|| ಶ್ರೀ ||





ಕನ್ನಡಕವಿ ಸಾರ್ವಭೌಮನೆನಿಸಿದ ಲಕ್ಷ್ಮೀಶಕವಿಯು
ಮೃದುಮಧುರಪದ ವಿಚಿತ್ರ ಸರಸಾಲಂಕಾರ ಚಮತ್ಕಾರವಾಗಿರುವಂತೆ
ಲೋಕೋಪಕಾರಾರ್ಥವಾಗಿ ರಚಿಸಿರುವ,

# ಜೈಮಿನಿ ಭಾರತವೆಂಬ ಮಹಾಕಾವ್ಯವು.



ಬ್ರ॥ ಶ್ರೀ॥ ದೊಡ್ಡಬೆಲೆ, ನಾರಾಯಣಶಾಸ್ತ್ರಿಯವರಿಂದ ರಚಿಸಲ್ಪಟ್ಟ
ಪ್ರತಿಪದಾರ್ಥ, ತಾತ್ಪರ್ಯ, ಅನ್ವಯಾರ್ಥ, ಸಂಧಿ, ಸಮಾಸ, ಅಲಂಕಾರ,
ಛಂದೋವಿವರಣ ಮುಂತಾದವುಗಳಿಂದೊಡಗೂಡಿರುವ

"ಜೈಮಿನಿ ಭಾರತ ಭಾನುಪ್ರಭೆ"

ಎಂಬ ಟೀಕೆಯಿಂದೊಡಗೂಡಿ ಪರಿಷ್ಕೃತವಾಗಿ

ಇದರ ಸರ್ವ ಸ್ವಾತಂತ್ರ್ಯವನ್ನು ಪಡೆದಿರುವ
ಬೆಂಗಳೂರು ಸಿಟಿ ಚಿಕ್ಕಪೇಟೆ ಬುಕ್‌ಡಿಪೊ ಪ್ರೊಪ್ರೈಟರ್

ಟಿ. ರ್ಯ. ಕೃಷ್ಣಯ್ಯಶೆಟ್ಟಿಯವರ ಸ್ವಕೀಯ

ಶ್ರೀ ವೆಂಕಟೇಶ ಮುದ್ರಾಕ್ಷರಶಾಲೆಯಲ್ಲಿ ಮುದ್ರಿಸಲ್ಪಟ್ಟಿತು.

ಶುದ್ಧಪಡಿಸಿದ ಎರಡನೆಯ ಮುದ್ರಣ ೨,೦೦೦ ಪ್ರತಿಗಳು.

1932

Price 4-0-0] ರಿಜಿಸ್ಟರ್ಡ್ ಕಾಪಿರೈಟ್. [ಕ್ರಯ 4-0-0

|| ಶ್ರೀಃ ||

# ಪ್ರಸ್ತಾವನೆ.



ಶ್ರೀಮದಖಂಡ ಭೂಮಂಡಲ ಮಂಡನಾಯಮಾನವಾಗಿರುವ ಕರ್ಣಾಟಕದೇಶ ಕಮಲಾಕರಕ್ಕೆ ಕಮಲದಂತಿರುವ ಶ್ರೀ ಮನ್ಮಹೀಶೂರ ಸಂಸ್ಥಾನದ ಸೀಮೆಯೊಳಗಣ ಬಾಣಾವಾರದ ತಾಲ್ಲೋಕು ದೇವನೂರು ಗ್ರಾಮದಲ್ಲಿ ಜನಿಸಿ, ತನ್ನಯ ವಿದ್ಯಾವೈದುಷ್ಯದಿಂದ ಕನ್ನಡ ಕವಿಕುಲಲಲಾಮನೆಂದು ಲೋಕವಿಖ್ಯಾತಿಯಂ ಪಡೆದ ಲಕ್ಷ್ಮೀಶನೆಂಬ ಮಹಾಕವಿಯು ಕನ್ನಡಿಗರ ಸೌಭಾಗ್ಯೋದಯದಂತೆಸೆವ "**ಜೈಮಿನಿ ಭಾರತಂ**" ಎಂಬ ಒಂದು ಲೋಕೋತ್ತರವಾದ ಪದ್ಯ ಪ್ರಬಂಧವನ್ನು, ಈಗ್ಗೆ ಸುಮಾರು ೨೧೦ ವರ್ಷಗಳ ಹಿಂದೆ ರಚಿಸಿರುವಂತೆ ಶಾಸನಗಳೇ ಮುಂತಾದವುಗಳಿಂದ ತಿಳಿದು ಬರುತ್ತದೆ. ಈ ಸುಪ್ರಸಿದ್ಧಕಾವ್ಯದ ಗುಣಗಾಂಭೀರ್ಯವೇ ಆ ಮಹಾಕವಿಯ ಮತ್ತು ಆ ಮಹಾಕಾವ್ಯದ ಮಹಿಮೆಗೆ ಕನ್ನಡಿಯಾಗಿದೆ. ಪದಲಾಲಿತ್ಯ, ಅರ್ಥಗಾಂಭೀರ್ಯ, ಮಾಧುರ್ಯ, ಶೈಲಿ, ಸರಸತೆ, ಸಾರಳ್ಯ, ಅರ್ಥಚಮತ್ಕೃತಿ, ಭಾವವೈಚಿತ್ರ್ಯ, ಅಲಂಕಾರವೈಖರಿ, ಗುಣಪರಿಪಾಟಿ, ಭಾವೋದಯಘಕ್ಕಿಕೆ, ಶ್ರಾವ್ಯತೆ ಮುಂತಾದವುಗಳನ್ನು ಎಷ್ಟು ಕೊಂಡಾಡಿದರೂ ಸಾಲದು. ಕನ್ನಡ ಕಾವ್ಯಾಂಮೃತವನ್ನು ಪಾನಮಾಡಬೇಕೆಂದು ಬಯಸುವ ಕನ್ನಡಿಗರಿಗೆ ಇಂತಹ ಅಮೃತನಿಧಿಯು ಮತ್ತೊಂದಿಲ್ಲ. ಪಟ್ಟಣ, ಗ್ರಾಮ, ಊರು, ಹಳ್ಳಿ ಮೊದಲಾದವುಗಳಲ್ಲಿಯೂ ಈ ಪ್ರಬಂಧವನ್ನು ಓದಿ, ಕೇಳಿ ಆನಂದಿಸದವರೇ ಇಲ್ಲ. ಈ ಸುಂದರಕಾವ್ಯದ ಸವಿಯು ಭಾಷಾಜ್ಞಾನವನ್ನು ಹೆಚ್ಚಾಗಿ ಪಡೆಯುವವರಿಗೆ ಬಹುತರವಾದ ಸಹಾಯವಾಗಿದೆ. ಇದಲ್ಲದೆ ಸರ್ವಜ್ಞನು, ಸರ್ವಶಕ್ತನು, ಕರುಣಾಸಮುದ್ರನೂ ಆಗಿರುವ ಭಗವಂತನ ಮತ್ತು ಭಾಗವತ ಶಿರೋಮಣಿಗಳ ವಿಚಿತ್ರವಾಗಿಯೂ, ಕರ್ಣಾನಂದಕರವಾಗಿಯೂ, ಭಕ್ತಿರಸಭರಿತವಾಗಿಯೂ ಇರುವ ಕಥಾಸಂದರ್ಭದಿಂದ ಗುಂಫಿತವಾಗಿದೆ. ಇಂತಹ ಸ್ಗ್ರಂಥವನ್ನು ವಿದ್ಯಾರ್ಥಿಗಳಿಗೂ, ಸಾಧಾರಣ ಜನರಿಗೂ ವಿಶದಪಡಿಸಿ ತಿಳಿಯಪಡಿಸಬೇಕೆಂಬ ಉದ್ದೇಶದಿಂದ ಪ್ರತಿಪದಟೀಕಾ, ಕಥಾರೂಪವಾದ ತಾತ್ಪರ್ಯ, ಸಂಧಿಸಮಾಸಾದಿಗಳು, ಛಂದೋವಿವರಣ, ಶ್ಲೇಷಾರ್ಥ, ಅಲಂಕಾರವಿಶೇಷಗಳು, ಇತ್ಯಾದಿಗಳನ್ನು ಸರಸವಾಗಿ ವಿಂಗಡಿಸಿ "**ಭಾನುಪ್ರಭೆ**" ಎಂಬ ಟೀಕೆಯನ್ನು ರಚಿಸಿ ಇದೆ. ಈ ರಚನಾ ಕಾರ್ಯಕ್ಕೆ ಮ|| ರಾ|| ಪಂಡಿತ ಶ್ರೀಕಂಠಯ್ಯನವರು, ಮ|| ರಾ|| ದೇ|| ಶಂಕರಭಟ್ಟರವರೇ ಪರಿಪೂರ್ಣ ಸಹಾಯಮಾಡಿದಾರೆ. ರಚನಾಕರ್ತೃಗಳ ಭ್ರಮ ಪ್ರಮಾದಾದಿಗಳಿಂದಲೂ, ಮುದ್ರಣ ಕಾರ್ಯವಿಶೇಷದಿಂದಲೂ ಗ್ರಂಥದಲ್ಲಿ ತಪ್ಪೇ ಇಲ್ಲವೆಂದು ಹೇಳಲಿಕ್ಕೆ ಸಾಧ್ಯವಿಲ್ಲ. ಆದರೆ ಲೋಕದಲ್ಲಿ ಕೇವಲ ಗುಣಮಯವೇ ಆಗಿ ದೋಷವಿಲ್ಲದೆಯೂ, ದೋಷಮಯವೇ ಆಗಿ ಗುಣವಿಲ್ಲದೆಯೂ ಇರುವ ಪದಾರ್ಥವೇ ಇಲ್ಲ. ಆದುದರಿಂದ ಗುಣೈಕ ಪಕ್ಷಪಾತಿಗಳೂ, ದಯಾದ್ರಹೃದಯರೂ ಆಗಿರುವ ಸತ್ಪುರುಷರು ಈ ವಿವರಣದಲ್ಲಿನ ಗುಣಾಂಶವನ್ನು ಮಾತ್ರ ಪರಿಗ್ರಹಿಸಿ ಸಂತೋಷಿಸುವರೆಂದು ಕೋರಿಕೆ. ಈ ವಿಷಯದಲ್ಲಿ ಕಂಠದೊಳಗೆ ವಿಷವನ್ನು ಅಡಗಿಸಿಕೊಂಡು ಶಿರಸ್ಸಿನಲ್ಲಿ ಚಂದ್ರನನ್ನು ಶೇಖರಿಸಿಕೊಂಡಿರುವ ನೀಲಕಂಠನಾದ ಶಶಿಖಂಡಮಂಡನನೂ, ಜಲಮಿಶ್ರವಾದ ಕ್ಷೀರದಲ್ಲಿ ಜಲಾಂಶವನ್ನು ಬಿಟ್ಟು ಕ್ಷೀರಾಂಶವನ್ನು ಪರಿಗ್ರಹಿಸುವ ರಾಜಹಂಸೆಗಳೂ ಉದಾಹರಣೆಯಾಗಿ ಕಂಗೊಳಿಸುತ್ತಿರುವಲ್ಲಿ ಸತ್ಪುರುಷರ ಸನ್ನಿಧಾನದೊಳಗೆ ವಿಶೇಷವಾಗಿ ವಿಜ್ಞಾಪಿಸಬೇಕಾದ ವಿಷಯವೇನಿರುವುದು ? ಎಲೈ ಪಾಠಕಮಹಾಶಯರುಗಳಿರಾ ! ಈ ಪ್ರಭೆಯು ತಮ್ಮ ಪಾಠಾವಸರದಲ್ಲಿ ಸ್ವಲ್ಪ ಮಟ್ಟಿಗಾದರೂ ಸಹಾಯಕಾರಿಯಾದರೆ ನಮ್ಮ ಶ್ರಮವು ಸಾರ್ಥಕವಾಗುವುದು.

ವಿವರಣಕರ್ತ.

ಶುಭಮಸ್ತು.

# ಜೈಮಿನಿ ಭಾರತದ ವಿಷಯಾನುಕ್ರಮಣಿಕೆ.

ಸಂಧಿ.



ಜೈಮಿನಿ ಭಾರತದ ವಿಷಯಾನುಕ್ರಮಣಿಕೆ ಸಂಪೂರ್ಣವಾದುದು.





|| ಶ್ರೀ ||



ಶ್ರೀ ಮಹಾ ಗಣಪತಯೇನಮಃ.

# ಟೀಕಾ ತಾತ್ಪರ್ಯ ಸಹಿತ ಜೈಮಿನಿಭಾರತವು.

## ಮೊದಲನೆಯ ಸಂಧಿ.

ಪೀಠಿಕೆ.

ಶ್ರೀವಧುವಿನಂಬಕ ಚಕೋರಕಂ ಪೊರೆಯೆ ಭ | ಕ್ತಾವಳಿಯ ಹೃತ್ಕುಮುದ ಕೋರಕಂ ಬಿರಿಯೆ ಜಗ | ತೀವ ಲಯದಮಲಸೌಭಾಗ್ಯ ರತ್ನಾಕರಂ ಪೆರ್ಚಿನಿಮ್ಮೆರೆವರಿಯೆ || ಆವಗಂ ಸರಸಕರುಣಾಮೃತದ ಕಲೆಗಳಿಂ | ತೀವಿದೆ ಳನಗೆಯ ಬೆಳದಿಂಗಳಿಂ ಪಸರಿಸುವ | ದೇವಪುರನಿಲಯ ಲಕ್ಷ್ಮೀರಮಣನಾಸ್ಯಚಂದ್ರಸಾನಂದಮೆಮಗೀಯಲಿ || ೧ ||

---

ಕಂದ|| ವಂದಾರುಮನುಜ ಬೃಂದಕೆ | ಬೃಂದಾರಕತರುವೆನಿಪ್ಪನಾರಾಯಣನಂ || ಮಂದೇತರಮತಿಗಾಗಿಯೆ | ಸಂದೇಹವತೊರೆದು ನಿಂದುವಂದಿಸುತಿರುವೆಂ ||೧|| ಸೋಮನ ಶಿರದೊಳ್ಧರಿಸಿಹ | ಸೋಮನ ಚರಣಾಬ್ಜವನ್ನೆ ನೆನೆಯುತೆ ಮನದೊಳ್ || ಮಾಮಕಮತಿಯನುರೂಪದಿ | ಜೈಮಿನಿಯಾಭಾರತಕ್ಕೆ ಟೀಕೆಯುಗೈವೆಂ ||೨|| ನಾರಾಯಣನಂ ನೆನೆಯುತೆ ನಾರಾಯಣಶರ್ಮನೀಗ ರಚಿಸಿಹಕೃತಿಯೊಳ್ | ಕಾರುಣ್ಯಾಮೃತನಿಧಿಗಳ್ | ಸಾರಾಂಶಾದಾನದಿಂದೆ ತೋಷಿಕೆವಿಬುಧರ್ ||೩||

ಅವತಾರಿಕೆ— ಸ್ವಸ್ತಿಶ್ರೀಮತ್ಸಮಸ್ತ ಭೂಮಂಡಲಮಂಡನಾಯಮಾನವಾಗಿ, ಸಕಲ ಕಲ್ಯಾಣಗುಣಗಳಿಗೆ ನೆಲೆಯೆನಿಸಿ, ನಿಖಿಲ ಸಂಪದಂಗಳಿಗೆ ತೌರೂರಾದ ಕರ್ಣಾಟಕ ಜನಪದದೊಳು ಪ್ರಖ್ಯಾತಿಯನ್ನು ಪಡೆದಿರುವ ಮಹಾಕವಿಗ ಳೊಳಗೋರ್ವನಾದ ಶ್ರೀಯುತ ಲಕ್ಷ್ಮೀಶನೆಂಬ ಕವಿಯು, ಜೈಮಿನಿ ಮಹಾಮುನಿಯ ಕೃತಿಯಾಗಿರುವ ಅಶ್ವಮೇಧ ಪರ್ವದ ಕಥೆ ಯನ್ನು ಕನ್ನಡಿಗರ ಮೇಲ್ಮೆಗಾಗಿ ಕರ್ಣಾಟಕ ಭಾಷೆಯೊಳು ವಾರ್ಧಿಕ ಷಟ್ಪದಿಯ ಪದ್ಯರೂಪವಾಗಿ, ಮೃದುಮಧುರಪದ

---

ತಾತ್ಪರ್ಯ— (೧) ವಿಷ್ಣು ಪತ್ನಿಯಾದ ಲಕ್ಷ್ಮೀದೇವಿಯ ಕಣ್ಣುಗಳೆಂಬ ಚಕೋರಂಗಳನ್ನು ಸಲಹುವ, ಭಗವ ದ್ಭಕ್ತರಾದವರ ಮುಕುಳಿತವಾದ ಹೃದಯವೆಂಬ ಕುಮುದ ಪುಷ್ಪವನ್ನು ವಿಕಾಸಪಡಿಸುವ, ಪ್ರಪಂಚದ ಐಶ್ವರ್ಯವೆಂಬ ಅಬ್ಧಿಯು ಮೇರೆಯನ್ನತಿಕ್ರಮಿಸಿ ಬರುವಂತೆ ಮಾಡುವ, ಅನವರತವೂ ಶೃಂಗಾರರಸವೇ ಮೊದಲಾದ ನವರಸಂಗಳಿಂದ ಭರಿತ ವಾಗಿರುವ, ಕೃಪಾಸಮುದ್ರನಾದ, ಸುಧಾವಿಶಿಷ್ಟವಾದ ಕಳೆಯಿಂದೊಡಗೂಡಿರುವ, ಯಾವಾಗಲೂ ಹಸನ್ಮುಖಿಯಾಗಿರುವ, ದೇವತೆಗಳ ಪಟ್ಟಣದಲ್ಲಿ ವಾಸಿಸುವಂಥ, ಶ್ರೀಮನ್ನಾರಾಯಣ ಮೂರ್ತಿಯ ಮುಖವೆಂಬ ಶಶಾಂಕನು ಸಂತೋಷ ಸಮೃದ್ಧಿ ಯನ್ನು ದಯಪಾಲಿಸಿ (ಬ್ರಹ್ಮಾನಂದವನ್ನಿತ್ತು) ನಮ್ಮನ್ನು ಕಾಪಾಡಲಿ ಎಂದು ಭಾವವು.

ಶೈಲಿಯಿಂದ ರಚಿಸಬೇಕೆಂದು ನೆನೆದು, ತಾನು ಕೈಕೊಂಬ ಕೃತಿಯು ಅಂತರಾಯವಿಲ್ಲದೆ ನೆರವೇರಲೋಸುಗವೂ, ಮುಂದಿನ ಕಾವ್ಯಕರ್ತರಿಗೆ ಸತ್ಸಂಪ್ರದಾಯಶಿಕ್ಷೆಗಾಗಿಯೂ, ಆಶೀರ್ವಾದ, ನಮಸ್ಕಾರ, ವಸ್ತು ನಿರ್ದೇಶಗಳೆಂಬ ಮಂಗಳಗಳೊಳ ಗೊಂದಾದ ಆಶೀರ್ವಾದ ರೂಪವಾಗಿರುವ ಮಂಗಳವನ್ನು "ಶ್ರೀವಧುವಿನಂಬಕ" ಎಂಬ ಪದ್ಯರೂಪದಿಂದ ರಚಿಸುತ್ತಲಿದಾನೆ.

ಟೀಕು— ಶ್ರೀ-ವಿಷ್ಣುವಿನ ಪ್ರಾಣಕಾಂತೆಯಾದ ಲಕ್ಷ್ಮೀದೇವಿಯೆಂಬ, ವಧುವಿನ-ಸ್ತ್ರೀಯ, ಅಂಬಕ-ನೇತ್ರ ವೆಂಬ, ಚಕೋರಕಂ - ಚಕೋರವೆಂಬಹಕ್ಕಿಯು, ಪೊರೆಯೆ - ಕಾಪಾಡಲ್ಪಡಲು, ಭಕ್ತ - ಭಕ್ತಿಯನ್ನುಳ್ಳವರ, ಆವಳಿಯ- ಗುಂಪಿನ, ಹೃತ್ - ಎದೆಯೆಂಬ, ಕುಮುದ - ಕರೀಕಮಲದಹೂವಿನ, ಕೋರಕಂ - ಮೊಗ್ಗು, ಬಿರಿಯೆ - ವಿಕಾಸವನ್ನೈದಲು, ಜಗತೀ-ಪ್ರಪಂಚದ, ವಲಯದ-ಸುತ್ತುಗಟ್ಟಿನ, ಅಮಲ-ಪರಿಶುದ್ಧವಾದ (ಕಶ್ಮಲರಹಿತಮಾದ) ಸೌಭಾಗ್ಯ-ಐಶ್ವರ್ಯವೆನ್ನುವ, ರತ್ನಾಕರಂ-ಕಡಲು, ಪೆರ್ಚಿನಿಂ- ಅಧಿಕವಾಗುವಿಕೆಯಿಂದ, ಮೇರೆವರಿಯೆ-ದಡವನ್ನು ಮೀರಿಬರಲು, ಆವಗಂ-ಸದಾಕಾಲದ ಲ್ಲಿಯೂ, ಸರಸ-ಶೃಂಗಾರರಸವೇ ಆದಿಯಾದ ನವರಸಗಳಿಂದ (ಪ್ರೀತಿಯಿಂದೊಡಗೂಡಿದ), ಕರುಣಾ-ಕರುಣೆಯೆಂಬ, ಅಮೃ ತದ-ಅಮೃತಮಯವಾದ, ಕಲೆಗಳಿಂ-ಷೋಡಶಕಳೆಗಳಿಂದ (ತೇಜಸ್ಸುಗಳಿಂದ) ತೀವಿದ-ವ್ಯಾಪ್ತಮಾದ, ಎಳೆನಗೆಯ-ಹುಸಿ ನಗೆಯೆಂಬ, ಬೆಳದಿಂಗಳಿಂ-ಬೆಳದಿಂಗಳಿನಿಂದ (ಚಂದ್ರಕಿರಣಂಗಳಿಂದ) ಪಸರಿಸುವ-(ಕಾಂತಿಯನ್ನು ಹೊಂದಿರುವ), ಹರಡಿ ಕೊಂಡಿರುವ, ದೇವಪುರನಿಲಯ - ದೇವಪುರವೆಂಬ ಹಳ್ಳಿಯನ್ನು ನಿವಾಸಸ್ಥಾನವಾಗಿ ಮಾಡಿಕೊಂಡಿರತಕ್ಕ, ಲಕ್ಷ್ಮಿ - ಲಕ್ಷ್ಮಿ ದೇವಿಗೆ, ರಮಣನ - ಗಂಡನಾದ ವಿಷ್ಣುವಿನ, ಆಸ್ಯ - ವದನವೆಂಬ, ಚಂದ್ರ-ಇಂದುವು, ನಮಗೆ-ನಮ್ಮಗಳಿಗೆ, ಆನಂದಂ- ಸಂತೋಷವನ್ನು, ಈಯಲಿ - ದಯಪಾಲಿಸಲಿ, (ಈ ಅರ್ಥವು ವಿಷ್ಣುಪರವಾದದ್ದು).

ಶ್ರೀ-ಶಾರದೆಯೆಂಬ, ವಧುವಿನ - ಹೆಂಗಸಿನ, ಅಂಬಕ-ನೇತ್ರವೆಂಬ, ಚಕೋರಕಂ - ಚಕೋರವೆಂಬ ಹಕ್ಕಿಯು, ಪೊರೆಯೆ-ಸಲಹಲ್ಪಡಲು, ಭಕ್ತ-ಬ್ರಹ್ಮನನ್ನೇ ಸದಾಧ್ಯಾನ ಮಾಡುತ್ತಿರುವ ಸನಕಸನಂದನರೆಯೆ ಮೊದಲಾದವರ, ಆವಳಿಯ- ಗುಂಪಿನ, ಹೃತ್-ಎದೆಯೆನ್ನುವ, ಕುಮುದ- ಕನ್ನೈದಿಲೆಯ, ಕೋರಕಂ - ಮೊಗ್ಗು, ಬಿರಿಯೆ - ವಿಕಸಿತಮಾಗಲು, ಜಗತೀ- ಭೂಮಿಯ, ವಲಯದ-ಮಂಡಲದ, (ಬ್ರಹ್ಮನಿಂದ ಉತ್ಪನ್ನಮಾದ ಇಳಾಮಂಡಲದ) ಅಮಲ - ಪರಿಶುದ್ಧವಾದ, ಸೌಭಾಗ್ಯ- ಸಂಪತ್ತೆನ್ನತಕ್ಕ, ರತ್ನಾಕರಂ-ಅಬ್ಧಿಯು, ಪೆರ್ಚಿನಿಂ-ಆದಿಕ್ಯದಿಂದ, ಮೇರೆವರಿಯೆ-ಮಿತಿಮೀರಿ ಬರುತ್ತಿರಲಾಗಿ, ಆವಗಂ-ಸರ್ವ ಕಾಲದಲ್ಲಿಯೂ, ಸರಸ-ಪ್ರೀತಿಯುಕ್ತವಾದ (ತನ್ನ ಭಕ್ತರಲ್ಲಿ) ಕರುಣಾ-ಕರುಣೆಯಿಂದೊಡಗೂಡಿದ, ಅಮೃತದ ಕಲೆಗಳಿಂ- ಅಮೃತ ವಿಶಿಷ್ಟವಾದ ತೇಜಸ್ಸುಗಳಿಂದ, ತೀವಿದ-ಪೂರಿತಮಾದ, ಎಳೆನಗೆಯ - ಅರೆನಗೆಯೆಂಬ, ಬೆಳದಿಂಗಳಿಂ - ಬೆಳದಿಂಗಳಿ ನಿಂದ, ಪಸರಿಸುವ-ಕಾಂತಿಯನ್ನೀಯುವ, ದೇವಪುರ-ಸುರಾವಾಸಮಾದ ಸತ್ಯಲೋಕವೆ, ನಿಲಯ-ವಾಸಸ್ಥಾನಮಾಗಿ ಉಳ್ಳ, ಲಕ್ಷ್ಮೀರಮಣನ-ಸರಸ್ವತೀ ಪ್ರಿಯನಾದ ಕಮಲಾಸನನ, ಆಸ್ಯ-ಮೋರೆಯೆಂಬ, ಚಂದ್ರ-ಇಂದುವು, ಆನಂದಂ-ಸಂತೋಷ

---

ಅಂದರೆ ಸಮಸ್ತ ಲೋಕಗಳೂ ವಿಷ್ಣುವಿನಿಂದ ವ್ಯಾಪಿಸಲ್ಪಟ್ಟಿರುತ್ತವೆಂದೂ. ಸಕಲ ಪ್ರಾಣಿ ಸಮುದಾಯವೂ ತತ್ತತ್ಕರ್ಮಾನುಸಾರವಾಗಿ ಪಡೆಯುವ ಆನಂದವು ಅತ್ಯಲ್ಪವೆಂದೂ, ಇಹಪರಂಗಳಿಗೆ ಸಾಧನೆಯಾದ ಬ್ರಹ್ಮಾನಂದವೆ ಬಲು ದೊಡ್ಡದಾದ:ದರಿಂದ ಆ ಅಸಾಧಾರಣವಾದ ಆನಂದವನ್ನು ನಮಗೆ ಕೊಟ್ಟು ಕಾಪಾಡಲಿ ಎಂಬದಾಗಿಯೂ; ಸರ್ವಾಂತರ್ಯಾಮಿ ಯಾಗಿ ಸರ್ವಲೋಕ ಶರಣ್ಯನಾಗಿರುವ ವಿಷ್ಣುವನ್ನು ಪ್ರಾರ್ಥಿಸಿದ್ದಾನೆ. ಮತ್ತು ಪ್ರಾರಂಭದಲ್ಲಿ "ಶ್ರೀವಧು" ಎಂಬ ಮಂಗ ಳೋಕ್ತಿಯನ್ನು ಪ್ರಯೋಗಿಸಿದ್ದಾನೆಂದು ಗೊತ್ತಾಗುವದು. (ಇದು ವಿಷ್ಣುಪರವಾದ್ದು).

ಮತ್ತು ಶಾರದೆ ಎಂಬ ಸ್ತ್ರೀಯ ನಯನಂಗಳೆನ್ನುವ ಚಕೋರಗಳನ್ನು ರಕ್ಷಿಸುವ, ಬ್ರಹ್ಮಧ್ಯಾನಪರರಾದ ಸನಕಸನಂದನರೆಯೆ ಮೊದಲಾದವರ ಹೃದಯಂಗಳಿಗೆ ಆಹ್ಲಾದವನ್ನೆಸಗುವ, ಬ್ರಹ್ಮದೇವರಿಂದಲೆ ಉತ್ಪತ್ತಿಯಾದ ಈ ಪ್ರಪಂಚದ ಐಶ್ವರ್ಯಾತಿಶಯಗಳಿಂದೊಡಗೂಡಿದ, ಸಮುದ್ರವನ್ನು ಮೇರೆಯನ್ನತಿಕ್ರಮಿಸುವಂತೆ ಮಾಡತಕ್ಕ, ತಾಪಸ ಶ್ರೇಷ್ಠರಾದವರಲ್ಲಿ ಪ್ರೀತಿಯನ್ನೂ ಕರುಣೆಯನ್ನೂ ಇಟ್ಟುಕೊಂಡಿರುವ, ಅರೆನಗೆಯೆಂಬ ಬೆಳ್ದಿಂಗಳಿಂ ಪ್ರಕಾಶಿಸುವ, ಸತ್ಯ ಲೋಕ ನಿವಾಸಿಯಾಗಿರುವ, ಕಮಲಾಸನನ ಮುಖಚಂದ್ರನು ಸಂತೋಷವನ್ನು ನಮಗೆ ದಯಪಾಲಿಸಲಿ ಎಂಬ ಬ್ರಹ್ಮಪರ ವಾದ ಭಾವವೂ ತೋರುವಂತೆ ರಚಿಸಿರುವನು.

ಚಕೋರವೆಂಬ ಪಕ್ಷಿಯು ಚಂದ್ರಿಕೆಯನ್ನು ಪಾನಮಾಡುವುದು, ಚಂದ್ರೋದಯದಲ್ಲಿ ಕುಮುದ ಪುಷ್ಪಗಳು ಅರಳು ವುದು, ಬೆಳ್ದಿಂಗಳು ಬಿದ್ದೊಡನೆ ಕಡಲು ಉಕ್ಕುವುದೂ ಲೋಕಪ್ರಸಿದ್ಧವು. ನಗೆಯು, ಧರ್ಮವು, ಸುಗುಣವು, ಕೀರ್ತಿಯು, ಈ ಮುಂತಾದವುಗಳು ಬೆಳ್ಳಗಿರತಕ್ಕವುಗಳೆಂದು ವರ್ಣಿಸುವುದು ಕವಿಸಮಯ ಸಿದ್ಧವಾಗಿದೆ.

ವನ್ನು, ಎಮಗೆ-ನಮಗೆ, ಈಯಲಿ-ಕರುಣಿಸಲಿ, ಇಲ್ಲಿ 'ಲಕ್ಷ್ಮೀ' ಎಂಬ ಪದಕ್ಕೆ ಲಕ್ಷಣಯುಕ್ತಳಾದವಳು (ಸರಸ್ವತಿ) ಎಂದು ಅರ್ಥವು. (ಈ ಅರ್ಥವು ಬ್ರಹ್ಮಪರವಾದದ್ದು).

ಈ ಪದ್ಯದಲ್ಲಿ ಪ್ರಾರಂಭದೊಳಗೆ ಪ್ರಯೋಗಿಶಿರುವ "ಶ್ರೀ" ಎಂಬ ಶಬ್ದವು ನಾನಾರ್ಥಗಳಿಂದೊಡಗೂಡಿ ಅಂದರೆ ಐಶ್ವರ್ಯ, ಮಂಗಳ, ಶಾರದೆ, ಲಕ್ಷ್ಮೀದೇವಿ, ಕಳೆ ಎಂಬ ಅರ್ಥಂಗಳಿಂದ ಗರ್ಭಿತವಾಗಿರುವುದಲ್ಲದೆ ವರ್ಣಗಣವೇ ಮೊದಲಾದವುಗಳಿಗೆ ಪಾರಿಶುಧ್ಯವನ್ನೂ ವಿದ್ಯಾರ್ಥಿಗಳಿಗೂ ಬೋಧಕರಿಗೂ, ಏಳಿಗೆಯನ್ನೂ ಈಯತಕ್ಕದ್ದಾಗಿರುವುದು. ಶ್ರೀವಧು, ಅಂಬಕಚಕೋರ, ಹೃತ್ಕೋರಕಂ, ಸೌಭಾಗ್ಯರತ್ನಾಕರ-ಆಸ್ಯಚಂದ್ರಂ-ಇವುತಾದ್ರೂಪ್ಯವರ್ಣನೆಯಿಂದೊಡಗೂಡಿವೆಯಾದುದರಿಂದ ರೂಪಕಾಲಂಕಾರವೆಂದರಿಯಬೇಕು.

ಲಕ್ಷ್ಮಿಯ ರಮಣ, (ಷ. ತ. ಸ.)

ಈ ಪದ್ಯದಲ್ಲಿ ಚಂದ್ರ ಆನಂದಂ ಈಯಲಿ ಎಂಬುದೇ ಪ್ರಧಾನವಾಗಿ ಸಕರ್ಮಕ ಕರ್ತರಿ ವಾಕ್ಯವು—ಚಂದ್ರ (ಕರ್ತೃ) ಆನಂದ (ಕರ್ಮ) ಈಯಲಿ ಕ್ರಿಯೆ. ಇದು ಪ್ರಾರ್ಥನಾಸೂಚಕವಾದದ್ದು.

---

ಈಶ್ವರನ ಕಾಂತೆಯಾದ ಪಾರ್ವತಿಯ ನೇತ್ರಗಳೆಂಬ ಚಕೋರ ಪಕ್ಷಿಗಳನ್ನು ರಕ್ಷಿಸುವಂಥ, ತನ್ನ ಪರಮ ಭಕ್ತರ ಮುಕುಳಿತವಾದ ಹೃದಯ ಕಮಲವನ್ನು ಬಿಚ್ಚುವಂತೆ ಮಾಡುವ, ಲೋಕದ ಸಂಪತ್ತಿನ ರಾಶಿಯನ್ನು ಮಿತಿಮೀರಿಸುವ, ಯಾವಾಗಲೂ ನವರಸಗಳಿಂದ ಪೂರ್ಣನಾಗಿರುವ, ಕರುಣಾನಿಧಿಯಾದ, ಅಮೃತಕಳೆಯಿಂದೊಡಗೂಡಿರುವ, ಸಂತೋಷಚಿತ್ತನಾದ, ದೇವಪುರವಾದ ಕೈಲಾಸಪರ್ವತದಲ್ಲಿ ನೆಲೆಯಾಗಿರುವ ಚಂದ್ರಶೇಖರನ ವದನಚಂದ್ರನು ಶಾಶ್ವತ ಸುಖವನ್ನಿತ್ತು, ನಮ್ಮನ್ನು ಯಾವಾಗಲೂ ಪಾಲಿಸಲಿ. ಶಿವಾ, ಭವಾನಿ, ರುದ್ರಾಣಿ, ಶರ್ವಾಣಿ, ಸರ್ವಮಂಗಳೆ, ಇತ್ಯಾದಿ ಪದಗಳಂತೆ ಶ್ರೀ, ಲಕ್ಷ್ಮಿ, ಶಿವೆ, ಅಂಬಿಕೆ, ಗೌರಿ, ಷಷ್ಠೀ, ಜಯೆ, ದೇವಸೇನೆ ಈ ಮುಂತಾದ ಪದಗಳೂ ಪಾರ್ವತಿಗೆ ಪರ್ಯಾಯ ಪದಗಳಾಗಿವೆ. ಯಾವುದೊಂದು ಎಡರೂ ಬಾರದೆ ಗ್ರಂಥವು ಪೂರ್ಣವಾಗಬೇಕೆಂದು ಕವಿಯು ಪರಮೇಶ್ವರ ಪ್ರಾರ್ಥನಾ ರೂಪವಾದ ಮುನ್ನೊಂದು ಮಂಗಳವನ್ನು ರಚಿಸುತಲಿದಾನೆ.

ವೃತ್ತವಿಷಯ :—ಈ ಗ್ರಂಥದಲ್ಲಿನ ವೃತ್ತಗಳು ಷಟ್ಪದಿಯ ಜಾತಿಗೆ ಸೇರಿರುವುವು. ಷಟ್ಪದಿಯಲ್ಲಿ ಪ್ರತಿಯೊಂದು ಪದ್ಯಕ್ಕೂ ಆರು ಪಾದಗಳಿರುತ್ತವೆ. ಅವುಗಳೊಳಗೆ ಪೂರ್ವಾರ್ಧಕ್ಕಿರುವ ಲಕ್ಷಣವೆ ಉತ್ತರಾರ್ಧಕ್ಕೂ ಇರುವುದು. ಈ ಷಟ್ಪದಿಗಳಲ್ಲಿ, ಶರಷಟ್ಪದಿ, ಕುಸುಮ ಷಟ್ಪದಿ, ಭೋಗ ಷಟ್ಪದಿ, ಭಾಮಿನಿ ಷಟ್ಪದಿ, ಪರಿವರ್ಧಿನಿ, ವಾರ್ಧಿಕ, ಎಂದು ಆರು ವಿಧವುಂಟು. ಒಂದು ಎರಡನೆಯ ಪಾದಗಳಲ್ಲಿ ಎಷ್ಟೆಷ್ಟು ಮಾತ್ರೆಗಳಿರುವುವೋ, ಅಷ್ಟೂ ಮತ್ತು ಅದರಲ್ಲಿ ಅರ್ಧ, ಹೆಚ್ಚಾಗಿ ಇನ್ನೊಂದು ಗುರು ಸಹ ಮೂರನೆಯ ಪಾದದಲ್ಲಿರುವುದು. ಇದರ ಹಾಗೆಯೆ ಉತ್ತರಾರ್ಧವೂ ಇರುವುದು. ಪ್ರಕೃತವಾದ ವಾರ್ಧಿಕ ಷಟ್ಪದಿಯಲ್ಲಿ ಸಮನ್ವಯವೆಂತೆಂದರೆ :—

∪ – – – ∪ – – – ∪ – ∪ – – – ∪
(೧) ಶ್ರೀ ವ ಧು ವಿ ನಂ ಬ ಕ ಚ ಕೋ ರ ಕಂ ಪೊ ರೆ ಯೆ ಭ

∪ – – – ∪ – – – ∪ – ∪ – – – – –
(೨) ಕ್ತಾ ವ ಳಿ ಯ ಹೃ ತ್ಕು ಮು ದ ಕೋ ರ ಕಂ ಬಿ ರಿ ಯೆ ಜ ಗ

∪ – – – – – – ∪ ∪ – ∪ ∪ – ∪ ∪ – ∪
(೩) ತೀ ವ ಲ ಯ ದ ಮ ಲ ಸೌ ಭಾ ಗ್ಯ ರ ತ್ನಾ ಕ ರಂ ಪೇ ರ್ಚಿ ನಿ

∪ – – – ∪
ಮ್ಮೇ ರೆ ವ ರಿ ಯೆ (ಇದು ಪ್ರಸ್ತಾರ ಕ್ರಮ)

ಇಲ್ಲಿ ಐದು ಮಾತ್ರೆಗಳ ಗಣಗಳು ಒಂದು ಎರಡನೆಯ ಪಾದಗಳಲ್ಲಿ ನಾಲ್ಕು ನಾಲ್ಕೂ, ಮೂರನೆಯ ಪಾದದಲ್ಲಿ ಆರು ಗಣಗಳೂ ಮತ್ತು ಒಂದು ಗುರುವೂ ತಾಳಕ್ರಮವಾಗಿ ಇದ್ದು ಅರ್ಧ ಪದ್ಯಕ್ಕೆ ಎಪ್ಪತ್ತೆರಡು ಮಾತ್ರೆಗಳೂ ಪೂರ್ಣ ಪದ್ಯಕ್ಕೆ ಒಂದನೂರ ನಲವತ್ತನಾಲ್ಕು ಮಾತ್ರೆಗಳೂ ಇರುವುದು ಎಂದು ತಿಳಿಯಬೇಕು. (ಪ್ರಾಸ) ಪದ್ಯದ ಪ್ರತಿಯೊಂದು ಪಾದದ ಮೊದಲನೆಯ ಎರಡು ಸ್ವರಗಳ ನಡುವೆ ಒಂದೇ ವಿಧವಾದ ವ್ಯಂಜನವಿರಬೇಕೆಂಬ ನಿಯಮವೇ ಪ್ರಾಸವೆನ್ನಲ್ಪಡುವುದು. ಇದರಲ್ಲಿ ಸಿಂಹಪ್ರಾಸ, ಗಜಪ್ರಾಸ, ಶರಭಪ್ರಾಸ, ಅಜಪ್ರಾಸ, ವೃಷಭಪ್ರಾಸ, ಅಶ್ವಪ್ರಾಸ, ಎಂಬಿವೇ ಮೊದಲಾದ ಪ್ರಾಸಗಳು ಕನ್ನಡದಲ್ಲಿ ಪ್ರಸಿದ್ಧಿಗೊಂಡಿವೆ.

ಟೀ॥ ಶ್ರೀ-ಪಾರ್ವತಿ ಎಂಬ, ವಧುವಿನ_ನಾರೀಮಣಿಯ, ಅಂಬಕ-ನೇತ್ರವೆಂಬ, ಚಕೋರಕಂ-ಚಕೋರಹಕ್ಕಿಯು, ಪೊರೆಯೆ-ಸಲಹಲ್ಪಡಲು, ಭಕ್ತ_ತನ್ನ ಭಕ್ತರಾದವರ, ಆವಳಿಯ_ಗುಂಪಿನ, ಹೃತ್ಕುಮುದ-ಎದೆಯೆಂಬ ಕಪ್ಪು ತಾವರೆಯ, ಕೋರಕಂ_ಮೊಗ್ಗು, ಬಿರಿಯೆ_ಅರಳಲು, ಜಗತೀವಲಯದ_ನಿನ್ನಿಂದ ರಕ್ಷಿಸಲ್ಪಡುತ್ತಿರುವ, ಭೂಮಂಡಲದ, ಸೌಭಾಗ್ಯ, ಸೊಬಗೆಂಬ, ರತ್ನಾಕರಂ_ಕಡಲು, ಪೆರ್ಚಿನಿಂ - ಅತಿಶಯದಿಂದ, ಮೇರೆವರಿಯೆ - ದಡಮೀರಿ ಬರುತ್ತಿರಲಾಗಿ, ಆವಗಂ_ ಸದಾ, ಸರಸ_ಮನೋರಂಜಕವಾದ, ಕರುಣಾ_ಕಾರುಣ್ಯವೆಂಬ, ಅಮೃತದಕಲೆಗಳಿಂ_ಸುಧಾಕಾಂತಿಗಳಿಂದ, ತೀವಿದ_ಪರಿ ಪೂರ್ಣತೆಯನ್ನೈದಿದ, ಎಳೆನಗೆಯ_ಮಂದಹಾಸವೆಂಬ, ಬೆಳದಿಂಗಳಿಂ_ಬೆಳದಿಂಗಳಿನಿಂದ, ಪಸರಿಸುವ_ಹರಡತಕ್ಕ, ದೇವಪುರ_ ದೇವತಾವಾಸಮಾದ ಕೈಲಾಸಗಿರಿಯೆ, ನಿಲಯ_ಸ್ಥಾನವಾಗಿವುಳ್ಳ, ಲಕ್ಷ್ಮೀ-ಲಕ್ಷ್ಮೀಯೆಂಬ ನಾಮಧೇಯವುಳ್ಳ ಪಾರ್ವತಿಯ, ರಮಣನ_ಪ್ರಿಯನಾದ ಪರಮೇಶ್ವರನ, ಅಸ್ಯ_ಮುಖವೆಂಬ, ಚಂದ್ರ_ಕುಮುದಬಂಧುವು, (ಇಂದುವು) ಎಮಗೆ_ನಮಗೆ, ಆನಂದಂ_ಸಂತೋಷವನ್ನು, ಈಯಲಿ-ಕೊಟ್ಟುಪಾಲಿಸಲಿ. ಈ ಪದ್ಯದ ಮೂಲದಲ್ಲಿ ಲಕ್ಷ್ಮೀರಮಣನಾಸ್ಯಚಂದ್ರಾನಂದ ನಮಗೀಯಲಿ ಎಂಬುದರಲ್ಲಿ ಆನಂದ ಎಂಬ ಪದಕ್ಕೆ ಕರ್ಮಪದದ ಅರ್ಥವಾಗುವುದಿಲ್ಲವಾದ್ದರಿಂದ "ಲಕ್ಷ್ಮೀರಮಣ ನಾಸ್ಯ ಚಂದ್ರಾನಂದಮೆಮಗೀಯಲಿ ಎಂದು ತಿದ್ದಿ ಆಸ್ಯಚಂದ್ರ, ಆನಂದಂ ಎಮಗೆ ಈಯಲಿ ಎಂದು ಪದಛೇದ ಮಾಡು ವಂತೆ ತಿದ್ದಬೇಕು. (ಇದು ಪರಮೇಶ್ವರನ ಪರವಾದ ಅರ್ಥವು) ಅ॥ ವಿ॥ ಲಕ್ಷ್ಮೀ-ಲಕ್ಷಣಯುಕ್ತಳು (ಪಾರ್ವತಿ) ಎಂದೂ ಹೇಳಬಹುದು ॥೧॥

---

ವರ್ಣಗಳಲ್ಲಿ ಲಘುವೆಂತಲೂ, ಗುರುವೆಂತಲೂ ಎರಡು ಭೇದ. ಗಣಗಳು ಮ, ಯ, ರ, ಸ, ತ, ಜ, ಭ, ನ, ಎಂಬ ದಾಗಿ ಎಂಟುವಿಧ.

(U) ಇದು ಗುರುವರ್ಣದ ಗುರುತು (—) ಇದು ಲಘುವರ್ಣಕ್ಕೆ ಸಂಜ್ಞೆ.

‾ U U U – U – – – U
ಯ ಮಾ ತಾ ರಾ ಜ ಭಾ ನ ಸ (ಲ ಗಂ)

ಈ ವರ್ಣಗಳೊಳಗೆ ಮೊದಲಿನಿಂದಲೂ ಒಂದೊಂದು ವರ್ಣದಿಂದ ಮೂರುಮೂರು ವರ್ಣಗಳನ್ನೇ ಎಣಿಸಿಕೊಂಡರೆ ಮೊದಲನೆಯ ವರ್ಣದಿಂದ ಆಯಾಗಣದ ಹೆಸರೂ ಪ್ರತಿಮೂರು ವರ್ಣಗಳಮೇಲೆ ತೋರಿರುವ ಗುರುತುಗಳಿಂದ ಆಯಾ ಗಣದಲ್ಲಿರಬೇಕಾದ ಮಾತ್ರೆಗಳೂ ತಿಳಿದುಬರುತ್ತವೆ.

ಉದಾ :—(೧) ಯಮತಾ (೨) ಮಾತಾರಾ (೩) ತಾರಾಜ (೪) ರಾಜಭಾ (೫) ಜಭಾನ (೬) ಭಾನಸ (೭) ನಸಲ (೮) ಸಲಗಂ.

ಆದಿಮಧ್ಯಾವಸಾನೇಷು ಯರತಾಯಾಂತಿಲಾಘವಂ । ಭಜಸಾಗೌರವಂಯಾಂತಿ ಮನೌತುಗುರುಲಾಘವೌ ॥ ಅಂದರೆ ಮೊದಲಲ್ಲಿ ಲಘುವಿದ್ದರೆ ಯ ಗಣವೆಂದೂ ನಡುವೆ ಲಘುವರ್ಣವಿದ್ದರೆ ರಗಣವೆಂದೂ, ಅಂತ್ಯಲಘುವಾದರೆ ತಗಣ ವೆಂದೂ ಮತ್ತು ಆದಿಗುರುವಾದರೆ ಭಗಣವೆಂದೂ ಮಧ್ಯಗುರುವಾದರೆ ಜಗಣವೆಂದೂ ಅಂತ್ಯಗುರುವಾದರೆ ಸಗಣವೆಂದೂ ಮನಗಣಗಳು ಕ್ರಮವಾಗಿ ಗುರುಲಘುಗಳುಳ್ಳದ್ದೆಂದೂ ತಿಳಿದುಕೊಂಡು ಎಲ್ಲಾ ಪದ್ಯಗಳಲ್ಲೂ ಗಣಗಳನ್ನು ಗೊತ್ತುಮಾಡ ಬೇಕು. ॥ ೧ ॥ ಇಲ್ಲಿ ಶ್ರೀವಧು ಎಂಬೆಡೆಯಲ್ಲಿ ಆದಿ ಗುರುವಾದ್ದರಿಂದ ಭಗಣವೂ, ಮತ್ತು ದೇವತಾವಾಚಕವು ಆಗಿದೆ. ಶ್ಲೋಕ॥ ದೇವತಾವಾಚಕಾಯೇಚ ಯೇಚಮಂಗಳವಾಚಕಾಃ । ತೆಸರ್ವೆನ್ನೈವನಿಂದ್ಯಾಃಸ್ಯುರ್ಲಿಪಿತೋಗಣತೋಪಿವಾ ॥ ಮೊದ ಲಲ್ಲಿ ಭಗಣಪ್ರಯೋಗದಿಂದ ವಾಚಕರಿಗೆಲ್ಲಾ ಮಂಗಳವನ್ನೂ ಸಂಪತ್ಪರಂಪರೆಯನ್ನೂ ಕೊಡುವದು. ಪ್ರಾರಂಭದಲ್ಲಿ ದೇವತಾವಾಚಕವಾದ ಆಶೀರೂಪಕವಾದ ಮಂಗಳವನ್ನು ಬರೆದಿರುವುದರಿಂದ ಈ ಕೃತಿಯ ಬರವಣಿಗೆ ಮತ್ತು ಗಣಗಳಲ್ಲಿನ ದೋಷಗಳು ಅನಿಂದ್ಯಗಳಾಗಿರಲೆಂದು ಮಹಾ ಕವಿಯಾದ ಲಕ್ಷ್ಮೀಶನು ಪ್ರಯೋಗಿಸಿರುವಂತೆ ಊಹಿಸಬಹುದು. ಒತ್ತ ಕ್ಷರದ ಹಿಂದಣ ಅಕ್ಷರವೂ, ಸೊನ್ನೆಯಿಂದೊಡಗೂಡಿರುವ ಅಕ್ಷರವೂ, ದೀರ್ಘಾಕ್ಷರವೂ, ವಿಸರ್ಗದಿಂದ ಕೂಡಿರುವ ವರ್ಣವೂ, ಗುರುವರ್ಣವೆಂತಲೂ ಉಳಿದ ವರ್ಣಗಳೆಲ್ಲ ಲಘು ವರ್ಣಗಳೆಂತಲೂ ಗುರುಲಘು ವಿಭಾಗವನ್ನು ತಿಳಿಯಬೇಕು. ಇದಲ್ಲದೆ ಪದ್ಯಪಾದದ ಕೊನೆಯ ಅಕ್ಷರವನ್ನು ಸಂದರ್ಭಾನುಸಾರ ಲಘುವಾಗಿದ್ದರೂ ಗುರುವನ್ನಾಗಿ ಭಾವಿಸಬಹುದು ॥ ೧ ॥ ಹಾವುಗಳನ್ನೆ ಆಭರಣವಾಗಿ ಧರಿಸಿ ವಿರಾಜಮಾನನು, ಪರಿಶುದ್ಧಸ್ವರೂಪನು, ಮಹರ್ಷಿಗಳಿಂದ ನಾರದಾದಿಗಳಿಂ ವಂದ್ಯವಾದ ಪಾದಾರವಿಂದಗಳುಳ್ಳವನು, ಇಂದುರೇಖೆಯನ್ನು ತಲೆಯಲ್ಲಿ ಧರಿಸಿರುವನು, ಗಿರಿಜೆಯ ಮನೋಭೀಷ್ಟ ಸಿದ್ಧಿಯಂ

ಪಾವನತುಲಾಭರಣಮಂ ಮಾಡಿಕೊಂಡೆಸೆವ | ಪಾವನತರಸ್ವರೂಪಂ ನಾರದಾದಿಮುನಿ | ಪಾವನತಪಾದಪಂಕೇರುಹದ್ವಂದ್ವ ಮಿಂದುಕಲಾವತಂಸನುಮೆಯ || ಭಾವನೆಯನೊಡಗೂಡಿಸುವ ಸಕಲ ಸುರರ ಸಂ | ಭಾವನೆಯ ಕೈಗೊಂಬ ಲೋಕವಿಸ್ತರಣ ಪ್ರ | ಭಾವನಯನತ್ರಯಂ ದೇವಗಂಗಾಧರಂ ಸಲಹುನಿಚ್ಚಂ ನಮ್ಮನು ||೨|| ಪ್ರಸ್ತುತದೊಳೊಗೆದ ಮುಂಬೆಳಗಮಲದಂತದಗ | ಭಸ್ತಿನವಪೂರ್ವಸಂಧ್ಯಾರುಣಂ ಭಾಳವಿ | ನ್ಯಸ್ತಸಿಂದೂರಮಂಕುರಿಪ ಪೊಂಬಿಸಿಲೊಡನೆ ಮೂಡುವಳೆನೇಸರೆಸೆವ || ಮಸ್ತ

ಈಶ್ವರ ಸ್ತೋತ್ರ.

ಪಾವನು-ಸರ್ಪವನ್ನು, ಅತುಲ-ಅಸದೃಶವಾದ, ಆಭರಣಮಂ-ಆಭರಣವನ್ನಾಗಿ, ಮಾಡಿಕೊಂಡು-ಎಸಗಿ, ಎಸೆವ-ಹೊಳೆಯುವ, ಪಾವನತರ-ಬಹಳ ಪರಿಶುದ್ಧವಾದ, ಸ್ವರೂಪಂ-ಆಕೃತಿಯಿಂದ ಕೂಡಿದ, ನಾರದ-ನಾರದರೆ, ಆದಿ-ಮುಂತಾದ ಮುನಿಪ-ತಾಪಸರಿಂದ, ಅವನತ-ನಮಸ್ಕಾರಮಾಡಿಸಿಕೊಳ್ಳುವ, ಪಾದಪಂಕೇರುಹ-ಪಾದಕಮಲಗಳ, ದ್ವಂದ್ವಂ-ಎರಡನ್ನುಳ್ಳ, ಇಂದು-ಚಂದ್ರನ, ಕಲಾ-ಪ್ರಕಾಶವನ್ನು, (ಹದಿನಾರನೆಯ ಒಂದು ಭಾಗವನ್ನು), ಅವತಂಸಂ-ಶಿರಸ್ಸಿಗೆ ಅಲಂಕಾರವಾಗಿ ಮಾಡಿಕೊಂಡಿರುವ, ಉಮೆಯ-ಗೌರಿಯ, ಭಾವನೆಯನು-ಇಷ್ಟಾರ್ಥವನ್ನು, ಒಡಗೂಡಿಸುವ-ಕೈಗೂಡಿಸತಕ್ಕ, ಸಕಲ-ಅಶೇಷರಾದ, ಸುರರ-ವಿಬುಧರು ಮಾಡಿದ, ಸಂಭಾವನೆಯನು-ಸಪರ್ಯೆಯನ್ನು, (ಪೂಜೆಯನ್ನು), ಕೈಕೊಂಬ-ಸ್ವೀಕರಿಸತಕ್ಕ, ಲೋಕ-ಸ್ವರ್ಗ, ಮರ್ತ್ಯ, ಪಾತಾಳಂಗಳಲ್ಲಿ, ವಿಸ್ತರಣ-ಖ್ಯಾತಮಾದ, ಪ್ರಭಾವ- ಮಹಿಮೆಯಿಂದ ಕೂಡಿದ, ನಯನತ್ರಯಂ-ಮುಕ್ಕಣ್ಣನಾದ, ದೇವ-ಸ್ವಾಮಿಯಾದ, ಗಂಗಾಧರಂ-ಶಂಕರನೆ, ನಿಚ್ಚಂ-ಅನವರತವೂ, ನಮ್ಮನು-ನಮ್ಮನ್ನು, ಸಲಹು-ಸಂರಕ್ಷಿಸು.

ಈ ಪದ್ಯದಲ್ಲಿ ನಾರದ, ಕೃದ್ವೃತ್ತಿ, ಪಂಕೇರುಹ, ಎಂಬುದು ಅಲುಕ್ಸಮಾಸ. ಇಂದುವಿನಕಲಾ (ಷ. ತ) ಇಂದುಕಳೆಯೇ ಅವತಂಸವಾಗಿವುಳ್ಳ (ಬ. ಸ) ಲೋಕವಿಸ್ತರಣ (ಷ. ತ) ಲೋಕವಿಸ್ತರಣ ಪ್ರಭಾವ (ಷ. ಬ).

ಪೂರ್ವದಲ್ಲಿ ಪಾತಾಳಲೋಕದಲ್ಲಿ ತಪಸ್ಸುಮಾಡುತ್ತಿದ್ದ ಕಪಿಲ ಋಷಿಯ ಬೆನ್ನ ಹಿಂಗಡೆಯಲ್ಲಿ ಇಂದ್ರನಿಂದ ಗೋಪ್ಯವಾಗಿಡಲ್ಪಟ್ಟಿದ್ದ ಯಜ್ಞಾಶ್ವವನ್ನು ತೆಗೆದುಕೊಳ್ಳುವುದಕ್ಕುದ್ಯುಕ್ತರಾದ ಸಗರಚಕ್ರವರ್ತಿಯ ಅರವತ್ತು ಸಹಸ್ರಜನ ಪುತ್ರರೂ ಕಪಿಲಋಷಿಯ ತಪೋಭಂಗದ ವ್ಯಾಜದಿಂದ ಆತನ ನೇತ್ರಾಗ್ನಿಯಿಂದಲೆ ದಗ್ಧರಾದರು. ಅವರಿಗೆ ಸದ್ಗತಿಯನ್ನುಂಟುಮಾಡಲು ತದ್ಗೋತ್ರಜನಾದ ಭಗೀರಥನು ಅನೇಕ ವರ್ಷಗಳು ತಪಸ್ಸುಮಾಡಿ ಸ್ವರ್ಗಲೋಕದಲ್ಲಿರುವ ಗಂಗಾನದಿಯು ಭೂಲೋಕಕ್ಕೆ ಬರುವಂತೆ ಮಾಡಿದನು. ಆ ನದಿಯು ಸ್ವರ್ಗದಿಂದ ಒಂದೇ ಉರುಬೆಗೆ ಭೂಮಿಯಮೇಲೆ ಬಿದ್ದರೆ ಅದರ ವೇಗದಿಂದ ಪ್ರಪಂಚವೇ ನಾಶವಾದೀತೆಂದು ಪರಮೇಶ್ವರನು ಮೊದಲು ಅದನ್ನು ತನ್ನ ಜಡೆಯಲ್ಲಿ ಧರಿಸಿ ಅನಂತರ ಭೂಲೋಕಕ್ಕೆ ಬಿಟ್ಟುಬಿಟ್ಟನು. ಅಂದಿನಿಂದಲೂ ಈಶ್ವರನಿಗೆ ಗಂಗಾಧರನೆಂಬ ಹೆಸರು ಬಂದಿದೆ.

ಈ ಪದ್ಯದಲ್ಲಿ "ದೇವಗಂಗಾಧರಂ ನಮ್ಮನು ಸಲಹು" ಎಂಬುದು ಸಕರ್ಮಕ ಕರ್ತರಿಪ್ರಯೋಗವು. (ನೀನು ಎಂಬ ಕರ್ತೃವು ಅಧ್ಯಾಹಾರವು) ||೨||

ವಿಘ್ನೇಶ್ವರ ಸ್ತೋತ್ರವು.

ಪ್ರಸ್ತುತದೊಳು - ಕಾಲಕ್ಕೆ ಸರಿಯಾಗಿ, ಒಗೆದ - ಉಂಟಾದ, ಮುಂಬೆಳಗು - ಪ್ರಾತಃಕಾಲದ ಕಾಂತಿಯು, ಅಮಲ-ಪರಿಶುದ್ಧವಾದ, ದಂತದ - ಕೋರೆಹಲ್ಲಿನ, ಗಭಸ್ತಿ - ಮರೀಚಿಯು, (ಕಿರಣವು), ನವ - ನೂತನವಾದ, ಪೂರ್ವ-ಮೂಡಲಲ್ಲಿರುವ, ಸಂಧ್ಯಾರುಣಂ - ಸಂಜೆಗೆಂಪು, ಭಾಳ - ಫಾಲದಲ್ಲಿ ಎಂದರೆ ಹಣೆಯಲ್ಲಿ, ವಿನ್ಯಸ್ತ - ಇಡಲ್ಪಟ್ಟಿರುವ,

ಗ್ರೈವನು, ಅಶೇಷ ದೇವತಾಗಣದಿಂ ಸಂಪೂಜ್ಯನಾದವನೂ ಆಗಿ, ಲೋಕವಿಖ್ಯಾತವಾದ ಮಹಾತ್ಮೆಯುಳ್ಳ, ಸೂರ್ಯ ಚಂದ್ರ ಅಗ್ನಿಗಳೇ ಕಣ್ಣುಗಳಾಗಿರುವ, ಭಗೀರಥರಾಯನ ಇಷ್ಟಸಿದ್ಧಿಗಾಗಿ ಮೊದಲು ಗಂಗೆಯನ್ನು ಜಡೆಯಲ್ಲಿ ಧರಿಸಿ ಪುನಃ ಹೊರಕ್ಕೆ ...ಂಥ, ಪರಮೇಶ್ವರನು ನಮ್ಮನ್ನು ಎಡಬಿಡದೆ ಸಂರಕ್ಷಣೆಯನ್ನು ಮಾಡಲಿ" ವಿಘ್ನಗಳು ಹೇರಳವಾಗಿದ್ದು ಗ್ರಂಥವು ಪರಿಸಮಾಪ್ತಿಯನ್ನು ಹೊಂದದೆ ಹೋದೀತೆಂದು ನೆನೆದು ಸಕಲ ಪುರುಷಾರ್ಥಪ್ರದನೂ, ಆದಿಪೂಜ್ಯನೂ ಆಗಿರುವ ವಿಘ್ನೇಶ್ವರನ ಪ್ರಾರ್ಥನಾರೂಪವಾದ ಮಂಗಳವನ್ನು ಪುನಃ ರಚಿಸಿದಾನೆಂದರಿಯಬೇಕು. ||೨|| ಬೆಳಗಿನ ಜಾವದಲ್ಲಿ ಆಗತಾನೆ ಉದಯಿಸಿರುವ ಸೂರ್ಯಕಾಂತಿ (ಕಿರಣ) ಯೇ ಪರಿಶುದ್ಧವಾದ ಕೋರೆಹಲ್ಲಿನ ಕಾಂತಿಯಾಗಿಯೂ, ಉದಯಪರ್ವತದಲ್ಲಿ ನೂತನವಾಗಿ ಉತ್ಪನ್ನವಾಗುವ ಸಂಜೆಗೆಂಪೇ ಲಲಾಟನ್ಯಸ್ತಮಾದ ಕುಂಕುಮವಾಗಿಯೂ, ಸ್ವರ್ಣ ಛಾಯೆಯಿಂದೊಡಗೂಡಿ ಆಗತಾನೇ ಮೂಡುತ್ತಿರುವ ಎಳೆಯ ಸೂರ್ಯನೇ, ತನ್ನ ಶಿರಸ್ಸಿನಲ್ಲಿಟ್ಟುಕೊಂಡು ಇರತಕ್ಕ ಮಣಿ ಖಚಿತವಾದ ಕಿರೀಟವಾಗಿಯೂ, ಆಗು

ಕದಮಣಿಮುಕುಟಮಾಗಲುದಯಾಚಲದ | ವಿಸ್ತಾರದಂತೆಭದ್ರಾಕೃತಿಯೊಳೊಪ್ಪುವಸ | ಮಸ್ತಸಿದ್ಧಿಪ್ರದಾಯಕವಿನಾಯಕ ಮಾಳ್ಪುದೆಮಗೆ ನಿರ್ವಿಘ್ನತೆಯನು ||೧|| ಭೂವ್ಯೋಮಪಾತಾಳಲೋಕಂಗಳಲ್ಲಿ ಸಂ | ಭಾವ್ಯರೆಂದೆನಿಸಿಕೊಂಬಖಿಳದೇವರ್ಕಳಿಂ | ಸೇವ್ಯಮಾದಜನಪಟ್ಟಣದರಾಣಿವರದೆ ಕಲ್ಯಾಣಿಫಣಿವೇಣಿವಾಣಿ || ಕಾವ್ಯಮಿದು ಭುವನದೊಳ್ಸಕಲಜನರಿಂದ ಸು | ಶ್ರಾವ್ಯಮಪ್ಪಂತೆನ್ನವದನಾಬ್ಜದಲ್ಲಿ ನೀ | ನೇವ್ಯಾಪಿಸಿರ್ದಮಲಸುಮತಿಯಂ ತಾಯೆನಗೆತಾಯೆನಗೆಗೂಡಿನೋಡಿ ||೨|| ಪಾರದೆಪದಾರ್ಥ

---

ಸಿಂದೂರಂ-ಕುಂಕುಮವು, (ಚಂದ್ರ) ಅಂಕುರಿಪ-ಉತ್ಪತ್ತಿಯಾಗುತ್ತಲಿರುವ, ಪೊಂಬಿಸಿಲೊಡನೆ-ಚಿನ್ನದ ವರ್ಣವಾದ ಬಿಸಲಿನ ಜೊತೆಯಲ್ಲಿ, ಮೂಡುವ-ಉತ್ಪನ್ನವಾಗುವ, ಎಳನೇಸರು-ಪ್ರಾತಃಕಾಲದ ಸೂರ್ಯನು, ಎಸೆವ-ಹೊಳೆಯುವ, ಮಸ್ತಕದ-ಶಿರಸ್ಸಿನ, ಮಣಿ- ರತ್ನಗಳಿಂದ ಕೆತ್ತಲ್ಪಟ್ಟ, ಮಕುಟಂ - ಕಿರೀಟವು, ಆಗಲು-ಆಗಲಾಗಿ, ಉದಯಾಚಲದ - ಪೂರ್ವದಿಕ್ಕಿನ ಪರ್ವತದ, ವಿಸ್ತಾರದಂತೆ-ವಿಶಾಲತೆಯಹಾಗೆ, ಭದ್ರ-ಮಂಗಳಕರವಾದ, ಆಕೃತಿಯೊಳು - ಆಕಾರದಿಂದ, ಒಪ್ಪುವ-ಹೊಳೆಯುತ್ತಲಿರುವ ಎಂದರೆ ಸಹಿತವಾಗಿರುವ, ಸಮಸ್ತ-ಅಶೇಷವಾದ, ಸಿದ್ಧಿ-ಇಷ್ಟಾರ್ಥಗಳನ್ನು, ಪ್ರದಾಯಕಂ-ದಯಪಾಲಿಸತಕ್ಕ, ವಿನಾಯಕ - ಗಣೇಶನೇ, ಎಮಗೆ - ನಮಗೆ, ನಿರ್ವಿಘ್ನತೆಯನು - ತೊಂದರೆಗಳಿಲ್ಲದಿರುವುದನ್ನು, (ಅಡ್ಡಿಗಳಿಲ್ಲದಿರುವುದನ್ನು), ಮಾಳ್ಪುದು-ಉಂಟುಮಾಡಬೇಕು.

ಈ ಪದ್ಯದಲ್ಲಿ "ವಿನಾಯಕ ನಿರ್ವಿಘ್ನತೆಯನು ಮಾಳ್ಪುದು" ಎಂಬುದು ಪ್ರಧಾನವಾದ ಸಕರ್ಮಕ ಕರ್ತರಿ ವಾಕ್ಯವು.

ಬೆಳಕಿನಮುಂದು - ಮುಂಬೆಳಗು, (ಅ. ಭಾ. ಸ) ಉದಯಾಚಲ, ಭದ್ರಾಕೃತಿ, ಸಂಧ್ಯಾರುಣ ಈ ಮೂರೂ ಸವರ್ಣದೀರ್ಘಸಂಧಿ, ಭದ್ರ-ಆನೆಯ, ಆಕೃತಿ- ಮುಖದ ಆಕಾರವುಳ್ಳವನು, ವಿ-ತೊಂದರೆ (ಎಡರುಗಳಿಗೆ) ನಾಯಕಂ-ಒಡೆಯ, (ಷ. ತ). ||೧||

ಭೂ ವ್ಯೋಮ ಪಾತಾಳಲೋಕಂಗಳಲ್ಲಿ - ಸ್ವರ್ಗ ಮರ್ತ್ಯ ಪಾತಾಳಂಗಳೆಂಬ ತ್ರಿಲೋಕಂಗಳಲ್ಲಿಯೂ, ಸಂಭಾವ್ಯರು-ಪೂಜಾರ್ಹರು, ಎಂದು-ಎಂಬದಾಗಿ, ಎನಿಸಿಕೊಂಬ - ಹೇಳಿಸಿಕೊಳ್ಳತಕ್ಕ, ಅಖಿಲ-ಅಶೇಷರಾದ, ದೇವರ್ಕಳಿಂ-ಸುರರಿಂದ, ಸೇವ್ಯಮಾದ-ಸೇವಾರ್ಹಮಾಗಿರುವ, ಅಜನ-ಕಮಲಾಸನನ, ಪಟ್ಟದರಾಣಿ-ಪಟ್ಟಮಹಿಷಿಯಾಗಿರುವ, ವರದೆ-ಇಷ್ಟಾರ್ಥಪ್ರದೆಯಾದ, ಕಲ್ಯಾಣಿ-ಮಂಗಳಕರಳಾದ, ಫಣಿವೇಣಿ-ನಾಗವೇಣಿಯಾದ, (ಕರಿಯ ಹಾವಿನಂತೆ ಉದ್ದವಾದ ಮತ್ತು ಕಪ್ಪಾದ ಜಡೆಯುಳ್ಳ) ತಾಯೆ-ಜನನಿಯಾದ, ವಾಣಿ-ಶಾರದೆಯೆ, ಇದುಕಾವ್ಯಂ-ಈ ಕೃತಿಯು, ಭುವನದೊಳು-ಪ್ರಪಂಚದಲ್ಲಿ, ಸಕಲ ಜನರಿಂದೆ-ಎಲ್ಲರಿಂದಲೂ, ಸುಶ್ರಾವ್ಯಂ - ಶ್ರವಣಾರ್ಹವಾದ್ದು, ಅಪ್ಪಂತೆ- ಆಗುವರೀತಿಯಾಗಿ, ಎನ್ನ-ನನ್ನ, ವದನ-ಮುಖವೆಂಬ, ಅಬ್ಜದಲಿ-ಕಮಲದಲ್ಲಿ, (ಕಮಲದಂತಿರುವ ನನ್ನ ಮುಖದಲ್ಲಿ) ನೀನೆ ವ್ಯಾಪಿಸಿ-ನೀನು ಆವರಿಸಿಕೊಂಡು, ಇರ್ದು-ಇದ್ದು, ನಗೆಗೂಡಿ-ಆಹ್ಲಾದದಿಂದೊಡಗೂಡಿ, ನೋಡಿ-ಈಕ್ಷಿಸಿ, ಎನಗೆ-ನನಗೆ, ಅಮಲ-ಪರಿಶುದ್ಧವಾದ, ಸು-ಒಳ್ಳೆ, ಮತಿಯಂ-ಬುದ್ಧಿಯನ್ನು, ತಾ-ದಯಪಾಲಿಸು.

ಈ ಪದ್ಯದಲ್ಲಿ "ನೀನು, ಅಮಲಮತಿಯಂತಾ" ಎಂಬುದು ಪ್ರಧಾನವಾದ ಸಕರ್ಮಕ ಕರ್ತರಿವಾಕ್ಯ

ಜ-ಜನ್ಮವು, ಅ-ಇಲ್ಲದವನು, (ಅಜ) ಮತ್ತು ಅ-ಹರಿಯಿಂದ, ಜ-ಉತ್ಪನ್ನನಾದವನು, (ಅಜ) ಫಣವುಳ್ಳದ್ದು ಫಣಿ, ಅಪ್-ನೀರಿನಲ್ಲಿ, ಜ-ಹುಟ್ಟಿದ್ದು, (ಅಬ್ಜ) ವದನವೆಂಬ ಅಬ್ಜ-ವದನಾಬ್ಜ (ಅ. ಪೂ. ಕ). ||೨||

---

ತ್ತಿರಲು, ಪೂರ್ವಗಿರಿಯ ವಿಶಾಲತೆಯೋಪಾದಿಯಲ್ಲಿ, ಶುಭಾಕಾರವನ್ನು ಮತ್ತು ಶುಭಕರವಾದ ಆನೆಯ ಆಕಾರವನ್ನೂ ಧರಿಸಿ ಪ್ರಕಾಶಿಸುತ್ತಿರುವ ಭಕ್ತರ ಕೋರಿಕೆಗಳನ್ನೆಲ್ಲಾ ನಿರ್ವಿಘ್ನವಾಗಿ ಈಡೇರಿಸುವ ಗುಣವುಳ್ಳ ಗಣೇಶನು ನಾನು ಮಾಡುತ್ತಿರುವ ಕಾರ್ಯಕ್ಕೆ ತೊಂದರೆಗಳುಂಟಾಗದಿರುವಂತೆ ನೋಡಿಕ್ಕೊಂಡು ಕಾಪಾಡಲಿ || ೧ || ಇನ್ನು ಮುಂದೆ ಸಕಲ ಶಬ್ದಾರ್ಥ ಸ್ವರೂಪಳಾದ ಶಾರದೆಯನ್ನು ಪ್ರಾರ್ಥಿಸುತ್ತಲಿದ್ದಾನೆ. ಭೂಲೋಕ, ಪಾತಾಳ, ಸ್ವರ್ಗಲೋಕಗಳೆಂಬ ಮೂರು ಲೋಕಗಳಲ್ಲಿಯೂ ಪೂಜಾರ್ಹರಾಗಿ ಇರತಕ್ಕ ಅಶೇಷರಾದ ತ್ರಿದಶರಿಂ ಸೇವ್ಯಳಾದ, ಬ್ರಹ್ಮನಿಗೆ ಮುಖ್ಯ ಮಹಿಷಿಯಾಗಿರುವ, ಇಷ್ಟಾರ್ಥಾರ್ಥ ಸಿದ್ಧಿಯಂ ಗೈಯ್ಯುವ ಮತ್ತು ಮಂಗಳಕರಳಾಗಿರತಕ್ಕ ಹಾವಿನಂತೆ ಉದ್ದವಾದ ಜಡೆಯುಳ್ಳ, ತ್ರೈಲೋಕ್ಯಜನನಿಯಾಗಿರು ದೋ ಶಾರದೆಯೇ! ಈ ಪ್ರಪಂಚದಲ್ಲಿರುವ ಸಕಲ ಜನರಿಗೂ ಆನಂದವನ್ನು ಉಂಟುಮಾಡುವಂತೆ ನಾನು ಈ ಕೃತಿಯನ್ನು ಬಯಲ್ಲಿ ಸಲು ನೀನು ನನ್ನ ಮುಖ ಕಮಲವನ್ನು ಆಶ್ರಯಿಸಿ ಪರಿಶುದ್ಧವಾದ ಜ್ಞಾನವನ್ನು ನನಗೆ ಕರುಣಿಸಿ ಕಾಪಾಡಬೇಕೆಂದು ಪ್ರಾರ್ಥಿಸದ ಸುತ್ತೇನೆ. ||೨|| ಇತರರ ಪದಾರ್ಥಕ್ಕೆ ಆಶೆಪಡದೆ ಶ್ರೇಷ್ಠನಾದ ಯತೀಶ್ವರನಿಗೆ ಅಪಮಾನವನ್ನು ಉಂಟುಮಾಡದಂತೆ ನೀನು

(ಪರಾರ್ಥವೆಂದು ಪಾ.) ವಂವರಯತಿಗೆಭಂಗವುಂ | ತಾರದೆನಿಜಾನ್ವಯಕ್ರಿಯೆಗಳ್ಗೆದೂಷಣಂ | ಬಾರದೆ ವಿಶೇಷಗುಣಗಣ ಕಲಾಗೌರವಂತೀರದೆ ದುರುಕ್ತಿಗಳ್ಗೆ || ಸೇರದೆಸುಮಾರ್ಗದೊಳ್ನಡೆವಸತ್ಪುರುಷನಗ | ಭೀರದೆಸೆಯಂಪೋಲ್ವಕಾವ್ಯಪ್ರಬಂಧವಂ | ಶಾರದೆಯಕರುಣದಿಂಪೇಳ್ವೆನಾಂದೋಷವುಂತೊರೆದೆಲ್ಲರುಂಕೇಳ್ವುದು || ೫ || ಛಂದಸ್ಸುಲಕ್ಷಣಮಲಂಕಾರಭಾವರಸ | ವೊಂದಿಕಲೆವೆತ್ತಸತ್ಕೃತಿಚಮತ್ಕೃತಿಯುಕ್ತಿ | ಯೊಂದುಮಿಲ್ಲದೆಕಾವ್ಯಮಶ್ರಾವ್ಯಮಕ್ಕೆಂದುಜರೆದುಕವಿತೆಯನುಬರಿದೆ || ದಂದುಗಕ್ಕೊಳಗಾಗಿಪೇಳ್ದೆನೆಂದೆನ್ನನಗು | ವಂದಮುಂಮಾಡದೆನಗೊಲಿದಿತ್ತನಮಲಮತಿ | ಯಂದೇವಪುರದಲಕ್ಷ್ಮೀರಮಣನೆಂದರಿದುಕೇಳ್ವುದೆಲ್ಲಾಸುಜನರು ||೬|| ಕೆನೆವಾಲನಂಗಡೆದುನವನೀತಮುಂತೆಗೆದುಬಾ | ಯ್ಗಿನಿದಾಗಿಸವಿಯದದರೊಳಗೆಪುಳಿವಿಡಿದು

---

ಟೀ|| ಪದ – ಶಬ್ದಸಮುದಾಯದ, ಅರ್ಥಮಂ – ಅಭಿಪ್ರಾಯವನ್ನು, (ಪರ – ಇತರರ, ಅರ್ಥಮಂ – ವಸ್ತುವನ್ನು ಎಂದು ಪಾಠಾಂತರವು) ಎಂದರೆ ಬೇರೆಯಾದ ಅರ್ಥವೆಂಬುದನ್ನು, ಪಾರದೆ-ಪಡೆಯದೆ, (ಹೆರರೊಡವೆಯನ್ನಪಹರಿಸದೆ) ವರ–ಉತ್ತಮವಾದ, ಯತಿಗೆ–ಯತೀಶ್ವರನಿಗೆ, ಮತ್ತು ಪದ್ಯಗಳಯತಿ ಎಂಬ ಸ್ಥಳಕ್ಕೆ, ಭಂಗಮುಂ-ರಾಹಿತ್ಯವನ್ನು ಮತ್ತು ಅಮರ್ಯಾದೆಯನ್ನು, ತಾರದೆ–ಬರಮಾಡದೆ, (ಉಂಟುಮಾಡದೆ) ನಿಜ–ತನ್ನದಾದ, ಅನ್ವಯಂ–ಅನ್ವಯಯುಕ್ತವಾದ ಪದಗಳಿಗೆ ಮತ್ತು ಕುಲಕ್ಕೆ, ಕ್ರಿಯೆಗಳ್ಗೆ–ತಿಙಂತಗಳಿಗೆ ಮತ್ತು ಕಾರ್ಯಗಳಿಗೆ, ದೂಷಣಂ–ಅಪವಾದವು, ಮತ್ತು ತಪ್ಪು, ಬಾರದೆ-ಬಿದಗದಂತೆ, ವಿಶೇಷ–ಬಹಳವಾಗಿ ಮತ್ತು ಅತಿಯಾಗಿ, ಗುಣ–ಕೃತಿಸಂಬಂಧಗುಣಗಳಿ ಮತ್ತು ಶಾಂತಿಯೇ ಮೊದಲಾದವುಗಳ, ಗಣ–ಮಾತ್ರೆಗಳಿಂದ ಯುಕ್ತವಾದ ಮತ್ತು ಸಮೂಹದ. ಕಲಾ–ಪ್ರಕಾಶದ, ಮತ್ತು ಬಿಜ್ಜೆಯ, ಗೌರವಂ–ಗಾಂಭೀರ್ಯವನ್ನು ಮತ್ತು ಗೌರವವನ್ನು, ತೀರದೆ–ವಿಸರ್ಜಿಸದೆ, ಸು-ಒಳ್ಳೆಯದಾದ, ಮಾರ್ಗದೊಳ್–ದಾರಿಯಲ್ಲಿ ಮತ್ತು ದ್ರಾಕ್ಷೆಯಪಾಕದ ಪದ್ಧತಿಯಲ್ಲಿ, ನಡೆವ–ತಿರುಗುತ್ತಿರುವ, ಸತ್ಪುರುಷನ–ಸತ್ಸಂಪ್ರದಾಯವುಳ್ಳವನ, ಗಭೀರ–ಗಾಂಭೀರ್ಯಮಾದ, ದೆಶೆಯಂ–ತೆರನನ್ನು, ಪೋಲ್ವ–ಒಪ್ಪತಕ್ಕ, ಪ್ರಬಂಧಮಂ-ಕಾವ್ಯವನ್ನು (ಕಥೆಯನ್ನು) ಶಾರದೆಯ–ಸರಸ್ವತೀದೇವಿಯ, ಕರುಣೆಯಿಂ-ದಯೆಯಿಂದ, ನಾಂ–ನಾನು, ಪೇಳ್ವೆನು–ಹೇಳುತ್ತಿದೇನೆ. ದೋಷಮುಂ–ನಿಂದೆಯನ್ನು, ತೊರೆದು–ವಿಸರ್ಜಿಸಿ, (ಎಣಿಸದೆ) ಎಲ್ಲರೂ-ಸಮಸ್ತರೂ, ಕೇಳ್ವುದು-ಲಾಲಿಸಬೇಕು.

ಈ ಪದ್ಯದಲ್ಲಿ "ನಾಂ ಕಾವ್ಯಪ್ರಬಂಧಮಂಪೇಳ್ವಂ" ಎಲ್ಲರುಂ ಇದಂಕೇಳ್ವುದು, ಎಂಬೆರಡು ಪ್ರಧಾನವಾದ ಸಕರ್ಮಕಕರ್ತರಿ ವಾಕ್ಯಗಳಿರುವುವು. ಇದಂ ಎಂಬ ಕರ್ಮಪದವು ಅಧ್ಯಾಹಾರವು ||೫||

(ಅರ್ಥಚಮತ್ಕಾರದಿಂದಲೂ, ಸರಸಗುಣಾಲಂಕಾರಗಳಿಂದಲೂ ಒಡಗೂಡಿ ಕೇಳುವುದಕ್ಕೆ ಇಂಪಾಗಿಯೂ ಇರುವ ಕಾವ್ಯರಚನೆಗೆ ದ್ರಾಕ್ಷಾಪಾಕವೆನ್ನುವರು.

ಟೀ || ಛಂದ-ಛಂದಸ್ಸನ್ನೂ, ಸು-ಒಳ್ಳೇದಾದ, ಲಕ್ಷಣಂ–ಅಸಮಾನವಾದ ಧರ್ಮಚಿಹ್ನೆಯನ್ನು (ಕೃತಿಯ ಲಕ್ಷಣವನ್ನು) ಭಾವ-ಅಭಿಪ್ರಾಯ, ರಸ–ಶೃಂಗಾರವೇ ಮೊದಲಾದ ನವರಸಗಳು ಇವುಗಳನ್ನು, ಒಂದಿ–ಸೇರಿ, ಕೆಲೆವೆತ್ತ–ಕಾಂತಿಯಂತಾಳಿದ, ಸತ್ಕೃತಿ-ಸದ್ಗ್ರಂಥವು, ಚಮತ್ಕೃತಿ–ಚತುರೋಕ್ತಿಯು, ಒಂದುಂ–ಇದು ಯಾವದೂ, ಇಲ್ಲದ-ಇಲ್ಲದೆಯಿರುವ, ಕಾವ್ಯಂ–ಕೃತಿಯು, ಅಶ್ರಾವ್ಯಂ-ಕೇಳಲನರ್ಹವಾದದ್ದು, ಅಕ್ಕೆ-ಆಗಲಿ, ಎಂದು–ಎಂಬದಾಗಿ, ಕವಿತೆಯನು–

---

ತಕ್ಕ, ತನ್ನ ಸಂತತಿಗೂ ತನ್ನಿಂಗಯ್ಯಲ್ಪಡುವ ಕಾರ್ಯಕ್ಕೂ. ಕಾವ್ಯಕ್ಕೂ ಯಾವ ವಿಧವಾದ ಕುಂದೂ ಇಲ್ಲದಂತೆಯೂ ಒಳ್ಳೆಕುಲದಲ್ಲಿ ಹುಟ್ಟತಕ್ಕದ್ದು, ಔದಾರ್ಯಸ್ವಭಾವ, ಅಧಿಕವಾದ ಐಶ್ವರ್ಯವಿರುವುದು. ಇವೇ ಮೊದಲಾದ ಸದ್ಗುಣಗಳನ್ನೂ ವಿದ್ಯಾಸಂಬಂಧವಾದ ಮರ್ಯಾದೆಯನ್ನೂ ಹೊಂದಿ, ತುಚ್ಛ ಮಾರ್ಗವನ್ನು ಪರಿತ್ಯಜಿಸಿ ಸನ್ಮಾರ್ಗವನ್ನೇ ಅವಲಂಬಿಸಿ ಇರುವ ಧಾರ್ಮಿಕನ ಹಾಗೆ, ಬಹಳ ಗಂಭೀರವಾದ ಮಾರ್ಗವನ್ನು ಅನುಸರಿಸಿ, ಯಾವ ವಿಧವಾದ ದೋಷವೂ ಇಲ್ಲದೆ ನಿರ್ದುಷ್ಟವಾದ, ಯತಿಸ್ಥಾನ ಮೊದಲಾದ್ದರಲ್ಲಿಯೂ ದೋಷವಿಲ್ಲದಿರುವ, ಸುಬಂತ ತಿಙಂತ ಸಂಬಂಧವಾದ ಯಾವ ನ್ಯೂನತೆಗೂ ಅವಕಾಶವಿಲ್ಲದಿರುವ, ನಿರ್ದೋಷವಾದ ಎಂದರೆ ಅಶುಭವಾದ ಮಾತುಗಳು ಮತ್ತು ಅಪಶಬ್ದಗಳೂ ಯಿಲ್ಲದಿರುವ ಕೃತಿಸಂಬಂ[illegible]ವಾದ ಎಲ್ಲಾ ಗುಣಗಣಗಳಿಂದಲೂ ಕೂಡಿರುವ ಈ ಕಾವ್ಯವನ್ನು ಸಕಲರೂ ದೋಷವನ್ನೆಣಿಸದೆ ಸಂತೋಷಚಿತ್ತದಿಂದ [illegible]ಸಬೇಕು. ಶಾರದೆಯ ಅನುಗ್ರಹದಿಂದ ನಾನು ಹೇಳುತ್ತೇನೆಂದು ಕವಿಯು ಪ್ರಾರ್ಥಿಸಿದಾನೆ || ೫ || ಸಾಧಾರಣವಲ್ಲದಿ ಯ[illegible]ರ್ಮ ಮಾರ್ಗವನ್ನೂ, ಉಪಮಾಲಂಕಾರವೇ ಮೊದಲಾದ ಅಲಂಕಾರಗಳನ್ನೂ, ಸದ್ಭಾವವನ್ನೂ ಉಳ್ಳ ಗ್ರಂಥಕ್ಕೆ ಪಿಲ್ಲದ[illegible]ವಾದ ಗ್ರಂಥವೆಂಬ ನಾಮಧೇಯವು ಬರುವುದು. ಕಾವ್ಯದಲ್ಲಿ ಯುಕ್ತಿಚಾತುರ್ಯಗಳಿಲ್ಲದಿದ್ದರೆ ಕೇಳುವುದಕ್ಕೆ ಮನ ನಾನು ಒಪ್ಪುವುದಿಲ್ಲವೆಂಬುವತೆರನಾದ ಹಾಸ್ಯೋಕ್ತಿಗಳಿಗೆ ಮಾತ್ರವೇ ಈ ಗ್ರಂಥವನ್ನು ಕವಿಯು ಬರೆದನೆಂದು ಜನರು

ರಸ | ವನೆಕೆಡಿಸಿದೊಡೆಕರೆದಸುರಭಿಗಪ್ಪುದೆಕೊರತೆಕಾವ್ಯಮಂಕೇಳ್ದುಮಥಿಸಿ || ಜನಿಸಿದಪದಾರ್ಥಮಂತಿಳಿದುನೋಡದೆವಿನೂ | ತನಕವಿತೆಯೆಂದುಕುಂದಿಟ್ಟುಜರೆದೊಡೆಪೇಳ್ದ | ವನೊಳಾವದೂಣೆಯಂಜಾಣರಿದನರಿದುಮತ್ಸರವನುಳಿದಾಲಿಸುವುದು || ೭ || ಜಾಣರಂತಲೆದೂಗಿಸದೆನುಡಿದೊಡಾಪದ | ಕ್ಕೂಣೆಯುಂಬಹುದೆಂದುಸರಸೋಕ್ತಿಯಿಂದಗೀ | ರ್ವಾಣಪುರನಿಲಯರಕ್ಷ್ಮೀವರಂ ತಾನೆ ಸಂಗೀತಸುಕಲಾನಿಪುಣನು || ವೀಣೆಯಿಂಗಾನನುಂನುಡಿಸುವಂದದೊಳೆನ್ನ | ವಾಣಿಯಿಂಕವಿತೆಯಂಪೇಳಿಸಿದನೆಂದರಿದು |

---

ನಾನು ರಚಿಸಿದ ಗ್ರಂಥವನ್ನು, ಬರಿದೆ-ಅನ್ಯಾಯವಾಗಿ, ಜರಿದು-ಹೀಯಾಳಿಸಿ, ದಂದುಗಕ್ಕೆ-ಅಪಹಾಸ್ಯಕ್ಕೆ, ಬಳಗಾಗಿ-ಗುರಿಯಾಗಿ, ಪೇಳ್ದೆ-ಹೇಳಿದೇನೆ, ಎಂದು-ಎಂಬದಾಗಿ, ಎನ್ನ-ನನ್ನನ್ನು, ನಗುವಂದನುಂ-ನಗೆಗೀಡಾಗಿ, ಮಾಡದೆ-ಎಸಗದೆ, ಎನಗೆ-ನನಗೆ, ದೇವಪುರ(ದ)-ದೇವಪುರವೆಂಬ ಊರೇ ವಾಸವಾಗಿ ಉಳ್ಳ, ಲಕ್ಷ್ಮೀರಮಣನು-ವಿಷ್ಣುವು, ಅಮಲ-ಪರಿಶುದ್ಧವಾದ, ಮತಿಯಂ-ಅರಿವನ್ನು, ಒಲಿದು-ವಿಶ್ವಾಸದಿಂದ, ಇತ್ತನು-ದಯೆಪಾಲಿಸಿದನು, ಎಂದು-ಎಂಬದಾಗಿ, ಎಲ್ಲಾಸುಜನರು-ಅಶೇಷರಾದ ಸತ್ಪುರುಷರೂ, ಅರಿದು-ತಿಳಿದುಕೊಂಡು, ಕೇಳ್ವುದು-ಲಾಲಿಸಬೇಕು ||

ಈ ಪದ್ಯದಲ್ಲಿ "ದೇವಪುರದ ಲಕ್ಷ್ಮೀರಮಣನು ಅಮಲಮತಿಯ ಇತ್ತಂ" "ಎಲ್ಲಾ ಸುಜನರು ಇದಂ ಕೇಳ್ವುದು" ಈ ಎರಡೂ ಸಕರ್ಮಕ ಕರ್ತರಿವಾಕ್ಯಗಳು.

ಛಂದಸ್ಸು :—ಪದ್ಯಗಳ ರಚನಾಭಿಜ್ಞಾನ ಶಾಸ್ತ್ರವು.

ರಸ :—ಶೃಂಗಾರ, ವೀರ, ಕರುಣ, ಅದ್ಭುತ, ಹಾಸ್ಯ, ಭಯಾನಕ, ಭೀಭತ್ಸ, ರೌದ್ರ, ಶಾಂತಿ ಎಂಬ ಒಂಬತ್ತು ರಸಗಳು || ೬ ||

ಟೀ|| ಕೆನೆವಾಲನಂ-ಕೆನೆಯಿರತಕ್ಕ ಹಾಲನ್ನು, ಕಡೆದು-ಮಥನಮಾಡಿ, ನವನೀತಮಂ-ಬೆಣ್ಣೆಯನ್ನು, ತೆಗೆದು-ಈಚೆಗೆ ತೆಗೆದು, (ಎತ್ತಿ) ಬಾಯಿಗೆ, ರಸನೆಗೆ, ಇನಿದಾಗಿ-ರುಚಿಯಾಗಿರುವಂತೆ, ಸವಿಯದೆ - ಆಸ್ವಾದಿಸದೆ, ಅದರೊಳಗೆ-ಅದರಲ್ಲಿ (ಬೆಣ್ಣೆ), ಪುಳಿವಿಡಿದು-ಹುಳಿಯನ್ನು ಆಗಮಾಡಿಸಿ, ರಸವನೆ-ಅದರರುಚಿಯನ್ನು, ಕೆಡಿಸಿದೊಡೆ-ನಿರ್ನಾಮಮಾಡಿದರೆ (ಹಾಳು ಮಾಡಿದರೆ, ಕರೆದುಸುರಭಿಗೆ-ಹಾಲನ್ನಿತ್ತ ಗೋವಿಗೆ, ಕೊರತೆ-ಬಾಧಕವು, (ನ್ಯೂನತೆಯು) ಅಪ್ಪುದೆ-ಪ್ರಾಪ್ತವಾದೀತೆ, ಕಾವ್ಯಮುಂಕೇಳ್ದು-ಕೃತಿಯನ್ನು ಕೇಳಿ, ಮಥಿಸಿ-ಚನ್ನಾಗಿ ಪರಿಶೀಲಿಸಿ, ಜನಿಸಿದ-ಅದರಿಂದುಂಟಾದ, ಪದಾರ್ಥವಂ-ವಸ್ತುವನ್ನು (ಅರ್ಥ ಸ್ವಾರಸ್ಯವನ್ನು) ತಿಳಿದು-ತಿಳಿದುಕೊಂಡು, ನೋಡದೆ-ಲಕ್ಷಿಸದೆ, ವಿನೂತನ-ಹೊಸದಾಗಿರುವ, ಕವಿತೆ ಎಂದು-ಕೃತಿಯೆಂಬದಾಗಿ, ಕುಂದಿಟ್ಟು - ದೋಷವನ್ನುಂಟುಮಾಡಿ, ಜರೆದೊಡೆ-ಹೀಯಾಳಿಸಿದರೆ, ಆವುದು-ಯಾವುದು, ಊಣೆಯಂ-ದೋಷವು ? ಜಾಣರು-ಪ್ರಾಜ್ಞರಾದವರು, ಇದನು-ಇದನ್ನು, ಅರಿದು - ಚನ್ನಾಗಿ ಯೋಚಿಸಿ, ಮತ್ಸರವನು-ಕೋಪವನ್ನು, (ದ್ವೇಷಬುದ್ಧಿಯನ್ನು) ಉಳಿದು-ಬಿಟ್ಟು, ಕೇಳ್ವುದು-ಲಾಲಿಸತಕ್ಕದ್ದು.

ಟೀ|| ಜಾಣರಂ-ಪ್ರಾಜ್ಞರಾದವರನ್ನು, ತಲೆದೂಗಿಸದೆ-ಮನಮೆಚ್ಚಿಸದೆ, ನುಡಿದೊಡೆ-ಮಾತನಾಡಿದರೆ, ಆ ಪದಕ್ಕೆ-ಆ ವರ್ಣಸಮುದಾಯಕ್ಕೆ, ಊಣೆಯಂ-ದೋಷವು, ಬಹುದು - ಉಂಟಾಗುವುದು, ಎಂದು - ಎಂಬದಾಗಿ, ಸರಸ - ರಸಭರಿತವಾದ, ಉಕ್ತಿಯಿಂದ-ವಚನಂಗಳಿಂದ, ಗೀರ್ವಾಣಪುರ-ದೇವಪುರವೆಂಬ ಗ್ರಾಮವನ್ನೆ, ನಿಲಯ-ಸ್ಥಾನವಾಗಿವುಳ್ಳ, ಲಕ್ಷ್ಮೀ

---

ತಿಳಿಯದೆ ದೇವಪುರವಾಸಿಯಾದ ಶ್ರೀಮನ್ನಾರಾಯಣ ಮೂರ್ತಿಯೇ ದಿವ್ಯಾನುಗ್ರಹವನ್ನು ಕರುಣಿಸಿ ಸುಜ್ಞಾನದಿಂದ ಈ ಕೃತಿಯನ್ನು ಬರೆಯಿಸಿದನೆಂದರಿತು ಅಶೇಷರಾದ ಸುಜನರೂ ಕೇಳಬೇಕು. ಎಂದು ಭಾವವು, = ಇದರಿಂದ ಈ ಕೃತಿಯು ಕವಿಯ ಸ್ವಬುದ್ಧಿ ಮಾತ್ರ ಕಲ್ಪಿತವಲ್ಲವೆಂತಲೂ ದೈವಾನುಗ್ರಹದಿಂದಲೇ ಕವಿತೆಯು ಹೊರಟಿರುವುದೆಂತಲೂ, ಆದುದರಿಂದಲೇ ನಿರ್ದೋಷವಾಗಿ ಸರ್ವಜನರಿಗೂ ಶ್ರಾವ್ಯವಾಗಿರುವುದೆಂತಲೂ ಕವಿಯು ತನ್ನ ಆಶಯವನ್ನು ಹೊರಪಡಿಸಿದಾನೆ ||೬|| ಕೆನೆಯನ್ನುಳ್ಳ ಹಾಲನ್ನು ಕಡೆದು ಬೆಣ್ಣೆಯನ್ನು ಬೇರ್ಪಡಿಸಿ ರುಚಿಯಾಗಿ ಮಾಡಿಕೊಂಡು ತಿಂದು ಸಂತೋಷಪಡುವದನ್ನು ಬಿಟ್ಟು ಅದರಲ್ಲಿ ಹುಳಿಯೂ ಅಸ್ವಾರಸ್ಯವೂ ಉಂಟಾಗುವಂತೆ ಮಾಡಿಕೊಂಡು ಅಮೃತೋಪಮಾನವಾದ ಹಾಲನ್ನಿತ್ತ ಹಸುವನ್ನು ನಿಂದಿಸಿದರೆ ಆ ದೂಷಣೆಯು ಹಸುವಿಗೆ ಹೇಗೆ ಸಲ್ಲಲಾರದೋ ಹಾಗೆಯೇ ನಾನು ಮಾಡಿರುವ ಈ ಕಾವ್ಯಗ್ರಂ[illegible]ವನ್ನು ಆಮೂಲಾಗ್ರವಾಗಿ ಪರಿಶೋಧಿಸಿ ತಿಳಿಯದೆ ಸುಮ್ಮನೆ ನೂತನ ಗ್ರಥವೆಂದು ಅಸೂಯೆಯಿಂದ ತಿರಸ್ಕರಿಸಿದಲ್ಲಿ [illegible]ಷವು ನನಗೆ ಅನ್ವಯಿಸತಕ್ಕದ್ದಲ್ಲ. ಪ್ರಾಜ್ಞರು ಗುಣೈಕ ಪಕ್ಷಪಾತಿಗಳಾಗಿ ಕೇಳಬೇಕೆಂದು ಭಾವವು || ೭ || ಬಾಯ[illegible]ಂ ಹೇಳಬಹುದಾದ ರಾಗಗಳನ್ನು ವೀಣೆಯ ಮುಖಾಂತರ ನುಡಿಸುವಂತೆ ನಾನು ರಚಿಸುವ ಗ್ರಥದಲ್ಲಿ ಪ್ರಯೋಗಿಸುವ[illegible]ಗಳು ಸುಷ್ಠುವಾಗಿಲ್ಲದಿದ್ದರೆ ವಿದ್ವಾಂಸರು ಒಪ್ಪುವುದಿಲ್ಲವೆಂದೂ, ಆ ಪದಕ್ಕೆ ಕೊರತೆಯುಂಟಾಗುತ್ತೆಂದೂ, ಅರಿತು ಶಿ

ಕೇಣಮಂತೊರೆದು ಪುರುಡಿಸುವರಂಜರೆದುಕಿವಿದೆರೆದು ಕೇಳ್ವುದೆಲ್ಲಾಸುಜನರು ||೮|| ದುಷ್ಟಾಹಿಘೋರತರವಿಷವದನದಿಂದಸಂ | ದಷ್ಟಮಾಗಿರುತಿರ್ದೊಡಂದೋಷಮಿರ್ದೊಡಂ | ನಷ್ಟಕಲೆಯಾದೊಡಂಚಂದ್ರನಂತೆನ್ನಕಾವ್ಯದರಸಂಸುಮನಸರ್ಗೆ|| ಇಷ್ಟಮಾಗದೆಮಾಣದಿಂನಾವನಾದೊಡಂ | ಕಷ್ಟಮುಂಬಗೆವವಂಚೋರಂಗೆ ವಿರಹಿಗಂ | ದೃಷ್ಟಾಂತಮಾಗಿಸಲ್ವಂಧರಾವಲಯದೋಳ್ಸಂದೇಹಮೇನಿದರೊಳು || ೯ || ಮೊಗಮಾವಲೀಲೆಯಿಂದೆಸೆವುದಾಭಾವಮಂ | ಮಗುಳೆತೋರುವದಲ್ಲದನ್ಯಪ್ರಕಾರದಿಂ | ಸೊಗಯಿಪುದೆರನ್ನಗನ್ನಡಿಧರೆಯೊಳಾರಾಜಿಸುವಕನ್ನಡದನುಡಿಗಳ || ಬಗೆಯರಿದರಾವಲಕ್ಷಣದಿಂದಮುನ್ನಕ | ಬ್ಬಗಳನುಸುರಿದರದೇ

---

ವರಂ_ಲಕ್ಷ್ಮೀದೇವಿಯ ಗಂಡನಾದ ವಿಷ್ಣುವು, ತಾನೆ_ಅವನೇ, ಸಂಗೀತ_ಸಂಗಿತಶಾಸ್ತ್ರವೆಂಬ, ಸುಕಲಾ_ಸದ್ವಿದ್ಯೆಯಲ್ಲಿ, ನಿಪುಣನು_ಚತುರನು, ವೀಣೆಯಿಂ_ವೀಣೆಯಿಂದ, ಗಾನಮುಂ-ಮನೋಲ್ಲಾಸಕರವಾದ ಹಾಡನ್ನು, ನುಡಿಸುವ_ಉಂಟುಮಾಡುವ, ಅಂದದೊಳು_ರೀತಿಯಲ್ಲಿ, (ತೆರನಾಗಿ) ಎನ್ನ-ಮದೀಯವಾದ, ವಾಣಿಯಿಂ_ಮಾತಿನಿಂದ, ಕವಿತೆಯಂ-ಕೃತಿಯನ್ನು, ಪೇಳಿಸಿದನೆಂದು_ಹೇಳುವಹಾಗೆ ಮಾಡಿದನೆಂಬುದಾಗಿ, ಅರಿದು-ತಿಳಿದು, ಕೇಣಮುಂ_ಹುರುಡನ್ನು, ತೊರೆದು_ವಿಸರ್ಜಿಸಿ, ಪುರುಡಿಸುವರಂ_ಅಸೂಯಾಪರರನ್ನು, ಜರಿದು-ಹೀಯಾಳಿಸಿ, ಕಿವಿದೆರೆದು-ಗಮನವನಿಟ್ಟು, (ಕಿವಿಗೊಟ್ಟು) ಎಲ್ಲಾಸುಜನರು_ಸತ್ಪುರುಷರೆಲ್ಲರೂ, ಕೇಳ್ವುದು_ಲಾಲಿಸಬೇಕು || ೮ ||

ಟೀ|| ದುಷ್ಟ-ನೀಚವಾದ, (ನೀಚನೆಂಬ) ಅಹಿ_ಹಾವಿನ, ಘೋರತರ_ಬಹಳ ಕಠಿಣವಾದ, ವಿಷವದನದಿಂದ_ನಂಜಿನಿಂದ ಕೂಡಿದ ಮೋರೆಯಿಂದ, ಮತ್ತು ನಂಜಿಗೆ ಸಮಾನವಾದ ಮುಖದಿಂದ, ಸಂದಷ್ಟಮಾಗಿ_ಕಡಿಯಲ್ಪಟ್ಟದ್ದಾಗಿ ಮತ್ತು ನಿಂದಿಸಲ್ಪಟ್ಟದ್ದಾಗಿ, ಇರುತಿರ್ದೊಡಂ_ಇದ್ದರುಕೂಡ, ದೋಷಂ_ಅಪರಾಧವು ಮತ್ತು ನಿಶಿಯು, ಇರ್ದೊಡೆ_ಇದ್ದಾಗ್ಯೂ, ನಷ್ಟ_ಗತಿಸಿದ, ಕಲೆಯಾದೊಡಂ-ಕಾಂತಿಯುಳ್ಳದ್ದಾದರೂ ಎಂದರೆ ಕಳಾಹೀನವಾದಾಗ್ಯೂ ಅಥವಾ ಪರಿಪೂರ್ಣತೆಗೆ ವ್ಯತಿರಿಕ್ತವಾದರೂ, ಚಂದ್ರನಂತೆ_ಇಂದುವಿನಹಾಗೆ, ಎನ್ನ_ನನ್ನ, ಕಾವ್ಯದ_ಕೃತಿಯ, ರಸಂ_ಸಾರಾಂಶವು (ಸ್ವಾರಸ್ಯವು) ಸುಮನಸರ್ಗೆ_ಸುರರಿಗೂ ಮತ್ತು ಪಂಡಿತರಿಗೂ, ಇಷ್ಟಮಾಗದೆ_ಒಪ್ಪಿಕೆಯಾಗದೆ, ಮಾಣದು_ಇರವುದಿಲ್ಲ, ಇನ್ನು_ಇತರರು, ಆವನಾದೊಡಂ-ಯಾರಾದಾಗ್ಯೂ, ಕಷ್ಟಮುಂ_ಕಠಿಣವೆಂಬುದನ್ನು, ಬಗೆವವಂ_ಆಲೋಚನೆಯಂ ಗೆಯ್ಯುವನು, ಚೋರಂಗೆ_ಕಳವುಮಾಡುವವನಿಗೂ, (ಕಳ್ಳನಿಗೂ) ವಿರಹಿಗಂ_ವಿರಹ ವೇದನೆಯಿಂದ ಕೂಡಿರುವವನಿಗೂ, ದೃಷ್ಟಾಂತಮಾಗಿ_ಹೋಲಿಕೆಯಾಗಿ, ಧರಾವಲಯದೋಳ್-ಪ್ರಪಂಚದಲ್ಲಿ, ಸಲ್ವಂ_ಇರುವನು, ಇದರೊಳು_ಈ ವಿಚಾರವಾಗಿ, ಸಂದೇಹಂ_ಸಂಶಯವು, ಏಂ_ಏನಿರುವುದು ? (ಅನುಮಾನವೇನಿದೆ) (ಯಾವ ಅನುಮಾನವೂ ಇಲ್ಲವೆಂದು ಅರ್ಥ) || ೯ ||

ಟೀ|| ಮೊಗಂ – ಮೋರೆಯು, ಆವ – ಯಾವರೀತಿಯಾದ, ಲೀಲೆಯಿಂ – ವಿಲಾಸದಿಂದ, ಎಸೆವುದು – ಹೊಳೆಯುವುದೋ, ಆಭಾವಮಂ_ಅದೇ ವಿಲಾಸವನ್ನೇ, ಮಗುಳೆ_ತಿರುಗಿ, ರನ್ನ_ರತ್ನಖಚಿತವಾದ, ಕನ್ನಡಿ_ಕನ್ನಡಿಯು, (ದರ್ಪಣವು) ಅನ್ಯಪ್ರಕಾರದಿಂದ_ಬೇರೆ ರೀತಿಯಾಗಿ, ಸೊಗಯಿಪುದೆ – ಕಾಣುತ್ತದೆಯೆ, ಧರೆಯೊಳು – ಪ್ರಪಂಚದಲ್ಲಿ, ಆರಾಜಿಸುವ_ಹೆಸರುವಾಸಿಯನ್ನೈದಿರುವ, ಕನ್ನಡದ-ಕನ್ನಡಭಾಷೆಯ, ನುಡಿಗಳ_ಪದಸಮೂಹದ, ಬಗೆಯು_ವಿಧಾನವನ್ನು, ಅರಿದರು-ತಿಳಿದಿರತಕ್ಕವರು, ಆವಲಕ್ಷಣದಿಂದ-ಯಾವಚಿಹ್ನೆಯಿಂದ, ಮುನ್ನ_ಪುರಾತನಕಾಲದಲ್ಲಿ, ಕಬ್ಬಗಳ_ಕಾವ್ಯಗಳನ್ನು, ಉಸುರಿದರ್_ಹೇಳಿದರೋ, ಅದೇಲಕ್ಷ್ಯಂ-ಪುರಾತನಕೃತಿಗಳಲ್ಲಿ ಉಕ್ತವಾಗಿರುವ ಚಿಹ್ನೆಯೆ, ಅದಲ್ಲದೆ-ಹೊರತು, ಪೆರತು_ಅನ್ಯವಾದದ್ದು, ಎನಗೆ_ನನಗೆ, ಸಲ್ಲದು_ಬಾರದು, ಅದರಿಂದ-ಆ ಕಾರಣದಿಂದ, ಪೂರ್ವ-ಪೂರ್ವಿಕರಾದ, ಸತ್ಕವಿಗಳ್ಗೆ_ಸತ್ಕವಿಸಾರ್ವಭೌಮ

---

ನ್ನಾರಾಯಣ ಮೂರ್ತಿಯೇ ನವರಸಭರಿತಮಾದ ಮಾತುಗಳಿಂದ ರಚಿಸುವಂತೆ ನನಿಗೆ ಪ್ರೇರಣೆಯನ್ನು ಮಾಡಿರುವನಾದುದರಿಂದ ಸತ್ಪುರುಷರಾದವರು ಮಾತ್ಸರ್ಯವನ್ನು ಬಿಟ್ಟು ಇದನ್ನು ಕೇಳಬೇಕು ||೮|| ಚಂದ್ರನು ವಿಷವುಳ್ಳ ರಾಹುವೆಂಬ ಕೆಟ್ಟ ಹಾವಿನಿಂದ ಕಚ್ಚಲ್ಪಟ್ಟು ಕಾಂತಿಯನ್ನೆಲ್ಲಾ ಹೋಗಲಾಡಿಸಿಕ್ಕೊಂಡು ರಾತ್ರಿಯಿಂದ ಕೂಡಿಯಿದ್ದರೂ ಸಕಲ ಸುರರೂ ಅವನನ್ನು ಪ್ರೀತಿಸುವಂತೆ ನನ್ನ ಕಾವ್ಯದಲ್ಲಿರುವ ರಸವನ್ನೆಲ್ಲಾ ನೀಚರು ಹೀಯಾಳಿಸಿದರೂ, ಕಳಾಹೀನವೆಂದರೂ, ದೋಷಸಹಿತವಾದ ..ಂದರೂ ಕೂಡ ಇದು ವಿದ್ವಾಂಸರ ಮನಸ್ಸಿಗೆ ಹಿತವನ್ನುಂಟುಮಾಡುತ್ತದೆ. ಇದನ್ನು ಯಾರೂ ಕಠಿನ ಅಥವಾ ಕ್ಲಿಷ್ಟ.. ತಿಳಿಯಕೂಡದು. ಹಾಗೆ ತಿಳಿದರೆ ಅಂಥವರು ಕಳ್ಳರಿಗೂ ಕಾಮಿಗಳಿಗೂ ಹೋಲುವರು ||೯|| ರತ್ನಖಚಿತವಾದ ಕನ್ನಡಿ..ನ್ನು ತೆಗೆದುಕೊಂಡು ಮುಖವನ್ನು ನೋಡಿಕೊಂಡರೆ ಮುಖದ ಕಾಂತಿಯೇ ಕನ್ನಡಿಯಲ್ಲಿ ಪ್ರತಿಬಿಂಬವಾಗಿ ಕಾಣಿಸುವು..ವ ಅನ್ಯಪ್ರಕಾರವಾಗಿ ಕಾಣಿಸದಿರುವಂತೆ, ಪುರಾತನ ಕವಿಗಳು ಹೇಳಿರುವ ಕರ್ಣಾಟಕ ಶಬ್ದಶೈಲಿಯನ್ನನುಸರಿಸಿಯೇ ..ೂ ಈ ಗ್ರಂಥವನ್ನು ಬರಿಯುವೆನಾದ್ದರಿಂದ ಲೋಕವಿಖ್ಯಾತರಾಗಿ, ಕವಿತಾಮಾರ್ಗವನ್ನು ಬಲ್ಲ ಸತ್ಕವಿಗಳಿಗೆ ಗ್ರಂಥಾ

ಲಕ್ಷ್ಯಮಲ್ಲದೆಪೆರತೆ | ನಗೆಸಲ್ಲದದರಿಂದಪೂರ್ವಸತ್ಕವಿಗಳ್ಗೆನಮಿಸಿನಾಂಕೃತಿಪೇಳ್ವೆನು ‖ ೧೦ ‖ ವಿದ್ವತ್ಸಭಾವಲಯವರಿಯೆವಿರಚಿಸಿದಂಭ | ರದ್ವಾಜಗೋತ್ರಭವನಣ್ಣಮಾಂಕನಸುತಂ | ಸದ್ವಿನುತಕರ್ನಾಟಕವಿಚೂತವನಚೈತ್ರಲಕ್ಷ್ಮೀಶನೆಂಬೋರ್ವನು ‖ ಹೃದ್ವನಜದೋಳ್ದೇವಪುರದಲಕ್ಷ್ಮೀಶನಪ | ದದ್ವಯವನಾವಗಂಧ್ಯಾನಿಸುವರಡಿಗಳಂ | ಸದ್ವಿನಯದಿಂಭಜಿಪಬಲ್ಪಿಂದವಿಮಲಜೈಮಿನಿಭಾರತದಕಥೆಯನು ‖ ೧೧ ‖ ವರವರ್ಣದಿಂದಶೋಭಿತಮಾಗಿರೂಪವಿ | ಸ್ತರದಿಂದಚೆಲ್ವಾಗಿಮಧುರತರನವರ

---

ರಿಗೆ, ನಾಂ–ನಾನು, ನಮಿಸಿ-ವಂದನೆಗಳನ್ನು ಅರ್ಪಿಸಿ, ಕೃತಿ–ಈ ಕಾವ್ಯಗ್ರಂಥವನ್ನು, ಪೇಳ್ವೆನು–ಹೇಳುತ್ತೇನೆ.

ಮೊಗ (ತ್ಭ)-ಮುಖ(ತ್ಸ), ಕಬ್ಬ (ತ್ಭ)ಕಾವ್ಯ (ತ್ಸ).

ರನ್ನ (ತ್ಭ)-ರತ್ನ (ತ್ಸ), ರನ್ನ+ಕನ್ನಡಿ (ಆದೇಶಸಂಧಿ).

ಕನ್ನಡ (ತ್ಭ)-ಕರ್ನಾಟ (ತ್ಸ).

ಸಲ್ಲದು, ಪೇಳ್ವೆನು, ಈ ಎರಡು ಸಕರ್ಮಕ ಕ್ರಿಯಾಪದಗಳಿರುವವು ‖೧೦‖

ಟೀ‖ ವಿದ್ವತ್–ಪಂಡಿತರ, ಸಭಾವಲಯಂ – ಸಮುದಾಯವು, ಅರಿಯೆ – ತಿಳಿಯುವುದಕ್ಕಾಗಿ, ಭರದ್ವಾಜ - ಭರದ್ವಾಜನೆಂಬ ಮಹರ್ಷಿಯ, ಗೋತ್ರ–ವಂಶದಲ್ಲಿ, ಭವನು–ಉತ್ಪನ್ನನಾದ, ಅಂಣಮಾಂಕನ–ಅಂಣಮಾಂಕನೆಂಬುವನ, ಸುತಂ–ಪುತ್ರನಾದ, ಸದ್ವಿನುತ-ಸಜ್ಜನರಿಂವ ಶ್ಲಾಘಿಸಲ್ಪಟ್ಟವನಾದ, ಕರ್ಣಾಟಕವಿ–ಕನ್ನಡ ಪಂಡಿತರೆಂಬ, ಚೂತವನ–ಮಾವಿನಮರಗಳ ಸಮೂಹಕ್ಕೆ, (ತೋಪಿಗೆ) ಚೈತ್ರ–ವಸಂತಸಮಯದಂತಿರುವ, ಲಕ್ಷ್ಮೀಶನು–ಲಕ್ಷ್ಮೀಶನೆಂಬ ನಾಮಧೇಯವುಳ್ಳ, ಓರ್ವನು–ಒಬ್ಬ ಕವಿಯು, ಹೃದ್ವನಜದೊಳು–ಕಮಲದಂತಿರುವ ಮನಸ್ಸಿನಲ್ಲಿ (ಹೃತ್ಕಮಲದಲ್ಲಿ) ದೇವಪುರದ-ದೇವತೆಗಳಿಗೆ ನಿವಾಸಸ್ಥಾನವಾದ ಪಟ್ಟಣದಲ್ಲಿರುವ, ಲಕ್ಷ್ಮೀಶನ–ನಾರಾಯಣ ಮೂರ್ತಿಯ, ಪದದ್ವಯವನು–ಪಾದಯುಗ್ಮವನ್ನು, ಆವಗಂ–ಸದಾಕಾಲದಲ್ಲಿಯೂ, ಧ್ಯಾನಿಸುವರ–ಸ್ಮರಿಸತಕ್ಕವರ, (ಭಕ್ತರ) ಸದ್ವಿನಯದಿಂ–ಉತ್ತಮವಾದ ಮಾರ್ಗದಿಂದ, ಭಜಿಪ–ಧ್ಯಾನಿಸುವ, ಬಲ್ಪಿಂದ–ಸಾಮರ್ಥ್ಯದಿಂದ, ವಿಮಲ–ಪರಿಶುದ್ಧವಾದ, ಜೈಮಿನಿಭಾರತದ–ಜೈಮಿನಿ–ಜೈಮಿನಿ ಮುನೀಂದ್ರನಿಂದ ರಚಿಸಲ್ಪಟ್ಟ, ಭಾರತದ–ಸಂಸ್ಕೃತ ಮಹಾಭಾರತದಲ್ಲಿ ಪಾಂಡುಪುತ್ರರ ಸಂಬಂಧವಾದ, ಕಥೆಯನು-ಇತಿಹಾಸವನ್ನು, ವಿರಚಿಸಿದಂ–ಮಾಡಿದವನಾದನು ‖ ೧೧ ‖

ಟೀ‖ ವರ–ಉತ್ತಮವಾದ, ವರ್ಣದಿಂದ - ಅಕ್ಷರಗಳಿಂದ ಮತ್ತು ಕೃಷ್ಣವರ್ಣದಿಂದ, ಶೋಭಿತಮಾಗಿ - ಪ್ರಕಾಶವನ್ನೈದಿ, ರೂಪವಿಸ್ತರದಿಂದ–ರೂಪ–ವರ್ಣಸಮುದಾಯಸ್ವರೂಪದ ಮತ್ತು ಆಕೃತಿಯ, ವಿಸ್ತರದಿಂದ – ಆಧಿಕ್ಯದಿಂದ, ಚೆಲ್ವಾಗಿ–ಕಾಂತಿಯುಕ್ತವಾಗಿ, ಮಧುರತರ-ಬಹು ಸಿಹಿಯಾದ, ನವ-ನೂತನವಾದ ಮತ್ತು ಒಂಭತ್ತೆಂಬ ಸಂಖ್ಯೆಯುಳ್ಳ, ರಸ–ಶೃಂಗಾರವೇ ಮೊದಲಾದ ರಸವು ಮತ್ತು ಹೂಗಳ ಮಕರಂದವೇ ಉದರ-ಗರ್ಭದಲ್ಲಿ ಮತ್ತು ಪದಸಮೂಹದ ಮಧ್ಯಭಾಗದಲ್ಲಿ, ಭರಿತದಿಂದ–ಪೂರ್ಣವಾಗಿರುವುದರಿಂದ, ಮತ್ತು ಒಳಗೊಂಡಿರುವುದರಿಂದ, ವಿಲಸಿತಮಾಗಿ–ಕಾಂತಿಯುಕ್ತವಾಗಿ, ಮತ್ತು ಮನಸ್ಸಿಗೆ ಸಂತೋಷವನ್ನು ಕೊಡತಕ್ಕದ್ದಾಗಿ, ಸುಮನಃ–ವಿದ್ವಾಂಸರ ಮತ್ತು ಹೂಗಳ, ಅನುರಾಗದಿಂ–ವಿಶ್ವಾಸದಿಂದ, ಪ್ರಚುರಮಾಗಿ–ಪ್ರಸಿದ್ಧಿಯನ್ನು ತಾಳಿ, ನಿರತ–ಸದಾ ಕಾಲದಲ್ಲೂ, ಮಂಜುಳ-ಮನಸ್ಸಿಗೆ ಇಂಪಾದ, ಶಬ್ದದಿಂದ–ಅಕ್ಷರ ಸಮುದಾಯದಿಂದ ಮತ್ತು ಧ್ವನಿಯಿಂದ, ಕಿವಿಗೆ-ಕಿವಿಗಳಿಗೆ, ಇಂಪಾಗಿ-ಆನಂದದಾಯಕಗಳಾಗಿ, ಚರಿಸುವ-ತಿರುಗಾಡುವ ಮತ್ತು ಪ್ರಕಟವಾಗುವ, ಸುಲಲಿತ–ಮನೋಹರವಾದ ಮತ್ತು ಮೃದುವಾದ, ಷಟ್ಪದಿಗಳು – ಆರಡಿಗಳು (ಭೃಂಗಗಳು)

---

ರಂಭದಲ್ಲಿ ನಮಸ್ಕಾರವನ್ನು ಮಾಡುತ್ತೇನೆ ‖೧೦‖ ಭರದ್ವಾಜಮುನಿಯ ಗೋತ್ರದಲ್ಲಿ ಜನಿಸಿದವನು, ಅಣ್ಣಮಾಂಕನೆಂಬಾತನ ತನಯನು, ಸಜ್ಜನರಲ್ಲಿ ಹೆಸರುವಾಸಿಯನ್ನು ಪಡೆದವನು, ಕನ್ನಡ ಕವಿಗಳೆಂಬ ಸೀಮಾವಿನ ಗಿಡಗಳ ತೋಪಿಗೆ ವಿಕಾಸವನ್ನುಂಟು ಮಾಡುವ ಚೈತ್ರಮಾಸದಂತಿರುವನೂ ಆದ ಲಕ್ಷ್ಮೀಶನೆಂಬ ಕವಿಯು ನಿಜಹೃದಯ ಕಮಲದಲ್ಲಿ ಶ್ರೀಮನ್ನಾರಾಯಣನ ಪಾದಕಮಲ ಯುಗಳವನ್ನು ನೆನೆಯುವ ಮಹಾನುಭಾವರನ್ನು ಭಜಿಸುವ ಒಲ್ಮೆಯಿಂದ ನಿರ್ಮಲವಾದ ಈ ಜೈಮಿನಿಭಾರತ ಕಥೆಯನ್ನು ಹೇಳಿದನು ‖೧೧‖ ಉತ್ತಮವಾದ ಮೇಘದ ವರ್ಣದಿಂದ ಪ್ರಕಾಶಿಸುತ್ತಿರುವ, ವಿಸ್ತಾರವಾದ ಆಕಾರವುಳ್ಳದ್ದಾದ್ದರಿಂದ ನೋಡುವುದಕ್ಕೆ ಅಲಂಕಾರವಾದ, ಅತ್ಯಂತ ಮಧುರವಾದ ಮತ್ತು ನೂತನವಾದ ಮಕರಂದವನ್ನು ತನ್ನ ಗರ್ಭದಲ್ಲಿ ಧರಿಸಿರುವುದರಿಂದಲೇ ಕಾಂತಿಯಿಂದ ಕೂಡಿದ, ಹೂಗಳನ್ನು ಕಂಡರೆ ವಿಶ್ವಾಸವುಳ್ಳವೆಂಬ ಹೆಸರನ್ನು ಪಾದಿಸಿಕೊಂಡು ಕರ್ಣಾನಂದವನ್ನು ಉಂಟುಮಾಡುತ್ತಿರುವ, ಅಸದೃಶವಾದ ಹಾಡುಗಳಿಂದ ಕೂಡಿರುವ ದುಂಬಿಗಳಹಾಗೆ ಉತ್ತಮವಾದ ಅಕಾರಮೊದಲ್ಗೊಂಡು ಳಕಾರದವರೆಗಿರುವ ಅಕ್ಷರಗಳಿಂದ ಕೂಡಿಯೂ, ದೊಡ್ಡ ಪದ್ಯಗಳ ಸಮೂಹದಿಂ

ಸೋ | ದರಭರಿತದಿಂದವಿಲಸಿತಮಾಗಿ ಸುಮನೋನುರಾಗದಿಂ ಪ್ರಚುರಮಾಗಿ || ನಿರತಮಂಜುಳಶಬ್ದದಿಂದ ಕಿವಿಗಿಂಪಾಗಿ | ಚರಿ
ಸುವಸುಲಲಿತಷಟ್ಪದಿಗಳೆಡೆಬಿಡದೆ ಝೇಂ | ಕರಿಸದಿರ್ಪವೆಬಂದುನೆರೆದವಿದ್ವತ್ಸಭಾನೀರೇರುಹಾಕರದೊಳು || ||೧೨||

ಪೀಠಿಕಾಸಂಧಿ ಪ್ರಥಮಂ ಸಂಪೂರ್ಣಂ ಮಂಗಳಮಸ್ತು.

---

ಮತ್ತು ಆರುಪಙ್ತಿಗಳುಳ್ಳ ಪದ್ಯಗಳು, ಬಂದು–ಸಮೀಪವನ್ನೈದಿ, ನೆರೆದ–ಸೇರಿರತಕ್ಕ, ವಿದ್ವತ್ಸಭಾ-ವಿದ್ವನ್ಮಂಡಲಿಯೆಂಬ, ನೀರೇರುಹಾಕರದೊಳು–ಸರೋವರದಲ್ಲಿ, ಎಡೆಬಿಡದೆ–ಅವಕಾಶವನ್ನೀಯದೆ, ಝೇಂಕರಿಸದೆ–ಧ್ವನಿಮಾಡದೆ, ಇರ್ಪವೆ–ಇರುತ್ತವೆಯೆ, (ಧ್ವನಿಮಾಡದೆ ಇರುವುದಿಲ್ಲ).

ಅ|| ವರ್ಣ (ತ್ಸ)–ಬಣ್ಣ (ತ್ಭ)

ಷಟ್—ಆರು, ಪದಿ–ಕಾಲುಗಳುಳ್ಳದ್ದು (ದುಂಬಿ) ||೧೨||

ಪೀಠಿಕೆ ಎಂಬ ಮೊದಲನೆಯ ಸಂಧಿಯು ಸಮಾಪ್ತಮಾದುದು.

---

ದಲೂ, ಪದ್ಯಗಳ ಮಧ್ಯಭಾಗಗಳಲ್ಲಿ ಶೃಂಗಾರರಸವೇ ಮೊದಲಾದ ನವರಸಗಳಿಂದ ಭರಿತವಾಗಿರುವುದರಿಂದಲೂ ವಿದ್ವಾಂಸರ ಸಮೂಹಕ್ಕೆ ಕುತೂಹಲವನ್ನೂ ಸಂತೋಷಾತಿಶಯವನ್ನೂ ಇತ್ತು ಪ್ರಕಟವಾಗಿರುವ ಈ ಆರು ಪಾದಗಳನ್ನುಳ್ಳ ಪದ್ಯಗಳು (ಮತ್ತು ಭ್ರಮರಗಳು) ಸಭೆಯಲ್ಲಿ ನೆರೆದಿರುವ ಅಶೇಷ ವಿದ್ವನ್ಮಂಡಲಿಗೆ ಆನಂದವನ್ನು ಕೊಡತಕ್ಕವುಗಳಾಗಿವೆ ಎಂದು ಭಾವವು.

ಟೀಕಾ ತಾತ್ಪರ್ಯ ಸಹಿತ ಜೈಮಿನಿಭಾರತದೊಳ್ ಪೀಠಿಕಾಸಂಧಿಯೆಂಬ
ಮೊದಲನೆಯ ಸಂಧಿಯು ಸಮಾಪ್ತಮಾದುದು.



## ಎರಡನೆಯ ಸಂಧಿ.

ಸೂಚನೆ॥ ರಾಜೇಂದ್ರಧರ್ಮತನಯಂಬಾದರಾಯಣನ | ವಾಜಿಮೇಧಾಧ್ವರವಿಧಾನಮಂ ಕೇಳ್ದಪಂ | ಕೇಜಪತ್ರೇ ಕ್ಷಣನಮತವಿಡಿದು ಕಳುಹಿದಂ ಕುದುರೆಗೆ ವೃಕೋದರನನು ॥

ವನರುಹಭವಾಂಡದೊಳಗೈವತ್ತು ಕೋಟಿಯೋ | ಜನದವಿಸ್ತೀರ್ಣದಿಳೆಯಂ ಸಪ್ತಶರನಿಧಿಗ | ಳನುವೇಷ್ಟಿಸಿರಲದರ ಮಧ್ಯದೋಳ್ಮಿನುತ ಜಂಬೂದ್ವೀಪ ಮದರನಡುವೆ ॥ ಅನವರತ ಸುರತಗೋಷ್ಠಿಗೆ ನೆರೆದನಿರ್ಜರಾಂ | ಗನೆಯ ರಂಗಚ್ಛವಿಯ ಹಬ್ಬುಗೆಯೊ ಕಾರ್ಮಿಂ | ಚಿನ ಮಹಾರಾಶಿಯೋ ಪೇಳೆನಲ್ಮೆರೆವ ಕನಕಾಚಲಂ ಕಣ್ಗೆಸೆದುದು ॥ ೧ ॥

ಆ ಕನಕಗಿರಿಯ ತೆಂಕಣದೆಸೆಯೊಳಿರ್ಪುದು ಸು | ಧಾಕರ ಕುಲದ ನೃಪರ ಸಾಮ್ರಾಜ್ಯಪಟ್ಟಾಭಿ | ಷೇಕ ವಿಸ್ತರದಿಂ

---

ಎರಡನೆಯ ಸಂಧಿ.

ಸೂಚನೆ॥ ರಾಜೇಂದ್ರ - ರಾಜಾಧಿರಾಜನಾದ, ಧರ್ಮತನಯಂ-ಯುಧಿಷ್ಠಿರನು, ಬಾದರಾಯಣನ - ವ್ಯಾಸಮುನೀಶ್ವರನನ್ನು, ವಾಜಿಮೇಧ - ಅಶ್ವಮೇಧವೆಂಬ ಹೆಸರುಳ್ಳ, ಅಧ್ವರ-ಯಾಗದ, ವಿಧಾನಮಂ - ರೀತಿಯನ್ನು, ಕೇಳ್ದು-ಕೇಳಿ, ಪಂಕೇಜ-ತಾವರೆಯ ಹೂವಿನ, ಪತ್ರ-ದಳಗಳಂತಿರುವ, ಈಕ್ಷಣನ-ನೇತ್ರಗಳುಳ್ಳ, ಕೃಷ್ಣಸ್ವಾಮಿಯ, ಮತವ-ಅಭಿಪ್ರಾಯವನ್ನು, ಇಡಿದು-ತಾಳಿ, ಕುದುರೆಗೆ-ಅಶ್ವಮೇಧಯಾಗಕ್ಕೆ ಆವಶ್ಯಕವಾದ ಕುದುರೆಗೋಸ್ಕರ, ವೃಕೋದರನನು-ಭೀಮಸೇನನನ್ನು, ಕಳುಹಿದಂ-ಕಳುಹಿಸಿದನು.

ವೃಕೋದರ, ರಾಜೇಂದ್ರ, ಪತ್ರೇಕ್ಷಣ (ಗುಣಸಂಧಿ)

ಧರ್ಮ-ಯಮನ, ತನಯಂ-ಪುತ್ರನು (ಯುಧಿಷ್ಠಿರನು)

ವೃಕ-ತೋಳದ ಹೊಟ್ಟೆಯಂತೆ, ಉದರಂ-ಹೊಟ್ಟೆಯುಳ್ಳವನು (ಭೀಮನ ಹೊಟ್ಟೆಯಲ್ಲಿರುವ ಅಗ್ನಿಗೆ ವೃಕವೆಂದು ಹೆಸರು.)

ಬದರ-ಎಲಚೀ ಹಣ್ಣುಳ್ಳ ಕಾಡೇ, ಅಯನಂ-ವಾಸಸ್ಥಾನವಾಗಿ ಉಳ್ಳವನು.

"ಧರ್ಮತನಯಂ ವೃಕೋದರನನು ಕಳುಹಿದಂ" ಎಂಬುದು ಸಕರ್ಮಕ ಕರ್ತರೀವಾಕ್ಯವು.

ಟೀ॥ ವನರುಹ ಭವಾಂಡದೊಳಗೆ- ವನ-ನೀರಿನಲ್ಲಿ, ರುಹ-ಹುಟ್ಟಿದ್ದು (ಕಮಲ), ವನರುಹ-ಕಮಲದಹಾಗೆ ಇರುವ ವಿಷ್ಣುವಿನ ನಾಭಿಯಲ್ಲಿ, ಭವ-ಹುಟ್ಟಿದವನು (ಬ್ರಹ್ಮ), ವನರುಹಭವ-ಅಂಥ ಪರಮಾತ್ಮನ ಪುತ್ರನಾದ ಬ್ರಹ್ಮದೇವರ, ಅಂಡದೊಳಗೆ-ಹೊಟ್ಟೆಯಲ್ಲಿ ಅಂದರೆ ಬ್ರಹ್ಮಾಂಡದಲ್ಲಿ, ಐವತ್ತು ಕೋಟಿ - ಪಂಚಾಶತ್ಕೋಟಿಯಷ್ಟು, ವಿಸ್ತೀರ್ಣ-ವಿಸ್ತೃತವಾದ (ಅಗಲವಾದ) ಇಳೆಯಂ-ಧರಾಮಂಡಲವನ್ನು, ಸಪ್ತಶರನಿಧಿಗಳು - ಲವಣ, ಇಕ್ಷು, ಸುರಾ, ಸರ್ಪಿ, ದಧಿ, ಕ್ಷೀರ, ಜಲಗಳಿಂದ ಕೂಡಿದ ಏಳು ಸಮುದ್ರಗಳಿಂದ, ಅನುವೇಷ್ಟಿಸಿ-ಆವೃತಮಾಗಿ, (ಸುತ್ತಿಕೊಂಡು) ಇರಲು-ಇರಲಾಗಿ, ಅದರ-ಆ ಜಂಬೂದ್ವೀಪದ, (ಆ ಸಮುದ್ರಗಳ) ನಡುವೆ-ಮಧ್ಯಪ್ರದೇಶದಲ್ಲಿ, ಅನವರತ-ಸರ್ವದಾ, ಸುರತಗೋಷ್ಠಿಗೆ-ಕೇಳೀವಿಲಾಸಕ್ಕೆ, ನೆರೆದ-ಸೇರಿಕೊಂಡಿರುವ, ನಿರ್ಜರಾಂಗನೆಯರ-ತ್ರಿದಶಾಂಗನೆಯರ, ಅಂಗ-ಶರೀರದ, ಛವಿಯ-ಹೊಳಪಿನ, ಹಬ್ಬುಗೆಯೊ-ಗುಂಪೊ, ಕಾರ್ಮಿಂಚಿನ-ವರ್ಷಾಕಾಲದ ಮಿಂಚಿನ, ಮಹಾರಾಶಿಯೊ-ಅಗಾಧವಾದ ಗುಂಪೊ, ಪೇಳು-ಹೇಳೆಂಬದಾಗಿ, ಮೆರೆವ-ಹೊಳೆಯುತ್ತಿರುವ, ಕನಕಾಚಲಂ-ಸುವರ್ಣಗಿರಿಯು, ಕಣ್ಗೆ-ಕಣ್ಣುಗಳಿಗೆ, ಎಸೆದುದು-ಪ್ರಕಾಶವಾಗಿ ತೋರುತ್ತಿತ್ತು.

"ಕನಕಾಚಲಂ ಎಸೆದುದು" ಇದು ಅಕರ್ಮಕ ಕರ್ತರಿವಾಕ್ಯ ॥೧॥

ಟೀ॥ ಆ ಕನಕಗಿರಿಯ - ಭಂಗಾರದ ರೂಪವಾಗಿರುವ ಆ ಮೇರುಪರ್ವತದ, ತೆಂಕಣದೆಸೆಯೊಳು- ದಕ್ಷಿಣದಿಕ್ಕಿನಲ್ಲಿ, ಸುಧಾಕರ-ಹಿಮಕರನ, ಕುಲದ - ಸಂತತಿಯಲ್ಲಿ ಹುಟ್ಟಿದ, ನೃಪರ-ರಾಜರ, ಸಾಮ್ರಾಜ್ಯ-ದೊರೆತನದ, ಪಟ್ಟಾಭಿಷೇಕ-ಪಟ್ಟ

---

ಟೀಕಾ ತಾತ್ಪರ್ಯ ಸಹಿತಮಾದ ಜೈಮಿನಿಭಾರತದೋಳ್ ಎರಡನೆಯ ಸಂಧಿಯ ಸಾರಾಂಶವು.

ಶ್ರೀಮನ್ನಾರಾಯಣಮೂರ್ತಿಯ ವಕ್ಷಸ್ಥಲದಡಿಯೊಳಿರುವ ನಾಭಿಕಮಲದಲ್ಲಿ ಜನಿಸಿ ಬ್ರಹ್ಮಾಂಡನಾಯಕನಾಗಿರುವ ಕಮಲಾಸನನಿಗೆ ಸೇರಿದ ಧರಾಮಂಡಲದಲ್ಲಿ ಏಳು ಸಮುದ್ರಗಳನ್ನೂ ಆವರಣವಾಗಿ ಮಾಡಿಕೊಂಡಿರುವ, ಪಂಚಾಶತ್ಕೋಟಿ ವಿಸ್ತೀರ್ಣವನ್ನೊಳಕೊಂಡಿರತಕ್ಕ ಜಂಬೂದ್ವೀಪವೆಂಬ ನಾಮಧೇಯವುಳ್ಳ ಒಂದು ದ್ವೀಪವುಂಟು. ಆ ದ್ವೀಪದ ಮಧ್ಯಭಾಗದಲ್ಲಿ ಸುರಾಂಗನೆಯರ ದೇಹದ ಹೊಳಪೆಂಬಂತೆಯೂ, ವರ್ಷಋತುವಿನಲ್ಲಿ ಉಂಟಾಗುವ ನೀಲಮೇಘವೆಂಬಂತೆಯೂ ಭ್ರಾಂತಿಗೆಯ್ಯುತ್ತಿರುವ ಸುವರ್ಣಗಿರಿಯೆಂಬ ಒಂದಾನೊಂದು ಪರ್ವತವುಂಟು ॥ ೧ ॥ ಆ ಪರ್ವತದ ದಕ್ಷಿಣದಿಗ್ಭಾಗದಲ್ಲಿರುವ ಹಸ್ತಿನಾವತಿಯೆಂಬ ಪಟ್ಟಣವನ್ನು ಚಂದ್ರವಂಶೀಯ ಸಾರ್ವಭೌಮರು ಅನೂಚಾನವಾಗಿ ರಾಜಧಾನಿಯನ್ನಾಗಿ ಮಾಡಿಕೊಂಡು

ಜಸಂಬಡೆದ ಹಸ್ತಿನಾಪುರಮಲ್ಲಿಗರಸೆನಿಸುವ ‖ ಭೂಕಾಂತ ಜನಮೇಜಯಂ ಮಹಾಭಾರತ ಕ | ಥಾಕೌತುಕದೊಳಾಶ್ವ
ಮೇಧಿಕವ ನೊಲವಿನಿಂ | ದೇಕಮಾನಸನಾಗಿ ಜೈಮಿನಿಮುನೀಂದ್ರನಂ ಬೆಸಗೊಂಡನೀತೆರದೊಳು ‖ ೨ ‖ ಪಿಂತೆ ಕೌರವ
ಜಯಂತಮಗೆ ಕೈಸಾರ್ದ ಸಮು | ನಂತರದೊಳಾದ ಸಾಮ್ರಾಜ್ಯದೊಳ್ಪಾಂಡವರ | ದೆಂತಿಳೆಯ ನೋವಿದರದೇಗೈಯ್ದರೆಂದು
ಜನಮೇಜಯಮಹೀಪಾಲನು ‖ ಸಂತಸಂದಳೆದು ಜೈಮಿನಿಮುನಿಪನಂ ಕೇಳ್ದೊ | ಡಿಂತವಂ ಪೇಳ್ದನಾಭೂಪಂಗೆ ಸಕಲಜನ |
ಸಂತತಿಗೆ ಕರ್ಣಾವತಂಸಮೆನೆ ಮಧುರತರಭಾರತದ ಸತ್ಕಥೆಯನು ‖ ೩ ‖ ಕೇಳೆಲೆನೃಪಾಲಪಾಂಡವರಕಥೆಯಿದು ಪುಣ್ಯ | ದೇಳಿಗೆ

---

ವನ್ನು ಕಟ್ಟತಕ್ಕ, ವಿಸ್ತರದಿಂ – ವಿಶಾಲತೆಯಿಂದ, ಜಸಂಬಡೆದ – ಕೀರ್ತಿಯಂ ತಾಳಿದ, ಹಸ್ತಿನಾಪುರಂ – ಹಸ್ತಿನಾಮಕವಾದ ಪರವು, ಇರ್ಪುದು–ಇದೆ, ಅಲ್ಲಿಗೆ–ಆ ಪಟ್ಟಣಕ್ಕೆ, ಅರಸು–ರಾಜನು, ಎನಿಸುವ–ಎನ್ನಿಸಿಕೊಳ್ಳುವ, ಭೂಕಾಂತ–ಪೃಥ್ವೀಶ್ವರನಾದ, ಜನಮೇಜಯಂ–ಜನಮೇಜಯನೆಂಬ ಅರಸು, ಮಹಾಭಾರತ–ಭಾರತದ, ಕಥಾ–ಕಥೆಯನ್ನು ಕೇಳಬೇಕೆಂಬ, ಕೌತುಕದೊಳು–ಕುತೂಹಲದಿಂದ, ಆಶ್ವಮೇಧಿಕವನು – ಅಶ್ವಮೇಧಪರ್ವದ ಕಥೆಯನ್ನು, ಏಕಮಾನಸನಾಗಿ–ಒಂದೇಮನಸ್ಸಿನಿಂದ, ಜೈಮಿನಿಮುನೀಂದ್ರನಂ– ಋಷಿವರ್ಯನಾದ ಜೈಮಿನಿರುಷಿಯನ್ನು, ಈ ತೆರದೊಳು–ಮುಂದೆ ಹೇಳುವ ಪ್ರಕಾರವಾಗಿ, ಒಲವಿನಿಂ–ಪ್ರೀತಿಯಿಂದ, ಬೆಸಗೊಂಡನು–ಕೇಳಿದನು ‖೨‖

ಟೀ‖ ಪಿಂತೆ– ಪೂರ್ವಕಾಲದಲ್ಲಿ, ತಮಗೆ - ತಮಗೆ (ಪಾಂಡವರಿಗೆ) ಕೌರವಜಯಂ – ಕುರುವಂಶೋತ್ಪನ್ನರಾದ ದುರ್ಯೋಧನನೇ ಮೊದಲಾದವರನ್ನು ಗೆಲ್ಲುವಿಕೆಯು, ಕೈಸಾರ್ದ–ನೆರವೇರಿದ, ಸಮನಂತರದೊಳು–ತರುವಾಯ, ಆದ–ಲಭಿಸಿದ, ಸಾಮ್ರಾಜ್ಯದೊಳ್–ರಾಜ್ಯವೈಭವದಲ್ಲಿ, ಪಾಂಡವರು– ಯುಧಿಷ್ಠಿರಾದಿಗಳು, ಅದೆಂತು–ಅದುಹೇಗೆ, ಇಳೆಯನು–ರಾಜ್ಯವನ್ನು, ಓವಿದರು–ಆಳಿದರು, ಆದೇಗೈದರು–ಏನಮಾಡಿದರು, ಎಂದು–ಎಂಬತೆರನಾಗಿ, ಜನಮೇಜಯಮಹೀಪಾಲಂ–ಜನಮೇಜಯನೆಂಬ ರಾಯನು, ಸಂತಸಂದಳೆದು–ಆನಂದದಿಂದ ಕೂಡಿ, ಜೈಮಿನಿ–ಜೈಮಿನಿಯೆಂಬ, ಮುನಿಪನಂ–ಋಷಿವರ್ಯನನ್ನು, ಕೇಳ್ದೊಡೆ–ಪ್ರಶ್ನೆ ಮಾಡಲಾಗಿ, ಅವಂ–ಆ ರುಷೀಶ್ವರನು, ಇಂತು–ಮುಂದೆ ಹೇಳುವ ರೀತಿಯಾಗಿ, ಆ ಭೂಪಂಗೆ–ದೊರೆಯಾದ ಜನಮೇಜಯನಿಗೆ, ಕರ್ಣಾವತಂಸಂ–ಕಿವಿಗಿಂಪಾಗಿದೆ, ಎನೆ–ಎಂಬಂತೆ, ಮಧುರತರ–ಅತಿ ಮಧುರ ರಸಭರಿತಮಾದ, ಭಾರತದ–ಭರತಕುಲದಲ್ಲಿ ಜನಿಸಿದ ಅರಸುಗಳ, ಸತ್ಕಥೆಯನು - ಸಚ್ಚರಿತ್ರೆಯನ್ನು, ಪೇಳ್ದನು–ಬೋಧಿಸಿದನು (ಈ ಜೈಮಿನಿರುಷಿಯು ಮೀಮಾಂಸಾ ಶಾಸ್ತ್ರದ ವಿಧಿಗಳನ್ನು ರಚಿಸಿದಾನೆ) ‖೩‖

ಟೀ‖ ಎಲೆನೃಪಾಲ–ಅಯ್ಯಾ ಜನಮೇಜಯನೆ, ಕೇಳು - ಲಾಲಿಸು, ಇದು ಈಗ ಹೇಳಲ್ಪಡುವುದು, ಪಾಂಡವರ ಕಥೆ–ಯುಧಿಷ್ಠಿರಾದಿಗಳ ಚರಿತ್ರೆಯು, ಪುಣ್ಯದ–ಪುಣ್ಯಾತಿಶಯದಿಂದ ಲಭಿಸಿದ, ಏಳಿಗೆಯಲಾ–ಮೇಲ್ಮೆಯಲ್ಲವೆ, ಆ ಸುಯೋಧನ–ಕುರುವಂಶಜನಾದ ದುರ್ಯೋಧನನೆಂಬ ಅರಸನನ್ನು, ಕಾಳಗದೊಳು–ರಣರಂಗದಲ್ಲಿ, ಉರೆ–ಹೆಚ್ಚಾಗಿ, ಗೆಲ್ದಬಳಿಕ–ಜಯಿಸಿದ ಮೇಲೆ, ವರ–ಉತ್ತಮವಾದ, ಹಸ್ತಿನಾಪುರದ– ಹಸ್ತಿನಾವತಿ ನಗರಿಯ, ನಿಜ–ಸ್ವಕೀಯವಾದ, ಸಾಮ್ರಾಜ್ಯದ–ಒಡೆತನದ, ಬಾಳಿಕೆಯನು - ಇರುವಿಕೆಯನ್ನು (ಸಂಪತ್ತನ್ನು) ಅನುಜರಿಂದ–ಭೀಮಾರ್ಜುನಾದಿಗಳಾದ ಸಹೋದರರಿಂದ, ಒಡಗೂಡಿ–ಜತೆಯಲ್ಲಿ ಇದ್ದುಕೊಂಡು, ಧರ್ಮಜಂ–ಧರ್ಮಸ್ವರೂಪನಾದ ಯುಧಿಷ್ಠಿರನು, ಭರತ ನಳ ನಹುಷಾದಿ–ರಾಜಾಧಿರಾಜರಾದ ಭರತ, ನಳ, ನಹುಷರೆಂಬುವರೇ ಮೊದಲಾದವರನ್ನು, ಪೇಳುವೊಡೆ–ಎಣೆಯೆಂದು ಹೇಳಲು, ಅವರ್ಗೆ–ಅವರಿಗೆ, (ನಹುಷಾದಿರಾಯರಿಗೆ) ಇನಿತು–ಈ ಧರ್ಮಜನಲ್ಲಿರುವಷ್ಟು, ಗುಣಂ–ಉತ್ತಮವಾದ ಗುಣಗಳು, ಇಲ್ಲವೆಂದು - ಇರಲಿಲ್ಲವೆಂಬುದಾಗಿ, ಭೂಮಂಡಲಂ–ಲೋಕದ ಜನರು, ಕೊಂಡಾಡಲು–ಹೊಗಳುವಂತೆ, ತಾಳಿದಂ–ರಾಜ್ಯಾಭಿಷಿಕ್ತನಾದನು.

ಅ. ವಿ‖ ಭರತ–ಶಕುಂತಲಾ ದುಷ್ಯಂತರಿಂದ ಜನಿಸಿದವನು, ನಹುಷ - ಪೂರ್ವಕಾಲದಲ್ಲಿ ಇವನು ಇಂದ್ರಪಟ್ಟಕ್ಕಾಗಿ ಒಂದುನೂರು ಅಶ್ವಮೇಧಯಾಗವನ್ನು ಮಾಡಿದನು, ಅನಂತರ ಇಂದ್ರಪಟ್ಟವನ್ನೂ ಪಡೆದು, ಇಂದ್ರಪತ್ನಿಯಾದ ಶಚೀ

---

ಸುಖವಾಗಿ ರಾಜ್ಯಪರಿಪಾಲನೆಯನ್ನು ಮಾಡುತ್ತಿದ್ದರು. ಈ ಪಟ್ಟಣದಲ್ಲಿ ಜನಮೇಜಯನೆಂಬೋರ್ವರಾಯನು ಆಳುತ್ತಿರುವಾಗ ಅಲ್ಲಿಗೆ ಒಂದಾನೊಂದು ಕಾಲದಲ್ಲಿ ವ್ಯಾಸರುಷಿಗಳ ಶಿಷ್ಯನಾದ ಜೈಮಿನಿ ಎಂಬ ರುಷೀಶ್ವರನು ಬಂದನು. ಜನಮೇಜಯನು ಆತನನ್ನು ಕುರಿತು ‖ ೨ ‖ ಎಲೈ ರುಷಿಗಳೆ! ಪೂರ್ವದಲ್ಲಿ ಪಾಂಡುಪುತ್ರರಾದ ಧರ್ಮಾದಿಗಳು ಧಾರ್ತರಾಷ್ಟ್ರರನ್ನು ಗೆದ್ದು ರಾಜ್ಯಮಂ ಪಾಲಿಸುತ್ತಿರುವಾಗ ಅವರು ಯಾವ ಯಾವ ಕಾರ್ಯಗಳನ್ನು ಮಾಡಿದರು? ಇದನ್ನೆಲ್ಲಾ ಹೇಳಬೇಕೆಂದು ಪ್ರಾರ್ಥಿಸಲಾಗಿ ಜೈಮಿನಿ ರುಷಿಗಳು ಜನಮೇಜಯರಾಯನಿಗೆ ಮಹಾಭಾರತದ ಕಥೆಯನ್ನು ಮುಂದೆ ಹೇಳುವ ರೀತಿಯಾಗಿ ಕಿವಿಗಿಂಪಾಗಿರುವಂತೆ ಹೇಳುತ್ತಾರೆ ‖ ೩ ‖ ಕೇಳು ಜನಮೇಜಯನೆ! ಯುಧಿಷ್ಠಿರನು ಕುರುವಂಶಜರಾದ ಸುಯೋ

ಯಲಾಸುಯೋಧನಮೇದಿನೀಶನಂ | ಕಾಳಗದೊಳುರಿಗೆಲ್ದ ಬಳಿಕವರಹಸ್ತಿನಾಪುರದನಿಜಸಾಮ್ರಾಜ್ಯದ || ಬಾಳಿಕೆಯನನುಜರಿಂದೊಡಗೂಡಿಧರ್ಮಜಂ | ತಳೆದಂ ಭರತನಳನಹುಷಾದಿರಾಯರಂ | ಪೇಳುವೊಡರ್ವಗಿನಿತುಗುಣಮಿಲ್ಲವೆಂದುಭೂಮಂಡಲಂಕೊಂಡಾಡಲು ||೪|| ಬಳಿಕನೃಪವರಯುಧಿಷ್ಠಿರನಾಳ್ವದೇಶದೊ | ಳ್ಕಳವುಕೊಲೆಪಾದರಂಪುಸಿನುಸುಳುವೈರಮ | ಟ್ಟುಳಿತೋಹುಬೆದರುಬೆಜ್ಜರಕಷ್ಟನಿಷ್ಠುರಂಗಜರುಗಾವಳಿವಿವಾದ || ಮುಳಿಸುಪೊರಗಲಸುಮೊರೆಸೆರೆಕೃತಕಕಾರ್ಪಣ್ಯ | ಮಳಿವುಪಳಿವನ್ಯಾಯ ಮರೆಮೋಸವಾಸಿತ | ಲ್ಲಣತಳೆವಿಯೋಗಮಲಸಿಕೆಕರ್ಕಶಂಗಳಿವು ಮೊಳೆದೋರವೇವೇಳ್ವೆನು || ೫ || ನೀತಿಚತುರತೆಕೀರ್ತಿಕಲ್ಯಾಣಭೋಗ ಸಂ | ಪ್ರೀತಿಪರಹಿತವಿನಯ ಶುಭವಿಭವವಿಜಯ ವಿ | ಖ್ಯಾತಿ ಕಳೆಸೌಭಾಗ್ಯ ಮಾರೋಗ್ಯಸೌಖ್ಯ

---

ದೇವಿಯಲ್ಲಿ ಆಸಕ್ತನಾಗಿದ್ದು, ಬಹಳ ಹೆಮ್ಮೆಯಿಂದ ತಾನು ಪಲ್ಲಕ್ಕಿಯಲ್ಲಿ ಕುಳಿತು ತನ್ನನ್ನು ಸಪ್ತ ಋಷಿಗಳು ಹೊತ್ತುಕೊಂಡು ಹೋಗುವಂತೆ ಮಾಡಿದನು. ಋಷಿಗಳು ಪಲ್ಲಕ್ಕಿಯನ್ನು ಹೊತ್ತುಕೊಂಡು ಹೋಗುತ್ತಿರುವಾಗ ಇವನು "ಸರ್ಪ" "ಸರ್ಪ" ಎಂಬುದಾಗಿ ಹೇಳುತ್ತ ಅಗಸ್ತ್ಯಮಹರ್ಷಿಗಳನ್ನು ಕಾಲಿನಿಂದೊದ್ದು ಅವರ ಕೋಪಾಗ್ನಿಯಿಂದ "ಸರ್ಪೋಭವ" ಎಂಬ ಶಾಪವನ್ನು ಹೊಂದಿದನು. ಆಗ ಅವನಿಗೆ ಅಜಗರನೆಂಬ ನಾಮಧೇಯವಾಯಿತು. ಈ ಶಾಪವು ಧರ್ಮರಾಯನೊಡನೆ ಸಂಭಾಷಿಸಿದ್ದರಿಂದ ವಿಮೋಚನೆಯಾಯಿತು.

ನಳ—ಇವನು ನಿಷಧಾಧಿಪತಿಯು, ವಿದರ್ಭರಾಜನಾದ ಭೀಮಭೂಪಾಲನ ಅಳಿಯನು. ದಾಯಾದಿಯಾದ ಪುಷ್ಕರನಿಗೆ ಪಗಡೆಯಾಟದಲ್ಲಿ ರಾಜ್ಯವನ್ನು ಸೋತು ಪತ್ನಿಯಾದ ದಮಯಂತಿಯನ್ನು ಕಾಡಿನಲ್ಲಿ ಬಿಟ್ಟು ತಾನು ಅನೇಕಪ್ರಕಾರವಾದ ಶನಿಕಾಟಗಳನ್ನು ಅನುಭವಿಸಿ ಪುನಃ ದಮಯಂತಿಯನ್ನೂ ರಾಜ್ಯವನ್ನೂ ಹೊಂದಿ ಹೆಸರುವಾಸಿಯನ್ನು ಪಡೆದು ಸುಖವಾಗಿದ್ದ ಚಕ್ರವರ್ತಿಯು ||೪||

ಟೀ|| ಬಳಿಕ-ಆಮೇಲೆ, ನೃಪವರ_ರಾಜೋತ್ತಮನಾದ, ಯುಧಿಷ್ಠಿರ_ಧರ್ಮಭೂಪಾಲನು, ಆಳ್ವ-ರಾಜ್ಯಭಾರಮಾಡುತ್ತಿರುವ, ದೇಶದೊಳು-ರಾಜ್ಯದಲ್ಲಿ, ಕಳವು-ಚೌರ್ಯವು, ಕೊಲೆ_ಕೊಂದುಹಾಕುವುದು, ಪಾದರ-ಹಾದರವು, ಪುಸಿ-ಸಟೆ, ನುಸುಳು_ತಪ್ಪಿಸಿಕೊಳ್ಳುವುದು, ವೈರಂ_ಶತ್ರುಭಾವವು, ಅಟ್ಟುಳಿ-ಗರ್ಜನೆಯು, ತೋಹು_ಎಡರುಗಳು, ಬೆದರು_ಗಾಬರಿ, ಬೆಜ್ಜರ-ದಿಗಿಲು, ಕಷ್ಟ-ಕಷ್ಟವು, ನಿಷ್ಠುರಂ - ಕ್ರೂರವಚನಗಳು, ಗಜರು_ಗದ್ದಲವು, ಗಾವಳಿ_ರೊಂಪು (ಹಾವಳಿ), ವಿವಾದ_ವ್ಯಾಜ್ಯಗಳು, ಮುಳಿಸು-ಸಿಟ್ಟು, ಹೊಲೆಗಲಸು_ನೀಚಕೆಲಸ ಮಾಡುವುದು, ಮೊರೆ_ದೈನ್ಯವು, ಸೆರೆ-ಬಂಧನವು, ಕೃತಕ-ಮೋಸ, ಕಾರ್ಪಣ್ಯ-ಲುಬ್ಧತೆ, ಅಳಿವು-ನಾಶನವು, ಪಳಿವು_ದುರ್ಜನವು, ಅನ್ಯಾಯ_ನ್ಯಾಯರಾಹಿತ್ಯವು, ಮರೆಮೋಸವಾಸಿ_ನಂಬಿಕೆಗೆ ದ್ರೋಹವು, ತಲ್ಲಣ_ಕೊರಗು, ತಳೆ_ಪ್ರಜ್ಞೆತಪ್ಪುವುದು, ವಿಯೋಗಂ_ಅಗಲುವಿಕೆಯು, ಅಲಸಿಕೆ-ಸೋಮಾರಿತನವು, ಕರ್ಕಶಂಗಳು-ಕ್ರೂರಕರ್ಮವು, ಇವು-ಇವೆಲ್ಲ, ಮೊಳೆದೋರವು_ಉಂಟಾಗುತ್ತಿರಲಿಲ್ಲ, ಏವೇಳ್ವೆನು_ಏನೆಂದು ಹೇಳಲಿ ||೫||

ಟೀ|| ನೀತಿ_ಸನ್ಮಾರ್ಗವು, ಚತುರತೆ_ಚಮತ್ಕಾರವು, ಕೀರ್ತಿ-ಒಳ್ಳೆಯ ಹೆಸರುವಾಸಿಯು, ಕಲ್ಯಾಣ-ಮಂಗಳವು, ಭೋಗ-ಸೌಖ್ಯವು, ಸಂಪ್ರೀತಿ - ಪ್ರೇಮಾತಿಶಯವು, ಪರಹಿತ - ಪರೋಪಕಾರ ಬುದ್ಧಿಯು, ವಿನಯ_ನಮ್ರತೆಯು, ಶುಭ ಕಲ್ಯಾಣವನ್ನು ಕೊಡುವ, ವಿಭವ-ವೈಭವವು, ವಿಜಯ_ಗೆಲುವು, ವಿಖ್ಯಾತಿ-ಹೆಸರುವಾಸಿಯು, ಕಳೆ_ಪ್ರಕಾಶವು, ಸೌಭಾಗ್ಯ_ಮಹಿಮೆಯು, ಆರೋಗ್ಯ-ಕಾಯಿಲೆಯಿಲ್ಲದಿರುವಿಕೆಯು, ಸೌಖ್ಯ_ಸುಖವು, ಉನ್ನತ_ಅಧಿಕವಾದ, ಸತ್ಯ_ನಿಶ್ಚಯವು, ನಿತ್ಯಶಕ್ತಿ_ಶಾಶ್ವತವಾದ ಸಾಮರ್ಥ್ಯವು, ಜಾತಿ_ಚಾತುರ್ವರ್ಣ್ಯವು, ಧರ್ಮಾಚಾರ - ಧರ್ಮದ ನಡವಳಿಕೆಗಳಲ್ಲಿ, ನಿಷ್ಠೆ_ಅಭಿಲಾಷೆ

---

ಧನಾದಿಗಳನ್ನೆಲ್ಲಾ ರಣದಲ್ಲಿ ಗೆದ್ದು ಅವರನ್ನು ಸಂಹರಿಸಿದ ಬಳಿಕ ಖ್ಯಾತಿಯಲ್ಲಿಯೂ ಸದ್ಗುಣದಲ್ಲಿಯೂ ಪ್ರಸಿದ್ಧರಾದ ನಳ, ನಹುಷ, ಭರತಾದಿರಾಯರಿಗೆಲ್ಲಾ ಅಗ್ರಗಣ್ಯನಾಗಿ ಹಸ್ತಿನಾವತಿಯಲ್ಲಿ ಭೀಮಾರ್ಜುನಾದಿಗಳಾದ ತಮ್ಮಂದಿರಿಂದೊಡಗೂಡಿ ಸಾಮ್ರಾಜ್ಯಲಕ್ಷ್ಮಿಯನ್ನು ಕೈಯಲ್ಲಿರಿಸಿಕೊಂಡು ಅಪರಿಮಿತ ಸುಖದಿಂದ ಇದ್ದನು. ಆದರೆ ತಮ್ಮ ವಂಶದಲ್ಲಿ ಉತ್ಪನ್ನರಾಗಿದ್ದ ದಾಯಾದಿಗಳಾದ ದುರ್ಯೋಧನಾದ್ಯರನ್ನು ಯುದ್ಧದಲ್ಲಿ ಸಂಹರಿಸಿದ್ದರಿಂದ ಗೋತ್ರಹತ್ಯಾದೋಷ ಉಂಟಾಯಿತೆಂಬ ಸಂತಾಪಾಗ್ನಿಯು ಮಾತ್ರ ಯಾವಾಗಲು ಅವನ ಸುಖವನ್ನು ಭಸ್ಮೀಭೂತವಾಗಿ ಮಾಡುತ್ತಿತ್ತು || ೪ || ಈತನು ಆಳುವ ಹಸ್ತಿನಾವತೀಪುರಿಯಲ್ಲಿ ಚೋರಭಯ, ಹಾದರ, ಅನೃತ ಶತ್ರುತ್ವ, ಬೆದರಿಕೆ, ಕಾಠಿಣ್ಯ, ಕೋಪ, ದೂಷಣೆ, ಅಪನಿಂದೆ, ಕಾಪಟ್ಯ, ಆಲಸ್ಯ, ಮೊದಲಾದವು ತಲೆದೋರಲು ಹೆದರುತ್ತಲಿದ್ದವು ||೫|| ಆದರೆ ಈತನ ರಾಜ್ಯಭಾರದಲ್ಲಿ ನ್ಯಾಯ ಚಮತ್ಕಾರ, ಸತ್ಕೀರ್ತಿ, ಸುಖ, ಭೋಗ, ಪ್ರೇಮ, ಪರೋಪಕಾರ, ವಿಧೇಯತೆ, ಸತ್ಯ, ಸಾಮರ್ಥ್ಯ, ಚತುರ್ವರ್ಣಾಶ್ರ

ಮುನ್ನತಸತ್ಯನಿತ್ಯಶಕ್ತಿ || ಜಾತಿಧರ್ಮಾಚಾರನಿಷ್ಠೆಧರ್ಮಜ್ಞತೆ (ದೈವಜ್ಞತೆಯೆಂದು ಪಾ) ವಿ | ಭೂತಿಶಮದಮದಾನದಾಕ್ಷಿಣ್ಯಮೆಂಬಿವುಮ | ಹಾತಿಶಯಮೆನೆಪೆರ್ಚಿತಾಯುಧಿಷ್ಠಿರನರೇಶ್ವರನಾಳ್ವಭೂತಳದೊಳು || ೬ || ಕುಟಿಲಚಂಚಲಕಠಿನಕೃಶಮಾಂದ್ಯಮೆಂಬಿವು | ತ್ಕಟಯೌವನಶ್ರೀವಿಲಾಸಿನಿಯರಳಕಾಳಿ | ಚಟುಲಸುಕಟಾಕ್ಷವಕ್ಷೋಜಾತಮಧ್ಯಗತಿಗಳವಿಲಾಸದೊಳಲ್ಲದೆ || ಘಟಿಸದುಮದಾವಸ್ಥೆನಿಗಳಬಂಧನದಸಂ | ಕಟಹರಿದ್ವೇಷಮತಿಹೀನತೆಗಳೆಂಬವಿಭ | ಘಟೆಯೊಳಲ್ಲದೆಸಲ್ಲದೆಲ್ಲಿಯುಂಧರ್ಮತನಯಂಪಾಲಿಸುವನೆಲದೊಳು || ೭ || ಗಾರುಡದೊಳಹಿತತ್ವಮಾರಣ್ಯದೋಳ್ದಾನ | ವಾರಣಂಚಾರುಪ್ರವಾಳಮಣಿರುಚಿ

---

ಯು, ಧರ್ಮಜ್ಞತೆ–ಧರ್ಮದ ಅರಿವು, ವಿಭೂತಿ–ಸಂಪತ್ತು, ಶಮ–ಒಳಭಾಗದ ಇಂದ್ರಿಯಗಳ ಸ್ವಾಧೀನತೆ, ದಮ–ಹೊರಭಾಗದ ಇಂದ್ರಿಯಗಳ ಸ್ವಾಧೀನತೆ, ದಾನ–ಕೊಡುವದು (ಮಂತ್ರೋದಕದಿಂದ), ದಾಕ್ಷಿಣ್ಯ–ಅಭಿಲಾಷೆ, (ಎರಡನೆಯವರ ಇಷ್ಟದಂತೆ ನಡೆವುದು (ಎಂಬಿವು – ಇವುಗಳೆಲ್ಲವೂ, ಯುಧಿಷ್ಠಿರನರೇಶ್ವರನು – ಧರ್ಮರಾಯನೆಂಬ ಪೃಥ್ವೀಶನು–ಆಳ್ವ–ಪಾಲಿಸುತ್ತಿರುವ, ಭೂತಳದೊಳು–ಭೂಮಂಡಲದಲ್ಲಿ, ಮಹಾತಿಶಯವು–ಬಹಳ ಹೆಚ್ಚು, ಎನೆ–ಎಂಬತೆ, ಪೆರ್ಚಿತು–ಅತ್ಯಧಿಕವಾಯಿತು || ೬ ||

ಟೀ|| ಕುಟಿಲ–ಕೌಟಿಲ್ಯವು (ವಕ್ರಮಾರ್ಗವು), ಉತ್ಕಟ – ಹೆಚ್ಚಾದ, ಯೌವನಶ್ರೀ – ಹರೆಯವೆಯೆ ಭಾಗ್ಯವಾಗಿರುವ, ವಿಲಾಸಿನಿಯರ–ನಾರೀಮಣಿಗಳ, ಅಳಕಾಳಿ – ಮುಂಗುರುಳಿನ ಪಙ್ತಿಯಲ್ಲಿಯೂ, ಚಂಚಲ – ಚಾಪಲ್ಯವೆಂಬುದು, ಚಟುಲ–ಅಲ್ಲಾಡುತ್ತಿರುವ (ಚಂಚಲವಾದ), ಸುಕಟಾಕ್ಷ–ನೇತ್ರಗಳಲ್ಲಿಯೂ, ಕಠಿನ–ಘಟ್ಟಿಯಾಗಿರುವುದು (ಕಾಠಿಣ್ಯವು), ವಕ್ಷೋಜಾತ–ಎದೆಗಂಟುಗಳಲ್ಲಿಯೂ (ಮೊಲೆಗಳಲ್ಲಿ), ಕೃಶ–ಕುಂದಿರುವುದು (ಬಡವಾಗಿರುವುದು), ಮಧ್ಯ–ಮಧ್ಯದೇಶದಲ್ಲಿ (ಸೊಂಟದಲ್ಲಿ) ಯೂ, ಮಾಂದ್ಯ–ಮಂದತೆ (ಚಟುವಟಿಕೆಯಿಲ್ಲದಿರುವಿಕೆಯು), ಗತಿವಿಲಾಸದೊಳ್–ನಡಿಗೆಯ ರೀತಿಯಲ್ಲಿಯೂ ಎಂಬ ಇವು–ಇವೆಲ್ಲಾ, ಅಲ್ಲದೆ–ಇದ್ದವೇವಿನಹ, ಘಟಿಸದು–ಇನ್ನೆಲ್ಲಿಯೂ ಇರಲಿಲ್ಲ, ಮದಾವಸ್ಥೆ–ಕಾಮೋದ್ರೇಕದ ಬಾಧೆಯು, ನಿಗಳಬಂಧನದಸಂಕಟ–ಸರಪಣಿಯನ್ನು ಹಾಕಿಕಟ್ಟಿರುವದರಿಂದುಂಟಾಗುವ ದುಃಖ, ಹರಿದ್ವೇಷ–ವೈಷ್ಣವದ್ವೇಷ (ಸಿಂಹದಲ್ಲಿರುವದ್ವೇಷ) ಮತಿಹೀನತೆಗಳು–ಮಂಕುತನವು, ಎಂಬವು–ಇವುಗಳೆಲ್ಲಾ, ಇಭಘಟೆಯೊಳಗೆ ಅಲ್ಲದೆ – ಗಜಸಂಕುಲದಲ್ಲಿದ್ದವೇಹೊರ್ತು, ಧರ್ಮತನಯಂ–ಯುಧಿಷ್ಠಿರನು, ಪಾಲಿಸುವ–ಆಳತಕ್ಕ, ನೆಲದೊಳು – ರಾಜ್ಯದಲ್ಲಿ, ಎಲ್ಲಿಯುಂ – ಯಾವಭಾಗದಲ್ಲಿಯೂ, ಸಲ್ಲದು–ಒದಗುತ್ತಿರಲಿಲ್ಲ.

ಹರಿ ಎಂಬ ಪದಕ್ಕೆ ಸೂರ್ಯ, ಗಿಣಿ, ಕೋತಿ, ಕಪ್ಪೆ, ಗಾಳಿ, ಸಿಂಹ, ಕುದುರೆ, ವಿಷ್ಣು, ಮೊದಲಾದ ಅನೇಕಾರ್ಥಗಳುಂಟು. ಉತ್ಪಲ–=ಕಪ್ಪುಕನುದಹಾಗೆ, ಅಕ್ಷಿ–ನೇತ್ರವುಳ್ಳವಳು (ಸವರ್ಣದೀರ್ಘಸಂಧಿ) ವಕ್ಷ ಎದೆಯಭಾಗದಲ್ಲಿ, ಜ–ಉತ್ಪನ್ನವಾದ್ದು (ಸ್ತನ) || ೭ ||

ಟೀ|| ಗಾರುಡದೊಳು–ಪಕ್ಷಿರಾಜನಲ್ಲಿ ಮತ್ತು ಗಾರುಡವಿದ್ಯೆಯಲ್ಲಿಯೂ, ಅಹಿತತ್ವಂ–ವೈರವು, ಮತ್ತು ಹಾವುಗಳಸಂಬಂಧವಾದ ತತ್ವವು, ಆರಣ್ಯದೋಳ್–ವನದಲ್ಲಿ, ದಾನವಾರಣಂ–ದಾನಮಾಡುವುದಕ್ಕವಕಾಶವಿಲ್ಲದಿರುವಿಕೆ ಮತ್ತು ಮದಜಲದಿಂಪೂರ್ಣವಾದಗಜವು, ಚಾರು–ಹೃದಯಾಹ್ಲಾದವನ್ನೀಯುವ, ಪ್ರವಾಳಮಣಿರುಚಿಯೋಳ್–ಹವಳಗಳಲ್ಲಿ, ಸದಾ–ಅನವರತವೂ, ಅರುಣಂ–ರಕ್ತವರ್ಣವು (ಸದಾರುಣವು), ಸರಸಿಯೋಳ್–ಸರೋವರದಲ್ಲಿ, ಕಲಹಂಸಮಯಂ–ಜಗಳದ ಕಾಲವು, ಇನಿದಾದಸ್ವರದಿಂದ ಕೂಡಿರುವ ಹಂಸಗಳಿಂ ಸೇರುವಿಕೆಯು, ಉತ್ಪಲಾಕ್ಷಿಯರ–ನಾರೀಮಣಿಗಳ, ಕಂಧರದೊಳು–ಕಂಠದಲ್ಲಿ, ಹಾರವಲಯಂ–ಗುಂಡಾದ ಮಾಲೆಯು, ಮತ್ತು ಹಾಎಂಬ ವ್ಯಸನಸೂಚಕವಾದ ಶಬ್ದವು, ಭೂರುಹದೊಳು–ವೃಕ್ಷದಲ್ಲಿ, ಅನೇಕಾ

---

ಮಧರ್ಮ, ಆಚಾರ, ಐಶ್ವರ್ಯ, ದಾನ, ಧರ್ಮ, ದಯೆ, ದಾಕ್ಷಿಣ್ಯ, ಅಂತರ್ಬಹೀಂದ್ರಿಯನಿಗ್ರಹಗಳು ಮೊದಲಾದುವೇ ತುಂಬಿತುಳುಕಾಡುತ್ತಿದ್ದವು ||೬|| ಇದೂ ಅಲ್ಲದೆ ಕೌಟಿಲ್ಯವೆಂಬ ದುರ್ಗುಣವು (ವಕ್ರತೆ) ಯುವತಿಯರ ಮುಂಗುರುಳುಗಳಲ್ಲೂ, ಚಾಪಲ್ಯವೆಂಬುದು ಅವರ ಕಟಾಕ್ಷಂಗಳಲ್ಲೂ, ಕಾಠಿಣ್ಯವು ಅವರ ಎದೆಗೆಂಟುಗಳಲ್ಲಿ (ಸ್ತನ), ಕಾರ್ಶ್ಯವು ಅವರ ಟೊಂಕದಲ್ಲಿಯೂ, ಮಂದತೆಯು ಅವರ ಗಮನದ (ನಡಿಗೆ) ಲ್ಲಿಯೂ, ಮತ್ತು ಮದದ ಬಾಧೆ, ಬೇಡಿಹಾಕುವುದು, ಹರಿಯದ್ವೇಷ, ಮಾಂದ್ಯಗುಣ ಮೊದಲಾದವೆಲ್ಲಾ ಆನೆಗಳ ಗುಂಪಿನಲ್ಲಿಯೂ ಅನ್ವರ್ಥಕಂಗಳಾಗಿದ್ದುವು. ಆ ದೇಶದ ಪ್ರಜೆಗಳೆಲ್ಲರೂ ಮೇಲೆ ಹೇಳಿದ ಕೌಟಿಲ್ಯಾದಿ ಗುಣ ವರ್ಜಿತರಾಗಿಯೂ, ಅಹಂಕಾರ ಬಂಧನರಹಿತರಾಗಿಯೂ, ವಿಷ್ಣುವಿನಲ್ಲಿ ಪರಮಭಕ್ತಿಯುಳ್ಳವರಾಗಿಯೂ, ಸದಾಚಾರ ಸದ್ಗುಣಗಳಿಂದೊಡಗೂಡಿಯೂ ಇದ್ದರು || ೭ || ಮತ್ತು ಆ ರಾಜ್ಯದಲ್ಲಿ ಅಹಿತತ್ವವೆಂಬುದು ಗರುಡನಲ್ಲಿಯೂ, ಸದಾರುಣವೆಂಬುದು ಪ್ರವಾಳಂಗಳಲ್ಲಿಯೂ, ಕಲಹಂಸವೆಂಬುದು ಕಾಸಾರಗಳಲ್ಲಿಯೂ, ಹಾರವಲಯವೆಂ

ಯೋಳ್ಸ | ದಾರುಣಂ ಸರಸಿಯೋಳ್ಕಲಹಂಸಮಯಮುತ್ಪಲಾಕ್ಷಿಯರಕಂಧರದೊಳು || ಹಾರವಲಯಂಭೂರುಹದೊಳನೇಕಾಗ್ರತೆನ| ವಾರಾಮದೋಳ್ಮಹಾಶೋಕಂವಸಂತದೋಳ್ಮಾರಹಿತಮುಂಟಲ್ಲದಿಲ್ಲಮಿವುಮತ್ತೆಲ್ಲಿಯುಂಧರ್ಮಜನನೆಲದೊಳು||೮|| ಕೊಡೆಯೆಂಬರಾತಪತ್ರನನುದರದೇಶವಮಂ | ಪೊಡೆಯೆಂಬರೊಲಿದುಮಂಥನವನೆಸಗೆಂಬುದಂ | ಕಡೆಯೆಂಬರಾಱಡಿಯನಳಿಯೆಂಬರುದಕಪ್ರವಾಹಮಂತೊರೆಯೆಂಬರು || ಮಡಿಯೆಂಬರಂಬರದಧೌತಮಂ ಕಬರಿಯಂ | ಮುಡಿಯೆಂಬರೆಡೆವಿಡದೆಮುಸುಕಿರ್ದಮೇಘಮಂ | ಜಡಿಯೆಂಬರುರುಶಿಲೆಯನರೆಯೆಂಬರಲ್ಲದಿವನುಡಿಯರವನಾಳ್ವಿಳೆಯೊಳು || ೯ || ಎಲ್ಲರುಂಭೋಗಿಗಳ್ಪಾತಾಳಗತರೆನಿಸ | ರೆಲ್ಲರುಂವಿದ್ಯಾಧರರ್ನಭೋಜನರೆನಿಸ | ರೆಲ್ಲರುಂದಾಕ್ಷಿಣ್ಯವರ್ತಿಗಳ್ತಿಳಿಯೆಲಂಕಾನಿವಾಸಿಗಳೆನಿಸರು || ಎಲ್ಲರುಂ

---

ಗ್ರತೆ-ಚಿತ್ತಚಾಂಚಲ್ಯವು ಮತ್ತು ಶಾಖಾಬಾಹುಳ್ಯವು, ನವ-ಹೊಸದಾದ, ಆರಾಮದೋಳ್-ತೋಟದಲ್ಲಿ, ಮಹಾಶೋಕಂ-ಸಾಮತಿಯಿಲ್ಲದ ವ್ಯಸನವು ಮತ್ತು ಅಗಾಧವಾದ ಅಶೋಕವೃಕ್ಷವು, ವಸಂತದೋಳ್-ಮಧುಮಾಸದಲ್ಲಿ, ಮಾರಹಿತಂ-ಐಶ್ವರ್ಯ ರಾಹಿತ್ಯವು ಮತ್ತು ಮದನನಿಗೆ ಇಷ್ಟವಾಗಿರುವುದು, ಉಂಟಲ್ಲದೆ-ಉಂಟಾಗಿರುವುದಲ್ಲದೆ, ಧರ್ಮಜನ-ಯುಧಿಷ್ಠಿರನ, ನೆಲದೊಳು-ರಾಜ್ಯದಲ್ಲಿ, ಮತ್ತೆಲ್ಲಿಯುಂ-ಇನ್ನೆಲ್ಲಿಯೂ, ಇವು-ಇವುಗಳು, ಇಲ್ಲ-ಇರಲಿಲ್ಲ.

ಟೀ|| ಅವನು-ಆ ಪಾಂಡು ಪುತ್ರನಾದ ಯುಧಿಷ್ಠಿರನು, ಆಳ್ವ-ರಾಜ್ಯವಾಳುತ್ತಿರುವ, ಇಳೆಯೊಳು-ಧರಾಮಂಡಲದಲ್ಲಿ ಆತಪತ್ರವನು-ಬಿಸಲಿನ ಝಳವನ್ನು ನಿವಾರಣೆ ಮಾಡುವ ವಸ್ತುವನ್ನು ಮಾತ್ರ, ಕೊಡೆಎಂಬರು-ಕೊಡೆ ಎಂಬುದಾಗಿ ಹೇಳುವರು, ಉದರದೇಶಮಂ-ಜಠರಭಾಗವನ್ನು, (ಹೊಡೆ) ಪೊಡೆ ಎಂಬರು-ಪೊಡೆಎಂಬುದಾಗಿ ಅನ್ನುವರು, ಒಲಿದು-ಮೆಚ್ಚಿ, ಮಂಥನವನು-ಕಲಕುವಿಕೆಯನ್ನು, ಎಸಗು-ಮಾಡು, (ಕಡೆ) ಎಂಬುದಂ-ಎನ್ನುವದನ್ನು ಮಾತ್ರ, ಕಡೆಎಂಬರು-ಕಡೆ ಎಂಬುದಾಗಿ ಕರೆಯುತ್ತಾರೆ. ಆರಡಿಯನು - ಭ್ರಮರವನ್ನು, ಅಳಿಎಂಬರು - ಅಳಿ ಅನ್ನುವರು, ಉದಕಪ್ರವಾಹಮಂ-ನೀರುಹರಿಯುತ್ತಿರುವದನ್ನು ಮಾತ್ರ-ತೊರೆಎಂಬರು-ತೊರೆಎಂದು ಹೇಳುವರು, ಅಂಬರದಧೌತಮಂ-ಒಗೆದ ವಸ್ತ್ರಗಳನ್ನು ಮಾತ್ರವೇ ಮಡಿಎಂಬರು-ಮಡಿಎನ್ನುತ್ತಿದ್ದರು. ಕಬರಿಯ-ಹೆರಳನ್ನು, ಮುಡಿಎಂಬರು-ಮುಡಿ ಅನ್ನುವರು, ಎಡವಿಡದೆ-ಅವಕಾಶವಿಲ್ಲದೆ ಆವರಿಸಿದ ಮುಗಿಲನ್ನು ಮಾತ್ರವೇ, ಜಡಿಎಂಬರು-ಜಡಿ ಎನ್ನುವರು, ಉರುಶಿಲೆಯನ್ನು-ದಪ್ಪವಾದ ಬಂಡೆಯನ್ನು, ಅರೆಎಂಬರು-ಅರೆಯೆನ್ನುವರು, ಅಲ್ಲದೆ-ಈ ಪ್ರಕಾರವಾಗಿತ್ತೇ ಹೊರ್ತು, ಮೇಲ್ಕಂಡ ಕೊಡೆ, ಪೊಡೆ, ಕಡೆ, ಅಳಿ, ತೊರೆ, ಮಡಿ, ಮುಡಿ, ಜಡಿ, ಅರೆ ಮೊದಲಾದವುಗಳ ನಿಜಾರ್ಥವಾದ ಕೊಡದಿರುವಿಕೆ, ದಂಡನೆ, ಕತ್ತರಿಸುವಿಕೆ, ಹಾಳಾಗುವದು, ತ್ಯಜಿಸುವುದು, ಮರಣವು, ನಷ್ಟವಾಸವುದು, ಒಡೆಯುವುದು, ಕಲ್ಲಿನಿಂದ ಅರೆಯುವುದು. ಎಂಬ ಮಾತುಗಳನ್ನು ನುಡಿಯ್ಯರು-ಆಡುತ್ತಲೇ ಇರಲಿಲ್ಲ || ೯ ||

ಟೀ|| ಅವನ-ಆ ಧರ್ಮಭೂಪಾಲನ, ಇಳೆಯೊಳು-ರಾಜ್ಯದಲ್ಲಿರುವ, ಎಲ್ಲರುಂ-ನಿವಾಸಿಗಳೆಲ್ಲಾ. ಭೋಗಿಗಳ್-ಹಾವುಗಳೇ ಆದರೂ, ಪಾತಾಳಗತರು-ಪಾತಾಳಲೋಕದಲ್ಲಿರುವರೆಂಬುದಾಗಿ, ಎನಿಸರು- ಎನಿಸಿಕೊಳ್ಳರು (ಸರ್ವರೂ ಸುಖಾನುಭವಿಗಳು), ಎಲ್ಲರೂ-ಸಕಲರೂ, ವಿಧ್ಯಾಧರರು-ದೇವತೆಗಳಿಂದ ಹುಟ್ಟಿದವರು ಆದಾಗ್ಯೂ, ನಭೋಗತರು-ಗಗನ ನಿವಾಸಿಗಳು ಎನಿಸರು-ಅನ್ನಿಸಿಕೊಳ್ಳರು, (ಸಕಲಕಲಾಪ್ರೌಢರು), ಎಲ್ಲರುಂ - ಸರ್ವರೂ, ದಾಕ್ಷಿಣ್ಯ-ತೆಂಕಣ ದೆಸೆಯಲ್ಲಿ, ವರ್ತಿಗಳ್-ಇರತಕ್ಕವರು ಆದರೂ, ತಿಳಿಯೆ - ಆಲೋಚನೆ ಮಾಡಿದರೆ, ಲಂಕಾನಿವಾಸಿಗಳ್ - ಲಂಕಾಪಟ್ಟಣದಲ್ಲಿರತಕ್ಕವರು. (ಅಸುರರು), ಎನಿಸರು-ಅನ್ನಿಸಿಕೊಳ್ಳರು. (ಪರದಾಕ್ಷಿಣ್ಯಾಭಿಲಾಷಿಗಳು) ಎಲ್ಲರೂ-ಅಶೇಷರೂ, ಸುಮನೋರತರು-ಹೂಗಳಲ್ಲಿ ಹಿತವುಳ್ಳವರು ಆಗಿದ್ದರೂ, ಮಧುವ್ರತರು - ಬಂಡನುಂಡು ಬದುಕುವರು, (ದುಂಬಿಗಳು) ಎನಿಸರು-ಅನ್ನಿಸಿಕೊಳ್ಳರು - (ಪಂಡಿತರು

---

ಬುದು ನಾರೀಮಣಿಗಳ ಕಂಠಗಳಲ್ಲೂ, ಅನೇಕಾಗ್ರತೆ ಎಂಬುದು ತರುಸಮೂಹದಲ್ಲೂ, ಮಹಾಶೋಕವೆಂಬುದು ಉದ್ಯಾನದಲ್ಲೂ, ಮಾರಹಿತವೆಂಬುದು ವಸಂತಸಮಯದಲ್ಲೂ ಅನ್ವರ್ಥಕಂಗಳಾಗಿ ಮೇಲೆ ವಿವರಿಸಿರುವ ಅಹಿತತ್ವ (ವೈರ), ಸದಾರುಣ (ಸಾಲ), ಕಲಹಂ (ಜಗಳ), ಹಾರವಲಯ (ಹಾ ಎಂಬ ರೋಧನಧ್ವನಿ) ಅನೇಕಾಗ್ರತೆ (ಚಾಂಚಲ್ಯ), ಮಹಾಶೋಕ (ವ್ಯಸನ), ಮಾರಹಿತ (ಬಡತನ) ಮೊದಲಾದವೆಲ್ಲಾ ಅಲ್ಲಿನ ಪ್ರಜೆಗಳ ವಿಷಯದಲ್ಲಿ ನಿರರ್ಥಕತೆಯನ್ನೈದಿದವು ||೮|| ಮತ್ತು ಕೊಡೆ, ಪೊಡೆ, ಕಡೆ, ಅಳಿ, ತೊರೆ, ಮಡಿ, ಮುಡಿ, ಜಡಿ, ಅರೆ ಎಂಬ ಶಬ್ದಗಳನ್ನು ಕ್ರಮವಾಗಿ ಶ್ವೇತಛತ್ರ, ಹೊಟ್ಟೆ, ಮಥಿಸುವದು, ಭ್ರಮರ, ನದಿ, ಒಗೆದಬಟ್ಟೆ, ತುರುಬು, ಮೇಘಾತಿಶಯ, ಬಂಡೆ ಮೊದಲಾದವುಗಳಿಗೆ ಮಾತ್ರವೇ ಉಪಯೋಗಿಸುತ್ತಿದ್ದರು. ಅಲ್ಲಿನ ಪ್ರಜೆಗಳೆಲ್ಲಾ ದಾನಧರ್ಮ ಪರೋಪಕಾರ ನಿರತರಾಗಿ, ಈತಿಬಾಧೆಗಳಿಗೆ ಸಿಕ್ಕುಬೀಳದೆ ಸುಖದಿಂದಿದ್ದರು ||೯|| (ಅಲ್ಲದೆ) ಆ ಪುರವಾಸಿಗಳೆಲ್ಲಾ ಸುಖಾನುಭವಿಗಳೂ, ವಿದ್ಯಾವಿಶಾರದರೂ ದಾಕ್ಷಿಣ್ಯಶೀಲರೂ ವಿದ್ಯಾಪಕ್ಷಪಾತಿಗಳೂ

ಸುಮನೋರಥರ್ಮಧುವ್ರತರೆನಿಸ | ರೆಲ್ಲರುಂ ಗುಣಯುತರ್ಕಠಿಣರೆನಿಸರ್ಮನುಜ | ರೆಲ್ಲರುಂ ಕಾಂತಾರಮಿತಭೋಗ ಸಂಪದ ಕರ್ಕುಜನರಲ್ಲವನಿಳೆಯೊಳು ||೧೦|| ವಸುಗಳಿಂದುಪಭೋಗ್ಯಮಾಗದೊಡೆ ಸೌರಭ್ಯ | ರಸದಿಂದಲಾರೋಗ್ಯಮೆನಿಸದೊಡೆಸಂತತಂ| ವಿಶದಸುಮನೋಯೋಗ್ಯಮಲ್ಲದೊಡೆ ಹರಿವೈಭವಶ್ಲಾಘ್ಯಮಲ್ಲದಿರಲು || ಲಸದಪ್ಸರೋದ್ಯಾನಸೌಭಾಗ್ಯಮೊಂದಿರದೊ | ಡೆಸೆವ ರಾಜೇಂದ್ರಂಗೆ ಸೊಗಸುವೀಡಾಗಿ ರಂ | ಜಿಸದೊಡೀ ಹಸ್ತಿನಾವತಿಯನಮರಾವತಿಗೆ ಸರಿಯೆಂಬರೆಪ್ರೌಢರು || ೧೧ || ನಾಗೇಂ ದ್ರನಂಬಿಡದೆತಲೆವಾಗಿಸಿತ್ತಮರ | ನಾಗೇಂದ್ರನಂಬ.ದ್ಧಿದೊರಸಿತ್ತುಪುರಮರ್ದನಾಗೇಂದ್ರನಂನಿಂದುಬೆರಗಾಗಿಸಿತ್ತಮಲಧರ್ಮ

---

ಪ್ರೇಮವುಳ್ಳವರು ಮತ್ತು ಸಾರಾಯಿ ಕುಡಿಯುತ್ತಿರಲಿಲ್ಲ) ಎಲ್ಲರೂ- ಎಲ್ಲಾ ಜನರೂ, ಗುಣಯುತರ್-ಸದ್ಗುಣ ಸಂಪನ್ನರು, ಆದರೂ, ಕಠಿಣರು-ಕಾಠಿಣ್ಯಚಿತ್ತರು, ಎನಿಸರು-ಎಂಬದಾಗಿ ಹೇಳಿಸಿಕೊಳ್ಳುತ್ತಿರಲಿಲ್ಲ. (ದಯಾಳುಗಳು ಮತ್ತು ಸನ್ಮಾರ್ಗ ಪ್ರವರ್ತಕರು), ಎಲ್ಲರೂ-ಎಲ್ಲಾಮನುಷ್ಯರೂ, ಕಾಂತಾರ-ಅರಣ್ಯಗಳಲ್ಲಿ, ಮಿತ-ಕ್ಲುಪ್ತವಾದ, ಭೋಗ-ಸುಖದ, ಸಂಪದರು-ನಿಧಿಯುಳ್ಳವರೂ, ಆಗಿದ್ದರು. ಕುಜನರು-ನೀಚರು, ಇಲ್ಲ-ಇರಲಿಲ್ಲ ||೧೦||

ಟೀ|| ವಸುಗಳಿಂದ-ಜಯ, ವಿಷ್ಣು, ಅನಿಲ, ಪ್ರಭಾಸ. ವರುಣ, ನಹುಷ, ಪ್ರತ್ಯೂಷ, ವೃಷಭರೆಂಬ ಎಂಟು ಜನ ವಸುವೆಂಬ ದೇವತೆಗಳ ಭೇದದವರಿಂದ, (ಹಣದಿಂದ) ಉಪಭೋಗಂ-ಸುಖಾರ್ಹವಾದದ್ದು, ಆಗದೊಡೆ-ಆಗದೆಹೋದರೆ, ಸೌರಭ್ಯರಸದಿಂದ-ಕಾಮಧೇನುವಿನ ಹಾಲಿನಿಂದ ಮತ್ತು ಮನೋಲ್ಲಾಸಕರಮಾದ-ಶೃಂಗಾರಾದಿ ರಸಗಳಿಂದ, ಆರೋಗ್ಯಂ-ನಿರುಪಾಧಿಕವಾಗಿ, ಇರುವುದೆಂದು, ಎಣಿಸದೊಡೆ-ಹೇಳಿಸಿಕೊಳ್ಳದಿದ್ದರೆ, ಸಂತತಂ-ಅನವರತವೂ, ಸಮನೋಯೋಗ್ಯಂ-ಸುರರಿಗೆ ಅರ್ಹವಾದ್ದು (ವಿದ್ವಾಂಸರಿಗೆ ಅರ್ಹವಾದದ್ದು) ಅಲ್ಲದೊಡೆ-ಆಗದಿದ್ದರೆ, ಹರಿ-ನಾರಾಯಣನ, ವೈಭವ-ಸಂಪತ್ತಿನಿಂದ, ಶ್ಲಾಘ್ಯಂ-ಸ್ತುತ್ಯರ್ಹವು, ಅಲ್ಲದೊಡೆ-ಅಲ್ಲದೆಯಿದ್ದರೆ, ಲಸತ್-ಹೊಳೆಯುತ್ತಿರುವ, ಅಪ್ಸರ-ದೇವತೆಗಳ ವೇಶ್ಯಾಂಗನೆಯರಿಂದ ಕೂಡಿದ, ಉದ್ಯಾನ-ದೇವೇಂದ್ರನ ನಂದನವನದ, ಸೌಭಾಗ್ಯಂ-ಸೊಬಗನ್ನು, ಒಂದಿರದೊಡೆ-ಹೊಂದಿಲ್ಲವಾದರೆ, ಮತ್ತು ಲಸತ್-ಕಾಂತಿ ವಿಶಿಷ್ಟವಾದ, ಅಪ್ಸರ-ಕಾಸಾರಂಗಳಿಂದಲು, ಉದ್ಯಾನ-ತೋಟಗಳಿಂದಲು, ಸೌಭಾಗ್ಯಂ-ಸಂಪತ್ಸಮೃದ್ಧಿಯನ್ನು, ಒಂದಿರದೊಡೆ-ಉಂಟಾಗಿಲ್ಲವಾದರೆ, ಎಸೆವ-ರಾರಾಜಿಸುತ್ತಲಿರುವ, ರಾಜೇಂದ್ರಂಗೆ- ಧರ್ಮನಂದನನಿಗೆ, ಸೊಗಸು-ಅಲಂಕಾರವಾಗಿ ಕಾಣುವುದಕ್ಕೆ, ಈಡಾಗಿ-ಸ್ಥಾನಭೂತವಾಗಿದ್ದು, ರಂಜಿಸದೊಡೆ-ಕಾಂತಿಯನ್ನೀಯದೆ ಹೋದರೆ, ಪ್ರೌಢರು-ಪ್ರಾಜ್ಞರು, ಹಸ್ತಿನಾವತಿಯನು-ಹಸ್ತಿನಾವತೀಪುರಿಯನ್ನು, ಅಮರಾವತಿಗೆ-ದೇವೇಂದ್ರನ ನಗರಕ್ಕೆ, ಸರಿಯೆಂಬರೆ-ಹೋಲಿಸಿ ಹೇಳುತ್ತಾರೆಯೆ? ||೧೧||

ಟೀ|| ಅಮಲ-ಪರಿಶುದ್ಧನಾದ, ಧರ್ಮಜನ-ಧರ್ಮನಂದನನ, ಕೀರ್ತಿ-ಒಳ್ಳೆಯ ಹೆಸರು, ಬಳಿಕ-ಆಮೇಲೆ, ನಾಗೇಂದ್ರನಂ-ಸರ್ಪರಾಜನನ್ನು (ಆದಿಶೇಷನನ್ನು) ತಲೆವಾಗಿಸಿತು-ನಾಚಿಕೆಯನ್ನುಂಟುಮಾಡಿತು, ಅಮರನಾಗೇಂದ್ರನಂ-ಸುರರ ಐರಾವತವೆಂಬ ಗಜವನ್ನು, ಬುದ್ಧಿದೊರಸಿತ್ತು-ಮಂಕಾಗಿ ಮಾಡಿತು, ಮತ್ತು, ಪುರ-ತ್ರಿಪುರಾಸುರರನ್ನು, ಮರ್ದನ-ಸಂಹರಿಸಿದ ಪರಮೇಶ್ವರನ, ಆಗೇಂದ್ರನಂ-ಕೈಲಾಸ ಶಿಖರವನ್ನು, ನಿಂದು-ಎದುರಾಗಿ ನಿಂತು, ಬೆರಗಾಗಿಸಿತ್ತು-ಸ್ತಂಭೀ ಭೂತಮಾಡಿತ್ತು, ನಾಗೇಂದ್ರಶಯನ-ಸರ್ಪರಾಜನನ್ನೆ ಹಾಸಿಗೆಯಾಗಿವುಳ್ಳ ನಾರಾಯಣನ, ಆಲಯಮ-ನಿವಾಸಸ್ಥಾನಮಾದ ಪಾಲ್ಗಡಲನ್ನು, ಜಡಧಿ-ಮಂಕಾಗಿ ಮತ್ತು ನೀರುಳ್ಳದ್ದಾಗಿ, ಎನಿಸಿ-ಎನ್ನಿಸಿ, ನುತನಾಗೇಂದ್ರ-ಸ್ತೋತ್ರಾರ್ಹನಾದ ಗಜೇಂದ್ರನಿಗೆ, ವರದ-ಇಷ್ಟಾರ್ಥಗಳನ್ನು ಕೊಟ್ಟ ನಾರಾಯಣನ, ಆಯುಧವ-ಶಂಖವೆಂಬ ಆಯುಧವನ್ನು, ಪೊಳ್ಳುಗಳೆದು-ಟೊಳ್ಳುಮಾಡಿಬಿಟ್ಟು, ಮಥನ-ಸಮುದ್ರವನ್ನು ಕಡೆಯಲು ಉಪಯೋಗಿಸಿಕ್ಕೊಂಡಿದ್ದ, ಆಗೇಂದ್ರ-ಮಂದರಗಿರಿಯನ್ನು, ಧರನ-ಧರಿಸಿದಂಥಾ ಹರಿಯಿಂದ, ಜಾತೆಯ-ಉತ್ಪನ್ನಳಾದ ಜಾಹ್ನವಿಯ, ನಿಲವುಗೆಡಿಸಿ- ಸ್ಥಿತಿಯನ್ನು ಭಂಗಪಡಿಸಿ, ಮೂಜಗದೊಳು-ಮೂರುಲೋಕಗಳಲ್ಲೂ, ನೆರೆ-ಅಸದೃಶವಾಗಿ, ರಾಜಿಸಿತು-ಪ್ರಕಾಶವನ್ನೈದಿತು.

---

ಗುಣಾಢ್ಯರೂ ಏಕಪತ್ನೀವ್ರತವುಳ್ಳವರೂ ಆಗಿ ಕಾಠಿಣ್ಯ ಕ್ರೌರ್ಯಾದಿ ದುರ್ಗುಣಗಳನ್ನು ದೂರಮಾಡಿದ್ದರು ||೧೦|| ಆ ಧರ್ಮಾತ್ಮನಾದ ಧರ್ಮನಂದನನ ರಾಜಧಾನಿಯಾದ ಹಸ್ತಿನಾವತಿಯು ಐಶ್ವರ್ಯಸಮೃದ್ಧಿಯಿಂದಲೂ, ಶೃಂಗಾರಾದಿ ನವರಸಗಳಿಂದಲೂ ಪಂಡಿತನಿಕಾಯದಿಂದಲೂ, ಸದಾ ವಿಷ್ಣುಭಕ್ತರಾದವರಿಂದಲೂ, ಪ್ರಕಾಶವನ್ನೈದುತ್ತಿರುವ ಆರಾಮಂಗಳಿಂದಲೂ ಮೆರೆಯುತ್ತ ದೇವತಾವಾಸಮಾಗಿಯೂ, ಇಷ್ಟಾರ್ಥಗಳನ್ನೀಯುವ ಕಾಮಧೇನುವಿನಿಂದ ಕೂಡಿಯೂ, ರಂಭಾದ್ಯಪ್ಸರ ಸ್ತ್ರೀಯರಿಂದ ಅಲಂಕೃತವಾಗಿಯೂ, ಮನೋಹರವಾದ ನಂದನವನವೆಂಬ ಉದ್ಯಾನವುಳ್ಳದ್ದಾಗಿಯೂ, ದೇವತೆಗಳಿಗೆ ಒಡೆಯನಾದ ದೇವೇಂದ್ರನಿಗೆ ರಾಜಧಾನಿಯಾಗಿಯೂ ಇರುವ ಅಮರಾವತೀ ಪಟ್ಟಣವನ್ನೂ ಕೂಡ ಅಲ್ಲಗಳೆಯುತ್ತಿತ್ತು ||೧೧|| ಆತನ ಸತ್ಕೀರ್ತಿಯಾದರೋ ಸರ್ಪರಾಜನಾದ ಆದಿಶೇಷನು ನಾಚಿಕೆಯಿಂದ ತಲೆ ತಗ್ಗಿಸಿಕೊಳ್ಳುವಂತೆಯೂ, ಐರಾವತದ ಬುದ್ಧಿಯು ಮಂ

ಜನಕೀರ್ತಿಬಳಿಕ ॥ ನಾಗೇಂದ್ರಶಯನಾಲಯನಜಡಧಿಯೆನಿಸಿನುತ । ನಾಗೇಂದ್ರವರದಾಯುಧವಪೊಳ್ಳುಗಳದುಮಥ । ನಾಗೇಂದ್ರಧನಜಾತೆಯನಿಲವುಗೆಡಿಸಿನೆರೆರಾಜಿಸಿತುಮೂಜಗದೊಳು ॥ ೧೨ ॥ ಹರಿಯಂತೆಬಲಯುತಂಶಿವನಂತೆರಾಜಶೇಖರನಬ್ಜಭವನಂತೆಚತುರಾನನಂಸರಿ । ದ್ವರನಂತೆರತ್ನಾಕರಂದಿವಾಕರನಂತೆನಿರ್ದೋಷನಿಂದ್ರನಂತೆ ॥ ಪರಿಚಿತಸುರಭಿರಮ್ಯನಮೃತಾರ್ಚಿಯಂತೆನಿ । ಸ್ತರಿತಕುವಲಯನೆಂದುಧರ್ಮಜನಧರೆಪೊಗಳು । ತಿರೆಬಳಿಕಹಸ್ತಿನಾವತಿಗೆ ವೇದವ್ಯಾಸಮುನಿಯೊಂದಿನಂಬಂದನು ॥ ೧೩ ॥ ಬರಲಾನೃಪಾಲಕಂಸೋದರರ್ವೆರಸಿಮುನಿ । ವರನಪದಕೆರಗಿದೊಡೆಮಣಿದೆತ್ತಿಬೋಳೈಸಿ । ಪರಸಿಮಂತ್ರಾ

ಅಧಿಕವಿಷಯ—ನಾಗ=ಸರ್ಪ ಮತ್ತು ಆನೆ. ಪುರಮರ್ದನ-ಈಶ್ವರ.

(ಪೂರ್ವದಲ್ಲಿ ತ್ರಿಪುರರೆಂಬ ರಕ್ಕಸರು ಅಂತರಿಕ್ಷದಲ್ಲಿ ಮೂರು ಪಟ್ಟಣಗಳನ್ನು ನಿರ್ಮಿಸಿಕೊಂಡು ತ್ರಿಲೋಕ ಕಂಟಕರಾಗಿದ್ದರಾದ್ದರಿಂದ ಪರಮೇಶ್ವರನು ಲೋಕಕ್ಷೇಮಕ್ಕಾಗಿ ವಿಷ್ಣುವನ್ನು ಬಾಣವಾಗಿ ಮಾಡಿಕೊಂಡು ಇವರನ್ನು ಸಂಹಾರಮಾಡಿ ಖ್ಯಾತನಾದನು).

ಗಜೇಂದ್ರ—ಇವನು ಪೂರ್ವಕಾಲದಲ್ಲಿ ಶಾಪಕ್ಕೊಳಗಾಗಿ ಈ ಜನ್ಮವನ್ನೆತ್ತಿದ ರಾಜನು. ಒಂದು ದಿನ ನೀರನ್ನು ಕುಡಿಯಲು ಸರಸ್ಸಿಗೆ ಹೋದಾಗ ಅದರಲ್ಲಿದ್ದ ಮೊಸಳೆಯೊಂದು ಇದನ್ನು ಹಿಡಿದುಕೊಂಡಿತು. ಅದರಿಂದ ತಪ್ಪಿಸಿಕೊಳ್ಳಲು ಮಾಡಿನ ಪ್ರಯತ್ನಗಳೆಲ್ಲಾ ವ್ಯರ್ಥವಾಗಿ ನಾನಾ ಪ್ರಕಾರವಾಗಿ ಭಗವಂತನನ್ನು ಸ್ತುತಿಸಲು ವಿಷ್ಣುವು ಬಂದು ಆ ಮೊಸಳೆಯನ್ನು ಸಂಹರಿಸಿದನು. ಇದರಿಂದ ಶಾಪ ಪರಿಹಾರವಾಯಿತಲ್ಲದೆ ಶಾಶ್ವತವಾದ ಮೋಕ್ಷವನ್ನೂ ಹೊಂದಿ ಹೆಸರುವಾಸಿಗೆ ಬಂದನು. (ಇದೇ ಗಜೇಂದ್ರಮೋಕ್ಷ ಕಥೆಯು).

ಮಂದರಪರ್ವತ—ಪೂರ್ವದಲ್ಲಿ ಸುರಾಸುರರು ಸಮುದ್ರದಲ್ಲಿರುವ ಅಮೃತವನ್ನು ಪಡೆಯಲು ಇದನ್ನು ಕಡಗೋಲಾಗಿ ಮಾಡಿಕೊಂಡಿದ್ದರು ॥೧೨॥

ಟೀ॥ ಧರೆ-ಲೋಕದ ಜನರು, ಧರ್ಮಜನ_ಯುಧಿಷ್ಠಿರನನ್ನು, ಹರಿಯಂತೆ-ನಾರಾಯಣನಂತೆ, ಬಲಯುತಂ-ಬಲದೇವನು ಮತ್ತು ಪರಾಕ್ರಮ ಇವುಗಳಿಂದ ಕೂಡಿ, ಶಿವನಂತೆ_ಪರಮೇಶ್ವರನಂತೆ, ರಾಜಶೇಖರಂ_ಚಂದ್ರಚೂಡನು ಮತ್ತು ಉತ್ತಮನಾದ ದೊರೆಯು, ಅಬ್ಜಭವನಂತೆ-ವಿರಿಂಚಿಯಹಾಗೆ, ಚತುರಾನನಂ-ಚತುರ್ಮುಖವುಳ್ಳವನು ಮತ್ತು ಚಾತುರ್ಯವಾದ ವದನವನ್ನುಳ್ಳವನು, ಸರಿದ್ವರನಂತೆ-ಕಡಲಿನಹಾಗೆ, ರತ್ನಾಕರಂ_ರತ್ನಗಳಿಗೆ ನೆಲೆಯಾದವನು ಮತ್ತು ರತ್ನಗರ್ಭನು, ದಿವಾಕರನಂತೆ_ರವಿಯೋಪಾದಿಯಲ್ಲಿ, ನಿರ್ದೋಷನು-ಅನಿಶನು (ಜ್ಞಾನಿಯು) ಮತ್ತು ಅನಿಂದ್ಯನು (ಪಾಪವಿಲ್ಲದವನು), ಇಂದ್ರನಂತೆ_ಶಚೀಪತಿಯಹಾಗೆ, ಪರಿಚಿತ_ಪಡೆದಿರುವ ಮತ್ತು ಸಹಿತವಾದ, ಸುರಭಿ_ಕಾಮಧೇನು ಮತ್ತು ಸುವಾಸನೆ ಇವುಗಳಿಂದ ರಮ್ಯನು_ಮನೋಲ್ಲಾಸಕರನು, ಅಮೃತಾರ್ಚಿಯಂತೆ_ಹಿಮಕರನಹಾಗೆ, ವಿಸ್ತರಿತ-ವಿಶಾಲವಾದ, ಕುವಲಯನು_ಕನ್ನೈದಿಲೆಯುಳ್ಳವನು ಮತ್ತು ಧರಾಮಂಡಲವುಳ್ಳವನು, ಹೀಗೆಂಬದಾಗಿ, ಪೊಗಳುತಿರೆ-ಸ್ತುತಿಸುತ್ತಿರಲು, ಬಳಿಕ-ಅನಂತರ, ಒಂದು ದಿನಂ-ಒಂದಾನೊಂದು ದಿನ, ವೇದವ್ಯಾಸಮುನಿ_ವ್ಯಾಸಮಹಾಮುನಿಯು, ಹಸ್ತಿನಾವತಿಗೆ_ಹಸ್ತಿನಾಪುರಿಗೆ, ಬಂದನು_ಬಿಜಯಮಾಡಿದನು.

ಅ, ವಿ॥ ಅಮೃತ-ಸುಧಾಪೂರಿತವಾದ, ಅರ್ಚಿ-ಕಿರಣವನ್ನುಳ್ಳವನು (ಚಂದ್ರ), ದಿವಾಕರ-ಹಗಲನ್ನು ಮಾಡುವನು, ಸರಿದ್ವರ_ನದಿಗಳಲ್ಲಿ ಉತ್ತಮವಾದ್ದು ॥೧೩॥

ಟೀ॥ ಬರಲು-ವ್ಯಾಸಋಷಿಗಳು ಬಿಜಯಮಾಡಲಾಗಿ, ಆ ನೃಪಾಲಕಂ-ಆ ರಾಜೇಂದ್ರನು, ಸೋದರರ್ವೆರಸಿ-ಸಹೋದರರಿಂ ಕೂಡಿ, ಮುನಿವರನ-ಋಷಿವರ್ಯನಾದ ಬಾದರಾಯಣನ, ಪದಕೆ-ಕಾಲುಗಳಿಗೆ, ಎರಗಿದೊಡೆ- ನಮಸ್ಕಾರಮಾಡಲಾಗಿ,

ಕಾಗುವ ತೆರನಾಗಿಯೂ, ಕೈಲಾಸಗಿರಿಯು ಭ್ರಾಂತಿಯನ್ನೈದುವ ರೀತಿಯಾಗಿಯೂ, ಕ್ಷೀರಸಮುದ್ರವನ್ನು ಜಡಬುದ್ಧಿಯಿಂದಿರ್ಪಂತೆಯೂ, ಶ್ರೀ ಮಹಾ ವಿಷ್ಣುವಿನ ಶಂಖವನ್ನು ಅನಾಮಧೇಯವಾಗಿರುವಹಾಗೂ, ಲೋಕಪ್ರಸಿದ್ಧವಾದ ಗಂಗಾನದಿಯ ಕೀರ್ತಿಯು ಕಡಮೆಯಾಗುವಂತೆಯೂ ಮಾಡಿಬಿಟ್ಟಿತು ॥ ೧೨ ॥ ಇಂಥಾ ಕೀರ್ತಿವಂತನಾದ ಧರ್ಮರಾಯನು ಬಲದಲ್ಲಿ ವಿಷ್ಣುವನ್ನೂ, ಶ್ರೇಷ್ಠತೆಯಲ್ಲಿ ಹರನನ್ನೂ, ಚಾತುರ್ಯದಲ್ಲಿ ಬ್ರಹ್ಮನನ್ನೂ, ಐಶ್ವರ್ಯದಲ್ಲಿ ಸಮುದ್ರನನ್ನೂ, ಪರಿಶುದ್ಧತೆಯಲ್ಲಿ ರವಿಯನ್ನೂ, ಕಾಮಿತಂಗಳನ್ನೀಯುವುದರಲ್ಲಿ ಕಾಮಧೇನುವನ್ನೂ, ವೈಶಾಲ್ಯದಲ್ಲಿ ಚಂದ್ರನನ್ನೂ ಹೋಲುತ್ತ ಅಪರಿಮಿತ ಸುಖಸಾಮ್ರಾಜ್ಯ ವೈಭವಗಳಿಂದೊಡಗೂಡಿ ಸಕಲ ಜನರಿಂದಲೂ ಹೊಗಳಿಸಿಕೊಳ್ಳುತ್ತ, ಆ ಸುತನಮಂ ಗೆಯ್ಯುತ್ತಿರುವ ಕಾಲದಲ್ಲಿ ಒಂದಾನೊಂದುದಿನ ಆ ಪ್ರಸಿದ್ಧವಾದ ಹಸ್ತಿನಾವತಿಗಿ ಋಷೀಶ್ವರರಾಗಿ, ಪ್ರಸಿದ್ಧಿಯಂ ಪಡೆದಿರುವ ವ್ಯಾಸಮಹಾಮುನಿಗಳು ಬಿಜಯಂಗೈದರು, ॥೧೩॥ ಆಗ ಧರ್ಮನಂದನನು ತನ್ನ ಅನುಜರಾದ ಭೀಮಾರ್ಜುನ ನಕುಲ ಸಹದೇವರಿಂದೊಡಗೂಡಿ ತಾಪ

ಕ್ಷತೆಯನಿತ್ತುಸತ್ಕಾರಮುಂಕೊಂಡುಕುಳ್ಳಿರ್ದಬಳಿಕ ‖ ಅರಸನನುತಾಪದಿಂತಲೆವಾಗಿಮಾತಾಡ | ದಿರುತಿರ್ದನನಿಲಸಂಚಾರ
ಮೊಂದಿನಿತಿಲ್ಲ | ದುರಿವಕಡುವೇಸಗೆಯಬಿಸಿಲಿಂದ ಬಸವಳಿದಕೋಮಲರಸಾಲದಂತೆ ‖ ೧೪ ‖ ಕಂಡನರಸನಭಾವವಂಬಳಿಕನ
ಗುತಬೆಸ | ಗೊಂಡನಿಂತೆಂದಾಮುನೀಂದ್ರನೆಲೆ ನೃಪತಿಭೂ | ಮಂಡಲದಸಕಲಸಾಮ್ರಾಜ್ಯಮಂಪಾಲಿಸುವನಿನ್ನಸಂತಸದೇ
ಳ್ಗಿಗೆ ‖ ಖಂಡನಂಮಾಳ್ಪುದಾನನದಿರವುಸಾಕುಮನ | ದಂಡಲೆಯನೊರೆಯೆನಲ್ಜೀಯಸಂತಾಪದಿಂ | ಬೆಂಡಾದುದೆನ್ನೊಡಲ್ಸೈ
ರಿಸಲರಿಯೆನೆಂದೊಡಾತಪೋನಿಧಿನುಡಿದನು ‖ ೧೫ ‖ ಕೆತ್ತಬಲ್ಗತ್ತಲೆಗೆತರಣಿಮುಂಗಾಣದಿರೆ | ಪೊತ್ತುವೆಳಗಂಬೇರೆತೋರ್ಪ

---

ಮಣಿದು–ಕೆಳಕ್ಕೆಬಗ್ಗಿ, ಎತ್ತಿ-ಮೇಲಕ್ಕೆತ್ತಿ, ಬೋಳೈಸಿ – ತಲೆಯಂಸವರಿ, ಪರಸಿ – ಆಶೀರ್ವಾದವಂಗೈದು, ಮಂತ್ರಾಕ್ಷತೆಯನು-ಸೇಸೆಯನ್ನು, ಇತ್ತು–ಕೊಟ್ಟಂಥವನಾಗಿ, ಸತ್ಕಾರಮಂ–ಸಪರ್ಯೆಯನ್ನೂ, ಕೊಂಡು – ಸ್ವೀಕರಿಸಿ, ಕುಳ್ಳಿರ್ದಬಳಿಕ-ಪೀಠವನ್ನು ಅಲಂಕರಿಸಿದನಂತರ, ಅರಸನು-ರಾಜನು, ಅನುತಾಪದಿಂ–ದುಃಖಾತಿಶಯದಿಂದ, ತಲೆವಾಗಿ–ತಲೆತಗ್ಗಿಸಿದವನಾಗಿ, ಮಾತಾಡದೆ–ಯಾವಮಾತನ್ನೂ ಆಡದೆ, ಅನಿಲ-ವಾಯುವಿನ, ಸಂಚಾರಂ–ತಿರುಗುವಿಕೆಯು, ಒಂದಿನಿತು-ಸ್ವಲ್ಪವೂ, ಇಲ್ಲದೆ-(ಉಸಿರಾಡಿಸದೆ), ಉರಿವ-ದಹಿಸುವ, ಕಡುವೇಸಗೆಯ–ಅಸದಳಮಾದ ವೈಶಾಖಮಾಸದ ಬಿಸಲಿನಿಂದ, ಬಸವಳಿದ–ಕಂದಿದ, ರಸಾಲದಂತೆ-ಚೂತವೃಕ್ಷದೋಪಾದಿಯಲ್ಲಿ, ಇರುತಿರ್ದನು–ಇದ್ದನು ‖ ೧೪ ‖

ಟೀ‖ ಆ ಮುನೀಂದ್ರನು–ಆ ಬಾದರಾಯಣನು, ಅರಸನ–ಯುಧಿಷ್ಠಿರನ, ಭಾವವಂ–ರೀತಿಯನ್ನು, ಕಂಡನು–ತಿಳಿದುಕೊಂಡನು, ಬಳಿಕ–ಅನಂತರ, ನಗುತ–ನಗುತ್ತ, ಇಂತೆಂದು–ಈರೀತಿಯಾಗಿ, ಬೆಸಗೊಂಡನು-ಕೇಳಿದನು, ಎಲೆನೃಪತಿ-ಎಲೈ ರಾಜನೆ, ಭೂಮಂಡಲದ–ಪ್ರಪಂಚದ, ಸಕಲ–ಎಲ್ಲಾ, ಸಾಮ್ರಾಜ್ಯಮಂ–ಸಂಪತ್ತನ್ನೂ, ಪಾಲಿಸು–ರಕ್ಷಿಸುವ, ನಿನ್ನ–ನಿನ್ನಯ, ಸಂತಸದ–ಹರ್ಷಾತಿಶಯದ, ಏಳ್ಗಿಗೆ–ಅಭಿವೃದ್ಧಿಗೆ. ಆನನದ-ಮೋರೆಯ, ಇರವು-ಇರುವಿಕೆಯು, ಖಂಡನಂಮಾಳ್ಪುದು–ಭಗ್ನಪಡಿಸುವದು, ಸಾಕು–ಇನ್ನು ಚಿಂತಿಸಬೇಡ, ಅಂಡಲೆಯನು–ದುಃಖದ ಬಗೆಯನ್ನು, ಒರೆ-ತಿಳಿಸು, ಎನಲ್-ಎಂಬದಾಗಿ ಹೇಳಲು, ಜೀಯ–ಸ್ವಾಮಿಯೆ, ಎನ್ನ–ನನ್ನ, ಒಡಲ್–ದೇಹವು, ಸಂತಾಪದಿಂ-ವ್ಯಸನದಿಂದ, ಬೆಂಡಾದುದು-ನಿಸ್ಸಾರವಾಯಿತು, ಸೈರಿಸಲು–ತಡೆಯಲು, ಅರಿಯೆಂ–ಆಗದು, ಎಂದೊಡೆ–ಎನ್ನಲು, ಆ ತಪೋನಿಧಿ–ಆ ಬಾದರಾಯಣ ಮುನೀಂದ್ರನು, ನುಡಿದನು–ಮುಂದೆ ವಿವರಿಸುವಹಾಗೆ ಹೇಳುವನು ‖

ಅ-ವಿ‖ ತಪಃ-ತಪಸ್ಸೆ, ನಿಧಿ–ನಿಕ್ಷೇಪವಾಗಿ ಉಳ್ಳವನು (ಬ. ಸ.) ‖೧೫‖

ಟೀ‖ ಕೆತ್ತ–ಕವಿದಿರುವ, ಬಲ್ಗತ್ತಲೆಗೆ-ಗಾಢಾಂಧಕಾರಕ್ಕೆ, ತರಣಿ–ರವಿಯು, ಮುಂಗಾಣದಿರೆ–ಏನೂತೋರದವನಾದರೆ, ಬೆಳಕಂ–ಕಾಂತಿಯನ್ನು (ಬೆಳಕನ್ನು), ಪೊತ್ತು-ಹೊಂದಿ, ಬೇರೆಆರು–ಮತ್ತೆಯಾರು, ತೋರ್ಪರು–ಪ್ರಕಾಶವನ್ನೀಯುವರು, ಮಾರುತಂ-ವಾಯುದೇವರೇ, ಬಿಡದೆ - ತಪ್ಪದೆ, ಘರ್ಮೋತ್ಕರಕೆ–ಬಹಳಸೆಕೆಗೆ, ಬೆಮರ್ದೊಡೆ–ಬೆವರನ್ನುಹೊಂದಿಬಿ

---

ಸೋತ್ತಮರಾದ ವ್ಯಾಸಮಹಾಮುನಿಗಳಿಗೆ ಸಾಷ್ಟಾಂಗ ಪ್ರಣಾಮವಂ ಮಾಡಿದನು. ವ್ಯಾಸಮುನೀಶ್ವರನು ಅವರಿಗೆಲ್ಲಾ ಆಶೀರ್ವಾದನನ್ನು ಮಾಡಿ ಮಂತ್ರಾಕ್ಷತೆಗಳನ್ನು ದಯಪಾಲಿಸಿದನು. ಯುಧಿಷ್ಠಿರಾದಿಗಳೆಲ್ಲಾ ವ್ಯಾಸಮಹಾಮುನಿಗಳಿಂದೊರೆತ ಆಶೀರ್ವಚನ ಸೇಸೆಗಳಂ ತಮ್ಮತಮ್ಮ ಶಿರದೊಳ್ಧರಿಸಿ, ಆ ಮಹಾಮುನಿಗಳಿಗೆ ಅರ್ಘ್ಯಪಾದ್ಯಾದ್ಯುಪಚಾರಂಗಳನ್ನು ಮಾಡಿ ಉಚಿತಾಸನದಲ್ಲಿ ಕುಳ್ಳಿರಿಸಿದರು. ಅನಂತರ ಯುಧಿಷ್ಠಿರಾದಿಗಳೂ ತಮ್ಮತಮ್ಮ ಆಸನಗಳನ್ನಲಂಕರಿಸಿದರು. ಯುಧಿಷ್ಠಿರನು ಎಷ್ಟುಹೊತ್ತಾದರೂ ಒಂದು ಮಾತನ್ನಾದರೂ ಆಡದೆ ಮೂಕಭಾವವನ್ನವಲಂಬಿಸಿ ತಲೆಯನ್ನು ತಗ್ಗಿಸಿ ನೆಲವನ್ನು ನೋಡುತ್ತ ಸುಮ್ಮನೆ ಕುಳಿತಿದ್ದನು. ಈ ರೀತಿಯಲ್ಲಿರುವ ರಾಯನ ಕಡೆಗೆ ವ್ಯಾಸಮಹಾಮುನಿಗಳು ತಿರುಗಿನೋಡಿ, ಗ್ರೀಷ್ಮ ರುತುವಿನಲ್ಲಿರುವ ಪ್ರಚಂಡವಾದ ಬಿಸಲಿನಲ್ಲಿ ಸಿಕ್ಕಿದ ಕೋಮಲವಾದ ಎಲೆಚಿಗುರುಗಳಿಂದ ಕೂಡಿದ ಚೂತವೃಕ್ಷದಂತೆ ಕಂದಿ ಕುಂದಿ ಕಾಂತಿಹೀನವಾಗಿ ಚಿಂತಾಸಮುದ್ರದಲ್ಲಿ ಮಗ್ನನಾಗಿರುವ ಯುಧಿಷ್ಠಿರನ ಮುಖ ಕಮಲವನ್ನು ನೋಡಿ ‖೧೪‖ ತನ್ನಲ್ಲಿ ಮುಸುನಗೆಯನ್ನೈದಿ, ಎಲೈ ರಾಜನೆ ! ನೀನು ಸಕಲ ಸಾಮ್ರಾಜ್ಯವನ್ನನುಭವಿಸುತ್ತಿರುವವನಾಗಿ ಚಕ್ರವರ್ತಿ ಎಂಬ ಹೆಸರುಳ್ಳವನಾಗಿದ್ದಿ. ಇಂಥ ನಿನ್ನಮುಖವೆಂಬ ಚಂದ್ರನು ರಾಹುವಿನ ಬಾಯಿಗೆ ತುತ್ತಾಗಲು ಕಾರಣವೇನು ? ನಿನ್ನ ದುಃಖವನ್ನೆಲ್ಲಾ ಇನ್ನುಬಿಟ್ಟು, ನಿನಿಗೆ ಈ ದುಃಖಕಾರಣವನ್ನುಹೇಳೆಂದರು. ಇದನ್ನು ಕೇಳಿ ಧರ್ಮಜನು ವ್ಯಾಸಮಹಾಮುನಿಗಳನ್ನು ಕುರಿತು ಎಲೈ ಮಹಾನುಭಾವರೇ! ಗೋತ್ರಹತ್ಯಮಾಡಿದ ದುಃಖಾತಿಶಯದಿಂದ ನನ್ನಶರೀರವೆಲ್ಲಾ ಬೆಂದು ಬೂದಿಯಾಗಿದೆ. ಈ ದುಃಖವನ್ನು ಸಹಿಸಲು ಅಸಾಧ್ಯವೆಂಬದಾಗಿ ಹೇಳಿದ ರಾಯನನ್ನು ನೋಡಿ‖೧೫‖ವ್ಯಾಸಮಹಾಮುನಿಗಳು ಕೇಳೈ ಧರ್ಮರಾಯನೇ, ಅಂಧಕಾರವನ್ನು ನೋಡಿ ಸೂರ್ಯನೂ, ಉಷ್ಣಾತಿಶಯವನ್ನು ಕಂಡು ಮಾರುತನೂ, ವಿಷಕ್ಕೆ ಬೆದರಿ ಗರುಡನೂ ಹೆದರಿಕೊಂಡರೆ ಅನ

ಕೃತ್ರಿಮ.ದವಿಷದಸೋಂಕಿಗೆ ರಾರ್ಬಿಡದೆಪ | ರ್ವೊತ್ತರಕೆಮಾರುತಂಬೆಮರ್ದೊಡಾರ್ಬಿ(ಸುವರ್ಬಳಿಕಾಲವಟ್ಟದಿಂದ || ಗರುಡನಳವಳಿಯೆ | ಮತ್ತೆರಕ್ಷೆಗೆಮಂತ್ರಿಸುವರಾರುಭೂಪನೀ | ನೊತ್ತುವನುತಾಪಕೆಡೆಗೊಟ್ಟರಾರ್ಬಿಡಿಸುವರ್ಪೇಳೆಂದನಾಮು ನಿಪನು || ೧೬ || ಎನಲಾಮುನೀಂದ್ರನಂನೋಡಿಬಿಸುಸುಯ್ಯುತೊ | ಯ್ಯನೆಮಹೀಪಾಲನಿಂತೆಂದನೆಂತೆನ್ನಮನ | ದನುತಾಪ ಮಂಬಿಡುವೆನಕಟಶಿಶುತನದಿಂದಸಲಹಿದಪಿತಾಮಹಂಗೆ || ನೆನೆದೆವನುಚಿತವನಗ್ರಜನೆಂದರಿಯದೆ ಕ | ರ್ಣನನಿರಿದೆವಾಚಾ ರ್ಯವಧೆಗೆಳಸಿದೆವುಸುಯೋ | ಧನಶಲ್ಯಮುಖ್ಯಬಾಂಧವರನೀಡಾಡಿದೆವುಬದುಕಲೇಕಿನ್ನಿಳೆಯೊಳು || ೧೭ || ಶಿಷ್ಯರಿಂದಭಿವರ್ಧಿ ಸದಗುರುವಿನಂತೆವೈ | ದುಷ್ಯದಿಂಪೂಜ್ಯನಾಗದವಿಪ್ರನಂತೆಸುಹ | ವಿಷ್ಯದಿಂಸೇವ್ಯನಾಗದವಹ್ನಿಯಂತೆಸಲಿಲಾಶ್ರಯವನಾ

---

ಟ್ಟರೆ, ಆರು-ಮತ್ತೆಯಾರು, ತಂಪನ್ನು ಉಂಟುಮಾಡತಕ್ಕವರು ಬಳಿಕ-ಆಮೇಲೆ, ಆಲವಟ್ಟದಿಂ-ಬೀಸಣಿಗೆಯಿಂದ, ಬೀಸುವರು-ಬೀಸುವರು, ಕೃತ್ರಿಮದ-ಮೋಸದ, ವಿಷದ-ನಂಜಿನ, ಸೋಂಕಿಗೆ-ಸ್ಪರ್ಶಕ್ಕೆ, ಗರುಡನು-ಪಕ್ಷಿರಾಜನೆ, (ಗರುಡ), ಅಳವಳಿಯೆ-ಸ್ಮರಣತಪ್ಪಲು, ಮತ್ತೆ-ತಿರುಗಿ, ರಕ್ಷೆಗೆ-ವಿಷದ ಕಾಟವನ್ನು ತಪ್ಪಿಸಲು, ಆರು-ಇನ್ನುಯಾರು, ಮಂತ್ರಿಸುವರು-ಮಾಸಿಮಾಡುವರು, ಭೂಪ-ರಾಜೇಂದ್ರನೆ, ನೀನು-ನೀನು, ಒತ್ತುವ-ಅನುಭವಿಸುತ್ತಲಿರುವ, (ಆವರಿಸಲ್ಪಟ್ಟಿರುವ) ಅನುತಾಪಕೆ-ಸಂಕಟಕ್ಕೆ-ಎಡೆಗೊಟ್ಟರೆ-ಅವಕಾಶಕೊಟ್ಟದ್ದೇಆದರೆ, ಬಿಡಿಸುವರು - ನಿನ್ನವ್ಯಸನವನ್ನುನೀಗಿ ಸಂತೋಷವನ್ನುಂಟುಮಾಡುವವರು, ಆರು-ಮತ್ತೆಯಾರಾದರೂ ಇದಾರೆಯೆ ?, ಪೇಳು-ಹೇಳು, (ಯಾರೂಇಲ್ಲ) ||೧೬||

ಟೀ|| ಎನಲು-ಹೀಗೆ ಬಾದರಾಯಣ ಮುನಿಯು ಪೇಳಲಾಗಿ, ಆಮುನಿವರ್ಯನಂ-ಆ ಋಷಿಶ್ರೇಷ್ಠನನ್ನು-ನೋಡಿ-ಈಕ್ಷಿಸಿ, ಬಿಸುಸುಯ್ಯುತ್ತ-ದುಃಖದ ಗಾಳಿಯನ್ನು ಹೊರಕ್ಕೆ ಉಗುಳುತ್ತ, ಒಯ್ಯನೆ-ಮೆಲ್ಲಗೆ, ಮಹೀಪಾಲ-ದೊರೆಯು, ಇಂತು-ಈ ಪ್ರಕಾರವಾಗಿ, ಎಂದನು-ಹೇಳಿದನು, ಎನ್ನ-ನನ್ನ, ಮನದ-ಹೃದಯದ, ಅನುತಾಪಮಂ-ವ್ಯಸನಪರಂಪರೆಯನ್ನು, ಎಂತು-ಯಾವರೀತಿಯಲ್ಲಿ ಬಿಡುವೆಂ-ಬಿಡಲಿ, ಅಕಟ-ಅಹಾ, ! ಶಿಶುತನದಿಂದ-ಹುಡುಗರಾದಾರಭ್ಯದಿಂದಲೂ, (ಬಾಲಬಾವದಿಂದ) ಸಲಹಿದ-ಪಾಲಿಸಿದ, ಪಿತಾಮಹಂಗೆ-ಮುತ್ತತಂದೆಯಾದ ಭೀಷ್ಮನಿಗೆ, ಅನುಚಿತವನು-ಅವನನ್ನು ಸಂಹರಿಸುವಂಥ ನೀಚಕಾರ್ಯವನ್ನು, ನೆನೆದೆವು-ಆಲೋಚನೆ ಮಾಡಿಬಿಟ್ಟೆವು, ಅಗ್ರಜನು-ಹಿರಿಯಣ್ಣನು, ಎಂಬುದು-ಎಂಬದಾಗಿ, ಅರಿಯದೆ-ತಿಳಿದುಕೊಳ್ಳಲಾರದೆ, ಕರ್ಣನನು-ಕರ್ಣನನ್ನು, ಇರಿದೆವು-ತಿವಿದೆವು, (ಕೊಂದೆವು) ಆಚಾರ್ಯ-ವಿದ್ಯಾಬುದ್ಧಿಗಳನ್ನು ಕಲಿಸಿದ ದ್ರೋಣಾಚಾರ್ಯನನ್ನು, ವಧೆಗೆ-ಕೊಲಲು, ಎಳಸಿದೆವು-ಬಯಸಿದೆವು. ಸುಯೋಧನ-ಕುರುನಂದನರಾದ, ದುರ್ಯೋಧನಾದ್ಯರನ್ನು, ಶಲ್ಯ-ಸೋದರಮಾವನಾದ ಶಲ್ಯನೇ, ಮುಖ್ಯ-ಮೊದಲಾದ, ಬಾಂಧವರನು-ಎಲ್ಲಾ ಬಂಧುವರ್ಗದವರನ್ನೂ, ಈಡಾಡಿದೆವು-ಸಂಹರಿಸಿಬಿಟ್ಟೆವು. ಇನ್ನು-ಇಷ್ಟಾದಮೇಲೆ, ಇಳೆಯೊಳು-ಈ ಧರಾಮಂಡಲದಲ್ಲಿ, ಬದುಕಲು ಯಾಕೆ-ಜೀವಿಸಿ ಫಲವೇನಿಸೆ (ಏನೂ ಇಲ್ಲ), ಪಿತಾಮಹ-ಬ್ರಹ್ಮ, ತಾತ ಎಂಬ ಅರ್ಥಗಳಿವೆ || ೧೭ ||

ಟೀ|| ಶಿಷ್ಯರಿಂದ-ವಿದ್ಯಾರ್ಥಿಗಳಿಂದ, ಅಭಿವರ್ಧಿಸದ-ಏಳಿಗೆಯಾಗದ, ಗುರುವಿನಂತೆ-ಬೋಧಕನಹಾಗೂ, ವೈದುಷ್ಯದಿಂ-ವಿದ್ಯಾಸಂಪತ್ತಿನಿಂದ, ಪೂಜ್ಯನಾಗದ-ಬಹುಮತಿಯನ್ನು ಹೊಂದದ, ವಿಪ್ರನಂತೆ-ಭೂಸುರನಹಾಗೂ, ಸು-ಉತ್ತಮವಾದ, ಹವಿಷ್ಯದಿಂ-ಹವಿಸ್ಸಿನಿಂದ, ಸೇವ್ಯಮಾಗದ-ಪೂಜಿಸಲ್ಪಡದಿರುವ, ವಹ್ನಿಯಂತೆ-ಬೆಂಕಿಯಹಾಗೂ, ಸಲಿಲ-ಉದಕದ, ಆಶ್ರಯವನು-ಸಹಾಯವನ್ನು, ಆಶ್ರಯಿಸದ-ಹೊಂದದ, ಕೃಷ್ಯದಂತೆ-ಬೇಸಾಯದಹಾಗೂ, ಅಖಿಲ-ಅಶೇಷರಾದ, ಬಾಂಧವ-ಬಂಧುವರ್ಗದ, ಒಡನೆ-ಸಂಗಡ, ಬದುಕದ-ಬಾಳದಿರುವ, ಮನುಷ್ಯ-ಮಾನವನ, ಸಂಸಾರದಿಂದ, ಏನು-ಪ್ರಯೋ

---

ರಿಗೆ ಸಹಾಯಕರಾಗತಕ್ಕವರು ಮತ್ತೆ ಯಾರಿರುವರು ? ಎಂಬದಾಗಿ ಹೇಳಿದ ಮಾತನ್ನು ಧರ್ಮರಾಯನು ಕೇಳಿ || ೧೬ || ಎಲೈ ತಾಪಸೋತ್ತಮರೇ, ಹೇಗೆ ಮನೋವ್ಯಥೆಯನ್ನು ಬಿಡಲಿ ? ಆದರೆ ಅಯ್ಯೋ, ಬಾಲ್ಯದಿಂದಲೂ ಸಾಕಿ ಸಲಹಿದ ತಾತನಾದ ಭೀಷ್ಮಾಚಾರ್ಯನಿಗೆ ಎರಡು ಬಗೆದವು. ಅಣ್ಣನೆಂದು ತಿಳಿಯದೆ ಕರ್ಣನನ್ನು ಕೊಂದೆವು. ವಿದ್ಯಾ ಬುದ್ಧಿಗಳಲ್ಲಿ ನಮ್ಮನ್ನೆಲ್ಲಾ ನಿಸ್ಸೀಮರನ್ನಾಗಿ ಮಾಡಿದ ಗುರುಗಳಾದ ದ್ರೋಣಾಚಾರ್ಯರನ್ನು ಮರಣಕ್ಕೆ ಗುರಿ ಮಾಡಿದೆವು. ಆತ್ಮ ಬಂಧುಗಳಾದ ಶಲ್ಯ ದುರ್ಯೋಧನಾದ್ಯರನ್ನೆಲ್ಲಾ ನೆಲಕ್ಕೆ ಅದುಮಿದೆವು ಗೋತ್ರಹತ್ಯ, ಗುರುಹತ್ಯೆ, ಮೊದಲಾದ ಮಹಾ ಪಾತಕವಾದ ವಿಷವೃಕ್ಷವು ಚೆನ್ನಾಗಿ ಬೇರೂರಿ ನಿಂತುಬಿಟ್ಟು ಇದೆ. ಇದನ್ನು ಬುಡಸಹಿತ ಕೀಳದೆ ಇಷ್ಟು ಪಾಪ ಕರ್ಮಗಳನ್ನು ಮಾಡಿ ಇನ್ನೂ ಭೂಮಿಯಲ್ಲಿ ಬದುಕಿ ಪ್ರಯೋಜನವೇನು ? ಅಯ್ಯೋ ಎಂದು ದುಃಖಿತನಾಗಿ ||೧೭|| ಆ ಮುನಿವರ್ಯರನ್ನು ಕುರಿತು, ಎಲೈ ಮಹಾನುಭಾವರೇ, ಇಂಥ ದುಃಖವನ್ನು ಲಕ್ಷ್ಯಮಾಡದೆ ಮೂಢನಾಗಿ ರಾಜ್ಯಸುಖದಲ್ಲಿದ್ದಮಾತ್ರದಲ್ಲಿ ನನಗೆ ತತ್ಸಂಬಂಧವಾದ ದೋಷಪರಿಹಾರವಾಗುವದು ಹೇಗೆ? ಪರಲೋಕದಲ್ಲಿ ನನಗೆ ಮೋಕ್ಷತಾನೆ ಹೇಗೆ ಲಭಿಸೀತು?

ಶ್ರೈಸದ ‖ ಕೃಷ್ಯದಂತಖಿಳಬಾಂಧವರೊಡನೆಬದುಕದನು | ನುಷ್ಯಸಂಸಾರದಿಂದೇನದರಿನಿನ್ನಿಜಾ | ಯುಷ್ಯಮುಳ್ಳನ್ನಪರಿ
ಯಂತವನವಾಸಮಂ ಮಾಡುವುದೆಲೇಸೆಂದನು ‖ ೧೮ ‖ ಕಾಯದುಪಭೋಗಸಿರಿಯಂಬಯಸಿ ಸುಗತಿಯಂ | ಕಾಯದುರುತರ
ವೈರದಿಂದಖಿಳಬಾಂಧವನಿ | ಕಾಯದುಪಹತಿಯನೆಸಗಿದಪಾತಕದ್ರುಮಂವಿಷಮಾಗಿತನಗೆಮುಂದೆ ‖ ಕಾಯದುಳಿಯದುಮಹಿಯ
ನಿನ್ನಾಳ್ದೊಡಂಜಸಂ | ಕಾಯದುರೆಮಾಣದದರಿಂದರಸುತನವೆಸಾ | ಕಾಯದುಕುಲೇಂದ್ರನಂಭಜಿಸುವೆಂ ಚಿತ್ತಶುದ್ಧಿಯೊ
ಳರಣ್ಯದೊಳೆಂದನು ‖ ೧೯ ‖ ಆಗಲರಸನಮಾತಿನಾಸರಂಕೇಳ್ದುತಲೆ | ದೂಗಿಮುನಿಪುಂಗವಂನುಡಿದನೆಲೆಭೂಪನಿಗ | ಮಾ
ಗಮಪುರಾಣಶಾಸ್ತ್ರಂಗಳವಿಚಾರಮಂನೀನರಿಯದಪ್ರೌಢನೆ ‖ ಈಗಲನುತಾಪಮೇತಕೆನಿಖಿಲಸಾಮ್ರಾಜ್ಯ | ಮಾಗಲಿಳೆಯಂ

---

ಜನವೇನು? ಆದರಿನಿಂ-ಆದಕಾರಣದಿಂದ, ನಿಜಾಯುಷ್ಯಂ-ನನ್ನ ಜೀವಮಾನವು, ಉಳ್ಳನ್ನಪರಿಯಂತಂ - ಇರುವತನಕ, ವನವಾಸಮಂ-ಅರಣ್ಯವಾಸವನ್ನೇ, ಮಾಡುವುದೆ-ಮಾಡತಕ್ಕದ್ದೇ, ಲೇಸು-ಉತ್ತಮ, ಎಂದನು-ಹೀಗೆಂದನು ‖೧೮‖

ಟೀ‖ ಕಾಯದ-ಶರೀರದ, ಉಪಭೋಗ-ಸುಖಾನುಭವಗಳ, ಸಿರಿಯಂ-ಸಂಪದವನ್ನು, ಬಯಸಿ-ಕೋರಿ, ಸುಗತಿಯಂ-ಮುಂದೆ ಪಡೆಯಬೇಕಾದ ಸದ್ಗತಿಯನ್ನು, ಕಾಯದೆ-ಕಾಪಾಡಿಕೊಳ್ಳದೆ, ಉರುತರದ-ಬಹು ಕಠಿನವಾದ, ವೈರದಿಂದ-ದ್ವೇಷದಿಂದ, ಅಖಿಲ-ಸಕಲರಾದ, ಬಾಂಧವ - ಬಂಧುಗಳ, ನಿಕಾಯದ - ಸಮೂಹದ, ಉಪಹತಿಯನು - ತೊಡಕನ್ನು, ಎಸಗಿದ-ಮಾಡಿದ, ಪಾತಕ- ದುರಿತವೆಂಬ, ದ್ರುಮಂ-ವೃಕ್ಷವು, ವಿಷಮಾಗಿ - ನಂಜಾಗಿ, ಮುಂದೆ-ಇನ್ನುಮೇಲೆ, ತನಗೆ-ನನಗೆ, ಕಾಯದೆ-ಫಲಗಳನ್ನು ಕೊಡದೆ, ಉಳಿಯದು - ಬಿಡುವುದಿಲ್ಲ, ಮಹಿಯನು - ಈ ಪ್ರಪಂಚವನ್ನು, ಇನ್ನು-ಮುಂದೆ, ಆಳ್ದೊಡಂ-ರಕ್ಷಿಸಿದರೂ, ಜಸಂ-ಯಶಸ್ಸು, ಕಾಯದು-ಸ್ಥಿರಪಡುವುದಿಲ್ಲ, (ರಕ್ಷಿಸದು), ಉರೆ-ಹೆಚ್ಚಾಗಿ (ಪೂರ್ತಿಯಾಗಿ), ಮಾಣದು-ಆಗುವುದಿಲ್ಲ, ಅದರಿಂದ-ಆ ಕಾರಣದಿಂದ, ಅರಸುತನವೆ-ರಾಜ್ಯಪದವಿಯೇ, ಸಾಕು-ಇನ್ನುಬೇಡ, ಅರಣ್ಯದೊಳು-ಕಾಡಿನಲ್ಲಿ, ಚಿತ್ತಶುದ್ಧಿಯೊಳು-ನಿಷ್ಕಲ್ಮಷವಾದ ಹೃದಯದಿಂದ, ಯದುಕುಲ-ಯದುವಂಶಕ್ಕೆ, ಇಂದ್ರನಂ-ರಾಜನಾದ ಕೃಷ್ಣಸ್ವಾಮಿಯನ್ನು, ಭಜಿಸುವೆಂ-ಧ್ಯಾನಮಾಡುತ್ತಾ ಕಾಲವನ್ನು ಕಳೆಯುತ್ತೇನೆ, (ರಾಜ್ಯಭಾರ ಬೇಡವೆಂದು ಭಾವವು) ‖೧೯‖

ಟೀ‖ ಆಗಲ್-ಆ ಕಾಲದಲ್ಲಿ, ಅರಸಿನ-ರಾಜನಾದ ಯುಧಿಷ್ಠಿರನ, ಮಾತಿನ-ವಚನದ, ಆಸರಂ- ಅಭಿಪ್ರಾಯವನ್ನು, ಕೇಳ್ದು-ಚೆನ್ನಾಗಿ ತಿಳಿದವನಾಗಿ, ತಲೆದೂಗಿ-ತಲೆಯನ್ನು ಅಲ್ಲಾಡಿಸುತ್ತ, ಮುನಿಪುಂಗವಂ-ಮುನೀಂದ್ರನಾದ ವ್ಯಾಸರುಷಿಯು, ನುಡಿದನು-ಮುಂದೆ ಹೇಳುವಂತೆ ಹೇಳುವನು, ಎಲೆ ಭೂಪ-ಎಲೈ ರಾಜನೆ, ನೀನು-ನೀನಾದರೋ, ನಿಗಮ-ಬ್ರಹ್ಮನ ಮುಖದಿಂದ ಪ್ರಕಟಿಸಲ್ಪಟ್ಟ, ಚತುರ್ವೇದಗಳಲ್ಲಿಯೂ, ಶಾಸ್ತ್ರಂಗಳ-ಮೀಮಾಂಸವೇ ಮೊದಲಾದ ಶಾಸ್ತ್ರಗಳಲ್ಲೂ, ವಿಚಾರಮಂ-ಉಕ್ತವಾದದ್ದನ್ನೆಲ್ಲಾ, (ಸಂಗತಿಯನ್ನೆಲ್ಲ) ಅರಿಯದ-ತಿಳಿಯದೆ ಇರುವ, ಅಪ್ರೌಢನೆ-ಬುದ್ಧಿಹೀನನೆ (ಅಂದರೆ ಸಕಲ ನಿಗಮಾಗಮ ಶಾಸ್ತ್ರ ಪಾರಂಗತನೆಂದು ಅಭಿಪ್ರಾಯವು), ಈಗಲ್-ಈಗ, ಅನುತಾಪಂ-ಕೊರತೆಯು, ಏತಕೆ-ಏಕೆ, ನಿಖಿಲ-ಅಶೇಷವಾದ, ಸಾಮ್ರಾಜ್ಯಂ-ಒಡೆತನ, ಆಗಲು-ದೈವಾಯತ್ತವಾಗಿ ಒದಗಿದ್ದರೂ, ಇಳೆಯಂ-ಧರಾಮಂಡಲವನ್ನು, ಧರ್ಮದಿಂ-ಧರ್ಮಮಾರ್ಗದಿಂದ, ಪಾಲಿಸದೆ-ಸಲಹದೆ, ವನಕೆ-ಕಾಡಿಗೆ, ಪೋಗಲು-ಹೋಗುವುದಕ್ಕೆ, ನಿನಗೆ-ನಿನಗಾದರೋ, ಅವುದು ಸಿದ್ಧಿಯು-ಬೇರೆ ಯಾವ ಇಷ್ಟಾರ್ಥತಾನೆ, ಅಪ್ಪುದು-ಆಗುತ್ತದೆ? ಉಸಿರು-ಹೇಳು, ಎನಲು-ಹೀಗೆಂದು ವ್ಯಾಸರು ಹೇಳಲಾಗಿ, ಧರಾನಾಥನು-ಈ ಮಾತುಗಳನ್ನು ಕೇಳಿದ ರಾಜೇಂದ್ರನಾದ ಯುಧಿಷ್ಠಿರನು, ಇಂತು-ಮುಂದೆ ಹೇಳುವತೆರನಾಗಿ, ಎಂದನು-ವ್ಯಾಸಮುನಿಗಳಿಗೆ ಉತ್ತರವನ್ನಿತ್ತನು.

---

ಈ ರಾಜ್ಯಸಂಬಂಧವೇ ನನಗೆ ಬೇಡ. ಇದನ್ನೆಲ್ಲಾ ನನ್ನ ಅನುಜನಾದ ಭೀಮಸೇನನಿಗೆ ಕೊಟ್ಟು ಯಾವಜ್ಜೀವವೂ ನಾನು ವನವಾಸಮಾಡುತ್ತ ಏಕಚಿತ್ತಮನೋಭಾವದಿಂದ ಮಹಾನುಭಾವನಾದ ಜಗತ್ಪತಿಯನ್ನು ನೆನೆಯುತ್ತ ಧನ್ಯನಾಗುತ್ತೇನೆ. ‖೧೮‖ ಶಾರೀರಸುಖವನ್ನು ಬಯಸಿ ಮೋಕ್ಷಮಾರ್ಗವನ್ನು ಮರೆತು ಬಂಧು ಮಿತ್ರ ಗುರುಗಳನ್ನೆಲ್ಲಾ ನಾಶಪಡಿಸಿ ಪಡೆದಿರುವ ಪಾಪವೂ ಅಪಕೀರ್ತಿಯೂ ಅತಿಶಯವಾಗಿದೆಯಾದ್ದರಿಂದ ಇನ್ನು ಅರಸುತನಕ್ಕಿಂತಲೂ ವನವಾಸವೇ ಅತ್ಯುತ್ತಮವಾಗಿದೆ ಎಂಬುದಾಗಿ ಹೇಳಿದನು. ‖ ೧೯ ‖ ಧರ್ಮರಾಜನ ಈ ಅಭಿಪ್ರಾಯವನ್ನೆಲ್ಲಾ ಕೇಳಿ ವ್ಯಾಸಮುನಿಪುಂಗವನು ಎಲೈ ಧರ್ಮಜ, ನೀನು ವೇದವೇದಾಂಗಗಳಲ್ಲಿಯೂ ಸಕಲವಾದ ಶಾಸ್ತ್ರ ಪುರಾಣಗಳಲ್ಲೂ ಉತ್ತಮೋತ್ತಮನೆನಿಸಿಕೊಂಡು ಪ್ರಜ್ಞಾಶಾಲಿಯಾಗಿದ್ದೂ ಇಂಥ ಅವಿವೇಕತೆಯನ್ನು ಹೊಂದಬಹುದೆ? ನೀನು ಅನ್ಯಾಯವಾಗಿ ಹೀಗೆ ದುಃಖ ಸಮುದ್ರದಲ್ಲಿ ಮಗ್ನನಾಗಿ ಏಕಿರುವೆ? ಇನ್ನು ಸಾಕು! ವ್ಯಥೆಯನ್ನು ಬಿಟ್ಟು ಸಂತೋಷಚಿತ್ತವನ್ನು ಪಡೆ. ಸಕಲ ಸುಖ

ಧರ್ಮದಿಂಪಾಲಿಸದೆಬನಕೆ । ಪೋಗಲಾವುದುಸಿದ್ಧಿನಿನಗಪ್ಪುದುಸುರೆನೆಧರಾನಾಥನಿಂತೆಂದನು ॥೨೦॥ ಜೀಯಚಿತ್ತೈಸಾದೊಡಿನ್ನಖಿಳಸಾಮ್ರಾಜ್ಯ । ಮಾಯಿತೆಂಬುತ್ಸವಂತನಗಿಲ್ಲಕರ್ಣಗಾಂ । ಗೇಯಗುರುಶಲ್ಯಕೌರವರನುಳಿದೀಸಕಲಮೇದಿನೀಮಂಡಲವನು ॥ ವಾಯುಜನೊಳಿರಿಸಿನಾಂಗೋತ್ರವಧೆಗೈಸಿದೀ । ಕಾಯಮುಂವನವಾಸಕೈದಿಸುವೆನೆನೆಬಾದ । ರಾಯಣಂಗಹಗಹಿಸಿನಸುನಗುತನುಡಿಯರಸಮತ್ತೆನುಡಿಯೆನುತಿರ್ದನು ॥೨೧॥ ಕ್ಷಾತ್ರಧರ್ಮವನೀಕ್ಷಿಸಲ್ನಿನಗೆಪಾತಕಂ । ಗೋತ್ರವಧೆಯಿಂದ ಬಪ್ಪುದೆಮಹಾದೇವನೀಂ । ಧಾತ್ರಿಯಂಪಾಲಿಸದಿರಲ್ಕೆನಿರ್ದೋಷಿಯೇನಾವರಿಯೆವೀಗನಿನ್ನ ॥ ಗಾತ್ರಮಂವನವಾಸ

ತಲೆಯನ್ನು ತೂಗಿ= ತಲೆದೂಗಿ (ಕ್ರಿ. ಸ) ಮುನಿಗಳಲ್ಲಿ ಪುಂಗವಂ = ಮುನಿಪುಂಗವಂ (ಸ. ತ) ಸಿಂಹ-ಪ್ರಕಾಂಡ ಪುಂಗವ, ಮಣಿ, ವರ ಈ ಮೊದಲಾದ ಶಬ್ದಗಳನ್ನು ಶ್ರೇಷ್ಠವಾಚಕದಲ್ಲಿ ಕವಿಗಳು ಪ್ರಯೋಗಿಸುತ್ತಾರೆ ॥೨೦॥

ಟೀ॥ ಜೀಯ-ಪ್ರಭುವೆ, ಆದೊಡೆ-ಆರೀತಿಯಾದರೆ, ಚಿತ್ತೈಸು- ಮನವಿಟ್ಟು ಲಾಲಿಸು, ಇನ್ನು - ಇನ್ನುಮುಂದೆ, ಅಖಿಲ-ಸಮಸ್ತವಾದ, ಸಾಮ್ರಾಜ್ಯಂ- ಸಂಪತ್ಪರಂಪರೆಯು, ಆಯಿತು-ಪ್ರಾಪ್ತವಾಯಿತು, ಎಂಬ-ಎನ್ನುವಂಥ, ಉತ್ಸವಂ-ಅಧಿಕ ಸಂತೋಷವು, ತನಗೆ-ನನಗೆ, ಇಲ್ಲ-ಆಗಲಿಲ್ಲ, ಕರ್ಣ-ಜ್ಯೇಷ್ಠ ಭ್ರಾತೃವಾದ ಕರ್ಣನನ್ನೂ, ಗಾಂಗೇಯ-ಗಂಗೆಯಸುತನಾದ ಭೀಷ್ಮಾಚಾರ್ಯನನ್ನೂ, ಗುರು - ವಿದ್ಯಾಭ್ಯಾಸಮಾಡಿಸಿದ ದ್ರೋಣಾಚಾರ್ಯನನ್ನೂ, ಶಲ್ಯ-ಮಾತುಲನಾದ ಶಲ್ಯನನ್ನೂ, ಕೌರವರನು-ಕುರುಪುತ್ರರಾದ ಸುಯೋಧನಾದಿಗಳನ್ನೆಲ್ಲಾ, ಉಳಿದ - ಕಳೆದುಕೊಂಡ, ಈ ಸಕಲ ಮೇದಿನೀಮಂಡಲವನು-ಅಶೇಷವಾದ ಈ ಧರಾವಲಯವನ್ನೆಲ್ಲಾ, ವಾಯುಜನೊಳು - ವಾಯುಪುತ್ರನಾದ ಭೀಮಸೇನನಲ್ಲಿ, ಇರಿಸಿ - ಇಟ್ಟುಬಿಟ್ಟು, ಆಂ-ನಾನು, ಗೋತ್ರವಧೆಗೆ-ನಮ್ಮ ವಂಶದಲ್ಲಿ ಹುಟ್ಟಿದವರ ವಧೆಯನ್ನು, ಐದಿಸಿದ-ಮಾಡಿಸಿದ, ಈ ಕಾಯಮುಂ-ಈ ನನ್ನ ದೇಹವನ್ನು, ವನವಾಸಕೆ-ಕಾಡಿನ ಒಕ್ಕಲುತನಕ್ಕೆ, ಐದಿಸುವೆನು - ಕಳುಹಿಸುತ್ತೇನೆ, ಎನೆ-ಧರ್ಮರಾಯನು ಹೀಗೆನ್ನಲಾಗಿ, ಬಾದರಾಯಣಂ-ವ್ಯಾಸಮಹರ್ಷಿಯು, ಗಹಗಹಿಸಿ-ಅಟ್ಟಹಾಸದೊಡನೆ, (ಕೇಕೆ ಹಾಕಿಕೊಂಡು) ನಸುನಗುತ-ಹುಸಿನಗೆಯನ್ನು ತೋರ್ಪಡಿಸುತ್ತ, ಅರಸ-ಯುಧಿಷ್ಠಿರನೆ, ನುಡಿ-ಹೀಗೆಯೇ ಹೇಳು, ಮತ್ತೆ ನುಡಿ-ಆಡಿದ್ದೇ ಆಡುತ್ತಿರು, ಎನುತ-ಎನ್ನುತ್ತ, ಇರ್ದನು-ಇದ್ದನು. ॥೨೧॥

ಟೀ॥ ಕ್ಷಾತ್ರಧರ್ಮವನು-ಕ್ಷತ್ರಿಯರ ಧರ್ಮವನ್ನು, ಈಕ್ಷಿಸಲ್-ವಿಚಾರಮಾಡಿ ನೋಡಿದರೆ, ನಿನಗೆ-ನಿನಗಾದರೋ, ಪಾತಕಂ-ದೋಷವು (ಪಾಪವು), ಗೋತ್ರವಧೆಯಿಂದ-ದಾಯಾದಿಗಳ ಸಂಹಾರದಿಂದ, ಬಪ್ಪುದೆ-ಬರುವುದೆ, ಮಹಾದೇವ-ಪರಮೇಶ್ವರನೆ, ನೀಂ-ನೀನು, ಧಾತ್ರಿಯಂ-ಪೃಥ್ವಿಯನ್ನು, ಪಾಲಿಸದೆ-ರಕ್ಷಿಸದೆ, ಇರಲ್ಕೆ-ಇದ್ದಮಾತ್ರಕ್ಕೆ, ನಿರ್ದೋಷಿಯೆ-ನಿಷ್ಕಲ್ಮಷನಾಗುವೆಯಾ, ನಾವು-ನಾವುಗಳು, ಅರಿಯೆವು-ಗೊತ್ತು ಮಾಡಿಕ್ಕೊಳ್ಳಲಾರೆವು, ಈಗ-ಈ ಸಮಯದಲ್ಲಿ, ನಿನ್ನ-ನಿನ್ನಯ, ಗಾತ್ರಮಂ - ಶರೀರವನ್ನು, ವನವಾಸಕೆ- ಕಾಡಿನ ಜೀವನಕ್ಕೆ, ಐದಿಸುವ - ಗುರಿಮಾಡುವ, ಮತಂ - ಆಶಯವನ್ನು, (ತಾತ್ಪರ್ಯವನ್ನು) ತಿಳಿಸತಕ್ಕದ್ದು, ಆವ - ಯಾವ, ಸೂತ್ರದೊಳ್ - ವಿಧಿಯಲ್ಲಿ ಎಂದರೆ ಆಶ್ವಲಾಯನ, ಆಪಸ್ತಂಭ, (ಬೋಧಾಯನರೆಂಬ ಶಾಸ್ತ್ರಜ್ಞರಿಂದ ಮಾಡಲ್ಪಟ್ಟ ಧರ್ಮಸೂತ್ರಗಳ ಯಾವ ಭಾಗದಲ್ಲಿ), ಕಾಣಿಸಿತೊ-ಗೋಚರವಾಯಿತೊ, ಲೇಸುಲೇಸು - ಚೆನ್ನಾಗಿದೆ, (ಮೇಲಾಗಿದೆ) ಸಾರ್ಥಕವಾಗಿದೆ, ನೀಂ - ನೀನು, ಅರಣ್ಯ - ವನದ ಸಂಬಂಧವಾದ, ಯಾತ್ರೆಯಂ - ಅಲೆದಾಟವನ್ನು, ಮಾಡು-ನೆರವೇರಿಸು, ಮಾರುತಿಗೆ - ವಾಯುನಂದನನಾದ ಭೀಮನಿಗೆ,

ವೈಭವಂಗಳಿಗೆ ಕಾರಣವಾಗಿರುವ ರಾಜ್ಯವನ್ನು ಪಾಲಿಸು, ರಾಜ್ಯವನ್ನು ಬಿಟ್ಟು ಕಾಡಿನಲ್ಲಿ ವಾಸಮಾಡಿದ ಮಾತ್ರಕ್ಕೆ ಗೋತ್ರಹತ್ಯಾದಿ ದೋಷಗಳು ಹೇಗೆ ತಾನೆ ಹೋಗುತ್ತವೆ? ಈ ಮೌಢ್ಯವನ್ನು ಬಿಟ್ಟು ಸುಖವಾಗಿ ರಾಜ್ಯವನ್ನು ಪಾಲಿಸು ಎಂದು ಹೇಳಿದನು. ॥೨೦॥ ಹೀಗೆ ವ್ಯಾಸಮಹಾಮುನಿಗಳು ಹೇಳಿದರೂ ಕೂಡ ಧರ್ಮರಾಯನು, ಎಲೈ ಮುನಿಗಳಿರಾ, ಈ ರಾಜ್ಯವೈಭವದಲ್ಲಿ ನನಗೆ ಎಳ್ಳಷ್ಟಾದರೂ ಆಶೆಯಿಲ್ಲ. ಅಣ್ಣನಾದ ಕರ್ಣನನ್ನೂ, ಪಿತಾಮಹನಾದ ಭೀಷ್ಮನನ್ನೂ, ವಿದ್ಯಾಗುರುವಾದ ದ್ರೋಣನನ್ನೂ, ಬಂಧುಗಳಾದ ಶಲ್ಯ ಸುಯೋಧನಾದಿಗಳನ್ನೆಲ್ಲಾ ನಾಶಮಾಡಿದ ಮೇಲೆ ಈ ರಾಜ್ಯಭಾರದಲ್ಲಿನ ಆಸಕ್ತಿಯು ನನಗೆ ಇಲ್ಲ. ವಾಯುಪುತ್ರನಾದ ವೃಕೋದರನಿಗೇ ಇದನ್ನೆಲ್ಲಾ ಒಪ್ಪಿಸಿ ನಾನು ವನವಾಸಕ್ಕೆ ಹೊರಡುವೆನು. ಎಂದು ಮತ್ತೆಮತ್ತೆ ಹೇಳುತ್ತಿರುವ ರಾಯನನ್ನು ನೋಡಿ ಗಹಗಹಿಸಿ ಘಟ್ಟಿಯಾಗಿ ನಗುತ್ತ ಎಲೈ ಧರ್ಮರಾಯನೆ ಕೇಳು, ॥೨೧॥ ಕ್ಷತ್ರಿಯರು ಯುದ್ಧದಲ್ಲಿ ದಾಯಾದಿಗಳನ್ನು ಕೊಂದರೆ ಅದರಿಂದ ಗೋತ್ರಹತ್ಯಾದೋಷ ಬರುತ್ತೆಂದೂ ವನವಾಸದಿಂದ ಪರಿಹಾರವಾಗುತ್ತೆಂದೂ ಯಾವ ವೇದಶಾಸ್ತ್ರಪುರಾಣಗಳು ಹೇಳುತ್ತವೆ. ಇಂಥಾ ಅವಿವೇಕಿತೆಯಿಂದ ನೀನು ಅರಣ್ಯವಾಸ ಮಾಡುವುದಾದರೆ ಅಗತ್ಯವಾಗಿ ಮಾಡು. ನಿನ್ನಂಥ ಹುಚ್ಚರು ಈ ಭೂಮಂಡಲದಲ್ಲಿ ಮತ್ತೆ ಯಾರಿರುವರೊ ನೀನೇ ಹೇಳು.

ಕೈದಿಸುವವುತಮಾವ । ಸೂತ್ರದೊಳ್ಕಾಣಿಸಿತೋಲೇಸುಲೇಸಾರಣ್ಯ । ಯಾತ್ರೆಯಂಮಾಡುನೀಂಮಾರುತಿಗೆಪಟ್ಟಮಂಗಟ್ಟುವೆವುನಾವೆಂದನು ॥ ೨೨ ॥ ಧರ್ಮಸುತಮರುಳೆನೀನಿಂತಾಡುತಿರ್ದೊಡೆಬು । ಧರ್ಮೆಚ್ಚುವರೆಸಾಕದಂತಿರಲಿಸೋಮಕುಲ । ಜರ್ಮಹಾಕ್ರತುಗಳಂಮಾಡಿದಲ್ಲದೆಸಲ್ಲರದರಿಂದನಿನಗಿಳೆಯೊಳು ॥ ನಿರ್ಮಲಸುಕೀರ್ತಿಯಪ್ಪಂತೆಯಜ್ಞಾದಿಸ । ತ್ಕರ್ಮಂಗಳಂನೆಗಳ್ಚಿಗೋತ್ರವಧೆಗಳಿಂ । ನಿರ್ಮಿಸಿದಘಂಪೋಗಿಶುಚಿಯಾಗಿಬಾಳ್ವಪೆಯೆನಲ್ಭೂಪನಿಂತೆಂದನು ॥ ೨೩ ॥ ಆದೊಡೆತವಾನುಗ್ರಹಪ್ರಭಾವದೊಳಿನ್ನು । ಮೇದಿನಿಯನಾನೆಪಾಲಿಸುವೆನೀಗೋತ್ರಹತ್ಯಾದೋಷಮೇತರಿಂಪೋಪುದಾತೆರನಂತಿಳುಹಿ

---

ಪಟ್ಟವಂ-ರಾಜ್ಯಭಾರವನ್ನು, ನಾವು-ನಾವುಗಳು, ಕಟ್ಟುವೆವು-ವಹಿಸುತ್ತೇವೆ, (ಒಪ್ಪಿಸುತ್ತೆವೆ) ಎಂದನು-ಎಂಬುದಾಗಿ ಹೇಳಿದನು ॥ ೨೨ ॥

ಟೀ॥ ಧರ್ಮಸುತ-ಅಯ್ಯಾ ಯುಧಿಷ್ಠಿರಾ, ಮರುಳೆ-ನಿನಿಗೆ ಹುಚ್ಚೇನಾದರೂ ಹಿಡಿದಿದೆಯೆ, ಇಂತು-ಈಪ್ರಕಾರವಾಗಿ, ನೀನು-ನೀನಾದರೋ, ಆಡುತ್ತ-ಮಾತುಗಳನ್ನು ಆಡುತ್ತ, ಇರ್ದೊಡೆ-ಇದ್ದರೆ, ಬುಧರ್-ವಿದ್ವಾಂಸರು, ಮೆಚ್ಚುವರೆ-ಒಪ್ಪುತ್ತಾರೆಯೆ ? ಸಾಕು- ಆ ವನವಾಸದ ಯೋಚನೆಯನ್ನು ನಿಲ್ಲಿಸು, ಅದು- ಆ ವನವಾಸವು, ಅಂತು-ಹಾಗೆ, ಇರಲಿ-ಇರಲಿ, ಸೋಮಕುಲಜರು-ಹಿಮಕರಾನ್ವಯಸ್ಥರು, (ಚಂದ್ರವಂಶಜರು), ಮಹಾ-ದೊಡ್ಡ, ಕ್ರತುಗಳಂ-ಯಜ್ಞಗಳನ್ನು, ಮಾಡಿದಲ್ಲದೆ-ನೆರವೇರಿಸದಿದ್ದಲ್ಲಿ, ಸಲ್ಲರು-ತೂಕಕ್ಕೆ ಕಡಮೆಯಾಗುತ್ತಾರೆ, (ಅವರು ಯಾಗ ಮಾಡದಿದ್ದರೆ ಮರ್ಯಾದೆಗೆ ಕಡಮೆ), ಅದರಿಂದ-ಆದಕಾರಣ, ನಿನಗೆ-ನಿನಗಾದರೋ, ಇಳೆಯೊಳು-ಈ ಪ್ರಪಂಚದಲ್ಲಿ, ನಿರ್ಮಲ-ಪರಿಶುದ್ಧವಾದ, ಸುಕೀರ್ತಿ-ಸುಯಶಸ್ಸು, (ಹೆಸರುವಾಸಿಯು) ಅಪ್ಪಂತೆ-ಉಂಟಾಗುವಹಾಗೆ, ಯಜ್ಞಾದಿ-ಯಜ್ಞವೆ ಮುಂತಾದ, ಸತ್ಕಾರ್ಯಂಗಳಂ-ಪುಣ್ಯಕೆಲಸಗಳನ್ನು, ನೆಗಳ್ಚಲ್-ನಡೆಸಿವರೆ, ಗೋತ್ರವಧೆಗಳಿಂ-ವಂಶಜರನ್ನು ನಾಶಮಾಡಿದ್ದರಿಂದ ಸಂಭವಿಸಿದ (ಲಭಿಸಿದ) ಅಘಂ-ದುರಿತವು, ಕಳೆದು-ತೊಲಗಿ, ಶುಚಿಯಾಗಿ-ಪಾಪರಹಿತನಾಗಿ, ಬಾಳ್ವಪೆ-ಪ್ರಸಿದ್ಧನಾಗಿ ಜೀವಿಸುವೆ, ಎನಲ್-ಎಂಬದಾಗಿ ನುಡಿಯಲು, ಭೂಪನು-ಧೊರೆಯಾದ ಧರ್ಮರಾಯನು, ಇಂತು-ಮುಂದೆ ಹೇಳುವತೆರನಾಗಿ, ಎಂದನು-ಹೇಳುವನು ॥ ೨೩ ॥

ಟೀ॥ ಆದೊಡೆ-ಹಾಗಾದರೆ, ತವ-ನಿನ್ನ, ಅನುಗ್ರಹಪ್ರಭಾವದೊಳು-ಮಹಿಮಾತಿಶಯದಿಂದ, ಇನ್ನು-ಇನ್ನುಮುಂದೆ, ಮೇದಿನಿಯ - ಪೃಥ್ವಿಯನ್ನೆಲ್ಲಾ, ನಾನೆ-ನಾನೇ, ಪಾಲಿಸುವೆನು - ಕಾಪಾಡುತ್ತೇನೆ, ಈಗೋತ್ರಹತ್ಯಾದೋಷಂ-ಈ ವಂಶಜರವಧೆಯಿಂದ ಲಭಿಸಿರುವ ದುರಿತಾತಿಶಯವು, ಏತರಿಂ-ಯಾವತೆರದಿಂದ, ಪೋಪುದು-ಪರಿಹಾರವಾಗುತ್ತದೆಯೊ, ಆತೆರನಂ-ಆ ಬಗೆಯನ್ನು ತಿಳಿಸಿ-ಬೋಧಿಸಿ, ರಾಜಕುಲದ-ಚಂದ್ರಕುಲಜರಾದ, ನೃಪರ-ಚಕ್ರವರ್ತಿಗಳ, ಸಾಧು-ಉತ್ತಮವಾದ, ಚಾರಿತ್ರಂ-ರೀತಿಗಳು, (ನಡತೆಗಳು) ಎನ್ನಿಂದ-ನನ್ನ ದೆಶೆಯಿಂದ, ಸೊಗಡಾಗದಂತೆ-ಭಂಗಮಂ ಪಡೆಯದಂತೆ, (ಕಳಂಕವಾಗದಹಾಗೆ) ಕಾರುಣ್ಯದಿಂ-ಕೃಪಾಕಟಾಕ್ಷದಿಂದ-ಎನಗೆ - ನನಗೆ, ಶುಭೋದಯವನು-ಮೇಲ್ಮೆಯನ್ನು, ನೀವೇ-ನೀವುಗಳೇ, ಮಾಳ್ಪುದು-ನೆರವೇರಿಸಬೇಕು, ಎಂದು-ಎಂಬದಾಗಿ, ಕೈಮುಗಿಯೆ-ಪ್ರಣಾಮವಂಗೈಯಲು, ಧರ್ಮಜಂಗೆ-ಯುಧಿಷ್ಠಿರನಿಗೆ, ಆ ತಪೋನಿಧಿ-ತಾಪಸೋತ್ತಮನಾದ ವ್ಯಾಸಮುನಿಯು, ಇಂತು-ಮುಂದೆ ಹೇಳುವಂತೆ, ಎಂದನು-ಹೇಳುತ್ತಾನೆ.

---

ಅದು ನಿಜವಾದಾಗ ಭೀಮನಿಗೆ ನಾವೆಯೆ ಪಟ್ಟ ಕಟ್ಟುವೆವು ॥ ೨೨ ॥ ಮತ್ತೆ ರಾಯನಂ ಕುರಿತು:—ಎಲೆ ಧರ್ಮನೆ ಕೇಳು, ಕ್ಷತ್ರಿಯರು ರಾಜ್ಯಸಂಪಾದನೆಗಾಗಿ ಪರಸ್ಪರ ಹೊಡೆದಾಡಿ ಯುದ್ಧದಲ್ಲಿ ಶತ್ರುಗಳನ್ನು ಕೊಂದರೆ ಅದು ಗೋತ್ರಹತ್ಯವೆಂಬುದು ಹೇಗೆ ಆದೀತು ! ನೀನು ಹುಚ್ಚನು. ಆದಕಾರಣ ಈರೀತಿ ಭ್ರಾಂತನಾಗಿ ಮಾತನಾಡುತ್ತಿದ್ದಿ, ನೀನಾಡುವ ಮಾತುಗಳನ್ನು ಯಾರುತಾನೆ ಒಪ್ಪುತ್ತಾರೆ. ನಿಮ್ಮ ವಂಶದ ರಾಜರೆಲ್ಲಾ ಕ್ಷತ್ರಧರ್ಮದ ಪಾಪಪರಿಹಾರಕ್ಕೆ ಅಶ್ವಮೇಧಾದಿ ಮಹಾಯಜ್ಞಗಳನ್ನು ಮಾಡಿದರೇ ಹೊರ್ತು ನಿನ್ನಂತೆ ಅರಣ್ಯವಾಸಮಾಡಬೇಕೆಂದು ಯಾರು ಬಯಸಿದರು ? ಪೂರ್ವದಲ್ಲಿ ಶ್ರೀರಾಮನು ಬ್ರಹ್ಮಕುಲಜನಾದ ರಾವಣನನ್ನು ಯುದ್ಧದಲ್ಲಿ ಸಂಹರಿಸಿದ ಪಾಪಪರಿಹಾರಕ್ಕಾಗಿ ಅಶ್ವಮೇಧ ಯಾಗವನ್ನು ಮಾಡಿ ಆ ದೋಷವನ್ನು ನಿವಾರಣೆಮಾಡಿಕೊಂಡನೋ ಅಥವಾ ನಿನ್ನಂತೆ ವನವಾಸಕ್ಕೆ ಇಚ್ಛಿಸಿದನೋ ? ಹಾಗೆಯೇ ನೀನೂ ಕೂಡ ವನವಾಸದ ಹಂಬಲನ್ನು ತೊರೆದು ಮಹಾಯಾಗಾದಿಗಳನ್ನು ಮಾಡಿದರೆ ನಿನ್ನ ದೋಷವೂ ಪರಿಹರವಾಗಿ ಶಾಶ್ವತವಾದ ಕೀರ್ತಿಗೆ ಒಡೆಯನಾಗುತ್ತಿ ಎಂದು ನುಡಿದನು ॥೨೩॥ ಈ ಮಾತನ್ನು ಕೇಳಿದ ಧರ್ಮರಾಯನು ಬಾದರಾಯಣನನ್ನು ಕುರಿತು, ಎಲೈ ಮಹರ್ಷಿಗಳೆ, ಹಾಗಾದರೆ ನಿಮ್ಮ ಬುದ್ಧಿವಾದದಿಂದ ಅರಣ್ಯವಾಸದ ಯೋಚನೆಯನ್ನು ಬಿಟ್ಟದೇನೆ. ರಾಜ್ಯಭಾರವನ್ನೂ ನಾನೇ ವಹಿಸುತ್ತೇನೆ. ನನಿಗೆ ಬಂದಿರತಕ್ಕ ಗೋತ್ರಹತ್ಯಾದೋಷವನ್ನು ಹೋಗಲಾಡಿಸುವಂತೆಯೂ ನಮ್ಮ ಪೂರ್ವಿಕರ ಸಚ್ಚರಿತ್ರೆಗೆ ನನ್ನಿಂದ ಭಂಗಬಾರದಂತೆಯೂ ನಾನು ನಡೆದುಕೊಳ್ಳತಕ್ಕ ಬುದ್ಧಿಮಾರ್ಗವನ್ನು ಕರುಣೆಯಿಂದರುಹಿ

ರಾಜಕುಲದನೃಪರ ‖ ಸಾಧುಚಾರಿತ್ರಮೆನ್ನಿಂದಸೊಗಡಾಗದಂ । ತಾದರಿಸಿನೀವೆಕಾರುಣ್ಯದಿಂಮಾಳ್ಪುದುಶು । ಭೋದ
ಯುನನಗೆಂದುಕೈಮುಗಿಯೆಧರ್ಮರಾಜಂಗಾಮುನಿಪನಿಂತೆಂದನು ‖ ೨೪ ‖ ಎಣಿಕೆಬೇಡೆಲೆಮುಗನೆರಾಘವಂಪಿಂತೆರಾ । ವ
ಣಂಮಥಿಸಿವಾಜಿಮೇಧದೊಳ್ವಾರ್ವರಂ । ದಣಿಸಿದಂನೀನುಮಂತಾಮಹಾಧ್ವರವನೆಸಗಲ್ಕಿನಗೆಮೂಜಗದೊಳು ‖ ಎಣೆಯಿ
ಲ್ಲೆನಲ್ಕೆಂತುಮಾಳ್ಪೆನಾನಾವಲ । ಕ್ಷಣದಹಯಮುದಕೆಋತ್ವಿಜರೆನಿಬರೆನಿಸುದ । ಕ್ಷಿಣೆಗಳದರಂದನುಂಬೆಸವೇಳ್ವುದೆನಗೆನ
ಲ್ಮುನಿನಾಥನಿಂತೆದನು ‖ ೨೫ ‖ ಸ್ವಛ್ಛತರಧವಳಾಂಗದತಿಮನೋಹರಪೀತ । ಪುಛ್ಛದಸುಗಮನದೊಂದೇಕಿವಿಯೊಳೆ

---

ಅ‖ ವಿ‖ ಪೂರ್ವದಲ್ಲಿ ಮಧುಕೈಟಭ ಎಂಬೀರ್ವರುರಕ್ಕಸರು, ಇವರು ಬಹುವಾಗಿ ಭಾಧೆಯನ್ನುಂಟುಮಾಡುತ್ತಿದ್ದದ್ದರಿಂದ ಮಹಾವಿಷ್ಣುವು ಇವರೀರ್ವರನ್ನೂ ಕೊಂದು ಇವರ ಮೇದಸ್ಸಿನಿಂದ ಈ ಭೂಮಿಯನ್ನು ನಿರ್ಮಿಸಿದನಾಗಿ ಈ ಧರಾಮಂಡಲವನ್ನು “ ಮೇದಿನಿ ” ಎಂದು ಕರೆಯುತ್ತಾರೆ. (ಮೇದ-ಕೊಬ್ಬು-ಅದನುಳ್ಳದ್ದು-ಮೇದಿನೀ) ‖ ೨೪ ‖

ಟೀ‖ ಎಲೆ ಮಗನೆ – ಮಗೂ ಯುಧಿಷ್ಠಿರಾ, ಎಣಿಕೆಬೇಡ – ವ್ಯಸನಪಡಬೇಡ, ಪಿಂತೆ – ಪೂರ್ವದಲ್ಲಿ (ತ್ರೇತಾಯುಗ), ರಾಘವಂ-ದಾಶರಥಿಯು, ರಾವಣನಂ-ಬ್ರಹ್ಮನ ವಂಶಜನಾದ ರಾವಣಾಸುರನನ್ನು, ಮಥಿಸಿ-ಧ್ವಂಸಮಾಡಿ, ವಾಜಿಮೇಧದೊಳು-ಅಶ್ವಮೇಧವೆಂಬ ಕ್ರತುವಿನಲ್ಲಿ, ಪಾರ್ವರಂ-ಭೂಸುರರನ್ನು, ದಣಿಸಿದಂ – ಆನಂದಪಡಿಸಿದನು, ಅಂತು-ಅದೇಮೇರೆ, ನೀನುಂ-ನೀನುಕೂಡ, ಮಹಾಧ್ವರವನು-ಈ ದೊಡ್ಡ ಯಾಗವನ್ನು, ಎಸಗಲ್-ನೆರವೇರಿಸಲು, ನಿನಗೆ-ನಿನಗಾದರೋ ಮೂಜಗದೊಳು-ತ್ರಿಲೋಕಗಳಲ್ಲಿಯೂ, ಎಣೆ-ಜೋಡಿಯಾದವನು, (ಸಮಾನನು) ಇಲ್ಲ-ಇಲ್ಲವು, ಎನಲ್ಕೆ-ಎಂದು ಹೇಳಲಾಗಿ, ನಾನು-ನಾನಾದರೋ, ಎಂತು-ಯಾವತೆರನಾಗಿ, ಮಾಳ್ಪೆನು-ನೆರವೇರಿಸಬಲ್ಲೆನು ?, ಅದಕ್ಕೆ-ಆಯಾಗಕ್ಕೆ, ಹಯಂ – ಅಶ್ವವು, ಆವಲಕ್ಷಣಂ-ಎಂತಹುದಾಗಿರಬೇಕು ?, ಋತ್ವಿಜರು-ಋತ್ವಿಗ್ಜನರು, (ಪುರೋಹಿತರು) ಎನಿಬರು-ಎಷ್ಟುಜನ ಆಗಬೇಕು ?, ದಕ್ಷಿಣೆ-ಯಾಗಸಾಫಲ್ಯಕ್ಕಾಗಿ ಆಗಬೇಕಾದ ದಕ್ಷಿಣಾದ್ರವ್ಯವು, ಎನಿತು-ಎಷ್ಟಾಗಬೇಕು ? ಎನಗೆ-ನನಗೆ, ಅದರ-ಆ ಯಾಗದ, ಅಂದಮಂ-ಬಗೆಯನ್ನು, ಬೆಸವೇಳ್ವುದು-ಅನುಗ್ರಹಿಸಿ ತಿಳಿಸಬೇಕು, ಎನಲ್-ಎಂಬುದಾಗಿಹೇಳಲು, ಮುನಿನಾಥನು-ಮುನೀಂದ್ರನಾದ ವ್ಯಾಸಮಹರ್ಷಿಯು, ಇಂತು-ಈ ರೀತಿಯಲ್ಲಿ, ಎಂದನು-ಹೇಳುತ್ತಾನೆ ‖

ಅ‖ ವಿ‖ ರಘುವಂಶದಲ್ಲಿ ಹುಟ್ಟಿದವನು ರಾಘವನು, ರಾವಣ – ಇವನು ಒಬ್ಬರಕ್ಕಸಾಧಿಪತಿ, ಮಹಾ ಅಹಂಕಾರಿಯೂ ದುಷ್ಟನೂ ಲೋಕಕಂಟಕನೂ ಆಗಿದ್ದನು. ಒಂದಾನೊಂದುಕಾಲದಲ್ಲಿ ಗರ್ವೋದ್ಧತನಾಗಿ ಶಿವನ ಕೈಸಾಸಪರ್ವತವನ್ನು ಎತ್ತಲುಜ್ಜುಗಿಸಿ ತನ್ನ ಕೈಗಳನ್ನು ಬುಡಕ್ಕೆ ಇಟ್ಟು ಅಲ್ಲಾಡಿಸಲು ಪ್ರಯತ್ನಿಸಿದಾಗ ಪರಮೇಶ್ವರನು ಭದ್ರವಾಗಿ ಅವುಕಿಬಿಡಲು ಇವನ ಕೈಗಳು ಕೈಲಾಸಗಿರಿಯ ಬುಡದಲ್ಲಿ ಸೇರಿ ಜಜ್ಜಿಹೊದಾಗ ಪ್ರಳಯಕಾಲದ ಗುಡುಗಿನಂತೆ ಅರಚಿಕೊಂಡದ್ದರಿಂದ ಪರಮೇಶ್ವರನು ಮನ್ನಿಸಿ ಬಿಟ್ಟುಬಿಟ್ಟನು. ಆತೆರನಾದ ಘೋರರವಂಗೈಯ್ಯಲಾಗಿ ಇವನಿಗೆ ರಾವಣನೆಂದು ಹೆಸರಾಯಿತು ‖ ೨೫ ‖

ಟೀ‖ ಸ್ವಚ್ಛತರ-ಅತ್ಯಂತ ಪರಿಶುದ್ಧವಾದ, ಧವಳಾಂಗದ-ಧೌತವಾದ ಶರೀರದ, (ಬಿಳ್ಪಾದ) ಪೀತಪುಚ್ಛದ-ಹರಿದ್ರವರ್ಣವುಳ್ಳ ಲಾಂಗೂಲದಿಂ ಕೂಡಿದ, (ಅರಸಿನ ಬಣ್ಣದ ಬಾಲವುಳ್ಳ) ಸು-ಉತ್ತಮವಾದ, ಗಮನದ-ಗತಿಯುಳ್ಳ (ನಡಿಗೆ) ಒಂದೇಕಿವಿಯೊಳು-ಒಂದೇಕರ್ಣದಲ್ಲಿಯೇ, ಎಸೆವ-ಹೊಳೆಯುವ, ನೀಲಚ್ಛವಿಯ – ಮೇಘವರ್ಣದಿಂದ ಕೂಡಿದ, ಕೋಮಲ – ಸುಕುಮಾರ ದೇಹವನುಳ್ಳ, ತುರಗಮಂ – ಅಶ್ವವನ್ನು, ಸಾಧಿಸಿ – ಸಂಪಾದಿಸಿ, ಮಹಾಕ್ರತುವನು-ದೊಡ್ಡ ಯಾಗವನ್ನು, ಆಚರಿಪಡೆ – ನೆರವೇರಿಸಿದರೆ, ಇಚ್ಛೈಗೈದು – ಏಕಾಗ್ರಚಿತ್ತನಾಗಿ, ಉರೆ – ಅಧಿಕವಾಗಿ, ಸಕಲ-ಎಲ್ಲಾ,

---

ಕಾಪಾಡಬೇಕೆಂದು ಅಂಜಲಿಬದ್ಧನಾಗಿ ವಿನಯದಿಂದ ಬೇಡುತ್ತಲಿರುವ ಯುಧಿಷ್ಠಿರನನ್ನು ನೋಡಿ ವ್ಯಾಸಮಹರ್ಷಿಯು ‖೨೪‖ ಅಯ್ಯಾ ಧರ್ಮಜನೆ, ಪೂರ್ವದಲ್ಲಿ ಶ್ರೀರಾಮನು ಮಾಡಿದಂತೆ ನೀನೂ ಮಹಾಪಾತಕಗಳನ್ನು ನೀಗಿ ಕೀರ್ತಿಯನ್ನೀಯುವ ಅಸದೃಶವಾದ ಅಶ್ವಮೇಧಯಾಗವನ್ನು ಮಾಡಿ ಧನಕನಕ ವಸ್ತ್ರಾಭರಣಗಳಿಂದ ಬ್ರಾಹ್ಮಣರನ್ನೂ ಹವ್ಯಾದಿಗಳಿಂದ ದೇವತೆಗಳನ್ನೂ ತೃಪ್ತಿಪಡಿಸಿದರೆ ಗೋತ್ರಹತ್ಯಾ ದೋಷವು ಪರಿಹಾರವಾಗುತ್ತೆಂದು ನುಡಿದನು. ಈ ಮಾತನ್ನು ಕೇಳಿ ಯುಧಿಷ್ಠಿರನು, ಎಲೈ ಮಹರ್ಷಿಗಳೆ, ಆ ಯಾಗದ ವಿಧಾನವೇನು, ಕುದುರೆ ಎಂಥಾದ್ದಾಗಬೇಕು, ಋತ್ವಿಕ್ಕಗಳೆಷ್ಟುಮಂದಿ ಇರಬೇಕು, ದಕ್ಷಿಣೆಯ ವಿಧಾನವು ಹೇಗೆ, ಇದನ್ನೆಲ್ಲಾ ಸವಿಸ್ತಾರವಾಗಿ ಅಪ್ಪಣೆ ಕೊಡಿಸಬೇಕೆಂದು ಬೇಡುತ್ತಲಿರುವ ಧರ್ಮರಾಯನನ್ನು ಕುರಿತು ‖ ೨೫ ‖ ವ್ಯಾಸಮುನಿಯು, ಕೇಳೈ ಧರ್ಮಜಾ, ಈ ಅಶ್ವಮೇಧವೆಂಬಯಾಗಕ್ಕೆ ಅರ್ಹವಾದ ಕುದುರೆಯು ಶರೀರವೆಲ್ಲಾ ಬೆಳ್ಳಗಿರಬೇಕು. ಬಾಲವು ಗೌರವರ್ಣವನ್ನುಳ್ಳದ್ದಾಗಿರಬೇಕು. ಒಂದು ಕಿವಿಮಾತ್ರ ನೀಲಬಣ್ಣದಿಂದ ಕೂಡಿರ

ಸೆನನೀ । ಲಭ್ಯವಿಯಕೋನುಲತುರಂಗನುಂಸಾಧಿಸಿಮಹಾಕ್ರತುವನಾಚರಿಪಡೆ ॥ ಇಚ್ಛೆಗೈದುರೆಸಕಲಮೇದಿನೀತಳವನೇ । ಕಚಕ್ರದಿಂಪಾಲಿಸುವನರೇಶ್ವರನನಂ । ಗಚ್ಛಿದ್ರವಾಗಿನಡೆವುದುಭೂಪಕುಲದೀಪಕೇಳದರಮಾಳ್ಕೆಗಳನು ॥ ೨೬ ॥ ಸತ್ಯ ಶೌಚಾಚಾರಕುಲವೇದಶಾಸ್ತ್ರಪಾಂ । ಡಿತ್ಯದಸುವಿಪ್ರರಿಪ್ಪತ್ತುಸಾವಿರಕೆನೈ । ಪಥ್ಯವಸ್ತ್ರಾದಿಪೂಜೆಗಳಿಂದಸತ್ಕರಿಸಿಬೇರೆ ಬೇರವರ್ಗೆ ॥ ಪ್ರತ್ಯೇಕಮೊಂದೊಂದುಬಳ್ಳಮುಕ್ತಾಫಲವ । ನತ್ಯಧಿಕಹಯಗಜರಥಂಗಳೊಂದೊಂದನೌ । ಚಿತ್ಯಸಾಲಂಕೃತಗೋಸಹಸ್ರವನೊಂದುಭಾರಪೊನ್ನಂಕೊಡುವುದು ॥ ೨೭ ॥ ಸನ್ನುತಕುಲಾಚಾರಗುಣವೇದಶಾಸ್ತ್ರಸಂ । ಪನ್ನಭೂಸುರರಿನಿಬರೀತೆರದಸೌಖ್ಯತರ । ಮನ್ನಣೆಗಳಂಪಡೆದುಸಭೆಯಾಗಿಕುಳ್ಳಿರ್ದನುಜ್ಞೆಯಂಕೊಟ್ಟಬಳಿಕ ॥ ಇನ್ನುಮೇದಿನಿಯೊ

---

ಮೇದಿನೀತಲವನು–ಧರಾಲಯವನ್ನು, ಏಕಚಕ್ರದಿಂ - ನಿರಂಕುಶವಾದ ಏಕಚಕ್ರಾಧಿಪತ್ಯದಿಂದ, ಪಾಲಿಸುವ–ಸಲಹುವ, ನರೇಶ್ವರನನಂಗೆ–ಅಂಥಾ ರಾಜೇಶ್ವರನಿಗೆ, ಅಚ್ಛಿದ್ರಮಾಗಿ - ಒಡಕಿಲ್ಲದೆ ನಡೆಯುವುದು, ಭೂಪಕುಲ - ರಾಜಮನೆತನಕ್ಕೆ, ದೀಪ–ದೀಪಪ್ರಾಯನಾದ, ಧರ್ಮಜನೆ - ಧರ್ಮರಾಯನೆ, ಅದರ–ಆ ಕ್ರತುವಿನ, ಮಾಳ್ಕೆಗಳನು–ಮಾಡತಕ್ಕ ವಿಧಾನಗಳನ್ನೆಲ್ಲಾ, ಕೇಳು-ಕೇಳುವನಾಗು ॥೨೬॥

ಟೀ॥ ಸತ್ಯ-ಅನೃತವಾದಿಗಳಲ್ಲದ, ಶೌಚ–ನಿರ್ಮಲಚಿತ್ತವಾದ, ಆಚಾರ-ಸಶಾಸ್ತ್ರೀಯಮಾದ ಮಾರ್ಗವು, ಕುಲ–ಒಳ್ಳೇ ವಂಶವು, ವೇದ-ಚತುರ್ವೇದಗಳು, ಶಾಸ್ತ್ರ-ನ್ಯಾಯಾದಿ ಶಾಸ್ತ್ರಗಳು ಇವುಗಳಲ್ಲಿ, ಪಾಂಡಿತ್ಯದ–ಅತಿಶಯವಾದ ಜ್ಞಾನಾರ್ಜನೆಯಂ ಮಾಡಿರುವ ಪಂಡಿತರಿಂದ, ಸುವಿಪ್ರರ - ಯೋಗ್ಯತೆಯನ್ನು ಪಡೆದ ಉತ್ತಮರಾದ ಭೂಸುರರ, ಇಪ್ಪತ್ತುಸಾವಿರಕೆ–ಇಪ್ಪತ್ತು ಸಾವಿರ ಜನರಿಗೆ, ನೈಪಥ್ಯ - ದೀಕ್ಷೆಯ, (ಅಲಂಕಾರದ) ವಸ್ತ್ರಾದಿ - ಉಡಿಗೊರೆಗಳೇ ಮೊದಲಾದ, ಪೂಜೆಗಳಿಂದ-ಸಪರ್ಯೆಗಳಿಂದ, (ಸೇವೆಗಳಿಂದ) ಸತ್ಕರಿಸಿ–ಆದರಿಸಿ, ಅವರವರ್ಗೆ–ಅವರವರಿಗೆ, ಪ್ರತ್ಯೇಕಂ–ಬೇರೆಬೇರೆಯಾಗಿ, ಒಂದೊಂದು ಬಳ್ಳ–ಎರಡೆರಡು ಸೇರಿನ ಪ್ರಕಾರ, ಮುಕ್ತಾಫಲವನು-ಮುತ್ತುಗಳನ್ನು, ಅತ್ಯಧಿಕ–ಅತಿಶಯವಾದ, ಹಯಗಜರಥಂಗಳೊಳು–ಹಸ್ತ್ಯಶ್ವರಥಗಳಲ್ಲಿ, (ಆನೆ ಕುದುರೆ ತೇರುಗಳಲ್ಲಿ) ಒಂದೊಂದನು-ಒಂದೊಂದನ್ನು, ಔಚಿತ್ಯ–ಯೋಗ್ಯವಾದ, ಸಾಲಂಕಾರ-ಸಾಲಂಕೃತಮಾದ, ಗೋ ಸಹಸ್ರವನು-ಸಹಸ್ರ ಸಂಖ್ಯೆಯುಳ್ಳ ಆಕಳುಗಳನ್ನು, ಒಂದು ಭಾರ–ಇಪ್ಪತ್ತು ಮಣ ತೂಕವುಳ್ಳ, ಪೊನ್ನಂ-ಚಿನ್ನವನ್ನೂ, ಕೊಡುವುದು–ದಾನಮಾಡಬೇಕು.

ಅಲಂಕಾರಸಹಿತಂ–ಸಾಲಂಕಾರ (ಸಹಪೂರ್ವಪದ ಬಹುವ್ರೀಹಿ) ॥೨೭॥

ಟೀ॥ ಸನ್ನುತ–ಸ್ತುತಿಸಲ್ಪಟ್ಟ, ಕುಲ - ಸಂತತಿಯು, ಆಚಾರ - ನಡವಳಿಕೆ, ಗುಣ–ಒಳ್ಳೆಯ ಗುಣಗಳು, ವೇದ-ಋಗ್ವೇದಾದಿ ನಾಲ್ಕು ವೇದಗಳು, ಶಾಸ್ತ್ರ-ನ್ಯಾಯಾದಿಶಾಸ್ತ್ರಗಳು ಇವುಗಳಿಂದ, ಸಂಪನ್ನ- ಕೂಡಿಕೊಂಡಿರುವ, ಭೂಸುರರು-ವಿಪ್ರೋತ್ತಮರು, ಇನಿಬರು–ಇಪ್ಪತ್ತುಸಹಸ್ರ ಸಂಖ್ಯೆಯಷ್ಟು ಜನವೂ, ಈ ತೆರದ–ಈ ರೀತಿಯಾದ, ಸೌಖ್ಯತರ-ಬಹಳ ಸುಖದಿಂದ ಕೂಡಿದ, ಮನ್ನಣೆಗಳಂ–ಮರ್ಯಾದೆ (ಗೌರವ) ಗಳನ್ನು, ಪಡೆದು–ಅನುಭವಿಸಿ, ಕುಳ್ಳಿರ್ದು-ಕೂತುಕೊಂಡು, ಅನುಜ್ಞೆಯಂ–ಆಜ್ಞೆಯನ್ನು, ಕೊಟ್ಟ ಬಳಿಕ-ಇತ್ತನಂತರ, ಇನ್ನು–ಇತರವಾದ, ಮೇದಿನಿಯೊಳಗೆ–ಧರಾಮಂಡಲದಲ್ಲಿ, ಆರಾದೊಡಂ–ಯಾರಾದಾಗ್ಯೂ, ಮಿಣುಕುಳ್ಳೊಡೆ-ಪರಾಕ್ರಮವುಳ್ಳವರಾದರೆ, (ಸತ್ವಸಂಪನ್ನರಾಗಿದ್ದರೆ) ಉನ್ನತ–ಅತ್ಯಧಿಕವಾದ ಪರಾಕ್ರಮ–

---

ಬೇಕು. ಇಷ್ಟು ಲಕ್ಷಣಗಳಿಂದ ಕೂಡಿದ ಉತ್ತಮವಾದ ಕುದುರೆಯನ್ನು ತಂದು ಯಾಗಮಾಡತಕ್ಕದ್ದು. ಅಪ್ರತಿಹತಪರಾಕ್ರಮವೂ ಏಕಚ್ಛತ್ರಾಧಿಪತ್ಯವೂ ಉಳ್ಳ ರಾಜನಿಗೆ ನಿರ್ವಿಘ್ನವಾಗಿ ಸಾಧ್ಯವಾಗುವದು. ॥೨೬॥ ಎಂದು ಹೇಳಿ ಮತ್ತೆ ಯುಧಿಷ್ಠಿರನನ್ನು ಕುರಿತು, ಎಲೈ ಧರ್ಮನಂದನನೆ, ಈ ಯಾಗವನ್ನು ಮಾಡಲು ಸುಳ್ಳುಗಾರರಲ್ಲದ ನಿಷ್ಕಲ್ಮಷಹೃದಯರಾದ, ಸದಾಚಾರ ನಿರತರೂ ಸತ್ಕುಲಪ್ರಸೂತರೂ ವೇದಶಾಸ್ತ್ರ ಪಾರಂಗತರೂ ಆದ ಭೂಸುರರು ಇಪ್ಪತ್ತುಸಾವಿರಮಂದಿ ಇರಬೇಕು. ಅವರಲ್ಲಿ ಪ್ರತಿಯೊಬ್ಬರಿಗೂ ಒಳ್ಳೆ ಉಡುಗೆರೆ, ದಕ್ಷಿಣೆ, ತಾಂಬೂಲ, ಎರಡೆರಡು ಬಳ್ಳ ಮುತ್ತು, ಆನೆ, ಕುದುರೆ ರಥಗಳೊಂದೊಂದೂ, ಸಹಸ್ರಸಂಖ್ಯಾತವಾದ ಸಾಲಂಕೃತವಾದ ಗೋವುಗಳೂ, ಒಂದೊಂದುಭಾರ ಬಂಗಾರವೂ ಇವನ್ನು ಕೊಟ್ಟು ಅವರನ್ನು ಸತ್ಕರಿಸಬೇಕು. ॥ ೨೭ ॥ ಬ್ರಾಹ್ಮಣೋತ್ತಮರನ್ನೆಲ್ಲಾ ಸತ್ಕರಿಸಿ ಅವರೆಲ್ಲಾ ಸಂತೃಪ್ತರಾಗಿ ಉಚಿತಾಸನಗಳನ್ನು ಅಲಂಕರಿಸಿದ ಬಳಿಕ ಅವರ ಅನುಜ್ಞೆಯಂ ಪಡೆದು ಯಾಗಾಶ್ವನನ್ನು ತಂದು ಶೂರಾಗ್ರಗಣಿಗಳ್ಯಾರಾದರೂ ಇದ್ದರೆ ಈ

ಳಾದಾದೊಡಂ ಪಿಡುಕುಳ್ಳೊ | ಡುನ್ನತಪರಾಕ್ರಮಿ ತಡೆಯುಲಿ ವಾಜಿಯನೆಂದು || ತನ್ನ ಬಿರುದಂಬರೆದು ಪೊಂಬಟ್ಟಮುಂ
ಗಟ್ಟಿ ಬಿಡುವುದಾಹಯದ ಪಣೆಗೆ ||೨೮|| ಆಕುದುರೆ ಬಿಟ್ಟೊಂದುವರ್ಷಪರ್ಯಂತ ತಾ | ನೇ ಕಂಡಕಡೆಗೆ ತೆರಳಲ್ಕದರಸಂಗ
ಡಂ | ಭೂಕಾಂತ ಸೂನುಗಳ್ಪಲಬರಡಿಗಡಿಗೆ ಮಣಿಕನಕರಾಶಿಗಳ ಸುರಿದು || ಲೋಕಮಂದಣಿಸುತ್ತೈತರಲಖಿಳದೆಸೆಯೊಳದ |
ನಾಕೆವಾಳರ್ತಡೆಯೆ ಬಿಡಿಸಬೇಕನಿಬರಿಂ | ನೂಕದೊಡೆ ಕರ್ತೃರ್ತಾನಾದೊಡಂಪೋಗಿ ನಡೆಸುವುದು ಬಳಿಕಾಹಯವನು ||೨೯||
ಇಂತಾಹಯಂತಾನೆಮೇದಿನಿಯೊಳೊಂದುವರು | ಷಂತಿರುಗಿತನ್ನಿಳಿಗೆಬಂದುನಿಲ್ಲುನಲ್ಲಿಪರಿ | ಯಂತಮುಸಿಪತ್ರಮೆಂಬುರುತರವ್ರ

---

ಸಾಹಸವನ್ನುಳ್ಳರಾಜನು, ಈ ವಾಜಿಯನು- ಭೂಸಂಚಾರಕ್ಕೆ ಬಿಟ್ಟರತಕ್ಕ ಈ ಅಶ್ವವನ್ನು, ತಡೆಯಲಿ-ಕಟ್ಟಿಹಾಕಲಿ, ಎಂದು-ಎಂಬುದಾಗಿ, ತನ್ನ ಬಿರುದಂ-ಸಾಹಸಾತಿಶಯದ ಬಿರುದುಗಳನ್ನೆಲ್ಲಾ, ಬರೆದು-ಬರೆದುಬಿಟ್ಟು, ಪೊಂಬಟ್ಟಮುಂಗಟ್ಟಿ-ಆ ಅಶ್ವದ ಹಣೆಗೆ ಚಿನ್ನದ ರೇಕನ್ನು ಕಟ್ಟಿ, ಬಿಡುವುದು-ಸಂಚಾರಮಾಡುವಂತೆ ಸ್ವೇಚ್ಛೆಯಾಗಿ ಬಿಟ್ಟು ಬಿಡಬೇಕು ||೨೮||

ಟೀ|| ಆ ಕುದುರೆ-ಆ ಯಜ್ಞಾಶ್ವವು, ಬಿಟ್ಟ - ಭೂ ಸಂಚಾರಕ್ಕಾಗಿ ಬಿಟ್ಟಂಥ, ಒಂದು ವರ್ಷ - ಒಂದು ವರ್ಷದ, ಪರ್ಯಂತಂ_ತನಕ, ತಾನೆ_ಆ ಯಾಗದ ಹಯವೆ, ಕಂಡ ಕಡೆಗೆ_ತನ್ನ ಮನಸ್ಸು ಬಂದ ಸ್ಥಳಗಳಿಗೆಲ್ಲಾ, ತೆರಳಲ್ಕೆ-ಹೋಗುತ್ತಿರಲಾಗಿ, ಅದರ_ಆ ಅಶ್ವದ, ಸಂಗಡಂ_ಜೊತೆಯಲ್ಲಿ, ಭೂಕಾಂತಸೂನುಗಳು_ರಾಜಕುಮಾರರು, ಪಲಬರು_ಹಲವರು, (ಅನೇಕರು) ಅಡಿಗಡಿಗೆ-ಅಲ್ಲಲ್ಲಿಗೆ, ಮಣಿ_ರನ್ನಗಳ, ಕನಕ-ಹೊನ್ನಿನ, ರಾಶಿಗಳನು-ಸಮೂಹಗಳನ್ನು, ಸುರಿದು_ಹಾಕಿ, ಲೋಕಮಂ-ಜನಗಳನ್ನೆಲ್ಲಾ, ದಣಿಸುತ_ಆನಂದಗೊಳಿಸುತ್ತ, ಐತರಲು-ಬರುತ್ತಿರಲಾಗಿ, ಅಖಿಲ_ಎಲ್ಲ, ದೆಸೆಯೊಳು_ದಿಕ್ಕುಗಳಲ್ಲೂ, ಅದನು_ಆ ಹಯವನ್ನು, ಆಕೆವಾಳರು-ವೀರರು, ತಡೆಯೆ_ನಿರ್ಬಂಧದಿಂದ ಆ ಕುದುರೆಯನ್ನು ಕಟ್ಟಿದರೆ, ಬಿಡಿಸಬೇಕು_ಪರಾಕ್ರಮದಿಂದ ಅದನ್ನು ಬಿಡುಗಡೆ ಮಾಡಿಸಬೇಕು, ಅನಿಬರಿಂ_ಎಲ್ಲಾ ಯೋಧರಿಂದಲೂ, ನೂಕದೊಡೆ_ಆ ಕುದುರೆಯನ್ನು ಬಿಡಿಸಲು ಆಗದೆ ಇದ್ದರೆ, ಕರ್ತೃ-ಯಾಗ ದೀಕ್ಷೆಯನ್ನು ಹೊಂದಿರುವ ಭೂಪತಿಯು, ತಾನಾದೊಡಂ_ತಾನೇ ಆದರೂ, ಪೋಗಿ_ಅದರ ಸಮೀಪವನ್ನೈದಿ, ಬಳಿಕ_ ಆ ತರುವಾಯ, ಆ ಹಯವನು_ಆ ಯಾಗಾಶ್ವವನ್ನು, ನಡೆಸುವುದು_ಪರರಾಜರಿಂದ ಬಿಡಿಸಿ ಮುಂದೆ ಸಂಚಾರಕ್ಕೆ ಅನುಕೂಲಪಡಿಸಬೇಕು ||೨೯||

ಟೀ|| ಇಂತು-ಈ ಪ್ರಕಾರವಾಗಿ, ಆ ಹಯಂ_ಆ ಅಶ್ವವು, ಮೇದಿನಿಯೊಳು-ಪೃಥ್ವಿಯಲ್ಲಿ, ಒಂದು ವರ್ಷಂ-ಒಂದು ವರ್ಷದವರೆಗೂ, ತಿರಿಗಿ_ಸುತ್ತಿಕೊಂಡು, ತನ್ನಿಳಿಗೆ ಬಂದು_ಪೂರ್ವಸ್ಥಾನಕ್ಕೆ ಸೇರಿ, ನಿಲ್ಲುವ_ನಿಂತುಕೊಳ್ಳುವ, ಅಲ್ಲಿಪರ್ಯಂತಂ-ಅಲ್ಲಿನವರಿವಿಗೂ, ಅಸಿಪತ್ರ_ಅಸಿಧಾರೆ ಎನ್ನುವ, ಉರುತರ-ಅತಿ ಕಷ್ಟವಾದ, ವ್ರತವನು_ಕಟ್ಟಲೆಯನ್ನು, ಆಚರಿಸುತ_ನೆರವೇರಿಸುತ್ತ, ಇರ್ದು-ಇದ್ದು, ಆ ಮಖವನು_ಆ ಯಾಗವನ್ನು, ಮುಂದೆ_ಅನಂತರ, ವೇದೋಕ್ತದಿಂ_ವೇದದಲ್ಲಿ ಹೇಳಿರುವ ನಿಯಮಗಳನ್ನನುಸರಿಸಿ, ಮಾಳ್ಪುದು - ನೆರವೇರಿಸಬೇಕು, ಇದರ - ಈ ಯಜ್ಞದ, ಅಂದಂ - ತೆರನು, ಇದು - ಇದೇ, ಕುಂತೀಕುಮಾರ_ಕುಂತೀ ಪುತ್ರನಾದ ಯುಧಿಷ್ಠಿರನೆ! ನೀನಾರ್ಪೊಡೆ_ಮಾಡುವ ಇಷ್ಟವಿದ್ದರೆ, (ನಿನಗೆ ಶಕ್ತಿಯಿದ್ದರೆ) ಉಜ್ಜುಗಿಸು_ಪ್ರಯತ್ನಮಾಡು, ಎನಲ್_ಎಂಬುದಾಗಿ ಹೇಳಲು, ಧರಿತ್ರೀತಳಾಧಿಪನು- ಭೂಮಂಡಲೇಶ್ವರನಾದ ಧರ್ಮನಂದನನು, ಚಿಂತಿಸುತ_ಆಲೋಚನೆಯಂ ಗೈಯುತ್ತ, ಒಯ್ಯನೆ - ಮೆಲ್ಲಗೆ, ಆ ತಪೋಧನನೊಳು - ಆ ತಾಪಸೋತ್ತಮನಲ್ಲಿ, ನುಡಿದಂ_ಹೇಳುತ್ತಾನೆ. ||೩೦||

---

ಅಶ್ವವನ್ನು ಹಿಡಿದು ನಮ್ಮನ್ನು ಗೆಲ್ಲಬಹುದೆಂದೂ, ತಮ್ಮ ಬಿರುದಿನ ಒಕ್ಕಣೆಯನ್ನೂ ಸಹ ಒಂದು ಸುವರ್ಣದ ತಗಡಿನಲ್ಲಿ ಬರೆದು ಆ ತಗಡನ್ನು ಯಾಗಾರ್ಹವಾದ ಕುದುರೆಯ ಹಣೆಗೆ ಕಟ್ಟಿ ಮುಂದೆ ಬಿಟ್ಟುಕೊಂಡು ಅದರ ಕಾವಲಿಗಾಗಿ ಬೇಕಾದ ವೀರರೆಲ್ಲಾ ಹೋಗಬೇಕು. || ೨೮ || ಈ ರೀತಿಯಲ್ಲಿ ಕುದುರೆಯು ಸ್ವೇಚ್ಛೆಯಾಗಿ ತಿರುಗಾಡುತ್ತಿರುವಾಗ ಯಾವ ಶೂರನಾದರೂ ಈ ಕುದುರೆಯನ್ನು ಹಿಡಿದುಕೊಂಡದ್ದಾದರೆ ಕಾವಲುಗಾರರು ಆ ಶೂರನೊಂದಿಗೆ ಕಾದಿ ಅಶ್ವವನ್ನು ಬಂಧನದಿಂದ ಬಿಡಿಸಬೇಕು. ಜೊತೆಯಲ್ಲಿ ಹೋದ ಯಾರಿಗೂ ಇದು ಸಾಧ್ಯವಾಗದಿದ್ದರೆ, ಆಗ ಮುಖ್ಯನಾದ ಯಜಮಾನನೆ ಯುದ್ಧಕ್ಕೆ ನಿಂತು ವೈರಿಯನ್ನು ರಣದಲ್ಲಿ ಗೆದ್ದು ಕುದುರೆಯನ್ನು ಬಿಡಿಸಬೇಕು. ||೨೯|| ಹೀಗೆಯೇ ಆ ಕುದುರೆಯು ಒಂದು ವರ್ಷಪರ್ಯಂತವೂ ಸ್ವೇಚ್ಛೆಯಾಗಿ ತಿರುಗಿ ಸ್ವಸ್ಥಾನವನ್ನು ಸೇರಿದ ಬಳಿಕ ವೇದೋಕ್ತ ವಿಧಾನದಿಂದ ಯಜ್ಞಕ್ಕೆ ಉಪಕ್ರಮ ಮಾಡಬೇಕು.

ತವನಾಚರಿಸುತಿರ್ದಾಮುಖವನು ‖ ಮುಂತೆವೇದೋಕ್ತದಿಂಮಾಳ್ಪದಿದರಂದಮಿದು | ಕುಂತೀಕುಮಾರನೀನಾರ್ಪೊಡುಜ್ಜುಗಿಸನ | ಲ್ಚಿಂತಿಸುತನುಡಿದನೊಯ್ಯನೆಧರಿತ್ರೀತಳಾಧಿಪನಾತಪೋಧನನೊಳು ‖ ೩೦ ‖ ದ್ರವ್ಯಮೆನಗಿಲ್ಲಮೇದಿನಿಯೊಳರಸುವೊಡೆಕೌರವ್ಯರಿಂದಿಳೆನೊಂದುದಿನಿತುಲಕ್ಷಣಮುಳ್ಳ | ದಿವ್ಯಹಯಮಿಲ್ಲಸೋದರರಾಹವದೊಳಲಸಿದರ್ಸಹಾಯಂಗಳಿಲ್ಲ ‖ ಸವ್ಯಸಾಚಿಯುಮಿತ್ರನಿಲ್ಲಿಲ್ಲತನಗಧ್ವ | ರವ್ಯಸನಮೆಂತೊಡರ್ಪುದುಪೇಳಿಯೆನಲುವೇ | ದವ್ಯಾಸಮುನಿವರಂಕರುಣದಿಂದಾಯುಧಿಷ್ಠಿರನೃಪನೊಳಿಂತೆಂದನು ‖೩೧‖ ರಾಯನೀನದಕೆಚಿಂತಿಸಬೇಡಧನಮುಂಸ | ಹಾಯುಮುಂತುರಗಮುಂತೋರುವೆಂಮರುತನೆಂ | ಬಾಯುಗದನೃಪನಶ್ವಮೇಧಮುಂಮಾಡಿಬಹುಕನಕಮುಂಭೂಸುರರ್ಗೆ ‖ ಈಯಲವರೊಯ್ಯುತೆಡೆಯೊಳಗಲಸಿಬಿಟ್ಟರ | ಪ್ರಿಯ

---

ಅ‖ ವಿ‖ ಧರಿತ್ರಿಯ + ತಳ = ಧರಿತ್ರೀತಳ. (ಷ. ತ.) ಧರಿತ್ರೀತಳದ + ಅಧಿಪ = ಧರಿತ್ರೀತಳಾಧಿಪ ಷ. ತ). ಅಸಿ–ಕತ್ತಿಯ, ಪತ್ರ–ಮೊನೆಯಂತಿ ತೀಕ್ಷ್ಣವಾದ, ವ್ರತ–ನಿಯಮವುಳ್ಳವನು ‖೩೦‖

ಟೀ‖ ಎನಗೆ–ನನಗೆ, ದ್ರವ್ಯಂ–ಹಣವು, ಇಲ್ಲ–ಇಲ್ಲವು. ಮೇದಿನಿಯೊಳು–ಈ ಭೂಮಂಡಡಲ್ಲಿ, ಅರಸುವೊಡೆ–ಹುಡುಕಿನೋಡಿದರೂ (ಪ್ರಜೆಗಳಿಂದ ಸಂಪಾದಿಸೋಣವೆಂದರೆ,) ಕೌರವ್ಯರಿಂದ ಕುರುನಂದನರಿಂದ, ಇಳೆ–ಪ್ರಪಂಚದ ಜನಗಳು, ನೊಂದಿತು – ಬಹು ಕಷ್ಟವನ್ನು ಅನುಭವಿಸಿದಾರೆ. ಇನಿತು – ಇಷ್ಟು, ಲಕ್ಷಣವುಳ್ಳ – ಗುರುತುಗಳಿಂದ ಕೂಡಿರುವ, ದಿವ್ಯ-ಯಾಗಾರ್ಹವಾದ, ಹಯಂ ಇಲ್ಲ – ಕುದುರೆಯು ಇಲ್ಲ. ಸೋದರರು – ಅನುಜರೆಲ್ಲ, ಆಹವದೊಳು – ಕೌರವಾದಿಗಳೊಡನೆ ನಡಿಸಿದ ಯುದ್ಧಗಳಲ್ಲಿ, ಅಲಸಿದರು – ಬಹು ಕಷ್ಟಪಟ್ಟಿರುವರು. ಸಹಾಯಂಗಳು – ಅನುಕೂಲತೆಗಳು, ಇಲ್ಲ–ಇಲ್ಲವು, ಸವ್ಯಸಾಚಿಯ-ಎಡಗೈಯಿಂದಲೂ ಬಾಣಗಳನ್ನು ಬಿಡಬಲ್ಲ ಪಾರ್ಥನ, ಮಿತ್ರಂ–ಸಖನು, (ಶ್ರೀ ಕೃಷ್ಣನು) ಇಲ್ಲಿಲ್ಲ – ಈ ಸ್ಥಳದಲ್ಲಿಲ್ಲ. ತನಗೆ ಇಷ್ಟು ಅನಾನುಕೂಲಗಳನ್ನುಳ್ಳ ನನಿಗೆ, ಅಧ್ವರ-ಯಾಗದ, ವ್ಯಸನಂ – ಆಲೋಚನೆಯು, ಎಂತೊಡರ್ಪುದು–ನೇರವೇರುವ ಬಗೆಹೇಗೆ, ಪೇಳಿ-ಹೇಳಿರಿ, ಎನಲು–ಎಂಬದಾಗಿ ಹೇಳಲು, ವೇದವ್ಯಾಸಮುನಿವರಂ-ಋಷಿಶ್ರೇಷ್ಠರಾದ ವ್ಯಾಸಮಹರ್ಷಿಯು, ಕರುಣೆಯಿಂದ–ಕೃಪಾಕಟಾಕ್ಷದಿಂದ, ಆ ಯುಧಿಷ್ಠಿರನೃಪನೊಳು-ಆ ಧರ್ಮಪುತ್ರನೊಡನೆ, ಇಂತೆಂದನು–ಹೇಳಿದನು.

ಅ‖ ವಿ‖ ವೇದಗಳನ್ನು ವಿಭಾಗಿಸಿ ನಿರ್ಣಯಮಾಡಿದ್ದರಿಂದ ವೇದವ್ಯಾಸರೆಂಬ ಹೆಸರುಂಟಾಗಿದೆ ‖೩೧‖

ಟೀ‖ ರಾಯ–ಯುಧಿಷ್ಠಿರನೆ, ನೀಂ–ನೀನು, ಇದಕೆ–ಇದಕ್ಕಾಗಿ, ಇನ್ನು – ಮುಂದೆ, ಚಿಂತಿಸಬೇಡ – ಆಲೋಚನೆ ಮಾಡಬೇಡ. ಧನಮುಂ–ಹಣವನ್ನು, ಸಹಾಯಮುಂ–ಸಹಾಯಕರನ್ನು, ತುರುಗಮುಂ–ಅಶ್ವವನ್ನೂ, ತೋರುವೆಂ–ತೋರಿಸಿಕೊಡುತ್ತೇನೆ. ಮರುತನುಎಂಬ–ಮರುತ್ತನೆಂಬ ನಾಮಧೇಯವುಳ್ಳ, ಆ ಯುಗದ–ಪೂರ್ವ ಯುಗದ, ನೃಪನು–ರಾಜನು, ಅಶ್ವಮೇಧಮುಂ–ಅಶ್ವಮೇಧವೆನ್ನುವ ಯಜ್ಞವನ್ನು, ಮಾಡಿ–ನೆರವೇರಿಸಿ, ಬಹುಕನಕಮುಂ–ಅಧಿಕವಾದ ಸುವರ್ಣವನ್ನು, ಭೂಸುರರ್ಗೆ–ವಿಪ್ರೋತ್ತಮರಿಗೆ, ಈಯಲು–ದಾನವ ಮಾಡಲು, ಅವರು–ಆ ಭೂಸುರರು, ಒಯ್ಯುತ–ತೆಗೆದುಕೊಂಡು ಹೋಗುತ್ತ, ಎಡೆಯೊಳಗೆ–ದಾರಿಯಲ್ಲಿ, ಅಲಸಿ–ಬೇಸರಹೊಂದಿ, ಅಪ್ರಿಯದಿಂದ–ತೆಗೆದುಕೊಂಡು ಹೋಗಲೊಲ್ಲದೆ, ಬಿಟ್ಟರು–ಬಿಟು ಹೊರಟರು. ಹಿಮಾಲಯದೊಳು–ಹಿಮಾಲಯವೆಂಬ ಬೆಟ್ಟದಲ್ಲಿ, ಅವಸ್ತು–ಅಧನವು, ಅದೆ–ಇರುವದು, ಅದಕೆ–ಆ ಧನಕ್ಕೆ,

---

ಆ ಒಂದು ವರುಷವೂ ಯಜ್ಞಕರ್ತನು ಅಸಿಧಾರಾವ್ರತವೆಂಬ ಘೋರವಾದ ವ್ರತವನ್ನು ಆಚರಿಸುತ್ತಿರಬೇಕು. ಈ ರೀತಿಯಲ್ಲಿ ನೀನು ಯಾಗವನ್ನು ಸಾಂಗವಾಗಿ ಮಾಡಿದರೆ ಗೋತ್ರಹತ್ಯಾದೋಷವು ಹೋಗಿ ಕೀರ್ತಿಶರೀರವನ್ನುಳ್ಳವನಾಗಿ ಸುಖವಾಗಿರುವೆ ; ಎಂದು ಹೇಳಿದ ಬಾದರಾಯಣನ ನುಡಿಗಳಂ ಕೇಳಿ ಚಿಂತಿಸುತ್ತ ‖ ೩೦ ‖ ಓ ಮಹರ್ಷಿಗಳೆ, ಇದುವರೆಗೂ ನಾವು ಕೌರವಾದಿಗಳೊಂದಿಗೆ ಹೋರಾಡಿ ಹಣವಿಲ್ಲದೆ ಬರಿಗಯ್ಯವರಾದೆವು. ದೇಶದ ಜನರೆಲ್ಲಾ ಕೌರವಾದಿಗಳಿಂದ ಪೀಡಿತರಾಗಿರುವದರಿಂದ ದ್ರವ್ಯೋತ್ಪತ್ತಿಯಾಗಲಾರಬು. ತಾವು ಅಪ್ಪಣೆಯನ್ನಿತ್ತ ಸುಲಕ್ಷಣಗಳುಳ್ಳ ಹಯವು ನಮಗೆಂತು ದೊರೆವುದು ? ಭೀಮಾರ್ಜುನಾದಿ ನನ್ನ ಅನುಜರು ಯುದ್ಧದಲ್ಲಿ ಬಳಲಿ ಬೇಸತ್ತಿರುವರು. ನಮಗೆ ನೆರವಾದ ಕೃಷ್ಣಸ್ವಾಮಿಯು ಹತ್ತಿರವಿಲ್ಲ. ಇಂಥಾ ಅಸಹಾಯನಾಗಿರುವ ನನಿಗೆ ಯಾಗದ ಹಂಬಲು ಏಕೆ? ಎಂದುಸುರಿದ ಧರ್ಮನಂದನನನ್ನು ಕುರಿತು ಕೃಪಾಕಟಾಕ್ಷಮುಳ್ಳ ವ್ಯಾಸಮಹರ್ಷಿಯು ಮುಂದೆ ಹೇಳುತ್ತಾನೆ ‖ ೩೧ ‖ ಅಯ್ಯಾ ಧರ್ಮಜ, ನೀನು ಹೀಗೆ ಯೋಚನೆ ಮಾಡಬೇಡ, ನಿನಗೆ ಯಾಗಕ್ಕೆ ಹಣವು ದೊರೆಯುವ ಬಗೆಯನ್ನೂ, ಕುದುರೆಯು ಸಿಕ್ಕತಕ್ಕ ವಿಧಾನವನ್ನೂ, ಸಹಾಯಸಂಪತ್ತುಗಳ ರೀತಿಯನ್ನೂ, ವಿವರಿಸುತ್ತೇನೆ : ಲಾಲಿಸು. ಆದಿಯುಗವಾದ ಕೃತಯುಗದಲ್ಲಿ ಮರುತ್ತ

.................................................................ತೆಂದನು ‖ ೩೨ ‖ ಅಕಟಜಡ ದಿಂದಾವಸ್ತುವದೆಹಿಮಾಲಯದೊಳದ | ಕಾಯಸಂಪಿರಿದಿಲ್ಲತಂದುನೀನುಪಯೋಗಿಸೆನಲರಸನಿಂತೆಂದನು ‖ ೩೨ ‖ ಅಕಟಜಡ ಮತಿಗೆಮರುಳುಮ್ಮತವನಿಕ್ಕಿದೊಡೆ | ಸುಕಲೆ (ಸುಕರವೆಂದು ಪಾಠಾಂತರವು,) ಯಪ್ಪುದೆಜೀಯಗೋತ್ರಸಂಹರಣಪಾ | ತ ಕವನೊರಸುವಮುಖವೆನಾವಿಪ್ರರೊಡವೆಯಿಂಮಾಡಲೆನಗಿಹಪರದೊಳು ‖ ಪ್ರಕಟಮೆನಿಪುದೆಕೀರ್ತಿಸದ್ಗತಿಗಳೆನೆಮಗನೆ | ಸಕ ಲಭೂಮಂಡಲಂದ್ವಿಜರದಲ್ಲವೆರಾಜ | ನಿಕರಮಂತರಿದೀಯನೇಪರಶುರಾಮನೀಧರೆಯನವನೀಸುರರ್ಗೆ ‖ ೩೩ ‖ ಬಾಹುಬಲ ಮುಳ್ಳನೃಪರೊಡೆಯರೀಧರೆಗೆಸಂ | ದೇಹವಿಲ್ಲದರಿಂದ್ವಿಜರ್ಗೆಸಲ್ಲದುಬಗೆವೊ | ಡಾಹಿಮಾಲಯದೊಳಿಹವಸ್ತುನಿನ್ನದುಯೌವ

---

ಆಯಸಂ–ಆಲಸ್ಯಂ, ಪಿರಿದು–ಅತಿಶಯವಾಗಿ, ಇಲ್ಲ–ಇಲ್ಲವು. ತಂದು-ಆ ಹಣವನ್ನು ತೆಗೆದುಕೊಂಡು ಬಂದು, ನೀನು–ನೀನಾ ದರೋ, ಉಪಯೋಗಿಸು–ಯಾಗಕ್ಕೆ ವೆಚ್ಚಮಾಡು, ಎನಲು–ಎಂದು ಹೇಳಲು, ಅರಸನು–ಯುಧಿಷ್ಠಿರನು, ಇಂತು–ಹೀಗೆ, ಎಂದನು–ಹೇಳಿದನು ‖ ೩೨ ‖

ಟೀ‖ ಅಕಟ-ಅಯ್ಯೋ, ಜಡಮತಿಗೆ – ಬುದ್ಧಿಹೀನನಿಗೆ, ಮರುಳ್–ಮಂಕುಮಾಡುವ, ಉನ್ಮತವನು – ಉನ್ಮತ್ತಿಯಬಿತ್ತವನ್ನು, ಇಕ್ಕಿದರೆ–ತಿನ್ನಿಸಿದರೆ, ಸುಕಲೆ–ಒಳ್ಳೆಯ ತಿಳಿವಳಿಕೆಯು, ಅಪ್ಪುದೆ–ಆಗುತ್ತದೆಯೇ? ಜೀಯ–ಸ್ವಾಮಿಯೇ, ಗೋತ್ರಸಂಹರಣ–ಗೋತ್ರವಧೆಯ, ಪಾತಕವನು–ದುರಿತವನ್ನು, ಆ ವಿಪ್ರರ-ಆ ಭೂಸುರರ, ಒಡವೆಯಿಂ–ಧನದಿಂದ, ಮಾಡಲು–ಎಸಗಿದರೆ, ಇಹಪರದೊಳು–ಈ ಲೋಕದಲ್ಲಿಯೂ ಮತ್ತು ಸ್ವರ್ಗದಲ್ಲಿಯೂ, ಎನಗೆ–ನನಗೆ, ಕೀರ್ತಿ–ಒಳ್ಳೆಯ ಹೆಸರು, ಸದ್ಗತಿಗಳುಂ-ಮೋಕ್ಷಗಳು, ಪ್ರಕಟಂ-ಪ್ರಸಿದ್ಧವಾದದ್ದು, ಎನಿಪುದೆ–ಎನಿಸಿಕೊಳ್ಳುತ್ತದೆಯೆ, ಎನೆ–ಎಂಬುದಾಗಿ ಹೇಳಲು, ಮಗನೆ-ಹಸುಳೆಯೇ, ಸಕಲ ಭೂಮಂಡಲಂ–ಪ್ರಪಂಚವೆಲ್ಲವೂ, ದ್ವಿಜರದು–ವಿಪ್ರರದು, ಅಲ್ಲವೆ–ಆಗಿಲ್ಲವೇ, ಪರಶುರಾಮನು–ಜಾಮದಗ್ನ್ಯನು, ರಾಜನಿಕರಮಂ-ಅರಸುಗಳ ಗುಂಪನ್ನೆಲ್ಲಾ, ತರಿದು–ಸಂಹಾರಮಾಡಿ, ಈ ಧರೆಯನು–ಈ ಭೂಮಂಡಲವನ್ನೆಲ್ಲಾ, ಅವನೀಸುರರಿಗೆ–ಭೂಸುರೋತ್ತಮರಿಗೆ, ಈಯನೆ–ದಾನಮಾಡಲಿಲ್ಲವೇ?

ಅ‖ ವಿ‖ ದ್ವಿ-ಎರಡು, ಜ–ಜನ್ಮವುಳ್ಳವರು (ಉಪನಯನಕ್ಕೆ ಪೂರ್ವದಲ್ಲಿ ಶೂದ್ರರೂ, ಉಪನಯನಾನಂತರದಲ್ಲಿ ಬ್ರಾಹ್ಮಣರೂ ಆಗತಕ್ಕವರು. ಬ್ರಹ್ಮ, ಕ್ಷತ್ರಿಯ, ವೈಶ್ಯರು), "ದ್ವಿಜ" ಎಂಬ ಪದವು ಹಲ್ಲು ಮತ್ತು ಪಕ್ಷಿಗಳಿಗೂ ಆಗುತ್ತವೆ, "ಪರಶುರಾಮ" ಎಂಬುವವನು–ಜಮದಗ್ನಿಋಷಿಯ ಮಗನು, ಪರಶು–ಕೊಡಲಿ, ಎಂದು ಅರ್ಥವು, ಪರಶುರಾಮ–ಕೊಡಲಿಯನ್ನೆ ಆಯುಧವಾಗಿ ಉಳ್ಳವನು, ಈತನು–ಕ್ಷತ್ರಿಯವಂಶವೇ ಇಲ್ಲದಂತೆ ಮಾಡಬೇಕೆಂದೆಣಿಸಿ ೨೧ ಆವರ್ತಿ ಕ್ಷತ್ರಿಯರನ್ನೆಲ್ಲಾ ಸಂಹರಿಸಿ ಆ ಭೂಮಿಯನ್ನೆಲ್ಲ ಬ್ರಾಹ್ಮಣರಿಗೆ ಕೊಟ್ಟಂದಿನಿಂದಲೂ ಇದು ಬ್ರಾಹ್ಮಣರದಾಗಿದೆ ಎಂದು ಭಾವವು ‖೩೩‖

ಟೀ‖ ಈ ಧರೆಗೆ–ಈ ಭೂಮಂಡಲಕ್ಕೆ, ಬಾಹುಬಲ – ಭುಜದ ಸಾಮರ್ಥ್ಯವು, ಉಳ್ಳ-ಇರುವ, ನೃಪರು – ರಾಜರು, ಒಡೆಯರು–ಹಕ್ಕುದಾರರು ಎಂಬುವ ವಿಷಯದಲ್ಲಿ ಸಂದೇಹಂ–ಅನುಮಾನವು, ಇಲ್ಲ–ಉಂಟಾಗುವದಿಲ್ಲ. ಅದರಿಂ-ಆದಕಾರಣ, ದ್ವಿಜರ್ಗೆ–ಭೂಸುರರಿಗೆ, ಸಲ್ಲದು–ಬರಲಾಗದು, ಬಗೆವೊಡೆ-ಆಲೋಚಿಸಿ ನೋಡಿದರೆ, ಆ ಹಿಮಾಲಯದೊಳು–ಆತುಹಿನಗಿರಿಯಲ್ಲಿ, ಇಹ–ಇರತಕ್ಕ, ವಸ್ತು-ಧನವು, ನಿನ್ನದು-ನಿನ್ನದೇ ಆಗಿದೆ, ಯೌನನಾಶ್ವನೆಂಬ–ಯೌವನಾಶ್ವನೆಂಬ ನಾಮಧೇಯವುಳ್ಳ, ಅವನೀಶನು–ರಾಜನು, ಮೋಹದಿಂ–ಪ್ರೇಮದಿಂದ, ಭದ್ರಾವತೀನಗರದೊಳು - ಭದ್ರಾವತಿಯೆಂಬ ನಗರದಲ್ಲಿ

---

ನೆಂಬುವನು ಅಶ್ವಮೇಧಯಾಗವಂ ಮಾಡಿ ವಿಪ್ರವರ್ಯರನ್ನೆಲ್ಲಾ ಧನಕನಕ ವಸ್ತ್ರಾಭರಣಗಳಿಂದ ತೃಪ್ತಿಗೊಳಿಸಲು ಅವರೆಲ್ಲರೂ ಅದನ್ನು ತೆಗೆದುಕೊಂಡು ಬರಲಾರದೆ ಹಿಮಾಲಯದವರೆಗೂ ತಂದು ಅಲ್ಲಿಯೇ ಬಿಟ್ಟು ಹೊರಟು ಹೋದರು. ಅಂದಿನಿಂದಲೂ ಆ ಧನವೆಲ್ಲಾ ಅಲ್ಲಿಯೇ ಇದೆ. ನೀನು ಅದನ್ನೆಲ್ಲಾ ತಂದು ವೆಚ್ಚಮಾಡು ಎಂಬದಾಗಿ ನುಡಿದ ಮುನಿವಚನಗಳನ್ನು ಕೇಳಿದ ಧರ್ಮರಾಯನು ‖ ೩೨ ‖ ಎಲೈ ಮಹರ್ಷಿಯೆ, ಗೋತ್ರಹತ್ಯಾದೋಷ ಪರಿಹಾರಕ್ಕಾಗಿ ನಾನು ಕೈಕೊಳ್ಳುವ ಯಾಗವನ್ನು ಬ್ರಹ್ಮಸ್ವತ್ತಿನಿಂದ ಮಾಡಿದರೆ ನನಿಗೇನು ಫಲವು. ಆದರಿಂದ ಬ್ರಹ್ಮಸ್ವಾಪಹಾರದೋಷವೊಂದನ್ನೂ ಇರುವ ದೋಷದೊಂದಿಗೆ ಸೇರಿಸಿದಂತಾಗುವದಿಲ್ಲವೆ, ಎಂದು ಕೇಳಲು, ವ್ಯಾಸಮಹರ್ಷಿಯು ಅಯ್ಯ ಧರ್ಮಪುತ್ರನೆ, ಲೋಕದಲ್ಲಿ ಯಾವದು ತಾನೆ ಬ್ರಾಹ್ಮಣರದಲ್ಲವು? ಪರಶುರಾಮನಿಂದ ಲೋಕವೆಲ್ಲಾ ಬ್ರಾಹ್ಮಣರಿಗೇ ದಾನವಾಗಿ ಬಂದದ್ದರಿಂದ ಅಶೇಷವಾದ ಭೂಲೋಕವು ಬ್ರಾಹ್ಮಣರದೇ ಆಗಿದೆ ‖ ೩೩ ‖ ಈರೀತಿ ಪ್ರಪಂಚವೇ ಬ್ರಾಹ್ಮಣರದಾದರೂ ಅದನ್ನು ಪರಿಪಾಲಿಸತಕ್ಕವರು ವೀರರಾದ ನಿಮ್ಮಂಥ ರಾಜಾಧಿರಾಜರಾದ್ದರಿಂದ ಆ ಧನವು ನಿನ್ನದೆಂಬುದರಲ್ಲಿ ಲೇಶವೂ ಅನುಮಾನವಿಲ್ಲ. ಅದನ್ನು ಉಪಯೋಗಿಸಿಕೊಳ್ಳಬಹುದು. ಅಲ್ಲದೆ ಭದ್ರಾವತಿಯೆಂಬೊಂದು ಪಟ್ಟಣದಲ್ಲಿ ಯೌವನಾಶ್ವನೆಂಬ ಶೂರಶಿಖಾಮಣಿಯಿರುವನು. ಅವನು ಹತ್ತು ಅಕ್ಷೋಹಿಣೀ ಸೈನ್ಯದಿಂದ ಆ ಪಟ್ಟಣವನ್ನು ನಿರುಪಾಧಿಕವಾಗಿ ಪರಿಪಾಲಿಸುತ್ತಿರುವನು. ಆ ಪಟ್ಟಣದಲ್ಲಿ

ನಾಶ್ವನೆಂಬವನೀಶನು || ಮೋಹದಿಂಭದ್ರಾವತೀನಗರದೊಳ್ದಶಾ | ಕ್ಷೋಹಿಣೀಸೇನೆಯಿಂಪಾಲಿಸುವನಿಂತಪ್ಪ | ಪಾಹಯೋತ್ತಮನೊಂದನದು ನಿನಗೆಬಾರದಿರ್ಪುದೆಶೌರ್ಯಮುಂಟಾದೊಡೆ || ೩೪ || ಈ ಘಟೋತ್ಕಚನತನುಸಂಭವಂ ಬಡವನೇ | ಮೇಘನಾದಂ ಕರ್ಣಸೂನುವೃಷಕೇತುತಾಂ | ಮೋಘವಿಕ್ರಮನೆನಿನ್ನನುಜರೇಂ ಕಿರುಕುಳರೆಹರಿನೆನಸಿದರೆಬಾರನೆ || ನೀಘನವಿದೆನ್ನದಿರ್ಕೈಕೊಳಧ್ವರವತಾ | ನೇಘಟಿಪುದಿನ್ನು ಸಂಶಯಮೇಕೆಕರೆಸು ವಿ | ಪ್ರೌಘವನೆನಲ್ನೃಪಂನಗುತ ಕಲಿಭೀಮನಂನೋಡಲವನಿಂತೆಂದನು ||೩೫|| ಜೀಯಸಂದೇಹಮೇಕುಜ್ಜುಗಿಸುಧನಮುಂ ಸ | ಹಾಯಮುಂತೋರಿದಂನಿನಗೆನಿ | ರ್ದಾಯದಿಂದೀ

---

ದಶಾಕ್ಷೋಹಿಣೀಸೇನೆಯಿಂ-ಹತ್ತು ಅಕ್ಷೋಹಿಣೀ ಸೈನ್ಯದಿಂದ, ಇಂತಪ್ಪ-ಮೇಲೆ ಹೇಳಿದ ಚಿಹ್ನೆಗಳಿಂದ ಕೂಡಿದ, ಒಂದನು-ಒಂದಾದ, ಹಯೋತ್ತಮನುಂ-ಶ್ರೇಷ್ಠವಾದ ಕುದುರೆಯನ್ನು ಪಾಲಿಸುವನು - ಕಾಪಾಡುತ್ತಲಿದ್ದಾನೆ, ನಿನಗೆ-ನಿನಗೆ, ಶೌರ್ಯಂ-ಪರಾಕ್ರಮವು, ಉಂಟಾದೊಡೆ-ಇದ್ದರೆ, ಬಾರದೆ ಇರ್ಪುದೆ-ನಿನಗೆ ಸಿಕ್ಕುವುದಿಲ್ಲವೆ? ಎಂದರೆ ದೊರೆಯುತ್ತದೆ.

ಅ-ವಿ|| ಹಿಮಾಲಯ-ಮಂಜಿನ ಪರ್ವತ, ಆನೆ ತೇರುಗಳಲ್ಲಿ ಪ್ರತಿ ಜಾತಿಯೂ ಇಪ್ಪತ್ತೊಂದು ಸಾವಿರದ ಎಂಟನೂರ ಎಪ್ಪತ್ತರಂತೆಯೂ, ಅರವತ್ತೈದು ಸಾವಿರದ ಆರನೂರ ಹತ್ತು ಅಶ್ವಗಳೂ, ಪದಾತಿಗಳ ಸಂಖ್ಯೆ ಒಂದು ಲಕ್ಷದ ಒಂಭತ್ತು ಸಾವಿರದ ಮುನ್ನೂರೈವತ್ತು ಉಳ್ಳ ಬಲಕ್ಕೆ ಅಕ್ಷೋಹಿಣಿ (ಅಕ್ಷೌಹಿಣಿ) ಎಂದು ಹೆಸರು ||೩೪||

ಟೀ|| ಈ ಘಟೋತ್ಕಚನ - ಭೀಮಸೇನನ ಪುತ್ರನಾದ ಈ ಘಟೋತ್ಕಚನೆಂಬ ರಕ್ಕಸನ, ತನುಸಂಭವಂ - ಕುವರನಾದ, ಮೇಘನಾದ-ಮೇಘನಾದನೆಂಬಾತನು, ಬಡವನೆ-ಬಲಹೀನನೆ, ಕರ್ಣಸೂನು-ಕರ್ಣನಂದನನಾದ, ವೃಷಕೇತು-ವೃಷಕೇತುವೆಂಬ ಹೆಸರುಳ್ಳ, ತಾಂ-ತಾನು, ಮೋಘ-ನಿಷ್ಪ್ರಯೋಜನವಾದ, ವಿಕ್ರಮನೆ-ಶಕ್ತಿಯುಳ್ಳವನೆ, ನಿನ್ನ-ನಿನ್ನಯ, ಅನುಜರು-ಸಹೋದರರು, ಕಿರುಕುಳರೆ-ಹೇಡಿಗಳೆ, ಹರಿ-ಕೃಷ್ಣಸ್ವಾಮಿಯು, ನೆನಸಿದರೆ - ಸ್ಮರಣೆಮಾಡಿದ ಮಾತ್ರಕ್ಕೇ, ಬಾರನೆ-ಬರದೆ ಹೋಗುತ್ತಾನೆಯೆ, ಇದು-ಈ ಯಾಗವು, ಘನವು- ಅಸಾಧ್ಯವು, ಎನ್ನದೆ-ಎಂದು ಹೇಳದೆ, ನೀ-ನೀನು, ಇರು-ಸುಮ್ಮನಿರು, ಅಧ್ವರವ-ಯಾಗಕ್ಕಾಗಿ, ಕೈಕೊಳ್-ತೊಡಗು, ತಾನೆ-ಅದೇ, ಘಟಿಪುದು-ನೆರವೇರುತ್ತದೆ, ಇನ್ನು-ಇನ್ನುಮೇಲೆ, ಸಂಶಯವು-ಅನುಮಾನವು, ಏಕೆ-ಏತಕ್ಕೆ, ವಿಪ್ರೌಘವನು - ಭೂಸುರೋತ್ತಮರ ಸಮುದಾಯವನ್ನು, ಕರೆಸು - ಕರೆಕಳುಹು, ಎನಲ್-ಎಂಬದಾಗಿ ಹೇಳಲು, ನೃಪಂ-ಯುಧಿಷ್ಠಿರನು, ನಗುತ್ತ-ನಗುತ, ಕಲಿ-ಶೂರನಾದ, ಭೀಮನಂ-ವೃಕೋದರನನ್ನು, ನೋಡಲು-ನೋಡಲಾಗಿ, ಅವನು-ಆ ಭೀಮನು, ಇಂತು-ಮುಂದೆ ಹೇಳುವಂತೆ, ಎಂದನು-ಹೇಳಿದನು.

ಭೀಮ, ಎಂದರೆ ಭಯವನ್ನು ಉಂಟುಮಾಡತಕ್ಕವನು, ಕಲಿ-ಅಂದರೆ ಕಲಿಯುಗ, ಶೂರ, ಜಗಳಗಳೆಂಬ ಅರ್ಥಗಳು ಆಗುತ್ತವೆ, ವೃಷ-ಎತ್ತೆ, ಕೇತು-ಧ್ವಜದಲ್ಲಿವುಳ್ಳವನು. ||೩೫||

ಟೀ|| ಜೀಯ-ಪ್ರಭುವೇ! ಸಂದೇಹಂ-ಅನುಮಾನವು, ಏಕೆ-ಏತಕ್ಕೆ, ಉಜ್ಜುಗಿಸು-ಯಜ್ಞಮಾಡಲು ಪ್ರಾರಂಭಿಸು, ಧನಮುಂ-ಹಣವನ್ನೂ, ಸಹಾಯಮುಂ-ನೆರವಾಗುವವರನ್ನೂ, ತುರುಗಮುಂ - ಅಶ್ವನನ್ನೂ, ಈ ಬಾದರಾಯಣಂ-ಈ ವ್ಯಾಸ ಮಹರ್ಷಿಯು, ನಿನಗೆ-ನಿನಗಾದರೋ, ನಿರ್ದಾಯದಿಂ-ಕೃಪಾಕಟಾಕ್ಷದಿಂದ, ತೋರಿದಂ-ತೋರಿಸಿದಾನೆ, ನಾಂ-ನಾನು, ಭದ್ರಾವತೀನಗರಿಗೆ-ಭದ್ರಾವತೀಯೆಂಬ ಊರಿಗೆ, ಪೋಗಿ-ಹೊರಟುಹೋಗಿ, ಆ ಯೌವನಾಶ್ವನಂ - ಆ ಯೌವನಾಶ್ವನೆಂಬ ನಾಮಧೇಯವುಳ್ಳ ಆ ಅರಸನನ್ನು, ಗೆಲ್ದು-ಜಯಿಸಿ, ಅವನ-ಆ ರಾಜನ, ಸೇನಾನಿಕಾಯಮುಂ-ದಂಡನ್ನೆಲ್ಲಾ, ತರಿದು-ಧ್ವಂಸಮಾಡಿ, ಸುವಾಜಿಯುಂ-ಲಕ್ಷಣಯುಕ್ತವಾದ ಅಶ್ವವನ್ನು, ತಂದು-ತೆಗೆದುಕೊಂಡು ಬಂದು, ಮಖಕೆ-ಯಾಗಕ್ಕೆ, ಈಯದೊಡೆ-ಕೊಡದೆ ಇದ್ದರೆ, ತಾಂ-ತಾನು, ಪರಲೋಕಬಾಹಿರಂ-ಸ್ವರ್ಗಲೋಕಕ್ಕೆ ದೂರದಲ್ಲಿರುವವನು, ಅಪ್ಪೆಂ-ಆಗುತ್ತೇನೆ, ಎಂದು-ಹೀಗೆಂದು, ಮಾರುತಿ-ಭೀಮಸೇನನು, ನುಡಿದನು. ಯುಧಿಷ್ಠಿರನೊಂದಿಗೆ ಹೇಳಿದನು.

---

ಯಾಗಕ್ಕೆ ಬೇಕಾದ ಸುಲಕ್ಷಣಲಕ್ಷಿತಮಾದ ಅಶ್ವವಿರುವುದು. ನೀನು ಪರಾಕ್ರಮಿಯಾದರೆ ಆ ಕುದುರೆಯು ನಿನ್ನ ಬಳಿಗೆ ಬರುವುದು ಎಷ್ಟು ಮಾತ್ರದ ಕೆಲಸವು. || ೩೪ || ಮತ್ತು ನಿನ್ನ ಬಳಿಯಿರುವ ವೃಷಧ್ವಜಮೇಘನಾದರೂ ನಿನ್ನನುಜರಾದ ಭೀಮಾರ್ಜುನ ನಕುಲ ಸಹದೇವರೂ ಹೇಡಿಗಳೆಂದು ತಿಳಿದಿರುವೆಯಾ? ಇವರಿಗಿಂತಲೂ ನಿನಗೆ ಸಹಾಯ ಬೇಕೇ? ಸ್ಮರಿಸಿದ ಮಾತ್ರಕ್ಕೇ ಕೃಷ್ಣಸ್ವಾಮಿಯು ನಿನ್ನ ಬಳಿ ಇರದೆ ಹೋದಾನೆ? ಈ ಯಾಗವು ಮಹಾತ್ಮನಾದ ನಿನಗೆ ಎಷ್ಟುಮಾತ್ರವಾದದ್ದು. ಇದಕ್ಕಾಗಿ ನೀನು ಯೋಚನೆ ಮಾಡದೆ ಪ್ರಾರಂಭಿಸಿಬಿಡು. ಬ್ರಾಹ್ಮಣರನ್ನು ಕರೆಸು, ತಡಮಾಡಬೇಡವೆಂಬದಾಗಿ ಹೇಳಿದ ಮಾತುಗಳನ್ನೆಲ್ಲಾ ಧರ್ಮರಾಯನು ಕೇಳಿ ಆನಂದಪಡುತ್ತ ತನ್ನ ತಮ್ಮನಾದ ಭೀಮಸೇನನ ಕಡೆ ತಿರುಗಿ ನೋಡಿದನು. ||೩೫|| ಆಗ ಭೀಮಸೇನನು, ತನ್ನ ಕಡೆ ನೋಡುತ್ತಿರುವ ಯುಧಿಷ್ಠಿರನನ್ನು ಕುರಿತು, ಅಗ್ರಜನೇ! ಓ ಸ್ವಾಮಿಯೇ! ನೀನು

ಬಾದರಾಯಣಂನಾಂಪೋಗಿಭದ್ರಾವತೀನಗರಿಗೆ || ಆ ಯೌವನಾಶ್ವನಂಗೆಲ್ದವನಸೇನಾನಿ | ಕಾಯಮುಂತರಿದಾಸುವಾಜಿಯಂ
ತಂದುಮುಖ | ಕೀಯುದೊಡೆಪರಲೋಕಬಾಹಿರಂತಾನಪ್ಪೆನೆಂದುಮಾರುತಿನುಡಿದನು ||೩೬|| ಯಜ್ಞಕ್ಕೆತುರಗಮುಂತಹೆನೆಂದು
ಭೀಮಂಪ್ರ | ತಿಜ್ಞೆಯುಂಮಾಡುತಿರಲಾಕ್ಷಣದೊಳಾಹವಕ | ಭಿಜ್ಞನೆನಿಸುವಕರ್ಣಸುತವೃಷಧ್ವಜನೆದ್ದು ನಗುತಕೈಮುಗಿದು
ನಿಂದು || ವಿಜ್ಞಾಪನಂಗೈದನೆಲೆತಾತಕೊಡುತನಗ | ನುಜ್ಞೆಯುಂಪವಮಾನತನಯನಾಡಿದನುಡಿಗ | ವಜ್ಞೆಬಂದೊಡೆರವಿ
ಕುಮಾರಂಗೆಜನಿಸಿದನೆನೋಡೆನ್ನಧಟನೆಂದನು ||೩೭|| ವ್ಯಗ್ರದಿಂಬಾಲನಾಡಿದನುಡಿಗೆಭೂಪತಿಸ | ಮಗ್ರಸಂತೋಷದಿಂತೆಗೆದಪ್ಪಿ

---

ಅ-ವಿ|| ಮರುತನಮಗನು ಮಾರುತಿ (ಭೀಮ ಮತ್ತು ಹನುಮಂತ) ಭದ್ರಾ-ಶುಭಕರವಾದ, ಅವತಿ-ಪಟ್ಟಣ, ಜೀಯ-ಆರ್ಯ, ಜಯಶಾಲಿ ||೩೬||

ಟೀ|| ಭೀಮಂ-ಭೀಮಸೇನನು, ಯಜ್ಞಕ್ಕೆ-ಯಾಗಕ್ಕೋಸ್ಕರ, ತುರಗನುಂ-ಕುದುರೆಯನ್ನು, ತಹೆನು-ತರುವೆನು, ಎಂದು-ಎಂಬದಾಗಿ, ಪ್ರತಿಜ್ಞೆಯಂ-ಪ್ರಮಾಣವನ್ನು ಮಾಡುತ್ತಿರಲು-ಮಾಡುತ್ತಿರುವಾಗ, ಆ ಕ್ಷಣದೊಳು-ಕೂಡಲೆ, ಆಹವಕೆ-ಸಮರಕ್ಕಾಗಿ, ಅಭಿಜ್ಞನು-ಅರಿತವನು, ಎನಿಸುವ-ಎಂದು ಹೇಳಿಸಿಕೊಳ್ಳುವ, ಕರ್ಣಸುತ-ಕರ್ಣನ ಪುತ್ರನಾದ, ವೃಷಧ್ವಜನು-ವೃಷಧ್ವಜನೆಂಬಾತನು, ಎದ್ದು-ಮೇಲಕ್ಕೆದ್ದು, ನಗುತ- ನಗೆದೋರುತ, ಕೈಮುಗಿದು-ಕೈಜೋಡಿಸಿ, ನಿಂದು-ನಿಂತು, ವಿಜ್ಞಾಪನಂ ಗೈದನು, ಮುಂದೆ ಹೇಳುವತೆರನಾಗಿ ಅರಿಕೆಮಾಡಿಕೊಳ್ಳುತ್ತಾನೆ. ಎಲೆ ತಾತ-ಅಯ್ಯಾ ತಂದೆಯೆ! ಅನುಜ್ಞೆಯಂ-ಅಪ್ಪಣೆಯನ್ನು, ಎನಗೆ - ನನಗೆ, ಕೊಡು - ದಯಪಾಲಿಸು, ಪವಮಾನತನಯಂ - ವಾಯುಸೂನುವಾದ ವೃಕೋದರನು, ಆಡಿದ-ಪ್ರತಿಜ್ಞೆಯಂಗೈದ, ನುಡಿಗೆ-ವಚನಕ್ಕೆ, ಅವಜ್ಞೆ-ಅಮರ್ಯಾದೆಯು, ಬಂದೊಡೆ-ಉಂಟಾದರೆ, ರವಿಕುಮಾರಂಗೆ-ಸೂರ್ಯಸುತನಾದ ಕರ್ಣನಿಗೆ, ಜನಿಸಿದನೆ-ಉತ್ಪನ್ನನಾದವನೆ? ಎನ್ನ-ನನ್ನ, ಅಧಟನು-ಶಕ್ತಿಯನ್ನು, ನೋಡು-ಪರೀಕ್ಷೆಮಾಡು, ಎಂದನು-ಎಂಬುದಾಗಿ ಹೇಳಿದನು. ||೩೭||

ಟೀ|| ಬಾಲಕನು-ಹಸುಳೆಯು, ವ್ಯಗ್ರದಿಂ-ಉತ್ಸಾಹಾತಿಶಯದಿಂದ, ಆಡಿದ-ಹೇಳಿದ, ನುಡಿಗೆ-ವಚನಕ್ಕೆ, ಭೂಪತಿ-ಯುಧಿಷ್ಠಿರನು, ಸಮಗ್ರಸಂತೋಷದಿಂದ - ಪರಿಪೂರ್ಣವಾದ ಆಹ್ಲಾದದಿಂದ, ತೆಗೆದು-ಬಾಚಿ, ಅಪ್ಪಿಕೊಂಡು- ಸಮಿಪಕ್ಕೆ ಎಳೆದು-ತಬ್ಬಿಕೊಂಡು, ಮಗನೆ-ಎಲೈ ಪುತ್ರನೇ! ನಿನ್ನ-ನಿನ್ನಯ, ಉಗ್ರ-ಅಸಾಧ್ಯವಾದ, ಪ್ರತಾಪಂ-ಶೌರ್ಯವನ್ನು, ಅಂ-ನಾನು, ಬಲ್ಲೆ-ತಿಳಿದಿರುವೆನು, ಕೇಳು-ನನ್ನ ಮಾತನ್ನು ಚೆನ್ನಾಗಿ ಲಾಲಿಸು, ಅಂದು-ಪೂರ್ವದಲ್ಲಿ (ಕುರುಪುತ್ರರೊಡನೆ ಯುದ್ಧ ಮಾಡುವಾಗ) ನೆಲದ-ದೇಶದ, ಆಸೆಗಾಗಿ-ಕುತೂಹಲಕ್ಕೋಸ್ಕರ, ಅಗ್ರಜನನು-ಜ್ಯೇಷ್ಠನಾದ ರವಿಸೂನುವನ್ನು, ಇರಿದುದಲ್ಲದೆ-ಕೊಂದು ಹಾಕಿದ್ದು ಅಲ್ಲದೆ, ಪಸುಳೆ-ಬಾಲಕನೇ! ನಿನ್ನನು-ನಿನ್ನನ್ನೂ ಕೂಡ, ಈ ವಿಗ್ರಹಕೆ - ಈ ಸಮರಕ್ಕಾಗಿ, ಕಳುಹಿ-ಕಳುಹಿಸಿ ಬಿಟ್ಟು, ಎಂತು-ಯಾವ ರೀತಿಯಾಗಿ, ಸೈರಿಸುವೆನು-ತಡೆದಿರಲಿ? ಅಕಟ-ಆಹಾ! ವಾಜಿಗ್ರಹಣ-ಅಶ್ವವನ್ನು ಹಿಡಿದು ತರುವ, ಕಾರ್ಯಂ-ಉದ್ಯೋಗವು, ಅಂತು-ಹಾಗೆಯೇ, ಇರಲಿ-ಇದ್ದುಕೊಳ್ಳಲಿ, ಎಂದೊಡೆ-ವೃಷಕೇತುವನ್ನು ಕುರಿತು ಹೀಗೆ ಹೇಳಲು, ಆತನು - ಆ ವೃಷಧ್ವಜನು, ಅವನೀಶ್ವರಂಗೆ - ಭೂಕಾಂತನಾದ ಯುಧಿಷ್ಠಿರನಿಗೆ, ಇಂತು - ಹೀಗೆ, ಎಂದನು-ಹೇಳುತ್ತಾನೆ.

---

ಇನ್ನು ಏತಕ್ಕೆ ಅನುಮಾನಪಡುತ್ತೀಯೆ? ಯಾವ ಯೋಚನೆಯನ್ನೂ ಮಾಡದೆ ಕಾರ್ಯಾರಂಭವನ್ನು ಮಾಡು, ಈ ಋಷಿವರ್ಯರು ಧನವು ದೊರೆಯುವ ಸ್ಥಳವನ್ನೂ, ಕುದುರೆ ಸಿಕ್ಕುವ ರೀತಿಯನ್ನೂ, ಸಹಾಯ ಸಂಪತ್ತಿನ ವಿಧಾನವನ್ನೂ, ಕರುಣವನ್ನಿಟ್ಟು ತಿಳಿಸಿದರೂ ನೀನೇಕೆ ಈಪರಿ ಯೋಚಿಸಬೇಕು. ನಾನು ಭದ್ರಾವತೀ ನಗರಿಗೆ ಹೋಗಿ ಅಲ್ಲಿಯ ಅರಸಾದ ಯೌವನಾಶ್ವನನ್ನೂ, ಆತನ ಹತ್ತು ಅಕ್ಷೋಹಿಣೀ ಸೈನ್ಯವನ್ನೂ, ಧ್ವಂಸಮಾಡಿ ಜಯಶಾಲಿಯಾಗಿ, ಕುದುರೆಯನ್ನು ತಂದು ನಿನಗೆ ಒಪ್ಪಿಸದೆ ಹೋದರೆ ಸ್ವರ್ಗಾದಿ ಲೋಕಗಳಿಂದ ಬಹುದೂರವಿರುವವನಾಗುತ್ತೇನೆಂದು ಶಪಥಮಾಡಿ ನುಡಿದನು ||೩೬|| ವಾಯುಪುತ್ರನ ಈ ಪರಿಯಾದ ಶಪಥವನ್ನು ಕೇಳಿದ ಕರ್ಣಸುತನಾದ ವೃಷಕೇತುವು ಯುಧಿಷ್ಠಿರನನ್ನು ನೋಡಿ, ಕೈಮುಗಿದು ನಿಂತು ಎಲೈ ತಂದೆಯೇ ನನಗೆ ಅಪ್ಪಣೆಯನ್ನು ಕೊಡು. ನಾನು ಹೋಗಿ ಭೀಮಸೇನನು ಮಾಡಿದ ಶಪಥವನ್ನು ಸಾರ್ಥಕಪಡಿಸುತ್ತೇನೆ. ಹಾಗೆ ನಿರ್ಥಕಮಾಡಿದರೆ ನಾನು ಸೂರ್ಯಪುತ್ರನಾದ ಕರ್ಣನಂದನನಲ್ಲವೆಂದು ತಿಳಿ, ಎಂದು ಪ್ರತಿಜ್ಞೆಯಂ ಮಾಡಿದನು ||೩೭|| ಬಾಲನಾದ ವೃಷಧ್ವಜನನ್ನು ನೋಡಿ, ಬಾಚಿ ಅಪ್ಪಿಕೊಂಡು, ಎಲೈ ಕಂದನೆ, ಈ ಹಸ್ತಿನಾವತಿಯ ಒಡೆತನಕ್ಕಾಗಿ ಸೂರ್ಯಸುತನಾಗಿ, ನಿಮ್ಮ ತಂದೆಯೂ ನಮ್ಮ ಅಣ್ಣನೂ ಆದ ಕರ್ಣನನ್ನು ಕೊಂದು ದುಃಖಸಮುದ್ರದಲ್ಲಿ ಬಿದ್ದು ದಡವನ್ನು ಕಾಣದಿರುವಾಗ ಬಾಲನಾದ ನಿನ್ನನ್ನು ಆ ಯುದ್ಧಕ್ಕೆ ಕಳುಹಿ ಎಂತು ಬದುಕಿಲಿ? ಸರ್ವಪ್ರಕಾರವಾಗಿಯೂ ನಿನಗೆ ಯುದ್ಧದ

ಕೊಂಡುನಿ | ನ್ನಗ್ರಪ್ರತಾಪಮುಂಬಲ್ಲೆನಾಂಮಗನೆಕೇಳೆಂದುನೆಲದಾಸೆಗಾಗಿ || ಅಗ್ರಜನನಿರಿದುದಲ್ಲದೆಪಸುಳೆನಿನ್ನನೀ | ವಿಗ್ರಹಕೆಕಳುಹಿಸೈರಿಸುವೆನೆಂತಕಟವಾ | ಜಿಗ್ರಹಣಕಾರ್ಯಮುಂತಿರಲೆಂದೊಡನನೀಶ್ವರಂಗಾತನಿಂತೆಂದನು || ೩೮ || ತಾತಕೇಳ್ಸಹಜಾತರಾದನಿಮ್ಮೈವರೊಳ್ | ತಾತಳ್ತಿರದೆ ವಿರೋಧಿಸಿದ ನೆಮ್ಮಯ್ಯಂ | ತಾತನಪರಾಧಮಂ ಪರಿಹರಿಸದಿರ್ದೊಡಾನಿರ್ದುಫಲವೇನು ಬಳಿಕ || ಆತುರಂಗಮಕೆ ಪೋಪನಿಲಜನ ಕೂಡೆನಡೆ | ದಾತುರದೊಳೈತಪ್ಪರಿಪು ಚಾತುರಂಗಕಿದಿ | ರಾಂತುರಣದೊಳ್ಗೆಲ್ವೆನಹಿತರಂತನಗೆ ಬೆಸಸೆಂದಕರ್ಣಸೂನು || ೩೯ || ಅಪ್ರತಿಪರಾಕ್ರಮಿವೃಕೋದರಂಮಾಡಿದಘನ | ಪ್ರತಿಜ್ಞೆಯನಿನಜತನಯನಾಡಿದಗಭೀ | ರಪ್ರತಾಪವನಾಗಲಾ ಘಟೋತ್ಕಚನಸುತಮೇಘನಾದಂ ಕೇಳಿದಂ || ಕ್ಷಿಪ್ರದಿಂದೆಷ್ದುಬಂದವನಿಪಾಲಕನಚರ | ಣಪ್ರದೇಶಕೆ ತನ್ನಹೊಳಹೊಳೆವಲಲಿತರ | ತ್ನಪ್ರಭಾಶೋಭಿತಕಿರೀಟಮುಂಚಾಚುತೊಯ್ಯನೆಬಿನ್ನಪಂಗೈದನು || ೪೦ || ಭದ್ರಾವತಿಗೆನಡೆದುಯೌವನಾಶ್ವನಬಲಸ | ಮುದ್ರಮಂಕಲಕದಿಹನೇಕೆರಲ್ವದೆಕಾಲ |

---

ಅ|| ವಿ|| ಅಗ್ರ - ಮುಂಚೆ, ಜ_ಹುಟ್ಟಿದವನು (ಅಣ್ಣ), ವಿಗ್ರಹ - ಸಮರ, ದೇಹ ಎಂಬ ಎರಡು ಅರ್ಥಗಳು ಆಗುವುವು || ೩೮ ||

ಟೀ|| ತಾತ-ಪಿತನಾದ ಯುಧಿಷ್ಠಿರನೆ, ಕೇಳು-ಲಾಲಿಸು, ಸಹಜಾತರಾದ_ಜೊತೆಯಲ್ಲಿ ಹುಟ್ಟಿದ, ನಿಮ್ಮ-ನಿಮ್ಮಗಳ. ಐವರೊಳು_ಐದುಜನಗಳಲ್ಲೂ, ತಾ_ತಾನು, ತಳ್ತು-ಹೊಂದಿಕೊಂಡು, ಇರದೆ, ಎಮ್ಮ-ನಮ್ಮ, ಅಯ್ಯನು-ತಂದೆಯು, ವಿರೋಧಿಸಿದನು_ಹಗೆತನಮಂ ಮಾಡಿದನು, ಅಂತು-ಹಾಗೆಯೆ, ಆತನ_ನಮ್ಮ ಪಿತನಾದ ಕರ್ಣನ, ಅಪರಾಧಮಂ_ದೋಷವನ್ನು, ಪರಿಹರಿಸದೆ_ನಿವಾರಣೆಮಾಡದೆ, ಇರ್ದೊಡೆ_ಇದ್ದದ್ದಾದರೆ, ಆಂ_ನಾನು, ಇರ್ದು_ಜೀವಂತನಾಗಿ ಇದ್ದು, ಫಲಮೇಂ-ಸಾರ್ಥಕವೇನಿಥೆ? ಬಳಿಕ-ಅನಂತರ, ಆತುರಂಗಮಕೆ-ಆ ಹಯಕ್ಕೆ, ಪೋಪ-ಹೋಗುವಂಥ, ಅನಿಲಜನಕೂಡೆ-ವಾಯುನಂದನನಾದ ವೃಕೋದರನೊಂದಿಗೆ, ನಡೆದು-ಪೋಗಿ, ಆತುರದೊಳು-ಅವಸರದಿಂದ, ಐತಪ್ಪ-ಸಮೀಪವನ್ನೈದುವ, ರಿಪು-ಹಗೆಗಳ, ಚಾತುರಂಗಕೆ_ನಾಲ್ಕು ವಿಧವಾದ ಹಸ್ತ್ಯಶ್ವರಥ ಪದಾತಿಗಳೆಂಬ ಸೈನ್ಯಕ್ಕೆ, ಇದಿರಾಂತು-ಎದುರುಬಿದ್ದು, ರಣದೊಳು_ಸಮರಾಂಗಣದಲ್ಲಿ, ಅಹಿತರಂ_ವೈರಿಗಳನ್ನು, ಗೆಲ್ವೆನು-ಸೋಲಿಸಿಬಿಡುತ್ತೇನೆ, ಬೆಸಸು-ಅನುಜ್ಞೆಯಂ ಪಾಲಿಸು, ಎಂದು_ಎಂಬದಾಗಿ, ಆಕರ್ಣಸೂನು-ಕರ್ಣನ ಮಗನಾದ, ಅವೃಷಧ್ವಜನು, ಎಂವನು_ಹೇಳಿದನು || ೩೯ ||

ಟೀ|| ಅಪ್ರತಿಪರಾಕ್ರಮಿ_ಮತ್ತೆಯಾರೂ ಎದುರುನಿಲ್ಲಲಾರದ ಶೌರ್ಯವುಳ್ಳ, ವೃಕೋದರಂ_ಅನಿಲಜನು, ಮಾಡಿದ-ಹೇಳಿದಂಥ, ಘನಪ್ರತಿಜ್ಞೆಯಂ-ಕ್ರೂರವಾದ ಪಂತವನ್ನು, ಇನಜತನಯನು_ಸೂರ್ಯನ ಮೊಮ್ಮಗನಾದ ವೃಷಧ್ವಜನು, ಆಡಿದ-ನುಡಿದ, ಗಂಭೀರ - ಗಾಂಭೀರ್ಯವುಳ್ಳ, ಪ್ರತಾಪವನು - ವೀರೋಕ್ತಿಗಳನ್ನೂ, ಆಗಳ್ - ಆಸಮಯದಲ್ಲಿ, ಘಟೋತ್ಕಚನ_ಭೀಮ ಮತ್ತು ಹಿಡಿಂಬಿ ಇವರಿಂದುತ್ಪನ್ನನಾದ ಘಟೋತ್ಕಚನೆಂಬವನ, ಸುತಂ-ಕುವರನಾದ, ಮೇಘನಾದಂ-ಮೇಘನಾಥನೆಂಬುವವನು, ಕೇಳಿದ ಆಗಲೆ_ಕೇಳಿದ ಕೂಡಲೆ, ಕ್ಷಿಪ್ರದಿಂದ_ನಿಧಾನ ಮಾಡದೆ, ಎದ್ದುಬಂದು_ಧರ್ಮರಾಯನು ಇರುವ ಸ್ಥಳಕ್ಕೆ ಬಂದು, ಅವನಿಪಾಲಕ - ಪೃಥ್ವೀಶನಾದ ಯುಧಿಷ್ಠಿರನ, ಚರಣಪ್ರದೇಶಕೆ - ಪಾದಗಳ ಬಳಿಗೆ, ತನ್ನ- ಸ್ವಕೀಯವಾದ, ಹೊಳಹೊಳೆವ_ಬಹಳವಾಗಿ ಕಾಂತಿಯನ್ನೀಯುವ, ಲಲಿತ_ಹೃದಯಹಾರಿಗಳಾದ, ರತ್ನಪ್ರಭಾ-ರತ್ನದ ಕಾಂತಿಯಿಂದ, (ಹೊಳವಿನಿಂದ) ಶೋಭಿತ_ಪ್ರಕಾಶವನ್ನೈದಿರುವ, ಕಿರೀಟಮುಂ-ರಾಜಚಿಹ್ನೆಯಾದ ಕಿರೀಟವನ್ನು, ಚಾಚುತ-ಒಡ್ಡುತ್ತ, ಒಯ್ಯನೆ-ನಿಧಾನವಾಗಿ, ಬಿನ್ನಪಂಗೈದನು_ಅರಿಕೆಮಾಡಿದನು ||

ಇನಜ= ಕೃ. ವೃ, ಇನಜತನಯನ_ಷ. ತ. ಅವನಿಯಪಾಲಕ_ಅವನಿಪಾಲಕ (ಷ. ತ. ಸ.) || ೪೦ ||

---

ಯೋಚನೆ ಬೇದವೆಂದು ಯುಧಿಷ್ಠಿರನು ಆಡಿದ ಮಾತನ್ನು ಕೇಳಿ ಧರ್ಮರಾಯನನ್ನು ಕುರಿತು || ೩೮ || ಎಲೈ ಪಿತನೇ ರವಿವಂಶಜನಾದ ನಮ್ಮ ತಂದೆಯು ನಿಮ್ಮೈವರೊಂದಿಗೆ ಸೇರದೆಹೋದ ಅಪರಾಧವನ್ನು ನಿವಾರಣೆಮಾಡದೆ ನಾನು ಬದುಕಿದ್ದೂ ಫಲವೇನು ? ಆದಕಾರಣ ಅನಿಲಜನಕೂಡ ನಾನೂ ಭದ್ರಾವತೀನಗರಿಗೆ ಹೋಗಿ ಯೌವನಾಶ್ವನನ್ನು ಗೆದ್ದುಬರಲು ಅಪ್ಪಣೆಯನ್ನು ದಯಪಾಲಿಸಬೇಕೆಂದು ಮತ್ತ ಯುಧಿಷ್ಠಿರನನ್ನು ಬೇಡಿಕೊಂಡನು || ೩೯ || ಅಪ್ರತಿಹತವಾದ ಪರಾಕ್ರಮವುಳ್ಳ ಭೀಮಸೇನನು ಮಾಡಿದ ಶಪಥನನ್ನು ಸೂರ್ಯನ ಮೊಮ್ಮಗನೂ ಕರ್ಣನ ಕುವರನೂ ಆದ ವೃಷಕೇತುವು ತನ್ನ ಪ್ರತಾಪವನ್ನು ಹೇಳಿಕೊಂಡದ್ದನ್ನೂ ಕೇಳಿದ ಹಿಡಿಂಬಿಯೆಂಬ ರಕ್ಕಸಿಯಲ್ಲಿ ಭೀಮಸೇನನಿಂದ ಜನಿಸಿದ ಘಟೋತ್ಕಜನ ಕುವರನಾದ ಮೇಘವರ್ಣನು ದಿಗ್ಗನೆದ್ದು ಜಾಗ್ರತೆಯಾಗಿ ಧರ್ಮನಂದನನ ಬಳಿಗೆ ಬಂದು ಸೂರ್ಯತೇಜೋವಿರಾಜಮಾನವಾದ ತನ್ನ ಕಿರೀಟನನ್ನು ಮುಂದಕ್ಕೆ ನೀಡುತ್ತಾ, || ೪೦ || ರಾಯನನ್ನು ನೋಡಿ. ಎಲೈ ರಾಜೇಂದ್ರನೇ ! ಈ ಭೀಮಸೇನನಿಗೆ ಕೋ

ರುದ್ರನಲ್ಲಾ ವೃಕೋದರನೀವೃಷಧ್ವಜನೊಳಿದಿರಾಂಪೊಡಾಹವದೊಳು ‖ ಅದ್ರಿಮಥನಂಗರಿದು ಸಾಕದಂತಿರಲಿವೈ | ರಿದ್ರುಮಂಗಳನೆಖಂಡಿಸುವೆನೆಂಬಾಳುತನ | ದುದ್ರೇಕಮೆನಗಿಲ್ಲನಿನ್ನವರ್ಗಶ್ವಮುಂಪಿಡಿದೊಪ್ಪಿಸುವೆನೆಂದನು ‖ ೪೧ ‖ ಕರ್ಣತನುಸಂಭವಂಬಂದೊಡೇನೀಮೇಘ | ವರ್ಣನೈತಂದೊಡೇನಾಂಪೋದೊಡೇನಿದುಸು| ಪರ್ಣವಾಹನನಬಲ್ಪುಂಟಾದೊಡಪ್ಪುದಿವರೀರ್ವರಂ ಕೂಡಿಕೊಂಡು ‖ ಅರ್ಣವೋಪಮಯೌವನಾಶ್ವಚತುರಂಗಮುಂ | ನಿರ್ನಾಮವೆನಿಸಿವಾಜಿಗ್ರಹಣಕಾರ್ಯಮುಂ | ನಿರ್ಣಯಿಸಿಕೊಡುವೆನಿತ್ತಪುದೆಮಗೆವೀಳೆಯವನೆಂದನಿಲಜಂನುಡಿದನು ‖ ೪೨ ‖ ಇಂದುಕುಲತಿಲಕಜನಮೇಜಯ ನರೇಂದ್ರಕೇಳಂದವನಿರ್ಮೂ

---

ಟೀ‖ ಭದ್ರಾವತಿಗೆ – ಭದ್ರಾವತಿಗೆ, ನಡೆದು – ಹೋಗಿ, ಯೌವನಾಶ್ವನ – ಯೌವನಾಶ್ವನೆಂಬ ಭೂಪಾಲಕನ, ಬಲಸಮುದ್ರಮುಂ–ದಂಡೆಂಬ ಕಡಲನ್ನು, ವೃಕೋದರನು–ಭೀಮಸೇನನು, ಕೆರಳ್ದೊಡೆ–ರೇಗಿಬಿಟ್ಟರೆ, ಕಲಕದೆ–ಕದಡದೆ, ಇಹನೆ–ಇರುತ್ತಾನೆಯೆ ? ಕಾಲರುದ್ರನಲ್ಲಾ–ಪ್ರಳಯಕಾಲದ ಈಶ್ವರನಾಗುವನಲ್ಲವೇ? ಈ ವೃಷಧ್ವಜನೊಳು–ಈ ವೃಷಕೇತುವಿನೊಂದಿಗೆ, ಇದಿರಾಂಪಡೆ–ಎದುರಾಗಿ ನಿಲ್ಲಬೇಕಾದರೆ, ಆಹವದೊಳು–ಕದನದಲ್ಲಿ, ಅದ್ರಿಮಥನಂಗೆ–ದೇವೇಂದ್ರನಿಗೂ, ಅರಿದು–ಅಸಾಧ್ಯವು. ಅದು–ಆನುಡಿಯು, ಸಾಕು–ಇನ್ನು ಸಾಕು, ಅಂತಿರಲಿ–ಹಾಗಿರಲಿ, ವೈರಿ–ಹಗೆಗಳೆಂಬ, ದ್ರುಮಂಗಳನೆ–ವೃಕ್ಷಗಳನ್ನೆ, ಖಂಡಿಸುವೆನು–ಭಂಗಪಡಿಸುತ್ತೇನೆ, ಎಂಬ–ಎಂದಾಡುತ್ತಿರುವ, ಆಳುತನದ–ಶೌರ್ಯದ, ಉದ್ರೇಕಂ–ಆಧಿಕ್ಯವು, ಎನಗೆ–ನನಿಗೆ, ಇಲ್ಲ–ಇಲ್ಲವು, ನಿನ್ನವರ್ಗೆ–ನಿನ್ನ ಕಡೆಯ ಜನರಿಗೆ, ಅಶ್ವಮುಂ–ಹಯವನ್ನು, ಪಿಡಿದು–ಹಿಡಿದುಕೊಂಡು ಬಂದು, ಒಪ್ಪಿಸುವೆನು–ತಂದುಕೊಡುತ್ತೇನೆ, ಎಂದನು–ಹೀಗೆಂದು ಹೇಳಿದನು ‖ ೪೧ ‖

ಟೀ‖ ಕರ್ಣ–ಕರ್ಣನ, ತನುಸಂಭವಂ – ಪುತ್ರನಾದ ವೃಷಕೇತುವು, ಬಂದಡೆಏಂ - ಬಂದರೇನುಪ್ರಯೋಜನ? ಈ ಮೇಘವರ್ಣನು–ಈ ಮೇಘನಾದನೆಂಬಾತನು, ಐತಂದಡೆ–ಬಂದರೆ, ಏಂ–ಫಲವೇನು ? ಆಂ–ನಾನು, ಪೋದೊಡೆ–ಹೋದರೆ ತಾನೆ, ಏಂ–ಫಲವೇನು ? ಇದು–ಯಜ್ಞಾಶ್ವವನ್ನು ತರುವ ಈ ಕಾರ್ಯವು, ಸುಪರ್ಣವಾಹನನ–ಗರುಡಧ್ವಜನಾದ ಕೃಷ್ಣನ, ಬಲ್ಪು–ಸಹಾಯವು, ಉಂಟಾದೊಡೆ–ಒದಗಿದರೆ, ಅಪ್ಪುದು–ಸಿದ್ಧಿಸುವದು, ಇವರೀರ್ವರಂ–ವೃಷಧ್ವಜ ಮೇಘನಾದರೆಂಬಿಬ್ಬರನ್ನೂ, ಕೂಡಿಕೊಂಡು–ಜೊತೆಮಾಡಿಕೊಂಡು, ಅರ್ಣವ–ಕಡಲಿಗೆ, ಉಪಮ–ಹೋಲಿಕೆಯಾದ, ಯೌವನಾಶ್ವನ–ಯೌವನಾಶ್ವನೆಂಬ ರಾಜನ, ಚತುರಂಗಮುಂ–ಆನೆ, ಕುದುರೆ, ತೇರು, ಕಾಲಾಳೆಂಬ ನಾಲ್ಕು ಬಗೆಯಾದ ಸೈನ್ಯವನ್ನು, ನಿರ್ನಾಮಮೆನಿಸಿ–ನಿರ್ಮೂಲಮಾಡಿ, ವಾಜಿಗ್ರಹಣ–ಅಶ್ವಬಂಧನದ, ಕಾರ್ಯಮಂ–ಉದ್ಯೋಗವನ್ನು, ನಿರ್ಣಯಿಸಿ–ಗೊತ್ತುಮಾಡಿ, ಕೊಡುವೆನು–ಕೊಡುತ್ತೇನೆ. ಎಮಗೆ–ನಮ್ಮ ಮೂವರಿಗೂ, ವೀಳೆಯವನು–ತಾಂಬೂಲವನ್ನು (ಅನುಜ್ಞೆಯನ್ನು), ಇತ್ತಪುದು–ದಯಪಾಲಿಸಬೇಕು. ಎಂದು–ಎಂಬುದಾಗಿ, ಅನಿಲಜಂ–ವಾಯುಸೂನುವು, ನುಡಿದನು–ಹೇಳಿದನು.

ಅ‖ ವಿ‖ ಮೇಘನಾದ–ಮೇಘಗಳ ಧ್ವನಿಯಂತೆ ಧ್ವನಿಯುಳ್ಳವನು, ಮೇಘವರ್ಣಂ–ಮೇಘದ ಕಾಂತಿಯಂತೆ ಹೊಳಪುಳ್ಳವನು ‖ ೪೨ ‖

ಟೀ‖ ಇಂದುಕುಲ–ಚಂದ್ರನ ಸಂತತಿಗೆ, ತಿಲಕ – ಆಭರಣಪ್ರಾಯನಾದ, ಜನಮೇಜಯನರೇಂದ್ರ – ಜನಮೇಜ

---

ಪವುಂಟಾದರೆ ಪ್ರಳಯಕಾಲದ ರುದ್ರನನ್ನೂ ಅಲ್ಲಗಳೆಯುವನಾಗುತ್ತಾನೆ. ಇಂಥ ಅನಿಲಜನು ಭದ್ರಾವತೀನಗರಿಗೆ ಹೋಗಿ ಯೌವನಾಶ್ವನನ್ನು ರಣದಲ್ಲಿ ಗೆದ್ದು ಅವನನ್ನೂ, ಅವನ ಸೇನಾಬ್ಧಿಯನ್ನೂ ಕಲಕಿ ನಿರ್ಮೂಲನಾಡದೆ ಬರುತ್ತಾನೆಯೆ? ಈ ವೃಷಕೇತುವನ್ನು ಗೆಲ್ಲಲು ಅಮರೇಂದ್ರನೂ ಅಸಮರ್ಥನು. ನಾನು ಶತ್ರುಗಳೆಂಬ ಮರಗಳನ್ನು ಬುಡಸಹಿತ ಕೆಳಕ್ಕೆ ಉರುಳಿಸಿ ನಿನ್ನ ಪಾದಾರವಿಂದಗಳ ಬಳಿಗೆ ಅಶ್ವವನ್ನು ತಂದು ಒಪ್ಪಿಸದೆ ಇರುವನೆಂದು ತಿಳಿದಿದ್ದೀಯಾ? ಆದ್ದರಿಂದ ಅವರಿಬ್ಬರೊಂದಿಗೆ ನನಿಗೂ ಯುದ್ಧಕ್ಕೆ ಹೋಗಲು ಅನುಮತಿಯನ್ನು ಕೊಡೆಂದು ಕೇಳಿದನು ‖೪೧‖ ಈ ಮೂವರಾಡಿದ ಶಪಥಗಳನ್ನು ಕೇಳುತ್ತಲಿದ್ದ ಧರ್ಮಜನನ್ನು ಕುರಿತು ಪುನಃ ಭೀಮಸೇನನು, ಎಲೈ ಅಗ್ರಜನೇ! ಸೂರ್ಯಸುತನಾದ ಕರ್ಣನ ಪುತ್ರನಾದ ಈ ವೃಷಕೇತುವೂ, ಈ ಮೇಘನಾದನೂ ಸಹ ಬಂದರೆ ವಿನು ಪ್ರಯೋಜನ? ನಾನು ಹೋದರೆತಾನೆ ಫಲವೇನು ? ಮುಖ್ಯವಾಗಿ ಈ ಕಾರ್ಯವು ಗರುಡಧ್ವಜನಾಗಿ ರಾಕ್ಷಸಾಂತಕನಾಗಿರುವ ಶ್ರೀ ಕೃಷ್ಣನ ಸಹಾಯದಿಂದ ನೆರವೇರಬೇಕೇ ಹೊರ್ತು ಬೇರೆ ಮಾರ್ಗವೇನಿರುವುದು ? ಆ ಅಚಿಂತ್ಯನೂ ಅವ್ಯಕ್ತನೂ ಆಗಿರುವ ಪರಮಾತ್ಮನಮೇಲೆ ಭಾರವನ್ನು ಹಾಕಿ ಆ ಯೌವನಾಶ್ವನೊಂದಿಗೆ ಕಾದಿ ಅವನನ್ನು ಕೊಂಡು ಅವನ ಚತುರಂಗಬಲವನ್ನೂ ಹೆಸರಿಲ್ಲದಂತೆ ಮಾಡಿಬಿಟ್ಟು ಯಾಗಾರ್ಹವಾದ ಕುದುರೆಯನ್ನು ಹಿಡಿದುಕೊಂಡು ಬಂದು ನಿನ್ನ ಪಾದಕಮಲಗಳಿಗೊಪ್ಪಿಸಲು ಬಯಸುತ್ತಿರುವ ಶೂರಾಗ್ರೇಸರರಾದ ನಮ್ಮ ಮೂವರಿಗೂ ಯುದ್ಧಕ್ಕೆ ಹೊರಡಲು ತಾಂಬೂಲವನ್ನು ಕೊಡೆಂದು ಕೇಳಿದನು ‖ ೪೨ ‖ ಯುದ್ಧಾಭಿಲಾಷಿಗಳಾಗಿ ನಿಂತಿರುವ ಈನೂ

ವರುಂತುರಂಗಮುಂಕೊಂಡುಬಹೆ | ವೆಂದು-ಬೆಸನೆಂಬೇಡಿನಿಂದಿರಲ್ಬಾದರಾಯಣನಮೊಗಮುಂನೋಡುತ || ಇಂದಿವರ್ನಾಂಕಳು ಪಲಸುರವೈರಿಗೆ ಬೇಸರೊಂದಿನಿಸುತೋರದಿರ್ಪುದೆಜೀಯತನಗಿದಕೆ | ಮುಂದುಗಾಣಿಸದು ಕರುಣಿಪುದೆನೆಯುಧಿಷ್ಠಿರಂಗಾ ತಪೋನಿಧಿನುಡಿದನು || ೪೩ || ಭೂಪಕೇಳ್ನೀಂಮರುಳೆಹರಿನಿನ್ನೆಡೆಯೊಳಲಸ | ಲಾಪನೆಬೆಸನಬೇಡುವವೃಕೋದರನ ಪ್ರ | ತಾಪನೆವೃಷಕೇತುಮೇಘವರ್ಣಕರನೊಡಗೊಂಡು ಕುದುರೆಗೆನಡೆಯಲಿ || ಈಪವನತನಯನಂಕಳುಹೆಂದುನಯದೊಳಾ | ತಾಪ ಸೋತ್ತಮನೊಡಂಬಡಿಸಿನುಡಿದಾಜ್ಞಾನು | ರೂಪದಿಂದರಸನಿತ್ತಂಭೀಮಹೈಡಿಂಬಿಕರ್ಣಜರ್ಗನುಮತಿಯನು || ೪೪ || ಬಳಿಕ ನೃಪನಂಪರಸಿಬೀಳ್ಕೊಂಡುಮುನಿವರಂ | ತಳರ್ದನಾಶ್ರಮಕಿತ್ತಲಂಜುತಯುಧಿಷ್ಠಿರಂ | ನಳಿನಾಕ್ಷನಿಲ್ಲದಧ್ವರಕುಪಕ್ರಮಿ

ಯನೆಂಬರಾಜನೆ! ಕೇಳು-ಲಾಲಿಸು, ಅಂದು-ಆ ಕಾಲದಲ್ಲಿ, ಅವರ್ಮೂನರು-ಆಭೀಮ, ವೃಷಧ್ವಜ. ಮೇಘನಾದರೆಂಬ ಮೂರು ಜನವೂ, ತುರಗಮುಂ-ಯಾಗದ ಕುದುರೆಯನ್ನು, ಕೊಂಡುಬಹೆವು-ಹಿಡಿದುಕೊಂಡು ಬರುವೆವು, ಎಂದು-ಎಂಬದಾಗಿ, ಬೆಸಂ ಬೇಡಿ-ಆಜ್ಞೆಯನ್ನುಹೊಂದಿ, ನಿಂದಿರಲ್-ನಿಂತುಕೊಂಡಿರಲಾಗಿ, ಬಾದರಾಯಣ-ವ್ಯಾಸಮಹರ್ಷಿಯ, ಮೊಗಮುಂ-ಆನನವನ್ನು, ನೋಡುತ-ಈಕ್ಷಿಸುತ್ತ, ಇಂದು-ಈಹೊತ್ತು, ಇವರನು-ಈ ಮೂರುಮಂದಿಯನ್ನೂ, ಅಂ-ನಾನು, ಕಳುಪಲು-ಯುದ್ಧಕ್ಕೆ ಕಳುಹುವುದಕ್ಕಾಗಿ, ಅಸುರವೈರಿಗೆ-ಶ್ರೀ ಕೃಷ್ಣಸ್ವಾಮಿಗೆ, ಬೇಸರ-ಬೇಜಾರು, ಒಂದಿನಿಸು-ಎಳ್ಳಷ್ಟಾದರೂ, ತೋರದಿರ್ಪುದೆ-ಉಂಟಾಗದಿರುವುದೆ?, ಜೀಯ-ಓ ಪ್ರಭು! ತನಗೆ-ನನಿಗೆ, ಇದಕೆ-ಈ ಕಾರ್ಯಕ್ಕೆ, ಮುಂಗಾಣಿಸದು-ಮುಂದೇನು ಮಾಡಬೇಕೊ ತಿಳಿಯದು, ಕರುಣಿಪುದು-ಕೃಪೆಯಿಟ್ಟು ಹೇಳಬೇಕು, ಎನೆ-ಎಂದು ಹೇಳಲು, ಯುಧಿಷ್ಠಿರಂಗೆ-ಧರ್ಮರಾಜಗೆ, ಆತಪೋನಿಧಿ- ಆ ತಾಪಸೋತ್ತಮನಾದ ವ್ಯಾಸಮುನಿಯು, ನುಡಿದನು-ಉತ್ತರವಿತ್ತನು.

ಅ|| ವಿ|| ತಿಲಕ ಎಂಬುವದಕ್ಕೆ (೧) ತಿಲದಿಂದೊಡಗೂಡಿದ ಉದಕ (೨) ಮುಖದಲ್ಲಿ ಅಲಂಕಾರದ ಚಿಹ್ನೆ ಎಂಬ ಅರ್ಥಗಳು ಆಗುತ್ತವೆ. ಇಂದುಕುಲ (ಷ. ತ.) ಇಂದುಕುಲತಿಲಕ (ಷ. ತ.) ನರೇಂದ್ರ-ಗುಣಸಂಧಿ || ೪೩ ||

ಟೀ|| ಭೂಪ-ಯುಧಿಷ್ಠಿರನೆ!, ನೀಂ-ನೀನು, ಮರುಳೆ-ಚಿತ್ತವಿಭ್ರಮನೆ? (ಮಂಕನೆ) ಹರಿ-ಕೃಷ್ಣಮೂರ್ತಿಯು, ನಿನ್ನೆಡೆಯೊಳು-ನಿನ್ನ ಬಳಿಯಲ್ಲಿ, ಅಲಸಲಾಪನೆ-ಸಾವಕಾಶವನ್ನು ಮಾಡುವನೆ? ಕೇಳ್-ಕೇಳಯ್ಯಾ, ಬೆಸನಬೇಡುವ-ಅನುಜ್ಞೆಯಂಬಯಸುತ್ತಲಿರುವ, ವೃಕೋದರನು-ಭೀಮಸೇನನು, ಅಪ್ರತಾಪನೆ-ಹೇಡಿಯೆ?, ವೃಷಕೇತು ಮೇಘವರ್ಣನು-ವೃಷಧ್ವಜ ಮೇಘನಾದರನ್ನು, ಒಡಗೊಂಡು-ಜೊತೆಮಾಡಿಕೊಂಡು, ಈಪವನತನಯಂ-ವಾಯುಸೂನುವಾದ ಈಭೀಮಸೇನನು, ಕುದುರೆಗೆ-ಅಶ್ವವನ್ನು ಹಿಡಿದುತರಲು, ನಡೆಯಲಿ-ಹೊರಡಲಿ, ಕಳುಹು-ಈತನನ್ನು ಕಳುಹಿಸಿಕೊಡು, ಎಂದು-ಎಂಬದಾಗಿ, ನಯದೊಳು-ನ್ಯಾಯಮಾರ್ಗದಿಂದ, ಆತಾಪಸೋತ್ತಮನು-ಆ ಋಷಿವರ್ಯನು, ಒಡಂಬಡಿಸಿ-ಒಪ್ಪುವಂತೆಮಾಡಿ, ನುಡಿದ-ಹೇಳಿದ (ತಿಳಿಸಿದ), ಆಜ್ಞಾ-ಅಪ್ಪಣೆಗೆ, ಅನುರೂಪದಿಂ-ಅನುಸಾರವಾಗಿ, ಅರಸನು-ಧರ್ಮನಂದನನು, ಭೀಮಹೈಡಿಂಬಿಕರ್ಣಜರ್ಗೆ-ವೃಕೋದರ, ಮೇಘವರ್ಣ, ವೃಷಧ್ವಜರಿಗೆ, ಅನುಮತಿಯನು-ಅನುಜ್ಞೆಯನ್ನು, ಇತ್ತ-ಕೊಟ್ಟನು.

ಅ|| ವಿ|| ಹೈಡಿಂಬಿ-ಹಿಡಿಂಬಿಯಮಗ ವೃಕೋದರ, ತಾಪಸೋತ್ತಮ, ಇವೆರಡೂ ಗುಣಸಂಧಿ, ಆಜ್ಞಾನುವರ್ತಿ-ಸವರ್ಣದೀರ್ಘಸಂಧಿ || ೪೪ ||

ಟೀ|| ಬಳಿಕ-ತರುವಾಯ, ನೃಪನಂ-ಯುಧಿಷ್ಠಿರನನ್ನು, ಪರಸಿ-ಹರಸಿ, ಬೀಳ್ಕೊಂಡು-ದೊರೆಯ ಅನುಜ್ಞೆಯಂತಾಳಿ, ಮುನಿವರಂ-ಮುನಿಶ್ರೇಷ್ಠನು, ಆಶ್ರಮಕೆ-ತನ್ನ (ತಪೋವನಕ್ಕೆ) ಪರ್ಣಶಾಲೆಗೆ, ತಳರ್ದಂ-ಹೋದನು. ಇತ್ತ

ವರನ್ನೂ ನೋಡಿದ ಧರ್ಮಜನು ವ್ಯಾಸಮಹರ್ಷಿಗಳನ್ನು ಕುರಿತು, ಎಲೈ ಮಹಾನುಭಾವರೇ! ಕೃಷ್ಣಸ್ವಾಮಿಯ ಸಮ್ಮತಿಯನ್ನು ಕೇಳದೆ ಇವರನ್ನು ನಾನು ಯೌವನಾಶ್ವನೊಂದಿಗೆ ಯುದ್ಧಕ್ಕೆ ಕಳುಹಿದರೆ ಆತನ ಚಿತ್ತಕ್ಕೆ ಅಸಮಾಧಾನವೇನಾದರೂ ಉಂಟಾದೀತೇ? ಈ ವಿಷಯದಲ್ಲಿ ನನಿಗೇನೂ ತೋರದಲ್ಲಾ, ಏನುಮಾಡಲಿ? ಎಂಬದಾಗಿ ಕಳವಳಪಡುತ್ತ ಕೇಳಿದನು. ಇದನ್ನು ಕೇಳಿ ವ್ಯಾಸಮಹಾಮುನಿಯು ಎಲೈ ರಾಜನೇ! ||೪೩|| ನೀನು ಭ್ರಾಂತನಾಗಿರುವಂತೆ ತೋರುತ್ತಿ. ಕೃಷ್ಣಸ್ವಾಮಿಯು ನೀನು ಸ್ಮರಣೆ ಮಾಡಿದಮಾತ್ರಕ್ಕೇ ಬರದೆ ಹೋದಾನೆ? ನಿನ್ನನುಜನಾದ ವೃಕೋದರನನ್ನು ಹೇಡಿಯೆಂದು ಯೋಚಿಸುತ್ತೀಯಾ? ಯಾವ ಸಂದೇಹವನ್ನೂ ಇಟ್ಟುಕೊಳ್ಳದೆ ಯುದ್ಧಾಭಿಲಾಷಿಗಳಾಗಿರುವ ಭೀಮ, ವೃಷಕೇತು ಮೇಘನಾದರಿಗೆ ಅನುಜ್ಞೆಯನ್ನು ಕೊಟ್ಟು ಕಳುಹೆಂದು ಹೇಳುತ್ತಿರುವ ಮುನಿವಚನವನ್ನು ಶಿರಸಾವಹಿಸಿ ಆ ಮೂವರಿಗೂ ಯೌವನಾಶ್ವನೊಂದಿಗೆ ಯುದ್ಧಕ್ಕೆ ಹೋಗಲಿಕ್ಕೆ ಅನುಜ್ಞೆಯನ್ನು ದಯಪಾಲಿಸಲು ಒಪ್ಪಿದನು || ೪೪ || ಅನಂತರದಲ್ಲಿ ವ್ಯಾಸಮಹಾಮುನಿಯು ಧರ್ಮಜನಿಗೆ ಆಶೀರ್ವಾದ ಸೇಸೆಯುಂಸೂಸಿ ತನ್ನಾಶ್ರಮಕ್ಕೆ ತೆರಳಿದನು. ಆಬಳಿಕ ಧರ್ಮತನಯನು ತನ್ನಷ್ಟಕೆ

ಸೆನಡೆಯದು ಕಿರೀಟಿಯನೀಗಳೆ ‖ ಕಳುಹಿ ಕರೆಸುವೆನೆಂಬೆಣಿಕೆಯೊಳಿರಲನ್ನೆಗಂ । ತೊಳಲುತರಸುವಬಳ್ಳಿಕಾಲ್ತೊಡಕಿದಂತರಸು । ಗಳಶಿರೋಮಣಿಗೆಸಂಭ್ರಮದೊಳೈತಂದು ಬಿನ್ನೈಸಿದಂಚರನೋರ್ವನು ‖ ೪೫ ‖ ಅವಧಾನಜೀಯನಮ್ಮ ಪೊಳಲಪೊರಗೆಯಾ । ದವರೆರೆಯನಿದೆಬಂದನೆನೆಘಳಿಲನೆದ್ದುನಿಂ । ದವನನುಡಿಗುಚಿತಮಂಕೊಡುತಭಕ್ತಾವಳಿಯಬಗೆಯನೊಡರಿಚುವೆಡೆಯೊಳು ‖ ತವಕಮೆನಿತೋಮುರಾರಿಗೆಮಹಾದೇವತ್ರೈ । ಭುವನದೊಳ್ತಾನೇಕೃತಾರ್ಥನಲಕೌತು । ಕವನಿಂದುಕಂಡೆನೆನುತರಸನರಮನೆಯಿಂದಪೊರಮಟ್ಟುನಡೆತಂದನು ‖ ೪೬ ‖ ಮಿತ್ರೋದಯಾತ್ರಂದೊಳೈತಂದುಹಯಮೇಧ । ಸತ್ರಸಾಧನಕೆ ವೇದವ್ಯಾಸಮುನಿಧರ್ಮ । ಪುತ್ರನಂಬೋಧಿಸಿಮರಳ್ದನಾರಾತ್ರಿಯೋಳ್ಭಂದನೊಲಿದಿಭನಗರಿಗೆ ‖ ಪತ್ರೀಂದ್ರವಾಹನಂಬಳಿ

---

ಲು-ಈ ಕಡೆಯಲ್ಲಿ, ಯುಧಿಷ್ಠಿರಂ-ಧರ್ಮನಂದನನು, ಅಂಜುತ-ದಿಗಲುಬೀಳುತ್ತ, ನಳಿನಾಕ್ಷನು-ಕೃಷ್ಣನು, ಇಲ್ಲದೆಯಿರಲು-ಇಲ್ಲದೆ ಹೋದರೆ, ಅಧ್ವರಕೆ-ಯಾಗಕ್ಕೆ, ಉಪಕ್ರಮಿಸೆ-ಉಜ್ಜುಗಿಸಿದರೆ, ನಡೆಯದು-ಆ ಯಾಗವು ಆಗುವದು ಅಸಾಧ್ಯ, ಕಿರೀಟಿಯನು-ಪಾರ್ಥನನ್ನು, ಈಗಳೆ-ಈವಾಗಲೇ, ಕಳುಹಿ - ಹೇಳಿಕಳುಹಿಸಿಕೊಟ್ಟು, ಕರಸುವೆನು - ಕೃಷ್ಣನನ್ನು ಕರೆಕಳುಹಿಸುತ್ತೇನೆ. ಎಂಬ-ಎನ್ನುವಂಥ, ಎಣಿಕೆಯೊಳು, ಯೋಚನೆಯಲ್ಲಿ, ಇರಲು-ಇರುವ ಕಾಲದಲ್ಲಿ, ಅನ್ನೆಗಂ-ಆ ಹೊತ್ತಿಗೆ, ತೊಳಲುತ-ಆಯಾಸಪಡುತ್ತ, ಅರಸುವ-ಹುಡುಕುತ್ತಿರುವ, ಬಳ್ಳಿ-ಎಳೆಹಂಬು (ಲತೆಯು), ಕಾಲ್ತೊಡಕಿದಂತೆ-ಕಾಲಿಗೆ ತಗಲಿಕೊಂಡ ತೆರದಿಂದ, ಅರಸುಗಳ-ದೊರೆಗಳ, ಶಿರೋಮಣಿಗೆ-ಶಿರೋಭೂಷಣನಾಗಿರುವ ಯುಧಿಷ್ಠಿರನಿಗೆ, ಸಂಭ್ರಮದೊಳು-ಆನಂದದಿಂದ, ಓರ್ವನು-ಒಬ್ಬಾನೊಬ್ಬ, ಚರನು-ಸೇವಕನು, ಐತಂದು-ಬಂದು, ಬಿನ್ನೈಸಿದಂ-ಮುಂದೆ ಹೇಳುವಂತೆ ಬಿನ್ನಹವಂ ಮಾಡುತ್ತಾನೆ.

ಅ‖ ವಿ‖ ನಳಿನ-ಕಮಲದ ಎಸಳಿನಂತೆ, ಅಕ್ಷ-ಕಣ್ಣುಳ್ಳವನು, (ಕೃಷ್ಣ)-ಸ, ದೀ. ಸಂಧಿ. ಬಿನ್ನೈಸು (ತ್ಭ) ವಿಜ್ಞಾಪಿಸು (ತ್ಸ) ಆಶ್ರಮಗಳು ನಾಲ್ಕು, ಯಾವುವೆಂದರೆ, (ಬ್ರಹ್ಮಚರ್ಯ, ಗೃಹಸ್ಥ, ವಾನಪ್ರಸ್ಥ, ಯತಿ ಎಂಬವು ‖೪೫‖

ಟೀ‖ ಜೀಯ-ಒಡೆಯನೆ, ಅವಧಾನ-ಪರಾಕ್; ನಮ್ಮ-ನಮ್ಮಗಳ, ಈ ಪೊಳಲ-ಈ ಹಸ್ತಿನಾವತಿಯ, ಪೊರಗೆ-ಹೊರಗಡೆಯಲ್ಲಿ, ಯಾದವರ-ಯದುಕುಲದಲ್ಲಿ ಉತ್ಪನ್ನರಾದವರ, ಎರೆಯನು-ಸ್ವಾಮಿಯಾದ ಶ್ರೀ ಕೃಷ್ಣನು, ಬಂದನು-ಬಿಜಯಮಾಡಿದ್ದಾನೆ. ಎನೆ-ಎಂದು ಹೇಳಲು, ಘಳಿಲನೆ-ಶೀಘ್ರವಾಗಿ, ಎದ್ದು-ಮೇಲಕ್ಕೆದ್ದು, ನಿಂತು-ನಿಂತವನಾಗಿ, ಅವನ-ಆ ಚಾರನ, ನುಡಿಗೆ-ವಚನಂಗಳಿಗೆ, ಉಚಿತಮಂಕೊಡುತ್ತ-ಸಮಂಜಸವಾದ ಪ್ರತಿವಚನಗಳನ್ನು ಹೇಳುತ್ತ, (ಬಹುಮತಿಯನಿತ್ತು) ಭಕ್ತಾವಳಿಯ-ತನ್ನ ಭಕ್ತರಾದವರ, ಬಗೆಯನು-ಅಪೇಕ್ಷೆಗಳನ್ನು, ಒಡರಿಚುವ-ಸಿದ್ಧಿಗೈಯ್ಯುವ, ಎಡೆಯೊಳು-ದಾರಿಯಲ್ಲಿ, ಮುರಾರಿ-ಮುರಹರನಿಗೆ, ತವಕಂ-ಅಭಿಲಾಷೆಯು, ಎನಿತೋ-ಎಷ್ಟಿದೆಯೋ, ಮಹಾದೇವ-ಪರಮೇಶ್ವರನೇ! ತ್ರೈಭುವನದೊಳು-ತ್ರಿಲೋಕಗಳಲ್ಲಿಯೂ ತಾನೇ-ನಾನೆ, ಕೃತಾರ್ಥನು- ಇಷ್ಟಸಿದ್ಧಿಪಡೆದವನು (ಕೃತಕೃತ್ಯ) ಅಲ್ಲವೆ? ಇಂದು-ಈ ಹೊತ್ತು, ಕೌತುಕವನು-ಅಚ್ಚರಿಯನ್ನು, ಕಂಡೆ-ನೋಡಿದೆನು, ಎನುತ-ಎಂಬದಾಗಿ ಹೇಳುತ್ತ, ಅರಸನು-ಯುಧಿಷ್ಠಿರನು, ಅರಮನೆಯಿಂದ-ರಾಜಭವನದಿಂದ, ಪೊರಮಟ್ಟು-ಹೊರಹೊರಟು, ನಡೆತಂದನು-ಐತಂದನು ‖೪೬‖

ಟೀ‖ ಮಿತ್ರೋದಯಾತ್ರಂದೊಳು - ಸೂರ್ಯೋದಯಾನಂತರ, ಐತಂದು ಬಂದು, ಹಯಮೇಧಸತ್ರದ-ಅಶ್ವಮೇಧವೆಂಬ ಕ್ರತುವಿನ ಸಾಧನಕೆ-ಈಡೇರುವಿಕೆಗೆ, ವೇದವ್ಯಾಸಮುನಿ-ವ್ಯಾಸಮಹರ್ಷಿಯು, ಧರ್ಮಪುತ್ರನಂ-ಧರ್ಮನಂದನನನ್ನು ಕುರಿತು, ಬೋಧಿಸಿ-ಅರುಹಿ, ಮರಳ್ದನು-ಹಿಂತಿರುಗಿ ಹೊರಟು ಹೋದನು, ಆರಾತ್ರಿಯೋಳ್-ಅದೇನಿಶಿಯಲ್ಲಿಯೇ, ಪತ್ರೀಂದ್ರ

---

ತಾನೆ ಮನಸ್ಸಿನಲ್ಲಿ ಅಯ್ಯೋ ಕಮಲಾಕ್ಷನಾದ ಕೃಷ್ಣನು ಇಲ್ಲದಿದ್ದರೆ ಈ ಯಾಗವು ನೆರವೇರುವುದು ದುಸ್ತರವಾದ್ದರಿಂದ ಈಗಲೆ ಫಲ್ಗುಣನನ್ನು ಕರೆದು ಕೃಷ್ಣಮೂರ್ತಿಯನ್ನು ಕರೆತರ ಹೇಳಬೇಕೆಂದು ಯೋಚಿಸುತ್ತಿರುವ ಸಮಯಕ್ಕೆ ಸರಿಯಾಗಿ ಓರ್ವ ದೂತನು ಯುಧಿಷ್ಠಿರನ ಬಳಿಗೆ ಬಂದು ‖೪೫‖ ಯದುವಂಶದ ಚರಿತ್ರೆಯನ್ನು ಸ್ತುತಿಸುತ್ತಾ ಶ್ರೀ ಕೃಷ್ಣಮೂರ್ತಿಯ ಬರುವಿಕೆಯನ್ನು ಹೇಳ ತೊಡಗಿದ ಪರಿಯೆಂತೆಂದರೆ—

—ಶ್ರೀ ಕೃಷ್ಣಮೂರ್ತಿಯ ವಂಶಾವಳಿ—

ಪೂರ್ವದಲ್ಲಿ ಮಹಾವಿಷ್ಣುವಿನ ವಕ್ಷಸ್ಥಲದಡಿಯ ನಾಭಿಕಮಲದಲ್ಲಿ ಬ್ರಹ್ಮನು ಹುಟ್ಟಿ ಕಮಲಾಸನನೆಂಬ ಹೆಸರು ಪಡೆದನು. ಆ ಕಮಲಾಸನನ ಮೂಲಕ ಅತ್ರಿಯೂ, ಅತ್ರಿಯಿಂದ ಇಂದುವೂ, ಅವನಿಂದ ಬುಧನೂ, ಬುಧನಿಂದ ಪುರೂರನೂ, ಪುರೂರವನಿಂದ ಆಯುವೂ ಜನಿಸಿದರು. ಆಯುವಿನಿಂದ ದೇವೇಂದ್ರನ ಪಟ್ಟವನ್ನು ಆಕ್ರಮಿಸಿದ್ದ ನಹುಷನೂ, ಆ ನಹುಷ ಚಕ್ರವರ್ತಿಯ ದೆಸೆಯಿಂದ ಯಯಾತಿಯೂ ಹುಟ್ಟಿದರು. ಆ ಯಯಾತಿಗೆ ಇಬ್ಬರು ಹೆಂಡತಿಯರಾದರು. ಅವರಲ್ಲಿ ಒಬ್ಬಳು

ಕೈದೆಪಾಂಡವಧ | ರಿತ್ರೀರಮಣರಿದಿರ್ಗೊಂಡರುಗ್ಗಡಣೆಯುವಿ | ಚಿತ್ರಪಾಠಕರವಾದ್ಯಧ್ವನಿಯಸಾಲಕೈದೀವಿಗೆಯಸಂಭ್ರಮ ದೊಳು ||೪೭|| ಮಿರುಪಮಣಿಮಕುಟದೋರಣಿಸಿದಳಕಾವಳಿಯ | ಪೆರೆನೊಸಲಕತ್ತುರಿಯಲಲಿತತರಭ್ರೂಲತೆಯ | ತುರುಗೆ ವೆಯನಿಟ್ಟೆಸಳುಗಂಗಳಸುನಾಸಿಕದಪೊಳೆವಲ್ಲನಸುದೋರುವ || ಕಿರುನಗೆಯಕದಪುಗಳ ಕುಂಡಲದಚೆಲ್ವಿನಿಂ | ಮೆರೆವಸದ್ವದನ ನಂಮೋಹನದಸದನನಂ | ನೆರೆಸೊಬಗುನುದನನಂಪಡೆದನಿಜರೂಪನಂಕಂಡನವನೀಪಾಲನು || ೪೮ || ಭೂರಮಣಕೇಳ್ಮುರ ಧ್ವಂಸಿನರಲೀಲಾನ | ತಾರಮಂತಾಳ್ದುಹೊಂದೇರನಿಳಿದೈತಂದು | ಚಾರುಹಾಸದೊಳಾಯುಧಿಷ್ಠಿರನಕಾಲ್ಗೆರಗಲಾನೃಪಂಕೂ

---

ವಾಹನಂ-ಶ್ರೀ ಕೃಷ್ಣನು, ಐದೆ-ಬಂದು ಸೇರಲು, ಬಳಿಕ-ಆಮೇಲೆ, ಪಾಂಡವಧರಿತ್ರೀರಮಣರು - ಧರ್ಮಾದಿಗಳಾದ ಪಂಚ ಪಾಂಡವರು, ಉಗ್ಗಡಣೆಯ-ಅತ್ಯಧಿಕವಾದ, ವಿಚಿತ್ರ-ಆಶ್ಚರಿಯಂ ಬೀರುವ, ಪಾಠಕರ-ಹೊಗಳಭಟರ, ವಾದ್ಯಧ್ವನಿಯ- ಭೇರಿಯೇ ಮೊದಲಾದ ವಾದ್ಯಗಳ ರವದಿಂದ, ಸಾಲಕೈದೀವಿಗೆಯ-ಪಂಸೆಯಾಗಿ ಕೈಯಲ್ಲಿ ಹಿಡಿದಿರತಕ್ಕ ದೀಪಗಳ, ಸಂಭ್ರಮ ದೊಳು-ಆನಂದಾತಿಶಯದಿಂದ, ಇದಿರ್ಗೊಂಡರು-ಎದುರಿಗೆ ಹೋಗಿ ಸೇರಿದರು.

ಅ-ವಿ|| ಪತ್ರಿ-ಪಕ್ಷಿಗಳ, ಇಂದ್ರ-ಒಡೆಯನು, (ಗರುಡನು, ಷ-ತ) ಪತ್ರೀಂದ್ರನೇ ವಾಹನವಾಗಿ ಉಳ್ಳವನು ಯಾ ವನೋ ಅವನು (ಕೃಷ್ಣನು ಬ-ಸ) ಪಾಂಡುವಿನ ಮಕ್ಕಳು (ತ-ಪು) ಧರಿತ್ರಿಯರ ರಮಣರು (ಷ. ತ) ಪಾಂಡವರೆಂಬ ಧರಿತ್ರೀರಮಣರು (ಸಂಭಾವನಾಪೂರ್ವಪದ) ಮಿತ್ರ-ರವಿ, ಸಖ ಎಂಬೆರೆಡು ಅರ್ಥಗಳು. ಪತ್ರಿ-ಹಕ್ಕಿ, ಅಂಬು || ೪೭ ||

ಟೀ|| ಅವನೀಪಾಲನು - ಭೂಕಾಂತನಾದ ಯುಧಿಷ್ಠಿರನು, ಮಿರುಪ-ಥಳಥಳಿಸುತ್ತಿರುವ, ಮಣಿ-ರತ್ನಖಚಿತವಾದ, ಮಕುಟದ-ಶಿರೋಭೂಷಣದ (ಕಿರೀಟದ) ಓರಣಿಸಿದ - ಸಾಲಾದ, ಅಳಕಾವಳಿಯ-ತಲೆಯ ಮುಂಭಾಗದಲ್ಲಿರುವ ಕೂದಲ ಪಜ್ತಿಯ, ಪರೆ-ವಿಶಾಲವಾದ ಚಂದ್ರನಂತೆ, ನೊಸಲ-ಫಾಲದಲ್ಲಿರುವ, ಕತ್ತುರಿಯ-ಕಸ್ತೂರಿಯ, ಲಲಿತ-ಮೃದುವಾದ, ಭ್ರೂ ಲತೆಯ-ಲತೆಯಂತಿರುವ ಕಣ್ಣುಬ್ಬುಗಳನ್ನುಳ್ಳ, ತುರುಗೆವೆಯ-ಒತ್ತಾಗೂದಲಿನ ರೆಪ್ಪೆಯುಳ್ಳ, ನಿಟ್ಟೆಸಳು-ತಾವರೆದಹಾಗೆ ವಿಶಾಲ ವಾಗಿರತಕ್ಕ, ಕಂಗಳ-ನೇತ್ರಗಳುಳ್ಳ, ಸುನಾಸಿಕದ-ಲಕ್ಷಣಯುಕ್ತವಾದ ಮೂಗುಳ್ಳ, ಪೊಳೆವಲ್ಲ-ಕಾಂತಿಯುಕ್ತವಾದ ದಂತಪಜ್ತಿ ಯನ್ನುಳ್ಳ, ನಸುದೋರುವ-ಅಲ್ಪವಾಗಿ ಕಾಣುವ, ಕಿರುನಗೆಯ-ಹುಸಿನಗೆಯುಳ್ಳ, ಕದಪುಗಳ-ಕಪೋಲಂಗಳ, ಕುಂಡಲದ ಚೆಲ್ವಿನಿಂ-ಕರ್ಣಾಭರಣದ ಕಾಂತಿಯಿಂದ, ಮೆರೆವ-ಹೊಳೆಯುತ್ತಿರುವ, ಸದ್ವದನನಂ-ಉತ್ತಮವಾದ ಮೋರೆಯನುಳ್ಳ, ಮೋಹ ನದ-ಮನ್ಮಥನ (ಮೋಹಾತಿಶಯದ), ಸದನನಂ-ನೆಲೆಯುಳ್ಳ, ಪಡೆದ-ಹೊಂದಿದ, ನಿಜ-ಸ್ವಕೀಯವಾದ, ರೂಪನಂ-ಆಕೃತಿ ಯುಳ್ಳ ಕೃಷ್ಣಸ್ವಾಮಿಯನ್ನು, ಕಂಡನು-ನೋಡಿದನು ||೪೮||

ಟೀ|| ಭೂರಮಣ-ಭೂಕಾಂತನಾದ ಜನಮೇಜಯನೇ, ಕೇಳು-ಲಾಲಿಸು, ಮುರಧ್ವಂಸಿ-ಮುರಾರಿಯ, ನರ ಲೀಲಾ-ಮನುಷ್ಯರ ವಿನೋದಗಳಂತೆಯೇ, ಅವತಾರಮಂ-ಮಾನುಷ್ಯದೇಹವನ್ನು, ತಾಳ್ದು-ಅವಲಂಭಿಸಿ, ಹೊಂದೇರಂ- ಸುವರ್ಣದ ರಥವನ್ನು, ಇಳಿದು-ಕೆಳಗಡೆಗೆಇಳಿದು, ಐತಂದು-ಸಮೀಪವನೈದಿ, ಚಾರು-ಮನೋಹ್ಲಾದಕರವಾದ, ಹಾಸದೊಳು- ಮುಗುಳ್ನಗೆಯಿಂದ, ಆ ಯುಧಿಷ್ಠಿರನ-ಆ ಧರ್ಮನಂದನನ, ಕಾಲ್ಗೆ-ಪಾದಗಳಿಗೆ, ಎರಗಲು-ನಮಸ್ಕಾರ ಮಾಡಲು, ಆ ನೃಪಂ- ಆ ಧರ್ಮನಂದನನು, ಕೂಡೆ-ಒಡನೆಯೆ, ತೊಲಗಿ-ಹೋಗಿ, ವಾರಿಜಾಂಬಕನ-ಕಮಲಾಕ್ಷನ, ಪದಪಲ್ಲವಕ-ಎಳೆಚಿಗುರನ್ನು ಹೋಲುತ್ತಿರುವ ಪಾದಗಳಿಗೆ, ಮಣಿಯುತ-ಸಾಷ್ಟಾಂಗ ಪ್ರಣಾಮನಗೈಯ್ಯುತ್ತಾ, ಇರಲು-ಇರಲಾಗಿ, ಆ ರಾಯನಂ-ಆ ಧರ್ಮ

---

ಶುಕ್ರನ ಮಗಳಾದ ದೇವಯಾನೆಯು, ಮತ್ತೊಬ್ಬಳು ಶರ್ಮಿಷ್ಠೆಯೆಂಬ ವೃಷಪರ್ವನ ಕುವರಿಯು. ಶುಕ್ರಪುತ್ರಿಯು, ಯದು ದುರ್ವಸು ಎಂಬೀರ್ವರು ಪುತ್ರರನ್ನೂ, ಮಾಧವೀ ಎಂಬ ಪುತ್ರಿಯನ್ನೂ ಪಡೆದಳು. ವೃಷಪರ್ವನ ತನುಜೆಯ ಗರ್ಭದಲ್ಲಿ ಅನು, ದೃಹ್ಯ, ಪೂರು ಎಂಬ ಮೂವರು ಕುವರರು ಜನಿಸಿದರು. ಯದು ಎಂಬ ಹೆಸರುಳ್ಳ ಯಯಾತಿಯ ಜೇಷ್ಠ ಪುತ್ರನಿಗೆ ಸಹಸ್ರಜಿತ್, ಕ್ರೋಷ್ಟು, ಅನಲ, ರಿಪು ಎಂಬ ನಾಲ್ವರು ಪುತ್ರರಾದರು, ಕ್ರೋಷ್ಟುವಿನ ಒಡಲಿನಲ್ಲಿ ವೃಜಿನವಂತನೂ, ಅವ ನಿಗೆ ಶ್ವಾಹಿಯೂ, ಆಶ್ವಾಹಿ ಎಂಬಾತನಿಗೆ ರೂಪಕನೂ, ರೂಪಕನಿಂದ ಚಿತ್ರರಥನೂ, ಚಿತ್ರರಥನಿಂದ ಶಶಿಬಿಂದುವೂ, ಉಂ ಟಾದರು. ಶಶಿಬಿಂದುವು ಒಂದು ಲಕ್ಷನುಂದಿ ಸ್ತ್ರೀಯರನ್ನು ಪರಿಗ್ರಹಿಸಿ ಅವರಿಂದ ಹತ್ತುಲಕ್ಷ ಮಕ್ಕಳನ್ನು ಪಡೆದಿದ್ದನು. ಆ ಪುತ್ರರಲ್ಲೆಲ್ಲಾ ಪೃಥುಶ್ರವಸ್ಸೆಂಬಾತನೆ ಹಿರಿಯನು. ಅವನಿಗೆ ಧರ್ಮನೆಂಬ ಕುವರನೂ, ಅವನಿಂದ ಉಶನಸ್ಸೆಂಬಾತನೂ ಜನಿಸಿದರು. ಈತನಿಗೆ ಸಿತನೆಂಬ ಬೇರೆ ಹೆಸರಿತ್ತು. ಇವನಿಂದ ರುಚಿಕನೂ, ರುಚಿಕನಿಂದ ರುಕ್ಮಕವಚ ಎಂಬುವನೂ ಆತನಿಂದ ಪರಾಜಿತ್ತುವೂ. ಪರಾಜಿತ್ತುವಿನೆ ಜ್ಯಾಮಘನೂ, ಜ್ಯಾಮಘನಿಂದ ವಿದರ್ಭನೂ, ಆತನಿಂದ ಕ್ರಥ, ಕೈಶಿಕ, ಲೋಮ ಪಾದ ಎಂಬ ಮೂವರು ಹುಟ್ಟಿದರು. ಅವರಲ್ಲಿ ಹಿರಿಯನಾದ ಕ್ರಥನು ಕುಂತಿ ಭೋಜನೆಂಬ ಮಗನನ್ನು ಪಡೆದನು. ಕುಂತಿ

ತೆತೊಲಗಿ ‖ ವಾರಿಜಾಂಬಕನಪದಪಲ್ಲವಕೆಮಣಿಯುತಿರ । ಲಾರಾಯನಂತೆಗದುತಕ್ಕೈಸಲರಸನಸು । ರಾರಿಯಂಪ್ರೇಮದಿಂ ಬಿಗಿಯಪ್ಪಿದಂಮತ್ತೆಮುನಿಜನಂಬೆರಗಾಗಲು ‖೪೯‖ ಮುರಹರಂಬಳಿಕವಂದಿಸುವಭೀಮಾದಿಭೂ । ವರಸಹೋದರರನಾಲಿಂಗಿಸುತಹರ್ಷದಿಂ । ದರಮನೆಗೆನಡೆದುಬರೆಪಾಂಚಾಲೆಸರಸಿರುಹನಯನಫಣಿರಾಜಶಯನ ‖ ಶರಣಜನದುರಿತಾಪಹರಣದೈತೇಯಸಂ । ಹರಣಗೋವರ್ಧನೋದ್ಧರಣಪೀತಾಂಬರಾ । ವರಣಕೌಸ್ತುಭಾಭರಣಸಲಹೆಂದುಹರಿಚರಣಕೆರಗಿದಳುಬಂದು ‖ ೫೦ ‖

---

ನಂದನನನ್ನು, ತೆಗೆದು-ಹತ್ತಿರಕ್ಕೆ ಸೆಳೆದುಕೊಂಡು, ತಕ್ಕೈಸಲು-(ಅಪ್ಪಿಕೊಳ್ಳಲು) ಉಪಚಾರೋಕ್ತಿಗಳನ್ನು ಹೇಳಲು, ಅರಸನು-ಯುಧಿಷ್ಠಿರನು, ಅಸುರಾರಿಯಂ-ಕೃಷ್ಣಸ್ವಾಮಿಯನ್ನು, ಪ್ರೇಮದಿಂ-ಪ್ರೀತಿಯಿಂದ, ಮುನಿಜನಂ-ಋಷಿವರ್ಗವು, ಬೆರಗಾಗಲು-ಭ್ರಾಂತರಾಗುವಂತೆ, ಮತ್ತೆ-ತೆರುಗಿ, ಬಿಗಿಯಪ್ಪಿದಂ-ಬಾಚಿ ತಬ್ಬಿಕೊಂಡನು.

ಅ-ವಿ‖ ಹೊನ್ನಿನತೇರು (ಷ. ತ) ಪದಪಲ್ಲವ (ಉ. ಉತ್ತರಪದ ಕರ್ಮಧಾರಯ), ವಾರಿಜಾಂಬಕ=ವಾರಿ-ನೀರಿನಲ್ಲಿ, ಜ-ಹುಟ್ಟಿದ್ದು (ಕಮಲ) ವಾರಿಜದಂತೆ ಅಂಬಕವುಳ್ಳವನು (ಬ. ಸ.) ‖೪೯‖

ಟೀ‖ ಮುರಹರಂ-ಕೃಷ್ಣಸ್ವಾಮಿಯು, ಬಳಿಕ-ಆಮೇಲೆ, ವಂದಿಸುವ-ನಮಸ್ಕಾರಮಾಡುತ್ತಿರುವ, ಭೀಮ-ವೃಕೋದರನೇ, ಆದಿ-ಮೊದಲಾಗಿರುವ, ಭೂವರ ಸಹೋದರರನು-ರಾಜೇಂದ್ರನಾದ ಯುಧಿಷ್ಠಿರನ ಅನುಜಾತರನ್ನೆಲ್ಲಾ, ಆಲಿಂಗಿಸುತ-ತಬ್ಬಿಕೊಳ್ಳುತ್ತ, ಹರ್ಷದಿಂ-ಆನಂದದಿಂದ, ಅರಮನೆಗೆ-ರಾಜಸದನಕ್ಕೆ, ನಡೆದುಬರೆ-ಹೊರಟುಬರಲಾಗಿ, ಪಾಂಚಾಲೆ-ದ್ರುಪದನಂದನೆಯು, ಸರಸಿರುಹ-ತಾವರೆಯದಳದಂತೆ, ನಯನ-ನೇತ್ರಗಳನ್ನುಳ್ಳ, ಫಣಿರಾಜ-ಸರ್ಪರಾಜನನ್ನೆ, ಶಯನ-ಹಾಸಿಗೆಯಾಗಿ ಉಳ್ಳ, ಶರಣಜನ-ಮರೆಹೊಕ್ಕವರ, ದುರಿತ-ದೋಷಗಳನ್ನೆಲ್ಲಾ, ಅಪಹರಣ-ಕಳೆದುಬಿಡತಕ್ಕ, ದೈತೇಯ-ಅಸುರರನ್ನು ಸಂಹರಣ-ನಾಶಮಾಡುವ, ಗೋವರ್ಧನ- ಗೋವರ್ಧನಗಿರಿಯನ್ನು, ಉದ್ಧರಣ-ಕೊಡೆಯಾಗಿಮಾಡಿಕೊಂಡ, ಪೀತಾಂಬರ-ಹಳದಿಬಣ್ಣದ ವಸ್ತ್ರವೇ, ಆವರಣ-ವಸ್ತ್ರವಾಗಿವುಳ್ಳ, ಸತ್ಕೌಸ್ತುಭ-ಕೌಸ್ತುಭವೆಂಬ ರತ್ನವೇ, ಆಭರಣ-ಭೂಷಣವಾಗಿವುಳ್ಳ, ಕೃಷ್ಣಸ್ವಾಮಿಯೇ, ಸಲಹು-ಕಾಪಾಡು, ಎಂದು-ಎಂಬದಾಗಿ, ಹರಿಚರಣಕೆ-ಶ್ರೀಕೃಷ್ಣನ ಪಾದಕಮಲಗಳ ಸಮಿಪಕ್ಕೆ, ಬಂದು-ಬಂದವಳಾಗಿ, ಎರಗಿದಳು-ಪ್ರಣಾಮವಂ ಗೈದಳು, ಆ ಗೋವರ್ಧನೋದ್ಧರಣ-ಆ ಶ್ರೀಕೃಷ್ಣನು (ಗೋಪಾಲಕನಾಗಿರುವಾಗ ಗೋವರ್ಧನಗಿರಿಯನ್ನು ಆತಪತ್ರವನ್ನಾಗಿ ಮಾಡಿಕೊಂಡಿದ್ದನೆಂದು ಹೇಳುವರು.) ಗೋ ಎಂಬ ಪದವು ಗಣೇಶ, ರವಿ, ಗಂಧರ್ವ, ಸ್ವರ್ಗಲೋಕ, ಇಂದು, ಯಾಗ, ಬ್ರಹ್ಮ, ಮೊದಲಾದ ನಾನಾರ್ಥಗಳನ್ನು ಕೊಡುವುದು. ಪಾಂಚಾಲಿ-ಪಾಂಚಾಲವೆಂಬ ದೇಶದ ದೊರೆಯ ಮಗಳು (ದ್ರೌಪದಿ) ಮುರಹರಂ-ಮುರನೆಂಬ ರಾಕ್ಷಸನನ್ನು ಕೊಂದವನು (ಕೃಷ್ಣ) ‖೫೦‖

---

ಭೋಜನಿಂದ ವೃಷ್ಣಿಯೂ, ಅವನಿಂದ ನಿರ್ವೃತಿಯೂ, ನಿರ್ವೃತಿಯಿಂದ ದಶಾರ್ಹನೂ, ಆತನಿಂದ ವ್ಯೋಮನೂ, ವ್ಯೋಮನಿಂದ ಜೀಮೂತನೂ ಅವನಿಂದ ವಿಕೃತಿಯೂ, ವಿಕೃತಿಯಿಂದ ಭೀಮರಥನೂ, ಆತನಿಗೆ ನವರಥನೂ, ನವರಥನಿಗೆ ದಶರಥನೂ, ಅವನಿಗೆ ಶಕುನಿಯೂ, ಶಕುನಿಯಿಂದ ಕರಂಭಿಯೂ, ಕರಂಭಿಯಿಂದ ದೇವರಾತನೂ ಉಂಟಾದರು. ಆ ದೇವರಾತನಿಗೆ ದೇವಕ್ಷತ್ರನೂ, ಆತನಿಗೆ ಮಧುವೂ, ಮಧುವಿನಿಂದ ಕುಕರನೂ, ಅವನಿಂದ ಅನುವೂ, ಅನುವಿನಿಂದ ಪುರುಹೂತನು, ಆತನಿಂದ ಅಂಶುವೂ, ಅಂಶುವಿನಿಂದ ಸತ್ವನೂ ಹುಟ್ಟಿದರು. ಆಸತ್ವನು ಭಜಮಾನ, ಭಜಿ, ದಿವ್ಯ, ವೃಷ್ಣಿ, ದೇವಾವೃಧ, ಅಂಧಕ, ಮಹಾಭೋಜ ಎಂಬ ಏಳುಜನ ಪುತ್ರರನ್ನು ಪಡೆದಿದ್ದನು ಜ್ಯೇಷ್ಠನಾದ ಭಜಮಾನನಿಗೆ ವಿಡೂಥನೂ, ಅವನಿಗೆ ಶೂರನೂ, ಶೂರನಿಂದ ಶಮಿಯೂ, ಆತನಿಗೆ ಪ್ರತಿಭತ್ರನೂ, ಅವನಿಂದ ಸ್ವಯಂಭೋಜನೂ, ಅವನಿಗೆ ಹೃದಿಕನೂ ಮಕ್ಕಳಾದರು. ಇವನು ದೇವಮೀಢ, ಶತಧನು, ಕೃತವರ್ಮ ಎಂಬ ಮೂವರು ಪುತ್ರರನ್ನು ಪಡೆದನು. ಮೊದಲನೆಯವನಾದ ದೇವಮೀಢನಿಗೆ ಶೂರನು ಹುಟ್ಟಿದನು. ಅವನು ಮರೀಷಾ ಎಂಬ ಭಾರ್ಯೆಯೋರ್ವಳನ್ನು ಉಂಟಾಗಿ ಆಕೆಯ ಗರ್ಭದಲ್ಲಿ ವಸುದೇವ, ದೇವಭಾಗ, ಕಂಕ, ದೇವಶ್ರವಸ್ಸು, ವೃಕ, ಆನಕ, ಸೃಂಜಯ, ಶ್ಯಾಮ, ಶಮೀಕ, ವತ್ಸ ಎಂಬ ಹತ್ತುಮಂದಿ ಕುವರರೂ ಪೃಥೆ, ಶ್ರುತಶ್ರವೆ, ಶ್ರುತದೇವಿ, ರಾಜಾದೇವಿ, ಶ್ರುತಕೀರ್ತಿಕೆ ಎಂಬೈವರು ಕುವರಿಯರನ್ನೂ ಪಡೆದನು. ವಸುದೇವನು ಆನಕದುಂದುಭಿ ಎಂಬ ನಾಮಾಂತರದಿಂದ ಕಶ್ಯಪಾಂಶವನ್ನು ತಾಳಿ ರೋಹಿಣಿ, ಮದಿರೆ, ಭದ್ರೆ, ರೋಚನೆ, ಬಡಬೆ, ಇಳೆ, ಸುತನು ಎಂಬ ಬಾಹ್ಲೀಕ ಕನ್ನಿಕೆಯರೇಳುಮಂದಿಯನ್ನೂ, ಕೋಸಲದೇಶದ ದೊರೆಯ ಕೌಸಲ್ಯಾ, ಕೌರವಿ ಎಂಬೀರ್ವರು ಕನ್ಯಕೆಯರನ್ನೂ ಕಾಶೀರಾಜನ ತನುಜೆಯಾದ ವೈಶಾಖಿ ಎಂಬ ಹೆಸರುಳ್ಳ ಕನ್ಯಾಮಣಿಯನ್ನೂ ಮತ್ತು ದೇವಕನೆಂಬಾತನ ಪುತ್ರಿಯಾದ ಶ್ರೀದೇವಿ, ಶ್ರುತದೇವಿ, ದೇವರಕ್ಷಿತೆ, ಸಹದೇವಿ, ಉಪದೇವಿ, ಶಾಂತಿದೇವಿ, ದೇವಕಿ ಎಂಬ ನಾಮಧೇಯವುಳ್ಳ ಏಳುಮಂದಿಯನ್ನೂ ಮತ್ತು ಅನೇಕರಾದ ಇತರರನ್ನೂ ವರಿಸಿದ್ದನು. ಇವನ ಪತ್ನಿಯರಲ್ಲಿ ಓರ್ವಳಿಂದ ರೋಹಿಣಿ ಎಂಬಾಕೆಯು ಬಲರಾಮ

ದ್ರುಪದತನುಜಾತೆಯಂ ಪಿಡಿದೆತ್ತಿ ಕರುಣದಿಂ | ದುಪಚರಿಸಿ ಮನೆಗೆಬೀಳ್ಕೊಟ್ಟು ಸಂದಣಿಸಿನೆರೆ | ದಪರಿಮಿತಪೌರಜನಪರಿಜನದೊಳವರವರ ತಾರತಮ್ಯಗಳನರಿದು || ಕೃಪೆಯಿಂದಕಳುಹಿ ಬೀಹವರೊಡನೆಬಳಿಕಸುರ | ರಿಪುನೃಪಗೆಕೈಗೊಟ್ಟು ನಡೆಯಲಾಸ್ಥಾನಮಂಟಪಕೆ | ಬಂದಲ್ಲಿಕುಳ್ಳಿರ್ದನುತ್ಸವಮಾದುದಂದಿನಿರುಳೋಲಗದೊಳು ||೫೧|| ಶಕ್ರನಾಸ್ಥಾನಮಂವಿವಿಧವೈಭವದಿಂದ | ತಿಕ್ರಮಿಸಿದರಸನೋಲಗಮಂನಿರೀಕ್ಷಿಸುತು | ಪಕ್ರಮಿಸುವೆಳನಗೆಯೊಳಸುರಾರಿನುಡಿದನೆಲೆನೃಪತಿಭೂಮಂಡಲದೊಳು ||

ಟೀ|| ಅಸುರರಿಪು–ರಾಕ್ಷಸಾಂತಕನಾದ ಕೃಷ್ಣಸ್ವಾಮಿಯು, ದ್ರುಪದ–ದ್ರುಪದನೆಂಬ ರಾಜನ, ತನುಜಾತೆಯಂ–ಕುವರಿಯಾದ ಪಾಂಚಾಲಿಯನ್ನು, ಪಿಡಿದು–ಹಿಡಿದುಕೊಂಡು, ಎತ್ತಿ–ಮೇಲಕ್ಕೆಬ್ಬಿಸಿ, ಕರುಣೆಯಿಂದ–ದಯೆಯಿಂದ, ಉಪಚರಿಸಿ–ಉಪಚಾರಮಾಡಿ, ಮನೆಗೆ–ರಾಣಿವಾಸಕ್ಕೆ, ಬೀಳ್ಕೊಟ್ಟು – ಕಳುಹಿಸಿಕೊಟ್ಟು, ಸಂದಣಿಸಿ – ಒತ್ತಾಗಿ, ನೆರೆದ–ಕೂಡಿದ, ಅಪರಿಮಿತ–ಅಸಂಖ್ಯಾತವಾದ, ಪೌರಜನ– ನಗರವಾಸಿಗಳ, ಪರಿಜನದೊಳು–ಅಂತೇವಾಸಿಗಳಲ್ಲಿ, (ಪರಿಚಾರಕರಲ್ಲಿ) ಅವರವರ ತಾರತಮ್ಯಗಳನರಿದು – ಅವರವರ ಯೋಗ್ಯತೆಗನುಗುಣವಾಗಿ, ಕೃಪೆಯಿಂದ – ಕರುಣದಿಂದ, ಕಳುಹಿ– ಕಳುಹಿಸಿ, ಬೀಹನರೊಡನೆ–ಆಳುಗಳೊಂದಿಗೆ, ಬಳಿಕ–ಅನಂತರ, ನೃಪಗೆ–ಯುಧಿಷ್ಠಿರನಿಗೆ, ಕೈಗೊಟ್ಟು–ಹಸ್ತವಂ ನೀಡಿ, ಆಸ್ಥಾನಮಂಟಪಕೆ–ಸಭಾಂಗಣಕ್ಕೆ, ನಡೆಯಲು–ನಡೆದು ಬರುತ್ತಾ, ಬಂದು–ಸಭಾಭವನವಂ ಸೇರಿ, ಕುಳ್ಳಿರ್ದನು–ಕೂತುಕೊಂಡಿದ್ದನು, ಅಂದಿನ–ಆ ಹೊತ್ತಿನ, ಇರುಳ–ಸಂಧ್ಯಾಕಾಲದ, ಓಲಗದೊಳು ಒಡ್ಡೋಲಗದಲ್ಲಿ, ಉತ್ಸವಂ–ಕೃಷ್ಣಸ್ವಾಮಿಯು ಬಿಜಯಂಗೈದ ಉತ್ಸವವು, ಆದುದು–ಆಗಿತ್ತು.

ಅ–ವಿ|| ದ್ರುಪದರಾಯನು ಯಾಗವನ್ನು ಮಾಡಿ ಹೋಮಕುಂಡದಲ್ಲಿ ಪಡೆದ ಪುತ್ರಿಗೆ ದ್ರೌಪದಿ ಎಂದು ಹೆಸರಾಯಿತು ||೫೧||

ಟೀ|| ಶಕ್ರನ–ದೇವೇಂದ್ರನ, ಆಸ್ಥಾನಮಂ–ಓಲಗವನ್ನು, ವಿವಿಧ–ನಾನಾ ಪ್ರಕಾರವಾದ, ವೈಭವದಿಂದ–ಸಂಪತ್ತಿನಿಂದ, ಅತಿಕ್ರಮಿಸಿದ–ಹೆಚ್ಚಿದ, ಅರಸನ–ಯುಧಿಷ್ಠಿರನ, ಓಲಗಮಂ–ಆಸ್ಥಾನವನ್ನು, ನಿರೀಕ್ಷಿಸುತ–ನೋಡುತ್ತ, ಉಪಕ್ರಮಿಸುವ– ತೋರಿಬರುವ, ಎಳನಗೆಯೊಳು – ಕಿರುನಗುವಿನಿಂದ, ಅಸುರಾರಿ – ಶ್ರೀಕೃಷ್ಣಮೂರ್ತಿಯು, ನುಡಿದನು–ಮುಂದೆ ಹೇಳುವಂತೆ ಹೇಳುತ್ತಾನೆ. ಎಲೆ ನೃಪತಿ– ಎಲೈ ಧರ್ಮಜನೆ, ಭೂಮಂಡಲದೊಳು – ಧರಾವಲಯದಲ್ಲಿ, ನಿನ್ನ ಸಿರಿಗೆ–ನಿನ್ನ ಐಶ್ವರ್ಯಕ್ಕೆ, ವಕ್ರಿಸುವರು – ಶತ್ರುಗಳು, ಇಲ್ಲ–ಇಲ್ಲವು, ರಾಜಧರ್ಮ – ರಾಜನೀತಿಗಳಿಗೂ, ಕ್ರಿಯೆಗೆ– ಕೆಲಸಕ್ಕೂ, ನಳ–ನಳ

---

ಸಾರಣ, ಉಶೀರಕ, ದುರ್ಮದ, ಶುಭ್ರ, ಪಿಂಡಾರಕ, ಶಠ, ಮದನ ಎಂಬ ಎಂಟು ಮಂದಿ ಕುವರರನ್ನೂ, ಸುಭದ್ರೆಯೆಂಬ ಕುವರಿಯನ್ನೂ ಪಡೆದಳು. ಈ ಸುಭದ್ರೆಯನ್ನು ಚಿತ್ರೆಯೆಂದೂ ಕರೆಯುತ್ತಿದ್ದರು. ಈಕೆಯನ್ನೇ ಅರ್ಜುನನಿಗೆ ಕೊಟ್ಟು ಮದುವೆ ಮಾಡಿದ್ದರು. ದೇವಕಿಯ ಗರ್ಭವನ್ನು ಯೋಗಮಾಯಾಶಕ್ತಿಯಿಂದ ಆಕರ್ಷಿಸಿ ರೋಹಿಣಿಯ ಹೊಟ್ಟೆಯಲ್ಲಿಟ್ಟದ್ದರಿಂದ ಅಲ್ಲಿ ಹುಟ್ಟಿದ ಶಿಶುವನ್ನು ಸಂಕರ್ಷಣನೆಂದೂ ಬಲರಾಮನೆಂದೂ ಕರೆಯುತ್ತಾರೆ. ಇವನು ಆದಿಶೇಷಾಂಶೆಯಿಂದ ಕೂಡಿದ್ದಾನೆ. ದೇವಕಿಯ ಗರ್ಭದಲ್ಲಿಯಾದರೊ ಶ್ರೀಮನ್ನಾರಾಯಣಮೂರ್ತಿಯು ದುಷ್ಟ ಶಿಕ್ಷಣ ಶಿಷ್ಟ ಪರಿಪಾಲನಾರ್ಥವಾಗಿ ಒಂದು ಕೈಯಲ್ಲಿ ಶಂಖವೂ, ಇನ್ನೊಂದು ಕೈಯಲ್ಲಿ ಚಕ್ರವೂ, ಮತ್ತೊಂದು ಕೈಯಲ್ಲಿ ಗದೆಯೂ, ಬೇರೊಂದು ಹಸ್ತದಲ್ಲಿ ಕಮಲವೂ ಉಳ್ಳವನಾಗಿ ಮೂರನೆಯ ಯುಗವಾದ ದ್ವಾಪರ ಯುಗದಲ್ಲಿ ವಿಶ್ವಾವಸುವೆಂಬ ವರ್ಷದ ಶ್ರಾವಣ ಬಹುಳ ಅಷ್ಟಮೀ ಸೌಮ್ಯವಾಸರದಲ್ಲಿ ರೋಹಿಣಿ ನಕ್ಷತ್ರ ಯುಕ್ತವಾದ ನಿಶಿಯಲ್ಲಿ ಚಂದ್ರನು ಹುಟ್ಟುವುದಕ್ಕೆ ಪ್ರಾರಂಭವಾಗುವ ಕಾಲಕ್ಕೆ ಸರಿಯಾಗಿ ವೃಷಭಲಗ್ನದಲ್ಲಿ, ಅಂಗಾರಕನು ಮಕರರಾಶಿಯಲ್ಲಿರುವಾಗ, ಮತ್ತು ಬುಧನು ಕನ್ಯಾರಾಶಿಯಲ್ಲೂ, ಗುರುವು ಮೀನರಾಶಿಯಲ್ಲೂ, ಶುಕ್ರ, ಶನಿ, ರಾಹು, ಕೇತು, ಸೂರ್ಯ ಇವರು ಕ್ರಮವಾಗಿ ತುಲ, ವೃಶ್ಚಿಕ, ವೃಷಭ, ಸಿಂಹರಾಶಿಗಳಲ್ಲಿಯೂ ಇರುವಾಗ ಶ್ರೀಕೃಷ್ಣನೆಂಬ ನಾಮಧೇಯದಿಂದ ಅವತಾರಮಾಡಿದನು. ಇದು ವಸುದೇವನಿಗೆ ತಿಳಿಯಿತು. ಕೃಷ್ಣಸ್ವಾಮಿಯ ಆಜ್ಞೆಯನ್ನನುಸರಿಸಿ ಆ ಕೂಸನ್ನು ಕರೆದುಕೊಂಡು ಹೋಗಿ ನಂದಗೋಕುಲದಲ್ಲಿ ನಂದನೆಂಬುವವನ ಭಾರ್ಯೆಯಾದ ಯಶೋದೆಯ ಬಳಿಯಲ್ಲಿಟ್ಟು ಆಕೆಗೆ ಆಗತಾನೆ ಜನಿಸಿದ್ದ ಸ್ತ್ರೀ ಶಿಶುವನ್ನು ತೆಗೆದುಕೊಂಡು ಹೋಗಿ ದೇವಕಿಗೆ ಬಹು ಗೋಪ್ಯವಾಗಿ ಕೊಟ್ಟನು. ಆ ಗೋಕುಲದಲ್ಲಿದ್ದ ನಂದನೆಂಬುವವನು ಮೊದಲು ದ್ರೋಣನೆಂಬ ನಾಮಧೇಯದಿಂದಿದ್ದವನೂ ಯಶೋದೆಯೇ ಧರೆ ಎಂಬ ಹೆಸರಿನಿಂದಿದ್ದವಳೂ ಆಗಿದ್ದರು. ದೇವಕಿಯ ಬಳಿ ತಂದಿಟ್ಟದ್ದ ಸ್ತ್ರೀ ಶಿಶುವು ಯೋಗಮಾಯೆಯಿಂದ ಜನಿಸಿತ್ತು. ದೇವಕಿಯು ಸಂತಾನವನ್ನು ಪಡೆದಿದಾಳೆಂಬ ಸುದ್ದಿಯು ಕಂಸನಿಗೆ ತಿಳಿದ ಕೂಡಲೆ ಬಹು ಬೇಗನೆ ಬಂದು ಆ ಕೂಸನ್ನೆತ್ತಿಕೊಂಡು ಅದರ ಕೈ ಕಾಲುಗಳನ್ನೆಲ್ಲಾ ಕಟ್ಟಿ ಬಂಡೆಯಮೇಲೆ

ವಕ್ರಿಸುವರಿಲ್ಲನಿನ್ನೀಸಿರಿಗೆರಾಜಧ | ರ್ಮಕ್ರಿಯೆಗೆನಳಪುರೂರವಹರಿಶ್ಚಂದ್ರಾದಿ | ಚಕ್ರವರ್ತಿಗಳೈದೆಸೋಲ್ವನಿತರೊಳಿನ್ನು ಕೃತಕೃತ್ಯರಾವೆಂದನು ||೫೨|| ಎನಲಹುದುಬಳಿಕೇನುನಿಮ್ಮಡಿಯಸೇವಕರ | ಘನತೆಯೊಳುಕೃತಕೃತ್ಯರಹೆವಲಾನಾವಿದರೊ | ಳನುಮಾನವೇಪಾಂಡವಸ್ಥಾಪನಾಚಾರ್ಯನೆಂದುಧರೆಯುಳ್ಳನ್ನೆಗಂ || ಜನಮಾಡದಿರ್ದಪುದೆಸಾಕದಂತಿರಲಿಮುಂ | ದೆನಗೆಮಾಡುವರಾಜಕಾರ್ಯಮಂಬೆಸವೇಳ್ವ | ದೆನುತಭೀಮನಕಡೆಗೆಮೊಗದಿರುಹಿದರಸಂಗೆನಳಿನಾಕ್ಷನಿಂತೆಂದನು || ೫೩ || ದಾಯಾದರಿಲ್ಲ ಮಾರ್ಮಲೆವಪರಮಂಡಲದ | ನಾಯಕರಸುಳುವಿಲ್ಲನಿನ್ನಾಳ್ಕೆಗೆಲ್ಲಿಯು | ಮಪಾಯಮವನಿಯೊಳಿಲ್ಲಮಿನ್ನುದಿಗ್ವಿಜಯಮಿಲ್ಲವ

---

ನೆಂಬ ರಾಜೇಂದ್ರನೂ, ಪುರೂರವ-ಪುರೂರವನೆಂಬ ಚಕ್ರವರ್ತಿಯೂ, ಹರಿಶ್ಚಂದ್ರ-ಹರಿಶ್ಚಂದ್ರನೆಂಬ ನರಾಧಿಪನೂ, ಆದಿಮುಂತಾದ, ಚಕ್ರವರ್ತಿಗಳು-ಪೃಥ್ವೀಶ್ವರರೂ ಕೂಡ, ಐದೆ-ಚೆನ್ನಾಗಿ, ಸೋಲ್ವರು-ಪರಾಜಯವನ್ನು ಹೊಂದುತ್ತಾರೆ. ಇನಿತರೊಳು-ಇಷ್ಟರಲ್ಲಿ, ಇನ್ನು-ಇನ್ನು ಮುಂದೆ, ಆವು-ನಾವು, ಕೃತಕೃತ್ಯರು-ಕೃತಾರ್ಥರು, ಎಂದನು-ಎಂಬದಾಗಿ ನುಡಿದನು ||೫೨||

ಟೀ|| ಎನಲು-ಹೀಗೆಂದು ಅರುಪಲು, ಅಹುದು- ಸತ್ಯವು, ಬಳಿಕ-ಆಮೇಲೆ, ಏನು - ಮಿಕ್ಕದ್ದೇನಿದೆ ? ಎಂದರೆ ಏನೂ ಮಿಕ್ಕಿಲ್ಲವು, ನಿಮ್ಮ-ನಿಮ್ಮಗಳ, ಅಡಿಯ-ಚರಣಗಳ, ಸೇವಕರ-ಪರಿಚಾರಕರೆಂಬ, ಘನತೆಯೊಳು-ದೊಡ್ಡಸ್ತಿಕೆಯಲ್ಲಿ, ನಾವು-ನಾವುಗಳು, ಕೃತಕೃತ್ಯರು-ಧನ್ಯರು, ಅಹೆವಲಾ-ಆದೆವಲ್ಲವೇ, ಇದರೊಳ್-ಈ ನುಡಿಯಲ್ಲಿ, ಅನುಮಾನವೇ-ಶಂಕೆಯೇ? ಧರೆ-ಪ್ರಪಂಚವು, ಉಳ್ಳನ್ನೆಗಂ-ಇರುವತನಕ, ಪಾಂಡವ-ಪಾಂಡುಪುತ್ರರನ್ನು, ಸ್ಥಾಪನ-ರಾಜ್ಯಾಭಿಷೇಕ ಮಾಡುವುದರಲ್ಲಿ, ಆಚಾರ್ಯನೆಂದು - ಗೊತ್ತುಗಾರನೆಂದು, ಜನಂ-ಲೋಕವು, ಆಡದಿರ್ಪುದೆ-ನುಡಿಯದಿರುವುದೆ, ಸಾಕು-ಇನ್ನು ಸಾಕು, ಅ ಮಾತು-ಆ ನುಡಿಯು, ಅಂತಿರಲಿ-ಹಾಗಿರಲಿ, ಮುಂದೆ-ಇನ್ನು ಮೇಲೆ, ಮಾಡುವ-ಮಾಡಬೇಕಾದ, ರಾಜಕಾರ್ಯಮಂ-ರಾಜ್ಯಭಾರದ ಕೆಲಸಗಳನ್ನು, ಎನಗೆ-ನನಗೆ, ಬೆಸವೇಳ್ವುದು-ಆಜ್ಞೆಯನ್ನೀಯಬೇಕು, ಎನುತ-ಎಂದು ನುಡಿಯುತ್ತ, ಭೀಮನಕಡೆಗೆ-ಭೀಮನು ಇರುವ ಕಡೆ, ಮೊಗದಿರುಹಿದ-ಮುಖವನ್ನು ಮಾಡಿದಂಥ, ಅರಸಂಗೆ-ಯುಧಿಷ್ಠಿರನಿಗೆ, ನಳಿನಾಕ್ಷನು-ಶ್ರೀ ಕೃಷ್ಣನು, ಇಂತು-ಮುಂದೆ ಹೇಳುವಂತೆ, ಎಂದನು-ಉತ್ತರವಿತ್ತನು ||೫೩||

ಟೀ|| ಮುರಧ್ವಂಸಿ-ಮುರಾಂತಕನು, ನಗುತ-ಮುಗುಳ್ನಗೆಯಿಂದ ಕೂಡಿ, ರಾಯ-ಎಲೈ ಯುಧಿಷ್ಠಿರನೆ! ದಾಯಾದರು-ನಿನ್ನ ಗೋತ್ರಜರು (ಜ್ಞಾತಿವರ್ಗದವರು), ಇಲ್ಲ-ಇಲ್ಲವು, ಮಾರ್ಮಲೆವ-ಎದುರಿಗೆ ನಿಲ್ಲತಕ್ಕ, ಪರಮಂಡಲದ-ವೈರಿಸಮೂಹದ, ನಾಯಕರ-ಅರಸುಗಳ, ಸುಳಿವು - ಬರುವಿಕೆಯು, ಇಲ್ಲ-ಇರುವುದಿಲ್ಲ, ಅವನಿಯೊಳು-ಪ್ರಪಂಚದಲ್ಲಿ, ನಿನ್ನ-ನಿನ್ನಯ, ಆಳ್ಕೆಗೆ-ರಾಜ್ಯಭಾರಕ್ಕೆ, ಎಲ್ಲಿಯುಂ - ಎಲ್ಲಾ ಭಾಗದಲ್ಲೂ, ಅಪಾಯಂ - ಉಪದ್ರವವು, ಇಲ್ಲ- ಆಗಲಾರದು, ಇನ್ನು-ಇನ್ನು ಮುಂದೆ, ದಿಗ್ವಿಜಯಮುಂ - ಜೈತ್ರಯಾತ್ರೆಗೆ ಹೊರಡತಕ್ಕದ್ದೂ, ಇಲ್ಲ-ಇಲ್ಲವು, ಅವಸರದ-ಆತುರವಾದ, ಬ್ಯಾಂಟೆ-ಬೇಟೆ

---

ಬಗೆಯುತ್ತಿರುವಾಗ ಆ ಶಿಶುವು ಅವನ ಕೈಯಿಂದ ಜಾರಿ ತಪ್ಪಿಸಿಕೊಂಡು ಹೋಗಿ ದೊಡ್ಡ ಹೆಂಗಸಿನ ಆಕೃತಿಯಾಗಿ ಎಂಟು ಕೈಗಳನ್ನೂ ಪ್ರತಿಯೊಂದು ಹಸ್ತದಲ್ಲಿಯೂ ಕ್ರಮವಾಗಿ ಶಂಖ, ಚಕ್ರ, ಗದಾ, ಚರ್ಮ, ಶೂಲ, ಶಕ್ತಿ, ಕತ್ತಿ, ಧನುಸ್ಸು, ಪದ್ಮಗಳಂ ಧರಿಸಿ! ದೇವತೆಗಳೆಲ್ಲಾ ಹೊಗಳುತ್ತಿರಲಾಗಿ ಆಗ ಕಂಸನನ್ನು ಕುರಿತು ಎಲೈ ಅವಿವೇಕಿಯೆ? ನನ್ನನ್ನು ಕೊಲ್ಲಲು ಏತಕ್ಕೆ ಎಳಸುವೆ? ನಿನ್ನನ್ನು ಧ್ವಂಸಮಾಡತಕ್ಕ ಶಿಶುವೊಂದು ನಂದಗೋಕುಲದಲ್ಲಿ ಹುಟ್ಟಿದೆ ಎಂದು ನುಡಿದ ದುರ್ಗಾದೇವಿ ಎಂಬ ನಾಮಧೇಯವುಳ್ಳ ಆ ಸ್ತ್ರೀಯ ಮಾತನ್ನು ಕೇಳಿ ಕೂಡಲೆ ಹಿಂದಿರುಗಿ ತನ್ನ ಅಮಾತ್ಯರೊಂದಿಗೆ ಮುಂದೇನು ಮಾಡೋಣವೆಂದು ಆಲೋಚಿಸಿದನು. ಅವರು ನಂದಗೋಕುಲದಲ್ಲಿರುವ ಶಿಶುಗಳನ್ನೆಲ್ಲಾ ಕೊಲ್ಲಿಸೆಂದು ಸಲಹೆಯನ್ನಿತ್ತರು. ಅದರಂತೆಯೇ ಇವನು ಪೂತನಿ ಎಂಬ ಮಾಯಾರೂಪದ ನಾರಿಯನ್ನು ಕಳುಹಿಸಿದನು. ಇವಳು ಹೋಗಿ ಗೋಕುಲದಲ್ಲಿದ್ದ ಕೃಷ್ಣಸ್ವಾಮಿಗೆ ವಿಷದ ಸ್ತನ್ಯಗಳನ್ನು ಕೊಡಲುದ್ಯುಕ್ತಳಾದಳು ಸ್ತನ್ಯಪಾನಮಾಡುವ ನೆವದಲ್ಲಿ ಅವಳ ಪ್ರಾಣಗಳನ್ನು ಪಾನಮಾಡಿದ್ದರಿಂದ ಕಂಸನು ಶಕಟಾಸುರನೆಂಬ ಬಂಡಿಯರೂಪದ ರಾಕ್ಷಸನನ್ನೂ, ಧೇನುಕಾಸುರನನ್ನೂ ಕಳುಹಿಸಿದನು. ಅವರೂ ಹತರಾದರು, ಅನಂತರ ಕಂಸನೇ ಯತ್ನಿಸಿದನು. ಆಗ ಕೃಷ್ಣಸ್ವಾಮಿಯು ಇವನನ್ನು ಛೇದಿಸಿದನು. ಅನಂತರ ನರಕಾಸುರನನ್ನು ವಧಿಸಿದನು. ಮತ್ತು ಭೀಮನು ಜರಾಸಂಧನನ್ನೂ, ಸುಯೋಧನಾದ್ಯರನ್ನೂ ಸಂಹಾರಮಾಡಲು ಸಹಾಯಮಾಡಿದನು. ಶಿಶುಪಾಲನೆಂಬುವವನೂ ಕೊಲ್ಲಲ್ಪಟ್ಟನು. ಅನಂತರ ಇವನ ತಂದೆಯು ಇವನಿಗೆ ಉಪನಯನ ಸಂಸ್ಕಾರವನ್ನು ಮಾಡಿ ಸಾಂದೀಪನ ರುಷಿಯಲ್ಲಿ ವಿದ್ಯಾಭ್ಯಾಸಕ್ಕಾಗಿ ಬಿಟ್ಟನು. ಅಲ್ಲಿ ಸಕಲ ವಿದ್ಯಾಪಾರಂಗತನಾದನು. ಅನಂತರ ಗೋವರ್ಧನಗಿರಿಯನ್ನು ಕೊಡೆಯನ್ನಾಗಿ ಮಾಡಿಕೊಂಡಿದ್ದನು. ದೇವೇಂದ್ರನೆ ಇವನಿಗೆ ಪಟ್ಟಗಟ್ಟಿದನು. ತರುವಾಯ ವಿದರ್ಭದೇಶದ ದೊರೆಯ ಹೊಟ್ಟೆಯಲ್ಲಿ ಹುಟ್ಟಿದ್ದ ರುಕ್ಮಿಣಿಯನ್ನು ವರಿಸಿದನು. ಇವಳೇ ಲೋಕಮಾತೆಯಾದ ಮಹಾಲಕ್ಷ್ಮಿಯು. ಬಳಿಕ ಸತ್ಯಭಾಮೆಯೆಂಬ ಭೂದೇವಿ

ಸರದಬೇಂಟೆಯಿಲ್ಲ || ವಾಯುನಂದನಧನಂಜಯರೊಳೆರಪಿಲ್ಲಮಾ | ದ್ರೇಯರೊಳ್ತಪ್ಪಿಲ್ಲಚತುರಂಗಕೆಡರಿಲ್ಲ | ರಾಯನಿನಗೇ
ನುಮಾಡುವರಾಜಕಾರ್ಯಮೆಂದಂ ಮುರಧ್ವಂಸಿನಗುತ || ೫೪ || ಈಚರಾಚರವಿಚಾರವ್ಯಾಪ್ತಿನಿಮ್ಮಡಿಗ | ಗೋಚರವೆಶಿವಶಿವಾ
ಸಾಕಿದೇತಕೆಬರಿದೆ | ವಾಚಿಸುವಿರಿಂದುವೇದವ್ಯಾಸಮುನಿವರಂಬಂದುಕಾರುಣ್ಯದಿಂದ || ಆಚಾರವಿದುಭರತಕುಲದವರ್ಗೆ
ನುತಕಾ | ಲೋಚಿತವನರಿತುಹಯಮೇಧವಿಧಿಯಂತನಗೆ | ಸೂಚಿಸೆಪ್ರತಿಜ್ಞೆಗೈದಂಭೀಮನದಕಶ್ವಮಂತಂದುಕೊಡುವೆ

---

ಯು, ಇಲ್ಲ-ಇಲ್ಲವು, ವಾಯುತನಯನ-ಅನಿಲಜನಾದ ವೃಕೋದರ, ಧನಂಜಯರೊಳು - ಫಲ್ಗುಣರಲ್ಲಿ, ಎರಡು - ಆಗಲುವ ಭಾವವು, ಇಲ್ಲ-ಆಗಿಲ್ಲ, ಮಾದ್ರೇಯರೊಳು-ನಕುಲಸಹದೇವರೆಂಬ ಮಾದ್ರಿಯ ಕುವರರಲ್ಲಿಯೂ, (ನಕುಲಸಹದೇವರಲ್ಲಿಯೂ) ತಪ್ಪು-ದೋಷವು, ಇಲ್ಲ-ಇಲ್ಲವು, ಚತುರಂಗಕ್ಕೆ-ನಾಲ್ಕುಬಗೆಯಾದ ಆನೆ, ಕುದುರೆ, ತೇರು, ಕಾಲಾಳುಗಳಿಗೆ, ಎಡರು-ಯಾವ ಬಾಧಕವೂ, ಇಲ್ಲ-ಪ್ರಾಪ್ತವಾಗಲಿಲ್ಲವು. ನಿನಗೆ-ಯಾವ ಈತಿಬಾಧೆಗೂ ಸಿಕ್ಕಿಲ್ಲದ ನಿನಿಗೆ, ರಾಜಕಾರ್ಯಂ - ರಾಜಕೃತ್ಯವು, ಮಾಡುವುದು-ನೆರವೇರಿಸಬೇಕಾದದ್ದು, ಏನು-ಏನಿದೆ? ಎಂದು-ಹೀಗೆಂಬದಾಗಿ, ಎಂದಂ-ನುಡಿದನು ||೫೪||

ಟೀ|| ಈಚರಾಚರ - ಚರಿಸುವ ಮತ್ತು ಚಲಿಸದಿರುವ ಮುಂದೆ ತೋರಿ ಬರತಕ್ಕ ವಸ್ತುಗಳ, ವ್ಯಾಪ್ತಿ - ಆವರಿಸಿರುವ ಬಗೆಯು, ನಿಮ್ಮ-ಸ್ವಾಮಿಯಾದ ನಿಮ್ಮ, ಅಡಿಗೆ - ಚರಣಂಗಳಿಗೆ, ಅಗೋಚರವೆ - ಅರಿಯದೆ? ಶಿವಶಿವ - ಹರಹರ, ಸಾಕು-ಆ ಮಾತು ಬೇಡ, ಬರಿದೆ-ವ್ಯರ್ಥವಾಗಿ, ಅದೇತಕೆ-ಯಾವ ಪ್ರಯೋಜನಕ್ಕಾಗಿ, ನಾಚಿಸುವಿರಿ-ಲಜ್ಜೆಪಡಿಸುತ್ತೀರಿ ?, ವೇದವ್ಯಾಸಮುನಿವರಂ-ಋಷಿವರ್ಯನಾದ ಬಾದರಾಯಣನು, ಇಂದು-ಈಹೊತ್ತು, ಬಂದು-ಇಲ್ಲಿ ಬಿಜಯಮಾಡಿ, ಕಾರುಣ್ಯದಿಂದ, ದಯೆಯಿಂದಕೂಡಿ, ಭರತಕುಲದವರ್ಗೆ-ಭರತಮಹಾರಾಯನ ಸಂತತಿಯಲ್ಲಿ ಉತ್ಪನ್ನರಾದ ನರೇಶ್ವರರಿಗೆ, ಇದು-ಈ ಅಶ್ವಮೇಧಯಾಗದ ಕಾರ್ಯವು, ಆಚಾರಂ-ಪದ್ಧತಿಯಾಗಿದೆ, ಎನುತ-ಎಂದು ನುಡಿಯುತ್ತ, ಕಾಲೋಚಿತವನು-ಸಮಯಕ್ಕೆ ತಕ್ಕದ್ದನ್ನು, ಅರಿತು-ತಿಳಿದವನಾಗಿ, ಹಯಮೇಧವಿಧಿಯಂ-ಅಶ್ವಮೇಧಯಾಗವನ್ನು ಮಾಡಬೇಕಾದ ರೀತಿಯನ್ನು, ತನಿಗೆ-ನನಿಗೆ, ಸೂಚಿಸೆ-ಹೇಳಲು, ಅದಕೆ-ಆ ಯಾಗಕ್ಕೆ, ಅಶ್ವಮಂ-ಹಯವನ್ನು, ತಂದುಕೊಡುವೆನು-ತಂದೊಪ್ಪಿಸುತ್ತೇನೆ, ಎಂದು-ಹೀಗೆಂದು, ಭೀಮಂ-ವೃಕೋದರನು, ಪ್ರತಿಜ್ಞೆಗೈದಂ-ಶಪಥವನ್ನು ಮಾಡಿದ್ದಾನೆ.

ಶ್ರೀಕೃಷ್ಣನು ಸರ್ವಾಂತರ್ಯಾಮಿಯಾದ್ದರಿಂದ ಚರಾಚರವ್ಯಾಪ್ತಿಯುಳ್ಳನಿನಗೆ ಅಗೋಚರವೆ? ಎಂದು ಕೇಳಿರುವನು||೫೫||

---

ಯ ಅವತಾರದ ಸತ್ರಾಜಿತನ ಪುತ್ರಿಯನ್ನು ಸ್ಯಮಂತಕಮಣಿಯನ್ನು ಹುಡುಕಿ ಕೊಟ್ಟು ಮದುವೆಯಾದನು. ಇನ್ನೂ ಜಾಂಬವತಿ, ಕಾಳಿಂದಿ, ಭದ್ರೆ, ಮಿತ್ರವಿಂದೆ ಮೊದಲಾದ ಕನ್ಯಕೆಯರನ್ನು ಮದುವೆಯಾದ್ದಲ್ಲದೆ, ಪಾರಿಜಾತಾಪಹರಣಕ್ಕಾಗಿ ಹೋಗಿ ಮುರಾಸುರನನ್ನೂ ನರಕಾಸುರನನ್ನೂ ವಧಿಸಿ ನರಕನ ಬಂಧನವಲ್ಲಿದ್ದ ಹದಿನಾರು ಸಹಸ್ರದ ಒಂದು ನೂರಜನ ಸ್ತ್ರೀಯರನ್ನೂ ಬಿಡುಗಡೆ ಮಾಡಿ ಎಲ್ಲರನ್ನೂ ತನ್ನ ರಾಣಿಯರನ್ನಾಗಿ ಮಾಡಿಕೊಂಡು ಎಲ್ಲರ ಮನೆಯಲ್ಲಿಯೂ ಅನೇಕಪ್ರಕಾರಮಾದ ರೂಪಗಳಿಂ ವಿಹರಿಸುತ್ತಿದ್ದನು. ಇವನಿಗೆ ಈ ರಾಣಿಯರಲ್ಲೆಲ್ಲಾ ರುಕ್ಮಿಣಿಯೇ ಮುಖ್ಯಳಾದ ಪಟ್ಟದರಸಿಯು. ಈಕೆಯು ಪ್ರದ್ಯುಮ್ನ, ಚಾರುಬಾಹು, ಚಾರುಚಂದ್ರ, ಚಾರುದೇಹ, ಸುಚಾರ, ಚಾರುಗುಪ್ತ, ಭದ್ರಚಾರ, ವಿಚಾರು, ಸುಧೇಷ್ಣಳ, ಚಾರುದೇವ ಎಂಬ ಹತ್ತುಮಂದಿ ಪುರುಷ ಶಿಶುಗಳನ್ನೂ ಚಾರುಮತಿ ಎಂಬೋರ್ವ ಸ್ತ್ರೀ ಶಿಶುವನ್ನೂ ಹೆತ್ತಳು. ಘನರೂಪಳಾದ ಸತ್ಯಭಾಮೆಗೆ ಭಾನು, ಸ್ವಭಾನು, ಸ್ವರ್ಭಾನು, ಪ್ರಭಾನು, ಭಾನುಮಂತ ಅತಿಭಾನು, ಚಂದ್ರಭಾನು, ಶ್ರೀ ಭಾನು, ಬೃಹದ್ಭಾನು ಎಂಬ ಹತ್ತುಜನ ಗಂಡುಮಕ್ಕಳೂ ಭಾನುಮುದ್ರಿಕೆ ಎಂಬ ಹೆಣ್ಣು ಮಗುವೂ ಹುಟ್ಟಿದರು. ಕಾಳಿಂದಿ ಎಂಬಾಕೆಯು ಕೃಷ, ಕವಿ, ವೃಷ, ವೀರ, ಭದ್ರ, ಶಾಂತಿ, ಸೋಮಕ, ಸುಬಾಹು, ಪೂರ್ಣಮಾಸ, ದರ್ಶ ಎಂಬ ಹತ್ತುಮಂದಿ ಪುತ್ರರನ್ನೂ, ಗಾತ್ರೆ ಎಂಬೋರ್ವ ಪುತ್ರಿಯನ್ನೂ ಪಡೆದಳು. ಮಿತ್ರವಿಂದೆಗೆ ಪವನ, ಕೃಕ, ನಾರ, ಗೃಧ್ರ, ಅಂಕ, ಮಹಾಸನ, ವರ್ಧನ, ವಹ್ನಿ, ಅನಲ, ಕ್ಷುದಿ ಎಂಬ ಎಂಟು ಜನ ಗಂಡುಮಕ್ಕಳೂ ಆದರು. ಮತ್ತು ಭದ್ರವತಿ ಎಂಬ ಹೆಣ್ಣುಮಗುವೂ ಆಯಿತು. ಜಾಂಬವತಿಯು ಸಾಂಬ, ಸಹಸ್ರಜಿತು, ಸುಮಿತ್ರ, ಶತಜಿತ್, ಮಿತ್ರ, ವಿಜಯ, ಚಿತ್ರಕೇತು, ಪುರಜಿತ್ತು, ಕ್ರತು, ದ್ರವಿಡ ಎಂಬ ಗಂಡುಮಕ್ಕಳನ್ನೂ ಮಿತ್ರವತಿ ಎಂಬೊಂದು ಹೆಣ್ಣುಕೂಸನ್ನು ಹೆತ್ತಳು. ಸತ್ಯೆ ಎಂಬ ನಗ್ನಜಿತುವಿನ ಕುವರಿಯ ಗರ್ಭದಲ್ಲಿ ವೀರ, ಚಂದ್ರ, ಅಶ್ವಸೇನ, ಚಿತ್ರ, ಶಂಕು, ವೇಗವಂತ, ಅಮನ, ವೃಷ, ವಸು, ಕುಂತಿ, ಶ್ವೇತೆ ಎಂಬ ಮಕ್ಕಳು ಜನಿಸಿದರು. ಭದ್ರೆಯು ಶೂರ, ಜಯ, ಪ್ರಹರ, ಭದ್ರ, ಸುಭ್ರ, ಹರಿಜಿತ್ತು, ವಾಮನ, ಸಂಗ್ರಾಮಜಿತು, ಆಯು, ಬೃಹತ್ಸೇನ, ಸತ್ಯಕ ಎಂಬ ಪುತ್ರರನ್ನೂ, ದಾಮಪ್ರತೀಕೆ ಎಂಬೋರ್ವ ಕುವರಿಯನ್ನೂ ಹಡೆದಳು. ಹೀಗೆಯೇ ಇನ್ನೂ ಅನೇಕಜನ ಸ್ತ್ರೀಯರು ಅನೇಕ ಮಕ್ಕಳುಗಳನ್ನು ಪಡೆದು ಇದ್ದರು. ಇಂಥ ಸುಖಸಾಮ್ರಾಜ್ಯವನ್ನು ಅನು

ಪತ್ಪದನನಧಿಕರಿಸಿದೆವು ನೆಂದು ‖ ೫೫ ‖ ತ್ವತ್ಪಾದಕಮುಲದಾಶ್ರಯದಿಂದನಾನಾವಿ | ಪತ್ಪರಂಪರೆಗಳಂದಾಂಟದೆವುರಾಜಸಂ | ಮುತ್ಪನ್ನರಾಗಿಫಲವೇನಾವತೆರ ಬಳಿಕಿದರಸೌಖ್ಯದಿಂನಾವಿರುತಿರ್ದೊಡೆ ‖ ಸತ್ಪುರುಷರ್ಕೈದೆಮೆಚ್ಚುವರೆಭರತಾನ್ವಯಸ | ದಿಂಜ | ಗತ್ಪಾವನಾಶ್ವಮೇಧವನಾಗಿಸುವೆನಿದಕೆನೀವೆಂಬುದೇನೆಂದನು ‖ ೫೬ ‖ ಮುರುಳಹರೆಭೂಪಾಲಬಾದರಾಯಣನಿಕ್ಕಿ |

ಟೀ‖ ತ್ವತ್=ನಿನ್ನ ಸಂಬಂಧವಾದ, ಪಾದಕಮುಲದ-ಅಡಿದಾವರೆಯ, ಆಶ್ರಯ=ಆಸರೆಯಿಂದ, ನಾನಾವಿಪತ್ಪರಂಪರೆಗಳನು-ಅನೇಕ ಪ್ರಕಾರವಾದ ಎಡರುಗಳ ತರಂಗಗಳನ್ನೆಲ್ಲಾ, ದಾಂಟದೆವು-ತಪ್ಪಿಸಿಕೊಂಡೆವು, ರಾಜ-ಅರಸುಗಳ, ಸಂಪತ್ಪದನನು-ಸಂಪತ್ಸಮೃದ್ಧಿಯನ್ನು, ಅಧಿಕರಿಸಿದೆವು-ಅವಲಂಬಿಸಿದೆವು, ಬಳಿಕ-ತರುವಾಯ, ಇದರಸೌಖ್ಯದಿಂ-ದೊರೆತನವಸುಖದಲ್ಲಿ, ನಾವು-ನಾವುಗಳು, ಇರುತಿರ್ದೊಡೆ-ಇರುವಕಾಲದಲ್ಲಿ, ಸತ್ಪುರುಷರು-ಸಾಧುಜನರು, ಐದೆ-ಚನ್ನಾಗಿ, ಒಪ್ಪುವರೆ-ಒಡಂಬಟ್ಟಾರೆ? ಭರತ-ಭರೆತಮಹಾರಾಜನ, ಅನ್ವಯ-ಸಂತತಿಯಲ್ಲಿ, ಸಮುತ್ಪನ್ನರಾಗಿ-ಜನಿಸಿ, ಫಲವೇನು - ಏನುಸಾರ್ಥಕ? ಆವತೆರದಿಂ-ಯಾವ ಬಗೆಯಿಂದ, ಜಗತ್-ಪ್ರಪಂಚದಲ್ಲಿ, ಪಾವನ-ಪರಿಶುದ್ಧವಾದ್ದೆಂಬ ಹೆಸರನ್ನು ಪಡೆದಿರುವ, ಅಶ್ವಮೇಧವನು-ಹಯಮೇಧವನ್ನು, ಆಗಿಸುವೆನು-ನೆರವೇರಿಸಬಲ್ಲೆನು? ಇದಕೆ-ಈ ಯಾಗದ ವಿಷಯದಲ್ಲಿ, ನೀವು-ನೀವಾದರೋ, ಎಂಬುವುದು-(ಅಭಿಮತವು) ಏನು-ಏನಿದೆ?, ಎಂದು-ಎಂಬದಾಗಿ, ಎಂದನು-ಕೇಳಿದನು ‖೫೬‖

ಭವಿಸುತ್ತಲಿರುವ, ಮನುಷ್ಯಾಕಾರವನ್ನು ತಾಳಿ ಕೃಷ್ಣನೆಂಬ ನಾಮಧೇಯವನ್ನಿಟ್ಟುಕೊಂಡಿರುವ ಅನಂತರೂಪನಾದ ಶ್ರೀಮನ್ನಾರಾಯಣ ಮೂರ್ತಿಯು ಬರುತ್ತಿರುವುದಾಗಿ ಹೇಳುತ್ತಲಿರುವ ಚಾರನ ನುಡಿಗಳನ್ನು ಕೇಳಿದ ಕೂಡಲೆ ಯುಧಿಷ್ಠಿರನು ಧಿಗ್ಗನೆದ್ದು ಆ ಚಾರನ ನುಡಿಗಳಿಗೆ ಬಾರಿಬಾರಿಗೂ ಉತ್ತರವನ್ನೀಯುತ್ತಾ ಆನಂದವೆಂಬ ಕಡಲಿನಲ್ಲಿ ಮುಳುಗಿದವನಾಗಿ ತನ್ನಷ್ಟಕ್ಕೆ ತಾನೆ ಆಹಾ! ಈ ಮಹಾನುಭಾವನಿಗೆ ಭಕ್ತರಲ್ಲಿರುವ ಪ್ರೇಮವನ್ನೇನೆಂದು ಹೇಳಲಿ, ಸ್ಮರಿಸುತ್ತಲಿರುವಷ್ಟರಲ್ಲಿಯೇ ಬಂದು ಸಿದ್ಧನಾದನಲ್ಲಾ, ಆಹಾ! ಪ್ರಪಂಚದಲ್ಲಿ ಈ ಮಹಾನುಭಾವನ ಸಂದರ್ಶನ ಸುಖವನ್ನನುಭವಿಸುತ್ತಲಿರುವ ನನಿಗಿಂತಲೂ ಧನ್ಯರು ಮತ್ತೆ ಯಾರಿದಾರೆ, ಎಂಬುದಾಗಿ ಸಂತೋಷವನ್ನು ಪಡುತ್ತಿರುವ ರಾಯನು ‖೪೬‖ ವ್ಯಾಸಮಹರ್ಷಿಗಳು ಹೊರಟುಹೋದಕೂಡಲೆ, ಯೋಚಿಸುತ್ತಿರುವುದರೊಳಗಾಗಿಯೇ ಎದುರಿಗೆ ಬಂದು ನಿಂತು ಇರುವ ಕೃಷ್ಣಮೂರ್ತಿಯನ್ನು ಎದುರ್ಗೊಳ್ಳಲು ಭೀಮಾದಿ ಅನುಜರಿಂದೊಡಗೂಡಿ ಭೇರೀ ಮೃದಂಗಾದಿ ವಾದ್ಯಧ್ವನಿಗಳೂ, ಸ್ತುತಿಪಾಟಕರ ಕೋಲಾಹಲಧ್ವನಿಯೂ, ದಿಕ್ಕುಗಳನ್ನು ವ್ಯಾಪಿಸುತ್ತಾ ಇರಲಾಗಿ, ದೀವಟಿಗೆಗಳನ್ನು ಹಿಡಿಸಿಕೊಂಡು ಸಂಭ್ರಮದಿಂದ ಹೊರಟನು ‖ ೪೭ ‖ ಅನಂತರದಲ್ಲಿ ಧರ್ಮರಾಯನು ಭೀಮಾರ್ಜುನರೊಂದಿಗೆ ಕೃಷ್ಣಸ್ವಾಮಿ ಇರತಕ್ಕ ಸ್ಥಳಕ್ಕೆ ಬಂದು ಮಿರುಗುಟ್ಟುವ ಕಿರೀಟವನ್ನಿಟ್ಟುಕೊಂಡು, ಪಚ್ಚೆಯಾಗಿ ಪ್ರಕಾಶಿಸುತ್ತಿರುವ ಮುಂಗುರುಳುಳ್ಳವನಾಗಿ, ಅಗಲವಾದ ಹಣೆಯೂ ಆ ಹಣೆಯಲ್ಲಿ ಕಸ್ತೂರಿಯ ತಿಲಕವೂ ಉಳ್ಳವನಾಗಿ, ಕಾಮನ ಬಿಲ್ಲನ್ನು ಹೋಲುವ ಕಣ್ಣುಬ್ಬುಗಳನ್ನೂ, ಕಮಲದ ದಳದಂತೆ ಅತಿ ವಿಶಾಲವಾಗಿಯೂ ಅತಿ ಮನೋಹರವಾಗಿಯೂ ಇರುವ ನೇತ್ರಗಳನ್ನೂ, ಚಂದ್ರನ ಬೆಳದಿಂಗಳಿನಂತಿರುವ ಹಲ್ಲುಗಳನ್ನೂ ಉಳ್ಳವನಾಗಿ ಮನ್ಮಥನಂತೆ ಹೊಳೆಯುತ್ತಿರುವ ಕೃಷ್ಣನನ್ನು ಕಂಡನು ‖ ೪೮ ‖ ಕೇಳೈ ಜನಮೇಜಯನೇ? ಆ ಸಮಯದಲ್ಲಿ ಕೃಷ್ಣಸ್ವಾಮಿಯು ಮನುಷ್ಯರ ವಿನೋದದಂತೆಯೇ ತಾನೂಕೂಡಾ ಯುಧಿಷ್ಠಿರನನ್ನು ನೋಡಿದೊಡನೆಯೇ ತನ್ನ ಸುವರ್ಣ ರಥದಿಂದ ಕೆಳಕ್ಕಿಳಿದು ಮಂದಸ್ಮಿತನಾಗಿ ಧರ್ಮರಾಯನಿಗೆ ನಮಸ್ಕಾರ ಮಾಡಿದನು. ಯುಧಿಷ್ಠಿರನೂಕೂಡಾ ಸಾಷ್ಟಾಂಗದಂಡಪ್ರಣಾಮುವನ್ನು ಶ್ರೀ ಕೃಷ್ಣಮೂರ್ತಿಯ ಪಾದಾರವಿಂದಗಳಲ್ಲಿ ಅರ್ಪಿಸಿದನು. ಅನಂತರದಲ್ಲಿ ಕೃಷ್ಣನು ಧರ್ಮರಾಯನನ್ನೂ ಯುಧಿಷ್ಠಿರನು ಕೃಷ್ಣಮೂರ್ತಿಯನ್ನೂ ಆಲಿಂಗನವ ಮಾಡಿಕೊಂಡು ಸಂತೋಷ ಸಮುದ್ರದಲ್ಲಿ ಮುಳುಗಿರುವುದನ್ನು ನೋಡಿ ಮುನೀದ್ರರೆಲ್ಲಾ ಆನಂದಬಾಷ್ಪಗಳನ್ನು ಬಿಡುತ್ತಿದ್ದರು ‖ ೪೯ ‖ ಅನಂತರದಲ್ಲಿ ಭೀಮನೂ, ಅರ್ಜುನನೂ, ನಕುಲಸಹದೇವರೂ ಶ್ರೀ ಕೃಷ್ಣನ ಪಾದಾರವಿಂದಗಳಿಗೆ ಸಾಷ್ಟಾಂಗ ಪ್ರಣಾಮುಂಗೈದರು. ಮುರಹರನು ಅವರನ್ನೆಲ್ಲಾ ಆಲಂಗಿಸಿಕೊಂಡು ಸಂತೋಷಪರವಶನಾಗಿ ಎಲ್ಲರೂ ರಾಜಭವನವನ್ನೈದಿದರು. ಶ್ರೀ ಕೃಷ್ಣನು ಬಂದಿರತಕ್ಕ ಸುದ್ದಿಯನ್ನು ಕೇಳಿದ ದ್ರೌಪದಿಯು, ಎಲೈ ಮಹಾನುಭಾವನೆ, ಕಮಲಾಕ್ಷನೆ, ಶೇಷಶಾಯಿ, ಭಕ್ತರಕ್ಷಣಧುರೀಣಾ, ರಾಕ್ಷಸಾಂತಕಾ, ಕೌಸ್ತುಭಮಣಿಯನ್ನು ಆಭರಣವಾಗಿವುಳ್ಳ, ಗೋವರ್ಧನಗಿರಿಯನ್ನು ಎತ್ತಿದ, ಪೀತಾಂಬರವನ್ನು ಹೊದ್ದಿರುವ ಸ್ವಾಮಿಯೇ, ಜಗತ್ಪತೀ! ಎಂದು ನಾನಾಪ್ರಕಾರವಾಗಿ ಹೊಗಳುತ್ತಾ ನಮಸ್ಕರಿಸಲಾಗಿ ಆ ದ್ರುಪದನಂದನೆಯನ್ನು ‖೫೦‖ ಕೃಷ್ಣಸ್ವಾಮಿಯು ಮೇಲಕ್ಕೆಬ್ಬಿಸಿ ಉಪಚಾರೋಕ್ತಿಗಳನ್ನಾಡಿ ಅಂತಃಪುರಕ್ಕೆ ಕಳುಹಿಸಿದನು. ಅನಂತರದಲ್ಲಿ ಅಲ್ಲಿ ನೆರೆದಿದ್ದ ಅಶೇಷರನ್ನೂ ಅವರವರ ನಿವಾಸಸ್ಥಾನಗಳಿಗೆ ಮರ್ಯಾದೆಯಿಂದ ಕಳುಹಿಸಿ ಧರ್ಮರಾಯನೂ ತಾನೂ ಸಭಾಮಂಟಪಕ್ಕೆ

ದುರುಳಗಣ್ಣಿಗೆಸಿಲುಕುವರೆಭೀಮನೆಂಬವಂ | ದುರುಳನರಿಯಾಹಿಂದಣವರಲ್ಲಯೌವನಾಶ್ವಪ್ರಮುಖರತಿವೀರರು || ಅರಳಾದ ಮಲ್ಲಿಗೆಯ ಪೊದರೊಳಗೆತಿರುಗಿದೊಡೆ | ತೆರಳಬಲ್ಲುದೆ ಸಂಪಗೆಯಬನಕೆ ಮರಿದುಂಬಿ | ತರಳತನದಿಂದ ಹಯಮೇಧಕುದ್ಯೋಗಿಪರೆಹೇಳೆಂದುಹರಿನುಡಿದನು || ೫೭ || ಮತಿಯುಳ್ಳೊಡಿವನಸುರಬಲಿಗೊದಗಿಸಿದಕೂಳ | ನತಿಮಹೋದರಕಡಸಿಕೊಂಬನೆ

ಟೀ|| ಭೂಪಾಲ–ಪೊಡವಿಪತಿಯಾದ ಯುಧಿಷ್ಠಿರನೆ? ಮರುಳು – ಭ್ರಾಂತನು, ಅಹರೆ–ಆಗಬಹುದೆ, ಬಾದರಾಯಣನು–ಮುನೀಂದ್ರನಾದ ವ್ಯಾಸನು, ಇಕ್ಕಿದ – ಚಾಚಿದಂಥ, ಉರುಳುಗಣ್ಣಿಗೆ-ಪಾಶಕ್ಕೆ, ಸಿಲಕುವರೆ – ಕಟ್ಟುಬೀಳಬಹುದೆ,? ಭೀಮನೆಂಬವಂ-ಭೀಮಸೇನನು, ದುರುಳನು-ಕೋಪಿಷ್ಠನು, ಅರಿಯಾ–ಇದು ನಿನಗೆ ಗೊತ್ತಿಲ್ಲವೆ? ಹಿಂದಣವರು–ಪೂರ್ವಿಕರಾದ ಜರಾಸಂಧನೇ ಮೊದಲಾದ ಸಾಹಸಿಗಳಂತೆ, ಅಲ್ಲ-ಈಗ ಪ್ರತಿಜ್ಞೆ ಮಾಡಿದವರಲ್ಲವು. ಯೌವನಾಶ್ವ ಪ್ರಮುಖರು–ಯೌವನಾಶ್ವಾದಿರಾಯರು, ಅತಿವೀರರು – ಮಹಾಪರಾಕ್ರಮಿಗಳು, ಅರಳಾದ – ವಿಕಸಿತವಾದ, ಮಲ್ಲಿಗೆಯ– ಮಲ್ಲಿಕಾಪುಷ್ಪವಿರುವ ಗಿಡಗಳ, ಪೊದರೊಳಗೆ–ಪೊದೆಗಳಲ್ಲಿ, ತಿರುಗಿದೊಡೆ-ಅಲೆದರೆ, ಮರಿದುಂಬಿ-ಭೃಂಗವು, ಸಂಪಗೆಯ ಬನಕೆ–ಸಂಪಗೆ ಹೂಗಳಿರುವ ತೋಟಕ್ಕೆ, ತೆರಳಬಲ್ಲದೆ – ಹೊರಡಲುದ್ಯುಕ್ತವಾದೀತೆ,? (ಆದರಂತೆಯೇ) ತರಳತನದಿಂದ–ಬಾಲಭಾವದಿಂದ, ಹಯಮೇಧಕ್ಕೆ-ಅಶ್ವಮೇಧವೆಂಬೀ ಕ್ರತುವಿಗೆ, ಉದ್ಯೋಗಿಪರೆ–ಪ್ರಯತ್ನಿಸಬಹುದೇ? ಹೇಳು-ಉತ್ತರ ಕೊಡು, ಎಂದು–ಎಂಬತೆರನಾಗಿ, ಹರಿ–ಶ್ರೀ ಕೃಷ್ಣಮೂರ್ತಿಯು, ನುಡಿದನು–ಪ್ರಶ್ನೆಗೈದನು ||೫೭||

ಟೀ|| ಮತಿಯು–ವಿವೇಕವು, ಉಳ್ಳೊಡೆ–ಇದ್ದರೆ, ಇವನು–ಈ ವೃಕೋದರನು, ಅಸುರಬಲಿಗೆ-ರಕ್ಕಸನ ತಿಂಡಿಗೆ, ಒದಗಿಸಿದ – ಮಾಡಿದಂಥ, ಕೂಳನು – ಆಹಾರಸಾಮಗ್ರಿಯನ್ನೆಲ್ಲಾ, ಅತಿಮಹೋದರಕೆ–ಇವನ ದೊಡ್ಡ ಜಠರಕ್ಕೆ, ಅಡಗಿಸಿ

ಬಂದು ಕುಳಿತರು. ಆ ರಾತ್ರಿಯೆಲ್ಲಾ ಬಹು ಆನಂದಮಯವಾಗಿತ್ತು ||೫೧|| ಆಗ ಶ್ರೀ ಕೃಷ್ಣನು ಅಯ್ಯಾ ಧರ್ಮನಂದನಾ! ಕೇಳು:—ನಿನ್ನೀ ಸಭಾ ಭವನವು ಸ್ವರ್ಗದಲ್ಲಿರುವ ಇಂದ್ರನ ಸಭಾಮಂಟಪವನ್ನಲ್ಲಗಳೆಯುತ್ತಲಿದೆ. ನಿನ್ನ ಐಶ್ವರ್ಯಕ್ಕೆ ಪೂರ್ವದಲ್ಲಿ ಖ್ಯಾತಿಯನ್ನೂ ಧರ್ಮವನ್ನೂ ತಾಳಿದ್ದ ಪ್ರಸಿದ್ಧರಾದ ನಳ, ಪುರೂರವ, ಹರಿಶ್ಚಂದ್ರಾದಿಗಳೂ ಸಮಾನರಲ್ಲವು. ನೀನೇ ಧನ್ಯನು, ಎಂದಾಡಿದ ಕೃಷ್ಣಮೂರ್ತಿಯ ನುಡಿಗಳನ್ನು ಕೇಳಿ || ೫೨ || ಧರ್ಮರಾಯನು ಎಲೈ ಮಹಾನುಭಾವನೆ! ನೀನು ಹೇಳಿದ್ದೆಲ್ಲಾ ನಿಜವೇ ಸರಿ, ನಿನ್ನ ದಯೆಯಿರುವವರೆವಿಗೂ ನಮಗೆ ಭಯವೇನು? ನಮ್ಮನ್ನು ಉದ್ಧಾರಮಾಡಿದವನೇ ನೀನು, ಎಂಬುದು ಸಕಲಜನ ವೇದ್ಯವಾಗಿದೆ ಆ ಮಾತು ಹಾಗೆ ಇರಲಿ, ಮುಂದೆ ರಾಜಕಾರ್ಯವು ಹೇಗೆ ನಡೆಯಬೇಕೊ ಅನುಜ್ಞೆಯನ್ನೀಯಬೇಕೆಂದು ಬೇಡಿಕೊಂಡ ರಾಯನನ್ನು ಕುರಿತು || ೫೩ || ಎಲೈ ಧರ್ಮತನಯನೆ? ಈಗ ನಿನಗೆ ಜ್ಞಾತಿಗಳ ಬಾಧೆಯೂ, ಶತ್ರುಗಳ ತೊಂದರೆಯೂ ಸ್ವಲ್ಪವೂ ಇಲ್ಲ, ನಿನ್ನಾಜ್ಞೆಗೆ ಎದುರೇ ಇಲ್ಲ. ಬೇಟೆಯ ತಾಪತ್ರಯವೂ ಇಲ್ಲ. ನಿನ್ನ ತಮ್ಮಂದಿರು ಯಾರೂ ನಿನ್ನ ಮಾತಿಗೆ ಬದಲು ಹೇಳತಕ್ಕವರೇ ಅಲ್ಲ. ನಿನ್ನ ಚತುರಂಗಬಲಕ್ಕೆ ಕೊರತೆ ಏನೂ ಒದಗಿಲ್ಲ ಇಷ್ಟ ಅನುಕೂಲ ಸಾಮ್ರಾಜ್ಯದಿಂದಿರ್ಪ ನಿನಗೆ ರಾಜಕಾರ್ಯವು ಏನು ಅಸಾಧ್ಯವು ? ನಾನು ಹೇಳತಕ್ಕದ್ದೇನಿದೆ? ಎಂದು ಹಾಸ್ಯಮಾಡಿ ಹೇಳಿದನು. ||೫೪|| ಇವನ್ನು ಕೇಳಿದ ಧರ್ಮರಾಯನು, ಎಲೈ ಮಹಾನುಭಾವನೇ, ಈ ರೀತಿ ಹಾಸ್ಯೋಕ್ತಿಗಳನ್ನು ಆಡಬೇಡ. ಇದಂಲ್ಲಿ ನಿಮಗೆ ತಿಳಿಯದೆ ಹೊಸದಾಗಿರುವುದು ಯಾವುದಿದೆ ಎಂದು ಉತ್ತರಕೊಟ್ಟನು. ಮತ್ತೆ ಶ್ರೀ ಕೃಷ್ಣನನ್ನು ಕುರಿತು ಎಲೈ ಕೃಷ್ಣಸ್ವಾಮಿಯೆ? ಈದಿನ ವ್ಯಾಸಮಹರ್ಷಿಗಳು ಬಂದಿದ್ದರು. ಭರತಕುಲದ ಪದ್ಧತಿಯ ಪ್ರಕಾರ ಅಶ್ವಮೇಧಯಾಗವನ್ನು ಮಾಡಿ ಕೀರ್ತಿಯನ್ನು ಪಡೆಯೆಂದೂ ಇದರಿಂದ ಗೋತ್ರಹತ್ಯಾದೋಷ ಪರಿಹಾರವಾಗುವುದೆಂದೂ ಹೇಳಿದರು. ಈ ಭೀಮಸೇನನು ಅಶ್ವವನ್ನು ಯಾಗಕ್ಕೆ ತಂದುಕೊಡಲು ಒಪ್ಪಿ ಪ್ರತಿಜ್ಞೆಮಾಡಿದಾನೆ ||೫೫|| ನಿನ್ನ ಪಾದಾರವಿಂದಗಳ ಆಸರೆಯಿಂದಲೇ ತರಂಗಾಕಾರವಾಗಿ ಒದಗಿದ ಕಷ್ಟಗಳನ್ನೆಲ್ಲಾ ನೀಗಿಕೊಂಡು ರಾಜ್ಯಭಾರವನ್ನು ಪಡೆದಿರುವೆವು. ಲೋಕವು ಮೆಚ್ಚುವಂತೆಯೂ ಪಾಪಪರಿಹಾರಕ್ಕಾಗಿಯೂ ಕೀರ್ತಿವಿಸ್ತಾರಕ್ಕಾಗಿಯೂ ಮಾಡಬೇಕೆಂದಿರುವ ಈ ಅಶ್ವಮೇಧದ ವಿಷಯವಾಗಿ ತಮ್ಮ ಅಪ್ಪಣೆಯನ್ನು ನಿರೀಕ್ಷಿಸುತ್ತಿರುವೆನೆಂದು ನುಡಿದನು. ||೫೬|| ಈ ಮಾತನ್ನು ಕೇಳಿ ಕೃಷ್ಣಸ್ವಾಮಿಯು ಅಯ್ಯಾ ರಾಜನೇ! ನಿನಗೇನು ಭ್ರಾಂತಿಯುಂಟಾಯಿತು. ವ್ಯಾಸಮುನಿಯು ಹೇಳಿದ ಈ ಮೋಹಪಾಶಕ್ಕೆ ಸಿಕ್ಕಿಬಿಟ್ಟೆಯಲ್ಲಾ ಭೀಮನು ಮಹಾ ಕೋಪಿಷ್ಠನೆಂದು ತಿಳಿದೂ ಇವನ ಪ್ರತಿಜ್ಞೆಯನ್ನು ನಂಬಿಕೊಂಡು ನೀನು ಈ ಕಾರ್ಯಕ್ಕೆ ಉಜ್ಜುಗಿಸಬಹುದೆ? ಹಿಂದಿದ್ದ ಜರಾಸಂಧಾದಿಗಳಿಗಿಂತ ಯೌವನಾಶ್ವನು ಮಹಾ ಪರಾಕ್ರಮಿ, ಸುವಾಸನೆಯುಳ್ಳ ಮಲ್ಲಿಗೆ ಹೂಗಳ ಮಧ್ಯದಲ್ಲಿ ಸೇರಿರುವ ಆರಡಿಗಳು ಸಂಪಗೆಯ ತೋಟಕ್ಕೆ ಹೋಗಲು ಇಚ್ಛಿಸುತ್ತವೆಯೆ? ಯೋಚನೆಯಿಲ್ಲದೆ ಇದಕ್ಕೆ ನೀನೇಕೆ ಒಪ್ಪಿದೆ? ||೫೭|| ಈ ಭೀಮನು ಅಂಥಾ ಬುದ್ಧಿವಂತನಾಗಿದ್ದರೆ ಬಕಾಸುರನಿಗೆ ಮಾಡಿದ್ದ ಅನ್ನದ ರಾಶಿಯನ್ನು ತಿನ್ನುತ್ತಿ

ನೀತಿಗಳ | ಗತಿಯನರಿದೊಡೆನಿಶಾಚರಿಯನಿವನಾಳ್ವನೇರಾಣಿಯೆಂದರಮನೆಯೊಳು || ಕ್ಷಿತಿಯೊಳದ್ಭುತರೂಪನೀವೃಕೋದರ ನಿನನ | ಮತವಿಡಿದುಹಯಮೇಧಕುದ್ಯೋಗಿಸಿದೊಡೆಪೂ | ರಿತನುಹುದೆಮರುಳೆಹೇಳೆಂದುನೃಪನೊಡನೆಮುರರಿಪುಭೀಮನಂ ಜರೆದನು ||೫೮|| ಆಹಾಮಹಾದೇವಚಿತ್ರವಂಕೇಳಿದೆವಲಾ | ಹಲವುಲೋಕಂಗಳಂಕೊಳದೆನಿನ್ನುದರ | ಮಾಹಾನಿಶಾಚರಿಯ ರಲ್ಲವೇನರಕಾಸುರನಮನೆಯಬಾಲಕಿಯರು || ಈಹೆದರದೇಕೆಕರಡಿಯಮಗಳನಾಳ್ವನಿನ | ಗೋಹೋಧರೆಯೊಳದ್ಭುತಾಕಾರ ರಾರೊನಿ | ನ್ನೂಹೆಗಳಬಲ್ಲೆನಾನಿತ್ತಭಾಷೆಗೆತಪ್ಪೆನೆಂದುಭೀಮಂನುಡಿದನು ||೫೯|| ಭಾಷೆಯಂಕೊಟ್ಟುತಪ್ಪುವನಲ್ಲನೀನಾವಿ |

---

ಕೊಂಬನೆ-ಹಾಕಿಕೊಂಡು ಬಿಡುತ್ತಿದ್ದನೆ. ಅರಿದೊಡೆ - ಬುದ್ಧಿವಂತನಾಗಿದ್ದರೆ, ಇನನು-ಈ ವಾಯುಜನು, ನಿಶಾಚರಿಯನು-ರಕ್ಕಸಿಯನ್ನು, ಅರಮನೆಯೊಳು-ರಾಜಭವನದಲ್ಲಿ, ರಾಣಿಯೆಂದು-ಪಟ್ಟಮಹಿಷಿ ಎಂಬದಾಗಿ, ಆಳ್ವನೆ-ಕ್ರೀಡಿಸುತ್ತಿದ್ದನೆ? ಕ್ಷಿತಿಯೊಳು-ಪೃಥ್ವಿಯಲ್ಲಿ, ವೃಕೋದರನು-ಅನಿಲಜನು, ಅದ್ಭುತ-ಅಚ್ಚರಿಯನ್ನೆಸಗುವ, ರೂಪನು-ಆಕೃತಿಯುಳ್ಳವನು, ಇವನ-ಇಂಥಾ ಸ್ವಭಾವದವನ, ಮತವಿಡಿದು-ಆಶಯವನ್ನು ಒಪ್ಪಿಕೊಂಡು, ಹಯಮೇಧಕೆ-ಅಶ್ವಮೇಧವೆಂಬ ಯಾಗಕ್ಕೆ, ಉದ್ಯೋಗಿಸಿದೊಡೆ-ಪ್ರಯತ್ನಮಾಡಿದಲ್ಲಿ, ಪೂರಿತಂ - ನೆರವೇರುವುದು, ಆಹುದೆ-ಆದೀತೆ? ಮರುಳೆ- ಭ್ರಾಂತನೇ, ಹೇಳು-ಹೇಳಯ್ಯ, ಎಂದು-ಎಂಬದಾಗಿ, ನೃಪನೊಡನೆ-ಧರ್ಮಜನೊಂದಿಗೆ, ಭೀಮನಂ-ಅನಿಲಜನನ್ನು, ಮುರರಿಪು-ಶ್ರೀ ಕೃಷ್ಣನು, ಜರೆದನು-ತಿರಸ್ಕರಿಸಿದನು ||೫೮||

ಟೀ|| ಆಹಾ-ಆಶ್ಚರ್ಯ ಆಶ್ಚರ್ಯ, ಮಹಾದೇವ - ಭಗವಂತನೆ! ಚಿತ್ರಮಂ - ಅತ್ಯಾಶ್ಚರ್ಯವನ್ನು, ಕೇಳಿದೆವಲಾ-ಕೇಳಿಬಿಟ್ಟೆವಲ್ಲಾ! ನಿನ್ನ-ನಿನ್ನಯ, ಉದರಂ-ಜಠರವು, ಹಲವು-ಸಮಸ್ತವಾದ, ಲೋಕಂಗಳಂ-ಪ್ರಪಂಚಗಳನ್ನೆಲ್ಲಾ, ಕೊಳದೆ-ಸ್ವೀಕರಿಸುವುದಿಲ್ಲವೇ? ಆಹಾ-ಅಚ್ಚರಿಯು, ನರಕಾಸುರನ-ನರಕನೆಂಬ ನಾಮಧೇಯವುಳ್ಳ ದಾನವನ, ಅರಮನೆಯ-ರಾಜಗೃಹದಲ್ಲಿದ್ದಂಥಾ, ಬಾಲಕಿಯರು-ಕನ್ಯೆಯರು, ನಿಶಾಚರಿಯರು-ರಾಕ್ಷಸಸ್ತ್ರೀಯರು, ಅಲ್ಲವೆ-ಆಗಿರಲಿಲ್ಲವೆ? ಹೆದರದೆ-ದಿಗಲುಬೀಳದೆ, ಏಕೆ-ಯಾವ ಕಾರಣಕ್ಕಾಗಿ, ಕರಡಿಯ ಮಗಳನು-ಋಕ್ಷಾಧಿಪನಾದ ಜಾಂಬವಂತನ ಪುತ್ರಿಯಾದ ಜಾಂಬವತಿಯನ್ನು, ಆಳ್ದ-ಪತ್ನಿಯಾಗಿ ವರಿಸಿದ, ನಿನಗೆ-ನಿನಗಿಂತಲೂ, ಧರೆಯೊಳಗೆ-ಪ್ರಪಂಚದಲ್ಲಿ, ಅದ್ಭುತ-ಅಚ್ಚರಿಯಾದ, ಆಕಾರರು-ಆಕೃತಿಯುಳ್ಳವರು, ಆರೊ-ಇನ್ನು ಯಾರಿದಾರೆ? ಓಹೋ-ಪರಮಾಶ್ಚರ್ಯವು! ನಿನ್ನ-ನಿನ್ನಯ, ಊಹೆಗಳನು-ಮುಂದಿನ ಯೋಚನೆಗಳನ್ನು, ಆಂ-ನಾನು, ಬಲ್ಲೆನು-ಅರಿತಿರುವೆನು, ಇತ್ತ-ಪ್ರತಿಜ್ಞೆಮಾಡಿದ, ಭಾಷೆಗೆ-ನುಡಿಗೆ, ತಪ್ಪೆನು-ಅತಿಕ್ರಮಿಸಿ ನಡೆಯುವುದಿಲ್ಲವು, ಎಂದು-ಎಂಬದಾಗಿ, ಭೀಮಂ-ವೃಕೋದರನು, ನುಡಿದನು-ಹೇಳಿದನು ||೫೯||

ಟೀ|| ಎಲೆ ವೃಕೋದರನೆ? ನೀನು-ನೀನಾದರೋ, ಭಾಷೆಯಂ-ಪ್ರಮಾಣವನ್ನು, ಕೊಟ್ಟು-ಕೊಟ್ಟವನಾಗಿ, ತಪ್ಪುವನು-ದಾಟತಕ್ಕವನು, ಅಲ್ಲ-ಅಲ್ಲವು, ಆ ವಿಶೇಷಮಂ-ನಿನ್ನ ಒಳ ಬಂಡವಾಳವೆಲ್ಲಾ, ಕಂಡು ಬಲ್ಲೆವು-ಗೊತ್ತೇಯಿದೆ, ಹಿಂದೆ-ಪೂರ್ವಕಾಲದಲ್ಲಿ, ರಣದೊಳು-ಸಮರದಲ್ಲಿ, ಅಭಿಲಾಷೆಯಿಂ-ಕುತೂಹಲದಿಂದ, ಪೈಶಾಚರಂತೆ-ದೆವ್ವಹಿಡಿದಿರುವರ ಹಾಗೆ, ಹೇಸದೆ-ಬೇಸರವಿಲ್ಲದೆ, ರಕ್ತಪಾನಮಂ ಮಾಡಿಯೆ-ರಕ್ತವನ್ನು ಕುಡಿದೇ, ಒಡಲ-ನಿನ್ನ ಹೊಟ್ಟೆಯನ್ನು, ಪೋಷಿಸಿದೆ-ರಕ್ಷಿಸಿಕೊಂಡೆ, ಇದು-ಈ ಕೃತ್ಯವು, ಭಂಡತನವು - ಹೆಡ್ಡತನವು, ನಿನ್ನ- ನಿನ್ನಯ, ಸಾಹಸಕೆ - ಶೌರ್ಯಕ್ಕೆ, ಭೂಷಣವೆ - ಸರಿಯಾಗಿದೆಯೆ ? ಎಲವೋ-ಎಲೈ, ಬಾಣಸಿಗ-ಅಡಿಗೆಯ ಆಳೆ! ಹೋಗು-ಹೊರಟು ನಡೆ, ಲೋಕದೊಳ್-ಪೃಥ್ವಿಯಲ್ಲಿ, ದೂಷಣಕೆ-ಅಪವಾದಕ್ಕೆ, ಬೆದರೆ-ದಿಗಲು ಬೀಳುವುದಿಲ್ಲ, ಎಂದು-ಎಂಬದಾಗಿ, ಮುರಧ್ವಂಸಿ-ಮುರಾಂತಕನಾದ ಕೃಷ್ಣಸ್ವಾಮಿಯು, ಮಿಗೆ-ಅತಿಶಯಮಾದ,

---

ದ್ದನೆ? ನ್ಯಾಯಪರನಾಗಿದ್ದರೆ ರಾಕ್ಷಸಿಯನ್ನು ಮದುವೆ ಮಾಡಿಕೊಳ್ಳುತ್ತಿದ್ದನೆ? ಇಂಥಾ ವೃಕೋದರನ ಮಾತನ್ನು ನಂಬಿರುವ ನೀನು ಹುಚ್ಚನೇ ಸರಿ, ಎಂದು ಧರ್ಮರಾಯನೆದುರಿಗೆ ಭೀಮನನ್ನು ಹೀಯಾಳಿಸಿದನು ||೫೮|| ಈ ಮಾತುಗಳನ್ನು ಕೇಳಿದ ವೃಕೋದರನು ಶ್ರೀ ಕೃಷ್ಣನನ್ನು ಕುರಿತು ಎಲೈ ಸ್ವಾಮಿಯೇ! ಎಂಥಾ ಆಶ್ಚರ್ಯಕರವಾದ ಮಾತುಗಳನ್ನು ಆಡುತ್ತಲಿದ್ದಿ. ನರಕಾಸುರನ ಬಂದೀಕಾನೆಯಲ್ಲಿದ್ದ ಹದಿನಾರು ಸಹಸ್ರದ ನೂರ ಎಂಟು ಮಂದಿಯನ್ನು ಬಿಡುಗಡೆಮಾಡಿ ನೀನು ವರಿಸಿದೆಯಲ್ಲಾ ಅವರೆಲ್ಲಾ ದೇವಕನ್ನಿಕೆಯರೊ? ಅಥವಾ ಅಸುರಾಂಗನೆಯರೊ! ಹೇಳು, ಕರಡಿಯ ಮಗಳನ್ನೆ ನೀನು ಮದುವೆಮಾಡಿಕ್ಕೊಂಡು ಸುಖಸಂಪತ್ತುಗಳನ್ನು ಅನುಭವಿಸುತ್ತಿದ್ದೆಯಾದ್ದರಿಂದ ನನಗಿಂತಲೂ ನಿನ್ನ ಆಕೃತಿಯೇ ಘೋರಾಕೃತಿಯಲ್ಲವೆ? ನಾನು ಕೊಟ್ಟ ಭಾಷೆಯನ್ನು ತಪ್ಪುವುದಿಲ್ಲ, ಎಂದು ನುಡಿದ ಭೀಮನ ನುಡಿಗಳನ್ನು ಕೃಷ್ಣಮೂರ್ತಿಯು ಕೇಳಿ ||೫೯|| ನಿಶ್ಚಯ, ನಿಶ್ಚಯ, ನೀನು ಭಾಷೆಗೆ ಎಂದೂ ತಪ್ಪುವುದಿಲ್ಲವೆಂದು ನನಗೆ ಗೊತ್ತುಂಟು, ಆದರೆ ನಿನ್ನ ಜೀವಾಳವೆಲ್ಲಾ ನನಗೆ ಗೊತ್ತಿಲ್ಲವೋ? ಪೂರ್ವದಲ್ಲಿ ರಾಕ್ಷಸನೊಂದಿಗೆ ಯುದ್ಧಮಾಡುವಂತೆ ಹೇಳಿ ಹೋಗಿ ಅವನಿಗಾಗಿ ಕಳುಹಿದ ರಕ್ತದ ಭಾಂಡಗಳನ್ನೆಲ್ಲಾ ಬರಿದಾಗಿ

ಶೇಷಮುಂಕಂಡ-ಬಲ್ಲೆವ್ರುಹಿಂದೆರಣದೊಳಭಿ | ಲಾಷೆಯಿಂಪೈಶಾಚರಂತೆಹೇಸದೆರಕ್ತಪಾನಮುಂಮಾಡಿಯೊಡಲ || ಪೋಷಿಸಿದೆ ಭಂಡತನವಿದುನಿನ್ನಸಾಹಸಕೆ | ಭೂಷಣವೆಹೋಗೆಲವೊಬಾಣಸಿಗಲೋಕದೊ | ಳ್ದೂಷಣಕೆಬೆದರೆಯೆಂದಂಮುರಧ್ವಂಸಿಮಿಗೆಸರಸದೊಳ್ಪವನಜನನು || ೬೦ || ಶಿವಶಿವಾದೂಷಣಕೆಬೆದರಿಮಾಡಿದಿರಿಕ್ಕೈ | ತವಜಾರವಿದ್ಯೆಗಳಹೆಂಣಾಗಿಬಾಣಸದ | ಪವಣರಿಧುದಿಲ್ಲಲಾಹೇವರಿಸದಸುರೆಯಸುವೀಂಟಿದವರಾರೊಬಳಿಕ || ಅವನಿಪತಿಗಳಕೂಡೆಗೋವಳರ್ಗಾವಮೇಳವದ | ನುಡಿಯಲಂಜುವೆವೆಮ್ಮನಿಜಭಾಷಿ | ತವನುಳಿಯೆನಶ್ವಮಂತಹೆವುಕ್ರತುವಂನಡೆಸಿವೆಃಣುಳುಹಿನೀವೆಂದನು || ೬೧ || ನಕ್ಕನಸುರಾರಿಭೀಮನಮಾತಿಗೆಲವೊಕಲ | ಹಕ್ಕೆಬೇಸೆರೆಯಲಾತುರಗಮುಂತಂದುಕೊಡು | ವಕ್ಕರುಳ್ಳೊಡೆನಡೆವ್ವೃಥಾಗಳಹಬೇಡನಾವೀಗ ಸಾರಿದೆವುಮುಂದೆ || ಕಕ್ಕಸವಹುದುವೀರರುಂಟಿಳೆಯಮೇಲೆಕೈ | ಯಿಕ್ಕಲರಿದೀಮುಖವನ್ನೈದೆನಡೆಸುವದನ್ವ | ಯಕೆತೊಡರಪ್ಪುದು ವಿಚಾರದೊಳ್ಕೈಕೊಂಬುದೆನೆಭೂಪನಿಂತೆಂದನು || ೬೨ || ದೇವನಿಮ್ಮಡಿಯಕಾರುಣ್ಯಮೊಂದುಳ್ಳೊಡೆಸ | ದಾವಜಯ

---

ಸರಸದೊಳು_ಸಲಿಗೆಯ ನುಡಿಗಳಿಂದ, ಪವನಜನನು-ಅನಿಲನಂದನನನ್ನು ಕುರಿತು, ಎಂದಂ _ಹೀಗೆಂದುಹೇಳಿದನು. || ೬೦ ||

ಟೀ|| ಶಿವಶಿವ_ಹರಹರಾ, ದೂಷಣಕೆ_ಅಪವಾದಕ್ಕೆ, ಬೆದರಿ_ಹೆದರಿ, ಕೈತವ_ನಿಂದಾರ್ಹವಾದ, ಜಾರವಿದ್ಯೆಗಳ_ಹಾದರದ ಕೆಲಸಗಳನ್ನು, ಹೆಣ್ಣಾಗಿ_ಸ್ತ್ರೀಯಾಗಿ, ಬಾಣಸದ-ಪಾಕದ, ಪವಣ-ಪ್ರತಿಜ್ಞೆಯನ್ನು, ಅರಿದುದು-ಗೋಚರವಂತಾಳ್ದುದು, ಇಲ್ಲಲಾ_ಇಲ್ಲವಷ್ಟೆ, ಹೇವರಿಸದೆ_ಬೇಸರವಿಲ್ಲದೆ, ಅಸುರೆಯ-ರಾಕ್ಷಸಿಯ, ಅಸುವ_ಜೀವವನ್ನು, ಈಂಟಿದವರು_ಪಾನ ಮಾಡಿದವರು, ಆರೊ_ಯಾರಿರಬಹುದು ? ಬಳಿಕ_ತರುವಾಯ, ಅವನಿಪತಿಗಳ_ಅರಸುಗಳ, ಕೂಡೆ_ಜೊತೆಯಲ್ಲಿ, ಗೋವಳರ್ಗೆ_ಪಶುಪಾಲಕರಿಗೆ, ಆದು ಆವ ಮೇಳವು_ಅದೆಂಥಾ ಜೋಡಿಯಾಗುವಿಕೆ, ಇನ್ನು-ಮುಂದೆ, ನುಡಿಯಲು-ಹೇಳಲು, ಅಂಜುವೆವು_ಹೆದರುವೆವು, ಎಮ್ಮ-ನಮ್ಮ, ನಿಜಭಾಷಿತವನು_ನಿಶ್ಚಯ ಪ್ರಮಾಣವನ್ನು, ಉಳಿಯೆವು_ಬಿಡುವುದುದಿಲ್ಲ, ಅಶ್ವಮಂ-ಹಯವನ್ನು, ತಹೆವು_ತೆಗೆದುಕೊಂಡೇ ಬರುತ್ತೇವೆ. ನೀವು-ನೀವಾದರೋ, ಕ್ರತುವಂ_ಯಾಗವನ್ನು, ನಡಿಸಿ-ನೆರವೇರಿಸಿ, ಮೇಣ್-ಅಲ್ಲದೆ, ಉಳಿಸಿ-ನಿಲ್ಲುವಂತೆ ಮಾಡಿ, ಎಂದು-ಎಂಬದಾಗಿ, ಎಂದನು_ವೃಕೋದರನು ಹೇಳಿದನು. || ೬೧ ||

ಟೀ|| ಅಸುರಾರಿ-ಕೃಷ್ಣಸ್ವಾಮಿಯು, ಭೀಮನ_ವೃಕೋದರನ, ಮಾತಿಗೆ_ನುಡಿಗಳಿಗೆ, ನಕ್ಕನು_ನಕ್ಕುಬಿಟ್ಟನು. ಎಲವೊ-ಎಲೈ ವೃಕೋದರನೆ ! ಕಲಹಕ್ಕೆ-ಯುದ್ಧಕ್ಕೆ, ಬೇಸರೆಯಲಾ_ಸೋಮಾರಿತನವೇ ಇಲ್ಲವಲ್ಲಾ, ತುರಗಮಂ_ಅಶ್ವವನ್ನು, ತಂದುಕೊಡುವ-ತಂದು ಕೊಡತಕ್ಕ, ಅಕ್ಕರು_ಅಭಿಲಾಷೆಯು, ಉಳ್ಳೊಡೆ_ಉಂಟಾಗಿದ್ದರೆ, ನಡೆ_ಮುಂದೆ ನಡಿ, ವೃಥಾ-ಅನ್ಯಾಯವಾಗಿ, ಗಳಹಬೇಡ-ವ್ಯಾಜ್ಯವಾಡಬೇಡ (ಹರಟಬೇಡ), ನಾವು-ನಾವಾದರೋ, ಈಗ_ಮುಂಚೆಯೇ, ಸಾರಿದೆವು_ಹೇಳಿದೇವೆ, ಮುಂದೆ-ಇನ್ನು, ಕಕ್ಕಸವು_ಕ್ಲೇಶವು, ಅಹುದು_ಒದಗುತ್ತದೆ. ಇಳೆಯಮೇಲೆ_ಪ್ರಪಂಚದಲ್ಲಿ, ವೀರರು-ಪರಾಕ್ರಮಿಗಳು, ಉಂಟು_ಇರುವರು, ಕೈ-ಕರಗಳನ್ನು, ಇಕ್ಕಲು_ಇಡಲು, ಅರಿದು_ಅಸಾಧ್ಯವು, ಈಯಜ್ಞವನು_ಈ ಯಾಗವನ್ನು, ನಡೆಸುವದು_ನೆರವೇರಿಸತಕ್ಕದ್ದು, ಅನ್ವಯಕೆ_ವಂಶಕೆ, ಐದೆ_ಚನ್ನಾಗಿ, ತೊಡರು_ಬಾಧಕವು, ಅಪ್ಪುದು_ಆಗುತ್ತದೆ. ವಿಚಾರದೋಳ್_ಯೋಚನೆಮಾಡಿ ಕೈಕೊಂಬುದು_ಉಜ್ಜುಗಿಸಬೇಕು, ಎನೆ-ಎಂಬದಾಗಿ ಹೇಳಲು, ಭೂಪನು_ಯುಧಿಷ್ಠಿರನು, ಇಂತು_ಮುಂದೆ ಹೇಳುವಂತೆ, ಎಂದನು_ನುಡಿದನು. || ೬೨ ||

ಟೀ|| ದೇವ – ಪ್ರಭುವೆ ! ನಿಮ್ಮ – ನಿಮ್ಮಗಳ, ಅಡಿಯ – ಚರಣಗಳ, ಕಾರುಣ್ಯಂ – ಕೃಪೆಯು, ಒಂದುಳ್ಳೊಡೆ-

---

ಮಾಡಿದ, ತಿಂಡಿಪೋತನಾದ ಹೇಡಿಯಲ್ಲವೇ ನೀನು, ಇದು ನಿನಗೆ ಸಹಜವೊ ? ನಿನಗೆ ಯುದ್ಧದ ಗೊಡವೆ ಏತಕ್ಕೆ, ನೀನು ಎಲ್ಲಿಯಾದರೂ ಅಡಿಗೆ ಕೆಲಸ ಮಾಡಿಕೊಂಡು ಹೊಟ್ಟೆ ಹೊರೆದುಕೊಳ್ಳುವುದಕ್ಕೆ ಸರಿ ಎಂದು ಹಾಸ್ಯೋಕ್ತಿಗಳನ್ನಾಡಿದ ಕೃಷ್ಣನಿಗೆ ಭೀಮಸೇನನಿಂತೆಂದನು || ೬೦ || ಎಲೈ ಕೃಷ್ಣಮೂರ್ತೀ ! ಲೋಕದಲ್ಲಿ ಅಪರಾಧಕ್ಕೆ ಆಸ್ಪದವಾದ್ದೆಂದು ತಿಳಿದೂಕೂಡ ನೀನು ಜಾರತನವನ್ನು ಬಿಟ್ಟುಬಿಟ್ಟೆಯಾ ? ನೀನು ರಾಕ್ಷಸಿಯ ಪ್ರಾಣವನ್ನು ತೆಗಿಯಲಿಲ್ಲವೆ ? (ಪೂತನಿಯ) ರಾಜನಾದ ನೀನು ದನವನ್ನು ಏತಕ್ಕೆ ಕಾಯುತ್ತಿದ್ದೆ ? ನಿನ್ನ ಬಂಡವಾಳವನ್ನುನಾನೇತಕ್ಕೆ ಹೆಚ್ಚಾಗಿ ಹೇಳಲಿ! ಎಂದು ವೃಕೋದರನೂ ಹಾಸ್ಯಮಾಡಿದನು ||೬೧|| ಈ ಭೀಮನು ನುಡಿದ ಹಾಸ್ಯದ ನುಡಿಯಂಕೇಳಿ ಕೃಷ್ಣನು ನಕ್ಕು ಎಲೈ ಭೀಮಸೇನ ! ನಿನಗೆ ಯುದ್ಧ ಮಾಡಬೇಕೆಂದರೆ ಸ್ವಲ್ಪವೂ ಬೇಸರವೇ ಇಲ್ಲವಲ್ಲಾ, ಕುದುರೆಯನ್ನು ತರುವ ಸಾಮರ್ಥ್ಯವು ನಿನಿಗಿದ್ದರೆ ಹೊರಡು, ವೃಥಾ ಹರಟೆಯ ಮಾತುಗಳನ್ನು ಆಡಬೇಡ, ಲೋಕದಲ್ಲಿ ಮಹಾವೀರರು ಅನೇಕಮಂದಿ ಇರುವರು. ಅವರನ್ನೆಲ್ಲಾ ಗೆಲ್ಲಲು ನೀನು ಎಷ್ಟು ಮಾತ್ರದವನು? ಯೋಚನೆಯಿಲ್ಲದೆ ಕೆಲಸಕ್ಕೆ ಉದ್ಯುಕ್ತನಾದರೆ ನಿಮ್ಮ ವಂಶಕ್ಕೇ ಕೆಟ್ಟಹೆಸರು ಬಂದೀತು ಎಂಬದಾಗಿ ನುಡಿಯುತ್ತಿರುವ ಕೃಷ್ಣಸ್ವಾಮಿಯ ಮಾತುಗಳನ್ನು ಕೇಳಿ ||೬೨|| ಧರ್ಮನಂದನನು, ಎಲೈ ಮಹಾನುಭಾವನೇ ! ನಿನ್ನ ಕರುಣವಿ

......................................................................................................................................................................................................................... ಭೂವರನಮುಕುಟಮಂ ನಾವುದಾರಿದ್ರೇನಮಾಳ್ಪರರಿ | ದಾವುದೊಲಿದೆನ್ನನುದ್ಧರಿಸವೇಳ್ಕೆಂದುನೃಪನಚ್ಯುತನಪದಕೆರಗಲು || ಭೂವರನಮುಕುಟಮಂ ಪಿಡಿದೆತ್ತಿರಾಜವಂ | ಶಾವಳಿಯೊಳುಂಟೆನಿನ್ನಂದನರಸಿನ್ನುನಿನ | ಗೀವಾಜಿಮೇಧಮೇನಚ್ಚರಿಯೆಕೈಕೊಳಾವಿರ್ದುನಡೆಸುವೆ ನೆಂದನು ||೬೩|| ನಳಿನೋದರನವಚನಮುಂಕೇಳ್ದುಸಂತಸಂದಳೆದುನೃಪನಧ್ವರದಕಾರ್ಯಮುಂನಾಡನೆಲೆ | ಗೊಳಿಸಿಪವನಜನನೃಷ ಧ್ವಜಮೇಘನಾದರಂಕುದುರೆತಹುದೆಂದುಬೆಸಸಿ || ಬಳಿಕೋಲಗವನಂದುಬೀಳ್ಕೊಟ್ಟುಹರಿಸಹಿತ | ನಿಳಯದೋಳ್ಷಡ್ರಸಾದಿಗ ಳನಾರೋಗಿಸಿವಿ | ಮಳಹಂಸತೂಲದೊಳ್ಪವಡಿಸಿದನನ್ನೆಗಂತೋರಿತಿನಸೂತನೇಳ್ಗೆ || ೬೪ || ಮೂಡದೆಸೆಯೋಳ್ಕೆಂಪುದೊರೆ

---

ಬಂದುಮಾತ್ರವಿದ್ದರೆ, ವಿಜಯಂ-ಗೆಲುವು, ಸದಾ-ಅನವರತವೂ, ಆಗುವುದು-ಲಭಿಸುವದು. (ಎಷ್ಟರದು) ಆರು-ಯಾರುತಾನೆ ಇದ್ದು-ಇದ್ದುಕೊಂಡು, ಏನ-ಏನನ್ನು, ಮಾಳ್ಪರು-ಮಾಡಿಯಾರು? ಅರಿದು - ಸಾಧ್ಯವಿಲ್ಲದಿರುವುದು, ಆವುದು - ಯಾವುದಿದೆ? ಒಲಿದು-ಪ್ರೀತಿಸಿ, ಎನ್ನಂ-ನನ್ನನ್ನು, ಉದ್ಧರಿಸವೇಳ್ಕಂ-ಕಾಪಾಡಬೇಕು. ಎಂದು-ಎಂಬದಾಗಿ, ನೃಪನು-ಯುಧಿಷ್ಠಿರನು, ಅಚ್ಯುತನ-ಮುರಾಂತಕನ, ಪದಕೆ-ಅಡಿಗಳಿಗೆ, ಎರಗಲು-ವಂದನೆಯಂಗೈಯಲು, ಭೂವರನ-ಅರಸನಾದ ಯುಧಿಷ್ಠಿರನ, ಮುಕುಟಮಂ-ಶಿರೋಭೂಷಣವಾದ ಕಿರೀಟವನ್ನು, ಪಿಡಿದು-ಹಿಡಿದುಕೊಂಡು, ಎತ್ತಿ - ಮೇಲಕ್ಕೆ ಎತ್ತಿ, ರಾಜವಂಶಾವಳಿ ಯೊಳು-ರಾಜರ ಮನೆತನದಲ್ಲೆಲ್ಲಾ, ನಿನ್ನಂದದ-ನಿನ್ನಂಥ, ಅರಸು-ರಾಜನು, ಉಂಟೆ-ಇರುವನೆ? ಇನ್ನು-ಮುಂದೆ, ನಿನಗೆ-ನಿನ ಗಾದರೋ, ಈ ವಾಜಿಮೇಧಂ-ಈ ಅಶ್ವಮೇಧಯಾಗವು, ಅಚ್ಚರಿಯೆ-ಏನು ಆಶ್ಚರ್ಯವು (ನಡೆಯುವುದರಲ್ಲಿ), ಕೈಕೊಳ್-ಉಜ್ಜು ಗಿಸು, ಆವು-ನಾವು, ಇರ್ದು-ಇದ್ದು, ನಡೆಸುವೆವು-ನೆರವೇರುವಂತೆ ಮಾಡುವೆವು. ಎಂದನು-ಹೀಗೆಂದು ನುಡಿದನು ||೬೩||

ಟೀ|| ನಳಿನೋದರನ-ಸರಸಿಜನಾಭನ, ವಚನಮುಂ-ನುಡಿಗಳನ್ನು, ಕೇಳ್ದು-ಆಲಿಸಿ, ಸಂತಸಂದಳೆದು-ಆನಂದವಂ ತಾಳಿ, ನೃಪನು-ರಾಜನು, ಅಧ್ವರದ-ಯಾಗದ, ಕಾರ್ಯಮುಂ-ಕೃತ್ಯವನ್ನು, ನಾಡ-ತನ್ನ ರಾಷ್ಟ್ರದಲ್ಲೆಲ್ಲಾ, ನೆಲೆಗೊಳಿಸಿ-ಪ್ರಕಟ ಪಡಿಸಿ, ಪವನಜ-ವಾಯುಪುತ್ರನಾದ ವೃಕೋದರನನ್ನೂ, ವೃಷಧ್ವಜ-ವೃಷಕೇತುವನ್ನೂ, ಮೇಘನಾದರಂ-ಮೇಘವರ್ಣನೇ ಮೊದಲಾದ ಈ ಮೂರುಮಂದಿಯನ್ನೂ, ಕುದುರೆ-ಹಯವನ್ನು, ತಹದು-ತರಬೇಕು, ಎಂದು-ಎಂಬದಾಗಿ, ಬೆಸಸಿ-ಆಜ್ಞಾ ಪಿಸಿ, ಬಳಿಕ-ತರುವಾಯ, ಅಂದು-ಆ ದಿನ, ಓಲಗವನು-ಆಸ್ಥಾನವನ್ನು, ಬೀಳ್ಕೊಟ್ಟು-ಪೂರ್ತಿಮಾಡಿ, ಹರಿಸಹಿತ- ಶ್ರೀ ಕೃಷ್ಣ ನೊಂದಿಗೆ, ನಿಳಯದೊಳು-ಮಂದಿರದಲ್ಲಿ, ಷಡ್ರಸಾದಿಗಳನು-ಮಾಧುರ್ಯ, ಹುಳಿ, ಕಾರ, ಉಪ್ಪು, ಕಹಿ, ಒಗರು ಇವುಗಳ ರುಚಿ ಯಿಂದೊಡಗೂಡಿದ, ಪದಾರ್ಥಗಳನ್ನು, ಆರೋಗಿಸಿ-ಭುಜಿಸಿ, ವಿಮಲ-ಪರಿಶುದ್ಧವಾದ, ಹಂಸತೂಲದೊಳ್-ಹಂಸತೂಲಿಕಾ ತಲ್ಪದಲ್ಲಿ, ಪವಡಿಸಿದನು-ವಿಶ್ರಮಿಸಿಕೊಂಡನು. ಅನ್ನೆಗಂ-ಅಷ್ಟುಹೊತ್ತಿಗೆ, ಇನ-ರವಿಯ, ಸೂತನ-ಸಾರಥಿಯಾದ ಅರುಣನ, ಏಳ್ಗೆ-ಅಭಿವೃದ್ಧಿಯು, ತೋರಿತು-ಕಂಡುಬಂತು. (ಅರುಣೋದಯವಾಯಿತು) ||೬೪||

ಟೀ|| ಮೂಡದೆಸೆಯೊಳ್-ರವಿಯು ಉದಯಿಸುವ ಪೂರ್ವದಿಕ್ಕಿನಲ್ಲಿ, ಕೆಂಪು-ಅರುಣತೆಯು, ದೊರೆಯೆ-ಪ್ರಾರಂಭ ವಾಗಲು, ತಾರಕೆ-ನಕ್ಷತ್ರಗಳ ಸಮೂಹವು, ಪರಿಯೆ-ಅದೃಶ್ಯವಾಗಲು, ಕೂಡೆ-ಒಡನೆಯೆ, ತಂಗಾಳಿ-ತಣ್ಣಗಿರುವ ವಾಯುವು,

---

ದ್ದರೆ ಯಾವ ಶೂರರುತಾನೆ ನಮ್ಮನ್ನು ಏನುಮಾಡಿಯಾರು? ನಿನ್ನ ಸಹಾಯವು ನಮಗೆ ಇದ್ದರೆ ಜಯವು ಸಿದ್ಧವು. ಕೃಪಾ ಕಟಾಕ್ಷದಿಂದ ನಮ್ಮನ್ನು ನೀನು ಉದ್ಧಾರಮಾಡಿ ಕಾಪಾಡಬೇಕೆಂದು ಸ್ವಾಮಿಯ ಪಾದಗಳಲ್ಲಿ ತನ್ನ ತಲೆಯನಿಟ್ಟನು, ಒಡನೆಯೇ ಕೃಷ್ಣಸ್ವಾಮಿಯು ಕಿರೀಟವನ್ನಿಟ್ಟು ವಿರಾಜಮಾನನಾಗಿರುವ ಯುಧಿಷ್ಠಿರನನ್ನು ಮೇಲಕ್ಕೆಬ್ಬಿಸಿ ಸಮಾಧಾನಪಡಿಸಿ, ಅವನನ್ನು ಕುರಿತು ಹೇಳತೊಡಗಿದನು. ಅಯ್ಯಾ ಧರ್ಮಜನೇ: ಕೇಳು, ಲೋಕದಲ್ಲಿ ನಿನಗೆಣೆಯಾದ ಅರಸು ಮತ್ತೆ ಯಾರಿರು ವರು? ನೀನೇಕೆ ಈರೀತಿ ವ್ಯಸನ ಪಡಬೇಕು. ಈ ಯಾಗವನ್ನು ಮಾಡುವುದು ನಿನಿಗೆ ಏನು ಅಸಾಧ್ಯವು? ಏಕಮನಸ್ಕ ನಾಗಿ ಕಾರ್ಯಾರಂಭವನ್ನು ಮಾಡು. ನಾವುಗಳೆಲ್ಲಾ ಮುಂದಾಳುಗಳಾಗಿ ಕಾರ್ಯವನ್ನು ಆಗಮಾಡಿಸುವೆವು ಎಂದು ಪ್ರಸನ್ನ ನಾಗಿ ನುಡಿದ ಕೃಷ್ಣನ ಮಾತುಗಳನ್ನು ಕೇಳಿ ಯುಧಿಷ್ಠಿರನು ಅತ್ಯಾನಂದಭರಿತನಾದನು. || ೬೩ || ಅನಂತರದಲ್ಲಿ ಯುಧಿಷ್ಠಿ ರನು ಅಶ್ವಮೇಧ ಯಾಗವನ್ನು ಮಾಡುವುದಾಗಿ ತನ್ನ ರಾಷ್ಟ್ರದಲ್ಲೆಲ್ಲಾ ಪ್ರಚಾರಪಡಿಸಿ, ಕುದುರೆಯನ್ನು ತರುವುದಕ್ಕಾಗಿ ಭೀಮ, ವೃಷಕೇತು, ಮೇಘನಾದರಿಗೆ ಅನುಜ್ಞೆಯನ್ನಿತ್ತು, ಸಭೆಯನ್ನು ಪೂರ್ತಿಮಾಡಿಬಿಟ್ಟು, ಕೃಷ್ಣಸ್ವಾಮಿಯೊಂದಿಗೆ ತನ್ನ ಭವನವನ್ನೈದಿ, ಷಡ್ರಸಗಳಿಂದ ಕೂಡಿದ ಮೃಷ್ಟಾನ್ನವನ್ನು ಭುಂಜಿಸಿ, ವಿಶ್ರಾಂತಿಸುಖವನ್ನೈದಲು ದಿವ್ಯವಾದ ಹಂಸತೂಲಿ ಕಾತಲ್ಪವನ್ನು ಸೇರಿದನು. ತರುವಾಯ ಸ್ವಲ್ಪ ಹೊತ್ತಾದಮೇಲೆ ಪೂರ್ವದಿಕ್ಕೆಲ್ಲಾ ಕೆಂಡದಂತೆ ಕೆಂಪಾಗಿಯೂ ನಕ್ಷತ್ರ ಗಳೇ ಕಾಣಿಸದೆಯೂ ಆಗಿ ಹೋಗಿ ತಂಪಗೆ ಗಾಳಿಬೀಸಲು ಆರಂಭವಾಯಿತು. ಕಮಲಗಳೆಲ್ಲಾ ಅರಳಿದವು, ಭೃಂಗಗಳ ಝೇಂಕಾರವು ಕರ್ಣಾನಂದವನ್ನುಂಟು ಮಾಡುತ್ತಲಿತ್ತು, ಚಕ್ರವಾಕ ಪಕ್ಷಿಗಳ ಸಂತೋಷವು ಇಮ್ಮಡಿಯಾಗಿ ದಂಪತಿಗಳು

ಯೆತಾರಕಿಪರಿಯೆ | ಕೂಡೆತಂಗಾಳಿಮುಂಬರಿಯೆಕಮಲಂಬಿರಿಯೆ | ಪಾಡುವೆಳೆದುಂಬಿಗಳ್ಮೊರೆಯೆಚಕ್ರಂನೆರೆಯೆನೈದಿಲೆಯ ಸೊಂಪುಮುರಿಯೆ || ಬೀಡುಗೊಂಡಿರ್ದಕತ್ತಲೆಯಪಾಳೆಯಮೆತ್ತ | ಲೋಡಿದುದೊನೋಡಿದಪೆನೆಂದುಪೂರ್ವಾಚಲದ | ಕೋಡುಗಲ್ಲಂಪತ್ತುನವೊಲಿರ್ದನಾಪ್ರಭೆಯೊಳೌಚಿತ್ಯನಾದಿತ್ಯನು || ೬೫ || ಇಂದುವೇದವ್ಯಾಸಮುನಿವರಂಕೃಪೆಯೊಳೈ | ತಂದುಸನ್ನುತವಾಜಿಮೇಧಮುಂಮಾಡುನೀ | ನೆಂದುನೇಮಿಸಲೇತಕೊಡನೆಗರುಡಧ್ವಜಂತಾನೆಕಾರುಣ್ಯದಿಂದ || ಬಂದುಮೈದೋರಲೇಕಿದುತನ್ನಭಾಗ್ಯವಧು | ವೊಂದುಗೂಡುವಕಾಲಮೆಂಬಹರುಷದೊಳರಸ | ನಂದುನಿದ್ರಾಲಲನೆಯಂಬಿಸುಟನುಪ್ಪವಡಿಸಿದನೋಲಗಂಗೊಟ್ಟನು || ೬೬ || ಆವೇಳೆಯೋಳ್ಪವನಜಂಬಂದುಭೂಪನಡಿ | ದಾವರೆಯೊಳೆರಗಿಪಯಣಕೆಬೆಸಂಬಡೆದರಸು |

ಮುಂಬರಿಯೆ - ಮುಂಚಿತವಾಗಿ ಬೀಸುತ್ತಿರಲಾಗಿ, ಕಮಲಂ-ತಾವರೆಹೂ, ಬಿರಿಯೆ_ಅರಳಲು, ಪಾಡುವ_ಸಂಗೀತಧ್ವನಿಗೈವ, ಎಳದುಂಬಿ - ಸಣ್ಣಸಣ್ಣ ಭ್ರಮರಗಳು, ಮೊರೆಯೆ - ಝೇಂಕಾರವಂ ಮಾಡುತ್ತಿರಲು, ಚಕ್ರಂ_ಜಕ್ಕವಕ್ಕಿಗಳು, ನೆರೆಯೆ-ಜೊತೆಗೂಡುತ್ತಿರಲು, ನೈದಿಲೆಯ_ಕಪ್ಪುತಾವರೆಗಳ, ಸೊಂಪು-ಸೊಗಸು, ಮುರಿಯೆ_ಕುಂದಲು, ಬೀಡುಗೊಂಡಿರ್ದ_ಒಟ್ಟುಗೂಡಿದ್ದ, ಕತ್ತಲೆಯ-ಅಂಧಕಾರದ, ಪಾಳೆಯಂ- ನಿವಾಸಸ್ಥಾನವು, ಎತ್ತಲು-ಯಾವ ಕಡೆಗೆ, ಓಡಿದುದೊ-ಪಲಾಯನಮಾಡಿತೊ, ನೋಡಿದಪೆನು-ಈಕ್ಷಿಸುತ್ತೇನೆ, ಎಂದು_ಎಂಬದಾಗಿ, ಪೂರ್ವಾಚಲದ_ಉದಯಗಿರಿಯ, ಕೋಡುಗಲ್ಲಂ-ತುದಿಯನ್ನು, ಪತ್ತುನವೋಲ್-ಏರುವಂತೆ, ಅವ್ಯಕ್ತನು-ಸ್ಪಷ್ಟವಾಗಿ ದೃಷ್ಟಿಪಥಕ್ಕೆ ಬೀಳದಿರುವ, ಆದಿತ್ಯನು_ಇನನು, ಆ ಪ್ರಭೆಯೊಳು_ಆ ವಿಧವಾದ ಪ್ರಕಾಶದಿಂದ, ಇರ್ದನು_ಇದ್ದನು. ||೬೫||

ಟೀ|| ಇಂದು- ಈ ದಿನ, ವೇದವ್ಯಾಸಮುನಿವರಂ - ತಾಪಸೋತ್ತಮನಾದ ವ್ಯಾಸಮಹರ್ಷಿಯು, ಕೃಪೆಯೊಳು_ವಿಶ್ವಾಸದಿಂದ, ಐತಂದು_ಬಂದು, ನೀನು; ಸನ್ನುತ-ಸ್ತೋತ್ರಾರ್ಹವಾದ, ವಾಜಿಮೇಧಮುಂ_ಹಯಮೇಧವನ್ನು, ಮಾಡುಮುಗಿಸು, ಎಂದು-ಎಂಬತೆರನಾಗಿ, ನಿಯಮಿಸಲು_ಆಜ್ಞಾಪಿಸಿದ್ದು, ಏತಕೆ-ಏನುಕಾರಣವು, ಗರುಡಧ್ವಜಂ_ಗರುಡವಾಹನನಾದ ಸ್ವಾಮಿಯು, ಒಡನೆ_ಕೂಡಲೆ, ಕಾರುಣ್ಯದಿಂ_ಪ್ರೀತಿಯಿಂದ, ತಾನೆ_ತಾನಾಗಿಯೆ, ಬಂದು_ಬಿಜಯಂಗೈದು, ಮೈದೋರಲು-ನಮಗೆ_ಕಾಣಿಸಿಕೊಂಡದ್ದು, ಏಕೆ_ಯಾವಕಾರಣವೋ, ಇದು_ಈ ರೀತಿ ಕೃಷ್ಣದರ್ಶನವು ಲಭಿಸಿದ್ದು, ತನ್ನ-ನನ್ನ ಸಂಬಂಧವಾದ, ಭಾಗ್ಯವಧು_ಐಶ್ವರ್ಯವೆಂಬ ನಾರಿಯು, ಒಂದುಗೂಡುವ_ಒಲಿದು ಬರುವ, ಕಾಲಂ-ಸಮಯವಾಗಿದೆ, ಎಂಬ_ಎಂದು ಹೇಳುವ, ಹರ್ಷದೊಳು_ಸಂತೋಷಾತಿಶಯದಲ್ಲಿ, ಅರಸನು_ಯುಧಿಷ್ಠಿರನು, ಅಂದು_ಆದಿನ, ನಿದ್ರಾಲಲನೆಯನು_ನಿದ್ರೆಯೆಂಬ ಸ್ತ್ರೀಯನ್ನು, ಬಿಸುಟು_ತ್ಯಜಿಸಿ, ಉಪ್ಪವಡಿಸಿ_ಮೇಲಕ್ಕೆದ್ದವನಾಗಿ, ಓಲಗಂಗೊಟ್ಟನು-ಒಡ್ಡೋಲಗವನ್ನು ನಡೆಯಿಸಲಾರಂಭಿಸಿದನು ||೬೬||

ಟೀ|| ಆ ವೇಳೆಯೋಳ್-ಆ ಕಾಲದಲ್ಲಿ, ಪವನಜಂ - ವಾಯುಸೂನುವಾದ ವೃಕೋದರನು, ಬಂದು_ಯುಧಿಷ್ಠಿರನ ಬಳಿಸೇರಿ, ಭೂಪತಿಯ_ಧರ್ಮನಂದನನ, ಅಡಿದಾವರೆಯೊಳ್-ಪಾದಾರವಿಂದಗಳಲ್ಲಿ, ಎರಗಿ_ಪ್ರಣಾಮವನ್ನರ್ಪಿಸಿ, ಪಯಣಕೆ-ಯಾಗ ಪಶುವನ್ನು ತರಲು, ಬೆಸಂಬಡೆದು - ಅನುಜ್ಞೆಯನ್ನು ಹೊಂದಿ, ಅರಸುಗಾವಲಂ - ದೊರೆಯ ಅಂಗರಕ್ಷಣೆಯನ್ನು, ಫಲುಗುಣನೊಳು_ಪಾರ್ಥನಲ್ಲಿ, ಇರಿಸಿ-ಇಟ್ಟು, ಹೈಡಿಂಬಿಯಂ_ಮೇಘವರ್ಣನನ್ನು, ಬರಿಸಿ-ಜತೆಯಲ್ಲಿ ಕರೆದುಕೊಂಡು, ಕರ್ಣಜನ - ವೃಷಧ್ವಜನನ್ನು, ಕರಿಸಿ - ಬರಮಾಡಿಕೊಂಡು, ಆ ವೀರರು - ಆ ಪರಾಕ್ರಮಿಗಳಾದ, ಊರ್ವರ್ವೆರಸಿ - ವೃಷಕೇತು ಮೇಘನಾದರಿಂದೊಡಗೂಡಿ, ರಥಮುಂ_ರಥವನ್ನು, ತರಿಸಿ_ತೆಗಿಸಿಕೊಂಡು, ಬಂದು, ದೇವಪುರ_ವೈಕುಂಠವೆ, ನಿಲಯ_ಆವಾಸ

ಪರಸ್ಪರ ಅಗಲದೆ ಯಾವಾಗಲೂ ಜೋಡಿಯಾಗಿಯೆ ಇರುತ್ತಿದ್ದವು. ಕನ್ನೈದಿಲೆಯ ಕಾಂತಿಗೆ ಭಂಗವುಂಟಾಯಿತು. ಕತ್ತಲೆಯು ಹೋಗಿ ಎಲ್ಲಿ ಸೇರಿದೆಯೋ ನೋಡಬೇಕೆಂದೆಣಿಸಿದಂತೆ ಸೂರ್ಯನು ಪೂರ್ವಗಿರಿಯಲ್ಲಿ ತನ್ನ ಪ್ರಕಾಶವಂ ದಿಕ್ಕು ದಿಕ್ಕುಗಳಿಗೂ ಬೀರಲು ಉಪಕ್ರಮಿಸಿದನು ||೬೫|| ಈ ರೀತಿ ಸೂರ್ಯೋದಯವಾಗುವ ಕಾಲಕ್ಕೆ ಸರಿಯಾಗಿ ಯುಧಿಷ್ಠಿರನು ನಿದ್ರೆಯಿಂದೆಚ್ಚತ್ತು ಈ ದಿನ ಅಕಸ್ಮಾತ್ತಾಗಿ ವ್ಯಾಸಮಹರ್ಷಿಗಳು ಬಿಜಯಮಾಡಿ ಅಶ್ವಮೇಧಯಾಗವಂ ಮಾಡೆಂದು ನನಗೆ ಉಪದೇಶಮಾಡಿದ್ದು, ಶ್ರೀ ಕೃಷ್ಣಸ್ವಾಮಿಯು ಬಂದು ನಮಗೆ ದರ್ಶನವಂ ಕೊಟ್ಟಿರುವುದು, ಇವುಗಳನ್ನು ನೋಡಿದರೆ ನನ್ನ ಭಾಗ್ಯಕ್ಕೆ ಎಣೆಯೇ ಇಲ್ಲವೆಂದು ಆನಂದ ಪರವಶನಾಗಿ ತನ್ನ ಹಾಸಿಗೆಯನ್ನು ಬಿಟ್ಟು ಪ್ರಾತರಾಹ್ನಿಕಗಳನ್ನು ತೀರಿಸಿಕೊಂಡು ಅನಂತರದಲ್ಲಿ ಸಭಾ ಭವನವನ್ನಲಂಕರಿಸಿದನು || ೬೬ || ಆ ಕಾಲಕ್ಕೆ ಸರಿಯಾಗಿ ಭೀಮಸೇನನು ಅಗ್ರಜನ ಬಳಿಗೆ ಬಂದು ಸಾಷ್ಟಾಂಗಪ್ರಣಾಮವಂ ಮಾಡಿ ಯಾಗ ಪಶುವನ್ನು ತರಲು ಅನುಜ್ಞೆಯನ್ನು ಪಡೆದು ರಾಜನ ಅಂಗರಕ್ಷಣೆಗೆ ಪಾರ್ಥನನ್ನು ಗೊತ್ತುಮಾಡಿ, ಹಿಡಿಂಬಿಯ ಮೊಮ್ಮಗನಾದ ಮೇಘವರ್ಣನನ್ನೂ, ಕರ್ಣ ಸುತನಾದ ವೃಷಧ್ವಜನನ್ನೂ ಸಂಗಡ ಕರೆದುಕೊಂಡು

ಗಾನಲಂಘಲುಗುಣನೊಳರಿಸಿಪ್ಪೆಡಿಂಬಿಯಂಬರಸಿಕರ್ಣಜನಕರೆಸಿ || ಆವೀರರೀರ್ವರುಂಬೆರಸಿರಥಮಂತರಿಸಿ | ದೇವಪುರಲಕ್ಷ್ಮೀಶಾನಂಘ್ರಿಗುಪಚರಿಸಿಬಿರು | ದಾವಳಿಯಪಾಠಕರಗಡಣದಿಂ ಪೊರಮಟ್ಟನಾಹಸ್ತಿನಾವತಿಯನು ||೬೭||

ಸಂಧಿ ೨ಕ್ಕೆ ಪದ್ಯ ೬೭ಕ್ಕೆ ಮಂಗಳಮಸ್ತು.

---

ಆವಾಸವಾಗಿರುವ, ಲಕ್ಷ್ಮೀಶನ-ಲಕ್ಷ್ಮೀಕಾಂತನಾದ ಮಹಾನುಭಾವನ, ಅಂಘ್ರಿಗೆ-ಪಾದಾರವಿಂದಗಳಿಗೆ, ಉಪಚರಿಸಿ-ಶುಶ್ರೂಷೆ ಮಾಡಿ, ಬಿರುದಾವಳಿಯ-ಬಿರುದುಗಳ ಸಮೂಹವನ್ನು, ಪಾಠಕರ-ಹೊಗಳುತ್ತಿರುವವರ, ಗಡಣದಿಂ-ಶಬ್ದದಿಂದ, ಆ ಹಸ್ತಿನಾವತಿಯನು-ಆ ಹಸ್ತಿನಾಪುರಿಯನ್ನು, ಪೊರಮಟ್ಟನು-ಬಿಟ್ಟು ಮುಂದೆ ನಡೆದವನಾದನು ||೬೭||

ಎರಡನೆಯ ಸಂಧಿಯು ಸಮಾಪ್ತವು.

---

ಸ್ತುತಿಪಾಠಕರು ಅನೇಕ ಪ್ರಕಾರವಾಗಿ ಹೊಗಳುತ್ತಿರಲು ಈ ಮೂವರೂ ಹಸ್ತಿನಾಪಟ್ಟಣವನ್ನು ಬಿಟ್ಟು ದಿಗ್ವಿಜಯಾರ್ಥವಾಗಿ ಪ್ರಯಾಣಮಾಡಿದರು ||೬೭||

ಇಂತು ಟೀಕಾ ತಾತ್ಪರ್ಯ ಸಹಿತವಾದ ಜೈಮಿನಿಭಾರತದೊಳ್
ಎರಡನೆಯ ಸಂಧಿಯು ಸಮಾಪ್ತವಾದದು.



## ಮೂರನೆಯ ಸಂಧಿ.

ಸೂಚನೆ॥ ಹಸ್ತಿನಾವತಿಯಂ ತಳರ್ದು ಭದ್ರಾವತಿಯ । ವಿಸ್ತಾರಮಂ ತೋರಿದಂ ಸಮೀಪದಗಿರಿಯ । ಮಸ್ತಕ ದೊಳಿರ್ದನಿಲಸಂಭವಂ ಕರ್ಣತನಯಂಗೆ ಸಂಪ್ರೀತಿಯಿಂದ ॥

ಭೂವರಮಣ ಕೇಳ್ಮುಂದೆ ನಡೆಸುವ ಕ । ಥಾವಿಸ್ತರವನಿನ್ನ ಪಯಣಗತಿಯಿಂದ ಭ । ದ್ರಾವತೀದೇಶಮಂ ಪೊಕ್ಕರನಿಲಜನ್ವಷಧ್ವಜಘಟೋತ್ಕಚತನುಜರು ॥ ಆವಗಂ ನಿರ್ಮಲಶ್ರೀಕರಗ್ರಾಹಿ ವ । ತ್ಸಾವಗಂ ಪ್ರಣುತವನಮಾಲಾಸು ಶೋಭಿ ತಾ । ನಾವಗಂ ಮನ್ಮಥೋದ್ಭವಕಾರಿ ಹರಿಯೊಲಾನೆಂಬ ಪೆಂಪಿಂದೆಸೆದುದು ॥ ೧ ॥ ಎಲ್ಲಿಯುಂ ಪರಿವ ಪೆರ್ದೊರೆಯಿಂದ ಕೆರೆಯಿಂದ । ಲೆಲ್ಲಿಯುಂ ಕುಸುಮದಾಗರದಿಂದ ಸರದಿಂದ । ಲೆಲ್ಲಿಯುಂ ರತ್ನಮಯದಿಳೆಯಿಂದ ಬೆಳೆಯಿಂದ ಮಣಿಕೃತಕಶೈಲ

---

ಭದ್ರಮಸ್ತು.

ಸೂಚನೆ॥ ಹಸ್ತಿನಾವತಿಯಂ-ಹಸ್ತಿನಾಪುರಿಯನ್ನು, ತಳರ್ದು - ಬಿಟ್ಟು, ಕರ್ಣತನಯಂಗೆ - ಕರ್ಣಸೂನುವಾದ ವೃಷಧ್ವಜನಿಗೆ, ಸಂಪ್ರೀತಿಯಿಂದ-ಅಧಿಕಮಾದ ವಿಶ್ವಾಸದಿಂದ, ಸಮೀಪದ-ಭದ್ರಾವತಿನಗರದ ಪಕ್ಕದಲ್ಲಿರುವ, ಗಿರಿಯ-ಪರ್ವತದ, ಮಸ್ತಕದೊಳು-ತುದಿಯಲ್ಲಿ, ಇರ್ದ-ಇದ್ದಂಥ, ಅನಿಲಸಂಭವಂ-ವಾಯುಸುತನು, ಭದ್ರಾವತಿಯ-ಭದ್ರಾವತಿಯೆಂಬ ಪಟ್ಟಣದ, ವಿಸ್ತಾರಮಂ-ವೈಶಾಲ್ಯವನ್ನು, ತೋರಿದಂ-ಅರುಹಿದನು ॥

ಟೀ॥ ಭೂವರಮಣ-ಜನಮೇಜಯನೆ? ಮುಂದೆ-ಅನಂತರದಲ್ಲಿ, ನಡೆಸುವ-ನಡೆಯುವಂಥ ಕಥಾವಿಸ್ತಾರಮಂ-ಕಥೆಯ ವೈಶಾಲ್ಯವನ್ನು, ಕೇಳ್-ಲಾಲಿಸು, ಪಯಣ-ಪ್ರಯಾಣದ, ಗತಿಯಿಂದ-ಗಮನದಿಂದ, ಅನಿಲಜ-ವಾಯುಸುತನಾದ ವೃಕೋದರನು, ವೃಷಧ್ವಜ-ಕರ್ಣನಂದನನು, ಘಟೋತ್ಕಚತನುಜರು-ಘಟೋತ್ಕಚನ ಪುತ್ರನಾದ ಮೇಘವರ್ಣನೆ ಮೊದಲಾದ ಮೂರುಮಂದಿಯೂ, ಭದ್ರಾವತೀದೇಶಮಂ-ಭದ್ರಾವತೀ ನಗರಿಯನ್ನು, ಪೊಕ್ಕರು-ಸೇರಿದರು. ಆ ಪಟ್ಟಣವು, ಹರಿಯೊಲು-ಪದ್ಮನಾಭನಂತೆ, ಆವಗಂ-ಅನವರತವೂ, ಶ್ರೀ-ಐಶ್ವರ್ಯದ ಮತ್ತು ಲಕ್ಷ್ಮಿಯ, ಕರ-ಉಂಟಾಗುವಿಕೆ ಮತ್ತು ಕೈಯನ್ನು, ಗ್ರಾಹಿ-ಧರಿಸಿರುವುದು ಮತ್ತು ಹಿಡಿದಿರುವನು, (ಭದ್ರಾವತಿನಗರಿ ಮತ್ತು ವಿಷ್ಣು), ಪ್ರಣುತ-ಸ್ತೋತ್ರಾರ್ಹವಾದ, ವನಮಾಲಾ-ಉದ್ಯಾನಗಳ ಸಾಲು ಮತ್ತು ತುಳಸೀಹಾರ ಇವುಗಳಿಂದ, ಸುಶೋಭಿ-ಹೆಚ್ಚಾಗಿ ಹೊಳೆಯುತ್ತಿರುವದು, ತಾನು-ಅದು, ಆವಗಂ-ಯಾವಾಗಲು, ಮನ್ಮಥ-ಕಾಮುವನ್ನು ಮತ್ತು ಮದನನನ್ನು, ಉದ್ಭವ-ಆಧಿಕ್ಯ ಮತ್ತು ಸೃಷ್ಟಿಯನ್ನು, ಕಾರಿ-ಎಸಗಿದವನು ಮತ್ತು ಎಸಗಿದ್ದು ಆಗಿರುವ ಕಾರಣದಿಂದ, ಆಂ-ನಾನು, (ಭದ್ರಾವತಿನಗರಿಯು), ಹರಿಯವೋಲ್-ಮಹಾ ವಿಷ್ಣುವಿನಂತೆಯೆ ಇರುವೆನೆನ್ನುವ, ಪೆಂಪಿಂದ-ಹೆಮ್ಮೆಯಿಂದ, ಎಸೆದುದು-ಹೊಳೆಯಿತು.

ಅ-ವಿ॥ ಭೂವರಭೂ-(ಸಂ. ಪೂ) ಭೂವರಭೂರಮಣ (ಷ. ತ) ನಿರ್ಮಲಶ್ರೀ-(ವಿ. ಪೂ), ನಿರ್ಮಲಶ್ರೀಯಕರ (ಷ. ತ) ನಿರ್ಮಲ ಶ್ರೀಕರವನ್ನು ಗ್ರಾಹಿ (ಕೃ. ವೃ) ಪ್ರಣುತಮಾದವನಮಾಲಾ-(ವಿ. ಪೂ) ಪ್ರಣುತವನಮಾಲೆಯಿಂದ ಸುಶೋಭಿ (ತೃ. ತ) ಪಯಣ, ತ್ಭ-ಪ್ರಯಾಣ (ತ್ಭ.) ಹರಿ-ವಿಷ್ಣು, ಕೋತಿ, ಕಪ್ಪೆ, ಸಿಂಹ, ಮೊದಲಾದ ನಾನಾರ್ಥಗಳನ್ನೀಯುವುದು॥೧॥

ಟೀ॥ ಎಲ್ಲಿಯುಂ-ಎಲ್ಲಾಕಡೆಯಲ್ಲಿಯೂ, ಪರಿವ-ಪ್ರವಹಿಸುತ್ತಿರುವ, ಪೆರ್ದೊರೆಯಿಂದ-ಹೆಚ್ಚಿಗೆಯ ಹೊಳೆಗಳಿಂದಲೂ, ಕೆರೆಯಿಂದ-ಕೆರೆಗಳಿಂದಲೂ, ಎಲ್ಲಿಯುಂ-ಸಮಸ್ತವಾದ ಪ್ರದೇಶಂಗಳಲ್ಲಿಯೂ, ಕುಸುಮದ-ಪುಷ್ಪಗಳ, ಆಗರದಿಂದ-ಗೃಹಗಳಿಂದಲೂ, ಸರದಿಂದ-ಸರೋವರಗಳಿಂದಲೂ, ಎಲ್ಲಿಯುಂ - ಎಲ್ಲೆಡೆಗಳಲ್ಲಿಯೂ, ರತ್ನಮಯದ - ರತ್ನಖಚಿತವಾದ,

---

ಶ್ರೀರಸ್ತು.

ಅನಂತರದಲ್ಲಿ ಜೈಮಿನಿರುಷಿಯು ಧರಾವಲ್ಲಭನಾದ ಜನಮೇಜಯನಂ ಕುರಿತು, ಕೇಳ್ ಜನಮೇಜಯನೆ, ಮುಂದೆ ನಡೆದ ಕಥಾ ವೃತ್ತಾಂತವಂ ಪೇಳುವೆನು:—ಬಳಿಕ ವಾಯುಸೂನುವಾದ ವೃಕೋದರನೂ, ಕರ್ಣ ತನುಜನಾದ ವೃಷಧ್ವಜನೂ, ಹಿಡಿಂಬಿಯ ಮೊಮ್ಮಗನಾದ ಮೇಘವರ್ಣನೂ ಸಹ ಧರ್ಮಪುತ್ರನಾದ ಯುಧಿಷ್ಠಿರನು ಕೊಟ್ಟ ಅಪ್ಪಣೆಯನ್ನು ತಮ್ಮತಮ್ಮ ತಲೆಗಳಲ್ಲಿ ಧರಿಸಿದವರಾಗಿ ಹಸ್ತಿನಾವತಿಯಿಂದ ಪ್ರಯಾಣವಂಬೆಳಸಿ ಮುಂದೆ ಬರುತ್ತಿರುವಾಗ ಆ ಯೌವನಾಶ್ವನೆಂಬ ಮಹಾರಾಯನ ದೇಶದ ಎಲ್ಲೆಯು ಅಧಿಕವಾದ ಐಶ್ವರ್ಯವನ್ನು ಧರಿಸಿ, ಮನೋಹರಂಗಳಾದ ಉದ್ಯಾನಂಗಳನ್ನೊಳಕೊಂಡು, ಮಹಾತಿಶಯವುಳ್ಳದ್ದಾಗಿ ಲಕ್ಷ್ಮೀರಮಣನಾಗಿಯೂ, ತುಲಸೀಮಾಲಾಂಕೃತನಾಗಿಯೂ, ಮನ್ಮಥನ ಉತ್ಪತ್ತಿಗೆ ಕಾರಣಭೂತನಾಗಿಯೂ ಇರುವ ಮಹಾವಿಷ್ಣುವಿಗೆ ನಾನೂ ಸಮಾನವಾಗಿದೇನೆಂಬ ಹೆಮ್ಮೆಯಿಂದ ಹೊಳೆಯುತ್ತಲಿರುವುದನ್ನು ॥ ೧ ॥ ಮತ್ತ ಯಾವಯಾವಕಡೆ ತಿರುತಿರುಗಿ ನೋಡಿದರೂ ಕೂಡ ಭೋರೆಂದು ಹರಿಯುತ್ತಿರುವ ನದಿಗಳು, ದೊಡ್ಡ

ದಿಂದ ॥ ಎಲ್ಲಿಯುಂ ಸುಳಿವಗೋವ್ರಜದಿಂದ ಗಜದಿಂದ | ಲೆಲ್ಲಿಯುಂ ಕತ್ತುರಿಯಮೃಗದಿಂದ ಖಗದಿಂದ | ಲೆಲ್ಲಿಯುಂವಿರಚಿತ
ಭವನದಿಂದಜನದಿಂದ ಲಾನಾಡಸಿರಿ ಮೆರೆದುದು ॥ ೨ ॥ ಅಂಚೆವಿಂಡಾಡದಕೊಳಂ ಕೊಳಗಳೊಳುಸಲೆ ಪ | ಳಂಚಿಸುಳಿಯದ
ಗಾಳಿ ಗಾಳಿಗಳಬಳಿವಿಡಿದು | ಸಂಚರಿಸುವೆಳೆದುಂಬಿ ದುಂಬಿಗಳಬಿಡಯುಕಿಂಪೆನಿಸದಚ್ಚಲರಲರ್ಗಳ ॥ ಗೊಂಚಲೆರಗಿಸದಲತೆ
ಲತೆಗಳಡರದತಳ್ಕಿ | ನಿಂಚಿಗುರಿಸದಮಾವು ಮಾವುಗಳಚಂದಳಿ | ರ್ಮಿಂಚದಬನಂ ಬನಗಳಿಂಬಳಸದೂರೂರ್ಗಳಿಲ್ಲ ದೆಡೆಯಿಲ್ಲಿ
ಳೆಯೊಳು ॥ ೩ | ಬೆಳೆಯುದಪೊಲಂಗಳಂ ಬೆಳ್ದಾವರೆಗಳಲ | ರ್ದಳೆಯದಕೊಳಂಗಳಂ ಮಣಿಶಿಲಾರೋಚಿಯಿಂ | ಪೊಳೆಯ

---

ಇಳೆಯಿಂದ–ಧರಾವಲಯದಿಂದಲೂ. ಬೆಳೆಯಿಂದ - ಪೈರುಗಳ ಭೂಮಿಗಳಿಂದಲೂ, ಮಣಿ - ರನ್ನಂಗಳಿಂದ, ಕೃತಕ–ರಚಿಸಲ್ಪಟ್ಟ, ಶೈಲದಿಂದ–ಬೆಟ್ಟದಿಂದಲೂ, ಎಲ್ಲಿಯುಂ–ಸರ್ವಪ್ರದೇಶಗಳಲ್ಲಿಯೂ, ಸುಳಿವ–ತಿರುಗಾಡುತ್ತಿರುವ, ಗೋವ್ರಜದಿಂದ–ಧೇನುಸಮುದಾಯದಿಂದಲೂ, ಗಜದಿಂದಲು-ಹಸ್ತಿಸಮೂಹದಿಂದಲೂ, ಎಲ್ಲಿಯೂ - ಅಶೇಷಸ್ಥಳಂಗಳಲ್ಲಿಯೂ, ಕತ್ತುರಿಯ ಮೃಗದಿಂದ–ಕಸ್ತುರಿಮೃಗಂಗಳಿಂದಲೂ, ಖಗದಿಂದ - ಹಕ್ಕಿಗಳಿಂದಲೂ, ಎಲ್ಲಿಯು-ಎಲ್ಲಾ ಕಡೆಗಳಲ್ಲಿಯೂ, ವಿರಚಿತ–ಮಾಡಲ್ಪಟ್ಟ, ಭವನದಿಂದ–ಗೃಹಗಳಿಂದಲೂ, ಜನದಿಂದ-ಮನುಷ್ಯರಿಂದಲೂ, ಆನಾಡ–ಆ ಜನಪದದ, ಸಿರಿ-ಐಶ್ವರ್ಯವು, ಮೆರೆದುದು–ಕಾಂತಿಯನ್ನೈದಿತು ॥ ೨ ॥

ಟೀ॥ ಇಳೆಯೊಳು-ಆ ಭದ್ರಾವತೀ ದೇಶಕ್ಕೆ ಸಂಬಂಧಪಟ್ಟ ಭೂಪ್ರದೇಶದಲ್ಲಿ, ಅಂಚೆ–ಹಂಸಪಕ್ಷಿಗಳ, ವಿಂಡು–ಗುಂಪು. ಆಡದ-ತಿರುಗಾಡದಿರುವ, ಕೊಳಂ-ಬಾವಿಗಳು, ಕೊಳಗಳೊಳು–ಆ ಪ್ರಕಾರವಾದ ಕೊಳಗಳಲ್ಲಿ.ಸಲೆ– ಚನ್ನಾಗಿ, ಪಳಂಚಿ–ಆವರಿಸಿಕೊಂಡು, ಸುಳಿಯದ–ಚಲಿಸದಿರುವ, ಗಾಳಿ–ವಾಯುವು, ಗಾಳಿಗಳ-ಉಪವನಗಳ, ಬಳಿವಿಡಿದು–ದಾರಿಯನ್ನೈದಿ, ಸಂಚರಿಸದ–ಸಂಚಾರಮಾಡದೆ ಇರುವ, ಎಳದುಂಬಿ-ಮರಿದುಂಬಿಗಳು, ದುಂಬಿಗಳಬಿಡಯುಕೆ–ಆ ಅಳಿಗಳ ಗುಂಪಿಗೆ, ಇಂಪೆನಿಸದ–ಸುಖದೋರದಿರುವ, ಅಚ್ಚಲರು-ಕಲ್ಮಷರಹಿತವಾದ ಪುಷ್ಪಗಳು, ಅಲರ್ಗಳ–ಆ ಹೂಗಳ, ಗೊಂಚಲ–ಗುಚ್ಛಂಗಳನ್ನು, ಎರಗಿಸದ–ಬಿಡದಿರುವ, ಲತೆ-ಎಳೆಬಳ್ಳಿಗಳು, ಲತೆಗಳು–ಆ ಬಳ್ಳಿಗಳ ರಾಶಿಯು, ಅಡರದ–ಆಕ್ರಮಿಸದಿರುವ, ತಳ್ಕಿನಿಂ-ಪ್ರಕಾಶದಿಂದ, ಚಿಗುರಿಸದ–ಚಿಗುರನ್ನು ಹೊಂದದಿರುವ, ಮಾವು-ಚೂತವೃಕ್ಷಂಗಳು, ಮಾವುಗಳ–ಆ ಚೂತವೃಕ್ಷಂಗಳ, ಚಂದಳಿರ್–ಕೆಂಪು ಚಿಗುರುಗಳಿಂದ, ಮಿಂಚದ–ಹೊಳೆಯದಿರುವ, ಬನಂ–ತೋಟಗಳು, ಬನಂಗಳಿಂ–ಆರೀತಿಯಾದ ಉದ್ಯಾನಗಳಿಂದ ಬಳಸದ-ಆವರಿಸದ, ಊರು-ಹಳ್ಳಿಗಳು, ಊರ್ಗಳಿಲ್ಲದ-ಆತೆರನಾದ ಹಳ್ಳಿಗಳಿಂದ ಕೂಡದ, ಎಡೆ–ಸ್ಥಳಗಳು, ಇಲ್ಲ–ಇರಲಿಲ್ಲ.

ಅ॥ ವಿ॥ ಅಂಚೆ (ತ್ಭ). ಹಂಸ (ತ್ಸ). ಅಚ್ಛ (ತ್ಸ). ಅಚ್ಚ (ತ್ಭ). ಬನ (ತ್ಭ). ವನ (ತ್ಸ). ॥೩॥

ಟೀ॥ ಅನುಹೀಮಂಡಲದೊಳು–ಆ ಭದ್ರಾವತೀನಗರಕ್ಕೆ ಸೇರಿದ ಸ್ಥಳಂಗಳಲ್ಲಿ, ಬೆಳಯದ–ಫಲಿಸದಿರುವ, ಪೊಲಂಗಳಂ–ಬೆದ್ದಲುಗಳನ್ನು, ಬೆಳ್ದಾವರೆಗಳ - ಪುಂಡರೀಕಂಗಳ, ಅಲರ್ - ಪುಷ್ಪವು, ತಳೆಯದ - ಅರಳದಿರುವ, ಕೊಳಂಗಳಂ–ಕೊಳಗಳನ್ನು, ಮಣಿಶಾಲಾ - ರನ್ನಮನೆಗಳ, ರೋಚಿಯಿಂ - ಪ್ರಕಾಶದಿಂದ, ಪೊಳೆಯದ - ಕಾಂತಿಯನ್ನೀಯದಿರುವ, ಅಚಲಂಗಳಂ–ಗಿರಿಗಳನ್ನು, ತರುಣ - ಹೊಸದಾದ, ಅರುಣ - ಸೂರ್ಯನ ಸಾರಥಿಯ, ಪ್ರಭಾ–ಹೊಳಪೆಂಬ, ಲಕ್ಷ್ಮಿಯಂ–ಸಂಪತ್ತನ್ನು, ನಗುವಂತೆ–ಹಾಸ್ಯಮಾಡುವಹಾಗೆ, ಇರೆ–ಇರಲು, ತಳೆಯದ - ಚಿಗುರುಗಳಿಂದ ರಹಿತವಾದ, ಬನಂಗಳಂ–ತೋಟಗಳನ್ನು, ಕಿವಿಯೊಳು–ಕಿವಿಯಲ್ಲಿ, ಇಡಿದು–ಸೇರಿ, ಅಸರಂ-ಶ್ರಮವನ್ನು, ಕಳೆಯದ–ನೀಗದಿರುವ, ಸ್ವನಂಗಳಂ–ಸಂಗೀ

---

ದೊಡ್ಡ ಕೆರೆಗಳು, ಮನೋಹರವಾದ ಆರಾಮಂಗಳು, ಸರೋವರಂಗಳು, ರತ್ನಗರ್ಭಿತವಾದ ಭೂಪ್ರದೇಶಗಳು, ಎತ್ತರವಾದ ಮೈದಾನಂಗಳು. ಮಾಡುವೆಟ್ಟಗಳು, ದನದ ಮಂದೆಗಳು, ಆನೆಯ ಹಿಂಡುಗಳು, ಕಸ್ತುರಿಮೃಗಂಗಳು, ಪಕ್ಷಿಗಳ ಗುಂಪುಗಳು, ದೊಡ್ಡದೊಡ್ಡ ಮನೆಗಳು ಇವುಗಳಿಂದ ಅತಿ ಮನೋಹರವಾಗಿರುವದನ್ನೂ ಕಂಡರು ॥ ೨ ॥ ತರುವಾಯ ಮತ್ತೆ ಸ್ವಲ್ಪ ಮುಂದೆ ನಡೆಯಲು ಮನೋಹರವಾದ ಕೊಳಗಳು ಕಾಣಬಂದವು. ಅವುಗಳಲ್ಲಿ ಹಂಸಪಕ್ಷಿಗಳು ಆಟವನ್ನಾಡುತ್ತಿದ್ದವು. ಅಲ್ಲಿ ಮಂದಮಾರುತವು ಬೀಸುತ್ತಿದ್ದದ್ದರಿಂದ ಎಲ್ಲೆಲ್ಲಿಯೂ ಭೃಂಗಗಳು ಹಾರಾಡುತ್ತಿದ್ದವು. ಎಲ್ಲೆಲ್ಲಿಯೂ ಸುವಾಸನೆಯುಳ್ಳ ಪುಷ್ಪಗಳೂ, ಎಳೆಬಳ್ಳಿಗಳೂ ತುಂಬಿ ನೋಟಕ್ಕೆ ಅತ್ಯಂತ ರಮಣೀಯವಾಗಿತ್ತು. ಮಾವಿನ ಮರಗಳ ಚಿಗರಿನಿಂದ ಎಲ್ಲಾ ಊರುಗಳೂ ಕಾಂತಿಯುಕ್ತವಾಗಿದ್ದವು, ಇವುಗಳಿಂದ ರಹಿತವಾದ ಊರೇ ಈ ಭದ್ರಾವತಿ ನಗರಕ್ಕೆ ಸೇರಿಲ್ಲವೆಂಬಂತೆ ಹೊಳೆಯುತ್ತಿತ್ತು ॥ ೩ ॥ ಆ ನಾಡಿನಲ್ಲಿ ಎಲ್ಲಿ ನೋಡಿದರೂ ಫಲಭರಿತವಾದ ಹೊಲಗಳು ಕಾಣುತ್ತಲಿದ್ದುವಲ್ಲದೆ ಬೀಡುಭೂಮಿಯನ್ನು ನೋಡುವದು ಬಹು ಅಪೂರ್ವವಾಗಿತ್ತು. ಸರೋವರಗಳಲ್ಲಿ ಕಮಲ ಪುಷ್ಪಂಗಳು ತುಂಬಿ ರಮಣೀಯವಾಗಿತ್ತಲ್ಲದೆ ಇವುಗಳಿಂದ ರಹಿತವಾದ ಕಾಸಾರ ವೊಂದೂ ಕಾಣದು. ಪರ್ವತಗಳೆಲ್ಲಾ ರತ್ನಖಚಿತವಾಗಿದ್ದವು. ಉದ್ಯಾನವನ

ದಚಲಂಗಳಂತರುಣಾರುಣಪ್ರಭಾಲಕ್ಷ್ಮಿಯುಂನಗುವಂತಿರೆ || ತಳಿಯುದಬನಂಗಳಂಕಿವಿಯೊಳಿಡಿದಾಸರಂ | ಕಳಿಯದಸ್ವನಂಗಳಂಮನಕನವರತಸುಖಂ | ಮೊಳೆಯದಜನಂಗಳಂಮುಳಿದರಸಲಾಂಕಾಣೆನಾಮಹೀಮಂಡಲದೊಳು ||೪|| ಉರ್ವರೆಯಶಾಲಿಗಳಪಾಲ್ದೆನೆಗೆನಭದಿಂಮುಗುರ್ವಿಗಿಳಿವಿಂಡುಗಳನುಲಿಯಿಂದಪಾಮರಿಯರೇರ್ವಿಸಿದೊಡಿರದೆ | ಬಾಂದಳಕೆಮಗುಳೇಳ್ವವೋಲ್ಕಲಮಂಗಳಿಕ್ಕೆಲದೊಳು || ಕೊರ್ವಿನಳಿನಳಿಸಿನಿಳ್ದುರೆಬೆಳೆದರಸದಾಳಿ | ಗರ್ವುಗಳಸೋಗೆಗಳಪಸುರುವಗರಾಗಸಕೆ | ಪರ್ವುತಿತ್ತಾನಾಡೊಳೆಲ್ಲಿಯುಂದಾರಿಗರಕಣ್ಗೆ ಕೌತುಕವಾಗಲು || ೫ || ತಂಬೆಲರಸೊಗಸಿಂಗೆತಲೆದೂಗುವಂತೆತಳೆ | ದಂಬುಜದಪರಿಮಳಕೆಶಿರವನೊಲೆವಂತೆ | ಮರಿದುಂಬಿಗಳಗಾನಕ್ಕೆಕೊರಳನೊಲದಾಡುವಂತೊಯ್ಯೊಯ್ಯನೊಲದಾಡುವ || ಪೊಂಬಣ್ಣವೆಸೆವಕಳಮಶ್ರೀಯಪರಿಚರ್ಯ | ಮಂಬಿಡವೆಮಾಳ್ಪಕೆಳದಿಯರೆನಲ್ಕೀರನಿಕು | ರುಂಬಮಂಸೋವಲೆಂದಲ್ಲಿರ್ದಪಾಮರಿಯರ

---

ತಾಲಾಪಂಗಳನ್ನು, ಮನಕೆ–ಹೃದಯಕ್ಕೆ, ಅನವರತ–ಸರ್ವದಾ, ಸುಖಂ-ಸೌಖ್ಯವು, ಮೊಳೆಯದ–ಅಂಕುರಿಸದಿರುವ, ಜನಂಗಳಂ-ಪ್ರಜೆಗಳನ್ನು, ಮುಳಿದು–ಬೇಸರಗೊಂಡು, ಅರಸಲು–ಹುಡುಕಾಡಲಾಗಿ, ಆಂ–ನಾನು, ಕಾಣೆನು–ನೋಡಲೇ ಇಲ್ಲವು.

ಅ|| ವಿ|| “ಬೆಳೆ” ಎಂಬುದು ಸಸ್ಯವೃದ್ಧಿಯಲ್ಲಿಯೂ “ಬಳೆ” ಇತರ ವಸ್ತುಗಳ ಅಭಿವೃದ್ಧಿಯಲ್ಲಿಯೂ ಪ್ರಯೋಗಿಸಲ್ಪಡುವುದು. ||೪||

ಟೀ|| ಆನಾಡೊಳು- ಆ ಭದ್ರಾವತೀ ದೇಶದಲ್ಲಿ, ಉರ್ವರೆಯ-ಪೈರುಗಳು ಬೆಳೆಯಲು ಅರ್ಹತೆಯನ್ನೈದಿದ ಭೂಪ್ರದೇಶದ, ಶಾಲಿಗಳ–ನೆಲ್ಲಿನ ಪೈರುಗಳ, ಪಾಲ್ದೆನೆಗೆ-ಹಾಲು ಹಿಡಿದಿರುವ ತೆನೆಗಳಿಗೆ, ನಭದಿಂ–ಅಂತರಿಕ್ಷದಿಂದ, ಮುಗುರ್ವ–ಮುಂದರಿದು ಹಾರಿ ಬರುವ, ಗಿಳಿವಿಂಡುಗಳ – ಶುಕಸಮೂಹಗಳನ್ನು, ಪಾಮರಿಯರು - ರೈತರ ಹೆಂಗಸರು (ಒಕ್ಕಲಗಿತ್ತಿಯರು), ಉಲಿಯಿಂದ–ಕೂಗುವಿಕೆಯಿಂದ, ಎರ್ವಿಸಿದೊಡೆ–ಚದರಿಸಲಾಗಿ, ಇರದೆ- ಆದೇಸ್ಥಳವನ್ನಾಶ್ರಯಿಸದೆ, ಬಾಂದಳಕೆ–ಅಂತರಿಕ್ಷಮಾರ್ಗಕ್ಕೆ, ಮಗುಳೆ-ಪುನಃ, ಏಳ್ವವೊಲ್ - ಹಾರಿಹೋಗುವಂತೆ, ಕಲಮಂಗಳ – ನೆಲ್ಲಿನ ಗದ್ದೆಗಳ, ಇಕ್ಕೆಲದೊಳು–ಉಭಯಪಾರ್ಶ್ವಗಳಲ್ಲಿಯೂ, ಕೊರ್ವಿ–ಮುದಿಸಿ, (ಪಕ್ವವಾಗಿ), ನಳನಳಿಸಿ – ಹೊಳೆಹೊಳೆಯುತ್ತ, ನಿಳ್ದು–ನಿಂತುಕೊಂಡು, ಉರೆ–ಅಧಿಕವಾಗಿ, ಬೆಳೆದ – ಬೆಳೆದಿರುವ, ರಸದಾಳಿ – ರಸತಾಳೆ ಎಂಬ ಭೇದವುಳ್ಳ, ಕರ್ವುಗಳ-ಕಬ್ಬುಗಳ ಅಥವ ಇಕ್ಷುದಂಡಗಳ, ಸೋಗೆಗಳ–ಗರಿಗಳ, ಪಸರುವಗರು – ಹಸರು ಬಣ್ಣವು, ಆಗಸಕೆ–ಅಂತರಿಕ್ಷಕ್ಕೆ, ಪರ್ವುತ–ಹಬ್ಬುತ್ತ, ದಾರಿಗರ–ಪ್ರಯಾಣಿಕರ, ಕಣ್ಗಿಗೆ-ನಯನಂಗಳಿಗೆ, ಕೌತುಕಂ–ಆಚ್ಚರಿಯು, ಆಗಲು–ಆಗಲಾಗಿ, ಎಲ್ಲಿಯುಂ–ಎಲ್ಲಾ ಸ್ಥಳಗಳಲ್ಲಿಯೂ, ಇತ್ತು-ಆಗಿತ್ತು ||೫||

ಟೀ|| ತಂಬೆಲರ-ತಂಗಾಳಿಯ, ಸೊಗಸಿಂಗೆ–ಚೆಲ್ವಿಗೆ, (ಮನೋಹರತ್ವಕ್ಕೆ), ತಲೆದೂಗುವಂತೆ–ತಲೆಯನ್ನು ಅಲ್ಲಾಡಿಸುವ ಹಾಗೆ, ತಳೆದ–ಪೂರ್ಣವಾಗಿರುವ, ಅಂಬುಜದ–ತಾವರೆಯು, ಪರಿಮಳಕೆ–ಸುರಭಿಗೆ, ಶಿರವನು-ಶಿರಸ್ಸನ್ನು, ಒಲವಂತೆ–ತೂಗುವಂತೆ, ಮರಿದುಂಬಿಗಳ–ಸಣ್ಣಸಣ್ಣ ಭೃಂಗಂಗಳ, ಗಾನಕ್ಕೆ–ಹಾಡುವಿಕೆಗೆ, ಕೊರಳನು-ಕಂಠವನ್ನು, ಒಲದಾಡುವಂತೆ–ಚಲಿಸುತ್ತಿರುವಂತೆ, ಒಯ್ಯೊಯ್ಯನೆ–ಮೆತ್ತಮೆತ್ತಗೆ, ಒಲದಾಡುವ-ಅಲ್ಲಾಡುವ, ಪೊಂಬಣ್ಣಂ–ಚಿನ್ನದ ವರ್ಣದಿಂದ, ಎಸೆವ–ಹೊಳೆಯುತ್ತಿರುವ, ಕಳಮಶ್ರೀಯ–ಭತ್ತದ ಪೈರೆಂಬ ಲೋಕಮಾತೆಯ, ಪರಿಚರ್ಯೆಯಂ–ಚಾಕರಿಯನ್ನು (ಉಪಚಾರವನ್ನು), ಬಿಡದೆ-ತಪ್ಪದೆ, ಮಾಳ್ಪ–ಎಸಗುವ, ಕೆಳದಿಯರು–ಸಂಗಾತಿಯರು, ಎನಲು–ಎಂಬಂತೆ, ಕೀರನಿಕುರಂಬಮಂ–ಗಿಳಿವಿಂಡನ್ನು, ಸೋವಲು–ಅಟ್ಟಲು, ಎಂದು–ಎಂಬ ತೆರನಾಗಿ, ಅಲ್ಲಿ-ಆ ನೆಲ್ಲಿನಗದ್ದೆಯಲ್ಲಿ, ಇದ್ದ-ಇದ್ದಂಥ, ಪಾಮರಿಯರು-ಒಕ್ಕಲಗಿತ್ತಿಯರು, ಅಧ್ವಗರ–ಮಾರ್ಗಸ್ಥರ, ನಡೆ–ಗಮನವನ್ನು, ಕೆಡಿಸರು–ಭಂಗಪಡಿಸುತ್ತಿರುವರು. ||೬||

---

ಲಕ್ಷ್ಮಿಯಂ–ಶ್ರೀ ಮಹಾಲಕ್ಷ್ಮಿಯನ್ನು ಕೂಡ ಹಾಸ್ಯಮಾಡುವಂತೆ ಇತ್ತು, ಎಲ್ಲಿ ನೋಡಿದರೂ ಸಂಗೀತರವವೂ ಸಜ್ಜನಾಲಾಪವೂ ಕೇಳಿ ಬರುತ್ತಲಿದ್ದುವೇ ಹೊರತು ಇವುಗಳು ಇಲ್ಲದೆಡೆಗಳನ್ನು ಕಾಣುವುದೇ ದುರ್ಲಭವಾಗಿತ್ತು, ||೪|| ಮತ್ತು ಆ ದೇಶದ ಎಲ್ಲಾ ಗದ್ದೆಗಳಲ್ಲಿಯೂ ಭತ್ತದ ಪೈರು ಚೆನ್ನಾಗಿ ಬಲಿತು ಇರುವುದನ್ನು ತಿನ್ನಲು ಬಯಸಿ ಬರುವ ಗಿಳಿವಿಂಡನ್ನು ಕಾವಲಗಾರ್ತಿಯರು ಚದರಿಸಿ ಬಿಡಲಾಗಿ ಅವುಗಳೆಲ್ಲಾ ಗದ್ದೆಗಳ ಇರ್ಕಡೆಗಳಲ್ಲಿಯೂ ಬೆಳದಿರುವ ರಸದಾಳೆ ಕಬ್ಬುಗಳ ಮೇಲೆ ಕೂತು ನಭೋಮಂಡಲದವರೆಗೂ ವ್ಯಾಪಿಸಿವೆಯೊ ಎಂಬಂತೆ ಕಬ್ಬಿನ ಪೈರುಗಳು ಬೆಳದಿರುವುದನ್ನು ದಾರಿಗರು ನೋಡಿ ಆಶ್ಚರ್ಯಪಡುತ್ತಿದ್ದರು ||೫|| ಅಲ್ಲದೆ ಮಂದಮಾರುತವೂ, ಕಮಲ ಪುಷ್ಪಗಳ ಸುರಭಿಯೂ, ಸಂಗೀತರವವೂ ಜನರ ಮನಸ್ಸನ್ನು ಎಂತು ಆನಂದಗೊಳಿಸುವುದೋ ಅದೇತೆರನಾಗಿ ಎಲ್ಲೆಡೆಗಳಲ್ಲಿ ಬೆಳದಿರುವ ಹಳದಿ ಬಣ್ಣದ ಬತ್ತದ ತೆನೆಗಳ ಸಮೂಹವೂ, ಗಿಳಿವಿಂಡುಗಳ ಕಂಠಧ್ವನಿಯೂ, ರೈತರ ಹೆಂಗಸರ ಶಬ್ದಪರಂಪರೆಯೂ ಮಾರ್ಗಸ್ಥರ ಮನಸ್ಸನ್ನು ಆನಂದಗೊಳಿಸು

ಧ್ವನಿಗರನಡೆಗೆಡೆಸರು ||೬|| ಪಾಲ್ಗೆನೆಯೊಳಂಡಿಸಿದಗಿಳಿವಿಂಡನಬಲೆಯ | ಕರ್ಾಲ್ದೆಗೆಯಲಾರ್ದುಕೈಪರೆಗುಟ್ಟುವಂಡಲೆಗೆ | ತೇಲ್ದು ಮೇಲುದುಜಾರೆತೋರ್ಪಪೊಂಗೊಡವೊಲೆಯುನಂಬುಜದಮುಕುಳಮೆಂದು || ಸೋಲ್ದೆರಗಿತಿರುತಿರುಗಿಬರುತಿರ್ಪತುಂಬಿಗಳ | ಸಾಲ್ದಿವಿಜಗಿರಿಯುಂಬಳಸಿದತಮೋರಾಜಿಯುಂ | ಪೋಲ್ದುಸಲೆಕಂಗೊಳಿಸುತಿರ್ಪುದಾಭೂತಳದೊಳೇನೆಂಬೆನಚ್ಚರಿಯನು ||೭|| ಶಾಲಿಗಳಕೈಗಂಪ ಪೊಲಗಾವ ಪಾಮರಿಯ | ಓಳಿಗಳ ಮೈಗಂಪಸತತ ಕುಸುಮಿತತರುಲ | ತಾಳಿಗಳ ಪೂಗಂಪತಿಳಿಗೊಳದೊಳಲರ್ದಪೊಚ್ಚಪೊಂದಾವರೆಗಳ || ಧೂಳಿಗಳತನಿಗಂಪನುಂಡುಮಿಂಡೆದ್ದಭೃಂ | ಗಾಳಿಗಳಬಳಗಂಪರಿಯಲೊಡನೆ ಸುಳಿವತಂ | ಗಾಳಿಗಳಕಡುಗಂಪಸೇವಿಸುತಪಥಿಕರಾಸರ್ಗಳೆವರಾನಾಡೊಳು || ೮ || ಬಟ್ಟೆಬಟ್ಟೆಯೊಳೆಲ್ಲಿಯುಂಕುಳಿರ್ವೆರಸಿ

---

ಟೀ|| ಪಾಲ್ಗೆನೆಯೊಳು - ಹಾಲು ಹಿಡಿದ ನೆಲ್ಲಿನತೆನೆಗಳಲ್ಲಿ, ಅಂಡಿಸಿದ-ಕುಳಿತಿರುವ, ಗಿಳಿವಿಂಡನು - ಶುಕಸಮೂಹವನ್ನು, ಅಬಲೆಯರು-ಬೆಳೆಗೆ ಕಾವಲಿರುವ ಹೆಂಗಸರು, ಕಾಲ್ದೆಗೆಯಲು-ನಡೆಯಲು, ಆರ್ದು-ಧ್ವನಿಗೈಯುತ್ತ, ಕೈಪರೆಗುಟ್ಟುವ-ಕರಗಳನ್ನು ಪರಸ್ಪರತಟ್ಟುವುದರ, ಅಂಡಲೆಗೆ-ಬಾಧೆಗೆ, ತೇಲ್ದು- ಜಾರಿಹೋಗಿ, ಮೇಲುದ - ಮೇಲ್ಸೆರಗು, ಜಾರೆ-ಜಾರಲು ತೋರ್ಪ-ಕಂಡು ಬರುವ, ಪೊಂಗೊಡ - ಚಿನ್ನದ ಬಿಂದಿಗೆಯ ಹಾಗಿರುವ, ವೊಲೆಯನು-ಕುಚವನ್ನು. ಅಂಬುಜದ ಮುಕುಳಮೆಂದು-ತಾವರೆ ಮೊಗ್ಗೆಂದು, ಸೋಲ್ದು-ಭ್ರಾಂತಿಪಟ್ಟು, ಎರಗಿ-ಕುಚಗಳ ಸಮೀಪಕ್ಕೆ ಬಂದು, ತಿರುತಿರುಗಿ-ಸುತ್ತಿ ಸುತ್ತಿ, ಬರುತಿರ್ಪ-ಹತ್ತಿರಕ್ಕೆ ಬರುವಂಥ, ತುಂಬಿಗಳ-ಭೃಂಗಗಳ, ಸಾಲು-ಹಂತಿಯು, ದಿವಿಜಗಿರಿಯಂ - ಸುವರ್ಣ ಪರ್ವತವನ್ನು, ಬಳಸಿದ-ಆವರಿಸಿಕೊಂಡಿರುವ, ತಮೋರಾಜಿಯುಂ-ಅಂಧಕಾರದ ಸಮೂಹವನ್ನು, ಪೋಲ್ದು-ಹೋಲಿಕೆಯಾಗಿ, ಸಲೆ-ಚೆನ್ನಾಗಿ, ಆ ಭೂತಲದೊಳು-ಆ ಭದ್ರಾವತೀ ಪ್ರದೇಶದಲ್ಲಿ, ಕಂಗೊಳಿಸುತ-ಕಾಣುತ, ಇರ್ಪುದು-ಇದೆ, ಅಚ್ಚರಿಯನು-ಈ ಆಶ್ಚರ್ಯವನ್ನು, ಏನೆಂಬೆನು-ಎಂತು ವರ್ಣಿಸಲಿ. ||೭||

ಟೀ|| ಆನಾಡೊಳು - ಆ ಜನತೆಯಲ್ಲಿ, ಶಾಲಿಗಳ=ನೆಲ್ಲುಪೈರುಗಳ, ಕೈಗಂಪ - ತೆನೆಗಳ ಸುವಾಸನೆಯನ್ನು. ಪೊಲಗಾವ-ಗದ್ದೆಗೆ ಕಾವಲಿರುವ, ಪಾಮರಿಯರ - ಒಕ್ಕಲಗಿತ್ತಿಯರ, ಓಳಿಗಳ-ಗುಂಪಿನ, ಮೈಗಂಪ - ಶರೀರದವಾಸನೆಯನ್ನು, ಸತತ-ಅನವರತವೂ, ಕುಸುಮಿತ-ಹೂ ಬಿಟ್ಟ, ತರು-ವೃಕ್ಷಗಳ, ಲತಾ-ಎಳೆಬಳ್ಳಿಗಳ, ಆಳಿಗಳ-ಸಾಲುಗಳ, ಪೂಗಂಪ-ಅಲಗಂಪನ್ನು, ತಿಳಿಗೊಳದೊಳು - ಸ್ವಚ್ಛವಾದ ಉದಕವುಳ್ಳ ಕೂಪದಲ್ಲಿ, ಅಲರ್ದ-ವಿಕಸಿತಮಾದ, ಪೊಚ್ಚ-ನೂತನವಾದ, ಪೊಂದಾವರೆಗಳ-ಹರಿದ್ವರ್ಣಮಾದ ಕಮಲಪುಷ್ಪಂಗಳ, ಧೂಳಿಗಳ-ಧೂಳಿನ, ತನಿಗಂಪನು-ಇಂಪಾದವಾಸನೆಯನ್ನು, ಉಂಡು-ಮೆದ್ದು, ಎದ್ದು-ನಡೆದು, ಭೃಂಗಾಳಿಗಳ - ಆಳಿವಿಂಡುಗಳ, ಬಳಗಂ-ಕುಲದವು, ಪರಿಯಲು-ತಿರುಗಾಡುತ್ತಿರಲು, ಒಡನೆ-ಕೂಡಲೆ, ಸುಳಿವ-ಚಲಿಸುವ, ತಂಗಾಳಿಗಳ - ಮಂದಮಾರುತಂಗಳ, ಕಡುಗಂಪ-ಹೆಚ್ಚಾದ ಸುವಾಸನೆಯನ್ನು, ಸೇವಿಸುತ-ಆಘ್ರಾಣಿಸುತ್ತ, ಪಥಿಕರು-ದಾರಿಗರು, ಆಸರಗಳೆವರು-ದಾರಿನಡೆದ ಬಳಲಿಕೆಯನ್ನು ನೀಗಿಕೊಳ್ಳುತ್ತಾರೆ. ||೮||

ಟೀ|| ಬಟ್ಟೆಬಟ್ಟೆಯೊಳು - ದಾರಿದಾರಿಯಲ್ಲಿ, ಎಲ್ಲಿಯುಂ-ಎಲ್ಲೆಡೆಗಳಲ್ಲಿಯೂ, ಕುಳಿರ್ವೆರಸಿದ-ತಂಪಾಗಿರುವ, ಅರವಟ್ಟಿಗೆಯ-ದಮ್ಮಣಿಯ (ಅರವಂಟಿಗೆ), ಸದನಂಗಳಿಂದ-ಗೃಹಗಳಿಂದ, ಬಾಗಿಲ್ಗೆ-ಬಾಗಿಲ ಬಳಿಗೆ, ಪೊರಮಟ್ಟು-ನಡೆದು, ಕಲಶಮನು-ಕಲಶಗಳನ್ನು, ಎತ್ತಿ-ಎತ್ತಿ ಹಿಡಿದುಕೊಂಡು, ನೀರ ಉದಕವನ್ನು, ಎರೆವ-ಸುರಿಯುವ, ಕಾಮಿನಿಯರ-ಸ್ತ್ರೀಯರ, ಉರು-

---

ತ್ತಿತ್ತು ||೬|| ಅಲ್ಲದೆ ಹಾಲು ಹಿಡಿದಿರತಕ್ಕ ಭತ್ತದ ತೆನೆಗಳ ಮೇಲೆ ಕುಳಿತಿರುವ ಭೃಂಗಾಳಿಯನ್ನು ಕೈಚಪ್ಪಾಳೆ ತಟ್ಟುತಾ ಓಡಿಸಲುದ್ಯುಕ್ತರಾದ ಒಕ್ಕಲಿಗಿತ್ತಿಯರ ಸೀರೆಯ ಸೆರಗು ಜಾರಿಹೋಗಲು ಅಲ್ಲಿ ಪೀತವರ್ಣವಾಗಿ ಹೊಳೆಯುವ ಕುಚಮಂಡಲವನ್ನು, ಅರಸಿನ ಬಣ್ಣವುಳ್ಳ ಕಮಲದ ಮೊಗ್ಗೆಂದು ಭ್ರಮಿಸಿ ಭತ್ತದ ತೆನೆಗಳಿಂದ ಚದರಿಸಲ್ಪಟ್ಟ ಅಳಿವಿಂಡು ಬಂದು ಮುತ್ತಿಕೊಂಡು ಕೈಲಾಸಗಿರಿಯನ್ನು ಆಶ್ರಯಿಸಿರತಕ್ಕ ಅಂಧಕಾರವೋ ಎಂಬಂತೆ ಆಶ್ಚರ್ಯವನ್ನುಂಟುಮಾಡುವ ತೆರದಿಂದ ನೋಟಕರಿಗೆ ಅತಿ ಮನೋಹರವಾಗಿತ್ತು ||೭|| ಅದೂ ಅಲ್ಲದೆ ಆ ದೇಶದ ಎಲ್ಲಾ ಭಾಗದಲ್ಲಿಯೂ ವ್ಯಾಪ್ತವಾಗಿರುವ ಭತ್ತದ ತೆನೆಗಳ ಸುವಾಸನೆಯನ್ನೂ, ಹೊಲದ ಕಾವಲ್ಗಾತಿಯರ ದೇಹದ ಸುವಾಸನೆಯನ್ನೂ, ಎಳೆ ಬಳ್ಳಿಗಳಲ್ಲಿ ಬಿಟ್ಟಿರುವ ಪುಷ್ಪಂಗಳ ಸುಗಂಧವನ್ನೂ, ತಾವರೆ ಹೂಗಳ ಸುರಭಿಯನ್ನೂ ಆಘ್ರಾಣಿಸಿ ಆನಂದವನ್ನು ಅನುಭವಿಸುತ್ತಿದ್ದ ಭೃಂಗಾಳಿಯೇ ತುಂಬಿರುವುದನ್ನು ನೋಡಲು ಪರಮ ಸಂತೋಷವೂ, ಮಂದಮಾರುತವು ಬೀಸುತ್ತಿದ್ದುದ್ದರಿಂದ ಆನಂದಾತಿಶಯವೂ ಉಂಟಾಗಿ ಮಾರ್ಗಸ್ಥರಿಗೆ ಲೇಶವೂ ಆಯಾಸವೆಂಬುದೇ ತೋರುತ್ತಿರಲಿಲ್ಲ ||೮|| ಆ ದೇಶದಲ್ಲಿ ಎಲ್ಲೆಲ್ಲಿ ನೋಡಿದರೂ ತಣ್ಣಗಿ

ದರ | ವಟ್ಟಗೆಯಸನನಂಗಳಿಂದಬಾಗಿಲ್ಗೆಪೊರ | ಮಟ್ಟಕಲಶನನೆತ್ತಿನೀರೆರನಕಾಮಿನಿಯರುರುಬಾಹುಮೂಲದೆಡೆಗೆ ‖ ದಿ
ಟ್ಟನರಿವರಿದವೊಗವೋರ್ಗುಡಿಸಿಸರಿಸಕಳ | ವಟ್ಟಜಲಧಾರೆಪೊರಸೂಸಿಬಯಲಿಗೆಬಾಯ | ಬಿಟ್ಟುನಗಿಸುವರಲ್ಲಿತೃಷೆಯಿಂದ
ಬಂದಪಥಿಕರ್ಗಳಾಬಾಲೆಯರನು ‖ ೯ ‖ ಸ್ವಾದುಸ್ವಚ್ಛತೆಶೈತ್ಯಮಾವೋದವೊಂದಿಸೊಗ | ಸಾದಲಲಿತಾಂಗಿಯರಕರತಳದವಿ
ಮಲಕಲ | ಶೋದಕನನೊಲಿದೀಂಟುತಿರ್ದೊಡಂಮನದಣಿಯದಧ್ವಗರ್ಗಾಹೆಂಗಳ ‖ ಮಾದಳಿರಪಳಿವಚೆಂದುಟಯಸವಿಗೆಳೆ
ನಗೆಯೊ | ಳಾದರಿಪಕಂಗಡೆಯನಿಚ್ಚಳಕೆಪೀವರಪ | ಯೋಧರದ್ವಯವನಪ್ಪುವತಂಪಿಗೆಸೆನಮೈಗಂಪಿಂಗೆಬಯಸಿಬಯಸಿ‖೧೦‖
ತಳಿರೆಡೆಯೊಳಿರ್ದಮಾವಿನತೋರತನಿನಂಣ | ಗಿಳಿಕರ್ದುಂಕಿದೊಡೆರಸವೊಸರಿಸೋರ್ವಂತೆಹೆಂ | ಗಳಕರತಳದಪೊಂಗಳಸದಂ
ಜಳಿಯೊಳಿಟ್ಟಬೆರಳಂತೆಗೆದುನೀರಂಬಿಡಲ್ಕೆ ‖ ಲಲಿತಚಂಪಕತನುಚ್ಛಾಯೆಯಿಂಕೆಂಪಿಡಿದ | ಜಲಧಾರೆಕಂಗೊಳಿಸುತಿರ್ಪುದಧ್ವ

---

ಅಧಿಕವಾದ, ಬಾಹುಮೂಲದ-ಭುಜದ ಸಂದುಗಳ ಅಂದರೆ ಕಂಕಳಿನ, ಎಡೆಗೆ-ಸ್ಥಾನಕ್ಕೆ, ದಿಟ್ಟ-ನೋಟವನ್ನು, ವರಿವರಿದು-ಬಿಟ್ಟುಬಿಟ್ಟು, ವೊಗಂ-ಮೋರೆಯು, ಓರ್ಗುಡಿಸಿ-ಅರ್ಧಹಿಂದುಮಾಡಿಕೊಂಡು, ಸರಿಸಕೆ-ಸಮೀಪಕ್ಕೆ, ಬಳಿವಟ್ಟ-ಬರುವ, ಜಲಧಾರೆ-ನೀರಿನ ಧಾರೆಯು, ಪೊರೆಸೂಸಿ-ಹೊರಗೆಬಂದು, ಬಯಲಿಗೆ-ಬರಿದಾದ ಸ್ಥಳಕ್ಕೆ, ಬಾಯ-ಬಾಯನ್ನು, ಬಿಟ್ಟು-ತೆರದು, ಅಲ್ಲಿ-ಆ ಭದ್ರಾವತಿಪಟ್ಟಣದ ಪ್ರದೇಶದಲ್ಲಿ, ತೃಷೆಯಿಂದ-ನೀರಡಿಕೆಯಿಂದ, ಬಂದ-ಸಮೀಪಸ್ಥರಾದ, ಪಥಿಕರ್ಗಳು-ದಾರಿಗರು, ಆಬಾಲೆಯರನು-ಆ ಬಾಲಕಿಯರನ್ನು, ನಗಿಸುವರು-ಹಸನ್ಮುಖರನ್ನಾಗಿ ಮಾಡುವರು. ‖ ೯ ‖

ಟೀ‖ ಸ್ವಾದು-ಮಾಧುರ್ಯವು, ಸ್ವಚ್ಛತೆ-ಪಾರಿಶುಧ್ಯವು, ಶೈತ್ಯ-ತಂಪಾಗಿರುವದು, ಆಮೋದಂ - ಒಳ್ಳೆವಾಸನೆಯು ಇವುಗಳನ್ನು, ಒಂದಿ-ತಾಳಿ, ಸೊಗಸಾದ-ಇನಿದಾಗಿರುವ, ಲಲಿತಾಂಗಿಯರ-ಸುಂದರಾಂಗಿಯರ, ಕರತಲದ-ಕೈಯ್ಯಲ್ಲಿರುವ, ಅಮಲ-ಸ್ವಚ್ಛವಾದ, ಕಲಶೋದಕವನು-ಕಲಶದಲ್ಲಿನ ಜಲವನ್ನು, ಒಲಿದು-ಆಶಿಸಿ, ಈಂಟುತ-ಪಾನಮಾಡುತ್ತ, ಇರ್ದೊಡಂ-ಇದ್ದರೂ, ಅಧ್ವಗರ್ಗೆ-ದಾರಿಗರಿಗೆ, ಮನವು-ಮನಸ್ಸು, ಮಾದಳಿರ-ಚೂತವೃಕ್ಷದ ಕೆಂದಳಿರನ್ನು, ಪಳಿವ - ಅಲೆಗಳೆಯುವ, ಚೆಂದುಟಿಯ-ರಕ್ತವರ್ಣದ ಅಧರದ, ಸವಿಗೆ-ಸ್ವಾರಸ್ಯಕ್ಕೆ, ಎಳೆನಗೆಯೊಳು-ಹುಸಿನಗೆಯಲ್ಲಿ, ಆದರಿಪ-ಉಪಚರಿಸುವ, ಕಂಗಡೆಯ-ಕಡೆಗಣ್ಣಿನ, ನಿಚ್ಚಳಕೆ-ಪರಿಶುದ್ಧತೆಗೆ, ಪೀವರ-ಗಾತ್ರವಾದ, (ಬಲಿತ), ಪಯೋಧರದ್ವಯವನು- ಕುಚಯುಗ್ಮವನ್ನು, ಅಪ್ಪುವ-ತಬ್ಬಿಕೊಳ್ಳುವ, ತಂಪಿಗೆ-ಶೈತ್ಯಕ್ಕೆ, ಎಸೆವ-ಹೊಳೆಯುವ, ಮೈಗಂಪಿಗೆ-ದೇಹ ಸುವಾಸನೆಗೆ, ಬಯಸಿಬಯಸಿ-ಆಶಿಸಿ ಆಶಿಸಿ, ದಣಿಯದು-ಸಂತುಷ್ಟಿಯನ್ನೈದದು ‖ ೧೦ ‖

ಟೀ‖ ತಳಿರ-ಪಲ್ಲವಂಗಳ, ಎಡೆಯೊಳು-ಹತ್ತಿರದಲ್ಲಿ, ಇರ್ಪ-ಇರತಕ್ಕ, ಮಾವಿನ-ಚೂತವೃಕ್ಷದ, ತೋರ=ಗಾತ್ರವಾದ, ತನಿವಣ್ಣ-ನೂತನವಾದ ಫಲವನ್ನು, ಗಿಳಿ-ಗಿಳಿಯು, ಕರ್ದುಂಕಿದೊಡೆ-ಕಡಿಯಲಾಗಿ, ರಸಂ-ಸಾರವು, ಒಸರಿ-ಜಿನುಗಿ, ಸೋರ್ವಂತೆ-ದ್ರವಿಸುವಹಾಗೆ, ಹೆಂಗಳ - ಸ್ತ್ರೀಯರ, ಕರತಳದ - ಕೈಯಲ್ಲಿರುವ, ಪೊಂಗಳಸದ - ಚಿನ್ನದ ಕಲಶಂಗಳುಳ್ಳ, ಅಂಜಳಿಯೊಳು-ಬೊಗಸೆಗಳಲ್ಲಿ, ಇಟ್ಟ-ಇಟ್ಟಂಥ, ಬೆರಳಂ-ಅಂಗುಳಿಯನ್ನು, ತೆಗೆದು-ಈಚೆಗೆ ತೆಗೆದುಬಿಟ್ಟು, ಬಿಡಲ್ಕೆ-ಜಲವನ್ನೆರೆಯುತ್ತಿರಲಾಗಿ, ಲಲಿತ-ಅತಿ ಮೃದುವಾದ, ತನು-ದೇಹದ. ಛಾಯೆಯಿಂ-ನೆಳಲಿನಿಂದ, ಕೆಂಪಿಡಿದ-ರಕ್ತವರ್ಣವಂತಾಳ್ದ, ಜಲಧಾರೆ-ನೀರಿನ ಧಾರೆಯು, ಅಧ್ವಶ್ರಮಂಗಳನು-ದಾರಿಯ ಬಳಲಿಕೆಯನ್ನು, ಆಂತು-ತಾಳಿ, ಬಂದ-ಐತರಿದ, ಪಥಿಕರ್ಗಳು-

---

ರುವ ಉದಕದಿಂದ ಕೂಡಿದ ಅರವಟ್ಟಿಗೆಗಳು ಕಾಣಬರುತ್ತಿದ್ದವು. ನವಯೌವನವನ್ನು ತಾಳಿರುವ ಬಾಲಕಿಯರು ಕೈಗಳಲ್ಲಿ ತಂಬಿಗೆಗಳನ್ನು ಹಿಡಿದುಕೊಂಡು ಅರವಟ್ಟಿಗೆಗಳ ಬಾಗಿಲ್ಗಳಲ್ಲಿ ನಿಂತು ನೀರಡಿಕೆಯಿಂದ ಬರುವ ಮಾರ್ಗಸ್ಥರ ಮನದಣಿವಂತೆ ನೀರನ್ನು ಹುಯ್ಯುವದಕ್ಕುದ್ಯುಕ್ತರಾಗಿ ಅವರ ಚಲ್ವಿಗೆ ಮೆಚ್ಚಿ ಅವರಲ್ಲಿ ರತಿಕ್ರೀಡೆಯನ್ನನುಭವಿಸಬೇಕೆಂಬ ಕುತೂಹಲವುಳ್ಳವರಾದರೂ ಲಜ್ಜಾಪರವಶರಾಗಿ ಮುಖವನ್ನು ಓರೆಮಾಡಿಕೊಂಡು ನೀರೆರೆಯುತ್ತಿರಲು ಆ ಉದಕಧಾರೆಯು ಕೆಳಗೇ ಬಿದ್ದು ಹೋಗುತ್ತಲಿತ್ತು. ಇದನ್ನು ನೋಡಿದ ಪಥಿಕರ ಮನಸ್ಸನ್ನೂ ಶಾತಕುಂಭಂಗಳಿಂದಲಂಕೃತರಾಗಿರುವ ನಾರೀಮಣಿಗಳ ಮನೋಭಿಲಾಷೆಯನ್ನೂ ಬಣ್ಣಿಸಲು ಅಸದಳವಾಗಿತ್ತು ‖ ೯ ‖ ಮಾರ್ಗಸ್ಥರು ಅರವಟ್ಟಿಗೆಗಳ ಬಳಿಗೆ ಬಂದು ಆ ಕೋಮಲಾಂಗಿಯರು ತಮ್ಮ ಕೈಗಳಲ್ಲಿರುವ ರುಚಿಯಾಗಿಯೂ ನಿರ್ಮಲವಾಗಿಯೂ ತಣ್ಣಗೂ ಸುವಾಸನೆಯುಳ್ಳದ್ದಾಗಿಯೂ ಇರುವ ನೀರನ್ನೊಳಕೊಂಡಿರುವ ಕಲಶಂಗಳಿಂದೆರೆದ ಉದಕ ಮಾತ್ರದಿಂದಲೇ ತೃಪ್ತಿಪಡದೆ ಆ ನಾರೀಮಣಿಗಳ ರಕ್ತವರ್ಣವಾದ ಅಧರಾಮೃತದ ರುಚಿಯನ್ನೂ, ಮುಗುಳ್ನಗೆಯಿಂದ ಕೂಡಿದ ಅವರ ನೋಟವನ್ನೂ, ಅವರ ಕುಚಾಲಿಂಗನದಿಂದೊಗೆವ ತಂಪನ್ನೂ, ಅವರ ಮೈಗಂಪನ್ನೂ ಅನುಭವಿಸಿ ತೃಪ್ತಿಪಡಬೇಕೆಂದು ಹಾರೈಸುತ್ತಿದ್ದರು ‖ ೧೦ ‖ ಆ ಧರ್ಮಪಾನೀಯಶಾಲೆಗಳಲ್ಲಿ ನೀರನ್ನು ಕೊಟ್ಟು ಬಾಯಾರಿಕೆಯನ್ನು ನೀಗುವ ಕೋಮಲಾಂಗಿಯರಕೈಯು ಮಾವಿನ ಎಳೆ

ತ್ರಮುಂ | ಗಳನಾಂತುಬಂದಪಥಿಕರ್ಕಳೀಂಟುವಸಮಯದೊಳ್ಪ್ರಪಾಶಾಲೆಗಳೊಳು ‖ ೧೧ ‖ ಲಲಿತಕರತಳದೊಳ್ಪಿಡಿದ ಚಂದ್ರಕಾಂತಕೃತ | ಕಲಶಸೆಂದುಮಂಡಲರುಚಿಗೊಸರ್ವನಿ | ರ್ಮಲಜಲಮಿದೆಂಬಂದದಿಂ ಸೊಗಯಿಸುವಸುಶೀತಾಂಬುಧಾ ರೆಯುನೀಂಟುತ ‖ ಲಲನೆಯರಕೋಮಲಾವಯವಲಾವಣ್ಯಮಂ | ಸಲೆಕಂಡುಮೆಚ್ಚಿಮನಮುಳುಗಿದಾನಂದದಿಂ | ತಲೆದೂಗುವ ಪಥಿಕರಾನೀರ್ಗೆದಣಿವನೆವದಿಂದಲಾಜನಪದದೊಳು ‖ ೧೨ ‖ ಏಂತಾಳ್ದುದೋಚೆಲ್ವಮೀದೇಶಮೆಂದುನಲ | ವಾಂತುಮುಂದ ಳೆವುತಿರೆಕಂಡರವರಾಪುರ | ಪ್ರಾಂತದೊಳ್ಸನ್ನೆಗೈದಿನಿಯರಂಬರಿಸಿನವರತಿಕಲಾಪ್ರೌಢಿಯಿಂದ ‖ ಸ್ವಾಂತಸುಖಮಂಪಡೆವ ಪೌರನಾರಿಯರವಿಶ್ರಾಂತಿಗನುವಿದರಂನವಾಸರೆಗಳಿಂದಶ | ಕಾಂತಶಿಲೆಗಳಕಂದರಂಗಳಿಂದತಿಮನೋಹರಮಾದಗಿರಿಯೊಂದನ॥ ‖ ೧೩ ‖ ಆಗಿರಿಯನುಸ್ತ್ರಕವನಡರಲ್ಕದರಪೂರ್ವ | ಭಾಗದೊಳ್ಮೆರೆವಭದ್ರಾವತಿಯಸಿರಿಗೆತಲೆ | ದೂಗುತವೃಕೋದರಂನುಡಿದ

---

ದಾರಿಗರು| ಈಂಟುವ_ಪಾನಮಾಡುವ, ಸಮಯದೊಳು_ಕಾಲದಲ್ಲಿ ಪ್ರಪಾಶಾಲೆಗಳೊಳು-ಧರ್ಮಪಾನೀಯಶಾಲೆಗಳಲ್ಲಿ, ಕಂಗೊಳಿಸುತಿರ್ಪುದು_ಥಳಥಳಿಸುತ್ತಲಿರುವುದು. ‖ ೧೧ ‖

ಟೀ|| ಲಲಿತ_ಮೃದುವಾದ, ಕರತಳದೊಳ್_ಅಂಗೈಯ್ಯಲ್ಲಿ, ಪಿಡಿದ - ಹಿಡಿದುಕೊಂಡಿರುವ, ಚಂದ್ರಕಾಂತ_ಇಂದು ಕಾಂತವೆಂಬ ಕಲ್ಲಿನಿಂದ, ಕೃತ_ರಚಿಸಿರುವ, ಕಲಶಂ - ಕಲಶವು, ಆಸ್ಯ-ವದನವೆಂಬ, ಇಂದುಮಂಡಲ_ಚಂದ್ರಬಿಂಬದ, ರುಚಿಗೆ-ಪ್ರಕಾಶಕ್ಕೆ, ಒಸರ್ವ_ಸ್ರವಿಸುವ, ನಿರ್ಮಲ_ಪರಿಶುದ್ಧವಾದ, ಜಲಂ_ನೀರು, ಇದುಎಂಬಂದದಿಂ-ಇದು ಎಂಬತೆರನಾಗಿ, ಸೊಗಯಿಸುವ-ಇವಿದಾಗಿರುವ, ಶೀತಾಂಬುಧಾರೆಯನು-ತಂಣೀರಿನಧಾರೆಯನ್ನು, ಈಂಟುತ - ಪಾನಮಾಡುತ್ತ, ಲಲನೆಯರ_ಸ್ತ್ರೀಯರ, ಕೋಮಲ_ಮೆತ್ತನಾದ, ಅವಯವ-ಶರೀರದ, ಲಾವಣ್ಯಮಂ_ಸೊಗಸನ್ನು, ಸಲೆ_ಚೆನ್ನಾಗಿ, ಕಂಡು_ದೃಷ್ಟಿಸಿ, ಮೆಚ್ಚಿ_ಒಪ್ಪಿಕೊಂಡು, ಮನ-ಮನಸ್ಸು, ಮುಳುಗಿದ-ಮಗ್ನವಾಗಿರುವ, ಆನಂದದಿಂ_ಆಹ್ಲಾದದಿಂದ, ಆನೀರ್ಗೆ- ಆ ಉದಕಕ್ಕೆ, ದಣಿವ_ಸಂತುಷ್ಟಿಯಾಯಿತೆಂಬ, ನೆವದಿಂದ_ಕಾರಣದಿಂದ, ಪಥಿಕರು_ಮಾರ್ಗಸ್ಥರು, ಆಜನಪದದೊಳು_ ಆ ನಾಡಿನಲ್ಲಿ, ತಲೆದೂಗುವರು. ‖ ೧೨ ‖

ಟೀ|| ಈದೇಶಂ-ಈನಾಡು, ಚೆಲ್ವಂ_ಸೌಂದರ್ಯವನ್ನು, ಏಂತಾಳ್ದುದೋ-ಹೇಗೆ ತಾಳಿತೋ, ಎಂದು_ಎಂಬದಾಗಿ, ನಲವಾಂತು_ಆನಂದವನ್ನು ತಾಳಿ, ಮುಂತೆ_ಮುಂಭಾಗದಲ್ಲಿ, ಅಳೆವುತಿರೆ_ಹೊರಡುತ್ತಿರಲು, ಅವರು-ಆ ವೃಕೋದರ, ವೃಷಧ್ವಜ, ಮೇಘವರ್ಣರು, ಆಪುರಪ್ರಾಂತದೊಳು_ಆ ಭದ್ರಾವತಿಯೆಡೆಯಲ್ಲಿ, ಸನ್ನೆಗೈದು-ಸೈಗೆಯನ್ನು ಮಾಡಿ, ಇನಿಯರಂ_ವಿಟಪುರುಷರನ್ನು, ಬರಿಸಿ_ಸಮೀಪಸ್ಥರನ್ನಾಗಿ ಮಾಡಿಕೊಂಡು, ನವ_ಹೊಸದಾದ, ರತಿಕಲಾ_ಮದನಕಲೆಯ, ಪ್ರೌಢಿಯಿಂದ-ಚಾತುರ್ಯದಿಂದ, ಸ್ವಾಂತಸುಖಮಂ_ಹೃದಯಾಹ್ಲಾದವನ್ನು, ಪಡೆವ_ತಾಳುವ, ಪೌರ-ನಗರದ, ನಾರಿಯರ_ಸ್ತ್ರೀಯರ, ವಿಶ್ರಾಂತಿಗೆ_ಆಯಾಸವನ್ನು ನೀಗುವುದಕ್ಕೆ, ಅನುರಿದ_ಆನುಕೂಲ್ಯಮಂ ಪಡೆದ, ರನ್ನ_ಮಣಿಖಚಿತಮಾದ, ವಾಸರಂಗಳಿಂದ - ಶಿಲಾಪರ್ಯಂಕಗಳಿಂದ, ಶಶಿಕಾಂತ_ಇಂದುಕಾಂತದ, ಶಿಲೆಗಳ-ಕಲ್ಲುಗಳ, ಕಂದರಂಗಳಿಂದ_ಗವಿಗಳಿಂದಲೂ, ಅತಿಮನೋಹರಮಾದ_ಬಹುವಾಗಿ ಮನವನ್ನು ರಂಜಿಸುವಂತಹ, ಗಿರಿಯೊಂದನು_ಒಂದಾನೊಂದು ಬೆಟ್ಟವನ್ನು, ಕಂಡರು_ಮುಂಗಡೆಯಲ್ಲಿ ನೋಡಿದರು ‖ ೧೩ ‖

---

ಚಿಗುರನ್ನು ಅಲ್ಲಗಳೆಯುವಂತೆ ಕೆಂಪಾಗಿದ್ದವು. ರಕ್ತವರ್ಣವಾದ ಚಿಗುರುಗಳ ಮಧ್ಯದಲ್ಲಿರುವ ಮಾವಿನ ಹಣ್ಣನ್ನು ಗಿಳಿಗಳು ಬಂದು ಕಡಿಯಲು ಅದರ ರಸವು ಒಸರುತ್ತ ಕೆಂಪಗೆ ಕಾಣುತ್ತಿರುವುದೊ ಎಂಬಂತೆ ಆ ನಾರಿಯರು ತಮ್ಮ ಕೈಬೆರಳುಗಳಿಂದ ಸುರಿಸುತ್ತಿರುವ ಉದಕ ಧಾರೆಯು ಭ್ರಾಂತಿಯನ್ನುಂಟುಮಾಡುತ್ತಲೂ ‖ ೧೧ ‖ ಅವರ ಕೈಗಳಲ್ಲಿರುವ ಕಲಶಂಗಳು ಚಂದ್ರಕಾಂತ ಶಿಲೆಯಿಂದ ಮಾಡಲ್ಪಟ್ಟವಾದ್ದರಿಂದಲೇ ಆ ನಾರೀಮಣಿಗಳ ಮುಖವೆಂಬ ಚಂದ್ರನ ಮರೀಚಿಯು ಕರಗಿ ತಂಪಾದ ನೀರಾಗಿ ಹೋಗಿರುವಂತೆಯೂ ತೋರುತ್ತಿತ್ತು. ಇಂತಹ ಅತಿ ಸ್ವಚ್ಛವಾಗಿಯೂ ಪರಿಶುದ್ಧವಾಗಿಯೂ ಇರುವ ನೀರನ್ನು ಮಾರ್ಗಸ್ಥರು ಪಾನಮಾಡಿ ಸಂತೋಷಪಡುತ್ತಲೂ ಆ ಸ್ತ್ರೀಯರ ಸೌಂದರ್ಯಾತಿಶಯವಂ ಕಂಡು ಹಿಗ್ಗುತ್ತಲೂ ಇದ್ದರು ‖ ೧೨ ‖ ಇವುಗಳನ್ನೆಲ್ಲಾ ನೋಡಿನೋಡಿ ಆಹಾ! ಈ ದೇಶವು ಎಷ್ಟು ಚನ್ನಾಗಿದೆ ಎಂಬದಾಗಿ ಅತ್ಯಾಶ್ಚರ್ಯಪಡುತ್ತಾ ಭೀಮ, ವೃಷಕೇತು, ಮೇಘನಾದರು ಮತ್ತೆ ಸ್ವಲ್ಪ ದೂರ ಮುಂದೆ ನಡೆಯಲು, ಆ ಭದ್ರಾವತೀನಗರ ಪ್ರಾಂತದಲ್ಲಿ ಒಂದಾನೊಂದು ಪರ್ವತವು ಕಾಣಬಂದಿತು. ಆ ಗಿರಿಯು ಆ ನಾಡಿನ ಪೌರನಾರಿಯರು ವಿಟರನ್ನು ಬರಮಾಡಿಕೊಂಡು ರತಿಕ್ರೀಡಾ ಸರಸಸಲ್ಲಾಪಗಳ ಸುಖಗಳನ್ನನುಭವಿಸಲು ಯೋಗ್ಯಮಾದ ಮಣಿಖಚಿತವಾಗಿರುವ ಪರ್ಯಂಕಗಳಿಂದಲೂ ಚಂದ್ರಕಾಂತ ಶಿಲೆಗಳ ಗುಹೆಗಳಿಂದಲೂ ತುಂಬಿ ನೋಟಕರಿಗೆ ಬಹು ರಮಣೀಯವಾಗಿ ಕಾಣುತ್ತಿತ್ತು ‖ ೧೩ ‖ ಈ ಪರ್ವತದ ಸೌಂದರ್ಯಾತಿಶಯವನ್ನು ನೋಡಿ ಸಂತಸಂತಾಳ್ದು ಅನಂತರದಲ್ಲಿ ಆ ಭೀಮ, ವೃಷಧ್ವಜ, ಮೇಘನಾದರು ಮೂವರೂ

ನೆಲೆವೃಷಕೇತುನೋಡಿದ್ಯೆಕೌತುಕನನು ॥ ಈಗಳೀನಗರಂಮಹೀಲಲನೆಗಾಸ್ಯಾಬ್ಜ | ಮಾಗಿರ್ಪುದೆತ್ತಲುಂಗಗನದೆಡೆಗೇಳ್ವ ಬಹು | ಯಾಗಧೂಮಂಗಳೆಂಬಾಲೋಲನೀಲಾಳಕಾವಳಿಯಚೆಲ್ವಿನಿಂದ ॥೧೪॥ ಎನಿಸುಜನಮಿರ್ದೊಡಂತ್ರಿದಶಜನಕಾವಾಸ | ಮೆನಿಪುದಮರಾವತೀಪಟ್ಟಣಂಮೂಜಗದೊ | ಳೆನಿತುಜಸವಡೆದೊಡಂಗುಹ್ಯಕಾಸ್ಪದವೆನಿಪುದಳಕಾಪುರಂತಿಳಿವೊಡೆ ॥ ಎನಿಸು ಜನಮಿರಲೆನಿಸುಜಸವಡೆಯಲದರಿಂದ | ತನಗಿನಿಸುಕುಂದಿಲ್ಲಮೆಂಬಪೆಂಪಿಂದಪುರ | ವನಿತೆಗಹಗಹಿಸಿನಗುವಂತೆಸೆವಸೌಧಂಗಳ ಮರೀಚಿಯಂನೋಡೆಂದನು ॥೧೫॥ ಶ್ವೇತಾದ್ರಿಶಿಖರದೋಳ್ಕಂಗೊಳಿಸುವುಜ್ವಲ | ಜ್ಯೋತಿರ್ಲತೆಯೊಮೇಣ್ಸಲ್ಲಲಿತಶುಭ್ರಜೀ | ಮೂತದೊಡ್ಡಿನಮೇಲೆಪೊಳೆವಸೌದಾಮಿನಿಯೊಶಿವನಮಸ್ತಕದೊಳೆಸೆವ ॥ ಶೀತಾಂಶುರೇಖೆಯೋಬಗೆವೊಡೀನಗರದವಿ | ನೂತ

ಟೀ॥ ಆ ಗಿರಿಯ-ಆ ಪರ್ವತದ, ಮಸ್ತಕವನು-ತುದಿಯನ್ನು, ಅಡರಲ್ಕೆ-ಏರಲು, ಅದರ- ಆ ಪರ್ವತದ, ಪೂರ್ವ ಭಾಗದೊಳು-ಪೂರ್ವದಿಗ್ಭಾಗದಲ್ಲಿ, ಮೆರೆವ-ಹೊಳೆಯುತ್ತಿರುವ, ಭದ್ರಾವತಿಯ-ಭದ್ರಾವತೀನಗರದ, ಸಿರಿಗೆ-ಐಶ್ವರ್ಯಕ್ಕೆ, ತಲೆದೂಗುತ್ತ-ಮೆಚ್ಚಿಕೊಳ್ಳುತ್ತ, ವೃಕೋದರನು – ವಾಯುಸುತನಾದ ಭೀಮಸೇನನು, ಎಲೆ ವೃಷಕೇತು-ಅಯ್ಯ ವೃಷಧ್ವಜನೆ! ಈ ಕೌತುಕವನು-ಈ ಆಚ್ಚರಿಯನ್ನು, ನೋಡಿದ್ಯೆ-ಈಕ್ಷಿಸಿದೆಯಾ? ಈಗಳು-ಈಗ, ನಗರಂ-ಭದ್ರಾವತೀ ನಗರವು, ಎತ್ತಲುಂ-ಎಲ್ಲೆಡೆಗಳಲ್ಲಿಯೂ, ಗಗನದ-ಅಂತರಿಕ್ಷದ, ಎಡೆಗೆ-ಸಮೀಪಕ್ಕೆ, ಏಳ್ವ-ಎದ್ದು ಬರುವ, ಬಹು-ಅನೇಕವಾದ, ಯಾಗಧೂಮಂಗಳು-ಯಜ್ಞನಿಮಿತ್ತವಾದ ಧೂಮ್ರವು, ಎಂಬುವ-ಎಂದು ಹೇಳುವ, ಆಲೋಲ – ಸುಳಿದಾಡುತ್ತಿರುವ, ನೀಲ-ಕಪ್ಪಗಿರುವ, ಅಲಕಾವಳಿಯ-ಮುಂಗುರುಳಿನ ಸಾಲಿನ, ಚೆಲ್ವಿನಿಂದ-ಸೊಗಸಿನಿಂದ, ಮಹೀಲಲನೆಗೆ-ಧರೆ ಎಂಬ ನಾರೀಮಣಿಗೆ, ಆಸ್ಯಾಬ್ಜಂ-ವದನಾರವಿಂದವು, ಆಗಿರ್ಪುದು-ಆಗಿರುತ್ತದೆ ॥೧೪॥

ಟೀ॥ ಅಮರಾವತೀಪಟ್ಟಣಂ-ಅಮರಾವತಿಯೆಂಬ ದೇವೇಂದ್ರನ ರಾಜಧಾನಿಯು, ಎನಿಸುಜನಂ-ಎಷ್ಟುಮಂದಿಯು, ಇರ್ದೊಡಂ-ಇದ್ದಾಗ್ಯೂಕೂಡ, ತ್ರಿದಶಜನಕೆ-ದೇವತೆಗಳಿಗೆ (ಹದಿಮೂರು) ಜನರಿಗೆ, ಆವಾಸ-ನೆಲೆಯಾದ, ಮೂಜಗದೊಳು-ತ್ರಿಲೋಕಂಗಳಲ್ಲಿಯೂ, ಅಳಕಾಪುರಂ-ಧನಪತಿಯಾದ ಕುಬೇರನಗರವು, ಎನಿಸು-ಎಷ್ಟು, ಜಸವಡೆದೊಡಂ-ಯಶಸ್ಸನ್ನೊಂದಿದರೂ, ಗುಹ್ಯಕೆ-ಹೆಸರವಾಸಿಗೆ (ಯಕ್ಷರೆಂಬವರಿಗೆ) ಆಸ್ಪದಂ-ಇಲ್ಲದ್ದಾಗಿದೆ ಮತ್ತು ಆಸರೆಯಾಗಿಧೆ. ತಿಳಿವೊಡೆ-ಯೋಚಿಸಿದರೆ, ಎನಿಸುಜನಂ-ಎಷ್ಟುಮಂದಿಯು, ಇರಲು-ಇದ್ದರೂ, ಎನಿಸು-ಎಷ್ಟುಮಾತ್ರದ ಜಸವೊಡೆಯಲು-ಯಶಸ್ಸನ್ಹೈದಿದರೂ, ಗುಹ್ಯಕಾಸ್ಪದವೆಂಬ ನಾಮಧೇಯವು ಹೋಗಲಿಲ್ಲ, ಆದರಿಂದ-ಆದಕಾರಣ, ತನಿಗೆ-ನನಿಗೆ, ಇನಿಸು-ಸ್ವಲ್ಪವಾದರೂ, ಕುಂದು-ಬಾಧಕವು, ಇಲ್ಲಂ-ಇರುವುದಿಲ್ಲ, ಎಂಬ-ಎನ್ನತಕ್ಕ, ಪೆಂಪಿಂದ-ಅಭಿವೃದ್ಧಿಯಿಂದ, ಪುರವನಿತೆ-ಭದ್ರಾವತಿಯೆಂಬ ನಾರಿಯು, ಗಹಗಹಿಸಿನಗುವಂತೆ-ಗೇಲಿಗೆಬ್ಬಿಸಿ ನಗುವಹಾಗೆ, ಎಸೆವ-ಹೊಳೆಯುವ, ಸೌಧಂಗಳ-ಮಹಡಿಗಳ, ಮರೀಚಿ-ಹೊಳಪನ್ನು, ನೋಡು-ಈಕ್ಷಿಸು, ಎಂದನು-ಎಂಬದಾಗಿ ಹೇಳಿದನು ॥ ೧೫ ॥

ಟೀ॥ ಶ್ವೇತಾದ್ರಿ-ಈಶ್ವರನಿಗೆ ನೆಲೆಯಾದ ಕೈಲಾಸಗಿರಿಯ, ಶಿಖರದೋಳ್-ತುದಿಯಲ್ಲಿ, ಕಂಗೊಳಿಸುವ-ಥಳಥಳಿಸುತ್ತಿರುವ, ಉಜ್ವಲ-ಬೆಳಗುತಿರುವ, ಜ್ಯೋತಿರ್ಲತೆಯೊ- ಕಾಂತಿವಿಶಿಷ್ಟಮಾದ ಬಳ್ಳಿಯೊ, ಮೇಣ್ - ಅದೂ ಅಲ್ಲದೆ, ಸಲ್ಲಲಿತ-ಅತಿಮನೋಹರವಾದ, ಜೀಮೂತದ-ಮೋಡಗಳ, ಒಡ್ಡಿನ – ಗುಂಪಿನ, ಮೇಲೆ-ಮೇಲ್ಗಡೆಯಲ್ಲಿ, ಪೊಳೆವ-ಥಳಥಳಿ

ಅದರ ಶಿಖರವನ್ನೇರಿದರು. ತರುವಾಯ ಆ ಪರ್ವತದ ಪೂರ್ವ ದಿಗ್ಭಾಗದಲ್ಲಿ ನೋಡಲಾಗಿ ಅಲ್ಲಿ ಯೌವನಾಶ್ವನಿಂದಾಳಲ್ಪಡುತ್ತಿರುವ ಭದ್ರಾವತೀ ನಗರಿಯು ಕಂಡಿತು. ಆಗ ಭೀಮಸೇನನು ಈ ಪುರದ ಸೌಂದರ್ಯವನ್ನು ನೋಡಿ ಆಶ್ಚರ್ಯಪಡುತ್ತ ಕರ್ಣಸುತನಾದ ವೃಷಧ್ವಜನನ್ನು ಕುರಿತು, ಎಲೈ ವೃಷಕೇತುವೇ? ಈ ಪಟ್ಟಣದ ಸೌಂದರ್ಯವನ್ನು ನೋಡಿದೆಯಾ! ಈ ಪುರಿಯು ಭೂಮಿಯೆಂಬ ಹೆಂಗಸಿನ ಮುಖಕಮಲವಾಗಿ ಮೇಲಕ್ಕೇಳುವ ಯಜ್ಞಾ ಸಂಬಂಧವಾದ ಧೂಮ್ರವೆಂಬ ಮುಂಗುರುಳಿನಿಂದ ಕೂಡಿ ಎಷ್ಟು ಸುಂದರವಾಗಿದೆ ನೋಡು ॥೧೪॥ ದೇವೇಂದ್ರನ ರಾಜಧಾನಿಯಾದ ಅಮರಾವತೀ ಪಟ್ಟಣದಲ್ಲಿ ಎಷ್ಟು ಜನವಿದ್ದರೂಕೂಡ, ಅದು ಸುರರಿಗೆ ಆಸರೆಯಾದ್ದೆಂದೂ, ಕುಬೇರನ ಅಳಕಾಪಟ್ಟಣದಲ್ಲಿ ಎಷ್ಟು ಧನವಿದ್ದು ಪ್ರಸಿದ್ಧವಾಗಿದ್ದರೂ ಯಕ್ಷರಿಗೆ ಆಶ್ರಯವಾಗಿದೆ ಎಂದೂ ಈ ನಮ್ಮ ಪಟ್ಟಣದಲ್ಲಿ ಎಷ್ಟು ಪ್ರಜೆಗಳಿದ್ದರೂ ಎಷ್ಟು ಐಶ್ವರ್ಯವಿದ್ದರೂಕೂಡ ಮತ್ಯಾರಿಗೂ ಆಶ್ರಯವಾದದ್ದು ಎಂದೆಂದಿಗೂ ಆಗುವುದಿಲ್ಲವೆಂಬ ಹೆಮ್ಮೆಯಿಂದ ಈ ಪುರವೆಂಬ ಸ್ತ್ರೀಯು ಅಮರಾವತಿ ಮತ್ತು ಅಳಕಾಪಟ್ಟಣಗಳನ್ನು ನೋಡಿ ಕೇಕೆ ಹಾಕಿಕೊಂಡು ಹಾಸ್ಯಮಾಡಿ ನಗುವಂತಿರ್ಪ ಎತ್ತರವಾದ ಉಪ್ಪರಿಗೆಗಳಿಂದ ಮೆರೆಯುವುದನ್ನು ನೋಡಿದೆಯಾ? ॥೧೫॥ ಈ ಪಟ್ಟಣವು ಕೈಲಾಸ ಪರ್ವತದಲ್ಲಿ ಥಳಥಳನೆ ಹೊಳೆಯುತ್ತಿರುವ ತೇಜಸ್ಸೆಂಬ ಬಳ್ಳಿಯೋ ಎಂಬಂತೆಯೂ, ಮೇಘಮಂಡಲದಲ್ಲಿ ಹೊಳೆಯುತ್ತಿರುವ ಮಿಂಚೆಂಬಂತೆಯೂ, ಈಶ್ವರನ ತಲೆಗೆ ಭೂಷಣವಾದ

ನಪ್ರಾಸಾದದಗ್ರದೋಳ್ಸುಳಿನಂಬು | ಜಾತನಯನೆಯರತನುವಲ್ಲರಿಯಕಾಂತಿಯೋ ಕರ್ಣಸುತನೋಡೆಂದನು || ೧೬ || ನಳನಳಿಪತರುಣತೆಯಸೊಂಪುವೆತ್ತರುಣತೆಯ | ತಳಿರಿಡಿದತೋರಣದಚೆಲ್ವನಾಂತೋರಣದ | ತೊಳಪಕಲಶದಗುಡಿಯಸಾಲ್ವಳದ ಕನ್ನಡಿಯಸಾಲಸೀಗುರಿಚಮರಿಯ || ಚಲಿತಲೀಲಾಸ್ಪದಪತಾಕೆಗಳಲಾಸ್ಯದಪ | ವಳಮುತ್ತುಗಳಗೊಂಚಲುಗಳೊತ್ತುಗಳಗೊಂ | ದಳವಬಗೆಕಂಗಳಿಂಬಿಗೆಕೌತುಕಂಗಳಿಂಬೀದಿಗಳೊಳೆಸೆದಿರ್ಪುವು || ೧೭ || ಒತ್ತರಿಸಿದುನ್ನತಪ್ರಾಸಾದದಬಲೆಯರ | ವೃತ್ತವದನದಸುಮಂದಸ್ಮೇರಚಂದ್ರಿಕೆಯೊ | ಳುತ್ತುಂಗದೇವಾಲಯದಗೋಪುರದಮಾಣಿಕದಕಲಶದೆಳೆವಿಸಿಲೊಳು || ಕತ್ತಲಿ

---

ಸುವ, ಸೌದಾಮಿನಿಯೊ-ವಿದ್ಯುತ್ತೊ, ಶಿವನ-ಹರನ, ಮಸ್ತಕದೋಳ್-ಶೀರ್ಷದಲ್ಲಿ, ಎಸೆವ-ಹೊಳೆಯುತ್ತಿರುವ, ಶೀತಾಂಶುರೇಖೆಯೊ-ಇಂದುಲೇಖೆಯೊ, ಬಗೆಪೊಡೆ-ಆಲೋಚಿಸಿದರೆ, ಈ ನಗರದ-ಈ ಪುರದ, ವಿನೂತನ-ನವೀನವಾದ, ಪ್ರಾಸಾದದ-ಮಹಡಿಗಳ, ಅಗ್ರದೋಳ್-ತುದಿಯಲ್ಲಿ, ಸುಳಿವ-ತಿರುಗಾಡುವ, ಅಂಬುಜಾತನಯನೆಯರ-ಪದ್ಮಪತ್ರಾಕ್ಷಿಯರ, ತನು-ಶರೀರವೆಂಬ, ವಲ್ಲರಿಯ-ಲತೆಯ, ಕಾಂತಿಯೊ-ಹೊಳಪೊ, ಕರ್ಣಸುತ-ಎಲೈ ಕರ್ಣತನುಜನಾದ ವೃಷಧ್ವಜನೆ, ನೋಡು-ಈಕ್ಷಿಸು, ಎಂದನು-ಎಂಬದಾಗಿ ಹೇಳಿದನು ||೧೬||

ಟೀ|| ನಳನಳಿಪ-ಹೊಳೆಹೊಳೆಯುವ, ತರುಣತೆಯ-ಯೌವನದ, ಸೊಂಪುವೆತ್ತ-ಮನೋಹರವಾಗಿರುವ, ಅರುಣತೆಯ-ರಕ್ತವರ್ಣವುಳ್ಳ, ತಳಿರು-ಪಲ್ಲವಂಗಳಿಂದ, ಇಡಿದ-ತುಂಬಿದ, ತೋರಣದ-ಬೀದಿಬಾಗಲಿನಲ್ಲಿ ಕಟ್ಟಿರುವ ತೋರಣದ, ತೊಳಪ-ಹೊಳೆಯುತ್ತಿರುವ, ಕಲಶದ-ಕಲಶವುಳ್ಳ, ಗುಡಿಯ-ಮಂಟಪಂಗಳ ಎಂದರೆ ಸಣ್ಣ ಮನೆಗಳ, ಸಾಲ್ವಳೆದ-ಹಂತಿಯಾಗಿರುವ, ಕನ್ನಡಿಯ-ದರ್ಪಣದ, ಸಾಲ-ಸಾಲಿನ, ಸೀಗುರಿ-ರವಿಯ ಮತ್ತು ಇಂದುವಿನ ಪಾನಸಂಬಂಧವನ್ನೈದಿದ, (ಸೂರೆಪಾನ) ಚಮರಿಯ-ಚಮರಿಯ, ಚಲಿತ-ಅಲ್ಲಾಡುತ್ತಿರುವ, ಲೀಲಾ-ಮನೋಹರವಾದ, ಆಸ್ಪದ-ಮೋರೆಯನ್ನುಳ್ಳ, ಪತಾಕೆಗಳ-ಬಾವಟಗಳ, ಲಾಸ್ಯದ-ನರ್ತನೆಯ, ಪವಳ-ಪ್ರವಾಳಂಗಳ, ಮುತ್ತುಗಳ-ಮುತ್ತಿನ ಮಣಿಗಳ, ಗೊಂಚಲುಗಳು-ಗುಚ್ಛಗಳು, ಒತ್ತುಗಳಿ-ದಟ್ಟವಾಗಿ ವ್ಯಾಪಿಸಿ, ಗೊಂದಳದ-ಜನಗಳ ಗುಂಪಿನ, ಬಗೆ-ತೆರನಾಗಿ, ಕಂಗಳ-ನಯನಂಗಳ, ಇಂಬಿಗೆ-ಮನೋಹರತ್ವಕ್ಕೆ, ಕೌತುಕಂಗಳಿಂ-ಅಚ್ಚರಿಗಳಿಂದ, ಬೀದಿಗಳೊಳು-ರಾಜಬೀದಿಗಳಲ್ಲಿ, ಎಸೆದಿರ್ಪವು-ಥಳಥಳಿಸುತ್ತಲಿರುವುವು.

ಅ|| ವಿ|| ಈ ಪಟ್ಟಣವು ಬಹು ಭಾಗ್ಯವುಳ್ಳದ್ದೆಂದು ತೋರ್ಪಡಿಸಲು ಈರೀತಿ ಹೇಳಿದೆಯಾದ್ದರಿಂದ ಇದನ್ನು ಅತಿಶಯೋಕ್ತ್ಯಲಂಕಾರವೆಂಬದಾಗಿ ತಿಳಿಯಬೇಕು ||೧೭||

ಟೀ|| ಒತ್ತರಿಸಿದ-ಸೇರಿರುವ, ಉನ್ನತ-ಎತ್ತರವಾದ, ಪ್ರಾಸಾದದ-ಉಪ್ಪರಿಗೆಗಳಲ್ಲಿರುವ, ಅಬಲೆಯರ-ನಾರಿಯರ ವೃತ್ತ-ವರ್ತುಲಾಕಾರವಾದ, ವದನದ-ಆನನದ, ಸುಮಂದಸ್ಮೇರ-ಅರೆನಗೆಯೆಂಬ, ಚಂದ್ರಿಕೆಯೊಳು - ಇಂದುಕಿರಣಂಗಳಲ್ಲಿ, ಉತ್ತುಂಗ-ಎತ್ತರವಾದ, ದೇವಾಲಯ-ದೇವರ ಗುಡಿಗಳ, ಗೋಪುರದ-ಕಟ್ಟಕಡೆಯಲ್ಲಿರುವುದಾದ, ಮಾಣಿಕದ-ರತ್ನದ, ಕಲಶದ - ಸುವರ್ಣ ಕುಂಭಂಗಳ, ಎಳೆವಿಸಿಲೊಳು - ಬಾಲಸೂರ್ಯ ಕಿರಣಗಳಿಂದ, ಈ ನಗರದೊಳು - ಈ ಪುರದಲ್ಲಿ, ಕತ್ತಲೆ-ತಮೋರಾಶಿಯು, ಪರ್ವುತಿದೆ - ಹೊರಟುಹೋಗುತ್ತಲಿದೆ, ಬೇರೆ-ಇದನ್ನು ಬಿಟ್ಟು, ಸೋಮ-ಇಂದುವಿನ, ಆದಿತ್ಯ-ರವಿಯ, ಕಿರಣಂಗಳು-ಕಿರಣಗಳು, ಐದುವಡೆ-ಸಮೀಪಕ್ಕೆ ಬರಲು, ಸುತ್ತಲುಂ-ಎಲ್ಲಾ ಕಡೆಯು, ಮುಗಿಲ-ಅಂತರಿಕ್ಷಮಾರ್ಗವನ್ನು, ಮುಟ್ಟಿದ-ಸೋಂಕುತ್ತಲಿರುವ, ಕೋಟೆಗಳ ವಲಯವು-ಕೋಟೆಗಳ ಆವರಣವು (ಇರುವುದು), ಅಚ್ಚರಿಯನು-ಈ ಆಶ್ಚರ್ಯ

---

ಚಂದ್ರರೇಖೆಯೆಂಬಹಾಗೂ, ಮತ್ತು ಈ ಪುರದ ಉಪ್ಪರಿಗೆಗಳ ಮೇಲ್ಗಡೆಯಲ್ಲಿ ಸಂಚರಿಸತಕ್ಕ ಕಮಲಮುಖಿಯರ ದೇಹಕಾಂತಿಯೋ ಎಂಬಂತೆಯೂ, ಎಂಥಾ ತೇಜೋವಿಶಿಷ್ಟವಾಗಿದೆ || ೧೬ || ಆಗತಾನೆ ಚಿಗುರಿರುವುದರಿಂದ ಅತಿ ಕೆಂಪಾಗಿಯೂ ಮೃದುವಾಗಿಯೂ ಇರುವ ಚಂದಳಿರ್ಗಳ ತೋರಣಂಗಳೂ, ಥಳಥಳನೆ ಹೊಳೆಯುತ್ತಿರುವ ಕಲಶಂಗಳನ್ನುಳ್ಳ ಮಂಟಪಗಳೂ, ಸಾಲಾಗಿಯೂ, ನೋಟಕರಿಗೆ ಪರಮಾನಂದ ವುಂಟಾಗುವಂತೆಯೂ ಕಟ್ಟಿರುವ ಕನ್ನಡಿಗಳೂ, ಸಣ್ಣ ಚಾಮರಂಗಳ ಚಲನೆಯೂ, ಬಾವಟಗಳ ಕುಣಿತವೂ, ಪ್ರವಾಳ ಮತ್ತು ಮುತ್ತುಗಳ ಗೊಂಚಲುಗಳೂ, ಬೀದಿಬೀದಿಗಳಲ್ಲೂ ಗುಂಪುಗುಂಪಾಗಿ ನೆರೆದಿರುವ ಜನಸಮುದಾಯವೂ, ಹರ್ಷಾತಿಶಯವನ್ನುಂಟುಮಾಡುತ್ತಲೂ, ಮಹದೈಶ್ವರ್ಯವನ್ನು ಸೂಚಿಸುತ್ತಲೂ, ಇರುವುದು || ೧೭ || ಎಲೈ ಕರ್ಣನಂದನಾ ! ಇನ್ನೂ ಈ ಪಟ್ಟಣದ ಭಾಗ್ಯವನ್ನು ತಿಳಿಸುತ್ತೇನೆ ಕೇಳು, ಈ ನಗರದ ಸುತ್ತಲೂ ಬಲವಾಗಿಯೂ ಆಕಾಶವನ್ನು ಎಟಕಿಸುವುದಾಗಿಯೂ ಇರುವ ಕೋಟೆಯು ಆವರಿಸಿಕೊಂಡು ಸೂರ್ಯಚಂದ್ರರ ಪ್ರವೇಶಕ್ಕೆ ತಡೆಯನ್ನುಂಟುಮಾಡಿದಾಗ್ಯೂ ಕೂಡಾ ಆ ಪುರದ ಉಪ್ಪರಿಗೆಗಳಲ್ಲಿರುವ ಪದ್ಮಮುಖಿಯರ ಮುಖವೆಂಬ ಚಂದ್ರನ ಮುಗುಳ್ನಗೆಯೆಂಬ ಬೆಳದಿಂಗಳೂ, ಗೋಪುರಾಗ್ರಂಗಳಲ್ಲಿ ಮಿರುಮಿರುಗುತ್ತಿರ್ಪ ಕಲಶಂಗಳಪ್ರಭೆಯೆಂಬೆಳೆವಿಸಿಲೂ ದಿವಾರಾತ್ರಿಗಳಲ್ಲಿಯೂ

ಪರಿವುದಲ್ಲದೀನಗರದೋಳ್ಪೇರೆ | ಮತ್ತೆ ಸೋಮಾದಿತ್ಯಕಿರಣಂಪೊಯ್ದುವೊಡೆ | ಸುತ್ತಲುಂಮುಗಿಲಮುಟ್ಟಿದಕೋಟೆಗಳವಳೆಯವಣುಗನೋಡಚ್ಚರಿಯನು || ೧೮ || ಕುಸಿದುಪಲಕಾಲಮುಂಪಾತಾಳದೊಳಗಿರ್ದು | ದ್ವಿಸಹಸ್ರನಯನಂಗಳಿಂದನೋಡಿದಡೆಕಾಣಿಸಿಕೊಳ್ಳದೀಪುರದಗಳಘಾತಮಿದನಜಂಬಲ್ಲನೋಕೇಳ್ವೆನೆಂದು || ಬಿಸಜಸಂಭವನಪುರಿಗೆಂದಿಳೆಯನುಗಿದುಚ್ಚಳಿಸಿಬೆಳೆದಫಣಿಪತಿಯಮಣಿವೆಡೆಯಸಾಲಿವೆನಲೆಸೆವುದಾಗಸದೊಳೀಪೊಳಲಕೋಟೆಯರನ್ನದೆನೆಗಳೆಲ್ಲಾದೆಸೆಯೊಳು || ೧೯ || ವಾಯುಪಾಶಂಪರಿಯೆಧರೆಗುರುಳ್ದಪೆವಿದಕುಪಾಯಮಿನ್ನೇನೆಂದುನವರತ್ನಖಚಿತಕಮನೀಯಕಾಂಚನಮಯೋನ್ನತದೃಢಪ್ರಾಕಾರದೊತ್ತುಗೊಂಡಲ್ಲಲ್ಲಿಗೆ || ದಾಯಮಿಗೆನಿಲಿಸಿದರೊಖೇಚರರ್ತಮ್ಮಶೋಭಾಯಮಾನಾಲಯಂಗಳನೆನಲ್ಕಣ್ಗೆರಮಣೀಯಮಾಗಿದೆಕರ್ಣತನಯನೋಡೀಪುರದಮುಗಿಲಟ್ಟಳೆಯಸಾಲ್ಗಳ || ೨೦ || ಮೇಲೆನಿಚ್ಚಂಪರಿವದಿನಮಣಿಯಮಣಿರಥದ |

---

ವನ್ನು, ನೋಡು-ಈಕ್ಷಿಸು, ಇದು ಉತ್ಪ್ರೇಕ್ಷೆಯು || ೧೮ ||

ಟೀ|| ಪಲಕಾಲಮುಂ - ಬಹುಕಾಲ, ಪಾತಾಳದೊಳಗೆ - ಅಧೋಲೋಕದಲ್ಲಿ, ಇರ್ದು-ಇರುವುದಾಗಿ, ಕುಸಿದು-ಬಾಗಿಹೋಗಿ, ದ್ವಿಸಹಸ್ರನಯನಂಗಳಿಂದ-ಎರಡು ಸಾವಿರ ನೇತ್ರಂಗಳಿಂದ, ನೋಡಿದೊಡೆ - ಈಕ್ಷಿಸಿದರೂ, ಈ ಪುರದ-ಈ ನಗರದ, ಅಗಳ್-ಕಂದಕದ, ಘಾತಂ-ಆಳವು, ಕಾಣಿಸಿಕೊಳ್ಳದು-ಗೋಚರಿಸುವುದಿಲ್ಲವು, ಇದನು-ಈ ಕಂದಕದ ಆಳವನ್ನು, ಅಜಂ-ವಿರಿಂಚಿಯು, ಬಲ್ಲನೋ-ಅರಿತಿರುವನೊ, ಕೇಳ್ವೆನು- ಕೇಳುತ್ತೇನೆ, ಎಂದು - ಎಂಬದಾಗಿ, ಬಿಸಜಸಂಭವನ - ಕಮಲೋದ್ಭವನಾದ ವಿಧಾತೃವಿನ, ಪುರಿಗೆ-ನಗರಕ್ಕೆ, ಎಂದು-ಎಂಬದಾಗಿ, ಇಳೆಯನು-ಧರಾಮಂಡಲವನ್ನು, ಉಗಿದು - ಭೇದಿಸಿಕೊಂಡು, ಉಚ್ಚಳಿಸಿ-ಮೇಲ್ಗಡೆ ಬಂದು, ಬೆಳೆದ-ಬೆಳೆದಿರುವಂಥ, ಫಣಿಪತಿಯ-ಸರ್ಪರಾಜನ, ಮಣಿವೆಡೆಯ-ರತ್ನಗರ್ಭಿತವಾದ ಹೆಡೆಗಳ, ಸಾಲು-ಹಂತಿಯು, ಇವು-ಇವುಗಳು, ಎನಲು-ಎಂಬಂತೆ, ಆಗಸದೊಳು-ಅಂತರಿಕ್ಷದಲ್ಲಿ, ಈ ಪೊಳಲ-ಈ ನಾಡಿನ, ಕೋಟೆಯ-ಆವರಣದ, ರನ್ನದೆನೆಗಳು-ರನ್ನಮಯವಾದ ತೆನೆಗಳು, ಎಲ್ಲಾದೆಸೆಯೊಳು-ಸಮಸ್ತದಿಗ್ಭಾಗಗಳಲ್ಲಿಯೂ, ಎಸೆವುದು-ಥಳಥಳಿಸುತ್ತಿದೆ. || ಇದೂ ಉತ್ಪ್ರೇಕ್ಷೆಯು, ||೧೯||

ಟೀ|| ಕರ್ಣತನಯ-ಎಲೈ ವೃಷಧ್ವಜನೇ?, ವಾಯು-ಗಾಳಿಯೆಂಬ, ಪಾಶಂ-ಹುರಿಯು, ಪರಿಯೆ-ಕಡಿದುಹೋಗಲು, ಧರೆಗೆ-ಇಳೆಗೆ, ಉರುಳ್ದಪೆವು-ಹೊರಳುವೆವು, ಇದಕೆ-ಈ ಕಾರ್ಯಕ್ಕೆ, ಉಪಾಯಂ - ಚಮತ್ಕಾರವು, (ಚಾತುರ್ಯವು), ಇನ್ನು, ಏನೆಂದು - ಏನಿರುವುದೆಂಬದಾಗಿ, ನವರತ್ನಖಚಿತ - ವಜ್ರ, ವೈಡೂರ್ಯ, ಗೋಮೇಧಿಕ, ಪುಷ್ಯರಾಗ, ಮರಕತ, ಮಾಣಿಕ್ಯ, ಮುತ್ತು, ಹವಳ, ನೀಲಗಳೆಂಬ ಒಂಬತ್ತು ಬಗೆಯ ರತ್ನವಿಶೇಷಂಗಳಿಂದ ಕೆತ್ತಿದ, ಕಮನೀಯ-ಮನೋರಂಜಕವಾದ, ಕಾಂಚನಮಯ-ಸುವರ್ಣಮಯವಾದ, ಉನ್ನತ-ಎತ್ತರವಾದ, ದೃಢ-ಬಲವಾದ, ಪ್ರಾಕಾರದ-ಆವರಣದಿಂದ, ಒತ್ತುಗೊಂಡು-ದಟ್ಟವಾಗಿಸೇರಿ, ಅಲ್ಲಿಗಲ್ಲಿಗೆ-ಅಷ್ಟಷ್ಟುಸ್ಥಳಕ್ಕೆ, ಖೇಚರರು-ಸುರರು, ತಮ್ಮ-ತಮ್ಮಗಳ, ಶೋಭಾಯಮಾನ-ಹೊಳೆಯುತ್ತಿರುವ, ಆಲಯಂಗಳನು-ಸ್ಥಾನಂಗಳನ್ನು, ದಾಯಮಿಗೆ- ಹೊಲಿಕೆಗೆ ಸರಿಯಾಗಿ, ನಿಲಿಸಿದರೊ - ನಿಲ್ಲುವಂತೆ ಎಸಗಿದರೊ. ಎನಲು-ಎಂಬಂತೆ, ಕರ್ಣತನಯ-ಕರ್ಣತನುಜನಾದ ವೃಷಧ್ವಜನೇ? ರಮಣೀಯಮಾಗಿ-ಬಹುಚೆಲ್ವಾಗಿ, ಇದೆ-ಇರುವುದು, ಈ ಪುರದ-ಈ ನಗರದ, ಮುಗಿಲು-ಅಂತರಿಕ್ಷವನ್ನೈದುತ್ತಿರುವ, ಅಟ್ಟಳೆಯ-ಬುರುಜುಗಳ, ಸಾಲ್ಗಳ-ಶ್ರೇಣಿಗಳನ್ನು, ನೋಡು-ಈಕ್ಷಿಸು || ೨೦ ||

---

ಬೆಳಕನ್ನೀಯುತ್ತ ಅತ್ಯಾನಂದಕರವಾಗಿದೆ || ೧೮ || ಮತ್ತು ಪಾತಾಳಲೋಕದವರೆಗೂ ಬಗ್ಗಿ ಎರಡು ಸಹಸ್ರ ಕಣ್ಣುಗಳನ್ನಿಟ್ಟುಕೊಂಡು ಪರೀಕ್ಷಿಸಿ ನೋಡಿದರೂಕೂಡ ಈ ಕೋಟೆಯ ಆಳವನ್ನು ತಿಳಿಯಲಾರದೆ ಮತ್ತೆ ಭೂಮಿಯನ್ನು ಭೇದಿಸಿಕೊಂಡು ಮೇಲಕ್ಕೆದ್ದು ಬಂದು ಸೃಷ್ಟಿಕರ್ತನಾದ ಕಮಲಸಂಭವನೆಡೆಗೆ ಹೋಗಿ ಈ ಕೋಟೆಯ ಆಳವೆಷ್ಟಿದೆಯೋ ಕೇಳಿಬರುವೆನೆಂದು ಹೋಗುತ್ತಿರುವಂತೆಯೂ, ಆದಿಶೇಷನ ರತ್ನ ಸಹಿತವಾದ ಹೆಡೆಗಳೆಂಬಂತೆಯೂ ಇರುವ ರತ್ನಖಚಿತವಾದ ಕೋಟೆಯ ಪ್ರಾಕಾರದ ತೆನೆಗಳು ಕಾಣಬರುತ್ತ ಜನರಿಗೆ ಎಷ್ಟು ಆನಂದದಾಯಕಂಗಳಾಗಿ ಭಾಗ್ಯಾತಿಶಯಸೂಚಕಂಗಳಾಗಿವೆ ||೧೯|| ಎಂಬದಾಗಿ ಹೇಳುತ್ತ ಮತ್ತೆ ವೃಷಕೇತುವನ್ನು ಕುರಿತು, ಅಯ್ಯಾ ಕರ್ಣತನುಜನೇ ಕೇಳು, ಗಾಳಿ ಎಂಬ ಹಗ್ಗವು ಕಡಿದು ಬಿದ್ದರೆ ಕೆಳಗೆ ಉರುಳದಿರಬೇಕೆಂದು ನವರತ್ನಖಚಿತವಾಗಿಯೂ, ಹೃದಯಾಹ್ಲಾದಕರವಾಗಿಯೂ, ಸ್ವರ್ಣಮಯವಾಗಿಯೂ ಬಲವಾಗಿಯೂ ಇರುವ ಸುತ್ತುಗಟ್ಟುಗಳಿಂದ ಕೂಡಿ, ಸುರರೆಲ್ಲರೂ ತಮ್ಮತಮ್ಮ ಕೋರಿಕೆಗೆ ಸರಿಯಾಗಿ ಅಲ್ಲಲ್ಲಿ ನಿವಾಸಸ್ಥಾನಗಳನ್ನು ಮಾಡಿಕೊಂಡಿರುವರೋ ಎಂಬಂತೆಯೂ ಆಕಾಶವನ್ನು ಎಟಕಿಸಿಕೊಳ್ಳುವಹಾಗೆ ಇದೆಯೋ ಎಂಬಂತೆಯೂ ಅತ್ಯುನ್ನತಗಳಾಗಿರುವ ಈ ನಗರದ ಕೋಟೆಯ ಬುರುಜುಗಳ ಸೌಂದರ್ಯವು ವರ್ಣಿಸಲಸದಳವಾಗಿರ್ಪುದು || ೨೦ ||

ಗಾಲಿಗಳನೇಮಿಗಳಪೊಯ್ಲಿಂದಲೊಡೆಯೆದ್ದ | ಸಾಲಹೊಂಗೋಟೆದೆನೆಗೊನೆಗಳಿಂದೇಳ್ವಧೂಳಲ್ಲಿಗಲ್ಲಿಗೆನಭದೊಳು ‖ ಸ್ಥೂಲ
ದಂಡಾಕೃತಿಯನಾಂತವೊಲ್ಪ್ರಾಕಾರ | ಜಾಲನುಂಮಿರ್ದಹೇಮದಡೊಂಕಣಿಯಕೈಗ | ಳಾಲಿಗಚ್ಚರಿಯಾಗಿತೋರುತಿವೆತನ
ಯನೋಡೀನಗರದೆಣ್ದೆಸೆಯೊಳು ‖ ೨೧ ‖ ಈನಗರವಧುತನ್ನೆಡೆಯೊಳಾವಗಂಬಾಳ್ವ | ಮಾನವರ್ಗೆದೆಸೌಖ್ಯಂಪೆಚ್ಚಲೆಂ
ದೊಮ್ಮೆ | ತಾನಿಷ್ಟದೇವತೆಯ-ಬೇಡಿಕೊಂಡಿರ್ದೊಡಃಪರಕೆಕೈಗೂಡಲೊಡನೆ ‖ ಸಾನುರಾಗದೊಳುಟ್ಟಪಸುರುಡಿಗೆಯೆನೆಧರಾ |
ಮಾನಿನಿಯುಮೊಗದಾವರೆಯಮುಸುಕಿಕೊಂಡಿಹನ | ವೀನಪತ್ರಾವಳಿಗಳೆನೆನಗರಮುಂಬಳಸಿದುಪವನಂಗಳ್ಮೆರೆದುವು ‖ ೨೨ ‖
ಆನಗಂಪುಷ್ಪಿಣಿಯರಾಗಿರ್ಪರಿಲ್ಲಿಯಲ | ತಾವಧುಗಳಿವರಸೋಂಕಲೆಬಾರದೆಂದುರಾ | ಜೀವಮಿತ್ರಂತನ್ನನಿರ್ಮಲಕರಂಗಳಂ

---

ಟೀ॥ ಮೇಲೆ–ಆಕಾಶದಲ್ಲಿ, ನಿಚ್ಚಂ–ಅನವರತವೂ, ಸರಿವ-ಸುಳಿದಾಡುತ್ತಿರುವ, ದಿನಮಣಿಯ–ರವಿಯ, ಮಣಿ ರಥದ–ರತ್ನಖಚಿತವಾದ ರಥದ, ಗಾಲಿಗಳ–ಸಾಮು ಬಳೆಗಳ, ನೇಮಿಗಳ-ಮರದ ತುಂಡುಗಳ ಅಂದರೆ ಪಟ್ಟಿಗಳ, ಪೊಯ್ಲಿಂ ಹೊಡೆತದಿಂದಲೆ, ಒಡನೆ-ಜೊತೆಯಲ್ಲಿಯೇ, ಎದ್ದ–ಮೇಲ್ಗಡೆ ಚಿಮ್ಮಿಬರುವ, ಸಾಲ-ಆವರಣದ, ಹೊಂಗೋಟೆತೆನೆ–ಸುವರ್ಣ ಮಯವಾದ ಕೋಟೆಯ ತೆನೆಗಳ, ಗೊನೆಗಳಿಂದ–ತುದಿಗಳಿಂದ, ಏಳ್ವ-ಮೇಲಕ್ಕೆದ್ದುಬರುವ, ದೂಳು-ರಜೋವಿಶೇಷವು, ಅಲ್ಲಿಗಲ್ಲಿಗೆ-ಅಷ್ಟಷ್ಟಕ್ಕೆ, ಸ್ಥೂಲ-ಗಾತ್ರವಾದ, ದಂಡಾಕೃತಿಯನು - ಕಟ್ಟಿಗೆಯರೀತಿಯನ್ನು, ಆಂತವೊಲ್-ಹೊಂದಿದಂತೆ, ಪ್ರಾಕಾರ–ಆವರಣದ, ಜಾಲಮುಂ–ಗುಂಪನ್ನು, ಮಿರ್ದ–ಅತಿಕ್ರಮಿಸಿದ, ಹೇಮದ - ಚಿನ್ನದ, ಡೊಂಕಣಿಯ – ಪತಾಕೆಯ, ಕೈಗಳು–ಹಸ್ತಗಳು, ಆಲಿಗೆ – ನಯನಂಗಳಿಗೆ, ಅಚ್ಚರಿಯಾಗಿ – ಆಶ್ಚರ್ಯವನ್ನುಂಟುಮಾಡುವಂತೆ, ತೋರುತ್ತವೆ–ತಿಳಿದು ಬರುತ್ತಲಿವೆ, ತನಯ - ಪುತ್ರನಾದ ವೃಷಧ್ವಜನೇ! ಈನಗರದ - ಈ ಪುರಿಯ, ಎಣ್ದೆಸೆಯೊಳು - ಅಷ್ಟದಿಕ್ಕುಗಳಲ್ಲಿಯೂ, ನೋಡು–ಈಕ್ಷಿಸು ‖ ೨೧ ‖

ಟೀ॥ ಈ ನಗರ–ಈ ಪುರಿ ಎನ್ನತಕ್ಕ, ವಧು–ಸ್ತ್ರೀಯು, ತನ್ನೆಡೆಯೊಳು–ತನ್ನ ಬಳಿಯಲ್ಲಿ, ಆವಗಂ–ಅನವರತವೂ, ಬಾಳ್ವ–ಜೀವಿಸಿರುವ, ಮಾನವರ್ಗೆ–ನರರಿಗೆ, ಇದೆ–ಚೆನ್ನಾಗಿ, ಸೌಖ್ಯಂ-ಸುಖಪರಂಪರೆಯು, ಪೆಚ್ಚಲೆಂದು–ಅಭಿವೃದ್ಧಿಯಾಗ ಲೆಂದು, ಒಮ್ಮೆ-ಒಂದುಕಾಲದಲ್ಲಿ, ತಾನು–ತಾನಾದರೊ, ಇಷ್ಟದೇವತೆಯ - ತನ್ನ ಮನಸ್ಸಿಗೆ ಒಪ್ಪಿಕೆಯಾಗುವ ದೇವರನ್ನು, ಬೇಡಿಕೊಂಡು–ಕೇಳಿಕೊಂಡು, ಇರ್ದೊಡೆ-ಇರುತ್ತಿರಲಾಗಿ, ಆ ಪರಕೆ–ಆ ಇಷ್ಟವು, ಕೈಗೂಡಲು–ನೆರವೇರಲು, ಒಡನೆ–ಕೂಡಲೆ, ಸಾನುರಾಗದೊಳು-ಪ್ರೀತಿಪುರಸ್ಸರವಾಗಿ, ಉಟ್ಟ–ತಾಳ್ದ, ಪಸರುಡಿಗೆ–ಹಸರು ಬಣ್ಣದ ಪರ್ಣಗಳು ಎನ್ನುವ ವಸ್ತುವು, ಎನೆ–ಎಂಬಂತೆ, ಧರಾಮಾನಿನಿಯ–ಇಳೆಯೆಂಬ ನಾರೀಮಣಿಯ, ಮೊಗದಾವರೆಯ–ಮುಖಪದ್ಮವನ್ನು, ಮುಸುಕಿಕೊಂಡು–ಆವರಿಸಿ ಕೊಂಡು, ಇಹ–ಇರತಕ್ಕ, ನವೀನ–ನೂತನವಾದ, ಪತ್ರಾವಳಿಗಳು–ಪರ್ಣರಾಶಿಗಳು, ಎನೆ-ಎಂಬಂತೆ, ನಗರಮಂ–ಪುರವನ್ನು, ಬಳಸಿದ–ಆವರಿಸಿಕೊಂಡ, ಉಪವನಂಗಳ್–ಉದ್ಯಾನಗಳು, ಮೆರೆದವು–ಹೊಳೆಯುತ್ತಲಿದ್ದವು ‖ ೨೨ ‖

ಟೀ॥ ಇಲ್ಲಿಯ–ಈ ನಾಡಿನ, ಲತಾವಧುಗಳು–ಲತೆಗಳೆಂಬನಾರಿಯರು, ಆವಗಂ–ಅನವರತವೂ, ಪುಷ್ಪಿಣಿಯರು–ಹೂಗ ಳುಳ್ಳವರು ಮತ್ತು ಋತುಮತಿಯರು–ಚಂಡಾಲಜಾತಿಯವರು, ಆಗಿರ್ಪರು-ಆಗಿರುವವರು, ಇವರ–ಈ ಜನರನ್ನು, ಸೋಂಕಲೆಬಾ ರದು–ಸ್ಪರ್ಶಮಾಡಲೇಬಾರದು, ಎಂದು–ಹೀಗೆ ಎಂಬದಾಗಿ, ರಾಜೀವ–ತಾವರೆಗಳಿಗೆ, ಮಿತ್ರಂ–ಸಖನಾದ, ರವಿಯು, ತನ್ನ–ಸ್ವಕೀಯವಾದ, ನಿರ್ಮಲ–ಸ್ವಚ್ಛವಾದ, ಕಿರಣಂದಿಳಂ-ಕರಗಳನ್ನು, ಪೆರೆದೆಗೆದನು–ಹೊರಕ್ಕೆ ತೆಗೆದುಬಿಟ್ಟನು, ಎಂಬಂತೆ–

---

ಅಲ್ಲದೆ ಯಾವಾಗಲೂ ಆಕಾಶಮಾರ್ಗದಲ್ಲಿ ತಿರುಗುತ್ತಿರುವ ರತ್ನಖಚಿತವಾದ ಮತ್ತು ಅತಿವಿಚಿತ್ರವಾದ ಸೂರ್ಯನ ರಥದಚ ಕ್ರಗಳ ಮೂಲಕ ಮೇಲಕ್ಕೇಳುವ ಧೂಳೆಲ್ಲವೂ ಒಂದುಗೂಡಿ ದಂಡಾಕೃತಿಯನ್ನೈದಿ ಮೇಲ್ಭಾಗದಲ್ಲಿ ಹೊಳೆಯುತ್ತಲಿದೆಯೊ ಎಂಬಂತೆ ತೋರುತ್ತಿರುವ ಈ ನಗರದ ಎತ್ತರವಾದ ಸ್ಥಳಗಳಲ್ಲಿಟ್ಟಿರುವ ಸುವರ್ಣಮಯವಾದ ಬಾವುಟಗಳ ಸೌಂದ ರ್ಯವು ಅಷ್ಟದಿಕ್ಕುಗಳಲ್ಲೂ ಎಷ್ಟು ಮನೋಲ್ಲಾಸಕರವಾಗಿದೆ ನೋಡು ‖ ೨೧ ‖ ಮತ್ತು ಈ ಭದ್ರಾವತಿನಗರದ ಉದ್ಯಾ ನವನದಲ್ಲಿರುವ ಎಲ್ಲಾ ಗಿಡಮರಗಳಲ್ಲೂ ಕೋಮಲವಾಗಿಯೂ ಹೊಸದಾಗಿಯೂ ಬಿಟ್ಟು ಇರುವ ಹಸುರೆಲೆಗಳು, ಧರಾಮಂ ಡಲವೆಂಬ ನಾರೀಮಣಿಯ ಮುಖಕಮಲವನ್ನು ಆವರಿಸಿಕೊಂಡಿರುವುದಾಗಿ. ಈ ಪುರವನಿತೆಯು ತನ್ನ ಬಳಿಯಲ್ಲಿರುವ, ತನ್ನ ನ್ನೇ ಆಶ್ರಯಿಸಿರುವ ಜನರಿಗೆ ಸುಖಪರಂಪರೆಯು ಒದಗಲೆಂದು ಮಾಡಿದ ವ್ರತದ ಇಷ್ಟಸಿದ್ಧಿಯಿಂ ಪಡೆಯಲು ಪ್ರೀತ್ಯತಿಶಯ ದಿಂದ ಉಟ್ಟುಕೊಂಡಿರುವ ಹಸರು ಸೀರೆಯೋ ಎಂಬಂತೆ ಭ್ರಾಂತಿಯನ್ನುಂಟುಮಾಡುತ್ತ ಹೇಗೆ ಹೊಳೆಯುತ್ತಿದೆ ‖ ೨೨ ‖ ಅಲ್ಲದೆ ಈ ಭದ್ರಾವತಿ ನಗರಕ್ಕೆ ಸೇರಿರುವ ಎಲ್ಲಾ ಉದ್ಯಾನವನಗಳೂ ದೊಡ್ಡದೊಡ್ಡ ಮರಗಳಿಂದ ಕೂಡಿವೆ, ಆ ಮರಗಳಲ್ಲಿ ಬಹಳ ಒತ್ತಾಗಿ ಹಸುರಾದ ಎಲೆಗಳು ಬಿಟ್ಟು ಇರುವುವು. ಮತ್ತು ಆ ಉದ್ಯಾನಂಗಳ ನಾನಾಕಡೆಗಳಲ್ಲೂ ಇರುವ ಕೋಮಲ

ಪೆಱದೆಗೆದಸಂಬಂತಿರೆ || ಆವೆಡೆಯೊಳುಂಛಿದ್ರಮಿಲ್ಲೆನಿಸಿವಿವಿಧ | ದ್ರುಮಾವಳಿಯನಿಬಿಡಪತ್ರಚ್ಛಾಯೆಗಳಸೊಂಪು | ದೀವಿದಾರಾಮಂಗಳೆಂದುಮೀಪುರಜನರ್ಗೇಂವಿಲಾಸವನೀವುವೊ || ೨೩ || ನಿಚ್ಚಳದೊಳೆಸೆವತಿಳಿಗೊಳನಕಲಕಾಡಿಬಂ | ದಚ್ಚಲರಧೂಳಿಗಳಚೆಲ್ಲಾಡಿಸಲೆಮದಂ | ಪೆರ್ಚಿಸೆತರುಲತೆಯನಣದಾಡಿಮರಿದುಂಬಿಗಳಕೂಡಿಕೊಂಡೀಬನದೊಳು || ನಿಚ್ಚಲೆಳೆವೆಲರೆಂಬಸೊಕ್ಕಾನೆತಾನೆತ | ನ್ನಿಚ್ಛೆಯಿಂತಿರುಗುತಿದೆತೊಲತೊಲಗಿವಿರಹಿಗ | ಳೆಚ್ಚರದೊಳೆಂದೆತ್ತಲುಂಪೂಯಲಿಡುವಂತೆಕೂಗುತಿವೆಕೋಗಿಲೆಗಳು || ೨೪ || ಮಿಗೆಮುತ್ತಿಮೊರೆವತುಂಬಿಗಳತಿಂತಿಣಿಯನೇ | ಮುಗಿಲೆಂದುಸುಳಿವಗಾಳಿಗೆಬಿಡದೆನರ್ತಿಪಲ | ತೆಗಳಕುಡಿಗೊನರನುಣ್ಬೊಗರನೇಮಿಂಚೆಂದುಸೊಗಯಿಸುವಪೂಗಳಿಂದ || ಪೊಗುವಮಕರಂದಬಿಂದುಗಳನೇಮಳೆಗಳೆಂ | ದುಗುವಸಂತಸದೊಳಾವಗಮೈದೆಕುಣಿವಸೋ | ಗೆಗಳಬಳಗಂಗಳಂಮಗನೆಕಂಡೈತಳಿತನಗರೋಪವನದೆಡೆಯೊಳು || ೨೫ || ಪೂಗಳಪರಾ

---

ಎಂಬತೆರನಾಗಿ, ಇರೆ-ಇರಲು, ಆ ವೆಡೆಯೊಳಂ-ಎಲ್ಲಪ್ರದೇಶಗಳಲ್ಲೂ, ಛಿದ್ರಂ-ಬೇರೆಯಾದ್ದು, ಇಲ್ಲ-ಇಲ್ಲವು, ಎನಿಸಿ-ಎನ್ನಿಸಿಕೊಂಡು, ವಿವಿಧ-ನಾನಾಪ್ರಕಾರವಾದ, ದ್ರುಮ-ವೃಕ್ಷಂಗಳ, ಆವಳಿಯ-ಗುಂಪಿನಿಂದ, ನಿಬಿಡ-ತುಂಬಿದ, ಪತ್ರ-ಪರ್ಣಗಳ, ಛಾಯೆಗಳ-ಪ್ರತಿಬಿಂಬಗಳ, ಸೊಂಪು-ಏಳಿಗೆಯನ್ನು, ತೀವಿದ-ಹೊಂದಿದ, ಆರಾಮಗಳು-ಉಪವನಗಳು, ಎಂದುಂ-ಸದಾ, ಈಪುರಜನರ್ಗೆ-ಈ ನಗರದ ನಿವಾಸಿಗಳಿಗೆ, ಏಂವಿಲಾಸವನು-ಎಷ್ಟು ಆನಂದವನ್ನು, ಈವುವೊ-ದಯೆಗೈಯ್ಯುತ್ತಿರುವವೋ || ಇದು ಶ್ಲೇಷಾಲಂಕಾರವು || ೨೩ ||

ಟೀ|| ನಿಚ್ಚಲದೊಳು-ನೈರ್ಮಲ್ಯದಿಂದ, ಎಸೆವ-ಹೊಳೆಯುತ್ತಿರುವ, ತಿಳಿಗೊಳನ-ಸ್ವಚ್ಛವಾದ ಉದಕವುಳ್ಳ ಬಾವಿಯನ್ನು, ಕಲಕಾಡಿ-ಚದರಿಬಿಟ್ಟು, ಬಂದು-ಐತಂದು, ಅಚ್ಚಲರ-ಪರಿಶುದ್ಧವಾದ ಹೂಗಳಲ್ಲಿರುವ, ಧೂಳಿಗಳ-ಧೂಳನ್ನು, ಚೆಲ್ಲಾಡಿ-ಕಲಕಿಬಿಟ್ಟು, ಸಲೆ-ಚನ್ನಾಗಿ, ಮದಂ-ಕಾಮವು, ಪೆರ್ಚೆ-ಉದ್ರೇಕವಾಗಲು, ತರುಲತೆಯ-ವೃಕ್ಷದ ಬಳ್ಳಿಯನ್ನು, ನಣದಾಗಿ-ಅಲ್ಲಾಡುವಂತೆ ಮಾಡಿ, ಮರಿದುಂಬಿಗಳ-ಭೃಂಗಾವಳಿಯನ್ನು, ಕೂಡಿಕೊಂಡು-ಜತೆಮಾಡಿಕೊಂಡು, ಈಬನದೊಳು-ಈ ಕಾಡಿನಲ್ಲಿ, ನಿಚ್ಚಲ-ನಿಜವಾದ, ಎಳವಲರೆಂಬ-ತಂಗಾಳಿ ಎನ್ನತಕ್ಕ, ಸೊಕ್ಕಾನೆ-ಮದಗಜವು, ತಾನೆ-ತನ್ನಷ್ಟಕ್ಕೆ ತಾನೆ, ತನ್ನಿಚ್ಛೆಯಿಂ-ಮನಸ್ವಿಯಾಗಿ, ತಿರುಗುತಿದೆ-ಸಂಚರಿಸುತ್ತಿರುವುದು, ವಿರಹಿಗಳು - ವಿರಹತಾಪದಿಂದ ಇರುವವರು, ಪೆಚ್ಚರದೊಳು-ಎಚ್ಚರಿಕೆಯಿಂದ, ತೊಲತೊಲಗಿ-ಹೊರಹೊರಡಿರಿ, ಎಂದು-ಎಂಬತೆರನಾಗಿ, ಎತ್ತಲು-ಎಲ್ಲೆಡೆಗಳಲ್ಲಿಯೂ, ಪುಯ್ಯಲಿಡುವಂತೆ-ಕೂಗಿಕೊಡುವಂತೆ, ಕೋಗಿಲೆಗಳು-ಪಿಕವಿಂಡು, ಕೂಗುತಿವೆ-ದನಿಗೈಯುತಲಿರುವುವು || ೨೪ ||

ಟೀ|| ಮಿಗೆ-ಅಧಿಕವಾಗಿ, ಮುತ್ತಿ-ಕವಿದುಕೊಂಡು, ಮೊರೆವ-ಧ್ವನಿಯಂಗೈವ, ತುಂಬಿಗಳ-ಆಳಿಗಳ, ತಿಂತಿಣಿಯನೆ-ಗುಂಪನ್ನೆ, ಮುಗಿಲೆಂದು-ಮೋಡವೆಂದು, ಸುಳಿವ-ಚಲಿಸುತ್ತಿರುವ, ಗಾಳಿಗೆ-ಪವನನಿಗೆ, ಬಿಡದೆ-ತಪ್ಪದೆ, ನರ್ತಿಪ-ನರ್ತನಮಾಡುತ್ತಿರುವ. ಲತೆಗಳ-ಎಳೆವಳ್ಳಿಗಳ, ಕುಡಿ-ಚಿಗುರಿನ, ಕೊನರ-ಕೊನರಿನ, ನುಣ್ಬೊಗರನೆ - ನಯವಾದ ತೇಜಸ್ಸನ್ನೆ, ಮಿಂಚೆಂದು-ವಿದ್ಯುತ್ತೆಂಬದಾಗಿಯೂ, ಸೊಗಯಿಸುವ-ಮಿರಮಿರಗುವ, ಪೂಗಳಿಂದ-ಪುಷ್ಪಗಳಿಂದ, ಪೊಗುವ-ಸ್ರವಿಸುವ, ಮಕರಂದ-ಹೂವಿನ ಸಾರದ ಅಂದರೆ ಮಧುವಿನ, ಬಿಂದುಗಳನೆ-ತೊಟ್ಟುಗಳನ್ನೆ, ಮಳೆಗಳೆಂದು-ವರ್ಷಧಾರೆಗಳೆಂಬುದಾಗಿಯೂ, ಒಗೆವ-ಉಂಟಾಗುವ, ಸಂತಸದೊಳು-ಹರ್ಷದಲ್ಲಿ, ಆವಗಂ-ಸದಾ, ಐದೆ-ಚನ್ನಾಗಿ, ಕುಣಿವ-ನಾಟ್ಯವಂಗೈವ, ಸೋಗೆಗಳ-ಗಂಡು ನವಿಲುಗಳ, ಬಳಗಂಗಳಂ-ಸಮೂಹವನ್ನು, ತಳಿತ-ಚಿಗುರಿನಿಂದ ಕೂಡಿದ, ನಗರದ-ಪುರಿಯ, ಉಪವನದ-ಉದ್ಯಾನವನಗಳ, ಎಡೆಯೊಳ್-ಹತ್ತಿರದಲ್ಲಿರುವುದನ್ನು, ಮಗನೆ-ಪುತ್ರನಾದ ವೃಷಧ್ವಜನೆ, ಕಂಡೈ-ನೋಡಿದೆಯಾ? || ೨೫ ||

---

ಲತೆಗಳೂಕೂಡ ಅತಿಶಯವಾದ ಸುರಭಿಯಂ ಬೀರುತ್ತಲಿರುವ ಪುಷ್ಪಗಳಿಂದಲಂಕೃತಮಾಗಿರುವುವು. ಈ ಸೊಬಗನ್ನು ನೋಡಿದರೆ ಪುಷ್ಪಿಣಿಯರಿಂದ ಲತಾವಧುಗಳು ಈ ವನದಲ್ಲಿ ಸೇರಿರುವುದರಿಂದ ಸೂರ್ಯನು ತನ್ನ ಸಂಚಾರವನ್ನು ಇಲ್ಲಿ ಬಿಟ್ಟುಬಿಟ್ಟರುವನೆಂಬ ಭ್ರಾಂತಿಯನ್ನುಂಟುಮಾಡುತ್ತಿವೆ || ೨೩ || ಮೊಟ್ಟಮೊದಲು ನಿರ್ಮಲವಾದ ಸರೋವರಕ್ಕೆ ಹೋಗಿ ಅದನ್ನೆಲ್ಲಾ ಕಲಕಿಬಿಟ್ಟು ಅಲ್ಲಿಂದ ಮುಂದಕ್ಕೆ ಹೊರಟು ಪುಷ್ಪಗಳಲ್ಲಿರುವ ಪರಾಗವನ್ನೆಲ್ಲಾ ಚದರಿಸಿ, ಅನಂತರ ದೊಡ್ಡ ದೊಡ್ಡ ವೃಕ್ಷಗಳ ಬಳಿಗೆ ಬಂದು ಅವುಗಳನ್ನೆಲ್ಲಾ ಅಲ್ಲಾಡಿಸಿಬಿಟ್ಟು ಆಳಿವಿಂಡನ್ನು ತನ್ನ ಜತೆಮಾಡಿಕೊಂಡು ಶೈತ್ಯಸೌರಭ್ಯಮಾಂದ್ಯಯುಕ್ತಮಾದ ಗಾಳಿಯೆಂಬ ಸೊಕ್ಕಾನೆಯು ಸ್ವೇಚ್ಛೆಯಾಗಿ ಕಾಡಿನಲ್ಲೆಲ್ಲಾ ಅಲೆಯುತ್ತಿದೆ. ವಿರಹವೇದನೆಯನ್ನನುಭವಿಸತಕ್ಕವರಿಗೆ ಇದು ಸ್ಥಳವಲ್ಲವೆಂಬ-ದನ್ನು ಪ್ರಕಟಿಸುವ ತೆರದಿಂದ ಎಲ್ಲೆಲ್ಲಿಯೂ ಕೋಗಿಲೆಯ ಪಕ್ಷಿಗಳು ಕೂಗುತ್ತಲಿವೆ. ||೨೪|| ಈ ಉದ್ಯಾನವನವು ಎಲ್ಲೆಲ್ಲಿಯೂ ಝೇಂಕಾರವಂಗೈವ ಭೃಂಗಾಳಿ ಎಂಬ ಮೇಘದಿಂದಲೂ, ಅಲ್ಲಲ್ಲಿ ಸುಳಿ ಸುಳಿವ ಮಂದಮಾರುತನ ಸೊಂಪಿಗೆ ನರ್ತನಮಾಡುವ ಎಳೆವಳ್ಳಿಗಳ ಕೊನೆಗಳ ಕಾಂತಿಯೆಂಬ ಮಿಂಚಿನಿಂದಲೂ, ಸುವಾಸನೆಯುಳ್ಳ ಅಲ

ಗನೊಕ್ಕಿರ್ದಿಳೆಯುಮೇಲಿಕುಂ | ಹಂಸೀಗಣಂನಡೆಯಲದರಡಿಪೆಜ್ಜೆವತ್ತಿಸಾ | ಲಾಗಿರಲ್ಕಿವುಬನವನವಿರಹಿಗಳ್ಪೊಗದಂತೆಮನ್ಮಥಂಬರೆ ದಿರಿಸಿದ || ನಾಗರದಯಂತ್ರದಕ್ಕರಂಗಳೆಂಬಂದದಿಂ | ದಾಗತವಗಿರುಳಹವಿಯೋಗಮಂನೆನೆದಂಜಿ | ಬೇಗದಿಂತೊಡೆವಂತೆಪೊ ರಳ್ದುರತಿಗೈವಕೋಕಂಗಳಂನೋಡೆಂದನು || ೨೬ || ನಸುಗಾಳಿಸಂಧಿಸೆಕೆದರ್ದಪೊಂಬಾಳೆಗಳ | ಕುಸುರಿಗಳ್ತಳಿವಕ್ಷತೆಗಳನಾ ಅಮಲಮಂಜರಿಯು | ಕುಸುಮಂಗಳಾಂತಪುಷ್ಪಾಂಜಲಿಗಳೊಂದಿಕಿಕ್ಕಿರಿದಪೆರ್ಗೊನೆಗಳಿಂದ || ಎಸೆವಚೆಂದೆಂಗಾಯ್ಗಳೊಂದೊಂದ ನೆತ್ತಿಯೊತ್ತ | ಲೊಸರಿಸೋರ್ವೆಳನೀರ್ಗಳರ್ಘ್ಯಂಗಳಾಗೆರಂ | ಜಿಸುವಬನದೇವಿಭೂದೇವತೆಯನರ್ಚಿಸುವೊಲಿದೆಕುವರನೋ ಡೆಂದನು || ೨೭ || ತರುಣಪಲ್ಲವದವಿಸ್ತಾರದಿಂನೇರದಿಂ | ಸ್ವರಗೈವಕಲಪಿಕೋಚ್ಚಾರದಿಂಸಾರದಿಂ | ಸುರಿವಪೂದೊಂಗಲತು

ಟೀ|| ಪೂಗಳ-ಪುಷ್ಪಗಳ, ಪರಾಗಂ-ಧೂಳು, ಒಕ್ಕಿರ್ದ-ಎರಚಿದ್ದ, ಇಳೆಯಮೇಲೆ-ಧರಾಮಂಡಲದ ಮೇಲ್ಗಡೆ, ಹಂಸೀಗಣಂ-ಹಂಸಪಕ್ಷಿಗಳ ಸಮೂಹವು, ನಡೆಯಲು-ತಿರುಗಾಡಲು, ಅದರ-ಆ ಹಂಸಗಳ, ಪೆಜ್ಜೆ-ಅಡಿಗಳು, ಒತ್ತಿ-ಅಮುಕಲ್ಪಟ್ಟು, ಸಾಲಾಗಿ-ಶ್ರೇಣಿಯಾಗಿ, ಇರಲ್ಕೆ-ಇರುತ್ತಿರಲು, ಇವು-ಈ ಗುರ್ತುಗಳು, ವಿರಹಿಗಳು-ವಿರಹತಾಪವುಳ್ಳವರು, ಬನವ-ಅರಣ್ಯವನ್ನು, ಪೊಗದಂತೆ-ಪ್ರವೇಶಮಾಡದಹಾಗೆ, ಮನ್ಮಥಂ-ಮದನನು, ಬರೆದು-ಲಿಖಿಸಿ, ಇರಿಸಿದ- ಇಟ್ಟಿರುವಂಥ, ನಾಗರದ-ನಾಗರವರ್ಣಮಾಲೆಗಳುಳ್ಳ, ಯಂತ್ರದ-ಯಂತ್ರವಿಶೇಷಗಳ, ಅಕ್ಕರಗಳು-ವರ್ಣಗಳು, ಎಂಬಂದದಿಂ-ಎಂಬ ಬಗೆಯಿಂದ, ಆಗ-ಆ ಕಾಲದಲ್ಲಿ, ತಮಗೆ, ಇರುಳ-ಸಂಜೆಯಲ್ಲಿ, ಆಹ-ಉಂಟಾಗಿರುವ, ವಿಯೋಗಮಂ - ಅಗಲಿಕೆಯನ್ನು, ನೆನೆದ-ಸ್ಮೃತಿಗೆ ತಂದುಕೊಂಡು, ಅಂಜಿ-ಹೆದರಿ, ಬೇಗದಿಂ-ಶೀಘ್ರವಾಗಿ, ತೊಡೆವಂತೆ-ಬಳಿಯುವಹಾಗೆ ಪೊರಳ್ದು-ಉರುಳಾಡಿ, ರತಿಗೈವ-ರತಿ ಸುಖವನ್ನನುಭವಿಸುವ, ಕೋಕಂಗಳಂ-ಚಕ್ರವಕ್ಕಿಗಳನ್ನು, ನೋಡು-ಈಕ್ಷಿಸು, ಎಂದನು-ಎಂದು ನುಡಿದನು ||೨೬||

ಟೀ|| ಕುವರ-ಕರ್ಣನಂದನನೆ !, ನಸುಗಾಳಿ-ಮಂದಮಾರುತವು, ಸಂಧಿಸೆ - ಚಲಿಸಲು, ಕೆದರ್ದ-ಚದರಿಹೋದ, ಪೊಂಬಾಳೆಗಳ-ಸುವರ್ಣಛಾಯೆಯಾಗಿರುವ ಕದಳಿಗಳ-ಬಾಳೆಗಳ, ಕುಸುರಿಗಳು-ಹೂಗಳು, ತಳಿವ-ಗೋಚರಿಸುವ, ಅಕ್ಷತೆಗಳು-ಸೇಸೆಗಳು, ಆಗೆ-ಆಗಲು, ಅಮಲ-ಪರಿಶುದ್ಧವಾದ, ಮಂಜರಿಯ-ಗುಚ್ಛಂಗಳಾಗಿರುವ, ಕುಸುಮಂಗಳು-ಪುಷ್ಪಗಳು, ಆಂತ-ಧರಿಸುವ, ಪುಷ್ಪಾಂಜಲಿ-ಬೊಗಸೆಯಲ್ಲಿಟ್ಟುಕೊಂಡಿರುವ ಮಂತ್ರಪುಷ್ಪಂಗಳು, ಆಗೆ-ಆಗಲು, ಒಂದಿ-ಒಟ್ಟುಸೇರಿ, ಕಿಕ್ಕಿರಿದ-ಸಾಂದ್ರವಾದ, ಪೆರ್ಗೊನೆಗಳಿಂದ-ದೊಡ್ಡದೊಡ್ಡ ಗುಚ್ಛಂಗಳಿಂದ, ಎಸೆವ-ರಂಜಿಸುವ, ಚೆಂದೆಂಗಾಯ್ಗಳು-ಕೆಂಪಾದ ತೆಂಗಿನ ಕಾಯಿಗಳು, ಒಂದೊಂದನು-ಬೇರೆಬೇರೆಯಾಗಿ, ಎಡೆ-ಪಾರ್ಶ್ವದಲ್ಲಿ, ಒತ್ತಲು-ತಗಲಲು, ಒಸರಿ-ಜಿನಗಿ, ಸೋರ್ವ-ಸ್ರವಿಸುತ್ತಿರುವ, ಎಳನೀರ್ಗಳ-ಎಳನೀರಿನಲ್ಲಿನ ಉದಕವು, ಅರ್ಘ್ಯಂಗಳು-ಅರ್ಘ್ಯಜಲವು, ಆಗೆ-ಆಗುತ್ತಿರಲು, ರಂಜಿಸುವ-ಪ್ರಕಾಶಿಸುವ, ಬನದೇವಿ-ವನಾಭಿಮಾನಿದೇವತೆಯು, ಭೂದೇವತೆಯನು-ಇಳೆಯೆನ್ನುವ ದೇವತೆಯನ್ನು, ಅರ್ಚಿಸುವವೊಲ್-ಯಜನವಂಮಾಡುವಂತೆ, ಇದೆ-ಇರುವುದು, ನೋಡು-ಇದನ್ನು ನೋಡು, ಎಂದನು-ಎಂಬದಾಗಿ ಉತ್ಪ್ರೇಕ್ಷೆ ತೋರುವಂತೆ ನುಡಿದನು ||೨೭||

ಟೀ|| ತರುಣ-ನವೀನವಾದ, ಪಲ್ಲವದ-ಎಳೆಚಿಗುರಿನ, ವಿಸ್ತಾರದಿ-ವೈಶಾಲ್ಯದಿಂದ, ನೇರದಿಂ-ಭೇದವಲ್ಲದಂತೆ, ಸ್ವರಂಗೈವ-ಶಬ್ದಮಾಡುವ, ಕಲ-ಗೋಚರವಾಗದ ಸವಿಯುಳ್ಳ, ಪಿಕ-ಕೋಗಿಲೆಪಕ್ಷಿಗಳ, ಉಚ್ಚಾರದಿಂ-ಧ್ವನಿಯಿಂದಲೂ, ಸಾರದಿಂ-ಸ್ವಾರಸ್ಯದಿಂದಲೂ, ಸುರಿವ-ದ್ರವಿಸುವ, ಪೂದೊಂಗಲ-ಪುಷ್ಪಗುಚ್ಛಗಳಿಂದ ಹೊರಟುಬರುವ, ತುಷಾರದಿಂ-ಸಣ್ಣಸಣ್ಣ ಉದಕ ಬಿಂದುಗಳಿಂದ, ಸ್ವೈರದಿಂ-ಮನಸ್ವಿಯಾಗಿ, ಸಲ್ಲಾಪಕೆ-ಕ್ರೀಡೆಗೆ, ಎಳಸಿ, ಬಯಸಿ, ಬಳಸಿ-ತಿರುಗಾಡಿ, ಮೊರೆವ-ಧ್ವನಿಯಂ

ಗಳಿಂ ಸುರಿಯುತ್ತಿರುವ ಪುಷ್ಪರಸವೆಂಬ ಮಳೆಯ ನೀರಿನಿಂದಲೂ, ಆನಂದಾತಿಶಯದಿಂದ ನರ್ತನಮಂಗೈವ ನವಿಲ್ಗಳಿಂದಲೂ ಮನೋಹರವಾಗಿರ್ಪುದಲ್ಲದೆ || ೨೫ || ಈ ಎಡೆಯಲ್ಲಿ ವಿರಹಿಗಳು ಯಾರೂ ನಿಲ್ಲಕೂಡದೆಂಬದಾಗಿ ನಾಗರಾಕ್ಷರದಲ್ಲಿ ಮನ್ಮಥನೇ ಬರೆದಿದಾನೆಯೋ ಎಂಬಂತೆ ಇರುವ ಹಂಸವಿಂಡಿನಿಂದ ತುಳಿಯಲ್ಪಟ್ಟ ಪುಷ್ಪಪರಾಗದಿಂದ ಕೂಡಿದ ಪ್ರದೇಶಗಳು ಕಣ್ಗೊಳಿಸುತ್ತಲಿವೆ ಮತ್ತು ಎಲ್ಲೆಲ್ಲಿಯೂ ಚಕ್ರವಕ್ಕಿಗಳು ಜೋಡಿ ಜೋಡಿಯಾಗಿ ಇದ್ದುಕೊಂಡು ರತಿ ಸುಖವನ್ನು ಅನುಭವಿಸುತ್ತಿರುವದನ್ನು ನೋಡು ||೨೬ ಎಂಬುದಾಗಿ ಎಲ್ಲವನ್ನೂ ತೋರಿಸುತ್ತ ಪುನಃ ವೃಷಕೇತುವನ್ನು ಕುರಿತು, ಎಲೈ ಕರ್ಣನಂದನನನೇ, ಈ ಉದ್ಯಾನವೆಂಬ ದೇವತೆಯು ತಂಗಾಳಿಯಿಂದ ಚದರಿಸಲ್ಪಟ್ಟ, ಅರಿಸಿನ ಬಣ್ಣವಾದ ಬಾಳೆಯ ಮರಗಳಲ್ಲಿನ ಕುಸುಮಂಗಳೆಂಬ ಅಕ್ಷತೆಗಳಿಂದಲೂ, ಆ ಗೊಂಚಲಿನಲ್ಲಿರುವ ಪುಷ್ಪ ಸಮುದಾಯವೆಂಬ ಮಂತ್ರಪುಷ್ಪದ ಮಲಗಳಿಂದಲೂ, ಅಲ್ಲಿರುವ ತೆಂಗಿನ ಮರಗಳ ದೊಡ್ಡ ದೊಡ್ಡ ಗೊನೆಗಳಲ್ಲಿರುವ ಕಾಯಿಗಳು ಪರಸ್ಪರ ತಾಕಲಾಡಿದ್ದರಿಂದೊಸರುತ್ತಿರುವ ಎಳನೀರೆಂಬ ಅರ್ಘ್ಯೋದಕದಿಂದಲೂ ಭೂದೇವಿಯನ್ನು ಪೂಜಿಸುತ್ತಿರುವಂತೆಯೂ, ತೋರುತ್ತಿದೆ || ೨೭ || ಎಲ್ಲೆಲ್ಲಿಯೂ ವೃಕ್ಷಗಳೆಲ್ಲಾ ಚಿಗುರಿವೆ, ಕೋಗಿಲೆಗಳು ಇಂಪಾಗಿ ಗಾನಮಾಡುತ್ತಿವೆ, ಪುಷ್ಪ ಗುಚ್ಛಂಗಳ ಮೂಲಕ ಮಕ

ಸಾರದಿಂಸ್ವೈರದಿಂಸಲ್ಲಾಪಕೆಳಸಿಬಳಸಿ ‖ ಮೊರೆವತುಂಬಿಗಳಝೋಂಕಾರದಿಂತೋರದಿಂ । ಪರಿಪಕ್ವಮಾದಫಲಭಾರದಿಂಕೀರದಿಂ । ಕರಮೆಸೆವುತಿರ್ಪಸಹಕಾರದಿಂತೀರದಿಂದೆಲ್ಲಿಯುಂನಂದನದೊಳು ‖೨೮‖ ಎಮ್ಮಂತೆಕೂರ್ಪರಂಬಿಡದಪ್ಪಿಕೊಂಡಿರದೊ । ಡೊಮ್ಮೆಯುಂಪಿಲಲೀಯನೀಬನದೊಳಂಗೋದ್ಭ । ವಂ ಮೋಹಿಗಳನೆಂದುದೃಷ್ಟಾಂತಮಂತೋರಿಭೋಗಿಸುವಮಾನವರ್ಗೆ ‖ ತಮ್ಮಿಂದವಸ್ತುಗಳಪಡೆಯಲ್ಕೆಸಂಯೋಗ । ಮಂಮಾಳ್ಪವೋಲ್ನಾಗವಲ್ಲಿಗಳ್ಫಲಭಾರ । ದಿಂಮೆರೆವಪೂಗವೃಕ್ಷಂಗಳಂಪರ್ವಿಕಂಗೊಳಿಸುತಿವೆನೋಡೆಂದನು ‖೨೯‖ ಭೂತಳದಭೋಗಿಸಂಕುಲಕೆಬಹುವಿಧಸುಗಂ । ಧಾತಿಶಯಸೌಖ್ಯದಿಂನೆರೆದಣಿಸಿಬಳಿಕಸಂ । ಪ್ರೀತಿಯಂತಳೆದಮಲಭೋಗಿಚಯಕೊಂದುಬಗೆಬಗೆಯಕಂಪಿನಸೊಗಸನು ‖ ಏತಕುಣಿಸದೆಬಿಡು (ಬಿಡುವಳೀವನಾಂಗನೆಯೆಂಬ) ವುದೀಬನವುತಾನೆಂಬ । ರೀತಿಯಿಂಬೇರ್ವರಿದನುಡಿವಾಳಮಿರಲಳಿ । ವ್ರಾತಮರಿಯದೆತಿರುಗುತಿವೆನಿಧಾನ

---

ಗೈಯುವ, ತುಂಬಿಗಳ-ಅಳಿಗಳ. ಝೋಂಕಾರದಿಂ-ಝೋಂ ಎಂಬ ಶಬ್ದದ, ತೋರದಿಂ-ಆಧಿಕ್ಯದಿಂದ, ಪರಿಪಕ್ವಮಾದ-ಚೆನ್ನಾಗಿ ಮಾಗಿರುವ, ಫಲಭಾರದಿಂ-ಹಣ್ಣುಗಳ ಹೊರೆಯಿಂದ, ಕೀರದಿಂ-ಶುಕದಿಂದ, ಕರಂ-ಹೆಚ್ಚಾಗಿ, ಎಸೆವುತ-ಹೊಳೆಯುತ್ತ, ಇರ್ಪ-ಇರುವ, ಸಹಕಾರದಿಂ-ಸವಿಯಾದ ಹಣ್ಣು ಬಿಡುವ ಚೂತವೃಕ್ಷದಿಂದ, ತೀರದಿಂ-ಜಲಾಶಯದ ಎಲ್ಲೆಗಳಿಂದ, ಎಲ್ಲಿಯುಂ-ಎಲ್ಲೆಡೆಗಳಲ್ಲಿಯೂ, ನಂದನದೊಳು-ಆರಾಮಂಗಳಲ್ಲಿ, ಕಂಗೊಳಿಸುತಿರ್ಪುದು-ಕಾಂತಿಯಿಂದ ಕೂಡಿರುವುದು ‖೨೮‖

ಟೀ‖ ಎಮ್ಮಂತೆ-ನಮ್ಮಂತೆಯೆ, ಕೂರ್ಪರಂ-ಹಿತರಾಗಿರುವರನ್ನು, ಬಿಡದೆ-ತ್ಯಜಿಸದೆ, ಅಪ್ಪಿಕೊಂಡು-ತಬ್ಬಿಕೊಂಡು, ಇರದೊಡೆ-ಇಲ್ಲವಾದರೆ, ಒಮ್ಮೆಯುಂ-ಒಂದಾವರ್ತಿಯಾದಾಗ್ಗೂ, ಅಂಗೋದ್ಭವಂ-ಮದನನು, ಈ ಬನದೊಳು-ಈ ಉದ್ಯಾನದಲ್ಲಿ, ಮೋಹಿಗಳನು-ಹೆಂಗಸರಲ್ಲಿ ವ್ಯಾಮೋಹವುಳ್ಳವರನ್ನು, ನಿಲಲ್-ನಿಂತುಕೊಳ್ಳಲು, ಈಯನು- ಅವಕಾಶಕೊಡುವುದಿಲ್ಲ, ಎಂದು-ಹೀಗೆಂದು, ದೃಷ್ಟಾಂತಮುಂ-ಸಾಮ್ಯವನ್ನು, ತೋರಿ- ತೋರಿಸಿ, ಭೋಗಿಸುವ - ರಮಿಸುವ, ಮಾನವರ್ಗೆ-ನರರಿಗೆ, ತಮ್ಮಿಂದ, ವಸ್ತುಗಳ-ಪದಾರ್ಥಗಳನ್ನು ಅಥವ ಪುರುಷ್ಗಳನ್ನು, ಪಡೆಯಲ್ಕೆ - ಅನುಭವಿಸುವುದಕ್ಕೆ, ಸಂಯೋಗಮಂ-ಒಟ್ಟುಗೂಡುವುದನ್ನು. ಮಾಳ್ಪವೋಲ್-ಎಸಗುವಂತೆ, ನಾಗವಲ್ಲಿಗಳು-ವೀಳಯದೆಲೆಗಳು, ಫಲ-ಅಡಿಕೆಕಾಯಿಯ, ಭಾರದಿಂ-ಹೊರೆಯಿಂದ, ಮೆರೆವ-ರಂಜಿಸುವ, ಪೂಗವೃಕ್ಷಂಗಳಂ-ಅಡಕೆಯ ಮರಗಳ ಗುಂಪನ್ನು, ಪರ್ವಿ-ಹರಡಿಕೊಂಡು, ಕಂಗೊಳಿಸುತ್ತ-ಹೊಳೆಯುತ, ಇವೆ-ಇರುತ್ತಲಿವೆ, ನೋಡು-ಈಕ್ಷಿಸು, ಎಂದನು-ಎಂದು ನುಡಿದನು ‖ ಉತ್ಪ್ರೇಕ್ಷಾಲಂಕಾರವು ‖೨೯‖

ಟೀ‖ ಭೂತಲದ-ಧರಾವಲಯದ, ಭೋಗಿ-ಸುಖಾನುಭವವುಳ್ಳವರ, ಸಂಕುಲಕೆ-ಗುಂಪಿಗೆ, ಬಹುವಿಧ-ನಾನಾತೆರನಾದ, ಸುಗಂಧ-ಪರಿಮಳದ, ಅತಿಶಯದ-ಹೆಚ್ಚಿಗೆಯ, ಸೌಖ್ಯದಿಂ-ಸೌಖ್ಯದಿಂದ, ನೆರೆ-ಹೆಚ್ಚಾಗಿ, ದಣಿಸಿ-ಸಂತೋಷಪಡಿಸಿ, ಬಳಿಕ-ಆಮೇಲೆ, ಸಂಪ್ರೀತಿಯಂ-ಆಹ್ಲಾದವನ್ನು, ತಳೆದು-ಪಡೆದು, ಅಮಲ-ಸ್ವಚ್ಛವಾದ, ಭೋಗಿ-ಅಧೋಲೋಕದಲ್ಲಿರುವ ಹಾವುಗಳ, ಚಯಕೆ-ಗುಂಪಿಗೆ, ಒಂದುಬಗೆಯು-ಒಂದುತೆರನಾದ, ಕಂಪಿನ-ಸುರಭಿಯ, ಸೊಗಸನು-ಸೌಂದರ್ಯವನ್ನು, ಈಬನವು-ಈ ಉದ್ಯಾನವು, ಏತಕೆ-ಏತಕ್ಕೆ, ಉಣಿಸದೆ-ಊಟಮಾಡಿಸದೆ, ಬಿಡುವುದು-ವರ್ಜಿಸುವದು. (ಈ ವನಾಂಗನೆ-ಈ ಉದ್ಯಾನವೆಂಬ ನಾರೀರತ್ನವು, ಏತಕೆ ಏನುಕಾರಣ, ಉಣಿಸದೆ-ಊಟಮಾಡಿಸದೆ, ಬಿಡುವಳು-ಬಿಟ್ಟುಬಿಡುತ್ತಾಳೆ? ಎಂದು ಪಾಠಾಂತರ). ಎಂಬ-ಎನ್ನುವ, ರೀತಿಯಿಂ-ವಿಧಾನದಿಂದ, ಬೇರ್ವರಿದ-ಬುಡವನ್ನು ಬಿಟ್ಟಿರತಕ್ಕ, ಮುಡಿವಾಳಂ-ಲಾವಂಚದ ಗಿಡವು, ಇರಲು-ಇರಲಾಗಿ, ಅಳಿವ್ರಾತಂ-ಭೃಂಗಗಳ ಗುಂಪು, ಅರಿಯದೆ-ಇಳೆಯ ಅಂತರ್ಭಾಗದಲ್ಲಿದೆ ಎಂದು ತಿಳಿಯದೆ, ಆ ಭಾಗ್ಯಂ-ಮಂದಭಾಗ್ಯನು, ನಿಧಾನವನು-ನಿಕ್ಷೇಪವನ್ನು, ಕಾಣದೆ-ಈಕ್ಷಿಸದೆ, ಇಪ್ಪಂತೆ - ಇರುವಹಾಗೆ, ಇದೆ-ಇರಲು, ತಿರುಗುತಿವೆ-ಸಂಚರಿಸುತ್ತಲಿವೆ, ‖

ಅ‖ ವಿ‖ ಉಪಮಾ ಮತ್ತು ಶ್ಲೇಷಾಲಂಕಾರಗಳಿಂದೊಡಗೂಡಿರುವುದು. ‖೩೦‖

---

ರಂದವು ಸುರಿಯುತ್ತಿದೆ. ತುಂಬಿಗಳು ಝೇಂಕರಿಸುತ್ತಿವೆ. ಮಾವಿನ ಮರಗಳಲ್ಲಿ ಪಕ್ವವಾದ ಹಣ್ಣುಗಳಿಂದ ತನಿ ರಸವು ಸುರಿಯುತ್ತಲೂ, ಆ ರಸವನ್ನು ಗಿಣಿಗಳು ಪಾನಮಾಡುತ್ತಲೂ ಇವೆ. ಎಲ್ಲೆಲ್ಲಿಯೂ ಜಲಾಶಯಂಗಳು ಕಂಗೊಳಿಸುತ್ತಿವೆ. ‖೨೮‖ ಈ ಉದ್ಯಾನದಲ್ಲಿ ಅಡಕೆ ಮರಗಳು ದೊಡ್ಡದಾಗಿ ಬೆಳೆದು ಕಾಯಿಗಳನ್ನು ಬಿಟ್ಟು ಇರುವುದನ್ನೂ ಈ ಮರಗಳ ಸುತ್ತಲೂ ವೀಳಯದೆಲೆಯ ಹಂಬುಗಳು ಮನ್ಮಥಬಾಣಪೀಡಿತನಾದ ಕಾಮುಕನು ತನ್ನ ಅಂಗನೆಯನ್ನಾಲಿಂಗನಮಾಡಿಕೊಳ್ಳುವಂತೆ ವ್ಯಾಪಿಸಿರುವುದನ್ನೂ ನೋಡಿದೆಯಾ? ‖೨೯‖ ಇದೂ ಅಲ್ಲದೆ ಭೂಲೋಕದಲ್ಲಿ ಸುಖಾಭಿಲಾಷಿಗಳಿಗೆಲ್ಲಾ ಸುವಾಸನೆಯನ್ನು ಇತ್ತು ಸಂತೋಷಪಡಿಸಿ ಇದರಂತೆಯೆ ಪಾತಾಳ ಲೋಕದಲ್ಲಿರುವವರಿಗೂ ಆನಂದವನ್ನುಂಟುಮಾಡಲು ಹೋಗಿದೆಯೋ ಎಂಬಂತಿರ್ಪ ಲಾವಂಚದ ಬೇರನ್ನು ಕಾಣದೆ ನಿರ್ಭಾಗ್ಯರಾಗಿ ಹೋದೆವಲ್ಲಾ ಎಂಬದಾಗಿ ಭೃಂಗಗಳು ಅಲೆದಾ

ವನಭಾಗ್ಯಂಕಾಣದಿಪ್ಪಂತಿರೆ ‖ ೩೦ ‖ ಕುದ್ದಾಲಹತಿಯನುರೆತಾಳ್ದೆಮ್ಮನಿನ್ನೆಗಂ । ಮುದ್ದುಗೈದೀವಸುಧೆಬೆಳೆಯಿಸಿದಳೆಂದು ತುರು । ಗಿದ್ದತನಿವಣ್ಗಳಿಂದೆಸೆವಪೇರ್ಗೊನೆಗಳಸಲೆಸಮರ್ಪಿಸಲೊಡರ್ಚಿ ‖ ಎದ್ದಿರದೆಬಾಗಿದುವೊಕದಳಿಗಳಾಧರಣಿಗೆನೆ । ಲಿದ್ದಪರೆಮರೆದುಪುರುಷಾರ್ಥಮಂಮಾಡಿದರನು । ದ್ದಾಮಗುಣಮುಳ್ಳಜೀವಿಗಳ್ತನುಜನೋಡೆಂದನಾಪವನಸೂನು ‖ ೩೧ ‖ ಕಡುಗೆಂಪೆಸೆವತಳಿರತನಿಗೆಂಡಮಂಕಲಕಿ । ನಡೆದುಮೊನೆಮುಗುಳಶಸ್ತ್ರಂಗಳಂಪಾಯ್ದುಮಾ । ಮಿಡಿಯರಾಜಿಪವಜ್ರಮುಷ್ಟಿಯ ಪಿಡಿದುಲತೆಗಳಕೊನರಂಚಾಟಿಯಿಂದ ‖ ಬಡಿದುಕೋಗಿಲೆಯನಿಡುಸರದಬೊಬ್ಬೆಯೊಳಾಳ್ದು । ಬಿಡದೆವನದೇವಿಯೋಲಗದೊಳುತ್ಸವದಿಂದ । ಅಡಿಗಡಿಗೆತೂಣಗೊಂಡವನಂತೆಸೆವಮಂದಮಾರುತನನೋಡೆಂದನು ‖ ೩೨ ‖ ಬಕುಳಮಂದಾರಪಾದರಿಕರ್ಣಿಕಾ

ಟೀ‖ ಈ ವಸುಧೆ-ಈ ಇಳೆಯು, ಕುದ್ದಾಲ-ಗುದ್ದಲಿಯೆಂಬ ಆಯುಧದ, ಹತಿಯನು-ಏಟುಗಳನ್ನು, ಉರೆ-ಹೆಚ್ಚಾಗಿ, ತಾಳ್ದು-ಹೊಂದಿ, ಇನ್ನೆಗಂ-ಇಷ್ಟುಕಾಲವೂ, ಮುದ್ದುಗೈದು-ಪ್ರೀತಿಯನ್ನು ತೋರಿ, ಎಮ್ಮನು-ನಮ್ಮನ್ನು, ಬೆಳೆಯಿಸಿದಳು-ಅಭಿವೃದ್ಧಿಯಾಗುವಹಾಗೆ ಮಾಡಿದಳು, ಎಂದು-ಹೀಗೆಂದು, ತುರುಗಿದ್ದ-ಸಾಂದ್ರವಾಗಿದ್ದ, ತನಿ-ನೂತನವಾದ, ಪಣ್ಗಳಿಂದ-ಫಲಗಳಿಂದ, ಎಸೆಯುವ-ಹೊಳೆಯುವ, ಪೇರ್ಗೊನೆಗಳಂ- ದೊಡ್ಡ ದೊಡ್ಡ ಗೊನೆಗಳನ್ನು, ಸಲೆ-ಚೆನ್ನಾಗಿ, ಸಮರ್ಪಿಸಲು-ಅರ್ಪಣೆಯಂ ಮಾಡಲು, ಒಡರ್ಚಿ-ಅನುವಾಗಿ, ಎದ್ದಿರದೆ-ಮೇಲ್ಗಡೆ ಇರಲಾರದೆ, ಕದಳಿಗಳು-ಕದಳಿ ವೃಕ್ಷಂಗಳು, ಧರಣಿಗೆ-ಇಳಾಮಂಡಲಕ್ಕೆ, ಬಾಗಿದವೊ-ತಲೆತಗ್ಗಿಸಿಕೊಂಡಿದೆಯೊ (ಬಗ್ಗಿದೆಯೊ), ಎನಲು-ಎಂಬಂತೆ, ಉದ್ದಾಮ-ಬಹು ದೊಡ್ಡ ಗುಣಮುಳ್ಳ-ಸದ್ಗುಣ ಸಂಪನ್ನಗಳಾದ, ಜೀವಿಗಳು-ಪ್ರಾಣಿಸಮುದಾಯವು, ಪುರುಷಾರ್ಥಮಂ-ಫಲಗಳನ್ನು, ಮಾಡಿದರನು-ನೆರವೇರಿಸಿದವರನ್ನು, ಮರೆದು-ಮರೆತುಹೋಗಿ, ಇದ್ದಪರೆ- ಇರುತ್ತಾರೆಯೆ? ತನುಜ-ಪುತ್ರನೆ, ನೋಡು-ಈಕ್ಷಿಸು, ಎಂದು-ಎಂಬದಾಗಿ, ಆ ಪವನಸೂನು-ಆ ವಾಯುನಂದನನಾದ ವೃಕೋದರನು, ಎಂದನು-ಎಂಬದಾಗಿ ವೃಷಕೇತುವಿನೊಂದಿಗೆ ಹೇಳಿದನು. ‖ ಉತ್ಪ್ರೇಕ್ಷಾಲಂಕಾರವು ‖೩೧‖

ಟೀ‖ ಕಡುಗೆಂಪು-ಅಧಿಕವಾದ ರಕ್ತಛಾಯೆಯಿಂದ, ಎಸೆವ-ಹೊಳೆಯುವ, ತಳಿರ-ಪಲ್ಲವಂಗಳ, ತನಿಗೆಂಡಮಂ-ಹೊಸದಾದ ನಿಗಿನಿಗಿ ಕೆಂಡವನ್ನು, ಕಲಕಿ-ಕದಡಿ, (ತುಳಿದುಕೊಂಡು-ಪಾದಸ್ಪರ್ಶವಂ ಮಾಡುತ್ತ,) ನಡೆದು-ಚಲಿಸುತ್ತ, ಮೊನೆ-ಚೂಪಾಗಿರುವ, ಮುಗುಳು-ಸೂಜಿಮಲ್ಲಿಗೆ ಎಂಬ ಹೆಸರಿನ, ಶಸ್ತ್ರಂಗಳಂ-ಆಯುಧ ವಿಶೇಷಗಳನ್ನು, ಪಾಯ್ದು-ಮೀರಿ, ಮಾಮಿಡಿಯ-ಮಾವಿನ ಎಳೆಗಾಯೆಂಬ, ರಾಜಿಪ-ಹೊಳೆಯುತ್ತಿರುವ, ವಜ್ರಮುಷ್ಟಿಯಂ-ವಜ್ರಸಂಬಂಧವುಳ್ಳ ಮುಷ್ಟಿಯನ್ನು, ಪಿಡಿದು-ಧರಿಸಿ, ಲತೆಗಳ-ಎಳೆವಳ್ಳಿಗಳ, ಕೊನರ-ತುದಿಗಳ, ಚಾಟಿಯಿಂದ- ಸೌಂದರ್ಯದಿಂದ, (ಬಾರುಗೋಲು) ಬಡಿದು-ತಾಡಿಸಿ, ಕೋಗಿಲೆಯ-ಕೋಗಿಲೆಯೆಂಬ ಹಕ್ಕಿಯ, ನಿಡು-ದೀರ್ಘವಾದ ಧ್ವನಿಯು, ಬೊಬ್ಬೆಯೊಳು-ಗರ್ಜನೆಯಿಂದ, ಆಲ್ದು-ಅಲೆದಾಡುತ್ತ, ವನದೇವಿಯ-ಉದ್ಯಾನಾಭಿಮಾನ ದೇವತೆಯ, ಓಲಗದೊಳು-ಸಭಾಭವನದಲ್ಲಿ, ಉತ್ಸವದಿಂದ-ಸಂಭ್ರಮಾತಿಶಯದಿಂದ, ಬಿಡದೆ-ತಪ್ಪದೆ, ಅಡಿಗಡಿಗೆ-ಆಗಾಗ್ಗೆ, ತೂಣಗೊಂಡವನಂತೆ-ಶರೀರಸ್ಮೃತಿ ತಪ್ಪಿದವನಹಾಗೆ, ಎಸೆವ- ಹೊಳೆಯುತ್ತಿರುವ, ಮಂದಮಾರುತನ-ನಿದಾನವಾಗಿ ಚಲಿಸುವ ತಂಗಾಳಿಯನ್ನು, ನೋಡು-ಈಕ್ಷಿಸು, ಎಂದನು-ಹೀಗೆಂದು ನುಡಿದನು ‖ ಇದು ರೂಪಕೋತ್ಪ್ರೇಕ್ಷಾಲಂಕಾರವು ‖ ೩೨ ‖

ಟೀ‖ ಬಕುಳ-ಹವಳದಹೂ, ಮಂದಾರ-ಪಾರಿಜಾತವು, ಕರ್ಣಿಕಾರ-ಬೆಟ್ಟಕಣಿಗಲು, ಚಂಪಕ-ಸಂಪಿಗೆಹೂ, ಕೋವಿದಾರ-ಕೋವಿದಾರ ವೃಕ್ಷ, ಪ್ರಿಯಂಗು-ಕುಂಕುಮದ ಗಿಡ, ಕರವೀರ-ಕರವೀರ ವೃಕ್ಷ (ಕಣಿಗಲ), ಕುರವಕ-ಗೋರಂಟಿ ಗಿಡ, ತಿಲಕ-ತಿಲಕ ವೃಕ್ಷ, ಸುರಗಿ-ಸುರಗಿಯು, ನಂದ್ಯಾವರ್ತ-ನಂದಿಬಟ್ಟಲ ಗಿಡ, ಮೇರು-ಧೂಪದ ಗಿಡವು, ಸೇವಂತಿಗೆ-

ಡುತ್ತಿರುವದನ್ನು ನೋಡಿದೆಯ ? ‖೩೦‖ ಈ ಉದ್ಯಾನದಲ್ಲಿನ ಭೂಮಿಯು ಮೊದಲು ಗುದ್ದಲಿ ಪೆಟ್ಟುಗಳನ್ನು ತಿಂದು ತಿಂದು, ಇದುವರೆಗೂ ನಮಗೆ ಆಹಾರವನ್ನು ಕೊಟ್ಟು ಪೋಷಿಸಿದ್ದರಿಂದ ಆ ಭೂದೇವತೆಗೆ ಫಲ ಸಮರ್ಪಣೆಯ ಮೂಲಕ ಕೃತಜ್ಞತೆಯನ್ನು ತೋರಲುದ್ಯುಕ್ತವಾಗಿವೆಯೋ ಎಂಬಂತೆ ಫಲಭರಿತವಾಗಿ ಭೂಮಿಯನ್ನೇ ನೋಡುತ್ತಲಿರುವ ಸಜ್ಜನರನ್ನು ಹೋಲುವ ಕದಳೀ ವೃಕ್ಷಂಗಳ ಅಂದವನ್ನು ನೋಡು ‖೩೧‖ ಮತ್ತು ಕೆಂಪು ಬಣ್ಣದ ಚಿಗುರಾದ ಎಲೆಗಳೆಂಬ ಕೆಂಡಗಳಮೇಲೆ ನಡೆಯುತ್ತಲೂ, ಸೂಜಿಮಲ್ಲಿಗೆ ಮೊಗ್ಗಿನಮೇಲೆ ಹಾದುಕೊಂಡೂ, ಚೂತ ವೃಕ್ಷಗಳಲ್ಲಿನ ಹೀಚು ಕಾಯೆಂಬ ಪ್ರಕಾಶಮಾನವಾದ ವಜ್ರಮುಷ್ಟಿಯನ್ನು ಹಿಡಿದುಕೊಂಡು, ಬಳ್ಳಿಗಳ ಕೊನೆಗಳೆಂಬ ಚಾಟಗಳಿಂದ ಹೊಡೆಯಲ್ಪಟ್ಟು ಕೋಗಿಲೆಯ ಕೊರಲ್ಸರದಿಂದ ಅಲೆಯುತ್ತಿಲೂ, ಈ ವನದ ಎಲ್ಲೆಡೆಗಳಲ್ಲಿಯೂ ಆವೇಶಬಂದವನಹಾಗೆ ಚಲಿಸುತ್ತಿರುವ ಮಂದಮಾರುತನನ್ನೂ,‖೩೨‖ ಈ ಉದ್ಯಾನವನದ ಮಧ್ಯಪ್ರದೇಶದಲ್ಲಿ ಹೊಳೆಯುತ್ತಿರುವ ಸರಸ್ಸುಗಳಲ್ಲಿ ಸಾಂದ್ರವಾಗಿ ಬೆಳೆದುಕೊಂಡಿರುವ ಕಮಲದ

ರಚಂ । ಪಕಕೋವಿದಾರಪ್ರಿಯಂಗುಕರವೀರಕುರ । ವಕತಿಲಕಸುರಗಿನಂದ್ಯಾವರ್ತಮೇರುಸೇವಂತಿಗೆಶಿರೀಷಮೆಂಬ ‖ ಸಕಲ ತರುನಿಚಯಂಗಳಂಗಜನವಿವಿಧಸಾ । ಯಕದಮೂಡಿಗೆಗಳಂತೆಸೆವನನಕುಸುಮಸ್ತ । ಬಕದಿಂದಲೊಪ್ಪುತಿಹಕುಂದಮಾಲತಿ ಮಲ್ಲಿಕಾದಿಪೂವಲ್ಲಿಗೂಡಿ ‖ ೩೩ ‖ ಸಾಲಸಾಲಂಗಳಿಂಬಕುಳಕುಲದಿಂದಹಿಂ । ತಾಲತಾಲಂಗಳಿಂಮಾದಳದಲರ್ಗಳಿಂ । ತಮಾಲ ಮಾಲತಿಗಳಿಂಸೌರಂಭರಂಭದಿಂಮಂದಮಂದಾರದಿಂದ ‖ ಜಾಲಜಾಲಂಗಳಿಂಸುರಹೊನ್ನೆಹೊನ್ನೆಬಗೆ । ಪಾಲಪಾಲಾಶತರು ತರುಣಾಮ್ರಚಯಕೋಕ । ಲಾಲಿತನವಾಶೋಕದಿಂದುದ್ಯದುದ್ಯಾನಮತಿಚೆಲ್ವಿನಿಂವೆರೆದುದು ‖ ೩೪ ‖ ಬಗೆವೊಡಿದುಮುನ್ನ ಮಾಡಿರ್ದದೈವದ್ರೋಹ । ದಘದಿಂದಬನದಪೊರವಳಯದೊಳ್ಬಹುಕಂಟ । ಕಿಗಳಾಗೆಬಂದುಸಂಭವಿಸಿರಲ್ತಿತಹೊಂಗೇದಿಗೆಗ

ಸೇವಂತಿಗೆ ಎಂಬ ಗಿಡವು, ಶಿರೀಷ_ಬಿಂದಿಗೆ ಹೂವಿನ, ತರು_ವೃಕ್ಷಂಗಳ, ನಿಚಯಂಗಳು - ಸಮುದಾಯಗಳು, ಅಂಗಜನ-ಮದನನ, ವಿವಿಧ_ಬಗೆಬಗೆಯಾದ, ಸಾಯಕದ-ಸರಲಿನ, ಮೂಡಿಗೆಗಳಂತೆ-ಬಾಣದ ಚೀಲಗಳೋಪಾದಿಯಲ್ಲಿ, ಎಸೆವ-ಹೊಳೆಯುವ, ನವ-ನೂತನವಾದ, ಕುಸುಮ-ಹೂಗಳ, ಸ್ತಬಕದಿಂದಲಿ_ಗೊಂಚಲುಗಳಿಂದ, ಒಪ್ಪುತಿಹ_ಅಂದವಾಗಿರುವ, ಕುಂದ-ಉದ್ದವಾದ ಮಲ್ಲಿಗೆ, ಮಾಲತೀ_ಜಾತೀಪುಷ್ಪ, ಮಲ್ಲಿಕಾ - ದುಂಡುಮಲ್ಲಿಗೆ, ಆದಿ_ಇವೆ ಮೊದಲಾಗಿರುವ, ಪೂವಲ್ಲಿ_ಹೂವಿನ ಲತೆಗಳಿಂದ, ಕೂಡಿ-ಸೇರಿಕೊಂಡು ‖೩೩‖

ಟೀ‖ ಸಾಲ-ಮತ್ತಿ ಮರಗಳಿಂದಲೂ, ಸಾಲಂಗಳಿಂ_ಸಾಲ ವೃಕ್ಷಂಗಳಿಂದಲೂ, ಬಕುಳ_ಹವಳಗಳ, ಗಣದಿಂ-ಸಮೂಹದಿಂದಲೂ, ಹಿಂತಾಲ_ಸಣ್ಣ ತಾಳೆ, ತಾಲಂಗಳಿಂ-ದೊಡ್ಡ ತಾಳೆಮರಗಳಿಂದಲೂ. ಮಾದಳದ-ಮಾದಳವೆಂಬ ಗಿಡದ, ದಳದಿಂದ_ಸಮೂಹದಿಂದಲೂ, ತಮಾಲ_ಹೊಂಗೆಗಿಡಗಳ, ಮಾಲತಿಗಳಿಂ - ಜಾಜೀಗಿಡಗಳ ಬಳ್ಳಿಗಳಿಂದಲೂ, ಸೌರಂಭ-ದೊಡ್ಡ ಕದಳಿಗಳು, ರಂಭದಿಂ_ಸಣ್ಣ ಕದಳಿಗಳು ಇವುಗಳಿಂದಲೂ, ಮಂದ-ಶಮೀವೃಕ್ಷ, ಮಂದಾರದಿಂ_ಪಾರಿಜಾತದಿಂದಲೂ, ಜಾಲಜಾಲಂಗಳಿಂ - ಜಾಲೀಗಿಡಗಳ ಗುಂಪಿನಿಂದಲೂ, ಸುರಹೊನ್ನೆ_ದೇವಹೊನ್ನೆಮರ, ಹೊನ್ನೆ-ಹೊನ್ನೆವೃಕ್ಷ, ಬಗೆಪಾಲ-ಬೆಪ್ಪಾಲ, ದ್ರುಮಗಳು_ಮರಗಳು, ಪಾಲಾಶ_ಮುತ್ತುಗಂಗಳು, ಎಂಬ_ಎನ್ನುವ, ತರು-ವೃಕ್ಷಂಗಳ, ತರುಣ_ನವೀನವಾದ, ಆಮ್ರಚಯ-ಚೂತವೃಕ್ಷಗಳ ಸಮೂಹದಲ್ಲಿರುವ, ಕೋಕ_ಪಿಕಗಳಿಂದ ಕೂಡಿ, ಲಾಲಿತ_ಮನೋಹರವಾದ, ನವ_ನೂತನವಾದ, ಅಶೋಕದಿಂದ_ಅಶೋಕವೆಂಬ ಮರಗಳಿಂದ, ಉದ್ಯತ್-ವೃದ್ಧಿಯನ್ನೈದುತ್ತಿರುವ, ಉದ್ಯಾನಂ_ಆರಾಮವು, ಅತಿಚೆಲ್ವಿನಿಂ-ಸೌಂದರ್ಯಾತಿಶಯದಿಂದ, ಮೆರೆದುದು_ಹೊಳೆಯಿತು ‖೩೪‖

ಟೀ‖ ಬಗೆವೊಡೆ - ಆಲೋಚನೆಮಾಡಿದರೆ, ಇದು_ಈ ಕೇತಕೀ ವೃಕ್ಷವು, ಮುನ್ನ - ಪೂರ್ವಜನ್ಮದಲ್ಲಿ, ಮಾಡಿರ್ದ-ನೆರವೇರಿಸಿದ್ದ, ದೈವದ್ರೋಹದ_ದೇವರ ವಂಚನೆಯ ಸಂಬಂಧವಾದ, ಅಘದಿಂ_ಪಾತಕದಿಂದ, ಬನದ_ಉದ್ಯಾನದ, ಪೊರವಳಯದೊಳ್_ಬಹಿರ್ಭಾಗದಲ್ಲಿ, ಬಹು - ಹೆಚ್ಚಾಗಿ, ಕಂಟಕಿಗಳಾಗಿ - ಬಾಧೆಪಡಿಸತಕ್ಕವುಗಳಾಗಿ ಮತ್ತು ಮುಳ್ಳುಗಳಿಂದೊಡ

ಸಮೂಹದ ಹಾಗೆ ಈ ವನದಲ್ಲಿ ವಕುಳ, ಮಂದಾರ, ಕಣಿಗಲು, ಸಂಪಗೆ, ಕೋವಿದಾರ, ಕುಂಕುಮದ ಗಿಡ, ಗೋರಂಟಿ, ತಿಲಕ, ಸುರಗಿ, ನಂದಿವರ್ಧನ, ಧೂಪ, ಸೇವಂತಿಗೆ, ಬೆಟ್ಟಮಲ್ಲಿಗೆ, ಮಲ್ಲಿಗೆ, ಜಾಜಿ ಈ ಮುಂತಾದ ಗಿಡಗಳು ದಟ್ಟವಾಗಿ ಬೆಳೆದು ಅವುಗಳಲ್ಲಿನ ಹೂಗಳನ್ನು ಮನ್ಮಥನ ಬಗೆಬಗೆಯಾದ ಬಾಣಗಳಿಗೆ ಸಲಕರಣೆಯನ್ನು ಅಣಿಮಾಡಿಕೊಡುವಂತೆ ಒಪ್ಪುತ್ತಿದೆ ‖೩೩‖ ಮತ್ತು ಮತ್ತಿ, ಸರ್ಜ, ಹವಳ, ಮಂದಾಳೆ, ಕಿರುದಾಳೆ, ಮಾದಳ, ಹೊಂಗೆ, ಮುತ್ತುಗ, ಮುಂತಾದ ಗಿಡಗಳಿಂದಲೂ, ಜಾಜಿ, ಬಾಳೆ, ಬನ್ನಿ, ಪಾರಿಜಾತ, ಸುರಹೊನ್ನೆ, ಹೊನ್ನೆ, ಬೆಪ್ಪಾಲ, ಮುಳ್ಳುಮುತ್ತುಗ, ಮಾವು, ಅಶೋಕ, ಮುಂತಾದ ಗಿಡಗಳಿಂದಲೂ ಘಮಘಮಿಸುವ ಹೂಗಳಿಂದಲೂ, ಈ ಉದ್ಯಾನವು ಅಂದವಾಗಿ ಬೆಳಗುತಿದೆ ಇದನ್ನು ನೋಡು ‖ ೩೪ ‖ ಇನ್ನೂ ಈ ವನದ ಹೊರಭಾಗದಲ್ಲಿರುವ ಕೇದಗೆಯನ್ನು ನೋಡಿದರೆ ಇದು ಪೂರ್ವದಲ್ಲಿ ಮಾಡಿದ್ದ ದೈವದ್ರೋಹ*ದಿಂದ ಈ ಜನ್ಮದಲ್ಲಿ ಮುಳ್ಳುಗಿಡಗಳಾಗಿ ಹುಟ್ಟಿರುವುದರಿಂದ ಇವುಗಳ ಸಂಗದಿಂದ ಹೊಂಗೇದಿಗೆಗಳು ಮಲಿನಗಳಾದುವು. ಆದ ಕಾರಣ ನಮಗೆ ಇವುಗಳ ಸಂಗವೇಕೆ ಎಂದು ಸಂಪಗೆಗಳು ಬಹಳ ಶುಚಿಗಳಾಗಿ ಹೂತಿರುವುವು. ಇವುಗಳಿಂದ ಈ ಪುರದ ನಂದನದ ಅಂದವನ್ನೂ ನೋಡು*(ಪೂರ್ವದಲ್ಲಿ ಬ್ರಹ್ಮನಿಗೂ ವಿಷ್ಣುವಿಗೂ ನಾನು ದೊಡ್ಡವನು, ತಾನು ದೊಡ್ಡವನು ಎಂಬದಾಗಿ ವಿವಾದವುಂಟಾಯಿತು. ಆಗ ಅವರಿಬ್ಬರೂ ಮಹಾದೇವನ ಬಳಿಗೆ ಹೋಗಿ ಇದರ ನಿಷ್ಕರ್ಷೆಯನ್ನು ಕೇಳಿದರು. ಆಗ ಪರಮೇಶ್ವರನು ವಿರಾಡ್ರೂಪವನ್ನು ತಾಳಿ ತನ್ನ ತಲೆಯನ್ನಾಗಲಿ ಪಾದವನ್ನಾಗಲಿ ಕಂಡು ಬರತಕ್ಕವರೇ ದೊಡ್ಡವರು ಎಂದನು ಅನಂತರ ವಿಷ್ಣುವು ಶಿವನ ಹಜ್ಜೆಯನ್ನು ವಿಧಿಯು ತಲೆಯನ್ನೂ ನೋಡಿ ಬರುವುದಕ್ಕೆ ಹೊರಟರು, ಹರಿಯು ಹರನ ಹೆಜ್ಜೆಯನ್ನು ಕಾಣದೆ ಹಿಂದಿರುಗಿ ಬಂದು ಶಿವನಿಗೆ ನಿಜವನ್ನು ಹೇಳಿದನು. ಬೊಮ್ಮನು ಮೇಲ್ಮುಖವಾಗಿ ಹೋಗುತ್ತಿದ್ದು ಶಂಕರನ

ನವರೋಳಾಡಿ ॥ ಮಿಗೆಮುಲಿನನಾಯ್ತು ಸರ್ವಾಂಗಮುಂಭ್ರಮರಾವ | ಳಿಗೆತನುಗದರಸಂಗಮೇಕೆಂದು ಪೂತಸಂ | ಪಗೆಗಳತಿ ಶುಚಿಗಳಂತೆಸೆವುತಿವೆನೋಡುನಂದನಪುರದನಂದನನೊಳು ॥೩೫॥ ಮುಡಿವಾಳಲಾಮಂಚಗಳಬೇರ್ಗ್ಗಳಿಂಬೇರ್ಗ | ಳಿಡಿದಗರು ಚಂದನಂಗಳಕೊಂಬಿನಿಂಕೊಂಬು | ತೊಡರಿದಚ್ಚೆಸಲುಮಲ್ಲಿಗೆಜಾಜಿಗಳಪೂಗಳಿಂಪೂಗಳೊಂದುಗೂಡಿ ॥ ಕಡುಗಂಪುವಡೆದುದಾ ಮೂಲಾಗ್ರಮಂಬನದ | ನಡುವೆಪುಟ್ಟಿರ್ದಹಮರಂಗಳೆಲ್ಲಾ ಸೋಂಕಿ | ದೊಡೆತಂಬೆಲರಿಗೆಪರಿಮಳವನೀಯದಕುಜಂನಂದನದೊಳೊಂದಿಲ್ಲೆನೆ ॥೩೬॥ ಈವನದನಡುನಡುವೆತೊಳತೊಳಗುತಿರುತಿಹಸ | ರೋವರವಂದೊಳೇದಳದಳದುಬೆಳೆಬೆಳೆದರಾ | ಜೀವದಲರಲರತುಳಿತುಳಿದುವಿಡಿವಿಡಿದಬಂಡನೊಡನೊಡನೆಸವಿದುಸವಿದು ॥ ಅನವರಗಮುಗಲದೆಯುಗಯುಗಮಾ

---

ಗೂಡಿಕೊಂಡು, ಬಂದು-ಐತಂದು, ತಳಿತ-ಚಿಗುರಿರುವ, ಹೊಂಗೇದಿಗೆಗಳು-ಭಂಗಾರಛಾಯೆಯ ಕೇತಕಿಗಳು, ಸಂಭವಿಸಿರಲು, ಆಗಿರಲು, ಅವರೋಳ್-ಅಂತಹ ಕೇತಕೀಪುಷ್ಪಗಳೊಂದಿಗೆ, ಆಡಿ-ತಿರುಗಾಡಿ, ಭ್ರಮರಾವಳಿಗೆ-ಅಳಿವಿಂಡಿಗೆ, ಸರ್ವಾಂಗ ದೇಹವೆಲ್ಲಾ, ಮಿಗೆ-ಹೆಚ್ಚಾಗಿ, ಮುಲಿನಂ-ಕಲ್ಮಷಸಹಿತವಾದ್ದಾಯಿತು, ತನುಗೆ-ನಮಗೆ, ಅದರ-ಆ ಕೇತಕಿಗಳ, ಸಂಗಂ-ಸಹವಾಸವು, ಏಕೆ-ಏತಕ್ಕಿರಬೇಕು, ಎಂದು ಎಂಬುದಾಗಿ, ಪೂತ-ಹೂಬಿಟ್ಟಿರತಕ್ಕ, ಸಂಪಿಗೆಗಳು-ಸಂಪಿಗೆ ಮರಗಳು, ಅತಿಶುಚಿಗಳಂತೆ-ಬಹು ಪರಿಶುದ್ಧವಾಗಿರುವಹಾಗೆ, ಪುರ-ನಗರದ, ನಂದನದೊಳು-ಆರಾಮದಲ್ಲಿ, ಎಸೆವುತಿವೆ-ಹೊಳೆಯುತ್ತಿವೆ, ನಂದನ-ಎಲೈ ಪುತ್ರನೆ, ನೋಡು-ಈಕ್ಷಿಸು, ಉತ್ಪ್ರೇಕ್ಷಾಲಂಕಾರವು ॥೩೫॥

ಟೀ॥ ಮುಡಿವಾಳ-ಸುವಾಸನೆಯುಳ್ಳ ಕರೀಹುಲ್ಲಿನಬೇರು, ಲಾವಂಚಗಳ-ಲಾವಂಚವೆಂಬೊಂದು ಬೇರು ಇವುಗಳ, ಬೇರ್ಗಳಿಂ-ಬೇರುಗಳಿಂದ, ಬೇರ್ಗಳಿಡಿದ-ಬೇರುಬಿಟ್ಟಿರುವ, ಅಗರು-ಕರೀಗಂಧದ ಮರವು, ಚಂದನಂಗಳ-ಶ್ರೀಗಂಧಗಳ, ಕೊಂಬಿನಿಂ-ಶಾಖೆಗಳಿಂದ, ಕೊಂಬು-ಶಾಖೆಗಳಿಗೆ, ತೊಡರಿದ-ಆವರಿಸಿರುವ, ಅಚ್ಚೆಸಳುಮಲ್ಲಿಗೆ=ಅಚ್ಚ-ನಿರ್ಮಲವಾದ, ಎಸಳು-ದಳಗಳಿಂದ ಕೂಡಿದ, ಮಲ್ಲಿಗೆ-ದುಂಡುಮಲ್ಲಿಗೆಯ ಲತೆಗಳ, ಜಾಜಿಗಳ-ಜಾಜೀಲತೆಗಳ, ಪೂಗಳಿಂ-ಪುಷ್ಪಗಳಿಂದ, ಪೂಗಳು-ಅಲರ್ಗಳು, ಒಂದುಗೂಡಿ-ಒಟ್ಟಾಗಿ, ಕಡುಗಂಪು-ಬಹಳ ಸುವಾಸನೆಯನ್ನು, ಪಡೆದುದು-ಹೊಂದಿತು, ಆ ಮೂಲಾಗ್ರಮಂ-ಅಡಿಯಿಂದ ತುದಿಯತನಕಲೂ, ಬನದ-ಉದ್ಯಾನವ, ನಡುವೆ-ಮಧ್ಯಪ್ರದೇಶದಲ್ಲಿ, ಪುಟ್ಟಿರ್ದ-ಹುಟ್ಟಿರುವುದು, ಅಹ-ಆಗಿರತಕ್ಕ, ಮರಂಗಳೆಲ್ಲಾ-ಅಶೇಷವಾದ ವೃಕ್ಷಂಗಳೂ, ಸೋಂಕಿದೊಡೆ-ಸ್ಪರ್ಶಮಾಡಿದ ಮಾತ್ರವೇ, ತಂಬೆಲರಿಗೆ-ತಂಗಾಳಿಗೆ, ಪರಿಮಳವನು-ಒಳ್ಳೇ ವಾಸನೆಯನ್ನು, ಈಯದೆ-ಕೊಡದೆ ಇರತಕ್ಕ, ಕುಜಂ-ವೃಕ್ಷವು, ನಂದನದೊಳು-ಆರಾಮಂಗಳಲ್ಲಿ, ಇಲ್ಲ-ಇಲ್ಲವು, ಎನೆ-ಎಂಬಂತೆ, ಹೊಳೆಯುತ್ತಿದ್ದವು ॥೩೬॥

ಟೀ॥ ರವಿ-ಸೂರ್ಯನ, ತನಯ-ಪುತ್ರನಾದ ಕರ್ಣನ, ತನಯ-ಮಗನಾದ ವೃಷಧ್ವಜನೆ! ಈ ವನದ-ಈ ಉದ್ಯಾನದ, ನಡುನಡುವೆ-ಮಧ್ಯಭಾಗದಲ್ಲಿ, ತೊಳತೊಳಗುತ-ಹೊಳೆಹೊಳೆಯುತ್ತ, ಇರುತಿಹ-ಇರುವಂಥ, ಸರೋವರದೊಳೆ-ಕಾಸಾರಂಗಳಲ್ಲಿಯೆ, ದಳದಳದು-ಒಟ್ಟೊಟ್ಟಾಗಿ ಸೇರಿ, ಬೆಳೆಬೆಳೆದಿಹ-ಹೆಚ್ಚುಹೆಚ್ಚಾಗಿ ಬೆಳೆದಿರುವಂಥಾ, ರಾಜೀವ-ತಾವರೆಗಳ, ದಳದ-ಎಸಳ್ಗಳ, ಅಲರ್ಗಳಂ-ಕೇಸರನಾಳಗಳನ್ನು, ತುಳಿತುಳಿದು-ಹೆಚ್ಚಾಗಿ ತುಳಿದು, ವಿಡಿದಿಡಿದ-ಹಿಡಿದು ಹಿಡಿದು ಇರುವಂಥ, ಬಂಡನು-ಪರಾಗವನ್ನು, (ಮಕರಂದ) ಒಡನೊಡನೆ-ಸಂಗಡಸಂಗಡಲೆ, ಸವಿಸವಿದು-ಆಸ್ವಾದಿಸಿ ಆಸ್ವಾದಿಸಿ, ಅನವರತಂ-ಸದಾ, ಅಗಲದೆ-ಎಡೆಬಿಡದೆ, ಯುಗಯುಗಮಾಗಿ-ಜೋಡಿಜೋಡಿಯಾಗಿ, ನೆರೆನೆರೆದು-ಸೇರಿಸೇರಿ, ಕಾವ-ಕಾಪಾಡುವ, ಸೊಗಸೊಗಸಿನಲಿ-

---

ತಲೆಯನ್ನು ಕಾಣದೆ ಪೇಚಾಡುತ್ತಿರುವಾಗ ಶಿವನ ತಲೆಯ ಮೇಲಿನಿಂದ ಬರುತ್ತಿದ್ದ ಕೇದಗೆಯನ್ನು ಕಂಡು "ಎಲೈ ಕೇದಗೆಯೇ! ನಾನು ಶಿವನ ತಲೆಯನ್ನು ಕಂಡೆನೆಂತಲೂ ಅಲ್ಲಿಂದ ನಿನ್ನನ್ನು ತಂದೆನೆಂತಲೂ ಶಿವನೊಡನೆ ಹೇಳುವೆನು ನೀನು ಅದಕೆ ಸಾಕ್ಷ್ಯವನ್ನು ಕೊಡು" ಎಂದು ಹೇಳಿದನು. ಆಮೇಲೆ ಕೇದಗೆಯು ಹಾಗೆಯೇ ಅಪಸಾಕ್ಷ್ಯವನ್ನು ನುಡಿಯಿತು. ಇದಕ್ಕಾಗಿ ಸಿಟ್ಟುಗೊಂಡ ರುದ್ರನು ಬ್ರಹ್ಮನಿಗೆ ಕಲಿಯುಗದೊಳಗೆ ಪೂಜೆಯಾಗದ ಹಾಗೂ ಕೇದಗೆಯು ಕಂಟಕಿಯಾಗಿ ಪರಮೇಶ್ವರನ ಪೂಜೆಗೆ ಅರ್ಹವಾಗದಂತೆಯೂ ಶಪಿಸಿದನು ಇದೇ ದೈವದ್ರೋಹ) ॥೩೫॥ ಇದಲ್ಲದೆ ಲಾವಂಚ, ಕರೀಹುಲ್ಲುಬೇರು ಅಗರು, ಚಂದನ, ಎಸಳುಮಲ್ಲಿಗೆ, ದುಂಡುಮಲ್ಲಿಗೆ ಜಾಜಿ, ಮುಂತಾದವುಗಳು ಬೇರಿನಿಂದಲೂ, ಕಾಂಡದಿಂದಲೂ, ಹೂಗಳಿಂದಲೂ ಸುವಾಸನೆಯನ್ನು ಕಲ್ಪಿಸುತ್ತಾ ತನ್ನ ಸ್ಪರ್ಶದಿಂದ ಮಂದಮಾರುತಕ್ಕೆ ಸುವಾಸನೆಯನ್ನೀಯದ ಗಿಡವೇ ಈ ವನದಲ್ಲಿ ಕಾಣಬರುವುದಿಲ್ಲ ॥೩೬॥ ಈ ಉದ್ಯಾನವನದ ಮಧ್ಯಪ್ರದೇಶದಲ್ಲಿ ಹೊಳೆಯುತ್ತಿರುವ ಸರಸ್ಸುಗಳಲ್ಲಿ ಸಾಂದ್ರವಾಗಿ ಬೆಳದುಕೊಂಡು ಇರುವ ಕಮಲದ ರೇಕುಗಳನ್ನೆಲ್ಲಾ ತುಳಿದು ಅದರಲ್ಲಿರುವ (ಮಕರಂದವನ್ನು) ಆಸ್ವಾದಿಸಿ ಯಾವಾಗಲೂ ಜೊತೆಯಾಗಿ

ಗಿನೆರೆನೆರೆದ | ಕಾನನೊಗಸೊಗಸಿನಲಿನಲಿದುಮೊರೆಮೊರೆವಭೃಂ | ಗಾವಳಿಯಗಾವಳಿಯಕಳಕಳಂಗಳನೋಡುನೋಡು
ರವಿತನಯತನಯ || ೩೭ || ಸಗ್ಗದಾಣ್ಮನವಜ್ರಹತಿಯಿಂದಸಾಗರಕೆ | ಮುಗ್ಗುವಕುಲಾದ್ರಿಗಳಮರಿಗಳಸಮೂಹಮೆನ |
ಲೊಗ್ಗಿನಿಂಪೇರ್ಗಡಲನೀರ್ಮೊಗೆಯಲಿಳಿದಕಾರ್ಮುಗಿಲಬಳಗಂಗಳೆನಲು || ದಿಗ್ಗಜಮನೇಕಂಗಳಾದವೆನೆಕರಿಘಟೆಯು |
ಮೊಗ್ಗರಂವರಸರೋವರಸಲಿಲಪಾನಕಿಳೆ | ನೆಗ್ಗಿದಲ್ಲದೆಮಾಣದೆಂಬಿನಿಂಪೊಳಲಪೊರಮಟ್ಟುಬಂದವೃದೆಂದನು || ೩೮ || ಖಳ
ರಪುರುಷಾರ್ಥಮಂಕಾಮಿಸುವಯಾಚಕಾ | ವಳಿಯಂತೆಪೊಳಲಿಂದಪೊರಮಟ್ಟುಸರಸಿಯೋಳ್ | ಮುಳುಗುತಿರ್ಪಾನೆಗಳದಾ
ನಾಭಿಲಾಷೆಯಂಬಿಟ್ಟಳಿಕುಲಂತೊಲಗಲು || ಕಳಕಳಿಸಿನಗುವಸಜ್ಜನರ್ವೊಲ್ಸರಸಪರಿ | ಮಳದಮಕರಂದಮಂಭ್ರಮರಾವ
ಳಿಗೆಮಾಚ | ದೊಲಿದಿತ್ತುಮೆರೆನಬೆಳ್ದಾವರೆಯಬಿಚ್ಚಲರ್ಗಳಪೆಚ್ಚನೋಡೆಂದನು || ೩೯ || ಕಾರ್ಗಾಲದಭ್ರಮಾಲೆಗಳಮರ

---

ಸೌಂದರ್ಯಾತಿಶಯದಿಂದ, ನಲಿನಲಿದು–ಆನಂದ ಪಟ್ಟುಪಟ್ಟು, ಮೊರೆವ–ಝೇಂಕಾರವಂ ಮಾಡುವ, ಭೃಂಗಾವಳಿಯ–ಅಳಿವಿಂಡಿನ, ಗಾವಳಿಯ-ಗದ್ದಲದ, ಕಳಕಳಂಗಳನು–ಕೋಲಾಹಲ ಧ್ವನಿಗಳನ್ನು, ನೋಡುನೋಡು–ಈಕ್ಷಿಸು ಈಕ್ಷಿಸು ||

ಅ. ವಿ|| ಈ ಪದ್ಯದಲ್ಲಿ. ನಡುನಡು, ಬೆಳೆಬೆಳೆ, ನೆರೆನೆರೆ ಮೊದಲಾದ ದ್ವಿರುಕ್ತಿಗಳು ಸಂಭ್ರಮ ಮತ್ತು ಅಧಿಕ್ಯಾರ್ಥಗಳಲ್ಲಿ ಪ್ರಯೋಗಿಸಲ್ಪಟ್ಟಿವೆ. ಮತ್ತು ಇದು–ಅಕ್ಷರಚಿತ್ರಮಾದ ಯಮಕಗಳು ಪ್ರಾಸವಾಗಿದೆ || ೩೭ ||

ಟೀ|| ಸಗ್ಗದ–ಸ್ವರ್ಗಲೋಕವನ್ನು, ಆಣ್ಮನ–ಪರಿಪಾಲಿಸುವ ದೇವೇಂದ್ರನ, ವಜ್ರಹತಿಯಿಂದ-ವಜ್ರಾಯುಧದ ಏಟಿನಿಂದ, ಸಾಗರಕೆ–ಕಡಲಿಗೆ,ಮುಗ್ಗುವ–ಮುಂದುವರಿಯುವ,ಕುಲಾದ್ರಿಗಳ–ಸಪ್ತಕುಲಪರ್ವತಗಳ, ಮರಿಗಳ-ತನುಜರ, ಸಮೂಹಂ–ಗುಂಪು, ಎನಲು–ಎಂಬಂತೆ, ಒಗ್ಗಿನಿಂ–ಸಮೂಹದಿಂದ, ಪೇರ್ಗಡಲ–ದೊಡ್ಡದಾದ ಉದಧಿಯ, ನೀರ್-ಜಲವನ್ನು, ಮೊಗೆಯಲು–ಈಂಟಲು, ಇಳಿದ–ಇಳಿದು ಬಂದಿರುವ, ಕಾರ್ಮುಗಿಲ – ವರ್ಷಾಕಾಲದ ಮೋಡಗಳ, ಬಳಗಂಗಳು–ಸಮೂಹಗಳು, ಎನಲು–ಎಂಬಂತೆಯೂ, ದಿಗ್ಗಜಂ – ಅಷ್ಟದಿಗ್ಗಜಗಳು, ಅನೇಕಂಗಳು – ಅನೇಕವಾದವುಗಳು, ಆದವು – ಆಗಿವೆ, ಎನೆ–ಎಂಬಂತೆ, ಕರಿಘಟೆಯು–ಹಸ್ತಿಗಳ, ಮೊಗ್ಗರಂ–ಸಮುದಾಯವು, ವರ-ಉತ್ತಮವಾದ, ಸರೋವರ–ಕಾಸಾರದ, ಸಲಿಲ–ಉದಕದ, ಪಾನಕೆ–ಕುಡಿತಕ್ಕೆ, ಇಳೆ-ಧರೆಯು, ನೆಗ್ಗಿದಲ್ಲದೆ–ಇಳಿಬಿದ್ದುಹೋಗದೆ, ಮಾಣದು–ಇರುವುದಿಲ್ಲ, ಎಂಬಿನಿಂ–ಎಂಬಂತೆ, ಪೊಳಲ–ನಗರವನ್ನು, ಪೊರಮಟ್ಟು–ಬಿಟ್ಟುಹೊರಟು, ಬಂದವುದು–ಸಮೀಪಸ್ಥವಾಗುವುದು, ಎಂದನು-ಹೀಗೆಂದು ನುಡಿದನು, ಉತ್ಪ್ರೇಕ್ಷಾಲಂಕಾರವು || ೩೮ ||

ಟೀ|| ಖಳರ–ಕೃಪಣರಾದ ದುರ್ಮಾರ್ಗಿಗಳ ಸಂಗಡ, ಪುರುಷಾರ್ಥಮಂ–ಧರ್ಮ, ಅರ್ಥ, ಕಾಮ, ಮೋಕ್ಷಾದಿ ಇಷ್ಟಸಿದ್ಧಿಗಳನ್ನು, ಕಾಮಿಸುವ-ಕೋರುವ, ಯಾಚಕಾವಳಿಯಂತೆ– ಯಾಚನೆ ಮಾಡುವವರ ಅಥವ ಭಿಕ್ಷ ಬೇಡುವವರ ಸಮೂಹದಹಾಗೆ, ಪೊಳಲಿಂದ-ನಗರದಿಂದ. ಪೊರಮಟ್ಟು-ಆಚೆಗೆನಡೆದು, ಸರಸಿಯೋಳ್-ಕಾಸಾರದಲ್ಲಿ, ಮುಳುಗುತಿರ್ಪ–ಮುಗ್ನವಾಗುತ್ತಿರುವಂಥ, ಆನೆಗಳ–ಹಸ್ತಿಗಳ, ದಾನ–ಮದಜಲದಲ್ಲಿ, ಅಭಿಲಾಷೆಯಂ-ಆಸೆಯನ್ನು, ಬಿಟ್ಟು-ವಿಸರ್ಜನೆಮಾಡಿ, ಅಳಿಕುಲಂ–ಭೃಂಗಗಳಗುಂಪು, ತೊಲಗಲು-ಹೊರಟುಹೋಗಲು, ಕಳಕಳಿಸಿ-ಆನಂದದಿಂದೊಡಗೂಡಿ, ನಗುವ–ಹಾಸ್ಯಗೈಯುತ್ತಿರುವ, ಸಜ್ಜನರ್ವೊಲ್-ಸುಜನರಹಾಗೆ, ಸರಸ-ರಸಭರಿತವಾದ, ಪರಿಮಳದ–ಒಳ್ಳೆ ವಾಸನೆಯಿಂದ ಕೂಡಿರತಕ್ಕ, ಮಕರಂದಮಂ-ಮಧುರಸವನ್ನು, ಭ್ರಮರಾವಳಿಗೆ–ಅಳಿವಿಂಡಿಗೆ, ಮಾಚದೆ–ಮರೆಮಾಡದೆ, ಒಲಿದು – ವಿಶ್ವಾಸದಿಂದ, ಇತ್ತು–ಕೊಟ್ಟು, ಮೆರೆವ-ಹೊಳೆಯುತ್ತಿರುವ, ಬೆಳ್ದಾವರೆಯ–ಪುಂಡರೀಕದ, ಅಚ್ಚ-ನಿರ್ಮಲವಾದ, ಅಲರ್ಗಳ-ಪುಷ್ಪಗಳ, ಪೆಚ್ಚ–ಆಧಿಕ್ಯವನ್ನು, ನೋಡು-ಈಕ್ಷಿಸು, ಎಂದನು-ಎಂಬದಾಗಿ ಹೇಳಿದನು || ೩೯ ||

---

ಯೋ ಇದ್ದುಕೊಂಡು ಸಂತೋಷದಿಂದಕೂಡಿದ ಆಳಿವಿಂಡನ್ನು ನೋಡಲು ಎಷ್ಟು ಸಂತೋಷವಾಗುತ್ತಿದೆ ||೩೬|| ನಗರದಲ್ಲಿರುವ ಆನೆಗಳು ಉದ್ಯಾನವನದಲ್ಲಿನ ಸರೋವರದಲ್ಲಿರುವ ನಿರ್ಮಲೋದಕವನ್ನೀಂಟಿ ತೃಪ್ತಿಪಡಲು ಬರುತ್ತಿರುವುದನ್ನು ನೋಡಿದರೆ, ಪೂರ್ವದಲ್ಲಿ ದೇವೇಂದ್ರನು ಪರ್ವತಗಳ ರೆಕ್ಕೆಗಳನ್ನು ಕತ್ತರಿಸುವಾಗ ಬಚ್ಚಿಟ್ಟುಕೊಂಡಿದ್ದು ಈಗ ಹೊರಗೆ ಬರುತ್ತಿರುವ ಬೆಟ್ಟದ ಮರಿಗಳೋ ಎಂಬಂತೆಯೂ, ನಿರನ್ನು ಕುಡಿಯಲು ಕೆಳಗೆ ಬಂದು ಸೇರುತ್ತಿರುವ ಮೇಘ ಸಮುದಾಯವೋ ಎಂಬಹಾಗೂ ಭ್ರಾಂತಿಯನ್ನು ಹುಟ್ಟಿಸುತಿವೆ ||೩೮|| ಈ ಉದ್ಯಾನವು ರಸಭರಿತವಾಗಿಯೂ, ಸುವಾಸನೆಯುಳ್ಳದ್ದಾಗಿಯೂ, ಪುಷ್ಪರಸವನ್ನು ಭ್ರಮರಗಳ ಗುಂಪಿಗೆ ಯಾವಾಗಲೂ ಕೊಟ್ಟು ಹೆಸರುವಾಸಿಗೆ ಬಂದಿರುವ ಪುಂಡರೀಕಂಗಳು ಕೃಪಣರಿಂದ ಪುರುಷಾರ್ಥವಾಗಲೆಳಸುತ್ತಿರುವ ಯಾಚಕರಂತೆಯೂ ಊರನ್ನು ಬಿಟ್ಟು ಸರೋವರದಲ್ಲಿ ಮಜ್ಜನವಂಗೈಯುತಲಿರುವ ಹಸ್ತಿನಿಚಯದ ಮದೋದಕದಲ್ಲಿ ನಿರಾಶೆಯಾಗಿರುವ ಅಳಿವಿಂಡನ್ನು ನೋಡಿ ಹಾಸ್ಯಮಾಡುವ ಸಜ್ಜನರಂತೆಯೂ ಪ್ರಕಾಶವಾನವಾಗಿರುವುವು||೩೯||

ಸರಣಿಯೋಳ್ | ಎತ್ತಗೂಡುತೆತ್ತಲುಂ ನಿಬಿಡಮಪ್ಪಂದದಿಂ | ನೀರ್ಗುಡಿಯ ಪೊಳಲ ಪೆರ್ಬಾಗಿಲ್ಗಳಿಂದ ಪೊರಮಡುವವರ ಸರಸಿ
ಯಿಂದ || ಊರ್ಗೆ ಮರಳುವ ತೇಜಿಗಳ ಸಾಲ್ಗಳಾ ಮಧ್ಯ | ಮಾರ್ಗದೊಳ್ತವೆ ತೀವಿ ಸಂದಣಿಸುತಿವೆ ನೃಪರೊಳ್ | ಆರ್ಗಿವನ ಸೌ
ಭಾಗ್ಯಮುಂಟೆಮಹುದು ಪೊಗಳ್ವೆನೆಂತಣುಗನೋಡಚ್ಚರಿಯನು || ೪೦ || ಬೇರೆಬೇರಿನಿತೆಲ್ಲಮುಂ ಕರ್ಣತನಯಂಗೆ | ತೋರುತಿರ್ದಂ
ಭೀಮನನ್ನೆಗಂ ಬಿಸಿಯ ಬಿಸಿ | ಲೇರಿದುದು ಭದ್ರಾವತಿಯ ತೇಜಿಗಳ ಚಪಲತೆಯ ಸೌರಂಭದಿಂದಂ || ಮೀರಿದ ಜವಂಗಳಂ ಕಂಡ ಕಾ
ಲ್ಗಿಟ್ಟಳೆಯು | ಲಾರದೊಯ್ಯನೆ ನಡವ ತೇರ್ಗುದುರೆಯಂ ಕಂಡು | ನೂರೆಲೆಗೆಳೆಯನುಗ್ರ ಕೋಪದಿಂದುರಿಯನುಗುಳದೆ ಮಾಣನೆಂ
ಬಂತಿರೆ || ೪೧ || ಭಾನು ಮಧ್ಯಾಹ್ನಗತನಾದನೀ ಕುದುರೆಗಳೊ | ಳಾನುತ್ತಮಾಶ್ವಮಂ ಕಂಡುದಿಲ್ಲದರಿಂದ | ಮೇಣದಂ ಪೊರಮಡಿ

---

ಟೀ|| ಕಾರ್ಗಾಲದ–ವರ್ಷರುತುವಿನ, ಅಭ್ರಮಾಲೆಗಳು–ಮೋಡಗಳ ಸಮೂಹವು, ಅಮರಸರಣಿಯೋಳ್–ಗಗನದ ಹಾದಿಯಲ್ಲಿ, ಎತ್ತಗೂಡುತ–ಒಟ್ಟಾಗುತ್ತ, ಎತ್ತಲುಂ–ಎಲ್ಲೆಡೆಗಳಲ್ಲೂ, ನಿಬಿಡಂ–ಸಾಂದ್ರವಾದದ್ದು. ಅಪ್ಪ–ಆಗಿರತಕ್ಕ, ಅಂದದಿಂ–ತೆರದಿಂದ, ನೀರ್ಗುಡಿಯೆ–ಜಲಪಾನವಂ ಗೈಯ್ಯಲು, ಪೊಳಲ–ನಗರದ, ಪೆರ್ಬಾಗಿಲ್ಗಳಿಂದ–ಹೆದ್ವಾರಿಗಳಿಂದ, ಪೊರಮಡುವವರ–ಆಚೆಗೆ ಹೊರಡತಕ್ಕವರ, ಸರಸಿಯಿಂದ–ಕಾಸಾರದಿಂದ. ಊರ್ಗೆ–ನಗರಕ್ಕೆ, ಮರಳುವ – ಹಿಂದಿರುಗುವ, ತೇಜಿಗಳ–ಅಶ್ವಂಗಳ, ಸಾಲ್ಗಳು–ಶ್ರೇಣಿಗಳು. ಆ ಮಧ್ಯಮಾರ್ಗದೊಳು–ಆ ದಾರಿಯ ಮಧ್ಯದೆಡೆಯಲ್ಲಿ, ತವೆ–ಚೆನ್ನಾಗಿ, ತೀವಿ–ಸಾಂದ್ರವಾಗಿ ಆವರಿಸಿ, ಸಂದಣಿಸುತಿವೆ–ತೃಪ್ತಿಗೊಳಿಸುತ್ತಲಿರುವವು, ನೃಪರೊಳು–ಅರಸರಲ್ಲಿ, ಆರ್ಗೆ–ಯಾವ ರಾಜನಿಗೆತಾನೆ, ಇವನ–ಈ ಯೌವನಾಶ್ವನೆಂಬ ಅರಸನ, ಸೌಭಾಗ್ಯಂ–ಐಶ್ವರ್ಯವು, ಉಂಟು–ಇರುವುದು? ಅಹುದು–ಮಹದಾಶ್ಚರ್ಯವೇಸರಿ, ಅಣುಗ–ಅಪ್ಪಾ ಮಗೂ!, ಎಂತು–ಯಾವ ಪ್ರಕಾರವಾಗಿ, ಪೊಗಳ್ವೆನು–ವರ್ಣನೆಮಾಡಲಿ, ಅಚ್ಚರಿಯನು–ಆಶ್ಚರ್ಯವನ್ನು, ನೋಡು–ಈಕ್ಷಿಸು || ೪೦ ||

ಟೀ|| ಇನಿತೆಲ್ಲಮುಂ–ಮೇಲೆ ವಿವರಿಸಿದ್ದನ್ನೆಲ್ಲ. ಬೇರೆಬೇರೆ–ತಂಡತಂಡವಾಗಿ, ಭೀಮನು–ವೃಕೋದರನು, ಕರ್ಣತನಯಂಗೆ–ಕರ್ಣಪುತ್ರನಾದ ವೃಷಧ್ವಜನಿಗೆ, ತೋರುತಿರ್ದಂ–ಕಾಣಿಸುತ್ತಿದ್ದನು, ಅನ್ನೆಗಂ–ಅಷ್ಟು ಹೊತ್ತಿಗೆ, ಬಿಸಿಯಬಿಸಿಲು–ಉಗ್ರೋಷ್ಣವು, ಏರಿದುದು–ಅಧಿಕವಾಗಲಾರಂಭಿಸಿತು. ಭದ್ರಾವತಿಯೊಳು–ಭದ್ರಾವತೀನಗರಿಯಲ್ಲಿ, ಉಳ್ಳ–ಇರತಕ್ಕ, ತೇಜಿಗಳ–ಅಶ್ವಗಳನ್ನು, ಚಪಲತೆಯು–ಚುರುಕಾದ ನಡಿಗೆಯು, ಸೌರಂಭದಿಂ–ವೇಗದಿಂದ, ಮೀರಿದ–ಅಧಿಕವಾದ, ಜವಂಗಳ–ಜಾಗ್ರತೆಯನ್ನು ಪಡೆದಿರುವದನ್ನು. ಕಂಡು–ಈಕ್ಷಿಸಿ, ನೂರೆಲೆಗೆಳೆಯನು–ನೂರು ರೇಕುಗಳಿಂದ ಕೂಡಿರುವ ತಾವರೆಹೂಗಳ ಸಖನಾದ ರವಿಯು, ಉಗ್ರ–ಕಠಿಣವಾದ, ಕೋಪದಿಂದ–ಕ್ರೋಧದಿಂದ, ಉರಿಯನು–ತೇಜಸ್ಸನ್ನು, ಉಗುಳದೆ – ಚಿಮ್ಮದೆ, ಮಾಣನು–ಬಡುವುದಿಲ್ಲ. ಎಂಬಂತೆ–ಎಂಬರೀತಿಯಾಗಿ, ಇರೆ–ಇರಲು, || ಅತಿಶಯೋಕ್ತಿ ಮತ್ತು ಉತ್ಪ್ರೇಕ್ಷಾಲಂಕಾರಂಗಳೆರಡೂ ತೋರುತ್ತಿರುವುವು || ೪೧ ||

ಟೀ|| ಭಾನು–ರವಿಯು, ಮಧ್ಯಾಹ್ನಗತನಾದಂ–ನೆತ್ತಿಯಮೇಲೆ ಬಂದಿದಾನೆ, ಈ ಕುದುರೆಗಳೊಳು – ಈ ಹಯಂಗಳಲ್ಲಿ, ಉತ್ತಮಾಶ್ವಮುಂ–ಯಜ್ಞಾರ್ಹವಾಗಿರುವ ಹಯವನ್ನು, ಆಂ–ನಾನು, ಕಂಡುದಿಲ್ಲ–ನೋಡಲೇ ಇಲ್ಲವು, ಅದರಿಂದ–ಆ ಕಾರಣದಿಂದ, ಮೇಣ್–ಅಲ್ಲದೆ, ಅದಂ–ಆ ಹಯವನ್ನು, ಪೊರಮಡಿಸರೊ–ಹೊರಕ್ಕೆ ಬರಮಾಡುವುದೇ ಇಲ್ಲವೊ?, ಪೊಳಲೊಳು–ಈ ನಗರದಲ್ಲಿಯೇ, ಇಲ್ಲವೊ–ಇಲ್ಲವೋ ಏನೋ, ಕಣ್ಗೆ–ನಯನಂಗಳಿಗೆ, ಗೋಚರಂ–ತೋರಿಬರುವದು, ಆಗದೊ–ಆಗದೆ ಇದೆಯೋ?, ಈ ನಿದಾನವನು–ಇದರ ಹೇತುವನ್ನು, ಅರಿವುದು–ತಿಳಿದುಕೊಳ್ಳುವುದು, ಎಮಗೆ–ನಮ್ಮಗಳಿಗೆ, ಎಂತುಟು–ಹೇಗೆ

---

ವರ್ಷಾಕಾಲದ ಮೇಘಸಮುದಾಯವು ನೀರನ್ನು ಕುಡಿಯಲು, ಸಾಂದ್ರವಾಗಿ ಸೇರಿ ಆಕಾಶದಲ್ಲಿ ಚಲಿಸುತ್ತಿರುವಂತೆಯೆ, ಈ ರಾಜನಗರದಲ್ಲಿಯೂ ಊರಬಾಗಲಿನ ಮುಖಾಂತರ ನೀರಿಗಾಗಿ ಸರೋವರಕ್ಕೆ ಹೋಗುತ್ತಲೂ ಅಲ್ಲಿ ನೀರ್ಗುಡಿದು ತೃಪ್ತಿಯನ್ನೈದಿ ಮೇಲೆ ಪಟ್ಟಣಕ್ಕೆ ಹೋಗುತ್ತಲೂ ಇರುವ ಕುದುರೆಗಳ ಸಮೂಹವನ್ನು ನೋಡಿದರೆ ಈ ಭೂಪಾಲನು ಮಹತ್ತಾದ ಸಾಮ್ರಾಜ್ಯವುಳ್ಳವನೇ ಸರಿ ಎಂಬುವದರಲ್ಲಿ ಏನೇನೂ ಅನುಮಾನವಿಲ್ಲವು. ಇದು ಮಹಾ ಆಶ್ಚರ್ಯವು || ೪೦ || ಎಂಬದಾಗಿ ಕರ್ಣಸುತನೊಂದಿಗೆ ನುಡಿಯುತ್ತಾ ಆತನಿಗೆ ಭದ್ರಾವತೀ ನಗರದ ವಿಶೇಷ ಸಂಗತಿಗಳನ್ನೆಲ್ಲಾ ಬೇರೆಬೇರೆಯಾಗಿ ತೋರಿಸುತ್ತಲಿರುವಾಗ ಸೂರ್ಯನು ತನ್ನ ರಥಕ್ಕೆ ಕಟ್ಟಿದ್ದ ಕುದುರೆಗಳು ಈ ಯೌವನಾಶ್ವನ ನಗರದಲ್ಲಿರುವ ಕುದುರೆಗಳ ವೇಗವುಳ್ಳವುಗಳಾಗಿಲ್ಲದ್ದರಿಂದ ಜಾಗ್ರತೆ ನಡೆಯಲಾರದೆ ಹೋದ ಕೋಪಕ್ಕಾಗಿ ತನ್ನ ಚಂಡಕಿರಣಂಗಳನ್ನು ಬೀರುತ್ತಿರುವನೋ ಎಂಬಂತೆ ಬಿಸಲಿನ ಝಳವು ಹೆಚ್ಚಲುಪಕ್ರಮಿಸಿತು || ೪೧ || ಆಗ ಭೀಮಸೇನನು ಕರ್ಣಪುತ್ರನಾದ ವೃಷಧ್ವಜನನ್ನು ಕುರಿತು ಎಲೈ ಕರ್ಣ

ಕಣ್ಗೆಗೋಚರಮಾಗದೊ || ಈನಿದಾನವನರಿವುದೆಂತುಟೆನುಗೆಲೆಕರ್ಣ | ಸೂನುಪೇಳೆಂದುಚಿಂತಾವಿಷ್ಟನಾಗಿಪವ | ಮಾನಜಂ ಚಿತ್ತದೋಳ್ದೇವಪುರಲಕ್ಷ್ಮೀಶನಂಘ್ರಿಯಂಧ್ಯಾನಿಸಿದನು ||೪೨||

ಸಂಧಿ ೩ ಕ್ಕೆ ಪದ್ಯ ೧೨೧ ಕ್ಕೆ ಮಂಗಳಮಸ್ತು.

---

ಸಾಧ್ಯ? ಎಲೆ ಕರ್ಣಸೂನು-ಅಯ್ಯಾ ಕರ್ಣನಂದನಾ!, ಪೇಳು-ಹೇಳು, ಎಂದು-ಎಂಬದಾಗಿ, ಚಿಂತಾವಿಷ್ಟನಾಗಿ- ಆಲೋಚನೆಗೆ ಈಡಾಗಿ, ಪವಮಾನಜಂ - ವಾಯುಪುತ್ರನಾದ ವೃಕೋದರನು, ಚಿತ್ತದೊಳ್-ಹೃದಯದಲ್ಲಿ, ದೇವಪುರ- ವೈಕುಂಠವೇ, ನಿಲಯ-ಆವಾಸವಾಗಿ ಉಳ್ಳ, (ದೇವನೂರಲ್ಲಿರುವ) ಲಕ್ಷ್ಮೀಶನ-ಶ್ರಿಯಃಪತಿಯ, ಅಂಘ್ರಿಯಂ - ಪಾದಾರವಿಂದಗಳನ್ನು, ಧ್ಯಾನಿಸಿದನು-ಸ್ಮರಿಸಿದನು ||೪೨||

ಇಂತು ಜೈಮಿನಿಭಾರತದೊಳ್ ಮೂರನೆಯ ಸಂಧಿಯು

ಸಮಾಪ್ತಮಾದುದು.

---

ತನುಜನೆ, ಈಗ ಮಧ್ಯಾಹ್ನವಾಗುತ್ತ ಬಂದದ್ದರಿಂದ ಬಿಸಲಿನ ಝಳವನ್ನು ಸಹಿಸಲಸಾಧ್ಯವಾಗಿದೆ. ಇಷ್ಟು ಹೊತ್ತಾದರೂ ಕೂಡ ಈ ನಗರದಿಂದ ಹೊರಗಡೆಗೆ ಬಂದಿರುವ ಕುದುರೆಗಳಲ್ಲಿ ನಮಗೆ ಬೇಕಾದ ಯಜ್ಞಾಶ್ವವು ಬಂದಿರುವಂತೆ ಕಾಣಿಸಲಿಲ್ಲವಲ್ಲಾ! ಆ ಕುದುರೆಯನ್ನು ಮಾತ್ರ ಹೊರಕ್ಕೆ ಬಿಡುವರೋ ಇಲ್ಲವೊ, ಅಥವಾ ಆ ಕುದುರೆಯು ಈ ಊರಲ್ಲಿದೆಯೊ ಇಲ್ಲವೊ ಇದರ ನಿಜಸ್ಥಿತಿಯು ನಮಗೆ ಗೋಚರವಾಗುವ ಬಗೆ ಹೇಗೆ? ಈ ಕುದುರೆಯ ವಿಷಯವಾಗಿ ನನಗೆ ಏನೂ ತೋಚದೆ ಇದೆಯಲ್ಲಾ, ಇದಕ್ಕೆ ಮುಂದೆ ನಾವು ಏನು ಮಾಡೋಣ? ಎಂಬದಾಗಿ ಅತಿಶಯವಾದ ಚಿಂತಾಗ್ನಿಯಿಂದ ತಪ್ತನಾಗುತ್ತ ತನ್ನ ಮನಸ್ಸಿನಲ್ಲಿ ವೈಕುಂಠವಾಸಿಯಾಗಿಯೂ ಶ್ರಿಯಃಪತಿಯಾಗಿಯೂ ಇರುವ ಶ್ರೀ ಕೃಷ್ಣಸ್ವಾಮಿಯ ಪಾದಾರವಿಂದಗಳನ್ನು ಧ್ಯಾನಮಾಡುತ್ತಿದ್ದನು ||೪೨|| ಎಂಬಲ್ಲಿಗೆ

ಟೀಕಾ ತಾತ್ಪರ್ಯ ಸಹಿತವಾದ ಜೈಮಿನಿ ಭಾರತದೊಳ್
ಮೂರನೆಯ ಸಂಧಿ ಸಮಾಪ್ತಮಾದುದು.



## ನಾಲ್ಕನೆಯ ಸಂಧಿ.

ಸೂಚನೆ॥ ಜಡಿದುಭದ್ರಾವತಿಯೊಳಮಲತರವಾಜಿಯುಂ । ಪಿಡಿದುಕಲಿಯೌವನಾಶ್ವನಚಾತುರಂಗಮುಂ । ಬಡಿದ ನವನಲ್ಲಿಕಾಣಿಸಿಕೊಂಡುಹಸ್ತಿನಾವತಿಗೆಭೀಮಂಬಂದನು ॥

ಜನಮೇಜಯಕ್ಷಿತಿಪ ಕೇಳ್ಪ್ರಣಯಕಲಹದೊ । ಳ್ಮುನಿದ ಕಾಂತೆಯ ಕುಪಿತ ವದನಸರೋಜದೋಳ್ಮಿ । ನುಗುವೆಳನಗೆದೋರುವನ್ನೆಗಂ ಚಿತ್ತದೊಳ್ಕುದಿವ ನಾಗರಿಕನಂತೆ ॥ ಅನಿಲಸುತನಾ ಹಯಂ ಪೊಳಲ ಪೊರಮಡುವಿನಂ । ಮನದುಬ್ಬೆಗದೊಳೆಚಿಂತಿಸಿ ಮತ್ತೆ ಕರ್ಣಜಾ । ತನವದನಮಂ ನೋಡುತನುತಾಪದಿಂ ತನ್ನಪಳಿದು ಕೊಳುತಿಂತೆಂದನು ॥ ೧ ॥

ಉದ್ರೇಕದಿಂ ಮುನಿವರನೊಳಾಡಿ ತಪ್ಪಿದ । ಗುರುದ್ರೋಹಮೊಂ ದಚ್ಯುತನೊಳಾಡಿ ಹೋಳಿದ ದೈ । ವದ್ರೋಹಮೆರ

---

ನಾಲ್ಕನೆಯ ಸಂಧಿ.

ಸೂಚನೆ॥ ಭೀಮಂ–ವೃಕೋದರನು, ಭದ್ರಾವತಿಯೊಳು – ಭದ್ರಾವತಿ ಎಂಬ ನಗರದಲ್ಲಿ, ಅಮಲತರ– (ನಿರ್ಮಲವಾದ) ಯಾಗಾರ್ಹಮಾಗಿರತಕ್ಕ, ವಾಜಿಯುಂ – ಅಶ್ವವನ್ನು, ಜಡಿದು–ಅಡ್ಡಗಟ್ಟಿಕೊಂಡು, ಪಿಡಿದು-ಹಿಡಿದುಕೊಂಡು, ಕಲಿ–ಶೂರಾಗ್ರೇಸರನಾದ, ಯೌವನಾಶ್ವನ–ಯೌವನಾಶ್ವನೆಂಬ ಭೂಪಾಲನ, ಚಾತುರಂಗಮುಂ–ಹಸ್ತಿ, ಅಶ್ವ, ರಥ, ಪದಾತಿ, ಎಂಬ ನಾಲ್ಕು ಬಗೆಯಾದ ದಂಡನ್ನೂ, ಬಡಿದು–ತಾಡಿಸಿ ಬಿಟ್ಟು, (ಬಕ್ಕಲಿಕ್ಕಿ) ಅವನನು–ಆ ಯೌವನಾಶ್ವನೆಂಬ ಧೊರೆಯನ್ನು, ಅಲ್ಲಿ–ಆ ಅಶ್ವಬಂಧನದೆಡೆಯಲ್ಲಿ, ಕಾಣಿಸಿಕೊಂಡು–ನೋಡಿದಂಥವನಾಗಿ (ಎದುರ್ಗೊಂಡು) ಹಸ್ತಿನಾವತಿಗೆ–ಹಸ್ತಿನಾಪುರಿಗೆ, ಬಂದನು–ಹಿಂದಿರುಗಿ ಬಂದು ಸೇರಿದನು ॥

ಟೀ॥ ಜನಮೇಜಯ–ಜನಮೇಜಯನೆಂಬ ನಾಮಧೇಯವುಳ್ಳ, ಕ್ಷಿತಿಪ–ರಾಜೇಂದ್ರನೆ!, ಕೇಳು–ಲಾಲಿಸು, ಪ್ರಣಯ–ಪ್ರೀತಿಯುಕ್ತವಾದ, ಕಲಹದೊಳ್ – ವ್ಯಾಜ್ಯದಲ್ಲಿ, ಮುನಿದ-ಸಿಟ್ಟುಗೊಂಡ, ಕಾಂತೆಯ - ಪ್ರಿಯೆಯ, ಕುಪಿತ-ಆಗ್ರಹಯುಕ್ತವಾದ, ವದನ-ಮೋರೆಯೆನ್ನುವ, ಸರೋಜದೊಳ್–ಪದ್ಮದಲ್ಲಿ, ಮಿನುಗುವ-ಹೊಳೆಯುತ್ತಿರುವ, ಎಳನಗೆ–ಹುಸಿನಗೆಯನ್ನು, ತೋರುವ–ತೋರ್ಪಡಿಸತಕ್ಕ, ಅನ್ನೆಗಂ–ವರೆಗೂ, ಚಿತ್ತದೊಳ್–ಹೃದಯದಲ್ಲಿ, ಕುದಿವ–ದುಃಖಪಡುತ್ತಿರುವ, ಅನಾಗರಿಕನಂತೆ–ಮಂದಮತಿಯಹಾಗೆ, ಅನಿಲಸುತನು–ವಾಯುನಂದನನಾದ ಭೀಮಸೇನನು, ಆ ಹಯಂ–ಆ ಅಶ್ವವು, ಪೊಳಲ–ನಗರದಿಂದ, ಪೊರಮಡುವಿನಂ–ಹೊರಕ್ಕೆ ಬರುವ ಪರ್ಯಂತರವೂ, ಮನದ–ಹೃದಯದ, ಉಬ್ಬೆಗದೊಳ್–ದುಃಖದಲ್ಲಿಯೇ, ಚಿಂತಿಸಿ–ಕೊರಗಿ, ಮತ್ತೆ–ತಿರುಗಿ, ಕರ್ಣಜಾತನ–ವೃಷಧ್ವಜನ, ವದನಮಂ–ಆಸ್ಯವನ್ನು, ನೋಡುತ–ದೃಷ್ಟಿಸುತ್ತ, ಅನುತಾಪದಿಂ–ಸಂತಾಪದಿಂದ, ತನ್ನ–ತನ್ನನ್ನು ತಾನೆ, ಪಳಿದು ಕೊಳುತ - ಹೀಯಾಳಿಸಿಕೊಳ್ಳುತ್ತ, ಇಂತೆಂದನು – ಮುಂದೆ ಹೇಳುವಂತೆ ಹೇಳುತ್ತಾನೆ ॥೧॥

ಟೀ॥ ಉದ್ರೇಕದಿಂ–ಪೌರುಷದಿಂದ, ಮುನಿವರನೊಳು-ಋಷಿವರ್ಯನಾದ ವ್ಯಾಸಮುನಿಪನಲ್ಲಿ, ಆಡಿ-ಮಾತನಾಡಿಬಿಟ್ಟು, ತಪ್ಪಿದ–ನೆರವೇರಿಸದಿರತಕ್ಕ, ಗುರುದ್ರೋಹಂ–ಗುರುವಿನ ಮಾತಿಗೆ ಮೀರಿದಂಥ ದುರಿತವು, ಒಂದು–ಒಂದಾಗಿದೆ, ಅಚ್ಯುತನೊಳು–ಶ್ರೀಕೃಷ್ಣನೊಂದಿಗೆ, ಆಡಿ–ಪ್ರತಿಜ್ಞೆಮಾಡಿ, ಹೋದ-ನೆರವೇರಿಸದ, ದೈವದ್ರೋಹಂ-ದೇವತಾಸಂಬಂಧವಾದ ನಿಂದೆಯು, ಎರಡು–ಎರಡನೆಯದಾಗಿದೆ, ಅರಸನ–ರಾಜನ, ಅವಸರಕ್ಕೆ-ಯಾಗದ ಸಮಯಕ್ಕೆ, ಒದಗದ–ದೊರೆಯದ, ಸ್ವಾಮಿದ್ರೋಹಂ–ಒಡೆಯನಿಗೆ ಮಾಡಿದ ಅಪರಾಧವು, ಐದೆ–ಚೆನ್ನಾಗಿ, ಮೂರು–ಮೂರನೆಯದಾಗಿದೆ, ಮದ್ರಚಿತ – ನನ್ನಿಂಗೈಯಲ್ಪಟ್ಟ, ವೀರಪ್ರತಿಜ್ಞೆ-ಪರಾಕ್ರಮದ ಪ್ರಮಾಣವು, ಕೈಗೂಡದ–ಆಗದೆಹೋದ, ಆತ್ಮದ್ರೋಹಂ – ಸ್ವಾತ್ಮ ಸಂಬಂಧವಾದ, ನಿಂದೆಯು, ಅದುವೆ–ಎಂಬತಕ್ಕದ್ದೆ, ನಾಲ್ಕು–ನಾಲ್ಕನೆಯದು, ಇದರ ಸಂಗಡಕೆ-ಇವುಗಳ ಜತೆಗೆ, ತನಿಗೆ–ನನಿಗೆ, ಅಶ್ವಮಂ–ಹಯವನ್ನು,

---

ನಾಲ್ಕನೆಯ ಸಂಧಿಯು.

ಅನಂತರದಲ್ಲಿ ಜೈಮಿನಿಋಷಿಯು ಜನಮೇಜಯರಾಯನನ್ನು ಕುರಿತು ಇಂತೆಂದನು,— ಕೇಳೈ ಜನಮೇಜಯನೆ! ಆ ಬಳಿಕ ಮಧ್ಯಾಹ್ನ ಸಮಯವಾದ ಕೂಡಲೇ ಹಯಮೇಧಾರ್ಹವಾದ ಉತ್ತಮಾಶ್ವವು ಹೊರಗೆ ಬರಲಿಲ್ಲವಲ್ಲಾ ಎಂಬದಾಗಿ ದುಃಖಿಸುತ್ತಲಿರುವ ವೃಕೋದರನು ಕರ್ಣನಂದನನನ್ನು ಕುರಿತು ಎಲೈ ಕರ್ಣತನುಜನಾದ ವೃಷ್ಯಜನೆ, ಇಷ್ಟು ಹೊತ್ತಾದರೂ ಕೂಡ ಈ ಪಟ್ಟಣದಿಂದ ಹೊರಕ್ಕೆ ಉತ್ತಮಾಶ್ವವು ಬರಲೇ ಇಲ್ಲವಲ್ಲಾ ॥೧॥ ನಾನು ಇನ್ನು ಕುದುರೆಯನ್ನು ಕಾಣುವ ಬಗೆ ಹೇಗೆ? ಸುಮ್ಮನೆ ಅಹಂಕಾರದಿಂದ ಮಾತ್ರವೇ ವ್ಯಾಸಮಹರ್ಷಿಗಳೊಂದಿಗೆ ಕುದುರೆಯನ್ನು ಹಿಡಿದು ತರುವೆನೆಂದು ಶಪಥಮಂ ಗೈದು ಗುರುದ್ರೋಹವನ್ನು ಸಂಪಾದಿಸಿಕೊಂಡಂತೆಯೂ ಶ್ರೀ ಕೃಷ್ಣಸ್ವಾಮಿಯೊಡನೆಯೂ ಸುಳ್ಳು ಪ್ರಮಾಣಮಾಡಿ

ಡರಸನವಸರಕ್ಕೊದಗದ ಸ್ವಾಮಿದ್ರೋಹವ್ಯೆದೆನೂರು ॥ ಮದ್ರಚಿತವೀರಪ್ರತಿಜ್ಞೆ ಕೈಗೂಡದಾ । ತ್ಮದ್ರೋಹವುದುವೆ ನಾಲ್ಕಿದರಸಂಗಡಕೆಥ । ರ್ಮದ್ರೋಹವೈದಾಗದಿಹುದೆತನಗಶ್ವಮಂ ಕಂಡುಕೊಂಡೊಯ್ಯದಿರಲು ॥ ೨ ॥ ಪುಸಿದನೆಬಯಲ್ಗೆ

---

ಕಂಡು–ಈಕ್ಷಿಸಿ, ಕೊಂಡು–ಹಿಡಿದುಕೊಂಡು, ಒಯ್ಯದೆ–ಧರ್ಮನಂದನನಬಳಿಗೆ ತೆಗೆದುಕೊಂಡು ಹೋಗದೆ, ಇರಲು–ಇದ್ದಹಾಗಾದರೆ, ಧರ್ಮದ್ರೋಹಂ–ಧರ್ಮವಿರುದ್ಧವಾದ ಮಾರ್ಗವೇ, ಐದು–ಪಂಚಮಸಂಖ್ಯೆಯ ನಿಂದೆಯು, ಆಗದೆ–ಸಂಭವಿಸದೆ, (ಒದಗದೆ) ಇಹುದೆ–ಇದ್ದೀತೆ?, ಎಂದರೆ ಆಗುವುದೇ ನಿಶ್ಚಯವೆಂದು ಭಾವವು ॥ ೨ ॥

ಟೀ॥ ವೇದವ್ಯಾಸಮುನಿ - ವ್ಯಾಸಮಹರ್ಷಿಯು, ಬಯಲ್ಗೆ–ಇಲ್ಲಿ ಅಶ್ವವಿಲ್ಲದಿದ್ದರೂಕೂಡಾ, ಪುಸಿದನೆ–ಇದೆ ಎಂಬದಾಗಿ ಅನೃತವನ್ನು ನುಡಿದಿರುವನೆ? ಪುಸಿದೊಡೆ–ವೇದವ್ಯಾಸರು ಅನೃತವನ್ನು ಹೇಳಿದ್ದ ಪಕ್ಷದಲ್ಲಿ, ಅಸುರಾರಿ–ರಾಕ್ಷಸಾಂತಕನಾದ ಕೃಷ್ಣಸ್ವಾಮಿಯು, ಸೈರಿಪನೆ–ತಡೆದಿದ್ದಾನೆಯೆ? ಸೈರಿಸಿದೊಡೆ–ಶ್ರೀ ಕೃಷ್ಣನೂ ಶಾಂತಚಿತ್ತನಾಗಿದ್ದಲ್ಲಿ, ಶಕುನಂಗಳು–ಮಂಗಳಸೂಚಕಂಗಳಾದ ನಿಮಿತ್ತಗಳು, ಒಳ್ಳಿತೆಂದು–ಕಲ್ಯಾಣವಾಗುತ್ತದೆಂದು, ಉಸರುವವೆ–ನುಡಿಯುತ್ತವೆಯೆ,? ಉಸುರಿ

---

ದೈವದ್ರೋಹಕ್ಕೆ ಗುರಿಯಾದಂತೆಯೂ, ಯುಧಿಷ್ಠಿರನು ಮಾಡಬೇಕೆಂದಿರುವ ಅಶ್ವಮೇಧಯಾಗಕ್ಕೆ ಕುದುರೆಯನ್ನು ತಂದು ಕೊಡುತ್ತೇನೆಂದು ಒಪ್ಪಿ, ಕೊಟ್ಟ ಭಾಷೆಯನ್ನು ತಪ್ಪಿ ನಡೆಯುವುದರಿಂದ ಸ್ವಾಮಿದ್ರೋಹಕ್ಕೆ ಈಡಾದಹಾಗೂ, ನಾನು ಮಾಡಿದ ಪ್ರತಿಜ್ಞೆಗೆ ನನ್ನಿಂದಲೇ ಭಂಗವುಂಟಾದ್ದರಿಂದ ಆತ್ಮದ್ರೋಹಕ್ಕೆ ಪಾತ್ರನಾದಂತೆಯೂ, ಮಾಡಿದ ಪ್ರತಿಜ್ಞೆಯನ್ನು ನೆರವೇರಿಸದೆ ಧರ್ಮಕ್ಕೆ ವ್ಯತಿರಿಕ್ತವಾಗಿ ನಡೆದೆನಾದ್ದರಿಂದ ಧರ್ಮದ್ರೋಹಕ್ಕೆ ಒಳಗಾದಂತೆಯೂ, ಆಗಿರುವೆನು. ॥ ೨ ॥ ವ್ಯಾಸಮಹರ್ಷಿಗಳೇನಾದರೂ ಇಲ್ಲಿ ಕುದುರೆ ಇವೆ ಎಂದು ಸುಳ್ಳುಹೇಳಿದರೆಂದು ಯೋಚಿಸುವುದು ಅಸಂಭವವು ಒಂದುವೇಳೆ ಅವರು ಹಾಗೆ ಅನೃತವನ್ನೇ ನುಡಿದಿದ್ದಲ್ಲಿ ಶ್ರೀ ಕೃಷ್ಣಸ್ವಾಮಿಯು ಅದನ್ನು ಎಂದಿಗೂ ಒಪ್ಪುತ್ತಲೆ ಇರಲಿಲ್ಲ. ಕೃಷ್ಣನೂ ಅದನ್ನೇ ಅಂಗೀಕರಿಸಿದಲ್ಲಿ ನಾವು ದಾರಿಯಲ್ಲಿ ಬರುತ್ತಿರುವಾಗ ಒದಗಿದ ಶುಭಶಕುನಗಳು ಸುಳ್ಳೇ? ಒಂದುವೇಳೆ ಅವೂ ವ್ಯತಿರಿಕ್ತವಾದ ಧರ್ಮವನ್ನೇ ಕೈಕೊಂಡಲ್ಲಿ ರಾಜವರ್ಯನಾದ ಯುಧಿಷ್ಠಿರನು ನಿರ್ಭಾಗ್ಯನೆ? ಯುಧಿಷ್ಠಿರನೂ ಕೂಡ ನಿರ್ಭಾಗ್ಯಶಿರೋಮಣಿಯೇ ಅದಲ್ಲಿ ಪರಿಶುದ್ಧವಾಗಿಯೂ, ಹೆಸರುವಾಸಿಯನ್ನೈದಿಯೂ ಇರುವ ನಮ್ಮ ವಂಶವು ಸಾಧಾರಣವಲ್ಲ. ಅದರ ವಿಸ್ತಾರವನ್ನು ಕೇಳು, ಆದಿಯಲ್ಲಿ ಬ್ರಹ್ಮನೂ, ಬ್ರಹ್ಮನಿಂದ ಅತ್ರಿಮುನಿಯೂ, ಆತನಿಂದ ಚಂದ್ರನೂ, ಅವನಿಂದ ಬುಧನೂ, ಬುಧನಿಂದ ಪುರೂರವನೂ ಜನಿಸಿದರು. ಅವನಿಗೆ ಆಯು, ವನಾಯು, ವಿಶ್ವಾಯು, ಶ್ರುತಾಯು, ಉದಾವಸು, ದೃಢಾಯು, ಶತಾಯು ಎಂಬ ಏಳ್ವರುಪುತ್ರರಾದರು. ಅವರಲ್ಲಿ ಹಿರಿಯನಾದ ಆಯುವಿಗೆ ನಹುಷನೆಂಬ ಮಗನೂ, ಅವನಿಂದ ಯಯಾತಿಯೂ ಜನಿಸಿದರು. ಆ ಯಯಾತಿ ಎಂಬ ಮಹಾರಾಜನು, ದೇವಯಾನಿ, ಶರ್ಮಿಷ್ಠೆ ಎಂಬೀರ್ವರನ್ನು ವರಿಸಿದನು. ಶರ್ಮಿಷ್ಠೆಯು, ಅನು, ದ್ರುಹ್ಯ, ಪೂರು ಎಂಬ ಮೂವರು ಪುತ್ರರನ್ನು ಪಡೆದಳು, ಪೂರುವಿನಿಂದ ಜನಮೇಜಯನೂ, ಪ್ರಾಚೀನವಂತನೂ ಉತ್ಪನ್ನರಾದರು. ಪ್ರಾಚೀನವಂತನಿಗೆ ಶರ್ಯಾತಿ ಎಂಬುವವನು ಕುವರನಾದನು. ಅವನಿಂದ ಅಹಂಪಾತಿಯು, ಅಹಂಪಾತಿಗೆ ಸಾರ್ವಭೌಮನೆಂಬುವವನೂ ಹುಟ್ಟಿದರು. ಸಾರ್ವಭೌಮನು ಜಯತ್ಸೇನನೆಂಬ ಪುತ್ರನನ್ನೂ, ಜಯತ್ಸೇನನು ಅರಾಜನನನೆಂಬ ಕುವರನನ್ನೂ ಪಡೆದರು. ಅರಾಜನನಿಂದ ಮಹಾಭೌಮನೂ, ಅವನಿಂದ ಅಯುತಾಯುವೂ, ಆಯುತಾಯುವಿಗೆ ಅಕ್ರೋಧನನೂ ಮಕ್ಕಳಾದರು. ಅಕ್ರೋಧನನು ದೇವಾತಿಥಿಯನ್ನೂ, ಆತನು ರುಚನನ್ನೂ ರುಚನು ರುಕ್ಷನೆಂಬುವನನ್ನೂ, ರುಕ್ಷನು ರಂತಿನಾರನನ್ನೂ ಪಡೆದರು. ರಂತಿನಾರನಿಂದ ತ್ರಸ್ನುವು, ಅವನಿಂದ ಇಲಲನೂ, ಇಲಲನಿಂದ ಜನಮೇಜಯನೂ, ಅವನಿಂದ ದುಷ್ಯಂತನೂ ಹುಟ್ಟಿದರು. ಈ ದುಷ್ಯಂತಮಹಾರಾಯನು ಶಕುಂತಳೆಯನ್ನು ವರಿಸಿದನು. ಈಕೆಯ ಉದರದಲ್ಲಿ ಭರತನೆಂಬ ಕುವರನು ಜನಿಸಿದನು. ಭರತನಿಂದ ಸುಮನ್ಯುವು, ಸುಮನ್ಯುವಿಗೆ ಸುಹೋತ್ರನು, ಅವನಿಂದ ಹಸ್ತಿಯೂ, ಹಸ್ತಿಯಿಂದ ನಿಕುಂಜನೂ, ಅವನಿಂದ ಅಜಮೀಢನೂ ಜನಿಸಿದರು. ಅಜಮೀಢನಿಗೆ ರುಕ್ಷನೂ, ರುಕ್ಷನಿಂದ ಸಂವರಣನೂ, ಸಂವರಣನಿಂದ ಕುರುವೂ ಹುಟ್ಟಿದರು. ಕುರುವು ವಿಡೂರಥನನ್ನೂ, ಆತನು ಅನಶ್ವನನ್ನೂ, ಅನಶ್ವನು ಪರೀಕ್ಷಿತ್ತೆಂಬವನನ್ನೂ ಪಡೆದರು. ಪರೀಕ್ಷಿತ್ತಿನಿಂದ ಭೀಮನು, ಭೀಮನಿಂದ ಪ್ರತೀಪನೂ, ಪ್ರತೀಪನಿಂದ ಶಂತನು, ದೇವಾಪಿ, ಬಾಹ್ಲೀಕರೆಂಬ ಮೂವರೂ ಉತ್ಪನ್ನರಾದರು. ಶಂತನುವೆಂಬುವವನು ಗಂಗಾಪುತ್ರನಾದ ಭೀಷ್ಮನನ್ನೂ, ಮತ್ಸ್ಯಗಂಧಿಯ ಗರ್ಭದಲ್ಲಿ ಚಿತ್ರಾಂಗದ, ವಿಚಿತ್ರವೀರ್ಯರೆಂಬೀರ್ವರು ಕುವರರನ್ನೂ ಪಡೆದನು. ಚಿತ್ರಾಂಗದನು ಗಂಧರ್ವರಿಂದ ಹತನಾದನು. ವಿಚಿತ್ರವೀರ್ಯನ ಪ್ರಾಣವು ರಾಜಯಕ್ಷ್ಮವೆಂಬ ಮಹಾವ್ಯಾಧಿಯ ಬಾಯಿಗೆ ತುತ್ತಾಯಿತು. ಆತನಿಗೆ ಅಂಬಿಕೆ ಅಂಬಾಲಿಕೆ ಎಂಬೀರ್ವರು ಪತ್ನಿಯರಾಗಿದ್ದರು. ವ್ಯಾಸಮಹರ್ಷಿಯು ಮಾಡಿದ ಅನುಗ್ರಹದಿಂದ ಅಂಬಿಕೆಯು ಧೃತ

ವೇದವ್ಯಾಸಮುನಿಪುಸಿದೊ । ಡಸುರಾರಿಸ್ವೈರಿಪನೆಸ್ವೈರಿಸಿದೊಡೊಳ್ಳಿತಂ । ದುಸುರುವವೆಶಕುನಂಗಳುಸುರಿದೊಡಭಾಗ್ಯನೇ
ಭೂವರನಭಾಗ್ಯನಾಗೆ ॥ ಮಸುಳಿಪುದೆಶಶಿಕುಲಂಮಸುಳಿಸಿದೊಡಡ್ಡಪುದೆ । ವಸುಧೆಯದ್ದಡೆತನ್ನನುಡಿಬಂಜೆಯಪ್ಪುದಿದು ।
ಪೊಸತದೇಂ ಪಾಪದಿಂಕಾಣಿಸದೊ ತುರಗಮೆಂದನಿಲಜಂಚಿಂತಿಸಿದನು ॥ ೩ ॥ ಪಾತಕಿಗೆನುಡಿದಸೊಲ್ಲುಪುಸಿಯಹುದುಪರ
ದಾರ । ಸೂತಕಿಗೆನೆನೆದೆಣಿಕೆಬಯಲಹುದುಗುರುವಿಪ್ರ । ಘಾತಕಿಗೆಕಾಣ್ಬೊಡವೆಮರೆಯಹುದುತಥ್ಯಮಿದುಜಗದೊಳೆನಗಾವ
ಭವದ ॥ ಜಾತಕಿಲ್ಬಿಷವೊಯಾದವಕುಲಮಹಾಂಬುನಿಧಿ । ಶೀತಕಿರಣಂತನ್ನಶರಣರನುಳಿದನೋಹಯ । ಮೇತಕಿಂತಕಟ
ಕಾಣಿಸವೊಶಿವಶಿವಾಎಂದನಿಲಜಂಚಿಂತಿಸಿದನು ॥ ೪ ॥ ತಲ್ಲಕ್ಷಣಂಗಳಿಂಸಲ್ಲಲಿತಮಾದಹಯ । ಮಿಲ್ಲಿವಿಧಿವಶದಿಂದಮಿಲ್ಲದಿ

---

ದೊಡೆ–ಅವೂ ಅನೃತ ಸೂಚಕಂಗಳಾಗಿದ್ದರೆ, ಭೂವರನು–ರಾಜಾಗ್ರಣಿಯಾದ ಯುಧಿಷ್ಠಿರನು, ಅಭಾಗ್ಯನೆ–ಮಂದಭಾಗ್ಯನೆ ?, ಅಭಾಗ್ಯನಾಗೆ–ಆತನೂ ನಿರ್ಭಾಗ್ಯನಾದಲ್ಲಿ, ಶಶಿಕುಲಂ–ಇಂದುವಿನ ಸಂತತಿಯು, ಮಸಳಿಪುದೆ–ಕಾಂತಿಯುಕ್ತವಾದೀತೆ, ? ಮಸುಳಿಸೊಡೆ–ಅದೂ ಕಾಂತವಿಹೀನವಾದರೆ, ವಸುಧೆ–ಧರಾಮಂಡಲವು, ಅದ್ದಪುದೆ–ವಶವಾಗಿರು(ಕುಸಿಯು)ತ್ತದೆಯೆ,? ಅದ್ದಡೆ–ಇಳೆಯೂ ವಶವರ್ತಿಯಾಗಿ(ಕುಸಿದುಬಿ)ದ್ದಲ್ಲಿ, ತನ್ನ–ಸ್ವಕೀಯವಾದ, ನುಡಿ–ವಚನವು, ಬಂಜೆಯು–ವ್ಯರ್ಥವಾದದ್ದು, ಅಹುದೆ–ಆದೀತೆ,? ಇದು–ಈಕಾರ್ಯವು, ಪೊಸತು–ನೂತನವಾಗಿದೆ, ಅದೇಂಪಾಪದಿಂ–ಯಾವತೆರದ ದುರಿತಾತಿಶಯದಿಂದ, ತುರಗಂ–ಅಶ್ವವು, ಕಾಣಿಸದೊ–ದೃಷ್ಟಿಪಥಕ್ಕೆ ಬಾರದಿರ್ಪುದೋ?, ಎಂದು–ಎಂಬೀ ರೀತಿಯಾಗಿ, ಅನಿಲಜಂ–ವಾಯುಸೂನುವಾದ ವೃಕೋದರನು, ಚಿಂತಿಸಿದನು–ಆಲೋಚನೆಯಂ ಮಾಡುತ್ತಿದ್ದನು ॥ ೩ ॥

ಟೀ॥ ಪಾತಕಿಗೆ–ದುರಿತದಿಂದ ಕೂಡಿದವನಿಗೆ, ನುಡಿದ–ಹೇಳಿದ, ಸೊಲ್ಲು–ವಚನವು, ಪುಸಿಯು–ಮಿಥ್ಯೆಯು (ಅನೃತವು) ಅಹುದು–ಆಗುತ್ತದೆ, ಪರದಾರ–ಮತ್ತೊಬ್ಬರ ಪತ್ನಿಯಲ್ಲಿ, ಸೂತಕಿಗೆ–ಆಕಾಂಕ್ಷೆಯುಳ್ಳ ಮನುಷ್ಯನಿಗೆ, ನೆನೆದ–ಸ್ಮರಣೆಮಾಡಿಕೊಂಡ, ಎಣಿಕೆ–ಇಷ್ಟಾರ್ಥವು, ಬಯಲು–ಬರೀದು, ಆಹುದು–ಆಗಿಹೋಗುವುದು, ಗುರು–ಆಚಾರ್ಯನನ್ನೂ, ವಿಪ್ರ–ಭೂಸುರನನ್ನೂ ಸಹ, ಘಾತಕಿಗೆ–ಕೊಲೆಮಾಡಿದವನಿಗೆ, ಕಾಣ್ಬೊಡವೆ – ಗೋಚರವಾಗುವ ವಸ್ತುವೂ, ಮರೆಯು–ದೃಷ್ಟಿಗೆ ಬೀಳದ್ದು, ಅಹುದು–ಆಗುತ್ತದೆ, ಇದು–ಈ ನುಡಿಯು, ಜಗದೊಳಗೆ–ಲೋಕದಲ್ಲಿ, ತಥ್ಯಂ–ಯಥಾರ್ಥವು, ಎನಗೆ–ನನಗೆ, ಆವ ಭವದ–ಯಾವ ಪ್ರಕಾರ(ಜನ್ಮ)ದ, ಜಾತ–ಉತ್ಪನ್ನವಾದ, ಕಿಲ್ಬಿಷವೊ–ದುರಿತವೋ, ಯಾದವ–ಯದುಮಹಾರಾಯನ ಸಂಬಂಧವಾದ, ಕುಲ–ಸಂತತಿಯೆಂಬ, ಮಹಾ–ದೊಡ್ಡದಾದ, ಅಂಬುನಿಧಿ–ಕಡಲಿಗೆ, ಶೀತ–ತಣ್ಣಗಿರುವ, ಕಿರಣಂ–ಕರಗಳುಳ್ಳ ಇಂದುವಿನಂತಿರುವ ಕೃಷ್ಣಸ್ವಾಮಿಯು, ಶರಣರನು–ತನ್ನನ್ನು ಶರಣು ಹೊಂದಿರತಕ್ಕ ನಮ್ಮನ್ನು, ಉಳಿದನೋ–ಬಿಟ್ಟುಬಿಟ್ಟನೋ, ಹಯಂ–ಅಶ್ವವು, ತನಗೆ, ಏತಕೆ–ಯಾವ ಕತದಿಂದ, ಇಂತು–ಈತೆರನಾಗಿ, ಕಾಣಿಸದೊ–ದೃಷ್ಟಿಗೆ ಬೀಳುವುದಿಲ್ಲವೊ, ಅಕಟ–ಅಯ್ಯೋ ! ಶಿವಶಿವ–ಹರಹರ, ಎಂದು–ಹೀಗೆಂದು, ಪವನಜಂ–ವಾಯುನಂದನನಾದ ಭೀಮಸೇನನು, ಚಿಂತಿಸಿದನು–ವ್ಯಸನಾಕ್ರಾಂತನಾಗಿದ್ದನು ॥ ೪ ॥

---

ರಾಷ್ಟ್ರನೆಂಬ ಕುವರನನ್ನೂ, ಅಂಬಾಲಿಕೆಯು ಪಾಂಡುವೆಂಬ ಮಗನನ್ನೂ ಹೆತ್ತರು. (ವಿದುರನು ಶೂದ್ರಸ್ತ್ರೀ ಪುತ್ರನಾದನು. ಇವನೇ ಯಮ.) ಧೃತರಾಷ್ಟ್ರನು ಗಾಂಧಾರಿಯನ್ನು ವರಿಸಿ ಆಕೆಯ ಗರ್ಭದಿಂದ ಸುಯೋಧನನೇ ಮೊದಲಾದ ನೂರುಮಂದಿ ಗಂಡುಮಕ್ಕಳನ್ನೂ, ದುಶ್ಶಳೆ ಎಂಬೋರ್ವ ಕುವರಿಯನ್ನೂ ಪಡೆದನು. ಪಾಂಡುವು ಕುಂತಿ ಮಾದ್ರಿ ಎಂಬೀರ್ವರನ್ನು ವರಿಸಿದನು. ಕುಂತಿಯು ಕನ್ಯೆಯಾಗಿರುವಾಗ ಸೂರ್ಯನಿಂದ ಕರ್ಣನೆಂಬ ಮಗನನ್ನೂ ಪಾಂಡುರಾಯನಿಂದ ನಮ್ಮ ಅಣ್ಣನಾಗಿಯೂ ಧರ್ಮಾತ್ಮನಾಗಿಯೂ ಇರುವ ಧರ್ಮರಾಯನನ್ನೂ, ನನ್ನನ್ನೂ, ಪಾರ್ಥನನ್ನೂ, ಹಡೆದಳು. ಮಾದ್ರೀದೇವಿಯಿಂದ ಪಾಂಡುರಾಯನು ನಕುಲ ಸಹದೇವರೆಂಬೀರ್ವರು ಪುತ್ರರನ್ನು ಪಡೆದನು. ಇಂಥಾ ಅತ್ಯುಚ್ಛ್ರೇಯಸ್ಥಿತಿಯಲ್ಲಿರುವ ಚಂದ್ರವಂಶವೇ ಕ್ಷೀಣಗತಿಯನ್ನೈದೀತೆ? ಇಂಥಾ ಪರಿಶುದ್ಧವಾದ ನಮ್ಮ ವಂಶವು ಎಡರ್ಗಳಿಗೆ ಸಿಕ್ಕಿದರೆ ನಮಗೆ ಈ ರಾಜ್ಯವು ನಮ್ಮ ಸ್ವಾಧೀನವಾದರೂ ಕೂಡ ನಾನು ಅನೃತವಾದಿಯೆ ? ಯಾವ ದುರಿತಗಳಿಂದ ನಮಿಗೆ ಕುದುರೆಯು ಕಾಣಿಸದೋ ಗೊತ್ತಿಲ್ಲವಲ್ಲಾ ॥ ೩ ॥ ಪಾಪಿಷ್ಠನು ಆಡಿದ ಮಾತು ಸುಳ್ಳಾಗುವದೂ, ಅನ್ಯರ ಹೆಂಡಿರಲ್ಲಿ ಆಸೆಯುಳ್ಳವನ ಇಷ್ಟವು ಸಿದ್ಧವಾಗದಿರುವುದೂ, ಗುರುಹತ್ಯ ಬ್ರಹ್ಮಹತ್ಯಗಳನ್ನು ಮಾಡಿದವರ ಕಣ್ಣಿಗೆ ಕಾಣಬೇಕಾದ ಒಡವೆಯು ಕಾಣದೆ ಮಾಯವಾಗುವುದೂ ಸ್ವಾಭಾವಿಕವಾಗಿರುವುದು. ಇವುಗಳಲ್ಲಿ ನಾನು ಯಾವುದಕ್ಕೂ ಸೇರಿದವನಲ್ಲಾ? ಯಾವ ಕಾರಣದಿಂದ ನನಗೆ ಅಶ್ವವು ಗೋಚರಿಸದೊ, ಅಥವಾ ಯದುಕುಲಕ್ಕೆ ರತ್ನದಂತಿರುವ ಶ್ರೀ ಕೃಷ್ಣಮೂರ್ತಿಯ ಅನುಗ್ರಹವು ನಮ್ಮಲ್ಲಿ ತಪ್ಪಿಹೋಯಿತೊ ಏನೋ? ॥ ೪ ॥ ಹಾಗಿಲ್ಲದಿದ್ದರೆ ಈ ದೇಶದಲ್ಲಿ ಒಂದುವೇಳೆ ಅಶ್ವಮೇಧಾರ್ಹವಾದ ಕುದುರೆಯೇ ಇಲ್ಲದಿದ್ದರೆ

ದೊರ್ಡೆಧರಾ । ವಲ್ಲಭನರಂಜಿಸುವಮೆಲ್ಲಡಿಗಳಂಕಾಣಬಲ್ಲೆನೆಮಹೀತಳದೊಳು ॥ ಎಲ್ಲಿರ್ದೊಡಂತಾನದಲ್ಲಿಪೊಕ್ಕರಸಿತಂದಲ್ಲದೆನ್ನಯಭಾಷೆಸಲ್ಲದಿದಕೆಂತೆನುತ । ಘಲ್ಲಿಸುವಚಿಂತೆಯಿಂನಿಲ್ಲದೆವೃಕೋದರಂತಲ್ಲಣಿಸುತಿರುತಿರ್ದನು ॥ ೫ ॥ ಅನಿತರೊಳನೇಕಸೇನೆಗಳಸನ್ನಾಹದಿಂ । ಘನವಾದ್ಯರಭಸದಿಂಸೂತರಪೊಗಳ್ಕೆಯಿಂ । ದನುಕರಿಸಿದಮಲವಸ್ತ್ರಾಭರಣಗಂಧಮಾಲ್ಯಾದಿಗಳಪೂಜೆಯಿಂದ ॥ ವಿನುತಾತಪತ್ರಚಾಮರಂಗಳಿಂದೆಡಬಲದೊ । ಳನುವಾಗಿವಾಜಿಯಂಪಿಡಿದುನಡೆತಪ್ಪನೃಪ । ತನುಜರಿಂದಾಹಯಂನೀರ್ಗೆಪೊರಮಟ್ಟುಸಂಭ್ರಮದೊಳೈತರುತಿರ್ದುದು ॥ ೬ ॥ ವಿಧುಬಿಂಬದುದಯಮಂಕಂಡೊತ್ತರಿಸಿಪಯೋ । ನಿಧಿಮೇರೆವರಿದುಕ್ಕುವಂತೆನಿರ್ಮಲವಾದ । ಸುಧೆಯೇಳ್ಗೆಯಂಕಂಡುಪುಳಕಂನೆಗಳ್ವಜಂಭಾರಿಸಂಭ್ರಮಿಸುವಂತೆ ॥ ಅಧಿಕಬಲಯೌವನಾಶ್ವನಿಪನೈಶ್ವರ್ಯ । ವಧುವಿನಕಟಾಕ್ಷದಂತೊಪ್ಪುವತುರಂಗಮಂ । ಕುಧರೋಪಮಾನಪವಮಾನಜಂಕಂಡುನೆರೆಸು

---

ಟೀ॥ ತತ್-ಆ ಅಶ್ವಮೇಧಾರ್ಹವಾದ, ಲಕ್ಷಣಗಳಿಂ- ಗುರುತುಗಳಿಂದ, ಸಲ್ಲಲಿತಂ-ಅತಿ ಮನೋರಂಜಿತವಾದದ್ದು, ಅಹ-ಆಗಿರತಕ್ಕ, ಹಯಂ-ಅಶ್ವವು, ವಿಧಿವಶದಿಂದ-ದೇವರ ಕೃಪೆಯಿಂದ, ಇಲ್ಲದಿರ್ದೊಡೆ- ಇಲ್ಲದಿದ್ದಪಕ್ಷಕ್ಕೆ, ಧರಾವಲ್ಲಭನ-ಪೃಥ್ವೀಶ್ವರನಾದ ಯುಧಿಷ್ಠಿರನ, ರಂಜಿಸುವ-ಹೊಳೆಯುವ, ಮೆಲ್ಲಡಿಗಳಂ – ಕೋಮಲಂಗಳಾದ ಪಾದಯುಗ್ಮವನ್ನು, ಕಾಣಬಲ್ಲೆನೆ-ಈಕ್ಷಿಸಲು ಶಕ್ತನಾಗುವೆನೆ?, ಮಹೀತಳದೊಳು-ಧರಾವಲಯದಲ್ಲಿ, ಎಲ್ಲಿರ್ದೊಡಂ-ಯಾವ ಸ್ಥಳದಲ್ಲಿದ್ದಾಗ್ಯೂ, ತಾನು-ನಾನು, ಅಲ್ಲಿಗೆ-ಆ ಪ್ರದೇಶಕ್ಕೆ, ಪೊಕ್ಕು-ಪ್ರವೇಶಮಾಡಿ, ಅದ-ಆ ಅಶ್ವವನ್ನು, ಅರಸಿ-ಅನ್ವೇಷಣೆಮಾಡಿ, ತಂದಲ್ಲದೆ- ತೆಗೆದುಕೊಂಡು ಬಂದಹೊರತು, ಎನ್ನಯ-ನನ್ನ ಸಂಬಂಧವಾದ, ಭಾಷೆ, ಶಪಥವು, ಸಲ್ಲದು-ನೆರವೇರುವುದಿಲ್ಲ, ಇದಕೆ-ಇದು ನೆರವೇರುವುದಕ್ಕೆ, ಎಂತು-ಹೇಗೆ, ಎನುತ-ಎಂಬದಾಗಿ ನುಡಿಯುತ್ತ, ಘಲಿಸುವ-ಚಪಲಯುಕ್ತವಾದ, ಚಿಂತೆಯಿಂ-ವ್ಯಸನದಿಂದ, ವೃಕೋದರಂ-ಅನಿಲಜನು, ನಿಲ್ಲದೆ-ಸುಮ್ಮನಿರದೆ, ತಲ್ಲಣಿಸುತ-ಭ್ರಾಂತನಾಗುತ್ತ, ಇರುತಿರ್ದನು-ಇದ್ದವನಾದನು ॥೫॥

ಟೀ॥ ಅನಿತರೊಳು-ಆ ಕಾಲಕ್ಕೆ ಸರಿಯಾಗಿ, ಅನೇಕ-ಬಗೆಬಗೆಯಾದ, ಸೇನೆಗಳ-ಚತುರಂಗ ಬಲಗಳ, ಸನ್ನಾಹದಿಂ-ಸಮೂಹದಿಂದ, ಘನ-ಅತಿಶಯವಾದ, ವಾದ್ಯ-ದುಂದುಭಿ ಮುಂತಾದ್ದರ, ರಭಸ-ಘರ್ಜನೆಯ ಸಮೂಹದಿಂದಲೂ, ಸೂತರ-ಸ್ತುತಿಪಾಠಕರ, ಪೊಗಳ್ಕೆಯಿಂದ – ಸ್ತುತಿವಚನಗಳಿಂದಲೂ, ಅನುಕರಿಸಿದ – ಜೊತೆಯಾಗಿರುವ, ಅಮಲ- ಪರಿಶುದ್ಧವಾದ, ವಸ್ತ್ರ-ಉಡಿಗೆಗಳು, ಆಭರಣ-ತೊಡಿಗೆಗಳು, ಗಂಧ-ಪರಿಮಳದ್ರವ್ಯವು, ಮಾಲ್ಯ-ಪುಷ್ಪಗಳೇ, ಆದಿ-ಮುಂತಾದ, ಪೂಜೆಯಿಂದ-ಸಪರ್ಯೆಗಳಿಂದ, ವಿನುತ-ಸ್ತೋತ್ರಾರ್ಹವಾದ, ಆತಪತ್ರ-ಶ್ವೇತಚ್ಛತ್ರ, ಚಾಮರಂಗಳಿಂದ-ಚವರಿಗಳಿಂದಲೂ, ಎಡಬಲದೊಳ್-ಇರ್ಕಡೆಗಳಲ್ಲೂ, ಅನುವಾಗಿ-ಸೇರಿದವರಾಗಿ, ವಾಜಿಯಂ-ಅಶ್ವವನ್ನು, ಪಿಡಿದು-ಹಿಡಿದುಕೊಂಡು, ನಡೆತಪ್ಪ-ಹೊರಟು ಬರುತ್ತಿರುವ, ನೃಪತನುಜರಿಂ-ಅರಸುಕುವರರಿಂದ, ಆ ಹಯಂ-ಆ ಅಶ್ವವು, ನೀರ್ಗೆ-ಜಲಪಾನಕ್ಕಾಗಿ, ಪೊರಮಟ್ಟು-ಮುಂದೆಹೊರಟು, ಸಂಭ್ರಮದೊಳು-ಆನಂದಾತಿಶಯದಿಂದ, ಐತರುತಿರ್ದುದು-ಬಿಜಯಮಾಡುತ್ತಿತ್ತು ॥೬॥

ಟೀ॥ ವಿಧು-ಇಂದುವಿನ, ಬಿಂಬ-ಮಂಡಲದ, ಉದಯವನು – ಉತ್ಪತ್ತಿಯಾಗುವಿಕೆಯನ್ನು, ಕಂಡು- ಈಕ್ಷಿಸಿ, ಒತ್ತರಿಸಿ-ತಳ್ಳಿ, ಪಯೋನಿಧಿ-ಪಾಲ್ಗಡಲು, ಮೇರೆವರಿದು- ಎಲ್ಲೆಯನ್ನತಿಕ್ರಮಿಸಿ, ಉಕ್ಕುವಂತೆ – ಉಲ್ಬಣವಾಗುವಹಾಗೆ, ನಿರ್ಮಲವಾದ – ಪರಿಶುದ್ಧವಾದ, ಸುಧೆಯ – ಅಮುರ್ದವಿನ, ಏಳ್ಗೆಯಂ – ಹೆಚ್ಚಿಕೆಯನ್ನು, ಕಂಡು- ಈಕ್ಷಿಸಿ, ಜಂಭಾರಿ-ದೇವೇಂದ್ರನು, ಸಂಭ್ರಮಿಸುವಂತೆ-ಹರ್ಷವನ್ನೈದುವತೆರನಾಗಿ, ಅಧಿಕ-ಹೆಚ್ಚಾದ,ಬಲ-ಸೇನೆಯಿಂದ ಕೂಡಿರತಕ್ಕ, ಯೌವ

---

ಮತ್ತೆಲ್ಲಿರುವುದೋ ಅಲ್ಲಿಗೇ ಹೋಗಿ ಕುದುರೆಯನ್ನು ತಂದು ಧರ್ಮನಂದನನ ಪಾದಾರವಿಂದಗಳಿಗೆ ಒಪ್ಪಿಸಬೇಕಲ್ಲದೆ ಸುಮ್ಮನೆ ಯುಧಿಷ್ಠಿರನ ಬಳಿಗೆ ಹೋಗಿ ನಿಂತು ನನ್ನ ಶಪಥವನ್ನು ಸುಳ್ಳಾಗಿ ಎಂದೆಂದಿಗೂ ಮಾಡಿಕೊಳ್ಳಲಾರೆನೆಂಬದಾಗಿ ನಾನಾ ಪ್ರಕಾರವಾಗಿ ಚಿಂತಿಸುತ್ತಿದ್ದನು. ॥೫॥ ಆ ಕಾಲಕ್ಕೆ ಸರಿಯಾಗಿ ಭದ್ರಾವತಿಯ ಊರ ಬಾಗಿಲಿನಿಂದ ಹಸ್ತ್ಯಶ್ವರಥಪದಾತಿಗಳೆಂಬ ಚತುರ್ವಿಧ ಸೈನ್ಯದಿಂದ ಆವರಿಸಲ್ಪಟ್ಟು ಇರುವುದಾಗಿಯೂ, ದುಂದುಭಿಯೇ ಮೊದಲಾದ ಅನೇಕ ವಾದ್ಯಧ್ವನಿಗಳಿಂದ ಕೂಡಿಯೂ, ಸ್ತುತಿಪಾಠಕರಿಂದ ಹೊಗಳಿಸಿಕೊಳ್ಳುತ್ತಲೂ, ದಿವ್ಯಾಂಬರಾಭರಣಂಗಳಿಂದಲು ಪರಿಮಳಯುಕ್ತವಾದ ಗಂಧಮಾಲ್ಯಾದಿಗಳಿಂದ ಅಲಂಕೃತವಾಗಿಯೂ, ಎಡಬಲ ಭಾಗಗಳಲ್ಲಿ ಚಾಮರಗಳನ್ನು ಬೀಸುವುದರಿಂದಲು ಶ್ವೇತಚ್ಛತ್ರವನ್ನು ಹಿಡಿದು ಇರುವುದರಿಂದಲೂ ಪಕ್ಕಗಳಲ್ಲಿ ಕಾವಲ್ಗಾರರಾಗಿರುವ ರಾಜಪುತ್ರರ ಗಡಣದಿಂದಲೂ ರಾರಾಜಿಸುತ್ತಲಿರುವ ಒಂದಾನೊಂದು ಅಶ್ವವು ಹೊರಭಾಗದಲ್ಲಿ ಸಂಭ್ರಮಾತಿಶಯದಿಂದ ಬರುತ್ತಿತ್ತು ॥೬॥ ಪೂರ್ಣಚಂದ್ರಬಿಂಬವನ್ನು ನೋಡಿ ಸಮುದ್ರರಾಜನು ಮಿತಿಮೀರಿದ ಆನಂದದಿಂದ ಕೂಡಿರುವಂತೆಯೂ, ಪರಿಶುದ್ಧವಾದ ಅಮೃತೋತ್ಪತ್ತಿಯಾದ್ದನ್ನು ನೋಡಿದ ದೇವೇಂದ್ರನ ಸಂತೋಷದಂತೆಯೂ, ಮಹಾಬಲದಿಂದಲೂ, ಶಕ್ತಿಯಿಂದಲೂ ಮೆರೆಯುತ್ತಿರುವ ಭದ್ರಗಿರಿರಾಜನ ಐಶ್ವರ್ಯ

ಭಿತದಲಂಕಾರದಸುಲಕ್ಷಣದಲಾಲಿತ | ಶ್ರುತಿರಂ ಜನಮಾನಮಂತಾಳ್ದನು ||೭|| ಚತುರಪದಗತಿಯಸರಸಧ್ವನಿಯವರ್ಣಶೋ | ಜನದವಿಶೇಷಾರ್ಥಸಂಚಿತದವಿಸ್ತಾರದಿಂ ಪೊಸತೆನಿಸುವ | ನುತಸತ್ಕವಿಪ್ರೌಢತರಸುಪ್ರಬಂಧದಂ | ತತಿಮನೋಹರಮಾದವಾಜಿ ಯಂಕಂಡುಹ | ರ್ಷಿತನಾಗಿನೋಡುತಿರ್ದಂಕಲಾವಿದನಪ್ಪಮಾರುತಿಮಹೋತ್ಸವದೊಳು ||೮|| ಮೂಜಗದೊಳೀತುರಂಗ

---

ನಾಶ್ವಾವನಿಪನ - ಯೌವನಾಶ್ವನೆಂಬ ಮಹೀಪಾಲನ, ಐಶ್ವರ್ಯ-ಸಾಮ್ರಾಜ್ಯವೆನ್ನುವ, ವಧುವಿನ-ಸ್ತ್ರೀಯ, ಕಟಾಕ್ಷದಂತೆ- ನೋಟಗಳೋಪಾದಿಯಲ್ಲಿ, ಒಪ್ಪುವ-ಪ್ರಕಾಶಿಸತಕ್ಕ, ತುರಂಗಮಂ - ಅಶ್ವವನ್ನು, ಕುಧರ-ಗಿರಿಗೆ, ಉಪಮ-ಸದೃಶನಾದ, ಪವಮಾನಜಂ - ವಾಯುಸೂನುವಾದ ಭೀಮಸೇನನು, ಕಂಡು-ಈಕ್ಷಿಸಿ, ನೆರೆ-ಹೆಚ್ಚಾಗಿ, ಸುಮ್ಮಾನಮಂ-ಸಂತೋಷವನ್ನು, ತಾಳ್ದನು-ಪಡೆದನು ||೭||

ಟೀ|| ಚತುರ-ಯುಕ್ತಿಯುಕ್ತವಾದ, ಪದ-ಅಡಿಗಳ (ಪಾದಗಳ), ಗತಿಯ-ಬಗೆಯುಳ್ಳ, ರಸ-ಶೃಂಗಾರ ಮೊದಲಾದ ನವರಸಗಳು, ಧ್ವನಿಯ-ಆಶ್ಚರ್ಯಸೂಚಕವಾಗಿರುವ, ವರ್ಣ-ಅಕಾರವೇ ಮೊದಲಾದ ಅಕ್ಕರಂಗಳಿಂದ, ಶೋಭಿತದ-ರಂಜಿಸುತಿರುವ, ಅಲಂಕಾರದ-ಉಪಮಾ ಮೊದಲಾದ ನಾನಾ ಅಲಂಕಾರಗಳಿಂದ, ಸುಲಕ್ಷಣದ - ಕಾವ್ಯಾದಿಗಳಿರುವ ನಿಬಂಧನೆಗಳಿಂ ಕೂಡಿರುವ, ಲಾಲಿತ - ಸರಳವಾಗಿಯೂ, ಶ್ರುತಿರಂಜನದ - ಕರ್ಣಾನಂದವನ್ನು ಉಂಟುಮಾಡತಕ್ಕವುಗಳಾಗಿಯೂ ಇರುವ, ವಿಶೇಷಾರ್ಥ-ನಾನಾ ವಿಧವಾದ ಶ್ಲೇಷಾರ್ಥಗಳಿಂದ, ಸಂಚಯದ - ಗುಂಪುಳ್ಳ, (ಸಂಚಿತದ - ಅನ್ವಿತಂಗಳಾಗಿರುವ ಎಂದೂ ಪಾಠಾಂತರದಲ್ಲಿ) ವಿಸ್ತಾರದಿಂ-ವೈಶಾಲ್ಯದಿಂದ, ಪೊಸದು-ನವೀನವಾದದ್ದು, ಎನಿಸುವ-ಎನ್ನುವಂಥ, ನುತ-ಸ್ತುತ್ಯರ್ಹವಾದ, ಸತ್ಕವಿ-ಒಳ್ಳೆ ಕವಿತ್ವವಂಗೈಯ್ಯುವವನಿಂದ ರಚಿತವಾದ, ಸುಪ್ರಬಂಧದಂತೆ-ಸತ್ಕೃತಿಯೋಪಾದಿಯಲ್ಲಿ, (ಇದು ಕಾವ್ಯಪರವಾದ ಅರ್ಥವು), ಚತುರ-ಚಾತುರ್ಯವುಳ್ಳ, ಪದ-ಅಡಿಗಳ, ಗತಿಯ-ಚಲನೆಯಿಂದ ಕೂಡಿದ, ಸರಸ-ಪ್ರೀತಿಸೂಚಕವಾದ, ಧ್ವನಿಯ-ಶಬ್ದಸಹಿತವಾದ, ವರ್ಣ-ಕಪ್ಪು, ಬಿಳಪು, ಹಳದಿಯೇ ಮೊದಲಾದ ವರ್ಣಗಳ ಸಮುದಾಯದಿಂದ, ಶೋಭಿತದ-ಹೊಳೆಯುತ್ತಿರುವ, ಅಲಂಕಾರದ-ವಸ್ತ್ರಾಭರಣಂಗಳಿಂ ಶೋಭಿಸುತ್ತಿರುವ, ಸುಲಕ್ಷಣದ-ಅಶ್ವಮೇಧ ಯಜ್ಞಕ್ಕೆ ತಕ್ಕ ಚಿಹ್ನೆಗಳಿಂದ ಒಡಗೂಡಿರುವ, ಲಾಲಿತ-ಕೋಮಲವಾದ, ಶ್ರುತಿ-ಕರ್ಣಗಳಿಂದ, ರಂಜನದ-ಪ್ರಕಾಶಿಸುವಂಥ, ವಿಶೇಷ-ಅತ್ಯಧಿಕವಾದ, ಅರ್ಥ-ಚತುರ್ವಿಧ ಪುರುಷಾರ್ಥಂಗಳ, ಸಂಚಯದ-ರಾಶಿಯ, (ಸಂಚಿತದ-ಸೇರಿರುವ ಎಂದು ಪಾಠಾಂತರ), ವಿಸ್ತಾರದಿಂ-ಹೆಚ್ಚಿಕೆಯಿಂದ, ಪೊಸತು - ನೂತನವಾದ್ದು, ಎನಿಸುವ-ಎಂದು ಹೇಳಿಸಿಕೊಳ್ಳುವ, ನುತ - ಮನ್ನಣೆಯಂ ಮಾಡಿಸಿಕೊಳ್ಳುವ (ಇದು ಹಯಮೇಧಾರ್ಹವಾದ ಅಶ್ವಪರವಾದ ಅರ್ಥವು), ಸತ್ಕವಿಪ್ರೌಢರ - ಒಳ್ಳೇ ಕವೀಶ್ವರರ, ಸುಪ್ರಬಂಧದಂತೆ-ಸತ್ಕಾವ್ಯದಹಾಗೆ, ಅತಿ ಮನೋಹರವಾದ - ಅತಿ ಚೆಲ್ವಾದ, ವಾಜಿಯಂ - ಅಶ್ವವನ್ನು, ಕಲಾವಿದನು-ಸಕಲ ವಿದ್ಯಾಪ್ರವೀಣನು, ಅಪ್ಪ-ಆಗಿರುವಂಥಾ, ಮಾರುತಿ-ವಾಯುಸೂನುವಾದ ವೃಕೋದರನು, ಮಹೋತ್ಸವದೊಳು-ಆನಂದಾತಿಶಯದಿಂದ, ನೋಡುತಿರ್ದಂ-ಈಕ್ಷಿಸುತಿದ್ದನು ||೮||

ಟೀ|| ಅರಸ-ಎಲೈ ಜನಮೇಜಯಮಹೀಪಾಲನೆ, ಕೇಳು - ಲಾಲಿಸು, ಈ ತುರಂಗಮವೆ - ಈ ಅಶ್ವವೇ, ಮೂಜಗ

---

ವೆಂಬ ನಾರಿಯ ಸುಲಕ್ಷಣಯುಕ್ತವಾದ ಕಟಾಕ್ಷಗಳೆಂಬಂತೆಯೂ ದಿವ್ಯ ತೇಜಸ್ಸಿನಿಂದ ವಿರಾಜಮಾನವಾಗಿಯೂ, ಯಜ್ಞಾರ್ಹವಾಗಿಯೂ ಇರುವ ಅಶ್ವವು || ೭ || ಚಮತ್ಕಾರವಾದ ನಡಿಗೆಯ ವಿಲಾಸದಿಂದಲೂ, ಮನೋರಂಜಕವಾದ ಕಂಠಧ್ವನಿಯಿಂದಲೂ, ಕಪ್ಪು ಬಿಳುಪು ಹಳದಿ ಮೊದಲಾದ ಬಣ್ಣಗಳಿಂದ ಕೂಡಿಯೂ, ಸುಲಕ್ಷಣಲಕ್ಷಿತವಾಗಿಯೂ, ಒಳ್ಳೆಯದಾಗಿರುವ ಕರ್ಣಂಗಳಿಂದ ಶೋಭಿಸುತ್ತಲೂ ಇರುವುದನ್ನು ಪರ್ವತೋಪಮಾನನಾಗಿಯೂ, ಸಕಲ ಕಲಾವಿಶಾರದನಾಗಿಯೂ ವಾಯುಪುತ್ರನಾಗಿಯೂ ಇರುವ ಭೀಮಸೇನನು ನೋಡಿ ಇದುವರೆಗೆ ಅಶ್ವವನ್ನು ಕಾಣದೆಯಿದ್ದುದರಿಂದುಂಟಾಗಿದ್ದ ಶೋಕಾಗ್ನಿಯ ಮಹಾಜ್ವಾಲೆಯನ್ನು ಆನಂದಾತಿಶಯದಿಂದುಂಟಾದ ಬಾಷ್ಪಂಗಳಿಂದ ಶಮನಮಾಡಿ ||೮|| ಕೊಂಡು ಸ್ವರ್ಗ ಮರ್ತ್ಯ ಪಾತಾಳಂಗಳಲ್ಲಿ ಎಲ್ಲಿಯೂ ಇಂಥಾ ಉತ್ತಮಾಶ್ವವನ್ನು ನೋಡಲೇ ಇಲ್ಲ. ಆಹಾ! ಇದರ ಸೌಂದರ್ಯವನ್ನು ವರ್ಣಿಸಲು ಯಾರಿಗೆತಾನೆ ಸಾಧ್ಯವು ಎಂದು ಕರ್ಣಪುತ್ರನೊಂದಿಗೆ ಹೇಳುತ್ತಿರುವಾಗ ಹಿಡಿಂಬಿಯ ಮೊಮ್ಮಗನಾದ ಮೇಘನಾದನು ಭೀಮಸೇನನ ಬಳಿಗೆ ಬಂದು ಸಾಷ್ಟಾಂಗ ದಂಡಪ್ರಣಾಮವಂಗೈದು, ಎಲೈ ತಂದೆಯೇ! ನನಿಗೆ ಅನುಜ್ಞೆಯಂ ದಯಪಾಲಿಸು, ಈಗಲೆ ಹೋಗಿ ಯೌವನಾಶ್ವನ ಸೈನ್ಯವನ್ನೆಲ್ಲಾ ಧೂಳಿಪಟವನ್ನಾಗಿ ಮಾಡಿ ಕುದುರೆಯನ್ನು ಹಿಡಿದು ತರುತ್ತೇನೆ. ನನ್ನ ಸಾಹಸವನ್ನು ನೋಡೆಂದು ನುಡಿದು ಆತನ ಅನುಜ್ಞೆಯನ್ನು ಪಡೆದು ಅಶ್ವರಕ್ಷಣೆಗೆ ಬಂದು ನೆರೆದಿರುವ ಸೈನ್ಯವನ್ನೆಲ್ಲಾ ಮಾಯಾಪಾಶಕ್ಕೆ ಗುರಿಮಾಡಿದನು. ||೯|| ಈ ಮಹಾಮಾಯಾಜಾಲದೊಳು ಸಿಲುಕಿದ ಯೌವನಾಶ್ವ ಭೂಪಾಲನ ಸೇನಾನಿಕಾಯವು ಬೆಚ್ಚರಗೊಂಡು ಎಲ್ಲೆ

ಮನೆಪೊಸತೆಂದುವರ ॥ ವಾಜಿಯಂನಿಟ್ಟಿಸುವಭೀಮಸೇನನಪದಸ । ರೋಜಯುಗಳಕ್ಕೆರಗಿಮೇಘನಾದಂನೀವುನೋಳ್ಪ
ದೆನ್ನಧಟನೀಗ ॥ ವಾಜಿಯಂತಹೆನೆನುತ್ತಲ್ಲಿಂತಳರ್ದುಮಾ । ಯಾಜಾಲನುಂಬೀಸಿದಂನಭೋಮಂಡಲ । ಕ್ಕಾಜನಪನಶ್ವರಕ್ಷೆಯ
ಬಲಂಕಂಗೆಡ.ಪೊಲರಸಕೇಳದ್ಭುತವನು ॥ ೯ ॥ ತುರ.ಗಿತೆತ್ತಲುಂಪ್ರಳಯಕಾಲದಮೇಘ । ಮೊರಗುತಿವೆಬರಯಬರಿಸಿಡಿಲ್ಗಳ
ತ್ತೆತ್ತಲುಂ । ಕರೆವುತಿದೆಬಿರುಗಾಳಿಧೂಳ್ಗಳೆತ್ತೆತ್ತಲುಂಕತ್ತಲೆಗಳಿಟ್ಟಣಿಸಿವೆ ॥ ತೆರೆಯಬಾರದುಕಂಣಮರೆದುಕಣ್ದೆರೆಯೆದಿ ।
ಕ್ಕರಿಯಬಾರದಮಹಾದ್ಭುತಮಿದೆತ್ತಣದೊಜಗ । ದೆರೆಯನೇಬಲ್ಲನೆನುತಿರ್ದುದಾಸೈನಿಕಂಹೈಡಿಂಬಿಕೃತಮಾಯೆಗೆ ॥ ೧೦ ॥
ಗಗನದೋಳ್ಸುಳಿವುತನಿಮಿಷನೋರ್ವನಿವನಮಾ । ಯೆಗೆಭಯಂಗೊಂಡುಕಡುವೇಗದಿಂಪೋಗಿವ । ಜ್ರಿಗೆಪೇಳಲವನಾಳ್ಗಳಂ
ಕಳುಪಿಕೇಳಿಸಿದೊಡೀತನಾಂಭೀಮಸುತನ ॥ ಮಗನಧ್ವರಕೆಹಯವನೊಯ್ದಪನೆನಲ್ಕವಂ । ಮಗುಳದಂಪೋಗಿಸುರಪತಿಗೆಬಿ

---

ದೊಳು-ಸ್ವರ್ಗ, ಮರ್ತ್ಯ, ಪಾತಾಳಂಗಳಲ್ಲಿಯೂ, ಪೊಸತು-ನವೀನವಾದ್ದು, ಎಂದು-ಎಂಬತೆರನಾಗಿ, ವರವಾಜಿಯಂ-ಉತ್ತಮಾಶ್ವವನ್ನು, ನೀಂಟಿಸುವ-ದೃಷ್ಟಿಸುತಿರುವ, ಭೀಮಸೇನನ-ವೃಕೋದರನ, ಪದಸರೋಜ-ಅಡಿದಾವರೆಯ, ಯುಗಕ್ಕೆ-ಎರಡಕ್ಕೆ, ಮೇಘನಾದಂ-ಮೇಘವರ್ಣನು, ಎರಗಿ-ನಮಸ್ಕಾರಮಾಡಿ, ನೀವು-ನೀವು, ಈಗ-ಈ ಸಂದರ್ಭದಲ್ಲಿ, ಎನ್ನ-ಮದೀಯವಾದ, ಅಧಟನು-ಶೌರ್ಯವನ್ನು, ನೋಳ್ಪುದು-ಪರೀಕ್ಷಿಸಬೇಕು, ವಾಜಿಯಂ-ಅಶ್ವವನ್ನು, ತಹೆನು-ಹಿಡಿದುಕೊಂಡು ಬರುವೆನು, ಎನುತ-ಎಂದು ನುಡಿಯುತ್ತ, ಅಲ್ಲಿಂ-ಆಸ್ಥಳದಿಂದ, ತಳರ್ದು-ಮುಂದೆ ನಡದು, ಆ ಜನಪನ-ಆ ಯೌವನಾಶ್ವನ, ಅಶ್ವರಕ್ಷೆಯ-ಹಯರಕ್ಷಣೆಗಾಗಿ ನೆರೆದಿರುವ, ಬಲಂ-ದಂಡು, ಕಂಗೆಡುವವೊಲ್-ಕಳೆಗುಂದುವಂತೆ, ಮಾಯಾಜಾಲಮುಂ-ಮಂಕುಬಲೆಯುನ್ನು, ನಭೋಮಂಡಲಕ್ಕೆ-ಗಗನಮಾರ್ಗಕ್ಕೆ ಬೀಸಿದಂ-ಚೆಲ್ಲಿದನು ॥ ೯ ॥

ಟೀ॥ ಎತ್ತಲು-ಎಲ್ಲೆಡೆಗಳಲ್ಲೂ, ಪ್ರಳಯಕಾಲದ-ವಿನಾಶಕಾಲದ, ಮೇಘಂ - ಮೋಡವು, ತುರುಗಿತು - ಮುಚ್ಚಿಕೊಂಡಿತು, ಎತ್ತೆತ್ತಲೂ-ಎಲ್ಲಾ ಸ್ಥಳಗಳಲ್ಲಿಯೂ, ಬರಿಯ-ಸಾಂದ್ರವಾದ, ಬರ-ಬರತಕ್ಕ, ಸಿಡಿಲ್ಗಳು-ಸಿಡಲುಗಳ ಗುಂಪು, ಎರಗುತಿವೆ-ಕೆಳಗೆ ಉರುಳುತ್ತಿರುವವು, ಎತ್ತೆತ್ತಲು-ನಾನಾಪ್ರದೇಶಗಳಲ್ಲಿಯೂ, ಬಿರುಗಾಳಿ-ಕಠಿಣವಾದ ವಾಯುವು, ಧೂಳ್ಗಳ-ರಜೋವಿಶೇಷವನ್ನು, ಕರೆವುತಿದೆ-ಎರಚುತಿದೆ. ಎತ್ತೆತ್ತಲು-ಅಶೇಷ ಸ್ಥಳದಲ್ಲಿಯೂ, ಕತ್ತಲೆಗಳು-ತಮೋರಾಶಿಗಳು, ಇಟ್ಟಿಸಿವೆ-ಕವಿದುಕೊಂಡಿವೆ, ಕಣ್ಣ-ನಯನಂಗಳನ್ನು, ತೆರೆಯೆ-ತೆಗಿಯಲು, ಬಾರದು-ಆಗುವುದಿಲ್ಲ, ಮರೆದು-ಮುಯ್ಮರೆತು, ಕಣ್ದೆರೆಯೆ-ನಯನಂಗಳನ್ನು ತೆಗೆದರೆ, ದಿಕ್ಕು-ದಿಕ್ಕುಗಳು, ಅರಿಯಬಾರದು-ಕಾಣುವುದಿಲ್ಲ, ಇದು ಮಹಾದ್ಭುತಂ-ಈ ಅತ್ಯಾಶ್ಚರ್ಯವು, ಎತ್ತಣದೊ-ಯಾವಸ್ಥಳದ್ದೊ, ಜಗದ-ಲೋಕಂಗಳ, ಎರೆಯನೆ-ಒಡೆಯನಾದ ಸ್ವಾಮಿಯೆ, ಬಲ್ಲನು-ಅರಿತಿರುವನು, ಎಂದು-ಎಂಬದಾಗಿ, ಆ ಸೈನಿಕಂ-ಆ ಸೇನಾಜನವು, ಹೈಡಿಂಬ-ಹಿಡಿಂಬಿಯ ಪುತ್ರನಾದ ಮೇಘವರ್ಣನಿಂದ, ಕೃತ=ಆಚರಿಸಲ್ಪಟ್ಟ, ಮಾಯೆಗೆ-ಮರಳುಬಿಜ್ಜೆಗೆ, ಎನುತ-ಮೇಲಿನಂತೆ ನುಡಿಯುತ್ತ, ಇರ್ದುದು-ಇತ್ತು ॥೧೦॥

ಟೀ॥ ಗಗನದೋಳ್-ಆಕಾಶದಲ್ಲಿ, ಸುಳಿವುತ-ತಿರುಗಾಡುತ್ತ, ಓರ್ವಂ - ಒಬ್ಬಾನೊಬ್ಬ, ಅನಿಮಿಷನು-ಸುರನು, ಇವನ-ಈ ಹೈಡಿಂಬಿಯ, ಮಾಯೆಗೆ-ಕೃತಕವಿದ್ಯೆಗೆ, ಭಯಗೊಂಡು-ದಿಗಿಲುಬಿದ್ದು, ಕಡು-ಹೆಚ್ಚಾದ, ವೇಗದಿಂ-ಜಾಗ್ರತೆಯಿಂದ, ಪೋಗಿ-ನಡೆದು, ವಜ್ರಿಗೆ-ಅಮರೇಂದ್ರನಿಗೆ, ಪೇಳಲು-ಅರುಹಲು, ಅವನು-ಆ ಸುರನಾಥನು, ಆಳ್ಗಳಂ-ದೂತರನ್ನು, ಕಳುಪಿ-ಅಟ್ಟಿ, ಕೇಳಿಸಿದೊಡೆ-ಪತ್ತೆಮಾಡಿದರೆ ಅಥವಾ ಹುಡುಕಿಸಿದರೆ, ಈತನು-ಇವನು, ಆ ಭೀಮಸುತ-ಆ ಭೀಮಸೇನನ ತನುಜನ, ಸುತ-ಪುತ್ರನಾದವನು, ಅಧ್ವರಕ್ಕೆ-ಯಾಗಕ್ಕಾಗಿ, ಹಯವನು-ಅಶ್ವವನ್ನು, ಒಯ್ದಪನು-ಸೆಳೆದುಕೊಂಡು ಹೋಗುತ್ತಿರುವನು, ಎನಲ್ಕೆ-ಎಂದರುಹಲು, ಅವಂ-ಆ ದೇವೇಂದ್ರನ ಆಳು, ಮಗುಳೆ-ಮತ್ತೆ, ಅದಂ-ಆ ನುಡಿಯನ್ನು, ಪೋಗಿ-ಹೋಗಿ, ಸುರಪತಿಗೆ-ಅಮರಾಧಿಪನಿಗೆ, ಬಿನ್ನೈಸೆ-ಬಿನ್ನಹಮಂಗೈಯ್ಯಲು, ಅವಂ-ಆ ಮಹಾರಾಜನಾದ ಇಂದ್ರನು, ನಸುನಗುತ್ತ-ಮು

---

ಲ್ಲಿಯೂ ಮಹಾಪ್ರಳಯದ ಮೇಘವು ಕವಿದು ಸಿಡಿಲು ಮಿಂಚು ಗುಡುಗುಗಳಿಂದಲೂ ಅಂಧಕಾರಾತಿಶಯದಿಂದಲೂ ಕೂಡಿ ಕಣ್ಣನ್ನು ತೆರೆಯಲು ಆಗದಂತೆಯೂ ಮರೆತು ಕಣ್ಣುಬಿಟ್ಟೊಡನೆಯೇ ಬಿರುಗಾಳಿಗಳಿಂದ ಉಂಟಾದ ಧೂಳು ತುಂಬಿಕೊಳ್ಳುವಂತೆಯೂ ಎಲ್ಲಿ ನೋಡಿದರೂ ದಿಕ್ಕುಗಳೇ ಕಾಣದಿರುವಂತೆಯೂ ಇರುವ, ಇಂಥಾ ಅತ್ಯದ್ಭುತಕೃತ್ಯವನ್ನು ಎಸಗಿದವರು ಯಾರೆಂಬುದು ಜಗನ್ನಾಯಕನಾದ ಸ್ವಾಮಿಗೇ ವೇದ್ಯವಲ್ಲದೆ ನಮ್ಮಿಂದ ಅರಿಯಲು ಅಸದಳವಾಗಿದೆಯೆಂದು ನುಡಿಯುತ್ತ ॥ ೧೦ ॥ ಈ ಮಹದದ್ಭುತವನ್ನು ನೋಡುತಿದ್ದ ಒಬ್ಬಾನೊಬ್ಬ ದೇವದೂತನು ಭಯಗ್ರಸ್ತನಾಗಿ ಇಂದ್ರನ ಬಳಿಗೆ ಹೋಗಿ ಅರುಪಲು ಆಗ ದೇವೇಂದ್ರನಿಂದ ಕಳುಹಲ್ಪಟ್ಟ ಅವನ ದೂತರು ಆಕಾಶಮಾರ್ಗಕ್ಕೆ ಬಂದು ಇದನ್ನೆಲ್ಲಾ ನೋಡಿಕೊಂಡು ಹೋಗಿ ಅಮರಾಧಿಪತಿಗೆ ವಿಜ್ಞಾಪನೆಯಂಮಾಡಲು ಆಗ ಶಚೀಪತಿಯು ಅನೇಕ ದೇವತೆಗಳಿಂದೊಡಗೂಡಿ ಭದ್ರಾವತೀನಗರ

ನ್ಕೈಸೆನಸು | ನಗುತವಂದೇವರ್ಕಳೊಡಗೂಡಿಬಂದನಲ್ಲಿಗೆಸಮರಮಂನೋಡಲು ॥ ೧೧ ॥ ಇತ್ತಲೀಕುದುರೆಗಾವಲಭಟರಕಣ್ಗೆ
ಬಲು | ಗತ್ತಲಿಗಳಂಘೂಳ್ಗಳಂತವಿಸಿಭೀತಿಯಂ ॥ ಬಿತ್ತಿನೆಲಕಿಳಿದುಪಡಿವಾಘೆಯಂಪಿಡಿದರಸುಮಕ್ಕಳಂಬೀಳಹೊಯ್ದು ॥
ತತ್ತುರಗಮಂಕೊಂಡುಚಿಗಿದನಾಗಸಕೆಸರ | ದತ್ತಣಿಂದಂಚೆಬೆಳ್ದಾವರೆಯನರ್ಥಿಯಿಂ | ಕಿತ್ತುನಭಕೇಳ್ವಂತೆಮೇಘನಾದಂ
ಭೀಮಕರ್ಣಜರ್ಬೆರಗಾಗಲು ॥ ೧೨ ॥ ರಾಹುತುಡುಕಿದಚಂದ್ರಮಂಡಲವೊಗರುಡನು | ತ್ಸಾಹದಿಂದೆತ್ತಿಕೊಂಡೊಯ್ವಮೃತ
ಕಲಶವೊಬ | ಲಾಹಕಂತಾಳ್ದಬೆಳ್ಮಿಂಚಿನೊಬ್ಬುಳಿಯೊಪೊಸತೆನೆಘಟೋತ್ಕಚತನಯನು ॥ ಬಾಹುಬಲದಿಂದೆಡದಕಕ್ಷದೊಳಿರುಂ
ಕಿದಮ | ಹಾಹಯಂಗಗನಮಾರ್ಗದೊಳೈದುತಿರೆಕುದುರೆ | ಗಾಹಿನಚತುರ್ಬಲಂಕಂಡುಬೊಬ್ಬಿರಿದಾರ್ದುಕಾಳಗಕೆಮುಂ
ಕೊಂಡುದು ॥ ೧೩ ॥ ಪೂಡಲೇಳಶ್ವಂಗಳಿನ್ನೊಂದುಕುದುರೆಯಂ | ಜೋಡಿಸುವೆನೆನ್ನತೇರ್ಗೆಂದೆನುತಹರಿಯಂ | ಗಾಢದಿಂ

---

ಗುಳ್ಳಗೆಯುಂತಾಳಿ, ದೇವರ್ಕಳ್-ಸುರರಿಂದ, ಒಡಗೂಡಿ-ಸೇರಿದವನಾಗಿ, ಸಮರಮಂ-ರಣವನ್ನು, ನೋಡಲು-ಈಕ್ಷಿಸಲು, ಅಲ್ಲಿಗೆ-ಆ ಭದ್ರಾವತೀನಗರದೆಡೆಗೆ, ಬಂದನು-ಐತಂದನು ॥೧೧॥

ಟೀ॥ ಇತ್ತಲು-ಈ ಎಡೆಯಲ್ಲಿ, ಕುದುರೆಗಾವಲರ-ಅಶ್ವರಕ್ಷಕರಾದ, ಭಟರ-ಯೋಧರ, ಕಣ್ಗೆ-ನಯನಂಗಳಿಗೆ, ಬಲು-ಅಧಿಕವಾದ, ಕತ್ತಲೆಗಳಂ-ಅಂಧಕಾರಗಳನ್ನೂ, ಧೂಳ್ಗಳಂ-ರಜೋವಿಶೇಷವನ್ನೂ, ಕವಿಸಿ-ವ್ಯಾಪಿಸುವಂತೆ ಮಾಡಿ, ಭೀತಿಯಂ-ಹೆದರಿಕೆಯನ್ನು, ಬಿತ್ತಿ-ಹರಡಿ, ನೆಲಕೆ-ಇಳೆಗೆ, ಇಳಿದು-ಬಂದು, ಪಡಿ-ಶೂರನಾಗಿ, ವಾಘೆಯಂ-ಅಶ್ವವನ್ನು, ಪಿಡಿದ-ಹಿಡಿದುಕೊಂಡಿರುವಂಥ, ಅರಸುಮಕ್ಕಳಂ-ರಾಜಕುವರರನ್ನು, ಬೀಳಹೊಯ್ದು-ಭೂಮಿಗೆ ಕೆಡವಿ, ತತ್-ಆ, ತುರಗಮಂ-ಅಶ್ವವನ್ನು, ಕೊಂಡು-ತೆಗೆದುಕೊಂಡು, ಸರದ-ಕಾಸಾರದ, ಅತ್ತಣಿಂ-ಎಡೆಯಿಂದ, ಅಂಚೆ-ಹಂಸಪಕ್ಷಿಯು, ಬೆಳ್ದಾವರೆಯನು-ಪುಂಡರೀಕವನ್ನು, ಅರ್ಥಿಯಿಂ-ಕುತೂಹಲದಿಂದ, ತಿತ್ತು-ತುಂಡುಮಾಡಿ, ನಭಕೆ-ಗಗನಕ್ಕೆ, ಏಳ್ವಂತೆ-ಏರುವಹಾಗೆ, ಮೇಘನಾದಂ-ಹೈಡಿಂಬಿಯು, ಭೀಮಕರ್ಣಜರು-ವಾಯುನಂದನ ಕರ್ಣನಂದನರು, ಬೆರಗಾಗಲು-ಆಶ್ಚರಿಯನ್ನೈದುತ್ತಿರಲು, ಆಗಸಕೆ-ಅಂತರಿಕ್ಷಕ್ಕೆ, ಚಿಗಿದನು-ಹಾರಿದನು ॥೧೨॥

ಟೀ॥ ರಾಹು-ರಾಹುವೆಂಬುವವನು, ತುಡುಕಿದ-ಹಿಡಿದುಕೊಂಡ, ಚಂದ್ರಮಂಡಲವೋ-ಇಂದುಬಿಂಬವೊ, ಗರುಡನು-ಗರುತ್ಮಂತನು, ಉತ್ಸಾಹದಿಂದ-ಶೌರ್ಯಾತಿಶಯದಿಂದ, ಎತ್ತಿಕೊಂಡು-ತೆಗೆದುಕೊಂಡು, ಒಯ್ವ-ಹೋಗುವ, ಅಮೃತಕಲಶವೊ-ಸುಧಾಪೂರ್ಣವಾದ ಶಾತಕುಂಭಕುಂಭವೊ, ಬಲಾಹಕಂ-ಮೋಡಗಳ ರಾಶಿಯು, ತಾಳ್ದ-ಹೊಂದಿರತಕ್ಕ, ಬೆಳ್ಮಿಂಚಿನ-ಶ್ವೇತವಾದ ವಿದ್ಯುತ್ತಿನ, ಒಬ್ಬುಳಿಯೊ-ರಾಶಿಯೊ, ಪೊಸದು-ನವೀನವಾದ್ದು, ಎನೆ-ಎಂದು ನುಡಿಯಲು, ಘಟೋತ್ಕಚತನುಜನು-ಘಟೋತ್ಕಚನ ಪುತ್ರನಾದ ಮೇಘವರ್ಣನು, ಬಾಹು-ಭುಜಗಳ, ಕಕ್ಷದೋಳ್-ತೋಳುಗಳ ಸಂದುಗಳಲ್ಲಿ, ಇರುಂಕಿದ-ಬಚ್ಚಿಟ್ಟುಕೊಂಡಿರುವಂಥ, ಮಹಾಹಯಂ-ಶ್ರೇಷ್ಠವಾದ ಕುದುರೆಯು, ಗಗನಮಾರ್ಗದೊಳು-ಆಕಾಶದ ಮಾರ್ಗದಲ್ಲಿ, ಐದುತಿರೆ-ನಡೆಯುತ್ತಿರಲು, ಕುದುರೆಗಾಹಿನ-ಅಶ್ವರಕ್ಷಕರ, ಚತುರ್ಬಲಂ-ನಾಲ್ಕು ತೆರನಾದ ದಂಡು, ಕಂಡು-ಈಕ್ಷಿಸಿ, ಬೊಬ್ಬಿರದು-ಭೋರ್ಗರೆದು, ಆರ್ದು-ಸಿಂಹನಾದವಂ ಮಾಡುತ್ತ, ಕಾಳಗಕೆ-ರಣಕ್ಕೆ, ಮುಂಕೊಂಡುದು-ಅನುವಾಯಿತು ॥೧೩॥

ಟೀ॥ ಏಳಶ್ವಂಗಳಂ-ಸಪ್ತಾಶ್ವಗಳನ್ನು, ಪೂಡಲು-ತೇರಿಗೆ ಹೂಡಲು, ಇನ್ನೊಂದು-ಬೇರೆವೊಂದು, ಕುದುರೆಯಂ-ಹಯವನ್ನು, ಎನ್ನ-ನನ್ನ, ತೇರ್ಗೆ-ಗಾಡಿಗೆ (ರಥಕ್ಕೆ), ಜೋಡಿಸುವೆನು-ಸೇರಿಸುತ್ತೇನೆ, ಎಂದು-ಎಂಬದಾಗಿ, ಎನುತ-ನುಡಿಯುತ್ತ, ಹರಿಯಂ-ಕುದುರೆಯನ್ನು, ಸಗಾಢದಿಂ-ಜಾಗ್ರತೆಯಾಗಿ, ಬಾನ್ಗೆ-ಅಂತರಿಕ್ಷಕ್ಕೆ, ಅಬ್ಜಸಖಂ-ರವಿಯು, ಎತ್ತಿಕೊಂಡು-

---

ದೆಡೆಗೆ ಬಂದು ಈ ಯುದ್ಧವನ್ನು ನೋಡಲೆಳಸಿದ ದೇವತೆಗಳು ವ್ಯೋಮಮಂಡಲದಲ್ಲಿ ನಿಂತು ಜಯಾಪಜಯಗಳನ್ನು ಪರೀಕ್ಷಿಸುತಿದ್ದರು. ॥ ೧೧ ॥ ಹೀಗಿರುವಲ್ಲಿ ಮೇಘವರ್ಣನು ಯೌವನಾಶ್ವನ ಸೇನಾಂಗಣದಲ್ಲಿ ಮಾಯಾಜಾಲದಿಂದ ಹೆಚ್ಚಾದ ಕತ್ತಲನ್ನೂ ಧೂಳನ್ನೂ ಉಂಟುಮಾಡಿ ನೆಲಕ್ಕೆ ಇಳಿದುಬಂದು ಅಶ್ವರಕ್ಷಣೆಗಾಗಿ ಅದರ ಹತ್ತಿರದಲ್ಲಿ ನೆರೆದಿರುವವರನ್ನೆಲ್ಲಾ ಬೀಳಕೆಡವಿ ಹಂಸಪಕ್ಷಿಯು ಸರೋವರದಲ್ಲಿ ಇರುವ ಪುಂಡರೀಕವನ್ನು ತುಂಡುಮಾಡಿ ಆಕಾಶಮಾರ್ಗಕ್ಕೆ ತೆಗೆದುಕೊಂಡು ಹೋಗುವಂತೆ ಯಾಗಾರ್ಹವಾದ ಅಶ್ವವನ್ನು ಹಿಡಿದುಕೊಂಡು ಆಕಾಶಮಾರ್ಗಕ್ಕೆ ಹಾರಿ ಭೀಮಕರ್ಣಾನುಜರನ್ನೂ ಕೂಡ ಬೆರಗುಮಾಡುತಿದ್ದನು ॥೧೨॥ ಆಗ ಯೌವನಾಶ್ವನ ಸೈನ್ಯವು ರಾಹುಗ್ರಸ್ತೇಂದು ಮಂಡಲದಂತೆಯೂ, ಗರುಡನು ತೆಗದುಕ್ಕೊಂಡು ಹೋಗುತ್ತಿರುವ ಅಮೃತಕಲಶದಂತೆಯೂ, ಮುಗಿಲ್ಗಳಿಂದ ಹೊರಹೊರಡುತ್ತಿರುವ ಬೆಳ್ಮಿಂಚೆಂಬಂತೆಯೂ ಹೊಳೆಯುತ್ತಿರುವ ಮೇಘನಾದನ ಕಂಕುಳಲ್ಲಿ ಸಿಕ್ಕಿರುವ ಕುದುರೆಯನ್ನು ನೋಡಿ ಸಿಂಹನಾದವಂ ಮಾಡುತ್ತ ಯೌವನಾಶ್ವನ ಸೈನ್ಯವು ಯುದ್ಧಕ್ಕೆ ಅನುವಾಯಿತು ॥ ೧೩ ॥ ಸೂರ್ಯನು ತನ್ನ ರಥಕ್ಕೆ ಕಟ್ಟಿರತಕ್ಕ ಏಳು ಕುದುರೆಗಳ ಜೊತೆಗೆ ಇದನ್ನೂ ಕಟ್ಟುವುದ

ಬಾನ್ಗೆತ್ತಿ ಕೊಂಡೊಯ್ಯದಿರನಬ್ಜಸಖನೆಂಬಶಂಕೆಯಿಂದ ‖ ರೂಢಿಸಿದವಂದಿಗಳ್ನೆರದುಬಂದೆಣ್ದೆಸೆಗೆ । ಮಾಡಿದರೊಮುತ್ತಿಗೆ ಯನೆನೆಮೇಘನಾದನವಿ । ಭಾಡಿಸಿಚತುರ್ಬಲಂಕವಿಯೆಲ್ಕಿಸದವಂಸ್ವೈರಿದನಾಗಸದೊಳು ‖ ೧೪ ‖ ಬಳಿಕಾಬಲಂಕಂಡು ದಭ್ರಮಾರ್ಗದೊಳೆಮುಂ । ದಳೆವುತಿಹಮೇಘನಾದನನೆಲವೊಬರಿಮಾಯೆ । ಗಳನೆಸಗಿಮೋಸದೊಳ್ತುರಂಗಮಂಕೊಂಡುಬಾಂ ದಳಕಡರ್ದೊಡೆನಿನ್ನನು ‖ ಉಳುಹುವರೆಯೌವನಾಶ್ವನಸುಭಟರಕಟನಿ । ನ್ನಳವನರಿಯದೆಬಂದುಕೆಣಕಿದೆಯಲಾಜೀವ । ದುಳಿವನಾರೈದುಕೊಳ್ಳೆನುತಾತನಂಮುತ್ತಿಕೊಂಡುಕವಿದೆಸುತಿರ್ದರು ‖ ೧೫ ‖ ಪಿಂತಿರುಗಿನೋಡಿದಂಕಂಡನಲ್ಲವೆಜೀವ । ಮಂ ತೆಗೆದುಕೊಂಡೊಯ್ವಕಾಲನಂಪೆಣನಟ್ಟು । ವಂತಾಯ್ತಲಾನಿಂಮಸಾಹಸಂಜಾಗುಜಾಗೆನುತಹೈಡಿಂಬಿನಗುತ ‖ ಸಂತತಂಕರೆವ

---

ಕರೆದುಕೊಂಡು, ಒಯ್ಯದೆ–ಹೋಗದೆ, ಇರನು–ಬಿಡುವುದಿಲ್ಲವು, ಎಂಬ–ಅನ್ನುವ, ಶಂಕೆಯಿಂ–ಸಂದೇಹದಿಂದ, ರೂಢಿಸಿದ–ಹೆಸರುವಾಸಿಯಾದ, ವಂದಿ–ಜನರು, ನೆರೆದುಬಂದು–ಒಟ್ಟುಗೂಡಿಬಂದು, ಎಣ್ದೆಸೆಗೆ–ಎಂಟು ದಿಕ್ಕುಗಳಿಗೂ, ಮುತ್ತಿಗೆಯನು–ಆಕ್ರಮಿಸುವಿಕೆಯನ್ನು, ಮಾಡಿದರೊ–ಗೈದರೊ, ಎನೆ–ಎಂಬಂತೆ, ಚತುರ್ಬಲಂ–ನಾಲ್ಕು ಬಗೆಯಾದ ಸೇನೆಯು, ಕವಿಯೆ–ಮುಸುಕಲು, ಆವಂ–ಆ ಮೇಘನಾದನು, ಲೆಕ್ಕಿಸದೆ–ಲಕ್ಷ್ಯಕ್ಕೆತಾರದೆ, ಆಗಸದೊಳು–ಅಂತರಿಕ್ಷದಲ್ಲಿ, ಸ್ವೈರಿದನು–ಮುಂದುವರಿಯುತಿದ್ದನು‖೧೪

ಟೀ‖ ಬಳಿಕ–ಮೇಘವರ್ಣನು ಅಶ್ವವನ್ನು ಅಂತರಿಕ್ಷಮಾರ್ಗಕ್ಕೆ ಒಯ್ದಮೇಲೆ, ಆಬಲಂ–ಆ ದಂಡು, ಅಭ್ರಮಾರ್ಗದೊಳು–ಅಂತರಿಕ್ಷಪ್ರದೇಶವಲ್ಲಿ, ಮುಂದಳೆವುತ–ಅಶ್ವದಿಂದೊಡಗೂಡಿ ನಡೆಯುತ್ತ, ಇಹ–ಇರತಕ್ಕ, ಮೇಘನಾದ–ಮೇಘವರ್ಣನನ್ನು, ಕಂಡು–ಈಕ್ಷಿಸಿ, ಎಲವೊ–ಅಯ್ಯ, ಬರಿ–ವ್ಯರ್ಥವಾದ, ಮಾಯೆಗಳನು–ಕಪಟಕೃತ್ಯವನ್ನು, ಎಸಗಿ–ನೆರವೇರಿಸಿ, ಮೋಸದೊಳು–ಕೃತ್ರಿಮದಿಂದ, ತುರಂಗಮಂ–ಅಶ್ವವನ್ನು, ಬಾಂದಳಕೆ–ಅಂತರಿಕ್ಷಕ್ಕೆ, ಕೊಂಡು–ಸೆಳೆದೊಯ್ದು, ಅಡರ್ದೊಡೆ–ಸೇರಿಕೊಂಡರೆ, ಯೌವನಾಶ್ವ–ಯೌವನಾಶ್ವಭೂಪಾಲನ, ಸುಭಟರು–ಯೋಧರು, ನಿನ್ನನು–ನಿನ್ನನ್ನು, ಉಳುಹುವರೆ–ಜೀವದೊಡನೆ ಬಿಟ್ಟಾರೆ?, ಅಕಟ–ಅಯ್ಯೊ, ನಿನ್ನಳವ–ನಿನ್ನ ಶೌರ್ಯವನ್ನೆ ನೀನು, ಅರಿಯದೆ–ಗೊತ್ತುಮಾಡಿಕೊಳ್ಳದೆ, ಬಂದು–ಐತಂದು, ಕೆಣಕಿದೆಯಲಾ–ಕೀಟಲೆಮಾಡಿದೆಯಲ್ಲವೆ?, ಜೀವದ–ಅಸುವಿನ, ಉಳಿವ–ಇರುವಿಕೆಯನ್ನು, ಆರೈದುಕೊಳ್ಳು–ಸ್ಥಿರಪಡಿಸಿಕೊ, ಎನುತ–ಎಂದು ನುಡಿಯುತ್ತ, ಆತನಂ–ಅವನನ್ನು, ಮುತ್ತಿಕೊಂಡು–ವ್ಯಾಪಿಸಿಕೊಂಡು, ಕವಿದು–ಸುತ್ತುಕಟ್ಟಿ, ಎಸುತಿರ್ದರು–ಸರಳುಮಳೆಯಂ ಕರೆಯುತ್ತಿದ್ದರು ‖ ೧೫ ‖

ಟೀ‖ ಪಿಂತಿರುಗಿ–ಹಿಂದಿರುಗಿ ನೋಡಿ, ಇದಂ–ಈ ಅಶ್ವರಕ್ಷಕ ಸೇನೆಯನ್ನು ಕಂಡನು– ಈಕ್ಷಿಸಿದನು, ಅಲ್ಲವೆ–ಆಗಲಿಲ್ಲವೆ, ಜೀವಮಂ–ಹರಣವನ್ನು, ಕೊಂಡೊಯ್ದು – ಸೆಳೆದು ಕೊಂಡು ನಡೆಯುವ, ಕಾಲನಂ – ಯಮಧರ್ಮರಾಯನನ್ನು, ಪೆಣನು–ಶವವು, ಅಟ್ಟನಂತೆ – ಅಟ್ಟುತ ಹೋಗುವ ಹಾಗೆ, ಆಯ್ತಲಾ – ಆಯಿತಲ್ಲವೆ ?, ನಿಮ್ಮ – ನಿಮ್ಮಗಳ, ಸಾಹಸಂ–ಪರಾಕ್ರಮವು, ಜಾಗುಜಾಗು– ಬಹು ಹುಷಾರಾದದ್ದು, ಎನುತೆ–ಎಂದು ನುಡಿಯುತ್ತ ಹೈಡಿಂಬಿ – ಹಿಡಿಂಬಿಯ ಸೂನುವು, ನಗುತ–ಹಾಸ್ಯಮಂಗೈಯ್ಯುತ್ತ, ಸಂತತಂ–ಅನವರತವೂ, ಕರೆವ–ಎರಚುತ್ತಲಿರುವ, ಕಲ್ಮಳಗಳಂ–ಶಿಲಾವರ್ಷವನ್ನು, ಸೃಜಿಸಿ–ಹುಟ್ಟಿಸಿ, ಬಲಮಂ–ದಂಡನ್ನೆಲ್ಲಾ, ತವೆ–ಚೆನ್ನಾಗಿ, ಪೊರಳ್ಚಿ–ನೆಲಕ್ಕೆ ಕೆಡವಿ, ಮುಂದಳೆಯಲು–ಮುಂದೆಮುಂದೆ ನಡೆದುಬರುವ ವೇಳಯಲ್ಲಿ, ಅಪುಯ್ಯಲು–ಆ ಹಾವಳಿಯು, ಊರ–ಭದ್ರಾವತೀನಗರವನ್ನು, ತಾಗೆ–ಮುಟ್ಟಲು, ಆನೃಪನ–ಆ ಭದ್ರಾ

---

ಕ್ಕಾಗಿ ಕೊಂಡುಹೋಗುತ್ತಲಿರುವನೊ ಎಂಬ ಭ್ರಾಂತಿಯನ್ನುಂಟುಮಾಡಿ ಆಕಾಶಮಾರ್ಗದಲ್ಲಿ ಕುದುರೆಯನ್ನು ಸೆಳೆದೊಯ್ಯುತಿರುವ ಮೇಘನಾದನನ್ನು ಅಷ್ಟದಿಕ್ಕುಗಳಲ್ಲಿಯೂ ಯೌವನಾಶ್ವನ ಸೈನ್ಯವು ಮುತ್ತಿಕೊಂಡರೂ ಕೂಡ ಮೇಘವರ್ಣನು ಅದನ್ನು ಲಕ್ಷ್ಯವೇ ಮಾಡದೆ ಗಗನಮಂಡಲವನ್ನು ಸೇರಿಬಿಟ್ಟನು ‖ ೧೪ ‖ ಈ ರೀತಿಯಲ್ಲಿ ಮುಂದರಿದು ಹೋಗುತಿರುವ ಮೇಘನಾದನನ್ನು ಭದ್ರಗಿರಿರಾಜನ ಸೇನಾನಾಯಕರು ಕಂಡುಕೊಂಡು ಆಕಾಶಮಾರ್ಗದಲ್ಲಿರುವ ಮೇಘನಾದನನ್ನು ಕುರಿತು ಏನಯ್ಯ ಇಂಥ ಕಪಟಕೃತ್ಯವನ್ನೆಸಗಿ ಅಶ್ವವನ್ನು ಕೊಂಡೊಯ್ದ ಮಾತ್ರವೇ ನೀನು ಗೆದ್ದೆ, ಎಂದು ತಿಳಿದಿರುವೆಯಾ ? ನಿನ್ನ ಶಕ್ತಿಯೇ ನಿನಿಗೆ ಗೊತ್ತಿಲ್ಲದೆ ಈ ರೀತಿ ಯೌವನಾಶ್ವನ ಸೈನಿಕರಾದ ನಮ್ಮೊಂದಿಗೆ ಕಾದಲುಜ್ಜುಗಿಸಿ ಏತಕ್ಕೆ ಪ್ರಾಣವನ್ನು ಕಳೆಕೊಳ್ಳಲಿಚ್ಛಿಸುವೆ ? ಎಂದು ನುಡಿಯುತ್ತ ಅವನ ಸುತ್ತಲೂ ಮುತ್ತಿಕೊಂಡಿರುವುದನ್ನು ‖೧೫‖ ಮೇಘನಾದನು ನೋಡಿ ಅವರನ್ನು ಕುರಿತು ಓಹೋ ! ನಿಮ್ಮ ಶೌರ್ಯವು ಪ್ರಾಣಾಪಹರಣಮಂ ಮಾಡಿಕೊಂಡು ಹೋಗುತಿರುವ ಯಮನೊಂದಿಗೆ ಮಾಡಿದ ಹೆಣದ ಶೌರ್ಯದಂತೆ ಆಯಿತೆಂದು ನುಡಿಯುತ್ತಲೂ ಅವರನ್ನೆಲ್ಲಾ ನೋಡಿ ಹಾಸ್ಯಮಾಡಿ ನಗುತ್ತಲೂ ಶಿಲಾವರ್ಷಗಳಿಂದ ಅವರನ್ನು ಹಿಂಸೆ ಪಡಿಸುತ್ತಲೂ ಮುಂದೆ ಮುಂದೆ ಹೋಗುತಿದ್ದನು. ಈ ಸುದ್ದಿಯು ಭದ್ರಾವತೀನಗರದಲ್ಲಿದ್ದ ಯೌವನಾಶ್ವನಿಗೆ ತಿಳಿಯಲು ಆತನು ಒಂದು ಅಕ್ಷೋಹಿಣಿ ಸೈನ್ಯವನ್ನು ಕೂಡಲೆ ಯು

ರಂತಾಗೆಪೊರಮಟ್ಟುದಾನೃಪನಸೈನ್ಯಮಕ್ಷೋಹಿ
ಕಲ್ಮಳಿಗೆಳಂಸೃಜಿಸಿಬಲ | ಮಂತವೆಪೊರಳ್ಚಿ ಮುಂದಳೆಯಲಾಪ್ರಯ್ಯಲೂ | ವಿನ್ನಭಸ್ಥಳಕೊಯ್ದನೆಂಬಕಡುಗೋಪದಿಂ |
ಣಿಯುಗಣನೆಯಿಂದ ‖ ೧೬ ‖ ತನ್ನೊಳಿರ್ದಮಲಹಯರತ್ನಮುಂಬಂದುಕಳ | ಯಂನೆ
ಬೆನ್ನಬಿಡದೆದ್ದುದೋಗಗನಕೀಧರಣಿಯೆನಲಾಘಟೋತ್ಕಚತನುಜನು ‖ ಮುನ್ನಮಾಡಿದರಜದಮಾಯೆಗಿಮ್ಮಡಿಸಿಪ್ರತಿ | ಪಟಹನಿ
ಗಳ್ಚಿದರೊವೈರಿಗಳೆನೆರಣೋತ್ಸಾಹ | ದಿಂನಡೆವಚಾತುರಂಗದಪದಹತಕ್ಕೆಳ್ವಧೂಳ್ಮಸಗಿತಂಬರದೊಳು ‖ ೧೭ ‖ ಚಟುಲವಾಜಿಗಳಖುರಪುಟದರಭಸಂಹರಿಸು
ಸ್ಸಾಣತಮ್ಮಟಭೇರಿಗಳಸಮು | ತ್ಕಟನಾದಮುಗ್ರಗಜಘಟೆಯಘಂಟಾರವಂ | ಭಟರಚಾಪಸ್ವನಂಪಟುತರದಬೊಬ್ಬೆಯಾ |
ತಿಹರಥದಚಕ್ರಧ್ವನಿ ‖ ಲಟಕಟಿಪಸಮರಲಂಪಟರಭುಜಹೊಯ್ಲುಬಲು |
ರ್ಭಟಗಳೊಂದಾಗಿಸಂಘಟಿಸಿತೀಬ್ರಹ್ಮಾಂಡಘಟಮಿಂದೊಡೆಯದಿರದೆನೆ ‖ ೧೮ ‖ ಎತ್ತಿಬಹಸತ್ತಿಗೆಯಮೊತ್ತಂಗಳೆತ್ತಲುಂ |

---

ವತೀರಾಜನ, ಸೈನ್ಯಂ-ಬಲವು, ಅಕ್ಷೋಹಿಣಿಯು-ಅಕ್ಷೋಹಿಣಿ ಎನ್ನುವ, ಗಣನೆಯಿಂದ-ಸಂಖ್ಯೆಯಿಂದಕೂಡಿ, ಪೊರಮಟ್ಟುದು-ಯುದ್ಧಕ್ಕೆ ನಡೆಯಿತು ‖ ೧೬ ‖

ಟೀ‖ ತನ್ನೊಳುಂ-ತನ್ನ ಬಳಿಯಲ್ಲಿ, ಇರ್ದ-ಇಟ್ಟುಕೊಂಡಿದ್ದ, ಅಮಲ-ಪರಿಶುದ್ಧವಾದ, ಹಯರತ್ನಮಂ-ಉತ್ತಮಾಶ್ವವನ್ನು, ಬಂದು-ಐತಂದು, ಕಳವಿನಿಂ-ಚೌರ್ಯದಿಂದ, ನಭಸ್ಥಳಕೆ-ಗಗನದೆಡೆಗೆ, ಒಯ್ದನು-ಕೊಂಡು ನಡೆದನು, ಎಂಬ-ಎನ್ನುವ, ಕಡು-ಅತ್ಯಂತ, ಕೋಪದಿಂ-ಕ್ರೋಧದಿಂದ, ಬೆನ್ನಬಿಡದೆ-ಹಿಂಬಾಲಿಸದೆ, ಗಗನಕೆ-ಆಗಸಕ್ಕೆ, ಧರಣಿ-ಇಳಾಮಂಡಲವು, ಎದ್ದುದೋ-ಮೇಲಕ್ಕೆ ನಡೆಯಿತೊ!, ಎನಲು-ಎಂಬಂತೆ, ಘಟೋತ್ಕಚತನುಜನು-ಭೀಮನ ಮಗನಾದ ಘಟೋತ್ಕಚನ ಪುತ್ರನು, ಮುನ್ನ-ಪೂರ್ವಕಾಲದಲ್ಲಿ, ಮಾಡಿದ-ರಚಿಸಿದ, ರಜದ-ರಜಸ್ಸಿನ, ಮಾಯೆಗೆ-ಕೃತಕಕ್ಕೆ, ಇಮ್ಮಡಿಸಿ-ಎರಡು ಪಾಲು ಅಧಿಕವಾಗಿ, ವೈರಿಗಳು-ಹಗೆಗಳು, ಪ್ರತಿಯಂ-ಬದಲಾಗಿ, ನೆಗಳ್ಚಿದರೊ-ನಡಿಸಿರುವರೊ, ಎನೆ-ಎಂಬಂತೆ, ರಣ-ಆಜಿಯ, ಉತ್ಸಾಹದಿಂ-ಸಂತೋಷದ ಹುಮ್ಮಸ್ಸಿನಿಂದ, ನಡೆವ-ನಡೆದು ಬರುತ್ತಿರುವ, ಚತುರಂಗ-ನಾಲ್ಕು ತೆರನಾದ ಸೇನೆಯ, ಪದ-ಅಡಿಗಳ, ಹತಕ್ಕೆ-ಘಾತಕ್ಕೆ (ತಾಡನೆಗೆ), ಏಳ್ವ-ಮೇಲ್ಗಡೆಗೆ ಬರುವ, ಧೂಳು-ರಜೋ ವಿಶೇಷವು, ಅಂಬರದೊಳು-ಗಗನಾಂಗಣದಲ್ಲಿ, ಮಸಗಿತು-ಕವಿಯಿತು ‖ ೧೭ ‖

ಟೀ‖ ಪಟಹ-ನಗಾರಿ ಎಂಬ ವಾದ್ಯವಿಶೇಷವು, ನಿಸ್ಸಾಣ - ಸಮರಕಾರ್ಯಗಳನ್ನು ತಿಳಿಸುವ ವಾದ್ಯವಿಶೇಷವು, ತಮ್ಮಟ-ತಬಟೆಯು, ಭೇರಿ-ಭೇರಿ ಎನ್ನುವ ವಾದ್ಯದ, ಸಮುತ್ಕಟ-ಹೆಚ್ಚಾದ, ನಾದಂ-ಶಬ್ದವು, ಉಗ್ರ-ಕ್ರೋಧಾವಿಷ್ಟವಾದ, ಗಜಘಟೆಯ-ಹಸ್ತಿಸಂಚಯದ, ಘಂಟಾರವಂ-ಘಂಟಾನಾದವು, ಚಟುಲ-ವೇಗವುಳ್ಳ, ವಾಜಿಗಳ-ಅಶ್ವಗಳ, ಖುರಪುಟದ-ಗೊರಸುಗಳ ಬುಡದ, ರಭಸಂ-ಧ್ವನಿಯು, ಹರಿಸುತ-ಮುಂದಕ್ಕೆ ನಡಿಸುತ್ತ, ಇಹ-ಇರತಕ್ಕ, ರಥದ-ಗಾಡಿಯ, ಚಕ್ರ-ಪಾರುಂಬಳಗಳ, ಧ್ವನಿ-ಕಿರ್ರೆಂಬ ಶಬ್ದವು, ಲಟಕಟಿಪ-ಪಿಸುನುಡಿಗಳನ್ನಾಡುವ, ಸಮರ-ರಣದಲ್ಲಿ, ಲಂಪಟರ-ಆಶೆಯುಳ್ಳ ವೀರರ, ಭುಜಹೊಯ್ಲು-ಭುಜಗಳನ್ನು ತಾಡಿಸಿಕೊಳ್ಳುವುದು, ಬಹು-ಅನೇಕರಾದ, ಭಟರ-ವೀರರ, ಚಾಪಸ್ವನಂ-ಚಾಪಧ್ವನಿಯು, (ಸಿಂಜಾರವವು), ಪಟುತರದ-ಬಹುಶೌರ್ಯಸೂಚಕವಾದ, ಬೊಬ್ಬೆಯ-ಸಿಂಹನಾದದ, ಆರ್ಭಟಗಳು - ಕೂಗುಗಳು, ಒಂದಾಗಿ-ಒಂದುಗೂಡಿ, ಬ್ರಹ್ಮಾಂಡಘಟಂ-ಬ್ರಹ್ಮಾಂಡಮಂಡಲವೆಂಬ ಗಡಿಗೆಯು, ಇಂದು-ಈ ಹೊತ್ತು, ಒಡೆಯದೆ-ನುಚ್ಚುನುಚ್ಚಾಗದೆ, ಇರದು-ಇರುವುದಿಲ್ಲವು, ಎನೆ-ಎನ್ನುವಹಾಗೆ, ಸಂಘಟಿಸಿತು-ಒಂದುಗಲೆಯಿತು ‖ ೧೮ ‖

ಟೀ‖ ಎತ್ತಿ-ಮೇಲ್ಗಡೆಗೆ ಹಿಡಿದು, ಬಹ-ಐತರ್ಪ, ಸತ್ತಿಗೆಯ-ಆತಪತ್ರಂಗಳ, ಮೊತ್ತಂಗಳು - ಸಮೂಹವು, ಎತ್ತಲು-ನಾನಾಕಡೆಯೂ, ಕತ್ತಲಿಸೆ-ತಮೋರಾಶಿಯಂ ಬೀರಲು, ಪೊತ್ತ-ಧರಿಸಲ್ಪಟ್ಟ, ಮಸೆವೆತ್ತ-ಸಾಣೆಗೆ ಕೊಟ್ಟ, ಬಲ್ಗತ್ತಿಗಳ-ಅನೇಕ ಕತ್ತಿಗಳನ್ನು, ಕಿತ್ತು-ಚೀಲದಿಂದ ಹೊರಕ್ಕೆ ಸೆಳೆದು, ಭಟರು-ಪದಾತಿಗಳು, ಜಡಿವುತ್ತೆ-ತಿರುಗಿಸುತ್ತ, ಇರಲ್-

---

ದ್ಧಕ್ಕೆ ಸಿದ್ಧಪಡಿಸಿ ಹೊರಡಿಸಿದನು ‖ ೧೬ ‖ ಭೂಮಿಯಲ್ಲಿದ್ದ ಅಶ್ವವೆಂಬ ರತ್ನವನ್ನು ಕದ್ದುಕೊಂಡು ಹೋಗುತಿರುವ ಮೇಘನಾದನನ್ನು ಹಿಂದಟ್ಟಿ ಹೋಗುವ ಧರಾಮಂಡಲವೆಂದೂ, ಮೊದಲು ರಜೋಮಾಯೆಯನ್ನು ಕಲ್ಪಿಸಿದ್ದಕ್ಕೆ ಪ್ರತೀಕಾರವನ್ನು ಮಾಡಲುದ್ಯುಕ್ತರಾದ ಯೌವನಾಶ್ವನ ಭಟರು ಇಮ್ಮಡಿಯಾಗಿ ಈಗ ರಜೋವಿಶೇಷವನ್ನುಂಟುಮಾಡಿರುವಂತೆಯೂ, ತೋರುತಿರುಸ ಭದ್ರಾವತೀರಾಜನ ಅಕ್ಷೋಹಿಣೀ ಸೈನ್ಯದ ಪಾದಘಾತದಿಂದೊಗೆದ ಧೂಳು ನಭೋಮಂಡಲವನ್ನು ವ್ಯಾಪಿಸಿತು ‖೧೭‖ ಮತ್ತು ಭೇರೀಪಟಹಾದಿ ವಾದ್ಯಧ್ವನಿಗಳೂ, ಹಸ್ತಿಗಳ ಘಂಟಾರವವೂ, ಕುದುರೆಗಳ ಖುರಪುಟದ ಪಟಪಟಧ್ವನಿಯೂ, ರಥಚಕ್ರಸ್ವನಂಗಳೂ, ಯೋಧರ ಸಿಂಹನಾದವೂ, ಬಿಲ್ಲುಗಳ ಸಿಂಜಾರವೂ. ಏಕೀಭವಿಸಿ ಬ್ರಹ್ಮಾಂಡಮಂಡಲವೆಂಬ ಗಡಿಗೆಯನ್ನು ಒಡೆದು ಪುಡಿಪುಡಿಮಾಡುವುದೆಂಬ ತೆರದಿಂದ ರಣಾಂಗಣವು ಪ್ರಕಾಶಿಸುತಿತ್ತು ‖ ೧೮ ‖ ಆಗ ಯೌವನಾಶ್ವನ

ಕತ್ತಲಿಸೆಪೊತ್ತ ನುಸೆವೆತ್ತಬಲ್ಗತ್ತಿಗಳ | ಕಿತ್ತು ಭಟರೆತ್ತಿ ಜಡಿವುತ್ತಿರಲ್ಕತ್ತ ಬೆಳಗಿತ್ತವವುಮತ್ತೆ ಬಲಕೆ || ಸುತ್ತಲುಂಕೆತ್ತವೋಲ್ಮತ್ತಗಜವೊತ್ತರಿಸಿ | ಮುತ್ತಿನಡೆವುತ್ತೆಲರವೊತ್ತಿಸಿಲಿಸುತ್ತಿರಲು | ದತ್ತಚಮರೋತ್ಥಿತಮರುತ್ತತಿಯೊಳುತ್ತಮಹಿಮೋತ್ತರಂಬಿತ್ತರಿಸಿತು ||೧೯|| ತಡೆಯೊಳಿರ್ದಖಿಳಮೇಘಂಗಳಂಪ್ರಳಯದೋಳ್ | ಬಿಡಲುಘುಡಿಘುಡಿಸುತ್ತನಡೆವಂದದಿಂದಬೊಬ್ಬಿಡುತವಧಿಯಿಲ್ಲದೈತರುತಿರ್ಪಯೌವನಾಶ್ವನಸೈನ್ಯಮಂನೋಡುತ || ಎಡಗೈಯತುರಂಗಮುಂಪಿಡಿದಳವಡಿಸಿತನ್ನ | ಖಡುಗಮಂಜಡಿದನಿಬರೆಲ್ಲರಂಚಿತ್ತದೋಳ್ | ಗಡಣಿಸದೆಕಲಿಘಟೋತ್ಕಚಸುತಂನಸುನಗುತಗಗನದೋಳ್ಬರುತಿರ್ದನು || ೨೦ || ಡಿಳ್ಳಮಾದುದೆಯೌವನಾಶ್ವಭೂಪತಿಯಬಲ | ಹೊಳ್ಳಿಗರನೂಕುನೂಕಾವೆಡೆಯೊಳಾಕುದುರೆ | ಗಳ್ಳನಂತೋರುತೋರೆನುತನಡೆ

---

ಇರಲಾಗಿ, ಅವು-ಆ ಖಡ್ಗಂಗಳು, ಬಲಕೆ-ದಂಡಿಗೆ, ಅತ್ತ-ಮತ್ತೊಂದೆಡೆಯಲ್ಲಿ, ಬೆಳಗ-ಕಾಂತಿಯನ್ನು, ಇತ್ತವು-ಕೊಟ್ಟವು, ಮತ್ತೆ-ತಿರುಗಿ, ಮತ್ತಗಜಂ-ಮದ್ದಾನೆಯು, ಸುತ್ತಲುಂ-ಎಲ್ಲಾ ಕಡೆಯೂ, ಕೆತ್ತವೋಲ್-ಜೋಡಿಸಿದಂತೆ, ಒತ್ತರಿಸಿ-ಸಾಂದ್ರವಾಗಿ, ಮುತ್ತಿ-ಕವಿದುಕೊಂಡು, ನಡೆವುತ್ತ-ಹೊರಡುತ್ತ, ಎಲರಂ-ವಾಯುವನ್ನು, ಒತ್ತಿ-ಅಡ್ಡಗಟ್ಟಿ, ದತ್ತ-ಅಲ್ಲಾಡಿಸುತ್ತಲಿರುವ, ಚಮರ-ಚೌರಿಗಳಿಂದ, ಉತ್ಥಿತ-ಉತ್ಪತ್ತಿಯಾದ, ಮರುತ್-ವಾಯುವಿನ, ತತಿಯೊಳು-ರಾಶಿಯಲ್ಲಿ, ಉತ್ತಮ-ಒಳ್ಳೆಯದಾದ, ಹಿಮೋತ್ತರ-ಶೈತ್ಯಾಧಿಕ್ಯವು, ಬಿತ್ತರಿಸಿತು-ಹರಡಿಕೊಂಡಿತು ||೧೯||

ಟೀ|| ತಡೆಯೊಳು-ಬಂಧನದಲ್ಲಿ, ಇರ್ದ-ಸಿಕ್ಕಿದ್ದ, ಅಖಿಲ-ಸಮಸ್ತವಾದ, ಮೇಘಂಗಳಂ-ಮುಗಿಲ್ಗಳನ್ನು, ಪ್ರಳಯದೊಳ್-ಪ್ರಪಂಚಕ್ಕೆ ನಾಶಕಾಲವು ವೊದಗಿದಾಗ, ಬಿಡಲು-ವರ್ಜಿಸಲು ಕಳುಹುವಲ್ಲಿ, ಘುಡಿಘುಡಿಸುತ-ಗುಡಗುಡ ಎಂಬ ಧ್ವನಿಗೆಯ್ಯುತ, ನಡೆವಂದದಿಂ-ನಡೆಯುವಹಾಗೆ, ಬೊಬ್ಬಿಡುತ-ಭೋರ್ಗರೆಯುತ್ತ, ಅವಧಿಯಿಲ್ಲದೆ- ಮಿತಿಯಿಲ್ಲದೆ, ಐತರುತಿರ್ಪ-ಸಮೀಪವನ್ನು ಹೊಂದತಕ್ಕದ್ದಾಗಿರುವ, ಯೌವನಾಶ್ವನ-ಯೌವನಾಶ್ವನೆಂಬ ಪೊಡವಿಪನ, ಸೈನ್ಯಮಂ-ದಂಡನ್ನು, ನೋಡುತ-ನಿರುಕಿಸುತ್ತ, ಎಡಗೈಯ್ಯ-ವಾಮಬಾಹುವಿನಬಳಿ ಸೇರಿರುವ, ತುರಂಗಮುಂ-ಹಯವನ್ನು ಪಿಡಿದು, ಅಳವಡಿಸಿ-ಸಿದ್ಧನಾಗಿ, ತನ್ನ-ಸ್ವಕೀಯವಾದ, ಖಡುಗಮಂ-ಅಸಿಯನ್ನು, ಜಡಿದು-ಅಲ್ಲಾಡಿಸಿ, ಅನಿಬರೆಲ್ಲರಂ-ಅಷ್ಟು ಜನಗಳನ್ನು, ಚಿತ್ತದೊಳ್-ತನ್ನ ಎದೆಯಲ್ಲಿ, ಗಣಿಸದೆ-ಲೆಕ್ಕಿಸದೆ, ಕಲಿ-ಶೂರಾಗ್ರಣಿಯಾದ, ಘಟೋತ್ಕಚ-ಘಟೋತ್ಕಚನೆಂಬ ರಕ್ಕಸನ, ಸುತಂ-ತನುಜನಾದ ಮೇಘವರ್ಣನು, ನಸುನಗುತ-ಮುಗುಳ್ನಗೆಯನ್ನೈದುತ್ತ, ಗಗನದೊಳ್-ಆಗಸದಲ್ಲಿ, ಬರುತ-ಐತರುತ್ತ, ಇರ್ದನು-ಇದ್ದನು ||೨೦||

ಟೀ|| ಯೌವನಾಶ್ವ - ಯೌವನಾಶ್ವನೆಂಬ ನಾಮಧೇಯವುಳ್ಳ, ಭೂಪತಿಯ - ರಾಜಾಧಿರಾಜನ, ಬಲಂ-ದಂಡು, ಡಿಳ್ಳಂ-ಕೈಲಾಗದ್ದು, ಆದುದೆ-ಆಗಿಹೋಯಿತೆ? ಹೊಳ್ಳಿಗರ-ಕೈಲಾಗದವರನ್ನು, ನೂಕುನೂಕು-ತರಮುತರವು, ಆ ಕುದುರೆ-ಆ ಅಶ್ವವು, ಆವ-ಯಾವ, ಎಡೆಯೊಳು-ಸ್ಥಾನದಲ್ಲಿದೆ? ಕಳ್ಳನಂ-ಅಶ್ವಚೋರನನ್ನು, ತೋರು ತೋರು-ಕಾಣಿಸು ಕಾಣಿಸು, ಎನುತ-ಎಂದು ನುಡಿಯುತ್ತ, ನಡೆತಂದು-ಐತಂದು, ಹೈಡಿಂಬಿಯಂ-ಹಿಡಿಂಬಿಯ ಕುವರನಾದ ಮೇಘವರ್ಣನನ್ನು, ಮುತ್ತಿಕೊಂಡು-ಕವಿದುಕೊಂಡು, ಒಳ್ಳಿತೊ-ಶಭಾಸ್ (ಒಳ್ಳೆಯದು) ವೀರ-ಪರಾಕ್ರಮಿಯಾದ, ಹಯಚೋರ-ಅಶ್ವವನ್ನು ಕಳವು ಮಾಡಿದವನೇ! ಜೀವದೊಳು-ಹರಣದಲ್ಲಿ, ಆಸೆಯು-ಅಭಿಲಾಷೆಯು, ಉಳ್ಳೊಡೆ-ಇದ್ದರೆ, ಕುದುರೆಯಂ-ಹಯವನ್ನು, ಬಿಟ್ಟುಸಾರು-ಬಿಟ್ಟುನಡೆ, ಅಲ್ಲದೊಡೆ-ಅದು ನಿನಗೆ ಸಮ್ಮತಿಯಿಲ್ಲವಾದರೆ, ಮಹ-ಅತಿಶಯವಾದ, ಅಸ್ತ್ರ-ನಾನಾಸ್ತ್ರಂಗಳ, ಪ್ರತತಿಯನು-ರಾಶಿಯನ್ನು, ಕೊಳ್ಳು-ಹಿಡಿದು ನಿಲ್ಲು, ಎಂದು-ಹೀಗೆಂದು ನುಡಿಯುತ್ತ, ಅಂಬರವನು-ಅಂತರಿಕ್ಷಮಾರ್ಗವನ್ನು, ಅಂಬಿನೊಳು-ಸರಳ್ಗಳಿಂದ, ತುಂಬಿಸಿದರು-ಕವಿದರು. ||

---

ಸೇನಾಜನಗಳು ಒರೆಗಳಿಂದ ಕತ್ತಿಗಳನ್ನು ಸೆಳೆದು ಝಳಪಿಸುತ್ತಲೂ, ಸಿಂಹಗರ್ಜನೆಗಳಂ ಮಾಡುತ್ತಲೂ, ಬಾಹುಮೂಲಗಳನ್ನು ಮುಷ್ಟಿಗಳಿಂದ ಅಪ್ಪಳಿಸುತ್ತಲೂ, ವೀರಾಟೋಪದ ನುಡಿಗಳನ್ನು ನುಡಿಯುತ್ತಲೂ ಮುಂದುವರಿಯುತ್ತಿದ್ದರು. ಮದ್ದಾನೆಗಳು ಘೀಂಕರಿಸುತ್ತ ದಿಕ್ಕುದಿಕ್ಕಿನಲ್ಲಿಯೂ ನೆರೆದವು ||೧೯|| ಈ ರೀತಿಯಾಗಿ ಮಹಾ ಪ್ರಳಯ ದಿನದಲ್ಲಿನ ಮೇಘಸಮುದಾಯಂಗಳ ಗುಡಗುಡ ಧ್ವನಿಯಂತೆ ದಿಕ್ಕುದಿಕ್ಕಿನಲ್ಲಿಯೂ ತಂಡತಂಡವಾಗಿ ಕವಿಯುತ್ತಿರುವ ಯೌವನಾಶ್ವಾವನಿಪನ ಸೇನಾ ನಿಕಾಯುವಂ ನೋಡಿ, ಶೂರಾಗ್ರಣಿಯಾದ ಮೇಘನಾದನು ತನ್ನ ಎಡಗೈಯಲ್ಲಿ ಕುದುರೆಯಂ ಪಿಡಿದು, ಒರೆಯಲ್ಲಿದ್ದ ಮತ್ತು ಹೊಸದಾಗಿ ಸಾಣೆಗೆ ಕೊಟ್ಟಿದ್ದ ಖಡ್ಗವನ್ನು ಬಲಗೈಯಿಂದ ಸೆಳೆದುಕೊಂಡು, ಶತ್ರುರಾಜರ ಅಷ್ಟಸಹಸ್ರ ಸಂಖ್ಯಾತರಾದ ಪದಾತಿಗಳನ್ನು ಸಂಹರಿಸಿ, ಅವರ ರಥಾಶ್ವಗಳನ್ನೂ ಬಿಲ್ಲುಬತ್ತಳಿಕೆಗಳನ್ನೂ ಧ್ವಜಗಳನ್ನೂ ನುಚ್ಚುನುಚ್ಚಾಗಿ ಮಾಡಿ ಕೆಳಗೆ ಉರುಳಿಸಿ ಅವರನ್ನು ಹಾಸ್ಯಮಾಡುತ್ತ ಮುಂದುಮುಂದಕ್ಕೆ ಬರುತ್ತಿರುವಾಗ ||೨೦|| ಇವನ ಖಡ್ಗದ ಪೆಟ್ಟಿಗೆ ಹಿಂಜರಿಯದೆಯೂ, ಮತ್ತು ಇವನ ಹಾಸ್ಯದ ನುಡಿಗಳನ್ನು ಗಣನೆಗೆ ತಾರದೆಯೂ, ಇವನ ಭದ್ರಗಿರಿರಾಜನ ಸೈನಿಕರು ಅತಿ ಕೋಪಾವಿಷ್ಟ

ತಂದುಪೈಡಿಂಬಿಯುಂಮುತ್ತಿಕೊಂಡು ॥ ಬಳ್ಳಿತೋವೀರಹಯಚೋರಜೀವದೊಳಾಸೆ | ಯುಳ್ಳೊಡೀಕುದುರೆಯಂಬಿಟ್ಟುಸಾರ
ಲ್ಲಮೊಡೆ | ಕೊಳ್ಳಾಮಹಾಸ್ತ್ರಪ್ರತತಿಯನೆಂದಂಬರವನಂಬಿನೋಳ್ತುಂಬಿಸಿದರು ॥ ೨೧ ॥ ನಿಮ್ಮರಾಯನಪೊರೆಯಪರಿವಾರ
ದೊಳ್ನೀವೆ | ದಿಮ್ಮಿದರೊಮತ್ತೆಕೆಲರುಂಟೊಕಳವಲ್ಲಹಯ | ಮನ್ಮೊಗದಮುಂದೆಕೊಂಡೊಯ್ವೆನಾರ್ಪೊಡೆಶಕ್ತಿಯಿಂಬಿಡಿಸಿ
ಕೊಳ್ಳಿಬರಿದೆ ॥ ಉಮ್ಮಳಿಸಬೇಡನೀವತಿಸಾಹಸಿಗಳಾದ | ಡೊಮ್ಮೆಹಮ್ಮೈಸದಿರಿಸಾಕೆಂದುಮೇಘನಾ | ದಂಮಹಾಮಾ
ಯಾಭಯಂಗಳಂಸೃಜಿಸಿದಮೂಜಗಂತಲ್ಲಣಿಸಲು ॥೨೨॥ ಪೊಡೆವಸಿಡಿಲ್ಕರೆವಮಳೆಜಡಿವಕಲ್ಗುಂಡುಧೂ | ಳಿಡುವಬಿರುಗಾಳಿ
ಕಂಗೆಡಿಪಕತ್ತಲೆಮೇಲೆ | ಕೆಡೆವಗಿರಿತರುಗಳುರೆಕಡಿವವಿವಿಧಾಯುಧಂನೆಡುವಶಸ್ತ್ರಾಸ್ತ್ರಂಗಳು ॥ ಪಿಡಿವಪುಲಿಕರಡಿಬಾಯ್ಬಿ
ಡುವಭೂತಂಗಳಸು | ಗುಡಿವಪಾವುಗಳಪ್ಪಿಸುಡುವಕಾಡ್ಗಿಚ್ಚುಳಿಯ | ಗುಡದವನಮಾಯೆಯಂತಡೆವರಿಲ್ಲಾಬಲಂಪುಡಿವಡೆದು

---

ಅ॥ ವಿ॥ ಅಸ್ತ್ರ-ಮಂತ್ರಪೂರ್ವಕವಾದ ಐಂದ್ರಾದಿಗಳು, ಶಸ್ತ್ರ-ಉಕ್ಕು ಮೊದಲಾದವುಗಳಿಂದ ರಚಿಸಲ್ಪಟ್ಟ ಆಯುಧ ವಿಶೇಷಗಳು, ಅಂಬರ-ಆಕಾಶ ಮತ್ತು ವಸ್ತ್ರ ॥೨೧॥

ಟೀ॥ ನಿಮ್ಮ-ನಿಮ್ಮ, ರಾಯನ-ರಾಜನಾದ ಯೌವನಾಶ್ವನ, ಪೊರೆಯ-ಆಸರೆಯಲ್ಲಿರುವ, ಪರಿವಾರದೊಳ್-ಸೇನಾ ನಿಕಾಯದಲ್ಲಿ, ನೀವೆ, ದಿಮ್ಮಿದಿರೋ-ವೀರರೊ, ಮತ್ತೆ-ಇನ್ನೂ, ಕೆಲವರು-ಹಲವುಮಂದಿ, ಉಂಟೋ-ಇದಾರೆಯೊ?, ಕಳವು-ಚೌರ್ಯವು, ಅಲ್ಲ-ಅಲ್ಲವು, ಹಯಮುಂ-ಅಶ್ವವನ್ನು, ಮೊಗದಮುಂದೆ-ನಿಮ್ಮ ಸಮಕ್ಷಮದಲ್ಲಿಯೇ, ಕೊಂಡೊಯ್ವೆನು-ಸೆಳೆದು ಕೊಂಡು ಹೋಗುವೆನು, ಆರ್ಪಡೆ-ಸಾಹಸವಿದ್ದರೆ, ಶಕ್ತಿಯಿಂ-ಶೌರ್ಯದಿಂದ, ಬಿಡಿಸಿಕೊಳ್ಳಿ-ತೆಗೆದುಕೊಂಡು ಹೋಗಿ, ನೀವು-ನೀವುಗಳು, ಬರಿದೆ-ವ್ಯರ್ಥವಾಗಿ, ಉಮ್ಮಳಿಸಬೇಡಿ-ದುರಹಂಕಾರೋಕ್ತಿಗಳನ್ನು ನುಡಿಯಬೇಡಿ, ಅತಿ ಸಾಹಸಿಗಳು-ಮಾಮಸಕ ಮುಳ್ಳವರು, ಆದೊಡೆ-ಆದಪಕ್ಷಕ್ಕೆ, ಒಮ್ಮೆ-ಒಂದು ಸಲವೂ, ಹಮ್ಮೈಸದೆ-ಗರ್ವದ ನುಡಿಗಳನ್ನು ಆಡದೆ, ಇರಿ-ನಿಲ್ಲಿ, ಸಾಕು-ಬಿಟ್ಟುಬಿಡಿ, ಎಂದು ಓಗೆಂದು, ಮೇಘನಾದಂ-ಹೈಡಿಂಬಿಯು, ಮೂಜಗಂ-ತ್ರಿಲೋಕಂಗಳೂ, ತಲ್ಲಣಿಸಲು-ಹೆದರಿಕೊಳ್ಳುವಂತೆ, ಮಹಾ-ಅತ್ಯಧಿಕವಾದ, ಮಾಯಾ-ಮೋಸದ, ಭಯಂಗಳಂ-ಹೆದರಿಕೆಯ ಬಗೆಯನ್ನು, ಸೃಜಿಸಿದಂ-ಹುಟ್ಟಿಸಿದನು ॥೨೨॥

ಟೀ॥ ಪೊಡೆವ-ಕಾಡಿಸುವ, ಸಿಡಿಲ್ಗರೆವ - ಸಿಡಿಲುಗಳನ್ನು ಬೀರುತ್ತಲಿರುವ, ಮಳೆ-ಮಳೆಯು, ಜಡಿವ-ಏಟುತಗಲುವ, ಕಲ್ಗುಂಡು-ಶಿಲೆಗಳು ಮತ್ತು ಗುಂಡುಗಳೂ, ಧೂಳಿಡುವ-ರಜಸ್ಸಂ ಸೃಜಿಸುವ, ಬಿರುಗಾಳಿ-ಕ್ರೂರನಾದ ಪವನನು, ಕಂಗೆಡಿಪ-ನೇತ್ರಂಗಳ ದಿಟ್ಟಿಯಂ ತಗ್ಗಿಸುವ, ಕತ್ತಲೆ-ತಮವು, ಮೇಲೆ-ದೇಹದ ಮೇಲ್ಭಾಗದಲ್ಲಿ, ಕೆಡೆವ-ಉದುರುವ, ಗಿರಿ-ಬೆಟ್ಟಗಳು, ತರು-ವೃಕ್ಷಂಗಳು, ಉರೆ-ಅಧಿಕವಾಗಿ, ಕಡಿವ-ತುಂಡುಮಾಡುತ್ತಾ ಬರುವ, ವಿವಿಧ-ನಾನಾಪ್ರಕಾರವಾದ, ಆಯುಧಂ-ಕತ್ತಿ ಈಟಿ ಮೊದಲಾದುವನ್ನು, ನೆಡುವ - ನಾಟತಕ್ಕ, ಶಸ್ತ್ರಾಸ್ತ್ರಂಗಳು - ಬಾಣಗಳು ಮತ್ತು ಆಯುಧಂಗಳು, ಪಿಡಿವ-ಹಿಡಿಯುವಂಥ, ಪುಲಿ ಕರಡಿ - ವ್ಯಾಘ್ರ ಮತ್ತು ಕರಡಿಗಳು, ಬಾಯ್ಬಿಡುವ - ಬಾಯಿತೆಗೆಯುವ, ಭೂತಂಗಳು - ಕಠಿಣವಾದ ಭೂತಗಳು, ಅಸು-ಹರಣಂಗಳನ್ನು, ಕುಡಿವ - ಪಾನಮಂಗೈವ, ಪಾವುಗಳ್- ಸರ್ಪಗಳು, ಅಪ್ಪಿ-ವ್ಯಾಪಿಸಿ, ಸುಡುವ-ದಹಿಸತಕ್ಕ, ಕಾಡ್ಗಿಚ್ಚು - ಕಾಡು ಬೆಂಕಿ ಇವೇ ಮೊದಲಾದವುಗಳಿಂದ, ಉಳಿಯ ಗುಡದು - ಪ್ರಾಣದೊಡನೆ ಬಿಡದಿರತಕ್ಕ,

---

ರಾಗಿ ಮೇಘನಾದನನ್ನು ನೋಡಿ, ಎಲೈ ಕುದುರೆಯನ್ನು ಕಳ್ಳತನದಿಂದ ತೆಗೆದುಕೊಂಡು ಹೋಗಲುದ್ಯುಕ್ತನಾಗಿರುವ ಶೂರನೆ! ನಿಲ್ಲು ನಿಲ್ಲು ನಿನಗೆ ಪ್ರಾಣದಮೇಲೆ ಆಶೆಯಿದ್ದರೆ ಅಶ್ವದ ಗೊಡವೆಯನ್ನು ಬಿಟ್ಟು ನಡೆ, ಇಲ್ಲವಾದರೆ ಅಸ್ತ್ರಶಸ್ತ್ರಂಗಳಿಂದ ನಮ್ಮನ್ನು ಜೈಸು ಎಂದು ಸಿಂಹಗರ್ಜನೆಗಳಿಂದ ಮೇಘನಾದನನ್ನು ಮುತ್ತಿಕೊಂಡರು ॥೨೧॥ ಇದನ್ನು ನೋಡಿದ ಹೈಡಿಂಬಿಯು ಆ ಯೋಧರನ್ನು ಕುರಿತು, ನೀವೇ ಯೌವನಾಶ್ವನ ಸೈನ್ಯದಲ್ಲೆಲ್ಲಾ ವೀರಾಗ್ರಣಿಗಳೊ? ಮತ್ತೆ ಯಾರಾದರೂ ಇರುವರೊ? ನಾನು ನಿಮ್ಮ ಎದುರಿಗೇ ಈ ಅಶ್ವವನ್ನು ತೆಗೆದುಕೊಂಡು ನಡೆಯುವುದೇ ಸಿದ್ಧವು. ನೀವು ಸಾಹಸಿಗಳಾದರೆ ಹರಟೆಯ ಮಾತುಗಳನ್ನಾಡದೆ ಯುದ್ಧವಂ ಮಾಡಿ ನನ್ನನ್ನು ಗೆದ್ದು ಅಶ್ವವನ್ನು ಬಿಡಿಸಿಕೊಂಡು ನಡೆಯಿರಿ, ಸುಮ್ಮನೆ ಏತಕ್ಕೆ ಗಳಹುವಿರಿ ಎಂದು ನುಡಿಯುತ್ತ ॥೨೨॥ ತ್ರಿಲೋಕಂಗಳೂ ಗಡಗಡನೆ ನಡುಗುವಂತೆ ಘೋರವಾದ ಸಿಡಿಲು ಗುಡುಗು ಮಿಂಚು ಮಳೆಗಳನ್ನೂ, ಕಲ್ಲು ಗುಂಡುಗಳನ್ನೂ, ಬಿರುಗಾಳಿಯನ್ನೂ, ಮಹಾಂಧಕಾರವನ್ನೂ, ಗಿರಿದುರ್ಗಂಗಳನ್ನೂ, ಬಗೆಬಗೆಯಾದ ಅಸ್ತ್ರಶಸ್ತ್ರಂಗಳನ್ನೂ, ಬಾಯ್ಬಿಟ್ಟು ಹೆದರಿಸುತ್ತಲಿರುವ ಭೂತ ಗಣಂಗಳನ್ನೂ, ಹುಲಿ, ಕರಡಿ, ಸಿಂಹ, ಸರ್ಪಾದಿ ಕ್ರೂರ ಜಂತುಗಳನ್ನೂ ತನ್ನ ಮಾಯಾಜಾಲದಿಂದ ಸೃಷ್ಟಿಸಿ ಎಲ್ಲೆಲ್ಲಿಯೂ ವ್ಯಾಪಿಸಿ ಯೌವನಾಶ್ವಾವನಿಪನ ಸೈನ್ಯವನ್ನೆಲ್ಲಾ ಪುಡಿಪುಡಿಮಾಡುತ್ತ ॥೨೩॥ ಅಂತರಿಕ್ಷಮಾರ್ಗದಲ್ಲಿ ನಡೆಯುತ್ತಿರುವಾಗ ಭದ್ರಗಿರಿರಾಜನು ಪುನಃ ಎಂಟು ಸಹಸ್ರ ಸೈನ್ಯವನ್ನು ಕಳುಹಿಸಿದನು. ಅವರೂ ಕೂಡ ಅತಿ ಜಾಗ್ರತೆಯಾಗಿ ಮೇಘನಾದನನ್ನು ಮುತ್ತಿಕೊಂಡು, ಎಲೋ ನೀಚ, ಖೂಳ! ನಿಲ್ಲು ನಿಲ್ಲು. ಕುದುರೆಯನ್ನು

ದೇವೇಳ್ವೆನು ॥ ೨೩ ॥ ಮಾಯೆಯಿಂಬಲವೆಲ್ಲನುಂಕೊಂದುಹಯಮುಂವಿ । ಹಾಯುಸಪಥದೊಳೊಯ್ವುಹೈಡಿಂಬಿಯುಂಕಂಡ ।
ಜೇಯರಂಬರದವಿವರಂಗಳಂಪೊಗುವೆಂಟುಸಾವಿರಮಹಾರಥರನು ॥ ಆಯೌವನಾಶ್ವನೃಪನಟ್ಟಿದೊಡೆನಭದೊಳಸ । ಹಾಯು
ಶೂರನಮಾರ್ಗಮುಂಕಟ್ಟಿನಿಲ್ಲುಖಳ । ಸಾಯದಿರ್ಬಿಡುಬಿಡುತುರಂಗಮನೆನುತಸೈಗರೆದರಂಬಿನಮಳೆಯನು ॥ ೨೪ ॥ ವೀರರಹು
ದೋಜಗಕೆನೀವಲಾಸ್ವಾಮಿಹಿತ । ಕಾರಿಗಳ್ತಲೆಯಾಶೆಯಿಲ್ಲೆನುತಹೈಡಿಂಬಿ । ತೋರಗದೆಯಿಂದವರತೇರ್ಗಳಂಚಾಪಬಾಣಂಗ
ಳಂಕುದುರೆಗಳನು ॥ ಸಾರಥಿಗಳಂಧ್ವಜಪತಾಕೆಗಳನಪ್ಪಳಿಸಿ । ವಾರುವಂಬೆರಸಿಕಡುವೇಗದಿಂದೈತಂದು । ಮಾರುತಸುತನ
ಮುಂದೆನಿಲುತಿರ್ದನನ್ನೆಗಂಮತ್ತೆಪಡಿಬಲಂಬಂದುದು ॥ ೨೫ ॥ ಹರಿಗಳಿಂನಾಗಂಗಳಿಂಸ್ಯಂದನಂಗಳಿಂ । ಶರಜಾಲಕದಳಿದಳಪುಂ

---

ಅವನ–ಆ ಹೈಡಿಂಬಿಯು, ಮಾಯೆಯುಂ–ಕೃತಕ ವಿದ್ಯೆಯನ್ನು, ತಡೆವರು–ತಾಳತಕ್ಕವರು, ಇಲ್ಲ-ಇರಲಿಲ್ಲವು, ಆಬಲಂ–ಆ ಯೌವನಾಶ್ವನ ಸೇನಾಸಮೂಹವೆಲ್ಲವೂ, ಪುಡಿನಡೆದುದು–ನುಚ್ಚುನುಚ್ಚಾಗಿಹೋಯಿತು, ಏವೇಳ್ವೆನು–ಏನೆಂದು ನುಡಿಯಲಿ ॥೨೩॥

ಟೀ॥ ಮಾಯೆಯಿಂ–ಕೃತಕದಿಂದ, ಬಲಮೆಲ್ಲನುಂ-ಸಮಸ್ತ ದಂಡನ್ನು, ಕೊಂದು–ಕೊಂದುಹಾಕಿ, ಹಯಮುಂ–ಅಶ್ವವನ್ನು, ವಿಹಾಯಸಪಥದೊಳು-ಗಗನಮಾರ್ಗದಲ್ಲಿ ಒಯ್ವು–ಸೆಳೆದುಕೊಂಡು ಹೋಗತಕ್ಕ, ಹೈಡಿಂಬಿಯುಂ–ಹಿಡಿಂಬಿಯ ತನುಜನನ್ನು, ಕಂಡು–ಈಕ್ಷಿಸಿ, ಅಜೇಯರ–ಗೆಲ್ಲುವುದಕ್ಕೆ ಅಸಾಧ್ಯರಾಗಿರತಕ್ಕ, ಅಂಬರದ–ಗಗನದ, ವಿವರಂಗಳಂ–ಬಿಲಗಳನ್ನು, ಪೊಗುವ–ಪ್ರವೇಶನಂ ಮಾಡುವ, ಎಂಟುಸಾವಿರ–ಎಂಟು ಸಹಸ್ರದ, ಮಹಾರಥರನು–ವೀರಾಗ್ರಣಿಗಳಾದ ರಥಿಕರ್ಕಳನ್ನು, ಆನೃಪ-ಆ ಅರಸಾದ, ಯೌವನಾಶ್ವನು–ಯೌವನಾಶ್ವಭೂಪತಿಯು, ಅಟ್ಟಿದೊಡೆ–ಕಳುಹಲು, ನಭದೊಳು–ಗಗನದಲ್ಲಿ, ಅಸಹಾಯಶೂರನ–ಯಾರೊಬ್ಬರ ಸಹಾಯಾಪೇಕ್ಷೆಯೂ ಬೇಡದೆ ಸ್ವಯಂ ಪರಾಕ್ರಮಿಯಾಗಿರತಕ್ಕ ಮೇಘವರ್ಣನ, ಮಾರ್ಗಮುಂ-ಬಟ್ಟೆಯನ್ನು, ಕಟ್ಟಿ-ಅಡ್ಡಹಾಕಿ, ಖಳ–ಎಲೊ ಖೂಳ, ನಿಲ್ಲು–ಸ್ತಬ್ಧನಾಗು, ಸಾಯದಿರು–ಮರಣವನ್ನು ಬಯಸಬೇಡ, ತುರಂಗಮವನು–ಅಶ್ವವನ್ನು, ಬಿಡುಬಿಡು,–ಎನುತ-ಎಂದು ನುಡಿಯುತ್ತ, ಅಂಬಿನ–ಸರಲ್ಗಳ, ಮಳೆಯನು - ಉದಕಧಾರೆಯನ್ನು, ಸೈಗರೆದರು-ಚೆಲ್ಲುತ್ತ ಇದ್ದರು ॥ ೨೪ ॥

ಟೀ॥ ಜಗಕೆ-ಪ್ರಪಂಚಕ್ಕೆಲ್ಲಾ, ನೀವ್-ನೀವು, ವೀರರು–ಪರಾಕ್ರಮಿಗಳು, ಅಹುದೊ-ಆಗಿರುವಿರಾದೀತು, ಸ್ವಾಮಿ–ಯಜಮಾನನಿಗೆ, ಹಿತ-ಒಳ್ಳೆಯದನ್ನು, ಕಾರಿಗಳ್–ಮಾಡಲುಜ್ಜುಗಿಸುವರು, ತಲೆಯ-ಶಿರಸ್ಸಿನ, ಆಶೆಯು-ಅಪೇಕ್ಷೆಯು, ಇಲ್ಲ-ಇರುವುದಿಲ್ಲ, ಎನುತ–ಎಂದು ನುಡಿಯುತ್ತ ಹೈಡಿಂಬಿ–ಹಿಡಿಂಬಿಯ ಮಗನು, ತೋರ–ಗಾತ್ರವಾದ, ಗದೆಯಿಂ-ಗದೆಯೆಂಬೊಂದು ಆಯುಧವಿಶೇಷದಿಂದ, ಅವರ-ಆ ರಥಿಕಶ್ರೇಷ್ಠರ, ತೇರ್ಗಳಂ–ಬಂಡಿಗಳನ್ನೂ, ಚಾಪ–ಧನುಸ್ಸನ್ನೂ, ಬಾಣಂಗಳಂ–ಸರಲ್ಗಳನ್ನೂ, ಕುದುರೆಗಳನು–ಹಯಂಗಳನ್ನೂ, ಸಾರಥಿಗಳಂ–ರಥವನ್ನು ನಡೆಸತಕ್ಕವರನ್ನೂ, ಧ್ವಜಪತಾಕೆಗಳನು–ಧ್ವಜಗಳು ಮತ್ತು ಬಾವಟಗಳನ್ನೂ, ಅಪ್ಪಳಿಸಿ–ತಾಡಿಸಿ, ವಾರುವಂ–ಅಶ್ವವನ್ನು, ಬೆರಸಿ–ಸೇರಿಕೊಂಡು, ಕಡುವೇಗದಿಂದ–ಬಹುಜಾಗ್ರತೆಯಿಂದ, ಐತಂದು–ಬಂದು, ಮಾರುತಸುತನ-ಅನಿಲಜನಾದ ಭೀಮಸೇನನ, ಮುಂದೆ–ಮುಂಭಾಗದಲ್ಲಿ, ನಿಲುತಿರ್ದನು-ನಿಂತನು, ಅನ್ನೆಗಂ-ಅಷ್ಟುಕಾಲಕ್ಕೆ, ಮತ್ತೆ–ಪುನಃ, ಪಡಿಬಲಂ–ಬೇರೆದಳವು, ಬಂದುದು–ಬಂದು ನೆರೆಯಿತು ॥೨೫॥

ಟೀ॥ ಹರಿಗಳಿಂ–ಸಿಂಗಂಗಳಿಂದಲೂ, ನಾಗಂಗಳಿಂ–ಹಾವುಗಳಿಂದಲೂ, ಸ್ಯಂದನಂಗಳಿಂ–ಕ್ರಿಮಿಕೀಟಾದಿಗಳಿಂದಲೂ, ಶರಜಾಲದಿಂ–ಅಂಬಿನ ಗುಂಪಿನಿಂದಲೂ, ಕದಳಿದಳ–ಕದಳೀವೃಕ್ಷಂಗಳಿಂದಲೂ, ಪುಂಡರೀಕಂಗಳಿಂ–ಬೆಳ್ದಾವರೆಗಳಿಂದಲೂ, ಸುರಗಿಖಡ್ಗಂಗಳಿಂ–ಸುರಗಿ ಎಂಬ ವೃಕ್ಷಜಾತಿಗಳಿಂದಲೂ, (ಇದು ವನಪರ್ಯಾಯವಾಗಿ), ಹರಿಗಳಿಂ–ಅಶ್ವನಿಕಾಯದಿಂದಲೂ, ನಾಗಂಗಳಿಂ-ಹಸ್ತಿ ಸಮೂಹದಿಂದಲೂ, ಸ್ಯಂದನಂಗಳಿಂ-ತೇರುಗಳ ಗುಂಪಿನಿಂದಲೂ, ಶರಜಾಲದಿಂ–ಸರಲುಗಳ ಸಮೂಹದಿಂದಲೂ, ಕದಳಿಗಳ-ಟೊಂಕದಲ್ಲಿಟ್ಟುಕೊಂಡಿರಬಹುದಾದ ಬಾಕು ಎನ್ನುವ ಆಯುಧವಿಶೇಷಗಳಿಂದಲೂ, ಪುಂಡರೀಕಂಗಳಿಂ-ವ್ಯಾಘ್ರಂಗಳಿಂದಲೂ, ಸುರಗಿಖಡ್ಗಂಗಳಿಂ–ಕುಡುಗೋಲೆಂಬ ಆಯುಧಗಳಿಂದಲೂ (ಮಚ್ಚುಕತ್ತಿ). (ಇದು ರಣಾಂಗಣವಲ್ಲಿ

---

ಬಿಟ್ಟು ಪ್ರಾಣವನ್ನು ಉಳಿಸಿಕೊ ಎಂದು ಗರ್ಜನೆಯಂ ಮಾಡುತ್ತ ಶರವರ್ಷವನ್ನು ಸುರಿಸುತ್ತಿದ್ದರು. ॥ ೨೪ ॥ ಇದಕ್ಕೆ ಮೇಘನಾದನು ಸ್ವಲ್ಪವೂ ಹೆದರದೆ ದೊಡ್ಡದಾದ ಗದೆಯೊಂದನ್ನು ತೆಗೆದುಕೊಂಡು ಮಹಾರಥಿಕರಾದ ಆ ಎಂಟು ಸಹಸ್ರಜನರನ್ನೂ, ಅವರ ಅಶ್ವರಥಾದಿಗಳನ್ನೂ, ಧ್ವಜಪತಾಕೆಗಳನ್ನೂ, ಪುಡಿಪುಡಿಯಾಗುವಂತೆ ಬಡಿದು ಕೆಡವಿ, ಕುದುರೆಯ ಸಮೇತವಾಗಿ ವೇಗಾತಿಶಯದಿಂದ ವಾಯುಪುತ್ರನಾದ ಭೀಮಸೇನನ ಬಳಿಗೆ ಹೋಗಿ ಸೇರಿದನು. ॥ ೨೫ ॥ ಈ ಸುದ್ದಿಯನ್ನು ಯೌವನಾಶ್ವನ ತನುಜಾತನೂ ಯೋಧಾಗ್ರೇಸರನೂ ಆದ ಸುವೇಗನೆಂಬುವನು ಕೇಳಿ, ಅತ್ಯಂತ ಕೋಪಾಟೋಪದಿಂದ ತನ್ನ ತೋರಗದೆಯಂ ತಿರುತಿರುಗಿಸಿಕೊಂಡು, ಭಯಂಕರವಾದ ಸಿಂಹನಾದದಿಂದ ಭೂಮಿಯನ್ನು ಗಡಗಡನೆ ನಡುಗಿಸುತ್ತ, ಚತು

ಡರೀಕಂಗಳಿಂ | ಸುರಗಿಖಡ್ಗಂಗಳಿಂನಡೆವಕಾಂತಾರದಂತೆಸೆವಚತುರಂಗದೊಡನೆ || ಭರದಿಂಸುವೇಗನೆಂಬಾಯೌವನಾಶ್ವಭೂ | ವನತನುಜಾತನಾಹವಕೆನಿರ್ಭೀತನು | ಬ್ಬರದಬಿಲ್ದಿರುವಿನಬ್ಬರದಕೋಲಾಹಳಕೆಧರೆಬಿರಿಯೆನಡೆತಂದನು || ೨೬ || ಅಂಬರದೊ ಳಡ್ಡೈಸಿದೊಡೆನಮ್ಮರಥಿಕರ್ಕಳ | ಳಂಬಗೆಯದಹಿತಂಹಯಂಬೆರಸಿಸೈವರಿದ | ನೆಂಬುದಂಕೇಳ್ದಾಗಲಾಯೌವನಾಶ್ವಭೂಪಂ ತಾನೆಕೋಪದಿಂದ || ತುಂಬಿನುರಿಸಂಪಗೆಯಲರಪರಿಮಳದಸೂರೆ | ಗಂಬಯಸಿಬಂದುದಿದುಮಿಗೆಪೊಸತೆನುತಹರಿಸಿ | ದಂಬೇಗದಿಂಮಣಿವರೂಥಮಂಕೆಲಬಲದನುನ್ನೆಯರಗಡಣದಿಂದ || ೨೭ || ಇದುಭಗೀರಥರಥವಭೆಂಕೊಂಡುಪರಿವಸುರ | ನದಿಯ ಪ್ರವಾಹವೆನಲಾನೃಪನವರವರೂ | ಥದಪಿಂತೆಬಹುವಾದ್ಯರಭಸದಿಂದೆಡೆವರಿಯದೈತಪ್ಪಚತುರಂಗದ || ಪದಹತಿಗೆಧರೆನಡುಗು

---

ನೆರೆದಿರುವ ಸೇನಾನಿಚಯದ ಪರವಾದ ಅರ್ಥವು). ನಡೆವ-ಸುಳಿದಾಡುವ, ಕಾಂತಾರದಂತೆ-ಅರಣ್ಯದ ಹಾಗೆ, ಎಸೆವ-ಹೊಳೆಯುವ, ಚತುರಂಗದೊಡನೆ-ನಾಲ್ಕು ಬಗೆಯಾದ ದಳದಿಂದೊಡಗೂಡಿ, ಭರದಿಂ-ಶೀಘ್ರವಾಗಿ, ಸುವೇಗನೆಂಬ-ಸುವೇಗನೆಂಬ ನಾಮಧೇಯವುಳ್ಳ, ಆ ಯೌವನಾಶ್ವಭೂವರನ-ಆ ಯೌವನಾಶ್ವಭೂಪಾಲನ, ತನುಜಾತನು-ಪುತ್ರನು, ಆಹವಕೆ-ಸಮರಕ್ಕೆ, ನಿರ್ಭೀತನು-ಹೆದರದವನು, ಉಬ್ಬರದ-ಅತಿಯಾಗಿ ಬಾಗಿರುವ, ಬಿಲ್-ಬಿಲ್ಲಿನ, ತಿರುವಿನ-ದಾರದ, ಅಬ್ಬರದ-ರವದ, ಕೋಲಾಹಲಕೆ-ಕಲಕಲಾ ಎಂಬ ವಾದ್ಯವಿಶೇಷಕ್ಕೆ, ಧರೆ-ಇಳೆಯು, ಬಿರಿಯೆ-ಬಿರಿಯುವಂತೆ, ನಡೆತಂದನು-ಐತಂದನು || ೨೬ ||

ಟೀ|| ಅಂಬರದೊಳು-ಅಂತರಿಕ್ಷದಲ್ಲಿ, ಅಡ್ಡೈಸಿದೊಡೆ-ಅಡ್ಡಿಹಾಕಲಾಗಿ, ನಮ್ಮ, ರಥಿಕರ್ಕಳಂ – ಮಹಾರಥಿಕಶ್ರೇಷ್ಠರನ್ನು, ಬಗೆಯದೆ-ಗಣನೆಗೆ ತಾರದೆ, ಅಹಿತಂ-ಅರಿಯು, ಹಯಂಬೆರಸಿ-ಅಶ್ವದಿಂದ ಕೂಡಿ, ಸೈವರಿದನು-ಹೊರಟುಹೋದನು, ಎಂಬುದಂ-ಎನ್ನುವ ಸುದ್ದಿಯನ್ನು, ಕೇಳ್ದಾಗಲ್-ಕೇಳಿದೊಡನೆಯೇ, ಆಯೌವನಾಶ್ವಭೂಪಂ-ಯೌವನಾಶ್ವನೆಂಬರಸು, ತಾನೇ-ಅವನೇ, ಕೋಪದಿಂ-ಕ್ರೋಧಾತಿಶಯದಿಂದ, ತುಂಬಿಮರಿ-ಜೇರುಂಡೆಯ ಮರಿಗಳು, ಸಂಪಗೆಯಲರ – ಚಂಪಕಪುಷ್ಪಂಗಳ, ಪರಿಮಳದ-ಆಮೋದದ, ಸೂರೆಗಂ-ಕೊಳ್ಳೆಗೆ, ಬಯಸಿ-ಕೋರಿ, ಬಂದುದು-ಐತಂದಿತು, ಇದು-ಈ ಕಾರ್ಯವು, ಮಿಗೆ-ಅತಿಶಯವಾಗಿ, ಪೊಸತು-ನವೀನವಾದದ್ದು, ಎನುತ-ಎಂದು ಎಂದುಕೊಳ್ಳುತ್ತ, ಕೆಲಬಲದ-ಎಡಬಲಭಾಗಗಳಲ್ಲಿರತಕ್ಕ, ಮನ್ನೆಯರ-ಹೊಗಳತಕ್ಕವರ, ಗಡಣದಿಂ-ಗುಂಪಿನಿಂದ, ಮಣಿ-ರತ್ನಖಚಿತವಾದ, ವರೂಥಮಂ-ರಥವನ್ನು, ಬೇಗದಿಂ-ಶೀಘ್ರವಾಗಿ, ಹರಿಸಿದಂ-ಹೊರಡಿಸಿದನು || ೨೭ ||

ಟೀ|| ಇದು-ಈ ದಳವು, ಭಗೀರಥನ-ಸಗರವಂಶಜನಾದ ಭಗೀರಥನೆಂಬ ಮಹಾರಾಜನ, ರಥವ – ಸ್ಯಂದನವನ್ನು, ಬೆಂಕೊಂಡು-ಅನುಸರಿಸಿ, ಪರಿವ-ಪ್ರವಹಿಸುತ್ತಿರುವ, ಸುರನದಿಯ – ಭಾಗೀರಥೀನದಿಯ, ಪ್ರವಾಹಂ – ಹರಿಯುವಿಕೆಯು, ಎನಲು – ಎನ್ನುವಂತೆ, ಆನೃಪವರನ – ಆ ರಾಜವರ್ಯನ, ವರೂಥದ – ತೇರಿನ, ಪಿಂತೆ – ಹಿಂಭಾಗದಲ್ಲಿ, ಬಹು – ವಿವಿಧವಾದ, ವಾದ್ಯ-ಭೇರೀಮೊದಲಾದವುಗಳ, ರಭಸದಿಂ – ಸ್ವನಂಗಳಿಂದ, ಐತಪ್ಪ – ಬರುತ್ತಿರುವ, ಚತುರಂಗದ – ಹಸ್ತ್ಯಶ್ವರಥಪದಾತಿಗಳ, ಪದಹತಿಗೆ-ಕಾಲ್ಗಳ ಪೆಟ್ಟಗೆ, ಧರೆ-ಇಳೆಯು, ನಡಗುತಿರೆ-ಅಲ್ಲಾಡುತ್ತಿರಲು, ಜಹ್ನು-ಜಹ್ನುವೆಂಬ ನಾಮಧೇಯವುಳ್ಳ, ಮುನಿಪನಂತೆ-ಋಷೀಶ್ವರನಹಾಗೆ, ಅದರ-ಆ ಸುರನದಿಯ, ಸಂಭ್ರಮಕೆ-ಆನಂದಕ್ಕೆ, ಸೈರಿಸದೆ-ತಡೆಯಲಾರದೆ, ಅಂತರಂಗದೋಳ್-ಮನದಲ್ಲಿ, ಕರ್ಣಸುತನು-ವೃಷಧ್ವಜನು, ಕುದಿವುತ-ಕೊರಗುತ್ತ, ಇರ್ದಂ – ಇದ್ದನು, ಪವನಜಾತಂ-

---

ರಂಗಬಲಸಮೇತನಾಗಿ ವಿಧವಿಧವಾದ ಅಸ್ತ್ರಶಸ್ತ್ರಂಗಳಂ ಕೈಕೊಂಡು ಹೊರಟನು ಮತ್ತು || ೨೬ || ಮರಿದುಂಬಿಗಳು ಹೊಸದಾದ ಸಂಪಿಗೆ ಹೂಗಳಲ್ಲಿರುವ ಮಕರಂದವನ್ನು ಪಾನಮಾಡಲು ಅತಿತ್ವರೆಯಿಂದ ಹೇಗೆ ಹೊರಡುತ್ತವೆಯೊ ಹಾಗೆಯೇ ಭದ್ರಾವತೀನಗರದ ರಾಜನಾದ ಯೌವನಾಶ್ವನೂ ಕೂಡ ತನ್ನನ್ನೂ ತನ್ನ ಸೈನ್ಯವನ್ನೂ ಸ್ವಲ್ಪವೂ ಲಕ್ಷ್ಯಮಾಡದೆ ಕುದುರೆಯಂಪಿಡಿದೊಯ್ವ ಮೇಘನಾದನನ್ನು ಚೈಸಲು ದಿವ್ಯ ತೇಜೋವಿರಾಜಮಾನವಾಗಿಯೂ ನವರತ್ನಖಚಿತವಾಗಿಯೂ ಇರುವ ತೇರನಡರ್ದು, ಉಭಯಪಾರ್ಶ್ವಗಳಲ್ಲಿಯೂ ನೆರೆದಿರುವ ಸ್ತುತಿಪಾಠಕರಿಂದ ಹೊಗಳಿಸಿಕೊಳ್ಳುತ್ತ ಅತ್ಯಂತ ವೇಗದಿಂದ ಬರುತಿದ್ದನು || ೨೭ || ಈ ರೀತಿಯಾಗಿ ಮೊದಲು ಸುವೇಗನೂ ಅನಂತರ ಯೌವನಾಶ್ವಭೂಪಾಲನೂ ಯುದ್ಧಸನ್ನದ್ಧರಾಗಿ ಬರುತ್ತಿರುವದನ್ನೂ, ಅವರೀರ್ವರ ಹಿಂದುಗಡೆಯಲ್ಲಿ ಹಸ್ತ್ಯಶ್ವರಥಪದಾತಿಗಳು ತಮ್ಮತಮ್ಮ ಪಾದಘಾತದಿಂದ ಭೂಮಿಯನ್ನು ಗಡಗಡನೆ ನಡುಗಿಸುತ್ತಿರುವುದನ್ನೂ ಕರ್ಣನಂದನನಾದ ವೃಷಧ್ವಜನು ಕೇಳಿ, ಪೂರ್ವಕಾಲದಲ್ಲಿ ಸ್ವರ್ಗಲೋಕದಿಂದ ಭೂಲೋಕಕ್ಕೆ ಹೆಮ್ಮೆಯಿಂದ ಇಳಿದು ಬರುತಿದ್ದ ಸುರನದಿಯ ಆಟೋಪವನ್ನು ಸಹಿಸಲಾರದೆ ಜಹ್ನುಮಹಾಮುನಿಯು ನಿಶ್ಶೇಷವಾಗಿ ಪಾನಮಾಡಿದಂತೆ ತಾನೂಕೂಡಾ ಅತ್ಯಂತ ವೀರಾವೇಶದಿಂದ ಸಮೀಪಸ್ಥವಾಗುತಿರುವ ಯೌವನಾಶ್ವನ ದಳವನ್ನು ನೋಡಿ ಸ್ವಲ್ಪವೂ ಸಹಿಸದೆ ಜನಹ್ನುಋಷಿಯಂತೆ ಈ ಸೇನಾಪ್ರವಾಹನನ್ನು ಏಕಾಪೋಶನವಂ ಮಾಡಿಕೊಳ್ಳಲು ಬಯ

ತಿರೆಜಹ್ನುಮುನಿಪಸಂ | ತದರಸಂಭ್ರಮಕೆಸ್ಯೆರಿಸದಂತರಂಗದೋ | ಳ್ಕದಿವುತಿರ್ದಂಕರ್ಣಸುತನವನಭಾವಮಂಪವನಜಾತಂ ಕಂಡನು ||೨೮|| ಕಟ್ಟಿತರುಮೂಲಕಶ್ವಮಂನದರಕಾವಲ್ಗೆ | ದಿಟ್ಟಹೈಡಿಂಬಿಯಂಬೈಚಿಟ್ಟುತಮ್ಮನುರೆ | ಯಟ್ಟಿಬಹಯೌವನಾಶ್ವನಪಡೆಗೆಕರ್ಣಿಯಂಕಳುಪಿಕಾಲಾಗ್ನಿಯಂತೆ || ಇಟ್ಟಣಿಸುತ್ತೈದುವಸುವೇಗನಬಲೌಘಕಿದಿ | ರಿಟ್ಟುನಿಂದಂಭೀಮನುತ್ಸಾಹಮಾಗಿಪೆ | ರ್ಬೆಟ್ಟೊತ್ತಿನೂಕುವಮಹಾವಾತಘಾತಮಂತಡೆದೊಲೆಯದಿಪ್ಪಂತಿರೆ || ೨೯ || ಕೇಳ್ಮಹೀಪಾಲಕಸುವೇಗನಭಟಚರ್ಣಿ | ಯೊಳ್ಮುತ್ತಿಕೊಂಡರುವೃಕೋದರನನಿತ್ತಕೆಂ | ಧೂಳ್ಮುಸುಕಲೆಣ್ದೆಸೆಗಳಂನೃಪರಮಣಿಭೂಷಣದಕಾಂತಿ ಝುಗಿಝುಗಿಸಲು || ತೋಳ್ಮಿಡುಕಿನಿಂದಾರ್ದುಝುಳಪಿಸುವಭಟರಕರ | ವಾಳ್ಮಿಂಚೆಛತ್ರಚಮರಂಗಳವಿಡಾಯಮಿಗೆ | ಸೂಳ್ಮೆ

ವಾಯು ಸೂನುವು ಅವನ–ಆ ಕರ್ಣತನುಜನ, ಭಾವನಂ–ಆಶಯವನ್ನು, ಕಂಡನು–ತಿಳಿದುಕೊಂಡನು ||೨೮||

ಟೀ|| ತರುಮೂಲಕೆ–ವೃಕ್ಷದಡಿಯಲ್ಲಿ, ಅಶ್ವಮಂ–ಹಯವನ್ನು, ಕಟ್ಟಿ–ಬಂಧಿಸಿ, ಅದರ–ಆ ಅಶ್ವದ, ಕಾವಲ್ಗೆ–ಪೋಷಣೆಗೆ (ರಕ್ಷಣೆಗೆ), ದಿಟ್ಟ–ವೀರನಾದ, ಹೈಡಿಂಬಿಯಂ–ಹಿಡಿಂಬಿಯ ಪುತ್ರನನ್ನು, ಬೈಚಿಟ್ಟು–ಅಂತರಂಗವಾಗಿ ನಿಲ್ಲಿಸಿ, ತಮ್ಮನು–ತಮ್ಮನ್ನೆ, ಉರೆ–ಅತಿಶಯವಾಗಿ, ಅಟ್ಟಿ ಬಹ–ಬೆನ್ನು ಬಿದ್ದು ಬರುವ, ಯೌವನಾಶ್ವನ – ಯೌವನಾಶ್ವನೆಂಬ ಮಹೀಪಾಲನ, ಪಡೆಗೆ–ಸೇನೆಗೆ, ಕರ್ಣಿಯಂ– ಕರ್ಣತನುಜನನ್ನು, ಕಳುಪಿ– ಕಳುಹಿ, ಕಾಲಾಗ್ನಿಯಂತೆ – ಪ್ರಳಯಸಮಯದ ಯಜ್ಞೇಶ್ವರನ ಹಾಗೆ, ಇಟ್ಟಣಿಸುತ–ಸಾಂದ್ರವಾಗುತ್ತ, ಐದುವ–ಬರುತ್ತಿರುವ, ಸುವೇಗನ–ಸುವೇಗನೆಂಬ ಯೌವನಾಶ್ವನ ತನುಜನ, ಬಲೌಘಕೆ–ಸೇನಾನಿಕಾಯಕ್ಕೆ, ಇದಿರಿಟ್ಟು–ಹೊರಟು, ಭೀಮನು–ವೃಕೋದರನು, ಪೆರ್ಬೆಟ್ಟ–ಅಗಾಧವಾದ ಪರ್ವತವು, ಒತ್ತಿ–ಅಮುಕಿ, ನೂಕುವ–ಮುಂದಕ್ಕೆ ಅಟ್ಟುವ, ಮಹಾವಾತ–ಚಂಡಮಾರುತನ, ಘಾತಿಯಂ–ಹೊಡೆತವನ್ನು, ತಡೆದು–ತಾಳಿ, ಒಲೆಯದೆ–ಪಕ್ಕವನ್ನು ಸೇರದೆ, ಇಪ್ಪ–ಇರುವಂತೆ, ಉತ್ಸಾಹಮಾಗಿ–ಹೆಚ್ಚಾದ ಉಲ್ಲಾಸದಿಂದ, ನಿಂತಂ–ನಿಂತನು ||೨೯||

ಟೀ|| ಮಹೀಪಾಲಕ – ಭೂಪತಿಯಾದ ಜನಮೇಜಯನೆ, ಕೇಳು–ಲಾಲಿಸು, ಸುವೇಗನ – ಸುವೇಗನೆಂಬ ಅರಸನ, ಭಟರು–ಸೈನಿಕರು, ಚೂಣಿಯೊಳ್ – ಪುರೋಭಾಗದಲ್ಲಿ, ವೃಕೋದರನನು–ವಾಯುಸೂನುವನ್ನು, ಮುತ್ತಿಕೊಂಡರು–ಕವಿದುಕೊಂಡರು, ಇತ್ತ–ಈ ಪಾರ್ಶ್ವದಲ್ಲಿ, ಕೆಂಧೂಳಿ–ರಕ್ತಛಾಯೆಯಾದ ರಜವು, ಎಣ್ದೆಸೆಗಳಂ–ಅಷ್ಟದಿಕ್ಕುಗಳನ್ನೂ, ಮುಸುಕಲು–ಕವಿದುಕೊಳ್ಳಲು, ನೃಪರ–ಅರಸರ, ಮಣಿ–ರತ್ನಖಚಿತಂಗಳಾದ, ಭೂಷಣದ–ತೊಡಿಗೆಗಳ, ಕಾಂತಿ–ಕಳೆಯು, ಝುಗಝುಗಿಸಲು–ಥಳಥಳಿಸುತ್ತಿರಲಾಗಿ, ತೋಳ್–ಭುಜಗಳ, ಮಿಡುಕಿನಿಂದ–ಅಲ್ಲಾಡಿಸುವಿಕೆಯಿಂದ, ಆರ್ದು–ಗರ್ಜಿಸಿ, ಝುಳಪಿಸುವ–ತಿರುಗಿಸುತ್ತಿರುವ, ಭಟರ–ಕಾಲಾಳುಗಳ, ಕರವಾಳ–ಖಡ್ಗವು, ಮಿಂಚೆ–ಹೊಳೆಹೊಳೆಯಲು, ಛತ್ರ–ಆತಪತ್ರಂಗಳು, ಚಮರ–ವ್ಯಜನಂಗಳು, (ಚಾಮರಗಳು), ಇವುಗಳ, ವಿಡಾಯಿ–ಶ್ರೇಣಿಯು, ಮಿಗೆ–ಅತಿಯಾಗಿ, ಮೆರೆಯೆ–ಹೊಳೆಯಲು, ನಿಸ್ಸಾಣ–ಯುದ್ಧ ಸೂಚಕವಾದ (ರಣಭೇರಿಗಳ), ಕೋಟಿ–ಸಮೂಹವು, ಸೂಳ್ಮೆರೆಯೆ–ಧ್ವನಿಯಿಂದ ಪ್ರಕಾಶಿಸಲು, ಕಲಿ–ಶೂರನಾದ ಯೌವನಾಶ್ವ ಕ್ಷಿತಿಪನು–ಯೌವನಾಶ್ವನೆಂಬ ಪೃಥ್ವೀಶನು, ಐತಂದನು–ಬಂದನು ||೩೦||

ಸುತ್ತಿದ್ದನು ||೨೮|| ಕರ್ಣಸುತನ ಈ ಬಗೆಯಾದ ಭಾವನನ್ನು ವಾಯುಪುತ್ರನಾದ ಭೀಮಸೇನನು ತಿಳಿದುಕೊಂಡು, ಅಶ್ವಮೇಧಾರ್ಹವಾದ ಹಯವನ್ನು ಒಂದು ಮರದ ಬುಡದಲ್ಲಿ ಬಿಗಿದುಕಟ್ಟಿ, ಧನುರ್ವಿದ್ಯಾವಿಶಾರದನಾದ ಮೇಘವರ್ಣನನ್ನು ಅಲ್ಲಿ ಅಶ್ವರಕ್ಷಣೆಗಾಗಿ ಗುಟ್ಟಾಗಿ ಇಟ್ಟು, ಬಹು ವೇಗದಿಂದ ಬರುತ್ತಿರುವ ಯೌವನಾಶ್ವಭೂಪಾಲನ ಸೈನ್ಯಕ್ಕೆದುರಾಗಿ ಕರ್ಣ ನಂದನನನ್ನು ಕಳುಹಿ, ಪ್ರಳಯಕಾಲದ ಅಗ್ನಿಯನ್ನು ನಿರಾಕರಿಸುವ ತೇಜಃಪುಂಜದಿಂದ ಮೆರೆಯುತ್ತಿರುವ ಸುವೇಗನೆಂಬ ಯೌವನಾಶ್ವ ಭೂಪಾಲನ ಪುತ್ರನ ಸೈನ್ಯದ ಕಡೆಯಲ್ಲಿ ತಾನು ಪ್ರಚಂಡ ಮಾರುತನಿಗೂ ಹೆದರದೆ ನಿಲ್ಲತಕ್ಕ ಪರ್ವತೋಪಮಾನನಾಗಿ ಉತ್ಸಾಹಾತಿಶಯದಿಂದ ಸ್ಥಿರನಾಗಿ ನಿಂತನು ||೨೯|| ಅನಂತರದಲ್ಲಿ ಜೈಮಿನಿಋಷಿಯು ಜನಮೇಜಯನನ್ನು ಕುರಿತು, ಎಲೈ ಜನಮೇಜಯನೆ, ಮುಂದೆ ನಡೆದ ಕಥಾ ವೃತ್ತಾಂತವನ್ನರುಹುವೆನು ಕೇಳು, ಈ ರೀತಿಯಾಗಿ ಭೀಮನು ಸುವೇಗನ ಸೈನ್ಯಕ್ಕೂ, ಕರ್ಣಸುತನು ಯೌವನಾಶ್ವಾವನಿಪನ ದಳಕ್ಕೂ, ಎದುರಾಗಿ ನಿಂತಿರುವ ಕಾಲದಲ್ಲಿ ಸುವೇಗನ ಹಿಂದೆ ಬರುತ್ತಿದ್ದ ಅಕ್ಷೋಹಿಣೀ ಸೈನ್ಯವೂ ವೃಕೋದರನನ್ನು ಎಡೆಬಿಡದೆ ನಾಲ್ಕು ದಿಕ್ಕಿನಲ್ಲಿಯೂ ಮುತ್ತಿಕೊಂಡಿತು. ಈ ಸೈನ್ಯದ ಪಾದತಾಡನದಿಂದುಂಟಾದ ಕೆಂಧೂಳು ದಿಕ್ಕುಗಳ ತುದಿಗಳನ್ನಾವರಿಸಿ ಯುದ್ಧಾರ್ಥಿಗಳಾಗಿ ಬಂದಿರುವ ಮಹಾ ರಥಿಕರ ಕಿರೀಟಗಳ ಕಾಂತಿಯ ರಾಶಿಯೊ ಎಂಬಂತೆ ಭ್ರಾಂತಿಯನ್ನುಂಟುಮಾಡುತ್ತಿತ್ತು. ಪದಾತಿಗಳು ತಮ್ಮ ತಮ್ಮ ಖಡ್ಗಂಗಳನ್ನು ಝಳಪಿಸುತ್ತಲೂ ಭುಜಮೂಲಗಳನ್ನು ತಮ್ಮ ತಮ್ಮ ಕರಗಳಿಂದಪ್ಪಳಿಸುತ್ತಲೂ, ವೈರಿಗಳ ಎದೆಯು ನಡುಗುವಂತೆ ಸಿಂಹನಾದವನ್ನು ಮಾಡುತ್ತಲೂ ಇದ್ದರು. ಭೇರಿ ತಮ್ಮಟೆಗಳ ರವವೂ ಶಂಖಧ್ವನಿಯೂ ದಿಕ್ಕುಗಳ ಕೊನೆಯನ್ನು ಮುಟ್ಟಿತು. ||೩೦|| ಈ ರೀತಿ

ರಿಪುನಿಸ್ವಾಳಕೋಟಿಕಲಿಯೌವನಾಶ್ವಕ್ಷಿತಿಪನೈತಂದನು ||೩೦|| ಬತ್ತಿಬಹಯೌವನಾಶ್ವನಪಡೆಯುಚೂಣಿಯಂ | ಕಿತ್ತುನಿಂ ದಂಕರ್ಣಸುತನದಂಕಂಡುಕವಿ | ದತ್ತವನಮೇಲೆಕರಿತುರಗರಥಪಾಯದಳವೊಂದಾಗಿಸಂದಣಿಯೊಳು || ಹತ್ತಿಸಿದಚಾಪಮಂ ಜೇಗೈದುಕೂಡೆಮುಸೆ | ವೆತ್ತಕೂರಂಬುಗಳನಾರ್ದಿಸಲ್ಸೇನೆಮುರಿ | ಯಿತ್ತವನಬಾಣಘಾತಕೆಹಯದಚೋರನೇಂವೀರನೋಜಗ ದೊಳೆನುತ ||೩೧|| ಎಲ್ಲಿಹಯಚೋರನಂತೋರವನನೆತ್ತರಂ | ಚೆಲ್ಲುವೆಂಭೂತಗಣಕೆನುತಖತಿಯಿಂದನಿಂ | ದಲ್ಲಿನಿಲದೈತಪ್ಪ ಯೌವನಾಶ್ವನರಥಕೆಮಾರಾಂತುಕರ್ಣಸುತನು || ಬಿಲ್ಲೊಳಂಬಂಪೂಡಲಾರುನೀನೆಲವೊನಂ | ಮಲ್ಲಿಸೆಣಸಿದೆನೋಡಿದೊಡೆ ಬಾಲಕಂನಿನ್ನೊ | ಳೊಲ್ಲೆನಾಹವನೆಮ್ಮ ಕುದುರೆಯುಂಬಿಟ್ಟುಪೋಗೆಂದೊಡವನಿಂತೆಂದನು ||೩೨|| ಆರಾದೊಡೇನಶ್ವಮುಂಬಿಡುವ

---

ಟೀ|| ಬತ್ತಿ-ಸಾಂದ್ರವಾಗಿ, ಬಹ-ಐದುತ್ತಲಿರುವ, ಯೌವನಾಶ್ವನ-ಯೌವನಾಶ್ವನೆಂಬ ಅರಸನ, ಪಡೆಯ-ದಂಡಿನ, ಚೂಣಿಯಂ-ಅಗ್ರಭಾಗವನ್ನೆಲ್ಲಾ, ಕಿತ್ತು-ಹಿಂದಕ್ಕೆ ಹೋಗುವಂತೆ, ಕರ್ಣಸುತಂ-ಕರ್ಣನಂದನನು, ನಿಂದಂ-ನಿಂತುಕೊಂಡನು, ಅದಂ-ಅದನ್ನು, ಕಂಡು-ಈಕ್ಷಿಸಿ, ಕರಿ-ಹಸ್ತಿಗಳು, ತುರಗ-ಅಶ್ವಗಳು, ರಥ- ಸ್ಯಂದನಂಗಳು, ಪಾಯದಳಂ-ಪದಾತಿಯು, ಒಂದಾಗಿ-ಏಕವಾಗಿ, ಸಂದಣಿಯೊಳು-ದಟ್ಟವಾಗಿ, ಅವನಮೇಲೆ - ಆ ಕರ್ಣನಂದನನ ಮೇಲೆ, ಕವಿದತ್ತು-ಬಳಸಿಕೊಂಡಿತು, ಕೂಡೆ-ಒಡನೆಯೆ, (ವೃಷಧ್ವಜನು)-ಆರ್ದ್ಪು- ಗರ್ಜನೆಯಂ ಮಾಡಿ, ಹತ್ತಿಸಿದ-ಬಾಣಪ್ರಯೋಗವಂ ಮಾಡಿರುವ, ಚಾಪಮಂ-ಧನುಸ್ಸನ್ನು, ಜೇಗೈದು - ಟಂಕಾರ ಶಬ್ದವುಂಟಾಗುವಂತೆ ಮಾಡಿ, ಮುಸೆವೆತ್ತ - ಸಾಣೆಯಿಟ್ಟ, ಕೂರಂಬುಗಳಂ-ಹರಿತವಾದ ಸರಲ್ಗಳನ್ನು, ಎಸೆಯಲು-ಪ್ರಯೋಗಿಸಲು, ಅವನ-ಆ ಕರ್ಣತನುಜನ, ಬಾಣ-ಬಾಣಗಳ, ಘಾತಕ್ಕೆ-ಪೆಟ್ಟುಗಳಿಗೆ, ಸೇನೆ-ಬಲವು, ಹಯಚೋರಂ-ಈ ಅಶ್ವಚೋರನು, ಜಗದೊಳ್-ಪ್ರಪಂಚದಲ್ಲಿ, ಏಂವೀರನೊ-ಎಷ್ಟು ಪರಾಕ್ರಮಿಯೊ, ಎನುತ-ಎಂದು ನುಡಿಯುತ್ತ, ಮುರಿಯಿತ್ತು-ಹಿಮ್ಮೆಟ್ಟಿತು ||೩೧||

ಟೀ|| ಹಯ-ಅಶ್ವವನ್ನು, ಚೋರನಂ-ಅಪಹರಿಸಿದವನನ್ನು, ತೋರು-ಕಾಣಿಸು, ಅವನ-ಆ ಕಳ್ಳನ, ನೆತ್ತರಂ-ರಕ್ತವನ್ನೆಲ್ಲಾ, ಭೂತಗಣಕೆ - ಪಿಶಾಚಗಳೇ ಮೊದಲಾದವುಗಳಿಗೆ, ಚೆಲ್ಲುವೆಂ-ಎರಚುವೆನು, ಎನುತ-ಎಂದು ನುಡಿಯುತ್ತ, ಖತಿಯಿಂದ-ಕ್ರೋಧಾತಿಶಯದಿಂದ, ನಿಂದಲ್ಲಿ-ನಿಂತಿದ್ದ ಸ್ಥಳದಲ್ಲಿಯೆ, ನಿಲದೆ-ಇರಲೊಲ್ಲದೆ, ಐತಪ್ಪ-ಸಮೀಪಸ್ಥನಾಗುತ್ತಿರುವ, ಯೌವನಾಶ್ವನ - ಯೌವನಾಶ್ವನೆಂಬ ಅರಸನ, ರಥಕೆ-ತೇರಿಗೆ, ಕರ್ಣಸುತನು-ಕರ್ಣತನುಜನು, ಮಾರಾಂತು-ಎದುರು ಬಿದ್ದು, ಬಿಲ್ಲೊಳು-ಚಾಪಕ್ಕೆ, ಅಂಬನು-ಸರಲನ್ನು, ಪೂಡಲು-ಸೇರಿಸಲು, ಎಲವೊ-ಎಲೈ, ನೀನು ಆರು-ಯಾರು, ನಮ್ಮಲ್ಲಿ-ನಮ್ಮೊಂದಿಗೆ, ಸೆಣಸಿದೆ-ಕಾದಿದೆ, ನೋಡಿದೊಡೆ-ಈಕ್ಷಿಸಿದರೆ, ಬಾಲಕಂ-ಹಸುಳೆಯು, (ಆಗಿರುವಿ), ನಿನ್ನೊಳು-ನಿನ್ನೊಂದಿಗೆ, ಆಹವವ-ಯುದ್ಧವನ್ನು ಮಾಡಲು, ಒಲ್ಲೆನು-ಇಷ್ಟಪಡುವುದಿಲ್ಲ, ಎಮ್ಮ-ನಮ್ಮ, ಕುದುರೆಯಂ-ಹಯವನ್ನು, ಬಿಟ್ಟುಪೋಗು-ಬಿಟ್ಟು ನಡೆ, ಎಂದೊಡೆ-ಎಂದು ನುಡಿಯಲು, ಅವನು-ಆ ಕರ್ಣಸೂನುವು, ಇಂತು-ಈ ರೀತಿಯಾಗಿ ಅಂದರೆ ಮುಂದೆ ಹೇಳುವಂತೆ, ಎಂದನು-ಎಂದು ನುಡಿದನು ||೩೨||

ಟೀ|| ಆರಾದೊಡೆ-ನಾನು ಬಾಲನಾದರೂ ಅಥವ ತರುಣನಾದರೂ, ಏನು-ತನಗೇನು, ನಾನು, ಅಶ್ವಮಂ-ಹಯವನ್ನು, ಬಿಡುವನಲ್ಲ-ಎಂದಿಗೂ ನಿನ್ನ ವಶಮಾಡುವುದಿಲ್ಲ, ಮದವಾರಣಂ-ಮದ್ದಾನೆಯು, ಪಿರಿದು-ಗಾತ್ರವಾದ್ದು, ಆದೊಡೆ-ಆದ

---

ಸೈನ್ಯವು ಭೀಮಸೇನನನ್ನು ಮುತ್ತಿಕೊಂಡಿರುವ ಕಾಲಕ್ಕೆ ಯೌವನಾಶ್ವಮಹೀಪಾಲನು ಕೂಡ ವಾಯು ವೇಗದಿಂದ ಬರುತ್ತಿರುವದನ್ನು ಕರ್ಣನಂದನನು ನೋಡಿ ಮುಂದೆ ಬರಲು ಅವಕಾಶವನ್ನೀಯದೆ ಶತ್ರುಸೈನ್ಯದ ಮುಂಭಾಗವನ್ನೆಲ್ಲಾ ದಿಕ್ಕುದಿಕ್ಕಿಗೂ ಚದರಿಸಿ ಬಿಟ್ಟನು. ಕೂಡಲೆ ಯೌವನಾಶ್ವನ ಚತುರಂಗಬಲವೂ ಏಕೀಭವಿಸಿ ಕರ್ಣಸುತನನ್ನು ಎಲ್ಲೆಲ್ಲಿಯೂ ಮುತ್ತಿಕೊಳ್ಳಲು ಆಗ ವೃಷಕೇತುವು ತನ್ನ ಕೈಯ್ಯಲ್ಲಿದ್ದ ಧನುಸ್ಸಿಗೆ ಬಾಣವನ್ನು ತೊಟ್ಟು ಶತ್ರುಸೈನ್ಯವನ್ನು ಹೊಡೆಯಲು ವೃಷಧ್ವಜನ ಬಾಣದ ಏಟುಗಳನ್ನು ತಡೆಯಲಾರದೆ ಸೈನ್ಯವೆಲ್ಲಾ ಹಿಮ್ಮೆಟ್ಟಲುದ್ಯುಕ್ತವಾಯಿತು. ||೩೧|| ಸೈನ್ಯವು ಈ ರೀತಿಯಲ್ಲಿ ಚದರಿ ಹೋದದ್ದನ್ನು ಯೌವನಾಶ್ವನು ನೋಡಿ ಕೋಪಾವಿಷ್ಟನಾಗಿ ರಥವನ್ನು ಬೇಗಬೇಗನೆ ನಡೆಸುತ್ತಲೂ ನಮ್ಮ ಅಶ್ವವನ್ನು ಕದ್ದುಕೊಂಡು ಹೋಗುತ್ತಲಿರುವನು ಯಾರು, ಅವನನ್ನು ಬೇಗ ನನಗೆ ತೋರಿಸಿ, ಈಗಲೆ ಅವನನ್ನು ಕೊಂದು ಅವನ ರಕ್ತವನ್ನು ಭೂತಗಣಂಗಳಿಗೆ ಅರ್ಪಿಸುವೆನು ಎಂದು ಸಿಂಹನಾದವಂ ಮಾಡುತ್ತ ಬರುತ್ತಿರುವ ಯೌವನಾಶ್ವನನ್ನು ವೃಷಕೇತುವು ಪ್ರತಿಭಟಿಸಿ ಧನುಸ್ಸಿಗೆ ಹೆದೆಯನ್ನೇರಿಸಿ ಯುದ್ಧ ಸನ್ನದ್ಧನಾಗಿರುವುದನ್ನು ಯೌವನಾಶ್ವನು ನೋಡಿ, ಆ ಬಾಲಕನಾದ ಕರ್ಣಜನನ್ನು ಕುರಿತು, ಎಲಾ ನೀನು ಯಾರು? ಪರಾಕ್ರಮಿಗಳಾದ ನಮ್ಮೊಂದಿಗೆ ಯುದ್ಧವೆಂದರೇನು? ನೀನು ಇನ್ನೂ ಅರಿಯದ ಬಾಲನು ನಿನ್ನೊಡನೆ ನಮಗೆ ಯುದ್ಧವು ಸಲ್ಲದು. ಕುದುರೆಯನ್ನು ಬಿಟ್ಟು ನಡೆ ಎಂದು ನುಡಿದನು. ||೩೨|| ಈ ಮಾತುಗಳನ್ನು ವೃಷ

ನಲ್ಲನುದ | ವಾರಣಂಪಿರಿದಾದೊಡೆಳಸಿಂಗಮಂಜಿಕೆಲ | ಸಾರುವುದೆನಿನ್ನತನುವಿನತೋರದಾಯತಕೆಕಲಿಗಳೆದೆಕಾತರಿಪುದೆ ||
ವೀರನಾದೊಡೆಕೈದುಮುಷ್ಟಿಗಳಘೋರಪ್ರ | ಹಾರನುಂತೋರಿಸೀಸ್ಥೂಲಸೂಕ್ಷ್ಮಂಗಳವಿ | ಚಾರಮೇಕೆನುತವೃಷಕೇತುತೆಗ
ದೆಚ್ಚನಾನೃಪನಕಾಯಂನೋಯಲು || ೩೩ || ಲೋಕದೋಳ್ತನ್ನೊಳ್ಪೊಣರ್ವಭಟರಿಲ್ಲಸೀ | ನೇಕಲಿಕಣಾಪಸುಳೆಯೆಂದು
ಸೈರಿಸಿದನಿನ | ಗಾಕೆವಾಳಿಕೆಯಧೀರತ್ವಮುಂಟಾದೊಡದುಬಳಿಕೆನ್ಮಪುಣ್ಯಮೆನುತ || ಆಕರ್ಣಪೂರದಿಂತೆಗೆದೆಚ್ಚನಾಭೂಪ |
ನಾಕರ್ಣಸಂಭವಂಕಡಿದನೆಡೆಯೊಳ್ಸರಲ | ನೇಕಾರ್ಣವಂಮೇರೆತಪ್ಪಿತೆನೆಮುಸುಕಿದಂಕಣೆಯಿಂದವನರಥವನು || ೩೪ ||
ಮಾರ್ಗದೋಳ್ಮಾರ್ಗಣಂಗಳನರಿದುಕರ್ಣಜಂ | ಕೂರ್ಗಣೆಯಕಾರ್ಗಾಲನುಂಸೃಜಿಸಲಾನೃಪನ | ತೇರ್ಗೆರಗಿಕೊರ್ಗೊಂಡು
ಮುತ್ತಿತುಶರೌಘಮದನೇನೆಂಬೆನಾಕ್ಷಣದೊಳು || ಪೆರ್ಗಳಿಂದೋರ್ಗುಡಿಸಿಸಾರಥಿಬಳಲ್ದಕೆ | ಸ್ಕೀರ್ಗಾರಿದೀಘಶಯುನಂ

---

ಮಾತ್ರಕ್ಕೇ, ಎಳಸಿಂಗಂ-ಮರಿಸಿಂಹವು, ಅಂಜಿ-ಹೆದರಿ, ಕೆಲಸಾರುವುದೆ-ಹಿಮ್ಮೆಟ್ಟುವುದೇ, ನಿನ್ನ-ನಿನ್ನಯ, ತನುವಿನ-ದೇಹದ, ತೋರದ-ಗಾತ್ರಕ್ಕೂ, ಆಯತಕೆ-ವಿಸ್ತಾರಕ್ಕೂ, ಕಲಿಗಳ-ವೀರರ, ಎದೆ-ಧೈರ್ಯವು, ಕಾತರಿಪುದೆ-ಕುಂದುವುದೆ, ವೀರನು-ಧೀರನು, ಅಪೊಡೆ-ಆಗಿದ್ದರೆ, ಕೈದು-ಖಡ್ಗಾದಿಗಳ, ಮುಷ್ಟಿಗಳ-ಹಿಡಿಗಳ, ಘೋರ-ಕಠಿಣವಾದ, ಪ್ರಹಾರಮಂ-ಏಟುಗಳನ್ನೂ, ತೋರಿಸು-ಉಂಟುಮಾಡು, ಈ ಸ್ಥೂಲಸೂಕ್ಷ್ಮಂಗಳ-ಈ ಗುರುಲಘುವೆನ್ನುವ, ವಿಚಾರಂ-ಚರ್ಚೆಯು. ಏಕೆ-ಏತಕ್ಕೆ ಮಾಡುತ್ತಿ, ಎತುತ-ಎಂದು ಹೇಳುತ್ತ, ವೃಷಕೇತು-ವೃಷಧ್ವಜನು, ಆನೃಪನ-ಆ ಭದ್ರಗಿರಿರಾಜನ, ಕಾಯಂ-ದೇಹವು, ನೋಯಲು-ಬಾಧೆಯನ್ನು ಪಡುವಂತೆ, ಎಚ್ಚನು-ಬಾಣದಿಂದ ಹೊಡೆದನು || ೩೩ ||

ಟೀ|| ಲೋಕದೊಳ್-ಜಗತ್ತಿನಲ್ಲಿ, ತನ್ನೊಳ್-ತನ್ನೊಂದಿಗೆ, ಪೊಣರ್ವ-ಎದುರುನಿಲ್ಲುವ, ಭಟರು-ವೀರರು, ಇಲ್ಲ-ಇಲ್ಲವು, ಕಲಿ-ಶೂರಾಗ್ರಣಿಯು, ನೀನೇಕಣಾ-ನೀನೆ ಅಲ್ಲವೆ, ಪಸುಳೆಎಂದು-ಹುಡುಗನೆಂಬುದಾಗಿ, ಸೈರಿಸಿದೆ-ಮನ್ನಿಸಿರುವೆನು, ನಿನಗೆ, ಆಕೆವಾಳಿಕೆಯ-ವೀರತನದ, ಧೀರತ್ವಂ-ಶೌರ್ಯವು, ಉಂಟಾದೊಡೆ-ಇದ್ದಲ್ಲಿ, ಅದು-ಆ ಎದೆಯು, ಬಳಿಕ-ಇನ್ನು ಮುಂದೆ, ನಮ್ಮಪುಣ್ಯಂ-ನಮ್ಮ ಪುಣ್ಯಶೇಷವು, ಎನುತ-ಎಂದು ನುಡಿಯುತ್ತ, ಆ ಕರ್ಣಪೂರದಿಂ-ಶ್ರವಣೇಂದ್ರಿಯದ ತುದಿವರೆಗೂ, ತೆಗೆದು-ಸೆಳೆದು, ಆ ಭೂಪಂ-ಆ ಯೌವನಾಶ್ವಾವನಿಪನು, ಎಚ್ಚನು-ಪ್ರಯೋಗಮಂ ಮಾಡಿದನು, ಈ ಕರ್ಣಸಂಭವಂ-ಈ ಕರ್ಣನಂದನನು, ಎಡೆಯೊಳ್-ಮಧ್ಯಮಾರ್ಗದಲ್ಲಿಯೆ, ಸರಳನು-ಅಲಗನ್ನು, ಕಡಿದನು-ತುಂಡುಮಾಡಿಬಿಟ್ಟನು, ಏಕಾರ್ಣವಂ-ಪ್ರಪಂಚದಲ್ಲಿ ಹೆಸರುವಾಸಿಯಂ ಪಡೆದಿರುವ ಏಳು ಕಡಲುಗಳೂ ಒಟ್ಟುಸೇರಿ ಒಂದಾದ ದೊಡ್ಡ ಅಬ್ಧಿಯು, ಮೇರೆ-ಎಲ್ಲೆಯನ್ನು, ತಪ್ಪಿತು-ಬಿಟ್ಟುಬಿಟ್ಟಿತು, ಎನೆ-ಎಂಬಂತೆ, ಕಣೆಯಿಂದ-ಸರಲಿನಿಂದ, ಅವನ-ಆ ಯೌವನಾಶ್ವಮಹೀಪಾಲನ, ರಥವನು-ಸ್ಯಂದನವನ್ನು, ಮುಸುಕಿದಂ-ಆವರಿಸಿಬಿಟ್ಟನು || ೩೪ ||

ಟೀ|| ಕರ್ಣಜಂ-ಕರ್ಣಸೂನುವು, ಮಾರ್ಗದೋಳ್-ಹಾದಿಗಳಲ್ಲಿ, ಮಾರ್ಗಣಂಗಳನು-ಸರಲ್ಗಳನ್ನು, ಅರಿದು-ಛೇದಿಸಿ, ಕೂರ್ಗಣೆಯ-ಚೂಪಾದ ಬಾಣಗಳ, ಕಾರ್ಗಾಲನುಂ-ವರ್ಷಾಕಾಲವನ್ನು, ಸೃಜಿಸಲು-ಉಂಟುಮಾಡಲು, ಆಕ್ಷಣದೋಳ್-ಕೂಡಲೆ, ಶರೌಘಂ-ಸರಲ್ಗಳ ರಾಶಿಯು, ಆನೃಪನ-ಆ ರಾಜನ, ತೇರ್ಗೆ-ಸ್ಯಂದನಕ್ಕೆ, ಎರಗಿ-ಹೋಗಿಸೇರಿ, ಕೂರ್ಗೊಂಡು-ಪ್ರವೇಶನಮಾಡಿ, ಮುತ್ತಿತು-ಆವರಿಸಿತು, ಅದನು-ಆ ಅಚ್ಚರಿಯನ್ನು, ಏನೆಂಬೆನು-ಏನೆಂದುವರ್ಣಿಸಿಲಿ, ಸಾರಥಿ-ರಥದ ಆಳು, ಪೆರ್ಗಳಿಂದ-ಗಾಯಗಳಿಂದ, ಬಳಲ್ದು-ಆಯಸಂಗೊಂಡು, ಓರ್ಗುಡಿಸೆ-ಪಕ್ಕಪಕ್ಕಗಳನ್ನು ಸೇರುತ್ತಿರಲು, ಕುದುರೆ

---

ಕೇತುವು ಕೇಳಿ, ಎಲೈ ರಾಜನೆ ನಾನು ಚಿಕ್ಕವನಾದರೇನು? ಮದ್ದಾನೆಯು ದೊಡ್ಡದೆಂದು ಸಿಂಹದ ಮರಿಯು ಓಡಿಹೋದೀತೆ? ಹಾಗೆಯೇ ನೀನು ದೊಡ್ಡವನಾದಮಾತ್ರಕ್ಕೆ ಶೂರನಾದ ನಾನು ಹೆದರುವೆನೆಂದು ತಿಳಿಯುವಿಯಾ? ನಿನ್ನ ಕೈಲಾದರೆ ಅಸ್ತ್ರಶಸ್ತ್ರಗಳಿಂದಲೂ ಮುಷ್ಟಾಮುಷ್ಟಿಯಿಂದಲೂ ಹೋರಾಡಿ ಗೆದ್ದು ಅಶ್ವವನ್ನು ಬಿಡಿಸಿಕೊ, ರಣರಂಗದಲ್ಲಿ ಚಿಕ್ಕವರು ದೊಡ್ಡವರೆಂಬ ಭೇದವೇನು? ಎಂದು ನುಡಿಯುತ್ತ ಕ್ರೂರವಾದ ಒಂಡಾನೊಂದು ಬಾಣವನ್ನು ಅವನ ಕಡೆಗೆ ಗುರಿಯಿಟ್ಟು ಹೊಡೆದನು. ಈ ಬಾಣವು ಯೌವನಾಶ್ವನ ಎದೆಗೆ ಹೋಗಿ ನಾಟ ನೋವನ್ನುಂಟುಮಾಡಲಾಗಿ || ೩೩ || ಯೌವನಾಶ್ವನು ಕರ್ಣಜನನ್ನು ಕುರಿತು, ಎಲೈ ಹುಡುಗನೆ, ಪ್ರಪಂಚದಲ್ಲಿ ನನ್ನ ಮೇಲೆ ಯುದ್ಧಕ್ಕೆ ಬಂದು ಗೆದ್ದವರನ್ನೇ ಕಾಣೆನು—ನಿನ್ನ ಸಮನಾದ ಶೂರನೇ ಇಲ್ಲವು. ಬಾಣಪ್ರಯೋಗದ ವಿದ್ಯೆಯು ನಿನಗೆ ಬಹಳ ಚನ್ನಾಗಿ ಗೊತ್ತಿದೆ ಎಂದು ನುಡಿಯುತ್ತ, ಬಿಲ್ಲಿಗೆ ಬಾಣವನ್ನು ತಗಲಿಸಿ ಆಕರ್ಣಾಂತವಾಗಿ ಸೆಳೆದು ಬಿಟ್ಟ ಯೌವನಾಶ್ವನ ಮಾರ್ಗಣವನ್ನು ಅರ್ಧದಾರಿಯಲ್ಲೇ ಭಂಗಪಡಿಸಿ ಅವನನ್ನೂ ಆತನ ಸೈನ್ಯವನ್ನೂ ಅನೇಕವಾದ || ೩೪ || ಶರವರ್ಷಂಗಳಿಂದ ಮುಚ್ಚಿಬಿಟ್ಟನು. ಇವನ ಬಾಣಪ್ರಯೋಗದಿಂದ ಪ್ರಳಯಕಾಲದ ಮಳೆಯೂ ಮೋಡವೂ ಕತ್ತಲೆಯೂ ದಿಕ್ಕುದಿಕ್ಕಿನಲ್ಲೂ ವ್ಯಾಪ್ತಿಸಲ್ಪಡುಗೂ ತಶಸಿ ಊ ಳಿನಗಬಲ ಚತುರಂವ

ಗೈಯೆಕ್ಕುಮದೆಗೆ । ಕ್ಕೀರ್ಗೋಲಭೋರ್ಗರೆವನೃಪನಂಗದೋಳ್ಕಾಣಿಸಿದವುಜಾಳಂಧ್ರದಂತೆ ॥ ೩೫ ॥ ಒಡಲೊಳಿಡಿದಸ್ತ್ರಮಂ ಕಿತ್ತೊಡನೆಚಿತ್ತದೋಳ್ । ಕ್ಕುಡಿಯಿಡುವಕಡುಗೋಪದುರಿಮಯ್ಯೊಳಿರದೆಪೊರ । ಮಡುವದೋಕಂಗಳಿಂದೆನೆಕೆಂಪಡರ್ದಾಲಿಗಳ್ಭಯಂಕರಮಾಗಲು ॥ ತುಡುಕಿಪಾವಕಮಹಾಬಾಣಮಂತಿರುವಿನೋಳ್ । ಕ್ಕೊಡಿಸಿಕಿವಿವರೆಗೆತೆಗೆದೆಚ್ಚೊಡನನಂದುಕೈ । ಗೆಡದೆಕರ್ಣಾತ್ಮಜಂವಾರುಣಾಸ್ತ್ರಪ್ರಯೋಗದೊಳದಂತಂಪಿಸಿದನು ॥೩೬॥ ಹವ್ಯವಾಹಾಸ್ತ್ರಮಂವರುಣಾಸ್ತ್ರದಿಂಗೆಲ್ದು । ನವ್ಯಮೇಘಾಸ್ತ್ರಮಂಕರ್ಣಜಂಪೊಡೆಯೆವಾ । ಯುವ್ಯಾಸ್ತ್ರದಿಂದಬರಿಕೈದವಂತಿಮಿರಾಸ್ತ್ರಮಂಜೋಡಿಸಲ್ಕಾತನು ॥ ರವ್ಯಸ್ತ್ರದಿಂಜೈಸಿ ಶೈಲಾಸ್ತ್ರಮಂತೊಡಲ್ । ದಿವ್ಯಕುಲಿಶಾಸ್ತ್ರದಿಂಮುರಿದಾನೃಪಾಲನು । ಗ್ರವ್ಯಾಳದಸ್ತ್ರಮಂತೆಗೆಯಲ್ಕೆಗರುಡಾಸ್ತ್ರದಿಂದಿನಂಖಂಡಿಸಿದನು ॥ ೩೭ ॥ ಪೂತುರೇತರುಣಮಂತ್ರಾಸ್ತ್ರಪ್ರತೀಕಾರ । ಚಾತುರ್ಯಮುಂಟೆಲಾನಿನ್ನೊಳದುಲೇಸುಗೆ । ಲ್ವಾತುರಮದೇಕಂ

---

ಗಳು–ಹಯಗಳು, ಕೆನ್ನೀರ–ನೆತ್ತರನ್ನು, ಕಾರಿ–ಸುರಿಸಿ, ದೀರ್ಘಶಯನಂಗೈಯಲು–ದೀರ್ಘನಿದ್ರೆಯನ್ನು ತಾಳಲು, ನೇರ್ಗೋಲ–ನೀಟಾದ ಸರಲುಗಳ, ಪೋರ್ಗಳು–ಹಣ್ಣುಗಳು ಅಥವಾ ಏಟಿನ ಕುರುಹುಗಳು, ಆ ನೃಪನ–ಆ ಅರಸನ, ಅಂಗದೋಳ್–ದೇಹದಲ್ಲಿ, ಜಾಳಾಂಧ್ರದಂತೆ–ಜಲ್ಲಡಿಯಹಾಗೆ, ಕಾಣಿಸಿದವು–ಆಗಿಹೋದವು ॥ ೩೫ ॥

ಟೀ॥ ಒಡಲೊಳ್–ದೇಹದಲ್ಲಿ, ಇಡಿದ–ಪ್ರವೇಶಮಾಡಿದ, ಅಸ್ತ್ರಮಂ–ಮಂತ್ರಪೂರ್ವಕವಾದ ಸರಲನ್ನು, ಕಿತ್ತು–ಈಚೆಗೆ ತೆಗೆದು, ಒಡನೆ–ಕೂಡಲೆ, ಚಿತ್ತದೋಳ್–ಹೃದಯದಲ್ಲಿ, ಕುಡಿಯಿಡುವ–ಹುಟ್ಟಲು ಪ್ರಾರಂಭಿಸುವ, ಕಡು–ಹೆಚ್ಚಾದ, ಕೋಪದ–ಮುಳಿಸಿನ, ಉರಿ–ಉರಿಯು, ಮೈಯೊಳು–ಶರೀರದಲ್ಲಿ, ಇರದೆ–ಸೇರಿರಲೊಲ್ಲದೆ, ಕಂಗಳಿಂ–ನಯನಂಗಳಿಂದ, ಪೊರಮಡುವುದೋ–ಈಚೆಗೆ ಬರುತ್ತಲಿವೆಯೊ, ಎನೆ–ಎಂಬಂತೆ, ಕೆಂಪಡರ್ದ–ರಕ್ತವರ್ಣವಾದ, ಆಲಿಗಳು–ನಯನಂಗಳು, ಭಯಂಕರಂ–ಹೆದರಿಕೆಯನ್ನುಂಟುಮಾಡುವುದು, ಆಗಲು–ಆಗಲಾಗಿ, ಪಾವಕ–ಅಗ್ನಿಸಂಬಂಧವಾದ, ಮಹಾ–ಶ್ರೇಷ್ಠವಾದ, ಬಾಣಮಂ–ಒಂದಾನೊಂದು ಸರಲನ್ನು, ತುಡುಕಿ – ಸೆಳೆದುಕೊಂಡು, ತಿರುವಿನೋಳ್ – ಹೆದೆಯಲ್ಲಿ, ತೊಡಿಸಿ–ಏರಿಸಿ, ಕಿವಿವರೆಗೆ–ಆಕರ್ಣಾಂತವಾಗಿ, ತೆಗೆದು–ಎಳೆದುಕೊಂಡು, ಆವನು–ಯೌವನಾಶ್ವನು, ಎಚ್ಚೊಡೆ–ಪ್ರಯೋಗವಂ ಮಾಡಲು, ಅಂದು–ಆ ಕಾಲದಲ್ಲಿ, ಕೈಗೆಡದೆ–ಎದೆಗುಂದದೆ (ಆ ಬಾಣಕ್ಕೆ ಸಿಕ್ಕದೆ), ವಾರುಣ–ವರುಣನ ಸಂಬಂಧವಾದ ಸರಲಿನ, ಪ್ರಯೋಗದಿಂದ–ಬಿಡುವಿಕೆಯಿಂದ, ಅದಂ–ಆ ಅಗ್ನಿಸಂಬಂಧವಾದ ಅಸ್ತ್ರವನ್ನು, ಕರ್ಣಾತ್ಮಜಂ–ಕರ್ಣಸೂನುವು, ತಂಪಿಸಿದನು–ಶಮನವಾಗುವಂತೆ ಮಾಡಿಬಿಟ್ಟನು ॥ ೩೬ ॥

ಟೀ॥ ಕರ್ಣಜಂ – ಕರ್ಣನಂದನನು, ಹವ್ಯವಾಹಾಸ್ತ್ರಮಂ – ಆಗ್ನೇಯಾಸ್ತ್ರವನ್ನು, ವರುಣಾಸ್ತ್ರದಿಂ – ವರುಣನ ಅಸ್ತ್ರವನ್ನು ಪ್ರಯೋಗಿಸಿದ್ದರಿಂದ, ಗೆಲ್ದು–ಜಯಿಸಿ, ನವ್ಯ–ನೂತನವಾದ, ಮೇಘಾಸ್ತ್ರಮಂ–ಮುಗಿಲ ಅಸ್ತ್ರವನ್ನು, ಬಿಡೆ–ಬಿಡಲಾಗಿ, ಅವಂ – ಆ ಭದ್ರಾವತೀರಾಜನು, ವಾಯವ್ಯಾಸ್ತ್ರದಿಂ – ಗಾಳಿಯನ್ನುಂಟುಮಾಡುವ ಬಾಣದಿಂದ, ಬರಿಕೈದು–ನಿರ್ನಾಮ ಮಾಡಿ, (ಯೌವನಾಶ್ವನು), ತಿಮಿರಾಸ್ತ್ರಮಂ–ಅಂಧಕಾರಾಸ್ತ್ರವನ್ನು, ಜೋಡಿಸಲ್ಕೆ–ಏರಿಸಲು, ಈತನು–ಈ ವೃಷಧ್ವಜನು, ರವ್ಯಸ್ತ್ರದಿಂ–ತರಣ್ಯಸ್ತ್ರಪ್ರಯೋಗದಿಂದ, ಜಯಿಸಿ–(ಕರ್ಣಸೂನುವು), ಶೈಲಾಸ್ತ್ರಮಂ – ಪರ್ವತಗಳನ್ನು ಉರುಳಿಸುವ ಅಲಗನ್ನು, ತೊಡಲ್–ಬಿಡಲು, ಆ ನೃಪಾಲನು–(ಆ ಯೌವನಾಶ್ವನೆಂಬ ಭೂಪತಿಯು), ದಿವ್ಯ–ಸ್ತುತ್ಯರ್ಹವಾದ, ಕುಲಿಶಾಸ್ತ್ರದಿಂ–ವಜ್ರದ ಬಾಣದಿಂದ, ಮುರಿದು–ಭೇದಿಸಿ, (ಯೌವನಾಶ್ವನು), ಉಗ್ರ–ಕಠಿಣವಾದ, ವ್ಯಾಳದ–ಹಾವಿನ ಸಂಬಂಧದ, ಅಸ್ತ್ರಮಂ–ಬಾಣವನ್ನು, ತೆಗೆಯಲ್ಕೆ–ಏರಿಸಲು, ಇವಂ–ಈ ಕರ್ಣಸುತನು, ಗರುಡಾಸ್ತ್ರದಿಂ–ಗರುಡನ ಅಸ್ತ್ರದಿಂದ, ಖಂಡಿಸಿದನು–ಪುಡಿಪುಡಿಮಾಡಿದನು ॥ ೩೭ ॥

---

ಪಟವನ್ನಾಗಿ ಮಾಡಿ ಅರಸನ ಮೈಯನ್ನೆಲ್ಲಾ ಗಾಯಮಾಡಿಸಿತು. ॥ ೩೫ ॥ ತನ್ನ ಶರೀರದಲ್ಲಿ ನಾಟಿದ ವೃಷಕೇತುವಿನ ಬಾಣಗಳನ್ನು ಈಚೆಗೆ ಕಿತ್ತುಹಾಕಿ ಹೃದಯದಲ್ಲಿ ಉಂಟಾದ ಕೋಪಾಗ್ನಿಯು ಅಲ್ಲಿಯೇ ನಿಲ್ಲದೆ ಕಣ್ಣುಗಳಿಂದ ಈಚೆಗೆ ಹೊರಟು ಬರುತ್ತಿದೆಯೋ ಎಂಬ ತೆರನಾದ ಕೆಂಡದಂತಿರುವ ಕಣ್ಣುಗಳುಳ್ಳವನಾಗಿ ಆಗ್ನೇಯಾಸ್ತ್ರವನ್ನು ಆಕರ್ಣಾಂತವಾಗಿ ಸೆಳೆದು ಬಿಡಲು ವೃಷಕೇತುವು ಸ್ವಲ್ಪವೂ ಹೆದರದೆ ವರುಣಾಸ್ತ್ರದಿಂದ ಅದನ್ನು ತಣ್ಣಗೆ ಮಾಡಿದನು ॥ ೩೬ ॥ ಕೂಡಲೆ ತಾನು ಧನುಸ್ಸಿಗೆ ಹೆದೆಯನ್ನೇರಿಸಿ ಮೇಘಾಸ್ತ್ರವನ್ನು ಬಿಡಲು ಯೌವನಾಶ್ವನು ವಾಯವ್ಯಾಸ್ತ್ರವನ್ನು ಪ್ರಯೋಗಿಸಿ ಅದನ್ನು ದಿಕ್ಕು ದಿಕ್ಕುಗಳಲ್ಲೂ ಚದರಿಸಿಬಿಟ್ಟು ತಾನು ಕತ್ತಲನ್ನುಂಟುಮಾಡುವ ಅಂಧಕಾರಾಸ್ತ್ರದಿಂದ ವೃಷಕೇತುವು ಹೊಡೆದನು. ಒಡನೆಯೇ ಅವನೂ ರವ್ಯಸ್ತ್ರವನ್ನುಂಟುಮಾಡಿ ಶತ್ರುವಿನಿಂದ ಬಿಡಲ್ಪಟ್ಟ ಅಸ್ತ್ರವನ್ನು ಖಂಡಿಸಿ ಶೈಲಾಸ್ತ್ರವನ್ನು ಬಿಟ್ಟನು. ಇದರ ಬಾಧೆಯನ್ನು ಯೌವನಾಶ್ವನು ವಜ್ರಾಸ್ತ್ರದಿಂದ ನೀಗಿಕೊಂಡು ಸರ್ಪಾಸ್ತ್ರವನ್ನು ಎಸೆಯಲಾಗಿ ವೃಷಕೇತುವು ಅದನ್ನು ವೈನತೇ

ನಿನಗೆನುತವಂಕೈದೋರಿಸಲ್ಕಣೆಗಳಾಗಸದೊಳು || ಸೇತುವಂ ಕಟ್ಟಿದವೊಲಿಟ್ಟಣಿಸಲಾಗವೃಷ | ಕೇತುತರಿದೊಟ್ಟುತಿರಲವರೀರ್ವರೆಡೆಯೊಳ | ಡ್ಡಾತುನಿಂದುದುಬೆಳೆದುಚಿನಕಡಿದಶರಗಿರಿಯದೇನೆಂಬೆನದ್ಭುತವನು | ೩೮ || ಅವರೀರ್ವರೆಸುಗೆಯೊಳ್ಮಂಡಲಾಕೃತಿಯೊಳೊ | ಪ್ಪುವಕಾರ್ಮುಕಂಗಳುದಯಾಸ್ತಮಯಮಪ್ಪಶಶಿ | ರವಿಬಿಂಬದಾಂುತದೊಲಿರೆನಡುವಣಂಬುಗಳ್ತನ್ಮರೀಚಿಗಳಂತಿರೆ || ಅವಯುವದಗಾಯದೊಳೊಗುವರಕ್ತಧಾರೆಗ | ಳ್ತವೆಸಂಜೆಗೆಂಪಿಡಿದತೆರದಿಂದಕಂಗೊಳಿಸೆ | ಭುವನದೊಳ್ಪೊಸತಾಯ್ತುಸಂಗರಂಸಂಧ್ಯಾಗಮುವನಂದುಸೂಚಿಪಂತೆ || ೩೯ || ಎಚ್ಚುಕೈಗೆಡದಾನೃಪಾಲನಾಕಣೆಗಳಂ | ಕೊಚ್ಚಿಬೇಸರ

---

ಟೀ|| ರೇ-ಎಲೊ, ತರುಣ-ದುಷ್ಟನಾದ ಬಾಲನೆ, ಪೂತು-ಭಲಾ, ಪೂತುರೆ-ಭಲಾಭಲಾ (ಶಹಬಾಸ್), ನಿನ್ನೊಳು-ನಿನ್ನಲ್ಲಿ, ಮಂತ್ರಾಸ್ತ್ರ-ಮಂತ್ರಪೂರ್ವಕವಾಗಿ ಪ್ರಯೋಗಿಸಿದ ಸರಲುಗಳಿಗೆ, ಪ್ರತೀಕಾರ-ಪ್ರತಿಯಾಗಿ ಮಾಡುವ, ಚಾತುರ್ಯಂ-ಜಾಣತನವು, ಉಂಟೆಲಾ-ಇರುತ್ತದ್ಯೆಯ್ಯ, ಅದು-ಆ ಪ್ರತಿಕ್ರಿಯೆಯು, ಲೇಸು-ಇನ್ನು ಸಾಕು, ಗೆಲ್ವ-ನನ್ನ ಜೈಸುವ, ಆತುರಂ-ಸಂಭ್ರಮವು, ಅವೇಕೆ-ಏನು ಪ್ರಯೋಜನ, ಎನುತ-ಎಂದು ನುಡಿಯುತ್ತ, ಅನಂ-ಆ ದೊರೆಯು, ಕೈದೋರಿಸಲ್-ಪುನಃ ಬಾಣ ಪ್ರಯೋಗವನ್ನಾರಂಭಿಸಲು, ಆಗಸದೊಳು-ಅಂತರಿಕ್ಷದಲ್ಲಿ, ಕಣೆಗಳು-ಸರಲ್ಗಳು, ಸೇತುವಂ-ಸೇತುವೆಯನ್ನು, ಕಟ್ಟಿದ ವೋಲ್-ಬಂಧಿಸಿದಂತೆ, ಇಟ್ಟಣಿಸಲು-ಸಾಂದ್ರವಾಗಿ ನೆರೆಯಲು,| ಆಗ-ಆ ಕಾಲದಲ್ಲಿ, ವೃಷಧ್ವಜನು, ತರಿದು-ಅವುಗಳನ್ನು ಖಂಡಿಸಿ, ಒಟ್ಟುತ್ತಿರಲು-ಗುಂಪುಸೇರಿಸುತ್ತಿರಲಾಗಿ, ಅವರೀರ್ವರ-ಆ ವೃಷಧ್ವಜ ಯೌವನಾಶ್ವರ, ಎಡೆಯೊಳ್-ಹತ್ತಿರದಲ್ಲಿ, ಚಿನಂ-ಚೂರು ಚೂರಾಗಿ, ಕಡಿದ-ಛೇದಿಸಿದ, ಶರಗಿರಿಯು-ಬಾಣಂಗಳ ಪರ್ವತವು, ಬೆಳೆದು-ಅಭಿವೃದ್ಧಿಯನ್ನೈದಿ, ನಿಂದುದು-ನಿಂತುಬಿಟ್ಟಿತು, ಅದ್ಭುತವನು-ಈ ಆಶ್ಚರ್ಯವನ್ನು, ಅದು ಏನೆಂಬೆನು-ಏನೆಂದು ವರ್ಣಿಸಲಿ ||೩೮||

ಟೀ|| ಅವರೀರ್ವರ-ಆ ಯೌವನಾಶ್ವ ಕರ್ಣನಂದನರ, ಎಸುಗೆಯೊಳು-ಬಾಣಗಳ ಬಿಡುವಿಕೆಯಿಂದ, ಮಂಡಲಾಕೃತಿಯೊಳು-ಗುಂಡಾದ ಆಕಾರದಿಂದ, ಒಪ್ಪುವ-ಹೊಳೆಯುವ, ಕಾರ್ಮುಕಂಗಳು-ಚಾಪಗಳು, ಉದಯ-ಉತ್ಪತ್ತಿಯೂ, ಅಸ್ತಮಯಂ-ಮುಳುಗುವಿಕೆಯೂ, ಅಪ್ಪ-ಆಗುವ, ಶಶಿರವಿಬಿಂಬದ-ಇಂದುವಿನ ಮತ್ತು ಇನನ ಬಿಂಬಂಗಳ, ಆಯುತದವೋಲ್-ವೈಶಾಲ್ಯದಂತೆ, ಇರೆ-ಇರಲು, ನಡುವಣ - ಮಧ್ಯಭಾಗದಲ್ಲಿರತಕ್ಕ, ಅಂಬುಗಳ್ - ಸರಲ್ಗಳು, ತನ್ಮರೀಚಿಗಳಂತೆ-ಆ ರವಿಯ ಮತ್ತು ಹಿಮಾಂಶುವಿನ ಕರಗಳಂತೆ, ಇರೆ-ಇರಲಾಗಿ, ಅವಯುವದ-ಶರೀರ ಭಾಗಗಳ, ಗಾಯದೊಳು-ಹುಣ್ಣಿನಲ್ಲಿ, ಒಗುವ-ಒಸರುವ, ರಕ್ತಧಾರೆಗಳು-ನೆತ್ತರದ ಧಾರೆಯು, ತವೆ-ಸಾಂದ್ರವಾಗಿ, ಸಂಜೆಗೆಂಪು-ಸಂಧ್ಯಾರಾಗವು, ಇಡಿದ-ಆದ, ತೆರದಿಂದ-ವಿಧಾನದಿಂದ, ಕಂಗೊಳಿಸೆ- ಹೊಳೆಯಲು, ಭುವನದೊಳ್ - ಲೋಕದಲ್ಲಿ, ಸಂಗರಂ-ರಣವು, ಸಂಧ್ಯಾಗಮುವನು-ಸಾಯಂ ಕಾಲದ ಸೂಚನೆಯನ್ನು, ಅಂದು-ಆಗ, ಸೂಚಿಪಂತೆ- ತೋರ್ಪಡಿಸುವಹಾಗೆ, ಪೊಸತು-ನವೀನವಾದದ್ದು, ಆಯ್ತು-ಆಗಿ ಬಿಟ್ಟಿತು ||೩೯||

ಟೀ|| ಆ ನೃಪಾಲನು-ಆ ಭದ್ರಾವತಿ ರಾಜನಾದ ಯೌವನಾಶ್ವನು, ಕೈಗೆಡದೆ-ಸ್ವಲ್ಪವೂ ಹಿಂಜರಿಯದೆ, ಎಚ್ಚು-ಸರಲ್ಗಳಂ ಬಿಡಲಾಗಿ, ವೃಷಧ್ವಜಂ-ಕರ್ಣಸುತನು, ಆ ಕಣೆಗಳಂ-ಆ ತೂಣೀರಂಗಳನ್ನು, ಕೊಚ್ಚಿ-ಖಂಡಿಸಿ, ಬೇಸರನು-ಬಳಲ

---

ಯಾಸ್ತ್ರದಿಂದ ಭಂಗಪಡಿಸಿದನು || ೩೭ || ಇದನ್ನು ಯೌವನಾಶ್ವಭೂಪಾಲನು ಕಂಡು ವೃಷಕೇತುವನ್ನು ಕುರಿತು, ಎಲೋ ಬಾಲಕ, ನಿನಗೆ ಬಾಣಪ್ರಯೋಗವೂ ಉಪಸಂಹಾರವೂ ಗೊತ್ತಿದೆಯಷ್ಟೆ, ಒಳ್ಳೇದು ನನ್ನನ್ನು ಗೆಲ್ಲುವುದೆಂತೊ ನೋಡುವೆನು ಎಂದು ನುಡಿಯುತ್ತಾ, ಅಂತರಿಕ್ಷಮಾರ್ಗಕ್ಕೆ ಸೇತುವೆಯನ್ನು ಕಟ್ಟಿದಂತೆ ಶರವರ್ಷವನ್ನು ಕರೆಯಲು ವೃಷಧ್ವಜನು ಅವುಗಳನ್ನೆಲ್ಲಾ ನಿರ್ನಾಮಮಾಡಿದನು. ಇವರೀರ್ವರೆಡೆಯಲ್ಲಿಯೂ ಬಿದ್ದಿದ್ದ ಬಾಣಗಳ ರಾಶಿಯು ದೊಡ್ಡದೊಡ್ಡ ಪರ್ವತಗಳೆಂಬಂತೆ ಭ್ರಾಂತಿಯನ್ನುಂಟುಮಾಡುತ್ತಿದ್ದವು ||೩೮|| ಆಗ ರಣರಂಗವು ಕರ್ಣತನುಜ ಯೌವನಾಶ್ವರಿಂದ ಗಗನಮಾರ್ಗದಲ್ಲಿ ಬಿಡಲ್ಪಡುತ್ತಿರುವ ಮಂಡಲಾಕಾರವಾದ ಶರಗಳೆಂಬ ರವಿಶಶಿಬಿಂಬಗಳಿಂದಲೂ, ಮಧ್ಯಭಾಗದಲ್ಲಿ ಪ್ರಯೋಗಿಸಲ್ಪಡುತ್ತಿರುವ ಬಾಣಗಳೆಂಬ ಕಿರಣಂಗಳಿಂದಲೂ ಶರೀರಗಳಿಂದ ಈಚೆಗೆ ಸುರಿಯುತ್ತಿರುವ ರಕ್ತಧಾರೆ ಎಂಬ ಸಂಧ್ಯಾರಾಗದಿಂದಲೂ, ಸಂಧ್ಯಾಕಾಲವನ್ನೂ ಕೂಡ ಅಲೆಗಳೆಯುತ್ತಿತ್ತು. ಹೀಗಿದ್ದರೂ ಯೌವನಾಶ್ವನು ಬಾಣಪ್ರಯೋಗವಂ ಮಾಡುವುದಕ್ಕೂ ವೃಷಧ್ವಜನು ಅದರ ಪ್ರತೀಕಾರವನ್ನು ಮಾಡುವುದಕ್ಕೂ ಲೇಶವಾದರೂ ಬೇಸರವಿಲ್ಲದೆ ಘೋರಯುದ್ಧವಂ ಗೈಯುತ್ತಿರಲಾಗಿ ಯೌವನಾಶ್ವನು ವೃಷಕೇತುವನ್ನು, ಏನೆಲಾ ಬಾಲಕ, ನೀನು ವಯಸ್ಸಿನಲ್ಲಿ ಚಿಕ್ಕವನಾದರೂ ನಿನ್ನ ಕಾರ್ಯವು ಯೌವನದಿಂದ ಮೆರೆಯುತ್ತಿರುವುದು. ನಿಮ್ಮ ತಂದೆ ಯಾರು? ನಿಮ್ಮ ತಾತನು ಯಾರು? ಎನ್ನುತ ಘೋರವಾದ ಒಂದು ಬಾಣವನ್ನು ಬಿಡಲು ಕರ್ಣಪುತ್ರನು ಇವನ ಮಾತುಗಳನ್ನು ಕೇಳಿ ಕಿಲಕಿಲನೆ ನಗುತ್ತ ಅವನಿಂದ ಪ್ರಯೋಗಿಸಲ್ಪಟ್ಟ ಸ

ನೀನ್ವೃಷಧ್ವಜಂಬಳಿಕದಕೆ । ಮೆಚ್ಚಿ ಕೇಳ್ದಂ ಯೌವನಾಶ್ವನೆಲೆಬಾಲ ನೀಂಪಸುಳೆಯಾಗಿರ್ದೊಡೇನು ॥ ಕೆಚ್ಚೆದೆಯಭಟನಪ್ಪೆ ನಿನ್ನ ಪಡೆದವನಾವ । ನೆಚ್ಚರಿಸು ನಿಮ್ಮ ಮುತ್ತಯ್ಯಯನಾರೆನುತ ತೆಗ । ದೆಚ್ಚೊಡಾತನ ಕೋಲ್ಗಳಂ ಕಡಿದು ನಸುನಗುತ ಕರ್ಣಸುತ ನಿಂತೆಂದನು ॥ ೪೦ ॥ ಪುಯ್ಯಲೊಳ್ಬಂದಳವು ತೋರುತಿರ್ಪಾಗ ನಿಂ । ನಯ್ಯ ಮುತ್ತಯ್ಯನಾರೆಂದು ತನ್ನಂ ಕೇಳ್ವೆ । ಕೈಯರಿದು ಕಾಣಲಿಲ್ಲವೆ ಕರ್ಣ ಕಮಲಹಿತ ಕರರವರನುಸುರಬಹುದೆ ॥ ಪುಯ್ಯಲೆಳಸಿದ ವಿರೋಧಿಯ ಕಿವಿಗೆ ವಿರಹಿತಂ । ಗಯ್ಯಬೇಕಲ್ಲದೆಲೆ ಮರುಳೆ ಕೋವಿದನಾದೊ । ಡೊಯ್ಯನೆ ಪರೋಕ್ಷದೊಳ್ತಿಳಿದುಕೊಳ್ಸಾಕೆನುತ ವೃಷಕೇತು ತೆಗೆದೆಚ್ಚನು ॥ ೪೧ ॥ ಅಪ್ರತಿಮನಪ್ಪೆ ಬಾಲಕಲೇಸುಲೇಸು ಬಾ । ಣಪ್ರಯೋಗಂಗಳೆನುತೊಂದು ಕಣೆಯೂಡಿ ಕ । ರ್ಣಪ್ರದೇಶಕೆ ತೆಗೆದವಂ ಬಿಡಲ್ಕವನುರವನುಗಿಯೆ ಮೈಮರೆದು ಕೂಡೆ ॥ ಸಪ್ರಾಣಿಸುತ ಕೆರಳ್ದಿನ್ನು ನೋಡೈಸಾಯ । ಕಪ್ರಭಾವವನೆನುತ ದೆಸೆಗುರುಳ್ವ ಕನ । ಕಪ್ರಭೆ

ಲ್ಲಿಲ್ಲವು, ಬಳಿಕ–ಅನಂತರ, ಅದಕೆ–ಅವನ ಸಾಹಸ ಕೃತ್ಯಕ್ಕೆ, ಮೆಚ್ಚಿ– ಯೌವನಾಶ್ವನು ಒಪ್ಪಿಕೊಂಡು, ಎಲೆ ಬಾಲ–ಎಲೈ ಹಸುಳೆಯೇ, ನೀಂ–ನೀನು, ಪಸುಳೆಯು–ಬಾಲಕನು, ಆಗಿರ್ದೊಡೆ–ಆದ ಮಾತ್ರಕ್ಕೇ, ಏನು–ನೀನು, ಕೆಚ್ಚೆದೆಯ–ಸ್ಥಿರಹೃದಯದ, ಭಟನು–ವೀರನು, ಅಪ್ಪೆ–ಆಗಿರುತ್ತಿ, ನಿನ್ನ–ನಿನ್ನನ್ನು, ಪಡೆದವನು–ಹಡೆದವನು, ಆವನು–ಯಾರು, ಎಚ್ಚರಿಸು–ಅರುಹು, ನಿಮ್ಮ, ಮುತ್ತಯ್ಯನು–ತಾತನು, ಆರು–ಯಾರು, ಎಂದು ಕೇಳಿದನು–ಪ್ರಶ್ನೆಗೈದನು, ಮತ್ತು ತಗೆದು– ಬಾಣವನ್ನು ಸೆಳೆದು ಕೊಂಡು, ಎಚ್ಚೊಡೆ–ಪ್ರಯೋಗಿಸಲು, (ವೃಷಕೇತುವು) ಆತನ–ಆ ಯೌವನಾಶ್ವನ, ಕೋಲ್ಗಳಂ–ಸರಲುಗಳನ್ನು, ಕಡಿದು–ಛೇದಿಸಿ, ನಸುನಗುತ–ಹುಸಿನಗೆಯಂ ತಾಳುತ್ತ, ಇಂತು–ಮುಂದೆ ಹೇಳುವಂತೆ, ಎಂದನು–ನುಡಿದನು ॥೪೦॥

ಟೀ॥ ಪುಯ್ಯಲೋಳ್–ರಣದಲ್ಲಿ, ಬಂದು–ನೆರೆದು, ಅಳವು–ಸಾಹಸವನ್ನು, ತೋರುತಿರ್ಪಾಗ–ಕಾಣಿಸುವ ಕಾಲದಲ್ಲಿ ನಿಮ್ಮಯ್ಯ–ನಿಮ್ಮ ಪಿತನು, ಮುತ್ತಯ್ಯನು–ಪಿತಾಮಹನೂ, ಆರೆಂದು–ಯಾರು ಎಂಬುದಾಗಿ, ತನ್ನಂ–ನನ್ನನ್ನು, ಕೇಳ್ವೆ–ಪ್ರಶ್ನೆಗೈಯ್ಯುವೆ, ಕೈಯ–ಕೈಯ್ಯನ್ನು, ಅರಿದು–ತಿಳಿದುಕೊಂಡು, ಕಾಣಲಿಲ್ಲವೆ–ಅರಿಯಲಿಲ್ಲವೆ, ಕರ್ಣ–ಕರ್ಣನೆಂದು, ಕಮಲಹಿತಕರಂ–ಪದ್ಮ ಬಂಧುವಾದ ರವಿಯೆಂಬುದಾಗಿ, ಕಾಣಲಿಲ್ಲವೆ–ಊಹೆನಾಡದೆ ಹೋದೆಯಾ, ಅವರನು–ಅವರ ನಾಮಧೇಯಂಗಳನ್ನು, ಉಸುರಬಹುದೆ – ಗುರುಗಳಾದ್ದರಿಂದ ಹೇಳಬಾರದು, ಪುಯ್ಯಲ–ಯುದ್ಧವನ್ನು, ಎಳಸಿದ–ಬಯಸಿದ, ವಿರೋಧಿಯ ಕಿವಿಗೆ–ವಿರಹಿತಂ–ಅಹಿತವಾದದ್ದನ್ನೆ, ಗೈಯ್ಯಬೇಕು–ಎಸಗಬೇಕು, ಅಲ್ಲದೆ–ಅದನ್ನು ಬಿಟ್ಟು, ಎಲೆ ಮರುಳೆ–ಎಲೆ ಮಂದಬುದ್ಧಿಯುಳ್ಳವನೆ, ಕೋವಿದನಾದೊಡೆ–ಬುದ್ಧಿವಂತನಾದರೆ, ಪರೋಕ್ಷದೊಳ್–ಅನ್ಯರಿಂದ, ತಿಳಿದುಕೊ–ಸ್ಮೃತಿಪಥಕ್ಕೆ ತಂದುಕೊ, ಸಾಕು–ನನ್ನನ್ನು ಪ್ರಶ್ನೆ ಮಾಡಬೇಡ, ಎನುತ–ಎಂದು ನುಡಿಯುತ್ತ, ವೃಷಕೇತು–ವೃಷಧ್ವಜನು, ತೆಗೆದ–ಬಾಣವನ್ನು ಎಳೆದು, ಎಚ್ಚನು–ಪ್ರಯೋಗಮಾಡಿದನು ॥೪೧॥

ಟೀ॥ ಬಾಲಕ–ಅಣುಗನೆ, ಅಪ್ರತಿಮನು – ಅಸದೃಶನು, ಅಪ್ಪೆ–ಆಗಿರುತ್ತಿ, ಬಾಣ–ಶರಗಳ, ಪ್ರಯೋಗಂಗಳು–ಹೊಡೆತಗಳು, ಲೇಸು ಲೇಸು–ಒಳ್ಳೆಯದು ಒಳ್ಳೆಯದು, ಎನುತ–ಎಂದು ನುಡಿಯುತ್ತ, ಅವಂ–ಆ ಯೌವನಾಶ್ವನು, ಒಂದು–ಒಂದಾನೊಂದು, ಕಣೆಯ–ಬಾಣವನ್ನು, ಊಡಿ–ಬಿಲ್ಲಿಗೆ ಸೇರಿಸಿ, ಕರ್ಣಪ್ರದೇಶಕೆ–ಆಕರ್ಣಾಂತವಾಗಿಯೂ, ತೆಗೆದು–ಸೆಳೆದು, ಸೆಳೆದು, ಬಿಡಲ್ಕೆ–ಪ್ರಯೋಗಿಸಲು, ಉರವನು–ಹೃದಯವನ್ನು, ಉಗಿಯೆ–ಛೇದಿಸಲು, ಇವನು–ಈ ವೃಷಧ್ವಜನು, ಮೈಮರೆದು–ಸ್ಮೃತಿತಪ್ಪಿ, ಕೂಡ–ಪುನಃ, ಸಪ್ರಾಣಿಸುತ–ಎಚ್ಚತ್ತು, ಕೆರಳ್ದು–ಖಾತಿಯಿಂದ, ಸಾಯಕ–ಶರದ, ಪ್ರಭಾವವನು–ಮಹಿಮೆಯನ್ನು, ಇನ್ನು ನೋಡು–ಈಕ್ಷಿಸು, ಎನುತ–ಎಂದು ನುಡಿಯುತ್ತ, ದೆಸೆದೆಸೆಗೆ–ನಾನಾದಿಕ್ಕುಗಳಿಗೂ, ಉರುಳ್ವ– ವ್ಯಾಪಿಸತಕ್ಕ, ಕನಕ–ಹೇಮದ, ಪ್ರಭೆಯೊಳು–ಪ್ರಕಾಶದಿಂದ, ಎಸೆವ–ಹೊಳೆಯುವ, ಸರಳಂ–ಕಣೆಯನ್ನು, ತೊಟ್ಟು–ನಿರಿಸಿ, ಕೆನ್ನೆಗೆ–ಶ್ರೋತ್ರೇಂದ್ರಿಯದ ವರೆಗೂ, ಎಳೆದು, ಆರ್ದು–ಗರ್ಜಿಸಿ, ಆ ನೃಪನನು–ಆ ಯೌವನಾಶ್ವನೆಂಬ ರಾಯನನ್ನು, ಎಚ್ಚನು–ಹೊಡೆದನು ॥೪೨॥

ಲನ್ನು ಛಿನ್ನಾಭಿನ್ನವಾಗಿ ಮಾಡಿಬಿಟ್ಟು ಯೌವನಾಶ್ವನನ್ನು ಕುರಿತು ॥೪೦॥ ಎಲೈ ರಾಜನೆ, ನಿನಗೆ ಶತ್ರುವಾಗಿ ಬಂದಿರುವ ನನ್ನನ್ನು ಯುದ್ಧಮಾಡಿ ಗೆಲ್ಲಲಾರದೆ ನಿನ್ನ ತಂದೆ ತಾತಂದಿರು ಯಾರೆಂದು ಪ್ರಶ್ನೆ ಮಾಡುವೆಯಾ? ನಿನಗೆ ಬೇಕಾದರೆ ಪರೋಕ್ಷದಲ್ಲಿ ತಿಳಿದುಕೊ ಎಂದು ನುಡಿಯುತ್ತ ಒಂದಾನೊಂದು ಬಾಣದಿಂದ ಯೌವನಾಶ್ವನ ಎದೆಯನ್ನು ಚುಚ್ಚಲಾಗಿ ॥೪೧॥ ಯೌವನಾಶ್ವನು ವೃಷಕೇತುವನ್ನು ಕುರಿತು, ಎಲೆಲಾ ಬಾಲನೆ, ಶಹಬಾಸ್, ಎಂದು ನುಡಿಯುತ್ತ ಮತ್ತೊಂದು ಸರಲನ್ನು ಬಿಲ್ಲಿಗೆ ಸೇರಿಸಿ ಆಕರ್ಣಾಂತವಾಗಿ ಸೆಳೆದು ಅತ್ಯಂತ ಕೋಪದಿಂದ ವೃಷಕೇತುವಿನ ಮೇಲೆ ಬಿಡಲು ಅದು ವೃಷಧ್ವಜನನ್ನು ಮೂರ್ಛಾಕ್ರಾಂತನನ್ನಾಗಿ ಮಾಡಿಬಿಟ್ಟಿತು ॥೪೨॥ ವೃಷಕೇತುವು ಸ್ವಲ್ಪಹೊತ್ತಿನಮೇಲೆ ಎಚ್ಚತ್ತು ಮೇಲಕ್ಕೆದ್ದು ಈ ಬಾಣದ ಪ್ರಭಾವವನ್ನಾದರೂ ಸ್ವಲ್ಪ ನೋಡೆಂದು ಯೌವನಾಶ್ವನೊಂದಿಗೆ ನುಡಿಯುತ್ತ ಅಷ್ಟದಿಕ್ಕುಗಳಲ್ಲಿಯೂ ಸುವರ್ಣಚ್ಛಾಯೆಯ

ಯೊಳಿಸೆನಸರಳಂತೊಟ್ಟುಕೆನ್ನೆಗೆಳೆದಾರ್ದೆಚ್ಚನಾನೃಪನನು ‖ ೪೨ ‖ ಏನೆಂಬೆನಂಸಕರ್ಣಜನಬಾಣದಘಾತ | ಕಾನರೇಂದ್ರಂ ಕರದಚಾಪಮುಂಬಿಟ್ಟುಮೂ | ರ್ಛಾನುಗತನಾಗಲಾತನಬಲಂಮುಂಕೊಂಡುಬಂದಿವನಮೇಲೆಕವಿಯೆ ‖ ಆನೆಯಂಪೊಯ್ದೆಳ ವಸಿಂಗಮುಂಮುತ್ತುವನ್ಮೃ | ಗಾನೀಕಮುಂಕಂಡೆವಿಂದೆನುತತುಡುಕಿದನ | ನೂನಶರಜಾಲಮುಂಕರಿತುರಗರಥಪದಾತಿಗಳಸಂದಣಿ ದಣಿಯಲು ‖ ೪೩ ‖ ತರಿತರಿದುಕತ್ತರಿಸಿಚುಚ್ಚಿನೆಟ್ಟುಚ್ಚಳಿಸಿ | ಕೊರೆದರೆದುಕಡಿದಿರಿದುಬಗಿದುಗಿದುಗಬ್ಬರಿಸಿ | ಪರಿದುಸೀಳ್ದುತ್ತರಿಸಿಕೆತ್ತಿಕಂಡಿಸಿಬಳಚಿತಿವಿದಿಕ್ಕಿಕೊಯ್ದುಪೊಯ್ದು ‖ ಎರಗಿಕವಿದಿಡಿದೊತ್ತಿಕದುಕಿಕೀಲಿಸಿಕೀರಿ | ತುರಗಿತುಂಡಿಸಿತುಳುಕಿನಾಂಟಿನುರುವೊನೆಗೊಂಡು | ನೆರೆಪೊರಳ್ಚಿದವರಿಚತುರ್ಬಲವನೆಲ್ಲಮುಂಕರ್ಣಜನೆಸುವಕಣೆಗಳು ‖ ೪೪ ‖ ತಲೆಬೀಳಲಟ್ಟೆಗಳ್ಕಾದಿದುವುಮೇಣಟ್ಟೆ | ನೆಲೆಕುರುಳೆತಲೆಗಳೆದ್ದಾಡಿದವುಕೈದುಗನೆ | ಳಲುಗಿದವುಖಂಡಿಸಿದತೋಳ್ಗಳುರೆಕಡಿದಕಾಲ್ಗ

---

ಟೀ‖ ಅರಸ_ಜನಮೇಜಯನೆ, ಏನೆಂಬೆನು_ಏನೆಂದು ನುಡಿಯಲಿ, ಕರ್ಣಜನ_ವೃಷಧ್ವಜನ, ಬಾಣದ - ಶರದ, ಘಾತಕೆ-ಏಟಿಗೆ, ಆ ನರೇಂದ್ರಂ_ ಆ ಯೌವನಾಶ್ವ ಭೂಪತಿಯು, ಕರ_ತನ್ನ ಕೈಯಲ್ಲಿದ್ದ, ಚಾಪಮುಂ-ಧನುಸ್ಸನ್ನು, ಬಿಟ್ಟು-ಕೆಡವಿ, ಮೂರ್ಛಾನುಗತನು – ಸ್ಮೃತಿತಪ್ಪಿದವನು, ಆಗಲು - ಆಗಲು, ಆತನ_ಆಭೂಪತಿಯ, ಬಲಂ_ಸೇನಾನಿಕಾಯವು, ಮುಂಕೊಂಡು_ಮುಂದುವರಿದು, ಇವನ ಮೇಲೆ_ಈ ಕರ್ಣತನುಜನ ಮೇಲೆ, ಕವಿಯೆ_ಮುಸುಕಲು, ಆನೆಯಂ_ಗಜವನ್ನು, ಪೊಯ್ದು_ಹೊಡೆದು, ಎಳವ_ಸೆಳೆದುಕ್ಕೊಂಡು ಬರತಕ್ಕ, ಸಿಂಗಮುಂ_ಮೃಗೇಂದ್ರನನ್ನು, ಮುತ್ತುವ-ಕವಿವ, ಮೃಗಾನೀಕಮುಂ_ಜಿಂಕೆ ಮೊದಲಾದವುಗಳ ಗುಂಪನ್ನು, ಇಂದು_ಈ ಹೊತ್ತು, ಕಂಡೆವು-ಈಕ್ಷಿಸಿದೆವು, ಎಂದು-ಎಂಬದಾಗಿ, ಎನುತ_ನುಡಿಯುತ್ತ, ಕರಿತುರಗರಥಪದಾತಿಗಳ-ಚತುರ್ವಿಧಮಾದ ಸೇನಾನಿಚಯದ, ಸಂದಣಿ-ಗುಂಪು, ದಣಿಯಲು-ಸಂತಾಪಮಂ ತಾಳ್ವಂತೆ, ಅನೂನ_ಬಿಡುವಿಲ್ಲದ, ಶರಜಾಲಮುಂ_ಕಣೆವಿಂಡನ್ನು ತುಡುಕಿದನು_ಎಸೆದನು ‖ ೪೩ ‖

ಟೀ‖ ಕರ್ಣಜನು-ಕರ್ಣಾತ್ಮಜನು, ಎಸುವ_ಪ್ರಯೋಗಮಾಡುವ, ಕಣೆಗಳು-ಶರಗಳು, ಎಲ್ಲಮುಂ – ಅಶೇಷವಾದ, ಚತುರ್ಬಲಮುಂ_ನಾಲ್ಕುತೆರನಾದ ದಳವನ್ನು, ತರಿತರಿದು-ಚರ್ಮವೆಲ್ಲಾ ಕಿತ್ತುಹೋಗುವಹಾಗೆ ಮಾಡಿ, ಕತ್ತರಿಸಿ_ತುಂಡಾಗುವಂತೆ ಕಡಿದು, ಚುಚ್ಚಿ_ಇರಿದು, ನೆಟ್ಟು-ನಾಟ, ಉಚ್ಚಳಿಸಿ_ಮೇಲ್ಗಡೆಗೆ ಎದ್ದು, ಕೊರೆದು_ತಿರುವಿ, ಅರೆದು_ನುಣುವುಮಾಡಿ, ಕಡಿದು-ಸೀಳಿ, ಇರಿದು_ಒಳಗೆ ಸುಗ್ಗಿಸಿ, ಬಗಿದು_ಸೀಳಿ, ಉಗಿದು_ನೆತ್ತರನ್ನೆರಚಿ, ಗಬ್ಬರಿಸಿ – ಪೀರ್ದು, ಪರಿದು – ಆವರಿಸಿ, ಸೀಳ್ದು-ಭೇದಿಸಿ, ಉತ್ತರಿಸಿ_ಕತ್ತರಿಸಿ, ಕೆತ್ತಿ_ತುಂಡುಮಾಡಿ, ಖಂಡಿಸಿ_ತುಂಡುಮಾಡಿ, ಬಳಚಿ-ಆವರಿಸಿ, ತಿವಿದು_ಇರಿದು, ಇಕ್ಕಿ-ಹೊಡೆದು, ಕೊಯ್ದು_ಗಾಯಮಾಡಿ, ಪೊಯ್ದು_ಹೊಡೆದು, ಎರಗಿ_ಮೇಲಕ್ಕಡರಿ, ಕವಿದು – ಮೇಲೆಬಿದ್ದು, ಇಡಿದು_ಸಾಂದ್ರವಾಗಿ ನೆರೆದು, ಒತ್ತಿ_ಹಿಂಸಿಸಿ, ಕದುಕಿ_ಭೇದಿಸಿ, ಕೀಲಿಸಿ-ಸೋಕಿಸಿ, ಕೀರಿ_ಪರಚಿ, ತುರಗಿ – ತಳ್ಳಿ, ತುಂಡಿಸಿ-ಪಾಲುಮಾಡಿ, ತುಳುಕಿ_ಭರ್ತಿಮಾಡಿ, ನಾಂಟಿ-ಒಳಹೊಕ್ಕು, ಮರುಮೊನೆಗೊಂಡು_ಬಾಣದ ತುದಿಗಳು ಚೂಪಾಗಿ ಹಿಂಸೆಪಡಿಸಲು, ಪೊರಳ್ಚಿದವು_ಉರುಳಾಡಿಸಿದವು ‖ ೪೪ ‖

ಟೀ‖ ತಲೆ-ತಲೆಯು, ಬೀಳಲು_ಹೊರಳಲು, ಅಟ್ಟೆಗಳು-ಮುಂಡಗಳು, ಕಾದಿದವು – ಹೋರಾಡಿದವು, ಮೇಣ್-ತಿರುಗಿ, ಅಟ್ಟೆ-ರುಂಡಿಗಳು, ನೆಲಕೆ – ಇಳೆಗೆ, ಉರುಳೆ – ಹೊರಳಲು, ತಲೆಗಳು – ಶೀರ್ಷಂಗಳು, ಎದ್ದು – ಮೇಲ್ಗಡೆಗೆ

---

ನ್ನುಂಟುಮಾಡುವ ಸರಲೊಂದನ್ನು ಬಿಲ್ಲಿನೊಳಿಟ್ಟು ಯೌವನಾಶ್ವನ ಮೇಲೆ ಪ್ರಯೋಗಿಸಿದನು ‖ ೪೨ ‖ ಎಲೈ ಜನಮೇಜಯನೆ ಮುಂದೆ ನಡೆದ ಸುದ್ದಿಯನ್ನು ಲಾಲಿಸು. ವೃಷಧ್ವಜನ ಬಾಣವು ಹೋಗಿ ಯೌವನಾಶ್ವನಿಗೆ ತಗಲಿದೊಡನೆಯೆ ಕೈಯಲಿದ್ದ ಬಿಲ್ಲು ಬಾಣಗಳನ್ನೆಲ್ಲಾ ಕೆಳಗೆ ಕೆಡವಿ ತಾನೂ ಮೈಮರೆತು ಧೊಮ್ಮನೆ ನೆಲಕ್ಕೆ ಬಿದ್ದು ಹೋದನು. ಇದನ್ನು ಕಂಡು ಆತನ ಚತುರಂಗಬಲವು ವೃಷಕೇತುವನ್ನು ಎಲ್ಲೆಲ್ಲಿಯೂ ಮುತ್ತಿಕೊಂಡಿತು. ಆನೆಯನ್ನು ಎಳೆದೊಯ್ವ ಸಿಂಹದ ಮರಿಯನ್ನು ಹಿಂಬಾಲಿಸುವ ಜಿಂಕೆ ಹಿಂಡಿನಂತಿರ್ಪ ಈ ಚತುರಂಗ ಬಲವನ್ನು ‖ ೪೩ ‖ ವೃಷಧ್ವಜನಿಂದ ಬಿಡಲ್ಪಟ್ಟ ಬಾಣಸಮುದಾಯವು ಕತ್ತರಿಸುವುದು. ಸೆಳೆಯುವುದು, ಹೊಡೆಯುವುದು, ತಳ್ಳುವುದು ಮೊದಲಾದ ನಾನಾ ಪ್ರಕಾರದಿಂದ ನಿರ್ಮೂಲಮಾಡುತ್ತ ‖ ೪೪ ‖ ಲಿದ್ದರೂಕೂಡ ಸ್ವಲ್ಪವೂ ಹಿಂಜರಿಯದೆ ಯುದ್ಧವಂ ಗೈಯುತಿದ್ದರು. ಅಲ್ಲಿ ವೃಷಕೇತುವಿನ ಬಾಣದ ಏಟಿನಿಂದ ಅನೇಕ ಯೋಧರು ಶಿರಚ್ಛೇದನವನ್ನು ಹೊಂದಿ, ಶಿರವೂ ಮುಂಡವೂ ಬೇರೆಯಾದರೂ ಕೂಡಾ, ಯುದ್ಧವನ್ನು ನಿಲ್ಲಿಸದೆ ಶಿರವು ಕೆಳಗೆ ಬಿದ್ದರೆ ಮುಂಡವೂ, ಮುಂಡವು ಉರುಳಿಕೊಂಡರೆ ರುಂಡವೂ, ಈ ರೀತಿ ಎಡೆಬಿಡದೆ ಕಾದುತ್ತಿದ್ದವು, ಅವರ ಕೈಗಳು ಕತ್ತರಿಸಲ್ಪಟ್ಟು ಕೆಳಗೆ ಬಿದ್ದು ಹೋಗಿದ್ದರೂ ಬಾಣಪ್ರಯೋಗವನ್ನು ಮಾತ್ರ ತಪ್ಪಿಸಲಿಲ್ಲ. ಕಾಲುಗಳು ಕತ್ತರಿಸಲ್ಪಟ್ಟರೂ ಮುಂದೆಮುಂದೆ ನಡೆಯುತ್ತಲೆ ಇದ್ದವು. ಈ ರೀತಿಯಾಗಿ ಘೋರ ಯುದ್ಧವಂಗೈಯುತ್ತಿದ್ದರೂಕೂಡ

ಳ್ಕಂದಕಡಿಯಿಟ್ಟವು ॥ ಕಲಿತನನುದೆಂತೊಪಟುಬಟರಳವಿಗೊಟ್ಟಾಗಿ । ಸಲಿಸರಳಗಾಯಕಿನ್ಮುಡಿವುತಿರ್ದರುಸಮು । ಜ್ಜ್ವಲ ದೀಪವೆಡೆಗೆಮುಗ್ಗುವಪತಂಗಪ್ರಸರಮೆನೆವೃಷಧ್ವಜನಿದಿರೊಳು ॥ ೪೫ ॥ ಕಡಿಕಡಿದುಬಿದ್ದಕೈಕಾಲ್ಗಳಿಂತೋಳ್ಗಳಿಂ । ಪೊಡೆ ಗೆಡದಹೇರೊಡಲಸೀಳ್ಗಳಿಂಪೋಳ್ಗಳಿಂ । ಮಡಿಮಡಿದುರುಳ್ವಕಟ್ಟಾಳ್ಗಳಿಂಬಾಳ್ಗಳಿಂದೊಡೆದತಲೆಯೋಳ್ಗಳಿಂದ ॥ ಕಡುಭಯಂ ಕರವಾಗಲಾರಣದಮಾರಣದ । ನಡುವೆಕಲ್ಪಾಂತಭೈರವನಂತೆಜವನಂತೆ । ಕಡುಮುಳಿದವನಕಾಣುತಲೆಬಿಟ್ಟುಸಲೆಕೆಟ್ಟುಸರಿದರೆಣ್ದೆಸೆಗೆಭಟರು ॥ ೪೬ ॥ ಮೈಮರೆದಭೂಪನಂಬಿಟ್ಟುಪಟುಭಟರುಳಿದೆ । ವೈಮಹಾದೇವೆನುತಸರಿದರೆಣ್ದೆಸೆಗಿವಂ । ಕೈಮಾಡಲೊರ್ವರಂಕಾಣದೆಬಳಲ್ದರಿಪುಚೇತರಿಸಿಕೊಳ್ಳದಿರಲು ॥ ವೈಮನಸ್ಯದೊಳಕಟತಪ್ಪಿತೆರಣಾಟೋಪ । ಮೈಮೊಗಂಬಲ್ಲನೆ

---

ಎದ್ದು, ಅಡಿದವು – ಕಾದಿದವು, ಖಂಡಿಸಿದ – ಕತ್ತರಿಸಲ್ಪಟ್ಟ, ತೋಳ್ಗಳು – ಭುಜಗಳು, ಕೈದುಗಳನು – ಕಣೆಗಳನ್ನು, ಎಲುಗಿದವು–ಎರಚಿದವು ಉರೆ–ನಿಶ್ಶೇಷವಾಗಿ, ಕಡಿದ–ಛೇದಿಸಲ್ಪಟ್ಟ, ಕಾಲ್ಗಳು–ಅಡಿಗಳು, ಮುಂದಕ್ಕೆ – ಮುಂಭಾಗಕ್ಕೆ, ಅಡಿಯಿಟ್ಟವು–ಪಾದಗಳನ್ನು ಇರಿಸಿದವು. ಕಲಿತನಂ–ವೃಷಧ್ವಜನ ಶೌರ್ಯವೆಂಬುದು, ಅದುಎಂತೋ–ಇನ್ನು ಎಂಥಾದ್ದೋ, ಅಳವಿಗೆ–ಆ ಹವಕ್ಕೆ, ಪಟುಭಟರು–ಯೋಧಾಗ್ರೇಸರರು, ಒಟ್ಟಾಗಿ–ಏಕವಾಗಿ, ಸಲೆ–ಚೆನ್ನಾಗಿ, ಸರಳ–ಕಣೆಗಳ, ಗಾಯದಿಂದ–ವ್ರಣದಿಂದ, ಸಮುಜ್ಜ್ವಲ–ಥಳಥಳಿಸುತ್ತಿರುವ, ದೀಪದ, ಎಡೆಗೆ–ಹತ್ತಿರಕ್ಕೆ, ಮುಗ್ಗುವ–ಕವಿಯುವ, ಪತಂಗ–ದೀಪದ ಹುಳಗಳ, ಪ್ರಸರಂ–ಗುಂಪು, ಎನೆ–ಎಂಬಂತೆ, ವೃಷಧ್ವಜನ–ಕರ್ಣನಂದನನ, ಇದಿರಿನೊಳು–ಮುಂಭಾಗದಲ್ಲಿ, ಮಡಿವುತ್ತ–ಮರಣವನ್ನೈದುತ್ತ, ಇರ್ದುದು–ಇತ್ತು ॥ ೪೫ ॥

ಟೀ॥ ಕಡಿಕಡಿದು–ಛೇದಿಸಿಛೇದಿಸಿ, ಬಿದ್ದ – ನೆಲಕ್ಕೆ ಉರುಳಿದ, ಕೈ–ಹಸ್ತಗಳಿಂದಲೂ, ಕಾಲ್ಗಳಿಂ – ಪಾದಗಳಿಂದಲೂ, ತೋಳ್ಗಳಿಂ–ಬಾಹುಗಳಿಂದಲೂ, ಪೊಡೆ–ಉದರವು, ಕೆಡದ–ಹೀನವಾಗದ, ಪೇರೊಡಲು–ಗಾತ್ರವಾದ ಶರೀರದ, ಸೀಳ್ಗಳಿಂ–ಭಾಗಗಳಿಂದಲೂ, ಪೋಳ್ಗಳಿಂ–ಹೋಳುಗಳಿಂದಲೂ, ಮಡಿಮಡಿದು–ಮರಣವನ್ನು ಹೊಂದಿ ಹೊಂದಿ, ಉರುಳ್ವ–ಕೆಳಸಾರ್ವ, ಕಟ್ಟಾಳ್ಗಳಿಂ–ಶೂರಾಗ್ರಣಿಗಳಿಂದಲೂ, ಆಳ್ಗಳಿಂ–ಬಲಶಾಲಿಗಳಾದ ಗೃತಹಸ್ತರಿಂದಲೂ, ಒಡೆದ–ಛೇದಿಸಲ್ಪಟ್ಟ, ತಲೆಯೋಳ್ಗಳಿಂ–ತಲೆಬುರುಡೆಗಳಿಂದಲೂ, ಕಡು–ಬಹಳ, ಭಯಂಕರಮಾಗಲು–ದಿಗಲನ್ನು ಹುಟ್ಟಿಸಲು, ಆ ರಣದ–ಆ ಆಜಿಯ, ಮಾರಣದ–ಕೊಲ್ಲುವ ಪ್ರದೇಶದ, ನಡುವೆ, ಕಲ್ಪಾಂತ–ಕೊನೆಗಾಲದ, ಭೈರವನಂತೆ–ಮಹೇಶ್ವರನಹಾಗೆ, ಜವನಂತೆ–ಯಮನ ಹಾಗೆ, ಕಡು–ಬಹುವಾಗಿ, ಮುನಿದ–ಸಿಟ್ಟುಮಾಡಿಕೊಂಡ, ಅವನ–ಆ ಕರ್ಣಸೂನುವನ್ನು, ಕಾಣುತಲೆ – ನೋಡಿದೊಡನೆಯೆ, ಬಿಟ್ಟು–ಆಜಿಯಂ ವಿಸರ್ಜಿಸಿ, ಸಲೆ–ಪೂರ್ತಿಯಾಗಿ, ಕೆಟ್ಟು–ಪರಾಜಿತರಾಗಿ, ಭಟರು–ಯೋಧರು, ಎಣ್ದೆಸೆಗೆ–ಅಷ್ಟದಿಕ್ಕುಗಳಿಗೂ, ಸರಿದರು–ಪಲಾಯನಮಾಡಿದರು ॥ ೪೬ ॥

ಟೀ॥ ಮೈಮರೆದ–ಸ್ಮರಣೆತಪ್ಪಿಹೋದ, ಭೂಪನಂ–ಭದ್ರಾವತಿರಾಜನನ್ನು, ಬಿಟ್ಟು– ತ್ಯಜಿಸಿ ಪಟುಭಟರು– ಶೂರರಾದ ಯೋಧರು, ಉಳಿದೆವೈ – ಬದುಕಿದೆವು, ಎನುತ - ಎಂದು ನುಡಿಯುತ್ತ, ಎಣ್ದೆಸೆಗೆ– ಅಷ್ಟದಿಕ್ಕುಗಳಿಗೂ, ಸರಿದರು–ಪಲಾಯನಗೈದರು, ಇವಂ - ಈ ಕರ್ಣತನುಜನು, ಕೈಮಾಡಲು - ಹೋರಾಡಲು, ಓರ್ವರಂ - ಎದುರಾಳುಗಳಾರನೂ, ಕಾಣದೆ–ಈಕ್ಷಿಸದೆ, ಬಳಲ್ದ–ಆಯಸಂತಾಳ್ದ, ರಿಪು–ಹಗೆಯಾದ ಯೌವನಾಶ್ವಮಹಿಪನು, ಚೇತರಿಸಿಕೊಳ್ಳದೆ–ಜ್ಞಾನವನ್ನೈದದೆ, ಇರಲು–ಇರಲಾಗಿ, ವೈಮನಸ್ಯದೊಳು–ಹೃದಯದುಃಖದಿಂದ, ಅಕಟಾ–ಅಹಾ, ರಣ–ಕದನದ, ಆಟೋಪ–ಶೌರ್ಯವು, ತಪ್ಪಿತೆ–ಶಾಂತವಾಯಿತೆ, ಐಮೊಗಂ–ಪಂಚ ಮುಖಗಳುಳ್ಳಪರಮೇಶ್ವರನು, ಬಲ್ಲನು–ಅರಿತಿರುವನು, ಎನುತ–ಎಂದುನುಡಿಯುತ್ತ, ಇವನ–ಈ ಮಹೀಶ್ವರನ, ಎಡೆಗೆ–ಬಳಿಗೆ, ಬಂದು–ಐತಂದು, ಇದು–ಈ ಬಗೆಯಾಗಿ ಸ್ಮೃತಿತಪ್ಪಿರೋಣವು, ಏನೈ–ಏನು, ಎನಲು–

---

ವೃಷಧ್ವಜನ ಪೆಟ್ಟು ಬಲವಾಗಲು ದೀಪವನ್ನಾವರಿಸಿ ಮಡಿಯುವ ಪತಂಗದ ಹುಳಗಳಂತೆ ಯೌವನಾಶ್ವನ ಚತುರಂಗಬಲವು ಇದ್ದ ಕಡೆಯಲ್ಲಿಯೆ ಬಿದ್ದುಬಿದ್ದು ಮೃತ್ಯುದೇವತೆಗೆ ತುತ್ತಾಗುತ್ತಿತ್ತು ॥ ೪೫ ॥ ಮತ್ತೆ ಕೆಲವರು, ತಮ್ಮ ಸೈನ್ಯದಲ್ಲಿದ್ದ ಅನೇಕರ ಶಿರಸ್ಸನ್ನೂ, ಕೈಕಾಲ್ಗಳನ್ನೂ, ಬೇರೆಬೇರೆಯಾಗಿ ಕತ್ತರಿಸಿ ಅವರ ಶರೀರವನ್ನೆಲ್ಲಾ ಛಿದ್ರಛಿದ್ರವಾಗಿ ಸೀಳಿ, ಪ್ರಳಯಾಗ್ನಿಯಂತೆಯೂ, ಕಾಲ್ಪಾಂತ ಭೈರವನಹಾಗೂ, ಮಹಾ ಭಯಂಕರಾಕಾರವಾಗಿಯೂ ಇರುವ ಮೇಘನಾದನನ್ನು ನೋಡಿದ ಮಾತ್ರದಿಂದಲೇ ದಿಕ್ಕುದಿಕ್ಕಿಗೂ ಪಲಾಯನವಂಗೈದರು ॥ ೪೬ ॥ ತಮ್ಮ ಒಡೆಯನಾದ ಯೌವನಾಶ್ವನು ಮೂರ್ಛಾಕ್ರಾಂತನಾಗಿ ಬಿದ್ದು ಇರುವದನ್ನೂ ನೋಡದೆ, ಸೈನ್ಯವೆಲ್ಲಾ ನಾನಾದಿಕ್ಕುಗಳಿಗೂ ಚದರಿಹೋಗಲಾಗಿ ವೃಷಕೇತುವು ಪುನಃ ಬಾಣಪ್ರಯೋಗ ಮಾಡಿದಲೂ ಎಚ್ಚೆತ್ತುಕೊಳ್ಳದೆ ನಿರಾಧಾರನಾಗಿ ಬಿದ್ದುಹೋಗಿರುವ ಯೌವನಾಶ್ವನ ಬಳಿಗೆ ಬಂದು ಏತಕ್ಕೆ ಈ ರೀತಿ ಮೂರ್ಛೆಬಿದ್ದು ಹೋದೆ? ಎಂದು ಪ್ರಶ್ನೆಮಾಡಿದರೂಕೂಡಾ ಉತ್ತರವನ್ನೀಯದಿರಲು ವೃಕೇತುವು ಅತ್ಯಂತ

ಸುತವನೆಡೆಗೆಬಂದಿರ್ದೆ । ನೈಮೂರ್ಛೆನಿನಗೆನಲ್ನುಡಿಯದಿರಲೊಯ್ಯನಾನೃಪನುಸುರನಾರೈದನು ‖ ೪೭ ‖ ಸತ್ಯಮೆನಗುಂಟಾದೊಡಾಂಧೀರನಾದೊಡಾ । ದಿತ್ಯಂಗೆಪೌತ್ರನಾದೊಡೆತನ್ನತಾತಂಗ । ಪತ್ಯತಾನಾದೊಡೀನೃಪತಿಜೀವಿಸಲೆನುತಕರ್ಣಜಂಪಗೆಮಾಡುವ ‖ ಕೃತ್ಯಮಂಬಿಟ್ಟಾಮಹೀಶನಬಳಲ್ಕೆಗೌ । ಚಿತ್ಯಮಾದುಪಚಾರದಿಂದಸಮರಶ್ರಮಪ । ರಿತ್ಯಾಗಮಪ್ಪಂತೆಸಂತೈಸುತಿರಲಾಧರಾಧಿಪಂಮೈಮುರಿದನು ‖ ೪೮ ‖ ಅರಸಕೇಳಾಯೌವನಾಶ್ವನಿಂತಾಗಮೈ । ಮುರಿದುಕಣ್ದೆರೆವನಿತರೊಳಗಾತನರಿಯದಂ । ತಿರೆಕರ್ಣಸಂಭವಂಮುನ್ನತಾನಿರ್ದಪ್ರದೇಶಕ್ಕೈತಂದುನಿಂದು ‖ ಕರದಕಾರ್ಮುಕವನೊದರಿಸಿದಿವ್ಯಬಾಣಮಂ । ತಿರುಪುತಾರ್ದೆಸುವತೆರದಿಂಬರಿದೆಮುಳಿಸಿನುಬ್ಬರಮನ್ನೆಗಳ್ಚಿ । ತನ್ನಾಳ್ತನದಬಿಂಕಮಂಕಾಣಿಸಿದನೇವೇಳ್ವೆನು ‖೪೯‖ ಕೂಡೆಕಣ್ದೆರೆದೆದ್ದುಚೇತರಿಸಿವೆಸೆಗಳಂ । ನೋಡಿತನ್ನವರೋರ್ವರಂಕಾಣದಿರೆಕೈ । ಮಾಡದೆವೃಥಾಟೋಪಮಂನೆಗಳ್ಚುವವಿರೋಧಿಯವಿಕ್ರ

---

ಎಂದು ಪ್ರಶ್ನೆಮಾಡಲು, ನುಡಿಯದೆ–ಪ್ರತಿಮಾತನೆ, ಈಯದೆ–ಕೊಡದೆ, ಇರಲ್–ಇರಲಾಗಿ, ಒಯ್ಯನೆ–ನಿಧಾನವಾಗಿ, ಆ ನೃಪನ–ಆ ರಾಜನ, ಉಸುರನು–ಜೀವ ಸಂಬಂಧವಾದ ಅನಿಲನನ್ನು, ಆರೈದನು–ಉಪಚರಿಸಿದನು ‖೪೭‖

ಟೀ‖ ಎನಗೆ–ನನಗೆ, ಸತ್ಯಂ–ನಿಶ್ಚಯ ಬುದ್ಧಿಯು, ಉಂಟಾದೊಡೆ–ಇದ್ದರೆ, ಆಂ–ನಾನು, ಧೀರನು–ವೀರನು, ಆದೊಡೆ–ಆಗಿದ್ದ ಪಕ್ಷದಲ್ಲಿ, ಆದಿತ್ಯಂಗೆ–ರವಿಗೆ, ಪೌತ್ರನು–ಮಗನ ಮಗನು, ಆ ದೊಡೆ–ಆಗಿದ್ದಲ್ಲಿ, ತನ್ನ–ತನ್ನ, ತಾತಂಗೆ–ತಂದೆಗೆ, ನಾನು–ನಾನು, ಅಪತ್ಯ–ಸುತನು, ಆದೊಡೆ–ನಿಜವಾದರೆ, ಈ ನೃಪತಿ–ಈ ನರೇಶ್ವರನು, ಜೀವಿಸಲಿ–ಚೇತರಿಸಿಕೊಳ್ಳಲಿ, ಎನುತ–ಎಂದು ಹೇಳುತ್ತ, ಕರ್ಣಜಂ–ಕರ್ಣಸೂನುವು, ಪಗೆಮಾಡುವ–ವೈರವನ್ನು ಬೆಳಸತಕ್ಕ, ಕೃತ್ಯಮಂ–ಕರ್ಮವನ್ನು, ಬಿಟ್ಟು–ತ್ಯಜಿಸಿ, ಆ ಮಹೀಶನ–ಆ ಭೂಕಾಂತನ, ಬಳಲ್ಕೆಗೆ–ಆಯಾಸಕ್ಕೆ, ಔಚಿತ್ಯಮಾದ–ಯೋಗ್ಯಮಾದ, ಉಪಚಾರದಿಂದ–ಸತ್ಕಾರದಿಂದ, ಸಮರ–ರಣದ, ಶ್ರಮದ–ಬಳಲಿಕೆಯ, ಪರಿತ್ಯಾಗಂ–ಬಿಡೋಣವು, ಅಪ್ಪಂತೆ–ನೆರವೇರುವಂತೆ, ಸಂತೈಸುತ–ಸೇವೆಗೈಯುತ್ತ, ಇರಲು–ಇರಲಾಗಿ, ಆ ಧರಾಧಿಪಂ–ಆ ಇಳೇಶನು, ಮೈಮುರಿದನು–ಸ್ಮೃತಿಯನ್ನೈದಿದನು ‖೪೮‖

ಟೀ‖ ಅರಸ–ಜನಮೇಜಯನೆ, ಕೇಳು–ಲಾಲಿಸು, ಆಗ–ಆ ಸಮಯದಲ್ಲಿ, ಆ ಯೌವನಾಶ್ವನು–ಆ ಯೌವನಾಶ್ವನೆಂಬ ಮಹಿಪನು, ಇಂತು–ಈ ಬಗೆಯಾಗಿ, ಮೈಮುರಿದು–ಭ್ರಾಂತಿಯನ್ನು ಬಿಟ್ಟು, ಕಣ್ದೆರೆವ – ನಯನಂಗಳನ್ನು ತೆರೆಯುವ, ಅನಿತರೊಳ್–ಕಾಲದಲ್ಲಿ, ಆತನು–ಆ ಭದ್ರಾವತಿಯ ದೊರೆಯು, ಅರಿಯದಂತಿರೆ – ಗೋಚರಪಡಿಸಿಕೊಳ್ಳಲು ಆಗದಿರುವಂತೆ, ಕರ್ಣಸಂಭವಂ–ಕರ್ಣನಂದನನು, ಮುನ್ನ–ಆದಿಯಲ್ಲಿ, ತಾಂ–ತಾನು, ಇರ್ದ–ಇದ್ದ, ಪ್ರದೇಶಕೆ–ಎಡೆಯಲ್ಲಿ, ಐತಂದು–ಸೇರಿ, ನಿಂದು–ನಿಂತುಕೊಂಡು, ಕರದ–ಕೈಯ್ಯಲ್ಲಿದ್ದ, ಕಾರ್ಮುಕವನು–ಧನುಸ್ಸನ್ನು, ಒದರಿಸಿ–ಶಬ್ದವಾಗುವಂತೆ ಮಾಡಿ, ದಿವ್ಯ–ಉತ್ತಮವಾದ, ಬಾಣಮಂ–ಕಣೆಯನ್ನು, ತಿರುಪುತ–ಅಲ್ಲಾಡಿಸುತ್ತ, ಆರ್ದು–ಗರ್ಜಿಸಿ, ಎಸುವತೆರದಿಂ–ಸರಲನ್ನು ಬಿಡುವಹಾಗೆಯೆ, ಬರಿದೆ–ತೂಷ್ಣೀಂಭಾವದಿಂದ, ಮುಳಿಸಿನ–ಕೋಪದ, ಉಬ್ಬರಮಂ–ಆಧಿಕ್ಯವನ್ನು, ನೆಗಳ್ಚಿ–ಗೋಚರಪಡಿಸಿ, ತನ್ನ–ಸ್ವಕೀಯಮಾದ, ಆಳ್ತನದ–ವೀರಭಾವದ, ಬಿಂಕಮಂ – ಗಾಂಭೀರ್ಯಾತಿಶಯವನ್ನು, ಕಾಣಿಸಿದನು – ಹೊರಪಡಿಸಿದನು, ಏವೇಳ್ವೆನು–ಏನೆಂದು ನುಡಿಯಲಿ ‖೪೯‖

ಟೀ‖ ಕೂಡೆ–ಒಡನೆಯೆ, ಕಣ್–ನೇತ್ರಂಗಳನ್ನು, ತೆರೆದು–ತೆಗೆದು, ಎದ್ದು– ಮೇಲಕ್ಕೆದ್ದು, ಚೇತರಿಸಿ–ಎಚ್ಚೆತ್ತು, ದೆಸೆದೆಸೆಗಳಂ - ಸುತ್ತುಮುತ್ತಲು, ನೋಡಿ–ಈಕ್ಷಿಸಿ, ತನ್ನವರ–ತನ್ನ ಸೈನಿಕರ, ಓರ್ವರಂ–ಯಾರೊಬ್ಬರನ್ನೂ, ಕಾಣದೆ–ಈಕ್ಷಿಸದೆ, ಇದಿರೆ–ಮುಂಭಾಗದಲ್ಲಿ, ಕೈಮಾಡದೆ–ಸಮರವನ್ನೆಸಗದೆ, ವೃಥಾ ನಿಷ್ಪ್ರಯೋಜನವಾಗಿ, ಆಟೋಪಮಂ–ಆರ್ಭಟವನ್ನು ಮಾತ್ರವೇ, ನೆಗಳ್ಚುವ–ಗೈಯುತಿರುವ, ವಿರೋಧಿಯ–ಹಗೆಯಾದ ಕರ್ಣಸುತನ, ವಿಕ್ರಮುವನೆ–ಶೌರ್ಯವನ್ನು, ಕಂಡು–ದೃಷ್ಟಿಸಿ, ಮೂಡಿದ–ಉಂಟಾದ, ವಿರಕ್ತಿಯಿಂ–ವೈರಾಗ್ಯಬುದ್ಧಿಯಿಂದ, ಮನದೊಳ್–ಚಿತ್ತದಲ್ಲಿ, ನಾಚಿ–ಲಜ್ಜೆಯನ್ನು ಹೊಂದಿ

---

ವ್ಯಾಕುಲಚಿತ್ತನಾಗಿ ‖೪೭‖ ನಾನು ಸತ್ಯವಂತನೂ, ವೀರನೂ, ಸೂರ್ಯಸುತನ ತನುಜನೂ, ನಮ್ಮ ತಂದೆಗೆ ನಾನು ಜನಿಸಿದವನೂ, ಆಗಿದ್ದರೆ ಈ ಯೌವನಾಶ್ವಮಹೀಪಾಲನು ಮೂರ್ಛೆಯಿಂದ ಚೇತರಿಸಿಕೊಳ್ಳಲೆಂದು ಭಗವಂತನನ್ನು ಧ್ಯಾನಮಾಡುತ್ತ ವೈರವಂ ತೊರೆದು ರಾಯನನ್ನು ಉಪಚರಿಸಲು ಆ ನರೇಂದ್ರನು ಸ್ವಲ್ಪಸ್ವಲ್ಪವಾಗಿ ಮೈಮುರಿದು ಚೇತರಿಸಿಕೊಳ್ಳಲುದ್ಯುಕ್ತನಾದ ಕೂಡಲೆ ‖೪೮‖ ವೃಷಧ್ವಜನು ಶೀಘ್ರವಾಗಿ ತಾನಿದ್ದೆಡೆಗೆ ಯೌವನಾಶ್ವನಿಗೆ ಗೋಚರವಿಲ್ಲದಂತೆ ಬಂದು ಬಿಲ್ಲಿಗೆ ಕ್ರೂರವಾದ ಬಾಣವೊಂದನ್ನು ತಗಲಿಸಿ ಧನುಷ್ಟಂಕಾರವಂ ಮಾಡಿ ವೀರಾವೇಶದಿಂದ ಮೆರೆಯುತ್ತಿದ್ದನು. ಆ ವೇಳೆಗೆ ಯೌವನಾಶ್ವನಿಗೂ ಚೆನ್ನಾಗಿ ಜ್ಞಾನವು ತಿರುಗಿದ್ದರಿಂದ ಕೂಡಲೇ ಮೇಲಕ್ಕೆದ್ದು ಸುತ್ತಲೂ ತನ್ನವರು ಯಾರೂ ಇಲ್ಲದೆ ರಣರಂಗದಲ್ಲಿ ಬಾಣಪ್ರಯೋಗ ಮಾಡದೆ ಸುಮ್ಮನೆ ಸಿಂಹನಾದವನ್ನು ಮಾತ್ರ ಮಾಡುತ್ತಲಿರುವ ವೃಷಧ್ವಜನನ್ನು ನೋಡಿ ಇವನು

ಮುವನೆಕಂಡು ‖ ಮೂಡಿದವಿರಕ್ತಿಯಿಂನಾಚಿಮನದೋಳ್ಪಂಥ । ಪಾಡಿನನೊಳಿನ್ನುಸಲ್ಲದುತನಗೆಕಾರುಣ್ಯ । ಕೀಡಾದ
ಬಳಿಕವೇತಕೆಸಮರವೆನುತವಂಕರ್ಣಜಂಗಿಂತೆಂದನು ‖ ೫೦ ‖ ಮೂಲೋಕದೊಳ್ತನಗೆಸಮವಾದಮೇದಿನೀ । ಪಾಲರಂ
ಸುಭಟರಂಕಾಣೆನೆಂದಾನಿನಿತು । ಕಾಲಮುಂಬೆರೆದಿರ್ದೆನೆನ್ನುವಂಗೆಲ್ದುನೀನತಿಬಲನೆನಿಸಿಕೊಂಡೆಲಾ ‖ ಬಾಲನೀನಾರವಂನಿನ್ನ
ಪೆಸರೇನಿಳೆಗೆ । ಮೇಲೆನಿಸುವೀಹಯಂನಿನಗದೇತಕೆನಿನ್ನ । ಶೀಲಕಂಮಾರುವೋದೆಂಕಾದಲೊಲ್ಲೆನಿನ್ನುಸುರೆಂದೊಡಿಂತೆಂದನು ‖
‖೫೧‖ ಆದೊಡೀಜಗಕೆಲೋಚನನೆನಿಸಿನಭದೊಳೆಸೆ । ವಾದಿತ್ಯನಿಂದೊಗೆದಕರ್ಣನಂಕೇಳ್ದರಿವಿ । ಯಾದೊಡಾತನಸುತಂಪೆಸ
ರೆನಗೆವೃಷಕೇತುವೆಂದುನರಲೀಲೆಗಾಗಿ ‖ ಯಾದವರ್ಗರಸಾದಕೃಷ್ಣಂಭರತಕುಲದ । ಮೇದಿನೀಶ್ವರಯುಧಿಷ್ಠಿರನಿಮ್ಮಖಂ

ಇವನೊಳು–ಈ ಕರ್ಣಾತ್ಮಜನಕೂಡೆ, ಪಂಥಪಾಡು–ಶಪಥದ ನಿಶ್ಚಯವು, ಸಲ್ಲದು–ಒಪ್ಪದು, ಕಾರುಣ್ಯಕೆ–ಕೃಪೆಗೆ, ಈಡಾದಬಳಿಕ–ಗುರಿಯಾದನಂತರ, ತನಿಗೆ-ನನಗೆ, ಸಮರಂ-ರಣವು, ಏತಕೆ–ಏನು ಫಲದಾಯಕವಾದ್ದು, ಎನುತ-ಎಂಬತೆರನಾಗಿ, ಅವಂ-ಆ ಧರ್ಮಪತಿಯದೊರೆಯು, ಕರ್ಣಜಂಗೆ–ಕರ್ಣಸೂನುವಾದ ವೃಷಧ್ವಜನೊಂದಿಗೆ,ಎಂದನು–ಮುಂದೆ ಹೇಳುವಂತೆ ನುಡಿದನು‖೫೦‖

ಟೀ‖ ತನಗೆ–ನನಗೆ, ಸಮವಾದ– ಹೋಲಿಕೆಯಾಗಿರತಕ್ಕ, ಮೇದಿನೀಪಾಲರಂ – ಪೃಥ್ವೀಶ್ವರರನ್ನೂ, ಸುಭಟರಂ–ಶೂರರನ್ನೂ, ಆಂ–ನಾನು, ಮೂಲೋಕದೊಳು-ಸ್ವರ್ಗ, ಮರ್ತ್ಯ, ಪಾತಾಳಗಳೆಂಬ ಪ್ರಪಂಚಗಳ್ಮೂರರಲ್ಲಿಯೂ, ಕಾಣೆನು–ನೋಡಿಲ್ಲವು. ಎಂದು–ಎಂಬತೆರದಿಂದ, ಇನಿತು ಕಾಲಂ - ಇಷ್ಟುದಿನವೂ, ಬೆರೆದು–ಅಹಂಕಾರವನ್ನೈದಿ, ಇರ್ದೆನು-ಇದ್ದವನಾದೆನು, ಎನ್ನುವಂ–ಇಂಥ ಮದೋದ್ಧತನಾದ ನನ್ನನ್ನು, ನೀನು–ನೀನು, ಗೆಲ್ದು–ಜಯಿಸಿ, ಅತಿ ಬಲನು–ವೀರರ ವೀರನು, ಎನಿಸಿಕೊಂಡೆಲಾ–ಎಂಬ ಹೆಸರುವಾಸಿಯನ್ನುಸಂಪಾದಿಸಿ ಬಿಟ್ಟೆಯಲ್ಲಾ, ಬಾಲ–ಹಸುಳೆಯೆ, ನೀಂ–ನೀನು, ಆರವಂ-ಯಾರಕಡೆಯವನು, ನಿನ್ನ–ನಿನ್ನ, ಪೆಸರು–ನಾಮಧೇಯವು, ಏಂ–ಏನು, ಇಳೆಗೆ-ಪ್ರಪಂಚದಲ್ಲಿ, ಮೇಲು–ಉತ್ತಮೋತ್ತಮವು, ಎನಿಸುವ–ಎಂದು ಹೊಗಳಿಸಿಕೊಳ್ಳುವ, ಈ ಹಯಂ–ಈ ಕುದುರೆಯು, ನಿನಗೆ–ನಿನಗೆ, ಅದು ಏತಕೆ–ಯಾವ ಉದ್ದಿಶ್ಯವಾಗಿ ಬೇಕಾಗಿದೆ, ನಿನ್ನ-ನಿನ್ನ ಸಂಬಂಧವಾದ, ಶೀಲಕೆ-ಸ್ವಭಾವಕ್ಕೆ, ಆಂ–ನಾನು, ಮಾರುವೋದೆಂ– ವಶನಾಗಿದೇನೆ, ಕಾದಲು– ಹೋರಾಡಲು, ಒಲ್ಲೆನು-ಇಷ್ಟಪಡುವುದಿಲ್ಲ, ಇನ್ನು-ಇನ್ನುಮುಂದೆ, ಉಸುರು–ಪ್ರತ್ಯುತ್ತರವನ್ನು ಕೊಡು, ಎಂದೊಡೆ - ಎಂದು ಕೇಳಲು, ಇಂತು-ಈ ರೀತಿಯಾಗಿ. ಅಂದನು–ಕರ್ಣಸುತನು ಹೇಳ ತೊಡಗಿದನು ‖೫೧‖

ಟೀ‖ ಆದೊಡೆ-ನನ್ನ ವೃತ್ತಾಂತವನ್ನು ನೀನು ಅರಿಯಬೇಕಾದಲ್ಲಿ, ಈ ಜಗಕೆ - ಈ ಲೋಕಕ್ಕೆ, ಲೋಚನನು–ಕಣ್ಣು, ಎನಿಸಿ–ಎಂದು ಹೊಗಳಿಸಿಕ್ಕೊಂಡು, ಎಸೆವ–ಹೊಳೆಯುವ, ಆದಿತ್ಯನಿಂದ–ರವಿಯಿಂದ, ಒಗೆದ–ಉಂಟಾದ, ಕರ್ಣನಂ–ಕರ್ಣನೆಂಬುವನನ್ನು, ಕೇಳ್ದು–ಕೇಳಿ, ಅರಿವೆಯಾದೊಡೆ–ತಿಳಿದುಕೊಂಡಿದ್ದ ಪಕ್ಷದಲ್ಲಿ, ಆಂ–ನಾನು, ಆತನ-ಅಂಥಾ ರವಿಸುತನಾದ ಕರ್ಣನ, ಸುತಂ–ಪುತ್ರನು, ಎನಗೆ–ನನಗೆ, ವೃಷಕೇತು–ವೃಷಧ್ವಜ, ಎಂದು-ಎಂಬದಾಗಿ, ಪೆಸರು–ನಾಮಧೇಯವು, ನರಲೀಲೆಗಾಗಿ-ಮಾನುಷ ವಿನೋದಕ್ಕೋಸ್ಕರ, ಯಾದವರ್ಗೆ – ಯದುವಂಶದ ಮಹಾರಾಜರಿಗೆ, ಅರಸಾದ–ಒಡೆಯನಾದ ಶ್ರೀ ಕೃಷ್ಣಸ್ವಾಮಿಯು, ಭರತ–ಭರತ ಮಹಾರಾಯನ, ಕುಲ–ಸಂತತಿಯಲ್ಲಿ ಜನಿಸಿದ, ಮೇದಿನೀಶ್ವರ–ಮಹೀಪತಿಯಾದ, ಯುಧಿಷ್ಠಿರನಿಂ-ಧರ್ಮಜನಿಂದ, ಮಖಂ–ಸತ್ರನನ್ನು, ಗೈಸಲು–ನೆರವೇರಿಸಲು, ಈ ದಿವ್ಯಹಯಕ್ಕೆ-ಈ ಉತ್ತಮೋತ್ತಮವಾದ ಅಶ್ವಕ್ಕೆ, ಭೀಮನನು-ವೃಕೋದರನನ್ನು, ಅಟ್ಟಲು–ತರುಮಲು, ಅವನೊಡನೆ-ಆ ವಾಯು ಪುತ್ರನೊಂದಿಗೆ, ಬಂದೆನು–ನಾನೂ ಬಂದಿರುವೆನು, ಇದು–ಯಜ್ಞಾಕ್ಕಾಗಿ ಈ ಕುದುರೆಯು ಬೇಕಾಗಿರುವುದೆ, ಹದನು – ಕಾರಣವು, ಎಂದನು – ಹೀಗೆಂದು ಕರ್ಣಜನು

ನನ್ನನ್ನು ಉಪಚರಿಸಿರಬಹುದೆಂದು ಯೋಚಿಸಿ ಆತನೊಡನೆ ಯುದ್ಧಮಾಡಲು ಮನವೊಪ್ಪದಿರಲು ಆಗ ಯೌವನಾಶ್ವನು ವೃಷಧ್ವಜನನ್ನು ಕುರಿತು ‖೫೦‖ ಅಯ್ಯಾ, ಬಾಲನೆ, ಸ್ವರ್ಗ ಮರ್ತ್ಯ ಪಾತಾಳಗಳೆಂಬ ಮೂರು ಲೋಕಗಳಲ್ಲಿಯೂ ನನ್ನನ್ನು ಜಯಿಸುವ ವೀರರೆ ಇಲ್ಲವೆಂದು ತಿಳಿದುಕೊಂಡಿದ್ದ ನನ್ನನ್ನು ಗೆದ್ದು ಮಹಾ ಪರಾಕ್ರಮಿ ಎಂಬ ಯಶಸ್ಸನ್ನು ಪಡೆದಿರುವ ನೀನು ಯಾರು? ಮತ್ತು ನೀನು ಯಾವ ರಾಜಾಧಿರಾಜನ ಪರವಾಗಿ ನನ್ನೊಂದಿಗೆ ಕಾದುತ್ತಿದ್ದಿ? ಲೋಕೋತ್ತಮವಾದ ಈ ಅಶ್ವವು ನಿನಗೆ ಏಕೆ ಬೇಕು? ನಿನ್ನ ಸತ್ಸ್ವಭಾವಕ್ಕೆ ನಾನು ಕಟ್ಟುಬಿದ್ದಿರುವೆನಾಗಿ ನಿನ್ನೊಡನೆ ಇನ್ನು ಯುದ್ಧಮಾಡುವುದಿಲ್ಲ. ನಿಜವಾದ ಸಂಗತಿಯನ್ನು ಹೇಳು ಎಂದು ಕೇಳಲಾಗಿ ಕರ್ಣಜನು ಯೌವನಾಶ್ವನಂ ನೋಡಿ ‖ ೫೧ ‖ ಎಲೈ ರಾಯನೆ ಕೇಳು, ಭೂಲೋಕಕ್ಕೆಲ್ಲಾ ಕಣ್ಣಿನಂತಿರುವ ಸೂರ್ಯನಿಗೆ ಕರ್ಣನೆಂಬ ಕುವರನಿದ್ದನೆಂದು ನೀನು ಕೇಳಿರಬಹುದು. ಆ ರವಿಸುತನ ಪುತ್ರನೆ ನಾನು, ನನ್ನನ್ನು ವೃಷಕೇತುವೆಂದು ಕರೆಯುವರು ಯಾದವೇಂದ್ರನಾದ ಶ್ರೀ ಕೃಷ್ಣಮೂರ್ತಿಯು ಪಾಂಡುಪುತ್ರನಾದ ಯುಧಿಷ್ಠಿರನೊಂದಿಗೆ ಅಶ್ವಮೇಧವೆಂಬ ಯಾಗವನ್ನು ಮಾಡಲೆಳಸಿ ಈ ಕುದುರೆಯನ್ನು ತೆಗೆದುಕೊಂಡು ಬರು

ಗೈಸ | ಲೀದಿವ್ಯಹಯಕೆಭೀಮನಟ್ಟಲವನೊಡನೆಬಂದೆನಿದುಹದನೆಂದನು || ೫೨ || ಎಂದೊಡೆಲೆಕುವರನೀನಿನ್ನೆಗಂತನ್ನೊಳಿಂ | ತೆಂದುದಿಲ್ಲಕಟಧರ್ಮದರೂಪುತಾನೀತ | ನೆಂದೆಂಬರಾಯುಧಿಷ್ಠಿರಮಹೀಪತಿಯನವನೀಮಖಂಗೈಸುವವನೆ || ಇಂದಿರಾವಲ್ಲಭನಪದಕೆನಮ್ಮಾಹಯವ | ನೊಂದನೊಯ್ವರೆತನ್ನ ಸರ್ವಸ್ವಮುಂತಾನೆ | ತಂದುಹರಿಪದಕರ್ಪಿಸುವೆನೆಲ್ಲಿಭೀಮನಂತೋರೆಂದ ನಾಭೂಪನು || ೫೩ || ಎನಲಚ್ಯುತನಪದಕೆಸರ್ವಸ್ವವೊಪ್ಪಿಸುವ | ಮನಮುಳ್ಳನಾವನಾತಂಗೆಪಾಂಡವರೊಳೆರ | ವಿನಿತಿಲ್ಲಮಾ ಪಾರ್ಥಿವರಸಖ್ಯಮಾವಂಗೆದೊರೆವುದಾತಂಗೆಹರಿಯ || ಮುನಿಸಿಲ್ಲಮದರಿಂದಭೀಮನಂಕಾಣ್ಬುದೀ | ಗನುನಯವುಸಿನಗೆಂದು

ಉತ್ತರವನ್ನಿತ್ತನು || ೫೨ ||

ಟೀ|| ಎಂದೊಡೆ-ಈ ರೀತಿಯಾಗಿ ವೃಷಧ್ವಜನು ಹೇಳಲು, ಎಲೆಕುವರ-ಎಲೈ ಬಾಲಕನೆ, ನೀನು-ನೀನು, ಇನ್ನೆಗಂ-ಇಷ್ಟುಕಾಲವೂ, ತನ್ನೊಳು-ನನ್ನಲ್ಲಿ, ಇಂತು-ಈ ವಿಷಯವಾಗಿ, ಎಂದುದಿಲ್ಲ-ನುಡಿಯಲೇ ಇಲ್ಲ. ಅಕಟ-ಆಹಾ, ಈತನು-ಈ ಧರ್ಮರಾಯನು ತಾನು, ಧರ್ಮದರೂಪು-ಸ್ವತಸ್ಸಿದ್ಧನಾದ ಧರ್ಮಪುರುಷನೆ, ಎಂದು-ಹೀಗೆಂದು, ಆ ಯುಧಿಷ್ಠಿರ ಮಹೀಪತಿಯನು-ರಾಜಾಧಿರಾಜನಾದ ಆ ಧರ್ಮತನಯನನ್ನು, ಎಂಬರು-ಹೇಳುವರು, ಅವಂ-ಅಂಥಾ ಧರ್ಮರಾಯನು, ಈಮಖಂ-ಈ ಯಾಗವನ್ನು, ಗೈಸುವನೆ-ನೆರವೇರಿಸುತ್ತಾನೆಯೆ, ನಮ್ಮ-ನಮ್ಮ ಸಂಬಂಧವಾದ, ಈ ಹಯವನು ಒಂದನೆ- ಇದೊಂದು ಅಶ್ವವನ್ನೆ, ಇಂದಿರಾವಲ್ಲಭನ-ಮಾಪತಿಯ, ಪದಕೆ-ಅಡಿಗಳೆಡೆಗೆ, ಒಯ್ವರೆ-ಕೊಂಡುಹೋಗಬಹುದೆ, ತನ್ನ-ನನ್ನ ಸಂಬಂಧವಾದ, ಸರ್ವಸ್ವಮುಂ-ಅಶೇಷವಾದ ಸಿರಿಯನ್ನೂ, ಹರಿಪದಕೆ-ಶ್ರೀ ಕೃಷ್ಣಸ್ವಾಮಿಯ ಪಾದಸನ್ನಿಧಿಯಲ್ಲಿ, ಅರ್ಪಿಸುವೆನು-ಸಮರ್ಪಣೆ ಮಾಡುತ್ತೇನೆ. ಭೀಮನಂ-ವೃಕೋದರನನ್ನು, ತೋರು-ತೋರಿಸು, ಎಲ್ಲಿ-ಯಾವಸ್ಥಳದಲ್ಲಿ ಇರುವನು ಎಂಬುದಾಗಿ, ಆ ಭೂಪನು-ಆ ಯೌವನಾಶ್ವಮಹಿಪನು, ಎಂದನು-ಪ್ರಶ್ನೆಮಾಡಿದನು || ೫೩ ||

ಟೀ|| ಎನಲು-ಯೌವನಾಶ್ವನು ಈರೀತಿಯಾಗಿ ನುಡಿಯಲು, ಕರ್ಣಜಂ-ಕರ್ಣನಂದನನು ಯೌವನಾಶ್ವನನ್ನು ಕುರಿತು, ಅಚ್ಯುತ-ಶ್ರೀಕೃಷ್ಣಮೂರ್ತಿಯ, ಪದಗಳಿಗೆ-ಅಡಿಗಳೆಡೆಗೆ, ಸರ್ವಸ್ವಮುಂ-ಸಮಸ್ತವನ್ನೂ, ಒಪ್ಪಿಸುವ-ಅರ್ಪಣೆಮಾಡತಕ್ಕ, ಮನಂ-ಚಿತ್ತಸ್ಥೈರ್ಯವು, ಉಳ್ಳನು-ಇರುವನು. ಅವನು - ಯಾರೇ ಆದರೂ, ಆತಂಗೆ-ಅಂಥಾ ಸ್ವಾಮಿಭಕ್ತಿಪರಾಯಣನಾದ ಮನುಷ್ಯನಿಗೆ, ಪಾಂಡವರೊಳು-ಪಾಂಡುನಂದನರಲ್ಲಿ, ಎರವು-ಹಗೆತನವು, ಇನಿತು-ಸ್ವಲ್ಪವೂ ಅಂದರೆಎಳ್ಳಷ್ಟಾದರೂ, ಇಲ್ಲಂ-ಇರುವುದಿಲ್ಲ. ಆ ಪಾರ್ಥಿವರ-ಆ ಭೂಪತಿಗಳ, ಸಖ್ಯಂ-ಸ್ನೇಹವು, ಆವಂಗೆ-ಯಾವ ಮನುಷ್ಯನಿಗೆ ದೊರೆವುದೊ-ಪ್ರಾಪ್ತವಾಗುತ್ತೊ, ಆತಂಗೆ-ಅಂಥಾ ದೇವರಲ್ಲಿ ಭಕ್ತನಾದನನಿಗೆ, ಹರಿಯ-ಶ್ರೀ ಕೃಷ್ಣಸ್ವಾಮಿಯ, ಮುನಿಸು-ಕೋಪವು, ಇಲ್ಲಂ-ಉಂಟಾಗದು. ಅದರಿಂದ-ಆದಕಾರಣದಿಂದ, ಈಗ-ಈ ಸಮಯದಲ್ಲಿ, ಭೀಮನಂ-ವೃಕೋದರನನ್ನು, ಕಾಂಬುದು-ಭೇಟಿ ಮಾಡಿಕೊಳ್ಳುವುದು, ಅನುನಯವು-ಯೋಗ್ಯವಾದದ್ದು, ಎಂದು-ಎಂಬ ತೆರನಾಗಿ, ಕರ್ಣಜಂ-ಕರ್ಣ ಸೂನುವು, ನುಡಿದೊಡೆ-ಹೇಳಲಾಗಿ, ಆ ಜನಪನು-ಆ ಯೌವನಾಶ್ವನೆಂಬ ನರನಾಥತು, ಉತ್ಸವದೊಳು-ಸಂತೋಷದಿಂದ, ತನ್ನ-ಸ್ವಕೀಯವಾದ, ಮಣಿರಥವನು-ರತ್ನಖಚಿತಮಾದ ಸ್ಯಂದನವನ್ನು, ಇರ್ವರುಂ - ಯೌವನಾಶ್ವ ವೃಷಧ್ವಜರೆಂಬೀರ್ವರೂ, ಐದಲು-

ವಂತೆ ಭೀಮಸೇನನಿಗೆ ಹೇಳಿ ಕಳುಹಲು ಆತನೊಡನೆ ನಾನು ಬಂದೆನು. ಎಂದು ಉತ್ತರವನ್ನಿತ್ತನು || ೫೨ || ಈ ಮಾತನ್ನು ಯೌವನಾಶ್ವನು ಕೇಳಿ ವೃಷಧ್ವಜನನ್ನು ಕುರಿತು ಏನೈಯ್ಯ—ಬಾಲಕನೆ ! ನೀನು ಇದುವರೆಗೂ ನನಗೆ ಈ ಸುದ್ದಿಯನ್ನೆ ತಿಳಿಸದೆ ಎಂಥ ಮೋಸಕೃತ್ಯವಂ ಗೈದಿರುವೆ, ಅಯ್ಯೊ, ಎಂದು ತನ್ನ ಮನದಲ್ಲಿ ಖೇದಗೊಂಡು ಮತ್ತೆ ವೃಷಧ್ವಜನನ್ನು ಕುರಿತು ಭೂಲೋಕದಲ್ಲಿ ಧರ್ಮವೆಲ್ಲಾ ಒಟ್ಟುಗೂಡಿ ಮೂರ್ತೀಭವಿಸದಂತಿರುವ ಧರ್ಮನಂದನನು ಅಶ್ವಮೇಧಯಾಗವನ್ನು ಮಾಡಬೇಕೆಂದಿರುವನೆ ? ಈ ಯಾಗಕ್ಕೆ ಶ್ರೀ ಕೃಷ್ಣನೆ ಸಹಾಯಕನಾಗಿ ನಿಂತು ಇರುವನೆ ? ಅಯ್ಯೋ ! ಹಾಗಾದರೆ ನಾನು ವೃಥಾ ನಿನ್ನೊಡನೆ ಯುದ್ಧಮಾಡಿದೆನಲ್ಲಾ ಎಂದು ಮರುಗಿ ಕರ್ಣಜನಂ ನೋಡಿ ಎಲೈ ವೃಷಧ್ವಜನೆ, ಲಕ್ಷ್ಮೀರಮಣನಾದ ಶ್ರೀಕೃಷ್ಣಸ್ವಾಮಿಗೆ ಅಶ್ವವೊಂದನ್ನು ಮಾತ್ರ ಒಪ್ಪಿಸಲಾದೀತೆ, ನನ್ನ ಸರ್ವಸ್ವದೊಂದಿಗೆ ಪೂರ್ಣವಾದ ಆನಂದಾತಿಶಯದಿಂದ ಈ ಅಶ್ವವನ್ನು ನಾನೆ ತಂದು ಶ್ರೀ ಕೃಷ್ಣನ ಪಾದಪಂಕೇಜಂಗಳಲ್ಲಿ ಒಪ್ಪಿಸಿ ಧನ್ಯನಾಗುವೆನು, ಭೀಮನನ್ನು ಈಗಲೇ ತೋರಿಸು ಎಂದು ನುಡಿದನು || ೫೩ || ಈ ನುಡಿಗಳನ್ನು ಕೇಳಿದ ವೃಷಧ್ವಜನು ಎಲೈ ಯೌವನಾಶ್ವಾವನಿಪನೆ ಕೇಳು, ಯಾವ ರಾಜರೇ ಆಗಲಿ ತಮ್ಮ ಸರ್ವಸ್ವವನ್ನೂ ಶ್ರೀ ಕೃಷ್ಣನಿಗೆ ಒಪ್ಪಿಸಲಿಚ್ಛಿಸುವರೊ ಅಂಥವರು ಪಾಂಡವರಿಗೆ ಎಂದೆಂದಿಗೂ ಶತ್ರುಗಳಾಗುವುದಿಲ್ಲ. ಅಂಥಾ ಪಾಂಡುಪುತ್ರರಲ್ಲಿ ಯಾರು ಮೈತ್ರಿಯನ್ನು ಬೆಳಸುವರೊ ಅವರಿಗೆ ಸ್ವಾಮಿಯ ಸಂದರ್ಶನವು ಅಸಾಧ್ಯವಾಗುವುದೇ ಇಲ್ಲ. ಆದುದರಿಂದ ಈಗಲೇ ನೀನು ವೃಕೋದರನನ್ನು ನೋಡುವುದು ಯುಕ್ತವೆಂದು ನುಡಿಯಲು ಯೌವನಾಶ್ವ

ಕರ್ಣಜಂನುಡಿದೊಡಾ | ಜನಪನುತ್ಸವದೊಳಳವಡಿಸಿದಂತನ್ನ ಮಣಿರಥವನಿರ್ವರುವ್ಯೈದಲು || ೫೪ || ಮಾನವಾಧೀಶಕೇಳ್ಬ
ಳಿಕವೃಷಕೇತುಸು | ಮ್ಮಾನದಿಂದಾಯೌವನಾಶ್ವಭೂಪತಿಗೆಪವ | ಮಾನಸುತನಂಕಾಣಿಸುವೆನೆಂಬತವಕದಿಂದಾತನವರೂಥ
ದೊಳಗೆ || ಮೌನದಿಂದಡರ್ದವಂವೆರಸಿನಡೆತರುತಿರೆವಿ| ಮಾನದಿಂನೋಡುವನಿಮಿಷನಿಕರಮಿತನಸ | ಮಾನದವರಿಲ್ಲೆಂದುಕೊಂ
ಡಾಡುತಾಗಸದೊಳಲರಸರಿಯಂಕರೆದರು || ೫೫ || ಅನ್ನೆಗಂಭದ್ರಾವತೀಶ್ವರನಸುತನಸೈ | ನ್ಯಂನಡೆದುಬಂದಾವೃಕೋದರನ
ಮುತ್ತಿದೊಡ | ವನ್ನಿಜಗದಾದಂಡಮುಂಕೊಂಡುದಿಂಡುಗೆಡಪಿದೊಡಾನೃಪಾಲಸೂನು || ತನ್ನ ಸಾಹಸದೊಳನಿಲಜನಕೋಪಾ
ಟೋಪ | ಮಂನಿಲಿಸಿಕಾದುತಿರಲಾಸಮಯಕಿವರೊಂದೆ | ರನ್ನದೇರೊಳಗಿರ್ವರುಂಬರುತಿರಲ್ಕಂಡುಬೆರಗಾದರವರತ್ತಲು | ೫೬||
ಪವಮಾನನಂದನಸುವೇಗರನ್ಯೋನ್ಯಮಾ | ಹವದಬೇಳಂಬಮುಂಮರೆದೊಂದೆಪೊಂದೇರೊ | ಳವರಿರ್ವರುಂಬರಲ್ಕಂಡುವಿಸ್ಮಿತ

---

ಅಡರಲು, ಅಳವಡಿಸಿದಂ–ನೇರ್ಪಡಿಸಿದನು || ೫೪ ||

ಟೀ|| ಮಾನವಾಧೀಶ-ನರಪತಿಯಾದ ಜನಮೇಜಯನೆ, ಕೇಳು–ಲಾಲಿಸು, ಬಳಿಕ–ಆಮೇಲೆ, ವೃಷಕೇತು-ವೃಷಧ್ವಜನು, ಸುಮ್ಮಾನದಿಂದ–ಆನಂದಾತಿಶಯದಿಂದ, ಆಯೌವನಾಶ್ವಭೂಪತಿಗೆ–ಆ ಯೌವನಾಶ್ವನೆಂಬ ಅವನೀವಲ್ಲಭನಿಗೆ, ಪವಮಾನಸುತನಂ–ವಾಯುಸೂನುವನ್ನು ಕಾಣಿಸುವೆನು-ತೋರಿಸುತ್ತೇನೆ, ಎಂಬ-ಎನ್ನುವ, ತವಕದಿಂ–ಕುತೂಹಲದಿಂದ, ಆತನ–ಆ ರಾಯನ, ವರೂಥಮೊಳಗೆ–ರಥದಲ್ಲಿ, ಮೌನದಿಂದ-ಮುನ್ನಣೆಯಿಂದ, ಅಡರ್ದು–ಏರಿ, ಅವಂವೆರಸಿ–ಆ ಯೌವನಾಶ್ವನನ್ನೊಡಗೂಡಿ, ನಡೆತರುತ-ಐತರುತ್ತ, ಇರೆ–ಇರಲಾಗಿ, ವಿಮಾನದಿಂ–ದೇವತೆಗಳು ಹತ್ತುವ ತೇರಿನಿಂದ, ಅನಿಮಿಷನಿಕರದ-ಸುರ ಸಮುದಾಯವು, ಈತನ–ಈ ವೃಷಧ್ವಜನಿಗೆ, ಸಮಾನರು-ಎಣೆಯಾದವರು, ಇಲ್ಲವು-ಇಲ್ಲ, ಎಂದು–ಹೀಗೆಂದು, ಕೊಂಡಾಡುತ–ಸ್ತುತಿಸುತ್ತ, ಆಗಸದೊಳು–ಅಂತರಿಕ್ಷದಲ್ಲಿ, ಅರಳ–ಪುಷ್ಪಂಗಳ, ಸರಿಯಂ–ವೃಷ್ಟಿಯನ್ನು, ಕರೆದರು - ಉಂಟಾಗುವಂತೆ ಮಾಡಿದರು || ೫೫ ||

ಟೀ|| ಅನ್ನೆಗಂ–ಆವೇಳೆಗೆ, ಭದ್ರಾವತೀಶ್ವರನ–ಭದ್ರಾವತಿನಗರದ ರಾಜನಾದ ಯೌವನಾಶ್ವನ, ಸುತನ - ತನುಜನಾದ ಸುವೇಗನೆಂಬ ಮಹಾರಾಯನ, ಸೈನ್ಯಂ–ಪಡೆಯು, ನಡೆದುಬಂದು–ಐತಂದು, ಆವೃಕೋದರನ–ಆ ವಾಯುನಂದನನನ್ನು, ಮುತ್ತಿದೊಡೆ–ಕವದುಕೊಳ್ಳಲಾಗಿ, ಅವಂ - ಆ ಮಾರುತಿಯು, ನಿಜ–ಸ್ವಕೀಯವಾದ, ಗದಾದಂಡಮುಂ - ಗಾಂಡಿವವೆಂಬ ತನ್ನ ತೋರಗದೆಯನ್ನು, ಕೊಂಡು-ಪಿಡಿದು, ದಿಂಡುಗೆಡಪಿದೊಡೆ-ಶಕ್ತಿಕುಂದಿದವನನ್ನಾಗಿ ಮಾಡಲು, ಆ ನೃಪಾಲಸೂನು–ಯೌವನಾಶ್ವನ ಕುವರನು, ತನ್ನ–ಸ್ವಕೀಯ, ಸಾಹಸದೊಳು–ಶೌರ್ಯದಿಂದ, ಅನಿಲಜನ–ವಾಯುನಂದನನ, ಕೋಪಾಟೋಪಮಂ–ಕ್ರೋಧಾತಿಶಯವನ್ನು, ನಿಲ್ಲಿಸಿ-ನಿರೋಧಿಸಿ, ಕಾದುತಿರಲು–ಹೋರಾಡುತಿರಲಾಗಿ, ಆ ಸಮಯಕೆ–ಆ ಕಾಲಕ್ಕೆ, ಇವರು–ಈ ವೃಷಧ್ವಜ ಯೌವನಾಶ್ವರು, ಒಂದೇರನ್ನದೇರೊಳಗೆ–ರತ್ನಖಚಿತವಾದ ಒಂದೇ ತೇರಿನೊಳಗೆ, ಇರ್ವರೂ - ಇವರಿಬ್ಬರೂ, ಬರುತಿರಲ್–ಐತರುತ್ತಿರಲಾಗಿ, ಅತ್ತಲು–ಆ ಭಾಗದಲ್ಲಿ, ಅವರು–ಭೀಮಸೇನನೂ ಸುವೇಗನೂ, ಕಂಡು-ಇವರ ಬರುವಿಕೆಯನ್ನು ನೋಡಿ, ಬೆರಗಾದರು-ಭ್ರಾಂತಿಯನ್ನೈದಿದರು || ೫೬ ||

ಟೀ|| ಪವಮಾನನಂದನಸುವೇಗರ–ವಾಯುಸೂನು ಮತ್ತು ಯೌವನಾಶ್ವನಂದನರು, ಅನ್ಯೋನ್ಯಂ - ಪರಸ್ಪರವಾಗಿ, ಆಹವದ–ಯುದ್ಧದ, ಬೇಳಂಬಮುಂ–ಯತ್ನವನ್ನು, ಮರೆದು–ತ್ಯಜಿಸಿ, ಒಂದೆಪೊಂದೇರೊಳು–ಒಂದಾದ ಚಿನ್ನದ ರಥದಲ್ಲಿಯೆ, ಅವರೀರ್ವರುಂ–ಕರ್ಣಸುತ ಯೌವನಾಶ್ವರು, ಬರಲ್–ಐತರುತ್ತಿರಲು, ಕಂಡು–ಈಕ್ಷಿಸಿ, ವಿಸ್ಮಿತರಾಗಿ-ಆಶ್ಚರಿಯಂತಾಳಿ, ನಿಂದರು–ನಿಂತುಕೊಂಡರು, ಅನಿತರೋಳ್-ಆ ವೇಳೆಗೆ, ಇತ್ತಲು–ಈ ಪಾರ್ಶ್ವದಲ್ಲಿ, ರವಿಸುತನಸೂನು–ಸೂರ್ಯನಮೊ

---

ಕ್ಷಿತಿಪನು ವೃಷಕೇತುವಿನೊಂದಿಗೆ ತನ್ನ ರತ್ನಖಚಿತವಾದ ರಥವನ್ನೇರಿ || ೫೪ || ಭೀಮಸೇನನ ದರ್ಶನಾರ್ಥವಾಗಿ ಹೊರಟನು. ಈರೀತಿಯಲ್ಲಿ ಜಯಶೀಲನಾಗಿ ಸಂತೋಷಾತಿಶಯದಿಂದ ಯೌವನಾಶ್ವನನ್ನು ಕರೆದುಕೊಂಡು ಬರುತ್ತಿರುವ ವೃಷಕೇತುವನ್ನು ಅಂತರಿಕ್ಷಮಾರ್ಗದಲ್ಲಿ ನೋಡುತ್ತಿದ್ದ ಇಂದ್ರಾದಿ ದೇವತೆಗಳು ಈ ಕರ್ಣಜನ ಶೌರ್ಯಾತಿಶಯಕ್ಕೆ ಮೆಚ್ಚಿ ಜಯಜಯಧ್ವನಿಯಂ ಮಾಡುತ್ತ ಪುಷ್ಪವೃಷ್ಟಿಯನ್ನು ಕರೆದರು || ೫೫ || ಅತ್ತಲಾ ಯೌವನಾಶ್ವನ ಕುವರನಾದ ಸುವೇಗನೆಂಬುವನು ಘೋರವಾದ ಸೇನಾಸಮೇತನಾಗಿ ಭೀಮನನ್ನು ಸುತ್ತಿಕೊಳ್ಳಲಾಗಿ ಆಗ ವೃಕೋದರನು ತನ್ನ ಗದಾದಂಡದಿಂದ ಸುವೇಗಾದಿಗಳನ್ನು ಬಡಿದು ಕೆಡುವುತ್ತಿದ್ದರೂ ಕೂಡ ಲಕ್ಷ್ಯವೇ ಮಾಡದೆ ಅತ್ಯಂತ ಸಾಹಸದಿಂದ ಕಾದುತ್ತಲೇ ಇರುವಷ್ಟು ಹೊತ್ತಿಗೆ ಸರಿಯಾಗಿ ಯೌವನಾಶ್ವ ವೃಷಕೇತುಗಳಿಬ್ಬರೂ ಒಂದೇ ರಥದಲ್ಲಿ ಕುಳಿತುಕೊಂಡು ಇವರ ಬಳಿಗೆ ಬರುತ್ತಿರುವದನ್ನು ನೋಡಿ ಭ್ರಾಂತರಾದರು. ಆವೇಳೆಗೆ ಯೌವನಾಶ್ವ ವೃಷಕೇತುಗಳೂ ಇವರ ಬಳಿಯಂ ಸೇರಿದರು. ಆಗ ಯೌವನಾ

ರಾಗಿನಿಂದರನಿತರೊಳಿತ್ತಲು ‖ ರವಿಸುತನಸೂನುಕಲಿಯೌವನಾಶ್ವಂಗೆಪಾಂ | ಡವರಾಯನನುಜನಂತೋರಿಸಿದೊಡಾವರೂ | ಥವನಿಳಿದುನಡೆವುತಾಭೂವರಂತನ್ನತನುಸಂಭವಂಗಿಂತೆಂದನು |೫೭‖ ತನಯದಿವ್ಯಾಶ್ವಮುಂಪಿಡಿದರಿವರೆಂಬಮನ | ದನುತಾಪಮಂಬಿಡುಸರೋಜಾಂಬಕಂಪಾಂಡು | ಜನಪನಂದನಯುಧಿಷ್ಠಿರನರೇಶ್ವರನಮುಖಕೆಂದುನಮ್ಮಕುದುರೆಗೆ ‖ ಅನಿಲಸುತನಂ ಕಳುಹಿದೊಡೆಬಂದನಾತಂಗೆ | ವಿನಯದಿಂದೆಮ್ಮಸರ್ವಸ್ವಮುಂಕೊಡುವೆವಿ | ನ್ನನುವರವದೇಕೆನಿಲ್ಲೆನಲವಂಶರಧನುವನಿರಿಸಿ ಪಿತನಂಸಾರ್ದನು ‖೫೮‖ ಬಳಿಕತನುಜಾತನಂಕೂಡಿಕೊಂಡಾನೃಪಂ | ನಳಿನಸಖಸುತನನುಗನೊಡನೆಬಂದನಿಲಜನ | ಬಳಿಸಾರ್ದುಕಾಲ್ಗೆರಗಲವನೀವೃಷಧ್ವಜನಮೊಗನೋಡುತಿವರಾರೆನೆ ‖ ಎಳೆನಗೆಯೊಳಾತನಿವನೀಗಳೀಮೇದಿನೀ | ತಳಕರಸೆನಿಪ

---

ಮ್ಮಗನು, ಕಲಿ–ಶೂರನಾದ, ಯೌವನಾಶ್ವಂಗೆ–ಭದ್ರಾವತಿಯ ಒಡೆಯನಿಗೆ, ಪಾಂಡವರಾಯನ-ಪಾಂಡುಪುತ್ರನಾದ ಯುಧಿಷ್ಠಿರನ, ಅನುಜನಂ–ತಮ್ಮನಾದ ವೃಕೋದರನನ್ನು, ತೋರಿಸಿದೊಡೆ–ದೃಷ್ಟಿಸುವಂತೆ ಮಾಡಲಾಗಿ, ಆ ಭೂವರಂ–ಆ ಭೂಕಾಂತನಾದ ಯೌವನಾಶ್ವನು, ಆ ವರೂಥವನ್ನು – ತನ್ನ ತೇರಿಸಿಂದ, ಇಳಿದು– ಕೆಳಗೆ ಇಳಿದು, ನಡೆವುತ–ಮುಂದಕ್ಕೆ ಹೊರಡುತ್ತ, ತನ್ನ-ಸ್ವಕೀಯವಾದ, ತನುಸಂಭವಂಗೆ-ಸುತನಾದ ಸುವೇಗನಿಗೆ, ಇಂತು-ಮುಂದೆ ಹೇಳುವಂತೆ, ಎಂದನು–ಉಸುರಿದನು ‖೫೭‖

ಟೀ‖ ತನಯ– ನಂದನನೇ, ಇವರು – ಈ ಭೀಮಸೇನ ವೃಷಧ್ವಜರು, ದಿವ್ಯಾಶ್ವಮುಂ – ಉತ್ತಮವಾದ ನಮ್ಮ ಕುದುರೆಯನ್ನು, ಪಿಡಿದರು-ಹಿಡಿದಿರುವರು, ಎಂಬ–ಎನ್ನುವ, ಮನದ–ಹೃದಯದ, ಅನುತಾಪಮುಂ-ಸಂತಾಪವನ್ನು, ಬಿಡು–ತ್ಯಜಿಸು, ಸರೋಜಾಂಬಕಂ – ಪದ್ಮೇಕ್ಷಣನಾದ ಕೃಷ್ಣಮೂರ್ತಿಯು, ಪಾಂಡುಜನಪ–ಪಾಂಡುವೆಂಬ ದೊರೆಯ, ನಂದನ–ತನುಜನಾದ ಧರ್ಮರಾಯನ, ಮಖಕೆಂದು – ಯಜ್ಞಕ್ಕೆಂಬುದಾಗಿ, ನಮ್ಮ-ನಮ್ಮದಾಗಿರುವ, ಈ ಕುದುರೆಗೆ-ಈ ಹಯಕ್ಕೆ, ಅನಿಲಸುತನಂ-ವಾಯುಸೂನುವನ್ನು, ಕಳುಹಿದೊಡೆ–ಕಳುಹಿಸಲಾಗಿ, ಬಂದನು–ಆತನು ಐತಂದನು, ಆತಂಗೆ–ಆ ವೃಕೋದರನಿಗೆ, ವಿನಯದಿಂ–ನಮ್ರಭಾವದಿಂದ, ಎಮ್ಮ-ನಮ್ಮ, ಸರ್ವಸ್ವಮುಂ-ಐಶ್ವರ್ಯವನ್ನೆಲ್ಲಾ, ಕೊಡುವೆವು-ಕೊಟ್ಟು ಬಿಡಬೇಕು, ಇನ್ನು-ಹೀಗಾದ್ದರಿಂದ, ಅನುವರವು-ಕದನವು, ಅದು ಏಕೆ–ಏನು ಪ್ರಯೋಜನ, ನಿಲ್ಲು–ಕದನವನ್ನು ಬಿಡು, ಎನಲು–ಎಂದು ನುಡಿಯಲು, ಅವಂ–ಸುವೇಗನೆಂಬುವನು, ಶರಧನುವನು – ಅಂಬು ಬಿಲ್ಲುಗಳನ್ನು, ಇರಿಸಿ–ನೆಲದಲ್ಲಿಟ್ಟು, ಪಿತನಂ–ತಂದೆಯ ಸಾನ್ನಿಧ್ಯವನ್ನು, ಸಾರ್ದನು-ಹೊಕ್ಕನು ‖೫೮‖

ಟೀ‖ ಬಳಿಕ–ಅನಂತರ, ಆ ನೃಪ–ಆ ಧೊರೆಯಾದ ಯೌವನಾಶ್ವನು, ತನುಜಾತನಂ ಕೂಡಿಕೊಂಡು-ತನ್ನ ಮಗನನ್ನು ಜೊತೆಮಾಡಿಕೊಂಡು, ನಳಿನಸಖ-ರವಿಯ, ಸುತನೊಡನೆ– ತನುಜಾತನಾದ ವೃಷಧ್ವಜನೊಂದಿಗೆ, ಬಂದು–ಐತಂದು, ಅನಿಲಜನ–ವೃಕೋದರನ, ಬಳಿ-ಹತ್ತಿರವನ್ನು, ಸಾರ್ದು–ಸೇರಿ, ಕಾಲ್ಗೆ–ಪಾದಗಳಿಗೆ, ಎರಗಲು – ಮಣಿಯಲು, ಅವನು-ಆ ವೃಕೋದರನು, ಮೊಗ–ವೃಷಕೇತುವಿನ ಕಡೆಗೆ, ನೋಡುತ–ದೃಷ್ಟಿಸುತ್ತ, ಇವರು–ಈ ರಾಜಾಗ್ರಣಿಗಳು, ಆರು–ಯಾರು, ಎನೆ–ಎಂದು ಪ್ರಶ್ನೆಯಂಗೈಯಲು, ಆತನು- ಆ ವೃಷಧ್ವಜನು, ಎಳನಗೆಯೊಳು – ಹುಸಿನಗೆಯಿಂದ, ಇವನೀಗಳೆ–ಈತನು, ಈ ಮೇದಿನೀತಳದೊಳಗೆ-ಈ ಧರಾಮಂಡಲದಲ್ಲಿ, ಅರಸು–ರಾಜನು, ಎನಿಪ–ಎಂದು ಹೆಸರುಪಡೆದಿರತಕ್ಕ, ಯೌವನಾಶ್ವನು–ಯೌವನಾಶ್ವನೆಂಬ ನಾಮಧೇಯವುಳ್ಳ ಪೃಥ್ವೀಪತಿಯು, ಈತಂಗೆ – ಈ ಧೊರೆಗೆ, ಮೈನೆಳಲು – ಬೇರೆಯಾದ ದೇಹವು, ಎನಿಸುವ–

---

ಶ್ವನು ವೃಷಕೇತುವಿನ ಮೂಲಕ ಭೀಮನನ್ನು ನೋಡಿದ ಕೂಡಲೆ ರಥದಿಂದ ಕೆಳಗಿಳಿದು ತನ್ನ ತನುಜನಾದ ಸುವೇಗನನ್ನು ಕುರಿತು ‖೫೭‖ ಎಲೈ ಕಂದನೆ, ಈ ನಮ್ಮ ಉತ್ತಮಾಶ್ವವನ್ನು ಭೀಮಾದಿಗಳು ಹಿಡಿದಿರುವರೆಂದು ನೀನು ಖಿನ್ನನಾಗಬೇಡ. ಯದುಕುಲಾಗ್ರಣಿಯಾದ ಶ್ರೀ ಕೃಷ್ಣನೇ ಪಾಂಡುಪುತ್ರನಾದ ಧರ್ಮರಾಯನು ಮಾಡತಕ್ಕ ಅಶ್ವಮೇಧಯಾಗಕ್ಕೆ ಈ ನಮ್ಮ ಕುದುರೆಯನ್ನು ತರಹೇಳಿ ಭೀಮನನ್ನು ಕಳುಹಿರುವೆನೆಂದು ತಿಳಿದುಬರುತ್ತಿದೆಯಾದ್ದರಿಂದ ಆ ಮಹಾತ್ಮನಾದ ಸ್ವಾಮಿಗೆ ನಮ್ಮ ಸರ್ವಸ್ವದೊಂದಿಗೆ ಈ ಹಯವನ್ನು ಸಂತೋಷದಿಂದ ಒಪ್ಪಿಸುವುದೇ ಧರ್ಮವೆಂದು ನುಡಿದ ತಂದೆಯ ಮಾತುಗಳನ್ನು ಕೇಳಿದೊಡನೆಯೆ ಸುವೇಗನು ಕೈಯಲ್ಲಿದ್ದ ಧನುರ್ಬಾಣಗಳನ್ನು ಕೆಳಗೆ ಬಿಸುಟು ತಂದೆಯ ಬಳಿಗೆ ಹೋಗಿ ಸೇರಿದನು ‖೫೮‖ ಅನಂತರದಲ್ಲಿ ಪುತ್ರಸಮೇತನಾದ ಯೌವನಾಶ್ವನು ವೃಷಕೇತುವಿನೊಂದಿಗೆ ಭೀಮಸೇನನಿರುವ ಸ್ಥಳಕ್ಕೆ ಬಂದು ಆತನಿಗೆ ನಮಸ್ಕಾರ ಮಾಡಲು ಆಗ ಭೀಮಸೇನನು ಇವರು ಯಾರೆಂದು ಕರ್ಣಪುತ್ರನನ್ನು ಕೇಳಿದನು. ಆಗ ವೃಷಧ್ವಜನು ಎಲೈ ಅಗ್ರಜನೇ, ಈತನು ಭದ್ರಾವತೀರಾಜನಾದ ಯೌವನಾಶ್ವನೆಂದೂ, ಈತನು ಆ ಅರಸನ ಕುವರನೆಂದೂ, ಇವರಿರ್ವರೂ ತಮ್ಮ ಸರ್ವಸ್ವವನ್ನೂ ಈ ಯಾಗಾರ್ಹವಾದ ಅಶ್ವದೊಂದಿಗೆ ಶ್ರೀ ಕೃಷ್ಣನ ಪಾದಾರವಿಂದಗಳಲ್ಲಿ ಸಮರ್ಪಿಸಿ ಯುಧಿಷ್ಠಿರನ ಯಾಗಕ್ಕೆ ನೆರವಾಗಿ ಧನ್ಯರಾಗಲಿಚ್ಛಿಸಿ ನಿನ್ನ ದರ್ಶನಾರ್ಥವಾಗಿ ಬಂದಿರುವರು ಎಂದು, ಮುಗುಳ್ನಗೆಯಿಂದ ಕೂಡಿ

ಯೌವನಾಶ್ವನೀತಂಗೆನ್ನೈ | ನೆಳಲೆನಿಪಕುವರಂಸುವೇಗನೆಂಬವನೀತನೆನುತಮಣಿದಂಪದದೊಳು ||೫೯|| ಇವರಚ್ಯುತಾಂಘ್ರಿ ದರ್ಶನಲಂಪಟತ್ವದಿಂ | ದವನಿಪತಿಕುಲಶಿರೋಮಣಿಯೆನಿಪಧರ್ಮಸಂ | ಭವನಡಿಯನೋಲೈಸಲೆಂದುನಿನ್ನಂಕಾಣಲೋಸುಗಂಬಂದರೆಂದು || ಪವನಜಂಗಾವೃಷಧ್ವಜನೊರೆದೊಡಾತನು | ತ್ಸವದೊಳಾಭೂಪಾಲನಂತೆಗೆದುತಕ್ಕೈಸು | ತವನತನುಜಾತನಂಬಿಗಿಯಪ್ಪಲಾನೃಪಂಬಕವೈರಿಗಿಂತೆಂದನು ||೬೦|| ಎಲೆವೃಕೋದರಬಾಹುಬಲಮುಳ್ಳವೀರರುಂ | ಪಲಬರುಂಟಿಳೆಯೊಳವರಂಕಂಡುಬಲ್ಲೆನಾಂ | ಕಲಹದೋಳ್ಮಲೆತವಂಮೈಮರೆದೊಡಿರಿವರಲ್ಲದೆಪಗೆಯಪೊರೆಗೆಬಂದು || ಅಲಸಿದನಿವಂಧುರದೊಳೆಂದವನನುಪಚರಿಸಿ | ಸಲಹಿದಪರಾಕ್ರಮಿಗಳಾರ್ಮಹೀತಳದೊಳೀ | ಕಲಿವೃಷಧ್ವಜನಲ್ಲದಮರದಾನವಮಾನವರೊಳೊಗೆದಪಟುಭಟರೊಳು ||೬೧|| ಆವನವಿನೋದಮಾತ್ರದೊಳೀಸಮಸ್ತಭುವ | ನಾವಳಿಗಳಾಗಿಬಾಳ್ದಳಿವವಾವಿಭುನಿಮ್ಮ | ಸೇವೆಯಾಳ್ಗಡ

---

ಎನ್ನಿಸಿಕೊಳ್ಳತಕ್ಕ, ಕುವರಂ–ತನುಜನಾದ ಸುವೇಗನೆಂಬಾತನು, ಇವನು ಎನುತ–ಹೀಗೆಂದು ನುಡಿಯುತ್ತ, ಪದದೊಳು–ಭೀಮನ ಪಾದಾರವಿಂದಗಳಿಗೆ, ಮಣಿದಂ–ನಮಸ್ಕಾರಮಾಡಿದನು ||೫೯||

ಟೀ|| ಇವರು–ಪಿತಾಪುತ್ರರಾದ ಯೌವನಾಶ್ವ ಸುವೇಗರು, ಅಚ್ಯುತ–ಕೃಷ್ಣಸ್ವಾಮಿಯ, ಅಂಘ್ರಿ-ಅಡಿಗಳ, ದರ್ಶನ–ಈಕ್ಷಿಸತಕ್ಕ, ಲಂಪಟತ್ವದಿಂ-ಆಶೆಯಿಂದ, ಅವನಿಪತಿ–ಭೂಕಾಂತರಾದ ಅರಸರ, ಕುಲ–ವಂಶಕ್ಕೆ, ಶಿರೋಮಣಿ-ಶಿರೋಭೂಷಣವಾದ ಮಾಣಿಕ್ಯವು, ಎನಿಪ–ಎಂದು ಹೆಸರನ್ನು ಪಡೆದಿರತಕ್ಕ, ಧರ್ಮಸಂಭವನ– ಯುಧಿಷ್ಠಿರನ, ಅಡಿಯನು–ಚರಣವನ್ನು, ಓಲೈಸಲೆಂದು–ಸೇವಿಸಬೇಕೆಂದು, ನಿನ್ನನು–ನಿನ್ನನ್ನೆ, ಕಾಣಲೋಸುಗಂ–ನೋಡುವುದಕ್ಕಾಗಿ, ಬಂದರು–ಐತಂದರು, ಎಂದು–ಎಂಬುದಾಗಿ, ಪವನಜಂಗೆ-ವಾಯುನಂದನನಿಗೆ, ಆ ವೃಷಧ್ವಜಂ–ಆ ಕರ್ಣಸುತನು, ಒರೆದೊಡೆ–ತಿಳಿಸಲು, ಉತ್ಸವದೊಳು–ಆನಂದದಿಂದ, ಆ ಭೂಪಾಲನಂ-ಆ ಯೌವನಾಶ್ವಾವನಿಪನನ್ನು, ತೆಗೆದು–ಆಲಿಂಗನಾದಿಗಳಿಂದ, ತಕ್ಕೈಸುತ – ಸತ್ಕರಿಸುತ್ತ, ಅವನ-ಮಹೀಶ್ವರನ, ಅನುಜಾತನಂ–ಸುವೇಗನೆಂಬ ಪುತ್ರನನ್ನೂ, ಬಿಗಿಯಪ್ಪಲು–ಬಾಚಿ ತಬ್ಬಿಕೊಳ್ಳಲು, ಆ ನೃಪಂ-ಆ ರಾಜನು ಬಕವೈರಿಗೆ-ಭೀಮಸೇನನಿಗೆ, ಇಂತು–ಈ ಪ್ರಕಾರದಿಂದ, ಎಂದನು–ಹೇಳಲುಜ್ಜುಗಿಸಿದನು ||೬೦||

ಟೀ|| ಎಲೆ ವೃಕೋದರ – ಅಯ್ಯಾ ಭೀಮನೆ, ಬಾಹುಬಲಂ – ಭುಜಪರಾಕ್ರಮವು, ಉಳ್ಳ–ಇರತಕ್ಕ, ಶೂರರು–ಯೋಧರು, ಇಳೆಯೊಳಗೆ–ಧರೆಯಲ್ಲಿ, ಪಲಬರು-ಅನೇಕರು, ಉಂಟು-ಇದಾರೆ, ಅವರಂ–ಆ ವೀರರನ್ನು, ಆಂ–ನಾನು, ಕಂಡುಬಲ್ಲೆ-ಅರಿತಿರುವೆನು, ಕಲಹದೊಳು-ರಣದಲ್ಲಿ, ಮಲೆತವಂ–ಪ್ರತಿಕಕ್ಷಿಯಾಗಿರತಕ್ಕವನು, ಮೈಮರದೊಡೆ–ಸ್ಮೃತಿತಪ್ಪಿ ಬಿದ್ದರೆ, ಇರಿವರು–ಸಂಹರಿಸುವರು, ಅಲ್ಲದೆ–ಹಾಗೆಮಾಡದೆ, ಪಗೆಯ–ವೈರಿಯ, ಪೊರೆಗೆ–ಬಳಿಗೆ, ಬಂದು–ಐತಂದು, ಇವಂ–ಇವನು, ಧುರದೊಳ್–ರಣದಲ್ಲಿ, ಅಲಸಿದನು–ಆಯಸಂಗೊಂಡನು, ಎಂದು-ಎಂಬದಾಗಿ, ಅವನನು–ಶತ್ರುವನ್ನು, ಉಪಚರಿಸಿ-ಸತ್ಕರಿಸಿ, ಸಲಹಿದ-ಕಾಪಾಡಿದ, ಪರಾಕ್ರಮಿಗಳು–ವೀರರು, ಈ ಕಲಿವೃಷಧ್ವಜನಲ್ಲದೆ – ಧೀರನಾದ ಈ ಕರ್ಣತನುಜನಲ್ಲದೆ, ಮಹೀತಲದೊಳು-ಇಳೆಯಲ್ಲಿ, ಅಮರ–ಸುರರಲ್ಲಿಯೂ, ದಾನವ-ಅಸುರರಲ್ಲಿಯೂ, ಮಾನವರೊಳಗೆ–ಮನುಜರಲ್ಲಿಯೂ, ಒಗೆದ-ಉತ್ಪನ್ನರಾದ, ಪಟುಭಟರೊಳು–ಶೂರರಾದವರಲ್ಲಿ, ಆರು–ಯಾರಿರುವರು? ||೬೧||

ಟೀ|| ಆವನ–ಯಾರ, ವಿನೋದಮಾತ್ರದೊಳು– ಲೀಲಾಮಾತ್ರದಿಂದಲೆ, ಈ ಸಮಸ್ತ–ಈ ಅಶೇಷವಾದ, ಭುವನಾವಳಿಗಳು – ಪ್ರಪಂಚ ಸಮುದಾಯಗಳು, ಆಗಿ-ಹುಟ್ಟಿ, ಬಾಳ್ದು - ಬಾಳಿ, ಅಳಿವವು–ಲಯವಾಗುವವೊ, ಆ ವಿಭು–ಅಂಥಾ ಪ್ರಭುವು, ನಿಮ್ಮ–ಪಾಂಡುಪುತ್ರರಾದ ನಿಮಗೆ, ಸೇವೆಯಾಳ್ಗಡ–ದಾಸನಲ್ಲವೆ, ನಾನು–ನಾನು, ಅದೇಸರವಂ– ಎಷ್ಟುಮಾತ್ರದ ಮನುಜನು, ಎಂದು-ಎಂಬತೆರದಿಂದ, ಎನ್ನಮೇಲೆ- ನನ್ನೊಂದಿಗೆ, ಸಾಹಸವನು – ಪರಾಕ್ರಮವನ್ನು, ಎಸಗಿ-ತೋರ್ಪಡಿಸಿ

---

ಸಾಷ್ಟಾಂಗದಂಡಪ್ರಣಾಮವನ ಗೈದನು. ಈ ನುಡಿಯನ್ನು ಕೇಳಿದ ಕೂಡಲೆ ವೃಕೋದರನು ಯೌವನಾಶ್ವನನ್ನೂ ಆತನ ಕುಮಾರನನ್ನೂ ಗಾಢಾಲಿಂಗನವಂ ಮಾಡಿಕೊಂಡು ಆನಂದಭರಿತನಾಗಿದ್ದನು ||೬೦|| ಆಗ ಯೌವನಾಶ್ವನು ಭೀಮಸೇನನನ್ನು ಕುರಿತು, ಎಲೈ ಪವನಸಂಭವನೆ ಕೇಳು, ಪ್ರಪಂಚದಲ್ಲಿ ಮಹಾ ಪರಾಕ್ರಮಿಗಳೆಂಬ ಹೆಸರನ್ನು ಪಡೆದಿರುವರು ಅಸಂಖ್ಯಾತರಾಗಿರುವರು. ಆದರೆ ಯುದ್ಧದಲ್ಲಿ ಮೂರ್ಛಾಕ್ರಾಂತನಾಗಿ ಮೈಮರೆತು ಬಿದ್ದ ಶತ್ರುವನ್ನು ಸಂಹರಿಸುವರೇ ಹೊರತು ಶೈತ್ಯೋಪಚಾರದಿಂದ ಸತ್ಕರಿಸಿದವರಲ್ಲಿ ಈ ಕರ್ಣಪುತ್ರನೊಬ್ಬನಲ್ಲದೆ ತ್ರಿಲೋಕಗಳಲ್ಲಿ ಎಲ್ಲಿಯಾಗಲಿ ಮತ್ತೆ ಯಾರಾದರೂ ಇರುವರೆ ||೬೧|| ಸೃಷ್ಟಿ ಸ್ಥಿತಿ ಲಯಗಳಿಗೆ ಕಾರಣಭೂತನೂ ಭಕ್ತವತ್ಸಲನೂ ಆದ ಪರಮಾತ್ಮನೇ ನಿಮ್ಮ ವಶವಾಗಿರ.ವಾಗ ನನ್ನನ್ನು ಎಷ್ಟುಮಾತ್ರದವನೆಂದು ಈ ರೀತಿಯಲ್ಲಿ ಹೋರಾಡಿ ವೃಥಾ ಶ್ರಮಗೊಂಡಿರಿ. ಈ ಸಂದರ್ಭದಲ್ಲಿ ಸ್ವಲ್ಪ ಸೂಚಿಸಿದ್ದರೂ ಸಂತೋಷದಿಂದ ಒಪ್ಪಿಕೊಳ್ಳದೆ ಇರತಕ್ಕವನೆಂದು ಯೋಚಿಸಿದಿರಾ? ಅಯ್ಯೋ, ಎಂಥಾ ಕಾರ್ಯವನ್ನು ಮಾಡಿಬಿಟ್ಟರಿ.

ನಾನದೇಸರವನೆಂದೆನ್ನಮೇಲೆಸಾಹಸವನೆಸಗಿ ‖ ಈವಾಜಿಯಂಪಿಡಿದಿರಕಟತಪ್ಪಿದಿರಿಲ | ಕ್ಷ್ಮೀವರನಕಿಂಕರರ್ಗೀಯದನೆ ತಾನೆನ್ನ | ಜೀವಮಂಸಮರದೊಳ್ಕಾಯ್ದುಳುಪಿದಂ ಕರ್ಣತನಯನದನೇವೇಳ್ವೆನು ‖ ೬೨ ‖ ಈವೃಷಧ್ವಜನಿಂದುಸಮರದೋಳ್ಕಾಯದೊಡೆ | ಹಾವೃಥಾಕೃತಮಾಗಿಪೋಗುತಿರ್ದುದುಜನ್ಮ | ಮಾವೃತಸಮಸ್ತಯಾದವನಾಗಿನಿಮ್ಮೊಳಗೆನರಲೀಲೆಯಂನಟಿಸುವ ‖ ಶ್ರೀವೃತ್ತಕುಚಕುಂಕುಮಾಂಕನಂಕಂಡಪೆನ | ಲಾವೃಕೋದರನೀವುಮಾಡಿದುಪಕಾರಕಬ | ಲಾವೃಂದಸಹಿತಬಂದೆನ್ನಸರ್ವಸ್ವಮಂಹರಿಗರ್ಪಿಸುವೆನೆಂದನು ‖೬೩‖ ಎಂದೊಡರಸಂಗೆಸೋದರರಾವುನಾಲ್ವರುಂ | ಟಿಂದುವರೆಗಿನ್ನುನೀಸಹಿತೈವರಾದೆವಿದ | ರಿಂದಹರಿದರ್ಶನಮಸಾಧ್ಯಮಪ್ಪುದೆನಿನಗೆಧರ್ಮಜನವರಮಖವನು | ನಿಂದುಮಾಡಿಸುವಭಾರಕನಸುರಹರನಾಮು |

---

ಈವಾಜಿಯು-ಈ ಕುದುರೆಯನ್ನು, ಪಿಡಿದಿರಿ_ಹಿಡಿದುಕೊಂಡಿರಿ ಅಥವ ಬಂಧಿಸಿದವರಾದಿರಿ, ಅಕಟ_ಅಯ್ಯೊ, ತಪ್ಪಿದಿರಿ-ಸುಲಭಮಾರ್ಗವನ್ನು ತ್ಯಜಿಸಿಬಿಟ್ಟಿರಿ, ಲಕ್ಷ್ಮೀವರನ_ಲಕ್ಷ್ಮೀಕಾಂತನ, ಕಿಂಕರರ್ಗೆ_ದಾಸರಿಗೆ, ತಾನ_ನಾನು, ಈಯದನೆ_ಕೊಡಲಾರದವನೆ, ಅಲ್ಲ_ಎಂದಿಗೂ ಹಾಗೆ ಮಾಡತಕ್ಕವನಲ್ಲ, ಕರ್ಣತನಯನು-ಕರ್ಣನಂದನನು, ಸಮರದೊಳ್-ಕದನದಲ್ಲಿ, ಎನ್ನ-ನನ್ನ, ಜೀವಮಂ-ಹರಣವನ್ನು, ಕಾಯ್ದು-ಕಾಪಾಡಿ, ಉಳುಪಿದಂ-ಬದುಕಿಸಿದನು, ಅದನು-ಆ ಆಶ್ಚರ್ಯವನ್ನು, ಏವೇಳ್ವೆನು-ಏನೆಂದು ನುಡಿಯಲಿ ‖ ೬೨ ‖

ಟೀ‖ ಇಂದು_ಈಹೊತ್ತು, ಈ ವೃಷಧ್ವಜನು_ಈ ಕರ್ಣನಂದನನು, ಎನ್ನ-ನನ್ನನ್ನು, ಸಮರದೊಳ್_ಆಜಿಯಲ್ಲಿ, ಕಾಯದೊಡೆ_ರಕ್ಷಿಸದಿದ್ದರೆ, ಜನ್ಮಂ - ನನ್ನಬಾಳು, ವೃಥಾಕೃತವಾಗಿ_ನಿರರ್ಥಕವಾಗಿ, ಪೋಗುತ - ಹೊರಟುಹೋಗುತ್ತ, ಇರ್ದುದು_ಇತ್ತು, ಹಾ_ಕಷ್ಟವು, ಆವೃತ_ಅನ್ವಿತವಾದ, ಸಮಸ್ತ_ಸಕಲವಾದ, ಯಾದವನಾಗಿ-ಯದುವಂಶದಿಂದ ಸೇರಿದವನಾಗಿ, ನಿಮ್ಮೊಳಗೆ_ನಿಮ್ಮೊಂದಿಗೆ, ನರಲೀಲೆಯಂ_ಮಾನುಷ ನಟನೆಗಳನ್ನು, ನಟಿಸುವ_ತೋರ್ಪಡಿಸುತ್ತಿರುವ, ಶ್ರೀ-ಇಂದಿರೆಯ, ವೃತ್ತ_ದುಂಡಾದ, ಕುಚ_ಎದೆಗಂಟುಗಳ ಎಂದರೆ ಸ್ತನಗಳ, ಕುಂಕುಮ_ಕುಂಕುಮಕೇಸರಿಯ ಪರಿಮಳದ, ಅಂಕನಂ_ಚಿಹ್ನೆಯುಳ್ಳ ಕೃಷ್ಣಸ್ವಾಮಿಯನ್ನು, ಕಂಡಪೆನು-ಈಕ್ಷಿಸುವೆನು, ಎಲಾ-ಎಲೈ, ವೃಕೋದರ - ವಾಯುಪುತ್ರನೆ, ನೀವು, ಮಾಡಿದ-ಎಸಗಿದ, ಉಪಕಾರಕ್ಕೆ-ಉಪಕೃತಿಗೆ, ಅಬಲಾ_ನಾರೀಗಣದಿಂದ, ಬಂದು_ಐತಂದು, ಎನ್ನ_ನನ್ನ, ಸರ್ವಸ್ವಮಂ_ಎಲ್ಲವನ್ನೂ, ಹರಿಗೆ_ಶ್ರೀ ಕೃಷ್ಣಸ್ವಾಮಿಗೆ, ಅರ್ಪಿಸುವೆನು_ಕೊಡುತ್ತೇನೆ, ಎಂದನು_ಎಂಬುದಾಗಿ ಪೇಳಿದನು ‖ ೬೩ ‖

ಟೀ‖ ಎಂದೊಡೆ_ಯೌವನಾಶ್ವನು ಈರೀತಿ ನುಡಿಯಲು (ಭೀಮನು), ಅರಸಂಗೆ_ಧರ್ಮನಂದನನಿಗೆ, ಆವು_ನಾವು, ನಾಲ್ವರು_ನಾಲ್ಕು ಜನರು, ಸೋದರರು_ಅನುಜರು, ಇದುವರೆಗೆ_ಈದಿನದ ಪರ್ಯಂತವೂ, ಆದೆವು-ಆಗಿದ್ದೆವು. ಇನ್ನು_ಮುಂದೆ, ನೀಸಹಿತ_ನೀನೂಕೂಡಿ, ಐವರು - ಐದುಜನ ಸಹೋದರರು, ಆದೆವು - ಆಗಿದ್ದೇವೆ, ಇದರಿಂದ - ಈಪ್ರಕಾರವಾಗಿ ಅಣ್ಣತಮ್ಮಂದಿರ ಭಾವವನ್ನು ನೀನು ಅಂಗೀಕರಿಸಿರುವುದರಿಂದ, ಹರಿಯ_ಕೃಷ್ಣಮೂರ್ತಿಯ, ದರ್ಶನಂ_ನೋಡುವ ಸುಖವು, ಅಸಾಧ್ಯಂ-ಕಷ್ಟವಾದದ್ದು, ಅಪ್ಪುದೆ_ಆದೀತೆ, ಧರ್ಮಜನ-ಯುಧಿಷ್ಠಿರನ, ವರ_ಶ್ರೇಷ್ಠವಾದ, ಮಖವನು_ಯಾಗವನ್ನು, ನಿಂತು_ಮುಂದಾಳಾಗಿ ನಿಂತು, ನಡೆಸುವ_ಈಡೇರಿಸುವ, ಭಾರಕನು - ಹೊರೆಯನ್ನು ಹೊತ್ತಿರುವವನು, ಅಸುರಹರನು_ರಾಕ್ಷಸಾಂತಕನಾದ ಕೃಷ್ಣನು, ಅಹನು-ಆಗಿರುವನು, ಆಮುಕುಂದನಂ_ಮೋಕ್ಷದಾಯಕನಾದ ಆ ಸ್ವಾಮಿಯನ್ನು, ಕಾಣ್ಬುದು_ದರ್ಶನಮಾಡಿಕೊಳ್ಳತಕ್ಕದ್ದು, ಉಳ್ಳೊಡೆ_ಆಗಿದ್ದಪಕ್ಷಕ್ಕೆ, ತನ್ನಕೂಡೆ_ನನ್ನೊಂದಿಗೆ, ನೀಂ_ನೀನೂ, ಬಂದು_ಐತಂದು, ಸೇವಿಪುದು-ಧ್ಯಾನಮಾಡುವುದು, ಎನಲು_ಎಂದು ನುಡಿಯಲು, ಮಾರುತಿಗೆ-ವಾಯುಸೂನುವಿಗೆ, ಆನೃಪಂ_ಆ ಯೌವನಾಶ್ವನೆಂಬ

---

ಲಕ್ಷ್ಮೀಕಾಂತನಾದ ಪರಮಾತ್ಮನ ಭಕ್ತರಾದ ನಿಮಗೆ ಈ ಅಶ್ವವನ್ನು ಕೊಡದೆ ಎಂದೆಂದಿಗೂ ಇರುತ್ತಲೇ ಇರಲಿಲ್ಲ ‖ ೬೨ ‖ ಈ ವೃಷಧ್ವಜನು ಯುದ್ಧದಲ್ಲಿ ಶರವರ್ಷಗಳಿಂದ ನನ್ನನ್ನು ಮೂರ್ಛಾಕ್ರಾಂತನನ್ನಾಗಿ ಮಾಡಿ ಪುನಃ ಶೈತ್ಯೋಪಚಾರದಿಂದ ಸತ್ಕರಿಸಿದ್ದು ನನಗೆ ಮಹದುಪಕಾರವಾಯಿತು. ಈ ಕಾರಣದಿಂದ ನನಿಗೆ ಸಚ್ಚಿದಾನಂದರೂಪನಾದ ಶ್ರೀ ಕೃಷ್ಣಸ್ವಾಮಿಯ ಸಂದರ್ಶನಫಲವು ಲಭಿಸುತ್ತಾದ್ದರಿಂದ ನಾರೀಮಣಿಗಳ ಸಹಿತ ನನ್ನ ಸರ್ವಸ್ವದೊಂದಿಗೆ ಈ ಉತ್ತಮಾಶ್ವವಂ ಕೂಡಿಕೊಂಡು ಬಂದು ಶ್ರೀ ಕೃಷ್ಣನ ಪಾದಾರವಿಂದಗಳಲ್ಲಿ ಅರ್ಪಿಸುವೆನೆಂದು ನುಡಿದನು ‖೬೩‖ ಆಗ ವೃಕೋದರನು ಎಲೈ ಯೌವನಾಶ್ವಭೂಪಾಲನೆ, ಇದುವರೆಗೂ ಯುಧಿಷ್ಠಿರನಿಗೆ ನಾನೂ, ಅರ್ಜುನನೂ, ನಕುಲಸಹದೇವರೂ ನಾಲ್ವರು ಮಾತ್ರ ಅನುಜರಾಗಿದ್ದೆವು. ಇನ್ನು ಮೇಲೆ ನೀನೂಸೇರಿ ಧರ್ಮನಂದನನಿಗೆ ಐದು ಮಂದಿ ಒಡಹುಟ್ಟಿದವರು. ಧರ್ಮಪುತ್ರನ ಸ್ನೇಹವು ದೊರೆತಮೇಲೆ ನಿನಿಗೆ ಶ್ರೀ ಕೃಷ್ಣಪರಮಾತ್ಮನ ಸಂದರ್ಶನವು ಲೇಶವೂ ಕಷ್ಟವಿಲ್ಲವು. ಧರ್ಮರಾಯನ ಯಾಗಕ್ಕೆ ಸಹಾಯಕನಾಗಿ ಬಂದಿರತಕ್ಕ ಪರಮಾತ್ಮಸ್ವರೂಪನಾದ ಕೃಷ್ಣನನ್ನು ನೋಡಬೇಕಾದರೆ ನನ್ನೊಡನೆ ಬಂದು ಸ್ವಾಮಿಯನ್ನು ಧ್ಯಾನಿಸು

ಕುಂದವನಂಕಾಣ್ಬುದುಳ್ಳೊಡೆತನ್ನ ಕೂಡೆನೀ | ಬಂದುಸೇವಿಪುದೆನಲ್ಮಾರುತಿಗೆವಿನಯದಿಂದಾಭೂಪನಿಂತೆಂದನು || ೬೪ || ಅಹು ದುನೀನೆಂದುದಂಮೀರೆನೆನ್ನೂರೊಗದೆ | ಬಹಿರಂಗದಿಂತೆರಳ್ವುದುನೀತಿಯಲ್ಲೆನ್ನೊ | ಳಹಸೇವೆಯಂಪುರದೊಳೊಂದೆರಡುದಿವ ಸಂಗಳಿರ್ದುಕೈಕೊಂಡುಬಳಿಕ || ಬಹುವಸ್ತುಚಯಸಹಿತಪಡೆವೆರಸಿನಿನ್ನೊಡನೆ | ಬಹೆನೆನ್ನನೊಡಗೊಂಡುಮುದದಿಪೋಪಂತ ನು | ಗ್ರಹಿಸೆಂದವಂಬೇಡಿಕೊಳಲೊಪ್ಪಿದಂಕೀಚಕಾಂತಕಂಸಂತಸದೊಳು || ೬೫ || ತರಿಸಿಕೋಲ್ಪಿಡಿದಹಯಮಂಸುವೇಗನವಶ ದೊ | ಳಿರಿಸಿಬಳಿಕನಿಲಜಂಹೈಡಿಂಬಿಕರ್ಣಜ | ವೆರಸಿಭದ್ರಾವತಿಗೆಬರಲಾನೃಪಂಪೊಳಲಸಿಂಗರಿಸಿಮೇಣಿವರನು || ಅರಸಿಯ ರಗಡಣದೊಳಿದಿರ್ಗೊಂಡುಮನೆಯೊಳಾ | ದರಿಸಿದಿವಸತ್ರಯಂತಡೆದೊಡನೆಮಂತ್ರಿಯಂ | ಕರೆಸಿರಾಜ್ಯದಭಾಗಮಂಪೊರಿಸಿಹ ಸ್ತಿನಾಪುರಕ್ಕೈದಲನುವಾದನು || ೬೬ || ತೀವಿರ್ದನಿಖಿಲಭಂಡಾರಮಂತೆಗೆಸಿನಾ | ನಾವಸ್ತುನಿಚಯಮಂಪೇರಿಸಿಸಮಸ್ತಸೇ |

---

ಭೂಪನು, ವಿನಯದಿಂದ–ನಮ್ರತೆಯಿಂದ, ಇಂತು–ಮುಂದೆ ಹೇಳುವತೆರನಾಗಿ, ಎಂದನು–ನುಡಿದನು || ೬೪ ||

ಟೀ|| ಆಗ ಯೌವನಾಶ್ವನು ಭೀಮನ ನುಡಿಗಳನ್ನು ಕೇಳಿ, ಅಹುದು-ನ್ಯಾಯ-ವು, ನೀನು–ನೀನು, ಎಂದುದಂ ಉಸಿರಿದ್ದನ್ನು, ಮೀರೆನು-ಅತಿಕ್ರಮಿಸುವುದಿಲ್ಲವು. ಎನ್ನೂರ್–ನನ್ನ ಪಟ್ಟಣವಾದ ಭದ್ರಾವತಿಗೆ, ಪೋಗದೆ–ಹೋಗದೇನೆ, ಬಹಿರಂಗದಿಂ–ಹೊರಹೊರಗೇ, ತೆರಳ್ವುದು–ಪ್ರಯಾಣ ಬೆಳೆಸತಕ್ಕದ್ದು, ನೀತಿಯಲ್ಲ–ಸರಿಯಾದ ಮಾರ್ಗವಾಗಿಲ್ಲ. ಎನ್ನೊಳು–ನನ್ನಿಂದ, ಅಹ–ಮಾಡಲ್ಪಡುವ, ಸೇವೆಯಂ–ಉಪಚಾರವನ್ನು, ಪುರದೊಳು–ನನ್ನ ನಗರವಾದ ಭದ್ರಾವತಿಯಲ್ಲಿ, ಒಂದೆರಡು ದಿವಸಂಗಳು–ಒಂದೆರಡುದಿನ ಮಾತ್ರವಾದರೂ, ಕೈಕೊಂಡು–ಸ್ವೀಕರಿಸಿ, ಬಳಿಕ–ಆ ಮೇಲೆ, ಬಹು-ಅಧಿಕವಾದ, ವಸ್ತು–ಪುರುಳಿನ, ಚಯ–ಸಮೂಹದ, ಸಹಿತ–ಸಮೇತರಾಗಿ, ಪಡೆವೆರಸಿ–ದಂಡಿನಿಂದ ಕೂಡಿ, ನಿನ್ನೊಡನೆ–ನಿನ್ನಕೂಡ, ಬಹೆನು–ಬರುವೆನು. ಎನ್ನನು–ನನ್ನನ್ನು, ಒಡಗೊಂಡು-ಜೊತೆಗೊಂಡು, ಮುದದಿ–ಆನಂದದಿಂದ, ಪೋಪಂತೆ–ಹೋಗುವಹಾಗೆ, ಅನುಗ್ರಹಿಸು – ಮನಸ್ಸುಮಾಡು, ಎಂದು – ಎಂಬದಾಗಿ, ಅವಂ–ಆ ಯೌವನಾಶ್ವ ಭೂಪಾಲನು, ಬೇಡಿಕೊಳಲು – ಕೇಳಿಕೊಳ್ಳಲಾಗಿ, ಕೀಚಕಾಂತಕಂ–ಕೀಚಕನನ್ನು ಕೊಂದ ವಾಯುಪುತ್ರನು, ಸಂತಸದೊಳು–ಆನಂದದಿಂದ, ಒಪ್ಪಿದಂ–ಒಡಂಬಟ್ಟನು || ೬೫ ||

ಟೀ|| ಕೋಲ್–ಸೂರೆಯಲ್ಲಿ, ಪಿಡಿದ–ಹಿಡಿದಂಥಾ, ಕುದುರೆಯಂ–ಹಯವನ್ನು, ತರಿಸಿ – ತೆಗೆಸಿಕೊಂಡು ಬಂದು, ಸುವೇಗನ–ಸುವೇಗನೆನ್ನುವ ಭದ್ರಾವತಿಯ ಯುವರಾಜನ, ವಶದೊಳು–ಹತ್ತಿರದಲ್ಲಿ, ಇರಿಸಿ–ಒಪ್ಪಿಸಿ, ಬಳಿಕ–ಅನಂತರ, ಅನಿಲಜಂ–ವಾಯುನಂದನನು, ಹೈಡಿಂಬಿ–ಹಿಡಿಂಬಿಯ ಪುತ್ರನು, ಕರ್ಣಜರು–ಕರ್ಣನಂದನರು, ವೆರಸಿ–ಇವರೊಂದಿಗೆ ಭದ್ರಾವತಿ ನಗರಕ್ಕೆ, ಬರಲು–ಐತರಲು, ಆ ನೃಪಂ–ಆ ಅರಸು, ಪೊಳಲ–ನಗರವನ್ನು, ಸಿಂಗರಿಸಿ-ಕಾಂತಿಯುಕ್ತವಾಗಿ ಮಾಡಿ, ಮೇಣ್–ಅಲ್ಲದೆ, ಇವರನು–ವಾಯುಸುತನೇ ಮೊದಲಾದವರನ್ನು, ಅರಸಿಯರ–ಅರಸು ಪತ್ನಿಯರ, ಗಡಣದೊಳು–ಸಂಭ್ರಮದಿಂದ, ಇದಿರ್ಗೊಂಡು–ಎದುರಾಗಿ ಬಂದು, ಮನೆಯೊಳು–ರಾಜಮಂದಿರದಲ್ಲಿ, ಆದರಿಸಿ–ಸತ್ಕಾರವಂ ಮಾಡಿ, ದಿವಸತ್ರಯಂ–ಮೂರು ದಿವಸಗಳವರೆಗೂ, ತಡೆದು–ಹೋಗಲು ಬಿಡದೆ, ಒಡನೆ–ತಕ್ಷಣವೇ, ಮಂತ್ರಿಯನು–ಅಮಾತ್ಯನನ್ನು, ಕರೆಸಿ–ಹೇಳಿಕಳುಹಿಸಿ, ರಾಜ್ಯಭಾರಮಂ–ದೇಶದ ಆಡಳಿತಗಳ ಹೊರೆಯನ್ನು, ಪೊರಿಸಿ–ಆತನಿಗೆ ಹೊರಿಸಿ, ಹಸ್ತಿನಾಪುರಕೆ–ಹಸ್ತಿನಾವತಿಗೆ, ಬರಲು–ಐತರಲು, ಅನುವಾದನು–ಸಿದ್ಧನಾದನು || ೬೬ ||

ಟೀ|| ತೀವಿರ್ದ–ಪೂರ್ಣವಾಗಿದ್ದ, ನಿಖಿಳ–ಎಲ್ಲಾ, ಭಂಡಾರಮಂ–ಐಶ್ವರ್ಯವನ್ನು, ತೆಗಿಸಿ–ಈಚೆಗೆ ತೆಗಿಸಿ, ನಾನಾವಿಧವಿಧವಾದ, ವಸ್ತು–ಪದಾರ್ಥಗಳ, ನಿಚಯಮಂ–ರಾಶಿಯನ್ನು, ಪೇರಿಸಿ–ಭರ್ತಿಮಾಡಿಸಿ, ಸಮಸ್ತ–ಅಶೇಷವಾದ, ಸೇನಾ–

---

ಎಂದು ಹೇಳಿದ ಮಾತನ್ನು ಕೇಳಿ ಯೌವನಾಶ್ವಕ್ಷಿತಿಪತಿಯು || ೬೪ || ಮಾರುತಿಯನ್ನು ನೋಡಿ, ಎಲೈ ವೃಕೋದರನೆ ನೀನು ಹೇಳಿದ್ದು ಯುಕ್ತವೇಸರಿ. ನಾನು ಬರಲು ಸಿದ್ಧನಾಗಿಯೇ ಇರುವೆನು, ಆದರೆ ನೀವುಗಳೆಲ್ಲರೂ ನನ್ನ ನಗರಿಗೆ ಬಂದು ನಾನು ಮಾಡುವ ಅಲ್ಪವಾದ ಆತಿಥ್ಯವನ್ನು ಸಂತೋಷದಿಂದ ಪರಿಗ್ರಹಿಸಿ, ಒಂದೆರಡು ದಿನವಿದ್ದು ಅನಂತರ ಪ್ರಯಾಣವಂಬೆಳೆಸಬೇಕೆಂದು ವಿನಯದಿಂದ ಕೇಳಿಕೊಳ್ಳಲಾಗಿ ||೬೫|| ಭೀಮಸೇನನು ಅತ್ಯಾನಂದದಿಂದ ಒಪ್ಪಿಕೊಂಡನು. ಕೂಡಲೇ ಭೀಮನು ಅಶ್ವಮೇಧಾರ್ಹವಾದ ಹಯವನ್ನು ತಂದು ಸುವೇಗನಿಗೆ ಒಪ್ಪಿಸಿ ಕರ್ಣಜ ಮೇಘನಾದರಿಂದೊಡಗೂಡಿ ಭದ್ರಾವತೀನಗರಕ್ಕೆ ಹೊರಡಲೆಳಸಿದನು. ಇವರು ಊರು ಸೇರುವ ಹೊತ್ತಿಗೆ ಪಟ್ಟಣವೆಲ್ಲಾ ಶೃಂಗಾರಕಾಂತಿಯಿಂದ ಥಳಥಳಿಸುತ್ತಿರಲು, ಯೌವನಾಶ್ವಮಹೀಪಾಲನು ಇವರನ್ನು ಸಂಭ್ರಮದಿಂದ ಆದರಿಸಿ ತನ್ನ ಅರಮನೆಗೆ ಕರದುಕ್ಕೊಂಡು ಹೋಗಿ ಮೂರು ದಿನಗಳವರೆಗೂ ನಾನಾ ಪ್ರಕಾರವಾಗಿ ಅವರನ್ನು ಸತ್ಕರಿಸಿ ರಾಜ್ಯದ ಆಡಳಿತಗಳನ್ನೆಲ್ಲಾ ತನ್ನ ಮಂತ್ರಿಗೆ ಒಪ್ಪಿಸಿ ||೬೬|| ತನ್ನ ಭಂ

ನಾವಿತತಿಸಹಿತಾಹಯಂಸಹಿತಸುತಸಹೋದರಬಂಧುವರ್ಗಸಹಿತ ‖ ಆವಸುಮತೀವಲ್ಲಭಂಪ್ರಭಾವತಿಯೆಂಬ | ದೇವಿಸಹಿತಗಣಿತವಧೂಜಾಲಸಹಿತಭದ್ರಾವತಿಯ | ಪುರಜನಂಸಹಿತಪೊರಮಟ್ಟನೊಲವಿಂಭೀಮಸೇನನೊಡನೆ ‖೬೭‖ ಎಲ್ಲರುಂಪೊರಮಟ್ಟ ಬಳಿಕಾನೃಪಂರಮಾ | ವಲ್ಲಭನದರ್ಶನಕೆಮಾತೆಯಂಕರೆಯಲವ | ಳೊಲ್ಲೆನಾನಿಲ್ಲಿರದೊಡೀಬದುಕನೋಡುವವರಾರೆಂದುಚಂಡಿಗೊಳಲು ‖ ಫುಲ್ಲನಾಭನಿಗೆಸರ್ವಸ್ವಮೊಪ್ಪಿಸುವಡಿವ | ಳಿಲ್ಲದಿರಬಾರದೆಂದಾಕೆಯಂಬಲ್ಪಿನಿಂ | ನಿಲ್ಲದಂದಳವನೇರಿಸಿಮತ್ತೆ ಮಾರುತಿಯೊಡನೆಪಯಣಕನುವಾದನು ‖೬೮‖ ಪಟ್ಟಣದೊಳಾರುಮಿಲ್ಲೆನಿಸಿತನ್ನೊಡನೆಪೊರ | ಮಟ್ಟುದಖಿಳಪ್ರಜೆಗಳಿವರಂ ನಡಸೆದಿನಂ | ದಟ್ಟದಲ್ಲದೆಮಾಣದನ್ನೆಗಂಧರ್ಮಜಂಗೀರಾಜಕಾರಿಯವನು ‖ ಮುಟ್ಟಿಸದಿರಲ್ಬಾರದೆಂದಾಮಹೀಶ್ವರನ | ಬಟ್ಟೆಗಾವಲ್ಗೆ ಕರ್ಣಜಮೇಘನಾದರಂ | ಕೊಟ್ಟುನಿಂದಲ್ಲಿನಿಲ್ಲದೆಬಂದುಭೀಮಸೇನಂಪೊಕ್ಕನಿಭಪುರಿಯನು ‖ ೬೯ ‖ ನುತವಸಂತಾಗ

---

ವಿತತಿಸಹಿತ-ಸಮುದಾಯದೊಂದಿಗೆ, ಆ ಹಯಂ ಸಹಿತ - ಆ ಅಶ್ವದೊಂದಿಗೂ, ಸುತ-ಮಗನು, ಸೋದರ-ಅನುಜನು, ಬಂಧುವರ್ಗಸಹಿತ-ನೆಂಟರಿಷ್ಟರಿಂದ ಸಮೇತನಾಗಿ, ಪ್ರಭಾವತಿ ಎಂಬ-ಪ್ರಭಾವತಿ ಎಂಬ ನಾಮಧೇಯವುಳ್ಳ, ದೇವಿಸಹಿತ-ಪಟ್ಟಮಹಿಷಿಯೊಂದಿಗೆ, ಅಗಣಿತ-ಲೆಕ್ಕವಿಲ್ಲದಷ್ಟು, ವಧೂಜಾಲಸಹಿತ-ಸ್ತ್ರೀಪರಿವಾರದೊಂದಿಗೂ, ಭದ್ರಾವತಿಯ-ಭದ್ರಾವತಿಯೆಂಬ ರಾಜ್ಯದ, ಪುರಜನಸಹಿತ - ಪುರನಿವಾಸಿಗಳೊಂದಿಗೂ, ಆ ವಸುಮತೀವಲ್ಲಭಂ-ಆ ಭೂಕಾಂತನಾದ ಯೌವನಾಶ್ವನು, ಭೀಮಸೇನನೊಡನೆ-ವೃಕೋದರನೊಂದಿಗೆ, ಒಲವಿಂ-ಸಂಪ್ರೀತಿಯಿಂದ, ಪೊರಮಟ್ಟನು-ಪ್ರಯಾಣವಂ ಬೆಳಸಿದನು ‖೬೭‖

ಟೀ‖ ಎಲ್ಲರುಂ-ಸಮಸ್ತರೂ, ಪೊರಮಟ್ಟ ಬಳಿಕ - ಊರಿನಿಂದ ಹೊರಟನಂತರ, ಆ ನೃಪಂ-ಆ ಯೌವನಾಶ್ವಮಹಿಪನು, ರಮಾವಲ್ಲಭನ-ಲಕ್ಷ್ಮೀಕಾಂತನ, ದರ್ಶನಕೆ-ನೋಟದ ಆನಂದಕ್ಕೆ, ಮಾತೆಯಂ-ತನ್ನ ತಾಯಿಯನ್ನು, ಕರೆಯಲು-ಬರಹೇಳಲು, ಅವಳು-ಆಕೆಯು, ಒಲ್ಲೆನು-ಬರುವುದಿಲ್ಲ, ನಾನು, ಇಲ್ಲಿ-ಈ ಎಡೆಯಲ್ಲಿ, ಇರದೊಡೆ-ಇಲ್ಲದಿದ್ದರೆ, ಈ ಬದುಕನು-ಈ ಗೃಹಕೃತ್ಯವನ್ನು, ನೋಡುವವರು - ವಿಚಾರಣೆಮಾಡಿಕೊಳ್ಳತಕ್ಕ ಮನುಷ್ಯರು, ಆರು- ಯಾರಿರುವರು, ಎಂದು-ಎಂಬದಾಗಿ, ಚಂಡಿಗೊಳಲು-ಮುಷ್ಕರಹಿಡಿಯಲು, ಫುಲ್ಲನಾಭನಿಗೆ-ಕಮಲನಾಭನಿಗೆ, ಸರ್ವಸ್ವಂ-ಆಸ್ತಿಯೆಲ್ಲವನ್ನೂ, ಒಪ್ಪಿಸುವೊಡೆ-ಅರ್ಪಣೆ ಮಾಡಲು, ಇವಳು-ಈ ಮಾತೃವು, ಇಲ್ಲದೆ ಇರಬಾರದು-ಇಲ್ಲದಿರುವದು ಯೋಗ್ಯವಲ್ಲವು, ಎಂದು-ಎಂಬದಾಗಿ, ಬಲ್ಪಿನಿಂ-ಬಲವಂತದಿಂದ, ನಿಲ್ಲದೆ-ತಡಮಾಡದೆ, ಅಂದಣವನು-ಪಲ್ಲಕ್ಕಿಯನ್ನು, ಏರಿಸಿ-ಅಡರಲು ಒಪ್ಪಿಸಿ, ಮತ್ತೆ-ಅನಂತರ, ಮಾರುತಿಯೊಡನೆ-ವಾಯುಪುತ್ರನೊಂದಿಗೆ, ಪಯಣಕೆ-ಪ್ರಯಾಣಬೆಳಸುವುದಕ್ಕೆ, ಅನುವಾದನು-ಸಿದ್ಧನಾದನು ‖೬೮‖

ಟೀ‖ ಪಟ್ಟಣದೊಳು-ನಗರದಲ್ಲಿ, ಆರು-ಯಾರೂ, ಇಲ್ಲೆನಿಸಿ-ಇಲ್ಲವೆಂದೆನ್ನಿಸಿಕೊಂಡು, ತನ್ನೊಡನೆ-ತನ್ನ ಸಂಗಡ, ಅಖಿಲ ಪ್ರಜೆಗಳು-ಎಲ್ಲಾ ಜನರೂ, ಪೊರಮಟ್ಟುದು - ಪ್ರಯಾಣವಂ ಬೆಳಸಿದರು, ಇವರಂ-ಈ ಜನರನ್ನು, ನಡಸೆ-ಪ್ರಯಾಣ ಮಾಡಿಕೊಂಡು ಹೋಗಿ ಸೇರಲು, ದಿನಂ-ದಿನವು, ದಟ್ಟದಲ್ಲದೆ - ಹೆಚ್ಚಾಗದೆ, ಮಾಣದು-ಆಗುವುದಿಲ್ಲವು, ಅನ್ನೆಗಂ-ಅದುವರೆಗೂ, ಈ ರಾಜಕಾರ್ಯವನು-ಈ ಅರಸುಗೆಲಸವನ್ನು, ಧರ್ಮಜಂಗೆ - ಯುಧಿಷ್ಠಿರನಿಗೆ, ಮುಟ್ಟಿಸದೆ- ತಿಳಿಯಪಡಿಸದೆ, ಇರಬಾರದು-ಇರಕೂಡದು, ಎಂದು-ಎಂಬದಾಗಿ, ಆ ಮಹೀಶ್ವರನ-ಆ ಧರಾವಲ್ಲಭನ, ಬಟ್ಟೆಗಾವಲ್ಗೆ-ದಾರಿಯ ಕಾವಲಿಗೋಸ್ಕರ, ಕರ್ಣಜ ಮೇಘನಾದರಂ-ಕರ್ಣಪುತ್ರ ಮತ್ತು ಮೇಘವರ್ಣರನ್ನು, ಕೊಟ್ಟು-ಇರಿಸಿ, ನಿಂದಲ್ಲಿನಿಲ್ಲದೆ-ಎಲ್ಲಿಯೂ ನಿಲ್ಲದೆ, ಬಂದು-ಹೊರಟು, ಭೀಮಸೇನಂ-ವೃಕೋದರನು, ಇಭಪುರಿಯನು - ಹಸ್ತಿನಾವತಿಯೆಂಬ ತಮ್ಮ ರಾಜಧಾನಿಯನ್ನು, ಪೊಕ್ಕನು-ಪ್ರವೇಶಮಾಡಿದನು ‖೬೯‖

ಟೀ‖ ನುತ-ಸ್ತೋತ್ರಾರ್ಹವಾದ, ವಸಂತ-ಮಾಘಮಾಸದ, ಆಗಮವನು- ಬರುವಿಕೆಯ ಸೂಚನೆಯನ್ನು, ಎಚ್ಚ

---

ಡಾರದಲ್ಲಿದ್ದ ಅನೇಕ ರತ್ನಾಭರಣ ಧನ ಕನಕ ವಸ್ತ್ರಾದಿಗಳನ್ನು ತೆಗೆಸಿಕೊಂಡು, ಯಜ್ಞಾಶ್ವದಿಂದಲೂ, ಚತುರಂಗಬಲದಿಂದಲೂ, ಪುತ್ರ ಮಿತ್ರ ಭ್ರಾತೃ ಕಳತ್ರಾದಿಗಳಿಂದಲೂ, ಪುರಜನರಿಂದಲೂ ಕೂಡಿದವನಾಗಿ ‖ ೬೭ ‖ ಕೃಷ್ಣಸಂದರ್ಶನಕ್ಕೋಸುಗ ತನ್ನ ತಾಯಿಯನ್ನು ಬರುವಂತೆ ಕೇಳಲು ಮನೆಯ ಆಡಳಿತಗಳನ್ನು ನೋಡಿಕೊಳ್ಳತಕ್ಕವರು ಯಾರೂ ಇಲ್ಲವಾದ್ದರಿಂದ ಬರುವುದಿಲ್ಲವೆಂದು ಮುಷ್ಕರವಂ ಮಾಡಲಾಗಿ ಆಕೆಯನ್ನೂ ಸಮಾಧಾನೋಕ್ತಿಗಳಿಂದ ಕರದುಕೊಂಡು ಮಾರುತಿಯೊಂದಿಗೆ ಹೊರಟನು. ಆಗ ಭೀಮಸೇನನು ಯೌವನಾಶ್ವನನ್ನು ಕುರಿತು ಎಲೈ ರಾಜನೆ! ಸೈನ್ಯ ಸಮೇತ ನೀವು ಬಂದು ಸೇರಲು ಕಾಲ ವಿಳಂಬವಾಗುವುದು. ಆದರಿಂದ ವೃಷಕೇತು ಮೇಘನಾದರು ನಿನ್ನೊಂದಿಗೆ ಬರುವರು. ನಾನು ಜಾಗ್ರತೆಯಲ್ಲಿ ಹೋಗಿ ಸೇರಿ ಯುಧಿಷ್ಠಿರನಿಗೆ ಈ ಸುದ್ದಿಯನ್ನು ಹೇಳಬೇಕೆಂದು ನುಡಿದು ವಾಯುವೇಗದಿಂದ ಹಸ್ತಿನಾವತಿಗೆ ಬಂದು ‖೬೮‖ ಮಂದಮಾರುತವು ವಸಂತರುತುವಿನ ಸಮಾಗಮವನ್ನು ಸೂಚಿಸುವಂತೆ ತಾನೂ ಕೂಡ ಈ ವೃತ್ತಾಂತವನ್ನು ಯುಧಿಷ್ಠಿರನಿಗೆ

ಮುವನೆಚ್ಚರಿಪಮಲಯಮಾ | ರುತನುಪವನಸ್ಥಳದಿಸುಳಿವಂತೆಪವನಜಂ | ಕ್ಷಿತಿಪನಾಸ್ಥಾನಮುಂಪೊಕ್ಕರಸನಂಕಂಡುಪಾದಪಲ್ಲವಕೆರಗಲು || ಅತಿಶಯದಪ್ರೀತಿಯಿಂತೆಗೆದುಬಿಗಿಯಪ್ಪಿರವಿ | ಸುತಜಹೈಡಿಂಬಿಗಳದೆಲ್ಲಿನೀಪೋದಸಂ | ಗತಿಯದೆಂತೈನಿನ್ನ ಭಾಷೆಗಳಿವಿಲ್ಲಲಾತುರಗವಿಷಯದೊಳೆಂದನು ||೨೦|| ಎನಲವನಿಪತಿಗೆಬಿನ್ನೈಸಿದಂಪವಮಾನ | ತನಯನಲ್ಲಿಂದಭದ್ರಾವತಿಗೆನಡೆದುದಂ | ವಿನುತಹಯರತ್ನಮಂಪಿಡಿದುದಂಮುಂಕೊಂಡುಸೇನೆಯಂಸದೆಬಡಿದುದಂ || ಅನುವರದೊಳಹಿತನಂಪಿಡಿದುದಂಬಳಿಕವಂ | ತನಗೆರಗಿನುಡಿದುದಂತನ್ನಸರ್ವಸ್ವಮಂ | ದನುಜಾರಿಗೀಯಲ್ಕುದುರೆವೆರಸಿಹೈಡಿಂಬಿಕರ್ಣಜರೊಡನೆಬಹುದನು ||೨೧|| ಕೇಳಿನೃಪನುತ್ಸವದೊಳನುಜನಂತಕ್ಕೈಸಿ | ಬೀಳುಕೊಡಲರಸಿಯರತಂಡದಾರತಿಗಳನಿ | ವಾಳಿಗಳಸಡಗರದೊಳರಮನೆಗೆ

---

ರಿಪ–ತೋರಿಸುವ, ಮಲಯಮಾರುತನು-ಮಂದಮಾರುತನು, ಉಪವನಸ್ಥಳದಿಂ–ನಗರದ ಬಳಿಯಣ ಆರಾಮದಿಂದ, ಸುಳಿವಂತೆ, ಚಲಿಸುವ ಹಾಗೆ, ಪವನಜಂ–ವಾಯುನಂದನನು, ಕ್ಷಿತಿಪನ–ಯುಧಿಷ್ಠಿರನ, ಆಸ್ಥಾನಮಂ–ಒಡ್ಡೋಲಗವನ್ನು, ಪೊಕ್ಕು–ಪ್ರವೇಶ ಮಾಡಿ, ಅರಸನಂ–ರಾಜನನ್ನು, ಕಂಡು–ನೋಡಿ, ಪಾದಪಲ್ಲವಕೆ-ಪಾದಾರವಿಂದಗಳಿಗೆ, ಎರಗಲು-ಪ್ರಣಾಮವಂ ಮಾಡಲು, ಯುಧಿಷ್ಠಿರನು, ಅತಿಶಯಮಾದ-ಅತ್ಯಂತವಾದ, ಪ್ರೀತಿಯಿಂ-ವಿಶ್ವಾಸದಿಂದ, ತೆಗೆದು–ಹತ್ತಿರ ಕರೆದುಕೊಂಡು, ಬಿಗಿಯಪ್ಪಿ-ತಬ್ಬಿಕೊಂಡು, ರವಿಸುತ–ವೃಷಧ್ವಜನೂ, ಹೈಡಿಂಬಿಗಳ್– ಮೇಘವರ್ಣರೂ, ಅದೆಲ್ಲಿ–ಎಲ್ಲಿರುವರು, ನೀಂ–ನೀನು, ಪೋದ-ಹೋಗಿದ್ದ, ಸಂಗತಿಯು–ಕಾರ್ಯವು, ಅದೆಂತೈ–ಏನಾಯಿತು, ತುರಗವಿಷಯದೊಳ್-ಅಶ್ವದ ವಿಚಾರವಾಗಿ, ನಿನ್ನ ಭಾಷೆಗೆ-ನಿನ್ನ ಪ್ರಮಾಣಕ್ಕೆ, ಅಳಿವು-ಎಡರು, ಇಲ್ಲಲಾ–ಉಂಟಾಗಲಿಲ್ಲವಷ್ಟೆ, ಎಂದನು-ಎಂದು ಪ್ರಶ್ನೆಗೈದನು ||೨೦||

ಟೀ|| ಎನಲು – ಹೀಗೆ ಕೇಳಲು, ಅವನಿಪತಿಗೆ – ಯುಧಿಷ್ಠಿರನಿಗೆ, ಪವಮಾನತನಯನು – ವಾಯು ಸೂನುವು, ಅಲ್ಲಿಂದ-ಆ ಹಸ್ತಿನಾವತಿಪಟ್ಟಣದಿಂದ, ಭದ್ರಾವತಿಗೆ-ಭದ್ರಾವತಿನಗರಿಗೆ, ನಡೆದುದಂ–ಹೊರಟುಹೋದ್ದನ್ನು, ವಿನುತ-ಉತ್ತಮವಾದ, ಹಯರತ್ನಮಂ–ಅಶ್ವವನ್ನು, ಪಿಡಿದುದಂ–ಹಿಡಿದುಕೊಂಡ ಬಗೆಯನ್ನೂ, ಮುಂಕೊಂಡುಬಂದ–ಎದುರಾಗಿ ಬಂದ, ಸೇನೆಯಂ–(ಯೌವನಾಶ್ವ ಭೂಪಾಲನ) ದಂಡನ್ನು, ಸದೆಬಡಿದುದ–ಧ್ವಂಸಮಾಡಿದ ತೆರನನ್ನೂ, ಅನುವರದೊಳು–ರಣರಂಗದಲ್ಲಿ, ಅಹಿತನಂ-ಹಗೆಯಾದ ಯೌವನಾಶ್ವನನ್ನು, ಪಿಡಿದುದಂ–ಜೀವಸಹಿತವಾಗಿ ಹಿಡಿದ ವಿಧಾನವನ್ನೂ, ಬಳಿಕ–ಅನಂತರ, ಅವಂ-ಆ ಯೌವನಾಶ್ವನು, ತನಗೆ–ಭೀಮಸೇನನಾದ ನನಗೆ, ಎರಗಿ–ನಮಸ್ಕಾರಮಾಡಿ, ನುಡಿದುದಂ-ಉಸುರಿದ ಬಗೆಯನ್ನೂ, ತನ್ನ-ಯೌವನಾಶ್ವನ, ಸರ್ವಸ್ವಮಂ–ಎಲ್ಲವನ್ನೂ, ದನುಜಾರಿಗೆ–ಶ್ರೀ ಕೃಷ್ಣಸ್ವಾಮಿಗೆ, ಈಯಲು-ಸಮರ್ಪಿಸಲು, ಕುದುರೆವೆರಸಿ-ಅಶ್ವಸಹಿತನಾಗಿ, ಹೈಡಿಂಬಿ–ಹಿಡಿಂಬಿಯ ಮಗ, ಮತ್ತು ಕರ್ಣಜರೊಡನೆ–ಕರ್ಣಸುತ ಇವರೊಂದಿಗೆ, ಬರುವುದಂ-ಐತರತಕ್ಕ ವಿಧಾನವನ್ನು, ಬಿನ್ನೈಸಿದಂ–ಅರಿಕೆಮಾಡಿದನು ||೨೧||

ಟೀ|| ನೃಪನು–ಯುಧಿಷ್ಠಿರನು, ಕೇಳಿ–ವೃಕೋದರನ ನುಡಿಗಳನ್ನು ಆಲಿಸಿ, ಉತ್ಸವದೊಳು–ಆನಂದದಿಂದ, ಅನುಜನಂ–ಸಹೋದರನನ್ನು, ತಕ್ಕೈಸಿ–ಸತ್ಕಾರಮಾಡಿ, ಬೀಳುಕೊಡಲು-ಕಳುಹಿಸಲಾಗಿ, ಅರಸಿಯರ-ಅಂತಃಪುರದ ನಾರಿಯರ-ತಂಡದ–ಗುಂಪಿನ, ಆರತಿಗಳ-ಆರತಿಗಳ ಶುಭಕೃತ್ಯಗಳ, ನಿವಾಳಿಗಳ–ನಿವಾಳಿಸಿ ತೆಗೆದುಹಾಕುವ ಕಾರ್ಯಗಳ, ಸಡಗರದೊಳು–ಸಂಭ್ರಮದಲ್ಲಿ, ಅರಮನೆಗೆ–ರಾಜಸದನಕ್ಕೆ, ಬಂದು–ಐತಂದು, ಪಾಂಚಾಲಿಗೆ–ದ್ರುಪದಪುತ್ರಿಗೆ, ಈಸಂಗತಿಯನು–ಈ ಹದನನ್ನು,

---

ತಿಳಿಸಬೇಕೆಂದು ಧರ್ಮನಂದನನ ಒಡ್ಡೋಲಗಕ್ಕೆ ಹೋಗಿ ಆತನ ಅಡಿದಾವರೆಗಳಿಗೆ ವಂದಿಸಲು, ಧರ್ಮರಾಯನು ವೃಕೋದರನನ್ನು ಆಲಿಂಗಿಸಿಕೊಂಡು ಅತ್ಯಾನಂದಪರವಶನಾಗಿ ಭೀಮಸೇನನನ್ನು ಕುರಿತು, ಎಲೈ ಅನುಜನೆ, ಕರ್ಣತನುಜಾತನೂ ಹೈಡಿಂಬಿಯೂ ಎಲ್ಲಿ? ಅಶ್ವವು ದೊರೆಯಿತೆ? ನಿನ್ನ ಶಪಥವು ಕೈಗೂಡಿತೆ? ಎಂದು ಪ್ರಶ್ನೆಯಂಗೈದ ಧರ್ಮಪುತ್ರನನ್ನು ಕುರಿತು ವಾಯುಜನು ||೬೯|| ಎಲೈ ಅಗ್ರಜನಾದ ಯುಧಿಷ್ಠಿರನೆ ಕೇಳು, ನಾನೂ ಕರ್ಣನಂದನನೂ, ಮೇಘನಾದನೂ ನಿನ್ನ ಆಜ್ಞಾನುಸಾರವಾಗಿ ಹಸ್ತಿನಾವತಿಯಿಂದ ಪ್ರಯಾಣಮಾಡಿ ಭದ್ರಾವತೀ ನಗರವನ್ನು ಪೊಕ್ಕು ಅಲ್ಲಿದ್ದ ಉತ್ತಮಾಶ್ವವನ್ನೂ ಹಿಡಿದು ಅದರ ಕಾವಲ್ಗಾರರನ್ನೆಲ್ಲಾ ಸಂಹರಿಸಿ ನಮ್ಮ ಮೇಲೆ ಯುದ್ಧಕ್ಕೆ ಬಂದ ಯೌವನಾಶ್ವನನ್ನು ಗೆದ್ದು ಜಯಶೀಲರಾಗಿ ಬಂದಿರುವೆವು. ಆ ಯೌವನಾಶ್ವ ಮಹೀಪಾಲನೂ ಕೂಡ ತನ್ನ ಸರ್ವಸ್ವವನ್ನೂ ಮತ್ತು ಉತ್ತಮೋತ್ತಮವಾದ ಹಯವನ್ನೂ ಶ್ರೀ ಕೃಷ್ಣನ ಪಾದಾರವಿಂದಗಳಲ್ಲಿ ಅರ್ಪಿಸಿ ಧನ್ಯನಾಗಲು ಸಂಭ್ರಮದಿಂದ ಪರಿವಾರ ಸಮೇತನಾಗಿ ವೃಷಕೇತು ಮೇಘನಾದರೊಂದಿಗೆ ಬರುತ್ತಿರುವನು ಈ ಸುದ್ದಿಯನ್ನು ಮೊದಲೇ ಸನ್ನಿಧಿಯಲ್ಲಿ ವಿಜ್ಞಾಪಿಸಬೇಕೆಂದು ನಾನು ಬಂದೆನೆಂದು ನುಡಿದು ಯುಧಿಷ್ಠಿರನಿಗೆ ವಂದಿಸಲು ಧರ್ಮಜನು ಸಂತೋಷದಿಂದ ಅನುಜನನ್ನು ಆಲಿಂಗಿಸಿಕೊಂಡು ಅವನನ್ನು ಅಂತಃಪುರಕ್ಕೆ ಕಳುಹಿದನು. ವೃಕೋದರನು ಜಯಶೀಲನಾಗಿ ಬಂದದ್ದರಿಂದ ನಾರೀಮಣಿಗಳು ಇವನನ್ನು ಆರತಿ ಅಕ್ಷತೆಗಳಿಂದ ಸತ್ಕರಿಸಿದರು.

ಬಂದುಪಾಂಚಾಲೆಗೀಸಂಗತಿಯನು ‖ ಹೇಳಿಮುರಹರನಮಂದಿರಕೆನಡೆತಂದುನಿಜ । ಭಾಳಮಂಚರಣದೊಳ್ಚಾಚಿತಮ್ಮಯ ವಿಜಯ । ದೇಳಿಗೆಯನೊರೆಯಲ್ಕೆಮನ್ನಿಸಿದನಾತನಂದೇವಪುರಲಕ್ಷ್ಮೀಶನು ‖೭೨‖

ಸಂಧಿ ೪ ಕ್ಕೆ ಪದ್ಯ ೧೯೩ ಕ್ಕಂ ಮಂಗಳಮಸ್ತು.

---

ಹೇಳಿ-ಅರುಪಿ, ಮುರಹರನ-ಕೃಷ್ಣಸ್ವಾಮಿಯ, ಮಂದಿರಕೆ-ವಾಸಸ್ಥಾನಕ್ಕೆ, ನಡೆತಂದು-ಐತಂದು, ನಿಜಭಾಳಮಂ-ತನ್ನ ಫಾಲವನ್ನು, ಚರಣದೊಳ್-ಪಾದಗಳಮೇಲೆ, ಚಾಚಿ-ಒಡ್ಡಿ, ಅಂದರೆ ನಮಸ್ಕಾರವಂ ಮಾಡಿ, ತಮ್ಮಯ-ತಮ್ಮ, ವಿಜಯದ-ಜಯಿಸುವಿಕೆಯ, ಏಳಿಗೆಯನು-ಮೇಲನ್ನು, ಒರೆಯಲ್ಕೆ-ತಿಳಿಸಲು, ದೇವಪುರ-ದೇವಪುರವೆಂಬ ಪಟ್ಟಣದ, ಲಕ್ಷ್ಮೀಶನು-ಲಕ್ಷ್ಮೀರಮಣನಾದ ಕೃಷ್ಣಸ್ವಾಮಿಯು, ಆತನಂ-ಆ ವೃಕೋದರನನ್ನು, ಮನ್ನಿಸಿದಂ-ಶಾಂತಿಯನ್ನೈದುವಂತೆ ಮಾಡಿದನು ‖೭೨‖

ನಾಲ್ಕನೆಯ ಸಂಧಿಯು ಸಮಾಪ್ತಮಾದುದು.

---

ಆಮೇಲೆ ಭೀಮಸೇನನು ಅಂತಃಪುರದಲ್ಲಿ ದ್ರುಪದನಂದನೆಗೆ ಈ ಸುದ್ದಿಯನ್ನೆಲ್ಲಾ ಸವಿಸ್ತಾರವಾಗಿ ಪೇಳಿ ಶ್ರೀಕೃಷ್ಣಮೂರ್ತಿಯ ಬಿಡಾರಕ್ಕೆ ಬಂದು ನಮ್ರಭಾವದಿಂದ ತನ್ನ ಶಿರವನ್ನು ಆತನ ಪಾದಪಲ್ಲವಂಗಳಲ್ಲಿರಿಸಿ ನಡೆದ ಸುದ್ದಿಯನ್ನೆಲ್ಲಾ ಸವಿಸ್ತಾರವಾಗಿ ಹೇಳಿದನು. ಶ್ರೀ ಕೃಷ್ಣನು ಬಹು ಸಂತೋಷವನ್ನು ಹೊಂದಿ ಭೀಮನನ್ನು ಬಹಳವಾಗಿ ಮನ್ನಿಸಿದನು ಎಂಬಲ್ಲಿಗೆ,

ಟೀಕಾತಾತ್ಪರ್ಯಸಹಿತಮಾದ ಜೈಮಿನಿಭಾರತದೊಳು ನಾಲ್ಕನೆಯ ಸಂಧಿಯು ಸಮಾಪ್ತಮಾದುದು.



## ಐದನೆಯ ಸಂಧಿ.

ಸೂಚನೆ|| ಧರ್ಮಜಂಯೌವನಾಶ್ವನನಿದಿರ್ಗೊಂಡುನೃಪ | ಧರ್ಮದಿಂಕೃಷ್ಣನಂದ್ವಾರಕಿಗೆಕಳುಹಿವರ | ಧರ್ಮಂ
ಗಳಂಕೇಳ್ದನೊಲವಿಂದನುತಬಾದರಾಯಣಮುನೀಶ್ವರನೊಳು ||

ತತ್ಸಂಗತಿಯ ನಾಲಿಸಿನ್ನೆಲೆಮಹೀಶ್ವರ ಮ | ರುತ್ಸುತನ ಮನೆಗೆ ಬೀಳ್ಕೊಟ್ಟನೊಲವಿಂ ಭಕ್ತ | ವತ್ಸಲಂ ಬಳಿಕಿತ್ತಲರಸಾಳ್ಗಳಾ ಯುಧಿಷ್ಠಿರನೃಪನ ಮನೆಗೆ ಬಂದು || ತ್ವತ್ಸಮೀಪದ ಸೇವೆಗೋಸುಗಂ ತನ್ನ ಸಂ | ಪತ್ಸಹಿತಲಾ ಯೌವನಾಶ್ವ ಧರಣೀಂದ್ರನ | ತ್ಯುತ್ಸವದೊಳೈತಂದನಿದೆ ನಮ್ಮ ಪಟ್ಟಣದ ಬಾಹ್ಯಪ್ರದೇಶಕೆಂದು || ೧ || ಉಚಿತಮಂ ತೆಗೆದವರ್ಗಿತ್ತು ಬಳಿಕನುಜ ಮಂ | ತ್ರಿ ಚಮೂಪ ಸಾಮಂತ ಗುರು ಪುರೋಹಿತ ಸುಭಟ | ನಿಚಯಮಂ ಕರೆಸಿಕೊಂ

---

ಐದನೆಯ ಸಂಧಿ ಪ್ರಾರಂಭವು.

ಸೂಚನೆ:—ಧರ್ಮಜಂ–ಧರ್ಮರಾಯನು, ಯೌವನಾಶ್ವನನು–ಯೌವನಾಶ್ವನೆಂಬ ಮಹಾರಾಜನನ್ನು, ಇದಿರ್ಗೊಂಡು–ಎದುರುಗೊಂಡನನಾಗಿ, ನೃಪಧರ್ಮದೊಳ್– ರಾಜಮರ್ಯಾದೆಯನ್ನನುಸರಿಸಿ, ಕೃಷ್ಣನಂ–ಶ್ರೀ ಕೃಷ್ಣಸ್ವಾಮಿಯನ್ನು, ದ್ವಾರಕಿಗೆ–ದ್ವಾರಕಾನಗರಕ್ಕೆ, ಕಳುಹಿ-ಕಳುಹಿಸಿ ಕೊಟ್ಟು, ಬಾದರಾಯಣ ಮುನೀಶ್ವರನೊಳು– ವ್ಯಾಸಮಹರ್ಷಿಯಿಂದ. ವರ–ಉತ್ತಮವಾದ, ಧರ್ಮಂಗಳಂ–ಧರ್ಮಮಾರ್ಗವನ್ನು, ಒಲವಿಂದ–ವಿಶ್ವಾಸದಿಂದ, ಕೇಳ್ದನು–ಲಾಲಿಸಿದನು.

ಟೀ|| ಎಲೈ ಮಹೀಶ್ವರ – ಜನಮೇಜಯನೆಂಬ ಭೂಕಾಂತನೆ, ತತ್ಸಂಗತಿಯನು– ಆ ಯೌವನಾಶ್ವನು ಬಂದ ವಿವರವನ್ನು, ಇನ್ನು–ಮುಂದೆ, ಆಲಿಸು–ಕೇಳುವನಾಗು, ಭಕ್ತ–ದಾಸರಲ್ಲಿ, ವತ್ಸಲಂ–ವಾತ್ಸಲ್ಯವುಳ್ಳ ಕೃಷ್ಣಸ್ವಾಮಿಯು, ಒಲವಿಂ–ಮುದದಿಂದ, ಮರುತ್ಸುತನ–ವಾಯುಸೂನುವನ್ನು, ಮನೆಗೆ–ತನ್ನ ಮಂದಿರಕ್ಕೆ, ಬೀಳ್ಕೊಟ್ಟನು–ಹೋಗ ಹೇಳಿದನು, ಬಳಿಕ–ಅನಂತರ, ಇತ್ತಲು–ಈ ಕಡೆಯಲ್ಲಿ, ಅರಸಾಳ್ಗಳು–ಧೊರೆಯ ಸೇವಕರು, ಯುಧಿಷ್ಠಿರ ನೃಪನ–ಧರ್ಮತನಯನ, ಮನೆಗೆ-ಮಂದಿರಕ್ಕೆ, ಬಂದು–ಐತಂದು, ತ್ವತ್ಸಮೀಪದ–ನಿನ್ನ ಹತ್ತಿರದ, ಸೇವೆಗೋಸುಗಂ–ಸೇವಾರ್ಥವಾಗಿ, ಯೌವನಾಶ್ವ-ಯೌವನಾಶ್ವನೆಂಬ ಹೆಸರುಳ್ಳ, ಧರಣೀಂದ್ರನು–ಭೂಕಾಂತನು, ತನ್ನ–ಸ್ವಕೀಯವಾದ, ಸಂಪತ್ಸಹಿತಲೆ-ಸಾಮ್ರಾಜ್ಯದೊಂದಿಗೆ, ಇದೆ–ಈಗಲೆ, ನಿಮ್ಮ ಪಟ್ಟಣದ-ನಿಮ್ಮ ಪೊಳಲಿನ, ಬಾಹ್ಯಪ್ರದೇಶಕೆ-ಹೊರಗಡೆಯಲ್ಲಿ, ಅತ್ಯುತ್ಸವದೊಳ-ಸಂತೋಷಾತಿಶಯದಿಂದ, ಐತಂದನು–ಬಂದಿರುವನು, ಎಂದು–ಎಂಬ ತೆರನಾಗಿ, ವಿಜ್ಞಾಪಿಸಿದರು–ಅರಿಕೆಮಾಡಿದರು ||೧||

ಟೀ|| ಅವರ್ಗೆ-ಆ ಸೇವಕರಿಗೆ, ಉಚಿತಮಂ – ಮರ್ಯಾದಾರ್ಥವಾದ ವಸ್ತ್ರಾಭರಣಗಳನು, ತೆಗೆದಿತ್ತು – ತೆಗೆಯಿಸಿ ಕೊಟ್ಟವನಾಗಿ, ಬಳಿಕ-ತರುವಾಯ, ಅನುಜ–ಸಹೋದರರು, ಮಂತ್ರಿ–ಅಮಾತ್ಯರು, ಚಮೂಪ–ಸೇನಾನಾಯಕರು, ಸಾಮಂತ–ಆಶ್ರಿತರಾಜರು. ಗುರು – ಶ್ರೇಷ್ಠರಾದ ಗುರುಗಳು, ಸುಭಟ – ವೀರರು ಇವರ, ನಿಚಯಮಂ - ಸಮುದಾಯವನ್ನು, ಕರಿಸಿಕೊಂಡು – ಕೂಡ ಸೇರಿಸಿಕೊಂಡು, ಅಸುರಾರಿಸಹಿತ – ಕೃಷ್ಣನ ಸಮೇತವಾಗಿ, ಅಖಿಲ – ಸಕಲವಾದ, ಚತುರಂಗಸೈನ್ಯದೊಡನೆ–ಹಸ್ತ್ಯಶ್ವಾದಿಗಳೊಂದಿಗೆ, ಅಚಲ–ಗಿರಿಗೆ, ನಿಭದ–ಸದೃಶವಾದ. ಇಭದಮೇಲೆ - ಹಸ್ತಿಯಮೇಲ್ಗಡೆ, ಅಡರಿ–ಏರಿ, ಸಿಂಗರದ–ಅಲಂಕಾರವುಳ್ಳ, ಗುರುಕುಚೆಯರು–ಪೀವರಸ್ತನವುಳ್ಳ ನಾರಿಯರು, ದ್ರೌಪದಿಯಕೂಡೆ–ದ್ರುಪದನಂದನೆಯೊಂದಿಗೆ, ಬರಲಿ–ಐತರಲಿ, ಪುರದೊಳು–ಪೊಳಲಲ್ಲಿ, ಗುಡಿ ತೋರಣದ–ಚಪ್ಪರ ತೋರಣ ಮೊದಲಾದುವುಗಳ, ರಚನೆ–ಅಂದವಾಗಿ ಮಾಡು

---

ಐದನೆಯ ಸಂಧಿ ಪ್ರಾರಂಭವು.

ಅನಂತರದಲ್ಲಿ ಜೈಮಿನಿಋಷಿಯು ಜನಮೇಜಯರಾಯನನ್ನು ಕುರಿತು, ಕೇಳೈ ಜನಮೇಜಯನೆ, ಭೀಮಸೇನನು ಧರ್ಮರಾಯನಿಗೂ ಶ್ರೀ ಕೃಷ್ಣಸ್ವಾಮಿಗೂ ತನ್ನ ವಿಜಯವನ್ನು ಸವಿಸ್ತಾರವಾಗಿ ವಿಜ್ಞಾಪಿಸಿ, ಅವರ ಅನುಜ್ಞೆಯಿಂದ ತನ್ನ ಅಂತಃಪುರಕ್ಕೆ ವಿಶ್ರಮಿಸಿಕೊಳ್ಳುವುದಕ್ಕಾಗಿ ಹೊರಟು ಹೋದನು ಇತ್ತ ಕೆಲವು ಸೇವಕ ಜನರು ಯುಧಿಷ್ಠಿರನ ಆಸ್ಥಾನಕ್ಕೆ ಬಂದು ಧರ್ಮಜನನ್ನು ಕುರಿತು, ಎಲೈ ಪ್ರಭುವೆ, ಭದ್ರಾವತಿಯ ರಾಜನಾದ ಯೌವನಾಶ್ವನು ಸಕಲ ಸೇನಾಪರಿವೃತನಾಗಿ ತಮ್ಮ ಸೇವೆಗಾಗಿ ಬರುತ್ತಿರುವನೆಂದು ತಿಳಿಸಲು ಧರ್ಮನಂದನನು ಅವರಿಗೆ ಅನೇಕ ಬಹುಮಾನಗಳನ್ನು ಕೊಟ್ಟು ಕಳುಹಿಸಿ ತನ್ನ ಅನುಜರು, ಮಂತ್ರಿಯು, ಚತುರಂಗಬಲವು, ಅನೇಕ ಸಾಮಂತರಾಜರು ಗುರು ಪುರೋಹಿತರು ಇವರನ್ನೆಲ್ಲಾ ಜಾಗ್ರತೆಯಲ್ಲಿ ಬಂದೊಡಗಬೇಕೆಂದು ಹೇಳಿ ಕಳುಹಿಸಲು ಎಲ್ಲರೂ ಸಿದ್ಧವಾದರು. ಧರ್ಮರಾಯನು ಶ್ರೀ ಕೃಷ್ಣಸ್ವಾಮಿಯೊಂದಿಗೆ ಚತುರಂಗಬಲ ಸಮೇತನಾಗಿ ಪರ್ವತೋಪಮಾನವಾದ ಪಟ್ಟದ ಆನೆಯ ಮೇಲೆ ಕುಳಿತುಕೊಂಡು ಮಂಗಳ ಧ್ವನಿಯೊಡನೆ ಸಂಭ್ರಮದಿಂದ ಯೌವನಾಶ್ವಮಹಿಪನನ್ನು ಎದುರ್ಗೊಳ್ಳಲು ಹೊರಟನು. ದ್ರೌಪದಿ ಸುಭದ್ರೆ ಮೊದಲಾದ ಅಂತಃಪುರ ಸ್ತ್ರೀ

ಡಸುರಾರಿಸಹಿತಖಿಳಚತುರಂಗಸೈನ್ಯದೊಡನೆ || ಅಚಲನಿಭದಿಭದಮೇಲಡರಿಸಿಂಗರದಗುರು | ಕುಚೆಯರರಸಿಯಕೂಡೆ ಬರಲಿಗುಡಿತೋರಣದ | ರಚನೆಮೆರೆಯಲಿಪುರದೊಳೆನುತಪೊರಮಟ್ಟನವನಿಪನೊಸಗೆವರೆಮುಸಗಲು || ೨ || ಸಿಂಗರದೊ ಳಾಹಸ್ತಿನಾವತಿಯೊಳಿರ್ದಜನ | ಜಂಗುಳಿಮಹೀಪಾಲನೊಡನೆಪೊರಮಟ್ಟಬಳಿ | ಕಂಗನೆಯರಾದ್ರುಪದಸುತೆಯಪೊನ್ನಂದ ಳದಕೂಡೆಸಂದಣಿಸಿಬರಲು || ಮಂಗಳಧ್ವಾನದಿಂದುಲಿವ ಭೇರಿಗಳನಾ | ದಂಗಳೈದಿದವಷ್ಟದಿಕ್ಪಾಲಕರಪಟ್ಟ | ಣಂಗಳ್ಗೆ ಪಾಂಡವರಪುರದಸಂಭ್ರಮವನೆಚ್ಚರಿಸಿನಾಚಿಸುವಂತಿರೆ || ೩ || ಭದ್ರಗಜಕಂಧರದೊಳಸನೆಸೆದಿರ್ದಂಲ | ಸದ್ರತ್ನಭೂಷ ಣಂಗಳಕಾಂತಿಯಿಂಮೂಡ | ಣದ್ರಿಯೊಳ್ತೊಳಗುವೆಳನೇಸರೆನೆಬಳಿಕಿದಿರ್ಗೊಂಬಹರ್ಷವನೆಕಂಡು || ಭದ್ರಾವತೀಶ್ವರನೆನಿಪ ಯೌವನಾಶ್ವಂಜ | ಗದ್ರಾಜನಾದಪಾಂಡವನೆಡೆಗೆಬಂದಂನು | ಹದ್ರಾಗದಿಂತನಗೆಭೀಮನಭಿಮುಖನಾಗಿಬರಲಾತನೊಡನೆನಗು

---

ವದು, ಮೇರೆಯಲಿ-ಚನ್ನಾಗಿ ಹೊಳೆಯಲಿ, ಎನುತ-ಎಂದು ನುಡಿಯುತ್ತ, ಒಸಗೆವರೆ-ಶುಭಸೂಚಕವಾದ್ಯಗಳು, ಮುಸಗಲು-ಪ್ರಕಟವಾಗುತ್ತಿರಲು, ಅವನಿಪನು-ಯುಧಿಷ್ಠಿರನು, ಪೊರಮಟ್ಟನು-ಮುಂದಕ್ಕೆ ನಡೆದನು || ೨ ||

ಟೀ|| ಸಿಂಗರದೊಳು-ಅಲಂಕಾರದಿಂದ, ಹಸ್ತಿನಾವತಿಯೊಳು-ಹಸ್ತಿನಾವತಿ ಪಟ್ಟಣದಲ್ಲಿ, ಇರ್ದ-ಇದ್ದಂಥ, ಜನಜಂಗುಳಿ-ಜನಗಳಗುಂಪು, ಮಹೀಪಾಲನೊಡನೆ-ಧರ್ಮರಾಯನಕೂಡೆ, ಪೊರಮಟ್ಟು-ಳಿಕ-ಹೊರಟುಹೋದತರುವಾಯ, ಅಂಗನೆಯರು-ಸ್ತ್ರೀಯರು, ಆದ್ರುಪದಸುತೆಯ-ಆ ದ್ರುಪದಪುತ್ರಿಯ,ಪೊನ್ನಂದಳದಕೂಡೆ-ಚಿನ್ನದ ಪಲ್ಲಕ್ಕಿಯ ಜೊತೆಯಲ್ಲಿ,ಸಂದಣಿಸಿ-ಸಾಂದ್ರವಾಗಿ ಸೇರಿ, ಬರಲು-ಸಮೀಪವನ್ನೈದಲು, ಮಂಗಳಧ್ವಾನದಿಂದ-ಕಲ್ಯಾಣಸೂಚಕ ವಾದ್ಯಧ್ವನಿವಿಶೇಷದಿಂದ, ಉಲಿವ-ಶಬ್ದಮಾಡುತಲಿರುವ, ಭೇರಿಗಳ-ಭೇರಿ ಎಂಬ ವಾದ್ಯವಿಶೇಷದ, ನಾದಂಗಳು-ಸ್ವನಂಗಳು, ಅಷ್ಟದಿಕ್ಪಾಲಕರ-ಎಂಟು ದಿಕ್ಕಿಗಳನ್ನೂ ಸಂರಕ್ಷಿಸತಕ್ಕ ಇಂದ್ರಾದಿ ದೇವತೆಗಳ, ಪಟ್ಟಣಂಗಳಿಗೆ-ನಗರಂಗಳಿಗೆ, ಪಾಂಡವರ-ಪಾಂಡುನಂದನರ, ಪುರದ-ಪಟ್ಟಣವಾದ ಹಸ್ತಿನಾವತಿಯ, ಸಂಭ್ರಮವನು-ಸಾಮ್ರಾಜ್ಯವನ್ನು, ಎಚ್ಚರಿಸಿ-ಸ್ಮೃತಿಪಥಕ್ಕೆತಂದು, ನಾಚಿಸುವಂತೆ-ಲಜ್ಜೆಯನ್ನುಂಟುಮಾಡುವಹಾಗೆ, ಇರೆ-ಇರಲು, ಐದಿದವು-ಹೊರಟುವು || ೩ ||

ಟೀ|| ಮೂಡಣದ್ರಿಯೊಳ್ - ಪೂರ್ವಗಿರಿಯಲ್ಲಿ, ತೊಳಗುವ - ಥಳಥಳಿಸುವ, ಎಳನೇಸರ್ - ಬೆಳಗಿನ ರವಿಯು, ಎನೆ-ಎಂಬಂತೆ, ಭದ್ರ-ಮಂಗಳಕರವಾದ, ಗಜ-ಹಸ್ತಿಯ, ಕಂಧರದೊಳು-ಕಂಠದ ಮೇಲೆ, ಲಸತ್-ಹೊಳೆಯುತ್ತಿರುವ, ರತ್ನ-ನವರತ್ನಖಚಿತವಾದ, ಭೂಷಣಂಗಳ-ತೊಡಿಗೆಗಳ, ಕಾಂತಿಯಿಂ-ಪ್ರಕಾಶದಿಂದ, ಅರಸನು - ಯುಧಿಷ್ಠಿರನು, ಎಸೆದಿರ್ದಂ-ಹೊಳೆಯುತ್ತಿದ್ದನು, ಬಳಿಕ-ಅನಂತರ, ಭದ್ರಾವತೀಶ್ವರಂ-ಭದ್ರಾವತಿಯ ಅರಸು, ಎನಿಪ-ಎನ್ನುವ, ಯೌವನಾಶ್ವಂ-ಯೌವನಾಶ್ವ ಭೂಪಾಲನು, ಇದಿರ್ಗೊಂಬ-ದರ್ಶನವನ್ನು ತೆಗೆದುಕೊಳ್ಳಬೇಕೆಂಬ, ಹರ್ಷವನೆ - ಆನಂದವನ್ನೆ, ಕಂಡು-ದೃಷ್ಟಿಸಿ, ಮಹತ್-ಅಧಿಕವಾದ, ರಾಗದಿಂದ-ಪ್ರೀತಿಯಿಂದ, ತನಗೆ-ಯೌವನಾಶ್ವನಿಗೆ, ಅಭಿಮುಖನಾಗಿ-ಎದುರಾಗಿ, ಭೀಮಂ-ವೃಕೋದರನು, ಬರಲು-ಐತರಲು, ಆತನೊಡನೆ - ಅವನೊಂದಿಗೆ, ನಗುತ - ಸಂತೋಷವನ್ನೈದುತ್ತ, ಜಗದ್ರಾಜನಾದ-ಸಾರ್ವಭೌಮನಾದ, ಪಾಂಡವನ-ಯುಧಿಷ್ಠಿರನ, ಎಡೆಗೆ-ಹತ್ತಿರಕ್ಕೆ, ಬಂದಂ-ಬಂದು ಸೇರಿದನು. (ಇದು ಉತ್ಪ್ರೇಕ್ಷಾಲಂಕಾರವು) || ೪ ||

---

ಯರೂ ಅನೇಕ ನಾರೀಮಣಿಗಳೂ ಇವರ ಜತೆಯಲ್ಲಿಯೇ ಹೊರಟರು. ಅಷ್ಟು ಹೊತ್ತಿಗೆ ಪಟ್ಟಣವೆಲ್ಲಾ ನಾನಾಲಂಕಾರಗಳಿಂದ ಮೆರೆಯಲು ಪ್ರಾರಂಭವಾಯಿತು. || ೨ || ಆ ನಗರವಾಸಿಗಳೆಲ್ಲಾ ರಾಯನನ್ನೆ ಹಿಂಬಾಲಿಸಿದರು. ಈರೀತಿಯಲ್ಲಿ ಪೌರನಾರಿಯರು ಮತ್ತು ಪುರಜನರೆಲ್ಲರೂ ಅತ್ಯುತ್ಸವದಿಂದ ಹೊರಟು ಬರುತ್ತಿರುವುದರಿಂದಲೂ ಭೇರಿ ಮೊದಲಾದ ವಾದ್ಯಧ್ವನಿಗಳು ಅಷ್ಟದಿಕ್ಕುಗಳಿಗೂ ವ್ಯಾಪಿಸಿ ಅವರ (ಅಷ್ಟದಿಕ್ಪಾಲಕರ) ಐಶ್ವರ್ಯವೂಕೂಡ ಯುಧಿಷ್ಠಿರನ ಭಾಗ್ಯಕ್ಕೆ ಎಣೆಯಿಲ್ಲವೆಂದು ನಾಚಿಸುತ್ತಿತ್ತು. || ೩ || ಹೀಗಿರುವಾಗ ಉದಯಪರ್ವತದಲ್ಲಿ ಆಗತಾನೆ ಹುಟ್ಟಿದ ಬಾಲಸೂರ್ಯನಂತೆ ಮಂಗಳಕರವಾದ ಆನೆಯ ಕುಂಭಸ್ಥಳದಲ್ಲಿ ಥಳಥಳನೆ ಹೊಳೆಯುವ ರತ್ನಮಯವಾದ ಉಡಿಗೆತೊಡಿಗೆಗಳಿಂದೊಪ್ಪಿ ಬರುತ್ತಿರುವ ಯುಧಿಷ್ಠಿರನ ಬಳಿಗೆ ಯೌವನಾಶ್ವನು ತನ್ನನ್ನೆದುರ್ಗೊಳ್ಳಲು ಸಮೀಪಸ್ಥನಾಗುತ್ತಲಿರುವ ವೃಕೋದರನಿಂದೊಡಗೂಡಿ ಐತರಲು ಆಗ ಧರ್ಮಜನು ತನಗಭಿಮುಖರಾಗಿ ಬರುತ್ತಲಿರುವ ವಾಯುನಂದನ ಯೌವನಾಶ್ವರನ್ನು ನೋಡಿ ಆನೆಯಿಂದ ಕೆಳಗಿಳಿದು ನಿಂತುಕೊಂಡನು. ಯೌವನಾಶ್ವನು ಕೂಡಲೆ ಧರ್ಮಾತ್ಮನಾದ ಧರ್ಮಪುತ್ರನ ಬಳಿಗೆ ಬಂದು ಸಾಷ್ಟಾಂಗಪ್ರಮಾಣವಂ ಮಾಡಿ ಬಹುವಿಧವಾದ ಕಾಣಿಕೆಯನ್ನು ಇತ್ತು ಕೈಗಳನ್ನು ಮುಗಿದು ನಿಂತಿರಲು ಧರ್ಮರಾಯನು ಯೌವನಾಶ್ವನನ್ನು ಬಾಚಿ ತಬ್ಬಿಕೊಂಡು ಅವನನ್ನು ಕುರಿತು, ಎಲೈ ರಾಜನೆ, ನೀನೂ ನನ್ನನುಜರಾದ ಭೀಮಾರ್ಜುನ ನಕುಲಸಹದೇವರಿಗೆ ಸಮಾನನಾದ್ದರಿಂದ ನಿನಗೆ

ತ || ೪ || ವಾಯುಸುತನೊಡನೆತಾನಿರ್ದಪ್ಪುರೆಗಾಗಿಬ | ಪ್ಪಾಯೌವನಾಶ್ವನಂಕಂಡಿಭವನಿಳಿದುನಿಂ | ದಾಯುಧಿಷ್ಠಿರನಡಿಗೆಬೇಕಾದಕಾಣಿಕೆಯನಿತ್ತೆರಗಿಕೈಮುಗಿಯಲು || ಪ್ರೀಯದಿಂಪಾತನಂತೆಗೆದುತಕ್ಕೈಸಿನಾ | ದ್ರೇಯಭೀಮಾರ್ಜುನರಸಮವೆನಗೆನೀನದರಿಂ | ನೀಯಾದವೇಂದ್ರನಂಭಾವಿಸೆಂದರಸಂಮುಕುಂದನಂತೋರಿಸಿದನು || ೫ || ಬಳಿಕವಂಕಂಡನುತ್ಪಲದಳಶ್ಯಾಮಕೋ | ಮಲತರಶರೀರನಂನವರತ್ನಮುಕುಟಕುಂ | ಡಲಕನಕಕೇಯೂರಹಾರನಂಪ್ರಕಟಕಟಿಸೂತ್ರಮಣಿಮಂಜೀರನಂ || ವಿಲಸಿತಶ್ರೀವತ್ಸಕೌಸ್ತುಭಶುಭೋರನಂ | ಲಲಿತಪೀತಾಂಬರೋಜ್ಜ್ವಲದಲಂಕಾರನಂ | ಜಲಜಸಮಚರಣಯುಗಮೋಹನಾಕಾರನಂಲಕ್ಷ್ಮೀಮನೋಹಾರನಂ || ೬ || ಅಚ್ಯುತನಮಂಗಳಶ್ರೀಮೂರ್ತಿಕಣ್ಮನವ | ನಚ್ಯುತಂಗೊಳಲೀಳ್ವರೋಮಪುಳಕದೊಳಿಮೈ |

---

ಟೀ|| ಆ ಕಾಲದಲ್ಲಿ ಯುಧಿಷ್ಠಿರನು, ವಾಯುಸುತನೊಡನೆ–ವಾಯುನಂದನನ ಸಂಗಡ, ತಾಂ–ತಾನು, ಇರ್ದು–ಸೇರಿಕೊಂಡು ? ಇಭವನು–ಹಸ್ತಿಯನ್ನು, ಇಳಿದು, ನಿಂದು–ನಿಂತುಕೊಂಡು, ಆ ಯುಧಿಷ್ಠಿರನ–ಆ ಪಾಂಡುನಂದನನ, ಅಡಿಗೆ–ಪಾದಗಳಿಗೆ, ಬೇಕಾದ–ಮನವೊಪ್ಪತಕ್ಕ, ಕಾಣಿಕೆಯನು – ವಸ್ತುಗಳ ರಾಶಿಯನ್ನು, ಇತ್ತು - ಕೊಟ್ಟವನಾಗಿ, ಕೈಮುಗಿಯಲು–ಕರತಳವನ್ನು ಜೋಡಿಸಲು, ಪ್ರೀತಿಯಿಂದ–ಸಂತೋಷದಿಂದ, ಆತನಂ–ಆ ಯೌವನಾಶ್ವ ಕ್ಷಿತಿಪತಿಯನ್ನು, ತೆಗೆದು–ಚಾಚಿ, ತಕ್ಕೈಸಿ–ಆಲಿಂಗಿಸಿ, ಯೌವನಾಶ್ವನನ್ನು ಕುರಿತು, ನೀನು, ಎನಗೆ–ನನಗೆ, ಮಾದ್ರೇಯ–ಮಾದ್ರಿದೇವಿಯ ಸುತರಾದ ನಕುಸಹದೇವರಿಗೂ, ಭೀಮಾರ್ಜುನರ–ಭೀಮಾರ್ಜುನರೆಂಬ ನನ್ನ ನಾಲ್ವರು ಅನುಜರಿಗೂ, ಸಮಾನವು–ಸದೃಶನು, ಅದರನಿಂ–ಕಾರಣ, ಈ ಯಾದವೇಂದ್ರನಂ–ಈ ಕೃಷ್ಣಸ್ವಾಮಿಯನ್ನು, ಭಾವಿಸು–ಹೃದಯದಲ್ಲಿನೆನೆ, ಎಂದು–ಎಂಬದಾಗಿ, ಅರಸಂ–ಯುಧಿಷ್ಠಿರನು, ಯೌವನಾಶ್ವ ಭೂಪತಿಗೆ, ಮುಕುಂದನಂ–ಮೋಕ್ಷಪ್ರದನಾದ ಶ್ರೀ ಕೃಷ್ಣಮೂರ್ತಿಯನ್ನು, ತೋರಿದಂ–ಈಕ್ಷಿಸುವಂತೆ ಮಾಡಿದನು || ೫ ||

ಟೀ|| ಬಳಿಕ–ಧರ್ಮರಾಯನು ಕೃಷ್ಣನನ್ನು ತೋರಿಸಿದಮೇಲೆ, ಅವಂ–ಆ ಯೌವನಾಶ್ವನೆಂಬ ಮಹಿಪನು, ಉತ್ಪಲದಳಶ್ಯಾಮ–ಉತ್ಪಲ–ಕರಿಯಕಮಲದ, ದಳ–ರೇಕಿನಂತೆ, ಶ್ಯಾಮ–ಕಪ್ಪುಬಣ್ಣದಿಂದ ಕೂಡಿದ, ಕೋಮಲತರ–ಬಹುಮೃದುವಾದ, ಶರೀರನಂ–ಗಾತ್ರವುಳ್ಳ, ನವರತ್ನಮಯ–ವಜ್ರವೈಡೂರ್ಯಾದಿಗಳಾದ ಒಂಬತ್ತು ಬಗೆಯ ರತ್ನಮಣಿಗಳ, ಮಕುಟ–ಶಿರೋಭೂಷಣವಾದ ಒಡವೆಯು, ಕುಂಡಲ–ಕರ್ಣಾಲಂಕೃತಗಳಾದ ಹತ್ತಕಡಕುಗಳು, ಕನಕ–ಸುವರ್ಣಮಯಗಳಾದ, ಕೇಯೂರ–ಭುಜಕೀರ್ತಿಗಳು, ಹಾರನಂ–ಕಂಠಾಭರಣಗಳು ಇವುಗಳಿಂದ ಕೂಡಿದ, ಪ್ರಕಟ–ಪ್ರಸಿದ್ಧವಾದ, ಕಟಿಸೂತ್ರ–ಉಡಿದಾರವು, ಮಣಿ–ರತ್ನಖಚಿತಂಗಳಾದ, ಮಂಜೀರನ–ಕಾಲ್ಪಳಿಗಳುಳ್ಳ, ವಿಲಸಿತ–ಥಳಥಳಿಸುತ್ತಿರುವ, ಶ್ರೀವತ್ಸ – ಶ್ರೀವತ್ಸವೆಂಬ ನಾಮಧೇಯದಿಂದ ಅನ್ವಿತವಾದ ಗುರ್ತಿನಿಂದಲೂ, ಕೌಸ್ತುಭ–ಕೌಸ್ತುಭವೆನ್ನುವ ರತ್ನದಿಂದಲೂ ಕೂಡಿದ, ಶುಭ–ಭದ್ರಕರವಾದ, ಉರನಂ–ಹೃದಯದ ಭಾಗವುಳ್ಳವನಾದ, ಲಲಿತ–ಮನೋಹರವಾದ, ಪೀತಾಂಬರ–ಹಳದಿಯ ಬಣ್ಣದ ಪಟ್ಟೆ ಮಡಿಯಿಂದ, ಉಜ್ವಲ–ಥಳಥಳಿಸುವ, ಅಲಂಕಾರನಂ–ಕಾಂತಿಯುಳ್ಳ, ಜಲಜ–ಕೆಂದಾವರೆಯನ್ನು ಹೋಲುವ, ಚರಣಯುಗ – ಅಡಿಗಳನ್ನುಳ್ಳ, ಮೋಹನ–ಇಷ್ಟಸಿದ್ಧಿಯಂಗೈವ, ಆಕಾರನಂ–ಸ್ವರೂಪವುಳ್ಳ, ಲಕ್ಷ್ಮೀ–ಲಕ್ಷ್ಮೀದೇವಿಯ, ಮನ–ಹೃದಯವನ್ನು ಹಾರನಂ–ವಶಮಾಡಿಕೊಂಡಿರತಕ್ಕವನಾದ ಶ್ರೀ ಕೃಷ್ಣಮೂರ್ತಿಯನ್ನು, ಕಂಡನು–ಈಕ್ಷಿಸಿದನು || ಈ ಪದ್ಯವು ಶೃಂಗಾರ ರಸದಿಂದ ಅನ್ವಿತವಾದದ್ದು || ೬ ||

ಟೀ|| ಅಚ್ಯುತನ–ರೂಪರಹಿತನಾದ ಪರಮಾತ್ಮನ, ಮಂಗಳ–ಶುಭಕರವಾದ, ಶ್ರೀ ಮೂರ್ತಿಯ–ಸತ್ಕುಲಸಂಪನ್ನತೆ ಸುಜ್ಞಾನ, ಸದ್ಗುಣ, ಸಾಮ್ರಾಜ್ಯ ಮೊದಲಾದವುಗಳಿಂದ ಕೂಡಿರುವ, ದಿವ್ಯ–ಮನೋರಂಜಕನಾದ, ಆಕೃತಿಯು–ಆಕಾರವು, ಕಣ್ಮನನನು–ಯೌವನಾಶ್ವನೆಂಬ ಧರಾವಲ್ಲಭನ ಹೃದಯನಯನಂಗಳನ್ನು, ಅಚ್ಯುತಂಗೊಳಲು–ಪರಮಾತ್ಮನನ್ನು ಈಕ್ಷಿಸುವುದರಲ್ಲೆ ಮನಸ್ಸನ್ನು ನೆಲೆಯಾಗಿಡಲು, ಏಳ್ವ–ಪ್ರಾಪ್ತವಾಗುತ್ತಲಿರುವ, ಪುಳಕದೊಳಿ–ರೋಮಾಂಚನದಿಂದಲೆ, ಮೈಪೆಚ್ಚಿದ–

---

ಸ್ವಾಮಿ ದರ್ಶನ ಫಲವು ಲಭಿಸುವುದೇನೂ ಅಸಾಧ್ಯವಲ್ಲವೆಂದು ನುಡಿದು ಶ್ರೀ ಕೃಷ್ಣಸ್ವಾಮಿಯನ್ನು ತೋರಿಸಿದನು. || ೫ || ಆಗ ಯೌವನಾಶ್ವಮಹಿಪನು ಕನ್ನೈದಿಲೆಯಂತೆ ಕಪ್ಪಾಗಿರುವ ಅತಿ ಮೃದುವಾದ ದೇಹದಲ್ಲಿ ನವರತ್ನಖಚಿತವಾಗಿ ಸೂರ್ಯನ ತೇಜಸ್ಸನ್ನು ನಿರಾಕರಿಸುತ್ತಿರುವ ಕರ್ಣಕುಂಡಲ ಕಿರೀಟಕೇಯೂರಾದಿಗಳಿಂದೊಡಗೂಡಿ, ಉತ್ತಮವಾದ ಉಡಿದಾರ ಕಾಲ್ಕಡಗಗಳನ್ನು ಹಾಕಿಕೊಂಡು ಶ್ರೀ ವತ್ಸಾಂಕಿತನಾಗಿ ಕೌಸ್ತುಭಮಣಿಯಿಂದಲೂ ಪೀತಾಂಬರದಿಂದಲೂ ಪ್ರಕಾಶಿಸುತ್ತಿರುವ ಕಮಲದಂತೆ ಪಾದಗಳನ್ನುಳ್ಳ ಲಕ್ಷ್ಮೀಕಾಂತನಾದ ಮತ್ತು ||೬|| ಚ್ಯುತಿಯಿಲ್ಲದವನೂ ಬ್ರಹ್ಮರುದ್ರೇಂದ್ರಾದಿಗಳಿಗೂ ನಾರದವಶಿಷ್ಠಾದಿಗಳಿಗೂ ಅಗೋಚರನೂ ಸಚ್ಚಿದಾನಂದ ಸ್ವರೂಪನೂ ಆದ ಶ್ರೀ ಕೃಷ್ಣಪರಮಾತ್ಮನನ್ನು ನೋಡಿ ಅತ್ಯಾನಂದ ಭರಿತ

ಪೆಚ್ಚಿದತಿಹರ್ಷದಿಂದಜಭವಸೂರೇಂದ್ರಮುನಿಮುಖ್ಯರ್ಗೆಗೋಚರಿಸದ ‖ ಸಚ್ಚಿದಾನಂದಮಯನಂ ಕಂಡೆನಿದುಜಗದೊ | ಳಚ್ಚರಿಯೆಲಾನರರ್ಗೆನುತಾನೃಪಾಲಕಂ | ಬೆಚ್ಚನಸುರಾಂತಕನಪದಕೆಪೊಸಮಿಸುನಿಯೊಳೆಸವಮುಕುಟದನೊಸಲನು ‖ ೭ ‖ ಕಮಲದಳನಯನಕಾಳಿಯಮಥನಕಿಸಲಯೋ | ಪಮಚರಣಕೀಶಪತಿಸೇವ್ಯಕುಜಹರಕೂರ್ಮಸಮಸತ್ಕಪೋಲಕೇಯೂರಧ ರಕ್ಕೈರವಶ್ಯಾಮಕೋಕನದಗೃಹೆಯ ‖ ರಮಣಕೌಸ್ತುಭಶೋಭಕಂಬುಚಕ್ರಗದಾಬ್ಜ | ವಿಮಲತರಕಸ್ತೂರಿಕಾತಿಲಕಕಾವುದೆಂ | ದಮಿತಪ್ರಭಾಮೂರ್ತಿಯಂನುತಿಸಲಾತನಂ ಹರಿನೆಗಪಿದಂಕೃಪೆಯೊಳು ‖ ೮ ‖ ಎದ್ದಾನೃಪಂ ಕೃತಾಂಜಲಿಪುಟಾವನ

---

ಅಭಿವೃದ್ಧಿಯುಂಪಡೆದ, ಅತಿ ಹರ್ಷದಿಂದ-ಸಂತೋಷದಿಂದ, ಅಜ-ವಿರಂಚಿಯೂ, ಭವ-ಶಿವನು, ಸುರೇಂದ್ರ-ಶಚೀಪತಿಯು, ಮುನಿ-ತಾಪಸೋತ್ತಮರಾದ ವಶಿಷ್ಠ ನಾರದರೇ, ಮುಖ್ಯ-ಆದಿಯಾಗಿರತಕ್ಕವರಿಗೆ, ಗೋಚರಿಸದ-ಕಾಣದಿರುವ, ಸಚ್ಚಿದಾನಂದಮಯನಂ-ಸಚ್ಚಿದಾನಂದ ಸ್ವರೂಪನಾದ ಭಗವಂತನನ್ನು, ಕಂಡೆನು-ದರ್ಶನಲಾಭವಂ ಪಡೆದನು, ಜಗದೊಳು-ಲೋಕದಲ್ಲಿ, ನರರ್ಗೆ-ಮಾನವರಿಗೆ, ಅಚ್ಚರಿಯಲಾ-ಆಶ್ಚರ್ಯದಾಯಕ ವಾದದ್ದಲ್ಲವೆ, ಎನುತ-ಎಂದು ನುಡಿಯುತ್ತ, ಆ ನೃಪಾಲಕಂ-ಆ ರಾಜನಾದ ಯೌವನಾಶ್ವನು, ಅಸುರ-ರಕ್ಕಸರ, ಅಂತಕಂ-ಸಂಹಾರಕನಾದ ಕೃಷ್ಣಸ್ವಾಮಿಯ, ಪದಕೆ - ಕಾಲುಗಳಿಗೆ, ಪೊಸ-ಪುಟವಿಟ್ಟ, ಮಿಸುನಿಯೊಲು-ಭಂಗಾರದಂತೆ, ಎಸೆವ-ಥಳಥಳಿಸುವ, ಮುಕುಟದ-ಶಿರೋಭೂಷಣವುಳ್ಳ, ನೊಸಲನು-ಫಾಲವನ್ನು, ಬೆಚ್ಚನು-ಇಟ್ಟನು ‖ ೭ ‖

ಟೀ‖ ಕಮಲ-ಕಮಲಪುಷ್ಪಗಳ, ದಳ - ರೇಕುಗಳಂತಿರುವ, ನಯನ - ಅಲಿಗಳನ್ನುಳ್ಳ, ಕಾಳಿಯ-ಕಾಳಿ ಎಂಬ ಹಾವನ್ನು, ಮಥನ-ದಂಡಿಸಿದ, ಕಿಸಲಯ-ಚಿಗುರಿಗೆ, ಉಪಮ-ಸಮಾನವಾದ, ಚರಣ-ಪಾದಗಳುಳ್ಳ, ಕೀಶ-ಕೋತಿಗಳ, ಪತಿ-ಒಡೆಯನಾದ ಸುಗ್ರೀವನಿಂದ, ಸೇವ್ಯ-ಪೂಜೆಮಾಡಿಸಿಕೊಳ್ಳತಕ್ಕ ರಾಮಾವತಾರವನ್ನು ತಾಳಿದ್ದ, ಕುಜ-ಗೋವರ್ಧನ ಪರ್ವತವನ್ನು, ಹರ-ಮೇಲಕ್ಕೆ ಎತ್ತಿ ಹಿಡಿದುಕೊಂಡ, ಕುಜ-ಪಾರಿಜಾತ ವೃಕ್ಷವನ್ನು, ಹರ-ಅಪಹರಿಸಿದ, ಮತ್ತು ಕುಜ-ಕೆಡುಕರನ್ನು, ಹರ-ಸಂಹರಿಸುವ, ಕೂರ್ಮ-ಕೂರ್ಮಾವತಾರಮಾಡಿದ, ಸಮ-ನೇರವಾದ, ಸತ್ಕಪೋಲ-ಸುಂದರವಾದ ಕೆನ್ನೆಗಳಿಂದೊಡಗೂಡಿದ, ಕೇಯೂರ-ಭುಜಕೀರ್ತಿಗಳನ್ನು, ಧರ-ಹಾಕಿಕೊಂಡಿರುವ, ನೀರದ-ಮುಗಿಲಿನಂತೆ, ಶ್ಯಾಮ-ಶ್ಯಾಮಲವರ್ಣವುಳ್ಳ, ಕೋಕನದ-ಕೆಂದಾವರೆಯೇ, ಗೃಹೆಯ-ಮನೆಯಾಗಿಉಳ್ಳ ಮಹಾಲಕ್ಷ್ಮಿಗೆ, ರಮಣ-ಪತಿಯಾದ, ಕೌಸ್ತುಭ-ಕೌಸ್ತುಭವೆನ್ನುವ ರತ್ನದಿಂದ, ಶೋಭ-ಪ್ರಕಾಶಿಸುವ, ಕಂಬು-ಶಂಖವೆಂಬ, ಚಕ್ರ-ಚಕ್ರಾಯುಧವೆನ್ನುವ, ಗದಾ-ಗದೆಎಂಬ ನಾಮಧೇಯದ, ಅಬ್ಜ-ಪದ್ಮವು ಮೊದಲಾದವುಗಳಿಂದ, ವಿಮಲತರ-ಅತ್ಯಂತ ಪರಿಶುದ್ಧವಾದ, ಕಸ್ತೂರಿಕಾ-ಕಸ್ತೂರಿ ಎಂಬ ಪರಿಮಳ ದ್ರವ್ಯದ, ತಿಲಕ-ಅಲಂಕಾರ ಅಥವ ನಾಮಗಳನ್ನುಳ್ಳ ಕೃಷ್ಣಸ್ವಾಮಿಯೇ, ಕಾವುದು-ರಕ್ಷಿಸಬೇಕು, ಎಂದು-ಎಂಬ ತೆರನಾಗಿ, ಅಮಿತ-ಹೆಚ್ಚಾದ, ಪ್ರಭಾ-ಕಾಂತಿಯುಕ್ತವಾದ, ಮೂರ್ತಿಯಂ-ಆಕಾರವನ್ನುಳ್ಳ ಸ್ವಾಮಿಯನ್ನು, ನುತಿಸಲು-ಸ್ತುತಿಸಲು, ಕೃಪೆಯೊಳು-ಕರುಣೆಯಿಂದ, ಆತನಂ-ಆ ಯೌವನಾಶ್ವ ಭೂಪಾಲನನ್ನು, ನೆಗಪಿದಂ-ಮೇಲಕ್ಕೆಬ್ಬಿಸಿದನು ‖

ಅ‖ ವಿ‖ ಕುಜ, ಇದು ನಾನಾರ್ಥಪದ, ಕು-ಜ = ವೃಕ್ಷ, ಪರ್ವತ, ನೀಚರು, ಎಂಬ ಅರ್ಥಗಳನ್ನೊಳಗೊಂಡಿರುವುದು. ಕೂರ್ಮಾವತಾರ.—ಪೂರ್ವದಲ್ಲಿ ದೇವಾಸುರರು ಕ್ಷೀರ ಸಮುದ್ರದಲ್ಲಿರುವ ಅಮೃತವನ್ನು ಪಡೆಯಲು ಮಂದರಗಿರಿಯನ್ನು ಕಡಗೋಲಾಗಿಯೂ, ವಾಸುಕಿ ಎಂಬ ಸರ್ಪರಾಜನನ್ನು ಹಗ್ಗವಾಗಿಯೂ ಮಾಡಿಕೊಂಡು ಸಮುದ್ರವನ್ನು ಮಥಿಸಿ ಅಮೃತವನ್ನು ಹೊಂದಿದ ಬಳಿಕ ಆ ಮಂದರ ಪರ್ವತವನ್ನು ಪುನಃ ಮೇಲಕೆತ್ತಲೋಸುಗವಾಗಿ ಸ್ವಾಮಿಯು ಈ ಅವತಾರವನ್ನು ಮಾಡಿದನು. ‖ ೮ ‖

ಟೀ‖ ಆನೃಪಂ-ಆ ಯೌವನಾಶ್ವ ಮಹೀಪಾಲನು, ಕೃತಾಂಜಲಿಪುಟ-ಮುಕುಳಿತಕರ ಸಂಪುಟಗಳಿಂದ, ಅವನತನು-ತಲೆ ತಗ್ಗಿಸಿದವನು, ಆಗಿದ್ದಾಗ-ಆದಕಾಲದಲ್ಲಿ, ಭೀಮನಂ-ವೃಕೋದರನನ್ನು, ನೋಡಿ-ಈಕ್ಷಿಸಿ, ವಿಷಯಂಗಳಂ-ಸ್ವಚ್ಛಂದನಾದಿ

---

ನಾಗಿ ಆ ಮಹಾನುಭಾವನ ಪಾದಾರವಿಂದಗಳಲ್ಲಿ ಹೊಸದಾದ ನವರತ್ನಗಳಿಂದ ಥಳಥಳಿಸುತ್ತಿರುವ ತನ್ನ ಕಿರೀಟವನ್ನು ನೀಡಿ ‖ ೭ ‖ ಎಲೈ ಕಮಲನೇತ್ರನೆ, ಕಾಳಿ ಎಂಬ ಸರ್ಪವನ್ನು ಕೊಂದವನೆ, ಪಲ್ಲವಗಳಂತಿರುವ ಚರಣವುಳ್ಳವನೆ, ಸುಗ್ರೀವಾದಿಗಳಿಂದ ಸ್ತುತಿಸಲ್ಪಟ್ಟವನೆ, ಕೂರ್ಮಾವತಾರವಂ ತಾಳಿದವನೆ, ಶ್ಯಾಮಲಾಂಗನೆ, ಕಿರೀಟಕೇಯೂರಾದಿಗಳಿಂದಲಂಕೃತನೆ, ಶಂಖಚಕ್ರಗದಾಪದ್ಮಂಗಳನ್ನು ಧರಿಸಿ ಕಸ್ತೂರಿಯ ತಿಲಕವುಳ್ಳ ಸ್ವಾಮಿಯೆ, ಜಗದ್ರಕ್ಷಕನೆ, ದೀನಬಂಧೂ, ಭಕ್ತವತ್ಸಲಾ ಎಂಬದಾಗಿ ನಾನಾ ಪ್ರಕಾರವಾಗಿ ಸ್ತುತಿಸುತ್ತಿದ್ದನು. ಈ ಪ್ರಕಾರವಾಗಿ ತನ್ನನ್ನು ಏಕಚಿತ್ತ ಮನೋಭಾವದಿಂದ ಸ್ತುತಿಸುತ್ತಿದ್ದ ಯೌವನಾಶ್ವನನ್ನು ಸ್ವಾಮಿಯು ಮೇಲಕ್ಕೆಬ್ಬಿಸಲು ‖ ೮ ‖ ಆಗ ಯೌವನಾಶ್ವನು ಎದ್ದು ತನ್ನ ಕರಕಮಲ

ತನಾ | ಗಿದ್ದಾಗಭೀಮನಂನೋಡಿ ವಿಷಯಂಗಳಂ | ಗೆದ್ದನಿರ್ಮಲತಪಸ್ವಿಗಳನಿಶ್ಚಲಹೃದಯಮಧ್ಯಪಂಕೇಜಾತದ ‖ ಗದ್ದುಗೆಯೊಳೆಸೆವಚಿದ್ರೂಪನಂಜಗವರಿಯೆ | ದೊಡ್ಡಿಯೋಳ್ಕೂಡಿತೇರ್ಗುದುರೆಯಂ ಪೂಡೆವುದಂ | ಪೊದ್ದಿಸಿದಪಾರ್ಥನಾರಿದರೊಳೆನಲರ್ಜುನಂಬಂದಾತನಂ ಕಂಡನು ‖ ೯ ‖ ಗುಣದೊಳಾಯೌವನಾಶ್ವಕ್ಷಿತಿಪನೆರಗಿಫಲು | ಗುಣನಮೊಗಮುಂನೋಡಿನೀನಲಾತಿಳಿಯಲ್ತ್ರಿ | ಗುಣಗಳೊಂದದಘನಶ್ರುತಿಶಿರೋಮಣಿಯನಿಳೆಯರಿಯೆ ನಿಜಭಕ್ತಿಯೆಂಬ ‖ ಗುಣದಿಂದಬಂಧಿಸಿದಕೋವಿದನವೇಂಬಯಲ | ಗುಣವಿರ್ದರಕಟಯೋಗಿಗಳೆಂದು ನರನಸದ್ಗುಣವನುರೆಕೊಂಡಾಡಿಬಳಿಕಸಹದೇವನ ಕುಲಾದ್ಯರಂಮನ್ನಿಸಿದನು ‖ ‖ ೧೦ ‖ ಬಳಿಕಹೊಳಹೊಳವಮಿಂಚಿನಗೊಂಚಲೆತ್ತಲುಂ | ಬಳಸಿಕಂಗೊಳಿಸುತಿರಲಡಿಗಡಿಗೆ ಘುಡಘುಡಿಸಿ | ಮೊಳಗುವ ಸಿತಾಭ್ರಮುಂಕುಲಗಿರಿತಟ ಪ್ರದೇಶಕೆಸಾರ್ಚುವನಿಲನಂತೆ ‖ ಲಲಿತಕನಕಾಭರಣಗಳ ಕಾಂತಿಯಿಂಸುಗತಿ | ಗುಲಿನಹೊಂ

---

ಗಳನ್ನು, ಗೆದ್ದ-ನಿಗ್ರಹಿಸಿದ, ನಿರ್ಮಲ-ಪರಿಶುದ್ಧವಾದ, ತಪಸ್ವಿಗಳ-ಋಷಿವರ್ಯರ, ನಿಶ್ಚಲ-ಅಲ್ಲಾಡದೆ ಇರುವ, ಹೃದಯ-ಮನದ, ಮಧ್ಯ-ನಡುವಣ, ಪಂಕೇಜಾತದ-ತಾವರೆಹೂವಿನ, ಗದ್ದುಗೆಯೊಳು-ಆಸನದಲ್ಲಿ, ಎಸೆವ-ಹೊಳೆಯುವ, ಚಿದ್ರೂಪನಂ-ಚಿದಾನಂದರೂಪನನ್ನು, ಜಗವು-ಲೋಕವು, ಅರಿಯೆ-ಗೊತ್ತುಮಾಡಿಕೊಳ್ಳುವಂತೆ, ದೊಡ್ಡಿಯೋಳ್-ತೇರನ್ನು ನಡೆಸುವಿಕೆಯಲ್ಲಿ, ಕೂಡಿ-ಒಂದಾಗಿ, ತೇರ್ಗುದುರೆಯಂ-ರಥಕ್ಕೆ ಕಟ್ಟತಕ್ಕ ಹಯವನ್ನು, ಪೂಡೆವುದಂ-ನಡೆಸುವಿಕೆಯನ್ನು, ಪೊದ್ದಿಸಿದ-ಜೋಡಿಸಿದ, ಪಾರ್ಥನು-ಫಲ್ಗುಣನು, ಇವರೊಳು-ಇಲ್ಲಿ ನೆರೆದಿರುವವರಲ್ಲಿ, ಆರು-ಯಾರು, ಎನಲು-ಎಂದು ಪ್ರಶ್ನೆಮಾಡಲು, ಅರ್ಜುನಂ-ಕಿರೀಟಿಯು, ಬಂದು-ಸಮೀಪವನ್ನೈದಿ, ಆತನಂ-ಆ ಯೌವನಾಶ್ವನನ್ನು, ಕಂಡನು-ಈಕ್ಷಿಸಿದನು ‖ ೯ ‖

ಟೀ‖ ಗುಣದೊಳು-ನಯವಿನಯಾದಿಗಳಿಂದ, ಆ ಯೌವನಾಶ್ವಕ್ಷಿತಿಪನು-ಆ ಯೌವನಾಶ್ವನೆಂಬ ಪೃಥ್ವೀಶ್ವರನು, ಎರಗಿ-ವಂದಿಸಿ, ಫಲುಗುಣನ-ಪಾರ್ಥನ, ಮೊಗಮುಂ-ಆಸ್ಯವನ್ನು, ನೋಡಿ-ಈಕ್ಷಿಸಿ, ನೀನಲಾ-ನೀನೆ, ತಿಳಿಯಲ್-ಅರಿಯಲು, ತ್ರಿಗುಣಗಳು-ಸತ್ವಗುಣ, ರಜೋಗುಣ, ತಮೋಗುಣಗಳ, ಒಂದತೆ-ಕೂಡದೆ, ಘನ-ಶಾಶ್ವತವಾದ, ಶ್ರುತಿ-ವೇದವಚನಂಗಳಲ್ಲಿ, ಶಿರ-ಶೀರ್ಷಪ್ರಾಯವಾದ ಉಪನಿಷದ್ವಾಕ್ಯಗಳಲ್ಲಿ, ಮಣಿಯ-ರನ್ನದಹಾಗೆ ಉತ್ತಮೋತ್ತಮನಾದ ಶ್ರೀ ಕೃಷ್ಣ ಪರಮಾತ್ಮನನ್ನು, ಇಳೆ-ಪ್ರಪಂಚವು, ಅರಿಯೆ-ಗೋಚರನನ್ನೈದುವಂತೆ, ನಿಜ-ಸ್ವಕೀಯವಾದ, ಭಕ್ತಿ ಎಂಬ-ಭಕ್ತಿ ಎನ್ನತಕ್ಕ, ಗುಣದಿಂದ-ಪಾಶದಿಂದ, ಬಂಧಿಸಿದ-ನಿರ್ಬಂಧಿಸಿಕೊಂಡಿರತಕ್ಕ, ಕೋವಿದನು-ಪಂಡಿತನಾಗಿರುವ, ಬಯಲುಗುಣವಿದ್ದರೆ-ಶಮದಮ ಮೊದಲಾದ ಬಾಹ್ಯ ಸಂಬಂಧ ಗುಣಂಗಳಿದ್ದರೆತಾನೆ, ಯೋಗಿಗಳು ಅದೇಂ-ಅಂಥವರು ನಿಜವಾದ ಭಕ್ತರೇ? (ಇಲ್ಲ). ಯಾವ ಯೋಗಾಭ್ಯಾಸವೂ ಇಲ್ಲದ ಸ್ವಾಮಿಯ ವಿಶ್ವಾಸಕ್ಕೆ ಪಾತ್ರನಾಗಿರುವದು ಅತ್ಯಾಶ್ಚರ್ಯವು. ಎಂದು-ಹೀಗೆಂದು, ನರನ-ಪಾರ್ಥನ, ಸದ್ಗುಣವನು-ಒಳ್ಳೇ ಗುಣವನ್ನು, ಉರೆ-ಅಧಿಕವಾಗಿ, ಕೊಂಡಾಡಿ-ಸ್ತುತಿಸಿ, ಬಳಿಕ-ಆಮೇಲೆ, ನಕುಲಸಹದೇವಾದ್ಯರಂ-ನಕುಲಸಹದೇವ ಮೊದಲಾದವರನ್ನು, ಮನ್ನಿಸಿದನು-ಆಶೀರ್ವಾದ ಪುರಸ್ಸರವಾಗಿ ಮನ್ನಣೆಯಂ ಮಾಡಿದನು ‖ ೧೦ ‖

ಟೀ‖ ಬಳಿಕ-ಆಮೇಲೆ, ಹೊಳೆವ-ಪ್ರಕಾಶಿಸುವ, ಮಿಂಚಿನ-ವಿದ್ಯುತ್ತಿನ, ಗೊಂಚಲು-ರಾಶಿಯು, ಎತ್ತಲು-ಎಲ್ಲೆಡೆಗಳಲ್ಲಿಯೂ, ಬಳಸಿ-ತುಂಬಿಕೊಂಡು, ಕಂಗೊಳಿಸುತ-ಥಳಥಳಿಸುತ್ತ, ಇರಲು-ಇರಲಾಗಿ, ಅಡಿಗಡಿಗೆ-ಆಗಿಂದಾಗ್ಗೆ, ಘುಡುಘುಡಿಸಿ-ಘುಡುಘುಡುಸ್ವರದಿಂದ, ಮೊಳಗುವ-ಧ್ವನಿಯಂಗೈವ, ಸಿತಾಭ್ರಮುಂ-ಶ್ವೇತವರ್ಣದ ಮುಗಿಲನ್ನು, ಕುಲಗಿರಿ-ಸಪ್ತಕುಲ ಪರ್ವತಗಳ, ತಟಪ್ರದೇಶಕೆ-ದಡದಬಳಿಗೆ, ಸಾರ್ಚುವ-ಕೂಡಿಸುವ, ಅನಿಲನಂತೆ-ಗಾಳಿಯ ಹಾಗೆ, ಲಲಿತ-ಮನೋಹರವಾದ, ಕನಕ-ಸುವರ್ಣದ, ಆಭರಣ-ತೊಡಿಗೆಗಳ, ಕಾಂತಿಯಂ-ಕಳೆಯನ್ನು, ಸುಗತಿಗೆ-ಸನ್ಮಾರ್ಗಕ್ಕೆ, ಉಲಿವ-ಶಬ್ದವಾಗುವ, ಹೊಂಗೆಜ್ಜೆಗಳ-ಚಿನ್ನದ ಗೆಜ್ಜೆಗಳ, ರಭಸದಿಂ-ನಿನದದಿಂದ, ಎಸೆವ-ಹೊಳೆಯುವ, ನಿರ್ಮಲ-ಪರಿಶುದ್ಧವಾದ, ವಾಜಿಯುಂ

---

ಗಳನ್ನು ಜೋಡಿಸಿಕೊಂಡು ನಮ್ರ ಭಾವದಿಂದ ನಿಂತು ಪಕ್ಕದಲ್ಲಿದ್ದ ಭೀಮಸೇನನನ್ನು ಕುರಿತು ಎಲೈ ವೃಕೋದರನೆ, ಸ್ರಕ್ಚಂದನವನಿತಾದಿಗಳನ್ನು ಬಿಟ್ಟು ಪರಿಶುದ್ಧರಾದ ತಾಪಸೋತ್ತಮರಿಗೂ ಅಗೋಚರನೂ ಚಿದ್ರೂಪನೂ ಆದ ಭಗವಂತನನ್ನು ಸಾರಥಿಯನ್ನಾಗಿವುಳ್ಳ ಅರ್ಜುನನು ಯಾರೆಂದು ಪ್ರಶ್ನೆಮಾಡಿದನು. ಭೀಮನು ಪಾರ್ಥನನ್ನು ತೋರಿಸಲಾಗಿ ಯೌವನಾಶ್ವನು ಆತನಿಗೆ ನಮಸ್ಕಾರವಂ ಮಾಡಿ ಅಯ್ಯಾ ಫಲ್ಗುಣನೆ, ತ್ರಿಲೋಕಂಗಳ ಉತ್ಪತ್ತಿಗೆ ಕಾರಣಭೂತನಾಗಿ ನಿರ್ಗುಣನಾಗಿರುವ ಪರಮಾತ್ಮನನ್ನು ಭಕ್ತಿಪಾಶದಿಂದ ಬಂಧಿಸಿದ ನಿನಗಿಂತಲೂ ಮಹಾತ್ಮರು ಇನ್ನು ಯಾರಿರುವರು ಎಂಬದಾಗಿ ಸ್ತೋತ್ರವಂ ಮಾಡಿ ಬಳಿಕ ನಕುಲಸಹದೇವರನ್ನೂ ಆಲಿಂಗಿಸಿಕೊಂಡು ‖ ೧೦ ‖ ಆನಂದಪರವಶನಾಗಿದ್ದನು. ಆಗ ವಿದ್ಯುತ್ತಿನ ಗೊಂಚಲಿನಂತೆ ಹೊಳೆಯುತ್ತಿರುವ ಗುಚ್ಛಂಗಳಿಂದಕೂಡಿ, ಗುಡುಗಿನಿಂದ ಸೇರಿರುವ ಬಿಳಿ ಮೇಘವುಳ್ಳ ಆಗಸದಂತೆ ಹೊಳೆಯುವ ಬಿಳಿಯ ಮೈಯ್ಯನ್ನುಳ್ಳ, ಸುವರ್ಣದ ಗೆಜ್ಜೆಗಳನ್ನುಧರಿಸಿ ಝಣಝಣನೆ ಶಬ್ದವಂ ಮಾಡುತ್ತಿರುವ, ಉತ್ತಮಾಶ್ವವನ್ನು ಸುವೇಗನು

ಗೆಜ್ಜೆಗಳರಭಸದಿಂದೆಸೆವನಿ | ರ್ಮಲವಾಜಿಯಂಸುವೇಗಂತಂದುನಿಲಿಸಿದಂಧರ್ಮಜನಸಮ್ಮುಖದೊಳು ॥ ೧೧ ॥ ತುರಗಮೇಧಂಗೈಯ್ಯದೊಂದಿನಿಸುಕುಂದೆನ್ನ | ಶಿರದಮೇಲಿದೆತಾನಿದಂ ತಾಳಲಾರೆನೀಂ | ಪರಿಹರಿವುದೆಂದುನಿಜಕೀರ್ತಿಹಯರೂಪದಿಂ ಭೂಪನಂಬೇಡಿಕೊಳಲು ॥ ಪೊರೆಗೆಬಂದವೊಲೇಕಕರ್ಣದಸಿತತ್ವದಿಂ | ಪರಿಶೋಭಿಸುವಶುಭ್ರವಾಜಿಯಂಕಾಣುತ | ಚ್ಚರಿವಟ್ಟುಸಕಲಜನಮೈತಂದು ನೋಡುತಿರ್ದುದು ಬಳಸಿದೆಸೆದೆಸೆಯೊಳು ॥ ೧೨ ॥ ಕೊಂಡುಬಂದಾ ಹಯವನೊಪ್ಪಿಸಿಯುಧಿಷ್ಠಿರನ | ಕಂಡಂಸುವೇಗನತಿಭಕ್ತಿಯಿಂದೆರಗಿದಂ | ಪುಂಡರೀಕಾಕ್ಷಂಗೆಬಳಿಕರ್ಜುನಾದಿಗಳ್ಗುಚಿತದಿಂವಂದಿಸಿದನು ॥ ಬಂಡಿಪೇರೆತ್ತೊಂಟೆಗಳಮೇಲೆತಂದಖಿಳ | ಭಂಡಾರಮಂಕರಿರಥಾಶ್ವಮುಂನಾರಿಯರ | ತಂಡಮುಂಗೋಮಹಿಷಮೊದಲಾದವಸ್ತುಗಳನಾಕ್ಷಣದೊಳೊಪ್ಪಿಸಿದನು ॥೧೩॥ ಮೇಲೆಪರಿತೋಷದಿಂದಾಯೌವನಾಶ್ವಭೂ | ಪಾಲಕಂತನ್ನಸರ್ವಸ್ವಮುಂತಂದು | ಲಕ್ಷ್ಮೀ

---

ಅಶ್ವವನ್ನು, ಸುವೇಗಂ–ಸುವೇಗನೆಂಬ ನಾಮಧೇಯವುಳ್ಳ ಯೌವನಾಶ್ವನ ಪುತ್ರನು, ಧರ್ಮಜನ–ಯುಧಿಷ್ಠಿರನ, ಸಮ್ಮುಖದೊಳು–ಎದುರುಭಾಗದಲ್ಲಿ, ನಿಲಿಸಿದಂ–ನಿಲ್ಲುವಂತೆ ಮಾಡಿದನು ॥೧೧॥

ಟೀ॥ ತುರಗಮೇಧಂ- ಹಯಮೇಧವೆಂಬ ಯಾಗವನ್ನು, ಗೈಯದೆ-ರಚಿಸದೆ, ಇನಿಸು–ಸ್ವಲ್ಪವಾದರೂ, ಕುಂದು–ದೋಷವು, ಎನ್ನ-ನನ್ನ. ಶಿರದಮೇಲೆ–ಶಿರೋಭಾಗದಲ್ಲಿ, ಇದೆ–ಇರುವುದು, ತಾನು–ನಾನು, ಇದಂ – ಈ ದುಷ್ಕೀರ್ತಿಯನ್ನು, ತಾಳಲಾರೆ–ತಡೆಯಲಾರೆ, ಪರಿಹರಿವುದು-ಹೋಗಲಾಡಿಸಬೇಕು, ಎಂದು–ಹೀಗೆಂದು, ನಿಜಕೀರ್ತಿ–ತನ್ನ ಜಸವು, ಹಯರೂಪದಿಂ–ಕುದುರೆಯ ಆಕಾರದಿಂದ, ಭೂಪನಂ-ರಾಜನನ್ನು, ಬೇಡಿಕೊಳ್ಳಲು-ಕೇಳಿಕೊಳ್ಳಲಿಕ್ಕೆ, ಪೊರೆಗೆ–ಹತ್ತಿರಕ್ಕೆ, ಬಂದವೊಲ್-ಬಂದಿದೆಯೋ ಎಂಬಂತೆ, ಏಕ–ಒಂದು, ಕರ್ಣ–ಶ್ರೋತ್ರೇಂದ್ರಿಯದ, ಅಸಿತತ್ವದಿಂ-ಕರಿಯ ಬಣ್ಣದಿಂದ, ಪರಿಶೋಭಿಸುವ–ಪ್ರಕಾಶಿಸುವ, ಶುಭ್ರ–ಶ್ವೇತವರ್ಣದ, ವಾಜಿಯಂ–ತೇಜಿಯನ್ನು, ಕಾಣುತ-ಈಕ್ಷಿಸುತ್ತ, ಅಚ್ಚರಿವಟ್ಟು-ಆಶ್ಚರ್ಯವನ್ನೈದಿ, ಐತಂದು–ಬಂದು, ದೆಸೆದೆಸೆಯೊಳು–ನಾನಾ ದಿಕ್ಕುಗಳಲ್ಲಿಯೂ, ಬಳಸಿ–ಸುತ್ತಿಕೊಂಡು, ಸಕಲ-ಅಶೇಷರಾದ, ಜನಂ–ಪ್ರಜೆಯು, ನೋಡುತಿರ್ದುದು-ಈಕ್ಷಿಸುತ್ತಲಿತ್ತು ॥೧೨॥

ಟೀ॥ ಸುವೇಗನು–ಸುವೇಗನೆಂಬುವನು, ಆ ಹಯವನು–ಆ ತೇಜಿಯನ್ನು, ಕೊಂಡು ಬಂದು-ತೆಗೆದುಕೊಂಡು ಬಂದು ಒಪ್ಪಿಸಿ–ಸಮರ್ಪಣೆಮಾಡಿ, ಯುಧಿಷ್ಠಿರನ – ಧರ್ಮರಾಯನನ್ನು, ಕಂಡಂ– ಈಕ್ಷಿಸಿದನು, ಅತಿ ಭಕ್ತಿಯಿಂದ – ಪರಮಭಕ್ತಿಯಿಂದ, ಎರಗಿದಂ-ವಂದಿಸಿದನು, ಪುಂಡರೀಕಾಕ್ಷಂಗೆ – ಕಮಲನೇತ್ರನಿಗೆ, ಬಳಿಕ-ಅನಂತರ, ಅರ್ಜುನಾದಿಗಳ್ಗೆ–ಪಾರ್ಥನೆ ಮುಂತಾದವರಿಗೆ, ಉಚಿತದಿಂ–ಯೋಗ್ಯತೆಯನ್ನರಿತು, ವಂದಿಸಿದನು–ಎರಗಿದನು, ಬಂಡಿ–ಗಾಡಿಗಳು, ಪೇರೆತ್ತು–ದೊಡ್ಡ ವೃಷಭಗಳು, ಒಂಟೆಗಳಮೇಲೆ–ಉಷ್ಟ್ರವೇ ಮೊದಲಾದವುಗಳಮೇಲೆ, ತಂದ–ತೆಗೆಯಿಸಿಕೊಂಡು ಬಂದಂಥ, ಅಖಿಳ-ಎಲ್ಲಾ, ಭಂಡಾರಮುಂ–ನಗನಾಣ್ಯ, ಕರಿ-ಆನೆಗಳು, ರಥ–ತೇರುಗಳು, ಅಶ್ವಮುಂ–ಹಯಗಳನ್ನು, ನಾರಿಯರ-ಸ್ತ್ರೀಯರ, ತಂಡಮುಂ–ಸಮೂಹವನ್ನು, ಗೋ–ಹಸುಗಳು, ಮಹಿಷ-ಕರೆಯುವ ಎಮ್ಮೆ, ಮೊದಲಾದ-ಮುಂತಾದ, ವಸ್ತುಗಳನು–ಪುರುಳನ್ನು, ಆ ಕ್ಷಣದೊಳು–ಒಡನೆಯೇ, ಒಪ್ಪಿಸಿದನು–ಸಮರ್ಪಣೆಯಂ ಮಾಡಿದನು ॥೧೩॥

ಟೀ॥ ಮೇಲೆ–ತರುವಾಯ, ಪರಿತೋಷದಿಂ–ಆನಂದದಿಂದ, ಆ ಯೌವನಾಶ್ವ ಭೂಪಾಲಕಂ–ಆ ಯೌವನಾಶ್ವ ಮಹಾರಾಜನು, ತನ್ನ–ಸ್ವಕೀಯವಾದ, ಸರ್ವಸ್ವಮುಂ-ಸಂಪತ್ತನ್ನೆಲ್ಲಾ, ತಂದು-ತೆಗಿಸಿಕೊಂಡು ಬಂದು, ಲಕ್ಷ್ಮೀಲೋಲನ–ಲಕ್ಷ್ಮೀಕಾಂತನ, ಅಂಘ್ರಿಗೆ – ಪಾದಕ್ಕೆ, ಒಪ್ಪಿಸಿದ-ಅರ್ಪಣೆಮಾಡಿದ, ಬಳಿಕ – ಅನಂತರ, ಅವನೊಡನೆ - ಆ ಸುವೇಗನೊಂದಿಗೆ, ಬಂದಿಹ-ಐತಂದಿರುವ, ಸಮಸ್ತಜನವು-ಸಕಲ ಪ್ರಜೆಗಳೂ, ನೀಲಮೇಘ-ಕೃಷ್ಣವರ್ಣವಾದ ಮುಗಿಲಿನಂತೆ, ಶ್ಯಾಮಲನ–ಕಪ್ಪುಬಣ್ಣವುಳ್ಳ, ಕೋಮಲಾಂಗದ-ಸುಖದೇಹವುಳ್ಳ, ವಿಶಾಲತರ–ಬಹು ಹೆಚ್ಚಾದ, ಲಾವಣ್ಯ-ಸೌಂದರ್ಯದ, ಲಹರಿಯ-

---

ತಂದು ಧರ್ಮರಾಯನ ಎದುರಿಗೆ ನಿಲ್ಲಿಸಿದನು ॥೧೧॥ ಅಶ್ವಮೇಧಯಾಗದಿಂದೊದಗಿದ ದೋಷವು ಮೂರ್ತಿವತ್ತಾಗಿ ದೇಹವೆಲ್ಲಾ ಬಿಳುಪಾಗಿಯೂ ಒಂದು ಕಿವಿ ಮಾತ್ರ ಕಪ್ಪಗೂ ಇರುವ ಆ ಉತ್ತಮಾಶ್ವವು ಧರ್ಮರಾಯನ ಕೀರ್ತಿಯೆ ಮೂರ್ತೀಭವಿಸಿ ಅಶ್ವಮೇಧಯಾಗವನ್ನು ಮಾಡದ್ದರಿಂದುಂಟಾಗಿರುವ ದೋಷವನ್ನು ತನ್ನ ತಲೆಯಲ್ಲಿ ಧರಿಸಿ ಇದನ್ನು ಪರಿಹರಿಸಬೇಕೆಂದು ಧರ್ಮಜನನ್ನು ಬೇಡಿಕೊಳ್ಳುತ್ತಿದೆಯೊ ಎಂಬಂತೆ ಪ್ರಕಾಶಿಸುತ್ತಿತ್ತು ॥೧೨॥ ಇಂಥಾ ಉತ್ತಮಾಶ್ವವನ್ನೂ, ಒಂಟೆಗಳಮೇಲೂ ಆನೆಗಳಮೇಲೂ ಗಾಡಿಗಳಲ್ಲಿಯೂ ತಂದಿದ್ದ ಧನಕನಕ ವಸ್ತ್ರಾದಿಗಳನ್ನೂ, ಅನೇಕ ಹಸುಗಳನ್ನೂ, ನಾರಿಯರನ್ನೂ ಸುವೇಗನು ಯುಧಿಷ್ಠಿರನಿಗೊಪ್ಪಿಸಿ ಧರ್ಮಪುತ್ರನಿಗೂ ಭೀಮಾರ್ಜುನ ನಕುಲ ಸಹದೇವರಿಗೂ ವಂದಿಸಿದನು ॥೧೩॥ ಆ ಯೌವನಾಶ್ವನ ಪರಿವಾರದವರೂ ಕೂಡ ಶ್ರೀ ಕೃಷ್ಣಸ್ವಾಮಿಗೂ ಧರ್ಮಾದಿಗಳಿಗೂ ನಮಸ್ಕಾರಮಾಡಿ ಅತ್ಯಾನಂದಪರವಶರಾಗಿದ್ದರು ॥ ೧೪ ॥

ಲೋಲನಂಘ್ರಿಗೊಪ್ಪಿಸಿದಬಳಿಕವನೊಡನೆಬಂದಿಹಸಮಸ್ತಜನರು ‖ ನೀಲಮೇಘಶ್ಯಾಮಲನಕೋಮಲಾಂಗದವಿ । ಶಾಲತರಲಾವಣ್ಯಲಹರಿಯಸುಧಾಂಬುಧಿಯೊ । ಳೋಲಾಡುತಿರ್ದಡಿಗಳಿಗೆವಂದಿಸಿನುತಿಸಿಜಯಜಯನಿನಾದದಿಂದ ‖ ೧೪ ‖ ಇತ್ತಲಾಯೌವನಾಶ್ವನರಾಣಿಕಾಣಿಕೆಯ । ನಿತ್ತುಕುಂತಿಗೆನಮಿಸಿಬಳಿಕಪಾಂಚಾಲಭೂ । ಭೃತ್ತನೂಜೆಯಚರಣಸೀಮೆಗಾನತಳಾಗಲವಳಕುಚಭರಮೆಸೆದುದು ‖ ಒತ್ತಿಡಿದಸಂಜೆಗೆಂಪಿನಮೇಲೆಕವಿದಬಲ್ಗತ್ತಲೆಯೊಶೋಣಗಿರಿತಟಕೆಳಿವಕಾರ್ಮುಗಿಲ । ಮೊತ್ತಮೊಕಮಲಕೆರಗುವಳಿಕುಲವೊತಳಿರ್ಗೊಂಬಡರ್ದಬರ್ಹಿಯೊಪೇಳೆನೆ ‖ ೧೫ ‖ ದ್ವೇಷಮಂಬಿಟ್ಟುಕೆಂದಾವರೆಯಚೆಲ್ವಿನವಿ । ಶೇಷಮಂನೋಡಲುಸಮೀಪಮಂಸಾರ್ದಪೀ । ಯೂಷಕರಬಿಂಬಮೆನಲಾಪ್ರಭಾವತಿಯಮೊಗಮಂಘ್ರಿದೇಶದೊಳೊಪ್ಪಿರೆ ‖ ಭೂಷಣಂಚಲಿಸೆನುಣಿದೆತ್ತಿಬಿಗಿಯಪ್ಪಿಸಂ । ತೋಷದಿಂದವಳನುಪಚರಿಸಿತಿರುಗಿದರಖಿಳ । ಯೋಷಿದ್ಗಳೊಡನತಿವಿಲಾಸದಿಂದ್ರೌಪದಿಸುಭದ್ರಾದಿಸತಿಯರೊಡನೆ ‖೧೬‖ ಶೌರಿಸಹಿತರಸಂಬಳಿಕರಜತಗಿರಿಯಂತೆ । ಗೌರಾಂಗದಿಂದಕಂಗೊಳಿಸುವತುರಂ

---

ಹರಿಯುವಿಕೆಯುಳ್ಳ, ಸುಧಾಂಬುಧಿಯೊಳ್ - ಸುಧಾಪೂರ್ಣವಾದ ಕಡಲಲ್ಲಿ, ಅಡಿಗಡಿಗೆ - ಬಾರಿಬಾರಿಗೂ, ವಂದಿಸಿ-ಎರಗಿ, ನುತಿಸಿ-ಸ್ತೋತ್ರಮಾಡಿ, ಜಯಜಯವೆಂಬ-ಜಯಜಯವೆನ್ನುವ, ನಿನಾದದಿಂದ-ರವದಿಂದ, ಓಲಾಡುತಿರ್ದುದು-ಹೊರಳಾಡುತ್ತಿತ್ತು ‖

ಅ‖ ವಿ‖ ವಿಶಾಲ=ವಿಸ್ತಾರ ಮತ್ತು ವಿಶಾಲವೆಂಬೊಂದು ನಗರ ‖೧೪‖

ಟೀ‖ ಇತ್ತಲು-ಸ್ತ್ರೀಯರಿರುವ ಪಾರ್ಶ್ವದಲ್ಲಿ, ಆ ಯೌವನಾಶ್ವನರಾಣಿ - ಯೌವನಾಶ್ವನ ಪಟ್ಟದರಸಿಯಾದ ಪ್ರಭಾವತಿ ಎಂಬಾಕೆಯು, ಕುಂತಿಗೆ-ಕುಂತಿದೇವಿಗೆ, ಕಾಣಿಕೆಯನು-ಮರ್ಯಾದಾ ದ್ರವ್ಯವನ್ನು, ಇತ್ತು-ಕೊಟ್ಟವಳಾಗಿ, ನಮಿಸಿದ ಬಳಿಕ-ಎರಗಿದಮೇಲೆ, ಪಾಂಚಾಲ-ಪಾಂಚಾಲದೇಶದ, ಭೂಭೃತ್-ರಾಜನ, ತನೂಜೆಯ- ಕುವರಿಯಾದ ದ್ರುಪದಪುತ್ರಿಯ, ಚರಣ-ಅಡಿಗಳ, ಸೀಮೆಗೆ-ಅಂಚಿಗೆ, ಅಥವಾ ಹತ್ತಿರಕ್ಕೆ, ಆನತಳಾಗಲು-ನಮ್ರಭಾವದಿಂದ ಎರಗಲು, ಅವಳ-ಆ ಯೌವನಾಶ್ವನ ರಾಣಿಯ, ಕುಚಭರಂ-ಸ್ತನಭಾರವು ಕಾಣಿಸದ ಬಗೆ ಹೇಗೆಂದರೆ, ಒತ್ತಿಡಿದ-ಸಾಂದ್ರವಾಗಿ ನೆರೆದ, ಸಂಜೆಗೆಂಪಿನಮೇಲೆ-ಸಂಧ್ಯಾರಾಗದ ಮೇಲ್ಗಡೆಯಲ್ಲಿ, ಕವಿದ-ವ್ಯಾಪಿಸಿರುವ, ಬಲ್ಗತ್ತಲೆಯೊ-ತಮೋರಾಶಿಯೊ, (ಪ್ರಭಾವತಿಯು ಕಪ್ಪುಬಣ್ಣದ ಕಂಚುಕವನ್ನು ತೊಟ್ಟಿದ್ದರಿಂದ ಕರಗಿದ್ದವು). ಶೋಣ-ರಕ್ತಛಾಯೆಯಾದ, ಗಿರಿ-ಪೂರ್ವ ಪಶ್ಚಿಮದಿಕ್ಕುಗಳ ಕೊನೆಯಲ್ಲಿರುವ ಬೆಟ್ಟಗಳ, ತಟಕೆ-ತೀರಕ್ಕೆ, ಇಳಿವ-ಬರತಕ್ಕ, ಕಾರ್ಮುಗಿಲ-ನೀಲಮೇಘದ, ಮೊತ್ತಮೊ-ಗುಂಪೊ, ಕಮಲಕ್ಕೆ-ತಾವರೆ ಹೂವಿಗೆ, ಎರಗುವ-ಮಧುಪಾನಕ್ಕರಸಿ ಬರತಕ್ಕ, ಅಳಿಕುಲವೊ - ಭೃಂಗಾಳಿಯೊ, ತಳಿರ್ಗೊಂಬ-ರಕ್ತಪಲ್ಲವಗಳಿಂದಾವರಿಸಿದ ಶಾಖೆಯನ್ನು, ಅಡರ್ದ-ಏರಿದ, ಬರ್ಹಿಯೊ-ನವಿಲೊ, ಪೇಳು-ಹೇಳು, ಎನೆ-ಎಂಬಂತೆ, ಎಸೆದುದು-ಥಳಥಳಿಸಿತು ‖೧೫‖

ಟೀ‖ ದ್ವೇಷಮಂ-ವೈರವನ್ನು, ಬಿಟ್ಟು-ವಿಸರ್ಜಿಸಿ, ಕೆಂದಾವರೆಯ- ರಕ್ತಛಾಯೆಯಾದ ಕಮಲದ, ವಿಶೇಷಮಂ-ಆಧಿಕ್ಯವನ್ನು, ನೋಡಲು-ದೃಷ್ಟಿಸಲು, ಸಮೀಪಮಂ-ಹತ್ತಿರಕ್ಕೆ, ಸಾರ್ದ-ಬಂದ, ಪೀಯೂಷಕರ-ಸುಧಾಂಶುವಿನ, ಬಿಂಬಂ-ಮಂಡಲವೊ, ಎನಲ್-ಎಂಬಂತೆ, ಆ ಪ್ರಭಾವತಿಯ-ಯೌವನಾಶ್ವನ ರಾಣಿಯ, ಮೊಗಂ-ಆಸ್ಯವು, ಅಂಘ್ರಿದೇಶದೊಳು-ಅಡಿಗಳ ಬಳಿಯಲ್ಲಿ, ಒಪ್ಪಿರೆ-ನೆರೆದಿರಲಾಗಿ, (ಆ ದ್ರೌಪದಿಯೇ ಮೊದಲಾದವರೂ), ಭೂಷಣಂ-ತೊಡಿಗೆಗಳು, ಚಲಿಸಲು-ಅಲ್ಲಾಡುತ್ತಿರಲು, ಮಣಿದು-ನಮಸ್ಕರಿಸಿ, ಎತ್ತಿ-ಮೇಲಕ್ಕೆಬ್ಬಿಸಿ, ಬಿಗಿಯಪ್ಪಿ-ಆಲಿಂಗನವಂ ಮಾಡಿಕೊಂಡು, ಸಂತೋಷದಿಂದ-ಆಹ್ಲಾದದಿಂದ, ಅವಳನು-ಆ ಯೌವನಾಶ್ವನ ಸತಿಯನ್ನು, ಉಪಚರಿಸಿ-ಮನ್ನಿಸಿ, ಅಖಿಲಯೋಷಿದ್ಗಳೊಡನೆ - ಎಲ್ಲಾ ನಾರಿಯರೊಂದಿಗೂ, ವಿಲಾಸದಿಂ-ಆನಂದದಿಂದ, ತಿರುಗಿದರು-ನಗರಕ್ಕೆದುರಾಗಿ ಹೊರಟರು.

ಅ‖ ವಿ‖ ಈ ಪದ್ಯದಲ್ಲಿ ಶ್ವೇತವರ್ಣದ ಆಸ್ಯಕ್ಕೂ ರಕ್ತವರ್ಣದ ಅಡಿಗಳಿಗೂ ಶಶಿರವಿಗಳ ಹೋಲಿಕೆಯನ್ನು ಕೊಟ್ಟಿರುವುದು ‖೧೬‖

---

ಅತ್ತಲಾ ಯೌವನಾಶ್ವನ ರಾಣಿಯಾದ ಪ್ರಭಾವತಿಯು ಕುಂತಿ, ಸುಭದ್ರೆ, ದ್ರೌಪದಿ ಮೊದಲಾದವರ ಪಾದಗಳಿಗೆ ಎರಗಿದಳು. ಸಂಧ್ಯಾರಾಗದ ಮೇಲೆ ಆವರಿಸಿದ ತಮೋರಾಶಿಯಂತೆಯೂ, ಪೂರ್ವ ಪಶ್ಚಿಮ ದಿಗಂತಗಳಲ್ಲಿರುವ ಕೆಂಪು ಬೆಟ್ಟಗಳ ಮೇಲೆ ಕವಿದ ಕರಿಯ ಮೋಡಗಳು ಎಂಬ ಹಾಗೂ, ಕಮಲಗಳನ್ನಾಶ್ರಯಿಸುವ ಅಳಿವಿಂಡಿನತೆರನಾಗಿಯೂ, ಚಿಗುರಿನಿಂದ ಕೂಡಿದ ಕೊಂಬೆಯನ್ನಾಶ್ರಯಿಸಿದ ನವಿಲಿನಂತಿರುವ ಸ್ತನಗಳುಳ್ಳವಳಾಗಿಯೂ ‖೧೫‖ ವೈರಭಾವವನ್ನು ಮರೆತು ಕೆಂದಾವರೆಯನ್ನು ನೋಡಲೆಳಸಿ ಬಂದಿರುವ ಚಂದ್ರನಂತೆ ಮುಖವನ್ನುಳ್ಳ ಪ್ರಭಾವತಿದೇವಿಯನ್ನು ರತ್ನಭೂಷಣಾಲಂಕೃತರಾದ ದ್ರೌಪದಿ ಸುಭದ್ರೆ ಮೊದಲಾದವರು ಉಪಚಾರದಿಂದ ಕರೆದುಕೊಂಡು ಹೋಗುತ್ತಿದ್ದರು ‖ ೧೬ ‖ ಶ್ರೀಕೃಷ್ಣನಿಂದೊಡಗೂಡಿದ

ಗನುದ | ಸೌರಂಭಮುಂನೋಡಿಬಿಗಿಯಪ್ಪಿಮುಂಡಾಡಿಹೈಡಿಂಬಿಕರ್ಣಜರನು || ಗೌರವಂಮಿಗೆಯೌವನಾಶ್ವಭೂಪಾಲನಂ | ಪೌರುಷದೊಳುಪಚರಿಸಿತಂದನಿಭಪುರಿಗಖಿಳ | ಪೌರಜನಪರಿಜನದರಥನಾಗವಾಜಿಗಳಸಂದಣಿಯ ಸಂಭ್ರಮದೊಳು || ೧೭ || ಭೂವಲ್ಲಭಂಮುದದೊಳಾಯೌವನಾಶ್ವನಂ | ಭಾವಿಸಿದಬಳಿಕಪಕ್ಷದ್ವಯಂಹರಿಹಸ್ತಿ | ನಾವತಿಯೊಳಿರ್ದುನೃಪವರನೊಳಿಂತೆಂದನೀಚೈತ್ರಮಾಸಂಪೋದುದು || ಈವೇಳೆಗಧ್ವರದಸಮುಯಮನುಪಕ್ರಮಿಸ | ಲಾವಿರಲ್ಪನ್ನೊಂದುತಿಂಗಳಿಪ್ಪುದುಮುಂದೆ ನೀವುಕರೆಸಿದೊಡೆಬಂದಪೆವಂದಿಗೊದವಿದಸಮಸ್ತ ವಸ್ತುಗಳಕೊಂಡು || ೧೮ || ರಾಯನೀಕರೆಸಿದೊಡೆನಿನ್ನಮಹದಧ್ವರಸ | ಹಾಯಕೆಸಮಸ್ತವಸ್ತುವನಖಿಳಯಾದವನಿ | ಕಾಯಮುಂಕೂಡಿಕೊಂಡೈತಪ್ಪೆವನ್ನೆಗಂಸುವಿಧಾನದಿಂಹಯವನು || ಈ ಯೌವನಾಶ್ವಭೂಪತಿಸಹಿತಕಾವುದೆಂ | ದಾಯುಧಿಷ್ಠಿರನು-ಖರನಂದುಬೀಳ್ಕೊಂಡುಕನುಲಾಯತಾಕ್ಷಂಬಂಧುಕೃತ್ಯದಿಂದ್ವಾರಕೆ

---

ಅರಸಂ-ಯುಧಿಷ್ಠಿರನು, ಶೌರಿಸಹಿತ-ಕೃಷ್ಣಮೂರ್ತಿಯೊಂದಿಗೆ, ಗೌರ-ಬಿಳೀಬಣ್ಣವುಳ್ಳ, ಅಂಗದಿಂ-ದೇಹದಿಂದ, ರಜತಗಿರಿಯಂತೆ-ಬೆಳ್ಳಿಯ ಬೆಟ್ಟದಹಾಗೆ (ಕೈಲಾಸಗಿರಿಯಂತೆ), ಕಂಗೊಳಿಸುವ-ಹೊಳೆಯುವ, ತುರಂಗನುದ-ಹಯದ, ಸೌರಂಭಮಂ-ಅಲಂಕಾರವಾದ ನಡಿಗೆಯ ವೇಗವನ್ನು, ನೋಡಿ-ದೃಷ್ಟಿಸಿ, ಬಿಗಿಯಪ್ಪಿ-ವೃಷಕೇತು ಮೇಘನಾದರಂ ಆಲಿಂಗನೆಮಾಡಿಕೊಂಡು, ಮುಂಡಾಡಿ-ತಲೆಯನ್ನು ಆಘ್ರಾಣಿಸಿ, ಯೌವನಾಶ್ವಭೂಪಾಲನಂ-ಯೌವನಾಶ್ವಾವನಿಪನನ್ನು, ಗೌರವಂ-ಮರ್ಯಾದೆಯು, ಮಿಗೆ-ಹೆಚ್ಚಾನಂತೆ, ಪೌರುಷದೊಳು-ಪರಾಕ್ರಮದೊಂದಿಗೆ, ಉಪಚರಿಸಿ-ಸತ್ಕರಿಸಿ, ಅಖಿಲ-ಸಮಸ್ತವಾದ, ಪೌರಜನ-ಪಟ್ಟಣದ ಪ್ರಜೆಗಳ, ಪರಿಜನದ-ಭೃತ್ಯರ, ರಥ-ತೇರುಗಳ, ನಾಗ-ಹಸ್ತಿಗಳ, ವಾಜಿ-ಕುದುರೆಗಳ, ಸಂದಣಿಯ-ಗುಂಪಿನ, ಸಂಭ್ರಮದೊಳು-ಸಡಗರದಿಂದ, ಇಭಪುರಿಗೆ-ಹಸ್ತಿನಾವತೀ ಪಟ್ಟಣಕ್ಕೆ, ತಂದನು-ಬರಮಾಡಿಕೊಂಡನು || ೧೭ ||

ಟೀ|| ಭೂವಲ್ಲಭಂ-ಯುಧಿಷ್ಠಿರನು, ಮುದದೊಳು - ಆನಂದದಿಂದ, ಭಾವಿಸಿದಬಳಿಕ - ಆ ಯೌವನಾಶ್ವನನ್ನು ಸತ್ಕರಿಸಿದಮೇಲೆ, ಹರಿ-ವಿಷ್ಣುವು, ಹಸ್ತಿನಾವತಿಯೊಳು-ಹಸ್ತಿನಾವತಿ ಎಂಬ ನಗರದಲ್ಲಿ, ಪಕ್ಷದ್ವಯಂ-ಎರಡು ಪಕ್ಷಗಳು, ಇರ್ದು-ಇದ್ದು, ಆನೃಪವರನೊಳು-ಆ ಧರ್ಮರಾಯನೊಂದಿಗೆ, ಈಚೈತ್ರಮಾಸಂ-ಈ ಮಧುಮಾಸವು, ಪೋದುದು-ಮುಗಿಯಿತು, ಈವೇಳೆಗೆ-ಈ ಸಮಯಕ್ಕೆ, ಆವು-ನಾವು, ಇರಲ್-ಇರಲು, ಅಧ್ವರದ-ಯಾಗದ, ಸಮಯವನು-ನಿಷ್ಕರ್ಷೆಯ ವೇಳೆಯನ್ನು, ಉಪಕ್ರಮಿಸಲು-ಆರಂಭಮಾಡಲು, ಪನ್ನೊಂದುತಿಂಗಳು-ಹನ್ನೊಂದು ತಿಂಗಳು, ಇಪ್ಪುದು-ಇರುವುದು, ಆದರಿಂದ-ಆದಕಾರಣ, ನೀವು-ನೀವುಗಳು, ಮುಂದೆ-ಮುಂದಿನ ವರ್ಷದ ಚೈತ್ರಮಾಸದ ಸಮಯಕ್ಕೆ, ಕರೆಸಿದೊಡೆ-ಬರಮಾಡಿಕೊಂಡರೆ, ಅಂದಿಗೆ-ಆ ಸಮಯಕ್ಕೆ, ಒದಗಿದ-ದೊರೆತ, ಸಮಸ್ತ-ಸಕಲವಾದ, ವಸ್ತುಗಳ-ಪುರುಳ್ಗಳನ್ನು, ಕೊಂಡು-ತೆಗೆಯಿಸಿಕೊಂಡು, ಬಂದಪೆವು-ಬಂದು ಒದಗುವೆವು, ಎಂದನು-ಎಂಬದಾಗಿ ನುಡಿದನು ||

ಅ|| ವಿ|| ಪಕ್ಷ-ಇದು ನಾನಾರ್ಥಪದವು-ಶುಕ್ಲಪಕ್ಷ ಕೃಷ್ಣಪಕ್ಷಗಳೆಂದೂ, ಪಕ್ಷಿಗಳ ರಕ್ಕೆ, ಎಡಬಲಭಾಗಗಳೆಂಬ ಅರ್ಥಗಳೂ ಆಗುವವು || ೧೮ ||

ಟೀ|| ರಾಯ-ಅರಸನೆ, ನೀನು-ನೀವು, ಕರೆಸಿದೊಡೆ-ಹೇಳಿ ಕಳುಹಿಸಿದರೆ, ನಿನ್ನ-ನೀನು ಮಾಡುವ, ಮಹಾಧ್ವರ-ಮಹಾಯಾಗದ, ಸಹಾಯಕೆ-ಸಲುವಾಗಿ, ಸಮಸ್ತ-ಸಕಲವಾದ, ವಸ್ತುವನು-ಸೋಪಸ್ಕರಗಳನ್ನು, ಅಖಿಲ-ಎಲ್ಲಾ, ಯಾದವ-ಯದುಕುಲದ, ನಿಕಾಯಮುಂ-ಪರಿವಾರವನ್ನೂ, ಕೂಡಿಕೊಂಡು-ಸೇರಿಸಿಕೊಂಡು, ಐತಪ್ಪೆವು-ಬರುತ್ತೇವೆ,ಅನ್ನೆಗಂ-ಅಷ್ಟರತನಕ, ಸುವಿಧಾನದಿಂ-ವೇದವಿಧಿಯಿಂದ, ಹಯವನು-ಅಶ್ವವನ್ನು, ಆಯೌವನಾಶ್ವಭೂಪತಿಸಹಿತ-ಆ ಯೌವನಾಶ್ವನಿಂದೊಡಗೂಡಿ, ಕಾವುದು-ಕಾಪಾಡಬೇಕು, ಎಂದು-ಎಂಬದಾಗಿ,ಆಯುಧಿಷ್ಠಿರಮುಖರನಂ-ಧರ್ಮರಾಯಮುಂತಾದವರನ್ನು, ಬೀಳ್ಕೊಂಡು-ಕೇಳಿ

---

ಯುಧಿಷ್ಠಿರನು ಮನೋಹರವಾದ ನಡಿಗೆಯ ವೇಗದಿಂದ ತನ್ನೊಂದಿಗೆ ಬರುತ್ತಿರುವ ಉತ್ತಮಾಶ್ವವನ್ನು ಕಂಡು ಅತ್ಯಾನಂದದಿಂದ ಮೇಘನಾದ ವೃಷಕೇತುಗಳನ್ನು ಆಲಿಂಗಿಸಿಕೊಂಡು ಚತುರಂಗಬಲಸಮೇತನಾಗಿ ಬಹು ಸಂಭ್ರಮದಿಂದ ಹಸ್ತಿನಾವತಿಗೆ ಕರೆತಂದು || ೧೭ || ಮರ್ಯಾದೆಯಿಂದ ಉಪಚರಿಸಿದನು. ಯೌವನಾಶ್ವನು ಶ್ರೀ ಕೃಷ್ಣಧರ್ಮಜರೊಂದಿಗೆ ಹದಿನೈದು ದಿನಗಳವರೆಗೂ ಆನಂದದಿಂದ ಕಾಲಹರಣ ಮಾಡುತ್ತಿದ್ದನು. ಹೀಗಿರುವಲ್ಲಿ ಶ್ರೀ ಕೃಷ್ಣನು ಯುಧಿಷ್ಠಿರನನ್ನು ನೋಡಿ, ಎಲೈ ಧರ್ಮಜನೆ! ನೀನು ಯಾಗಕ್ಕೆ ಆರಂಭಿಸಲು ಇನ್ನು ಹನ್ನೊಂದು ತಿಂಗಳು ಸಾವಕಾಶವಿದೆ. ನಾನು ನಮ್ಮ ರಾಜಧಾನಿಗೆ ಹೋಗಿ ಯಜ್ಞಕಾಲಕ್ಕೆ ದೊರೆತ ಅನೇಕ ಸಾಮಗ್ರಿಗಳಿಂದ ಕೂಡಿಕೊಂಡು ಬಂದು ಸಿದ್ಧನಾಗುವೆನು. || ೧೮ || ಅದುವರೆಗೂ ನೀವು ಈ ಅಶ್ವವನ್ನು ಯೌವನಾಶ್ವ ಭೂಪತಿಯ ಸಹಾಯದಿಂದ ಕಾಪಾಡಿರಿ ಎಂದು ನುಡಿದು ದ್ವಾರಕಾ ಪಟ್ಟಣವನ್ನು ಹೋಗಿ ಸೇರಿದನು. || ೧೯ || ಶ್ರೀ ಕೃಷ್ಣಸ್ವಾಮಿಯು ಹಸ್ತಿನಾವತಿಯಿಂದ ದ್ವಾರಕಾ ಪಟ್ಟಣಕ್ಕೆ ಹೊರಟು ಹೋಗಲು

ಯವುರಕೆಬಿಜಯಂಗೈದನು ‖ ೧೯ ‖ ಇತ್ತಲವನಿಪನಸುರಹರನಕಳುಹಿದಚಿಂತೆ | ಗಿತ್ತುನಿಜಬುದ್ಧಿಯಂಮುಂದರಿಯದಿರೆಬಂದು | ಮತ್ತೆವೇದವ್ಯಾಸಮುನಿತಿಳುಪಲಮಳಮಂಟಪವನೋಜೆಯೊಳುರಚಿಸಿ ‖ ತತ್ತುರುಗಮಂನಿಲಿಸಿಬಳಿಕಕಾವಲ್ಗೆರಥ | ಮತ್ತಗಜಹಯಪದಾತಿಗಳಸಂದೋಹಮಂ | ಸುತ್ತಲುಪರುಠವಿಸಿಕೇಳ್ದನಾರುಷಿಯೊಳ್ಮರುತ್ತನೃಪತಿಯಕಥೆಯನು ‖ ೨೦ ‖ ವಿಧುಕುಲಲಲಾಮಕೇಳ್ ಧರ್ಮಸುತನಾತಪೋ | ನಿಧಿಗೆಕೈಮುಗಿದುಬೆಸಗೊಂಡಂಮರುತ್ತನೃಪ | ನಧಿಕತರಯಾಗಮನದಾವಋಷಿಮುಖದಿಂದಲಂದು ವಿರಚಿಸಿದನದರ ‖ ವಿಧಿಯಂತನಗೆಪೇಳ್ವುದೆನೆಬಾದರಾಯಣಂ | ಮಧುರೋಕ್ತಿಯಿಂದವಂಪತಿಗೆವಿಸ್ತರಿಸಿದಂ|ಬುಧಜನಪ್ರೀತಿಕರಮಾಗಲಾರಾಯನಮಹಾಕ್ರತುವನೀಕ್ರಮದೊಳು‖೨೧‖ ಆದೊಡೆನರೇಂದ್ರಕೇಳಾದಿಯುಗದಂದು

---

ಹೊರಟು, ಕಮಲಾಯತಾಕ್ಷಂ-ತಾವರೆಯ ಎಸಳಂತೆ ವಿಶಾಲನಯನಗಳುಳ್ಳ ಕೃಷ್ಣಮೂರ್ತಿಯು, ಬಂಧುಕೃತ್ಯದಿಂದ-ಬಾಂಧವ್ಯದ ಕಜ್ಜದಿಂದ, ದ್ವಾರಕಿಗೆ-ತನ್ನ ರಾಜಧಾನಿಯಾದ ದ್ವಾರಕಾಪಟ್ಟಣಕ್ಕೆ, ಬಿಜಯಂಗೈದನು-ದಯಮಾಡಿಸಿದನು, (ಪ್ರಯಾಣವನ್ನು ಬೆಳಸಿದನು) ‖ ೧೯ ‖

ಟೀ‖ ಇತ್ತಲು-ಇಲ್ಲಿ, ಅವನಿಪನು-ಯುಧಿಷ್ಠಿರನು, ಅಸುರಹರನ-ಕೃಷ್ಣಸ್ವಾಮಿಯನ್ನು, ಕಳುಹಿದ - ಕಳುಹಿಸಿಕೊಟ್ಟಂಥ, ಚಿಂತೆಗೆ-ವ್ಯಥೆಗೆ, ನಿಜಬುದ್ಧಿಯಂ-ತನ್ನ ಅರಿವನ್ನು, ಇತ್ತು-ಕೊಟ್ಟವನಾಗಿ, ಮುಂದರಿಯದೆ-ಏನೂ ತೋಚದೆ, ಇರೆ-ಇರಲಾಗಿ, ಮತ್ತೆ-ಪುನಃ, ವೇದವ್ಯಾಸಮುನಿ - ವ್ಯಾಸಮಹರ್ಷಿಯು, ತಿಳುಪಲು - ಧರ್ಮಬೋಧನೆಯಂ ಗೈಯಲು, ಅಮಲ-ಪರಿಶುದ್ಧವಾದ, ಮಂಟಪವನು-ಯಜ್ಞಶಾಲೆಯನ್ನು, ರಚಿಸಿ-ನಿರ್ಮಿಸಿ, ತತ್ತುರಂಗಮಂ-ಆ ಹಯವನ್ನು, ನಿಲಿಸಿದ ಬಳಿಕ-ಯಾಗಶಾಲೆಯಲ್ಲಿ ಬಂಧಿಸಿದ ತರುವಾಯ, ಕಾವಲ್ಗೆ-ಅದರ ಪೋಷಣೆಗೆ, ರಥ-ತೇರುಗಳ, ಮತ್ತಗಜಗಳ-ಮದ್ದಾನೆಗಳ, ಹಯ-ಅಶ್ವಂಗಳ, ಪದಾತಿಗಳ-ಕಾಲ್ಬಲದ, ಸಂದೋಹಮಂ-ಸಮುದಾಯವನ್ನು, ಸುತ್ತಲು-ನಾನಾ ಕಡೆಯಲ್ಲಿಯೂ, ಪರುಠವಿಸಿ-ಸೇರಿಸಿ, ಆರುಷಿಯೊಳು-ಆ ವ್ಯಾಸಮುನಿಪನಿಂದ, ಮರುತ್ತನೃಪತಿಯ-ಮರುತ್ತರಾಯನ, ಕಥೆಯನು-ವೃತ್ತಾಂತವನ್ನು, ಕೇಳಿದನು-ಶ್ರವಣಮಾಡಿದನು ‖ ೨೦ ‖

ಟೀ‖ ವಿಧು-ಸುಧಾಂಶುವಿನ, ಕುಲ-ಸಂತತಿಗೆ, ಲಲಾಮ-ಹಣೆಯನ್ನಲಂಕರಿಸುವ ನಾಮದಂತಿರುವ. ಜನಮೇಜಯರಾಯನೆ, ಕೇಳ್-ಲಾಲಿಸು, ಧರ್ಮಸುತನು-ಯುಧಿಷ್ಠಿರನು, ಆತಪೋನಿಧಿಗೆ-ಆ ತಾಪಸೋತ್ತಮನಿಗೆ, ಕೈಮುಗಿದು-ನಮಸ್ಕರಿಸಿ, ಮರುತ್ತನೃಪನು-ಮರುತ್ತನೆಂಬರಸನು, ಅಧಿಕತರ-ಅತ್ಯಂತಾತಿಶಯಮಾದ, ಅದುಯಾಗಮಂ-ಆ ಕ್ರತುವನ್ನು, ಆವರುಷಿಮುಖದಿಂದಲಿ-ಯಾವ ರುಷಿಶ್ರೇಷ್ಠರ ಮುಂಖಾಂತರ, ಅಂದು-ಪೂರ್ವದಲ್ಲಿ, ವಿರಚಿಸಿದನ-ನೆರವೇರಿಸಿದನು, ಅದರ-ಆ ಸತ್ರದ, ವಿಧಿಯಂ-ನಿಯಮವನ್ನು, ಎನಗೆ-ನನಗೆ, ಪೇಳ್ವುದು-ತಿಳಿಸಬೇಕೆಂದು, ಬೆಸಗೊಂಡಂ-ಕೇಳಿಕೊಂಡನು, ಎನೆ-ಧರ್ಮಜನು ಈರೀತಿ ಪ್ರಶ್ನೆಗೆಯ್ಯಲು, ಬಾದರಾಯಣಂ-ವ್ಯಾಸಮಹರ್ಷಿಯು, ಮಧುರ-ಇನಿದಾದ, ಉಕ್ತಿಯಿಂದ-ನುಡಿಗಳಿಂದ, ಅವನಿಪತಿಗೆ-ಧರ್ಮ ಪುತ್ರನಿಗೆ, ಬುಧಜನ-ವಿದ್ವಾಂಸರಿಗೆ, ಪ್ರೀತಿಕರಂ-ಆಹ್ಲಾದವನ್ನೆಸಗುವದು, ಆಗಲು-ಆಗುವಂತೆ, ಆರಾಯನ-ಆ ಮರುತ್ತನೆಂಬರಸನ ಮಹಾಕ್ರತುವನ-ಆ ಅಸಾಧಾರಣವಾದ ಯಾಗದ ವಿಧಿಯನ್ನು, ಈಕ್ರಮದೊಳು-ಮುಂದೆ ಹೇಳುವ ಪ್ರಕಾರವಾಗಿ, ವಿಸ್ತರಿಸಿದನು-ತಿಳಿಯಪಡಿಸಿದನು ‖

ಅ‖ ವಿ‖ ವಿಧುವಿನ ಕುಲ=ವಿಧುಕುಲ (ಷ. ತ.) ವಿಧುಕುಲಕ್ಕೆ ಲಲಾಮನು ಯಾರೋ ಅವನು. (ಷ. ತ.) ‖೨೨‖

ಟೀ‖ ನರೇಂದ್ರ-ಯುಧಿಷ್ಠಿರನೆ? ಆದೊಡೆ-ಹಾಗಾದರೆ, ಕೇಳು-ಕಿವಿಗೊಡು, ಆದಿಯುಗದ-ಪ್ರಥಮ ಯುಗವಾದ ಕೃತಯುಗದ, ಅಂದು-ಕಾಲದಲ್ಲಿ, ಆದಿತ್ಯವಂಶದೊಳು-ರವಿಯ ಅನ್ವಯದಲ್ಲಿ, ಇಕ್ಷ್ವಾಕು-ಇಕ್ಷ್ವಾಕುವೆಂಬ ಧೊರೆಯೆ, ಮೊದಲಾದವರು-ಆದಿಯಾದವರು, ಧರ್ಮ-ಪುಣ್ಯಕೆಲಸಗಳಿಂದಲೂ, ಕೀರ್ತಿ-ಬಳ್ಳಿ ಹೆಸರುವಾಸಿಯಿಂದಲೂ, ಪ್ರತಾಪಂಗಳಿಂದ-

---

ಧರ್ಮರಾಯನು ಕೃಷ್ಣನನ್ನಗಲಿದ ದುಃಖದಿಂದ ಏನೂ ತೋರದೆ ಮುಗ್ಧನಾಗಿ ಸುಮ್ಮನೆ ಕುಳಿತಿದ್ದನು. ಈರೀತಿಯಲ್ಲಿರುವ ರಾಯನಿಗೆ ವೇದವ್ಯಾಸ ಮಹರ್ಷಿಗಳು ನಾನಾಪ್ರಕಾರವಾದ ಧರ್ಮ ರಹಸ್ಯಗಳನ್ನು ಬೋಧಿಸಲು, ಆತನು ದುಃಖವನ್ನು ಮರೆತು ಯಜ್ಞಮಂಟಪವನ್ನು ನಿರ್ಮಾಣಮಾಡಿಸಿ ಅಲ್ಲಿ ಯಜ್ಞಾಶ್ವವನ್ನು ಕಟ್ಟಿಸಿ, ಅದರ ಅಂಗರಕ್ಷಣೆಗೆ ಚತುರಂಗ ಬಲ ಸೈನ್ಯವನ್ನೂ ಇಟ್ಟು ಮುನಿಯನ್ನು ಕುರಿತು ಎಲೈ ಮಹರ್ಷಿಯೆ ನನಗೆ ಮರುತ್ತರಾಯನ ಕಥೆಯನ್ನು ಕೇಳಬೇಕೆಂಬ ಆಸೆಯು ಅಧಿಕವಾಗಿದೆ. ದಯಮಾಡಿ ಹೇಳಬೇಕೆಂದು ಬೇಡಿಕೊಳ್ಳಲು ಮುನಿಯು ಧರ್ಮಜನಿಗೆ ಮರುತ್ತನ ಕಥೆಯನ್ನು ಪೇಳ ತೊಡಗಿದನು ‖೨೦‖ ಎಲೈ ಜನಮೇಜಯನೆ ಕೇಳು, ಧರ್ಮನಂದನನು "ಮರುತ್ತನೃಪನು ಯಾರ ಸಹಾಯದಿಂದ ಯಾಗವನ್ನು ವಿರಚಿಸಿದನೋ ಅದರ ಅಂದವನ್ನು ಅರುಹಬೇಕು" ಎನಲು ಬಳಿಕ ವ್ಯಾಸಮಹಾಮುನಿಯು ಧರ್ಮಜನಂ ಕುರಿತು, ಕೇಳು ಯುಧಿಷ್ಠಿರ ‖ ೨೧ ‖ ಮೊದಲನೆಯದಾದ ಕೃತಯುಗದಲ್ಲಿ ಪರಿಶುದ್ಧವಾದ ಸೂರ್ಯವಂಶದೊಳಗೆ ಧರ್ಮದಿಂ

ವಿನು | ಲಾದಿತ್ಯವಂಶದೊಳ್ಮೆರೆದರಿಕ್ಷ್ವಾಕುವೊದ | ಲಾದವರ್ಧರ್ಮಪ್ರತಾಪಂಗಳಿಂದವರಪಾರಂಪರ್ಯದೊಳ್ || ಮೇದಿನೀಪತಿಕರಂಧಮನೆಂಬವಂಸಕಲ | ಭೂದೇವಕುಲದೊಳುದ್ದಾಮನೆನಿಪಾಂಗಿರಸ | ನಾದರಿಸಿವರಿಸಿಹಯಮೇಧಶತಮುಂಮಾಡಿ ಸುರಪದವಿಯಂಪಡೆದನು ||೨೨|| ಆಕರಂಧಮನಸುತನಾವಿಕ್ಷಿಯೆಂಬವಸು | ಧಾಕಾಂತನಾತನಿಂದುದಯಿಸಿಮರುತ್ತಂತ್ರಿ | ಲೋಕವಿಖ್ಯಾತನಾದಂಪಗೆಗಳಂಗೆಲ್ವೆಡೆಯೊಳುಸಿರ್ವಿಡುತಿರಲ್ಕೆ || ವ್ಯಾಕೀರ್ಣಚಾತುರ್ಬಲಂಪುಟ್ಟುತಿಹುದವಂ | ಬೇಕೆಂದ ಕಡೆಸಾಧ್ಯಮಾಗಿಬಹುದೀಧರೆಯ | ನೇಕಾಧಿಪತ್ಯದಿಂದಾಳ್ದನಂದಮಲಧರ್ಮದಮೇರೆದಪ್ಪದಂತೆ ||೨೩|| ರಾಜ್ಯವೈಭವದಿಂದ ರಂಜಿಸುವಧರೆಯಸಾ | ಮ್ರಾಜ್ಯಾಧಿಪತ್ಯದಮಹಾಧನಂಸುರವಿಪ್ರ | ಭೋಜ್ಯಮಪ್ಪವೊಲಾನೃಪಾಲಕಂತುರಂಗಮೇಧಾಧ್ವರದ ಮಾಳ್ಕೆಗೆಳಸಿ || ಯಾಜ್ಯಯಾಜನವವರಿಸುವೊಡಾಂಗಿರಸಸುತಂ | ಪೂಜ್ಯನೆಮ್ಮ್ಮಕುಲದವರ್ಗೆಂಬನಿಶ್ಚಯದೊ | ಳಾಜ್ಯಪರ್ಗ

---

ಪರಾಕ್ರಮದಿಂದ, ಮೆರೆದರು–ಅಭಿವೃದ್ಧಿಸ್ಥಿತಿಯಲ್ಲಿದ್ದರು, ಅವರ–ಆ ರಾಜರ, ಪಾರಂಪರ್ಯದೊಳ್–ಸಂತತಿಯಲ್ಲಿ, ಮೇದಿನೀಪತಿ–ಪೃಥ್ವೀಶ್ವರನಾದ, ಕರಂಧಮನೆಂಬವಂ – ಕರಂಧಮನೆಂಬರಾಯನು, ಸಕಲ–ಎಲ್ಲಾ, ಭೂದೇವ–ಬ್ರಾಹ್ಮಣರ, ಕುಲದೊಳು–ಸಂತತಿಯಲ್ಲಿ, ಉದ್ದಾಮನು–ಶ್ರೇಷ್ಠನು, ಎನಿಪ–ಎಂದು ಹೊಗಳಿಸಿಕೊಂಡ, ಆಂಗೀರಸನ–ಅಂಗೀರಸನೆಂಬ ತಾಪಸೋತ್ತಮನನ್ನು, ಆದರಿಸಿ–ಉಪಚರಿಸಿ, ವರಿಸಿ–ಇಚ್ಛಿಸಿ, ಹಯಮೇಧಶತಮುಂ–ಅಶ್ವಮೇಧ ಯಾಗಗಳ ನೂರನ್ನು, ಮಾಡಿಸಿ–ನೆರವೇರಿಸಿ, ಸುರಪದವಿಯಂ–ದೇವೇಂದ್ರನ ಸಿಂಹಾಸನವನ್ನು, ಪಡೆದನು–ತಾಳಿದನು ||೨೨||

ಟೀ|| ಆ ಕರಂಧಮನ–ಆ ಕರಂಧಮನೆಂಬ ಅರಸನ, ಸುತನು–ಪುತ್ರನು, ಅವಿಕ್ಷಿಯೆಂಬ–ಅವಿಕ್ಷಿಯೆಂಬ ನಾಮಧೇಯವುಳ್ಳ, ವಸುಧಾಕಾಂತನು–ಭೂರಮಣನು, ಆತನಿಂದ–ಅವನಿಂದ, ಮರುತ್ತಂ–ಮರುತ್ತನು, ಉದಯಿಸಿ–ಉತ್ಪನ್ನನಾಗಿ, ತ್ರಿಲೋಕ–ಸ್ವರ್ಗ ಮರ್ತ್ಯ ಪಾತಾಳಗಳೆಂಬ ಮೂರು ಲೋಕಗಳಲ್ಲೂ, ವಿಖ್ಯಾತನು–ಹೆಸರಾದವನು, ಆದಂ–ಆಗಿದ್ದನು, ಪಗೆಗಳಂ–ವೈರಿಗಳನ್ನು, ಗೆಲ್ವೆಡೆಯೊಳು–ಜಯಿಸುವುದರಲ್ಲಿ, ಉಸಿರ್ವಿಡುತ್ತ–ಉಸಿರನ್ನು ಹೊರಗೆ ಬಿಡುತ್ತ, ಇರಲ್ಕೆ–ಇದ್ದರೆ ಎಂದರೆ ಒಂದಾವರ್ತಿ ಉಸಿರುಬಿಟ್ಟಲ್ಲಿ, ವ್ಯಾಕೀರ್ಣ–ಆವರಿಸಲ್ಪಟ್ಟ, ಚಾತುರ್ಬಲಂ–ನಾಲ್ಕು ಬಗೆಯಾದ ದಳವು, ಪುಟ್ಟುತ–ಉತ್ಪನ್ನವಾಗುತ್ತ, ಇಹುದು–ಇರುವುದು, ಅವಂ–ಆ ಮರುತ್ತನು, ಬೇಕೆಂದ–ಇಷ್ಟಪಡುವ, ಕಡೆ–ಎಡೆಯಲ್ಲಿ, ಸಾಧ್ಯಮಾಗಿ–ಕಷ್ಟವಿಲ್ಲದೆ, ಬಹುದು–ಐತರುತ್ತಿರುವುದು, ಈಧರೆಯೊಳು–ಈ ಭೂಮಂಡಲವನ್ನು, ಏಕಾಧಿಪತ್ಯದಿಂದ–ನಿರಂಕುಶ ಪ್ರಭುತ್ವದಿಂದ, ಅಮಲ–ನಿರ್ದೋಷವಾದ, ಧರ್ಮದ–ಪುಣ್ಯಕಾರ್ಯಗಳ, ಮೇರೆ–ಎಲ್ಲೆಯು, ತಪ್ಪದಂತೆ–ಅತಿಕ್ರಮಿಸದ ಹಾಗೆ, ಅಂದು–ಪೂರ್ವದಲ್ಲಿ, ಆಳ್ದನು–ಅರಸುತನವಂ ಮಾಡಿದನು ||೨೩||

ಟೀ|| ರಾಜ್ಯ–ಅರಸುತನದ, ವೈಭವದಿಂದ – ಸಮೃದ್ಧಿಯಿಂದ, ರಂಜಿಸುವ – ಪ್ರಕಾಶಿಸುವ, ಧರೆಯ–ಇಳೆಯ, ಸಾಮ್ರಾಜ್ಯಾಧಿಪತ್ಯದ–ಸಾರ್ವಭೌಮತ್ವದಿಂದ, ಮಹಾ–ಹೆಚ್ಚಾದ, ಧನಂ–ಹಣದ ರಾಶಿಯನ್ನು, ಸುರ–ದೇವತೆಗಳ, ವಿಪ್ರ–ಭೂಸುರರ, ಭೋಜ್ಯಂ–ಸುಖಕ್ಕೆ ತಕ್ಕದ್ದು, ಅಪ್ಪವೊಲ್–ಆಗುವಹಾಗೆ, ಆ ನೃಪಾಲಕಂ–ಆ ರಾಜನೂ, ತುರಗಮೇಧಾಧ್ವರದ–ಅಶ್ವಮೇಧಯಾಗದ, ಮಾಳ್ಕೆಗೆ–ಎಸಗುವಿಕೆಗೆ, ಎಳಸಿ–ಆಶಿಸಿ, ಯಾಜ್ಯ–ಯಾಗಮಾಡಿಸಲು ಉತ್ತಮರಾದವರ, ಯಾಜನವ–ಕಾರ್ಯಕ್ಕಾಗಿ, ವರಿಸುವೊಡೆ–ಒಪ್ಪಲು, ಎಮ್ಮ–ನಮ್ಮ, ಈ ಕುಲದವರ್ಗೆ–ಈ ಸೂರ್ಯವಂಶದಲ್ಲಿ ಉತ್ಪನ್ನರಾದವರಿಗೆ, ಅಂಗಿರಸಸುತಂ–ಗುರುವು, ಪೂಜ್ಯನು–ಸಪರ್ಯೆಗೆ ತಕ್ಕವನು, ಎಂಬ–ಎನ್ನುವ, ನಿಶ್ಚಯದೊಳು–ಸ್ಥಿರಬುದ್ಧಿಯಿಂದ, ಆಜ್ಯಪರ್ಗೆ–ಆ ಸುರ

---

ದಲೂ ಕೀರ್ತಿಯಿಂದಲೂ ಶೌರ್ಯದಿಂದಲೂ ಅನೇಕ ರಾಜರು ಧೊರೆತನವನ್ನು ಮಾಡಿದರು. ಅವರಲ್ಲಿ ಇಕ್ಷ್ವಾಕುವೇ ಮೊದಲನೆಯವನು, ಆದ್ದರಿಂದ ಅವರ ವಂಶಕ್ಕೆ ಇಕ್ಷ್ವಾಕುವಂಶವೆಂದೂ ನಾಮಾಂತರವಿರುವುದು. ಅವರ ಸಂತತಿಯಲ್ಲಿ ಇಕ್ಷ್ವಾಕು ಮಹಾರಾಯನಿಗೆ ಕರಂಧಮನೆಂಬೊಬ್ಬ ಮಗನು ಹುಟ್ಟಿ ಭೂಲೋಕ ಸ್ವರ್ಗಲೋಕಗಳಲ್ಲಿಯೂ ಪ್ರಸಿದ್ಧಿಯಂ ಪಡೆದ ಆಂಗಿರಸ ಋಷಿಗಳಿಂದ ನೂರು ಅಶ್ವಮೇಧಯಾಗವನ್ನು ಮಾಡಿ ಇಂದ್ರಪಟ್ಟವನ್ನು ಸಂಪಾದಿಸಿದನು || ೨೨ || ಆ ಕರಂಧಮನು ವಿಕುಕ್ಷಿ ಎಂಬ ಮಗನೊಬ್ಬನನ್ನು ಪಡೆದು ಇದ್ದನು. ಆ ವಿಕುಕ್ಷಿಯ ತನುಜನನ್ನೇ ಮರುತ್ತನೆಂದು ಕರೆಯುವರು. ಇವನು ಸ್ವರ್ಗ ಮರ್ತ್ಯ ಪಾತಾಳಗಳೆಂಬ ಮೂರು ಲೋಕಗಳಲ್ಲಿಯೂ ವಿಖ್ಯಾತನಾಗಿ ಧರ್ಮಮಾರ್ಗಕ್ಕೆ ಲೇಶವೂ ವಿರುದ್ಧವಿಲ್ಲದಂತೆ ನಡೆಯುತ್ತಿದ್ದನು. ಇವನು ಯುದ್ಧಮಾಡುವಾಗ ಅವಶ್ಯಕವಾದ ವೇಳೆಯಲ್ಲಿ ಉಸಿರು ಬಿಟ್ಟ ಮಾತ್ರದಿಂದಲೆ ಚತುರಂಗ ಬಲವೂ ಉಂಟಾಗಿ ನೆರವಾಗುತ್ತಿತ್ತು. ಭೂಮಿಯನ್ನು ತನ್ನೊಂದಿಗೆ ಕರೆದುಕೊಂಡು ಹೋಗುವಷ್ಟು ಸತ್ಯವಂತನಾಗಿ ನಾನಾ ದೇಶಗಳನ್ನು ಗೆದ್ದು ಮಹತ್ಸಾಮ್ರಾಜ್ಯ ಪದವಿಯನ್ನು ಅನುಭವಿಸುತ್ತಿದ್ದನು. ||೨೩|| ಇಷ್ಟು ಸುಖಸಾಮ್ರಾಜ್ಯದಿಂದ ಮೆರೆಯುತ್ತಿರುವ ಆ ರಾಯನು ಒಂದಾನೊಂದು ಕಾಲದಲ್ಲಿ ಅಶ್ವಮೇಧಯಾಗವಂ ಮಾಡಲುಜ್ಜುಗಿಸಿ ತಮ್ಮ ಕುಲ ಪುರೋಹಿ

ಚಾರ್ಯನಾಗಿಹಬೃಹಸ್ಪತಿಯಪ್ರೋರೆಗೆಬಂದಿಂತೆಂದನು ||೨೪|| ಎಲೆಬೃಹಸ್ಪತಿಮತ್ಪಿತಾಮಹಂಕ್ರತುಗಳ್ಗೆ | ಸಲೆನಿನ್ನತಾತನಂವರಿಸಿರ್ದನದರಿಂದ | ಕುಲಧರ್ಮಮಂಬಿಡದೆನೀನೆನಗೆಯಜ್ಞಮಂಮಾಡಿಸೆನಲವನೊಪ್ಪಲು || ಬಲರಿಪುಕನಲ್ದುಮಾನವರಮಖಯಾಜನಂ | ಪೋಲಿಸುರರ್ಗುಚಿತಮಲ್ಲೆಂದುಗುರುವಂತಡೆದು | ನಿಲಿಸಲಾನೃಪತಿಭಂಜಿತನಾಗಿಬರುತನಾರದಮುನಿಪನಂ ಕಂಡನು ||೨೫|| ದುಗುಡದಿಂದಾನೃಪಂನಾರದಂಗೆರಗೆನಸುನಗುತಿದೇನೆಲೆರಾಯನಿನಗೆದುರ್ಮ್ಮಾನಮೆನೆ | ಮಿಗೆಬೃಹಸ್ಪತಿತನಗೆಮಾಡಿದವಮಾನವಂಪೇಳ್ದತಿವಿರಕ್ತಿಯಿಂದ || ನಗರಮಂಪೊಗದರಣ್ಯದೊಳುಗ್ರತಪದಿಂದ | ಜಗದೊಳುತ್ಕೃಷ್ಟಪದಮಂಪಡೆವೆನೆನೆ

---

ರಿಗೆ, ಆಚಾರ್ಯನು_ಗುರುವು, ಆಗಿಹ_ಆಗಿರತಕ್ಕ, ಬೃಹಸ್ಪತಿಯ-ಗುರುವಿನ, ಪೋರೆಗೆ_ಬಳಿಗೆ, ಬಂದು_ಐತಂದು, ಇಂತು_ಮುಂದೆ ಹೇಳುವಂತೆ, ಎಂದನು_ನುಡಿದನು ||೨೪||

ಟೀ|| ಎಲೆ ಬೃಹಸ್ಪತಿ-ಎಲೈ ಬೃಹಸ್ಪತ್ಯಾಚಾರ್ಯರೇ!, ಮತ್ಪಿತಾಮಹಂ - ನಮ್ಮ ಮುತ್ತಂದೆಯಾದ ಕರಂದಮನೆಂಬ ನರೇಶ್ವರನು, ಕ್ರತುಗಳ್ಗೆ_ಮಾಡಿದ ಯಾಗಗಳಿಗೆ, ಸಲೆ_ಬಹುವಾಗಿ, ನಿನ್ನ ತಾತನಂ-ನಿಮ್ಮ ತಂದೆಯಾದ ಅಂಗಿರಸರನ್ನು, ವರಿಸಿರ್ದನು_ಇಷ್ಟಪಟ್ಟು ಬರಮಾಡಿಕೊಳ್ಳುತ್ತಿದ್ದನು, ಅದರಿಂದ_ನೀವು ನಮಗೆ ಅನೂಚಾನವಾಗಿ ಬಂದ ಪುರೋಹಿತರಾಗಿರುವುದರಿಂದ, ಕುಲ_ಸಂತತಿಯ, ಧರ್ಮಮಂ_ನಡತೆಯನ್ನು, ಬಿಡದೆ_ತಪ್ಪದೆ, ನೀನು_ನೀನಾದರೋ, ಎನಗೆ-ನನಗೆ, ಯಜ್ಞಮಂ-ಯಾಗವನ್ನು, ಮಾಡಿಸು_ನೆರವೇರಿಸು, ಎನಲು_ಎಂದು ನುಡಿಯಲು, ಅವನು_ಆ ಗುರುವು, ಒಪ್ಪಲು_ಒಡಂಬಡಲು, ಬಲರಿಪು-ಸುರನಾಥನು, ಕನಲ್ದು-ಆಗ್ರಹಗೊಂಡು, ಮಾನವರ-ಮನುಷ್ಯರು ಮಾಡುವ, ಮಖ-ಯಾಗದ, ಯಾಜನಂ_ನಡೆಸಲು ಹೋಗುವುದು, ಸುರರ್ಗೆ-ಸ್ವರ್ಗಲೋಕದವರಿಗೆ, ಪೋಲಿ_ಒಪ್ಪದು, ಉಚಿತಂ_ಯೋಗ್ಯವಾದದ್ದು, ಅಲ್ಲ_ಆಗದು, ಎಂದು_ಹೀಗೆಂಬದಾಗಿ, ಗುರುವಂ-ಸುರಾಚಾರ್ಯರನ್ನು, ತಡೆದು ನಿಲಿಸಲು_ಹೋಗಲೀಸದಿರಲು, ಆ ನೃಪತಿ_ಆ ಮರುತ್ತನೆಂಬ ರಾಜನು, ಭಂಜಿತನಾಗಿ_ಭಗ್ನಮನಸ್ಕನಾಗಿ, ಬರುತ_ಐತರುತ್ತ, ನಾರದಮುನಿಪನಂ_ಮುನಿವರ್ಯನಾದ ನಾರದನನ್ನು, ಕಂಡನು ಈಕ್ಷಿಸಿದನು ||

ಅ|| ವಿ|| ಮುನಿಪ= ಮುನಿ- ಋಷಿಗಳನ್ನು, ಪ-ಪಾಲಿಸುವನು (ಕೃ. ವೃ.) ಬೃಹಸ್ಪತಿ= ಬೃಹತೀ - ಮಾತುಗಳಿಗೆ, ಪತಿ_ಯಜಮಾನನು ||೨೫||

ಟೀ|| ದುಗುಡದಿಂದ_ಸಂತಾಪದಿಂದ, ಆ ನೃಪಂ-ಆ ಮರುತ್ತರಾಯನು, ನಾರದಂಗೆ_ ನಾರದಮಹಾಮುನಿಗೆ, ಎರಗೆ_ವಂದಿಸಲು, (ನಾರದನು), ನಸುನಗುತ_ಮುಗುಳ್ನಗೆಯಂ ತಾಳುತ್ತ, ಎಲೆ ರಾಯ-ಅಯ್ಯಾ ಧೊರೆಯಾದ ಮರುತ್ತನೆ, ನಿನಗೆ, ದುರ್ಮ್ಮಾನಂ_ಮನೋವ್ಯಥೆಯು, ಇದೇನು_ಇದು ಏತಕ್ಕೆ, ಎನೆ_ಎಂದು ಪ್ರಶ್ನೆಯಂಗಯ್ಯಲು, ಬೃಹಸ್ಪತಿ_ಗುರುವು, ತನಗೆ_ತನ್ನ ವಿಷಯದಲ್ಲಿ, ಮಿಗೆ_ಅಧಿಕವಾಗಿ, ಮಾಡಿದ_ಎಸಗಿದ, ಅವಮಾನವಂ_ಅಮರ್ಯಾದೆಯನ್ನು, ಪೇಳ್ದು_ತಿಳಿಸಿ, (ಮತ್ತು ಅವರನ್ನು ಕುರಿತು), ನಗರಮಂ_ಪಟ್ಟಣವನ್ನು, ಪೊಗದೆ_ಪ್ರವೇಶಮಾಡದೆ, ಅತಿವಿರಕ್ತಿಯಿಂದ_ಹೆಚ್ಚಾದ ವೈರಾಗ್ಯದ ಭಾವದಿಂದ, ಉಗ್ರ_ಕ್ರೂರವಾದ, ತಪದಿಂದ_ಉಪವಾಸಾದಿ ನಿಯಮವನ್ನು ಮಾಡಿಕೊಂಡು, ಜಗದೊಳು_ಲೋಕದಲ್ಲಿ, ಉತ್ಕೃಷ್ಟ-ಶ್ರೇಷ್ಠವಾದ, ಪದಮಂ-ಮಾರ್ಗವನ್ನು (ಪದವಿಯನ್ನು), ಪಡೆವೆನು-ಸಂಪಾದಿಸುವೆನು, ಎನೆ_ಹೀಗೆಂದು, ಮರುತ್ತನು ಹೇಳಲು

---

ತರೂ ಆಂಗಿರಸರ ಪುತ್ರರೂ ಆದ ಬೃಹಸ್ಪತ್ಯಾಚಾರ್ಯರನ್ನು ಕುರಿತು ||೨೪|| ಎಲೈ ಸುರಗುರುಗಳೆ! ನಿಮ್ಮ ತಂದೆಯವರಾದ ಆಂಗಿರಸರು ನಮ್ಮ ತಾತಂದಿರು ಮಾಡಿದ ಅಶ್ವಮೇಧಯಾಗಕ್ಕೆ ಆಚಾರ್ಯರಾಗಿದ್ದು ಯಜ್ಞವನ್ನು ಸಾಂಗವಮಾಡಿಸಿ ಕೃತಾರ್ಥರನ್ನಾಗಿ ಮಾಡಿದರು. ಆದ್ದರಿಂದ ನೀವು ನಮ್ಮ ವಂಶಕ್ಕೆ ಕುಲಪುರೋಹಿತರಾಗಿರುವಿರಿ, ಈಗ ಅಶ್ವಮೇಧಯಾಗವಂ ಮಾಡಲೆಳಸಿ ತಮ್ಮನ್ನು ಪುರೋಹಿತರನ್ನಾಗಿ ಮಾಡಿಕೊಳ್ಳಬೇಕೆಂದು ಬಂದಿರುವ ನನ್ನ ಕೋರಿಕೆಯನ್ನು ಸಾರ್ಥಕಪಡಿಸಿ ಕೃತಾರ್ಥನನ್ನಾಗಿ ಮಾಡಬೇಕೆಂದು ಪ್ರಾರ್ಥಿಸಿದನು. ಈ ಸುದ್ದಿಯು ದೇವೇಂದ್ರನಿಗೆ ತಿಳಿಯಲಾಗಿ ಮನುಷ್ಯರು ಮಾಡುವ ಯಾಗಾದಿಗಳಿಗೆ ನೀನು ಆಚಾರ್ಯನಾಗುವದು ಅನುಚಿತವೆಂದು ಬೋಧಿಸಿ ಒಪ್ಪಿದ್ದ ಬೃಹಸ್ಪತಿಯನ್ನು ಒಪ್ಪದಂತೆ ಮಾಡಿಬಿಟ್ಟನು. ಅನಂತರ ಭಗ್ನಮನಸ್ಕನಾದ ಮರುತ್ತನು ಹಿಂದಿರುಗಿ ಬರುತ್ತಿರುವಾಗ ಪೂತಾತ್ಮರೂ ತ್ರಿಲೋಕಸಂಚಾರಿಗಳೂ ಆದ ನಾರದಮಹರ್ಷಿಗಳು ಎದುರಾದರು. ಆಗ ಮರುತ್ತನು ನಾರದಮುನಿಗಳಿಗೆ ಸಾಷ್ಟಾಂಗ ಪ್ರಣಾಮವಂಮಾಡಿ ದುಃಖದಿಂದ ಖಿನ್ನನಾಗಿ ನಿಂತಿರುವುದನ್ನು ಕಂಡು ನಾರದನು ತನ್ನ ಮನದಲ್ಲಿ ಮುಗುಳ್ನಗೆಯಂತಾಳಿ ಎಲೈ ರಾಯನೆ, ಇದೇನು ಬಹು ಸಂತಾಪದಿಂದ ಕೂಡಿರುವಂತೆ ಕಾಣುತ್ತೀಯಲ್ಲಾ, ನಿನ್ನ ಮುಖ ಕಮಲದ ಕಾಂತಿಯು ಕುಂದಲು ಕಾರಣವೇನು ಎಂದು ಪ್ರಶ್ನೆಮಾಡಲಾಗಿ ಮರುತ್ತನು ಎಲೈ ಮಹರ್ಷಿಗಳೆ, ನಾನು ಅಶ್ವಮೇಧಯಾಗವಂ ಮಾಡಲೆಳಸಿ ಬೃಹಸ್ಪತ್ಯಾಚಾರ್ಯರನ್ನು ಪುರೋಹಿತರಾಗಬೇಕೆಂದು ಬೇಡಲು, ಇಂದ್ರನ ಒತ್ತಾಯದಿಂದ ಅವರು ತಿರಸ್ಕರಿಸಿಬಿಟ್ಟದ್ದರಿಂದ ಆಶಾಭಂಗವಾಗಿ ಈ ರೀತಿಯಾಗಿರುವೆನು. ಇನ್ನು ನನಗೆ ಯಾಗವೆಂದರೇನು? ನನಗೆ ರಾಜ್ಯಕೋಶ

ಕೇಳ್ದು | ವಿಗಡಮುನಿಸಂನಾಗಳಾಮಹೀಪಾಲನಂ ಸಂತೈಸುತಿಂತೆಂದನು || ೨೬ || ಜನಪನಿನಗೆಚ್ಚರಿಪೆನಾದಿಯೊಳ್ಪಂಕಜಾ | ಸನನಮಾನಸಪುತ್ರನಾದನಾಂಗೀರಸನ | ತನುಜಂಬೃಹಸ್ಪತಿಯುಮಿನ್ನೊರ್ವಸಂವರ್ತನೆಂಬವಂಬಳಿಕವರ್ಗೆ || ದಿನದಿನಕೆ ದಾಯಾದಮತ್ಸರಂಪೆರ್ಚುತಿರೆ | ಮನವಾರ್ತೆಯೊಳ್ಪಸುಗೆಯಂಕೊಡದೆಗುರುತಗು | ಳ್ದನುಜನಂಪೊರಮಡಿಸೆಕಾಶಿಯೊಳ್ಪೋಗಿರ್ಪನಾತನವಧೂತನಾಗಿ ||೨೭|| ಆತನಂವರಿಸಿದೊಡೆಯಜ್ಞಮಾದಪುದುನಿನ | ಗೇತಕಿನ್ನೆಣಿಕೆನಡೆಕಾಶಿಕಾಪಟ್ಟಣದೊ | ಳಾತಪೋನಿಧಿನಿನ್ನಕಣ್ಗೆಗೋಚರಿಸದಿರೆ ಪೊಳಲಪೆರ್ಬಾಗಿಲೊಳಗೆ || ಘಾತಿಯಾಗಿರ್ದಪೆಣನಂಬಿಸುಡಿಸಿದೊಡಖಿಳ | ಜಾತಿಗಳ್ತುಳಿದುಕೊಂಡೆಡೆಯಾಡುತಿರ್ಪುದವ | ಧೂತನಾಗಿರ್ದವಂಕಂಡುಕೊಲಗಿದೊಡರಿದುಬೆಂಬಿಡದೆಪೋಗೆಂದನು ||೨೮|| ಪೊಕ್ಕಲ್ಲಿ

---

ಕೇಳ್ದು-ಆಲಿಸಿ, ವಿಗಡಮುನಿಸಂನು-ಕಲಹದ ನಾರದಮುನಿಯು, ಆಗಳ್-ಆಗ, ಆ ಮಹೀಪಾಲನಂ-ಆ ಭೂಕಾಂತನಾದ ಮರುತ್ತನನ್ನು, ಸಂತೈಸುತ-ಸಮಾಧಾನಪಡಿಸುತ್ತ, ಇಂತು-ಮುಂದೆ ಹೇಳುವಂತೆ, ಎಂದನು-ನುಡಿದನು || ೨೬ ||

ಟೀ|| ಜನಪ-ನರೇಂದ್ರನಾದ ಮರುತ್ತನೆ, ನಿನಿಗೆ-ನಿನಗೆ, ಎಚ್ಚರಿಪೆಂ-ಎಚ್ಚರವನ್ನುಂಟುಮಾಡುವೆನು, ಆದಿಯೋಳ್-ಪ್ರಾರಂಭದಲ್ಲಿ, ಪಂಕಜಾಸನನ-ಕಮಲಾಸನನ, ಮಾನಸಪುತ್ರನು-ಮನದಲ್ಲಿ ಉದ್ಭವಿಸಿದವನು, ಆದ-ಆಗಿರತಕ್ಕ, ಆಂಗೀರಸನ-ಅಂಗೀರಸ್ಸೆಂಬ ಮುನಿಯ, ತನುಜಂ-ಪುತ್ರನಾದ, ಬೃಹಸ್ಪತಿಯುಂ-ವಾಕ್ಪತಿಯಾದ ಸುರಾಚಾರ್ಯನುಂ, ಇನ್ನೊರ್ವ-ಮತ್ತೊಬ್ಬನಾದ, ಸಂವರ್ತನೆಂಬವಂ-ಸಂವರ್ತನೆಂಬ ಹೆಸರುಳ್ಳ ಪುತ್ರನು, (ಇರುವರು), ಬಳಿಕ-ತರುವಾಯ, ಅವರ್ಗೆ-ಬೃಹಸ್ಪತಿ ಮತ್ತು ಸಂವರ್ತರೆಂಬುವರಿಗೆ, ದಿನದಿನಕೆ-ದಿನೇದಿನೇ, ದಾಯಾದಮತ್ಸರಂ-ಜ್ಞಾತಿ ಕಲಹವು, ಪೆರ್ಚುತ್ತಿರೆ-ವೃದ್ಧಿಯನ್ನೈದುತ್ತಿರಲು, ಮನೆವಾರ್ತೆಯೊಳು-ಗೃಹಕೃತ್ಯದಲ್ಲಿ, ಪಸುಗೆಯಂ-ಭಾಗವನ್ನು, ಕೊಡದೆ-ಈಯದೆ, ಗುರು-ಸುರಾಚಾರ್ಯನು, ಅನುಜನಂ-ಸಂವರ್ತನೆಂಬ ತನ್ನ ಸಹೋದರನನ್ನು, ತಗುಳ್ದು-ನೂಕಿ, ಪೊರಮಡಿಸೆ-ಆಚೆಗೆ ಕಳುಹಲು, ಆತನು- ಆ ಸಂವರ್ತನು, ಕಾಶಿಯೊಳು-ಕಾಶೀಕ್ಷೇತ್ರದಲ್ಲಿ, ಪೋಗಿ-ಹೋಗಿ ಸೇರಿ, ಅವಧೂತನಾಗಿ-ಅವಧೂತಾಶ್ರಮವನ್ನೈದಿ, ಇರ್ಪನು-ಇದಾನೆ ||

ಅ|| ವಿ|| ಅನುಜ=ಅನುಸರಿಸಿ ಹುಟ್ಟಿದವನು, (ತಮ್ಮ). ಮನೆವಾರ್ತೆ-ಮನೆಯ ಆಸ್ತಿ ಅಥವ ವ್ಯವಹಾರ, ಪಂಕೆ-ಕೆಸರಿನಲ್ಲಿ, ಜ-ಹುಟ್ಟಿದ್ದು, (ಕಮಲ), ಸ. ತ. ಸಂವರ್ತ ಎಂಬುದು ನಾನಾರ್ಥಪದ, ಸಂವರ್ತ=ಪ್ರಳಯಕಾಲ, ಸಂವರ್ತನೆಂಬ ಮುನಿ. ಮೇಘದಲ್ಲಿ ಒಂದು ಭೇದ. || ೨೭ ||

ಟೀ|| ಆತನಂ-ಆ ಸಂವರ್ತನೆಂಬ ನಾಮಧೇಯವುಳ್ಳ ಆಂಗೀರಸನ ಪುತ್ರನನ್ನು, ವರಿಸಿದೊಡೆ-ಪ್ರಾರ್ಥಿಸಿದರೆ (ಮೆಚ್ಚಿಸಿದರೆ), ಯಜ್ಞಂ-ಕ್ರತುವು, ಆದಪುದು-ನೆರವೇರುವುದು ನಿನಿಗೆ-ನಿನಗೆ, ಇನ್ನು-ಮುಂದೆ, ಎಣಿಕೆಯಾತಕೆ-ಆಲೋಚನೆ ಯಾತಕ್ಕೆ? ನಡೆ-ಕಾಶಿಗೆ ಪ್ರಯಾಣವಂ ಬೆಳಸುವನಾಗು, ಕಾಶಿಕಾಪಟ್ಟಣದೊಳು-ಆ ಕಾಶೀಕ್ಷೇತ್ರದಲ್ಲಿಯೆ, ಆತಪೋನಿಧಿ-ಆ ಮಹಾಮುನಿಯಾದ ಸಂವರ್ತನು, ನಿನ್ನಕಣ್ಗೆ-ನಿನ್ನ ಆಲಿಗಳಿಗೆ, ಗೋಚರಿಸದಿರೆ-ದೃಷ್ಟಿಪಥಕ್ಕೆ ಬೀಳದೆ ಹೋದಲ್ಲಿ, ಪೊಳಲ-ನಗರದ, ಪೆರ್ಬಾಗಿಲೊಳಗೆ-ದೊಡ್ಡ ಬಾಗಿಲಲ್ಲಿ, ಘಾತಿಯಾಗಿರ್ಪ-ವ್ರಣ, ಅಥವ ಹುಣ್ಣಿನಿಂದ ಕೂಡಿದ, ಪೆಣನಂ-ಶವವನ್ನು, ಬಿಸುಡಿಸಿದೊಡೆ-ಇಟ್ಟಿದ್ದರೆ, ಅಖಿಳಜಾತಿಗಳ್-ಎಲ್ಲಾ ಬಗೆಯವರೂ, ತುಳಿದುಕೊಂಡೆ-ಪಾದತಾಡನದಿಂದಲೆ, ಎಡೆಯಾಡುತಿರ್ಪುದು-ಓಡಾಡುತ್ತಿರುವುದು, ಅವಧೂತನಾಗಿರ್ದ-ಅತಿ ವಿರಕ್ತಯತಿಯಾದ, ಅವಂ-ಆ ಸಂವರ್ತನು, ಕಂಡು-ಶವವನ್ನು ನೋಡಿ,

---

ಗಳೇನೂ ಬೇಡ, ಭಗವಂತನನ್ನು ಕುರಿತು ತಪಸ್ಸುಮಾಡಿ ಸದ್ಗತಿಗಾದರೂ ದಾರಿಮಾಡಿಕೊಳ್ಳಬಿಚ್ಛಿಸಿರುವೆನೆಂದು ಬಹುದುಃಖದಿಂದ ನುಡಿದನು || ೨೬ || ಈ ಮಾತುಗಳನ್ನು ನಾರದರು ಕೇಳಿ, ಎಲೈ ಪ್ರಭುವೆ! ನೀನು ಚಿಂತಿಸಬೇಡ, ಯಾಗವು ಸಾಂಗವಾಗುವ ಬಗೆಯನ್ನು ಅರುಹುವೆನು ಕೇಳು. ಪೂರ್ವದಲ್ಲಿ ಜಗತ್ಸೃಷ್ಟಿಯಾಗುವಾಗ ಬ್ರಹ್ಮದೇವರ ಮನಸ್ಸಿನಿಂದ ಅಂಗೀರಸನೆಂಬೋರ್ವ ಋಷಿಯು ಜನಿಸಿದನು. ಆ ಅಂಗಿರಸಮುನಿಗೆ ಬೃಹಸ್ಪತಿ, ಸಂವರ್ತ ಎಂಬಿಬ್ಬರು ಪುತ್ರರಾದರು. ಅವರಲ್ಲಿ ಹಿರಿಯನಾದ ಬೃಹಸ್ಪತಿಯು ದೇವತೆಗಳಿಗೆ ಆಚಾರ್ಯನಾದನು, ಹೀಗಿರುವಲ್ಲಿ ಜ್ಯೇಷ್ಠ ಬೃಹಸ್ಪತಿಗೂ ಕನಿಷ್ಠನಾದ ಸಂವರ್ತನಿಗೂ ದಾಯಭಾಗದ ವ್ಯಾಜ್ಯವು ಪ್ರಬಲವಾಗಿ ಸುರಗುರುವು ಅನುಜನಿಗೆ ಏನನ್ನೂ ದಕ್ಕಲೀಸದೆ ಮಾಡಿ ಬಿಟ್ಟದ್ದರಿಂದ ಸಂವರ್ತನು ಆತನ ಸಹವಾಸವನ್ನೆ ತೊರೆದು ಈಗ ಕಾಶೀಕ್ಷೇತ್ರದೊಳಗೆ ದೇವರಲ್ಲಿ ಪರಮಭಕ್ತನಾದ ಸನ್ಯಾಸಿಯಾಗಿರುವನು. || ೨೭ || ನೀನು ಅಲ್ಲಿಗೆ ಹೋಗಿ ಆ ಮಹರ್ಷಿಯನ್ನು ಸೇವಿಸಿದರೆ ಆತನ ಅನುಗ್ರಹದಿಂದ ನಿನ್ನ ಯಾಗವು ಸಾಂಗವಾಗಿ ನೆರವೇರುವುದು. ಲೇಶವೂ ಚಿಂತೆಗೆ ದಾರಿಯನ್ನು ಕೊಡದೆ ಕಾಶೀಪಟ್ಟಣಕ್ಕೆ ಹೋಗಿ ಆ ಮುನಿಯನ್ನು ಸೇವಿಸು. ಒಂದುವೇಳೆ ನಿನಗೆ ಆ ಮುನಿಯು ಗೊತ್ತಾಗದಿದ್ದರೆ ಬಹು ಗಾಯದಿಂದ ಕೂಡಿದ ಒಂದು ಹೆಣವನ್ನು ತಂದು ಆ ಊರಹೆಬ್ಬಾಗಲಲ್ಲಿಟ್ಟರೆ ಆ ಪುರನಿವಾಸಿಗಳು ಅದನ್ನು ತುಳಿಯುತಲೆಯೆ ತಿರುಗಾಡುವರು. ಆದರೆ ಈ ಸಂವರ್ತನು ಬಹು ವೈರಾಗ್ಯಯು

ಪೊಕ್ಕುಬೆಂಬಿಡದೆನೀಂಬರೆಕಂಡು | ಸಿಕ್ಕಿದೆತ್ತಣವೆಂದುಬಯಿದಪಂಪೊಯಿದಪಂ | ಮುಕ್ಕುಳಿಸಿಮೇಲುಗುಳ್ದಪನದೇನಾದೊಡಂ ಮಾಡುವಂ ನೀನದಕ್ಕೆ || ಪೆಕ್ಕಳಿಸಿಹಿಮ್ಮೆಟ್ಟದಿರ್ದೊಡಾರೊರೆದರೆ | ನ್ನಿರ್ಕೆಯಂಪೇಳೆಂದವಂಕೇಳ್ದೊಡೆನ್ನನಿದಿ | ರಿಕ್ಕಿನಾರದನರುಪಿತಾಂಕಿಚ್ಚಿನೊಳ್ಬಿದ್ದನೆಂದುಸಿರ್ಪೋಗೆಂದನು || ೨೯ || ನಾರದಂತನ್ನೊಳರುಪಿದಬುದ್ಧಿಯಂಕೇಳ್ದು | ಭೂರಮಣನಲ್ಲಿಂದಬೀಳ್ಕೊಂಡುಶಶಿಮೌಳಿ | ತಾರಕಬ್ರಹ್ಮೋಪದೇಶದಿಂಪ್ರಾಣಿಗಳ್ಗಾತ್ಮಸಾಯುಜ್ಯಮೀವ || ಭೂರಿದುರಿತಂಗಳಂಕಂಡಮಾತ್ರದೊಳೆಸಂ | ಹಾರಮಂಮಾಳ್ಪನಿಖಿಳಪ್ರಳಯಬಾಧೆಗ | ಳ್ದೂರಮೆನಿಪವಿಮುಕ್ತಕಾಶಿಗೈತಂದುವಿಶ್ವೇಶಂಗೆಪೊಡಮಟ್ಟನು || ೩೦ || ಬಳಿಕಲ್ಲಿನಾರದಂಪೇಳ್ದಂತೆಭೂವರಂ | ಪೊಳಲಪೆರ್ಬಾಗಿಲ್ಗೆಕುಣಪಮಂತಂದಿರಿಸ | ಲುಳಿಯದೆಡೆಯಾಡುತಿರ್ದುದುಜನಂಕಂಡು

---

ತೊಲಗಿದೊಡೆ-ಅಲ್ಲಿ ನಿಲ್ಲದೆ ಪಕ್ಕಪಕ್ಕಕ್ಕೆ ಹೋದಲ್ಲಿ, ಅರಿದು-ಇದನ್ನು ತಿಳಿದುಕೊಂಡು, ಬೆಂಬಿಡದೆ-ಅವನ ಬೆನ್ನ ಹಿಂದೆಯೇ, ಪೋಗು-ನಡೆ, ಎಂದನು-ಎಂದು ನುಡಿದನು || ೨೮ ||

ಟೀ|| ಪೊಕ್ಕಲ್ಲಿ-ಮರುತ್ತನು ಪ್ರವೇಶಮಾಡುವ ಸ್ಥಳದಲ್ಲೆಲ್ಲಾ, ಪೊಕ್ಕು-ನಡೆದು, ಬೆಂಬಿಡದೆ-ಅವನನ್ನು ಹಿಂಬಾಲಿಸಿ, ನೀಂ-ನೀನು, ಬರೆ-ಐತಂದರೆ, ಕಂಡು-ನೋಡಿ, ಇದು-ಈ, ಸಿಕ್ಕು-ಹಿಂಸೆಯು, ಎತ್ತಣದು-ಎಲ್ಲಿ ಒದಗಿತು? ಎಂದು-ಎಂಬುದಾಗಿ, ಬೈದಪಂ-ಕೆಟ್ಟಮಾತುಗಳನ್ನಾಡುತ್ತಾನೆ. ಪೊಯಿದಪಂ-ಹೊಡೆಯುತ್ತಾನೆ, ಮುಕ್ಕುಳಿಸಿ-ಕ್ಯಾಕರಿಸಿ (ಬಾಯಲ್ಲಿ ನೀರನ್ನು ಕೂಡಿಟ್ಟದ್ದು) ಮೇಲೆ-ನಿನ್ನ ಮೇಲ್ಗಡೆಯಲ್ಲಿ, ಉಗುಳ್ದಪನು-ಉಗುಳುವನು, ಅದೇನಾದೊಡಂ-ಮತ್ತೆ ಯಾವ ಹಿಂಸೆಯನ್ನಾದರೂ, ಮಾಡುವಂ-ಎಸಗುವನು, ನೀ-ನೀನು, ಅದಕ್ಕೆ-ಅವನು ಎಸಗುವ ಕಾರ್ಯಗಳಿಗೆ, ಹೆಕ್ಕಳಿಸಿ-ಬೇಜಾರುಪಟ್ಟು, ಹಿಮ್ಮೆಟ್ಟದಿರ್ದೊಡೆ-ಹಿಂದೆ ಬೀಳದೆ ಅವನನ್ನೇ ಅನುಸರಿಸಿದರೆ, ಎನ್ನ-ನನ್ನ, ಇರ್ಕೆಯಂ-ಸ್ಥಿತಿಯನ್ನು, ಆರು-ಯಾರು, ಒರೆದರು-ಉಸುರಿದರು? ಪೇಳ್-ಹೇಳು, ಎಂದು-ಎಂಬಂತೆ, ಅವಂ-ಆ ಸಂವರ್ತನು, ಕೇಳ್ದೊಡೆ-ಪ್ರಶ್ನೆಯಂಗೈದರೆ, ಎನ್ನನು-ನನ್ನನ್ನು, ಇದಿರಿಕ್ಕಿ-ಎದುರಾಳಾಗಿ ಮಾಡಿ, ನಾರದನು-ನಾರದಮಹರ್ಷಿಯು, ಅರುಪಿ-ತಿಳಿಸಿ, ತಾಂ-ಆತನು, ಕಿಚ್ಚಿನೊಳು-ಅಗ್ನಿಯಲ್ಲಿ, ಬಿದ್ದನು-ಹೊಕ್ಕನು, ಎಂದು-ಎಂಬದಾಗಿ, ಉಸಿರು-ಅರುಹು, ಪೋಗು-ಹೋಗು, ಎಂದನು-ಎಂಬದಾಗಿ ಹೇಳಿದನು. || ೨೯ ||

ಟೀ|| ಭೂರಮಣನು-ಭೂಕಾಂತನಾದ ಮರುತ್ತನು, ತನ್ನೊಳು - ತನ್ನೊಂದಿಗೆ, ನಾರದಂ - ನಾರದಮುನಿಯು, ಅರುಪಿದ-ವಿವರವಾಗಿ ಬೋಧಿಸಿದ, ಬುದ್ಧಿಯಂ-ಪ್ರತಿಜ್ಞೆಯನ್ನು, ಕೇಳ್ದು-ಲಾಲಿಸಿ, ಅಲ್ಲಿಂದ-ಆ ಎಡೆಯಿಂದ, ಬೀಳ್ಕೊಂಡು-ಹೊರಟು, ಶಶಿಮೌಳಿ-ಚಂದ್ರಚೂಡನಾದ ಹರನು, ತಾರಕ-ಸಂಸಾರಸಾಗರದಿಂದ ಬಿಡಿಸತಕ್ಕ, ಬ್ರಹ್ಮ-ಬ್ರಹ್ಮನ ಸಂಬಂಧವಾದ, ಉಪದೇಶದಿಂದ-ತಿಳಿವಳಿಕೆಯಿಂದ, ಪ್ರಾಣಿಗಳ್ಗೆ-ಚೇತನ ವರ್ಗಗಳಿಗೆ, ಆತ್ಮಸಾಯುಜ್ಯಂ-ತನ್ನೊಂದಿಗೆ ಸೇರಿಸಿಕೊಳ್ಳುವಿಕೆಯನ್ನು, ಈವ-ದಯಪಾಲಿಸುವ, ಭೂರಿ-ಹೆಚ್ಚಾದ, ದುರಿತಂಗಳಂ-ಪಾತಕಗಳನ್ನು, ಕಂಡಮಾತ್ರದೊಳು-ನೋಡಿದ ಮಾತ್ರವೇ, ಸಂಹಾರಮಂ-ಹೋಗಲಾಡಿಸುವಿಕೆಯನ್ನು, ಮಾಳ್ಪ-ಮಾಡುವ, ನಿಖಿಳ-ಎಲ್ಲಾ, ಪ್ರಳಯ-ಕಡೆಗಾಲದ, (ವಿನಾಶಕಾಲದ), ಬಾಧೆಗಳು-ಹಿಂಸೆಗಳು, ದೂರಮೆನಿಪ-ಒದಗದೆ ಇರತಕ್ಕ, ಅವಿಮುಕ್ತ-ಮಹಾಪ್ರಳಯದಲ್ಲಿಯೂ, ತನ್ನಿಂದ ದೂರ ಮಾಡದೆ ಅತ್ಯಂತ ಪರಿಶುದ್ಧವಾದ, (ಅವಿಮುಕವೆಂಬ) ಕಾಶಿಗೆ-ಕಾಶೀಕ್ಷೇತ್ರಕ್ಕೆ, ಐತಂದು-ಪ್ರವೇಶನಾಡಿ, ವಿಶ್ವೇಶಂಗೆ-ವಿಶ್ವೇಶ್ವರ ಸ್ವಾಮಿಗೆ, ಪೊಡಮಟ್ಟನು-ಸಾಷ್ಟಾಂಗ ಪ್ರಣಾಮವಂ ಮಾಡಿದನು || ೩೦ ||

ಟೀ|| ಬಳಿಕ-ಅನಂತರ, ಅಲ್ಲಿ-ಕಾಶೀನಗರದಲ್ಲಿ, ನಾರದಂ-ನಾರದ ಮುನೀಂದ್ರನು, ಪೇಳ್ದಂತೆ-ಹೇಳಿದ ಹಾಗೆಯೆ, ಭೂವರಂ-ಪೃಥ್ವೀಶ್ವರನಾದ ಮರುತ್ತನು, ಪೊಳಲ-ಊರಿನ, ಪೆರ್ಬಾಗಿಲ್ಗೆ-ಹೆಬ್ಬಾಗಲಿಗೆ, ಕುಣಪಮಂ-ಶವವನ್ನು, ತಂದು-

---

ದ್ಧಿಯಿಂದ ಸ್ವಾಮಿಭಕ್ತಿ ಪರಾಯಣನಾಗಿರುವುದರಿಂದ ಈ ಹೆಣವನ್ನ ನೋಡಿ ಹಿಂದಕ್ಕೆ ಹೊರಟು ಹೋಗುವನು. ಅವನನ್ನೇ ಸಂವರ್ತನೆಂದರಿತು ನೀನು ಅವನನ್ನು ಹಿಂಬಾಲಿಸು || ೨೮ || ನೀನು ಬೆನ್ನಬಿಡದೆ ಬರುತ್ತಿರುವದನ್ನು ನೋಡಿ ಆ ಮುನಿಯು ನಿನ್ನನ್ನು ಬಯ್ದು, ಹೊಡೆದು, ಉಗುಳಿ, ಬೇಸರದ ನುಡಿಗಳನ್ನಾಡಿ ನಾನಾಪ್ರಕಾರವಾಗಿ, ಹಿಂಸಿಸುವನು ನೀನು ಯಾವುದಕ್ಕೂ ಹಿಮ್ಮೆಟ್ಟದೆ ಆತನನ್ನೆ ಅನುಸರಿಸಿ ನಡೆದರೆ ನಿನಗೆ ಪ್ರಸನ್ನನಾಗಿ ನಾನು ಇಲ್ಲಿರುವುದನ್ನು ನಿನಗೆ ತಿಳಿಸಿದನನು ಯಾರೆಂದು ಕೇಳುವನು. ಆಗ ನೀನು ನಾರದ ಋಷಿಯು ಹೇಳಿ ಬೆಂಕಿಯಲ್ಲಿ ಬಿದ್ದುಹೋದನೆಂದು ಆತನೊಂದಿಗೆ ಹೇಳಿಬಿಡು. || ೨೯ || ಎಂದು ನುಡಿದನು. ಈ ರೀತಿಯಲ್ಲಿ ಹೇಳಿದ ನಾರದರ ಬುದ್ಧಿವಾದವನ್ನು ಶಿರಸ್ಸಿನಲ್ಲಿ ಧರಿಸಿದವನಾಗಿ ಅಲ್ಲಿಂದ ಹೊರಟು ಕಾಶಿಯನ್ನು ಹೊಕ್ಕು ಚಂದ್ರಶೇಖರನೂ, ಪ್ರಜೆಗಳನ್ನು ಸಂಸಾರಸಾಗರದಿಂದ ಉತ್ತೀರ್ಣರನ್ನಾಗಿಮಾಡಿ ತನ್ನೊಂದಿಗೆ ಸೇರಿಸಿಕೊಂಡು ಮೋಕ್ಷಸುಖವನ್ನೀಯುವವನೂ, ಭಕ್ತರ ಪಾಪವನ್ನೆಲ್ಲಾ ಹೆಸರೇ ಇಲ್ಲದಂತೆ ಮಾಡತಕ್ಕವನೂ, ಪರಿಶುದ್ಧಾಂತರಂಗನೂ ಆದ ವಿಶ್ವೇಶ್ವರಮೂರ್ತಿಗೆ ಸಾಷ್ಟಾಂಗ ದಂಡಪ್ರಣಾಮವಂಗೈದು || ೩೦ || ಬಳಿಕ ಎಲ್ಲೆಲ್ಲಿ ನೋಡಿದರೂ ಸಂವರ್ತ

ಸಂವರ್ತನತ್ತಲಿತೊಲಗಲು | ಬಳಿವಿಡಿದುಪೋದೊಡವನೀಶನಂಬೈದುಪೊ | ಯ್ದಳಲಿಸಿಕನಲ್ದುಗುಳ್ದೋಕರಿಸಿನೂಕಲದ | ಕಳುಕದಿದಿರ್ದೊಡೆತಾನದಾರೆಂದು ಬಂದೆನೀನೆಂದುನೃಪನಂ ಕೇಳ್ದನು || ೩೧ || ಸುರಪುರೋಹಿತನನುಜನಾಂಗಿರಸಸೂನುಮುನಿ | ವರಮೌಳಿಸಂವರ್ತನೆಂದರಿದುಬಂದುನಿ | ನ್ನಿರವಂಪರೀಕ್ಷಿಸಿದೆನೆಂದು ನೃಪನು ಸುರಲನರಾರ್ನಿಗೆ ಪೇಳ್ದರೆನಲು || ಪರಮರ್ಷಿ ನಾರದಂತನಗೊರೆದುಕೂಡೆತಾ | ನುರಿಯೊಳ್ಪ್ರವೇಶಿಸಿದನೆನೆತಾಪಸಂತಿಳಿದು | ಕರುಣದಿಂದೇತಕ್ಕೆತಂದೆ ನೀನಾರೆನ್ನೊಳಹ ಕಜ್ಜಮೇನೆಂದನು||೩೨||ಆದೊಡೆಮರುತ್ತನಾನಾವಿಕ್ಷಿನೃಪಸುತಂ| ಮೇದಿನಿಯೊಳೆನಗೆಹಯಮೇಧಮಂಮಾಡಿಸೆಂದಾದರಿಸಿನಿಮ್ಮ

---

ತೆಗೆದುಕೊಂಡು ಬಂದು, ಇರಿಸಲು_ಇಡಲು, ಉಳಿಯದೆ_ಬಿಡದೆ, ಜನಂ_ಪ್ರಜೆಗಳು, ಎಡೆಯಾಡುತಿರ್ದುದು-ಓಡಾಡುತ್ತಲೆ ಇದ್ದರು, ಸಂವರ್ತನು-ಸಂವರ್ತನೆಂಬ ರುಷಿಯು, ಕಂಡು-ಈ ಹೆಣವನ್ನು ನೋಡಿ, ಅತ್ತಲೆ_ಆ ಕಡೆಗೇ, ತೊಲಗಲು-ಹಿಂದಿರುಗಲು, ಬಳಿವಿಡಿದು-ಅವನನ್ನೇ ಅನುಸರಿಸಿ, ಪೋದೊಡೆ - ಮರುತ್ತನೂ ಹೋಗಲು, ಅವನೀಶನಂ-ಆ ರಾಯನನ್ನು, ಬಯ್ದು-ದುರ್ಭಾಷೆಗಳನ್ನು ನುಡಿದು, ಪೊಯ್ದು-ಬಡಿದು, ಅಳಲಿಸಿ_ದುಃಖಪಡಿಸಿ, ಕನಲ್ದು-ಸಿಟ್ಟುಮಾಡಿಕೊಂಡು, ಓಕರಿಸಿ_ಬಳಭಾಗದ ಎಂಜಲನ್ನೆಲ್ಲಾ ಒಟ್ಟುಗೂಡಿಸಿ, ಉಗುಳ್ದು-ಉಗಳಿಬಿಟ್ಟು, ನೂಕಲು_ದಬ್ಬಲಾಗಿ, ಅದಕೆ-ಆ ಬಾಧೆಗಳಿಗೆ, ಅಳುಕದೆ-ದಿಗಲು ಬೀಳದೆ, ಇರ್ದೊಡೆ_ಇರುವಲ್ಲಿ, ತಾನು_ನಾನು, ಅದು ಆರು_ಅದು ಯಾರು, ಎಂದು-ಎಂಬದಾಗಿ, ನೀನು, ಬಂದೆ_ಐತಂದೆ? ಎಂದು-ಎಂಬದಾಗಿ, ನೃಪನಂ-ಮರುತ್ತರಾಜನನ್ನು, ಕೇಳ್ದನು-ಪ್ರಶ್ನೆಮಾಡಿದನು || ೩೧ ||

ಟೀ|| ಸುರ-ದೇವತೆಗಳಿಗೆ, ಪುರೋಹಿತನ-ಆಚಾರ್ಯನಾದ ಬೃಹಸ್ಪತಿಯ, ಅನುಜನು - ಸಹೋದರನು, ಮತ್ತು, ಅಂಗೀರಸ_ಅಂಗೀರಸನ, ಸೂನು_ಪುತ್ರನೂ, ಮುನಿವರ-ರುಷಿವರ್‍ಯರಲ್ಲಿ, ಮೌಳಿ-ಶ್ರೇಷ್ಠನೂ ಆಗಿರುವ, ಸಂವರ್ತನೆಂದು-ಸಂವರ್ತನೆಂಬುದಾಗಿ, ಅರಿದು-ತಿಳಿದು, ಬಂದು_ಐತಂದು, ನಿನ್ನ-ನಿನ್ನಯ, ಇರವಂ-ಸ್ಥಿತಿಯನ್ನು, ಪರೀಕ್ಷಿಸಿದೆನು-ಪರೀಕ್ಷೆ ಮಾಡಿದೆನು, ಎಂದು_ಎಂಬುದಾಗಿ, ನೃಪನು-ಮರುತ್ತರಾಯನು, ಉಸುರಲು-ಅರುಹಲು, ನಿನಗೆ, ಆರು-ಯಾರು, ಪೇಳ್ದರು-ಉಸುರಿದರು, ಎಂದು-ಎಂಬದಾಗಿ, ಎನಲು-ಪ್ರಶ್ನೆಮಾಡಲು, ನೃಪನು-ಅರಸು, ಪರಮರ್ಷಿ-ಉತ್ತಮನಾದ, ನಾರದಂ-ನಾರದ ಮಹಾಮುನಿಯು, ತನಗೆ-ನನಗೆ, ಒರೆದು-ಹೇಳಿ, ಕೂಡೆ-ತಕ್ಷಣವೆ, ತಾ-ತಾನು, ಉರಿಯೋಳ್-ಅಗ್ನಿಯಲ್ಲಿ, ಪ್ರವೇಶಿಸಿದನು-ಹೋಗಿ ಸೇರಿದನು. ಎನೆ-ಎಂದು ನಡಿಯಲು, ತಾಪಸಂ-ಸಂವರ್ತನು, ತಿಳಿದು-ತಿಳಿದುಕೊಂಡು, ಕರುಣದಿಂ-ವಿಶ್ವಾಸದಿಂದ, ಏತಕೆ-ಯಾವ ಕಾರ್ಯಕ್ಕಾಗಿ, ಐತಂದೆ-ಬಂದೆ, ನೀನು, ಆರು-ಯಾರು, ಎನ್ನೊಳು-ನನ್ನೊಂದಿಗೆ, ಅಹ-ಇರುವ, ಕಜ್ಜಂ-ಕಾರ್ಯವು, ಏನು-ಯಾವದು, ಎಂದನು_ಎಂದು ಕೇಳಿದನು || ೩೨ ||

ಟೀ|| ಆದೊಡೆ_ಹಾಗಾದರೆ, ಆನು_ನಾನು, ಆ ವಿಕ್ಷಿನೃಪ-ಆ ವಿಕ್ಷಿ ಎಂಬರಸನ, ಸುತಂ - ತನುಜನಾದ, ಮರುತ್ತನು-ಮರುತ್ತನೆಂಬುವನು, ಮೇದಿನಿಯೋಳ್-ಪ್ರಪಂಚದಲ್ಲಿ, ಎನಗೆ-ನನಗೆ, ಹಯಮೇಧಮಂ-ಅಶ್ವಮೇಧಯಾಗವನ್ನು, ಮಾಡಿಸಲು-ನೆರವೇರಿಸಲು, ಆಚಾರ್ಯನಾಗು, ಎಂದು_ಎಂಬುದಾಗಿ, ಆದರಿಸಿ-ಉಪಚರಿಸಿ, ನಿಮ್ಮ-ಅಣ್ಣನಂ-ಅಗ್ರಜನನ್ನು, ಕೇಳ್ವೊಡೆ-ಕೇಳಲಾಗಿ, ಆತಂ-ಆ ಸುರಗುರುವು, ತಿರಸ್ಕರಿಸಿದೊಡೆ_ಉಪೇಕ್ಷೆಮಾಡಿಬಿಡಲು, ನಿನ್ನನು-ನಿನ್ನಹೆಸರನ್ನು, ಆದೇವ

---

ಮುನಿ ಇರುವುದು ಗೋಚರವಾಗದಿರಲು ನಾರದೋಕ್ತಿಯನ್ನು ಸ್ಮೃತಿಪಥಕ್ಕೆ ತಂದು ಕೂಡಲೆ ಬಹುವ್ರಣದಿಂದ ಕೂಡಿದ ಶವವೊಂದನ್ನು ಊರಮುಂದಿನ ದೊಡ್ಡ ಬಾಗಿಲಿನಲ್ಲಿಟ್ಟನು. ಪ್ರಜೆಗಳೆಲ್ಲಾ ಈ ಹೆಣವನ್ನು ನೋಡಿಕೊಂಡು ಆ ಕಡೆಗೂ ಈ ಕಡೆಗೂ ನಡೆಯುತ್ತಲೇ ಇದ್ದರು. ಮರುತ್ತನು ಸಂವರ್ತಮುನಿ ಇಂಥವನೆಂದು ತಿಳಿಯದೆ ಯೋಚಿಸುತ್ತಿರುವಲ್ಲಿ ಒಬ್ಬಾನೊಬ್ಬ ತಪಸ್ವಿಯು ಬಂದು ಈ ಹೆಣವನ್ನು ನೋಡಿ ಹಿಂದ ಹಿಂದಕ್ಕೆ ಜರುಗಿದ್ದನ್ನು ಕಂಡಕೂಡಲೆ ಈತನೇ ಸಂವರ್ತನೆಂದು ನಂಬಿ ಆ ಮುನಿಯನ್ನೆ ಅನುಸರಿಸಿ ನಡೆದನು, ಆ ತಪಸ್ವಿಯಾದರೋ ತನ್ನ ಬೆನ್ನಹಿಂದೆ ಬರುತ್ತಲಿರುವ ಮಾನವನನ್ನು ನೋಡಿ ಬೈದು ಹೊಡೆದು ಕೇಕರಿಸಿ ಉಗುಳಿ ನಾನಾದುರ್ಭಾಷೆಗಳನ್ನಾಡಿದರೂ ಯಾವುದಕ್ಕೂ ಬೇಸರಪಡದೆ ಹಿಂಬಾಲಿಸುವ ಮನುಷ್ಯನನ್ನು ಕುರಿತು ಸಂವರ್ತನು ಎಲೈ ಮಾನವನೇ ನಾನು ಯಾರೆಂದು ನನ್ನ ಬಳಿಗೆ ಬಂದಿರುವೆ? ಎಂದು ಕೇಳಿದನು || ೩೧ || ಈ ಮಾತನ್ನು ಕೇಳಿದ ಮರುತ್ತರಾಯನು ಮುನಿವರ್‍ಯನನ್ನು ಕುರಿತು ಎಲೈ ತಾಪಸರೇ! ನಿಮ್ಮನ್ನು ಅಂಗೀರಸ ಪುತ್ರರೆಂದೂ ಸುರಾಚಾರ್‍ಯರ ಅನುಜರೆಂದೂ ಅರಿತು ನಿಮ್ಮ ಮರೆಹೊಕ್ಕಿದೇನೆ. ನೀವು ಇಲ್ಲಿರುವುದನ್ನು ನಾರದ ರುಷಿಯು ನನಿಗೆ ತಿಳಿಸಿ ಕೂಡಲೆ ಬೆಂಕಿಯಲ್ಲಿ ಬಿದ್ದು ಪ್ರಾಣವನ್ನು ಕಳಕೊಂಡನು, ಎಂದು ನುಡಿದ ಮರುತ್ತನ ಮಾತನ್ನು ಕೇಳಿ ಸಂವರ್ತನಿಗೆ ಬಹು ಕರುಣವುಂಟಾಯಿತು. ಆಗ ಸಂವರ್ತನು ಮರುತ್ತನನ್ನು ಕುರಿತು ಎಲೈ ನೀನು ಯಾರು? ಇಲ್ಲಿಗೆ ಏತಕ್ಕೆ ಬಂದೆ? ನನ್ನಿಂದ ನಿನಗೆ ಆಗಬೇಕಾದದ್ದೇನಿರುವುದು? ಎಂದು ಪ್ರಶ್ನೆಯಂ ಮಾಡಿದ ಮುನಿಯನ್ನು ಕುರಿತು ಎಲೈ ತಪೋನಿಧಿ ||೩೨||

ಜ್ಞನಂಕೇಳ್ದೊಡಾತಂತಿರಸ್ಕರಿಸಿದೊಪೆನಿನ್ನನು|| ಆದೇವಮುನಿಪೇಳ್ದೊಡೈತಂದೆನೆನ್ನಧ್ವ | ರೋದಯಕೆನೀನಲ್ಲದನ್ಯರಂಕಾಣೆನೆಂ | ದಾದಿನಪಕುಲದರಸನಂದುಸಂವರ್ತನಂಬೇಡಿಕೊಳಲಿಂತೆಂದನು || ೩೪ || ಲೇಸಾದುದೆಲೆರಾಯನಿನ್ನಯಜ್ಞಕ್ಕೆತಾ | ನೋಸರಿಸುವನನಲ್ಲಪುರುಡಿಂಮಮಾಗ್ರಜಂ | ವಾಸವನಮುಖದಿಂದೊಡಂಬಡಿಸಿಮುಖಕೆತಾನಧ್ಯಕ್ಷನೆಂದು || ಆಸೆಯಿಂಕೇಳ್ದೊಡೇಗೈವೆನೀಂಪೇಳೆನಲುಭೂಸುರನವಧೆಯುಗತಿತನಗಹುದುನಿಮ್ಮಂ | ಪ್ರಯಾಸದಿಂಬಿಟ್ಟೊಡೆಂದರಸಂಪ್ರತಿಜ್ಞೆಯಂಮಾಡಲವನಿಂತೆಂದನು || ೩೪ || ಯಾಜಕಂತಾನಪ್ಪೆನಧ್ವರಕೆನೀನಿಂದು | ರಾಜಿಪಹಿಮಾಲಯದೊಳೆಸವರಜಿತಾದ್ರಿಯೊಳ್ | ತೇಜೋಮಯಂ ಸದಾಶಿವನನಿಪ್ಪನಾತನಪದಾಬ್ಜಮಂಪೋಗಿಕಂಡು || ಪೂಜೆಗೈದೊಡೆಕನಕರಾಶಿಗಳನಿತ್ತಪಂ | ಮೂಜಗಂದಣಿವಂತೆವರಮ

---

ಮುನಿ-ಆ ನಾರದ ಮಹರ್ಷಿಯು, ಪೇಳ್ದೊಡೆ-ತಿಳಿಸಲು, ಐತಂದೆನು-ನಿನ್ನ ಮರೆಹೊಕ್ಕೆನು, ಎನ್ನ-ನಾನು ಮಾಡುವ, ಅಧ್ವರೋದಯಕೆ-ಯಾಗಾರಂಭಕ್ಕೆ, ನೀನು, ಅಲ್ಲದೆ-ಹೊರತು, ಅನ್ಯರಂ-ಇನ್ನುಯಾರನ್ನು, ಕಾಣೆನು-ನೋಡಲಿಲ್ಲ, ಎಂದು-ಎಂಬತೆರನಾಗಿ. ಆದಿನಪಕುಲದ-ಆ ಸೂರ್ಯವಂಶದಲ್ಲಿ ಹುಟ್ಟಿದ, ಅರಸನು-ಮರುತ್ತನೆಂಬುವನು, ಅಂದು-ಆ ಕಾಲದಲ್ಲಿ, ಸಂವರ್ತನಂ-ಸಂವರ್ತ ಮುನಿಯನ್ನು, ಬೇಡಿಕೊಳಲು-ಕೇಳಿಕೊಳ್ಳಲಾಗಿ, ಇಂತು-ಮುಂದೆ ಹೇಳುವಂತೆ, ಎಂದನು-ನುಡಿದನು || ೩೩ ||

ಟೀ|| ಎಲೆರಾಯ-ಎಲೈ ಅರಸೇ, ಲೇಸು-ಮೇಲ್ಮೆಯು, ಆದುದು-ಆಯಿತು, ನಿನ್ನ-ನೀನು ಮಾಡುವ, ಯಜ್ಞಕ್ಕೆ-ಯಾಗಕ್ಕೆ, ತಾನು-ನಾನು, ಓಸರಿಸುವನು-ಉಪೇಕ್ಷೆಮಾಡತಕ್ಕವನು, ಅಲ್ಲ-ಎಂದಿಗೂ ಆಗುವದಿಲ್ಲ. ಪುರುಡಿಂ - ಅಸೂಯೆಯಿಂದ, ಮಮ-ನನ್ನ, ಅಗ್ರಜಂ-ಜೇಷ್ಠಭ್ರಾತನಾದ ಗುರುವು, ಇಂದ್ರನ-ವಾಸವನ, ಮುಖದಿಂದ-ಮೂಲಕ, ಒಡಂಬಡಿಸಿ-ನಿನ್ನನ್ನು ಒಪ್ಪಿಸಿ, ಮುಖಕೆ-ಯಾಗಕ್ಕೆ, ಅಧ್ಯಕ್ಷನು-ಆಚಾರ್ಯನು, ಅಪ್ಪೆನು-ಆಗುತ್ತೇನೆ, ಎಂದು-ಎಂಬದಾಗಿ, ಆಶೆಯಿಂ-ಅಭಿಲಾಷೆಯಿಂದ, ಕೇಳ್ದೊಡೆ-ಪ್ರಶ್ನೆಮಾಡಿದರೆ, ನೀಂ-ನೀನು, ಏಗೈವೆ-ಏನುಮಾಡುತ್ತಿ, ಪೇಳು-ಹೇಳು, ಎನಲ್-ಎಂದು ಕೇಳಲು, (ಮರುತ್ತನು) ನಿಮ್ಮಂ-ನಿಮ್ಮನ್ನು, ಬಿಟ್ಟೊಡೆ-ಬಿಟ್ಟಹಾಗಾದರೆ, ತನಿಗೆ-ನನಿಗೆ, ಭೂಸುರನವಧೆಯ-ಬ್ರಹ್ಮಹತ್ಯಾದೋಷದ, ಗತಿಯು-ಪಾಪಾತಿಶಯವು, ಅಹುದು-ಆಗುತ್ತದೆ, ಎಂದು-ಎಂಬದಾಗಿ, ಅರಸಂ-ದೊರೆಯು, ಪ್ರತಿಜ್ಞೆಯಂ-ಪ್ರಮಾಣವನ್ನು, ಮಾಡಲು-ಎಸಗಲು, ಅವನು-ಆ ಸಂವರ್ತನು, ಇಂತು-ಮುಂದೆ ಹೇಳುವಂತೆ, ಎಂದನು-ನುಡಿದನು || ೩೪ ||

ಟೀ|| ತಾನು-ನಾನು, ಅಧ್ವರಕೆ-ಯಾಗಕ್ಕೆ, ಯಾಜಕಂ-ಪುರೋಹಿತನು, ಆಪ್ಪೆನು-ಆಗುವೆನು, ನೀನು, ಇಂದು-ಈಗ, ರಾಜಿಪ-ಥಳಥಳಿಸುವ, ಹಿಮಾಲಯದೊಳು-ಹಿಮವತ್ಪರ್ವತದಲ್ಲಿ, ಎಸೆವ - ಹೊಳೆಯುತ್ತಿರುವ, ರಜಿತಾದ್ರಿಯೊಳು-ಕೈಲಾಸಗಿರಿಯಲ್ಲಿ, ತೇಜೋಮಯಂ-ಕಾಂತಿವಿಶಿಷ್ಟನಾದ, ಸದಾಶಿವನು-ಪರಮೇಶ್ವರನು, ಇಪ್ಪನು-ಇದಾನೆ, ಆತನ-ಆ ಪರಮಾತ್ಮನ, ಪದಾಬ್ಜಮಂ-ಅಡಿದಾವರೆಯನ್ನು, ಪೋಗಿ-ಅಲ್ಲಿಗೆ ಹೋಗಿ, ಕಂಡು-ಈಕ್ಷಿಸಿ, ಪೂಜೆಗೈದೊಡೆ-ಪೂಜೆ ಮಾಡಿದರೆ, ಕನಕರಾಶಿಗಳನು-ಭಂಗಾರದ ಗುಂಪನ್ನು (ರಾಶಿಯನ್ನು), ಇತ್ತಪಂ-ದಯಪಾಲಿಸುತ್ತಾನೆ, ಮೂಜಗಂ-ಮೂರು ಲೋಕವು,

---

ನನ್ನ ವೃತ್ತಾಂತವನ್ನು ಲಾಲಿಸಿ, ನನ್ನ ಹೆಸರು ಮರುತ್ತನು, ಸೂರ್ಯವಂಶದಲ್ಲಿ ಹೆಸರುಗೊಂಡಿದ್ದ ಆ ವಿಕ್ಷಿಮಹಾರಾಯನ ಕುವರನು. ಈ ಭೂಮಂಡಲದಲ್ಲಿ ನಾನು ಅಶ್ವಮೇಧಯಾಗವಂ ಮಾಡಲೆಳಸಿ ನಿಮ್ಮ ಅಗ್ರಜನಾದ ಸುರಾಚಾರ್ಯನನ್ನು ಪುರೋಹಿತನಾಗೆಂದು ಕೇಳಿಕೊಳ್ಳಲು ಭೂಲೋಕದಲ್ಲಿ ಮಾನವರು ಮಾಡುವ ಯಾಗಕ್ಕೆ ನಾನು ಬರುವುದಿಲ್ಲವೆಂದು ತಿರಸ್ಕರಿಸಿಬಿಟ್ಟನು. ಆತನ ತಿರಸ್ಕಾರದಿಂದ ಭಗ್ನಮನಸ್ಕನಾಗಿ ಹೊರಟು ಬರುತ್ತಿದ್ದಾಗ ಪರಮಋಷಿಯಾದ ನಾರದರು ಎದುರಾಗಿ ನಿಮ್ಮ ವೃತ್ತಾಂತವನ್ನು ತಿಳಿಸಿದ್ದರಿಂದ ನಿಮ್ಮನ್ನು ಮರೆಬಿದ್ದಿರುವೆನು. ನಾನು ಮಾಡಬೇಕೆಂದಿರುವ ಅಶ್ವಮೇಧವನ್ನು ನೆರವೇರಿಸಲು ನೀವು ಪುರೋಹಿತರಾಗಿ ಕಾಪಾಡಬೇಕು. ಎಂದು ಕೇಳಿಕೊಂಡ ಮರುತ್ತನನ್ನು ನೋಡಿ ಸಂವರ್ತನು || ೩೩ || ಎಲೈ ಅರಸೆ, ನೀನು ಎಸಗುವ ಯಜ್ಞವನ್ನು ನಾನು ಮಾಡಿಸಲು ಸಿದ್ಧನಾಗಿರುವೆನು. ಆದರೆ ನಮ್ಮ ಅಣ್ಣನಾದ ಬೃಹಸ್ಪತಿಯು ಈ ಸುದ್ದಿಯನ್ನರಿತು ಹೊಟ್ಟೆಕಿಚ್ಚಿನಿಂದ ತಾನೆ ಪುರೋಹಿತನಾಗುವೆನೆಂದು ದೇವೇಂದ್ರನಿಂದ ನಿನಿಗೆ ಹೇಳಿಸಿದರೆ ಆಗ ನೀನು ಏನು ಮಾಡುತ್ತಿ? ಎಂದು ಕೇಳಿದನು. ಈ ಮಾತನ್ನು ಮರುತ್ತನು ಕೇಳಿ, ಎಲೈ ತಾಪಸೋತ್ತಮರೆ, ನಾನು ಮಾಡಿದ ಪ್ರತಿಜ್ಞೆಯನ್ನು ಎಂದೆಂದಿಗೂ ಮೀರುವುದಿಲ್ಲ. ಹಾಗೆ ಮೀರುವ ಕಾಲವು ಸಂಘಟಿಸಿದರೆ ಬ್ರಹ್ಮಹತ್ಯಾದೋಷವು ನನಿಗೆ ಸಿದ್ಧವಾಗಲೆಂದು ಕ್ರೂರ ಶಪಥನಂಗೈದ ರಾಯನನ್ನು ಕುರಿತು ಸಂವರ್ತನು || ೩೪ || ಎಲೈ ಅರಸೆ, ಹಾಗಾದರೆ ನಾನು ಕ್ರತುವನ್ನು ಮಾಡಿಸಲು ಸಿದ್ಧನಾಗಿರುವೆನು. ಹಿಮಾಲಯ ಪರ್ವತದ ಒಂದು ಭಾಗದಲ್ಲಿ ಕೈಲಾಸಗಿರಿ ಎಂಬ ಬೆಳ್ಳಿಯ ಬೆಟ್ಟವಿರುವುದು. ಆ ಪರ್ವತದಲ್ಲಿ ತೇಜೋವಿಶಿಷ್ಟನಾದ ಪರಮೇಶ್ವರನಿರುವನು, ಅಲ್ಲಿಗೆ ನೀನು ಹೋಗಿ ಪಾವನ ಮೂರ್ತಿಯೂ ಇಷ್ಟಾರ್ಥದಾಯಕನೂ ಆದ ಈಶ್ವರನನ್ನು ಸೇವಿಸಿದರೆ ನಿನಿಗೆ ಅಪರಿಮಿತವಾದ ಐಶ್ವರ್ಯವನ್ನೂ ನವರತ್ನಗಳ ರಾಶಿಯನ್ನೂ ದಯಪಾಲಿ

ಖಂನಡೆವುದೆನ | ಲಾಜನಪನಲ್ಲಿಗೈತಂದುಗಿರಿಜೇಶನಂಪ್ರಾರ್ಥಿಸಿದನರ್ಥಿಯಿಂದ || ೩೫ || ತರುಣೇಂದುಮೌಳಿಯಂಪ್ರಾರ್ಥಿಸಿದೊಡಿತ್ತನತಿ | ಕರುಣದಿಂದಪರಿಮಿತವಸ್ತುವಂಬಳಿಕಹಿಮ | ಗಿರಿತಟದೊಳಾನೃಪಂಕಟ್ಟಿಸಿದನಧ್ವರಸುಶಾಲೆಯಂಕನಕದಿಂದ || ವರವೈದಿಕಪ್ರಮಾಣದೊಳಂದುವಿಪ್ರರಂ | ಕರಸಿಸಂವರ್ತನಂಕೂಡಿಕೊಂಡುತ್ಸವದೊ | ಳರಸಂಮಹಾಕ್ರತುಪ್ರಾರಂಭದೋಳ್ಮೆರೆದನೈಶ್ವರ್ಯವಿಭವದಿಂದ || ೩೬ || ಕೇಳ್ದಂಬೃಹಸ್ಪತಿಮರುತ್ತನಮಖೋದಯವ | ತಾಳ್ದನತಿಚಿಂತೆಯಂ ಮುಂದೆಧನಯುತನಾಗಿ | ಬಾಳ್ದಪಂಸಂವರ್ತನೆಂಬವುರುಡಿಂದುಬ್ಬೆಗಂಬಟ್ಟುದಿವಿಜಪತಿಗೆ || ಪೇಳ್ದೊಡವನಗ್ನಿಯಂಕಳುಪಿದೊಡೆದೀಕ್ಷೆಯಂ | ತಾಳ್ದೆಸೆವಭೂಪನೆಡೆಗೈತಂದುವೃತ್ರನಂ | ಸೀಳ್ದವಂತನ್ನೊಳಾಡಿದಮಾತನಿಂತೆಂದುವಿವರಿಸಿದನಾಕೃಶಾನು ||೩೭|| ರಾಯಕೇಳಿಂದ್ರನಾಡಿದಮಾತನೊರೆವೆನಾ | ನೀಯಜ್ಞಮಂಬೃಹಸ್ಪತಿಯಕೈಯಿಂತೊಡಗಿಸಾಯಸಂಬಟ್ಟುಸಂಪ

---

ದಣಿವಂತೆ-ಸಂತುಷ್ಟಿಯನ್ನೈದುವಂತೆ, ವರ-ಉತ್ತಮವಾದ, ಮಖಂ-ಯಾಗವು, ನಡೆವುದು-ಈಡೇರುವುದು, ಎನಲು-ಎಂದು ನುಡಿಯಲು, ಜನಪನು-ಮರುತ್ತರಾಯನು. ಅಲ್ಲಿಗೆ-ಆ ಕೈಲಾಸ ಶಿಖರಕ್ಕೆ, ಐತಂದು-ಬಂದು, ಗಿರಿಜೇಶನಂ-ಪರ್ವತ ರಾಜನ ಮಗಳಾದ ಪಾರ್ವತೀಪತಿಯನ್ನು, ಅರ್ಥಿಯಿಂದ-ಆಸಕ್ತಿಯಿಂದ, ಪ್ರಾರ್ಥಿಸಿದನು-ಪೂಜೆಮಾಡಿದನು ||೩೫||

ಟೀ|| ತರುಣ-ಹಸುಳೆಯಾದ, ಇಂದು-ಹಿಮಾಂಶುವೇ, ಮೌಳಿಯಂ-ಶಿರೋಭೂಷಣವಾಗಿವುಳ್ಳ ಪರಮೇಶ್ವರನನ್ನು, ಪ್ರಾರ್ಥಿಸಿದೊಡೆ-ಪೂಜೆಮಾಡಲಾಗಿ, ಅತಿ ಕರುಣದಿಂದ-ಪ್ರೀತ್ಯತಿಶಯದಿಂದ, ಅಪರಿಮಿತ - ಅಸಂಖ್ಯಾತವಾದ, ವಸ್ತುವಂ-ಪದಾರ್ಥವನ್ನು, ಇತ್ತನು-ದಯಪಾಲಿಸಿದನು, ಬಳಿಕ-ತರುವಾಯ, ಆ ನೃಪಂ-ಆ ಮರುತ್ತನೆಂಬ ಕ್ಷಿತಿಪನು, ಹಿಮಗಿರಿ-ಮಂಜಿನ ಬೆಟ್ಟದ, ತಟದೊಳು-ಬುಡದಲ್ಲಿ, ಕನಕದಿಂದ-ಭಂಗಾರದಿಂದ, ಅಧ್ವರಸುಶಾಲೆಯಂ-ಉತ್ತಮವಾದ ಯಜ್ಞ ಮಂಟಪವನ್ನು, ಕಟ್ಟಿಸಿದನು-ನಿರ್ಮಾಣಮಾಡಿಸಿದನು, ವರ-ಮೇಲಾದ, ವೈದಿಕ ಪ್ರಮಾಣದೊಳು-ವೇದ ನಿಯಮಗಳಿಂದ, ವಿಪ್ರರಂ-ಭೂಸುರರನ್ನು, ಕರೆಸಿ-ಹೇಳಿ ಕಳುಹಿಸಿ, ಸಂವರ್ತನಂ ಕೂಡಿಕೊಂಡು - ಸಂವರ್ತಮುನಿಯೊಡಗೂಡಿ, ಉತ್ಸವದೊಳು- ಆನಂದದಿಂದ, ಅರಸಂ-ದೊರೆಯು, ಮಹಾಕ್ರತು-ದೊಡ್ಡ ಯಾಗದ, ಪ್ರಾರಂಭದೊಳು-ಆದಿಯಲ್ಲಿ, ಐಶ್ವರ್ಯ-ಸಾಮ್ರಾಜ್ಯದ, ವಿಭವದಿಂದ-ಆಧಿಕ್ಯದಿಂದ, ಮೆರೆದನು-ಪ್ರಕಾಶವನ್ನೈದಿದನು ||೩೬||

ಟೀ|| ಬೃಹಸ್ಪತಿ-ಸುರಗುರುವು, ಮರುತ್ತನ-ಮರುತ್ತರಾಯನ, ಮಖೋದಯವ-ಯಾಗಾರಂಭದ ವಿಭವವನ್ನು, ಕೇಳ್ದಂ-ಕೇಳಿ ತಿಳಿದನು, ಅತಿ-ಹೆಚ್ಚಾದ, ಚಿಂತೆಯಂ-ದುಃಖವನ್ನು, ತಾಳ್ದನು-ಅನುಭವಿಸಿದನು, ಮುಂದೆ-ಇನ್ನುಮೇಲೆ, ಸಂವರ್ತನು-ನನ್ನ ತಮ್ಮನಾದ ಸಂವರ್ತಮುನಿಯು, ಧನಯುತನಾಗಿ-ಸಂಪತ್ತಿನಿಂದೊಡಗೂಡಿ, ಬಾಳ್ದಪಂ-ಜೀವಿಸುವನು, ಎಂಬ-ಅನ್ನುವ, ಪುರುಡಿಂದ-ಹೊಟ್ಟೆಕಿಚ್ಚಿನಿಂದ, ಉಬ್ಬೆಗಂಪಟ್ಟು-ವ್ಯಥೆಪಟ್ಟು, ದಿವಿಜಪತಿಗೆ-ಸುರನಾಥನಿಗೆ, ಪೇಳ್ದೊಡೆ-ಹೇಳಲು, ಅವನು-ಆ ಸುರೇಂದ್ರನು, ಅಗ್ನಿಯಂ-ಅಗ್ನಿದೇವನನ್ನು, ಕಳುಪಿದೊಡೆ-ಮರುತ್ತನಲ್ಲಿಗೆ ಕಳುಹಿಸಲು, ದೀಕ್ಷೆಯಂತಾಳ್ದ-ದೀಕ್ಷಾಬದ್ಧನಾಗಿ, ಎಸೆವ-ಹೊಳೆಯುವ, ಭೂಪನ-ಮರುತ್ತರಾಜನ, ಎಡೆಗೆ-ಹತ್ತಿರಕ್ಕೆ, ಐತಂದು-ಪ್ರವೇಶಮಾಡಿ, ವೃತ್ರನಂ-ವೃತ್ರಾಸುರನನ್ನು, ಸೀಳ್ದವಂ-ಸಂಹರಿಸಿದ ದಿವಿಜಪತಿಯು, ತನ್ನೊಳ್-ತನ್ನೊಂದಿಗೆ, ಆಡಿದ-ಹೇಳಿ ಕಳುಹಿಸಿದ್ದ, ಮಾತನು-ನುಡಿಗಳನ್ನು, ಇಂತೆಂದು-ಮುಂದೆ ಹೇಳುವಂತೆ, ಕೃಶಾನು-ಯಜ್ಞೇಶ್ವರನು, ವಿವರಿಸಿದನು-ಉಸುರಿದನು ||೩೭||

ಟೀ|| ರಾಯ-ಎಲೈ ರಾಜನೆ, ಆಂ-ನಾನು, ಇಂದ್ರನು-ವೃತ್ರಘ್ನನು, ಆಡಿದ-ಹೇಳಿ ಕಳುಹಿಸಿರುವ, ಮಾತನು-ನುಡಿಗ

---

ಸುವನು ಇದರಿಂದ ನಿನ್ನ ಯಾಗವು ಬಹು ಚೆನ್ನಾಗಿ ನಡೆಯಲು ಸಹಾಯವಾಗುವುದೆಂದು ನುಡಿಯಲು, ಮರುತ್ತನು ಕೂಡಲೆ ತುಹಿನಗಿರಿಯ ಭಾಗದಲ್ಲಿ ನೆಲೆಯಾಗಿರುವ ಶಂಕರನ ಸನ್ನಿಧಿಗೆ ಹೋಗಿ ನಾನಾಪ್ರಕಾರವಾಗಿ ಪ್ರಾರ್ಥಿಸಲಾಗಿ ಚಂದ್ರಚೂಡನು ದಯಾರ್ದ್ರದೃಷ್ಟಿಯಿಂದ ಅರಸನಿಗೆ ಅಪರಿಮಿತವಾದ ಧನಕನಕವಸ್ತು ರಾಶಿಗಳನ್ನಿತ್ತನು. ಆಗ ಮರುತ್ತನು ಪರಮಾನಂದಭರಿತನಾಗಿ ಶಿವನಿಂದ ಲಭಿಸಿದ ಸಂಪತ್ಸಮೃದ್ಧಿಯಂ ಕೈಕೊಂಡು ಆ ಪರ್ವತದ ಅಡಿಯಲ್ಲಿಯೇ ಸುವರ್ಣಖಚಿತವಾಗಿಯೂ ದೇದೀಪ್ಯಮಾನವಾಗಿಯೂ ಇರುವ ಯಾಗಶಾಲೆಯನ್ನು ನಿರ್ಮಿಸಿ ವೇದವೇದಾಂಗಪಾರಂಗತರಾದ ವಿಪ್ರವರ್ಯರಿಂದಲೂ, ಪುರೋಹಿತನಾದ ಸಂವರ್ತ ಮುನಿಯಿಂದಲೂ ಕೂಡಿದವನಾಗಿ ಯಜ್ಞಾರಂಭವನ್ನುಮಾಡಿ ಸಕಲ ವಿಭವಂಗಳಿಂ ಮೆರೆಯುತ್ತಿರುವ||೩೬|| ಸುದ್ದಿಯು ಸುರಾಚಾರ್ಯರಾದ ಬೃಹಸ್ಪತಿಗೆ ತಿಳಿಯಿತು. ಕೂಡಲೆ ಗುರುವು ತನ್ನ ಮನದಲ್ಲಿ ಇನ್ನುಮುಂದೆ ನನ್ನ ತಮ್ಮನಾದ ಸಂವರ್ತಮುನಿಗೆ ಆ ಅಪರಿಮಿತವಾದ ಐಸಿರಿಯು ಲಭಿಸಿ ನನ್ನನ್ನು ಅಲ್ಲಗಳೆಯುವನಲ್ಲಾ, ಮುಂದೇನಮಾಡಲಿ? ಎಂದು ಮನಸ್ಸಿನಲ್ಲಿ ಅತಿಯಾಗಿ ಚಿಂತಿಸಿ ಅಸುರಾರಿಯಾದ ಇಂದ್ರನಬಳಿಗೆ ಹೋಗಿ ಈ ಸಂಗತಿಯನ್ನು ಅರುಪಲು, ಆಗ ದೇವೇಂದ್ರನು ಯಜ್ಞೇಶ್ವರನನ್ನು ಕರೆದು ಎಲೈ ಅಗ್ನಿಯೇ! ||೩೭|| ಹಿಮವತ್ಪ್ರಾಂತದಲ್ಲಿ ಮರುತ್ತನೆಂಬ ರಾಯನೋರ್ವನು ಸಂವರ್ತಮುನಿಯಿಂದ

ರ್ತನಂವರಿಸಬೇಡೆನ್ನಾಜ್ಞೆಯಂಮಿಾರ್ದೊಡೆ ॥ ವಾಯುದಿಂದಧ್ವರಂಕೆಡುವಂತೆನೂಡುವೆನ | ಪಾಯಮುಂನಿನಗೆಂದುಪೇಳ್ದಂ ಸುರಪನೆಂಬ | ವಾಯುಸಖನಂನೋಡಿ ನಸುನಗುತವಿನಯದಿಂ ಭೂಪಾಲನಿಂತೆಂದನು ॥ ೩೮ ॥ ಗುರುವೆಕುಲಗುರುವೆಂದು ಮೊದಲೆನಾಂಪೋಗಿವಿ | ಸ್ತರದಿಂದಮಾಡಿಸಧ್ವರವನೆಂದಾಡಿದೊಡೆ | ನರಯಾಜನಕ್ಕೊಲ್ಲೆನೆಂದಬಳಿಕ್ಕೆಸಲೆಸಂವರ್ತನಂ ಮುಖಕ್ಕೆ ॥ ವರಿಸಿದೆನಸತ್ಯಮುಂನುಡಿಯಲಂಜುವೆನಿನ್ನು | ತುರಗಮೇಧಂನಡೆಯದೊಡೆನೂಣಲೆಂದುಭೂ | ವರನಗ್ನಿಯಂಬೇಡಿಕೊಳುತಿರಲ್ಕಂಡುಕನಲ್ದಾಮುನಿಪನಿಂತೆಂದನು ॥೩೯॥ ಭೂಕಾಂತನಿನಗಿವನೊಳುಪಚಾರಮೇಕಿನ್ನು | ಸಾಕೀತನಂಕಳುಪುಯಜ್ಞಮಂಕೆಡಿಸಿದೊಡೆ | ನಾಕಮಂಕೆಡಿಸುವೆಂಸಕಲಮಂಸುಡುವನಲನಂಸುಡುವೆನೀಕ್ಷಣದೊಳು ॥ ಪಾಕಶಾಸನನನೊಡಗೊಂಡು

---

ಳನ್ನ, ಒರೆವೆನು_ಹೇಳುತ್ತೇನೆ, ಕೇಳು_ಲಾಲಿಸು, ಈ ಯಜ್ಞಮಂ_ಈ ಕ್ರತುವನ್ನು, ಬೃಹಸ್ಪತಿಯಕೈಯಿಂ – ಸುರಾಚಾರ್ಯನಿಂದ, ತೊಡಗಿಸು-ಎಸಗಲು ಏರ್ಪಡಿಸು, ಆಯಸಂಬಟ್ಟು-ಶ್ರಮವನ್ನು ಹೊಂದಿ, ಸಂವರ್ತನಂ-ಸಂವರ್ತಮುನಿಯನ್ನು, ವರಿಸಬೇಡ-ಪುರೋಹಿತನನ್ನಾಗಿ ಮಾಡಿಕೊಳ್ಳಬೇಡ, ಎನ್ನ-ನನ್ನ, ಆಜ್ಞೆಯಂ-ಶಾಸನವನ್ನು, ಮಿಾರ್ದೊಡೆ- ಅತಿಕ್ರಮಿಸಿದರೆ, ವಾಯುದಿಂದ_ಹಗೆತನದಿಂದ, ಅಧ್ವರಂ_ಯಾಗವು, ಕೆಡುವಂತೆ-ವಿಘ್ನವನ್ನು ಐದುವಂತೆ, ನಿನಗೆ_ನಿನ್ನ ವಿಷಯದಲ್ಲಿ, ಅಪಾಯಮುಂ-ವಿಪತ್ತರಂಪರೆಯನ್ನು, ಮಾಡುವೆನು-ಎಸಗುವೆನು, ಎಂದು_ಹೀಗೆಂದು, ಸುರಪನು-ಶಚೀಪತಿಯು, ಪೇಳ್ದಂ_ಉಸುರಿದನು, ಎಂಬ-ಎನ್ನತಕ್ಕ, ವಾಯುಸಖನಂ-ಗಾಳಿಯ ಮಿತ್ರನಾದ ವೈಶ್ವಾನರನನ್ನು, ನೋಡಿ-ಈಕ್ಷಿಸಿ, ನಸುನಗುತ_ಮುಗುಳ್ನಗೆಯನ್ನೈದುತ್ತ, ವಿನಯದಿಂ-ನಮ್ರಭಾವದಿಂದ, ಭೂಪಾಲನು-ಮರುತ್ತನೆಂಬರಸು, ಇಂತೆಂದನು_ಹೀಗೆಂದು ಹೇಳಿದನು ॥೩೮॥

ಟೀ॥ ಗುರುವೆ-ಸುರಾಚಾರ್ಯನೆಯೆ, ಕುಲಗುರುವು-ನಮ್ಮ ವಂಶದ ಪುರೋಹಿತನು, ಎಂದು_ಎಂಬದಾಗಿ, ಮೊದಲೆ-ಪ್ರಾರಂಭದಲ್ಲಿಯೆ, ನಾಂ_ನಾನು, ಪೋಗಿ-ಅವರ ಹತ್ತಿರಕ್ಕೆ ಹೋಗಿ, ವಿಸ್ತರದಿಂದ-ಆಧಿಕ್ಯದಿಂದ, ಅಧ್ವರವನು-ಕ್ರತುವನ್ನು, ಮಾಡಿಸು-ನೆರವೇರಿಸು, ಎಂದು_ಎಂಬದಾಗಿ, ಆಡಿದೊಡೆ-ನುಡಿಯಲು, ನರ_ಮಾನವರು ಮಾಡುವ, ಯಾಜನಕ್ಕೆ-ಯಾಗದ ಪೌರೋಹಿತ್ಯಕ್ಕೆ, ಒಲ್ಲೆನು-ಬರುವುದಿಲ್ಲ, ಎಂದ ಬಳಿಕ-ಹೀಗೆಂದು ಹೇಳಿದಮೇಲೆ, ಸಲೆ_ಚೆನ್ನಾಗಿ, ಸಂವರ್ತನಂ_ಸಂವರ್ತಮುನಿಯನ್ನು, ಮುಖಕೆ-ಯಾಗಕ್ಕೆ, ವರಿಸಿದೆನು-ಬೇಡಿಕೊಂಡೆನು, ಅಸತ್ಯಮುಂ-ಅನೃತವನ್ನು, ನುಡಿಯಲು-ಪೇಳಲು, ಅಂಜುವೆನು-ಹೆದರುವೆನು, ಇನ್ನು_ಇನ್ನುಮುಂದೆ, ತುರಗಮೇಧಂ-ಹಯಮೇಧವು, ನಡೆಯದೊಡೆ-ಈಡೇರದಂತೆ, ಮಾಣಲಿ_ಗೈಯಲಿ, ಎಂದು_ಎಂಬದಾಗಿ, ಭೂವರನು_ಭೂಕಾಂತನಾದ ಮರುತ್ತನು, ಅಗ್ನಿಯಂ- ಯಜ್ಞೇಶ್ವರನನ್ನು, ಬೇಡಿಕೊಳುತ-ಪ್ರಾರ್ಥನೆ ಮಾಡುತ್ತ, ಇರಲ್-ಇರಲಾಗಿ, ಕಂಡು_ಈಕ್ಷಿಸಿ, ಕನಲ್ದು-ಸಿಟ್ಟುಮಾಡಿಕೊಂಡು, ಮುನಿಪನು-ಸಂವರ್ತನೆಂಬ ಮುನಿವರ್ಯನು, ಇಂತು_ಮುಂದೆ ಹೇಳುವಂತೆ, ಎಂದನು_ನುಡಿದನು ॥೩೯॥

ಟೀ॥ ಭೂಕಾಂತ_ ಮರುತ್ತರಾಯನೆ, ನಿನಗೆ, ಇವನೊಳು – ಈ ಅಗ್ನಿಪುರುಷನ ಕೂಡ, ಉಪಚಾರಂ_ಸಮಾಧಾನದ ನುಡಿಗಳು, ಏಕೆ_ಏತಕ್ಕೆ ಹೇಳಬೇಕು, ಇನ್ನು – ಮುಂದೆ, ಸಾಕು – ಉಪಚಾರ ಹೇಳಬೇಡ, ಆತನಂ_ಆ ಅಗ್ನಿಯನ್ನು, ಕಳುಪು-ಹೊರಡಿಸು, ಯಜ್ಞಮಂ_ಕ್ರತುವನ್ನು, ಕೆಡಿಸಿದೊಡೆ-ಭಗ್ನಮಾಡಿದರೆ, ನಾಕಮಂ_ಸುರಲೋಕವನ್ನೆ, ಕೆಡಿಸುವೆಂ-ಹಾಳುಮಾಡುವೆನು, ಸಕಲಮಂ – ಎಲ್ಲವನ್ನೂ, ಸುಡುವ_ದಹಿಸುವ, ಅನಲನಂ – ಯಜ್ಞೇಶ್ವರನನ್ನು, ಈಕ್ಷಣದೊಳ್_

---

ಯಾಗವನ್ನು ಮಾಡಲು ಯತ್ನಿಸಿರುವನು. ನೀನು ಅಲ್ಲಿಗೆ ಹೋಗಿ ನನ್ನ ನುಡಿಗಳಿಂದ ಆ ಅರಸನೊಂದಿಗೆ ಸಂವರ್ತಮುನಿಯನ್ನು ಬಿಟ್ಟು ದೇವ ಪುರೋಹಿತನಾದ ಸುರಾಚಾರ್ಯನನ್ನು ಯಾಗಮಾಡಿಸಲು ನೇಮಿಸಿಕೊಳ್ಳಬೇಕೆಂದೂ, ಹಾಗೆ ನೀನು ಆತನ ಆಜ್ಞೆಯನ್ನು ನೆರವೇರಿಸದಿದ್ದರೆ ನಿನ್ನ ಯಾಗವು ಶಚೀಪತಿಯಿಂದ ಅನೇಕ ಅಪಾಯಗಳಿಗೆ ಗುರಿಯಾದೀತೆಂದೂ ತಿಳಿಸಿಬಾರೆಂದು ಕಳುಹಲು ವೈಶ್ವಾನರನು ತಡಮಾಡದೆ ಹಿಮವತ್ಪ್ರಾಂತದಲ್ಲಿ ಯಾಗಶಾಲೆಯನ್ನು ನಿರ್ಮಿಸಿ ದೀಕ್ಷಾಬದ್ಧನಾಗಿರುವ ರಾಯನ ಬಳಿಗೆ ಬಂದು ಸಂಕ್ರಂದನನ ನುಡಿಗಳನ್ನೆಲ್ಲಾ ವಿಸ್ತಾರವಾಗಿ ತಿಳಿಸಿದನು ॥೩೮॥ ಅಗ್ನಿಪುರುಷನು ತಿಳಿಸಿದ ಸುರನಾಥನ ಮಾತುಗಳನ್ನೆಲ್ಲಾ ಕೇಳಿದ ಬಳಿಕ ಮರುತ್ತನು ಮುಗುಳ್ನಗೆಯಿಂದೊಡಗೂಡಿ ಯಜ್ಞೇಶ್ವರನನ್ನು ಕುರಿತು ಎಲೈ ಹುತವಹನೆ ಕೇಳು ನಾನು ಯಾಗಾರಂಭ ಮಾಡುವುದಕ್ಕೆ ಮುಂಚೆಯೆ ಬೃಹಸ್ಪತ್ಯಾಚಾರ್ಯರಲ್ಲಿಗೆ ಹೋಗಿ ಕುಲಪುರೋಹಿತರಾದ ನೀವು ನಾನು ಮಾಡಬೇಕೆಂದಿರುವ ಯಾಗವನ್ನು ಸಾಂಗವಾಗಿ ಈಡೇರಿಸಬೇಕೆಂದು ಬೇಡಿಕೊಂಡೆನು. ಮಾನವರು ವಿರಚಿಸುವ ಯಾಗವನ್ನು ನಾನು ಮಾಡಿಸುವುದಿಲ್ಲವೆಂದು ತಿರಸ್ಕರಿಸಿ ಬಿಟ್ಟದ್ದರಿಂದಲ್ಲವೆ ನಾನು ಹತಾಶನಾಗಿ ಸಂವರ್ತಮುನಿಯ ಬಳಿಗೆ ಹೋಗಿ ಆತನನ್ನು ಒಡಂಬಡಿಸಿ ಪುರೋಹಿತನನ್ನಾಗಿ ಮಾಡಿಕೊಂಡಿರುವೆನು. ಈಗ ಆ ಮುನಿಗಳನ್ನು ಬಿಡುವುದು ಹೇಗೆ ತಾನೆ ಸಾಧ್ಯವಾದೀತೆಂದು ಮೃದುನುಡಿಗಳನ್ನು ಆಡಲು ॥೩೯॥ ಇದನ್ನೆಲ್ಲಾ ನೋಡಿ ಕೇಳುತ್ತಿದ್ದ ಸಂವರ್ತಮುನಿಯು ಅತಿ

ಬರಲಗ್ನಿಯಂ| ನೂಕೆಂದುಸಂವರ್ತನಾಡಲ್ಬೆದರ್ದುಸುರ| ಲೋಕಕ್ಕೆಪೋಗಿವೈಶ್ವಾನರಂವಜ್ರಿಗರುಪಿದೊಡಾತನಿಂತೆಂದನು||೪೦|| ಇನ್ನೊಂದುಬಾರಿನೀಂಪೋಗಿಪೇಳಾನೃಪತಿ | ಗೆನ್ನವಜ್ರಕ್ಕೆಗುರಿಯಾಗಬೇಡೆನಲಗ್ನಿ | ತನ್ನಕೈಯೊಳುಸಾಗದಂಜುವೆಂಸಂವರ್ತನತಿತಪೋಬಲನಿಳೆಯೊಳು || ಮುನ್ನಭೂಸುರಶಾಪದಿಂದಪಲರಳಿದುಳಿದು | ಬನ್ನಬಟ್ಟವರುಂಟುಸಾಕೆಂದುಶಿಖಿತೊಲಗೆ | ಮನ್ನಿಸಿಪುರಂದರಂಧೃತರಾಷ್ಟ್ರನೆಂಬಗಂಧರ್ವಂಗೆನೇಮಿಸಿದನು||೪೧||ಧೃತರಾಷ್ಟ್ರನೆಂಬಗಂಧರ್ವರಾಜಂಬಂದು | ಶತಮುಖಂ ಸಂವರ್ತನಂಬಿಟ್ಟುವರಬೃಹ | ಸ್ಪತಿಯನಧ್ವರಕೆ ವರಿಸದೊಡೀಗವಜ್ರದಿಂದರಿದಪಂನಿನ್ನನೆಂದು || ಕ್ಷಿತಿಪಂಗೆಪೇಳ್ದೊಡದಕೇ

---

ಈಗಲೇ, ಸುಡುವೆನು-ಬೂದಿಯಾಗಿ ಮಾಡುವೆನು, ಪಾಕಶಾಸನನು-ಅಸುರಾರಿಯನ್ನು, ಒಡಗೊಂಡು-ಜೊತೆಮಾಡಿಕೊಂಡು, ಬರಲಿ-ಐತರಲಿ, ಅಗ್ನಿಯಂ-ಈ ಅಗ್ನಿದೇವನನ್ನು, ನೂಕು-ತೊರೆ, ಎಂದು-ಎಂಬದಾಗಿ, ಸಂವರ್ತನು-ಸಂವರ್ತಮುನಿಯು, ಆಡಲು-ನುಡಿಯಲು, ಬೆದರ್ದು-ಗಾಬರಿಯಾಗಿ, ವೈಶ್ವಾನರಂ-ಯಜ್ಞೇಶ್ವರನು, ಸುರಲೋಕಕೆ- ದೇವಲೋಕಕ್ಕೆ, ಪೋಗಿ- ಪ್ರವೇಶಮಾಡಿ, ವಜ್ರಿಗೆ-ವಜ್ರಾಯುಧವನ್ನುಳ್ಳ ಶಚೀಪತಿಗೆ, ಅರುಪಿದೊಡೆ-ಹೇಳಲು, ಆತನು-ಆ ದೇವೇಂದ್ರನು, ಇಂತು- ಮುಂದೆ ಹೇಳುವಂತೆ, ಎಂದನು-ನುಡಿದನು || ೪೦ ||

ಟೀ|| ಇನ್ನೊಂದುಬಾರಿ-ಪುನಃ ಈ ಸಲವೂ, ನೀಂ-ನೀನು, ಪೋಗಿ-ಆ ರಾಜನ ಹತ್ತಿರಕ್ಕೆ ಹೋಗಿ, ಆ ನೃಪತಿಗೆ- ಆ ಮರುತ್ತರಾಯನನ್ನು ಕುರಿತು, ತನ್ನ-ನನ್ನ, ವಜ್ರಕ್ಕೆ-ವಜ್ರಾಯುಧದ ಏಟಿಗೆ, ಗುರಿಯಾಗಬೇಡ-ಈಡಾಗಬೇಡ, ಎಂದು, ಪೇಳು-ತಿಳಿಸು, ಎನಲು-ಎಂದು ನುಡಿಯಲು, ಅಗ್ನಿ-ಹುತವಹನು, ಇಳೆಯೊಳು-ಧರೆಯಲ್ಲಿ, ಸಂವರ್ತನು-ಸಂವರ್ತನೆಂಬುವನು, ಅತಿತಪೋಬಲನು-ಬಹಳ ತಪೋನಿಷ್ಠನು, ತನ್ನಕೈಯೊಳು - ನನಗೆ, ಸಾಗದು - ಅಸಾಧ್ಯವು, ಅಂಜುವೆಂ-ಅಲ್ಲಿಗೆ ಹೋಗಲು ಹೆದರುವೆನು, ಮುನ್ನ-ಹಿಂದೆ, ಭೂಸುರ - ವಿಪ್ರರ, ಶಾಪದಿಂದ - ಕೋಪದ ನುಡಿಗಳಿಂದ, ಪಲರು-ಅನೇಕರು, ಅಳಿದು-ಮರಣವನ್ನು ಹೊಂದಿ, ಉಳಿದು-ಪುನಃ ಜನಿಸಿ, ಬನ್ನಬಟ್ಟವರು-ಅವಮಾನಪಟ್ಟವರು, ಉಂಟು-ಇರುವರು, ಸಾಕು- ಆಗುವುದಿಲ್ಲ, ಎಂದು-ಎಂಬದಾಗಿ, ಶಿಖಿ-ಯಜ್ಞೇಶ್ವರನು, ತೊಲಗೆ-ಹೊರಟು ಹೋಗಲು, ಮನ್ನಿಸಿ-ಆ ಅಗ್ನಿಯನ್ನು ಬಿಟ್ಟು, ಪುರಂದರಂ-ಶಚೀಪತಿಯು, ಧೃತರಾಷ್ಟ್ರನೆಂಬ-ಧೃತರಾಷ್ಟ್ರನೆಂಬ, ಗಂಧರ್ವಂಗೆ-ಗಂಧರ್ವರಲ್ಲಿ ಒಬ್ಬನಿಗೆ, ನೇಮಿಸಿದನು- ಆಜ್ಞಾಪಿಸಿದನು.

ಅ|| ವಿ|| ಬನ್ನ (ತ್ಭ,) ಭಗ್ನ-(ತ್ಸ.) ಭೂಸರ-(ಷ. ತ.) ಶಿಖಿ=ನವಿಲು, ಬೆಂಕಿ, ಜುಟ್ಟುಳ್ಳ ಪ್ರಾಣಿ, ಧೃತರಾಷ್ಟ್ರ- ಒಬ್ಬ ಗಂಧರ್ವ, ದುರ್ಯೋಧನನ ತಂದೆ, ಒಂದು ಹಾವು ||೪೧||

ಟೀ|| ಧೃತರಾಷ್ಟ್ರನೆಂಬ-ಧೃತರಾಷ್ಟ್ರನೆಂಬ ಹೆಸರುಳ್ಳ, ಗಂಧರ್ವರಾಜಂ-ಗಂಧರ್ವರ ಅರಸು, ಬಂದು-ಮರುತ್ತನ ಯಾಗಶಾಲೆಗೆ ಬಂದು, ಶತಮುಖಂ-ದೇವೇಂದ್ರನು, ಸಂವರ್ತನಂ-ಸಂವರ್ತಮುನಿಯನ್ನು, ಬಿಟ್ಟು-ತ್ಯಜಿಸಿ, ವರ-ಉತ್ತಮನಾದ, ಬೃಹಸ್ಪತಿಯನು-ಬೃಹಸ್ಪತಿಯನ್ನು, ಅಧ್ವರಕೆ-ಯಾಗಕ್ಕೆ, ವರಿಸದೊಡೆ-ಪುರೋಹಿತನನ್ನಾಗಿಮಾಡಿಕೊಳ್ಳದಿದ್ದರೆ, ಈಗ- ಕೂಡಲೆ, ವಜ್ರದಿಂದ-ವಜ್ರಾಯುಧದಿಂದ, ನಿನ್ನನು-ನಿನ್ನನ್ನು, ಅರಿದಪಂ-ಪುಡಿಪುಡಿಮಾಡುತ್ತಾನೆ, ಎಂದು-ಹೀಗೆಂದು, ಕ್ಷಿತಿಪಂಗೆ-ಮರುತ್ತನೆಂಬ ಭೂಪಾಲನಿಗೆ, ಪೇಳ್ದೊಡೆ-ಹೇಳಲಾಗಿ, ಅದ-ಆನುಡಿಯನ್ನು, ಕೇಳ್ದು-ಲಾಲಿಸಿ, ಮುನೀಶ್ವರಂ-ಸಂವರ್ತ

---

ಯಾದ ಕೋಪವಂತಾಳಿ ಮರುತ್ತನೊಡನೆ, ಎಲೆ ಅರಸೆ! ಇದೇನು ನೀನು ಇವನನೊಂದಿಗೆ ಇಷ್ಟು ಸಮಾಧಾನೋಕ್ತಿಗಳನ್ನಾಡುತ್ತಲಿರುವೆ? ಶಾಂತಭಾವವು ಇನ್ನು ಸಾಕು! ಇವನನ್ನು ಮೊದಲು ಆಚೆಗೆ ತಳ್ಳು, ಇಂದ್ರನು ಸಾಹಸಿಯಾದರೆ ಬಂದು ಯಾಗವನ್ನು ಕೆಡಿಸಲಿ, ಅವನು ಯಜ್ಞಭಂಗಕ್ಕುಜ್ಜುಗಿಸಿದರೆ ನಾನು ಅವನ ಸುರಲೋಕವನ್ನೆ ಧ್ವಂಸಮಾಡಿಬಿಡುವೆನು, ಪ್ರಪಂಚದಲ್ಲಿ ಎಲ್ಲವನ್ನೂ ಸುಡುವ ಈ ಅಗ್ನಿ ಪುರುಷನನ್ನು ನನ್ನ ತಪೋಜ್ವಾಲೆಯಿಂದ ಭಸ್ಮಮಾಡಿ ಬಿಡುವೆನು. ನೀನೇಕೆ ಹೆದರುವೆ? ಈ ಹುತವಹನು ಶಚೀಪತಿಯನ್ನೊಡಗೊಂಡು ಬರಲಿ, ಕಳುಹೆಂದು ನುಡಿಯುತ್ತಿರುವ ಸಂವರ್ತ ಮುನಿಯ ಕ್ರೂರವಾದ ನುಡಿಗಳನ್ನು ಕೇಳಿದ ವೈಶ್ವಾನರನು ಹೆದರಿ ಅಲ್ಲಿಂದ ಬಹುಬೇಗನೆ ಸುರಪನಲ್ಲಿಗೆ ಬಂದು ನಡೆದ ವೃತ್ತಾಂತವನ್ನೆಲ್ಲಾ ವಿಸ್ತರಿಸಿದನು ||೪೦|| ಇದನ್ನೆಲ್ಲಾ ಕೇಳಿದ ಬಲಾರಾತಿಯು ಹುತಾಶನನ್ನು ಕುರಿತು, ನೀನು ಮತ್ತೊಂದಾವರ್ತಿ ಮರುತ್ತನ ಬಳಿಗೆ ಹೋಗಿ ಗುರುವನ್ನು ಪುರೋಹಿತನನ್ನಾಗಿ ಮಾಡಿಕೊಂಡರೆ ಸರಿ, ಇಲ್ಲವಾದರೆ ವಜ್ರಾಯುಧದ ಪೆಟ್ಟಿಗೆ ಗುರಿಯಾಗುವೆ, ಎಂದು ತಿಳಿಸಿ ಬಾರೆಂದು ಆಜ್ಞೆಮಾಡಲು ಹುತವಹನು ಸುರೇಂದ್ರನನ್ನು ಕುರಿತು ಎಲೈ ಅರಸೆ! ಸಂವರ್ತನು ಮಹಾತಪಸ್ವಿಯೂ ಅತಿ ಕ್ರೂರಿಯೂ ಆಗಿರುವನು. ಅಲ್ಲಿಗೆ ಹೋಗಿಬರಲು ನನಗೆ ಶಕ್ತಿಯಿಲ್ಲ. ಆತನ ಶಾಪಕ್ಕೆ ನಾನು ಗುರಿಯಾಗಲಾರೆ! ಆದ್ದರಿಂದ ಕ್ಷಮಿಸೆಂದು ನುಡಿದನು. ತರುವಾಯ ಸುರಪನು ಧೃತರಾಷ್ಟ್ರನೆಂಬೊರ್ವ ಗಂಧರ್ವನನ್ನುಕುರಿತು ||೪೧|| ನೀನು ಹೋಗಿ "ಬೃಹಸ್ಪತಿ

ೞ್ನಾಮುನೀಶ್ವರಂ | ಖತಿಗೊಂಡೊಡಾತಂ ಮರಳ್ದು ಶಕ್ರಂಗರುಪ | ಲತುಳಸನ್ನಾಹದಿಂ ಪೊರಮಟ್ಟನಿಂದ್ರನನಿಮಿಷನಿಕರಗಡಣ ದಿಂದ || ೪೨ || ಕೋಪದಿಂದಾಗಲೆತ್ತಿದ ವಜ್ರಜಸ್ತದಿಂ | ದಾಪುರಂದರನೈದೆಕಂಡು ನಡನಡುಗುತಿಹ | ಭೂಪನಂ ಸಂತೈಸಿ ಸಂವರ್ತನಿಂದ್ರಾಗ್ನಿಮೊದಲಾದಮರಗಣವನು || ರೂಪಿಸಿದ ಚಿತ್ರಪಟದಂತಾಗ ನಿಲಿಸಲ್ಪ್ರ | ತಾಪಂಗಳುಡುಗಿ ನಿರ್ಜರನಿಕರಮು ೞವಳಿಯಲಾಪರಮಧಾರ್ಮಿಕ ಮರುತ್ತಂ ತಪಸ್ವಿಯಂ ಬೇಡಿಕೊಂಡಂ ನಯದೊಳು || ೪೩ || ಎಲೆಮುನೀಶ್ವರ ಹವಿರ್ಭಾಗಮಂ ಕೊಂಬಮರ | ಕುಲವಿಂತಿರಲ್ಬಹುದೆ ಪ್ರತ್ಯಕ್ಷವಾಗಿ ಬಂ | ದೊಲಿದೆನ್ನ ಯಾಗದೊಳ್ವಿನಯದಿಂದೀಸಿಕೊಳಲಾಹುತಿಯ ಪಸುಗೆಗಳನು || ಸಲಿಸಬೇಕೆನ್ನ ಬಿನ್ನಪವನೀ ಸುರಪನೊಳ್ | ಕಲಹಮಂ ಬಿಡಿಸೆಂದು ಭೂವಲ್ಲಭಂ ಕೃತಾಂ | ಜಲಿಯಿಂದ ಸಂವರ್ತನಂ

ಮುನೀಂದ್ರನು, ಖತಿಗೊಂಡೊಡೆ-ಸಿಟ್ಟುಮಾಡಿಕೊಳ್ಳಲು, ಆತಂ-ಆಗಂಧರ್ವರ ಅರಸು, ಮರಳ್ದು-ಹಿಂದಿರುಗಿಬಂದು, ಶಕ್ರಂಗೆ-ಸುರನಾಥಂಗೆ, ಅರುಪಲು-ಹೇಳಲು, ಅತುಳ-ಅಸಮಾನವಾದ, ಸನ್ನಾಹದಿಂ-ಸಂರಂಭದಿಂದ, ಇಂದ್ರನು-ಶಚೀಪತಿಯು, ಅನಿಮಿಷ-ಸುರರ, ನಿಕರ-ಸಮುದಾಯದ, ಗಡಣದಿಂ-ಗುಂಪುಗೂಡಿ, ಪೊರಮಟ್ಟನು-ಮರುತ್ತನ ಬಳಿಗೆ ಹೊರಟನು || ೪೨ ||

ಟೀ || ಆಪುರಂದರಂ-ಆ ಅಮರೇಂದ್ರನು, ಕೋಪದಿಂದ-ಸಿಟ್ಟಿನಿಂದ, ಆಗಲು-ಆಗ, ಎತ್ತಿದ-ಎತ್ತಿ ಹಿಡಿದಿರುವ, ವಜ್ರ-ವಜ್ರಾಯುಧದಿಂದ ಕೂಡಿದ, ಹಸ್ತದಿಂ-ಕರದಿಂದ, ಐದೆ-ಸಮೀಪಸ್ಥನಾಗಲು, ಕಂಡು-ಮರುತ್ತನು ನೋಡಿ, ನಡನಡುಗುತ-ಗಡಗಡನೆ ನಡುಗುತ್ತ, ಇಹ-ಇರತಕ್ಕ, ಭೂಪನಂ-ಅರಸನನ್ನು, ಸಂವರ್ತನು-ಸಂವರ್ತಮುನಿಯು, ಸಂತೈಸಿ-ಸಮಾಧಾನವನ್ನು ಹೇಳಿ, ಇಂದ್ರ-ಸುರಪತಿಯು, ಅಗ್ನಿ-ಹುತಾಶನನು, ಮೊದಲಾದ-ಆದಿಯಾದ, ಅಮರಗಣವನು-ದೇವತೆಗಳ ಗುಂಪನ್ನು, ರೂಪಿಸಿದ-ಲಿಖಿಸಿದ, ಚಿತ್ರಪಟದಂತೆ-ಚಿತ್ರಪ್ರತಿಮೆಯ ಹಾಗೆ, ನಿಲಿಸಲ್-ಅಚೇತನರನ್ನಾಗಿ ಮಾಡಲು, ಪ್ರತಾಪಂಗಳು-ಸಾಹಸಗಳು, ಉಡುಗಿ-ಕುಂದಿ, ನಿರ್ಜರನಿಕರಂ-ಸುರರ ಸಮುದಾಯವು, ಅಳವಳಿಯಲು-ಹೆದರಲು, ಆಪರಮಧಾರ್ಮಿಕ-ಮಹಾಧರ್ಮನಿರತನಾದ, ಮರುತ್ತಂ-ಮರುತ್ತರಾಯನು, ನಯದೊಳು-ನಮ್ರತೆಯಿಂದ, ತಪಸ್ವಿಯಂ-ತಪೋನಿಷ್ಠನಾದ ಸಂವರ್ತನನ್ನು ಕುರಿತು, ಬೇಡಿಕೊಂಡನು-ಕೇಳಿಕೊಂಡವನಾದನು || ೪೩ ||

ಟೀ|| ಎಲೆ ಮುನಿಶ್ವರ-ಎಲೈ ಮುನಿನಾಥನೆ, ಹವಿರ್ಭಾಗಮಂ-ಯಜ್ಞದಲ್ಲಿ ಕೊಡುವ ಹೋಮದ್ರವ್ಯದ ಭಾಗವನ್ನು, ಕೊಂಬ-ಕೈಕೊಳ್ಳತಕ್ಕ, ಅಮರಕುಲಂ-ಸುರಸಮುದಾಯವು, ಇಂತು-ಹೀಗೆ, ಇರಲ್ಬಹುದೆ-ಸ್ತಂಭೀಭೂತವಾಗಿ ನಿಲ್ಲಬಹುದೆ, ಪ್ರತ್ಯಕ್ಷವಾಗಿ-ಕಣ್ಣಿಗೆ ಕಾಣುವಂತೆ. ಯಾಗದೋಳ್-ಕ್ರತುವಿನಲ್ಲಿ, ವಿನಯದಿಂದ-ನಮ್ರಭಾವದಿಂದ, ಆಹುತಿಯ-ಹೋಮದ್ರವ್ಯದ, ಪಸುಗೆಗಳನು-ಭಾಗಗಳನ್ನು, ಈಸಿಕೊಳಲಿ-ತೆಗೆದುಕೊಳ್ಳಲಿ ಅಥವಾ ಸ್ವೀಕರಿಸಲಿ, ಎನ್ನ-ನನ್ನ, ಬಿನ್ನಪವನು-ಪ್ರಾರ್ಥನೆಯನ್ನು, ಸಲಿಸಬೇಕು-ನೆರವೇರಿಸಬೇಕು, ಈ ಸುರಪನೊಳ್-ಈ ದೇವೇಂದ್ರನೊಂದಿಗೆ, ಕಲಹಂ- ವ್ಯಾಜ್ಯವನ್ನು, ಬಿಡಿಸು-ತಪ್ಪಿಸು, ಎಂದು-ಹೀಗೆಂದು, ಭೂವಲ್ಲಭಂ-ಪೊಡವಿಪನು, ಕೃತಾಂಜಲಿಯಿಂದ-ಕೈಗಳನ್ನು ಜೋಡಿಸಿಕೊಂಡು, ಸಂವರ್ತನಂ-ಸಂವರ್ತನನ್ನು, ಪ್ರಾರ್ಥಿಸಿದೊಡೆ-ಕೇಳಿಕೊಳ್ಳಲಾಗಿ, ಆ ನೃಪನ-ಆ ರಾಜನ, ವಾಂಛಿತವನು-ಇಷ್ಟ ಸಿದ್ಧಿಯನ್ನು, ಇತ್ತನು-ಉಂಟುಮಾಡಿದನು || ೪೪ ||

ಯನ್ನು ಪುರೋಹಿತನನ್ನಾಗಿ ಮಾಡಿಕೊಂಡು ಸಂವರ್ತನನ್ನು ಕಳುಹಿಸಿಬಿಡು, ಇಲ್ಲವಾದರೆ ದೇವೇಂದ್ರನ ವಜ್ರಘಾತಕ್ಕೆ ಗುರಿಯಾಗುತ್ತಿ" ಎಂದು ನಾನು ಹೇಳಿದೆನೆಂದು ಮರುತ್ತನಿಗೆ ತಿಳಿಸಿಬಾರೆಂದು ಕಳುಹಲು ಧೃತರಾಷ್ಟ್ರನು ಇಂದ್ರನ ಅಪ್ಪಣೆಯಂತೆ ಮರುತ್ತನ ಬಳಿಗೆ ಹೋಗಿ ಶಚೀಪತಿಯ ಆಜ್ಞೆಯನ್ನು ವಿಸ್ತರಿಸಿದನು. ಸಂವರ್ತ ಮುನಿಯು ಇದನ್ನು ಕೇಳಿ ಅತ್ಯಂತ ಕೋಪಾವಿಷ್ಟನಾದ್ದರಿಂದ ಧೃತರಾಷ್ಟ್ರನು ಹೆದರಿ ತಡಮಾಡದೆ ಇಂದ್ರನಬಳಿಗೆ ಹೋಗಿ ನಡೆದ ವೃತ್ತಾಂತವನ್ನು ವಿಜ್ಞಾಪನೆ ಮಾಡಿದನು. ಕೂಡಲೆ ದೇವೇಂದ್ರನು ಸಕಲ ದೇವತೆಗಳಿಂದೊಡಗೂಡಿ||೪೨||ತನ್ನ ವಜ್ರಾಯುಧವನ್ನು ಝಳುಪಿಸುತ್ತಾ ಬರುತ್ತಿರುವುದನ್ನು ಮರುತ್ತನು ಕಂಡು ಭಯದಿಂದ ಗಡಗಡನೆ ನಡುಗುತಿದ್ದನು ಈರೀತಿಯಲ್ಲಿ ಭಯಗ್ರಸ್ತನಾದ ಮರುತ್ತನನ್ನು ಸಂವರ್ತನು ಧೈರ್ಯದ ನುಡಿಗಳಿಂದ ಸಮಾಧಾನಪಡಿಸಿ ಎದುರಿಗೆ ಬರುತಿರುವ ಇಂದ್ರಾದಿ ಅಮರಗಣವನ್ನು ಚಿತ್ರಪ್ರತಿಮೆಗಳಂತೆ ಸ್ತಂಭೀಭೂತರನ್ನಾಗಿ ಮಾಡಿಬಿಟ್ಟನು. ಆಗ ಪರಮಧರ್ಮಮಾರ್ಗಾವಲಂಬಿಯಾದ ಮರುತ್ತರಾಯನು ಸಂವರ್ತಮುನಿಯನ್ನು ಕುರಿತು||೪೩ ಕೃತಾಂಜಲಿಯಾಗಿ ಸವಿನಯದಿಂದ, ಎಲೈ ಸಂವರ್ತ ಮಹರ್ಷಿಗಳೆ, ಯಾಗದಲ್ಲಿ ಹವಿರ್ಭಾಗವನ್ನು ಸ್ವೀಕರಿಸತಕ್ಕ ದೇವಗಣವೆಲ್ಲಾ ಹೀಗೆ ಸ್ತಬ್ಧವಾಗಿ ಹೋದರೆ ಮುಂದೇನುಗತಿ? ನಾನು ಮಾಡುವ ಯಾಗದಲ್ಲಿ ದೇವತೆಗಳೇ ಪ್ರತ್ಯಕ್ಷವಾಗಿ ಬಂದು ಅವರವರಿಗೆ ಸಲ್ಲತಕ್ಕ ಹವಿರ್ಭಾಗವನ್ನು ಸ್ವೀಕರಿಸುವಂತೆಯೂ ಇಂದ್ರನಿಗೆ ನನ್ನಲ್ಲಿರುವ ದ್ವೇಷವನ್ನು ತಪ್ಪಿಸಬೇಕೆಂತಲೂ ಬಹುವಿಧವಾಗಿ ಬೇಡಿಕೊಳ್ಳಲು ಹಾಗೆಯೇ ಆಗಲೆಂದು ಅನುಗ್ರಹವಿತ್ತನು ||೪೪|| ಅನಂತರದಲ್ಲಿ ವ್ಯಾಸಮಹಾಮುನಿಯು

ಪಾರ್ಥಿಸಿದೊಡಿತ್ತನಾನೃಪನವಾಂಛಿತವನು ‖ ೪೪ ‖ ಭೂಮಿಶಕೇಳ್ಬಳಿಕಸಂವರ್ತಮುನಿವರನಸಾಮರ್ಥ್ಯಮಂನೋಡಿವೈರ ಮಂಬಿಟ್ಟುಸು | ತ್ರಾಮುಂಸಕಲದಿವಿಜರೊಡಗೂಡಿಯಜ್ಞದಹ | ವಿರ್ಭಾಗಮುಂಕೊಂಬೊಡೆ ‖ ಪ್ರೇಮದಿಂಪ್ರತ್ಯಕ್ಷಮಾಗಿಬಂ ದಿರುತಿರ್ದನಾಮರುತ್ತಂಗೆಸಂತೋಷಂನೆಗಳ್ದುದುಮ | ಹಾಮುಖಂನೆರದುದುಸಮಸ್ತವೈಭವದವಿಸ್ತಾರದಿಂಖ್ಯಾತಮಾಗಿ ‖೪೫‖ ವರ್ತಿಸಿತುವೈದಿಕವಿಧಾನದಿಂದೆಸೆವಸಂ | ವರ್ತಮುನಿಮಾಡಿಸೆಮಹಾಧ್ವರಂಸಕಲದಿವಿ | ಜರ್ತಂತಮ್ಮಭಾಗಂಗಳಂಪ್ರತ್ಯಕ್ಷ ಮಾಗಿಕೈಕೊಂಡರಿರ್ದು ‖ ಮರ್ತ್ಯಲೋಕಂಕನಕಮಯಮಾಗೆಭೂಮಿಯಮ | ರರ್ತೆಗೆದುಹೊತ್ತದಕ್ಷಿಣೆಗಳಿಂದಣಿದುಬಿಸು | ಟರ್ತುಹಿನಗಿರಿಯೊಳಗಣಿತಹೇಮರಾಶಿಗಳನೇನೆಂಬೆನಚ್ಚರಿಯನು ‖ ೪೬ ‖ ಪಾರ್ಥಿವಾಗ್ರಣಿಮರುತ್ತಂಬಳಿಕವಿನಯದಿಂ | ಪಾರ್ಥಿಸಿದನಿಂದ್ರಾದಿಗಳನವರ್ಮುದದೊಳಿ | ಷ್ಟಾರ್ಥಮಂಸಲಿಸಿದರ್ದಣಿದಲಸಿದರ್ದ್ವಿಜರ್ಭೂರಿದಕ್ಷಿಣೆಗಳಿಂದ ‖ ಸ್ವಾರ್ಥ

ಟೀ‖ ಭೂಮಿಶ-ಯುಧಿಷ್ಠಿರನೆ, ಕೇಳ್-ಲಾಲಿಸು, ಬಳಿಕ-ತರುವಾಯ, ಸಂವರ್ತಮುನಿವರನ, ಸಂವರ್ತನೆಂಬ ಮುನಿಪನ, ಸಾಮರ್ಥ್ಯಮಂ-ತಪಃಪ್ರಭಾವವನ್ನು, ನೋಡಿ-ಈಕ್ಷಿಸಿ, ಸುತ್ರಾಮಂ-ಸುರನಾಯಕನು, ವೈರಮಂ-ದ್ವೇಷವನ್ನು, ಬಿಟ್ಟು-ತ್ಯಜಿಸಿ, ಸಕಲದಿವಿಜರ-ದೇವತೆಗಳ, ಒಡಗೂಡಿ-ಸೇರಿ, ಯಜ್ಞದ-ಕ್ರತುವಿನಲ್ಲಿ ಕೊಡತಕ್ಕ, ಹವಿರ್ಭಾಗಮಂ-ಆಹುತಿಯ ಭಾಗವನ್ನು, ಕೊಂಬೊಡೆ-ತೆಗೆದುಕೊಳ್ಳಲು, ಪ್ರೇಮದಿಂ-ಪ್ರೀತಿಯಿಂದ, ಪ್ರತ್ಯಕ್ಷಮಾಗಿ-ಕಣ್ಣಿಗೆ ಕಾಣುವಂತೆ, ಬರುತಿರ್ದನು-ಐತರುತ್ತಿರ್ದನು, ಆ ಮರುತ್ತಂಗೆ-ಆ ಮರುತ್ತರಾಯನಿಗೆ, ಸಂತೋಷಂ-ಆಹ್ಲಾದವು, ನೆಗಳ್ದುದು-ಆವಿರ್ಭವಿಸಿತು, ಮಹಾಮುಖಂ-ಶ್ರೇಷ್ಠವಾದ ಹಯಮೇಧವು, ಸಮಸ್ತ-ಎಲ್ಲಾ, ವೈಭವ-ಸಾಮ್ರಾಜ್ಯದ, ವಿಸ್ತಾರದಿಂದ-ವೈಶಾಲ್ಯದಿಂದ, ಖ್ಯಾತಮಾಗಿ-ಹೆಸರುವಾಸಿಯುಳ್ಳದ್ದಾಗಿ, ನೆರೆದುದು-ನೆರವೇರುತ್ತಿತ್ತು ‖೪೫‖

ಟೀ‖ ಎಸೆವ-ಹೊಳೆಯುತ್ತಿರುವ, ಸಂವರ್ತಮುನಿ- ಸಂವರ್ತನೆಂಬು ಋಷಿಯು, ವೈದಿಕವಿಧಾನದಿಂ-ವೇದೋಕ್ತವಾದ ನಿಯಮದಿಂದ, ಮಾಡಿಸೆ-ನೆರವೇರಿಸಲು, ಮಹಾಧ್ವರಂ-ಮಹಾಯಾಗವು, ವರ್ತಿಸಿತು- ನೆರವೇರುತಿತ್ತು, ಸಕಲ ದಿವಿಜರು-ಎಲ್ಲಾ ಸುರರು, ಪ್ರತ್ಯಕ್ಷಮಾಗಿರ್ದು-ಎದುರಾಗಿಯೆ ಬಂದು, ತಮ್ಮ ತಮ್ಮ-ತಮತಮಗೆ ಬರಬೇಕಾಗಿರ್ದ, ಭಾಗಂಗಳಂ-ಪಸುಗೆಗಳನ್ನು, ಕೈಕೊಂಡರು-ಸ್ವೀಕರಿಸಿದರು, ಮರ್ತ್ಯಲೋಕಂ – ಭೂಲೋಕವು, ಕನಕಮಯಂ-ಚಿನ್ನದ ಮಯವು, ಆಗೆ-ಆಗಿ ಹೋಗಲು, ಭೂಮಿಯಮರರು-ಭೂಸುರೋತ್ತಮರು, ತೆಗೆದು-ಸ್ವೀಕರಿಸಿ, ಹೊತ್ತ-ಗಂಟುಕಟ್ಟಿದ, ದಕ್ಷಿಣೆಗಳಿಂ-ಮರ್ಯಾದಾದ್ರವ್ಯದಿಂದ, ದಣಿದು-ಸಂತುಷ್ಟರಾಗಿ, ತುಹಿನಗಿರಿಯೊಳು-ಹಿಮವತ್ಪರ್ವತದಲ್ಲಿ, ಅಗಣಿತ-ಅಸಂಖ್ಯಾತವಾದ, ಹೇಮರಾಶಿಗಳ-ಸುವರ್ಣದ ಸಮೂಹವನ್ನು, ಬಿಸುಟರು-ಹಾಕಿ ಬಿಟ್ಟರು, ಅಚ್ಚರಿಯನು- ಈ ಆಶ್ಚರ್ಯವನ್ನು, ಏನೆಂಬೆನು-ಏನೆಂದು ನುಡಿಯಲಿ ‖೪೬‖

ಟೀ‖ ಪಾರ್ಥಿವ-ರಾಜರಲ್ಲಿ, ಅಗ್ರಣಿ-ಮೊದಲನೆಯವನಾದ, ಮರುತ್ತನು, ಬಳಿಕ-ತರುವಾಯ, ವಿನಯದಿಂ-ನಮ್ರಭಾವದಿಂದ, ಇಂದ್ರಾದಿಗಳನು – ದೇವೇಂದ್ರನೆ ಮೊದಲಾದವರನ್ನು, ಪಾರ್ಥಿಸಿದನು – ಕೇಳಿಕೊಂಡನು, ಅವರ್-ಆ ಸುರರು, ಮುದದೊಳು-ಆನಂದದಿಂದ, ಇಷ್ಟಾರ್ಥಮಂ-ಬಯಸಿದ್ದನ್ನೆಲ್ಲಾ, ಸಲಿಸಿದರು – ಕೊಟ್ಟು ಸಂತೋಷಪಡಿಸಿದರು, ದ್ವಿಜರ್-ವಿಪ್ರರು, ಭೂರಿದಕ್ಷಿಣೆಗಳಿಂ-ಹೆಚ್ಚಿದ ದಕ್ಷಿಣಾದ್ರವ್ಯದಿಂದ, ದಣಿದು-ಸಂತುಷ್ಟರಾಗಿ, ಅಲಸಿದರ್-ಆಯಾಸವನ್ನು ಹೊಂದಿದರು, ಸಂವರ್ತಮುನಿಗೆ-ಸಂವರ್ತಮುನೀಂದ್ರನಿಗೆ, ಸ್ವಾರ್ಥಮೆಲ್ಲಮಂ-ಆ ಮರುತ್ತನ ಸರ್ವಸ್ವವನ್ನೂ, ಇತ್ತು-ದಾನ

ಯುಧಿಷ್ಠಿರನನ್ನು ಕುರಿತು ಎಲೈ ಧರ್ಮನಂದನನೆ ಕೇಳು, ಈ ರೀತಿಯಲ್ಲಿ ಸಂವರ್ತಮುನಿಯು ಇಂದ್ರಾದಿಗಳನ್ನೆಲ್ಲಾ ಚಿತ್ರಪ್ರತಿಮೆಗಳಂತೆ ಮಾಡಿದ್ದರಿಂದ ಶಚೀಪತಿಯು ಇವನ ಸಾಹಸಕ್ಕೆ ಮೆಚ್ಚಿ ವೈರವನ್ನು ಬಿಟ್ಟು ಸಕಲ ದೇವತಾಸಮಾವೃತನಾಗಿ ಮರುತ್ತನ ಯಾಗಕ್ಕೆ ಪ್ರತ್ಯಕ್ಷವಾಗಿಯೆ ಬಂದು ತಮ್ಮ ತಮ್ಮ ಹವಿರ್ಭಾಗವನ್ನು ಸ್ವೀಕರಿಸಲಾಗಿ ಮರುತ್ತನು ಅತ್ಯಾನಂದಭರಿತನಾದನು, ಆತನ ಯಾಗವೂ ಸಾಂಗವಾಗಿ ಅತಿ ವಿಜೃಂಭಣೆಯಿಂದ ನಡೆಯಿತು ‖೪೫‖ ಈ ಯಾಗದಲ್ಲಿ ದೇವತೆಗಳೆಲ್ಲಾ ಸಂತುಷ್ಟರಾಗಿ ಮರುತ್ತನ ಇಷ್ಟಾರ್ಥಗಳೆಲ್ಲವನ್ನೂ ಸಲ್ಲಿಸಿದ ಬಳಿಕ ಸುವರ್ಣಮಯವಾಗಿರುವ ಭೂಮಂಡಲದಲ್ಲಿ ವಿಪ್ರರೆಲ್ಲಾ ಬೇಕು ಬೇಕಾದಷ್ಟು ಹೇಮದ ಹೊರೆಗಳನ್ನು ಹೊತ್ತುಕೊಂಡು ಹೋಗಿ ಭಾರವನ್ನು ತಡೆಯಲಾರದೆ ಹಿಮಗಿರಿಯ ತಟದಲ್ಲೇ ಕೆಡವಿ ಹೋಗಿರುವರು ‖ ೪೬ ‖ ಸುರಗಣವು ಹವಿರ್ಭಾಗದಿಂದಲೂ ಭೂಸುರನಿಕರವು ಭೂರಿ ದಕ್ಷಿಣೆಗಳಿಂದಲೂ ಸಂತುಷ್ಟರಾಗಿ ಹೊರಟು ಹೋದಮೇಲೆ ತನ್ನ ಸರ್ವಸ್ವವನ್ನೂ ಸಂವರ್ತಮುನಿವರ್ಯನಿಗೆ ದಾನಮಾಡಿ ತೃಪ್ತಿಪಡಿಸಿದನು. ಯಾಗವು ಪೂರೈಸಿದ್ದಕ್ಕಾಗಿ ಅವಭೃತಸ್ನಾನವನ್ನೂ ನೆರವೇರಿಸಿದನು. ದೇವತೆಗಳೂ ಬ್ರಾಹ್ಮಣರೂ ಬಹುವಾಗಿ ಮರುತ್ತರಾಯನ ಯಾಗದ ಬಗೆಯನ್ನು ಕೊಂಡಾಡಿದರು. ಈ ರೀತಿಯಲ್ಲಿ ಲೋಕ ವಿಖ್ಯಾತವಾಗುವಂತೆ ಯಾಗವನ್ನು ಪೂರೈಸಿ ಅನೇಕ

## ಐದನೆಯ ಸಂಧಿ.

ಮೆಲ್ಲನುನಿತ್ತು ಸಂವರ್ತಮುನಿಗೆಮುಖ | ತೀರ್ಥದೊಳ್ಮಿಂದುಶುಚಿಯಾಗಿದೇವರ್ಕಳಿದು | ಸಾರ್ಥಮೆನೆಚಿರಕಾಲಮವನಿಯೊಳವಂಬಾಳ್ದುಪಡೆದನುತ್ತಮಗತಿಯನು ॥೪೭॥ ರಾಯಕೇಳಾಯಜ್ಞಸಂಗತಿಯನಾಬಾದ | ರಾಯಣಂಪೇಳ್ದಬಳಿಕವನಿಪಂಧರ್ಮಸಾ | ರಾಯಮಂಕೇಳ್ದನಾಮುನಿವರನೊಳಾವನರನಾವಕೃತ್ಯಂಗೈಯ್ಯಲು ॥ ಬೀಯದಜಸಂದಳೆವುದಿಲ್ಲಿನಾರಕದ | ಬಿರುಬೀಯದಸುಖಂಪರದೊಳೆಂತುದೊರಕೊಂಬುದಂ | ದಾಯುದಲಿವಿಸ್ತರಿಸಿಪೇಳ್ವುದೆನೆಶುಕತಾತಧರ್ಮಜಂಗಿಂತೆಂದನು ॥ ೪೮ ॥ ಸಾರ್ವನಿಗಮಾರ್ಥಮಂತಿಳಿದುಸತ್ಕರ್ಮಮಂ | ಸಾರ್ವಕಾಲಂಗೈದುಪರವಧೂವಿಷಯಮಂ | ಸಾರ್ವಚಿಂತೆಯನುಳಿದುಲೋಕಾಪವಾದಮಂಪರಿಹರಿಸಿಪರರೊಡವೆಗೆ ॥ ಪಾರ್ವನಲ್ಲದೆಸದಾಚಾರದಿಂನಡೆದೊಡಾ | ಪಾರ್ವನಿಹದೊಳ್ಕೀರ್ತಿಪರನಾಗಿಬಳಿಕವಂ | ಪಾರ್ವನುತ್ತಮಗತಿಗೆದೇಹಾವಸಾನದೊಳ್ಭೂಪಾಲಕೇಳೆಂದನು ॥ ೪೯ ॥ ಸರ್ವಧರ್ಮಗಳನರಿದೋವಿದೊಡೇಣಕೆ

---

ಮಾಡಿ, ಮಖ–ಯಾಗದ ತೀರ್ಥದೊಳು–ಮಂತ್ರಪೂರ್ವಕವಾದ ಜಲದಲ್ಲಿ, ಮಿಂದು–ಯಜ್ಞಪೂರ್ತಿಯ ಸ್ನಾನವಂ ಗೈದು, ಶುಚಿಯಾಗಿ – ನಿಷ್ಕಲ್ಮಷನಾಗಿ, ದೇವರ್ಕಳು – ಸುರರು, ಇದು–ಈ ಕ್ರತುವು, ಸಾರ್ಥಂ–ಉತ್ತಮವಾಯಿತು, ಎನೆ–ಎಂದು ಹೇಳಲು, ಚಿರಕಾಲಂ–ದೀರ್ಘಕಾಲವು, ಅವನಿಯೊಳ್ – ಭೂಲೋಕದಲ್ಲಿ, ಅವಂ–ಆ ಮರುತ್ತರಾಯನು, ಬಾಳ್ದು–ಜೀವಿಸಿ, ಉತ್ತಮಗತಿಯನು–ಮೋಕ್ಷವನ್ನು, ಪಡೆದನು–ಅನುಭವಿಸಿದನು ॥೪೭॥

ಟೀ॥ ರಾಯ–ಜನಮೇಜಯ ಭೂಪಾಲನೆ, ಕೇಳು–ಲಾಲಿಸು, ಆ ಯಜ್ಞಸಂಗತಿಯನು–ಆ ಮರುತ್ತರಾಯನು ಮಾಡಿದ ಯಾಗದ ವಿವರವನ್ನು, ಬಾದರಾಯಣಂ–ವ್ಯಾಸಮುನಿಪನು, ಪೇಳ್ದ–ಉಸುರಿದ, ಬಳಿಕ–ಅನಂತರ, ಅವನಿಪಂ–ಯುಧಿಷ್ಠಿರನು, ಆ ಮುನಿವರನೊಳು – ಆ ತಾಪಸೋತ್ತಮನಲ್ಲಿ, ಧರ್ಮ–ಉತ್ತಮಮಾರ್ಗದ, ಸಾರಾಯಮಂ–ಸ್ವಾರಸ್ಯವನ್ನು, ಕೇಳ್ದನು–ಪ್ರಶ್ನೆಮಾಡಿದನು, ಆವ ನರನು–ಯಾವ ಮಾನವನು, ಆವಕೃತ್ಯಂ–ಯಾವುದೊಂದು ಕೆಲಸವನ್ನು, ಗೈಯ್ಯಲು–ಎಸಗಲು, ಇಲ್ಲಿ–ಈ ಎಡೆಯಲ್ಲಿ, ಬೀಯದ–ಶಾಶ್ವತವಾದ, ಜಸಂ–ಕೀರ್ತಿಯು, ತಳೆವುದು–ಪ್ರಾಪ್ತಿಸುವುದು, ಪರದೊಳು–ಸ್ವರ್ಗದಲ್ಲಿ, ನಾರಕದ–ಯಮಪುರಿಯ, ಬಿರು–ಸಂಕಟವನ್ನು, ಈಯದ–ಕೊಡದ, ಸುಖಂ–ಸುಖವು, ಎಂತು–ಯಾವ ಬಗೆಯಾಗಿ, ದೊರಕೊಂಬುದು–ಸಿದ್ಧಿಸುವುದು, ಎಂದು–ಎಂಬದಾಗಿ, ಆಯದಲ್ಲಿ – ನೇರವಾಗಿ, ವಿಸ್ತರಿಸಿ–ವಿಶದವಾಗಿ, ಪೇಳ್ವುದು – ಹೇಳಬೇಕು, ಎನೆ–ಎಂದು ಕೇಳಲು, ಶುಕತಾತ–ವ್ಯಾಸಮುನಿಪನು, ಧರ್ಮಜಂಗೆ–ಯುಧಿಷ್ಠಿರನಿಗೆ, ಇಂತು–ಮುಂದೆ ಹೇಳುವಂತೆ, ಎಂದನು–ನುಡಿದನು ॥೪೮॥

ಟೀ॥ ಭೂಪಾಲ–ಯುಧಿಷ್ಠಿರನೆ, ಕೇಳು–ಲಾಲಿಸು, ಸಾರ್ವ–ಸಮಸ್ತವಾದ, ನಿಗಮ–ವೇದವಚನಗಳ, ಅರ್ಥಮಂ–ಆಶಯವನ್ನು ತಿಳಿದು– ಗೋಚರಮಾಡಿಕೊಂಡು, ಸತ್ಕರ್ಮಮಂ – ಒಳ್ಳೆಜ್ಜಗಳನ್ನು, ಸಾರ್ವಕಾಲಂ–ಅನವರತವೂ, ಗೈದು–ಎಸಗಿ, ಪರ–ಇತರರ, ವಧೂವಿಷಯಮಂ–ನಾರಿಯರ ವಿಚಾರವನ್ನು, ಸಾರ್ವ–ಪ್ರಸಿದ್ಧಿಮಾಡುವ, ಚಿಂತೆಯನು–ವ್ಯಥೆಯನ್ನು, ಉಳಿದು–ಬಿಟ್ಟು, ಲೋಕಾಪವಾದಮಂ–ಲೋಕ ದೌರ್ಜನ್ಯವನ್ನು, ಪರಿಹರಿಸಿ–ಕಳೆದುಕೊಂಡು. ಪರರ–ಇತರರ, ಒಡವೆಗೆ–ವಸ್ತುವಿಗೆ, ಪಾರ್ವನು–ಆಶಿಸುವನು, ಅಲ್ಲದೆ–ಆಗಿಹೋಗದೆ, ಸದಾ–ಸರ್ವಕಾಲವೂ, ಆಚಾರದಿಂ–ಸನ್ಮಾರ್ಗದಿಂದ, ನಡೆದೊಡೆ–ವರ್ತಿಸಿದರೆ, ಆ ಪಾರ್ವನು–ಆ ವಿಪ್ರನು, ಇಹದೊಳು–ಈ ಲೋಕದಲ್ಲಿ, ಕೀರ್ತಿಪರನಾಗಿ–ಯಶೋವಂತನಾಗಿ, ಬಳಿಕ–ತರುವಾಯ, ದೇಹಾವಸಾನದೊಳು – ಮರಣಕಾಲದಲ್ಲಿ, ಉತ್ತಮಗತಿಗೆ–ಶಾಶ್ವತವಾದ ಮೋಕ್ಷಕ್ಕೆ, ಪಾರ್ವನು–ಹೋಗಿ ಸೇರುವನು ॥೪೯॥

---

ವರ್ಷಗಳು ಅಪರಿಮಿತವಾದ ಸುಖಸಾಮ್ರಾಜ್ಯವನ್ನು ಅನುಭವಿಸಿ ಕೊನೆಗೆ ಸದ್ಗತಿಯನ್ನು ಪಡೆದನು ॥ ೪೭ ॥ ಎಂದು ನುಡಿದನು. ಎಲೈ ಜನಮೇಜಯನೆ ಕೇಳು, ಯುಧಿಷ್ಠಿರನು ಮರುತ್ತನ ಯಾಗದ ವಿವರವನ್ನು ಕೇಳಿದ ಬಳಿಕ ಮತ್ತೆ ವ್ಯಾಸ ಮುನೀಂದ್ರನನ್ನು ನೋಡಿ, ಎಲೈ ಪರಮರ್ಷಿಯೆ, ಮರುತ್ತನ ಕಥೆಯನ್ನು ಕೇಳಿ ತೃಪ್ತನಾದೆನು. ಸ್ವರ್ಗ ನರಕಗಳ ಪ್ರಾಪ್ತಿಗೇನು ಕಾರಣವೆಂಬುದನ್ನೂ ಯಾವ ಯಾವ ಕಾರ್ಯದಿಂದ ಉತ್ತಮಾಧಮ ಗತಿಗಳುಂಟಾಗುವವೆಂಬ ತೆರನನ್ನೂ ತಿಳಿಯಲಿಚ್ಛೈಸಿರುವೆನಾದ್ದರಿಂದ ಧರ್ಮ ರಹಸ್ಯವನ್ನು ವಿಸ್ತಾರವಾಗಿ ಬೋಧಿಸಿ ನನ್ನನ್ನು ಕೃತಾರ್ಥನನ್ನಾಗಿ ಮಾಡಬೇಕೆಂದು ಕೇಳಿಕೊಂಡ ಧರ್ಮನಂದನನನ್ನು ಕುರಿತು ವ್ಯಾಸಮಹಾಮುನಿಯು ಎಲೈ ಧರ್ಮಪುತ್ರನೆ ಕೇಳು ॥೪೮॥ ಬ್ರಾಹ್ಮಣ ಜನ್ಮವನ್ನೆತ್ತಿದ ಮಾನವನು ಸಮಸ್ತವಾದ ವೇದಶಾಸ್ತ್ರ ಪುರಾಣಂಗಳಲ್ಲಿ ಪಂಡಿತನಾಗಿಯೂ, ಸನ್ಮಾರ್ಗ ಪ್ರವರ್ತಕನಾಗಿಯೂ, ಪರಸ್ತ್ರೀಯನ್ನು ಸ್ವಪ್ನದಲ್ಲಿಯೂ ಸ್ಮರಿಸದೆಯೂ, ಲೋಕ ನಿಂದೆಗೆ ಬಾಹಿರನಾಗಿಯೂ, ಪರರೊಡವೆಯನ್ನು ಮಣ್ಣಿಗಿಂತಲೂ ಕಡೆಯೆಂದೆಣಿಸಿಯೂ, ಸದಾಚಾರ ಶೀಲನಾಗಿಯೂ ಇದ್ದರೆ ಅಂಥ ವಿಪ್ರವರ್ಯನಿಗೆ ಇಹದಲ್ಲಿ ಸುಖ ಸಾಮ್ರಾಜ್ಯವೂ ಪರದಲ್ಲಿ ಶಾಶ್ವತವಾದ ಸದ್ಗತಿಯೂ ಉಂಟಾಗುವುದರಲ್ಲಿ ಲೇಶವೂ ಅನುಮಾನವೆ ಇಲ್ಲವು ॥೪೯॥ ಹೀಗೆಯೇ ಸಕಲ ವರ್ಣಾಶ್ರಮದ ಧರ್ಮಗ

ಬೇ | ಸರ್ವನಲ್ಲದೊಡಾತ್ಮವಿದನಾದೊಡಿಳೆಯೊಳ್ಪ | ಸರ್ವಡೆದುಕ್ಷತ್ರಿಯಂಕಾದಿಮಡಿದೊಡೆಸೂರೆಗೊಂಬನಮರಾವತಿಯನು | ದುರ್ವಚನಮಂನುಡಿಯದತಿಥಿಗಳಕೆಡೆನುಡಿಯ | ದುರ್ವಧನಮುಂಕೂಡಿಗೋರಕ್ಷಣಂಮಾಳ್ಪ | ದುರ್ವರೆಯೊಳಿದುಕೀರ್ತಿವೈಶ್ಯಂಗೆಪರಗತಿಮುಕುಂದಸೇವೆಯೊಳಿಪ್ಪುದು || ೫೦ || ದ್ವಿಜರಾಸರಂತಳೆದುಬೆಸಗೈವಶೂದ್ರನುಂ | ದ್ವಿಜರಾಜವಾಹನನಸ್ಮರಣೆಯಿಂದೈದುವಂ | ದ್ವಿಜರಾಜಸನ್ನಿಭದಸುಗತಿಯಂಜಗದೊಳಂತದುಕುಲಸ್ತ್ರೀಯರೊಳಗೆ || ನಿಜನಾಥಭೀತೆಸುಚರಿತ್ರೆಗುಣವತಿಮಾನಿ | ನಿಜನಾಪವಾದವಿರಹಿತೆಯೆನಿಪನಾರಿಯಂ | ಸುಜನಾದಿನಿರ್ಜರರ್ವಂದಿಸುವರೇನವಳಸುಕೃತಮೆಂತೋಧರೆಯೊಳು||೫೧|| ಪತಿದೈವಮೆಂದರಿದುನಡೆವಸತಿಗಹುದುಪರ | ಗತಿಯಲ್ಲದಂಗನೆಯರತಿಸಾಹಸಿಗಳವರ | ಕೃತಕಶೀಲಂಗಳಂನಂಬಲಾಗದು ಮೇ

---

ಟೀ|| ಸರ್ವ-ಸಮಸ್ತವಾದ, ಧರ್ಮಗಳನು-ಧರ್ಮಮಾರ್ಗಗಳನ್ನೂ, ಅರಿದು-ಗ್ರಹಿಸಿದವನಾಗಿ, ಓವಿದೊಡೆ-ಆಚರಿಸಿದರೆ, ರಣಕ್ಕೆ-ಯುದ್ಧಕ್ಕೆ, ಬೇಸರ್ವನು-ಹಿಮ್ಮೆಟ್ಟುವನು, ಅಲ್ಲದೊಡೆ ಅಲ್ಲವಾದರೆ, ಆತ್ಮವಿದನು-ಸ್ವಾತ್ಮನ ತಿಳಿವಳಿಕೆಯನ್ನುಂಟಾದವನು, ಆದೊಡೆ-ಆದಲ್ಲಿ, ಇಳೆಯೊಳು-ಧರೆಯಲ್ಲಿ, ಸೆಸರ್ವಡೆದ-ಕೀರ್ತಿವಂತನಾಗಿ, ಕಾದಿ-ಹೋರಾಡಿ, ಮಡಿದೊಡೆ-ಮರಣವನ್ನೈದಿದರೆ, ಕ್ಷತ್ರಿಯಂ-ದ್ವಿತೀಯವರ್ಣಾಶ್ರಮದವನು, ಅಮರಾವತಿಯನು-ಇಂದ್ರನ ರಾಜಧಾನಿಯನ್ನು, ಸೂರೆಗೊಂಬನು-ಲೂಟಿಮಾಡುವನು, ವೈಶ್ಯಂಗೆ-ತೃತೀಯವರ್ಣಾಶ್ರಮದವನಿಗೆ, ದುರ್ವಚನಮಂ-ದುರ್ಭಾಷೆಯನ್ನು, ನುಡಿಯದೆ-ಹೇಳದೆ, ಅತಿಥಿಗಳ-ಯಾಚಕರನ್ನು-ಹಸಿದು ಬಂದವರನ್ನು ಕೆಡೆನುಡಿಯದೆ-ಸಿಟ್ಟಿನಿಂದ ವ್ಯತಿರಿಕ್ತವಾದ ಉತ್ತರವನ್ನೀಯದೆ, ಉರ್ವಧನಮಂಕೂಡಿ-ಸಂಪತ್ತಿನಿಂದೊಡಗೂಡಿ, ಗೋರಕ್ಷಣಂ-ಪಶುಪಾಲನೆಯನ್ನು, ಮಾಳ್ಪುದು-ಎಸಗುವದು, ಉರ್ವರೆಯೊಳು-ಧರಾಮಂಡಲದಲ್ಲಿ, ಇದು-ಈ, ಕೀರ್ತಿ-ಯಶಸ್ಸು, ಪರಮಗತಿ-ಉತ್ಕೃಷ್ಟಮಾರ್ಗವು, ಮುಕುಂದ-ಮುಕ್ತಿದಾಯಕನಾದ ಸ್ವಾಮಿಯ, ಸೇವೆಯೊಳು-ಪೂಜೆಯಲ್ಲಿ, ಅಪ್ಪುದು-ಸಿದ್ಧಿಸುವವುದು || ೫೦ ||

ಟೀ|| ದ್ವಿಜರ-ವಿಪ್ರರ, ಆಸರಂ-ಆಶ್ರಯವನ್ನು, ತಳೆದು-ಹೊಂದಿ, ಬೆಸಗೈವ-ಅವರ ಅನುಜ್ಞೆಯನ್ನು ಪಾಲಿಸುವ, ಶೂದ್ರನುಂ-ನಾಲ್ಕನೆ ವರ್ಣದವನು, ದ್ವಿಜ-ಎರಡು ಜನ್ಮವುಳ್ಳ ಪಕ್ಷಿಗಳ, ರಾಜ-ಅರಸನಾದ ಗರುಡನನ್ನು, ವಾಹನನ-ವಾಹನವಾಗಿವುಳ್ಳ ಮಹಾವಿಷ್ಣುವಿನ, ಸ್ಮರಣೆಯಿಂ-ಧ್ಯಾನದಿಂದ, ದ್ವಿಜರಾಜ-ಇಂದುಕಿರಣಗಳಿಗೆ, ಸನ್ನಿಭ-ಸದೃಶವಾದ, ಸುಗತಿಯಂ-ಮೋಕ್ಷವನ್ನು, ಐದುವಂ-ಪಡೆಯುವನು, ಅದು-ಆ ಸದ್ಗತಿಯು, ಅಂತು-ಅದೇರೀತಿಯಾಗಿಯೇ, ಕುಲಸ್ತ್ರೀಯರೊಳಗೆ-ಒಳ್ಳೆವಂಶದವರಲ್ಲಿ ಜನಿಸಿದ ನಾರಿಯರಲ್ಲಿ, ನಿಜ-ಸ್ವಕೀಯನಾದ, ನಾಥ-ಪತಿಗೆ, ಭೀತೆ-ಹೆದರತಕ್ಕವಳು, ಸುಚರಿತ್ರೆ-ಸನ್ಮಾರ್ಗಪ್ರವರ್ತಕಳು, ಗುಣವತಿ-ಒಳ್ಳೆ ಗುಣವಂತಳು, ಮಾನಿನಿ-ಮರ್ಯಾದೆಗೆ ಕಟ್ಟುಬೀಳುವಳು, ಜನಾಪವಾದ-ಲೋಕನಿಂದೆಗೆ, ವಿರಹಿತೆ-ದೂರವಾದವಳು, ಎನಿಪ-ಎಂದು ಎನ್ನಿಸಿಕೊಳ್ಳತಕ್ಕ, ನಾರಿಯಂ-ವಧುವನ್ನು, ಸುಜನಾದಿ-ಸತ್ಪುರುಷರೆ ಮೊದಲಾದ, ನಿರ್ಜರರು-ಸುರರು, ವಂದಿಸುವರು-ಎರಗುವರು, ಧರೆಯೊಳು-ಇಳೆಯಲ್ಲಿ, ಅವಳ-ಆ ಮಾನಿನಿಯ, ಸುಕೃತಂ-ಒಳ್ಳೇ ಕಾರ್ಯದ ಫಲವು, ಎಂತೊ-ಎಷ್ಟು ಉತ್ತಮವಾದದ್ದೋ ? ||

ಅ|| ವಿ|| ದ್ವಿಜರಾಜವಾಹನ-ದ್ವಿಜರಾಜ (ಷ. ತ.). ದ್ವಿಜರಾಜವಾಹನ (ಬ ಸ.). ದ್ವಿಜ-ಬ್ರಹ್ಮ, ಕ್ಷತ್ರಿಯ, ವೈಶ್ಯ, ಪಕ್ಷಿ, ಹಲ್ಲು ಮೊದಲಾದ ಅರ್ಥಗಳನ್ನೀಯುವುದು, ದ್ವಿಜ ಎಂದರೆ ಎರಡು ಜನ್ಮವುಳ್ಳದ್ದು. || ೫೧ ||

ಟೀ|| ಪತಿ-ನಾಥನೇ, ದೈವಮೆಂದು-ದೇವರೆಂದು, ಅರಿದು-ಚಿತ್ತವಿಟ್ಟು, ನಡೆವ- ವರ್ತಿಸುವ, ಸತಿಗೆ-ಸ್ತ್ರೀಗೆ, ಪರಗತಿ-ಮುಕ್ತಿಯು, ಅಹುದು-ಸಿದ್ಧಿಸುವದು, ಅಲ್ಲದೆ-ಅದಕ್ಕೆ ವ್ಯತಿರಿಕ್ತರಾದ, ಅಂಗನೆಯರು- ನಾರಿಯರು, ಅತಿಸಾಹಸಿಗಳು-ಮಹಾಕಠಿಣರು, ಅವರ-ಆ ವಧುಗಳ, ಕೃತಕಶೀಲಂಗಳಂ-ಕೃತ್ರಿಮ ಮಾರ್ಗವನ್ನು, ನಂಬಲಾಗದು - ನೆಚ್ಚ ಕೂಡದು,

---

ಳನ್ನೂ ಅರಿತು ಅವರವರ ಯೋಗ್ಯತಾನುಸಾರವಾಗಿ ಕಾಪಾಡುತ್ತಲೂ, ಯುದ್ಧದಲ್ಲಿ ಹಿಮ್ಮೆಟ್ಟದೆಯೂ, ತನ್ನನ್ನು ತಾನು ತಿಳಿದವನಾಗಿಯೂ ಎಂದರೆ ಪ್ರಜೆಗಳನ್ನೆಲ್ಲಾ ಮಕ್ಕಳಂತೆ ಸಲಹುತ್ತಲೂ ಇರುವ ಕ್ಷತ್ರಿಯಶ್ರೇಷ್ಠನು ದೇವೇಂದ್ರನ ಅಮರಾವತೀ ಪಟ್ಟಣವನ್ನೂ ನಿರಾಯಾಸವಾಗಿ ಜೈಸಬಲ್ಲನು. ಮತ್ತು ದುರ್ಭಾಷೆಗಳನ್ನಾಡದೆಯೂ, ಅತಿಥಿ ಅಭ್ಯಾಗತರನ್ನು ಆದರದಿಂದ ಸತ್ಕರಿಸುತ್ತಲೂ, ಅಪರಿಮಿತವಾದ ಐಶ್ವರ್ಯದಿಂದೊಡಗೂಡಿ ಕೃಷಿವಾಣಿಜ್ಯಾದಿಗಳನ್ನು ಮಾಡಿಕೊಂಡು ಸ್ವಧರ್ಮನಿರತನಾಗಿರುವ ತೃತೀಯವರ್ಣಾಶ್ರಮ ಧರ್ಮವುಳ್ಳ ವೈಶ್ಯನು ಇಹದಲ್ಲಿ ಕೀರ್ತಿಯನ್ನೂ ಪರದಲ್ಲಿ ಮೋಕ್ಷವನ್ನೂ ಪಡೆಯದಿರನು || ೫೦ || ಶೂದ್ರನು ಯಾವಾಗಲೂ ಬ್ರಹ್ಮ ಕ್ಷತ್ರಿಯ ವೈಶ್ಯರಿಗೆ ಸೇವೆಯಂ ಮಾಡುತ್ತ ಹರಿನಾಮ ಸಂಕೀರ್ತನೆಯಿಂದ ಉತ್ತಮಲೋಕವಂ ಪಡೆಯುವನು. ಸ್ತ್ರೀಯು ಸತ್ಕುಲಪ್ರಸೂತಳೂ, ತನ್ನ ಗಂಡನ ಮಾತನ್ನುಮೀರಿ ನಡೆಯದಿರುವವಳೂ, ಸಚ್ಚರಿತ್ರೆಯುಳ್ಳವಳೂ, ಸದ್ಗುಣ ಸಂಪನ್ನೆಯೂ, ಅಪವಾದರಹಿತೆಯೂ, ಆಗಿದ್ದರೆ ಅಂತಹ ಮಾನಿನಿಯನ್ನು ಸಜ್ಜನರೂ ದೇವತೆಗಳೂ ಸಹ

ಣ್ಸ್ವತಂತ್ರಮಂಕೊಡಲಾಗದು ‖ ಪಿತನಿಂದಬಾಲ್ಯದೋಳ್ಪತಿಯಿಂದಪ್ರಾಯದೋಳ್ಸುತನಿಂದ ವೃದ್ಧಾಪ್ಯದೋಳ್ಕುಲಸ್ತ್ರೀ ಸುರಕ್ಷಿತೆಯಾಗದಿರ್ದೊಡವಳಿಂದನಿಜವಂಶಕುಪಹತಿಬಂದೊಡಲ್ಲದಿರದು‖೫೨‖ ವರಯಜ್ಞಶಾಲೆಯುಂಬಾಲೆಯುಂದ್ವಿಜಪಙ್ಕ್ತಿ ಪರಿಶೋಭಿಸದೊಡೆಸತ್ಕವಿತೆಯುಂಯುವತಿಯುಂ | ಚರಣಗತಿಸಮತೆವೆತ್ತಿರದೊಡಬ್ಜಾರಿಯುಂನಾರಿಯುಂಚಾರುತರದ ‖ ಕರಭೋರುಕಾಂತಿಸಂಯುಕ್ತಮಾಗಿರದಿರ್ದೊಡೆರಸಾಳ್ವಧರಣಿಯುಂತರುಣಿಯುಂಶಾಲಿಸುಂ| ದರಮಾಗಿರದೊಡೆಸೌಮಂಗಲ್ಯಮಾಗಿಯುಂಮೇಲೆಯುನ್ನತಿಯಪ್ಪುದೆ ‖೫೩‖ ಮಾವಂಗೆಭಾವಂಗೆಮೇಣತ್ತೆಗೈದೆಸಂ | ಭಾವಿಸುತಸೇವಿಸುತಕಾಂತಂಗೆಸುರತಸಂ |

---

ಮೇಣ್-ಅದಲ್ಲದೆ, ಸ್ವತಂತ್ರಮಂ-ಸ್ವೇಚ್ಛಾಪ್ರವರ್ತನೆಗೆ ದಾರಿಯನ್ನು, ಕೊಡಲಾಗದು - ಈಯಲಾಗದು, ಬಾಲ್ಯದೋಳ್- ಶೈಶವದಲ್ಲಿ, ಪಿತನಿಂದ-ಜನಕನಿಂದಲೂ, ಪ್ರಾಯದೊಳು-ಹರಯದಲ್ಲಿ, ಪತಿಯಿಂದ-ನಾಥನಿಂದಲೂ, ವೃದ್ಧಾಪ್ಯದೋಳ್- ವಾರ್ಧಿಕ್ಯದಲ್ಲಿ, ಸುತನಿಂದ-ಪುತ್ರನಿಂದಲೂ, ಕುಲಸ್ತ್ರೀ-ಸತ್ಕುಲಪ್ರಸೂತಳು, ರಕ್ಷಿತೆಯು-ಪಾಲಿಸಲ್ಪಡುವಳು, ಆಗದಿರ್ದೊಡೆ- ಆಗದೆಹೋದಲ್ಲಿ, ಅವಳಿಂದ-ಆ ನಾರಿಯಿಂದ, ನಿಜವಂಶಕೆ-ತನ್ನ ಸಂತತಿಗೆ (ಗಂಡನ ಮತ್ತು ತಂದೆಯ ಸಂತತಿಗೆ), ಉಪಹತಿ-ಎಡರು, ಬಂದಲ್ಲದೆ-ಪ್ರಾಪ್ತವಾಗದೆ, ಇರದು-ತಪ್ಪುವುದಿಲ್ಲ.

ಅ‖ ವಿ‖ ಸ್ತ್ರೀಗೆ ಸ್ವಾತಂತ್ರ್ಯವು ಎಂದಿಗೂ ಕೂಡದೆಂದು ಭಾವವು ‖ ೫೨ ‖

ಟೀ‖ ವರ-ಒಳ್ಳೆಯದಾದ, ಯಜ್ಞಶಾಲೆಯುಂ - ಯಜ್ಞಮಂಟಪವೂ, ದ್ವಿಜ - ವಿಪ್ರವರ್ಯರಿಂದ, ಪರಿಶೋಭಿಸದೊಡೆ-ಕಾಂತಿಯನ್ನೈದಿಲ್ಲವಾದರೆ, ಬಾಲೆಯುಂ-ಕನ್ಯಾರತ್ನವು, ದ್ವಿಜಪಙ್ಕ್ತಿಯಿಂ-ದಂತಶ್ರೇಣಿಯಕಾಂತಿಯಿಂದ, ಪರಿಶೋಭಿಸದೊಡೆ-ಹೊಳೆಯದಿದ್ದಲ್ಲಿ, ಸತ್ಕವಿತೆಯುಂ-ಯೋಗ್ಯವಾದ ಕವಿತಾರಚನೆಯು, ಚರಣ-ಅಡಿಗಳ, ಗತಿ=ಇರುವಿಕೆಯು ಸಮತೆಯ-ಸಾದೃಶ್ಯವನ್ನು, ಒತ್ತಿರದೊಡೆ-ತಾಳಿರುವುದಿಲ್ಲವಾದರೆ, ಯುವತಿಯು - ಯೌವನಸ್ಥಳಾದ ನಾರಿಯು, ಚರಣ-ಕಾಲುಗಳ, ಗತಿ-ಗಮನದ, ಸಮತೆಯ-ಒಂದೇರೀತಿಯಾಗುವಿಕೆಯನ್ನು, ಒತ್ತಿರದೊಡೆ - ಪಡೆದಿಲ್ಲವಾದರೆ, ಅಬ್ಜಾರಿಯುಂ-ಅಮಲಕ್ಕೆ ಹಗೆಯಾದ ವಿಧುವು, ಕರ-ಕಿರಣಗಳ, ಭಾ-ದ್ಯುತಿಯಿಂದುಂಟಾದ, ಉರು-ಅಧಿಕವಾದ, ಕಾಂತಿ-ಪ್ರಕಾಶದಿಂದ, ಸಂಯುಕ್ತಮಾಗಿ-ಕೂಡಿಕೊಂಡು, ಇರದಿರ್ದೊಡೆ-ಇಲ್ಲದೆಹೋದರೆ, ನಾರಿಯುಂ-ಸ್ತ್ರೀಯು, ಕರಭ-ಮದ್ದಾನೆಯ ಊರು-ಸೊಂಡಲಿನ ಹಾಗೆ ಇರತಕ್ಕ ತೊಡೆಗಳ, ಕಾಂತಿ-ಪ್ರಕಾಶದಿಂದ, ಸಂಯುಕ್ತಮಾಗಿ-ಒಂದುಗೂಡಿ, ಇರದಿರ್ದೊಡೆ-ಇರದೆಹೋದರೆ, ಅರಸ-ರಾಜನು, ಆಳ್ವ-ಸಂರಕ್ಷಣೆಮಾಡುವ, ಧರಣಿಯು-ಇಳೆಯು, ಶಾಲಿ-ನೆಲ್ಲು ಪೈರುಗಳಿಂದ, ಸುಂದರಮಾಗಿ-ಅಂದವಾಗಿ, ಇರದೊಡೆ-ಇಲ್ಲದೆಹೋದರೆ, ತರುಣಿಯುಂ-ಪ್ರಾಯದ ಸ್ತ್ರೀಯು, ಶಾಲಿ-ಶಾಂತತೆಯಿಂದ, ಸುಂದರಮಾಗಿ-ಅಲಂಕಾರದಿಂದ ಕೂಡಿ. ಇರದೊಡೆ- ಇರದಿದ್ದರೆ, ಮೇಲೆ - ಅದೂಅಲ್ಲದೆ, ಸೌಮಂಗಲ್ಯಮಾಗಿಯುಂ - ಮಂಗಳಕರವಾಗಿಯೂ, ಸೌಮಂಗಲ್ಯಮಾಗಿಯೂ-ಸುಲಕ್ಷಣ ಚಿಹ್ನೆಯಿಂದ ಕೂಡಿಯೂ (ಮುತ್ತೈದೆಯಾಗಿಯೂ), ಇರದೊಡೆ-ಇರದೆ ಇದ್ದರೆ, ಉನ್ನತಿ-ಏಳಿಗೆಯು, ಅಪ್ಪುದೆ-ಆದೀತೆ? (ಆಗುವದಿಲ್ಲವೆಂದು ಭಾವವು).

ಅ‖ ವಿ‖ ಶ್ಲೇಷಾಲಂಕಾರವು, ನಾರಿ-ಸ್ತ್ರೀ, ಧನುಸ್ಸಿನದಾರ, ಧರಣಿ-ಭೂಮಿ, ಆಕಾಶನ ಪತ್ನಿ. ಕವಿತೆ-ಇದು ಭಾವನಾಮ, (ಚಂದ್ರನಪರವಾಗಿ) ಕರಗಳಭಾ-(ಷ. ತ.) ಉರುಕಾಂತಿ (ವಿ. ಪೂ.) ಕರಭ-ಕಾಂತಿಪ್ರಸರಣೆಯ ಉರುಕಾಂತಿ-(ಷ. ತ.) (ಸ್ತ್ರೀಪರವಾಗಿ), ಕರಭದಂತೆ ಇರುವ ಊರು (ಉ. ಪೂ.) ಕರಭೋರುವಿನ ಕಾಂತಿ (ಷ. ತ.) ಕರಭೋರುಕಾಂತಿಯಿಂದ ಸಂಯುಕ್ತಂ (ತೃ. ತ.) ‖೫೩‖

ಟೀ‖ ಮಾವಂಗೆ-ತನ್ನ ಗಂಡನ ಪಿತನಿಗೂ, ಭಾವಂಗೆ-ತನ್ನ ಪತಿಯ ಅಣ್ಣನಿಗೂ, ಮೇಣ್-ಅಲ್ಲದೆ, ಅತ್ತೆಗೆ-ಪತಿಯ ತಾಯಿಗೂ, ಐದೆ-ಚನ್ನಾಗಿ, ಸಂಭಾವಿಸುತ-ಮನ್ನಣೆಯನ್ನೀಯುತ್ತ, ಸೇವಿಸುತ-ಓಲೈಸುತ್ತ, ಕಾಂತಂಗೆ-ಪ್ರಿಯ

---

ಕೊಂಡಾಡುವರು. ಗಂಡನನನ್ನೇ ದೇವರೆಂದು ಭಾವಿಸಿ ಪತಿಭಕ್ತಿ ಪಾರಾಯಣಳಾಗಿರುವ ನಾರೀಮಣಿಯು ಸದ್ಗತಿಯನ್ನೈದುವಳು. ಸ್ತ್ರೀಯರು ಸಾಹಸಗಾತಿಯರೂ ಮೋಸದ ನಡವಳಿಕೆಯುಳ್ಳವರೂ ಆದ್ದರಿಂದ ಅವರನ್ನೆಂದಿಗೂ ನಂಬಲಾರದು. ಅವರನ್ನು ಬಾಲ್ಯದಲ್ಲಿ ತಂದೆಯೂ ಯೌವನದಲ್ಲಿ ಪತಿಯೂ ವಾರ್ಧಿಕ್ಯದಲ್ಲಿ ಸುತನೂ ರಕ್ಷಿಸಬೇಕಲ್ಲದೆ ಸ್ವಾತಂತ್ರ್ಯವನ್ನೇ ಕೊಡಕೂಡದು. ಸ್ತ್ರೀಯರು ಸ್ವಾತಂತ್ರ್ಯವುಳ್ಳವರಾದರೆ ಅಂಥವರಿಂದ ಹುಟ್ಟಿದ ಮನೆಗೂ ಸೇರಿದಮನೆಗೂ ಹಾನಿಯುಂಟಾಗದಿರುವುದಿಲ್ಲ ‖೫೨‖ ಯಾವ ಸುದತಿಯು ಮಂದಗಮನದಿಂದಲೂ, ಆನೆಯ ಸೊಂಡಲನ್ನು ಹೋಲುವ ತೊಡೆಗಳಿಂದಲೂ, ಶಾಂತ ಸ್ವಭಾವದಿಂದಲೂ, ಸೌಮಂಗಲ್ಯದಿಂದಲೂ ಮೆರೆವಳೋ ಅಂಥವಳಿಂದ ದೇಶಕ್ಕೆ ಕ್ಷೇಮವೆಂದರಿಯಬೇಕು ‖ ೫೩ ‖ ಅತ್ತೆ ಮಾವ ಭಾವ ಮೊದಲಾದವರನ್ನು ಮರ್ಯಾದೆಯಿಂದ ಕಂಡು ಅವರ ಮನಸ್ಸಿನಂತೆ ಅನುವರ್ತಿಸುತ್ತ ಪತಿಯ ಪರಮ

ಜೀವನನವನೀವನವಯುವತಿಗಿಹಲಕ್ಷಣಂ ಸುಕೃತಫಲಮಂತಲ್ಲದೆ || ಪಾವಿನಂತಾವಿನಂತಡಿಗಡಿಗೆಮೊರೆದೆದ್ದು | ಡಾವರಿಸಿಸೀವರಿಸಿ ಮನೆಗೆಲಸಮಂಗೈಯ | ದಾವನಿತೆಸಾವನಿತೆಲೇಸೆನಿಸದಿಹಳುತತ್ಪತಿಗೆತದ್ಗುರುಜನಕ್ಕೆ || ೫೪ || ಕಾಲುನಾಲಗೆಗಳುಂಕಪ್ಪಾಗಿ ಮೇದಿನಿಯ | ಮೇಲೆಕಾಲಂಗುಳಿಗಳೋರಗೆಯೊಳಗೊಂದದಿರೆ | ಬಾಲೆಗೀಲಕ್ಷಣಂಮುತ್ತೈದೆತನಮಾಗಲರಿಯದುವಿಧವೆಯಾದೊಡೆ || ಶೀಲಮಾಲಂಬಿಸಿತವರ್ಮನೆಯೊಳಿರ್ದನಿತು | ಕಾಲಮಾಲಸ್ಯಮಿಲ್ಲದೆಸದಾಚಾರಕನು | ಕೂಲೆಯಾಗಿರುತಿರ್ದುದೇಹಮಂದಂಡಿಸಲ್ಪತಿಲೋಕಮುಂಪಡೆವಳು || ೫೫ || ವಿಟಗೋಷ್ಠಿಯೋಳ್ಭೋಗಮುಂಬಯಸಿಕಾಮಲಂ | ಪಟೆಯಾಗಿಮೇಣರ್ಥಕಾಮಂಗಳಿಸಿಗರ್ವದಿಂ | ಜಠರಮುಂಪೊರೆವುತ್ತಪೆರೆಯುರ್ಚಿದುರಗಿಯವೋಲಿಹದುಷ್ಟವಿಧವೆಗೆತಿಯು | ಘಟಿಪುದಾವಂಗವನುಮವಳುನುವಳಾಣ್ಮನುಂ | ಸಟೆಯಲ್ಲಮೂವರುಂಪತಿತರದರಿಂದಸಂ | ಕಟದೊಳುಂನೋಡಲಾಗದುಪರಸ್ತ್ರೀಯರಂನೆರೆದೊಡ

---

ನಿಗೆ, ಸುರತ ಸಂಜೀವನನನು–ರತಿಕ್ರೀಡಾದಿ ದಿವ್ಯೌಷಧವನ್ನು, ಈವ–ಕೊಡತಕ್ಕಂಥ, ನವಯುವತಿಗೆ-ಹೊಸ ಯೌವನಶಾಲಿಯಾದ ಸ್ತ್ರೀಗೆ, ಇಹ- ಇರಬೇಕಾದ, ಲಕ್ಷಣಂ – ಈ ಚಿಹ್ನೆಗಳು, ಸುಕೃತಫಲಂ - ಸತ್ಫಲಕ್ಕೆ ಹೇತುವಾಗಿರುವುದು, ಅಲ್ಲದೆ–ಈರೀತಿಗೆ ವ್ಯತಿರಿಕ್ತರಾಗಿ, ಪಾವಿನಂತೆ–ಹಾವಿನ ಹಾಗೂ, ಆವಿನಂತೆ–ಪಶುಗಳ ರೀತಿಯಾಗಿಯೂ, ಅಡಿಗಡಿಗೆ–ಬಾರಿಬಾರಿಗೂ, ಮೊರೆದು–ಮುಖವನ್ನು ಗಂಟುಹಾಕಿಕೊಂಡು, ಎದ್ದು–ಮೇಲ್ಗಡೆಗೆ ಎದ್ದುನಿಂತು, ಡಾವರಿಸಿ-ಹಿಂಸೆಯನ್ನುಂಟುಮಾಡಿ, ಸೀವರಿಸಿ–ದುಷ್ಕಾರ್ಯಗಳಿಗೆ ಪ್ರವರ್ತಿಸಿ, ಮನೆಗೆಲಸಮಂ–ಗೃಹಕೃತ್ಯದ ಕಜ್ಜಗಳನ್ನು, ಗೈಯದ–ಎಸಗದಿರುವ, ಆವನಿತೆ–ಆ ಸ್ತ್ರೀಯು, ಸಾವನಿತೆ–ಪ್ರಾಣಬಿಡಬೇಕಾದ್ದೇ, ತತ್ಪತಿಗೆ–ಆಕೆಯ ನಾಥನಿಗೂ, ತದ್ಗುರು ಜನಕ್ಕೆ–ಅವಳ ತಾಯಿ, ತಂದೆ, ಅತ್ತೆ, ಮಾವ, ಭಾವ ಮೊದಲಾದ ಬಂಧು ವರ್ಗದವರಿಗೂ, ಲೇಸು-ಮೇಲಾದದ್ದು ಎಂಬದಾಗಿ, ಎನಿಸದೆ ಇಹಳೆ–ಹೇಳಿಸಿಕೊಳ್ಳದಿರುವಳೆ ||೫೪||

ಟೀ|| ಕಾಲುನಾಲಗೆಗಳುಂ – ಪಾದ ಮತ್ತು ಜಿಹ್ವೆಯು, ಕಪ್ಪಾಗಿ – ಕರೀಬಣ್ಣವಾಗಿ, ಮೇದಿನಿಯಮೇಲೆ–ಧರಾವಲಯದಲ್ಲಿ, ಕಾಲಂಗುಳಿಗಳು–ಪಾದದ ಬೆಟ್ಟುಗಳು, ಓರಗೆ–ಒಳಭಾಗದಲ್ಲಿ, ಒಂದದಿರೆ – ಕೂಡದಿದ್ದರೆ, ಬಾಲೆಗೆ–ಕನ್ನೆಗೆ, ಈ ಲಕ್ಷಣಂ–ಈ ಚಿಹ್ನೆಯು, ಮುತ್ತೈದೆತನಂ–ಗಂಡನನ್ನು ಇಟ್ಟುಕೊಂಡು ಲಕ್ಷಣವಾಗಿರುವ ಭಾಗ್ಯವನ್ನು, ಆಗಲು–ಪಡೆಯಲು, ಅರಿದು–ಅಸಾಧ್ಯವು, ವಿಧವೆಯಾದೊಡೆ–ಪತಿಹೀನಳಾದರೆ, ಶೀಲಂ–ಸನ್ಮಾರ್ಗವನ್ನು ಆಲಂಬಿಸಿ-ಹೊಂದಿ, ತವರ್ಮನೆಯೊಳು–ಹುಟ್ಟಿದ ಮನೆಯಲ್ಲಿ, ಇರ್ದು–ಇದ್ದುಕೊಂಡು, ಅನಿತುಕಾಲಂ–ಪ್ರಾಣವಿರುವತನಕ, ಆಲಸ್ಯಂ–ಬೇಸರವು, ಇಲ್ಲದೆ-ಪಡದೆ, ಸದಾಚಾರಕೆ–ಸನ್ಮಾರ್ಗಕ್ಕೆ, ಅನುಕೂಲೆಯಾಗಿ-ನೆರವಾಗಿ, ಇರುತಿರ್ದ–ಇದ್ದುಕೊಂಡು, ದೇಹಮಂ–ತನ್ನ ಮೈಯನ್ನು, ದಂಡಿಸಲ್–ಕಷ್ಟಪಟ್ಟು ಗುರುಹಿರಿಯರ ಸೇವೆಗೆ ಈಡುಮಾಡಿದರೆ, ಪತಿಲೋಕಮುಂ–ಗಂಡನ ಸೇವೆಯಿಂದ ಲಭಿಸುವ ಪುಣ್ಯಲೋಕವನ್ನು, ಪಡೆವಳು-ಅನುಭವಿಸುವಳು ||೫೫||

ಟೀ|| ವಿಟ–ಹಾದರತನಮಾಡತಕ್ಕವರ, ಗೋಷ್ಠಿಯೋಳ್–ಗುಂಪಿನಲ್ಲಿ, ಭೋಗಮುಂ – ಶರೀರಸುಖವನ್ನು, ಬಯಸಿ–ಕೋರಿ, ಕಾಮುಲಂಪಟೆಯಾಗಿ – ಮದನ ಬಾಧೆಗೆ ಸಿಕ್ಕಿ ನರಳುತ್ತ, ಮೇಣ್–ಅಲ್ಲದೆ, ಅರ್ಥಮುಂ-ಹಣವನ್ನು, ಗಳಿಸಿ-ಕೂಡಿಸಿಟ್ಟು, ಗರ್ವದಿಂ- ಅಹಂಕಾರದಿಂದ, ಜಠರಮುಂ – ಹೊಟ್ಟೆಯನ್ನು, ಪೊರೆವುತ – ಹೊರೆಯುತ್ತ, ಪೆರೆ-ಮೈಮೇಲಿರುವ ಸಿಪ್ಪೆಯನ್ನು, ಉರ್ಚಿದ – ಬಿಸುಟ, ಉರಗಿಯವೋಲ್ - ಕರಿಯ ನಾಗರ ಹಾವಿನ ಹಾಗೆ, ಇಹ – ಇರತಕ್ಕ, ದುಷ್ಟ–ದುರ್ಮಾರ್ಗಳಾದ, ವಿಧವೆಗೆತಿಯು–ಪತಿಹೀನಳ ದಾರಿಯು, ಆವಂಗೆ–ಯಾವ ಮಾನವನಿಗೆ, ಘಟಿಪುದು–ಉಂಟಾಗುತ್ತದೆಯೋ, ಅವನುಂ-ಆ ಮನುಷ್ಯನೂ, ಅವಳುಂ–ಆ ಹಾದರಗಿತ್ತಿಯು, ಅವಳ–ಆ ಹೆಂಗಸಿನ, ಆಣ್ಮನುಂ–ಪತಿನೇ ಮೊದಲಾದವರು,

---

ಪ್ರೀತಿಗೆ ಪಾತ್ರಳಾಗಿ ಯೌವನದಿಂದ ಮೆರೆಯುವ ನಾರೀಮಣಿಯನ್ನು ಎಲ್ಲರೂ ಕೊಂಡಾಡುವರು. ಹಾವಿನ ಹಾಗೆಯೂ ದನದಂತೆಯೂ, ಬಾರಿಬಾರಿಗೂ ಮುಖವನ್ನು ಸಿಂಡ್ರಿಸಿಕೊಂಡು ಮನೆಗೆಲಸವನ್ನು ಬಿಟ್ಟು ದುರ್ವಿಷಯಕ್ಕೆಳಸಿ ಗುರುಹಿರಿಯರನ್ನು ಗಣನೆಗೆ ತಾರದಿರುವ ಸ್ತ್ರೀಯನ್ನು ಯಮನು ಬೇಗ ಕರೆದುಕೊಂಡು ಹೋಗಲೆಂದು ಎಲ್ಲರೂ ಹಾರೈಸುವರು || ೫೪ || ಯಾವ ಬಾಲೆಯು ಪಾದಜಿಹ್ವೆಗಳಲ್ಲಿ ಕಪ್ಪು ಬಣ್ಣದಿಂದ ಕೂಡಿದವಳಾಗಿ ಬೆರಳುಗಳನ್ನು ಭೂಮಿಯಮೇಲೆ ಸಮವಾಗಿಡಲಾರದವಳಾಗುವಳೋ, ಅಂಥವಳು ವಿಧವೆಯಾಗುವಳು. ಪತಿಹೀನಳಾದಾಗ್ಗೂ ಕೂಡ ಆಕೆಯು ತವರ್ಮನೆಯಲ್ಲಿಯೆ ಇರುತ್ತ ಸೌಶೀಲ್ಯದಿಂದಲೂ ಸನ್ಮಾರ್ಗದಿಂದಲೂ ನಡೆಯುತ್ತ ತನ್ನ ದೇಹವನ್ನು ದಂಡಿಸಿ ಮೃತಳಾದರೆ ಆಕೆಗೆ ಪರಲೋಕವು ದೊರೆಯುವುದರಲ್ಲಿ ಸಂಶಯವಿಲ್ಲ. || ೫೫ || ಕಾಮಾಸಕ್ತಿಯಿಂದ ವಿಟಪುರುಷರೊಂದಿಗೆ ಸೇರಿ ಅವರಿಗೆ ಅನುಕೂಲೆಯಾಗಿದ್ದು ಧನವನ್ನಾರ್ಜಿಸಿ ಹೆಮ್ಮೆಯಿಂದ ಮೆರೆಯುವ ದುರ್ಮಾರ್ಗಳೊಂದಿಗೆ ಯಾರು ಸುರತಸುಖವನ್ನು ಪಡೆಯುವರೊ, ಅವರಿಗೂ ಆ ವಿಧವೆಗೂ ಅವಳ ಪೋಷಕರಿಗೂ ಭ್ರಷ್ಟತ್ವವು ಸಿದ್ಧಿಸುವುದರಿಂದ ಎಂಥ ಆಪತ್ಕಾಲವು ಒದಗಿದರೂ ಇಂಥವರ ಸಹವಾಸವನ್ನು ದೂರಮಾಡಿರ

ಕ್ಕುಲವಪ್ಪುದು ||೫೬|| ಗೃಹಕೃತ್ಯಮಂಬಿಟ್ಟುನೆರೆಮನೆತವ | ರ್ಮನೆಯೊಳಿಹಳೆಳೆಯರಂಚುಂಬಿಸುವಳೊಲಿದುಪಾಡುವ | ಳ್ಗಹಗಹಿಸಿಬರಿದೆನಗುವಳ್ಬೀದಿಗರನೈದೆಬಾಗಿಲೊಳ್ನೋಡುತಿಹಳು || ಬಹುಜನದಮುಂದೆಸುಳಿವಳ್ನಾಡಮಾತುಗಳ | ತಹಳುತರುವಲಿಗಳೊಡನಾಡುತಿರ್ಪಳ್ತನ್ನ | ಸಹಜಮಲ್ಲದೆಪಿರಿದಲಂಕರಿಸಿಕೊಂಬುವಳ್ನಿಲ್ವಳೇಶಿಕ್ಷಿಸಿದೊಡೆ || ೫೭ || ನರ್ತಕಿಯನಾಪಿತೆಯ ಪರ್ಣವಿಕ್ರಯಿಯಪ್ರ | ವರ್ತಕಿಯದಾಸಿಯಬರುಂಟೆಯಕಪಾಲಿನಿಯ | ಭರ್ತಾರನುಳಿದವಳಮಾಲೆಗಾತಿಯಜಟಿಯ ಸೂತಕಿಯಸೈರಂಧ್ರಿಯ | ಕರ್ತವ್ಯದಿಂದಿನಿಬರೊಡನಾಡಿದೊಡೆಬಾಲೆ | ಯರ್ತವೆದುರಾಚಾರಮಂಕಲಿವರದರಿಂಬು |

---

ಮೂವರುಂ-ಈ ಮೂರು ಜನವು, ಪತಿತರು_ಪಾತಕಿಗಳು, ಸಟೆಯಲ್ಲ_ಹುಸಿಯಲ್ಲ, ಅದರಿಂ_ಆದಕಾರಣ, ಸಂಕಟದೊಳುಂ_ಆಪತ್ಕಾಲದಲ್ಲಿಯೂ, ಪರಸ್ತ್ರೀಯರಂ-ಇತರರ ಹೆಂಡತಿಯರನ್ನು, ನೋಡಲಾಗದು_ದೃಷ್ಟಿಸಕೂಡದು, ನೆರೆದೊಡೆ_ಜತೆಗೂಡಿದರೆ, ಅಕ್ಕುಲಂ-ಚಂಡಾಲವಂಶಕ್ಕಿಂತ ಕಡೆಯ ಕುಲವು, ಅಪ್ಪುದು_ಆಗುತ್ತದೆ. ||೫೬||

ಟೀ|| ಗೃಹಕೃತ್ಯಮಂ-ಮನೆಯ ಬದುಕನ್ನು, ಬಿಟ್ಟು-ವರ್ಜಿಸಿ, ನೆರೆಮನೆ-ಪಕ್ಕದಲ್ಲಿರುವ ಮನೆಗಳಲ್ಲಿಯೂ, ತವರ್ಮನೆಯೊಳು_ತಾನು ಹುಟ್ಟಿದ ಮನೆಯಲ್ಲಿಯೂ, ಇಹಳೆ_ಇರುವ ಸ್ತ್ರೀಯೆ, ಎಳೆಯರಂ_ಕಾಮುಕರನ್ನು, ಚುಂಬಿಸುವಳು_ಪ್ರೀತ್ಯತಿಶಯವನ್ನು ತೋರ್ಪಡಿಸುವಳು, ಒಲಿದು-ಪ್ರೀತಿಯಿಂದ, ಪಾಡುವಳು – ಗಾನಮಾಡುವಳು, ಗಹಗಹಿಸಿ_ಪಕಪಕನೆ ಬರಿದೆ_ನಿಷ್ಕಾರಣವಾಗಿ, ನಗುವಳ್-ನಗುವಳು, ಬೀದಿಗರನು_ದಾರಿಹೋಕರನ್ನು, ಐದೆ-ಚೆನ್ನಾಗಿ ದೃಷ್ಟಿಯಿಟ್ಟುಕೊಂಡು, ಬಾಗಿಲೊಳ್-ಕವಾಟದ ಬಳಿಯಲ್ಲಿ, ನೋಡುತಿಹಳು – ಈಕ್ಷಿಸುತ್ತಿರುವವಳು, ಬಹು ಜನದಮುಂದೆ_ಎಲ್ಲಾ ಜನಗಳ ಎದುರಿನಲ್ಲೂ, ಸುಳಿವಳು_ಸಂಚಾರಮಾಡುತ್ತಿರುವಳು, ನಾಡ_ಊರಿನ ಪ್ರಜೆಗಳ, ಮಾತುಗಳ-ವೃತ್ತಾಂತ ಅಥವ ಸಮಾಚಾರವನ್ನು, ತಹಳು_ತರತಕ್ಕವಳು, ತರುವಲಿಗಳೊಡನೆ – ದುರಾಚಾರವುಳ್ಳ ಹುಡುಗರೊಂದಿಗೆ, ಆಡುತಿರ್ಪಳು – ಸಲ್ಲಾಪವಂ ಗೈಯುತ್ತಿರುವಳು, ತನ್ನ-ಸ್ವಕೀಯವಾದ, ಸಹಜಂ-ನೈಜವಾದದ್ದು ಅಲ್ಲದೆ_ವಿನಹ, ಪಿರಿದು_ಅಧಿಕವಾಗಿ, (ಜಾರಸ್ತ್ರೀಯರಂತೆ) ಅಲಂಕರಿಸಿಕೊಂಬಳು_ಸಿಂಗರಿಸಿಕೊಳ್ಳತಕ್ಕವಳು, ಇಂಥಾ ಗುಣವುಳ್ಳ ಹೆಂಗಸನ್ನು, ಶಿಕ್ಷಿಸಿದೊಡೆ-ದಂಡಿಸಿ ಸ್ವಾಧೀನದಲ್ಲಿಟ್ಟುಕೊಂಡರೆ, ನಿಲ್ವಳೆ_ವಶವಾದಾಳೆ? ಎಂದರೆ ಆಗುವುದೇ ಇಲ್ಲವೆಂದು ಭಾವವು ||೫೭||

ಟೀ|| ನರ್ತಕಿಯ-ನಾಟ್ಯಗಾತಿಯ, ನಾಪಿತೆಯ- ನಾಯಿಂದಗಿತ್ತಿಯ, ಪರ್ಣವಿಕ್ರಯಿಯ_ಎಲೆ ಮಾರಿ ಹೊಟ್ಟೆಹೊರೆದುಕೊಳ್ಳುವವಳ, ಪ್ರವರ್ತಕಿಯ_ದುರ್ಬೋಧನೆಯಿಂದ ಮನಸ್ಸನ್ನು ಕೆಡಿಸುವ ಸ್ತ್ರೀಯ (ತಲೆ ಹಿಡುಕಳ), ಬರುಂಟೆಯ_ಬಿದರು ಹೆಣಿಗೆಯಿಂದ ಕಾಲಹರಣ ಮಾಡತಕ್ಕವಳ, ಕಪಾಲಿನಿಯ_ಶಕುನವನ್ನು ಹೇಳುವ ಕೊರಚರ ಹೆಂಗಸಿನ, ಭರ್ತಾರನ_ಪತಿಯನ್ನು, ಉಳಿದವಳ-ಬಿಟ್ಟು ತಿರುಗಾಡುವವಳ, ಮಾಲೆಗಾತಿಯ-ಹೂವಾಡಿಗಿತ್ತಿಯ, ಜಟಿಯ_ಪತಿಹೀನನಾದ ಬಳಿಕ ವೈರಾಗ್ಯವನ್ನು ಹೊಂದಿರುವಂತೆ ಜಟಾಧಾರಿಯಾದವಳ, ಸೂತಕಿಯ_ರಜಸ್ವಲಿಯಾದರೂ ಗೋಚರಪಡಿಸದೆಯೂ, ದುರ್ವ್ಯಾಪಾರದಿಂದ ಕೂಡಿಯೂ ಇರುವವಳ, ಸೈರಂಧ್ರಿಯ-ಅನ್ಯರ ಗೃಹದಲ್ಲಿ ದಾಸಿಯಾಗಿರುವವಳ, ಕರ್ತವ್ಯದಿಂದ_ಕಾರ್ಯಗೌರವದಿಂದ, ಇನಿಬರೊಡನೆ-ಇಷ್ಟು ಜನರಲ್ಲಿಯೂ, ಬಾಲೆಯರು_ನಾರಿಯರು, ಆಡಿದೊಡೆ_ಸಲಿಗೆ ಮಾಡಿಕೊಂಡು ವಿಶ್ವಾಸದಿಂದೊಡಗೂಡಿದ್ದರೆ, ತವೆ_ಅಧಿಕವಾಗಿ, ದುರಾಚಾರಮಂ_ದುಷ್ಟಮಾರ್ಗವನ್ನು, ಕಲಿವರು_ತಿಳಿದುಕೊಳ್ಳುವರು, ಅದರಿಂ_ಆದಕಾರಣ, ಬುಧರು_ಪಂಡಿತರು, ತರುಣಿಯರ_ನಾರೀಮಣಿಗಳ, ನಡವಳಿಗೆ-ಪತಿಭಕ್ತಿ ದೈವಭಕ್ತಿ ಮೊದಲಾದ ಸದಾಚಾರಗಳಿಗೆ, ಭಂಗಂ-ನಷ್ಟವು, ಅಂಕುರಿಸದಂತೆ-ಬಾರದಹಾಗೆ, ಪಾಲಿಸವೇಳ್ಪುದು_ಸಂರಕ್ಷಣೆಮಾಡಬೇಕು ||೫೮||

---

ಬೇಕು. ಇಲ್ಲವಾದರೆ ಪತಿತನೇ ಆಗುವನು || ೫೬ || ಮನೆ ಕೆಲಸವನ್ನೆಲ್ಲಾ ಬಿಟ್ಟು ಯಾವಾಗಲೂ ನೆರೆಹೊರೆಯವರ ಮನೆಯಲ್ಲಿಯೂ ತವರ್ಮನೆಯಲ್ಲಿಯೂ ಇದ್ದುಕೊಂಡು ವಿಟನಿಂದೊಡಗೂಡಿ ಸುರತ ಕ್ರೀಡೆಗಳಲ್ಲಿ ಕಾಲಹರಣವಂ ಮಾಡಿ ಅವರೊಂದಿಗೆ ಗಾನ ವಿನೋದದಿಂದಿರುತ್ತ ನಿಷ್ಕಾರಣವಾಗಿಯೆ ನಗುತ್ತ ತಲೆಬಾಗಿಲಲ್ಲಿ ನಿಂತು ದಾರಿಗರಮೇಲೆ ತನ್ನ ಕಟಾಕ್ಷ ಬಾಣವಂ ಬಿಟ್ಟು ಅವರ ಬುದ್ಧಿಯನ್ನು ತನ್ನ ಕಡೆಗೆ ಸೆಳೆಯುತ್ತ ಅನೇಕ ಜನರು ನೆರೆದಕಡೆ ಸುಮ್ಮಸುಮ್ಮನೆ ತಿರುಗಾಡುತ್ತ ಊರ ಸುದ್ದಿಯನ್ನು ವಿಚಾರಿಸುವುದರಲ್ಲಿಯೇ ನಿರತಳಾಗಿ ಸೂಳೆಯರಂತೆ ಅಲಂಕಾರವಂ ಮಾಡಿಕೊಳ್ಳಲಿಚ್ಛಿಸುವ ಬಾಲೆಯನ್ನು ಮೊದಲಿಂದಲೂ ಕ್ರೂರದಂಡನೆಗೆ ಗುರಿಮಾಡದಿದ್ದರೆ ಕೆಟ್ಟುಹೋಗುವಳು ||೫೭|| ನಾಟ್ಯಗಾತಿ, ಕ್ಷೌರಕನ ಹೆಂಡತಿ, ಎಲೆ ಮಾರಿ ಉದರ ಭರಣಮಂ ಮಾಡುವಳು. ದುರ್ಬೋಧನೆಯಿಂದ ಬುದ್ಧಿಯನ್ನು ವಿಟನೊಂದಿಗೆ ತಿರುಗಿಸುವವಳು, ಬಿದರು ಕೆಲಸ ಮಾಡುವಳು, ದಾದಿಯು, ಕಣಿ ಹೇಳುವ ಕೊರಚರವಳು, ಗಂಡನನ್ನು ಬಿಟ್ಟು ಇರತಕ್ಕವಳು, ದುರ್ನಡತೆಯವಳು, ಹೂವಾಡಿಗರವಳು ಮೊದಲಾದವರು ದುರ್ಮಾರ್ಗವನ್ನು ಕಲಿಸತಕ್ಕವರಾದ್ದರಿಂದ ಮಕ್ಕಳನ್ನು ಬಾಲ್ಯದಿಂದಲೂ ಅಂಥವರೊಂದಿಗೆ

ಧರ್ತರುಣಿಯರನಡವಳಿಗೆಭಂಗಮಂಕುರಿಸದಂತೆಪಾಲಿಸವೇಳ್ಪುದು ‖ ೫೮ ‖ ಪುರುಷಾಂತರಕ್ಕೆಳಸಿಪುಷ್ಪಶರತಾಪದಿಂ । ಕರಗಿ ಕಾತರಿಸಿಮೆಲ್ಲನೆದೂತಿಯೊರ್ವಳಿಂ । ಕರೆದೊಡಂಬಡಿಸಿಬೇಡಿದನಿತ್ತುಸತ್ಕರಿಸಿಪೊತ್ತುವೇಳೆಗಳನರಸಿ ‖ ನೆರೆಹೊರೆಯರರಿಯ ದಂತೆಪತಿಯನ್ಮರೆಸಿಮನೆಯ । ಲಿರುವರೆಲ್ಲರಟೊಣೆದುಮದನಕೇಳಿಗೆಸಂದು । ಮರಳಿಮಾನಿನಿಯಂತಿರೆಬಲ್ಲರೇಜಾರೆಯರವರಂ ನೋಡಬಹುದೆ ‖ ೫೯ ‖ ಸೋಲ್ದನಂಕಂಡುಕಡ್ಗೊನೆಗೊಲದುನೋಟಮಂ । ಜೋಲ್ದುರುಬನೊಂದಿಸುವನೆವದಿಂದಕೈನೆಗಪಿ। ಸಾಲ್ದಮೇಲುದನೋಸರಿಸಿಮೊಲೆಗೆಲದಪೊಗರ್ತೋರಿಪುಸಿಲಜ್ಜೆಯಿಂದ । ತೇಲ್ದವಳತೆರದಿಂದನಸುನಗೆಯಪಸರಿಸುತ। ಕಾಲ್ದೆಗೆಯ ಲೊಯ್ಯನೊಯ್ಯನೆನಡೆವಭಂಗಿಯಿಂ । ನಾಲ್ದೆಸೆಗೆಕಾಣಿಸುವಮೈಸಿರಿಯಕಾಮಿನಿಯರವರೆಜಾರೆಯರೆನಿಪರು ‖ ೬೦ ‖ ಚಪಲೆ ಚಂಚಲೆಚಾಟುವತಿಚಂಡಿಛಲವಾದಿಕುಪಿತೆಕುತ್ಸಿತೆಕುಹಕಿಕುಜೆಕುಟಿಲೆಕುಲಗೇಡಿ । ಕಪಟಕಂಟಕಿಕಟಕಿಕಡುದುಷ್ಟೆಕಲಹಾ

---

ಟೀ‖ ಪುರುಷಾಂತರಕ್ಕೆ–ಪರಪುರುಷನಿಗೆ, ಎಳಸಿ–ಇಚ್ಛೈಸಿ, ಪುಷ್ಪಶರ–ಹೂವನ್ನೇ ಬಾಣವಾಗಿವುಳ್ಳ ಮೀನಕೇತನನ, ತಾಪದಿಂ–ಸಂಕಟದಿಂದ, ಕರಗಿ–ಜಲಭಾವವನ್ನೈದಿ, ಕಾತರಿಸಿ–ಹೆದರಿ, ಮೆಲ್ಲನೆ–ನಿಧಾನವಾಗಿ, ದೂತಿಯೋರ್ವಳಿಂ–ಒಬ್ಬಿತಲೆ ಹಿಡುಕಿಯನ್ನು, ಕರೆದು–ಬರಹೇಳಿ, ಒಡಂಬಡಿಸಿ–ಸಮ್ಮತಿಪಡುವಂತೆಮಾಡಿ, ಬೇಡಿದನು–ಕೋರಿದ್ದನ್ನು, ಇತ್ತು–ಕೊಟ್ಟು, ಸತ್ಕರಿಸಿ–ಆದರಿಸಿ, ಪೊತ್ತುವೇಳೆಗಳನು–ಪತಿಗೆ ಗೋಚರವಾಗದ ಕಾಲವನ್ನು, ಅರಸಿ–ನಿಷ್ಕರ್ಷಿಸಿ, ನೆರೆಹೊರೆ–ಪಕ್ಕದ ಮನೆಯವರು, ಅರಿಯದಂತೆ–ಗೋಚರಮಾಡಿಕೊಳ್ಳಲು ಆಗದಹಾಗೆ, ಪತಿಯಂ–ಕಾಂತನನ್ನು, ಮರಸಿ–ಗೋಚರವಿಲ್ಲದಂತೆ ಮಾಡಿಕೊಂಡು, ಮನೆಯಲ್ಲಿರುವರೆಲ್ಲರ–ಮನೆಯಲ್ಲಿ ವಾಸಮಾಡುವ ಸರ್ವರನ್ನೂ, ಟೊಣೆದು – ತ್ಯಜಿಸಿ, ಮದನಕೇಳಿಗೆ– ಮಾರನ ಆಟಕ್ಕೆ, ಸಂದು–ಜೋಡೆಯಾಗಿ, ಮರಳಿ–ಮತ್ತೆ, ಮಾನಿನಿಯರಂತೆ–ಗಂಡನಲ್ಲಿ ಭಕ್ತಿಯುಳ್ಳ ಉತ್ತಮ ಸ್ತ್ರೀಯರ ಹಾಗೆಯೆ, ಇರಬಲ್ಲರೇ–ಇರತಕ್ಕಸ್ತ್ರೀಯರೇ, ಜಾರೆಯರು–ದುರ್ವ್ಯಾಪಾರವುಳ್ಳ ಹೆಂಗಸರು, ಅವರಂ–ಅಂಥವರನ್ನು, ನೋಡ ಬಹುದೆ–ಈಕ್ಷಿಸಲಾದೀತೆ? ‖೫೯‖

ಟೀ‖ ಸೋಲ್ದನಂ–ತನ್ನ ನೋಟಕ್ಕೆ ಸಿಕ್ಕುಬಿದ್ದು ಇರತಕ್ಕವರನ್ನು, ಕಂಡು–ನೋಡಿ, ಕಡ್ಗೊನೆಗೆ–ಕಟಾಕ್ಷಕ್ಕೆ, ನೋಟಮಂ–ದಿಟ್ಟಿಯನ್ನು, ಒಲದು–ಹರಡಿ, ಅಥವ ಒಪ್ಪಿಕೊಂಡು, ಜೋಲ್ದುರುಬನು–ನೇತಾಡುವ ಕೂದಲ ಗುಂಪನ್ನು, ಒಂದಿಸುವ ನೆವದಿಂದ–ಒಟ್ಟುಗೂಡಿಸುವ ಕಾರಣದಿಂದ, ಕೈನೆಗಪಿ – ಕೈಸನ್ನೆಮಾಡಿ, ಸಾಲ್ದ – ಕಡಮೆಯಾಗಿರುವುದರಿಂದ ಸ್ತನಗಳು ಮುಚ್ಚಿಕೊಳ್ಳದಿರುವ, ಮೇಲುದನು–ಸೀರೆಯ ಸೆರಗನ್ನು, ಓಸರಿಸಿ – ಪಕ್ಕಕ್ಕೆ ತಿರುಗಿಸಿ, ಮೊಲೆಗೆಲದ – ಕುಚ ಮಂಡಲದ ಪಕ್ಕದ, ಪೊಗರ್–ಯೌವನಾವಸ್ಥೆಯಿಂದ ಎಂಥ ಪುರುಷನನ್ನಾದರೂ ವಶಪಡಿಸಿಕೊಳ್ಳತಕ್ಕ ಅತ್ಯಂತಕಾಂತಿಯುಕ್ತ ಮಾದ ಗುರುತುಗಳನ್ನು, ತೋರಿ–ತೋರ್ಪಡಿಸಿ, ಪುಸಿಲಜ್ಜೆಯಿಂದ–ಹುಸಿನಾಚಿಕೆಯಿಂದ, ತೇಲ್ದವಳತೆರದಿಂ–ನಿಲ್ಲದೆ ಹೊರಡುವ ದನ್ನು ಸೂಚಿಸುವರೀತಿಯಾಗಿ, ನಸುನಗೆಯ–ಮುಗುಳ್ನಗೆಯನ್ನು, ಪಸರಿಸುತ–ಪ್ರಚಾರಮಾಡುತ್ತ, ಒಯ್ಯನೊಯ್ಯನೆ–ಮೆಲ್ಲ ಮೆಲ್ಲಗೆ, ನಡೆವ–ನಡೆಯತಕ್ಕ, ಭಂಗಿಯಿಂ–ಬಗೆಯಿಂದ, ಕಾಲ್ದೆಗೆಯಲು–ನಡೆಯಲು, ನಾಲ್ದೆಸೆಗೆ–ಚತುರ್ದಿಕ್ಕಿಗೂ, ಕಾಣಿ ಸುವ–ತೋರ್ಪಡಿಸುವ, ಮೈಸಿರಿಯ–ಶರೀರದ ಹೊಳಪನ್ನುಳ್ಳ, ಕಾಮಿನಿಯರು–ಸ್ತ್ರೀಯರು, ಅವರೆ–ಅಂಥಾ ಹೆಂಗಸರೇ, ಜಾರೆ ಯರು–ಹಾದರಗಿತ್ತಿಯರು, ಎನಿಪರು–ಎಂದು ಹೇಳಿಸಿಕೊಳ್ಳುವರು ‖ ೬೦ ‖

ಟೀ‖ ಚಪಲೆ–ಚಪಲಬುದ್ಧಿಯುಳ್ಳವಳು, ಚಂಚಲೆ–ಒಂದುಕಡೆ ನಿಲ್ಲದವಳು, ಚಾಟುವತಿ–ಕುಹಕಗಾತಿಯು, ಚಂಡಿ– ಮುಷ್ಕರ ಹಿಡಿಯುವಳು, ಛಲವಾದಿ – ದ್ವೇಷಮಾಡತಕ್ಕವಳು, ಕುಪಿತೆ – ಸಿಟ್ಟುಮಾಡಿಕೊಳ್ಳುವಳು, ಕುತ್ಸಿತೆ– ನಿಂದ್ಯಳು,

---

ಆಟಪಾಟಗಳಿಗೆ ಬಿಡದೆ ಸುಶಿಕ್ಷಿತರಾಗಿರುವಂತೆ ನೋಡಿಕೊಳ್ಳಬೇಕು ‖ ೫೮ ‖ ಕಾಮೋದ್ರೇಕದಿಂದ ಕೃಶಳಾಗಿ ಅನ್ಯ ಪುರುಷ ನನ್ನು ಬಯಸಿ ದೂತಿಯೊಬ್ಬಳನ್ನು ತನ್ನ ಪ್ರೀತಿಪಾತ್ರಳನ್ನಾಗಿ ಮಾಡಿಕೊಂಡು ಅವಳಿಗೆ ಬೇಕಾದ್ದನ್ನೆಲ್ಲಾ ಧಾರಾಳವಾಗಿ ಕೊಟ್ಟು ವಿಟನನ್ನು ಗೊತ್ತುಮಾಡಿಕೊಂಡು ತನ್ನ ಗಂಡನೂ ನೆರೆಹೊರೆಯವರೂ ಅರಿಯಲಾರದ ಕಾಲವನ್ನು ನಿರೀಕ್ಷಿಸಿ ಜಾಗ್ರತೆಯಾಗಿ ಕಾಮುಕನೊಂದಿಗೆ ಸೇರಿ ಮನ್ಮಥನ ಬಾಧೆಯಿಂದ ಬಿಡುಗಡೆಯನ್ನು ಹೊಂದಿ ಪುನಃ ಯಾರೊಬ್ಬರೂ ಅರಿಯ ದಂತೆ ತಾನಿದ್ದ ಸ್ಥಳವನ್ನು ಸೇರಿ ಪ್ರತಿವ್ರತೆಯಂತೆಯೇ ನಟಿಸುವ ಹಾದರಗಿತ್ತಿಯ ಮುಖವನ್ನೂ ನೋಡಬಾರದು ‖೫೯‖ ತನ್ನ ಕಟಾಕ್ಷಕ್ಕೆ ಸಿಕ್ಕಿಹೋದ ಪುರುಷನನ್ನು ಓರೆಗಣ್ಣಿನಿಂದ ನೋಡುತ್ತ ಜುಟ್ಟು ಗಂಟುಹಾಕಿಕೊಳ್ಳುವ ನೆವದಿಂದ ಕೈಗಳನ್ನು ಮೇಲಕ್ಕೆತ್ತಿ ಸಾಕೂಸಾಲದಂತಿರುವ ಸೆರಗನ್ನು ಓರೆಮಾಡಿ ಸ್ತನಮಂಡಲದ ಬಿಗುಹನ್ನು ವಿಟನಿಗೆ ತೋರ್ಪಡಿಸಿ ಹುಸಿನಗೆ ಯಿಂದ ಕೂಡಿದವಳಾಗಿ ಹೊರಟುಹೋಗುವಂತೆ ನಡಿಗೆಯ ಸಂಭ್ರಮವನ್ನು ತೋರ್ಪಡಿಸುತ್ತ ಕಾಮಾತುರಳಾಗಿರುವವಳನ್ನು ಜಾರಿಣಿಯೆಂದರಿಯಬೇಕು ‖೬೦‖ ಚಿತ್ರದಲ್ಲಿ ಬರೆದ ಹೆಣ್ಣುಗೊಂಬೆಯನ್ನೇ ನಂಬಕೂಡದೆನ್ನುವಾಗ ಚಪಲಚಿತ್ತಳೂ, ಹಟವಾದಿ

ರ್ಥಿನಿರಸೆಪರವಶೆಸಾದರಿ ‖ ವಿಪದೆವಿಹ್ವಲೆವಿಷಮೆವಿರಹಿವಿಪರೀತೆಮಿಗೆ | ತಪಿತೆತಸ್ಕರೆತವಕಿತವೆತಂದ್ರಿತಾಮಸಿಯೆ | ನಿಪವರ ತೆಯರನಿಜಕೆನಿಲಿಸೆನಿಶ್ಚೈಸಿದರೆಬಳಿಲಿಬಳಕಿಕೆಬಾರದೆ ‖ ೬೧ ‖ ಹಲವುಮಾತೇನರಸಚಿತ್ರದೊಳ್ಬರೆದಕೋ | ಮಲೆಯರಂನಂ ಬಬಾರದುನಿರುತಮೆನಲವರ ‖ ಪೊಲವುಗಂಡವರುಂಟೆಸಾಕದಂತಿರಲಿಪರಿಕಲ್ಪಿತವ್ರತಸಮಾಧಿ ‖ ಸಲೆತೀರ್ಥಯಾತ್ರೆಜಪತಪನಿ ಷ್ಠೆಬೇಕೆಂಬ | ವಿಲಗಮಿಲ್ಲಾತ್ಮಪತಿಸೇವಿಯಂಪ್ರತಿದಿನದೊ | ಳಲಸದೆನೆಗಳ್ಚಿದೊಡೆಸತಿಯರ್ಗೆಕೀರ್ತಿಸುಗತಿಗಳಪ್ಪುವಿಹ ಪರದೊಳು ‖ ೬೨ ‖ ಭೂಪಾಲಕೇಳ್ಧರ್ಮಸಾರವಿದುಜಗದೊಳ್ಮ | ಹೀಪತಿಗಳರ್ಥಲೋಲುಪ್ತಿಯಿಂತಮ್ಮಯಸ | ಮಾಪ

---

ಕುಹಕಿ-ಮೋಸಮಾಡುವಳು, ಕುಜೆ-ದುರ್ಬೀಜಕ್ಕೆ ಜನಿಸಿದವಳು, ಕುಟಿಲೆ - ನ್ಯಾಯಮಾರ್ಗ ವಿಲ್ಲದವಳು, ಕುಲಗೇಡಿ-ತವ ರ್ಮನೆ ಅತ್ತೆ ಮನೆಗಳಿಗೆ ಕೆಟ್ಟ ಹೆಸರನ್ನು ತರತಕ್ಕವಳು, ಕಪಟೆ-ಕೃತ್ರಿಮವುಳ್ಳವಳು, ಕಂಟಕಿ-ಇತರ ಕಾರ್ಯಕ್ಕೆ ಭಂಗಮಾಡು ವವಳು, ಕಟಕಿ-ಕಠಿಣಹೃದಯಳು, ಕಡುದುಷ್ಟೆ-ಬಹು ಕೆಟ್ಟವಳು, ಕಲಹಾರ್ತಿ-ಜಗಳಗಂಟಿಯು, ನಿರಸೆ-ನಿರ್ದಯಳು. ಪರವಶೆ-ಅನ್ಯರ್ಗೆ ವಶಳಾದವಳು, ಸಾದರಿ-ಜಾರಿಣಿಯು, ವಿಪದೆ-ಪರದೇಶಿಯಾದವಳು ಎಂದರೆ ತಾಯಿ ತಂದೆ ಅಣ್ಣ ತಮ್ಮ ಮಾವ ಭಾವ ಮೊದಲಾದ ಯಾರೂ ಇಲ್ಲದಿರುವಳು, ವಿಹ್ವಲೆ-ಬುದ್ಧಿ ಭ್ರಮಣೆಯನ್ನು ಪಡೆದಿರುವಳು, ವಿಷಮೆ-ಸಹವಾಸದಲ್ಲಿ ಸೇರದ ವಳು, ವಿರಹಿ-ಜೋಡಣೆಯಿಲ್ಲದವಳು, ವಿಪರೀತೆ-ದೊಡ್ಡವರನ್ನು ಗಣಿಸದವಳು, ಮಿಗೆ-ಅಧಿಕವಾಗಿ, ತಪಿತೆ-ಮನ್ಮಥಬಾಧೆಯಿಂದ ಕೂಡಿದವಳು, ತಸ್ಕರೆ-ಚೋರಳು, ತವಕಿ-ಕಾಮುಕಿಯು, ತವೆ-ಹೆಚ್ಚಾಗಿ, ತಂದ್ರಿ-ನಿದ್ರೆಯನ್ನೆಸಗುವಳು, ತಾಮಸಿ-ತಿಳುವಳಿಕೆ ಇಲ್ಲದವಳು, ಎನಿಪ-ಎಂದು ಹೇಳಿಸಿಕೊಳ್ಳತಕ್ಕ, ವನಿತೆಯರ-ನಾರಿಯರನ್ನು, ನಿಜಕೆ-ರುಜುಮಾರ್ಗಕ್ಕೆ, ನಿಲಿಸೆ-ಸ್ಥಿರಮಾಡಲು, ನಿಶ್ಚೈಸಿದರೆ-ಗೊತ್ತುಮಾಡಿದರೆ, ಬಳಿಕ-ತರುವಾಯ, ಬಳಲಿಕೆ-ಬೇಸರವು, ಬಾರದೆ-ಉಂಟಾಗದಿರುವುದೆ ? ‖೬೧‖

ಟೀ‖ ಅರಸೆ-ಎಲೈ ರಾಜನೆ, ಹಲವು-ಅನೇಕ ಪ್ರಕಾರವಾದ, ಮಾತೇನು-ನುಡಿಗಳಿಂದೇನು ಪ್ರಯೋಜನವು? ನಿರತಂ-ಸದಾಕಾಲದಲ್ಲಿಯೂ, ಚಿತ್ರದೊಳ್-ಚಿತ್ರಪಟದಲ್ಲಿ, ಬರೆದ-ಲಿಖಿಸಿದ, ಕೋಮಲೆಯರಂ-ಸ್ತ್ರೀಯನ್ನೂ ಕೂಡ, ನಂಬಬಾರದು-ನೆಚ್ಚಕೂಡದು, (ಚೇತನವುಳ್ಳ ಹೆಂಗಸನ್ನು ನಂಬಲು ಆಗುವುದೇ ಇಲ್ಲವು.) ಎನಲು-ಸ್ತ್ರೀಯರನ್ನೂ ಶಿಕ್ಷೆಯಲ್ಲಿಟ್ಟರಲು, ಅವರ-ಆ ನಾರಿಯರ, ಪೊಲವು-ರೀತಿಯನ್ನು, ಕಂಡವರು- ಅವರ ನಡತೆ ಇಂಥಾದ್ದೆಂದು ಗೊತ್ತುಮಾಡಿದವರು, ಉಂಟೆ-ಇರುವರೆ, ಎಂದರೆ ಅವರ ಚಿತ್ತವನ್ನು ಬಲ್ಲವರೇ ಇಲ್ಲವು, ಅದು-ಆ ನುಡಿಯು, ಸಾಕು, ಅಂತು-ಹಾಗೆ, ಇರಲಿ, ಪರಿಕಲ್ಪಿತ-ಸಾಂಗವಾಗಿ ನೆರವೇರಿಸಿದ, ವ್ರತ - ಮಾಸವ್ರತ, ಪಕ್ಷವ್ರತ, ಲಕ್ಷ್ಮೀವ್ರತವೇ ಮೊದಲಾದವುಗಳ, ಸಮಾಧಿ- ಯೋಗಾಭ್ಯಾಸ, ನೆಲದಲ್ಲಿ ಹಾಕುವುದು, ಉಸರು ಕಟ್ಟುವದು, ಇವುಗಳ, ಸಲೆ-ಚನ್ನಾಗಿ, ತೀರ್ಥ-ಗಂಗಾದಿ ಸಲಿಲಗಳಲ್ಲಿ, ಯಾತ್ರೆ-ಕಾಶಿ ರಾಮೇಶ್ವರ ಮೊದಲಾದ ಪುಣ್ಯ ಕ್ಷೇತ್ರಂಗಳಲ್ಲಿ ಹೋಗಿ ಸತ್ಫಲಗಳನ್ನಾರ್ಜಿಸುವದು, ಜಪ-ಭಗವಂತನ ಧ್ಯಾನದ ಮಂತ್ರವನ್ನೇ ಅನೇಕಾವರ್ತಿ ಹೇಳುವದು, ತಪ-ತನ್ನ ಇಷ್ಟಸಿದ್ಧಿದಾಗಿ ಉಪವಾಸ, ಒಂದುಹೊತ್ತು-ದೇವರಸೇವೆ ಮೊದಲಾದವುಗಳಿಂದ ದೇಹವನ್ನು ದಂಡಿಸುವುದು, ನಿಷ್ಠೆ-ಶಾಸ್ತ್ರಧರ್ಮದಲ್ಲಿ ಹೇಳಿದ ಅಂಶಗಳಲ್ಲಿ ಯಾವುದನ್ನೂ ಬಿಡದೆ ಆಚರಿಸುವುದು ಮುಂತಾದವು, ಬೇಕೆಂಬ-ಅವಶ್ಯಕವೆನ್ನತಕ್ಕ, ವಿಲಗಂ-ಕಟ್ಟನ್ನು, ಪ್ರತಿದಿನದೊಳು-ದಿನಂಪ್ರತಿಯೂ, ನೆಗಳ್ಚಿದೊಡೆ-ಎಸಗಲು, ಸತಿಯರ್ಗೆ-ಪತಿಭಕ್ತಿ ಪರಾಯಣರಾದ ನಾರಿಯರಿಗೆ, ಇಹಪರದೊಳು-ಈಲೋಕದಲ್ಲಿಯೂ ಸ್ವರ್ಗಲೋಕದಲ್ಲಿಯೂ, ಕೀರ್ತಿ ಸುಗತಿಗಳು-ಒಳ್ಳೆಯ ಕೀರ್ತಿಗಳು, ಅಪ್ಪುದು-ಉಂಟಾಗುವವು.

ಅ‖ ವಿ‖ ಜಪ-ಹೇಳಿದುದನ್ನೇ ಮರಳಿ ಮರಳಿ ಹೇಳುತಿರುವುದು, ತಪ-ದೇವರನ್ನು ಬಗೆಬಗೆಯಿಂದ ಅನೇಕ ಮಂತ್ರಗಳಿಂದ ಸ್ತುತಿಸುವುದು ‖೬೨‖

---

ಯೂ, ಮೂರ್ಖಳೂ, ಕೋಪಿಷ್ಠಳೂ, ಹಾಸ್ಯಗಾತಿಯೂ, ದುರ್ಬೀಜೋತ್ಪನ್ನಳೂ, ಕಠಿಣಚಿತ್ತಳೂ, ನೀಚಳೂ, ಅಪಮಾರ್ಗದವಳೂ, ಜಗಳಗಂಟಿಯೂ, ಚೋರಳೂ, ಮೂಢಳೂ, ಆದ ಸ್ತ್ರೀಯನ್ನು ನೆಚ್ಚಲಾದೀತೆ ? ‖ ೬೧ ‖ ಯಾವ ಪುರುಷನು ತಾನೆ ಅವರ ಸ್ಥಿತಿಯನ್ನು ತಿಳಿಯಲು ಸಾಧ್ಯವಾದೀತು. ಒಂದು ವೇಳೆ ಯಾವ ಸ್ತ್ರೀಯಾದರೂ ಸದಾ ಪತಿಭಕ್ತಿ ಪರಾಯಣಳಾಗಿ ಸನ್ಮಾರ್ಗ ಸೌಶೀಲ್ಯಾದಿಗಳಿಂದೊಡಗೂಡಿದ್ದರೆ ಅಂತಹ ಪತಿವ್ರತಾಶಿರೋಮಣಿಗೆ ಅನೇಕ ವ್ರತ ಕಥೆಗಳಿಂದಲೂ ತೀರ್ಥಸ್ನಾನಾದಿಗಳಿಂದಲೂ ಜಪತಪಗಳಿಂದಲೂ ಆಗುವ ಫಲಕ್ಕಿಂತ ಅತ್ಯಧಿಕವಾದ ಸುಖಪ್ರಾಪ್ತಿಯೇ ಒದಗಿ ಸದ್ಗತಿಯನ್ನೈದುವಳು ‖೬೨‖ ಈ ಲೋಕದಲ್ಲಿ ಅಂತಹ ಮಹಾತ್ಮಳನ್ನು ಕೊಂಡಾಡದ ಜನವೇ ಇರುವುದಿಲ್ಲವು. ಎಂಬದಾಗಿ ವ್ಯಾಸಮಹಾಮುನಿಯು ಧರ್ಮಜನಿಗೆ ಧರ್ಮಸೂಕ್ಷ್ಮವನ್ನು ಬೋಧಿಸಿ ಮತ್ತೆ ರಾಯನಂ ಕುರಿತು ಎಲೈ ಯುಧಿಷ್ಠಿರನೆ, ಈ ಧರ್ಮರಹಸ್ಯದೊಂದಿಗೆ ಮತ್ತೆ ಕೆಲವು ವಿಷಯಗಳನ್ನು ತಿಳಿಸುವೆನು ಕೇಳು ಪ್ರಪಂಚದಲ್ಲಿ ಯಾವ ದೊರೆಯೆ ಆಗಲಿ ತನ್ನ ಬಳಿಯಲ್ಲಿ ಲುಬ್ಧರೂ

ದೋಳ್ದ್ಯೂತರತನಾಸ್ತಿಕರನೈದೆಪಿಸುಣರನಸೂಯಕರೆನಿಪರ || ಸೋಪಚಾರದೊಳಿರಿಸಿಕೊಂಡಿರುತಿರಲ್ಪ್ರಜಾ | ಲೋಪ ಮಪ್ಪುದುರಾಜ್ಯಮದರಿನಪಕೀರ್ತಿಯಂ | ಪಾಪದಿಂದರಸುಗಳಿಗಿಹಪರಂಕೆಡುಗುಮಿದನರಿಯದಿರಬಹುದೆನೃಪರು || ೬೩ || ಆಚಾರಧರ್ಮದಿಂನಡೆಯಲರಿಯದವಿಪ್ರ | ನೀಚಕ್ರಿಯಾಜ್ಞೆಯಂಮೀರಿದವನವನಿಂದ | ನೀಚನೆಹರಿಪ್ರಿಯಂಮಾಧವನಪೂಜಿಗೈಯ್ಯದವಂಗೆಸುಗತಿಯುಂಟೆ || ಈಚತುರ್ದಶಜಗದೊಳಂತಿರಲದಿನ್ನುಸಲೆ | ಸೂಚಿಪೆಂನಿನಗೆಬೆಸಗೊಂಬುದೆನೆರಮೆನೆಲಸಿ ಗೋಚರಿಪಳಾವನನುನೆಯೊಳೆಂದು | ಭೂವರಂಕೇಳ್ದೊಡಾಮುನಿನುಡಿದನು || ೬೪ || ವತ್ಸಕೇಳಾದೊಡೀಧರೆಯೊಳಖಿಳಪ್ರಾಣಿ ವತ್ಸಲನ | ಸತ್ಯಶೌಚಾನ್ವಿತನನುನೆಗೆಶ್ರೀವತ್ಸಲಾಂ | ಛನನರಸಿದೊಡವೆನಿಪಳಾವಗಂಪತಿಪರಾಯಣೆಯಾಗಿಹ || ಸತ್ಯತಿ

ಟೀ|| ಭೂಪಾಲ_ಯುಧಿಷ್ಠಿರನೆ, ಕೇಳ್_ಲಾಲಿಸು, ಇದು-ಈ ನುಡಿಯು, ಜಗದೋಳ್ - ಪ್ರಪಂಚದಲ್ಲಿ, ಧರ್ಮಸಾರಂ-ಧರ್ಮರಹಸ್ಯವು, ಮಹೀಪತಿಗಳು_ಪೃಥ್ವೀಶ್ವರರು. ಅರ್ಥಲೋಲುಪ್ತಿಯಿಂ - ಹಣದಾಸೆಯಿಂದ, ತಮ್ಮಯ_ತಮ್ಮಗಳ, ಸಮೀಪದೊಳ್-ಎಡೆಯಲ್ಲಿ, ದ್ಯೂತ-ಪಂಥದಲ್ಲಿ, ರತ-ನಿರತರಾದವರ, ನಾಸ್ತಿಕರ – ಆಸ್ತಿಕ್ಯಬುದ್ಧಿಯಿಂದ ದೂರವಾದವರ, ಪಿಸುಣರ_ಕೃಪಣರ, ಅಸೂಯಕರೆನಿಪರ - ನೋಡಿ ಸಹಿಸದೆ ಮನನೊಂದು ಪೇಚಾಡುವರ, ಐದೆ_ಚೆನ್ನಾಗಿ, ಸೋಪಚಾರದೊಳು_ಆದರಣೆಯಿಂದ, ಇರಿಸಿಕೊಂಡಿರಲ್_ ಇಟ್ಟುಕೊಂಡಿದ್ದರೆ, ರಾಜ್ಯಂ-ನಾಡು, ಪ್ರಜಾಲೋಪಂ-ಜನರ ಕ್ಷೇಮಕ್ಕೆ ಭಂಗವುಳ್ಳದ್ದು, ಅಪ್ಪುದು_ಆಗುವುದು, ಅದರಿನ_ಆ ಲೋಕದ ಏಳಿಗೆಯ ಭಂಗದ, ಅಪಕೀರ್ತಿಯಂ_ಕೆಟ್ಟಹೆಸರನ್ನು, ಪಾಪದಿಂ-ದೋಷದಿಂದ, ಅರಸುಗಳಿಗೆ_ರಾಜರುಗಳಿಗೆ, ಇಹಪರಂ_ಈ ಲೋಕ ಪರಲೋಕಗಳು, ಕೆಡುಗುಂ-ತಪ್ಪಿಹೋಗುವವು, ನೃಪರು_ರಾಜರು, ಇದನು_ಈ ಧರ್ಮಮಾರ್ಗವನ್ನು, ಅರಿಯದೆ-ತಿಳಿಯದೆ, ಇರಬಹುದೆ_ಇರಲಾದೀತೆ? ||೬೩||

ಟೀ|| ಆಚಾರ_ವೇದಸಂಬಂಧದ ನಡವಳಿಕೆ, ವಂಶಕ್ರಮದಿಂದ ಬಂದ ಪದ್ಧತಿ, ಹಿರಿಯರ ನಡವಳಿಕೆ, ಮೊದಲಾದವುಗಳು, ಧರ್ಮದಿಂ_ಸತ್ಕಾರ್ಯಗಳಿಂದ, ನಡೆಯಲು-ವರ್ತಿಸಲು, ಅರಿಯದ_ತಿಳುವಳಿಕೆ ಇಲ್ಲದಿರುವ, ವಿಪ್ರನೆ-ಭೂಸುರನೇ, ಚಕ್ರಿಯ_ಚಕ್ರಪಾಣಿಯಾದ ನಾರಾಯಣನ, ಆಜ್ಞೆಯಂ_ಶಾಸನವನ್ನು, ಮೀರಿದವನು_ಅತಿಕ್ರಮಿಸತಕ್ಕವನು, ಅವನಿಂದ_ಅಂಥ ಮನುಷ್ಯನಿಗಿಂತ, ಹರಿಪ್ರಿಯ-ಕೀಳುಜಾತಿಯಲ್ಲಿ ಹುಟ್ಟಿ ಸ್ವಾಮಿಭಕ್ತಿಪರಾಯಣನಾದವನು, ನೀಚನೆ-ನಿಂದಾರ್ಹನೆ? ಎಂದರೆ ಉತ್ತಮನು, ಚತುರ್ದಶಜಗದೊಳು - ಹದಿನಾಲ್ಕು ಲೋಕದಲ್ಲಿಯೂ, ಮಾಧವನ – ಮಧುವೈರಿಯ, ಪೂಜೆ_ಅರ್ಚನೆಯನ್ನು, ಗೈಯ್ಯದವಂಗೆ_ಮಾಡದಿರುವ ಪ್ರಾಣಿಗೆ, ಗತಿಯು_ಪುಣ್ಯಲೋಕವು, ಉಂಟೆ_ಆದೀತೆ? ಎಂದರೆ ಆಗಲಾರದು, ಅದಂತಿರಲಿ-ಆ ಮಾತು ಹಾಗಿರಲಿ, ಇನ್ನು_ಮುಂದೆ, ಸಲೆ_ಚನ್ನಾಗಿ, ಸೂಚಿಪೆಂ_ಅರುಹುವೆನು, ಬೆಸಗೊಂಬುದು_ಕೇಳಬೇಕು, ಎನೆ_ಎಂದು ನುಡಿಯಲು, ಭೂವರಂ_ಯುಧಿಷ್ಠಿರನು, ಆವಮನೆಯೊಳು-ಎಂಥವರ ಗೃಹದಲ್ಲಿ, ರಮೆ_ಲೋಕಮಾತೆಯು, ನೆಲಸಿ_ಶಾಶ್ವತವಾಗಿದ್ದು, ಗೋಚರಿಸಳು_ತೋರುವಳು, ಎಂದು_ಎಂಬದಾಗಿ, ಕೇಳ್ದೊಡೆ_ಪ್ರಶ್ನೆಮಾಡಲು, ಆ ಮುನಿ_ಆ ಜೈಮಿನಿ ಮುನೀಂದ್ರನು, ನುಡಿದನು_ಹೇಳ ತೊಡಗಿದನು. ||೬೪||

ಟೀ|| ವತ್ಸ_ಎಲೈ ಹಸುಳೆಯಾದ ಧರ್ಮನಂದನನೇ, ಆ ದೊಡೆ-ಲಕ್ಷ್ಮೀನಿವಾಸಸ್ಥಾನವನ್ನು ತಿಳಿದುಕೊಳ್ಳಬೇಕೆಂಬ ಆಶೆ ಇದ್ದರೆ, ಕೇಳು_ ಲಾಲಿಸು, ಈ ಧರೆಯೊಳು- ಈ ಇಳೆಯಲ್ಲಿ, ಅಖಿಲ_ ಸಮಸ್ತವಾದ, ಪ್ರಾಣಿ- ಜೀವರಾಶಿಗಳಲ್ಲಿಯೂ ವತ್ಸಲನ_ಪ್ರೀತಿಯುಳ್ಳವನ, ಸತ್ಯ_ನಿಜವು, ಶೌಚ_ನೈರ್ಮಲ್ಯವು, ಇವುಗಳಿಂದ, ಅನ್ವಿತನ_ಯುಕ್ತನಾದವನ, ಮನೆಗೆ_ಮಂದಿರಕ್ಕೆ, ಶ್ರೀವತ್ಸ-ಶ್ರೀವತ್ಸವೆಂಬ ಹಸರು ಮಚ್ಚೆಯ, ಲಾಂಛನನ-ಚಿಹ್ನೆಯುಳ್ಳ ನಾರಾಯಣನ, ಅರಸಿ_ಪತ್ನಿಯಾದ ಲಕ್ಷ್ಮೀದೇ

ನಾಸ್ತಿಕರೂ ಅಸೂಯಾಪರರೂ ಜೂಜುಗಾರರೂ ದುರ್ಮಾರ್ಗಿಗಳೂ ಆದವರನ್ನು ತನ್ನ ಪರಮಾಪ್ತರನ್ನಾಗಿ ಮಾಡಿಕೊಳ್ಳುವನೊ, ಅಂತಹ ರಾಜನೂ, ಅಲ್ಲಿನ ಪ್ರಜೆಗಳೂ ಅಪಕೀರ್ತಿಗೆ ಗುರಿಯಾಗುವರು. ಆದ್ದರಿಂದ ಅಂಥವರನ್ನು ಸಮೀಪದಲ್ಲಿ ಸೇರಿಸಬೇಕಾರದು. ಉತ್ತಮವಾದ ಬ್ರಾಹ್ಮಣ ವರ್ಣದಲ್ಲಿ ಹುಟ್ಟಿ ಅಕೃತ್ಯಗಳನ್ನು ಮಾಡುತ್ತ ದುರ್ಮಾರ್ಗಪ್ರವರ್ತಕನಾದ ವಿಪ್ರನು ಭಗವದ್ಧ್ಯಾನಪರಾಯಣನಾಗಿರುವ ಜಾತಿ ಚಂಡಾಲನಿಗಿಂತಲೂ ಪರಮ ನೀಚನೂ ಪಾಪಿಯೂ ಆಗುವನು. ಹದಿನಾಲ್ಕು ಲೋಕದಲ್ಲಿ ಎಲ್ಲಿಯೇ ಆದರೂ ಸ್ವಾಮಿಭಕ್ತರಲ್ಲದವರಿಗೆ ಮೋಕ್ಷವೆಂಬುದೇ ಸ್ವಪ್ನಪ್ರಾಯವೆಂದು ತಿಳಿಯೆಂದು ನುಡಿಯುತ್ತಿರುವಾಗ ಧರ್ಮಜನು ವ್ಯಾಸಮಹರ್ಷಿಯನ್ನು ಕುರಿತು ಎಲೈ ಮಹಾತ್ಮನೇ! ಲಕ್ಷ್ಮಿಯು ಎಲ್ಲಿ ನೆಲೆಯಾಗಿರಲೆಳಸುವಳೆಂಬುದನ್ನರಿಯಲು ನನ್ನ ಮನವು ಕಾತರಿಸುವುದಾದ್ದರಿಂದ ದಯವಿಟ್ಟು ಅರುಹೆಂದು ಕೇಳಿದ ಧರ್ಮರಾಯನನ್ನು ಕುರಿತು ವ್ಯಾಸಮುನೀಂದ್ರನು ಹೇಳತೊಡಗಿದನು ||೬೪|| ಕೇಳೈ ಯುಧಿಷ್ಠಿರಾ, ಈ ಲೋಕದಲ್ಲಿ ಯಾರು ಸಕಲ ಭೂತಗಳಲ್ಲಿಯೂ ದಯೆಯನ್ನಿಟ್ಟುಕೊಂಡು ಸತ್ಯವನ್ನು ತಪ್ಪದೆ ನಿತ್ಯಕರ್ಮಾನುಷ್ಠಾನದಿಂದ ಶುಚಿಯಾಗಿ ಪರಸ್ತ್ರೀಯರನ್ನು ಸ್ವಪ್ನದಲ್ಲಿಯೂ ಆಶಿಸದೆ

ಯರಲ್ಲಿಮೇಣುನ್ಮುಖಮುಖಾಂಬುರುಹ । ತ್ಸರೋಜಾಸ್ತ್ರಕಳುಕದಪುರುಷನಲ್ಲಿವಿಲ । ಸತ್ಸಮುದ್ರಾತ್ಮಜೆಸರಾಗದಿಂದಲ್ಲಿಸು ಸ್ಥಿರೆಯಾಗಿನೆಲೆಸಿರ್ಪಳು ॥ ೬೫ ॥ ರನ್ನದಿಂಧಾನ್ಯವಮಿಶೇಷಮೆಂದೊದವಿಸುವ । ರನ್ನಮೇಹಣದಿನಿಮ್ಮಡಿಯೆಂದುವೆಚ್ಚಿಸುವ । ಮನ್ನಿಸಲ್ಬಾಲಕನುಮತಿಥಿಯುಂ ಸರಿಯೆಂದುಸತ್ಕರಿಪನಾವನವನ ॥ ತನ್ನತಾಯ್ತಂದೆಸೋದರಬಂಧುಬಳಗಮಂ । ಮನ್ನಿಸುವ ನಾವನಾತನಸದಾಚಾರಸಂ । ಪನ್ನನಾಗಿರಲವನಮಂದಿರದೊಳೈಶ್ವರ್ಯಲಕ್ಷ್ಮಿನೆಲೆಯಾಗಿರ್ಪಳು ॥ ೬೬ ॥ ಮಧುರವಾಣಿಯಕೃತಜ್ಞನದಾನಪರನಪರ । ವಧುವಿನೊಲ್ಮೆಯಬೇಟೆಗೊಳಗಾಗದನಮಾನ । ನಿಧಿಯೆನಿಸುವನತೀರ್ಥಸಂಗತನಸಲೆಕೂಟಸಾ

ಕ್ಷಿಯ, ಆವಗಂ-ಸರ್ವದಾ, ತೊಡವೆನಿಸಳು - ಭೂಷಣವಾದವಳೆಂದೆನ್ನಿಸಿಕೊಳ್ಳುವಳು, ಆವಗಂ-ಅನವರತವೂ, ಪತಿ-ಭರ್ತನಲ್ಲಿಯೇ, ಪರಾಯಣೆಯರು- ಪ್ರೀತಿಯುಳ್ಳವರು, ಆಗಿಹ-ಆಗಿರತಕ್ಕ, ಸತ್ಸತಿಯರಲ್ಲಿ- ಸಂಸಾರಸ್ತ್ರೀಯರಲ್ಲಿಯೂ, ಮೇಣ್-ಅಲ್ಲದೆ, ಉನ್ಮುಖ-ಎದುರಾಗುವ, ಮುಖಾಂಬುರುಹ-ತಾವರೆಯಂತಿರುವ ಮುಖವೆಂಬ, ಸತ್-ಶ್ರೇಷ್ಠವಾದ, ಸರೋಜಾಸ್ತ್ರಕೆ-ಪುಷ್ಪಶರಕ್ಕೆ, ಅಳುಕದ-ಹೆದರದ, ಪುರುಷನಲ್ಲಿ-ಮಾನವನಲ್ಲಿ, ವಿಲಸತ್-ಹೊಳಹೊಳೆಯುವ, ಸಮುದ್ರಾತ್ಮಜೆ-ಕಡಲಣುಗಿಯು, ಸರಾಗದಿಂದ-ಪ್ರೇಮಾತಿಶಯದಿಂದ, ಅಲ್ಲಿ-ಆ ಎಡೆಯಲ್ಲಿ, ಸುಸ್ಥಿರೆಯಾಗಿ-ಶಾಶ್ವತವಾಗಿ, ನೆಲಸಿರ್ಪಳು-ಆವಾಸವಾಗಿರುವಳು,

ಅ॥ ವಿ॥ ಶ್ರೀವತ್ಸವೆಂಬುದೊಂದು ಐಶ್ವರ್ಯದಾಯಕವಾದ ಮಚ್ಚೆಯು, ವಿಷ್ಣುವು ಈ ಚಿಹ್ನೆಯಿಂದ ಅಲಂಕೃತನಾದ್ದರಿಂದ ಸಾಮ್ರಾಜ್ಯದಿಂದೊಡಗೂಡಿರುವನು. ವತ್ಸ-ಇದು ನಾನಾರ್ಥಪದವು. ಇದಕ್ಕೆ ಬಾಲಕ, ಕರು, ಒಬ್ಬ ಮುನಿಯನಾಮವು, ಎಂಬ ಅರ್ಥಗಳುಂಟು ॥೬೫॥

ಟೀ॥ ರನ್ನದಿಂ-ಶ್ರೇಷ್ಠವಾದ ಮಣಿಗಳಿಗಿಂತಲೂ, ಧಾನ್ಯಂ-ನೆಲ್ಲು, ರಾಗಿ, ಗೋಧಿ ಮೊದಲಾದ ಧಾನ್ಯಗಳನ್ನೆ, ವಿಶೇಷಮೆಂದು-ಅಧಿಕವಾದದ್ದೆಂದು, ಒದವಿಸುವರು-ಏರ್ಪಡಿಸತಕ್ಕವರು, ಅನ್ನಮೆ-ಆಹಾರವೇ, ಹಣದಿಂ - ಹಣಕ್ಕಿಂತಲೂ, ಇಮ್ಮಡಿಯೆಂದು-ಮೇಲಾದ್ದೆಂದು, ವೆಚ್ಚಿಸುವ-ಖರ್ಚುಮಾಡುವ, ಮನ್ನಿಸಲ್-ಮರ್ಯಾದೆಮಾಡಲು, ಬಾಲಕನು-ಹಸುಳೆಯು, (ತನ್ನ ಕುವರನು) ಅತಿಥಿಯುಂ-ಊಟಕ್ಕೆ ಬಂದ ಪರಸ್ಥಳದವನು, ಸರಿಯೆಂದು-ಒಂದೇ ಎಂಬದಾಗಿ, ಸತ್ಕರಿಪನು-ಉಪಚಾರಮಾಡತಕ್ಕವನು, ಅವನು-ಯಾವನೊ, ಅವನ-ಅಂತಹಮಾನವನ, ಮತ್ತು, ತನ್ನ-ಸ್ವಕೀಯರಾದ, ತಾಯ್ತಂದೆ- ಮಾತಾಪಿತೃಗಳು, ಸೋದರ-ಸಹಜಾತರು, ಬಂಧು-ಅತ್ತೆ ಮಾವ ಭಾವ ಮೊದಲಾದವರ, ಬಳಗಮಂ - ಗುಂಪನ್ನು, ಮನ್ನಿಸುವನು-ಮರ್ಯಾದೆಯಿಂದ ನೋಡತಕ್ಕವನೋ, ಆವನು-ಯಾವ ಮಾನವನೊ, ಆತನ-ಅಂತಹ ಪುರುಷನ, ಸದಾಚಾರಸಂಪನ್ನನಾಗಿ-ಸನ್ಮಾರ್ಗಪ್ರವರ್ತಕನಾಗಿ, ಇರಲು-ಇರುತ್ತಿರಲು, ಅವನ-ಆತನ. ಮಂದಿರದೊಳ್-ಭವನದಲ್ಲಿ, ಐಶ್ವರ್ಯಲಕ್ಷ್ಮಿ-ಭಾಗ್ಯವಧುವು, ನೆಲೆಯಾಗಿರ್ಪಳು-ಶಾಶ್ವತವಾಗಿರುವಳು. ॥೬೬॥

ಟೀ॥ ಮಧುರ-ಇಂಪಾದ, ವಾಣಿಯ-ನುಡಿಯುಳ್ಳ, ಕೃತಜ್ಞನ-ಮಾಡಿದ ಉಪಕೃತಿಯನ್ನು ಎಂದಿಗೂ ಮರೆಯದವನ, ದಾನಪರನ-ಉತ್ತಮರಿಗೆ ದಾನಮಾಡಿ ಕೃತಾರ್ಥನಾಗಬೇಕೆಂದು ಬಯಸತಕ್ಕವನ, ಪರವಧುವಿನ-ಅನ್ಯರ ಹೆಂಗಸಿನ, ಒಲ್ಮೆಯ-ವಿಶ್ವಾಸವೆನ್ನತಕ್ಕ, ಬೇಟೆಗೆ-ಸೂರೆಗೆ, ಒಳಗಾಗದನ-ಈಡಾಗದಿರತಕ್ಕವನ, ಮಾನನಿಧಿಯೆನಿಸುವನ-ಮರ್ಯಾದೆಯೆಂಬ ನಿಕ್ಷೇಪದಿಂದ ಕೂಡಿದವನ, ತೀರ್ಥಸಂಗತನ-ಗಂಗಾನದಿಯೇ ಮೊದಲಾದವುಗಳಲ್ಲಿ ಸ್ನಾನಮಂಗೈದು ಪಾಪಪರಿಹಾರವಂ ಮಾಡಿಕೊಂಡಿರತಕ್ಕವನ, ಸಲೆ-ಹೆಚ್ಚಾಗಿ, ಕೂಟಸಾಕ್ಷ್ಯವಂ-ಅನೃತದ ಮಾತನ್ನು, ನುಡಿಯದವನ-ಎಂದಿಗೂ ಹೇಳದೆ ಇರುವಂಥವನ, ವಿದಿತ-ಶಾಸ್ತ್ರಸಿದ್ಧವಾದ, ಕರ್ಮದ-ಅನುಷ್ಠಾನದ, ಮಾಳ್ಕೆಯಂ-ಬಗೆಯನ್ನು, ಮಾಜದನ-ಮರೆಮಾಚದೆ ಇರತಕ್ಕವನ, ವಸುಧೆಯೊಳು-ಇಳೆಯಲ್ಲಿ, ಇಷ್ಟಾರ್ಥಪೂರ್ತಿಯ-ಇಷ್ಟಸಿದ್ಧಿಯನ್ನು, ನೆಗಳ್ಚುವನ-ಎಸಗುವನ, ಬಹುವಿಧ-ಬಗೆಬಗೆಯಾದ,

ಇರುವ ಪುರುಷನಲ್ಲಿಯೂ ಪತಿಭಕ್ತಿಪರಾಯಣರಾದ ನಾರೀಮಣಿಯರ ಬಳಿಯಲ್ಲಿಯೂ ಪಾಲ್ಗಡಲ ಪುತ್ರಿಯಾಗಿಯೂ ನಾರಾಯಣಮೂರ್ತಿಯ ಸತೀರತ್ನವಾಗಿಯೂ ಇರುವ ಶ್ರೀ ಮಹಾಲಕ್ಷ್ಮಿಯು ತಾಂಡವವಾಡುತ್ತಲಿರುವಳು ॥ ೬೫ ॥ ಅಲ್ಲದೆ ವಜ್ರ ವೈಡೂರ್ಯಾದಿಗಳಿಗಿಂತಲೂ ಧಾನ್ಯವೇ ಶ್ರೇಷ್ಠವೆಂದು ಕೂಡಿ ಹಾಕತಕ್ಕ, ಅನ್ನದಾನಕ್ಕಿಂತ ಹೆಚ್ಚಾದದ್ದು ಮತ್ತೆ ಯಾವುದೂ ಇಲ್ಲವೆಂದು ಅರಿತಿರುವ, ಅನ್ನಕ್ಕಾಗಿ ಬಂದವರನ್ನು ಮನೆಯ ಮಕ್ಕಳಿಗಿಂತಲೂ ಹೆಚ್ಚಾಗಿ ಆದರಿಸುವ ನಡತೆಯುಳ್ಳ, ಮಾತಾಪಿತೃಗಳು ಸಹೋದರ ಸಹೋದರಿಯರು, ಬಂಧು ಬಳಗದವರು ಇವರನ್ನೆಲ್ಲಾ ಮರ್ಯಾದೆಯಿಂದ ನೋಡುತ್ತ ಸನ್ಮಾರ್ಗಪ್ರವರ್ತಕನಾದವನ ಮನೆಯನ್ನೂ ॥ ೬೬ ॥ ಯಾವಾಗಲೂ ಎಲ್ಲರನ್ನೂ ವಿಶ್ವಾಸದಿಂದ ಮಾತನಾಡಿಸುತ್ತಲೂ, ಉಪಕಾರವನ್ನು ಸ್ಮರಿಸುತ್ತಲೂ ಸಜ್ಜನರಲ್ಲಿ ದಾನಮಾಡಲೆಳಸುತ್ತಲೂ ಪರಸ್ತ್ರೀಯರನ್ನು ಮನದಲ್ಲಿಯೂ ಸ್ಮರಿಸದೆ ಮಾನಿಷ್ಠನೂ, ಮಿಥ್ಯಾವಾದವಿಲ್ಲದವನೂ, ಜೂಜಾಡದವನೂ, ಧರ್ಮ ಪ್ರವರ್ತಕನೂ, ಗಂಗಾದಿ ಪುಣ್ಯ ನದಿಗಳಲ್ಲಿ ಮಿಂದು ಪಾಪ ಪರಿಹಾರ ಮಾಡಿಕೊಂಡವನೂ ಇವರೇ ಮೊದಲಾದವರು ಇರುವ ಸ್ಥಳವನ್ನೂ ಬಿಟ್ಟು ಹೋಗಲು ಮಹಾಲಕ್ಷ್ಮಿಗೆ ಲೇಶವೂ

ಕ್ಷ್ಯವಂನುಡಿಯದವನ ‖ ವಿದಿತಕರ್ಮದನಾಳ್ಕೆಯುಂಮಾಜದಾತನವ | ಸುಧೆಯೊಳಿಸ್ವಾರ್ಥಪೂರ್ತಿಯನೆಗಳ್ಚುವನಬಹು | ವಿಧ
ದಧರ್ಮಂಗಳಂರಚಿಸುವನಮನೆಯೊಳಿಂದಿರೆಬಿಡದೆನೆಲಸಿರ್ಪಳು ‖ ೬೭ ‖ ಹೊಸ್ತಿಲೊರಳೊನಕೆಗಳಮೇಲೆಕುಳ್ಳಿರ್ಪವನ | ಮ
ಸ್ತಕವನೆರಡುಕೈಯಿಂತುರಿಸಿಕೊಂಬುವನ | ವಿಸ್ತರದಜೂಜುಗಳ್ಗೆಳಸುವವನಪಿರಿದುಂಬುವನನಿಂದುನೀರ್ಗುಡಿವನ ‖ ಅಸ್ತಮಯ
ದುದಯಕಾಲದಿನಿದ್ರೆಗೈವನಾ | ತ್ಮಸ್ತುತಿಯಪರನಿಂದೆಯುವನಸಾಧಿಸಿಪರರ | ವಸ್ತುವಂಕಳುವನನಿರುದ್ಯೋಗದವನಸಿರಿತೊಲ
ಗಿದಲ್ಲದೆಮಾಣ್ಪಳೆ ‖ ೬೮ ‖ ಜಡನಮೂರ್ಖನಶಠನತಾಮಸನನಿಷ್ಠುರದ | ನುಡಿಯುವನಪಿಸುಣನಕೃತಘ್ನನಕರುಬನಾಬಾ | ಯ್ಬ
ಡುಕನಕುಚೇಷ್ಟಕನಕಾಮುಕನಹಿಂಸಕನಡಂಭಕನಪಾಷಂಡಿಯ ‖ ಕಡುಗೋಪದವನಬಹುಭಕ್ಷಕನಖೂಳನ | ಧೃಢನಕುತ್ಸಿ
ತನಕುಹಕನದುರಾಚಾರದಿಂ | ನಡೆವವನವಿಶ್ವಾಸಘಾತುಕನಪಾತಕನ ಲಕ್ಷ್ಮಿತೊಲಗದೆಮಾಣ್ಬಳೆ ‖ ೬೯ ‖ ಈಪರಿಯೊಳಾಮು

---

ಧರ್ಮಗಳಂ-ಸತ್ಕಾರ್ಯಗಳನ್ನು, ರಚಿಸುವನ-ನೆರವೇರಿಸತಕ್ಕವನ, ಮನೆಯೊಳು-ಮಂದಿರದಲ್ಲಿ, ಇಂದಿರೆ-ಸಿರಿಯು, ನೆಲಸಿರ್ಪಳು-ಸ್ಥಿರವಾಗಿರುವಳಾಗುತ್ತಾಳೆ ‖ ೬೭ ‖

ಟೀ‖ ಹೊಸ್ತಿಲು-ಕವಾಟದ, ಒರಳು-ಒರಳುಕಲ್ಲಿನ, ಒನಕೆಗಳ-ಒನಕೆ ಎಂಬ ಮರದ ತುಂಡಿನ, ಮೇಲೆ-ಮೇಲ್ಭಾಗದಲ್ಲಿ, ಕುಳ್ಳಿರ್ಪವನ-ಕೂತು ಇರತಕ್ಕ ಮನುಷ್ಯನ, ಮಸ್ತಕವನು-ಶಿರವನ್ನು, ಎರಡುಕೈಯಿಂ-ಎರಡು ಕರಗಳಿಂದಲೂ, ತುರಿಸಿಕೊಂಬುವನ-ಪರಚಿಕೊಳ್ಳತಕ್ಕವನ, ವಿಸ್ತರದ-ವಿಶಾಲವಾದ, ಜೂಜುಗಳ್ಗೆ-ಪಂಥಗಳಿಗೆ, ಎಳಸುವವನ-ಬಯಸತಕ್ಕ ಮನುಷ್ಯನ, ಪಿರಿದು-ಅಧಿಕವಾಗಿ, ಉಂಬುವನ-ಊಟಮಾಡತಕ್ಕವನ, ನಿಂದು-ಮೇಲಕ್ಕೆದ್ದು, ನೀರ್ಗುಡಿವನ-ಜಲಪಾನವಂ ಗೈಯ್ಯುವವನ, ಅಸ್ತಮಯದಿ-ಸಂಧ್ಯಾಕಾಲದಲ್ಲಿ, ಉದಯಕಾಲದಿ- ಸೂರ್ಯನು ಹುಟ್ಟಲು ಪ್ರಾರಂಭವಾದಾಗ, ನಿದ್ರೆಗೈವನ-ನಿದ್ದೆಹೋಗತಕ್ಕ ಮಾನವನ, ಆತ್ಮಸ್ತುತಿ-ತನ್ನನ್ನು ಹೊಗಳಿಕೊಂಡು, ಪರ-ಅನ್ಯರನ್ನು, ನಿಂದೆಯುವನ-ದೂರತಕ್ಕವನ, ಸಾಧಿಸಿ-ಕಾಲವನ್ನು ನಿರೀಕ್ಷಿಸಿ, ಪರರವಸ್ತುವಂ-ಇತರರ ಪದಾರ್ಥವನ್ನು, ಕಳುವನ-ಕಳ್ಳತನ ಮಾಡತಕ್ಕವನ, ನಿರುದ್ಯೋಗದವನ-ಯಾವ ವಿಧವಾದ ಕೆಲಸವನ್ನೂ ಮಾಡದೆ ಅನ್ಯಾಯವಾಗಿ ಕಾಲವನ್ನು ಕಳೆಯತಕ್ಕ ಮನುಷ್ಯನ, ಸಿರಿ-ಸಂಪತ್ತು, ತೊಲಗಿದಲ್ಲದೆ-ಆ ಸ್ಥಳದಿಂದ ದೂರವಾದಹೊರತು, ಮಾಣ್ಪಳೆ-ಇದ್ದಾಳೆಯೆ, ? ಎಂದಿಗೂ ಇರುವುದಿಲ್ಲ. ‖೬೮‖

ಟೀ‖ ಜಡನ-ಸೋಮಾರಿಯನ್ನು, ಮೂರ್ಖನ-ಮುಷ್ಕರ ಹಿಡಿಯುವವನನ್ನು, ಶಠನ- ದುಷ್ಟನನ್ನು, ತಾಮಸನ-ಆಲಸ್ಯ ಸ್ವಭಾವದವನನ್ನು, ನಿಷ್ಠುರದ-ಅನುಪಯುಕ್ತವಾದ, ನುಡಿಯುವನ-ವಚನಗಳುಳ್ಳವನನ್ನು, ಪಿಸುಣನ-ಕೃಪಣನ, ಕೃತಘ್ನನ-ಉಪಕಾರಸ್ಮರಣೆಯೇ ಇಲ್ಲದವನ, ಕರುಬನ-ಅಸೂಯಾಪರನ, ಬಾಯ್ಬಡುಕನ-ಬಾಯಾಳಿಯ, ಕುಚೇಷ್ಟಕನ-ಕೆಟ್ಟ ಚೇಷ್ಟೆಗಳವನ, ಕಾಮುಕನ-ಪರಸ್ತ್ರೀಯಳಂ ಬಯಸುವನ, ಹಿಂಸಕನ-ಬಾಧೆಯಂಗೈವನ, ಡಂಭಕನ-ಜಂಭಗಾರನ, ಪಾಷಂಡಿಯ-ನಾಸ್ತಿಕ ಬುದ್ಧಿಯಂ ಪ್ರಚಾರಮಾಡುವನ, ಕಡುಗೋಪದವನ-ಬಹು ಮುಳಿಸುಳ್ಳವನ, ಬಹುಭಕ್ಷಕನ-ಅತ್ಯಾಹಾರದವನ, ಖೂಳನನು-ದುರ್ಮಾರ್ಗಿಯೇ ಆದಿಯಾದವರನ್ನ, ಅದೃಢನ-ಚಿತ್ತಸ್ಥೈರ್ಯವಿಲ್ಲದವನ, ಕುತ್ಸಿತನ-ದೂಷಣೆಯನ್ನೈದಿದವನ, ಮತ್ತು ದೂಷಿಸತಕ್ಕವನ, ಕುಹಕನ-ಹಾಸ್ಯಗಾರನ, ದುರಾಚಾರದಿಂ-ದುರ್ಮಾರ್ಗದಿಂದ, ನಡೆವವನ-ವರ್ತಿಸತಕ್ಕವನ, ವಿಶ್ವಾಸಘಾತಕನ-ನಂಬಿಕೆಗೆ ದ್ರೋಹವಂ ಮಾಡತಕ್ಕವನ, ಪಾತಕನ-ಪಂಚಮಹಾ ಪಾತಕವುಳ್ಳವನ, ಇವರನ್ನು, ಲಕ್ಷ್ಮಿ-ಸಿರಿಯು, ತೊಲಗದೆ-ಬಿಟ್ಟುಬಿಡದೆ, ಮಾಣ್ಬಳೆ-ಇದ್ದಾಳೆಯೆ ?

ಅ‖ ವಿ‖ ಪಂಚಮಹಾಪಾತಕಗಳು-ಸ್ವರ್ಣಸ್ತೇಯ, ಸುರಾಪಾನ, ಬ್ರಹ್ಮಹತ್ಯ, ಭ್ರೂಣಹತ್ಯ, ಈ ನಾಲ್ಕು ಕೃತ್ಯಂಗಳಂ ಮಾಡುವರೊಡನೆ ಸ್ನೇಹ ಬೆಳೆಸುವುದು ಈ ಐದು ‖ ೬೯ ‖

ಟೀ‖ ಈ ಪರಿಯೊಳು-ಈ ತೆರನಾಗಿ, ಆ ಮುನಿ-ಆ ಬಾದರಾಯಣನು, ಸಮಸ್ತ - ಎಲ್ಲಾ, ಧರ್ಮಂಗಳಂ-ತತ್ತ್ವ

---

ಇಷ್ಟವಿಲ್ಲವು ‖೬೭‖ ಹೊಸಲು, ಒರಳಕಲ್ಲು, ಒನಕೆ ಇವುಗಳಮೇಲೆ ಕುಳಿತುಕೊಳ್ಳುವನನ್ನೂ, ಎರಡು ಕೈಗಳಿಂದಲೂ ತಲೆಯನ್ನು ಕೆರೆಯುತಕ್ಕವನನ್ನೂ, ಜೂಜುಗಾರನನ್ನೂ, ಅತ್ಯಾಹಾರಿಯನ್ನೂ, ನಿಂತು ನೀರು ಕುಡಿಯತಕ್ಕವನನ್ನೂ, ಉದಯಾಸ್ತಮಯಕಾಲದಲ್ಲಿ ನಿದ್ರೆ ಮಾಡತಕ್ಕವನನ್ನೂ, ತನ್ನನ್ನು ಹೊಗಳಿಕೊಂಡು ಇತರರನ್ನು ತಿರಸ್ಕರಿಸತಕ್ಕವನನ್ನೂ, ಪರಸ್ವಾಪಹರಣ ಮಾಡುವವನನ್ನೂ, ಯಾವ ಕೆಲಸವೂ ಇಲ್ಲದೆ ಕಾಲಹರಣ ಮಾಡುವವನನ್ನೂ,‖೬೮‖ ಸೋಮಾರಿ, ಮೂರ್ಖ, ಹಟವಾದಿ, ಮಂದಬುದ್ಧಿಯುವನು, ಕಠಿಣೋಕ್ತಿಗಳನ್ನು ಆಡುವನು, ಹೊಟ್ಟೆಕಿಚ್ಚುಪಡುವನು, ಉಪಕಾರ ಸ್ಮರಣೆಯಿಲ್ಲದವನು, ಘಾತಕನು, ಕೆಟ್ಟಚಾಳಿಯುವನು, ದುರ್ಮಾರ್ಗಿಯು, ನಂಬಿದವರನ್ನು ಕೆಡಿಸಲೆಳಸುವ ಪಾತಕಿಯು, ಇವರೇ ಮೊದಲಾದವರು ಇರುವ ಸ್ಥಳದಿಂದ ಶ್ರೀ ಮಹಾಲಕ್ಷ್ಮಿಯು ಬಹುದೂರದಲ್ಲಿರುವಳು ‖ ೬೯ ‖ ಎನ್ನುವ ಧರ್ಮಸೂಕ್ಷ್ಮಗಳನ್ನು ವ್ಯಾಸಮಹರ್ಷಿಯು

ನಿಸಮಸ್ತಧರ್ಮಾಂಗಳಂ | ಭೂಪತಿಗೆವಿಸ್ತರಿಸಿಬಳಿಕಮಖಕಾಲಂಸ | ಮೀಪವಾದಪುದಿನ್ನುಹಿಮಗಿರಿಯೊಳಿರ್ದಧನಮಂತರಿಸ ವೇಳ್ಪುದೆಂದು || ಅಪರಾಶರಸುತಂನೇಮಿಸಿದೊಡರಸಂಚ | ಮೂಪರಂಕರೆಸಿಪೊರಮಟ್ಟು ನಡೆಗೊಂಡಂಪ್ರ | ತಾಪದಿಂಪಯಣ ಪಯಣಕೆನಡೆವಬೀಡುಬೀಡುಗಳಸನ್ನಾಹದಿಂದ || ೨೦ || ಸವ್ಯಸಾಚಿಪ್ರಮುಖರೊಡಗೂಡಿಹಿಮಗಿರಿಯ | ದಿವ್ಯಸ್ಥಳಂಗಳಂನೋಡುತೊಲವಿಂದವೇ | ದವ್ಯಾಸಮುನಿವೆರಸಿವಿಪ್ರರೊಡಗೂಡಿಮರುತಾಧ್ವರದೊಳಂದುಬಿಸುಟ || ದ್ರವ್ಯದೆಡೆಗೈತಂದು ಗಂಧಾಕ್ಷತೆಗಳಿಂದ | ನವ್ಯಕುಸುಮೋತ್ಕರಸುಧೂಪದೀಪಂಗಳಿಂ | ಗವ್ಯಮಧುಶರ್ಕರಾದ್ಯುಪಹಾರದಿಂನೃಪಂಧನದನಂಪೂಜಿಸಿದನು||೨೧|| ಅಷ್ಟದಿಕ್ಪಾಲರ್ಗೆಪೂಜೆಯುಂಮಾಡಿಚೌ | ಷಷ್ಟಿಯೋಗಿನಿಯರ್ಗೆಬಲಿಗೊಟ್ಟುಭೂತಸಂ | ತುಷ್ಟಿಯಪ್ಪಂತೆಕುರಿಕೋಣಂ

---

ರಹಸ್ಯಗಳನ್ನೂ, ಭೂಪತಿಗೆ-ಯುಧಿಷ್ಠಿರನಿಗೆ, ವಿಸ್ತರಿಸಿ-ಬೋಧಿಸಿ, ಬಳಿಕ - ಅನಂತರ, ಮಖಕಾಲಂ - ಯಾಗಾರ್ಹವಾದ ಮಧುಮಾಸವು, ಸಮೀಪಂ-ದೂರವಿಲ್ಲದ್ದು, ಆದಪುದು-ಆಗುತ್ತದೆ, ಇನ್ನು-ಮುಂದೆ, ಹಿಮಗಿರಿಯೊಳು-ತುಹಿನಗಿರಿಯಲ್ಲಿ, ಇರ್ದ-ವಿಪ್ರರು ಬಿಸುಟಿದ್ದ, ಧನಮಂ-ಧನವನ್ನು, ತರಿಸವೇಳ್ಪುದು-ತೆಗಿಸಿಕೊಂಡು ಬರಬೇಕು, ಎಂದು-ಎಂಬದಾಗಿ, ಆ ಪರಾಶರ ಸುತಂ-ಆ ವ್ಯಾಸಮುನಿವರ್ಯನು, ನೇಮಿಸಿದೊಡೆ-ಶಾಸನವನ್ನೀಯಲು, ಅರಸಂ-ಧರ್ಮನಂದನನು, ಚಮೂಪರಂ-ದಳದಮುಖ್ಯಸ್ಥರನ್ನು, ಕರೆಸಿ-ಬರಮಾಡಿಕೊಂಡು, ಪೊರಮಟ್ಟು-ನಡೆದು, ಪ್ರತಾಪದಿಂ-ವೀರಾವೇಶದಿಂದ, ಪಯಣಪಯಣಕೆ-ಹಾರಿದಾರಿಗೂ, ನಡೆವ-ಐತರುವ, ಬೀಡುಬೀಡುಗಳ-ಸೇವಕಜನರಗುಂಪುಗುಂಪಿನ, ಸನ್ನಾಹದಿಂ-ಕಾರ್ಯಗಳಿಂದ, ನಡೆಗೊಂಡಂ-ಪ್ರಯಾಣವಂ ಬೆಳೆಯಿಸಿದನು.

ಅ|| ವಿ|| ಪರಾಶರ-ಪರಾಶರ ಮಹರ್ಷಿಯ, ಸುತಂ-ಕುವರನು (ವ್ಯಾಸನು), ಪಯಣ (ತ್ಭ) ಪ್ರಯಾಣ (ತ್ಸ) ಪಯಣಪಯಣ, (ಕ್ರಮಾನುಲ್ಲಂಘನದಲ್ಲಿ ದ್ವಿರುಕ್ತಿ), ಬೀಡುಬೀಡುಗಳ (ಅಧಿಕಾರ್ಥದಲ್ಲಿ ದ್ವಿರುಕ್ತಿ), || ೨೦ ||

ಟೀ|| ಸವ್ಯಸಾಚಿ-ಪಾರ್ಥನೆ, ಪ್ರಮುಖರು-ಆದಿಯಾದವರಿಂದ, ಒಡಗೂಡಿ - ಸೇರಿಕೊಂಡು, ಹಿಮಗಿರಿಯ-ಹಿಮವತ್ಪ್ರಾಂತದ, ದಿವ್ಯ-ಸುರರಿಗೆ ಅರ್ಹವಾದ, ಸ್ಥಳಂಗಳಂ-ಇಳೆಯನ್ನು, ನೋಡುತ-ಈಕ್ಷಿಸುತ್ತ, ಒಲವಿಂದ-ಪ್ರೀತಿಯಿಂದ, ವೇದವ್ಯಾಸಮುನಿವೆರಸಿ-ಬಾದರಾಯಣನಿಂದೊಡಗೂಡಿ, ವಿಪ್ರರೊಡಗೂಡಿ-ಬ್ರಾಹ್ಮಣರಂ ಜೊತೆಮಾಡಿಕೊಂಡು, ಮರುತ-ಮರುತ್ತರಾಯನು ಮಾಡಿದ, ಅಧ್ವರದೊಳು-ಯಾಗದಲ್ಲಿ, ಅಂದು-ಪೂರ್ವದಲ್ಲಿ, ಬಿಸುಟ-ಹಾಕಿದ್ದ, ದ್ರವ್ಯದ-ಧನದ, ಎಡಗೆ-ಹತ್ತಿರಕ್ಕೆ, ಐತಂದು-ಹೊಕ್ಕು, ಗಂಧ-ಪರಿಮಳ ದ್ರವ್ಯದಿಂದಲೂ, ಅಕ್ಷತೆಗಳಿಂದ-ಸೇಸೆಗಳಿಂದಲೂ, ನವ್ಯ-ನೂತನವಾದ, ಕುಸುಮ-ಪುಷ್ಪಗಳ, ಉತ್ಕರ-ಅತಿಶಯವಾದ, ಸುಧೂಪ-ಪರಿಮಳಯುಕ್ತವಾದ ಹಾಲುಮಡ್ಡಿ ಮೊದಲಾದವುಗಳಿಂದಲೂ, ದೀಪಂಗಳಿಂ-ದೀಪಗಳಿಂದಲೂ, ಗವ್ಯ-ದಧ್ಯಾಜ್ಯಗಳು, ಮಧು-ಜೇನುತುಪ್ಪ, ಶರ್ಕರ-ಸಕ್ಕರೆ, ಆದಿ-ಇವೆ ಮೊದಲಾದ, ಉಪಹಾರದಿಂ-ಪೂಜೋಪಕರಣಂಗಳಿಂದ, ನೃಪಂ-ಯುಧಿಷ್ಠಿರನು, ಧನದನಂ-ಅಳಕಾಪಟ್ಟಣದ ಒಡೆಯನನ್ನು, ಪೂಜಿಸಿದನು-ಅರ್ಚಿಸಿದನು ||

ಅ|| ವಿ|| ಮಧು-ಮಧುವೆಂಬರಾಕ್ಷಸ, ಮಧುವನ, ಜೇನುತುಪ್ಪ, ವಸಂತಕಾಲವೆಂಬ ಅರ್ಥಗಳಾಗುವವು ||೨೧||

ಟೀ|| ಅಷ್ಟದಿಕ್ಪಾಲಕರ್ಗೆ-ಇಂದ್ರಾದಿಗಳಿಗೆ, ಪೂಜೆಯುಂ-ಸಪರ್ಯೆಯನ್ನು, ಮಾಡಿ - ಎಸಗಿ, ಚೌಷಷ್ಟಿ - ಅರವತ್ತನಾಲ್ಕುಮಂದಿ, ಯೋಗಿನಿಯರ್ಗೆ - ಸುರಾಂಗನೆಯರಿಗೆ, ಬಲಿಗೊಟ್ಟು - ಆಹಾರವನ್ನಿತ್ತು, ಭೂತ - ಸಿದ್ಧರು, ಗುಹ್ಯಕ

---

ಯುಧಿಷ್ಠಿರನಿಗೆ ಬೋಧಿಸಿದ ಬಳಿಕ ರಾಯನಂ ಕುರಿತು, ಎಲೈ ಧರ್ಮಜನೆ, ಯಾಗವನ್ನು ಆರಂಭಿಸತಕ್ಕ ಗಡುವು ಹತ್ತಿರವಾಯಿತಾಗಿ ಜಾಗ್ರತೆಯಲ್ಲಿ ಹಿಮವತ್ಪರ್ವತ ಪ್ರಾಂತದಲ್ಲಿರುವ ಧನರಾಶಿಯನ್ನು ತರಿಸಲು ಏರ್ಪಡಿಸೆಂದು ಬೆಸಸಿದನು. ಈರೀತಿಯಲ್ಲಿ ಆಜ್ಞೆಯನ್ನಿತ್ತ ವ್ಯಾಸಮುನಿಯ ಶಾಸನವನ್ನು ಶಿರದೊಳಿಟ್ಟು ಚತುರಂಗಬಲವೂ ಸಿದ್ಧವಾಗಲೆಂದು ಸೇನಾನಾಯಕರಿಗೆಲ್ಲಾ ಅಪ್ಪಣೆಯಂ ಮಾಡಿದನು ||೨೦|| ತಕ್ಷಣವೇ ಸಕಲ ಚಮೂಪರೂ ಸಕಲ ಸೇನಾಪರಿವೃತರಾಗಿ ಸಿದ್ಧರಾದರು. ಧರ್ಮನಂದನನು ಈ ಪರಿವಾರದಿಂದಲೂ ಅರ್ಜುನಾದಿಗಳಿಂದಲೂ ಕೂಡಿ, ವ್ಯಾಸಮುನೀಂದ್ರನನ್ನೂ ಇನ್ನೂ ಅನೇಕರಾದ ಭೂಸುರೋತ್ತಮರನ್ನೂ ಸಂಗಡ ಕರೆದುಕೊಂಡು ಹೊರಟು ಮರುತ್ತನು ಪೂರ್ವದಲ್ಲಿ ಅಶ್ವಮೇಧಯಾಗನಂಮಾಡಿ ಖ್ಯಾತಿಯಂ ಪಡೆದಿದ್ದ ಹಿಮವತ್ಪ್ರಾಂತವನ್ನು ಹೋಗಿ ಸೇರಿದನು. ಆ ಬಳಿಕ ಯುಧಿಷ್ಠಿರನು ಮರುತ್ತನು ಮಾಡಿದ ಯಾಗಶಾಲೆಯನ್ನು ಹೊಕ್ಕು ಆತನ ಯಾಗದಲ್ಲಿ ಬ್ರಾಹ್ಮಣರೆಲ್ಲಾ ಧನಕನಕ ವಸ್ತ್ರಾದಿಗಳಿಂದ ತೃಪ್ತರಾಗಿ ತಮಗೆ ಮರುತ್ತನು ಕೊಟ್ಟ ಧನರಾಶಿಯನ್ನು ಹೊತ್ತುಕೊಂಡು ಹೋಗಲಾರದೆ ಅಲ್ಲಿಯೆ ಬಿಟ್ಟು ತಂಡತಂಡವಾಗಿ ಬಿದ್ದಿರುವದನ್ನೂನೋಡಿ ಆ ಧನರಾಶಿಯ ಬಳಿಗೆ ಬಂದು ಗಂಧಪುಷ್ಪಾಕ್ಷತೆಗಳಿಂದಲೂ, ಧೂಪದೀಪನೈವೇದ್ಯಾದಿಗಳಿಂದಲೂ, ಹಾಲುಸಕ್ಕರೆಮೊದಲಾದ ಅಭಿಷೇಕ ಸಾಮಗ್ರಿಗಳಿಂದಲೂ, ಧನಪತಿಯಾದ ಅಲಕಾಪಟ್ಟಣದ ರಾಜನನ್ನು ಅರ್ಚಿಸಿ, || ೨೧ || ಅನಂತರ ಇಂದ್ರಾದಿ ಅಷ್ಟದಿಕ್ಪಾಲಕರೆಲ್ಲರನ್ನೂ

ಗಳಂಪೊಯಿಸಿಬಣ್ಣಗೂಳಂಪಸರಿಸಿ ॥ ದೃಷ್ಟಮಾದಖಿಳಧನಮಂತೆಗೆಸಿಭೂಪನು । ತ್ಕೃಷ್ಟಮಖಮಿನ್ನುಸಂಪೂರ್ತಿಯಾದವು ದೆಂಬ । ಹೃಷ್ಟತೆಯೊಳರ್ಥಮಂಸಾಗಿಸಿದನಿಭಪುರಿಗೆಸೆರ್ಬೊರೆಗಳಿಟ್ಟಣಿಸಲು ॥ ೭೨ ॥ ಪೊರೆಯಾಳ್ಗಳೊಂಟೆವೇಸರಮತ್ತು ಬಂಡಿಗ । ಳ್ನೆರೆಕನಕಭಾರದಿಂದೈದಿದುವುಮಾರ್ಗದೋ । ಳ್ತೆರಪಿಲ್ಲಮೆನೆಕೋಟಿಸಂಖ್ಯೆಯಿಂಕೃಷ್ಣಮುನಿಸಹಿತನೃಪನುತ್ಸವ ದೊಳು ॥ ಮೆರೆವನಿಜನಗರಪ್ರವೇಶಮಂಮಾಡುತ । ಕ್ಕರದೊಳಂದುಭೀಮನಂಕಳುಹಿದಂದೇವ । ಪುರದೆರೆಯಲಕ್ಷ್ಮೀಶನಂ ದ್ವಾರಕಿಗೆಪೋಗಿಬಿಜಯಂಗೈಸಿತಪ್ಪುದೆಂದು ॥೭೩॥

ಸಂಧಿ ೫ ಕ್ಕೆ ಪದ್ಯ ೨೬೩ ಕ್ಕಂ ಮಂಗಳಮಸ್ತು.

---

ಗಂಧರ್ವರು, ಕಿನ್ನರರು, ಕಿಂಪುರುಷರಾದಿಯಾದವರಿಗೂ, ವನಜಂತುಗಳಿಗೂ, ಬ್ರಹ್ಮರಾಕ್ಷಸ, ಭೇತಾಳಗಳಿಗೂ, ಶಾಕಿನೀ ಢಾಕಿನೀ ಮೊದಲಾದವುಗಳಿಗೂ, ಸಂತುಷ್ಟಿಯು-ಆನಂದವು, ಅಪ್ಪಂತೆ-ಉಂಟಾಗುವಹಾಗೆ, ಕುರಿಕೋಣಂಗಳಂ-ಟಗರು ಮಹಿ ಷಾದಿಗಳನ್ನು, ಪೊಯಿಸಿ ಬಲಿಗೊಟ್ಟು, ಬಣ್ಣಗೂಳಂ-ರಕ್ತವರ್ಣದ ಅನ್ನವನ್ನು, ಪಸರಿಸಿ-ವಿಸ್ತರಿಸಿ, ದೃಷ್ಟಮಾದ-ಗೋಚರ ವಾಗುತ್ತಿರುವ, ಅಖಿಳ-ಅಶೇಷವಾದ, ಧನಮಂ-ದ್ರವ್ಯವನ್ನೂ, ತೆಗೆಸಿ-ಭೂಮಿಯಿಂದ ಹೊರಗೆ ತೆಗೆದು, ಭೂಪನು-ಯುಧಿಷ್ಠಿ ರನು, ಉತ್ಕೃಷ್ಟಮಖಂ-ಶ್ರೇಷ್ಠವಾದ ಯಾಗವು, ಸಂಪೂರ್ತಿಯಾದಪುದು-ಈಡೇರುವುದು, ಎಂಬ-ಎನ್ನತಕ್ಕ, ಹೃಷ್ಟತೆಯೊಳು- ಸಂತೋಷದಿಂದ, ಅರ್ಥಮಂ-ಧನವನ್ನು, ಪೆರ್ಬೊರೆಗಳನು-ದೊಡ್ಡದೊಡ್ಡ ಚೀಲಗಳನ್ನು, ಇಟ್ಟಣಿಸಲು - ದಟ್ಟವಾಗಿರುವಂತೆ ಮಾಡಲು, ಇಭಪುರಿಗೆ-ಹಸ್ತಿನಾವತಿ ಪಟ್ಟಣಕ್ಕೆ, ಸಾಗಿಸಿದನು-ತೆಗೆಯಿಸಿಕೊಂಡು ನಡೆದನು ॥

ಅ॥ ವಿ॥ ಅಷ್ಟದಿಕ್ಪಾಲಕರು=ಇಂದ್ರ, ಅಗ್ನಿ, ಯಮ, ನಿಋರುತಿ, ವರುಣ, ವಾಯು, ಕುಬೇರ, ಈಶಾನ, ಯೋಗಿನಿ ಯರು-ಅರವತ್ತುನಾಲ್ಕು ಮಹಾಕೋಟಿ।ಸಂಖ್ಯಾತರಾದ ಸುರಸ್ತ್ರೀಯರು, ಬಣ್ಣಗೂಳು-ಬಲಿಕೊಟ್ಟ ಕೆಂಪು ಹಳದಿ ಕಪ್ಪು ಮೊದಲಾದವರ್ಣದಿಂ ಕೂಡಿದ ಅನ್ನವು ॥೭೨॥

ಟೀ॥ ಪೊರೆಯಾಳ್ಗಳು-ಭಾರವನ್ನು ಹೊತ್ತಿರುವ ಭೃತ್ಯಜನರು, ಒಂಟೆ-ಒಂಟೆಗಳು, ವೇಸರ-ಕತ್ತೆ ಕುದುರೆಗಳ ಸಂ ಯೋಗದಿಂದ ಜನಿಸಿದ ಸಂಕರ ಜಾತಿಯ ಮೃಗಗಳು, ಬಂಡಿಗಳು-ಗಾಡಿಗಳು, ನೆರೆ-ಮೇಲಾಗಿ, ಕನಕ ಭಾರದಿಂ-ಚಿನ್ನದ ಹೊರೆ ಗಳಿಂದ, ಮಾರ್ಗದೋಳ್-ಹಾದಿಯಲ್ಲಿ, ತೆರಪು-ಬಿಡುವು, ಇಲ್ಲಂ-ಇಲ್ಲವು, ಎನೆ-ಎಂಬಂತೆ, ಕೋಟಿಸಂಖ್ಯೆಯಿಂ-ಕೋಟಿಗಣನೆ ಯಿಂದ, ಐದಿದವು-ಹೊರಟವು, ನೃಪ-ಯುಧಿಷ್ಠಿರನು, ಕೃಷ್ಣಮುನಿಸಹಿತ-ವೇದವ್ಯಾಸರ ಸಮೇತನಾಗಿ, ಉತ್ಸವದೊಳು-ಸಂ ತೋಷದಿಂದ, ಮೆರೆವ-ಥಳಥಳಿಸುವ, ನಿಜ-ಸ್ವಕೀಯಮಾದ, ನಗರ ಪ್ರವೇಶಮಂ-ಪಟ್ಟಣ ಪ್ರಯಾಣವನ್ನು, ಮಾಡುತ-ಎಸ ಗುತ್ತ, ಅಂದು-ಆ ಹೊತ್ತೆ, ಅಕ್ಕರದೊಳೆ-ಪ್ರೇಮದಿಂದ, ಭೀಮನಂ- ವೃಕೋದರನನ್ನು, ದ್ವಾರಕೆಗೆ-ಶ್ರೀ ಕೃಷ್ಣನ ವಾಸ ಸ್ಥಳಕ್ಕೆ, ಪೋಗಿ-ಹೊಕ್ಕು. ದೇವಪುರದ-ದೇವಪುರವೆಂಬ ಗ್ರಾಮದ, ಎರೆಯ-ಒಡೆಯನಾದ, ಲಕ್ಷ್ಮೀಶನಂ-ಲಕ್ಷ್ಮೀಕಾಂತನನ್ನು, ಬಿಜಯಂಗೈಸಿ-ಪ್ರಯಾಣಕ್ಕೆ ನಿಷ್ಕರ್ಷಿಸಿ, ತಪ್ಪುದು-ಕರೆತರುವುದು, ಎಂದು-ಎಂಬ ತೆರನಾಗಿ, ಕಳುಹಿದಂ-ಹಸ್ತಿನಾವತಿಯಿಂದ ದ್ವಾರಕಿಗೆ ಪ್ರಯಾಣಮಾಡಿಸಿದನು ॥೭೩॥

ಟೀಕಾ ತಾತ್ಪರ್ಯ ಸಹಿತಮಾದ ಜೈಮಿ.ನಿಭಾರತದೊಳ್ ಐದನೆಯ ಸಂಧಿಯು ಸಮಾಪ್ತಮಾದುದು.

---

ಪೂಜೆಗೈದು, ಅರವತ್ತುನಾಲ್ಕುಮಂದಿ ಯೋಗಿನಿಯರ್ಗೆ ಬಣ್ಣಗೂಳನ್ನಿಟ್ಟು, ಟಗರು ಕೋಣ ಮೊದಲಾದವುಗಳಿಂದ ಭೂತಗ ಳನ್ನು ತೃಪ್ತಿಗೊಳಿಸಿ ಅಲ್ಲಿನ ಅಪರಿಮಿತಮಾದ ಐಸಿರಿಯನ್ನೆಲ್ಲಾ ಆನಂದಾತಿಶಯದಿಂದ ವಶಮಾಡಿಕ್ಕೊಂಡು ॥೭೨॥ ಆ ಧನವ ನ್ನೆಲ್ಲಾ ಒಂಟೆಗಳಮೇಲೂ ಕಾಲಾಳುಗಳು, ಹೇಸರಕತ್ತೆಗಳು, ಬಂಡಿಗಳು ಇವೇ ಮೊದಲಾದವುಗಳ ಸಹಾಯದಿಂದಲೂ ಹಸ್ತಿನಾವತಿಗೆ ಸಾಗಿಸಿಕ್ಕೊಂಡು ಹೋಗಿ ಸೇರಿದಮೇಲೆ ಭೀಮನನ್ನು ಕರೆದು, ಎಲೆ ವೃಕೋದರನೆ, ನಾನು ಮಾಡಬೇಕೆಂಬ ಯಾಗವು ಸಮೀಪಸ್ಥವಾದ್ದರಿಂದ ಜಾಗ್ರತೆಯಲ್ಲಿ ದ್ವಾರಕಾನಿವಾಸಿಯೂ ಲಕ್ಷ್ಮೀಪತಿಯೂ ಆದ ನಾರಾಯಣಮೂರ್ತಿಯನ್ನು ಕರೆದುಕೊಂಡು ಬರಬೇಕೆಂಬದಾಗಿ ಆಜ್ಞೆಯನ್ನಿತ್ತನು. ॥೭೩॥

ಎಂಬಲ್ಲಿಗೆ ಟೀಕಾ ತಾತ್ಪರ್ಯ ಸಹಿತಮಾದ ಜೈಮಿನಿಭಾರತದೊಳ್ ಐದನೆಯ ಸಂಧಿಯು ಸಮಾಪ್ತಮಾದುದು.



## ಆರನೆಯ ಸಂಧಿ.

ಸೂಚನೆ॥ ಸಿಂಧುರನಗರದಿಂದನಡೆತಂದುಪವನಜಂ । ಸಿಂಧುರಂಗದೊಳೆಸೆವದ್ವಾರಕಿಯೊಳ್ಪೈದೆಮುಳಿ । ಸಿಂಧುರ
ದೊಳಸುರರಂಗೆಲ್ದವನನಾರೋಗಣೆಯಸಮಯದೊಳ್ಕಂಡನು ॥

ಎಲೆ ಮಹೀಶ್ವರನಾಗ ನಗರಮಂ ಪೊರಮಟ್ಟ । ನಿಲಸುತಂ ಪಯಣಗತಿಯೊಳ್ ಬರುತ ಕಂಡ ನಗ । ಕುಲದಪ
ವಿಘಾತ ಭಯಶಮನೌಷಧಿಯ ನತುಲ ಕಲ್ಲೋಲ ನಿರವಧಿಯನು ॥ ಜಲಜಂತು ಚಾರಣವಿಧಿ ನಿಳಾಮಂಡಲವ । ಬಳಸಿದ
ಪರಿಧಿಯನಪಹೃತಗಣಿತಸುಧೆಯ ನವಿ । ರಳ ಘೋಷದುದುಧಿಯನೇಕ ರತ್ನಪ್ರತತಿಗಳ ನಿಧಿಯನಂಬುಧಿಯನು ॥೧॥ ಮುನಿ
ಮುನಿದು ಪೀರ್ದುದಂ ರಾಜನಂಶಕುಠಾರ । ಕನಕನಲ್ಕಿಗೆನೆಲಂಬಿಟ್ಟುದಂಘುಜ ರಾ । ಮನ ಮನದ ಕೋಪದುರುಬೆಗೆ

---

ಆರನೆಯ ಸಂಧಿ ಪ್ರಾರಂಭವು.

ಟೀ॥ ಪವನಜಂ–ವಾಯು ಸೂನುವು, ಸಿಂಧುರನಗರದಿಂದ–ಹಸ್ತಿನಾವತಿಯಿಂದ, ನಡೆತಂದು-ಪ್ರಯಾಣವಂ ಬೆಳಸಿ, ಸಿಂಧು–ಕಡಲಿನ, ರಂಗದೊಳು–ನಡುವೆ, ಎಸೆವ–ಹೊಳೆಯುವ, ದ್ವಾರಕೆಯೊಳು–ದ್ವಾರಕೆ ಎಂಬ ನಗರದಲ್ಲಿ, ಐದೆ-ಹೊಕ್ಕು, ಮುಳಿಸಿಂ–ಕೋಪಾತಿಶಯದಿಂದ, ಧುರದೊಳುಂ–ರಣದಲ್ಲಿ, ಅಸುರರಂ- ನೀಚರಾದ ರಕ್ಕಸರನ್ನು, ಗೆಲ್ದವನನು–ಜಯಿಸಿದವನನ್ನು- (ಶ್ರೀ ಕೃಷ್ಣಮೂರ್ತಿಯನ್ನು), ಆರೋಗಣೆಯ ಸಮಯದೊಳು - ಊಟಮಾಡುವ ವೇಳೆಯಲ್ಲಿ, ಕಂಡನು–ಈಕ್ಷಿಸಿದನು.

ಟೀ॥ ಎಲೆ ಮಹೀಶ್ವರ–ಅಯ್ಯಾ ಜನಮೇಜಯಭೂಪನೆ, ಅನಿಲಸುತಂ – ವಾಯುಜನು, ನಾಗ ನಗರಮಂ-ಗಜಪುರಿಯಿಂದ, ಪೊರಮಟ್ಟು–ಬಿಟ್ಟು ಹೊರಟು, ಪಯಣ–ಪ್ರಯಾಣದ, ಗತಿಯೊಳ್–ಗಮನದಲ್ಲಿ, ಬರುತ–ನಡೆತರುತ್ತ, ಅಗಕುಲದ–ಗಿರಿ ಸಮೂಹಗಳಿಗೆ, ಪವಿ–ವಜ್ರವೆಂಬಾಯುಧದ, ಘಾತ–ಏಟಿನ, ಭಯ–ಹೆದರಿಕೆಯನ್ನು, ಶಮನ–ತಗ್ಗಿಸುವ, ಔಷಧಿಯನು–ಔಷಧಿಪ್ರಾಯವಾದ, ಅತುಲ–ಅಸದೃಶವಾದ, ಕಲ್ಲೋಲ–ತೆರೆಗಳಿಂದ, ನಿರವಧಿಯನು-ಮೇರೆಯೇ ತೋರದಿರುವ, ಜಲಜಂತು–ಉದಕವಾಸಿಗಳಾದ ಪ್ರಾಣಿಗಳನ್ನು, ಚಾರಣ–ಚರಿಸಲು, ವಿಧಿಯನು–ಗೊತ್ತಾಗಿರುವ, ಇಳಾಮಂಡಲವ-ಧರಾವಲಯವನ್ನು, ಬಳಸಿದ-ಆವರಿಸಿದ, ಪರಿಧಿಯನು–ಕುಡ್ಯವಂ ಪೋಲುವ, ಅಪಹೃತ–ಹೋಗಲಾಡಿಸಲ್ಪಟ್ಟ, ಅಗಣಿತ–ಲೆಕ್ಕವಿಲ್ಲದಿರುವ, ಸುಧೆಯನು–ಅಮೃತವಿಶಿಷ್ಟವಾಗಿರುವ, ಅವಿರಳ–ಸಾಂದ್ರವಾದ, ಘೋಷದ–ರವವುಳ್ಳ, ಉದಧಿಯನು–ನೀರಿನಿಂದ ಕೂಡಿರುವ, ಅನೇಕ–ನಾನಾಪ್ರಕಾರವಾದ, ರತ್ನ– ಮಣಿಗಳ. ಪ್ರತತಿಗಳ- ಸಮೂಹಗಳಿಗೆ, ನಿಧಿಯನು– ಆಸರೆಯಾದ, ಅಂಬುಧಿಯನು–ಸಮುದ್ರವನ್ನು, ಕಂಡನು-ಈಕ್ಷಿಸಿದನು ॥

ಅ॥ ವಿ॥ ಅನಿಲ–ವಾಯು, ಅನಲ–ಅಗ್ನಿ, ಅಗಕುಲ (ಷ. ತ.) ಪವಿಘಾತ (ಷ. ತ.) ಅಗಕುಲಕ್ಕೆ ಪವಿಘಾತ(ಷ. ತ) ಅಗಕುಲಪವಿಘಾತದಭಯ (ಷ. ತ), ಅಗ............ಭಯದಶಮನ (ಷ. ತ) ಮಹೌಷಧಿ (ವಿ. ಪೂ), ನಿರವಧಿ–ಮಿತಿಯಿಲ್ಲದ್ದು ಚಾರಣ–ತಿರುಗುವುದು, ಚಾರಣರೆಂಬುವರು, ವಸು–ದ್ರವ್ಯವನ್ನು, ಧೆ-ಧರಿಸಿರುವದು, ಅನೇಕವಾದ ರತ್ನ (ವಿ. ಪೂ) ಅನೇಕರತ್ನಗಳ ಪ್ರತತಿ (ಷ ತ) ಅಂಬು–ನೀರು ಮತ್ತು ಬಿಲ್ಲು ಎಂಬೆರಡರ್ಥಗಳು ॥ ಅನಿಲಸುತಂ ಅಂಬುಧಿಯಂ ಕಂಡನು–ಸಕರ್ಮಕ ಕರ್ತರಿವಾಕ್ಯವು ॥೧॥

---

ಆರನೆಯ ಸಂಧಿ ಪ್ರಾರಂಭವು.

ಅನಂತರದಲ್ಲಿ ಜೈಮುನಿರುಷಿಯು ಜನಮೇಜಯರಾಯನಂ ಕುರಿತು ಕೇಳ್ಳೈ ಜನಮೇಜಯನೆ, ಆ ಬಳಿಕ ಧರ್ಮಪುತ್ರನಿಂದ ಆಜ್ಞಾಪಿಸಲ್ಪಟ್ಟ ವಾಯುನಂದನನು ದ್ವಾರಕಾವಾಸಿಯಾಗಿರುವ ಶ್ರೀ ಕೃಷ್ಣಸ್ವಾಮಿಯನ್ನು ಕರೆತರಲು ಇಭನಗರಿಯಿಂದ ಹೊರಟು ಬರುತ್ತಿರುವಾಗ ಮುಂಭಾಗದಲ್ಲಿ ಒಂದಾನೊಂದು ಸಮುದ್ರವು ಕಾಣಬಂದಿತು. ಆ ಕಡಲು ಪೂರ್ವದಲ್ಲಿ ದೇವೇಂದ್ರನಿಂದ ಪರ್ವತಗಳಿಗುಂಟಾಗಿದ್ದ ಭಯವನ್ನು ಹೋಗಲಾಡಿಸುವುದರಲ್ಲಿ ದಿವ್ಯೌಷಧಿಯಂತೆಯೂ, ಅಸಂಖ್ಯಾತವಾದ ತರಂಗಗಳ ತಂಡದಿಂದೊಡಗೂಡಿಯೂ, ಮೀನು ಮೊಸಳೆ ಮೊದಲಾದ ಪ್ರಾಣಿರಾಶಿಗಳಿಂದ ತುಂಬಿ ಭೂಮಂಡಲಕ್ಕೆ ಪರಿಧಿಯೋಪಾದಿಯಲ್ಲಿದ್ದುಕೊಂಡು ತನ್ನಲ್ಲಿದ್ದ ಅಮೃತವನ್ನು ಹೋಗಲಾಡಿಸಿದ ವ್ಯಸನದಿರದ ಅತ್ಯಾರ್ಭಟವಂ ಮಾಡುತ್ತಿರುವಂತೆಯೂ, ನಾನಾ ರತ್ನಗಳಿಂದೊಡಗೂಡಿಯೂ, ಮೆರೆಯುತ್ತಿತ್ತು ॥೧॥ ಅಗಸ್ತ್ಯಮಹಾಮುನಿಯು ಕೋಪಾತಿಶಯದಿಂದ

ಬಟ್ಟೆಗೊಟ್ಟುದಂ ಬಡಬಾನಲಂ ತನ್ನೊಳು ‖ ದಿನದಿನದೊಳವಘಡಿಸುತಿರ್ಪುದಂ ಬಹಳ ಜಡ । ತನ ತನಗೆ ಬಂದುದಂ ಭಂಗವೆ‌ಡೆಗೊಂಡುದಂ । ನೆನೆನೆನೆದುನಿಟ್ಟುಸುರ್ವಿಟ್ಟುಸುಯಿವಂತು ದಧಿತೆರೆಪೆಚ್ಚುಗೆಯೊಳಿರ್ದುದು ‖ ೨ ‖ ಘುಳಿಘುಳಿಸು ತೇಳ್ವಬೊಬ್ಬುಳಿಗಳಿಂಸುಳಿಗಳಿಂ । ಸೆಳೆಸೆಳೆದುನಡೆವ ಪೇರ್ದೆರೆಗಳಿಂ ನೊರೆಗಳಿಂ । ಪೊಳೆವತುಂತುರಿನ ನೀರ್ವನಿಗಳಿಂಧ್ವನಿಗಳಿಂವಿವಿಧ ರತ್ನಂಗಳಿಂದ ‖ ಒಳಕೊಂಬನಾನಾಪ್ರವಾಹದಿಂಗ್ರಾಹದಿಂ । ದಳತೆಗೆಳವಡದೆಂಬಪೆಂಪಿನಿಂಗುಂಪಿನಿಂ । ತಳೆದಪವ

---

ಟೀ‖ ಮುನಿ-ಅಗಸ್ತ್ಯಮುನೀಂದ್ರನು, ಮುನಿಸಿ-ಕೋಪಿಸಿಕೊಂಡು, ಪೀರ್ದುದಂ-ಕುಡಿದುಬಿಟ್ಟುದನ್ನು, ರಾಜ-ಘೋರಿಗಳ, ವಂಶ-ಸಂತತಿಗೆ, ಕುಠಾರಕನ - ಪರುಶುವಿನಂತಿರುವ ಜಮದಗ್ನಿಯು, ಕನಲ್ಕೆಗೆ-ಮುಳಿಸಿಂಗೆ, ನೆಲಂ-ಇಳೆಯನ್ನು, ಬಿಟ್ಟುದಂ-ತ್ಯಜಿಸಿದ್ದನ್ನು, ರಘುಜ-ರಘುಕುಲದಲ್ಲಿ ಜನಿಸಿದ, ರಾಮನ- ರಾಮಚಂದ್ರಮೂರ್ತಿಯ, ಮನದ-ಚಿತ್ತದ, ಕೋಪದ-ಸಿಟ್ಟಿನ, ಉರುಬೆಗೆ-ಹೆಚ್ಚಿಗೆಗೆ, ಬಟ್ಟೆಗೊಟ್ಟುದಂ-ದಾರಿಕೊಟ್ಟದ್ದನ್ನು, ತನ್ನೊಳು-ಸಮುದ್ರದಲ್ಲಿ, ಬಡಬಾನಲಂ-ಬಡಬಾಗ್ನಿಯು, ದಿನದಿನದೊಳು-ಪ್ರತಿನಿತ್ಯವೂ, ಅವಘಡಿಸುತ-ಮಿೞಲವಕಾಶವಿಲ್ಲದೆ ಒಣಗಿಸುತ್ತಾ, ಇರ್ಪುದಂ-ಇರತಕ್ಕದ್ದನ್ನು, ಬಹಳ-ಹೆಚ್ಚಾದ, ಜಡತನ-ಸೋಮಾರಿತನವು, ತನಗೆ-ತನ್ನ ವಿಷಯದಲ್ಲಿ, ಬಂದುದಂ-ಉಂಟಾದದ್ದನ್ನು, ಭಂಗಂ-ಅಪಮಾನವು, ಒಡಗೊಂಡುದಂ-ಒದಗಿದ್ದನ್ನು, ನೆನೆನೆನೆದು-ಎಣಿಸೆಣಿಸಿ, ನಿಟ್ಟುಸುರ್ವಿಟ್ಟು - ಉದ್ದವಾದ ಸುಯ್ಲಿಂದ, ಸುಯಿವಂತೆ-ದುಃಖದಿಂದ ನಿಶ್ವಸಿಸುವಂತೆ, ಉದಧಿ-ಕಡಲು, ತೆರೆ-ತರಂಗಗಳ, ಪೆಚ್ಚುಗೆಯೊಳು-ಅತಿಶಯದಿಂದ, ಇರ್ದುದು-ಇರುತ್ತಿತ್ತು.

ಅ‖ ವಿ‖ ಸಮುದ್ರರಾಜನ ಅಹಂಕಾರಕ್ಕೆ ಪ್ರತಿಯಾಗಿ ಗರ್ವಭಂಗವನ್ನೆಸಗಲೋಸುಗ ಅಗಸ್ತ್ಯಮುನಿಪನು ಸಮುದ್ರವನ್ನೆಲ್ಲಾ ಆಪೋಶನಮಾಡಿ ಮೂತ್ರದಲ್ಲಿ ಬಿಟ್ಟನು. ಜಮದಗ್ನಿಯಪುತ್ರನಾದ ಪರಶುರಾಮನು ಪ್ರಪಂಚದಲ್ಲಿರುವ ಕ್ಷತ್ರಿಯರ ಹುಟ್ಟನ್ನೇ ಅಡಗಿಸಬೇಕೆಂದೆಣಿಸಿ ಇಪ್ಪತ್ತೊಂದಾವರ್ತಿ ಕ್ಷತ್ರಿಯರನ್ನು ಸಂಹರಿಸಿ ತಾನು ಜಯಿಸಿದ ಸ್ಥಳಗಳನ್ನೆಲ್ಲಾ ಕಶ್ಯಪಮುನಿಗಳಿಗೆ ಧಾರೆಯೆರೆದನು. ಅನಂತರ ಭೂಮಿಯಲ್ಲಿ ತಾನಿರಲು ಬ್ರಾಹ್ಮಣರ ಸ್ವತ್ತಾದ್ದರಿಂದಲೂ ಆ ವಿಪ್ರವರ್ಯರು ಇವನನ್ನು ಇರಗೊಡಿಸದೆ ಹೋದ್ದರಿಂದಲೂ ಸಮುದ್ರನೊಂದಿಗೆ ಹೋರಾಡಿ ಅವನಿಂದ ಸ್ಥಳವಂ ಬಿಡಿಸಿಕೊಂಡು ಮುಂದೆ ನಡೆದನು. ಈಗಲೂ ತೆಂಕಣದಿಗ್ಭಾಗದಲ್ಲಿ ಪರುಶುರಾಮಕ್ಷೇತ್ರವೆಂದು ಹೆಸರಾಗಿದೆ. (೩) ಶ್ರೀರಾಮನು ರಾವಣನನ್ನು ಸಂಹರಿಸಿ, ಸೀತೆಯನ್ನು ಕರೆತರಲು ಕಪಿಸೈನ್ಯದಿಂದೊಡಗೂಡಿ ದಕ್ಷಿಣ ಸಮುದ್ರದ ಬಳಿಗೆ ಬರಲು ಸೈನ್ಯವು ಮುಂದರಿಯಲು ಕಡಲು ದಾರಿಯನ್ನೇ ಕೊಡಲಿಲ್ಲವಾದ್ದರಿಂದ ಕೋಪವಂತಾಳಿ ಬಾಣಪ್ರಯೋಗವಂ ಮಾಡಲುಜ್ಜುಗಿಸಲು ಸಮುದ್ರನು ಹೆದರಿ ದಾರಿಯಂ ಬಿಟ್ಟದ್ದಲ್ಲದೆ ಇವನನ್ನು ಬಹುವಾಗಿ ಉಪಚರಿಸಿದನು. (೪) ಸಮುದ್ರವು ಮೇರೆತಪ್ಪಿದರೆ ಪ್ರಪಂಚವೇ ಲಯವಾದೀತೆಂದು ತನ್ನ ಜ್ವಾಲೆಯಿಂದ ಕಡಲನ್ನು ಮಿತಿಮೀರಲು ದಾರಿಯಂ ಕೊಡದೆ ಇರುವನು ‖ ೨ ‖

ಟೀ‖ ಘುಳಿಘುಳಿಸುತ-ಗುಡಗುಡನೆ ಶಬ್ದಮಾಡುತ್ತ, ಏಳ್ವ-ಸಮೀಪವನ್ನೈದುವ, ಬೊಬ್ಬುಳಿಗಳ-ಬುದ್ಬುದಂಗಳ, ಸುಳಿಗಳಿಂ-ಸುತ್ತುಗಳಿಂದಲೂ, ಸೆಳೆಸೆಳೆದು-ಬಹುವಾಗಿ ಎಳೆದುಕೊಂಡು, ನಡೆವ-ಆ ಕಡೆಗೂ ಈ ಕಡೆಗೂಚಲಿಸುವ, ಪೇರ್ದೆರೆಗಳಿಂ-ದೊಡ್ಡದೊಡ್ಡ ಅಲೆಗಳಿಂದಲೂ, ನೊರೆಗಳಿಂ-ನೊರೆಗಳಿಂದಲೂ, ತುಂತುರಿನ-ಸಣ್ಣಸಣ್ಣ, ನೀರ್ವನಿಗಳಿಂ-ಅಂಬುಕಣಗಳಿಂದಲೂ, ಧ್ವನಿಗಳಿಂ-ನಿನದಂಗಳಿಂದ, ವಿವಿಧ-ಬಗೆಬಗೆಯಾದ, ರತ್ನಂಗಳಿಂದ-ಮಣಿವಿಶೇಷಂಗಳಿಂದ, ಒಳಗೊಂಬ-ಸೆಳೆದುಕೊಳ್ಳುವ, ನಾನಾ-ತೆರತೆರವಾದ, ಪ್ರವಾಹದಿಂ-ನದಿಗಳ ಸಮೂಹದಿಂದ, ಗ್ರಾಹದಿಂದ-ಜಲವಾಸಿಗಳಾದ ಮತ್ಸ್ಯಾದಿಗದಿಂದ, ಅಳತೆಗೆ-ಪರಿಮಿತಿಗೆ, ಅಳವಡದು-ವಶವಾಗದು, ಎಂಬ-ಎನ್ನುವ, ಪೆಂಪಿನಿಂ-ಸೊಂಪಿನಿಂದ, ತಳೆದ-ಹೊಂದಿದ, ಪವ

---

ಉದಧಿಯಲ್ಲಿನ ಯಾವತ್ತು ಜಲವನ್ನೂ ಏಕಾಪೋಶನವಾಗಿ ಮಾಡಿದ್ದರಿಂದಲೂ, ಜಮದಗ್ನಿಪುತ್ರನೂ ಕ್ಷತ್ರಿಯಂಹಗೆಯೂ ಆದ ಪರಶುರಾಮನ ಭಯದಿಂದ ಭೂಮಿಗೆ ಬಹುದೂರದಲ್ಲಿರುವಂತೆ ಮಾಡಿದುದರಿಂದಲೂ, ದಾಶರಥಿಯ ಕೋಪಾಗ್ನಿಗೆ ಬೆದರಿ ತನ್ನ ಮೇಲೆ ಸೇತುವೆ ಕಟ್ಟಲವಕಾಶವನ್ನಿತ್ತ ಕತದಿಂದಲೂ, ತನ್ನ ಅಭಿವೃದ್ಧಿಗೆ ಬಡಬಾಗ್ನಿಯು ಅಡ್ಡಿಪಡಿಸುತ್ತಲಿರುವುದರಿಂದಲೂ, ತನಿಗೆ ಜಡಬುದ್ಧಿಯು ಒದಗಿದ್ದರಿಂದಲೂ, ಉಂಟಾದ ದುಃಖವನ್ನುತಡೆಯಲಾರದೆ ನಿಟ್ಟುಸುರು ಬಿಡುತ್ತಲಿರುವುದೋ ಎಂಬಂತೆ ಅಲೆಗಳು ಭ್ರಾಂತಿಗೊಳಿಸುತಿದ್ದವು ‖ ೨ ‖ ಆ ಸಮುದ್ರದಲ್ಲಿ ಎಲ್ಲೆಲ್ಲಿಯೂ ನೀರ್ಗುಳ್ಳೆಗಳು ಏಳುತ್ತಲೂ ಮುಳುಗುತ್ತಲೂ ಇದ್ದವು. ಅಲ್ಲಲ್ಲಿ ಸುಳಿಗಳು ಉಂಟಾಗುತ್ತಿದ್ದವು. ದೊಡ್ಡದೊಡ್ಡ ತರಂಗಗಳೂ ನೊರೆಯೂ ಕಂಗೊಳಿಸುತಿದ್ದವು, ಎಲ್ಲಿನೋಡಿದರೂ ಸಣ್ಣಸಣ್ಣ ನೀರಿನ ಹನಿಗಳು ಕಾಣಬರುತಿದ್ದವು, ದೊಡ್ಡದೊಡ್ಡ ನದಿಗಳೆಲ್ಲಾ ಭೂಮಿಯಲ್ಲಿರುವ ನವನಿಧಿಗಳನ್ನು ಹೊಡೆದುಕ್ಕೊಂಡು ಬಂದು ಬೀಳುತಲಿರುವುದೂ ಹವಳದ ಕುಡಿಗಳು ತುಂಬಿರುವುದೂ ನೋಟಕರ ಮನಸ್ಸನ್ನು ಅಚ್ಚರಿಗೊಳಿಸುತಿತ್ತು. ಈರೀತಿಯಾಗಿರುವ ಅಗಾಧವಾದ ಅಕೂಪಾರವು ‖೩‖ ಅಮರೇಂದ್ರನಿಗೆ ಸಮಸ್ತವಾದ ಐಸಿರಿಯನ್ನೂ ಇತ್ತು ತೃಪ್ತಿ

ಳದವಿೂರ್ದಕುಡಿಗಳಿಂತಡಿಗಳಿಂದಾಕಡಲ್ಗಣ್ಗೆಸೆದುದು ||೩|| ಪಾಕಶಾಸನನಸಕಲೈಶ್ವರ್ಯಸಂಪದಕೆ | ಬೇಕಾದವಸ್ತುವಂಪಡೆದಿತ್ತನೆನ್ನವ | ರ್ಗಾಕುಲಿಶಧರನುಪಹತಿಯನೆಸಗನದರಿಂದಲಿನ್ನಿಳೆಗೆಮುನ್ನಿನಂತೆ || ಜೋಕೆಮಿಗೆತೆರಳಿನೀವೆಂದುಸಂತೈಸಿರತ್ನಾಕರಂಕಳುಹಿದಕುಲಾದ್ರಿಗಳಪರ್ಬುಗೆಯ | ನೇಕಬರುತಿಹವೆನಲ್ಪೇರ್ದೆರೆಗಳೆದ್ದುಬರುತಿರ್ದವುಮಹಾರ್ಣವದೊಳು || ೪ || ಶಿವನಂತೆಗಂಗಾಹಿಮುಕರಾವಹಂರಮಾ | ಧವನಂತೆಗೊತ್ರೈಕಪಾಲಕಂಪಂಕರುಹ | ಭವನಂತೆಸಕಲಭುವನಾಶ್ರಯಂಶಕ್ರನಂ

ಳದ-ಪ್ರವಾಳಂಗಳ, ವಿೂರ್ದ-ಹೆಚ್ಚಿರುವ, ಕುಡಿಗಳಿಂ-ಗುಚ್ಛಂಗಳಿಂದಲೂ, ತಡಿಗಳಿಂದ-ದಡಗಳಿಂದಲೂ, ಆ ಕಡಲ್ ಆ ಉದಧಿಯು, ಕಣ್ಗೆ-ನಯನಂಗಳಿಗೆ, ಎಸೆದುದು-ಥಳಥಳಿಸಿತು.

ಅ|| ವಿ|| ಪವಳ (ತ್ಭ) ಪ್ರವಾಳ (ತ್ಸ) ಘುಳಿಘುಳಿಸು (ಅಧಿಕ್ಯಾರ್ಥದಲ್ಲಿ ದ್ವಿರುಕ್ತಿ) ||೩||

ಟೀ|| ಪಾಕಶಾಸನನ-ಪಾಕನೆಂಬ ರಾಕ್ಷಸನನ್ನು ಸಂಹರಿಸಿದ ದೇವೇಂದ್ರನ, ಸಕಲ-ಸಮುಸ್ತವಾದ, ಐಶ್ವರ್ಯ-ಸಾಮ್ರಾಜ್ಯದ, ಸಂಪದಕೆ-ವೈಭವಕ್ಕೆ, ಬೇಕಾದ ವಸ್ತುವಂ-ಬಯಸಿದ ಪುರುಳನ್ನೆಲ್ಲಾ, ಪಡೆದು-ಹೊಂದಿ, ಇತ್ತನು-ಕೊಟ್ಟನು, ಎನ್ನವರ್ಗೆ-ನನ್ನವರಿಗೆ, ಆ ಕುಲಿಶಧರನು- ಆ ವಜ್ರಾಯುಧವನ್ನು ಧರಿಸಿದ ದೇವೇಂದ್ರನು, ಉಪಹತಿಯನು-ಬಾಧೆಯನ್ನು, ಎಸಗನು-ರಚಿಸುವುದಿಲ್ಲವು, ಅದರಿಂದ-ಆದಕಾರಣ, ಇನ್ನು-ಇನ್ನುಮೇಲೆ, ಇಳೆಗೆ-ಧರೆಗೆ, ಮುನ್ನಿನಂತೆ-ಮೊದಲಿನಹಾಗೆಯೇ, ಜೋಕೆಮಿಗೆ-ಎಚ್ಚರಿಕೆಯಾಗಿರುವಂತೆ, ನೀವು-ನೀವುಗಳು, ತೆರಳಿ-ಧರಾವಲಯದ ಮೇಲ್ಭಾಗಕ್ಕೆ ನಡೆಯಿರಿ, ಎಂದು-ಎಂಬ ತೆರನಾಗಿ, ಸಂತೈಸಿ-ಒಪ್ಪಿಸಿ, ರತ್ನಾಕರಂ-ಕಡಲು, ಕಳುಹಿದ-ಸಾಗಿಸಿದ, ಕುಲಾದ್ರಿಗಳ-ಹಿಮವತ್ಪರ್ವತ, ನಿಷಧ, ವಿಂಧ್ಯ, ಮಾಲ್ಯವಂತ, ಪಾರಿಯಾತ್ರಕ, ಗಂಧಮಾಧನ, ಹೇಮಕೂಟವೇ ಆದಿಯಾದ ಏಳು ಕುಲಗಿರಿಗಳ, ಪರ್ಬುಗೆಯನೇಕ-ಅಧಿಕವಾದ ಗುಂಪು, ಬರುತಿಹವು-ಸಮಿೂಪಸ್ಥವಾಗುವವು, ಎನಲ್-ಎಂಬಂತೆ, ಮಹಾರ್ಣವದೊಳ್-ಅಗಾಧವಾದ ಉದಧಿಯಲ್ಲಿ, ಪೇರ್ದೆರೆಗಳು-ದೊಡ್ಡ ದೊಡ್ಡ ಅಲೆಗಳು, ಬರುತ-ಐತರುತ್ತ, ಇರ್ದವು-ಇದ್ದವು.

ಅ|| ವಿ|| ಪಾಕಶಾಸನ (ಕೃ. ವೃ) ಐಶ್ವರ್ಯ (ತ್ಸ) ಐಸಿರಿ (ತ್ಭ) ರತ್ನಾಕರ ಮತ್ತು ಕುಲಾದ್ರಿ ಎರಡೂ ಸುವರ್ಣದೀರ್ಘಸಂಧಿ ||೪||

ಟೀ|| ಶಿವನಂತೆ-ಪರಮೇಶ್ವರನಹಾಗೆ, ಗಂಗಾ-ಸುರನದಿಯನ್ನು, ಹಿಮುಕರ-ಇಂದುವನ್ನೂ, ಆವಹಂ- ತಾಳಿರುವನು, (ಹರನು) ಗಂಗಾ-ದೇವನದಿಯನ್ನು, ಅಹಿ-ಉರಗಗಳನ್ನೂ, ಮಕರ-ಮೊಸಳೆಗಳನ್ನೂ, ಆವಹಂ-ಸೇರಿಸಿಕೊಂಡಿರುವನು (ಸಮುದ್ರನು) ರಮಾ-ಲಕ್ಷ್ಮಿಯ, ಧವನಂತೆ-ಪತಿಯಾದ ನಾರಾಯಣನಂತೆ, ಗೋತ್ರೈಕಪಾಲಕಂ=ಗೋತ್ರ-ಇಳೆಗೆ ಹೊರೆಯಾಗಿದ್ದ ಅಸುರರನ್ನು ಸಂಹರಿಸಿ ಧರೆಯನ್ನು ಏಕ-ಮುಖ್ಯವಾಗಿ, ಪಾಲಕಂ-ಸಲಹುವನು (ವಿಷ್ಣು), ಗೋತ್ರ-ಪವಿಯಘಾತಕ್ಕೆ ಹೆದರಿದ ಪರ್ವತಗಳನ್ನು, ಪಾಲಕಂ-ಸಂರಕ್ಷಿಸುವ (ಉದದಿಯು), ಪಂಕರುಹ-ತಾವರೆಯಲ್ಲಿ, ಭವನಂತೆ-ಹುಟ್ಟಿದ ಸೃಷ್ಟಿಕರ್ತನಹಾಗೆ, ಸಕಲ-ಎಲ್ಲಾ, ಭುವನ-ಪ್ರಪಂಚಗಳಿಗೆ, ಆಶ್ರಯಂ-ನೆರವಾಗಿರುವ (ಹರನು), ಸಕಲ-ಸಮುಸ್ತವಾದ, ಭುವನ-ಜಗತ್ತುಗಳಿಗೆ, ಆಶ್ರಯ - ಸ್ಥಿರಪ್ರದೇಶವಾಗಿರುವ (ಕಡಲು), ಶಕ್ರನಂತೆ-ಶಚೀಪತಿಯಂತೆ, ಅನಿಮಿಷ - ಅಸುರ ವೈರಿಗಳ, ನಿಕರ-ಗುಂಪಿನಿಂದ, ಕಾಂತನು-ಪ್ರಕಾಶಮಾನನಾದವನು, (ಸುರನಾಥನು), ಅನಿಮಿಷ - ವಿೂನುಗಳ, ನಿಕರ-ಸಮುದಾಯದಿಂದ, ಕಾಂತನು-ಹೊಳಯುತಕ್ಕವನು (ಸಮುದ್ರ ರಾಜನು), ದಿವಸ-ಹಗಲಿಗೆ, ಅಧಿಪನಂತೆ-ಒಡೆಯನಾದ ರವಿಯೋಪಾದಿಯಲ್ಲಿ, ಅನಂತ-ಅಂತರಿಕ್ಷಕ್ಕೆ, ರತ್ನಂ-ರತ್ನಪ್ರಾಯನಾದ, ಅನಂತ-ಅಸಂಖ್ಯಾತವಾದ, ರತ್ನಂ-ನವರತ್ನಗಳಿಂದಸಹಿತವಾದ,

ಗೊಳಿಸಿದೇನೆಯಾಗಿ ನನ್ನಲ್ಲಿದ್ದ ಪರ್ವತಗಳಿಗೆ ಎಡರನ್ನುಂಟು ಮಾಡಲಾರೆನೆಂದು ಬಗೆದು ಸಪ್ತಕುಲಪರ್ವತಗಳನ್ನು ಕುರಿತು ಪೂರ್ವದಂತೆಯೇ ಇನ್ನು ನೀವು ಭೂಲೋಕದಲ್ಲಿ ನಿರ್ಭಯವಾಗಿರಬಹುದೆಂದು ನುಡಿಯಲು, ಅವುಗಳೆಲ್ಲ ಆನಂದಾತಿಶಯದಿಂದಲೂ ಹೆಮ್ಮೆಯಿಂದಲೂ ಓಡಿಓಡಿ ಬರುತ್ತಿರುವಂತೆಯೂ, ಆ ಉದಧಿಯ ದೊಡ್ಡದೊಡ್ಡ ತರಂಗಗಳು ಭ್ರಾಂತಿಗೈಸುತ್ತಲಿದ್ದವು ||೪|| ಗಂಗಾದಿ ಪುಣ್ಯನದಿಗಳಿಂದಲೂ, ಸರ್ಪಗಳು, ಮೊಸಳೆಗಳು ಮೊದಲಾದವುಗಳಿಂದಲೂ ಕೂಡಿ ದೇವನದಿ ಮತ್ತು ಇಂದುವಿನಿಂದಲಂಕೃತನಾದ ಹರನಂತೆಯೂ, ಕುಲಗಿರಿಗಳನ್ನು ಕಷ್ಟಕ್ಕೆ ಸಿಕ್ಕಿಸದೆ ಇದ್ದು ರಾಕ್ಷಸಾಂತಕನಾದ ಶ್ರೀಮಹಾವಿಷ್ಣುವನ್ನು ಹೋಲುತ್ತಲೂ, ಪ್ರಪಂಚಕ್ಕೆ ತಾನು ಸುತ್ತುಕಟ್ಟಕೊಂಡಿರೋಣದರಿಂದ ಜಗತ್ಕರ್ತನಾದ ಬ್ರಹ್ಮನನ್ನು ಹೋಲುತ್ತಲೂ ವಿೂನು ಮೊಸಳೆ ಮೊದಲಾದವುಗಳನ್ನು ತನ್ನಲ್ಲಿಟ್ಟುಕೊಂಡು ಸುರವಿಂಡಿನಿಂ ಮೆರೆವ ತ್ರಿದಶಪತಿಗೆಣೆಯಾಗಿಯೂ, ನವರತ್ನಗಳಿಂ ಕೂಡಿರುವುದರಿಂದ ಆಕಾಶಕ್ಕೆ ರತ್ನಪ್ರಾಯನಾದ ಸೂರ್ಯನನ್ನು ಹೋಲುತ್ತಲೂ, ಅನೇಕ ನದಿಗಳಿಂಕೂಡಿ ಅಪರಿಮಿತ ಸೇನಾನಿವಹದಿಂದಮೆರೆಯುತಲಿರುವ ಅರಸುಗಳನ್ನೆಲ್ಲಾ ಅಲಗಳೆಯುತ್ತಲೂ,ಪ್ರವಾಳಂಗಳು ಬಳ್ಳಿಗಳುಮೊದಲಾದವುಗಳಿಂದ ಸೇರಿಕೊಂಡು

ತನಿಮಿಷನಿಕರಕಾಂತನು || ದಿವಸಾಧಿಪತಿಯಂತನಂತರತ್ನಂರಾಜ | ನಿವಹದಂತಪರಿಮಿತವಾಹಿನೀಸಂಗತನು | ಪವನಾಳಿಯಂತೆವಿದ್ರುಮಲತಾಶೋಭಿತಂತಾನೆಂದುದಧಿಮೆರೆದುದು ||೫|| ಚಿಪ್ಪೊಡೆದುಸಿಡಿವಮುತ್ತುಗಳಲ್ಲದಿವುಮುಗು | ಳ್ದುಪ್ಪರಿಸುವೆಳೆಮೀನ್ಬಿದಿರ್ವಶೀಕರವಲ್ಲ | ಮೊಪ್ಪುವಸುಲಲಿತಶಂಖದಸರಿಗಳಲ್ಲದಿವುಬೆಳ್ನೊರೆಗಳೊಟ್ಟಲಲ್ಲ || ತಪ್ಪದೊಳಗಣರನ್ನವೆಳಗಲ್ಲದಿವುತೊಡ | ರ್ದಿರ್ಪ್ಪಕೆಂಬವಳಮಲ್ಲಿವುಪಯೋನಿಧಿಯಕೆನೆ | ಯೊಪ್ಪವಮಲ್ಲದೆನೀರ್ಮೊಗೆಯಲಿಳಿವಮೇಘಂಗಳಲ್ಲೆನಿಸಿತಾಕಡಲೊಳು ||೬|| ಕ್ರೂರಕರ್ಕಟಕಕಟಕಂಕಮಠನುಠವಿಡಿದ | ನೀರಾನೆಗಳ್ನೆಗಳ್ದೆಡೆಮುದಮುದ್ವೈವ | ಶಾಲೂರಕುಲರಾಜಿರಾಜಿಪಗೃಹಂನಿಬಿಡಗಂಡೂಪದಪದಂಪೇರ್ಚಿದ || ಘೋರಸಮುದಗ್ರದಗ್ರಾಹಭವಭವನಮಂ | ಭೂರಿಭೀಕರಮಕರಮಹಿತಿಮಿತಿಮಿಂಗಿಲ | ಕಠೋರತರಜಾಜೀವಜೀವಪ್ರತತಿವಾಸವಾಸಮುದ್ರದೊಳೆಸೆದುದು ||೭|| ಸುಳಿದೊಂದುಮೀನಮೀನ್ನುಂಗಿತಾಮೀನನಾ |

---

(ಅಬ್ಧಿಯು), ರಾಜ-ಪ್ರಭುಗಳ, ನಿವಹದಂತೆ- ಗುಂಪಿನಹಾಗೆ, ಅಪರಿಮಿತ-ಬಹು ಹೆಚ್ಚಾದ, ವಾಹಿನಿ-ದಳಗಳಿಂದ, ಸಂಗತನು-ಸಹಿತವಾದವನು, (ಅರಸು) ಅಪರಿಮಿತ-ಲೆಕ್ಕವಿಲ್ಲದಷ್ಟು, ವಾಹಿನೀ - ಹೊಳೆಗಳಿಂದ, ಸಂಗತನು-ಸೇರಿದ್ದು (ಪರಿವಾರವು), ಉಪವನ-ತೋಟಗಳ, ಅಳಿಯಂತೆ-ಶ್ರೇಣಿಯಹಾಗೆ, ವಿದ್ರುಮ-ಚಿಗುರುಗಳಿಂದಲೂ, ಲತಾ-ಎಳೆ ಬಳ್ಳಿಗಳಿಂದಲೂ, ಶೋಭಿತನು-ಹೊಳೆಯುತ್ತಿರುವುದು, (ಆರಾಮವು), ವಿದ್ರುಮ-ಪ್ರವಾಳಂಗಳಿಂದ, ಲತಾ-ಎಳೆಬಳ್ಳಿಗಳಿಂದ, ಶೋಭಿತನು-ಭೂಷಣವಾದದ್ದು (ಕೂಪಶರವು), ತಾಂ-ತಾನು, ಎಂದು-ಎಂಬದಾಗಿ, ಉದಧಿ-ಸರಿತ್ಪತಿಯು, ಮೆರೆದುದು-ಅಲಂಕಾರಯುಕ್ತವಾಯಿತು. ||೫||

ಟೀ|| ಇವು-ಇವುಗಳು, ಚಿಪ್ಪು-ಮುತ್ತಿನಮಣಿಯುಕ್ತಮಾದ ಚೀಲವು, ಒಡೆದು-ಛಿದ್ರವಾಗಿ, ಸಿಡಿದ-ಮೇಲಕ್ಕೇಳುವ, ಮತ್ತು ಮುತ್ತುಗಳ-ಮುತ್ತೆಂಬ ಪದಾರ್ಥವು, ಅಲ್ಲದೆ-ಆಗಿಲ್ಲದೆ, ಮುಗುಳ್ದು-ಮತ್ತೆ, ಉಪ್ಪರಿಸುವ-ಮೇಲಕ್ಕೇಳುವ, ಎಳಮೀನ್ಗಳು-ಚಿಕ್ಕ ಚಿಕ್ಕ ಮೀನುಗಳು, ಬಿದಿರ್ವ-ಶರೀರವನ್ನು ಒದರುವುದರಿಂದ ಉಂಟಾದ, ಶೀಕರಂ-ಅಂಬುಕಣಗಳು, ಅಲ್ಲ-ಅಲ್ಲವು, ಲಲಿತ-ನಯವಾದ, ಶಂಖದ, ಸರಿಗಳು-ರಾಶಿಗಳು, ಅಲ್ಲದೆ-ಹೊರತು, ಇವು-ಈ ವಸ್ತುಗಳು, ಬೆಳ್ನೊರೆಗಳ-ಬಿಳಿದಾದ ನೊರೆಗಳ, ಒಟ್ಟಲು-ಗುಂಪು, ಅಲ್ಲ-ಅಲ್ಲವು, ತಪ್ಪದೆ-ವಿಸರ್ಜಿಸದೆ, ಒಳಗಣ - ಅಂತರ್ಭಾಗದಲ್ಲಿರುವ, ರನ್ನ-ಮಣಿಗಣಗಳ, ವೆಳಗು-ಕಾಂತಿಯು, ಅಲ್ಲದೆ-ಹೊರ್ತು, ಇವು-ಈ ಪುರುಳ್ಗಳು, ತೊಡರ್ದಿರ್ಪ-ಪೂರ್ಣವಾಗಿರುವ, ಕೆಂಬವಳಂ-ಕೆಂಪುಬಣ್ಣದ ಹವಳವು, ಅಲ್ಲ-ಅಲ್ಲವು, ಪಯೋನಿಧಿಯ-ಪಾಲ್ಗಡಲ, ಕೆನೆಯೊಪ್ಪಂ-ಸಾರದಿಂದ ಸಹಿತವಾದ್ದು, ಹೊರ್ತು, ನೀರ್ಮೊಗೆಯಲು-ಜಲವನ್ನು ಪಾನಮಾಡಲು, ಇಳಿವ-ಸಮೀಪಕ್ಕೆ ಬರುವ, ಮೇಘಂಗಳು-ಮುಗಿಲ್ಗಳು, ಅಲ್ಲ- ಅಲ್ಲವು, ಎಂದು-ಎಂಬತೆರನಾಗಿ, ಆ ಕಡಲೊಳು-ಆ ಉದಧಿಯಲ್ಲಿ, ಎನಿಸಿತು-ಹೇಳಿಸಿಕೊಂಡಿತು, ಎಂದರೆ ಕಡಲಲ್ಲಿನ ಉದಕ ಬಿಂದುಗಳು ಮುಕ್ತಾಫಲಗಳಂತೆಯೂ, ನೊರೆಯು ಶಂಖ ವೆಂಬುವದನ್ನೂ, ಬಿಳೀ ಮೋಡಗಳನ್ನೂ ಶ್ವೇತವರ್ಣದ ಜಲವನ್ನೂ ಹೋಲುವಂತೆ ಭ್ರಾಂತಿಯನ್ನುಂಟುಮಾಡುತ್ತಿತ್ತು ||೬||

ಟೀ|| ಕ್ರೂರ-ಭಯಂಕರಗಳಾದ, ಕರ್ಕಟಕ- ಏಡಿಕಾಯಿಗಳ, ಕಟಕಂ- ಸಮೂಹಕ್ಕೆ, ಕಮಠ- ತಾಂಬೇಲಿಗಳ, ಮಠಂ-ಎಡೆಯು, ಇಡಿದ-ಸಾಂದ್ರವಾದ, ನೀರಾನೆಗಳ್ - ಜಲಜಗಳಾದ ಹಸ್ತಿಗಳು, ನೆಗಳ್ದ-ನೆಲೆಮಾಡಿಕೊಂಡಿರುವ, ಎಡೆ-ಸ್ಥಳವೂ, ಮುದಮುದ್ವೈವ-ಆನಂದದಿಂ ಪೂರಿತಮಾಗುವ, ಶಾಲೂರ-ದರ್ದುರಂಗಳ, ಕುಲ-ಸಂತತಿಯ, ರಾಜಿ-ಶ್ರೇಣಿಗೆ, ರಾಜಿಪ-ಹೊಳೆಯುವ, ಗೃಹಂ-ಮನೆಯು, ನಿಬಿಡ-ದಟ್ಟಮಾದ, ಗಂಡೂಪದ-ಕಪ್ಪೆಗಳಿಗೆ, ಪದಂ-ನಿಲಯವು, ಪೇರ್ಚಿದ-ಅಭಿವೃದ್ಧಿಯಾದ, ಘೋರ-ಭಯಂಕರವಾದ, ಸಮುದಗ್ರ-ಅಧಿಕವಾದ, (ಭಾರಿಯಾದ), ಗ್ರಾಹ-ಮೊಸಳೆಗಳಿಗೆ, ಭವ-ಗೃಹಕೃತ್ಯದ, ಭವನಮುಂ-ಮಂದಿರವು, ಭೂರಿ-ಹೆಚ್ಚಾದ, ಭೀಕರಂ - ಹೆದರಿಸುವ, ಮಕರ - ಮೊಸಳೆಗಳಿಗೆ, ಮಹಿ-ನೆಲೆಯಾದದ್ದು, ತಿಮಿ

---

ದೊಡ್ಡ ದೊಡ್ಡ ಮರಗಳಿಂದಲೂ ಎಲೆವಳ್ಳಿಗಳಿಂದಲೂ ಸಹಿತಮಾದ ಆರಾಮುಗಳನ್ನು ನಗೆಗೀಡಾಗಿ ಮಾಡುತ್ತಲೂ ಇರುವ ಮಹಾರ್ಣವದಲ್ಲಿ ||೫|| ಇರುವ ಮೀನುಗಳು ತಮ್ಮ ತಮ್ಮ ಶರೀರಗಳನ್ನು ಅಲ್ಲಾಡಿಸುವುದರಿಂದುಂಟಾದ ನೀರ್ಪನಿಗಳೇ ಆಗತಾನೆ ಚಿಪ್ಪಿನಿಂದ ಸಿಡಿದು ಮೇಲಕ್ಕೆ ಹಾರುತ್ತಿರುವ ಆಣಿ ಮುತ್ತುಗಳೆಂಬಂತೆಯೂ, ಬಿಳಿದಾದ ನೊರೆಗಳೇ ಶಂಖಗಳ ಸಮೂಹವೆಂಬಹಾಗೂ, ಒಳಭಾಗದಲ್ಲಿರುವ ಕೆಂಪು ಹವಳದ ಬಳ್ಳಿಗಳ ಕಾಂತಿಯೇ ನವರತ್ನಗಳ ಹೊಳಪೆಂಬ ತೆರನಾಗಿಯೂ, ಮೇಲ್ಗಡೆ ಏಳುವ ಕೆನೆಯೇ ನೀರಿಗಾಗಿ ಬರುತ್ತಿರುವ ಬಿಳಿಯ ಮೋಡಗಳೆಂಬಂತೆಯೂ ಉಂಟಾದ ಭ್ರಾಂತಿಯು ||೬|| ತಲೆದೋರುತ್ತಿತ್ತು, ಈ ಪರಿಯಿಂದ ಶೋಭಿಸುತ್ತಲಿರುವ ಮಹಾ ಕಡಲು ಮೀನು, ಮೊಸಳೆ, ಆನೆ, ನವರತ್ನಗಳು, ಕಪ್ಪೆಗಳು, ತಿಮಿ ತಿಮಿಂಗಿಲಗಳು, ಮೊದಲಾದ ನಾನಾ ಜಲಚರಗಳಿಗೆ ಆವಾಸಮಾಗಿ ||೭|| ಇದ್ದುದಲ್ಲದೆ ಒಂದು ಮೀನು ಮತ್ತೊಂದನ್ನೂ

ಗಳೆನುಂಗಿತೊಂದುಮೀನಾಮೀನನುಂಗಿದುದು | ಬಳಿಕೊಂದುಮೀನದಂಮತ್ತೊಂದುಮೀನ್ನುಂಗಿತಾಮೀನನುಂಗಿತೊಂದು ||
ತೊಳಲುತೊಂದೊಂದನೊಂದಿಂತುನುಂಗಲ್ತಿಮಿಂ | ಗಿಲಮೆಲ್ಲಮಂನುಂಗುತಿರ್ಪುದೆನೆಬೆದರಿಮೀರ್ಗ | ಗಳುತಿರುಗುತಿರ್ದುವೆರೆಕೆ
ಗಳೊಡನೆಮುಂಪೊಕ್ಕಗಿರಿಗಳೆಡೆಯಾಡುವಂತೆ ||೮|| ಆಮಹಾಂಭೋಧಿಯಂನೋಡಿಹರುಷಿತನಾಗಿ | ಭೀಮಸೇನಂಬಳಿಕನಲವಿ
ನಿಂದ್ವಾರಕೆಯ | ಸೀಮೆಗೈತಂದುನಗರದ್ವಾರಮಂಪೊಕ್ಕುಬರೆರಾಜಮಾರ್ಗದೊಳಗೆ || ಸಾಮಜಗಿರಿಯಹಯತರಂಗದನೆರವಿ
ದೊರೆಯ | ಚಾಮರಶಫರಿಯಬೆಳ್ಗೊಡೆನೊರೆಯಭೂಷಣ | ಸ್ತೋಮಮಣಿಗಣದಕಳಕಳರವದಜನದಸಂದಣಿಯಕಡಲಂ
ಕಂಡನು ||೯|| ಪೆಚ್ಚಿದಿಂಗಡಲೂರ್ಮಿಮಾಲೆಮಾಲೆಗಳೆಡೆಯೊ | ಳುಚ್ಛಳಿಸಿಹೊಳೆಹೊಳೆವಮರಿಮೀನ್ಗಳೆನೆತೊಳಗು | ವಚ್ಚ
ಬೆಳ್ಮುಗಿಲೊಡ್ಡುಗಳಥರಥರಂಗಳೋಳ್ಮಲೆದೋರ್ಪಮಿಂಚುಗಳೆನೆ || ಅಚ್ಚರಿಯೆನಿಪರಾಜಮಾರ್ಗದಿಕ್ಕೆಲದೊಳಿಹ | ನಿಚ್ಚಳದ

---

ತಿಮಿಂಗಿಲ-ಅಧಿಕವಾದ ಮತ್ತು ಅತ್ಯಧಿಕವಾದ ಮತ್ಸ್ಯವು, ಕಠೋರತರ-ಬಹುಕ್ರೂರವಾದ, ರಾಜೀವಂ-ಸಂಘದ ಮತ್ಸ್ಯಗಳು ಇವೇ ಆದಿಯಾದ, ಜೀವ-ನೀರಿನಲ್ಲಿ ವಾಸಮಾಡತಕ್ಕ ಜಂತುಗಳ, ಪ್ರತತಿ-ಸಮೂಹಕ್ಕೆ, ವಾಸವು-ನೆಲೆಯು, ಆ ಸಮುದ್ರದೊಳು-ಆ ಆ ಉದಧಿಯಲ್ಲಿ, ಎಸೆದುದು-ಪ್ರಕಾಶಿಸಿತು.

ಅ|| ವಿ|| ತಿಮಿ-ಭಾರಿಯಾದ ಮೀನು. ತಿಮಿಂಗಿಲ-ಅದಕ್ಕಿಂತಲೂ ಭಾರಿಯಾದ ಮತ್ಸ್ಯವು ||೭||

ಟೀ|| ಸುಳಿದ-ಮುಂದಾಗಿ ಬಂದ, ಒಂದು ಮೀನ-ಒಂದಾನೊಂದು ಮೀನನ್ನು, ಮೀನು-ಮತ್ತೊಂದು ಜಲಚರವು, ನುಂಗಿತು-ತುತ್ತಾಗಿ ಮಾಡಿಕೊಂಡಿತು, ಆ ಮೀನನು-ನೀರನ್ನು ವಾಸವಾಗಿವುಳ್ಳ ಅದನ್ನು, ಆಗಳೆ-ಕೂಡಲೆ, ನುಂಗಿತು-ಭಕ್ಷಿಸಿತು, ಒಂದು ಮೀನು-ಬೇರೊಂದು ಮತ್ಸ್ಯವು, ಆ ಮೀನ-ಅದನ್ನು, ನುಂಗಿದುದು-ಕವಳವಾಗಿ ಮಾಡಿಕೊಂಡಿತು, ಬಳಿಕ-ತರುವಾಯ, ಒಂದು ಮೀನು-ಮುಗದೊಂದು, ಅದಂ-ಅದನ್ನು, ಇನ್ನೊಂದು ಮತ್ಸ್ಯವು, ನುಂಗಿತು-ತುತ್ತುಮಾಡಿಕೊಂಡಿತು, ಆಮೀನ-ಅದನ್ನು, ನುಂಗಿತು-ತಿಂದಿತು, ಒಂದು-ಬೇರೊಂದು, ತೊಳಲುತ-ಹಿಂಸೆಪಡುತ್ತ, ಒಂದಾನೊಂದು-ಒಂದು ಮತ್ತೊಂದನ್ನು, ನುಂಗಿತು-ಕವಳವನ್ನಾಗಿ ಮಾಡಿಕೊಂಡಿತು, ಇಂತು-ಈ ಪ್ರಕಾರವಾಗಿ, ನುಂಗಲ್-ತುತ್ತುಮಾಡುತ್ತಿರಲು, ತಿಮಿಂಗಿಲವು-ಬಹು ದೊಡ್ಡ ಮತ್ಸ್ಯವು, ಎಲ್ಲಮಂ-ಸಕಲವನ್ನೂ, ನುಂಗುತಿರ್ಪುದು-ಭಕ್ಷಿಸುತ್ತಿತ್ತು, ಎನೆ-ಎಂಬಂತೆ, ಮೀನ್ಗಳು-ಜಲಚರಗಳು, ಎರೆಗಳೊಡನೆ-ಗರಿಗಳ ಸಹಿತವಾಗಿ, ಮುಂ-ಮೊದಲು, ಪೊಕ್ಕ-ಕಡಲ ಒಳಭಾಗವನ್ನು ಪ್ರವೇಶಿಸಿರುವ, ಗಿರಿಗಳು-ಅಗಗಳು, ಎಡೆಯಾಡುವಂತೆ-ಚಲಿಸುವಂತೆ, ತಿರುಗುತಿರ್ದವು-ತಾರಾಡುತ್ತಿದ್ದವು ||೮||

ಟೀ|| ಆ ಮಹಾಂಬುಧಿಯಂ - ಆ ದೊಡ್ಡ ಅಬ್ಧಿಯನ್ನು, ಭೀಮಸೇನಂ-ವೃಕೋದರನು, ನೋಡಿ-ಈಕ್ಷಿಸಿ, ಹರ್ಷಿತನಾಗಿ-ಆನಂದದಿಂದ ಕೂಡಿ, ಬಳಿಕ-ತರುವಾಯ, ನಲವಿನಿಂ-ಪ್ರೇಮದಿಂದ, ದ್ವಾರಕೆಯ ಸೀಮೆಗೆ - ದ್ವಾರಕಾಪಟ್ಟಣದೆಡೆಗೆ, ಐತಂದು-ಪ್ರಯಾಣಮಾಡಿ, ನಗರ-ಪಟ್ಟಣದ, ದ್ವಾರಮಂ-ಕವಾಟವನ್ನು, ಪೊಕ್ಕು-ಪ್ರವೇಶಮಾಡಿ, ರಾಜಮಾರ್ಗದೊಳಗೆ-ದೊಡ್ಡ ಬೀದಿಯಲ್ಲಿ, ಬರೆ-ಐತರಲು, ಸಾಮಜ-ಹಸ್ತಿ ಎಂಬ, ಗಿರಿಯ-ದುರ್ಗವುಳ್ಳ, ಹಯ-ಅಶ್ವಂಗಳೆಂಬ, ತರಂಗದ-ತೆರೆಗಳುಳ್ಳ, ನೆರವಿ-ವ್ಯಾಪಾರ ಸ್ಥಳಗಳಲ್ಲಿ, ಸಾಮಾನುಗಳನ್ನೆಲ್ಲೆಲ್ಲಿಯೂ ಹಾಕಿರುವುದೆಂಬ, ದೊರೆಯ-ಹೊಳೆಗಳುಳ್ಳ, ಚಾಮರ-ಚಾಮರಗಳೆಂಬ, ಶಫರಿಯ-ಮೀನುಗಳುಳ್ಳ, ಬೆಳ್ಗೊಡೆ-ಶ್ವೇತಾತಪತ್ರವೆಂಬ, ನೊರೆಯ-ನೊರೆಯಿಂದ ಕೂಡಿದ, ಭೂಷಣ-ತೊಡಿಗೆಗಳೆಂಬ, ಮಣಿಗಣದ-ನವರತ್ನಗಳ ಗುಂಪಿನ, ಕಳಕಳರವದ- ಕೋಲಾಹಲಸ್ವನದ, ಜನದ-ಲೋಕದ, ಸಂದಣಿಯ-ಗುಂಪೆನ್ನುವ, ಕಡಲಂ-ಉದಧಿಯನ್ನು, ಕಂಡನು-ನೋಡಿದನು ||೯||

ಟೀ|| ಪೆಚ್ಚಿದ-ಅಧಿಕವಾದ, ಇಂಗಡಲ-ಹಾಲಿನ ಸಮುದ್ರದ, ಊರ್ಮಿ-ತರಂಗಗಳ, ಮಾಲೆಮಾಲೆಗಳ-ಶ್ರೇಣಿಶ್ರೇಣಿಗಳ, ಎಡೆಯೊಳು-ಸ್ಥಾನದಲ್ಲಿ, ಉಚ್ಛಳಿಸಿ-ಮೇಲ್ಭಾಗಕ್ಕೆ ಹಾರಿ, ಹೊಳೆಹೊಳೆವ-ಮಿರುಮಿರುಗುವ, ಮರಿಯ ಮೀನ್ಗಳೆನೆ-

---

ಅದು ಇನ್ನೊಂದನ್ನೂ ಪುನಃ ಅದು ಬೇರೊಂದನ್ನೂ ಹಿಡಿಯಲು ಚಲಿಸುತ್ತಿರುವುದನ್ನು ನೋಡಿದರೆ ಒಳಭಾಗದಲ್ಲಿ ಅಡಗಿಕೊಂಡಿರತಕ್ಕ, ಕುಲಗಿರಿಗಳೇ ಇಂತು ಚಲಿಸುತ್ತಿರುವವೊ ಎಂಬಂತೆ ತೋರಿಬರುವ || ೮ || ಆ ಮಹೋದಧಿಯನ್ನು ವೃಕೋದರನು ಕಂಡು ಸಂತುಷ್ಟನಾಗಿ ದ್ವಾರಕಾಪಟ್ಟಣದ ಬಳಿಗೆ ಬಂದು ಆ ಊರ ಹೆಬ್ಬಾಗಲಿನಿಂದ ಒಳಗೆ ಪ್ರವೇಶಮಾಡುತ್ತಿರುವಾಗ, ಮದ್ದಾನೆಯೆಂಬ ಪರ್ವತಂಗಳಿಂದಲೂ, ಅಶ್ವಂಗಳೆಂಬ ಅಲೆಗಳಿಂದಲೂ, ಎಲ್ಲೆಲ್ಲಿಯೂ ಹಾಕಿರತಕ್ಕ ವಸ್ತುನಿಚಯಮೆಂಬ ಹೊಳೆಗಳಿಂದಲೂ, ಚಾಮರಗಳೆನ್ನುವ ಮೀನ್ಗಳಿಂದಲೂ, ಶ್ವೇತಾತಪತ್ರವೆಂಬ ನೊರೆಗಳಿಂದಲೂ, ತೊಡಿಗೆಗಳೆಂಬ ರತ್ನರಾಶಿಗಳಿಂದಲೂ, ಕಲಕಲಧ್ವನಿಯೆಂಬ ಶಬ್ದದಿಂದಲೂ ಮೊರೆಯುತ್ತಿರುವ ಜನಸಂಘವೆಂಬ ಮಹಾ ಸಮುದ್ರವನ್ನು ||೯|| ದಾಟಕೊಂಡು ಮುಂದೆ ನಡೆಯುತ್ತಿರುವಾಗ ಪಾಲ್ಗಡಲಲ್ಲಿ ಹುಟ್ಟಿದ ಅಲೆಗಳನ್ನಾಶ್ರಯಿಸಿದ ಮೀನುಗಳ ಮರಿಗಳೆಂಬಂತೆಯೂ,

ಕರುವಾಡದೋರಣದನೆಲೆನೆಲೆಯೊ | ಳೆಚ್ಚಾರೆಗಂಗಳೆಳೆವೆಂಗಳ ಕಟಾಕ್ಷದ ಮರೀಚಿಗಳ್ಸೊಗಯಿಸಿದುವು || ೧೦ || ವಿರಚಿಸಿದ ಕರುವಾಡದಿಕ್ಕೆಲದನವರತ್ನ | ಪರಿಖಚಿತಕನಕತೋರಣಮೊಪ್ಪಿದುದುರಜತ | ಗಿರಿಶಿಖರಮಂಸಾರ್ದಶುಭ್ರಾಭ್ರದೊಳ್ಮೂಡಿದ ಮರೇಂದ್ರಚಾಪದಂತೆ || ಪರಿಪರಿಯಗುಡಿಕಲಶಕನ್ನಡಿಪತಾಕೆಸೀ | ಗುರಿಚಮರಗಳಸಾಲ್ಗಳೆಸೆದವುಗಗನಮೆಂಬ | ಕರಿಯ ಸಿಂಗರಿಸಿದರೊಪರಿಮಳೋತ್ಸವಕೆಪೊರಮಡುವನಿಲರಾಜಂಗೆನೆ || ೧೧ || ಹರ್ಮ್ಯಾಗ್ರದೋಳ್ವಿರಾಜಿಪಚಂದ್ರಶಾಲೆಳ | ನಿರ್ಮಲಸ್ಥಳದೊಳೇಕಾಂತದಿಂತನುಲತೆಯ | ಘರ್ಮಶ್ರಮಂಗಳೆಸೆವಸೊಕ್ಕುಜವ್ವನದನೀರಜಗಂಧಿಯರಕೊಬ್ಬಿ || ಪೇರ್ಮೊಲೆಗಳೆಡೆಯಚಂದನದಣ್ಪುಮಲ್ಲಿಗೆಯ | ಲರ್ಮುಡಿಯತನುಗಂಪನೆರವಿವೆರವಿಗೆತಂದೆ || ಲರ್ಮೆಲ್ಲಮೆಲ್ಲನೆಪರವುತಿರ್ದುದಾರಾಜಮಾರ್ಗದೊಳ್ಪಿಸುಣರಂತೆ || ೧೨ || ದುರ್ಗಮಜಡಾಶ್ರಯಮನುಗ್ರಜಂತುಗಳಸಂ | ಸರ್ಗಮಂಬಿಟ್ಟುಮುಕ್ತಾಳಿವಿದ್ರುಮರತ್ನ |

---

ಚಿಕ್ಕಚಿಕ್ಕಮತ್ಸ್ಯಗಳೆಂಬಂತೆ, ತೊಳಗುವ-ಹೊಳೆಯುವ, ಅಚ್ಚ - ನಿರ್ಮಲವಾದ, ಬೆಳ್ಮುಗಿಲ - ಬಿಳುಪಾದ ಮೋಡಗಳ, ಒಡ್ಡುಗಳ_ಗುಂಪುಗಳ, ಥರಥರಂಗಳೊಳ್-ಬಗಬಗೆಗಳಿಂದ, ತಲೆದೋರ್ಪ_ಅಲ್ಪವಾಗಿ ಕಾಣುವ, ಮಿಂಚುಗಳ್-ವಿದ್ಯುತ್ತುಗಳು, ಎನೆ_ಎಂಬಂತೆ, ಅಚ್ಚರಿಯೆನಿಪ-ಭ್ರಾಂತಿಯನ್ನೀಯತಕ್ಕದ್ದೆನಿಸಿಕೊಳ್ಳುವ, ರಾಜಮಾರ್ಗದ-ದೊಡ್ಡರಸ್ತೆಯ, ಇಕ್ಕೆಲದೊಳು-ಎರಡುಕಡೆ ಇರುವ, ನಿಚ್ಚಲದ_ಅಲ್ಲಾಡದಿರುವ, ಕರುವಾಡದ-ಮಹಡಿಗಳ, ಓರಣದ_ಸಾಲಿನ, ನೆಲೆನೆಲೆಯೊಳು-ಎಲ್ಲಾ ಪ್ರದೇಶಂಗಳಲ್ಲಿಯೂ, ಓಚ್ಚಾರೆಗಂಗಳ_ಒಂದು ಬೊಗಸೆಯಷ್ಟು ವಿಸ್ತಾರವಾದ ನಯನಂಗಳುಳ್ಳ, ಎಳೆವೆಣ್ಗಳ_ಬಾಲೆಯರ, ಕಟಾಕ್ಷ-ಓರೆನೋಟದ, ಮರೀಚಿಗಳ್_ಕರಂಗಳು, ಸೊಗಯಿಸಿದವು-ಅಲಂಕಾರದಿಂದ ಕೂಡಿದ್ದವು ||೧೦||

ಟೀ|| ಕರುವಾಡದ-ಮಹಡಿಯ ಮೇಲಿರುವ ಅಂಗಳದ (ಬಿಸಿಲುಮುಚ್ಚಿನ), ಇಕ್ಕೆಲದ_ಎಡಬಲಭಾಗಗಳ, ನವರತ್ನ_ವಜ್ರವೈಡೂರ್ಯಾದಿಗಳಿಂದ, ಪರಿಖಚಿತ-ಸಿಂಗರಿಸಿದ, ಕನಕ_ಸುವರ್ಣಮಯವಾದ, ತೋರಣದ_ಬಾಗಿಲಿಗೆ ಕಟ್ಟಿದ ಹಾರವು, ರಜತಗಿರಿ_ಬೆಳ್ಳಿಯ ಬೆಟ್ಟದ, ಶಿಖರಮಂ-ತುದಿಯನ್ನು ಸಾರ್ದ-ಹೊಂದಿದ, ಶುಭ್ರಾಭ್ರದೊಳು_ಬಿಳಿಯ ಮೋಡದಲ್ಲಿ, ಮೂಡಿದ_ಜನಿಸಿದ, ಅಮರೇಂದ್ರಚಾಪದಂತೆ - ಸುರಪನಬಿಲ್ಲಿನಹಾಗೆ, ಪರಿಪರಿಯ- ವಿಧವಿಧವಾದ, ಗುಡಿ_ದೇವಾಲಯಗಳ, ಕಲಶ_ಮೇಲ್ಭಾಗದಲ್ಲಿರುವ ಕಲಶಂಗಳ, ಕನ್ನಡಿ_ದರ್ಪಣಗಳ, ಪತಾಕೆ_ಬಾವುಟಗಳ, ಸೀಗುರಿ_ಸಣ್ಣಚಾಮರಗಳ, ಚಮರಗಳ_ದೊಡ್ಡದೊಡ್ಡಚಾಮರಗಳ, ಸಾಲ್ಗಳು-ಶ್ರೇಣಿಗಳು, ಪರಿಮಳೋತ್ಸವಕೆ_ಸುವಾಸನೆಯ ಆನಂದಕ್ಕೆ, ಪೊರಮಡುವ_ಹೊರಟು ಬರುವ, ಅನಿಲರಾಜಂಗೆ_ಪವನನೆಂಬ ಅರಸನಿಗೆ, ಗಗನಮೆಂಬ_ಅಂತರಿಕ್ಷವೆನ್ನುವ, ಕರಿಯ_ಗಜವನ್ನು, ಸಿಂಗರಿಸಿದರೋ-ಅಲಂಕಾರಮಾಡಿದರೋ, ಎಂಬಂತೆ_ಎಂಬತೆರನಾಗಿ, ಎಸೆದವು_ಥಳಥಳಿಸಿದವು ||೧೧||

ಟೀ|| ಹರ್ಮ್ಯ_ಮಹಡಿಗಳ, ಆಗ್ರದೋಳ್-ಕಟ್ಟಕಡೆಯಲ್ಲಿ, ವಿರಾಜಿಪ - ಹೊಳೆವ, ಚಂದ್ರಶಾಲೆಗಳ_ಅಗ್ರಭಾಗದ ಮನೆಯ, ನಿರ್ಮಲ_ಪರಿಶುದ್ಧವಾದ, ಸ್ಥಳದೊಳು_ಎಡೆಯಲ್ಲಿ, ಏಕಾಂತದಿಂ-ಗೋಪ್ಯವಾಗಿ, ತನುಲತೆಯ_ಬಳ್ಳಿಯಹಾಗಿರತಕ್ಕ ಶರೀರದ, ಘರ್ಮಶ್ರಮಂ-ಉಷ್ಣದ ಬಳಲಿಕೆಯನ್ನು, ಕಳೆವ_ನಿವಾರಣೆಮಾಡುವ, ಸೊಕ್ಕುಜವ್ವನೆಯ-ಹರೆಯದ ಮದವುಳ್ಳ, ನೀರಜಗಂಧಿಯರ_ತಾವರೆಯ ಸುರಭಿಯಂತೆ ಪರಿಮಳವನ್ನುಳ್ಳ ನಾರಿಯರ, ಕೊಬ್ಬಿದ_ವಿವರಗಳಿಲ್ಲದ, ಪೇರ್ಮೊಲೆಗಳ-ದೊಡ್ಡಸ್ತನಗಳ, ಎಡೆಯ_ಪಾರ್ಶ್ವದ, ಚಂದನಗಂಧ_ಪರಿಮಳಯುಕ್ತವಾದ ಬಿಳೀಗಂಧದ, ತಣ್ಪು-ಶೈತ್ಯವನ್ನು, ಮಲ್ಲಿಗೆಯಲರ್-ಮಲ್ಲಿಕಾಪುಷ್ಪಗಳ, ಮುಡಿಯ_ಗಂಟಿನ, ತನು_ಅತ್ಯಲ್ಪವಾದ, ಗಂಪು_ಸುವಾಸನೆಯನ್ನು, ನೆರವಿಗೆ-ಪ್ರಜೆಗಳೆಲ್ಲರ ಸಮುದಾಯಕ್ಕು, ಎಲರ್_ಪವನನು, ತಂದು_ಸಾಗಿಸಿಕೊಂಡುಬಂದು, ಆ ರಾಜಮಾರ್ಗದೊಳು-ಆ ರಾಜಬೀದಿಯಲ್ಲಿ, ಪಿಸುಣರಂತೆ_ವಿಟರಂತೆ, ಮೆಲ್ಲಮೆಲ್ಲನೆ_ಮೆತ್ತಮೆತ್ತಗೆ, ಪರವುತಿರ್ದುದು_ಹರಡುತ್ತಿತ್ತು ||೧೨||

---

ನಿರ್ಮಲವಾದ ಮೇಘದಲ್ಲಿ ಹುಟ್ಟಿದ ವಿದ್ಯುಲ್ಲತೆಯೋ ಎನ್ನುವಹಾಗೂ ರಾಜಬೀದಿಯ ಪಾರ್ಶ್ವಗಳಲ್ಲಿ ಎತ್ತರವಾದ ಸೌಧಾಗ್ರಗಳಲ್ಲಿ ನೆರೆದಿರುವ ಕಮಲಾಕ್ಷಿಯರು ಕಾಂತಿಯುಕ್ತರಾಗಿರುವುದನ್ನು || ೧೦ || ವಾಯುವೆಂಬರಸು ಸುರಭಿ ಸಂಭ್ರಮಕ್ಕಾಗಿ ಪ್ರಯಾಣಸನ್ನದ್ಧನಾಗಿ ಹೊರಡುವುದರಿಂದ ರಾಜಬೀದಿಯ ಎರಡು ಪಕ್ಕಗಳಲ್ಲಿಯೂ ನವರತ್ನಖಚಿತಮಾದ ಭಂಗಾರದ ತೋರಣವನ್ನು ಕಟ್ಟಿ ಕೈಲಾಸಗಿರಿಯನ್ನು ಆವರಿಸಿದ ಬೆಳ್ಮುಗಿಲೊಳ್ಪುಟ್ಟಿದ ಅಮರಪತಿಯ ಬಿಲ್ಲಿನಹಾಗೆ ಎಲ್ಲೆಲ್ಲಿಯೂ ಇರುವ ದೇವಸ್ಥಾನಗಳು ಎತ್ತರವಾದ ಸ್ಥಳಗಳು ಮೊದಲಾದುವನ್ನೂ ಆಕಾಶವೆಂಬ ಹಸ್ತಿಯನ್ನೂ ಅಲಂಕರಿಸಿರುವದೊ ಎಂಬಂತೆ ಕಾಣಬರುವುದನ್ನೂ || ೧೧ || ಮತ್ತು ಉಪ್ಪರಿಗೆಗಳ ಮೇಲ್ಭಾಗದಲ್ಲಿ ಏಕಾಂಗಿನಿಯರಾಗಿ ನೆರೆದು ಬಿಸಲಿನ ತಾಪವಂ ಕಳೆಯಲುಜ್ಜುಗಿಸಿರುವ ಯುವತಿಯರ ಕುಚಗಳಲ್ಲಿ ಲೇಪಿಸಿದ್ದ ಪರಿಮಳವನ್ನೂ ಅವರು ತಮ್ಮ ತಮ್ಮ ತಲೆಗಳಲ್ಲಿ ಮುಡಿದಿರುವ ಮಲ್ಲಿಗೆಹೂವಿನ ಸುವಾಸನೆಯನ್ನೂ ವಾಯುವು ತೆಗೆದುಕೊಂಡು ಬಂದು ರಾಜಬೀದಿಯಲ್ಲಿ ಸುಳಿಯುವರ ಮನಸ್ಸಂತೋಷಪಡಿಸು

ವರ್ಗಗಂಗಳಲ್ಲಿಸೇರಿದವೆಂಬೊಲೊಪ್ಪಿದವನರ್ಘ್ಯಮಣಿವಸನಂಗಳು ‖ ಭರ್ಗಸಖನೊಲಿದುನವನಿಧಿಗಳಂಧಾತ್ರಿಯಜ | ನರ್ಗೆವಿಸ್ತರಿಸಿತೋರಿಸಿದನೆನೆಚಿನ್ನವರಿ | ಗರ್ಗುಡಿಸಿಕೊಂಡಿರ್ಪರಾಶಿಪೊನ್ನಳ್ಪಿಂಗದಂಗಡಿಗಳೆಸೆದಿರ್ದುವು ‖ ೧೩ ‖ ದಾನವಧ್ವಂಸಿಗೀದ್ವಾರಕಾಪುರಿರಾಜ | ಧಾನಿಗಡಸಕಲವೈಭವದೊಡಾತನರಾಣಿ | ತಾನಿರದಿಹಳೆಲಕ್ಷ್ಮಿಮೇಣವಳುಮರಸಿಯಲ್ಲವೆ ಧರಣಿತನ್ನೊಳಿರ್ದ ‖ ನಾನಾಸುವಸ್ತುಗಳನೊದವಿಸದಿಹಳೆಚೋದ್ಯ | ಮೆನೆನೆವಣಿಗ್ವಾಟಪಙ್ತಿಗಳ್ಶೋಭಾಯ | ಮಾನಮಾದುವುರಾಜಮಾರ್ಗದೊಳ್ಬಹಳಧನಸಂಪತ್ಸಮಾಜದಿಂದ ‖ ೧೪ ‖ ಸವಿಯೆಪ್ರಿಯರಾಗಮದರಾಗಮದರಾಗಮದ | ನವಿಲಾಸಮೊಂದುತಾಂಬೂಲಮಂ ತೋರ್ಪರ್ಮು | ಡಿವರೇಬೇಕಾದಲರ್ಕಾದಲರ್ಕಾದಲರ್ಕಂಗಜಾಹವದೊಳೆಂದು ‖ ನವಸುಗಂಧಾಮೋದಕು

ಟೀ‖ ದುರ್ಗಮ-ಪ್ರವೇಶಮಾಡಲು ಅಸದಳವಾದ, ಜಡಾಶ್ರಯಮನು-ಮಂಕರಿಗೂ ನೀರಿಗೂ ನೆರವಾದ. ಉಗ್ರಜಂತುಗಳ-ದುಷ್ಟಗಳಾದ ಮಕರವೇ ಮೊದಲಾದ ಪ್ರಾಣಿಗಳ ಅಥವಾ ಕಠಿಣಚಿತ್ತವುಳ್ಳಲೋಗರ, ಸಂಸರ್ಗಮಂ-ಜೊತೆಯನ್ನು, ಬಿಟ್ಟು-ವರ್ಜಿಸಿ, ಮುಕ್ತಾಳಿ-ಮೌಕ್ತಿಕ ಸಮೂಹವು, ವಿದ್ರುಮ-ಹವಳಗಳು, ರತ್ನ-ವಜ್ರವೈಡೂರ್ಯಾದಿಗಳು ಇವುಗಳ, ವರ್ಗಂಗಳಲ್ಲಿ-ಸಮೂಹದಲ್ಲಿ, ಸೇರಿದವು-ಒಂದಾದವು, ಎಂಬೊಲ್-ಎಂಬತೆರನಾಗಿ, ಅನರ್ಘ್ಯ-ಬೆಲೆಕಟ್ಟಲಾಗದ, ಮಣಿ-ರತ್ನಖಚಿತಗಳಾದ, ವಸನಂಗಳು-ಅಂಬರಗಳು, ಒಪ್ಪಿದವು-ಅಲಂಕಾರದಿಂದ ಮೆರೆದವು, ಭರ್ಗ-ಹರನಿಗೆ, ಸಖನು-ಸ್ನೇಹಿತನಾದ ಧನಪತಿಯು, ಒಲಿದು-ಪ್ರೀತಿಸಿ. ನವನಿಧಿಗಳಂ-ಒಂಭತ್ತು ವಿಧವಾದ ನಿಕ್ಷೇಪಗಳನ್ನು, ಧಾತ್ರಿಯ-ಪ್ರಪಂಚದ, ಜನರ್ಗೆ-ಲೋಕರಿಗೆ, ವಿಸ್ತರಿಸಿ-ಪ್ರಕಟಪಡಿಸಿ, ತೋರಿಸಿದನು-ಗೋಚರಮಾಡಿದನು, ಎನೆ-ಎನ್ನುವತೆರನಾಗಿ, ಚಿನ್ನವರೆಗರ್-ಸುವರ್ಣವನ್ನು ವರೆಗಲ್ಲಿನಲ್ಲಿ ಉಜ್ಜಿ ಪರೀಕ್ಷಿಸುವ ವ್ಯಾಪಾರಸ್ಥರು, ಗುಡಿಸಿಕೊಂಡು-ಒಟ್ಟು ಸೇರಿಸಿಕೊಂಡು, ಇರ್ಪ-ಇರತಕ್ಕ, ರಾಶಿಪೊನ್ನಳ್-ದ್ರವ್ಯ ಮತ್ತು ಚಿನ್ನದ ಗುಡ್ಡೆಗಳು, ಪಿಂಗದ-ಕಡಮೆಯಾಗದಿರುವ, ಅಂಗಡಿಗಳು-ವ್ಯಾಪಾರ ಸ್ಥಾನಗಳು, ಎಸೆದು-ತೇಜಸ್ಸಿನಿಂದಕೂಡಿ, ಇರ್ದವು-ಇದ್ದವು ‖೧೩‖

ಟೀ‖ ದಾನವ-ದನುವೆಂಬುವಳ ಗರ್ಭದಲ್ಲಿ ಜನಿಸಿದ ಅಸುರರನ್ನು, ಧ್ವಂಸಿಗೆ-ಸಂಹಾರಮಾಡಿದ ಕೃಷ್ಣಸ್ವಾಮಿಗೆ, ಈ ದ್ವಾರಕಾಪುರಿ-ಈ ದ್ವಾರಕಾನಗರವು, ರಾಜಧಾನಿಗಡ - ಮುಖ್ಯಸ್ಥಳವಲ್ಲವೆ, ಆದಪ್ರಯುಕ್ತ, ಸಕಲ - ಎಲ್ಲಾವಿಧವಾದ, ವೈಭವದೊಡನೆ-ಐಶ್ವರ್ಯದಿಂದ, ಆತನ-ಆ ಸ್ವಾಮಿಯ, ರಾಣಿ-ಅರಸಿಯಾದ ಶ್ರೀಯು, ತಾನು, ಇರದೆ-ನೆಲೆಯಾಗದೆ, ಇಹಳೆ-ಇದ್ದಾಳೆಯೆ, ಮೇಣ್-ಅಲ್ಲದೆ, ಧರಣಿ-ಇಳೆಯು, ಅರಸಿಯಲ್ಲವೆ-ಪಟ್ಟಮಹಿಷಿಯಲ್ಲವೆ, ಅದರಿಂದ-ಆದಕಾರಣ, ತನ್ನೊಳು-ಧನದಹೊರೆ ಎಂಬ ತನ್ನಲ್ಲಿ. ನಾನಾವಸ್ತುಗಳನು-ಬಗೆಬಗೆಯಾದ ಪುರುಳ್ಗಳನ್ನು, ಒದವಿಸದೆ-ಒಟ್ಟುಗೂಡಿಸಿ ಈಯದೆ, ಇಹಳೆ-ಇರುವಳೆ, ಚೋದ್ಯಂ-ಅಚ್ಚರಿಯು, ಏನು-ಏನಿರುವುದು, ಎನೆ-ಎಂಬರೀತಿಯಾಗಿ, ವಣಿಕ್-ವರ್ತಕರ, ವಾಟ-ವ್ಯಾಪಾರಸ್ಥಳಗಳ, ಪಙ್ತಿಗಳು-ಶ್ರೇಣಿಗಳು, ರಾಜಮಾರ್ಗದೊಳು- ದೊಡ್ಡದೊಡ್ಡ ಬೀದಿಗಳಲ್ಲಿ, ಬಹಳ-ಹೆಚ್ಚಾದ, ಧನ-ದ್ರವ್ಯದ, ಸಂಪತ್ ಐಸಿರಿಯು, ಸಮಾಜದಿಂದ-ಸಮುದಾಯದಿಂದ, ಶೋಭಾಯಮಾನಂ-ಥಳಥಳಿಸುವುದು, ಆದವು-ಆಗಿದ್ದವು.

ಅ‖ ವಿ‖ ರಾಜಧಾನಿ-ರಾಜನು ವಾಸಮಾಡತಕ್ಕ ಪಟ್ಟಣ, ಸಕಲವಾದ ವೈಭವ (ವಿ. ಪೂ.) ಬಹಳವಾದ ಧನ (ವಿ. ಪೂ.) ಬಹಳ ಧನದ ಸಂಪತ್ (ಷ. ತ.) ಬಹಳ ಧನದ ಸಂಪತ್ತಿನ ಸಮಾಜ (ಷ. ತ.) ‖೧೪‖

ಟೀ‖ ಪಲರ್-ಹಲವುಮಂದಿ ವೇಶ್ಯಾಂಗನೆಯರು, ವಿಟರ್ಗೆ-ಹಾದರತನವನ್ನುಬಲ್ಲವರಿಗೆ, ಸವಿಯೆ-ಅಡಿಕೆಲೆಹಾಕಿಕೊಂಡರೆ, ಪ್ರಿಯ-ಕಾಮುಕರಾದ ಸ್ತ್ರೀಪುರುಷರ, ರಾಗ-ವಿಶ್ವಾಸದ, ಮದರಾಗ-ಪ್ರಾಯಸಂಬಂಧವಾದ ಪ್ರೇಮದ, ಮದರಾಗವಿಶ್ವಾಸಪೂರ್ವಕವಾದ ಆಹ್ಲಾದದ, ಮದಿಸಿದ-ಕೊಬ್ಬಿದ, ಮದನ-ಮೀನಕೇತನನ, ವಿಲಾಸವೊಂದು-ಪ್ರೇಮಕಲಹವುಳ್ಳದ್ದೆಂದು,ಅಲ್ಲದೆ ಪ್ರಿಯರ-ಸ್ನೇಹಿತರ, ಆಗಮದ-ಸಮೀಪಸ್ಥರಾಗುವುದರಿಂದೊಗೆವ, ರಾಗ-ವಿಶ್ವಾಸದಿಂದ ಲಭಿಸಿದ, ಮದರಾಗ-ಪ್ರಾಯಸಂಬಂ

ತ್ತಿರುವುದನ್ನೂ ‖ ೧೨ ‖ ನೋಡಿ ಅತ್ಯಾನಂದಪಟ್ಟು ಮತ್ತೆ ಸ್ವಲ್ಪದೂರ ನಡೆಯಲಾಗಿ ವ್ಯಾಪಾರಸ್ಥರ ಅಂಗಡಿಗಳು ಕಾಣಿಸಿದವು. ಅವುಗಳಲ್ಲಿ ವಜ್ರ ವೈಡೂರ್ಯಾದಿ ನವರತ್ನಗಳನ್ನೂ ಸುವರ್ಣದ ರಾಶಿಯನ್ನೂ ಹಾಕಿಕೊಂಡು ಅಳಕಾಪಟ್ಟಣದ ಅರಸನೂ ಧನಪತಿಯೂ ಆದ ಕುಬೇರನೇ ಭೂಲೋಕದ ಜನರಿಗೆಲ್ಲಾ ಭಂಗಾರದ ಪರೀಕ್ಷೆಯನ್ನು ತೋರುತ್ತಿರುವುದಂ ಈಕ್ಷಿಸುತ್ತ ಸ್ವಲ್ಪ ಕಾಲವಂ ಕಳೆದನು ‖ ೧೩ ‖ ಅಸುರಾಂತಕನಾದ ಶ್ರೀ ಕೃಷ್ಣಸ್ವಾಮಿಗೆ ಲಕ್ಷ್ಮಿಯೂ ಭೂದೇವಿಯೂ ಪತ್ನಿಯರಾದ್ದರಿಂದ ಆ ಮಹಾನುಭಾವನಿಗೆ ಐಶ್ವರ್ಯಕ್ಕರೆಯೇನಿರುವುದೆಂಬುದಾಗಿ ಭ್ರಾಂತಿಗೊಳಿಸುವ ಚಿನಿವಾರರ ಗುಂಪುಳ್ಳ ದ್ವಾರಕಾನಗರವಂ ನೋಡಿ ಅತ್ಯಾನಂದವನ್ನೊಂದಿ ಮುಂದೆ ಸ್ವಲ್ಪದೂರ ಪ್ರಯಾಣಮಾಡಲು ‖ ೧೪ ‖ ಮುಂಭಾಗದಲ್ಲಿ ವೇಶ್ಯಾಸ್ತ್ರೀಯರ ಬೀದಿಯು ಸಿಕ್ಕಲಾಗಿ ಭೀಮಸೇನನು ಆ ಪಥವನ್ನೇ ಹಿಡಿದು ಹೋದನು. ಅಲ್ಲಿ ಪ್ರತಿಮನೆಯ ಬೀದಿಯ ಬಾಗಿಲಲ್ಲಿಯೂ

ಸುಮಂಗಳಂತೋರಿ | ಸುವರೊಲಿದುಯೇಕಾಂತಕಾಂತಕಾಂತರನೊಲಿಸ | ಲಿವುಬಲ್ಲವೆಂದುಪರಿಮಳದಕರಡಿಗೆಗಳಂತೋ
ರ್ಪರ್ಪ್ರಿಟರ್ಗೆ || ೧೫ || ನಸುನಗೆಯೊಳರೆಬಿರಿದಮಲ್ಲಿಗೆಯನುರೆಪೊಳೆವ | ದಶನದೊಳ್ಕುಂದಮಂಮೊಗದೊಳರವಿಂದಮಂ |
ಮಿಸುಪನಳಿತೋಳ್ಗಳೊಳ್ಶಿರೀಷಮಾಲೆಯನೆಸೆವನಾಸದೊಳ್ಸಂಪಿಗೆಯನು || ಎಸಳ್ಗಣ್ಗಳುತ್ಪಲವನುಗುರ್ಗಳೊಳ್ಕೇತಕಿ
ಯ | ನೊಸೆದಿರಿಸಿಕೊಂಡುಳಿದಲರ್ಗಳಂ ಮಾರುವೊ | ಲ್ಕುಸುಮದಪಸರದೊಳೊಪ್ಪಿದರಲ್ಲಿ ಪೂವಡಿಗವೆಂಗಳದನೇವೇಳ್ವೆ
ನು || ೧೬ || ಕಬ್ಬು ವಿಲ್ಲುಂಬಿವೆಡೆಪೂಸರಳ್ಪೂಪ್ಪೆಸೆ | ಲ್ನಿಬ್ಬರಮಿದೆಂದುಮದನಂಮಾಲೆಗಾತಿಯರ | ಹುಬ್ಬೆಂಬಚಾಪಮಂ

ಧವಾದಸರಸಸಲ್ಲಾಪಗಳನ್ನುಳ್ಳ, ಮದನ–ಮಾರನ, ವಿಲಾಸವೆಂದು-ಹಾಸ್ಯದ ನಿಧಿಯೆಂದು, ತಾಂಬೂಲಮಂ–ವೀಳಯವನ್ನು, ತೋರ್ಪರು–ಗೋಚರಪಡಿಸುವರು. ತಾಂಬೂಲವು ತಮ್ಮ ಅಂತರಾಭಿಪ್ರಾಯವನ್ನು ಪ್ರಿಯನಿಗೆ ತೋರ್ಪಡಿಸುವುದಕ್ಕೂ, ಅವನ ಮನಸ್ಸನ್ನು ತಮ್ಮ ಕಡೆಗೆಳೆದುಬಿಡುವುದಕ್ಕೂ ಸಹಾಯಕಾರಿಯಾದ್ದರಿಂದ, ವೀಳೆಯದೆಲೆ ಅಡಿಕೆಪುಡಿ ಮೊದಲಾದ ಮನ್ಮಥೋದ್ರೇಕ ವಸ್ತುಗಳನ್ನು ತೋರುತ್ತಿದ್ದರೆಂದು ಭಾವವು. ಮುಡಿದರೆ–ಪುಷ್ಪವನ್ನು ಜಡೆಯಲ್ಲಿಟ್ಟುಕೊಂಡರೆ, ಅಂಗಜಾಹವದೊಳು–ಮಾರನಾಟದಲ್ಲಿ ಎಂದರೆ ಸ್ತ್ರೀಪುರುಷರ ಸಂಯೋಗಕಾಲದಲ್ಲಿ, ಬೇಕಾದ–ಅವಶ್ಯವಾದ, ಅರಲ್-ಪುಷ್ಪಗಳ, ಕಾದಲಿಕ್ಕೆ-ಹೋರಾಟಕ್ಕೆ, ಕಾದ–ರತಿಯಿಂದ ತೀಕ್ಷ್ಣವಾದ, ಅಲರ್-ಶರವು, ಎಂದು–ಎಂಬತೆರನಾಗಿ, ನವ–ನೂತನವಾದ, ಸುಗಂಧ–ಪರಿಮಳದ, ಆಮೋದ–ಸುರಭಿಯುಳ್ಳ, ಕುಸುಮಂಗಳಂ-ಪುಷ್ಪಗಳನ್ನು, ತೋರಿಸುವರು–ಗೋಚರಪಡಿಸುವರು, ತಾಂಬೂಲದಂತೆ ಇವೂ ಮನ್ಮಥಾವಸ್ಥೆಯನ್ನು ಹೆಚ್ಚಿಸತಕ್ಕವು, ಒಲಿದು–ಪ್ರೀತಿಸಿ, ಏಕಾಂತ–ಅಂತರಂಗದಲ್ಲಿ, ಕಾಂತ–ಸುಂದರರಾದ, ಕಾಂತ–ಕಾಮುಕರನ್ನು, ಒಲಿಸಲು–ತಮ್ಮ ಬಲೆಗೆ ಸಿಕ್ಕಿಸಿಕೊಳ್ಳಲು, ಇವು-ಈ ಕರಡಿಗೆಗಳು, ಬಲ್ಲವು–ಅರಿತಿರುವವು, ಎಂದು–ಎಂಬತೆರನಾಗಿ, ಪರಿಮಳದ–ಪರಿಮಳ ದ್ರವ್ಯಂಗಳಿಂದ ಕೂಡಿದ, ಕರಡಿಗೆಗಳಂ–ಡಬ್ಬಿಗಳನ್ನು, ತೋರ್ಪರು - ಕಾಣಿಸುತ್ತಿರುವರು, ತಾಂಬೂಲದ ಕರಡಿಗೆಯ ಧ್ವನಿಯುಕೂಡ ಸ್ತ್ರೀಪುರುಷರ ಕಾಮವನ್ನು ಹೆಚ್ಚಿಸತಕ್ಕವು.

ಅ|| ವಿ|| ಪರಿಮಳವಸ್ತುಗಳು–ಅಡಿಕೆ, ಎಲೆ, ಜಾಕಾಯಿ, ಲವಂಗ, ಜಾಪತ್ರೆ, ಕುಂಕುಮಕೇಸರಿ, ಪಚ್ಚೆಕರ್ಪೂರ, ಕತ್ತುರಿಯೇ ಮೊದಲಾದವು. || ೧೫ ||

ಟೀ|| ನಸುನಗೆಯೊಳು-ಕಿರುನಗೆಯಿಂದ, ಅರೆಬಿರಿದ-ಅರ್ಧವಿಕಸಿತವಾದ, ಮಲ್ಲಿಗೆಯನು–ಮಲ್ಲಿಕಾಪುಷ್ಪವನ್ನು, ಉರೆ–ಹೆಚ್ಚಾಗಿ, ಪೊಳೆವ-ಪ್ರಕಾಶಿಸುವ, ದಶನದೋಳ್–ದಂತದಲ್ಲಿ, ಕುಂದಮಂ–ಕುಂದಮಲ್ಲಿಗೆ ಹೂವನ್ನು, ಮೊಗದೋಳ್–ಆಸ್ಯದಲ್ಲಿ, ಅರವಿಂದಮಂ-ತಾವರೆಯನ್ನು, ಮಿಸುಪ-ಥಳಥಳಿಸುವ, ನಳಿತೋಳ್ಗಳೊಳ್–ತಾವರೆದಂಟನ್ನು ಹೋಲುವ ಕೈಗಳಲ್ಲಿಯೂ, ಶಿರೀಷಮಾಲೆಯನು–ಗಿರಿಮಲ್ಲಿಕಾಪುಷ್ಪಗಳ ಸರವನ್ನು, ಎಸೆವ-ಪ್ರಕಾಶಿಸುವ, ನಾಸದೊಳ್–ಮೂಗಿನಲ್ಲಿ, ಸಂಪಿಗೆಯನು–ಚಂಪಕಪುಷ್ಪವನ್ನು ಅಥವಾ ಮೊಗ್ಗನ್ನು, ಎಸಳ್ಗಂಣೊಳು–ತಾವರೆಯದಳದಂತೆ ಅತಿವಿಶಾಲವಾದನಯನದಲ್ಲಿ, ಉತ್ಪಲವನು-ಕಪ್ಪುಕಮಲವನ್ನು, ಉಗುರ್ಗಳೊಳು–ನಖಗಳಲ್ಲಿ, ಕೇತಕಿಯನು–ಕೇತಕಿಪುಷ್ಪವನ್ನು, ಒಸೆದು–ಪ್ರೀತಿಯಿಂದ, ಇರಿಸಿಕೊಂಡು–ಹತ್ತಿರದಲ್ಲಿ ಸೇರಿಸಿಕೊಂಡು, ಉಳಿದ–ಮಿಕ್ಕ, ಅಲರ್ಗಳಂ-ಪುಷ್ಪಗಳನ್ನು, ಮಾರುವೋಲ್–ಖರೀದಿಗೆ ಕೊಡುವರೋ ಎಂಬಂತೆ, ಕುಸುಮಪಸರದೊಳು–ಪುಷ್ಪಂಗಳ ವ್ಯಾಪಾರಸ್ಥಳದಲ್ಲಿ, ಪೂವಡಿಗವೆಂಗಳು–ಹೂವಾಡಗಿತ್ತಿಯರು, ಒಪ್ಪಿದರು–ಕಾಂತಿಯುಕ್ತರಾದರು, ಅಲ್ಲಿ-ಆ ದ್ವಾರಕಾನಗರದಲ್ಲಿ, ಆದನು-ಆ ಸ್ತ್ರೀಯರ ಚಲುವನ್ನು, ಏವೇಳ್ವೆನು–ಎಂತು ಬಣ್ಣಿಸಲಿ.

ಅ|| ವಿ|| ಆ ನಾರಿಯರು ಪುಷ್ಪಗಳಂತಿರುವ ಅತಿಮನೋಹರವಾದ ದೇಹಕಾಂತಿಯಿಂದ ಹೊಳೆಯುತ್ತಿದ್ದರು ||೧೬||

ಚಲ್ವೆಯರೂ ನವಯುವತಿಯರೂ ಆದ ವಾರಾಂಗನೆಯರು ತಮ್ಮತಮ್ಮ ಕೈಗಳಲ್ಲಿ ಕಾಮುಕರನ್ನು ಮರುಳು ಮಾಡಲು ಸಾಧಕವಾದ ತಾಂಬೂಲವನ್ನೂ, ಪುಷ್ಪವನ್ನೂ, ಅಡಿಕೆಲೆಯ ಕರಡಿಗೆಗಳನ್ನೂ ಹಿಡಿದು ಬೀದಿಯ ಬಾಗಿಲನ್ನಲಂಕರಿಸಿ ನಿಂತು ದಾರಿಯಲ್ಲಿ ಬರುವ ಕಾಮುಕರನ್ನು ವಿಭ್ರಾಂತರನ್ನಾಗಿ ಮಾಡುತ್ತಿದ್ದರು || ೧೫ || ಇನ್ನು ಸ್ವಲ್ಪದೂರ ನಡೆತರಲಾಗಿ ಅಲ್ಲಿ ಹೂವಾಡಿಗರ ಅಂಗಡಿಗಳಲ್ಲಿ ಕುಳಿತಿರುವ ನಾರಿಯರು ಕಿರುನಗೆಯಿಂದ ಆಗತಾನೆ ವಿಕಸಿಸಲಿರುವ ಮಲ್ಲಿಕಾಪುಷ್ಪವನ್ನೂ ಹೀಯಾಳಿಸುವಂತೆಯೂ, ಶುಭ್ರಗಳಾದ ಪಲ್ಗಳ ಸಾಲ್ಗಳಿಂದ ಕುಂದಕುಟ್ಮಲವನ್ನುಕೂಡ ಅಲೆಗಳೆಯುವತೆರನಾಗಿಯೂ, ತಮ್ಮಮುಖದಿಂದ ಬೆಳ್ದಾವರೆಯನ್ನು ತಿರಸ್ಕರಿಸುವಹಾಗೂ ಇದ್ದರು. ಅದೂ ಅಲ್ಲದೆ ಹೂವಾಡಗಿತ್ತಿಯರು ತಾವರೆಯ ದಂಟನ್ನು ಹೋಲುವ ತಮ್ಮ ಬಾಹುಗಳಲ್ಲಿ ಗಿರಿಮಲ್ಲಿಕಾಮಾಲಿಕೆಯನ್ನುಳ್ಳವರಾಗಿ ಸಂಪಿಗೆಯ ಮೊಗ್ಗನ್ನು ಹೋಲುವ ನಾಶಿಕವನ್ನೂ, ಕಮಲಪತ್ರವನ್ನು ನೋಡಿ ನಗುವಂತೆ ಇರುವ ವಿಶಾಲನೇತ್ರಂಗಳನ್ನೂ, ಹೊಂದಿ ಕೇದಿಗೆ ಹೂವಿನ ಸೊಬಗನ್ನು ಕಡೆಯೆಂದು ತೋರ್ಪಡಿಸುವ ನಖಗಳಿಂದಲೂ, ಕಪ್ಪು ತಾವರೆ ಹೂವೆಂಬ ಭ್ರಾಂತಿಯನ್ನುಂಟು ಮಾಡುವ ನಯನಂಗಳಿಂದಲೂ ಕೂಡಿ ಪ್ರಕಾಶಿ

ಕುರುಳೆಂಬನಾರಿಯುಂಕಣ್ಣೆಂಬಕೂರ್ಗಣೆಯುನು || ಉಬ್ಬರದಸಾಹಸದೊಳಳವಡಿಸಿಕೊಂಡುಬಿರಿ | ದಬ್ಬರಿಸಿಸೋವಿತಂದವ ರಬಲ್ಮೊಲೆಯೆಂಬ | ಹೆಬ್ಬೆಟ್ಟದೆದೆಯಿರುಬಿನೋಳ್ಕೆಡವುತಿಹರಲ್ಲಿವಿಟರಕ್ಷಿನ್ಮೃಗಕುಲವನು || ೧೭ || ಮಲ್ಲಿಗೆಯಲರ್ವಿಡಿದುಕೆಂ ಜಾಜಿಯೆಂದೀವ | ರುಲ್ಲಾಸದಿಂದನೀಲೋತ್ಪಲವನೆಳನಗೆಯ | ಸೊಲ್ಲಿಂದಕುಮುದಮೆಂದುಸುರುವರ್ಸುರಹೊನ್ನೆಯರಳಮಾ ಲೆಯುಲೊಪ್ಪುವ || ಸಲ್ಲಲಿತಕಾಯುದಸರಿಸಕೆತ್ತುಸುರಗಿಯೆಂ | ದೆಲ್ಲರ್ಗೆತೋರಿಸುವರರುಣತಾಮರಸಮಂ | ಚೆಲ್ಲೆಗಣ್ಗೊನೆ ಯೊಳೀಕ್ಷಿಸಿಪುಂಡರೀಕಮೆಂದೆಚ್ಚರಿಪರೆಳೆವೆಣ್ಗಳು || ೧೮ || ಪಸರದೊಳ್ಮಾರ್ಪಲರ್ಗಳಸರಂಗಳ್ಗೆಸೊಗ | ಯಿಸುವಸುಯ್ಯಲರ

ಟೀ|| ಮದನಂ–ಮಾರನು, ಕಬ್ಬು–ಕಬ್ಬನ್ನು, ಬಿಲ್–ಚಾಪವನ್ನು, ತುಂಬಿ–ಭೃಂಗಗಳು, ಹೆದೆ–ಸಿಂಜಿನಿಯು, ಪೂ–ಅರಲು, ಸರಳ್–ಅಲಗು ಮೊದಲಾದುದನ್ನು, ಈ ತೆರನಾಗಿ, ಪೂಣ್ಕು–ಪ್ರೋಕ್ಷಿಸಿ, ಎಸಲು–ಹೂವಿನ ಅಲಗನ್ನು ಪ್ರಯೋಗಿ ಸಲು, ನಿಬ್ಬರಂ–ಅಸದಳವು, ಇದು. ಎಂದು–ಎಂಬದಾಗಿ, ಬಗೆದು, ಮಾಲೆಗಾತಿಯರ – ಹೂವಾಡಗಿತ್ತಿಯರ, ಹುಬ್ಬೆಂಬ– ಹುಬ್ಬೆನ್ನತಕ್ಕ, ಚಾಪಮಂ–ಧನುಸ್ಸನ್ನು, ಕುರುಳೆಂಬ–ಮುಂಭಾಗದ ಕೇಶಪಾಶಗಳೆಂಬ, ನಾರಿಯುಂ–ಹಗ್ಗವನ್ನು, ಕಣ್ಣೆಂಬ– ನಯನವೆಂಬ, ಕೂರ್ಗಣೆಯನು–ಹರಿತವಾದ ಅಂಬನ್ನು, ಉಬ್ಬರದ–ಅತ್ಯಧಿಕವಾದ, ಸಾಹಸದೊಳು–ಶೌರ್ಯದಿಂದ, ಅಳವಡಿಸಿ ಕೊಂಡು–ನೇರ್ಪಡಿಸಿಕೊಂಡು, ಬಿರಿದು–ಅಧಿಕವಾಗಿ, ಅಬ್ಬರಿಸಿ=ಘರ್ಜಿಸಿ, ಸೋವಿ–ಧ್ವನಿಗೈದು, ತಂದು–ಹೆದರಿಕೆಯನ್ನುಂ ಟುಮಾಡಿ ಸಾಗಿಸಿಕೊಂಡುಬಂದು, ಅವರ–ಆ ನಾರಿಯರ, ಬಲ್ಮೊಲೆಯೆಂಬ–ಪೀವರಸ್ತನಂಗಳೆನ್ನತಕ್ಕ, ಹೆಬ್ಬೆಟ್ಟದ–ಅಗಾಧ ವಾದ ಗಿರಿಗಳ, ಎದೆ–ಉರಸ್ಸು ಎನ್ನುವ, ಇರುಬಿನೋಳ್–ಇಕ್ಕಟ್ಟನಲ್ಲಿ, ಅಲ್ಲಿ–ಆ ನಗರದಲ್ಲಿ, ವಿಟರ–ಕಾಮುಕರ, ಅಕ್ಷಿ–ನಯ ನಂಗಳೆಂಬ, ಮೃಗಕುಲವನು–ಮೃಗಂಗಳ ಗುಂಪನ್ನು, ಕೆಡಹುತಿಹನು–ಕೆಳಗೆ ಬೀಳುವಂತೆ ಮಾಡುತ್ತಿರುವನು ||೧೭||

ಟೀ|| ಮಲ್ಲಿಗೆಯಲರ್–ಮಲ್ಲಿಕಾ ಪುಷ್ಪವನ್ನು, ಪಿಡಿದು–ಹಿಡಿದುಕೊಂಡು, ಕೆಂಜಾಜಿಯೆಂದು–ರಕ್ತವರ್ಣದ ಜಾಜಿ ಪುಷ್ಪವೆಂದು, ಈವರು–ಕೊಡುತ್ತಿರುವರು, (ಅಂಗನೆಯರಕರವು ನವಪಲ್ಲವಂಗಳಂತೆ ರಕ್ತವರ್ಣವಾಗಿದ್ದುದರಿಂದ ಬಿಳುಪಾ ದಹೂವನ್ನೂ ಕೂಡ ಕೆಂಪಗೆ ಕಾಣುವಂತೆ ಮಾಡಿತೆಂದು ಊಹೆಯು) ಉಲ್ಲಾಸದಿಂದ–ಉತ್ಸಾಹದಿಂದ, ನಿಲೋತ್ಪಲವನೆ– ಕಪ್ಪುಕಮಲವನ್ನೆ, ಎಳನಗೆಯ–ಮಂದಸ್ಮಿತದ, ಸೊಲ್ಲಿಂದ–ನುಡಿಯಿಂದ, ಕುಮುದಮೆಂದು–ಪುಂಡರೀಕವೆಂದು, ಉಸುರು ವರು–ಪೇಳುವರು, (ಕಿರುನಗೆಯ ಧವಳವರ್ಣದ ಕಾಂತಿಯು ಕನ್ನೈದಿಲೆಯ ಕೃಷ್ಣವರ್ಣವನ್ನು ಮರೆಮಾಚಿತು), ಸುರಹೊ ನ್ನೆಯ–ಸುರೆಹೊನ್ನೆ ಎನ್ನತಕ್ಕ, ಅರಳಮಾಲೆಯಲ್ಲಿ–ಪುಷ್ಪಮಾಲಿಕೆಯಲ್ಲಿ, ಒಪ್ಪುವ–ಮೆಚ್ಚುವಂಥಾ, ಸಲ್ಲಲಿತ–ಕೋಮಲ ವಾದ, ಕಾಯದ–ದೇಹಕ್ಕೆ, ಸರಿಸ–ಸಮವಾಗಿ, ಕೆತ್ತು–ಒಟ್ಟುಗೂಡಿಸಿ, ಸುರಗಿಯೆಂದು–ಸುರಗಿಯ ಪುಷ್ಪವೆಂದು, ಎಲ್ಲರಿಗೆ– ಎಲ್ಲಾಜನರಿಗೂ, ತೋರಿಸುವರು–ಕಾಣಿಸುತ್ತಾರೆ, ಅರುಣತಾಮರಸಮಂ–ರಕ್ತವರ್ಣದ ಕಮಲಪುಷ್ಪವನ್ನು, ಚೆಲ್ಲೆಕಣ್ಗೊನೆ ಯೊಳ್–ಚಪಲವಾದ ಕಟಾಕ್ಷವೀಕ್ಷಣದಿಂದ, ಈಕ್ಷಿಸಿ–ನಿರುಕಿಸಿ, ಪುಂಡರೀಕಮೆಂದು–ಸಿತಾಂಭೋಜಾತಂಗಳೆಂಬದಾಗಿ, ಎಳೆವೆ ಣ್ಗಳ್–ಯೌವನ ಸ್ತ್ರೀಯರು, ಎಚ್ಚರಿಪರು–ಎಚ್ಚರಿಕೆಯನ್ನುಂಟುಮಾಡುವರು.

ಅ|| ವಿ|| ಕೆಚ್ಚನೆಜಾಜಿ (ವಿ. ಪೂ.) ನೀಲೋತ್ಪಲ (ಗುಣಸಂಧಿ) || ೧೮ ||

ಸುತ್ತಿದ್ದರು || ೧೬ || ಬೇಟೆಯಾಡುವ ಬೇಡರವನು ಅರಣ್ಯವಾಸಿಗಳಾದ ಮೃಗವಿಂಡನ್ನು ಸೂರೆಮಾಡಲು ಧನುಸ್ಸು, ಬಾಣ, ದಾರ, ಮೊದಲಾದವನ್ನು ಸಿದ್ಧಮಾಡಿಕೊಂಡು ಕೈಗೆ ಸಿಕ್ಕಿದ ಮೃಗಗಳನ್ನು ಕೊಳ್ಳೆ ಹೊಡೆಯುತ್ತಿರುವಂತೆ ಮಾರನೆಂಬ ವ್ಯಾಧನು ತನ್ನ ಪುಷ್ಪ ಬಾಣಕ್ಕೆ ಸಾಧನಂಗಳಾದ ಕಬ್ಬು, ಬಾಣ, ಅಳಿ, ನಾರಿ, ಹೂ ಮೊದಲಾದವೆಲ್ಲಾ ನಿರರ್ಥಕಂಗಳೆಂದು ಬಗೆದು ಆ ದ್ವಾರಕಾನಗರದ ಹೂವಾಡಿಗರ ಬೀದಿಯಲ್ಲಿ ಹೂವನ್ನು ಮಾರುತ್ತಿರುವ ನಾರಿಯರ ಹುಬ್ಬೆಂಬ ಧನುಸ್ಸಿಗೆ ಅವರ ಮುಂಗುರುಗಳೆನ್ನತಕ್ಕ ದಾರವನ್ನು ಬಿಗಿದು, ನಯನಂಗಳೆನ್ನುವ ಅಲಗನ್ನು ತಗಲಿಲಿ, ಬಹು ಜಾಗ್ರತೆಯಾಗಿ ಕಾಮುಕರ ನಯನಂಗಳೆಂಬ ಮೃಗಗಳನ್ನು ಹೊಡೆದು ಆರ್ಭಟದಿಂದ ಬೆದರಿಸಿ ಎಳತಂದು ಆ ಹೂವಾಡಿಗಿತ್ತಿಯರ ಪೀವರಸ್ತನಂಗಳ ಮಧ್ಯಭಾಗದಲ್ಲಿ ಕೆಡುವುತ್ತಿರುವನೊ ಎಂಬಂತೆ ವಿಟಪುರುಷರು ಕಾಮಾತುರರಾಗಿ ಆ ನಾರಿಯರನ್ನೆ ನೋಡಿ ನೋಡಿ ಆನಂದ ಪಡುತ್ತಿದ್ದರು. || ೧೭ || ಮನ್ಮಥಾವಸ್ಥೆಯಿಂದ ಮರುಳ್ಗೊಂಡ ಆ ಹೆಂಗಸರು ಅಲ್ಲಿಗೆ ಬರತಕ್ಕ ವ್ಯಾಪಾರಸ್ಥರಿಗೆ ಮಲ್ಲಿ ಕಾಪುಷ್ಪಮಂ ಚಿಗುರಿನಂತಿರುವ ಕರದೊಳ್ಪಿಡಿದು ಜಾತೀ ಕುಸುಮವೆಂದು ಕೊಡುತ್ತಲೂ, ಮುಗುಳ್ನಗೆಯ ಕಾಂತಿಯು ಕರೀ ತಾವರೆಯಮೇಲೆ ಬೀಳಲು ಅದನ್ನು ಬೆಳ್ದಾವರೆಯೆಂದು ನುಡಿಯುತ್ತಲೂ, ಸುರಹೊನ್ನೆಯ ಹೂವಿನ ಹಾರವನ್ನು ತಮ್ಮ ದೇಹ ಕಾಂತಿಯಿಂದ ಸುರಗಿಯ ಹೂವೆಂಬದಾಗಿ ತೋರಿಸುತ್ತಲೂ, ರಕ್ತಛಾಯೆಯ ಕಮಲವನ್ನು ಓರೆಗಣ್ಣಿನಿಂದ ನೋಡಿ ಬೆಳ್ದಾ ವರೆ ಎಂದು ಹೇಳಿ ಅಚ್ಚರಿಗೊಳಿಸುತ್ತ || ೧೮ || ತಾವು ಮಾರುವ ಹೂವಿಗೆ ತಮ್ಮ ಮೈ ಸುಗಂಧದಿಂದ ಕೂಡಿದ

ಕಂಪಿಂದಕಂಪೇರಿಸುವ | ಠೊಸೆದುಕೋಮಲಿತತನುವಲ್ಲರಿಯ ಸೊಂಪಿಂದಸೊಂಪುದೋರಿಸುತಿರ್ಪರು || ಲಸದವಯವಂಗಳಾಕೃತಿಯಚೆಲ್ವಿಕೆಯಿಂದ | ಪೊಸತೆನಿಪಚೆಲ್ವಿಕೆಯನೈದೆನಲವಿಂದಕಾ | ಣಿಸುವರಲ್ಲಿಯಮಾಲೆಗಾತಿಯರ್ಮದನಶರಮೂರ್ತಿಯರ್ವಿರಹಿಗಳ್ಗೆ ||೧೯|| ನಾನಾಸುವಸ್ತುಗಳವಿಸ್ತರವನೊಲಿದುಪವ | ಮಾನಾತ್ಮಜಂನೋಡುತೈತರಲ್ಮುಂದೆಗಣಿ | ಕಾನಾರಿಯರಸದನಪಜ್ಜಗಳಲೋವೆಗಳಸಾಲ್ಮೆರೆದವಿಕ್ಕೆಲದೊಳು || ಏನಾದೊಡಂಮುನಿಮೃಗಾವಳಿಯಬೇಟೆಯಂ | ತಾನಾಡಲೆಂದುಸಿಂಗರದಪೆಣ್ಗೂಡಿನೋ | ಳ್ಮೀನಾಂಕನೃಪತಿಕಟ್ಟಿಸಿದಬಲ್ಲಾರಂಗಳಾಗಬೇಕೆಂಬಂತಿರೆ || ೨೦ || ಘನಕುಚದ್ವಯಕೆಲೋಚನಯುಗಕೆಸೊಗಯಿಸುವ | ತನುಮಧ್ಯಕಿಂಪಾದನುಣ್ದೊಡೆಗೆಪಡಿಗಟ್ಟು | ವನಿತುಸೊಬಗುಳ್ಳವಸ್ತುಗಳನಂಬುಜಭವಂ

ಟೀ|| ವಿರಹಿಗಳ್ಗೆ – ಕಾಮಾತುರರಾದವರಿಗೆ, ಮದನ ಶರಮೂರ್ತಿಯರು= ಮದನ – ಮನ್ಮಥನ, ಶರ–ಸರಲ್ಗಳ, ಮೂರ್ತಿಯರು–ಆಕೃತಿಯನ್ನುಳ್ಳ, ಮಾಲೆಗಾತಿಯರು-ಹೂವಾಡಗಿತ್ತಿಯರು, ಪಸರದೋಳ್-ಪ್ರಕಟನೆಯಿಂದ, ಮಾರ್‍ವ-ವಿಕ್ರಯಿಸತಕ್ಕ, ಅಲರ್ಗಳ–ಪುಷ್ಪಂಗಳ, ಸರಂಗಳ್ಗೆ-ಹಾರಂಗಳಿಗೆ, ಸೊಗಯಿಸುವ-ಅಲಂಕಾರವನ್ನುಂಟುಮಾಡತಕ್ಕ, ಸುಯ್ಯಲರ–ನಿಟ್ಟುಸುರಿನ, ಕಂಪಿಂದ-ಆಮೋದದಿಂದ, ಕಂಪೇರಿಸುವರು – ಹೆಚ್ಚು ಸುರಭಿಯನ್ನುಂಟುಮಾಡುವರು, ಕೋಮಲಿತ–ಬಹಳ ಮೃದುವಾದ, ತನುವಲ್ಲರಿಯ–ಎಳೆವಳ್ಳಿಯಂತಹ ದೇಹದ, ಸೊಂಪಿಂದ–ಕೋಮಲತ್ವದಿಂದ, ಸೊಂಪುದೋರಿಸುತ–ಮಾರ್ದವವನ್ನು ಪ್ರಕಟಿಸುತ್ತ, ಇರ್ಪರು-ಇರುತ್ತಾರೆ, ಲಸತ್–ಹೊಳಹೊಳೆಯುವ, ಅವಯವ-ದೇಹದ, ಆಕೃತಿಯ–ಆಕಾರವುಳ್ಳ, ಚೆಲ್ವಿಕೆಯಿಂದ–ಅಲಂಕಾರದಿಂದ, ಪೊಸತು– ನವೀನವಾದದ್ದು, ಎನಿಪ-ಎನ್ನಿಸಿಕೊಳ್ಳತಕ್ಕ, ಚಲ್ವಿಕೆಯನು–ಅಲಂಕಾರವನ್ನು, ಐದೆ–ಚೆನ್ನಾಗಿ, ನಲವಿಂದ–ವಿಶ್ವಾಸದಿಂದ, ಕಾಣಿಸುವರು–ಪ್ರಕಟಪಡಿಸುವರು ||೧೯||

ಟೀ|| ನಾನಾ–ವಿಧವಿಧಮಾದ, ವಸ್ತುಗಳ–ಪದಾರ್ಥಗಳ, ವಿಸ್ತರವನು–ವೈಶಾಲ್ಯವನ್ನು, ಪವಮಾನಾತ್ಮಜಂ-ವಾಯುಪುತ್ರನಾದ ವೃಕೋದರನು, ನೋಡುತ– ಈಕ್ಷಿಸುತ್ತ, ಐತರಲ್-ಸಮೀಪಸ್ಥನಾಗಲಾಗಿ, ಮುಂದೆ–ಅನಂತರ, ಏನಾದೊಡಂ-ಏನೇ ಆದರೂ, ಮುನಿ–ತಾಪಸರೆಂಬ, ಮೃಗಾವಳಿಯ– ಜೀವರಾಶಿಯ, ಬೇಟೆಯಂ–ಕೊಳ್ಳೆಯನ್ನು, ತಾನು–ಮನ್ಮಥನು, ಆಡಲೆಂದು–ಕ್ರೀಡಾಸುಖವನ್ನೈದಬೇಕೆಂದು, ಸಿಂಗರದ- ಅಲಂಕಾರಯುಕ್ತರಾದ, ಪೆಣ್ಗೂಡಿನೋಳ್–ಸ್ತ್ರೀಯರೆಂಬ ಮಾಡದಲ್ಲಿ, (ಗೂಡಿನಲ್ಲಿ) ಮೀನಾಂಕನೃಪತಿ–ಮದನನು, ಕಟ್ಟಿಸಿದ–ವಿರಚಿಸಿದಂಥ, ಬೆಳ್ಳಾರಂಗಳ್-ಬಂಧನದ ಗೂಡು ಅಥವಾ ಬೋನು, ಎಂಬಂತೆ–ಎಂಬತೆರನಾಗಿ, ಇರೆ–ಇರಲಾಗಿ, ಗಣಿಕಾನಾರಿಯರ–ಸೂಳೆಯರ, ಸದನ–ಗೃಹಗಳ, ಪಜ್ಜಗಳ–ಸಾಲುಗಳ, ಲೋವೆಗಳ ಸಾಲು–ಮನೆಯಮುಂದೆ ಗೋಡೆಗೆ ಆಧಾರವಾದ ಸ್ಥಾನಗಳ ಶ್ರೇಣಿಯು, ಇಕ್ಕೆಲದೊಳು–ಎರಡು ಪಕ್ಕಗಳಲ್ಲಿಯೂ, ಮೆರೆದವು–ಥಳಥಳಿಸಿದವು.

ಅ|| ವಿ|| ಮೀನಾಂಕನೃಪತಿ=ಮೀನ-ಮತ್ಸ್ಯವನ್ನೇ, ಅಂಕ–ಧ್ವಜಪಟದಲ್ಲಿವುಳ್ಳ, ನೃಪತಿ–ಅರಸು (ಮಾರನು) ||೨೦||

ಟೀ|| ಘನ–ಬಲಿತ, ಕುಚ– ಸ್ತನಗಳ, ದ್ವಯಕೆ– ಎರಡಕ್ಕೆ, ಲೋಚನ – ನಯನಂಗಳ, ಯುಗಕೆ– ಯುಗ್ಮಕ್ಕೆ, ಸೊಗಯಿಸುವ – ಅಲಂಕಾರಯುಕ್ತವಾದ, ತನು- ಬಡವಾದ, ಮಧ್ಯಕೆ - ಟೊಂಕಕ್ಕೆ, ಇಂಪಾದ – ಆನಂದದಾಯಕವಾದ, ನುಣ್ದೊಡೆಗೆ-ನಯವಾದ ಮೊಳಕಾಲ ಮೇಲ್ಭಾಗಕ್ಕೆ,ಪಡಿಗಟ್ಟುವ–ಸಾಮ್ಯವಾಗುವ, ಅನಿತು–ಅದರಷ್ಟು, ಸೊಬಗುಳ್ಳ-ಸೌಂದರ್ಯವುಳ್ಳ, ವಸ್ತುಗಳನು–ಪುರುಳ್ಗಳನ್ನು, ಭುವನದೊಳ್–ಲೋಕದಲ್ಲಿ, ಕಾಣೆನು–ಗೋಚರಪಡಿಸಿಕೊಳ್ಳಲಿಲ್ಲವು, ಎಂದು–ಎಂಬತೆರದಿಂದ, ಅಂಬುಜಭವಂ-ವಿರಂಚಿಯು, ಜನಮರಿಯೆ–ಲೋಗರ ದೃಷ್ಟಿಪಥನನ್ನೈದುವಂತೆ, ಪೇರ್ಗಿರಿ–ದೊಡ್ಡಬೆಟ್ಟ, ವನಜ–ತಾವರೆ, ಲತೆ–ಬಳ್ಳಿ, ಸೇರೆ–ನೀಳವಾದ ಕುಡಿತೆ, ಪಿಡಿಕರ–ಆನೆ ಸೊಂಡಿಲು, ಭೃಂಗಗಳ್–ದುಂಬಿಗಳು, ಎಂದು–ಎಂದು ಹೇಳಿಸಿಕೊಳ್ಳತಕ್ಕ, ಇವರೊಳು–ಈ ಕರಂಗಳಿಂದ, ಅಭಿನಯಿಸಿ-ಸಾಮ್ಯವನ್ನು ಹೇಳಿದ ವಸ್ತು ಸಮುದಾಯದಿಂದ ಮುಖ್ಯವಾದ ಪುರುಳ್ಗಳನ್ನು ಕರಸಂಜೆಗಳಿಂದ ಸುಲಭಗ್ರಾಹ್ಯವಾಗುವಂತೆ ಮಾಡುತ್ತ,ತೋರಿಸಲ್–ಅರುಹಲು, ಮೃದು–ಮೆತ್ತಗಿರುವ,ಪಾಣಿ–ಹಸ್ತವೆನ್ನತಕ್ಕ, ವನ

ನಿಟ್ಟುಸುರನ್ನು ತುಂಬಿ ಸುವಾಸನೆಯನ್ನು ಹೆಚ್ಚಿಸುತ್ತಲೂ, ತಮ್ಮ ಮೃದುವಾದ ಸುಂದರಗಾತ್ರದಿಂದ ಅಲಂಕೃತರಾಗಿ, ಕಾಂತಿ ವಿಶಿಷ್ಟಂಗಳಾದ ಅವಯವಂಗಳಿಂದ ಮೆರೆಯುತ್ತ ವಿಟಪುರುಷರನ್ನು ಮೀನಕೇತನನ ಬಾಣದಿಂದ ತಪಿಸುತ್ತಿದ್ದರು. ||೧೯|| ಭೀಮಸೇನನು ವಿರಹತಾಪವನ್ನುಂಟುಮಾಡತಕ್ಕ ಹೂವಾಡಿಗರ ಅಂಗಡಿ ಬೀದಿಯಿಂದ ಮುಂದೆ ನಡೆಯಲಾಗಿ ಸೂಳೆಯರ ಮನೆಗಳ ಸಾಲ್ಗಳಿಂದ ಕೂಡಿದ ರಾಜಬೀದಿಯು ಕಾಣಿಸಲು ಇವನೂ ಅದೇ ಮಾರ್ಗವನ್ನು ಹಿಡಿದು ಬರುತ್ತಿದ್ದನು. ಆ ಬೀದಿಯು ತಾಪಸರೆಂಬ ಮೃಗಗಳನ್ನು ಬೇಟೆಯಾಡಬೇಕೆಂದು ಮನ್ಮಥನೆ ಕಟ್ಟಿಸಿ ಒಡ್ಡಿದ್ದ ಬಲೆಗಳೋ ಎಂಬಂತೆ ಹೊಳೆಯುತ್ತಿತ್ತು ||೨೦|| ಅಲ್ಲಿರುವ ಗಣಿಕಾಸ್ತ್ರೀಯರು ಪೀವರಸ್ತನಗಳಿಂದಲೂ ತೆಳ್ನಡುವಿನಿಂದಲೂ ನುಣುಪಾದ ತೊಡೆಗಳಿಂದಲೂ ಕೂಡಿ

ಭುವನದೊಳಿಲ್ಲಾಕೆನೆಂದು ‖ ಜನಮರಿಯೆವೆರ್ಗಿರಿವನಜಲನತೆಸೇರೆಪಿಡಿಕರಭ್ಯಂಗಗ । ಳೆನಿಪವರೊಳಭಿನೈಸಿತೋರಿಸಲ್ಕ್ರುದುಪಾಣಿ
ವನಜಮಂಸೃಷ್ಟಿಸಿದನೆಂಬಚೆಲ್ವಿನಕೋಮಳೆಯರಲ್ಲಿಕಣ್ಗೆಸೆದರು ‖ ೨೧ ‖ ಗುರುಕುಚದಭರಣಿಸುಂದರಗಜಾರೋಹಿಣಿಮ ।
ಧುರಕಾಮಕೇಳೀರಸಾರ್ದ್ರಸಮ್ಮೋಹನೋ । ತ್ತರೆಸುರತತಂತ್ರವಿರಚಿತಹಸ್ತಚಿತ್ರೆಹ್ರಸ್ವಾತಿವರ್ತುಳಸುಕಂಠೀ ‖ ವರಬಾ
ಹುಮೂಲಮಣಿಭೂಷಣಶ್ರವಣೆ । ವಿಸ್ತರಗುಣಾಪೂರ್ವೆಯೆನಿಪಬಾಲಕಿಯರಲ್ಲಿ । ಪರಿಶೋಭಿಸಿದರೆಸೆವನಕ್ಷತ್ರಗಣದಂತೆ
ಮೊಗಸಸಿಯಸೇರುವೆಯೊಳು ‖ ೨೨ ‖ ಅಡಿಯುಮವಳಾಸ್ಯಮುಂಕಮಲಮುಂಕಮಲಮುಂ । ನಡೆಯುಮೆಳೆವಾಸಿಯುಂನಾಗ
ಮುಂನಾಗಮುಂ । ಕಡುಚೆಲ್ವಪಾಣಿಯುಮಧರಮುಂಪ್ರವಾಳಮುಂಲಲಿತಪ್ರವಾಳಮಣಿಯ ‖ ತೊಡೆಯುಮೆಸೆವಕ್ಷಿಯುಂಬಾಳೆ

---

ಜಮುಂ-ತಾವರೆಯನ್ನು, ಸೃಷ್ಟಿಸಿದನು-ನಿರ್ಮಿಸಿದನು, ಎಂಬ-ಎನ್ನುವ, ಚೆಲ್ವಿನ-ಅಲಂಕಾರಯುಕ್ತರಾದ, ಕೋಮಳೆಯರು-ನಾರಿಯರು, ಕಣ್ಗೆ-ನಯನಂಗಳಿಗೆ, ಎಸೆದರು-ಹೊಳೆಯುತ್ತಿದ್ದರು.

ಅ‖ ವಿ‖ ವನ-ನೀರಿನಲ್ಲಿ, ಜ-ಹುಟ್ಟಿದ್ದು, (ಕಮಲ, ಸ. ತ.) ಪ್ರಪಂಚದ ಸಕಲ ವಸ್ತುಗಳನ್ನು ಅವುಗಳ ಸಾಮ್ಯದಿಂದ ಸಕಲ ಜನರಿಗೂ ಕರಸಂಜ್ಞೆಗಳಿಂದ ಎಂದರೆ ಕೈಗಳ ಬೆರಳುಗಳನ್ನು ಮಡಿಸುವುದು, ತೆರೆಯುವುದು, ಮೇಲಕ್ಕೆತ್ತುವುದು, ಕೆಳಗೆ ತಗ್ಗಿಸುವುದು ಇವೆ ಮೊದಲಾದವುಗಳಿಂದ ಗೋಚರಪಡಿಸತಕ್ಕ ವಿಧಾನವು ನಂದಿಯೆ ಮೊದಲಾದವರು ರಚಿಸಿದ ಗ್ರಂಥಗಳಲ್ಲಿ ಸುಪ್ರಸಿದ್ಧಗಳಾಗಿರುವವು ‖೨೧‖

ಟೀ‖ ಗುರು-ದಪ್ಪನಾದ, ಕುಚದ-ಮೊಲೆಗಳೆನ್ನುವ, ಭರಣಿ-ಟೊಳ್ಳಾದ ಫಲವನ್ನುಳ್ಳ (ಭರಣಿ-ಭರಣಿ ಎಂಬ ನಕ್ಷತ್ರವು), ಸುಂದರ-ಅಲಂಕಾರನಾದ, ಗಜಾರೋಹಿಣಿ - ಹಸ್ತ್ಯಾರೋಹಣವನ್ನು ಮಾಡಿದವಳಾದ, (ರೋಹಿಣೀ-ರೋಹಿಣೀ ಎಂಬ ನಕ್ಷತ್ರವು), ಮಧುರ-ಹೃದಯಾನಂದಕರವಾದ, ಕಾಮಕೇಳಿ - ಮದನಕ್ರೀಡೆಯಿಂದೊಗೆದ, ರಸ-ಮನ್ಮಥವಿಕಾರದ ಉದಕದಿಂದ, ಆರ್ದ್ರೆ-ತೋಯಲ್ಪಟ್ಟವಳು, (ಆದ್ರಾ-ಆದ್ರಾನಕ್ಷತ್ರವು), ಸಮ್ಮೋಹನ-ಕಾಮೋದ್ರೇಕವನ್ನುಂಟುಮಾಡುವುದರಲ್ಲಿ, ಉತ್ತರೆ ಹೆಚ್ಚಾದವಳು, (ಉತ್ತರಾನಕ್ಷತ್ರ ಸುರತ-ರತಿಸುಖದ, ಚಿತ್ರೆ-ಚಾತುರ್ಯವುಳ್ಳವಳು, (ಹಸ್ತ ಮತ್ತು ಚಿತ್ತ ಎಂಬ ನಕ್ಷತ್ರಗಳು), ಹ್ರಸ್ವ-ಚಿಕ್ಕದಾಗಿಯೂ, ಅತಿವರ್ತುಳ-ಬಹು ದುಂಡಗೂ, ಸುಕಂಠೀ-ಕತ್ತನ್ನುಳ್ಳವಳು, (ಸ್ವಾತಿ ಎಂಬ ತಾರೆಯು) ವರ-ಉತ್ತಮವಾದ, ಬಾಹುಮೂಲ-ಕೈಬುಡವುಳ್ಳವಳು, (ಮೂಲ ಎಂಬ ತಾರೆಯು, (ಮಣಿ-ನವರತ್ನಗಳಿಂದ ಕೆತ್ತಿದ, ಭೂಷಣ-ತೊಡಿಗೆಗಳ, ಶ್ರವಣೆ-ಶ್ರೋತ್ರೇಂದ್ರಿಯದಲ್ಲಿವುಳ್ಳವಳು, (ಶ್ರವಣವೆಂಬ ನಕ್ಷತ್ರವು) ವಿಸ್ತರ-ಅಧಿಕವಾದ, ಗುಣ-ಸದ್ಗುಣಗಳಿಂದ, ಅಪೂರ್ವೆ-ಸುಪ್ರಸಿದ್ಧಳು, (ಪೂರ್ವಾಷಾಢಾ ಎಂಬ ನಕ್ಷತ್ರವು) ಎನಿಸುವ-ಈ ಪರಿಯ ತಾರಾಗಣದಂತೆ ಪ್ರಕಾಶಮಾನರೆನ್ನುವ, ಬಾಲಕಿಯರು-ಕನ್ಯೆಯರು, ಅಲ್ಲಿ-ಆ ನಗರದಲ್ಲಿ, ಎಸೆವ-ಹೊಳೆಯುವ, ನಕ್ಷತ್ರ-ಭರಣೀ ನಕ್ಷತ್ರವೇ ಮೊದಲಾದವುಗಳ, ಗಣದಂತೆ-ಗುಂಪಿನಂತೆ, ಮೊಗಸಸಿಯ-ಮೋರೆ ಎಂಬ ಹಿಮಕರನ, ಸೇರುವೆಯೊಳು-ಒಟ್ಟುಗೂಡುವುದರಿಂದ, ಪರಿಶೋಭಿಸಿದರು-ಅಲಂಕಾರಯುಕ್ತರಾದರು.

ಅ‖ ವಿ‖ ಮೊಗ (ತ್ಭ) ಮುಖ (ತ್ಸ) ಸಸಿ (ತ್ಭ) ಶಶಿ (ತ್ಸ) ‖೨೨‖

ಟೀ‖ ಅವಳ-ಆ ಸ್ತ್ರೀಯ, ಅಡಿಯುಂ-ಪಾದವು, ಆಸ್ಯಮುಂ-ಮೋರೆಯು, ಕಮಲಮುಂ-ತಾವರೆಯನ್ನು, ಕಮಲಮುಂ-ಇಂದುವನ್ನು, ನಡೆಯುಂ-ನಡಿಗೆಯು, ಎಳೆವಾಸಿಯುಂ-ಜಡೆಯು, ನಾಗಮುಂ-ಹಸ್ತಿಯನ್ನು, ನಾಗಮುಂ-ಪನ್ನಗನನ್ನು, ಕಡು-ಬಹಳ, ಚೆಲ್ವ-ಸೊಗಸಿನಿಂದ ಕೂಡಿದ, ಪಾಣಿಯುಂ- ಹಸ್ತವು, ಅಧರಮುಂ-ಓಷ್ಠವು, ಪ್ರವಾಳಮುಂ-ಪಲ್ಲವಂಗಳು ಮತ್ತು ಪವಳಗಳು ಇವನ್ನು, ಲಲಿತ-ಸುಂದರವಾದ, ಪ್ರವಾಳ-ಹವಳದ, ಮಣಿಯಂ-ಮಣಿಯನ್ನು, ಕೊಡೆಯು-ಕೊಡೆಗಳು, ಎಸೆವ-ಥಳಥಳಿಸುವ, ಅಕ್ಷಿಯೂ-ನೇತ್ರವು, ಬಾಳೆಯುಂ-ಕದಳಿಯನ್ನು, ಬಾಳೆಯುಂ-ಬಾಳೆ ಎಂಬ ಮೀನಿನ ಜಾರೆಯನ್ನು, ನಡು

---

ಜಗತ್ಕರ್ತನಾದ ಬ್ರಹ್ಮನು ನಮ್ಮಂತಹ ರೂಪವತಿಯರಾರನ್ನೂ ಸೃಷ್ಟಿಸಿರಲಿಲ್ಲವೆಂದೂ, ಬಹಳ ಚನ್ನಾಗಿ ಅಭಿನಯಿಸಲು ಸಾಧಕವಾದ ಕರಪಲ್ಲವಂಗಳನ್ನುಳ್ಳವರಲ್ಲೆಲ್ಲಾ ನಾವೇ ಅಗ್ರಗಣ್ಯರೆಂದೂ ಮೆರೆಯುತ್ತಲೂ, ‖೨೧‖ ಇದ್ದು, ಕುಚಗಳೆಂಬ ಭರಣಿಯಿಂದ ಕೂಡಿ, ಕಾಂತಿಯುಕ್ತವಾದ ಆನೆಯನ್ನೇರಿ, ಮನ್ಮಥವಿಲಾಸದಿಂದುಂಟಾದ ನೀರಿನಿಂದ ನೆನೆಸಲ್ಪಟ್ಟು, ಅತಿಶಯವಾದ ಭಾವಾವಿಷ್ಟರಾಗಿ, ಮಾರನ ಆಟದಲ್ಲಿ ಕರಚಾತುರ್ಯವನ್ನು ಚನ್ನಾಗಿ ತೋರುತ್ತ, ಒಳ್ಳೆ ಕಂಠವುಳ್ಳವರಾಗಿ, ಅಲಂಕಾರ ಯುಕ್ತಂಗಳಾದ ಕಿವಿಗಳಿಂದಲೂ, ಅತ್ಯಧಿಕವಾದ ಸೌಂದರ್ಯಾದಿಗಳಿಂದಲೂ ಭರಣೀ ನಕ್ಷತ್ರ ಮೊದಲಾದುವನ್ನು ಹೋಲುತ್ತಲೂ ಇದ್ದರು ‖೨೨‖ ಮತ್ತು ಆ ಸ್ತ್ರೀಯರು ತಾವರೆಯಂತಿರುವ ಪಾದಗಳನ್ನೂ, ಇಂದುವನ್ನು ಹೋಲುವ ಮೋರೆಯನ್ನೂ, ಆನೆಯ ನಡಿಗೆಯಂತಿರುವ ನಡಿಗೆಯನ್ನೂ, ಸರ್ಪದಂತೆ ಉದ್ದವಾದ ಜಡೆಯನ್ನೂ, ಎಳೆದಳಿರಂತಿರುವ ಹಸ್ತಂಗಳನ್ನೂ, ಹವಳದಂತಿರುವ

ಯಂಬಾಳೆಯುಂ | ನಡುವುಂಸುವಾಣಿಯುಂಹರಿಯುಮಂಹರಿಯುಮಂ | ಬಿಡದೆಪೊತ್ತಿರೆಮೆರೆವಕಾಂತೆಯರ್ನೀಲಾಳಕಾಂತೆಯ ಸೊಗಯಿಸಿದರು || ೨೩ || ನಾಗರಿಪುಮಧ್ಯಮೂರ್ವಶಿಯನಡುವಿಂಗೆಸರಿ | ಯಾಗಬಲ್ಲುದೆಪೊಸವಸಂತೋತ್ಸವದೊಳುಲಿವ | ಕೋಗಿಲೆಯಸ್ವರಮೇತಕೀನಿತಂಬಿನಿಯನುಣ್ದನಿಗೆಪಾಸಟಿಯಪ್ಪುದೆ || ಪೂಗಣೆವಿಲಾಸವಾರಂಭೆಯುವಿರಾಜಿಸುವ | ಸೊಗೆಗಣ್ಗೆಣೆಯಹುದೆನೋಡೆಂದುಪೊಗಳ್ದನು | ರಾಗದಿಂದೋರ್ವಳಂವಿಟನಪ್ಸರಸ್ತ್ರೀಯರಂಪೆಸರಿಸುವನೆವದೊಳು || ೨೪ || ಸುನಿಮೇಷಮೀನಚಾಪಲನೇತ್ರೆಚಕ್ರೋನ್ಮಿ | ಥುನಕುಂಭಕುಚೆನುಕರಕೇತುಮಾತುಳಸಮಾ | ನನೆಸಿಂಹಮಧ್ಯೆವೃಷಭಧ್ವಜಾರಿಯಪಟ್ಟದಾನೆಕನ್ಯಾಕುಲಮಣಿ || ಮನಸಿಜಶರಾಂಕಕರ್ಕಟಚೇಲಮಂತೊಡೆವ | ತನಿಸೊಬಗುವಡೆದಸನ್ಮೋಹನದಕಣಿಯೆ

ವುಂ-ಸೊಂಟವು, ಸುವಾಣಿಯುಂ-ಸವಿನುಡಿಯು, ಹರಿಯುಮಂ-ಮೃಗೇಂದ್ರನನ್ನು, ಹರಿಯುಮಂ-ಶುಕವನ್ನು, ಬಿಡದೆ-ತ್ಯಜಿಸದೆ, ಪೊತ್ತಿರೆ-ಹೊತ್ತಿರುವಹಾಗೆ, ನೀಲ-ಕೃಷ್ಣವರ್ಣದ, ಅಳಕ-ಮುಂಗುರುಳ್ಗಳ, ಅಂತೆಯರ-ಕೊನೆಯುಳ್ಳ, ಮೆರೆವ-ಪ್ರಕಾಶಿಸತಕ್ಕ, ಕಾಂತೆಯರು-ನಾರಿಯರು, ಸೊಗಯಿಸಿದರು-ಅಲಂಕಾರಯುಕ್ತರಾದರು || ೨೩ ||

ಟೀ|| ನಾಗ-ಹಸ್ತಿಗೆ, ರಿಪು-ಹಗೆಯಾದ ಮೃಗರಾಜನ, ಮಧ್ಯಂ-ಮಧ್ಯದೇಶಕ್ಕೆ ಸಮಾನವಾದ ನಡುವು, ಊರ್ವಶಿಯ-ಊರ್ವಶಿ ಎಂಬ ಸುರಲೋಕದ ಅಪ್ಸರಾಂಗನೆಯ, ನಡುವಿಂಗೆ-ಸೊಂಟಕ್ಕೆ, ಸರಿಯಾಗಬಲ್ಲುದೆ-ಹೋಲಿಕೆಯಾದೀತೆ, ಪೊಸ-ನೂತನವಾದ, ವಸಂತೋತ್ಸವದೊಳು-ವಸಂತಋತುವಿನ ಸಂಭ್ರಮದಲ್ಲಿ, ಉಲಿವ-ಶಬ್ದವಂಗೈವ, ಕೋಗಿಲೆಯ-ಪಿಕದರವ, ಸ್ವರಂ-ರವವು, ಏತಕೆ-ಯಾವಕಾರಣ, ಈ ನಿತಂಬಿನಿಯ-ಈ ನಾರೀಮಣಿಯ, ನುಣ್ದನಿಗೆ-ಸೊಗಸಾದ ಗಾನಕ್ಕೆ, (ಧ್ವನಿಗೆ), ಪಾಸಟಿ-ಹೋಲಿಕೆಯಾದದ್ದು, ಅಪ್ಪುದೆ-ಆದೀತೆ, ಪೂಗಣೆ-ಹೂವಿನಂತಿರುವ ದೃಷ್ಟಿಯ ಬೀಳುವಿಕೆಯು, ಆರಂಭೆಯ-ಆರಂಭೆಯೆನ್ನುವ ಸುರವೇಶ್ಯೆಯ, ವಿರಾಜಿಸುವ-ಪ್ರಕಾಶಮಾನವಾದ, ಸೋಗೆಕಣ್ಗೆ-ವಿಶಾಲನಯನಂಗಳಿಗ, ಎಣೆಯು, ಸದೃಶವಾದದ್ದು, ಅಹುದೆ-ಆದೀತೆ, ನೋಡು-ಈಕ್ಷಿಸು, ಎಂದು-ಎಂಬದಾಗಿ, ವಿಟನು- ಕಾಮುಕನು, ಅಪ್ಸರಸ್ತ್ರೀಯರಂ-ವೇಶ್ಯಾಂಗನೆಯರನ್ನು, ಪೆಸರಿಸುವ-ಕೂಗುವ, ನೆವದೊಳು-ಕಾರಣದಿಂದ, ಓರ್ವಳಂ-ಒಬ್ಬ ಕನ್ನೆಯನ್ನು, ಅನುರಾಗದಿಂದ-ಪ್ರೀತ್ಯತಿಶಯದಿಂದ, ಪೊಗಳ್ದನು-ಸ್ತುತಿಸಿದನು ||೨೪||

ಟೀ|| ಸು-ಒಳ್ಳೆಯದಾದ, ನಿಮೇಷ-ರೆಪ್ಪೆ ಹೊಡೆಯುವ ಚಮತ್ಕಾರದಿಂದ ಮೆರೆವಳೆ, ಮೇಷವೆಂಬ ರಾಶಿಯು-ಮೀನ-ಜಲಚರದಹಾಗೆ, ಚಾಪಲ-ಸ್ಥಿರವಿಲ್ಲದ, ನೇತ್ರೆ-ನಯನಂಗಳನ್ನುಳ್ಳವಳೆ, ಮೀನ ಮತ್ತು ಧನುರ್ರಾಶಿಗಳು, ಚಕ್ರ-ಚಕ್ರವಕ್ಕಿಗಳ, ಉನ್ಮಿಥುನ-ಗಂಡಹೆಂಡಿರಂತೆ, ಕುಂಭ-ಅಲಂಕಾರವಾದ ಕಲಶಗಳಹಾಗೆ ಇರತಕ್ಕ, ಕುಚೆ-ಸ್ತನಗಳುಳ್ಳವಳೇ, ಮಿಥುನ ಕುಂಭರಾಶಿಗಳು, ಮಕರ-ಕೇತು, ಕಾಮ-ಇವರುಗಳಿಗೆ, ಮಾತುಳ-ತಾಯಿಯ ಸಹೋದರರ ವರಸೆಯಾದ ಹಿಮಾಂಶುವಿನೊಂದಿಗೆ, ಸಮ-ಹೋಲಿಕೆಯಾದ, ಆನನೆ-ಆಸ್ಯವನ್ನುಳ್ಳವಳೆ, ಮಕರ-ತುಲಾ ಎನ್ನತಕ್ಕ ರಾಶಿಯು, ಸಿಂಹ-ಮೃಗರಾಜನಿಗೆ ಸಮನಾದ, ಮಧ್ಯೆ-ಸೊಂಟವನ್ನುಳ್ಳವಳೆ, ಸಿಂಹರಾಶಿ-ಸಿಂಹವೆಂಬರಾಶಿಯೂ, ವೃಷ-ಎತ್ತು, ಧ್ವಜ-ಕೇತುವಾಗಿವುಳ್ಳ, ಹರನಿಗೆ, ಅರಿಯ-ಹಗೆಯಾದ ಮೀನಕೇತನ, ಪಟ್ಟದಾನೆ-ಪಟ್ಟಹಸ್ತಿಯಾಗಿರತಕ್ಕವಳೆ, ವೃಷಭರಾಶಿ-ವೃಷಭವೆಂದು ಹೆಸರ್ಗೊಂಡ ರಾಶಿಯು, ಕನ್ಯಾ-ಬಾಲೆಯರ, ಕುಲ-ಸಮುದಾಯದಲ್ಲಿ, ಮಣಿ-ಉತ್ತಮಳಾದವಳೆ, ಕನ್ಯಾರಾಶಿ-ಕನ್ಯಾ ಎಂಬ ನಾಮಧೇಯ

ತುಟಿಯನ್ನೂ, ಕದಳೀಸ್ತಂಭಕ್ಕೆ ಸಮನಾದ ತೊಡೆಗಳನ್ನೂ, ಬಾಳೆ ಎನ್ನುವ ಮೀನನ್ನು ಅಲಗಳೆಯುವ ನಯನಂಗಳನ್ನೂ ಸಿಂಹದ ನಡುವಿನಂತಿರುವ ನಡುವನ್ನೂ, ಶುಕದ ಕೂಗನ್ನು ತಿರಸ್ಕರಿಸುವ ಮೃದುನುಡಿಗಳನ್ನೂ ಉಳ್ಳವರಾಗಿ ||೨೩|| ಮೆರೆಯುತ್ತಲಿದ್ದರು. ಹೀಗಿರುವ ನಾರಿಯರನ್ನು ವಿರಹತಾಪದಿಂ ಪೀಡಿತನಾದ ಓರ್ವನು ನೋಡಿ, ಮೃಗರಾಜನಾದ ಸಿಂಹದ ಟೊಂಕವುಳ್ಳವಳೂ ಅಪ್ಸರ ಕನ್ನಿಕೆಯೂ ಅತಿ ಸುಂದರಿಯೂ ಆದ ಊರ್ವಶಿಯ ನಡುವಿಗೆ ಸಮನಾದೀತೆ? ನೂತನವಾದ ವಸಂತಕಾಲದಲ್ಲಿ ದನಿಗೈವ ಪಿಕದ ನುಡಿಯು ಈ ಮೃದುಲತಾಂಗಿಯ ಇಂಚರಕ್ಕೆ ಹೋಲಿಕೆಯಾಗುವದೆ? ಹೂಗಳಂತಿರುವ ಈ ನಾರಿಯ ನೋಟವು ಸ್ವರ್ಗಲೋಕದಲ್ಲಿರುವ ರಂಭೆಯ ಕಟಾಕ್ಷಕ್ಕಿಂತಲೂ ಕಡಮೆಯಾಗಿದೆಯೇ? ಆಹಾ! ಇಂತಹ ಸುಂದರಾಂಗಿಯರನ್ನು ಇದುವರೆಗೂ ನೋಡಲಿಲ್ಲವೆಂದು ಮತ್ತೊಬ್ಬರನ್ನು ಕುರಿತು ಅಪ್ಸರಸ್ತ್ರೀಯರ ನೆವದಿಂದ ನುಡಿಯುತ್ತ ಕಾಮಾತುರನಾಗಿ ವ್ಯಥೆಯನ್ನು ತಾಳಲಾರದೆ ಮನದಲ್ಲಿಯೆ ತಪಿಸುತ್ತಿದ್ದನು || ೨೪ || ಹೀಗಿರುವಲ್ಲಿ ಒಬ್ಬಸ್ತ್ರೀಯು ಮತ್ತೋರ್ವ ತನ್ನಗೆಳತಿಯನ್ನು ಕುರಿತು, ಒಳ್ಳೆಭ್ರೂಲತೆಗಳನ್ನೂ, ಮೀನಿನಂತೆ ಚಪಲನಯನಂಗಳನ್ನು, ಗಂಡಹೆಂಡರಲ್ಲಿ ಪರಸ್ಪರ ಪ್ರೀತ್ಯತಿಶಯವುಳ್ಳ ಚಕ್ರವಾಕಗಳಂತೆ ಕುಚಯುಗ್ಮವನ್ನು, ಚಂದ್ರನಂತಿರುವ ಆಸ್ಯವನ್ನೂ, ಸಿಂಹದ ತನುಮಧ್ಯದಂತಿರುವ ಸೊಂಟವನ್ನು ಉಳ್ಳ ಕನ್ಯಾಮಣಿಯೇ, ಗಟ್ಟಿಯಾದ ಕವಚವುಳ್ಳವಳೆ, ಮೋಹದನಿಧಿಯೇ, ಇಲ್ಲಿ ಬಾ ಎಂಬದಾಗಿ ಮೇಷಾದಿ ಹನ್ನೆರಡುರಾಶಿ

ಬಾ । ಯೆನುತೋರ್ವನೀರೆಸಖಿಯಂಕರೆದಳೀರಾರುರಾಶಿಯಂಪೆಸರಿಸುವ್ರೊಲು ॥ ೨೫ ॥ ಬೇಡಪೂರ್ವಸ್ನೇಹವಿನ್ನುದಾಕ್ಷಿಣ್ಯ ಮಂ । ಮಾಡದಿರ್ನಿನಗಪರವಯಸಾದೊಡೋರ್ವರುಂ । ನೋಡರಿದಿರುತ್ತರಂಗೊಡುಬಿಡುಸುವಾಸನುಂನುಡಿದಕಾಲಂನೆಡೆದುದು॥ ಕೂಡಿರ್ದಪಾಶದನುಬಂಧಮುಂಪರಿದರದ । ಕೋಡಿದತನಂನೂಕುಸಾಕೆಂದುಬುದ್ಧಿಯಂ । ಜೋಡಿಸಿದಳೋರ್ವಳಣುಗೆಗೆ ನಾಲ್ಕುದೆಸೆಯಾಣ್ಮರಂಪೆಸರಿಸುವ ನೆವದೊಳು ॥ ೨೬ ॥ ಮೊಳೆಮೊಲೆಯೊಳೆಸೆವಸಸಿವದನದೋಳ್ಕುಡಿನೋಟ । ದಳೆಪುರ್ಬು ದೋಳ್ಗಳೊಳ್ಬೆಳದುಬ್ಬುಜಘನದೋಳ್ಸೆಳೆನಡುವಿನೋಳ್ಸುಳಿಗುರುಳ್ಗಳೋಳ್ನೊಗಸುಸಮುಮಡರಿದಸೌಂದರದೊಳು।ತಳಿಂಡಿಗ

ವ್ರಳ್ಳರಾಶಿಯೂ, ಮನಸಿಜ_ಮಾರನು, ಶಶಾಂಕ_ಇಂದುವೆಂಬ, ಕರ್ಕಟ_ಗಟ್ಟಿಯಾದ, ಚೇಲಮಂ_ಕವಚವನ್ನು, ತೊಡುವ_ಧರಿ ಸುವುದಕ್ಕೆ, ತನಿಸೊಬಗು ವಡೆದ_ಅಧಿಕವಾದ ಸೌಂದರ್ಯದಿಂದನ್ವಿತವಾದ, ಸಮ್ಮೋಹನದ-ಭ್ರಾಂತಿಗೊಳಿಸುವ, ಕಣಿಯೆ-ಸ್ಥಾನ ಭೂತಳಾಗಿರುವಳೆ, (ಮನಸಿಜ-ಪ್ರದ್ಯುಮ್ನನ, ಶಶಾಂಕ_ಇಂದುವಿನ, ಕರ್ಕಶ_ಕಠಿಣವಾದ, ಚೇಲ_ಸಹಿಸಲಸದಳವಾದ ಮನ್ಮ ಥಾವಸ್ಥೆಯನ್ನು, ತೊಡೆವ_ಹೋಗಲಾಡಿಸತಕ್ಕ, ತನಿಸೊಬಗುವಡೆದ_ಹೆಚ್ಚಾದ ಅಲಂಕಾರದಿಂದಸಹಿತಳಾದ, ಸಮ್ಮೋಹನದಕ ಣಿಯೆ_ಪ್ರಾಯದಿಂದ ಮೆರೆಯತಕ್ಕವಳೇ ಎಂದು ಪಾಠಾಂತರವು) ಮತ್ತು, ಬಾ_ಸಮೀಪವನ್ನೈದು, ಎನುತ_ಎಂದುನುಡಿಯುತ್ತ, ಓರ್ವನೀರೆ-ಒಬ್ಬಾನೊಬ್ಬನಾರೀಮಣಿಯು, ಈರಾರುರಾಶಿಯಂ_ಮೇಷರಾಶಿಯೆ ಪ್ರಾರಂಭವಾಗಿವುಳ್ಳ ಆರೆಂಬ ಸಂಖ್ಯೆಯ ಎರಡ ರಷ್ಟಾದ ರಾಶಿಗಳನ್ನು, ಪೆಸರಿಸುವವೊಲ್-ಕೂಗುವಂತೆ, ಸಖಿಯಂ-ಸಂಗಾತಿಯವಳನ್ನು, ಕರೆದಳು_ಬರಹೇಳಿದಳು ॥ ೨೫ ॥

ಟೀ॥ ಪೂರ್ವಸ್ನೇಹಂ_ಕಾಮುಕರಲ್ಲಿ ಸ್ಥಿರಪಡಿಸಿಕೊಂಡಿದ್ದ ಹಿಂದಿನ ಮೈತ್ರಿಯು, ಇನ್ನು – ಮುಂದೆ, ಬೇಡ_ ಕೂಡದು, ದಾಕ್ಷಿಣ್ಯಮಂ_ಕರುಣೆಯನ್ನು, ಮಾಡದಿರು-ಎಸಗಬೇಡ, ನಿನಿಗೆ_ನಿನಿಗೆ, ಅಪರವಯಸಾದೊಡೆ_ಯೌವನಕಾಲವು ಅತಿ ಕ್ರಮಿಸಿದರೆ, ಓರ್ವರುಂ_ಯಾರೂ, ನೋಡರು_ನಿನ್ನನ್ನು ಪ್ರೀತಿಸುವದಿಲ್ಲ, ಇದಿರುತ್ತರಂ_ಕಾಮುಕರಿಂದ ಹಣವನ್ನು ಸಂಪಾ ದನೆಮಾಡಲನುಕೂಲವಾದ ಪ್ರತಿ ವಚನವನ್ನು ಗೊಡು_ನುಡಿ, ಸುವಾಸಮಂ_ಪದೇಪದೆ ದ್ರವ್ಯಸಹಾಯವನ್ನೆಸಗದ ಕಾಮುಕನ ಬಳಿಗೆ ಸಿಂಗರಿಸಿಕೊಂಡು ನಡೆಯುವುದನ್ನು, ಬಿಡು_ವರ್ಜಿಸು, ನುಡಿದಕಾಲಂ_ಇತ್ತ ದ್ರವ್ಯಕ್ಕೆ ತಕ್ಕಷ್ಟು ಸುಖಾಸ್ಪದವಾಗಿದ್ದ ಸಮಯವು, ನಡೆದುದು-ಆಗಿಹೋಯಿತು, ಕೂಡಿರ್ದ_ಸೇರಿರ್ದ, ಪಾಶದ-ಮನ್ಮಥಾವಸ್ಥೆಯೆಂಬ ಹಗ್ಗದ ಅನುಬಂಧಮಂ_ ಕಟ್ಟನ್ನು, ಪರಿದರೆ_ಕಿತ್ತುಬಿಟ್ಟರೆ, ಅದಕೆ_ಆ ವಿರಹತಾಪಕ್ಕೆ, ಓಡಿದತನಂ-ಪರಾಜಿತನಾದವನನ್ನು, ನೂಕು-ತಳ್ಳು, ಸಾಕು_ದುಡ್ಡಿ ಲ್ಲದ ರತಿಸುಖವುಬೇಡ, ಎಂದು-ಎಂಬುದಾಗಿ, ಓರ್ವಳು-ಒಬ್ಬಹೆಂಗಸು, ಅಣುಗೆಗೆ_ತನ್ನಕುವರಿಗೆ, ನಾಲ್ಕುದೆಸೆಯಾಣ್ಮರಂ_ ಮೂಡಲು, ಪಡುವಲು, ತೆಂಕಲು, ಬಡಗಲು-ಎಂಬ ಚತುರ್ದಿಕ್ಪಾಲಕರನ್ನು, ಪೆಸರಿಸುವ_ಹೆಸರನ್ನು ಹಿಡಿದುಕೂಗುವ, ನೆವ ದೊಳು_ಕಾರಣವಂ ಮಾಡಿಕೊಂಡು, ಬುದ್ಧಿಯಂ-ವಿವೇಕವನ್ನು, ಜೋಡಿಸಿದಳು_ಬೋಧನೆ ಮಾಡಿದಳು ॥೨೬॥

ಟೀ॥ ಎಳೆವೆಣ್ಗಳು-ಆಗತಾನೆ ತಲೆದೋರುವ ಪ್ರಾಯದ ಹುಡುಗಿಯರು, ಅಚ್ಚ_ನಿರ್ಮಲವಾದ, ಪೊಸ_ಹೊಸ ದಾದ, ಜವ್ವನದೊಳ್_ಹರೆಯದಲ್ಲಿ, ವಿಟಪೀವರರ-ಬಲಿಷ್ಠರಾದ ಕಾಮುಕರ, ಆಶ್ರಯದೊಳು-ನೆರವಿನಿಂದ, ಉತ್ತಮವಾದ ವೃಕ್ಷದ ಆಸರೆಯಿಂದ, ಮೊಳೆ-ಸ್ತನಾಗ್ರದ, ಎಳೆಪೈರಿನ, ಮೊಲೆಯೊಳು_ಯದೆಗಂಟುಗಳಿಂದ, ಎಸೆವ_ಹೊಳೆಯುವ, ಸಸಿ_ ಗಿಡವು, ಇಂದು, ಇವರ, ವದನದೋಳ್-ಆಸ್ಯದಿಂದ, ಕುಡಿ_ತುದಿ, ಚಿಗುರು, ನೋಟದ-ಈಕ್ಷಿಸುವಿಕೆಯು, ಎಳೆ_ದಾರವು, ದೀರ್ಘವಾದದ್ದು, ಪುರ್ಬು-ಹಣೆಗೆ ಅಲಂಕಾರವಾದದ್ದು, ಅಭಿವೃದ್ಧಿಯಾಗುವುದು, ತೋಳ್ಗಳೋಳ್-ಬಾಹುಗಳಿಂದ, ಬೆಳದ- ಹೆಚ್ಚಿದ, ವಿಳಿಗೆಯನ್ನೈದಿದ, ಅಬ್ಬು-ವ್ಯಾಪಿಸುವದು, ಆಲಿಂಗಿಸಿಕೊಳ್ಳುವುದು, ಜಘನದೋಳ್-ಕಟಿಪಶ್ಚಾದ್ಭಾಗದಲ್ಲಿ, ಅಂದು- ಆಗ, ಸೆಳೆ_ಸೆಳೆತವು, ಅಲ್ಲಾಡುತ್ತಲಿರುವುದು, ನಡುವಿನೋಳ್-ಸೊಂಟದಿಂದ, ಸುಳಿ_ಸುತ್ತಲೂ ಸುತ್ತಿರುವಿಕೆಯು, ಕುರುಳ್ಗ

ಗಳನ್ನು ಕೂಗುವ ಕಾರಣವನ್ನಿಟ್ಟುಕೊಂಡು ಕೂಗುತ್ತ ॥ ೨೫ ॥ ಹತ್ತಿರಕ್ಕೆ ಕರೆದು, ಎಲೆ ಪ್ರಾಯದ ಹುಡುಗೀ, ಕಾಮುಕ ರೊಂದಿಗೆ ಇದುವರೆಗೆ ನೀನು ಅನುಸರಿಸುತ್ತಲಿದ್ದ ಮಾರ್ಗವನ್ನು ಬಿಟ್ಟುಬಿಡು, ದಾಕ್ಷಿಣ್ಯಕ್ಕೆ ಒಳಗಾಗಬೇಡ. ಈಗಿರುವ ಪ್ರಾ ಯವು ಕಳದು ಹೋದರೆ ನಿನ್ನನ್ನು ಯಾರುತಾನೆ ಆಮೇಲೆ ಒಲಿಯುವರು ? ದುಡ್ಡನ್ನು ಸೆಳೆಯತಕ್ಕ ಮಾತನ್ನೇ ಆಡಬೇಕಲ್ಲವೆ ಪದೇಪದೇ ದ್ರವ್ಯವನ್ನು ಬರಮಾಡುವ ಮಾರ್ಗವನ್ನೇ ಹುಡುಕು ವಿಟನ ಮೋಸಕ್ಕೆ ಮರುಳಾದೀಯೆ ? ನಿನ್ನ ಇಚ್ಛಾನುಸಾರ ದ್ರವ್ಯವನ್ನು ಕೊಡದ ಕಾಮುಕನನ್ನು ಕಡೆಗಣ್ಣಿನಿಂದ ನೋಡಿಬಿಡು. ಎಂಬುದಾಗಿ ನಾಲ್ಕು ದಿಕ್ಕುಗಳನ್ನೂ ಕುರಿತು ಕೂಗುವ ನೆವದಿಂದ ಬೋಧಿಸುತ್ತಿದ್ದಳು ॥ ೨೬ ॥ ಆ ಬಾಲಕಿಯರು ನವೀನ ಪ್ರಾಯಸಮರ್ಥರಾಗಿ ಕಾಮುಕರಿಂದೊಡಗೂಡಿ ಉತ್ತ ಮವಾದ ಸ್ತನಾಗ್ರದಿಂದ ಕೂಡಿದ ಕುಚಗಳುಳ್ಳವರಾಗಿ ಇಂದುಮಂಡಲವನ್ನು ಹೋಲುವ ಕಾಂತಿಯುಕ್ತವಾದ ಮುಖ ದಿಂದ ಕೂಡಿಯೂ, ಮನೋಹರವಾದ ಕುಡಿನೋಟವನ್ನೂ ಮತ್ತು ಕಣ್ಣುಬ್ಬುಗಳನ್ನೂ ಹೊಂದಿ ನಿಡುದೋಳ್ಗಳಿಂದಲೂ

ಳೊೞ್ಮುಗುಳ್ನಗೆಯಲರ್ಗಣ್ಗಳೊೞ | ಳ್ದಳೆದುಸಲೆರಾಜಿಸುವತನುಲತೆಯೊಳೊಪ್ಪಿರ್ದರ್ || ರೆಳೆವೆಣ್ಗಳಚ್ಚ ವೊಸಜವ್ವನದೊಳಾವ
ಗಂವಿಟಪೀವರಾಶ್ರಯದೊಳು ||೨೭|| ದಾನಸಾಮಜಭೇದನೋದ್ದಂಡದುಗ್ರಪಂ | ಚಾನನಂಗೆಲ್ವಚತುರೋಪಾಯಮಂಬಿಟ್ಟು |
ತಾನಳ್ಕಿಬಳ್ಕಿಕಡುದೈನ್ಯದಿಂದೀಗಮುಗ್ಧಾಂಗಮಂತಳೆದಿರ್ಪುದು || ಏನಿದಚ್ಚರಿಯೆಂದುವಿಟನೋರ್ವಳಂಕೇಳ್ದೊ | ಡಾನೀರೆನಗು
ತಲಬಲಾಶ್ರಯದೊಳಿರೆ | ಮೇರುಮಾನವನಕೈವಿಡಿತೆಗೊಳಗಪ್ಪುದೆಲೆಮರುಳೆನೀನರಿದುದಿಲ್ಲೆಂದಳು || ೨೮ || ಕಲಹಂಸಗಮನೆ
ಪೂರ್ಣೇಂದುಮುಖಿಚಾರುಮಂ | ಗಳಗಾತ್ರೆಘನಸೌಮ್ಯಸೌಂದರವಿಲಾಸಿನಿವಿ | ಮಲಗುರುಪಯೋಧರಿಸರಸಕವಿನುತಪ್ರಮ
ದೆಮಲ್ಲಿಕಾಮಂದಸ್ಮಿತೆ || ವಿಲಸದ್ಭುಜಂಗಸಂಗತೆಮದನಕೇತುಚಂ | ಚಲನೇತ್ರೆಕೇಳ್ನಿನ್ನದೆಸೆಗಿದೆನವಗ್ರಹಂ | ಗಳಪೆಸರ

ಳೊಳ್-ಕೇಶಗಳಲ್ಲಿ, ಸೊಗಸುರಸವುಂ-ಅಲಂಕಾರಾತಿಶಯವು, ಆಡರಿದ_ವ್ಯಾಪ್ತವಾದ, ಸೌಂದರದೊಳ್_ಅಲಂಕಾರದಿಂದ, ತಳಿರಡಿಗಳೊಳ್- ಪಾದಪಲ್ಲವಂಗಳಿಂದ, ಮುಗುಳ್ನಗೆಯ-ಹುಸಿನಗೆಯೆಂಬ, ಅಲರ್ಗಣ್ಗಳೊಳ್- ವಿಕಸಿತವಾದ ಹೂಗಳೆಂಬ ನೇತ್ರಂಗಳಿಂದ, ದಳೆದು_ಹೊಂದಿ, ಸಲೆ_ಚೆನ್ನಾಗಿ, ರಾಜಿಸುವ_ಹೊಳೆಯುವ, ತನುಲತೆಯೊಳು_ದೇಹವೆಂಬ ಎಳೆವಳ್ಳಿಯಿಂದ, ಒಪ್ಪಿರ್ದರು_ಹೋಲಿಕೆಯನ್ನು ಪಡೆದಿದ್ದರು.

ಅ|| ವಿ|| ರಸ_ಶೃಂಗಾರಾದಿ ನವರಸಗಳು, ಸುವಾಸನೆ, ನೀರು, ರುಚಿ ಮೊದಲಾದವು ||೨೭||

ಟೀ|| ದಾನ-ಮತ್ತವಾದ, ಸಾಮಜ_ಹಸ್ತಿಗಳನ್ನು, ಭೇದನ - ಸಂಹರಿಸುವುದರಲ್ಲಿ, ಉದ್ದಂಡ-ಸಮರ್ಥವಾದ, ಉಗ್ರ_ಬಹು ಕಠಿಣವಾದ, ಪಂಚಾನನಂ_ಮೃಗೇಂದ್ರನಂ, ಗೆಲ್ವ-ಪರಾಜಯವನ್ನೈದದಿರುವ, ಚತುರೋಪಾಯಮಂ_ನಾಲ್ಕು ತೆರನಾದ ಯುಕ್ತಿಗಳನ್ನು, ಬಿಟ್ಟು_ತ್ಯಜಿಸಿ, ಅಳ್ಕಿ_ಹೆದರಿ, ಬಳ್ಕಿ-ನಡುಗಿ, ಕಡುದೈನ್ಯದಿಂದ_ಬಹು ಕೀಳುಭಾವದಿಂದ, ಮುಗ್ಧಾಂಗಮಂ-ಮಂದವಾದ ಶರೀರವನ್ನು, ಸುಂದರಗಾತ್ರವನ್ನು, ತಳೆದಿರ್ಪುದು_ಹೊಂದಿರುವುದು, ಅಚ್ಚರಿ_ಆಶ್ಚರ್ಯವು, ಇದುಏನು-ಏತಕ್ಕೆ, ಎಂದು_ಎಂಬ ತೆರನಾಗಿ, ವಿಟನು_ಕಾಮುಕನು, ಓರ್ವಳಂ_ಒಬ್ಬ ಸ್ತ್ರೀಯನ್ನು, ಕೇಳ್ದೊಡೆ-ಪ್ರಶ್ನೆಮಾಡಲು, ಆ ನೀರೆ_ಆ ಸ್ತ್ರೀಯು, ನಗುತಲಿ_ಹಾಸ್ಯಮಾಡುತ್ತ, ಇಂತು_ಮುಂದೆ ಹೇಳುವಂತೆ, ಎಂದಳು_ನುಡಿದಳು, ಮೇರು-ಸುವರ್ಣಗಿರಿಯು, ಅಬಲ_ಅಶಕ್ತರ, ಮತ್ತು ಸ್ತ್ರೀಯರ, ಆಶ್ರಮದೊಳು-ಸೆರವಿನಲ್ಲಿ, ಇರೆ_ಇದ್ದರೆ, ಮಾನವನ_ಪುರುಷನ, ಕೈವಿಡಿತೆಗೆ_ಅಂಗೈ ಹಿಡಿತಕ್ಕೆ, ಒಳಗಪ್ಪುದು_ಪ್ರಾಪ್ತವಾಗುವುದು, ಎಲೆ ಮರುಳೆ_ಎಲೈ ಹುಚ್ಚನೆ, ನೀನು-ನೀನು, ಅರಿದುದಿಲ್ಲ_ತಿಳುವಳಿಕೆಗೆ ತಂದುಕೊಂಡಿಲ್ಲವು, ಎಂದಳು_ಎಂದು ನುಡಿದಳು.

ಅ|| ವಿ|| ಚತುರೋಪಾಯ ಸಾಮ, ದಾನ, ಭೇದ, ದಂಡ ||೨೮||

ಟೀ|| ಕಲಹಂಸ_ಹಂಸದ, ಗಮನೆ_ನಡಿಗೆಯಂತೆ ನಡಿಗೆಯುಳ್ಳವಳೆ, (ಕಲ_ರವಿಯು), ಪೂರ್ಣೇಂದು_ಪೂರ್ಣ ಚಂದ್ರನಹಾಗೆ ಇರತಕ್ಕ, ಮುಖಿ_ಆಸ್ಯವನ್ನುಳ್ಳವಳೇ, (ಇಂದು_ಹಿಮಾಂಶು), ಚಾರುಮಂಗಳಗಾತ್ರೆ=ಚಾರು_ಸುಂದರವಾದ, ಮಂಗಳ_ಶುಭಕರವಾದ, ಗಾತ್ರೆ_ಶರೀರವುಳ್ಳವಳೆ (ಮಂಗಳ-ಭೌಮ), ಘನ_ಗಂಭೀರವಾದ, ಸೌಮ್ಯ-ಸಮಾಧಾನದಿಂದ ಕೂಡಿದ, ಸೌಂದರ್ಯ-ಅಲಂಕಾರಯುಕ್ತಳಾದ, ವಿಲಾಸಿನಿ-ಸ್ತ್ರೀಯೆ, (ಸೌಮ್ಯ-ಬುಧಗ್ರಹ) ವಿಮಲ_ಪರಿಶುದ್ಧವಾದ, ಗುರು_ದಪ್ಪನಾದ, ಪಯೋಧರಿ_ಕುಚಗಳುಳ್ಳವಳೇ, (ಗುರು_ಬೃಹಸ್ಪತಿಯು) ಸರಸ-ಶೃಂಗಾರರಸವೇ ಮೊದಲಾದ ನವರಸಭರಿತಮಾದ, ಕವಿ_ಕವಿತ್ವ

ಸುಳಿಸುಳಿವ ತೊಡೆಗಳಿಂದಲೂ ಕೂಡಿಕೊಂಡು, ವಕ್ರಾತಿಶಯದಿಂದ ಮೆರೆವ ಮುಂಗುರುಳ್ಗಳುಳ್ಳವರಾಗಿ, ಅಲಂಕಾರಯುಕ್ತರಾಗಿ ತಳಿರುಗಳು, ಮೊಗ್ಗುಗಳು ಹೂವು ಮೊದಲಾದವುಗಳಿಂದ ಕೂಡಿರುವ ಎಳೆಯದಾದ ಬಳ್ಳಿಗೆ ಸಮಾನವಾದ ದೇಹವನ್ನೈದಿ ಹೊಳೆಯುತ್ತಿದ್ದರು. ||೨೭|| ಆಗ ಒಬ್ಬಾನೊಬ್ಬ ವಿಟಪುರುಷನು ಕಾಮುಕಿಯೋರ್ವಳಂ ಕುರಿತು ಮತ್ತಗಜಗಳನ್ನು ಕೂಡ ಛಿದ್ರಛಿದ್ರವಾಗಿ ಮಾಡಬಲ್ಲ ಸಾಮರ್ಥ್ಯವನ್ನುಳ್ಳ ಸಿಂಹದ ದೇಹವೂ ನಾಲ್ಕು ಬಗೆಯಾದ ಉಪಾಯಗಳನ್ನೆಲ್ಲಾ ಬಿಟ್ಟುಬಿಟ್ಟು ಬಹುವಾಗಿ ದಿಗಿಲುಬಿದ್ದು ಗಡಗಡನೆ ನಡುಗುತ್ತ ದೀನಭಾವವನ್ನೈದಿರಲು ಕಾರಣವೇನೆಂದು ಕೇಳಲಾಗಿ ಆ ವಿರಹವೇದನೆಗೆ ಸಿಕ್ಕಿರುವ ಬಾಲೆಯು ಕಾಮುಕನನ್ನು ಕುರಿತು ಬಲಿಷ್ಠವಾದ ಮೇರುಪರ್ವತವಾದರೂ ಸ್ತ್ರೀ ವಶವಾದ ಕೂಡಲೆ ದುರ್ಬಲವಾಗಿ ಹೋಗುವುದು. ಎಲೆ ಹುಚ್ಚನೆ, ಇಷ್ಟು ಮಾತ್ರ ನೀನು ತಿಳಿಯಲಾರದೆ ಹೋದೆಯಾ? ಎಂದು ಉತ್ತರವನ್ನೀಯುತ್ತಿದ್ದಳು ||೨೮|| ಇದನ್ನೆಲ್ಲಾ ಭೀಮಸೇನನು ನೋಡುತ್ತ ಆಶ್ಚರ್ಯಚಿತ್ತನಾಗಿ ಇನ್ನು ಸ್ವಲ್ಪ ದೂರ ಮುಂದೆ ನಡೆಯಲಾಗಿ ಅಲ್ಲಿ ಒಬ್ಬ ಹೆಂಗಸು ತನ್ನ ಸ್ನೇಹಿತಳನ್ನು ಕುರಿತು, ಎಲೆ ಬಾಲೆಯೆ, ನಿನ್ನ ನಡಿಗೆಯು ಹಂಸಪಕ್ಷಿಯ ನಡಿಗೆಯನ್ನೂ ಅಲೆಗಳೆಯುತ್ತಲಿದೆ. ನಿನ್ನಾಸ್ಯವು ಪೌರ್ಣಮಿ ದಿವಸದಲ್ಲಿ ಮೆರೆಯುವ ಪೂರ್ಣಚಂದ್ರನನ್ನು ಹೋಲುತ್ತಿರುವುದು, ನಿನ್ನ ಶರೀರವು

ಬಲಮಿನ್ನು ಸೋಲ್ವುದುನಿನಗೆಜನಮೆಂದಳೋರ್ವಳ್ಸಖಿಯೊಳು ||೨೯|| ಇನ್ನುಹಿಡಿಯದಿರುಸಾಕುಕಾಳಪನ್ನಗವೇಣಿ | ಮುನ್ನಾನೆ ಸಿಕ್ಕಿದುದನೋಡಿದಾಶಶಿವದನೆ | ಯನ್ನಮನೆಯೋಳ್ಪೋದುದಕಟಕಟನಿನ್ನಕೈಗುದುರೆಪೊಂಗೊಡಮೊಲೆಯುಳೆ || ನಿನ್ನತೇರ್ಮಾ

---

ಮಾತತಕ್ಕವರಿಂದ, ನುತ-ಸ್ತುತಿಸಲ್ಪಟ್ಟ, ಪ್ರಮುದೆ-ಸ್ತ್ರೀಯೆ, (ಕವಿ-ಭಾರ್ಗವ), ಮಲ್ಲಿಕಾ-ಮಲ್ಲಿಕಾ ಪುಷ್ಪದಂತೆ, ಮಂದಸ್ಮಿತೆ-ಹುಸಿನಗೆಯಿಂದ ಕೂಡಿದವಳೆ (ಮಂದ-ಶನಿ) ವಿಲಸತ್-ಥಳಥಳಿಸುವ, ಭುಜಂಗ-ಕಾಮುಕರಿಂದ, ಸಂಗತೆ-ಬಂದುಗೂಡಿದವಳೆ, (ಭುಜಂಗ-ರಾಹುಗ್ರಹ), ಮದನ-ಮಾರನಿಗೆ, ಕೇತು-ಧ್ವಜಪಠದಂತಿರುವ, ಚಂಚಲ-ಸ್ಥಿರವಿಲ್ಲದ, ನೇತ್ರ-ನಯನಂಗಳನ್ನುಳ್ಳವಳೆ, (ಕೇತು-ಕೇತುಗ್ರಹವು), ನಿನ್ನದೆಸೆಗೆ-ನಿನ್ನ ಅದೃಷ್ಟಕ್ಕೆ, ನವಗ್ರಹಂಗಳ-ಸೂರ್ಯಾದಿ ಯಾದವರ, ಪೆಸರ-ನಾಮಧೇಯದ, ಬಲಂ-ಸಾಮರ್ಥ್ಯವು, ಇದೆ-ಇರುವುದು, ನಿನಗೆ-ನಿನ್ನ ವಿಷಯದಲ್ಲಿ, ಜನಂ-ಲೋಗರು, ಸೋಲ್ವಪ್ರದು-ವಶವರ್ತಿಗಳಾಗುವರು, ಎಂದು-ಎಂಬದಾಗಿ, ಓರ್ವಳು-ಒಬ್ಬಾನೊಬ್ಬ ಹೆಂಗಸು, ಸಖಿಯೊಳು-ತನ್ನ ಸಂಗಾತಿಯಾದವಳೊಂದಿಗೆ, ಎಂದಳು-ಎಂದು ನುಡಿದಳು ||೨೯||

ಟೀ|| ಪನ್ನಗ-ಹಾವಿನಂತೆ, ವೇಣಿ-ಜಟಾಧಾರಿಯಾದವಳೆ, ಆಳ-ಕಾಲ್ಬಲವನ್ನು, ಮತ್ತು ಚತುರಂಗದ ಆಟದಲ್ಲಿ ಪ್ಯಾದೆ ಎಂಬುದನ್ನು. ಇನ್ನು-ಮುಂದೆ, ಹಿಡಿಯದಿರು-ಹಿಡಿದುಕೊಳ್ಳಬೇಡ, ಸಾಕು-ಪ್ಯಾವೆ ಎನ್ನತಕ್ಕ ಕಾಯಿಯಿಂದ ಆಸನನ್ನು ವಶಪಡಿಸಿಕೊಳ್ಳತಕ್ಕ ಹಂಬಲವನ್ನು ಮರೆತುಬಿಡು. (ಎಂದರೆ ನಿನ್ನ ಜಡೆಯು ಹಾವಿನಂತೆ ಉದ್ದವಾಗಿಯೂ ಅಂದವಾಗಿಯೂ ಇರುವುದು. ಪನ್ನಗನ ಸ್ಪರ್ಶದಿಂದ ನಂಜೇರಿ ದೇಹವನ್ನು ಎಂತು ಮೂರ್ಛೆಗೊಳಿಸುವದೊ ಆ ಪರಿಯಿಂದಲೇ ಕೋಮಲಾಂಗಿಯೂ, ಸರ್ಪವೇಣಿಯೂ ಆಗಿರುವ ನಿನ್ನ ಸುಂದರಗಾತ್ರ ಸ್ಪರ್ಶದಿಂದ ಮನೋಭ್ರಾಂತಿಯುಂಟಾಗಿ, ನನ್ನ ಮನವು ನಿನ್ನೊಂದಿಗೆ ರತಿಸುಖವನ್ನೆಳಸಲಿಚ್ಛಿಸುವುದು). ಆದಕಾರಣ ನೀನು ನನ್ನನ್ನು ಮುಟ್ಟಿ ವಿರಹತಾಪವನ್ನುಂಟುಮಾಡಬೇಡ. (ಕಾಳಪನ್ನಗವೇಣಿ-ಕೃಷ್ಣಸರ್ಪದಂತೆ ನೀಳವಾದ ಜಡೆಯುಳ್ಳವಳೇ ಎಂದು ಹೇಳಬಹುದು). ಶಶಿವದನೆ-ಇಂದುಮುಖೀ, ಅಕಟಕಟ-ಆಶ್ಚರ್ಯ ಆಶ್ಚರ್ಯ, ಮುನ್ನ-ಹಿಂದೆ, ಆನೆ-ಹಸ್ತಿಯು, ಸಿಕ್ಕಿದುದ-ಬಂಧಿಸಲ್ಪಟ್ಟದ್ದನ್ನು, ನೋಡಿದಾ-ಈಕ್ಷಿಸಿದೆಯಾ (ಇದು ಚದುರಂಗದ ಆಟದ ಪರವಾಗಿ), ಆನೆ-ನಿನ್ನೊಂದಿಗೆ ಸರಸೋಕ್ತಿಗಳನ್ನಾಡುತ್ತಲಿರುವ ನಾನೆ, ಮುನ್ನ-ಮೊಟ್ಟಮೊದಲು, ಸಿಕ್ಕಿದುದ-ವಿರಹತಾಪದಿಂದ ನಿನಗೆ ಸ್ವಾಧೀನವಾಗಿ ಹೋದ್ದನ್ನು, ನೋಡಿದಾ-ಕಾಣಲಿಲ್ಲವೆ? (ನಿನ್ನ ಪಾಶಕ್ಕೆ ನಾನೇ ಒಳಗಾಗಿರುವಾಗ ನನ್ನನ್ನು ಏತಕ್ಕಾಗಿ ಬಂಧಿಸುವೆ ಎಂದು ಆಶಯವು), ಪೊಂಗೊಡ-ಚಿನ್ನದ ಗಡಿಗೆಯಂತೆ ಪೀತವರ್ಣವಾದ, ಮೊಲೆಯುಳೆ-ಕುಚಗಳುಳ್ಳ ಬಾಲೆಯೇ, ಎನ್ನ ಮನೆಯೋಳ್-ನನ್ನ ಕಡೆ ಇರತಕ್ಕ ಅಕ್ಷಹೃದಯದ ಮನೆಯಲ್ಲಿ, ನಿನ್ನ ಕುದುರೆ-ಹಯವೆಂಬ ನಿನ್ನ ಕಾಯಿಯು, ಪೋದುದು-ಪ್ರವೇಶಿಸಿತು (ಆಟದ ಪರವಾಗಿ), ಎನ್ನ-ಮದೀಯವಾದ, ಮನೆಯೊಳ್-ಮದನ ಗೃಹದಲ್ಲಿ, ನಿನ್ನ-ನೀನು ಬಯಸುವ, ಕೈಗುದುರೆ-ಪುರುಷವು, ಪೋದುದೆ-ಹೊಕ್ಕಿತೆ, ಬಲವಾಗಿ ತಳ್ಳಿದ ಪುರುಷವು ಭಗಾಂತರ್ದೇಶವನ್ನು ಹೊಕ್ಕಿತೆ ಎಂಬ ಅಭಿಪ್ರಾಯ ಸೂಚಕವು), ಸರೋಜಾಕ್ಷಿ-ತಾವರೆ ಹೂವಿನ ಎಸಳಿನಂತಿರುವ ನಯನಂಗಳನ್ನುಳ್ಳವಳೆ, ನಿನ್ನ-ತ್ವತ್ಸಂಬಂಧವಾದ, ತೇರ್-ಗಾಡಿಯು, ಮಾರ್ಪಜ್ಜೆಗೆಟ್ಟುದು-ಇನ್ನು ಮುಂದೆ ನಡೆಯಲು ತ್ರಾಣವಿಲ್ಲದೆ ಸ್ತಬ್ಧವಾಯಿತು. (ಆಟದ ಪರವಾಗಿ) ನಿನ್ನ-ನಿನ್ನ ಸಂಬಂಧವಾದ, ತೇರ್-ಗಾತ್ರವು, ಮಾರ್ಪಜ್ಜೆಗೆಟ್ಟಿತು-ಒಂದು ಹೆಜ್ಜೆಯನ್ನಾದರೂ ಮುಂದಕ್ಕೆ ಇಡಲಾರದಂತಾಯಿತು. ಅರಸಂಚೆನಡೆಯುಳೆ=ಅರಸಂಚೆ-ರಾಜಹಂಸದ ನಡಿಗೆಯಂತೆ, ನಡೆಯಳೆ-ಚಾತುರ್ಯವಾದ ನಡಿಗೆಯುಳ್ಳ ಬಾಲೆಯೇ, ನಿನ್ನ-ನಿನ್ನ ಸಂಬಂಧದ, ಆಟ-ಆಡುವುದು, ಕಟ್ಟಿತು-ಬಂಧಿಸಲ್ಪಟ್ಟಿತು, ನಾನು ಜಯಶೀಲನಾಗಿದೇನೆ. ಪೋಗು-ನಡೆ,

---

ಅತ್ಯಂತ ಶುಭಕರವಾದದ್ದಾಗಿರುವುದು, ನಿನ್ನ ಸೌಂದರ್ಯವು ಮತ್ತೆ ಯಾವ ಹೋಲಿಕೆಯನ್ನೂ ಪಡೆಯಲಸಮರ್ಥವಾದುದು. ಎಲೈ ಪೀವರಸ್ತನಂಗಳುಳ್ಳ ಕನ್ಯಾರತ್ನವೇ, ನಿನ್ನ ಸೌಂದರ್ಯಾತಿಶಯವನ್ನು ಶೃಂಗಾರಾದಿ ನವರಸಗಳಲ್ಲಿ ನಿಪುಣರಾದ ಕವಿಗಳೆಲ್ಲಾ ಬಣ್ಣಿಸುತ್ತಿರುವರು. ನಿನ್ನ ಹುಸಿನಗೆಯು ಸ್ವಚ್ಛಗಳಾದ ಮಲ್ಲಿಕಾ ಪುಷ್ಪಂಗಳನ್ನಣಕಿಸುವದು. ಎಲೈ ಕಾಮುಕಳೆ, ಚಪಲವಾದ ಅಕ್ಷಂಗಳನ್ನುಳ್ಳವಳೆ, ನಿನಗೆ ಗ್ರಹಗತಿಯು ಬಲು ಚೆನ್ನಾಗಿರುವುದು. ಆದ್ದರಿಂದಲೇ ನಿನ್ನ ಮುಖವನ್ನೂ, ನಿನ್ನ ಸೌಂದರ್ಯವನ್ನೂ ನೋಡಿದ ಮಾತ್ರದಿಂದಲೇ ಕಾಮುಕರ ಮನವು ತಲ್ಲಣಗೊಂಡು ನಿನ್ನ ವಶವರ್ತಿಗಳಾಗಿ ಹೋಗುವರು. ಎಂಬುದಾಗಿ ಸೂರ್ಯ, ಚಂದ್ರ, ಅಂಗಾರಕ, ಬುಧ, ಗುರು, ಶುಕ್ರ, ಶನಿ, ರಾಹು, ಕೇತುವೇ ಮೊದಲಾದ ನವಗ್ರಹಗಳನ್ನು ಕೂಗಿ ಹೇಳುವ ನೆಪವಂ ಮಾಡಿಕೊಂಡು ನುಡಿಯುತ್ತಿದ್ದಳು. ||೨೯|| ಭೀಮಸೇನನು ಇನ್ನೂ ಸ್ವಲ್ಪ ಮುಂದುವರಿದು ಹೋಗಲಾಗಿ ಅಲ್ಲಿ ಒಬ್ಬ ಕಾಮುಕನು ಬಾಲೆಯೋರ್ವಳಂ ಕುರಿತು, ಎಲೈ ನಾಗವೇಣಿಯೇ, ನಿನ್ನನ್ನು ನೋಡಿದ ಮಾತ್ರದಿಂದಲೇ ನನ್ನ ಮನವು ನಿನ್ನಲ್ಲಿ ನೆಲೆಗೊಂಡಿತು. ಆಗ ನಮ್ಮಿಬ್ಬರಿಗೂ ಅತ್ಯಾನಂದವುಂಟಾಗಿ ರತಿಸುಖವನ್ನು ಸ್ವೇಚ್ಛೆಯಾಗಿ ಅನುಭವಿಸಿದೆವು.

ರ್ಪೆಜ್ಜೆಗೆಟ್ಟನುಸರೊಜಾಕ್ಷಿ | ನಿನ್ನಾಟಕಟ್ಟಿತರಸಂಚೆನಡೆಯುಳಿಪೋಗು | ನಿನ್ನ ಚತುರಂಗನುಂಗೆಲ್ದೆನೆಂದೋರ್ವನಾಡುತಮು ನಿದನೋರ್ವಳೊಡನೆ || ೩೦ || ಅಚ್ಚಪಳದಿಯಕಾಯಜೋಡಮೇಲೊತ್ತಿದೊಡೆ | ನೆಚ್ಚಿರ್ದಕೈಯಕರಿದಿನಹಿಂಡಹಿಡಿಯದೊಡೆ | ಮಚ್ಚಿನಾಟಕೆಮೀರಿಬಂದಕೆಂಪಿನಹಣ್ಣನಂಡಲೆದುಬಿಡದಿರ್ದೊಡೆ || ಬಚ್ಚನಾಲಗೆಯೆಬೀಳೆಂದುಹಾಸಂಗಿಯಂ | ಪಚ್ಚೆಯವಿದೂ

(ಆಟದ ಪರವಾಗಿ), ನಿನ್ನಾಟ-ನಮ್ಮಿಬ್ಬರ ಪರಸ್ಪರ ಸಂಯೋಗದಿಂದುಂಟಾದ ಇಂದ್ರಿಯವು ಸ್ಖಲನವಾಯಿತಾಗಿ ಸರಸಸಲ್ಲಾಪಂಗಳೆಲ್ಲಾ ಕಟ್ಟಿತು-ನಿಂತವು. ಪೋಗು-ಸ್ವೇಚ್ಛೆಯಾಗಿ ನಾವಿಬ್ಬರೂ ವಿರಹವೇದನೆಯನ್ನು ತೀರಿಸಿಕೊಂಡಿದ್ದಾಯಿತಾದ್ದರಿಂದ ನಡೆ, ನಿನ್ನ-ತ್ವತ್ಸಂಬಂಧದ, ಚತುರಂಗಮಂ-ಹಸ್ತಿ, ಅಶ್ವ, ರಥ, ಪದಾತಿಗಳೆಂಬ ನಾಲ್ಕು, ದಾಳಗಳನ್ನು, (ಆಟದ ಪರವಾಗಿ) ಚತುರಂಗನುಂ-ಅಲಂಕಾರದಿಂದ ಕೂಡಿರುವ ನಿನ್ನ ಆಸ್ಯವು, ನಯನಂಗಳು, ಗಮನ, ಕುಚಗಳನ್ನು, ಗೆಲ್ದೆನು-ವಶಪಡಿಸಿಕೊಂಡಿರುವೆನು, ಸೋಲಿಸಿದೆನು (ಆಟದ ಪರವಾಗಿ) ನಿನಗೆ ವಿರಹತಾಪವುಅಧಿಕವಾಗುವಂತೆ ಮಾಡಿದೆನಾಗಿ ರತಿಸುಖಕ್ಕೆ ಸಹಾಯಕಂಗಳಾದ ಮೋರೆಯು, ಚಕ್ಷುಸ್ಸುಗಳು, ಕುಚಗಳು, ನಡಿಗೆಯೂಸಹ ನನ್ನ ವಶವರ್ತಿಗಳಾದವು, ಎಂದು-ಎಂಬ ಬಗೆಯಾಗಿ, ಓರ್ವನು-ಒಬ್ಬಾನೊಬ್ಬ ವಿಟನು, ಓರ್ವಳೊಡನೆ-ಒಬ್ಬ ಕಾಮುಕಳೊಂದಿಗೆ, ಆಡುತ್ತ-ಚದುರಂಗವಾಡುತ್ತ ಮತ್ತು ರತಿಸುಖವನ್ನು ಅನುಭವಿಸುತ್ತ, ಮುನಿದನು-ಕೋಪವಂತಾಳ್ದನು.

ಅ|| ವಿ|| ನನ್ನನ್ನು ನೋಡಿದ ಮಾತ್ರವೇ ವಿರಹತಾಪವು ಪ್ರಬಲವಾಗುವಂತೆ ಮಾಡಿ ನಿನ್ನನ್ನು ಸ್ವಾಧೀನಕ್ಕೆ ತೆಗದುಕೊಂಡು ಸ್ವೇಚ್ಛೆಯಾಗಿ ರತಿಸುಖವನ್ನು ಅನುಭವಿಸಿರುವೆನು. ಪೊನ್ನಿನಕೊಡ= (ಷ. ತ.) ಪೊಂಗೊಡದಂತೆ ಮೊಲೆಯು ಯಾರಿಗೊ ಅವಳು. (ಬ. ಸ.) ಸರಸಿ-ಸರಸ್ಸಿನಲ್ಲಿ, ಜ-ಹುಟ್ಟಿದ್ದು, (ಕಮಲ ಕೃ. ವೃ.) ಸರೋಜದಂತೆ ಅಕ್ಷಿಯು ಯಾರಿಗೊ ಅವಳು (ಬ. ಸ.) ಅರಸಂಚೆ-ರಾಜಹಂಸ (ಸಂ. ಸಮಾಸಪದ) ಅಂಚೆ, ತ್ಭ-ಹಂಸ (ತ್ಸ) ಮುನಿ-ಋಷಿ, ಕೋಪಮಾಡು ಎಂಬೆರಡರ್ಥಂಗಳು ಕ್ರಮವಾಗಿ ನಾಮಪದ ಕ್ರಿಯಾಪದಂಗಳಲ್ಲಿ ಆಗುವವು. ಪತ್-ಕಾಲಿನಿಂದ, ನಗ-ನಡಿಯದಿರುವದು (ಕೃ. ವೃ.) ಪನ್ನಗದಂತೆ ವೇಣಿಯು ಯಾರಿಗೊ ಅವಳು-ಪನ್ನಗವೇಣಿ (ಬ. ಸ.) ||೩೦||

ಟೀ|| ಪಚ್ಚೆಯವಿದೂಷಕನು-ಅಕ್ಷಹೃದಯದಲ್ಲಿರುವ ನಕಲಿಯವನು (ವಿಟನು) ಕಟಕಿವಾತುಗಳ-ಬೇರೆ ಭಾವಗರ್ಭಿತವಾದ ನುಡಿಗಳ. ಜಾಣ್ಮೆಗಳಿಂ-ಚಾತುರ್ಯದಿಂದ, ಅಚ್ಚ-ಭಂಗಾರದಂತೆ ಸ್ವಚ್ಛವಾದ, ಪಳದಿಯಕಾಯಜೋಡ-ಪೀತವರ್ಣದ ದಾಳಗಳ ಎರಡನ್ನು, (ಪಗಡೆಯಾಟದ ಪರವಾಗಿ), ಅಚ್ಚ-ಸ್ವಚ್ಛಂಗಳಾದ, ಪಳದಿಯ-ಅರಿಶಿನಬಣ್ಣದ ಸ್ತನಗಳ, ಜೋಡ-ಎರಡನ್ನು, ಮೇಲೆ-ನಾಲ್ಕು ಪಜ್ಜೆಗಳು ಮತ್ತು ನಾಲ್ಕು ವರ್ಣದ ದಾಳಗಳಿಂಸಹಿತವಾದ ಮನೆಯಮೇಲೆ ಮತ್ತು ಕಾಮುಕನ ಮೇಲ್ಗಡೆ, ಒತ್ತಿದೊಡೆ-ಚಲಿಸದಿದ್ದರೆ, (ಪಗಡೆ) ಆಲಿಂಗನವಂ ಮಾಡಿಕೊಳ್ಳದಿದ್ದರೆ, (ನೆಚ್ಚಿರ್ದ-ಪಕ್ವವಾಗುವುದೆಂದು ಊಹಿಸಿದ್ದ, ಸಹವಾಸಕ್ಕೆ ಬರುವುದಿಲ್ಲವೆಂದು ತಿಳಿದುಕೊಂಡಿದ್ದ, ಕೈ-ಕರದಿಂಸ್ಪರ್ಶಿಸಿದ, ಮತ್ತು ಕರದಿಂದ, ಕರಿದಿನ-ನೀಲವರ್ಣದ ದಾಳಗಳ, ಮತ್ತು ಕರೀಕೂದಲ, ಹಿಂಡ-ಸಮೂಹವನ್ನು, ಹಿಡಿಯದೊಡೆ-ಪಗಡೆಕಾಯಿಗೆ ಜೋಡಿಸದೆಹೋದರೆ, ಹಿಡಿಯದಿದ್ದಲ್ಲಿ), ಮಚ್ಚಿನ-ಕ್ಲಿಪ್ತಮಾಡಿರತಕ್ಕ, ಆಟಕೆ-ರತಿಸುಖಕ್ಕೆ, (ಕಂಠಾಲಿಂಗನ ಅಧರಚುಂಬನಾದಿ ವ್ಯಾಪಾರಗಳಿಗೆ), ಮೀರಿಬಂದ-ಅತಿಕ್ರಮಿಸಿದ, (ಉಗುಳು ಮೊದಲಾದವುಗಳಿಂದ ಕೂಡಿದ) ಕೆಂಪಿನ ಹಣ್ಣನು-ರಕ್ತವರ್ಣದ ಫಲವನ್ನು ಮತ್ತು ತೊಂಡೆಯ ಹಣ್ಣನ್ನು ಹೋಲುವ ಅರುಣಾಧರವನ್ನು, ಅಂಡಲೆದು-ಕಚ್ಚುವುದು, ರಸವಂ ಹೀರುವುದು, ಮೊದಲಾದ ಕಷ್ಟಂಗಳಿಗೆ ಸಿಕ್ಕಿಸಿ, ಬೆಚ್ಚ-ಈಕ್ಷಿಸಿದರೆ, ಬಿಡದಿರ್ದೊಡೆ-ಪಗಡೆಯಾಡುವ ಹಾಸಿನಲ್ಲಿ ಮೂರು ಕಾಯಿಗಳು ಬೀಳಬೇಕೆಂಬ ಹಂಬಲನೆ ಪ್ರಾಮುಖ್ಯವನ್ನಾಗಿ ಮಾಡಿರಲು, (ಪಗಡೆಯಾಟದ ಪರವಾಗಿ), (ಮತ್ತು ಬಿಚ್ಚನು-ಒಂಟಿಯಾಗಿರುವುದನ್ನು, ಆಲಕೆಯೆ-ಸಹಿಸಲಾರೆ ಎಂದು ಪಾಠಾಂತರ), ಕಾಮುಕಳನ್ನು ಅಪ್ಪಿಕೊಂಡು, ನಾಲಗೆಯೇ-ನಾಲ್ಕೆಂಬ ಸಂಖ್ಯೆಯೆ ಮತ್ತು ರಸಜ್ಞವೆ, ಬೀಳೆಂದು-ಬಿದ್ದುಹೋಗಲಿ ಮತ್ತು ತುಟಿಯನ್ನು ರುಚಿನೋಡಲಿ ಎಂಬದಾಗಿ, ಹಾಸಂಗಿಯಂ-ಶಯ್ಯೆಯನ್ನು ಮತ್ತು ಕಾಮುಕಳನ್ನು, ಪಚ್ಚೆಯ-ಅಕ್ಷಹೃದಯದ, ವಿದೂಷಕಂ-ತಮಾಷೆಗಾರನು, ಮತ್ತು ವಿಟನು, ಉರುಳ್ಚಿದಂ-ದಾಳಗಳನ್ನು ಎಸೆದನು

ಆದ್ದರಿಂದ ನನ್ನ ವಶವರ್ತಿಯಾದ ನೀನು ಮೊದಲಿದ್ದ ಪ್ರಾಯದ ಬಲವನ್ನೆಲ್ಲಾ ಕಳೆದುಕೊಂಡು ಇರುವೆ. ನಿನ್ನ ಮುಖದ ಕಾಂತಿಯು ಕೆಟ್ಟುಹೋಯಿತು. ನಿನ್ನ ಕುಚಗಳ ಸೊಗಸು ಹೋಯಿತು. ನೀನು ಈಗ ಕಂಗೆಟ್ಟು ಹೋಗಿರುವೆ. ನಿನ್ನ ನಡಿಗೆಯ ಅಂದವು ವಿಕಾರವಾಗಿ ಹೋಯಿತು. ಈಗ ನೀನು ಏನೂ ಪ್ರಯೋಜನವಿಲ್ಲದವಳಾಗಿ ಹೋದೆ ಎಂಬುದಾಗಿ ರತಿಸುಖವಂ ಪಡೆದ ಕನ್ನೆಯನ್ನು ಕುರಿತು ಪಗಡೆಯ ಆಟದ ನೆವದಿಂದ ಅಪಹಾಸ್ಯವಂ ಮಾಡುತ್ತಲೂ, ಬಹು ವಿನೋದವಾಗಿ ಆಟವಾಡುತ್ತಲೂ || ೩೦ || ಮತ್ತು ಕಾಮುಕಳೊಂದಿಗೆ ಅರ್ಥಾಂತರವಾಗತಕ್ಕ ನುಡಿಗಳನ್ನು ಆಡುತ್ತಲೂ ಅತಿಯಾದ ಸರಸಸಲ್ಲಾಪಂ

ಷಕನುರುಳ್ದಿದಂಬಾಲೆಯರ | ನೆಚ್ಚಿಸುವಕಟಕಿವಾತುಗಳಜಾಣ್ಕೆಗಳಿಂದ ಪಗಡೆಯಾಡುವನೆವದೊಳು || ೩೧ || ಕೈಗೆಮೊಲೆ ಗಳಬಿಣ್ಪುಕಣ್ಗೆಚೆಲ್ವಿನಸೊಂಪು | ಬಾಯ್ಗೆಚೆಂದುಟಯಿಂಪುಕಿವಿಗೆನುಡಿಗಳನುಣ್ಪು | ಸುಯ್ಗೆತನುವಿನಕಂಪುಸೋಂಕಿಗಂ ಪಿನತಂಪುಚಿತ್ತಕ್ಕೆಸೊಗಸಿನಿಂಪು || ಮೈಗೂಟದೋಳ್ಸಮನಿಪೆಳೆವೆಂಗಳೆಸೆದಿರ್ದ | ರೈಗಣೆಯನೆಸುಗೆಗಳುಕದಯೋಗಿನಿಕರ ಮುಂ | ಸೈಗೆಡಪಲೆಂದಂಗಜಂಪೂಜೆಗೈದಸಮ್ಮೋಹನಾಸ್ತ್ರಂಗಳೆನಲು || ೩೨ || ಇವಳಮನಮೇಕಿವಳತುಂಗಕುಚದಂತಾದು |

ಮತ್ತು ಕಾಮುಕಳಾದ ಬಾಲೆಯನ್ನು ರತಿಸುಖಾನುಭವಕ್ಕಾಗಿ ಭೂಶಯ್ಯೆಯನ್ನವಲಂಬಿಸಲು ಒಪ್ಪಿಸಿದನು.

ಅ|| ವಿ|| ಅಚ್ಚ (ತ್ಭ) ಅಚ್ಛ (ತ್ಸ), ಕರಿ-ಆನೆ ಮತ್ತು ಕಪ್ಪುಬಣ್ಣ, ಜಾಣ್ಕೆ-ಭಾವನಾಮ ||೩೧||

ಟೀ|| ಕೈಗೆ-ವಿರಹಿಗಳ ಕರಂಗಳಿಗೆ, ಮೊಲೆಗಳ-ಸ್ತನಗಳ, ಬಿಣ್ಪು-ಗಟ್ಟಿಯಾಗಿ ಹಿಡಿಯುವಿಕೆಯು, ಕಣ್ಗೆ-ನಯನಂ ಗಳಿಗೆ, ಚೆಲ್ವಿನ-ಅಲಂಕಾರಸಹಿತಮಾದ, ಸೊಂಪು-ನೇತ್ರಾನಂದವು, ಬಾಯ್ಗೆ-ವದನಕ್ಕೆ, ಚೆಂದುಟಿ-ರಕ್ತಾಧರದ, ಇಂಪು-ಪ್ರೀತಿಯು, ಕಿವಿಗೆ-ಶ್ರೋತ್ರಂಗಳಿಗೆ, ನುಡಿಗಳ-ಸುಭಾಷಿತಂಗಳ, ನುಣ್ಪು-ನಯವು, ಸುಯ್ಗೆ-ಉಚ್ಛ್ವಾಸಕ್ಕೆ, ತನುವಿನ-ದೇಹದ, ಕಂಪು-ಸುವಾಸನೆಯು, ಸೋಂಕಿಗೆ-ಸ್ಪರ್ಶಕ್ಕೆ. ಅಂಪಿನ-ಆಲಿಂಗನದ, ತಂಪು-ಶೈತ್ಯವು, ಚಿತ್ತಕ್ಕೆ-ಹೃದಯಕ್ಕೆ, ಸೊಗಸಿನ-ಅಲಂ ಕಾರದ, ಇಂಪು-ಇಚ್ಛೆಯು, ಮೈಗೂಟದೋಳ್-ಅಂಗಾಲಿಂಗನದಲ್ಲಿ, ಸಮನಿಪ-ಜೋಡಿಯಾಗುವ, ಎಳೆವೆಂಗಳು-ಬಾಲೆಯರು, ಐ-ಪಂಚ, ಗಣೆಯನು-ಬಾಣಗಳುಳ್ಳ ಮದನನ, ಎಸುಗೆಗೆ-ಶರಸಂಧಾನಕ್ಕೆ, ಅಳುಕದ-ಹೆದರದಿರುವ, ಯೋಗಿ-ಮುನಿವರ್ಯರ, ನಿಕರಮುಂ-ಗುಂಪನ್ನು, ಸೈಗೆಡಪಲಿ-ಚಂಚಲಚಿತ್ತರನ್ನಾಗಿ ಮಾಡಿಬಿಡಲಿ, ಎಂದು-ಎಂಬದಾಗಿ, ಅಂಗಜಂ-ಮಾರನು, ಪೂಜೆ ಗೈದ-ಪೂಜೆ ಮಾಡಿದಂಥಾ, ಸಂಮೋಹನಾಸ್ತ್ರಗಳು-ವಿರಹತಾಪವಂ ಹೆಚ್ಚಿಸತಕ್ಕವುಗಳು, ಎನಲು-ಎನ್ನುವತೆರನಾಗಿ, ಎಸೆದಿ ರ್ದರು-ಹೊಳೆಯುತ್ತಿದ್ದರು.

ಅ|| ವಿ|| ಚೆಂದುಟಿ-(ಕೆಚ್ಚನೆ+ತುಟಿ) ವಿ. ಪೂ. ಮೈಗೂಟ-ಆದೇಶಸಂಧಿ ಮತ್ತು ಷ. ತ. (ಐಗಣೆ-ದ್ವಿಗುಸಮಾಸ), ಅಸ್ತ್ರ-ಮಂತ್ರಪೂರ್ವಕವಾದ ಶರಗಳು, ಶಸ್ತ್ರ-ಉಕ್ಕು ಮೊದಲಾದ ಆಯುಧಂಗಳು ||೩೨||

ಟೀ|| ಇವಳ-ಈ ಬಾಲೆಯ, ಮನಂ-ಹೃದಯವು, ಏಕೆ-ಯಾವ ಕಾರಣದಿಂದ, ತುಂಗ-ಎತ್ತರವಾದ, ಕುಚದಂತೆ-ಎದೆ ಗಂಟುಗಳಂತೆ, ಆದುದು-ಮೃದುವಾದ ಮನಸ್ಸು ಸ್ತನಗಳಂತೆ ಘಟ್ಟಿಯಾಯಿತು, ಇವಳ-ಈಕೆಯ, ಸನ್ಮಾನಂ-ಉಪಚಾ ರವು, ನಡೆಯಂತೆ-ನಡಿಗೆಯಹಾಗೆ, ಏಕೆ-ಏತಕ್ಕಾಗಿ, ಆದುದು-ಕಡಿಮೆಯಾಯಿತು, ಇವಳ-ಈ ಅಂಗನೆಯ, ಒಲವು-ವಿಶ್ವಾ ಸವು, ಮಧ್ಯದಂತೆ-ಸೊಂಟದಹಾಗೆ ಏಕೆ-ಯಾವನಿಮಿತ್ತವಾಗಿ, ಆದುದು-ಕೃಶವಾಯಿತು, ಇರ್ದವೋಲ್-ಪೂರ್ವದಂತೆ, ಈಗಳು-ಈವೇಳೆಯಲ್ಲಿ, ಎನ್ನೊಳು-ಕಾಮುಕನಾದ ನನ್ನೊಂದಿಗೆ, ಇವಳ-ಈ ಹುಡುಗಿಯ, ನುಡಿ-ವಚನವು, ಕುರುಳಂದಮಂ-ನೊಸ ಲೆಡೆಯನ್ನಾವರಿಸಿದ ಕೇಶಗಳಂತೆ, ಆದುದು-ಮುರುಸಾಯಿತು. ಇಂದು-ಈ ದಿನ, ಇವಳನು-ಈ ಬಾಲಕಿಯನ್ನು, ಇವಳ-ಈಕೆಯ, ಆಯುಳಿವಳುಅಹ-ಮೃತ್ಯುವನ್ನು ಎದುರುನೋಡುತ್ತಲಿರುವ, ತಾಯಿ - ಮಾತೆಯಾದ ಮುದುಕಿಯು, ಇವಳನು-ಈಕೆಯನ್ನು, ಬೋಧಿಸಿದಳು-ತಿಳಿಹೇಳಿದವಳು, ಆಗಿರಬೇಕು-ಇರಬಹುದು, (ಇವಳನು-ಈ ಅಸುಳೆಯನ್ನು, ಅಳಿಪ-ಕಾಮು ಕನ ಮನೋಭಿಲಾಷೆಗೆ ವ್ಯತಿರಿಕ್ತವಾಗಿರಬೇಕೆಂದು ದುರ್ಬೋಧನೆಯಂಗೈದ, ಇವಳತಾಯಿ-ಈ ಬಾಲೆಯ ಮಾತೆಯು, (ಎಂದು ಪಾಠಾಂತರದಲ್ಲಿ). ಎಂದು-ಎಂಬದಾಗಿ, ಆವಳ-ಆ ಕಾಮುಕಳಾದ ಬಾಲೆಯ, ಕಣ್ಮುಂತಾಗಿ-ಪುರೋಭಾಗದಲ್ಲಿಯೇ, ನಿಜಸಖನೊಳು-ತನ್ನ ಮಿತ್ರನೊಂದಿಗೆ, ಓರ್ವನು-ಒಬ್ಬಾನೊಬ್ಬ ವಿಟನು, ಆಲೋಚಿಸಿದನು-ಯೋಚನೆಯಂಗೈದನು, ಇದನು

---

ಗಳಿಂ ಪರಸ್ಪರ ಕಾಮೋದ್ರೇಕವನ್ನು ಹೆಚ್ಚುಮಾಡಿಕೊಂಡು ಅತ್ಯಾನಂದದಿಂದ ರತಿಸುಖವನ್ನು ಅನುಭವಿಸುತ್ತ, ಕಾಲವನ್ನು ಬಹು ಸುಲಭವಾಗಿ ಕಳೆಯುತ್ತಿರುವುದನ್ನು ವೃಕೋದರನು ನೋಡುತ್ತ ಮಹದಾಶ್ಚರ್ಯ ಭರಿತನಾಗಿ ಮುಂದೆ ನಡೆದನು||೩೧|| ಹೀಗೆ ಸ್ವಲ್ಪದೂರ ಹೋಗಲಾಗಿ ಅಲ್ಲಿ ಪೊಂಬಣ್ಣವಾಗಿಯೂ, ಕರ್ಕಶವಾಗಿಯೂ, ಇರುವ ತಮ್ಮ ಕುಚಯುಗ್ಮಗಳಿಂದ ವಿರಹಿಗಳ ಹಸ್ತಂಗಳನ್ನೂ, ಸೌಂದರ್ಯಾತಿಶಯದಿಂದ ಅವರ ನೇತ್ರಂಗಳನ್ನೂ, ತೊಂಡೆ ಹಣ್ಣಿನಂತೆ ಕೆಂಪಾದ ತುಟಿಗ ಳಿಂದ ಬಾಯನ್ನೂ, ಸವಿನುಡಿಗಳಿಂದ ಶ್ರೋತ್ರಂಗಳನ್ನೂ, ಶರೀರದ ಸುವಾಸನೆಯಿಂದ ಅವರ ಉಸಿರನ್ನೂ, ಅಲೆಗಳೆ ಯುತ್ತಾ, ತಮ್ಮ ಅಂಗಸ್ಪರ್ಶದಿಂದ ಪರಮಾನಂದವನ್ನುಂಟುಮಾಡಿ ಅವರ ಮನಸ್ಸನ್ನು ದಣಿಸುತ್ತ ಜಿತೇಂದ್ರಿಯರಾದ ಮುನಿವರ್ಯರನ್ನೂ ಕೂಡ ಭ್ರಾಂತರಾಗುವಂತೆ ಮಾಡಲು ಮನ್ಮಥನೇ ಈ ಬಾಲೆಯರ ರೂಪವಂ ಧರಿಸಿರುವನೋ ಎಂಬಂತಿ ರುವ ಸುಂದರಾಂಗನೆಯರನ್ನು ನೋಡುತ್ತ || ೩೨ || ಮುಂದೆ ನಡೆಯಲು ಅಲ್ಲಿ ಒಬ್ಬಾನೊಬ್ಬ ವಿಟನು ತನ್ನ ಸಖನೊಂದಿಗೆ ಕಾಮುಕಳಾದ ಬಾಲೆಯ ಎದುರಾಗಿಯೇ, ಅಯ್ಯಾ ಮಿತ್ರನೇ, ಈ ಬಾಲೆಯನ್ನು ನೋಡು, ಈಕೆಯ ಮನಸ್ಸು ಇವಳ ಸ್ತನಗ

ದಿವಳಸನ್ಮಾನಮೇಕಿವಳನತೆಯಂತಾದು | ದಿವಳೊಲವಿದೇಕಿವಳವಾಧ್ಯದಂತಾದುದಿರ್ದವೊಲೀಗಳ್ನೆಡೆಯೊಳು || ಇವಳನುಡಿ ಯೇಕಿವಳಕುರುಳಂದಮಾದುದಿಂ | ದಿವಳಾಯುಳಿವಳಹತಾಯ್ಬೋಧಿಸಿದಳಾಗಬೇ | ಕಿವಳನೆಂದವಳಕಣ್ಮಂತಾಗಿನಿಜಸಖನೊ ಳೋರ್ವನಾಲೋಚಿಸಿದನು ||೩೩|| ಸವಿನೋಟದೋಳ್ಪಂಚುನಗೆಯೋಳ್ಪಳಂಚುಸೊಗ | ಯಿಸುವಬೇಟದೋಳ್ಕೃತಕಮೊಲವಿ ನೋಳ್ಗತಕಮುಸು | ರುವಲಲ್ಲೆಯೊಳ್ಕೊಂಕುಬಗೆಯೋಳ್ಕ | ಳಂಕುಸವಿಲುಗಲೆಗಳೋಳ್ಸಲೆವಂಚನೆ || ತವಕದೋಳ್ಪುಸಿಯಳ ವುತಕ್ಕೆಯೋಳ್ಕಳವುವಿಾ | ರುವನೇಹದೋಳ್ಮುಸುಳುಕೂಟದೊಳ್ನುಸುಳುಸೇ | ರುವೆಯಾಗಿನೆಲೆಗೊಂಡಗಣಿಕೆಯರತಂಡವಿಾ ತೆರದಿಚೆಲ್ವಂಪಡೆದುದು || ೩೪ || ಅಕ್ಕಜವಮಾಡದಿರಿವಂನಿನ್ನ ಮೈವಳಿಗೆ | ತಕ್ಕನಲ್ಲಂನೀನೊಲಿವಗೊಡಿವೆಯೇಕಿನ್ನುತ | ಕ್ಕ

---

ಕಾಮುಕನಾರ್ಮೋರ್ವನು ತನ್ನ ಸಖನನ್ನು ಸಂಬೋಧಿಸಿ ಕಾಮುಕಳಾದ ಬಾಲೆಯ ಎದುರಿನಲ್ಲಿ ನುಡಿದ ಮಾತು.

ಅ|| ವಿ|| ಕುಚದ ಕಾಠಿಣ್ಯವನ್ನು ಮನವು ಧರಿಸಿದೆ ಎಂದೂ, ಮಂದಗಮನದಂತೆ ಉಪಚಾರಾದಿಗಳೆ ಇಲ್ಲವೆಂಬದಾ ಗಿಯೂ, ವಿಶ್ವಾಸವು ಕಡಮೆಯಾಯಿತೆಂತಲೂ, ಸರಿಯಾದ ಮಾತುಗಳನ್ನಾಡುವುದಿಲ್ಲವೆಂತಲೂ ವಿರಹಿಯ ಆಶಯವು ||೩೩||

ಟೀ|| ಸವಿನೋಟದೋಳ್-ವಿಶ್ವಾಸಪೂರಿತಮಾದ ಕಟಾಕ್ಷದಲ್ಲಿ, ಪಂಚು_ಮೋಸವು, ನಗೆಯೊಳ್-ಹುಸಿನಗೆಯಲ್ಲಿ, ಪಳಂಚು_ಹರಡುವಿಕೆಯು, ಸೊಗಸುವ_ಕಾಂತಿಯುಕ್ತಮಾದ, ಬೇಟದೋಳ್-ಶೃಂಗಾರದಲ್ಲಿ, ಕೃತಕಂ-ಕೃತ್ರಿಮವು, ಒಲವಿ ನೋಳ್_ಪ್ರೇಮದಲ್ಲಿ, ಗತಕಂ_ಶಾಶ್ವತವಿಲ್ಲದಿರೋಣವು, ಉಸುರ್ವ_ಹೇಳುವ, ಲಲ್ಲೆಯೋಳ್ - ಬಲ್ನುಡಿಗಳಲ್ಲಿ, ಕೊಂಕು- ಕ್ಷೀಣಗತಿಯು, ಬಗೆಯೋಳ್-ಮನದಲ್ಲಿ, ಕಳಂಕಂ_ದೋಷವು, ಸವಿಗಲೆಗಳೋಳ್- ಸಚ್ಛಾಸ್ತ್ರಾಭ್ಯಾಸದಲ್ಲಿ, ಸಲೆ-ಚೆನ್ನಾಗಿ, ವಂಚನೆ_ಮೋಸವು, ತವಕದೋಳ್-ವಿರಹಾತಿಶಯದಲ್ಲಿ, ಪುಸಿ_ಅನೃತವು, ಅಳವು_ವ್ಯಸನವು, ತಕ್ಕೆಯೋಳ್_ಒಲಿಯುವುದರಲ್ಲಿ, ಕಳವು-ತಸ್ಕರತೆಯು, ಮಿಾರುವ-ದಡದಿಂದೀಚೆಗೆ ಬರುವ, ನೇಹದೋಳ್-ಮೈತ್ರಿಯಲ್ಲಿ, ಮುಸುಳು-ಕಳಾಹೀನವಾಗುವುದು, ಕೂಟದೋಳ್_ಕ್ರೀಡೆಯ ಜೋಡಣೆಯಲ್ಲಿ, ನುಸುಳು - ಬಿಡಿಸಿಕೊಳ್ಳುವುದು, ಮೊದಲಾದವು ಸೇರುವೆಯಾಗಿ_ಬಂದಾಗಿ, ನೆಲೆ ಗೊಂಡ_ಶಾಶ್ವತವಾದ, ಗಣಿಕೆಯರ_ವೇಶ್ಯಾಂಗನೆಯರ, ತಂಡಂ_ಗುಂಪು, ಈತೆರದಿ-ಈ ಪರಿಯಿಂದ, ಚೆಲ್ವ-ಸೌಂದರ್ಯವನ್ನು, ಪಡೆದುದು_ಐದಿತು.

ಅ|| ವಿ|| ಸವಿಯಾದ ನೋಟ (ವಿ. ಪೂ. ಕ.) ||೩೪||

ಟೀ|| ಅಕ್ಕ_ಎಲೆ ಬಾಲೇ, ಜವಮಾಡದಿರು - ಆತುರಪಡಬೇಡ, ಮತ್ತು ಅಕ್ಕಜವ_ಬಹುಕಾಲದ ಪ್ರೇಮವನ್ನು, ಮಾಡದಿರು_ಎಸಗಬೇಡ, ಇವಂ_ಈ ಸಖನು, ನಿನ್ನ_ತ್ವತ್ಸಂಬಂಧದ, ಮೈವಳಿಗೆ_ದೇಹದ ಬಗೆಗೆ, ಮತ್ತು ನಿನ್ನ ಒಳ್ಳೆಗುಣಗ ಳಿಗೆ, ತಕ್ಕನು_ಅನುರೂಪನು, ಅಲ್ಲ-ಅಲ್ಲವು ನಿನ್ನ-ನಿನ್ನ ಸಂಬಂಧದ, ಒಲವಿಗೆ-ಮೆಚ್ಚಿಕೆಗೆ, ಇನ್ನು-ಪ್ರೇಮವು ಆವಿರ್ಭವಿ ಸಿದ ಬಳಿಕ, ಒಡವೆ_ತೊಡಿಗೆಗಳಿಗಾಗಿ ಬಯಸುವುದು, ಏಕೆ-ಏನುಪ್ರಯೋಜನ, ಒಲವೆ_ಪ್ರೀತಿಸಿರತಕ್ಕದ್ದರ, ಗೊಡಿವೆ, ಬಗೆಯು, ಏಕೆ_ಬರೀ ಪ್ರೀತಿಗೆ ವಶವಾಗಬೇಡ, ಕಕ್ಕುಲಿತೆ_ಮತ್ತೆ ಅವನ ವಶವರ್ತಿಯಾಗತಕ್ಕದ್ದು, ಬೇಡ_ಅನಾವಶ್ಯಕವು, ಇವನ- ಈತನೊಂದಿಗೆ, ಕೂಟಮುಂ_ ಸಂಯೋಗವನ್ನು, ಪರಿದ ಬಳಿಕ- ತ್ಯಜಿಸಿದಮೇಲೆ, ಇವನ-ಈ ವಿಟನ, ಲೇಸು_ ಮೇಲ್ಮೆಯು, ಆವುದು-ಯಾವುದು ತಾನೆ, ಉಂಟೆ_ಇರುತ್ತದೆ, ಇವನ - ಈ ವಿರಹಿಯ, ಕೂಟಮುಂ - ಶಿರೋಭೂಷಣವಾದ ವಸ್ತ್ರವನ್ನು, ಪರಿದ ಬಳಿಕ_ವಿಕ್ರಯಿಸಿದ ನಂತರ, ಇವನ ಲೇಸು_ಇವನಿಂದಾಗುವುದು, ಆವುದುಂಟು_ಏನಿದೆ, ಠಕ್ಕಿಪರೆ-ಸುಳ್ಳು ಹೇಳಬಹುದೆ,

---

ಳಂತೆ ಕಠಿಣವಾಗಿ ಹೋಗಿರುವುದು, ಇವಳು ಮೊದಲು ಮಾಡುತ್ತಿದ್ದ ಉಪಚಾರವು ಇವಳ ಮಂದಗಮನವನ್ನು ಮಾದರಿ ಯಾಗಿ ಮಾಡಿಕೊಂಡಿರುವುದು. ಇವಳಿಗೆ ಮೊದಲಿನಂತೆ ಪ್ರೀತಿಯು ಇಲ್ಲದೆ ಬಡನಡುವಿನಂತೆ ಕುಂದಿಹೋಯಿತು. ಇವಳು ಮುನ್ನಿನಂತೆ ಮಾತನ್ನೇ ಆಡುವುದಿಲ್ಲವಲ್ಲಾ? ಈ ರೀತಿಯಲ್ಲಿಯೆ ಆಚರಿಸೆಂದು ಇವಳ ತಾಯಿಯೇ ಬೋಧಿಸಿರಬಹುದೆಂದು ನುಡಿಯುತ್ತಿದ್ದುದನ್ನು ಕೇಳುತ್ತ ಪುನಃ ಸ್ವಲ್ಪದೂರ ನಡೆದುಹೋಗಲಾಗಿ ||೩೩|| ಅನೇಕರಾದ ಗಣಿಕಾಸ್ತ್ರೀಯರು ತಮ್ಮ ಕಟಾಕ್ಷವೀಕ್ಷಣದಿಂದ ಕಾಮುಕರ ಚಿತ್ತವಂ ಚಂಚಲಗೊಳಿಸುತ್ತಲೂ, ಮುಗುಳ್ನಗೆಯಿಂದಲೂ ಸೌಂದರ್ಯದ ಬೆಡಗಿನಿಂ ದಲೂ, ಕಪಟ ಪ್ರೀತಿಯಿಂದಲೂ ಅವರನ್ನು ಮರುಳುಮಾಡುತ್ತಲಿರುವುದನ್ನು ನೋಡಿದಮೇಲೆ ಮುಂದೆ ಮುಂದೆ ನಡೆಯುತ್ತಿರು ವಾಗ ||೩೪|| ಒಬ್ಬ ದೂತಿಯು ತನ್ನ ಯಜಮಾನಿಯಾದ ಸೂಳೆಯನ್ನು ಕುರಿತು ಕಾಮುಕನಿಗಾಗಿ ನೀನೇತಕ್ಕೆ ಆತುರಪಡುವೆ? ಸುಮ್ಮನೆ ಅನುರಾಗ ಮಾತ್ರಕ್ಕೆ ಎಂದೆಂದಿಗೂ ಒಪ್ಪಬೇಡ, ಇವನ ಸರ್ವಸ್ವವನ್ನೂ ಸೆಳೆಯುವವರೆಗೂ ಒಳ್ನುಡಿಗಳಿಂದ ಬೆರಗು ಮಾಡು, ಸುಮ್ಮನೆ ಅವನೊಂದಿಗೆ ಮಾತನಾಡಿ ಕಾಮೋದ್ರೇಕವನ್ನುಂಟುಮಾಡತಕ್ಕ ನಿನ್ನ ಕುಚ, ಕೆನ್ನೆ, ತೊಡೆ, ತುಟಿ ಇವನ್ನು ತೋರಿಸಬೇಡವೆಂಬ ಆಶಯವನ್ನು ಸೂಚಿಸುವ ಮತ್ತು ವಿರಹಿಯ ಈ ಅಭಿಪ್ರಾಯಕ್ಕೆ ವ್ಯತಿರಿಕ್ತಭಾವವು ತೋ

ಲಿತೆಪೇಳಿವನಕೂಟಮಂಪರಿದಬಳಿಕಿವನಲೇಸಾವುದುಂಟು ‖ ಠಕ್ಕಿಪರೆಪೊನ್ನಿಲ್ಲದಾತನಿವನಾಗನಿದಿ । ರಿಕ್ಕದಿರ್ಸಾಕೆಂದುಮುನಿಸಿ ನೋಳ್ಪಿಟನಚಿ । ಚಿತ್ತಕ್ಕೆಸೊಗಸೆನೆಸೂಳೆಗವಳದೂತಿಕೆನುಡಿದಳವನಂಜರೆದುಪೊಗಳ್ವೊಲು ‖೩೫‖ ತಾಂತವೆಕೃತಾಂತರಿಪು ನೇತ್ರದಿಂದುರಿದವೃ । ತ್ತಾಂತಮಂನೆನೆಯದೆಲತಾಂತಶರನಗಲ್ದವನಿ । ತಾಂತರ್ನಿತಾಂತವನಮುಂಸುಡುವೆನೆಂದುಪೊರವಟ್ಟು ನಡೆತಪ್ಪನಂತೆ ‖ ಕಾಂತೆನೀನೇಕಾಂತದಿಂಪವಡಿಸುವಚಂದ್ರ । ಕಾಂತಭವನದೊಳಗೇಕಾಂತದೊಳಿಹಂನಿನ್ನ । ಕಾಂತನೇಕಂತ ರಂಗದೊಳೆಣಿಕೆಯಂದೋರ್ವಚಪಳೆತರಳೆಗೆನುಡಿದಳು ‖೩೬‖ ತೋಟಿಗೆಳಸನೊಯ್ಯನೊಯ್ಯನೆಮನೋಭವನ । ದಾಟಿಗೊಳ ಗಾಗಿನಿಲಿಸುವಮದನಕಲೆಗಳಂ । ಪಾಟಸುವಬಗೆಯನೆಳೆಯರ್ಗೆಕಲಿಸುವನಾಯಕಿಗೆಧನಯುತರನೊಲಿಸುವ ‖ ತಾಟಿಗಂಟಕಿ

---

ಪೊನ್ನಿಲ್ಲದಾತನು–ನಿರ್ಭಾಗ್ಯನು, ಇವನು- ಈ ವಿಟನು, ಆಗನು–ಅಲ್ಲವು, ಠಕ್ಕಿಪರೆ-ಸುಳ್ಳುಮಾತನ್ನೇ ನುಡಿಯುತ್ತಾ ಇದ್ದಲ್ಲಿ, ಪೊನ್ನಿಲ್ಲದಾತನು-ಬಡವನು, ಇವನು–ಈತನು, ಆಗನೆ–ಆಗದಿರುವನೆ, ಇದಿರಿಕ್ಕದಿರ್–ಕಾಮುಕನ ಇಚ್ಛೆಗನುಗುಣವಾಗಿ ನಿನ್ನ ಆಶಯವನ್ನು ಸೂಚಿಸಬೇಡ, ಮತ್ತು ಯಾವುದೊಂದು ಆಶೆಯೂ ಇಲ್ಲದೆ ಪ್ರಿಯನನ್ನು ಸೇರು. ಇದಿರಿಕ್ಕದಿರ್–ರತಿವಿಲಾಸಕ್ಕೆ ಹೇತುಭೂತಂಗಳಾದ ಅಧರವು, ಕುಚಯುಗ್ಮವು, ನುಣ್ಗದಪು, ಜಘನಂಗಳು ಇವನ್ನು ಅವನ ವಶಮಾಡಬೇಡ. ಸಾಕು– ಕಾಮುಕನೊಂದಿಗೆ ಪ್ರೇಮವು ಮತ್ತು ಚಂಡಿತನವೂ ಬೇಡ, ಎಂದು-ಎಂಬದಾಗಿ, ಮುನಿಸಿನೋಳ್–ಮನಸ್ಸಿನ ಆಕ್ರೋಶ ದಿಂದ, ವಿಟನ–ಕಾಮುಕನ, ಚಿತ್ತಕ್ಕೆ-ಹೃದಯಕ್ಕೆ, ಸೊಗಸೆನೆ–ಒಲಿಯುವಂತೆ, ಅವನಂ–ಆ ವಿರಹಿಯನ್ನು, ಜರೆದು–ಹೀಯಾಳಿಸಿ, ಪೊಗಳ್ವೊಲು–ಸ್ತುತಿಸುವಹಾಗೆ, ಅವಳ ದೂತಿಕೆ-ಆ ಬಾಲೆಯ ಕಂಚುಕಿಯು, ನುಡಿದಳು–ಹೇಳಿದಳು ‖೩೫‖

ಟೀ‖ ತಾಂ–ಅವನು, ತವೆ–ಸ್ವೇಚ್ಛೆಯಾಗಿ, ಕೃತಾಂತ–ಕಾಲನ, ರಿಪು–ಹಗೆಯಾದ ಹರನ, ನೇತ್ರದಿ-ಫಾಲಾಕ್ಷದಿಂದ, ಉರಿದ–ಸುಟ್ಟುಹೋದ, ವೃತ್ತಾಂತಮಂ–ಸಮಾಚಾರವನ್ನು, ನೆನೆಯದೆ–ಸ್ಮೃತಿಪಥಕ್ಕೆ ತಂದುಕೊಳ್ಳದೆ, ಲತಾಂತಶರನನು– ಲತ–ಎಳೆವಳ್ಳಿಗಳ, ಅಂತ–ತುದಿಯಲ್ಲಿರತಕ್ಕ ಪುಷ್ಪಗಳು, ಪಲ್ಲವಂಗಳು ಇವೇ, ಶರನು–ಸರಲನ್ನಾಗಿವುಳ್ಳ ಮನ್ಮಥನು, ಅಗಲ್ದ– ಏಕಾಕಿನಿಯಾಗಿರತಕ್ಕ, ವನಿತಾ-ಸ್ತ್ರೀಯರ, ಅಂತಃ-ಚಿತ್ತವೆಂಬ, ನಿತಾಂತ–ಸಾಂದ್ರವಾದ, ವನಮಂ–ಕಾಡನ್ನು, ಸುಡುವೆನು- ಭಸ್ಮಮಾಡಿಬಿಡುತ್ತೇನೆ. ಎಂದು–ಎಂಬದಾಗಿ, ಪೊರಮಟ್ಟು–ನಡೆದು, ನಡೆತಪ್ಪನಂತೆ-ಸಮಿಾಪಸ್ಥನಾಗುವಹಾಗೆ, ಕಾಂತೆ–ಎಲೈ ಸುಂದರಿಯೇ, ನೀನು–ನೀನಾದರೊ, ಏಕಾಂತದಿಂ–ರಹಸ್ಯವಾಗಿ, ಪವಡಿಸುವ–ಮಲಗಿಕೊಳ್ಳತಕ್ಕ. ಚಂದ್ರಕಾಂತಮಣಿ-ಇಂದು ವಿನ ಸಂಬಧದ ಕಲ್ಲಿನಿಂದ, ಸ್ಥಗಿತವಾಗಿ–ಕೆತ್ತಲ್ಪಟ್ಟ ಇರತಕ್ಕ, ಭವನದೊಳಗೆ–ಮಂದಿರದಲ್ಲಿ, ಏಕಾಂತದೊಳ್–ಗೋಪ್ಯವಾ ದೆಡೆಯಲ್ಲಿ, ನಿನ್ನ ಕಾಂತನು-ನೀನು ಬಯಸುವ ವಿಟನು, ಇಹಂ–ಇರುವನು, ಅಂತರಂಗದಲ್ಲಿ-ಮನಸ್ಸಿನಲ್ಲಿ, ಎಣಿಕೆ-ವ್ಯಥೆಯು, ವಿತರ್ಕೆ–ಮಾಡುವುದು ವಿತಕ್ಕೆ, ಎಂದು–ಎಂಬದಾಗಿ, ಓರ್ವ–ಒಬ್ಬ, ಚಪಳೆ–ಚಿತ್ತಚಂಚಲವನ್ನುಳ್ಳ ಹೆಂಗಸು, ತರಳೆಗೆ–ವಿರಹ ದಿಂದಿರ್ವ ಬಾಲೆಯೊಂದಿಗೆ, ನುಡಿದಳು–ಹೇಳಿದಳು, ಇದು ವಿರಹವೇದನೆಯನ್ನು ತಾಳಲಾರದ ಕಾಮುಕಳಿಗೆ ಒಬ್ಬ ಚಪಲ ಬುದ್ಧಿಯ ಹೆಂಗಸು ಹೇಳಿದ್ದು,

ಅ। ವಿ‖ ಪೂರ್ವದಲ್ಲಿ ಈಶ್ವರನು ಅತಿವೈರಾಗ್ಯವನ್ನವಲಂಬಿಸಿ ತಪೋನಿಷ್ಠನಾಗಿರುವ ಕಾಲದಲ್ಲಿ ಮನ್ಮಥನು ಅಲ್ಲಿಗೆ ಬಂದು ತನ್ನ ಪುಷ್ಪಬಾಣದಿಂದ ಹೊಡೆಯಲಾಗಿ ಪರಮೇಶ್ವರನಿಗೆ ಬಹು ಸಿಟ್ಟು ಬಂದು ತನ್ನ ಮೂರನೇ ಕಣ್ಣನ್ನು ತೆರೆದು ನೋಡಿದನು. ಆ ನೇತ್ರಾಗ್ನಿಗೆದುರಾದ ಮಿಾನಕೇತನನು ಕೂಡಲೆ ಬೂದಿಯಾಗಿ ಹೋದನು ‖೩೬‖

ಟೀ‖ ತೋಟಿಗೆ–ಹೇಳಿಕಳುಹಿಸಿಕೊಟ್ಟಲ್ಲಿ, ಎಳಸದ – ಸಮಿಾಪಸ್ಥನಾಗದವನನ್ನು, ಒಯ್ಯನೊಯ್ಯನೆ–ನಿಧಾನವಾಗಿ, ಮನೋಭವನ–ಮಾರನ, ದಾಟಿಗೆ–ಪರಾಕ್ರಮಕ್ಕೆ, ಒಳಗಾಗಿ- ವಶನಾಗಿ, ನಿಲಿಸುವ-ಶಾಶ್ವತಮಾಡತಕ್ಕ, ಮದನ ಕಲೆಗಳಂ– ಮಾರವಿದ್ಯೆಯನ್ನು, ಪಾಟಸುವ–ಅಭ್ಯಾಸಮಾಡತಕ್ಕ, ಬಗೆಯನು-ರೀತಿಯನ್ನು, ಎಳೆಯರ್ಗೆ – ಕಾಮುಕರಾದ ಸ್ತ್ರೀಯರಿಗೆ, ಕಲಿಸುವ–ಬೋಧಿಸುವ, ನಾಯಕಿಗೆ – ಜಾರಿಣಿಗೆ, ಧನಯುತರನು – ಹಣಗಾರರಾದ ಕಾಮುಕರನ್ನು, ಒಲಿಸುವ–ಸೇರಿಸುವ,

---

ರುವ ಅರ್ಥಗರ್ಭಿತವಾದ ನುಡಿಗಳಿಂದ ಕಾಲಹರಣ ಮಾಡುತ್ತಿರುವುದನ್ನು ಕಂಡನು. ‖೩೫‖ ಮತ್ತು ಚಪಲಚಿತ್ತಳಾದವ ಳೊಬ್ಬಳು ಸುಂದರಿಯಾದ ಕಾಮುಕಳನ್ನು ಕುರಿತು, ಎಲೈ ಬಾಲೆಯೇ ಪೂರ್ವದಲ್ಲಿ ಈಶ್ವರನ ಹಣೆಗಣ್ಣಿನಿಂದ ಸುಟ್ಟುಹೋದೆ ನೆಂಬ ಯೋಚನೆಯೇ ಇಲ್ಲದೆ ವಿರಹವೇದನೆಯನ್ನನುಭವಿಸುವ ಜನರ ಗುಂಪನ್ನು ಭಸ್ಮಮಾಡಿ ಬಿಡಬೇಕೆಂದು ಮನ್ಮಥನೇ ನಿನ್ನ ರೂಪದಿಂದ ಮೆರೆಯುತ್ತಲಿರುವನೋ ಎಂಬಂತೆ ತೋರುವ ನಿನ್ನ ಪಾಶದಲ್ಲಿ ಕಾಮುಕರನೇಕರು ಸಿಕ್ಕಿಬೀಳುವರು. ‖೩೬‖ ಎಂದು ನುಡಿಯುತ್ತಿರುವುದನ್ನೂ, ದಾದಿಯರನೇಕರು ಕಾಮುಕರಿಗೂ ಮತ್ತು ಬಾಲೆಯರಿಗೂ ವಿರಹತಾಪವನ್ನು ಹೆಚ್ಚಿಸಿ ಪರ ಸ್ಪರ ಸೇರುವಂತೆ ಮಾಡುತ್ತಲೂ ಒಂದು ವೇಳೆ ಒಬ್ಬರಿಗೊಬ್ಬರಿಗೆ ಕಲಹವುಂಟಾದರೆ ಪುನಃ ಒಂದುಗೂಡಿಸುವುದನ್ನೂ, ಹಣ

ಸಂಧಿಗಳನೆಸಗುವಮುಳಿಯೆ | ಮೇಟಿಗೋರ್ವನನರಸಿಸೊನಸಬಲಿಸುವಚಾರು | ಚೇಟಿಯರ್ಚಲಿಸುವರನಂಗಶಬರನಬೇಟೆ ತೋಹಿನಮೃಗಂಗಳಂತೆ || ೩೭ || ಇಂತೆಸೆವಗಣಿಕಾಸಮೂಹಮಂನೋಡುತ | ಲ್ಲಿಂತಳರ್ದನಿಲಜಂಬರೆಮುಂದೆನಾನಾದಿ | ಗಂತದಿಂಮುರಹರನಕೀರ್ತಿಯಿಂಕೇಳ್ದೊದವಿದಿಷ್ಟಾರ್ಥಮಂಪಡೆಯಲು || ತಂತಮ್ಮವಿದ್ಯಾವಿನೋದಮಂತೋರಿಸುವ | ಸಂತಸದೊಳೈತಂದುನೆರೆದಿರ್ದಕೋವಿದರ | ತಿಂತಿಣಿಯರಾಜರಾಜಿಪರಾಜಗೇಹದಸಮೀಪದೆಡೆಗೈತಂದನು || ೩೮ || ತಗರ್ವೆಣಗಿಸುವಸಿಂಪಿಲೆಗಚ್ಚಿಸುವಕೋಳಿಗಾ | ಳಗವಕಾದಿಸುವಕರಿತುರಗದೇರಾಟಮಂ | ಮಿಗೆತೋರಿಸುವನೆತ್ತಪಗಡೆಯೊಳ್ಬಿನದಿಸುವಜೂಜು

ತಾಟಸಂ-ತಟವಟದ ಕೆಲಸವು, ಟಕ್ಕಿ-ಅನೃತ ವಚನಂಗಳಿಂದ ಕೃತಕಕ್ಕೊಳಗು ಮಾಡುವುದು, ಮುಳಿಯೆ-ಕೋಪವನ್ನೈದಿದರೆ, ಸಂಧಿಗಳನು-ಜೋಡಿಸುವ ಚಮತ್ಕಾರವನ್ನು, ಎಸಗುವ-ಮಾಡತಕ್ಕದ್ದು, ಮೇಟಿಗೆ-ಇವನಿಗಿಂತ ಉತ್ತಮನಾದ, ಓರ್ವನ-ಮತ್ತೊಬ್ಬ ಕಾಮುಕನನ್ನು, ಅರಿಸಿ-ಹುಡುಕಿ, ಸೊಗಸ-ಅಲಂಕಾರವನ್ನು, ಬಲಿಸುವ-ಹೆಚ್ಚು ಮಾಡತಕ್ಕ, ಚಾರು-ಸುಂದರಿಯರಾದ, ಚೇಟಿಯರು-ತಲೆಹಿಡುಕಿಯರಾದ ದಾಸಿಯರು, ಅನಂಗ-ಮದನನೆನ್ನುವ, ಶಬರನ-ವ್ಯಾಧನ, ಬೇಟೆ-ಕೊಳ್ಳೆಗೆ, ತೋಹಿನ-ನೆರವಾದ, ಮೃಗಗಳಂತೆ-ಕಾಡು ಮೃಗಗಳನ್ನು ವಶಪಡಿಸಿಕೊಳ್ಳುವುದರಲ್ಲಿ ಸಹಾಯಕವಾದ ಪಳಗಿದ ಜೀವಿಯ ಹಾಗೆ, ಚಲಿಸುವರು-ಓಡಾಡುವರು.

ಅ|| ವಿ|| ಮನ-ಮನಸ್ಸಿನಲ್ಲಿ, ಭವ-ಹುಟ್ಟಿದವನು (ಸ. ತ.) || ೩೭ ||

ಟೀ|| ಇಂತು - ಈ ಬಗೆಯಾಗಿ, ಎಸೆವ - ಹೊಳೆಯುವ, ಗಣಿಕಾಸಮೂಹಮಂ - ವೇಶ್ಯಾಸ್ತ್ರೀಯರ ಗುಂಪನ್ನು, ನೋಡುತ-ಈಕ್ಷಿಸುತ್ತ, ಅಲ್ಲಿಂ-ಆ ಗಣಿಕಾ ಸ್ತ್ರೀಯರ ಬೀದಿಯಿಂದ, ತಳರ್ದು-ಹೊರಟು, ಅನಿಲಜಂ-ವೃಕೋದರನು, ಬರೆ-ಐತರಲು, ಮುಂದೆ-ಪುರೋಭಾಗದಲ್ಲಿ, ಮುರಹರನ-ಮುರಾಂತಕನಾದ ಕೃಷ್ಣನ, ಕೀರ್ತಿಯಂ-ಯಶಸ್ಸನ್ನು, ಕೇಳ್ದು-ಲಾಲಿಸಿ, ಒದವಿದ-ಉಂಟಾದ, ಇಷ್ಟಾರ್ಥಮಂ-ಇಷ್ಟಸಿದ್ಧಿಯನ್ನು, ಪಡೆಯಲು - ತಾಳಲು, ನಾನಾದಿಗಂತದಿಂ - ಬೇರೆಬೇರೆಯಾದ ನಾಡುಗಳಿಂದ, ಐತಂದು-ಸಮೀಪಸ್ಥರಾಗಿ, ತಂತಮ್ಮ-ಸ್ವಕೀಯವಾದ, ವಿದ್ಯಾ-ಬಿಜ್ಜೆಯ, ವಿನೋದಮಂ- ಕುಶಲತೆಯನ್ನು, ತೋರಿಸುವ-ದೃಷ್ಟಿಗೋಚರಕ್ಕೆ ತರತಕ್ಕ, ಸಂತಸದೊಳು-ಆನಂದಾತಿಶಯದಿಂದ, ನೆರೆದಿರ್ದ-ಕೂಡಿದ್ದ, ಕೋವಿದರ-ಪಂಡಿತರ, ತಿಂತಿಣಿಯ-ಸಮೂಹದ, ರಾಜಿ-ಶ್ರೇಣಿಗಳಿಂದ, ರಾಜಿಪ-ಪ್ರಕಾಶಿಸತಕ್ಕ, ರಾಜಗೇಹದ-ಶ್ರೀ ಕೃಷ್ಣಸ್ವಾಮಿಯ, ಶುಭಾಗಾರದ, (ಅರಮನೆಯ) ಸಮೀಪದೆಡೆಗೆ-ಕೇವಲ ಹತ್ತಿರಕ್ಕೆ, ಐತಂದನು-ಬಂದನು.

ಅ|| ವಿ|| ಇಷ್ಟಾರ್ಥ (ಸ. ದೀ. ಸಂಧಿ) || ೩೮ ||

ಟೀ|| ತಗರ್-ಕುರೀಪಟ್ಟಿಗಳನ್ನು, ವೆಣಗಿಸುವ-ಕಾಳಗಕ್ಕೆ ಬಿಡತಕ್ಕ, ಸಿಂಪಿಲೆ-ಮುಂಗಸಿ ಸರ್ಪಗಳನ್ನು, ಕಚ್ಚಿಸುವ-ಕಚ್ಚಾಡಲು ಬಿಟ್ಟು ವಿನೋದವನ್ನು ನೋಡುವ, ಕೋಳಿ-ತಾಮ್ರಚೂಡಂಗಳ, ಕಾಳಗವ-ಸಂಘವನ್ನು, ಕಾದಿಸುವ-ಬಿಡತಕ್ಕ, ಕರಿತುರುಗದ-ಹಸ್ತ್ಯಶ್ವಂಗಳಮೇಲೆ, ಏರಾಟಮಂ-ಸವಾರಿಮಾಡುವುದನ್ನು, ಮಿಗೆ-ಅಧಿಕವಾಗಿ, ತೋರಿಸುವ-ಕಾಣಿಸತಕ್ಕ, ನೆತ್ತ-ಬಿಡ್ತಿದ, ಪಗಡೆಯೊಳು-ದಾಳಗಳಲ್ಲಿ, ಬಿನದಿಸುವ-ವಿನೋದಪಡಿಸತಕ್ಕ, ಜೂಜುಗಳನು-ಪಂದ್ಯಗಳನ್ನು, ಬಿಡ್ತಿ-ಬಿಟ್ಟು, ನಲಿವ-ಸಂತೋಷಪಡುವ, ಬಗೆಬಗೆಯ-ಅನೇಕರಾದ, ರಾಜಪುತ್ರರ-ಅರಸುಗುವರರ, ತನು-ದೇಹಸಂಬಂಧದ, ವಿಲೇಪನಾದಿಗಳ-ಸುಗಂಧವೇ ಆದಿಯಾದವುಗಳ, ಬಿರಸೊರಸಿನಿಂದ-ಲೇಪಿಸುವಿಕೆಯಿಂದ, ಉದಿರ್ದ-ಕೆಳಗೆಬಿದ್ದ, ಪರಿಮಳದ-ಸುಗಂಧದ್ರವ್ಯದ, ಧೂಳಿಗಳನು-ಧೂಳನ್ನು, ಅಲ್ಲಿರ್ದ-ಆ ಎಡೆಯೊಳಿರ್ದ, ಸೊಕ್ಕಾನೆಗಳ-ಮತ್ತಹಸ್ತಿಗಳನ್ನು, ಮೊಗಮೊಗೆದು-ಮೇಲ್ಗಡೆಗೆ ತಂದು ತಂದು, ಚೆಲ್ಲಿಕೊಳ್ಳುತಿರ್ದವು-ಎರಚಿಕೊಳ್ಳುತ್ತಿದ್ದವು.

ಗಾರರನ್ನೆ ಹುಡುಕಿಹುಡುಕಿ ಜೊತೆಗೊಳಿಸುತ್ತ ಮನ್ಮಥನೆಂಬ ವ್ಯಾಧನ ಬಲೆಗೆ ವಿರಹಾಗ್ನಿಯಿಂದ ತಪಿಸುತ್ತಿರುವ ಬಾಲೆಯರೆಂಬ ಮೃಗಗಳನ್ನು ಸಿಕ್ಕಿಸಲುಜ್ಜುಗಿಸಿ, ತಲೆಹಿಡುಕಿಯರೆಂಬ ಬೇಟೆನಾಯ್ಗಳು ಸುಳಿಸುಳಿದು ಸಂಚುಮಾಡುತ್ತಿರುವುದನ್ನೂ ಕಂಡು ಮತ್ತೆ ಸ್ವಲ್ಪದೂರ ನಡೆಯಲಾಗಿ ಶ್ರೀ ಕೃಷ್ಣನ ಅರಮನೆಯ ||೩೭|| ಮುಂದೆ ನಾನಾದೇಶಗಳಿಂದಲೂ ಬಂದು ಸ್ವಾಮಿಯಿಂದ ಸಕಲವಾದ ಇಷ್ಟಸಿದ್ಧಿಯಂ ಪಡೆಯಲೋಸುಗವಾಗಿ ನೆರೆದಿರುವ ಸಕಲ ಕಲಾಕೋವಿದರಾದ ಪಂಡಿತನಿಕರಮಂ ಕಂಡು ಸಂತುಷ್ಟಾಂತರಂಗನಾಗಿರುವಾಗ || ೩೮ || ಮತ್ತೊಂದೆಡೆಯಲ್ಲಿ ಹಲವರು ಕುರಿಪಟ್ಟಿಗಳ ಕಾಳಗವನ್ನು ಬಿಟ್ಟುನೋಡುತ್ತಿದ್ದರು, ಮತ್ತೆ ಕೆಲವರು ಹಾವಿಗೂ ಮುಂಗಸಿಗೂ ಜಗಳವಂ ಬಿಟ್ಟು ತಮಾಷೆಯನ್ನು ನೋಡುತಲಿದ್ದರು. ಇನ್ನೂ ಕೆಲವರು ಕೋಳಿಯ ಪಂದ್ಯದಿಂದ ಕಾಲಕಳೆಯುತ್ತಿದ್ದರು. ಬೇರೆ ಹಲವರು ಆನೆಗಳಮೇಲೂ ಕುದುರೆಗಳಮೇಲೂ ಸವಾರಿಹೊರಟು ಯಾರು ಮುಂದಾಗುವರೊ ಎಂದು ಕಾತುರರಾಗಿದ್ದರು. ಅನೇಕರು ಪಗಡೆ ಆಟದಲ್ಲಿ ಹೊತ್ತನ್ನು ಸುಲಭವಾಗಿ ಹೋ

ಗಳನೊತ್ತಿನಲಿವ ‖ ಬಗೆಬಗೆಯರಾಜಪುತ್ರರತನುವಿಲೇಪನಾದಿಗಳೊರಸೊರಸಿನಿಂದುದಿರ್ದಪರಿಮಳದ । ಧೂಳಿಗಳನಲ್ಲಿರ್ದಸೊ ಕ್ಕಾನೆಗಳ್ಮೊಗೆಮೊಗೆದುಮಿಗೆಚೆಲ್ಲಿಕೊಳುತಿರ್ದುವು ‖ ೩೯ ‖ ತನ್ನೊಳಿರ್ದಚ್ಯುತಂದ್ವಾರಕೆಗೆಬಂದಿರ । ಲ್ಮುನ್ನತಾನೈತಂದು ನಿಂದ-ದೊರಾಜಿಸುವ । ರನ್ನಂಗಳೊಡನೆಪಾಲ್ಗಡಲೆನಲ್ಮಣಿಸೌಧಕಾಂತಿಗಳ್ಕಂಗೊಳಿಸುವ ‖ ಪನ್ನಗಾರಿಧ್ವಜನರಾಜಗೃಹಮಂ ಕಂಡು । ಸನ್ನುತವರೂಥದಿಂದಿಳಿದುಮೈಯಿಕ್ಕಿಸಂ । ಪನ್ನಮತಿಪವನಜಂತಳರ್ದನಲ್ಲಿಗೆವಿಪುಲಕೋತ್ಸವಂಪೊಣ್ಮಲು ‖ ೪೦ ‖ ಮಾರನಂಪಡೆದಚೆಲ್ವಿಂದಿರೆಯನಾಳ್ವಸಿರಿ । ವಾರಿಜಾಸನಮುಖ್ಯದೇವರ್ಕಳಂಪೊರೆವ । ದಾರಂತನಗೆಸಾಲದೆಂದುಭೂಪಾಲ

---

ಅ‖ ವಿ‖ ಬಿನದಿಸು (ತ್ಭ) ವಿನೋದಿಸು (ತ್ಸ) ಜೂಜು (ತ್ಭ) ದ್ಯೂತ (ತ್ಸ) ಸೊಕ್ಕಾನೆ (ವಿ. ಪೂ) ಮೊಗೆಮೊಗೆದು (ಅಧಿಕ್ಯಾರ್ಥದಲ್ಲಿ ದ್ವಿರುಕ್ತಿ) ‖ ೩೯ ‖

ಟೀ‖ ತನ್ನೊಳು-ಪಾಲ್ಗಡಲಲ್ಲಿ, ಇರ್ದ್ದ-ನೆಲಸಿದ, ಅಚ್ಯುತಂ-ಶ್ರೀಮನ್ನಾರಾಯಣನು, ದ್ವಾರಕೆಗೆ-ದ್ವಾರಕಾನಗರಕ್ಕೆ, ಬಂದಿರಲು-ಬಂದು ಸೇರಿರುವದಕ್ಕೆ,ಮುನ್ನ-ಮೊದಲೆ, ತಾನು-ಪಯೋದಧಿಯೇ, ಐತಂದು-ಸಮೀಪಸ್ಥವಾಗಿ, ನಿಂದುದೊ-ನಿಂತುಬಿಟ್ಟಿತೋ, ರಾಜಿಸುವ-ಥಳಥಳಿಸುವ, ರನ್ನಂಗಳೊಡನೆ-ಮಣಿಗಳಿಂದೊಡಗೂಡಿ, ಪಾಲ್ಗಡಲು-ಪಯೋಧಿಯು, ಎನೆ-ಎಂಬಂತೆ, ಮಣಿ-ನವರತ್ನಖಚಿತಂಗಳಾದ, ಸೌಧ-ಮಹಡಿಗಳ, ಕಾಂತಿಗಳ-ಕಳೆಯನ್ನು, ಕಂಗೊಳಿಸುವ-ತೋರ್ಪಡಿಸತಕ್ಕ, ಪನ್ನಗಾರಿಧ್ವಜನ-ಶ್ರೀ ಕೃಷ್ಣಸ್ವಾಮಿಯ, ರಾಜಗೃಹಮಂ-ದೊರೆಯ ಮಂದಿರವನ್ನು, ಕಂಡು-ಈಕ್ಷಿಸಿ, ಸನ್ನುತ-ಸ್ತುತ್ಯರ್ಹವಾದ, ವರೂಥದಿಂ-ರಥದಿಂದ, ಇಳಿದು-ಕೆಳಗೆಬಂದು, ಮೈಯಿಕ್ಕಿ-ಪ್ರವೇಶಿಸಿ, ಸಂಪನ್ನಮತಿ-ತಿಳುವಳಿಕೆಯಿಂದ ಕೂಡಿದ, ಪವನಜಂ-ವಾಯುಸೂನುವು, ವಿಪುಲ-ಅತ್ಯಧಿಕವಾದ, ಪುಲಕೋತ್ಸವಂ-ರೋಮಾಂಚವು, ಪೊಣ್ಮಲು-ಪ್ರಾಪ್ತವಾಗಲು, ಅಲ್ಲಿಗೆ-ಆ ರಾಜಸದ್ಮಕ್ಕೆ, ತಳರ್ದನು-ನಡೆತಂದನು.

ಅ‖ ವಿ‖ ಪತ್-ಕಾಲುಗಳಿಂದ, ನಗ-ನಡೆಯುದ್ದು, (ತೃ. ತ.) ಪನ್ನಗ-ಹಾವುಗಳ, ಅರಿ-ಶತ್ರು, (ಗರುಡ ಷ. ತ.) ಪನ್ನಗಾರಿಯನ್ನು ಧ್ವಜದಲ್ಲಿವುಳ್ಳವನು (ಕೃಷ್ಣನು, ಬ. ಸ.) ರನ್ನ (ತ್ಭ) ರತ್ನ (ತ್ಸ) ರಾಜಗೃಹ (ಸಂಸ್ಕೃತಸಮಾಸಪದ)-ದೊರೆಮನೆ (ಕನ್ನಡದಲ್ಲಿ ಸರಿಯಾದ ಸಮಾನಪದ) ಮಣಿಖಚಿತವಾದ ಸೌಧ (ವಿ. ಪೂ.) ಮಣಿಸೌಧಂಗಳ ಕಾಂತಿ (ಷ. ತ.) ಸನ್ನುತವಾದ ವರೂಥ (ವಿ. ಪೂ,) ಪವನಜಂ (ತೃ. ತ.) ಪುಲಕೋತ್ಸವ (ಷ. ತ.) ವಿಪುಲವಾದ ಪುಲಕೋತ್ಸವ (ವಿ. ಪೂ.) ಮೈಯನ್ನು ಇಕ್ಕು=ಮೈಯಿಕ್ಕು (ಕ್ರಿ. ಸ.) ಪುಲಕೋತ್ಸವ (ಗುಣಸಂಧಿ) ‖ ೪೦ ‖

ಟೀ‖ ಮಾರನಂ-ಮದನನನ್ನು, ಪಡೆದ-ಸೃಜಿಸಿದ, ಚೆಲ್ವು-ಸೌಂದರ್ಯವು, ಇಂದಿರೆಯನು-ಶ್ರೀದೇವಿ ಭೂದೇವಿಯರನ್ನು, ಆಳ್ದ-ರತಿಕ್ರೀಡಾದಿಗಳಿಂದ ತೃಪ್ತಿಗೊಳಿಸುವ, ಸಿರಿ-ಐಶ್ವರ್ಯವು, ವಾರಿಜಾಸನ-ಕಮಲೋದ್ಭವನಾದ ಸೃಷ್ಟಿಕರ್ತನೆ, ಮುಖ್ಯ-ಆದಿಯಾದ, ದೇವರ್ಕಳಂ-ಸುರರನ್ನು, ಪೊರೆವ-ಪರಿಪಾಲಿಸತಕ್ಕ, ಉದಾರಂ - ದಾತೃವಾದ, ತನಗೆ-ವೈಕುಂಠಪತಿಯಾದವನಿಗೆ, ಸಾಲದೆಂದು-ಅಲ್ಲಿನ ಐಶ್ವರ್ಯದಿಂದ ಮಾತ್ರವೇ ತೃಪ್ತಿಯಿಲ್ಲವೆಂಬುದಾಗಿ, ಭೂಪಾಲಕರ-ಪೊಡವಿಪರ, ಭಾಗ್ಯಮಂ-ಐಸಿರಿಯನ್ನು, ತಳೆದನು-ಹೊಂದಿದನು, ಎಂಬ-ಎನ್ನತಕ್ಕ, ನೀರದ-ನೀರನ್ನುಕೊಡುವ ಮೋಡಗಳಂತೆ, ಶ್ಯಾಮನ-ಕಂದು ಬಣ್ಣದವನಾದ ಹರಿಯ, ಅರಮನೆಯು-ರಾಜಗೃಹವು, ಎಂದೊಡೆ-ಎಂದು ನುಡಿಯಲು, ಅದರ-ಆರಾಜಸದ್ಮದ, ವಿಸ್ತಾರಮಂ-ವೈಶಾಲ್ಯವನ್ನು, ಬಣ್ಣಿಸುವೊಡೆ-ಹೊಗಳಲು, ಎನ್ನಳವೆ-ನನ್ನಕೈಯಲ್ಲಾದೀತೆ, ಪೇಳು-ಉಸಿರು, ಎನಲ್-ಎಂದು ಹೇಳುವ ಹಾಗೆ, ಮಾರುತಿಯ-ವಾಯುಸೂನುವಿನ, ಕಣ್ಗೆ-ನಯನಂಗಳಿಗೆ, ಬಹಳ-ಹೆಚ್ಚಾದ, ಮಣಿ-ನವರತ್ನಗಳಂಕೆತ್ತಿದ ತೋರಣಪ್ರಭೆಯೊಳು-ತೋರಣದ ಅಲಂಕಾರದಿಂದ, ರಮಣೀಯಮಾದುದು-ಮನೋಹರವಾಗಿತ್ತು.

ಅ‖ ವಿ‖ ವಾರಿ-ನೀರಿನಲ್ಲಿ, ಜ-ಹುಟ್ಟಿದ್ದು (ಕಮಲ ಸ. ತ) ವಾರಿಜ-ಕಮಲವೇ, ಆಸನ-ಪೀಠವಾಗಿವುಳ್ಳವನು (ಬ್ರಹ್ಮ ಬ.ಸ.) ವಾರಿಜಾಸನನೇಮುಖ್ಯ (ಅ.ಪೂ.ಬ.) ಭೂಪಾಲಕ (ಷ.ತ.) ನೀರ-ನೀರನ್ನು, ದ-ಕೊಡತಕ್ಕದ್ದು (ದ್ವಿ.ತ.)

---

ಗಲಾಡಿಸುತ್ತಿದ್ದರು, ರಾಜಪುತ್ರರನೇಕರು ತಮ್ಮ ತಮ್ಮ ಶರೀರದಲ್ಲಿ ಲೇಪಿಸಿಕೊಂಡಿದ್ದ ಸುಗಂಧದ ಧೂಳು ನೆಲದಲ್ಲಿ ರಾಶಿಗಳಾಗಿ ಬೀಳಲು, ಅವನ್ನು ಮದ್ದಾನೆಗಳು ತಮ್ಮ ಸೊಂಡಲಿನಿಂದೆತ್ತಿ ಮೈಮೇಲೆಲ್ಲಾ ಚೆಲ್ಲಿಕೊಳ್ಳುತ್ತಿದ್ದವು. ‖೩೯‖ ಆ ಕೃಷ್ಣಸ್ವಾಮಿಯ ರಾಜಭವನವಾದರೋ, ಕ್ಷೀರಸಮುದ್ರದಲ್ಲಿ ವಾಸಮಾಡುತ್ತಿದ್ದ ಮಹಾವಿಷ್ಣುವು ದ್ವಾರಕಾ ಪಟ್ಟಣವನ್ನು ಬಂದು ಸೇರುವ ಮೊದಲುತಾನೇ ಬಹುವೇಗದಿಂದೈತಂದು ಆ ಕಡಲು ತನ್ನಲ್ಲಿದ್ದ ನವರತ್ನಂಗಳಿಂದಕೂಡಿ ದೇದೀಪ್ಯಮಾನನಾಗಿ ಮೂರ್ತಿವತ್ತಾಗಿದೆಯೊ ಎಂಬಂತೆ ವಿರಾಜಿಸುತ್ತಿತ್ತು, ಈ ತೆರನಾದ ಗರುಡಧ್ವಜನ ರಾಜಭವನವನ್ನು ಭೀಮಸೇನನು ಕಂಡು ಸಂತೋಷಾತಿಶಯಮಂತಾಳ್ದು ತನ್ನ ರಥದಿಂದ ಕೆಳಕ್ಕೆ ಇಳಿದು ‖ ೪೦ ‖ ಸೌಂದರ್ಯದಲ್ಲಿ ಮನ್ಮಥನನ್ನೂ ಕೂಡ ಹೀಯಾಳಿಸುತ್ತ,

ಕರಭಾಗ್ಯಮಂತಳೆದನೆಂಬ || ನೀರದಶ್ಯಾಮನರಮನೆಯೆಂದೊಡದರವಿ | ಸ್ತಾರಮಂಬಣ್ಣಿಸುವೊಡೆನ್ನಳವೆಪೇಳೆನೆ | ಲ್ಕಾರುತಿಯ ಕಣ್ಗೆರಮಣೀಯಮಾದುದುಬಹಳಮಣಿತೋರಣಪ್ರಭೆಗಳು || ೪೧ || ಪಾರಿಜಾತಪ್ರಸರಪರಿಮಳಕೆಗಗನದೋ | ಳ್ಸೇರಿದಳಿಮಾಲೆಗಳನುಜ್ವಲಿಪನೀಲಮಣಿ | ತೋರಣಪ್ರಭೆಗಳಂಬೇರ್ಪಡಿಸಲರಿದೆನಲ್ಕಿರೆವಹರಿಯರಮನೆಯನು || ಸೇರಿದಂಪವನಜಂಬಾಗಿಲೋಳ್ತನ್ನಪರಿ | ವಾರಮಂನಿಲಿಸುತೊಳಪೊಕ್ಕನೇಂಸಲುಗೆಯೋಮು | ರಾರಿಯೆರೆಯೊಳ್ದ್ವಾರಪಾಲಕರ್ತಡೆಯರ್ಬರುಮಂತರಾಂತರದೊಳು || ೪೨ || ಜನಪಕೇಳಾಸಮುಯಕಸುರಾರಿಕನಕಭಾ | ಜನರತ್ನದೀಪ್ತಿಗಳಸಾಲ್ಗಳಿಂದೆಸೆವಭೋ | ಜನಶಾಲೆಗೈತಂದುಬಾಂಧವರ್ವೆರಸಿಕುಳ್ಳಿರ್ದುದಿವ್ಯಾಸನದೊಳು || ಜನನಿಯರುಣಿಸಲಿಕ್ಕಿಸವಿಗೊಳಿಸೆಚಮರವ್ಯ | ಜನಮಂಪಿಡಿದು

---

ನೀರದದಂತೆ-ಶ್ಯಾಮ (ಉ. ಪೂ. ಕ. ಸ.) ಬಣ್ಣಿಸು(ತ್ಫ)-ವರ್ಣಿಸು (ತ್ಸ) ಮಣಿತೋರಣಪ್ರಭೆ-ಮಣಿತೋರಣ (ಷ. ತ.) ಮಣಿತೋರಣದ ಪ್ರಭೆ (ಷ. ತ.) ||೪೧||

ಟೀ|| ಪಾರಿಜಾತಪ್ರಸರ - ಪಾರಿಜಾತವೆಂಬ ಹೂವಿನ, ಪರಿಮಳಕೆ - ಸುವಾಸನೆಗೆ, ಗಗನದೊಳ್ - ಅಂತರಿಕ್ಷದಲ್ಲಿ, ಸೇರಿದ-ತುಂಬಿಕೊಂಡಿರತಕ್ಕ, ಅಳಿಮಾಲೆಗಳನು-ಭೃಂಗಾಳಿಯನ್ನು, ಉಜ್ವಲಿಪ-ಹೊಳಹೊಳೆಯುವ, ನೀಲಮಣಿ-ನವರತ್ನಗಳಲ್ಲೊಂದಾದ ನೀಲವೆಂಬ ಮಣಿಯಿಂದ ರಚಿತಮಾದ, ತೋರಣ-ತೋರಣದ, ಪ್ರಭೆಗಳಂ-ಕಾಂತಿವಿಶೇಷವನ್ನು, ಬೇರ್ಪಡಿಸಲು-ಅಗಲುವಹಾಗೆ ಮಾಡಲು, ಅರಿದು - ಅಸಾಧ್ಯವು, ಎನಲ್ - ಎಂಬತೆರನಾಗಿ, ಮೆರೆವ-ಹೊಳೆಯತಕ್ಕ, ಹರಿಯ-ಶ್ರೀ ಕೃಷ್ಣಮೂರ್ತಿಯ ಮನೆಯನು-ರಾಜಭವನವನ್ನು, ಪವನಜಂ-ವೃಕೋದರನು, ಸೇರಿದಂ-ಪೊಕ್ಕನು, ತನ್ನ-ಸ್ವಕೀಯ, ಪರಿವಾರಮಂ-ದಂಡನ್ನು, ಬಾಗಿಲೋಳ್ - ಹೊರಗಡೆಯಲ್ಲಿಯೆ, ನಿಲಿಸುತ - ಇರುವಂತೆ ನುಡಿಯುತ್ತ, ತಾಂ-ತಾನು, ಒಳಪೊಕ್ಕನು-ಅಮನೆಯೊಳಕ್ಕೆ ಪ್ರವೇಶಮಾಡಿದನು, ಮುರಾರಿಯ-ಮುರಹರನ, ಎಡೆಯೊಳ್-ಸಮೀಪದಲ್ಲಿ, ಏಂಸಲಿಗೆಯೊ-ಎಷ್ಟು ಬಳಕೆಯಿದೆಯೊ, ದ್ವಾರಪಾಲಕರು - ಕಾವಲ್ಗಾರರು, ಓರ್ವರುಂ-ಯಾರೊಬ್ಬರೂ, ಅಂತರಾಂತರದೊಳು - ರಾಜಭವನದ ಪ್ರತಿಭಾಗದಲ್ಲಿಯೂ, ತಡೆಯರು-ನಿರೋಧಿಸಲಿಲ್ಲವು.

ಅ|| ವಿ|| ಅಳಿ - ಭ್ರಮರ, ಸಾಯುವುದು, (ನಾಶಹೊಂದು), ನೀಲದಮಣಿ (ಷ. ತ.) ನೀಲಮಣಿಯ ತೋರಣ (ಷ. ತ.) ನೀಲಮಣಿತೋರಣದಪ್ರಭೆ (ಷ. ತ.) ||೪೨||

ಟೀ|| ಜನಪ-ರಾಜನಾದ ಜನಮೇಜಯರಾಯನೆ, ಕೇಳು-ಲಾಲಿಸು, ಆಸಮಯಕೆ-ಆಕಾಲದಲ್ಲಿ, ಅಸುರಾರಿ-ರಾಕ್ಷಸಾಂತಕನಾದ ಕೃಷ್ಣಸ್ವಾಮಿಯು, ಕನಕ - ಸುವರ್ಣದ, ಭಾಜನ - ತಟ್ಟೆ, ಬಟ್ಟಲು ಮೊದಲಾದವುಗಳ, ರತ್ನ - ಮಣಿಗಳ, ದೀಪ್ತಿಗಳ-ಪ್ರಕಾಶಗಳ, ಸಾಲ್ಗಳಿಂದ-ಪಙ್ತಿಗಳಿಂದ, ಎಸೆವ-ಹೊಳೆಯುವ, ಭೋಜನಶಾಲೆಗೆ-ಊಟದಮನೆಗೆ, ಐತಂದು-ಬಂದು, ಬಾಂಧವರ್ವೆರಸಿ - ನೆಂಟರುಗಳಿಂದ ಕೂಡಿ, ದಿವ್ಯ - ಶ್ರೇಷ್ಠವಾದ, ಆಸನದೊಳು - ಮಣೆಯಮೇಲೆ, ಕುಳ್ಳಿರ್ದು-ಕುಳಿತುಕೊಂಡು, ಜನನಿಯರು - ವಸುದೇವನ ಪತ್ನಿಯರಾದ ತನ್ನ ಮಾತೆಯರು, ಉಣಿಸಲ್ಕೆ - ಊಟಮಾಡುವುದಕ್ಕಾಗಿ, ಸವಿಗೊಳಿಸೆ-ಸ್ವಾರಸ್ಯವಾಗುವಂತೆಸಗಲು, ರಾಣಿಯರು - ರುಕ್ಮಿಣಿ ಮೊದಲಾದ ತನ್ನ ಭಾರ್ಯೆಯರು, ಇಕ್ಕೆಲದೊಳು - ಎಡಬಲಗಳಲ್ಲಿ, ಚಾಮರವ್ಯಜನಮುಂ-ಚಾಮರ, ಬೀಸಣಿಗೆ ಎಂಬ ಬಳಲಿಕೆಯಂ ನೀಗುವ ವಸ್ತುಗಳೆರಡನ್ನು, ಪಿಡಿದು-ಧರಿಸಿ, ಇರೆ-ಇರುತ್ತಿರಲಾಗಿ, ಸು - ಉತ್ತಮವಾದ, ರಂಜನ - ಮನವೊಪ್ಪತಕ್ಕ, ಕಥಾ - ಇತಿಹಾಸಗಳ, ಆಲಾಪ - ಸಲ್ಲಾಪಂಗಳ, ರಸದಿಂ-ಪ್ರೀತ್ಯತಿಶಯದಿಂದ, ಷಡ್ರಸಾನ್ನದ - ಷಡ್ರಸೋಪೇತವಾದ ಅನ್ನದ, ಆರೋಗಣೆಯೊಳು - ಭೋಜನದಲ್ಲಿ, ಇರುತಿರ್ದನು-ಇದ್ದವನಾದನು.

---

ಲಕ್ಷ್ಮೀದೇವಿಗೆ ರಮಣನಾಗಿರುವುದರಿಂದ ಮಹತ್ಸಾಮ್ರಾಜ್ಯವನ್ನುಳ್ಳವನಾಗಿ, ಬ್ರಹ್ಮನೆಮೊದಲಾದ ದೇವಗಣವನ್ನೆಲ್ಲಾ ಪಾಲಿಸುವ ಉದಾರಬುದ್ಧಿಯಂಪಡೆದು, ಲೋಕದಲ್ಲೆಲ್ಲಾ ಉತ್ತಮೋತ್ತಮವಾದುದೆಂಬ ಅಸಾಧಾರಣವಾದ ವೈಕುಂಠಪದವಿಗೆ ಒಡೆಯನಾಗಿ, ಅದರಿಂದಲೂ ತೃಪ್ತನಾಗದೆ ಭೂಲೋಕದ ಸಕಲ ರಾಜಾಧಿರಾಜರ ಐಸಿರಿಯನ್ನೆಲ್ಲಾ ಒಟ್ಟುಗೂಡಿಸಿಕೊಂಡಿರುವನೋ ಎಂಬಂತೆಯೂ ನವರತ್ನ ತೋರಣಾಲಂಕೃತವಾಗಿಯೂ ಇರುವ ನೀಲಮೇಘಶ್ಯಾಮನಾದ ಕೃಷ್ಣಸ್ವಾಮಿಯ ಅರಮನೆಯ ಬಳಿಗೆ ಹೋಗಿ || ೪೧ || ಸಕಲ ಪರಿವಾರವನ್ನೂ ಬಾಗಿಲಲ್ಲಿಯೇ ಇರುವಂತೆ ಅಜ್ಞಾಪಿಸಿ ತಾನೊಬ್ಬನೆ ರಾಜಗೃಹವನ್ನು ಪ್ರವೇಶಿಸಲು ಈತನನ್ನು ಯಾರೂ ತಡೆಯಲೇ ಇಲ್ಲವು || ೪೨ || ಅನಂತರದಲ್ಲಿ ಜೈಮುನಿರುಷಿಯು ಜನಮೇಜಯನಂ ಕುರಿತು, ಕೇಳ್ಳೆ ಜನಮೇಜಯನೆ, ಆ ಬಳಿಕ ಭೀಮಸೇನನು ಕೃಷ್ಣಸ್ವಾಮಿಯು ಅರಮನೆಯ ಭೋಜನಶಾಲೆಯಲ್ಲಿ ಊಟ

ರಾಣಿಯರ್ಕೆಲದೊಳಿರೆಸುರಂ | ಜನಕಥಾಲಾಪರಸದಿಂಪಡುರಸಾನ್ನದಾರೋಗಣೆಯೊಳಿರುತಿರ್ದನು ||೪೩|| ಎಸೆವಪೊಂಬರಿವಾಣ ಮಿಸುನಿವಟ್ಟಲ್ಗಳೊಳ್ | ಮಿಸುಪಶಾಲ್ಯೋದನಂಸೂಪಘೃತಭಕ್ಷ್ಯಪಾ | ಯಸಪರಡಿಮಧುಶರ್ಕರಾಮಿಷಪಳಿದ್ಯಸೀಕರಣೆಶಾಕ ತನಿವಣ್ಗಳು || ರಸರಸಾಯನಸಾರ್ಗಳುಪ್ಪುಗಾಯ್ಬಾಳಕಂ | ಕೃಸರಿಕಚ್ಚಡಿಪಾಲ್ಮೊಸರ್ಗಳಿವುಬಗೆಗೊಳಿಸಿ | ಪೊಸತೆನಿಸಿರಲ್ಸವಿದನಚ್ಯುತಂದೇವಕಿಯಶೋದೆಯರ್ತಂದಿಕ್ಕಲು || ೪೪ || ಗುಪ್ತದಿಂದಸುರರ್ಗಮೃತವನುಣಿಸಿದನಿತ್ಯ | ತೃಪ್ತಂಸಕಲಮಖಂಗಳಹವಿರ್ಭಾಗಮುಂ | ಸಪ್ತಾರ್ಚಿಮುಖದಿಂದಕೈಗೊಂಡದರ್ಫಲವನುಣಿಸುವಪರಮಾತ್ಮನು || ಕ್ಲುಪ್ತಮೆನಿಸುವರಾಜಭೋಜ್ಯದೊಳಗಾವುದಂ | ಲುಪ್ತಮಾಗದವೊಲಾರೋಗಣೆಯನೈದೆಲೋ | ಲುಪ್ತಿಯಿಂಮಾಡುತಿರ್ದಂತನ್ನಮಾನುಷ್ಯಲೀಲೆಗಿದು

---

ಅ-ವಿ|| ಷಡ್ರಸಗಳು - ಭಕ್ಷ್ಯ, ಭೋಜ್ಯ, ಲೇಹ್ಯ, ಚೋಷ್ಯ, ಪಾನೀಯಂಗಳು, ಅಸುರಾರಿ, ದಿವ್ಯಾಸನರಸಾನ್ನ ಈ ಮೂರೂ ಸವರ್ಣದೀರ್ಘಸಂಧಿ ||೪೩||

ಟೀ|| ಎಸೆವ-ಥಳಥಳಿಸುವ, ಪೊಂಬರಿವಾಣ-ಚಿನ್ನದ ಸೌಟನಲ್ಲಿ, ಮಿಸುನಿವಟ್ಟಲ್ಗಳೊಳ್ - ಸುವರ್ಣದ ಬಟ್ಟಲುಗಳಲ್ಲಿ, ಮಿಸುಪ-ಅತ್ಯುತ್ತಮವಾದ, ಶಾಲ್ಯೋದನಂ-ಶಾಲ್ಯನ್ನವು, ಸೂಪ-ತೊವ್ವೆಯು, ಘೃತ-ಆಜ್ಯವು, ಭಕ್ಷ್ಯ-ಮಂಡಿಗೆ, ಶಾವಿಗೆ ಮೊದಲಾದವು, ಪಾಯಸ - ಪಾಯಸಾನ್ನವು, ಪರಡಿಶಾವಿಗೆ - ಪರಡಿಯಪಾಯಸವು, ಮಧು-ಜೇನುತುಪ್ಪ, ಮತ್ತು ಮಾದಕ ದ್ರವ್ಯವು, ಶರ್ಕರೆ-ಸಕ್ಕರೆಯು, ಆಮಿಷ-ಮಾಂಸವು, ಪಳಿದ್ಯ-ಮಜ್ಜಿಗೆಯಹುಳಿ ಮೊದಲಾದವು, ಸೀಕರಣೆ-ರಸಾಯನವು, ಶಾಕ-ತರ್ಕಾರಿಗಳು, ತನಿವಣ್ಗಳು-ಪಕ್ವವಾದ ಹಣ್ಣುಗಳು, ರಸ-ತಿಳಿಸಾರು, ಪಾನಕವೆಯೆ ಆದಿಯಾದ ರಸವಿಶೇಷಗಳು, ರಸಾಯನ-ಜೀರ್ಣಕಾರಿಗಳಾದ ಸಾಮಗ್ರಿಯು, ಸಾರ್ಗಳು - ವಿಧವಿಧವಾದ ಸಾರುಗಳು, ಉಪ್ಪುಕಾಯಿ - ವ್ಯಂಜವಾದ ಉಪ್ಪಿನಕಾಯಿಗಳು (ಮಾವಿನಕಾಯಿ, ನಿಂಬೇಕಾಯಿ, ನೆಲ್ಲಿಕಾಯಿ, ಹೇರಳೆಕಾಯಿ ಮೊದಲಾದವುಗಳಿಂದ ಮಾಡಿದವು). ಬಾಳಕ - ಮೆಣಸಿನಕಾಯಿಯನ್ನು ಸೀಳಿ ಉಪ್ಪುತುಂಬಿ ಒಣಗಿಸಿ ಅನಂತರ ತುಪ್ಪದಲ್ಲಿ ಕರಿದಿರುವುದು, ಕೃಸುರಿ - ಅನೇಕಪುಡಿಗಳು, (ಉದ್ದಿನಪುಡಿ, ಮೆಂಥ್ಯದಹಿಟ್ಟು ಮೊದಲಾದವು), ಕಚ್ಚಡಿ - ಆಗತಾನೆಮಾಡಿದ ತೆಂಗಿನಕಾಯಿ ಮೊದಲಾದ್ವರ ವ್ಯಂಜನಸಾಮಗ್ರಿಯು ಪಾಲು ಮೊಸರ್ಗಳು, ಕ್ಷೀರ ಮತ್ತು ತಕ್ರವು, ಬಗೆಬಗೆಗೊಳಿಸಿ - ಇವೆ ಮೊದಲಾದವುಗಳಿಂದ ಸೇರಿ, ಪೊಸತು - ನೂತನವಾದದ್ದು, ಎನಿಸಿ - ಎನ್ನಿಸಿಕೊಂಡು, ಇರೆ-ಇರುತ್ತಿರಲಾಗಿ, ಅಚ್ಯುತಂ - ಮುರಹರನು, ದೇವಕಿ ಯಶೋದೆಯರು - ದೇವಕಿ ಯಶೋದೆಯರೆಂಬ ಇವನ ತಾಯಿಯರು, ತಂದಿಕ್ಕಲು-ಎಲೆಯಲ್ಲಿ ತಂದು ಬಡಿಸುತ್ತಿರಲು, ಸವಿದನು-ಊಟಮಾಡುತಿದ್ದನು.

ಅ|| ವಿ|| ಶಾಲ್ಯೋದನ-ಬಿಳಿ ಸಣ್ಣಕ್ಕಿಯ ಅನ್ನ, (ಯಣ್ ಸಂಧಿ) ||೪೪||

ಟೀ|| ಗುಪ್ತದಿಂದ-ಯಾರೂ ಅರಿಯದಂತೆ, ಅಸುರರ್ಗೆ-ಸುರನಿಕರಕ್ಕೆ, ಅಮೃತವನು-ಪೀಯೂಷವನ್ನು, ಉಣಿಸಿದ-ಆಹಾರವಾಗಿ ಮಾಡಿಕೊಟ್ಟ, ನಿತ್ಯತೃಪ್ತಂ-ಸದಾ ಸಂತೋಷಚಿತ್ತನಾದ, ಸಕಲ-ಅಶೇಷವಾದ, ಮಖಂಗಳ-ಕ್ರತುಗಳ, ಹವಿರ್ಭಾಗಮುಂ-ಹೋಮದ್ರವ್ಯ ಭಾಗಗಳನ್ನು, ಸಪ್ತಾರ್ಚಿ-ಹುತವಹನ, ಮುಖದಿಂದ - ಮೂಲಕವಾಗಿ, ಕೈಕೊಂಡು - ಸ್ವೀಕರಿಸಿ ಅದರ-ಆ ಯಾಗದ, ಫಲವನು-ಪ್ರಯೋಜನವನ್ನು, ಉಣಿಸುವ-ಅನುಭವಿಸಲು ಸಹಾಯಕನಾಗಿರುವ, ಪರಮಾತ್ಮನು-ಪರಮಮೂರ್ತಿಯಾದ ಶ್ರೀ ಕೃಷ್ಣನು, ಕ್ಲುಪ್ತವೆನಿಸುವ-ಪರಿಮಾಣಕ್ಕೆ ತಕ್ಕಷ್ಟು ಉಳ್ಳ, ರಾಜಭೋಜ್ಯದೊಳಗೆ-ನೃಪಾನ್ನದಲ್ಲಿ ಆವುದುಂ-ಒಂದನ್ನೂ, ಲುಪ್ತಮಾಗದ ವೊಲ್ - ಬಿಡದಹಾಗೆ, ತನ್ನ-ಸ್ವಕೀಯಮಾದ, ಮನುಷ್ಯಲೀಲೆಗೆ - ಮಾನವಜನ್ಮದ ವಿನೋದಂಗಳಿಗೆ, ಇದು-ಈ ಭೋಜನವು, ಸಾರ್ಥಕವಾದದ್ದು ಅಥವಾ ಸರಿಯಾದದ್ದು,ಎನಲು-ಎಂಬತೆರನಾಗಿ,ಲೋಲುಪ್ತಿಯಿಂ-ವಿಶ್ವಾಸದಿಂದ, ಐದೆ-ಬೇಕಾದಷ್ಟು, ಆರೋಗಣೆಯನು-ಭೋಜನವನ್ನು, ಮಾಡುತ-ಎಸಗುತ್ತ, ಇರ್ದಂ-ಇದ್ದನು.

ಅ-ವಿ|| ಅಮರರು - ಮರಣವಿಲ್ಲದವರು, ಮಖ - ಯಾಗ, ಮುಖ - ಆಸ್ಯ, ಸಪ್ತಾರ್ಚಿ- ಏಳು ಕಿರಣಗಳು ಅಥವಾ ಹಸ್ತಗಳನ್ನುಳ್ಳವನು. ||೪೫||

---

ಮಾಡುತ್ತಿರುವುದಾಗಿ ಚರರಿಂ ತಿಳಿದು, ಅಲ್ಲಿಗೆ ಬಂದು ಸೇರಿದನು. ||೪೩|| ಆ ಕಾಲದಲ್ಲಿ ಕೃಷ್ಣಮೂರ್ತಿಯು ಸುಖಾಸನವನ್ನಲಂಕರಿಸಿ ಸಕಲ ಬಂಧುಮಿತ್ರರಿಂದೊಡಗೂಡಿದ್ದನು. ಎಲ್ಲರಿಗೂ ಭಂಗಾರದ ಎಲೆಗಳನ್ನು, ನವರತ್ನಖಚಿತವಾದ ಬಟ್ಟಲುಗಳನ್ನೂ ನೀಡಿ ಶಾಲ್ಯನ್ನ, ತೊವ್ವೆ, ಪಂಚಭಕ್ಷ್ಯ ಪರಮಾನ್ನಗಳು, ವಿವಿಧವಾದ ಹುಳಿಪಲ್ಯಗಳು, ಅನೇಕವಾದ ಹಣ್ಣುಗಳು, ಮಾದಕ ಪದಾರ್ಥಗಳು, ರಸವಿಶೇಷಗಳು, ಚಟ್ನಿ, ಉಪ್ಪಿನಕಾಯಿ, ಬಾಳಕಗಳು, ಹಾಲು ಮೊಸರು ಮೊದಲಾದವನ್ನೆಲ್ಲಾ ಅವನ ಮಾತೆಯರಾದ ದೇವಕಿಯಶೋದೆಯರು ತಂದು ಬಡಿಸುತ್ತಿದ್ದರು ||೪೪|| ಸುರವಿಂಡನ್ನೆಲ್ಲಾ ಸುಧಾರಸದಿಂದ ತೃಪ್ತಿಪಡಿಸಿ ಸರ್ವದಾ ಸಂತೋಷಚಿತ್ತನಾದ ಸ್ವಾಮಿಯು ಯಾಗಗಳ ಫಲವನ್ನೆಲ್ಲಾ ಅಗ್ನಿಮುಖದಿಂದ ಹೊಂದುವನಾದರೂ ಕೂಡ ನರಲೀಲೆ

ಸಾರ್ಥಮೆನಲು ‖ ೪೫ ‖ ಹಾರನೂಪುರಕಂಕಣಾದಿಭೂಷಣಝುಣ | ತ್ಕಾರಧ್ವನಿಗಳಮೇಲುದಿನೋಳ್ಪೊದಳ್ದಕುಚ | ಭಾರ ದಿಂನಸುವಾಗಿದಂಗಲತೆಲಹರಿಗಳಸಿರಿಮೊಗಕೊಲಿವಕಂಗಳ ‖ ಸ್ಮೇರೊಲ್ಲಸದ್ರುಚಿರದಂತಪಜ್'ಗಳಶೃಂ | ಗಾರಸರಸೋಕ್ತಿಗಳ ವಿನುತಾಷ್ಟಮಹಿಷಿಯ | ರ್ಚಾರುಚಾಮರತಾಲವೃಂತಮುಂಪಿಡಿದಿರ್ದರಚ್ಯುತನಕೆಲಬಲದೊಳು ‖ ೪೬ ‖ ಕದ್ದುಮನೆಮನೆಯೊ ಕ್ಕುಬೆಣ್ಣೆಪಾಲ್ಗೆನೆಗಳಂ | ಮೆದ್ದುಗೋವಳರಮೇಳದಕಲ್ಲಿಗೂಳಕೈ | ಮುದ್ದೆಯಂತೆಗೆದುಂಡುತುರುಗಾವಳಿಪಳ್ಳಿಯಂಬಿಟ್ಟುಬಳಿ ಕೆರಡಿಲ್ಲದೆ ‖ ಹೊದ್ದಿಪಾಂಡವರನೋಲೈಸಲಾದುದುಭಾಗ್ಯ | ಮಿದ್ದಪುದುರಾಜ್ಯಭೋಜ್ಯಂಗಳಿವುಪಡೆದವ | ರ್ಮುದ್ದುಗೈದಪ

ಟೀ‖ ಹಾರ - ಮುತ್ತು, ಹವಳ, ಚಿನ್ನದ ಕಾಸುಗಳು ಮೊದಲಾದವುಗಳ ಸರಗಳು, ನೂಪುರ - ಪಾದಾಭರಣಂಗಳಾದ ಅಂದಿಗೆ, ರುಳಿ ಮೊದಲಾದವು, ಕಂಕಣ – ಹಸ್ತಾಲಂಕೃತಂಗಳಾದ ಬಳೆ ಮೊದಲಾದ, ಭೂಷಣ–ಆಭರಣಂಗಳ, ಝುಣತ್ಕಾರ ಧ್ವನಿ–ಝುಣಝುಣನೆಂಬ ನಿನದಂಗಳ, ಮೇಲುದಿನೋಳ್ - ಕುಪ್ಪಸ ಅಥವಾ ಸೀರೆಯ ಸೆರಗಿನಲ್ಲಿ, ಪೊದಳ್ದ – ನೆಲಸಿದ, ಕುಚ–ಸ್ತನಂಗಳ, ಭಾರದಿಂ-ತೂಕದಿಂದ, ನಸು-ಸ್ವಲ್ಪಮಾತ್ರ, ಬಾಗಿದ–ತಗ್ಗಿದ, ಅಂಗಲತೆ–ಎಳೆವಳ್ಳಿಯನ್ನು ಹೋಲುವ ಶರೀರದ, ಲಹರಿಗಳ-ಕಾಂತಿಪ್ರವಾಹಂಗಳ, ಸಿರಿ–ಐಶ್ವರ್ಯವು, ಮೊಗಕೆ–ಆಸ್ಯಕ್ಕೆ, ಒಲಿವ–ಒಪ್ಪುವ, ಕಂಗಳ-ನಯನಂಗಳ, ಸ್ಮೇರ–ಮುಗುಳ್ನಗೆಯಿಂದ, ಉಲ್ಲಸತ್-ಥಳಥಳಿಸುವ, ರುಚಿರ–ಸೊಗಸಾದ, ದಂತಪಜ್'ಗಳ–ಹಲ್ಲಿನ ಶ್ರೇಣಿಗಳ, ಶೃಂಗಾರ-ಭೂಷಣ ಸಹಿತವಾದ, ಸರಸ–ರಸಭರಿತಂಗಳಾದ, ಉಕ್ತಿಗಳ–ನುಡಿಗಳ, ವಿನುತ–ಸ್ತೋತ್ರಾರ್ಹರಾದ, ಅಷ್ಟಮಹಿಷಿಯರ್-ಎಂಟುಜನ ಪತ್ನಿಯರು, ಚಾರು – ಮನೋಹರವಾದ, ಚಾಮರ – ಚಾಮರಗಳನ್ನು, ತಾಲವೃಂತಮಂ - ತಾಳೆಯೆಲೆಯ ಬೀಸಣಿಗೆಗಳನ್ನು, ಪಿಡಿದು–ಧರಿಸಿ, ಅಚ್ಯುತನ–ಶ್ರೀ ಕೃಷ್ಣಸ್ವಾಮಿಯ, ಕೆಲಬಲದೊಳ್–ಎಡಬಲಗಳಲ್ಲಿ, ಇರ್ದರ್-ನೆರೆದು ಇದ್ದರು ‖೪೬‖

ಟೀ‖ ಮನೆಮನೆಯ–ಎಲ್ಲಾಮಂದಿರಗಳನ್ನು ಕ್ರಮಪ್ರಕಾರವಾಗಿ, ಒಕ್ಕು-ಹೋಗಿಸೇರಿ, ಬೆಣ್ಣೆಪಾಲ್ಗೆನೆಗಳಂ–ಬೆಣ್ಣೆಯನ್ನೂ ಹಾಲಿನಕೆನೆಯನ್ನೂ, ಕದ್ದು–ಚೋರಕೃತ್ಯದಿಂದ ವಶಮಾಡಿಕೊಂಡು, ಮೆದ್ದು-ಭುಂಜಿಸಿ, ಗೋವಳರ-ಗೋಪಾಲಕರ, ಮೇಳದ–ಸಹವಾಸದ, ಕಲ್ಲಿಗೂಳ–ಹೊತ್ತುತಂದ ಆಹಾರಪದಾರ್ಥದ, ಕೈಮುದ್ದೆಯಂ–ತಿಂಡಿಯನ್ನು, ತೆಗೆದುಕೊಂಡು–ಸ್ವೀಕರಿಸಿ, ಉಂಡು–ಊಟಮಾಡಿ, ತುರು–ಪಶುಗಳನ್ನು, ಕಾವ - ಪಾಲಿಸುವ, ಪಳ್ಳಿಯಂ-ಗ್ರಾಮವನ್ನು, ಬಿಟ್ಟು – ವಿಸರ್ಜಿಸಿ, ಬಳಿಕ–ಅನಂತರ, ಎರಡಿಲ್ಲದೆ–ಭೇದವಿಲ್ಲದೆ, ಪಾಂಡವರನು–ಧರ್ಮಾದಿಗಳನ್ನು, ಓಲೈಸಲು–ಅನುಸರಿಸಲು, ಭಾಗ್ಯಂ-ಸಂಪತ್ಸಮೃದ್ಧಿಯು, ಆದುದು - ಲಭಿಸಿತು, ಇವುರಾಜಭೋಜನಂಗಳು - ಈ ನಾಡಿನಲ್ಲಿರುವ ಆಹಾರಸಾಮಗ್ರಿಗಳು, ಇದ್ದಪುದು – ಇರತಕ್ಕದ್ದು, ಪಡೆದವರು–ತಾಯಿಯರು, ಊಟದ ಎಡೆಗಳೊಳ್–ಊಟಮಾಡಲು ಸಿದ್ಧವಾದ ಎಲೆಗಳ ಮೇಲೆ, ಮುದ್ದುಗೈದಪರು–ಹಿತೋಕ್ತಿಗಳನ್ನು ನುಡಿಯುತ್ತಿರುವರು, ಚೋದ್ಯಂ - ಅಚ್ಚರಿಯು, ಎಂದು – ಎಂಬದಾಗಿ, ಸತ್ಯಭಾಮೆ – ಸತ್ಯಭಾಮೆ ಎಂಬ ಸತ್ರಾಜಿತನ ಪುತ್ರಿಯು, ನಗುತ-ಹಾಸ್ಯಮಾಡುತ್ತ, ಎಂದಳ್–ನುಡಿದಳು.

ಅ‖ ವಿ‖ ಗೊಲ್ಲರ ಜೊತೆಯಲ್ಲಿ ಹಸುಗಳನ್ನು ಮೇಯಿಸಿಕೊಂಡು ಅವರು ತಂದ ಬುತ್ತಿಯನ್ನುಂಡು ಕಾಲಹಾಕುತ್ತಿದ್ದ ನಿನಗೆ ಮಹಾರಾಜಾಧಿರಾಜರಾದ ಪಾಂಡುಪುತ್ರರ ಸಹಾಯ ದೊರೆತು ಈಗ ಸ್ವಲ್ಪ ಅನುಕೂಲಸ್ಥನಾದೆ ಎಂದೂ, ಎಳೆ ಮಕ್ಕಳಂತೆ ನಿನಗೂ ತಾಯಿಯು ಅನ್ನವನ್ನು ತಿನ್ನಿಸಬೇಕೆಂದೂ ಶ್ರೀ ಕೃಷ್ಣನನ್ನು ಹಾಸ್ಯಮಾಡಿದಳು. ಮನೆಮನೆ (ಕ್ರಮಾನುಲ್ಲಂಘನದಲ್ಲಿ ದ್ವಿರುಕ್ತಿ) ಎಡೆ=ಸಮೀಪ ಮತ್ತು ಊಟಕ್ಕೆ ಬಡಿಸಿದ ಎಲೆ ‖೪೭‖

ಯಿಂದ, ಬಡಿಸಿದ್ದ ಭೋಜನ ದ್ರವ್ಯಗಳನ್ನೆಲ್ಲಾ ತಿಂದು ತೃಪ್ತಿಪಡುತ್ತಿದ್ದನು ‖ ೪೫ ‖ ಅನೇಕವಾದ ಹಾರಗಳಿಂದಲಂಕೃತರಾಗಿಯೂ, ಕಾಲ್ಕಡಗಂಗಳ ಝುಣತ್ಕಾರದಿಂದ ಕೂಡಿಯೂ, ಅನೇಕವಾದ ತೊಡಿಗೆಗಳಿಂದ ಮೆರೆಯುತ್ತಲೂ ಇರುವ, ದಿವ್ಯಾಂಬರಧಾರಿಯರೂ, ತುಂಗಕುಚಗಳಿಂ ಕೂಡಿದವರೂ, ಚಂದ್ರನ ಬೆಳ್ಳಿಂಗಳನ್ನು ತಿರಸ್ಕರಿಸುವಷ್ಟು ಧಾವಳ್ಯದಿಂ ಶೋಭಿಸುವ ಹಲ್ಲುಗಳ ಸಾಲುಗಳಿಂದ ಕೂಡಿದವರೂ ಆಗಿರುವ ಶ್ರೀ ಕೃಷ್ಣಮೂರ್ತಿಯ ಪಟ್ಟದರಸಿಯರಾದ ರುಕ್ಮಿಣಿ ಸತ್ಯಭಾಮೆಯರು ಇಕ್ಕೆಲಗಳಲ್ಲಿಯೂ ನೆರೆದು ಸರಸ ಪ್ರಸಂಗವನ್ನು ಮಾಡುತ್ತ ಶ್ರೀ ಕೃಷ್ಣಸ್ವಾಮಿಗೆ ಸ್ವಲ್ಪವೂ ಆಯಾಸ ಕಾಣದಂತೆ ಬೀಸಣಿಗೆಯಿಂದ ಬೀಸುತ್ತಲೂ ಚಾಮರಂಗಳನ್ನು ಹಾಕುತ್ತಲೂ ಇದ್ದರು. ‖೪೬‖ ಆಗ ಸತ್ಯಭಾಮಾದೇವಿಯು ಶ್ರೀ ಕೃಷ್ಣನನ್ನು ನೋಡಿ, ಎಲೈ ಪ್ರಾಣಕಾಂತನೆ, ಮನೆಮನೆಗೂ ಕಳ್ಳತನದಿಂದ ನುಗ್ಗಿ ಹೋಗಿ ಅಲ್ಲಿ ದೊರೆಯುವ ಹಾಲು, ಮೊಸರು, ತುಪ್ಪಗಳನ್ನು ತಿಂದು ತೃಪ್ತನಾಗುತ್ತಲೂ, ದನಕಾಯುವ ಗೊಲ್ಲರೊಡನೆ ಸೇರಿ ಅವರೊಂದಿಗೆ ತಂಗಳು ಬುತ್ತಿಯನ್ನು ತಿಂದುಕೊಂಡು ಕಾಲಹರಣ ಮಾಡತಕ್ಕ ನಿನಿಗೆ ಪಾಂಡವರ ಸಹಾಯದಿಂದಲ್ಲವೇ ಈಗ ಇಷ್ಟು ಐಶ್ವರ್ಯವು ಒದಗಿರುವುದು? ನೀನು ಊಟಮಾಡಬೇಕಾದರೆ ಎಳೆ ಮಕ್ಕಳನ್ನು ಉಪಚಾರದಿಂದ ಮುದ್ದಾಡಿಸುವಂತೆ ನಿನ್ನನ್ನೂ ನಿಮ್ಮ ತಾಯಿಯರು ಹೊಗಳುತ್ತಿರಬೇಕೇ! ಎಂದು

ರೂಪಿದೆತೆಗಳೋಲ್ಚೋದ್ಯವೆಂದಲ್ಸತ್ಯಭಾಮೆನಗುತ ॥ ೪೭ ॥ ಬರಿದೆಗಳಹದಿರತ್ತೆಮಾವದಿರಿರಲ್ಕೆನೀ । ನರಿಯಲಾತನ್ನ ಬಂಧನವೀತನುದಯಿಸ । ಲ್ಪರಿದುದೀತನೆಜಗದ್ಗುರುಕಣಾಪಾಲಿಸುವನಿಂದ್ರಾದಿನಿರ್ಜರರನು ॥ ಕುರುಪಿಡಲ್ಬಹುದೆಮಾನವನೆಂದುಕೃಷ್ಣನಂ । ಜರಿಯೆನೀನೇಸರವಳೊಡನಾಡಿತನದಿಂದ । ಬೆರೆಯಬೇಡತ್ತಹೋಗೆಂದುದೇವಕಿಸತ್ಯಭಾಮೆಯಂಗರ್ಜಿಸಿದಳು ॥೪೮॥ ನಿಮ್ಮಬಂಧನವಬಿಡಿಸಿದವಂಗೆತವೆಬಂಧ। ನಮ್ಮಗುಳಿದೇಕಾಯ್ತುದಿವಿಜರಂಪೊರೆವವಂ। ಚವ್ಮಟಿಗೆವಿಡಿಯಲೇತಕೆ

ಟೀ॥ ಅತ್ತೆಮಾವಂದಿರು–ಅತ್ತೆ ಮಾವ ಮೊದಲಾದ ಹಿರಿಯರು, ಇರಲ್ಕೆ–ಎದುರಾಗಿದ್ದರೂ, ಬರಿದೆ–ವೃಥಾ, ಗಳಹದಿರು-ಹರಟೆಯನುಡಿಗಳನ್ನು ಹೇಳಬೇಡ, ನೀನುಅರಿಯಲಾ–ನಾವಿಲ್ಲಿರುವುದನ್ನು ತಿಳಿಯದೆ ಹೋದೆಯಾ? ತನ್ನ–ಮದೀಯವಾದ ಬಂಧನಂ-ಸೆರೆಯು, ಈತನಿಂ – ಈ ಮಗನಿಂದ, ಪರಿದುದು – ಕಳೆದುಹೋಯಿತು, ಈತನೆ – ಈ ಕೃಷ್ಣಮೂರ್ತಿಯೆ, ಜಗದ್ಗುರುಕಣಾ–ಲೋಕನಾಯಕನಲ್ಲವೆ? ಇಂದ್ರಾದಿನಿರ್ಜರರನು-ಶಚೀಪತಿಯೇ ಮೊದಲಾದ ಸುರಸಮೂಹವನ್ನು, ಪಾಲಿಸುವನು–ಕಾಪಾಡತಕ್ಕವನು, ಮಾನವನು–ನರನು, ಎಂದು – ಎಂಬತೆರನಾಗಿ, ಕೃಷ್ಣನಂ - ಕೃಷ್ಣಸ್ವಾಮಿಯ, ಕುರುಪ – ಗುರುತನ್ನ, ಇಡಬಹುದೆ-ಇಡಲಾದೀತೆ? ಮಾನವನು–ಮನುಷ್ಯನು, ಎಂದು–ಎಂಬ ಬಗೆಯಿಂದ, ಕೃಷ್ಣನಂ-ಕೃಷ್ಣಸ್ವಾಮಿಯನ್ನು, ಜರಿಯೆ–ತಿರಸ್ಕರಿಸುವುದಕ್ಕೆ, ನೀನು–ನೀನಾದರೊ, ಏಸರವಳು – ಎಷ್ಟರಮಟ್ಟನವಳು ? ಒಡನಾಡಿತನದಿಂದ–ನಿನ್ನೊಂದಿಗೆ ಸಲಿಗೆಯಾಗಿರುವುದರಿಂದ, ಬೆರೆಯಬೇಡ - ಮರ್‍ಯಾದೆಯನ್ನತಿಕ್ರಮಿಸಿ ಮಾತನಾಡದಿರು, ಅತ್ತಹೋಗು – ಹೊರಕ್ಕೆ ನಡೆ, ಎಂದು–ಎಂಬದಾಗಿ, ದೇವಕಿಯು–ವಾಸುದೇವನ ಮಾತೆಯು, ಸತ್ಯಭಾಮೆಯಂ–ಸತ್ಯಭಾಮಾದೇವಿಯನ್ನು, ಗರ್ಜಿಸಿದಳು–ದಂಡಿಸಿದಳು.

ಅ॥ ವಿ॥ ಜರಾ-ವೃದ್ಧಾಪ್ಯವು, ನ-ಇಲ್ಲದವರು (ನಿರ್ಜರರು) ದೇವಕಿಯ ಗರ್ಭದಲ್ಲಿ ಹುಟ್ಟಿದ ಮಕ್ಕಳೆಲ್ಲಾ ಕಂಸನು ಕೊಂದುಹಾಕುತ್ತಿದ್ದನು. ಶ್ರೀ ಕೃಷ್ಣನು ಹುಟ್ಟಿದ ಕೂಡಲೆ ಕಂಸಾಸುರನನ್ನು ಸಂಹರಿಸಿದ್ದರಿಂದ ದೇವಕಿಗೆ ಸೆರೆಯಿಂದ ಬಿಡುಗಡೆಯಾದಂತಾಯ್ತೆಂದು ಭಾವವು ॥೪೮॥

ಟೀ॥ ನಿಮ್ಮ–ಮಾತಾಪಿತೃಗಳಾದ ನಿಮಿಗೆ, ಬಂಧನವ-ಕಂಸಾಸುರನು ಮಾಡಿದ್ದ ಸೆರೆಯನ್ನು, ಬಿಡಿಸಿದವನಿಗೆ–ತಪ್ಪಿಸಿದ ಕೃಷ್ಣನಿಗೆ, ತವೆ-ಚೆನ್ನಾಗಿ, ಬಂಧನಂ-ಸೆರೆಯು ಎಂದರೆ ಜರಾಸಂಧನೇ ಮೊದಲಾದವರ ಹಿಂಸೆಗೋಸ್ಕರ ದ್ವಾರಕಾಪಟ್ಟಣದ ವಾಸವು, ಪಾಂಡವರ ಸಹವಾಸವು, ಸ್ತ್ರೀಜಿತನಾಗಿರುವದು, ಭೀಷ್ಮನೆ ಮೊದಲಾದವರಿಗೆ ವಶನಾಗಿ ಬಿದ್ದಿರುವುದು, ಇವೆ ಮೊದಲಾದವು, ಮಗುಳೆ-ತಿರುಗಿ, ಅದೇಕೆ–ಯಾವ ಕಾರಣದಿಂದ, ಆಯ್ತು–ಉಂಟಾಯಿತು ? ದಿವಿಜರಂ–ಸುರಗಣವನ್ನು, ಪೊರೆವವಂ-ಕಾಪಾಡತಕ್ಕವನು, ಚವ್ಮಟಿಗೆ–ಚಾಟಿಯನ್ನು, ಪಿಡಿಯಲು–ಹಿಡಿದುಕೊಳ್ಳಲು, ಏತಕೆ-ಕಾರಣವೇನು? ನರನಕುರುಹು–ಮನುಷ್ಯನ ಚಿಹ್ನೆಯು, ಕಾಣಿಸದವಂ-ಗೋಚರಿಸದಿರುವನು, (ಗುಣರಹಿತನು), ಪೆಳವಿಗೆ–ಹೆಳವಿಗೆ, ಸುಮ್ಮನೆ-ವೃಥಾ, ಏತಕೆ–ಯಾವಕಾರಣದಿಂದ. ಸಿಕ್ಕಿದಂ–ವಶವಾದನು ? ಜಗದ್ಗುರು–ಲೋಕನಾಯಕನು, ಎನಲ್–ಎಂಬತೆರನಾಗಿ, ನಮ್ಮದೆ - ನೆಚ್ಚದೆ, ನೀವು–ನೀವು, ಒಳಗೆ–ಒಳಭಾಗದಲ್ಲಿ, ಇರಿ-ಇರತಕ್ಕವರಾಗಿ, ನಮಿಗೆಯುಂ–ಗಂಡಹೆಂಡಿರಾದ ನಮ್ಮಿರ್ವರಿಗೂ, ನೀವೆ–ನೀವೇ, ಗುರು–ಬುದ್ಧಿಗಲಿಸುವರು, ನಮ್ಮ-ನಮ್ಮನ್ನು, ನಗಿಸದೆ-ಹಾಸ್ಯಕ್ಕೆ ಗುರಿಮಾಡದೆ, ನೀವು-ನೀವಾದರೊ, ತಿಳಿವುದು–ಮನುಜನು ಅಥವಾ ಲೋಕಾಧಿಪನು ಎಂದರಿಯಬಹುದು, ಎಂದು-ಎಂಬದಾಗಿ, ಸತ್ಯಭಾಮೆ–ಸತ್ಯಭಾಮಾದೇವಿಯು, ದೇವಕಿಗೆ–ದೇವಕಿಯೊಂದಿಗೆ, ಎಂದಳ್–ನುಡಿದಳು.

ಅ॥ ವಿ॥ ಕೃಷ್ಣನು ಜರಾಸಂಧವಧೆಯಕಾಲದಲ್ಲಿ ಅವನ ಬಂಧನಕ್ಕೆ ಸಿಕ್ಕಿದ್ದನು. ಕೊನೆಗೆ ಭೀಮನಿಂದ ಅವನನ್ನು ಕೊಲ್ಲಿಸಿದನು. ಕೃಷ್ಣನು ಅರ್ಜುನನಿಗೆ ಸಾರಥಿಯಾಗಿದ್ದು ಕೌರವರೇ ಮೊದಲಾದವರನ್ನೆಲ್ಲಾ ಸಂಹರಿಸಿದನಾದ್ದರಿಂದ ಸತ್ಯಭಾಮೆಯು ಶ್ರೀ ಕೃಷ್ಣಮೂರ್ತಿಯನ್ನು "ಚವ್ಮಟಿಗೆ ವಿಡಿವನಂ" ಎಂದು ನುಡಿದಿರುವಳು. ಕೃಷ್ಣನು ಮಧುರಾ

ತಮ್ಮತ್ತೆಯರಿದಿರಾಗಿಯೇ ಹಾಸ್ಯವುಂ ಮಾಡಿದಳು ॥ ೪೭ ॥ ಸತ್ಯಭಾಮೆಯ ಹಾಸ್ಯೋಕ್ತಿಗಳಂ ಕೇಳಿದ ದೇವಕೀದೇವಿಯು ಎಲೆ ಸತ್ರಾಜಿತಪುತ್ರೀ ! ಅತ್ತೆಮಾವಂದಿರ ಎದುರಿನಲ್ಲಿಯೇ ನೀನು ಈ ರೀತಿಯಾಗಿ ಕೃಷ್ಣನನ್ನು ಹೀಯಾಳಿಸುವಂತೆ ಹರಟೆ ಮಾತುಗಳನ್ನಾಡಬಹುದೆ? ನನಿಗೆ ಕಂಸನಿಂದುಂಟಾದ ಬಂಧನವನ್ನು ನೀಗಿದವನಲ್ಲವೇ ? ಇಂದ್ರನೇ ಮೊದಲಾದ ಮೂವತ್ತ ಮೂರ್ಕೋಟಿ ದೇವತೆಗಳನ್ನೂ, ಸ್ವರ್ಗಮರ್ತ್ಯ ಪಾತಾಳಂಗಳೆಂಬ ತ್ರಿಲೋಕಂಗಳನ್ನೂ ಪಾಲಿಸುವ ಕೃಷ್ಣಮೂರ್ತಿಯನ್ನು ಹೀಯಾಳಿಸಲು ನಿನಿಗೇನು ಯೋಗ್ಯತೆ ಇರುವುದು ? ಸಾಕು ಸುಮ್ಮನಿರು, ಎಂದು ಗದರಿಸಿದ ತಮ್ಮ ಅತ್ತೆಯನ್ನು ಕುರಿತು, ಸತ್ಯಭಾಮೆಯು ॥ ೪೮ ॥ ಎಲೌ ಮಾತೆಯೆ, ನನ್ನ ಮೇಲೆ ಕೋಪಮಾಡಬೇಡಿ, ಈ ಕೃಷ್ಣನು ನಿಮ್ಮ ಬಂಧನವನ್ನು ಬಿಡಿಸಿದ್ದರೆ ಜರಾಸಂಧನ ಬಲೆಗೇಕೆ ಸಿಕ್ಕಿದನು, ಧರ್ಮರಾಯನು, ಭೀಷ್ಮನು ಇವರಿಗೇತಕ್ಕೆ ವಶನಾದನು ? ಹದಿನಾರು ಸಹಸ್ರ

ನರನಕುರುಹುಗಾಣಿಸದನಂಪೆಳವಿಗೊಲ್ದು || ಸುಮ್ಮನೇತಕೆಸಿಕ್ಕಿದಂಜಗದ್ಗುರುವೆನಲ್ | ನಮ್ಮದೊಳಗಿರಿನೀವುನಮಗೆಯುಂ ಗುರುನೀವೆ | ನಮ್ಮನಗಿಸದೆನೀವುತಿಳಿವುದೆಂದಳ್ದೇವಕಿಕಿನುತೆ ಸತ್ಯಭಾಮೆ || ೪೯ || ಸತ್ಯಭಾಮಾದೇವಿನುಡಿದಕಟಕಿಯ ಮಾತಿ | ಗತ್ಯಂತಹರುಷಮುಂತಾಳ್ದದಕೆನಸುನಗುತಪ್ರತ್ಯುತ್ತರಂ | ಗೊಡುವೆನೆಂಬನಿತರೊಳ್ಭೀಮಸೇನನೈತರುತಿಹುದನು | ಭೃತ್ಯರೆಚ್ಚರಿಸಿದೊಡೆಭಾವಮೈದುನತನದ | ಕೃತ್ಯದಿಂದಚ್ಯುತಂಸೂಚಿಸಲ್ತೆಡೆದಳೌ | ಚಿತ್ಯಮಲ್ಲೊಳಪೊಗುವೊಡಾರೋಗಣೆ ಯುಸಮಯಮೆಂದುಸೈಳೇಂಧ್ರಿಬಂದು || ೫೦ || ಆರೋಗಣೆಯಸಮಯಮಾರ್ಗೆಭೂತಂಪೊಯ್ದು | ದಾರನೀಮನೆಯೊಳಿಂತೀ ಗಳೇತಕೆಮೌನ | ಮಾರುಮಿಲ್ಲವೆಪೊರೆಯೊಳಿಹರೆದೇವಕಿಸತ್ಯಭಾಮೆಗಾವುದುಮಿಲ್ಲಲಾ || ಆರೆನ್ನನಿಲ್ಲಿತಡೆಸಿದರಾಯ್ತೆ ದ-ರ್ಭಿಕ್ಷ |

---

ನಗರದ ಬೀದಿಯಲ್ಲಿ ತಿರುಗುತ್ತಿರುವಾಗ ಶೂದ್ರಜಾತಿಯ ಕುಬ್ಜೆಯನ್ನು ನೋಡಿದನು. ಆಕೆಯು ಅವನಿಗೆ ಗಂಧ ಪುಷ್ಪ ತಾಂಬೂಲಗಳನ್ನು ನೀಡಲು ಎಲ್ಲವನ್ನು ಕೈಗೊಂಡು ಕಾಲಿಲ್ಲದವಳಾದ ಅವಳ ಮೈಯನ್ನು ಮೇಲಕ್ಕೆತ್ತಿದನು. ಕೂಡಲೆ ಆಕೆಗೆ ದಿವ್ಯ ಶರೀರವು ಉಂಟಾಯಿತು, ಆಗ ಅವಳು ತನ್ನನ್ನು ವರಿಸೆಂದು ಕೇಳಿದಳು, ಕೃಷ್ಣನು ಆಗಲೆಂದು ಅನುಮೋದಿಸಿದನು. ಆದ್ದರಿಂದ ಕುಬ್ಜೆಯ ಪಾಶಕ್ಕೆ ಸಿಕ್ಕು ಬಿದ್ದನು. ಗುರು—ಅಜ್ಞಾನ ಧ್ವಂಸಕನು. ದೇವಕಿ-ವಸುದೇವನ ಹೆಂಡತಿ, ಸತ್ಯ ಭಾಮೆ—ಸತ್ರಾಜಿತನ ಪುತ್ರಿ, ಶ್ರೀ ಕೃಷ್ಣನು ಸ್ಯಮಂತಕಮಣಿಯನ್ನು ಹುಡುಕಿ ತನ್ನ ಮೇಲಿನ ದೂರನ್ನು ಹೋಗಲಾಡಿಸಿ ಕೊಳ್ಳಲು ಸತ್ರಾಜಿತನಿಗೆ ಕೊಟ್ಟ ಸಂತೋಷಕ್ಕಾಗಿ ಆತನು ತನ್ನ ಕುವರಿಯಾದ ಸತ್ಯಭಾಮೆಯನ್ನು ಕೊಟ್ಟು ಪಾಣಿಗ್ರಹಣ ಮಹೋತ್ಸವವನ್ನು ನೆರವೇರಿಸಿದ್ದನು || ೪೯ ||

ಟೀ|| ಸತ್ಯಭಾಮಾದೇವಿ-ಸತ್ರಾಜಿತನ ಪುತ್ರಿಯು, ನುಡಿದ-ಮಾತನಾಡಿದ, ಕಟಕಿಯಮಾತಿಗೆ - ಹಾಸ್ಯೋಕ್ತಿಗೆ, ಅತ್ಯಂತ-ಬಹಳ ಹೆಚ್ಚಾದ, ಹರ್ಷಮುಂ-ಆನಂದವನ್ನು, ತಾಳ್ದು-ಧರಿಸಿ, ನಸುನಗುತ-ಮುಗುಳ್ನಗೆಯಿಂದ ಕೂಡಿದವನಾಗಿ, ಪ್ರತ್ಯುತ್ತರಂ-ಪಡಿನುಡಿಯನ್ನು, ಕೊಡುವೆನೆಂಬ-ಈಯಬೇಕೆಂದಿರುವ ಅನಿತರೊಳ್-ಸಮಯಕ್ಕೆ, ಭೀಮಸೇನನು-ವೃಕೋದ ರನು, ಐತರುತಿಹುದನು-ಸಮೀಪಸ್ಥನಾಗುತ್ತಿರುವುದನ್ನು, ಭೃತ್ಯರು ಸೇವಕರು, ಎಚ್ಚರಿಸಿದೊಡೆ-ವಿಜ್ಞಾಪಿಸಲಾಗಿ, ಭಾವಮೈ ದುನತನದ-ಸೋದರಳಿಯನೆಂಬುದರ (ಸುಭದ್ರೆಯ ಗಂಡನಾದ ಅರ್ಜುನನ ಅಣ್ಣನೆಂಬುದರ), ಕೃತ್ಯದಿಂ ಸದರದಿಂದೊಗೆದ ಹಾಸ್ಯೋಕ್ತಿಗಳಿಂದ, ಅಚ್ಯುತಂ-ಹರಿಯು, ಸೂಚಿಸಲ್-ಸಂಜ್ಞೆಮಾಡಲು, ಸೈಳೇಂಧ್ರಿ-ಸೇವಕಳು, ಬಂದು-ವೃಕೋದರನಿ ದ್ದೆಡೆಯನ್ನು ಸೇರಿ, ಪೊಗುವೊಡೆ-ಒಳಗೆ ಪ್ರವೇಶಮಾಡಬೇಕಾದರೆ, ಆರೋಗಣೆಯ-ಊಟಮಾಡತಕ್ಕ, ಸಮಯಂ-ಸಂದ ರ್ಭವಾಗಿದೆ, ಔಚಿತ್ಯಂ-ಈಗ ಅಲ್ಲಿಗೆ ಹೋಗುವುದು, ಅಲ್ಲ- ಯೋಗ್ಯವಲ್ಲ. ಎಂದು-ಎಂಬದಾಗಿ, ತಡೆದಳು-ನಿರೋಧಿಸಿ ದಳು || ೫೦ ||

ಟೀ|| ಆರ್ಗೆ-ಯಾವ ಮನುಷ್ಯನಿಗೆ, ಆರೋಗಣೆಯ ಸಮಯಂ-ಭೋಜನದ ಹೊತ್ತು, ಈ ಮನೆಯೊಳು-ಈ ಮಂದಿರದಲ್ಲಿ, ಆರನು-ಯಾವ ನರನನ್ನು, ಭೂತಂ-ಗ್ರಹವಿಶೇಷವು, ಪೊಯ್ದು-ವಶಪಡಿಸಿಕೊಂಡಿರುವುದು? ಇಂತು-ಈ ಪರಿ ಯಾಗಿ, ಮೌನಂ-ಮೂಕಭಾವವು, ಏತಕೆ-ಸಾವುಕಾರಣದಿಂದಾಗಿದೆ? ಆರುಂ-ಒಬ್ಬರಾದರೂ, ಇಲ್ಲವೆ-ಈ ಎಡೆಯಲ್ಲಿಲ್ಲವೇ? ಪೊರೆಯೊಳ್ - ಹತ್ತಿರದಲ್ಲಿ ಮತ್ತು ಸಂರಕ್ಷಿಸುವುದರಲ್ಲಿ, ದೇವಕಿ - ಶ್ರೀ ಕೃಷ್ಣಮೂರ್ತಿಯ ಮಾತೆಯು, ಇಹರೆ-ಇದಾ ರೆಯೊ ಇಲ್ಲವೊ? ಸತ್ಯಭಾಮೆಗೆ-ಸತ್ರಾಜಿತನ ಕುವರಿಗೆ, ಆವುದುಂ-ಮುನ್ನಿನ ಯಾವುದೊಂದೂ, ಇಲ್ಲಲಾ-ಗೈಯ್ಯಲು ಒಡಂಬಡಿಕೆ

---

ಜನ ಹೆಂಗಸರ ಕೈಗೆ ಸಿಕ್ಕಲು ಕಾರಣವೇನು? ಇಂದ್ರಾದಿ ದೇವತೆಗಳನ್ನೂ, ತ್ರಿಲೋಕಂಗಳನ್ನೂ ಕಾಪಾಡತಕ್ಕವನಾದರೆ ಸಾರಥಿಯಾಗಿ ಇರಬೇಕಾದ ನಿಮಿತ್ತವೇನು? ಇವನು ಮಾನವನಲ್ಲನಾದರೆ ಶೂದ್ರ ಜಾತಿಯ ಒಬ್ಬ ಹೆಳವಿಗೆ ವಶನಾಗಬೇಕಾ ಗಿತ್ತೆ? ಇದನ್ನೆಲ್ಲಾ ನಮ್ಮಿಬ್ಬರಿಗೂ ಗುರುಹಿರಿಯರಾದ ನೀವೇ ಯೋಚಿಸಿರೆಂದು ದೇವಕಿಯೊಂದಿಗೆ ನುಡಿದಳು || ೪೯ || ಈ ಮಾತುಗಳನ್ನು ದೇವಕಿಯು ಕೇಳಿ ಬಹು ಸಂತೋಷಪಟ್ಟು ಪ್ರತ್ಯುತ್ತರವಂ ಕೊಡಲು ಸಿದ್ಧಳಾಗುವ ವೇಳೆಗೆ ಚರನೋರ್ವನು ಬಂದು ವಾಯು ಪುತ್ರನಾದ ವೃಕೋದರನು ಬಂದಿರುವ ಸಂಗತಿಯನ್ನು ಕೃಷ್ಣನೊಂದಿಗೆ ವಿನಯದಿಂದ ಬಿನ್ನಯಿಸಿದನು. ಶ್ರೀ ಕೃಷ್ಣನಾದರೋ ಭಾವಮೈದನನ್ನು ಪರಿಹಾಸ್ಯಮಾಡಬೇಕೆಂದು ಬಗೆದು, ಈಗ ಊಟದ ಹೊತ್ತಾದ್ದರಿಂದ ಒಳಕ್ಕೆಹೋ ಗಲು ಆಗುವದಿಲ್ಲವೆಂದು ನುಡಿ ಎಂದು ಒಬ್ಬ ದೂತಿಯೊಡನೆ ಹೇಳಿಕಳುಹಿಸಲು ಅವಳು ಹಾಗೆಯೇ ಮಾಡಿದಳು || ೫೦ || ಆಗ ಭೀಮಸೇನನು ದೂತಿಯನ್ನು ಕುರಿತು ಇದೇನು ಈಗ ಯಾರಿಗೆ ಊಟದ ಹೊತ್ತು? ಈ ಮನೆಯಲ್ಲಿ ಯಾರಿಗೆ ಪಿಶಾಚಗ್ರಸ್ತ ವಾಗಿದೆ? ಇಷ್ಟು ನಿಶ್ಶಬ್ದವಾಗಿರಲು ಕಾರಣವೇನು? ಮನೆಯಲ್ಲಿ ಯಾರೂ ಇಲ್ಲವೆ? ಕೃಷ್ಣನಬಳಿ ದೇವಕಿ ಸತ್ಯಭಾಮೆಯರು ಇರುವರೊ? ಇಲ್ಲವೊ? ನನ್ನನ್ನು ಅಡ್ಡಿಮಾಡೆಂದು ನಿನಿಗೆ ಅನುಜ್ಞೆಯಂ ಕೊಟ್ಟವರಾರು? ಈ ಊರಲ್ಲಿ ಮುಳಿ ಬೆಗಳಳೇನೂ

ಮೂರೊಳ್ಳೆಳೆಯದೆಧಾನ್ಯಮಿಲ್ಲಿಕರೆಯದೆವೃಷ್ಟಿ | ನಾರಿಯರಿನಿಬರಂ ಕಟ್ಟಿಕೊಳಲಿ ಕೆಬಿತರೆಂದುಮಾರುತಿನುಡಿದನು || ೫೧ || ಭೀಮ ನಾಡಿದನುಡಿಯಕೇಳಿರುಕ್ಮಿಣಿಸತ್ಯ | ಭಾಮೆಯರಮೊಗನೋಡಿನಸುನಗುತಮುರಹರಂ | ತಾಮತ್ತೆರಭಸದಿಂಭೋಜನಂಗೈವುತೊಡನೊಡನೆಧಿರ್ರನೆತೇಗಲು || ತಾಮಸಮಿದೇಕೆನಾಂಬಂದನೋರ್ವನೆಮುಳಿದೊ | ಡೀಮೂಜಗಂನಿನ್ನಬಾಯ್ಗೊಂದುತುತ್ತಾಗ | ದೀಮನುಜಗಿನುಜರಂಬಲ್ಲರಾರೆನ್ನನುಳುಹೆಂದನಿಲಜಂಚೀರ್ದನು || ೫೨ || ಬಿಡದೆಕಳವಿಂದಲೋಗರಮನೆಗಳಂಪೊಕ್ಕುತುಡಿತಿಂದನನಭೋಜನಕ್ಕೆಮೃಷ್ಟಾನ್ನಮಾ | ದೊಡೆಕೆಲಬಲಂಗಳಂನೋಡುವನೆಗೋವಳಂಗರಸುತನಮಾದಬಳಿಕ || ಪೊಡವಿಯಂಕಂಡುನಡೆವನೆಮುಳಿದುಮಾನವನಂ | ಬಡಿದನಂನೆಂಟರರಿವನೆಮೊಲೆಯಗೊಟ್ಟಳಸುಗು | ಡಿದವಂಪುರುಷಾ

---

ಯಾಗವೆ ಹೋಯಿತೆ? ಎನ್ನನು-ನನ್ನನ್ನು, ಇಲ್ಲಿ-ಈ ಬಾಗಿಲಲ್ಲಿ ತಡಸಿದರು_ಅಡ್ಡಿಪಡಿಸೆಂದು ಹೇಳಿದವರು, ಆರು_ಯಾವ ಮಾನವನು? ಊರೋಳ್_ಈ ಪೊಳಲಲ್ಲಿ, ದುರ್ಭಿಕ್ಷಂ_ವೀರಕ್ಷಾನುವು ಮತ್ತು ಪರಸ್ಥಳದವರಿಗೆ ಅನ್ನಹಾಕದಿರುವುದು, ಆಯ್ತೆ_ಪ್ರಾಪ್ತವಾಗಿದೆಯೆ? ಇಲ್ಲಿ-ಈ ನಾಡಿನಲ್ಲಿ, ವೃಷ್ಟಿ_ವರ್ಷವು, ಕರೆಯದೆ_ಸುರಿಯುವುದಿಲ್ಲವೊ? ಕಾಳು_ಫಲವು, ವೆಳೆಯದೆ_ಫಲಿಸುವುದಿಲ್ಲವೊ?, ಇನಿಬರಂ-ಇಷ್ಟುಜನ ನಾರಿಯರನ್ನು ಕಟ್ಟಿಕೊಳ್ಳಲು. ಏತಕ್ಕೆ-ಏತಕ್ಕೆ ವರಿಸಬೇಕಾಗಿತ್ತು? ಬಿಡಲಿ_ಎಲ್ಲರನ್ನೂ ವರ್ಜಿಸಿ ಏಕಾಕಿಯಾಗಿ ತಾನೊಬ್ಬನೇ ಇರಲಿ, ಎಂದು_ಎಂಬ ತೆರನಾಗಿ, ಮಾರುತಿ-ಪವನಸೂನುವು, ನುಡಿದನು_ಹೇಳಿದನು.

ಅ|| ವಿ|| ಮರುತನ ಪುತ್ರನು ಮಾರುತಿ || ೫೧ ||

ಟೀ|| ಭೀಮಂ-ವಾಯುಸುತನು, ಆಡಿದ_ನುಡಿದ, ನುಡಿಯ-ವಚನವನ್ನು, ಕೇಳಿ-ಲಾಲಿಸಿ, ರುಕ್ಮಿಣಿ ಸತ್ಯಭಾಮೆಯರ_ರುಕ್ಮಿಣಿ ಸತ್ಯಭಾಮಾ ಎಂಬ ತನ್ನ ಈರ್ವರು ಮಹಿಷಿಯರ, ಮೊಗ_ಆಸ್ಯವನ್ನು, ನೋಡಿ_ಈಕ್ಷಿಸಿ, ಮುರಹರಂ_ಮುರಧ್ವಂಸಿಯು, ನಸುನಗುತ್ತ_ಮುಗುಳ್ನಗೆಯಿಂದ ಕೂಡಿದವನಾಗಿ, ತಾ-ಆತನು, ಮತ್ತೆ_ಪುನಃ, ರಭಸದಿಂ_ಜಾಗ್ರತೆಯಿಂದ, ಭೋಜನಂಗೈವುತ_ಆರೋಗಣೆಯನ್ನು ಎಸಗುತ್ತ ಒಡನೊಡನೆ_ಆಗಾಗ್ಗೆ, ಧಿರ್ರನೆತೇಗಲು_ಧಿರ್ರೆಂದು ಉಸುರನ್ನೆಳೆಯಲು, ತಾಮಸಂ_ಸಾವಕಾಶವು, ಇದೇಕೆ_ಏನುಕಾರಣ? ಬಂದವನು_ಐತಂದವನು, ನಾಂ_ತಾನು, ಓರ್ವನೆ_ಒಬ್ಬ ಮನುಷ್ಯನೆ, ಮುಳಿದೊಡೆ_ಆಕ್ರೋಶಮಂಗೈದಲ್ಲಿ, ಈ ಮೂಜಗಂ-ತ್ರಿಲೋಕಂಗಳೂ, ನಿನ್ನಬಾಯ್ಗೆ_ನಿನ್ನಾಸ್ಯಕ್ಕೆ, ಒಂದುತುತ್ತಾಗದೆ-ಒಂದೇ ಕವಳವಾಗದಿರುವುದೆ? ಈ ಮನುಜಗಿನುಜರು_ಈ ನರರುಗಿರರು ಎಂಬುವವನ್ನು, ಬಲ್ಲರು_ಅರಿತಿರುವರು, ಆರು_ಮತ್ತೆ ಯಾರು? ಎನ್ನನು-ನನ್ನನ್ನು, ಉಳುಹು_ಕಾಪಾಡು, ಎಂದು_ಎಂಬದಾಗಿ, ಅನಿಲಜಂ_ವಾಯುನಂದನು, ಚೀರ್ದನು-ಯಾಚಿಸಿದನು.

ಅ|| ವಿ|| ತ್ರಿಲೋಕಗಳು=ಸ್ವರ್ಗ, ಮರ್ತ್ಯ, ಪಾತಾಳಂಗಳು, ಮೊಗ (ತ್ಭ)_ಮುಖ (ತ್ಸ), ಅನಿಲ_ವಾಯು, ಅನಲ_ಅಗ್ನಿ, ಅನಿಲ_ವಾಯುವಿನಿಂದ, ಜಂ_ಹುಟ್ಟಿದವನು, (ಕೃ. ವೃ.) ಭೀಮನು ಮತ್ತು ಆಂಜನೇಯನು || ೫೨ ||

ಟೀ|| ಬಿಡದೆ_ಆಯುಕ್ತವೆಂದು ಅರಿತೂ ಬಿಟ್ಟುಬಿಡದೆ, ಕಳವಿಂದ_ಚೌರ್ಯದಿಂದ, ಲೋಗರಂ_ಮಾನವರ, ಮನೆಗಳಂ_ಮಂದಿರಗಳನ್ನು, ಪೊಕ್ಕು_ಪ್ರವೇಶಿಸಿ, ತುಡಿ_ನಿರ್ಬಂಧದಿಂದ, ಮತ್ತು ದುರ್ಮಾರ್ಗದಿಂದ, ತಿಂದವನ-ದಧಿನವನೀತಂಗಳನ್ನು ಆಹಾರಮಾಡಿಕೊಂಡವನ, ಭೋಜನಕ್ಕೆ-ಆರೋಗಣೆಗೆ, ಮೃಷ್ಟಾನ್ನಂ-ಭಕ್ಷ್ಯ, ಭೋಜ್ಯ, ಲೇಹ್ಯ, ಚೋಷ್ಯ ಪಾನೀಯಂಗಳಿಂ ಕೂಡಿದ ಶಾಲ್ಯನ್ನವು, ಆದೊಡೆ_ದೊರೆತರೆ, ಕೆಲಬಲಂಗಳಂ-ಎಡಬಲಗಳಲ್ಲಿ ಯಾರಿದಾರೆಂಬುದನ್ನು, ನೋಡುವನೊ-ಈಕ್ಷಿಸುವನೊ ಎಂದರೆ ತನ್ನಂತೆಯೇ ಇತರರೂ ಎಂಬ ವಿವೇಚನೆಯನ್ನುಂಟಾಗಿರುವನೋ,? ಗೋವಳಂಗೆ_ಪಶುಪಾಲಕನಿಗೆ, ಅರಸುತನಂ-ದೊರೆತನವು, ಆದಬಳಿಕ_ಸಿಕ್ಕಿದಮೇಲೆ, ಪೊಡವಿಯಂಕಂಡು_ತಲೆತಗ್ಗಿಸಿಕೊಂಡು, ನಡೆವನೆ_ನಡೆದಾನೆ ಅಥವಾ ತಿರುಗುವನೆ? ಮುಳಿದು_ಸಿಟ್ಟುಮಾಡಿಕೊಂಡ, ಮಾನವಂ_ಸೋದರಮಾವನನ್ನು ಅಥವಾ ಮಾತುಲನನ್ನು, ಬಡಿದನಂ_ಹತಮಾಡಿದನನು, ನೆಂಟರ_ಬಾಂಧುವರ್ಗವನ್ನು, ಅರಿವನೆ_ಮರ್ಯಾದೆಯಿಂದ ಕಾಣುವನೆ,? ಮೊಲೆಗಟ್ಟವಳ_ಸ್ತನವನ್ನುಣ್ಣಿಸಿದವಳ, ಅಸುವಂ-ಪ್ರಾಣವನ್ನು, ಕುಡಿದವಂ_ಪಾನ ಮಾಡಿದ, ಪುರುಷ – ನರನಲ್ಲಿ, ಅರ್ಥಿಯು_ಆಶೆಯುಳ್ಳವನು,

---

ಇಲ್ಲದೆ ಪರಸ್ಥಳದ ಒಬ್ಬನನ್ನು ಸತ್ಕರಿಸುವುದೂಕೂಡ ಅಸಾಧ್ಯವೊ? ಅಥವಾ ಕೃಷ್ಣನ ಸಂಸಾರವು ಬಲವಾದ್ದರಿಂದ ಅವನ ಜೀವನವೇ ದುಸ್ತರವೋ? ||೫೧|| ಎಂದು ನುಡಿಯುತ್ತಲಿದ್ದ ಭೀಮಸೇನನ ಮಾತುಗಳನ್ನು ಕೃಷ್ಣನು ಕೇಳಿ ರುಕ್ಮಿಣಿ ಸತ್ಯಭಾಮೆಯರಕಡೆ ನೋಡಿ ನಗುತ್ತ ಧಿರ್ರನೆ ತೇಗಿದನು. ಈ ಧ್ವನಿಯು ಭೀಮನಿಗೆ ಕೇಳಲಾಗಿ ಮತ್ತೆ ||೫೨|| ದೂತಿಯನ್ನು ನೋಡಿ ಯಾವಾಗಲೂ ಕಳ್ಳತನದಲ್ಲಿಯೇ ಹೊಟ್ಟೆ ಹೊರೆದುಕೊಳ್ಳತಕ್ಕವನಿಗೆ ಮೃಷ್ಟಾನ್ನವು ಸಿಕ್ಕಿದರೆ ಅವನ ಕಣ್ಣಿಗೆ ಎಡಬಲಗಳಲ್ಲಿರುವ ಜನರು ಕಾಣಿಸುತ್ತಾರಯೋ? ದನಕಾಯುವವನು ರಾಜಾಧಿರಾಜನಾದರೆ ಅವನಿಗೆ ತಲೆಯು ನಿಲ್ಲುವುದೇ? ಸೋದರಮಾವನನ್ನೇ

ರ್ಥಿಯಾದಪನೆನಾವಜ್ಞರೆಂದುಮಾರುತಿಜರಿದನು ‖ ೫೩ ‖ ದೇವತನನುಂಬಿಟ್ಟುನರನಾದವಂಗೆಬಳಿ | ಕಾವಗೌರವವಿಹುದಿವಂ ನಾಚುವನೆಸಾಕು | ನಾವೀತನಂಕಾಣ್ಬುದುಚಿತಮಲ್ಲೆಂದುಭೀಮಂವಿಭಾಡಿಸಲತ್ತಲು ‖ ಶ್ರೀವರಂನಸುನಗೆಯೊಳಾಗಳರಿದಂದದಿಂ | ದಾವಗಂಬಂದನನಿಲಜನಿತ್ತಕರೆತಡೆದ | ಳಾವಳೀತಕೆಕೋಪಮೆನೆಮುತ್ತೆಪವನಸುತನೊಳಪೊಗುತಲಿಂತೆಂದನು ‖೫೪‖ ದೇವನಿಮ್ಮರ್ಜುನನಸಲುಗೆನನುಗುಂಟೆಸಂ | ಭಾವಿಸುವರಿಲ್ಲೆಮ್ಮನಿಲ್ಲಿನಿಲಿಸಿದರೆನ | ಲ್ನಾವುತಡೆಸಿದೆವಿತ್ತಬಾಯೆನುತಸೆರಗಪಿಡಿ

---

ಅಥವಾ ಚತುರ್ವಿಧಫಲಪುರುಷಾರ್ಥ ಸಹಿತನು, ಆದಪನೆ– ಆದಾನ, ನಾವು–ಮಾನವರು, ಅಜ್ಞರು–ಮಂದಬುದ್ಧಿಯುಳ್ಳವರು, ಎಂದು–ಎಂಬದಾಗಿ, ಮಾರುತಿ–ವೃಕೋದರನು, ಜರಿದನು–ಹೀಯಾಳಿಸಿದನು.

ಅ‖ ವಿ‖ ಶ್ರೀ ಕೃಷ್ಣನು ಹುಟ್ಟುವುದಕ್ಕೆ ಮುಂಚೆ ದೇವಕಿಯ ಗರ್ಭದಲ್ಲಿ ಜನಿಸಿದ ಮಕ್ಕಳನ್ನೆಲ್ಲಾ ಕೊಲ್ಲುತ್ತಿದ್ದ ಕಂಸನು ಶ್ರೀ ಕೃಷ್ಣಮೂರ್ತಿಗೆ ಸೋದರಮಾವನಾಗಬೇಕು. ಇವನನ್ನೂ ಕಂಸನು ಕೊಲ್ಲಲುದ್ಯುಕ್ತನಾಗಲು ಸ್ವಾಮಿಯು ಅವನನ್ನು ಕೊಂದು ನಿರುಪಾಧಿಕವಾಗಿ ಮಾಡಿದನು. ಪೂತನಿ ಎಂಬ ದಾದಿಯು ತನಗೆ ವಿಷಸ್ತನಂಗಳನ್ನು ಕೊಡುತ್ತಿರುವಳೆಂದರಿತು ಅವಳ ಶಕ್ತಿಯಾವತ್ತನ್ನೂ ನಿಶ್ಶೇಷವಾಗಿ ಹೀರಿಬಿಟ್ಟನಾದ್ದರಿಂದ ಇಲ್ಲಿ ಭೀಮನು "ಮೊಲೆಯಗೊಟ್ಟಳಸುವಗುಡಿದಂ" ಎಂದು ಪೇಳಿರುವನು ಲೋಕ–ಪ್ರಪಂಚ ಮತ್ತು ಜನರು. ಪುರುಷಾರ್ಥಂಗಳು–ಧರ್ಮ, ಅರ್ಥ, ಕಾಮ, ಮೋಕ್ಷಂಗಳೆಂಬ ನಾಲ್ಕು ‖೫೩‖

ಟೀ‖ ದೇವತನನುಂ–ವೈಕುಂಠಪದವಿಯನ್ನು, ಬಿಟ್ಟು–ವಿಸರ್ಜಿಸಿ, ಎಂದರೆ ಅಸಾಧಾರಣವಾದ ತನ್ನ ನಿಜ ಶರೀರವನ್ನು ಮರೆಮಾಡಿ, ನರನಾದವಂಗೆ–ಕೃತ್ರಿಮವಾದ ಮನುಜನಾಗಿ ತೋರತಕ್ಕವನಿಗೆ, ಬಳಿಕ–ಆ ಮೇಲೆ, ಆವ ಗೌರವಂ–ಯಾವ ಮರ್ಯಾದೆಯು, ಇಹುದು–ದೊರಕೀತು, ಇವಂ–ಈ ಕೃಷ್ಣನು, ನಾಚುವನೆ–ಲಜ್ಜೆಯಂ ಪಡೆದಾನೆ, ಸಾಕು–ದ್ವಾರಬಂಧನ ಮಾತ್ರವೇ ಸಾಕಾಗಿಧೆ. ನಾವು–ಚಂದ್ರವಂಶದ ರಾಜರಲ್ಲಿ ಹೆಸರುವಾಸಿಗೆ ಬಂದ ನಾವುಗಳು, ಈತನಂ–ದನಕಾಯುವ ಇವನನ್ನು, ಅವ್ಯಕ್ತಸ್ವರೂಪನನ್ನು, ಕಾಣ್ಬುದು–ನರರ ಕಣ್ಣಿನಿಂದ ನೋಡೋಣವು, ಒಳಗಣ್ಣಿನಿಂದರಿಯೋಣವು, ಉಚಿತಂ ಅಲ್ಲಂ–ಅಯೋಗ್ಯವು, ಮತ್ತು ಅಸಾಧ್ಯವು, ಎಂದು–ಎಂಬದಾಗಿ, ಭೀಮನು–ವಾಯುಸೂನುವು, ವಿಭಾಡಿಸಲ್–ನಿಂದಿಸಲು, ಅತ್ತಲು–ಭೋಜನಶಾಲೆಯಲ್ಲಿ, ಶ್ರೀವರ–ಲಕ್ಷ್ಮೀರಮಣನು, ನಸುನಗೆಯೊಳು–ಮಂದಹಾಸದಿಂದ, ಆಗಳೆ–ಕೂಡಲೆ, ಅರಿದಂದದಿಂದ–ಗೋಚರವಾದಹಾಗೆ, ಆವಗಂ–ಯಾವ ವೇಳೆಯಲ್ಲಿ, ಅನಿಲಜಂ–ವೃಕೋದರನು, ಬಂದನು–ಐತಂದನು, ಇತ್ತ–ಇಲ್ಲಿಗೆ, ಕರೆ–ಬರಮಾಡು, ಎಂದು–ಎಂಬದಾಗಿ, ತಡದಳು–ನಿರೋಧಿಸಿದವಳು, ಆವಳು–ಯಾರು, ಕೋಪಂ–ಸಿಟ್ಟು, ಏತಕೆ–ಏನುಕಾರಣ, ಎಂದು–ಎಂಬ ತೆರನಾಗಿ, ಹರಿಯು ನುಡಿಯಲು, ಪವನಸುತನು–ವಾಯುಪುತ್ರನು, ಮತ್ತೆ–ತಿರುಗಿ, (ಒಳಕ್ಕೆ ಹೋಗಲು ಅನುಜ್ಞೆಯಾದ ಬಳಿಕ) ಪವನ ಸುತನು–ಅನಿಲಜನು, ಒಳಪೊಗುತಲೆ–ಒಳಕ್ಕೆ ಸೇರುತ್ತಲೆ, ಇಂತೆಂದನು–ಮುಂದೆ ಹೇಳುವಂತೆ ನುಡಿದನು ‖೫೪‖

ಟೀ‖ ದೇವ–ಪ್ರಭುವೆ, ನಿಮ್ಮ–ನಿಮಗೆ ಬಂಧುವಾದ, ಅರ್ಜುನನ–ಪಾರ್ಥನ, ಸಲಿಗೆ–ಬಳಕೆಯು ಅಥವಾ ಸದರವು, ಎನಗೆ–ನನಗೆ, ಉಂಟೆ–ಇರುವುದೆ, ಎಮ್ಮನು– ನನ್ನಂಥವರನ್ನು, ಸಂಭಾವಿಸುವರು – ಉಪಚರಿಸತಕ್ಕವರು, ಇಲ್ಲ–ಯಾರೂ ಇಲ್ಲವು, ಇಲ್ಲಿ–ಈ ದ್ವಾರದಲ್ಲಿಯೆ, ನಿಲಿಸಿದರು–ನಿರೋಧಿಸಿದರು, ಎನಲ್–ಎಂದು ನುಡಿಯಲು, ಸ್ವಾಮಿಯು, ನಾವು–ನಾನೇ, ತಡೆಸಿದೆವು–ಅಡ್ಡಿ ಪಡಿಸಿದೆನು, ಇತ್ತ–ಈ ಕಡೆ, ಬಾ–ಬರುವನಾಗು, ಏನುತ–ಎಂದು ನುಡಿಯುತ್ತ, ಸೆರಗ–ಹೊದ್ದಿದ್ದ ವಸ್ತ್ರದ ತುದಿ

---

ನಿಷ್ಕರುಣಿಯಾಗಿ ಕೊಂದವನಿಗೆ ನೆಂಟರಿಷ್ಟರಲ್ಲಿ ವಿಶ್ವಾಸವು ಎಲ್ಲಿಂದ ಬರುವುದು? ಹೊಟ್ಟೆಗೆ ಕೊಟ್ಟು ಕಾಪಾಡಿದವಳನ್ನು ಕೊಂದು ಹಾಕತಕ್ಕವನಿಗೆ ನಮ್ಮಂಥವರು ಲಕ್ಷ್ಯವೆ? ‖೫೩‖ ವೈಕುಂಠಪದವಿಯನ್ನು ಬಿಟ್ಟು ಭೂಲೋಕದಲ್ಲಿ ಸಾಧಾರಣ ಮನುಷ್ಯನಂತೆ ಜನಿಸಿದವನಿಗೆ ಮಾನ ಮರ್ಯಾದೆಗಳೆಲ್ಲಿಯವು? ಇಂಥಾ ನಾಚಿಕೆಯಿಲ್ಲದವನನ್ನು ನೋಡುವುದೇತಕ್ಕೆ ಎಂದು ಘೋರವಾಗಿ ಗರ್ಜಿಸಿದ ಭೀಮನ ಗರ್ಜನೆಯನ್ನು ಶ್ರೀ ಕೃಷ್ಣಮೂರ್ತಿಯು ಕೇಳಿ, ಮುಗುಳ್ನಗೆಯಂ ತಾಳಿ ಏನೂ ತಿಳಿಯದವನಂತೆ ಸೈರಂಧ್ರಿಯಂ ನೋಡಿ, ಇದೇನು! ವಾಯು ಪುತ್ರನು ಕೂಗುವಂತೆ ತೋರುವುದು. ಯಾವಾಗ ಬಂದನೋ ಕಾಣೆನು, ಅವನನ್ನು ತಡೆದವರು ಯಾರು? ತಡಮಾಡದೆ ಒಳಗೆ ಬಿಡಿ ಎಂದು ನುಡಿಯಲು, ದೂತಿಯು ಕೂಡಲೆ ಸ್ವಾಮಿಯ ಅಪ್ಪಣೆಯನ್ನು ನೆರವೇರಿಸಿದಳು. ಭೀಮಸೇನನಾದರೊ ಒಳಗೆ ಪ್ರವೇಶಿಸಿದೊಡನೆಯೇ ಸ್ವಾಮಿಯನ್ನು ಕುರಿತು, ಎಲೈ ಕೃಷ್ಣನೆ! ನಿನಗೆ ಭಾವಮೈದನಾದ ಪಾರ್ಥನಲ್ಲಿರುವ ವಿಶ್ವಾಸವೂ ಮರ್ಯಾದೆಯೂ ನಿಮ್ಮ ಮನೆಗೆ ನಾವು ಬಂದರೆ ನಮಗೆ ದೊರಕೀತೆ? ಮನೆಬಾಗಿಲಿನಲ್ಲಿಯೇ ಒಳ್ಳೇ ಮರ್ಯಾದೆಯನ್ನು ಮಾಡಿಸಿಬಿಟ್ಟೆ, ಮುಖ್ಯ ನಾವು ನಿನಗೇನು ಲಕ್ಷ್ಯವು? ಎಂದು ನಿಷ್ಠುರದ ನುಡಿ

ದೊಡನೆಕುಳ್ಳಿರಿಸಿಕೊಂಡು || ಆವಿವಿಧಭೋಜ್ಯದಿಂದಾರೋಗಿಸಿದಬಳಿಕ | ತೀವಿದಸುಗಂಧಕರ್ಪೂರತಾಂಬೂಲಪು | ಷ್ಪಾವಳಿಗಳಿಂದಸತ್ಕರಿಸಿದಂಭೀಮನಂಸುರಪುರದಲಕ್ಷ್ಮೀಶನು ||೫೫||

ಸಂಧಿ ೬ ಕ್ಕೆ ಪದ್ಯ ೩೨೧ ಕ್ಕಂ ಮಂಗಳಮಸ್ತು.

ಯನ್ನು, ಪಿಡಿದು-ಸೆಳೆದುಕೊಂಡು, ಒಡನೆ-ಕೂಡಲೆ, ಕುಳ್ಳಿರಿಸಿಕೊಂಡು - ಸಮೀಪದಲ್ಲಿರಿಸಿಕೊಂಡು, ಆ ವಿವಿಧ-ತಂಡೋಪತಂಡವಾದ, ಭೋಜ್ಯದಿಂದ-ಆಹಾರ ಸಾಮಗ್ರಿಗಳಿಂದ, ಆರೋಗಿಸಿದ ಬಳಿಕ-ತೃಪ್ತಿಪಡಿಸಿದ ನಂತರ, ತೀವಿದ-ತುಂಬಿದ, ಸುಗಂಧ-ಸುವಾಸನೆಯುಳ್ಳ, ಕರ್ಪೂರ-ಪಚ್ಚೆಗಪ್ಪುರದಿಂ ಕೂಡಿದ, ತಾಂಬೂಲ-ಅಡಿಕೆಲೆ, ಪುಷ್ಪಾವಳಿಗಳಿಂದ-ಪುಷ್ಪಮಾಲಿಕೆಗಳಿಂದ, ಸುರಪುರದ-ದೇವಪುರದ, ಲಕ್ಷ್ಮೀಶನು-ಲಕ್ಷ್ಮೀಕಾಂತನು, ಸತ್ಕರಿಸಿದಂ-ಆದರಿಸಿದನು ||೫೫||

ಟೀಕಾತಾತ್ಪರ್ಯ ಸಹಿತವಾದ ಜೈಮಿನಿಭಾರತದೊಳ್ ಆರನೆಯ ಸಂಧಿಯು

ಸಮಾಪ್ತವಾದುದು.

ಗಳನ್ನಾಡಲು ಶ್ರೀ ಕೃಷ್ಣನು ಕೂಡಲೆ ಭೀಮನ ವಸ್ತ್ರದ ಸೆರಗನ್ನು ತನ್ನ ಕಡೆಗೆ ಸೆಳೆದುಕೊಂಡು ನಾನೇ ವಿನೋದಕ್ಕಾಗಿ ಈ ರೀತಿ ಮಾಡಿದೆನು. ಇದಕ್ಕಾಗಿ ನೀನು ಸ್ವಲ್ಪವೂ ಮನನೊಯ್ಯಲಾಗದು ಎಂದು ಸಮಾಧಾನಪಡಿಸಿ ತನ್ನ ಬಳಿಯಲ್ಲಿ ಕೂಡಿಸಿಕೊಂಡು ಮನೆಯಲ್ಲಿ ಮಾಡಿದ್ದ ಪಂಚಭಕ್ಷ್ಯಪಾಯಸ ಶಾಲ್ಯನ್ನಾದಿಗಳಿಂದ ವೃಕೋದರನನ್ನು ತೃಪ್ತಿಗೊಳಿಸಿ, ಭೋಜನಾನಂತರದಲ್ಲಿ ಗಂಧ ಪುಷ್ಪತಾಂಬೂಲಾದಿಗಳಿಂದಾದರಿಸಿ, ಸುಖಸಲ್ಲಾಪಂಗಳಂ ಮಾಡುತ್ತಿದ್ದರೆಂಬಲ್ಲಿಗೆ,

ಟೀಕಾತಾತ್ಪರ್ಯ ಸಹಿತವಾದ ಜೈಮಿನಿ ಭಾರತದೊಳು ಆರನೆಯ ಸಂಧಿಯು

ಸಮಾಪ್ತವಾದುದು.



## ಏಳನೆಯ ಸಂಧಿ.

ಸೂಚನೆ॥ ಅಧ್ವರಕೆಯಾದವರಗಡಣದಿಂದಾನವಕು । ಲಧ್ವಂಸಿಹಸ್ತಿನಾವತಿಗೆಬಿಜಯಂಗೈವು । ತದ್ವದೊಳ್ತಾ
ಗಿದನುಸಾಲ್ವನಂಗೆಲ್ದುಪಾಂಡವರನುರೆಪಾಲಿಸಿದನು ॥

ಭೂರಮಣ ಕೇಳನಿಲತನಯನಂ ಕೂಡಿಕೊಂಡಾ । ರೋಗಿಸಿದ ಬಳಿಕ ನವ ಕುಸುಮ ಗಂಧ ಕ । ರ್ಪೂರ ತಾಂಬೂಲಮಂ ಕೊಡುತ ಕೃತವರ್ಮನಂ ಕರೆಸಿ ಧರ್ಮಜನ ಮುಖಕೆ ॥ ವಾರಣ ನಗರಿಗೀಗ ನಮ್ಮೊಡನೆ ನಡೆತರಲಿ । ದ್ವಾರಕೆ

---

ಏಳನೆಯ ಸಂಧಿ ಪ್ರಾರಂಭವು.

ಸೂ॥ ದಾನವಕುಲಧ್ವಂಸಿ-ರಾಕ್ಷಸಾಂತಕನಾದ ಶ್ರೀ ಕೃಷ್ಣಸ್ವಾಮಿಯು, ಅಧ್ವರಕೆ-ಯುಧಿಷ್ಠಿರನು ಎಸಗುವ ಹಯಮೇಧಕ್ಕೆ, ಯಾದವರ-ಯದುವಂಶಜರ, ಗಡಣದಿಂದ-ಸಮುದಾಯದಿಂದ, (ಯುಕ್ತನಾಗಿ), ಹಸ್ತಿನಾವತಿಗೆ-ಇಭಪುರಿಗೆ, ಬಿಜಯಂಗೈವುತ-ಹೊರಡುತ್ತ, ಅಧ್ವದೊಳ್-ಹಾದಿಯಲ್ಲಿ, ತಾಗಿದ-ಎದರುಬಿದ್ದ, ಅನುಸಾಲ್ವನಂ-ಅನುಸಾಲ್ವನೆಂಬ ನಾಮಧೇಯವುಳ್ಳ ರಕ್ಕಸನನ್ನು, ಗೆಲ್ದು-ಭಂಗಪಡಿಸಿ ಅಥವಾ ಅಪಜಯವುಂಟಾಗುವಂತೆ ಮಾಡಿ, ಪಾಂಡವರನು-ಧರ್ಮಾದಿಗಳನ್ನು, ಉರೆ-ಹೆಚ್ಚಾಗಿ, ಪಾಲಿಸಿದನು-ಸಲಹಿದನು.

ಅ॥ ವಿ॥ ದಾನವಕುಲಧ್ವಂಸಿ= ದಾನವ – ಅಸುರರ, ಕುಲ- ವಂಶವನ್ನು (ಷ. ತ.) ಧ್ವಂಸಿ - ಹಾಳುಮಾಡಿದನವನು (ದ್ವಿ. ತ).

ಟೀ॥ ಭೂರಮಣ–ಪೊಡವಿಪನಾದ ಜನಮೇಜಯನೆ, ಕೇಳು–ಲಾಲಿಸು, ಅನಿಲತನಯನಂ– ವಾಯುಸೂನುವನ್ನು, ಕೂಡಿಕೊಂಡು–ಜೊತೆಮಾಡಿಕೊಂಡು, ಆರೋಗಿಸಿದಬಳಿಕ–ಭೋಜನಮಾಡಿದಮೇಲೆ, ನವ–ನೂತನವಾದ, ಕುಸುಮ–ಹೂಗಳು, ಗಂಧ – ಸುವಾಸನಾದ್ರವ್ಯಗಳು, ಕರ್ಪೂರ – ಪಚ್ಚೆಗಪ್ಪುರವು, ತಾಂಬೂಲಮಂ – ವೀಳೆಯದೆಲೆ ಅಡಿಕೆ ಮೊದಲಾದವನ್ನು ಕೊಡುತ – ಈಯುತ್ತ, ಕೃತವರ್ಮನಂ–ಕೃತವರ್ಮನೆಂಬ ನಾಮಧೇಯದಿಂದ ಯುಕ್ತನಾದ ಯದುಕುಲದ ಚಮೂಪನನ್ನು, ಕರೆಸಿ-ಐತರಬೇಕೆಂದು ಹೇಳಿ, ಧರ್ಮಜನ-ಧರ್ಮಪುತ್ರನ, ಮುಖಕೆ-ಅಶ್ವಮೇಧವೆಂಬ ಕ್ರತುವಿಗೆ, ಈಗ–ಈಗಲೆ, ವಾರಣನಗರಿಗೆ–ಗಜಪುರಿಗೆ, ನಮ್ಮೊಡನೆ–ನಮ್ಮೊಂದಿಗೆ, ದ್ವಾರಕೆಯೊಳು–ದ್ವಾರಕಾನಗರದಲ್ಲಿ, ಇರ್ದ–ಇರತಕ್ಕಂಥ, ಜನರೆಲ್ಲರು-ಸಮಸ್ತಪ್ರಜೆಗಳೂ, ನಡೆತರಲಿ – ಐತರಲಿ, ಪೊರಗೆ – ಊರಾಚೆಯಕಡೆಯಲ್ಲಿ, ಗೂಡಾರಮಂ – ಬಿಡಾರವನ್ನು (ಡೇರೆಯನ್ನು), ಪೊಯ್ಸು–ಮಾಡಿಸು, ಪುರದೊಳು–ನಗರದಲ್ಲೆಲ್ಲಾ, ಪೋಗೆ–ಹಸ್ತಿನಾವತಿಗೆ ಹೊರಡಲು ಸಿದ್ಧರಾಗಬೇಕೆಂಬದಾಗಿ, ಸಾರಿಸು-ಪ್ರಕಟಪಡಿಸು, ಎಂದು–ಎಂಬತೆರನಾಗಿ, ಮಧುಸೂದನಂ–ಹರಿಯು, ನೇಮಿಸಿದನು-ಅಪ್ಪಣೆಯನ್ನಿತ್ತನು.

ಅ॥ ವಿ॥ ಮಧು-ಮಧುವೆಂಬ ರಕ್ಕಸನನ್ನು, ಸೂದನ – ಕೊಂದವನು (ದ್ವಿ. ತ.) ಮಧು = ಒಬ್ಬ ರಾಕ್ಷಸ, ಬಂದು ಉದ್ಯಾನವನ, ಸಿಹಿಪದಾರ್ಥ, ಹೆಂಡ, ಎಂಬ ಅರ್ಥಗಳನ್ನೊಳಕೊಂಡಿರುವುದು, ಅನಿಲತನಯಂ=ಅನಿಲ–ವಾಯುವಿನ,ತನಯಂ-ಪುತ್ರನು (ಷ. ತ.) ಅನಿಲ – ಗಾಳಿ, ಅನಲ-ಅಗ್ನಿ, ಕುಸುಮವೂ ಗಂಧವೂ ಕರ್ಪೂರವೂ ತಾಂಬೂಲವೂ = ಕುಸುಮ ಗಂಧ

---

ಏಳನೆಯ ಸಂಧಿ ಕಥಾಪ್ರಾರಂಭವು.

ಅನಂತರದಲ್ಲಿ ಜೈಮಿನಿಋಷಿಯು ಜನಮೇಜಯರಾಯನಂ ಕುರಿತು, ಕೇಳು ಜನಮೇಜಯನೆ, ಈ ಪರಿಯಾಗಿ ಶ್ರೀ ಕೃಷ್ಣಸ್ವಾಮಿಯಿಂದ ಸತ್ಕರಿಸಲ್ಪಟ್ಟ ವೃಕೋದರನು ಸಂತುಷ್ಟಾಂತರಂಗನಾಗಿ ಮುರಹರನನ್ನು ಕುರಿತು, ಪ್ರಭುವೆ, ಯುಧಿಷ್ಠಿರನು ಮಾಡಬೇಕೆಂದಿರುವ ಕ್ರತುವಿನ ಗಡುವು ಅತಿ ಸಮೀಪವಾಯಿತಾದ್ದರಿಂದ ತಮ್ಮನ್ನು ಸಕಲ ಪರಿವಾರ ಸಮೇತವಾಗಿ ಜಾಗ್ರತೆಯಿಂದ ಕರೆತರಬೇಕೆಂದು ನನಿಗೆ ಆಜ್ಞಾಪಿಸಿದನು. ಆದಕಾರಣ ಶೀಘ್ರವಾಗಿಯೇ ಸರ್ವರೂ ಪ್ರಯಾಣಕ್ಕೆ ಸಿದ್ಧರಾಗಬೇಕೆಂದು ಕೇಳಿಕೊಂಡನು. ಅನಿಲಜನ ಈ ತೆರನಾದ ನುಡಿಗಳನ್ನು ಕೇಳಿದೊಡನೆಯೇ ಮಧುವೈರಿಯು ತನ್ನ ಮುಖ್ಯ ಚಮೂಪನಾದ ವಾರ್ಷ್ಣೇಯನನ್ನು ಜಾಗ್ರತೆ ಕರತರಬೇಕೆಂದು ಹೇಳಿಕಳುಹಿಸಲು ಆ ಸೇನಾನಾಯಕನು ತಡಮಾಡದೆ ಬಂದು ಸ್ವಾಮಿಗೆ ಸಾಷ್ಟಾಂಗಪ್ರಣಾಮವನ್ನರ್ಪಿಸಿ ಅಪ್ಪಣೆ ಏನೆಂದು ಕೇಳಿಕೊಂಡನು, ಆಗ ದಾನವಾಂತಕನಾದ ಕೃಷ್ಣಸ್ವಾಮಿಯು ವಾರ್ಷ್ಣೇಯನನ್ನು । ಕುರಿತು, ಎಲೈ, ಸೇನಾನಾಯಕನೆ, ಇಭನಗರದಲ್ಲಿ ಧರ್ಮರಾಯನು ಅಶ್ವಮೇಧಯಾಗಮಂ ಮಾಡಲೆಳಸಿರುವುದರಿಂದ ನಮ್ಮನ್ನೆಲ್ಲಾ ಅಲ್ಲಿಗೆ ಕರೆದುಕೊಂಡು ಹೋಗಬೇಕೆಂದು ವಾಯುಸುತನಾದ ಭೀಮಸೇನನು ಬಂದಿರುವನು

ಯೊಳಿರ್ದ ಜನರೆಲ್ಲರುಂ ಪೊಯ್ಯುಗೊ | ಡಾರನುಂ ಸ್ಪೊರೆಗೆಸಾರಿಸು ಪುರದೊಳೆಂದು ಮಧುಸೂದನಂ ನೇಮಿಸಿದನು || ೧ ||
ವಸುದೇವಹಲಧರರ್ಪೊಳಲಿನಲ್ಲಿರ್ದುಪಾ | ಲಿಸಲಿಳಿದಪ್ರದ್ಯುಮ್ನಗದಸಾಂಬನನಿರುದ್ಧ | ಶಠನಿಶಠನಕ್ರೂರಸಾತ್ಯಕಿಪ್ರಮುಖ
ಯಾದವರೆಮ್ಮಕೂಡೆಬರಲಿ || ಪೊಸಗೆಮಿಗೆದೇವಕಿಯೊಡನೆತೆರಳಲರಸಿಯ | ರ್ಪೊಸತೆಸಿಪವಸ್ತುವಂತೆಗೆಸುಭಂಡಾರದಿಂ |
ವೆಸೆವಪುರಜನಪರಿಜನಸ್ತ್ರೀಯರ್ಬೈದಲೆಂದಸುರಾರಿನೇಮಿಸಿದನು ||೨|| ಬಳಿಕಕೃತವರ್ಮಕನನೇಮದಿಂನಗರದೋ | ಳ್ಮೊಳಗಿದುವು
ನಿಸ್ಸಾಳಕೋಟಿಗಳ್ಪೊರಮಟ್ಟು | ದುಳಿಯದೆಸಮಸ್ತಜನವ್ಯೆದಿದುವುದೇವಕಿಯಶೋದೆಯರದಂಡಿಗೆಗಳು || ಕೆಳದಿಯರ್ವೆರಸಿ
ರುಕ್ಮಿಣಿಸತ್ಯಭಾಮಾದಿ | ಲಲನೆಯರಪಲ್ಲಕ್ಕಿಗಳಸಾಲ್ಗಳಂದಕೆಲ | ಬಲದಸುಯಿಧಾನದಿಂತೆರಳಿದುವುಕೋಶದಸುವಸ್ತುಗ

---

ಕರ್ಪೂರ ತಾಂಬೂಲಂಗಳು = (ದ್ವಂದ್ವ. ಸ.) ನವ-ಹೊಸದಾದ, ಕುಸುಮ ಗಂಧ ಕರ್ಪೂರ ತಾಂಬೂಲಂಗಳು (ಪಿ. ಪೂ. ಕ. ಸ) ||೧||

ಟೀ|| ವಸುದೇವ-ವಸುದೇವನೆಂಬ ನಮ್ಮ ಪಿತನು, ಹಲಧರನು-ಬಲಭದ್ರನೆಂಬ ನಮ್ಮ ಅಗ್ರಜನು, ಪೊಳಲಿನಲ್ಲಿ-ನಗರದಲ್ಲಿ, ಇರ್ದು-ನೆಲಸಿ. ಪಾಲಿಸಲಿ-ಕಾಪಾಡುತ್ತಿರಲಿ, ಪ್ರದ್ಯುಮ್ನ-ಪ್ರದ್ಯುಮ್ನನೆಂಬ, ಗದ-ಗದನೆಂಬ ಹೆಸರುಳ್ಳ, ಸಾಂಬ-ಸಾಂಬನೆನ್ನತಕ್ಕ, ಅನಿರುದ್ಧ-ಅನಿರುದ್ಧನೆಂಬ ನಾಮಧೇಯಮಂಧರಿಸಿದ, ಶಠ-ಶಠನು, ನಿಶಠನು-ನಿಶಠನು, ಅಕ್ರೂರ-ಅಕ್ರೂರನು, ಸಾತ್ಯಕಿ-ಸಾತ್ಯಕಿಯು, ಪ್ರಮುಖರು-ಇವರೇಆದಿಯಾದ, ಯಾದವರು-ಯದುಕುವರರು, ಎಮ್ಮಕೂಡ-ನಮ್ಮ ಜೊತೆಯಲ್ಲಿಯೇ, ಬರಲಿ - ಬರತಕ್ಕವರಾಗಲಿ, ಪೊಸಗೆಮಿಗೆ - ನೂತನವಾದ ಉಡಿಗೆತೊಡಿಗೆಗಳ ಶೃಂಗಾರಾತಿಶಯಮಂತಾಳಿ, ದೇವಕಿಯೊಡನೆ-ನಮ್ಮ ತಾಯಿಯೊಂದಿಗೆ, ಅರಸಿಯರು-ಪಟ್ಟಮಹಿಷಿಯರಾದ ರುಕ್ಮಿಣಿ ಸತ್ಯಭಾಮೆಯರು, ಬರಲಿ-ಐತರಲಿ, ಭಂಡಾರದಿಂದ-ಕೋಶದಿಂದ, ಪೊಸತೆನಿಪ-ನವೀನವಾದ, ವಸ್ತುವಂ-ಪುರುಳ್ಗಳನ್ನು, ತೆಗೆಸು-ತರಹೇಳು, ಎಸೆವ-ಹೊಳೆಯುವ, ಪುರಜನ-ನಗರವಾಸಿಗಳು, ಪರಿಜನ-ಚಾಕರಿಯಜನರು, ಸ್ತ್ರೀಯರು-ನಾರಿಯರು, ಐದಲಿ-ಬರತಕ್ಕವರಾಗಲಿ, ಎಂದು-ಎಂಬತೆರನಾಗಿ, ಅಸುರಾರಿ-ದೈತ್ಯಾರಿಯಾದ ಕೃಷ್ಣನು, ನೇಮಿಸಿದನು-ಆಜ್ಞೆಯನ್ನಿತ್ತನು.

ಅ|| ವಿ|| ಪ್ರದ್ಯುಮ್ನ-ಇವನು ಶ್ರೀಕೃಷ್ಣನಿಂದ ರುಕ್ಮಿಣಿಯಲ್ಲಿ ಜನಿಸಿದವನು, ಸಾಂಬ - ಜಾಂಬವತಿಯು ಹಡದ ಮಗನು. ಹಲ-ನೇಗಲನ್ನು, ಧರ-ಧರಿಸಿದವನು ಬಲರಾಮ, (ದ್ವಿ. ತ.)

ಟೀ|| ಬಳಿಕ - ಶ್ರೀ ಕೃಷ್ಣನು ಈ ತೆರನಾಗಿ ಅಪ್ಪಣೆಯಂಕೊಡಲಾಗಿ, ಕೃತವರ್ಮಕನ-ಚಮೂಪನಾದ ಕೃತವರ್ಮನೆನ್ನತಕ್ಕವನ, ನೇಮದಿಂ - ಅನುಜ್ಞೆಯಿಂದ, ನಿಸ್ಸಾಳಕೋಟಿಗಳು - ಕೋಟಿಪ್ರಕಾರವಾದ ಭೇರೀಮೃದಂಗಾದಿಗಳ ಸ್ವನಂಗಳು, ಮೊಳಗಿದವು-ಘೋರ್ಗರೆದವು, ನಗರದೋಳ್ ಉಳಿಯದೆ-ಪಟ್ಟಣದಲ್ಲಿ ಯಾರೂ ನಿಲ್ಲದೆ, ಸಮಸ್ತಜನರ್-ಅಶೇಷಪ್ರಜೆಗಳೂ, ಪೊರಮಟ್ಟುದು-ಹೊರಟವರಾದರು, ದೇವಕಿಯಶೋದೆಯರ-ಕೃಷ್ಣನ ತಾಯಿಯರಾದ ದೇವಕಿ ಮತ್ತು ಯಶೋದೆ ಎನ್ನತಕ್ಕವರ, ದಂಡಿಗೆಗಳು-ಪಲ್ಲಕ್ಕಿಗಳು, ಐದಿದವು-ಮುಂದುವರಿದುವು, ಕೆಳದಿಯರ್ವೆರಸಿ - ಸಂಗಾತಿಯರಿಂದೊಡಗೂಡಿ, ರುಕ್ಮಿಣಿಸತ್ಯಭಾಮೆ-ಶ್ರೀ ಕೃಷ್ಣನ ಪಟ್ಟಮಹಿಷಿಯರಾದ ರುಕ್ಮಿಣಿಸತ್ಯಭಾಮೆಯರೆ, ಆದಿ-ಮುಂತಾದ, ಲಲನೆಯರ-ಸ್ತ್ರೀಯರ, ಪಲ್ಲಕ್ಕಿಗಳು-ದಂಡಿಗೆಗಳು, ಸಾಲ್ಗಳು-ಇವುಗಳ ಶ್ರೇಣಿಗಳು, ಕೆಲಬಲದ-ಉಭಪಾಯಪಾರ್ಶ್ವಗಳ, ಸುಯಿಧಾನದಿಂದ-ಅಂಗರಕ್ಷ

---

ಆದಕಾರಣ ದ್ವಾರಕಾನಗರದ ಪ್ರಜೆಗಳೆಲ್ಲಾ ನನ್ನೊಂದಿಗೆ ಹಸ್ತಿನಾವತಿಗೆ ಪಯಣ ಸನ್ನದ್ಧರಾಗಲೆಂದು ಊರಲ್ಲೆಲ್ಲಾ ಡಂಡೋರೆಯ ಮೂಲಕ ಪ್ರಸಿದ್ಧಪಡಿಸು, ಡೇರೆಯ ಸಾಮಾನುಗಳನ್ನು ಊರಹೊರಗೆ ಸಾಗಿಸಿ ಸಿದ್ಧವಾಗುವಂತೆ ಮಾಡು || ೧ || ವಸುದೇವನೂ ನೇಗಿಲನ್ನೇ ಆಯುಧವಾಗಿವುಳ್ಳ ಬಲರಾಮನೂ ಸಹ ನಾವು ಹಸ್ತಿನಾವತಿಯಿಂದ ಹಿಂದುರಿಗಿ ಬರುವವರೆಗೂ ದ್ವಾರಕಾನಗರದ ರಾಜ್ಯಭಾರವನ್ನು ನಡೆಸುತ್ತಲಿರಲಿ. ಪ್ರದ್ಯುಮ್ನ, ಗದ, ಸಾಂಬ, ಅನಿರುದ್ಧ, ಶಠ, ನಿಶಠನು, ಅಕ್ರೂರ, ಸಾತ್ಯಕಿಯೇ ಮೊದಲಾದ ಇತರರು ನಮ್ಮನ್ನು ಹಿಂಬಾಲಿಸಲಿ, ಭಂಡಾರದಲ್ಲಿ ನವೀನವಾಗಿರುವ ಹೊಸಹೊಸದಾದ ವಸ್ತ್ರಾಭರಣಂಗಳನ್ನೆಲ್ಲಾ ತೆಗೆಸಿ ಹಸ್ತಿನಾವತಿಗೆ ಸಾಗಿಸಲು ಪ್ರಯತ್ನಿಸು ರುಕ್ಮಿಣಿಸತ್ಯಭಾಮೆಯೇ ಮೊದಲಾದ ಪಟ್ಟಮಹಿಷಿಯರೆಲ್ಲಾ ಅಮೌಲ್ಯವಾದ ಉಡಿಗೆಗಳಿಂದಲಂಕೃತರಾಗಿ ದೇವಕಿದೇವಿಯೊಡನೆ ಪ್ರಯಾಣಕ್ಕೆ ಸಿದ್ಧರಾಗಲಿ, ಇವರೊಂದಿಗೆ ಊರಿನಲ್ಲಿರುವ ಎಲ್ಲಾ ಸ್ತ್ರೀಯರೂ ಮತ್ತು ಚೇಟಿಯರೂ ಸಹ ಹೊರಡಲಿ ಎಂದು ಆಜ್ಞಾಪಿಸಿದನು. ಶ್ರೀ ಕೃಷ್ಣಮೂರ್ತಿಯ ಈ ಪರಿಯಾದ ಅನುಜ್ಞೆಯನ್ನು ಶಿರದೊಳಿಟ್ಟು ಹಸ್ತಿನಾವತಿಗೆ ಧರ್ಮಪುತ್ರನು ಮಾಡುವ ಯಾಗಕ್ಕೆ ಪೌರಜನರೆಲ್ಲಾ ಹೊರಡಲು ಸಿದ್ಧರಾಗಲೆಂದು ವಾರ್ಷ್ಣೇಯನು ಅನೇಕವಾದ ವಾದ್ಯಧ್ವನಿಗಳಿಂದ ಪ್ರಸಿದ್ಧಪಡಿಸಿದನು. ಆ ಪುರದ ಪ್ರಜೆಗಳಾದರೊ, ಈ ಸುದ್ದಿಯಂ ಕೇಳಿದೊಡನೆಯೆ ಆನಂದಾತಿಶಯದಿಂದ ಹಸ್ತಿನಾವತಿಗೆ ಹೊರಡಲು ಸಿದ್ಧ

ಳನೆತ್ತಿಸಿದರು ||೩|| ಸುತಸಹೋದರಜ್ಞಾತಿಮಿತ್ರಬಾಂಧವಪುರೋ | ಹಿತರೊಡನೆಪೊರಮಟ್ಟನಸುರಾಂತಕಂಸಮಾ | ವೃತವಟು ಗಳಿಂದಸನ್ನಿಹಿತಶಾಸ್ತ್ರಂಗಳಿಂದ್ವಿಜರಾಯತಂಗಳಿಂದ || ಚತುರಂಗಬಲದಿಂದಭೂಭುಜರ್ದ್ರವ್ಯದಿಂ | ದತುಳಸಂಭಾರದಿಂ ವೈಶ್ಯರ್ಶೈದಿತುಶೂದ್ರ | ವಿತತಿನಾನಾಜಾತಿಗಳ್ನೆರವಿಯಿಂತಂತಮ್ಮವಿನಿಯೋಗದಿಂದೆ || ೪ || ಬಟ್ಟೆಗಳವೇಸರದಪೊರೆಯಾಳಕಂ ಬಿಗಳ | ಗೊಟ್ಟಗೆಯಕೊಲ್ಲಾರಬಂಡಿಗಳಮೇಲೆ ಸರ | ಕಿಟ್ಟಣಿಸಿನೂಕಿದುದುಗೋಮಹಿಷ ಮೇಷಿಕುಲದಾರಿಬಿಡದೈದಿತೊ ಡನೆ || ಘಟ್ಟಿಸಿದವಾನೆ ಕುದುರೆಯರಥದಸೇನೆಪೊರ | ಮಟ್ಟುದಂದಣವಪಲ್ಲಕ್ಕಿಗಳರಾಜಿಸಾ | ಲಿಟ್ಟನಡೆದವುಛತ್ರಚಾಮ

---

ಕರಿಂದ, ತೆರಳಿದವು-ನಡೆದುವು, ಕೋಶದ-ಭಂಡಾರದಲ್ಲಿದ್ದ, ಸುವಸ್ತುಗಳನು_ಧನಕನಕರಾಶಿಗಳು, ಧಾನ್ಯಗಳು, ವಸ್ತ್ರಾಭರ ಣಗಳೇನುಂತಾದವನ್ನು, ಎತ್ತಿದರು-ಆನೆ, ಒಂಟೆ, ಆಳುಗಳು, ಗಾಡಿಗಳು, ಇವುಗಳಲ್ಲಿ ಹೇರಿದರು. ||೩||

ಟೀ|| ಅಸುರಾಂತಕಂ=ರಕ್ಕಸರಿಗೆ ಅಂತಕನಾದ ಹರಿಯು, ಸುತ-ಪುತ್ರರು, ಸಹೋದರ_ಭ್ರಾತೃಗಳು, ಜ್ಞಾತಿ_ ದಾಯಾದಿಗಳು, ಬಾಂಧವ_ನೆಂಟರಿಷ್ಟರು, ಪುರೋಹಿತರು_ಹವ್ಯಕವ್ಯಗಳನ್ನು ಮಾಡಿಸತಕ್ಕವರು, ಒಡನೆ_ಇವರೇಮೊದಲಾ ದವರೊಂದಿಗೆ, ಸಮಾವೃತ_ಸ್ನಾತಕಕರ್ಮದಿಂದ ಶುದ್ಧರಾದ, ವಟುಗಳಿಂ-ಮುಂಜಿಯಾದಬಾಲಕರಿಂದ, ಸನ್ನಿಹಿತ_ಜೊತೆಯಾಗಿ ರುವ, ಶಾಸ್ತ್ರಂಗಳಿಂದ-ಧರ್ಮಶಾಸ್ತ್ರವೇ ಮೊದಲಾದವುಗಳಿಂದ, ದ್ವಿಜರ_ಬ್ರಹ್ಮ ಕ್ಷತ್ರ ವೈಶ್ಯರೆಂಬ ಮೊದಲು ಮೂರುವರ್ಣದ ವರ, ಆಯತಂಗಳಿಂದ-ಹೆಚ್ಚಿಕೆಯಿಂದ, ಭೂಭುಜರು_ರಾಜರು, ಚತುರಂಗಬಲದಿಂದ - ಹಸ್ತ್ಯಶ್ವರಥಪದಾತಿಗಳಿಂದಲೂ, ವೈಶ್ಯರು-ತೃತೀಯ ವರ್ಣದವರು, ದ್ರವ್ಯದಿಂ_ಹಣದರಾಶಿಯಿಂದಲೂ, ಶೂದ್ರವಿತತಿ_ಒಕ್ಕಲಿಗರಗುಂಪು, ಅತುಲ_ಅಸಮಾನ ವಾದ, ಭಾರದಿಂ_ಹೊರೆಗಳಿಂದಲೂ, ನಾನಾಜಾತಿಗಳ_ಬೇರೆಬೇರೆ ಪಂಗಡದವರ, ನೆರವಿಯಿಂ_ಸೇರುವಿಕೆಯಿಂದ, ತಂತಮ್ಮ ವಿನಿಯೋಗದಿಂದ_ಅವರವರಿಗೆ ನಿಯಾಮಕವಾದ ಕೃತ್ಯಗಳುಳ್ಳವರಾಗಿ, ಐದಿತು_ಮುಂದುವರಿದರು.

ಅ|| ವಿ|| ದ್ವಿಜ_ದ್ವಿ-ಎರಡು ಸಾರಿ, ಜ_ಜನ್ಮವುಳ್ಳವರು || ೪ ||

ಟೀ|| ಒಟ್ಟೆಗಳ_ಉಷ್ಟ್ರಂಗಳ, ವೇಸರದ_ಅಶ್ವಗಾರ್ಧಭಂಗಳ ಸಂಯೋಗದಿಂದ ಜನಿಸಿದ ಮೃಗಗಳ, ಪೊರೆ ಯಾಳ-ಭಾರ ಹೊರುವರ, ಕಂಬಿಗಳ_ಭುಜದಮೇಲೆ ಅಡ್ಡೆ ಕಟ್ಟಗೆಯಲ್ಲಿ ಹೇರನ್ನು ಹೊರತಕ್ಕವರ, ಗೊಟ್ಟಗೆಯ_ಮೂಟೆ ಹೊರತಕ್ಕವರ, ಕೊಲ್ಲಾರ_ವೃಷಭಗಳಮೇಲೆ ಹಾಕಿದ ಕಂಟಲೆಗಳ, (ಚೀಲಗಳ) ಬಂಡಿಗಳ_ಗಾಡಿಗಳ, ಮೇಲೆ-ಮೇಲ್ಭಾಗದಲ್ಲಿ, ಸರಕು_ಅಕ್ಕಿ, ಬೇಳೆ, ತುಪ್ಪ ಮೊದಲಾದವುಗಳನ್ನು, ಇಟ್ಟಣಿಸಿ_ಹೇರಿ, ನೂಕಿದುದು - ಸಾಗಿತು. ಗೋ - ಎತುಗಳ, ಮಹಿಷ_ಕೋಣಗಳ, ಕುಲ_ಸಮುದಾಯವು, ದಾರಿ_ಹಾದಿಯನ್ನು, ಬಿಡದೆ_ಬಿಡುವಿಲ್ಲದೆ, ದಟ್ಟಿಸಿದವು_ದಟ್ಟವಾಗಿ ಹೋಗು ತ್ತಿದ್ದವು, ಆನೆ-ಹಸ್ತಿಯು, ಕುದುರೆ-ಅಶ್ವವು, ರಥದ_ತೇರಿನ, ಸೇನೆ-ಪದಾತಿಯು, ಪೊರಮಟ್ಟುದು-ಮುಂದುವರಿಯಿತು, ಅಂದ

---

ರಾದರು. ದೇವಕಿ ಮತ್ತು ಯಶೋದೆಯರು ಪಲ್ಲಕ್ಕಿಗಳನ್ನಲಂಕರಿಸಿ ಮುಂದೆ ಹೊರಡಲು ಅವರ ಹಿಂದೆಯೇ ಶ್ರೀ ಕೃಷ್ಣ ಸ್ವಾಮಿಯ ಪಟ್ಟದರಸಿಯರಾದ ರುಕ್ಮಿಣಿ ಸತ್ಯಭಾಮೆಯರು ತಮ್ಮ ಸಖಿಯರಿಂದೊಡಗೂಡಿ ಮೇನಗಳಲ್ಲಿ ಕುಳಿತುಕೊಂಡು ಸಂಭ್ರಮದಿಂದ ನಡೆದರು. ಈ ವಿಮಾನಗಳ ಇಕ್ಕೆಲದಲ್ಲಿಯೂ ಮೈಗಾವಲಿಗಾಗಿ ಅನೇಕವಾದ ಸೈನ್ಯವು ನಡೆಯಿತು. ಇವರ ಹಿಂದುಗಡೆಯೇ ಬೊಕ್ಕಸ ಭಂಡಾರಗಳಲ್ಲಿದ್ದ ವಿಧವಿಧವಾದ ವಸ್ತುಗಳನ್ನೆಲ್ಲಾ ಗಾಡಿಗಳಲ್ಲಿಯೂ, ಆನೆ ಕುದುರೆಗಳ ಮೇಲೆಯೂ ಹೇರಿ ಸಾಗಿಸಿದರು || ೨ || ಅನಂತರದಲ್ಲಿ ಮುಖ್ಯ ಸೇನಾನಾಯಕನಾದ ವಾರ್ಷ್ಣೇಯನು ಶ್ರೀ ಕೃಷ್ಣಮೂರ್ತಿ ಯಬಳಿಗೆ ಬಂದು, ಮಹಾಪ್ರಭೊ, ತಮ್ಮ ಆಜ್ಞೆಯನ್ನು ಶಿರಸಾವಹಿಸಿ ದ್ವಾರಕಾನಗರದ ಅಶೇಷರಾದ ಪ್ರಜೆಗಳೂ, ರುಕ್ಮಿಣೀ ಸತ್ಯಭಾಮೆಯರೇ ಮೊದಲಾದ ಪೌರನಾರಿಯರೂ, ನಿನ್ನ ಮಾತೆಯರಾದ ದೇವಕಿ ಯಶೋದೆಯರೂ ಪ್ರಯಾಣಸನ್ನದ್ಧ ರಾಗಿ ಹೊರಟಿರುವರು, ಭಂಡಾರದಲ್ಲಿನ ಅಮೌಲ್ಯವಾದ ಧನಕನಕ ವಸ್ತ್ರಾಭರಣಗಳನ್ನೆಲ್ಲಾ ಬಂಡಿಗಳಲ್ಲಿಯೂ ಹಸ್ತ್ಯ ಶ್ವಗಳ ಮೇಲೆಯೂ ಹಾಕಿಸಿ ಸಿದ್ಧಪಡಿಸಿರುವೆನೆಂದು ಅರಿಕೆ ಮಾಡಿದನು || ೩ || ಈ ಪರಿಯಾದ ವಾರ್ಷ್ಣೇಯನ ಬಿನ್ನಪವನ್ನು ಕೇಳಿದ ಅಸುರವೈರಿಯು ಸಂತೋಷಪಟ್ಟು ವಾರ್ಷ್ಣೇಯನನ್ನು ಸತ್ಕರಿಸಿ, ಅನಂತರ ತಾನು ಪುತ್ರಮಿತ್ರ ಸಹೋದರರಿಂದಲೂ ಜ್ಞಾತಿವರ್ಗದಿಂದಲೂ ಕೂಡಿದವನಾಗಿ, ಪುರೋಹಿತರನ್ನು ಸಂಗಡಲೆ ಕರದುಕೊಂಡು, ಅನೇಕರಾದ ಬ್ರಹ್ಮಚಾರಿಗಳಿಂದಲೂ ಶಾಸ್ತ್ರನಿಯಮಗಳನ್ನು ನಿಷ್ಕರ್ಷಿಸಿರುವ ವಿಧವಿಧವಾದ ಗ್ರಂಥಸಮುದಾಯದಿಂದಲೂ ಯುಕ್ತನಾಗಿ ಪ್ರಯಾಣವಂ ಬೆಳಸಿ ದನು. ಇವನ ಹಿಂದೆಯೇ ವೇದವೇದಾಂಗ ಪಾರಂಗತರಾದ ಅನೇಕ ವಿಪ್ರವರ್ಯರೂ, ಸಕಲೈಶ್ವರ್ಯದಿಂದೊಡಗೂಡಿದ ವೈಶ್ಯ ರೂ, ಅನೇಕರಾದ ಶೂದ್ರರೂ ಹೊರಟರು || ೪ || ಒಂಟೆಗಳಮೇಲೂ, ಗಾಡಿಗಳಲ್ಲಿಯೂ, ಜನಗಳಮೇಲೆಯೂ, ಬೇಕಾ ದಷ್ಟು ಧಾನ್ಯಗಳನ್ನು ತುಂಬಿ ಕಳುಹಿಸಿದರು. ಹಾಲನ್ನು ಕೊಡುವ ಅತ್ಯುತ್ತಮವಾದ ಧೇನುಗಳೂ, ಎಮ್ಮೆಗಳೂ ಗುಂಪು

ರಪತಾಕೆಗಳ್ತೆರಳಿತುಜನಂಮುದದೊಳು ‖ ೫ ‖ ವಿಟರಮೇಳಂಗಳಿಂಚೇಟಿಯರ ಗಡಣದಿಂ | ನಟವಿದೂಷಕವಂದಿಗಾಯಕರ ತಂಡದಿಂ | ಕಟಕಿಧ್ವನಿವ್ಯಂಗ್ಯಸರಸೋಕ್ತಿಗಳ ಬೆಡಗುಗಳಬಯಲನಗೆನೋಟಂಗಳ ‖ ನಟಣೆಗಳನಡೆಯುಪಜ್ತಿಯಬರಿಯಬೇಟದತಿ | ಕುಟಿಲಾಂಗದೊಲವುಗಳವಾರನಾರೀಜನಂ | ಕಟಕದೊಳ್ಕಾಮುಕರ ನಡೆಗೆಡೆಸುತೊಗ್ಗಿನಿಂಪೊರಮಟ್ಟುಬರುತಿರ್ದುದು ‖ ೬ ‖ ನಾಗಪತಿಗೆಸದಳಂಕಮಠಂಗರಿದುದಿಶಾ | ನಾಗತತಿಗಳವಲ್ಲಧರಿಸಲರಿದೆಂಬಂತೆ | ನಾಗಣಿಸಲರಿಯೆನಿದುಪೊಸತೆನಲ್ಪಟಹನಿಸ್ಸಾಳಕಾಹಳರವದೊಳು ‖ ಸಾಗರದಮಧ್ಯದಿಂದೆದ್ದುದೋಮತ್ತೊಂದು | ಸಾಗರಂಪೇಳೆಂಬೊಲಖಿಳಯಾದವಕಟಕ | ಸಾಗರಂದ್ವಾರಕಾನಗರಮಂಪೊರಮಟ್ಟುನಡೆಗೊಂಡುದೇವೇಳ್ವೆನು ‖ ೭ ‖ ಕಳುಪುತೈತಂದವಸುದೇವಬಲಭದ್ರರಂ |

---

ಣದ-ವಿಮಾನಗಳ, ಪಲ್ಲಕ್ಕಿಗಳ-ಪಾಲಕಿಗಳ, ರಾಜಿ-ಶ್ರೇಣಿಯು, ಛತ್ರ-ಶ್ವೇತಾತಪತ್ರವು, ಚಾಮರ-ಚೌರಿಗಳು, ಪತಾಕೆ-ಬಾವುಟಗಳು, ಸಾಲಿಟ್ಟು-ಪಜ್ತಿಯಾಗಿ, ನಡೆದವು-ಹೊರಟವು, ಜನಂ-ಪ್ರಜೆಗಳೆಲ್ಲರೂ, ಮುದದೊಳು-ಆನಂದಾತಿಶಯದಿಂದ, ತೆರಳಿತು-ಪ್ರಯಾಣಮಾಡಿದರು ‖ ೫ ‖

ಟೀ‖ ವಿಟರ-ಮನ್ಮಥಬಾಣಪೀಡಿತರಾದವರ, ಮೇಳಂಗಳಿಂ-ಜೋಡಣೆಗಳಿಂದಲೂ, ಚೇಟಿ-ದಾಸಿಯರ, ಗಡಣದಿಂ-ಸಮುದಾಯದಿಂದಲೂ, ನಟ-ನರ್ತನವನ್ನು ಶಿಕ್ಷಿಸತಕ್ಕವರ, ವಿದೂಷಕ-ಹಾಸ್ಯಗಾರರ (ನಕಲಿಯವರ), ವಂದಿ-ಹೊಗಳಭಟರ, ಗಾಯಕರ-ಸಂಗೀತವನ್ನು ಹೇಳುವರ, ತಂಡದಿಂ-ಸಮೂಹದಿಂದ, ಕಟಕಿಧ್ವನಿ-ಹಾಸ್ಯದ ನುಡಿಗಳ, ವ್ಯಂಗ್ಯಸರಸೋಕ್ತಿಗಳ-ಅನ್ಯಾರ್ಥವನ್ನು ಕೊಡತಕ್ಕ ಸವಿನುಡಿಗಳ, ಬೆಡಗು-ಚಮತ್ಕಾರವು, ಬಯಲನಗೆ-ಕಾರಣವಿಲ್ಲದೆ ನಗತಕ್ಕದ್ದರ, ನೋಟಗಳ-ವಿರಹವೇದನೆಯನ್ನುಂಟುಮಾಡುವ ಕಟಾಕ್ಷದ, ನಡೆಯು-ಮನ್ಮಥವಿಕಾರವನ್ನು ಕಾಣಿಸುವ ಗಮನದ, ಪಜ್ತಿಯ-ಶ್ರೇಣಿಯ, ಬರಿಯ-ಶೂನ್ಯವಾದ, ಬೇಟದ-ಯೌವನಸ್ಥರನ್ನು ಸೂರೆಗೊಳ್ಳುವ, ಕುಟಿಲ-ವಂಚನೆಯನ್ನು ಮಾಡುವ, ಅಂಗದ-ಅವಯವಗಳುಳ್ಳ, ಒಲವುಗಳ-ರತಿಸುಖದ ಭಾವಾತಿಶಯದ, ವಾರನಾರೀಜನಂ - ವೇಶ್ಯಾಂಗನೆಯರು, ಕಟಕದೋಳ್-ಕಾಲ್ಬಲದಮಧ್ಯಭಾಗದಲ್ಲಿ, ಒಗ್ಗಿನಿಂ-ದಟ್ಟವಾಗಿ, ಪೊರಮಟ್ಟು-ಹೊರಟು, ಬರುತಿರ್ದುದು-ಸಮೀಪವನ್ನು ಸೇರುತ್ತಿತ್ತು ‖ ೬ ‖

ಟೀ‖ ನಾಗಪತಿಗೆ-ಫಣೀಂದ್ರನಿಗೆ, ಅಸದಳಂ-ಅಶಕ್ಯವು, ಕಮಠಂಗೆ-ತಾಂಬೇಲಿಯಹಾಗಿರುವ ಹರಿಗೆ, ಅರಿದು-ಸಾಧ್ಯವಲ್ಲವು, ನಾಗತತಿಗೆ-ಅಷ್ಟದಿಗ್ಗಜಗಳಿಗೆ, ಅಳವಲ್ಲ-ವಶವಾಗುವುದಲ್ಲವು, ಆದಕಾರಣ, ಧರಿಸಲು-ಹೊತ್ತಿರಲು, ಅರಿದು-ಅಸದಳವು, ಎಂಬಂತೆ-ಎನ್ನುವಹಾಗೆ, ನಾಂ-ನಾನು, ಗಣಿಸಲು-ಎಣಿಕೆಮಾಡಲು, ಅರಿಯೆನು-ತಿಳಿಯಲಾರೆನು, ಇದಂ-ಈ ಕಾರ್‍ಯವು, ಪೊಸತು-ನವೀನವಾದದ್ದು, ಎನಲ್-ಎಂಬತೆರನಾಗಿ, ಪಟಹ - ಪಟಹಗಳ, ನಿಸ್ಸಾಳ-ಅದಕ್ಕಿಂತಲೂ ಚಿಕ್ಕವುಗಳ, ಕಹಳೆ ಕೊಂಬಿನ, ರವದೊಳು-ಶಬ್ದಗಳೊಂದಿಗೆ, ಸಾಗರದ ಮಧ್ಯದಿಂ-ಕಡಲಿನ ನಡುವಿನಿಂದ, ಮತ್ತೊಂದುಸಾಗರಂ-ಬೇರೊಂದು ಅಬ್ಧಿಯು, ಎದ್ದುದೊ-ಮೇಲಕ್ಕೆದ್ದು ಬಂದಿದೆಯೋ, ಪೇಳು-ಅರಹು. ಎಂಬೊಲ್-ಎಂಬತೆರನಾಗಿ, ಅಖಿಳ-ಎಲ್ಲಾ, ಯಾದವಕಟಕ-ಯದು ಸಮೂಹವೆಂಬ, ಸಾಗರಂ-ಕಡಲು, ದ್ವಾರಕಾನಗರಮಂ-ದ್ವಾರಕಾಪುರಿಯಿಂದ, ಪೊರಮಟ್ಟು- ನಡೆದು, ನಡೆಗೊಂಡುದ-ಹೊರಡುತ್ತಿತ್ತು, ಏವೇಳ್ವೆನು-ಏನೆಂದು ನುಡಿಯಲಿ, ಯಾದವರ ಸೈನ್ಯವನ್ನು ಸಮುದ್ರಕ್ಕಿಂತಲೂ ಅತಿಶಯವೆಂದು ಹೇಳಿರುವುದರಿಂದ ಉತ್ಪ್ರೇಕ್ಷೆಯು ‖ ೭ ‖

ಟೀ‖ ಮಧುಸೂಧನಂ-ಮಧುವೆಂಬ ರಕ್ಕಸನನ್ನು ಕೊಂದ ಹರಿಯು, ಕಳುಪುತ-ಕಳುಹಿಸಿಕೊಡುತ್ತ, ಐತಂದ-ಬಡನೆ

---

ಗುಂಪಾಗಿ ಹೋಗುತ್ತಿದ್ದವು. ಹಸ್ತ್ಯಶ್ವ ರಥಪದಾತಿಗಳೂ ಪಲ್ಲಕ್ಕಿಗಳ ಸಾಲ್ಗಳೂ ಮೆರೆದವು. ಶ್ವೇತಾತಪತ್ರವನ್ನು ಚಾಮರಂಗಳನ್ನೂ ಉಳ್ಳ ಜನಸಮುದಾಯವೂ ಹಿಂಬಾಲಿಸಿ ಹೊರಟಿತು ‖ ೫ ‖ ಅನೇಕರಾದ ವಿರಹಿಗಳಿಂದಲೂ, ನರ್ತನ ಗಾಯಕ ಸಮಾಜದಿಂದಲೂ, ಹಾಸ್ಯದಿಂದ ಬೆರಗುಮಾಡುವ ಜನರಿಂದಲೂ ಕೂಡಿದ ವಾರಾಂಗನೆಯರು ವಿಟಪುರುಷರ ನಡಿಗೆಯನ್ನು ತಗ್ಗಿಸುತ್ತಲೂ ಜನಗಳ ಮನಸ್ಸನ್ನು ಚಂಚಲವಾಗುವಂತೆ ಮಾಡುತ್ತಲೂ ಸೇನಾ ಮಧ್ಯದಲ್ಲಿ ನಡೆದರು. ‖ ೬ ‖ ಇದನ್ನು ನೋಡಿದವರಿಗೆ ಸಮುದ್ರ ಮಧ್ಯದಿಂದ ಮತ್ತೊಂದು ಸಾಗರವು ಎದ್ದು ಬರುತ್ತಿರುವುದೊ ಎಂಬ ಭ್ರಾಂತಿಯನ್ನುಂಟು ಮಾಡುವಂತೆ ತೋರುವ ಸಕಲ ವಾದ್ಯಧ್ವನಿಗಳಿಂದಲೂ, ಆನೆ, ಕುದುರೆ, ರಥ, ಕಾಲ್ಬಲವೆಂಬ ನಾಲ್ಕು ತೆರನಾದ ಸೈನ್ಯದಿಂದಲೂ, ಪುರವಾಸಿಗಳ ತಂಡತಂಡಗಳಿಂದಲೂ, ನರ್ತಕ ಗಾಯಕರ ಮತ್ತು ವೇಶ್ಯಾಸ್ತ್ರೀಯರ ಸಮೂಹದಿಂದಲೂ ಕೂಡಿ, ದ್ವಾರಕಾನಗರದಿಂದ ಹಸ್ತಿನಾವತಿಗೆ ಹೊರಟ ಯಾದವರ ಸೇನಾ ಸಮುದ್ರಕ್ಕೆ ನೈಜವಾದ ಮಹಾರ್ಣವವೂ ಕೂಡ ಎಣೆಯಾಗಿರಲಿಲ್ಲ ‖ ೭ ‖ ಈ ರೀತಿಯಲ್ಲಿ ಅಪರಿಮಿತ ಸೇನಾಪರಿವೃತನಾಗಿ ಹೊರಟ ಕೃಷ್ಣಮೂರ್ತಿಯನ್ನು ಸಾಗಕಳುಹಿಸುವುದಕ್ಕಾಗಿ ಇವನ ತಂದೆಯಾದ ವಸುದೇವನೂ ಮತ್ತು ಅಣ್ಣನಾದ ಬಲರಾಮನೂ ಬಂದಿದ್ದರು. ಶ್ರೀ ಕೃಷ್ಣ

ಬಳಿಕವಂದಿಸಿಪರಕೆಗೊಂಡುಸಂತೈಸಿನಿಜ | ನಿಲಯರಕ್ಷೆಗೆನಿಲಿಸಿಭೀಮನಂಬೀಳ್ಕೊಳಿಸಿತಾಹಯಾರೂಢನಾಗಿ || ಉಳಿದಯಾದವರೆಲ್ಲರಂಕೂಡಿಕೊಂಡುಮುಂ | ದಳೆದುಮಧುಸೂದನಂಮಧ್ಯಮಾರ್ಗದೊಳೊಂದು | ಕೊಳಸಿರಲ್ಕಲ್ಲಿಬೀಡಂಬಿಡಿಸಿನಸುನಗುತ ರುಕ್ಮಿಣಿಯೊಳಿಂತೆಂದನು || ೮ || ರಾಜಮುಖಿನೋಡೀಸರೋವರದಪದ್ಮಿನಿಗೆ | ರಾಜಹಂಸಕ್ರೀಡೆಪುನ್ನಾಗಕೇಳಿವಿ | ಭ್ರಾಜಿತಮಧುಪಗೋಷ್ಠಿಸಂದಪುದುರವಿಗೆತಾನರಸಿಯಾದಪಳದೆಂತೊ || ಸ್ತ್ರೀಜನಕೆಸಹಜವಿದುಮೇಲೆಕರ್ದಮಜಾತೆ | ಮಾಜುವಳೆದೆ

ಬಂದಿರತಕ್ಕ, ವಸುದೇವಬಲಭದ್ರರಂ-ವಸುದೇವ ಮತ್ತು ಬಲರಾಮರನ್ನು, ವಂದಿಸಿ-ಪ್ರಣಾಮವಂಗೈದು, ಬಳಿಕ-ಆಮೇಲೆ, ಪರಕೆಗೊಂಡು-ಆಶೀರ್ವಚನಮಂತಾಳಿ, ನಿಜ - ಸ್ವಕೀಯವಾದ, ನಿಳಯ - ಮಂದಿರದ, ರಕ್ಷೆಗೆ - ಕಾವಲಿಗೆ, ನಿಲಿಸಿ - ಬಿಟ್ಟು, ಭೀಮನಂ - ವೃಕೋದರನನ್ನು, ಬೀಳ್ಕೊಡಿಸಿ - ವಸುದೇವನಿಗೂ ಬಲಭದ್ರನಿಗೂ ವಂದನೆಯಂಮಾಡಿ, ತಾ-ತಾನು, ಹಯಾರೂಢನು - ಅಶ್ವಾರೋಹಣಮಾಡಿದವನು, ಆಗಿ - ಆಗಿಬಿಟ್ಟು, ಉಳಿದ - ಮಿಕ್ಕ, ಯಾದವರೆಲ್ಲರಂ-ಅಶೇಷರಾದ ಯದುವಂಶಜರನ್ನು, ಕೂಡಿಕೊಂಡು - ಜೊತೆಯುಲ್ಲಿಕರೆದುಕೊಂಡು, ಮಧ್ಯಮಾರ್ಗದೊಳು - ಹಾದಿಯನಡುವೆ, ಒಂದು - ಒಂದಾನೊಂದು, ಕೊಳಂ-ಸರೋವರವು, ಇರಲ್-ಇರಲಾಗಿ, ಅಲ್ಲಿ-ಆದರ ತಡಿಯಲ್ಲಿ, ಬೀಡಂ-ದಳವನ್ನು, ಬಿಡಿಸಿ-ನಿಲ್ಲಿಸಿ, ನಸುನಗುತ-ಹುಸಿನಗೆ ತೋರುತ್ತ, ರುಕ್ಮಿಣಿಯೊಳು-ರುಕ್ಮಿಣಿಯೊಂದಿಗೆ, ಇಂತೆಂದನು-ಹೀಗೆಂದು ನುಡಿದನು ||೮||

ಟೀ|| ರಾಜಮುಖಿ - ಇಂದುವದನೆಯಾದರುಕ್ಮಿಣಿಯೇ, ನೋಡು - ಈಕ್ಷಿಸು, ಈ ಸರೋವರದ - ಶ್ರೇಷ್ಠವಾದ ಈ ಕಾಸಾರದ, ಪದ್ಮಿನಿಗೆ-ತಾವರೆಯಬಳ್ಳಿಗೆ, ರಾಜಹಂಸ-ಉತ್ತಮನಾದ ಭೂಪತಿಯ, ಕ್ರೀಡೆ-ಆಡುವಿಕೆಯು, ಪುನ್ನಾಗ-ಮಾನವರಲ್ಲಿ ಮೇಲಾದವನೊಂದಿಗೆ, ಕೇಳಿ-ಕ್ರೀಡೆಯಿಂದ, ವಿಭ್ರಾಜಿತ-ಹೊಳಹೊಳೆವ, ಮಧುಪಗೋಷ್ಠಿ-ಭೃಂಗಗಳಸಂಗ, ಸಂದವುದು-ಆಗಿರುವುದು, ತಾನು-ತಾನಾದರೊ, ರವಿಗೆ-ತರಣಿಗೆ, ಅರಸಿ-ರಾಣಿಯು, ಆದಪಳು-ಆಗುತ್ತಾಳೆ, ಅದುಎಂತೋ-ಅದುಹೇಗೊ, ಇದು - ಈ ಪರಿಯಿಂದಿರ್ಪುದು, ಸ್ತ್ರೀಜನಕೆ - ನಾರಿಯರಿಗೆ, ಸಹಜಂ - ನೈಜವಾದದ್ದು, ಮೇಲೆ-ಪರರಲ್ಲಿ ಆಸಕ್ತರಾದಬಳಿಕ, ಕರ್ದಮಜಾತೆ-ಕೆಸರಿನಲ್ಲಿ ಜನಿಸಿದ್ದು, ಎದೆಯೊಳು-ಹೃದಯದಭಾಗದಲ್ಲಿ, ಇರ್ದ - ಇದ್ದಂಥ, ಕೃಷ್ಣತೆಯನ್ನು-ದೋಷವನ್ನು, ಮಾಜುವಳು-ಬಚ್ಚಿಟ್ಟುಕೊಳ್ಳತಕ್ಕವಳು, ಸೋಜಿಗವೊ - ಆಚ್ಚರಿಯಾಗಿರುವುದೆ? ಎಂದರೆ ಸಹಜವೇ ಆಗಿದೆ. ಚಂಚಲೆ-ಅಪಲಚಿತ್ತಳು, ಪತಿಯನು - ಇನನನ್ನು, ಎಣಿಸುವಳೆ - ಬಗೆಯುವಳೆ ? ಪೇಳು - ಉಸಿರು (ಇದು ರುಕ್ಮಿಣಿಯ ಪರವಾಗಿ). ರಾಜಮುಖಿ-ಹಿಮಾಂಶುವಿಗೆ ಎದುರಾಗಿರುವ ಕಪ್ರುಕಮಲವೇ, ನೋಡು-ಪರಿಕಿಸು, ಈ ಸರೋವರದ - ಕಾಸಾರಗಳಿಂ ಮೇಲ್ಮೆಯನ್ನೈದಿದ, ಪದ್ಮಿನಿಗೆ - ಬಳ್ಳಿಯನ್ನೆ ಅವಯವಗಳಾಗಿವುಳ್ಳ ಸ್ತ್ರೀಗೆ, ರಾಜಹಂಸ - ಅರಸಂಚೆಯು ಸಂಗಡ, ಕ್ರೀಡೆ - ವಿಹರಿಸತಕ್ಕದ್ದು, ಪುನ್ನಾಗ-ಪುನ್ನಾಗವೆಂಬ ಹೂವಿನೊಂದಿಗೆ, ಕೇಳಿ-ವಿನೋದದಿಂದಕೂಡಿ, ವಿಭ್ರಾಜಿತ-ಮೆರೆಯುತ್ತಿರುವ, ಮಧುಪ-ಮಧುಕಪದಾರ್ಥಗಳನ್ನು ಸೇವಿಸುವರ, ಗೋಷ್ಠಿ - ಸಂಗವು, ಸನಿದಪುದು - ಆಗುವುದು, ತಾನು - ತಾನೇ, ರವಿಗೆ - ದ್ಯುಮಣಿಗೆ, ಅರಸಿ-ಮಹಿಷಿಯು, ಆದಪಳು-ಆಗುವಳು, ಅದೆಂತೊ-ಅದುಹೇಗೊ, ಸ್ತ್ರೀಜನಕೆ - ಹೆಂಗಸರಿಗೆ, ಇದು-ಈ ವಿಧವಾಗಿರುವುದು, ಸಹಜಂ-ಸಹಜವು, ಮೇಲೆ - ಬೇರೆಯವರಕಡೆ ಮನಮಂಬಿಟ್ಟ ತರುವಾಯ, ಕರ್ದಮಜಾತೆ - ಪಾತಕದಿಂದುಂಟಾದದ್ದು, ಎದೆಯೊಳು-ಹೃದಯದಲ್ಲಿ, ಇರ್ದ-ಆಗಿರುವುದಾದ, ಕೃಷ್ಣತೆಯನು-ಕಪ್ಪನ್ನು, ಮಾಜುವಳು - ಕಾಣಿಸಕೂಡದೆಂದು ನಟಿಸುವಳು, ಸೋಜಿಗವೊ - ವಿಸ್ಮಯವನ್ನುಂಟುಮಾಡತಕ್ಕದ್ದೊ, ಚಂಚಲೆ-ಅಲ್ಲಾಡುತ್ತಿರುವ ಮನವುಳ್ಳವಳು, ಪತಿಯನು

ಸ್ವಾಮಿಯು ತನ್ನನ್ನೇ ಹಿಂಬಾಲಿಸಿ ಬರುತ್ತಿರುವ ವಸುದೇವಬಲಭದ್ರರನ್ನು ಊರಿಗೆಹೋಗಿ, ತಾನು ಪುನಃ ಹಿಂತಿರುಗಿ ಬರುವವರೆವಿಗೂ ರಾಜ್ಯಭಾರವನ್ನು ನಡೆಯಿಸುತ್ತಿರಬೇಕೆಂದು ತಿಳಿಸಿದವನಾಗಿ ಅವರೀರ್ವರೂ ಸಾಷ್ಟಾಂಗಪ್ರಣಾಮವಂಗೈಯ್ಯಲು ಅವರು ಶ್ರೀ ಕೃಷ್ಣನಿಗೆ ಸಂತೋಷದಿಂದ ಆಶೀರ್ವಾದವಂಮಾಡಿ ತಾವು ದ್ವಾರಕಾನಗರದ ರಕ್ಷಣೆಗಾಗಿ ಹಿಂತಿರುಗಿ ಹೊರಟು ಹೋದರು, ಆಗ ಕೃಷ್ಣನು ಭೀಮನಿಂದಲೂ ವಸುದೇವ ಬಲರಾಮರಿಗೆ ನಮಸ್ಕಾರವನ್ನು ಮಾಡಿಸಿ, ವೃಕೋದರನ ಮತ್ತು ಯಾದವರ ದಂಡಿನಿಂದೊಡಗೂಡಿ ತಾನು ಕುದುರೆಯಮೇಲೆ ಕುಳಿತುಕೊಂಡು ನಡೆಯುತ್ತಾ ಇರಲು, ಮಧ್ಯಮಾರ್ಗದಲ್ಲಿ ಒಂದಾನೊಂದು ಸರೋವರವು ಕಾಣಬಂದಿತು. ಕೃಷ್ಣಸ್ವಾಮಿಯು ಆ ಸರೋವರದ ತಡಿಯಲ್ಲಿ ತನ್ನ ಸೈನ್ಯವನ್ನೆಲ್ಲಾ ನಿಲ್ಲಿಸಿ ತಾನೂ ಶ್ರಮಪರಿಹಾರವಂ ಮಾಡಿಕೊಳ್ಳಬೇಕೆಂದು ಕುದುರೆಯಿಂದ ಕೆಳಗಿಳಿದು ತನ್ನ ಪಟ್ಟಮಹಿಷಿಯಾದ ರುಕ್ಮಿಣಿಯನ್ನು ಕುರಿತು ಇಂತೆಂದನು || ೮ || ಎಲೈ ಪ್ರಾಣನಾಯಕಿಯೆ ! ಈ ಕಾಸಾರದಲ್ಲಿರುವ ತಾವರೆಯ ಲತೆಯನ್ನು ನೋಡು, ಇದು ರಾಜಹಂಸಕ್ರೀಡೆ, ಪುನ್ನಾಗಕೇಳಿ, ವಿಭ್ರಾಜಿತ ಮಧುಪಗೋಷ್ಠಿ ಇವುಗಳಿಂದ ಕೂಡಿ ಎಂದರೆ ಶ್ರೇಷ್ಠನಾದ ರಾಜಾಧಿರಾಜನ ಸಹವಾಸವಂ ಮಾಡಿಕೊಂಡು, ಮನುಜವರ್ಯರೊಂದಿಗೆ ಕ್ರೀಡಾಸ್ಪದವಾಗಿದ್ದು ಪ್ರಕಾಶಮಾನವಾದ ಅಳಿವಿಂಡನಿಂದ ಮೆರೆ

ಯೊಳಿರ್ದಕೃಷ್ಣತೆಯನಿಮುಜಗಕೆ | ಸೋಜಿಗವೆಚಂಚಲೆಯಲಾಪತಿಯ | ನೆಣಿಸುವಳೆಪೇಳೆಂದೊಡಿಂತೆಂದಳು ||೯|| ದೇವನೀಂ ಪದ್ಮಿನಿಗೆಪಳಿವನಾರೋಪಿಸುವು | ದಾವಸಮ್ಮತರಾಜಹಂಸಪುನ್ನಾಗಮಧು | ಪಾವಳಿಯನೋವಲಾಗದೆಮಾತೆಮಕ್ಕಳೊಡಗೂಡಿ ರ್ದೊಡೇಂಧರೆಯೊಳು || ಜೀವನಂನಿಂದೊಡಾದುದುಪಂಕಮಿಲ್ಲಿತಾ | ನಾವಿರ್ಭವಿಸಿದೊಡೇಂಕೃಷ್ಣಹೃದಯಕೆದೋಷ | ಮಾವು

ಒಡೆಯನನ್ನು, ಎಣಿಸುವಳೆ - ಗಮನಕ್ಕೆ ತರುವಳೆ? (ಇದು ಸರೋವರದ ಕಮಲಪುಷ್ಪದ ಪರವಾಗಿ), ರಾಜಮುಖಿ - ಅರಸರಕಡೆಗೆ ಗಮನವಿಟ್ಟು ಇರುವ ಹೆಂಗಸೇ, ನೋಡು - ಆಲೋಕಿಸು, ಈ ಸರೋವರದ - ಈ ಸರಸ್ಸನ್ನು ಅವಲಂಬಿಸಿರುವ, ಪದ್ಮಿನಿಗೆ-ಪದ್ಮಿನಿಜಾತಿಯ ಹೆಂಗಸಿಗೆ, ರಾಜಹಂಸ-ಶಶಿರವಿಗಳೊಂದಿಗೆ ಸೇರಿ, ಕ್ರೀಡೆ-ಕಾಮಬಾಧೆಯನ್ನು ಪರಿಹರಿಸಿಕೊಳ್ಳತಕ್ಕದ್ದು, ಪುನ್ನಾಗ-ಮದಗಜದೊಡನೆ, ಕೇಳಿ-ಸಂತೋಷದಿಂದ, ವಿಭ್ರಾಜಿತ-ಮಿರುಗುಟ್ಟುವ, ಮಧುಪ-ಸುಧಾಪಾನಮಾಡುವರ, ಗೋಷ್ಠಿ-ಜತೆಯು, ಸನಿದವುದು-ಸಿದ್ಧಿಸುವುದು, ತಾನು - ತಾನಾಗಿಯೇ, ರವಿಗೆ - ವಿಭಾವಸುವಿಗೆ, ಅರಸಿ- ಕಾಂತೆಯು, ಆದಪಳು-ಆಗುತ್ತಾಳೆ, ಅದೆಂತೊ-ಅದುಹೇಗೊ, ಸ್ತ್ರೀಜನಕೆ-ನಾರಿಯರಿಗೆ, ಇದು-ಈತೆರನಾದದ್ದು, ಸಹಜಂ-ನೈಜವು, ಮೇಲೆ-ಇತರರೊಡನೆ ಗಮನವನ್ನಿಟ್ಟ ತರುವಾಯ, ಕರ್ದಮಜಾತೆ - ಸುವಾಸನೆಯ ಕುಲದಲ್ಲಿ ಜನಿಸಿದವಳು, ಎದೆಯೊಳು - ಹೊಕ್ಕಳಲ್ಲಿ, ಇದ್ದ - ಉಂಟಾದ, ಕೃಷ್ಣತೆಯನು - ಕುಚಾಗ್ರಗಳ ಕಪ್ಪುಬಣ್ಣವನ್ನು, ಮಾಜುವಳು - ಕಾಣಿಸದಂತೆ ಮಾಡಿದವಳು, ಸೋಜಿಗವೊ-ಭ್ರಾಂತಿಯನ್ನುಂಟುಮಾಡತಕ್ಕದ್ದೊ, ಚಂಚಲೆ-ದೃಢಚಿತ್ತವಿಲ್ಲದವಳು, ಪತಿಯನು - ವಲ್ಲಭನನ್ನು, ಎಣಿಸುವಳೆ - ಮರ್ಯಾದೆಯಿಂದ ನೋಡಿಯಾಳೆ, (ಇದು ಕಾಮುಕಳಾದ ಸ್ತ್ರೀಯಪರವಾದ ಅರ್ಥವು), ಪೇಳು - ಹೇಳತಕ್ಕವಳಾಗು, ಎಂದೊಡೆ-ಎಂದು ಶ್ರೀಕೃಷ್ಣನು ಹೇಳಲಾಗಿ, ಇಂತೆಂದಳು-ಮುಂದೆ ಹೇಳುವಂತೆ ನುಡಿದಳು.

ಅ|| ವಿ|| ಮಧುವನ್ನು ಪಾನಮಾಡುವದು (ಕೃ. ವು) ಕರ್ದಮಜಾತೆ-ಸುರ ಯಕ್ಷ ಕರ್ದಮಜಾತಿಗಳು ||೯||

ಟೀ|| ದೇವ - ಒಡೆಯನಾದ ಕೃಷ್ಣಮೂರ್ತಿಯೆ, ನೀಂ-ನೀವಾದರೊ, ಪದ್ಮಿನಿಗೆ-ಬಳ್ಳಿಗೆ, ಬಳ್ಳಿಯಹಾಗೆ ಕೋಮಲಾಂಗಿಯಾದ ನನಿಗೆ, ಪಳಿವನು-ನಿಂದೆಯನ್ನು, ಕಳಂಕವನ್ನು, ಆರೋಪಿಸುವದು-ಕಲ್ಪಿಸಿ ನುಡಿಯುವುದು, ಆವಸಮ್ಮತ-ಯಾವ ವಿಧಾನವು, ಇನನರಸಿಯಾದ ಪದ್ಮಿನಿಯು, ರಾಜಹಂಸ-ಹಂಸಪಕ್ಕಿ, ಪುನ್ನಾಗ-ಪುನ್ನಾಗವೆಂಬ ಹೂ, ಮಧುಪಾವಳಿಯನು - ಅಳಿವಿಂಡೇ ಮೊದಲಾದವನ್ನು, ಓವಲಾಗದೆ - ಸಾಕಕೂಡದೆ, ಧರೆಯೊಳು - ಇಳೆಯಲ್ಲಿ, ಮಾತೆ-ಜನನಿಯು, ಮಕ್ಕಳೊಡಗೂಡಿರ್ದೊಡೇಂ-ಹಸುಳೆಗಳೊಂದಿಗೆ ಸೇರಿದ್ದರಿಂದ ದೋಷವೇನು? ಜೀವನ-ಉದಕವು ಜೀವನದ ಮಾರ್ಗವು, ನಿಂದೊಡೆ-ನಿಂತುಬಿಟ್ಟಲ್ಲಿ, ಇಲ್ಲಿ - ಈ ಕಾಸಾರದಲ್ಲಿ ಮತ್ತು ಈ ಎಡೆಯಲ್ಲಿ, ಪಂಕಂ - ಕೆಸರು, ದೋಷವು, ತಾಂ - ತಾನು, ಆವಿರ್ಭವಿಸಿದೊಡೆ-ಜನಿಸಿದಲ್ಲಿ. ಏಂ-ತೊಂದರೆ ಏನಿರುವುದು, ಕೃಷ್ಣಹೃದಯಕೆ-ಕರ್ರಗಿರುವ ಎದೆಯ ಪ್ರದೇಶಕ್ಕೆ, ಮತ್ತು ಶ್ರೀ ಕೃಷ್ಣನಲ್ಲಿಯೇ ಆಸಕ್ತವಾದ ಮನಕ್ಕೆ, ದೋಷಂ-ದುರಿತವು, ಆವುದು-ಎಲ್ಲಿಯದು, ಆಣ್ಮಂಗೆ-ರಾಜನಿಗೆ-ಒಡೆಯನಿಗೆ, ನಡನಡುಗಿದೊಡೆ-ದಿಗಲುಬಿದ್ದು ಅಲ್ಲಾಡಿದರೆ, ಚಂಚಲೆಯೆ - ಅಸ್ಥಿರಹೃದಯಳೆ, ಇದನು - ಈ ವಿಧಾನವನ್ನು, ನಾವು-ನಾವಾದರೊ, ಅರಿಯೆ.ವು-ತಿಳಿದು

ಯುತ್ತಲಿರುವ ಸೂರ್ಯನರಾಣಿಯು ಹೇಗಾಗುತ್ತದೆಯೊ ಕಾಣೆನು. ಈ ತೆರನಾಗಿರುವುದು ಸ್ತ್ರೀಯರಿಗೆ ಸ್ವಭಾವವೇ ಆಗಿದೆಯಲ್ಲವೆ? ಇಂಥಾದ್ದರಲ್ಲಿ ಪರಪುರುಷರೊಂದಿಗೆ ಸೇರಬೇಕೆಂಬ ಮನವುಂಟಾದ ಬಳಿಕ ಮನಸ್ಸನ್ನು ನಿಷ್ಕಲ್ಮಷವಾಗಿಟ್ಟುಕೊಂಡು ವಂಚನೆಯ ಬುದ್ಧಿಯಿಲ್ಲದೆಯೂ ಚಿತ್ತಚಾಂಚಲ್ಯವನ್ನೈದದೆಯೂ ತನ್ನ ಗಂಡನೇ ಗುರುವೆಂದೂ ದೈವವೆಂದೂ ಎಣಿಸಿಕೊಂಡು ಭಕ್ತಿಯುಕ್ತಳಾಗಿರುವಳೇ? ಹೇಳು, ಎಂದು ಹಾಸ್ಯೋಕ್ತಿಗಳನ್ನಾಡಿದನು. (ಎಲೈ ಕನ್ನೈದಿಲೆಯೆ! ಲತೆಗಳಿಂದ ಮಾಡಲ್ಪಟ್ಟ ಶರೀರವುಳ್ಳ ಹೆಂಗಸಿಗೆ ರಾಜಹಂಸದೊಂದಿಗೆ ಸಂಯೋಗವೂ, ಪುನ್ನಾಗಪುಷ್ಪದೊಡನೆ ಸಂತೋಷವೂ, ಮಧುಪಾಳಿಗಳ ಸಂಮೇಳನವೂ ಆದ ತರುವಾಯ ಸೂರ್ಯನ ರಾಣಿಯಾಗುವುದು ಹೇಗೆ? ಈ ಪದ್ಮಿನಿಯು ಕೃಷ್ಣತೆಯನ್ನುಂಟಾಗಿ ಚಂಚಲಚಿತ್ತವುಳ್ಳದ್ದಾಗಿದೆಯಾದ್ದರಿಂದ ತನ್ನ ಒಡೆಯನನ್ನೂ ಗಣನೆಗೆ ತರುವುದಿಲ್ಲವೆಂದು ಸರೋವರದಲ್ಲಿರುವ ಕನ್ನೈದಿಲೆಯ ಪರವಾಗಿಯೂ ಮತ್ತು (ಅರಸರಕಡೆ ಗಮನವಿಟ್ಟು ಸೂರ್ಯಚಂದ್ರರೊಂದಿಗೆ ವಿರಹತಾಪವನ್ನು ಕಳೆದುಕೊಳ್ಳುತ್ತಲೂ, ಮದ್ದಾನೆಯೊಂದಿಗೆ ಸಹವಾಸವಂ ಮಾಡುತ್ತಲೂ ಇರುವ ಚಪಲಚಿತ್ತದಿಂದ ಕೂಡಿದ ಸ್ತನಗಳ ತುದಿಯಲ್ಲಿ ಕಪ್ಪುಬಣ್ಣವುಳ್ಳ ಕಾಮುಕಳಾದ ಸ್ತ್ರೀಯಪರವಾಗಿಯೂ ಅನ್ವಯಿಸುವಂತೆ) ||೯|| ಶ್ರೀ ಕೃಷ್ಣಸ್ವಾಮಿಯ ಈ ಪರಿಯಾದ ಪರಿಹಾಸ್ಯದ ಮಾತುಗಳನ್ನು ಕೇಳಿ ರುಕ್ಮಿಣಿಯು ಎಲೈ ಪ್ರಾಣನಾಥನೆ! ಪದ್ಮಿನಿಯಂತೆ ಕೃಶಾಂಗಿಯಾದ ನನ್ನಲ್ಲಿ ನೀನು ಇಂಥಾ ದೋಷವನ್ನು ಚಿಂತಿಸಬಹುದೆ! ಇನನರಸಿಯಾದ ಪದ್ಮಿನಿಯನ್ನು ತಮ್ಮ ಉದರನಿಮಿತ್ತನಾಗಿ ಹಂಸಪಕ್ಷಿಗಳೂ, ಪುನ್ನಾಗಕುಸುಮಂಗಳೂ ಅಳಿವಿಂಡೂ-ಆಶ್ರಯಿಸಿದರೆ ಅವುಗಳನ್ನು ಕಾಪಾಡಿದ ಮಾತ್ರಕ್ಕೇ ಏನು ದೋಷ? ಮಾತೆಯು ತನ್ನಣುಗನೊಂದಿಗೆ

ದಾಣ್ಮಂಗೆನಡನಡುಗಿದೊಡೆಚಂಚಲೆಯೆನಾವರಿಯೆವಿದನೆಂದಳು ‖ ೧೦ ‖ ಪುರುಷನೋರ್ವಂಗೆನಾರಿಯರುಂಟುಪಲಬರೀ | ಧರೆಯೊಳಂಗನೆಗೆಪತಿಯೋರ್ವನೇಗತಿಯೆಂಬ | ಪರಿವಿಡಿಯನರುಹಿಸುವೊಡಾವೀರ್ವರಲ್ಲದೋರ್ವರುಮಿಲ್ಲಮಿನ್ನುಬರಿದೆ ‖ ಸರಸಿಯೊಳಗಣಪದ್ಮಿನಿಯದೂಷಿಸಲುಬೇಡ | ಪರಮಪಾವನೆಯೆಂದುಶಿವನುತ್ತಮಾಂಗದೋಳ್ | ಧರಿಸಿದನೆನಲ್ಪತಿವ್ರತೆಯಲ್ಲದಿಹಳೆ ಪೇಳೆಂದುರುಕ್ಮಿಣಿನುಡಿದಳು ‖೧೧‖ ನರಕಾಂತಕೇಳ್ಬಳಿಕರುಕ್ಮಿಣಿಯನಾತಿಂಗೆ | ನರಕಾಂತಕಂಮೆಚ್ಚಿನಸುನಗುತನಿಂದು | ವಾನರಕಾಂತಕೇತನಾಗ್ರಜನೋಳ್ಸರಸವಾಡುತೊಲವಿಂದಪಾಳಯವನು ‖ ಸರಸಿಸುತ್ತಣತೀರದೊಳ್ಬಿಡಿಸಿಸುಭಟ | ಪ್ರಸರಸುಯಿಧಾನದಿಂದಿರುಳಕಳೆದಪರವಾ | ಸರದಸೂರ್ಯೋದಯದೊಳಲ್ಲಿಂದಯಾದವರದಂಡುನಡೆದುದುಪಥದೊಳು ‖೧೨‖ ಆಮಾ

---

ಕೊಳ್ಳಲಾರೆವು, ಎಂದಳು–ಎಂದು ನುಡಿದಳು ‖೧೦‖

ಟೀ‖ ಪುರುಷನೋರ್ವಂಗೆ–ಒಬ್ಬ ಗಂಡಾಳಿಗೆ, ನಾರಿಯರು-ಸ್ತ್ರೀಯರು, (ಹೆಂಡತಿಯರು) ಪಲಬರು–ಬಹು ಜನರು, ಉಂಟು-ಇದ್ದಾರೆ, ಈ ಧರೆಯೊಳು–ಈ ಪೊಡವಿಯಲ್ಲಿ, ಅಂಗನೆಗೆ–ನಾರಿಗೆ, ಪತಿಯು-ರಮಣನು, ಓರ್ವನೆ–ಒಬ್ಬನು ಮಾತ್ರವೇ, ಗತಿ-ಪಾಲಿಸತಕ್ಕವನು, ಎಂಬ–ಎನ್ನತಕ್ಕ, ಪರಿವಿಡಿಯನು–ವಿಧಾನವನ್ನು, ಅರುಹಿಸುವೊಡೆ–ತಿಳಿಸಬೇಕಾದರೆ, ಆ ವೀರ್ವರಲ್ಲದೆ–ನಮ್ಮಿಬ್ಬರನ್ನು ಬಿಟ್ಟರೆ, ಓರ್ವರುಂ–ಮತ್ತೆ ಯಾರೂ, ಇಲ್ಲ–ಇಲ್ಲವು, ಇನ್ನು–ಮುಂದೆ, ಬರಿದೆ–ವ್ಯರ್ಥವಾಗಿ, ಸರಸಿಯೊಳಗಣ–ಕಾಸಾರವನ್ನಾಶ್ರಯಿಸಿರತಕ್ಕ, ಪದ್ಮಿನಿಯಂ–ತಾವರೆಯನ್ನು, ದೂಷಿಸಲುಬೇಡ–ಅಪವಾದಕ್ಕೆ ಗುರಿಮಾಡಬೇಡ, ಪರಮಪಾವನೆ–ಬಹು ಪರಿಶುದ್ಧಳು, ಎನಲ್–ಎಂಬತೆರನಾಗಿ, ಶಿವನು-ಹರನು, ಉತ್ತಮಾಂಗದೊಳ್–ತಲೆಯಲ್ಲಿ, ಧರಿಸಿದನು–ತಾಳಿದನು, ಎನಲ್–ಎಂದು ನುಡಿಯಲು, ಪತಿವ್ರತೆ–ಗಂಡನಲ್ಲಿ ಭಕ್ತಿಯುಳ್ಳವಳು, ಅಲ್ಲದೆ–ಆಗದೆ, ಇಹಳೆ–ಇದ್ದಾಳೆಯೆ, ಪೇಳು–ಉಸುರು, ಎಂದು–ಎಂಬ ಪರಿಯಾಗಿ, ರುಕ್ಮಿಣಿ-ಶ್ರೀ ಕೃಷ್ಣನ ಪಟ್ಟದರಸಿಯು, ನುಡಿದಳು-ಹೇಳಿದಳು ‖೧೧‖

ಟೀ‖ ನರಕಾಂತ–ಮನುಜೇಂದ್ರನಾದ ಜನಮೇಜಯರಾಯನೆ, ಕೇಳು-ಲಾಲಿಸು, ಬಳಿಕ-ತರುವಾಯ, ರುಕ್ಮಿಣಿಯ ಮಾತಿಗೆ–ರುಕ್ಮಿಣಿಯು ಹೇಳಿದ ಪಡಿನುಡಿಗೆ, ನರಕಾಂತಕಂ-ಕೃಷ್ಣಸ್ವಾಮಿಯು, ಮೆಚ್ಚಿ-ಸಂತುಷ್ಟನಾಗಿ, ನಸುನಗುತ–ಮುಗುಳ್ನಗೆಯನ್ನೈದುತ್ತ, ನಿಂದು–ನಿಂತವನಾಗಿ, ವಾನರಕಾಂತಕೇತನ–ಫಲ್ಗುಣನ, ಅಗ್ರಜನೋಳ್–ಜ್ಯೇಷ್ಠ ಭ್ರಾತೃವಾದ ವೃಕೋದರನೊಂದಿಗೆ, ಸರಸವಾಡುತ–ಪರಿಹಾಸ್ಯವಂಗೈಯುತ್ತ, ಒಲವಿಂದ–ವಿಶ್ವಾಸದಿಂದ, ಪಾಳಯವನು-ಸೈನ್ಯವನ್ನು, ಸರಸಿ–ಸರೋವರದ, ಸುತ್ತಣ–ಆವರಣದ, ತೀರದೋಳ್-ತಡಿಯಲ್ಲಿ, ಬಿಡಿಸಿ-ನಿಲ್ಲಿಸಿ, ಸುಭಟ-ಯೋಧಾಗ್ರೇಸರರ, ಪ್ರಸರ–ಗುಂಪಿನ, ಸುಯಿಧಾನದಿಂ–ಕಾವಲಿನಿಂದ, ಇರುಳ–ನಿಶಿಯನ್ನು, ಕಳೆದು–ನೀಗಿ, ಅಪರವಾಸರದ–ಮುಂದಿನ ದಿನದ, ಸೂರ್ಯೋದಯದೊಳು–ರವಿಯು ಉದಯವಾಗುವ ವೇಳೆಗೆ, ಅಲ್ಲಿಂದ–ಆ ಸರಸ್ಸಿನ ಬಳಿಯಿಂದ, ಯಾದವರ–ಯದುವಂಶಜರ, ದಂಡು–ಸೈನ್ಯವು, ಪಥದೊಳು–ಹಾದಿಯಲ್ಲಿ, ಆಗ–ಆ ಕಾಲದಲ್ಲಿ, ನಡೆದುದು-ಮುಂದುವರಿಯಿತು.

ಅ‖ ವಿ‖ ನರಕಾಂತ (ಷ. ತ) ನರಕನ ಅಂತಕಂ (ಕೃಷ್ಣ, ಷ. ತ) ವಾನರಕಾಂತಕೇತನ–ವಾನರರಕಾಂತ (ಷ. ತ. ಹನುಮಂತ) ವಾನರ ಕಾಂತನನ್ನು ಕೇತುವಾಗಿ ಉಳ್ಳವನು (ಅರ್ಜುನನು ಬ. ಸ) ಸೂರ್ಯೋದಯ (ಗುಣಸಂಧಿ) ‖೧೨‖

---

ಸೇರಿದ್ದರೆ ಇದರಲ್ಲಿ ಅನುಮಾನಕ್ಕೆ ಕಾರಣವೇನಿರುವುದು? ನೀರು ಕಡಮೆಯಾಗಿ ಕೆಸರಾಗಿದ್ದರೆ ಅದನ್ನು ಪಾಪವೆಂನು ದೂರಬಹುದೆ? ಕೃಷ್ಣಹೃದಯದವಳಾದ ನನ್ನಲ್ಲಿ ಎಂದರೆ ಕೃಷ್ಣನೇ ಸ್ವಪ್ನದಲ್ಲಿಯೂ ಒಡೆಯನೆಂದು ಭಾವಿಸಿರತಕ್ಕ ನನ್ನ ಮೇಲೆ ಇಂಥಾ ದೂರನ್ನು ಹಾಕಲು ನಿಮಿತ್ತವೇನಿದೆ? ಪತಿಗಾಗಿ ಭಯದಿಂದ ನಡುಗುತ್ತಿದ್ದರೆ ನನ್ನನ್ನು ಚಪಲಚಿತ್ತಳೆಂದೂ ಪರಪುರುಷನನ್ನೆಳಸತಕ್ಕವಳೆಂದೂ ಯೋಚಿಸಬಹುದೇ? ‖೧೦‖ ಈ ಲೋಕದಲ್ಲಿ ಒಬ್ಬ ಗಂಡನಿಗೆ ಹೆಂಡತಿಯರು ಅನೇಕರಿರಬಹುದೆಂದೂ, ಒಬ್ಬ ಹೆಂಗಸಿಗೆ ಪತಿಯೊಬ್ಬನೆ ಎಂದೂ ಶಾಸ್ತ್ರಸಿದ್ಧವಾಗಿರುವ ವಚನವು ನಮ್ಮೀರ್ವರಲ್ಲಿಯೇ ಅನ್ವಯಿಸತಕ್ಕದ್ದಾಗಿರುವುದು. ಆದ್ದರಿಂದ ಕಾಸಾರವನ್ನವಲಂಬಿಸಿರತಕ್ಕ ಪದ್ಮಿನಿಯನ್ನು ನೀನು ಎಂದಿಗೂ ದೂಷಿಸತಕ್ಕದ್ದಲ್ಲ. ಅದು ಬಹು ಶ್ರೇಷ್ಠವಾದುದೆಂದೂ ಹರನು ತನ್ನ ಶಿರದಲ್ಲಿಯೇ ಧರಿಸಿದಾನೆ. ಹೀಗಿರುವಲ್ಲಿ ನೀನು ಪದ್ಮಿನಿಯನ್ನು ಪತಿವ್ರತೆಯಲ್ಲವೆಂದು ನುಡಿಯಬಹುದೇ? ಎಂಬದಾಗಿ ರುಕ್ಮಿಣಿಯು ಶ್ರೀ ಕೃಷ್ಣಸ್ವಾಮಿಯೊಂದಿಗೆ ಹೇಳಿದಳು. ಎಲೈ ಜನಮೇಜಯನೆ ಕೇಳು, ಆ ಬಳಿಕ ಶ್ರೀ ಕೃಷ್ಣನು ಈ ರೀತಿಯಲ್ಲಿ ನುಡಿಯುತ್ತಿರುವ ರುಕ್ಮಿಣಿಯ ಮಾತುಗಳನ್ನು ಕೇಳಿ ತನ್ನ ಮನದಲ್ಲಿಯೇ ಮುಗುಳ್ನಗೆಯಂ ತಾಳಿ, ಭೀಮಸೇನನೊಂದಿಗೆ ಸರಸಸಲ್ಲಾಪಂಗಳಂ ಮಾಡುತ್ತಾ ಆ ಸರೋವರದ ಸುತ್ತಲೂ ಸೈನ್ಯವು ನಿಲ್ಲಲು ಏರ್ಪಡಿಸಿ ತಮ್ಮ ಅಂಗರಕ್ಷಣೆಗೆ ಅನೇಕ ಜನ ಕಾವಲುಗಾರರನ್ನು ನಿಯಮಿಸಿಕೊಂಡು ಆ ರಾತ್ರಿಯೆಲ್ಲಾ ಅದೇ ಸರಸ್ಸಿನ ತಡಿಯಲ್ಲಿಯೇ ಸುಖವಾಗಿ ಕಳೆದನು. ಮರುದಿನ ಬೆಳಿಗ್ಗೆ ಯದುಕುಲಜರ ಸೈನ್ಯದಿಂದೊಡಗೂಡಿದ ಹರಿಯು ಅದನ್ನು ಬಿಟ್ಟು,

ಧನಂಪಯಣಗತಿಯಿಂದಗಜಪುರದ | ಸೀಮೆಗೈತಂದುಗಂಗಾನದಿಯತೀರದೊಳ್ | ಭೀಮನಂಸುಯಿಧಾನಕಿರಿಸಿಯಾದವಕಟಕ
ಸಾಗರವನಲ್ಲಿಬಿಡಿಸಿ || ಭೂಮೀಶದರ್ಶನೋತ್ಸವಕೆಬಿಜಯಂಗೈಯ್ಯು | ನಾಮಧ್ಯಮಾರ್ಗದೊಳ್ಕಂಡುದುಮಹಾಜನಂ |
ತಾಮರಸನೇತ್ರನಂತಮತಮಗೆನುತಿಸಿದರ್ನಿಗಮಾಗಮೋಕ್ತಿಯಿಂದ ||೧೩|| ಶ್ರುತಿಧರ್ಮಶಾಸ್ತ್ರಾಗಮಸ್ಮೃತಿವಿಚಾರದಿಂ | ಗತಿ
ಗೆಟ್ಟಬ್ರಹ್ಮಹತ್ಯಾದಿಪಾತಕಕೆನಿ | ಷ್ಕೃತಿತವಸ್ಮರಣಮಾತ್ರದೊಳಪ್ಪುದೆಂದೊಡಾಶ್ರಮನಾಲ್ಕರೊಳ್ಮಾಡಿದ || ವ್ರತದಾನ
ಜಪತಪಸ್ಸ್ವಾಧ್ಯಾಯಪೂಜೆಸ | ತ್ಕ್ರತುಸಮಾಧಿಗಳೆಮಗೆನಿನ್ನನೀಕ್ಷಿಸಲುನಿ | ಷ್ಠಿತಮಾದವೆಂಬುದೇಂನುತಿಯೆನಿನಗೆಂದುಹರಿ

---

ಟೀ|| ಆ ಮಾಧವಂ–ಆ ಶ್ರಿಯಃಪತಿಯು, ಪಯಣಗತಿಯಿಂದ–ಪ್ರಯಾಣದ ತೆರದಿಂದ, ಗಜಪುರದ–ಹಸ್ತಿನಾವತಿಯ, ಸೀಮೆಗೆ–ಎಲ್ಲೆಗೆ, ಐತಂದು–ಬಂದು, ಗಂಗಾನದಿಯ-ದೇವನದಿಯ, ತೀರದೊಳ್-ತಟದಲ್ಲಿ, ಭೀಮನಂ–ವೃಕೋದರನನ್ನು, ಸುಯಿಧಾನಕೆ-ರಕ್ಷಣೆಗಾಗಿ (ಕಾವಲಿಗೆ), ಇರಿಸಿ–ನಿಲ್ಲಿಸಿ, ಯಾದವ–ಯದುವಂಶಜರ, ಕಟಕ-ದಳವೆಂಬ, ಸಾಗರವನು–ಅರ್ಣವವನ್ನು, ಅಲ್ಲಿ–ಆ ಸುರ ನದಿಯ ದಡದಲ್ಲಿ, ಬಿಡಿಸಿ–ನಿಲ್ಲಿಸಿ, ಭೂಮೀಶ–ಪೊಡವಿಪನಾದ ಧರ್ಮತನಯನ, ದರ್ಶನೋತ್ಸವಕೆ–ಈಕ್ಷಿಸಬೇಕೆಂಬ ಬಯಕೆಗೆ, ಬಿಯಯಂಗೈದನು–ನಡೆದನು, ಆ ಮಧ್ಯಮಾರ್ಗದೊಳ್ - ಆ ದಾರಿಯ ಮಧ್ಯದಲ್ಲಿ, ಮಹಾಜನಂ–ಅಲ್ಲಿನ ಜನಪದವು, ತಾಮರಸನೇತ್ರನಂ – ಕೃಷ್ಣಸ್ವಾಮಿಯನ್ನು, ಕಂಡುದು–ಈಕ್ಷಿಸಿತು, ತಮತಮಗೆ–ತಮ್ಮತಮ್ಮಷ್ಟಕ್ಕೆ ತಾವೆ, ನಿಗಮ–ಬ್ರಹ್ಮನ ಮುಖದಿಂದ ಬಂದ ವೇದವಚನಗಳ, ಆಗಮ–ಆಗಮಂಗಳ, ಉಕ್ತಿಯಿಂದ–ವಚನಗಳಿಂದ, ನುತಿಸಿದರು–ತ್ರಿಮೂರ್ತಿಯಾಗಿರತಕ್ಕ ಸ್ವಾಮಿಯೆಂದು ಅವರವರ ಕುಲದೇವರಂತೆ ಹೊಗಳಿದರು ||

ಅ|| ವಿ|| ಪಯಣ (ತ್ಭ)-ಪ್ರಯಾಣ (ತ್ಸ) ತಾಮರಸನೇತ್ರನು=ತಾಮರಸ - ಪದ್ಮಪತ್ರದಂತೆ, ನೇತ್ರನು-ಕಣ್ಣುಗಳನ್ನುಳ್ಳವನು (ಹರಿಯು) ನಿಗಮ-ಋಗ್ವೇದವೇ ಮೊದಲಾದ ನಾಲ್ಕು ವೇದಗಳು, ಆಗಮ–ಶಿವ, ವಿಷ್ಣು, ಪಾಂಚರಾತ್ರ ಮೊದಲಾದ ಪದ್ಧತಿಗಳು ||೧೩||

ಟೀ|| ಶ್ರುತಿ-ವೇದವಚನಗಳ, ಧರ್ಮಶಾಸ್ತ್ರ–ಕೃತ್ಯಾಕೃತ್ಯಗಳನ್ನು ತಿಳಿಸುವ ನಿಯಮಗಳನ್ನುಳ್ಳ ಗ್ರಂಥಗಳ, ಆಗಮ–ಶಿವ, ವಿಷ್ಣು, ಪಾಂಚರಾತ್ರ ಮೊದಲಾದವುಗಳ, ಸ್ಮೃತಿ–ಮನುಚಕ್ರವರ್ತಿ, ಗೌತಮ, ಪರಾಶರ ಇವರು ಮಾಡಿರುವ ಕಟ್ಟಳೆಗಳ, ವಿಚಾರದಿಂ–ಪರಿಶೀಲನೆಯಿಂದ, ಗತಿಗೆಟ್ಟ-ಆಮುಷ್ಮಿಕ ಸುಖವನ್ನು ನೀಗಿಕೊಂಡ, ಬ್ರಹ್ಮಹತ್ಯ-ಬ್ರಾಹ್ಮಣನನ್ನು ಕೊಲ್ಲುವುದೇ, ಆದಿ–ಮೊದಲಾದ, ಮಹಾಪಾತಕಕೆ–ಪಂಚಮಹಾಪಾತಕಗಳಿಗೆ, ನಿಷ್ಕೃತಿ–ಅವುಗಳಿಂದುಂಟಾಗುವ ಬಾಧಕಗಳನ್ನು ನೀಗುವ ಪ್ರತಿಕೃತಿ (ಪ್ರಾಯಶ್ಚಿತ್ತ) ತವ–ನಿನ್ನ ಸಂಬಂಧವಾದ, ಸ್ಮರಣಮಾತ್ರದೊಳ್ - ಧ್ಯಾನವೊಂದರಿಂದಲೆ, ಅಪ್ಪುದು-ಸಿದ್ಧಿಸುವುದು, ಎಂದೊಡೆ–ಎಂದು ನುಡಿದಮೇಲೆ, ಆಶ್ರಮನಾಲ್ಕರೊಳ್–ಆಶ್ರಮ ಚತುಷ್ಟಯಗಳಲ್ಲಿ, ಮಾಡಿದ-ಎಸಗಿದ, ವ್ರತ–ವೇದೋಕ್ತ ವ್ರತಗಳೂ, ಚಾಂದ್ರಾಯಣವೇ ಮೊದಲಾದ ಸ್ಮೃತಿಯಲ್ಲಿ ಹೇಳುವ ವ್ರತಗಳೂ, ಅಷ್ಟಾದಶ ಪುರಾಣಗಳಲ್ಲಿ ಹೇಳುವ ವ್ರತಗಳೂ, ದಾನ-ದಶದಾನಗಳು, ಜಪ-ಗಾಯತ್ರಿಯೇ ಮೊದಲಾದ ಜಪಗಳೂ, ತಪ–ತಪಸ್ಸು, ಸ್ವಾಧ್ಯಾಯ-ಅಭ್ಯಾಸವು, ಪೂಜೆ-ಧೂಪ ದೀಪ ನೈವೇದ್ಯ ತಾಂಬೂಲಾದಿಗಳಿಂದ ದೇವರನ್ನು ಮನಃಪೂರ್ವಕವಾಗಿ ಅರ್ಚಿಸುವುದು, ಸತ್ಕ್ರತು–ಒಳ್ಳೆ ಯಾಗಗಳು, ಸಮಾಧಿಗಳು–ನೆರವೇರಿಸುವುದು, ಎಮಗೆ–ನಮಗಾದರೊ, ನಿನ್ನನ್ನು–ಭಗವಂತನನ್ನು, ಈಕ್ಷಿಸಲು–ದೃಷ್ಟಿಸಲು, ನಿಷ್ಠಿತಮಾದವು-ಪ್ರಾಪ್ತವಾದವು, ಎಂಬುದು–ಎಂದು ನುಡಿಯುವುದು, ನಿನಗೆ–ನಿನ್ನ ವಿಷಯದಲ್ಲಿ, ನುತಿ–ಹೊಗಳಿಕೆಯಾಗಿದೆಯೇ (ನೈಜವೇ ಆಗಿರುವುದು), ಎಂದು–ಎಂಬ ತೆರನಾಗಿ, ಪಾರ್ವರು-ಭೂಸುರರು, ಹರಿಯಂ–ಕೃಷ್ಣಸ್ವಾಮಿಯನ್ನು ಪೊಗಳ್ದರು–ನುತಿಸಿದರು.

ಅ|| ವಿ|| ಪಂಚಮಹಾಪಾತಕಂಗಳು–ಚಿನ್ನ ಕದಿಯುವುದು, ಹೆಂಡಕುಡಿಯುವುದು, ಬ್ರಾಹ್ಮಣನನ್ನು ಕೊಲ್ಲುವುದು, ಗುರುಪತ್ನೀಗಮನ ಮಾಡುವುದು, ಮೇಲ್ಕಂಡ ನಾಲ್ಕು ತೆರನಾದವರೊಂದಿಗೆ ಸೇರುವುದು, ಇವುಗಳು. ಆಶ್ರಮಚತುಷ್ಟಯಂಗಳು-ಬ್ರಹ್ಮಚರ್ಯ, ಗಾರ್ಹಸ್ಥ್ಯ–ವಾನಪ್ರಸ್ಥ, ಯತಿ ಎಂಬಿವುಗಳು, ದಶದಾನಗಳು–ಹಸು, ಭೂಮಿ, ಎಳ್ಳು, ಸುವರ್ಣ, ತುಪ್ಪ,

---

ಮುಂದೆ ಹೊರಟು ||೧೨|| ಬಹುದೂರ ನಡೆದು ಬರಲಾಗಿ ಹಸ್ತಿನಾವತಿಯ ಪ್ರಾಂತವು ಕಾಣಿಸಿತು. ಆಗ ಶ್ರೀ ಕೃಷ್ಣಸ್ವಾಮಿಯು ತನ್ನ ಸಮಸ್ತ ಪರಿವಾರವನ್ನೂ ಭೀಮಸೇನನ ಕಾವಲಿನಲ್ಲಿ ಒಪ್ಪಿಸಿ, ತಾನು ಮಾತ್ರ ಏಕಾಕಿಯಾಗಿ ಧರ್ಮಜನ ದರ್ಶನವಂ ಮಾಡಿಕೊಳ್ಳಬೇಕೆಂದುಜ್ಜುಗಿಸಿ ಹೊರಟನು. ಈ ರೀತಿಯಲ್ಲಿ ಬರುತ್ತಿರುವ ಕೃಷ್ಣಸ್ವಾಮಿಯನ್ನು ಹಸ್ತಿನಾವತಿಯ ಬ್ರಾಹ್ಮಣರು!ನೋಡಿ ||೧೩|| ಎಲೈ ಪರಮಪಾವನಮೂರ್ತಿಯೇ! ಜಗದ್ರಕ್ಷಕನೇ! ನಾಲ್ಕುವೇದಗಳು, ಅನೇಕ ಧರ್ಮಶಾಸ್ತ್ರಗಳು ಮೊದಲಾದವುಗಳಿಂದ ಪರಿಶುದ್ಧತೆಯನ್ನು ಪಡೆಯಲವಕಾಶವಿಲ್ಲದಿರುವ ನಮಗೆ ಬ್ರಹ್ಮಹತ್ಯಾದಿ ಘೋರದುರಿತಗಳೆಲ್ಲವೂ

ಯಂಪೊಗಳ್ವರಾಪಾರ್ವರು ‖ ೧೪ ‖ ಕಾಣಿಕೆಯನಿತ್ತೆರಗಿಕಂಡುದುಸಕಲಜನ | ಶ್ರೇಣಿತಮತಮಗೆಮುಗಿದೆತ್ತಿದನೊಸಲೆಡೆಗೆ | ಪಾಣಿಗಳನಾಪಥದೊಳೋರ್ವನರ್ತಕಿಬಂದುನಾನಾಪ್ರಕಾರದಿಂದ ‖ ವೇಣುವೀಣಾದಿಸಂಗೀತವಾದ್ಯಸ್ಮೃತಿಯ | ಕೇಣಿಗೊಂಡು ಉರುಪುತಿರುಪಭಿನವಕಲಾಸಪ್ರಮಾಣದಸುನೃತ್ತದಿಂ ಮೆಚ್ಚಿಸಿದಳಚ್ಯುತನನಚ್ಚರಿಯರಚ್ಚರಿಯೆನೆ ‖ ೧೫ ‖ ನಾಗನಗರಿಯನಗಧರಂಪೊಕ್ಕುಬರುತಿರ್ದ | ನಾಗನಗರಿಪುಮುಖ್ಯರೈದೆಸಾಸಿರಪೆಡೆಯ | ನಾಗನಗರೀಯಾಂಗತಲ್ಪದವನಿವನೆಂದುಗಗನದೊಳ್ಕೈವಾರಿಸೆ ‖ ಬಾಗಿಲಂಸಾರ್ದುತಮತಮಗೆಕಾಮಿನಿಯರಿಂದ | ಬಾಗಿಲಂಬಿಸುವಲರ್ಮುಡಿಗಳಶಿರಂಗಳಿಂ | ಬಾಗಿಲಕ್ಷ್ಮೀಪತಿಗೆ

---

ವಸ್ತ್ರ, ಧಾನ್ಯ, ಬೆಲ್ಲ, ಹಣ, ಉಪ್ಪು ಇವುಗಳ ದಾನವು, ಜಪ-ಹೇಳಿದ ಮಂತ್ರಗಳನ್ನೇ ಅನೇಕಾವರ್ತಿ ಹೇಳುತ್ತಾ ದೇವರನ್ನು ಧ್ಯಾನಿಸುವುದು, ತಪ-ಅನೇಕ ಮಂತ್ರಗಳಿಂದ ಸ್ವಾಮಿಯನ್ನು ಮೆಚ್ಚಿಸುವುದು ‖೧೪‖

ಟೀ‖ ಕಾಣಿಕೆಯನು-ಮರ್ಯಾದಾ ದ್ರವ್ಯವನ್ನು (ಕಪ್ಪವನ್ನು), ಇತ್ತು-ಕೊಟ್ಟು, ಎರಗಿ-ನಮಸ್ಕಾರಮಾಡಿ, ಸಕಲ ಜನ-ಸರ್ವ ಪ್ರಜೆಗಳ, ಶ್ರೇಣಿ-ಪಙ್ತಿಯು, ಪಾಣಿಗಳ-ಹಸ್ತಗಳನ್ನು, ನೊಸಲ-ಹಣೆಯಭಾಗದ, ಎಡೆಗೆ-ಪ್ರದೇಶಕ್ಕೆ, ಮುಗಿದು-ಸೇರಿಸಿಕೊಂಡು, ಕಂಡುದು-ಕೃಷ್ಣನ ಸಂದರ್ಶನ ಸುಖವನ್ನೈದಿತು, ಆ ಪಥದೊಳ್-ಆ ದಾರಿಯಲ್ಲಿ, ಓರ್ವ-ಒಬ್ಬಳಾದ, ನರ್ತಕಿ-ನಾಯಕಸಾನಿಯು, ಬಂದು-ಐತಂದು, ನಾನಾಪ್ರಕಾರದಿಂದ-ಬೇರೆಬೇರೆ ರೀತಿಗಳಿಂದ, ವೇಣು-ಕೊಳಲು, ವೀಣಾ-ವಿಪಂಚಿಯು, ಆದಿ-ಮುಂತಾದ, ಸಂಗೀತವಾದ್ಯ-ಗಾನರವದ, ಸ್ಮೃತಿಯ-ನೆನಪಿನ ಅಥವಾ ಶ್ರುತಿಯನ್ನು, ಕೇಣಗೊಂಡು-ಸರಿಯಾಗುವಂತೆ ಮಾಡಿ, ಉರಪು-ಮುಂದರಿದು ಬರುವುದು, ತಿರುಪು-ಹಿಂದಿರುಗುವುದು, ಅಭಿನವ-ನೂತನವಾದ, ಕಲಾ-ಅಭಿನಯವಿದ್ಯೆಯ (ಭರತಶಾಸ್ತ್ರದ), ಸಪ್ರಮಾಣದ-ಒಡಂಬಡಿಕೆಯಿಂದ ಯುಕ್ತವಾದ, ಸುನೃತ್ತದಿಂ-ನರ್ತನದಿಂದ, ಅಚ್ಚರಿಯರು-ಅಲಂಕಾರ ವಿಶೇಷದಿಂದಲೂ ನರ್ತನ ಅಭಿನಯಾದಿಗಳಿಂದಲೂ ಮೆರೆಯುವ ದೇವಲೋಕದ ವೇಶ್ಯಾಂಗನೆಯರು, ಅಚ್ಚರಿಯೆನೆ-ವಿಸ್ಮಯ ಪಡುತ್ತಿರುವಂತೆ, ಅಚ್ಯುತನನು-ಹರಿಯನ್ನು, ಮೆಚ್ಚಿಸಿದಳು-ಸಂತೋಷ ಪಡಿಸಿದಳು ‖೧೫‖

ಟೀ‖ ಅಗಧರಂ-ಹರಿಯು, ನಾಗನಗರಿಯನು-ಇಭಪುರಿಯನ್ನು, ಪೊಕ್ಕು-ಪ್ರವೇಶಮಾಡಿ, ಬರುತಿರ್ದನು-ಐತರುತ್ತಿದ್ದನು, ಆಗ-ಆ ಕಾಲದಲ್ಲಿ, ನಗರಿಪುಮುಖ್ಯರು-ಶಚೀಪತಿಯೇ ಮೊದಲಾದವರು, ಐದೆ-ಚನ್ನಾಗಿ, ಸಾಸಿರಪೆಡೆಯ-ಸಹಸ್ರ ಫಣಗಳುಳ್ಳ, ನಾಗನ-ಆದಿಶೇಷನ, ಗರೀಯ-ಬಹುದೊಡ್ಡ, ಅಂಗ-ದೇಹವೇ, ತಲ್ಪದವನು-ಸೆಜ್ಜೆಯನ್ನಾಗಿ ಮಾಡಿಕೊಂಡಿರುವನು, ಇವನು-ಈ ಕೃಷ್ಣನು, ಎಂದು-ಎಂಬತೆರನಾಗಿ, ಗಗನದೊಳ್-ಅಂತರಿಕ್ಷದಲ್ಲಿ, ಕೈವಾರಿಸೆ-ಸ್ತುತಿಸಲು, ಕಾಮಿನಿಯರು-ಪೌರನಾರಿಯರು, ಬಾಗಿಲಂ-ಬಾಗಿಲನ್ನು, ಸಾರ್ದು-ಹೊಂದಿ, ತಮತಮಗೆ-ತಮ್ಮಲ್ಲಿತಾವೆ, ಇಂಬಾಗಿ-ಸಂತೋಷದಿಂದಕೂಡಿ, ಲಂಬಿಸುವ-ಅಲ್ಲಾಡುತ್ತಿರುವ, ಅಲರ್ಮುಡಿಗಳ-ಪುಷ್ಪಗಳಿಂದ ಕೂಡಿರುವ ಜಡೆಗಳನ್ನುಳ್ಳ, ಶಿರಂಗಳಂ - ಶೀರ್ಷಗಳನ್ನು, ಬಾಗಿ-ನೆಲಕ್ಕೆ ಬಗ್ಗುವಂತೆ ಮಾಡಿಕೊಂಡು, ಲಕ್ಷ್ಮೀಪತಿಗೆ-ಸಿರಿಯ ರಮಣನಿಗೆ, ರಾಜಮಾರ್ಗ-ರಾಜಬೀದಿಯ, ಅಂತರದೊಳು-ಮಧ್ಯಭಾಗದಲ್ಲಿ. ಒಲವಿಂದ-ವಿಶ್ವಾಸದಿಂದ, ವಂದಿಸಿದರು-ನಮಸ್ಕರಿಸಿದರು

ಅ‖ ವಿ‖ ಅಗಧರಂ=ಅಗ-ಗಮನವಿಲ್ಲದ್ದು ಎಂದರೆ ಚಲಿಸದಿರುವದು ಪರ್ವತವು, (ಗೋವರ್ಧನಗಿರಿ), ಅಗ-ಗೋವರ್ಧನ ಪರ್ವತವನ್ನು, ಧರಂ-ಮೇಲಕ್ಕೆತ್ತಿದವನು, (ಕೃಷ್ಣನು) ದ್ವಿ. ತ. ನಗರಿಪುಮುಖ್ಯರು-ನಗಗಳರಿಪು (ಷ. ತ.) ನಗರಿಪುವೇಮುಖ್ಯರು (ಅ ಪೂ. ಕ ) ಅಲರ್-ಹೂವು, ಎಲರ್-ಗಾಳಿ ‖೧೬‖

---

ನಿನ್ನ ನಾಮೋಚ್ಚಾರಣ ಮಾತ್ರದಿಂದಲೇ ಪರಿಹಾರವನ್ನೈದುತ್ತಿರುವವು. ಚತುರ್ವರ್ಣದವರೂ ತಮ್ಮ ತಮ್ಮ ಧರ್ಮವನ್ನವಲಂಬಿಸಿ ಮಾಡಿದ ಅನೇಕ ವ್ರತಗಳು, ದಾನಧರ್ಮಗಳು, ಯಜ್ಞಾದಿಗಳು ಇವುಗಳಿಂದಾಗುವ ಅತ್ಯಧಿಕವಾದ ಪುಣ್ಯವು ನಿನ್ನ ಸಂದರ್ಶನಮಾತ್ರದಿಂದಲೇ ಲಭಿಸಿರುವುದು ಎಂಬದಾಗಿ ಹೊಗಳುತ್ತಿದ್ದರು ‖ ೧೪ ‖ ಆ ಇಭನಗರ ವಾಸಿಗಳಲ್ಲನೇಕರು ಶ್ರೀ ಕೃಷ್ಣನ ಪಾದಾರವಿಂದಗಳಿಗೆ ಅಧಿಕವಾದ ಕಾಣಿಕೆಯನ್ನರ್ಪಿಸುತ್ತಲೂ ಮತ್ತೆ ಕೆಲವರು ಬಾರಿಬಾರಿಗೂ ನಮಸ್ಕಾರವನ್ನು ಮಾಡುತ್ತಲೂ ಇದ್ದರು. ಹೀಗಿರುವಲ್ಲಿ ಒಬ್ಬ ನರ್ತಕಿಯು ಶ್ರೀ ಕೃಷ್ಣನ ಎದುರಿಗೆ ವೀಣೆಯನ್ನು ನುಡಿಯಿಸಿ, ಸಂಗೀತವನ್ನು ಹೇಳಿ, ಭರತಶಾಸ್ತ್ರಪ್ರಕಾರವಾಗಿ ಅಭಿನಯಂಗಳಂತೋರಿಸಿ ಕುಣಿದಾಡುತ್ತಾ ಕೃಷ್ಣನು ಮರುಳಾಗಿನೋಡುತ್ತಿರುವಂತೆ ಮಾಡಿ ಅವನ ಮನಸ್ಸಿಗೆ ಅತ್ಯಾನಂದವನ್ನುಂಟುಮಾಡಿದಳು ‖೧೫‖ ಶ್ರೀ ಕೃಷ್ಣನು ಇನ್ನೂ ಮುಂದೆ ಹೋಗುತ್ತಿರುವಾಗ ರಾಜಮಾರ್ಗದ ಎರಡು ಕಡೆಯಲ್ಲಿಯೂ, ನೆರೆದು ಹೊಸದಾಗಿ ಸುವಾಸನೆಯಿಂದ ಕೂಡಿರುವ ಹೂಗಳಿಂದಲಂಕೃತವಾದ ಆದಿಶೇಷನನ್ನೆ ಹಾಸಿಗೆಯಾಗಿ ಮಾಡಿಕೊಂಡಿರುವ ಶ್ರೀ ಕೃಷ್ಣಮೂರ್ತಿಯು ಬರುತ್ತಿರುವುದನ್ನು ನೋಡಿ ಕೈಗಳನ್ನು ಜೋಡಿಸಿಕೊಂಡು ವಂದನೆಗಳನ್ನರ್ಪಿಸುತ್ತಿದ್ದರು. ಅದೇ ಕಾಲದಲ್ಲಿಯೇ ಅಂತರಿಕ್ಷದಲ್ಲಿ ಇಂದ್ರಾದಿ ದೇವತೆಗಳೆಲ್ಲರೂ ಶ್ರೀ ಕೃಷ್ಣಸ್ವಾಮಿಯನ್ನು ನುತಿ

ನಂದಿಸಿದರೊಲವಿಂದರಾಜಮಾರ್ಗಾಂತರದೊಳು ‖ ೧೬ ‖ ರಾಜಮಾರ್ಗದಕೆಲಬಲದಗೋಪುರದೊಳಿರ್ದ | ರಾಜವದನೆಯರಗ ರುಚಂದನಸುಧೂಪನೀ | ರಾಜನಫಲಾಳಿತಾಂಬೂಲಬಹುವಿಧಕುಸುಮಲಾಜದೂರ್ವಾಕ್ಷತೆಗಳ | ರಾಜಿಗಳನಳವಡಿಸೆಮಣಿ ತೋರಣಪ್ರಭೆವಿ | ರಾಜಿಸುವಧರ್ಮಸುತನರಮನೆಯಬಾಗಿಲ್ಗೆ | ರಾಜೀವಲೋಚನಂಬರೆಕೇಳ್ದುಭೂಪನಿದಿರ್ಗೊಂಡುನುತ್ಸವ ದೊಳು ‖ ೧೭ ‖ ಧರ್ಮಸುತನಂಕಂಡುನಗುತಮುರರಿಪುಹೇಮ | ನಿರ್ಮಿತವರೂಥದಿಂದಿಳಿದುನೃಪವರನಡಿಗೆ | ನಿರ್ಮಲಕಿರೀಟಮಂ ಚಾಚುತಿರೆತೊಲಗಿಹರಿಯಂಘ್ರಿಗರಸಂನಮಿಸಲು ‖ ಪೇರ್ಮೆಯಿಂತೆಗೆದುಬಿಗಿಯಪ್ಪಲವನೀಶ್ವರಂ | ನಿರ್ಮಾಯನಂಮಗುಳೆತಕ್ಕೈ ಸಲಾಗಲಮ | ರರ್ಮಹೀಪಾಲಕನ ಪೂರ್ವಕೃತಪುಣ್ಯಮಂ ಬಣ್ಣಿಸಿದರಂಬರದೊಳು ‖ ೧೮ ‖ ತದನಂತರದೊಳಾಮುರಾಂತಕಂ

ಟೀ॥ ರಾಜಮಾರ್ಗದ ದೊಡ್ಡಬೀದಿಯ, ಕೆಲಬಲದ-ಇಕ್ಕೆಲದ, ಗೋಪುರದೊಳು_ಮಹಡಿಗಳಮೇಲೆ, ಇರ್ದ_ನೆರೆದ, ರಾಜವದನೆಯರು-ಇಂದುಮುಖಿಯರು, ಅಗರ-ಕರಿಯಗಂಧದಮರದ, ಚಂದನ-ಸಿರಿಗಂಧದ, ಧೂಪ-ಹಾಲಮಡ್ಡಿ, ಊದಕಡ್ಡಿ ಮೊದಲಾದವುಗಳ, ನೀರಾಜನ_ಕರ್ಪೂರವೇಮೊದಲಾದವುಗಳ ಮಂಗಳಾರತಿಯ, ಫಲಾಳಿ-ಹಣ್ಣುಗಳ, ತಾಂಬೂಲ-ಅಡಿಕೆ ಎಲೆ ಇವುಗಳ, ಬಹುವಿಧ-ನಾನಾಪ್ರಕಾರವಾದ, ಕುಸುಮ - ಹೂಗಳು, ಲಾಜ_ಅರಳು, ದೂರ್ವ_ಚಿಗರುಹುಲ್ಲು, ಅಕ್ಷತೆ ಗಳ-ಸೇಸೆಗಳ, ರಾಜಿಗಳ_ಪಙ್ತ್ತಿಗಳ, ಮಣಿ_ನವರತ್ನಖಚಿತವಾದ, ತೋರಣದ_ಬಾಗಲಿಗೆ ಅಲಂಕೃತವಾಗಿರುವ ತೋರಣದ, ಪ್ರಭೆ_ತೇಜಸ್ಸು, ನಳನಳಿಸೆ_ಮಿರುಮಿರುಗುತ್ತಿರಲಾಗಿ, ವಿರಾಜಿಸುವ_ ಕಾಂತಿಯುಕ್ತನಾಗಿರುವ, ಧರ್ಮಸುತನ – ಯುಧಿಷ್ಠಿ ರನ, ಅರಮನೆಯ_ರಾಜಭವನದ, ಬಾಗಿಲ್ಗೆ_ದ್ವಾರದಬಳಿಗೆ, ರಾಜೀವ_ತಾವರೆಯಂತೆ, ಲೋಚನಂ_ನೇತ್ರಗಳನ್ನುಳ್ಳ ಹರಿಯು, ಬರೆ_ಐತರಲು, ಕೇಳ್ದು_ಆಲಿಸಿ, ಭೂಪರನು_ಪೊಡವಿಪನಾದ ಧರ್ಮನಂದನನು, ಉತ್ಸಾಹದೊಳು-ಆನಂದಾತಿಶಯದಿಂದ, ಇದಿ ರ್ಗೊಂಡನು_ಎದುರಾಗಿ ಬಂದನು ‖ ೧೬ ‖

ಟೀ॥ ಮುರರಿಪು-ಮುರಾಂತಕನಾದ ಕೃಷ್ಣನು, ಧರ್ಮಸುತನಂ-ಯುಧಿಷ್ಠಿರನನ್ನು, ಕಂಡು_ನೋಡಿ, ನಸುನ ಗುತ_ಮುಗುಳ್ನಗೆಯನ್ನೈದುತ್ತ, ಹೇಮ-ಚಿನ್ನದಿಂದ, ನಿರ್ಮಿತ_ಎಸಗಲ್ಪಟ್ಟ, ವರೂಥದಿಂದ_ಸ್ಯಂದನದಿಂದ, ಇಳಿದು_ಕೆಳ ಗಿಳಿದು, ನೃಪ_ರಾಜರುಗಳಲ್ಲೆಲ್ಲಾ, ವರನ-ಮೇಲಾದ ಯುಧಿಷ್ಠಿರನ, ಅಡಿಗೆ-ಕಾಲ್ಗಳಿಗೆ, ನಿರ್ಮಲ_ಸ್ವಚ್ಛವಾದ, ಕಿರೀಟಮಂ-ಶಿರೋಭೂಷಣವನ್ನು, ಚಾಚುತ_ನೀಡುತ್ತ, ಇರೆ_ಇರಲಾಗಿ, ತೊಲಗಿ_ಪಕ್ಕಕ್ಕೆ ಹೋಗಿ, ಹರಿಯ_ಶ್ರೀ ಕೃಷ್ಣಮೂರ್ತಿಯ, ಅಂಘ್ರಿಗೆ_ಅಡಿಗಳಿಗೆ, ಅರಸಂ-ದೊರೆಯು, ನಮಿಸಲು_ಪ್ರಣಾಮಂಗೈಯಲು, ಪೇರ್ಮೆಯಿಂ_ಪ್ರೀತ್ಯತಿಶಯದಿಂದ, ತೆಗೆದು-ಹಿಡಿದು, ಬಿಗಿಯಪ್ಪಲು_ಬಾಚಿ ತಬ್ಬಿಕೊಳ್ಳಲಾಗಿ, ಅವನೀಶ್ವರಂ_ಯುಧಿಷ್ಠಿರನುಕೂಡ, ನಿರ್ಮಾಯನಂ_ಮಾಯಾರಹಿತನಾದ ಕೃಷ್ಣನನ್ನು, ಮಗುಳೆ_ತಿರುಗಿ, ತಕ್ಕೈಸಲು_ಮನ್ನಣೆಯಂ ಮಾಡಲು, ಆಗಲು_ಆ ಕಾಲದಲ್ಲಿ, ಅಮರರು_ನಿರ್ಜರರು, ಅಂಬರ ದೊಳು_ಆಗಸದಲ್ಲಿ, ಮಹೀಪಾಲನ_ಯುಧಿಷ್ಠಿರ ಮಹಾರಾಜನ, ಪೂರ್ವಕೃತ_ಪೂರ್ವಾರ್ಜಿತದ, ಪುಣ್ಯಮಂ_ಸತ್ಕಾರ್ಯಗಳನ್ನು ಕುರಿತು, ಬಣ್ಣಿಸಿದರು-ಹೊಗಳಿದರು.

ಅ॥ ವಿ॥ ನೃಪವರ_ (ಸ. ತ.) ಅಮರರು_ಮರಣವಿಲ್ಲದವರು, ಅಂಬರ_ವಸ್ತ್ರ ಮತ್ತು ಆಕಾಶ. ಬಣ್ಣಿಸು (ತ್ಭ)-ವರ್ಣಿಸು (ತ್ಸ) ‖ ೧೮ ‖

ಟೀ॥ ತದನಂತರದೊಳು_ಆಮೇಲೆ, ಮುರಾಂತಕಂ-ಮುರವೈರಿಯಾದ ಕೃಷ್ಣನು, ಧೃತರಾಷ್ಟ್ರ-ಧೃತರಾಷ್ಟ್ರನೆಂಬ

---

ಸುತ್ತಿದ್ದರು ‖ ೧೬ ‖ ಕೃಷ್ಣಮೂರ್ತಿಯು ರಾಜಬೀದಿಯ ಇಕ್ಕೆಲದಲ್ಲಿಯೂ, ನೆರೆದಿರುವ ಚಂದ್ರಮುಖಿಯರ ಗಂಧಪುಷ್ಪಾ ಕ್ಷತೆ, ಧೂಪದೀಪ ನೈವೇದ್ಯ ತಾಂಬೂಲ ನೀರಾಜನಾದಿಗಳಿಂದ ಕೂಡಿದ ಅರ್ಚನೆಯಂ ಕೈಕೊಳ್ಳುತ್ತ ಯುಧಿಷ್ಠಿರನ ಅರಮನೆ ಯಮುಂದುಗಡೆಯಲ್ಲಿ ಬರುತ್ತಿರುವುದನ್ನು ಧರ್ಮರಾಯನು ಚರರಿಂದ ತಿಳಿದು ಅತ್ಯುತ್ಸವದಿಂದ ತಡಮಾಡದೆ ಶ್ರೀ ಕೃಷ್ಣ ಸ್ವಾಮಿಯ ದರ್ಶನ ಲಾಭವನ್ನು ಪಡೆ ‖೧೭‖ ಯಲೋಸುಗವಾಗಿ ಬರುತ್ತಿರುವುದನ್ನು ಕೃಷ್ಣನು ನೋಡಿದಕೂಡಲೆ ಸುವರ್ಣ ಮಯವಾದ ತೇರಿನಿಂದ ಕೆಳಕ್ಕಿಳಿದು ಮಂದಹಾಸಮಂತಾಳಿ ಧರ್ಮಪುತ್ರನಿಗೆ ವಂದನೆಯಂ ಮಾಡಿದನು. ಧರ್ಮರಾಯನೂ ಕೂಡ ಬಹು ನಮ್ರಭಾವದಿಂದ ಶ್ರೀ ಕೃಷ್ಣನ ಕಾಲುಗಳಿಗೆರಗಿದನು. ಆಗ ಮುರಹರನು ಧರ್ಮತನಯನನ್ನು ಅತ್ಯಾನಂದದಿಂದ ಆಲಿಂಗನವಂ ಮಾಡಿಕೊಂಡನು. ಭೂಕಾಂತನಾದ ಧರ್ಮರಾಯನುಕೂಡ ನಿರ್ಮಾಯನೂ ಅಚಿಂತ್ಯನೂ ಅವ್ಯಕ್ತನೂ ಆದ ಸ್ವಾಮಿಯನ್ನಪ್ಪಿಕೊಂಡು ಆನಂದದ ಕಡಲಿನಲ್ಲಿ ಮುಳುಗಿ ಮೇರೆಯನ್ನೇ ಕಾಣದಿದ್ದನು. ಇದನ್ನು ನೋಡಿ ಆಕಾಶದ ಲ್ಲಿನೆರೆದಿದ್ದ ದೇವತೆಗಳೆಲ್ಲರೂ ಧರ್ಮತನಯನನ್ನು ಮೀರಿದ ಪುಣ್ಯಾತ್ಮರು ಪ್ರಪಂಚದಲ್ಲೆಲ್ಲಿಯೂ ಇಲ್ಲವೆಂದು ಹೊಗಳುತ್ತಿ ದ್ದರು ‖ ೧೮ ‖ ಅನಂತರದಲ್ಲಿ ಕೃಷ್ಣಮೂರ್ತಿಯು ಧೃತರಾಷ್ಟ್ರ, ವಿದುರ, ಕೃಪಾಚಾರ್ಯ, ಗಾಂಧಾರಿ, ಕುಂತೀದೇವಿಯೇ

ಧೃತರಾಷ್ಟ್ರ | ವಿದುರಕೃಪಗಾಂಧಾರಿಕುಂತಿಯರ್ಗಭಿನಮಿಸಿ | ಮುದದಿಂದನರನಕುಲಸಹದೇವನ್ವೃಷಕೇತುಯೌವನಾಶ್ವಾದಿಗ
ಳನು || ಪದಕಮಲಕೆಿಗಿದೊಡೆತೆಗೆದುತಕ್ಕೈಸಿದ್ರೌ | ಪದಿಸುಭದ್ರೆಯರನೊಲವಿಂದಕಾಣಿಸಿಕೊಂಡು | ಪದುಳಮುಂಕೇಳ್ದು
ಸುಖಗೋಷ್ಠಿಯಿಂಕುಳ್ಳಿರ್ದಬಳಿಕನೃಪನಿಂತೆಂದನು || ೧೯ || ದೇವದೇವಕಿದೇವಿಮೊದಲಾದವರ್ಗೆವಸು | ದೇವಹಲಧರಮನ್ಮ
ಥಾದಿಗಳಿಗಖಿಳರಾ | ಣೀವಾಸಕ್ಕೆದೆಪದುಳಮೆಭೀಮಸೇನನೇಗೈದನಾರುಂಬಾರದೇನೀವೆ || ಚಿತ್ತೈಸಿದಿರಿದೇನೆನೆಸಮಸ್ತಪ್ರಜಾ
ವಿಭವದಿಂದಮಾರುತಿಸಹಿತಬಂದುಗಂ | ಗಾನದಿಯತೀರದೋಳ್ಬಿಟ್ಟುದೆಮ್ಮಯಕಟಕಮುಂನೋಳ್ಪೆವೇಳೆಂದನು || ೨೦ ||
ಎಂದುಹರಿನುಡಿಯಲರ್ಜುನನಮೊಗನೋಡಿನಾ | ವಿಂದುಧನ್ಯರ್ಭಕ್ತರೆಡೆಗೀದಯಾರ್ಣವಂ | ಬಂದುದಚ್ಚರಿಯಲಾಬಾಂಧವರ

---

ಕುರುಪತಿಗೂ, ವಿದುರ-ಧೃತರಾಷ್ಟ್ರನ ಅನುಜನೂ ಶೂದ್ರಸ್ತ್ರೀಯ ಮಗನೂ ಆದ ವಿದುರನಿಗೂ, ಕೃಪ-ಕೃಪನಿಗೂ, ಗಾಂಧಾರಿ-ಕುರುಪತಿಯ ಹೆಂಡತಿಗೂ, ಕುಂತಿಯರ್ಗೆ-ಕುಂತಿದೇವಿಯೇ ಮೊದಲಾದವರಿಗೂ, ಅಭಿನಮಿಸಿ-ನಮಸ್ಕಾರಮಾಡಿ, ಮುದದಿಂದ-ಆನಂದದಿಂದ, ನರ – ಪಾರ್ಥ, ನಕುಲ, ಸಹದೇವ, ವೃಷಕೇತು, ಯೌವನಾಶ್ವಾದಿಗಳನು – ನಕುಲ, ಸಹದೇವ, ವೃಷಧ್ವಜ ಯೌವನಾಶ್ವನೆಂಬ ರಾಜನೇ ಮೊದಲಾದವರ, ಪದಕಮಲಕೆ – ಅಡಿದಾವರೆಗೆ, ಎರಗಿದೊಡೆ – ಪ್ರಣಾಮಮಾಡಲು, ತೆಗೆದು – ಆಲಂಗಿಸಿಕೊಂಡು, ತಕ್ಕೈಸಿ-ಉಪಚರಿಸಿ, ದ್ರೌಪದಿ ಸುಭದ್ರೆಯನು-ಪಾಂಚಾಲಿ ಸುಭದ್ರೆ ಇವರನ್ನು, ಕಾಣಿಸಿಕೊಂಡು – ನೋಡಿ, ಪದುಳಮುಂ-ಕುಶಲ ಪ್ರಶ್ನೆಯನ್ನು, ಕೇಳ್ದು-ಮಾಡಿ, ಸುಖಗೋಷ್ಠಿಯಿಂ-ಆನಂದಮಯ-ವಾದ ಸಲ್ಲಾಪಂಗಳಿಂದ, ಕುಳ್ಳಿರ್ದ ಬಳಿಕ-ಕುಳಿತುಕೊಂಡಿದ್ದನಂತರ, ನೃಪನು-ಯುಧಿಷ್ಠಿರನು, ಇಂತು-ಮುಂದೆ ಹೇಳುವಂತೆ, ಎಂದನು-ನುಡಿದನು.

ಅ|| ವಿ|| ಕಮಲದಂತಿರುವ ಪದ (ಪದಕಮಲ, ಉ, ಉತ್ತರಪದ, ಕ) ಪದಕಮಲ, ಸ, ಸಮಾಸಪದ-ಅಡಿದಾವರೆ (ಕ, ಸ, ಪದ) ||೧೯||

ಟಿ|| ದೇವ – ಒಡೆಯನಾದ ಕೃಷ್ಣಸ್ವಾಮಿಯೇ, ದೇವಕಿದೇವಿ – ನಿಮ್ಮ ತಾಯಿಯಾದ ದೇವಕಿಯೇ, ಮೊದಲಾದವರ್ಗೆ-ಆದಿಯಾದವರಿಗೆ, ವಸುದೇವ-ವಸುದೇವನು, ಹಲಧರ-ಬಲಭದ್ರನು, ಮನ್ಮಥ-ಮದನನು, ಆದಿಗಳಿಗೆ-ಇವರೇ ಮೊದಲಾದವರಿಗೆ, ಅಖಿಳ-ಸಕಲರಾದ, ರಾಣಿವಾಸಕೆ-ಅರಸಿತಿಯರಿಗೆ, ಐದೆ – ಚೆನ್ನಾಗಿ, ಪದುಳಮೆ – ಕುಶಲವೇ ? ಭೀಮಸೇನನು ವೃಕೋದರನು, ಏಗೈದನು-ಏನನ್ನು ಎಸಗಿದನು. ಆರುಂಬಾರದೆ-ಯಾರೊಬ್ಬರೂ ಇಲ್ಲದೆ, ನೀವೇ-ನೀವು ಮಾತ್ರವೆ, ಚಿತ್ತೈಸಿದಿರಿ – ಬಿಜಯಂಗೈದಿರಿ, ಇದೇನು-ಇದು ಏತಕ್ಕೆ, ಎನೆ-ಎಂದು ಪ್ರಶ್ನೆಮಾಡಲು, ಸಮಸ್ತ – ಅಶೇಷವಾದ, ಪ್ರಜಾ-ಲೋಗರ, ವಿಭವದಿಂದ-ಸಂಭ್ರಮಾತಿಶಯದಿಂದ, ಮಾರುತಿಸಹಿತ – ವಾಯುಪುತ್ರನೊಂದಿಗೆ, ಬಂದು-ಐತಂದು, ಗಂಗಾ – ಸುರನದಿಯ, ತೀರದೋಳ್-ತಡಿಯಲ್ಲಿ, ಬಿಟ್ಟುದು-ನೆಲೆದಿರುವುದು. ಎಮ್ಮಯ-ನಮ್ಮ ಸಂಬಂಧವಾದ, ಕಟಕಮುಂ-ದಳವನ್ನು, ನೋಳ್ಪೆವು-ದೃಷ್ಟಿಸೋಣ, ಏಳು-ನಡೆ, ಎಂದನು-ಎಂಬದಾಗಿ ಹೇಳಿದನು ||೨೦||

ಟೀ|| ಎಂದು-ಮೇಲೆಹೇಳಿದಂತೆ, ಹರಿ-ಕೃಷ್ಣನು, ನುಡಿಯಲು-ಹೇಳಲಾಗಿ, ಅರ್ಜುನನ-ಪಾರ್ಥನ, ಮೊಗ-ಆಸ್ಯವನ್ನು, ನೋಡಿ-ಈಕ್ಷಿಸಿ, ನಾವು-ನಾವುಗಳಾದರೊ, ಇಂದು-ಈಗ, ಧನ್ಯರ್-ಕೃತಕೃತ್ಯರು, ಆದೆವು-ಆಗಿಹೋದೆವು, ಭಕ್ತರ-ಶರಣು ಹೊಂದಿದವರ, ಎಡೆಗೆ-ಹತ್ತಿರಕ್ಕೆ, ಈ ದಯಾರ್ಣವಂ-ಕೃಪಾನಿಧಿಯಾದ|ಈ ಹರಿಯು, ಬಂದನು-ಐತಂದನು, ಅಚ್ಚರಿಯಲಾ-ವಿಸ್ಮಯಕರವಾದದ್ದಲ್ಲವೆ,? ಬಾಂಧವರ – ಬಂಧುಜನಗಳ, ದರ್ಶನಂ – ಈಕ್ಷಿಸುವಿಕೆಯು, ನಮಿಗೆ-ನಮಗಾದರೋ,

---

ಮೊದಲಾದವರಿಗೆ ನಮಸ್ಕಾರವಂಮಾಡಿ ತನ್ನ ಪಾದಕಮಲಗಳಲ್ಲಿ ಬಿದ್ದ ಅರ್ಜುನ, ನಕುಲ, ಸಹದೇವ ಇವರನ್ನೂ ವೃಷಧ್ವಜ ಯೌವನಾಶ್ವಾದಿಗಳನ್ನೂ ಸಂತೋಷದಿಂದ ತಬ್ಬಿಕೊಂಡು, ಪಾಂಚಾಲಿ ಸುಭದ್ರೆಯರನ್ನು ಕುಶಲಪ್ರಶ್ನೆಗಳಿಂದ ಸಂತೋಷಪಡಿಸಿ, ಸುಖಾಸೀನನಾಗಿ ಕುಳಿತುಕೊಂಡಿದ್ದನು || ೧೯ || ಆಗ ಧರ್ಮರಾಯನು ಕೃಷ್ಣಸ್ವಾಮಿಯನ್ನು ಕುರಿತು ಎಲೈ ಪಾವನಮೂರ್ತಿಯೇ! ನಿಮ್ಮ ತಾಯಿಯಾದ ದೇವಕೀದೇವಿಯೂ, ತಂದೆಯಾದ ವಸುದೇವನೂ, ಅಣ್ಣನಾದ ಬಲರಾಮನೂ, ರುಕ್ಮಿಣೀ ಸತ್ಯಭಾಮೆಯೇ ಮೊದಲಾದವರೂ ಕ್ಷೇಮವಾಗಿದಾರೆಯೇ? ನಿಮ್ಮನ್ನು ಕರೆತರಲು ಬಂದ ವೃಕೋದರನೆಲ್ಲಿ? ಯಾರೂ ಬರದೇ ನೀವು ಒಬ್ಬರೇ ಬರಲು ಕಾರಣವೇನ? ಎಂದು ಕೇಳಿದನು. ಆಗ ಮುರಾಂತಕನು ಧರ್ಮನಂದನನನ್ನು ಕುರಿತು, ಎಲೈ ಧರ್ಮಸೂನುವೇ, ನಮ್ಮ ಸಕಲ ಸೈನ್ಯವೂ, ದ್ವಾರಕಾನಗರದ ಸರ್ವಪ್ರಜೆಗಳೂ, ಭೀಮಸೇನನೂ ಸಹ ನನ್ನೊಡನೆಯೇ ಬಂದರು. ಅವರನ್ನೆಲ್ಲಾ ಗಂಗಾನದಿಯ ದಡದಲ್ಲಿಯೇ ಬಿಟ್ಟು ನಾನೊಬ್ಬನೇ ಬಂದಿರುವೆನು. ಅವರನ್ನು ನೋಡಿಕೊಂಡು ಬರುವುದಕ್ಕೆ ಜಾಗ್ರತೆಯಲ್ಲಿ ಹೊರಡೆಂದು ನುಡಿದನು ||೨೦|| ಕೃಷ್ಣಸ್ವಾಮಿಯ ಈ ಪರಿಯಾದ ವಚನಂಗಳಂ ಕೇಳಿದ ಧರ್ಮಸುತನು ಆನಂದಪರವಶನಾಗಿ ಪಾರ್ಥನನ್ನು ಕುರಿತು, ಎಲೈ ಫಲ್ಗುಣನೇ ! ಇಂದಿಗೆ ನಾವು ಧನ್ಯರಾದೆವಲ್ಲವೇ? ಈ ಕೃಪಾಸಮುದ್ರ

ದಯಾಳನಂನಮಗೆಕೌತುಕಮಪ್ಪುದು || ಮಂದಿಯಂಕರೆಸುನಡೆನಗರಂಗುಡಿತೋರಣಗ | ಳಿಂದಮೆರೆಯಲಿಬರಲಿಸಿಂಗರದಬಾಲಕಿಯ | ರಂದಣಗಳಂಪಿಡಿಯಲರಸಿಯರ್ಪೊರಮಡಲಿಜನಮೆಂದುನೃಪನೆದ್ದನು || ೨೧ || ಬಳಿಕನೃಪನಾಜ್ಞೆಯಿಂದಾಹಸ್ತಿನಾವತಿಯ | ಪೊಳಲನುರೆಸಿಂಗರಿಸೆಮೊಳಗಿದುದುಕೂಡೆಮಂ | ಗಳವಾದ್ಯಸಂಕುಲನೆರೆದುದುಸಕಲಪೌರಜನಮಲಂಕಾರದಿಂದ || ಹೊಳೆವಮಣಿಭೂಷಣದಪೆಣ್ಗಳಿಟ್ಟಣಿಸಿದ | ರ್ತಳತಂತ್ರಮೈದೆಸಂದಣಿಸಿದುದುಪಾಠಕರ | ಕಳಕಳದನೃತ್ತಗೀತಂಗಳವಿಲಾಸದಿಂದಿದಿರ್ಗೊಳಲ್ಪೊರಮಟ್ಟರು || ೨೨ || ಉತ್ಸವದೊಳಧ್ವರಹಯಂಮುಂದೆನಡೆಯೆಭೀ | ಭತ್ಸುಮೊದಲಾದನುಜರೆಡಬಲದೊಳಿರೆಭಕ್ತ | ವತ್ಸಲಂಬಲದಭಾಗದೊಳುಬರಲ್ಪಿಂತೆಮುನಿನಿಕರಮೈತರೆಮುದದೊಳು || ಸತ್ಸಿಕತಮಯವಿರಾಜಿತವಿಮಲನಿರ್ಜ

---

ಕೌತುಕಂ–ಆಶ್ಚರ್ಯವನ್ನುಂಟುಮಾಡುವುದಾಗಿ, ಅಪ್ಪುದು–ಆಗಿದೆ, ಮಂದಿಯಂ–ಲೋಗರನ್ನು, ಕರೆಸು–ಹೇಳಿಕಳುಹಿಸು, ನಡೆ–ಹೊರಡು, ನಗರ–ಪಟ್ಟಣವು, ಗುಡಿ – ದೇವಸ್ಥಾನಗಳು, ತೋರಣಂಗಳಿಂದ – ಚಿಗುರಾದ ಮಾವಿನೆಲೆಗಳು, ಬಣ್ಣದ ಬಟ್ಟೆಗಳು ಮೊದಲಾದವುಗಳ ಅಲಂಕಾರದಿಂದ, ಮೆರೆಯಲಿ – ಹೊಳೆಯಲಿ, ಸಿಂಗರದ – ಶೃಂಗಾರಯುಕ್ತರಾದ, ಬಾಲಕಿಯರು – ಬಾಲೆಯರು, ಅಂದಣಂಗಳಂ – ಮೇನೆಗಳನ್ನು, ಪಿಡಿಯಲಿ – ಹಿಡಿಯತಕ್ಕವರಾಗಲಿ, ಅರಸಿಯರು – ಪಟ್ಟಮಹಿಷಿಯರು, ಪೊರಮಡಲಿ – ನಡೆಯಲಿ, ಜನಂ – ಪ್ರಜೆಗಳೂ, ಪೊರಮಡಲಿ – ಹೊರಡಲಿ, ಎಂದು – ಎಂಬತೆರನಾಗಿ, ನೃಪನು – ಯುಧಿಷ್ಠಿರನು, ಎದ್ದನು-ಮೇಲಕ್ಕೆದ್ದನು.

ಅ|| ವಿ|| ಮೊಗ (ತ್ಭ) ಮುಖ (ತ್ಸ) ಮೊಗನೋಡಿ (ಕ್ರಿ. ಸ.) ದಯಾರ್ಣವಂ (ಷ. ತ.) ಅಚ್ಚರಿ (ತ್ಭ) ಆಶ್ಚರ್ಯ (ತ್ಭ) ||೨೧||

ಟೀ|| ಬಳಿಕ-ತರುವಾಯ, ನೃಪನ-ಯುಧಿಷ್ಠಿರನ, ಆಜ್ಞೆಯಿಂ–ಅಪ್ಪಣೆಯಿಂದ ಅಥವಾ ಅನುಜ್ಞೆಯಿಂದ, ಆ ಹಸ್ತಿನಾವತಿಯ – ಆ ಇಭನಗರದ, ಪೊಳಲನು – ಪುರಿಯನ್ನು, ಉರೆ – ಅಧಿಕವಾಗಿ, ಸಿಂಗರಿಸೆ-ಶೃಂಗಾರವಂಮಾಡಲು, ಮಂಗಳವಾದ್ಯ-ಮೇಳ ತುತ್ತೂರಿ ಮೊದಲಾದವುಗಳ, ಸಂಕುಲಂ-ಸಮುದಾಯವು, ಮೊಳಗಿದುದು–ಧ್ವನಿಯಾಯಿತು, ಸಕಲ–ಅಶೇಷವಾದ, ಪೌರಜನಂ-ಪುರವಾಸಿಗಳು, ನೆರೆದುದು–ಸೇರಿತು, ಅಲಂಕಾರದಿಂದ–ಸೌಂದರ್ಯದಿಂದ, ಹೊಳೆವ-ಥಳಥಳಿಸುವ, ಮಣಿಭೂಷಣದ – ರತ್ನಖಚಿತವಾದ ತೊಡಿಗೆಗಳಿಂದ ಕೂಡಿದ, ಪೆಣ್ಗಳು – ಸ್ತ್ರೀಯರು, ಇಟ್ಟಣಿಸಿದರ್ – ಸಾಂದ್ರವಾಗಿ ನೆರೆಯುತ್ತಿದ್ದರು, ಐದೆ–ಮುಂದರಿದು ಬರುತ್ತಿರುವ ಕಾಲಕ್ಕೆ, ತಳತಂತ್ರಂ–ಜನವು, ಸಂದಣಿಸಿದುದು-ಒಟ್ಟುಗೂಡಿದರು, ಪಾಠಕರು–ಹೊಗಳಭಟರು, ವೇದಾಧ್ಯಯನಮಾಡಿದವರು, ಗಾನವಿದ್ಯೆಯನ್ನರಿತವರು ಇವರ, ನೃತ್ತ–ನರ್ತನದ, ಗೀತಂಗಳ–ಗಾನಗಳ, ವಿಲಾಸದಿಂದ-ಆನಂದಾತಿಶಯದಿಂದ, ಇದಿರ್ಗೊಳಲ್–ಎದುರುಗೊಂಡು ಕರೆತರಲು, ಪೊರಮಟ್ಟರು–ನಡೆದರು.

ಅ|| ವಿ|| ಸಿಂಗರಿಸು (ತ್ಭ) ಶೃಂಗರಿಸು (ತ್ಸ) ||೨೨||

ಟೀ|| ಅಧ್ವರದ-ಅಶ್ವಮೇಧವೆಂಬ ಕ್ರತುವಿನಸಲುವಾಗಿ ಸಂಪಾದಿಸಿದ, ಹಯಂ–ಅಶ್ವವು, ಉತ್ಸವದೊಳು–ಆನಂದದಿಂದ, ಮುಂದೆನಡೆಯೆ–ಮುಂದೆ ಹೊರಡಲು, ಭೀಭತ್ಸು–ಪಾರ್ಥನೆ, ಮೊದಲಾದ–ಆದಿಯಾದ, ಅನುಜರು - ಒಡಹುಟ್ಟಿದವರು, ಎಡಬಲದೋಳ್–ಇಕ್ಕೆಲದಲ್ಲಿಯೂ, ಇರೆ–ಸೇರಿರಲು, ಭಕ್ತವತ್ಸಲಂ–ಭಕ್ತಪರಾಧೀನನಾದ ಸ್ವಾಮಿಯು, ಬಲಭಾಗದೊಳು–ಬಲಗಡೆಯಲ್ಲಿ, ಬರಲು – ಐತರಲು, ಪಿಂತೆ–ಹಿಂಭಾಗದಲ್ಲಿ, ಮುನಿನಿಕರಂ–ತಾಪಸರ ಗುಂಪು, ಐತರೆ – ನಡೆಯಲು, ಮುದದೊಳು–

---

ನಾದ ಹರಿಯು ಭಕ್ತರಾದ ನಮ್ಮಲ್ಲಿಗೆ ಬಂದದ್ದು ಆಶ್ಚರ್ಯವೇಸರಿ, ಬಂಧುಗಳಾದ ಯದುಕುಲಜರನ್ನು ನೋಡಬೇಕೆಂದು ನನ್ನ ಮನವು ಆತುರಪಡುತ್ತಿರುಪ್ಪದು. ಆದ್ದರಿಂದ ಜಾಗ್ರತೆಯಲ್ಲಿಯೇ ಪುರನಿವಾಸಿಗಳೆಲ್ಲರೂ ಬಂದೊದಗುವುದೆಂತಲೂ, ಎಲ್ಲಾ ದೇವಾಲಯಗಳೂ ಪಟ್ಟಣದ ಭಾಗಗಳೂ ತೋರಣಗಳಿಂದಲೂ ಪತಾಕೆಗಳಿಂದಲೂ ಅಲಂಕಾರವನ್ನೈದುವಂತೆ ಏರ್ಪಡಿಸು. ಸಾಲಂಕೃತರಾದ ಬಾಲಕಿಯರೂ ಪಟ್ಟಮಹಿಷಿಯರೇ ಮೊದಲಾದ ಸ್ತ್ರೀಯರೂ ಹೊರಡಲಿ ಎಂದು ನುಡಿದು ತಾನೂ ಪ್ರಯಾಣಸನ್ನದ್ಧನಾದನು ||೨೧|| ಧರ್ಮತನಯನ ಆಜ್ಞಾನುಸಾರವಾಗಿ ಹಸ್ತಿನಾವತಿಯು ಅಲಂಕಾರದಿಂದ ಮೆರೆಯಿತು. ಎಲ್ಲೆಲ್ಲಿಯೂ ತುತ್ತೂರಿ ಓಲಗ, ತಾಳಮೇಳಗಳ ಸುಘೋಷಗಳೇ ತುಂಬಿದ್ದವು. ಸಕಲರಾದ ಪುರನಿವಾಸಿಗಳೂ ಬಂದು ಸೇರಿದರು. ಪೌರನಾರೀಗಣವು ಥಳಥಳಿಸುತ್ತಿರುವ ನವರತ್ನಮಯವಾದ ಉಡಿಗೆತೊಡಿಗೆಗಳಿಂದ ಮೆರೆಯುತ್ತಿತ್ತು. ಎಲ್ಲಿ ನೋಡಿದರೂ ಜನಗಳ ಗುಂಪೇ ಕಾಣುತ್ತಿತ್ತು. ಸ್ತುತಿಪಾಠಕರೂ, ನಾಟ್ಯಗಾರರೂ, ಸಂಗೀತಗಾರರೂ, ಬಂದು ಸೇರಿದರು ||೨೨|| ಆಗ ಯಾಗಾಶ್ವವನ್ನು ಮುಂದುಮಾಡಿಕೊಂಡು ಅರ್ಜುನಾದಿಗಳನ್ನು ಎರಡು ಪಾರ್ಶ್ವದಲ್ಲಿಯೂ ಇರುವಂತೆ ಮಾಡಿ, ಬಲಗಡೆಯಲ್ಲಿ ಭಕ್ತಪರಾ

ರಸ || ರಿತ್ಸಮೀಪದೊಳೆಸೆವಯಾದವರಪಾಳಿಯುನ | ನುತ್ಸುಕದೊಳವನೀಶ್ವರಂ ಸಾರ್ದನಂಬುಧಿಯುನಂಭೋಧಿಬೆರಸಿದಂತೆ|| ೨೩||
ದೇವಕಿಯ ಶೋದೆರೋಹಿಣಿಯರ್ಗೆಪಾಂಡವ | ರ್ಭೂವರಾರ್ಜುನಕುಂತಿಯರ್ಗೆಖಿಳಯಾದವ | ರ್ಭಾವಿಸಿದರುಳಿದವರ್ಗನ್ಯೋ
ನ್ಯದಾಲಿಂಗನಗಳಾದವರವರ್ಗೆ || ಆವಾಯುಜಂ ಕಂಡನರಸನಂ ರುಕ್ಮಿಣೀ | ದೇವಿಮೊದಲಾದರಂ ದ್ರೌಪದಿಸುಭದ್ರೆಯ |
ರ್ತಾವಪ್ಪಿದರ್ಪ್ರಭಾವತಿಹರಿಯರಾಣಿಯರ್ಗೆರಗಿಕಾಣಿಕೆಕೊಟ್ಟಳು || ೨೪ || ಮೂಡಿದೆಳನಗೆಗೂಡಿದ್ರುಪದನಂದನೆಯುವೊಗ |
ನೋಡಿನೀನೇಚದುರೆಲೋಕದೊಳ್ಕೃಷ್ಣನಂಷೋಡಶಸಹಸ್ರನಾರಿಯುರ್ಕೈದಲರಿಯರಾತನನೊಲಿಸಿಕೊಂಡೆನಿನ್ನ || ಗಾಡಿಗಿದು
ಪೊಸತೆಗಂಡರನೈವರಂಮರುಳು | ಮಾಡ ನಮಹಾಪತಿವ್ರತೆನಿನ್ನೊಳಾವುಮಾ | ತಾಡಲಂಜುವೆನೆಂದುಸತ್ಯಭಾಮಾದೇವಿನುಡಿ

---

ಆನಂದದಿಂದ, ಸತ್ಸಿಕತನುಯು-ಶ್ರೇಷ್ಠವಾದ ಮರಳಿನಿಂದ ಕೂಡಿರುವುದರಿಂದ, ವಿರಾಜಿತ - ಹೊಳೆಯುವ, ವಿಮಲ-ಸ್ವಚ್ಛವಾದ, ನಿರ್ಜರಸರಿತ್-ಸುರನದಿಯ, ಸಮೀಪದೊಳ್-ಎಡೆಯಲ್ಲಿಯೆ, ಎಸೆವ-ಹೊಳೆಯುವ, ಯಾದವರ-ಯದುವಂಶಜರ, ಪಾಳಯವನು-ಸೈನ್ಯವನ್ನು, ಅವನೀಶ್ವರಂ-ಧರಣೀಂದ್ರನಾದ ಧರ್ಮಪುತ್ರನು, ಉತ್ಸುಕದೊಳು-ಕೌತುಕದಿಂದ, ಅಂಬುಧಿಯನು-ಅರ್ಣವವನ್ನು, ಅಂಭೋಧಿ-ಬೇರೆ ಇನ್ನೊಂದು ಕಡಲು, ಬೆರಸಿದಂತೆ-ಕಲೆತಹಾಗೆ, ಸಾರ್ದನು-ಹೋಗಿ ಸೇರಿದನು.

ಅ|| ವಿ|| ಅಂಬು-ನೀರನ್ನು, ಧಿ-ಧರಿಸಿರುವುದು, (ಸಮುದ್ರ. ತ. ವೃ.) ಅಂಬು-ನೀರು (ಸಂಸ್ಕೃತ) ಬಿಲ್ಲು (ಕನ್ನಡ) ಅವನೀಶ್ವರ (ಸ. ದೀರ್ಘಸಂಧಿ ಮತ್ತು ಷ. ತ. ಸ.) || ೨೩ ||

ಟೀ|| ಪಾಂಡವರು-ಧರ್ಮಾದಿಗಳು, ದೇವಕಿ-ದೇವಕಿದೇವಿಯು, ಯಶೋದೆ-ಯಶೋದೆಯು, ರೋಹಿಣಿಯರ್ಗೆ-ರೋಹಿಣಿಯೇ ಮೊದಲಾದವರಿಗೂ, ಭೂವರ-ಭೂಕಾಂತನಾದ ಯುಧಿಷ್ಠಿರನು, ಅರ್ಜುನ-ಪಾರ್ಥನು, ಕುಂತಿಯರ್ಗೆ-ಕುಂತೀದೇವಿಯೇ ಮೊದಲಾದವರಿಗೆ, ಯಾದವರು-ಯದುಕುಲಜರು, ಭಾವಿಸಿದರು-ಪರಸ್ಪರ ನಮಸ್ಕಾರವಂ ಮಾಡಿದರು, ಉಳಿದವರ್ಗೆ-ಮಿಕ್ಕವರಿಗೆಲ್ಲ. ಅವರವರ್ಗೆ-ತಮ್ಮತಮ್ಮಷ್ಟಕ್ಕೆ, ಅನ್ಯೋನ್ಯ-ಒಬ್ಬರೊಬ್ಬರಿಗೆ, ಆಲಿಂಗನಗಳು-ತಬ್ಬಿಕೊಳ್ಳುವಿಕೆಯು, ಆದವು-ಆಯಿತು, ಅವಾಯುಜಂ-ಆ ವಾಯುಪುತ್ರನು, ಅರಸನಂ-ಯುಧಿಷ್ಠಿರನನ್ನು, ಕಂಡನು-ಈಕ್ಷಿಸಿದನು, ರುಕ್ಮಿಣಿದೇವಿ ಮೊದಲಾದರಂ-ರುಕ್ಮಿಣಿಯೇ ಆದಿಯಾಗಿರುವವರನ್ನು, ದ್ರೌಪದಿ ಸುಭದ್ರೆಯರು-ಪಾಂಚಾಲಿ ಮತ್ತು ಸುಭದ್ರೆಯು, ತಾವು-ತಮ್ಮತಮ್ಮಷ್ಟಕ್ಕೆ, ಅಪ್ಪಿದರು-ಆಲಿಂಗನವಂ ಮಾಡಿಕೊಂಡರು, ಪ್ರಭಾವತಿ- ಭದ್ರಾವತಿಯರಸಿನ ಅರಸಿಯು, ಹರಿಯ-ಕೃಷ್ಣಮೂರ್ತಿಯ, ರಾಣಿಯರ್ಗೆ-ಸತಿಯರಿಗೆ, ಎರಗಿ-ನಮಸ್ಕರಿಸಿ, ಕಾಣಿಕೆ-ಕಪ್ಪವನ್ನು, ಕೊಟ್ಟಳು-ಕೊಟ್ಟವಳಾದಳು.

ಅ|| ವಿ|| ವಾಯುವಿನಿಂದ, ಜ-ಹುಟ್ಟಿದವನು-(ತೃ.) || ೨೪ ||

ಟೀ|| ಮೂಡಿದ-ಆವಿರ್ಭವಿಸಿದ, ಎಳನಗೆ-ಮುಗುಳ್ನಗೆಯನ್ನು, ಗೂಡಿ - ತಾಳಿ, ದ್ರುಪದನಂದನೆಯು-ದ್ರುಪದಕುವರಿಯು, ಮೊಗ-ಆಸ್ಯವನ್ನು, ನೋಡಿ-ದೃಷ್ಟಿಸಿ, ನೀನೆ-ನೀನೊಬ್ಬಳೇ, ಚದುರೆ-ಚಾತುರ್ಯದಸ್ತ್ರೀ, ಲೋಕದೊಳು-ಭುವನದಲ್ಲಿ, ಶ್ರೀ ಕೃಷ್ಣನಂ-ಕೃಷ್ಣಮೂರ್ತಿಯನ್ನು, ಷೋಡಶಸಹಸ್ರನಾರಿಯುರು-ಹದಿನಾರು ಸಹಸ್ರ ಸಂಖ್ಯೆಯ ಸ್ತ್ರೀಯರು, ಐದಲು-ಸೇರಲು, ಅರಿಯರು-ಅಶಕ್ತರು, ಆತನನು - ಅಂಥವನನ್ನು, ನೀನು, ಒಲಿಸಿಕೊಂಡೆ-ವಶಪಡಿಸಿಕೊಂಡಿದ್ದಿ, ನಿನ್ನಗಾಡಿಗೆ-ನಿನ್ನ ಕೃತ್ರಿಮ ಕಾರ್ಯಕ್ಕೆ, ಇದು- ಈ ಕೆಲಸವು, ಪೊಸತೆ-ನವೀನವಾದದ್ದೆ? ಐವರಂ-ಐದು ಜನರಾದ, ಗಂಡರನು-ಪತಿಗಳನ್ನು, ಮರುಳುಮಾಡುವ-ಭ್ರಾಂತಿಯಂಗೈವ, ಮಹಾಪತಿವ್ರತೆ-ಪತಿಭಕ್ತಿಯುಳ್ಳವರಲ್ಲಿ ಮೇಲಾದವಳು, ಆವು-ನಾವು, ನಿನ್ನೊಳು-ಐದು

---

ಧೀನನಾದ ಕೃಷ್ಣನೂ, ಅವನ ಹಿಂಭಾಗದಲ್ಲಿ, ತಾಪಸೋತ್ತಮರೂ ಬರುತ್ತಿರಲಾಗಿ, ಧರ್ಮತನಯನು ಸಂಭ್ರಮಯುಕ್ತನಾಗಿ ಶುಭ್ರವಾದ ಮರಳ ರಾಶಿಗಳಿಂದ ಹೊಳೆಯುತ್ತ ಸುರನದಿಯ ತಟದಲ್ಲಿ ನೆಲಸಿರುವ ಯಾದವರ ಸೈನ್ಯವೆಂಬ ಮಹಾರ್ಣವವನ್ನು ತನ್ನ ದಳವೆಂಬ ಕಡಲಿನೊಂದಿಗೆ ಸೇರಿಸಿ || ೨೩ || ಅಲ್ಲಿ ನೆರೆದಿದ್ದ ದೇವಕಿಯಶೋದೆ ರೋಹಿಣಿಯೇಮೊದಲಾದವರಿಗೆಲ್ಲಾ ನಮಸ್ಕಾರವನ್ನು ಮಾಡಿದನು. ಅರ್ಜುನಾದಿಗಳೂ ಕೂಡ ವಂದನೆಗಳನ್ನರ್ಪಿಸಿದರು. ಅಲ್ಲಿ ನೆರೆದಿದ್ದ ಯಾದವರೆಲ್ಲರೂ ಧರ್ಮರಾಯನಿಗೂ, ಕುಂತಿ ಪಾರ್ಥಾದಿಗಳಿಗೂ ನಮಸ್ಕಾರವನ್ನು ಮಾಡಿದರು. ಮಿಕ್ಕವರೆಲ್ಲಾ ಪರಸ್ಪರವಾಗಿ ಆಲಿಂಗನಾದಿಗಳನ್ನು ಮಾಡಿಕೊಂಡರು. ಭೀಮಸೇನನು ತಮ್ಮ ಅಣ್ಣನಾದ ಧರ್ಮಪುತ್ರನ ಸಂದರ್ಶನವನ್ನು ಮಾಡಿಕೊಂಡನು. ದ್ರೌಪದಿ ಸುಭದ್ರೆಯರು ರುಕ್ಮಿಣಿಯೇ ಮೊದಲಾದವರನ್ನು ಆಲಿಂಗನಾದಿಗಳಿಂದ ಮನ್ನಿಸಿದರು. ಭದ್ರಾವತೀ ರಾಜನಾದ ಯೌವನಾಶ್ವನ ಪಟ್ಟದರಸಿಯಾದ ಪ್ರಭಾವತಿಯು ಕೃಷ್ಣನ ಹೆಂಡತಿಯಾದ ರುಕ್ಮಿಣಿಯೇ ಮೊದಲಾದವರಿಗೆ ಕಪ್ಪವನ್ನರ್ಪಿಸಿ ನಮಸ್ಕಾರಾದಿಗಳಿಂದ ಮನ್ನಿಸಿದಳು || ೨೪ || ಆಗ ಸತ್ಯಭಾಮೆಯು ತಮ್ಮನ್ನೆಲ್ಲಾ ಮನ್ನಿಸುತ್ತಿರುವ ದ್ರೌಪದಿಯನ್ನು ಕುರಿತು, ಮಂದಸ್ಮಿತಳಾಗಿ ಎಲೌ ದ್ರುಪದ ಕುವರೀ, ನಿನ್ನ ಚಾತುರ್ಯವು ಅಸಾಧಾರಣವಾದದ್ದು, ಇಹಲೋಕ

ಯಲವಳಿಂತೆಂದಳು ||೨೫|| ಕಾರುಣ್ಯನಿಧಿಯನಾನೊಲಿಸಿಕೊಳದಿರ್ದೊಡೆಪಿ | ವಿಚಾರಿಸುವರುಂಟೆಯೆನ್ನಭಿಮಾನಹಾನಿಯಂ | ಕೌರವನಸಭೆಯೊಳುಳಿದವರಿರ್ದೊಡೇನಾಯ್ತು ಕೃಷ್ಣನೇಪಾಲಿಸಿದನು || ಪಾರಿಜಾತದನೋಂಪಿಗಂದುನಿಜರಮಣನಂ | ನಾರದ ಮುನಿಗೆಕೊಟ್ಟಬಳಿಕೊಡೆಯನುಂಟೆನಿನ | ಗೀರುಕ್ಮಿಣೀಧವನನಾಥರ್ಗೆನಾಥನೆಂಬುದುಪುಸಿಯೆಪೇಳೆಂದಳು || ೨೬ || ಎಂದು ದ್ರೌಪದಿನುಡಿವಮಾತುಮುಗಿವನಿತರೊಳ್ | ಮುಂದಿಯಂಕಡೆಗೆತೊಲಗಿಸಿಯಜ್ಞತುರಗಮಂ | ತಂದುನಿಲ್ಲಿಸಿದರಲ್ಲಿಹರಿನಿರೂಪಿಸಲರಸನಾಜ್ಞೆಯಿಂದಾಕ್ಷಣದೊಳು || ಇಂದೀವರಾಕ್ಷಿಯರ್ನೋಡಿದರುಕೌತುಕವಿ | ದೆಂದುವಸ್ತ್ರಾಭರಣಪುಷ್ಪಗಂಧಾಕ್ಷ

---

ಜನ ಗಂಡಂದಿರನ್ನುಳ್ಳ ನಿನ್ನೊಂದಿಗೆ, ಮಾತಾಡಲು_ನುಡಿಯಲು, ಅಂಜುವೆವು-ಹೆದರಿಕೊಳ್ಳುವೆವು, ಎಂದು_ ಎಂಬತೆರನಾಗಿ, ಸತ್ಯಭಾಮಾದೇವಿ_ಸತ್ಯಭಾಮೆಯು, ನುಡಿಯಲು_ಹೇಳಲಾಗಿ, ಅವಳು_ಆ ಪಾಂಚಾಲೆಯು, ಇಂತು-ಮುಂದೆ ಹೇಳುವಂತೆ, ಎಂದಳು-ನುಡಿದಳು || ೨೫ ||

ಟೀ|| ಕಾರುಣ್ಯನಿಧಿಯ-ಕೃಪಾಸಮುದ್ರನಾದ ಕೃಷ್ಣಮೂರ್ತಿಯನ್ನು, ನಾನು – ನಾನಾದರೊ, ಒಲಿಸಿಕೊಳ್ಳದಿದ್ದರೆ-ಸ್ವಾಧೀನವಂಮಾಡಿಕೊಳ್ಳದಿದ್ದರೆ, ಕೌರವ_ಕುರುನಂದನನ, ಸಭೆಯೊಳು-ಓಲಗದಲ್ಲಿ, ಎನ್ನ_ನನ್ನ, ಅಭಿಮಾನ-ಮರ್ಯಾದೆಯ, ಹಾನಿಯಂ-ಭಂಗವನ್ನ, ವಿಚಾರಿಸುವರು_ಕೇಳತಕ್ಕವರು, ಉಂಟೆ-ಇದ್ದರೇ, ಉಳಿದವರು_ಮಿಕ್ಕವರು, ಇರ್ದ-ಇದ್ದುದ್ದರಿಂದ, ಏನಾಯ್ತು_ಏನು ಸಾರ್ಥಕವಾಯಿತು ? ಶ್ರೀಕೃಷ್ಣನೆ-ನಾರಾಯಣನೆ, ಪಾಲಿಸಿದನು-ಮರ್ಯಾದೆಯನ್ನು ಉಳಿಸಿದನು, ಪಾರಿಜಾತದ-ಪಾರಿಜಾತವೆಂಬ ತರುವಿನ, ನೋಂಪಿಗೆ_ವ್ರತಕ್ಕೆ, ಅಂದು-ಆಕಾಲದಲ್ಲಿ, ನಿಜರಮಣನಂ-ನಿನ್ನ ಪತಿಯನ್ನು, ನಾರದಮುನಿಗೆ_ನಾರದ ಋಷಿಗೆ, ಕೊಟ್ಟಬಳಿಕ_ಇತ್ತನಂತರ, ನಿನಿಗೆ_ನಿನಿಗಾಗಿ, ಒಡೆಯನು_ರಮಣನು, ಉಂಟೆ_ಇವ್ವಾನೆಯೆ, ಈ ರುಕ್ಮಿಣೀಧವನು_ಈ ಶ್ರೀಕಾಂತನು, ಅನಾಥರ್ಗೆ_ ದಿಕ್ಕಿಲ್ಲದವರಿಗೆ, ನಾಥನೆಂಬುದು – ಒಡೆಯನೆನ್ನುವುದು, ಪುಸಿಯೆ-ಸಟೆಯೆ? ಪೇಳು_ಉಸಿರು, ಎಂದಳು_ಎಂದು ನುಡಿದಳು.

ಅ|| ವಿ|| ಕಾರುಣ್ಯವೇ ನಿಧಿಯಾಗಿವುಳ್ಳವನು (ಕಾರುಣ್ಯನಿಧಿ,. ಬ. ಸ.) ಪಾರಿಜಾತದ ಕಥೆ :—ಸುರಲೋಕದಲ್ಲಿರುವ ಪಾರಿಜಾತ ವೃಕ್ಷದಿಂದ ಒಂದು ಹೂವನ್ನು ನಾರದರು ತೆಗೆದುಕೊಂಡುಬಂದು ರುಕ್ಮಿಣಿಗೆ ಕೊಟ್ಟರು. ಸತ್ಯಭಾಮೆಗಿಂತಲೂ ರುಕ್ಮಿಣಿಯೇ ಶ್ರೇಷ್ಠಳೆಂಬ ವಾರ್ತೆಯು ಎಲ್ಲೆಲ್ಲಿಯೂ ಉಂಟಾಗಲು, ಆಗ ಸತ್ಯಭಾಮೆಯು ಕೃಷ್ಣನನ್ನು ತನಿಗೂ ಆ ಪುಷ್ಪವನ್ನು ತಂದುಕೊಡೆಂದು ಕೇಳಿದಳು. ಅವಳ ಇಷ್ಟದಂತೆ ಶ್ರೀ ಕೃಷ್ಣನು ಸುರನಗರಕ್ಕೆ ಹೋಗಿ ಇಂದ್ರನನ್ನು ಗೆದ್ದು ಪಾರಿಜಾತವೃಕ್ಷವನ್ನೇ ಭೂಲೋಕಕ್ಕೆ ತಂದು ಸತ್ಯಭಾಮೆಯ ಅಂತಃಪುರದಲ್ಲಿಟ್ಟನು ||೨೬||

ಟೀ|| ಎಂದು_ಎಂಬತೆರನಾಗಿ, ದ್ರೌಪದಿ_ದ್ರುಪದನ ಪುತ್ರಿಯು, ನುಡಿವ-ಹೇಳುತ್ತಿರುವ,ಮಾತು-ವಚನವು, ಮುಗಿವ_ಪೂರೈಸುವ, ಅನಿತರೊಳು_ಕಾಲಕ್ಕೆಸರಿಯಾಗಿ, ಮುಂದಿಯಂ_ನೆರೆದಿದ್ದಲೋಗರನ್ನೆಲ್ಲಾ, ಕಡೆಗೆ_ಬಂದು ಪಕ್ಕಕ್ಕೆ, ತೊಲಗಿಸಿ-ಹೊರಡಿಸಿ, ಯಜ್ಞತುರಗಮಂ-ಯಾಗದ ಅಶ್ವವನ್ನು, ತಂದು_ತೆಗೆದುಕೊಂಡು ಬಂದು, ನಿಲ್ಲಿಸಿದರು-ನಿಲ್ಲಿಸಿದವರಾದರು, ಅಲ್ಲಿ_ಆ ಕಾಲದಲ್ಲಿ, ಹರಿ-ಶ್ರೀ ಕೃಷ್ಣಮೂರ್ತಿಯು, ನಿರೂಪಿಸಲು-ಅಪ್ಪಣೆಯನ್ನು ಮಾಡಲು, ಅರಸನ_ಯುಧಿಷ್ಠಿರನ, ಆಜ್ಞೆಯಿಂದ-ಅನುಜ್ಞೆಯಿಂದ, ಆಕ್ಷಣದೊಳು-ತಡಮಾಡದೆ, ಇಂದೀವರಾಕ್ಷಿಯರು_ಕನ್ನೈದಿಲೆಯನ್ನು ಹೋಲುವ ಕಣ್ಣುಗಳನ್ನುಳ್ಳ

---

ದಲ್ಲಿ ಕೃಷ್ಣನನ್ನು ವಶಮಾಡಿಕೊಳ್ಳಬೇಕೆಂದು ಹದಿನಾರು ಸಹಸ್ರಜನ ಸ್ತ್ರೀಯರು ಪ್ರಯತ್ನಮಾಡಿದರೂ ಯಾರಿಗೂ ವಶವಾಗದ ಕೃಷ್ಣಸ್ವಾಮಿಯನ್ನು ನೀನು ಸ್ವಾಧೀನಮಾಡಿಕೊಂಡು ಬಿಟ್ಟಿರುವೆಯಲ್ಲಾ ! ಐವರು ಪತಿಗಳ ಚಿತ್ತಕ್ಕೂ ಸರಿಯಾಗಿದ್ದುಕೊಂಡು ಅನುವರ್ತಿಸುವ ನಿನ್ನ ಸಂಗಡ ಮಾತನಾಡುವದಕ್ಕೆ ಕೂಡ ನಮಿಗೆ ಅಪವಾದವು ಒದಗೀತೆಂಬ ಭಯವುಂಟಾಗಿರುವದು, ಎಂದು ಹಾಸ್ಯಮಾಡಲು ||೨೫|| ಪಾಂಚಾಲಿಯು, ಎಲೌ ತಾಯೇ! ಸತ್ಯಭಾಮಾದೇವಿ ! ಕೃಪಾಸಮುದ್ರನಾದ ಕೃಷ್ಣನ ದಯೆಯು ಇಲ್ಲದೆ ಹೋಗಿದ್ದರೆ ನನ್ನನ್ನು ಕೇಳುತ್ತಿದ್ದವರು ಯಾರು ? ಪೂರ್ವದಲ್ಲಿ ನೀಚನಾದ ದುರ್ಯೋಧನನು ಒಡ್ಡೋಲಗದಲ್ಲಿ ನನ್ನ ಪತಿಗಳ ಎದುರಿನಲ್ಲಿಯೇ ಉಟ್ಟಿದ್ದ ವಸ್ತ್ರಗಳನ್ನು ಸೆಳೆಯಲುಜ್ಜುಗಿಸಲು, ಅಕ್ಷಯ ವಸ್ತ್ರಗಳನ್ನಿತ್ತು ನನ್ನಮಾನ ಸಂರಕ್ಷಣೆಯನ್ನು ಕೃಷ್ಣನಲ್ಲದೆ ಮತ್ತೆಯಾರು ಮಾಡಿದರು? ಪಾರಿಜಾತ ಪುಷ್ಪಕ್ಕಾಗಿ ನಿನ್ನ ಕಾಂತನನ್ನು ನಾರದನ ವಶಪಡಿಸಿದ ಬಳಿಕ ನಿನಗೆ ಗಂಡನ ಕೊರಟಲೆಯಿಲ್ಲಿಯದು ? ಈ ಕೃಷ್ಣನು ಅನಾಥರನ್ನೂ ಶರಣಾಗತರನ್ನೂ ರಕ್ಷಿಸತಕ್ಕ ಘೋರನಿಯಮವನ್ನವಲಂಬಿಸಿರುವನಲ್ಲವೆ? ಎಂದು ನುಡಿದ ಪಾಂಚಾಲಿಯ ಮಾತುಗಳನ್ನು ಕೇಳಿ ಪ್ರತ್ಯುತ್ತರವನ್ನೀಯಲುಜ್ಜುಗಿಸುತ್ತಿರವಷ್ಟರಲ್ಲಿಯೇ ||೨೬|| ಒತ್ತಾಗಿ ನೆರದಿದ್ದ ಜನರನ್ನೆಲ್ಲಾ ಅಲ್ಲಲ್ಲಿಗೆ ಚದುರಿಸಿ, ಕೃಷ್ಣನು ಮತ್ತು ಯುಧಿಷ್ಠಿರನು ಇವರುಗಳ ಅಪ್ಪಣೆಯಮೇರಿಗೆ ಅಶ್ವಮೇಧಾರ್ಹವಾದ ಕುದುರೆಯನ್ನು ತಂದು ನಿಲ್ಲಿಸಲಾಗಿ ಎಲ್ಲರೂ ಅದನ್ನೇ ನೋಡುತ್ತ, ಪರಮಾಶ್ಚರ್ಯವನ್ನುಂಟು

ತೆಗ | ಳಿಂದಪೂಜಿಸುತಿರ್ದರಶ್ವಮುಂ ಭೂಪಕೇಳ್ಮೇಲಾದಸಂಗತಿಯನು ||೨೭|| ಆಸಮಯದೊಳ್ಸಾಲ್ವನನುಜನನುಸಾಲ್ವನೀ | ವಾಸುದೇವನ ಪೂರ್ವವೈರಕಲ್ಲಿಗೆಬಂದು | ಮೋಸದೊಳ್ತಾಗಿತತ್ತುರಗಮುಂಪಿಡಿದೆತ್ತಿಕೊಂಡೊಯ್ದುಕಟ್ಟಿಬಳಿಕ || ಆಸುತ್ತುವಳಯದೊಳ್ಪದ್ಮಿನಾಕಾರಕೆಮ | ಹಾಸೇನೆಯಂನಿಲಿಸಿತಾನದರಮುಖದೊಳ್ಶ | ರಾಸನದೊಳಂಬನೇರಿಸಿನಿಂದುನುಡಿದಂಸುಧಾರನೆಂಬಾಪ್ತನೊಡನೆ ||೨೮|| ಅಣ್ಣನಂಕೊಂದೆಮ್ಮಸೌಭನಗರವನುರಿದ | ಬೆಣ್ಣೆಗಳ್ಳನಕೊಬ್ಬಿದುದರದೊಳ್ಪೊಚ್ಚಪೊಸ | ಸುಣ್ಣಮಂಪೊಯಿದುನೀರೆರೆದಂತೆಮಾಡಿಯಾದವರಪಾಂಡವರಬಿಂಕದ || ಬಣ್ಣಮಂಕೆಡಿಸಿಕಾಳಗದೊಳುಬ್ಬಸವನುರೆ | ಹಣ್ಣಿದಲ್ಲದೆ ಮಾಣೆನಹಿತರ್ಗೆಪಗೆಯುನ್ನ | ಕಣ್ಣಮುಂದಕೆಸುಳಿದುಜೀವಿಪನೆಸೇನೆಸನ್ನದ್ಧವಾಗಿರಲೆಂದನು ||೨೯|| ಇಂದುತುರಗಾಯಿಯಂ

---

ಸ್ತ್ರೀಯರು, ಇಮು–ಈ ಅಶ್ವವು, ಕೌತುಕಂ– ಆಚ್ಚರಿಯನ್ನುಂಟುಮಾಡತಕ್ಕದ್ದು, ಎಂದು–ಎಂಬದಾಗಿ, ನೋಡಿದರು–ಈಕ್ಷಿಸಿದರು, ವಸ್ತ್ರ–ದುಕೂಲಗಳು, ಆಭರಣ–ತೊಡಿಗೆಗಳು, ಗಂಧ–ಪರಿಮಳದ್ರವ್ಯಗಳು, ಪುಷ್ಪ–ಅಲರ್ಗಳು, ಅಕ್ಷತೆಗಳಿಂದ–ಸೇಸೆಗಳೇ ಮೊದಲಾದ ಪೂಜೋಪಕರಣಗಳಿಂದ, ಅಶ್ವಮುಂ–ಯಾಗದ ತುರಗವನ್ನು, ಪೂಜಿಸುತಿರ್ದರು–ಅರ್ಚನೆಯಂ ಮಾಡುತ್ತಿದ್ದರು, ಭೂಪ–ಜನಮೇಜಯಕ್ಷಿತಿಪನೆ, ಮೇಲೆ–ಅನಂತರದಲ್ಲಿ, ಆದ–ಉಂಟಾದ, ಸಂಗತಿಯನು–ವೃತ್ತಾಂತವನ್ನು, ಕೇಳು–ಲಾಲಿಸು. ||

ಅ|| ವಿ|| ತುರ–ಜಾಗ್ರತೆಯಿಂದ, ಗ–ಗಮಿಸುವುದು (ಕೃ. ವೃ.) ಆಜ್ಞೆ (ತ್ಸ) ಆಣೆ (ತ್ಭ) ಇಂದೀವರದಂತೆ ಅಕ್ಷಿಯುಯಾರಿಗೋ ಅವರು (ಇಂದೀವರಾಕ್ಷಿಯರು) (ಉ.ಪೂ.ಬ.ಸ.) ||೨೭||

ಟೀ|| ಆ ಸಮಯದೊಳ್–ಅಶ್ವವನ್ನು ಅರ್ಚಿಸಿ ಎಲ್ಲರೂ ಎಚ್ಚರಿಕೆಯನ್ನು ಬಿಟ್ಟು ಇರುವಲ್ಲಿ, ಸಾಲ್ವನ–ಸಾಲ್ವನೆನ್ನತಕ್ಕವನ, ಅನುಜನು–ಸಹೋದರನಾದ, ಅನುಸಾಲ್ವನು–ಅನುಸಾಲ್ವನೆನ್ನತಕ್ಕವನು, ಈ ವಾಸುದೇವನ–ಈ ಕೃಷ್ಣಸ್ವಾಮಿಯ, ಪೂರ್ವ–ಪೂರ್ವದಲ್ಲಿ ತನ್ನ ಜ್ಯೇಷ್ಠನಾದ ಸಾಲ್ವನನ್ನು ಕೊಂದ, ವೈರಕೆ–ದ್ವೇಷಕ್ಕಾಗಿ, ಅಲ್ಲಿಗೆ–ಆ ಕುದುರೆ ಇದ್ದೆಡೆಗೆ, ಬಂದು–ಐತಂದು, ಮೋಸದೊಳು–ವಂಚನೆಯಿಂದ, ತಾಗಿ–ಎದುರಾಳಾಗಿ, ತತ್ತುರಗಮುಂ–ಆ ಅಶ್ವವನ್ನು, ಪಿಡಿದು–ಹಿಡಿದು, ಎತ್ತಿಕೊಂಡು, ಒಯ್ದು–ತೆಗೆದುಕೊಂಡುಹೋಗಿ, ಕಟ್ಟಿ–ಬಂಧಿಸಿ, ಬಳಿಕ–ಆಮೇಲೆ, ಆ ಸುತ್ತುವಳಯದೊಳ್–ಅದರ ಸುತ್ತಲೂ, ಪದ್ಮಿನಾಕಾರಕೆ–ಗೃಧ್ರಾಕೃತಿಯಾಗಿ, ಮಹಾಸೇನೆಯಂ–ದೊಡ್ಡ ದಳವನ್ನು, ನಿಲಿಸಿ–ನಿಲ್ಲುವಹಾಗೆ ಮಾಡಿ, ತಾನು–ಸಾಲ್ವಾನುಜನು, ಅದರ–ಆ ಹದ್ದಿನಾಕಾರದ ಪಡೆಯ, ಮುಖದೊಳ್–ಮುಂಭಾಗದಲ್ಲಿ, ಶರಾಸನದೊಳು–ಧನುಸ್ಸಿನಲ್ಲಿ, ಅಂಬನು–ಸರಲನ್ನು, ಏರಿಸಿ–ಸಿಕ್ಕಿಸಿ, ನಿಂದು–ನಿಂತುಕೊಂಡು, ಸುಧಾರನೆಂಬ–ಸುಧಾರನೆಂಬ ನಾಮಧೇಯವುಳ್ಳ, ಆಪ್ತನೊಡನೆ–ಅಮಾತ್ಯನೊಂದಿಗೆ, ನುಡಿದಂ–ಹೇಳಿದನು ||೨೮||

ಟೀ|| ಅಣ್ಣನಂ – ಜ್ಯೇಷ್ಠನನ್ನು, ಕೊಂದು – ಸಾಯಿಸಿ, ಎಮ್ಮ – ನಮ್ಮ ಸಂಬಂಧವಾದ, ಸೌಭನಗರವನು–ಪೊಳಲನ್ನು, ಉರಿದ–ದಹಿಸಿದ, ಬೆಣ್ಣೆಗಳ್ಳನ – ನವನೀತ ಚೋರನ, ಕೊಬ್ಬಿದ–ದಪ್ಪನಾದ, ಉದರದೊಳ್–ಪೊಡೆಯಲ್ಲಿ, ಪೊಚ್ಚ–ಪರಿಶುದ್ಧವಾದ, ಪೊಸ–ನವೀನವಾದ, ಸುಣ್ಣಮಂ–ಚೂರ್ಣವನ್ನು, ಪೊಯಿದು–ಹಾಕಿ, ನೀರೆರೆದಂತೆ–ನೀರನ್ನು ಸುರಿದಂತೆ, ಮಾಡಿ–ಎಸಗಿ, ಯಾದವ–ಯದುಕುಲಜರ, ಪಾಂಡವರ–ಧರ್ಮಾದಿಗಳ, ಬಿಂಕದ–ಅಹಂಕಾರದ, ಬಣ್ಣಮಂ–ಬಗೆಯನ್ನು,

---

ಮಾಡುತ್ತಿರುವ ಆ ಹಯವನ್ನು ನೋಡಿ ಅಮೂಲ್ಯವಾದ ವಸ್ತ್ರಾಭರಣ ಗಂಧ ಪುಷ್ಪಾದಿಗಳಿಂದರ್ಚಿಸಿ ಆನಂದಪರವಶರಾಗಿದ್ದರು. ||೨೭ ಯದುಕುಲಜರೂ ಧರ್ಮಾದಿಗಳೂ ಈ ರೀತಿಯಲ್ಲಿ ಸಂತೋಷದ ಕಡಲಲ್ಲಿ ಮುಳುಗಿ ಮೈಮರೆತಿರುವಾಗ ಸಾಲ್ವನಿಗೆ ತಮ್ಮನಾದ ಅನುಸಾಲ್ವನೆಂಬ ನಾಮಧೇಯವುಳ್ಳ ರಕ್ಕಸನೋರ್ವನು ಪೂರ್ವದಲ್ಲಿ ತನ್ನ ಅಣ್ಣನಾದ ಸಾಲ್ವನನ್ನು ಹರಿಯು ಕೊಂದುಹಾಕಿದನೆಂಬ ದ್ವೇಷದಿಂದ ಆ ಗಂಗಾತೀರದಲ್ಲಿ ನೆಲಸಿ ಯಾದವರ ದಂಡಿನ ಮಧ್ಯಭಾಗವನ್ನಾಸರೆಯಾಗಿ ಮಾಡಿಕೋಂಡಿದ್ದ ಯುಧಿಷ್ಠಿರನ ಹಯಮೇಧಾಶ್ವವನ್ನು ಯಾರೂ ಕಾಣದಂತೆ ಮೋಸದಿಂದ ಕದ್ದುಕೊಂಡು ಹೋಗಿ ತನ್ನ ನಿವಾಸಸ್ಥಾನದಲ್ಲಿ ಕಟ್ಟಿ ಅದರ ಸುತ್ತಲೂ ಅಪರಿಮಿತವಾದ ಸೈನ್ಯವನ್ನು ಹದ್ದಿನಾಕೃತಿಯಾಗಿ ಕಾವಲಿಟ್ಟು ತಾನು ಆ ಸೈನ್ಯದ ಎದುರಲ್ಲಿ ನಿಂತು ಬಿಲ್ಲಿಗೆ ಬಾಣವನ್ನು ತಗಲಿಸಿ ಸಿದ್ಧಮಾಡಿಕೊಂಡು ನಿಂತು ಸುಧಾರನೆಂಬ ತನ್ನ ಮುಖ್ಯ ಸಚಿವನನ್ನು ಕುರಿತು||೨೮|| ನಮ್ಮಣ್ಣನಾದ ಸಾಲ್ವನನ್ನು ಸಂಹರಿಸಿ ನಮ್ಮ ಪಟ್ಟಣವನ್ನೆಲ್ಲಾ ಸುಟ್ಟುಹಾಕಿದ ಮತ್ತು ಎಲ್ಲರ ಮನೆಗೂ ಕಳ್ಳತನದಿಂದ ನುಗ್ಗಿ ಬೆಣ್ಣೆಯನ್ನು ಕದ್ದು ತಿನ್ನುವ ಕೃಷ್ಣನ ಚೆನ್ನಾಗಿ ಬಲಿತಿರುವ ವಕ್ಷಸ್ಥಳದೆಡೆಯಲ್ಲಿ ಹೊಸದಾಗಿರುವ ಸುಣ್ಣವನ್ನು ಇಟ್ಟು ನೀರು ಸುರಿದಂತೆ ಯದುಕುಲಜರ ಮತ್ತು ಧರ್ಮಾದಿಗಳ ಸೈನ್ಯವನ್ನೆಲ್ಲಾ ಕಂಗೆಡುವಂತೆ ಮಾಡಿ ಯುದ್ಧದಲ್ಲಿ ಬಹುವಾಗಿ ಆಯಾಸಪಡಿಸುತ್ತೇನೆ, ನಮ್ಮ ಸೈನ್ಯವೆಲ್ಲಾ ಯುದ್ಧಕ್ಕೆ ಸಿದ್ಧವಾಗಿರಲಿ. ||೨೯|| ದನಗಳನ್ನು ಕಾಯುವ ಕೃಷ್ಣನನ್ನು

ಬಂದಿರಿಯದವನೆನಗೆ | ಸಂದಪನೆಗೋವಳೆಯರುಪನಾಯಕನರಣಕೆ | ನಿಂದುಕಾದುವನಾಪ್ತನಿನಿತರೊಳ್ಸಂದೇಹಮಿಲ್ಲಪರಿವಾರ ದೊಳಗೆ || ಹಿಂದಣಪರಾಧನುಂಮುಂದಣದ್ರೋಹಂಗ | ಳೊಂದುಮಂ ನೋಡೆನೂರುಂಬಳಿಗಜಾಶ್ವಗೋ | ವೃಂದಧನಯುವತಿ ಯರ್ಮೊದಲಾದಸಕಲವಸ್ತುಗಳನಿತ್ತಪೆನೆಂದನು ||೩೦|| ಸೊಕ್ಕಿದನುಸಾಲ್ವನೀತೆರದಿಂದತನ್ನಪಡೆ | ಗಿಕ್ಕಿದಂಛಲಮಂಸುಧಾರ ನೆಂಬಾಸಚಿವ | ನಕ್ಕರಿಂದಖಿಳಸೇನಾವಳಯದೊಳ್ಸಾರಿಸಲ್ಪ್ರಳಯಮೇಘಂಗಳ || ಕಕ್ಕಸದಸಿಡಿಲಗರ್ಜನೆಗಳಂಕಲ್ಪಾಂತ | ಉಕ್ಕುವಬ್ಧಿಗಳಪೇರ್ದೆರೆಗಳಸುಘೋಷಮಂ | ಮಿಕ್ಕವುಸಮಸ್ತವಾದ್ಯಧ್ವನಿಗಳತಿಬಲರಬೊಬ್ಬೆಯಬ್ಬರದಕೂಡೆ ||೩೧|| ಇತ್ತ

---

ಕೆಡಿಸಿ-ಕಳೆದು, ಕಾಳಗದೊಳು-ರಣದಲ್ಲಿ, ಅಹಿತರ್ಗೆ-ವೈರಿಗಳಿಗೆ, ಉಬ್ಬಸವ-ಮೇಲುಸಿರನ್ನು, ಹಣ್ಣಿದಲ್ಲದೆ-ಎಸಗಿದಲ್ಲದೆ, ಮಾಣೆನು-ಬಿಡುವುದಿಲ್ಲ, ಎನ್ನ-ನನ್ನ ಸಂಬಂಧವಾದ, ಕಣ್ಣಮುಂದಕೆ-ಕಣ್ಣೆದುರಿಗೆ, ಸುಳಿದು-ಧೈರ್ಯದಿಂದ ಓಡಾಡುತ್ತ, ಪಗೆ-ವೈರಿಯು, ಜೀವಿಪನೆ-ಪ್ರಾಣದೊರಸೆ ಇದ್ದಾನೆ? ಸೇನೆ-ಪಡೆಯು, ಸನ್ನದ್ಧವಾಗಿ-ಕಾಳಗಕ್ಕನುವಾಗಿ, ಇರಲಿ-ಇರುವುದಾಗಲಿ, ಎಂದನು-ಎಂದು ನುಡಿದನು ||೨೯||

ಟೀ|| ಇಂದು-ಈ ಹೊತ್ತು, ತುರುಗಾಯಿಯಂ-ಗೋಪಾಲನನ್ನು, ಬಂದು-ಐತಂದು, ಇರಿಯದವನು-ಕೊಂದುಹಾಕದಿರುವನು, ಎನಗೆ-ನನ್ನ ವಿಷಯದಲ್ಲಿ, ಸಂದಪನೆ-ಸಿಕ್ಕಿಯಾನೆ? ಗೋವಳೆಯರ-ಹಸುಗಳನ್ನು ಮೇಯಿಸುವರ, ಉಪನಾಯಕನ-ನಿಯಾಮಕನಾದ ಕೃಷ್ಣನನ್ನು, ರಣಕೆ-ಅಜಿಗೆ, ನಿಂದು-ಎದುರಾಗಿ, ಕಾದುವವನು-ಹೋರಾಡತಕ್ಕವನು, ಪರಿವಾರದೊಳಗೆ-ಸೈನ್ಯದಲ್ಲಿ. ಇನಿತರೊಳ್-ಇಷ್ಟು ಮಂದಿಯಲ್ಲಿ, ಆಪ್ತನು-ಪ್ರಿಯನಾದವನು, (ಆಗುತ್ತಾನೆ) ಹಿಂದಣ-ಪೂರ್ವದ, ಅಪರಾಧನುಂ-ದ್ರೋಹಗಳನ್ನು, ಮುಂದಣ-ಮುಂದೆ ಆಗಬಹುದಾದ, ದ್ರೋಹಂಗಳ-ಅಪಕಾರಗಳನ್ನು, ಒಂದುಮಂ-ಯಾವುದನ್ನೂ, ನೋಡೆನು-ಗಣನೆಗೆ ತರುವುದಿಲ್ಲ, ಊರಂ-ನನ್ನ ಪಟ್ಟಣವನ್ನು, ಬಹು-ಹೆಚ್ಚಾದ, ಗಜ-ಆನೆಗಳು, ಅಶ್ವ-ಕುದುರೆಗಳು, ಗೋ-ಹಸುಗಳು, ಇವುಗಳ, ವೃಂದಮಂ-ಸಮೂಹವನ್ನು, ಧನ-ಹಣವು, ಯುವತಿಯರು-ಯೌವನ ಸ್ತ್ರೀಯರೇ ಆದಿಯಾದ, ಸಕಲ ವಸ್ತುಗಳನು-ಎಲ್ಲ ಪುರುಳ್ಗಳನ್ನು, ಇತ್ತಪೆನು-ಕೊಡುತ್ತೇನೆ, ಸಂದೇಹಂ-ಅನುಮಾನವು, ಇಲ್ಲ-ಇಲ್ಲವು, ಎಂದನು-ಎಂದು ನುಡಿದನು||೩೦

ಟೀ|| ಸೊಕ್ಕಿದ-ಮದೋದ್ಧತನಾದ, ಅನುಸಾಲ್ವನು-ಸಾಲ್ವನ ತಮ್ಮನು, ಈ ತೆರದಿಂದ-ಈ ಪರಿಯಿಂದ, ತನ್ನಪಡೆಗೆ-ತನ್ನ ದಳಕ್ಕೆ, ಛಲಮಂ-ವೈರವನ್ನು, ಇಕ್ಕಿದಂ-ಎಸಗಿದನು, ಸುಧಾರನೆಂಬ-ಸುಧಾರನೆಂಬ ಹೆಸರಿನ, ಆ ಸಚಿವನು-ಆ ಮಂತ್ರಿವರ್ಯನು, ಅಕ್ಕರಿಂದ-ಪ್ರೇಮದಿಂದ, ಅಖಿಳ-ಎಲ್ಲಾ, ಸೇನಾ-ದಂಡಿನ, ವಳಯದೊಳ್-ನಡುವೆ, ಸಾರಿಸಲ್-ಪ್ರಕಟಪಡಿಸಲು, ಸಮಸ್ತ-ಎಲ್ಲಾ. ವಾದ್ಯಧ್ವನಿಗಳು- ಭೇರಿಯೇ ಮೊದಲಾದವುಗಳ ಸ್ವರಂಗಳು, ಅತಿಬಲವುಳ್ಳವರ-ಬಹು ಪರಾಕ್ರಮಿಗಳ, ಬೊಬ್ಬೆಯ-ಸಿಂಹ ಗರ್ಜನೆಯ, ಅಬ್ಬರದ-ಪಡಿನುಡಿಯ, ಕೂಡೆ-ಜತೆಯಲ್ಲಿ, ಪ್ರಳಯ ಮೇಘಂಗಳ-ಅಂತ್ಯಕಾಲದ ಮುಗಿಲುಗಳ, ಕಕ್ಕಸದ-ಅತಿ ಕಠಿಣವಾದ, ಸಿಡಿಲಗರ್ಜನೆಗಳಂ-ಸಿಡಿಲಿನ ಗುಡುಗುಡು ಧ್ವನಿಯನ್ನು, ಕಲ್ಪಾಂತಕೆ-ಪ್ರಳಯಕಾಲಕ್ಕೆ, ಉಕ್ಕಿ ಬರುವ-ಮಿತಿಮೀರಿ ಬರತಕ್ಕ, ಅಬ್ಧಿಗಳ-ಅರ್ಣವಂಗಳ, ಪೇರ್ದೆರೆಗಳ-ದೊಡ್ಡ ದೊಡ್ಡ ತರಂಗಗಳ, ಸುಘೋಷಮಂ-ಶ್ರೇಷ್ಠಧ್ವನಿಯನ್ನು, ಮಿಕ್ಕವು-ಮೀರಿದವು ||

---

ಗೆಲ್ಲಲು ಯಾರು ಅಸಮರ್ಥರಾಗುತ್ತಾರೋ ಅಂಥವರನ್ನು ನಾನೆಂದಿಗೂ ವೀರನೆಂದು ಹೇಳೆನು. ಗೋಪಾಲಕನಾದ ಕೃಷ್ಣನೆದುರಿಗೆ ಪ್ರತಿಭಟಿಸಿ ನಿಂದು ಹೋರಾಡಿ ಜೈಸಬಲ್ಲ ಶೂರನನ್ನೇ ನನಗೆ ಮುಖ್ಯನಾದ ಪ್ರಾಣಪ್ರಿಯನೆಂದೆಣಿಸಿ, ಅಂಥವನು ಹಿಂದೆ ಎಷ್ಟು ದ್ರೋಹಮಾಡಿದ್ದರೂ ಗಣನೆಗೆ ತಾರದೆ ಮನ್ನಿಸುವೆನು. ಮುಂದೆ ಎಷ್ಟು ದ್ರೋಹಮಾಡಿದರೂ ಅವನ್ನೂ ಲಕ್ಷ್ಯಮಾಡದೆ ನನ್ನ ಪಟ್ಟಣವನ್ನೂ, ಆನೆ ಕುದುರೆ ಗೋವುಗಳೇ ಮೊದಲಾದ ಅಪರಿಮಿತವಾದ ವಸ್ತುಗಳನ್ನೂ ಇತ್ತು ಸತ್ಕರಿಸಿ ಯಾವಾಗಲೂ ನನ್ನ ಸಮೀಪದಲ್ಲಿಯೆ ಇಟ್ಟುಕೊಂಡಿರುವೆನು. ||೩೦|| ಎಂಬದಾಗಿ ಗರ್ವಾತಿಶಯದಿಂದ ನುಡಿಯುತ್ತಿರುವ ಅನುಸಾಲ್ವನ ಕ್ರೂರ ಶಪಥವನ್ನು ಸುಧಾರನೆಂಬ ಅಮಾತ್ಯನು ತಮ್ಮ ಸೈನ್ಯದಲ್ಲೆಲ್ಲಾ ಪ್ರಕಟಪಡಿಸಿದನು. ಇದನ್ನು ಕೇಳಿದ ಸೈನಿಕರೆಲ್ಲರೂ ವೀರಾಟೋಪದಿಂದ ಪ್ರಳಯಕಾಲದ ಮೇಘಗಳ ಗರ್ಜನೆಯನ್ನೂ, ಕಲ್ಪಾಂತಕಾಲದಲ್ಲಿ ಉಂಟಾಗುವ ದೊಡ್ಡದೊಡ್ಡ ತರಂಗಗಳ ಆರ್ಭಟವನ್ನು ಕೂಡ ಹಿಯ್ಯಾಳಿಸುವಂತೆ ಅತಿ ಭಯಂಕರಾಕಾರರಾಗಿ ಸಿಂಹಗರ್ಜನೆಗಳಿಂದ ಶತ್ರುಗಳ ಹೃದಯವನ್ನು ಗಡಗಡನೆ ನಡುಗಿಸುತ್ತ ಕೋಲಾಹಲಧ್ವನಿಯನ್ನು ಮಾಡುತ್ತಿದ್ದರು. ಎಲ್ಲೆಲ್ಲಿಯೂ ಭೇರಿ, ಮೃದಂಗ, ತಮಟೆ, ತುತ್ತೂರಿ, ಶಂಖ ಧ್ವನಿಗಳೇ ತುಂಬಿ ನಾಲ್ಕು ದಿಕ್ಕುಗಳ ಕೊನೆಗಳನ್ನೂ ವ್ಯಾಪಿಸಿದವು ||೩೧|| ಈ ರೀತಿಯಲ್ಲಿ ಅನುಸಾಲ್ವನು ಅಪರಿಮಿತಸೇನಾಪರಿವೃತನಾಗಿ ಅಶ್ವಮೇಧದ ಕುದುರೆಯನ್ನು ಕಟ್ಟಿ ಪಾಂಡವರೊಂದಿಗೂ ಮುರಹರನೊಂದಿಗೂ ಯುದ್ಧಕ್ಕೆ ಸಿದ್ಧನಾಗಿ ನಿಂತಿದ್ದನು. ಅತ್ತ ಯಾದವ ಪಾಂಡವರ ಪಾಳಯದಲ್ಲಾದರೋ ಸೈನ್ಯವೆಲ್ಲಾ ಹಯಮೇಧಾಶ್ವ ಸಂದರ್ಶ

ಲಡಹಾಯ್ದುವೋಸದೊಳಾತುರಂಗಮುವ | ನತ್ತಲನುಸಾಲ್ವನೆಳದೊಯ್ದುಭರಕಬಲೆಯರ | ವೊತ್ತಮಗಲಕೆಚೆಲ್ಲಿತಂಜಿದರ್ಮುನಿಗಳೆಲ್ಲಾಜನಂತಲ್ಲಣಿಸಿತು | ಚಿತ್ತದೋಳ್ನೃಪನೆಣಿಕೆಗೊಳುತಿರ್ದನುಳಿದವರಿ | ದೆತ್ತಣದ್ಭುತಮೆಂದುಬೆರಗಾದರಸುರಹರ | ನುತ್ತಮಾಂಗವನೊಲವುತಂದುಬಹುಮಾನದಿಂಪಟುಭಟರ್ಗಿಂತೆಂದನು ||೩೨|| ಈತನನುಸಾಲ್ವನೆಂಬಾತನಿವನಣ್ಣನಂ | ಘಾತಿಸಿದೆವಂದದರಖಾತಿಗೆನ್ಮೊಡನೆಸ | ತ್ವಾತಿಶಯಮುಂತೋರುವಾತುರದೊಳತಿಬಲವ್ರಾತಮುಂಕೂಡಿಕೊಂಡು || ಭೀತಿಯಿಲ್ಲದೆಪರಮಹೀತಳಕೆಬಂದುನ | ಮ್ಮಾತುರಗಮುಂಪಿಡಿದನೇತರಪರಾಕ್ರಮುದ | ಮಾತುನಮಗಿನ್ನುಮಝುಪೂತುದಾನವಯೆನುತಪೀತಾಂಬರಂಪೊಗಳ್ದನು ||೩೩|| ಆರೀತನಂಗೆಲ್ದುಕುದುರೆಯಂಬಿಡಿಸಿತಹ | ವೀರರೀಪಟುಭಟರೊಳವರಿಗಿದೆವೀಳೆಯಂ | ಪೂರ್ೖಸುವರಿಪಿಡಿಯಲೆಂದುಹರಿನುಡಿಯಲತಿಬಲರಂಜಿಸುಮ್ಮನಿರಲು || ಚಾರುಹಯಮುಂತಂದುಕೊಡುವೆನಲ್ಲದೊಡೆನೃಪ | ಕೀರಮಣನು

ಅ|| ವಿ|| ಕಕ್ಕಸ (ತ್ಭ), ಕರ್ಕಶ (ತ್ಸ) ||೩೧||

ಟೀ|| ಇತ್ತಲು–ಯುಧಿಷ್ಠಿರನ ಪಡೆಯಲ್ಲಿ, ಅನುಸಾಲ್ವನು - ಸಾಲ್ವಾನುಜನು, ವೋಸದೊಳ್–ವಂಚನೆಯಿಂದ, ಆ ತುರಂಗಮುವನು–ಆ ಹಯುವನ್ನು, ಅತ್ತಲು-ಆ ಕಡೆ, ಎಳದೊಯ್ದು-ಎಳೆದುಕೊಂಡು ಹೋದ, ಭರಕೆ-ತೀವ್ರತೆಗೆ, ಅಬಲೆಯರ-ಹೆಂಗಸರ, ವೊತ್ತಂ–ಗುಂಪು, ಅಗಲಕೆ-ವಿಶಾಲವಾಗಿ, ಚೆಲ್ಲಿತು–ಆಗಲಿಹೋಯಿತು, ಮುನಿಗಳು-ತಾಪಸೋತ್ತಮರು. ಅಂಜಿದರ್-ದಿಗಿಲು ಬಿದ್ದರು, ಎಲ್ಲಾ ಜನಂ-ಲೋಕರೆಲ್ಲರೂ, ತಲ್ಲಣಿಸಿತು-ಭ್ರಾಂತಿಯನ್ನೈದಿದರು, ನೃಪನು-ಯುಧಿಷ್ಠಿರನು, ಚಿತ್ತದೊಳ್-ಎದೆಯಲ್ಲಿ, ಎಣಿಕೆಗೊಳ್ಳುತ-ಆಲೋಚನೆಯಂ ಮಾಡುತ್ತ, ಇರ್ದನು–ಇದ್ದವನಾದನು, ಉಳಿದವರು–ಮಿಕ್ಕ ಜನಗಳು, ಇದು–ಈ ಕಾರ್ಯವು, ಎತ್ತಣ-ಯಾವತೆರದ, ಅದ್ಭುತಂ-ಆಚ್ಚರಿಯು, ಎಂದು–ಎಂಬದಾಗಿ, ಬೆರಗಾದರು–ಭ್ರಾಂತರಾಗಿ ಹೋದರು, ಅಸುರಹರನು–ದೈತ್ಯಾರಿಯು, ಉತ್ತಮಾಂಗವನು–ತಲೆಯನ್ನು, ಒಲವುತ–ತೂಗುತ್ತ, ಅಂದು–ಆ ಹೊತ್ತು, ಪಟುಭಟರ್ಗೆ-ಶೂರಾಗ್ರಣಿಗಳಿಗೆ, ಇಂತು–ಮುಂದೆ ಹೇಳುವಂತೆ, ಎಂದನು–ಪೇಳ್ದನು ||೩೨||

ಟೀ|| ಈತನು–ಈ ಶತ್ರುವು, ಅನುಸಾಲ್ವನೆಂಬಾತನ-ಈ ಹಗೆಯ, ಅಣ್ಣನಂ–ಜ್ಯೇಷ್ಠನನ್ನು, ಅಂದು–ಪೂರ್ವದಲ್ಲಿ, ನಾವು–ನಾವುಗಳು, ಘಾತಿಸಿದೆವು–ಸಂಹರಿಸಿದೆವು, ಎಂದು–ಎಂಬದಾಗಿ, ಅದರ–ಆ ಹಗೆತನದ, ಖಾತಿಗೆ–ಕೋಪಕ್ಕೆ, ಎಮ್ಮೊಡನೆ–ನಮ್ಮೊಂದಿಗೆ, ಸತ್ವಾತಿಶಯಮುಂ–ಹೆಚ್ಚು ಬಲವನ್ನು, ತೋರ್ಪಡಿಸುವ-ಕಾಣಿಸತಕ್ಕ, ಆತುರದೊಳು–ಅವಸರದಿಂದ, ಅತಿಬಲವ್ರಾತಮುಂ–ಅಪರಿಮಿತವಾದ ದಂಡನ್ನು, ಕೂಡಿಕೊಂಡು–ಜೊತೆನಾಡಿಕೊಂಡು, ಭೀತಿಯಿಲ್ಲದೆ–ದಿಗಿಲುಪಡದೆ, ಪರ–ವೈರಿಯ, ಮಹೀತಳಕೆ–ರಾಜ್ಯಕ್ಕೆ, ಬಂದು–ಐತಂದು, ನಮ್ಮ–ನಮ್ಮ ಸಂಬಂಧವಾದ, ಈ ತುರಗಮುಂ–ಈ ಹಯುನನ್ನು, ಪಿಡಿದನು–ಹಿಡಿದು ಕೊಂಡನು, ಇನ್ನು–ಮುಂದೆ, ಏತರ–ಯಾವ ಬಗೆಯು, ಪರಾಕ್ರಮುದ-ಶೌರ್ಯದ, ಮಾತು–ನುಡಿಯು, ಇನ್ನೆಲ್ಲಿಯದು–ಇನ್ನು ಉಪಯೋಗವೇನಿರುವುದು, ದಾನವ–ರಕ್ಕಸನೆ, ಮಝುಪೂತು–ಶಹಬಾಸ್, ಎನುತ–ಎಂದು ನುಡಿಯುತ್ತ, ಪೀತಾಂಬರಂ–ಮುರಹರನು, ಪೊಗಳ್ದನ–ಅನುಸಾಲ್ವನನ್ನು ಸ್ತುತಿಸಿದನು.

ಅ|| ವಿ|| ಪೀತವಾದ ಅಂಬರವು ಯಾರಿಗೊ ಅವನು ಪೀತಾಂಬರ (ಬ. ಸ.) ||೩೩||

ಟೀ|| ಈ ಪಟುಭಟರೊಳು - ಈ ಯೋಧಾಗ್ರೇಸರರಲ್ಲಿ, ಈತನಂ - ಈ ಸಾಲ್ವಾನುಜನನ್ನು, ಗೆದ್ದು - ಸೋಲಿಸಿ, ಕುದುರೆಯಂ - ಹಯುವನ್ನು, ಬಿಡಿಸಿತಹ - ಬಿಡಿಸಿಕೊಂಡು ಬರತಕ್ಕ, ವೀರರು - ಪರಾಕ್ರಮಿಗಳು, ಆರು- ಯಾರಿರುವರು? ಅವರಿಗೆ–ಅಂಥಾ ಸಾಹಸಿಗಳಿಗೆ, ವೀಳೆಯಂ - ಮರ್ಯಾದಾರ್ಥಕವಾದ ಅಡಿಕೆಲೆಯು, ಇದೆ- ಇಗೊ, ಪೂರ್ೖಸುವರೆ- ಸಾಲ್ವಾನು

ನದ ಸಂತೋಷದಿಂದ ವೈಮರೆತಿರುವಾಗ ಅಕಸ್ಮಾತ್ತಾಗಿ ಯಜ್ಞಾಶ್ವವನ್ನು ಅನುಸಾಲ್ವನು ಎಳೆದೊಯ್ಯು ರಭಸಕ್ಕೆ ಅಲ್ಲಿದ್ದ ಸ್ತ್ರೀಯರೆಲ್ಲಾ ದಿಗಿಲುಬಿದ್ದು ಅಲ್ಲಲ್ಲಿ ಚದರಿದರು. ಮುನಿನಿಕರವು ಮೂಕಭಾವವನ್ನು ವಹಿಸಿತು. ಪ್ರಜೆಗಳೆಲ್ಲಾ ಕಳವಳದಿಂದ ತಲ್ಲಣಿಸುತ್ತಿದ್ದರು. ಯುಧಿಷ್ಠಿರನ ಮನಸ್ಸಿನಲ್ಲಿ ಉಂಟಾದ ದುಃಖಕ್ಕೆ ಪಾರವೇ ಇರಲಿಲ್ಲ. ಈ ರೀತಿಯಲ್ಲಿ ತಲ್ಲಣಿಸುತ್ತಿರುವ ಯಾದವ ಪಾಂಡವರ ಕಟಕವನ್ನು ಶ್ರೀ ಕೃಷ್ಣಸ್ವಾಮಿಯು ನೋಡಿ ತನ್ನ ಮನಸ್ಸಿನಲ್ಲಿ ಸ್ವಲ್ಪಕಾಲಮಾತ್ರ ಯೋಚನೆ ಮಾಡಿ ಅನಂತರದಲ್ಲಿ ಅಲ್ಲಿದ್ದ ಶೂರಾಗ್ರಣಿಗಳನ್ನು ಕುರಿತು ||೩೨|| ಎಲೈ ವೀರರ ವೀರರೇ! ಕೇಳಿ, ಈತನು ಸಾಲ್ವನ ತಮ್ಮನಾದ ಅನುಸಾಲ್ವನೆಂಬುವವನು, ಪೂರ್ವದಲ್ಲಿ ನಾನು ಇವನ ಅಗ್ರಜನಾದ ಸಾಲ್ವನನ್ನು ಕೊಂದೆನೆಂಬ ಮತ್ಸರದಿಂದ ಈಗ ಕುದುರೆಯನ್ನು ಕಟ್ಟಿ ಅಪರಿಮಿತ ಸೇನಾನಿಕರದಿಂದ ಕೂಡಿದವನಾಗಿ ರಣರಂಗದಲ್ಲಿ ಮೆರೆಯುತ್ತಿರುವನು, ಇನ್ನು ಅವನನ್ನು ಜಯಿಸುವುದು ಶ್ರಮಸಾಧ್ಯವೇ ಸರಿ ಶಹಬಾಸ್, ಅನುಸಾಲ್ವನೆ, ಶಹಬಾಸ್. ನಿನ್ನ ಪರಾಕ್ರಮಕ್ಕೆ ನಾನು ಮೆಚ್ಚಿದೆನು. ಎಂದು ಸಾಲ್ವಾನುಜನನ್ನು ಹೊಗಳುತಾ ||೩೩|| ತನ್ನ ಸೈನಿಕರನ್ನೂ ಧರ್ಮರಾಯನ ಪಡೆಯನ್ನೂ ನೋಡಿ,

ಗ್ರ್ಯಗತಿಗಿಳಿವೆನೆಂದಸುರಸಂ | ಹಾರನಡಿಗೆರಗಿತಾಂಬೂಲನುಂಪ್ರದ್ಯುಮ್ನನಾಂತುಕಳುಹಿಸಿಕೊಂಡನು ||೩೪|| ಬಳಿಕವೃಷಕೇತು ಗರುಡಧ್ವಜನಮೃದುಪದಯು | ಗಳಕೆರಗಿದೇವಚಿತ್ತೈಸಾದೊಡಿನ್ನು ಕೊಳು | ಗುಳದೊಳನುಸಾಲ್ವನೆಂದೆಂಬಖಳನಂಪಿಡಿದು ನಿಮ್ಮಂಘ್ರಿಗೊಪ್ಪಿಸದೊಡೆ || ನುಳಿದುವಿಪ್ರನವಧೆಗೆಳಸಿದನನಗತಿಗೆತಾ | ನಿಳಿವೆನೆನ್ನಂಕಳುಹಬೇಕೆಂದುಕೈಮುಗಿಯೆ | ನಳಿನಾಕ್ಷನಾತನಂತೆಗೆದುತಕ್ಕೈಸಿವೀಳೆಯವಿತ್ತುಬೀಳ್ಕೊಟ್ಟನು || ೩೫ || ಸದ್ಯೋಗಿಜಯದವಿಮಾನಧ್ವಜವನಳವಡಿಸಿ | ವಿದ್ಯುತ್ಪ್ರಕಾರಮುಂಗೆಲ್ವಹಯಮಂಪೂಡಿ | ಖದ್ಯೋತಬಿಂಬನುಂನುಣಿಖಚಿತಕಾಂಚನನುಯಪ್ರಭೆಗಳಿಂದನಗುವ || ಉದ್ಯದ್ವರೂಥ ಮಂಜೋಡಿಸಿಮಹಾಸನುರ | ಕುದ್ಯುಕ್ತನಾಗಿಸಾರಥಿತಂದುನಿಲಿಸಲಾ | ಪ್ರದ್ಯುಮ್ನನಡರ್ದುನಿಜಚಾಪಮುಂಕೊಂಡುನಡೆ

---

ಜನನ್ನು ಸೋಲಿಸುವುದಾದರೆ, ಪಿಡಿಯಲಿ-ತಾಂಬೂಲವನ್ನು ಸ್ವೀಕರಿಸಗಿ, ಎಂದು-ಎಂಬದಾಗಿ, ಹರಿ- (ಶ್ರೀಕೃಷ್ಣನು), ನುಡಿಯಲು-ಹೇಳಲಾಗಿ, ಅತಿಬಲರು - ಮಾನುಸಕವುಳ್ಳವರು, ಅಂಜಿ-ಹೆದರಿ, ಸುಮ್ಮನಿರಲು - ಮೂಕಭಾವವನ್ನವಲಂಬಿಸಲು, ಪ್ರದ್ಯುಮ್ನನು-ರುಕ್ಮಿಣಿಗೆ ಶ್ರೀ ಕೃಷ್ಣನಿಂದುಂಟಾದ ಕುವರನು, ಚಾರು-ಮನೋಹರನಾದ, ಹಯಮಂ-ಅಶ್ವವನ್ನು, ತಂದು-ತೆಗೆದುಕೊಂಡು ಬಂದು, ಕೊಡುವೆನು-ಈಯುವೆನು, ಅಲ್ಲದೊಡೆ - ಇಲ್ಲವಾದರೆ, ವೃಷಲೀರಮಣನು-ಅಣ್ಣನಿಗಿಂತ ಮೊದಲು ಮದುವೆಯಾದವನ, ಉಗ್ರ-ಕಠಿಣವಾದ, ಗತಿಗೆ-ಯವುಲೋಕಕ್ಕೆ, ಇಳಿವೆನು-ಹೋಗಿ ಸೇರುವೆನು, ಎಂದು-ಎಂಬತೆರನಾಗಿ, ಅಸುರಸಂಹಾರನ-ರಾಕ್ಷಸಾಂತಕನ, ಅಡಿಗೆ-ಕಾಲುಗಳಿಗೆ, ಎರಗಿ-ನಮಸ್ಕಾರಮಾಡಿ, ತಾಂಬೂಲಮಂ- ವೀಳಯದೆಲೆ ಮತ್ತು ಅಡಿಕೆಯನ್ನು, ಆಂತು-ಸ್ವೀಕರಿಸಿ, ಕಳುಹಿಸಿಕೊಂಡನು-ಪಯಣಕ್ಕೆ ಅಜ್ಞೆಯಂ ಪಡೆದನು ||೩೪||

ಟೀ|| ಬಳಿಕ-ಅನಂತರ, ವೃಷಕೇತು-ಕರ್ಣನಂದನನು, ಗರುಡಧ್ವಜನ-ಗರುಡನನ್ನೆ ಧ್ವಜದಲ್ಲಿ ಉಳ್ಳ ಕೃಷ್ಣಮೂರ್ತಿಯ, ಮೃದು-ಮೆತ್ತಗಿರುವ, ಪದಯುಗಳಕೆ-ಅಡಿದಾವರೆಗೆ, ಎರಗಿ-ವಂದಿಸಿ, ದೇವ-ಪ್ರಭುವೇ, ಚಿತ್ತೈಸು-ಕರುಣಿಸು, ಆದೊಡೆ-ಹಾಗಾದರೆ, ಇನ್ನು-ಮುಂದೆ, ಕೊಳುಗುಳದೊಳು-ಯುದ್ಧದಲ್ಲಿ, ಅನುಸಾಲ್ವನೆಂದೆಂಬ-ಅನುಸಾಲ್ವನೆನ್ನತಕ್ಕ, ಖಳನಂ-ದುಷ್ಟನನ್ನು, ಪಿಡಿದು ಹಿಡಿದು, ನಿಮ್ಮಂಘ್ರಿಗೆ-ನಿಮ್ಮ ಪಾದಗಳಿಗೆ, ಒಪ್ಪಿಸದೊಡೆ-ಸಮರ್ಪಿಸದಿದ್ದರೆ, ವ ುಳಿದು-ಸಿಟ್ಟುಗೊಂಡು ವಿಪ್ರನ-ಭೂಸುರನ, ವಧೆಗೆ-ಸಂಹಾರಕ್ಕೆ, ಎಳಸಿದವನ-ಬಯಸಿದವನ, ಗತಿಗೆ-ಲೋಕಕ್ಕೆ, ತಾನು-ನಾನು, ಇಳಿವೆನು-ಸೇರಿಬಿಡುವೆನು, ಎನ್ನಂ-ನನ್ನನ್ನು, ಕಳುಹಬೇಕು-ಕಳುಹಿಸಿಕೊಡಬೇಕು, ಎಂದು-ಎಂಬತೆರನಾಗಿ, ಕೈಮುಗಿಯೆ-ನಮಸ್ಕರಿಸಲು, ನಳಿನಾಕ್ಷನು-ಪದ್ಮಲೋಚನನು, ಆತನಂ-ಕರ್ಣ ಸುತನನ್ನು, ತೆಗೆದು-ಹತ್ತಿರಕ್ಕೆ ಕರೆದುಕ್ಕೊಂಡು, ತಕ್ಕೈಸಿ-ಮರ್ಯಾದೆಯಂ ಮಾಡಿ, ವೀಳೆಯವನು-ಎಲೆ ಅಡಿಕೆಯನ್ನು, ಇತ್ತು-ದಯಪಾಲಿಸಿ, ಬೀಳ್ಕೊಟ್ಟನು-ಹೋಗಲು ಅನುಮತಿಯನ್ನಿತ್ತನು ||೩೫||

---

ಎಲೈ ಯೋಧಾಗ್ರೇಸರರೇ! ಈಗ ಎದುರಾಳಾಗಿರುವ ಶತ್ರುಗಳ ಸೈನ್ಯದ ಮೇಲೆ ನುಗ್ಗಿ ಅವರನ್ನೆಲ್ಲಾ ಸಂಹರಿಸಿ ಹಯಮೇಧಾರ್ಹವಾದ ಉತ್ತಮಾಶ್ವವನ್ನು ಬಿಡಿಸಿಕೊಂಡು ಬಂದು ನನಗೆ ಅರ್ಪಿಸಬಲ್ಲ ಪಟುಭಟರು ಯಾರಾದರೂ ಇದ್ದರೆ ತಡಮಾಡದೆ ಬಂದು ಈ ತಾಂಬೂಲವನ್ನು ಕೈಗೊಳ್ಳಬಹುದೆಂದು ನುಡಿದನು. ಅಲ್ಲಿ ನೆರೆದಿದ್ದ ಶೂರಾಗ್ರಣಿಗಳು ಶ್ರೀ ಕೃಷ್ಣನ ಮಾತುಗಳನ್ನು ಕೇಳಿ, ಅನುಸಾಲ್ವನನ್ನು ಗೆಲ್ಲುವುದು ಅಸಾಧ್ಯವೆಂದು ಮನದಲ್ಲಿ ಚಿಂತಿಸಿ, ಭಯಗ್ರಸ್ತರಾಗಿ ವೀಳಯಮಂ ಕೈಕೊಳ್ಳಲು ಇಷ್ಟವಿಲ್ಲದೆ ಕುಳಿತಿದ್ದ ಸ್ಥಳದಿಂದ ಸ್ವಲ್ಪವೂ ಕದಲದವರಾಗಿ ಚಿತ್ರಪ್ರತಿಮೆಗಳಂತಿರುವಾಗ ಶ್ರೀ ಕೃಷ್ಣಸ್ವಾಮಿಯ ಕುವರನಾದ ಮದನನು ಧಿಗ್ಗನೆದ್ದು ತಂದೆಯ ಬಳಿಗೆ ಬಂದು ಎಲೈ ಜನಕನಾದ ಸ್ವಾಮಿಯೇ! ನಾನು ಹೋಗಿ ಅನುಸಾಲ್ವನನ್ನು ಗೆದ್ದು ಕುದುರೆಯನ್ನು ತಂದು ನಿನ್ನಡಿದಾವರೆಗಳಲ್ಲರ್ಪಿಸುವೆನು. ಹಾಗಿಲ್ಲವೆ ಯುದ್ಧದಲ್ಲಿ ಹಿಮ್ಮೆಟ್ಟಿದಲ್ಲಿ ಹಿರಿಯಣ್ಣನಿಗಿಂತ ಮೊದಲು ಮದುವೆಯಾದವನಿಗುಂಟಾಗುವ ನರಕವು ನನಗೊದಗಲಿ, ತಾಂಬೂಲವನ್ನು ಕರುಣಿಸೆಂದು ಬೇಡಿಕೊಂಡನು ||೩೪|| ಶ್ರೀ ಕೃಷ್ಣಸ್ವಾಮಿಯು ತನ್ನಣುಗನ ಕ್ರೂರ ಶಪಥವನ್ನು ಕೇಳಿ ಸಂತಸಂದಾಳ್ದು ಅವನ ಇಷ್ಟದಂತೆಯೇ ತಾಂಬೂಲವನ್ನಿತ್ತು ಯುದ್ಧದಲ್ಲಿ ಜಯಶಾಲಿಯಾಗಿ ಬಾರೆಂದು ಆಶೀರ್ವದಿಸಿ ಕಳುಹಿದನು. ಪ್ರದ್ಯುಮ್ನನು ಯುದ್ಧಾರ್ಥಿಯಾಗಿ ಜನಕನಿಂದ ತಾಂಬೂಲವನ್ನು ಸ್ವೀಕರಿಸಿದ್ದನ್ನು ವೃಷಧ್ವಜನು ಕಂಡು, ಎಲೈ ದೀನಬಂಧುವೆ, ದಯಾನಿಧಿಯಾದ ಸ್ವಾಮಿಯೇ, ನಾನು ಕೂಡ ಅನುಸಾಲ್ವನೊಂದಿಗೆ ಹೋರಾಡಿ, ಆ ನೀಚನನ್ನು ಕೈಸೆರೆ ಹಿಡಿದು ತಂದು ನಿಮ್ಮ ಪಾದಕಮಲಗಳ ಮೇಲೆ ಕೆಡಹುವೆನು. ತಪ್ಪಿದರೆ ವಿಪ್ರವಧೆಯಗತಿಗೆ ಗುರಿಯಾಗುವೆನು, ನನಗೂ ತಾಂಬೂಲವನ್ನು ದಯಪಾಲಿಸೆಂದು ಕೇಳಿಕೊಳ್ಳುತ್ತಿರುವ ಕರ್ಣಸಂಭವನ ವೀರಾಟೋಪದ ನುಡಿಗಳನ್ನು ಕೇಳಿದ ಕೂಡಲೆ ಕೃಷ್ಣನು ಬಹು ಸಂತೋಷವನ್ನು ಹೊಂದಿ ಅವನನ್ನು ಬಾಚಿ ತಬ್ಬಿಕೊಂಡು ವೀಳಯವನ್ನಿತ್ತು ಆಶೀರ್ವಾದವಂ ಮಾಡಿ ಕಳುಹಿದನು||೩೫||ಈ ರೀತಿಯಲ್ಲಿ ಶ್ರೀಕೃಷ್ಣಸ್ವಾಮಿಯಿಂದ ವೀಳೆಯವಂ ಪಡೆದ ಮನ್ಮಥ

ತಂದನಾಹವಕೆನಲಿದು ‖ ೩೬ ‖ ಕಂಡನನುಸಾಲ್ವನಿವನಾರೀಗಣಕೆಮುಂ । ಕೊಂಡುಬಹವೀರನಸುರಾರಿಯಾದೊಡೆಕೇತು । ದಂಡದಗ್ರದೊಳಿರದುಮತ್ಸ್ಯಮಿವನವನಸುತನಾಗಬೇಕಿಲ್ಲಿಬರಲಿ । ದಿಂಡುಗೆಡುಪುವೆನೆನುತಸೇನೆಯಂಪಿಂದಿಕ್ಕಿ । ಪುಂಡರೀಕಾಕ್ಷನಕುಮಾರನಂತಡೆಯೆಕೋ । ದಂಡದೊಳ್ಪ್ರದ್ಯುಮ್ನನೈದುಕಣೆಯಂಪೂಡಿದೈತ್ಯನಂತೆಗೆದೆಚ್ಚನು ‖ ೩೭ ‖ ವ್ಯಗ್ರವೇತಕೆನಿನಗೆನಾವಿಂದ್ರಿಯಂಗಳಂ । ನಿಗ್ರಹಿಸಿದವರಲ್ಲವಿರಹವೆನುಗಿಲ್ಲಸುರ । ತಗ್ರಾಹ್ಯಮೋಹನದಪಂಚಬಾಣಪ್ರಯೋಗಂಗಳೇಕೀಗನಿನ್ನ

ಟೀ‖ ಸದ್ಯೋಗಿ-ಸ್ವಾಮಿಭಕ್ತರನ್ನು, ಮತ್ತು ವಿರಹಿಗಳನ್ನು, ಜಯದ-ಗೆಲ್ಲುವ, ಮೀನಧ್ವಜನನು-ಮತ್ಸ್ಯಾಂಕವನ್ನು, ಅಡನಳಿಸಿ-ನೇರ್ಪಡಿಸಿ, ವಿದ್ಯುತ್ಪ್ರಚಾರಮಂ-ತಟಿತ್ಸಮೂಹವನ್ನು, ಗೆಲ್ವ-ಸೋಲಿಸತಕ್ಕ, ಹಯಮುಂ – ಅಶ್ವವನ್ನು, ಪೂಡಿ-ಹೂಡಿ, ಮಣಿಖಚಿತ-ನವರತ್ನಮಯವಾದ, ಕಾಂಚನಮಯ-ಸುವರ್ಣಕೃತಮಾದ, ಪ್ರಭೆಗಳಿಂದ-ಪ್ರಕಾಶಂಗಳಿಂದ, ಖದ್ಯೋತ-ಲೋಕಬಂಧುವಿನ (ಸೂರ್ಯನ), ಬಿಂಬಮಂ-ಮಂಡಲವನ್ನು, ನಗುವ - ಪರಿಹಾಸ್ಯವಂ ಮಾಡುವ, ಉದ್ಯತ್-ಅತ್ಯುನ್ನತವಾದ, ವರೂಥಮಂ-ರಥವನ್ನು, ಜೋಡಿಸಿ-ಸಿದ್ಧಪಡಿಸಿ, ಮಹಾಸಮರಕೆ-ಘೋರವಾದ ರಣಕ್ಕೆ, ಉದ್ಯುಕ್ತನಾಗಿ-ಅನುವಾಗಿ, ಸಾರಥಿ-ರಥವನ್ನು ನಡೆಸತಕ್ಕವನು, ತಂದು-ಮೀನಕೇತನನ ಬಳಿಗೆ ತೆಗೆದುಕೊಂಡು ಬಂದು, ನಿಲಿಸಲು-ನಿಲ್ಲುವಂತೆ ಮಾಡಲು, ಆ ಪ್ರದ್ಯುಮ್ನನು-ಆ ಮದನನು, ಅಡರ್ದು-ತೇರಿಗೆಹತ್ತಿ, ನಿಜ-ಸ್ವಕೀಯಮಾದ, ಚಾಪಮಂ-ಧನುಸ್ಸನ್ನು, ಕೊಂಡು-ಸ್ವೀಕರಿಸಿ, ನಲಿದು-ಆನಂದಮಂತಾಳಿ, ಆ ಹವಕೆ-ಆಜಿಗೆ, ನಡೆತಂದನು-ಐತಂದನು ‖೩೬‖

ಟೀ‖ ಅನುಸಾಲ್ವನು-ಸಾಲ್ವನ ತಮ್ಮನು, ಕಂಡನು-ಮೀನಕೇತನನು ಬರುತ್ತಿರುವುದನ್ನು ನೋಡಿದನು, ಈಗ-ಎದುರಿಗೆ, ರಣಕೆ-ಸಮರಕ್ಕೆ, ಮುಂಕೊಂಡುಬಹ-ಮುಂದಾಳಾಗಿ ಬರುವ, ಇವನು-ಈ ಶೂರಾಗ್ರಣಿಯು, ಆರು-ಯಾರಿದ್ದೀತು ? ಅಸುರಾರಿಯಾದೊಡೆ-ರಾಕ್ಷಸಾಂತಕನಾದರೆ, ಕೇತುದಂಡದ-ಬಾವಟದ, ಅಗ್ರದೋಳ್ - ಕೊನೆಯಲ್ಲಿ, ಮತ್ಸ್ಯಂ-ಮೀನು, ಇರದು-ಇರುವುದಿಲ್ಲ, ಇವನು-ಈ ವೀರನು, ಅವನ-ಆ ಹರಿಯ, ಸುತನು-ತನುಜನು, ಆಗಬೇಕು-ಆಗಿರಬಹುದು, ಬರಲಿ-ಸಮರಕ್ಕೆಬಂದು ಸೇರಲಿ, ದಿಂಡುಗಡವುವೆನು-ಅಹಂಕಾರವನ್ನೆಲ್ಲಾ ತಗ್ಗಿಸಿ ಬಿಡುತ್ತೇನೆ. ಎನುತ-ಎಂದು ನುಡಿಯುತ್ತ, ಸೇನೆಯಂ-ದಳವನ್ನು, ಪಿಂದಿಕ್ಕಿ-ಹಿಂಭಾಗದಲ್ಲಿರುವಂತೆಮಾಡಿ. ಪುಂಡರೀಕಾಕ್ಷನ-ಕಮಲಲೋಚನನ, ಕುಮಾರನಂ-ತನುಜನನ್ನು, ತಡಿಯೆ-ಅಡ್ಡಗಟ್ಟಲಾಗಿ, ಪ್ರದ್ಯುಮ್ನನು-ಮನ್ಮಥನು, ಕೋದಂಡದೋಳ್-ಚಾಪದಲ್ಲಿ, ಐದುಕಣೆಯಂ-ಐದು ಸರಲ್ಗಳನ್ನು, ಹೂಡಿ-ಜೋಡಿಸಿ, ತೆಗೆದು-ಆ ಕರ್ಣಾಂತವಾಗಿ ಎಳೆದು, ದೈತ್ಯನ-ಸಾಲ್ವಾನುಜನನ್ನು, ಎಚ್ಚನು-ಹೊಡೆದನು.

ಅ‖ ವಿ‖ ಅಸುರಾರಿ-(ಸ. ದೀ. ಸಂಧಿ), ಪುಂಡರೀಕಾಕ್ಷ-ಪುಂಡರೀಕದಂತೆ ಅಕ್ಷಿಯು ಯಾರಿಗೋ ಅವನು (ಬ.ಸ.) ಎಚ್ಚನು-ಇಸುಧಾತುವಿನ ಭೂತಕಾಲ, ಐದುಕಣೆ-ಅರವಿಂದ, ಅಶೋಕ, ಚೂತ, ನವಮಲ್ಲಿಕಾ, ನೀಲೋತ್ಪಲಗಳೆಂಬ ಐದು ಬಾಣಗಳು ‖ ೩೭ ‖

ಟೀ‖ (ಅನುಸಾಲ್ವನು ಮದನನ್ನು ಸಂಬೋಧಿಸಿ ಹೇಳುವನು) ಅಯ್ಯಾಮನ್ಮಥ! ನಿನಿಗೆ-ನಿನಗಾದರೊ, ವ್ಯಗ್ರವು-ಇಂಥಾ ಸಾಹಸವು, ಮತ್ತು ಆತುರವು, ಏತಕೆ-ಏನುಪ್ರಯೋಜನ ? ಆವು-ನಾವಾದರೊ, ಇಂದ್ರಿಯಂಗಳಂ-ಚಕ್ಷುರಾದಿಇಂದ್ರಿ

ವೃಷಧ್ವಜರು ಯುದ್ಧಸನ್ನದ್ಧರಾಗುತ್ತಿರುವ ವೇಳೆಗೆ ಸರಿಯಾಗಿ, ಇಂದ್ರಿಯ ನಿಗ್ರಹವನ್ನು ಮಾಡಿಕೊಂಡು ಕಾಡುಬೀಡುಗಳಲ್ಲಿ ಸೇರಿ ದೇವರ ಧ್ಯಾನದಲ್ಲಿಯೇ ಕಾಲವಂ ಕಳೆಯುವ ತಾಪಸರ ಮನಸ್ಸನ್ನು ಕೂಡ ಚಂಚಲಪಡಿಸುವ ಮಕರಧ್ವಜದಿಂದ ಮೆರೆಯುತ್ತ, ಮಿಂಚಿನಂತೆ ಥಳಥಳಿಸುವ ಶ್ರೇಷ್ಠವಾದ ಕುದುರೆಗಳನ್ನು ಕಟ್ಟಿರುವುದರಿಂದ ಅಧಿಕವಾದ ತೇಜಸ್ಸಿನಿಂದ ಯುಕ್ತವಾಗಿ, ನವರತ್ನಖಚಿತವಾಗಿರುವುದರಿಂದ ಅಂತರಿಕ್ಷವನ್ನುಕೂಡ ಅಲ್ಲಗಳೆಯುತ್ತಿರುವ ದಿವ್ಯ ತೇಜೋವಿರಾಜಮಾನವಾದ ರಥವನ್ನು ಸಾರಥಿಯು ತಂದು ನಿಲ್ಲಿಸಿದನು. ರಥವು ಸಿದ್ಧವಾಗಿರುವ ಸಂಗತಿಯನ್ನು ಪ್ರದ್ಯುಮ್ನನು ಕೇಳಿದೊಡನೆಯೇ ಧನುರ್ಬಾಣಗಳನ್ನು ತೆಗೆದುಕೊಂಡು ರಥವನ್ನಲಂಕರಿಸಿ ಸಂತೋಷದಿಂದ ಹೊರಟನು ‖ ೩೬ ‖ ಈರೀತಿಯಲ್ಲಿ ಸಮರಸನ್ನಿಹಿತನಾಗಿ ವೇಗಾತಿಶಯದಿಂದ ಬರುತ್ತಿರುವ ಸೇನಾನಿಕರರನ್ನು ಅನುಸಾಲ್ವನು ನೋಡಿ, ತನ್ನಷ್ಟಕ್ಕೆತಾನೆ ಇದೇನು ನನ್ನೊಂದಿಗೆ ಯುದ್ಧಾರ್ಥಿಯಾಗಿ ಬರತಕ್ಕ ಇವನು ಶ್ರೀ ಕೃಷ್ಣನಂತೆ ತೋರುವುದಿಲ್ಲ. ಧ್ವಜಪಟದಲ್ಲಿ ಮಕರದ ಚಿಹ್ನೆಯು ತೋರಿಬರುವುದರಿಂದ ಇವನು ಶ್ರೀ ಕೃಷ್ಣನ ಕುಮಾರನಾದ ಮನ್ಮಥನಾಗಿರಬಹುದು. ಒಳ್ಳೇದು, ರಣರಂಗವನ್ನು ಬಂದು ಸೇರಲಿ, ಅವನ ಸೊಕ್ಕನ್ನೆಲ್ಲಾ ಮುರಿದುಬಿಡುತ್ತೇನೆಂದು ಎಂದುಕೊಂಡು ತನ್ನ ಸೈನ್ಯವನ್ನೆಲ್ಲಾ ಹಿಂದುಗಡೆಯೇ ನಿಲ್ಲುವಂತೆಮಾಡಿ ತಾನುಮಾತ್ರ ಮುಂದಾಳಾಗಿ ನಿಂತು ಪ್ರದ್ಯುಮ್ನನ ಸೈನ್ಯವನ್ನು ಮುಂದಕ್ಕೆ ಹೋಗದಂತೆ ಅಡ್ಡಗಿಸಿದನು. ಇದನ್ನು ಕಂಡಕೂಡಲೆ ಮನ್ಮಥನು ಕೋಪಾವಿಷ್ಟನಾಗಿ ತನ್ನ ಬಿಲ್ಲಿಗೆ ಅಂಬನ್ನು ಏರಿಸಿ ಸಾಲ್ವಾನುಜನಮೇಲೆ ಬಿಟ್ಟನು ‖ ೩೭ ‖ ಮನ್ಮಥನು ಬಿಟ್ಟ

ವಿಗ್ರಹಕೆನಮಗಿಕ್ಷುಚಾಪವಾರಡಿವೆದೆಸ | ಮಗ್ರಕುಸುಮಾಸ್ತ್ರಂಗಳಳಿಲ್ಲನೋಡೆಮ್ಮದೊಂ | ದುಗ್ರಸಾಯಕವನೆಂದಾರ್ರುತೆಗೆದೆ
ಚ್ಚನನುಸಾಲ್ವನಚ್ಯುತನಸುತನ ‖ ೩೮ ‖ ಪೃಥಿವಿಪತಿಕೇಳೆದೆಯಮೇಲೆಕೋಲ್ಕೀಲಿಸಲ್ | ವ್ಯಥಿಸಿಮೈ ಮರೆದನಾಪ್ರದ್ಯುಮ್ನ
ನೊಡನೆಸಾ | ರಥಿಕೃಷ್ಣನಿರ್ದೆಡೆಗೆತೇರನಾಗಳೆಕೊಂಡುಬರೆಶೌರಿಕಂಡುಬಳಿಕ ‖ ಪೃಥುಲಪೌರುಷದಿಂದನಮ್ಮಸುತನಿಂದು
ರಿಪುಮಥನಮುಂಮಾಡಿಬಳಲಿದನೆನುತಬಂದೆಲವೊ | ಶಿಥಿಲಪೌರುಷನಿನ್ನನೇಗೈಯಲೆಂದುಹರಿಯೊದೆದನೆಡಗಾಲ್ತುದಿಯೊಳು‖೩೯‖
ದ್ವಾರಕೆಯನೆಂತಬಲೆಯರಮುಂದೆಪೊಗುವೆಪೋ | ಗಾರಣ್ಯಕೆನಲಲ್ಲಿಮುನಿಗಳ್ಗೆಸೇರಿಕೆ | ಟ್ಟಾರೂರಸಾರ್ದೊಡಂನೀಂವಿರಹಿ

ಯಗಳನ್ನು, ನಿಗ್ರಹಿಸಿದವರು–ಸೋಲಿಸಿದವರು, (ವೈರಾಗ್ಯವನ್ನುಳ್ಳವರು), ಅಲ್ಲ–ಅಲ್ಲವು, (ಎಂದರೆ ಮಹಾಪರಾಕ್ರಮಿಗಳೂ ದ್ವಿತೀಯಾಶ್ರಮಧರ್ಮಾವಲಂಬಿಗಳೂ ಆಗಿರುವೆವು). ಸುರಥ–ಸ್ತ್ರೀಸಂಭೋಗಕ್ಕಾಗಿ, ಗ್ರಾಹ್ಯ–ಪಡೆಯಬೇಕಾದ, ಮೋಹನದ–ಮೂರ್ಛೆಗೊಳಿಸುವ, ಪಂಚಬಾಣ–ಐದು ಸರಲ್ಗಳ, ಪ್ರಯೋಗಂಗಳು–ಚಲ್ಲುವಿಕೆಯು, ಏಕೆ–ಏನು ಪ್ರಯೋಜನವು? (ನಾವು ಈಗ ಕಾಮಾತುರರಲ್ಲವಾದ್ದರಿಂದ ಈ ನಿನ್ನ ಬಾಣಗಳಿಂದೇನೂ ಪ್ರಯೋಜನವಿಲ್ಲ), ನಿನ್ನ–ನಿನ್ನಸಂಬಂಧವಾದ, ವಿಗ್ರಹಕೆ–ಸಮರಕ್ಕೆ, ನಮಗೆ–ನಮ್ಮಮೇಲೆ, ಇಕ್ಷುಚಾಪವು–ಕಬ್ಬಿನ ಧನುಸ್ಸು, ಆರಡಿವೆದೆ–ಭೃಂಗಾಳಿಗಳ ನಾರಿಯು, ಸಮಗ್ರ–ಪೂರ್ತಿಯಾದ, ಕುಸುಮಾಸ್ತ್ರಗಳು–ಪುಷ್ಪಶರಗಳು, ಇಲ್ಲ–ಇಲ್ಲವು, ಎಮ್ಮದು–ನಮ್ಮ ಸಂಬಂಧವಾದ, ಒಂದು–ಒಂದಾದ, ಉಗ್ರ–ಕ್ರೂರವಾದ, ಸಾಯಕವನು–ಸರಲನ್ನು, ನೋಡು–ದೃಷ್ಟಿಸುವನಾಗು, ಎಂದು–ಎಂಬತೆರನಾಗಿ, ಆರ್ದು–ಗರ್ಜಿಸಿ, ಅಚ್ಯುತನ–ಕೃಷ್ಣಮೂರ್ತಿಯ, ಸುತನ–ಕುವರನಾದ ಮನ್ಮಥನನ್ನು, ಅನುಸಾಲ್ವನು–ಸಾಲ್ವಾನುಜನು, ತೆಗೆದು–ಕಿವಿಯವರೆಗೂ ಎಳದು, ಎಚ್ಚನು–ಬಿಸುಟನು ‖

ಅ‖ ವಿ‖ ಪಂಚೇಂದ್ರಿಯಂಗಳು–ತ್ವಕ್, ಚಕ್ಷು, ಶ್ರೋತ್ರ, ಜಿಹ್ವ, ಘ್ರಾಣಂಗಳೆಂಬಿವು. ಅಚ್ಯುತ–ಅಂತ್ಯವಿಲ್ಲದವನು ಎಂದರೆ ಅನಂತರೂಪನು ‖ ೩೮ ‖

ಟೀ‖ ಪೃಥಿವಿಪತಿ–ಭೂಕಾಂತನಾದ **ಜನಮೇಜಯನೆ!** ಕೇಳು–ಲಾಲಿಸು, ಎದೆಯಮೇಲೆ–ಪ್ರದ್ಯುಮ್ನನ ಹೃದಯಸ್ಥಳದಲ್ಲಿ, ಕೋಲ್–ಅಲಗು, ಕೀಲಿಸಲ್–ತಗಲಿಕೊಳ್ಳಲಾಗಿ, ವ್ಯಥಿಸಿ–ನೋವನ್ನು ಹೊಂದಿ, ಆಪ್ರದ್ಯುಮ್ನನು–ಆ ರುಕ್ಮಿಣೀಸುತನು, ಮೈಮರೆದನು–ಪ್ರಜ್ಞೆಯಿಲ್ಲದವನಾದನು, ಒಡನೆ–ತಡಮಾಡದೆ, ಸಾರಥಿ–ರಥವನ್ನು ನಡೆಯಿಸುವವನು, ಕೃಷ್ಣನು–ಕೃಷ್ಣಮೂರ್ತಿಯು , ಇರ್ದೆಡೆಗೆ–ಇದ್ದಲ್ಲಿಗೆ, ತೇರನು–ಸ್ಯಂದನವನ್ನು, ಆಗಳೆ–ತಕ್ಷಣವೆ, ಕೊಂಡುಬರೆ–ತೆಗೆದುಕೊಂಡುಬರಲಾಗಿ, ಶೌರಿ–ಪರಾಕ್ರಮಿಯಾದ ಕೃಷ್ಣಸ್ವಾಮಿಯು, ಕಂಡು–ನೋಡಿ, ಬಳಿಕ–ಆಮೇಲೆ. ಪೃಥುಲ–ಅತ್ಯಧಿಕವಾದ, ಪೌರುಷದಿಂದ–ಸತ್ವದಿಂದ, ನಮ್ಮ–ನಮ್ಮಸಂಬಂಧದ ಸುತನು–ಕುವರನು, ಇಂದು–ಈ ಕಾಲದಲ್ಲಿ, ರಿಪು–ಹಗೆಯೊಂದಿಗೆ, ಮಥನಮುಂಮಾಡಿ–ಕಾದಾಡಿ, ಬಳಲಿದನು–ಆಯಸಂಗೊಂಡನು, ಎನುತ–ಎಂದು ನುಡಿಯುತ್ತ, ಬಂದು–ಮದನನ ಸಮೀಪವನ್ನುಸೇರಿ, ಎಲವೊ–ಎಲೈ, ಶಿಥಿಲ–ಚದುರಿದ, ಪೌರುಷ–ಸಾಹಸವುಳ್ಳವನೆ, ನಿನ್ನನ್ನು–ಇಂಥವನನ್ನು, ಏಗಯ್ಯಲಿ–ಏನಮಾಡಬೇಕು, ಎಂದು–ಎಂಬತೆರನಾಗಿ, ಹರಿಯು–ಕೃಷ್ಣಮೂರ್ತಿಯು, ಎಡಗಾಲತುದಿಯೊಳು–ಎಡಗಾಲಿನಕೊನೆಯಿಂದ, ಒದೆದನು–ತಾಡಿಸಿದನು‖೩೯‖

ಟೀ‖ ಈ ಪದ್ಯದ ತಾತ್ಪರ್ಯವನ್ನು ಮನ್ಮಥನೊಂದಿಗೆ ಕೃಷ್ಣಸ್ವಾಯು ಹೇಳಿದ್ದು:—ನೀನು–ನೀವಾದರೋ, ಅಬಲೆಯರ–ಸ್ತ್ರೀಯರ, ಮುಂದೆ–ಎದುರಿಗೆ, ದ್ವಾರಕೆಯನು–ದ್ವಾರಕಾಪಟ್ಟಣವನ್ನು, ಎಂತು–ಯಾವ ಪ್ರಕಾರವಾಗಿ, ಪೊಗುವೆ–

ಬಾಣವು ಅನುಸಾಲ್ವನಿಗೆ ತಗಲಲಾಗಿ ಆಗ ಅವನು ಮದನನನ್ನು ಕುರಿತು, ಎಲೈ ಕೃಷ್ಣನ ಕುವರನೆ! ನೀನು ಇಷ್ಟು ಧೈರ್ಯಮಾಡಿಬಿಟ್ಟ ಬಾಣವು ನನ್ನನ್ನೇನೂ ಮಾಡಲಾರದು, ವಿರಹಿಗಳಾದವರನ್ನು ವಶಮಾಡಿಕೊಳ್ಳತಕ್ಕ ಬಾಣವನ್ನು ನನ್ನ ಮೇಲೆ ಬಿಟ್ಟರೇನು ಪ್ರಯೋಜನ? ನಾನು ವಿರಹಿಯಲ್ಲವಾದ್ದರಿಂದ ನಿನ್ನಲಗು ಹೇಗೆ ಸಾರ್ಥಕವಾದೀತು? ಎಂದು ಜರೆದು ನನ್ನ ಈ ಅಲಗಿನ ಚಮತ್ಕಾರವನ್ನಾದರೂ ನೋಡೆಂದು ಕ್ರೂರವಾದ ಕಣೆಯೊಂದನ್ನು ಬತ್ತಳಿಕೆಯಿಂ ತೆಗೆದು ಧನುಸ್ಸಿಗೆ ಸೇರಿಸಿ ಪ್ರದ್ಯುಮ್ನನಮೇಲೆ ಬಿಟ್ಟನು ‖ ೩೮ ‖ ಎಲೈ ಜನಮೇಜಯರಾಯನೇ ಕೇಳು, ಈ ರೀತಿಯಲ್ಲಿ ಆಕರ್ಣಾಂತವಾಗಿ ಸೆಳೆದುಬಿಟ್ಟ ಅನುಸಾಲ್ವನ ತೀಕ್ಷ್ಣವಾದ ಬಾಣವು ಹೋಗಿ ಮೀನಕೇತನನ ಎದೆಯಲ್ಲಿ ನಾಟಕೊಂಡಕೂಡಲೇ ಆ ನೋವನ್ನು ತಡೆಯಲಾರದೆ ಮನ್ಮಥನು ಮೂರ್ಛಾಕ್ರಾಂತನಾಗಿ ಬಿದ್ದುಹೋದನು. ಕೂಡಲೆ ಸಾರಥಿಯು ಜಾಗ್ರತೆಯಾಗಿ ಶ್ರೀ ಕೃಷ್ಣನಿದ್ದೆಡೆಗೆ ಬಂದು ಮನ್ಮಥನು ಅನುಸಾಲ್ವನ ಬಾಣದ ಪೆಟ್ಟನಿಂದ ಸ್ಮರಣೆತಪ್ಪಿ ಬಿದ್ದುಹೋದನೆಂದರುಹಿದನು. ಇದನ್ನು ಕೇಳಿದ ಕೂಡಲೇ ಮುರಹರನು ಮದನನಿದ್ದೆಡೆಗೆಬಂದು ಆಹಾ! ನನ್ನ ಕುವರನು ಅನುಸಾಲ್ವನೊಂದಿಗೆ ಯುದ್ಧಮಾಡಿ ಆಯಾಸಪಟ್ಟಿರುವನೆಂದು ನುಡಿದು ಎಡಗಾಲಿನಿಂದ ಅವನನ್ನು ‖ ೩೯ ‖ ಒದೆಯುತ್ತ, ಎಲೈ ಪ್ರದ್ಯುಮ್ನನೆ ಅನುಸಾಲ್ವನನ್ನು ಗೆಲ್ಲುವೆ

ತನುವಿಷಮನೆಂದೋರ್ವರುಂ ಕೂಡರು ‖ ಆರಿನ್ನು ಗತಿನಿನಗೆಸಂಬಂಧಿಬಾಣನಂ । ಹಾರೈಸುವೊಡೆನಿನ್ನ ಬೇರ‍್ಗೊಲಿಗೆಶಿವನಿಪ್ಪ । ಕಾರಣಮನಂಗತ್ವಮೇಪ್ರಾಪ್ತಮೆಂದು । ಹರಿತನ್ನ ಸುತನಂಜರೆದನು ‖ ೪೦ ‖ ಕಾಲ್ದಳದೊಳೊಡೆಯಲ್ಕೆನಿನ್ನಮಗನೀ ಖಳಗೆ । ಸೋಲ್ದಪನೆಸಾಕಿನ್ನು ಕರ್ಣನಕುಮಾರಂಗೆ । ಮೇಳ್ದಳವನಟ್ಟೆಂದುಮಾರುತಿನುಡಿಯೆಶೌರಿಪೋಗುನೀನಾದೊಡೆನಲು ‖ ಸೋಲ್ಪುದಿನ್ನಾಹವಂತನಗೆಂಬಹರ್ಷದಿಂ । ನಾಲ್ದೆಸೆಗಳದುರೆಬೊಬ್ಬಿರಿದಾರ‍್ದುಬಿಲ್ವೆದೆಗೆ । ಕೋಲ್ದೊಡಿಸಿತೆಗೆದೆಸುತರಿಪುಚಾತು

ಪ್ರವೇಶಮಾಡುತ್ತೀಯೆ, (ಸೋತುಹೋದನೆಂದು-ಹೆಂಗಸರೆಲ್ಲಾ ಗೇಲಿಗೆಬ್ಬಿಸುವರು), ಆದ್ದರಿಂದ ಆರಣ್ಯಕೆ-ಕಾಂತಾರದೆಡೆಗೆ, ಪೋಗು-ಹೊರಡು, ಎನಲ್-ಎಂದುನುಡಿದರೆ, ಅಲ್ಲಿ-ಆಹಳುವದಲ್ಲಿ, ಮುನಿಗಳ್ಗೆ-ಋಷಿವರ್ಯರಿಗೆ, ಸೇರೆ-ನೆಲೆಯಾದದ್ದು, (ಎಂದರೆ ಅವರೆಲ್ಲ ಕಾಮುವನ್ನು ಜೈಸಿದವರಾದ್ದರಿಂದ ನಿನಿಗೆ ಅಲ್ಲಿ ಸ್ಥಳವಿಲ್ಲವು, ಕೆಟ್ಟು-ದೆಸೆಕೆಟ್ಟುಹೋಗಿ, ಆರೂರಸಾರ್ದೊಡಂ - ಯಾರ ಊರಿಗೆ ಹೋದರೂ, ನೀಂ-ನೀನು, ವಿರಹಿತನು-ವಿರಹತಾಪವನ್ನುಂಟುಮಾಡತಕ್ಕವನು, ಮತ್ತು ವಿಷಮ-ಹೆಂಗಳಿಂದಗಲಿರುವವರ, ತನು-ಶರೀರಕ್ಕೆ, ವಿಷನು-ಮನ್ಮಥಬಾಧೆಯನ್ನು ಹೆಚ್ಚಿಸತಕ್ಕವನು, ವಿರಹಿತನು-ಏಕಾಕಿಯು, ವಿಷಮನು-ದುಷ್ಟನು, (ನೀಚಸ್ವಭಾವದವನು), ಎಂದು, ಓರ್ವರೂ-ಯಾರೂ, ಕೂಡರು-ನಿನಿಗೆ ಸ್ಥಳವನ್ನು ಕೊಡುವುದಿಲ್ಲ, ನಿನಿಗೆ - ನಿನಿಗಾದರೊ, ಸಂಬಂಧಿ-ಬಂಧುವಾದ, ಬಾಣಂಗಳಂ-ಬಾಣಗಳನ್ನು (ರಕ್ಕಸನನ್ನು), ಹಾರೈಸುವೊಡೆ-ಅಪೇಕ್ಷಿಸಿದರೆ, ನಿನ್ನ-ನಿನ್ನನ್ನು, ಬೇರ‍್ಗೊಲೆಗೆ-ಮೂಲೋತ್ಪಾಟನೆಯಂಮಾಡಲು, ಶಿವನು-ಪಾರ್ವತೀಪತಿಯು, ಇಪ್ಪ-ಇರತಕ್ಕ, ಕಾರಣ-ನಿಮಿತ್ತದಿಂದ, ನಿನಿಗೆ-ನಿನ್ನ ವಿಷಯದಲ್ಲಿ, ಇನ್ನು - ಮುಂದೆ, ಆರುಗತಿ - ಯಾರುದಿಕ್ಕು ? ಅನಂಗತ್ವವೇ - ಮರಣವೆ ಅಥವ ಅಂಗರಹಿತವಾಗಿರತಕ್ಕದ್ದೇ, ಪ್ರಾಪ್ತಂ-ಉಂಟಾಯಿತು, ಎಂದು-ಎಂಬತೆರನಾಗಿ, ಹರಿ-ಕೃಷ್ಣಸ್ವಾಮಿಯು, ತನ್ನಸುತನಂ-ತನ್ನ ಕುವರನನ್ನು, ಜರೆದನು-ಹೀಯಾಳಿಸಿದನು.

ಅ‖ ವಿ‖ ಬಾಣಾಸುರನು ಈಶ್ವರನನ್ನು ಕುರಿತು ಪರಮಭಕ್ತಿಯಿಂದ ತಪಸ್ಸಿನಲ್ಲಿ ಮೆಚ್ಚಿಸಿ ತನ್ನ ಸಮೀಪದಲ್ಲಿಯೇ ಹರನನ್ನು ಇರಬೇಕೆಂದು ಕೇಳಿಕೊಳ್ಳಲು ಭಕ್ತಪರಾಧೀನನಾದ ಸ್ವಾಮಿಯು ಅವನ ಇಷ್ಟದಂತೆ ಬಾಣಾಸುರನ ಮನೆಯಲ್ಲಿ ಎಡೆಬಿಡದೆ ಇರುತ್ತಿದ್ದನು. ಆದ್ದರಿಂದ ಕೃಷ್ಣಸ್ವಾಮಿಯು ಮನ್ಮಥನೊಂದಿಗೆ ಶಿವನಿಗೆ ಬಾಣಾಸುರನ ಮನೆಯು ನೆಲೆಯಾಗಿದೆ ಎಂದು ಹೇಳಿರುವನು.

ಬಾಣಾಸುರನಿಗೆ ಉಷಾ ಎಂಬೋರ್ವಕುವರಿ ಇದ್ದಳು. ಅವಳು ಸ್ವಪ್ನದಲ್ಲಿ ಪ್ರದ್ಯುಮ್ನನ ಮಗನೂ ಶ್ರೀ ಕೃಷ್ಣಸ್ವಾಮಿಯ ಮೊಮ್ಮಗನೂ ಆದ ಅನಿರುದ್ಧನನ್ನು ಕಂಡವಳಾಗಿ ಆತನನ್ನೇ ಯಾರೂ ಅರಿಯದಂತೆ ಒಬ್ಬ ಚೇಟಿಯ ಮೂಲಕ ಕರೆತರಿಸಿ ಗಾಂಧರ್ವವಿವಾಹದಲ್ಲಿ ಆತನನ್ನು ವರಿಸಿದಳಾದ್ದರಿಂದ ಬಾಣಾಸುರನೂ ಮನ್ಮಥನೂ ಬೀಗರು ಆದಹಾಗಾಯಿತು. ಈ ಸಂಬಂಧದಿಂದ ಶ್ರೀಕೃಷ್ಣನು ಪ್ರದ್ಯುಮ್ನನನ್ನು ಬಾಣಾಸುರನ ಮನೆಯಲ್ಲಿರಬಹುದೆಂದು ಯೋಚಿಸಿದಾನೆ. ಜರೆ-ಹೀಯಾಳಿಸು, ಜರಾ-ವೃದ್ಧಾಪ್ಯ ‖೪೦‖

ಟೀ‖ ಕಾಲ್ದಳದೊಳು - ಪಾದದ ಅಗ್ರಭಾಗದಿಂದ, ಒದೆಯಲ್ಕೆ - ತಾಡಿಸಬೇಕಾದರೆ (ಒದೆಯಬೇಕಾದರೆ), ನಿನ್ನ ಮಗನು - ನಿನ್ನತನುಜಾತನು, ಈ ಖಳಗೆ-ಈ ನೀಚನಿಗೆ, ಸೋಲ್ದಪನೆ - ಅಪಜಯವನ್ನೈದಿರುವನೆ ? (ಎಂದರೆ ಸ್ಮರಣೆತಪ್ಪಿದ ಮಾತ್ರವೇ ಸೋತುಹೋದಂತೆ ಎಂದಿಗೂ ಎಣಿಸತಕ್ಕದ್ದಲ್ಲ,) ಇನ್ನು - ಇನ್ನುಮುಂದೆ, ಸಾಕು-ನಿನ್ನ ಮಗನನ್ನು ಜರೆದದ್ದು ಸಾಕಾಗಿರುವುದು, ಕರ್ಣನಕುಮಾರಂಗೆ-ಕರ್ಣನಂದನನಿಗೆ, ಮೇಳ್ದಳವನು-ಉತ್ತಾಸೆಯಾದ ಸೈನ್ಯವನ್ನು, ಅಟ್ಟು - ತರಮು, ಎಂದು - ಎಂಬಪರಿಯಿಂದ, ಮಾರುತಿ - ವಾಯುಸೂನುವು, ನುಡಿಯೆ - ಆರುಹಲು, ಶೌರಿ-ಹರಿಯು, (ಭೀಮನನ್ನು ಕುರಿತು)

ನೆಂದು ಮೊದಲು ಶಪಥವಂಮಾಡಿ ಈಗ ಸೋತು ಹಿಮ್ಮೆಟ್ಟಿದೆಯಲ್ಲಾ ! ನಿನ್ನ ಪ್ರತಿಜ್ಞೆ ಯೇನಾಯಿತು ? ಅಪಜಯವನ್ನು ಹೊಂದಿದ ನೀನು ಪುನಃ ದ್ವಾರಕೆಗೆ ಹೋದರೆ ಅಂತಃಪುರದಲ್ಲಿರುವ ಸ್ತ್ರೀಯರೆಲ್ಲರೂ ನಿನ್ನನ್ನು ಹಾಸ್ಯಮಾಡುತ್ತಾರೇ ! ಕಾಡಿಗಾದರೂ ಹೋಗಲೆಂದರೆ ಅಲ್ಲಿ ಜಿತೇಂದ್ರಿಯರಾದ ಋಷಿವರ್ಯರಿರುವುದರಿಂದ ನಿನಗೆ ಸ್ಥಳವು ದೊರೆಯದು. ನಿನಗೆ ಅನುಬಂಧಿಯಾದ ಬಾಣಾಸುರನ ಮನೆಗೆ ಹೋಗಲು ಯೋಚಿಸಿದರೆ ಪರಮೇಶ್ವರನು ಭಕ್ತನಾದ ಆ ಬಾಣನ ಮನೆಯ ಬಾಗಿಲಿನಲ್ಲಿಯೇ ಕಾಯುತ್ತ ಒಳಗೆ ಪ್ರವೇಶಮಾಡುವುದಕ್ಕೆ ಎಡೆಗೊಡುವುದಿಲ್ಲ. ನೀನು ಅಂಗರಹಿತನಾಗಿರುವುದೇ ಸರಿ ಎಂದು ನಾನಾ ಪ್ರಕಾರವಾಗಿ ಹೀಯಾಳಿಸುತ್ತಿದ್ದನು ‖ ೪೦ ‖ ಭೀಮಸೇನನು ಅದನ್ನು ಕೇಳಿ, ಓ ಕೃಷ್ಣಪರಮಾತ್ಮನೆ, ಈ ನೀಚನಾದ ಅನುಸಾಲ್ವನಿಗೆ ನಿನ್ನ ಮಗನು ಸೋತುಹೋದನೆಂದು ತಿಳಿಯಬೇಡ, ಮೂರ್ಛೆಬಿದ್ದಿರತಕ್ಕ ಪ್ರದ್ಯುಮ್ನನ ನೆರವಿಗಾಗಿ ಕರ್ಣಸೂನುವು ಯುದ್ಧಮಾಡಲೆಂದು ಬೇರೆ ಸೇನೆಯನ್ನು ಅವನ ಸಹಾಯಕ್ಕೆ ಕಳುಹೆನ್ನಲು

ರಂಗನುಂತಾಗಿದಂಪವನಸೂನು ॥ ೪೧ ॥ ಅಭೀಮನುರವಣಿಸೆಕಂಡುವೃಷಕೇತುನಗು । ತೀಭೂಮಿಗಿಂದುಪೊಸತಾದುದೆಲೆ ತಾತಬಾ । ಲಾಭಿಲಾಷೆಯಫಲಕ್ಕೆಳಸುವರೆಪಿತರ್‍ನಗೆಮಿಾಸಲೀಸಮರಮಿದಕೆ ॥ ಲೋಭದಿಂನೀಂಬಪ್ಪುದುಚಿತಮೇಪೇಳೆನಲ್ । ಶೋಭಿಸುವಪಣ್ಣಿಡಿಮತಂದೆಸವಿಸಿದೊಡೆತಾ । ನೇಭುಂಜಿಪನೆಪಸುಳೆನಿನಗೆರಣದನುತೋರಬಂದೆನೆಂದಂಮಾರುತಿ ॥೪೨॥ ನಸುನಗುತವೃಷಕೇತುಬಳಿಕಕಾರ್ಮುಕವನೊದ । ರಿಸುತರಿಪುಸೈನ್ಯಮಂತಾಗಿದಂಮಿಾರ್ದುಗ । ರ್ಜಿಸಿವನಾಂತರಕೆಸಿಡಿಲೆ

---

ಆದೊಡೆ – ಹಾಗಾದರೆ, ನೀನು – ನೀನೇ, ಪೋಗು–ಹೊರಡು, ಎನಲು–ಎಂದು ನುಡಿಯಲು, ಇನ್ನು–ವೃಕೋದರನೆ ರಣರಂಗವನ್ನು ಸೇರಿದಲ್ಲಿ, ಆಹವಂ – ಸಮರವು, ತನಿಗೆ – ನನ್ನ ವಿಷಯದಲ್ಲಿ, ಸೋಲ್ದುದು–ಅಪಜಯವನ್ನೈದೀತು. ಎಂಬ–ನಾನೇ ಜಯಿಸುತ್ತೇನೆಂಬ, ಹರ್ಷದಿಂ–ಸಂತಸದಿಂದ, ನಾಲ್ದೆಸೆಗಳು–ಮೂಡಲು, ಪಡವಲು, ತೆಂಕಲು, ಬಡಗಲೆಂಬ ಚತುರ್ದಿಕ್ಕುಗಳು, ಅದುರೆ–ನಡುಗಲು, ಬೊಬ್ಬಿರಿದು–ಗರ್ಜನೆಯಂ ಮಾಡಿ, ಆರ್ದು–ಧ್ವನಿಯಂಗೈದು, ಬಿಲ್–ಚಾಪದ, ಎಸೆಗೆ – ನಾರಿಗೆ [ಹುರಿಗೆ], ಕೋಲ್–ಸರಲನ್ನು, ತೊಡಿಸಿ–ಹೂಡಿ, ತೆಗೆದು – ಆಕರ್ಣಾಂತವಾಗಿ ಸೆಳೆದು, ಎಸೆಯೆ – ಬಾಣಗಳನ್ನು ಬಿಡುತ್ತ, ಪವಮಾನಸೂನು – ವಾಯುನಂದನನು, ರಿಪು – ವೈರಿಗಳ, ಚಾತುರಂಗಮಂ–ಆನೆ, ಕುದುರೆ, ರಥ, ಕಾಲಾಳುಗಳೆಂಬ ನಾಲ್ಕು ತೆರನಾದ ಸೈನ್ಯವನ್ನೂ, ತಾಗಿದಂ – ಹೊಡೆಯಲುಜ್ಜುಗಿಸಿದನು.

ಅ॥ ವಿ॥ ಹರುಷ [ತ್ಭ] ಹರ್ಷ [ತ್ಸ] ಮರುತನ ಮಗನು ಮಾರುತಿ [ಷ. ತ.]

ಟೀ॥ ಅಭೀಮನು–ಆ ವೃಕೋದರನು, ಉರವಣಿಸೆ – ಮುಂದುನುಗ್ಗಲು, ವೃಷಕೇತು – ವೃಷಧ್ವಜನು, ಕಂಡು–ಈಕ್ಷಿಸಿ, ನಗುತ–ಮುಗುಳ್ನಗೆಯನ್ನೈದುತ್ತ, ಎಲೆತಾತ–ಎಲೈ ಜನಕನೆ! ಈಭೂಮಿಗೆ–ಈ ಇಳೆಗೆ, ಇಂದು–ಈ ಹೊತ್ತು, ಪೊಸತಾದುದು–ಹೊಸಬಗೆಯಾಯಿತು; ಬಾಲಾಭಿಲಾಷೆಯ–ಮಕ್ಕಳುಬಯಸಿದಂಥ, ಫಲಕೆ–ಪಕ್ವವಾದ ಕಾಯಿಗೆ, ಪಿತರ್–ತಾತಂದಿರೇ, ಎಳಸುವರೆ – ಇಚ್ಛಿಸಬಹುದೆ? ಈಸಮರಂ – ಈ ರಣವು, ತನಿಗೆ–ನನಿಗೆಮಾತ್ರವೇ, ಮಿಾಸಲು–ನಿಷ್ಕರ್ಷಿಸಲ್ಪಟ್ಟದ್ದು, ಅದುದು–ಆಗಿರುವುದು, ನೀನು–ನೀನಾದರೋ, ಲೋಭದಿಂ–ಅತ್ಯಾಶೆಯಿಂದ, ಬಪ್ಪುದು–ಸಮರಕ್ಕೆ ತೊಡಗುವುದು, ಉಚಿತವೆ–ಯೋಗ್ಯವಾಡದ್ದೆ? ಪೇಳು–ಉಸಿರು, ಎನಲ್–ಎಂದು ನುಡಿಯಲು, ಭೀಮನು ವೃಷಧ್ವಜನೊಂದಿಗೆ, ಪಸುಳೆ–ಅಣುಗನೆ! ತಂದೆ–ಪಿತನು, ಶೋಭಿಸುವ–ಹೊಳೆಯುತ್ತಿರುವ, ಪಣ್–ಹಣ್ಣನ್ನು, ಪಿಡಿದು–ಹಿಡಿದುಕೊಂಡು, ಸವಿಸದೊಡೆ–ರುಚಿತೋರಿಸದಿದ್ದರೆ, ತಾನೆ–ಹಸುಳೆಯೇ, ಭುಂಜಿಪನೆ–ಸವಿಯಲಾದೀತೆ, (ಆಗುವುದಿಲ್ಲವೆಂದು ಭಾವವು), ನಿನಗೆ–ನಿನ್ನವಿಷಯದಲ್ಲಿ, ರಣದ–ಸಮರದ, ಅನುವ–ಬಗೆಯನ್ನು, ತೋರಬಂದೆನು – ತೋರಿಸುವುದಕ್ಕಾಗಿ ಬಂದಿದೇನೆಂಬದಾಗಿ, ಮಾರುತಿ – ವಾಯುಸುತನು, ಎಂದಂ–ನುಡಿದನು ॥೪೨॥

ಟೀ॥ ಬಳಿಕ – ತರುವಾಯ, ವೃಷಕೇತು – ಕರ್ಣಪುತ್ರನು, ನಸುನಗುತ – ಹುಸಿನಗೆಯನ್ನು ತಾಳುತ್ತ, ಕಾರ್ಮುಕವನು–ಚಾಪವನ್ನು, ಒದರಿಸುತ–ಶಬ್ದವುಂಟಾಗುವಂತೆ ಮಾಡುತ್ತ, ರಿಪುಸೈನ್ಯಮಂ–ವೈರಿಗಳ ಬಲವನ್ನು, ತಾಗಿದಂ–ಹೊಕ್ಕನು, ಮಿಾರ್ದು–ಅತಿಕ್ರಮಿಸಿ, ಗರ್ಜಿಸಿ–ಆರ್ಭಟವಂ ಮಾಡಿ, ವನಾಂತರಕೆ–ಕಾಡಿನ ನಡುವೆ, ಸಿಡಿಲುಎರಗಿದಂತೆ–ಸಿಡಿಲಿನ ಏಟು ತಗುಲಿದಹಾಗೆ, ಇದಿರಾಂತ–ಮುಂದುವರಿದ, ಭಟರ–ವೀರರ, ಕಣ್ಗಳು–ನಯನಂಗಳು, ಮೆರೆಯಲು–ಹೊಳೆಯಲು, ಮಸಗಿ–ಕೋಪವು ಹೆಚ್ಚಿ, ಚಿಮ್ಮುವ – ಮೇಲಕ್ಕೆದ್ದುಬರುವ, ರಕ್ತಧಾರೆಗಳ್–ರಕ್ತದ ಹೊಳೆಗಳು, ಕೂಡೆ–ಒಡನೆಯೆ, ಕಣ್ಗೆ – ನಯನಂಗಳಿಗೆ, ಎಸೆದವು–ಕಾಂತಿಯನ್ನೀಯುತ್ತಿದ್ದವು. ಅಲ್ಲಿಯ–ಆ ಸ್ಥಳದ, ಪಡೆಯಮೇಲೆ–ದಂಡಿನಮೇಲೆ, ಕವಿದ–ಮುತ್ತಿಕೊಂಡ, ಅಂಬು

---

ಕೃಷ್ಣಸ್ವಾಮಿಯು ಭೀಮನನ್ನು ಕುರಿತು ಎಲೈ ವೃಕೋದರನೇ! ಅವರೀರ್ವರ ಬತ್ತಾಸೆಗಾಗಿ ನೀನೇ ಹೊರಡೆಂದು ಅಪ್ಪಣೆಯನ್ನಿತ್ತನು. ಶ್ರೀ ಕೃಷ್ಣಮೂರ್ತಿಯಿಂದ ಆಜ್ಞಾಪ್ತನಾದ ಪವನಸೂನುವು ತನ್ನಲ್ಲಿತಾನೇ ಆನಂದ ಪಟ್ಟುಕೊಂಡು ಅನುಸಾಲ್ವನನ್ನು ಸೋಲಿಸಬೇಕೆಂಬ ಕೋಪವು ಅತ್ಯಧಿಕವಾಗಲು ಚತುರ್ದಿಕ್ಕುಗಳೂ ಗಡಗಡನೆ ನಡುಗುವಂತೆ ಆರ್ಭಟಮಾಡುತ್ತ ಧನುಸ್ಸಿಗೆ ಬಾಣವನ್ನು ಪೋಣಿಸಿ ಶತ್ರುಗಳ ಚತುರಂಗಬಲವನ್ನು ದಿಂಡುಕೆಡುವುತಲಿರುವುದನ್ನು ಕರ್ಣಸುತನಾದ ವೃಷಧ್ವಜನು ಕಂಡು ॥ ೪೧ ॥ ಭೀಮನನ್ನು ಕುರಿತು ಎಲೈ ತಾತನೇ, ಲೋಕದಲ್ಲಿ ಮಕ್ಕಳು ಬಯಸಿದ್ದನ್ನು ತಂದೆಯು ನನಿಗೆ ಬೇಕೆಂದು ಆಶೆಪಟ್ಟು ಹೇಳಿಯಾನೆ? ಅನುಸಾಲ್ವನೊಂದಿಗೆ ಕಾದುವಿಕೆಯು ನನಿಗೆ ನಿಷ್ಕರ್ಷಿಸಿರುವುದರಿಂದ ಇದಕ್ಕೆ ನೀನೇಕೆ ಪ್ರವೇಶಮಾಡುವೆ? ಎಂದು ಕೇಳಿದ ವೃಷಕೇತುವನ್ನು ಕುರಿತು ಭೀಮಸೇನನು ಎಲೈ ಕುವರನೆ! ಬಾಲಕರು ಬಯಸಿದ್ದಾದರೂ ಅದನ್ನು ತಂದೆಯು ಹೇಳಿಕೊಡದಿದ್ದರೆ ಮಕ್ಕಳು ಹೇಗೆ ಕಲಿತಾರು? ಆದ್ದರಿಂದ ಯುದ್ಧಮಾಡುವತೆರನನ್ನು ನಿನಗೆ ತೋರಿಸಲು ಬಂದಿರುವೆನು ಎಂದು ನುಡಿದನು ॥೪೨॥ ಪವನಾತ್ಮಜನ ಈ ತೆರನಾದ ನುಡಿಗಳನ್ನು ಕೇಳಿದ ಕೂಡಲೆ ವೃಷಧ್ವಜನು

ರಗಿದಂತಿದಿರಾಂತಭಟರಕಣ್ಗಳುಮೆರೆಯಲು ॥ ಮಸಗಿಚಿಮ್ಮುಗ್ರರಕ್ತಧಾರೆಗಳ್ಕೂಡೆಕ | ಣ್ಗೆಸೆದವಲ್ಲಿಯಪಡೆಯಮೇಲೆಕವಿ ದಂಬುಗ | ಳ್ಮುಸುಕಿತೆಣ್ದೆಸೆಯನೇನೆಂಬೆನೆರೆಹೊನಲಾಯ್ತುರುಧಿರಪ್ರವಾಹದಿಂದ ॥೪೩॥ ಝಷಕೇತನಂತನಗೆಸೋಲ್ದುಹಿಮ್ಮೆಟ್ಟಿದಂ | ವೃಷಭಾಂಕಿತಧ್ವಜಸ್ತಂಭದವನಾರಿವಂ | ವಿಷಮಗೋಪಾಲನಲ್ಲೆನುತಕಡುಗೋಪದಿಂದನುಸಾಲ್ವನಿವನಮೇಲೆ ॥ ಇಷುವೃಷ್ಟಿಯಂಕರೆಯಲಾಕರ್ಣಸಂಭವಂ | ವೃಷೆಯಿಲ್ಲದೆನ್ನೊಡನೆತೋರಿಸೈ | ನಿನ್ನಪೌರುಷವನೆಂದೆನುತವಂಮುಸುಕಿದಂ ಪೊಸಮಸೆಯವಿಶಿಖದೊಳವನರಥವನು ॥ ೪೪ ॥ ಉಚ್ಚಳಿಸಿಹಾಯ್ದುವಂಬುಗಳವನಕಾಯದಿಂ | ದೆಚ್ಚರಿಲ್ಲದೆನಿಮಿಷಮಿರ್ದುಚೇತರಿಸಿಕೊಂಡೆಚ್ಚನನುಸಾಲ್ವನೀಕರ್ಣಜನ | ವಕ್ಷಸ್ಥಳವನೊಂದುಬಾಣದಿಂದ ॥ ಎಚ್ಚೆಪೂರಾಯಗಾಯದೊಳೆಮ್ಮೆಮರೆದುಕ |

---

ಗಳು–ಸರಲ್ಗಳು, ಎಣ್ದೆಸೆಯನು–ಅಷ್ಟದಿಕ್ಕುಗಳನ್ನೂ, ಮುಸುಕಿತು–ಕವಿದುಕೊಂಡುಬಿಟ್ಟಿತು, ಏನೆಂಬೆನು–ಏನೆಂದು ನುಡಿಯಲಿ, ರುಧಿರ–ನೆತ್ತರಿನ, ಪ್ರವಾಹದಿಂದ–ಸಣ್ಣಸಣ್ಣ ಹೊಳೆಗಳಿಂದ, ನೆರೆ–ಚೆನ್ನಾಗಿ, ಹೊನಲಾಯ್ತು–ದೊಡ್ಡದೊಡ್ಡ ನದಿಯಾಯಿತು.

ಅ॥ ವಿ॥ ವೃಷಕೇತು, ವೃಷ–ಎತ್ತನ್ನು, ಕೇತು–ಧ್ವಜಪಟದಲ್ಲುಳ್ಳವನು, (ಬ. ಸ.) ವನದನಂತ (ಷ. ತ.) ಅಷ್ಟದಿಕ್ಕುಗಳು–ಇಂದ್ರ, ಅಗ್ನಿ, ಯಮ, ನೈರುತ್ಯ, ವರುಣ, ವಾಯುವ್ಯ, ಕುಬೇರ, ಈಶಾನ್ಯವೆಂಬಿವು ॥೪೩॥

ಟಿ॥ ಝಷಕೇತನಂ – ಮನ್ಮಥನು, ತನಿಗೆ–ನನ್ನ ಜೊತೆಯಲ್ಲಿ ಕಾದಿ, ಸೋಲ್ದು–ಸೋತುಹೋಗಿ, ಹಿಮ್ಮೆಟ್ಟಿದಂ–ಹಿಂದಕ್ಕೆ ಹೊರಟುಹೋದನು, ವೃಷಭಾಂಕಿತಧ್ವಜಸ್ತಂಭದವನು–ಧ್ವಜದಲ್ಲಿ ಎತ್ತಿನ ಆಕಾರವುಳ್ಳವನು, ಇವಂಆರು – ಇವನು ಯಾರು? ವಿಷಮ–ವಂಚಕನಾದ, ಗೋಪಾಲನು–ಹಸುಗಳನ್ನು ಮೇಯಿಸತಕ್ಕ ಕೃಷ್ಣನು, ಅಲ್ಲ–ಅಲ್ಲವು, ಎನುತ–ಎಂದು ನುಡಿಯುತ್ತ, ಕಡುಗೋಪದಿಂದ–ಬಲುಸಿಟ್ಟಿನಿಂದ, ಅನುಸಾಲ್ವನು–ಸಾಲ್ವನ ತಮ್ಮನು, ಇವನಮೇಲೆ – ಈ ಕರ್ಣಸುತನಮೇಲೆ, ಇಷುವೃಷ್ಟಿಯಂ–ಸರಲಮಳೆಯನ್ನು, ಕರೆಯಲು–ಸುರಿಯುವಂತೆ ಮಾಡಲು, ಆಕರ್ಣಸಂಭವಂ–ಆ ಕರ್ಣನಂದನನು, ವೃಷೆಯಿಲ್ಲದೆ–ನಿಶ್ಚಯವಾಗಿ, ಎನ್ನೊಡನೆ–ನನ್ನೊಂದಿಗೆ, ಆ ಪೌರುಷವನು–ಆ ಪರಾಕ್ರಮವನ್ನು, ತೋರಿಸು–ತೋರ್ಪಡಿಸು, ಎಂದು–ಎಂಬದಾಗಿ, ಎನುತ–ಹೇಳುತ್ತ, ಅವಂ–ಆ ವೃಷಕೇತುವು, ಪೊಸಮಸೆಯ–ಆಗತಾನೆ ಸಾಣೆಗೆ ಕೊಟ್ಟು ಸಿದ್ಧಮಾಡಿರುವ, ವಿಶಿಖದೊಳು–ಅಲಗಿನಿಂದ, ಅವನ–ಆ ವೃಷಧ್ವಜನ, ರಥವನು–ಗಾಡಿಯನ್ನು (ತೇರನ್ನು) ಮುಸುಕಿದಂ–ಕವಿದುಕೊಂಡುಬಿಟ್ಟನು॥೪೪॥

ಟೀ॥ ಅಂಬುಗಳು – ಸರಲ್ಗಳು, ಅವನ–ಆ ಸಾಲ್ವಾನುಜನ, ಕಾಯದಿಂದ–ದೇಹದಿಂದ, ಉಚ್ಚಳಿಸಿ – ತೂರಿತೂರಿ, ಹಾಯ್ದುವು–ಮುಂದುವರಿದವು. ಎಚ್ಚರಿಲ್ಲದೆ–ಸ್ಮರಣೆಯೇ ಇಲ್ಲದೆ, ಚೇತರಿಸಿಕೊಂಡು–ಪುನಃ ಜ್ಞಾನವನ್ನು ತಂದುಕೊಂಡವನಾಗಿ, ಕರ್ಣಜನ–ಕರ್ಣಪುತ್ರನ, ವಕ್ಷಸ್ಥಳವನು–ಮರ್ಮಸ್ಥಾನವನ್ನು, ಒಂದುಬಾಣದಿಂದ–ಒಂದೇ ಅಲಗಿನಿಂದ, ಎಚ್ಚೆ–ತಗುಲಿಸಲಾಗಿ, ಪೂರಾಯಗಾಯದೊಳು – ಹೆಚ್ಚಾದ ಹೊಡೆತದಿಂದ, ಮೈಮರೆದು – ಸ್ಮರಣೆತಪ್ಪಿ, ಕಣ್ಮುಚ್ಚುತ – ನಯನಂಗಳನ್ನು ಮುಚ್ಚಿಕೊಳ್ಳುತ್ತ, ವರೂಥದೋಳ್ – ರಥದಲ್ಲಿಯೇ, ಮಲಗಲ್ಕೆ–ಮಲಗಿಕೊಳ್ಳಲು, ಕಂಡು–ಈಕ್ಷಿಸಿ, ಖತಿ–ಸಿಟ್ಟು, ವೆಚ್ಚೆ–ಹೆಚ್ಚಾಗಿ, ಪವಮಾನಜಂ–ವಾಯುಪುತ್ರನು, ಬಂದು–ಐತಂದು, ಬಲ್ಗದೆಯೊಳು – ಬಹು ದೊಡ್ಡದಾದ ತನ್ನ ಗದೆಯಿಂದ, ಅವನ – ಅನುಸಾಲ್ವನ, ತೇರನು–ಸ್ಯಂದನವನ್ನು, ಅಪ್ಪಳಿಸಿದಂ–ತಾಡಿಸಿದನು ॥೪೫॥

---

ಜನು ಅತಿಯಾದ ಸಂತಸವಂ ತಾಳಿ ಧನುಷ್ಟಂಕಾರವಂ ಗೆಯ್ಯುತ್ತ ಅರಣ್ಯಮಧ್ಯದಲ್ಲಿ ಬಿದ್ದ ಸಿಡಿಲು ಕಾಡನ್ನು ನಿರ್ಮೂಲ ಮಾಡುವಂತೆ ತಾನುಕೂಡ ಅನುಸಾಲ್ವನ ಸೈನ್ಯದಮೇಲೆ ಶರವರ್ಷಂಗಳಂ ಕರೆದನು. ವೃಷಧ್ವಜನು ಬಿಟ್ಟ ಬಾಣಗಳು ದೊಡ್ಡದೊಡ್ಡ ಪರ್ವತಗಳಂತೆ ಶತ್ರುಸೈನ್ಯದ ಮಧ್ಯದಲ್ಲಿ ನಿಂತುಹೋದವು. ಬಾಣಘಾತಗಳಿಂದ ಹೃದಯದಲ್ಲಿ ಹೊರಟ ರಕ್ತಧಾರೆಗಳೆಲ್ಲವೂ ಸೇರಿ ಬಹುದೊಡ್ಡ ನದಿಯಂತೆ ಹರಿದವು ॥ ೪೩ ॥ ಇದನ್ನೆಲ್ಲಾ ಅನುಸಾಲ್ವನು ಕಂಡು ತನ್ನಲ್ಲಿತಾನೆ ಪ್ರದ್ಯುಮ್ನನೇನೋ ಹಿಂದಿರುಗಿ ಹೊರಟುಹೋದನು, ಆದರೆ ವೃಷಧ್ವಜದಿಂದಲಂಕೃತವಾದ ತೇರಿನಲ್ಲಿ ಕುಳಿತುಕೊಂಡು ನನ್ನನ್ನು ಎದುರಿಸಲು ಬರುವ ಶೂರನಾರೊ ಕಾಣೆನು! ಇವನು ಕೃಷ್ಣನಲ್ಲ. ಮತ್ತೆ ಯಾರಾದರೂ ಆಗಲಿ, ಎಂದು ಎಂದುಕೊಂಡು ಕೋಪಾಟೋಪದಿಂದ ಶತ್ರುವಿನ ಮೇಲೆ ಬಾಣಗಳ ಮಳೆಯನ್ನು ಕರೆದನು. ಆಗ ಕರ್ಣತನಯನು ಕೂಡ ಇಮ್ಮಡಿಯಾದ ಕೋಪವಂ ತಾಳಿ ಮೊನೆಯಾದ ಅಲಗುಗಳನ್ನು ಶತ್ರುವಿನ ರಥದ ಮೇಲೆ ಪ್ರಯೋಗಿಸಿದನು ॥ ೪೪ ॥ ವೃಷಧ್ವಜನು ಬಿಟ್ಟ ಶರವು ಹೋಗಿ ಅನುಸಾಲ್ವನ ಎದೆಗೆ ತಗಲಿದ ಕೂಡಲೆ ಮೂರ್ಛಾಕ್ರಾಂತನಾಗಿ ಬಿದ್ದು ಸ್ವಲ್ಪ ಹೊತ್ತಿನ ಮೇಲೆ ಚೇತರಿಸಿಕೊಂಡು ಕ್ರೂರಮಾದ ಅಲಗೊಂದನ್ನು ಕರ್ಣಜನ ಮರ್ಮಸ್ಥಳದಲ್ಲಿ ಹೋಗಿ ನಾಟುವಂತೆ ಎಸೆದನು. ಅನುಸಾಲ್ವನು ಬಿಟ್ಟ ಸರಲ ವೇಧೆಯನ್ನು ತಡೆಯಲಾರದೆ ಕರ್ಣನಂದನನು ರಥದಲ್ಲಿಯೇ ಸ್ಮೃತಿತಪ್ಪಿ ಬಿದ್ದು ಇರುವುದನ್ನು ಭೀಮಸೇನನು ತಿಳಿದು ತನ್ನ ತೋರಗದೆಯುಂ ಪಿಡಿದನನಾಗಿ ಅನುಸಾಲ್ವನ ರಥವನ್ನೆಲ್ಲಾ ಪುಡಿಪುಡಿ ಮಾಡಿದನು ॥ ೪೫ ॥ ಈ ಶೂರಾಗ್ರೇಸ್ಸ

ಣ್ಮಿಚಿಪ್ಪಿತವರೂಥದೋಳ್ಮಲಗಲ್ಕೆಕಂಡುಖತಿವೆಚ್ಚಿಪವನಮಾನಜಂಬಂದವನಶೇರನಪ್ಪಳಿಸಿದಂಬಲ್ಲದೆಯೊಳು ॥ ೪೫ ॥ ಮುಗ್ಗಿದ.ಮುಕುದುರೆಸಾರಥಿನುಡಿದನಾರಥಂ । ನೆಗ್ಗಿದುದುಚಿಗಿದನನುಸಾಲ್ವನಾತನಬಲಂ । ಮುಗ್ಗಿದುದುಸಂದಣಿಸಿಪವನಜನಮೇಲೆಶಸ್ತ್ರಾಸ್ತ್ರಪ್ರಯೋಗದಿಂದ । ತಗ್ಗಿದುದುದಿಗ್ದಂತಿಭೋಗಿರಾಜನಕೊರ । ಕ್ಕುಗ್ಗಿದುದುಧರಣಿತಲಮಿಭ್ಭಾಗಮಾಗಿಸಲೆ। ಹಿಗ್ಗಿದುದು ಪೋಗೆನಲ್ಪೊಯಿದನುರುಗದೆಯಿಂದಲಗ್ಗಳೆಯಕಲಿಭೀಮನು ॥ ೪೬ ॥ ಕಾದಿದಂದುಗಬಡದಮುನ್ನವೇತನ್ನಳವಿ । ಗೈದಿದಂಕದಭಟರ್ತೇರ್ಗಳಂತೆಗೆದಿಳೆಗೆ । ಮೋದಿದಂಕೊಂದನೆಡೆಗೆಡಹಿದಂಸದೆದನೊದೆದಂಪಿಡಿದುಸುಂಡಿಲ್ಗಳ ॥ ಸೇದಿದಂತಿಗಳನೀಡಾಡಿದಂರುಧಿರದಿಂ । ನಾದಿದಂಧರಣಿಯಂಗಾಳಿಯಿಂದಂಪಾರ । ಲೂದಿದಂರಣದೊಳ್ಪೆಣದರಾಶಿಯಂಮಾಡಿದಂಪರಬಲದೊಳಾಭೀಮನು ॥ ೪೭ ॥ ಮೆಟ್ಟಿದಂಮದದೊಳಿಟ್ಟೊರಸಿಕಾಲಾಳ್ಗಳಂ । ಘಟ್ಟಿಸಿದನುರುಬುವಹಯಂಗಳಂನಭಕೆತೆಗೆ । ದಿಟ್ಟನಾನೆ

---

ಟೀ॥ ಕುದುರೆ – ಅಶ್ವಂಗಳು, ಮುಗ್ಗಿದುದು – ಮುಗ್ಗರಿಸಿಬಿದ್ದುವು, ಸಾರಥಿ – ತೇರನ್ನು ಹೊಡೆಯುವವನು, ಮಡಿದನು–ಮರಣವನ್ನೈದಿದನು, ಆರಥಂ-ಆ ಬಂಡಿಯು, ನೆಗ್ಗಿದುದು – ಛಿನ್ನಾಭಿನ್ನವಾಗಿ ಹೋಯಿತು, ಅನುಸಾಲ್ವನು – ಸಾಲ್ವನ ತಮ್ಮನು, ಚಿಗಿದನು–ಮೇಲಕ್ಕೆ ಹಾರಿದನು, ಆತನಬಲಂ – ಅವನಪಡೆಯು, ಸಂದಣಿಸಿ–ಒಟ್ಟಾಗಿ, ಪವನಜನಮೇಲೆ-ವಾಯುಸುತನಮೇಲೆ, ಶಸ್ತ್ರಾಸ್ತ್ರಪ್ರಯೋಗದಿಂದ – ವಿಧವಿಧವಾದ ಅಸ್ತ್ರಶಸ್ತ್ರಂಗಳನ್ನು ಚೆಲ್ಲುವಿಕೆಯಿಂದ, ಮುಗ್ಗಿದುದು – ಮುತ್ತಿಕೊಂಡಿತು, ದಿಗ್ದಂತಿ–ಅಷ್ಟದಿಕ್ಕುಗಳಲ್ಲಿರುವ ಆನೆಗಳು, ತಗ್ಗಿತು–ಕುಗ್ಗಿದವು, ಭೋಗಿರಾಜನ–ಸರ್ಪಾಧಿಪತಿಯಾದ ಆದಿಶೇಷನ, ಕೊರಳು – ಕುತ್ತಿಗೆಯು, ಕುಗ್ಗಿದುದು – ತಗ್ಗಿಹೋಯಿತು, ಧರಣೀತಲಂ – ಇಳಾಮಂಡಲವು, ಇಬ್ಭಾಗಮಾಗಿ – ಎರಡುಹೋಳಾಗಿ, ಸಲೆ–ಚೆನ್ನಾಗಿ, ಹಿಗ್ಗಿದುದು – ಬಿರುಕುಬಿಟ್ಟುಕೊಂಡಿತು, ಪೋಗು–ನಡೆ, ಎನಲ್ – ಎಂಬತೆರನಾಗಿ, ಅಗ್ಗಳೆಯ–ಶೂರಾಗ್ರಣಿಯಾದ, ಕಲಿ–ಬಹುಸಮರ್ಥನಾದ, ಭೀಮನು – ವೃಕೋದರನು, ಉರು–ಬಲುದೊಡ್ಡ, ಗದೆಯಿಂದ – ಗದೆಯೆಂಬ ತನ್ನ ಆಯುಧದಿಂದ, ಪೊಯ್ದನು–ಹೊಡೆದನು.

ಅ॥ ವಿ॥ ಅಗ್ಗಳೆ (ತ್ಭ) ಅರ್ಗಳ (ತ್ಸ) ಬಲ–ಶಕ್ತಿ ಮತ್ತು ಸೈನ್ಯ, ಅಸ್ತ್ರ-ಮಂತ್ರಪೂರ್ವಕವಾದ ಆಗ್ನೇಯಾದಿಗಳು, ಶಸ್ತ್ರ–ಉಕ್ಕು ಮೊದಲಾದ್ದರಿಂದ ಮಾಡಿದ ಕತ್ತಿ, ಈಟಿ ಮೊದಲಾದವು ॥೪೬॥

ಟೀ॥ ಪರಬಲದೊಳು–ಹಗೆಗಳ ಪಡೆಯಲ್ಲಿ, ಆಭೀಮನು – ಆ ವೃಕೋದರನು, ಕಾದಿ–ಹೋರಾಡಿ, ದಂದುಗ – ಪರಿಹಾಸ್ಯವನ್ನು, ಬಡದ–ಐದದಿರುವ, (ದಂದುಗಬಡದ–ಜ್ಞಾನಶೂನ್ಯನೆಂಬದಾಗಿ ಹೇಳಿಸಿಕೊಳ್ಳದ), ಮುನ್ನವೇ-ಮೊದಲೆ, ತನ್ನ–ಸ್ವಕೀಯವಾದ, ಅಳವಿಗೆ–ಸಾಹಸಕ್ಕೆ, ಐದದ-ಗೋಚರಿಸದಿರುವ, ಅಂಕದ–ಚಿಹ್ನೆಯನ್ನು ಪಡೆದ, ಭಟರ–ವೀರರ, ತೇರ್ಗಳಂ–ಸ್ಯಂದನಂಗಳನ್ನು, ತೆಗೆದು–ಮೇಲಕ್ಕೆ ಸೆಳೆದು, ಇಳೆಗೆ–ಪೊಡವಿಗೆ, ಮೋದಿದಂ–ಒಗೆದನು. ಕೊಂದನು–ಹಲವರ ಅಸುವನ್ನು ಸೂರೆಗೊಂಡನು, ಎಡೆ-ಪಕ್ಕದಲ್ಲಿ, ಕೆಡಹಿದಂ–ಪಲವರನ್ನು ಉರುಳಿಸಿದನು. ಸದೆದನು-ಬೇರೆ ಹಲವರನ್ನು ಮರಣಕ್ಕೆ ಎದುರು ನೋಡುವಂತೆ ಮಾಡಿದನು. ಒದೆದನು – ಅನ್ಯರನ್ನು ಕಾಲಿನಿಂದ ತುಳಿದನು. ಸುಂಡಿಲ್ಗಳ–ಕರಗಳನ್ನು, ಪಿಡಿದು - ಹಿಡಿದುಕೊಂಡು, ಸೇದಿ–ಸೆಳೆದು, ದಂತಿಗಳನು-ಹಸ್ತಿಗಳನ್ನು, ಈಡಾಡಿದಂ–ಎರಚಾಡಿಬಿಟ್ಟನು. ರುಧಿರದಿಂ–ನೆತ್ತರಿಂದ, ಧರಣಿಯಂ–ಇಳೆಯನ್ನು, ನಾದಿದಂ - ತೋಯಿಸಿದನು. ಗಾಳಿಯಿಂದ-ಪವನನಿಂದ, ಪಾರಲು – ಹಾರಿಹೋಗುವಂತೆ, ಊದಿದಂ – ಉಸಿರನ್ನು ಬಿಟ್ಟನು. ರಣದೊಳು – ಆಜಿಯಲ್ಲಿ, ಪೆಣದ – ಶವಗಳ, ರಾಶಿ–ಗುಂಪನ್ನು, ಮಾಡಿದಂ - ಎಸಗಿದನು ॥೪೭॥

ಟೀ॥ ವಾಯುಜನು, ಮದದೊಳು - ಶಕ್ತಿಯ ಗರ್ವದಿಂದ, ಮೆಟ್ಟಿದಂ – ಹಲವರನ್ನು ಭೂಮಿಗೆ ಅದುಮಿದನು.

---

ನಾದ ಭೀಮಸೇನನ ಗದೆಯ ಪೆಟ್ಟುಗಳಿಗೆ ವೈರಿಗಳ ಕುದುರೆಗಳೆಲ್ಲಾ ಮುಗ್ಗರಿಸಿ ಬಿದ್ದುವು. ಅನುಸಾಲ್ವನ ಸಾರಥಿಯು ಯಮಲೋಕವನ್ನು ಸೇರಿದನು. ಭೀಮಸೇನನ ಗದಾಯುಧದ ಏಟಿಗೆ ಬೆದರಿ ಅನುಸಾಲ್ವನು ಅಂತರಿಕ್ಷದ ವರೆಗೂ ಹಾರಿ ಪುನಃ ಕೆಳಗೆ ದೊಪ್ಪನೆ ಬಿದ್ದುಬಿಟ್ಟನು. ಅವನ ಸೈನ್ಯವೆಲ್ಲಾ ಚದರಿಹೋಯಿತು. ಅಷ್ಟದಿಗ್ಗಜಗಳೂ ಬಗ್ಗಿಹೋದವು. ಆದಿಶೇಷನ ಕಂಠಧ್ವನಿಯು ನಿಂತುಹೋಯಿತು. ಭೂವಲಯವು ಯೆರಡಾಗಿಬಿರಿಯಿತು ॥೪೬॥ ಇದನ್ನೆಲ್ಲಾ ಅನುಸಾಲ್ವನ ಸೈನ್ಯದ ಪಟುಭಟರು ನೋಡಿ ಭೀಮನ ಮೇಲೆ ಯುದ್ಧಕ್ಕೆ ಬಂದು ತಮ್ಮ ಪರಾಕ್ರಮವನ್ನು ತೋರ್ಪಡಿಸಲುದ್ಯುಕ್ತರಾಗುವ ಮುಂಚೆಯೇ ವೃಕೋದರನು ಅವರನ್ನೆಲ್ಲಾ ನೆಲಕ್ಕೆ ಅದುಮಿ, ಅವರ ತೇರುಗಳನ್ನೆಲ್ಲಾ ನುಚ್ಚುನುಚ್ಚು ಮಾಡಿದನು. ಕೆಲವರನ್ನೆಲ್ಲಾ ಯಮಲೋಕಕ್ಕೆ ಕಳುಹಿದನು. ಮತ್ತೆ ಕೆಲವರನ್ನು ಅರ್ಧಜೀವವಿಟ್ಟುಕೊಂಡು ನರಳುವಂತೆ ಮಾಡಿದನು. ಕಾಲಿನಿಂದ ಒದ್ದು ಒದ್ದು ಅನೇಕರನ್ನು ಕೆಳಗೆ ಕೆಡವಿದನು. ಅನೇಕ ಕುದುರೆಗಳನ್ನು ಸೆಳೆದುಕೊಂಡು ಆಕಾಶದ ಮೇಲಕ್ಕೆ ಚಿಮ್ಮಿದನು. ಆನೆಗಳ ಸೊಂಡಿಲುಗಳನ್ನು ಹಿಡಿದು ಗಿರ್ರನೆ ತಿರುಗಿಸಿ ನೆಲದ ಮೇಲೆ ಒಗೆಯುತ್ತಿದ್ದನು. ಭೂಮಿಯನ್ನೆಲ್ಲಾ

ಗಳನಪ್ಪಳಿಸಿದಂ ತೇರ್ಗಳಂ ಧುರದೊಳನಿಲಜನ ಕೂಡೆ ॥ ಮುಟ್ಟಿ ಕಾದುವರುಂಟೆ ಸೇನೆ ನಿಮಿಷಾರ್ಧದೊಳ್ | ಬಟ್ಟಬಯಲಾಯ್ತು ಪೊಸರಥದೊಳ್ ಕುಳಿತು ತಂದಳವಿ | ಗೊಟ್ಟನನುಸಾಲ್ವನಂಬುಗಳ ಮಳೆಯಂ ಕರೆವುತಾ ವೃಕೋದರನಮೇಲೆ ॥ ೪೮ ॥ ಸಾಲ್ವಾನುಜಂ ಪೂಣ್ಕೆ ಸಲ್ಕೆಯನು ದಂಡಮುಂ | ಪೋಲ್ವಗದೆಯಂ ಕೊಂಡು ಮುತ್ತೆ ಮಾರುತಸುತಂ | ಮೇಲ್ವಾಯ್ದು ಬರಲೊಂದುಬಾಣಮಂ ಕಿವಿವರೆಗೆ ತೆಗದೆಚ್ಚು ಬೊಬ್ಬಿರಿಯಲು ॥ ಕೋಲ್ವಕ್ಷದೊಳ್ ನಾಂಟಲಳವಳಿದು ಪವನಜಂ | ತೇಲ್ವನಿತರೊಳ್ ಕಂಡು ದೈತ್ಯನುಳಿದಧಟರ್ಗೆ | ಸೋಲ್ವನಲ್ಲೆಂದಚ್ಯುತಂ ತಾನೆ ಕೋಪದಿಂದಾಹವಕೆ ನಡೆತಂದನು ॥ ೪೯ ॥ ದರ್ಪದಿಂ ಕುದುರೆಯಂ ಕೊಂಡು ಬಹೆನೆಂದು ಕಂ | ದ

---

ಕಾಲಾಳ್ಗಳಂ–ಕಾಲ್ಬಲವನ್ನು, ಇಟ್ಟೊರಸಿ – ನಿರ್ನಾಮಮಾಡಿ, (ಇಟ್ಟಣಿಸೆ–ಗುಂಪಾಗಿರಲು, ಪಾಠಾಂತರ), ಘಟ್ಟಿಸಿದನು–ದಮ್ಮಸ್ಸುನಮಾಡಿದನು. ಅನೇಕ ಏಟುಗಳಿಂದ ಕಠಿಣವಾಗಿರುವಂತೆ ಮಾಡಿದನು). ಉರುಬುವ–ಮುಂದೆಮುಂದೆ ಬರತಕ್ಕ, ಹಯಗಳಂ–ಅಶ್ವಗಳನ್ನು, ನಭಕೆ–ಅಂತರಿಕ್ಷಕ್ಕೆ, ತೆಗೆದಿಟ್ಟನು–ಎಸೆದನು. ಆನೆಗಳನು–ಹಸ್ತಿಗಳನ್ನು, ಅಪ್ಪಳಿಸಿದಂ–ಭೂಮಿಗೆ ಒಗೆದನು. ತೇರ್ಗಳಂ–ಬಂಡಿಗಳನ್ನು (ರಥಗಳನ್ನು), ಅಪ್ಪಳಿಸಿದಂ–ನುಚ್ಚುನುಚ್ಚು ಮಾಡಿದನು. ಧುರದೊಳು–ರಣದಲ್ಲಿ, ಅನಿಲಜನ–ವಾಯುಸೂನುವಿನ, ಕೂಡೆ–ಜೊತೆಯಲ್ಲಿ, ಮುಟ್ಟಿ–ಮುಷ್ಟಿಯುದ್ಧಕ್ಕೆಳಸಿ ಬಂದು, ಕಾದುವರು–ಹೋರಾಡತಕ್ಕವರು, ಉಂಟೆ–ಇರುವರೆ ? ನಿಮಿಷಾರ್ಧದೊಳು–ಅರಗಳಿಗೆಯಲ್ಲಿ, ಸೇನೆ–ಸಾಲ್ವಾನುಜನ ಪಡೆಯು, ಬಟ್ಟಬಯಲಾಯ್ತು–ಏನೂ ಉಳಿಯದೆ ಹೋಯಿತು, ಅನುಸಾಲ್ವನು, ಪೊಸ–ನೂತನವಾದ, ರಥದೊಳು–ಸ್ಯಂದನದಲ್ಲಿ, ಐತಂದು–ಕುಳಿತು ಸಮೀಪಪ್ರಾಂತವನ್ನು ಸೇರಿ, ಆವೃಕೋದರನಮೇಲೆ–ಆ ವಾಯುಸುತನಮೇಲೆ, ಅಂಬುಗಳ–ಸರಲ್ಗಳ, ಮಳೆಯಂ–ವರ್ಷವನ್ನು, ಕರೆವುತ–ಸುರಿಯುವಹಾಗೆ ಮಾಡುತ್ತ, ಅಳವಿಗೊಟ್ಟನು–ತನ್ನ ಶಕ್ತಿಯನ್ನು ತೋರ್ಪಡಿಸಿದನು ॥

ಅ॥ ವಿ॥ ಬಟ್ಟಬಯಲು–ಬಯಲು+ಬಯಲು (ಆಧಿಕ್ಯಾರ್ಥದಲ್ಲಿ ದ್ವಿರುಕ್ತಿ), ನಿಮಿಷಾರ್ಧ–(ಷ. ತ.) ॥೪೮॥

ಟೀ॥ ಸಾಲ್ವಾನುಜಂ–ಸಾಲ್ವನ ತಮ್ಮನು, ಪೂಣ್ಕೆ–ಅಂಬನ್ನು ತಗಲಿಸಿ, ಎಸಲ್ಕೆ–ಬಿಡಲಾಗಿ, ಮುತ್ತೆ–ಪುನಃ, ಮಾರುತಸುತಂ–ವಾಯುನಂದನನು, ಮೇಲ್ವಾಯ್ದು–ಎದುರಾಳಾಗಿ, ಯನುದಂಡಮುಂ–ಅಂತಕನ ಆಯುಧವನ್ನು, ಪೋಲ್ವ–ಹೋಲಿಕೆಯಾಗಿ ಮಾಡಿಕೊಂಡಿರತಕ್ಕ, ಗದೆಯಂ–ಗದಾದಂಡವನ್ನು, ಕೊಂಡು–ಕೈಗೊಂಡು, ಬರಲು–ಐತರಲು, ಒಂದುಬಾಣಮುಂ–ಒಂದು ಸರಲನ್ನು, ಕಿವಿವರೆಗೆ–ಆಕರ್ಣಾಂತವಾಗಿ, ತೆಗೆದು–ಸೆಳೆದು, ಎಚ್ಚು–ಪ್ರಯೋಗಮಾಡಿ, ಬೊಬ್ಬಿರಿಯಲು–ಸಿಂಹಗರ್ಜನೆಯಂಮಾಡಲು, ಕೋಲ್–ಬಾಣವು, ವಕ್ಷಸೊಳ್–ಹೃದಯದಲ್ಲಿ, ನಾಟಲು–ಸಿಕ್ಕಿಕೊಳ್ಳಲು, ಅನಿಲಜಂ–ವೃಕೋದರನು, ಅಳವಳಿದು–ಸ್ಮೃತಿತಪ್ಪಿ, ತೇಲ್ವ–ತಿರುಗಿ ಜ್ಞಾನಬರುವ, ಅನಿತರೊಳ್–ಕಾಲದೊಳಗಾಗಿ, ಅಚ್ಯುತಂ–ಮುರಹರನು, ಕಂಡು–ವಾಯುಜನು ಮೈಮರೆದು ಬಿದ್ದಿರುವುದನ್ನು ನೋಡಿ, ದೈತ್ಯನು–ಸಾಲ್ವನ ತಮ್ಮನು, ಉಳಿದ–ಮಿಕ್ಕ, ಅಧಟರ್ಗೆ–ವೀರರಿಗೆ, ಸೋಲ್ವನು–ಅಪಜಯವನ್ನು ಪಡೆಯುತಕ್ಕವನು, ಅಲ್ಲ–ಅಲ್ಲವು, ಎಂದು–ಎಂಬ ತೆರನಾಗಿ, ತಾನೆ–ಕೃಷ್ಣಸ್ವಾಮಿಯೆ, ಕೋಪದಿಂದ–ಕ್ರೋಧಾತಿಶಯದಿಂದ ಆಹವಕೆ–ರಣರಂಗಕ್ಕೆ, ನಡೆತಂದನು–ಐತಂದವನಾದನು ॥೪೯॥

ಟೀ॥ ಕುದುರೆಯಂ–ಯಾಗಾಶ್ವವನ್ನು, ಕೊಂಡುಬಹೆನು–ಹಿಂದಿರುಗಿಸಿಕೊಂಡು ಬರುವೆನು, ಎಂದು–ಎಂಬತೆರನಾಗಿ, ದರ್ಪದಿಂ–ಗರ್ವದಿಂದ, ಒಂದೆಡೆಯೊಳು–ಒಂದು ಭಾಗದಲ್ಲಿ, ಕಂದರ್ಪನು–ಮನ್ಮಥನು, ಉರವಣಿಸಿದಂ–ಮೇಲ್ವಾಯ್ದನು, ಪರಬಲಕೆ–ವೈರಿಗಳ ಪಡೆಗೆ, ಸಾಂಬ, ಕೃತವರ್ಮ, ಗದ, ಸಾತ್ಯಕಿ ಪ್ರಮುಖ–ಸಾಂಬರು, ಕೃತವರ್ಮನು, ಗದನೆಂಬುವನು, ಸಾತ್ಯಕಿಯೇ ಮೊದಲಾದ, ಯದುವೀರರು–ಯದುಕುಲದ ಸುಭಟರು, ಸಲಬರು–ಹಲವು ಮಂದಿಯು, ಕೂಡೆ–ಒಡನೆಯೆ, ನಡೆ

---

ರಕ್ತದಿಂದ ಕೆಸರಾಗುವಂತೆ ಮಾಡಿದನು. ಸೈನ್ಯವೆಲ್ಲಾ ಹಾರಿಹೋಗುವಂತೆ ದೊಡ್ಡದಾಗಿ ನಿಶ್ವಾಸವನ್ನು ಬಿಟ್ಟನು. ಶತ್ರುಗಳ ಸೈನ್ಯದ ಮಧ್ಯದಲ್ಲೆಲ್ಲಾ ಹೆಣಗಳ ಕುಪ್ಪೆಗಳೇ ಕಾಣಿಸುವಂತೆ ಮಾಡಿಬಿಟ್ಟನು ॥ ೪೭ ॥ ಅರಗಳಿಗೆಯಲ್ಲಿ ಅನುಸಾಲ್ವನ ಸೈನ್ಯವೆಲ್ಲಾ ನಿರ್ಮೂಲವಾಗಿ ಹೋಗಲು ಅವನು ಬಹು ರೋಷವನ್ನು ತಾಳಿ ಶೀಘ್ರವಾಗಿ, ಹೊಸ ರಥವನ್ನು ತರಿಸಿ ಕುಳಿತುಕೊಂಡು ಯುದ್ಧಸನ್ನದ್ಧನಾಗಿ ಶರವರ್ಷದಿಂದ ಭೀಮಸೇನನನ್ನು ಎಲ್ಲೆಲ್ಲಿಯೂ ಕವಿದುಕೊಂಡನು. ॥ ೪೮ ॥ ಈ ಬಾಣಗಳ ಘಾತವನ್ನು ವಾಯುನಂದನನು ಸ್ವಲ್ಪವೂ ಗಣನೆಗೆ ತಾರದೆ ಕಾಲದಂಡವನ್ನು ಮೀರಿಸುವ ತನ್ನ ಗದೆಯನ್ನು ತೆಗೆದುಕೊಂಡು ಅನುಸಾಲ್ವನನ್ನು ಹೊಡೆಯಬೇಕೆಂದು ಮುಂದರಿದು ಬರುತ್ತಿರುವಾಗ ಅನುಸಾಲ್ವನು ಕೂಡ ಒಂದಾನೊಂದು ಕ್ರೂರವಾದ ಅಲಗನ್ನು ಅಂಬಿಗೆ ಸೇರಿಸಿ ಕಿವಿಯ ವರೆಗೂ ಸೆಳೆದು ಭೀಮನಮೇಲೆ ಬಿಡಲು ಒಡನೆಯೇ ವೃಕೋದರನು ಸ್ಮರಣೆ ತಪ್ಪಿ ಬಿದ್ದುಹೋಗಿ ಪುನಃ ಎಚ್ಚೆತ್ತು ಯುದ್ಧಕ್ಕೆ ಸಿದ್ಧನಾಗುವುದರೊಳಗಾಗಿ, ಶ್ರೀ ಕೃಷ್ಣಮೂರ್ತಿಯಾದರೋ ಈ ರಕ್ಕಸನು ಮತ್ತಾವ ಶೂರನಿಗೂ ಸೋಲತಕ್ಕವನಲ್ಲ ॥ ೪೯ ॥ ಆದುದರಿಂದ ತಾನೇ ಯುದ್ಧಕ್ಕೆ ಹೋಗಬೇಕೆಂದು ಬಗೆದು ರಥಾರೂಢ

ರ್ಪನೊಂದೆಸೆಯೊಳುರವಣಿಸಿದಂಕೂಡೆನಡೆದರ್ಪರಬಲಕೆ | ಸಾಂಬಕೃತವರ್ಮಗದಸಾತ್ಯಕಿಪ್ರಮುಖಯದುವೀರರು || ಸರ್ಪ ವೈರಿಧ್ವಜನರಥವೈದೆಕಂಡುನೇ | ಸರ್ಪಲವನಡಗಿಸುವಚಕ್ರದಿಂದೈತ್ಯರಪೆಸರ್ಪರಿಯದಂತೆಮಾಡುವಕೃಷ್ಣನಿವನೆಂದರಿದು ಮೊರೆದನನುಸಾಲ್ವನು || ೫೦ || ಪೊಳೆವವಮಿಂಚುಗಳ್ವೈಸೆತೇಜಿಗಳಿವಲ್ಲಬ | ಲ್ಮೊಳಗುಗಳಿವೈಸೆರಥಚಕ್ರಧ್ವನಿಗಳಲ್ಲ | ತೊಳಗುವನುರೇಂದ್ರಕಾರ್ಮುಕವೈಸೆಪಿಡಿದಿರ್ದಶಾರ್ಙ್ಗಧನುವಲ್ಲಬೀಳ್ವ || ಮಳೆವನಿಗಳ್ವೈಸೆಕೂರಂಬುಗಳಿವಲ್ಲಕಂಗೊಳಿಪಕಾರ್ಮುಗಿಲ್ವೈಸೆಕೃಷ್ಣನಲ್ಲೆಂಬವೋ | ಲ್ಕೊಳುಗುಳಕೆವೈದೋರೆಕಂಡುಕಲಿಸಿಂಹದಂತಿರುವನನುಸಾಲ್ವನು || ೫೦ || ವ್ಯಗ್ರದಿಂದೈದುವನಮುರಾರಿಯಂಕಂಡುತ | ನ್ನಗ್ರಜನನಂದುಕೊಂದಾಪಗೆವನೀತನಂ | ನಿಗ್ರಹಿಪೆನೆಂದುಕಣೆನಾಲ್ಕರಿಂದಚ್ಯುತನಹಯಚತು

ದರು–ಹೊರಟರು. ಸರ್ಪವೈರಿಧ್ವಜನ-ಕೃಷ್ಣಸ್ವಾಮಿಯ, ರಥರ–ಸ್ಯಂದವು, ಐದೆ-ಸಮೀಪಸ್ಥವಾಗಲಾಗಿ, ಕಂಡು–ಈಕ್ಷಿಸಿ, ನೇಸರ-ಇನನ, ಪಲವನು–ತೀಕ್ಷ್ಣತೆಯನ್ನು, ಅಡಗಿಸಿಸುವ-ಕುಗ್ಗಿಸತಕ್ಕ, ಚಕ್ರದಿಂ–ಸುದರ್ಶನವೆಂಬ ಚಕ್ರಾಯುಧದಿಂದ, ದೈತ್ಯರ–ಸುರವೈರಿಗಳ, ಪೆಸರ್–ನಾಮವೇ, ಪರಿಯದಂತೆ–ನಿಂತುಹೋಗುವ ತೆರನಾಗಿ, ಮಾಡುವ-ಎಸಗುವ, ಕೃಷ್ಣನು-ಶ್ರೀ ಕೃಷ್ಣಸ್ವಾಮಿಯು, ಇವನು–ಎದುರಿಗೆ ಕಾಣತಕ್ಕವನು, ಎಂದು–ಎಂಬ ತೆರನಾಗಿ, ಅರಿದು–ತಿಳಿದುಕೊಂಡು, ಅನುಸಾಲ್ವನು-ಸಾಲ್ವನ ತಮ್ಮನು, ಮೊರೆದನು-ಸಿಂಹಗರ್ಜನೆಯನ್ನು ಮಾಡಿದನು ||

ಅ|| ವಿ|| ದರ್ಪ-ಅಹಂಕಾರ ಮತ್ತು ಗಾಬರಿ. ಚಕ್ರ–ವರ್ತುಳಾಕೃತಿ, ವೈಷ್ಣವಚಕ್ರ, ಇಳಾಮಂಡಲ, ರಾಶಿಚಕ್ರವೆಂಬ ನಾನಾರ್ಥವನ್ನೀಯತಕ್ಕದ್ದು. ಸರ್ಪವೈರಿಧ್ವಜಂ–ಸರ್ಪ–ಹಾವುಗಳ, ವೈರಿ-ಶತ್ರು (ಷ. ತ). ಸರ್ಪವೈರಿಯನ್ನು ಧ್ವಜದಲ್ಲಿ ಉಳ್ಳವನು (ಬ. ಸ.) || ೫೦ ||

ಟೀ|| ಇವು-ಈ ರಣರಂಗದಲ್ಲಿ ಸಂಚಾರಮಾಡುತ್ತಿರುವವು, ಪೊಳೆವ – ಥಳಥಳಿಸುವ, ಮಿಂಚುಗಳು – ವಿದ್ಯುತ್ತುಗಳು, ತೇಜಿಗಳು–ಅಶ್ವಂಗಳು, ಅಲ್ಲವೈಸೆ–ಅಲ್ಲವಷ್ಟೆ? ಇವು–ಈ ಸ್ವನಂಗಳು, ಬಲ್–ಹೆಚ್ಚಾಗಿರುವ, ಮೊಳಗುಗಳು–ಮೇಘಗರ್ಜನೆಗಳು, ಅಲ್ಲದೆ-ಹೊರತು, ರಥ–ತೇರುಗಳ, ಚಕ್ರ-ಪಾರುಂಬುಳಿಗಳ, ಧ್ವನಿಗಳು – ರವಂಗಳು, ಅಲ್ಲ- ಆಗಿಲ್ಲವು, ತೊಳಗುವ–ಹೊಳೆಯುವ, ಅಮರೇಂದ್ರ–ಶಚೀಪತಿಯ, ಕಾರ್ಮುಕಂ–ಚಾಪವು, ಅಲ್ಲದೆ-ಹೊರತು, ಪಿಡಿದಿರ್ಪ-ಧರಿಸಿದ್ದ, ಶಾರ್ಙ್ಗ–ಶಾರ್ಙ್ಗವೆಂಬ ನಾಮಧೇಯವುಳ್ಳ, ಧನುವು-ಶರಾಸನವು, ಅಲ್ಲ–ಆಗಲಿಲ್ಲವು, ಬೀಳ್ವ–ಉದುರುತ್ತಿರುವ, ಮಳೆವನಿಗಳು–ವರ್ಷಧಾರೆಗಳು, ಕೂರಂಬುಗಳು–ಮೊನೆಯಾದ ಬಾಣಗಳು, ಅಲ್ಲ–ಅಲ್ಲವು ಕಂಗೊಳಿಪ–ಥಳಥಳಿಸುವ, ಕಾರ್ಮುಗಿಲು–ಪ್ರಳಯದ ಮೋಡಗಳು ಹೊರತು, ಕೃಷ್ಣನು–ಕೃಷ್ಣಸ್ವಾಮಿಯು, ಅಲ್ಲ–ಅಲ್ಲವು, ಎಂಬವೋಲ್-ಎಂಬತೆರನಾಗಿ, ಕೊಳುಗುಳಕ್ಕೆ–ರಣಕ್ಕೆ, ವೈದೋರೆ–ಕಾಣಲು, ಕಂಡು – ನೋಡಿ, ಅನುಸಾಲ್ವನು – ಸಾಲ್ವಾನುಜನು, ಸಿಂಹದಂತೆ – ಮೃಗೇಂದ್ರನ ಹಾಗೆ, ಇದಿರಾದನು – ಎದುರು ಬಿದ್ದನು ||

ಅ|| ವಿ|| ಮರಣವಿಲ್ಲದವರು – ಅಮರು (ನಞ್ ಬಹು,). ಅಮರರ ಇಂದ್ರ (ಷ. ತ.) ಅಮರೇಂದ್ರನ ಚಾಪ (ಷ. ತ.) ಕೂರಂ (ತೃ). ಕ್ರೂರಂ (ತ್ಸ). ಅಂಬು-ನೀರು, ಬಾಣ, ಇದು ಕೃಷ್ಣಸ್ವಾಮಿಗೂ ಮೇಘಕ್ಕೂ ಹೋಲಿಕೆಯುಳ್ಳ ಪದ್ಯ || ೫೧ ||

ಟೀ|| ವ್ಯಗ್ರದಿಂ–ಧೀರತನದಿಂದ, ಐದುವ–ಸಮೀಪವನ್ನು ಸೇರುತ್ತಿರುವ, ಮುರಾರಿಯಂ–ಕೃಷ್ಣಮೂರ್ತಿಯನ್ನು, ಕಂಡು-ಈಕ್ಷಿಸಿ, ತನ್ನ–ಸ್ವಕೀಯವಾದ, ಅಗ್ರಜನ–ಜ್ಯೇಷ್ಠನನ್ನು, ಅಂದು-ಹಿಂದೆ, ಕೊಂದ–ಸಂಹರಿಸಿದ, ಪಗೆವನು–ವೈರಿಯು, ಈತನಂ-ಇವನನ್ನು, ನಿಗ್ರಹಿಪೆನು-ದಂಡಿಸುತ್ತೇನೆ, ಎಂದು–ಎಂಬದಾಗಿ, ಕಣೆನಾಲ್ಕರಿಂ–ನಾಲ್ಕುಶರಗಳಿಂದ, ಅಚ್ಯುತನ–ಮುರಹರನ, ಹಯಚತುಷ್ಟಯಮಂ–ನಾಲ್ಕು ತುರಗಗಳನ್ನು ನೋಯಿಸಲು–ಬಾಧೆಪಡಿಸಲು, ಉಗ್ರ-ತೀಕ್ಷ್ಣಗಳಾದ, ಶರ–ಅಲಗು

ನಾಗಿ ಯುದ್ಧಸನ್ನದ್ಧನಾಗಿ ಬರುತ್ತಿದ್ದನು || ೫೦ || ಈ ಕೃಷ್ಣ ಪರಮಾತ್ಮನ ರಥಕ್ಕೆ ಕಟ್ಟಿದ್ದ ಉತ್ತಮಾಶ್ವಂಗಳು ಥಳಥಳಿಸುವ ಮಿಂಚುಗಳನ್ನೂ ಕೂಡ ಅಲಿಗಳೆಯುತ್ತಿದ್ದವು. ಪಾರುಂಬಳೆಗಳ ಗಿಂಗಿರಧ್ವನಿಯು ಗುಡುಗಿನ ಶಬ್ದವೆಂದು ತೋರುವಂತೆ ಭ್ರಾಂತಿಯನ್ನುಂಟುಮಾಡುತ್ತಿತ್ತು. ಇವನು ಹಿಡಿದುಕೊಂಡಿದ್ದ ಶಾರ್ಙ್ಗವೆಂಬ ಬಿಲ್ಲು ಇಂದ್ರ ಧನುಸ್ಸನ್ನು ತಿರಸ್ಕರಿಸುತ್ತಿತ್ತು. ಈತನು ಬಾಣಗಳ ಮಳೆಯನ್ನು ಕರೆಯುತ್ತಿದ್ದರೂ ಕೂಡ ಎಲ್ಲರೂ ಮುಗಿಲ್ಗಳ ನೀರ್ವನಿಗಳೆಂದು ಭ್ರಾಂತಿಯನ್ನೈದುತ್ತಿದ್ದರು. ಇವನ ನೀಲವರ್ಣದ ಶರೀರವನ್ನು ನೋಡಿದವರೆಲ್ಲರೂ ಪ್ರಳಯಕಾಲದ ಮೇಘವೆಂದು ಊಹಿಸುತ್ತಿದ್ದರು. ಈ ರೀತಿಯಲ್ಲಿ ದಿವ್ಯ ತೇಜಸ್ಸಿನಿಂ ಮೆರೆಯುತ್ತ ಎದುರಾಗಿ ಬರುವ ಶ್ರೀ ಕೃಷ್ಣಮೂರ್ತಿಯನ್ನು ಅನುಸಾಲ್ವನು ನೋಡಿ || ೫೧ || ತನ್ನ ಅಣ್ಣನಾದ ಸಾಲ್ವನನ್ನು ಕೊಂದವನು ಇವನೇ ಎಂದು ಮನದಲ್ಲಿ ಬಗೆದು ಈತನನ್ನು ಯುದ್ಧದಲ್ಲಿ

ಷ್ಟಯಿಸನೋಯಿಸಲು ‖ ಉಗ್ರಶರಘಾತಿಗವುಸೂತನಂಕೈಕೊಳದೆ | ವಿಗ್ರಹವನುಳಿದೊಂದುಕಡೆಗೆಹಾಯ್ದುವುಯದುಕುಲಾ ಗ್ರಣಿಯನಿದಿರೆಕಾಣದೆನೊಂದುತನ್ನವರ್ಗನುಸಾಲ್ವನಿಂತೆಂದನು ‖ ೫೨ ‖ ನವದವುದೆಪರಿವಾರಮಿಾವಧನಮಂತರಿಸ | ಲವಿ ಚಾರದಿಂಪ್ರಜೆಗಳಲಸಿದರೋದೇಶದೋಳ್ತ | ವಕಮಿಗೆನಾರಿಯರ್ಪತಿಗಳಿರಲನ್ಯರೋಳ್ನೆರೆದಪರೊಮುತ್ಕೋಶಕೆ ‖ ತವೆಪುತ್ರರಿ ಲ್ಲದಳಿದವರೊಡವೆಸಾರ್ದವುದೊದ | ಬವರಕೈತಂದರಿಪುಕೃಷ್ಣನಂಕಾಣದಿಹ | ಪವಣಾವುದಕಟಪೊಸತಿದುತನ್ನಹಗೆಹರಿಯ ದೆಂದುಚಿಂತಿಸುತಿರ್ದನು ‖೫೩‖ ಅನ್ನೆಗಂಕುದುರೆಗಳನುಪಚರಿಸಿಸಾರಥಿಗೆ | ಸನ್ನೆಗೈದನುಸಾಲ್ವನಭಿಮುಖಕೆಮುರಹರಂ | ಕೆನ್ನೆಗೇರಿಸಿಚಾಪದೊಳ್ಪೂಡಿದಂಬನಾರ್ದಸುತಬರಲವನತ್ತಲು ‖ ಪನ್ನಗಾರಿಧ್ವಜಂಬಳಿಕೈತರಲ್ಕಂಡು | ತನ್ನೋಳ್ಪೊಣರ್ವಭ

---

ಗಳ, ಘಾತಿಗೆ–ಏಟಿಗೆ, ಆವು–ಆ ಹಯಂಗಳು, ಸೂತನಂ–ತೇರನ್ನು ನಡೆಯಿಸುವನನ್ನು, ಕೈಕೊಳದೆ–ಗಣಿಸದೆ, ವಿಗ್ರಹವನು–ರಣರಂಗವನ್ನು, ಉಳಿದು–ತ್ಯಜಿಸಿ, ಒಂದು ಕಡೆಗೆ-ಶರಸಂಧಾನವಿಲ್ಲದೆಡೆಗೆ, ಹಾಯ್ದವು-ಪಾರಿದವು, ಯದುಕುಲಾಗ್ರಣಿಯನು–ಕೃಷ್ಣಸ್ವಾಮಿಯನ್ನು, ಇದಿರೆ-ಮುಂಭಾಗದಲ್ಲಿ, ಕಾಣದೆ-ನೋಡದೆ, ನೊಂದು–ವ್ಯಥೆಗೊಂಡು, ತನ್ನವರ್ಗ–ತನ್ನ ಕಡೆಯವರನ್ನು ಕುರಿತು, ಅನುಸಾಲ್ವನು–ಸಾಲ್ವಾನುಜನು, ಇಂತು–ಮುಂದೆ ಹೇಳುವಂತೆ, ಎಂದನು–ನುಡಿದನು ‖

ಅ‖ ವಿ‖ ಯದುವಂಶಜರಕುಲ=ಯದುಕುಲ (ಷ. ತ) ಯದುಕುಲದಲ್ಲಿ ಅಗ್ರಣಿ (ಸ. ತ) ಅಗ್ರ–ಮೊದಲು, ಜ-ಹುಟ್ಟಿದವನು (ಅಣ್ಣನು) ‖೫೨‖

ಈವ-ಕೊಡಬೇಕಾಗಿರುವ, ಧನಮಂ–ಹಣವನ್ನು ಎಂದರೆ ಕೃಷ್ಣಾರ್ಪಿತವಾಗುವಂತೆ ಕೊಡಬೇಕಾದ ದ್ರವ್ಯವನ್ನು, ಅಂತರಿಸಲು – ಕೊಡದೆ ಹೋದಕಾರಣ, ಪರಿವಾರಂ – ದಳವು, ನವದವುದೆ – ಆಹಾರವಿಲ್ಲದೆ ನಶಿಸಿತೋ? ಆ ವಿಚಾರದಿಂ–ಬಳ್ಳೀದು ಕೆಟ್ಟದ್ದೆಂಬ ವಿಮರ್ಶೆಯಿಲ್ಲದೆ, ಪ್ರಜೆಗಳು–ಲೋಗರು, ಅಲಸಿದರೊ-ಆಯಸಂಗೊಂಡರೊ? ದೇಶದೋಳ್–ನಾಡಿನಲ್ಲಿ, ತವಕ–ಮೋಹಾತಿಶಯವು, ಮಿಗೆ–ಮಿತಿಮಿಾರಿ, ನಾರಿಯರು-ಸ್ತ್ರೀಯರು, ಪತಿಗಳು–ಒಡೆಯರು, ಇರಲು–ಇದ್ದರೂಕೂಡ, ಅನ್ಯರೋಳ್–ಬೇರೆಯವರೊಂದಿಗೆ, ನೆರೆದಪರೊ - ಕ್ರೀಡಿಸುತ್ತಿರುವರೊ? ಮುತ್ಕೋಶಕೆ–ನನ್ನ ಭಂಡಾರಕ್ಕೆ, ತವೆ–ಚೆನ್ನಾಗಿ, ಪುತ್ರರಿಲ್ಲದೆ-ತನುಜಾತರಿಲ್ಲದೆ (ಕುವರರಿಲ್ಲದೆ), ಅಳಿದವರ–ಪ್ರಾಣವಂ ಬಿಟ್ಟವರ, ಒಡವೆ- ದ್ರವ್ಯಾದಿಗಳು, ಸಾರ್ದವುದೊ–ಬಂದೊದಗಿದೆಯೊ? ಬವರಕೆ–ರಣಕ್ಕೆ, ಐತಂದ-ಸೇರಿದ, ಕೃಷ್ಣನಂ- ಕೃಷ್ಣಪರಮಾತ್ಮನನ್ನು, ಕಾಣದಿಹ–ನೋಡದಿರುವ, ಪವಣಂ – ಬಗೆಯು, ಆವುದು - ಯಾವುದಾಗಿದೆ? ಅಕಟ– ಆಹಾ! ಇದು – ಈ ಕಾರ್ಯವು, ಪೊಸದು - ನೂತನವಾದದ್ದು, ತನ್ನ–ಸ್ವಕೀಯನಾದ, ಹಗೆ–ಶತ್ರುವು, ಹರಿಯದು - ನಿವಾರಣೆಯಾಗಲಿಲ್ಲವು, ಎಂದು–ಎಂಬ ತೆರನಾಗಿ, ಚಿಂತಿಸುತಿರ್ದನು–ವ್ಯಸನಪಡುತ್ತಿದ್ದನು.

ಅ‖ ವಿ‖ ಕೃಷ್ಣನು ಅನುಸಾಲ್ವನನ್ನು ಕಾಣದೆ ದುಃಖಪಡುತ್ತಿರುವುದನ್ನು ಸೂಚಿಸುವ ಪದ್ಯವಾಗಿ ಇರುವುದು ‖೫೩‖

ಟೀ‖ ಅನ್ನೆಗಂ-ಅಷ್ಟರೊಳಗಾಗಿ, ಕುದುರೆಗಳನು - ಅಶ್ವಂಗಳನ್ನು, ಉಪಚರಿಸಿ – ಆದರಿಸಿ, ಸಾರಥಿಗೆ–ರಥವನ್ನು

---

ಸೋಲಿಸಬೇಕೆಂದು ನಾಲ್ಕು ಬಾಣಗಳನ್ನು ಬತ್ತಳಿಕೆಯಿಂದ ತೆಗೆದು ಕೃಷ್ಣನ ರಥಕ್ಕೆ ಕಟ್ಟಿದ ಕುದುರೆಗಳಮೇಲೆ ಬಿಟ್ಟನು. ಅನುಸಾಲ್ವನು ಬಿಟ್ಟ ಬಾಣಗಳ ಹೊಡೆತಕ್ಕೆ ರಥಾಶ್ವಗಳು ಬೆದರಿ ಸಾರಥಿಯ ಕೈಗೆ ಸಿಕ್ಕದೆ ಓಡಿದವು. ಅನುಸಾಲ್ವನು ಸಂತೋಷವನ್ನು ಹೊಂದಿ ಕೃಷ್ಣನು ತನ್ನ ಕೈವಶನಾದನೆಂದೂ, ಅವನನ್ನು ಹಿಡಿದು ತರಬೇಕೆಂದೂ ಯೋಚಿಸಿ, ಶ್ರೀ ಕೃಷ್ಣಮೂರ್ತಿಯಿದ್ದೆಡೆಗೆ ಬಂದು ನೋಡಿದರೆ ಅಲ್ಲಿ ಸ್ವಾಮಿಯು ಇರಲಿಲ್ಲ. ಎಲ್ಲೆಲ್ಲಿ ನೋಡಿದರೂ ಸಿಕ್ಕದಿರಲು ಅನುಸಾಲ್ವನು ತನ್ನ ಕಡೆಯವರನ್ನು ಕುರಿತು ‖೫೨‖ ಎಲೈ ವೀರಾಗ್ರಣಿಗಳೆ! ನಮ್ಮೊಂದಿಗೆ ಯುದ್ಧಮಾಡುತ್ತಿದ್ದ ಕೃಷ್ಣನು ಈಗ ಕಾಣಿಸುವುದೇ ಇಲ್ಲ. ನಮ್ಮ ರಾಜ್ಯದಲ್ಲಿ ದಾನಧರ್ಮ ಪರೋಪಕಾರಗಳೂ ನಿಂತುಹೋಗಿರಬಹುದು. ಸೇವಕರಿಗೂ ಯಾಚಕರಿಗೂ ಜೀವನವು ಅಭಾವವಾಗಿದ್ದೀತು? ಈ ದೇಶದಲ್ಲಿ ನ್ಯಾಯಾನ್ಯಾಯಗಳ ವಿಮರ್ಶೆಯೇ ಇಲ್ಲದೆ ಜನರು ತೊಂದರೆಯನ್ನನುಭವಿಸುತ್ತಿರಬಹುದು. ಹೆಂಗಸರು ಕಾಮಾತುರರಾಗಿ ತಮ್ಮ ತಮ್ಮ ಪತಿಗಳನ್ನು ಲಕ್ಷ್ಯಮಾಡದೆ ಪರ ಪುರುಷರೊಂದಿಗೆ ಸೇರುತ್ತಿರಬಹುದು. ಅಥವಾ ನನ್ನ ಭಂಡಾರಕ್ಕೆ ಅನ್ಯಾಯದ ಸ್ವತ್ತುಗಳೇನಾದರೂ ಸೇರಿದ್ದೀತೋ ಏನೋ ತಿಳಿಯದಲ್ಲಾ! ಇಂಥಾ ಅನ್ಯಾಯಗಳಿಲ್ಲವಾದರೆ ಕೃಷ್ಣಸ್ವಾಮಿಯು ನಮ್ಮ ಕಣ್ಣಿಗೆ ಕಾಣದಿರುತ್ತಿದ್ದನೆ! ಎಂಬೀ ಪರಿಯಾಗಿ ಚಿಂತಿಸುತ್ತಿರುವಷ್ಟರೊಳಗಾಗಿ ‖ ೫೩ ‖ ಪರಮಾತ್ಮನಾದ ಕೃಷ್ಣನು ಕುದುರೆಗಳನ್ನು ಸರಿಪಡಿಸಿಕೊಂಡು ರಥವನ್ನು ನಡೆಯಿಸತಕ್ಕ ಸಾರಥಿಗೆ ಜಾಗ್ರತೆಪಡಬೇಕೆಂದರುಹಿ, ಅನುಸಾಲ್ವನಿಗೆ ಎದುರಾಗಿ ಬಂದು ಶರಸಂಧಾನವಂ

ರದಿಂಬಂದುಸಮರದೋ | ಳ್ಗನ್ನಗತಕವನೆಸಗಲೇನಹುದುಮಾರಾಂತುನೋಡೆನುತತೆಗದೆಚ್ಚನು || ೫೪ || ಸಂಜನಿಸುವೆಳನಗೆ ಯೊಳಗಧರಂಮಾರಾಂಪ್ಡೆ | ಡಂಜುವೆವುನಿಮಗೆಸಂಗ್ರಾಮದೊಳ್ದಾನವರ | ಭಂಜನೆಗಲಸಿದೊಡಂಬಿಡದಲಾನಮಗೆನುತತೆಗೆದೆಸ ಲದಂಸ್ಯೆರಿಸಿ || ಸಿಂಜಿನಿಯೊಳೊಂದುಸರಳಂಪೂಡಿಬರಸೆಳೆನು | ರಂಜಿಪವಿಶಾಲವಕ್ಷಸ್ಥಳವನೆಚ್ಚನಂ | ದಂಜನಾದ್ರಿಯಮೇಲೆ ಸಿಡಿಲೆರಗಿದಂತಾಗೆದನುಜಾರಿಮೈಮರೆದನು || ೫೫ || ಪಾಥೋರುಹಾಕ್ಷನಂದಾರುಕಂನಿಟ್ಟಿಸಿವ | ರೂಥಮಂತಿರುಗಿಸಿದನಖಿಲ ಯಾದವರಥಗ | ಳಾಧೂಳಿಮಸಗಲುಭಯಂಗೊಂಡುಪುರಜನದನೆರವಿಪೇರ್ಬಾಗಿಲ್ಗಳ || ವೀಧಿಗಳೊಳಿಟ್ಟಳಿಸಿಪಟ್ಟಣಕೆಸರಿಯೆ

---

ನಡೆಯಿಸುವವನಿಗೆ (ದಾರುಕನೆಂಬುವವನಿಗೆ), ಸನ್ನೆಗೈದು–ಸಂಜ್ಞೆಯಿಂದ ತಿಳಿಯಪಡಿಸಿ, ಅನುಸಾಲ್ವನ–ಅನುಸಾಲ್ವನೆಂಬ ರಕ್ಕಸನ, ಅಭಿಮುಖಕೆ-ಮುಂದುಗಡೆ, ಮುರಹರಂ- ಕೃಷ್ಣಸ್ವಾಮಿಯು, ಚಾಪದೋಳ್- ಧನುಸ್ಸಿನಲ್ಲಿ, ಪೂಡಿದ- ಸೇರಿಸಿದ, ಅಂಬನು–ಅಲಗನ್ನು, ಕೆನ್ನೆಗೆ-ಆಕರ್ಣಾಂತವಾಗಿ, ಏರಿಸಿ–ಸೆಳೆದು, ಅರ್ದು–ಅರ್ಭಟವಂಮಾಡಿ, ಎಸುತ ಬರಲು–ಪ್ರಯೋಗಮಾಡುವುದಕ್ಕೆ ಉಪಕ್ರಮಿಸಲು, ಅವನು, ಅನುಸಾಲ್ವನು– ಆ ಸಾಲ್ವಾನುಜನು, ಅತ್ತಲು–ಆ ಪಾರ್ಶ್ವದಲ್ಲಿ, ಪನ್ನಗ–ಹಾವುಗಳಿಗೆಲ್ಲಾ, ಅರಿ–ಹಗೆಯಾದ ಗರುಡನನ್ನು, ಧ್ವಜಂ– ಧ್ವಜಪಠದಲ್ಲಿ ಉಳ್ಳ ಕೃಷ್ಣಮೂರ್ತಿಯು, ಐತರಲು– ಸಮೀಪವನ್ನು ಸೇರಲು, ಕಂಡು–ಈಕ್ಷಿಸಿ, ತನ್ನೊಳ್–ತನ್ನೊಂದಿಗೆ, ಪೊಣರ್ವ–ಹೋರಾಡತಕ್ಕ, ಭರದಿಂ–ಸಂಭ್ರಮದಿಂದ, ಬಂದು–ಐತಂದು, ಸಮರದೊಳ್–ರಣದಲ್ಲಿ, ಗನ್ನಗತಕವನು–ನುಸಿದು ಹೋಗುವಿಕೆಯನ್ನು, ಎಸಗಲು–ಗೈಯಲು, ಏನಹುದು–ಏನುತಾನೆ ಆದೀತು? ಮಾರಾಂತು–ಪ್ರತಿಭಟಿಸಿ. ನೋಡು–ಈಕ್ಷಿಸು, ಎನುತ–ಎಂದು ನುಡಿಯುತ್ತ, ತೆಗೆದು–ಬಾಣಗಳನ್ನು ಗುರಿಯಿಟ್ಟು, ಎಚ್ಚನು–ಹೊಡೆದನು.

ಅ|| ವಿ|| ಸನ್ನೆ (ತ್ಭ) ಸಂಜ್ಞೆ (ತ್ಸ) ಪನ್ನಗಾರಿಧ್ವಜ–ಪನ್ನಗ (ಕೃ. ವೃ) ಪನ್ನಗಂಗಳ ಅರಿ (ಷ. ತ.) ಪನ್ನಗಾರಿಯನ್ನು ಧ್ವಜದಲ್ಲಿ ಉಳ್ಳವನು ಯಾರೊ ಅವನು (ಬ. ಸ) ||೫೪||

ಟೀ|| ಅಗಧರಂ–ಗೋವರ್ಧನ ಪರ್ವತವನ್ನು ಕಿರುಬೆರಳಿನಿಂದ ಮೇಲಕ್ಕೆತ್ತಿ ಹಿಡಿದಂಥ ಕೃಷ್ಣನು, ಸಂಜನಿಸುವ–ಉಂಟಾಗುವ, ಎಳನಗೆಯೊಳು–ಹುಸಿನಗುವಿನಿಂದ, ಸಂಗ್ರಾಮದೊಳು–ಸಮರದಲ್ಲಿ, ನಿಮಗೆ–ನಿಮ್ಮ ಮೇಲೆ, ಮಾರಾಂಪೊಡೆ–ಪ್ರತಿಭಟಿಸಿ ನಿಲ್ಲುವುದಕ್ಕೆ, ಅಂಜುವೆವು–ಹೆದರುತ್ತೇವೆ, ದಾನವರ–ಅಸುರರ, ಭಂಜನೆಗೆ–ನಾಶಕ್ಕೆ, ಅಲಸಿದೊಡಂ–ಹಿಮ್ಮೆಟ್ಟಿದರೂ ಕೂಡ, ನಮಗೆ–ನನಿಗಾದರೊ, ಬಿಡದಲಾ–ತಪ್ಪಲಾರದಷ್ಟೆ? ಎನುತ–ಎಂದು ನುಡಿಯುತ್ತ, ತೆಗೆದು–ಆಕರ್ಣಾಂತವಾಗಿ ಎಳೆದು, ಬಿಡಲು–ಬಾಣಗಳನ್ನು ಪ್ರಯೋಗಿಸಲು, ಅದರ–ಅಲಗನ್ನು, ಸೈರಿಸಿ–ತಾಳಿ, ಸಿಂಜಿನಿಯೊಳು–ಧನುಸ್ಸಿನ ನಾರಿಯಲ್ಲಿ, ಒಂದು ಸರಲಂ–ಬಾಣವೊಂದನ್ನು, ಪೂಡಿ–ತಗಲಿಸಿ, ಬರಸೆಳೆದು–ಚೆನ್ನಾಗಿ ಎಳೆದು, ರಂಜಿಪ–ಕಡುಧೈರ್ಯದಿಂದ ಮೆರೆವ, ವಿಶಾಲ–ಬಹು ದೊಡ್ಡ, ವಕ್ಷಸ್ಥಲವನು–ಹೃದಯಭಾಗದ ಕಡೆಗೆ, ಎಚ್ಚನು–ಹೊಡೆದನು, ಅಥವಾ ಬಿಟ್ಟನು. ಅಂದು–ಪೂರ್ವದಲ್ಲಿ, ಅಂಜನಾದ್ರಿಯಮೇಲೆ–ಅಂಜನವೆಂಬ ಪರ್ವತದ ಮೇಲ್ಗಡೆಗೆ, ಸಿಡಿಲು–ಸಿಡಿಲೆಂಬ ಅಗ್ನಿಯು, ಬಿದ್ದಂತೆ–ಬಿದ್ದ ತೆರನಾಗಿ, ಆಗೆ–ಆಗಿಹೋಗಲು, ದನುಜಾರಿ–ಅಸುರವೈರಿಯು, ಮೈಮರೆದನು–ಸ್ಮರಣೆಯಿಲ್ಲದೆ ಬಿದ್ದು ಹೋದನು.

ಅ|| ವಿ|| ದನುಜಾರಿ=ದನು–ದನುವೆಂಬನಳಲ್ಲಿ, ಜ–ಹುಟ್ಟಿದವನು (ಕೃ. ವೃ) ದನುಜರ ಅರಿ (ಷ. ತ) ||೫೫||

ಟೀ|| ಪಾಥೋರುಹಾಕ್ಷನಂ–ಕೃಷ್ಣಸ್ವಾಮಿಯನ್ನು, ದಾರುಕಂ– ದಾರುಕನೆಂಬುವನು, ನಿಟ್ಟಿಸಿ–ನೋಡಿ, ವರೂಥಮಂ–ತೇರನ್ನು, ತಿರುಗಿಸಿದನು–ಹಿಂದಕ್ಕೆ ತಿರುಗಿಸಿದನು, ಅಖಿಳ–ಎಲ್ಲಾ, ಯಾದವರಥಗಳು–ಯದುಕುಲದ ರಥಿಕಶ್ರೇಷ್ಠರೂ

---

ಮಾಡಿ, ಕಿವಿಯವರೆಗೂ ಎಳೆದು ಸಾಲ್ವಾನುಜನ ಮೇಲೆ ಕಣೆಯೊಂದನ್ನು ಬಿಟ್ಟು ಬಿಟ್ಟನು. ಕೃಷ್ಣನು ಪುನಃ ತನ್ನ ದೃಷ್ಟಿಪಥಕ್ಕೆ ಸಿಕ್ಕಿರುವುದನ್ನು ನೋಡಿದ ಕೂಡಲೆ ಅನುಸಾಲ್ವನೂ ಕೂಡ ಕ್ರೂರವಾದ ಬಾಣವೊಂದನ್ನು ಸೆಳೆದುಕೊಂಡು ಮುರಹರನಮೇಲೆ ಬಿಟ್ಟು ಬಿಟ್ಟನು. ||೫೪|| ಇದನ್ನು ಗಣನೆಗೇ ತಾರದೆ ಮುರಹರನು ಹುಸಿನಗೆಯಂ ತಾಳಿ ಅನುಸಾಲ್ವನನ್ನು ಕುರಿತು, ನಿನ್ನೊಡನೆ ಯುದ್ಧಮಾಡಲು ನನಗೆ ದಿಗಿಲಾದರೂ ಕೂಡ ರಾಕ್ಷಸರನ್ನು ನಾಶಮಾಡತಕ್ಕದ್ದು ನನ್ನ ಕರ್ತವ್ಯವಾಗಿರುವುದರಿಂದ ಬೇಸರಪಟ್ಟರೆ ಆಗಲಾರದೆಂದು ಹೇಳುತ್ತಾ, ಬಂದಾನೊಂದು ಅಲಗನ್ನು ಅನುಸಾಲ್ವನ ಮೇಲೆ ಬಿಡಲು ಅವನು ಆ ಕ್ರೂರ ಬಾಣವನ್ನು ಸಹಿಸಿಕೊಂಡು, ಧನುಸ್ಸಿನಲ್ಲಿ ಬಾಣವನ್ನು ಪೋಣಿಸಿ ಆಕರ್ಣಾಂತವಾಗಿ ಸೆಳೆದು ಶ್ರೀ ಕೃಷ್ಣನ ಹೃದಯದೆಡೆಯಲ್ಲಿ ಬಿಟ್ಟುಬಿಟ್ಟನು. ಈ ಕ್ರೂರ ಬಾಣವು ಹೋಗಿ ಕೃಷ್ಣಮೂರ್ತಿಯ ಎದೆಯನ್ನು ಚುಚ್ಚಲಾಗಿ, ಅದರ ನೋವನ್ನು ತಡೆಯಲಾರದೆ ಕೃಷ್ಣನು ಮೂರ್ಛಾಕ್ರಾಂತನಾಗಿ ಬಿದ್ದು ಹೋದನು. || ೫೫ || ಕೂಡಲೆ ಇವನ ಸಾರಥಿಯಾದ ದಾರುಕನು ರಥವನ್ನು ಹಿಂದಿರುಗಿಸಿಕೊಂಡು ಹೊರಡಲು ಮಿಕ್ಕ ಯಾದವರೆಲ್ಲಾ ಇವನನ್ನೇ ಹಿಂಬಾಲಿಸಿದರು.

ನರ | ನಾಥನಿರ್ದಲ್ಲಿಬೆಂಗಾಗಿನಿಂದಂವಧೂ | ಯೂಥಮುಸುರಾರಿಯುಂಬಳಸಿತದರೊಳ್ಸತ್ಯಭಾಮೆನಗುತಿಂತೆಂದಳು || ೫೬ || ದಾನವಂಗಿದಿರಾಗಿಪೋಗಿರಣದೊಳ್ಪ್ರಾ | ಣದಾನವಂಬಡೆದುಮುರಳಿದನಿನ್ನ ಸತ್ವದನಿ | ದಾನವಂತಿಳಿದಹಿತರೇಗೆಯ್ಯರಕಟನಿಜಶೌರ್ಯ ದಿಂಪ್ರದ್ಯುಮ್ನನ || ಮಾನವಂಭಂಗಿಸಿದೆನಿನ್ನಂಜಗದೊಳಾವ | ಮಾನವಂಬಣ್ಣಿಸುವನಿನ್ನುನಿನ್ನಧಟಗೆಸ | ಮಾನವಂಕಾಣೆನೆಂದಳ್ಸತ್ಯಭಾಮೆನಗುತುರೆಜರಿದುನಿಜಪತಿಯನು || ೫೭ || ಕಂದೆರೆದುವಲ್ಲಭೆಯನುಡಿಗೆಲಜ್ಜಿಸಿಮನಂ | ಕಂದೆಕಣ್ಣಾಲಿಗಳ್ಕೆಂಪಡರೆಖಾತಿಮಿಗ | ಲಂದೆಡಬಲಂಗಳಂನೋಡಿಹರಿನುತ್ತೆ ರಣಕನುವಾಗುತಿರಲಿತ್ತಲು || ನಿಂದುವೃಷಕೇತುವನುಸಾಲ್ವಕನತಡೆ

ಆಧೂಳಿ-ಕೃಷ್ಣಸ್ವಾಮಿಯ ತೇರು ಹೋಗುತ್ತಿರುಗಾಗ ದಾರಿಯಲ್ಲಿ ಉಂಟಾದ ಕೆಂಧೂಳು, ಮುಸಗಲು-ಎಲ್ಲೆಲ್ಲಿಯೂ ಮುಚ್ಚಿಕೊಳ್ಳಲು, ಭಯಗೊಂಡು-ಹೆದರಿ, ಪುರಜನದ-ಪುರವಾಸಿಗಳ, ನೆರವಿ-ಸಮುದಾಯವು, ಪೆರ್ಬಾಗಿಲ್ಗಳ - ಹೆಬ್ಬಾಗಿಲುಗಳ, ವೀಧಿಗಳೊಳು-ದಾರಿಗಳಲ್ಲಿ, ಇಟ್ಟಣಿಸಿ-ಸಾಂದ್ರವಾಗಿ ನೆರೆದು, ಪಟ್ಟಣಕೆ-ನಗರಕ್ಕೆ, ಸರಿಯೆ-ಹೊರಡುವುದಕ್ಕೆ ಉಜ್ಜುಗಿಸಲು, ಅಲ್ಲಿರ್ದ-ಆ ಸ್ಥಳದಲ್ಲಿದ್ದಂಥ, ನರನಾಥನು-ನರಪತಿಯಾದ ಧರ್ಮಜನು, ಬೆರಗಾಗಿ-ಭ್ರಾಂತಿಯಿಂದ ಕೂಡಿ, ನಿಂದಂ-ನಿಂತು ಬಿಟ್ಟನು, ವಧೂಯೂಥಂ-ಅಬಲೆಯರ ಗುಂಪು, ಅಸುರಾರಿಯಂ - ಮುರಾಂತಕನನ್ನು, ಬಳಸಿತು- ಕವಿದುಕೊಂಡಿತು, ಅದರೊಳ್-ಆಗ ಆ ಹೆಂಗಸರ ನಡುವೆ, ಸತ್ಯಭಾಮೆ-ಸತ್ಯಭಾಮಾದೇವಿಯು, ನಗುತ-ಹಾಸ್ಯಮಾಡುತ್ತ, ಇಂತು-ಮುಂದೆ ಹೇಳುವಂತೆ, ಎಂದಳು-ನುಡಿದಳು ||

ಅ|| ವಿ|| ಪಾಥೋರುಹದಂತೆ ಅಕ್ಷಿಯು ಯಾರಿಗೊ ಅವನು ಪಾಥೋರುಹಾಕ್ಷ (ಬ. ಸ). ಪಾಥೋರುಹ-ತಾವರೆ ಎಸಳಿನಂತೆ, ಅಕ್ಷಂ-ಕಣ್ಣುಗಳುಳ್ಳವನು (ಕೃಷ್ಣನು) ಪಿರಿದು+ಬಾಗಿಲು=ಪೆರ್ಬಾಗಿಲು (ವಿ. ಪೂ.) ಭಯವನ್ನು ಕೊಂಡು (ಭಯಂಗೊಂಡು) ಕ್ರಿ. ಸ ||೫೬||

ಟೀ|| ದಾನವಂಗೆ-ಅನುಸಾಲ್ವನೆಂಬ ಅಸುರನಿಗೆ, ಇದಿರಾಗಿ-ಪ್ರತಿಭಟಿಸಿ, ಪೋಗಿ-ಹೋದವನಾಗಿ, ರಣದೋಳ್-ಯುದ್ಧರಂಗದಲ್ಲಿ, ಪ್ರಾಣದಾನವಂ-ಹರಣವನ್ನು ಸಲಹಿಕೊಳ್ಳುವುದನ್ನು, ಪಡೆದು-ಹೊಂದಿ, ಮರಳಿದ-ಹಿಂದಿರುಗಿದ, ನಿನ್ನ-ನಿನ್ನ ಸಂಬಂಧವಾದ, ಸತ್ವದ-ಪರಾಕ್ರಮದ, ನಿದಾನವನುಂ-ಕಾರಣವನ್ನು, ತಿಳಿದು-ಅರಿತು, ಅಹಿತರು-ವೈರಿಗಳು, ಏಗೆಯ್ಯರು-ಯಾವ ಕೆಲಸ ಮಾಡುವುದಕ್ಕೆ ತಾನೆ ಹಿಮ್ಮೆಟ್ಟಿಯಾರು? ಅಕಟ-ಆಹಾ, ನಿಜ-ಸ್ವಕೀಯವಾದ, ಶೌರ್ಯದಿಂ-ಪರಾಕ್ರಮದಿಂದ, ಪ್ರದ್ಯುಮ್ನನ-ಮನ್ಮಥನ, ಮಾನವಂ-ಮರ್ಯಾದೆಯನ್ನು, ಭಂಗಿಸಿದೆ - ಹೀಯಾಳಿಸಿದವನಾದೆ, ಜಗದೊಳು-ಲೋಕದಲ್ಲಿ, ಆವ ಮಾನವಂ-ಯಾವನು ತಾನೆ, ನಿನ್ನಂ-ನಿನ್ನನ್ನು, ಬಣ್ಣಿಸುವನು - ಹೊಗಳುತ್ತಾನೆ? ನಿನ್ನ-ನಿನ್ನ ಸಂಬಂಧದ, ಅಧಟಗೆ-ಪರಾಕ್ರಮಕ್ಕೆ, ಸಮಾನವನುಂ-ಸಮವಾದುದನ್ನು, ಕಾಣೆನು - ಈಕ್ಷಿಸಲಿಲ್ಲವೆಂಬದಾಗಿ, ನಗುತ-ಹಾಸ್ಯವಂ ಮಾಡುತ್ತ, ನಿಜಪತಿಯನು-ತನ್ನ ಪ್ರಾಣನಾಯಕನನ್ನು, ಉರೆ-ಹೆಚ್ಚಾಗಿ, ಜರೆದು-ಹೀಯಾಳಿಸಿ, ಸತ್ಯಭಾಮೆ-ಸತ್ಯಭಾಮೆಯು, ಎಂದಳು-ಎಂಬದಾಗಿ ಹೇಳಿದಳು. ||

ಅ|| ವಿ|| ಬಣ್ಣಿಸು (ತ್ಭ)-ವರ್ಣಿಸು (ತ್ಸ) ||೫೭||

ಟೀ|| (ಕೃಷ್ಣನು) ಕಂದೆರೆದು-ಆಲಿಗಳನ್ನಗಲಿಸಿ, ವಲ್ಲಭೆಯ-ಪ್ರಾಣಕಾಂತೆಯ, ನುಡಿಗೆ-ವಚನಂಗಳಿಗೆ, ಲಜ್ಜಿಸಿ-

ಇವರ ರಥವೇಗದಿಂದುಂಟಾದ ಧೂಳು ಭೂವ್ಯೋಮಾಕಾಶಗಳನ್ನು ಏಕವಾಗಿರುವಂತೆ ಮಾಡಿಬಿಟ್ಟಿತು. ಇದನ್ನೆಲ್ಲಾ ಧರ್ಮತನಯನು ನೋಡಿ ದಿಗ್ಭ್ರಾಂತನಾಗಿ ಏನೂ ತೋರದೆ ಮೂಕಭಾವವನ್ನವಲಂಬಿಸಿದನು. ಯದುಕುಲದ ನಾರಿಯರೆಲ್ಲಾ ಮೈಮರೆತು ಬಿದ್ದಿರುವ ಕೃಷ್ಣನ ಸುತ್ತಲೂ ಸೇರಿದರು. ಅವರಲ್ಲಿ ಸತ್ಯಭಾಮಾದೇವಿಯು || ೫೬ || ತನ್ನ ಪ್ರಾಣಕಾಂತನಾದ ಮುರಹರನನ್ನು ಕುರಿತು ಮಂದಸ್ಮಿತೆಯಾಗಿ, ಎಲೈ ಪ್ರಿಯನೆ, ದೈತ್ಯೇಂದ್ರನಾದ ಅನುಸಾಲನೊಂದಿಗೆ ಯುದ್ಧಕ್ಕೆ ಹೋಗಿ ಪ್ರಾಣದೊರಸೆ ಬಂದಿರುವ ನಿನ್ನ ಪರಾಕ್ರಮವನ್ನರಿತ ಹಗೆಗಳು ನಮ್ಮನ್ನು ಏನು ತಾನೆ ಮಾಡರು? ಅಯ್ಯೋ! ನಿನಗಿರುವ ಇಷ್ಟುಮಾತ್ರದ ಶೌರ್ಯಕ್ಕೆ ನಿನ್ನ ಕುವರನಾದ ಪ್ರದ್ಯುಮ್ನನಿಗೇತಕ್ಕೆ ಅವಮಾನವಂ ಮಾಡಿದೆ? ಇಂಥ ನಿನ್ನನ್ನು ಪ್ರಪಂಚದಲ್ಲಿ ಯಾರು ತಾನೆ ಹೊಗಳುತ್ತಾರೆ? ನಿನ್ನ ಪರಾಕ್ರಮವನ್ನು ಎಷ್ಟು ವರ್ಣಿಸಿದರೂ ಸ್ವಲ್ಪವೇ ಆಗಿದೆಯಲ್ಲಾ! ಎಂದು ಹೀಯಾಳಿಸುತ್ತಿರುವ ಸತ್ಯಭಾಮೆಯಯನ್ನು ಕೃಷ್ಣನು ಕಣ್ದೆರೆದು ನೋಡಿ ||೫೭|| ತನ್ನ ಹೆಂಡತಿಯ ಈ ತೆರನಾದ ತಿರಸ್ಕಾರದ ನುಡಿಗಳಿಗೆ ಅಧಿಕವಾದ ಲಜ್ಜೆಯಂ ತಾಳಿದನು. ಆಗ ಇವನ ಮುಖವು ಬೆಂಕಿಯ ಜ್ವಾಲೆಯಲ್ಲಿ ಸಿಕ್ಕಿದ ಎಳೆ ಬಾಳೆಯಂತೆ ಕಾಂತಿಹೀನವಾಯಿತು. ಕಣ್ಣಿನ ಗುಡ್ಡೆಗಳು ಕೆಂಡದಂತೆ ಕೆಂಪಾದವು, ಕೋಪವು ಮಿತಿಮೀರಿತು. ಈ ರೀತಿಯಾದ ವಿಕಾರಭಾವವನ್ನವಲಂಬಿಸಿದ ಕೃಷ್ಣನು ಉಭಯ ಪಾರ್ಶ್ವಗಳಲ್ಲಿಯೂ ತಿರುಗಿ ನೋಡಿ, ಯುದ್ಧ ಸನ್ನದ್ಧನಾಗಿ ಪುನಃ ಹೊರಡ

ದುಸೀ | ನಿಂದುಮುರವೈರಿಯಂತೆರಳಿಚಿದವೀರನೇ | ನಿಂದುಳಿದೆಯಾದೊಡಾಂ ಕರ್ಣಜನೆನಿಲ್ಲೆನುತತೆಗೆದುಚ್ಚುಬೊಬ್ಬಿರಿದನು ‖ ‖೫೮‖ ಹೆಂಗಸಂಕೊಂದಘಟತನದಿಂದಭಂಡಿಯಂ | ಭಂಗಿಸಿದಬಲ್ಪಿಂದಯೆತ್ತುಕತ್ತೆಯನಿರಿದ | ತುಂಗವಿಕ್ರಮದಿಂದಹಕ್ಕಿ ಹಾವಂಸದೆದಸಾಹಸದಿಬೆರೆದಿರ್ದೊಡೆ ‖ ಸಂಗರದೊಳಾಳಹನೆಗೋಪನನನಂಯುದ್ಧ | ರಂಗದೊಳ್ತೊಲಗಿಪುದೆನಗೆಪರಾಕ್ರಮವೆನಿ | ನ್ನಂಗಣನೆಯಾವುದೆಮ್ಮೊಡನೆಸೆಣಸಿದೆಯೆನುತತೆಗೆದೆಚ್ಚನನುಸಾಲ್ವನು ‖ ೫೯ ‖ ಎಲವೊಖಳನೀನರಿಯದಿರ್ದೊಡೇನ

---

ತಲೆ ಬಗ್ಗಿಸಿದವನಾಗಿ, ಮನಂ_ಹೃದಯವು, ಕಂದೆ_ಶೋಕಕ್ಕೆ ಈಡಾಗಲು, ಕಣ್ಣಾಲಿಗಳು - ಕಣ್ಣುಗುಡ್ಡುಗಳು, ಕೆಂಪಡರೆ_ಕೆಂಪಾಗಿ ಹೋಗಲು, ಖಾತಿ_ಕೋಪವು, ಮಿಗಲು_ಅಧಿಕವಾಗಲು, ಎಡಬಲಗಳಂ_ಉಭಯ ಪಾರ್ಶ್ವಗಳನ್ನು, ನೋಡಿ_ಈಕ್ಷಿಸಿ, ಹರಿ-ಅಸುರಾಂತಕನು, ಮತ್ತೆ-ತಿರುಗಿ, ರಣಕೆ-ಸಮರಕ್ಕೆ, ಅನುವಾಗುತ್ತಿರಲು-ಸಿದ್ಧನಾಗುತ್ತಿರಲಾಗಿ, ಇತ್ತಲು_ಈ ಕಡೆಯಲ್ಲಿ, ವೃಷಕೇತು_ಕರ್ಣಸುತನು, ನಿಂದು-ಯುದ್ಧಕ್ಕೆ ನಿಂತು, ಅನುಸಾಲ್ವಕನ_ಸಾಲ್ವಾನುಜನನ್ನು ತಡೆದು_ಅಡ್ಡಗಿಸಿ, ನೀನು-ನೀನಾದರೊ, ಇಂದು-ಈವಾಗ, ಮುರವೈರಿಯಂ_ಮುರಾಂತಕನನ್ನು, ತೆರಳಿಚಿದ-ರಣರಂಗದಿಂದ ತರುಮಿದ, ವೀರನೆ-ಪರಾಕ್ರಮಿಯೆ? ಎನ್ನಿಂದ-ನನ್ನ ಮೂಲಕವಾಗಿ, ಉಳಿದೆಯಾದೊಡೆ-ಗೆದ್ದೆಯಾದರೆ, ಆಂ_ನಾನು, ಕರ್ಣಜನೆ-ರವಿಸುತನಿಗೆ ತನುಜಾತನಾದೇನೆ? ನಿಲ್ಲು-ಅದೇ ಸ್ಥಳದಲ್ಲಿಯೇ ಇರು, ಎನುತ_ಎಂದು ನುಡಿಯುತ್ತ, ತೆಗೆದು_ಸರಳ್ಗಳಂ ಪೋಣಿಸಿ, ಎಚ್ಚು-ಪ್ರಯೋಗಮಾಡಿ, ಬೊಬ್ಬಿರಿದನು_ಗರ್ಜನೆಯನ್ನು ಮಾಡುತ್ತಿದ್ದನು.

ಅ‖ ವಿ‖ ಕಣ್ಣಂ ತೆರೆದು (ಕ್ರಿ. ಸ) ‖೫೮‖

ಟೀ‖ ಹೆಂಗಸಂ_ಅಬಲೆಯನ್ನು (ಪೂತನಿ ಎಂಬುವಳನ್ನು), ಕೊಂದ-ಪ್ರಾಣವಂ ಕಳೆದ, ಅಘಟತನದಿಂದ_ಶೌರ್ಯದಿಂದ, ಭಂಡಿಯಂ_ಶಕಟಾಸುರನನ್ನು, ಭಂಗಿಸಿದ-ಭಂಗಮಾಡಿದ, ಬಲ್ಪಿಂದ-ಶಕ್ತಿಯಿಂದಲೂ, ಎತ್ತು-ಎತ್ತಿನ ರೂಪಮಂ ಧರಿಸಿದ ಧೇನುಕಾಸುರನನ್ನೂ, ಕತ್ತೆಯನು-ಪ್ರಲಂಬನೆನ್ನುವ ಗಾರ್ದಭವನ್ನು, ಇರಿದ_ಸೀಳಿಹಾಕಿದ, ತುಂಗ_ಅತ್ಯಧಿಕವಾದ, ವಿಕ್ರಮದಿಂದ_ಸಾಹಸದಿಂದ, ಹಕ್ಕಿ- ಬಕಪಕ್ಷಿಯಹಾಗೆ ಇದ್ದ ಅಸುರನನ್ನೂ, ಹಾವಂ_ಉರಗಮುನಿಯನ್ನು (ಅಘನೆಂಬ), ಸದೆದ_ಗುದ್ದಿಗುದ್ದಿ ಕೊಂದ, ಸಾಹಸದಿ_ಧೀರತೆಯಿಂದ, ಬೆರೆದಿರ್ದೊಡೆ-ಕೂಡಿದ್ದರೆ, ಸಂಗರದೊಳು-ರಣದಲ್ಲಿ, ಆಳು_ವೀರನು ಅಹನೆ_ಆಗಬಲ್ಲನೆ? ಗೋಪನನನಂ_ಹಸುಗಳನ್ನು ಮೇಯಿಸತಕ್ಕವನನ್ನು, ಯುದ್ಧರಂಗದೊಳ್_ಸಮರಾಂಗಣದಲ್ಲಿ, ತೊಲಗಿಪುದು_ಹೊರಟು ಹೋಗುವಂತೆ ಮಾಡತಕ್ಕದ್ದು, ಎನಗೆ_ನನ್ನ ವಿಷಯದಲ್ಲಿ, ಪರಾಕ್ರಮವೆ-ಧೀರತನವೇ, ನಿನ್ನಂ_ನಿನ್ನನ್ನಾದರೊ, ಗಣನೆಯಾವುದು-ಲೆಕ್ಕವೇ ಇಲ್ಲವು, ಎಮ್ಮೊಡನೆ_ನಮ್ಮೊಂದಿಗೆ, ಸೆಣಸಿದೆ_ಹೋರಾಡಲಿಚ್ಛಿಸಿ ಬಂದೆ, ಎನುತ_ಎಂದು ನುಡಿಯುತ್ತ, ಅನುಸಾಲ್ವನು_ಸಾಲ್ವಾನುಜನು, ತೆಗೆದು_ಧನುಸ್ಸಿನ ಹುರಿಯನ್ನು ಕಿವಿಯವರೆಗೂ ಸೆಳೆದು, ಎಚ್ಚನು-ಬಾಣವನ್ನು ಪ್ರಯೋಗಿಸಿದನು ‖

ಅ‖ ವಿ‖ ಪೂತನಿ-ಇವಳು ಕೃಷ್ಣನಿಗೆ ವಿಷದ ಸ್ತನಗಳಿಂದ ಹಾಲನ್ನು ಕುಡಿಸುತ್ತಿದ್ದುದರಿಂದ ಕೃಷ್ಣನು ಹಾಲು ಕುಡಿಯುವ ನೆವದಲ್ಲಿ ಅವಳ ಪ್ರಾಣವನ್ನೇ ಕುಡಿದು ಬಿಟ್ಟನು. ಶಕಟಾಸುರ, ಧೇನುಕಾಸುರ, ಪ್ರಲಂಬ ಇವರು ಕಂಸನ ಪ್ರೇರಣೆಯಿಂದ ಕೃಷ್ಣನಮೇಲೆ ಯುದ್ಧಕ್ಕೆ ಬರಲು ಎಲ್ಲರೂ ಯಮಲೋಕವನ್ನು ನೋಡಬೇಕಾಯಿತು. ಬಕ, ಇವನು ಲೋಕ ಕಂಟಕನಾದ ರಕ್ಕಸನು. ಕೃಷ್ಣನು ಇವನನ್ನು ಭೀಮನಿಂದ ಕೊಲ್ಲಿಸಿದನು. ಗೋಪನು=ಗೋ_ದನಗಳನ್ನು, ಪ-ಪಾಲಿಸತಕ್ಕವನು. (ಕೃ. ಸ.) ಸೆಣಸಿದೆ-ಸೆಣಸು ಧಾತು ‖೫೯‖

ಟೀ‖ ಎಲವೊ ಖಳ-ಓ ನೀಚನೆ, ನೀನು_ನೀನಾದರೊ, ಅರಿಯದಿರ್ದೊಡಂ_ಅರಿತಿಲ್ಲವಾದರೂ, ಅಚ್ಯುತಂ_ಕೃಷ್ಣ

---

ಲುಜ್ಜುಗಿಸಿದನು. ಇತ್ತ ವೃಷಕೇತುವಾದರೊ ಸಾಲ್ವಾನುಜನನ್ನು ಆಚೆ ಈಚೆ ಹೋಗಲು ಎಡೆಗುಡದೆ ಅಡ್ಡಗಟ್ಟಿಕೊಂಡು, ಅನುಸಾಲ್ವನನ್ನು ಕುರಿತು, ಎಲೈ ಶೂರನೆ, ಮುರಹರನನ್ನು ಮೂರ್ಛೆಗೊಳಿಸಿದ ವೀರ ನೀನೇ ಅಲ್ಲವೆ? ನನ್ನ ಎದುರಿನಲ್ಲಿ ಪ್ರತಿಭಟಿಸಿ ನಿಂತು ನೀನು ಪ್ರಾಣವನ್ನುಳಿಸಿಕೊಂಡರೆ ನಾನು ಕರ್ಣನಂದನನಾದೇನೆ? ನಿಂತುಕೊ ಎಂದೆನ್ನುತ್ತ, ಬಾಣವನ್ನು ಅನುಸಾಲ್ವನಮೇಲೆ ಬಿಟ್ಟು ಸಿಂಹಗರ್ಜನೆಯನ್ನು ಮಾಡುತ್ತಿದ್ದನು. ‖೫೮‖ ಅತ್ತ ಅನುಸಾಲ್ವನು ಕೂಡ, ಪೂತನಿ ಎಂಬ ಸ್ತ್ರೀ ಹತ್ಯಮಂ ಮಾಡಿದ ಪರಾಕ್ರಮದಿಂದಲೂ, ಶಕಟಾಸುರನನ್ನು ಕೊಂದ ಶೌರ್ಯದಿಂದಲೂ, ಎತ್ತು ಕತ್ತೆ ಮೊದಲಾದವುಗಳ ಅಸುವಂ ನೀಗಿದ ಬಲದಿಂದಲೂ, ಬಕ ಮತ್ತು ಅಘರೆಂಬ ಪಕ್ಷಿ ಸರ್ಪಗಳನ್ನು ಕೊಂದ ಅಘಟಿತನದಿಂದಲೂ, ಕೂಡಿದ ಮಾತ್ರಕ್ಕೇ ರಣಧೀರನಾದಾನೆ? ದನಕರುಗಳನ್ನು ಕಾಯತಕ್ಕ ಇವನನ್ನು ಜಯಿಸುವುದು ರಾಜಾಗ್ರಣಿಯಾದ ನನಗೆ ಅಸಾಧ್ಯವೇ! ಎಂದು ತನ್ನ ಮನದಲ್ಲಿಯೇ ಎಂದುಕೊಳ್ಳುತ್ತಾ ಒಂದಾನೊಂದು ಬಾಣವನ್ನು ಬಿಟ್ಟನು ‖ ೫೯ ‖

ಚ್ಯುತಂ | ತಿಳಿಯೆಗೋಪಾಲನಲ್ಲವೆಕಪಟರೂಪದಿಂ | ಮುಳಿದುದುಷ್ಟರನೈದೆಶಿಕ್ಷಿಸದೆಮಾಣ್ದಪನೆನೊಣನೂರಿಮದಗಜವನು || ಬಳಲಿಪುದುಗಡದಿಟಂನಿನಗಸುರಕುಲಮಥನ | ನಳುಕುವನೆಶಿವಶಿವಾನಿನ್ನೊಡನೆಸೆಣಸುವರೆ | ಬಲವಂತರಾವಲ್ಲನೋಡುಸಾಕಿನ್ನೆನುತತೆಗೆಚ್ಚನಿನಜಸೂನು || ೬೦ || ಕರ್ಣಜನಕಣೆಗಳಂಕತ್ತರಿಸಿಪೊಸಮಸೆವೊ | ಗರ್ನಭೋಮಂಡಲವನಂಡಲೆಯಲೊಪ್ಪುವಸು | ವರ್ಣಪುಂಖದಸರಳ್ಗರೆದನನುಸಾಲ್ವನದನೆಲ್ಲಮಂತತ್‌ಕ್ಷಣದೊಳು || ನಿರ್ಹ್ಯಸಿವೃಷಕೇತುಕೈಗೊಂಡನೆಸುಗೆಯಂ | ದುರ್ನಿರೀಕ್ಷಣವಾದುದರಸಕೇಳದನೆನಗೆ | ವರ್ಣಿಸುವೊಡರಿದುಕೂರಂಬುಗಳ್ಗಂಬರದೊಳಿಂಬಿಲ್ಲಮೆಂಬೊಲಾಯ್ತು || ೬೧ || ಮಂಡಲಾಕೃತಿಯಲ್ಲದಿದುವೆನೋಡಲ್ಕೆಕೋ | (ಯಲ್ಲದಿರಲು) ದಂಡನಂಬುಗಿವಹೂಡುವಬಿಡುವಭೇದಮಂ | ಕಂಡವರದಾರ

---

ಮೂರ್ತಿಯು, ತಿಳಿಯೆ-ಯೋಚಿಸಿ ನೋಡಿದರೆ, ಗೋಪಾಲನು-ನಾಲ್ಕು ವೇದಗಳು, ಧರ್ಮಂಗಳು, ಇಳಾಮಂಡಲ ಇವನ್ನು ಸಲಹುವಾತನು, ಅಲ್ಲವೆ-ಆಗಿಲ್ಲವೆ? ಕಪಟರೂಪದಿಂ-ಕೃತ್ರಿಮವಾದ ಆಕೃತಿಯಿಂದ, ಮುಳಿದು-ಕೋಪವನ್ನು ಹೊಂದಿ, ದುಷ್ಟರನು-ದುರಾತ್ಮರನ್ನು, ಐದೆ-ಚನ್ನಾಗಿ, ಶಿಕ್ಷಿಸದೆ-ದಂಡಿಸದೆ, ಮಾಣ್ದಪನೆ-ಬಿಡುತ್ತಾನೆಯೆ? ನೊಣಂ-ನೊಣವು, ಊರಿ-ಕುಳಿತುಕೊಂಡು, ಮದಗಜವನು-ಮತ್ತ ಹಸ್ತಿಯನ್ನು, ಬಳಲಿಪುದುಗಡ-ಆಯಾಸ ಪಡಿಸತಕ್ಕದ್ದಲ್ಲವೆ, ದಿಟಂ-ನಿಜವು, ನಿನಿಗೆ-ನಿನಿಗಾವರೂ, ಅಸುರಕುಲಮಥನನು-ರಕ್ಕಸರ ವಿನಾಶಕನಾದ ಸ್ವಾಮಿಯು, ಅಳುಕುವನೆ-ಹೆದರತಕ್ಕವನೆ? ಶಿವಶಿವ-ಈಶ್ವರ ಈಶ್ವರ, ನಿನ್ನೊಡನೆ-ನಿನ್ನೊಂದಿಗೆ, ಸೆಣಸುವರೆ-ಹೋರಾಡಲಾಗುವುದೆ? ಆವು-ನಾವಾದರೊ, ಬಲವಂತರು-ಶಕ್ತಿಯುಳ್ಳವರು, ಅಲ್ಲ-ಅಲ್ಲವು. ಇನ್ನುಸಾಕು-ಇನ್ನು ಸಮ್ಮನಿರು, ಎನುತ-ಎಂದು ನುಡಿಯುತ್ತ, ಇನಜಸೂನು-ರವಿಯ ಮೊಮ್ಮಗನಾದ ಕರ್ಣಜನು, ತೆಗೆದು-ಬಾಣವಂ ಕೈಕೊಂಡು, ಎಚ್ಚನು-ಹೊಡೆದವನಾದನು ||

ಅ|| ವಿ|| ಅಸುರಕುಲಮಥನ-ಸುರರಲ್ಲದವರು ಅಸುರರು (ನಞ್‌ತತ್ಪುರುಷ), ಅಸುರರಕುಲ (ಷ. ತ.) ಅಸುರ ಕುಲವನ್ನು ಮಥಿಸತಕ್ಕವನು (ಕೃ. ವೃ.) ಇನಜಸೂನು-ಇನನಿಂದ, ಜ-ಕೃ. ವೃ. ಇನಜನ ಸೂನು (ಷ. ತ.) ||೬೦||

ಟೀ|| ಕರ್ಣಜನ-ಕರ್ಣಸಂಭವನ, ಕಣೆಗಳಂ-ಸರಲ್ಗಳನ್ನು, ಕತ್ತರಿಸಿ-ಖಂಡಿಸಿ, ಪೊಸ-ಹೊಸದಾದ, ಮಸೆ-ಸಾಣೆಹಿಡಿದ, ವೊಗರ್-ಕಾಂತಿಯು, ನಭೋಮಂಡಲವನು-ಆಗಸವನ್ನು, ಅಂಡಲೆಯಲು-ಕವಿಯಲು, ಒಪ್ಪುವ-ಕೂಡಿರುವ, ಸುವರ್ಣಪುಂಖದ-ಚಿನ್ನದ ಪಕ್ಷಂಗಳುಳ್ಳ, ಸರಳ್-ಅಲಗುಗಳನ್ನು, ಅನುಸಾಲ್ವನು-ಸಾಲ್ವನ ತಮ್ಮನು. ಕರೆದನು-ವರ್ಷಿಸಿದನು. ಆದನೆಲ್ಲಮಂ-ಆ ಕಣೆಗಳನ್ನೆಲ್ಲಾ, ಕ್ಷಣದೊಳು-ಅರೆಗಳಿಗೆ ಯೊಳಗಾಗಿ, ವೃಷಕೇತು-ವೃಷಧ್ವಜನು, ನಿರ್ಹ್ಯಸಿ.ಹೋಗಲಾಡಿಸಿ, ಎಸುಗೆಯಂ-ಬಾಣಗಳ ಬಿಡುವಿಕೆಯನ್ನು, ಕೈಕೊಂಡನು-ಎಸಗಲುಜ್ಜುಗಿಸಿದನು, ದುರ್ನಿರೀಕ್ಷಣಂ-ದೃಷ್ಟಿಸಲಸದಳವಾಗಿತ್ತು. ಅರಸ-ಎಲೈ ಜನಮೇಜಯ ಮಹೀಪನೆ! ಕೇಳು-ಲಾಲಿಸು, ಅದನು-ಆ ಶರವರ್ಷದ ಬಗೆಯನ್ನು, ವರ್ಣಿಸುವೊಡೆ-ಬಣ್ಣಿಸಬೇಕಾದರೆ, ಎನಗೆ-ನನಗೆ, ಅರಿದು-ಶಕ್ಯವಲ್ಲವು. ಕೂರಂಬುಗಳ್ಗೆ-ಕ್ರೂರವಾದ ಸರಲ್ಗಳಿಗೆ, ಅಂಬರದೊಳು-ಆಗಸದಲ್ಲಿ, ಇಂಬಿಲ್ಲ-ಎಡೆಯಿಲ್ಲವು, ಎಂಬೋಲ್-ಎನ್ನುವತೆರನಾಗಿ, ಆಯ್ತು-ಆಗಿಹೋಯಿತು ||೬೧||

ಟೀ|| ಮಂಡಲಾಕೃತಿಯು - ವರ್ತುಲಾಕಾರವು, ಅಲ್ಲದೆ - ಹೊರತು, ಇದುವೆ-ಇದೆ, ನೋಡಲ್ಕೆ - ಈಕ್ಷಿಸಲು, ಕೋದಂಡವಂ-ಧನುಸ್ಸನ್ನು, ಅಂಬುಗಿವ-ಬಾಣವನ್ನು ಬಿಡತಕ್ಕ, ಹೂಡುವ-ಸಿದ್ಧ ಮಾಡುವ, ಬಿಡುವ-ಪ್ರಯೋಗಿಸುವ, ಭೇದಮಂ-ವ್ಯತ್ಯಸ್ತಮಾದ ಬಗೆಯನ್ನು, ಕಂಡವರು-ಅರಿತವರು, ಅದಾರು-ಇನ್ನು ಯಾರಿದಾರೆ? ಎಣ್ದೆಸೆಗಳು-ಎಂಟುದಿಕ್ಕುಗಳು,ಅಸ್ತಮಯವಾದುದು-ಶರವರ್ಷದಿಂದ ಕತ್ತಲಾಯಿತು,ಅನುಸಾಲ್ವನು-ಸಾಲ್ವನ ತಮ್ಮನು,ಅಳವಳಿದನು-ಪ್ರಜ್ಞೆತಪ್ಪಿದನು,

---

ಅನುಸಾಲ್ವನು ಬಿಟ್ಟಬಾಣವನ್ನು ವೃಷಕೇತುವು ಖಂಡಿಸಿ ಅವನನ್ನುಕುರಿತು, ಎಲೈ ಅನುಸಾಲ್ವನೆ! ನೀಚಶ್ರೇಷ್ಠನೆ! ತಿಳಿಯದ ನಿನ್ನಂಥ ಮೂಢಾತ್ಮರಿಗೆ ಕೃಷ್ಣನು ದನಕಾಯುವವನೇಸರಿ, ಜ್ಞಾನಿಗಳಾದ ಮಹರ್ಷಿಯರು, ಆತನನ್ನು ಗೋಪಾಲಕನೆಂದೂ, ಚತುರ್ವೇದಗಳು, ಧರ್ಮಶಾಸ್ತ್ರಗಳು, ಇಳಾಮಂಡಲವೇ ಮೊದಲಾದವನ್ನು ಕಾಪಾಡುವವನೆಂದೂ ಕೊಂಡಾಡುವರು. ಕೃತಕವೇಷದಿಂದ ಭೂಮಂಡಲದಲ್ಲಿ ದುಷ್ಟಶಿಕ್ಷೆ ಮತ್ತು ಶಿಷ್ಟರ ಪರಿಪಾಲನಾರ್ಥವಾಗಿ ಅವತರಿಸಿದ ಸ್ವಾಮಿಯಲ್ಲವೆ? ಅನೇಕ ನೊಣಗಳು ಹೋಗಿ ಮದಗಜದಮೇಲೆ ಕುಳಿತುಕೊಂಡರೆ ಮದ್ದಾನೆಗೆ ಸ್ವಲ್ಪವೂ ಆಯಾಸವಿಲ್ಲದಿರುವಂತೆ ನಿನ್ನಂಥವರೆಷ್ಟುಮಂದಿ ಏಕಕಾಲದಲ್ಲಿ ಬಂದು ಆ ಕೃಷ್ಣನಮೇಲೆ ಬಿದ್ದರೆ ತಾನೆ ಆ ಮಹಾ ಪುರುಷನಿಗೆ ಬಳಲಿಕೆ ತೋರೀತೆ? ನೀನು ಮಾಡುವ ಸಾಹಸದಿಂದೇನೇನೂ ಪ್ರಯೋಜನವೇ ಇಲ್ಲವು, ಎಂದೆನುತ್ತಾ ಶರವರ್ಷಂಗಳಂ ಕರೆದನು || ೬೦ || ಈರೀತಿಯಲ್ಲಿ ಬಿಟ್ಟ ಕರ್ಣನಂದನನ ಬಾಣಗಳನ್ನೆಲ್ಲಾ ಅನುಸಾಲ್ವನು ಪುಡಿಪುಡಿಮಾಡಿ ಆಗತಾನೆ ತೊಟ್ಟು ಇರುವ ಸುವರ್ಣ

ಸ್ತ್ರಮುಯಮಾಮುಪೆಕ್ಕಸೆಗಳನುಸಾಲ್ವನಳವಳಿದನು || ದಿಂಡುರುಳಿತಾತನಚತುರ್ಬಲಂಬಳಿಕಕೋ | ದಂಡಮಂಕೊಂಡವನರ ಥಪೆಸೆಗೆಬಂದೆಳೆದು | ಕೊಂಡುಕೃಷ್ಣನಪದಾಂಬುಜದಹೊರೆಗಾಗಿನಡೆತಂದಿಳುಹಿಕೈಮುಗಿದನು || ೬೨ || ಕೊಂಡಾಡಿಶೌರಿತ ಕ್ಕೈಸಿದಂನೃಪನಪ್ಪಿ | ಮುಂಡಾಡಿಮನ್ನಿಸಿದನರ್ಜುನಾದಿಗಳಿಳಿಕೆ | ಗೊಂಡಾಡಿದರ್ತಮ್ಮಸಾಹಸಂಸತಿಯರ್ಪೊಗಳ್ದರೀಕ್ಷತ್ರಿ ಯರೊಳು || ಉಂಡಾಡಿಗಳ್ಪಲಬರಿರ್ದೊಡೇನಹುದಿವಂ | ಗಂಡಾಡಿದುರುಭಾಷೆಗರಿಗಳಶಿರಂಗಳಂ | ಚೆಂಡಾಡಿಪಗೆವನಂಪಿಡಿ ದೊಪ್ಪಿಸಿದನೆಂದರೆಲ್ಲರುಕರ್ಣಜನನು || ೬೩ || ಯುದ್ಧಶ್ರಮುಂಪೋಗಿಕಂದೆರೆದನನಿತರೋ | ಳ್ಬುದ್ಧಿಪಲ್ಲಟಿತನನುಸಾಲ್ವಕನು

---

ಆತನ ಚತುರ್ಬಲಂ-ಅವನ ಹಸ್ತ್ಯಶ್ವರಥಪದಾತಿಗಳಿಂದ ಕೂಡಿದ ನಾಲ್ಕುತೆರನಾದ ಸೈನ್ಯವೂ, ದಿಂಡುರುಳಿತು-ನಿತ್ರಾಣವಾಗಿ ಬಿದ್ದುಹೋಯಿತು, ಬಳಿಕ-ಆಮೇಲೆ, ಕೋದಂಡಮಂ-ಧನುಸ್ಸನ್ನು, ಕೊಂಡು-ತೆಗೆದುಕೊಂಡು, ಅವನ- ಆ ಅನುಸಾಲ್ವನ, ರಥದ-ತೇರಿನ, ಎಡೆಗೆ-ಸಮೀಪಕ್ಕೆ, ಬಂದು-ಐತಂದು, ಎಳದುಕೊಂಡು-ಸೆಳೆಯುತ್ತಾ, ಕೃಷ್ಣನ-ಪರಮಾತ್ಮನ, ಪದಾಂಬು ಜದ-ಅಡಿದಾವರೆಯ, ಹೊರೆಗಾಗಿ-ಸಮೀಪಕ್ಕೆ ಕಾಲಿಡಲು, ತಂದು-ತೆಗೆದುಕೊಂಡು ಬಂದು, ಇಳುಹಿ-ಕೆಡವಿ, ಕೈಮುಗಿದನು-ಕರಗಳನ್ನು ಜೋಡಿಸಿದನು ||

ಅ|| ವಿ|| ಪದಾಂಬುಜ-ಅಂಬು ನೀರಿನಲ್ಲಿ ಜ-ಹುಟ್ಟಿದ್ದು (ಕೃ. ವೃ.) ಅಂಬುಜದಂತಿರುವ ಪದ-ಪದಾಂಬುಜ (ಉ. ಉ. ಪದ. ಕ.) || ೬೨ ||

ಟೀ|| ಶೌರಿ-ಶ್ರೀ ಕೃಷ್ಣನು, ಕರ್ಣಜನನು-ಕರ್ಣಸೂನುವನ್ನು, ಕೊಂಡಾಡಿ-ಹೊಗಳಿ, ತಕ್ಕೈಸಿದಂ - ಮರ್ಯಾದೆ ಯನ್ನು ಮಾಡಿದನು, ನೃಪನು-ಧರ್ಮತನಯನು, ಅಪ್ಪಿ-ತಬ್ಬಿಕೊಂಡು, ಮುಂಡಾಡಿ-ತಲೆಯನ್ನುಮೂಸಿ, ಮನ್ನಿಸಿದನು-ಸತ್ಕರಿ ಸಿದನು, ಅರ್ಜುನಾದಿಗಳು-ಪಾರ್ಥನೇ ಮೊದಲಾದವರು, ತಮ್ಮ-ಸ್ವಕೀಯಂಗಳಾದ, ಸಾಹಸಂ-ಶಕ್ತಿಯನ್ನು, ಇಳಿಕೆಗೊಂಡು-ಕಡಮೆಯೆಂಬದಾಗಿ, ಆಡಿದರು-ಎಂದುಕೊಂಡರು, ಸತಿಯರು-ನಾರಿಯರೆಲ್ಲರೂ, ಪೊಗಳ್ದರು - ಹೊಗಳಿದರು, ಎಲ್ಲರುಂ-ಮಿಕ್ಕವರೆಲ್ಲಾ, ಈ ಕ್ಷತ್ರಿಯರೊಳ್-ಈ ಶೂರರಲ್ಲಿ, ಉಂಡಾಡಿಗಳ್-ಹೊಟ್ಟೆಬಾಕರು, ಪಲಬರು-ಹಲವುಮಂದಿ, ಇರ್ದೊಡೆ-ಇದ್ದಮಾತ್ರಕ್ಕೆ, ಏನಹುದು-ಏನುಪ್ರಯೋಜನವು? ಇವಂ-ಈ ಕರ್ಣಸುತನು, ಗಂಡು-ಗಂಡುಗಲಿಯು, ಆಡಿದ-ಶಪಥವಂ ಮಾಡಿದ, ಉರು-ಹೆಚ್ಚಾದ, ಭಾಷೆಗೆ-ಪ್ರಮಾಣದ ನುಡಿಗೆ, ಅರಿಗಳ-ಹಗೆಗಳ, ಶಿರಂಗಳಂ-ತಲೆಗಳನ್ನೆಲ್ಲಾ, ಚಂಡಾಡಿ-ಹಾರಿ ಹೋಗುವಂತೆ ಮಾಡಿ, ಪಗೆವನಂ-ವೈರಿಯನ್ನು, ಪಿಡಿದು-ಹಿಡಿದುಕೊಂಡು, ಒಪ್ಪಿಸಿದನು-ಶ್ರೀ ಕೃಷ್ಣನ ಪದಾರವಿಂದಗಳಲ್ಲಿ ಸಮರ್ಪಿಸಿಬಿಟ್ಟನು, ಎಂದರು-ಎಂದು ನುಡಿದರು |

ಅ|| ವಿ|| ಉಂಡಾಡಿಗ-ಇಲ್ಲಿ ಆಡಿಗ ಎಂಬುದು ತದ್ಧಿತಪ್ರತ್ಯಯವು, ಆಡಿಗ ಎಂಬುದು ಬಹುವಾಗಿ ತಿಂದು ಆಡುವ ನೆಂಬರ್ಥದಲ್ಲಿ ಬಂದಿದೆ || ೬೩ ||

ಯುದ್ಧಶ್ರಮುಂ-ರಣದ ಬಳಲಿಕೆಯು, ಪೋಗಿ-ಕಳೆದು, ಕಂದೆರೆದ-ಕಣ್ಣುಬಿಟ್ಟ, ಅನಿತರೊಳ್-ಅಷ್ಟರಲ್ಲಿ, ಬುದ್ಧಿ ಪಲ್ಲಟಿತನು-ಭ್ರಮಣೆಗೊಂಡ ಸಾಲ್ವನ ತಮ್ಮನು, ಅನಿರುದ್ಧನ-ಅನಿರುದ್ಧನೆಂಬವನ, ಪಿತಾಮಹನ - ತಾತನಾದ ಕೃಷ್ಣನ,

---

ಛಾಯೆಯಿಂದ ಕೂಡಿದ ಬಾಣಗಳ ಕಾಂತಿಯು ಅಂತರಿಕ್ಷವನ್ನಾವರಿಸುವಂತೆ ಅಲಗುಗಳನ್ನು ಬಿಟ್ಟನು. ವೃಷಧ್ವಜನು ಸಾಲ್ವಾನುಜನ ಬಾಣಗಳನ್ನೆಲ್ಲಾ ಖಂಡಿಸಿ ಅವನಿಗಿಂತಲೂ ಇಮ್ಮಡಿಯಾಗಿ ಅಂಬುಗಳನ್ನು ಬಿಡುತ್ತಿದ್ದನು. ಇವರಬ್ಬರೂ ಪರಸ್ಪರವಾಗಿ ಬಿಟ್ಟ ಅಂಬುಗಳು ಭೂಮಿಗೂ ಆಕಾಶಕ್ಕೂ ನಡುವೆ ಇರುವ ದೊಡ್ಡ ಪರ್ವತಗಳಹಾಗಾಗಿ ಆಕಾಶದಲ್ಲಿ ಸ್ಥಳ ವೇ ಸಾಲದಿರುವಂತೆ ತುಂಬಿಕೊಂಡು ಬಿಟ್ಟವು || ೬೧ || ಗೃಧ್ರಾಕಾರವಾದ ವ್ಯೂಹವಂ ಮಾಡಿಕೊಂಡು ಈರೀತಿಯಲ್ಲಿ ಘೋರ ವಾದ ಯುದ್ಧವಂ ಗೈಯುತ್ತಿದ್ದ ಅನುಸಾಲ್ವನು ಕಡೆಗೆ ಆಯಸಂಗೊಂಡನು. ಅವನ ಚತುರಂಗ ಬಲವೂ ದುರ್ಬಲವಾಯಿತು. ಅನುಸಾಲ್ವನ ಸೈನ್ಯದಲ್ಲಿ ಯಾರೂ ಯುದ್ಧವಂ ಮಾಡಲು ಕೈಲಾಗದೆ ಹೋದ್ದರಿಂದ ಕಡೆಗೆ ವೃಷಧ್ವಜನು ಧನುರ್ಬಾಣಂಗಳಂ ಕೊಂಡು ಅನುಸಾಲ್ವನ ರಥದಬಳಿಗೆ ಬಂದವನಾಗಿ, ಅಲ್ಲಿ ಬಿದ್ದುಹೋಗಿದ್ದ ಸಾಲ್ವಾನುಜನನ್ನು ಎಳೆತಂದು ಕೃಷ್ಣನ ಪಾದ ಕಮಲಗಳಲ್ಲಿ ಹಾಕಿ, ಮುಕುಳಿತಕರಸಂಪುಟನಾಗಿ ಕೃಷ್ಣಸ್ವಾಮಿಯನ್ನು ಕುರಿತು ನನ್ನ ಶಪಥವನ್ನು ನೆರವೇರುವಹಾಗೆಮಾಡಿ ದನೂ ತಿಳಿಯದಂತಿರುವ ನಿನ್ನ ಮಾಯಾಶಕ್ತಿಯನ್ನುಯಾರುತಾನೆ ಬಲ್ಲರು? ಎಂದು ನುಡಿಯುತ್ತ ಬಾರಬಾರಿಗೂ ನಮಸ್ಕಾ ರವಂ ಮಾಡಿದನು || ೬೨ || ತನ್ನ ಅಡಿದಾವರೆಗಳಲ್ಲಿ ಪ್ರಾಣಾಮನನ್ನರ್ಪಿಸುತ್ತ ಜಯಶಾಲಿಯಾಗಿಬಂದ ವೃಷಕೇತುವನ್ನು ಕೃಷ್ಣಸ್ವಾಮಿಯು ಬಹುವಾಗಿ ಸ್ತುತಿಸಿ ಆನಂದದಿಂದ ಅಪ್ಪಿಕೊಂಡನು. ಧರ್ಮಜನುಕೂಡ ಪ್ರೀತ್ಯತಿಶಯದಿಂದ ಅವನ ತಲೆಯನ್ನು ಮೂಸಿನೋಡುತ್ತ ಮರ್ಯಾದೆಯಿಂದ ಕಂಡನು. ಅರ್ಜುನಾದಿಗಳೆಲ್ಲಾ ಬಹುವಾಗಿ ಕೊಂಡಾಡಿದರು. ಅಲ್ಲಿ ನೆರೆ

ಕಂಡನಿ | ರುದ್ಧನಪಿತಾಮಹಸುಮೂರ್ತಿಯಂದೇವನೀನಾವನೆಂದಾನರಿಯದೆ॥ ಬದ್ಧಮಾಯಾಪಾಶನಾಗಿಬಿದ್ದಿಹೆನೆನ್ನನುದ್ಧರಿಸು
ಮರೆಹೊಕ್ಕೆನೆನೆಕೇಳ್ದುಕರ್ಣಜಂ | ಕ್ರುದ್ಧನಾದಂಜರಿದುನುಡಿದಕಲಿತನವೆಲ್ಲಿಸುಡುನಿನ್ನೊಡಲನೆಂದನು ||೬೪|| ರೋಷಮೇ
ತಕೆಮರುಳೆವೃಷಕೇತುಕೃಷ್ಣನಂ | ದ್ವೇಷದಿಂಬೈದೊಡಂತನ್ನಮನವಾರೆಸಂ | ತೋಷದಿಂನುತಿಗೈದೊಡಂಪೋಗದಿರ್ದಪುದೆ
ಕೋಟಿಜನ್ಮದೊಳೊದವಿದ | ದೋಷಂಗಳಿಂದುವೀರಾವೇಶದಿಂದನಾಂ | ದೂಷಿಸಿದೊಡೀದಯಾಂಬುಧಿಕಾಯದುಳಿವನೆವಿ |
ಶೇಷಸುಕೃತಫಲಂದೊರೆದುದೆನಗೆನುತಲನಂಬಿದ್ದನಚ್ಯುತನಂಘ್ರಿಗೆ ||೬೫|| ನಗುತಮಧುಸೂದನಂಪ್ರೀತಿಯಿಂದಾತನಂ | ತೆಗೆ
ದಪ್ಪಿನೀನಿಂದುಮೊದಲಾಗಿದಿವಿಜರ್ಗೆ | ಪಗೆಯೆನಿಸದೆಮ್ಮೊಡನೆಧರ್ಮಜನಯಜ್ಞದಸಹಾಯಕಿಲ್ಲಿಪ್ಪುದೆಂದು || ಮಿಗೆಮನ್ನಿಪ
ನಿತರೋಳ್ಪುದ್ಯುಮ್ನನುಳಿದಸೇ | ನೆಗಳನೆಲ್ಲನುಂಗೆಲ್ದುತುರಗನುಂಬಿಡಿಸಿಕೊಂ | ಡಗಧರಂನಸಮ್ಮುಖಕೆತಂದುನಿಲಿಸಿದನಿತ್ತಭಾಷೆ

---

ಸುಮೂರ್ತಿಯಂ-ಆಕೃತಿಯನ್ನು, ಕಂಡನು-ಈಕ್ಷಿಸಿದನು, ದೇವ-ಒಡೆಯನೆ, ನೀನು-ನೀನಾದರೊ, ಆವನು-ಯಾರು? ಎಂದು-ಎಂಬತೆರನಾ, ಆನು-ನಾನು, ಅರಿಯದೆ-ಗೋಚರಪಡಿಸದೆ, ಬದ್ಧ-ತೊಡಗಿದ, ಮಾಯಾಪಾಶನಾಗಿ- ಅವಿವೇಕವೆನ್ನುವ ಹುರಿಯಿಂದ ಕಟ್ಟಲ್ಪಟ್ಟವನಾಗಿ, ಬಿದ್ದಿಹೆನು-ಬಿದ್ದು ಹೋಗಿರುವೆನು, ಎನ್ನನು-ನನ್ನನ್ನು, ಉದ್ಧರಿಸು-ಸಲಹು, ಮರೆಯೊಕ್ಕೆನು-ಮರೆಬಿದ್ದಿದ್ದೇನೆ, ಎನೆ-ಎಂದು ನುಡಿಯಲು. ಕೇಳ್ದು-ಲಾಲಿಸಿ, ಕರ್ಣಜಂ-ಕರ್ಣಸೂನುವು, ಕ್ರುದ್ಧನಾದಂ-ಕೋಪದಿಂದ ಕೂಡಿದನು, ಜರಿದು-ಹೀಯಾಳಿಸಿ, ನುಡಿದ-ಉಸುರಿದ, ಕಲಿತನಂ-ಶೌರ್ಯವು, ಎಲ್ಲಿ-ಏನಾಯಿತು? ನಿನ್ನ-ನಿನ್ನ ಸಂಬಂಧವಾದ, ಒಡಲನು-ದೇಹವನ್ನು, ಸುಡು-ಭಸ್ಮಮಾಡು, ಎಂದನು-ಎಂದು ನುಡಿದನು ||೬೪||

ಟೀ|| ಮರುಳೆ-ಮೂಢನಾದ, ವೃಷಕೇತು- ಕರ್ಣಸುತನೆ ! ರೋಷಂ-ಕೋಪವು, ಏತಕ್ಕೆ-ಏನು ಪ್ರಯೋಜನ? ಕೃಷ್ಣನಂ-ಕೃಷ್ಣಸ್ವಾಮಿಯನ್ನು, ದ್ವೇಷದಿಂ-ಹಗೆತನದಿಂದ, ಬೈದೊಡಂ-ದೂಷಿಸಿದರೂ, ತನ್ನ-ಸ್ವಕೀಯವಾದ, ಮನವಾರೆ-ಇಷ್ಟಪೂರ್ತಿಯಾಗಿ, ಸಂತೋಷದಿಂ-ವಿಶ್ವಾಸದಿಂದ, ನುತಿಗೈದೊಡಂ-ಹೊಗಳಿದರೂ, ಕೋಟಿ ಜನ್ಮದೊಳು-ಒಂದು ಕೋಟಿ ಜನ್ಮಾಂತರದಲ್ಲಿ, ಒದವಿದ-ಉಂಟಾದ, ದೋಷಂಗಳು - ದುರಿತಂಗಳು, ಪೋಗದಿರ್ದಪುದೆ-ಹೋಗದೆ ಇದ್ದೀತೆ? (ಹೋಗುತ್ತದೆ) ಇಂದು-ಈಗ, ವೀರಾವೇಶದಿಂ-ಕಲಿತನದ ಕೊಬ್ಬಿನಿಂದ, ನಾಂ-ನಾನು, ದೂಷಿಸಿದೊಡೆ-ಬೈದರೆ, ಈ ದಯಾಂಬುಧಿ-ಈ ಕೃಪಾಸಾಗರನು, ಕಾಯದೆ-ಕಾಪಾಡದೆ, ಉಳಿವನೆ-ಹಾಗೆಯೇ ಬಿಟ್ಟು ಬಿಟ್ಟಾನೆ? (ಕಾಪಾಡದಿರನು) ವಿಶೇಷ-ಹೆಚ್ಚಾದ, ಸುಕೃತ-ಸತ್ಕಾರ್ಯದ, ಫಲಂ-ಲಾಭವು, ಎನಗೆ-ನನಿಗಾದರೊ, ದೊರೆದುದು-ಉಂಟಾಯಿತು, ಎನುತಲು-ಎಂದು ನುಡಿಯುತ್ತ, ಅನಂ-ಸಾಲ್ವಾನುಜನು, ಅಚ್ಯುತನ-ಕೃಷ್ಣಸ್ವಾಮಿಯ, ಅಂಘ್ರಿಗೆ-ಅಡಿಗಳಿಗೆ, ಬಿದ್ದನು-ಎರಗಿದನು ||೬೫||

ಮಧುಸೂದನಂ-ಮಧುವೆಂಬ ರಾಕ್ಷಸನನ್ನು ಕೊಂದ ಕೃಷ್ಣಸ್ವಾಮಿಯು, ನಗುತೆ- ಸಂತೋಷದಿಂದ ಕೂಡಿ, ಪ್ರೀತಿಯಿಂದ-ವಿಶ್ವಾಸದಿಂದ, ಆತನಂ-ಆ ಸಾಲ್ವಾನ ಜನನ್ನು, ತೆಗೆದು-ಹತ್ತಿರಕ್ಕೆ ಕರೆದುಕೊಂಡು, ಅಪ್ಪಿ-ಆಲಿಂಗನವಂ ಮಾಡಿಕೊಂಡು, ನೀನು-ನೀನಾದರೊ, ಇಂದು-ಈ ದಿನ, ಮೊದಲಾಗಿ- ಮೊದಲುಮಾಡಿಕೊಂಡು, ದಿವಿಜರ್ಗೆ-ಅಮರರಿಗೆ, ಪಗೆ-ವೈರಿಯು, ಎನಿಸದೆ-ಎಂದೆನ್ನಿಸಿಕೊಳ್ಳದೆ, ಎಮ್ಮೊಡನೆ- ನಮ್ಮೊಂದಿಗೆ, ಧರ್ಮಜನ-ಧರ್ಮತನಯನ, ಯಜ್ಞದ-ಯಾಗದ, ಸಹಾಯಕೆ-ನೆರವಿಗಾಗಿ, ಇಲ್ಲಿ-ನಮ್ಮ ಸಂಗಡಲೆ, ಇಪ್ಪುದು-ಇರಬೇಕು, ಎಂದು-ಎಂಬುದಾಗಿ, ಮಿಗೆ-ಅಧಿಕವಾಗಿ, ಮನ್ನಿಪ-

---

ದಿದ್ದ ಸ್ತ್ರೀಯರೆಲ್ಲರೂ ಇವನೇ ಗಂಡುಗಲಿ ಎಂದೂ ಮಿಕ್ಕವರೆಲ್ಲಾ ಉಂಡಾಡಿಗರೆಂತಲೂ ಹೇಳುತ್ತಾ ವೃಷಕೇತುವನ್ನು ಎಷ್ಟು ವರ್ಣಿಸಿದರೂ ತೃಪ್ತಿಪಡದಿದ್ದರು. ತಾನು ಮಾಡಿದ ಶಪಥವನ್ನು ನೆರವೇರಿಸಿ ಖ್ಯಾತಿಯಂ ಪಡೆದನೆಂದು ಎಲ್ಲರೂ ಕೊಂಡಾಡಿದರು ||೬೩|| ಅಷ್ಟು ಹೊತ್ತಿಗೆ ಅನುಸಾಲ್ವನಿಗೆ ಯುದ್ಧದಲ್ಲಿ ಆಗಿದ್ದ ಬಳಲಿಕೆಯೆಲ್ಲಾ ಕಳೆದುಹೋಗಿ ಜ್ಞಾನವುಂ ತಂದುಕೊಂಡು ಎದುರಾಗಿರುವ ಶ್ರೀ ಕೃಷ್ಣಪರಮಾತ್ಮನ ದಿವ್ಯ ಸುಂದರಗಾತ್ರವನ್ನು ನೋಡಿ ಆ ಮಹಾತ್ಮನಾದ ಸ್ವಾಮಿಯನ್ನು ಕುರಿತು ಎಲೈ ಮಹಾತ್ಮನೆ! ನೀನು ಯಾರೆಂಬ ತಿಳುವಳಿಕೆಯಿಲ್ಲದೆ ಮಾಯಾಪಾಶಬದ್ಧನಾಗಿ ಬಿದ್ದ ಅನಾಥನಾದ ನನ್ನನ್ನು ದೀನಬಂಧುವೂ, ಶರಣಾಗತರಕ್ಷಕನೂ ಆದ ನೀನು ಸಲಹಬೇಕೆಂದು ಕೇಳಿಕೊಂಡ ಅನುಸಾಲ್ವನ ಆ ನುಡಿಗಳನ್ನಾಲಿಸುತ್ತಿದ್ದ ವೃಷಧ್ವಜನು ಸಾಲ್ವಾನುಜನನ್ನು ಕುರಿತು ಗರ್ವೋದ್ಧತನಾಗಿ ನುಡಿದ ನಿನ್ನ ಮಾತು ಏನಾಯಿತು? ನಿನ್ನ ಪರಾಕ್ರಮವೆಲ್ಲಿಗೆ ಹೋಯಿತು? ನಿನ್ನ ಹೊಟ್ಟೆಯನ್ನು ಸೀಳಿಬಿಡಬೇಕು ಎಂಬ ತೆರನಾಗಿ ನುಡಿಯುತ್ತಿರುವ ಕರ್ಣತನುಜನನ್ನು ಕುರಿತು ||೬೪|| ಕೇಳೈ ಮತಿಯಿಲ್ಲದ ವೃಷಧ್ವಜನೇ! ಪರಮಾತ್ಮನನ್ನು ದೂಷಿಸಿದರೂ ಭೂಷಿಸಿದರೂ ಕೂಡ ಕೋಟಿ ಜನ್ಮಗಳಲ್ಲಿ ಮಾಡಿದ ದುಷ್ಕೃತಗಳೆಲ್ಲಾ ಹೋಗುವುದಿಲ್ಲವೇ? ವೀರಾವೇಶದಿಂದ ನಾನಾಡಿದ ಕೆಟ್ಟ ನುಡಿಗಳಿಗೆ ಕರುಣಾನಿಧಿಯಾದ ಪರಮಪುರುಷನು ಹಗೆತನವನ್ನೆ ಮಾಡುವನೆಂದರಿತಿರುವೆಯಾ? ಈದಿನ ನನಿಗುಂಟಾದ ಪುಣ್ಯಕ್ಕೆಣೆಯೇ ಇಲ್ಲವು. ನಾನೇ ಧನ್ಯನು ಎಂದೆನ್ನುತ್ತಾ ಕೃಷ್ಣನ

ಗುತ್ತಾರಮಾಗಿ ||೬೬|| ಬಳಿಕಜಯಲಾಭದಿಂದಸುರಾರಿಪಾಂಡವ | ರ್ಮೊಳಗುವನಿಖಿಳವಾದ್ಯಕುಲದಿಂದವಂದಿಗಳ | ಕಳಕಳದ ರಭಸದಿಂಬಳಸಿದಸಮಸ್ತಪುರುಷಸ್ತ್ರೀಕದಂಬದೊಡನೆ || ಪೊಳಲಂಪೊಗಲ್ಕಾಯುಧಿಷ್ಠಿರನರೇಶ್ವರಂ | ನಿಳಯಂಗಳಿತ್ತನಿಬರೆಲ್ಲರಂ ಸತ್ಕರಿಸಿ | ಕಳುಹಿನಿಜಭವನದೊಳ್ದೇವಪುರಲಕ್ಷ್ಮೀಪತಿಯನುಪಚರಿಸುತಿರ್ದನು ||೬೭||

ಸಂಧಿ ೭ ಕ್ಕಂ ಪದ್ಯ ೩೮೮ ಕ್ಕಂ ಮಂಗಳಮಸ್ತು.

---

ಮರ್ಯಾದೆಯಿಂದ ಕಾಣುವ, ಅನಿತರೊಳ್-ಬಳಗಾಗಿ, ಪ್ರದ್ಯುಮ್ನನು-ಮೀನಕೇತನನು, ಉಳಿದ-ಮಿಕ್ಕ, ಸೇನೆಗಳನೆಲ್ಲಮಂ-ಅಶೇಷವಾದ ಚತುರಂಗ ಬಲವನ್ನು, ಗೆಲ್ದು-ಗೆದ್ದು, ತುರಗಮಂ-ಅಶ್ವವನ್ನು, ಬಿಡಿಸಿಕೊಂಡು – ವಶಪಡಿಸಿಕೊಂಡವನಾಗಿ, ಅಗಧರನ – ಗೋವರ್ಧನೋದ್ಧಾರಿಯಾದ ಕೃಷ್ಣಮೂರ್ತಿಯ, ಸಮ್ಮುಖಕೆ – ಮುಂಭಾಗದಲ್ಲಿ, ತಂದು– ತೆಗೆದುಕೊಂಡು ಬಂದು, ಇತ್ತ–ತಾನುಮಾಡಿದ, ಭಾಷೆಗೆ– ಶಪಥಕ್ಕೆ, ಉತ್ತಾರಮಾಗಿ – ನೆರವೇರಿತೆಂಬತೆರನಾಗಿ, ನಿಲಿಸಿದನು– ನಿಲ್ಲುವಂತೆ ಮಾಡಿದನು ||೬೬||

ಟೀ|| ಬಳಿಕ–ಅನಂತರ, ಅಸುರಾರಿ–ರಾಕ್ಷಸಾಂತಕನಾದ ಕೃಷ್ಣಮೂರ್ತಿಯು, ಪಾಂಡವರು–ಯುಧಿಷ್ಠಿರನೇ ಮೊದಲಾದವರು, (ತಾವು ಗೆದ್ದ ಸಂತೋಷದಿಂದ) ಮೊಳಗುವ–ಧ್ವನಿಯಾಗತಕ್ಕ, ನಿಖಿಳ–ಸಮಸ್ತವಾದ, ವಾದ್ಯ ಕುಲದಿಂದ-ಭೇರಿ ದುಂದುಭಿಯೇ ಮೊದಲಾದವುಗಳ ತಂಡಗಳಿಂದ, ವಂದಿಗಳ–ಸ್ತುತಿಪಾಠಕರ, ಕಳಕಳ ರಭಸದಿಂದ–ಕೋಲಾಹಲ ಸ್ವನಂಗಳಿಂದಲೂ, ಬಳಸಿದ-ಆವರಿಸಿರತಕ್ಕ, ಸಮಸ್ತ–ಎಲ್ಲಾ, ಪುರುಷ-ಗಂಡಾಳುಗಳ, ಸ್ತ್ರೀ–ನಾರಿಯರ, ಕದಂಬ ದೊಡನೆ–ಗುಂಪಿನಿಂದೊಡಗೂಡಿ, ಪೊಳಲಂ–ನಗರವನ್ನು, ಪೊಗಲ್ಕೆ-ಪ್ರವೇಶಮಾಡಲು, ಆ ಯುಧಿಷ್ಠಿರ ನರೇಶ್ವರಂ - ರಾಜೇಂದ್ರನಾದ ಧರ್ಮಪುತ್ರನು, ನಿಳಯಂಗಳ–ನಿಲ್ಲುವುದಕ್ಕೆ ನೆಲೆಯನ್ನು, ಇತ್ತು–ದಯಪಾಲಿಸಿ, ಅನಿಬರೆಲ್ಲರಂ–ಅಷ್ಟು ಮಂದಿಯನ್ನು, ಸತ್ಕರಿಸಿ–ಮರ್ಯಾದೆ ಮಾಡಿ, ಕಳುಹಿ–ಕಳುಹಿಸಿ, ನಿಜಭವನದೊಳ್–ತನ್ನ ಮಂದಿರದಲ್ಲಿ, ದೇವಪುರ–ದೇವಲೋಕ ನಿವಾಸಿಯಾದ, ಲಕ್ಷ್ಮೀಪತಿಯನು–ಶ್ರೀ ಹರಿಯನ್ನು, ಉಪಚರಿಸುತ-ಸತ್ಕರಿಸುತ್ತ, ಇರ್ದನು–ಇದ್ದನು.

ಅ|| ವಿ|| ಕದಂಬ–ಗುಂಪು, ಕದಂಬವೆಂಬ ವೃಕ್ಷ. ||೬೭||

ಟೀಕಾ ತಾತ್ಪರ್ಯಸಹಿತಮಾದ ಜೈಮಿನಿ ಭಾರತದೊಳ್ ಏಳನೆಯ ಸಂಧಿಯು
ಸಮಾಪ್ತಮಾದುದು.

---

ಪದಾಂಬುರುಹಗಳಲ್ಲಿ ತನ್ನುತ್ತಮಾಂಗವನ್ನಿಟ್ಟುಕೊಂಡಿರುವ ಅನುಸಾಲ್ವನನ್ನು ||೬೫|| ಮಧುಸೂದನನು ನೋಡಿ ಮಂದಸ್ಮಿತನಾಗಿ ಪ್ರೇಮಾತಿಶಯದಿಂದ ಅವನನ್ನು ಭದ್ರವಾಗಿ ಅಪ್ಪಿಕೊಂಡು, ಆ ಸಾಲ್ವಾನುಜನನ್ನು ಕುರಿತು ಎಲೈ ದಾನವೇಂದ್ರನಾದ ಅನುಸಾಲ್ವನೆ! ನೀನು ಇದುವರೆಗೆ ಮಾಡಿದ ಕೆಟ್ಟಕೆಲಸಗಳನ್ನೆಲ್ಲಾ ಮನ್ನಿಸಿ ನಿನಗೆ ಪ್ರಸನ್ನನಾಗಿರುವೆನು. ಇಂದು ಮೊದಲು ನೀನು ದೇವಕಾರ್ಯಕ್ಕೆ ವಿರೋಧಿಯಾಗದೆ ನಮ್ಮೊಂದಿಗೆ ಇದ್ದುಕೊಂಡು ಯುಧಿಷ್ಠಿರನು ಮಾಡುವ ಅಶ್ವಮೇಧಯಾಗಕ್ಕೆ ಸಹಾಯಕನಾಗಿರಬೇಕೆಂದರುಹಿ ಮರ್ಯಾದೆಯಿಂದ ಕಾಣುತ್ತಿರುವ ಕಾಲಕ್ಕೆ ಸರಿಯಾಗಿ ಪ್ರದ್ಯುಮ್ನನು ಅನುಸಾಲ್ವನ ಮಿಕ್ಕ ಸೈನ್ಯವನ್ನೆಲ್ಲಾ ಸೂರೆಮಾಡಿ ಯಜ್ಞಾಶ್ವವನ್ನು ಬಿಡಿಸಿಕೊಂಡು ಬಂದು ಕೃಷ್ಣಮೂರ್ತಿಯ ಎದುರಿಗೆ ನಿಲ್ಲಿಸಿದವನಾಗಿ ತಾನು ಮಾಡಿದ ಶಪಥವನ್ನು ಈಡೇರಿಸಿ ಸಂತುಷ್ಟಾಂತರಂಗನಾಗಿದ್ದನು ||೬೬|| ಅನಂತರದಲ್ಲಿ ಪಾಂಡವರ ಮತ್ತು ಯಾದವರ ಸೈನ್ಯದಲ್ಲಿ ಜಯಸೂಚಕಂಗಳಾದ ಭೇರೀ ಮೃದಂಗಾದಿಗಳು ಮೊಳಗಿದವು. ಸ್ತುತಿಪಾಠಕರ ಧ್ವನಿಯು ಹೆಚ್ಚಾಯಿತು. ಕೋಲಾಹಲಧ್ವನಿಯಿಂದ ಜನರೆಲ್ಲಾ ಗುಂಪುಗುಂಪಾಗಿ ನೆರೆದರು. ಸ್ತ್ರೀಯರ ಸಮೂಹವು ಎಲ್ಲೆಲ್ಲಿಯೂ ಆವರಿಸಿಕೊಂಡಿತು. ಈ ರೀತಿಯಲ್ಲಿ ಜಯಜಯಧ್ವನಿಯಿಂದ ಕೂಡಿದ ಧರ್ಮಾತ್ಮನಾದ ಧರ್ಮರಾಯನು ತನ್ನ ವಾಸಸ್ಥಾನವನ್ನು ಸೇರಿ ಅಲ್ಲಿ ನೆರೆದಿದ್ದವರನ್ನೆಲ್ಲಾ ಸತ್ಕರಿಸಿ ದೇವಪುರನಿವಾಸಿಯಾದ ಲಕ್ಷ್ಮೀಕಾಂತನನ್ನು ಅಹೋರಾತ್ರಿಯಲ್ಲಿಯೂ, ಧ್ಯಾನವಂ ಮಾಡುತ್ತಿದ್ದನೆಂಬಲ್ಲಿಗೆ

ಟೀಕಾ ತಾತ್ಪರ್ಯಸಹಿತಮಾದ ಜೈಮಿನಿಭಾರತದೊಳು ಏಳನೆಯ ಸಂಧಿಯು
ಸಮಾಪ್ತಮಾದುದು. ||೬೭||



## ಎಂಟನೆಯ ಸಂಧಿ.

ಸೂಚನೆ॥ ಅಧ್ವರೋಪಕ್ರಮದೊಳ್ ಮರಹಯ ವೈದೆಸೀ । ಲಧ್ವಜನಪಟ್ಟಣದೊಳಗ್ನಿಯಂಕಂಡರಿಬ । ಲಧ್ವಂಸಿ ಪಾರ್ಥನವನಂಜಯಿ-ಸೆ ಭಂಗದಿಂತನ್ನ ಪುರಮಂ ಪೊಕ್ಕನು ॥

ರಾಯಕೇಳನುಸಾಲ್ವನಂ ಕೂಡಿಕೊಂಡುಕಮ । ಲಾಯತಾಂಬಕನಖಿಳಯಾದವರಗಡಣದಿಂ । ದಾಯುಧಿಷ್ಠಿರ ನೃಪನಸನ್ಮಾನಮಂತಳೆವುತಿರೆಜಾಹ್ನವಿಯತಟದೊಳು ॥ ಆಯಿತಧ್ವರಶಾಲೆಶಾಸ್ತ್ರವಿಶ್ರುತದವಿವಿ । ಧಾಯತ ವಿಚಿತ್ರ ವೈಭವ

ಶ್ರೀರಸ್ತು.

—ಎಂಟನೆಯ ಸಂಧಿಯ ಪ್ರಾರಂಭವು.—

ಸೂಚನೆ ;—ಅಧ್ವರ-ಯಜ್ಞದ, ಉಪಕ್ರಮದೊಳು-ಆರಂಭದಲ್ಲಿ, ಅಮಲ-ಉತ್ತಮವಾದ, ಹಯಂ-ಕುದುರೆಯು, ಐದೆ-ದೇಶಾಟನೆಗಾಗಿ ಹೊರಟರಲು, ನೀಲಧ್ವಜನ-ಕರ್ರಗಿರುವ ಧ್ವಜಪಟದಿಂದ ಶೋಭಿಸುತ್ತಿರುವ ನೀಲಧ್ವಜನೆಂಬರಸನ, ಪಟ್ಟಣದೊಳು-ನಗರದಲ್ಲಿ, ಅಗ್ನಿಯಂ-ಆ ಪೊಳಲಂ ಕಾಯುತ್ತಿರುವ ಸ್ವಭಾವವುಳ್ಳ ಅಗ್ನಿ ಪುರುಷನನ್ನು, ಕಂಡು-(ಕುದುರೆಯನ್ನು ನಿರ್ಬಂಧದಿಂದ ತಪ್ಪಿಸಲು ಹೋಗತಕ್ಕವರನ್ನು ಸುಡುತ್ತಿರುವಂತೆ) ನೋಡಿ-ಈಕ್ಷಿಸಿ, ಅರಿಬಲ-ವೈರಿಗಳ ಚತುರಂಗ ಬಲವನ್ನು, ಮತ್ತು ಅವಶ ಸಾಹಸವನ್ನೆಲ್ಲಾ, ಧ್ವಂಸಿ-ಹಾಳುಮಾಡುವ, ಪಾರ್ಥನು-ಕಿರೀಟಿಯು, ಆವನಂ-ಆ ನೀಲಧ್ವಜರಾಯನನ್ನು, ಮತ್ತು ಅಗ್ನಿಯನ್ನು ಸಹ, ಜಯಿಸೆ-ಪರಾಕ್ರಮ ಮತ್ತು ದೇವತಾಸ್ಮರಣೆ ಇವುಗಳಿಂದ ಸೋತುಹೋಗುವಂತೆ ಮಾಡಲು, ಭಂಗದಿಂ-ಪರಾಜಯದಿಂದ, ನೀಲಧ್ವಜನಿಗೆ ಸಹಾಯಕನಾದ ಅಗ್ನಿಯು ಫಲ್ಗುಣನಿಗೆ ವಶವಾಗಲು, ತನ್ನ-ಸ್ವಕೀಯವಾದ, ಪುರಮಂ-ಮಾಹಿಷ್ಮತೀ ಎಂಬ ಹೆಸರಿನಿಂದ ಮೆರೆಯುವ ಪಟ್ಟಣವನ್ನು, ಪೊಕ್ಕನು-ಪ್ರವೇಶ ಮಾಡಿದನು ॥

ಅ॥ ವಿ॥ ಅರಿಗಳಬಲ (ಷ. ತ.) ಅರಿಬಲವನ್ನು ಧ್ವಂಸಮಾಡತಕ್ಕವನು ಯಾರೊ ಅವನು (ಬ. ಸ.) ಅರಿ-ತೀಳಿ, (ಕ್ರಿಯೆ). ಕಾಳಿನಿಂದ ಕೂಡಿರುವ ಹುಲ್ಲು (ನಾಮ). ಬಲ-ಶಕ್ತಿ, ಸೈನ್ಯ, ಪೊಕ್ಕನು-ಪುಗು ಎಂಬ ಧಾತುವಿನ ಭೂತಕಾಲ. ಅರ್ಜುನ, ಫಲ್ಗುನ, ಪಾರ್ಥ, ಕಿರೀಟೀ, ಶ್ವೇತವಾಹನ, ಭೀಭತ್ಸು, ವಿಜಯ, ಕೃಷ್ಣ, ಸವ್ಯಸಾಚಿ, ಧನಂಜಯ ಎಂಬ ಹತ್ತು ಹೆಸರುಗಳು ಅರ್ಜುನನಿಗೆ ಸಲ್ಲತಕ್ಕವು ॥

ಟೀ॥ ರಾಯ-ಎಲೈ ಜನಮೇಜಯಕ್ಷಿತಿಪಾಲನೆ. ಕಮಲಾಯತಾಂಬಕನು-ಕೃಷ್ಣಸ್ವಾಮಿಯು, ಅನುಸಾಲ್ವನಂ ಕೂಡಿಕೊಂಡು-ಅನುಸಾಲ್ವನನ್ನು ಸಂಗಡ ಕರೆದುಕೊಂಡು, ಅಖಿಲ-ಎಲ್ಲಾ, ಯಾದವರ-ಯದುಕುಲಜರ, ಗಡಣದಿಂದ-ಸಮುದಾಯದಿಂದ, ಆಯುಧಿಷ್ಠಿರನೃಪನ-ಆ ಧರ್ಮಪುತ್ರನೆಂಬ ಹಸ್ತಿನಾವತಿಯ ಒಡೆಯನ, ಸನ್ಮಾನಮಂ-ಮರ್ಯಾದೆಯನ್ನು, ತಳೆವುತ-ಹೊಂದುತ್ತ, ಇರೆ-ಇರಲಾಗಿ, ಜಾಹ್ನವಿಯ-ಸುರನದಿಯ, ತಟದೊಳು-ದಡದಲ್ಲಿ, ಅಧ್ವರಶಾಲೆ-ಯಜ್ಞಮಂಟಪವು, ಆಯಿತು-ಎಸಗಬೇಕೆಂದು ನಿಷ್ಕರ್ಷೆಯಾಯಿತು, (ನೆರವೇರಿತು). ಶಾಸ್ತ್ರ-ಶಾಸ್ತ್ರಗಳಲ್ಲೆಲ್ಲಾ, ವಿಶ್ರುತ-ಸುಪ್ರಸಿದ್ಧವಾಗಿರುವ, ವಿವಿಧ-ನಾನಾಪ್ರಕಾರವಾದ, ಆಯತ-ಬಹುದೊಡ್ಡ, ವಿಚಿತ್ರ-ಅಚ್ಚರಿಗೊಳಿಸುವ, ವೈಭವದಿಂದ-ಸಾಮ್ರಾಜ್ಯದಿಂದ, ಬಳಿಕ-ಯಜ್ಞಮಂಟಪವೆಲ್ಲಾ ನೆರವೇರಿದಮೇಲೆ, ಆ ಮಹಾಯಜ್ಞದ-ಶ್ರೇಷ್ಠತಮವಾದ ಅಶ್ವಮೇಧವೆಂಬ ಆ ಕ್ರತುವಿನ, ಅಸಮ-ಅಸದೃಶವಾದ, ಪ್ರಾರಂಭಕಾಲದ-ಆರಂಭಿಸುವ ಸಮಯವಾದ, ವಸಂತರುತು-ಮಧುಮಾಸವು (ಚೈತ್ರ, ವೈಶಾಖ,) ಸಂಭವಿಸಿತು-ಪ್ರಾಪ್ತವಾಯಿತು ॥

ಅ॥ ವಿ॥ ಕಮಲಾಯತಾಂಬಕ-ಆಯತವಾದ ಅಂಬಕ (ವಿ. ಪೂ.) ಕಮಲದಂತೆ ಆಯತಾಂಬಕವು ಯಾರಿಗೊ ಅವನು ಕಮಲಾಯತಾಂಬಕ (ಬ. ಸ.) ಪೂರ್ವದಲ್ಲಿ ಸುರಲೋಕದಿಂದ ಗಂಗಾನದಿಯು ಭೂಲೋಕಕ್ಕೆ ಭಗೀರಥನ ಇಷ್ಟಸಿದ್ಧಿಯಂ ಗೈಯ್ಯಲು ಬರುತ್ತಿರುವ ಕಾಲದಲ್ಲಿ ಜಹ್ನುರುಷಿಯ ಆಶ್ರಮದೆಡೆಗೆ ಬಂದು ಆತನ ಪರ್ಣಶಾಲೆಯೆಲ್ಲಾ ನೆನೆದು

ಶ್ರೀರಸ್ತು.

ಎಂಟನೆಯ ಸಂಧಿ ಪ್ರಾರಂಭವು.

ಕೇಳೈ ಜನಮೇಜಯಕ್ಷಿತಿಪತಿಯೇ ! ಈರೀತಿಯಲ್ಲಿ ಶ್ರೀ ಕೃಷ್ಣನು ಅನುಸಾಲ್ವನೊಂದಿಗೂ, ತನ್ನ ಸಕಲ ಸೇನೆಯಿಂದೊಡಗೂಡಿಯೂ, ಧರ್ಮಜನ ಸತ್ಕಾರ್ಯವನ್ನೆಲ್ಲಾ ಕೈಕೊಂಡು ಸಂತೋಷಚಿತ್ತನಾಗಿರುವಾಗ ಗಂಗಾನದಿಯ ದಡದಲ್ಲಿ ಶಾಸ್ತ್ರಸಮ್ಮತವಾಗಿಯೂ, ಬಹು ವಿಚಿತ್ರ ವೈಭವದಿಂ ಕೂಡಿಯೂ, ಇರುವ ಯಜ್ಞಶಾಲೆಯು ನಿರ್ಮಿತವಾಯಿತು.

ದಿಂಪಬಳಿಕಾವು । ಹಾಯಜ್ಞಾದನುಸವ-ಪ್ರಾರಂಭಕಾಲದವಸಂತರ್ತುಸಂಭವಿಸಿತು ॥ ೧ ॥ ಒಂದೆಡೆಯೊಳುಂತನನೆನಿಲು ವಿಲ್ಲದತಿವೇಗ । ದಿಂದವಿರತಂಪ್ರಬಲಮಾಗಿಬೀಸುವಗಾಳಿ । ಚಂದನದ್ರುಮಂಗಳಂತೊಡರ್ದಹಿಗಳಾಹಾರಮಂಕೊಂಡುಕೊಂಡು ಮಿಕ್ಕ ॥ ಮಂದತ್ವಮಂತಳೆದುಮಲಯಾಚಲದಸೀಮೆ । ಯಿಂದಸರಸಿಜದೊಳ್ಭ್ರಮಿಸುವಮರಿದುಂಬಿಗಳ । ವೃಂದಮಂ ಕೂಡಿಕೊಂಡೆಳೆವೆಲರ್ಬಂದುದುವಿರಹಿಗಳೆದೆಯಾರುವಂತೆ ॥ ೨ ॥ ಮಿರುಗುವತಳಿರ್ದೋರಣಂಗಳಂಕಟ್ಟುಸುತ । ಮರಿಗೋಗಿಲೆಗಳಬಾಯ್ಗಳಬಲಿದಬಂಧನದ । ಸೆರೆಗಳಂಬಿಡಿಸುತ್ತದುಂಬಿಗಳಬಳಗಕ್ಕೆಕಮಲಗಳಸೂರೆವಿಡುತ ॥ ಕಿರುವೆಲರೊಳೆತ್ತಲಂಸಾರಿಸುತವಿರಹಿಗಳ । ನೆರಗಿಸುತಜೊನ್ನದರಸಂಪೇರ್ಚಿಮದನನೃಪ ॥ ಪೊರಮಟ್ಟುಮಾಗಿಯನ್ನುಡುಗಿಸಿಸಮಸ್ತವನರಾಷ್ಟ್ರಮಂಕೈಕೊಂಡನು ॥ ೩ ॥ ಪೊಸಮಾವಶೋಕೆಯೊಳ್ಮರಿದುಂಬಿಕೋಗಿಲೆಯೊ । ಳೆಸೆವಸಂಪಗೆಪೊಚ್ಚಪೊಂದಾ

ಹೋಗುವಂತಾಯಿತು. ಇದಕ್ಕಾಗಿ ಆ ಮಹರ್ಷಿಯು ಸುರನದಿಯ ಉದಕವನ್ನೆಲ್ಲಾ ಪಾನಮಾಡಿ ಭಗೀರಥಮಹಾರಾಯನ ಅನೇಕವಾದ ಪ್ರಾರ್ಥನೆಗಳಿಗೆ ಪ್ರಸನ್ನನಾಗಿ ತನ್ನ ಕಿವಿಯ ಮೂಲಕವಾಗಿ ಭೂಲೋಕಕ್ಕೆ ಸುರನದಿಯನ್ನು ಬಿಟ್ಟುಬಿಟ್ಟನು. ಅಂದಿನಿಂದಲೂ ಗಂಗಾನದಿಗೆ ಜಾಹ್ನವಿ ಎಂಬ ನಾಮಧೇಯವುಂಟಾಗಿರುವುದು ॥೧॥

ಟೀ॥ ಒಂದೆಡೆಯೊಳು-ಒಂದು ಕಡೆಯಲ್ಲಿ, ತನಗೆ-ಮಂದಾನಿಲನಿಗೆ, ನಿಲುವು-ನೆಲೆಯು, ಇಲ್ಲದ-ಇಲ್ಲದಿರತಕ್ಕ, ಅತಿವೇಗದಿಂ-ಬಹು ಜಾಗ್ರತೆಯಿಂದ, ವಿರತಂ-ಅನವರತವೂ, ಪ್ರಬಲಂ-ಹೆಚ್ಚಾದದ್ದು, ಆಗಿ-ಆಗಿಬಿಟ್ಟು, ಬೀಸುವ-ಸುಳಿದಾಡತಕ್ಕ, ಗಾಳಿ-ವಾಯುವು, ಚಂದನದ್ರುಮಂಗಳಂ-ಚಂದನತರುಗಳನ್ನು, ತೊಡರ್ದು-ಆವರಿಸಿಕೊಂಡು, ಅಹಿಗಳು-ಹಾವುಗಳು, ಆಹಾರಮಂ-ತಿಂಡಿಯನ್ನು, ಕೊಂಡುಕೊಂಡು-ಸ್ವೀಕರಿಸಿ, ಮಿಕ್ಕು-ಸ್ವಲ್ಪವಾಗಿ ನಿಂತು, ಮಂದತ್ವಮಂ-ಜಡತನವನ್ನು, ತಳೆದು-ಧರಿಸಿ, ಮಲಯಾಚಲದ-ಮಲಯಗಿರಿಯ, ಸೀಮೆಯಿಂದ-ತಟದಿಂದ, ಬಂದು-ಬಂದಾದ, ಸರಸಿಜದೊಳ್-ತಾವರೆಯಲ್ಲಿ, ಭ್ರಮಿಸುವ-ಚಲಿಸತಕ್ಕ, ಮರಿದುಂಬಿಗಳ-ಪರಮೆವರಿಗಳ, ವೃಂದಮಂ-ಗುಂಪಿನಿಂದ, ಕೂಡಿಕೊಂಡು-ಜೊತೆಮಾಡಿಕೊಂಡು, ಎಳೆವೆಲರು-ಮಂದಾನಿಲವು, ವಿರಹಿಗಳ - ಕಾಮಾತುರರಾಗಿರತಕ್ಕವರ, ಎದೆಯು-ಹೃದಯ ಸ್ಥಾನವು, ಆರುವಂತೆ- ಒಣಗಿಹೋಗುವ ತೆರನಾಗಿ, ಬಂದುದು-ಐತಂದಿತು. (ಚಲಿಸುತ್ತಿತ್ತು) ॥೨॥

ಟೀ॥ ಮಿರುಗುವ-ಹೆಚ್ಚಾಗಿ ಹೊಳೆಯುತ್ತಿರುವ, ತಳಿರು-ಚಿಗುರ್ಗಳೆನ್ನತಕ್ಕ, ತೋರಣಂಗಳಂ - ಚೂತಪರ್ಣಗಳ (ಮಾವಿನೆಲೆಯ) ತೋರಣಗಳನ್ನು, ಕಟ್ಟಿಸುತ-ಕಟ್ಟಿಹಾಕುತ್ತ, ಮರಿಕೋಗಿಲೆಗಳ - ಕೋಗಿಲೆಯ ಮರಿಗಳ, ಬಾಯ್ಗಳ-ವದನಂಗಳ, ಬಲಿದ-ಹೆಚ್ಚಾದ, ಬಂಧನದ-ಕಟ್ಟುಗಳಿಂದ ಕೂಡಿದ, ಸೆರೆಗಳಂ-ಬಂಧನಂಗಳನ್ನು, ಬಿಡಿಸುತ್ತ-ಬಿಟ್ಟುಹೋಗುವಂತೆ ಮಾಡುತ್ತ, ದುಂಬಿಗಳ-ಅಳಿಗಳ, ಬಳಗಕೆ-ಸಮೂಹಕ್ಕೆ, ಕಮಲಗಳ-ತಾವರೆಗಳನ್ನು, ಸೂರೆವಿಡುತ್ತ=ಕೊಳ್ಳೆಕೊಡುತ್ತ, ಕಿರುವೆಲರೊಳು-ಮಂದಾನಿಲದಿಂದ, ಎತ್ತಲುಂ-ಎಲ್ಲಾ ಕಡೆಗಳಲ್ಲಿಯೂ, ಸಾರಿಸುತ - ಪ್ರಕಟಮಾಡುತ್ತ, ಜೊನ್ನದ-ಚಂದ್ರಿಕೆಯ, ರಸಂ-ವರ್ಣವು (ಕಾಂತಿಯು), ಪೆರ್ಚಿ-ಅಧಿಕವಾಗಿ, ಮದನ-ಮನ್ಮಥನೆನ್ನುವ, ನೃಪ-ದೊರೆಯು, ಪೊರಮಟ್ಟು-ಹೊರಟು, ಮಾಗಿಯನು-ಮಾಘ ಫಾಲ್ಗುಣ ಮಾಸಂಗಳನ್ನು, ಉಡುಗಿಸಿ-ತಗ್ಗಿಸಿಬಿಟ್ಟು, ಸಂಕುಲವನ-ಎಲ್ಲಾ ಆರಾಮಂಗಳ, ಸಾಲುಮರ-ಸಾಲಾಗಿ ಅಥವಾ ಗುಂಡಾಗಿರತಕ್ಕ ತರುಗಳೆನ್ನುವ, ರಾಷ್ಟ್ರಮಂ-ನಾಡನ್ನು, ಕೈಕೊಂಡನು-ವಶಮಾಡಿಕೊಂಡನು॥

ಅ॥ ವಿ॥ ಜೊನ್ನ (ತ್ಭ) ಜ್ಯೋತ್ಸ್ನಾ) (ತ್ಸ) ಮಾಗಿ (ತ್ಭ) ಮಾಘ (ತ್ಸ). ॥೩॥

ಆಕಾಲಕ್ಕೆ ಸರಿಯಾಗಿ ಸಕಲ ಮನೋರಂಜಿತವಾದ ಮಧುಮಾಸವು ಪ್ರಾರಂಭವಾಯಿತು ॥೧॥ ಆಗ ಒಂದು ಕಡೆಯಿಂದ ತನಗೆ ಎಲ್ಲಿಯೂ ನಿಲ್ಲಲಾಗುವುದಿಲ್ಲವೆಂಬಂತೆ ಬಹು ವೇಗದಿಂದ ಗಟ್ಟಿಯಾಗಿ ಬೀಸಿಕೊಂಡು ಬರುತ್ತಾ ಗಂಧದ ಮರಗಳಿಗೆ ಸಿಕ್ಕಿಹೋಗಿ, ಸರ್ಪಗಳಿಗೆ ಆಹಾರವಾದ್ದರಿಂದ ಮೊದಲಿದ್ದ ವೇಗವು ಕಡಿಮೆಯಾಗಿ, ಮಲಯ ಪರ್ವತಪ್ರಾಂತವಂ ಬಳಸಿಕೊಂಡು, ಕಮಲಗಳಲ್ಲಿರುವ ಅಳಿವಿಂಡನ್ನು ಸ್ಪರ್ಶಿಸುತ್ತ, ಭೃಂಗಾಳಿಗಳಿಂದೊಡಗೂಡಿ ಬಂದು ವಿರಹವೇದನೆಯನ್ನನುಭವಿಸುವವರ ಎದೆಯು ಬತ್ತಿಹೋಗುವಂತೆ ಮಾಡುತ್ತಲಿರುವುದೋ ಎಂಬತೆರನಾಗಿ ಮಂದಾನಿಲವು ಬೀಸುತ್ತಿತ್ತು ॥ ೨ ॥ ಮನ್ಮಥರಾಜನು ದಿಗ್ವಿಜಯಾರ್ಥವಾಗಿ ಪಯಣವಂ ಮಾಡಿರುವುದರಿಂದ ಅಲಂಕಾರವಾಗಿರುವಂತೆ ಕಟ್ಟಿರುವ ತೋರಣಗಳೋ ಎಂಬಂತೆ ಎಲ್ಲೆಲ್ಲಿಯೂ ಎಳೆಯವಾಗಿಯೂ, ಕೆಂಪಗೂ ಇರತಕ್ಕ ಚಿಗುರುಗಳು ಮರಗಳನ್ನಾವರಿಸಿದ್ದವು. ಪರರಾಜರ ಬಂಧನದಿಂದ ಬಿಡುಗಡೆಯಾಯಿತೋ ಎಂಬಂತೆ ಕೋಗಿಲೆಗಳ ಕೊರಲ್ಸರವು ಚೆಲುವಾಯಿತು. ಅಳಿವಿಂಡು ತಾವರೆಗಳನ್ನಾವರಿಸಿತು. ಮಂದಮಾರುತವು ಎಲ್ಲೆಡೆಗಳಲ್ಲಿಯೂ ಬೀಸಲಾರಂಭಿಸಿತು, ಬೆಳ್ದಿಂಗಳ ಕಾಂತಿಯು ಅಧಿಕವಾಯಿತು. ಚಳಿಗಾಲವೆಂಬ ಹಗೆಯನ್ನು ಗೆದ್ದು ವನರಾಷ್ಟ್ರದಲ್ಲಿ ಪಟ್ಟಾಭಿಷಿಕ್ತವಾಗಿರುವನೋ ಎಂಬಂತೆ ತೋರುತ್ತಿತ್ತು ॥೩॥ ವಸಂತಕಾಲವು ಸಮಿಪಸ್ಥವಾಗಲು

ವರೆಯೊಳ್‌ಪಸ | ಡಿಸಿದಮಲ್ಲಿಗೆಯಲರ್ಬೆಳತಬೆಳದಿಂಗಳೊಳ್ಗಿಳಿವಿಂಡುಬನಸಿರಿಯೊಳು || ಮಸದವೊಂದೊಂದರೊಳ್ಮಧು
ಮಾಸಕಂಗಜನ | ದೆಸೆಯಂತೆಖತಿಯಂತೆಧನದಂತೆಜಸದಂತೆ | ಪಸರ್ವೆಳಗಿನಂತೆಕೆಂಪಸಿತಂಪಳದಿಪಳಕುಪಚ್ಚೆಗಳಬಣ್ಣದಿಂದ ||
ತಳಿತೆಸೆವತರುಗಳನೆರಳ್ಗಳಂಸಾರ್ದುಶೀತ | ಳದನಿರ್ಮಲವಾರಿಯಂನೀಂಟನವ್ಯಪರಿ | ಮಳದಿಂದಸೊಗಸುತೀಡುವತೆಳುವೆ
ಲರ್ಗೆಮೈಯೊಡ್ಡಿಮಾರ್ಗಶ್ರಮವನು || ಕಳೆದರಧ್ವಗರೋಪರೊಳ್ಬೆರೆದುವಿರಹಿಗ | ಳ್ಮಲಯಜದಘನಸಾರದೊಳ್ತಂಪುವೆತ್ತು

ಟೀ|| ಅಂಗಜನ-ಮನ್ಮಥನ ಸಂಬಂಧವಂ ಪಡೆದ, ಮಧುಮಾಸಕೆ-ಗಿಡಮರಗಳೆಲ್ಲಾ ಚಿಗುರಿ ಹೂವಾಗಿ ಕಾಯಿ ಹಣ್ಣು ಮೊದಲಾದವುಗಳಿಂದ ಪೂರ್ಣವಾಗಿರಲು, (ಮಾರನಾಟಕೆ ಕಾಲವಾಗಿರತಕ್ಕ ವಸಂತರುತುವಿನ ಸಮಾಗಮವಾಗಲು) ಪೊಸಮಾವು-ಚಿಗುರಿನಿಂದ ಕೂಡಿದ ಮಾವಿನ ಮರವು, ಅಶೋಕೆಯೊಳ್-ಅಶೋಕವೃಕ್ಷದಲ್ಲಿ, (ಆನಂದಾತಿಶಯದಲ್ಲಿ), ಕೆಂಪು-ರಕ್ತಛಾಯೆಯು, ದೆಸೆಯಂತೆ-ಸಂಜೆಗೆಂಪಿನಿಂ ಮೆರೆವ ದಿಕ್ಕುಗಳ ಹಾಗೆ, ಒಂದೊಂದರೊಳು-ಒಂದು ಇನ್ನೊಂದರಲ್ಲಿ, ಮಸೆದುದು-ಸೇರಿಕೊಂಡಿತು, (ವಸಂತರುತುವಿನಲ್ಲಿ ಮಾವಿನ ಮರಗಳೆಲ್ಲಾ ಚಿಗುರಿ ಅಲಂಕಾರಯುಕ್ತವಾಗಿರುತ್ತೆಂದು ಭಾವವು). ಮರಿದುಂಬಿ-ಜೇರುಂಡೆಯ ಮರಿಗಳು, ಕೋಗಿಲೆಯೊಳು-ಪಿಕಂಗಳಲ್ಲಿ, ಖತಿಯಂತೆ-ಕೋಪದ ತೆರನಾಗಿ, ಅಸಿತ-ಕೃಷ್ಣಛಾಯೆಯನ್ನು, ಮಸೆದುದು-ಉಂಟಾಗಿತ್ತು, (ಚೈತ್ರಮಾಸ ಪ್ರಾರಂಭವಾದ್ದರಿಂದ ಕೋಗಿಲೆಯ ಮತ್ತು ಭೃಂಗಗಳ ಸ್ವನಂಗಳು ಮನೋಹರವಾಗಿದ್ದವೆಂದು ಆಶಯವು), ಎಸೆವ-ಹೊಳೆಯುವ, ಸಂಪಿಗೆ-ಚಂಪಕ ಕುಸುಮಂಗಳು, ಪೊಚ್ಚ-ನೂತನವಾದ, ಪೊಂದಾವರೆಯೊಳು-ಅರಸಿನ ಬಣ್ಣದಿಂದ ಕೂಡಿದ ದಾವರೆ ಹೂಗಳಲ್ಲಿ, ಧನದಂತೆ-ಸುವರ್ಣದ ನಾಣ್ಯದಂತೆ, ಪಳದಿ-ಅರಿಸಿನ ಬಣ್ಣದಿಂದ, ಮಸೆದುದು-ಕೂಡಿತ್ತು, (ಮಧುಮಾಸವು ಒದಗಿ ಸಂಪಿಗೆಯ ಹೂಗಳಿಂ ಶೋಭಿಸುತ್ತಿತ್ತು) ಪವಡಿಸಿದ-ಹೆಚ್ಚಾದ, ಮಲ್ಲಿಗೆಯ-ಮಲ್ಲಿಕಾಲತೆಗಳ, ಅಲರ್-ಪುಷ್ಪಂಗಳು, ಬೆಳತ-ಚೆನ್ನಾಗಿ ಬಲಿತ, ಬೆಳದಿಂಗಳೊಳ್-ಚಂದ್ರಕಿರಣಂಗಳಲ್ಲಿ, ಜಸದಂತೆ-ಯಶಸ್ಸಿನ ಹಾಗೆ, ಪಳುಕು-ಶ್ವೇತಛಾಯೆಯಿಂದ, ಮಸೆದುದು-ನೆರೆಯಿತು (ಮಧುಮಾಸದಲ್ಲಿ ಮಲ್ಲಿಗೆಯ ಬಳ್ಳಿಗಳೆಲ್ಲಾ ಸುವಾಸನೆಯಾದ ಪುಷ್ಪಂಗಳಿಂದ ಶೋಭಿಸುತ್ತಿದ್ದವು). ಗಿಳಿವಿಂಡು-ಶುಕಸಂತತಿಯು, ಬನಸಿರಿಯೊಳು-ಉದ್ಯಾನವೆಂಬ ಲಕ್ಷ್ಮಿಯೊಂದಿಗೆ, ಪಸುರ್ವೆಳಗಿನಂತೆ-ಹಸುರುಬಣ್ಣದ ಪಚ್ಚೆಮಣಿಯಂತೆ, ಪಚ್ಚೆ-ಹಸುರು ಬಣ್ಣದಿಂದ, ಮಸೆದುದು-ಕೂಡಿತು. (ಎಲೆಗಳಿಂದಲೂ ಹಸುರಾಗಿದ್ದವು) ||

ಅ|| ವಿ|| ಸಂಪಿಗೆ (ತ್ಭ) ಚಂಪಕ (ತ್ಸ) ಮಲ್ಲಿಗೆ (ತ್ಭ) ಮಲ್ಲಿಕಾ (ತ್ಸ) ಬನ (ತ್ಭ) ವನ (ತ್ಸ) ಜಸ (ತ್ಭ) ಯಶಸ್ (ತ್ಸ) "ಕೆಂಪಸಿತಂಪಳದಿಪಚ್ಚೆಗಳ ಬಣ್ಣದಿಂದ" ಎಂಬೆಡೆಯಲ್ಲಿ ಅರ್ಥವು ಕ್ರಮವರಿತು ತೆಗೆದುಕೊಳ್ಳುವುದರಿಂದ ಕ್ರಮಾಲಂಕಾರವು ||೪||

ಟೀ|| ತಳಿತು-ಚಿಗುರಿ, ಎಸೆವ-ಹೊಳೆಯುವ, ತರುಗಳ-ವೃಕ್ಷಂಗಳ, ನೆರಳ್ಗಳಂ-ಪ್ರತಿಬಿಂಬಂಗಳನ್ನು, ಸಾರ್ದು-ತಾಳಿ, ಶೀತಳದ-ತಂಪಾದ, ನಿರ್ಮಲ-ಪರಿಶುದ್ಧವಾದ, ವಾರಿಯಂ-ಉದಕವನ್ನು, ನೀಂಟಿ-ಕುಡಿದು, ನವ್ಯ-ನೂತನವಾದ, ಪರಿಮಳದಿಂದ-ಸುರಭಿಯಿಂದ, ಸೊಗಸು-ಸೌಂದರ್ಯವನ್ನು, ತೀಡುವ-ಹರಡುವ, ತೆಳು-ಸ್ವಲ್ಪ ಸ್ವಲ್ಪವಾಗಿ ಬೀಸುವ, ಎಲರ್ಗೆ-ವಾಯುವಿಗೆ, ಮೈ-ದೇಹವನ್ನು, ಒಡ್ಡಿ-ಚಾಚಿ, ಮಾರ್ಗಶ್ರಮವನು-ನಡೆಯುವುದರ ಆಯಾಸವನ್ನು, ಅಧ್ವಗರು-ದಾರಿಗರು, ಕಳೆದರು-ಹೋಗಲಾಡಿಸಿಕೊಂಡರು, ವಿರಹಿಗಳ್-ಕಾಮಾತುರರಾಗಿರತಕ್ಕ ಹೆಂಗಸರು, ಓಪರೊಳ್-ವಿಟರುಗಳೊಂದಿಗೆ, ಮಲಯಜದ-ಮಲಯಗಿರಿಯಲ್ಲಿ ಹುಟ್ಟಿದ ಸುಗಂಧಯುಕ್ತವಾದ, ಘನಸಾರದೋಳ್-ಪಚ್ಚೆಗವ್ಪುರದಿಂದ, ತಂಪುವೆತ್ತು-ಶೈತ್ಯವಂ ಪಡೆದು, ನಿಚ್ಚಳದ-ನೆಲೆಯಾದ, ಕರುವಾಡದೊಳ್-ಉಪ್ಪರಿಗೆಗಳಲ್ಲಿ, ಅಂದು-ಆ ಕಾಲದಲ್ಲಿ, ಚೈತ್ರಾ

ಚೂತವೃಕ್ಷಗಳೆಲ್ಲಾ ಪಲ್ಲವಿಸಿ ದಾರಿಗರ ನೇತ್ರಗಳಿಗಾನಂದವನ್ನುಂಟುಮಾಡುತ್ತಿತ್ತು. ಎಲ್ಲೆಲ್ಲಿಯೂ ಭೃಂಗಾಳಿಗಳೂ, ಪಿಕವಿಂಡೂ ಇಂಪಾಗಿರುವಂತೆ ಗಾನವಂ ಮಾಡುತ್ತಿದ್ದವು. ಚಂಪಕ ಕುಸುಮಂಗಳಿಂದಲೂ ಮಲ್ಲಿಕಾಪುಷ್ಪಂಗಳಿಂದಲೂ, ಉಂಟಾದ ಸುವಾಸನೆಯು ದಿಕ್ಕುಗಳ ಕೊನೆಯನ್ನು ಮುಟ್ಟುತ್ತಿತ್ತು. ಎಲೆಗಳೆಲ್ಲಾ ಅಚ್ಚ ಹಸರು ಬಣ್ಣದಿಂದ ಕೂಡಿ ಪಚ್ಚೆಯಮಣಿಗಳನ್ನು ಧರಿಸಿರುವಂತೆ ಭ್ರಾಂತಿಗೈಯುತ್ತಿದ್ದವು || ೪ || ದಾರಿಗರು ಬಿಸಲಿನ ತಾಪವನ್ನು ತಡೆಯಲಾರದೆ ಎಳೆಚಿಗುರುಗಳಿಂದ ಕೂಡಿದ ವೃಕ್ಷಚ್ಛಾಯೆಗಳನ್ನಾಶ್ರಯಿಸಿ, ತಣ್ಣಗೂ ನಿರ್ಮಲವಾಗಿಯೂ ಇರುವ ಉದಕವಂ ಕುಡಿದು, ಶೈತ್ಯಸೌರಭ್ಯಮಾಂದ್ಯಯುಕ್ತವಾದ ಗಾಳಿಗೆ ಮೈಬಿಟ್ಟುಕೊಂಡು ತಮ್ಮ ಮಾರ್ಗಾಯಾಸವನ್ನು ಹೋಗಲಾಡಿಸಿಕೊಳ್ಳುತ್ತಿದ್ದರು. ವಿರಹತಾಪದಿಂದ ಬೆಂದು ಬೆಂಡಾದ ಸ್ತ್ರೀಯರು ಕಾಮುಕರೊಂದಿಗೆ ನೆರೆದು ಪಚ್ಚೆಕರ್ಪೂರ ಮೊದಲಾದ ವಸ್ತುಗಳಿಂದ ತಂಪಾಗಿರುವಂತೆ ಮಾಡಿಕೊಂಡು ಉಪ್ಪರಿಗೆಗಳ ಮೇಲ್ಮಚ್ಚುಗಳಲ್ಲಿ ಆನಂದದಿಂದ ಕ್ರೀಡಾಸುಖವನ್ನನುಭವಿಸುತ್ತಿ

ನಿ । ಷ್ಪಳದಕರುಪಾಡದೋಳ್ಭೋಗಿಸಿದರಂದು । ಚೈತ್ರಾಗಮದಸಂಭ್ರಮದೊಳು ॥ ೫ ॥ ಆಚೈತ್ರಮಾಸಮೆಸೆದುದುಧರ್ಮ
ಜನಕೀರ್ತಿ । ಭೂಚಕ್ರಮಂಮುಸುಕಿದಂತೆಬೆಳ್ದಿಂಗಳಿರೆ । ಯಾಚಕರನೆತ್ತಲಂಕೂಗಿಕರೆವಂತುಲಿಯೆಕೋಗಿಲೆಗಳಿಳೆಯಜನದ ॥
ಲೋಚನಕುದಯಿಪಪೊಸತಂತೆಚೂತಾಂಕುರಂ । ಗೋಚರಿಸೆಪಾತಕಕ್ಷಯದಂತೆಮಾಗಿಯವಿ । ಮೋಚನಂಕಾಣಿಸಲ್ಪು
ಣ್ಯವಾಸನೆಯಂತೆದಕ್ಷಿಣದವಾಯುಸುಳಿಯೆ ॥೬॥ ಧಾತ್ರೀಶಕೇಳ್ಬಳಿಕಧರ್ಮಜಂತಾಮರಸ । ನೇತ್ರವೇದವ್ಯಾಸರಾಜ್ಞೆಯಿಂದ
ವಿಖರ್ಪ । ಗೋತ್ರದಮುನಿಗಳೆಲ್ಲರಂಕರೆಸಿಮೇಣವರನುಜ್ಞೆಯಿಂದಾಯಜ್ಞದ ॥ ಸೂತ್ರಪ್ರಕಾರದಿಂದಾರಾಜಿಸುವಬಹಿಃ ।
(ಪ್ರಕಾರದಾಮುಖಶಾಲೆಯಿಂಬಹಿಃ) ಕ್ಷೇತ್ರದಧ್ವರಶಾಲೆಯೊಳ್‌ದೀಕ್ಷೆಯಂಕೊಂಡು । (ಕ್ಷೇತ್ರದೋಳ್ಸಲೆರಚಿಸಿ) ಚೈತ್ರ
ಸಿತಪೌರ್ಣಮಾಸ್ಯೆಯದಿನದಿಬಿಟ್ಟರರ್ಚಿಸಿಹಯವನುತ್ಸವದೊಳು ॥೭॥ ಇಂದುಕುಲದಗ್ಗಳೆಯಪಾಂಡುವಸುಧಾಪಾಲ । ನಂದನ

---

ಗಮದ-ವಸಂತಕಾಲ ಪ್ರಾರಂಭದ, ಸಂಭ್ರಮದೊಳು-ಆನಂದದಿಂದ, ಭೋಗಿಸಿದರು-ಕ್ರೀಡಿಸಿದರು ॥೫॥

ಟೀ॥ ಧರ್ಮಜನ-ಯುಧಿಷ್ಠಿರನ, ಕೀರ್ತಿ-ಯಶಸ್ಸು, ಭೂಚಕ್ರಮಂ-ಧರಾವಲಯವನ್ನು, ಮುಸುಕಿದಂತೆ-ಕವಿದು ಕೊಂಡಂತೆ, ಬೆಳ್ದಿಂಗಳ್-ಚಂದ್ರಿಕೆಯು, ಇರೆ-ಇರಲಾಗಿ, ಯಾಚಕರನು-ಅತಿಥಿಗಳಾಗಿ ಬಂದವರನ್ನು, ಎಲ್ಲೆಲ್ಲಿಯೂ ಕೂಗಿ-ಫಲಪ್ರಾಪ್ತಿಯಂ ಪಡೆಯಲು ಬರಹೇಳಿ, ಕರೆವಂತೆ-ಕರೆಯುವತೆರನಾಗಿ, ಕೋಗಿಲೆಗಳು-ಕೋಗಿಲೆ ಹಕ್ಕಿಗಳು, ಉಲಿಯೆ-ಶಬ್ದವಂ ಮಾಡಲು, ಇಳೆಯ-ಧರೆಯ, ಜನದ-ಲೋಗರ, ಲೋಚನಕೆ-ನಯನಂಗಳಿಗೆ, ಉದಯಿಪ-ಕಾಣಬರತಕ್ಕ, ಪೊಸತಂತೆ-ಹೊಸದಾಗಿರುವ ಹಾಗೆ, ಚೂತಾಂಕುರಂ-ಮಾವಿನ ಮರದ ಪಲ್ಲವಂಗಳು, ಗೋಚರಿಸೆ-ಕಾಣಲಾಗಿ, ಪಾತಕ-ದುರಿತದ, ಕ್ಷಯದಂತೆ-ನಿವಾರಣೆಯಂತೆ, ಮಾಗಿಯ-ಮಾಘಮಾಸದ, ವಿಮೋಚನಂ-ಬಿಡುಗಡೆಯು, ಕಾಣಿಸೆ-ಗೋಚರವಾಗುತ್ತಿರಲಾಗಿ, ಪುಣ್ಯವಾಸನೆಯಂತೆ-ಸತ್ಕಾರ್ಯದ ಆಮೋದದ ಬಗೆಯಾಗಿ, ದಕ್ಷಿಣದ-ತೆಂಕಣದೆಸೆಯ, ವಾಯು-ಪವನನು, ಸುಳಿಯೆ-ತಿರುಗಾಡಲು, ಆ ಚೈತ್ರಮಾಸವು-ಆ ವಸಂತಕಾಲವು, ಎಸೆದುದು-ಹೊಳೆಯಲಾರಂಭಿಸಿತು ॥೬॥

ಟೀ॥ ಧಾತ್ರೀಶ-ಪೊಡವಿಪನಾದ ಜನಮೇಜಯನೆ! ಕೇಳ್-ಲಾಲಿಸು, ಬಳಿಕ-ಆಮೇಲೆ, ಧರ್ಮಜಂ - ಯುಧಿಷ್ಠಿರನು, ತಾಮರಸ-ಸರಸಿಜಾತಂಗಳಂತಿರುವ, ನೇತ್ರ-ನಯನಂಗಳನ್ನುಳ್ಳ ಕೃಷ್ಣಮೂರ್ತಿಯ, ವೇದವ್ಯಾಸರ-ಬಾದರಾಯಣ ಮುನಿಪತಿಯ, (ಇವರೀರ್ವರ) ಆಜ್ಞೆಯಿಂದ-ಶಾಸನದಿಂದ, ಅಖಿಲ-ಸಮಸ್ತರಾದ, ಋಷಿ-ತಾಪಸೋತ್ತಮರ, ಗೋತ್ರದ-ವಂಶದಲ್ಲಿ ಹುಟ್ಟಿದ, ಮುನಿಗಳೆಲ್ಲರಂ-ಅಶೇಷರಾದ ಮುನೀಂದ್ರರನ್ನೂ, ಕರೆಸಿ-ಬರುವಂತೆ ಮಾಡಿ, ಮೇಣ್-ಅಲ್ಲದೆ, ಅವರ-ಆ ಋಷೀಶ್ವರರ, ಅನುಜ್ಞೆಯಿಂದ-ಆಜ್ಞೆಯಿಂದ, ಆ ಯಜ್ಞದ-ಆ ಕ್ರತುವಿನ, ಸೂತ್ರಪ್ರಕಾರದಿಂದ-ವಿಧಿನಿಯಾಮಕದಿಂದ, ರಾಜಿಸುವ-ಹೊಳೆಹೊಳೆವ, ಬಹಿಃಕ್ಷೇತ್ರದ-ನಗರದ ಹೊರಗಡೆಯಲ್ಲಿರತಕ್ಕ, ಅಧ್ವರಶಾಲೆಯೊಳ್-ಯಾಗಮಂಟಪದಲ್ಲಿ, ದೀಕ್ಷೆಯಂಕೊಂಡು-ದೀಕ್ಷಾಬದ್ಧನಾಗಿ, ಚೈತ್ರಸಿತ-ಚೈತ್ರಶುಕ್ಲದ, ಪೌರ್ಣಮಾಸಿಯ-ಪೂರ್ಣಿಮೆಯ, ದಿನದ-ದಿವಸದಲ್ಲಿ, ಉತ್ಸವದೊಳ್-ಸಂಭ್ರಮಾತಿಶಯದಿಂದ, ಅರ್ಚಿಸಿ-ವೇದವಿಧಿಯಂತೆ ಪೂಜೆಗೈದು, ಹಯವನು-ಅಶ್ವವನ್ನು, ಬಿಟ್ಟರು-ದೇಶಾಟನೆಗೋಸುಗವಾಗಿ ಕಳುಹಿಸಿದರು ॥

ಅ॥ ವಿ॥ ತಾಮರಸನೇತ್ರ - ತಾಮರಸದಂತೆ ನೇತ್ರವು ಯಾರಿಗೊ ಅವನು (ಬ. ಸ.) ಆಜ್ಞಾ (ತ್ಸ) ಆಣೆ (ತ್ಭ) ಗೋತ್ರದ ಮುನಿಗಳು-ಕಶ್ಯಪ, ಅತ್ರಿ, ಭರದ್ವಾಜ, ವಿಶ್ವಾಮಿತ್ರ, ಗೌತಮ, ಜಮದಗ್ನಿ, ವಸಿಷ್ಠನೇ ಮೊದಲಾದ ಋಷಿವರ್ಯರು. ಮೃಗಚರ್ಮ, ಕೊಂಬು, ಅರಿಶಿನದ ಪಂಚೆ, ಅಗ್ನಿಹೋತ್ರದ ಉಪಕರಣಂಗಳು, ಇವುಗಳಿಂದ ಕೂಡಿರುವುದಕ್ಕೆ "ದೀಕ್ಷಾವಿಧಿ" ಎಂದು ಹೆಸರು ॥೭॥

---

ದ್ದರು ॥೫॥ ಮತ್ತು ಧರ್ಮಾತ್ಮನಾದ ಧರ್ಮನಂದನನ ಯಶಸ್ಸೆಂಬ ಚಂದ್ರಿಕೆಯು ಎಲ್ಲೆಲ್ಲಿಯೂ ವ್ಯಾಪಿಸಿದೆಯೊ ಎಂಬಂತೆ ತೋರುವ ಬೆಳ್ದಿಂಗಳಿಂದಲೂ, ಯಾಚಕಜನರನ್ನು ಬೇಗ ಬನ್ನಿರೆಂದು ಕೂಗುತ್ತವೆಯೋ ಎಂಬಂತೆ ಕಾಣುವ ಪಿಕವಿಂಡುಗಳ ಇಂಚರಂಗಳಿಂದಲೂ, ಹೊಸದಾಗಿ ಚಿಗುರಿ ನೋಡುವುದಕ್ಕಾನಂದವಂ ಗೈವ ಚೂತಪಲ್ಲವಂಗಳಿಂದಲೂ, ಪಾತಕ ಪರಿಹಾರವಾದ್ದರಿಂದಲೇ ಪುಣ್ಯವು ಲಭಿಸುವಂತೆ ಮಾಗಿಯ ಕಾಲವು ಹೋಗಿ ಸಕಲಜನ ಮನೋರಂಜಕಮಾದ ಮಧುಮಾಸವುಂಟಾಗಿ ತೆಂಕಣ ಗಾಳಿಯು ಬೀಸುತ್ತಿರುವಾಗಲು ॥ ೬ ॥ ಆಗ ಧರ್ಮಜನು ಕಮಲಾಕ್ಷನಾದ ಕೃಷ್ಣಸ್ವಾಮಿಯ ಮತ್ತು ವೇದವ್ಯಾಸ ಮುನಿಗಳ ಅಜ್ಞೆಯಂತೆ ಕಶ್ಯಪ, ಅತ್ರಿ, ಭರದ್ವಾಜ, ವಿಶ್ವಾಮಿತ್ರ, ಗೌತಮ, ಜಮದಗ್ನಿ ಅಗಸ್ತ್ಯರೆ ಮೊದಲಾದ ಋಷಿವರ್ಗದವರನ್ನೆಲ್ಲಾ ಕರೆಯಿಸಿ, ಸಶಾಸ್ತ್ರೀಯವಾಗಿ ದೀಕ್ಷೆಯಂ ಕೈಕೊಂಡವನಾಗಿ, ಯಜ್ಞಾಶ್ವವನ್ನು ಗಂಧ ಪುಷ್ಪಾಕ್ಷತೆಗಳಿಂದ ಪೂಜಿಸಿ, ॥ ೭ ॥ ಬಂದಾನೊಂದು ಭಂಗಾರದ ತಗಡಿನಲ್ಲಿ "ಈ ಯಜ್ಞಾಶ್ವವು ಚಂದ್ರವಂಶದ

ಯುಧಿಷ್ಠಿರನರೇಂದ್ರನಧ್ವರದಹಯಮಿ | ದಂದಿಟ್ಟರಾರಾದೊಡಂ ಕಟ್ಟಿಕೊಳಲಾರ್ಪೊಡಿಳೆಯೊಳೆಂಬೀಲಿಪಿಯನು || ಸಂಧಿಸಿ
ಬರೆದಕನಕಪಟ್ಟಮನದರಫಣೆಯೊ | ಳೊಂದಿಸಿತುರಂಗಮನನಮಲವಸ್ತ್ರಾಭರಣ | ದಿಂದಿವ್ಯಗಂಧಮಾಲ್ಯಾಕ್ಷತೆಗಳಿಂದಲಂ
ಕರಿಸಿಬಿಟ್ಟರ್ಶುಭದೊಳು ||೮|| ಶ್ಲಾಘ್ಯದಿಂದಾದಮಜ್ಜನಭೋಜನದಸದಾ | ರೋಗ್ಯದಿಂತಾಂಬೂಲವಸ್ತ್ರಭೂಷಣದಸೌ |
ಭಾಗ್ಯದಿಂಕುಸುಮಪರಿಮಳಗಳನುಲೇಪದಿಂಸ್ತ್ರೀಪುರುಷರೇಕಾಂತಕೆ || ಯೋಗ್ಯವಹಸೆಜ್ಜೆಮನೆಯೊಳಗೀರ್ವರುಂದಿವ್ಯಭೋ
ಗ್ಯಮೆನಿಪೊಂದುಮಂಚದೊಳೊರಗಿಕಾಮವೈ | ರಾಗ್ಯಮಾಗಿರ್ಪುದಸಿಪತ್ರವ್ರತಂತದ್ವ್ರತದೊಳರಸನಿರುತಿರ್ದನು || ೯ ||
ತದ್ಯಾಗಮೊಂದುವರುಷಕೆಮುಗಿವುದನ್ನೆಗಂ | ಸದ್ಯಾಜಮಾನದೀಕ್ಷೆಯನವನಿಪಂತಾಳ್ದನುದ್ಯುಕ್ತ | ರಾದರರ್ಜುನನೊಡನೆ

---

ಟೀ|| ಇಂದುಕುಲದ–ಹಿಮಕರಾನ್ವಯದಲ್ಲಿ ಜನಿಸಿದವರಲ್ಲಿ, ಅಗ್ಗಳೆಯ–ಉತ್ತಮೋತ್ತಮನಾದ, ಪಾಂಡುನಸುಧಾಪಾಲ–ಪಾಂಡುರಾಜನ, ನಂದನ–ಕುಮರನಾದ, ಯುಧಿಷ್ಠಿರ–ಧರ್ಮತನಯನೆಂಬ, ನರೇಂದ್ರನ–ಮನುಜಾಧಿಪನ, ಅಧ್ವರಹಯಂ–ಯಾಗದ ಕುದುರೆಯು, ಇದಂ–ಈ ಹಯವನ್ನು, ದಿಟ್ಟರು–ವೀರಾಗ್ರಣಿಗಳು, ಆರಾದೊಡಂ–ಯಾರೇ ಆದರೂ, ಆರ್ಪೊಡೆ–ಶೂರರಿದ್ದಲ್ಲಿ, ಕಟ್ಟಿಕೊಳ್ಳಲಿ–ಬಂಧಿಸಲಿ, ಎಂಬ–ಎಂಬ ತೆರನಾದ, ಲಿಪಿಯನು–ಬರವಣಿಗೆಯನ್ನು, ಸಂಧಿಸಿ–ಸೇರಿಸಿ, ಬರೆದ–ಬರೆದಿರತಕ್ಕ, ಕನಕ–ಭಂಗಾರದಿಂದ ಮಾಡಿದ, ಪಟ್ಟವನು–ರೇಕನ್ನು, ಅದರ–ಆ ಅಶ್ವದ, ಪಣೆಯೊಳು–ಫಾಲದಲ್ಲಿ, ಬಂಧಿಸಿ–ಬಿಗಿದು, ತುರಂಗಮನನು–ಹಯವನ್ನು, ಅಮಲ–ಸ್ವಚ್ಛಂಗಳಾದ, ವಸ್ತ್ರಾಭರಣದಿಂ–ಉಡಿಗೆತೊಡಿಗೆಗಳಿಂದ, ದಿವ್ಯ–ಶ್ರೇಷ್ಠವಾದ, ಗಂಧಮಾಲ್ಯಾಕ್ಷತೆಗಳಿಂದ–ಗಂಧ, ಹೂ, ಸೇಸೆ ಇವುಗಳಿಂದ, ಅಲಂಕರಿಸಿ–ಶೃಂಗಾರವಂ ಮಾಡಿ, ಶುಭದೊಳು–ಕಲ್ಯಾಣದಿಂದ, ಬಿಟ್ಟರು–ಕಳುಹಿದರು ||

ಅ|| ವಿ|| ಇಂದು–ಈಗ (ಕನ್ನಡ), ಇಂದು–ಚಂದ್ರ (ಸಂಸ್ಕೃತ), ಅಗ್ಗಳೆ (ತ್ಭ) ಅರ್ಗಳ (ತ್ಸ) ವಸು–ದ್ರವ್ಯ, ಮತ್ತು ಅಷ್ಟವಸುಗಳು. ||೮||

ಟೀ|| ಶ್ಲಾಘ್ಯದಿಂದ– ಶ್ರೇಷ್ಠಮಾರ್ಗದಿಂದ, ಆದ–ಉಂಟಾದ, ಮಜ್ಜನ–ಸ್ನಾನದ, ಭೋಜನದ – ಶಾಲ್ಯಾನ್ನದ ಊಟದ, ಸದಾ–ಅನವರತವೂ, ಆರೋಗ್ಯದಿಂ–ಕಾಯಿಲೆ ಇಲ್ಲದೆ ಇರುವಿಕೆಯಿಂದಲೂ, ಮತ್ತು ದೈವಾಯತ್ತವಾದ ಬಲದಿಂದಲೂ, ತಾಂಬೂಲ ವಸ್ತ್ರ ಭೂಷಣದ–ಅಡಿಕೆ ವೀಳಯದೆಲೆ ಉಡಿಗೆ ತೊಡಿಗೆಗಳು ಇವುಗಳ, ಸೌಭಾಗ್ಯದಿಂ–ಸೊಬಗಿನಿಂದ, ಕುಸುಮಪರಿಮಳಾನು ಲೇಪನದಿಂ–ಹೂ ಗಂಧ ಮೊದಲಾದವುಗಳ ಬಳಿಯುವಿಕೆಯಿಂದಲೂ, ಸ್ತ್ರೀಪುರುಷರು–ಗಂಡ ಹೆಂಡಿರು (ದೀಕ್ಷಾಬದ್ಧರಾದ) ಏಕಾಂತಕೆ–ರಹಸ್ಯಸ್ಥಾನಕೆ, ಯೋಗ್ಯವಹ–ಯೋಗ್ಯವಾಗಿರತಕ್ಕ, ಸಜ್ಜೆಮನೆಯೊಳಗೆ–ಮಹಡಿಯ ಮನೆಯಲ್ಲಿ (ದೀಕ್ಷಾಬದ್ಧರಾದ) ಸತಿಪತಿಗಳಿರಲು ಮಾಡಿರುವ ಮನೆಯಲ್ಲಿ, ಈರ್ವರು–ದಂಪತಿಗಳು, (ಧರ್ಮರಾಜ ದ್ರೌಪದಿಯರು), ದಿವ್ಯಭೋಗ್ಯಂ–ಶ್ರೇಷ್ಠವಾದ ಸುಖಾನುಭವವು, ಎನಿಪ–ಎಂದೆನಿಸಿಕೊಳ್ಳುವ, ಒಂದು–ಒಂದಾದ, ಮಂಚದೊಳ್–ದರ್ಭೆಯಿಂದ ಮಾಡಿದ ಹಾಸಿಗೆಯಲ್ಲಿ, ಒರಗಿ–ಕಲೆತು, ಕಾಮವೈರಾಗ್ಯಮಾಗಿ–ಕಾಮಾತುರವನ್ನು ಬಿಟ್ಟು, ಇರ್ಪುದು–ಇರತಕ್ಕದ್ದು, ಅಸಿಪತ್ರವ್ರತಂ–ಅಸಿಧಾರಾವ್ರತವೆನ್ನಿಸಿಕೊಳ್ಳುವುದು, ತದ್ವ್ರತದೊಳು–ಅಂತಹ ನಿಯಮದಲ್ಲಿ, ಅರಸನು–ಯುಧಿಷ್ಠಿರನು, ಇರುತಿರ್ದನು–ಇದ್ದನು. ||೯||

ಟೀ|| ತದ್ಯಾಗಂ–ಆ ಹಯಮೇಧವು, ಒಂದು ವರ್ಷಕೆ–ಒಂದು ಸಂವತ್ಸರಕ್ಕೆ, ಮುಗಿವುದು–ಪೂರೈಸುತ್ತದೆ, ಅನ್ನೆಗಂ–ಅದುವರೆಗೂ, ಸತ್–ಉತ್ತಮವಾದ, ಯಾಜಮಾನ–ಯಜ್ಞಕರ್ತನು ಮಾಡಬೇಕಾಗಿರತಕ್ಕ, ದೀಕ್ಷೆಯನು–ವಿಧಿಯನ್ನು, ಅವ

---

ರಾಜರುಗಳಲ್ಲೆಲ್ಲಾ ರತ್ನಪ್ರಾಯನಾದ ಯುಧಿಷ್ಠಿರ ಮಹಾರಾಜನದು. ವೀರಾಗ್ರಣಿಗಳು ಯಾರು ಬೇಕಾದರೂ ಈ ಕುದುರೆಯನ್ನು ಕಟ್ಟಿ ನಮ್ಮನ್ನು ಜಯಿಸಬಹುದು, ಎಂದು ಬರೆದ ಚಿನ್ನದ ತಗಡಿನ ಪಟ್ಟಿಯನ್ನು ಆ ಉತ್ತಮಾಶ್ವದ ಹಣೆಯಲ್ಲಿ ಬಿಗಿದು ಅನರ್ಘ್ಯವಾದ ವಸ್ತ್ರಾಭರಣಗಳಿಂದಲಂಕರಿಸಿ, ದಿಗ್ವಿಜಯಾರ್ಥವಾಗಿ ಬಿಟ್ಟು ||೮|| ತರುವಾಯ ಅಭ್ಯಂಗನಸ್ನಾನದಿಂದಲೂ, ಶಾಲ್ಯನ್ನ ಭೋಜನದಿಂದಲೂ, ತಾಂಬೂಲ ವಸ್ತ್ರಾಭರಣಗಳಿಂದಲೂ, ಹೂ, ಗಂಧ ಮೊದಲಾದವುಗಳಿಂದಲೂ ಕೂಡಿ ಉಪ್ಪರಿಗೆಗಳ ಮೇಲ್ಮಚ್ಚುಗಳಲ್ಲಿ ಪಟ್ಟೆ ಮಂಚದಮೇಲೆ ಮಲಗಿ ಸುಖಸಲ್ಲಾಪಗಳಿಂದ ಕ್ರೀಡಿಸುತ್ತಿದ್ದ ಯುಧಿಷ್ಠಿರನೂ ಮತ್ತು ಇವನ ಪಟ್ಟದರಸಿಯಾದ ದ್ರೌಪದಿಯೂ ಸಹ ಅಶ್ವಮೇಧಯಾಗ ಸಾಧನೆಗಾಗಿ ರಾಜಭೋಗಂಗಳ ಹಂಬಲನ್ನೆಲ್ಲಾ ಮರೆತು, ಮಂತ್ರೋದಕ ಸ್ನಾನವೂ, ಕ್ಷೀರಮಾತ್ರವಾದ ಆಹಾರವೂ, ದೈವಾಯತ್ತವಾದ ಶಕ್ತಿಯೂ, ಅಲಂಕಾರಮಾತ್ರಕ್ಕಾಗಿ ಇಟ್ಟರತಕ್ಕ ಗಂಧ ಪುಷ್ಪ ತಾಂಬೂಲಗಳೂ ಉಳ್ಳವರಾಗಿ, ಯಾಗದೀಕ್ಷೆಯಂ ಕೈಕೊಂಡು, ಅತ್ಯಧಿಕವಾದ ವೈರಾಗ್ಯಬುದ್ಧಿಯಿಂದ ದೇವಯೋಗ್ಯಮಾದೊಂದು ದರ್ಭಾಸನದಲ್ಲಿ ಪವಡಿಸಿ ಅಸಿಧಾರಾವ್ರತಮಂ ನೆರವೇರಿಸುತ್ತಿದ್ದರು ||೯|| ಇದೇ ರೀತಿಯಲ್ಲಿ ಒಂದು ವರ್ಷದವರೆಗೂ ಅಸಿಧಾರಾವ್ರತನಿಯಮದಲ್ಲಿರಬೇಕೆಂದು ಗೊತ್ತುಮಾಡಿಕೊಂಡು ದಿಗ್ವಿಜಯಾರ್ಥವಾಗಿ

ಹಯರಕ್ಷಗಸುರಹರನಾಜ್ಞೆಯಿಂದ ‖ ಉದ್ಯುತ್ಪರಾಕ್ರಮಿಗಳನುಸಾಲ್ವಸಾತ್ಯಕಿ | ಪ್ರದ್ಯುಮ್ನ ಕೃತವರ್ಮಯೌವನಾಶ್ವಾತಿಬಲ | ಖದ್ಯೋತಸುತಸೂನುಮೊದಲಾದವೀರರೊದಗಿತುಚಾತುರಂಗಮೊಡನೆ ‖ ೧೦ ‖ ಇಭಮುಖಾರ್ಚನೆಯುಂನವಗ್ರಹದ ಪೂಜೆಯುಂ | ವಿಭವದಿಂಮಾಡಿದಧರ್ಮಜಭೀಮಕುಂತಿಗ | ಳ್ಗಭಿನಮಿಸಿಕೃಷ್ಣನಪದಾಂಬುಜಕ್ಕೆರಗಿದಿಕ್ಪಾಲರಂಬೇಡಿಕೊಂಡು ‖ ಶುಭಮುಹೂರ್ತದೊಳರಸಿಯರಸೇಸೆವೆತ್ತು ಮುನಿ | ಸಭೆಗಭಿನಂದಿಸಿಪರಕೆಗೊಂಡುಪಾಠಕರಜಯ | ರಭಸದಿಂದೆ ಸೆವಮಂಗಳವಾದ್ಯಘೋಷದಿಂದರ್ಜುನಂಪೊರಮಟ್ಟನು ‖ ೧೧ ‖ ಮುರಹರನರಾಣಿಯರ್‌ಧುಂಧೀರಕರ್ಣಸುತ | ನರಸಿ

---

ನಿಪಂ–ಯುಧಿಷ್ಠಿರನು, ತಾಳ್ದನು–ಹೊಂದಿದನು, ಉದ್ಯತ್–ಶ್ರೇಷ್ಠರಾದ, ಪರಾಕ್ರಮಿಗಳು–ವೀರಾಗ್ರಣಿಗಳಾದ, ಅನುಸಾಲ್ವ–ಸಾಲ್ವನ ತಮ್ಮನು, ಕೃತವರ್ಮ–ಕೃತವರ್ಮನೆಂಬುವನು, ಯೌವನಾಶ್ವ–ಭದ್ರಾವತೀರಾಜನು, ಅತಿಬಲ–ಬಹು ಪರಾಕ್ರಮಿಯಾದ, ಖದ್ಯೋತ–ರವಿಯ, ಸುತ–ಕುವರನಾದ ಕರ್ಣನಿಗೆ, ಸೂನು–ಮಗನಾದ ವೃಷಧ್ವಜನು, ಮೊದಲಾದ–ಇವರೆ ಆದಿಯಾಗಿರತಕ್ಕ, ವೀರರು–ಭಟರು, ಅಸುರಹರನ–ರಾಕ್ಷಸಾಂತಕನ, ಆಜ್ಞೆಯಿಂದ–ಶಾಸನದಿಂದ, ಅರ್ಜುನನೊಡನೆ–ಪಾರ್ಥನೊಂದಿಗೆ, ಹಯರಕ್ಷೆಗೆ–ಅಶ್ವಪಾಲನೆಗೆ, ಉದ್ಯುಕ್ತರಾದರು–ಅನುವಾದರು, ಒಡನೆ–ಕೂಡಲೆ, ಚಾತುರಂಗಂ–ಆನೆ, ಕುದುರೆ, ತೇರು, ಕಾಲ್ಬಲವೇ ಮೊದಲಾದವು, ಒದಗಿತು–ಪಯಣಕ್ಕೆ ಅನುವಾಯಿತು. ‖೧೦‖

ಟೀ‖ ಅರ್ಜುನಂ–ಫಲ್ಗುಣನು, ಇಭಮುಖ–ಗಣೇಶನ, ಅರ್ಚನೆಯುಂ–ಸಪರ್ಯೆಯನ್ನೂ, ನವಗ್ರಹದ–ಒಂಭತ್ತು ಗ್ರಹಗಳ, ಪೂಜೆಯುಂ–ಅರ್ಚನೆಯನ್ನೂ, ವಿಭವದಿಂ–ಸಂಭ್ರಮಾತಿಶಯದಿಂದ, ಮಾಡಿ–ಎಸಗಿ, ಧರ್ಮಜ–ಧರ್ಮರಾಯನು, ಭೀಮ–ವೃಕೋದರನು, ಕುಂತಿಗಳ್ಗೆ–ಕುಂತಿಯೇ ಮೊದಲಾದವರಿಗೆ, ಅಭಿನಮಿಸಿ–ಪ್ರಣಾಮವಂಗೈದು, ಶ್ರೀ ಕೃಷ್ಣನ–ಕೃಷ್ಣಮೂರ್ತಿಯ, ಪದಾಂಬುಜಕೆ–ಕಮಲದಂತಿರುವ ಪಾದಗಳಿಗೆ, ಎರಗಿ–ವಂದನೆಯಂ ಮಾಡಿ, ದಿಕ್ಪಾಲರಂ–ಅಷ್ಟದಿಕ್ಕುಗಳ ಅಧಿನಾಯಕರನ್ನು, ಬೇಡಿಕೊಂಡು–ಕೇಳಿಕೊಂಡು, ಶುಭ–ಮಂಗಳದಿಂ ಕೂಡಿದ, ಮುಹೂರ್ತದೊಳು–ಕಾಲದಲ್ಲಿ, ಅರಸಿಯರ–ರಾಣಿಯರಿಂದ, ಸೇಸೆ–ಆರತಿಯಿಂದ ಕೂಡಿದ ಅಕ್ಷತೆಯನ್ನು, ವೆತ್ತು–ತಾಳಿ, ಮುನಿಸಭೆಗೆ–ಋಷಿಮಂಡಲಿಗೆ, ವಂದಿಸಿ–ಪ್ರಣಾಮವಂಗೈದು, ಪರಕೆಗೊಂಡು–ಆಶೀರ್ವಚನಮಂ ತಾಳಿ, ಪಾಠಕರ–ಹೊಗಳು ಭಟರ, ಜಯರಭಸದಿಂದ–ಜಯಜಯನಿನದದಿಂದ, ಎಸೆವ–ಹೊಳೆಯುವ, ಮಂಗಳವಾದ್ಯ–ಶುಭ ಸೂಚಕವಾದ್ಯಗಳ, ಘೋಷದಿಂದ–ವಾದ್ಯಸ್ವನಂಗಳಿಂದ, ಪೊರಮಟ್ಟನು–ದಿಗ್ವಿಜಯಕ್ಕಾಗಿ ಹೊರಟನು. ‖

ಅ‖ ವಿ‖ ಇಭ–ಹಸ್ತಿಯ ವದನದಂತಿರುವ, ಮುಖ–ಆಸ್ಯವುಳ್ಳವನು, (ಬ. ಸ.) ನವಗ್ರಹಗಳು–ಸೂರ್ಯ, ಚಂದ್ರ, ಅಂಗಾರಕ, ಬುಧ, ಗುರು, ಶುಕ್ರ, ಶನಿ, ರಾಹು, ಕೇತುಗಳೆಂಬ ಒಂಭತ್ತು ಮಂದಿಯು. ಪದಾಂಬುಜ–ಅಂಬುಜದಂತಿರುವ ಪದ–ಪದಾಂಬುಜ (ಉ ಉ. ಕ.) ಸ. ದೀ. ದಿಕ್ಪಾಲಕರು–ಇಂದ್ರ, ಅಗ್ನಿ, ಯಮ, ನಿರುರುತಿ, ವರುಣ, ವಾಯು, ಕುಬೇರ, ಈಶಾನ ಎನ್ನತಕ್ಕವರು. ಮಂಗಳಕರವಾದ ವಾದ್ಯ (ವಿ. ಪೂ.) ಮಂಗಳವಾದ್ಯದ ಘೋಷ (ಷ. ತ.) ಅರ್ಜುನ–ಧರ್ಮಜನ ಎರಡನೆಯ ತಮ್ಮನು, ಎಕ್ಕದ ಗಿಡ, ಶ್ವೇತವರ್ಣ, ಕಾರ್ತವೀರ್ಯಾರ್ಜುನ ಎಂಬಿವು. ಪೊರಮಟ್ಟನು–ಪೊರಮಡು (ಧಾತು) ‖೧೧‖

ಟೀ‖ ಮುರಹರನ–ಮುರಾಂತಕನಾದ ಕೃಷ್ಣಮೂರ್ತಿಯ, ರಾಣಿಯರ್–ಅರಸಿಯರು, ಧುಂಧೀರ–ರಣದಲ್ಲಿ ಶೂರನಾದ, ಕರ್ಣಸುತನ–ಕರ್ಣನಂದನನ, ಅರಸಿಯೆಂದು–ರಾಣಿ ಎಂಬದಾಗಿ, ಎನ್ನ–ನನ್ನನ್ನು, ಪೊಗಳ್ವಂತೆ–ಸ್ತುತಿಸುವಂತೆ

---

ಹೊರಟ ಯಜ್ಞಾಶ್ವದ ಬೆಂಗಾವಲ್ಲಾಗಿ ಅರ್ಜುನನನ್ನು ಕೃಷ್ಣಸ್ವಾಮಿಯ ಅಪ್ಪಣೆಯ ಮೇರೆಗೆ ಕಳುಹಿಸಲು ಇವನ ಹಿಂದೆಯೇ ವೀರಾಗ್ರೇಸರರಾದ ವೃಷಕೇತು, ಅನುಸಾಲ್ವ, ಸಾತ್ಯಕಿ, ಮದನನೇ ಮೊದಲಾದವರೆಲ್ಲರೂ ಚತುರಂಗಬಲ ಸಮೇತರಾಗಿ ಕುದುರೆಯ ಬೈಗಾವಲ್ಲಾಗಿ ಅರ್ಜುನನನ್ನು ಮುಂದಾಳಾಗಿಯೂ ಪ್ರದ್ಯುಮ್ನನನ್ನು ಪ್ರಧಾನ ಸೇನಾನಾಯಕನನ್ನಾಗಿಯೂ ಮಾಡಿಕೊಂಡು ಹೊರಟರು ‖೧೦‖ ಆಗ ಅರ್ಜುನನು ತಾನು ಹೋಗಿ ಮಾಡಬೇಕಾದ ಕಾರ್ಯವು ನಿರ್ವಿಘ್ನವಾಗಿ ನಡೆಯಬೇಕೆಂದು ಮೊದಲು ಗಣಪತಿಗೆ ಪೂಜೆನಾಡಿ ಅನಂತರ ಸೂರ್ಯಾದಿ ಒಂಭತ್ತು ಗ್ರಹಗಳನ್ನು ಯಥಾವಿಧಿಯಾಗಿ ಅರ್ಚಿಸಿ, ಅಣ್ಣಂದಿರಾದ ಧರ್ಮಜ ವೃಕೋದರರಿಗೂ, ತಾಯಿಯಾದ ಕುಂತಿಗೂ ನಮಸ್ಕಾರವಂ ಮಾಡಿ, ಶ್ರೀ ಕೃಷ್ಣನ ಪಾದಕಮಲಗಳಲ್ಲಿ ವಂದನೆಗಳನ್ನರ್ಪಿಸಿ, ತನಗೆ ಮೇಲನ್ನು ಮಾಡಲೆಂದು ಅಷ್ಟದಿಕ್ಪತಿಗಳನ್ನೂ ಪ್ರಾರ್ಥಿಸಿದವನಾಗಿ, ಶುಭ ಮುಹೂರ್ತದಲ್ಲಿ ತನ್ನ ರಾಣಿಯರಿಂದ ಆರತಿ ಅಕ್ಷತೆಗಳನ್ನು ಮಾಡಿಸಿಕೊಂಡು, ತಾಪಸನಿಕರದಿಂದ ಆಶೀರ್ವಾದವಂ ಪಡೆದು ಮುಂದುವರಿಯಲು ಇಕ್ಕೆಲದಲ್ಲಿಯೂ ಸ್ತುತಿಪಾಠಕರು ಅರ್ಜುನನ ಬಿರುದಾವಳಿಯನ್ನು ಪಠಿಸುತ್ತಾ ನಡೆದರು ‖ ೧೧ ‖ ಕರ್ಣಸುತನೂ ವೀರರ

ಯೆಂವೆನ್ನ ಪೊಗಳ್ವಂತೆಮಿಗೆಸಂಗರದೊ | ಳರಿಗಳಂಗೆಲ್ವುದೆಂದಾರತಿಯನೆತ್ತಿಮುತ್ತಿನಸೇಸೆಗಳನೆಸೂಸಿ || ಭರದಿಂದಬಂದಪ್ಪಿ ದಂಗನೆಯಮೊಗನೋಡಿ | ಕುರುಳ್ಗಳನುಗುರ್ಗಳಿಂತಿದ್ದಿಮುದ್ದಿಸಿತನ್ನ | ಬೆರಳುಂಗುರಂಗೊಟ್ಟುಸಂತೈಸಿವೃಷಕೇತುಕಾಂತೆಯಿಂ ಬೀಳ್ಕೊಂಡನು || ೧೨ || ಅಂಕೆಯಿಂದರ್ಜುನಂಗಂದುಯಾದವಸೈನ್ಯ | ಮಂಕೂಡೆಕೊಟ್ಟುದಳಪತಿಯಾಗಿತನಯನಂ | ಮುಂ ಕೊಳಿಸಿಕರ್ಣಜಸುವೇಗಾನುಸಾಲ್ವರಸಹಾಯಮುಂಕೈವರ್ತಿಸಿ || ಪಂಕರುಹಲೋಚನಂಪೊರಮಟ್ಟನಿಬರೆಲ್ಲ | ರಂಕಳುಹಿ ತಿರುಗಿದಂಸ್ವೇಚ್ಛೆಯಿಂದಾಹಯಂ | ತೆಂಕಮುಖಮಾಗಿನಡೆದುದುಕರಿತುರಗರಥಪದಾತಿಗಳ್ಸಂದಣಿಸಲು || ೧೩ || ಊಹಿಸು ವೊಡರಿದೆನೆತುರಂಗಮದಕೂಡೆಸ | ನ್ನಾಹದಿಂಮೇರೆದಪ್ಪಿದಮಹಾರ್ಣವದಪ್ರ | ವಾಹಮೆನೆತಳ್ತಿಡಿದತರುಗುಲ್ಮಲತೆಗಳಿಂನಡೆ

---

ಸಂಗರದೊಳು_ರಣದಲ್ಲಿ, ಮಿಗೆ-ಹೆಚ್ಚಾಗಿ, ಅರಿಗಳಂ_ಹಗೆಗಳನ್ನು, ಗೆಲ್ವುದು-ಜಯಿಸಬೇಕೆಂಬದಾಗಿ, ಆರತಿಯನು-ಕೆಂಪು ನೀರಿನ ಮಂಗಳಾರತಿಯನ್ನು, ಎತ್ತಿ_ಮಾಡಿ, ಮುತ್ತಿನಸೇಸೆಗಳನು-ಮುತ್ತಿನ ಮಂತ್ರಾಕ್ಷತೆಗಳನ್ನು, ಸೂಸಿ_ಎರೆದು, ಭರ ದಿಂದ_ತಡಮಾಡದೆ, ಬೇಗನೆಬಂದು-ಶೀಘ್ರವಾಗಿ ಕರ್ಣಜನ ಸಮೀಪವನ್ನು ಸೇರಿ, ಅಪ್ಪಿದ-ಆಲಿಂಗಿಸಿಕೊಂಡ, ಅಂಗನೆಯ-ತನ್ನ ರಾಣಿಯ, ಮೊಗನೋಡಿ – ಮುಖವನ್ನು ಈಕ್ಷಿಸಿ, ಕುರುಳ್ಗಳಂ_ತಲೆಯ ಮುಂದಲೆಯ ಭಾಗದಲ್ಲಿರುವ ಕೂದಲುಗ ಳನ್ನು, ಉಗುರ್ಗಳಿಂ – ಉಗುರುಗಳಿಂದ, ತಿದ್ದಿ_ನೇರ್ಪಡಿಸಿ, ಮುದ್ದಿಸಿ-ಮುದ್ದಾಡಿ, ತನ್ನ_ಸ್ವಕೀಯಮಾದ, ಬೆರಳ_ಬೆಟ್ಟು ಗಳಲ್ಲಿದ್ದ, ಉಂಗುರಂ-ಉಂಗುರವನ್ನು, ಕೊಟ್ಟು-ಇತ್ತವನಾಗಿ, ಸಂತೈಸಿ-ಸಮಾಧಾನದ ನುಡಿಗಳನ್ನಾಡಿ, ವೃಷಕೇತು_ವೃಷ ಧ್ವಜನು, ಕಾಂತೆಯಂ-ತನ್ನರಸಿಯನ್ನು, ಬೀಳ್ಕೊಂಡನು-ಒಡಂಬಡಿಸಿ ಕಳುಹಿಸಿಕೊಂಡನು ||

ಅ|| ವಿ|| ಸೇಸೆ (ತ್ಭ) ಶೇಷಾ (ತ್ಸ). || ೧೨ ||

ಟೀ|| ಅಂಕೆಯಿಂದ-ತಾನು ನಡೆಯಬೇಕಾದ ವಿಧಿಯಿಂದ, ಅಂದು-ಆಗ, ಅರ್ಜುನಂಗೆ-ಫಲ್ಗುಣನಿಗೆ, ಯಾದವಸೈ ನ್ಯಮುಂ-ಯದುವಂಶಜರದಂಡನ್ನು, ಕೂಡೆ_ಜೊತೆಯಲ್ಲಿ, ಕೊಟ್ಟು-ಕೊಟ್ಟವನಾಗಿ, ತನಯನಂ-ಮೀನಕೇತನನನ್ನು, ದಳಪತಿ ಯಾಗಿ-ಸೇನಾನಾಯಕನನ್ನಾಗಿ, ಮುಂಕೊಳಿಸಿ-ಮುಂದಾಳಾಗಿರುವಂತೆ ಮಾಡಿಕೊಂಡು, ಕರ್ಣಜ-ಕರ್ಣ ಸುತನು, ಸವೇಗ_ಸುವೇಗನೆಂಬ ಯೌವನಾಶ್ವನ ಕುವರನು, ಅನುಸಾಲ್ವರ_ಸಾಲ್ವನ ತಮ್ಮನು ಇವರೇ ಮೊದಲಾದವರ, ಸಹಾಯಮುಂ-ಸಂಗ ವನ್ನು, ಕೈವರ್ತಿಸಿ_ಕೈಕೊಂಡು, ಪಂಕರುಹಲೋಚನಂ-ಕೃಷ್ಣಸ್ವಾಮಿಯು, ಪೊರಮಟ್ಟು-ಹೊರಟು, ಅನಿಬರೆಲ್ಲರಂ-ಆಷ್ಟು ಮಂದಿಯನ್ನೂ, ಕಳುಹಿ-ಹೊರಡಿಸಿ, ತಿರುಗಿದಂ-ಹಿಂತಿರುಗಿದವನಾದನು, ಆಹಯಂ-ಆ ತುರಗವು, ಸ್ವೇಚ್ಛೆಯಿಂದ_ತನ್ನ ಮನ ಸ್ಸುಬಂದಂತೆ, ತೆಂಕಮುಖವಾಗಿ_ದಕ್ಷಿಣದಿಕ್ಕಿನ ಕಡೆಗೆ, ಕರಿ-ಗಜಗಳು, ತುರಗ-ಅಶ್ವಂಗಳು, ರಥ-ಸ್ಯಂದನಂಗಳು, ಪದಾತಿ ಗಳ್-ಕಾಲ್ಬಲಗಳು, ಸಂದಣಿಸಲು-ಒಟ್ಟಾಗಿ ಸೇರಲು, ನಡೆದುದು_ಮುಂದೆ ಹೊರಟಿತು ||

ಅ|| ವಿ|| ಪಂಕರುಹಲೋಚನಂ – ಪಂಕ-ಕೆಸರಿನಲ್ಲಿ, ರುಹ – ಹುಟ್ಟಿದ್ದು (ಕೃ. ವೃ.) ಪಂಕರುಹ-ಕಮಲದಂತೆ, ಲೋಚನಂ-ನಯನಂಗಳುಳ್ಳವನು (ಬ. ಸ.) || ೧೩ ||

ಟೀ|| ಊಹಿಸುವೊಡೆ-ಆಲೋಚನೆಮಾಡಿ ತಿಳಿದುಕೊಳ್ಳಲು, ಅರಿದು-ಅಸಾಧ್ಯವು, ಎನೆ_ಎಂಬಂತೆ, ತುರಂಗಮದ-ಅಶ್ವದ, ಕೂಡೆ-ಸಂಗಡ, ಸನ್ನಾಹದಿಂ-ಸಲಕರಣೆಗಳಿಂದ, ಮೇರೆತಪ್ಪಿದ_ ತಟವನ್ನತಿಕ್ರಮಿಸಿದ, ಮಹಾಪ್ರವಾಹಂ-ದೊಡ್ಡ

---

ಹುಲಿಯೂ ಆದ ವೃಷಧ್ವಜನು, ತಾನೂ ಸಕಲರಿಗೂ ನಮಸ್ಕಾರವನ್ನುಮಾಡಿ, ಆಶೀರ್ವಾದವಂ ಪಡೆದು ತನ್ನ ರಾಣಿಯಿದ್ದೆಡೆಗೆ ಬರಲಾಗಿ, ಆಗ ಅವನರಸಿಯು ವೃಷಕೇತುವನ್ನು ಕುರಿತು, ಎಲೈ ಮೋಹದ ನಿಧಿಯೇ! ಶ್ರೀ ಕೃಷ್ಣನ ಕಾಂತೆಯರೆಲ್ಲರೂ, ನನ್ನನ್ನು “ರಣಧೀರನೂ ಸೂರ್ಯಸುತನ ತನುಜನೂ ಆದ ವೃಷಧ್ವಜನ ರಾಣಿ” ಎಂದು ಹೊಗಳುವಂತೆ ಆಗಲಿ ಎಂಬದಾಗಿ ನುಡಿ ಯುತ್ತ, ಆರತಿಯನ್ನು ಎತ್ತಿ ಮುತ್ತಿನ ಮಂತ್ರಾಕ್ಷತೆಗಳನ್ನು ತಳೆದು, ಬಹುಬೇಗನೆ ತನ್ನ ಪ್ರಾಣಕಾಂತನಬಳಿಗೆ ಬಂದು, ಗಾಢಾಲಿಂಗನವಂ ಮಾಡಿಕೊಂಡು, ಪತಿಯನ್ನಗಲಿರಬೇಕೆಂದು ಖಿನ್ನಳಾಗಿ ನಿಂತಳು. ಈರೀತಿಯಲ್ಲಿರುವ ತನ್ನ ಮೋಹನಾಂಗಿಯ ಮುಖವನ್ನು ನೋಡಿ, ತನ್ನ ಉಗುರುಗಳಿಂದ ಮುಂದಲೆಯನ್ನು ನೇರ್ಪಡಿಸಿ, ಮುತ್ತಿಟ್ಟು ತನ್ನಕೈಯಲ್ಲಿದ್ದ ಮುದ್ರೆಯ ಉಂಗು ರವನ್ನುಕೊಟ್ಟು ಯುದ್ಧದಲ್ಲಿ ಜಯಶೀಲನಾಗಿ ಜಾಗ್ರತೆಯಲ್ಲಿಯೇ ಬಂದು ಸೇರುವೆನೆಂದು ಸಮಾಧಾನಪಡಿಸಿ ಹೊರಟನು ||೧೨|| ಈರೀತಿಯಲ್ಲಿ ಹೊರಟ ಅರ್ಜುನ ವೃಷಕೇತುಗಳ ನೆರವಿಗಾಗಿ ಶ್ರೀ ಕೃಷ್ಣಸ್ವಾಮಿಯು ತನ್ನ ಪರಿವಾರವನ್ನೆಲ್ಲಾ ಜೊತೆಮಾಡಿ ಎಲ್ಲರನ್ನೂ ಸಾಗಕಳುಹಿ ತಾನು ಹಿಂದಕ್ಕೆ ಧರ್ಮಜನಿದ್ದಲ್ಲಿಗೆ ಬಂದು ಸೇರಿದನು. ಬಳಿಕ ಕುದುರೆಯೂ ಸ್ವೇಚ್ಛೆಯಾಗಿ ದಕ್ಷಿಣದಿಕ್ಕಿಗೆ ಹೊರಡಲುಪಕ್ರಮಿಸಲಾಗಿ ಅದರ ಹಿಂದೆಯೇ ಅರ್ಜುನಾದಿಗಳೂ ಚತುರಂಗಬಲವೂ ನಡೆಯಿತು || ೧೩ || ಈ ಸೈನ್ಯವನ್ನು ನೋಡಿದರೆ ಅಗಾಧವಾದ ಸಮುದ್ರವು ಮೇರೆತಪ್ಪಿ ಭೂಮಿಯಮೇಲೆ ಹೊರಟು ಬರುತ್ತಿದೆಯೋ ಎಂಬಂತೆಯೂ

ಗೊಂಡಕಾನನವೆನೆ॥ ಮೋಹರಂ ಭೂತಳಮನೊಳಗೊಂಡುಬರುತಿರ್ದು | ದಾಹಯುಂಬಳಿಕದಕ್ಷಿಣದಿಶಾಮುಖವಾಗಿ | ಮಾಹಿ
ಷ್ಮತೀಪಟ್ಟಣದಬಹಿರ್ಭಾಗದುಪವನದೆಡೆಗೆನಡೆತಂದುದು || ೧೪ || ಆನಗರದರಸುನೀಲಧ್ವಜಂಮೇಣವನಸೂನುಪ್ರವೀರನೆಂಬ
ವನಾಗಳಲ್ಲಿಗು | ದ್ಯಾನಕೇಳಿಗೆಬಂದನೊಲವಿಂದಮದನಮಂಜರಿಯೆಂಬಕಾಂತೆಯೊಡನೆ || ಆಳಿನಲೋಚನೆಯಕೆಳದಿಯರ್ಬೆಡ
ಯದಿಂ | ದಾನಂದದೊಳುಸಂಚರಿಸುತಿರ್ದರ್ಬಳಿಕ | ಮೀನಕೇತನಮಹೀಪಾಲನರಮನೆಯಸೊಕ್ಕಾನೆಗೆಳತಂಡದಂತೆ || ೧೫ ||
ನೋಡಿತಿಲಕವನಪ್ಪಿಕುರವಕವನೆಳೆನಗೆಯೊ | ಳೂಡಿಸಂಪಗೆಯಂಪ್ರಿಯಂಗುವಂಸೋಂಕಿಮುರಿ | ದಾಡಿಚೂತಮನೊದೆದ

ನದಿಯು, ಎನೆ-ಎಂಬಂತೆ, ತಳ್ತು-ಪಲ್ಲವಿಸಿ, ಇಡಿದ-ಸಾಂದ್ರವಾದ, ತರು-ವೃಕ್ಷಂಗಳಿಂದಲೂ, ಗುಲ್ಮ-ಪೊದರುಗಳಿಂದಲೂ, ಲತೆಗಳಿಂ-ಎಳೆವಳ್ಳಿಗಳೇ ಮೊದಲಾದವುಗಳಿಂದಲೂ, ನಡೆಗೊಂಡ-ನಡೆದು ಬರುವ, ಕಾನನಂ-ವಿಪಿನವು, ಎನೆ-ಎಂಬಂತೆ, ಮೋಹರಂ-ದಳವು, ಭೂತಳವನು-ಭೂಭಾಗವನ್ನು, ಒಳಕೊಂಡು-ಸೇರಿಸಿಕೊಂಡು, ಬರುತಿರ್ದುದು - ಬರುತ್ತಿತ್ತು, ಬಳಿಕ-ಆ ಮೇಲೆ, ಆಹಯಂ-ಆ ಅಶ್ವವು, ದಕ್ಷಿಣದಿಶಾಮುಖವಾಗಿ-ದಕ್ಷಿಣದಿಕ್ಕಿನ ಕಡೆಗೆ, ಮಾಹಿಷ್ಮತೀಪಟ್ಟಣದ-ಮಾಹಿಷ್ಮತೀ ಎಂಬ ನಗರದ, ಬಹಿರ್ಭಾಗದ-ಹೊರಗಡೆಯಲ್ಲಿರುವ, ಉಪವನದ-ಆರಾಮದ, ಎಡೆಗೆ-ಹತ್ತಿರಕ್ಕೆ, ನಡೆತಂದುದು-ಐತಂದಿತು ||೧೪||

ಟೀ|| ಆನಗರದ-ಆ ಮಾಹಿಷ್ಮತೀ ಎಂಬ ಪಟ್ಟಣದ, ಅರಸು-ರಾಜನಾದ, ನೀಲಧ್ವಜಂ-ನೀಲಧ್ವಜನೆಂಬುವನು, ಮೇಣ್-ಮತ್ತು, ಅವನಸೂನು- ಅವನ ಕುವರನಾದ ಪ್ರವೀರನೆಂಬ ನಾಮಧೇಯಮಂ ಪಡೆದವನು, ಅಲ್ಲಿ-ಆ ಉಪವನದಲ್ಲಿ, ಆಗಳು-ಆ ಕಾಲದಲ್ಲಿ, ಉದ್ಯಾನಕೇಳಿಗೆ-ತೋಟದ ಆಟಕ್ಕೆ, ಮದನಮಂಜರಿಯೆಂಬ-ಮದನಮಂಜರಿ ಎಂಬ ನಾಮಧೇಯವುಳ್ಳ, ಕಾಂತೆಯೊಡನೆ-ತನ್ನರಸಿಯೊಂದಿಗೆ, ಒಲವಿಂದ-ವಿಶ್ವಾಸದಿಂದ, ಬಂದನು-ಐತಂದನು. ಆಬಳಿಕ-ಅನಂತರ, ಆನಳಿನಲೋಚನೆಯ-ಆ ಪದ್ಮಾಕ್ಷಿಯ, ಕೆಳದಿಯರ್-ಸಂಗಾತಿಯರು, ಬೆಡಯದಿಂ-ಬೆಡಗನ್ನು ತೋರ್ಪಡಿಸುವುದರಿಂದ, ಆನಂದನದೊಳು-ಆ ಉದ್ಯಾನದಲ್ಲಿ, ಮೀನಕೇತನಮಹೀಪಾಲನ- ಮನ್ಮಥನೆಂಬರಸನ, ಅರಮನೆಯ - ರಾಜಗೃಹದಲ್ಲಿರತಕ್ಕ, ಸೊಕ್ಕಾನೆಗಳ-ಮತ್ತಹಸ್ತಿಗಳ, ತಂಡದಂತೆ-ಗುಂಪಿನಹಾಗೆ, ಸಂಚರಿಸುತಿದ್ದರು-ಸುಳಿದಾಡುತ್ತಿದ್ದರು. ||

ಅ|| ವಿ|| ನಳಿನಲೋಚನೆ-ನಳಿನದಂತೆ ಲೋಚನವುಳ್ಳವಳು ಯಾರೋ ಅವಳು (ಬ. ಸ.) || ೧೫ ||

ಟೀ|| ಅಂಬುಜಾಕ್ಷಿಯರು-ಸರಸಿಜಲೋಚನೆಯರು, ತಿಲಕವನು-ಹಣೆಯಲ್ಲಿ ಅಲಂಕಾರವಾಗಿರತಕ್ಕ ತಿಲಕವನ್ನು, ನೋಡಿ-ಈಕ್ಷಿಸಿ, ಕುರವಕವನು-ಕೆಂಪು ಗೋರಂಟಿಯನ್ನು, ಅಪ್ಪಿ-ತಬ್ಬಿಕೊಂಡು, ಸಂಪಗೆಯಂ-ಸಂಪಿಗೆಯ ಗಿಡವನ್ನು, ಎಳನಗೆಯೊಳು-ಹುಸಿ ನಗುವಿನಿಂದ, ಊಡಿ-ಆಗಮಾಡಿ, (ಉಗುಳಿ) ಪ್ರಿಯಂಗುವಂ-ಪ್ರಿಯಂಗುವೆಂಬ ಮರವನ್ನು, ಸೋಂಕಿ-ಮುಟ್ಟಿ, ಚೂತಮನ-ಮಾವಿನ ಮರವನ್ನು, ಮುರಿದಾಡಿ-ಭಂಜಿಸಿ, ಅಶೋಕೆಯಂ-ಅಶೋಕವೆಂಬ ತರುವನ್ನು. ಒದೆದು-ಕಾಲಿನಿಂದ ತಾಡಿಸಿ, ಬಕುಳಮಂ-ವಕುಳ ವೃಕ್ಷವನ್ನು, ಮುಕ್ಕಳಿಸಿ-ಬಾಯಿನೀರನ್ನು ಹೊರಕ್ಕೆ ಚೆಲ್ಲಿ, ಪುನ್ನಾಗಮಂ-ಪುನ್ನಾಗ ವೃಕ್ಷವನ್ನು (ಸುರಹೊನ್ನೆಯ ಮರವನ್ನು), ಮಧ್ಯದಿಂದ-ಮಧ್ಯಮಾವತಿ ರಾಗದಿಂದ, ಪಾಡಿ-ಗಾನಮಾಡಿ, ಕರ್ಣಿಕಾರವನೆ-ಕಣಿಗಿಲು ಗಿಡವನ್ನು, ಕೊಂಡಾಡಿ-ನುತಿಸಿ, ಮಂದಾರಮಂ-ಪಾರಿಜಾತದ ಮರವನ್ನು, ಜಾಣ್ನುಡಿದು-ಚಮತ್ಕಾರ ವಚನದಿಂದ ಬಾಗಿಸಿ, ಪುಷ್ಪಿತಂ ಮಾಡಿ-ಹೂಗಳು ಬಿಡುವಂತೆ ಮಾಡಿ, ಆಬನದೊಳು-ಆ ಉದ್ಯಾನದಲ್ಲಿ, ನಾನಾವಿಲಾಸದಿಂದ-ಪರಿಪರಿಯ ಚಾತುರ್ಯಗಳಿಂದ, ತೋರಿದರು-ತಮ್ಮ ಕೈಕಾಲು ಮೊದಲಾದವುಗಳ ಸಂಜ್ಞೆಯಿಂದ ತೋರ್ಪಡಿಸಿದರು ||

ಅ|| ವಿ|| ಅಂಬುಜಾಕ್ಷಿಯರ್-ಅಂಬು-ನೀರಿನಲ್ಲಿ, ಜ-ಹುಟ್ಟಿದ್ದು (ಕಮಲ. ಕೃ. ವೃ.) ಅಂಬುಜದಂತೆ ಅಕ್ಷಿಯು

ವಿಧವಿಧವಾದ ಮರಗಿಡ ಬಳ್ಳಿಗಳಿಂ ಕೂಡಿದ ಘೋರ ಕಾಂತಾರವೋ ಎಂಬತೆರನಾಗಿಯೂ, ಭ್ರಾಂತಿಯನ್ನುಂಟಾಗುತ್ತಿತ್ತು. ಈತೆರನಾದ ಸೇನಾರ್ಣವದಿಂದ ಕೂಡಿದ ಅಶ್ವವು ತೆಂಕಮುಖವಾಗಿ ಮುಂದೆ ಮುಂದೆ ನಡೆಯುತ್ತಿರುವಾಗ ಮಾಹಿಷ್ಮತೀಪಟ್ಟಣದ ಉದ್ಯಾನವನವು ಕಾಣಬಂದಿತು || ೧೪ || ಆ ಉಪವನದಲ್ಲಿ ಮಾಹಿಷ್ಮತೀರಾಜನಾದ ನೀಲಧ್ವಜನೆಂಬುವನೂ ಆವನ ಕುವರನಾದ ಪ್ರವೀರನೆಂಬಾತನೂ, ಮನ್ಮಥನೆಂಬ ರಾಜನ ಮನೆಯ ಮದ್ದಾನೆಗಳ ಗುಂಪೋ ಎಂಬಂತೆ ತೋರುವ ಸಖೀಜನರಿಂದೊಡಗೂಡಿದ ಮದನಮಂಜರಿಯೆಂಬ ಪ್ರವೀರನ ಅರಸಿಯೂಸಹ ಬಂದು ವಿಹರಿಸುತ್ತಾ ಸಂತೋಷದಿಂದ ಕೂಡಿದ್ದರು||೧೫|| ಅಲ್ಲಿ ನೆರೆದಿದ್ದ ಕಮಲಾಯತಾಕ್ಷಿಯರು ತಿಲಕವೃಕ್ಷವನ್ನು ನೋಡುತ್ತಲೂ, ಗೋರಂಟಿಯ ಮರವನ್ನು ಅಪ್ಪಿಕೊಳ್ಳುತ್ತಲೂ, ಸಂಪಿಗೆಯ ಹೂಗಳಿಂದ ಸಂತಸಮಂ ತಾಳುತ್ತಲೂ, ಮಾವಿನ ಮರಗಳನ್ನು ಮುರಿದು ಅಶೋಕವೃಕ್ಷಗಳನ್ನು ಒದೆಯುತ್ತಲೂ, ಸುರಹೊನ್ನೆ, ಗಿರಿತಾವರೆ ಮೊದಲಾದವನ್ನು ಹೊಗಳುತ್ತಲೂ, ಕಲ್ಪ ವೃಕ್ಷವನ್ನು ಬೊಗ್ಗಿಸಿ ಪುಷ್ಪಗಳುಂಟಾಗುವಂತೆ ಮಾಡುತ್ತಲೂ, ಕೈಕಾಲು ಮೊದಲಾದ ಅವಯವಗಳಿಂದ ವಿಧವಿಧವಾಗಿ ಚಮತ್ಕಾರಾತಿಶಯವನ್ನು ತೋರುತ್ತಿದ್ದರು. ||೧೬||

ಶೋಕಮುಂಬಕುಳಮಂಮುಕ್ಕುಳಿಸಿಮಧ್ಯದಿಂದ || ಪಾಡಿಪುನ್ನಾಗಮಂಕರ್ಣಿಕಾರವನೆಕೊಂ | ಡಾಡಿಮಂದಾರಮಂಜಾಣ್ಣು ಡಿದ-ಪುಷ್ಪಿತಂ | ಮಾಡಿತೋರಿದರಂಬುಜಾಕ್ಷಿಯರ್ನಾನಾವಿಲಾಸದಿಂದಾಬನದೊಳು ||೧೬|| ಮುಟ್ಟಲ್ಪ್ರಿಯಂಗುಪೂವಹತರಳೆ ಯರಕೈಗೆ | ನಿಟ್ಟಿಸಲ್ತಿಲಕಮಲರಹನೀರೆಯರಕಣ್ಗೆ ಮೆಟ್ಟದೊ | ಡಶೋಕಮಂಕುರವಪ್ಪಬಾಲೆಯರಮೆಲ್ಲಡಿಗೆಮಿಗೆಬೆಳ್ನಗೆ || ಪುಟ್ಟಲ್ಕೆಸಂಪಗೆಮುಗುಳ್ವೋರ್ಪ್ಪಸುದತಿಯರ | ಬಟ್ಟಮೊಗಕೆಣೆಯಹವೆತಾವರೆಗಳೆಂದವಂ | ಬಿಟ್ಟುತುಂಬಿದಜವ್ವನೆಯರತನುಪರಿ ಮಳಕೆಕವಿದವಾಬನದಳಿಗಳು ||೧೭|| ಸಣ್ಣನಡುಸೈನಿಮಿರೆತೋಳಮೊದಲೊಳ್ಪೊಸೆಯೆ | ತಿಣ್ಣಮೊಲೆಗಳ್ಪೊದಳೆಬೆನ್ನಸೋರ್ಮು ಡಿಯೊಲಿಯೆ | ಕಣ್ಣಬೆಳಗಾಗಸವನಾವರಿಸೆಮೊಗವೆತ್ತಿತುದಿಗಾಲ್ಗಳಿಂದನಿಂದು || ಬಣ್ಣವಳಿಯದಪೂಗಳಂಕೊಯ್ದುಬೆಂಡಾಗಿ | ತಣ್ಣೆಲರ್ಗೊಡ್ಡಿಮೈಬೆಮರನಾರಿಸಿಕೊಂಡು | ಪೆಣ್ಣುವಿಂಡಾಬನದಲರ್ಗಳಂತಮ್ಮತನುವಿನಕಂಪಿನಿಂಪೊರೆದರು ||೧೮|| ನಿಲುಕಿಪೂ

---

ಯಾರಿಗೊ ಅವರು (ಬ. ಸ) ಬನ (ತ್ಭ) ವನ (ತ್ಸ) ||೧೬||

ಟೀ|| ಮುಟ್ಟಲ್-ಮುಟ್ಟುವಿಕೆಯಿಂದ, ಪ್ರಿಯಂಗು - ಅಶೋಕ ವೃಕ್ಷವು, ಪೂವಹ-ಹೂವಾಗತಕ್ಕ, ತರಳೆಯರ-ಬಾಲೆಯರ, ಕೈಗೆ-ಕರಗಳಿಗೆ, ನಿಟ್ಟಿಸಲು- ಈಕ್ಷಿಸಲಾಗಿ, ತಿಲಕಂ-ತಿಲಕವೆಂಬಮರವು, ಅಲರಹ-ಪುಷ್ಪಿಸುವ, ನೀರೆಯರ-ನಾರಿಯರ, ಕಣ್ಗೆ-ನಯನಂಗಳಿಗೆ, ಮೆಟ್ಟದೊಡೆ-ಪಾದಸ್ಪರ್ಶಮಾಡಲು, ಅಶೋಕಂ-ಅಶೋಕವೆಂಬ ಮರವು, ಅಂಕುರಮಪ್ಪ-ಚಿಗುರಾಗುವ, ಬಾಲೆಯರ-ಯೌವನಸ್ತ್ರೀಯರ, ಮೆಲ್ಲಡಿಗೆ- ಮೃದುವಾದ ಕಾಲ್ಗಳಿಗೆ, ಮಿಗೆ-ಹೆಚ್ಚಾಗಿ, ಬೆಳ್ನಗೆ-ಬಿಳಿದಾದ ಹುಸಿನಗುವು, ಪುಟ್ಟಲ್ಕೆ-ಅಂಕುರಿಸಲು, ಸಂಪಗೆ-ಸಂಪಗೆಯ ಮರವು, ಮುಗುಳ್ವೋರ್ಪ-ಮೊಗ್ಗುಗಳು ಆಗುವ ತೆರದಿಂದ ಕಾಣ ಬರುವ, ಸುದತಿಯರ-ನಾರಿಯರ, ಬಟ್ಟಮೊಗಕೆ-ದುಂಡಾದ ವದನ ಪ್ರದೇಶಕ್ಕೆ, ತಾವರೆಗಳು-ಸರಸಿಜಾತಂಗಳು, ಎಣೆಯ ಹವೆ-ಸದೃಶವಾಗಿ ಆದಾವೆ? ಎಂದು-ಎಂಬತೆರನಾಗಿ, ಅವಂ-ಆ ತಾವರೆಗಳನ್ನು, ಬಿಟ್ಟು-ದೂರಮಾಡಿ, ತುಂಬಿದ-ಪರಿಪೂರ್ಣ ವಾದ, ಜವ್ವನೆಯರ-ಪ್ರಾಯದ ಹೆಂಗಸರ, ತನು-ದೇಹದ, ಪರಿಮಳಕೆ-ಸುರಭಿಗೆ, ಆ ಬನದ-ಆ ತೋಟದ, ಅಳಿಗಳು-ಭೃಂಗಂ ಗಳು, ಕವಿದವು-ಮುಚ್ಚಿಕೊಂಡವು ||೧೭||

ಟೀ|| ಸಣ್ಣ ನಡು-ಬಹು ಚಿಕ್ಕ ಸೊಂಟವು, ಸೈನಿಮಿರೆ-ಉನ್ನತವಾಗುತ್ತಿರಲು, ತೋಳಮೊದಲೊಳ್-ಬಾಹುಮೂಲ ದೆಡೆಯಲ್ಲಿ, ಪೊಸೆಯೆ-ಪ್ರಕಾಶಿಸುತ್ತಿರಲಾಗಿ, ತಿಣ್ಣ ಮೊಲೆಗಳು-ಗಟ್ಟಿಯಾಗಿಯೂ ಮೇಲಕ್ಕೆದ್ದೂ ಇರುವ ಕುಚಗಳು, ಪೊದಳೆ-ಅಲ್ಲಾಡುತ್ತಿರಲಾಗಿ, ಬೆನ್ನಸೋರ್ಮುಡಿ-ಬೆನ್ನ ಹಿಂದೆ ಬಿದ್ದ ಕೇಶಪಾಶಂಗಳು, ಒಲಿಯೆ-ಪಕ್ಕಕ್ಕೆ ತಿರುಗಲು, ಕಣ್ಣಬೆಳಗು-ನಯನಂಗಳಿಂದುಂಟಾದ ಪ್ರಭೆಯು, ಆಗಸವನು - ಅಂತರಿಕ್ಷವನ್ನು, ಆವರಿಸೆ-ಮುಚ್ಚಿಕೊಂಡು ಬಿಡಲು, ಮೊಗಂ-ಮೋರೆ ಯನ್ನು, ಎತ್ತಿ-ಮೇಲಕ್ಕೆತ್ತಿ, ತುದಿಗಾಲ್ಗಳಿಂದ-ಪಾದದ ದೊಡ್ಡ ಉಂಗುಟದಿಂದ, ನಿಂದು-ಎದ್ದುನಿಂತು, ಬಣ್ಣಂ ಅಳಿಯದ-ಕಂದಿಹೋಗದಿರುವ, ಪೂಗಳಂ-ಪುಷ್ಪಂಗಳನ್ನು, ಕೊಯ್ದು-ಕೊಯ್ದು ಬಿಟ್ಟು, ಬೆಂಡಾಗಿ-ನಿಸ್ಸಾತ್ವಕವಾಗಿ, ಮೈ-ಶರೀರವನ್ನು, ತಣ್ಣೆಲರ್ಗೆ-ತಂಗಾಳಿಗೆ, ಒಡ್ಡಿ-ಚಾಚಿ, ಬೆಮರನು-ಸ್ವೇದೋದಕವನ್ನು, (ಬೆವರನೀರನ್ನು), ಆರಿಸಿಕೊಂಡು-ಆರಿಹೋಗುವಂತೆ ಮಾಡಿ ಕೊಂಡು, ಪೆಣ್ಣುವಿಂಡು-ಸ್ತ್ರೀ ಮಂಡಲಿಯು, ಆ ಬನದ-ಆ ಉದ್ಯಾನದ, ಅಲರ್ಗಳಂ-ಪುಷ್ಪಗಳನ್ನು, ತಮ್ಮ-ಸ್ವಕೀಯ ವಾದ, ತನುವಿನ-ದೇಹದ, ಕಂಪಿನಿಂ-ಸುರಭಿಯಿಂದ, ಪೊರೆದರು-ಬಾಡದಂದೆ ಸಲಹಿದರು ||೧೮||

ಟೀ|| ನಿಲುಕಿ-ಹೆಬ್ಬೆಟ್ಟಿನ ಮೇಲೆ ನಿಂತು, ಪೂಗೊಯ್ಯು-ಪುಷ್ಪಾಪಚಯವಂ ಮಾಡತಕ್ಕ, ಲಲಿತಾಂಗಿಯರ-ಸುಂದರ ಗಾತ್ರವುಳ್ಳವರ, ಬಟ್ಟ-ದುಂಡಾಗಿಯೂ, ಬಲ್-ಚೆನ್ನಾಗಿ ಬಲಿತೂ ಇರತಕ್ಕ, ಮೊಲೆಗಳಂ-ಸ್ತನಗಳನ್ನು, ಪೊರಲಾರದ-ಹೊರು

---

ಅಲ್ಲದೆ ನೋಡಿದ ಮಾತ್ರದಿಂದಲೆ ಅಶೋಕವೃಕ್ಷ, ತಿಲಕತರುಗಳಲ್ಲಿ ಹೂಗಳುಂಟಾಗುವಂತೆ ಮಾಡುವ ನಯನಂಗಳಿಂದಲೂ, ತುಳಿದ ಮಾತ್ರದಿಂದಲೆ ಅಶೋಕ ವೃಕ್ಷವೆಲ್ಲಾ ಚಿಗುರಿನಿಂದ ಕೂಡುವಂತೆಸಗುವ ಅಡಿದಾವರೆಗಳಿಂದಲೂ, ಸಂಪಗೆಯ ಮುಗ್ಗು ಗಳನ್ನು ಹೋಲುವ ಮಂದಹಾಸದಿಂದಲೂ, ಅಂಬುಜಗಳನ್ನೂ ಕೂಡ ಅಲೆಗೆಳೆಯುವ ಮುಖಪದ್ಮದಿಂದಲೂ, ಕೂಡಿದ ನಾರೀ ಮಣಿಗಳ ಶರೀರದ ಸುರಭಿಗೆಳಸಿ ಆ ಉದ್ಯಾನದಲ್ಲಿದ್ದ ಭೃಂಗಗಳೆಲ್ಲಾ ಮುಚ್ಚಿಕೊಳ್ಳುತ್ತಲಿದ್ದವು. || ೧೭ || ಮತ್ತು ಆ ಕಮಲಮುಖಿಯರು ತಮ್ಮ ಬಡನಡುಗಳನ್ನು ಮೇಲಕ್ಕೆತ್ತಿಕೊಂಡು ಬಾಹುಮೂಲವು ಥಳಥಳಿಸುವಂತೆ ಮಾಡುತ್ತ, ಕಠಿಣ ವಾದ ಸ್ತನಗಳು ಅಲ್ಲಾಡುತ್ತಿರಲಾಗಿ, ತಲೆಯ ಗಂಟು ಓರೆಯಾಗಲು, ಕಣ್ಣಿನ ದೃಷ್ಟಿಯನ್ನು ಆಕಾಶಮಾರ್ಗದಲ್ಲಿರುವಂತೆ ಮಾಡಿ, ಹೆಬ್ಬೆಟ್ಟುಗಳಮೇಲೆ ನಿಂತು, ಬಲು ಚೆಲುವಾಗಿಯೂ, ಸುವಾಸನೆಯಿಂದ ಕೂಡಿಯೂ ಇರುವ ಹೂಗಳನ್ನೆಲ್ಲಾ ಕೊಯ್ದು ಆಯಾಸದಿಂದ ಶಕ್ತಿ ಕುಂದಿದವರಾಗಿ, ತಂಗಾಳಿಯಿಂದ ತಮ್ಮ ದೇಹದಲ್ಲುಂಟಾದ ಬೆವರನ್ನು ಆರಿಸಿಕೊಳ್ಳುತ್ತ ಅವುಗಳನ್ನೆಲ್ಲಾ ತಮ್ಮ ಮೈಗಂಪಿನಿಂದ ಬಾಡದಂತೆ ಕಾಪಾಡುತ್ತಲಿದ್ದರು. ||೧೮|| ಈ ರೀತಿಯಲ್ಲಿ ಮೇಲ್ಗಡೆಯಲ್ಲಿಯೇ ದೃಷ್ಟಿಯನ್ನಿಟ್ಟು

ಗೊಯ್ವಲಲಿತಾಂಗಿಯರಬಟ್ಟಬ | ಲ್ಮೊಲೆಗಳಂಪೊರಲಾರದಸಿಯಸೆಳೆನಡುವಿದುಶಿ | ಥಿಲಮೆಂದುಹರಿನೀಲದಿಂದೆಸೆವಸಣ್ಣಸರಳಂ ಮನೋಜಂನಿರ್ಮಿಸಿ || ನಿಲಿಸಿಬಿಗಿದನೊಮೂರುಕಟ್ಟನೆಡೆಗೆಡೆಗನ | ಲ್ಸಲೆರಾಜಿಸಿತುವಳಿತ್ರಯದಚಲ್ವಿಕೆಯಿಂದ | ಲಲನೆಯರ ಮಧ್ಯದೊಳೊಗೆದಬಾಸೆಕುಸುಮೋಪಚಯಸಮಯದೊಳ್ಪೊಸತೆನೆ ||೧೯|| ತುಂಬಿಗಳನೋಡಿಸದಚಂಪಕಂಸೊಕ್ಕಾನೆ | ಯಂ ಬೆದರಿಸದಸಿಂಗಮಿಡಿದಂಧಕಾರಮುಂ | ತುಂಬಿಸದಚಂದ್ರಮಂಡಲಮಿರಲ್ಕಂಡಲ್ಲಿನಾವುಮಿರ್ದೊಡೆನಮ್ಮನು || ಶಂಬರಾರಿಯಶರಂ ಕಾಡದಿರುಳಿನವಿರಹ | ಕೆಂಬನಿಶ್ಚಯದೊಳಗಲದೆಬಾಲಕಿಯರುರವ | ನಿಂಬುಗೊಂಡೆಣೆವಕ್ಕಿಯನಲೆಸದವಲರ್ಗೊಯ್ವನೀರೆಯರ ನೆಲೆಮೊಲೆಗಳು||೨೦|| ಮೊಳೆವಲ್ಲಮೊಲ್ಲೆಯಂಚಂದುಟಿಯಬಂದುಗೆಯ | ನೆಳೆನಗೆಯಮಲ್ಲಿಗೆಯನೆಸಳ್ಗಣ್ಣನೈದಿಲೆಯ | ನಳಿತೋ

---

ವುದಕ್ಕಾಗದಿರತಕ್ಕ, ಅಸಿಯ-ಮನ್ಮಥನ ಖಡ್ಗದಂತಿರುವ ನಾರಿಯ, ಇದು ಸೆಳೆನಡು-ಈ ತೆಳ್ಳನಡುವು, ಶಿಥಿಲಂ_ಗಟ್ಟಿಯಾಗಿಲ್ಲ, ಎಂದು_ಎಂಬದಾಗಿ, ಮನೋಜಂ_ಮದನನು, ಹರಿನೀಲದಿಂದ_ಇಂದ್ರನೀಲದಿಂದ, ಎಸೆವ-ಹೊಳೆಯುವ, ಸಣ್ಣ_ಬಹು ಚಿಕ್ಕದಾಗಿರತಕ್ಕ, ಸರಳಂ_ಅಲಗನ್ನು, ನಿರ್ಮಿಸಿ-ಉಂಟುಮಾಡಿ, ನಿಲ್ಲಿಸಿ_ನೇರವಾಗಿರುವಂತೆ ಮಾಡಿ, ಮೂರು ಕಟ್ಟನು_ಮೂರು ಬಂಧನಂಗಳನ್ನು, ಎಡೆಗೆಡೆಗೆ-ಹತ್ತಿರಹವಾಗಿ, ಬಿಗಿದನೊ-ಕಟ್ಟಹಾಕಿದನೊ? ಎನಲ್-ಎಂಬ ರೀತಿಯಿಂದಿರುವ, ವಳಿತ್ರಯದ-ತ್ರಿವಳಿಗಳ, ಚೆಲ್ವಿಕೆಯಿಂದ-ಸೌಂದರ್ಯಾತಿಶಯದಿಂದ, ಲಲನೆಯರ_ಮಾರನಾಟವಂ ಬಯಸುವ ಸ್ತ್ರೀಯರ, ಮಧ್ಯದೊಳು_ಸೊಂಟದಲ್ಲಿ, ಬಗೆದ_ಉಂಟಾಗಿದ್ದ, ಬಾಸೆ_ರೋಮಪಜ್'ಯು, ಪುಷ್ಪಾಪಚಯ ಸಮಯದೋಳ್_ಅಲರ್ಗಳಂ ಬಿಡಿಸುವ ಕಾಲದಲ್ಲಿ, ಪೊಸತೆನೆ_ಹೊಸದೆಂಬಂತೆ, ಸಲೆ_ಬಹುವಾಗಿ, ರಾಜಿಸಿತು-ಹೊಳೆಯುತ್ತಲಿತ್ತು.

ಅ|| ವಿ|| ಮನೋಜಂ=ಮನ_ಮನಸ್ಸಿನಲ್ಲಿ, ಜ-ಹುಟ್ಟಿದವನು(ಮದನನು, ಕ್ರ.ವೃ ) ಬಾಸೆ (ತ್ಭ) ಪಾಶ (ತ್ಸ)?||೧೯||

ಟೀ|| ತುಂಬಿಗಳನು_ಅಳಿಗಳನ್ನು, ನಯನಂಗಳನ್ನು, ಓಡಿಸದ_ಓಡಿಹೋಗದಂತೆ ಮಾಡದಿರುವ, ಚಂಪಕಂ_ಚಂಪಕ ಪುಷ್ಪವು, ನಾಸಿಕವು, ಸೊಕ್ಕಾನೆಯಂ-ಮತ್ತಗಜವನ್ನು, ಕಟಿಪಶ್ಚಾದ್ಭಾಗವನ್ನು, ನಡಿಗೆಯನ್ನು, ಮತ್ತು ಸ್ತನಂಗಳನ್ನು, ಬೆದರಿಸದ_ಹೆದರಿಸದಿರತಕ್ಕ, ತೆಳ್ಳಗೆ ಮಾಡದಿರುವ, ಸಿಂಗಂ-ಮೃಗೇಂದ್ರನು, ಸೊಂಟವು, ಇಡಿದ_ಎಲ್ಲೆಲ್ಲಿಯೂ ಕವಿದುಕೊಂಡ, ದಟ್ಟವಾದ, ಅಂಧಕಾರಮುಂ_ಕತ್ತಲೆಯನ್ನು, ಮತ್ತು ತುರುಬನ್ನು, ತುಂಬಿಸದ-ಸಾಂದ್ರವಾದ, ಕಾಂತಿವಿಶಿಷ್ಟವಾದ, ಚಂದ್ರಮಂಡಲಂ_ಇಂದುವು, ಮತ್ತು ಆಸ್ಯವು, ಇರಲ್_ಆಗಿರಲು, ಕಂಡು_ಈಕ್ಷಿಸಿ, ಅಲ್ಲಿ-ತಮಗೆ ಪ್ರತಿಬಂಧಕವಿಲ್ಲವೆಡೆಯಲ್ಲಿ, ನಾರಿಯರ ದೇಹದಲ್ಲಿ, ನಾವುಂ_ನಾವೂ ಸಹ, ಇರ್ದೊಡೆ-ಇದ್ದಲ್ಲಿ, ನಮ್ಮನು_ನಮ್ಮಗಳನ್ನು, ಶಂಬರಾರಿ_ಮದನನ, ಶರಂ_ಸರಲು, ಇರುಳಿನ-ರಾತ್ರಿಯಕಾಲದ, ವಿರಹಕೆ_ಅಗಲುವಿಕೆಗೆ, ಕಾಡದು_ ತೊಂದರೆಪಡಿಸದಿರುವುದಿಲ್ಲ, ಎಂಬ_ಎನ್ನತಕ್ಕ, ನಿಶ್ಚಯದೊಳು-ನಿರ್ಣಯದಿಂದ, ಅಗಲದೆ_ಅವಕಾಶವನ್ನೀಯದೆ, ಬಾಲಕಿಯರ_ಬಾಲೆಯರ, ಉರವನು-ಹೃದಯಸ್ಥಳವನ್ನು, ಇಂಬುಗೊಂಡು_ಒಟ್ಟುಮಾಡಿಕೊಂಡು ಇರುವ, ಎಣೆವಕ್ಕಿ ಎನಲ್-ಜಕ್ಕವಕ್ಕಿಯೊ ಎಂಬಂತೆ, ಅಲರ್ಗೊಯ್ವ_ಪುಷ್ಪಾಪಚಯಮಂ ಮಾಡತಕ್ಕ, ನೀರೆಯರ-ಸ್ತ್ರೀಯರ, ನೆಲೆ-ಮೇಲಕ್ಕೆದ್ದಿರುವ, ಮೊಲೆಗಳು-ಸ್ತನಂಗಳು, ಎಸೆದವು_ಹೊಳೆಯುತ್ತಲಿದ್ದವು. ||

ಅ|| ವ|| ವಸ್ತುಗಳ ಬಣ್ಣ, ಆಕೃತಿ ಇವುಗಳನ್ನು ಹೇಳಿ ವಸ್ತುಗಳನ್ನು ಊಹೆಮಾಡುವಂತೆ ತೋರ್ಪಡಿಸಿ ಸುಂದರಾಂಗನೆಯೆಂಬುದನ್ನು ಸೂಚಿಸುತ್ತಲಿರುವುದು. ಸೊಕ್ಕಾನೆ-ಸೊಕ್ಕಿದ+ಆನೆ (ವಿ. ಪೂ.) ಸಿಂಗಂ (ತ್ಭ) ಸಿಂಹಂ (ತ್ಸ) ಅಲರ್+ಕೊಯ್ವ (ಅಲರ್ಗೊಯ್ವ ಕ್ರಿ. ಸ.) ನೆಲೆಮೊಲೆಗಳು-ನೆಲೆಯಾದ+ಮೊಲೆಗಳು (ವಿ. ಪೂ ) ||೨೦||

ಟೀ|| ಮೊಳೆವ_ಹುಟ್ಟರತಕ್ಕ, ಪಲ್ಲು_ಹಲ್ಲುಗಳೆನ್ನುವ, ಮಲ್ಲೆಯಂ_ಕುಂದಕುಟ್ಮಲವನ್ನು, ಚೆಂದುಟಿಯ_ಕೆಂಪಾದ ಓಷ್ಠವನ್ನು, ಬಂದುಗೆಯನು_ರಕ್ತವರ್ಣದ ದಾಸವಾಳವನ್ನು, ಎಳನಗೆಯ_ಅರನಗೆಯೆಂಬ, ಮಲ್ಲಿಗೆಯಂ-ದುಂಡುಮಲ್ಲಿಗೆಯ ಹೂವನ್ನು, ಎಸಳ್ಗಣ್ಣ-ಪದ್ಮಪತ್ರದಂತಿರುವ ಲೋಚನಂಗಳನ್ನು, ನೈದಿಲೆಯ_ಕಪ್ಪುಕಮಲವನ್ನು, ನಳಿತೋಳ್-ನುಣ್ಣಗೂ ವೃದುವಾಗಿಯೂ ಇರುವ, ಶಿರೀಷಮಂ-ಶಿರೀಷ ಕುಸುಮವನ್ನು, (ಬಿಂದಿಗೆಯ ಹೂವನ್ನು) ಚೆಳ್ಳ-ಹರಿತವಾದ, ಉಗುರು-

---

ಕೊಂಡು ಹೂಗಳನ್ನು ಕೊಯ್ಯುತ್ತಿರುವಾಗ ಬಲುದಪ್ಪನಾದ ಅವರ ಮೊಲೆಗಳನ್ನು ಹೊರಲು ನಡುವು ಅತಿ ಸಣ್ಣದಾದ್ದರಿಂದ ಭಾರವನ್ನು ತಾಳಲು ಆಗುವುದಿಲ್ಲವೆಂದು ಯೋಚಿಸಿ, ಮನ್ಮಥನು ಇಂದ್ರನೀಲದಿಂದ ಪ್ರಕಾಶಿಸುವ ಸಣ್ಣದಾದ ಅಲಗೊಂದನ್ನು ನಿರ್ಮಾಣಮಾಡಿ ಭದ್ರವಾಗಿರಲೆಂದು ಮೂರು ಕಟ್ಟುಗಳಿಂದ ಬಿಗಿದಿರುವನೋ ಎಂಬಂತೆ ತೋರುವ ತ್ರಿವಳಿಗಳಿಂದ ಕೂಡಿದ ಅವರ ಉದರದ ಮೇಲ್ಗಡೆಯಲ್ಲಿ ತೋರುವ ರೋಮಪಜ್'ಯು ಪ್ರಕಾಶಿಸುತ್ತಲಿತ್ತು. ||೧೯|| ಭ್ರಮರಗಳನ್ನು ಹೋಲುವ ನಯನಂಗಳಿಂದಲೂ, ಸಂಪಿಗೆಯ ಹೂವಿನಂತಿರುವ ಸುನಾಸಿಕದಿಂದಲೂ, ಆನೆಯ ನಡಿಗೆಯನ್ನೂ, ಸಿಂಹದ ನಡುವನ್ನೂ ತಿರಸ್ಕರಿಸುವ ಮಂದಗಮನ ಮತ್ತು ಬಡ ನಡುವು ಇವುಗಳಿಂದಲೂ ಉದ್ಯಾನವನದಲ್ಲಿ ತಿರುಗಾಡುವ ಚಂದ್ರಮುಖಿಯರ ಎದೆಯ ಭಾಗದಲ್ಲಿರತಕ್ಕ ಬಲ್ಮೊಲೆಗಳು ಚಕ್ರವಾಕ ಪಕ್ಷಿಗಳಂತೆ ಅತಿ ಚೆಲುವಾಗಿದ್ದವು. ||೨೦|| ಕುಂದಕುಟ್ಮಲವನ್ನು ಅಲ

ಳ್ಳಿರೀಷಮಂಜಳ್ಳುಗ-ರುಕೇತಕಿಯಸಾನನದತಾವರೆಯನು|| ತೊಳಗುವಪಸ-ನಾಸಿಕದಸಂಪಗೆಯನವಯವದೊ | ಳಳವಡಿಸಿಕುಸುಮ
ಗಂಧಿಯರೇತಕಿನ್ನುಪೂ | ಗಳನರಸಿಕೊಯ್ವರೆಂದವರನಡುಚಿಂತಿಸಿಯೆಬಡವಾದುದೆನಲೆಸೆದುದು || ೨೧ || ಕರವೀರವರ್ಗಮಂ
ಬಾಗಿಸಿದರಥಟರಂ | ತಿರದೆಪುನ್ನಾಗಮಂಪತ್ತಿರಂಜಿಸಿದರ್ಜ | ದುರಮಾವಟಿಗರಂತೆಜಾತಿಯಂತರವನರಿದಾಯ್ದರವನೀಶರಂತೆ ||
ಸುರಗಿಯಂತುಡಿಕಿದ ಭಟರಂತೆಬಗೆಗೆಳಸಿ | ಪರಿದರ್ಸುವಿಟರಂತೆ ಪಾದರಿಯುನರಸಿಪಿಡಿ | ದುರವಣಿಸಿದ ನಗರಶೋಧ

---

ಉಗುರ್ಗಳೆಂಬ, ಕೇತಕಿಯ-ಕೇತಕೀ ಕುಸುಮವನ್ನು, ಆನನದ-ಆಸ್ಯವೆಂಬ, ತಾವರೆಯನು-ಅಬ್ಜವನ್ನು, ತೊಳಗುವ-ಪ್ರಕಾಶಿಸ ತಕ್ಕ, ಸುನಾಸಿಕದ-ಮೂಗೆನ್ನುವ, ಸಂಪಿಗೆಯನು-ಸಂಪಿಗೆ ಹೂವನ್ನು, ಅವಯವದೊಳ್-ದೇಹದಲ್ಲಿ, ಅಳವಡಿಸಿ-ಜೋಡಿಸಿ ಕೊಂಡು, ಕುಸುಮಗಂಧಿಯರು-ಹೂಗಳಂತೆ ಸುವಾಸನೆಯಿಂದ ಯುಕ್ತರಾದ ನಾರಿಯರು, ಪೂಗಳನು-ಅಲರ್ಗಳನ್ನು, ಅರಸಿ-ಹುಡಿಕಿದವರಾಗಿ, ಏತಕೆ-ಯಾವಕಾರಣದಿಂದ, ಕೊಯ್ವರು-ಕೊಯ್ಯುತ್ತಾರೆ? ಎಂದು-ಎಂಬಂತೆ, ಅವರ-ಆ ಸ್ತ್ರೀಯರ, ನಡು-ಟೊಂಕವು, ಎಸೆದುದು-ಹೊಳೆಹೊಳೆಯಿತು ||

ಅ|| ವಿ|| ಇದು ರೂಪಕಾಲಂಕಾರವು. ಚಂದುಟ-ಕೆಚ್ಚನೆ+ತುಟ (ವಿ. ಪೂ) ಬಂಧೂಕ (ತ್ಸ) ಬಂದುಗೆ(ತ್ಭ) ||೨೧||

ಟೀ|| ಬನದೊಳ್-ಅರಣ್ಯದಲ್ಲಿ, ಪೆಣ್ಗಳು-ಪುಷ್ಪಾಪಚಯಮಂ ಮಾಡುತ್ತಲಿದ್ದ ಬಾಲೆಯರು, ಅಥಟರಂತೆ-ವೀರಪುರುಷರಹಾಗೆ, ಕರವೀರವರ್ಗಮಂ=ಕರ-ಹಸ್ತಂಗಳಿಂದ, ವೀರವರ್ಗಮಂ-ಶೂರರ ಗುಂಪನ್ನು, ಬಾಗಿಸಿದರು-ಗೆದ್ದರು [ಶೂರರ ಪರವಾದ ಅರ್ಥವು] ಕರವೀರ- ಕರವೀರ ಪುಷ್ಪಂಗಳನ್ನು, ಅಂದರೆ ಕಣಿಗಿಲಗಿಡದ ರೆಂಬೆಗಳನ್ನು, ಬಾಗಿಸಿದರು-ಬಗ್ಗಿಸಿದವರಾದರು, (ಹೆಂಗಸರಪರವಾಗಿ) ಚದುರ-ಚಾತುರ್ಯವುಳ್ಳ, ಮಾವಟಿಗರಂತೆ - ಹಸ್ತಿ ಶಿಕ್ಷೆಯನ್ನರಿತಿರುವರಂತೆ, ಇರದೆ-ಸುಮ್ಮನಿರದೆ, ಪುನ್ನಾಗಮಂ-ಪುರುಷಗಜವನ್ನು, ಪತ್ತಿ-ಹತ್ತಿದವರಾಗಿ, ರಂಜಿಸಿದರು - ಕಾಂತಿಯುಕ್ತರಾದರು, (ಮಾವಟಿಗರು). ಪುನ್ನಾಗಮಂ- ಸರಹೊನ್ನೆಯನ್ನು, ಏರಿ-ಅಡರಿ, ರಂಜಿಸಿದರ್- ಹೊಳೆಯುತ್ತಲಿದ್ದರು, (ಹೆಂಗಸರು) ಪುನ್ನಾಗಮಂ-ಗಂಡಸರೆಂಬ ಆನೆಗಳನ್ನು, ಏರಿ-ಹತ್ತಿ, ರತಿಸುಖವಂ ಪಡೆಯಲು ಮೇಲೆ ಕುಳಿತು, ರಂಜಿಸಿದರ್-ಹೊಳೆಯಲಾರಂಭಿಸಿದರು, ಅವನೀಶರಂತೆ-ಪೊಡವಿಪತಿಗಳ ಹಾಗೆ, ಜಾತಿ-ವಿಪ್ರರೇ ಮೊದಲಾದವರ ಸಂತತಿಯ, ಅಂತರವನು-ವ್ಯತ್ಯಾಸವನ್ನು, ಅರಿದು-ಗೋಚರಮಾಡಿಕೊಂಡು, ಆಯ್ದರು- ಕಾಣಿಕೆಯನ್ನು ತೆಗೆದುಕೊಂಡರು, (ಅರಸರು). ಜಾತಿ-ಹೂವಿನ ಭೇದಗಳ, ಅಂತರವನು-ಬೇರ್ಪಡಿಸುವಿಕೆಯನ್ನು, ಆಯ್ದರು-ವಿಂಗಡಿಸಿದರು, (ಹೆಂಗಸರು) ಭಟರಂತೆ-ಯೋಧರಂತೆ, ಸುರಗಿಯಂ-ಖಡ್ಗವೇ ಮೊದಲಾದವುಗಳನ್ನು, ತುಡಕಿದರು-ತಾಳಿದವರಾದರು, (ದಳಪತಿಗಳು) ಸುರಗಿಯಂ-ಸುರಗಿಯ ಹೂವನ್ನು, ತುಡುಕಿದರು-ಬಿಡಿಸಿದವರಾದರು, (ಹೆಂಗಸರು). ಸುವಿಟರಂತೆ - ಕಾಮಾಸಕ್ತರಾದ ಜನರ ಹಾಗೆ, ಬಗೆಗೆ - ಯುವತಿಯರ ಬಿನ್ನಣವೇ ಮೊದಲಾದವುಗಳಿಗೆ, ಎಳಸಿ-ಅಪೇಕ್ಷಿಸಿ, ಪರಿದರು-ಸುಳಿದಾಡುತ್ತಲಿದ್ದರು, (ಕಾಮುಕರು), ಬಗೆಗೆ-ತಂಡತಂಡವಾದ ಮತ್ತು ಚಿತ್ರವಿಚಿತ್ರಂಗಳಾದ ಕುಸುಮಗಳಿಗೆ, ಎಳಸಿ-ಆಶಿಸಿ, ಪರಿದರ್-ವನದಲ್ಲಿ ತಿರುಗಾಡುತ್ತಲಿದ್ದರು, (ಹೆಂಗಸರು) ನಗರ-ಪಟ್ಟಣಂಗಳಲ್ಲಿ, ಶೋಧನೆಯ-ತಪ್ಪಿತಸ್ಥರನ್ನು ಹುಡುಕುವ, ತಳವಾರರಂತೆ-ಕಾವಲ್ಗಾರರ ಹಾಗೆ, ಪಾದರಿಯನು-ಹಾದರಗಿತ್ತಿಯನ್ನು,

---

ಗಳೆಯುವ ದಂತಪಙ್ತಿಯಿಂದಲೂ, ಕೆಂಪು ದಾಸವಾಳವನ್ನು ಹೋಲುವ ರಕ್ತಾಧರಂಗಳಿಂದಲೂ, ದುಂಡುಮಲ್ಲಿಗೆಯನ್ನು ತಿರಸ್ಕರಿಸುವ ಮಂದಹಾಸದಿಂದಲೂ, ಕನ್ನೈದಿಲೆಯಂತಿರುವ ಕಣ್ಣುಗಳಿಂದಲೂ, ಬಿಂದಿಗೆಯ ಹೂಗಳಂತೆ ಅತಿ ಕೋಮಲವಾಗಿರುವ ಬಾಹುಗಳಿಂದಲೂ, ಗೇದಿಗೆಯ ಹೂವನ್ನು ಏಳುವ ಉಗುರ್ಗೊನೆಗಳಿಂದಲೂ, ಕಮಲದಂತಿರುವ ಮುಖದಿಂದಲೂ ಸಂಪಗೆಯ ಮೊಗ್ಗಿನಂತಿರುವ ಮೂಗಿನಿಂದಲೂ ಕೂಡಿದ ಅತಿ ಸುಂದರರಾದ ನಾರಿಯರು ಹೂಗಳನ್ನು ಕೊಯ್ದು ಕೊಯ್ದು ಆಯಾಸವನ್ನು ಪಡುವರಲ್ಲಾ! ಎಂದು ಚಿಂತಿಸಿ ಕೃಶವಾಯಿತೋ ಎಂಬಂತೆ ಅವರ ನಡುವು ಹೊಳೆಯುತ್ತಲಿತ್ತು. ||೨೧||
ಈ ರೀತಿಯಿಂದ ಉಪವನದಲ್ಲಿರುವ ಸ್ತ್ರೀಯರಾದರೋ, ವೀರಾಗ್ರಣಿಗಳು ತಮ್ಮ ಕರಗಳಿಂದ ಶೂರರನ್ನು ಹಿಡಿದು ಬಗ್ಗಿಸುವ ತೆರನಾಗಿ ಕರವೀರಪುಷ್ಪಂಗಳಂ ಕೊಯ್ಯಲು ಮರಗಳನ್ನು ಬಗ್ಗಿಸುತ್ತಲೂ, ಮಾವಟಿಗರು ಮದ್ದಾನೆಗಳಮೇಲೇರುವಂತೆ ತಾವು ದೇವ ಹೊನ್ನೆಯ ತರುಗಳನ್ನಡರುತ್ತಲೂ, (ಪುರುಷರೆಂಬಾನೆಗಳನ್ನೇರಿ ಕ್ರೀಡಾಸುಖವನ್ನನುಭವಿಸುತ್ತಲೂ), ಬ್ರಾಹ್ಮಣಾದಿ ವರ್ಣಾನುಗುಣವಾಗಿ ಕಾಣಿಕೆಯನ್ನು ಬೇರೆಬೇರೆಯಾಗಿ ತೆಗೆದುಕೊಳ್ಳುವ ರಾಜರಂತೆ ತಾವು ಕೊಯ್ದು ಒಟ್ಟುಗೂಡಿಸಿದ್ದ ಕುಸುಮಂಗಳನ್ನೆಲ್ಲಾ ಬೇರ್ಪಡಿಸುತ್ತಲೂ, ಸೇನೆಯಲ್ಲಿರುವ ಜನರು ಕತ್ತಿ, ಈಟ ಮೊದಲಾದವನ್ನು ಧರಿಸುವಂತೆ ತಾವು ಸುರಗಿಯ ಹೂವನ್ನು ಕೊಯ್ಯುತ್ತಲೂ, ಕಾಮುಕರು ಸುಂದರಾಂಗನೆಯರನ್ನು ಹುಡುಕುತ್ತಾ ಅಲೆದಾಡುವಂತೆ ತಾವು ಒಳ್ಳೆ ಹೂಗಳಿಗಾಗಿ ವನದಲ್ಲೆಲ್ಲಾ ತಿರುಗಾಡುತ್ತಲೂ, ಗ್ರಾಮದ ಕಾವಲಿನವರು ಹಾದರಗಿತ್ತಿಯರನ್ನು ಹುಡುಕಲು ಊರಲ್ಲೆಲ್ಲ ಸುಳಿಸುಳಿ

ನೆಯುತಳೆವಾರರಂತೆಬನದೊಳ್ಪೆಣ್ಗಳು ‖ ೨೨ ‖ ಜಾತಿಸೇವಂತಿಗೆಶಿರೀಷಮೊದಲಾದಪೂ | ಜಾತಿಗಳೊಳಿಂತಲರ್ಗೊಯ್ಯುತುಪವನದೊಳ್ನಿ | ಜಾತಿಶಯಲೀಲೆಯಿಂದಿರುತಿರ್ದಳಾಮದನಮಂಜರಿಯುಕೆಳದಿಯರೊಳು ‖ ಭೂತಳದೊಳಿದುಶುಭಾಕಾರದಿಂದಾಶ್ಚರ್ಯ | ಭೂತಮೆನೆವ್ಯೈದೋರಿತಾಗಲಮರೇಂದ್ರಸಂ | ಭೂತನತುರಂಗಮುಮದಂಕಂಡು ಮುತ್ತಿದರ್ಮತ್ತಗಜಗಾಮಿನಿಯರು ‖೨೩‖ ವನಿತೆಯರೊಳಾಮದನಮಂಜರಿಹಯದಫಣೆಯ| ಕನಕಪಟ್ಟದಲೇಖನವನೋದಿಕೊಂಡುಯಮ | ತನುಜನಗ್ಗಳಿಕೆಯಂ ಕಂಡುನಸುನಗುತ ನಿಜಪತಿಗೆತಾನದನುಸುರಲು ‖ ಕನಲ್ದಿನೆಯಳಂ ನೋಡುತವನೆದ್ದುಕಾಣಬಹು | ದೆನುತ ಪಿಡಿದಶ್ವಮುಂಕಟ್ಟಿಪಟ್ಟಣಕೆಮಾ | ನಿನಿಯರಂಕಳುಹಿಪರಿವಾರಮುಂಕರೆಸಿನರನೊಳ್ಕಾದಲನುವಾದನು ‖ ೨೪ ‖ ಭೂಲೋಲ

ಅರಸಿ-ಅನ್ವೇಷಣವಂಮಾಡಿ, ಉರವಣಿಸಿ-ಅಡ್ಡಗಿಸಿ, ಪಿಡಿದರ್-ಹಿಡಿದವರಾದರು, (ತಳವಾರರು), ಪಾದರಿಯನು-ಪಾಟಲಿ ಪುಷ್ಪವನ್ನು, ಅರಸಿ-ಬಯಸಿ, ಉರವಣಿಸಿ-ಕಷ್ಟಸಾಧ್ಯದಿಂದ, ಪರಿದರು-ಕಿತ್ತುಕೊಂಡರು ‖

ಅ‖ ವಿ‖ ವೀರರವರ್ಗ (ಷ. ತ.) ಜಾತಿ (ತ್ಸ) ಜಾಜಿ (ತ್ಭ) ಪಾದರಿ (ತ್ಭ) ಪಾಟಲಿ (ತ್ಸ) ಅರಸಿ-ಹುಡಕಿ (ಕೃ. ದ) ಬನ (ತ್ಭ) ವನ (ತ್ಸ) ವಿರೋಧಾಭಾಸ ಮತ್ತು ಉಪಮಾಲಂಕಾರಗಳಿಂದ ಕೂಡಿರುವುದು ‖ ೨೨ ‖

ಟೀ‖ ಜಾತಿ-ವಿಧವಿಧವಾದ, ಸೇವಂತಿಗೆ-ಸೇವಂತಿಕಾ ಕುಸುಮಂಗಳು, ಶಿರೀಷ-ಬಿಂದಿಗೆಯ ಹೂ, ಮೊದಲಾದ-ಇವೇ ಆದಿಯಾಗಿವುಳ್ಳ, ಪೂಜಾತಿಗಳೋಳ್-ಕುಸುಮಭೇದಂಗಳಲ್ಲಿ, ಇಂತು-ಈ ತೆರನಾಗಿ, ಅಲಗರ್ೊಯ್ಯುತ-ಹೂಗಳನ್ನು ಒಟ್ಟುಗೂಡಿಸುತ್ತ, ಉಪವನದೊಳು-ಆರಾಮದಲ್ಲಿ, ನಿಜ-ಸ್ವಂತವಾದ, ಅತಿಶಯ-ಬಹು ಹೆಚ್ಚಾದ, ಲೀಲೆಯಿಂದ-ಸೌಂದರ್ಯದಿಂದ, ಮದನಮಂಜರಿಯು-ಪ್ರವೀರನೆಂಬ ಮಾಹಿಷ್ಮತೀ ನಗರದ ಯುವರಾಜನ ರಾಣಿಯು, ಗೆಳತಿಯರೊಳು-ಸಂಗಾತಿಯರೊಂದಿಗೆ, ಇರುತಿರ್ದಳು-ಇರುತ್ತಲಿದ್ದಳು, ಆಗಲು-ಆ ಕಾಲದಲ್ಲಿ, ಭೂತಳದೊಳು-ಇಳೆಯಲ್ಲಿ, ಇದು-ಈ ಅಶ್ವವು, ಶುಭಾಕಾರದಿಂದ-ಭದ್ರಾಕೃತಿಯಿಂದ, ಆಶ್ಚರ್ಯಭೂತಂ- ಆಶ್ಚರ್ಯವನ್ನುಂಟುಮಾಡತಕ್ಕದ್ದು, ಎನೆ-ಎಂಬಂತೆ, ಅಮರೇಂದ್ರಸಂಭೂತನ-ಪಾರ್ಥನ, ತುರಂಗಮುಂ-ಹಯವು, ವ್ಯೈದೋರಿತು-ಗೋಚರವಾಯಿತು, ಅದಂ-ಆ ಹಯವನ್ನು, ಕಂಡು-ಈಕ್ಷಿಸಿ, ಮತ್ತಗಜಗಾಮಿನಿಯರು-ಮದ್ದಾನೆಯ ನಡಿಗೆಯಂತೆ ನಡಿಗೆಯುಳ್ಳ ಸ್ತ್ರೀಯರು, ಮುತ್ತಿದರು-ಆವರಿಸಿಕೊಂಡರು ‖

ಅ‖ ವಿ‖ ಅಮರೇಂದ್ರಸಂಭೂತನು-ಮರಣವಿಲ್ಲದವರು ಅಮರರು, (ನಞ್‌ತತ್ಪುರುಷ) ಅಮರರ, ಇಂದ್ರ (ಷ. ತ.) ಅಮರೇಂದ್ರನಿಂದಸಂಭೂತ (ತೃ. ತ.) ಮತ್ತಗಜಗಾಮಿನಿಯರ್-ಮದಿಸಿದಗಜ (ವಿ. ಪೂ.) ಮತ್ತಗಜದಗಮನದಂತೆ ಗಮನವುಳ್ಳವರು ಯಾರೊ ಅವರು (ಬ ಸ.) ‖ ೨೩ ‖

ಟೀ‖ ವನಿತೆಯರೊಳು-ನಾರಿಯರಲ್ಲಿ, ಆ ಮದನಮಂಜರಿ-ಪ್ರವೀರನ ಕಾಂತೆಯು, ಹಯದ-ಅಶ್ವದ, ಫಣೆಯ-ಫಾಲದಲ್ಲಿರತಕ್ಕ, ಕನಕಪಟ್ಟದ-ಚಿನ್ನದ ತಗಡಿನ, ಲೇಖನವನು-ಬರಹವನ್ನು, ಓದಿಕೊಂಡು-ಓದಿದವಳಾಗಿ, ಯಮತನುಜನ-ಧರ್ಮನಂದನನ, ಅಗ್ಗಳಿಕೆಯಂ-ಬಿರುದೋಲಿಯನ್ನು, ಕಂಡು-ಈಕ್ಷಿಸಿ, ನಸುನಗುತ-ಮುಗುಳ್ನಗೆಯನ್ನೈದಿ, ನಿಜಪತಿಗೆ-ತನ್ನ ರಮಣನಿಗೆ, ತಾನು-ಮದನಮಂಜರಿಯು, ಅದನ್ನು, ಉಸುರಲು-ಪೇಳಲಾಗಿ, ಕನಲ್ದು-ಸಿಟ್ಟುಮಾಡಿಕೊಂಡು, ಇನೆಯಳಂ-ಸತಿಯನ್ನು, ನೋಡುತ-ದೃಷ್ಟಿಸುತ್ತ, ಅವನು-ಆ ಪ್ರವೀರನು, ಎದ್ದು-ಮೇಲಕ್ಕೆದ್ದವನಾಗಿ, ಕಾಣಬಹುದು-ದೃಷ್ಟಿಸಬಹುದು, ಎನುತ-ಎಂದು ನುಡಿಯುತ್ತ, ಅಶ್ವಮುಂ-ತುರಂಗವನ್ನು, ಪಿಡಿದು-ಹಿಡಿದುಕೊಂಡು, ಕಟ್ಟಿ-ಬಂಧಿಸಿ, ಪಟ್ಟಣಕೆ-ಪೊಳಲಿಗೆ, ಮಾನಿನಿಯರಂ-ನಾರೀಮಣಿಗಳನ್ನು, ಕಳುಹಿ-ಹೊರಟುಹೋಗುವಂತೆಮಾಡಿ, ಪರಿವಾರಮುಂ-ದಂಡನ್ನು, ಕರೆಸಿ-ಹೇಳಿಕರೆಯಿಸಿಕೊಂಡು, ನರನೊಳು-ಫಲ್ಗುಣನೊಂದಿಗೆ, ಕಾದಲು-ಹೋರಾಡಲು, ಅನುವಾದನು-ನೇರ್ಪಟ್ಟನು.

ಅ‖ ವಿ‖ ತನು ದೇಹದಲ್ಲಿ, ಜ-(ಕೃ. ವೃ.) ಯಮನತನುಜ (ಷ. ತ.) ‖ ೨೪ ‖

ವಂತೆ ತಾವು ಉದ್ಯಾನದಲ್ಲಿರುವ ಪಾಟಲೀಕುಸುಮಾಪಚಯಕ್ಕಾಗಿ ತಿರುಗಾಡುತ್ತಲೂ, ಇನ್ನು ಅನೇಕ ವಿಧವಾದ ಸೇವಂತಿಗೆ, ಮಲ್ಲಿಗೆ ಮೊದಲಾದ ಅಲರ್ಗಳಂ ಶೇಖರಿಸುತ್ತಲೂ, ಅತ್ಯಂತ ವಿಲಾಸದಿಂದ ತಿರುಗಾಡುತ್ತಲಿದ್ದರು. ‖ ೨೨ ‖ ಉಪವನದಲ್ಲಿ ಈಬಗೆಯಿಂದ ಸುಳಿದಾಡುವ ಸಖೀಜನರಿಂ ಕೂಡಿದ ಮದನಮಂಜರಿಯು ತನ್ನೆದುರಿಗೆ ಕಾಣಬರುವ ಭೂಲೋಕದಲ್ಲೆಲ್ಲಾ ಸರ್ವೋತ್ತಮವಾದ ಸ್ವರ್ಗಲೋಕದ ಕುದುರೆಯಂತೆ ಹೊಳೆಯುತಕ್ಕ ಅಶ್ವವೊಂದನ್ನು ನೋಡಿ ಅದರ ಸುತ್ತಲೂ ಮುತ್ತಿಕೊಂಡು ‖೨೩‖ ಆಶ್ಚರ್ಯದಿಂದಿರುವಾಗ ಅವರಲ್ಲಿ ಮದನಮಂಜರಿಯು ಆ ತುರಂಗಮದ ಹಣೆಯಲ್ಲಿದ್ದ ಭಂಗಾರದ ತಗಡೊಂದನ್ನು ನೋಡಿ ಅದರಲ್ಲಿ ಬರೆದಿರುವದನ್ನೆಲ್ಲಾ ಓದಿಕೊಂಡು ಧರ್ಮಸುತನ ಬಿರುದಾವಳಿಯ ತೆರವನ್ನೆಲ್ಲಾ ತನ್ನ ಪತಿಯೊಂದಿಗೆ ಹೇಳಲಾಗಿ ಆಗಲಾ ಪ್ರವೀರನೆಂಬ ನೀಲಧ್ವಜನ ಕುವರನು ತಡಮಾಡದೆ ಕುದುರೆಯನು, ಕಟ್ಟಿಹಾಕಿ ಸ್ತ್ರೀಯರನ್ನೆಲ್ಲಾ ಪಟ್ಟಣಕ್ಕೆ

ಕೇಳಗ್ನಿಮನೆಯೊಳಳಿಯನಾಗಿಹಂ | ನೀಲಧ್ವಜಂಗದಂತೆನೆಮುಂನವನಮಗ | ಳ್ಮೂಲೋಕದೊಳ್ಸುಲಭರಾರೆಂದರಸಿನೋಂ ತುಪಾವಕನನುರೆಮೆಚ್ಚಿಸೆ || ಬಾಲಕಿಯನಂದುಮೊದಲಾಗಿವೈಶ್ವಾನರಂ | ಪಾಲಿಪಂಪತಿರೂಪದಿಂದಾಪುರದೊಳದರ | ಮೂಲಬಲದಿಂಪ್ರವೀರಂಪಿಡಿದುಕಟ್ಟಿದಂಪಾರ್ಥನತುರಂಗನುವನು || ೨೫ || ಕಟ್ಟಿರ್ದಕುದುರೆಯಂಕಂಡುಕಾಹಿನಭಟ | ರ್ಧಟ್ಟಿಸಿದೊಡಾಪ್ರವೀರಂಕೆರಳ್ದಾಹವಂ | ಗೊಟ್ಟೆನಾರ್ಪಡೆಬರಲಿ ತನ್ನೊಡನೆಕಾಳಗಕೆಪಡೆಸಹಿತ ಪಾರ್ಥನೆಂದು || ತೊಟ್ಟಂ ಶರಾಸನದೊಳಂಬನವನೀಮಾತು | ಮುಟ್ಟಿದುದುಫಲುಗುಣಂಗೆಳೆನಗೆಯಕೋಪದಿಂ | ಧಟ್ಟನೋಡಿದನಾಗನಡೆದುದುಚತುರ್ಬಲಂಸರ್ವಸನ್ನಾಹದಿಂದ || ೨೬ || ಚೂಳಿಯಚತುರ್ಬಲದಧಾಳಿನಗರಿಗೆನಭಕೆ | ಧೂಳಿದೆಸೆದೆಸಗಳ್ಗೆ ಘೋಳಿಡುವವಾದ್ಯರವ |

ಟೀ|| ಭೂಲೋಲ-ಭೂಕಾಂತನಾದ ಜನಮೇಜಯನೆ! ನೀಲಧ್ವಜಂಗೆ-ನೀಲಧ್ವಜನೆಂಬರಸನಿಗೆ, ಅಗ್ನಿ-ಹುತವಹನು, ಅಳಿಯನಾಗಿ-ಜಾಮಾತನಾಗಿ (ಮಗಳ ಗಂಡನಾಗಿ), ಮನೆಯೊಳು-ಮಂದಿರದಲ್ಲಿ, ಇಹಂ-ಇದ್ದಾನೆ, ಅದು, ಎಂತೆನೆ-ಅದು ಹೇಗೆಂದರೆ, ಮುನ್ನ-ಹಿಂದಿನ ಕಾಲದಲ್ಲಿ, ಅವನ-ಆ ಮಾಹಿಷ್ಮತಿಯ ಒಡೆಯನ, ಮಗಳ್-ಪುತ್ರಿಯು, ಮೂಲೋಕದೊಳ್-ಸ್ವರ್ಗ, ಮರ್ತ್ಯ, ಪಾತಾಳಂಗಳಲ್ಲಿ, ಸುಲಭರು-ಕಷ್ಟವಿಲ್ಲದೇ ಸಿಕ್ಕುವವರು, ಆರು-ಯಾರು? ಎಂದು-ಎಂಬತೆರನಾಗಿ, ಅರಸಿ-ಅನ್ವೇಷಣೆಯಂಮಾಡಿ, ನೋಂತು-ವ್ರತಗಳನ್ನು ಮಾಡಿ, ಪಾವಕನನು-ವೈಶ್ವಾನರನನ್ನು, ಉರೆ-ಅಧಿಕವಾಗಿ, ಮೆಚ್ಚಿಸೆ- ತೃಪ್ತಿಪಡಿಸಲು, ಅಂದು ಮೊದಲಾಗಿ-ಆದಿನ ಮೊದಲ್ಗೊಂಡು, ವೈಶ್ವಾನರಂ-ಯಜ್ಞೇಶ್ವರನು, ಪತಿರೂಪದಿಂ-ಪತಿಯ ಆಕಾರವುಳ್ಳವನಾಗಿ, ಬಾಲಕಿಯನು-ತೇಜೋ ಮಂಜರಿಯೆಂಬ ಅವನಣುಗಿಯನ್ನು, ಆಪುರದೊಳು-ಆ ನಗರದಲ್ಲಿ, ಪಾಲಿಪಂ-ಸಲಹುತ್ತಿರುವನು. ಅದರ-ಆ ಸಂಬಂಧದ, ಮೂಲಬಲದಿಂದ-ಮೂಲಕಾರಣದಿಂದ. ಪ್ರವೀರಂ-ಪ್ರವೀರನೆಂಬುವವನು, ಪಾರ್ಥನ-ಫಲ್ಗುಣನ, ತುರಂಗಮುವನು-ಹಯುವನ್ನು, ಕಟ್ಟಿದಂ-ಬಂಧಿಸಿದನು.

ಅ|| ವಿ|| ತುರಂಗಮು-ತುರ-ಶೀಘ್ರವಾಗಿ, ಗಮು-ನಡೆಯುವುದು || ೨೫ ||

ಟೀ|| ಕಟ್ಟಿರ್ದ-ಬಿಗಿದಿದ್ದಂಥ, ಕುದುರೆಯಂ-ಹಯವನ್ನು, ಕಂಡು-ನೋಡಿ, ಕಾಹಿನಭಟರು-ಕುದುರೆಯ ಕಾವಲಿನವರು, ಧಟ್ಟಿಸಿದೊಡೆ-ಹೆದರಿಕೊಳ್ಳುವಂತೆ ಮಾಡಲು, ಆಪ್ರವೀರಂ-ಆ ನೀಲಧ್ವಜನ ಮಗನು, ಕೆರಳ್ದು-ಕೋಪಿಸಿಕೊಂಡು, ಪಾರ್ಥನು-ಫಲ್ಗುಣನು, ಆರ್ಪಡೆ-ವೀರನಾದರೆ, ಪಡೆಸಹಿತ-ದಳದಿಂದೊಡಗೂಡಿ, ತನ್ನೊಡನೆ-ನನ್ನೊಂದಿಗೆ, ಕಾಳಗಕೆ-ರಣಕ್ಕೆ, ಬರಲಿ-ಐತರಲಿ, ಆಹವಂಗೊಟ್ಟೆನು-ಕಾಳಗಕ್ಕೆ ಎದುರುನೋಡುತ್ತಿರುವೆನು, ಎಂದು-ಎಂಬದಾಗಿ, ಶರಾಸನದೊಳು-ಧನುಸ್ಸಿನಲ್ಲಿ, ಅಂಬನು-ಅಲಗನ್ನು, ತೊಟ್ಟಂ-ಸೇರಿಸಿದನು. ಅವನ-ಪ್ರವೀರನೆಂಬಾತನ, ಈಮಾತು-ಈ ನುಡಿಯು, ಫಲುಗುಣನಿಗೆ-ಪಾರ್ಥನಿಗೆ, ಮುಟ್ಟಿದುದು-ಗೋಚರವಾಯಿತು. ಎಳನಗೆಯ-ಹುಸಿನಗೆಯಿಂದ ಕೂಡಿದ, ಕೋಪದಿಂ- ಕ್ರೋಧದಿಂದ, ಧಟ್ಟ-ಆರ್ಭಟಿಸಿ, ನೋಡಿದಂ-ಈಕ್ಷಿಸಿದನು. ಆಗ-ಆ ಕಾಲದಲ್ಲಿ, ಸನ್ನಾಹದಿಂದ-ಯುದ್ಧಕಾರ್ಯಗಳಿಂದ, ಚತುರ್ಬಲಂ-ಹಸ್ತ್ಯಶ್ವರಥ ಪದಾತಿಗಳು. ನಡೆದುದು-ಮುಂದರಿಯಿತು ||

ಅ|| ವಿ|| ಕಾಹಿನ-ಕಾ ಎಂಬ ಧಾತುವಿನಿಂದಾದರೂಪವು, ಶರಾಸನ-ಶರ-ಬಾಣಕ್ಕೆ, ಆಸನ-ಸ್ಥಾನ ಭೂತವಾದದ್ದು. ಎಳನಗೆ-ಎಳದಾದನಗೆ-(ವಿ. ಪೂ) || ೨೬ ||

ಟೀ|| ಚೂಳಿಯ-ಮುಂದರಿದು ಬರುತ್ತಲಿರುವ, ಚತುರ್ಬಲದ-ನಾಲ್ಕುತೆರನಾದ ದಳದ, ಧಾಳಿ-ಸೂರೆಯು, ನಗರಿಗೆ-ಪಟಣಕ್ಕೂ, ಧೂಳಿ-ಭೂಮಿಯಿಂದುಂಟಾದ ಧೂಳು, ನಭಕೆ-ಅಂತರಿಕ್ಷಕ್ಕೂ, ಘೋಳಿಡುವ-ಹೆಚ್ಚಾಗಿ ಶಬ್ದಮಾಡುವ,

---

ಕಳುಹಿ ತಾನು ಯುದ್ಧಸನ್ನದ್ಧನಾಗಿ ನಿಂತವನಾದನು. || ೨೪ || ಎಲೈ ಜನಮೇಜಯರಾಯನೆ ಕೇಳು, ಪೂರ್ವದಲ್ಲಿ ನೀಲಧ್ವಜನೆಂಬರಸು ತನ್ನ ಕುವರಿಯಾದ ತೇಜೋಮಂಜರಿಯೆಂಬವಳನ್ನು ಯಾರಿಗೆ ಕೊಡಬೇಕೆಂದು ಹುಡುಕುತ್ತಾ ಕೊನೆಗೆ ಅಗ್ನಿಪುರುಷನಿಗೆ ಕೊಟ್ಟು ವಿವಾಹವಂ ಮಾಡಿದನಾದ್ದರಿಂದ ಆ ವೈಶ್ವಾನರನ ಬಲದಿಂದ ಪ್ರವೀರನು ಧರ್ಮರಾಜನ ಯಾಗದ ತುರಗವನ್ನು ಕಟ್ಟಿದ್ದನು. || ೨೫ || ಪ್ರವೀರನು ಕುದುರೆಯನ್ನು ಕಟ್ಟಿರುವ ಸುದ್ದಿಯು ಅರ್ಜುನನ ಸೈನಿಕರಿಗೆ ತಿಳಿಯಲಾಗಿ ಅವರೆಲ್ಲಾ ಬಹು ಜಾಗ್ರತೆಯಲ್ಲಿ ಬಂದು ಕುದುರೆಯನ್ನು ಬಿಡೆಂದು ಕೇಳಿದರೂ ಕೂಡ ಪ್ರವೀರನು ಸ್ವಲ್ಪವೂ ಲಕ್ಷ್ಯಮಾಡದೆ ಅವರನ್ನು ಕುರಿತು ನಿಮಗೆ ಅಶ್ವವು ಬೇಕಾದರೆ ಫಲ್ಗುಣನೊಂದಿಗೆ ಬಂದು ನಮ್ಮೊಡನೆ ಹೋರಾಡಿ ಗೆದ್ದು ಕುದುರೆಯನ್ನು ಬಿಡಿಸಿಕೊಳ್ಳಿ, ಇಲ್ಲವಾದರೆ ಸುಮ್ಮನೆ ನಡೆಯಿರಿ ಎಂದು ನುಡಿದು ಶರಾಸನದಲ್ಲಿ ಅಂಬನ್ನಿಟ್ಟು ನಿಲ್ಲಲು, ಅರ್ಜುನನ ಸೈನ್ಯದವರಾದರೊ ಈ ಸುದ್ದಿಯನ್ನು ತೆಗೆದುಕೊಂಡು ಹೋಗಿ ಫಲ್ಗುಣನೊಂದಿಗೆ ವಿಜ್ಞಾಪಿಸಿಕೊಂಡರು. ಇದನ್ನು ಕೇಳಿದ ಪಾರ್ಥನು ಕೋಪಾವಿಷ್ಟನಾಗಿ ಚತುರಂಗಬಲದೊಡನೆ || ೨೬ || ಮುಂದೆ ನಡೆದನು. ತನ್ನ ಹಿಂದೆ ಬರುತ್ತಿರುವ ಸೇನಾರ್ಣವದ

ದೋಳಿನೆರೆಮುಸುಕಿತೊಂದೇಭಾರಿಪುರಜನಕೆರವಿಗೆದಿಕ್ಪಾಲಕರ್ಗೆ ॥ ಬಾಳುವೆಮಹಾತೇಜಮತಿಶಯದಪದವಿಗಳ್ಕಾಳಹುದು ಮುಸುಳಿಪುದುಚಲನಮಹುದೆಂದುಹೇರಾಳಭಯದಿಂಶಂಕೆಯಿಂದದ್ಭುತಂಗಳಿಂಧೃತಿಗತಿಮತಿಗಳಳಿದವು ॥೨೭॥ ಮೇರೆದಪ್ಪಿದಮಹಾರ್ಣವದಂತೆಭುವನಸಂ । ಹಾರಕಾಲದಮೇಘಚಯದಂತೆಭರದಿಂಪ್ರ । ವೀರನಂಮುಸುಕಿತರ್ಜುನನಮುಂಚೂಣಿಯಚತುರ್ಬಲಂದೆಸೆದೆಸೆಯೊಳು ॥ ತೇರ್ಸೈಸದಿರ್ದನವನತಿಸತ್ವದಿಂದ । ಸಂಸಾರಪ್ರಲಾಪಮಾಲಾಕುಲಮನಧ್ಯಾತ್ಮ । ಸಾರದಿಂತಡೆವಯೋಗೀಶ್ವರನಚಿತ್ತದಂತೆಚ್ಚರಿಕೆಧಾತುಗೆಡದೆ ॥ ೨೮ ॥ ಮೇಗೆಮುಸುಕಿದಚೂಣಿಯನಿತುಚಾತುರ್ಬಲವ । ನಾಗಳೋರ್ವನೆಚಾರಿವರಿವರಿದುಬಾಣಪ್ರ । ಯೋಗಂಗಳಿಂಪ್ರವೀರಂಕೊಲ್ವುದಂಕಂಡುಬಿಲ್ಗೊಂಡುಕೋಪದಿಂದ ॥ ಬೇಗದಿಂಪ್ರದ್ಯುಮ್ನಸಾ

---

ವಾದ್ಯರವದ-ವಾದ್ಯಸ್ವನಂಗಳ, ಓಳಿ-ಗುಂಪು, ಒಂದೇಭಾರಿ - ಒಂದೇ ಕಾಲದಲ್ಲಿಯೇ, ಮುಸಿಕಿತು-ಕವಿದುಕೊಂಡಿತು. ಪುರಜನಕೆ-ನಗರ ವಾಸಿಗಳಿಗೆ, ರವಿಗೆ-ದಿನಮಣಿಗೆ, ದಿಕ್ಪಾಲಕರ್ಗೆ - ಇಂದ್ರನೇ ಮೊದಲಾದ ಎಂಟು ದಿಕ್ಕುಗಳ ನಾಯಕರಿಗೆ, ಬಾಳುವೆ-ಸದೃಶವಾದ, ಮಹಾತೇಜಂ - ಹೆಚ್ಚಾದ ಕಾಂತಿಯಿಂದ ಕೂಡಿದ, ಅತಿಶಯದ - ಅತ್ಯಧಿಕವಾದ, ಪದವಿಗಳು-ವೈಭವಂಗಳು, ಕಾಳಹುದು - ಕೆಟ್ಟು ಹೋಗುವುದು, ಮುಸುಳಿಪುದು - ಕಾಂತಿಹೀನವಾಗುವುದು. ಚಲನಂ-ಅಲ್ಲಾಡತಕ್ಕದ್ದು, ಅಹುದು-ಆಗುತ್ತದೆ. ಎಂದು-ಎಂಬದಾಗಿ, ಹೇರಾಳ-ಹೆಚ್ಚಾದ, ಭಯದಿಂದ-ದಿಗಲಿನಿಂದ, ಶಂಕೆಯಿಂದ-ತೊಂದರೆಯಾದೀತೆಂಬ ಅನುಮಾನದಿಂದ, ಅದ್ಭುತಂಗಳಿಂದ-ಅಚ್ಚರಿಗಳಿಂದ, ಧೃತಿ-ಎದೆಯು (ಧೈರ್ಯವು), ಗತಿ-ಗಮನವು, ಮತಿ-ಸ್ಥಿರಚಿತ್ತವು, ಅಳಿದವು-ಹೋದವು ॥

ಅ॥ ವಿ॥ ಘೋಳಿಡುವ (ಕ್ರಿ. ಸ.) ಅಳಿದವು-'ಅಳಿ' ಎಂಬುದರ ಭೂತಕಾಲ. ಅಳಿ-ಭೃಂಗ (ನಾಮ) ॥ ೨೭ ॥

ಟೀ॥ ಮೇರೆತಪ್ಪಿದ-ದಡವನ್ನತಿಕ್ರಮಿಸಿದ, ಮಹಾರ್ಣವದಂತೆ - ದೊಡ್ಡ ಕಡಲಿನಹಾಗೆ, ಭುವನ - ಪ್ರಪಂಚಗಳನ್ನೆಲ್ಲಾ, ಸಂಹಾರ-ಹಾಳುಮಾಡುವ, ಕಾಲಮೇಘ-ಪ್ರಳಯದಿನದ ಮುಗಿಲ್ಗಳ, ಚಯದಂತೆ-ಗುಂಪಿನಹಾಗೆ, ಭರದಿಂ-ಜಾಗ್ರತೆಯಾಗಿ, ಪ್ರವೀರನಂ-ಪ್ರವೀರನನ್ನು, ಅರ್ಜುನನ-ಪಾರ್ಥನ, ಮುಂಚೂಣಿಯ-ಎದುರಿಗೆ ಬರುವ, ಚತುರ್ಬಲಂ-ನಾಲ್ಕು ತೆರನಾದ ಪಡೆಯು, ದೆಸದೆಸೆಯೊಳು-ಎಂಟು ದಿಕ್ಕುಗಳಲ್ಲಿಯೂ, ಮುಸುಕಿತು-ಆವರಿಸಿಕೊಂಡಿತು, ಅವನು-ಆ ಪ್ರವೀರನು, ಅತಿಸತ್ವದಿಂದ-ಬಹು ಸಾಮರ್ಥ್ಯದಿಂದ, (ಸತ್ವಗುಣವನ್ನತಿಕ್ರಮಿಸುವದರಿಂದ) ಸಂಸಾರ-ಸಂಸಾರಚಕ್ರದ, ಪ್ರಲಾಪ-ಕ್ರೂರನುಡಿಗಳ, (ರಜೋಗುಣ ತಮೋಗುಣ ವಿಶಿಷ್ಟವಾದ ವ್ಯಸನದ) ಮಾಲಾ-ತಂಡಗಳಿಂದ, ಸಾಲುಗಳೊಂದಿಗೆ, ಕುಳಂ-ಸ್ಥಾನವಾದ, ಆಕುಲಮನು-ಮನಸ್ಸಿನ ದುಃಖವನ್ನು, ಅಧ್ಯಾತ್ಮಸಾರದಿಂ-ಪರಮಾತ್ಮನಲ್ಲಿಟ್ಟಿರುವ ಆಸ್ತಿಕ್ಯ ಬುದ್ಧಿಯಿಂದ, ತಡೆವ-ಸಂಸಾರ ಸಂಬಂಧದ ವ್ಯಸನಗಳನ್ನು ನೀಗುವ, ಯೋಗೀಶ್ವರನ-ಪರಮರ್ಷಿಯ, ಚಿತ್ತದಂತೆ-ಮನದಹಾಗೆ, ಎಚ್ಚರಿಕೆ-ವಿವೇಕಸಂಬಂಧವಾದ ಅರಿವನ್ನು, ಧಾತುಗೆಡದೆ-ಕಳೆದು ಬಿಡದೆ, ಸ್ಮೃತಿತಪ್ಪದೆ, ತೇರ್ಸೈಸದಿರ್ದನು-ವೈರಿಗಳ ರಥಗಳು ಮುಂದೆ ಬರಲು ಅವಕಾಶನನ್ನು ಕೊಡಲಿಲ್ಲ. (ಯೋಗಿಯಾದರೊ); ತೇರ್ಸೈಸದೆ-ಇಷ್ಟಾರ್ಥಗಳಿಗಾಗಿ ಆಶೆಪಡದೆ, ಇರ್ದನು-ಇದ್ದವನಾದನು ॥

ಅ॥ ವಿ॥ ಮೇರೆಯಂತಪ್ಪಿದ (ಕ್ರಿ. ಸ.). ಮಹಾರ್ಣವ-(ವಿ. ಪೂ ) ಯೋಗೀಶ್ವರ-ಯೋಗಿಗಳ ಈಶ್ವರ (ಷ. ತ.) ಧಾತುವಂ ಕೆಡದೆ (ಕ್ರಿ. ಸ,) ತೇರ್ಸೈಸದಿರ್ದನು-ತೇರ್ಸೈಸು ಎಂಬುದರ ಭೂತಕಾಲವು, ಸಕರ್ಮಕ ಕ್ರಿಯಾಪದ ॥೨೮॥

ಟೀ॥ ಮೇಗೆ-ಮೇಲ್ಗಡೆಯಲ್ಲಿ, ಮುಸುಕಿದ-ಕವಿದುಕೊಂಡಿರುವ, ಚೂಣಿಯು-ಸೈನ್ಯದ ಮುಂದುಗಡೆಯ, ಅನಿತು-ಅಷ್ಟು, ಚಾತುರ್ಬಲವನು, ನಾಲ್ಕುತೆರನಾದ ದಳವನ್ನು, ಆಗಳೆ-ಕೂಡಲೆ, ಚಾರಿ-ರಣರಂಗದಲ್ಲಿ ಸಂಚರಿಸುವ, ಓರ್ವನೆ-ಪ್ರವೀರನೆಂಬೊಬ್ಬನೆ, ವರಿವರಿದು-ಖಂಡಿಸಿ ಖಂಡಿಸಿ, ಬಾಣಪ್ರಯೋಗಂಗಳಿಂ-ಬಾಣಗಳನ್ನು ಬಿಡುವುದರಿಂದ, ಕೊಲ್ವುದಂ-

---

ರಭಸದಿಂದುಂಟಾದ ಧೂಳೂ, ಭೋರ್ಗರೆವ ವಾದ್ಯಧ್ವನಿಗಳೂ, ಭಟರ ಸಿಂಹನಾದವೂ ಸಹ ಏಕೀಭವಿಸಿ ತಮ್ಮ ಅಧಿಕವಾದ ಪ್ರಕಾಶದಿಂದ ಭೂಮಿ, ಸೂರ್ಯ, ಆಕಾಶಗಳನ್ನೂ ಕೂಡ ಅಲೆಗೆಳೆಯುತ್ತ ಶತ್ರುಗಳ ಧೈರ್ಯ, ಗಮನ, ವಿವೇಕಗಳನ್ನೆಲ್ಲಾ ಕುಗ್ಗಿಸಿ ॥೨೭॥ ದಡವನ್ನು ಮೀರಿಬರುವ ಸಮುದ್ರದಹಾಗೂ, ಪ್ರಳಯಕಾಲದ ಮೇಘಮಂಡಲದ ತೆರನಾಗಿಯೂ ಕಾಣುತ್ತ, ಪ್ರವೀರನನ್ನು ದಿಕ್ಕು ದಿಕ್ಕುಗಳಲ್ಲಿಯೂ ಎಡೆಬಿಡದೆ ಮುತ್ತಿಕೊಂಡರು. ಸಂಸಾರ ಸಂಬಂಧವಾದ ಜನನ ಮರಣಹೇತುವಾದ ಅರಿಷಡ್ವರ್ಗಗಳಿಂ ಕೂಡಿದ ದುಃಖ ಪರಂಪರೆಗಳನ್ನು ಜೈಸಿದ ಜಿತೇಂದ್ರಿಯನಾದ ಯೋಗಿಯು ಪುನಃ ತನ್ನ ಮನದಲ್ಲಿ ಕಾಮಕ್ರೋಧಾದಿಗಳುಂಟಾಗಲು ಅವಕಾಶವನ್ನು ಕೊಡದೆ ಹೇಗೆ ಸ್ಥಿರಚಿತ್ತನಾಗಿ ನಿಲ್ಲುವನೋ ಅದೇರೀತಿಯಾಗಿ ಪ್ರವೀರನೂ ಕೂಡ ಮುಂದೆ ಮುಂದೆ ನುಗ್ಗಿ ಬರುತ್ತಿರುವ ಸೇನಾಸಮೂಹವನ್ನು ಮುಂದರಿಯದಂತೆ ತಡೆಯುತ್ತ ನಿಶ್ಚಲಚಿತ್ತನಾಗಿ ನಿಂತಿದ್ದನು ॥ ೨೮ ॥ ಹೀಗಿದ್ದರೂಕೂಡ ಅರ್ಜುನನ ಸೈನ್ಯವು ಮೇಲ್ಪರಿದು ಪ್ರವೀರನನ್ನು ಹಿಂಸೆ ಮಾಡತೊಡಗಲು ಪ್ರವೀರನು

ಸಾತ್ಯಕಿವೃಷಧ್ವಜಸು | ವೇಗಾನುಸಾಲ್ವಕೃತವರ್ಮಾದಿಪಟುಭಟ | ರ್ತಾಗಿದರ್ಕಲ್ಪಮೇಘಂಗಳಂತಡೆವಿಟ್ಟಮಳೆಯೆನಲ್ಕಣೆಗರೆವುತ ||೨೯|| ಆಪ್ರವೀರಂಬಳಿಕನಿಬರೊಡನೈದೆನಾ | ನಾಪ್ರಕಾರದಸಮರದೊಳ್ಕಾದಲಿತ್ತ ಸೇ | ನಾಪ್ರತತಿಸಹಿತನೀಲಧ್ವಜಂನಗರಮಂಪೊರಮಟ್ಟನೇನೇಳ್ವೆನು || ಈಪ್ರಭಾಕರಕಿರಣವೀವಾಯುಸಂಚರಣ | ಮೀಪ್ರವಾಹಿಪನದಿಗಳೀಗಗನಮೀಧರೆಯೀ | ಮಹಾಪ್ರಳಯಕಡಗುವಂತಡಗಿಭುವನತ್ರಯಂಬರಿಧೂಳಿಮಯವಾಗಲು ||೩೦|| ಮೊಗಸಿದರ್ಪರಬಲವನಾಗಳ್ಪ್ರವೀರನಂ | ತೆಗೆಸಿದರ್ಪಿನ್ನೆಲೆಗೆರಿಪುಸೈನ್ಯದಳವಿಯಂ | ತೆಗೆಸಿದರ್ತಮತಮಗೆಕೈಕೊಂಡುವಾರಣವರೂಥವರವಾಜಿಗಳನು || ಪೊಗಿಸಿದರ್ವೈರಿಮೋಹರದೊಳಗೆಸಾಹಸಂ | ಮಿಗಿಸಿದರ್ಪೊಯಿದಾಡಿತನಿವೀರರಸದಿಂದ | ಸೊಗಸಿದರ್ಧುರಧೀರನೀಲಧ್ವಜನಮನೆಯ

---

ಕೊಂದು ಹಾಕುವುದನ್ನು, ಕಂಡು–ಈಕ್ಷಿಸಿ, ಬಿಲ್ಗೊಂಡು–ಶರಾಸನವಂ ಕೈಕೊಂಡು, ಕೋಪದಿಂ–ಸಿಟ್ಟಿನಿಂದ, ಪ್ರದ್ಯುಮ್ನ–ಪ್ರದ್ಯುಮ್ನನೆಂಬುವನು, ಸಾತ್ಯಕಿ-ಸಾತ್ಯಕಿಯು, ವೃಷಧ್ವಜ–ಕರ್ಣತನಯನು, ಸುವೇಗ–ಸುವೇಗನೆಂಬಾತನು, ಅನುಸಾಲ್ವ–ಸಾಲ್ವಾನುಜನು, ಕೃತವರ್ಮ-ಕೃತವರ್ಮನೆಂಬಾತನು, ಆದಿ–ಇವರೇ ಮೊದಲಾದ, ಪಟುಭಟರು–ಶೂರಾಗ್ರೇಸರರು, ಜೇಗದಿಂ-ಜಾಗ್ರತೆಯಿಂದ, ಕಲ್ಪಮೇಘಂಗಳಂತೆ–ಪ್ರಳಯಕಾಲದ ಮುಗಿಲ್ಗಳ ಹಾಗೆ, ತಡೆವಿಟ್ಟ–ಮಳೆಸುರಿಯದಿರುವ, ಮಳೆಯೆನಲ್–ಮಳೆಯೆಂಬಂತೆ, ಕಣೆಗರೆವುತ–ಶರಗಳಿಂದ ತುಂಬಿಸುತ್ತ, ತಾಗಿದರು–ರಣಕ್ಕೆ ಎದುರಾದರು.

ಅ|| ವಿ|| ಬಿಲ್ಗೊಂಡು–ಕಣೆಗರೆವುತ, ಈ ಎರಡೂ, ಕ್ರಿ. ಸ. ಗಳು. ಪಟುಭಟರು–(ವಿ. ಪೂ). ||೨೯||

ಟೀ|| ಬಳಿಕ-ತರುವಾಯ, ಆ ಪ್ರವೀರನು–ಆ ಪ್ರವೀರನೆಂಬಾತನು, ಒಡನೆ–ಜೊತೆಯಲ್ಲಿ, ಐದೆ–ರಣಕ್ಕಾಗಿ ಬರಲು, ನಾನಾ ಪ್ರಕಾರದ – ತಂಡೋಪತಂಡವಾದ, ಸಮರದೋಳ್-ಕಾಳಗದಲ್ಲಿ, ಕಾದಲು–ಹೋರಾಡಲು, ಇತ್ತ–ಈ ಪಾರ್ಶ್ವದಲ್ಲಿ, ಸೇನಾಪ್ರತತಿಸಹಿತ–ಸೇನಾಸಮುದಾಯದೊಂದಿಗೆ, ನೀಲಧ್ವಜಂ–ನೀಲಧ್ವಜನೆಂಬರಸು, ನಗರಮಂ-ಪಟ್ಟಣವನ್ನು ಬಿಟ್ಟು, ಪೊರಮಟ್ಟನು-ಹೊರಟನು, ಏನೇಳ್ವೆನು-ಏನೆಂದು ನುಡಿಯಲಿ, ಈ ಪ್ರಭಾಕಿರಣ–ಈ ಸೂರ್ಯನ ಕಳೆಯು, ಈ ವಾಯು ಸಂಚರಣಂ–ಈ ಗಾಳಿಯ ಸಂಚಾರವು, ಈ ಪ್ರವಾಹಿಪ ನದಿಗಳು–ಹರಿಯತಕ್ಕ ಈ ನದಿಗಳು, ಈ ಗಗನಂ–ಈ ಅಂತರಿಕ್ಷವು, ಈ ಧರೆ–ಈ ಪೊಡವಿಯು, ಮಹಾ ಪ್ರಳಯಕೆ-ಪ್ರಪಂಚದ ವಿನಾಶಕಾಲಕ್ಕೆ, ಅಡಗುವಂತೆ–ಕುಗ್ಗಿ ಹೋಗುವಂತೆ, ಅಡಗಿ–ಔತುಕೊಂಡು, ಭುವನತ್ರಯಂ-ಸ್ವರ್ಗ, ಮರ್ತ್ಯ, ಪಾತಾಳಂಗಳು. ಬರಿ ಧೂಳಿಮಯಂ–ಹೆಚ್ಚಾದ ಧೂಳಿನಿಂದ ಕೂಡಿದ್ದು, ಆಗಲು–ಆಗಲಾಗಿ, ಪೊರಮಟ್ಟನು–ಹೊರಟವನಾದನು.

ಅ|| ವಿ|| ಸೇನಾಪ್ರತತಿ–ಸೇನೆಯ ಪ್ರತತಿ (ಷ. ತ). ಪೊರಮಟ್ಟನು ಪೊರಮಡು–ಎಂಬ ಧಾತುವಿನ ಭೂತಕಾಲ. ಭುವನತ್ರಯಂ-ಭುವನಗಳ ತ್ರಯಂ (ಷ. ತ). ||೩೦||

ಟೀ|| ಧುರಧೀರ–ಯೋಧಾಗ್ರೇಸರರಾದ, ನೀಲಧ್ವಜನ–ನೀಲಧ್ವಜನೆಂಬ ರಾಯನ, ಮನೆಯ ಅರಮನೆಯ, ಚತುರ-ಚಮತ್ಕಾರವುಳ್ಳ, ಚತುರಂಗದವರು–ನಾಲ್ಕು ತೆರನಾದ ಸೈನ್ಯದವರು, ಪರಬಲವನು–ವೈರಿಗಳ ಬಲವನ್ನು, ಆಗಳ್-ಆ ಕಾಲದಲ್ಲಿ, ಮೊಗಸಿದರ್–ಚದುರಿಸಿ ಬಿಟ್ಟರು, ಪ್ರವೀರನಂ– ಪ್ರವೀರನೆಂಬಾತನನ್ನು, ಪಿನ್ನೆಲೆಗೆ–ಅರಿಬಲದಿಂದ ಹೊರಕ್ಕೆ, ತೆಗಸಿದರ್-ಕರೆದುಕೊಂಡರು, ರಿಪು ಸೈನ್ಯದ–ಪರಬಲದ, ಅಳವಿಯಂ-ಸಾಮರ್ಥ್ಯವನ್ನು, ತೆಗಿಸಿದರು–ಕಡಮೆಯಾಗುವಂತೆ ಮಾಡಿದರು, ತಮ ತಮಗೆ-ತಮ್ಮ ತಮ್ಮಿಷ್ಟಕ್ಕೆ, ವಾರಣ–ಹಸ್ತಿಯು, ವರೂಥ–ರಥವು, ವರ–ಮೇಲಾದ, ವಾಜಿಗಳನು–ಅಶ್ವಂಗೆ

---

ಅತಿಯಾದ ಕೋಪದಿಂದ ಬಿಲ್ಲಿಗೆ ಅಂಬನ್ನೇರಿಸಿ ಶತ್ರುಸೈನ್ಯದಮೇಲೆ ಬಿಡುತ್ತ ತಾನೊಬ್ಬನೆ ಅದನ್ನೆಲ್ಲಾ ನುಚ್ಚು ನುಚ್ಚು ಮಾಡಿ ಬಿಡುತ್ತಲಿರುವುದನ್ನು ಪ್ರದ್ಯುಮ್ನ, ಸಾತ್ಯಕಿ, ವೃಷಕೇತು, ಸುವೇಗ, ಅನುಸಾಲ್ವ, ಕೃತವರ್ಮ ಮೊದಲಾದ ವೀರಾಗ್ರಣಿಗಳು ಕಂಡು, ಕೋಪಾವಿಷ್ಟರಾಗಿ ಎಲ್ಲರೂ ಒಟ್ಟಿಗೆ ಸೇರಿ ಪ್ರವೀರನ ಮೇಲೆ ಶರವರ್ಷಗಳಂ ಕರೆದು ಹಿಂಸೆಮಾಡುತ್ತಿರಲಾಗಿ, ||೨೯|| ಅವನು ಸ್ವಲ್ಪವೂ ಧೈರ್ಯಗುಂದದೆ ಅರ್ಜುನನ ಕಡೆಯ ಪಟುಭಟರೊಂದಿಗೆ ಕಾದುತ್ತಲಿದ್ದನು. ಅಷ್ಟು ಹೊತ್ತಿಗೆ, ಸೂರ್ಯ ಕಿರಣಗಳೂ, ವಾಯು ಮಂಡಲವೂ, ಪ್ರಪಂಚದ ಅಶೇಷವಾದ ನದೀ ನದಗಳೂ, ಭೂಮಿಯೂ, ಆಕಾಶವೂ ಸ್ವರ್ಗ, ಮರ್ತ್ಯ, ಪಾತಾಳಗಳೆಂಬ ಮೂರು ಲೋಕಗಳೂ ಸಹ ಪ್ರಳಯಕಾಲದಲ್ಲಿ ಒಟ್ಟಾಗಿ ಸೇರಿ ಹೋಗುವಂತೆ ಮಾಹಿಷ್ಮತೀ ನಗರದಿಂದ ಬರುವ ನೀಲಧ್ವಜನ ಚತುರಂಗಬಲದ ಆರ್ಭಟದಿಂದುಂಟಾದ ಧೂಳು ಭೂಮ್ಯಾಕಾಶಗಳನ್ನು ವ್ಯಾಪಿಸಿ ಏಕಾಕಾರವಾಗಿರುವಂತೆ ಮಾಡುತ್ತ ಶೀಘ್ರವಾಗಿ ಬಂದು ಯುದ್ಧಾಸಕ್ತನಾಗಿರುವ ಪ್ರವೀರನ ಸೈನ್ಯಕ್ಕೆ ನೆರವಾಗಿ || ೩೦ || ಕೆಲವರನ್ನು ತಲೆಕೆಳಗಾಗಿ ಬೀಳುವಂತೆ ಛಿದ್ರಛಿದ್ರವಾಗಿ ಕಡಿದು ಹಾಕುತ್ತ, ಶತ್ರುಗಳ ಮಧ್ಯೆ ಸಿಕ್ಕಿದ್ದ ಪ್ರವೀರನನ್ನು ಬಿಡಿಸಿಕೊಂಡು, ಅರಿಬಲದ ಮೇಲೆ ತಮ್ಮ ಸಾಹಸವನ್ನು ತೋರಿ, ಆನೆಗಳು, ಕುದುರೆಗಳು, ರಥಗಳು ಮೊದಲಾದುವನ್ನೆಲ್ಲಾ

ಚತುರಚತುರಂಗದವರು ||೩೦|| ಮುಗ್ಗಿದರ್ಮುಸಗಿದಂಬುಧಿಯ ತೆರೆಯಂತೆಸಲೆ | ಮುಗ್ಗಿದರ್ಮುಗಿಲಮೊಗ್ಗರದಂತೆಭೋಂಕರಿಸು | ತೊಗ್ಗಿದರ್ಕವಿದಜೇನ್ನೊಣದಂತೆಪೊಯಿದಾಡಿರಿಪುಸೈನ್ಯಕಾನನವನು || ನೆಗ್ಗಿದರ್ನೆಲೆಗೆಡಿಸಿಬಿರುಗಾಳಿಯಂತ್ಯೈದೆ | ನುಗ್ಗಿದರ್ನುಚ್ಚುನುಸಿಯಾಗೆಬರಸಿಡಿಲಂತೆ | ಹಿಗ್ಗಿದರ್ವೆಚ್ಚಿವೀರಾವೇಶದಿಂದಪಟುಭಟರಾಗಳಾಹವದೊಳು ||೩೧|| ಪೊಯ್ದಾಡಿಮಡಿದಕಲಿಗಳಶರೀರಂಗಳಂ | ಪೊಯ್ದೆಳೆದುಪರಿದಿಂಬಮರುಳ್ಗಳಂಮೇಣವರ | ನೊಯ್ದುದಲ್ಲಿದಿವ್ಯತನುಗಳೊಳಪ್ಪಿಚುಂಬಿಸುವಸುರಸತಿಯರಂಕಾಣುತ || ಮೈದೆಗದಪರಿವೀರರಂದೋರ್ವರೋರ್ವರುಂ | ಬೈದುಮೂದಲಿಸಿರಣರಂಗದೊಳ್ಪಟುಭಟ | ಕೈದೋರುತಿರ್ದರೊಡವೆರಸಿಕೇಶಾಕೇಶಿಯುದ್ಧದಿಂದಳವಳಿಯದೆ ||೩೨|| ಕೃತವರ್ಮನುರವಣೆಯನನುಸಾಲ್ವನುಬ್ಬಟೆಯ | ನತಿಬಲಸುವೇಗನಪರಾಕ್ರಮವನಾದಿತ್ಯ | ಸುತಸುತನಶೌರ್ಯಮಂಸಾತ್ಯಕಿಯವೀರ್ಯಮಂವರಯೌವನಾಶ್ವನೃಪನ || ಅತುಳವಿಕ್ರಮವ

---

ಳನ್ನು, ಕೈಕೊಂಡು– ತೆಗೆದುಕೊಂಡು, (ಕುದುರೆಗಳಮೇಲೆ ಕೂತು) ವೈರಿ– ಹಗೆಗಳ, ಮೋಹರದೊಳಗೆ- ಸಮೂಹದಲ್ಲಿ, ಹೊಗಿಸಿದರ್-ಹೋಗುವಂತೆ ಮಾಡಿದರು (ನುಗ್ಗಿಸಿ ಬಿಟ್ಟರು), ಪೊಯಿದಾಡಿ–ಹೊಡೆದಾಡಿ, ಸಾಹಸಂ–ಸಾಮರ್ಥ್ಯವನ್ನು, ಮಿಗಿಸಿದರು- ಉಳಿಸಿಕೊಂಡರು, ತನಿ–ಹೊಸದಾದ, ವೀರರಸದಿಂದ– ಶೌರ್ಯರಸದಿಂದ, ಸೊಗಸಿದರು- ಅಲಂಕಾರಯುಕ್ತರಾದರು. ||೩೦||

ಟೀ|| ಮುಸಗಿದ–ಉಕ್ಕಿದ ಅಥವಾ ಮೇಲಕ್ಕೆದ್ದ, ಅಂಬುಧಿಯ-ಕಡಲಿನ, ತೆರೆಯಂತೆ-ಅಲೆಯ ಹಾಗೆ, ಮುಗ್ಗಿದರು-ಕುಗ್ಗಿಹೋದರು, ಮುಗಿಲ–ಮೋಡಗಳ, ಮೊಗ್ಗರದಂತೆ– ಗುಂಪಿನಹಾಗೆ, ಸಲೆ–ಚೆನ್ನಾಗಿ, ಮುಗ್ಗಿದರು– ಕೂಗಿದವರಾದರು, ಕವಿದ–ಮುತ್ತಿಕೊಂಡ, ಜೇನ್ನೊಣದಂತೆ–ಜೇನು ಹುಳಗಳ ಹಾಗೆ, ಭೋಂಕರಿಸುತ – ಭೋರ್ಗರೆಯುತ್ತ, ಒಗ್ಗಿದರ್-ಕೂಡಿದರು, ಪೊಯಿದಾಡಿ–ಹೋರಾಡಿ, ರಿಪುಸೈನ್ಯ–ವೈರಿಬಲವೆನ್ನತಕ್ಕ, ಕಾನನವನು- ಅಡವಿಯನ್ನು, ನೆಲೆಗೆಡಿಸಿ–ಸ್ಥಾನಪಲ್ಲಟವಾಗುವಂತೆ ಮಾಡಿ, ಬಿರುಗಾಳಿಯಂತೆ-ಬಿರುಸಾದ ಗಾಳಿಯ ಹಾಗೆ, ನೆಗ್ಗಿದರ್-ಹೊರಳಿ ಹೊರಳಿ ತಗ್ಗುವಂತೆ ಮಾಡಿಬಿಟ್ಟರು, ಐದೆ-ಚೆನ್ನಾಗಿ, ಬರಸಿಡಿಲಂತೆ–ಕ್ರೂರವಾದ ಸಿಡಲಿನ ಹಾಗೆ, ನುಚ್ಚುನುರಿಯಾಗಿ - ಸಣ್ಣ ಸಣ್ಣ ಚೂರಾಗಿ, ನುಗ್ಗಿದರ್-ಒಳಕ್ಕೆ ಪ್ರವೇಶ ಮಾಡಿದರು, ವೀರಾವೇಶದಿಂದ–ಪರಾಕ್ರಮದ ಹೆಚ್ಚಿಗೆಯಿಂದ, ವೆಚ್ಚಿ–ಕೊಬ್ಬಿ, ಆ ಹವದೊಳು–ರಣದಲ್ಲಿ, ಪಟುಭಟರು–ವೀರಾಗ್ರಣಿಗಳು; ಹಿಗ್ಗಿದರ್–ಸಂತೋಷದಿಂದ ಕೂಡಿದರು. ||೩೧||

ಟೀ|| ಪೊಯ್ದಾಡಿ– ಹೋರಾಡಿ, ಮಡಿದ– ಮರಣವನ್ನೈದಿದ, ಕಲಿಗಳ– ವೀರರ, ಶರೀರಂಗಳಂ– ದೇಹಗಳನ್ನು, ಪೊಯ್ದು–ಹೊಡೆದು, ಎಳೆದು–ಎಳೆದುಕೊಂಡು, ಪರಿದಿಂಬ– ಶರೀರವನ್ನೆಲ್ಲಾ ಕಚ್ಚತಕ್ಕ, ಮರುಳ್ಗಳಂ–ಪಿಶಾಚವರ್ಗವನ್ನು, ಮೇಣ್–ಅಲ್ಲದೆ, ಅವರನು–ಅಂತಹ ಜನರನ್ನು, ಒಯ್ದು–ಸೆಳೆದುಕೊಂಡು ಹೋಗಿ, ದಿವ್ಯತನುಗಳೊಳು– ದೇವತಾ ಸಂಬಂಧವಾದ ಅವಯುವಗಳಲ್ಲಿ, ಅಪ್ಪಿ–ತಬ್ಬಿಕೊಂಡು, ಚುಂಬಿಸುವ–ಮುದ್ದಾಡುವ, ಸುರಸತಿಯರಂ–ದೇವಕನ್ನಿಕೆಯರನ್ನು, ಕಾಣುತ–ಕಣ್ಣಿಸುತ್ತ, ವೀರರು–ಪರಾಕ್ರಮಿಗಳು, ಮೈತೆಗೆದಪರೋ–ಸಾವನ್ನು ಹೊಂದುವರೋ, ಎಂದು–ಎಂಬದಾಗಿ, ಓರ್ವೋರ್ವರಂ–ಒಬ್ಬೊಬ್ಬರನ್ನು, ಬೈದು–ನಿಂದಿಸಿ, ಮೂದಲಿಸಿ–ಹೀಯಾಳಿಸಿ, ರಣರಂಗದೊಳು– ಯುದ್ಧಭೂಮಿಯಲ್ಲಿ, ಪಟುಭಟರು–ಶೂರಾಗ್ರೇಸರರು, ಒಡವೆರಸಿ–ಸೇರಿ, ಕೇಶಾಕೇಶಿ ಯುದ್ಧದಿಂದ–ಒಬ್ಬರ ತಲೆಕೂದಲನ್ನೊಬ್ಬರು ಹಿಡಿದು ಮಾಡುವ ಜಗಳದಿಂದ, ಅಳವು–ಶಕ್ತಿಯನ್ನು, ಅಳಿಯದೆ–ಕಳೆದುಕೊಳ್ಳದೆ, ಕೈದೋರುತ–ಹಸ್ತಚಾತುರ್ಯವನ್ನು ತೋರ್ಪಡಿಸುತ್ತ, ಇರ್ದರು-ಇದ್ದವರಾದರು ||೩೨||

ಟೀ|| ಕೃತವರ್ಮನ – ಕೃತವರ್ಮನೆಂಬ ಯಾದವ ದಳಪತಿಯ, ಉರವಣೆಯ–ತೊಂದರೆಯನ್ನು, ಅನುಸಾಲ್ವನ–ಸಾಲ್ವಾನುಜನ, ಉಬ್ಬಟೆಯ–ಸಿಂಹನಾದವನ್ನು, ಅತಿಬಲಸುವೇಗನ–ಅತಿಬಲ ಸುವೇಗ ಎಂಬುವರ, ಪರಾಕ್ರಮವನು–ಶೌರ್ಯವನ್ನು, ಆದಿತ್ಯಸುತಸುತನ–ವೃಷಧ್ವಜನ, ಶೌರ್ಯಮಂ–ಸಾಮರ್ಥ್ಯವನ್ನೂ, ಸಾತ್ಯಕಿಯ–ಸಾತ್ಯಕಿ ಎನ್ನತಕ್ಕವನ, ವೀರ್ಯಮಂ–ಬಲ

---

ಪರಬಲದ ಕಡೆಗೆ ನುಗ್ಗಿಸಿ, ಅಸಾಧಾರಣವಾದ ಸಾಹಸವಂ ತೋರುತ್ತಲಿದ್ದರು ||೩೦|| ಇದೂ ಅಲ್ಲದೆ ಸಮುದ್ರದ ದೊಡ್ಡ ದೊಡ್ಡ ತರಂಗಳಂತೆ ತಗ್ಗುತ್ತಲೂ, ವರ್ಷಾಕಾಲದ ಮೇಘಮಂಡಲದಂತೆಯೂ, ಜೇನು ಹುಳಗಳ ಗುಂಪಿನಂತೆಯೂ ಭೋರ್ಗರೆಯುತ್ತಲೂ, ಶತ್ರುಸೈನ್ಯವೆಂಬ ಅರಣ್ಯವನ್ನು ಧ್ವಂಸಮಾಡುತ್ತಲೂ, ದೊಡ್ಡ ದೊಡ್ಡ ಸಿಡಿಲ್ಗಳಂತೆ ಶತ್ರುಸೈನ್ಯವಂ ಪುಡಿಪುಡಿಮಾಡುತ್ತಲೂ, ಅತಿಶಯವಾದ ವೀರಾವೇಶವಂ ತಾಳಿ, ||೩೧|| ಹೊಡೆದಾಡುತ್ತಲೂ, ಒಬ್ಬರನ್ನೊಬ್ಬರು ಧಿಕ್ಕರಿಸುತ್ತಲೂ, ಕೇಶಾಕೇಶಿಯಿಂದಲೂ, ಮುಷ್ಟಾಮುಷ್ಟಿಯಿಂದಲೂ ಯುದ್ಧವಂ ಮಾಡುತ್ತ ತಮ್ಮ ಕೈ ಚಮತ್ಕಾರವನ್ನು ತೋರುತ್ತಲಿದ್ದರು. ||೩೨|| ಇವರ ಮಹಾಸಾಹಸದ ಮುಂದೆ ಅರ್ಜುನನ ಕಡೆಯ ಪಟುಭಟರಾದ ಕೃತವರ್ಮ, ಅನುಸಾಲ್ವ,

ವನನಿರುದ್ಧನಾಟೋಪಮಂ | ಪ್ರತಿಭಟಭಯಂಕರಪ್ರದ್ಯುಮ್ನನಧಟನುಂ | ಗತಿಗೆಡಿಸಿತಾಗನೀಲಧ್ವಜನಪರಿವಾರಮೇವೇಳ್ವೆ ನಾಹವದೊಳು ||೩೪|| ಅರ್ಜುನಂಕಂಡನಹಿತಪ್ರಬಲಬಲಮನುರೆ | ನಿರ್ಜರರ್ಗರಿದೆನೆಕಠೋರಮಾಗಲ್ತನ್ನ | ವರ್ಜಯಿಸಲರಿಯರೇನೆಂದುಕಡುಕೋಪದಿಂಚಾಪಮುಂಪಿಡಿದುಮಿಡಿದು || ಗರ್ಜನೆಯೊಳೈದೆಕಡೆಗಾಲದೊಳ್ಮಳೆಗರೆವ | ಪರ್ಜನ್ಯನಂತಾರ್ದೆ ಸುತನಡೆಯಲಿದಿರಾಂಪ | ವರ್ಜಗದೊಳುಂಟೆಮುರಿದುದುಪುರಕೆನೀಲಧ್ವಜನಸೇನೆಕೆಟ್ಟುಕೆದರಿ || ೩೫ || ಮುರಿದುಬಹಸೇನೆಯುಂ ಕಂಡಾಪ್ರವೀರನುಂ | ಜರಿದುಕೋದಂಡಮುಂಕೊಂಡುಕೌಂತೇಯನಂ | ತರುಬಲಡಹಾಯ್ದುವೃಷಕೇತುಬರಲಾತನೊಳ್ಸರಿಯಾಗಿಕಾದುತಿರಲು || ಪರೆಗಿಕ್ಕಿಕರ್ಣಿಯಂಮುಂದೆನಿಂದನನುಸಾಲ್ವ | ನುರುಬಿದೊಡವಂನೋಯೆನೀಲಧ್ವಜಂತಾನೆ | ತುರುಗಿ

---

ವನ್ನು, ವರ–ಶ್ರೇಷ್ಠನಾದ, ಯೌವನಾಶ್ವನ–ಯೌವನಾಶ್ವನೆಂಬಾತನ, ಅತುಳ–ಅಸಮಾನವಾದ, ವಿಕ್ರಮವನು – ಸಾಮರ್ಥ್ಯವನ್ನು, ಅನಿರುದ್ಧನ–ಅನಿರುದ್ಧನೆಂಬುವನ, ಆಟೋಪಮುಂ–ಅಧಟನ್ನು, ಪ್ರತಿಭಟ–ಎದುರಾಳುಗಳಾದವರಿಗೆ, ಭಯಂಕರ–ಭಯವನ್ನೆಸಗುವ, ಪ್ರದ್ಯುಮ್ನನ–ಪ್ರದ್ಯುಮ್ನನೆಂಬಾತನ, ಅಧಟನು–ಶೌರ್ಯವನ್ನು, ನೀಲಧ್ವಜನ–ನೀಲಧ್ವಜನೆಂಬ ಅರಸನ, ಪರಿವಾರಂ– ಸೈನ್ಯವು, ಆಹವದೊಳು– ರಣದಲ್ಲಿ, ಗತಿಕೆಡಿಸಿತು– ಹಿಂದಕ್ಕೆ ಹೋಗುವಂತೆ ಮಾಡಿತು, ಏವೇಳ್ವೆನು–ಏನೆಂದು ನುಡಿಯಲಿ.

ಅ|| ವಿ|| ಆದಿತ್ಯ ಸುತ ಸುತನ=ಆದಿತ್ಯ–ಸೂರ್ಯನ, ಸುತ–ಮಗನು, ಕರ್ಣನು (ಷ. ತ.) ಆದಿತ್ಯ ಸುತನ ಸುತನು (ವೃಷಕೇತುವು ಷ. ತ.) ||೩೪||

ಟೀ|| ಅರ್ಜನಂ–ಫಲ್ಗುಣನು, ಅಹಿತ–ಹಗೆಗಳ, ಪ್ರಬಲ– ಹೆಚ್ಚಾದ, ಬಲಮನು-ದಂಡನ್ನು, ಕಂಡನು–ಈಕ್ಷಿಸಿದನು, ನಿರ್ಜರರ್ಗೆ–ಸುರರಿಗೆ, ಉರೆ- ಹೆಚ್ಚಾಗಿ, ಅರಿದು- ಅಸಾಧ್ಯವು, ಎನೆ– ಎಂಬತೆರನಾಗಿ, ಕಠೋರಂ- ಕರ್ಕಶವಾದದ್ದು, ಆಗಲ್–ಆಗಲಾಗಿ, ತನ್ನವರು–ತನ್ನ ಕಡೆಯವರು, ಜಯಿಸಲು–ಜಯವಂ ಪಡೆಯಲು, ಅರಿಯರು- ಗೋಚರಪಡಿಸಿಕೊಂಡಿಲ್ಲವು, ಏನೆಂದು–ಏನೆಂಬುದಾಗಿ, ಕಡುಗೋಪದಿಂ–ಬಹು ಕೋಪದಿಂದ, ಚಾಪಮುಂ–ಧನುಸ್ಸನ್ನು, ಪಿಡಿದು–ಧರಿಸಿ, ಮಿಡಿದು–ಹಾರಿ ಮೇಲಕ್ಕೆದ್ದು, ಗರ್ಜನೆಯೊಳು–ಆರ್ಭಟದಿಂದ, ಐದೆ–ಸಮೀಪಕ್ಕೆ ಬಂದು, ಕಡೆಗಾಲದೋಳ್–ಅಂತ್ಯಕಾಲದಲ್ಲಿ, ಮಳೆಗರೆವ–ಮಳೆಯನ್ನು ಸುರಿಸುವ, ಪರ್ಜನ್ಯನಂತೆ-ಮಳೆಗೆ ಅಧಿದೇವತೆಯ ಹಾಗೆ, ಆರ್ದು–ಸಿಂಹಗರ್ಜನೆಯಂ ಮಾಡಿ, ಎಸುತ–ಶರವರ್ಷವನ್ನುಂಟುಮಾಡುತ್ತ, ನಡೆಯಲು–ಹೊರಡಲಾಗಿ, ಇದಿರಾಂಪವರ್– ಎದುರಾಳುಗಳಾಗಿ ನಿಲ್ಲತಕ್ಕವರು, ಜಗದೊಳು–ಪ್ರಪಂಚದಲ್ಲಿ, ಉಂಟೆ-ಇರುವರೆ? ನೀಲಧ್ವಜನ–ನೀಲಧ್ವಜನೆಂಬರಾಯನ, ಸೇನೆ–ದಂಡು, ಕೆಟ್ಟು-ಏಟುಗಳಿಗೆ ಹೆದರಿ, ಪುರಕೆ–ಮಾಹಿಷ್ಮತೀ ನಗರಿಗೆ, ಕೆದರಿ–ದಿಕ್ಕಾಪಾಲಾಗಿ ಹೋಗಿ, ಮುರಿದುದು-ಭಂಗವನ್ನೈದಿತು.

ಅ|| ವಿ|| ಅಹಿತ ಪ್ರಬಲಬಲಮನು-ಹಿತರಲ್ಲದವರು ಅಹಿತರು (ನಞ್ತತ್ಪುರುಷ) ಪ್ರಬಲಮಾದ ಬಲಂ–ಪ್ರಬಲ ಬಲಂ (ವಿ. ಪೂ.) ಅಹಿತರ ಪ್ರಬಲ ಬಲಂ (ಷ.ತ.) ಜರಾ-ವೃದ್ಧಾಪ್ಯವನ್ನು ನ–ಉಂಟಾಗಿಲ್ಲದಿವರು, ನಿರ್ಜರರು (ಬ. ಸ.) ಕಡುಗೋಪ (ವಿ.ಪೂ.) ಮಳೆಯಂ ಕರೆವ–ಮಳೆಗೆರವ (ಕ್ರಿ. ಸ.) ಎಸುತ–ಇಸು ಧಾತುವಿನ ವರ್ತಮಾನ ಕೃದಂತ, ಕೆಟ್ಟು–ಕೆಡುಧಾತುವಿನ ಭೂತಕೃದಂತ. ||೩೫||

ಟೀ|| ಮುರಿದು ಬಹ–ಏಟುಗಳನ್ನು ತಿಂದು ಬರುತ್ತಿರುವ, ಸೇನೆಯಂ–ದಳವನ್ನು, ಪ್ರವೀರನುಂ–ಪ್ರವೀರನೆನ್ನತಕ್ಕವನು, ಕಂಡು–ಈಕ್ಷಿಸಿ, ಜರಿದು-ಹೀಯಾಳಿಸಿ, ಕೋದಂಡಮುಂ– ಧನುಸ್ಸನ್ನು, ಕೊಂಡು-ಹೊಂದಿ, ಕೌಂತೇಯನಂ–ಕುಂತಿಯ ಮಗನಾದ ಪಾರ್ಥನನ್ನು, ತರುಬಲು–ಹಿಂಜರಿಯುವಂತೆ, ಬರಲು–ಬರಲಾಗಿ, ವೃಷಕೇತು–ಕರ್ಣಸುತನು, ಅಡಹಾಯ್ದು–ಅಡ್ಡಗಿಸಿ, ಬರಲು–ಐತರಲು, ಆತನೋಳ್-ಆ ಕರ್ಣಸುತನೊಂದಿಗೆ, ಸರಿಯಾಗಿ–ಸಮಸಮನಾಗಿ, ಕಾದುತ–ಹೋರಾಡುತ್ತ, ಇರಲು–ಇರಲಾಗಿ, ಕರ್ಣಿಯಂ–ಕರ್ಣನಂದನನನ್ನು, ಪರೆಗಿಕ್ಕಿ – ಪಕ್ಕದಲ್ಲಿ ನಿಲ್ಲುವಂತೆ ಮಾಡಿ, ಮುಂದೆ-ಎದು

---

ಅತಿಬಲ, ಸುವೇಗ, ಸಾತ್ಯಕಿ, ಅನಿರುದ್ಧ, ಯೌವನಾಶ್ವಾದಿಗಳ ಪರಾಕ್ರಮವು ನಿಷ್ಫಲವಾಗಲು ||೩೪|| ಅರ್ಜುನನು ಇದನ್ನೆಲ್ಲಾ ನೋಡಿ, ನೀಲಧ್ವಜನ ಸೈನ್ಯವನ್ನು ಗೆಲ್ಲಲು ಇಂದ್ರಾದಿ ದೇವತೆಗಳಿಗೂ ಕೂಡ ಅಸಾಧ್ಯವಾಗಿರುವಾಗ ನಮ್ಮ ಸೈನ್ಯದವರು ಗೆಲ್ಲುವುದು ಎಂದರೇನು? ಎಂಬದಾಗಿ ತನ್ನ ಮನದಲ್ಲಿಯೇ ಚಿಂತಿಸುತ್ತಾ, ಅತ್ಯಂತ ಕೋಪಾವಿಷ್ಟನಾಗಿ ಕೈಯಲ್ಲಿ ಧನುಸ್ಸಂ ಪಿಡಿದು, ಮೇಲಕ್ಕೆ ಎಗರಿ ಕೆಳಗೆ ಧುಮುಕುತ್ತಲೂ, ಪ್ರಳಯಕಾಲದ ಗುಡುಗಿನಂತೆ ಧ್ವನಿ ಮಾಡುತ್ತಲೂ, ನೀಲಧ್ವಜನ ಸೈನ್ಯದ ಮೇಲೆ ಹೊರಟು ಚದರಿಸಿ ಬಿಟ್ಟನು || ೩೫ || ಹೀಗೆ ಚದರಿಹೋಗುತ್ತಿರುವ ಸೈನ್ಯವನ್ನು ಪ್ರವೀರನು ನೋಡಿ, ತನ್ನನ್ನು ತಾನೇ ತಿರಸ್ಕರಿಸಿಕೊಂಡು ಶರಾಸನವಂ ಕೈಕೊಂಡವನಾಗಿ ಅರ್ಜುನನನ್ನು ಹಿಮ್ಮೆಟ್ಟುವಂತೆ ಮಾಡಲು, ವೃಷ

ನನ್ನ ದಸಕಲಬಲಸಹಿತನೂಕಿದಂಫಲುಗುಣನಪಡೆಯಮೇಲೆ ||೩೬|| ವಾನರವರಧ್ವಜಂಮುಳಿದುನೀಲಧ್ವಜನ | ಸೇನೆಯಂತಡೆಗೆಡುವುತಾತನಂಮುಸುಕಿದನ | ನೂನಶರಜಾಲದಿಂಬಳಿಕವಂಕಂಗೆಟ್ಟುಪಾವಕಂಪೊರೆಯೊಳಿರಲು || ನೀನಳಿಯನಾಗಿರ್ದುಮೆನಗಿನಿತಪಾಯಮೇ | ಕೀನರನದೆಸೆಯಭಯಮುಂಬಿಡಿಸಬೇಕೆನೆಕೃ | ಶಾನುಕೇಳ್ದಾಗಸುಡತೊಡಗಿದಂತಾನೆಪೊಕ್ಕರ್ಜುನನಸೈನಿಕವನು || ೩೭ || ಛತ್ರಚಾಮರಹರಿಗೆಹಕ್ಕರಿಕೆಹಲ್ಲಣವಿ | ಚಿತ್ರದಪತಾಕೆಸೀಗುರಿಸಿಂಧಸೀಸಕತನುತ್ರರಂಜಿಕೆಪಾಶವಸ್ತ್ರವಾಹನವಾದ್ಯಕೈದುಬತ್ತಳಿಕೆಬಂಡಿ || ಪತ್ರಬಂಧುರಬಾಣಕೋದಂಡರಥರಥಾಂ | ಗತ್ರವೇಣುಕಯುಗಾಕ್ಷಂಗಳುರಿಗೊಳೆ

---

ರಿನಲ್ಲಿ, ಬಂದು-ಬಂದವನಾಗಿ, ಅನುಸಾಲ್ವನು-ಸಾಲ್ವಾನುಜನು, ಉರುಬಿದೊಡೆ-ಗರ್ಜನೆಯಂ ಮಾಡುತ್ತಿರಲಾಗಿ, ಅವಂ-ಆ ನೀಲಧ್ವಜನ ಸುತನಾದ ಪ್ರವೀರನು, ನೋಯೆ-ಪೆಟ್ಟುಗಳಿಂದ ಬಾಧೆಪಡಲು, ನೀಲಧ್ವಜಂ- ನೀಲಧ್ವಜನೆಂಬರಸು, ತಾನೆ-ತನ್ನಷ್ಟಕ್ಕೇ, ತುರುಗಿದ-ಒಟ್ಟಾಗಿ ಸೇರಿದ, ಅಗ್ಗದ-ಮುಖಂಡರಾದ, ಸಕಲ-ಎಲ್ಲಾ, ಬಲಸಹಿತ-ಸೇನಾಜನರಿಂದ, ಫಲುಗುಣನ-ಅರ್ಜುನನ, ಪಡೆಯಮೇಲೆ-ಸೈನ್ಯದಮೇಲೆ, ನೂಕಿದಂ-ನುಗ್ಗಿಸಿಬಿಟ್ಟನು ||೩೬||

ಟೀ|| ವಾನರಧ್ವಜಂ-ಪಾರ್ಥನು, ಮುಳಿದು- ಸಿಟ್ಟುಗೊಂಡು, ನೀಲಧ್ವಜನ- ನೀಲಧ್ವಜನೆಂಬ ಮಹೀಪಾಲನ, ಸೇನೆಯಂ-ಬಲವನ್ನು, ತಡೆಗೆಡುವುತ-ಹಿಂಜರಿಯುವಂತೆ ಮಾಡುತ್ತ, ಆತನಂ- ಆ ಮಾಹಿಷ್ಮತಿರಾಜನನ್ನು, ಅನೂನ-ಬಹುಹೆಚ್ಚಾದ, ಶರಜಾಲದಿಂ-ಕಣೆಗಳ ಸಮುದಾಯದಿಂದ, ಮುಸುಕಿದನು-ಮುತ್ತಿಕೊಂಡನು, ಬಳಿಕ-ತರುವಾಯ-ಅವಂ-ಆ ನೀಲಧ್ವಜನು, ಕಂಗೆಟ್ಟು-ಆಯಸಂಗೊಂಡು, ಪಾವಕಂ-ಹುತಾಶನನು, ಪೊರೆಯೊಳು-ಸಮೀಪದಲ್ಲಿ, ಇರಲು-ಇರಲಾಗಿ, ನೀನು-ನೀನಾದರೊ, ಅಳಿಯನು-ನನ್ನ ಕುವರಿಯ ಪತಿಯು, ಆಗಿರ್ದುಂ-ಆಗಿದ್ದೂಕೂಡ. ಎನಗೆ-ನನಗೆ, ಇನಿತು-ಇಷ್ಟೊಂದು, ಅಪಾಯಂ-ತೊಂದರೆಯು, ಏಕೆ-ಏತಕ್ಕೆ ಆಗಿದೆ? ನರನದೆಸೆಯ-ಫಲುಗುಣನ ಸಂಬಂಧವಾದ, ಭಯಮುಂ-ಹೆದರಿಕೆಯನ್ನು, ಬಿಡಿಸಬೇಕು-ಕಳೆದು ಬಿಡಬೇಕು, ಎನೆ-ಎಂದು ನುಡಿಯಲು. ಕೃಶಾನು-ಪಾವಕನು, ಕೇಳ್ದು-ನೀಲಧ್ವಜನ ಈ ತೆರನಾದ ನುಡಿಗಳನ್ನು ಕೇಳಿ, ಆಗ-ಆ ಕಾಲದಲ್ಲಿ, ತಾನೆ-ಹುತವಹನೆ, ಪೊಕ್ಕು-ಪ್ರವೇಶಮಾಡಿ, ಅರ್ಜುನನ-ಪಾರ್ಥನ, ಸೈನಿಕವನು-ದಳವನ್ನು, ಸುಡತೊಡಗಿನಂ-ಸುಡಲಾರಂಭಿಸಿದನು.

ಅ|| ವಿ|| ವಾನರ ವರಧ್ವಜಂ-ವಾನರರಲ್ಲಿವರ (ಸ. ತ.) ವಾನರವರ-ಹನುಮಂತನನ್ನು, ಧ್ವಜಂ-ಧ್ವಜ ಪಟದಲ್ಲುಳ್ಳವನು (ಪಾರ್ಥನು. ಬ. ಸ.) ಅನೂನ ಶರಜಾಲ-ಅನೂನವಾದ ಶರ (ವಿ. ಪೂ.) ಅನೂನಶರಗಳ ಜಾಲ (ಷ. ತ.) ಪೊಕ್ಕು-'ಪುಗು' ಎಂಬ ಧಾತುವಿನ ಭೂತಕೃದ್ವಾಚಿ ||೩೭||

ಟೀ|| ಛತ್ರ-ಆತಪತ್ರವು, ಚಾಮರ- ಚಾಮರವು, ಹರಿಗೆ - ಹಲಗೆಯು, ಹಕ್ಕರಿಕೆ - ಕಡಿವಾಣವು (ಪಕ್ಷರಕ್ಷೆ, ತ್ಸ) ಗೌಸು-ಗೌನು, (ಲಗಾಮು) ಹಲ್ಲಣ-ಜೀನು (ಕೋಗೀರು), ವಿಚಿತ್ರದ-ಆಶ್ಚರ್ಯಕರವಾದ, ಪತಾಕೆ-ಬಾವಟವು, ಸೀಗುರಿ-ಸಣ್ಣ ಚಾಮರಗಳು, ಸಿಂಧ-ಸಂಜ್ಞೆಗಳನ್ನು ತೋರಿಸತಕ್ಕ ನಿಶಾನಿಗಳು, ಸೀಸಕ-ಸೀಸದಿಂದ ಮಾಡಿದ ಕತ್ತಿನ ಪಟ್ಟಿಯು, (ಶೀರ್ಷಕ, ತ್ಸ) ಪಾಗು, ತನುತ್ರ-ಅಂಗಿ, ರುಮಾಲು, ಟೋಪಿ ಮೊದಲಾದ ಶರೀರ ರಕ್ಷಣ ಸಾಮಗ್ರಿಗಳು, ರಂಜ-ವಸ್ತ್ರ, ದೋತ್ರ ಮೊದಲಾದವುಗಳು, ಪಾಶ-ಪ್ರಯೋಜನಕರವಾದ ಹುರಿಗಳು, ಹಗ್ಗಗಳು ಮೊದಲಾದವು, ವಸ್ತ್ರ, ಉಡಿಗೆಗಳು, ವಾಹನ-ಹಸ್ತಿ, ಅಶ್ವವೇ ಆದಿಯಾದವುಗಳು, ವಾದ್ಯ-ಭೇರಿ, ಮೃದಂಗ, ತಬಟೆ ಮೊದಲಾದವುಗಳು, ಕೈದು - ಆಲಗುಗಳು, ಬತ್ತಳಿಕೆ-ಬಾಣಗಳನ್ನುಹಾಕುವ ಚೀಲಗಳು, ಬಂಡಿ-ಗಾಡಿಗಳು, ಪತ್ರಬಂಧುರಬಾಣ-ಪತ್ರ-ಪಕ್ಷಗಳಿಂದ, ಬಂಧುರ-ಕಟ್ಟಲ್ಪಟ್ಟ

---

ಕೇತುವು ಎದುರಾದನು. ಪ್ರವೀರನು ಅವನೊಂದಿಗೆ ಸರಿಸಮನಾಗಿ ಹೋರಾಡುತ್ತಿರುವ ಕಾಲಕ್ಕೆ ಕರ್ಣಸುತನಾದ ವೃಷಕೇತುವೂ, ಅನುಸಾಲ್ವನೂ ಬಂದು ಒಟ್ಟಾಗಿ ಬಾಣ ಪ್ರಯೋಗವಂ ಮಾಡುತ್ತಿರಲು, ಪ್ರವೀರನು ಅವರ ಏಟುಗಳನ್ನು ತಡೆಯಲಾರದೆ ಹಿಮ್ಮೆಟ್ಟಲುದ್ಯುಕ್ತನಾದನು. ಆಗ ನೀಲಧ್ವಜನು ತನ್ನ ಬಲವನ್ನೆಲ್ಲಾ ಅರ್ಜುನನ ಸೈನ್ಯದಮೇಲೆ ಒಂದೇಬಾರಿ ನುಗ್ಗುವಂತೆ ಮಾಡಿ ಬಿಟ್ಟನು || ೩೬ || ಆಗ ಅರ್ಜುನನು ಅತಿಯಾದ ಕೋಪವಂ ತಾಳಿ, ನೀಲಧ್ವಜನ ಚತುರಂಗಬಲವನ್ನೂ ನುಚ್ಚುನುಚ್ಚುಮಾಡಿ ಅವನನ್ನು ಅನೇಕ ಬಾಣಗಳಿಂದ ಹೊಡೆದನು. ನೀಲಧ್ವಜನು ಈ ಏಟುಗಳನ್ನು ತಡೆಯಲಾರದೆ ಕಂಗೆಟ್ಟು ಹೋಗಿ ಸಮೀಪದಲ್ಲಿದ್ದ ಅಗ್ನಿಪುರುಷನನ್ನು ಕುರಿತು, ಎಲೈ ಹುತವಹನೆ, ನೀನು ನನ್ನ ಅಳಿಯನಾಗಿದ್ದುಕೊಂಡು ಹೀಗೆ ಸುಮ್ಮನಿರಬಹುದೆ? ಅರ್ಜುನನ ಸೈನ್ಯವನ್ನು ಭಸ್ಮಮಾಡಿ ನನ್ನನ್ನು ಸಲಹೆಂದು ಪ್ರಾರ್ಥಿಸಿದನು. ಪ್ರಸನ್ನನಾದ ವೈಶ್ವಾನರನಾದರೂ ಅರ್ಜುನನ ಸೈನ್ಯದಮೇಲೆ ನುಗ್ಗಿ, ಅವನ ಬಲವನ್ನೆಲ್ಲಾ ಬೂದಿಮಾಡುತ್ತಿದ್ದನು ||೩೭|| ಈ ಹುತಾಶನನ ಹೊಯ್ಲಿನಿಂದ ಪಾರ್ಥನ ಸೇನೆಯಲ್ಲಿ ಛತ್ರ ಚಾಮರಗಳೂ, ಕುದುರೆಗೆ ಹಾಕುವ ಕಡಿವಾಣ, ಜೀನುಗಳೂ, ವಿಧವಿಧವಾದ ಬಾವುಟ

ಪಾಂಡು | ಪುತ್ರಸೇನೆಯೊಳೆಲ್ಲರುಂಬೆದರಿ (ಮಿಗೆಕಟ್ಟು) ದಕ್ಕೆಟ್ಟುಕೆದರಿದರ್ಕಿಡಿ (ಯುರುಬಿಗೆ) ಯನೊದರಿ ||೩೮|| ಹೊಗೆಹೊಗೆದುಹೊಗೆಸುತ್ತಿ ಹೋಗಲುದೆಸೆದೆಸೆಗಳಂ | ಮೊಗಮೊಗದುಮೊಗಸಿಪಲಮೊಗದೊಳವ್ವಳಿಸಿಪುಟ | ನೆಗೆನೆಗೆದುನೆಗಳ್ದಸೋನೆಗಳಾಗಿಸುರಿವಗಿರುಗಿಡಿಗಳತುಷಾರದಿಂದ || ಧಗಧಗದ್ಧಗನೆಹೋಗುವಜ್ವಾಲಮಾಲೆಗಳ | ಭುಗಿಭುಗಿಲ್ಭುಗಿಲೆಂದುಡಾವರಿಸಿಸೀವರಿಸಿ | ತಗತಗದುತಗುಳ್ದೆಲ್ಲರಂದಹಿಸತೊಡಗಿದುದು ಧಳ್ಳುರಿನರನಬಲದೊಳು || ೩೯ || ಕಟ್ಟುಗ್ರಕೋಪದಿಂಮುಳಿದಂದುರಾಘವಂ | ತೊಟ್ಟಬಾಣದ ಮೊನೆಯಧಳ್ಳುರಿಯುಝುಳಕೆಕಂ | ಗೆಟ್ಟುಸಿಡಿಮಿಡಿಗೊಂಬಸಾಗರದಜೀವಾಳಿಯಂತೆಪಾಂಡವರಸೇನೆ || ಅಟ್ಟಿಸುಡುವನಲಧೂಮಜ್ವಾಲೆಗೊಡನೆಗೋ | (ಜ್ವಾಲೆಗಿರದೆ) ಳಿಟ್ಟು ಹೊದಕುಳಿಗೊಂಡು ಹೊರಳುತಿರಲುಬ್ಬೆಗಂ | ಬಟ್ಟುಪಾರ್ಥಂಚಿಂತಿಸಿದನೆತ್ತಣದ್ಭುತಮಿದೆಂದುಪಾವಕನುರುಬೆಗೆ || ೪೦ || ಭಗ್ನರಾದರ್ಕೆಲರ್ಕವಚಾದಿಗಳ್ಬೆಂದು | ನಗ್ನರಾದರ್ಕೆ

---

ಬಾಣ-ಅಲಗುಗಳು, ಕೋದಂಡ-ಧನುಸ್ಸು, ರಥ – ಸ್ಯಂದನವು, ರಥಾಂಗ–ರಥಗಳ ಚಕ್ರಗಳು, ತ್ರಿವೇಣುಕ- ಮುಂಕಣಿಯ ಮರವು, ಯುಗ–ನೊಗವು, ಅಕ್ಷಂಗಳು–ಅಚ್ಚುಗಳು ಮೊದಲಾದುವೆಲ್ಲಾ, ಉರಿಗೊಳೆ–ಸುಟ್ಟುಹೋಗುತ್ತಿರಲು, ಪಾಂಡುಪುತ್ರ–ಪಾಂಡುನಂದನನಾದ ಫಲ್ಗುಣನ, ಸೇನೆಯೊಳು–ಸೈನ್ಯದಲ್ಲಿ, ಎಲ್ಲರು–ಸಕಲರೂ, ಬೆದರಿ–ಹೆದರಿಕೊಂಡು, ಕಿಡಿ–ಅಗ್ನಿಯ, ಉರುಬಿಗೆ-ಉರಿಯ ವೇಗಕ್ಕೆ, ಕೆಟ್ಟು-ಕಂಗೆಟ್ಟುಹೋಗಿ, ಚದರಿದರು–ದಿಕ್ಕುದಿಕ್ಕುಗಳನ್ನು ಸೇರಿದರು ||೩೮||

ಟೀ|| ನರನ-ಪಾರ್ಥನ, ಬಲದೊಳು–ಸೈನ್ಯದಲ್ಲಿ, ಧಳ್ಳುರಿ-ಗಾಢಾಗ್ನಿಯು, ಹೊಗೆಹೊಗೆದು–ಆಗಾಗ್ಗೆ ಹತ್ತಿಕೊಂಡು, ಹೊಗೆ-ಹೊಗೆಯು, ಸುತ್ತಿ–ಎಲ್ಲೆಲ್ಲಿಯೂ ಕವಿದುಕೊಂಡು, ದೆಸೆದೆಸೆಗಳಂ–ಪ್ರತಿಯೊಂದು ದಿಕ್ಕನ್ನು, ಹೊಗಲು–ಪ್ರವೇಶಮಾಡಲು, ಮೊಗಮೊಗದು–ದಿಕ್ಕು ದಿಕ್ಕಿಗೂ, ಮೊಗಸಿ–ಸುತ್ತಿಕೊಂಡು, ಪಲಮೊಗದೊಳು – ನಾನಾಮುಖವಾಗಿ, ಅವ್ವಳಿಸಿ–ವ್ಯಾಪಿಸಿ, ಪುಟನೆಗೆನೆಗೆದು–ಮೇಲಕ್ಕೆ ಹಾರಿ ಹಾರಿ, ನೆಗಳ್ವ-ಹರಡಿಕೊಳ್ಳುವ, ಸೋನೆಗಳಾಗಿ–ತುಂತುರು ಮಳೆಯಾಗಿ, ಸುರಿವ–ಕೆಳಗೆಬೀಳುವ, ಕಿರುಗಿಡಿಗಳ–ಬೆಂಕಿಯ ಕಿಡಿಗಳಂತಿರುವ, ತುಷಾರದಿಂದ–ಸಣ್ಣ ಸಣ್ಣ ಮಳೆ ಹನಿಗಳಿಂದ, ಧಗಧಗದ್ಧಗನೆ–ಧಗಧಗಧ್ವನಿಯಿಂದ, ಹೋಗುವ–ಪ್ರಕಾಶಿಸುವ, ಜ್ವಾಲಮಾಲೆಗಳ–ಉರಿಯ ಸಮೂಹದ, ಭುಗಿಭುಗಿಲ್ಭುಗಿಲೆಂದು–ಭುಗ್‌ಭುಗ್ ಎಂಬುದಾಗಿ, ಡಾವರಿಸಿ–ದಹಿಸಿಬಿಟ್ಟು, ಸೀವರಿಸಿ–ಬೂದಿಯಾಗಿಮಾಡಿ, ತಗತಗದು–ನೀರಿನ ಅಂಶವನ್ನೆಲ್ಲಾ ಒಣಗಿಸಿ, ತಗಳ್ದು–ಹೊತ್ತಿಕೊಂಡು, ಎಲ್ಲರಂ-ಸಮಸ್ತರನ್ನೂ, ದಹಿಸತೊಡಗಿದುದು-ಸಡಲಾರಂಭಿಸಿತು.

ಅ|| ವಿ|| ಧಗಧಗ, ಭುಗಭುಗ ಎಂಬ ವೆರಡೂ ಅನುಕರಣಾರ್ಥದಲ್ಲಿ ಪ್ರಯೋಗಿಸಟ್ಟಿವೆ. ಹೊಗಹೊಗೆದು, ಮೊಗಮೊಗೆದು ಆಧಿಕ್ಯಾರ್ಥದಲ್ಲಿ ದ್ವಿರುಕ್ತಿಯಾಗಿ ಪ್ರಯೋಗಿಸಲ್ಪಟ್ಟಿವೆ. ಬಲ-ಸೈನ್ಯ, ಶಕ್ತಿ, ಬಲಭಾಗ ಎಂಬ ಅರ್ಥಂಗಳಿಂದ ಕೂಡಿರುವ ಶಬ್ದವಾಗಿರುವುದು. ||೩೯||

ಟೀ|| ಅಂದು-ಆ ಎರಡನೆಯ ಯುಗದಲ್ಲಿ, ರಾಘವಂ – ಶ್ರೀರಾಮನು, ಕಟ್ಟುಗ್ರಕೋಪದಿಂ – ಬಹು ಹೆಚ್ಚಾದ ಕ್ರೋಧದಿಂದ, ಮುಳಿದು-ಕೋಪವಂತಾಳಿ, ತೊಟ್ಟ-ಹೆದೆಯೇರಿಸಿದ, ಬಾಣದ–ಅಲಗಿನ, ಮೊನೆಯ-ಕೊನೆಯಲ್ಲಿರುವ, ದಳ್ಳುರಿಯ-ಹೆಚ್ಚಾದ ಉರಿಯ, ಝುಳಕೆ-ತಾಪಕ್ಕೆ ಕಂಗೆಟ್ಟು-ಕಂದಿಹೋಗಿ, ಸಿಡಿಮಿಡಿಗೊಂಬ – ತಲ್ಲಣಿಸುತ್ತಿರುವ, ಸಾಗರದ–ಕಡಲನ್ನಾವರಿಸಿದ, ಜೀವಾಳಿಯಂತೆ–ಜೀವರಾಶಿಗಳ ತೆರನಾಗಿ, ಪಾಂಡವನ–ಪಾಂಡುಸುತನಾದ ಫಲ್ಗುಣನ, ಸೇನೆ–ದಳವು, ಅಟ್ಟಿಸುವ–ತರುಮಿಕೊಂಡು ಬರತಕ್ಕ, ಅನಲ-ಅಗ್ನಿಯ, ಧೂಮಜ್ವಾಲೆಗೆ-ಹೊಗೆಯ ಸಹಿತವಾದ ಉರಿಗೆ, ಒಡನೆ–ಕೂಡಲೆ, ಗೋಳಿಟ್ಟು–ಗೋಳಾಡಿ, ಹೊದಕುಳಿಗೊಂಡು–ಹೆದರಿಕೆಯಿಂದ ಚಿಂತಿಸುತ್ತಾ, ಹೊರಳುತ–ಅಲ್ಲಲ್ಲಿ ತಿರುಗಾಡುತ್ತಲಿರುವಾಗ, ಪಾರ್ಥಂ–ಫಲ್ಗುಣನು, ಉಬ್ಬೆಗಂಬಟ್ಟು–ವ್ಯಸನಮುಂ ತಾಳಿ, ಇದು–ಈ ಅಗ್ನಿಯಿಂದುಟಾದ ಹೆದರಿಕೆಯು, ಎತ್ತಣ ಅದ್ಭುತಂ–ಎಲ್ಲಿಯ ಆಶ್ಚರ್ಯವು. ಎಂದು–ಎಂಬುದಾಗಿ, ಪಾವಕನ–ಅಗ್ನಿಪುರುಷನ, ಉರುಬೆಗೆ–ಹಿಂಸೆಗೆ, ಚಿಂತಿಸಿದನು–ಆಲೋಚನೆ ಮಾಡಿದನು.

ಅ|| ವಿ|| ಕಡಿದಾದ–ಉಗ್ರವಾದ ಕೋಪ (ಕಟ್ಟುಗ್ರಕೋಪ-ವಿ. ಉ. ಕ.) ||೪೦||

ಟೀ|| ಕೆಲರ್-ಹಲವು ಮಂದಿ, ಕವಚಾದಿಗಳು-ಅಂಗಿ, ಕುಲಾವಿಯೇ ಮೊದಲಾದವೆಲ್ಲಾ, ಬೆಂದು-ಭಸ್ಮವಾಗಿ,

---

ಗಳೂ, ಹಸ್ತ್ಯಶ್ವಗಳೂ, ಭೇರಿ ಮೃದಂಗಾದಿಗಳೂ, ರಥ ರಥಾಂಗಗಳೂ, ಅನೇಕವಾದ ವಸ್ತ್ರಾಭರಣಗಳೂ ಸುಟ್ಟುಹೋದವು ||೩೮|| ಎಲ್ಲೆಲ್ಲಿಯೂ ಹೊಗೆಯು ಸುತ್ತಿಕೊಂಡಿತು. ಸ್ವಲ್ಪ ಸ್ವಲ್ಪ ಹೊತ್ತಿಗೊಂಡು ಭಾರಿ ಉರಿಯು ಧಗ್ಗೆನೆದ್ದುಮೇಲ್ಗಡೆಯಿಂದ ತನಿ ಕೆಂಡಗಳು ಬೀಳುತ್ತಲಿದ್ದವು. ಎಲ್ಲಿ ನೋಡಿದರೂ ಧಗಧಗ ಛಟಛಟ ಮೊದಲಾದ ಧ್ವನಿಗಳೇ ತುಂಬಿ ಸುಡುತ್ತಲಿರುವುದನ್ನು ಸೇನಾಜನವು ತಡೆಯಲಾರದೆ ಗೋಳಾಡುತ್ತಿಲಿದ್ದರು || ೩೯ || ಇವರ ಗೋಳಾಟವಾದರೊ, ತ್ರೇತಾಯುಗದಲ್ಲ

ಲ್ಪೆಚ್ಚಿದುರಿಗಿಚ್ಚಿನೊಳ್ | ನಗ್ನರಾದರ್ಕೆಲರ್ತನ್ನ ಸೇನೆಯೊಳಕಟಧರ್ಮಜನಹಯಮೇಧಕೆ | ವಿಘ್ನವಾದುದೆಶಿವಶಿವೆನುತ ಚಿಂತಿಸಿದನಿವ | ನಗ್ನಿಯಂಭಜಿಸಿನೋಡುವೆನೆಂದುನಿಜಕರದಿ | ಲಗ್ನಚಾಪನನಿಳುಹಿ ಶುಚಿಯಾಗಿಪಾವಕನನರ್ಜುನಂಪ್ರಾರ್ಥಿಸಿದನು || ೪೧ || ಬಳಿಕನಲಸೂಕ್ತಂಗಳಿಂದನುತಿಗೈದು | ತಳಕೊಂದಿಸಾಷ್ಟಾಂಗದಿಂದೆರಗಿನಿಂದುನೀಂ | ಮುಳಿಯಲೇಕೀಮಖಂನಿನಗೈಸೆಯೇಂನಿನ್ನದೆಸೆಯಿಂದಖಿಳಸುರರ್ಗೆ || ತಳೆವುದುಹವಿರ್ಭಾಗವೀಚರಾಚರದಪೊರ | ಗೊಳಗೆಲ್ಲಮುಂನೀನೆನಿನ್ನಿಂದಮೂಲೋಕ | ದಳಿವುಳಿವುಸಾಕದಂತಿರಲೆನಗೆ ಮಾರ್ಗಮಂಕೊಟ್ಟುಕಳುಹಬೇಕೆಂದನು || ೪೨ || ದೇವನೀನಂದುಗಾಂಡೀವ

---

ಭಗ್ನರು-ಶರೀರ ವಿಕಾರವನ್ನು ಹೊಂದಿದವರು, ಆದರ್-ಆಗಿಹೋದರು. ಕೆಲರ್-ಮತ್ತೆ ಕೆಲವರು, ಪೆಚ್ಚಿದ-ಅಧಿಕವಾದ, ಉರಿಗಿಚ್ಚಿನೊಳ್-ಉರಿಯಿಂದ ಕೂಡಿದ ಅಗ್ನಿಯಲ್ಲಿ, ನಗ್ನರು-ಬಟ್ಟೆಗಳೆಲ್ಲಾ ಸುಟ್ಟುಹೋದ್ದರಿಂದ ದಿಗಂಬರರಾದವರು, ಆದರ್-ಆಗಿಬಿಟ್ಟರು, ಕೆಲರ್-ಇನ್ನೂ ಕೆಲವುಜನರು, ಮಗ್ನರು-ಅಗ್ನಿಯಲ್ಲಿ ಮುಳುಗಿದವರು, ಆದರ್-ಆದರು. ಅಕಟ-ಆಹಾ! ಧರ್ಮಜನ-ಧರ್ಮಪುತ್ರನ, ಹಯಮೇಧಕೆ-ಅಶ್ವಮೇಧ ಯಾಗಕ್ಕೋಸುಗ, ವಿಘ್ನಂ-ಅಡಚಣೆಯು, ಆದುದೆ-ಉಂಟಾಯಿತೆ? ಶಿವಶಿವ-ಈಶ್ವರ ಈಶ್ವರ, ಎನುತ-ಎಂದು ನುಡಿಯುತ್ತ, ಚಿಂತಿಸಿದನು-ಆಲೋಚನೆಯಂ ಮಾಡಿದನು. ತನ್ನ-ಪಾರ್ಥನ, ಸೇನೆಯೊಳು-ದಂಡಿನಲ್ಲಿ, ಚಾಪವನು-ಧನುಸ್ಸನ್ನು, ಇಳುಹಿ-ಕೆಳಕ್ಕಿಳಿಸಿ, ಅಗ್ನಿಯಂ - ಅಗ್ನಿಪುರುಷನನ್ನು, ಭಜಿಸಿನೋಡುವೆನು-ಧ್ಯಾನಿಸಿ ನೋಡುತ್ತೇನೆ. ಎಂದು-ಎಂಬುದಾಗಿ, ನಿಶ್ಚೈಸಿ-ನಿಷ್ಕರ್ಷೆ ಮಾಡಿಕೊಂಡು, ಅರ್ಜುನಂ-ಫಲ್ಗುಣನು, ಶುಚಿಯಾಗಿ-ನಿರ್ಮಲಚಿತ್ತನಾಗಿ, ಪಾವಕನನು-ಯಜ್ಞೇಶ್ವರನನ್ನು, ಪ್ರಾರ್ಥಿಸಿದನು-ಭಕ್ತಿಯಿಂದ ಪೂಜಿಸಿದನು || ೪೧ ||

ಟೀ|| ಬಳಿಕ-ನಿರ್ಮಲಾಂತರಂಗನಾದ ತರುವಾಯ, ಅನಲಸೂಕ್ತಂಗಳಿಂದ-ಅಗ್ನಿಯ ಸಂಬಂಧವಾದ ಮಂತ್ರಗಳಿಂದ, ನುತಿಗೈದು-ಸ್ತೋತ್ರಮಾಡಿ, ಭೂತಳಕೆ - ಭೂಮಿಯಮೇಲೆ, ಒಂದಿ-ಅಡ್ಡಬಿದ್ದು, ಸಾಷ್ಟಾಂಗದಿಂದ-ಎದೆ, ತಲೆ, ಕಣ್ಣು, ಮನಸ್ಸು, ಕಾಲು, ಕೈ, ಕಿವಿ, ಶ್ರದ್ಧೆ ಎಂಬ ಎಂಟು ವಿಧವಾದ ಅಂಗಗಳಿಂದ, ಎರಗಿ-ನಮಸ್ಕಾರಮಾಡಿ, ನಿಂದು-ನಿಂತುಕೊಂಡು, ನೀಂ- ಯಾಗಗಳಿಗೆ ಒಡೆಯನಾದ ನೀನಾದರೂ, ಮುಳಿಯಲು - ಸಿಟ್ಟುಮಾಡಿಕೊಳ್ಳತಕ್ಕದ್ದು, ಏಕೆ- ಏತಕ್ಕೆ, ಈಮಖಂ-ಈ ಯಾಗವು, ನಿನಿಗೈಸೆ-ನಿನಿಗೋಸ್ಕರವೇ ಆಗಿಲ್ಲವೆ, ಏಂ-ಏನು, ನಿನ್ನದೆಸೆಯಿಂದ-ನಿನ್ನಮೂಲಕವಾಗಿ, ಅಖಿಳ-ಎಲ್ಲಾ, ಸುರರ್ಗೆ-ದೇವತೆಗಳಿಗೂ, ಹವಿರ್ಭಾಗಂ-ಹೋಮದ್ರವ್ಯದ ಭಾಗವು, ತಳೆವುದು-ಸೇರುತ್ತದೆ. ಈಚರಾಚರದ-ಈ ಚೇತನಾಚೇತನ ರೂಪವಾದ ಲೋಕದ, ಪೊರಗೆ-ಹೊರಗಡೆಯೂ, ಒಳಗೆ-ಒಳಭಾಗದಲ್ಲಿಯೂ, ಎಲ್ಲವೂ-ಸಮಸ್ತವೂ, ನೀವೇ-ನೀನೇಹೊರ್ತು ಮತ್ತೆ ಯಾರೂ ಇಲ್ಲ. ನಿನ್ನಿಂದ-ನಿನ್ನಿಂದಲೆ, ಮೂಲೋಕದ-ಸ್ವರ್ಗ ಮರ್ತ್ಯ ಪಾತಾಳಗಳ, ಅಳಿವು-ವಿನಾಶವು, ಉಳಿವು-ಜೀವಿಸುವಿಕೆಯು, ಅಹುದು-ಆಗುತ್ತದೆ, ಸಾಕು-ಬಿಡು, ಅದು-ಆ ಮಾತು, ಅಂತು-ಹಾಗೆ, ಇರಲಿ-ಇರತಕ್ಕದ್ದಾಗಲಿ, ಎನಗೆ-ನನಿಗೆ, ಮಾರ್ಗಮಂಕೊಟ್ಟು-ಹಾದಿಯನ್ನು ತೋರಿಸಿ, ಉಳುಹಬೇಕು-ಪ್ರಾಣವನ್ನು ಕಾಪಾಡಬೇಕು, ಎಂದನು-ಎಂದು ನುಡಿದನು || ೪೨ ||

ಟೀ|| ದೇವ-ಎಲೈ ಅಗ್ನಿ ಪುರುಷನೆ, ಅಂದು- ಪೂರ್ವದಲ್ಲಿ ಖಾಂಡವವನವನ್ನು ಸುಡುವಾಗ, ನೀನು-ನೀನೆ, ಗಾಂಡೀವನುಂ-ಗಾಂಡೀವವೆಂಬ ಧನುಸ್ಸನ್ನು, ತನಿಗೆ-ನನಿಗೆ, ಇತ್ತೆ-ಕೊಟ್ಟೆ, ಭಾವಿಸಲ್- ಯೋಚಿಸಿದರೆ, ಪಾಂಚಾಲೆ-

---

ಶ್ರೀರಾಮಚಂದ್ರನು ಕೋಪಾತಿಶಯದಿಂದ ಸಮುದ್ರನಮೇಲೆ ಬಾಣಪ್ರಯೋಗವಂ ಮಾಡಲಾಗಿ ಅದರ ಹೊಡೆತಕ್ಕೆ ಸಿಕ್ಕಿದ ಜಲಚರಗಳ ವ್ಯಥೆಯನ್ನೂ ಕೂಡ ಅಲೆಗಳೆಯುತ್ತಲಿತ್ತು. ಇದನ್ನೆಲ್ಲಾ ನೋಡಿದ ಅರ್ಜುನನು ಬಹುವಾಗಿ ಖೇದಮಂ ತಾಳಿ, ಅಕಸ್ಮಾತ್ತಾಗಿ ಅಗ್ನಿಭಯ ವುಂಟಾಗಲು ಕಾರಣವೇನೆಂದು ಚಿಂತಿಸುತ್ತಿದ್ದನು. || ೪೦ || ಅಷ್ಟುಹೊತ್ತಿಗೆ ಅರ್ಜುನನ ಸೈನ್ಯದಲ್ಲಿ ಅನೇಕರು ಪರಾಜಿತರಾಗಿ ಹಿಂದಕ್ಕೆ ಓಡಿಹೋದರು ಕೆಲವರು ಅಂಗಿ, ರುಮಾಲು, ವಸ್ತ್ರ ಮೊದಲಾದವೆಲ್ಲಾ ಸುಟ್ಟುಹೋದದ್ದರಿಂದ ದಿಗಂಬರರಾಗಿ ನಿಂತರು. ಹಲವರು ಉರಿಯಲ್ಲಿ ಸಿಕ್ಕಿಹೋದರು, ಆಗ ಅರ್ಜುನನು ಯುಧಿಷ್ಠಿರನು ಮಾಡುವ ಅಶ್ವಮೇಧ ಯಾಗಕ್ಕೆ ತೊಂದರೆಯುಂಟಾಯಿತಲ್ಲಾ ! ಎಂದು ಬಹುವಾಗಿ ಚಿಂತಿಸಿ, ಕೊನೆಗೆ ಕೈಯ್ಯಲ್ಲಿದ್ದ ಶರಾಸನವನ್ನು ಕೆಳಕ್ಕೆ ಇಳಿಸಿ, ಶುಚಿರ್ಭೂತನಾಗಿ. || ೪೧ || ಅಗ್ನಿದೇವನನ್ನು ಸಂಬೋಧಿಸಿ, ಅಯ್ಯಾ ಮಹಾತ್ಮನೆ, ನನ್ನಮೇಲೆ ನೀನು ಇಷ್ಟು ಕೋಪಮಾಡಲು ಕಾರಣವೇನು? ಈಗ ನಾವು ಮಾಡಬೇಕೆಂದಿರುವ ಯಾಗವು ನಿನಗೇ ಅಲ್ಲವೆ? ನಾವು ಕೊಟ್ಟ ಆಹುತಿಗಳೆಲ್ಲಾ ನಿನ್ನಿಂದಲೇ ಇಂದ್ರಾದಿ ದೇವತೆಗಳಿಗೆಲ್ಲಾ ಸೇರಬೇಕಾಗಿರುವುದಲ್ಲವೇ? ಈ ಪ್ರಪಂಚದ ಸೃಷ್ಟಿ ಸ್ಥಿತಿ ಲಯಗಳಿಗೆ ನೀನೇ ಕಾರಣಭೂತನಲ್ಲವೆ? ನನ್ನ ಮೇಲಿನ ಕೋಪವನ್ನು ಬಿಟ್ಟು ಪ್ರಸನ್ನನಾಗಿ ಕಾಪಾಡಬೇಕೆಂದು ಅಗ್ನಿದೇವತಾ ಪ್ರಾರ್ಥನರೂಪವಾದ ಅನೇಕ ಮಂತ್ರಗಳಿಂದ ಸ್ತೋತ್ರಮಂ ಮಾಡಿ, ||೪೨|| ಮತ್ತೆ ಅಗ್ನಿಯನ್ನು ಕುರಿತು, ಎಲೈ ಪಾವಕನೆ

ಮಂತನಗಿತ್ತೆ | ಭಾವಿಸಲ್ಪಾಂಚಾಲೆನಿನ್ನೊಳುದುಭವಿಸಿದ | ಳ್ನಾನನ್ಯರೇನಿನಗೆಪೇಳೆಂದುನುತಿಸಿಕುಂತೀಸುತಂಬೇಡಿಕೊಳಲು | ಪಾವಕಂಮೆಚ್ಚಿನುಡಿದಂಪಾರ್ಥಕೇಳಾದೊ | ದೊಡಾವುಮುಳಿಯೆವುನಿನಗೆ ಹರಿಸಮೀಪದೊಳಿರ್ದು | ವಾಜಿಮೇಧಮೇಕ ಮೃತಮಿರಲಲೆಗೆಳಸಿದಂತಾದುದೆನಲೆಂದನು || ೪೩ || ಅಹುದುನೀವೆಂಬುದಂಮೀರಬಪ್ಪುದೆಹರಿಯ | ಸಹವಾಸಮೇಸಾಲ್ಗು ಜಗದೋಳ್ಸದ್ಧರ್ಮಮಂ | ವಹಿಸುವನರಾರು ಮಾಧವನಾಜ್ಞೆಯಾದವುದುಮೇಣಂತುಮಲ್ಲದೆಮಗೆ || ವಿಹಗೇಂದ್ರವಾಹನಂ ಮಾಡವೇಳ್ಕೆಂದನು | ಗ್ರಹಿಸಿದಂಮುಖಮನಿದಕೆಂತೆಂದುನರನೆನೆ | ಲ್ದಹಿಪುದುಮಾಣ್ದೆನೆಂದಭಯವಿತ್ತಗ್ನಿನೀಲಧ್ವಜಂಗಿಂತೆಂ

ದ್ರುಪದ ನಂದನೆಯು, ನಿನ್ನೊಳು-ನಿನ್ನಲ್ಲಿ, ಉದಭವಿಸಿದಳ್-ಹುಟ್ಟಿದವಳಾದಳು, ಆದ್ದರಿಂದ ನಾವು-ನಾವಾದರೊ, ನಿನಗೆ-ನಿನ್ನ ವಿಷಯದಲ್ಲಿ, ಅನ್ಯರೆ-ಬೇರೆಯವರಾದೇವೆ? ಪೇಳು-ಹೇಳು, ಎಂದು-ಎಂಬುದಾಗಿ, ನುತಿಸಿ-ಸ್ತುತಿಗೈದು, ಕುಂತೀ ಸುತಂ-ಪಾರ್ಥನು, ಬೇಡಿಕೊಳಲು-ಕೇಳಿಕೊಳ್ಳಲಾಗಿ, ಪಾವಕಂ - ಅಗ್ನಿಯು, ಮೆಚ್ಚಿ - ಸಂತುಷ್ಟನಾಗಿ, ಪಾರ್ಥ-ಫಲ್ಗು ಣನೆ! ಆದೊಡೆ-ಹಾಗಾದರೆ, ಕೇಳು-ಲಾಲಿಸು, ಆವು-ನಾವಾದರೊ, ಮುಳಿಯೆವು-ಕೋಪಿಸಿಕೊಳ್ಳುವುದಿಲ್ಲ. ಹರಿ-ಕೃಷ್ಣ ಸ್ವಾಮಿಯು, ಸಮೀಪದೊಳು - ಹತ್ತಿರದಲ್ಲಿ, ಇರ್ದು-ಇದ್ದೂಕೂಡ, ಈ ವಾಜಿಮೇಧಂ-ಈ ಹಯಮೇಧವು, ಏಕೆ-ಏನು ಕಾರಣ, ಅಮೃತಂ-ಅಮೃತವು, ಇರಲು-ಇದ್ದಾಗ್ಯೂ, ಅಲೆಗೆ-ತರಂಗಗಳಿಗೆ, ಎಳಸಿದಂತೆ-ಆಶೆಗೊಂಡಂತೆ, ಆದುದು-ಆಗಿ ಬಿಟ್ಟಿತು? ಎಂಬದಾಗಿ, ನುಡಿದಂ-ಹೇಳಿದನು. ಎನಲ್-ಹೀಗೆಂದು ಕೇಳಿದ ಅಗ್ನಿಗೆ, ಎಂದನು-ಮುಂದೆ ಹೇಳುವಂತೆ ಪಾರ್ಥನು ಹೇಳತೊಡಗುತ್ತಾನೆ.

ಅ|| ವಿ|| ಅಗ್ನಿಯು ದ್ರೌಪದಿಗೆ ತಂದೆಯಾದ ಕಥೆ:—ದ್ರುಪದರಾಜನೂ ದ್ರೋಣಾಚಾರ್ಯನೂ ಬಾಲ್ಯ ಸ್ನೇಹಿತ ರಾಗಿ ಒಂದೇ ಕಡೆಯಲ್ಲೀ ವಿದ್ಯಾವಾಸಂಗಮಂ ಮಾಡಿದರು. ದ್ರುಪದನು ದೊರೆಯಾದಮೇಲೆ ಒಂದಾನೊಂದು ಕಾಲದಲ್ಲಿ ತನ್ನನ್ನು ನೋಡಲು ಬಂದ ದ್ರೋಣಾಚಾರ್ಯರನ್ನು ರಾಜ್ಯಪದದಿಂದ ಹೊರಗೆ ತಳ್ಳಿಸಿ ಬಿಟ್ಟನು. ಬಾಲ್ಯ ಸ್ನೇಹಿತನೆಂದು ದ್ರೋಣನೇ ಹೇಳಿದರೂ ನಿರಾಕರಿಸಿಬಿಟ್ಟನು. ಇದರಿಂದ ದ್ರೋಣಚಾರ್ಯನಿಗೆ ಕೋಪಬಂದು ನಿನ್ನನ್ನು ನನ್ನ ಕಾಲಿನ ಮೇಲೆ ಬೀಳುವಂತೆ ಮಾಡುವೆನೆಂದು ಶಪಥಮಾಡಿ ಹೊರಟು ಹೋದನು. ಕೆಲವು ದಿನಗಳ ಮೇಲೆ ತನ್ನಲ್ಲಿ ವ್ಯಾಸಂಗ ವಂಮಾಡುತ್ತಲಿದ್ದ ಅರ್ಜುನನ ವಿದ್ಯೆಯು ಸಾಂಗವಾಗಲಾಗಿ, ಗುರುದಕ್ಷಿಣೆ ಏನು ಕೊಡಬೇಕೆಂಡು ಕೇಳಿದನು. ದ್ರೋಣ ನಾದರೊ ನನಗೆ ಅವಮಾನ ಮಾಡಿದ್ದ ದ್ರುಪದನನ್ನು, ನನ್ನ ಕಾಲಮೇಲೆ ಕೆಡವಬೇಕೆಂದು ತಿಳಿಸಿದ್ದರಿಂದ ಅರ್ಜುನನು ದ್ರುಪ ದನನ್ನು ಗೆದ್ದು ಅವನನ್ನು ದ್ರೋಣಾಚಾರ್ಯರ ಪಾದಗಳಮೇಲೆ ತಂದಿರಿಸಿದನು. ಇದರಿಂದ ಅವಮಾನವನ್ನು ತಪ್ಪಿಸಿಕೊಳ್ಳಲು ದ್ರುಪದನು ಯಾಗವಂಮಾಡಿ ಅಗ್ನಿಯಂ ಮೆಚ್ಚಿಸಿ ಅಗ್ನಿಪುರುಷನಿಂದ ಅರ್ಜುನನ್ನು ಮದುವೆಯಾಗತಕ್ಕ ಮಗಳೂ, ದ್ರೋಣ ನನ್ನು ಕೊಲ್ಲುವ ಮಗನೂ ಆಗಬೇಕೆಂದು ಪ್ರಾರ್ಥಿಸಲು ಅವನ ಇಷ್ಟದಂತೆ ದೃಷ್ಟದ್ಯುಮ್ನನೂ ದ್ರಾಪದಿಯೂ ಹುಟ್ಟಿದರು, ದೃಷ್ಟದ್ಯುಮ್ನನಿಂದ ದ್ರೋಣನು ಹತನಾದನು, ದ್ರೌಪದಿಯನ್ನು ಅರ್ಜುನನಿಗೆ ಕೊಟ್ಟು ಮದುವೆಮಾಡಿದರು. ಅಗ್ನಿಕುಂಡ ದಲ್ಲಿ ಅಗ್ನಿಯವರಿಂದ ಹುಟ್ಟಿದ್ದರಿಂದ ದ್ರಾಪದಿಯು ಅಗ್ನಿಗೆ ಮಗಳಾದಂತಾಯಿತು. || ೪೩ ||

ಟೀ|| ಅಹುದು-ನಿಮ್ಮಮಾತು ನಿಜ, ನೀವು-ನೀವಾದರೊ, ಎಂಬುದಂ-ಎನ್ನುವದನ್ನು, ಮೀರಬಪ್ಪುದೆ-ಅತಿಕ್ರಮಿ ಸಲು ಸಾಧ್ಯವೆ? ಹರಿಯ-ಕೃಷ್ಣಸ್ವಾಮಿಯ, ಸಹವಾಸಮೆ-ಜೊತೆಯೆ, ಸಾಲ್ಗು - ಚತುರ್ವಿಧ ಪುರುಷಾರ್ಥದಾಯಕವು. ಆದ್ದರಿಂದ, ಜಗದೊಳ್-ಲೋಕದಲ್ಲಿ, ಸದ್ಧರ್ಮಮಂ-ವರ್ಣಾಶ್ರಮ ಧರ್ಮವನ್ನು, ವಹಿಸತಕ್ಕವರು-ಧರಿಸತಕ್ಕ ಜನರು, ಆರು-ಯಾರಿದಾರೆ? ಮಾಧವನ-ಮಧುಸೂದನನ, ಆಜ್ಞೆಯಾದವುದು-ಆಜ್ಞಾರೂಪವಾದದ್ದು, ಮೇಣ್-ಮತ್ತು, ಅಂತುಮ

ಖಾಂಡವವನ ದಹನಕಾಲದಲ್ಲಿ ನೀನು ನನಗೆ ಗಾಂಡೀವವನ್ನು ಕೊಟ್ಟು ಕಾಪಾಡಲಿಲ್ಲವೆ? ದ್ರೌಪದಿಯು ನಿನಗೆ ಮಗಳವರ ಸೆಯಾಗಿರುವುದರಿಂದ ನಿನಗೆ ನಾನು ಬೇರೆಯಾದವನೆ? ಎಂದು ನಾನಾ ಪ್ರಕಾರವಾಗಿ ಕೇಳಿಕೊಂಡನು, ವೈಶ್ವಾನರನೂಕೂಡ ಅರ್ಜುನನ ಪ್ರಾರ್ಥನೆಗಳಿಗೆ ಪ್ರಸನ್ನಚಿತ್ತನಾಗಿ ಪಾರ್ಥನನ್ನು ಕುರಿತು, ಎಲೈ ಫಲ್ಗುಣನೆ! ನಿನ್ನ ಸ್ತೋತ್ರಕ್ಕೆ ನಾನು ಮೆಚ್ಚಿ ದೆನಾದ್ದರಿಂದ ಇನ್ನು ನಿನಗೆ ಅಗ್ನಿಭಯ ಉಂಟಾಗುವುದಿಲ್ಲವು, ಆದರೆ ಶ್ರೀ ಕೃಷ್ಣಸ್ವಾಮಿಯು ಸಮೀಪವರ್ತಿಯಾಗಿದ್ದರೂ ಕೂಡ ಅಶ್ವಮೇಧಯಾಗವು ಇಷ್ಟು ದುಸ್ಸಾಧ್ಯವಾಗಿರಲು ಕಾರಣವೇನೆಂದು ಕೇಳಿದನು ||೪೩|| ಈರೀತಿಯಲ್ಲಿ ಪ್ರಶ್ನೆಗೈದ ಅಗ್ನಿ ಪುರುಷನನ್ನು ಕುರಿತು ಎಲೈ ಅಗ್ನಿದೇವನೇ! ನೀನು ಹೇಳುವಂತೆ ಹರಿಯ ಸಹವಾಸ ಮಾತ್ರದಿಂದಲೇ ಚತುರ್ವಿಧ ಫಲವು ರುಷಾರ್ಥಂಗಳೂ ಸಿದ್ಧಿಸುವುವಾದರೂ ಈ ಯಾಗವನ್ನು ಮಾಡಿರೆಂದು ನಮಗೆ ಅನುಜ್ಞೆಯನಿತ್ತನಾದ್ದರಿಂದ, ಅವನ ಅಪ್ಪಣೆಯಂತೆ ಈ ಕ್ರತುವನ್ನು ನಾವು ಮಾಡಲೇಬೇಕು. ಈ ಲೋಕದಲ್ಲಿ ಚತುರ್ವರ್ಣಾಶ್ರಮದವರೂ ತಮ್ಮ ತಮ್ಮ

ದನು ‖ ೪೪ ‖ ಸಂಗರಂಬೇಡನರನೊಡನೆಸಾಕಾತನಶ್ವ | ರಂಗಮುನಬಿಡುನಡೆನಗರಕೆಂದುವೈಶ್ವಾನ | ರಂಗುಣದೊಳರಸನಂತಿ ರುಗಿಸಿದನತ್ತಲರ್ಜುನನುರಿಯಡಾವರಿಯನು ‖ ಭಂಗಿಸಿದನೆಚ್ಚು ನಾರಾಯಣಾಸ್ತ್ರದೊಳನ್ನೆ | ಗಂಗಗನಮಣಿಪಶ್ಚಿಮಾಂಗನೆಯ ಬೈತಲೆಯ | ರಂಗುಮಾಣಿಕದಂತೆ ಕಣ್ಗೆ ಕಾಣಿಸುತಿರ್ದುದಸ್ತಗಿರಿಮಸ್ತಕದೊಳು ‖ ೪೫ ‖ ರಂಜಿಸುವಪಶ್ಚಿಮಾಚಲಕಿರಾತಂತೊಟ್ಟ | ಗುಂಜಾಭರಣವೋಮೇಣ್ಗಗನಾಂಬುಧಿಯತಡಿಯ | ಮಂಜುವಿದ್ರುಮಲತೆಯೋ ಬಗೆಗಪರದಿಗ್ವಧುವಿನಂಗದ ಕುಂಕಮುಲೇಪವೋ ‖ ಅಂಜನೇಭದಸಿಂಧುರವೊ ಶಿವನಕೇಶಗಳ | ಕೆಂಜಡೆಯೊವಿಷ್ಣುಪದಪಂಕರುಹದರುಣತೆಯೊ | ಸಂಜೆ

---

ಲ್ಲದೆ–ಆದಲ್ಲದೆ, ವಿಹಗೇಂದ್ರವಾಹನಂ–ಕೃಷ್ಣಮೂರ್ತಿಯು, ಮಾಡವೇಳ್ಕೆಂದು–ಎಸಗಬೇಕೆಂಬದಾಗಿ, ಮಖವನು–ಯಾಗವನ್ನು, ಅನುಗ್ರಹಿಸಿದಂ–ಕರುಣಿಸಿರುವನು, ಇದಕೆ–ಈ ವಿಚಾರವಾಗಿ, ಎಂತು–ಹೇಗೆ? ಎಂದು – ಎಂಬತೆರನಾಗಿ, ನರನು–ಪಾರ್ಥನು, ಎನಲ್–ನುಡಿಯಲು, ದಹಿವುದಂ–ಸುಡತಕ್ಕದ್ದನ್ನು, ಮಾಣ್ದೆನು–ಬಿಟ್ಟುಬಿಟ್ಟೆನು. ಎಂದು–ಎಂಬದಾಗಿ, ಅಗ್ನಿ–ಅಗ್ನಿಪುರುಷನು, ಅಭಯಂ–ಧೈರ್ಯವನ್ನು, ಇತ್ತು–ಕರುಣಿಸಿ, ನೀಲಧ್ವಜಂಗೆ–ನೀಲಧ್ವಜನೆಂಬರಸನಿಗೆ, ಇಂತು–ಮುಂದೆ ಹೇಳುವಂತೆ, ಎಂದನು–ನುಡಿದನು.

ಅ‖ ವಿ‖ ವಿಹಗೇಂದ್ರವಾಹನಂ–ವಿಹ–ಆಗಸದಲ್ಲಿ, ಗ–ಗಮಿಸುವುದು (ಕೃ. ವೃ.) ಪಕ್ಷಿ, ವಿಹಗ–ಪಕ್ಷಿಗಳ, ಇಂದ್ರ (ಷ. ತ.) ವಿಹಗೇಂದ್ರ–ಗರುಡನನ್ನು, ವಾಹನಂ–ರಥವಾಗಿವುಳ್ಳವನು ಯಾರೊ ಅವನು (ಕೃಷ್ಣನು ಬ. ಸ.) ‖೪೪‖

ಟೀ‖ ನರನೊಡನೆ–ಫಲ್ಗುಣನೊಂದಿಗೆ, ಸಂಗರಂ–ರಣವು, (ಕಾಳಗವು), ಬೇಡ - ಅಗತ್ಯವಿಲ್ಲ, ಸಾಕು–ನಿಲ್ಲಿಸಿಬಿಡು, ಆತನ–ಆ ಪಾರ್ಥನ, ತುರಂಗಮುವನು–ಅಶ್ವವನ್ನು, ಬಿಡು–ಆವನ ಬಳಿಗೆ ಸೇರಿಸುವವನಾಗು, ನಗರಿಗೆ–ಪೊಳಲಿಗೆ, ನಡೆ–ಹೊರಡು, ಎಂದು–ಎಂಬದಾಗಿ, ವೈಶ್ವಾನರಂ–ಹುತವಹನು, ಗುಣದೊಳು–ಒಳ್ನುಡಿಗಳಿಂದಲೆ, ಅರಸನಂ–ನೀಲಧ್ವಜನೆಂಬಾತನನ್ನು, ತಿರುಗಿಸಿದನು–ಹಿಂದಿರುಗುವಂತೆ ಮಾಡಿದನು, ಅತ್ತಲು–ಆ ಭಾಗದಲ್ಲಿ, ಅರ್ಜುನನು–ಪಾರ್ಥನು, ಉರಿಯ–ಅಗ್ನಿಜ್ವಾಲೆಯ, ಡಾವರಿಯನು–ಉಗ್ರತೆಯನ್ನು, ನಾರಾಯಣಾಸ್ತ್ರದೊಳು–ವಿಷ್ಣುಸಂಬಂಧವಾದ ಬಾಣದಿಂದ, ಎಚ್ಚು–ಹೊಡೆದು, ಭಂಗಿಸಿದನು–ಭಂಗವನ್ನೈದುವಂತೆ ಮಾಡಿದನು, ಅನ್ನೆಗಂ–ಅಷ್ಟು ಹೊತ್ತಿಗೆ, ಗಗನಮಣಿ–ರವಿಯು, ಪಶ್ಚಿಮಾಂಗನೆಯ–ಪಶ್ಚಿಮದಿಕ್ಕನ್ಯಕೆಯ, ಬೈತಲೆಯ–ತಲೆಯ ಮುಂಭಾಗದ, ರಂಗುಮಾಣಿಕದಂತೆ–ರಕ್ತವರ್ಣವಾದ ಮಣಿಯಹಾಗೆ, ಅಸ್ತಗಿರಿ–ಮುಳುಗುವ ಬೆಟ್ಟದ, ಮಸ್ತಕದೊಳು–ಶಿಖರದಲ್ಲಿ, ಕಾಣಿಸುತ–ಗೋಚರವಾಗುತ, ಇರ್ದುದು–ಇದ್ದಿತು.

ಅ‖ ವಿ‖ "ಗಗನಮಣಿ ಪಶ್ಚಿಮಾಂಗನೆಯ ಬೈತಲೆಯ ರಂಗು ಮಾಣಿಕದಂತೆ ಅಸ್ತಗಿರಿ ಮಸ್ತಕದೊಳು ಕಾಣಿಸುತಿರ್ದುದು" ಸಂಧ್ಯಾಕಾಲವಾದ್ದರಿಂದ ಪಶ್ಚಿಮ ಸಮುದ್ರದ ಭಾಗದ ಕಡೆಯಲ್ಲಿ ಕಾಣುವ ಅಂತರಿಕ್ಷ ಭಾಗವು ಕೆಂಪಗಾಯಿತೆಂದು ಮುಖ್ಯಾಶಯವು ‖ ೪೫ ‖

ಟೀ‖ ರಂಜಿಸುವ–ಹೊಳೆ ಹೊಳೆವ. ಪಶ್ಚಿಮಾಚಲ–ಪಶ್ಚಿಮ ದಿಕ್ಕಿನ ಬೆಟ್ಟವೆನ್ನುವ, ಕಿರಾತಂ–ವ್ಯಾಧನು, ತೊಟ್ಟ–ಇಟ್ಟುಕೊಂಡಿರುವ, ಗುಂಜಾಭರಣವೊ–ಗುಲಗಂಜಿಗಳಿಂದ ಮಾಡಿದ ಒಡವೆಯೊ, ಮೇಣ್–ಅಲ್ಲದೆ, ಗಗನಾಂಬುಧಿಯ–ಆಕಾಶವೆಂಬ ಕಡಲಿನ, ತಡಿಯ–ದಡದಲ್ಲಿರುವ, ಮಂಜು–ಮನಸ್ಸಿಗೆ ಇಂಪಾದ, ವಿದ್ರುಮಲತೆಯೊ–ಪ್ರವಾಳದ ಬಳ್ಳಿಯೊ, ಬಗೆಗೆ–ಹಣೆಯ ತಿಲಕಕ್ಕೆ, ಅಪರದಿಕ್ - ಪಡುವಣ ದಿಕ್ಕೆಂಬ, ವಧುವಿನ – ಸ್ತ್ರೀಯ, ಕುಂಕುಮದಲೇಪವೊ - ಕುಂಕುಮವನ್ನಿಟ್ಟರುವಿಕೆಯೊ, ಅಂಜನ–ಅಂಜನವೆಂಬ ಹೆಸರುಳ್ಳ, ಇಭದ–ಪಡುವಣ ದಿಕ್ಕೆಂಬ ಆನೆಯ, ಸಿಂಧುರವೊ–ಅಲಂಕಾರವಾಗಿರು

---

ವರ್ಣಧರ್ಮಾನುಸಾರವಾದ ಕರ್ಮಮಾರ್ಗವನ್ನವಲಂಬಿಸಿ ದೇವರನ್ನು ಸ್ತೋತ್ರ ಮಾಡಿದರೆ ಮುಕ್ತನಾಗುವನು ಇಲ್ಲವಾದರೆ ಕರ್ಮಚಂಡಾಲನಾಗುವನು. ಅದ್ದರಿಂದ ಶ್ರೀ ಕೃಷ್ಣನು ಆಜ್ಞಾಪಿಸಿರುವ ಯಾಗವು ಈಡೇರಲು ಸಹಾಯಕನಾಗಬೇಕೆಂದು ಕೇಳಕೊಂಡನು. ಇದನ್ನೆಲ್ಲಾ ವೈಶ್ವಾನರನು ಕೇಳಿ, ಇನ್ನು ನಿನಿಗೆ ಅಗ್ನಿಬಾಧೆಯುಂಟಾಗುವದಿಲ್ಲವೆಂದು ಅಭಯವನ್ನಿತ್ತು ನೀಲಧ್ವಜನನ್ನು ಕುರಿತು, ‖ ೪೪ ‖ ಎಲೈ ರಾಜನೆ ! ಕೃಷ್ಣಸ್ವಾಮಿಯು ನೆರವಾಗಿರತಕ್ಕ ಈ ಅರ್ಜುನನೊಂದಿಗೆ ಯುದ್ಧಮಾಡಬೇಕೆಂದಿರುವ ಹಂಬಲವನ್ನು ಬಿಟ್ಟು ಯಜ್ಞಾಶ್ವವನ್ನೊಪ್ಪಿಸಿ ಪಟ್ಟಣಕ್ಕೆ ಹೊರಡೆಂದು ಸಮಾಧಾನೋಕ್ತಿಗಳಿಂದ ಹೇಳಿದನು. ಅಗ್ನಿದೇವನಿಂದ ಅನುಗ್ರಹವಂ ತಾಳ್ದ ಅರ್ಜುನನು ವೈಷ್ಣವಾಸ್ತ್ರ ಪ್ರಯೋಗದಿಂದ ಸೇನೆಯಲ್ಲಿ ಅನಲನ ಭಾಧೆಯಂ ಪರಿಹರಿಸುವ ಕಾಲಕ್ಕೆ ಸರಿಯಾಗಿ ಸೂರ್ಯನು ಪಶ್ಚಿಮದಿಕ್ಕಿನಲ್ಲಿರುವ ಸಮುದ್ರದಲ್ಲಿ ಮುಳುಗಲುದ್ಯುಕ್ತನಾದನು‖೪೫‖ ಆಗ ಪಶ್ಚಿಮಗಿರಿ ಎಂಬ ಬೇಡನು ಧರಿಸಿದ ಗುಲಗಂಜಿಗಳಿಂದ ಮಾಡಿದ ಆಭರಣವೋ ಎಂಬಂತೆಯೂ, ಆಗಸವೆಂಬ ಸಮುದ್ರದಲ್ಲಿ ಹುಟ್ಟಿದ ಸೊಗಸಾದ ಹವಳದ ಬಳ್ಳಿಯೋ ಎಂಬತೆರನಾಗಿಯೂ, ಪಶ್ಚಿಮದಿಕ್ಕನ್ನೆಯ ಹಣೆಯನ್ನಲಂಕರಿಸಿದ

ವೆಣ್ಣುಟ್ಟರಕ್ತಾಂಬರವೊಪೇಳೆನಲ್ಕಾಬೈಗುಕೆಂಪೆಸೆದುದು || ೪೬ || ಬಿಚ್ಚಪೆಣೆವಕ್ಕಿಗಳಹೃದಯಮುಂಬೇಯಿಸುವ | ಪೊಚ್ಚ ಪೊಸಕೆಂಡಂಗಳೆನೆಲೋಕಮಂನುಂಗ | ಲಿಚ್ಛೈಸಿಬಪ್ಪಕತ್ತಲೆಯೆಂಬಕಾಳರಕ್ಕಸಿಕೋಪದಿಂದುಗುಳ್ದ || ಕಿಚ್ಚಿನಕೆದ ರ್ಗಿಡಿಗಳೆನೆತನ್ನಬಾಳುವಿಗೆ | ನಚ್ಚಿನವಳೀರಾತ್ರಿವಧುವೆಂದುಹಿಮುಕರಂ | ಮೆಚ್ಚಿಮುಂಗಳುಪಿದೆಳೆವಾಣಿಕದಮಣಿಗಳೆನೆಸಂಜೆ ಧಾರೆಗಳೆಸೆದವು ||೪೭|| ಪಿಡಿದವುಪಕ್ಷಿಗಳ್ಗೂಡಿಂಗೆದೆಸೆಗಳಂ | ನೋಡಿದುವುಘೂಕಂಗಳಳಿಗಳಂಸೆರೆಗೈದು | (ಸೆರೆಯಿಟ್ಟು) ಹೂಡಿದುವುಬಾಗಿಲಂಕಮಲಂಗಳರಳ್ದವಿಂದೀವರಂಗಳ್ನಭದೊಳು || ಮೂಡಿದುವುತಾರೆಗಳ್ಚಕ್ರವಾಕಂಗಳಂ | ಕಾಡಿದವುವಿರಹ

---

ವುದಕ್ಕಾಗಿ ಇಟ್ಟುಕೊಂಡಿರುವ ಚಂದ್ರವೊ, ಶಿವನ-ಪರಮೇಶ್ವರನ, ಕೇಶಗಳ-ಕೂದಲುಗಳ, ಕೆಂಜೆಡೆಯೊ-ಕೆಂಪಾದ ಜಡೆಯೊ, ವಿಷ್ಣುಪದ-ಅಂತರಿಕ್ಷವೆನ್ನತಕ್ಕ, ಪಂಕರುಹದ-ಕೆಂದಾವರೆಯ, ಅರುಣತೆಯೊ-ರಕ್ತಛಾಯೆಯೊ, ಸಂಜೆ-ಸಾಯಂಕಾಲವೆಂಬ, ಪೆಣ್-ನಾರಿಯು, ಉಟ್ಟ-ಉಟ್ಟುಕೊಂಡಿರುವ, ರಕ್ತಾಂಬರವೊ-ಕೆಂಪು ಬಟ್ಟೆಯೋ? ಪೇಳು-ನುಡಿ, ಎನಲ್ಕೆ-ಎಂದು ಹೇಳು ವಂತೆ, ಆ ಬೈಗುಗೆಂಪು-ಆ ಸಂಜೆಗೆಂಪು, ಎಸೆದುದು-ಕಾಂತಿಯುಕ್ತವಾಯಿತು.

ಅ|| ವಿ|| ಪಶ್ಚಿಮಾಚಲ – ಗಗನಾಂಬುಧಿ, ಗುಂಜಾಭರಣ-ರಕ್ತಾಂಬರ ಇವುಗಳೆಲ್ಲಾ ಸ. ದೀ. ಸಂಧಿ. ಕೆಂಜೆಡೆ-ಕೆಚ್ಚನೆ+ಜಡೆ (ವಿ. ಪೂ) ||೪೬||

ಟೀ|| ಬಿಚ್ಚ-ಪರಸ್ಪರ ಕೂಡುವುದು ಮತ್ತು ಕ್ರೀಡಿಸುವುದನ್ನು ಅಪೇಕ್ಷಿಸುವ, ಪೆಣೆವಕ್ಕಿಗಳ-ಚಕ್ರವಕ್ಕಿಗಳ, ಹೃದ ಯಮುಂ-ಮನಸ್ಸನ್ನು, ಬೇಯಿಸುವ-ಸುಡತಕ್ಕ, ಪೊಚ್ಚ-ಪರಿಶುದ್ಧವಾದ, ಪೊಸ-ಹೊಸದಾದ, ಕೆಂಡಗಳು-ಬೆಂಕಿಯ ತುಂಡು ಗಳು (ಕೆಂಡಗಳು), ಎನೆ-ಎಂಬ ತೆರನಾಗಿಯೂ, ಲೋಕಮಂ-ಭೂಮಂಡಲವನ್ನೆಲ್ಲಾ, ನುಂಗಲು-ನುಂಗಿ ಬಿಡಲು, ಇಚ್ಛೈಸಿ-ಬಯಸಿ, ಬಪ್ಪ-ಬರುವ, ಕತ್ತಲೆಯೆಂಬ-ಅಂಧಕಾರವೆನ್ನತಕ್ಕ, ಕಾಳ-ಕಪ್ಪಗಿರುವ, ಅಂತ್ಯಕಾಲದ, ರಕ್ಕಸಿ-ರಾಕ್ಷಸಸ್ತ್ರೀಯು, ಕೋಪದಿಂದ-ಸಿಟ್ಟಿನಿಂದ, ಉಗುಳ್ದ-ಹೊರಗೆ ಉಗುಳಿದಂಥ, ಕಿಚ್ಚಿನ-ಬೆಂಕಿಯ, ಕೆದರ್ದ-ಅಲ್ಲಲ್ಲಿಗೆ ಎರಚಿದ, ಕಿಡಿಗಳು-ಬೆಂ ಕಿಯ ಕೆಂಡಗಳು, ಎನೆ-ಎಂಬತೆರನಾಗಿ, ತನ್ನ-ಸ್ವಕೀಯವಾದ, ಬಾಳುವಿಗೆ-ಜೀವಕ್ಕೆ, ಈ ರಾತ್ರಿ ವಧು-ಈ ನಿಶಾ ನಾರಿಯು, ನಚ್ಚಿನವಳು – ತೃಪ್ತಿಪಡಿಸತಕ್ಕವಳು, ಎಂದು-ಎಂಬದಾಗಿ, ಹಿಮುಕರಂ-ಹಿಮಾಂಶುವು (ಚಂದ್ರನು), ಮೆಚ್ಚಿ-ಒಪ್ಪಿ, ಮುಂಗ ಳುಪಿದ-ಮೊದಲೆ ಕಳುಹಿಸಿದ, ಎಳೆ-ಧಾರದಿಂದ, ಪೋಣಿಸಿರತಕ್ಕ, ಮಾಣಿಕದಮಣಿಗಳನೆ-ರತ್ನಗಳೋ ಎಂಬಂತೆ, ಸಂಜೆದಾರೆ ಗಳು-ಸಂಜೆಯ ನಕ್ಷತ್ರರಾಶಿಯು, ಎಸೆದವು-ಹೊಳೆಯಲಾರಂಭಿಸಿದವು.

ಅ|| ವಿ|| ಮಾಣಿಕ (ತ್ಭ)-ಮಾಣಿಕ್ಯ (ತ್ಸ) ||೪೭||

ಟೀ|| ಪಕ್ಷಿಗಳು-ವಿಹಗಂಗಳು (ಹಕ್ಕಿಗಳು), ಗೂಡಿಂಗೆ-ತಮ್ಮ ವಾಸಸ್ಥಳಗಳಿಗೆ, ಪಿಡಿದವು-ಓಡಿಹೋದವು, ಘೂ ಕಂಗಳು-ಗೂಗೆಗಳು, ದೆಸೆಗಳಂ-ಎಲ್ಲಾ ದಿಕ್ಕುಗಳನ್ನೂ, ನೋಡಿದವು-ಎದುರು ನೋಡುತ್ತಲಿದ್ದವು, ಕಮಲಂಗಳು-ತಾವರೆ ಗಳು, ಅಳಿಗಳಂ-ಜೀರುಂಡೆಗಳನ್ನು, ಸೆರೆಗೈದು-ಸೆರೆಹಿಡಿದು, ಬಾಗಿಲಂ - ಬಾಗಿಲಿನ ಹಾಗಿರುವ ದಳಗಳನ್ನು, ಮೂಡಿದವು-ಮುಚ್ಚಿಬಿಟ್ಟವು, (ಕಮಲದ ಹೂಗಳೆಲ್ಲಾ ಮುಗ್ಗುಗಳಾದವು) ಇಂದೀವರಂಗಳ್ – ಕನ್ನೈದಿಲೆಗಳು, ಅರಳ್ದವು-ಅರಳಿಕೊಂ ಡವು, ನಭದೊಳು-ಅಂತರಿಕ್ಷದಲ್ಲಿ, ತಾರೆಗಳು-ನಕ್ಷತ್ರ ಸಮುದಾಯವು, ಮೂಡಿದವು – ಉಂಟಾದವು, ವಿರಹತಾಪಂಗಳು-ಗಂಡ ಹೆಂಡರ ಅಗಲಿಕೆಯಿಂದುಂಟಾಗತಕ್ಕ ಮನೋವ್ಯಥೆಯು, ಚಕ್ರವಾಕಂಗಳಂ – ಚಕ್ರವಾಕಪಕ್ಷಿಗಳನ್ನು, ಕಾಡಿದವು-

---

ಕುಂಕುಮವೆಂಬ ಬಗೆಯಿಂದಲೂ, ಅಂಜನವೆಂಬ ಆನೆಯ ಅಲಂಕಾರಪ್ರಾಯವಾದ ಚಂದ್ರವೊ ಎನ್ನುವ ಹಾಗೂ, ಈಶ್ವ ರನ ಕೆಂಜೆಡೆಯೆಂಬ ಭ್ರಾಂತಿ ಉಂಟಾಗುವಂತೆಯೂ. ಆಕಾಶವೆಂಬ ತಾವರೆಯ ಕೆಂಪು ಬಣ್ಣವೋ ಎಂಬ ರೀತಿಯಾಗಿಯೂ, ಸಂಧ್ಯಾ ನಾರಿಯು ಉಟ್ಟಿರತಕ್ಕ ಕೆಂಪು ವಸ್ತ್ರವೋ ಎನ್ನುವಂತೆಯೂ, ಭ್ರಾಂತಿಯಾಗುವಂತೆ ಪಶ್ಚಿಮದಿಕ್ಕಿನಲ್ಲಿ ಸಂಜೆ ಗೆಂಪುಂಟಾಯಿತು ||೪೬|| ಈ ಸಂಧ್ಯಾರಾಗವಾದರೊ, ರತಿ ಸುಖವನ್ನು ಬಯಸುತ್ತಲಿರುವ ಚಕ್ರವಾಕಪಕ್ಷಿಗಳ ಮನಸ್ಸನ್ನು ತಪಿಸುತ್ತಲಿರುವ ಬೆಂಕಿಯ ಕೆಂಡಗಳೆಂಬಂತೆಯೂ, ಪ್ರಪಂಚವನ್ನೇ ನುಂಗಬೇಕೆಂದು ಬರುವ ಕತ್ತಲೆಯೆಂಬ ಕಾಳರಕ್ಕ ಸಿಯು ಉಗುಳಿದ ಬೆಂಕಿಯ ಕಿಡಿಗಳೆಂಬ ರೀತಿಯಾಗಿಯೂ, ತನ್ನ ಜೀವನಕ್ಕೆ ರಾತ್ರಿಯೆಂಬ ಹೆಂಗಸು ನಂಬಿಕೆಯಾದವ ಳೆಂದು ಚಂದ್ರನು ಮುಂದಾಗಿಯೇ ಕಳುಹಿಸಿಕೊಟ್ಟಿರುವ ಪದ್ಮರಾಗದ ಮಣಿಗಳೆಂಬಂತೆಯೂ ಪ್ರಕಾಶಿಸುತ್ತಲಿತ್ತು ||೪೭|| ಪಕ್ಷಿಗಳೆಲ್ಲವೂ ತಮ್ಮ ತಮ್ಮ ಗೂಡಿಗೆ ಹೋಗಿ ಸೇರಿದವು ಗೂಬೆಗಳು ದಿಕ್ಕುಗಳನ್ನು ನೋಡಲಾರಂಭಿಸಿದವು. ಕಮಲ ಪುಷ್ಪಗಳು ಮೊಗ್ಗಾಗುವಾಗ ಒಳಗಿದ್ದ ಭೃಂಗಗಳು ಅಲ್ಲಿಯೇ ನಿಂತು ಹೋಗುತ್ತಲಿದ್ದವು. ಕನ್ನೈದಿಲೆಗಳೆಲ್ಲಾ ಅರಳಿ ದವು. ಆಕಾಶದಲ್ಲಿ ಎಲ್ಲೆಲ್ಲಿಯೂ ನಕ್ಷತ್ರಗಳು ಕಾಣ ಬಂದವು. ಚಕ್ರವಾಕಗಳು ವಿರಹತಾಪಕ್ಕೊಳಗಾಗಿ ಬಾಧೆ ಪಡ

ತಾಪಂಗಳಳೆಯಲ್ಲಮಂ । ತೀಡಿದವುಕತ್ತಲೆಗಳಲ್ಲಿಗಲ್ಲಿಗೆಮನೆಮನೆಯಸೊಡರ್ಕಣ್ಗೆಸೆದುದು ॥೪೮॥ ರವಿಪಶ್ಚಿಮಾಬ್ಧಿಯಂಮರೆಗೊಳೆತಮಸ್ತೋಮ। ಮವನಿಯಂಮುಸುಕಿತೀತೆರದೊಳಸಿತಧ್ವಜಂಬ । ವರದೊಳ್ಮುರಿದುಭಂಗಿತನಾಗಿತಿರುಗಿದಂತನ್ನಪಟ್ಟಣಕಿತ್ತಲೂ ॥ ಪವನಸಖನಂಬೇಡಿಕೊಂಡುನಾರಾಯಣಾ । ಸ್ತ್ರವನೆಚ್ಚುಪೆಚ್ಚಿದುರಿಯಂಕೆಡಿಸಿನಿಜಸೈನಿ । (ನಿಲಿಸಿ) ಕವನಲ್ಲಿಬಿಡಿಸಿದಂದೇವಪುರಲಕ್ಷ್ಮೀಪತಿಯಮೈದುನಂಮುದದೊಳು ॥೪೯॥

ಸಂಧಿ ೮ಕ್ಕೆ ಪದ್ಯ ೪೩೭ಕ್ಕಂ ಮಂಗಳಮಸ್ತು.

ತೊಂದರೆ ಪಡಿಸಿದವು, ಅಲ್ಲಿಗಲ್ಲಿಗೆ-ಅಷ್ಟಷ್ಟಕ್ಕೆ, ಮನೆ ಮನೆಯ-ಪ್ರತಿಯೊಂದು ಮನೆಯ, ಸೊಡರ್-ದೀಪವು, ಕಣ್ಗೆ-ದೃಷ್ಟಿಗೆ, ಎಸೆದುದು-ಕಾಂತಿಯುಕ್ತವಾಯಿತು ॥೪೮॥

ಟೀ॥ ರವಿ-ದಿನಕರನು, ಪಶ್ಚಿಮಾಬ್ಧಿಯಂ-ಪಶ್ಚಿಮ ಸಮುದ್ರವನ್ನು, ಮರೆಗೊಳೆ-ಆಶ್ರಯಿಸಲು, ತಮಸ್ತೋಮಂ-ಅಂಧಕಾರ ಸಮುದಾಯವು, ಈ ತೆರದೊಳು-ಈ ಬಗೆಯಿಂದ, ಅವನಿಯಂ-ಇಳಾಮಂಡಲವನ್ನು, ಮುಸುಕಿತು-ಕವಿದುಕೊಂಡಿತು, ಅಸಿತಧ್ವಜಂ-ನೀಲಧ್ವಜಮಹೀಪಾಲನು, ಬವರದೊಳ್-ಯುದ್ಧದಲ್ಲಿ, ಮುರಿದು-ಶಕ್ತಿಹೀನನಾಗಿ, ಭಂಗಿತನಾಗಿ-ಸೋತುಬಿಟ್ಟು, ತನ್ನ-ಸ್ವಕೀಯವಾದ, ಪಟ್ಟಣಕೆ-ನಗರಿಗೆ, ತಿರುಗಿದಂ-ಹಿಂದಿರುಗಿದನು, ಇತ್ತಲು-ಈ ಪಾರ್ಶ್ವದಲ್ಲಿ, ಪವನಸಖನಂ-ಅಗ್ನಿಪುರುಷನನ್ನು, ಬೇಡಿಕೊಂಡು-ಯಾಚಿಸಿದವನಾಗಿ, ನಾರಾಯಣಾಸ್ತ್ರವನು-ವೈಷ್ಣವಾಸ್ತ್ರವನ್ನು, ಎಚ್ಚು-ಪ್ರಯೋಗಮಾಡಿ, ಪೆಚ್ಚಿದ-ಹೆಚ್ಚುಪೆಚ್ಚಾದ, ಉರಿಯಂ-ಜ್ವಾಲಾಮಾಲೆಯನ್ನು, ಕೆಡಿಸಿ-ತಗ್ಗಿಸಿ, ನಿಜ-ತನ್ನ, ಸೈನಿಕವನು-ದಳವನ್ನು, ದೇವಪುರ-ಸುರನಗರ ವಾಸಿಯಾದ, ಲಕ್ಷ್ಮೀಪತಿಯ-ಲಕ್ಷ್ಮೀಕಾಂತನಾದ ಕೃಷ್ಣಮೂರ್ತಿಯ, ಮೈದುನಂ-ಭಾವಮೈದುನನಾದ ಅರ್ಜುನನು (ಕೃಷ್ಣನ ತಂಗಿಯಾದ ಸುಭದ್ರೆಯ ಕಾಂತನು) ಮುದದೊಳು-ಆನಂದದಿಂದ, ಬಿಡಿಸಿದಂ-ವಾಸವಾಗಿರುವಂತೆಏರ್ಪಡಿಸಿದನು.

ಅ॥ ವಿ॥ ಪಶ್ಚಿಮಾಬ್ಧಿ, ಅಪ್-ನೀರನ್ನು, ಧಿ-ಧರಿಸುವುದು (ಕೃ. ವೃ.) ಪಶ್ಚಿಮದ ಅಬ್ಧಿ (ಷ. ತ) ಅಸಿತಧ್ವಜಂ-ಸಿತ-ಬಿಳುಪಾದದ್ದು, ಅ-ಅಲ್ಲದಿರುವುದು (ನಞ್ ತತ್ಪುರುಷ) ಅಸಿತ-ಕಪ್ಪುವರ್ಣವನ್ನು, ಧ್ವಜಂ-ಬಾವುಟದಲ್ಲಿ ಉಳ್ಳವನು ಯಾರೊ ಅವನು (ಬ. ಸ.) ಪವನನ ಸಖ (ಷ. ತ.) ಶ್ರೀ ಕೃಷ್ಣನ ತಂಗಿಯಾದ ಸುಭದ್ರೆಯನ್ನು ಅರ್ಜುನಿಗೆ ಕೊಟ್ಟು ಮದುವೆ ಮಾಡಿದ್ದರಾದ್ದರಿಂ ಅರ್ಜುನನು ಕೃಷ್ಣನಿಗೆ ಭಾವಮೈದುನನಾಗಬೇಕಾಯಿತು ॥೪೯॥

ಇಂತು ಟೀಕಾತಾತ್ಪರ್ಯ ಸಹಿತವಾದ ಜೈಮಿನಿಭಾರತದಲ್ಲಿ ಎಂಟನೆಯ ಸಂಧಿಯು ಸಮಾಪ್ತವಾದುದು.

ಲಾರಂಭಿಸಿದವು. ಕತ್ತಲೆಯು ಎಲ್ಲೆಲ್ಲಿಯೂ ಕವಿದುಕೊಂಡಿತು. ಮನೆಮನೆಯಲ್ಲಿಯೂ ದೀಪಗಳು ಕಾಣಬಂದವು॥೪೮॥ಈ ರೀತಿಯಲ್ಲಿ ಸೂರ್ಯಾಸ್ತಮಯಕಾಲಕ್ಕೆಸರಿಯಾಗಿ ನೀಲಧ್ವಜನು ಅಗ್ನಿಯ ಮಾತಿನಂತೆ ಒಪ್ಪಿ ತನ್ನಪಟ್ಟಣಕ್ಕೆ ಹಿಂತಿರುಗಿ ಹೊರಟುಹೋದನು, ಇತ್ತ ಅರ್ಜುನನಾದರೊ,ನಾರಾಯಣಾಸ್ತ್ರದಿಂದ ಅಗ್ನಿಬಾಧೆಯನ್ನೆಲ್ಲಾತಪ್ಪಿಸಿ ಜಯಶೀಲನಾದ್ದರಿಂದ ಸಂತುಷ್ಟಾಂತರಂಗನಾಗಿ, ಚತುರಂಗಬಲದಿಂದ ಯಜ್ಞಾಶ್ವವನ್ನು ಬಿಡಿಸಿಕೊಂಡು, ಆ ರಾತ್ರಿಯನ್ನುಅಲ್ಲಿಯೇ ಸುಖದಿಂದಕಳೆಯುತ್ತಲಿದ್ದನೆಂಬಲ್ಲಿಗೆ,

ಟೀಕಾತಾತ್ಪರ್ಯಸಹಿತವಾದ ಜೈಮಿನಿ ಭಾರತದೊಳು ಎಂಟನೆಯ ಸಂಧಿಯು ಸಮಾಪ್ತವಾದುದು. ॥೪೯॥



## ಒಂಭತ್ತನೆಯ ಸಂಧಿ.

ಸೂಚನೆ॥ ಜ್ವಾಲೆ ನಿಜಕಾಂತನಂ ಛಲದಿಂದ ಬಿಟ್ಟುತ | ನ್ನಾಲಯದೊಳಿರದೆ ಪೊರಮಟ್ಟು ಬಂದರ್ಜುನನ |
ಮೇಲೆ ತಂತ್ರವನೆಸಗಿಶಾಪಮಂ ಕೊಡಿಸಿದಳ್ದೇವನದಿಯಂಕೆರಳ್ಚಿ ॥

ಇಂದು ಕುಲತಿಲಕಜನಮೇಜಯನರೇಂದ್ರಕೇ | ಳೆಂದು ನೀಲಧ್ವಜಂತಿರುಗಿ ತನ್ನರಮನೆಗೆ | ಬಂದಂವೈಶ್ವಾನರ ನನುಜ್ಞೆಯಿಂ ಪಾರ್ಥನ ತುರಂಗಮುಂ ಬಿಡುವೆನೆಂದು ॥ ನಿಂದು ಮಂತ್ರಿಗಳ ಕರಸಲ್ಕದಂ ಕೇಳ್ದುನಡೆ | ತಂದುನುಡಿದಳ್ಜ್ವಾ ಲೆಯೆಂಬರಸಿಪತಿಗೆನೀ | ನಿಂದುಸಿತವಾಹನಂಗೀಯದಿರ್ಕುದುರೆಯ ಬೆದರದಿರೆನುತತಡೆದಳು ॥ ೧ ॥ ಅನ್ನೆಗಂಕೇಳ್ದಜನಮೇಜ ಯನರೇಶ್ವರಂ | ತನ್ನಮನದೊಳ್ಸಂದೆಗಂಬಟ್ಟು ಬೆಸಗೊಂಡ | ನಿನ್ನೊಮ್ಮೆತಿಳುಪೆಲೆಮುನೀಂದ್ರತಾಪಸೋತ್ತಮಾಪಟ್ಟಣದೊ

---

ಒಂಭತ್ತನೆಯ ಸಂಧಿ ಪ್ರಾರಂಭವು.

ಸೂಚನೆ:—ಜ್ವಾಲೆ-ಜ್ವಾಲೆಯೆಂಬ ನಾರಿಯು, ನಿಜ-ಸ್ವಕೀಯನಾದ, ಕಾಂತನಂ - ರಮಣನನ್ನು, ಛಲದಿಂದ- ದ್ವೇಷದಿಂದ, ಬಿಟ್ಟು-ಬಿಟ್ಟುಬಿಟ್ಟು, ತನ್ನ-ತನ್ನದಾದ, ಆಲಯದೊಳು- ಮನೆಯಲ್ಲಿ, ಇರದೆ-ಸುಮ್ಮನಿರದೆ, ಪೊರಮಟ್ಟು- ಹೊರಟು, ಬಂದು-ಸಮೀಪವನ್ನು ಸೇರಿ, ಅರ್ಜುನನಮೇಲೆ-ಪಾರ್ಥನೊಂದಿಗೆ, ತಂತ್ರವನು-ಮೋಸಕಾರ್ಯವನ್ನು,ಎಸಗಿ-ಮಾಡಿ, ದೇವನದಿಯಂ-ಸುರನದಿಯಾದ ಗಂಗಾಪ್ರವಾಹವನ್ನು, ಕೆರಳ್ಚಿ-ಕೋಪಬರುವಂತೆ ಮಾಡಿ, ಶಾಪಮಂ-ತೊಂದರೆಯಾಗಬೇ ಕೆಂಬ ಹರಿಕೆಯನ್ನು, ಕೊಡಿಸಿದಳ್=ಕೊಡಿಸಿದವಳಾದಳು. ॥

ಅ॥ ವಿ॥ ದೇವನದಿ-ದೇವತೆಗಳ ನದಿ (ಷ. ತ.) ತನ್ನ+ಆಲಯ=ತನ್ನಾಲಯ (ಲೋ. ಸಂಧಿ).

ಟೀ॥ ಇಂದುಕುಲತಿಲಕ-ಇಂದು-ಹಿಮಕರನ, ಕುಲ-ಸಂತತಿಗೆ, ತಿಲಕ-ಅಲಂಕಾರ ಪ್ರಾಯನಾಗಿರುವ, ಜನಮೇ ಜಯ-ಜನಮೇಜಯನೆಂಬ ಹೆಸರುಳ್ಳ, ನರೇಂದ್ರ-ಮನುಜೇಶ್ವರನೇ ! ಕೇಳು-ಲಾಲಿಸು, ಅಂದು - ಆದಿನ, ನೀಲಧ್ವಜಂ- ನೀಲಧ್ವಜನೆಂಬ ಮಾಹಿಷ್ಮತಿಯ ಅರಸು, ತಿರುಗಿ-ಯುದ್ಧದಿಂದ ಹಿಂಜರಿದು, ತನ್ನ-ಸ್ವಕೀಯವಾದ, ಅರಮನೆಗೆ-ರಾಜಭವ ನಕ್ಕೆ, ಬಂದು-ಐತಂದು, ವೈಶ್ವಾನರನ-ಅಗ್ನಿಪುರುಷನ, ಅನುಜ್ಞೆಯಿಂ-ಅಪ್ಪಣೆಯಿಂದ, ಪಾರ್ಥನ-ಫಲ್ಗುಣನ, ತುರಂಗಮಂ- ಅಶ್ವವನ್ನು, ಬಿಡುವೆನು-ಅರ್ಜುನನಿಗೆ ಒಪ್ಪಿಸುವೆನು, ಎಂದು-ಎಂಬದಾಗಿ, ನಿಂದು-ಸ್ಥಿರಚಿತ್ತನಾಗಿ, ಮಂತ್ರಿಗಳ-ಅಮಾತ್ಯ ರನ್ನು, ಕರೆಸಲ್ಕೆ-ಬರಹೇಳಲು, ಅದಂ-ಆ ಸುದ್ದಿಯನ್ನು, ಜ್ವಾಲೆಎಂಬ - ಜ್ವಾಲೆ ಎಂಬ ಹೆಸರುಳ್ಳ, ಅರಸಿ - ನೀಲಧ್ವಜನ ರಾಣಿಯು, ಕೇಳ್ದು-ತಿಳಿದವಳಾಗಿ, ನಡೆತಂದು-ಗಂಡನ ಬಳಿಗೆ ಬಂದು, ಪತಿಗೆ-ತನ್ನ ಕಾಂತನನ್ನು ಕುರಿತು, ನುಡಿದಳು- ಮುಂದೆ ಹೇಳುವಂತೆ ಆಡುವಳು, ನೀನು-ನೀನಾದರೊ, ಇಂದು-ಈಹೊತ್ತು, ಸಿತವಾಹನಂಗೆ-ಬಿಳೀ ಕುದುರೆಗಳನ್ನು ಕಟ್ಟಿದ ರಥವುಳ್ಳ ಪಾರ್ಥನಿಗೆ, ಕುದುರೆಯಂ-ಹಯವನ್ನು, ಈಯದಿರ್-ಬಿಟ್ಟುಕೊಡಬೇಡ, ಬೆದರದೆ-ದಿಗಲು ಬೀಳದೆ, ಇರು-ಇರುವ ವನಾಗು, ಎನುತ-ಎಂದು ನುಡಿಯುತ್ತ, ತಡೆದಳು-ಕುದುರೆಯನ್ನು ಕೊಡಲು ನಿರೋಧಿಸಿ ಬಿಟ್ಟಳು.

ಅ॥ ವಿ॥ ಇಂದು-ಚಂದ್ರ (ಸಂ. ಪದ ) ಈಗ-(ಕ. ಪದ.) ಇಂದು ಕುಲತಿಲಕ-ಇಂದುವಿನ ಕುಲ (ಷ. ತ.) ಇಂದು ಕುಲದಲ್ಲಿ ತಿಲಕ (ಸ. ತ.) ನರೇಂದ್ರ-ನರರ ಇಂದ್ರ (ಷ. ತ. ಮತ್ತು ಗುಣಸಂಧಿ) ॥೧॥

ಟೀ॥ ಅನ್ನೆಗಂ-ಅಷ್ಟು ಹೊತ್ತಿನವರೆಗೂ, ಕೇಳ್ದ-ಕಥೆಯನ್ನಾಲಿಸುತ್ತಲಿದ್ದ, ಜನಮೇಜಯ-ಜನಮೇಜಯನೆಂಬ, ನರೇಶ್ವರನು-ರಾಜನು, ತನ್ನ-ಸ್ವಕೀಯನಾದ, ಮನದೊಳು-ಚಿತ್ತದಲ್ಲಿ, ಸಂದೆಗಂಬಟ್ಟು-ಅನುಮಾನವಂ ಹೊಂದಿ, ಎಲೆ ಮುನೀಂದ್ರ-ಎಲೈ ತಾಪಸೋತ್ತಮನಾದ ಜೈಮಿನಿಮುನಿಯೇ ! ಇನ್ನೊಮ್ಮೆ-ಮತ್ತೊಂದಾವರ್ತಿ, ತಿಳಿಪು-ಈ ಕಥೆಯನ್ನು

---

ಒಂಭತ್ತನೆಯ ಸಂಧಿಯ ಕಥಾಸಾರವು.

ಅನಂತರದಲ್ಲಿ ಜೈಮಿನಿ ಋಷಿಯು ಜನಮೇಜಯರಾಯನಂ ಕುರಿತು, ಕೇಳೈ ಜನಮೇಜಯ ಮಹೀಂದ್ರನೆ! ಆ ಬಳಿಕ ನೀಲಧ್ವಜನು ಯುದ್ಧರಂಗವನ್ನು ಬಿಟ್ಟು ತನ್ನರಮನೆಗೆ ಬಂದು ಮುಖ್ಯಾಮಾತ್ಯರನ್ನೆಲ್ಲಾ ಕರೆಯಿಸಿ ತಾನು ಹಿಡಿದಿರುವ ಉತ್ತ ಮಾಶ್ವವನ್ನು ಅರ್ಜುನನಿಗ ಒಪ್ಪಿಸಬೇಕೆಂದು ಅಗ್ನಿಪುರುಷನ ಅಪ್ಪಣೆಯಾಗಿರುವುದರಿಂದ ಈ ವಿಷಯದಲ್ಲಿ ನಿಮ್ಮಗಳ ಅಭಿಪ್ರಾ ಯವೇನೆಂದು ಕೇಳುತ್ತಿದ್ದ ಸುದ್ದಿಯನ್ನು ಅಂತಃಪುರದಲ್ಲಿದ್ದ ನೀಲಧ್ವಜನ ಪಟ್ಟದರಸಿಯಾದ ಜ್ವಾಲೆಯೆಂಬಾಕೆಯು ಕೇಳಿ, ಜಾಗ್ರತೆಯಲ್ಲಿ ಗಂಡನ ಬಳಿಗೆ ಬಂದು, ಎಲೈ ರಮಣನೆ ! ನೀನು ಈ ಯಜ್ಞಾಶ್ವವನ್ನು ಅರ್ಜುನನಿಗೆ ಕೊಡಬೇಡ, ಹೆದರದೆ ಯುದ್ಧಮಾಡತೊಡಗೆಂದು ಬೋಧಿಸಿ ಕುದುರೆಯನ್ನು ಕೊಡಲು ಅಡ್ಡಿಮಾಡಿದಳು. ॥೧॥ ಎಂಬದಾಗಿ ಹೇಳುತ್ತಲಿದ್ದ ಜೈಮಿನಿ ಮುನಿಪನನ್ನು ಕುರಿತು, ಜನಮೇಜಯನು, ಎಲೈ ಜೈಮಿನಿಮುನಿಪುಂಗವನೇ ! ಮಾಹಿಷ್ಮತೀನಗರದಲ್ಲಿ ಅಗ್ನಿಯು ಇದ್ದ ಕಾರ

ಇರ್ದನು || ಮನ್ನಣೆಯುನುನೆಯಳಿಯನೆಂತಾದನಾನೃಪನ | ಕನ್ನಿಕೆಯದೇನಮಾಡಿದಳದರವೃತ್ತಾಂತ | ಮಂನಿರೂಪಿಸವೇಳ್ಪುದೆನೆನುತ್ತೆಜೈಮಿನಿಧರಾಧಿಪಂಗಿಂತೆಂದನು || ೨ || ಆಲಿಸಿನ್ನಾದೊಡೆಲೆಭೂಪನೀಲಧ್ವಜಂ | ಜ್ವಾಲೆಯೆಂಬರಸಿಯೋಳ್ಪಡೆದನತಿರೂಪಗುಣ | ಶೀಲಂಗಳಿಂದೆಸೆವತನುಜೆಯಂಸ್ವಾಹಾಭಿಧಾನದೋಳ್ಬೆಳೆವುತಿರುವ || ಆಲೋಲಲೋಚನೆಗೆಜನ್ವನಂಬರೆಪಿತಂ | ಮೂಲೋಕದೊಳಗುಳ್ಳ ಪುರುಷರ್ಕಳಂಪಠದ | ಮೇಲೆರೂಪಿಸಿತೋರಿದನಿತರೊಳಗಾರ್ನಿನಗೆವಲ್ಲಭರ್ಪೇಳ್ವುದೆಂದು || ೩ || ವಿಪುಲಗಂಧರ್ವಯಕ್ಷೋರಗಸುರಾಸುರರ | ನಪಹಾಸವಂಮಾಡಿಸಕಲಭೂಮಂಡಲದ | ನೃಪವರ್ಗಮಂಹಳಿದುಹರಿಹರವಿರಂಚಿತ

---

ವಿಶದಪಡಿಸು, ಪಾವಕನು–ಯಜ್ಞೇಶ್ವರನು, ಆ ಪಟ್ಟಣದೊಳು–ಆ ಮಾಹಿಷ್ಮತೀ ನಗರದಲ್ಲಿ, ಏತಕೆ–ಯಾವ ಕಾರಣದಿಂದ, ಇರ್ದನು – ಇದ್ದವನಾದನು ?, ಮನ್ನಣೆಯ – ಮರ್ಯಾದೆಯನ್ನು ಮಾಡಿಸಿಕೊಳ್ಳತಕ್ಕ, ಮನೆಯಳಿಯನು – ಮನೆಯಲ್ಲಿಯೇ ಇರುವ ಜಾಮಾತೃವು (ಅಳಿಯನು), ಎಂತು–ಹೇಗೆ, ಆದನು–ಆಗಿರುವನು ?, ಆನೃಪನ–ಆ ಮಾಹಿಷ್ಮತಿಯ ಅರಸನ, ಕನ್ನಿಕಯು–ಕುವರಿಯು, ಅದೇನಮಾಡಿದಳು–ಈ ಅಗ್ನಿಯನ್ನು ವರಿಸಲು ಯಾವ ಕಾರ್ಯವನ್ನು ಮಾಡಿದಳು ?, ಅದರ–ಆಕೆಯು ಮಾಡಿದ, ಅಥವಾ ಅಗ್ನಿಯು ನೀಲಧ್ವಜನ ಅಳಿಯನಾದ, ವೃತ್ತಾಂತವಂ–ಬಗೆಯನ್ನು, ನಿರೂಪಿಸವೇಳ್ಪುದು–ತಿಳಿಸಬೇಕು, ಎಂದು–ಎಂಬದಾಗಿ, ಬೆಸಗೊಂಡನು–ಕೇಳಿಕೊಂಡನು. ಎನೆ – ಹೀಗೆಂದು ಜನಮೇಜಯನು ಕೇಳಲು, ಜೈಮಿನಿ–ಜೈಮಿನಿ ಋಷಿಯು, ಮತ್ತು–ಪುನಃ, ಧರಾಧಿಪಂಗೆ–ಭೂಕಾಂತನಾದ ಜನಮೇಜಯನಿಗೆ, ಇಂತು–ಮುಂದೆ ಹೇಳುವಂತೆ, ಎಂದನು–ನುಡಿದನು.

ಅ|| ವಿ|| ಸಂದೆಗಂ–ತ್ಭ–ಸಂದೇಹ, ತ್ಸ, ಮಾನ್ಯತಾ, ತ್ಸ–ಮನ್ನಣ, ತ್ಧ. || ೨ ||

ಟೀ|| ಎಲೈ ಭೂಪ–ಎಲೈ ಜನಮೇಜಯನೆ ! ಆದಡೆ–ಹಾಗಾದರೆ, ಇನ್ನು–ಮತ್ತೊಂದು ಬಾರಿ, ಆಲಿಸು–ಕೇಳುವವನಾಗು, ನೀಲಧ್ವಜಂ–ನೀಲಧ್ವಜನೆಂಬರಸು, ಜ್ವಾಲೆಎಂಬ–ಜ್ವಾಲಾದೇವಿ ಎನ್ನತಕ್ಕ, ಅರಸಿಯೋಳ್–ತನ್ನ ರಾಣಿಯಲ್ಲಿ, ಅತಿ–ಹೆಚ್ಚಾದ, ರೂಪ–ಸೌಂದರ್ಯವು, ಗುಣ–ಸದ್ಗುಣಗಳು, ಶೀಲಂಗಳಿಂದ–ಒಳ್ಳೆನಡತೆಗಳಿಂದ, ಎಸೆವ–ಹೊಳೆಯುವ, ತನುಜೆಯಂ–ಮಗಳನ್ನು, ಪಡೆದನು–ಹೊಂದಿದನು, ಸ್ವಾಹಾ–ಸ್ವಾಹಾ ಎನ್ನುವ, ಅಭಿಧಾನದೋಳ್ – ನಾಮಧೇಯದಿಂದ, ಬೆಳೆವುತ–ಅಭಿವೃದ್ಧಿಯಾಗುತ್ತ, ಇರುವ–ಇರತಕ್ಕ, ಆಲೋಲಲೋಚನೆಗೆ–ಆ ಚಪಲನೇತ್ರಂಗಳನ್ನುಳ್ಳ ನೀಲಧ್ವಜನ ಕುವರಿಗೆ, ಜನ್ವನಂ–ಹರೆಯವು, ಬರೆ–ಉಂಟಾಗಲು, ಪಿತಂ–ಇವಳ ತಂದೆಯು, ಮೂಲೋಕದೊಳಗೆ – ಸ್ವರ್ಗ ಮರ್ತ್ಯ ಪಾತಾಳಂಗಳೆಂಬ ಮೂರರಲ್ಲಿಯೂ, ಉಳ್ಳ–ಇರುವ, ಪುರುಷರ್ಕಳಂ – ಮಾನವರನ್ನು, ಪಠದಮೇಲೆ – ಕಾಗದದಮೇಲೆ, ರೂಪಿಸಿ–ರಚಿಸಿ, ತೋರಿದಂ–ಸ್ವಾಹಾದೇವಿಯ ಮುಂದೆ ಇಟ್ಟನು. ಅನಿತರೊಳಗೆ–ಚಿತ್ರಮಾತ್ರದ ಅಷ್ಟುಮಂದಿಯಲ್ಲಿ, ನಿನಿಗೆ–ನಿನ್ನ ಸಲುವಾಗಿ, ವಲ್ಲಭಂ–ರಮಣನಾಗತಕ್ಕವನು, ಆರ್–ಯಾವ ಪುರುಷನು ? ಪೇಳ್ವುದು–ಹೇಳತಕ್ಕದ್ದು, ಎಂದು–ಎಂಬತೆರನಾ ಎಂದನು–ಮಗಳೊಂದಿಗೆ ಹೇಳಿದನು.

ಅ|| ವಿ|| ತನುಜೆ–ತನು–ಶರೀರದಲ್ಲಿ, ಜೆ–ಹುಟ್ಟಿದವಳು (ಕೃ. ವೃ.) ಬೆಳೆ–ಸಸ್ಯವೃದ್ಧಿಯಲ್ಲಿ ಪ್ರಯೋಗಿಸತಕ್ಕ ಶಬ್ದ, ಬಳೆ–ಸಸ್ಯೇತರ ವಸ್ತುಗಳ ಏಳಿಗೆಯಲ್ಲಿ ಪ್ರಯುಕ್ತವಾಗತಕ್ಕ ಶಬ್ದ. || ೩ ||

ಟೀ|| ವಿಪುಲ–ಅನೇಕರಾದ, ಗಂಧರ್ವ–ಗಂಧರ್ವರನ್ನೂ, ಯಕ್ಷ–ಯಕ್ಷರೆಂಬುವವರನ್ನೂ, ಉರಗ–ಹಾವುಗಳನ್ನೂ, ಸುರ–ಅಮರರನ್ನೂ, ಅಸುರರನು–ರಕ್ಕಸರನ್ನೂ, ಅಪಹಾಸವಂಮಾಡಿ – ಪರಿಹಾಸ್ಯವಂಗೈದು, ಸಕಲ–ಎಲ್ಲಾ ಭೂಮಂಡಲದ,

---

ಣವನ್ನೂ, ನೀಲಧ್ವಜ ರಾಯನಿಗೆ ಅವನು ಅಳಿಯನಾದ ತೆರನನ್ನೂ, ಆ ರಾಜನ ಮಗಳು ಅಗ್ನಿಯನ್ನು ವರಿಸಲು ಏನೇನು ಮಾಡಿದಳೆಂಬುದನ್ನೂ ನನಗೆ ಸವಿಸ್ತಾರವಾಗಿ ಮತ್ತೊಂದಾವರ್ತಿ ತಿಳಿಯಪಡಿಸಬೇಕೆಂದು ಕೇಳಲು, ಜೈಮಿನಿ ಋಷಿಯು ನೀಲಧ್ವಜನಿಗೆ ಅಗ್ನಿಯು ಅಳಿಯನಾದ ಕಥೆಯನ್ನು ಹೇಳತೊಡಗಿದನು. || ೨ || ಕೇಳೈ ಜನಮೇಜಯನೆ ! ನೀಲಧ್ವಜನೆಂಬ ಮಾಹಿಷ್ಮತೀ ನಗರದ ರಾಜನು ಜ್ವಾಲೆಯೆಂಬ ತನ್ನ ಪಟ್ಟಮಹಿಷಿಯಲ್ಲಿ ಸುಗುಣ, ಸೌಶೀಲ್ಯಾದಿಗಳಿಂ ಮೆರೆವ ಸ್ವಾಹಾ ಎಂಬ ಹೆಸರುಳ್ಳ ಕನ್ಯಾರತ್ನವಂ ಪಡೆದನು. ರಾಜನೂ, ರಾಣಿಯೂ ಈ ಮಗುವನ್ನು ಪ್ರೀತ್ಯತಿಶಯದಿಂದ ಸಾಕುತ್ತಲಿರುವಾಗೆ ತನ್ನ ಕುವರಿಯು ಪ್ರಾಯಸಮರ್ಥಳಾಗುತ್ತಾ ಬರುತ್ತಿರುವವನ್ನು ದೊರೆಯು ಕಂಡು ಸ್ವರ್ಗ, ಮರ್ತ್ಯ, ಪಾತಾಳಂಗಳೆಂಬ ಮೂರು ಲೋಕಂಗಳಲ್ಲಿರುವ ಸುಂದರ ಪುರುಷರ ಭಾವಚಿತ್ರಗಳನ್ನು ತರಿಸಿ, ತನ್ನ ಮಗಳಾದ ಸ್ವಾಹಾದೇವಿಯನ್ನು ಕುರಿತು, ಎಲೈ ಮಗುವೆ! ಇಷ್ಟುಜನ ಪುರುಷಶ್ರೇಷ್ಠರಲ್ಲಿ ನಿನ್ನ ಮನ ಒಪ್ಪತಕ್ಕವನು ಯಾರಾದರೂ ಇದ್ದರೆ ಹೇಳೆಂದು ಚಿತ್ರಪಠಗಳನ್ನೆಲ್ಲಾ ತನ್ನಣುಗಿಯ ವಶಕ್ಕೆ ಕೊಟ್ಟನು. || ೩ || ಸ್ವಾಹಾ ಎಂಬ ನೀಲಧ್ವಜನ ಕುವರಿಯು ತಂದೆಯು ಕೊಟ್ಟ

ಕ್ರಾದಿಗಳನಿಳಿಕೆಗೈದು ॥ ತಪನೇಂದುಮನ್ಮಥನಸಂತರ್ಕಳಂಜರಿದ । ನುಪಮದಿಕ್ಪಾಲಕರನಡುವೆಕುಳ್ಳಿರ್ದರಾ । ಜಿಪವೀತಿ ಹೋತ್ರನಂಕಂಡಿವಳ್ತೋರಿಸಿದಳೆನಗಿವಂಕಾಂತನೆಂದು ॥ ೪ ॥ ಆನೀಲಕೇತುನೃಪನವಳನುಡಿಗೇಳ್ದಣುಗೆ । ನೀನಘಟಿತದವರವ ನೂಹಿಸಿದೆಪೇಳ್ದೊಡಾ । ನೇನಪ್ಪುದೆಂದುಚಿಂತಿಸುತಿರ್ಪತಾತನಂಜರಿದುಬೀಳ್ಕೊಂಡುಬಳಿಕ ॥ ಮಾನಿನಿಪುರೋದ್ಯಾನದೋಳ್ಪ್ರ ವಾಹಿಪನರ್ಮ । ದಾನದಿಗೆಬಂದುಮಿಂದಲ್ಲಿಸುವ್ರತೆಯಾಗಿ । ನಾನಾವಿಧಾನದಿಂದರ್ಚಿಸಿದಳಗ್ನಿಯಂಭಕ್ತಿಯಿಂದನುದಿನ ದೊಳು ॥ ೫ ॥ ಪಾವಕಂಮೆಚ್ಚಿದನವಳಭಕ್ತಿನೋಂಪಿಗೆಮ । ಹೀವಿಬುಧವೇಷಮಂತಾಳ್ದುನೀಲಧ್ವಜನ । ಚಾವಡಿಗೆಬರಲಾತ ನಿದಿರೆದ್ದುಸತ್ಕರಿಸಿಕೈಮುಗಿದುವಿನಯದಿಂದ ॥ ನೀವುಬಿಜಯಂಗೈದಕಾರ್ಯಮಂಬೆಸಸಿಯೆನ । ಲಾವುಕನ್ಯಾರ್ಥಿಗಳ್ಕೊಡುನಿನ್ನ

ಇಳಾವಲಯದಲ್ಲಿರತಕ್ಕ, ನೃಪವರ್ಗಮಂ-ಅರಸರ ಸಮುದಾಯವನ್ನು, ಪಳಿದು-ಜರೆದು, ಹರಿಹರವಿರಂಚಿಶಕ್ರಾದಿಗಳನು-ಹರಿ-ವಿಷ್ಣುವು, ಹರ-ಈಶ್ವರನು, ವಿರಿಂಚಿ-ಬ್ರಹ್ಮದೇವರು, ಶಕ್ರ-ದೇವೇಂದ್ರನು, ಆದಿಗಳನು-ಮೊದಲಾದವರನ್ನು, ಇಳಿಕೆಗೈದು-ತುಚ್ಛರನ್ನಾಗಿ ಮಾಡಿ, ತಪನ-ರವಿಯನ್ನು, ಇಂದು-ಹಿಮಕರನನ್ನು, ಮನ್ಮಥ-ಮದನನನ್ನು, ವಸಂತರ್ಕಳಂ-ವಸಂತನೇ ಮೊದಲಾದವರನ್ನು, ಜರಿದು-ಹೀಯಾಳಿಸಿ, ಅನುಪಮ-ಅಸದೃಶರಾದ, ದಿಕ್ಪಾಲರ-ಇಂದ್ರನೇ ಮೊದಲಾದ ಅಷ್ಟದಿಕ್ಪತಿಗಳ, ನಡುವೆ-ಮಧ್ಯಭಾಗದಲ್ಲಿ, ಕುಳ್ಳಿರ್ದ - ಕುಳಿತುಕೊಂಡು, ರಾಜಿಪ - ಹೊಳೆಯುತ್ತಲಿರುವ, ವೀತಿಹೋತ್ರನಂ - ಯಜ್ಞೇಶ್ವರನನ್ನು, ಕಂಡು-ಈಕ್ಷಿಸಿ, ಇವಳ್ - ಈ ಸ್ವಾಹಾದೇವಿಯು, ಎನಗೆ-ನನಿಗೆ, ಇವಂ - ಈ ಹುತವಹನೆ, ಕಾಂತನು - ಪತಿಯು, ಎಂದು-ಎಂಬದಾಗಿ, ತೋರಿಸಿದಳು-ತೋರ್ಪಡಿಸಿದವಳಾದಳು ॥೪॥

ಟೀ॥ ಆನೀಲಕೇತುನೃಪನು-ಆ ನೀಲಧ್ವಜನೆಂಬರಸು, ಅವಳ-ತನ್ನ ಕುವರಿಯಾದ ಸ್ವಾಹಾದೇವಿಯ, ನುಡಿ-ವಚನಗಳನ್ನು, ಕೇಳ್ದು-ಆಲಿಸಿ, ಅಣುಗೆ-ಬಾಲೆಯೆ! ನೀನು-ನೀನಾದರೊ, ಅಘಟಿತದ-ಆಗಲಸದಳವಾದ, ವರವನು-ಇಷ್ಟಾರ್ಥವನ್ನು, ಊಹಿಸಿದೆ-ಯೋಚನೆಮಾಡಿದೆ, ಪೇಳ್ದೊಡೆ-ಕಷ್ಟಸಾಧ್ಯವಾದುದನ್ನು ನುಡಿದರೆ, ಆನು-ನಾನು, ಏನು-ಏನನ್ನು, ಅಪ್ಪುದು-ಎನ್ನಬೇಕು, ಎಂದು - ಎಂಬದಾಗಿ, ಚಿಂತಿಸುತಿರ್ಪ - ಆಲೋಚನೆಯಂ ಮಾಡುವ, ತಾತನಂ - ಪಿತನನ್ನು, ಜರೆದು-ಧಿಕ್ಕರಿಸಿ, ಬೀಳ್ಕೊಂಡು-ಅವನ ಆಜ್ಞೆಯಂ ತಾಳಿ, ಬಳಿಕ - ಆಮೇಲೆ, ಮಾನಿನಿ-ಸ್ವಾಹಾದೇವಿಯು, ಪುರ-ಪಟ್ಟಣದ, ಉದ್ಯಾನದೊಳ್-ಆರಾಮದಲ್ಲಿ, ಪ್ರವಾಹಿಪ-ಹರಿದು ಬರುತ್ತಿರುವ, ನರ್ಮದಾನದಿಗೆ-ನರ್ಮದಾತೀರ್ಥಕ್ಕೆ, ಬಂದು-ಐತಂದು, ಮಿಂದು-ಅದರಲ್ಲಿ ಸ್ನಾನಮಾಡಿ, ಅಲ್ಲಿ-ಆಸ್ಥಳದಲ್ಲಿ, ಸುವ್ರತೆಯಾಗಿ-ಒಳ್ಳೆ ವ್ರತವುಳ್ಳವಳಾಗಿ, ನಾನಾ-ಅನೇಕ ಪ್ರಕಾರವಾದ, ವಿಧಾನದಿಂದ-ಶಾಸ್ತ್ರ ನಿಯಮಗಳಿಂದ, ಅನುದಿನದೊಳು - ದಿನಂಪ್ರತಿಯಲ್ಲಿಯೂ, ಭಕ್ತಿಯಿಂದ-ಶ್ರದ್ಧಾಪೂರ್ವಕವಾಗಿ, ಅಗ್ನಿಯಂ - ಅಗ್ನಿಪುರುಷನನ್ನು, ಅರ್ಚಿಸಿದಳು-ಪೂಜೆಯಂ ಮಾಡಿದಳು.

ಅ॥ ವಿ॥ 'ಮಾನಿನಿಅಗ್ನಿಯಂಅರ್ಚಿಸಿದಳು' ಎಂಬುದು ಪ್ರಧಾನವಾದ ಸಕರ್ಮಕಕರ್ತರಿವಾಕ್ಯವು ॥೫॥

ಟೀ॥ ಪಾವಕಂ - ಹುತವಹನು, ಅವಳ - ಆ ನೀಲಧ್ವಜನಮಗಳ, ಭಕ್ತಿ - ಶ್ರದ್ಧೆಯಿಂದ ಕೂಡಿದ, ನೋಂಪಿಗೆ-ವ್ರತಕಾರ್ಯಗಳಿಗೆ, ಮಹೀವಿಬುಧ - ವಿಪ್ರನ, ವೇಷಮಂ - ಆಕಾರವನ್ನು, ತಾಳ್ದು-ಹೊಂದಿ, ನೀಲಧ್ವಜನ-ನೀಲಧ್ವಜನೆಂಬರಸನ, ಚಾವಡಿಗೆ - ಸಭಾಸ್ಥಾನಕ್ಕೆ, ಬರಲು - ಐತರಲು, ಆತನು-ಆ ನೀಲಧ್ವಜಮಹಿಪನು, ಇದಿರೆದ್ದು-ಎದುರಾಗಿ ಬಂದು,

ಚಿತ್ರಪಠಗಳನ್ನೆಲ್ಲಾ ನೋಡುತ್ತಲಿರುವಾಗ ಒಂದು ಪಠದಲ್ಲಿರುವ ಪುರುಷಶ್ರೇಷ್ಠನು, ಅನೇಕರಾದ ಗಂಧರ್ವರು, ಯಕ್ಷರು, ನಾಗರು, ಸುರಾಸುರರು ಇವರನ್ನೆಲ್ಲ ತನ್ನ ಕಾಂತಿಯಿಂದ ಹಾಸ್ಯಮಾಡುತ್ತಲೂ, ಪ್ರಪಂಚದ ರಾಜಾಧಿರಾಜರನ್ನೂ, ತ್ರಿಮೂರ್ತಿಗಳನ್ನೂ ತನ್ನ ಸೌಂದರ್ಯಕ್ಕಿಂತಲೂ ಕಡಮೆಯಾದವರೆಂದು ತಿರಸ್ಕರಿಸಿ, ಸೂರ್ಯ, ಚಂದ್ರ, ಮನ್ಮಥ ವಸಂತರನ್ನೂ ಕೂಡ ಹೀಯಾಳಿಸುತ್ತಾ, ಇಂದ್ರಾದಿ ಅಷ್ಟದಿಕ್ಪಾಲರನ್ನೂ ಜರಿಯುತ್ತಾ, ತೇಜೋರೂಪನಾಗಿರುವುದನ್ನು ನೋಡಿ, ಇವನೇ ಶ್ರೇಷ್ಠನಾದ ಅಗ್ನಿಪುರುಷನೆಂದರಿತು ನನಿಗೆ ಇವನೇ ಗಂಡನಾಗತಕ್ಕವನೆಂದು ನಿಶ್ಚೈಸಿ, ತಂದೆಯೊಂದಿಗೆ ಹೇಳಿದಳು ॥೪॥ ಮಗಳ ಇಷ್ಟಾರ್ಥವನ್ನು ಕೇಳಿದ ನೀಲಧ್ವಜನು, ಎಲೈ ಕುವರಿಯೇ! ನೀನು ಅಸಾಧ್ಯವಾದದ್ದನ್ನೇ ಆಗಬೇಕೆಂದು ಕೇಳಿದೆಯಲ್ಲಾ! ಅಗ್ನಿಗೆ ನಿನ್ನನ್ನು ಕೊಟ್ಟು ಮದುವೆ ಮಾಡುವುದು ಹೇಗೆ? ಎಂದು ಯೋಚಿಸುತ್ತಿರುವುದನ್ನು ಸ್ವಾಹಾದೇವಿಯು ನೋಡಿ, ಎಲೈ ತಂದೆಯೇ! ನಿನಿಗೆ ಕಷ್ಟವಾದರೆ ನಾನೇ ಅಗ್ನಿಯನ್ನು ವರಿಸಲು ತಪಸ್ಸು ಮಾಡುವುದಕ್ಕಾಗಿ ಹೊರಡುವೆನು. ಇದಕ್ಕೆ ಅಪ್ಪಣೆಯನ್ನು ಕೊಡೆಂದು ಕೇಳಿದಳು. ತಂದೆಯು ಆಗಬಹುದೆಂದು ಆಜ್ಞೆಯನ್ನಿತ್ತನು. ಸ್ವಾಹಾದೇವಿಯಾದರೊ ಮಾಹಿಷ್ಮತೀ ನಗರದ ಸಮೀಪದಲ್ಲಿರುವ ಉದ್ಯಾನವನಕ್ಕೆ ಬಂದು, ಅಲ್ಲಿ ಹರಿಯುತ್ತಲಿದ್ದ ಪರಿಶುದ್ಧವಾದ ನರ್ಮದಾನದಿಯ ಉದಕದಲ್ಲಿ ಸ್ನಾನವಂ ಮಾಡಿ, ಅಗ್ನಿಪುರುಷನನ್ನು ಭಕ್ತಿಯಿಂದ ಸೇವಿಸುತ್ತಾ ಬಹು ಕಾಲವಂ ಕಳೆದಳು ॥ ೫ ॥ ಈ ರೀತಿಯಲ್ಲಿ ಭಕ್ತ್ಯತಿ

ಸುತೆಯನಿದ | ಕಾವೇಣಿಕೆಬೇಡಭೂಭುಜರಿಯ್ಯಬಹುದುವಿಪ್ರರ್ಗೆಂದೊಡಿಂತೆಂದನು ||೬|| ಕನ್ಯಾರ್ಥಿಯಾಗಿನೀವ್ಬಂದುಬೇಡುವ ದಿಳೆಯೊ | ಳನ್ಯಾಯವಲ್ಲವಿಪ್ರರ್ಗೆಕೊಡಬಹುದುರಾ | ಜನ್ಯರದಕೇನೊಂದುಫಲದಿಂದತನ್ನ ಕುವರಿಗೆಮರುತಸಖನಲ್ಲದೆ || ಅನ್ಯರಂಪತಿಯಾಗಿವರಿಸಬೇಕೆಂಬಚ್ಛೆ | ತನ್ಯಮಿಲ್ಲೇನುಮಾಡುವೆನಿನ್ನುನಿನಗೀವ | ಧನ್ಯತೆಗೆಬಾಹಿರಂತಾನಾದೆನೆನಲಾಕಪಟ ವಿಪ್ರನಿಂತೆಂದನು ||೭|| ಪ್ರಾಪ್ತಮಾದುದುನಿನ್ನಮಗಳಿಣಿಕೆಸುವ್ರತಸ | ಮಾಪ್ತಿಯಂಮಾಡಿಸಿಂನಾನಗ್ನಿ ಸಂಶಯ | ವ್ಯಾಪ್ತಿ

ಸತ್ಕರಿಸಿ-ಅರ್ಘ್ಯಪಾದ್ಯಾದಿಗಳಿಂದ ಮನ್ನಿಸಿ, ಕೈಮುಗಿದು-ವಂದಿಸಿ, ವಿನಯದಿಂದ - ನಮ್ರಭಾವದಿಂದ, ನೀವು-ನೀವಾದರೊ, ಬಿಜಯಂಗೈದ - ದಯಮಾಡಿಸೋಣವಾದ, ಕಾರ್ಯಮಂ-ಕಜ್ಜವನ್ನು, ಬೆಸಸಿ-ಅಜ್ಞಾಪಿಸಿರಿ, ಎನಲು-ಎಂದು ನೀಲಧ್ವಜನು ಕೇಳಲಾಗಿ, ಅವು-ನಾವಾದರೊ, ಕನ್ಯಾರ್ಥಿಗಳು-ಕನ್ಯಕೆಗೋಸ್ಕರ ಬಂದವರು, ನಿನ್ನ ಸುತೆಯ-ನಿನ್ನ ಕುವರಿಯನ್ನು, ಕೊಡು-ನನಗೆಕೊಟ್ಟು ಮದುವೆಮಾಡು, ಇದಕೆ - ಈ ಕಾರ್ಯಕ್ಕೆ, ಆವೇಣಿಕೆ - ಯಾವ ಬದಲು ಯೋಚನೆಯೂ, ಬೇಡ - ಕೂಡದು, ಭೂಭುಜರು-ಅರಸರು, ವಿಪ್ರರ್ಗೆ-ಭೂಸುರರಿಗೆ, ಈಯಬಹುದು-ಕನ್ಯಾದಾನಮಾಡಬಹುದು, ಎಂದೊಡೆ-ಎಂದುನುಡಿಯಲು, ಇಂತು-ಮುಂದೆ ಹೇಳುವಂತೆ, ಎಂದನು-ನುಡಿದನು.

ಅ|| ವಿ|| ಮಹೀವಿಬುಧ-ಮಹೀ ಭೂಲೋಕದ, ವಿಬುಧ-ದೇವತೆ (ಬ್ರಾಹ್ಮಣರು). ಭೂಭುಜರು - ಭೂ - ಭೂಮಿಯನ್ನು, ಭುಜರು-ಪರಿಪಾಲಿಸುವರು (ರಾಜರು. ಕೃ. ವೃ.) ಕನ್ಯಾರ್ಥಿ-(ಕೃ. ವೃ) ಸ, ಸಂಧಿ. ಕಾರ್ಯ (ತ್ಸ)-ಕಜ್ಜ (ತ್ಭ.) ಕೈಮುಗಿದು-ಕೈ-ಕೈಯನ್ನು, ಮುಗಿದು-ಜೋಡಿಸಿಕೊಂಡು-(ಕ್ರಿ. ಸ.)

ಟೀ|| ನೀವು-ನೀವಾದರೊ, ಕನ್ಯಾರ್ಥಿಯಾಗಿ-ಕನ್ಯಕೆಗೋಸ್ಕರ, ಬಂದು-ಐತಂದು, ಬೇಡುವುದು - ಕೇಳತಕ್ಕದ್ದು, ಇಳೆಯೊಳು - ಪ್ರಪಂಚದಲ್ಲಿ, ಅನ್ಯಾಯವಲ್ಲ - ಅಯುಕ್ತವಾದ್ದಲ್ಲ (ಯುಕ್ತವೇಸರಿ). ರಾಜನ್ಯರು - ದೊರೆಗಳು, ವಿಪ್ರರ್ಗೆ-ಭೂಸುರರಿಗೆ, ಕೊಡಬಹುದು - ಹೆಣ್ಣುಕೊಟ್ಟು ಮದುವೆಮಾಡಬಹುದು. ಅದಕೆ - ಹಾಗೆ ಮಾಡುವುದರಲ್ಲಿ, ಏನು - ಅಡ್ಡಿ ಏನಿರುವುದು ? ಒಂದುಫಲದಿಂದ - ಒಂದು ಉಪಯೋಗದಿಂದ, ತನ್ನ-ತನ್ನವಳಾದ, ಕುವರಿಗೆ-ಪುತ್ರಿಗೆ, ಮರುತನ-ಪವನನ, ಸಖನು-ಸ್ನೇಹಿತನಾದ ಅಗ್ನಿಪುರುಷನು, ಅಲ್ಲದೆ-ಪತಿಯಾಗಬೇಕೆ ಹೊರತು, ಅನ್ಯರಂ-ಮತ್ತೆ ಯಾರನ್ನೂ, ಪತಿಯಾಗಿ-ರಮಣನನ್ನಾಗಿ, ವರಿಸಬೇಕೆಂಬ - ಬಯಿಸಬೇಕೆನ್ನತಕ್ಕ, ಚೈತನ್ಯಂ-ಇಚ್ಛೆಯು, ಇಲ್ಲ - ಇರುವುದಿಲ್ಲ. ಏನುಮಾಡುವೆನು - ಮಾಡತಕ್ಕದ್ದೇನು ? ಇನ್ನು-ಹೀಗಿರುವುದರಿಂದ, ನಿನಗೆ-ಕನ್ಯಾರ್ಥಿಯಾಗಿ ಬಂದಿಂತಕ್ಕ ನಿನಗೆ, ಈವ-ಮಗಳನ್ನು ಕೊಟ್ಟು ಮದುವೆ ಮಾಡುವ, ಧನ್ಯತೆಗೆ-ಕೃತಾರ್ಥತೆಗೆ, ತಾನು-ನಾನಾದರೊ, ಬಾಹಿರಂ-ಬೇರೆಯಾದವನು, ಆದೆನು-ಆಗಿಬಿಟ್ಟದೇನೆ, ಎನಲು-ಎಂದು ನುಡಿಯಲು, ಆಕಪಟವಿಪ್ರನು - ಕೃತ್ರಿಮದಿಂದ ಬ್ರಾಹ್ಮಣನಾಗಿ ಇರುವ ಅಗ್ನಿಪುರುಷನು, ಇಂತು-ಮುಂದೆ ಹೇಳವಂತೆ, ಎಂದನು-ನುಡಿದನು.

ಅ|| ವಿ|| ಕುಮಾರಿ(ತ್ಸ)-ಕುವರಿ (ತ್ಭ), ಮರುತಸಖ-ಮರುತನಸಖ (ಷ. ತ.) ||೭||

ಟೀ|| ನಿನ್ನ-ನಿನ್ನ ಸಂಬಂಧವಾದ, ಮಗಳ-ಕುವರಿಯ, ಎಣಿಕೆ-ಇಷ್ಟಾರ್ಥವು, ಪ್ರಾಪ್ತಂ-ಸಿದ್ಧಿಸಿದಂಥಾದ್ದು, ಆದುದು-

ಶಯದಿಂದ ಸೇವಿಸುತ್ತಲಿರು ಸ್ವಾಹಾದೇವಿಯ ವ್ರತನಿಯಮಕ್ಕೆ ಅಗ್ನಿಯು ಸಂತುಷ್ಟನಾಗಿ, ಬ್ರಾಹ್ಮಣವೇಷವಂ ತಾಳಿ, ನೀಲಧ್ವಜನ ಒಡ್ಡೋಲಗಕ್ಕೆ ಬಂದನು. ಕೂಡಲೇ ನೀಲಧ್ವಜನು ಎದ್ದು ಬಂದು ತೇಜೋರೂಪನಾದ ಬ್ರಾಹ್ಮಣೋತ್ತಮನಿಗೆ ವಂದಿಸಿ, ಅರ್ಘ್ಯಪಾದ್ಯಗಳಿಂದ ಸತ್ಕರಿಸಿ, ಉಚಿತಾಸನದಲ್ಲಿ ಕುಳ್ಳಿರಿಸಿದ ಬಳಿಕ, ಆ ವಿಪ್ರವರ್ಯನನ್ನು ಕುರಿತು ನೀವು ಇಲ್ಲಿ ದಯೆಮಾಡಿರುವ ಕಾರ್ಯವೇನೋ ಅದನ್ನು ಆಜ್ಞಾಪಿಸಬೇಕೆಂದು ಕೇಳಿದನು. ಆಗ ಬ್ರಾಹ್ಮಣವೇಷಧಾರಿಯಾದ ಅಗ್ನಿಯು ನೀಲಧ್ವಜನನ್ನು ಕುರಿತು, ಎಲೈ ರಾಯನೆ ! ನಾನು ಕನ್ಯಾರ್ಥಿಯಾಗಿ ನಿನ್ನ ಬಳಿಗೆ ಬಂದಿರುವೆನು. ನಿನ್ನ ಮಗಳಾದ ಸ್ವಾಹಾದೇವಿಯನ್ನು ನನಗೆ ಕೊಟ್ಟು ಮದುವೆಮಾಡು. ಇದಕ್ಕೆ ಬದಲು ಹೇಳಕೂಡದು. ಕ್ಷತ್ರಿಯರು ಬ್ರಾಹ್ಮಣರಿಗೆ ಹೆಣ್ಣು ಕೊಟ್ಟು ಲಗ್ನಮಾಡುವುದರಲ್ಲಿ ದೋಷವೇನೂ ಇಲ್ಲವಲ್ಲಾ ? ಎಂದು ನುಡಿಯುತ್ತಿರುವ ಬ್ರಾಹ್ಮಣೋತ್ತಮನನ್ನು ಕುರಿತು||೬|| ನೀಲಧ್ವಜನು, ಎಲೈ ಭೂಸುರನೆ ! ನೀನು ನನ್ನ ಮಗಳನ್ನು ಕೇಳತಕ್ಕದ್ದು ಯುಕ್ತವೇ ಸರಿ. ಬ್ರಾಹ್ಮಣರಿಗೆ ಕ್ಷತ್ರಿಯರು ಹೆಣ್ಣು ಕೊಡಲೂ ಬಹುದು. ಆದರೆ ನನ್ನ ಮಗಳಾದ ಸ್ವಾಹಾದೇವಿಯು ಅಗ್ನಿಯನ್ನಲ್ಲದೆ ಮತ್ತೊಬ್ಬರನ್ನೂ ವರಿಸುವುದಿಲ್ಲವೆಂದು ಶಪಥಮಾಡಿರುವಳಲ್ಲಾ, ಇದಕ್ಕೇನ ಮಾಡಲಿ ? ನಿನಗೆ ಕನ್ಯಾದಾನಮಾಡಿ ಪಡೆಯಬಹುದಾದ ಫಲಕ್ಕೆ ಸ್ವಾಹಾದೇವಿಯ ಶಪಥವು ಅಡ್ಡಿಯಾಗಿದೆ, ಎಂದು ಯೋಚಿಸುತ್ತಲಿರುವ ರಾಯನನ್ನು ಕಪಟಬ್ರಾಹ್ಮಣನು ನೋಡಿ ||೭|| ಎಲೈ ಭೂಕಾಂತನೆ ! ನಿನ್ನ ಮಗಳ ಇಷ್ಟಾರ್ಥವು ಕೈಗೂಡಿತೆಂದು ತಿಳಿ. ಆಕೆಯು ಮಾಡುತ್ತಿರುವ ವ್ರತವು ಸಾಂಗವಾಯಿತೆಂದರುಹಿ

ಯಂಬಿಡುಕೊಡುನಿಜಾತ್ಮಜೆಯನೆನೆನಂಬದಾನ್ನಪಂಬಳಿಕತನ್ನ || ಆಪ್ತಮಂತ್ರಿಯೊಳೀಗಳಿವನಂಪರೀಕ್ಷಿಸೆನೆ | ಗೋಪ್ತಾರ ನಾಜ್ಞೆಯಿಂಬಂದವನನೋಡೆಶಿಖಿ | ದೀಪ್ತಿಯಂ ತೋರಲೆವೆಗಡ್ಡಮಿಸೆಗಳುರಿಯಲನಲನೆಂದರಿದನೆಂದು ||೮|| ಸಪ್ತರಸನಂತಪ್ಪ ದೆಂದಾನ್ನಪಂತಿಳಿದು | ಗುಪ್ತದಿಂತನ್ನಸತಿಕನುಜೆಯುಂಕರಸಿಲೋ | ಲುಪ್ತಿಯಿಂಬಂದನವಗೀಯಬೇಕಣುಗೆಯಂಶಿಖಿಯುಹುದೆ ನೋಡೆನಲ್ಕೆ || ತೃಪ್ತಭಾವದೊಳಾಕೆನಡೆತಂದುನಿಟ್ಟಸ | ಲ್ತಪ್ತಮಾದುದುಮೇಲುದಿನವಸನನುಗಳಾ | ಕ್ಷಿಪ್ತಮುಂಮಾಡಿನಗುತಿರ್ದನಾಭೂವರಂ ಸಭೆಯೊಳ್ವಿನೋದದಿಂದ || ೯ || ಭೂಕಾಂತಕೇಳ್ಬಳಿಕನೀಲಧ್ವಜಾವನಿಪ | ನಾಕಪಟವಿಪ್ರನಂಕರೆದಗ್ನಿ

ಆಯಿತು, ಸುವ್ರತ-ಅಗ್ನಿಯನ್ನು ಪೂಜೆಮಾಡುವ ಸದ್ವ್ರತದ, ಸಮಾಪ್ತಿಯಂ-ಪೂರೈಸುವಿಕೆಯನ್ನು, ಮಾಡಿಸು-ಈಡೇರಿಸು, ಆಂ-ನಾನೆ, ಅಗ್ನಿ-ಯಜ್ಞೇಶ್ವರನು- ಇನ್ನು-ಇನ್ನು ಮುಂದೆ, ಸಂಶಯಪ್ರಾಪ್ತಿಯಂ-ಹೆಚ್ಚಾದ ಅನುಮಾನವನ್ನು, ಬಿಡು-ಬಿಟ್ಟು ಬಿಡು, ನಿಜ-ನಿನ್ನ, ಆತ್ಮಜೆಯನು-ಕುವರಿಯನ್ನು, ಕೊಡು-ಕೊಟ್ಟು ಮದುವೆ ಮಾಡು, ಎನೆ-ಎಂದು ನುಡಿಯಲ, ಆನೃಪಂ-ಆ ನೀಲಧ್ವಜನೆಂಬ ದೊರೆಯು, ನಂಬದೆ-ನಂಬಿಕೆಯನ್ನು ತಾಳದೆ, ಬಳಿಕ-ಅನಂತರ, ತನ್ನ-ಸ್ವಕೀಯವಾದ, ಆಪ್ತಮಂತ್ರಿಗಳ್ಗೆ-ಮುಖ್ಯರಾದ ಸಚಿವರಿಗೆ, ಇವನಂ-ಈ ಬ್ರಾಹ್ಮಣನನ್ನು, ಪರೀಕ್ಷಿಸಿ-ಅಗ್ನಿಯು ಇವನೇ ಎಂಬುದನ್ನು ಗೊತ್ತುಮಾಡಿ, ಎನೆ-ಎಂದು ಹೇಳಲು, ಗೋಪ್ತಾರನ-ರಕ್ಷಕನಾದ ದೊರೆಯ, ಆಜ್ಞೆಯಿಂ-ಶಾಸನದಿಂದ, ಬಂದು-ಐತಂದು, ಅವಂ- ಆ ಸಚಿವನು, ನೋಡೆ-ನಿರುಕಿಸಲಾಗಿ, ಶಿಖಿ-ಅಗ್ನಿಪುರುಷನು, ದೀಪ್ತಿಯಂ-ತನ್ನ ಕಾಂತಿಯನ್ನು, ತೋರಲು-ಕಾಣಿಸಲು, ಎವೆ-ಕಣ್ಣುಬ್ಬುಗಳು, ಗಡ್ಡಮಿಸೆಗಳು-ಗಡ್ಡವೂ ಮಿಸೆಯು ವಹ, ಉರಿಯಲು-ಬೆಂದುಹೋಗಲು, ಅಂದು-ಆ ಸಮಯದಲ್ಲಿ, ಅನಲನೆಂದು-ಅಗ್ನಿದೇವರೇ ಎಂಬದಾಗಿ, ಅರಿದನು-ಗೋಚರಮಾಡಿಕೊಂಡನು.

ಅ|| ವಿ|| ಆತ್ಮಜೆ-ಆತ್ಮ-ತನ್ನಲ್ಲಿ, ಜೆ-ಹುಟ್ಟಿದವಳು (ಮಗಳು ಕೃ. ವೃ.) ಆಜ್ಞೆ (ತ್ಸ). ಆಣೆ (ತ್ಭ). ಶಿಖಿ-ನವಿಲು ಬ್ರಾಹ್ಮಣ, ಅಗ್ನಿ ಮೊದಲಾದವು, ಅನಲ-ಅಗ್ನಿ, ಅನಿಲ-ಗಾಳಿ, ಅರಿ-ತಿಳಿ (ಧಾತು). ಶತ್ರು )ನಾಮವಾಚಕ). ಅರಿದನು-'ಅರಿ' ಎಂಬ ಧಾತುವಿನ ಭೂತಕಾಲ, ಪ್ರಥಮ ಪುರುಷ, ಪುಲ್ಲಿಂಗ್ಯೆಕವಚನ. || ೮ ||

ಟೀ|| ಆನೃಪಂ-ಆ ನೀಲಧ್ವಜನೆಂಬರಸು, ಸಪ್ತರಸನು-ಸಪ್ತಜಿಹ್ವೆಗಳುಳ್ಳ ಅಗ್ನಿ ದೇವನೆ, ತಪ್ಪದು ಈ ಮಾತು ಹುಸಿಯಲ್ಲ. ಎಂದು-ಎಂಬತೆರನಾಗಿ, ತಿಳಿದು-ಅರಿತವನಾಗಿ, ಗುಪ್ತದಿಂ-ಗೋಪ್ಯವಾಗಿ, ತನ್ನ-ಸ್ವಕೀಯರಾದ, ಸತಿ-ಹೆಂಡತಿಯಾದ ಜ್ವಾಲೆಯನ್ನು, ತನುಜೆಯುಂ-ಕುವರಿಯಾದ ಸ್ವಾಹಾದೇವಿಯನ್ನು, ಕರೆಸಿ-ಬರಮಾಡಿಕೊಂಡು, ಲೋಲುಪ್ತಿಯಿಂ-ಹೆಚ್ಚಾದ ಆಸೆಯಿಂದ, ಬಂದನು-ಅಗ್ನಿಯೇ ಬಂದಿರುವನು. ಇವನಿಗೆ-ಈ ಹುತಾಶನನಿಗೆ, ಅಣುಗೆಯಂ-ಕುವರಿಯನ್ನು, ಈಯಬೇಕು-ಕೊಟ್ಟು ಮದುವೆ ಮಾಡಬೇಕು. ಶಿಖಿಯು-ಹುತವಹನು, ಅಹುದೆ-ಆಗಿದ್ದಾನೆಯೇ? ನೋಡು-ಪರೀಕ್ಷೆಮಾಡು, ಎನಲ್ಕೆ-ಎಂದು ನುಡಿಯಲು, ಆಕೆ-ಸ್ವಾಹಾ ಎಂಬ ಕುವರಿಯು, ತೃಪ್ತಭಾವದೊಳ್-ಪ್ರೇಮಾತಿಶಯದಿಂದ, ನಡೆತಂದು-ಐತಂದು, ನಿಟ್ಟಿಸಲ್-ಗಮನವಿಟ್ಟು ನೋಡಲು, ಮೇಲುದಿನ-ಮೇಲ್ಹೊದೆಯಿರುವ, ವಸನಂ-ಸೀರೆಯ ತುದಿಯು, ತಪ್ತಂ-ಸುಟ್ಟುಹೋದದ್ದು, ಆದುದು-ಆಗಿಹೋಯಿತು. ಆ ಭೂವರಂ-ಆ ಮಾಹಿಷ್ಮತಿಯ ಅರಸನು, ಸಭೆಯೊಳ್-ಸಭಾ ಮಂಟಪದಲ್ಲಿ, ಆಕ್ಷಿಪ್ತಮುಂಮಾಡಿ-ಅನುಮಾನವನ್ನು ಹೋಗಲಾಡಿಸಿ, ವಿನೋದದಿಂದ-ಆನಂದಾತಿಶಯದಿಂದ, ನಗುತ-ಸಂತೋಷವಂತಾಳುತ್ತ, ಇರ್ದನು-ಇದ್ದವನಾದನು ||

ಅ|| ವಿ|| ಸಪ್ತರಸನಂ-ಸಪ್ತ-ಏಳಾದ, ರಸನಂ-ನಾಲಿಗೆಯುಳ್ಳವನು ಯಾರೊ ಅವನು (ಬ. ಸ.) ||೯||

ಮನೆಗೆ ಕರೆತರುವವನಾಗು. ನಾನೇ ಅಗ್ನಿಯು. ಸಂಶಯವನ್ನು ಬಿಟ್ಟು ನಿನ್ನ ಮಗಳನ್ನು ನನಗೆ ಕೊಟ್ಟು ಮದುವೆ ಮಾಡು. ಎಂದು ನುಡಿದನು. ಇದನ್ನೆಲ್ಲಾ ಕೇಳಿದ ನೀಲಧ್ವಜನು ತನ್ನ ಮುಖ್ಯಾಮಾತ್ಯರನ್ನು ಕರೆಯಿಸಿ ಈ ಬ್ರಾಹ್ಮಣನು ಅಗ್ನಿಯೇ ಹೌದೂ ಅಲ್ಲವೊ ಪರೀಕ್ಷಿಸಿ ನೋಡಿರೆಂದು ಆಜ್ಞಾಪಿಸಿದನು. ದೊರೆಯಿಂದ ಆಜ್ಞಾಪಿಸಲ್ಪಟ್ಟ ಮಂತ್ರಿಯು ಆ ವಿಪ್ರನ ಹತ್ತಿರಕ್ಕೆ ಬರಲು, ಅಗ್ನಿಯು ತನ್ನ ತೇಜೋಬಲದಿಂದ ಅವನ ಗಡ್ಡ, ಮಿಸೆ, ಕಣ್ಣುರೆಪ್ಪೆ ಇವೆಲ್ಲಾ ಸುಟ್ಟುಹೋಗುವಂತೆ ಮಾಡಿದನಾದ್ದರಿಂದ ಆ ಮಂತ್ರಿಗೆ ಇವನು ಅಗ್ನಿಯೇ ಎಂದು ಗೊತ್ತಾಯಿತು. ||೮|| ನೀಲಧ್ವಜನೂಕೂಡ ಇವನನ್ನು ಅಗ್ನಿಯೇ ಎಂದು ತಿಳಿದವನಾಗಿ ತನ್ನ ಹೆಂಡತಿಯನ್ನೂ ಮಗಳನ್ನೂ ಗೋಪ್ಯವಾಗಿ ಕರೆಯಿಸಿ, ತನ್ನ ಕುವರಿಯನ್ನು ಕುರಿತು, ಇಗೊ ಈ ಬ್ರಾಹ್ಮಣನೇ ಅಗ್ನಿಪುರುಷನು, ಇವನಿಗೆ ನಿನ್ನನ್ನು ಕೊಟ್ಟು ಮದುವೆ ಮಾಡುವೆನು. ಇವನು ಅಗ್ನಿಯು ಅಹುದೋ ಅಲ್ಲವೊ? ಹತ್ತಿರಕ್ಕೆ ಹೋಗಿ ಪರೀಕ್ಷಿಸೆಂದು ನುಡಿಯಲು, ಸ್ವಾಹಾದೇಯು ಸಂತುಷ್ಟಾಂತರಂಗಳಾಗಿ ಆ ಬ್ರಾಹ್ಮಣನ ಬಳಿಗೆ ಹೋಗಿ ನಿಂತಕೂಡಲೆ ಅವಳು ಉಟ್ಟಿದ್ದಸೀರೆಯ ಸೆರಗು ಸುಟ್ಟುಹೋಯಿತು. ಇದನ್ನೆಲ್ಲಾ ನೀಲಧ್ವಜನು ನೋಡಿ ಸಂತೋ

ನೀನಾಮೊ | ಡೀಕುವರಿಯಂ ಕೊಡುವೆನಿಂದು ಮೊದಲಾಗಿ ಮಾಹಿಷ್ಮತಿಯ ಪಟ್ಟಣಕ್ಕ || ಪ್ರಾಕಾರವಾಗಿ ತನ್ನರಮನೆಯೊಳೆಂದು
ಮಿರ | ಬೇಕೆಂದು ಬೇಡಿಕೊಳಲೊಪ್ಪಿ ಪವಮಾನಸಖ| ನಾ ಕಮಲವದನೆಯಂ ಮದುವೆಯಾದಂ ವಿಧವಿಧಾನವಿಭವಂಗಳಿಂದ ||೧೦||
ಶ್ರೀಹೈಮವತಿಯರಂ ದುಗ್ಧಾಬ್ಧಿಹಿಮಗಿರಿಗ | ಳಾಹರಿಹರರ್ಗೆ ಕೊಟ್ಟಂ ಬಿಟ್ಟು ಕೊಂಡಿರ್ಪೊ | ಲೀಹುತವಹಂಗಾತ್ಮಜೆಯನಿತ್ತು
ನಿಲಿಸಿಕೊಂಡಂ ನೀಲಕೇತು ಬಳಿಕ || ಸ್ವಾಹಾವನಿತೆಯ ಸಂಮೇಳವದ ಸೌಖ್ಯದಿಂ | ಮಾಹಿಷ್ಮತೀಪಟ್ಟಣದೊಳಿರ್ಪ ನನಲಂ ಮ
ನೋಹರದ ವಿವಿಧಭೋಗದೊಳಂದು ಮೊದಲಾಗಿ ಸಂದು ಸಂತೋಷದಿಂದ || ೧೧ || ಅಲ್ಲಿ ಪಾವಕನಿರ್ಪ ಕಾರಣಮಿದೀಗವುಂ |

ಟೀ|| ಭೂಕಾಂತ–ಪೃಥ್ವೀಶನಾದ ಜನಮೇಜಯನೆ! ಕೇಳು–ಲಾಲಿಸು, ಬಳಿಕ–ಆಮೇಲೆ, ನೀಲಧ್ವಜಾವನಿಪನು–ನೀಲಧ್ವಜನೆಂಬರಸು, ಆ ಕಪಟವಿಪ್ರನಂ – ಆ ಬ್ರಾಹ್ಮಣ ವೇಷದಾರಿಯಾದ ಅಗ್ನಿಯನ್ನು, ಕರೆದು–ಸಮೀಪಕ್ಕೆ ಬರಹೇಳಿ, ಅಗ್ನಿ–ಅಗ್ನಿದೇವನು, ನೀನು–ನೀನೇ, ಆದೊಡೆ–ಆದಲ್ಲಿ, ಈ ಕುವರಿಯಂ–ಈ ನನ್ನ ತನುಜೆಯನ್ನು, ಕೊಡುವೆನು–ಕೊಟ್ಟು ಮದುವೆ ಮಾಡುತ್ತೇನೆ, ಇಂದು ಮೊದಲಾಗಿ–ಈಹೊತ್ತು ಮೊದಲುಮಾಡಿಕೊಂಡು, ಮಾಹಿಷ್ಮತೀ ಪಟ್ಟಣಕೆ–ಮಾಹಿಷ್ಮತೀ ನಗರಿಗೆ, ಪ್ರಾಕಾರನಾಗಿ–ಕೋಟೆಯಹಾಗೆ ಬಳಸಿಕೊಂಡು, ತನ್ನ–ನನ್ನದಾದ, ಅರಮನೆಯೊಳು–ರಾಜಮಂದಿರದಲ್ಲಿ, ಎಂದುಂ–ಅನವರತವೂ, ಇರಬೇಕು–ನೆಲಸಿದವನಾಗಬೇಕು, ಎಂದು–ಎಂಬುವಾಗಿ, ಬೇಡಿಕೊಳಲು–ಕೇಳಿಕೊಳ್ಳಲಾಗಿ, ಪವಮಾನಸಖಂ–ಅಗ್ನಿದೇವನು, ಆ ಕಮಲವದನೆಯ–ಕಮಲದಂತೆ ಮುಖವುಳ್ಳ ಆ ಸ್ವಾಹಾದೇವಿಯನ್ನು, ವಿಧಿ–ಶಾಸ್ತ್ರಸಮ್ಮತವಾದ, ವಿಧಾನ–ನಿಯಮಂಗಳ, ವಿಭವಂಗಳಿಂದ–ಸಂಭ್ರಮಾತಿಶಯದಿಂದ, ಮದುವೆಯಾದಂ–ಲಗ್ನವನ್ನು ಮಾಡಿಕೊಂಡನು.

ಅ|| ವಿ|| ಕಮಲವದನೆ–ಕಮಲದಂತೆ ವದನವು ಯಾರಿಗೊ ಅವಳು (ಬ. ಸ.) ವಿಧಿವಿಧಾನವಿಭವಂಗಳಿಂದ–ವಿಧಿಯ ವಿಧಾನ (ಷ. ತ.) ವಿಧವಿಧಾನದ ವಿಭವಂಗಳು (ಷ. ತ.) || ೧೦ ||

ಟೀ|| ಶ್ರೀ–ಲಕ್ಷ್ಮೀದೇವಿ, ಹೈಮವತಿಯರಂ – ಪಾರ್ವತಿ ಇವರನ್ನು, ದುಗ್ಧಾಬ್ಧಿ – ಪಾಲ್ಗಡಲು, ಹಿಮಗಿರಿಗಳು–ಹಿಮವಂತನು, ಆ ಹರಿಹರರ್ಗೆ–ವಿಷ್ಣು ಮತ್ತು ಈಶ್ವರರಿಗೆ, ಕೊಟ್ಟು–ಮದುವೆ ಮಾಡಿ, ಇಂಬಿಟ್ಟುಕೊಂಡು–ತಮ್ಮ ಮನೆಯಲ್ಲಿರಿಸಿಕೊಂಡು, ಇರ್ಪೊಲು–ಇರುವ ತೆರದಿಂದ, ನೀಲಕೇತು–ನೀಲಧ್ವಜನೂ ಕೂಡ, ಈ ಹುತವಹಂಗೆ–ಈ ಯಜ್ಞೇಶ್ವರನಿಗೆ, ಆತ್ಮಜೆಯನು–ತನ್ನ ಕುವರಿಯನ್ನು, ಇತ್ತು–ಕೊಟ್ಟು (ಮದುವೆಮಾಡಿ), ನಿಲಿಸಿಕೊಂಡಂ–ತನ್ನ ಮನೆಯಲ್ಲಿಯೆ ಇರುವಂತೆ ಮಾಡಿಕೊಂಡನು. ಬಳಿಕ–ತರುವಾಯ, ಸ್ವಾಹಾವನಿತೆಯ–ಸ್ವಾಹಾ ಎಂಬಾಕೆಯ, ಸಮ್ಮೇಳವದ–ಜೊತೆಯ, ಸೌಖ್ಯದಿಂ–ಸುಖಪರಂಪರೆಯಿಂದ, ಮಾಹಿಷ್ಮತೀಪಟ್ಟಣದೊಳು–ಮಾಹಿಷ್ಮತೀ ನಗರದಲ್ಲಿ, ಅನಲಂ–ಹುತವಹನು, ಮನೋಹರದ–ಮನೋಲ್ಲಾಸಕರವಾದ, ವಿವಿಧ–ನಾನಾಪ್ರಕಾರವಾದ, ಭೋಗವೊಳು–ಸುಖಪರಂಪರೆಗಳಿಂದ, ಅಂದು ಮೊದಲಾಗಿ–ಅದಿನ ಮೊದಲು ಮಾಡಿಕೊಂಡು, ಸಂದು–ಸೇರಿ, ಸಂತೋಷದಿಂದ–ಆನಂದಾತಿಶಯದಿಂದ, ಇರ್ಪನು–ಇರುತ್ತಲಿದ್ದನು.

ಅ|| ವಿ|| ಹೈಮವತಿ–ಹಿಮವಂತನ ಮಗಳು, ದುಗ್ಧಾಬ್ಧಿ–ಅಪ್–ನೀರನ್ನು, ಧಿ–ಭರಿಸಿರುವುದು, (ಕೃ. ವೃ.) ದುಗ್ಧದ ಅಬ್ಧಿ–(ಷ. ತ.) || ೧೧ ||

ಟೀ|| ಅರಸ–ಎಲೈ ಜನಮೇಜಯನೆ! ಅಲ್ಲಿ–ಆ ಮಾಹಿಷ್ಮತೀ ನಗರದಲ್ಲಿ, ಪಾವಕನು–ಅಗ್ನಿದೇವನು, ಇರ್ಪ–

ಮಂತಾಳುತ್ತ ಸಭೆಯಲ್ಲಿ ಕುಳಿತಿದ್ದನು ||೯|| ಎಲೈ ಜನಮೇಜಯರಾಯನೆ! ಕೇಳು, ಬಳಿಕ ನೀಲಧ್ವಜನೆಂಬರಸು ಆ ಕಪಟ ಬ್ರಾಹ್ಮಣನನ್ನು ಹತ್ತಿರಕ್ಕೆ ಕರೆಯಿಸಿ, ಎಲೈ ಬ್ರಾಹ್ಮಣನೇ! ನೀನು ಅಗ್ನಿಯೇ ಆದರೆ ನನ್ನ ಮಗಳನ್ನು ನಿನಗೆ ಕೊಟ್ಟು ಮದುವೆ ಮಾಡುತ್ತೇನೆ. ನೀನು ಇಂದು ಮೊದಲ್ಗೊಂಡು ಯಾವಾಗಲೂ ನನ್ನ ಪಟ್ಟಣದ ಕೋಟೆಯ ಸುತ್ತಲೂ ಕಾವಲಾಗಿದ್ದು ನನ್ನ ರಾಜಧಾನಿಗೆ ಯಾವ ಭಯವೂ ಇಲ್ಲದಂತೆ ಕಾಪಾಡಬೇಕೆಂದು ಕೇಳಿಕೊಳ್ಳಲು, ಹಾಗೆಯೇ ಆಗಲೆಂದು ಅಗ್ನಿಯು ಒಪ್ಪಿಕೊಂಡನು. ಕೂಡಲೆ ಕಮಲಮುಖಿಯಾದ ಸ್ವಾಹಾದೇವಿಗೂ, ತೇಜಃಪುಂಜದಿಂ ಮೆರೆಯುವ ಅಗ್ನಿಪುರುಷನಿಗೂ ಶಾಸ್ತ್ರೋಕ್ತವಾಗಿ ಅತ್ಯಂತ್ಸವದಿಂದ ವಿವಾಹವು ನಡೆಯಿತು || ೧೦ || ಹಿಮವಂತನು ತನ್ನ ಕುವರಿಯಾದ ಪಾರ್ವತಿಯನ್ನು ಈಶ್ವರನಿಗೂ, ಕ್ಷೀರಸಮುದ್ರವು ತನ್ನ ಪುತ್ರಿಯಾದ ಲಕ್ಷ್ಮೀದೇವಿಯನ್ನು ಶ್ರೀಮನ್ನಾರಾಯಣ ಮೂರ್ತಿಗೂ ಕೊಟ್ಟು ಮದುವೆಮಾಡಿ, ತಮ್ಮ ತಮ್ಮ ಮನೆಯಲ್ಲಿಯೇ ಇರಿಸಿಕೊಂಡಂತೆ. ನೀಲಧ್ವಜನೂ ಕೂಡ ತನ್ನಣುಗಿಯಾದ ಸ್ವಾಹಾದೇವಿಯನ್ನು ಅಗ್ನಿಗೆ ಕೊಟ್ಟು ವಿವಾಹವಂ ಮಾಡಿ ತನ್ನ ಮನೆಯಲ್ಲಿಯೇ ಇಟ್ಟುಕೊಂಡದ್ದರಿಂದ ಆದಿನ ಮೊದಲ್ಗೊಂಡು ಅಗ್ನಿಯು ಮಾಹಿಷ್ಮತೀ ನಗರದಲ್ಲಿ ಸ್ವಾಹಾದೇವಿಯೊಂದಿಗೆ ವಿಧವಿಧವಾದ ಭೋಗಂಗಳನ್ನನುಭವಿಸುತ್ತ, ಸುಖವಾಗಿ ಕಾಲವಂ ಕಳೆದುಕೊಂಡು ನೀಲಧ್ವಜನ ರಾಜಧಾನಿಗೆ ಯಾವ ಭಯವೂ ಇಲ್ಲದಂತೆ ಕಾಪಾಡುತ್ತಲಿರುವನು. ಇದೇ ಅಗ್ನಿಯು ನೀಲಧ್ವಜನ

ದಿಲ್ಲಿಯಕಥಾಂತರವನರಸಕೇಳಾರಾತ್ರಿ | ಯಲ್ಲಿನೀಲಧ್ವಜಂಮನೆಯೊಳಾಜ್ವಾಲೆಯನಿರೂಪಮಂತಲೆಯೊಳಾಂತು || ಸಲ್ಲಲಿತ
ವಾಜಿಯಂಬಿಡೆನೆಮ್ಮೊಡನೆಕಾದಿ | ದಲ್ಲದಿಂದಾಕಿರೀಟಿಗೆಪೇಳಿಸಿದನಿತ್ತ | ಪಲ್ಲವಿಸಿತಮಲಪೂರ್ವಾಶಾಲತಿಕೆಯೆನಲ್ಕೆಂಪಡರ್ದುದು
ಮೂಡಲು ||೧೨|| ತನ್ನಪಗೆಯಾದಕತ್ತಲೆಯಸಾರೂಪ್ಯದಿಂ | ದಿನ್ನಿದ್ದೊಡೆಮಗಿನಂಮುಳಿಯದಿರನೆಂದಂಜಿ | ಕನ್ನೈದಿ
ಲೆಯಮೊಗಂಬಾಡಿದುದುಕೂಡೆನಗುತಿರ್ದವರವಿಂದಂಗಳು || ಗನ್ನದೋಳ್ನೆರೆವಜಾರೆಯರಕುಂಟಣಿಯಂತೆ | ಸನ್ನೆಗೈದವು
ತಾಮ್ರಚೂಡಂಗಳೊಂದಿದವು | ಮುನ್ನಿನಂತಿರೆಜಕ್ಕವಕ್ಕಿಗಳ್ಪಾಡಿದುವುತುಂಬಿಗಳ್ಬಂಡನರಸಿ ||೧೩|| ರಾಹುಮುನ್ನೊಮ್ಮೆತನ್ನಂ

---

ಇರತಕ್ಕ, ಕಾರಣಂ – ನಿಮಿತ್ತವು, ಇದು – ಇದೇ, ಈಗ-ಇನ್ನುಮುಂದೆ, ಇಲ್ಲಿಯ–ಇಲ್ಲಿ ನಡೆಯತಕ್ಕ, ಕಥಾಂತರವನು – ಕಥಾ ವಿಸ್ತಾರವನ್ನು, ಕೇಳು–ಲಾಲಿಸು, ಆರಾತ್ರಿ–ಆ ನಿಶಿಯಲ್ಲಿ, ನೀಲಧ್ವಜಂ-ನೀಲಧ್ವಜರಾಯನು, ಮನೆಯೊಳು – ಏಕಾಂತಸ್ಥಾನದಲ್ಲಿ, ಜ್ವಾಲೆಯ–ಜ್ವಾಲೆಯೆಂಬ ತನ್ನ ಹೆಂಡತಿಯ, ನಿರೂಪಮಂ-ಆಜ್ಞೆಯನ್ನು, ತಲೆಯೊಳು–ತನ್ನ ಉತ್ತಮಾಂಗದಲ್ಲಿ (ತಲೆಯಲ್ಲಿ) ಆಂತು–ತಾಳಿದವನಾಗಿ, ಸಲ್ಲಲಿತ – ಮನೋಹರವಾದ, ವಾಜಿಯಂ-ಅಶ್ವವನ್ನು, ನಮ್ಮೊಡನೆ – ನಮ್ಮಸಂಗಡ, ಕಾದಿದಲ್ಲದೆ-ಕಾಳಗಮಾಡಿದಲ್ಲದೆ, ಬಿಡೆನು-ಬಿಟ್ಟುಕೊಡುವದಿಲ್ಲ, ಎಂದು–ಎಂಬದಾಗಿ, ಆಕಿರೀಟಿಗೆ–ಆ ಪಾರ್ಥನಿಗೆ, ಪೇಳಿಸಿದನು–ಹೇಳಿಸಿದವನಾದನು, ಇತ್ತ–ಈ ಪಾರ್ಶ್ವದಲ್ಲಿ, ಅಮಲ–ಪರಿಶುದ್ಧವಾದ, ಪೂರ್ವಾಶಾ–ಪೂರ್ವದಿಕ್ಕೆನ್ನುವ, ಲತಿಕೆ–ಎಳೆವಳ್ಳಿಯು, ಪಲ್ಲವಿಸಿತು–ತಳಿರ್ಗಳಿಂ ಕೂಡಿತು, ಎನೆ–ಎಂಬಂತೆ, ಮೂಡಲು–ಪೂರ್ವದಿಕ್ಕಿನ ಪಾರ್ಶ್ವವು, ಕೆಂಪಡರಿತು–ರಕ್ತಛಾಯೆಯನ್ನೈದಿತು ಎಂದರೆ ಅರುಣೋದಯವಾಯಿತು ||೧೨||

ಟೀ|| ತನ್ನ-ಇನನ, ಪಗೆಯಾದ – ವೈರಿಯಾದ, ಕತ್ತಲೆಯ – ಅಂಧಕಾರದ. ಸಾರೂಪ್ಯದಿಂ – ಸಮಾನವಾದ ಬಣ್ಣದಿಂದ, ಇನ್ನು – ಸೂರ್ಯೋದಯವಾದ ನಂತರ, ಇರ್ದೊಡೆ – ಇದ್ದಹಾಗಾದರೆ, ಎಮಗೆ – ಕನ್ನೈದಿಲೆಗಳಾದ ನಮಗೆ, ಇನಂ–ರವಿಯು, ಮಳಿಯದೆ–ಸಿಟ್ಟುಮಾಡಿಕೊಳ್ಳದೆ, ಇರನು-ಇರತಕ್ಕವನಲ್ಲ, ಎಂದು-ಎಂಬದಾಗಿ, ಅಂಜಿ-ಹೆದರಿ, ಕನ್ನೈದಿಲೆಯ–ಕರಿಯಕಮಲದ ಹೂಗಳ, ಮೊಗಂ–ಮೋರೆಯು, ಬಾಡಿದುದು–ಕಂದಿಹೋಯಿತು, ಕೂಡೆ–ತಕ್ಷಣವೇ, ಅರವಿಂದಂಗಳು–ಬಿಳೀ ತಾವರೆ ಹೂಗಳು, ನಗುತಿರ್ದವು-ನಗುತ್ತಲಿರುವಂತೆ ಅರಳಲು ಆರಂಭಿಸಿದವು, ಗನ್ನದೋಳ್ – ಕಪಟದಿಂದ, ನೆರೆವ – ಸುಳಿದಾಡುವ, ಜಾರೆಯರ–ಕಾಮುಕಸ್ತ್ರೀಯರ, ಕುಂಟಣಿಯಂತೆ – ಯಜಮಾನಿಯ-ಹಾಗೆ, (ತಲೆಹಿಡಿಕಿಯತೆರದಿಂದ) ತಾಮ್ರಚೂಡಂಗಳು-ಕೋಳಿಗಳು, ಸನ್ನೆಗೈದವು-ಬೆಳಗಾದ ಸೂಚನೆಯನ್ನು ತೋರ್ಪಡಿಸುತ್ತಲಿದ್ದವು. ಜಕ್ಕವಕ್ಕಿಗಳು – ಚಕ್ರವಾಕಂಗಳು, ಮುನ್ನಿನಂತೆ–ಮೊದಲಿನಹಾಗೆ, ಇರೆ–ಇರಲು, ಒಂದಿದವು–ಒಟ್ಟುಗೂಡಿದವು. ತುಂಬಿಗಳು–ಜೀರುಂಡೆಗಳು, ಬಂಡನು–ಪುಷ್ಪರಸವನ್ನು, ಅರಸಿ–ಹುಡುಕುತ್ತಾ, ಪಾಡಿದವು–ಝೇಂಕಾರಧ್ವನಿಯಿಂದ ಗಾನಮಾಡಲಾರಂಭಿಸಿದವು.

ಅ|| ವಿ|| ಕನ್ನೈದಿಲೆ–ಕರಿದಾದನೈದಿಲೆ (ವಿ. ಪೂ.) ಮೊಗಂ (ತ್ಭ) ಮುಖಂ (ತ್ಸ) ಸನ್ನೆ (ತ್ಭ) ಸಂಜ್ಞಾ (ತ್ಸ) ಸನ್ನೆಯಂಗೈದವು-ಸನ್ನೆಗೈದವು (ಕ್ರಿ. ಸ.) ತಾಮ್ರಚೂಡಂ–ತಾಮ್ರ–ಕೆಂಪಾದ, ಚೂಡಂ–ಜುಟ್ಟುಳ್ಳದ್ದು, (ಬ. ಸ ) ಜಕ್ಕವಕ್ಕಿ (ತ್ಭ) ಚಕ್ರವಾಕಪಕ್ಷಿ (ತ್ಸ) ಅರಸಿ–ಹುಡಕಿ (ಕೃದಂತ) ಅರಸಿ-ರಾಣಿ ನಾಮವಾಚಕ ||೧೩||

ಟೀ|| ರಾಹು–ರಾಹುವೆಂಬ ರಾಕ್ಷಸನು, ಮುನ್ನ–ಪೂರ್ವದಲ್ಲಿ, ಒಮ್ಮೆ–ಒಂದಾವರ್ತಿ, ತನ್ನಂ–ಇನನನ್ನು, ತುಡಕಿ

---

ರಾಜಧಾನಿಯಲ್ಲಿರಲು ಕಾರಣವು ||೧೧|| ಕೈಳೈ ಜನಮೇಜಯನೆ! ಇನ್ನು ಮುಂದಿನ ಕಥೆಯನ್ನು ಹೇಳತೊಡಗುವೆನು, ನೀಲಧ್ವಜನು ಯಜ್ಞಾಶ್ವವನ್ನು ಅರ್ಜುನನಿಗೆ ಕೊಡುವೆನೆಂದು ಅಗ್ನಿಯ ಮಾತಿನಂತೆ ಒಪ್ಪಿ ತನ್ನ ಪಟ್ಟಣಕ್ಕೆ ಹೋದ ರಾತ್ರಿಯಲ್ಲಿ ಅವನ ಕಾಂತೆಯಾದ ಜ್ವಾಲೆಯು ಯಾಗದ ಕುದುರೆಯನ್ನು ಕೊಡಕೂಡದೆಂದು ಮಾಡಿದ ದುರ್ಬೋಧನೆಗೆ ರಾಜನು ಕಿವಿಗೊಟ್ಟು ತನ್ನ ಚಾರರಂ ಕುರಿತು, ಎಲೈ ದೂತರೆ! ನೀವು ಈಗಲೇ ಅರ್ಜುನನ ಬಳಿಗೆ ಹೋಗಿ ನೀಲಧ್ವಜನನ್ನು ಗೆದ್ದಲ್ಲದೆ ಯಜ್ಞಾಶ್ವವು ನಿಮ್ಮ ಕೈಸೇರಲಾರದೆಂದು ಹೇಳಿ ಬನ್ನಿರೆಂದು ಆಜ್ಞಾಪಿಸಲು ಅವರು ಹಾಗೆಯೇ ಮಾಡಿದರು. ಅಷ್ಟು ಹೊತ್ತಿಗೆ ಪೂರ್ವದಿಕ್ಕೆಂಬ ಎಳೆಬಳ್ಳಿಯು ಹೊಸದಾದ ಕೆಂದಳಿರ್ಗಳಿಂದಲಂಕೃತವಾಯಿತೋ ಎಂಬಂತೆ ಅರುಣೋದಯವಾಯಿತಾದ್ದರಿಂದ ಪೂರ್ವದಿಕ್ಕೆಲ್ಲಾ ಕೆಂಪಾಗಿ ಕಾಣಲುಜ್ಜುಗಿಸಿತು ||೧೨|| ಆಗ ತನ್ನ ಹಗೆಯಾದ ಕತ್ತಲೆಯು ತೊಲಗಿದರೂ ಕೂಡ ಈ ಕಪ್ಪುಕಮಲಗಳು ಅಂಟಿಕೊಂಡೇ ಇವೆಯಲ್ಲಾ ಎಂದು ಸೂರ್ಯನು ಎಲ್ಲಿ ಕೋಪಮಾಡಿಕೊಳ್ಳುವನೋ, ಎಂಬ ಭಯದಿಂದ ಕನ್ನೈದಿಲೆಗಳು ತಮ್ಮಷ್ಟಕ್ಕೆ ತಾವೇ ಮುಚ್ಚಿಕೊಂಡು ಕಾಂತಿಹೀನವಾದದ್ದನ್ನು ಬೆಳ್ದಾವರೆಗಳು ನೋಡಿ ನಗುತ್ತಲಿವೆಯೋ ಎಂಬಂತೆ ಅರಳುತ್ತಲಿದ್ದವು. ತಲೆಹಿಡಿಕಿಯಾದ ಹೆಂಗಸು ವಿಟರನ್ನು ಜಾರಿಣಿಯರಿಗೆ ಸೂಚಿಸುವ ತೆರನಾಗಿ ಕೋಳಿಗಳು ಬೆಳಗಾಗುತ್ತ ಬಂತೆಂದು ಜನರಿಗೆಲ್ಲಾ ಧ್ವನಿಯಿಂದ ಸೂಚಿಸುತ್ತಲಿದ್ದವು. ಚಕ್ರವಾಕ ಪಕ್ಷಿಗಳು ಮೊದಲಿನಂತೆಯೇ ಒಟ್ಟುಗೂಡಿ

ತುಡುಕಿಬಿಟ್ಟನೆಂ | ಬಾಹಗೆಯುಮರಸಲೊಳಪೊಕ್ಕುಪಾತಾಳದಮ | ಹಾಹಿಸಂಕುಲಮನಾಕ್ರಮಿಸಿಪಡೆವಣಿಗಳಂತೆಗೆದುಕೊಂ
ಡಾಗಲವನು || ಸಾಹಸಂಮಿಗೆಚೆಲ್ಲುತ್ತೈತಪ್ಪನೋದೆಸೆದೆಸೆ | ಗಾಹರಿಹಯಂಪೇಳೆನಲ್ಪಸುಳೆವಿಸಿಲಪ್ರ | ವಾಹಂಗಳೆತ್ತಲುಂಪರಿ
ವಿನಿಂದಿನಪನುದಯಂಗೈದುಬರುತಿರ್ದನು || ೧೪ || ಇತ್ತಲವನೀಶಕೇಳುದಯವಾಗದಮುನ್ನ | ಮುತ್ತೆಮಾಹಿಷ್ಮತಿಯಪಟ್ಟ
ಣದಕೋಟೆಯಂ | ಮುತ್ತಿಕೊಂಡುದುನರನಚತುರಂಗಮಾಜಿಯೊಳುನೀಲಧ್ವಜನವಾಹಿನಿ || ಒತ್ತಿಕವಿದುದುವೀರರೊದಗಿದ್ದ
ಪೊರ್ಯ್ವಾಡ| ಲಿತ್ತಂಡಮೊಡೆವೆರಸಿಚೂಣಿಗಾಳಗದಭಟ| ರೊತ್ತಿದರ್ಪಂಥಪಾಡುಗಳನಸಿತಧ್ವಜಂನಡೆದನರ್ಜುನನಮೇಲೆ ||೧೫||
ತರಣಿತೊಲಗಿದಬಳಿಕಮಿಂಚುಬುಳುಬಿಗೆತಮಂ | ತೆರಳಬಲ್ಲುದೆಕೃಶಾನ-ಜ್ವಾಲೆಗಳುಕದಾ | ನರನುಳಿದವೀರರಂಬಗೆವನೆಪಡೆವೆರಸಿ

---

ಮುಟ್ಟಿ, ಬಿಟ್ಟನು-ಕಾಂತಿಹೀನನನ್ನಾಗಿ ಮಾಡಿದನು, ಎಂಬ-ಎನ್ನತಕ್ಕ, ಆಹಗೆಯಂ – ಆ ವೈರಿಯನ್ನು, ಅರಸಲು – ಹುಡುಕಿ ನೋಡಲು, ಒಳಪೊಕ್ಕು-ಒಳಗೆಹೋಗಿ, ಪಾತಾಳದ – ಪಾತಾಳಲೋಕದಲ್ಲಿರತಕ್ಕ, ಮಹಾ – ದೊಡ್ಡದಾದ, ಅಹಿ-ಹಾವುಗಳ, ಸಂಕುಲವನು-ಸಮುದಾಯಗಳನ್ನು, ಆಕ್ರಮಿಸಿ-ವಶಮಾಡಿಕೊಂಡು, ಪೆಡೆ-ಹೆಡೆಗಳಲ್ಲಿರತಕ್ಕ, ಮಣಿಗಳಂ-ಮಾಣಿಕ್ಯಗಳನ್ನು, ತೆಗೆದುಕೊಂಡು-ಕೈಕೊಂಡು, ಆಗಲ್-ಆಗ, ಅವನು – ಆ ಇಂದುವು, ಸಾಹಸಂಮಿಗೆ – ಶಕ್ತಿಯು ಹೆಚ್ಚುವಂತೆ, ದೆಸೆದೆಸೆಗೆ-ದಿಕ್ಕುದಿಕ್ಕುಗಳಿಗೂ, ಚಲ್ಲುತ-ಆ ರತ್ನಗಳನ್ನು ಎಸೆಯುತ್ತ, ಹರಿಹಯಂ – ದಿನಕರನಾಗಿ, ಐತಪ್ಪನೋ – ಬರುತ್ತಲಿರುವನೊ ? ಪೇಳ್-ಹೇಳು, ಎನಲ್-ಎಂಬಂತೆ, ಪಸುಳೆವಿಸಿಲ-ಬಾಲಸೂರ್ಯಪ್ರಭೆಯ, ಪ್ರವಾಹಂಗಳು – ಕಿರಣಗಳು, ಎತ್ತಲುಂ – ಎಲ್ಲಾ ಭಾಗದಲ್ಲಿಯೂ, ಪರಿವಿನಿಂ – ಹರಡುವಿಕೆಯಿಂದ, ದಿನಪನು – ರವಿಯು, ಉದಯಂಗೈದು – ಉದ್ಭವಿಸಿ, ಬರುತ-ಐತರುತ್ತ, ಇರ್ದ್ದನು-ಇದ್ದವನಾದನು.

ಅ|| ವಿ|| ದೆಸೆದೆಸೆ-ಎಲ್ಲದಿಕ್ಕುಗಳು ಎಂಬ ಅರ್ಥದಲ್ಲಿ ದ್ವಿರುಕ್ತಿ ||೧೪||

ಟೀ|| ಅವನೀಶ-ಭೂಕಾಂತನಾದ ಜನಮೇಜಯನೆ ! ಕೇಳು-ಲಾಲಿಸು, ಇತ್ತಲು-ಈ ಭಾಗದಲ್ಲಿ, ಉದಯವಾಗದ-ಸೂರ್ಯೋದಯವಾಗುವುದಕ್ಕಿಂತಲೂ, ಮುಂಚೆ-ಮೊದಲೇ, ಮತ್ತೆ-ತಿರುಗಿ, ಮಾಹಿಷ್ಮತಿಯಪಟ್ಟಣದ – ಮಾಹಿಷ್ಮತಿಯೆಂಬ ನಗರಿಯ, ಕೋಟೆಯಂ-ಕೋಟೆಯನ್ನು, ನರನ-ಫಲ್ಗುಣನ, ಚತುರಂಗಬಲಂ-ಹಸ್ತ್ಯಶ್ವರಥಪದಾತಿಗಳು, ಮುತ್ತಿಕೊಂಡುದು-ಕವಿದುಕೊಂಡಿತು, ಆಜಿಯೊಳು-ರಣದಲ್ಲಿ, ನೀಲಧ್ವಜನ – ನೀಲಧ್ವಜನೆಂಬರಸನ, ವಾಹಿನಿ-ದಂಡು, ಒತ್ತಿ – ಮುಂದೆಮುಂದೆ ಬಂದು, ಕವಿದುದು – ಸುತ್ತಿಕೊಂಡಿತು, ವೀರರು-ಭಟರು, ಪೊಯ್ವಾಡಲು – ಯುದ್ಧಮಾಡಲು, ಒದಗಿದರು – ಅನುವಾದರು, ಇತ್ತಂಡಂ-ಎರಡು ಕಡೆಯ ಸೈನ್ಯವೂ, ಒಡವೆರಸಿ-ಒಂದಾಗಿ, ಚೂಣಿ-ಸೈನ್ಯದ, ಕಾಳಗದ-ರಣದ, ಭಟರು-ಯೋಧರು, ಪಂಥ ಪಾಡುಗಳನು-ಜೂಜನ್ನೂ ಮತ್ತು ಸಾಹಸವನ್ನೂ, ಬಿತ್ತಿದರು – ಹೆಚ್ಚುಮಾಡಿದರು, ಅಸಿತಧ್ವಜಂ – ನೀಲಧ್ವಜನೆಂಬರಸು, ಅರ್ಜುನನಮೇಲೆ-ಪಾರ್ಥನೊಂದಿಗೆ, ನಡೆದನು-ಕಾಳಗಕ್ಕೆ ಹೊರಟವನಾದನು ||೧೫||

ಟೀ|| ತರಣಿ – ರವಿಯು, ತೊಲಗಿದಬಳಿಕ – ಹೊರಟುಹೋದಮೇಲೆ, ಮಿಂಚುಬುಳುಬಿಗೆ – ಮಿಂಚಿನ ಹುಳಕ್ಕೆ, ತಮಂ-ಅಂಧಕಾರವು, ತೆರಳಬಲ್ಲದೆ – ಹೊರಟುಹೋಗುತ್ತದೆಯೇ ?, ಕೃಶಾನುಜ್ವಾಲೆಗೆ – ಬೆಂಕಿಯ ಹೊಯ್ಲಿಗೆ, ಅಳುಕದ-ಹೆದರದ, ಆನರನು-ಆ ಪಾರ್ಥನು, ಉಳಿದ-ಮಿಕ್ಕ, ವೀರರಂ-ಧೀರರನ್ನು, ಬಗೆವನೆ-ಲಕ್ಷ್ಯಮಾಡುವನೆ ? ಪಡೆವೆರಸಿ-ಸೇನಾ ಸಮೇತನಾಗಿ, ಕಣೆಗರವುತ-ಬಾಣಪ್ರಯೋಗವಂ ಮಾಡುತ್ತ, ನೂಕಿದಂ-ವೈರಿಗಳ ಬಲವನ್ನು ಹಿಮ್ಮೆಟ್ಟುವಂತೆ ಮಾಡಿದನು,

---

ಸಂತೋಷದಿಂದ ತಿರುಗಾಡಲಾರಂಭಿಸಿದವು. · ಜೀರುಂಡೆಗಳು ಮಕರಂದಕ್ಕಾಗಿ ಅಲ್ಲಲ್ಲಿ ಅಲೆದಾಡಲುದ್ಯುಕ್ತವಾದವು ||೧೩|| ರಾಹುವೆಂಬ ರಕ್ಕಸನು ಪೂರ್ವದಲ್ಲಿ ತನ್ನನ್ನು ಮುಟ್ಟಿ ಕಾಂತಿಹೀನನನ್ನಾಗಿ ಮಾಡಿದ ವೈರವನ್ನು ತೀರಿಸಿಕೊಳ್ಳಲು ಚಂದ್ರನು ಪಾತಾಳದವರೆಗೂ ಹೋಗಿ ದೊಡ್ಡ ದೊಡ್ಡ ಹಾವುಗಳ ಹೆಡೆಯಲ್ಲಿರತಕ್ಕ ಮಣಿಗಳನ್ನೆಲ್ಲಾ ತೆಗೆದುಕೊಂಡು ಮೇಲಕ್ಕೆ ಬಂದು, ದಿಕ್ಕುದಿಕ್ಕಿಗೂ ಆ ರತ್ನಗಳನ್ನೆಲ್ಲಾ ಚೆಲ್ಲಿಬಿಟ್ಟು ಸೂರ್ಯನಾಗಿ ಬರುತಲಿರುವನೊ ಎಂಬಂತೆ ಎಳೆಬಿಸಲು ಎಲ್ಲೆಲ್ಲಿಯೂ ಹರಡಿಕೊಂಡಿತು ||೧೪|| ಎಲೈ ಜನಮೇಜಯನೆ ! ಈ ಕಡೆಯಲ್ಲಿ ಅರುಣೋದಯವಾಗುವುದಕ್ಕೆ ಮುಂಚಿತವಾಗಿಯೇ ಅರ್ಜುನನ ಸೈನ್ಯವು ನೀಲಧ್ವಜನ ರಾಜಧಾನಿಯಾದ ಮಾಹಿಷ್ಮತೀನಗರವನ್ನು ಎಲ್ಲೆಲ್ಲಿಯೂ ಮುತ್ತಿಕೊಂಡಿತು. ನೀಲಧ್ವಜನ ಸೈನ್ಯವೂ ಕೂಡ ಯುದ್ಧಕ್ಕೆ ಒದಗಿತು. ಉಭಯಪಕ್ಷದವರೂ ಹೋರಾಡಲು ಉದ್ಯುಕ್ತರಾದರು. ಎರಡುಕಡೆಯ ಯೋಧಾಗ್ರೇಸರರೂ ತಮ್ಮ ತಮ್ಮ ಶಕ್ತಿಸಾಹಸಗಳನ್ನು ಹೇಳಿಕೊಳ್ಳುತ್ತಲೂ, ಒಬ್ಬರನ್ನೊಬ್ಬರು ಜರೆಯುತ್ತಲೂ, ಇದ್ದರು. ನೀಲಧ್ವಜನೂ ಯುದ್ಧಕ್ಕೆ ಬಂದು ಸೇರಿದನು||೧೫||ಪರಸ್ಪರ ಘೋರಯುದ್ಧವು ನಡೆಯಲಾರಂಭಿಸಿತು. ಸೂರ್ಯನ ಬೆಳಕಿಲ್ಲದಿದ್ದರೆ ಮಿಂಚುಹುಳದಿಂದ ಮಾತ್ರವೇ ಕತ್ತಲೆಯು ತೊಲಗುವದು ಹೇಗೆ ಅಸಂಭವವೋ, ಅದೇರೀತಿಯಾಗಿಯೇ ಅಗ್ನಿಯ ಸಹಾಯದಿಂದ

ನೂಕಿದಂಕಣೆಗಳೆವುತ || ಮುರಿದ-ದುರುವಣೆಗೆವನಸೇನೆಬಳಿಕಳಲಿಗ | ರ್ತರಹರಿಸಿಸುತಸಹೋದರಮಂತ್ರಿಬಾಂಧವ | ರ್ಧುರ ದೊಳಾಂತಳಿದರರ್ಜುನನೊಳಾತಂಕಾದಿನೊಂದುಮೂರ್ಛಿತನಾದನು ||೧೬|| ಬಳಿಕಸಾರಥಿಮನೆಗೆತಂದನಾಭೂಪನಂ | ಪೊಳಲ ಪೆರ್ಬಾಗಿಲ್ಗಳಿಕ್ಕಿದವುಕೋಟೆಕೊ | ತ್ತಳದಕಾವಲ್ಗಳಂಬಲಿದರಲ್ಲಲ್ಲಿಗಜಬಜಿಸಿತಾನಗರದೊಳಗೆ || ತಿಳಿದುದಾತನಮೂರ್ಛೆ ಕಣ್ದೆರದುನೋಡಿಕೊಳು | ಗುಳದಪರಿಭವಕೆಬೆಂಡಾಗಿನಿಜತನಯರಳಿ | ದಳಲಿಂದಬೈದನಸಿತಧ್ವಜಂಜ್ವಾಲೆಯಂಪ್ರತಿಕೂಲೆ ಯಂಖತಿಯೊಳು ||೧೭|| ನಿನ್ನೆಪಾರ್ಥನಹಯುವನಾತಂಗೆಬಿಡಲೀಯ | ದೆನ್ನಕೆಡಸಿದೆಯಲಾಪಾತಕಿಯೆಸುತರಳಿದ | ರಿನ್ನೇನು ಘಾತಕಿಯೆಮತ್ಕುಲಕನಿಷ್ಟನೀನತಿಕಷ್ಟೆಪೋಗ-ದುಷ್ಟೆ || ಎನ್ನರಮನೆಯೊಳಿರದಿರೆಂದಾಗಲಾಜ್ವಾಲೆ | ಯಂನೀಲಕೇತುಧಟ್ಟಿಸಿ

---

ಉರುವಣೆಗೆ-ಏಟುಗಳಿಗೆ, ಆವನ-ಆ ನೀಲಧ್ವಜನೆಂಬ ರಾಜನ, ಸೇನೆ-ಪಡೆಯು, ಮುರಿದುದು-ಭಂಗಪಟ್ಟಿತು, ಬಳಿಕ-ಅನಂತರ, ಅಳಲಿಗರು-ದುಃಖದಿಂದ ಕೂಡಿದವರು, ತರಹರಿಸಿ-ಹೆದರಿಕೊಂಡು, ಸುತ-ಮಕ್ಕಳು, ಸಹೋದರ-ಅಣ್ಣತಮ್ಮಂದಿರು, ಮಂತ್ರಿ-ಅಮಾತ್ಯರು, ಬಾಂಧವರು-ಬಂಧುವರ್ಗದವರು, ಧುರದೊಳು-ರಣದಲ್ಲಿ, ಆಂತು-ಯುದ್ಧಾಸಕ್ತರಾಗಿ, ಅಳಿದರು-ನಾಶವಾದರು, ಆತಂ-ಆ ನೀಲಧ್ವಜನು, ಅರ್ಜುನನೊಳು-ಪಾರ್ಥನೊಂದಿಗೆ, ಕಾದಿ-ಹೋರಾಡಿ, ನೊಂದು-ಸಂಕಟಪಟ್ಟು, ಮೂರ್ಛಿತನಾದನು-ಮೈಮರೆತು ಬಿದ್ದನು ||೧೬||

ಟೀ|| ಬಳಿಕ-ನೀಲಧ್ವಜನು ಸ್ಮರಣೆಯನ್ನು ಕಳೆದುಕೊಂಡಮೇಲೆ, ಸಾರಥಿ-ರಥವನ್ನು ನಡೆಯಿಸತಕ್ಕವನು, ಆ ಭೂಪನಂ-ಆ ನೀಲಧ್ವಜನನ್ನು, ಮನೆಗೆ-ಅರಮನೆಗೆ, ತಂದನು-ತೆಗೆದುಕೊಂಡು ಬಂದು ಬಿಟ್ಟನು, ಪೊಳಲ-ನಗರದ, ಪೆರ್ಬಾಗಿಲ್ಗಳು-ದೊಡ್ಡ ಬಾಗಿಲುಗಳೆಲ್ಲಾ, ಇಕ್ಕಿದವು-ಹಾಕಲ್ಪಟ್ಟವಾದವು, ಕೋಟೆ-ಆವರಣದ, ಕೊತ್ತಳದ-ಬುರಜುಗಳ, ಕಾವಲ್ಗಳಂ-ಕಾಯುವಿಕೆಯನ್ನು, ಬಲಿದರು-ಹೆಚ್ಚುಮಾಡಿದರು, ಆ ನಗರದೊಳಗೆ-ಆ ಪುರದಲ್ಲಿ, ಅಲ್ಲಲ್ಲಿ-ಅಲ್ಲಲ್ಲಿಯೇ, ಗಜಬಜಿಸಿತು-ಹಾಹಾಕಾರವಾಯಿತು, ಆತನ-ಆ ರಾಜನ, ಮೂರ್ಛೆ-ಸ್ಮರಣೆತಪ್ಪಿರುವುದು, ತಿಳಿದುದು-ಹೋಗಿ ಜ್ಞಾನವು ಬಂದಿತು, ಕಣ್ದೆರದು-ದೃಷ್ಟಿಸಿ, ನೋಡಿ-ಈಕ್ಷಿಸಿ, ಕೊಳುಗುಳದ-ರಣದ, ಪರಿಭವಕೆ-ಅವಮತಿಗೆ, ಬೆಂಡಾಗಿ-ನಿಸ್ತೂಕವಾಗಿ, ನಿಜ-ಸ್ವಕೀಯರಾದ, ತನಯರು-ಪುತ್ರರು, ಅಳಿದ-ಸತ್ತು ಹೊದ, ಅಳಲಿಂದ-ವ್ಯಸನದಿಂದ, ಅಸಿತಧ್ವಜಂ-ನೀಲಧ್ವಜನೆಂಬ ರಾಜನು, ಖತಿಯೊಳು-ಸಿಟ್ಟಿನಿಂದ, ಪ್ರತಿಕೂಲೆಯಂ-ತನಗೆ ವ್ಯತಿರಿಕ್ತಳಾಗಿರತಕ್ಕ, ಜ್ವಾಲೆಯಂ-ಹೆಂಡತಿಯಾದ ಸತಿಯನ್ನು, ಬೈದನು-ದೂಷಿಸಿದನು ||

ಅ|| ವಿ|| ಪೆರ್ಬಾಗಿಲ್ಗಳ್-ಪಿರಿದಾದ ಬಾಗಿಲ್ಗಳು (ವಿ. ಪೂ.) ||೧೭||

ಟೀ|| ನಿನ್ನೆ-ನಿನ್ನೆಯದಿನ, ಪಾರ್ಥನ-ಫಲ್ಗುಣನ, ಹಯವನ್ನು-ಅಶ್ವವನ್ನು, ಆತಂಗೆ-ಆ ಅರ್ಜುನನಿಗೆ, ಬಿಡಲ್-ಬಿಟ್ಟುಬಿಡಬೇಕೆಂದಿದ್ದರೆ, ಈಯದೆ-ಕೊಡಲೀಸದೆ, ಎನ್ನ-ನನ್ನನ್ನು, ಕೆಡಿಸಿದೆಯಲಾ-ನಾಶಮಾಡಿಬಿಟ್ಟೆಯಲ್ಲಾ, ಪಾತಕಿಯೆ-ಎಲೆ ಪಾಪಾತ್ಮಳೆ! ಸುತರು-ನಿನ್ನ ಮಕ್ಕಳು, ಅಳಿದರು-ಸತ್ತು ಹೋದರು, ಇನ್ನೇನು-ಇನ್ನು ಯಾವ ತೊಂದರೆಯು ಮಿಕ್ಕಿದೆ? ಘಾತಕಿಯೆ-ಮಕ್ಕಳೆಲ್ಲಾ ಸತ್ತು ಹೋಗಲು ಕಾರಣವಾದವಳೆ! ಮತ್ಕುಲಕೆ-ನನ್ನ ವಂಶಕ್ಕೆ, ಅನಿಷ್ಟೆ-ಕೆಡಕುಮಾಡಿದವಳು, ನೀನು-ನೀನೆ ಅಲ್ಲವೆ? ಅತಿಕಷ್ಟೆ-ಬಹು ಕಷ್ಟಗಳಿಗೆ ಸಿಕ್ಕಿರುವಿ, ದುಷ್ಟೆ-ನೀಚಳೆ! ಪೋಗು-ನಡೆ, ಎನ್ನರಮನೆಯೊಳ್-ನನ್ನ ಮಂದಿರದಲ್ಲಿ, ಇರದಿರು-ಇರಕೂಡದು, ಎಂದು-ಎಂಬ ತೆರನಾಗಿ, ಆ ಜ್ವಾಲೆಯಂ-ಆ ತನ್ನ ಸತಿಯನ್ನು, ಧಟ್ಟಿಸಿ-ತಿರಸ್ಕರಿಸಿ, ಆಗ-ಆ ಕಾಲದಲ್ಲಿ, ಬೈದು-ದೂಷಿಸಿ, ಅಶ್ವಮಂ-ಹಯವನ್ನು, ನರನೆಡೆಗೆ-ಪಾರ್ಥನ ಹತ್ತಿರಕ್ಕೆ, ಕಳುಪಿ-ಕಳುಹಿಸಿಕೊಟ್ಟು,

---

ತಪ್ಪಿಹೋದ ನೀಲಧ್ವಜನು ಅರ್ಜುನನ ಎದುರಿಗೆ ನಿಲ್ಲಲಾರದೆ ಹೋಗಿ, ಅವನ ಬಾಣಗಳ ಹೊಡೆತವನ್ನು ತಾಳಲಾರದೆ ಮಕ್ಕಳು ಒಡಹುಟ್ಟಿದವರು, ಬಂಧುವರ್ಗದವರು, ಮಂತ್ರಿಗಳು ಮೊದಲಾದವರನ್ನೆಲ್ಲಾ ಕಳೆದುಕೊಂಡು ಅರ್ಜುನನ ಏಟಿಗೆ ತಡೆಯಲಾರದೆ ತಾನೂ ಮೂರ್ಛಾಕ್ರಾಂತನಾಗಿ ಬಿದ್ದುಹೋದನು ||೧೬|| ಕೂಡಲೆ ಸಾರಥಿಯು ನೀಲಧ್ವಜನನ್ನು ಜಾಗ್ರತೆಯಲ್ಲಿ ಅರಮನೆಗೆ ಕರೆತಂದು ಬಿಟ್ಟನು. ರಾಜಧಾನಿಯ ಹೆಬ್ಬಾಗಿಲುಗಳನ್ನೆಲ್ಲಾ ಮುಚ್ಚಿಬಿಟ್ಟು ಕೋಟೆ ಕೊತ್ತಲಗಳಲ್ಲಿ ಕಾವಲನ್ನು ಬಲಪಡಿಸಿದರು. ಊರಲ್ಲೆಲ್ಲಾ ಹಾಹಾಕಾರವು ಬಲವಾಯಿತು. ಅಷ್ಟುಹೊತ್ತಿಗೆ ನೀಲಧ್ವಜನು ಸ್ಮೃತಿಯಂ ತಂದುಕೊಂಡವನಾಗಿ ಯುದ್ಧದಲ್ಲಿ, ತನಗೆ ಪರಾಜಯವಾದುದಕ್ಕೋಸ್ಕರ ಹೆಚ್ಚಾದ ಅವಮಾನದಿಂದ ತಲೆ ತಗ್ಗಿಸಿದವನಾಗಿ, ತನ್ನ ಮಕ್ಕಳೆಲ್ಲಾ ಯುದ್ಧದಲ್ಲಿ ಮಡಿದುದಕ್ಕಾಗಿ ಉಂಟಾದ ವ್ಯಸನವನ್ನು ಸಹಿಸಲಾರದೆ, ನೀಚಳಾದ ತನ್ನ ಹೆಂಡತಿಯನ್ನು ಕುರಿತು || ೧೭ || ಕೋಪಾವಿಷ್ಟನಾಗಿ ಎಲೆ ದುಷ್ಟಳೇ! ಅರ್ಜುನನ ಕುದುರೆಯನ್ನು ಅವನಿಗೆ ಕೊಟ್ಟುಬಿಡಬೇಕೆಂದು ನಿನ್ನೆಯದಿನ ನಾನು ಯೋಚನೆಮಾಡಿದ್ದರೆ ಅದಕ್ಕೆ ವಿಘ್ನಮಾಡಿದೆಯಾದ್ದರಿಂದ ಈಗ ನನ್ನ ಮಕ್ಕಳೂ ಸತ್ತುಹೋದರು, ನಾನೂ ಸೋತು ಅವಮಾನವನ್ನು ಹೊಂದಿದೆನು. ಆದ್ದರಿಂದ ಇನ್ನು ನೀನು ನನ್ನ ಮನೆಯಲ್ಲಿರಬೇಡ ಎಂದು ತಿರಸ್ಕರಿಸಿ, ಯಜ್ಞಾಶ್ವವನ್ನು, ಅರ್ಜುನ

ಬೈದುಬಳಿಕಶ್ವ । ಮುಂನರನೆಡೆಗೆಕಳುಪಿತಾನಾಕಿರೀಟಿಯುಂಕಾಣಲ್ಕೆಪೊರಮಟ್ಟನು ॥ ೧೮ ॥ ಕೊಂಡುಬರಿಸಿದನಖಿಳವಸ್ತು
ಗಳನಮಲಮಣಿ । ಮಂಡನಾದಿಗಳಂವಿವಿಧದುಕೂಲಂಗಳಂ । ಹಿಂಡಾಕಳಂಮಹಿಷಿಗಳನುತ್ತಮಸ್ತ್ರೀಯರಂಗಜಹಯಾದಿಗಳನು॥
ಭಂಡಾರದರ್ಥಮಂಗುಡತೈಲಧಾನ್ಯಗಳ । ಬಂಡಿಗಳಮೇಲೆತುಂಬಿಸಿಪಾರ್ಥನಂಬಂದು । ಕಂಡನಸಿತಧ್ವಜಂಬಳಿಕವನನರ್ಜು
ನಂಪ್ರೀತಿಮಿಗೆಮನ್ನಿಸಿದನು ॥ ೧೯ ॥ ವಾಜಿನಡೆದುದುಬಳಿಕತೆಂಕಮುಖಮಾಗಿಸೇ । ನಾಜಲಧಿಸಹಿತನೀಲಧ್ವಜಂಪೊರಮಟ್ಟ ।
ನಾಜನಪನಂಕೂಡಿಕೊಂಡುಮುಂದಕೆಸವ್ಯಸಾಚಿತೆರಳಿದನಿತ್ತಲು ॥ ತೇಜಮಿಲ್ಲದೆಮನೆಯೊಳುಂಪೆಣ್ಣೊಡಲ್ಪೊಳಸು । ಏ
ಜೀವಮೇತಕೆನಗೆನುತನಿಜವಲ್ಲಭನ । ರಾಜಗೃಹಮುಂಬಿಟ್ಟುಪೋದಳಾಜ್ವಾಲೆಯುನ್ಮುಖನೆಂಬತಮ್ಮನೆಡೆಗೆ ॥ ೨೦ ॥ ಉನ್ಮು
ಖಂಕಂಡಿದಿರ್ಗೊಂಡಗ್ರಜಾತೆಯಂ । ಸನ್ಮಾನಿಸಿದನೇಕೆಬಂದೆಯೆನೆಫಲುಗುಣಂ । ಮನ್ಮನೋರಥಮೆಲ್ಲಮುಂಕೆಡಿಸಿಮುಕ್ಕಳಂ

---

ತಾನು-ನೀಲಧ್ವಜನು, ಆ ಕಿರೀಟಿಯುಂ-ಆ ಅರ್ಜುನನನ್ನು, ಕಾಣಲ್ಕೆ- ದರ್ಶನತೆಗೆದುಕೊಳ್ಳಲು, ಪೊರಮಟ್ಟನು-ಹೊರಟವನಾದನು ॥೧೮॥

ಟೀ॥ ಅಸಿತಧ್ವಜಂ-ಮಾಹಿಷ್ಮತೀನಗರದ ರಾಜನು, ಅಖಿಳ-ಸಕಲವಾದ, ವಸ್ತುಗಳನು-ಪುರುಳ್ಗಳನ್ನು, ಅಮಲ-ಪರಿಶುದ್ಧಗಳಾದ, ಮಣಿ-ರತ್ನಂಗಳ, ಮಂಡನಾದಿಗಳಂ-ತೊಡಿಗೆಗಳನ್ನು, ವಿವಿಧ-ನಾನಾ ಬಗೆಯಾದ, ದುಕೂಲಂಗಳಂ-ಉಡಿಗೆಗಳನ್ನು, ಹಿಂಡಾಕಳಂ-ಗೋ ಸಮೂಹವನ್ನೂ, ಮಹಿಷಿಗಳನು-ಎಮ್ಮೆಗಳನ್ನೂ, ಉತ್ತಮಸ್ತ್ರೀಯರಂ-ಶ್ರೇಷ್ಠರಾದ ನಾರಿಯರನ್ನು, ಗಜ-ಆನೆಗಳು, ಹಯಾದಿಗಳನು-ಕುದುರೆಯೇ ಮೊದಲಾದವನ್ನು, ಭಂಡಾರದ-ಖಜಾನೆಯಲ್ಲಿರುವ, ಅರ್ಥಮಂ-ಹಣದ ರಾಶಿಯನ್ನೂ, ಗುಡ ತೈಲ ಧಾನ್ಯಗಳ-ಬೆಲ್ಲ, ಎಣ್ಣೆ, ಅಕ್ಕಿ, ಬೇಳೆ ಮೊದಲಾದವುಗಳನ್ನು, ಬಂಡಿಗಳಮೇಲೆ-ಗಾಡಿಗಳೊಳಗೆ, ತುಂಬಿಸಿಕೊಂಡು-ಹಾಕಿಸಿಕೊಂಡು, ಬರಿಸಿದನು-ಬರುವಂತೆ ಮಾಡಿದನು, ಪಾರ್ಥನಂ-ಫಲ್ಗುಣನನ್ನು, ಕಂಡನು-ದರ್ಶನವಂ ತೆಗೆದುಕೊಂಡನು, ಬಳಿಕ-ಆ ಮೇಲೆ, ಅರ್ಜುನನು-ಪಾರ್ಥನು, ಪ್ರೀತಿಮಿಗೆ-ಪ್ರೇಮವು ಅಧಿಕವಾಗುವಂತೆ, ಮನ್ನಿಸಿದನು-ತಪ್ಪನ್ನು ಕ್ಷಮಿಸಿ ಮರ್ಯಾದೆಯಿಂದ ನೋಡಿದನು ॥೧೯॥

ಟೀ॥ ಬಳಿಕ-ಅನಂತರ, ವಾಜಿ-ಹಯವು, ತೆಂಕಮುಖಮಾಗಿ-ದಕ್ಷಿಣ ದಿಕ್ಕನ್ನು ಹಿಡಿದು, ನಡೆದುದು-ಮುಂದರಿಯಿತು, ಸೇನಾ-ಪರಿವಾರವೆನ್ನುವ, ಜಲಧಿಸಹಿತ-ಕಡಲಿನ ಸಮೇತವಾಗಿ, ನೀಲಧ್ವಜನು-ನೀಲಧ್ವಜನೆಂಬರಸು, ಪೊರಮಟ್ಟನು-ಹೊರಟನು, ಆ ಜನಪನಂ-ಆ ಧೊರೆಯನ್ನು, ಕೂಡಿಕೊಂಡು- ಜೊತೆಮಾಡಿಕೊಂಡು, ಸವ್ಯಸಾಚಿ-ಪಾರ್ಥನು, ಮುಂದಕೆ-ಮುಂದಮುಂದಕ್ಕೆ, ತೆರಳಿದನು-ನಡೆದನು, ಇತ್ತಲು-ಈ ಭಾಗದಲ್ಲಿ, ಮನೆಯೊಳುಂ-ಮಂದಿರದಲ್ಲಿ, ಪೆಣ್ಣೊಡಲ್-ಸ್ತ್ರೀ ಶರೀರವನ್ನು, ಪೊರೆಸುವ-ಕಾಪಾಡತಕ್ಕ, ಈ ಜೀವಂ-ಈ ಹರಣವು, ಎನಗೆ-ನನಗೆ, ಏತಕೆ-ಏನು ಪ್ರಯೋಜನ? ಎನುತ-ಎಂದು ನುಡಿಯುತ್ತ, ನಿಜವಲ್ಲಭನ-ತನ್ನ ಪತಿಯ, ರಾಜಗೃಹಮಂ-ರಾಜಭವನವನ್ನು, ಬಿಟ್ಟು-ಬಿಟ್ಟವಳಾಗಿ, ಆ ಜ್ವಾಲೆಯು-ಆ ಜ್ವಾಲೆ ಎನ್ನುವ ನೀಲಧ್ವಜನ ರಾಣಿಯು, ಉನ್ಮುಖನೆಂಬ-ಉನ್ಮುಖನೆಂಬ ಹೆಸರುಳ್ಳ, ತಮ್ಮನ-ಒಡಹುಟ್ಟಿದವನ, ಎಡೆಗೆ-ಹತ್ತಿರಕ್ಕೆ, ಪೋದಳು-ಹೊರಟು ಹೋದಳು ॥

ಅ॥ ವಿ॥ ಸೇನಾಜಲಧಿಸಹಿತ=ಜಲ-ನೀರನ್ನು, ಧಿ-ಧರಿಸುವುದು (ಕೃ. ವೃ ಸಮುದ್ರ) ಸೇನೆ ಎಂಬ ಜಲಧಿ (ಸಂ.ಪೂ) ಸೇನಾಜಲಧಿಯಿಂದ ಸಹಿತ (ತೃ. ತ.) ಜನಪನಂ=ಜನ-ಜನರನ್ನು, ಪ-ಕಾಪಾಡುವವನು (ಕೃ. ವೃ ) ॥೨೦॥

ಟೀ॥ ಉನ್ಮುಖಂ-ಉನ್ಮುಖನೆಂಬ ಜ್ವಾಲೆಯ ತಮ್ಮನು, ಅಗ್ರಜಾತೆಯನು-ಅಕ್ಕನನ್ನು, ಕಂಡು-ಈಕ್ಷಿಸಿ, ಇದಿರ್ಗೊಂಡು-ಎದುರಾಗಿ ಬಂದು, ಸನ್ಮಾನಿಸಿದನು-ಉಪಚಾರೋಕ್ತಿಗಳನ್ನಾಡಿದನು, (ಉನ್ಮುಖನು) ಏಕೆ-ಯಾವ ಕಾರ್ಯಕ್ಕಾಗಿ, ಬಂದೆ-ಇಲ್ಲಿಗೆ ಬಂದೆ, ಎನೆ-ಎಂದು ಹೇಳಲು, ಫಲುಗುಣಂ-ಪಾರ್ಥನು, ಎಲ್ಲಮುಂ-ಸಕಲವಾದ, ಮನ್ಮನೋರಥವನು-ನನ್ನ

---

ನಿನಗೆ ಕಳುಹಿಸಿಕೊಟ್ಟು ತಾನೂ ಕೂಡ ॥೧೮॥ ನಾನಾರತ್ನಾಭರಣಗಳನ್ನೂ, ದಿವ್ಯವಾದ ಉಡಿಗೆಗಳನ್ನೂ, ಅನೇಕ ಹಸುಗಳು, ಎಮ್ಮೆಗಳು, ಉತ್ತಮಾಂಗನೆಯರು, ಹಸ್ತ್ಯಶ್ವಾದಿಗಳು, ದ್ರವ್ಯರಾಶಿಗಳು ಇವನ್ನೆಲ್ಲಾ ಬಂಡಿಗಳಲ್ಲಿ ತುಂಬಿಸಿಕೊಂಡು ಬಂದು, ಅರ್ಜುನನಿಗೆ ಒಪ್ಪಿಸಲಾಗಿ, ಪಾರ್ಥನು ಆ ನೀಲಧ್ವಜಮಹಿಪನನ್ನು ಮರ್ಯಾದೆಯಿಂದ ಸತ್ಕರಿಸಿದನು ॥೧೯॥ ಬಳಿಕ ಅರ್ಜುನನು ಕುದುರೆಯನ್ನು ದಕ್ಷಿಣದಿಕ್ಕಿಗೆ ಬಿಟ್ಟುಕೊಂಡು ಸೇನಾಸಮೇತನಾಗಿ ಮುಂದೆಮುಂದೆ ನಡೆಯಲು, ನೀಲಧ್ವಜನೂ ತನ್ನ ಚತುರಂಗಬಲದಿಂದ ಕೂಡಿ ಪಾರ್ಥನನ್ನೇ ಹಿಂಬಾಲಿಸಿ ಹೊರಟನು. ಇತ್ತ ನೀಲಧ್ವಜನ ಅರಮನೆಯಲ್ಲಾದರೊ ಜ್ವಾಲಾದೇವಿಯು ಕಾಂತಿವಿಹೀನವಾದ ಈ ಮನೆಯಲ್ಲಿ ನಾನಿದ್ದು ಪ್ರಯೋಜನವೇನು? ಇನ್ನು ನಾನು ಏತಕ್ಕೆ ಬದುಕಬೇಕೆಂದು ಎಂದುಕೊಂಡು ರಾಜಗೃಹವಂ ಬಿಟ್ಟು ತನ್ನ ತಮ್ಮನಾದ ಉನ್ಮುಖನಿರುವ ಸ್ಥಳಕ್ಕೆ ॥೨೦॥ ಬರಲಾಗಿ, ಅವನು ತನ್ನ ಅಕ್ಕ

ಕೊಂದುಪತಿಯಂಗೆಲ್ದನು ‖ ತನ್ಮರಣಕೊಂದುಪಾಯನನೆಸಗದಿರಲೆನ್ನ | ಜನ್ಮವೇತಕೆನಿನ್ನದೆಸೆಯಿಂದನರನವಿಲ | ಸನ್ಮೌಳಿ ಮಸ್ತಕವನರಿಸದಿರೆನೆಂದೊಡಾಜ್ವಾಲೆಗವನಿಂತೆಂದನು ‖ ೨೧ ‖ ವಾಯಕರ್ಜುನನತಲೆಬಿದ್ದಪುದೆಕೃಷ್ಣನಸ | ಹಾಯಮಿರಲೆಲೆ ಮರುಳೆಹರಿಯಹಗೆಗೊಂಡುಕೆಡು | ವಾಯುಸಂತನಗೇಕೆರಾಘವಂಮಾಡಿದುಪಹತಿಯಿಂದಶಾನನಂಗೆ ‖ ದಾಯಮಂಪೇಳ್ದವನ ವಂಶವಂಸವರಿಸಿದ | ಮಾಯಕಾತಿಯವೊಲೆನ್ನಾಲಯಕೆಬಂದೆನಗ | ಪಾಯಮಂತಾರದಿಲ್ಲಿಂದಪೋಗೆಂದವಳನುನ್ಮುಖಂಕೋಪಿಸಿದನು ‖ ೨೨ ‖ ಜ್ವಾಲೆಬಳಿಕನುಜನಂಬೈದುಕೋಪದೊಳಾತ | ನಾಲಯದೊಳಿರದೆಪೊರೆಮುಟ್ಟುನಡೆತರೆಮುಂದೆ | ಲೀಲೆಮಿಗೆ

---

ಇಷ್ಟಾರ್ಥಗಳನ್ನು, ಕೆಡಿಸಿ-ಭಂಗವಾಗುವಹಾಗೆ ಮಾಡಿ, ಮಕ್ಕಳಂ_ಸುತರನ್ನೆಲ್ಲಾ, ಕೊಂದು-ಸಂಹಾರಮಾಡಿ, ಪತಿಯಂ_ನನ್ನ ಕಾಂತನನ್ನು, ಗೆಲ್ದನು_ಜಯಿಸಿದನು, ತನ್ಮರಣಕೆ-ಆ ಪಾರ್ಥನ ಸಾವಿಗೆ, ಒಂದು_ಯಾವುದಾದರೂ, ಉಪಾಯವನು-ಚಮತ್ಕಾರವನ್ನು, ಎಸಗದಿರಲು-ರಚಿಸದೆ ಹೋದರೆ, ಎನ್ನ-ನನ್ನ, ಜನ್ಮವು-ಬಾಳು, ಏತಕೆ_ಏನು ಪ್ರಯೋಜನ? ನಿನ್ನದೆಸೆಯಿಂದ_ನಿನ್ನ ನಿಮಿತ್ತವಾಗಿ, ನರನ_ಅರ್ಜುನನ, ವಿಲಸತ್ - ಹೊಳೆಹೊಳೆವ, ಮೌಳಿ - ತಲೆಗೆ ಅಲಂಕಾರಭೂತಮಾದ ಕಿರೀಟದಿಂದ ಸಹಿತವಾದ, ಮಸ್ತಕವನು-ಶಿರಸ್ಸನ್ನು, ಅರಿಸದಿರೆನು-ಛೇದಿಸದೆ ಬಿಡುವುದಿಲ್ಲ. ಎಂದೊಡೆ_ಎಂದು ನುಡಿಯಲು, ಅವನು-ಆ ಉನ್ಮುಖನೆಂಬುವನು, ಆಜ್ವಾಲೆಗೆ_ಆ ಜ್ವಾಲಾದೇವಿಯೊಡನೆ, ಇಂತು_ಮುಂದೆ ಹೇಳುವಂತೆ, ಎಂದನು_ನುಡಿದನು.

ಅ‖ ವಿ‖ ಅಗ್ರಜಾತೆ_ಅಗ್ರ_ಮೊದಲಿನಲ್ಲಿ, ಜಾತೆ - ಹುಟ್ಟಿದವಳು, (ಕೃ. ವೃ.) ವಿಲಸನ್ಮೌಳಿಮಸ್ತಕವನು-ವಿಲಸತ್-ಕಾಂತಿಯುಕ್ತವಾದ, ಮೌಳಿ - ಕಿರೀಟ (ವಿ. ಪೂ.) ವಿಲಸನ್ಮೌಳಿಯಿಂದ ಸಹಿತವಾದ ಮಸ್ತಕ (ಉ. ಮ. ಪದ. ಕರ್ಮಧಾರಯ.) ‖೨೧‖

ಟೀ‖ ಎಲೆಮರುಳೆ-ಹುಚ್ಚಳಾದ ಜ್ವಾಲೆಯೇ! ಶ್ರೀಕೃಷ್ಣನ-ಶ್ರೀ ಕೃಷ್ಣಸ್ವಾಮಿಯ, ಸಹಾಯಂ - ಪ್ರೇಮವು, ಇರಲು-ಇರಲಾಗಿ, ವಾಯಕೆ - ಚಮತ್ಕಾರಗಳಿಗೆಲ್ಲಾ, (ಪಾಯಕೆತಲೆಯನ್ನುಎಗರಿಸಲು ಎಂದು ಪಾಠಾಂತರ). ಅರ್ಜುನನ-ಪಾರ್ಥನ, ತಲೆ_ಶಿರವು, ಬಿದ್ದಪುದೆ_ಕೆಳಗೆ ಉರುಳೀತೆ? (ಬೀಳುವುದಿಲ್ಲವೆಂದು ಆಶಯುವು). ಹರಿಯ - ಕೃಷ್ಣನೊಂದಿಗೆ, ಹಗೆಗೊಂಡು_ದ್ವೇಷವನ್ನು ಮಾಡಿಕೊಂಡು, ಕೆಡುವ_ಭ್ರಷ್ಟನಾಗತಕ್ಕ, ಆಯುಸಂ-ತೊಂದರೆಯು, ತನಿಗೆ-ನನಿಗಾದರೊ, ಏಕೆ-ಏನುಪ್ರಯೋಜನ? (ನನಗೂ ಯುಕ್ತವಾದ್ದಲ್ಲ). ರಾಘವಂ_ರಾಮನು, ಮಾಡಿದ_ಎಸಗಿದ, ಉಪಹತಿಯಿಂದ_ಹಿಂಸೆಯಿಂದ ದಶಾನನಂಗೆ_ರಾವಣನೆಂಬ ರಾಕ್ಷಸನಿಗೆ, ದಾಯಮಂ_ಪ್ರಯೋಜನದ ತೆರನನ್ನು, ಪೇಳ್ದು_ಹೇಳಿ, ಅವನವಂಶವಂ-ಆ ರಾವಣನ ಕುಲವನ್ನೆ, ಸವರಿಸಿದ - ಹೆಸರಿಲ್ಲದಂತೆ ಮಾಡಿದ, ಮಾಯಕಾತಿಯವೋಲ್ - ಕೃತ್ರಿಮಕೆಲಸಮಾಡಿದ ಶೂರ್ಪಣಖಿಯಂತೆ, ಎನ್ನ-ನನ್ನ, ಆಲಯಕೆ-ಮನೆಗೆ, ಬಂದು_ಬಂದವಳಾಗಿ, ಎನಗೆ_ನನಿಗೇನೆ, ಅಪಾಯಮಂ_ಕೆಡುಕನ್ನು, ತಾರದೆ-ಬರಮಾಡದೆ, ಇಲ್ಲಿಂದ-ಈ ಸ್ಥಳದಿಂದ, ಪೋಗು_ಹೊರಡು, ಎಂದು_ಎಂಬದಾಗಿ, ಅವಳನು-ತನ್ನ ಅಕ್ಕನನ್ನು ಕುರಿತು, ಉನ್ಮುಖಂ-ಉನ್ಮುಖನೆಂಬುವನು, ಕೋಪಿಸಿದನು_ಸಿಟ್ಟುಮಾಡಿಕೊಂಡನು ‖೨೨‖

ಟೀ‖ ಬಳಿಕ_ಅನಂತರ, ಜ್ವಾಲೆ-ಜ್ವಾಲೆಯೆಂಬ ನೀಲಧ್ವಜನರಸಿಯು, ಅನುಜನಂ - ಒಡಹುಟ್ಟಿದ ಉನ್ಮುಖನನ್ನು,

---

ನಾದ ಜ್ವಾಲೆಯನ್ನು ಮರ್ಯಾದೆಯಿಂದ ಕಂಡು, ಬಂದಕಾರಣವೇನೆಂದು ಕೇಳಿದನು. ಆಗ ಜ್ವಾಲೆಯು ತನ್ನ ತಮ್ಮನಾದ ಉನ್ಮುಖನನ್ನು ಕುರಿತು, ಎಲೈ ಉನ್ಮುಖನೆ! ಅರ್ಜುನನು ನಮ್ಮ ರಾಜ್ಯಕ್ಕೆ ಮುತ್ತಿಗೆ ಹಾಕಿ ನೀಲಧ್ವಜನನ್ನೂ ಜಯಿಸಿ ಅವನನ್ನೂ ಹಿಂದೆಯೇ ಕರೆದುಕೊಂಡು ಹೋದನು. ನನ್ನ ಮಕ್ಕಳನ್ನೆಲ್ಲಾ ಕೊಂದನು. ನನ್ನ ಇಷ್ಟಾರ್ಥಗಳೆಲ್ಲಾ ಭಂಗವಾದವು, ಆದುದರಿಂದ ಅರ್ಜುನನ ತಲೆಯನ್ನು ಛೇದಿಸಿ ಕೆಳಗೆ ಬೀಳುವ ಉಪಾಯವೊಂದನ್ನು ಹುಡುಕಬೇಕೆಂದು ಹೇಳಿದಳು ‖ ೨೧ ‖ ಇದನ್ನು ಕೇಳಿದ ಉನ್ಮುಖನು ಜ್ವಾಲೆಯಂ ಕುರಿತು, ಎಲೈ ಜ್ವಾಲೆಯೇ! ಶ್ರೀ ಕೃಷ್ಣನ ದಯೆಯು ಸಂಪೂರ್ಣವಾಗಿರುವಾಗ ಅರ್ಜುನನ ತಲೆಯು ಉಪಾಯುಗಳಿಗೆಲ್ಲಾ ಕೆಳಗೆ ಬೀಳುವದೆ? ಶ್ರೀ ಕೃಷ್ಣಮೂರ್ತಿಯಲ್ಲಿ ವೈರವನ್ನು ಬೆಳಸಿ ಬದುಕಿದವರು ಯಾರಾದರೂ ಇದ್ದಾರೆಯೇ? ಆದ್ದರಿಂದ ಸರ್ವಥಾ ನಾನೀಕಾರ್ಯಕ್ಕೆ ಒಡಂಬಡುವುದಿಲ್ಲ ನಿನಿಗೂ ಈ ಕೆಟ್ಟಯೋಚನೆಯು ಬೇಡ. ನನ್ನ ಮಾತು ನಿನಗೆ ಸರಿಬೀಳದೆ ಹೋದರೆ ಪೂರ್ವದಲ್ಲಿ ಶೂರ್ಪಣಖಿಯು ತನ್ನಗ್ರಜನಾದ ರಾವಣನಿಗೆ ದುರ್ಬೋಧನೆಯನ್ನು ತುಂಬಿ ತ್ರಿಲೋಕರಕ್ಷಕನಾದ ಶ್ರೀ ರಾಮಚಂದ್ರಮೂರ್ತಿಯಮೇಲೆ ದ್ವೇಷವುಂಟಾಗುವಂತೆಮಾಡಿ ಅವನ ವಂಶವನ್ನೇ ರಾಮನಿಂದ ನಿರ್ಮೂಲಮಾಡಿಸಲು ಕಾರಣಭೂತಳಾದಹಾಗೆ, ನೀನೂ ಶ್ರೀ ಕೃಷ್ಣಸ್ವಾಮಿಯೊಂದಿಗೆ ಹಗೆತನವನ್ನು ನನಗೆ ಹೆಚ್ಚಿಸಿ ಯುದ್ಧಮಾಡುವಂತೆಸಗಿ ನನ್ನನ್ನೂ ಮತ್ತು ನನ್ನ ವಂಶವೆಂಬ ವೃಕ್ಷದ ಬುಡವನ್ನೂ ಕಡಿಯುವ ಕೊಡಲಿಯಾಗದೆ ಶೀಘ್ರವಾಗಿ ನನ್ನ ಮನೆಯಿಂದ ತೆರಳೆಂದು ಕಟ್ಟುಗ್ರಕೋಪದಿಂದ ನುಡಿದನು ‖೨೨‖ ಉನ್ಮುಖನ

ನಲಿದುಳಿದುಸುಳಿದಿಳಿದುಬೆಳೆವಳಿದುತಳೆದೆಳದುಪೊಳೆದುಸೆಳದು ॥ ಮೇಲೆಮೇಲೊದಗುವಘನಪ್ರವಾಹದಸುಕ | ಲ್ಲೋಲಮಾಲಾಕುಲದಬುದ್ಬುದದಜಲಜಂತು | ಜಾಲದಲಳಿಯುಲುಳಿಯಲಹರಿಗಳವಿಸ್ತರದವರಗಂಗೆಯಂ ಕಂಡಳು ॥೨೩॥ ತೆಳುಲುಡಿಯಮಳಲಿಡಿಯಲಿತ್ತಡಿಯತಳಗಡಿಯ| ಪೊಳೆನೆರೆಯಲುರೆಪೊರೆಯಲೊಳ್ದೊರೆಯಬೆಳ್ನೊರೆಯ | ತೊಳೆಪೆಳೆಯಮೀನ್ಪೊಳೆಯಲಿರದಿಳೆಯಲೆಡೆಸೆಳೆಯತುಂತುರಿನತನಿಗೆದರಿನ ॥ ಸುಳಿಸುಳಿಯಸವ್ವಳಿಯಬೊಬ್ಬುಳಿಯಕಡುಲಳಿಯ | (ನವ್ವಳಿಯ) ಜಳಚರದಥರಥರ

ಬೈದು-ದೂಷಿಸಿ, ಕೋಪದೊಳು-ಆಕ್ರೋಶದಿಂದ, ಆತನ-ಆ ಉನ್ಮುಖನ, ಆಲಯದೊಳು-ಮಂದಿರದಲ್ಲಿ, ಇರದೆ-ಸೇರದೆ, ಪೊರಮಟ್ಟು-ಹೊರಟು, ನಡೆತರೆ-ಐತರಲು, ಮುಂದೆ-ಎದುರಿನಲ್ಲಿ, ಲೀಲೆ-ಸಂತಸವು, ಮಿಗೆ-ಹೆಚ್ಚುವಹಾಗೆ, ನಲಿದು-ಆನಂದದಿಂದ ಕೂಡಿ, ಉಲಿದು-ಉಕ್ಕಿ, ಸುಳಿದು-ತಿರುಗಾಡಿ, ಇಳಿದು-ಕೆಳಗೆ ಬಿದ್ದು, ಬೆಳೆದು-ಹೆಚ್ಚಾಗಿ, ಅಳಿದು-ಸಣ್ಣದಾಗಿ, ತಳೆದು-ಮುಂದೆ ನಡೆದು, (ತೆಳಿದು-ಚಿಕ್ಕದಾಗಿ, ಎಂದು ಪಾಠಾಂತರದಲ್ಲಿ), ಎಳದು – ಸೆಳತವನ್ನುಂಟಾಗಿ, ಪೊಳೆದು – ಕಾಂತಿಯಿಂದ ಕೂಡಿ, ಸೆಳೆದು-ಸಿಕ್ಕಿದ ಪದಾರ್ಥಗಳನ್ನೆಲ್ಲಾ ಜೊತೆಯಲ್ಲಿ ಎಳೆದುಕೊಂಡು ಹೋಗುತ್ತ, ಮೇಲೆಮೇಲೆ – ಹೆಚ್ಚುಹೆಚ್ಚಾಗಿ, ಒದಗುವ-ಕೂಡಿಕೊಂಡು ಬರುವ, ಘನ – ಹೆಚ್ಚಾದ, ಪ್ರವಾಹದ – ಹರಿಯುವಿಕೆಯಿಂದ ಕೂಡಿದ, ಹೊಳೆಯು-ನದಿಯು, ಸು – ಒಳ್ಳೆ, ಕಲ್ಲೋಲ-ತರಂಗಗಳ, ಮಾಲಾ-ಪಙ್ತಗಳಿಂದ, ಆಕುಲದ-ತುಂಬಿದ, ಬುದ್ಬುದದ – ನೀರ್ಗುಳ್ಳೆಗಳ, ಜಲಜಂತು – ನೀರಿನಲ್ಲಿ ವಾಸಿಸುವ ಪ್ರಾಣಿಗಳ, ಜಾಲದ-ಸಮೂಹದ, ಲಳಿಯ-ಉದಕದ, ಉಳಿಯ-ಬುಗ್ಗೆಗಳ, ಲಹರಿಗಳ-ಪ್ರವಾಹಂಗಳ, ವಿಸ್ತರದ-ಅಧಿಕವಾದ, ವರ-ಉತ್ತಮವಾದ, ಗಂಗೆಯಂ-ಸುರನದಿಯನ್ನು, ಕಂಡಳು-ಈಕ್ಷಿಸಿದಳು.

ಅ॥ ವಿ॥ ಮೇಲೆಮೇಲೆ – ಇದು ಕ್ರಮಾನುಲಂಘನದಲ್ಲಿ ದ್ವಿರುಕ್ತಿಯಾಗಿ ಪ್ರಯೋಗಿಸಲ್ಪಟ್ಟದೆ. ನಲಿದು, ಉಲಿದು, ಸುಳಿದು ಮೊದಲಾದವು ಭೂತಕೃದ್ವಾಚಿ ॥೨೩॥

ಟೀ॥ ತೆಳಲು-ಬೆಳ್ಳಗೆ ನೀರಿನ ಮೇಲೆ ಕಾಣತಕ್ಕ ನೊರೆಯೇ, ಉಡಿಯ-ಉಟ್ಟಿರುವ ಬಿಳೀಸೀರೆಯಾಗಿವುಳ್ಳ, ಮಳಲ-ಮರಳೆಸ್ನುವ, ಇಡಿಯ – ಆಸನದಿಂದ ಕೂಡಿದ, ಇತ್ತಡಿಯ - ಇರ್ಕಡೆಗಳಲ್ಲಿರುವ, ತಳ-ಸ್ಥಾನವೇ, ಗಡೆಯ - ಕೊನೆಯಾಗಿರುವ, ಪೊಳೆ-ಶ್ರೇಷ್ಠತೆಯಂ ಪಡೆದ ಸುರನದಿಯಲ್ಲಿ, ನೆರೆಯಲು – ಸೇರುವುದಕ್ಕಾಗಿ, ಉರೆ-ಹೆಚ್ಚಾಗಿ, ಪೊರೆಯಲು – ಕಾಪಾಡಲು, ಒಳ್ದೊರೆಯ-ಯಮುನಾ, ಮಹಾನದಿ ಇತ್ಯಾದಿಗಳಿಂದ ಕೂಡಿರತಕ್ಕ, ಬೆಳ್ನೊರೆಯ-ಬೆಳ್ಳಗಿರುವ ನೊರೆಯನ್ನು ಹೊಂದಿರುವ, ತೊಳಪ-ಪ್ರಕಾಶಿಸುವ, ಎಳೆಯಮೀನ್-ಸಣ್ಣಮೀನುಗಳ, ಪೊಳೆಯಲಿ-ಕಾಂತಿಯಿಂದ, ಇರದೆ-ಸ್ಥಿರವಾಗಿ ನಿಲ್ಲದೆ, ಇಳೆಯಲ್ಲಿ-ಭೂಮಂಡಲದಲ್ಲಿ, ಎಡೆ-ಮಣ್ಣು, ಮರಳು ಇವುಗಳನ್ನು, ಸೆಳೆಯ-ತನ್ನಲ್ಲಿ ಗೆಳೆದುಕೊಳ್ಳುತ್ತ, ತುಂತುರಿನ-ನೀರ್ವನಿಗಳ, ತನಿ - ಹೊಸಹೊಸದಾದ, ಕೆದರಿನ – ಬೇರೆಬೇರೆಯಾಗಿರತಕ್ಕ, ಸುಳಿಸುಳಿಯ – ಅಲ್ಲಲ್ಲಿ ಸುಳಿಗಳಿಂದ ಕೂಡಿರುವ, ಸವ್ವಳಿಯ-ಧ್ವನಿಯುಳ್ಳ, ಬೊಬ್ಬುಳಿಯ - ಜಲಬುದ್ಬುದಂಗಳ ಅಥವಾ ನೀರ್ಗುಳ್ಳೆಗಳನ್ನೊಳಗೊಂಡಿರತಕ್ಕ, ಕಡು-ಹೆಚ್ಚಾದ, ಲಳಿಯ-ನೀರಿನಿಂದ ಕೂಡಿದ, ಜಲಚರದ-ನೀರಲ್ಲಿ ವಾಸವಾಗಿವುಳ್ಳ ಪ್ರಾಣಿಗಳ, ಥರಥರದ-ತಂಡೋಪತಂಡವಾದ, ಸೀಕರದ - ನೀರಿನ ಕಣಗಳುಳ್ಳ, ಭೀಕರದ-ಹೆದರಿಕೆಯನ್ನುಂಟುಮಾಡುವ, ಅತುಳ-ಅಸದೃಶವಾದ, ಗಂಗೆ-ಗಂಗಾ ಎನ್ನುವ ನಾಮಧೇಯವುಳ್ಳ, ಸುತರಂಗೆ – ಭಕ್ತರ ಪಾಪವನ್ನು ನೀಗುವ ಒಳ್ಳೆ ಅಲೆಗಳಿಂದ ಕೂಡಿರತಕ್ಕ, ದಿವಿಜ – ಸ್ವರ್ಗಲೋಕದಲ್ಲಿ ಹುಟ್ಟಿದ, ಸಿಂಧು-ನದಿಯು ಎಂದರೆ ದೇವಗಂಗೆಯು, ಅಂದು-ಆ ಕಾಲದಲ್ಲಿ, ನೋಳ್ಪರಿಗೆ - ಈಕ್ಷಿಸುವವರಿಗೆ, ಕಣ್ಗೆ-ನಯನಂಗಳಿಗೆ, ಎಸೆದಳು-ಕಾಂತಿಯುಕ್ತಳಾಗಿ ತೋರಿದಳು.

ಅ॥ ವಿ॥ ಸುತರಂಗೆ-ಸು-ಒಳ್ಳೆಯದಾದ, ತರಂಗೆ-ಅಲೆಗಳಿಂದ ಕೂಡಿದವಳು (ಬ. ಸ.) ದಿವಿಜಸಿಂಧು-ದಿವಿ-ಸ್ವರ್ಗದ

ಮಾತುಗಳನ್ನು ಕೇಳಿದ ಜ್ವಾಲೆಯು ಹೆಚ್ಚಾದ ಆಗ್ರಹವನ್ನು ತಾಳಿ ತನ್ನ ತಮ್ಮನನ್ನು ಮನಬಂದಂತೆ ಬೈದು, ಅವನ ಮನೆಯಲ್ಲಿ ನಿಲ್ಲದೆ ಮುಂದೆ ಹೊರಡಲಾಗಿ ಎದುರಿನಲ್ಲಿ ಸಂತೋಷವನ್ನು ಹೆಚ್ಚಿಸುತ್ತಲೂ, ಅಲ್ಲಲ್ಲಿ ಸುತ್ತುತ್ತಲೂ, ಮೇಲಕ್ಕೆ ಉಬ್ಬುತ್ತಲೂ, ಕೆಳಕ್ಕೆ ತಗ್ಗುತ್ತಲೂ, ನೀರುತುಂಬಿಕೊಳ್ಳುತ್ತಲೂ, ಪುನಃ ಕಡಿಮೆಯಾಗುತ್ತಲೂ, ಅಲ್ಲಲ್ಲಿ ನೀರ್ಗುಳ್ಳೆ ಕಾಣುತ್ತಲೂ, ಪುನಃ ಮಾಯವಾಗುತ್ತಲೂ, ನೋಡುವರ ಮನಸ್ಸಿಗೆ ಆನಂದವನ್ನುಂಟುಮಾಡತಕ್ಕದ್ದಾಗಿಯೂ ಪಾಪಪರಿಹಾರಕವಾದ ಗಂಗಾನದಿಯು ಕಾಣಬಂದಿತು ॥ ೨೩ ॥ ಆ ಗಂಗಾನದಿಯಾದರೊ, ನೀರಿನಮೇಲೆ ಹುಟ್ಟುವ ಬಿಳುಪಾದ ನೊರೆಗಳೆಂಬ ಬಿಳೀಸೀರೆಯನ್ನುಟ್ಟು, ಮರಳಿನಿಂದ ಮಾಡಿದ ಮಣೆಯಮೇಲೆ ಕುಳಿತು, ಎರಡು ಕಡೆಯಲ್ಲಿರುವ ದಡಗಳೆಂಬ ಮೇರೆಯುಳ್ಳದ್ದಾಗಿ, ಭಕ್ತರ ಪಾಪವನ್ನು ಪರಿಹರಿಸುವುದಕ್ಕಾಗಿ ಯಮುನಾದಿ ಉಪನದಿಗಳನ್ನು ಹೊಂದಿ ಮೀನು ಮೊಸಳೆ ಮೊದಲಾದ ಜಲಚರಗಳಿಗೆ ಆಸರೆಯಾಗಿ, ಅಲ್ಲಲ್ಲಿ ಮರಳುಗುಡ್ಡೆಗಳು, ನೀರ್ಗುಳ್ಳೆಗಳು, ತುಂತುರುಹನಿಗಳು, ಅಲೆಗಳ ರಾಶಿಗಳು ಇವುಗ

ದಶೀಕರದಭೀಕರದ | ತುಳಗಂಗೆಸುತರಂಗೆನೋಳ್ಪಂಗೆಸಲಿಕಣ್ಗೆ ಸದಳಂದುದಿವಿಜಸಿಂಧು || ೨೪ || ಕೂರ್ಮೆಗಡಿಯಾಗಿರ್ಪ ಗುಂಪಿನಿಂತನ್ನಡೆಯೊ | ಳಾರ್ಮುಳುಗಲನರಿಂದ್ರರಹರೆಂಬಪೇರ್ಮೆಯಿಂ | ಘೂರ್ಮಿಸುವಗಂಗಾಪ್ರವಾಹಮಂಕಂಡಳಾಜ್ವಾಲೆಬಳಿಕಲ್ಲಿನಿಂದು || ಧಾರ್ಮಿಕರದರೊಳುಂಟೆತನ್ನನೆಂತಾದೊಡಂ | ನೀರ್ಮುಟ್ಟದಂತೊಯ್ಯನಾತಡಿಗೆದಾಂಟಿಸುವ | ಕೂರ್ಮೆಯುಳ್ಳವರೆಂದೊಡಲ್ಲಿರ್ದನಾವಿಕರ್ಕೇಳ್ದವಳ್ಗಿಂತೆಂದರು || ೨೫ || ಬಿಂದುಮಾತ್ರಂಮೇಲೆಬೀಳ್ಕೆವಿಪ್ರನಂ | ಕೊಂದಪಾಪಂ ಪೋಪುದಿಲ್ಲಿಮಿಂದವನಗತಿ | ಯಂದವಂಬಣ್ಣಿಸುವಡಜನಪವಣಲ್ಲನೀನಿಲ್ಲಿಗೇಸಂಪ್ರಾರ್ಥಿಸಿ || ಬಂದಗಂಗಾಂಬುವಂಮುಟ್ಟದಿರಲು

---

ದಲ್ಲಿ, ಜ-ಹುಟ್ಟಿದ್ದು (ಕೃ. ವೃ.) ದಿವಿಜವೆಂಬ ಸಿಂಧು (ಸಂ ಪೂ. ಕ.) || ೨೪ ||

ಟೀ|| ಕೂರ್ಮೆಗೆ-ನನ್ನ ವಿಶ್ವಾಸಕ್ಕೆ, ಅಡಿಯಾಗಿ - ಸ್ಥಾನಭೂತವಾಗಿ, ಇರ್ಪ - ಇರತಕ್ಕ, ಗುಂಪಿನಿಂ - ಭಕ್ತರ ಸಮುದಾಯದಲ್ಲಿ, ಆರು-ಯಾರು, ತನ್ನ-ಸ್ವಕೀಯವಾದ, ಎಡೆಯೊಳ್-ಸಮೀಪದಲ್ಲಿ ಅಂದರೆ ಗಂಗಾ ಪ್ರವಾಹದಲ್ಲಿ, ಮುಳುಗಲು-ಸ್ನಾನಮಾಡಿದರೂ ಕೂಡ, ಅವರು-ಅಂಥವರು, ಇಂದ್ರರ್-ಸ್ವರ್ಗಲೋಕಕ್ಕೆ ನಾಯಕನಾಗಿರುವ ದೇವೇಂದ್ರನಿಗೆ ಸಮರಾದವರೇ; ಅಹರು-ಆಗುತ್ತಾರೆ, ಎಂಬ-ಎಂದು ನುಡಿವ, ಪೇರ್ಮೆಯಿಂ=ಮರ್ಯಾದಾತಿಶಯದಿಂದ, ಘೂರ್ಮಿಸುವ-ಸುತ್ತಿ ಸುತ್ತಿ ಪ್ರವಹಿಸತಕ್ಕ, ಗಂಗಾಪ್ರವಾಹಮಂ-ಗಂಗಾನದಿಯನ್ನು, ಜ್ವಾಲೆ-ಉನ್ಮುಖನ ಅಕ್ಕನಾದ ಜ್ವಾಲೆಯು, ಕಂಡಳು-ಈಕ್ಷಿಸಿದಳು, ಬಳಿಕ-ಅನಂತರ, ಅಲ್ಲಿ-ಆ ದೇವನದಿಯಲ್ಲಿ, ನಿಂದು-ನಿಂತವಳಾಗಿ, ಅದರೊಳು-ಆ ಗಂಗಾನದಿಯ ತಟದಲ್ಲಿರತಕ್ಕ ಜನಗಳ ಗುಂಪಿನಲ್ಲಿ, ಧಾರ್ಮಿಕರು-ಧರ್ಮಿಷ್ಠರಾದವರು, ಉಂಟೆ-ಇರುವರೆ? (ಯಾರಾದರೂ ಇದ್ದಪಕ್ಷದಲ್ಲಿ) ತನ್ನನು-ನನ್ನನ್ನು, ಎಂತಾದೊಡಂ-ಯಾವ ಬಗೆಯಿಂದಲಾದರೂ, ನೀರ್ಮುಟ್ಟದಂತೆ-ನೀರಿಗೆ ಸೋಕದಹಾಗೆ, ಒಯ್ಯನೆ - ನಿಧಾನವಾಗಿ, ಆತಡಿಗೆ-ಮತ್ತೊಂದು ದಡಕ್ಕೆ, ದಾಂಟಿಸುವ-ದಾಟಿಸತಕ್ಕ, ಕೂರ್ಮೆಯುಳ್ಳವರು-ಪ್ರೇಮದಿಂದ ಕೂಡಿದವರು, ಎಂದೊಡೆ-ಹೀಗೆಂದು ಕೇಳಲಾಗಿ, ಅಲ್ಲಿರ್ದ-ಅಲ್ಲಿ ನೆರದಿದ್ದ, ನಾವಿಕರು-ದೋಣಿಯನ್ನು ನಡೆಯಿಸತಕ್ಕವರು, ಕೇಳ್ದು-ಈ ಮಾತನ್ನು ಕೇಳಿದವರಾಗಿ, ಅವಳ್ಗೆ-ಆ ಜ್ವಾಲೆಯನ್ನು ಕುರಿತು, ಇಂತು-ಮುಂದೆ ಹೇಳುವಂತೆ, ಎಂದರು-ನುಡಿದರು || ೨೫ ||

ಟೀ|| ಬಿಂದುಮಾತ್ರಂ-ಗಂಗಾನದಿಯ ಒಂದು ತೊಟ್ಟು ನೀರು ಮೇಲೆ-ದೇಹದೆಡೆಯಲ್ಲಿ, ಬೀಳ್ಕೆ-ಬಿದ್ದದ್ದಾದರೆ, ವಿಪ್ರನಂ-ಭೂಸುರನನ್ನು, ಕೊಂದ-ಕೊಂದುಹಾಕಿದ, ಪಾಪಂ-ಎಡರು, ಪೋಪುದು-ಕಳೆದು ಹೋಗುತ್ತದೆ, ಇಲ್ಲಿ-ಇದರ ನೀರಿನಲ್ಲಿ, ಮಿಂದವನ-ಸ್ನಾನಮಾಡಿದಂಥ ಮನುಷ್ಯನ ಗತಿಯು-ಸ್ವರ್ಗ ಸುಖವಂ ಪಡೆವ ಪ್ರಯೋಜನದ, ಅಂದವಂ-ಬಗೆಯನ್ನು, ಬಣ್ಣಿಸುವಡೆ-ವರ್ಣನೆ ಮಾಡಬೇಕಾದರೆ, ಅಜನ-ಬ್ರಹ್ಮನಿಂದಲೂ, ಪವಣಲ್ಲ - ಸಾಧ್ಯವಲ್ಲವು, ನೀನು-ನಿನಾದರೊ, ಇಲ್ಲಿಗೆ-ಈ ಪುಣ್ಯಕ್ಷೇತ್ರಕ್ಕೆ, ಏಂ-ಏನನ್ನು, ಸಂಪ್ರಾರ್ಥಿಸಿ-ಬಯಸಿ, ಬಂದೆ-ಬಂದಿರುವಿ? ಗಂಗಾಂಬುವಂ - ಗಂಗೋದಕವನ್ನು, ಮುಟ್ಟದೆ-ಮುಟ್ಟದಹಾಗೆ, ಇರಬಹುದೆ-ಇರುತ್ತಾರೆಯೆ? ಪೇಳು-ಹೇಳು, ಎಂದೊಡೆ-ಎಂಬದಾಗಿ ಅಲ್ಲಿದ್ದ ನಾವಿಕರು ಕೇಳಲು, ಆಜ್ವಾಲೆ-ಆ ಜ್ವಾಲೆ ಎಂಬ ಹೆಂಗಸು, ನುಡಿದಳು-ಪೇಳುವಳಾಗುತ್ತಾಳೆ. ಜಾಹ್ನವಿಗೆ-ಸುರನದಿಗೆ, ಬಂದು-ಒಂದಾನೊಂದು, ದೋಷಂ-ಅಪವಾದವು, ಇಹುದು-ಇದೆ. ನಿಮಿಗೆ-ನಿಮ್ಮೊಡನೆ, ಒರೆವುದಿಲ್ಲ-ಹೇಳಲಾಗುವುದಿಲ್ಲ, ಅವಳು-ಆ ದೇವಗಂಗೆಯೇ, ಮೈದೋರಲು-ಪ್ರತ್ಯಕ್ಷವಾದರೆ, ಉಸುರುವೆನು-ಪೇಳ್ವೆನು, ಎಂದಳು-ಹೀಗೆಂದು ನುಡಿದಳು. ||

---

ಳಿಂದಕೂಡಿ, ನೋಡುವವರ ಕಣ್ಣಿಗೆ ಆನಂದವನ್ನುಂಟುಮಾಡುತ್ತಲಿತ್ತು || ೨೪ || ಈ ರೀತಿಯಲ್ಲಿ ಅಸಮಾನವಾಗಿ, ತನ್ನಲ್ಲಿ ಮುಳುಗಿದ ಭಕ್ತರ ಪಾಪಗಳನ್ನೆಲ್ಲಾ ನೀಗಿ ಶಾಶ್ವತ ಸುಖವನ್ನೀವೆನೆಂಬ ಹೆಮ್ಮೆಯಿಂದ ಮೆರೆಯುವಂತೆ ತೋರುವ ಸುರನದಿಯನ್ನು ಜ್ವಾಲೆಯು ನೋಡಿ ಆ ದಿವಿಜನದಿಯ ತಡಿಯಲ್ಲಿ ನಿಂತು, ಸ್ನಾನಮಾಡುತ್ತಲಿದ್ದ ಜನರನ್ನು ಕುರಿತು, ಈ ನದಿಯನೀರು ಸೋಕದಂತೆ ನನ್ನನ್ನು ಈ ದಡದಿಂದ ಮತ್ತೊಂದು ದಡವನ್ನು ಸೇರಿಸುವ ಪುಣ್ಯಾತ್ಮರು ಯಾರಾದರೂ ಇರುವರೇ? ಎಂದು ಕೂಗಿ ಕೇಳಿದಳು. ಈ ಶಬ್ದವು ಅಲ್ಲಿದ್ದ ನಾವಿಕರಿಗೆ ಕೇಳಿಸಲಾಗಿ ಆ ಅಂಬಿಗರು ತಡಮಾಡದೆ ಜ್ವಾಲೆಯು ಇದ್ದೆಡೆಗೆ ಬಂದು ಅವಳನ್ನು ಕುರಿತು || ೨೫ || ಎಲೆ ಹೆಂಗಸೇ! ಈ ನದಿಯಲ್ಲಿನ ಒಂದು ಬಟ್ಟು ನೀರು ಮೈಮೇಲೆ ಬಿದ್ದರೆ ಬ್ರಹ್ಮಹತ್ಯಾದಿ ಮಹಾಪಾತಕಗಳೆಲ್ಲಾ ಪರಿಹಾರವಾಗುತ್ತವೆ. ಈ ನದಿಯಲ್ಲಿ ಸ್ನಾನಮಾಡಿದವರಿಗುಂಟಾಗುವ ಸದ್ಗತಿಯು ಜಗತ್ಸೃಷ್ಟಿಗೆ ಕಾರಣಭೂತನಾಗಿರುವ ಬ್ರಹ್ಮದೇವನಿಂದಲೂ ವರ್ಣಿಸಲಸದಳವಾಗಿರ್ಪುದು. ಇಂಥಾ ಪುಣ್ಯನದಿಯ ತೀರ್ಥದಲ್ಲಿ ಸ್ನಾನವಂ ಮಾಡದೆ, ಒಂದು ನೀರಿನ ಕಣವೂ ಮೇಲೆ ಬೀಳಕೂಡದೆಂದು ಬಯಸುವ ನೀನು ಏನನ್ನು ಹಾರೈಸಿ ಇಲ್ಲಿಗೆ ಬಂದಿರುವಿ? ಎಂದು ಕೇಳಿದ ಅಂಬಿಗರನ್ನು ಜ್ವಾಲೆಯು ನೋಡಿ ಈ ಗಂಗಾನದಿಗೆ ಒಂದು ದೋಷವುಂಟಾಗಿದೆಯಾದ್ದರಿಂದ ನಾನು ಈ ನದಿಯಲ್ಲಿ ಸ್ನಾನವಂ ಮಾಡುವದಿಲ್ಲ. ಇದರ ನೀರು ನನ್ನ ಶರೀರಕ್ಕೆ ಸೋಕಿಸಕೂಡದು, ಆ ದೋಷದ ತೆರನನ್ನು ನಿಮ್ಮೊಡನೆ

ಹುದೆಸೇ | ಳೆಂದೊಡಾಜ್ವಾಲೆನುಡಿದಳ್ಜಾಹ್ನವಿಗೆದೋಷ | ವೊಂದಿಹುದುನಿಮುಗೊರೆವ್ರದಿಲ್ಲವುವಳೆನಗೆವ್ಯೆದೋರಲುಪಿಶುವೆನೆಂ ದಳು || ೨೬ || ನೈಜದಿಂದಜನಕರಪಾತ್ರದಗ್ರೋದಕಂ | ವೈಜಯಂತೀಧರನಪಾದಾಂಬುಶಿವನತಲೆ | ಗೈಜಡೆವೆಳಸಿಗೇರ್ದಜೀವನಂತಾನಂತುಮಲ್ಲದತಿಪಾಪಂಗಳ || ವ್ಯೆಜೋಡನುಗಿದುಬಿಸುಡುನಗಂಗೆಬೆದರಿದಳ್ | ತ್ರ್ಯೆಜಗದೊಳಪವಾದಕಂಜದವರುಂಟೆಕೇ | ಳೈಜನಪಜಲಧಿಜಾಹ್ನವಿಕೇಳ್ದುಪೊರಮಟ್ಟಳವಳೆಂದನುಡಿಗೆನಡುಗಿ || ೨೭ || ಅಂಬುರುಹರೋಲಂಬಮತ್ಸ್ಯಕಚ್ಛಪವಾರಿ | ಕಂಬುಶೀಕರಚಕ್ರವಾಕಶೈವಾಲಕಾ | ದಂಬಗಂಭೀರಸ್ಯೆಕತಮೃಣಾಳಂಗಳಿವುತನಗವಯವಂಗಳಾಗೆ || ಇಂಬಾದ ಸೌಂದರ್ಯಮಾನದಿಯನಡುವೆಪ್ರತಿ | ಬಿಂಬಿಸಿದೊಲಿನದಿವ್ಯರೂಪವಳವಡಿಸಿಜಗ | ದಂಬೆಜಾಹ್ನವಿಸಲಿಲಮಧ್ಯದಿಂದೆದ್ದುಬಂದಾ

ಅ|| ವಿ|| ಮಿಂದವನ-ಮಿಾ ಧಾತು, ಬಣ್ಣಿಸು (ತ್ಭ) ವರ್ಣಿಸು (ತ್ಸ) ಗಂಗಾಂಬು (ಸ. ದೀ.) ಜಾಹ್ನವಿ-ಜಹ್ನುಋಷಿಯ ಕಿವಿಯಿಂದ ಹೊರಗೆಬಂದು ಅನಂತರ ಭೂಲೋಕಕ್ಕೆ ಬಂದಳಾಗಿ ಜಹ್ನುಋಷಿಯ ಮಗಳೆಂದು ಪ್ರಸಿದ್ಧಿಯು ||೨೬||

ಟೀ|| ನೈಜದಿಂದ-ಸ್ವಾಭಾವಿಕವಾಗಿ, ಆಜನ - ಬ್ರಹ್ಮದೇವನ, ಕರ-ಕೈಯನ್ನಾವರಿಸಿದ, ಪಾತ್ರದ - ಕಪಾಲದ, ಅಗ್ರೋದಕಂ-ನಿರ್ಮಲವಾದ ನೀರು, ವೈಜಯಂತೀ-ವೈಜಯಂತೀ ಎನ್ನುವ ಹಾರವನ್ನು, ಧರ-ಹಾಕಿಕೊಂಡಿರುವ ವಿಷ್ಣುವಿನ, ಪದ-ಕಾಲುಗಳಲ್ಲಿ ಹುಟ್ಟಿದಂಥ, ಅಂಬು-ಉದಕವು, ಶಿವನ-ಪರಮೇಶ್ವರನ, ತಲೆಯ-ತಲೆಯಲ್ಲಿರತಕ್ಕ, ಐಜಡೆ-ಐದುತಿರಿಗಳನ್ನು, ವೆಳಸಿ-ಬಳಸಿಕೊಂಡು, ಎಗೆರಿದ-ಮೇಲಕ್ಕೆದ್ದ, ಜೀವನಂ - ಪ್ರಾಣರಕ್ಷಣೆಯನ್ನು ಮಾಡುವ ತೀರ್ಥವು, ಅಂತುಮಲ್ಲದೆ-ಇದೂ ಅಲ್ಲದೆ, ತಾನು-ಪರನದಿಯು, ಅತಿಪಾಪಂಗಳ-ಹೆಚ್ಚಾದ ದುರಿತಂಗಳ ಸಂಬಂಧವಾದ, ವ್ಯೆಜೋಡನು-ಶರೀರಕ್ಕೆ ಬಳಿದಿರುವಂತಿರತಕ್ಕ ಪಾಪವೆನ್ನುವ ಅಂಗಿಯನ್ನು, ಉಗಿದು-ಹೊರಗೆ ಬಿಸಾಟು, ಬಿಸುಡುವ-ಹೋಗಲಾಡಿಸುವ, ಗಂಗೆ-ದೇವನದಿಯು, ಬೆದರಿದಳು-ಹೆದರಿಕ್ಕೊಂಡವಳಾದಳು. ತ್ರೈಜಗದೊಳು-ಸ್ವರ್ಗ ಮರ್ತ್ಯ ಪಾತಾಳಂಗಳಲ್ಲಿ, ಅಪವಾದಕೆ-ದೋಷಕ್ಕೆ, ಅಂಜದವರು-ಬೆದರದೆ ಇರತಕ್ಕವರು, ಉಂಟೆ-ಇದ್ದಾರೆಯೇ? ಜನಪ-ಎಲೈ ಜನಮೇಜಯ ಮಹಿಪನೆ ! ಕೇಳೈ-ಲಾಲಿಸು ಎಂಬದಾಗಿ, ಜಲಧಿ-ನೀರಿಗೆ ಸ್ಥಾನಭೂತಗಳಾಗಿರತಕ್ಕ, ಜಾಹ್ನವಿ-ದೇವಗಂಗೆಯು, ಕೇಳ್ದು-ಆ ಜ್ವಾಲೆಯು ಹೇಳಿದ ಮಾತನ್ನು ಕೇಳಿ, ಅವಳು-ಆ ಜ್ವಾಲೆಯು, ಎಂದ-ಹೇಳಿದ, ನುಡಿಗೆ-ಮಾತಿಗೆ, ನಡುಗಿ-ಗಡಗಡನೆ ನಡುಗುತ್ತ, ಪೊರಮಟ್ಟಳು-ಶರೀರವನ್ನು ಧರಿಸಿದವಳಾಗಿ ನೀರಿನಿಂದ ಮೇಲಕ್ಕೆ ಬಂದವಳಾದಳು ||

ಅ|| ವಿ|| ಕರಪಾತ್ರ, ಕರ-ಕೈಯಲ್ಲಿರುವ, ಪಾತ್ರ-ಕಮಂಡಲ, (ಸ. ತ.) ಅಗ್ರೋದಕ, ಅಗ್ರ-ಶ್ರೇಷ್ಠವಾದ, ಉದಕ-ನೀರು, (ವಿ. ಪೂ.) ಜೀವನಂ-ನೀರು ಮತ್ತು ಬದಕುವುದು || ೨೭ ||

ಟೀ|| ಅಂಬುರುಹ-ಕಮಲ, ರೋಲಂಬ-ಭೃಂಗಗಳು, ಮತ್ಸ್ಯ-ಮಿಾನುಗಳು, ಕಚ್ಛಪ-ಮೊಸಳೆ, ವಾರಿ-ನೀರು, ಕಂಬು-ಶಂಖಗಳು, ಶೀಕರ-ನೀರ್ವನಿಗಳು, ಚಕ್ರವಾಕ-ಚಕ್ರವಾಕ ಹಕ್ಕಿಗಳು, ಶೈವಾಲ - ಪಾಚಿಗಳು, ಕಾದಂಬ - ಹಂಸ ಪಕ್ಷಿಗಳು, ಗಂಭೀರ-ಹೆಚ್ಚಾದ ಆಳವು, ಸೈಕತ-ಮರಳರಾಶಿಗಳು, ಮೃಣಾಳಂಗಳ್-ಕಮಲದ ದಂಟು ಮೊದಲಾದವೆಲ್ಲಾ, ತನಿಗೆ-ಗಂಗೆಯೆಂಬ ನಾರಿಗೆ, ಅವಯವಂಗಳು-ಅಂಗೋಪಾಂಗಗಳು, ಆಗೆ-ಆಗಿರಲು, ಇಂಬಾದ-ಮನೋಹರವಾದ, ಸೌಂದರ್ಯಂ-ಚನ್ನಾಗಿರುವಿಕೆಯು, ಆವನದಿಯ-ಆ ಸುರನದಿಯ, ನಡುವೆ-ಮಧ್ಯದಲ್ಲಿ, ಪ್ರತಿಬಿಂಬಿಸಿದವೋಲ್-ನೆರಳಿನಂತಿದೆಯೊ ಎಂಬಂತೆ, ಇರೆ-ಇರಲು, ದಿವ್ಯ-ಅತಿ ಶ್ರೇಷ್ಠವಾದ, ರೂಪ-ಆಕಾರವನ್ನು, ಅಳವಡಿಸಿ-ನೇರ್ಪಡಿಸಿಕೊಂಡು, ಜಗದಂಬೆ-ಲೋಕಮಾತೆಯಾದ, ಜಾಹ್ನವಿ-ಜಹ್ನುವಿನ ಕುವರಿಯಾದ ಸುರನದಿಯು, ಸಲಿಲ-ಉದಕದ, ಮಧ್ಯದಿಂದ-ಮಧ್ಯಭಾಗದಿಂದ, ಎದ್ದು-ಮೇಲಕ್ಕೆದ್ದು, ಬಂದು-ಜ್ವಾಲೆಯ ಸಮಿಾಪವನ್ನುಸೇರಿ, ಜ್ವಾಲೆಯುಂ-ಜ್ವಾಲೆಯೆಂಬ ನೀಲಧ್ವಜನ ಸತಿಯನ್ನು, ಕೇಳ್ದಳು-ಮುಂದೆ

ಹೇಳುವುದಿಲ್ಲ. ಗಂಗೆಯೇ ಮೂರ್ತೀಭವಿಸಿ ನನ್ನೆದುರಿಗೆ ಬಂದರೆ ಆಗ ಆಕೆಯೊಂದಿಗೆ ಆ ದೋಷವನ್ನು ಹೇಳುತ್ತೇನೆಂದು ನುಡಿದಳು || ೨೬ || ಈ ಅಪವಾದದ ಮಾತನ್ನು ಗಂಗಾದೇವಿಯು ಕೇಳಿ ಸ್ವಭಾವವಾಗಿ ತಾನು ಲೋಕಸೃಷ್ಟಿಯಂ ಮಾಡುವ ಬ್ರಹ್ಮದೇವನ ಕಮಂಡಲದ ಶ್ರೇಷ್ಠೋದಕವೂ, ವೈಜಯಂತಿಯೆಂಬ ಶ್ರೇಷ್ಠಮಾಲಿಕೆಯಿಂದಲಂಕೃತನಾದ ಮಹಾವಿಷ್ಣುವಿನ ಪಾದದಲ್ಲಿ ಹುಟ್ಟಿದ್ದರಿಂದ ಪರಿಶುದ್ಧವಾದದ್ದೂ, ಈಶ್ವರನ ಜಡೆಗಳಲ್ಲಿ ಸೇರಿರುವುದರಿಂದ ಪವಿತ್ರವಾಗಿಯೂ, ಭಕ್ತರ ದೇಹವನ್ನವಲಂಬಿಸಿರತಕ್ಕ ಪಾಪಸಂಬಂಧವಾದ ಅಂಗಿಯನ್ನು ತೆಗೆದು ಹಾಕಿ, ಪುಣ್ಯಕವಚವನ್ನು ತೊಡಿಸುವುದರಲ್ಲಿ ಹೆಸರುವಾಸಿಯನ್ನು ಪಡೆದಿರುವುದಾಗಿಯೂ ಇದ್ದರೂ ಕಡ ಲೋಕಾಪವಾದಕ್ಕೆ ಬೆದರಿ, || ೨೭ || ತನಿಗೆ ಅವಯವಗಳಾದ ಕಮಲ, ಭೃಂಗಂಗಳು, ಮಿಾನು, ಮೊಸಳೆ, ಚಕ್ರವಾಕಪಕ್ಷಿ, ಹಂಸ, ಆಳ, ಮರಳು ರಾಶಿಗಳು, ಮೊದಲಾದ ನದಿಯಲ್ಲಿರುವ ಪದಾರ್ಥಗಳನ್ನೆಲ್ಲಾ ಬಿಟ್ಟು ಬಿಟ್ಟು, ದಿವ್ಯ ತೇಜಸ್ಸಿನಿಂ ಹೊಳೆವ ಸ್ತ್ರೀರೂಪವನ್ನು ತಾಳಿ, ಮೇಲಕ್ಕೆದ್ದು ಬಂದು, ಜ್ವಾಲೆಯನ್ನು

ಜ್ವಾಲೆಯಂ ಕೇಳ್ದಳು ||೨೮|| ದೋಷಹರೆತಾನೆಂದುವೇದಶಾಸ್ತ್ರಂಗಳುರೆ | ಘೋಷಿಪವುಮುಟ್ಟಲಾಗದುತನ್ನನೆಂದುನೀಂ| ದೂಷಿಸುವಕಾರಣಮದಾವುದೋಜ್ವಾಲೆಹೇಳೆಂದುಜಾಹ್ನವಿನುಡಿದಳು || ದೂಷಣದಮಾತನಾಡುವಳಲ್ಲಲೋಕದಸು | ಭಾಷಿತವನುಸುರಬೇಹುದುಪುತ್ರರಿಲ್ಲದಿಹ | ಯೋಷಿದಂಗಸ್ಪರ್ಶನಂಪಾಪಮೆಂಬರದಕಾಗಿಬೆದರಿದೆನೆಂದಳು || ೨೯ || ಎಂದೊಡೆಕೆರಳ್ದುಭಾಗೀರಥಿ ಸಮಸ್ತನೃಪ | ಬೃಂದದೋಳ್ತನ್ನಮಗನುದ್ದಾಮನಾಗಿರ್ಪ | ನೆಂದುಮಳಿವವನಲ್ಲಮವನುಸ್ವೇಚ್ಛಾಮರಣಿಭಾಗವತಮಸ್ತಕಮಣಿ || ಬೃಂದಾರಕೋಪಮಂಸತ್ಯಸಂಧಂಭೀಷ್ಮ | ನೆಂದುಮೂಲೋಕದೊಳ್ಪ್ರಖ್ಯಾತನಾಗಿಹಂ | ಮಂದಮತಿನೀನೆನಗೆ

---

ಹೇಳುವಂತೆ ಕೇಳುವಳು ||೨೮||

ಟೀ|| ತಾನು - ಗಂಗೆ ಎಂಬ ಹೆಸರುಳ್ಳ ನಾನಾದರೋ, ದೋಷ-ಭಕ್ತರ ದುರಿತಂಗಳನ್ನು, ಹರೆ - ಕಳೆಯುವಳು, ಎಂದು-ಎಂಬದಾಗಿ, ವೇದಶಾಸ್ತ್ರಂಗಳು-ವೇದಗಳೂ, ಮತ್ತು ಶಾಸ್ತ್ರಗಳೂ ಸಹ, ಘೋಷಿಪವು-ಸಾರುವವು, (ಇಂಥಾ) ತನ್ನನು-ನನ್ನನ್ನು, ಮುಟ್ಟಲಾಗದು - ಮುಟ್ಟಕೂಡದು, ಎಂದು - ಎಂಬ ತೆರನಾಗಿ, ನೀಂ - ನೀನಾದರೊ, ದೂಷಿಸುವ - ಅಲಗಳೆಯುವಂಥ, ಕಾರಣಂ-ಹೇತುವು, ಅದುಆವುದೊ-ಅದು ಏತಕ್ಕೊ ? ಜ್ವಾಲೆ-ಎಲೈ ಜ್ವಾಲೆಯೇ, ಹೇಳು-ಅರುಹುವಳಾಗು, ಎಂದು-ಎಂಬದಾಗಿ, ಜಾಹ್ನವಿ-ಗಂಗಾದೇವಿಯು, ನುಡಿದಳು-ಕೇಳಿದಳು. ದೂಷಣದ-ಅಪವಾದ ಸಂಬಂಧದ, ಮಾತನು-ನುಡಿಯನ್ನು, ಆಡುವವಳಲ್ಲ - ನಾನು ಎಂದಿಗೂ ಆಡಲಾರೆ, ಲೋಕದ-ಪ್ರಪಂಚದ ಮಾನವರ, ಸುಭಾಷಿತವನು-ನುಡಿಗಳನ್ನು, ಉಸುರಬೇಹುದು-ತಿಳಿಸಬೇಕು, ಪುತ್ರರಿಲ್ಲದ-ಸಂತಾನವಂ ಪಡೆಯದಿರತಕ್ಕ, ಯೋಷಿತ್-ಸ್ತ್ರೀಯ, ಅಂಗಸ್ಪರ್ಶನಂ-ಶರೀರವನ್ನು ಮುಟ್ಟುವದು, ಪಾಪಂ-ಪಾತಕವು, ಎಂಬರು-ಎಂದು ಹೇಳುವರು, ಅದಕಾಗಿ-ಅದಕ್ಕೋಸ್ಕರವೇ, ಬೆದರಿದೆನು-ಹೆದರಿಕೊಂಡೆನು, ಎಂದಳು-ಹೀಗೆಂದು ಜ್ವಾಲೆಯು ಗಂಗಾದೇವಿಯೊಂದಿಗೆ ಹೇಳಿದವಳಾದಳು ||

ಅ|| ವಿ|| ವೇದಗಳು-ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವಣವೇದವೆಂಬವು. ಶಾಸ್ತ್ರಂಗಳು-ತರ್ಕ, ವ್ಯಾಕರಣ, ಛಂದಸ್ಸು, ನಿರುಕ್ತ, ಜ್ಯೋತಿಷ, ಕಲ್ಪಂಗಳು, ಸು-ಒಳ್ಳೆಯದಾದ, ಭಾಷಿತ (ನುಡಿಗಳು, ವಿ. ಪೂ.) ಪುತ್ರ-ಪುತ್ ಎಂಬ ಹೆಸರುಳ್ಳ ನರಕದಿಂದ, ತ್ರ-ಕಾಪಾಡತಕ್ಕವನು. ||೨೯||

ಟೀ|| ಎಂದೊಡೆ- ಜ್ವಾಲೆಯು ಹೀಗೆಂದು ನುಡಿಯಲು, ಕೆರಳ್ದು- ಕೋಪಗೊಂಡು, ಭಾಗೀರಥಿ- ಸುರನದಿಯು, ತನ್ನ-ನನ್ನ, ಮಗನು-ಸುತನಾದರೋ, ಸಮಸ್ತ-ಸಕಲರಾದ, ನೃಪ-ಅರಸುಗಳ, ಬೃಂದದೋಳ್-ಗುಂಪಿನಲ್ಲಿ, ಉದ್ದಾಮನಾಗಿ-ಹೆಚ್ಚಾದವನಾಗಿ, ಇರ್ಪನು- ಇದ್ದಾನೆ, ಎಂದುಂ- ಯಾವ ಕಾಲಕ್ಕೂ, ಅಳಿವವನು - ಮರಣವನ್ನೈದುವನು, ಅಲ್ಲ-ಅಲ್ಲವು, ಅವನು-ಆ ನನ್ನ ಮಗನಾದರೋ, ಸ್ವೇಛಾಮರಣಿ-ತನಗೆ ಬೇಕಾದ ಕಾಲದಲ್ಲಿ ಸತ್ತುಹೋಗಬಹುದೆನ್ನುವ ಬಲದಿಂದ ಕೂಡಿದವನು, ಭಾಗವತ-ಸ್ವಾಮಿಭಕ್ತರ, ಮಸ್ತಕ-ತಲೆಗೆ, ಮಣಿ-ಅಲಂಕಾರವಾದ ಒಡವೆಯಾಗಿರುವನು, (ಎಂದರೆ ಭಕ್ತಾಗ್ರೇಸರನು) ಬೃಂದಾರಕ-ದೇವತಾಸಮೂಹಕ್ಕೆ, ಉಪಮಂ-ಹೋಲಿಕೆಯಾದವನು, ಸತ್ಯಸಂಧಂ-ಮಹಾ ಸತ್ಯವಂತನು, ಎಂದು-ಎಂಬದಾಗಿ, ಭೀಷ್ಮಂ-ಭೀಷ್ಮನು, ಮೂಲೋಕದೊಳ್-ತ್ರಿಲೋಕಂಗಳಲ್ಲಿಯೂ, ಪ್ರಖ್ಯಾತನಾಗಿ-ಹೆಸರುವಾಸಿಯುಳ್ಳವನಾಗಿ, ಇಹಂ-ಇದ್ದಾನೆ, ಮಂದಮತಿ-ಬುದ್ಧಿಹೀನಳಾದ ಜ್ವಾಲೆಯೇ? ನೀನು-ನೀನಾದರೊ, ಎನಗೆ-ನನಗೆ, ಸುತನಿಲ್ಲ-ಮಗನೇ ಇಲ್ಲವೆಂದು, ಎನಲ್ಬಹುದೆ-ಹೇಳುವುದು ನ್ಯಾಯವೆ? ಪೋಗು-ಆಚೆಗೆ ಹೊರಡು, ನಡೆ-ನಡಿ, ಎನಲು-ಹೀಗೆಂದು ನುಡಿಯಲು, ಇಂತು-

---

ಕುರಿತು, ||೨೮|| ಎಲೈ ಜ್ವಾಲೆಯೇ! ನನ್ನ ನೀರಿನಲ್ಲಿ ಸ್ನಾನಮಾಡಿದ ಮಾತ್ರದಿಂದಲೇ ಪಾಪಗಳೆಲ್ಲವೂ ಪರಿಹಾರವಾಗಿ ಅಸಾಧಾರಣವಾದ ಪುಣ್ಯವು ಲಭಿಸುವುದೆಂದು ಸಕಲ ವೇದಶಾಸ್ತ್ರಂಗಳೂ ಸಾರುತ್ತಲಿರುವಾಗ, ಈ ನದಿಯಲ್ಲಿನ ನೀರನ್ನೇ ಮುಟ್ಟಕೂಡದೆಂಬ ಅಪವಾದವನ್ನೂ ನನ್ನ ಮೇಲೆ ಹಾಕಲು ಕಾರಣವೇನೆಂದು ಕೇಳಿದಳು, ಲೋಕಮಾತೆಯಾದ ಗಂಗೆಯ ನುಡಿಗಳನ್ನಾಲಿಸುತ್ತಲಿದ್ದ ಜ್ವಾಲೆಯು, ಎಲೈ ಭಾಗೀರಥಿಯೇ ಕೇಳು, ನಿನ್ನನ್ನು ನಾನೇನೂ ದೂಷಿಸಿದವಳಲ್ಲ. ಅಪುತ್ರವತಿಯಾದ ಹೆಂಗಸಿನ ಮೈಯನ್ನು ಮುಟ್ಟಕೂಡದೆಂಬ ಲೋಕವಾಡಿಕೆಯನ್ನು ಮನಸ್ಸಿಗೆ ತಂದುಕೊಂಡು ಪುತ್ರಹೀನಳಾದ ನಿನ್ನನ್ನು ಮುಟ್ಟಕೂಡದೆಂದು ಹೇಳಿದೆನಲ್ಲದೆ ಮತ್ತೆ ಯಾವ ಕಾರಣವೂ ಇಲ್ಲವೆಂದು ನುಡಿದಳು, || ೨೯ || ಈ ಮಾತುಗಳನ್ನು ಕೇಳಿದ ಗಂಗಾದೇವಿಯು ಕೋಪಾವಿಷ್ಟಳಾಗಿ ಜ್ವಾಲೆಯನ್ನು ಕುರಿತು, ಎಲೆ ಜ್ವಾಲೆಯೇ, ರಾಜರಲ್ಲೆಲ್ಲಾ ಅಗ್ರಗಣ್ಯನಾಗಿಯೂ, ಎಂದೆಂದಿಗೂ ಮರಣವೇ ಇಲ್ಲದೆ ತನ್ನಿಷ್ಟಬಂದಾಗ ಪ್ರಾಣವನ್ನು ಬಿಡಬಹುದೆಂದು ಸಾಮರ್ಥ್ಯದಿಂದ ಕೂಡಿಯೂ, ಭಗವದ್ಭಕ್ತರಲ್ಲಿ ಮೊದಲನೆಯವನಾಗಿಯೂ, ದೇವತೆಗಳಿಗೆ ಸಮಾನನಾಗಿಯೂ, ಸತ್ಯೈಕ ಪರಾಯಣನಾಗಿಯೂ ಇರುವ ಭೀಷ್ಮನೆಂಬ ನಾಮಧೇಯವುಳ್ಳ ಮಗನು ಮೂರು ಲೋಕದಲ್ಲಿಯೂ ಶ್ರೇಷ್ಠನೆಂದು ಹೆಸರು ಪಡೆದಿರಲು, ಬುದ್ಧಿಹೀನಳಾದ ನೀನು ನನ್ನನ್ನೂ

ಸುತರಿಲ್ಲಿನಲ್ಬಹುದೆಪೋಗೆಂದೊಡಿಂತೆಂದಳು ॥೩೦॥ ಉಂಟುನೀನಾಡಿದಿನಿತೆಲ್ಲಮುಂತಥ್ಯವಹು । ದೆಂಟಕೊಂದುಳಿದುದಂಬಲ್ಲೆ ನಾನದರಿಂದ । ವೆಂಟಣಿಸಿತಿನ್ನೆಗಂನಿನ್ನೇಳ್ಗೆಮೂಜಗದೊಳೀಗದಾಯಾದರೊಳಗೆ ॥ ಗಂಟಿಕ್ಕಿದಾಹವದೊಳರ್ಜುನಂತವಸೂನು ವಂಟಕ್ಕಿನಿಂಕೊಂದನಲ್ಲದಿರ್ದೊಡೆಮತ್ತೆ । ಕಂಟಕಮನೆತ್ತಣದುಭೀಷ್ಮನಭ್ಯುದಯಕೆಂದಾಜ್ವಾಲೆಕಾಲ್ಗೆಡೆದಳು ॥ ೩೧ ॥ ಪಚ್ಚೆಲೆಯುತರುವನೊಣಗಿದಮರವಪೊರೆಯಕಾ । ಡ್ಗಿಚ್ಚುಗೊಂಡುರಿವೊಲಾಜ್ವಾಲೆಯಮುಳಿಸಿನೊಡನೆ । ಪೆಚ್ಚಿತಮರಾಪಗೆಯ ಕೋಪಮೆತ್ತಿದಹಸ್ತದಿಂಭೀಷ್ಮನಂಘುರದೊಳು ॥ ಎಚ್ಚುಕೊಂದರ್ಜುನನತಲೆಯನಾತನಸುತಂ । ಕೊಚ್ಚಿಕೆಡಹಲಿತಿಂಗೆ

---

ಮುಂದೆ ಹೇಳುವಂತೆ, ಎಂದಳು-ಜ್ವಾಲೆಯು ಹೇಳುವಳಾಗುತ್ತಾಳೆ ॥

ಅ॥ ವಿ॥ ಭಾಗೀರಥಿ – ಸಗರವಂಶೋತ್ಪನ್ನನಾದ ಭಗೀರಥನು ದೇವರನ್ನು ಪ್ರಾರ್ಥಿಸಿ ಸ್ವರ್ಗಲೋಕದಿಂದ ಭೂಲೋಕಕ್ಕೆ ಗಂಗೆಯು ಬರುವಂತೆ ಮಾಡಿದನಾದದ್ದರಿಂದ ಸುರನದಿಗೆ ಭಾಗೀರಥಿ ಎಂಬ ಹೆಸರು ಬಂದಿದೆ ॥೩೦॥

ಟೀ॥ ಉಂಟು–ಇದೆ, ನೀನು–ನೀನಾದರೊ, ಆಡಿದ-ಹೇಳಿದ, ಇನಿತೆಲ್ಲಮುಂ-ಇವೆಲ್ಲವೂ, ತಥ್ಯವು-ಯಥಾರ್ಥವಾದದ್ದು, ಅಹುದು–ಆಗಿದೆ, ಎಂಟಕೆ-ಹುಟ್ಟಿದ ಎಂಟು ಜನರಲ್ಲಿ, ಒಂದುಳಿದುದಂ-ಒಂದು ಮಗುಮಾತ್ರ ನಿಂತದ್ದನ್ನು, ನಾಂ-ನಾನು, ಬಲ್ಲೆ–ತಿಳಿದಿರುವೆನು, ಅದರಿಂದ–ಆ ಕಾರಣದಿಂದಲೇ, ಇನ್ನೆಗಂ-ಇದುವರೆಗೂ, ನಿನ್ನ–ನಿನ್ನ ಸಂಬಂಧವಾದ, ಏಳ್ಗೆ-ಮೇಲ್ಮೆಯು, ಮೂಜಗದೊಳು – ತ್ರಿಭುವನಂಗಳಲ್ಲಿ, ವೆಂಟಣಿಸಿತು – ಅಧಿಕವಾಗಿತ್ತು. ಈಗ – ಈಗಲಾದರೊ, ದಾಯಾದರೊಳಗೆ–ಜ್ಞಾತಿ ವರ್ಗದವರಲ್ಲಿ, ಗಂಟಿಕ್ಕಿದ-ದ್ವೇಷಮಾಡಿದ, ಆ ಹವದೊಳು–ರಣದಲ್ಲಿ, ಅರ್ಜುನಂ–ಪಾರ್ಥನು, ತವ–ನಿನ್ನ, ಸೂನುವಂ – ತನುಜನಾದ ಭೀಷ್ಮನನ್ನು, ಟಕ್ಕಿನಿಂ-ಕೃತ್ರಿಮದಿಂದ, ಕೊಂದನು – ಕೊಂದುಹಾಕಿದವನು, ಅಲ್ಲದಿರ್ದೊಡೆ-ಹಾಗಿಲ್ಲವಾದರೆ, ಭೀಷ್ಮನ-ಭೀಷ್ಮನೆಂಬ ನಿನ್ನಣುಗನ, ಅಭ್ಯುದಯಕೆ–ಏಳಿಗೆಗೆ, ಕಂಟಕಂ – ಹಿಂಸೆಯು, ಅದೆತ್ತಣದು-ಎಲ್ಲಿ ಪ್ರಾಪ್ತವಾದೀತು ? ಎಂದು–ಎಂಬದಾಗಿ, ಆ ಜ್ವಾಲೆ–ಜ್ವಾಲೆ ಎಂಬ ಹೆಂಗಸು, ಕಾಲ್ಗೆಡೆದಳು–ಕೋಪವು ಹೆಚ್ಚಾಗುವಂತೆ ಮಾಡಿದಳು ॥೩೧॥

ಟೀ॥ ಪಚ್ಚೆಲೆಯ–ಹಸಿಯ ಎಲೆಗಳಿಂದ ಕೂಡಿದ, ತರುವನು–ಮರವನ್ನು, ಒಣಗಿದ್ಮರದ – ಒಣಗಿ ಹೋಗಿರುವ ದ್ರುಮದ, ಪೊರೆಯ- ಸಮೀಪದ, ಕಾಡ್ಗಿಚ್ಚು–ದಾವಾಗ್ನಿಯು, ಕೊಂಡು–ಹಸಿಯಮರಕ್ಕೂ ತಗಲಿ ಹೋಗಿ, ಉರಿಪವೋಲ್–ಸುಟ್ಟು ಬಿಡುವ ತೆರನಾಗಿ, ಆ ಜ್ವಾಲೆಯು–ಆ ಜ್ವಾಲೆ ಎಂಬ ಸ್ತ್ರೀಯ, ಮುಳಿಸಿನೊಡನೆ–ಸಿಟ್ಟಿನೊಂದಿಗೆ, ಅಮರಾಪಗೆಯ–ಸುರನದಿಯ, ಕೋಪಂ–ಆಗ್ರಹವು, ಪೆಚ್ಚಿತು–ಹೆಚ್ಚಾಯಿತು, ಎತ್ತಿದ-ಮೇಲೆ ಹಿಡಿದಿರುವ, ಹಸ್ತದಿಂ-ಕರದಿಂದ, ಘುರದೊಳು–ರಣದಲ್ಲಿ, ಭೀಷ್ಮನಂ-ಭೀಷ್ಮನೆಂಬ ಪುತ್ರನನ್ನು, ಎಚ್ಚು–ಬಾಣ ಪ್ರಯೋಗದಿಂದ, ಕೊಂದ-ಕೊಂದು ಹಾಕಿದ, ಅರ್ಜುನನ–ಪಾರ್ಥನ, ತಲೆಯನು–ಶಿರವನ್ನು, ಆತನ ಸುತಂ–ಅವನ ಕುವರನು, ತಿಂಗಳಾರಕೆ-ಆರು ತಿಂಗಳಲ್ಲಿ, ಆಹವದೊಳು-ಕಾಳಗದಲ್ಲಿ, ಕೊಚ್ಚಿ–ಛೇದಿಸಿ, ಕೆಡಹಲಿ–ಉರುಳಿಸಿ ಬಿಡಲಿ, ಎಂದು–ಎಂಬದಾಗಿ, ಉಚ್ಚರಿಸಿ–ನುಡಿದು, ಶಾಪಮಂ ಕೊಟ್ಟು–ಆಗಬಾರದ್ದು ಆಗಲಿ ಎಂದು ಹೇಳಿ, ದಿವಿಜತಟನಿ–ದೇವ ಗಂಗೆಯು, ಜಲದ–ಉದಕದ, ಮಧ್ಯದೊಳು-ಮಧ್ಯಭಾಗದಲ್ಲಿ, ಅಡಗಿದಳು–ಕಾಣದೆ ಹೋದಳು ॥

---

ಅಪುತ್ರವತಿ ಎಂದು ಹೇಳುವುದು ಸರಿಯೆ? ಸಾಕು ನಡೆ, ಎಂದು ಕೋಪದಿಂದ ಹೇಳಿದಳು ॥೩೦॥ ಗಂಗಾದೇವಿಯ ಈ ತೆರನಾದ ನುಡಿಗಳನ್ನು ಕೇಳಿದ ಕೂಡಲೆ ಜ್ವಾಲೆಯು ಓ ಗಂಗಾಂಬಿಕೆಯೇ! ನೀನು ಹೇಳಿದ್ದೆಲ್ಲಾ ನಿಜವೇ, ನಿನಗೆ ಎಂಟುಮಂದಿ ಮಕ್ಕಳು ಹುಟ್ಟಿ ಒಬ್ಬನುಮಾತ್ರ ಇದ್ದದ್ದು ನನಗೆ ಗೊತ್ತಿದೆ. ಆ ಒಬ್ಬ ಮಗನಿದ್ದನಾದ್ದರಿಂದಲೇ ನಿನಗೆ ಇದುವರೆಗೂ ಅಭಿವೃದ್ಧಿಯು ಹೆಚ್ಚಾಗಿತ್ತು. ಆದರೆ ನಿನ್ನ ಸುತನಾದ ಭೀಷ್ಮನನ್ನು ಅರ್ಜುನನು ಮೋಸದಿಂದ ಕೊಂದುಹಾಕಿ ನಿನ್ನೇಳ್ಗೆಗೆ ಭಂಗವಂ ಬರಿಸಿದನು ಇಲ್ಲವಾದರೆ ತ್ರಿಲೋಕಂಗಳಲ್ಲಿಯೂ ಹೆಸರುವಾಸಿಯಂ ಪಡೆದಿದ್ದ ಭೀಷ್ಮನಿಗೆ ಚ್ಯುತಿ ಎಂದರೇನು? ಇದಕ್ಕಾಗಿಯೇ ನಿನ್ನನ್ನು ಅಪುತ್ರವತಿಯೆಂದೂ, ಈ ಉದಕವನ್ನು ನಾನು ಮುಟ್ಟುವುದಿಲ್ಲವೆಂದೂ ಹೇಳಿ ಕೋಪವನ್ನು ಬಲಪಡಿಸಿದಳು ॥ ೩೧ ॥ ಒಣಗಿದ ಮರಕ್ಕೆ ತಗಲಿದ ಕಾಡ್ಗಿಚ್ಚು ಪಕ್ಕದಲ್ಲಿರುವ ಹಸಿರೆಲೆಗಳಿಂದ ಕೂಡಿದ ವೃಕ್ಷಕ್ಕೂ ತಗಲಿ ಅದನ್ನೂ ಸುಟ್ಟು ಬಿಡುವಂತೆ ಜ್ವಾಲೆಯ ಕಪಟೋಕ್ತಿಯಿಂದ ನಿರ್ದೋಷಿಯಾದ ಗಂಗಾದೇವಿಯ ಕೋಪವು ಹೆಚ್ಚಿ ತನ್ನೆರಡು ಕೈಗಳನ್ನೂ ಮೇಲಕ್ಕೆತ್ತಿ ಹಿಡಿದವಳಾಗಿ “ನನ್ನ ಮಗನಾದ ಭೀಷ್ಮನನ್ನು ಕೊಂದ ಅರ್ಜುನನ ತಲೆಯನ್ನೂ ಇಂದಿನಿಂದ ಆರು ತಿಂಗಳೊಳಗಾಗಿ ಅವನ ಮಗನೇ ಯುದ್ಧದಲ್ಲಿ ಕತ್ತರಿಸಿ ಬಿಡಲಿ” ಎಂದು ಘೋರ ಶಾಪವಂ ಕೊಟ್ಟು ನೀರಿನಮಧ್ಯ

ಳಾರಕಾಪವದೊಳೆಂ । ದುಚ್ಚರಿಸಿಶಾಪಮುಂಕೊಟ್ಟಡಗಿದಳ್ಜಲದನುಧ್ಯದೋಳ್ದಿವಿಜತಟಿನೀ ॥೩೨॥ ನಾರಿಯರಛಲಮೆಂತುಟೊ ಕೇಳ್ಮಹೀಶಭಾ ॥ ಗೀರಥಿಗೆಕೋಪಮುಂಬರಿಸಿಕೊಡಿಸಿದಳತಿಕ । ಠೋರತರಶಾಪಮುಂಜ್ವಾಲೆಬಳಿಕದುಸಾಲದಾನರನತಲೆಯ ನರಿವ ॥ ಕೂರಲಗಿನಸ್ತ್ರವಾದಪೆನೆಂದುಸುರನದಿಯ । ತೀರದೊಳ್ವಹ್ನಿಪ್ರವೇಶಮುಂಮಾಡಿಜಂ । ಭಾರಿತನಯನಸೂನು ಬಭ್ರುವಾಹನನಮೂಡಿಗೆಯೊಳಂಬಾಗಿರ್ದಳು ॥೩೩॥ ಬಂದುದುನರಂಗೆವಾಯದೊಳೀಗಶಾಪಮಿ । ಮಂದಾಕಿನಿಯಮಾತು ತಾಗಿದಲ್ಲದೆಮಾಣ । ದಿಂದುಕುಲ ಮಳಿವುದೀತನಕೂಡೆ ಧರ್ಮಜಾದಿಗಳಸುವಿಡಿಯಲರಿಯರು ॥ ಮುಂದೆಸುರಪುರದ

ಅ॥ ವಿ॥ ಪಚ್ಚನೆ+ಎಲೆ, (ಪಚ್ಚೆಲೆ, ವಿ. ಪೂ.) ಅಮರಾಪಗೆ=ಮರ-ಮರಣವು, ಅ-ಇಲ್ಲದವರು (ನಞ್ ತತ್ಪುರುಷ) ಅಮರರ ಆಪಗೆ (ಷ. ತ.) ದಿವಿಜತಟಿನಿ=ದಿವಿ-ಸ್ವರ್ಗದಲ್ಲಿ, ಜ-ಹುಟ್ಟಿದ್ದು (ಗಂಗೆ, ಕೃ. ವೃ). ದಿವಿಜ-ಗಂಗೆ ಎಂಬ, ತಟಿನಿ-ನದಿ (ಸಂ. ಪೂ) ॥೩೨॥

ಟೀ॥ ಮಹೀಶ-ಭೂಕಾಂತನಾದ ಜನಮೇಜಯನೆ! ನಾರಿಯರ-ಹೆಂಗಸರ, ಛಲಂ-ಹಗೆತನವು, ಎಂತುಟೊ-ಇನ್ನೆಂಥಾದ್ದೊ! ಕೇಳ್-ಕೇಳು, ಭಾಗೀರಥಿಗೆ-ಗಂಗಾದೇವಿಗೆ, ಕೋಪಮುಂ ಬರಿಸಿ-ಸಿಟ್ಟನ್ನುಂಟುಮಾಡಿ ಅಥವಾ ಆಗ್ರಹವನ್ನು ಹೆಚ್ಚು ಮಾಡಿ. ಅತಿ ಕಠೋರತರ-ಅತಿ ಕ್ರೂರವಾದ, ಶಾಪಮುಂ ಕೊಡಿಸಿದಳು-ಶಾಪವು ಬರುವಂತೆ ಮಾಡಿ ಬಿಟ್ಟಳು, ಬಳಿಕ-ತರುವಾಯ, ಅದು-ಆ ಶಾಪದಿಂದ, ಸಾಲದೆ-ತೃಪ್ತಿಪಡದ, ಆವನ-ಆ ಪಾರ್ಥನ, ತಲೆಯನು-ಶಿರಸ್ಸನ್ನು, ಅರಿವ-ಛೇದಮಾಡುವ, ಕೂರಲಗಿನ-ಹರಿತವಾದ, ಅಸ್ತ್ರವಾದಪೆನು-ಬಾಣವಾಗುತ್ತೇನೆ, ಎಂದು-ಎಂಬದಾಗಿ, ಸುರನದಿಯ ತೀರದೊಳ್-ಗಂಗಾನದಿಯ ತಡಿಯಲ್ಲಿ, ವಹ್ನಿ ಪ್ರವೇಶಮುಂ ಮಾಡಿ-ಬೆಂಕಿಯಲ್ಲಿ ಬಿದ್ದವಳಾಗಿ, ಜಂಭಾರಿ-ದೇವೇಂದ್ರನ, ತನಯನ-ಕುವರನಾದ ಪಾರ್ಥನ, ಸೂನು-ತನಯನಾದ, ಬಭ್ರುವಾಹನನ-ಬಭ್ರುವಾಹನನೆಂಬಾತನ, ಮೂಡಿಗೆಯೊಳು-ಬತ್ತಳಿಕೆಯಲ್ಲಿ, ಅಂಬಾಗಿ-ಅಲಗಾಗಿ, ಇರ್ದಳು-ಇದ್ದವಳಾದಳು ॥

ಅ॥ ವಿ॥ ಕೂರ-(ತ್ಭ), ಕ್ರೂರ (ತ್ಸ) ॥೩೩॥

ಟೀ॥ ನರಂಗೆ-ಪಾರ್ಥನಿಗೆ, ವಾಯದೊಳು - ಚಾತುರ್ಯದಿಂದ, ಶಾಪಂ-ಶಾಪವು, ಬಂದುದು- ಪ್ರಾಪ್ತವಾಯಿತು, ಈಗ-ಈಗಲಾದರೊ, ಮಂದಾಕಿನಿಯ-ದೇವಗಂಗೆಯ, ಮಾತು-ನುಡಿಯು, ತಾಗಿದಲ್ಲದೆ-ತಗಲುವುದೇ ಹೊರತು, ಮಾಣದು-ಬಿಡುವುದಿಲ್ಲ, ಇಂದುಕುಲಂ-ಚಂದ್ರವಂಶವು, ಈತನಕೂಡೆ-ಇವನ ಸಂಗಡಲೇ, ಅಳಿವುದು-ಹಾಳಾಗುವುದು, ಧರ್ಮಜಾದಿಗಳು-ಯುಧಿಷ್ಠಿರನೆ ಮೊದಲಾದವರು, ಅಸುವಿಡಿಯಲು-ಜೀವದೊರಸೆ ಇರಲು, ಅರಿಯರು-ಎಂದಿಗೂ ಆಗಲಾರದು, ಮುಂದೆ-ಇನ್ನು

ದಲ್ಲಿ ಅದೃಶ್ಯಳಾಗಿ ಹೊರಟು ಹೋದಳು ॥೩೨॥ ಎಲೈ ಜನಮೇಜಯನೆ ಕೇಳು, ಸ್ತ್ರೀಯರ ಹಟವೆಂಬುದು ಇನ್ನೆಷ್ಟು ಬಲವಾದದ್ದೊ ನೀನೇ ಯೋಚಿಸು, ಜ್ವಾಲೆಯು ನೀಲಧ್ವಜನಿಗೆ ವ್ಯತಿರಿಕ್ತಳಾಗಿ, ತಮ್ಮನಾದ ಉನ್ಮುಖನ ಮಾತನ್ನು ಲಕ್ಷ್ಯಮಾಡದೆ, ಗಂಗೆಯು ಮೂರ್ತೀಭವಿಸಿ ತನ್ನೆದುರಿಗೆ ಬಂದು ನಿಲ್ಲುವ ಉಪಾಯವನ್ನು ಹುಡುಕಿ, ಅನಂತರ ನಿರ್ದೋಷಿಯೂ ಲೋಕಮಾತೆಯೂ ಆದ ದೇವಗಂಗೆಯ ಮೇಲೆ ಇಲ್ಲದ ಅಪವಾದ ಒಂದನ್ನು ಕಲ್ಪಿಸಿ, ಭಾಗೀರಥಿಗೆ ಕೋಪ ಬರುವಂತೆ ಮಾಡಿ, ಆಕೆಯು ಕಟ್ಟುಗ್ರಶಾಪವೊಂದನ್ನು ಕೊಟ್ಟು ಬಿಡುವಂತೆ ಕೃತ್ರಿಮೋಪಾಯಮುಂ ಗೈದು ಅರ್ಜುನನಿಗೆ ಮರಣವುಂಟಾಗುವಂತೆ ಮಾಡಿದ್ದನ್ನು ನೋಡಿದೆಯಾ? ಮುಖ್ಯವಾಗಿ ಸ್ತ್ರೀಯರ ಛಲವು ಬಹು ಕಠಿಣವಾದದ್ದು ಎಂದು ಹೇಳಿ ಮತ್ತೆ ಜನಮೇಜಯರಾಯನನ್ನು ಕುರಿತು, ಕೇಳೆಲೆ ಮಹೀಂದ್ರನೆ! ಬಳಿಕ ಜ್ವಾಲೆಯು ಗಂಗೆಯಿಂದ ಅರ್ಜುನನಿಗೆ ಬಂದ ಶಾಪಮಾತ್ರದಿಂದ ತೃಪ್ತಿಪಡದೆ, ಗಂಗಾನದಿಯ ದಡದಲ್ಲಿ ಅಗ್ನಿಪ್ರವೇಶಮಾಡಿ ಅರ್ಜುನ ಕುವರನಾದ ಬಭ್ರುವಾಹನನ ಬಾಣದ ಚೀಲದಲ್ಲಿ ತಾನೂ ಬಾಣದಂತೆ ಕೃತ್ರಿಮ ರೂಪವನ್ನು ಮಾಡಿಕೊಂಡು ಹೋಗಿ ಸೇರಿ ಗಂಗೆಯ ಶಾಪದ ಗಡುವನ್ನೆದುರು ನೋಡುತ್ತಲಿದ್ದಳು ॥೩೩॥ ಅಂತರಿಕ್ಷದಲ್ಲಿ ಇದನ್ನೆಲ್ಲಾ ನೋಡುತ್ತಲಿದ್ದ ಇಂದ್ರಾದಿ ದೇವತೆಗಳೆಲ್ಲರೂ ಚಿಂತಾವಿಷ್ಟರಾಗಿ, ಆಹಾ! ಜ್ವಾಲೆಯು ಉಪಾಯವಾಗಿ ಅರ್ಜುನನಿಗೆ ಮರಣವುಂಟಾಗುವಂತೆ ಗಂಗಾದೇವಿಯಿಂದ ಶಾಪವನ್ನು ಕೊಡಿಸಿ ಬಿಟ್ಟಳು. ಲೋಕಮಾತೆಯಾದ ಭಾಗೀರಥಿಯ ಶಾಪವು ಅರ್ಜುನನಿಗೆ ತಗಲದೆ ಇರುವುದಿಲ್ಲ. ಅರ್ಜುನನು ಸತ್ತಮೇಲೆ ಚಂದ್ರವಂಶವೇ ನಿಂತು ಹೋದಂತಾಗುವುದು. ಯುಧಿಷ್ಠಿರ, ಭೀಮ, ನಕುಲ, ಸಹದೇವ ಇವರು ಅರ್ಜುನನು ಸತ್ತಮೇಲೆ ಆ ದುಃಖವನ್ನು ಸಹಿಸಿಕೊಂಡು ಬದುಕಿರುವರೇ? ಇವರನ್ನೆಲ್ಲಾ ಶ್ರೀಕಾಂತನಾದ ನಾರಾಯಣಮೂರ್ತಿಯು ಹೇಗೆ ಕಾಪಾಡುವನೋ ಕಾಣೆವಲ್ಲಾ ಎಂದು ನಾನಾ ಪ್ರಕಾರವಾಗಿ ಚಿಂತಿಸಿ, ಬಳಿಕ ಎಲ್ಲರೂ ತಮ್ಮತಮ್ಮಷ್ಟಕ್ಕೆ ಧೈರ್ಯಮುಂ ತಾಳಿದವರಾಗಿ, ತನ್ನನ್ನೇ ನಂಬಿರತಕ್ಕ ಭಕ್ತರನ್ನು ಶರಣಾಗತವತ್ಸಲನಾದ ಲಕ್ಷ್ಮೀಕಾಂತನು ಎಂದಿಗೂ ಕಾಪಾಡದೆ ಇರುವುದಿಲ್ಲವು. ಈಗ ಅರ್ಜುನನಿಗೆ ಒದಗಿ

ಲಕ್ಷ್ಮೀಕಾಂತನಾವತೆರ | ದಿಂದಪರಿಹರಿಸುವನೊತನ್ನಶರಣಾಗತರ | ನೊಂದುಪಾಯದೊಳುಳುಹದಿರನೆಂದ.ಧೈರ್ಯಮಂತಾಳ್ದ ರಿಂದ್ರಾದಿಸುರರು ||೩೪||

ಸಂಧಿ ೯ ಕ್ಕೆ ಪದ್ಯ ೪೭೧ ಕ್ಕಂ ಮಂಗಳಮಸ್ತು.

---

ಮೇಲೆ, ಸುರಪುರದ–ದೇವಲೋಕವಾಸಿಯಾದ, (ಲಕ್ಷ್ಮೀಕಾಂತನು–ಶ್ರೀಯಃಪತಿಯು,) ಆವತೆರದಿಂದ-ಯಾವ ಬಗೆಯಿಂದ, ಪರಿಹರಿಸುವನು–ಶಾಪವನ್ನು ನಿವಾರಣೆ ಮಾಡುತ್ತಾನಯೊ? ತನ್ನ-ತನ್ನನ್ನೆ, ಶರಣಾಗತರನು–ನಂಬಿರತಕ್ಕವರನ್ನು, ಒಂದುಪಾಯದೊಳು-ಚಮತ್ಕಾರವೊಂದರಿಂದ, ಉಳುಹದೆ–ಪಾಲಿಸದೆ, ಇರನು–ಇರುವುದಿಲ್ಲ, ಎಂದು-ಎಂಬದಾಗಿ, ಇಂದ್ರಾದಿ-ದೇವೇಂದ್ರನೇ ಮೊದಲಾದ, ಸುರರು–ನಿರ್ಜರರು, ಧೈರ್ಯಮಂ–ಭರವಸೆಯನ್ನು, ತಾಳ್ದರು–ಹೊಂದಿದರು ||೩೪||

ಟೀಕಾತಾತ್ಪರ್ಯಸಹಿತಮಾದ ಜೈಮಿನಿ ಭಾರತದೊಳು ಒಂಭತ್ತನೆಯ ಸಂಧಿಯು ಸಮಾಪ್ತಮಾದುದು.

---

ರುವ ದುಃಖವನ್ನು ಪರಿಹರಿಸಲು ಶ್ರೀ ಕೃಷ್ಣಮೂರ್ತಿಯು ಯಾವುದಾದರೂ ಉಪಾಯವೊಂದನ್ನು ಹುಡುಕಿ ಅರ್ಜುನನನ್ನು ಸಲಹಿ ಯಾವ ಅನಾಹುತಕ್ಕೂ ಅವಕಾಶವಂ ಕೊಡದೆ ನೋಡಿಕೊಳ್ಳುವನೆಂದು ನಂಬಿ ಸಂತೋಷದಿಂದ ಕೂಡಿದರೆಂಬಲ್ಲಿಗೆ,

ಟೀಕಾ ತಾತ್ಪರ್ಯಸಹಿತಮಾದ ಜೈಮಿನಿಭಾರತದೊಳು ಒಂಭತ್ತನೆಯ ಸಂಧಿಯು
ಸಮಾಪ್ತಮಾದುದು.



## ಹತ್ತನೆಯ ಸಂಧಿ.

ಸೂಚನೆ|| ಹರಿಶಿಲೆಯಮೇಲಿನಡೆಗೆಡೆಸವ್ಯಸಾಚಿಸೌ | ಭರಿಯದೆಸೆಯಿಂದಲುದ್ದಾಲಕನಕಥೆಗೇಳು | ತಿರದೆಹಂಸ ಧ್ವಜನಪಟ್ಟಣಕೆಬರಲವಂಕಾದಲ್ಕೆಪೊರಮಟ್ಟನು ||

ಆಲಿಸೆಲೆಜನಮೇಜಯಕ್ಷಿತಿಪಮುಂದಣಕ | ಥಾಲಾಪಕೌತುಕವನುಚಿತದಿಂಫಲುಗುಣಂ | ನೀಲಧ್ವಜನಕಂಡ ಬಳಿಕಾತನಂಕೂಡಿಕೊಂಡಖಿಳಸೇನೆಸಹಿತ || ಮೇಲೆನಡೆದಂತೆಂಕಮುಖಮಾಗಿಹಯದೊಡನೆ | ಕಾಲಿಡುವಮಂದಿಗಿಂಬಿಲ್ಲ ನೆಲನಾಗಸಂ | ಸಾಲದೇಳುವಧೂಳಿಗೆಣ್ದೆಸೆಕಠೋರವಾದ್ಯಧ್ವನಿಗೆನೆರೆಯದೆನಲು || ೧ || ಸಹದೇವನಾಗಿಸಮುದಿತನ ಕುಲನಾಗಿಸಂ | ನಿಹಿತಾರ್ಜುನನುಮಾಗಿವರವೃಕೋದರನಾಗಿ | ಮಹದಿಳಾಭೃದ್ರಾಜನಾಗಿಶಶಿಕಾಂತಕುಲದಿಂದಪಾಂಡ

---

ಸೂಚನೆ|| ಹರಿ-ಯಾಗದ ಕುದುರೆಯು, ಶಿಲೆಯುಮೇಲೆ-ವಿಂಧ್ಯಪರ್ವತದಲ್ಲಿ ಶಾಪಗ್ರಸ್ತಳಾದ ಚಂಡಿಯು ಬಂಡೆಯ ರೂಪವಾಗಿ ಬಿದ್ದಿದ್ದಳಾದ್ದರಿಂದ ಅದೇ ಬಂಡೆಯ ಮೇಲೆಯೇ, ನಡೆಗೆಡೆ-ಹೆಜ್ಜೆಯೂರಿ ಮುಂದರಿಯಲು ಆಗದೆ, ಸವ್ಯಸಾಚಿ-ಪಾರ್ಥನು, ಸೌಭರಿಯದೆಸೆಯಿಂದ - ಸೌಭರಿ ಎಂಬ ಮುನಿಯ ಮೂಲಕವಾಗಿ, ಉದ್ದಾಲಕನ - ಉದ್ದಾಲಕನೆಂಬ ತಪಸ್ವಿಯ, ಕಥೆ-ವೃತ್ತಾಂತವನ್ನು, ಕೇಳುತ-ಕೇಳುತ್ತ, ಇರದೆ-ಅಲ್ಲಿನಿಲ್ಲದೆ, ಹಂಸಧ್ವಜನ-ಹಂಸಧ್ವಜನೆಂಬ ರಾಜನ, ಪಟ್ಟಣಕೆ-ನಗರಕ್ಕೆ, ಬರಲು-ಐತರಲು, ಅವಂ-ಆ ಹಂಸಧ್ವಜನು, ಕಂಡು-ನೋಡಿ, ಕಾದಲ್ಕೆ-ಜಗಳವಾಡಲು, ಪೊರಮಟ್ಟನು-ಹೊರಟವನಾದನು.

ಅ|| ವಿ|| ಹಂಸಧ್ವಜ-ಹಂಸ-ಹಂಸಪಕ್ಷಿಯನ್ನೆ, ಧ್ವಜ-ಧ್ವಜಪಟದಲ್ಲುಳ್ಳವನು (ಬ. ಸ.)

ಟೀ|| ಎಲೆ ಜನಮೇಜಯಕ್ಷಿತಿಪ - ಎಲೈ ಜನಮೇಜಯನೆಂಬ ಭೂಕಾಂತನೆ ! ಮುಂದಣ - ಮುಂದೆ ನಡೆಯತಕ್ಕ, ಕಥಾ-ಚರಿತ್ರೆಯ, ಆಲಾಪ-ತೆರದ, ಕೌತುಕವನು - ಅಚ್ಚರಿಯನ್ನು, ಆಲಿಸು-ಗಮನಿಸುವವನಾಗು, ಫಲುಗುಣಂ - ಪಾರ್ಥನು, ನೀಲಧ್ವಜನ-ಮಾಹಿಷ್ಮತೀರಾಜನನ್ನು, ಉಚಿತದಿಂ - ಮರ್‍ಯಾದೆಯಿಂದ, ಕಂಡಬಳಿಕ-ನೋಡಿದತರುವಾಯ, ಆತನಂಕೂಡಿ ಕೊಂಡು-ಅವನೊಂದಿಗೆ, ಅಖಿಳ-ಸಮುಸ್ತವಾದ, ಸೇನೆಸಹಿತ - ಸೇನೆಯಿಂದೊಡಗೂಡಿ, ಹಯದೊಡನೆ-ಯಜ್ಞಾಶ್ವಸಮೇತ ನಾಗಿ, ತೆಂಕಮುಖಮಾಗಿ-ದಕ್ಷಿಣದಿಕ್ಕಿನಕಡೆಗೆ, ಕಾಲಿಡುವ, ಮಂದಿಗೆ-ಲೋಗರಿಗೆ, ಇಂಬಿಲ್ಲದ-ಆಸ್ಪದವಿಲ್ಲದ, ನೆಲನು - ಇಳೆ ಯುಳ್ಳದ್ದಾಗಿ, ಆಗಸಂ-ಅಂತರಿಕ್ಷವು, ಸಾಲದೆ-ಕಡಮೆ ಎಂದು, ಏಳುವ - ಮೇಲಕ್ಕೆದ್ದು ಬರುವ, ಧೂಳಿಗೆ - ಧೂಳಿನ ರಾಶಿಗೆ, ಎಣ್ದೆಸೆ-ಅಷ್ಟದಿಕ್ಕುಗಳೂ, ಕಠೋರ - ಅತಿ ಕಠಿಣವಾದ, ವಾದ್ಯಧ್ವನಿಗೆ - ಭೇರಿ ಮೊದಲಾದವುಗಳ ಸ್ವನಂಗಳಿಗೆ, ನೆರೆಯದು-ಸಾಲುವುದಿಲ್ಲ, ಎನಲು-ಎಂಬಂತೆ, ಮೇಲೆನಡೆದಂ-ಮುಂದಕ್ಕೆ ಪ್ರಯಾಣವಂ ಬೆಳಸಿದನು ||೧||

ಟೀ|| (ಅರ್ಜುನನ ಪರವಾಗಿ) ಸಹದೇವನಾಗಿ-ಸಹದೇವನೆಂಬ ತಮ್ಮನಿಂದ ಕೂಡಿ, ಸಮುದಿತನಕುಲನಾಗಿ-ನಕುಲ ನೆಂಬ ಅನುಜನಿಂದ ಕೂಡಿ, ಸನ್ನಿಹಿತ-ಹತ್ತಿರದಲ್ಲಿರುವ, ಅರ್ಜುನನುಂಆಗಿ - ಅರ್ಜುನನೇ ತಾನಾಗಿ, ವರ - ಶ್ರೇಷ್ಠನಾದ, ವೃಕೋದರನುಂಆಗಿ-ವಾಯುನಂದನನೆಂಬ ಅಗ್ರಜನಿಂದ ಸೇರಿ, ಮಹತ್-ಅತ್ಯಧಿಕರಾದ, ಇಳಾಭೃತ್-ಮಹೀಪಾಲರಿಗೆಲ್ಲಾ, ರಾಜನಾಗಿ-ಅರಸನಾಗಿ ಚಕ್ರವರ್ತಿ ಎಂಬ ಬಿರುದಿನಿಂ ಕೂಡಿದ ದೊಡ್ಡ ಅಣ್ಣನಿಂದ ನೆರೆದು, ಶಶಿಕಾಂತಕುಲದಿಂದ-ಚಂದ್ರವಂಶ

---

### ಹತ್ತನೆಯ ಸಂಧಿಯ ಕಥಾಸಾರವು.

ಅನಂತರದಲ್ಲಿ ಜೈಮಿನಿಋಷಿಯು ಜನಮೇಜಯರಾಯನಂ ಕುರಿತು, ಕೇಳೈ ಜನಮೇಜಯನೇ ! ಮುಂದಿನ ಕಥಾ ವೃತ್ತಾಂತವನ್ನು ಚನ್ನಾಗಿ ಆಲಿಸು. ಧನಕನಕರಾಶಿಗಳಿಂದಲೂ, ವಸ್ತುವಾಹನಾದಿಗಳಿಂದಲೂ, ದಿವ್ಯಾಶ್ವದಿಂದಲೂ ಕೂಡಿ ಕೊಂಡು ತನ್ನನ್ನು ನೋಡಲು ಬಂದ ನೀಲಧ್ವಜನೆಂಬ ಮಾಹಿಷ್ಮತೀರಾಜನನ್ನು ಅರ್ಜುನನು ನೋಡಿ ಹೆಚ್ಚಾದ ಸಂತೋಷ ದಿಂದ ಆತನ ಮರ್‍ಯಾದೆಯನ್ನೆಲ್ಲಾ ಕೈಕೊಂಡು ನೀಲಧ್ವಜನನ್ನು ಬಹುವಾಗಿ ಸತ್ಕರಿಸಿ ಬಳಿಕ ಯಜ್ಞಾಶ್ವಮಂ ಮುಂದುಮಾಡಿ ಕೊಂಡು, ನೀಲಧ್ವಜನೊಂದಿಗೆ ತನ್ನ ಸಕಲ ಸೇನೆಯಿಂದೊಡಗೂಡಿ ದಕ್ಷಿಣದಿಕ್ಕಿಗೆ ಹೊರಟನು. ಆಗ ಸೈನ್ಯದ ರಭಸದಿಂದ ಜನರು ನೆಲದಮೇಲೆ ಅಡಿಯಿಡಲಾಗದೆಯೂ ಆ ಸೇನಾಕಡಲಿಂದೊಗೆವ ಧೂಳನ್ನು ತುಂಬಿಕೊಳ್ಳಲು ಆಕಾಶವೂ ಸಾಲದೆಂಬ ಹಾಗೂ, ಅಲ್ಲಿ ಹುಟ್ಟಿದ ವಾದ್ಯಧ್ವನಿಗಳನ್ನು ಕೇಳಲು ಇಂದ್ರಾದಿ ಅಷ್ಟದಿಕ್ಕುಗಳಿಗೂ ಬಹು ಕಷ್ಟವಾಗಿತ್ತೆಂಬಂತೆಯೂ ತೋರುತ್ತಲಿತ್ತು ||೧|| ಈ ರೀತಿಯಲ್ಲಿ ಅರ್ಜುನನು ಯಾಗದ ಕುದುರೆಯನ್ನು ಮುಂದುಮಾಡಿಕೊಂಡು ಅಪರಿಮಿತ ಸೇನಾಪರಿ ವೃತನಾಗಿ ದಕ್ಷಿಣದಿಕ್ಕಿಗೆ ಕುದುರೆಯ ಮೃಗಾವಲಾಗಿ ಹೋಗುತ್ತಲಿರುವಾಗ ಮುಂದುಗಡೆಯಲ್ಲಿ ವಿಂಧ್ಯಪರ್ವತವು ಕಾಣಿಸಿತು ಈಶ್ವರ ದೇವಸ್ಥಾನಗಳು, ಶಿವಲಿಂಗಗಳು ಮೊದಲಾದವುಗಳಿಗೆ ಸ್ಥಾನಭೂತವಾಗಿಯೂ, ಮುಂಗಸಿಗಳು ಅರ್ಜುನವೃಕ್ಷವು

ವರುಮಾಗಿ ॥ ಅಹಿತರುಗಳಿಂಧಾರ್ತರಾಷ್ಟ್ರರಂಕೂಡಿಕೊಂ । ಡಿಹ ದರಿಂದಚಲನಾಗಿಹೆನೆಂದುಹರಿಯೊಡನೆಬ । ಹಪಾರ್ಥನಂ ಕರೆದುಮೂದಲಿಪತೆರದಿಂದವಿಂಧ್ಯಾದ್ರಿಮುಂದೆಸೆದುದು ॥ ೨ ॥ ಎಸೆದುದಾಗಿರಿಗಗನಮಂಡಲವನಂಡಲೆವ । ಲಸ ದುನ್ನತಶೃಂಗದುತ್ಕರದಸತ್ಕರದ । ಶಶಿಕಾಂತಮಯಮಾದರಮಣೀಯಕಮನೀಯಕಂದರದಸೌಂದರದೊಳು ॥ ಮುಸುಕಿ ತಪ್ಪಲಮೇವಮಂಜುಗಳನಂಜುಗಳ । ದಶನದುಗ್ರಾಹಿಗಳಪುತ್ತುಗಳಮುತ್ತುಗಳ । ಬೆಸಲಾದಪೇರ್ಬಿದಿರಕಾಡುಗಳಬೀಡುಗಳಶಬರಿಯರಸಂಕುಲದೊಳು ॥ ೩ ॥ ಪಕ್ಷಿಮೃಗಜಾತಿಗಳುಲೀಲೆಮಿಗೆರಮಿಸುತಿಹ । ಯಕ್ಷಕಿನ್ನರಕಿಂಪುರುಷಗರುಡ

---

ದಿಂದ, ಪಾಂಡವರುಮಾಗಿ-ಪಾಂಡುರಾಯನ ಕುವರನಾಗಿ, ಅಹಿತರುಗಳಿಂ - ವೈರಿಗಳಾದ, ಧಾರ್ತರಾಷ್ಟ್ರರಿಂ-ಧೃತರಾಷ್ಟ್ರನ ಕುವರರಾದ ದುರ್ಯೋಧನಾದಿಗಳಿಂದ, ಕೂಡಿಕೊಂಡು-ಸೇರಿದವನಾಗಿ, ಇಹುದರಿಂದ - ಇರೋಣದರಿಂದ. ಅಚಲನಾಗಿ - ಧೈರ್ಯ ದಿಂದ ನಿಲ್ಲತಕ್ಕವನಾಗಿ, ಹರಿಯೊಡನೆ-ಯಾಗದ ಅಶ್ವದೊಂದಿಗೆ, ಬಹ-ಬರುತ್ತಲಿರುವ, ಪಾರ್ಥನಂ-ಫಲ್ಗುಣನನ್ನು, (ವಿಂಧ್ಯ ಪರ್ವತವು), ಸಹದೇವನಾಗಿ - ಈಶ್ವರ, ಪಾರ್ವತಿ, ಲಿಂಗಗಳು ಮೊದಲಾದವುಗಳಿಂದಲೂ, ಸಮುದಿತ - ಕಾಡಿನಲ್ಲಿ ಹುಟ್ಟಿದ, ನಕುಲನಾಗಿ - ಮುಂಗಸಿಗಳಿಂದ ಕೂಡಿಯೂ, ಸನ್ನಿಹಿತ - ಹತ್ತಿರದಲ್ಲಿಯೆ ಇಟ್ಟುಕೊಂಡಿರತಕ್ಕ ಅಂದರೆ ಬೆಟ್ಟದ ಬಳಿಯಿರುವ ಅರ್ಜುನವೆಂಬ ಮರದಿಂದ ಸಹಿತವಾಗಿಯೂ, ವರ-ಮೇಲಾದ, ವೃಕ-ತೋಳಗಳನ್ನೆ, ಉದರನಾಗಿ-ತನ್ನಲ್ಲಿ ಧರಿಸಿರತಕ್ಕವನಾಗಿ, ಮಹತ್-ದೊಡ್ಡದೊಡ್ಡ, ಇಳಾಭೃತ್-ಪರ್ವತಗಳ, ರಾಜನಾಗಿ-ಅರಸನಾಗಿಯೂ, ಶಶಿಕಾಂತಕುಲದಿಂದ - ಚಂದ್ರಕಾಂತಂಗಳ ತಂಡತಂಡಗಳಿಂದ, ಪಾಂಡವರುಮಾಗಿ-ಬಿಳಿಯಬಣ್ಣದಿಂದ ಕೂಡಿಯೂ, ಅಹಿ-ಹಾವುಗಳಿಂದಲೂ, ತರುಗಳಿಂ-ವೃಕ್ಷಗಳಿಂದಲೂ, ಧಾರ್ತರಾಷ್ಟ್ರರಿಂ-ಶರೀರವೆಲ್ಲಾ ಬೆಳ್ಳಗಿರತಕ್ಕ ಹಂಸಪಕ್ಷಿಗಳಿಂದ ಕೂಡಿಯೂ, ಅಚಲನಾಗಿ - ಕದಲದೆ ಇದ್ದಕಡೆಯೇ ಇರುವುದೂ ಆಗಿ, ಮೂದಲಿಪ - ಅರ್ಜುನನನ್ನು ನಾನೂ ನಿನ್ನಂತೆಯೇ ಇರುವೆನೆಂದು ತೋರ್ಪಡಿಸುವ, ತೆರದಿಂದ - ಬಗೆಯಿಂದ, ಎದುರಿನಲ್ಲಿ, ವಿಂಧ್ಯಾದ್ರಿ-ವಿಂಧ್ಯಪರ್ವತವು, ಎಸೆದುದು-ಕಾಂತಿಯುಕ್ತವಾಯಿತು.

ಅ॥ ವಿ॥ ಈ ಪದ್ಯದಲ್ಲಿ ಕವಿಯು ತನ್ನೆದುರಿಗೆ ಬರುತ್ತಲಿರುವ ಅರ್ಜುನನನ್ನು ನಾನೂ ನಿನ್ನಂತೆಯೇ ಇರುವೆನೆಂದು ತೋರುತ್ತಲಿರುವಂತೆ ವಿಂಧ್ಯಪರ್ವತವನ್ನು ವರ್ಣಿಸಿರುವನು ॥೨॥

ಟೀ॥ ಆಗಿರಿ-ಆ ವಿಂಧ್ಯಾದ್ರಿಯಾದರೊ, ಗಗನಮಂಡಲವನು - ಅಂತರಿಕ್ಷ ಪ್ರದೇಶವನ್ನು, ಅಂಡಲೆವ-ಸೋಕತಕ್ಕ, ಲಸತ್-ಕಾಂತಿಯುಕ್ತವಾದ, ಉನ್ನತ-ಎತ್ತರವಾದ, ಶೃಂಗದ-ತುದಿಯುಳ್ಳ, ಉತ್ಕರದ-ಹೆಚ್ಚಾದ, ಸತ್ಕರದ-ಬೆಳ್ಳಿ ಕಿರಣಗಳಿಂದ ಕೂಡಿದ, ಶಶಿಕಾಂತಮಯ-ಚಂದ್ರಕಾಂತಶಿಲೆಯಿಂದ ಕೂಡಿದ, ರಮಣೀಯ - ಸುಂದರವಾದ, ಕಮನೀಯ - ಕೋರಲ್ಪಡುವ, ಕಂದರದ-ಗುಹೆಗಳಿಂದ ಕೂಡಿದ, ಸೌಂದರ್ಯದೊಳು-ಅಲಂಕಾರಾತಿಶಯದಲ್ಲಿ, ಮುಸುಕಿ-ಮುತ್ತಿಕೊಂಡು, ತಪ್ಪಲ-ಸಾನುಪ್ರದೇಶವನ್ನು (ಜರಿಗಳನ್ನು), ಮೇವ - ಮೇಯುತ್ತಲಿರತಕ್ಕ, ಮಂಜುಗಳ-ಹಿಮದ ಗಡ್ಡೆಗಳ, ನಂಜುಗಳ - ವಿಷದಿಂದ ಕೂಡಿದ, ದಶನದ-ದಂತಗಳನ್ನು ಪಡೆದ, ಉಗ್ರ-ಕ್ರೂರವಾದ, ಅಹಿ-ಸರ್ಪಗಳ, ಪುತ್ತುಗಳ-ಹುತ್ತದ ಸಾಲ್ಗಗಳ, ಮುತ್ತುಗಳ-ರನ್ನಗಳಿಂ ಕೂಡಿದ, ಬೆಸಲಾದ-ಅಲ್ಲಲ್ಲಿ ಅಭಿವೃದ್ಧಿಯಾಗಿರತಕ್ಕ, ಪೇರ್ಬಿದಿರ-ಹೆಬ್ಬಿದಿರಿನ, ಕಾಡುಗಳ-ಕಾಂತಾರಂಗಳಲ್ಲಿ, ಬೀಡುಗಳ-ಬೈಲಿನ ಪ್ರದೇಶಗಳ, ಶಬರಿಯರ-ಕಿರಾತಸ್ತ್ರೀಯರ, ಸಂಕುಲದೊಳು-ಗುಂಪಿನಿಂದ, ಎಸೆದುದು-ಹೊಳೆಯುತ್ತಲಿತ್ತು ॥೩॥

ಟೀ॥ ಪಕ್ಷಿ-ವಿಹಗಂಗಳು, ಮೃಗಜಾತಿಗಳು-ಸಿಂಹವೇ ಮೊದಲಾದವುಗಳು, ಲೀಲೆಮಿಗೆ - ಸಂತಸವು ಹೆಚ್ಚುವಂತೆ, ರಮಿಸುತ-ಕ್ರೀಡಿಸುತ್ತಾ, ಇಹ-ಇರತಕ್ಕ, ಯಕ್ಷ-ಯಕ್ಷರೆಂಬುವ, ಕಿನ್ನರ-ಕಿನ್ನರರೆಂಬ ಹೆಸರುಳ್ಳ, ಕಿಂಪುರುಷ-ಕಿಂಪುರುಷ

---

ತೋಳಗಳಹಿಂಡು ಇವುಗಳಿಂದ ಕೂಡಿಯೂ, ಪರ್ವತಗಳಿಗೆಲ್ಲಾ ರಾಜನಾಗಿಯೂ, ಚಂದ್ರಕಾಂತಂಗಳಿಂದನ್ವಿತವಾಗಿಯೂ ಬಿಳಿದಾದ ಹಂಸಪಕ್ಷಿಗಳಿಂದ ಕೂಡಿಯೂ ಇರುವ ಆ ವಿಂಧ್ಯಾದ್ರಿಯಾದರೊ, ತನ್ನೆದುರಿಗೆ ಬರುತ್ತಲಿರುವ, ನಕುಲ ಸಹದೇವರೆಂಬ ತಮ್ಮಂದಿರಿಂದಲೂ ಧರ್ಮಜ ವೃಕೋದರರೆಂಬ ಅಣ್ಣಂದಿರಿಂದಲೂ ಕೂಡಿದ, ಚಂದ್ರವಂಶಕ್ಕೆ ದೀಪಪ್ರಾಯನು ಕೌರವಾಂತಕನು, ರಾಜಾಧಿರಾಜನು, ಪಾಂಡುನಂದನನೂ ಆದ ಅರ್ಜುನನನ್ನು ನೋಡಿ, ನಾನೂ ನಿನ್ನಂತೆಯೇ ಇರುವೆನೆಂದು ಅವನನ್ನು ಅಣಕಿಸುತ್ತಲಿತ್ತು ॥ ೨ ॥ ಅದರ ಶಿಖರವು ನಭೋಮಂಡಲದ ತುದಿಯನ್ನು ಎಟಕಿಸಿಕೊಳ್ಳುತ್ತಲಿದೆಯೋ ಎಂಬಂತೆ ಕಾಣುತ್ತಲಿತ್ತು. ಮತ್ತು ಕ್ರೀಡಾಯೋಗ್ಯವಾಗಿರುವ ಚಂದ್ರಕಾಂತಶಿಲೆಗಳಿಂದಲೂ, ರಮಣೀಯವಾದ ಗುಹೆಗಳಿಂದಲೂ, ಸಾನುಪ್ರದೇಶವನ್ನು ಆವರಿಸಿಕೊಂಡಿರುವ ಮಂಜಿನ ರಾಶಿಗಳಿಂದಲೂ ಕ್ರೂರವಾದ ಹಾವುಗಳ ಹುತ್ತಗಳಿಂದಲೂ, ದೊಡ್ಡ ದೊಡ್ಡ ಬಿದಿರು ಮೆಳೆಗಳಿಂದಲೂ, ಬೈಲುಪ್ರದೇಶದಲ್ಲಿ ಅಲ್ಲಲ್ಲಿ ಬೇಡತಿಯರ ಸಮೂಹದಿಂದಲೂ ಕೂಡಿರುವ ಆ ವಿಂಧ್ಯಾದ್ರಿಯ ॥೩॥ ಅನೇಕವಾದ ಹಕ್ಕಿಗಳ, ಸಿಂಹ ಹುಲಿ ಮೊದಲಾದ ದುಷ್ಟಮೃಗಗಳ ಆವಾಸಕ್ಕೆ ಸಹಾಯವಾಗಿ ಯಕ್ಷ,

ಗಂಧರ್ವ | ರಕ್ಷೋಗಣಂಗಳಿಂದಲ್ಲಲ್ಲಿಗೆಸೆವಪುಣ್ಯಾಶ್ರಮದಮುನಿಗಳಿಂದ || ಋಕ್ಷವಾನರಕುಲದವಿವಿಧಚೇಷ್ಟೆಗಳಿಂದ | ವೃಕ್ಷ
ಲತೆಗಳಕುಸುಮ ಫಲಸಮೃದ್ಧಿಗಳಿಂದ | ಅಕ್ಷಿಗಚಲೇಂದ್ರಮೆಸೆದಿರ್ದುದುಪುಳಿಂದನೀತನುಗಂಧಬಂಧುರದೊಳು || ೪ || ಅಭಿ
ಲಾಷೆಯಂತಿರೆಸದಾನವಂಸಿರಿಯಂತೆ | ವಿಭವಾಸ್ಪದಂಕಲಾನಿಧಿಯಂತೆಮೃಗಧರಂ | ನಭದಂತೆಕುಜಯುತಂದ್ವಿಜನಂತೆವಂಶ
ಪರಿಶೋಭಿತಂಸ್ವರ್ಗದಂತೆ || ಶುಭಸುರಭಿಸಂಭೃತಂರಣದಂತೆಶರಧೃತಂ | ಸಭೆಯಂತೆಚಿತ್ರಪತ್ರಾನ್ವಿತಂದಿನಕರ | ಪ್ರಭೆ

---

ರೆನ್ನುವ ನಾಮಧೇಯದಿಂ ಕೂಡಿದ, ಗರುಡ-ಗರುಡನು, ಗಂಧರ್ವ-ಗಂಧರ್ವರು, ರಕ್ಷೋಗಣಂಗಳು-ರಾಕ್ಷಸ ಸಮೂಹವೇ ಮೊದಲಾದ ದೇವತಾ ಭೇದದವರು, ಅಲ್ಲಲ್ಲಿಗೆ-ಅಷ್ಟಷ್ಟಕ್ಕೆ, ಎಸೆವ-ಹೊಳೆಯುವ, ಪುಣ್ಯ-ಸುಕೃತದಿಂದ ಕೂಡಿದ, ಆಶ್ರಮದ-ಪರ್ಣಶಾಲೆಗಳುಳ್ಳ, ಮುನಿಗಳಿಂದ-ತಾಪಸೋತ್ತಮರಿಂದ, ಋಕ್ಷ-ಭಲ್ಲೂಕಂಗಳು, (ಕರಡಿಗಳು) ವಾನರ-ಕಪಿಗಳು ಇವುಗಳ, ಕುಲದ-ಸಮೂಹದ, ವಿವಿಧ-ತಂಡತಂಡವಾದ, ಚೇಷ್ಟೆಗಳಿಂದ-ಆಡಳಿತಗಳಿಂದ, ವೃಕ್ಷ-ತುರಗಳ, ಲತೆ-ಎಳೆವಳ್ಳಿಗಳ, ಕುಸುಮ-ಹೂಗಳ, ಫಲ-ಹಣ್ಣುಗಳ, ಸಮೃದ್ಧಿಗಳಿಂದ-ಅತಿಶಯಗಳಿಂದ, ಪುಳಿಂದಿನೀ-ಬೇಡಿತಿಯರ, ತನುಗಂಧ-ಶರೀರವಾಸನೆಯ, ಬಂಧುರದೊಳು-ಆವರಿಸುವಿಕೆಯಿಂದ, ಅಚಲೇಂದ್ರಂ-ವಿಂಧ್ಯವೆಂಬ ಗಿರಿಯು, ಅಕ್ಷಿಗೆ- ನಯನಂಗಳಿಗೆ, ಎಸೆದಿರ್ದುದು-ಥಳಥಳಿಸುತ್ತಲಿತ್ತು.

ಅ|| ವಿ|| ಋಕ್ಷ-ಕರಡಿ ಮತ್ತು ನಕ್ಷತ್ರ. || ೪ ||

ಟೀ|| ತಚ್ಛೈಲಂ-ಆ ವಿಂಧ್ಯಪರ್ವತವು, ಅಭಿಲಾಷೆಯಂತೆ-ಇಷ್ಟಾರ್ಥಸಿದ್ಧಿಯಂತೆ, ಇರೆ-ಇರಲು, ಸದಾ-ಅನವರತವೂ, ನವಂ-ನೂತನವಾದದ್ದು, ಸದಾನವಂ-ನಿಶಿಚರರಿಂದ ಕೂಡಿದ್ದು. ಸಿರಿಯಂತೆ-ಸಂಪತ್ತಿನಹಾಗೆ, ವಿಭವ-ಸಾಮ್ರಾಜ್ಯಕ್ಕೆ, ಆಸ್ಪದಂ-ಆಧಾರವಾದದ್ದು, ವಿಭವ-ವೈರಾಗ್ಯವುಳ್ಳ ಯೋಗಿಗಳಿಗೆ, ಆಸ್ಪದಂ-ಆಶ್ರಯವಾಗಿರುವು. ಕಲಾನಿಧಿಯಂತೆ-ಕಲಾಪೂರ್ಣನಂತೆ, ಮೃಗಧರಂ-ಮೃಗ-ಜಿಂಕೆಯನ್ನು, ಧರಂ-ಗುರ್ತಾಗಿ ಧರಿಸುವನು, ಮೃಗಧರಂ - ಸಿಂಹಮೊದಲಾದ ದುಷ್ಟ ಮೃಗಗಳಿಂದ ಕೂಡಿರುವುದು, ನಭದಂತೆ-ಅಂತರಿಕ್ಷದೋಪಾದಿಯಲ್ಲಿ, ಕುಜಯುತಂ-ಕುಜ-ಅಂಗಾರಕ ಗ್ರಹದಿಂದ, ಯುತಂ-ಯುಕ್ತವಾಗಿರುವುದು, (ಆಕಾಶ) ಕುಜ-ವೃಕ್ಷಭೇದಂಗಳಿಂದ, ಯುತಂ-ಸಹಿತಮಾದದ್ದು (ಪರ್ವತ) ದ್ವಿಜನಂತೆ-ಬ್ರಾಹ್ಮಣನತೆರದಿಂದ, ವಂಶಪರಿಶೋಭಿತಂ-ವಂಶ- ಸದ್ವಂಶದಿಂದ, ಪರಿಶೋಭಿತಂ - ಅಲಂಕಾರಯುಕ್ತವಾದದ್ದು (ಬ್ರಾಹ್ಮವಂಶ) ವಂಶ-ಬಿದಿರುಮೆಳೆಗಳೂ ಅಲ್ಲಲ್ಲಿರೋಣದರಿಂದ, ಪರಿಶೋಭಿತಂ-ಅಂದವಾಗಿ ಕಾಣುವುದು (ಪರ್ವತ) ಸ್ವರ್ಗದಂತೆ-ಇಂದ್ರಲೋಕದಂತೆ, ಶುಭ-ಶುಭಕರವಾದ, ಸುರಭಿ - ಪುಣ್ಯದಾಯಕವಾದ ಕಾಮಧೇನುವಿನಿಂದ, ಸಂಭೃತಂ - ಸಹಿತವಾದದ್ದು, (ಸ್ವರ್ಗ) ಶುಭ-ಕಲ್ಯಾಣಯೋಗ್ಯವಾದ, ಸುರಭಿ-ಶ್ರೀಗಂಧಾದಿಗಳ ಸುವಾಸನೆಯಿಂದ, ಸಧೃತಂ-ಸಹಿತವಾದದ್ದು, ರಣದಂತೆ-ಕಾಳಗದಂತೆ, ಶರಧೃತಂ- ಸರಳ್ಗಳಿಂಕೂಡಿರುವುದು (ರಣರಂಗವು), ಶರ-ನೀರಿನಲ್ಲಿ ಬೆಳೆಯುವ ಜಂಡುಗಳನ್ನು, ಧೃತಂ-ಧರಿಸಿರುವುದು, ಸಭೆಯಂತೆ-ಒಡ್ಡೋಲಗದ ರೀತಿಯಾಗಿ, ಚಿತ್ರ-ವಿಧವಿಧವಾದ, ಪತ್ರ-ಲೇಖನಾದಿಗಳಿಂದ, ಅನ್ವಿತಂ-ಕೂಡಿರುವುದು, (ಓಲಗವು) ಚಿತ್ರ-ನಾನಾಪ್ರಕಾರವಾದ, ಪತ್ರ-ಎಲೆಗಳಿಂದ, ಅನ್ವಿತಂ-ಸೇರಿರುವುದು (ವಿಂಧ್ಯಾದ್ರಿಯು) ದಿನಕರ-ರವಿಯ, ಪ್ರಭೆಯಂತೆ-ಪ್ರಕಾಶದಹಾಗೆ, ಪುಂಡರೀಕ-ತಾವರೆ ಹೂಗಳಿಗೆ, ಉಲ್ಲಾಸಕರಂ-ಅರಳಲು ಅನುಕೂಲವಾಗಿ ಸಂತೋಷವನ್ನುಂಟುಮಾಡುವುದು, (ಸೂರ್ಯನು) ಪುಂಡರೀಕ-ವ್ಯಾಘ್ರಸಮೂಹಗಳಿಗೆ, ಉಲ್ಲಾಸಕರಂ- ಆನಂದವನ್ನುಂಟುಮಾಡುವುದು, (ಪರ್ವತವು), ಆಗಿ-ಈಬಗೆಯಾಗಿ ತೋರುತ್ತ, ಇರ್ದುದು-ಇತ್ತು.

ಅ|| ವಿ|| ಸಿರಿ(ತ್ಭ) ಶ್ರೀ (ತ್ಸ). ದ್ವಿಜ-ದ್ವಿ-ಎರಡು, ಜ-ಜನ್ಮವುಳ್ಳವನು, ಅಂದರೆ ಹುಟ್ಟಿದಂದಿನಿಂದಲೂ ಉಪನಯನಸಂಸ್ಕಾರದವರೆಗೂ ಒಂದು ಜನ್ಮವೆಂದೂ (ಶೂದ್ರಜನ್ಮ) ತದನಂತರ ಬ್ರಾಹ್ಮಣ ಜನ್ಮವೆಂದೂ ಭಾವಿಸಬೇಕು (ದ್ವಿಜ-ಬ್ರ

---

ಗರುಡ, ಗಂಧರ್ವರೇ ಮೊದಲಾದ ದೇವಯೋನಿಯಲ್ಲಿ ಜನಿಸಿದವರ ಸಂಚಾರಕ್ಕೆ ಸಿಕ್ಕಿ ಪುಣ್ಯಾಶ್ರಮಗಳಿಂದಲೂ, ಪವಿತ್ರರಾದ ತಾಪಸೋತ್ತಮರಿಂದಲೂ ಕೂಡಿ, ಕಪಿಗಳು ಕರಡಿಗಳು ಮೊದಲಾದವುಗಳ ಚೇಷ್ಟೆಗೆ ಆಕರವಾಗಿ ಎಲ್ಲೆಲ್ಲಿಯೂ ದೊಡ್ಡ ದೊಡ್ಡ ಮರಗಳು, ಒಳ್ಳೆ ಹಣ್ಣು ಕಾಯಿಗಳು, ಸುವಾಸನೆಯನ್ನುಂಟುಮಾಡುವ ಪುಷ್ಪಜಾತಿಗಳು, ಇವುಗಳಿಂದ ತುಂಬಿಕೊಂಡು ಕಿರಾತಾಂಗನೆಯರ ಶರೀರಗಂಧದಿಂದ ಕೂಡಿ, ನೋಟಕರಿಗೆ ಬಹು ಮನೋಹರವಾಗಿತ್ತು || ೪ || ಅದೂ ಅಲ್ಲದೆ ಆ ಪರ್ವತದಲ್ಲಿ ಎಲ್ಲೆಲ್ಲಿಯೂ ರಾಕ್ಷಸರೂ ವಿರಕ್ತರಾದ ಯೋಗಿಗಳೂ, ಸಿಂಹಾದಿ ಮೃಗಗಳೂ, ದೊಡ್ಡದೊಡ್ಡ ಮರಗಳೂ, ಬಿದಿರು ಮೆಳೆಗಳೂ ಶ್ರೀಗಂಧ, ಜಂಬು ಮೊದಲಾದವೂ, ವಿಧವಿಧವಾದ ಎಲೆಗಳೂ, ಹುಲಿಗಳೂ, ತುಂಬಿಕೊಂಡು ಇಷ್ಟಾರ್ಥ, ಐಶ್ವರ್ಯಲಕ್ಷ್ಮಿ, ಚಂದ್ರ, ಆಕಾಶ, ಬ್ರಾಹ್ಮಣ, ಸ್ವರ್ಗಲೋಕ, ಯುದ್ಧಭೂಮಿ,

ಯುಂ ತೆಪುಂಡರೀಕೋಲ್ಲಾಸಕರನಾಗಿತಚ್ಛೈಲಮೆಸದಿರ್ದುದು ॥ ೫ ॥ ನಾಗಭೂಷಣನಾಗಿಶಿವನಲ್ಲಹರಿಗಿರ್ಕೆ । ಯಾಗಿ ಪಾಲ್ಗಡಲಲ್ಲಃಶಿಖಿನಿವಾಸಸ್ಥಾನ । ಮಾಗಿದಿಗ್ಭಾಗಮಲ್ಲಷ್ಟಾಪದೋದ್ಭಾಸನಾಗಿನೈಪಥ್ಯಮಲ್ಲ । ಗೋಗಣಾನ್ವಿತನಾಗಿವಜ್ರಮ ಲ್ಲಖಡ್ಗಧರ । ನಾಗಿಪಟುಭಟನಲ್ಲಮಹಿಷೀವಿಲಾಸಕರ । ಮಾಗಿನೃಪಗೇಹಮಲ್ಲೆನಿಸಿರ್ದುದಾಶ್ಚರ್ಯಸಾಂದ್ರಮಚಲೇಂದ್ರಮೆ ನೆನ ॥ ೬ ॥ ಶೃಂಗಮಯಮುರುಶಿಲಾಪಾಂಗಮಯಮುದಿತಮಾ । (ಶಿಲಾಸಂಗ) ತಂಗಮಯಮನುಪಮಭುಜಂಗಮಯಮುನ್ನತ ಪ್ಲ । ವಂಗಮಯವಿತತಸಾರಂಗಮಯಮದ್ಭುತದಸಿಂಗಮಯಶರಭಮಯವು ॥ ಭೃಂಗಮಯಮವಿರಳವಿಹಂಗಮಯಮೊಪ್ಪು

---

ಹ್ಮ, ಕ್ಷತ್ರಿಯ, ವೈಶ್ಯರು) ಮತ್ತು ಹಲ್ಲುಗಳು, ಪಕ್ಷಿಗಳು. ಇದರಲ್ಲಿ ವಿರೋಧಾಭಾಸವು ತೋರುವುದು ॥ ೫ ॥

ಟೀ॥ ಕವಿಯು ಮುಂದಿನ ಪದ್ಯದಲ್ಲಿ ಮೊದಲು ವಿರೋಧಾಭಾಸವನ್ನು ತೋರಿಸಿ ಅನಂತರ ಅದರ ಪರಿಹಾರ ವನ್ನೂ ಹೇಳುತ್ತಾ ವಿಂಧ್ಯಾದ್ರಿಯನ್ನು ವರ್ಣಿಸುತ್ತಲಿದ್ದಾನೆ :—ವಿಂಧ್ಯಪರ್ವತವಾದರೊ, ನಾಗಭೂಷಣನಾಗಿ– ದೊಡ್ಡದೊಡ್ಡ ಹಾವುಗಳನ್ನು ಒಡವೆಗಳಂತೆ ಮೈಯಲ್ಲೆಲ್ಲಾ ಹಾಕಿಕೊಂಡು ಇದ್ದರೂ, ಶಿವನಲ್ಲ–ಪರಮೇಶ್ವರನು ಎಂದು ಹೇಳಲಾಗು ವುದಿಲ್ಲ, ಇದು ವಿರೋಧವು. ವಿಂಧ್ಯಪರ್ವತದಲ್ಲಿ ಅನೇಕವಾದ ಹಾವುಗಳು ತುಂಬಿದ್ದವೆಂಬುದು ಇದಕ್ಕೆ ಪರಿಹಾರವು, ಹರಿಗೆ– ನಾರಾಯಣ ಮೂರ್ತಿಗೆ, ಇರ್ಕೆಯಾಗಿ–ನೆಲೆಯಾಗಿದ್ದರೂ, ಪಾಲ್ಗಡಲಲ್ಲ - ಹಾಲಿನ ಸಮುದ್ರವಲ್ಲವೆಂಬ ವಿರೋಧವನ್ನು, ಹರಿಗೆ-ಸಿಂಹ, ಕೋತಿ, ಕಪ್ಪೆ, ನದಿ, ಅಶ್ವತ್ಥವೃಕ್ಷ, ಗಿಳಿಗಳೇ ಮೊದಲಾದವುಗಳಿಗೆ ವಿಂಧ್ಯಪರ್ವತವು ಆಸರೆಯಾಗಿತ್ತೆಂದು ಪರಿಹಾರವಾಗಿ ಊಹಿಸಬೇಕು. ಶಿಖಿ-ಬೆಂಕಿಗೆ, ನಿವಾಸಸ್ಥಾನಂ–ನೆಲೆಯೂ, ಆಗಿ–ಆದರೂ, ದಿಗ್ಭಾಗಂ–ಆಗ್ನೇಯ ಮೂಲೆಯು ಅಲ್ಲ–ಆಗಿರಲಿಲ್ಲ. ಎಂದರೆ ನವಿಲುಗಳಿಂದ ತುಂಬಿತ್ತೆಂದು ಆಶಯವು. ಅಷ್ಟಾಪದ–ಸುವರ್ಣದಿಂದ, ಉದ್ಭಾಸನಾಗಿ–ಹೊಳೆ ಯುತ್ತಲಿದ್ದರೂ, ನೈಪಥ್ಯಂ–ರಾಣಿವಾಸವು, (ಅಲಂಕಾರವು) ಅಲ್ಲ–ಆಗಿರಲಿಲ್ಲ. ಎಂದರೆ ಅಷ್ಟಾಪದ–ಶರಭವೆಂಬ ಮೃಗಭೇಧ ದಿಂದ ತುಂಬಿತ್ತೆಂದು ಊಹೆಯು, ಗೋಗಣಾನ್ವಿತವಾಗಿ–ಹಸುಗಳ ಗುಂಪಿನಿಂದ ಸೇರಿದ್ದರೂ, ವ್ರಜಮಲ್ಲ–ದನದ ಕೊಟ್ಟಿಗೆ ಯಲ್ಲ, ಎಂದರೆ, ಗೋ–ಜಲರಾಶಿಗಳು, ಸರೋವರಗಳು ಮೊದಲಾದವುಗಳ, ವ್ರಜ–ಸಮುದಾಯದಿಂದ, ಅನ್ವಿತಂ–ಕೂಡಿತ್ತೆಂದು ಅರಿಯಬೇಕು, ಖಡ್ಗಧರನಾಗಿ–ಕತ್ತಿಯನ್ನು ಹಿಡಿದಿರತಕ್ಕವನಾಗಿ, ಪಟುಭಟನಲ್ಲ-ಶೂರಾಗ್ರೇಸರನಲ್ಲ. ಅಂದರೆ ಅನೇಕ ಖಡ್ಗ ಮೃಗಗಳು ಇದ್ದವೆಂದು ಭಾವವು. ಮಹಿಷೀ–ಪಟ್ಟದರಸಿಯಿಂದ, ವಿಲಾಸಕರನಾಗಿ–ಆನಂದಪಡಲು ಯೋಗ್ಯವಾಗಿದ್ದರೂ, ನೃಪಗೇಹಂ–ರಾಜಭವನವು, ಅಲ್ಲ–ಅಲ್ಲವು. ಎಂದರೆ, ಮಹಿಷೀ–ಎಮ್ಮೆಗಳಿಂದ, ವಿಲಾಸಕರನಾಗಿ–ಸಂತೋಷವನ್ನುಂಟುಮಾ ಡುವುದಾಗಿತ್ತೆಂದು ಆಶಯವು, ಈ ರೀತಿಯಲ್ಲಿ, ಅಚಲೇಂದ್ರಂ-ವಿಂಧ್ಯವೆಂಬ ಪರ್ವತರಾಜನು, ಆಶ್ಚರ್ಯಸಾಂದ್ರಂ–ಅಚ್ಚರಿಯ ನ್ನುಂಟುಮಾಡುವ ಪದಾರ್ಥಗಳಿಂದ ಕೂಡಿದಂಥಾದ್ದಾಗಿ ಕಾಣಿಸುತ್ತಲಿತ್ತು. ॥ ೬ ॥

ಟೀ॥ ಶೃಂಗ-ಶಿಖರಗಳ, ಮಯವು–ಅಧಿಕ್ಯದಿಂದ ಕೂಡಿದ್ದು, ಉರು–ವಿಸ್ತಾರವಾದ, ಶಿಲಾ-ಅರೆಯ, ಅಪಾಂಗ– ಹತ್ತಿರ ವಿರುವ ದೊಡ್ಡದೊಡ್ಡ ಗುಂಡುಗಳ, ಮಯವು–ಅತಿಶಯದಿಂದ ತುಂಬಿರುವುದು, ಮದಿತ–ಮದವೇರಿದ, ಮಾತಂಗ– ಹಸ್ತಿಗಳಿಂದ, ಮಯವು–ಸಾಂದ್ರವಾಗಿರುವುದು. ಅನುಪಮ-ಅಸದೃಶವಾದ, ಭುಜಂಗಮಯಂ–ಹಾವುಗಳಿಂದ ಕೂಡಿರುವುದು, ಉನ್ನತ–ಬಹು ಎತ್ತರವಾದ, ಪ್ಲವಂಗಮಯಂ–ಕೋತಿಗಳಿಂದ ತುಂಬಿರುವುದು, ವಿತತ-ಹೆಚ್ಚಾದ, ಸಾರಂಗಮಯಂ–ದುಪ್ಪಿ ಮೃಗಗಳಿಗೆ ಆಕರವಾಗಿರುವುದು, ಅದ್ಭುತ–ಅಚ್ಚರಿಯನ್ನುಂಟುಮಾಡತಕ್ಕ, ಸಿಂಗಮಯಂ–ಸಿಂಹಗಳಿಂದ ಕೂಡಿರುವುದು, ಶರಭ ಮಯವು–ಶರಭ ಮೃಗಗಳಿಂದ ತುಂಬಿರುವದು. ಭೃಂಗಮಯಂ–ಅಳಿವಿಂಡಿನಿಂ ಸಹಿತನಾಗಿರುವುದು, ಅವಿರಳ–ಸಾಂದ್ರ ವಾದ, ವಿಹಂಗಮಯಂ–ಹಕ್ಕಿಗಳಿಂದೊಡಗೂಡಿರುವುದು. ಒಪ್ಪುವ–ಮೆರೆಯುತಕ್ಕ, ಕುರಂಗಮಯಂ-ಜಿಂಕೆಗಳಿಂದ ಕೂಡಿ ರುವುದು, ಅನುರಿಯು–ಸುರಾಂಗನೆಯರ, ಅನಂಗಮಯಂ-ಮದನ ಕೇಳಿಗಳಿಂದ ವ್ಯಾಪಿಸಿರುವುದು, ಕೇಳಿಗಳ–ಸುರತಸುಖದ,

---

ಸಭಾಭವನ, ಸೂರ್ಯಮಂಡಲ ಇವುಗಳನ್ನು ವ್ಯಾಪಿಸುತ್ತಲಿತ್ತು ॥ ೫ ॥ ಅಲ್ಲದೆ, ಅನೇಕವಾದ ಹಾವುಗಳಿಂದಲೂ ಸಿಂಹಾದಿಗ ಳಿಂದಲೂಕೂಡ, ನವಿಲುಗಳಿಗೆ ವಾಸಸ್ಥಳವಾಗಿಯೂ, ಸುವರ್ಣರಾಶಿಗಳಿಂದ ಸಹಿತನಾಗಿಯೂ, ಅನೇಕವಾದ ಖಡ್ಗಮೃಗಗಳು ಹಸುಗಳು, ಎಮ್ಮೆಗಳು ಇವುಗಳಿಗೆಲ್ಲಾ ಆಕರವಾಗಿ ನೋಡುವವರಿಗೆಲ್ಲಾ ಪರಮಾಶ್ಚರ್ಯವನ್ನುಂಟುಮಾಡುತ್ತ, ಈಶ್ವರ, ಕ್ಷೀರಸಮುದ್ರ, ಅಗ್ನಿದಿಕ್ಕು ದನಗಳ ದೊಡ್ಡಿ, ಅಂತಃಪುರ ಇವುಗಳಲ್ಲಿ ಯಾವುದಿರಬಹುದೆಂಬ ಅನುಮಾನವನ್ನುಂಟುಮಾಡು ತ್ತಲಿತ್ತು. ॥ ೬ ॥ ಆ ಪರ್ವತದಲ್ಲಿ ಎಲ್ಲಿನೋಡಿದರೂ ದೊಡ್ಡದೊಡ್ಡ ಕಲ್ಲುಗಳು, ಬಂಡೆಗಳು, ಗೂಡುಗಳು, ಮತ್ತಗಜಗಳು ಹಾವುಗಳು, ಕೋತಿಗಳು, ಸಿಂಹ, ಸಾರಂಗಗಳು, ಭೃಂಗಗಳು, ಪಕ್ಷಿರಾಶಿಗಳು, ಜಿಂಕೆ ವಿಂಡುಗಳು, ದೇವಕನ್ನಿಕೆಯರ ವಿಹಾ

ವಕು | ರಂಗನುಯನುಮರಿಯರಸಂಗನುಯಕೇಳಿಗಳ | ಸಂಗನುಯಮೆನಿಸಗಿರಿಭಂಗನುಯಮಿಲ್ಲದುತ್ತುಂಗನುಯವಾಗಿರ್ದುದು || ೭ || ಬಹುಕಾಲಮೆನಗೆನೀರ್ಮಳೆಗರೆದಪುರುಷಾರ್ಥ | ಕಹಹನ್ನದ್ದಿಂದುಗಳನೀಗಸುರಿದಪೆನೆಂದು | ಮಹಿನಭಸ್ಥಳಕುದಜ್ಮುಖಮಾಗಿಸೂಸುವರಜದಸೋನೆಯನೆಧೂಳಿಡೆ || ಬಹಳತರುಗುಲ್ಮಲತೆಮೃಗಪಕ್ಷಿಕ್ರಿಮಿಕೀಟ | ಗುಹೆದೋಣಿಮೊರಡಿಪಳ್ಳಕೊಳ್ಳಜರಿಸರಿಜಲುಗು | ಗಹನಗಂಹರದವಿಂಧ್ಯಾದ್ರಿಯುಂಫಲುಗುಣನಸೇನೆತುಳಿದಸಿಯರದುದು || ೮ || ಹರಿಯಸೇವಕರಬರವಂಕಾಣುತಾವಿಂಧ್ಯ | ಗಿರಿಯದುರ್ಮಾರ್ಗಮುಂಸನ್ಮಾರ್ಗಮಾಯ್ತುದು | ರ್ಧರಹೃದಯವನಜಾಂಧಕಾರಮುಂಸುಪ್ರಕಾಶಿತಮಾಯ್ತುವಿಕೃತಿಯಡಗಿ || ಉರುತರಪ್ರಭಾವದಿವಿಮುಕ್ತಭಾವಿತಮಾಯ್ತು | ನಿರುಪಮಾಶಾಪರಿಜ್ಞಾನಮಾಯ್ತಿರದೆಗೋ |

---

ಸಂಗ-ಸಹಾಯವಿಂದ, ಮಯಂ-ಜಸ್ಪತಕ್ಕದ್ದು, ಎನಿಸ-ಎಂದು ಹೊಗಳಿಕೊಳ್ಳುವ, ಗಿರಿ-ವಿಂಧ್ಯಾದ್ರಿಯು, ಭಂಗಂ-ಕೃಶವಾದ, ಅಯುಂ-ಗಮನವು, ಇಲ್ಲದ-ಇಲ್ಲದೆ ಇರತಕ್ಕ, ಉತ್ತುಂಗನುಯನಾಗಿ-ಅತ್ಯುನ್ನತವಾದದ್ದಾಗಿ, ಇರ್ದುದು-ಇತ್ತು ||

ಅ|| ವಿ|| ಸಿಂಗ (ತ್ಸ)-ಸಿಂಹ (ತ್ಭ), ವಿಹಂಗ-ವಿಹ-ಅಂತರಿಕ್ಷದಲ್ಲಿ, ಗನು-ಸಂಚರಿಸುವುದು (ಹಕ್ಕಿ, ಕೃ ವೃ.) ||೭||

ಟೀ|| ಬಹುಕಾಲಂ-ಅನೇಕ ದಿನಗಳವರೆಗೂ, ಎನಗೆ-ನನಿಗೆ, ನೀರ್ಮಳೆ-ನೀರು ಸಹಿತವಾದ ಮಳೆಯನ್ನು, ಕರೆದ-ಸುರಿಸಿದ, ಪುರುಷಾರ್ಥಕೆ-ಫಲದಸಲುವಾಗಿ, ಪೃದ್ಬಿಂದುಗಳನು-ಧೂಳಿನಿಂದ ತುಂಬಿದ ಮಣ್ಣಿನ ಕಣಗಳನ್ನು, ಈಗ-ಈ ಕಾಲದಲ್ಲಿ, ಸುರಿದಪೆನು-ಕರೆಯುತ್ತೇನೆ, ಎಂದು-ಎಂಬದಾಗಿ, ಮಹಿ-ಇಳೆಯು, ನಭಸ್ಥಳಕೆ- ಆಕಾಶಮಾರ್ಗಕ್ಕೆ, ಉದಜ್ಮುಖಮಾಗಿ-ಮೇಲ್ಮುಖವಾಗಿ, ಸೂಸುವ-ಬೀರುತ್ತಲಿರುವ, ರಜದ-ಧೂಳಿನ ಸಂಬಂಧವಾದ, ಸೋನೆಯೆನೆ- ಸಣ್ಣಸಣ್ಣ ಕಣಗಳೊ ಎಂಬಂತೆ, ಧೂಳಿಡೆ-ಧೂಳು ತುಂಬಿಕೊಳ್ಳಲಾಗಿ, ಬಹಳ-ನಾನಾಪ್ರಕಾರವಾದ, ತರು-ವೃಕ್ಷಗಳು, ಗುಲ್ಮ-ಪೊದರುಗಳು, ಲತೆ-ಎಳೆವಳ್ಳಿಗಳು, ಮೃಗ-ಸಿಂಗಂಗಳು, ಪಕ್ಷಿ-ಹಕ್ಕಿಗಳು, ಕ್ರಿಮಿ - ಸಣ್ಣಸಣ್ಣ ಹುಳಗಳು, ಕೀಟ-ಬಹುದೊಡ್ಡಹುಳಗಳು, ಗುಹೆ-ಗವಿಗಳು, ದೋಣಿ-ನೀರಿನ ಹೊಂಡಗಳು, ಮೊರಡಿ-ಗುಡ್ಡಗಳು, ಪಳ್ಳ-ಹಳ್ಳಗಳು, ಕೊಳ್ಳ-ದಿಣ್ಣೆಗಳು, ಜರಿ-ಕಿಬ್ಬರಿಗಳು, ಸರಿ-ನೀರಿಳಿಯತಕ್ಕ ಸ್ಥಳಗಳು, ಜಲಗು-ನುಣುಪಾದ ಬಂಡೆಗಳು, ಗಹನ-ದುರ್ಗಮವಾದ ಅರಣ್ಯ ಮಾರ್ಗವು, ಗಂಹರದ-ಮೇಲಿನಿಂದ ಕೆಳಗೆ ಹೊರಳಲು ಸಿದ್ಧವಾದ ಗುಂಡುಗಳು ಇವೇ ಮೊದಲಾದವುಗಳಿಂದ ಕೂಡಿದ, ವಿಂಧ್ಯಾದ್ರಿಯುಂ-ವಿಂಧ್ಯಪರ್ವತದ ದಾರಿಯನ್ನು, ಫಲುಗುಣನ-ಪಾರ್ಥನ, ಸೇನೆ-ದಂಡು, ತುಳಿದು-ಮೆಟ್ಟಿ, ಅಸಿಯರದುದು-ಆಯಾಸದಿಂದ ಕೂಡಿತು || ೮ ||

ಟೀ| ಹರಿಯ - ನಾರಾಯಣನ, ಮತ್ತು ಕುದುರೆಯ, ಸೇವಕರ - ಭಕ್ತರಾದವರ, ಕಾವಲ್ಗಾರರ, ಬರವಂ-ಆಗಮನವನ್ನು, ಕಾಣುತ-ಈಕ್ಷಿಸುತ್ತಲೆ, ಆ ವಿಂಧ್ಯಗಿರಿಯ - ಆ ವಿಂಧ್ಯ ಪರ್ವತದ, ದುರ್ಮಾರ್ಗಮುಂ-ದುರಾಚಾರವು, ಮತ್ತು ಕಠಿಣವಾದ ದಾರಿಯು, ಸನ್ಮಾರ್ಗಮಾಯ್ತು - ನ್ಯಾಯಮಾರ್ಗದಿಂದ ಕೂಡಿದ್ದಾಯಿತು. ಅತ್ಯುತ್ತಮವಾದ ದಾರಿಯಾಯಿತು. ದುರ್ಧರ - ಹೊಂದಿರಲಸದಳವಾದ, ವನ-ಕಾಡಿನಲ್ಲಿ, ಜ-ಉತ್ಪನ್ನವಾದ ತರುಗಳ, ಅಂಧಕಾರಂ-ಕತ್ತಲೆಯು, ಮತ್ತು ದುರ್ಧರ-ಪಡೆಯಲಶಕ್ಯಮಾದ, ಹೃದ್ವನಜ - ಹೃದಯವೆಂಬ ತಾವರೆಯ, ಅಂಧಕಾರಂ-ಕತ್ತಲೆಯನ್ನು, ಹೋಲುವ ಅವಿವೇಕವು, ಸುಪ್ರಕಾಶಿತಂ - ತಡೆಯಿಲ್ಲದಿರುವುದು, ಮತ್ತು ಬೆಳಕನ್ನೈದಿದಂಥಾದ್ದು, ಆಯ್ತು - ಆಗಿಬಿಟ್ಟಿತು, ವಿಕೃತಿಯು-ದುಸ್ಸಹವಾದ ಕಾಡುದಾರಿಯ ವಿಕಾರವು, ಮತ್ತು ನೈಜವಾದ ವಿಕಾರವು, ಅಡಗಿ-ಒಳ್ಳೆದಾರಿಯಾಗಿ, ತಗ್ಗಿ ಹೋಗಿ, ಉರುತರ-ಬಹು ಹೆಚ್ಚಾದ, ಪ್ರಭಾವದಿ-ಮಹಾತ್ಮೆಯಿಂದ, ಶಕ್ತಿಯಿಂದ, ವಿಮುಕ್ತ-ಸರರಿಂದಲೂ, ಕುದು

---

ರಸ್ಥಳಗಳು, ಇವುಗಳಿಂದ ತುಂಬಿ ಅಲ್ಲಲ್ಲಿ ಕದಲದೆ ಸ್ಥಿರವಾಗಿಯೂ ಅತ್ಯುನ್ನತವಾಗಿಯೂ ಇತ್ತು. ||೭|| ಈ ಪರ್ವತಾಗ್ರದಿಂದ ಕೆಳಗೆಬಿದ್ದ ಮಂಜಿನಿಂದ ಭೂಮಂಡಲಕ್ಕೆಲ್ಲಾ ನೀರುಂಟಾದ ಪ್ರತ್ಯುಪಕಾರಕ್ಕಾಗಿ ಈ ಭೂಮಂಡಲದಿಂದ ಆಕಾಶಪ್ರಾಂತಕ್ಕೆ ಧೂಳಿನ ಮಳೆಯು ಎದ್ದಿದೆಯೋ ಎಂಬಂತೆ ಎಲ್ಲೆಲ್ಲಿಯೂ ಧೂಳನ್ನು ಎಬ್ಬಿಸುತ್ತ, ದುಷ್ಟ ಮೃಗಗಳಿಂದಲೂ, ಕ್ರಿಮಿಕೀಟಾದಿಗಳಿಂದಲೂ, ಗಿಡಮರಗಳಿಂದಲೂ, ಹಳ್ಳತಿಟ್ಟುಗಳಿಂದಲೂ, ಕಲ್ಲು, ಗುಂಡು, ದುರ್ಗಮವಾದ ಗುಹೆಗಳು ಇವುಗಳಿಂದಲೂ ಕೂಡಿರುವ ಅತಿ ದುಸ್ತರವಾದ ದಾರಿಯಲ್ಲಿ ಅರ್ಜುನನ ಉತ್ತಮಾಶ್ವವೂ, ಅಪರಿಮಿತವಾದ ಸೇನೆಯೂ ಹೊರಟು ನಡಿಯಲಾರದೆ ಹೆಚ್ಚಾದ ಬಳಲಿಕೆಯಂ ತಾಳಿರುವುದನ್ನು ನೋಡಿ || ೮ || ವಿಂಧ್ಯಪರ್ವತದ ದುರ್ಗಮವಾದ ದಾರಿಯು ವಿಷ್ಣುಭಕ್ತರಾದ ಅರ್ಜುನಾದಿಗಳಿಗೆ ತೊಂದರೆಯಾಗಕೂಡದೆಂದು ಬಹು ಸುಖವಾದ ಮಾರ್ಗವಾಯಿತು. ಅರಣ್ಯದಲ್ಲಿ ಮರಗಳು ಸಾಂದ್ರವಾಗಿ ಬೆಳೆದು ಬಹು ಕತ್ತಲಾಗಿದ್ದದ್ದು ಇವರಿಗೆ ತೊಂದರೆಯಾಗಬಾರದೆಂದು ಅಂಧಕಾರವೆಲ್ಲಾ ಹೋಗಿ ಹೆಚ್ಚಾಗಿ ಪ್ರಕಾಶಿಸುತ್ತಲಿತ್ತು. ಎಲ್ಲೆಲ್ಲಿಯೂ ಕಲ್ಲು ಗುಂಡುಗಳು, ಮುಳ್ಳುಗಳು, ಹಳ್ಳದಿಣ್ಣೆಗಳೂ ಆಗಿದ್ದನೆಲವೆಲ್ಲವೂ ಯಜ್ಞಾಶ್ವಕ್ಕೆ ಬಾಧೆಯಾಗಬಾ

ಚರಮಾಯ್ತು ವಿಷ್ಣುಪದಮೆನೆನಡೆದುದಾಹಯಂಬೆಂಬಿಡದೆಸೇನೆಸಹಿತ ‖ ೯ ‖ ಮಂದಿಸಂದಣಿಸಿಬೆಂಗೊಂಡುನಡೆತರೆಕುದುರೆ | ಮುಂದೆಬರೆಬರೆಕಂಡುದೊಂದುಯೋಜನದಗಲ | ದಿಂದೆಸೆವಶಿಲೆಯನದರೋಳ್ಪೊರಳ್ದಪೆನೆಂಬತನಕದಿಂದತಿಭರದೊಳು ‖ ಬಂದಡರ್ದಾಕಲ್ಲಮೇಲೆಹರಿಕಾಲಿಟ್ಟು | ದಂದುಹರಿಮೆಟ್ಟಿದರೆಪೆಣ್ಣಾದುದಂತೆಮೇ | ಣಿಂದಾಗದಿರ್ದಪುದೆಪೇಳೆಂಬಿನಿಂಮಹೀಪಾಲಕೇಳದ್ಭುತವನು ‖ ೧೦ ‖ ಕಾಲಿಡಲ್ಕಾಶಿಲೆಯೊಳಾತುರಂಗದಖುರಂ | ಕೀಲಿಸಿತುಭಂಗಿಸದೆಕೂಡೆಬೆಚ್ಚಂದದಿಂ | ಮೇಲೆನಡೆ

ರೆಯ ಕಾವಲಿಗಾಗಿ ಬಂದಿದ್ದ ಸೇನಾಜನರಿಂದಲೂ, ಭಾವಿತಂ- ಸಮಿಾಪಸ್ಥವಾದದ್ದು, ಯೋಚಿಸಲ್ಪಟ್ಟದ್ದು, ಆಯ್ತು-ಆಗಿಬಿಟ್ಟಿತು, ನಿರುಪಮ-ಅಸದೃಶವಾದ, ಆಶಾ-ದಿಗ್ಭಾಗದ, ಮತ್ತು ವಿಂಧ್ಯಾಟವಿಯನ್ನು ನೋಡಬೇಕೆಂಬ ಕುತೂಹಲದ, ಪರಿಜ್ಞಾನವು-ತಿಳಿವಳಿಕೆಯು, ಆಯ್ತು-ಉಂಟಾಯಿತು, ಇರದೆ-ಸುಮ್ಮನಿರದೆ, ವಿಷ್ಣುಪದಂ-ವೈಕುಂಠಪದವಿಯು, ಮತ್ತು ಅಂತರಿಕ್ಷವು, ಗೋಚರನಾಯಿತು-ಕಣ್ಣಿಗೆ ಕಾಣಬಂದಿತು, ಎನೆ-ಎಂಬತೆರನಾಗಿ, ಆಹಯಂ-ಆ ಅಶ್ವವು, ಬೆಂಬಿಡದೆ-ಅನುಸರಿಸದಿರದೆ, ಸೇನೆ ಸಹಿತ-ದಳದೊಂದಿಗೆ, ನಡೆದುದು-ವಿಂಧ್ಯಪರ್ವತದ ಮಾರ್ಗದಲ್ಲಿ ನಡೆಯಲಾರಂಭಿಸಿತು.

ಅ‖ ವಿ‖ ವನ-ನೀರಿನಲ್ಲಿ, ಜ-ಹುಟ್ಟಿದ್ದು, (ಕಮಲ-ಕ್ಯ. ವೃ.) ಬೆನ್ನನ್ನು ಬಿಡದೆ (ಕ್ರಿ. ಸ.) ‖೯‖

ಟೀ‖ ಮಂದಿ-ಸೇನಾಜನವು, ಸಂದಣಿಸಿ- ಸಾಂದ್ರವಾಗಿ, ಬೆಂಗೊಂಡು - ಕುದುರೆಯನ್ನು ಹಿಂಬಾಲಿಸಿ, ನಡೆತರೆ-ಐತರಲು, ಕುದುರೆ-ಹಯವು, ಮುಂದೆ-ಎದುರಿನಲ್ಲಿ, ಬರೆಬರೆ-ಬರುತ್ತಿರಲಾಗಿ, ಒಂದುಯೋಜನದ ಅಗಲದಿಂದ-ಒಂದುಗಾವುದದಷ್ಟು ವೈಶಾಲ್ಯದಿಂದ ಕೂಡಿದ, ಶಿಲೆಯನು-ಬಂಡೆಯನ್ನು ಕಂಡುದು-ಈಕ್ಷಿಸಿತು, ಅದರೋಳ್-ಆ ಬಂಡೆಯಮೇಲೆ, ಪೊರಳ್ದಪೆನು-ಹೊರಳಾಡುವೆನು, ಎಂಬ-ಎನ್ನತಕ್ಕ, ತವಕದಿಂದ-ಆಶೆಯಿಂದ, ಅತಿಭರದೊಳು - ಬಹುವೇಗನೆ, ಅಡರ್ದು-ಏರಿ, ಆಕಲ್ಲಮೇಲೆ-ಆ ಶಿಲೆಯಮೇಲೆ, ಹರಿ-ಕುದುರೆಯು, ಕಾಲಿಟ್ಟುದು-ಕಾಲೂರಿತು, ಅಂದು-ಆಗ, ಹರಿ-ಅಶ್ವವು, ಮೆಟ್ಟಿದ-ತುಳಿದಂಥ, ಅರೆ-ಶಿಲೆಯು, ಹರಿ-ಶ್ರೀರಾಮನು, ಮೆಟ್ಟಿದ-ತುಳಿದ, ಅರೆ-ಕಲ್ಲು, ಪೆಣ್ಣಾದುದಂತೆ-ಸ್ತ್ರೀರೂಪವಾಗಿ ಹೋದ ತೆರದಿಂದ, ಮೇಣ್-ಪುನಃ, ಇಂದು-ಈಗ, ಆಗದಿರ್ದಪುದೆ-ಆಗದೆಹೋಗುತ್ತದೆಯೇ? ಪೇಳು-ಅರುಹು, ಎಂಬಿನಿಂ-ಎನ್ನುವ ಬಗೆಯಿಂದ, ಮಹೀಪಾಲ-ಭೂರಮಣನಾದ ಜನಮೇಜಯನೆ! ಅದ್ಭುತವನು-ಆಶ್ಚರಿಯನ್ನು, ಕೇಳು-ಆಲಿಸು

ಅ‖ ವಿ‖ ಶ್ರೀರಾಮ ಮೂರ್ತಿಯು ಬಂಡೆಯನ್ನು ತುಳಿದಾಗ ಆಬಂಡೆಯು ಹೆಣ್ಣಾಗಿ ಹೋದ ಕಥೆ:—ಪೂರ್ವದಲ್ಲಿ ಗೌತಮನೆಂಬೊಬ್ಬ ಋಷಿ ಇದ್ದನು. ಆತನಿಗೆ ಅಹಲ್ಯಾ ಎಂಬ ಸತಿಯು ಇದ್ದಳು. ಆಕೆಯು ಮಹಾ ಪತಿವ್ರತೆಯು. ಒಂದಾನೊಂದು ದಿನ ಇಂದ್ರನು ಕೋಳಿಯ ವೇಷದಿಂದ ಗೌತಮರ ಆಶ್ರಮದ ಬಳಿಗೆ ಬಂದು ಅರ್ಧರಾತ್ರಿಯಲ್ಲಿ ಕೂಗಿಬಿಟ್ಟನಾಗಿ ಗೌತಮನು ಉಷಃಕಾಲವಾಯಿತೆಂದರಿತು ನದಿಗೆ ಸ್ನಾನಕ್ಕಾಗಿ ಹೊರಟನು. ಕೂಡಲೇ ಇಂದ್ರನು ಗೌತಮರವೇಷದಿಂದ ಆಶ್ರಮದ ಬಳಿಗೆ ಬಂದು ಕೂಗಲು ಗಂಡನೆಂದರಿತು ಕದವನ್ನು ತೆರೆಯಲು ಇಂದ್ರನು ಒಳಗೆ ಪ್ರವೇಶಿಸಿ ಅಹಲ್ಯೆಯೊಂದಿಗೆ ಸುಖ ಸಂಭಾಷಣೆಯಲ್ಲಿದ್ದನು. ಅತ್ತ ಗೌತಮನು ನದಿಗೆ ಹೋಗಿ ಎಷ್ಟು ಹೊತ್ತಾದರೂ ಬೆಳಗಾಗದಿರಲು ಪುನಃ ಆಶ್ರಮಕ್ಕೆಬಂದು ಕೂಗಿದನು, ಅಹಲ್ಯೆಯು ಭ್ರಾಂತಳಾಗಿ ಭಯದಿಂದ ನಡುಗುತ್ತ ಬಾಗಿಲನ್ನು ತೆರದಳು. ನಡದ ಸಂಗತಿಯನ್ನೆಲ್ಲಾ ದಿವ್ಯದೃಷ್ಟಿಯಿಂದರಿತು ಇಂದ್ರನಿಗೆ ನಿನ್ನ ಮೈಯಲ್ಲಾ ಸಹಸ್ರಾರು ಮಚ್ಚೆಗಳಾಗಲೆಂದೂ, ಅಹಲ್ಯೆಯನ್ನು ನೀನು ಬಂಡೆಯಾಗೆಂದೂ ಗೌತಮನು ಶಪಿಸಿದನು. ಕೂಡಲೆ ಇಂದ್ರನ ಮೈಯಲ್ಲೆಲ್ಲಾ ಸಹಸ್ರಾರು ಮಚ್ಚೆಗಳಾದವು. ಅಹಲ್ಯೆಯು ಬಂಡೆಯಾದಳು. ಗೌತಮರು ತಪಸ್ಸಿಗೆ ಹೊರಟು ಹೋದರು. ಶ್ರೀರಾಮನು ಬಂದು ಬಂಡೆಯನ್ನು ತುಳಿದರೆ ನಿಜರೂಪವು ಬರುವಂತೆ ಮುನಿ ಹೇಳಿದ್ದರಿಂದ ಪುನಃ ಸ್ವರೂಪವೇ ಬಂತು ‖ ೧೦ ‖

ರದೆಂದು ಅತಿ ಮನೋಹರವಾದ ದಾರಿಯಾಯಿತು. ಇಷ್ಟು ಅನುಕೂಲತೆಗಳು ಉಂಟಾದ್ದರಿಂದ ಎರಡನೆಯ ಸ್ವರ್ಗಲೋಕವೋ ಎಂಬಂತಿರುವ ವಿಂಧ್ಯಾದ್ರಿಯ ದಾರಿಯಲ್ಲಿ ಕುದುರೆಯು ಮುಂದೆ ಹೊರಡುತ್ತಾ ಅದರ ಹಿಂದುಗಡೆಯಲ್ಲಿ ಸೇನಾಸಮೇತರಾದ ಅರ್ಜುನಾದಿಗಳು ಬರುತ್ತಿರುವಾಗ ‖ ೯ ‖ ಒಂದು ಗಾವುದ ಅಗಲವಾಗಿರತಕ್ಕ ದೊಡ್ಡ ಬಂಡೆಯೊಂದು ಕಾಣಬಂದಿತು. ಆಗ ಯಜ್ಞಾಶ್ವವು ಇದನ್ನು ನೋಡಿ ಈ ಬಂಡೆಯಮೇಲೆ ಸ್ವೇಚ್ಛೆಯಾಗಿ ಹೊರಳಾದುತ್ತಾ ಸಂತೋಷದಿಂದ ಕಾಲಹರಣವಂ ಮಾಡಬೇಕೆಂದು ಬಗೆದು ಆ ಕಲ್ಲಿನಮೇಲೆ ತನ್ನ ಕಾಲ್ಗಳನ್ನು ಊರಲು, ಪೂರ್ವದಲ್ಲಿ ಶ್ರೀರಾಮಚಂದ್ರನು ಬಂಡೆಯಮೇಲೆ ಕಾಲಿಡಲು ಆ ಶಿಲೆಯು ಹೆಂಗಸಾಗಿ ಹೋದುದನ್ನು ಜ್ಞಾಪಿಸುವಂತೆ ಈಗ ಯಾಗದ ಕುದುರೆಯ ಕಾಲುಗಳು ಸಿಕ್ಕಿಕೊಂಡು ಆಚೆ ಈಚೆಗೆ ಕದಲದೆ ಹೋಗಿ ಸ್ತಬ್ಧವಾಗಿ ನಿಂತು ಬಿಟ್ಟಿತು ‖ ೧೦ ‖ ವಜ್ರವನ್ನು ಮರಕ್ಕೆ ಹಾಕಿದರೆ ಭದ್ರವಾಗಿ ನಿಲ್ಲು

ಗೆಟ್ಟುನಿಂದುದುದರಿದ್ರನಮನೋರಥದಂತೆನಿಜತನುವಿನ || ಲೀಲೆಯಡಗಿರ್ದುದಾಕೃತಿಯಭಂಜಿಕೆಯೆನ | ಲ್ಭೂಲೋಲಕೇಳೈಕ್ಯ ಮಾಗಿರ್ದುದಾಕಲ್ಲೊ | ಳಾಲಲಿತವಾಜಿಪೂರ್ಣೇಂದುಮಂಡಲದೊಳೊಪ್ಪುವಮೃಗಾಂಕದತೆರದೊಳು || ೧೧ || ಗಾಳಿಯಂ ಮಿಕ್ಕುನಡೆವಾಹಯಂಕಾಲ್ಗಳಂ | ಕೀಳಲಾರದೆನಿಂದುಧರೆಯೊಳೇನಚ್ಚರಿಯೊ | ಪೇಳಬೇಕೆಂದುಚರರೈತಂದುಪಾರ್ಥಂಗೆಬಿನ್ನೈಸಿ ಕೈಮುಗಿಯಲು || ಕೇಳಿವಿಸ್ಮಿತನಾಗಿಬಂದುನೋಡಿದನಲ್ಲಿ | ನಾಳನಟ್ಟಿದನಬ್ಬರಿಸಿಸೆಳೆಗಳಿಂದಪೊಯಿ | ದೇಳಿಸಿದೊಡದುವಜ್ರ ಲೇಪವಾದುದುಸಿಲುಕಿತಾಕುದುರೆಕಲ್ಲೆಡೆಯೊಳು || ೧೨ || ಬಳಿಕಚಿಂತಿಸಿದನರ್ಜುನನಿದೇನಾದೊಡಂ | ಮುಳಿದಮುನಿಪನ ಶಾಪಮಾಗಬೇಕೀವನ | ಸ್ಥಳದೊಳಾಶ್ರಮಮುಂಟೆನೋಳ್ಪುದಗಲದೊಳೆಂದುಚಾರರಂಕಳುಪಲವರು || ತೊಳಲಿನಿಮಿಷದೊ

---

ಟೀ|| ಆ ಶಿಲೆಯೊಳು-ಬಂದುಯೋಜನ ವಿಸ್ತಾರವಾದ ಆ ಬಂಡೆಯಲ್ಲಿ, ಕಾಲಿಡಲ್ಕೆ-ಕುದುರೆಯು ಹೆಜ್ಜೆಯನ್ನೂರಿದ ತಕ್ಷಣವೇ, ಆ ತುರಂಗದ ಖುರಂ-ಹಯದ ಗೊರಸು, ಕೀಲಿಸಿತು-ಅಲ್ಲಿಯೇ ಸಿಕ್ಕಿಕೊಂಡು ಬಿಟ್ಟಿತು, ಭಂಗಿಸದೆ-ಬಲವಂತದಿಂದ ಕಾಲ್ಗಳನ್ನು ಮೇಲಕ್ಕೆ ತೆಗೆಯಲು ಯತ್ನಿಸಿದಾಗ್ಯೂ ಆಗದೆ, ಕೂಡೆ-ಒಡನೆಯೇ, ಬೆಚ್ಚಂದದಿಂ-ಬೆಸಿಗೆ ಹಾಕಿದ ಬಗೆಯಿಂದ, ಮೇಲೆ-ಮುಂದಕ್ಕೆ, ನಡೆಗೆಟ್ಟು-ನಡಿಯಲಾರದೆ ಹೋಗಿ, ದರಿದ್ರನ-ಭಾಗ್ಯಹೀನನ, ಮನೋರಥದಂತೆ-ಇಷ್ಟಸಿದ್ಧಿಯ ಹಾಗೆ, ನಿಂದುದು- ಸ್ತಬ್ಧವಾಯಿತು, ನಿಜ- ಸ್ವಕೀಯಮಾದ, ತನುವಿನ- ದೇಹದ, ಲೀಲೆ- ಕ್ರೀಡಾದಿಗಳು, ಆಕೃತಿಯ-ಕೈಯಲ್ಲಿ ಬರೆದ, ಗೊಂಬೆವೊಲ್-ಬೊಂಬೆಯ ಹಾಗೆ, ಅಡಗಿ-ಕುಂದಿಹೋಗಿ, ಇರ್ದುದು-ಇತ್ತು, ಭೂಲೋಲ-ಭೂರಮಣನಾದ ಜನಮೇ ಜಯನೆ! ಕೇಳು-ಲಾಲಿಸು, ಲಲಿತವಾಜಿ- ಕೋಮಲಗಾತ್ರದಿಂದೊಪ್ಪುವ ಆ ಕುದುರೆಯು, ಆ ಕಲ್ಲೊಳು-ಆ ದೊಡ್ಡ ಬಂಡೆ ಯಲ್ಲಿ, ಪೂರ್ಣೇಂದು ಮಂಡಲದೊಳು – ಪೂರ್ಣಚಂದ್ರನ ಬಿಂಬದಲ್ಲಿ, ಒಪ್ಪುವ ಕಾಣುತ್ತಲಿರತಕ್ಕ, ಮೃಗಾಂಕದ-ಮೃಗದ ಗುರುತಿನ, ತೆರದೊಳು-ಬಗೆಯಿಂದ, ಐಕ್ಯವಾಗಿ-ಬಂದುಗೂಡಿ, ಇರ್ದುದು-ಇದ್ದಂಥಾದ್ದಾಯಿತು.

ಅ|| ವಿ|| ತುರಂಗ=ತುರ-ಜಾಗ್ರತೆಯಿಂದ, ಗ-ಗಮಿಸುವುದು, (ಕೃ. ವೃ.) ಮೃಗಾಂಕ-ಮೃಗದ ಅಂಕ (ಷ.ತ)||೧೧||

ಟೀ|| ಗಾಳಿಯಂ ಮಿಕ್ಕು-ವಾಯುವೇಗವನ್ನೂ ಮೀರಿಸಿ, ನಡೆವ-ಹೊರಡತಕ್ಕ, ಆ ಹಯಂ-ಆ ತುರಗವು, ಕಾಲ್ಗಳಂ- ಅಡಿಗಳನ್ನು, ಕೀಳಲಾರದೆ-ಮೇಲಕ್ಕೆತ್ತಲಾರದೆ, ನಿಂದುದು-ನಿಂತುಬಿಟ್ಟು ಇರತಕ್ಕದ್ದಾಯಿತು, ಧರೆಯೊಳು-ಇಳೆಯಲ್ಲಿ, ಏನಚ್ಚ ರಿಯೊ-ಎಂಥಾ ಆಶ್ಚರ್ಯವೊ, ಪೇಳಬೇಕು-ಉಸಿರುವುದು, ಎಂದು-ಎಂಬದಾಗಿ, ಚರರು-ಸೇವಕ ಜನರು, ಐತಂದು-ಸಮೀಪ ವನ್ನು ಸೇರಿ, ಪಾರ್ಥಂಗೆ-ಕಿರೀಟಿಗೆ, ಬಿನ್ನೈಸಿ-ವಿಜ್ಞಾಪನೆಯಂಮಾಡಿಕೊಂಡು, ಕೈಮುಗಿಯಲು-ನಮಸ್ಕಾರವಂ ಮಾಡಲು, ಕೇಳಿ-ಅವರ ನುಡಿಗಳನ್ನಾಲಿಸಿ, ವಿಸ್ಮಿತನಾಗಿ-ಆಶ್ಚರ್ಯದಿಂದ ಕೂಡಿ, ಬಂದು-ಕುದುರೆಯಿದ್ದೆಡೆಯನ್ನು ಸೇರಿ, ನೋಡಿದನು- ಅದರ ತೆರನೆಲ್ಲವನ್ನು ಈಕ್ಷಿಸಿದನು. ಅಲ್ಲಿನ-ಅಲ್ಲಿ ನೆರೆದಿದ್ದ, ಆಳ-ಸೇವಕರನ್ನೆಲ್ಲಾ, ಅಟ್ಟಿದನು-ಕುದುರೆಯು ಏಳುವ ಹಾಗೆ ಮಾಡಿರೆಂದು ಕಳುಹಿದನು, ಆ ದೂತರು ಅಬ್ಬರಿಸಿ-ಹೆದರಿಕೊಳ್ಳುವಂತೆಕೂಗಿ, ಸೆಳೆಗಳಿಂದ-ಎಳೆಯುವಿಕೆಯಿಂದ, (ಉಳಿಗಳಿಂದ) ಪೊಯಿದು-ಹೊಡೆದೂ ಕೂಡ, ಏಳಿಸಿದೊಡೆ-ಎಬ್ಬಿಸಿದರೆ, ಅದು-ಆ ಅಶ್ವವು, ವಜ್ರಲೇಪವಾದುದ-ಮರಕ್ಕೆ ವಜ್ರವನ್ನು ಹಾಕಿ ಬಿಗಿಸಿದಂತೆ ಆಯಿತು, ಆ ತುರಗವು, ಕಲ್ಲೆಡೆಯೊಳು-ಬಂಡೆಯಲ್ಲಿ, ಸಿಲುಕಿತು-ಸಿಕ್ಕಿ ಹೋಯಿತು.

ಅ|| ವಿ|| ಅಚ್ಚರಿ (ತ್ಭ)-ಆಶ್ಚರ್ಯ (ತ್ಸ) ||೧೨||

ಟೀ|| ಬಳಿಕ-ಅನಂತರದಲ್ಲಿ, ಅರ್ಜುನನು-ಪಾರ್ಥನು, ಚಿಂತಿಸಿದನು-ಮುಂದೆ ಹೇಳುವಂತೆ ಆಲೋಚನೆಯಂ ಮಾಡಿ ದನು, ಇದು-ಈ ಕುದುರೆಯು, ಹೀಗೆ ಬಂಡೆಯಲ್ಲಿ ಸಿಕ್ಕಿಬಿದ್ದಿರುವುದು, ಏನಾದೊಡಂ-ಪ್ರಾಯಶಃ, ಮುಳಿದ-ಕೋಪದಿಂದ ಕೂಡಿದ, ಮುನಿಪನಶಾಪಂ-ಋಷಿಯ ಶಾಪವು, ಆಗಬೇಕು-ಆಗಿದ್ದೀತು, ಈ ವನಸ್ಥಳದೊಳು-ಈ ಕಾಡಿನ ನಡುವೆ, ಆಶ್ರಮಂ-

---

ವಂತೆ ಬಂಡೆಯಲ್ಲಿ ಸಿಕ್ಕಿಕೊಂಡು ಬಡವನ ಮನೋರಥದಂತೆಯೂ, ಪೂರ್ಣ ಚಂದ್ರನಲ್ಲಿ ಸೇರಿರುವ ಮೃಗದ ಚಿಹ್ನೆಯ ಹಾಗೂ ವಾಯುವೇಗವನ್ನು ಮೀರಿಸುವಂತೆಯೂ ಇದ್ದ ಹಯವು ಈಗ ಸ್ತಂಭೀಭೂತವಾಗಿರುವುದನ್ನು ಚಾರರು ನೋಡಿ ||೧೧|| ಈ ಸುದ್ದಿಯನ್ನು ಸ್ವಾಮಿಯಾದ ಅರ್ಜುನನಿಗೆ ತಿಳಿಸಬೇಕೆಂದು ಬಂದು, ಕೈಗಳಂ ಜೋಡಿಸಿದವರಾಗಿ ಕುದುರೆಯು ಬಂಡೆ ಯಲ್ಲಿ ಸಿಕ್ಕಿ ಹೋಗಿರುವ ವಾರ್ತೆಯನ್ನು ಸವಿಸ್ತಾರವಾಗಿ ತಿಳಿಸಿದರು. ಚರರಿಂದ ತಿಳಿದು ಬಂದ ಕುದುರೆಯ ವಾರ್ತೆಯನ್ನು ಕೇಳಿ ಪರಮಾಶ್ಚರ್ಯದಿಂದ ಜಾಗ್ರತೆಯಾಗಿ ಬಂಡೆಯಬಳಿಗೆ ಬಂದು ನೋಡಿ, ಜನರಿಂದ ಅದನ್ನು ಎಳಸಿ, ಹೊಡೆದು ನೂಕಿ ಏನೇನು ಮಾಡಿದರೂ ವಜ್ರವನ್ನು ಹಾಕಿದಂತೆ ಅದರ ಕಾಲ್ಗಳು ಬಂಡೆಯಲ್ಲಿ ಸಿಕ್ಕಿಕೊಂಡಿದ್ದವೇ ಹೊರತು ಹೊರಕ್ಕೆ ಬರಲೇ ಇಲ್ಲವು ||೧೨|| ಅನಂತರ ಅರ್ಜುನನು ಯಜ್ಞಾಶ್ವದ ಈ ದುರವಸ್ಥೆಯನ್ನು ನೋಡಿ, ಮನಸ್ಸಿನಲ್ಲಿಯೇ ಬಹುವಾಗಿ ಚಿಂತಿಸಿ ಈ ರೀತಿಯಲ್ಲಿ ಆಗಲು ಪ್ರಾಯಶಃ ಯಾರೊ ಒಬ್ಬ ಮಹನೀಯನಾದ ಪರಮರ್ಷಿಯ ಶಾಪವೇ ಕಾರಣವಾಗಿರಬಹುದು. ಇಲ್ಲ

ಳರಸಿಬಂದುಬಿನ್ನೈಸಕ್ಕೆ | ಫಲುಗುಣಪ್ರದ್ಯುಮ್ನವೃಷಕೇತುನನುಸಾಲ್ವ | ಕಲಿಯೌವನಾಶ್ವನೀಲಧ್ವಜರನೈವರಂಕೂಡಿಕೊಂಡೈ ತಂದನು ||೧೩|| ವೆಗ್ಗಳಿಸಲಿನಚಂದ್ರಪವನಶಿಖಿಪರ್ಜನ್ಯ | ರೊಗ್ಗಿ ಹರುವೈರಮಿಲ್ಲದೆನಿಖಿಳಮೃಗಪಕ್ಷಿ | ಮೊಗ್ಗಲರ್ಕಾಯ್ಪಣ್ಪಳಿರ್ಗಳಂಬೀಯವೆಂದೆಂದುಮೆಲ್ಲಾತರುಗಳು || ಸಗ್ಗದವರಂತೆಬೇಡಿದನೀವುದಾವಗಂ | ಸುಗ್ಗಿಯಾಗಿಹವಾರುಋತುಗಳುಂ ಸಲೆಪೆಚ್ಚು | ತಗ್ಗುಶೀತೋಷ್ಣಸುಖದುಃಖಂಗಳೊಗೆಯದಾಶ್ರಮವೊಂದುಮುಂದೆಸೆದುದು ||೧೪|| ವೇದಶಾಸ್ತ್ರಾಗಮಸ್ಮೃತಿ ಪುರಾಣಾವಳಿಯ | ನೋದಿಸುವಕುಶಸಮಿತ್ಪುಷ್ಪಫಲಮೂಲಪ | ರ್ಣಾದಿಗಳನೊದವಿಸುವಜಪತಪಸ್ನಾನಾಗ್ನಿಹೋತ್ರವಿಧಿ ವೇಳೆಗಳನು || ಸಾಧಿಸುವರವಿನಮಸ್ಕಾರಹರಿಹರಸಮಾ | ರಾಧನೆಗಳಂಮಾಡುವತಿಥಿಗಳನರ್ಥಿಯಿಂದಾದರಿಪಯೋಗಮಾರ್ಗ

---

ಮುನಿಗಳ ಪರ್ಣಶಾಲೆಯು, ಉಂಟೆ_ಇದೆಯೇ? ಅಗಲದೊಳು-ಎಲ್ಲಾ ಕಡೆಯೂ, ನೋಳ್ಪುದು ನೋಡಿಕೊಂಡು ಬನ್ನಿರಿ, ಎಂದು-ಎಂಬದಾಗಿ, ಚಾರರಂ_ದೂತರನ್ನು, ಕಳುಪಲು_ಅಟ್ಟಲಾಗಿ, ಅವರು_ಆ ದೂತರಾದರೊ, ತೊಳಲಿ_ಎಲ್ಲೆಲ್ಲಿಯೂ ತಿರುಗಿ, ನಿಮಿಷದೊಳು_ಸ್ವಲ್ಪ ಹೊತ್ತಿನಲ್ಲಿ, ಅರಸಿ ಬಂದು-ಆಶ್ರಮವಿರುವ ಸ್ಥಳವನ್ನು ಗೊತ್ತುಮಾಡಿಕೊಂಡು ಬಂದು, ಬಿನ್ನೈಸಲ್ಕೆ-ತಿಳಿಸಲಾಗಿ, ಫಲುಗುಣ-ಪಾರ್ಥನು, ಪ್ರದ್ಯುಮ್ನ, ವೃಷಕೇತು, ಅನುಸಾಲ್ವ, ಕಲಿ-ಶೂರನಾದ, ಯೌವನಾಶ್ವ-ಯೌವನಾಶ್ವನೆಂಬರಸು, ನೀಲಧ್ವಜರನು-ನೀಲಧ್ವಜನೇ ಮೊದಲಾದ ಐದು ಮಂದಿಯನ್ನು, ಕೂಡಿಕೊಂಡು_ಜೊತೆಮಾಡಿಕೊಂಡು, ಐತಂದನು_ಬಂದವನಾದನು. ||೧೩||

ಟೀ|| ಇನ_ರವಿಯು, ಚಂದ್ರ_ಇಂದುವು, ಪವನ_ಗಾಳಿಯು, ಶಿಖಿ-ಅಗ್ನಿಯು, ಪರ್ಜನ್ಯ-ಮಳೆಯು ಮತ್ತು ಋತುಭೇದಗಳೂ, ವೆಗ್ಗಳಿಸಲು_ಮೀರಿ ನಡೆಯಲು, ವೈರಮಿಲ್ಲದೆ-ದ್ವೇಷವನ್ನು ಬಿಟ್ಟು, ನಿಖಿಳ_ಸಕಲವಾದ, ಮೃಗ_ಸಿಂಹಾದಿಗಳೂ, ಪಕ್ಷಿ-ಪಕ್ಷಿಗಳ ಸಮೂಹವೂ, ಮೊಗ್ಗು-ಮೊಗ್ಗುಗಳು, ಅಲರ್-ಕುಸುಮಂಗಳು, ಕಾಯಿ-ಪಕ್ವವಾಗದವು, ಪಣ್ಣು-ಹಣ್ಣುಗಳು, ತಳಿರ್ಗಳಂ_ಪಲ್ಲವಂಗಳನ್ನು, ಎಂದೆಂದೂ_ಅನವರತವೂ, ಎಲ್ಲಾ ತರುಗಳು_ಮರಗಳೆಲ್ಲವೂ, ಬೀಯವು-ಬಿಡದೆ ಇರುವುದಿಲ್ಲ, ಸಗ್ಗದವರಂತೆ - ಸ್ವರ್ಗಲೋಕದಲ್ಲಿರುವವರ ಹಾಗೆ, ಬೇಡಿದನು_ಯಾಚಿಸಿದ್ದನ್ನು, ಆವಗಂ_ಯಾವಾಗಲೂ, ಈವುದು_ಕೊಡತಕ್ಕದ್ದು, ಸುಗ್ಗಿಯಾಗಿಹವು-ಹಣ್ಣುಗಳಿಂದ ಕೂಡಿರುವುದು, ಆರು ಋತುಗಳಂ-ಷಡೃತುಗಳನ್ನು, ಸಲೆ-ಚೆನ್ನಾಗಿ, ಪೆಚ್ಚುತ-ಹೆಚ್ಚುತ್ತ, ತಗ್ಗು-ಕಡಮೆಯಾಗುವುದು, ಶೀತೋಷ್ಣ ಸುಖ ದುಃಖಗಳು-ತಂಪು, ಶಕೆ, ಸೌಖ್ಯ, ವ್ಯಸನ ಮೊದಲಾದವುಗಳು, ಬಗೆಯದ_ಸೇರದಿರುವ, ಒಂದು_ಒಂದಾನೊಂದು, ಆಶ್ರಮ_ತಪೋವನವು, ಮುಂದೆ_ಎದುರಿನಲ್ಲಿ, ಕಾಣಿಸಿತು-ಗೋಚರವಾಯಿತು.

ಅ|| ವಿ|| ಸಗ್ಗ (ತ್ಭ)-ಸ್ವರ್ಗ (ತ್ಸ) ಆರು ಋತುಗಳು ವಸಂತ, ಗ್ರೀಷ್ಮ, ವರ್ಷಋತು, ಶರದೃತು, ಹೇಮಂತಋತು, ಶಿಶಿರಋತುಗಳೆಂಬವು ||೧೪||

ಟೀ|| ವೇದ_ಋಗ್ವೇದವೇ ಮೊದಲಾದ ನಾಲ್ಕು ವೇದಗಳು, ಶಾಸ್ತ್ರ-ಮೀಮಾಂಸವೇ ಆದಿಯಾದ ಶಾಸ್ತ್ರಗಳು, ಆಗಮ_ಶೈವ ವೈಷ್ಣವ ಮೊದಲಾದ ಆಗಮಗಳು, ಪುರಾಣ_ಸ್ಕಾಂದವೇ ಮೊದಲಾದ ಹದಿನೆಂಟು ಪುರಾಣಗಳು, ಇವುಗಳ, ಆವಳಿಯನು_ಸಮುದಾಯವನ್ನು, ಓದಿಸುವ-ಅಭ್ಯಾಸ ಮಾಡಿಸತಕ್ಕ, ಕುಶ-ದರ್ಭೆಯು, ಸಮಿತ್_ಮುತ್ತುಗ ಮತ್ತು ಆರಳಿಯಮರಗಳ ಸಣ್ಣ ಸಣ್ಣ ಕಡ್ಡಿಗಳು, ಪುಷ್ಪ-ಹೂ, ಫಲ_ಹಣ್ಣು, ಮೂಲ_ಬೇರುಗಳು ಎಂದರೆ ಗಡ್ಡೆ ಗೆಣಸುಗಳು, ಪರ್ಣ_ಎಲೆಗಳು,

---

ವಾದರೆ ನಾವು ಇಷು. ಸಾಹಸಮಾಡಿದರೂ ಕುದುರೆಯು ಮುಂದೆ ಹೊರಡದಿರುವುದೇ ಎಂದು ಯೋಚಿಸಿ, ತನ್ನ ದೂತರನ್ನು ಕುರಿತು, ಇಲ್ಲಿ ಎಲ್ಲಿಯಾದರೂ ಋಷ್ಯಾಶ್ರಮವುಂಟೋ ಇಲ್ಲವೋ ಜಾಗ್ರತೆಯಲ್ಲಿ ನೋಡಿಕೊಂಡು ಬನ್ನಿರೆಂದು ಹೇಳಿಕಳುಹಿಸಿದನು. ಆ ಚರರಾದರೊ ಕ್ಷಣಮಾತ್ರದಲ್ಲಿ ವಿಂಧ್ಯಾಟವಿಯನ್ನೆಲ್ಲಾ ಸುತ್ತಿ ಸುತ್ತಿ ಆಶ್ರಮವಿರುವುದನ್ನು ನೋಡಿ, ಜಾಗ್ರತೆಯಾಗಿ ಪಾರ್ಥನಿದ್ದೆಡೆಗೆ ಬಂದು ಒಂದಾನೊಂದು ಪುಣ್ಯಾಶ್ರಮವುಂಟೆಂದು ವಿಜ್ಞಾಪಿಸಿಕೊಂಡರು. ಅರ್ಜುನನು ಪ್ರದ್ಯುಮ್ನ, ವೃಷಕೇತು, ಅನುಸಾಲ್ವ, ಯೌವನಾಶ್ವ, ನೀಲಧ್ವಜರಿಂದೊಡಗೂಡಿ, ಜಾಗ್ರತೆಯಾಗಿ ಹೊರಟು ಬರಲಾಗಿ ||೧೩|| ಮುಂದುಗಡೆಯಲ್ಲಿ ಸೂರ್ಯ, ಚಂದ್ರ, ಅಗ್ನಿ, ಮಳೆ ಇವರುಗಳಲ್ಲಿ ಒಬ್ಬರು ಮತ್ತೊಬ್ಬರನ್ನು ನೋಡಿ ಅಸೂಯೆಪಡದೆಯೂ ಇವರೆಲ್ಲರ ಸಹಾಯದಿಂದಲೂ ಅನೇಕ ಮೃಗಗಳು, ಪಕ್ಷಿಗಳು, ಹೂಗಳು, ಮೊಗ್ಗುಗಳು, ಕಾಯಿ ಹಣ್ಣು ಮೊದಲಾದವುಗಳಿಂದ ತುಂಬಿ ಕಾಮಿತಾರ್ಥಗಳನ್ನೀಯುತ್ತಲಿರುವ ಶೀತೋಷ್ಣ ಸುಖ ದುಃಖ ಮೊದಲಾದ ಯಾವುದಕ್ಕೂ ಸಿಕ್ಕದಿರುವ ಪುಣ್ಯಾಶ್ರಮವೊಂದು ಕಂಗೊಳಿಸುತ್ತಲಿರುವುದನ್ನು ನೋಡಿದವರಾಗಿ || ೧೪ || ಆ ಪುಣ್ಯಾಶ್ರಮದ ಬಳಿಗೆ ಬರಲಾಗಿ ಅಲ್ಲಿ ಚತುರ್ವೇದಗಳನ್ನೂ, ಮೀಮಾಂಸಾದಿ ಶಾಸ್ತ್ರಂಗಳನ್ನೂ, ಪರಾಶರ ಮೊದಲಾದ ಮಹನೀಯರ ಸ್ಮೃತಿಗಳನ್ನೂ, ಅಷ್ಟಾದಶ ಪುರಾಣಗಳನ್ನೂ ಹೇಳಿಕೊ

ದೊಳೆಸೆವಮುನಿಗಳಾಶ್ರಮದೆಡೆಯೊಳಿರುತಿರ್ದರು ‖ ೧೫ ‖ ಸುಡದಿರ್ದಪಾವಕನೊಬಿಸಲ್ಮಾಣ್ದರವಿಯೊತಂ । ಪಿಡಿದಿರದ ಚಂದ್ರಮನೊವಿಷಕಂಠನಾಗದಿಹ ‖ ಮೃಡನೊರಜಮಂಪೊದ್ದದಂಬುಜಾಸನನೊಫಣಿತಲ್ಪನಲ್ಲದವಿಷ್ಣುವೊ । ಕಡುತೇಜದೊಬ್ಬುಳಿಯೊಶಾಂತಿಯನಿಜಾಕಾರ ‖ ದೊಡಲೊಪೇಳೆಂಬಸೌಭರಿಮುನಿಪನಾಶ್ರಮದ । ನಡುವೆಕುಳ್ಳಿರ್ದುಸುಖಯೋಗದೊಳಿರಲ್ಕೆನಡೆತಂದರ್ಜುನಂಕಂಡನು ‖ ೧೬ ‖ ಬಂದುಸಾಷ್ಟಾಂಗದಿಂದೆರಗಿಸೌಭರಿಮುನಿಯ । ಮುಂದೆಕೈಮುಗಿದುನಿಲಲಾಪಾರ್ಥನಂ

---

ಆದಿಗಳನು-ಇನೇ ಮೊದಲಾದವನ್ನು, ಒದವಿಸುವ-ಒದಗಿಸಿ ಕೊಡತಕ್ಕ, ಜಪ – ಹೇಳಿದ ಮಂತ್ರವನ್ನೇ ಅನೇಕಬಾರಿ ಹೇಳುವುದು, ತಪ-ಅನೇಕ ಮಂತ್ರಗಳಿಂದ ದೇವರನ್ನರ್ಚಿಸುವುದು, ಸ್ನಾನ-ಅನೇಕ ತೀರ್ಥಗಳಲ್ಲಿ ಸ್ನಾನಮಾಡುವುದು, ಅಗ್ನಿಹೋತ್ರ-ಅಗ್ನಿಯಲ್ಲಿ ಹೋಮ ಮಾಡುವುದು, ವಿಧಿ – ಸಂಧ್ಯಾವಂದನೆ, ಮಾಧ್ಯಾಹ್ನಿಕ ಮೊದಲಾದ ನಿತ್ಯಕರ್ಮಗಳ, ವೇಳೆಗಳನು-ಸಮಯಗಳನ್ನು, ಸಾಧಿಸುವ-ಸಾಧನೆಯಂ ಮಾಡತಕ್ಕ, ರವಿನಮಸ್ಕಾರ – ಸೂರ್ಯೋಪಾಸನೆ, ಹರಿ-ವಿಷ್ಣುವಿನ ಸಂಬಂಧವಾದ ಮತ್ತು ಹರ – ಈಶ್ವರನಿಗೆ ಪ್ರೀತಿಯಾಗಬೇಕಾದ, ಸಮಾರಾಧನೆಗಳನು – ಪೂಜೆ ಮೊದಲಾದವನ್ನು, ಮಾಡುವ – ಎಸಗುವ, ಅತಿಥಿಗಳನು – ಭೋಜನಕ್ಕಾಗಿ ಬಂದವರನ್ನು, ಅರ್ಥಿಯಿಂದ-ಬಹು ಪ್ರೀತಿಯಿಂದ, ಆದರಿಪ – ಉಪಚಾರಮಾಡುವ, ಯೋಗಮಾರ್ಗದೊಳು – ಭಕ್ತಿಪುರಸ್ಸರವಾದ ಜ್ಞಾನಮಾರ್ಗದಿಂದ, ಎಸೆವ – ಕಾಂತಿಯುಕ್ತರಾಗಿರತಕ್ಕ, ಮುನಿಗಳು-ತಾಪಸೋತ್ತಮರು, ಆಶ್ರಮದ-ತಪೋವನದ, ಎಡೆಯೊಳು-ಹತ್ತಿರದಲ್ಲಿ, ಇರುತ್ತಿರ್ದರು-ಇರುತ್ತಾ ಇದ್ದರು ‖೧೫‖

ಟೀ‖ ಸುಡದೆ-ದಹಿಸಿಬಿಡದೆ, ಇರ್ದ-ಇರತಕ್ಕ, ಪಾವಕನೊ – ಯಜ್ಞೇಶ್ವರನೊ, ಬಿಸಿಲು-ಸೂರ್ಯಕಿರಣವು, ಮಾಣ್ದ-ಕಾಯದ, ರವಿಯೊ-ಸೂರ್ಯನೊ, ತಂಪು-ಶೈತ್ಯವನ್ನು, ಇಡಿದಿರದ – ಹೊಂದದೆ ಇರುವ, ಚಂದ್ರಮನೊ – ಇಂದುವೊ, ವಿಷ-ನಂಜನ್ನು, ಕಂಠನು-ಕತ್ತಿನಲ್ಲಿ ಉಳ್ಳ ಈಶ್ವರನು, ಆಗದಿಹ-ಆಗದೆ ಇರತಕ್ಕ, ಮೃಡನೋ-ಹರನೊ, ರಜಮಂ – ತ್ರಿಗುಣಗಳಲ್ಲಿ ಎರಡನೆಯದಾಗಿರುವ ರಜೋಗುಣವನ್ನು, ಪೊದ್ದದ-ಹೊಂದದೆ ಇರುವ, ಅಂಬುಜಾಸನನೊ-ಕಮಲೋದ್ಭವನಾದ ಬ್ರಹ್ಮದೇವರೊ, ಫಣಿ – ಆದಿಶೇಷನನ್ನು, ತಲ್ಪನು – ಹಾಸಿಗೆಯಾಗಿವುಳ್ಳ ವಿಷ್ಣುವು, ಅಲ್ಲದ-ಅಲ್ಲದೆ ಇರುವ, ವಿಷ್ಣುವೊ – ನಾರಾಯಣ ಮೂರ್ತಿಯೊ, ಕಡು – ಹೆಚ್ಚಾದ, ತೇಜದ-ಪ್ರಕಾದ, ಬಬ್ಬುಳಿಯೊ – ಸಮುದಾಯವೊ, ಶಾಂತಿಯ – ಶಾಂತಿಗುಣದ, ನಿಜ – ಸ್ವಭಾವಸಿದ್ಧವಾದ, ಆಕಾರದ – ಸ್ವರೂಪದ, ಒಡಲೊ – ದೇಹವೊ, ಪೇಳು-ಹೇಳು, ಎಂಬ-ಎನ್ನತಕ್ಕ, ಸೌಭರಿಮುನಿಪನ-ಸೌಭರಿ ಎಂಬ ಋಷೀಶ್ವರನ, ಆಶ್ರಮದ – ತಪೋವನದ, ನಡುವೆ – ಮಧ್ಯಭಾಗದಲ್ಲಿ, ಕುಳ್ಳಿರ್ದು – ಕುಳಿತುಕೊಂಡವನಾಗಿ, ಸುಖಯೋಗದೊಳು – ದುಃಖರಹಿತವಾದ ಯೋಗಪೀಠದಲ್ಲಿ, ಇರಲ್ಕೆ-ಇರಲಾಗಿ, ಅರ್ಜುನಂ-ಪಾರ್ಥನು, ನಡೆತಂದು-ಅಲ್ಲಿಗೆ ಬಂದು, ಕಂಡನು-ಯೋಗನಿಷ್ಠನಾಗಿ ಕುಳಿತಿರುವ ಸೌಭರಿ ಮುನಿಯನ್ನು ನೋಡಿದನು.

ಅ‖ ವಿ‖ ವಿಷಕಂಠ – ವಿಷವು ಕಂಠದಲ್ಲಿ ಯಾರಿಗೊ ಅವನು (ಬ. ಸ,) ಅಂಬುಜಾಸನ – ಅಂಬು – ನೀರಿನಲ್ಲಿ, ಜ-ಹುಟ್ಟಿದ್ದು, (ಕಮಲ ಕೃ. ವೃ.) ಅಂಬುಜವು-ಆಸನವಾಗುಳ್ಳವನು ಯಾರೊ ಅವನು (ಬ್ರಹ್ಮನು ಬ. ಸ.) ‖೧೬‖

ಟೀ‖ ಅರ್ಜುನನು, ಬಂದು – ಸೌಭರಿ ಮುನಿಯ ಬಳಿಗೆ ಸೇರಿ, ಸಾಷ್ಟಾಂಗದಿಂದ-ಎದೆ, ತಲೆ, ಕಣ್ಣು, ಕೈ, ಕಾಲು

---

ಡುತ್ತ ಸಮಿತ್ತು, ಹೂ, ಹಣ್ಣು, ಕಂದಮೂಲಾದಿಗಳು ಇವನ್ನೆಲ್ಲಾ ಸಿದ್ಧಮಾಡಿ, ಜಪಮಾಡುವುದು, ತಪಸ್ಸು, ಸ್ನಾನ, ಸಂಧ್ಯಾವಂದನ, ಅಗ್ನಿಹೋತ್ರಾದಿ ನಿತ್ಯಕರ್ಮಗಳಂ ಕಾಲಕಾಲಕ್ಕೆ ಮಾಡುವುದರಲ್ಲಿ ನಿರತರಾಗಿ, ಸೂರ್ಯನಮುಸ್ಕಾರ, ಈಶ್ವರ, ವಿಷ್ಣು ಪೂಜೆಗಳು ಮೊದಲಾದುವನ್ನು ಭಕ್ತಿಪುರಸ್ಸರವಾಗಿ ಮಾಡುತ್ತ, ಅನ್ನೋದಕಗಳಿಗೆ ಬಂದವರನ್ನು ಪರಮ ವಿಶ್ವಾಸದಿಂದ, ಆದರಿಸುತ್ತ, ಯೋಗನಿಷ್ಠರಾಗಿರುವ ಮಹನೀಯರಾದ ಋಷಿಗಳು ಆಶ್ರಮದೆಡೆಯಲ್ಲಿ ತಿರುಗಾಡುತಲಿರುವುದನ್ನೂ ‖ ೧೫ ‖ ಆ ಪುಣ್ಯಾಶ್ರಮದ ನಡುವೆ ಸುಡದೆ ಇರುವ ಯಜ್ಞೇಶ್ವರನಂತೆಯೂ, ಬಿಸಿಲಿನ ತಾಪಮಂ ಬಿಟ್ಟ ಸೂರ್ಯನ ಹಾಗೂ, ತಣ್ಣಗಿಲ್ಲದ ಚಂದ್ರನ ತೆರನಾಗಿಯೂ, ವಿಷವನ್ನು ಕತ್ತಿನಲ್ಲಿ ಧರಿಸದ ಪರಮೇಶ್ವರನ ಹೋಲಿಕೆಯಿಂದಲೂ, ರಜೋಗುಣವಿಶಿಷ್ಟನಲ್ಲದ ಕಮಲಾಸನನ್ನು ಹೊಲುತ್ತಲೂ, ಶೇಷಶಾಯಿಯಲ್ಲದ ನಾರಾಯಣ ಮೂರ್ತಿಯ ಅಂದದಿಂದಲೂ, ತೇಜಃಪುಂಜವೋ ಎಂಬ ಭ್ರಾಂತಿಗೆ ಆಕರನಾಗಿಯೂ, ಶಾಂತಮೂರ್ತಿಯೊ ಎನ್ನುವ ವಿಧದಿಂದಲೂ ಮೆರೆವ ಸೌಭರಿಮುನಿಯು, ಸುಖಾಸೀನನಾಗಿ ಯೋಗನಿಷ್ಠನಾಗಿರುವದನ್ನು ನೋಡಿ, ಆ ಮುನೀಶ್ವರನ ಬಳಿಗೆ ಬಂದು ‖ ೧೬ ‖ ಸಾಷ್ಟಾಂಗದಂಡಪ್ರಣಾಮವಂ ಮಾಡಿ, ಕರಗಳಂ ಜೋಡಿಸಿಕೊಂಡು, ಸೌಭರಿಮುನೀಂದ್ರನೆದುರಿಗೆ ಸವಿನಯದಿಂದ ನಿಂತುಕೊಂಡನು. ಆಗ ಸೌಭರಿ ಎಂಬ ತಾಪಸೋತ್ತಮನು ತನ್ನೆದುರಿಗೆ ನಿಂತಿರುವ ಅರ್ಜುನನನ್ನು ನೋಡಿ ಅವನನ್ನು ಉಪಚರಿಸಿ ಅರ್ಘ್ಯಪಾದ್ಯಾದಿಗಳಿಂ ಮನ್ನಿಸಿ ಕ್ಷೇಮ ಸಮಾಚಾರಗಳನ್ನೆಲ್ಲಾ ಕೇಳಿದ ಬಳಿಕ ನೀವು ಇಲ್ಲಿಗೆ ಬಂದ ಕಾರಣವೇನೆಂದು ಪ್ರಶ್ನೆಮಾಡಿದನು. ಈ ರೀತಿಯಲ್ಲಿ ಕೇಳಿದ

ಪ್ರೀತಿ | ಯಿಂದಸತ್ಕರಿಸಿಕುಶಲಂಗಳಂಕೇಳ್ದಿಲ್ಲಿಗೇಕೆಬರವಾಯಿತೆನಲು || ಅಂದುಕುಲಗೋತ್ರರಂಕೊಂದಪಾಪಂಪೋಗ |
ಲೆಂದಶ್ವಮೇಧಮಂತೊಡಗಿಯೆನ್ನಂಧರ್ಮ | ನಂದನಂಕಳುಪಿದಂಹಯರಕ್ಷೆಗದರೊಡನೆಬರೆಸಿಲುಕಿತದುರುಶಿಲೆಯೊಳು ||೧೭|| ಎಲೆ
ಮುನೀಶ್ವರತವಾನುಗ್ರಹದೊಳಲ್ಲದೀ | ಶಿಲೆಯೊಳೊಂದಿದಹಯಂಬಿಡುವದಂಕಾಣೆನೀ | ನುಳುಹಬೇಕೆಂದೆರಗಲರ್ಜುನನಮೊಗ
ನೋಡಿನಗುತಸೌಭರಿನುಡಿದನು || ತಿಳುಪಿದಂಪಿಂತೆಭಾರತಯುದ್ಧಮಧ್ಯದೋ | ಳ್ನಳಿನನಾಭಂನಿನಗೆಮತ್ತೆಯುಮಹಂಕಾರ |
ಮಳಿದ-ದಿಲ್ಲಕಟಜಗದೋಳ್ಕೊಲ್ವರಾರ್ಕಾಯ್ವರಾರ್ಬಲ್ಲಡುಸುರೆಂದನು || ೧೮ || ಶ್ರೀಕೃಷ್ಣನಿರೆಮುಂದೆವಂಶಮಂಕೊಂದೆ
ನೆಂಬೀ| ಕೃತ್ಯದಿಂಪಾತಕಂಬಹುದೆನಿನ್ನೊಳ್ಸ|ದಾಕೃಪಾನಿಧಿಯಸಾನ್ನಿಧ್ಯಮಿರುತಿರುತಿರಲಾಗಿವಾಜಿಮೇಧಂಬೇಹುದೆ||ಅಕೃತಾಂತ

---

ಮೊದಲಾದ ಎಂಟು ಬಗೆಯಾದ ಅವಯವಗಳಿಂದ, ಎರಗಿ - ನಮಸ್ಕಾರಮಾಡಿ, ಸೌಭರಿಮುನಿಯಮುಂದೆ - ಸೌಭರಿಮುನಿಯ ಎದುರಿಗೆ, ಕೈಮುಗಿದು-ಕರಗಳಂ ಜಟ್ಟುಗೂಡಿಸಿಕೊಂಡು, ನಿಲ್ಲಲು-ನಿಂತುಕೊಳ್ಳಲಾಗಿ, ಆಗ ಸೌಭರಿಯು, ಆಪಾರ್ಥನಂ-ಆ ಕಿರೀಟಿಯನ್ನು, ಪ್ರೀತಿಯಿಂದ-ಪ್ರೇಮಾತಿಶಯದಿಂದ, ಸತ್ಕರಿಸಿ - ಮರ್ಯಾದೆಮಾಡಿ, ಕುಶಲಂಗಳಂ - ಕ್ಷೇಮಸಮಾಚಾರಗಳನ್ನೆಲ್ಲಾ, ಕೇಳ್ದು-ಕೇಳಿ, ಇಲ್ಲಿಗೆ-ಈ ಸ್ಥಾನಕ್ಕೆ, ಏಕೆ-ಯಾವ ಉದ್ದೇಶವಾಗಿ, ಬರವು-ಬಂದದ್ದು, ಆಯಿತು-ಆಗಿದೆ? ಎನಲ್-ಹೀಗೆಂದು ಕೇಳಲಾಗಿ, ಅರ್ಜುನನು, ಅಂದು-ಆ ಕಾಲದಲ್ಲಿ, ಕುಲಗೋತ್ರರುಮಂ-ನಮ್ಮ ವಂಶೀಯರಾಗಿಯೂ ದಾಯಾದರಾಗಿಯೂ ಇರುವ, ದುರ್ಯೋಧನಾದಿಗಳನ್ನು, ಕೊಂದ-ಸಂಹಾರಮಾಡಿದ, ಪಾಪವು - ದುರಿತವು, ಪೋಗಲಿ-ಕಳೆಯಲಿ, ಎಂದು-ಎಂಬದಾಗಿ, ಅಶ್ವಮೇಧಮಂ-ಅಶ್ವಮೇಧವೆಂಬ ಹೆಸರಿನ ಯಾಗವನ್ನು, ತೊಡಗಿ-ಪ್ರಾರಂಭಮಾಡಿ, ಧರ್ಮನಂದನನು-ಯುಧಿಷ್ಠಿರನು, ಎನ್ನಂ-ನನ್ನನ್ನು, ಹಯರಕ್ಷೆಗೆ-ಕುದುರೆಯ ಕಾವಲಿಗೆ, ಕಳುಪಿದಂ-ಕಳುಹಿಸಿಕೊಟ್ಟನು, ಅದರೊಡನೆ - ಆ ಯಜ್ಞಾಶ್ವದೊಂದಿಗೆ, ಬರೆ-ಬರಲು, ಅದು-ಆ ಹಯವು, ಉರುಶಿಲೆಯೊಳು-ದೊಡ್ಡ ಬಂಡೆಯಲ್ಲಿ, ಸಿಲುಕಿತು-ಸಿಕ್ಕಿಕೊಂಡುಬಿಟ್ಟಿತು ||೧೭||

ಟೀ|| ಎಲೆಮುನೀಶ್ವರ - ಎಲೈ ತಾಪಸವರ್ಯನಾದ ಸೌಭರಿಯೆ ! ಈಶಿಲೆಯೊಳು-ಈ ದೊಡ್ಡ ಬಂಡೆಯಲ್ಲಿ, ಒಂದಿದ-ಸಿಕ್ಕಿಬಿದ್ದ. ಹಯಂ-ಅಶ್ವವು, ತವ-ನಿನ್ನ, ಅನುಗ್ರಹದೊಳು-ಕರುಣೆಯಿಂದ, ಅಲ್ಲದೆ-ಹೊರತು, ಬಿಡುವುದಂ-ಬಿಡುಗಡೆಯನ್ನು ಪಡೆಯುವುದನ್ನು, ಕಾಣೆನು-ನೋಡಲಿಲ್ಲ, ಉಳುಹಬೇಕು-ನನ್ನನ್ನು ಕಾಪಾಡಬೇಕು, ಎಂದು-ಎಂಬುದಾಗಿ, ಎರಗಲು - ನಮಸ್ಕಾರಮಾಡಲು, ಸೌಭರಿ-ಸೌಭರಿಮುನಿಯು, ಅರ್ಜುನನ-ಪಾರ್ಥನ, ಮೊಗ-ಮುಖವನ್ನು, ನೋಡಿ-ಈಕ್ಷಿಸಿ, ನಗುತ - ಮುಗುಳ್ನಗೆಯನ್ನೈದುತ್ತ, ನುಡಿದನು - ಮುಂದೆ ಹೇಳುವಂತೆ ಹೇಳಿದನು. ಪಿಂತೆ-ಪೂರ್ವದಲ್ಲಿ, ನಳಿನನಾಭಂ - ಪದ್ಮನಾಭನಾದ ಕೃಷ್ಣಸ್ವಾಮಿಯು, ಭಾರತಯುದ್ಧ - ಭರತವಂಶಜರಲ್ಲಿ ಪರಸ್ಪರ ನಡೆದ ಕದನದ, ಮಧ್ಯದೋಳ್ - ಮಧ್ಯಭಾಗದಲ್ಲಿ, ನಿನಗೆ-ನಿನಗಾದರೊ, ತಿಳುಪಿದಂ-ಅರುಹಿದನು, ಮತ್ತೆಯುಂ-ತಿರುಗಿ, ಅಹಂಕಾರ-ಗರ್ವವು, ಅಳಿದುದಿಲ್ಲ-ಹೋಗಲಿಲ್ಲ, ಅಕಟ-ಅಚ್ಚರಿಯು, ಜಗದೊಳ್ - ಲೋಕದಲ್ಲಿ, ಕೊಲ್ವರು - ಪ್ರಾಣಗಳನ್ನು ಕಳೆಯುವರು, ಕಾಯ್ವರು - ಕಾಪಾಡತಕ್ಕವರು, ಆರು-ಯಾರಿರುವರು, ಬಲ್ಲಡೆ-ತಿಳಿದಿದ್ದರೆ, ಉಸಿರು-ಹೇಳು, ಎಂದನು-ಹೀಗೆಂದು ನುಡಿದನು.

ಅ|| ವಿ|| ಮೊಗ (ತ್ಭ) ಮುಖ (ತ್ಸ) ನಳಿನನಾಭಂ-ನಳಿನವು ನಾಭಿಯಲ್ಲಿ ಯಾರಿಗೊ ಅವನು (ಬ. ಸ.) ||೧೮||

ಟೀ|| ಮುಂದೆ-ಎದುರಿನಲ್ಲಿ, ಶ್ರೀಕೃಷ್ಣನು- ಕೃಷ್ಣಮೂರ್ತಿಯು, ಇರೆ-ಇರುತ್ತಿರಲಾಗಿ, ವಂಶಮಂ - ಗೋತ್ರದವರನ್ನು, ಕೊಂದೆನೆಂಬ - ಹತಮಾಡಿದೆನೆಂಬ, ಈಕೃತ್ಯದಿಂ - ಈ ಕೆಲಸದಿಂದ, ಪಾತಕಂ - ದುರಿತವು, ಬಹುದೆ-ಬರುತ್ತದೆಯೇ?

---

ಸೌಭರಿಮುನಿಪುಂಗವನಂ ನೋಡಿ ಪಾರ್ಥನು, ಎಲೈ ತಪೋನಿಧಿಯೆ! ನಮ್ಮ ದಾಯಾದರಾದ ದುರ್ಯೋಧನಾದಿಗಳನ್ನು ಕೊಂದ ದೋಷಪರಿಹಾರಕ್ಕಾಗಿ ಅಶ್ವಮೇಧಯಾಗವೆಂಬ ಮಹಾಕ್ರತುವನ್ನೆಸಗಲುದ್ಯುಕ್ತನಾಗಿ ಯುಧಿಷ್ಠಿರನು ಕುದುರೆಯ ಬೆಂಗಾವಲ್ಗಾಗಿ ನನ್ನನ್ನು ಕಳುಹಿಸಿದನು. ನಾನು ಅದರ ಹಿಂದೆಯೇ ಬರುತ್ತಿರುವಾಗ ಈ ವಿಂಧ್ಯಾದ್ರಿಯಲ್ಲಿರುವ ದೊಡ್ಡ ಬಂಡೆಯೊಂದರಲ್ಲಿ ಆ ಉತ್ತಮಾಶ್ವದ ಕಾಲ್ಗಳು ಸಿಕ್ಕಿಕೊಂಡವು. ಏನು ಮಾಡಿದರೂ ಈಚೆಗೆ ಬಾರದು ||೧೭|| ಮಹಾತ್ಮನಾದ ನಿನ್ನ ಅನುಗ್ರಹದಿಂದ ಈ ನಮ್ಮ ಯಜ್ಞಾಶ್ವವು ಬಿಡುಗಡೆಯನ್ನೈದಬೇಕೇ ವಿನಾ ಮತ್ತೆ ಯಾವ ಉಪಾಯವನ್ನೂ ಕಾಣೆನು. ನಿನ್ನಿಂದಲೇ ನಾನು ಕೃತಾರ್ಥನಾಗಬೇಕೆಂದು ಸಾಷ್ಟಾಂಗಪ್ರಣಾಮವನ್ನರ್ಪಿಸುತ್ತಲಿರುವ ಅರ್ಜುನನನ್ನು ಸೌಭರಿಯು ನೋಡಿ, ಮುಗುಳ್ನಗೆಯಂ ತಾಳಿ, ಎಲೈ ಪಾರ್ಥನೆ ! ಪೂರ್ವದಲ್ಲಿ ಭಾರತಯುದ್ಧವು ನಡೆಯುತ್ತಿದ್ದ ವೇಳೆಯಲ್ಲಿ ನಿನಗೆ ಬುದ್ಧಿವಾದವನ್ನು ಉಪದೇಶಮಾಡಿದರೂ ನಿನ್ನ ಅಹಂಕಾರವು ಇನ್ನೂ ತಗ್ಗಲಿಲ್ಲವೆಂಬುದನ್ನು ಪುನಃ ಎಚ್ಚರಿಸಿ ಜ್ಞಾನೋದಯವನ್ನುಂಟುಮಾಡಬೇಕೆಂತಲೂ, ಪ್ರಪಂಚದಲ್ಲಿ ಕೊಲ್ಲುವನೂ, ಕಾಪಾಡತಕ್ಕವನೂ ಪಾವನಮೂರ್ತಿಯಾದ ನಾರಾಯಣನೆ ಎಂತಲೂ ತಿಳಿಸುವುದಕ್ಕಾಗಿ ಕೃಷ್ಣನು ಈ ಯುಕ್ತಿಯನ್ನು ಹುಡುಕಿದನು || ೧೮ || ಶ್ರೀ ಕೃಷ್ಣಮೂರ್ತಿಯೇ ನಿಮ್ಮ ಬಳಿಯಲ್ಲಿ ನೆಲಸಿರುವಾಗ

ಕನರಿದುದಿಲ್ಲಲಾಲೋಕಮೋ | ಳ್ಪ್ರಾಕೃತರತೆರದಿಂದಹರಿಮನೆಯೊಳಿರೆಗರ್ದ | ಭಾಕೃತಿಯಹರಿಯೊಡನೆಬಂದೆಸುರಭೂಜ ಮಿರೆಶಾಲ್ಮಲಿಯನರಸುವಂತೆ || ೧೯ || ಕೊಟ್ಟಗೆಯಕಾಮಧೇನುವನೊಲ್ಲದಾರ್ಥಿಯಿಂ | ಕಟ್ಟರಣ್ಯದಪುಲಿಯನರಸಿಕರೆಯ ಲ್ಕೊಡೆಯ | ಕಟ್ಟಳೆಯಲಾತುರಗಮೇಧಮೇಗೈವುದಾಹರಿಯಸಾನ್ನಿಧ್ಯಮಿರಲು || ಹುಟ್ಟತಿಲ್ಲವನಿನಗರಿವುಧರ್ಮಸೂನುಮತಿ | ಗೆಟ್ಟಹಶಿವಶಿವವೃಥಾಪರಿಭ್ರಮಣನಿಮ | ಗಟ್ಟತೆಂದಮರೇಂದ್ರಸೂನುವಂಜರಿದುಸೌಭರಿನುಡಿದೊಡಿಂತೆಂದನು || ೨೦ || ಹರಿಯನುಳಿದಾವುಬದುಕುವರಲ್ಲಚಿತ್ತದೋ | ಳ್ಭರಿತನಾಗಿಹನಾವಗಂಧರ್ಮಸೂನುಮರೆ | ದಿರನಾಮುರಾರಿಯನಿರೂಪದಿಂತೊಡ

---

ನಿನ್ನೋಳ್-ನಿನ್ನಲ್ಲಿ, ಸದಾ-ಅನವರತವೂ, ಕೃಪಾನಿಧಿಯ-ದಯೆಯಿಂದ ತುಂಬಿದ ಕೃಷ್ಣಸ್ವಾಮಿಯ, ಸಾನ್ನಿಧ್ಯಂ-ಜೊತೆಯು. ಇರುತಿರಲಾಗಿ-ಇರುವುದರ ಸಲುವಾಗಿ, ವಾಜಿಮೇಧಂ-ಅಶ್ವಮೇಧವು, ಬೇಹುದೆ- ಬೇಕೆ? ಆ ಕೃತಾಂತಕನ, - ಧರ್ಮತನ ಯನೂ, ಅರಿದುದಿಲ್ಲಲಾ-ಇದನ್ನು ಯೋಚಿಸದೆ ಹೋದನಲ್ಲ, ಲೋಕದಲ್ಲಿ-ಭೂಮಂಡಲದಲ್ಲಿ, ಪ್ರಾಕೃತರತೆರದಿಂದ-ಬುದ್ಧಿ ಶೂನ್ಯರ ಬಗೆಯಿಂದ, ಸುರಭುಜಂ - ಕಾಮಿತ ಫಲಗಳನ್ನೀಯುವ ಕಲ್ಪತರುವು, ಇರೆ-ಇದ್ದರೂ, ಶಾಲ್ಮಲಿಯನು-ನಿಷ್ಪ್ರ ಯೋಜನವಾದ ಬೂರಗದ ಮರವನ್ನು, ಅರಸುವಂತೆ-ಹುಡುಕುವತೆರನಾಗಿ, ಹರಿ-ಕೃಷ್ಣಸ್ವಾಮಿಯು, ಮನೆಯೋಳ್-ಮಂದಿ ರದಲ್ಲಿ, ಇರೆ-ಇರಲು, ಗರ್ದಭಾಕೃತಿಯ-ಕತ್ತೆಯನ್ನು ಹೋಲುವ ಆಕಾರವುಳ್ಳ, ಹರಿಯೊಡನೆ-ಹಯದೊಂದಿಗೆ, ಬಂದೆ- ಐತಂದೆ.

ಅ|| ವಿ|| ಕೃಪಾ-ಕರುಣೆಯನ್ನು, ನಿಧಿ-ನಿಕ್ಷೇಪವಾಗಿ ಪುಳ್ಳವನು ಯಾರೊ ಅವನು (ಜ. ಸ.) ಸುರಭೂಜ-ಭೂ- ಭೂಮಿಯಲ್ಲಿ, ಜ-ಹುಟ್ಟಿದ್ದು (ಕೃ ವೃ. ಮರವು) ಸುರರ ಭೂಜವು-(ಷ. ತ.) || ೧೯ ||

ಟೀ|| ಕೊಟ್ಟಗೆಯ-ದನಗಳ ದೊಡ್ಡಿಯಲ್ಲಿರತಕ್ಕ, ಕಾಮಧೇನುವನು-ದೇವಲೋಕದ ಆಕಳನ್ನು, ಒಲ್ಲದೆ-ಇಚ್ಛೆ ಪಡದೆ, ಕಟ್ಟರಣ್ಯದ-ಬಹು ಕ್ರೂರವಾದ ಕಾಡಿನ, ಪುಲಿಯನು-ಹುಲಿರಾಯನನ್ನು, ಅರಸಿಕರೆಯಲ್ಕೆ-ಹುಡುಕಿಕೊಂಡು ಬರುವು ದಕ್ಕೆ, ಅರ್ಥಿಯಿಂ-ಪ್ರೀತಿಯಿಂದ, ಒಡೆಯನ-ಸ್ವಾಮಿಯ, ಕಟ್ಟಲೆಯಲಾ-ಕಟ್ಟಳೆಯಲ್ಲವೆ? ಹರಿಯ-ಕೃಷ್ಣ ಪರಮಾತ್ಮನ, ಸಾನ್ನಿಧ್ಯಂ-ಸಮೀಪವು, ಇರಲ್-ಸಿಕ್ಕಿದಮೇಲೆ, ತುರಗಮೇಧಂ-ಅಶ್ವಮೇಧವು, ಏಗೈವುದು-ಏನು ಸಹಾಯತಾನೆ ಮಾಡಲಾ ದೀತು? ನಿನಿಗೆ-ನಿನಿಗಾದರೋ, ಅರಿವು-ತಿಳುವಳಿಕೆಯು, ಹುಟ್ಟುತಿಲ್ಲವೆ-ಉಂಟಾಗದೆ ಹೋಯಿತೆ? ಧರ್ಮಸೂನು-ಧರ್ಮಪು ತ್ರನು, ಮತಿಗೆಟ್ಟು-ಬುದ್ಧಿ ಶೂನ್ಯನಾಗಿ, ಇಹನೆ-ಇದ್ದಾನೆಯೆ? ಶಿವಶಿವ-ಹರಹರಾ, ನಿಮಿಗೆ-ನಿಮಿಗಾದರೋ, ಪರಿಭ್ರಮಣ- ತಿರುಗಾಡುವುದು, ವೃಥಾ-ನಿರರ್ಥಕವಾಗಿ, ಅಟ್ಟತು-ಆಯಿತು, ಎಂದು-ಎಂಬದಾಗಿ, ಅಮರೇಂದ್ರಸೂನುವಂ-ಪಾರ್ಥನನ್ನು, ಜರಿದು-ತಿರಸ್ಕಾರಮಾಡಿ, ಸೌಭರಿ-ಸೌಭರಿ ಎಂಬ ಋಷಿಯು, ನುಡಿದೊಡೆ-ಹೇಳಲಾಗಿ, ಅರ್ಜುನಂ-ಪಾರ್ಥನು, ಇಂತು-ಮುಂದೆ ಹೇಳುವಂತೆ, ಎಂದನು-ನುಡಿದನು || ೨೦ ||

ಟೀ|| ಆವು-ನಾವು, ಹರಿಯನು-ಕೃಷ್ಣಸ್ವಾಮಿಯನ್ನು, ಉಳಿದು - ಬಿಟ್ಟು, ಬದುಕುವರಲ್ಲ - ಜೀವದೊರಸೆ ಇರ ತಕ್ಕವರಲ್ಲ, ಚಿತ್ತದೊಳು-ಹೃದಯದಲ್ಲಿ, ಭರಿತನಾಗಿ-ತುಂಬಲ್ಪಟ್ಟವನಾಗಿ, ಇಹನು-ಇದ್ದಾನೆ, ಧರ್ಮಸೂನು-ಯುಧಿಷ್ಠಿರನು, ಮರೆದಿರನು-ಮರೆತಿಲ್ಲವು, ಆಮುರಾರಿಯ-ಆ ಕೃಷ್ಣಮೂರ್ತಿಯ, ನಿರೂಪದಿಂ - ಅನುಜ್ಞೆಯನ್ನು ಪಡೆದು, ಈಮಹಾಕ್ರತು ವನು-ಈ ದೊಡ್ಡಯಾಗವನ್ನು, ತೊಡಗಿ-ಪ್ರಾರಂಭಮಾಡಿ, ಮಾಡುವನು-ನೆರವೇರಿಸಬೇಕೆಂದಿರುವನು, ತರಳತೆಯ-ತಿಳುವಳಿಕೆ

---

ಗೋತ್ರ ಹತ್ಯಾದೋಷವು ಹೇಗೆ ಬರುವುದು? ಕೃಷ್ಣಮೂರ್ತಿಯು ನಿಮ್ಮ ಪ್ರೀತಿಗೆ ಪಾತ್ರನಾಗಿರುವಾಗ ಅಶ್ವಮೇಧಯಾ ಗದಿಂದ ನಿಮಿಗೆ ಆಗತಕ್ಕದ್ದೇನಿರುವುದು? ಇದನ್ನೆಲ್ಲಾ ಪರಮಮೂರ್ತಿಯಾದ ಕೃಷ್ಣನು ತಿಳಿಯದಿರುವನೆ? ಈಗ ನೀನು ಕೃಷ್ಣನನ್ನು ಬಿಟ್ಟು ಈ ಕುದುರೆಯೊಂದಿಗೆ ಬಂದಿರುವುದು ಕತ್ತೆಯ ಹಿಂದೆ ಬಂದಹಾಗೂ, ಕಲ್ಪವೃಕ್ಷವನ್ನು ಬಿಟ್ಟು ನಿಸ್ಸಾರವಾದ ಬೂರಗದ ಮರವನ್ನು ನಂಬಿದಂತೆಯೂ ಆಗಿರುವುದು. || ೧೯ || ನೀವು ಯೋಚಿಸಿರುವ ಕಾರ್ಯವಾದರೋ, ದನಗಳ ದೊಡ್ಡಿಯಲ್ಲಿರುವ ಕಾಮಧೇನುವನ್ನು ಬಿಟ್ಟು ಕಾಡು ಹುಲಿಯನ್ನು ಕರತಂದು ಹಾಲು ಕರೆಯಲೆಳಸಿದಂತಾದುದಲ್ಲಾ ಕೃಷ್ಣನ ಸಾನ್ನಿಧ್ಯವೇ ನಿಮಿಗೆ ಲಭಿಸುವಾಗ ಅಶ್ವಮೇಧ ಯಾಗದಿಂದ ನಿಮಿಗೆ ಆಗತಕ್ಕದ್ದೇನು? ನಿನಿಗೆ ಇದು ಗೊತ್ತೇ ಆಗದೆ ಹೋಯಿತೆ? ಧರ್ಮನಂದನನೂ ಕೂಡ ಈ ವಿಷಯದಲ್ಲಿ ಬುದ್ಧಿಯಿಲ್ಲದವನಾದನೆ? ಅಯ್ಯೋ ಈಶ್ವರಾ! ಅನ್ಯಾಯ ವಾಗಿ ನಿಮಿಗೆ ಈ ಅಲೆದಾಟವುಂಟಾಯಿತಲ್ಲಾ! ಎಂದು ಸೌಭರಿಯು ಅರ್ಜುನನ್ನು ಅಲಗಳೆಯಲಾಗಿ, ಪಾರ್ಥನು ತಪೋನಿ ಧಿಯಾದ ಸೌಭರಿಯುಂ ನೋಡಿ || ೨೦ || ಎಲೈ ತಾಪಸೋತ್ತಮನೆ, ಕೃಷ್ಣನ ದಯೆಯಿಲ್ಲದಿದ್ದರೆ ಅರಗಳಿಗೆಯೂ ನಾವು ಬದು ಕಿರಲಾರೆವು, ಯಾವಾಗಲೂ ನಮ್ಮ ಮನಸ್ಸಿನಲ್ಲಿಯೇ ಕೃಷ್ಣ ಮೂರ್ತಿಯು ನೆಲೆಗೊಂಡಿರುವನು. ಯುಧಿಷ್ಠಿರನು ಎಂದಿಗೂ

ಗಿಮಾಡುವನೀಮಹಾಕ್ರತುನನು || ತರಳತೆಯನುರನೆಗರಿವನುಪದೇಶಿಪಡೆಪೀ | ವ್ಗುರುಗಳಲ್ಲವೆನಾವುಧನ್ಯರಾದಪೆವಿನ್ನು | ಕರುಣದಿಂದೀಶಿಲೆಯೊಂದಿದತುರಂಗಮಂ ಬಿಡಿಸಿಕೊಡಬೇಕೆಂದನು || ೨೧ || ಇನ್ನುಚಿಂತಿಸದೆಕೃಷ್ಣಸ್ಮರಣೆಯುಂಮಾಡಿ | ನಿನ್ನಹಸ್ತಸ್ಪರ್ಶನಂಗೈದೊಡಾಕುದುರೆ | ಮುನ್ನಿನಂತವನಿಯೊಳ್ನಡೆದಪ್ಪುದುಪೋಗುನೀನೆಂದುಸೌಭರಿನುಡಿಯಲು || ತನ್ನೊಳಗೆ ತಾನೆವಿಸ್ಮಿತನಾಗಿಪಾರ್ಥನದ | ರುನ್ನತಿಯತುದಿವೊದಲನರುಪೆನಲ್ಜ್ಞಾನಸಂ | ಪನ್ನತಾಪಸನರ್ಜುನಂಗೆವಿಸ್ತರಿಸಿದಂಮತ್ತೆಪೂರ್ವಾಪರವನು ||೨೨|| ಆಲಿಸರ್ಜುನಮುನ್ನವಿಪ್ರನುಂಟೋರ್ವನು | ದ್ದಾಲಕಾಖ್ಯಂತಿಳಿದನಖಿಳಶಾಸ್ತ್ರಂಗಳಂ | ಮೇಲೆವೈವಾಹದೋಳ್ವಧುವಾದಳಾತಂಗೆಚಂಡಿಯೆಂಬಾಕೆಬಳಿಕ || ಕಾಲಕಾಲದಜಪಾನುಷ್ಠಾನಪೂಜೆಗಳಿ | ಗಾಲಸ್ಯಮಂಮಾಡದೆನ್ನಪರಿಚರ್ಯ

---

ಸಾಲದ ಹುಡುಗರು ಮಾಡುವ, ಮರವೆಗೆ-ಅಜ್ಞಾನ ಕೃತ್ಯಗಳಿಗೆ, ಅರಿವನು-ಸುಜ್ಞಾನವನ್ನು, ಉಪದೇಶಿಪೊಡೆ-ಬೋಧಿಸಲು, ನೀವು-ನೀವಾದರೊ, ಗುರುಗಳಲ್ಲವೆ-ಆಚಾರ್ಯರಲ್ಲವೆ? ನಾವು-ನಾವುಗಳು, ಧನ್ಯರು – ಕೃತಕೃತ್ಯರು, ಆದಪೆವು-ಆಗುತ್ತೇವೆ, ಇನ್ನು-ಮುಂದೆ, ಕರುಣದಿಂ-ಕೃಪಾಕಟಾಕ್ಷದಿಂದ, ಈ ಶಿಲೆಯೊಳು-ಈ ಬಂಡೆಯಲ್ಲಿ, ಬಂದಿದ-ಸಿಕ್ಕಿಬಿದ್ದಿರತಕ್ಕ, ತುರಂಗಮಂ-ಕುದುರೆಯನ್ನು, ಬಿಡಿಸಿಕೊಡಬೇಕು-ನಿರ್ಬಂಧದಿಂದ ತಪ್ಪಿಸಿ ಕಾಪಾಡಬೇಕು ಎಂಬದಾಗಿ, ಎಂದನು-ಕೇಳಿದನು ||

ಅ|| ವಿ|| ಮಹಾಕ್ರತು (ವಿ. ಪೂ.) ಗುರು-ಗು-ಅಜ್ಞಾನವೆಂಬ ಕತ್ತಲನ್ನು, ರು-ಹೋಗಲಾಡಿಸಿ ಸುಜ್ಞಾನವೆಂಬ ಬೆಳಕನ್ನುಂಟುಮಾಡತಕ್ಕವನು. ತರಳತೆ (ಭಾವನಾಮ), || ೨೧ ||

ಟೀ|| ಸೌಭರಿ-ಸೌಭರಿ ಎಂಬ ತಾಪಸ ಶ್ರೇಷ್ಠನು. ಅರ್ಜುನನನ್ನು, ಇನ್ನು- ಮುಂದೆ, ಚಿಂತಿಸದೆ-ಯೋಚನೆ ಮಾಡದೆ, ಕೃಷ್ಣಸ್ಮರಣೆಯಂಮಾಡಿ-ಶ್ರೀ ಕೃಷ್ಣ ಮೂರ್ತಿಯ ಧ್ಯಾನವನ್ನು ಮಾಡಿಕೊಂಡು, ನಿನ್ನ-ನಿನ್ನ ಸಂಬಂಧವಾದ, ಹಸ್ತ-ಕರದಿಂದ, ಸ್ಪರ್ಶನಂಗೈದೊಡೆ-ಮುಟ್ಟಿದ ಪಕ್ಷದಲ್ಲಿ, ಆ ಕುದುರೆ-ಯಾಗದ ಅಶ್ವವು, ಅವನಿಯೋಳ್-ಭೂಮಂಡಲದಲ್ಲಿ, ಮುನ್ನಿನಂತೆ-ಮೊದಲಿನ ಹಾಗೆಯೇ, ನಡದಪ್ಪುದು-ಸಂಚರಿಸಲಾರಂಭಿಸುವುದು. ನೀಂ-ನೀನು, ಪೋಗು-ಹೊರಡು, ಎಂದು-ಎಂಬದಾಗಿ, ನುಡಿಯಲು-ತಿಳಿಸಲು, ಪಾರ್ಥನು-ಕಿರೀಟಿಯು, ತನ್ನೊಳಗೆ-ತನ್ನ ಮನಸ್ಸಿನಲ್ಲಿಯೇ, ವಿಸ್ಮಿತನಾಗಿ-ಆಶ್ಚರಿಯಿಂದೊಡಗೂಡಿ, ಅದರ-ಆ ಶಿಲೆಯ, ಉನ್ನತಿಯ-ಅಭಿವೃದ್ಧಿಯ, ತುದಿವೊದಲನು-ಮೊದಲು ಕೊನೆಗಳನ್ನು, ಅರುಪು-ಹೇಳುವವನಾಗು, ಎನಲು-ಎಂದು ನುಡಿಯಲು, ಜ್ಞಾನಸಂಪನ್ನತಾಪಸನ-ಜ್ಞಾನ-ದಿವ್ಯಜ್ಞಾನದಿಂದ, ಸಂಪನ್ನ-ಕೂಡಿರತಕ್ಕ, ತಾಪಸನು-ತಪೋನಿಧಿಯಾದ ಸೌಭರಿ ಮುನೀಂದ್ರನು, ಅರ್ಜುನಂಗೆ-ಪಾರ್ಥನಿಗೆ, ಮತ್ತೆ-ಪುನಃ, ಪೂರ್ವಾಪರವನು-ಆ ಶಿಲೆಯ ಕಥೆಯನ್ನೆಲ್ಲಾ, ವಿಸ್ತರಿಸಿದಂ-ವಿಶದವಾಗಿ ಹೇಳಲಾರಂಭಿಸಿದನು ||

ಅ|| ವಿ|| ಜ್ಞಾನಸಂಪನ್ನತಾಪಸನು-ಜ್ಞಾನದಿಂದ ಸಂಪನ್ನನು (ತೃ. ತ.) ಜ್ಞಾನಸಂಪನ್ನನಾದ ತಾಪಸನು (ವಿ. ಪೂ.( ಪೂರ್ವಾಪರ (ಸ. ದೀ.) || ೨೨ ||

ಟೀ|| ಅರ್ಜುನ-ಎಲೈ ಪಾರ್ಥನೆ, ಆಲಿಸು-ಕೇಳು, ಮುನ್ನ - ಪೂರ್ವಕಾಲದಲ್ಲಿ, ಉದ್ದಾಲಕಾಖ್ಯಂ – ಉದ್ದಾಲಕನೆಂಬ ಹೆಸರುಳ್ಳ, ಓರ್ವಂ-ಬ್ರಾಹ್ಮಣನೊಬ್ಬನು, ಅಖಿಲ-ಸಮಸ್ತವಾದ, ಶಾಸ್ತ್ರಂಗಳಂ-ಶಾಸ್ತ್ರರಹಸ್ಯಗಳನ್ನೆಲ್ಲಾ, ತಿಳಿದವನು-ಅರಿತವನು, ಉಂಟು-ಇರುವನು. ಮೇಲೆ-ಅನಂತರ, ಆತಂಗೆ-ಆ ಉದ್ದಾಲಕನಿಗೆ, ವೈವಾಹದೋಳ್ ಮದುವೆಯಲ್ಲಿ, ಚಂಡಿಎಂಬಾಕೆ-

---

ದಿಗೂ ಮರೆತಿಲ್ಲವು, ಕೃಷ್ಣಸ್ವಾಮಿಯ ಅನುಮತಿಯಿಂದಲೇ ಈ ಯಾಗವಂ ಮಾಡಲೆಳಸಿ ನನ್ನನ್ನು ಯಜ್ಞಾಶ್ವದ ರಕ್ಷಣೆಗಾಗಿ ಕಳುಹಿಸಿದನು. ಒಂದುವೇಳೆ ನಾವು ಮಾರ್ಗತಪ್ಪಿ ನಡೆದಿದ್ದರೆ ಅದನ್ನು ಮನ್ನಿಸಿ ಸನ್ಮಾರ್ಗಕ್ಕೆ ಹೋಗುವಂತೆ ಉಪದೇಶಮಾಡತಕ್ಕ ಗುರುಗಳಾದ ನಿಮ್ಮ ನುಡಿಗಳನ್ನು ಶಿರಸಾವಹಿಸಿರುವೆನು. ನಾವು ಈ ಹೊತ್ತಿಗೆ ಕೃತಾರ್ಥರಾದೆವು. ಈ ಬಂಡೆಯಲ್ಲಿ ಸಿಕ್ಕಿಕೊಂಡಿರುವ ಕುದುರೆಯನ್ನು ಕರುಣಾಕಟಾಕ್ಷದಿಂದ ಬಿಡುಗಡೆಮಾಡಿ ಕಾಪಾಡಬೇಕೆಂದು ಪ್ರಾರ್ಥಿಸಿದನು || ೨೧ || ಅರ್ಜುನನ ಈ ಬಗೆಯಾದ ನುಡಿಗಳನ್ನು ಸೌಭರಿಯು ಕೇಳಿ, ಎಲೈ ಪಾರ್ಥನೆ, ನೀನು ಇನ್ನು ವ್ಯಸನಪಡಬೇಡ, ಶ್ರೀ ಕೃಷ್ಣ ಸ್ವಾಮಿಯನ್ನು ನಿನ್ನ ಮನಸ್ಸಿನಲ್ಲಿ ಧ್ಯಾನಮಾಡಿ, ನಿನ್ನ ಕೈಯಿಂದ ಕುದುರೆಯನ್ನು ಮುಟ್ಟು, ಅಶ್ವವು ಪೂರ್ವದಂತೆಯೇ ಮುಂದಕ್ಕೆ ನಡೆಯಲಾರಂಭಿಸುವುದು, ಹೋಗು, ಯೋಚನೆಯನ್ನು ಮಾಡಬೇಡವೆಂದು ಸೌಭರಿಯು ನುಡಿಯಲು ಆಗ ಅರ್ಜುನನು ಮುನೀಂದ್ರನನ್ನು ಕುರಿತು, ಎಲೈ ಮಹನೀಯನೆ ! ಈ ಶಿಲೆಯು ಉತ್ಪತ್ತಿಯಾದ ಕಾರಣ ಮೊದಲ್ಗೊಂಡು ಎಲ್ಲಾ ವಿಚಾರವನ್ನೂ ಸವಿಸ್ತಾರವಾಗಿ ತಿಳಿಸಬೇಕೆಂದು ಕೇಳಿಕೊಳ್ಳಲು, ಆಗ ಸುಜ್ಞಾನ ಮೂರುತಿಯಾದ ಸೌಭರಿಯು ಶಿಲೆಯ ವೃತ್ತಾಂತವನ್ನು ಅರ್ಜುನನಿಗೆ ತಿಳಿಸಲಾರಂಭಿಸಿದನು. ||೨೨|| ಕೇಳೈ ಅರ್ಜುನಾ, ಪೂರ್ವದಲ್ಲಿ ಸಕಲ ಶಾಸ್ತ್ರ ವಿಶಾರದನಾದ ಉದ್ದಾಲಕನೆಂಬ ಬ್ರಾಹ್ಮಣ ನೊಬ್ಬನಿದ್ದನು. ಅವನಿಗೆ ಚಂಡಿಯೆಂಬ ಹೆಂಗಸು ಹೆಂಡತಿಯಾದಳು ಮದುವೆ

ಕನು | ಕೂಲೆಯಾಗಿರ್ದುಮನೆವಾರ್ತೆಯಂಸಾಗಿಪುದುನೀನೆಂದೊಡಿಂತೆಂದಳು || ೨೩ || ಎಳ್ಳನಿತುನಿನ್ನಮಾತಂಕೇಳ್ವಳೆಂದೆ ಣಿಕೆ | ಗೊಳ್ಳದಿರ್ಪರಿಚರ್ಯಮನೆವಾರ್ತೆಯೆಂದೆಂಬ| ತಳ್ಳಿಯವಳಲ್ಲನೀನೆಂದುದಂಮಾಡೆನೆಂದಾಚಂಡಿಚಂಡಿಗೊಳಲು|| ಮುಳ್ಳಿಡಿದ ಮರನೇರಿದಂತಾದ-ದಿಹಪರಕೆ | ದೊಳ್ಳಿತಾದಪುದೆಬಂದುದುತಪೋಹಾನಿಯೆಂ | ದಳ್ಳಿಯೋಳ್ಕೋಲ್ಗೊಂಡತೆರದಲುದ್ದಾಲಕಂ ಚಿಂತಿಸಂಪ್ರತಿದಿನದೊಳು || ೨೪ || ಇಂತಿರುತಿರಲ್ಕೆಕೌಂಡಿನ್ಯನೆಂಬೋರ್ವಮುನಿ | ಪಂತನ್ನಮನೆಗೆಬರಲಾತನಂಸತ್ಕರಿಸಿ | ಚಿಂತೆವೆತ್ತಿರಲವನಿದೇನೆಂದುಬೆಸಗೊಂಡಡವಳಪ್ರತಿಕೂಲತೆಯನು || ಅಂತರಿಸದೆಲ್ಲಮಂಪೇಳ್ದೊಡವನಿದಕೆನೀಂ | ಮುಂತೆ

---

ಚಂಡಿ ಎಂಬ ಸ್ತ್ರೀಯು, ವಧುವು-ಸತಿಯು, ಆದಲ್-ಆದಳು. ಬಳಿಕ-ಈ ರೀತಿಯಲ್ಲಿ ಚಂಡಿಯು ಉದ್ದಾಲಕನೆಂಬ ಬ್ರಾಹ್ಮಣ ನಿಗೆ ಹೆಂಡತಿಯಾದ ತರುವಾಯ, ಕಾಲಕಾಲದ – ಆಯಾಯ ಕಾಲದಲ್ಲಿ ನೆರವೇರಿಸಬೇಕಾದ, ಜಪ - ಮಂತ್ರಗಳ, ಅನು ಷ್ಠಾನ - ಅನುಸರಿಸುವಿಕೆ ಮತ್ತು ಪೂಜೆಗಳಿಗೆ-ದೇವತಾಪೂಜೆಗಳಿಗಾಗಿ, ಆಲಸ್ಯಮಂಮಾಡದೆ-ತಡಮಾಡದ ಹಾಗೆ, ಎನ್ನ-ನನ್ನ ಸಂಬಂಧವಾದ, ಪರಿಚರ್ಯೆಗೆ-ಸೇವೆಗೆಲ್ಲಾ, ಅನುಕೂಲೆಯಾಗಿ-ನೆರವಾಗಿ, ಇರ್ದು-ಇದ್ದುಕೊಂಡು, ನೀನು-ನೀನಾದರೊ, ಮನೆ ವಾರ್ತೆಯಂ-ಮನೆಯ ಕೆಲಸಗಳನ್ನೆಲ್ಲಾ, ಸಾಗಿಪುದು-ಮಾಡಬೇಕು. ಎಂದೊಡೆ-ಎಂದು ಹೇಳಿದರೆ, ಚಂಡಿಯು, ಇಂತು- ಮುಂದೆ ಹೇಳುವಂತೆ, ಎಂದಳು-ನುಡಿದವಳಾದಳು ||೨೩||

ಟೀ|| ನಿನ್ನ-ನಿನ್ನ ಸಂಬಂಧವಾದ, ಮಾತಂ-ನುಡಿಗಳನ್ನು, ಎಳ್ಳನಿತು-ಎಳ್ಳು ಕಾಳಿನಷ್ಟು ಸ್ವಲ್ಪವೂ, ಕೇಳ್ವಳು-ನಡಿಸ ತಕ್ಕವಳು, ಎಂದು-ಎಂಬದಾಗಿ, ಎಣಿಕೆಗೊಳ್ಳದಿರ್ - ಆಲೋಚನೆ ಮಾಡಬೇಡ, ಪರಿಚರ್ಯ - ಚಾಕರಿಯು, ಮನೆವಾರ್ತೆಯು- ಮನೆಕೆಲಸವು, ಎಂದು-ಎಂಬದಾಗಿ, ಎಂಬುವ-ಹೇಳತಕ್ಕ, ತಳ್ಳಿಯವಳು – ಚಾಕರಳು, ನಾನು-ನಾನಾದರೊ, ಅಲ್ಲ - ಅಲ್ಲವು, ನೀಂ-ನೀನು, ಎಂದುದಂ-ಹೇಳಿದ ಕೆಲಸವನ್ನು, ಮಾಡೆನು-ಮಾಡುವುದಿಲ್ಲವು. ಎಂದು-ಎಂಬದಾಗಿ, ಆಚಂಡಿ-ಚಂಡಿ ಎಂಬ ಹೆಂಗಸು, ಚಂಡಿಗೊಳಲು-ಹಟವನ್ನು ಮಾಡಲಾಗಿ, ಮುಳ್ಳಿಡಿದ – ಮುಳ್ಳುಗಳಿಂದ ತುಂಬಿದ, ಮರನ-ವೃಕ್ಷವನ್ನು, ಏರಿದಂತೆ- ಹತ್ತಿದ ಹಾಗೆ, ಆದುದು-ಆಗಿಬಿಟ್ಟಿತು, ಇದು-ಈ ಚಂಡಿಯನ್ನು ಮದುವೆಯಾದದ್ದು, ಇಹಪರಕೆ-ಈ ಲೋಕ ಪರಲೋಕಗಳಿಗೆ ಒಳ್ಳಿತು – ಉತ್ತಮವಾದದ್ದು, ಆದಪುದೆ-ಆಗುತ್ತದೆಯೆ ?, ತಪೋಹಾನಿ-ತಪಸ್ಸಿಗೆ ಭಂಗವು, ಬಂದುದು-ಘಟಿಸಿತು, ಎಂದು ಎಂಬ ತೆರದಿಂದ, ಅಳ್ಳಿಯೋಳ್ - ಪಕ್ಕದಲ್ಲಿ, ಕೋಲ್ಗೊಂಡತೆರದಲಿ – ಬಾಣವು ಸಿಕ್ಕಿಕೊಂಡಂತೆ, ಪ್ರತಿದಿನದೊಳು – ದಿನಂ ಪ್ರತಿಯೂ, ಉದ್ದಾಲಕಂ-ಉದ್ದಾಲಕ ನೆಂಬುವನು, ಚಿಂತಿಸಂ-ವ್ಯಸನಪಡುತ್ತಲಿದ್ದನು.

ಅ|| ವಿ|| ತಪೋಹಾನಿ-ತಪದಹಾನಿ (ಷ. ತ.) ಇಡಿದ-ಇಡಿ. ಧಾತುವಿನ ಭೂತಕೃದ್ವಾಚಿ ||೨೪||

ಟೀ|| ಇಂತು - ಈ ಪ್ರಕಾರವಾಗಿ, ಇರುತಿರಲ್ಕೆ – ನಡೆಯುತ್ತಿರಲಾಗಿ, ಕೌಂಡಿನ್ಯನೆಂಬ – ಕೌಂಡಿನ್ಯನೆನ್ನತಕ್ಕ, ಓರ್ವ-ಒಬ್ಬಾನೊಬ್ಬ, ಮುನಿಪಂ-ತಾಪಸಶ್ರೇಷ್ಠನು, ತನ್ನಮನೆಗೆ-ತನ್ನ ಮಂದಿರಕ್ಕೆ, ಬರಲು-ಐತರಲು, ಆತನಂ-ಆ ಮುನಿ ವರ್ಯನನ್ನು, ಸತ್ಕರಿರಿಸಿ-ಉಪಚಾರದಿಂದ ಕಂಡು; ಚಿಂತೆವೆತ್ತು-ವ್ಯಸನಾಕ್ರಾಂತನಾಗಿ, ಇರುತಿರಲು-ಇರುತ್ತಿರಲಾಗಿ, ಅವನು- ಆ ಕೌಂಡಿನ್ಯನು, ಇದು - ಈ ವ್ಯಸನವು, ಏನು – ಏತಕ್ಕೋಸ್ಕರ ? ಎಂದು – ಎಂಬದಾಗಿ, ಬೆಸಗೊಂಡಡೆ-ಕೇಳಲು, ಅವಳ- ತನ್ನ ಹೆಂಡತಿಯ, ಪ್ರತಿಕೂಲತೆಯನು-ವ್ಯತಿರಿಕ್ತಮಾರ್ಗವನ್ನೆಲ್ಲಾ, ಅಂತರಿಸದೆ – ಮರೆಮಾಚದೆ, ಎಲ್ಲಮಂ-ಸಮಸ್ತವನ್ನೂ, ಪೇಳ್ದೊಡೆ-ಹೇಳಲಾಗಿ, ಅವನು-ಆ ಕೌಂಡಿನ್ಯನು ಉದ್ದಾಲಕನನ್ನು ಕುರಿತು, ನೀಂ-ನೀನು, ಮುಂದೆ-ಇನ್ನು ಮೇಲೆ, ವಿಪರೀ ತಮಂ-ವ್ಯತಿರಿಕ್ತವಾದುದನ್ನು, ಮಾಡಲು-ಹೇಳಿದರೆ, ಆದಪುದು - ಅನುಕೂಲವಾದದ್ದು, ನೆರವೇರಲು ಸಹಾಯವಾಗುವುದು.

---

ಯಾದ ಮೇಲೆ ಉದ್ದಾಲಕನು ತನ್ನ ಕಾಂತೆಯಂ ನೋಡಿ, ನಾನು ಕಾಲಕಾಲಕ್ಕೆ ಮಾಡುವ ಜಪತಪಗಳಿಗೂ, ಸ್ನಾನ, ಸಂಧ್ಯಾ ವಂದನೆ, ಬ್ರಹ್ಮಯಜ್ಞ ಮೊದಲಾದ ನಿತ್ಯಕರ್ಮಗಳಿಗೂ ಬೇಕಾದ ಉಪಕರಣಗಳನ್ನು ತಡಮಾಡದೆ ತಂದೊದಗಿಸಬೇ ಕೆಂದೂ, ಗೃಹಕೃತ್ಯವನ್ನು ಲೋಪಬಾರದಂತೆ ನೋಡಿಕೊಳ್ಳಬೇಕೆಂತಲೂ ಅಪ್ಪಣೆ ಮಾಡಿದನು, ಆಗ ಚಂಡಿಯು ತನ್ನ ಗಂಡ ನನ್ನು ಕುರಿತು || ೨೩ || ನೀನು ಹೇಳಿದಂತೆ ಮನೆಯ ಚಾಕರಿಯನ್ನೂ, ಗೃಹಕೃತ್ಯವನ್ನೂ ನಡೆಯಿಸಿಕೊಂಡು ಬಿದ್ದಿರಲು ನಾನು ನಿನ್ನ ಚಾಕರಿಯವಳಲ್ಲವು, ನೀನು ಹೇಳಿದ ಯಾವುದೊಂದನ್ನೂ ನಡೆಸತಕ್ಕವಳೆಂದು ತಿಳಿಯಬೇಡ ಎಂದು ಹೇಳಿದ ಮಾತನ್ನು ಕೇಳಿದ ಉದ್ದಾಲಕನೆಂಬ ಬ್ರಾಹ್ಮಣನು ಮುಳ್ಳುಗಳಿಂದಕೂಡಿದ ಮರದ ಮೇಲೆ ಹತ್ತಿದವನಂತಾಗಿ, ಅಯ್ಯೋ, ನನಗೆ ಇಹದಲ್ಲಿಯೂ ಪರದಲ್ಲಿಯೂ ಕೆಟ್ಟದ್ದಾಗುವ ಕಾಲವೊದಗಿತಲ್ಲಾ ! ತಪಸ್ಸಿಗೆ ಭಂಗವೂ ಪ್ರಾಪ್ತವಾಯಿತು ಎಂಬದಾಗಿ ಬಾಣ ದಿಂದ ಚುಚ್ಚಲ್ಪಟ್ಟ ಮರ್ಮಸ್ಥಳವುಳ್ಳವನಂತೆ ದುಃಖಸಮುದ್ರದಲ್ಲಿ ಮುಳುಗಿದ್ದನು ||೨೪|| ಹೀಗಿರುವ ಸಮಯದಲ್ಲಿ ಒಂದಾ ನೊಂದು ದಿನ ಕೌಂಡಿನ್ಯನೆಂಬೋರ್ವ ಋಷಿಯು ಉದ್ದಾಲಕನ ಮನೆಗೆ ಬಂದನು. ಉದ್ದಾಲಕನಾದರೋ ಕೌಂಡಿನ್ಯಮುನಿ

ವಿಪರೀತನುಂನಾಡಲಾದವುವೆಂದು | ಸಂತಾಪನುಂಬಿಡಿಸಿಬೀಳ್ಕೊಂಡವಂತೀರ್ಥಯಾತ್ರೆಗೈದಿದನತ್ತಲು ||೨೫|| ಉದ್ದಾಲಕಂ ಬಳಿಕತನ್ನಮಂದಿರದೊಳಿರು | ತಿರ್ದ್ದಸಮಯಕೆಪಿತೃಶ್ರಾದ್ಧದಿನಸಂಬಂದ | ಡೆದ್ದುಚಂಡಿಯೊಳೆಲಗೆನಾಳೆಪೈತೃಕಮದಂನಾಡಿ ದಲ್ಲದೆನಾಡೆನು || ಕದ್ದುತಹೆನಧಮಧಾನ್ಯವ್ರೀಹಿಶಾಕಮಂ | ವೊದ್ದಲೀಯೆಂಶುದ್ಧವಸ್ತುಗಳನೊಂದುನುಂ | ತದ್ದಿನಕೆಮರು ದಿವಸದೊಳ್ಕೀಳ್ಳುಬಹೆನಪಾತ್ರಂಗೆಂದೊಡಿಂತೆಂದಳು || ೨೬ || ನಾಳೆನಾಡಿಸುವೆನಾಂಪೈತೃಕದನುತ್ತಮದ | ಶಾಲಿಧಾನ್ಯ ವ್ರೀಹಿಶಾಕಮುಂಕೊಂಡುಬಹೆ | ನಾಲಯವನತಿಶುದ್ಧವಾದವಸ್ತುಗಳನಲ್ಲದೆಕೂಡೆನರ್ಥಿಯಿಂದ || ಪೇಳಿಸುವೆನಂದಿನದಿನದಮೊ

ಎಂದು-ಎಂಬದಾಗಿ, ಸಂತಾಪನುಂ-ಉದ್ದಾಲಕನ ಮನೋವ್ಯಥೆಯನ್ನು, ಬಿಡಿಸಿ-ಹೋಗಲಾಡಿಸಿ, ಬೀಳ್ಕೊಂಡು-ಅಲ್ಲಿಂನಡೆದು, ಅತ್ತಲು-ಬೇರೆ ಕಡೆಗೆ, ತೀರ್ಥಯಾತ್ರೆಗೆ-ಸ್ನಾನಕ್ಕೋಸ್ಕರವಾಗಿ, ಐದಿದನು-ನಡೆದವನಾದನು.

ಅ|| ವಿ|| "ನೀಂಮುಂತೆ ವಿಪರೀತನುಂನಾಡಲಾದವುದು" ಎಂದರೆ ನೀನು ಯಾವ ಕಾರ್ಯವು ಆಗಬೇಕೊ ಅದಕ್ಕೆ ಬದಲಾಗಿ ಅನುಕೂಲವಾಗಿರುವುದನ್ನೆ ಮಾಡಲು ಸಹಾಯಕಳಾಗುವಳೆಂಬ ಆಶಯವು ||೨೫||

ಟೀ|| ಬಳಿಕ-ತರುವಾಯ, ಉದ್ದಾಲಕನು – ಉದ್ದಾಲಕನೆಂಬ ಬ್ರಾಹ್ಮಣನು, ತನ್ನ – ಸ್ವಕೀಯನಾದ, ಮಂದಿರ ದೊಳು-ಭವನದಲ್ಲಿ, ಇರುತಿರ್ದ-ಇದ್ದಂಥ, ಸಮಯಕೆ-ಕಾಲದಲ್ಲಿ, ಪಿತೃಶ್ರಾದ್ಧದಿವಸನ-ಅವರ ತಂದೆಯ ತಿಥಿಯು, ಬಂದಡೆ-ಬರಲಾಗಿ, ಎದ್ದು-ಮೇಲಕ್ಕೆದ್ದು, ಎಲಗೆ-ಎಲೆ ಚಂಡಿಯೇ! ನಾಳೆಪೈತೃಕಂ-ನಾಳೆದಿನ ನಮ್ಮ ತಂದೆಯ ತಿಥಿಯು, ಅದಂ – ಆ ಕಾರ್ಯವನ್ನು, ನಾಡಿದಲ್ಲದೆ-ನಾಡಿದ್ದು ಮಾಡುತ್ತೇನೆಯೆ ಹೊರ್ತು ನಾಳೆದಿನ ಮಾಡುವದಿಲ್ಲ, ಅಧಮ-ಕನಿಷ್ಠವಾದ, ಧಾನ್ಯ-ದಿನಸುಗಳು, ವ್ರೀಹಿ-ಅಕ್ಕಿಯು, ಶಾಕಮುಂ-ಪಲ್ಯಕ್ಕೆ ಬೇಕಾದ ಪದಾರ್ಥಗಳು, ಇವನ್ನು, ಕದ್ದುತಹೆನು-ಕಳ್ಳತನದಿಂದ ಸಂಪಾದಿಸಿಕೊಂಡುಬರುವೆನು, ಶುದ್ಧವಸ್ತುಗಳನು – ನಿರ್ಮಲವಾದ ಪದಾರ್ಥಗಳನ್ನು, ಒಂದುನುಂ – ಒಂದನ್ನಾದರೂ, ಒದ್ದಲೀಯೆಂ-ಒದಗಿಸಿಕೊಡುವುದಿಲ್ಲವು, ತದ್ದಿನಕೆ-ಆ ಶ್ರಾದ್ಧದಿನಕ್ಕೆ, ಮರುದಿನದೊಳ್-ಎರಡನೆಯ ದಿವಸ, ಅಪಾತ್ರಗೆ-ಯೋಗ್ಯತೆ ಇಲ್ಲದಿರ ತಕ್ಕ ವಿಪ್ರನಿಗೆ, ಹೇಳಿಬಹೆನು – ನಿಮಂತ್ರಣಕ್ಕಾಗಿ ಬರಬೇಕೆಂದು ಹೇಳುವೆನು. ಎಂದೊಡೆ-ಹೀಗೆಂದು ನುಡಿಯಲು, ಇಂತು-ಮುಂದೆ ಹೇಳುವಂತೆ, ಎಂದಳು-ನುಡಿದಳು"

ಅ|| ವಿ|| ಸಂಬೋಧನಾ ವಿಭಕ್ತಿಯಲ್ಲಿ ಎಲೆ ಎಂಬುದಕ್ಕೆ ಪ್ರತಿಯಾಗಿ "ಎಲಗೆ" ಎಂದೂ ಹೇಳುವುದುಂಟು ||೨೬||

ಟೀ|| ಆಂ-ನಾನು, ನಾಳೆ-ನಾಳೆಯೇ, ಪೈತೃಕವನು – ಶ್ರಾದ್ಧಕರ್ಮವನ್ನು, ಮಾಡಿಸುವೆನು – ಮಾಡುವದಕ್ಕೆ ಅನು ಕೂಲ ಪಡಿಸುತ್ತೇನೆ. ಉತ್ತಮ – ಯೋಗ್ಯವಾದ, ಶಾಲಿಧಾನ್ಯ – ಬಿಳಿ ಅಕ್ಕಿ, ಶಾಕಮುಂ-ಕಾಯಿಪಲ್ಯಗಳನ್ನು, ಕೊಂಡು ಬಹೆನು-ತೆಗೆದುಕೊಂಡು ಬರುವಂತೆ ಮಾಡುವೆನು, ಆಲಯವನು-ಮಂದಿರವನ್ನು, ಅತಿಶುದ್ಧವಾದ-ಬಹು ಪರಿಶುದ್ಧವಾದ, ವಸ್ತುಗಳನು – ಪದಾರ್ಥಗಳನ್ನು, ಅಲ್ಲದೆ – ಹೊರತು, ಅರ್ಥಿಯಿಂದ – ಅಕ್ಕರೆಯಿಂದ, ಕೂಡೆನು – ಸೇರಿಸುವುದಿಲ್ಲ. (ಅಂದರೆ ಮನೆಯಲ್ಲಿ ಶುದ್ಧವಸ್ತುಗಳೇ ತುಂಬಿರುವಂತೆ ಮಾಡುತ್ತೇನೆ) ಅಂದಿನದಿನದ-ಶ್ರಾದ್ಧ ದಿನಸದ, ಮೊದಲರಾತ್ರಿಯ-ಹಿಂದಿನ ಸಾಯಂ ಕಾಲದಲ್ಲಿಯೇ, ವಿಶಾಲ – ಅತ್ಯಧಿಕವಾದ, ಗುಣ – ಸದ್ಗುಣಗಳಿಂದ, ಸಂಪನ್ನ – ಕೂಡಿದ, ವೇದಪಾರಂಗತ – ಸಾಂಗವಾಗಿ

ಯನ್ನು ಅರ್ಘ್ಯಪಾದ್ಯಾದಿಗಳಿಂದುಪಚರಿಸಿ, ಅವನನ್ನು ಸುಖಾಸನದಲ್ಲಿ ಕುಳ್ಳಿರಿಸಿ, ತಾನೂ ಕುಳಿತು ಚಿಂತಾಪರವಶನಾಗಿರಲು, ಕೌಂಡಿನ್ಯನು ನಿನ್ನ ಈ ತೆರನಾದ ಮಹಾ ವ್ಯಸನಕ್ಕೆ ಕಾರಣವೇನೆಂದು ಕೇಳಿದನು. ಚಂಡಿಯ ದುರ್ನಡತೆಗಳನ್ನೆಲ್ಲಾ ಉದ್ದಾಲಕನು ಸ್ವಲ್ಪವೂ ಮರೆಮಾಚದೆ ಹೇಳಲಾಗಿ, ಕೌಂಡಿನ್ಯಮುನಿಯು ಉದ್ದಾಲಕನನ್ನು ನೋಡಿ, ಇನ್ನುಮೇಲೆ ನೀನು ಯಾವುದನ್ನು ಮಾಡಬೇಕೆಂದಿಚ್ಛಿಸುವಿಯೊ ಅದಕ್ಕೆ ವ್ಯತಿರಿಕ್ತವಾದ್ದನ್ನು ಚಂಡಿಗೆ ಹೇಳುತ್ತಾ ಬರುವವನಾಗು, ಇದರಿಂದ ನಿನಗೆ ಬೇಕಾದದ್ದು ಅನುಕೂಲವಾಗುವುದು ಎಂಬ ಸಮಾಧಾನೋಕ್ತಿಗಳ ಮೂಲಕವಾಗಿ ಚಿಂತಾಸಮುದ್ರದಲ್ಲಿ ಮಗ್ನನಾಗಿದ್ದ ಬ್ರಾಹ್ಮಣನಾದ ಉದ್ದಾಲಕನನ್ನು ಮೇಲಕ್ಕೆತ್ತಿದವನಾಗಿ, ತಾನು ತೀರ್ಥಯಾತ್ರೆಗೆ ಹೊರಟುಹೋದನು||೨೫||ಇತ್ತ ಉದ್ದಾಲಕನಾದರೊ, ಕೌಂಡಿನ್ಯಮುನಿಯು ಹೇಳಿದಂತೆ ಮಾಡುತ್ತಾ ಬರಲು, ಎಲ್ಲವೂ ಅನುಕೂಲವಾಗುತ್ತಾ ಬಂದವು. ಇದರಿಂದ ಉದ್ದಾಲಕನಿಗೆ ಬಹು ಸಂತೋಷವಾಯಿತು. ಹೀಗಿರುವಲ್ಲಿ ಉದ್ದಾಲಕನ ತಂದೆಯ ಶ್ರಾದ್ಧವು ಬಂದಿತು ಆಗ ಉದ್ದಾಲಕನು ಚಂಡಿಯನ್ನು ಕುರಿತು, ಎಲೆ ಚಂಡಿಯೇ, ನಾಳೆದಿನ ನಮ್ಮ ತಂದೆಯ ವೈದಿಕವು. ನಾನು ಅದನ್ನು ನಾಡಿದ್ದು ಮಾಡೇನೇ ಹೊರತು ನಾಳೆ ಮಾಡುವುದಿಲ್ಲವು. ನೀಚ ಪದಾರ್ಥಗಳನ್ನೆಲ್ಲಾ ಕಳ್ಳತನದಿಂದ ಸಂಪಾದಿಸಿಕೊಂಡು ಬರುವೆನಲ್ಲದೆ ಸನ್ಮಾರ್ಗದಿಂದ ಉತ್ತಮವಸ್ತುಗಳನ್ನು ತರುವುದಿಲ್ಲ. ಶ್ರಾದ್ಧದಿನಕ್ಕೆ ಹಿಂದಿನ ದಿನವೇ ಬ್ರಾಹ್ಮಣರಿಗೆ ಹೇಳುವುದಕ್ಕೆ ಬದಲಾಗಿ ಶ್ರಾದ್ಧದಿನದ ಬೆಳಿಗ್ಗೆ ಹೋಗಿ ಅಯೋಗ್ಯನಾದ ಭೂಸುರನಿಗೆ ನಿಮಂತ್ರಣಕ್ಕೆ ಹೇಳಿ ಬರುತ್ತೇನೆಂದು ನುಡಿದನು || ೨೬ || ಆಗ ಚಂಡಿಯು

ದಲರಾತ್ರಿಯೆವಿ | ಶಾಲಗುಣಸಂಪನ್ನ ವೇದಪಾರಂಗತಸು | ಶೀಲರಹಸತ್ಪಾತ್ರದವನಿಯಮರರ್ಗೆನಲ್ಲಂಡಿಗವನಿಂತೆಂದನು ||೨೭||
ಆದೊಡೆಕುತುಪಕಾಲನುಂಬಿಡುವೆನರ್ಚನೆಯೊ | ಳಾದರಿಸೆನಾಂಬಂದವಿಪ್ರರಂಪಾಕದವನ | ವೋದನಸುಪಾಯಸಗುಡಾಜ್ಯ
ಮಧುತೈಲಮೃದುಭಕ್ಷ್ಯಭೋಜ್ಯಾದಿಗಳನು || ಸ್ವಾದುಫಲಶರ್ಕರೆವಿನುತಶಾಕನಿರ್ಮಲಪ | ಯೋದಧಿಗಳಂಸುಕುತ್ಸಿತ
ಮಾಗದಂತೆಸಂ | ಪಾದಿಸಿಪಿತೃಶ್ರಾದ್ಧಮುಂಮಾಡಿವಸ್ತ್ರದಕ್ಷಿಣೆಗಳಂಕೊಡೆನೆಂದನು || ೨೮ || ಎಂದೊಡೆಕುತುಪಕಾಲಮಂ
ಮೀರಲೀಯೆನಾಂ | ಬಂದವಿಪ್ರರನಾದರಿಸಿಪೂಜೆಗೈಸದಿರೆ | ನಿಂದೊಲ್ಲೆನೆಂದುವಕ್ಕಣಿಸಿದನಿತೆಲ್ಲಮುಂಸಂಪಾದಿಸದೆಮಾಣೆನು ||

---

ವೇದಾಧ್ಯಯನವಂ ಮಾಡಿರತಕ್ಕ, ಸುಶೀಲರು–ಸನ್ಮಾರ್ಗ ಪ್ರವರ್ತಕರು, ಅಹ–ಆಗಿರತಕ್ಕ, ಸತ್ಪಾತ್ರ–ಯೋಗ್ಯರಾದ, ಅವನಿಯ–ಭೂಮಂಡಲದ, ಅಮರರ್ಗೆ–ದೇವತೆಗಳಾದ ವಿಪ್ರರಿಗೆ, ಪೇಳಿಸುವೆನು–ಹೇಳುವಂತೆ ಮಾಡುವೆನು, ಎನಲ್–ಎಂದು ನುಡಿಯಲು ಚಂಡಿಗೆ–ಚಂಡಿಯನ್ನು ಕುರಿತು, ಅವನು–ಆ ಉದ್ದಾಲಕನೆಂಬ ಬ್ರಾಹ್ಮಣನು, ಇಂತು–ಮುಂದೆ ಹೇಳುವಂತೆ, ಎಂದನು–ನುಡಿದನು ||೨೭||

ಟೀ|| ಆದೊಡೆ–ಹಾಗಾದ ಪಕ್ಷದಲ್ಲಿ, ಕುತುಪಕಾಲಂ–ಶ್ರಾದ್ಧಕರ್ಮಕ್ಕೆ ಯೋಗ್ಯವಾಗಿ ನಿಯಮಿಸಲ್ಪಟ್ಟ ಸಮಯವನ್ನು, ಬಿಡುವೆನು–ಬಿಟ್ಟುಬಿಡುತ್ತೇನೆ, ಅರ್ಚನೆಯೊಳು–ಅರ್ಚನೆಮಾಡುವುದರಲ್ಲಿ, ಆಂ–ನಾನಾದರೊ, ಬಂದ–ಮನೆಗೆ ಬಂದಿರತಕ್ಕ, ವಿಪ್ರರಂ–ಭೂಸುರರನ್ನು, ಆದರಿಸೆನು–ಉಪಚಾರದಿಂದ ಕಾಣುವುದಿಲ್ಲ, ಪಾಕದ–ಅಡಿಗೆ ಮಾಡಿದ, ನವ–ಆಗಲೆ ಮಾಡಿದ, ಓದನ–ಅನ್ನವು, ಸುಪಾಯಿಸ–ಪಾಯಸವು, ಗುಡ–ಬೆಲ್ಲವು, ಆಜ್ಯ–ಸದ್ಯೋಘೃತವು, ಮಧು–ಜೇನುತುಪ್ಪ, ತೈಲ–ಒಳ್ಳೆಯಎಣ್ಣೆಯು, ಮೃದು–ಮೆತ್ತಗಿರುವ, ಭಕ್ಷ್ಯ–ಭಕ್ಷ್ಯಗಳು, ಭೋಜ್ಯಗಳನು–ರುಚಿಯಾದ ಇತರ ಸಾಮಾಗ್ರಿಗಳನ್ನು, ಸ್ವಾದು–ಸಿಹಿಯಾದ, ಫಲ–ಹಣ್ಣುಗಳು, ಶರ್ಕರೆ– ಸಕ್ಕರೆಯು, ವಿನುತ– ಉತ್ತಮವಾದ, ಶಾಕ– ಕಾಯಿಪಲ್ಯಗಳು, ನಿರ್ಮಲ– ಪರಿಶುದ್ಧವಾದ, ಪಯೋದಧಿಗಳನು–ಹಾಲು ಮೊಸರು ಇವುಗಳನ್ನು, ಸುಕುತ್ಸಿತಮಾಗದಂತೆ–ಯಾವದೊಂದು ಕೊರತೆಯೂ ಇಲ್ಲದ ಹಾಗೆ, ಸಂಪಾದಿಸಿ–ಅಣಿಮಾಡಿಕೊಂಡು, ಪಿತೃಶ್ರಾದ್ಧಮುಂ– ಶ್ರಾದ್ಧಕರ್ಮವನ್ನು, ಮಾಡಿ–ನೆರವೇರಿಸಿ, ವಸ್ತ್ರದಕ್ಷಿಣೆಗಳನು–ಉಡುಗೊರೆ ಮತ್ತು ದಕ್ಷಿಣಾದ್ರವ್ಯವನ್ನು, ಕೊಡೆನು–ಶ್ರಾದ್ಧಸಾದ್ಗುಣ್ಯವಾಗಲೆಂದು ಕೊಡುವುದಿಲ್ಲವು, ಎಂದನು–ಎಂಬುದಾಗಿ ಉದ್ದಾಲಕನು ಹೇಳಿದನು.

ಅ|| ವಿ|| ಭಕ್ಷ್ಯ–ತಿನ್ನುವ ಲಾಡು, ಚಿರೋಟಿ ಮೊದಲಾದವು, ಭೋಜ್ಯ– ನಂಚಿಕೊಳ್ಳುವ ವಸ್ತುಗಳು, ಕುತುಪಕಾಲ–ಇದರಲ್ಲಿ ಪಿತೃದೇವತೆಗಳ ಅರ್ಚನೆಗೆ ೧೨ ನೇ ಘಳಿಗೆಯಿಂದ ಆಚೆ ೨|| ಘಳಿಗೆ ಎಂದೂ, ೧೭|| ಘಳಿಗೆಯಿಂದ ೨೦ ಘಳಿಗೆಯವರೆಗೂ ಪಾಣೀ ಹೋಮ, ಬ್ರಾಹ್ಮಣ ಭೋಜನಕ್ಕೆ ತಕ್ಕಕಾಲವೆಂದೂ, ೨೦ ಘಳಿಗೆಯ ಆಚೆ ೨೨|| ಘಳಿಗೆ ಒಳಗಾಗಿ ಶ್ರಾದ್ಧಾಂಗವಾದ ಪಿಂಡಪ್ರದಾನದವೇಳೆಯೆಂದೂ, ೨೧|| ಘಳಿಗೆಯ ಆಚೆ ೨೪ ಘಳಿಗೆಯ ಒಳಗಾಗಿ ಪಿತೃವಿಸರ್ಜನೆಗೆ ಅನುಕೂಲವಾದ ಕಾಲವೆಂತಲೂ ಹೇಳಿರುವುದರಿಂದ ೧೫ ಘಳಿಗೆ ಮೊದಲ್ಗೊಂಡು ೨೪ ಘಳಿಗೆಯವರೆಗೂ ಶ್ರಾದ್ಧಕರ್ಮಕ್ಕೆ ತಕ್ಕ ಕಾಲವೆಂದರಿಯಬೇಕು. ಇದನ್ನೇ ಕುತುಪಕಾಲವೆಂದು ಕರೆಯುವರು. ಶ್ರಾದ್ಧಕರ್ಮವನ್ನು ಈ ಕಾಲವನ್ನು ಮೀರದಂತೆ ನಡಿಯಿಸಬೇಕು. ||೨೮||

ಟೀ|| ಎಂದೊಡೆ – ಹೀಗೆಂದು ಉದ್ದಾಲಕನು ಹೇಳಲು, ಕುತುಪಕಾಲಮಂ – ಶ್ರಾದ್ಧಯೋಗ್ಯವಾದ ೧೫ ಘಳಿಗೆಯಿಂದ ೨೪ ಘಳಿಗೆಯ ಒಳಗಿನ ಕಾಲವನ್ನು, ಮೀರಲೀಯೆನು – ಅತಿಕ್ರಮಿಸಲು ಅವಕಾಶವನ್ನು ಕೊಡುವುದಿಲ್ಲವು, ಆಂ–ನಾನು, ಬಂದ–ನಿಮಂತ್ರಣಕ್ಕೆ ಬಂದಂಥ, ವಿಪ್ರರಂ–ಭೂಸುರೋತ್ತಮರನ್ನು, ಆದರಿಸಿ–ಉಪಚರಿಸಿ, ಪೂಜೆಗೈಸದೆ–ಪೂಜೆ

---

ಉದ್ದಾಲಕನನ್ನು ಕುರಿತು, ಪಿತೃ ಶ್ರಾದ್ಧವು ನಾಳೆಯೇ ಆಗಬೇಕು. ಒಳ್ಳೆಯದಾಗಿಯೂ, ಪರಿಶುದ್ಧವಾಗಿಯೂ ಇರುವ ಅಕ್ಕಿ, ಕಾಯಿಪಲ್ಯ ಮೊದಲಾದುವನ್ನೆಲ್ಲಾ ಸನ್ಮಾರ್ಗದಿಂದಲೇ ತಂದೊದಗಿಸಬೇಕು. ಮನೆಯಲ್ಲೆಲ್ಲಾ ಪರಿಶುದ್ಧ ವಸ್ತುಗಳೇ ತುಂಬಿಕೊಂಡಿರುವಂತೆ ಮಾಡುವೆನು. ಸತ್ಪಾತ್ರರಾಗಿಯೂ, ವೇದವೇದಾಂಗ ಪಾರಂಗತರಾಗಿಯೂ ಇರುವ ಬ್ರಾಹ್ಮಣರಿಗೆ ಶ್ರಾದ್ಧ ದಿನದ ಹಿಂದಿನ ದಿನವೇ ಹೇಳಿ ಬರುವಂತೆ ಮಾಡುವೆನೆಂದು ನುಡಿದಳು ||೨೭|| ಈ ತೆರನಾದ ತನ್ನ ಹೆಂಡತಿಯನ್ನು ಕುರಿತು, ಹಾಗಾದರೆ ನಾನು ಶ್ರಾದ್ಧಯೋಗ್ಯವಾದ ಕಾಲದಲ್ಲಿ ಮಾಡುವುದೇ ಇಲ್ಲವು. ಬಂದ ಬ್ರಾಹ್ಮಣರನ್ನು ಭಕ್ತಿಯಿಂದಲೂ ಉಪಚಾರದಿಂದಲೂ ಕಾಣುವುದಿಲ್ಲ. ಒಳ್ಳೇ ಹಣ್ಣುಗಳು, ಹಾಲು, ಮೊಸರು, ತುಪ್ಪ, ಸಕ್ಕರೆ, ಅನ್ನ, ಭಕ್ಷ್ಯ ಭೋಜ್ಯಂಗಳು ಮೊದಲಾದವುಗಳಿಂದ ತೃಪ್ತಿಪಡಿಸಿದ ಮೇಲೆ ಶ್ರಾದ್ಧ ಸಾದ್ಗುಣ್ಯವಾದ ವಸ್ತ್ರ ದಕ್ಷಿಣೆಗಳನ್ನೇ ಕೊಡದೆ ಹಾಗೆಯೆ ಹೊರಟು ಹೋಗುವಂತೆ ಮಾಡುವೆನೆಂದು ಹೇಳಿದನು. ||೨೮|| ಅದಕ್ಕೆ ಚಂಡಿಯು ಗಂಡನೊಂದಿಗೆ ಕುತುಪಕಾಲಕ್ಕೆ ಸರಿಯಾಗಿ ಶ್ರಾದ್ಧವನ್ನು ಮಾಡಲು ಉಪಕರಣಗಳನ್ನೆಲ್ಲಾ ಸಿದ್ಧಮಾಡುವೆನು. ಬಂದ ಬ್ರಾಹ್ಮಣರನ್ನು ಭಕ್ತಿಯಿಂದ ಆದರಿಸುವಂತೆ

ತಂದನುಲವಸ್ತ್ರತಾಂಬೂಲವರದಕ್ಷಿಣೆ | ಗಳಿಂದಸತ್ಕರಿಸಿಕಳಹಿಸದೆಬಿಡೆನೆನುತನಲ | ವಿಂದೊದವಿಸಿದಖಿಲಸದ್ದ್ರವ್ಯಮಂ ಬಳಿಕಚಂಡಿಪಾಕಂಗೈದಳು || ೨೯ || ಕಂಡನೀತೆರನನುದ್ದಾಲಕಂಸಂತಸಂ | ಗೊಂಡುಮನದೊಳುಪೊರಗೆತಾನೊಪ್ಪದವನಾಗಿ | ಚಂಡಿಪೇಳಿದವೊಲಾಶ್ರಾದ್ಧಮುಂಮಾಡಿಸಂಪ್ರೀತಿಯಿಂವಿಪರೀತದ | ತೊಂಡುತೊಳಸಂಮರೆದುಕರ್ಮಾಂಗಮಾಗಿರ್ದ | ಪಿಂಡಮುಂತೆಗೆದುಮಡುವಿನೊಳುಹಾಯ್ಕೆಂದೊಡು | ದ್ದಂಡದಿಂದೆತ್ತಿಬೀದಿಗೆಬಿಸುಡಲಾದ್ವಿಜಂರೋಷಭೀಷಣನಾದನು || ೩೦ || ಎಲಗೆನಿನ್ನೊಡನೆನಾನೇಂಹಗೆಯಹೋರುವೆಂ | ಛಲತನಕೆಳಸಿದೆನೀನರೆಯಾಗಿಹೋಗೆಂದು | ಸಲೆಮುಳಿದುಶಾಪಮುಂಕೊಟ್ಟು

---

ಮಾಡಲೀಸದೆ, ಇರೆನು–ಇರುವುದಿಲ್ಲವು, ಇಂದು–ಈ ಹೊತ್ತು, ಬಳ್ಳೆನೆಂದು–ಬೇಡವೆಂಬದಾಗಿ, ಒಕ್ಕಣಿಸಿದ–ತಿಳಿಸಿದ, ಇನಿತೆಲ್ಲಮುಂ–ಇಷ್ಟೆಲ್ಲವನ್ನೂ, ಸಂಪಾದಿಸದೆ–ಒದಗಿಸದೆ, ಮಾಣೆನು–ಸುಮ್ಮನಿರುವುದಿಲ್ಲ, ತಂದು–ತೆಗೆದುಕೊಂಡು ಬಂದು, ಅಮಲ–ಶ್ರೇಷ್ಠವಾದ, ವಸ್ತ್ರ–ಬಟ್ಟೆಗಳು, ತಾಂಬೂಲ–ಅಡಿಕೆ ವೀಳೆಯದೆಲೆ, ವರ–ಉತ್ತಮವಾದ, ದಕ್ಷಿಣೆಗಳಿಂದ–ದಕ್ಷಿಣೆಯೇ ಮೊದಲಾದದ್ದರಿಂದ, ಸತ್ಕರಿಸಿ–ಉಪಚಾರದಿಂದ, ಕಳುಹಿಸದೆ–ಕಳುಹಿಸಿಕೊಟ್ಟಲ್ಲದೆ, ಬಿಡೆನು–ಇರುವುದಿಲ್ಲ, ಎನುತ–ಎಂದು ನುಡಿಯುತ್ತ, ನಲವಿಂದ–ವಿಶ್ವಾಸದಿಂದ, ಒದವಿಸಿದ–ಕೂಡ ಹಾಕಿದ, ಅಖಿಳ–ಸಕಲವಾದ, ಸದ್ದ್ರವ್ಯಮಂ–ಒಳ್ಳೆ ವಸ್ತುಗಳನ್ನೆಲ್ಲ, ಬಳಿಕ–ತರುವಾಯ, ಚಂಡಿ–ಉದ್ದಾಲಕನ ಹೆಂಡತಿಯು, ಪಾಕಂ ಗೈದಳು–ಅಡಿಗೆ ಮಾಡಿಟ್ಟಳು ||೨೯||

ಟೀ|| ಉದ್ದಾಲಕನೆಂಬ ಬ್ರಾಹ್ಮಣನು, ಈ ತೆರನಂ–ಚಂಡಿಯು ವ್ಯತಿರಿಕ್ತ ನುಡಿಗಳಿಂದ ಸಾಧ್ಯಕ್ಕೆ ಬರುವುದನ್ನು ಕಂಡನು–ನೋಡಿದನು, ಮನದೋಳ್–ಹೃದಯದಲ್ಲಿ, ಸಂತಸಂಗೊಂಡು–ಮುದವಂ ತಾಳಿ, ಪೊರಗೆ–ಹೊರಗಡೆಯಲ್ಲಿ, ತಾನು–ತಾನಾದರೋ, ಒಪ್ಪದವನಾಗಿ–ಒಪ್ಪದೆ ಇದ್ದಹಾಗೆಯೇ ನಟಿಸಿ, ಚಂಡಿ ಪೇಳಿದವೋಲ್–ಚಂಡಿಯು ಇಷ್ಟದಂತೆಯೇ, ಆ ಶ್ರಾದ್ಧಮುಂ–ಆ ಪಿತೃಕಾರ್ಯವನ್ನು, ಮಾಡಿ–ನೆರವೇರಿಸಿ, ಸಂಪ್ರೀತಿಯಿಂ – ಆನಂದದಿಂದ, ವಿಪರೀತದ–ವ್ಯತಿರಿಕ್ತ ಸ್ವಭಾವವುಳ್ಳ, ತೊಂಡು–ಸ್ವೇಚ್ಛಾಪ್ರಕೃತಿಯಿಂದ ಕೂಡಿದ, ಚಂಡಿಯ–ಚಂಡಿಯೆಂಬ ತನ್ನ ಹೆಂಡತಿಯ, ತೊಳಸಂ–ದುಷ್ಕಾರ್ಯವನ್ನು, ಮರತು–ಮರೆತುಹೋಗಿ, ಕರ್ಮಾಂಗಮಾಗಿ–ಶ್ರಾದ್ಧಕರ್ಮದ ಭಾಗವಾಗಿ, ಇರ್ದ–ಇದ್ದಂಥ, ಪಿಂಡಮುಂ–ಪಿಂಡವನ್ನು, ತೆಗದು–ತೆಗೆದುಕೊಂಡು ಹೋಗಿ, ಮಡುವಿನೋಳ್–ನೀರಿನಿಂದ ಕೂಡಿದ ಹೊಂಡದಲ್ಲಿ, ಹಾಕೆಂದಡೆ–ಹಾಕೆಂದು ಹೇಳಿದರೆ, ಉದ್ದಂಡದಿಂದ–ಅಹಂಕಾರದಿಂದ ಕೂಡಿದ ಒರಟು ತನದಿಂದ, ಎತ್ತಿ–ಆ ಪಿಂಡವನ್ನು ತೆಗೆದುಕೊಂಡು, ಬೀದಿಗೆ–ಬೀದಿಯಲ್ಲಿ, ಒಗೆಯಲು–ಹಾಕಲು, ಆ ದ್ವಿಜಂ–ಆ ಉದ್ದಾಲಕನೆಂಬ ಬ್ರಾಹ್ಮಣನು, ರೋಷಭೀಷಣನು–ರೋಷದಿಂದ ಭಯಂಕರನಾದವನು, ಆದನು–ಆಗಿಹೋದನು.

ಅ|| ವಿ|| ರೋಷಭೀಷಣನು–ರೋಷದಿಂದ ಭೀಷಣನು (ತೃ. ತ) ||೩೦||

ಟೀ|| ಎಲಗೆ–ಎಲೈ ಮೂರ್ಖಳೆ! ನಿನ್ನೊಡೆ–ನಿನ್ನೊಂದಿಗೆ, ನಾನು–ನಾನಾದರೆ. ಏಂ ಹಗೆಯ–ಎಂಥಾ ಶತ್ರುತ್ವವನ್ನು, ಹೋರುವೆಂ–ಮಾಡಲಿ, ಛಲತನಕೆ–ಚಂಡಿತನಕ್ಕೆ, ಎಳಸಿದೆ–ಬಯಸಿರುವಿ, ನೀನು–ನೀನಾದರೊ, ಅರೆಯಾಗಿ–ಶಿಲಾರೂಪವಾಗಿ, ಹೋಗು–ಆಗಿ ಬಿಡು, ಎಂದು–ಎಂಬದಾಗಿ, ಸಲೆ–ಹೆಚ್ಚಾಗಿ, ಮುಳಿದು–ಸಿಟ್ಟುಮಾಡಿಕೊಂಡು, ಶಾಪಮುಂ ಕೊಟ್ಟು–ಕೆಟ್ಟದ್ದಾಗಲೆಂದು ಹರಸಿ, ಕಾರುಣ್ಯದಿಂದ–ಕೃಪೆಯಿಂದ, ಆ ದ್ವಿಜಂ–ಆ ಬ್ರಾಹ್ಮಣನು, ಕೂಡೆ–ಒಡನೆಯೇ, ತಿಳಿದು–ಆಲೋಚಿಸಿ, ಕೆಲ

---

ಮಾಡುತ್ತೇನೆ. ನೀನು ಮಾಡುವುದಿಲ್ಲವೆಂದು ನುಡಿದದ್ದೆಲ್ಲವನ್ನೂ ನಾನು ಮಾಡದಿರೆನು. ಶ್ರೇಷ್ಠವಸ್ತ್ರಗಳಿಂದಲೂ, ದಕ್ಷಿಣೆ ತಾಂಬೂಲಾದಿಗಳಿಂದಲೂ ಬ್ರಾಹ್ಮಣರನ್ನು ಸತ್ಕರಿಸುವಂತೆ ಮಾಡದಿರುವುದೇ ಇಲ್ಲವೆಂದು ನುಡಿದು, ಶ್ರಾದ್ಧಯೋಗ್ಯವಾದ ಸಾಮಗ್ರಿಗಳನ್ನೆಲ್ಲಾ ಅಣಿಮಾಡಿಕೊಂಡು, ಮನೆಯನ್ನೆಲ್ಲಾ ಶುದ್ಧಿಮಾಡಿ, ಅಡಿಗೆಯನ್ನೂ ಮಾಡಿದವಳಾದಳು. ||೨೯|| ಚಂಡಿಯು ಈ ತೆರನಾದ ವ್ಯತಿರಿಕ್ತದ ನುಡಿಗಳಿಂದಲಾದರೂ ಸಾಧ್ಯಕ್ಕೆ ಬರುವಳೆಂದು ಉದ್ದಾಲಕನು ಮನಸ್ಸಿನಲ್ಲಿ ಸಂತಸಗೊಂಡು, ಹೊರಗೆ ಚಂಡಿಯ ಮಾತುಗಳಿಗೆ ಒಪ್ಪದವನಂತೆಯೇ ನಟಿಸುತ್ತಾ, ಭಕ್ತಿಯಿಂದ ಶ್ರಾದ್ಧವನ್ನು ಮಾಡಿದ ಬಳಿಕ ಚಂಡಿಯ ದುಸ್ವಭಾವವನ್ನು ಮರೆತು, ಹೋಗಿ ಶ್ರಾದ್ಧಾಂಗವಾದ ಪಿಂಡವನ್ನು ತೆಗೆದುಕೊಂಡು ಹೋಗಿ ನೀರಿನಲ್ಲಿ ಹಾಕಿಬಾರೆಂದು ಹೆಂಡತಿಗೆ ಹೇಳಿದರೆ, ಆ ಸ್ವೇಚ್ಛಾ ಪ್ರವರ್ತಕಳೂ, ಮೂರ್ಖಳೂ ಆದ ಚಂಡಿಯು, ಸಿಡಿಸಿಡಿ ಎಂದಂದುಕೊಂಡು, ಆ ಪಿಂಡವನ್ನು ಬೀದಿಯಲ್ಲಿ ಬಿಸಾಡಿದಳು. ಇದನ್ನು ನೋಡಿ ಉದ್ದಾಲಕನಿಗೆ ಕೋಪವೆಂಬುದು ಮಿತಿಮೀರಿದ್ದರಿಂದ ಮುಖದಲ್ಲಿ ಕೋಪಾಗ್ನಿಯಂ ಕಾರುತ್ತ, ಆ ನೀಚಳಾದ ತನ್ನ ಸತಿಯನ್ನು ಕುರಿತು, ||೩೦|| ಎಲೆ ಮೂರ್ಖಳಾದ ಪಾಪಿಯೆ, ನೀನು ಇಷ್ಟು ಛಲವನ್ನು ಸಾಧಿಸಲು ನಾನು ಮಾಡಿದ ಅಪರಾಧವೇನು? ನಿನ್ನ ದುಷ್ಕಾರ್ಯವನ್ನು ಇನ್ನೆಷ್ಟು ಸಹಿಸಲಾದೀತು? ಪರಮ ನೀಚಳಾದ ನೀನು ಬಂಡೆಯಾಗಿ ಬಿದ್ದು ಹೋಗೆಂದು ಶಾಪವಂ ಕೊಟ್ಟು, ಪುನಃ ಕರುಣದಿಂದ ಅವಳನ್ನು ನೋಡಿ, ಕೆಲವು ಕಾಲದಲ್ಲಿ

ಕಾರುಣ್ಯದಿಂದಾದ್ವಿಜಂಕೂಡೆತಿಳಿದು ‖ ಕೆಲವುಕಾಲಕೆನಿನ್ನೊಳಧ್ವರದಯಂಬಂದು | ನಿಲಲರ್ಜುನಂಬಿಡಿಸಿದೊಡೆಮೋಕ್ಷಮ
ಹುದೆಂದು | ತೊಲಗಿದಂಸನ್ಯಾಸಕನನತ್ತಲವನಿಯೊಳ್ಕಲ್ಲಾದಳವಳಿತ್ತಲು ‖೩೧‖ ಮೋಕ್ಷಮಹುದಾಗಿಚಂಡಿಗೆಶಾಪಮಿಗಳು
ಪಸಾಕ್ಷಿಗೈತಂದುನಿಂದುದುಹಯಂನೀಮುಟ್ಟ | ಲೀಕ್ಷಣದೊಳೆದ್ದುಪೋದಪುದುಪೋಗಿನ್ನುಮುಂದಣನೃಪರ್ಬಲವಂತರು ‖ ರಾ
ಕ್ಷಸಾರಿಯನೆಮರೆಯದಿರೆಂದುಸೌಭರಿನಿ | ರೀಕ್ಷಿಸಿಕೃಪಾವಲೋಕನದಿಂದವರಸಹ | ಸ್ರಾಕ್ಷನಕುಮಾರನಂಕಳುಹಲಾನತನಾ
ಗಿವಿನಯದಿಂಬೀಳ್ಕೊಂಡನು ‖ ೩೨ ‖ ತದನಂತರದೊಳರ್ಜುನಂಬಂದುಕುದುರೆಯಂ | ಮುದದಿಂದಮುಟ್ಟಲದುಬಿಟ್ಟುನಡೆದು
ದುಮುಂದ | ಕೊದರಿಕೊಳುತೆದ್ದುನರನಂಕಂಡುಚಂಡಿತಪಕಾಗಿಕಳುಹಿಕೊಂಡಳು ‖ ಒದವಿದಸಮಸ್ತಜನಮಾಗವಿಸ್ಮಿತಮಾ

---

ವುಕಾಲಕೆ–ಒಂದಾನೊಂದು ಕಾಲದಲ್ಲಿ, ನಿನ್ನೊಳು–ಕಲ್ಲಾಗಿರತಕ್ಕ ನಿನ್ನಮೈಲೆ, ಅಧ್ವರಹಯಂ-ಯಾಗದ ಕುದುರೆಯು, ಬಂದು ನಿಲಲು-ಬಂದು ಸಿಕ್ಕುಬಿದ್ದಾಗ, ಅರ್ಜುನಂ–ಪಾರ್ಥನು, ಬಿಡಿಸಿದೊಡೆ–ಅಶ್ವದ ಬಿಡುಗಡೆಯನ್ನು ಮಾಡಿದರೆ, ಮೋಕ್ಷಮಹುದು–ಮುಕ್ತಿಯು ಲಭಿಸುವುದು, ಎಂದು–ಎಂಬದಾಗಿ, ಅವನು–ಆ ಉದ್ದಾಲಕನು, ಅತ್ತಲು–ಬೇರೆ ಕಡೆಗೆ, ಸನ್ಯಾಸಕೆ-ಸನ್ಯಾಸವಂ ಪಡೆಯಲು, ತೊಲಗಿದನು-ಹೋದನು, ಅವನಿಯೋಳ್ - ಪ್ರಪಂಚದಲ್ಲಿ, ಇತ್ತಲು–ಈ ಭಾಗದಲ್ಲಿ, ಇವಳು–ಈ ಚಂಡಿಯಾದಟೊ, ಕಲ್ಲಾದಳು–ಬಂಡೆಯಾಗಿ ಬಿದ್ದುಹೋದಳು ‖ ೩೧ ‖

ಟೀ‖ ಈಗಳು–ಈ ಕಾಲದಲ್ಲಿ, ಚಂಡಿಗೆ- ಉದ್ದಾಲಕನ ಪತ್ನಿಯಾದ ಚಂಡಿ ಎಂಬುವಳಿಗೆ, ಶಾಪಂ–ಶಾಪವು, ಮೋಕ್ಷಂ-ಬಿಡುಗಡೆಯಾಗಿರತಕ್ಕದ್ದು, ಅಹುದು-ಆಗುತ್ತದೆ, ಉಪಸಾಕ್ಷಿಗೆ-ಹೋಲಿಕೆಗಾಗಿ, ಹಯಂ–ಅಶ್ವವು, ಐತಂದು–ಸಮೀಪಸ್ಥವಾದದ್ದಾಗಿ, ನಿಂದುದು–ನಿಂತಿತು, ನೀ-ನೀನು, ಮುಟ್ಟಲು–ಕುದುರೆಯ ಮೈಯ್ಯನ್ನು ಮುಟ್ಟಿದರೆ, ಈ ಕ್ಷಣದೊಳ–ಸ್ವಲ್ಪವೂ ಸಾವಕಾಶವಿಲ್ಲದೆ, ಎದ್ದು–ಅಲ್ಲಿಂದ ಹೊರಟು, ಪೋದಪುದು–ಮುಂದಕ್ಕೆ ನಡೆಯುವುದು, ಇನ್ನುಪೋಗು–ಇನ್ನು ಹೊರಡು, ಮುಂದಣ–ಮುಂದೆ ನಿನಗೆ ಎದುರಾಗುವ, ನೃಪರು–ಅರಸರು, ಬಲವಂತರು–ಬಹು ಪರಾಕ್ರಮಿಗಳು, ರಾಕ್ಷಸಾರಿಯನೆ–ಶ್ರೀ ಕೃಷ್ಣಮೂರ್ತಿಯನ್ನೆ, ಮರೆಯುದಿರು-ಮರೆತುಬಿಡದೆ ಯಾವಾಗಲೂ ಸ್ಮರಣೆ ಮಾಡುತ್ತಿರುವವನಾಗು, ಎಂದು–ಎಂಬದಾಗಿ, ಸೌಭರಿಯು–ಸೌಭರಿಯೆಂಬ ಮುನಿಯು, ಕೃಪೆ-ದಯೆಯಿಂದ ಕೂಡಿದ, ಅವಲೋಕನದಿಂದ–ದೃಷ್ಟಿಯಿಂದ, ನಿರೀಕ್ಷಿಸಿ–ನೋಡಿದವನಾಗಿ, ವರ–ಉತ್ತಮೋತ್ತಮನಾದ, ಸಹಸ್ರಾಕ್ಷನ-ದೇವೇಂದ್ರನ, ಕುಮಾರನಂ–ಪುತ್ರನಾದ ಪಾರ್ಥನನ್ನು, ಕಳುಹಲು–ಕಳುಹಿಸಿ ಕೊಡಲು, ಆನತನಾಗಿ–ಮರ್ಯಾದೆಯಿಂದ ಕೂಡಿ, ವಿನಯದಿಂ–ನಮ್ರಭಾವದಿಂದ, ಬೀಳ್ಕೊಂಡನು-ಮುಂದೆ ಹೊರಟವನಾದನು.

ಅ‖ ವಿ‖ ಸಹಸ್ರಾಕ್ಷ-ಒಂದು ಸಾವಿರ ಕಣ್ಣುಗಳುಳ್ಳವನು, (ಇಂದ್ರನು) ಇಂದ್ರನು ಗೌತಮ ಋಷಿಗಳ ಪತ್ನಿಯಾದ ಅಹಲ್ಯಾದೇವಿಯಲ್ಲಿ ಮೋಸದಿಂದ ಕ್ರೀಡಿಸಿದನೆಂಬ ತಪ್ಪಿತದಿಂದ ಆ ಗೌತಮರಿಂದಲೇ ತನ್ನ ಮೈಯಲ್ಲೆಲ್ಲಾ ಸಹಸ್ರ ಮಚ್ಚೆಗಳು ಕಾಣಲೆಂದು ಶಾಪವಂ ಪಡೆದನು, ಅಂದಿನಿಂದ ಇಂದ್ರನಿಗೆ ಸಹಸ್ರಾಕ್ಷನೆಂದು ಹೆಸರು ಬಂದಿರುವುದು. ‖೩೨‖

ಟೀ‖ ತದನಂತರದೊಳು–ಸೌಭರಿ ಮುನಿಪನ ಅಪ್ಪಣೆಯಂ ಪಡೆದು ಹೊರಟನಂತರ, ಅರ್ಜುನನು-ಪಾರ್ಥನು, ಬಂದು-ಆ ಬಂಡೆಯ ಹತ್ತಿರಕ್ಕೆ ಬಂದು, ಮುದದಿಂದ-ಆನಂದದಿಂದ ಕೂಡಿ, ಮುಟ್ಟಲು–ಕುದುರೆಯನ್ನು ಸ್ಪರ್ಶಿಸಲು, ಅದು–ಆ ಅಶ್ವವು, ಬಿಟ್ಟು–ಶಿಲೆಯಿಂದ ಬಿಡುಗಡೆಯನ್ನು ಹೊಂದಿ ಒದರಿಕೊಳುತ–ಮೈಯನ್ನು ಕೊಡವಿಕೊಳ್ಳುತ್ತ, ಎದ್ದು–ಮೇಲಕ್ಕೆದ್ದು,

---

ಯಾಗದ ಕುದುರೆಯು ಬಂದು ಬಂಡೆಯಾಗಿರುವ ನಿನ್ನ ಮೇಲೆ ನಿಲ್ಲುವುದು. ಅರ್ಜುನನು ಅದನ್ನು ಬಿಡಿಸುವನು. ಆಗ ನಿನಿಗೆ ಶಾಪವಿಮೋಚನೆಯಾಗುವುದು. ಹೋಗೆಂದು ನುಡಿದು, ತಾನು ಸನ್ಯಾಸವಂತಾಳಿ ತಪಸ್ಸು ಮಾಡಲು ಹೊರಟುಹೋದನು. ಈಕಡೆ ಚಂಡಿಯಾದರೊ ಗಂಡನ ಶಾಪದಿಂದ ಒಂದು ಗಾವುದದಷ್ಟು ಅಗಲ ಬಂಡೆಯಾಗಿ ಬಿದ್ದು ಹೋದಳು. ‖ ೩೧ ‖ ಇದೇ ಬಂಡೆಯ ಪೂರ್ವಾಪರವೃತ್ತಾಂತವು. ಈಗ ನೀನು ಹೋಗಿ ಕುದುರೆಯನ್ನು ಮುಟ್ಟಿದರೆ ಕುದುರೆಯು ಮುಂದಮುಂದಕ್ಕೆ ತಡಮಾಡದೆ ಹೊರಡುವುದು. ಚಂಡಿಯ ಶಾಪವೂ ಪರಿಹಾರವಾಗಿ ಮೊದಲಿನ ರೂಪವನ್ನೇ ಧರಿಸುವಳು. ಮುಂದೆ ನಿನಿಗೆ ದುರಾಗುವರಾಜರೆಲ್ಲಾ ಮಹಾ ಬಲವಂತರಾದ್ದರಿಂದ ನೀನು ಯಾವಾಗಲೂ ರಾಕ್ಷಸಾಂತಕನಾದ ಕೃಷ್ಣಮೂರ್ತಿಯನ್ನು ಎಡೆಬಿಡದೆ ಧ್ಯಾನಿಸುತ್ತಲಿರುವನಾಗು, ಹೊರಡು ಎಂದು ನುಡಿದು ಆಶೀರ್ವದಿಸಲು, ಅರ್ಜುನನು ಸೌಭರಿ ಮುನೀಂದ್ರನ ಆಶೀರ್ವಾದನನ್ನು ಶಿರಸಾವಹಿಸಿದವನಾಗಿ, ಅವನಿಗೆ ನಮಸ್ಕಾರವಂ ಮಾಡಿ, ಅವನ ಅನುಜ್ಞೆಯಿಂದ ಮುಂದಕ್ಕೆ ಹೊರಟು, ಕುದುರೆಯಿದ್ದ ಸ್ಥಳವನ್ನು ಸೇರಿ, ‖೩೨‖ ತನ್ನ ಕೈಯಿಂದ ಯಜ್ಞಾಶ್ವದ ಮೈಯನ್ನು ಸವರಿದ ಮಾತ್ರದಿಂದಲೇ, ಕುದುರೆಯು ವಾಯುವೇಗವನ್ನು ಮೀರಿಸಿ ಮುಂದಕ್ಕೆ ನಡೆಯಲಾರಂಭಿಸಿತು. ಬಂಡೆಯನ್ನು ಭೇದಿಸಿಕೊಂಡು ನಿಜರೂಪಮಂ ತಾಳಿದ ಚಂಡಿ

ದು | ದುದುರಿತುಕುಸುಮವೃಷ್ಟಿಬಳಿಕದಕ್ಷಿಣಕೆನಡೆ | ದುದುವಾಜಿಚಂಪಕಾಪುರಕಂದುಹಿಂದೆಬಹಸಡೆಸಹಿತವಹಿಲದಿಂದ‖೩೩‖
ಘನಘೋಷದಿಂದವಾಹಿನಿಗಳೈತರುತಿರ | ಲ್ವನಧಿಮೇರೆಯನತಿಕ್ರಮಿಸಿಬಂದಪುದೆಂದು | ಮುನಿದುಭೂಮಂಡಲಮಿರದೆನಭಸ
ಳಕೆಪೋಪಂತೆಧೂಳೀಳುತಿರಲು ‖ ಅನುಸಾಲ್ವಸಾತ್ಯಕಿಪ್ರದ್ಯುಮ್ನಯೌವನಾ | ಶ್ವನತನಯವೃಷಕೇತುನೀಲಧ್ವಜರಸೈನ್ಯ |
ಮನುಪಮಿತಮಾಗಿನಡೆದುದುಚಂಪಕಾನಗರಿಗರ್ಜುನನಹಯದಕೂಡೆ ‖೩೪‖ ತವೆಸರ್ವಮಂಗಳಾಸ್ಪದಮಾದೊಡಂಪರಾ | ಭವ
ಯುಕ್ತಮಾಗಿರ್ಪೆನೆಂದುಕೈಲಾಸಾಚ | ಲವನತುಳಲಕ್ಷ್ಮೀನಿಲಯಮಾದೊಡಂಭಂಗಸಹಿತಮಾಗಿರ್ಪುದೆಂದು ‖ ಅವಿರಳಪಯೋ

---

ಮುಂದಕೆ–ಮುಂದೆ ಕಾಣುವ ಕಡೆಗೆ, ನಡೆದುದು-ಹೊರಟಂಥಾದ್ದಾಯಿತು, ಚಂಡಿ–ಚಂಡಿಯಾದರೋ, ನರನಂ–ಪಾರ್ಥನನ್ನು, ಕಂಡು–ನೋಡಿದವಳಾಗಿ, ತಪಕಾಗಿ–ದೇವರ ಧ್ಯಾನದಲ್ಲಿ ಕಾಲವನ್ನು ಕಳೆಯುವದಕ್ಕಾಗಿ, ಕಳುಹಿಸಿಕೊಂಡಳು-ಅರ್ಜುನನ ಅನುಮತಿಯಿಂದ ಹೊರಟು ಹೋದಳು, ಬದವಿದ–ಅಲ್ಲಿ ನೆರೆದಿದ್ದ, ಸಮಸ್ತಜನಂ–ಪ್ರಜೆಗಳೆಲ್ಲರೂ, ವಿಸ್ಮಿತಂಆದುದು-ಆಶ್ಚರ್ಯದಿಂದ ಕೂಡಿದವರಾದರು, ಕುಸುಮವೃಷ್ಟಿ–ಪುಷ್ಪವೃಷ್ಟಿಯು, ಉದುರಿತು–ಸುರಿಯಿತು, ಬಳಿಕ–ಅನಂತರ, ವಾಜಿ–ಯಜ್ಞಾಶ್ವವು, ಅಂದು–ಆ ದಿನದಲ್ಲಿ, ಹಿಂದೆಬಹ-ತನ್ನನ್ನು ಹಿಂಬಾಲಿಸಿ ಬರುತ್ತಿರುವ, ಸೇನೆಸಹಿತ–ಬಲದೊಂದಿಗೆ, ದಕ್ಷಿಣಕ್ಕೆ-ತೆಂಕಮುಖವಾಗಿ, ವಹಿಲದಿಂ–ವೈಶಾಲ್ಯದಿಂದ, ಚಂಪಕಾಪುರಕೆ–ಚಂಪಕಾ ನಗರಕ್ಕೆ, ನಡೆದುದು–ಹೊರಟಿತು ‖ ೩೩ ‖

ಟೀ‖ ಘನ-ಮೇಘಗರ್ಜನೆಯಂತಿರುವ ದಟ್ಟವಾದ. ಘೋಷದಿಂದ-ಗರ್ಜನೆಯಿಂದ, ವಾಹಿನಿಗಳು-ದಳಗಳು, ಐತರುತ–ಬರುತ್ತ, ಇರಲ್–ಇರಲಾಗಿ, ವನಧಿ-ಕಡಲು, ಮೇರೆಯನು–ಎಲ್ಲೆಯನ್ನು, ಅತಿಕ್ರಮಿಸಿ–ದಾಟಿ, ಬಂದಪುದು–ಬರುತ್ತದೆ, ಎಂದು–ಎಂಬದಾಗಿ, ಮುನಿದು–ಸಿಟ್ಟುಮಾಡಿಕೊಂಡು, ಭೂಮಂಡಲಂ–ಧರಾವಲಯವು, ಇರದೆ–ಸುಮ್ಮನಿರದೆ, ನಭಸ್ಥಳಕೆ-ಅಂತರಿಕ್ಷ ಪ್ರದೇಶಕ್ಕೆ, ಪೋಪಂತೆ-ಹೋಗುವತೆರನಾಗಿ, ಧೂಳು–ಮಣ್ಣು, ಏಳುತಿರಲು–ಮೇಲಕ್ಕೆ ಹಾರಿಹೋಗುತ್ತಿರಲಾಗಿ, ಅನುಸಾಲ್ವ-ಸಾಲ್ವನ ತಮ್ಮನು, ಸಾತತ್ಯಕಿ–ಸಾತ್ಯಕಿ ಎಂಬುವನು, ಪ್ರದ್ಯುಮ್ನ–ಕೃಷ್ಣನ ಮಗನು, ಯೌವನಾಶ್ವತನಯ–ಯೌವನಾಶ್ವನ ಮಗನಾದ ಸುವೇಗನು, ವೃಷಕೇತು-ವೃಷಧ್ವಜನು, ನೀಲಧ್ವಜನ–ನೀಲಧ್ವಜನೆ ಮೊದಲಾದ ವೀರರ, ಸೈನ್ಯಂ–ದಳವು, ಅನುಪಮಿತಮಾಗಿ–ಅಸಮಾನವಾದದ್ದಾಗಿ, ಅರ್ಜುನನ-ಪಾರ್ಥನ, ಹಯದಕೂಡೆ-ಕುದುರೆಯೊಂದಿಗೆ, ಚಂಪಕಾನಗರಿಗೆ–ಚಂಪಕಾ ಎಂಬ ಊರಿಗೆ, ನಡೆದುದು-ಪ್ರಯಾಣವಂ ಬೆಳಸಿತು ‖ ೩೪ ‖

ಟೀ‖ ತವೆ-ಆರೆಯಿಲ್ಲದೆ, ಸರ್ವಮಂಗಳೆ–ಸಕಲ ಕಲ್ಯಾಣಕ್ಕೂ, ಮತ್ತು ಗೌರಿಗೂ, ಆಸ್ಪದಂ–ನೆಲೆಯು ಮತ್ತು ವಾಸಭೂಮಿಯೂ, ಆದೊಡಂ–ಆಗಿದ್ದರೂ, ಪರಾಭವ–ಅಲಗಳೆಯುವಿಕೆ ಮತ್ತು ಶ್ರೇಷ್ಠವಾಗಿ ನಾಶರಹಿತವಾಗಿಯೂ ಇರುವ ಪರಮೇಶ್ವರನಿಂದ, ಯುಕ್ತಂ–ಕೂಡಿರುವದು, ಆಗಿರ್ಪೆನು–ಆಗಿರುವೆನು, ಎಂದು–ಎಂಬತೆರನಾಗಿ, ಕೈಲಾಸಾಚಲವನು-ಕೈಲಾಸವೆಂಬ ಬೆಟ್ಟವನ್ನು, ಅತುಲ–ಅಸಮಾನವಾದ ಮತ್ತು ಹೆಚ್ಚಾದ, ಲಕ್ಷ್ಮಿ-ಐಶ್ವರ್ಯಕ್ಕೂ ಮತ್ತು ಲೋಕಮಾತೆಗೂ, ನಿಳಯಂ-ವಾಸಸ್ಥಾನವು, ಆದೊಡಂ-ಆಗಿದ್ದರೂ, ಭಂಗ–ಅಮರ್ಯಾದೆ ಮತ್ತು ಅಲೆಗಳಿಂದ, ಸಹಿತಂ–ಯುಕ್ತವಾದದ್ದು ಮತ್ತು ಪಡೆದಿರುವದು, ಆಗಿರ್ಪುದೆಂದು–ಆಗಿದೆ ಎಂಬದಾಗಿ, ಅವಿರಳ–ಸಾಂದ್ರವಾದ, ಪಯೋನಿಧಿಯನು–ಪಾಲ್ಗಡಲನ್ನು ಸಂಬೋಧಿಸಿ, ಅಟ್ಟಹಸವನು–ಪರಿಹಾಸ್ಯದಿಂದ ಕೂಡಿದ ನಗುವಿಕೆಯನ್ನು, ಮಾಡುವೋಲ್–ಎಸಗುವಂತೆ, ಆ ಪುರ–ಆ ನಗರದ ಪ್ರಾ

---

ಯು ಅರ್ಜುನನ್ನು ನೋಡಿ, ತನ್ನ ಶಾಪವು ಈ ಮಹಾತ್ಮನಿಂದ ಕಳೆಯಿತಲ್ಲಾ ಎಂದು ಸಂತೋಷವಂಹೊಂದಿ ತಾನುತಪಸ್ಸಿಗೆ ಹೊರಟುಹೋದಳು. ಅಲ್ಲಿ ನೆರೆದಿದ್ದವರೆಲ್ಲಾ ಆಶ್ಚರ್ಯದಿಂದ ಬೆರಗಾಗಿ ಹೋದರು, ಆಕಾಶದಿಂದ ಪುಷ್ಪವೃಷ್ಟಿಯು ಸುರಿಯಿತು. ಎಲ್ಲರೂ ಸಂತೋಷ ಸಮುದ್ರದಲ್ಲಿ ಮುಳುಗಿದರು. ಬಳಿಕ ಕುದುರೆಯು ದಕ್ಷಿಣ ದಿಕ್ಕಿನ ಕಡೆಗೆ ನಡೆಯಿತು. ಪರಿವಾರವೆಲ್ಲಾ ಆ ಯಜ್ಞಾಶ್ವವನ್ನೇ ಹಿಂಬಾಲಿಸಿತು. ‖೩೩‖ ಆಗ ಸೈನ್ಯದ ರಭಸವನ್ನು ನೋಡಿದರೆ, ಮಹಾಸಮುದ್ರವು ಮೇರೆ ತಪ್ಪಿ ಹೊರಗೆ ನುಗ್ಗಿ ಬರುತ್ತ, ಆರ್ಭಟವಂ ಗೈಯುತ್ತಿರುವಹಾಗೂ, ಭೂಮಂಡವು ಕೋಪಿಸಿಕೊಂಡು ತಾನಿದ್ದ ಸ್ಥಳವನ್ನು ಬಿಟ್ಟು ಆಕಾಶಮಾರ್ಗದಲ್ಲಿ ಹೊರಟುಹೋಗುವುದರಿಂದ ಧೂಳೇಳುತ್ತಲಿರುವುದೆಂಬಂತೆ ಭ್ರಾಂತಿಗೈಯ್ಯುತ್ತಲೂ ಇತ್ತು, ಈತೆರನಾದ ಅಪರಿಮಿತ ಸೈನ್ಯವನ್ನೊಡಗೊಂಡು, ಯೌವನಾಶ್ವ, ಅನುಸಾಲ್ವ, ಸಾತ್ಯಕಿ, ಪ್ರದ್ಯುಮ್ನ, ವೃಷಕೇತು, ನೀಲಧ್ವಜಾದಿಗಳೂ ಕೂಡಿ, ಮುಂದೆ ನಡೆಯುತ್ತಿರುವಾಗ, ಚಂಪಕಾನಗರವು ಕಾಣಬಂದಿತು. ‖ ೩೪ ‖ ಸುಣ್ಣವಂ ಬಳಿದಿರುವುದರಿಂದ ಬೆಳ್ಳಗಿರುವ ಆ ಚಂಪಕಾನಗರದ ಉಪ್ಪರಿಗೆಗಳ ತುದಿಗಳು ಶುಭಲಕ್ಷಣಗಳಿಂದೊಡಗೂಡಿಯೂ, ಕೈಲಾಸಪರ್ವತವನ್ನೂ ಕೂಡ ಅಲಗಳೆಯುತ್ತಲೂ, ತನ್ನಟ್ಟಹಾಸದಿಂದ ಸಮುದ್ರನೂ ಕಡಿಮೆ ಎಂದು ಭಾವಿಸಿ ಮಹೋದಧಿಯನ್ನು ನೋಡಿ ಕೆಕೆಹಾಕಿಕೊಂಡು ನಗುವಂತೆ ಮಹೋನ್ನತವಾಗಿಯೂ, ಹೆಚ್ಚಾದ ಪ್ರಕಾಶದಿಂದಲೂ ಕೂಡಿತ್ತು. (ಪಾರ್ವತೀದೇವಿಯಿಂದ ಕೂಡಿದ ಸಂಸಾರ

ನಿಧಿಯನಟ್ಟಹಾಸನನುಮಾ | ಡುವೊಲಿರ್ದುದಾಪುರಪ್ರಾಸಾದಕೋಟಿಗಳ | ಧವಳಿಮಸುಧಾಕೀರ್ಣರುಚಿಗಳಿಂಪೊರಗೆನೋಡುವ ಜನರ್ಗೇವೇಳ್ವೆನು ||೩೫|| ಇದುಪುರಸ್ತ್ರೀಮಣಿಕಾಂಚೀವಲಯಮೋಭೂ | ಸುದತಿಯರಕೊರಳಲಿರಾಜಿಪರತ್ನಮಾಲಿಕೆಯೋ | ತ್ರಿದಶಪತಿಗಿರಿಗಳಂಕಡಿವಂದುತೆಗೆದಿಡುವೆನೆಂದುತಿರುಪುನಕುಲಿಶದ || ಪೊದರುವೆಳಗಿಳೆಗಿಳಿದುವಜ್ರಮಯಮಾಗಿನಿಂ | ತುದೋ ವಿಮಲಕೀರ್ತಿಚಂದ್ರಿಕೆಯುಪರವುತಿಹನಗ | ರದರಾಜಮಂಡಲದಪರಿವೇಷಮೋಪೇಳೆನಲ್ಕೋಟೆಕಣ್ಗೆಸೆದುದು ||೩೬|| ಆನಗರದರಸುಹಂಸಧ್ವಜಂಕೇಳ್ದನೀ | ಸೇನೆಸಹಿತರ್ಜುನಂವರಮುಖತುರಂಗರ | ಕ್ಷಾನಿಮಿತ್ತಂಬಂದುಸೀಮೆಯಂಪೊಕ್ಕುದಂದೂತಮುಖದಿಂದಬಳಿಕ || ಧ್ಯಾನಿಸಿದನೊಂದೆರಡುಘಳಿಗೆತನ್ನಾಪ್ತಪ್ರ | ಧಾನಿಗಳೆಲ್ಲರಂಕರೆಸಿಕೊಂಡವರೊಳ್ | ಧಾನಿಸಿನುಡಿದನಂದು ಶ್ರದ್ಧಾಯಸುಮತಿಪ್ರಮತಿಯೆಂಬಮಂತ್ರಿಗಳ್ಗೆ ||೩೭|| ಈಧನಂಜಯನತುರಗವನೀಗಟ್ಟದೊಡೆ | ಮಾಧವಂತಾನೆಮ್ಮೆದೋರು

ಸಾದ-ಮುಹಡಿಗಳ, ಕೋಟಿಗಳ-ಕೋಟೆ ತುದಿಗಳ, ಧವಳಿಮ-ಬೆಳ್ಳಗಿರತಕ್ಕ, ಸುಧಾ-ಸುಣ್ಣದಿಂದ, ಆಕೀರ್ಣ-ತುಂಬಿರುವ, ರುಚಿಗಳಿಂ-ಹೊಳಪಿನಿಂದ, ಪೊರಗೆ-ಹೊರಗಡೆಯಿಂದ, ನೋಡುವ-ಅವಲೋಕಿಸುವ, ಜನರ್ಗೆ-ಪ್ರಜೆಗಳಿಗೆ, ಇರ್ದುದು-ಇದ್ದಂಥಾದ್ದಾಯಿತು, ಏವೇಳ್ವೆನು-ಏನೆಂದು ನುಡಿಯಲಿ ||೩೫||

ಟೀ|| ಇದು-ಈ ನಗರವನ್ನು ಸುತ್ತಿಕೊಂಡಿರುವುದು, ಪುರಸ್ತ್ರೀಯ- ಪೌರನಾರಿಯ, ಮಣಿ-ನವರತ್ನಗಳಿಂದ ಕೆತ್ತಲ್ಪಟ್ಟ, ಕಾಂಚಿ-ಡಾಬಿನ, ವಲಯಮೊ-ಆವರಣವೊ, ಭೂ ಸುದತಿಯ-ಭೂಮಿ ಎಂಬ ನಾರೀಮಣಿಯ, ಕೊರಳಲಿ-ಕಂಠದಲ್ಲಿ, ರಾಜಿಸ-ಪ್ರಕಾಶಿಸತಕ್ಕ, ರತ್ನಮಾಲಿಕೆಯೊ-ರತ್ನಖಚಿತವಾದ ಹಾರವೊ, ತ್ರಿದಶಪತಿ-ದೇವೇಂದ್ರನು, ಗಿರಿಗಳಂ-ಬೆಟ್ಟಗಳ ರೆಕ್ಕೆಗಳನ್ನು, ಕಡಿವಂದು-ಛೇದಿಸತಕ್ಕ ಕಾಲದಲ್ಲಿ, ತೆಗೆದು-ತೆಗೆದುಕೊಂಡು, ಇಡುವೆನು-ಇಡುತ್ತೇನೆ, ಎಂದು-ಎಂಬದಾಗಿ, ತಿರುಪುವ-ತಿರುಗಿಸತಕ್ಕ, ಕುಲಿಶದ-ವಜ್ರಾಯುಧದ, ಪೊದರು-ಸಾಣೆಯಿಟ್ಟದ್ದರ, ವೆಳಗು-ಕಾಂತಿಯು, ಇಳೆಗೆ-ಭೂಮಂಡಲಕ್ಕೆ, ಇಳಿದು-ಇಳಿದು ಬಿಟ್ಟು, ವಜ್ರಮಯವಾಗಿ-ವಜ್ರಾಕೃತಿಯಾಗಿ, ನಿಂತುದೊ-ನಿಂತಿದೆಯೊ, ನಿರ್ಮಲ-ಪರಿಶುದ್ಧವಾದ, ಕೀರ್ತಿಚಂದ್ರಿಕೆಯ-ಯಶಸ್ಸೆನ್ನುವ ಚಂದ್ರ ಕಿರಣವನ್ನು, ಪರವುತ-ಹರಡುತ್ತಾ, ಇಹ-ಇರುವ, ನಗರದ-ಪುರದ, ರಾಜಮಂಡಲದ-ಧೊರೆಗಳ ಸಮೂಹದ, ಪರಿವೇಷವೊ-ಬಳಿಸಿರುವಿಕೆಯೊ, ಪೇಳು-ಹೇಳು, ಎನಲ್-ಎಂಬ ತೆರನಾಗಿ, ಕೋಟೆ-ಪಟ್ಟಣವನ್ನು ಬಳಸಿರುವ ಕೋಟೆಯು, ಕಣ್ಗೆ-ನಯನಂಗಳ್ಗೆ, ಎಸೆದುದು-ಹೊಳೆಯುತ್ತಲಿತ್ತು ||

ಅ|| ವಿ|| ಸುದತಿ=ಸು-ಒಳ್ಳೆಯದಾದ, ದತಿ-ದಂತವುಳ್ಳವಳು, (ಹೆಂಗಸು) ತ್ರಿದಶಪತಿ-ತ್ರಿದಶರಪತಿ (ಷ. ತ)||೩೬||

ಟೀ|| ಆ ನಗರದ-ಆ ಚಂಪಕಾಪಟ್ಟಣದ, ಅರಸು - ರಾಜನಾದ, ಹಂಸಧ್ವಜಂ - ಹಂಸಧ್ವಜನೆಂಬ ನರೇಶ್ವರನು, ಅರ್ಜುನನು-ಪಾರ್ಥನು, ಸೇನೆಸಹಿತ-ತನ್ನ ದಳದೊಂದಿಗೆ, ವರ-ಶ್ರೇಷ್ಠವಾದ, ಮುಖತುರಗದ-ಯಾಗದ ಕುದುರೆಯ, ರಕ್ಷಾನಿಮಿತ್ತಂ-ಕಾವಲಿಗೋಸ್ಕರ, ಸೀಮೆಯಂ-ತನ್ನ ನಾಡನ್ನು, ಪೊಕ್ಕುದಂ-ಪ್ರವೇಶಿಸಿ ಬಂದಿರುವುದನ್ನು, ದೂತ ಮುಖದಿಂದ-ಚಾರರ ಮೂಲಕವಾಗಿ, ಕೇಳ್ದನು-ಕೇಳಿದವನಾದನು, ಬಳಿಕ-ಆ ಮೇಲೆ, ಒಂದೆರಡು ಘಳಿಗೆ-ಒಂದೆರಡು ಘಳಿಗೆಯ ಹೊತ್ತು, ಧ್ಯಾನಿಸಿದನು-ತನ್ನ ಮನಸ್ಸಿನಲ್ಲಿಯೆ ಆಲೋಚನೆ ಮಾಡಿಕೊಂಡನು, ಆಪ್ತ-ತನಗೆ ಬೇಕಾದ, ಎಲ್ಲರಂ-ಸಕಲರಾದ, ಪ್ರಧಾನಿಗಳನು-ಸಚಿವರನ್ನು, ಕರೆಸಿಕೊಂಡು-ಬರಮಾಡಿಕೊಂಡು, ಅವರೊಳ್-ಅವರೊಂದಿಗೆ, ನಿಧಾನಿಸಿ-ಅವಸರಪಡದೆ, ಶ್ರದ್ಧಾಯ-ಶ್ರದ್ಧಾಯನೆನ್ನುವ, ಸುಮತಿ-ಸುಮತಿ ಎಂಬ ಹೆಸರುಳ್ಳ, ಪ್ರಮತಿ-ಪ್ರಮತಿ ಎಂದು ಪ್ರಸಿದ್ಧರಾದ, ಮಂತ್ರಿಗಳಿಗೆ-ಸಚಿವರನ್ನು ಕುರಿತು, ನುಡಿದನು-ಮುಂದೆ ಹೇಳುವಂತೆ ತಿಳಿಸುವನಾಗುತ್ತಾನೆ ||೩೭||

ದುಃಖವನ್ನು ನೀಗುವ ಪರಮೇಶ್ವರನಂತೆಯೂ, ಲಕ್ಷ್ಮೀನಿವಾಸಸ್ಥಾನವಾದ ಕೈಲಾಸ ಪರ್ವತವೂ ಕೂಡ ತನ್ನ ಸಮನಲ್ಲವೆಂದೂ, ಸಮುದ್ರರಾಜನಿಗಿಂತಲೂ ನಾನೇ ಅಧಿಕನೆಂದೂ ತೋರ್ಪಡಿಸುತ್ತಿದೆಯೊ ಎಂಬಂತೆ) ||೩೫|| ಪೌರನಾರಿಯರ ರತ್ನಖಚಿತವಾದ ಭಂಗಾರದ ಡಾಬೊ ಎಂಬ ಭ್ರಾಂತಿಯನ್ನೀಯುತ್ತಲೂ, ಭೂಮಿ ಎಂಬ ನಾರೀಮಣಿಯು ಧರಿಸಿದ ಕಂಠೀಸರವೋ ಎನ್ನುವ ಅನುಮಾನವನ್ನುಂಟುಮಾಡುತ್ತಲೂ, ಪೂರ್ವದಲ್ಲಿ ದೇವೇಂದ್ರನು ಪರ್ವತಗಳ ರೆಕ್ಕೆಯನ್ನು ಕತ್ತರಿಸುವಾಗ ತನ್ನ ವಜ್ರಾಯುಧವನ್ನು ಕೆಳಗಿರಿಸಲು, ಅದು ಹಾಗೆಯೇ ನಿಂತುಹೋಗಿರುವುದೆಂಬ ಶಂಕಾಸ್ಪದಮಾಗಿಯೂ, ಯಶಸ್ಸೆಂಬ ಬೆಳದಿಂಗಳಿನ ಆವರಣವೊ ಎಂಬಂತೆ ತೋರುವುದಾಗಿಯೂ ಇರುವ ಕೋಟೆಯಿಂದ ಸುತ್ತಲ್ಪಟ್ಟ ಚಂಪಕಾನಗರದಲ್ಲಿ ||೩೬|| ಹಂಸಧ್ವಜನೆಂಬ ಮಹಾರಾಜನೋರ್ವನು ಧೊರೆಯಾಗಿದ್ದನು ಅರ್ಜುನನು ಸೇನಾಸಹಿತನಾಗಿ ಯಜ್ಞಾಶ್ವದಿಂದೊಡಗೂಡಿ ನಮ್ಮ ದೇಶಕ್ಕೆ ಪ್ರವೇಶಮಾಡಿರುವನೆಂದು, ಆ ರಾಯನ ದೂತರು ಬಂದು ದೊರೆಗೆ ವಿಜ್ಞಾಪನೆಯಂ ಮಾಡಿಕೊಳ್ಳಲು, ತನ್ನ ಮನಸ್ಸಿನಲ್ಲಿಯೇ ಸ್ವಲ್ಪ ಹೊತ್ತು ಆಲೋಚಿಸಿದವನಾಗಿ, ತನ್ನ ಮುಖ್ಯ ಮಂತ್ರಿಗಳನ್ನು ಕರೆದು, ಶ್ರದ್ಧಾಯ, ಸುಮತಿ, ಪ್ರಮತಿ

ವನೆಮಗೆಕೃಷ್ಣ | ನೀಧರೆಯೊಳಿರುತಿರ್ದ್ದಮಿನ್ನೆಗಂ ಕಂಡುದಿಲ್ಲಚ್ಯುತನಮೂರುತಿಯನು || ಬಾಧಿಸುವದೀದೇಹಮುಂನೆರೆತೆರಗಳಿನ್ನು | ಸಾಧಿಸುವದೇನಸುರರಿಪುಬಂದುತನ್ನೊಳ್ವಿರೋಧಿಸಿ | ರೋಧಿಸಿ ದೊಡಿನಿತರಿಂದಳಿದೊಡೇನುಳಿದೊಡೇ ನೆಂದನಾನೃಪತಿ ನಗುತ ||೩೮|| ಆನರಾಧಿಪತಿನಿಶ್ಚೈಸಿದಂ ಕದನಮಂ | ಭೂನಾಥಕೇಳವನ ಕಟ್ಟಳೆಯನೆಲ್ಲಮಂ | ತಾನಾಳ್ವದೇಶದೋಳ್ತನ್ನ ನಗರದೊಳೇಕಪತ್ನೀವ್ರತದೊಳಿರದೊಡೆ || ದಾನವಾರಿಯಪೂಜೆಗೈಯದೊಡೆಸಂತತಂ | ದಾನಧರ್ಮಂಗಳಂಮಾಡದೊಡೆಗತಿ

---

ಟೀ|| ಈ ಧನಂಜಯನ - ಈ ಪಾರ್ಥನ, ತುರಗವನು - ಅಶ್ವವನ್ನು, ಈಗ_ಈ ಸಮಯದಲ್ಲಿ, ಕಟ್ಟದೊಡೆ_ಕಟ್ಟಿದ ಪಕ್ಷದಲ್ಲಿ, ಮಾಧವಂ_ ಮಧುಸೂದನನು, ತಾನೆ_ತನ್ನಷ್ಟಕ್ಕೆ ತಾನೆ, ಮೈದೋರುವನು - ಪ್ರತ್ಯಕ್ಷನಾಗುವನು, ಕೃಷ್ಣನು- ಕೃಷ್ಣಮೂರ್ತಿಯು, ಈ ಧರೆಯೊಳು_ಈ ಭೂಮಂಡಲದಲ್ಲಿ ಇರುತಿರ್ದ್ದಂ_ಇದ್ದೂ ಕೂಡ, ಇನ್ನೆಗಂ_ಇಷ್ಟು ದಿವಸವಾದರೂ, ಎನಗೆ_ನನಗೆ, ಕಂಡುದಿಲ್ಲ_ದರ್ಶನವನ್ನೇ ಕೊಟ್ಟಿಲ್ಲ, ಅಚ್ಯುತನ_ಶಾಶ್ವತವಾದ, ಮೂರುತಿಯನು_ ಆಕಾರವುಳ್ಳ ಕೃಷ್ಣ ಸ್ವಾಮಿಯನ್ನು, ಕಂಡುದಿಲ್ಲ_ನೋಡಲೇ ಇಲ್ಲವು, ನೆರೆ_ಕೂದಲು ಬಿಳುಪಾಗುವುದು, ತೆರೆಗಳು_ಮುಖವೂ ಶರೀರವೂ ತಿರಿಗಳಿಂದ ಕೂಡುವುದು ಇವುಗಳು, ಈ ದೇಹಮಂ - ಈ ನನ್ನ ಶರೀರವನ್ನು, ಬಾಧಿಸುವುದು - ತೊಂದರೆ ಪಡಿಸುವುದು, ಇನ್ನು- ವೃದ್ಧಾಪ್ಯವು ಪ್ರಾಪ್ತವಾದಮೇಲೆ, ಸಾಧಿಸುವುದು ಏನು-ಯಾವ ಕಾರ್ಯವು ತಾನೆ ಮಾಡಲಾಗುವುದು? ಅಸುರರಿಪು-ರಾಕ್ಷಸಾಂತಕನಾದ ಕೃಷ್ಣಮೂರ್ತಿಯು, ಬಂದು_ಬಿಜಯಂಗೈದು, ತನ್ನೊಳ್_ನನ್ನ ಕೂಡ, ವಿರೋಧಿಸಿದೊಡೆ-ದ್ವೇಷಮಾಡಿದರೆ, ಇನಿತರಿಂದ_ಇಷ್ಟುಮಾತ್ರದಿಂದಲೆ, ಅಳಿದೊಡೆ ಏಂ_ಮರಣವನ್ನು ಹೊಂದಿದರೇನು? ಉಳಿದೊಡೆ ಏಂ_ಜೀವವನ್ನಿಟ್ಟುಕೊಂಡಿದ್ದರೆ ತಾನೆ ಏನು ಪ್ರಯೋಜನ? ಎಂದ_ಎಂಬತೆರನಾಗಿ, ಆ ನೃಪತಿ-ಹಂಸಧ್ವಜನೆಂಬ ನರನಾಥನು, ನಗುತ_ಮುಗುಳ್ನಗೆಯನ್ನೈದುತ್ತ, ಎಂದನು_ನುಡಿದನು

ಅ|| ವಿ|| ಮೈದೋರು_ ಮೈಯ್ಯಂ ತೋರು (ಕ್ರಿ. ಸ.) ಅಚ್ಯುತ=ಚ್ಯುತಿ - ನಾಶವನ್ನು, ಅ_ಉಂಟಾಗಿಲ್ಲದವನು, **ಅಸುರರಿಪು-ಅಸುರರರಿಪು, (ಷ. ತ.)** ||೩೮||

ಟೀ|| ಆ ನರಾಧಿಪತಿ_ಆ ಹಂಸಧ್ವಜನೆಂಬ ನರೇಂದ್ರನು, ಕದನಮಂ_ಕಾಳಗವನ್ನು, ಮಾಡಬೇಕೆಂಬುದಾಗಿ, ನಿಶ್ಚೈಸಿದಂ_ಖಂಡಿತಮಾಡಿಕೊಂಡನು, ಭೂನಾಥ_ಜನಮೇಜಯ ಮಹೀಪತಿಯೇ! ಅವನ-ಆ ಹಂಸಧ್ವಜನ, ಕಟ್ಟಳೆಯನ್ನೆಲ್ಲಮಂ_ ನಿಯಮಿತ ಕಾರ್ಯಗಳನ್ನೆಲ್ಲಾ, ಕೇಳು_ ಲಾಲಿಸು, ತಾನು_ ತಾನಾದರೊ, ಆಳ್ವ- ರಾಜ್ಯಭಾರ ಮಾಡುವ, ದೇಶದೋಳ್_ನಾಡಿನಲ್ಲಿಯೂ, ತನ್ನ_ತಾನು ಮಾಡಿಕೊಂಡಿರತಕ್ಕ, ನಗರದೊಳ್_ರಾಜಧಾನಿಯಲ್ಲಿಯೂ, ಏಕಪತ್ನೀವ್ರತದೊಳು-ತನ್ನ ಧರ್ಮಪತ್ನಿಯಲ್ಲಿಯೇ ಆಸಕ್ತನಾಗಿ, ಇರದೊಡೆ_ಇರದೆ ಹೋದರೆ, ದಾನವಾರಿಯ-ರಾಕ್ಷಸರನ್ನೆಲ್ಲಾ ಧ್ವಂಸಮಾಡಿದ ಕೃಷ್ಣನ, ಪೂಜೆ_ ಪೂಜೆಯನ್ನು, ಗೈಯ್ಯದೊಡೆ-ಮಾಡದೆ ಹೋದರೆ, ಸತತಂ_ಅನವರತವೂ, ದಾನಧರ್ಮಂಗಳಂ_ದಾನ ಮತ್ತು ಧರ್ಮ ಇವುಗಳನ್ನು, ಮಾಡದೊಡೆ_ಗೈಯದಿದ್ದರೆ, ಗತಿಗೆಟ್ಟು_ಮಂದಮತಿಗಳಾಗಿ, ಹೀನಜಾತಿಗಳೊಡನೆ-ನೀಚವರ್ಣಾಶ್ರಮದವರ ಸಂಪರ್ಕದಲ್ಲಿ, ಕೂಡಿದೊಡೆ_ ನೆರದಪಕ್ಷದಲ್ಲಿ, ಪರಿವಾರದೋಳ್-ತನ್ನ ಸೇನಾಜನರಲ್ಲಿಯೂ, ಪ್ರಜೆಯೊಳು_ನಾಡಿನ ಜನರಲ್ಲಿಯೂ, ಸೈರಿಸಂ_ತಡೆಯಲಾರನು ||

ಅ|| ವಿ|| ದಾನ-ಕೊಡತಕ್ಕ ಪದಾರ್ಥಗಳನ್ನು ಮಂತ್ರೋದಕದಿಂದ ಧಾರೆಯೆರೆದು ದಕ್ಷಿಣೆಯ ಸಹಿತವಾಗಿ ಕೊಡು

---

ಎಂಬ ತನ್ನ ಆಪ್ತ ಮಂತ್ರಿಗಳಂ ಕುರಿತು, || ೩೭ || ಸಾವಧಾನ ಚಿತ್ತನಾಗಿ, ಎಲೈ ಅಮಾತ್ಯವರ್ಯರೇ! ಅರ್ಜುನನ ಕುದುರೆಯನ್ನು ನಾವು ಈಗ ಕಟ್ಟಿಹಾಕಿದರೆ ಕೃಷ್ಣನು ತನ್ನಷ್ಟಕ್ಕೆ ತಾನೆ ನನಗೆ ಪ್ರತ್ಯಕ್ಷನಾಗುವನು. ಕೃಷ್ಣಮೂರ್ತಿಯು ಈ ಭೂಮಿಯಲ್ಲಿ ಅವತರಿಸಿದ್ದರೂ ಕೂಡ ನಾವು ಇದುವರೆಗೂ ನೋಡಲೇ ಇಲ್ಲವು ತಲೆಯು ಬೆಳ್ಳಗಾಗಿ, ಮುಖವೂ, ಮೈಯೂ, ತಿರಿಗಳಿಂದ ಕೂಡಿ ವೃದ್ಧಾಪ್ಯವು ಪ್ರಾಪ್ತವಾಗುತ್ತ ಬಂದರೂ, ಕೃಷ್ಣನ ಸಂದರ್ಶನ ಸುಖವು ದೊರೆಯದೆ, ಈಗ ಅಕಸ್ಮಾತ್ತಾಗಿ ಒದಗಿದೆಯಾದ್ದರಿಂದ ನಾವು ಅರ್ಜುನನೊಂದಿಗೆ ಯುದ್ಧಮಾಡುವುದೇ ಯುಕ್ತವು. ಇದರಿಂದ ಕೃಷ್ಣಸ್ವಾಮಿಯು ನಮ್ಮನ್ನು ಕೊಂದರೂ ಕಾಪಾಡಿದರೂ ಇಹಪರಗಳೆರಡಕ್ಕೂ ಒಳ್ಳೆಯದು. ಆದ್ದರಿಂದ ಯುದ್ಧಮಾಡುವುದೆ ಸರಿಯೆಂದು ನಿಶ್ಚೈಸಿದನು. ||೩೮|| ಎಲೈ ಜನಮೇಜಯ ಭೂಕಾಂತನೆ! ಆ ಹಂಸಧ್ವಜಮಹಾರಾಜನು ಅನುಸರಿಸುತ್ತಲಿದ್ದ ನಿಯಮಂಗಳಂ ಪೇಳುವೆನು, ಸಾವಧಾನ ಚಿತ್ತದಿಂದ ಕೇಳುವನಾಗು. ಆ ಧರಾವಲ್ಲಭನ ದೇಶದಲ್ಲಿಯೂ, ಅವನ ರಾಜಧಾನಿಯಲ್ಲಿಯೂ ವಾಸ ಮಾಡುವ ಸಕಲ ಪ್ರಜೆಗಳೂ, ತನ್ನ ಸೈನ್ಯದ ಅಶೇಷರೂ, ಏಕಪತ್ನೀವ್ರತವನ್ನಾಚರಿಸುತ್ತ, ರಾಕ್ಷಸಾಂತಕನಾದ ಕೃಷ್ಣನ ಪೂಜೆಯನ್ನು ಅಹೋರಾತ್ರಿಯಲ್ಲಿಯೂ ನಡೆಯಿಸಿಕೊಂಡು, ದಾನಧರ್ಮಪರೋಪಕಾರ ಬುದ್ಧಿಯುಳ್ಳವರಾಗಿ, ಹೀನ

ಗೆಟ್ಟು | ಹೀನಜಾತಿಗಳೊಡನೆಕೂಡಿದೊಡೆಸ್ವೈರಿಸಂಪರಿವಾರದೊಳ್ಪ್ರಜೆಯೊಳು || ೩೯ || ಅಂತುಮದರಿಂದೆಲ್ಲರೇಕಪತ್ನೀವ್ರತರ | ನಂಪೂಜಾರತರ್ಸೌಭಾಗ್ಯಸಂಯುತ | ರ್ಸಂತತಮಲಂಕಾರಮಂಡಿತರ್ನೀತಿಶಾಸ್ತ್ರಸ್ಮೃತಿವಿಚಾರಕೃತರು || ಕಂತುಶರನಿರ್ಜಿತರ್ಮದಲೋಭವರ್ಜಿತ | ರ್ಸಂತೋಷಭಾಷಿತರ್ಸ್ಸದ್ಗುಣವಿಭೂಷಿತರ್ಚಿಂತಿತ ಫಲಾಗತರ್ಸ್ಸಕಲ ಭೋಗಾನ್ವಿತರ್ಪ್ಪರಿವಾರದೋಳ್ಪ್ರಜೆಯೊಳು || ೪೦ || ಏಕಪತ್ನೀವ್ರತಂಪ್ರಾಯತಂಕೋಮಲಂ | ಮಾಕಾಂತಕಿಂಕರನಲಂಕಾರಪೂಜ್ಯಂಶು | ಭಾಕಾರನಾರೋಗ್ಯಪಟುಕರಣ ನಿರ್ಮ್ಮಲನ ಕೈತವಂ ಬಲವಂತನು || ಭೀಕರಪರಾಕ್ರಮ ವಿಶಾರದಂಸಂಗರವಿ | ವೇಕಿಯೆಂಬಿ

---

ವುದು, ಧರ್ಮ-ಕೊಡಬೇಕೆಂದು ಉದ್ದೇಶ ಮಾಡಿದ ವಸ್ತುವನ್ನು ಉಚಿತವಾಗಿ ಕೊಟ್ಟು ಬಿಡುವುದು || ೩೯ ||

ಟೀ|| ಅಂತು-ಹಾಗೆ, ಅದರಿಂದ-ಈ ವಿಧವಾದ ದೊರೆಯ ಅಪ್ಪಣೆಯಿಂದ, ಪರಿವಾರದೋಳ್-ಸೈನ್ಯದಲ್ಲಿಯೂ, ಪ್ರಜೆಯೊಳು-ಪುರನಿವಾಸಗಳಲ್ಲಿಯೂ, ಎಲ್ಲರೂ-ಸಮಸ್ತರೂ, ಏಕಪತ್ನೀವ್ರತರು-ತಮ್ಮ ತಮ್ಮ ಧರ್ಮಪತ್ನಿಯರಲ್ಲಿಯೇ ಆಸಕ್ತರಾಗಿರುವರೇವಿನಾ ಪರಸ್ತ್ರೀಗಮನವನ್ನು ಕಂಡವರೇ ಆಗಲಿಲ್ಲವು. ಅನಂತ-ಅಂತ್ಯವೇ ಇಲ್ಲದ ಮಹಾವಿಷ್ಣುವಿನ, ಪೂಜಾ-ಪೂಜೆ ಮಾಡುವುದರಲ್ಲಿ, ರತರು-ಆಸಕ್ತಿಯನ್ನುಳ್ಳವರು, ಸೌಭಾಗ್ಯಸಂಯುತರು-ಐಶ್ವರ್ಯದಿಂದಕೂಡಿದವರು, ಸಂತತಂ-ಯಾವಾಗಲೂ, ಅಲಂಕಾರಮಂಡಿತರು-ಒಡವೆಯಿಂದ ಕಾಂತಿಯುಕ್ತರಾಗಿರುವರು, ನೀತಿಶಾಸ್ತ್ರಸ್ಮೃತಿವಿಚಾರಕೃತರು-ನೀತಿ-ನ್ಯಾಯಶಾಸ್ತ್ರವು, ಶಾಸ್ತ್ರ-ಮೀಮಾಂಸಾದಿಗಳು, ಸ್ಮೃತಿ-ಪರಾಶರ, ಗೌತಮ ಮೊದಲಾದರು ಮಾಡಿದ ಸೂತ್ರಗಳು, ಇವುಗಳ, ವಿಚಾರ-ಸಂಭಾಷಣೆಯನ್ನು, ಕೃತರು-ಮಾಡುತ್ತಲಿರುವರು, ಕಂತುಶರ-ಮದನನ್ನು, ನಿರ್ಜಿತರ್-ಸೋಲಿಸತಕ್ಕದರು, ಮದ-ಅಹಂಕಾರವು, ಲೋಭ-ಕೃಪಣತೆಯು, ಇವುಗಳಿಂದ, ವರ್ಜಿತರು-ಬಿಡುಗಡೆಯನ್ನು ಹೊಂದಿದವರು, ಸಂತೋಷ-ಆಹ್ಲಾದವನ್ನು ಉಂಟುಮಾಡುವಂತೆ, ಭಾಷಿತರ್-ಮಾತನಾಡತಕ್ಕವರು, ಸದ್ಗುಣ-ಒಳ್ಳೇಗುಣಗಳಿಂದ, ವಿಭೂಷಿತರು-ಪ್ರಕಾಶಮಾನರಾದವರು, ಚಿಂತಿತ-ಕೋರಿದ, ಫಲ-ಇಷ್ಟಾರ್ಥಗಳನ್ನು, ಆಗತರು-ಹೊಂದಿರತಕ್ಕವರು, ಸಕಲ-ಎಲ್ಲಾವಿಧವಾದ, ಭೋಗ-ಸುಖಪರಂಪರೆಯಿಂದ, ಅನ್ವಿತರು-ಒಡಗೂಡಿದವರು || ೪೦ ||

ಟೀ|| ಏಕಪತ್ನೀವ್ರತಂ-ಮದುವೆ ಮಾಡಿಕೊಂಡಿರುವ ಹೆಂಡರಲ್ಲಿಯೇ ಆಸಕ್ತನು, ಪ್ರಾಯತಂ-ಯೌವನ ಸಮರ್ಥನು, ಕೋಮಲಂ-ಮೃದುವಾದ ಶರೀರವುಳ್ಳವನು, ಮಾಕಾಂತ-ಲಕ್ಷ್ಮೀರಮಣನ, ಕಿಂಕರನು-ಸೇವಕನು, ಅಲಂಕಾರ-ಅಲಂಕಾರಗಳಿಂದ, ಪೂಜ್ಯನು-ಪೂಜಿಸಲ್ಪಡತಕ್ಕವನು, ಶುಭಾಕಾರನು-ಮಂಗಳಕರವಾದ ಆಕೃತಿಯುಳ್ಳವನು, ಆರೋಗ್ಯ-ಕಾಯಿಲೆಯಿಲ್ಲದ, ಪಟು-ಸಮರ್ಥವಾದ, ಕರಣ-ಅವಯವಗಳಿಂದ, ನಿರ್ಮಲನು-ಪವಿತ್ರನಾದವನು. ಅಕೈತವಂ-ಕೃತ್ರಿಮ ರಹಿತನು, ಬಲವಂತನು-ಶಕ್ತಿಯಿಂದೊಡಗೂಡಿದವನು, ಭೀಕರ-ಭಯವನ್ನುಂಟುಮಾಡುವ, ಪರಾಕ್ರಮ-ಸಾಹಸದಿಂದ, ವಿಶಾರದಂ-ಸಂಪನ್ನನು, ಸಂಗರ-ರಣದಲ್ಲಿ, ವಿವೇಕಿ-ಬುದ್ಧಿಶಾಲಿಯು, ಎಂಬ-ಎನ್ನತಕ್ಕ, ಇನಿತುಗುಣಂ-ಇಷ್ಟು ಗುಣಗಳು, ಓರ್ವನೊಳು-ಒಬ್ಬನ ಬಳಿಯಲ್ಲಿಯೆ, ಇರಲ್ಕೆ-ಇರಲಾಗಿ, ಅವನನೆ-ಅಂಥ ಗುಣಯುಕ್ತನಾದವನನ್ನೆ, ಕರದು-ಬರಮಾಡಿಕೊಂಡು, ಮನ್ನಿಸುವನು-ಮರ್ಯಾದೆಮಾಡುವನು, ಅಲ್ಲದವನು-ಮೇಲೆ ಹೇಳಿದ ಗುಣರಹಿತರನ್ನು, ಉಳಿವನಂತೆ-ಮನ್ನಣೆಮಾಡುತ್ತಿರಲಿಲ್ಲವು ಆದ ಕಾರಣ, ಎಲ್ಲರು-ಸಮಸ್ತರು, ಈತೆರದ-ಈ ಬಗೆಯಾದ, ನರರು-ಗುಣಶೀಲರು, ಆದರು-ಆಗಿದ್ದರು.

ಅ|| ವಿ|| ಮಾಕಾಂತಕಿಂಕರಂ-ಮಾ-ಲಕ್ಷ್ಮಿಯು, ಕಾಂತ (ಷ. ತ.) ಮಾಕಾಂತನಕಿಂಕರ (ಷ. ತ.) ಭೀಕರಪರಾಕ್ರಮವಿಶಾರದರ್-ಭೀ-ಭಯವನ್ನು-ಕರ-ಉಂಟುಮಾಡುವುದು, (ಕೃ. ವೃ.) ಭೀಕರವಾದ ಪರಾಕ್ರಮ (ವಿ. ಪೂ.) ಭೀಕರ

---

ಜಾತಿಯರೊಂದಿಗೆ ಸೇರದಿರಬೇಕೆಂಬದಾಗಿ ಅಪ್ಪಣೆಯುಂ ಮಾಡಿದ್ದನು. || ೩೯ || ಇದರಿಂದ ಆತನ ರಾಜ್ಯದಲ್ಲಿಯೂ, ರಾಜಧಾನಿಯಲ್ಲಿಯೂ ಇರುವ ಪ್ರಜೆಗಳೂ, ಪರಿವಾರದವರೂ ಸಹ, ಏಕ ಪತ್ನೀ ವ್ರತವನ್ನವಲಂಭಿಸಿ, ಮಾಧವನ ಪೂಜೆಯಲ್ಲಿ ಆಸಕ್ತರಾಗಿ, ಧನಕನಕ ವಸ್ತ್ರಾಭರಣಾದಿ ಐಶ್ವರ್ಯ ಯುಕ್ತರಾಗಿ, ಅಲಂಕಾರದಲ್ಲಿ ಕುತೂಹಲವುಳ್ಳವರಾಗಿ, ನ್ಯಾಯಶಾಸ್ತ್ರ ಪರಾಶರ, ಗಾರ್ಗ್ಯ, ಗೌತಮಾದಿಗಳಿಂ ರಚಿತವಾದ ಸಿದ್ಧಾಂತಗಳನ್ನು ಯಾವಾಗಲೂ ವಿಚಾರಮಾಡುತ್ತ ಜಿತೇಂದ್ರಿರಾಗಿಯೂ, ಅಹಂಕಾರ, ಕೃಪಣತ್ವಮೊದಲಾದ ದುಸ್ಸ್ವಭಾವಗಳನ್ನು ದೂರಮಾಡಿ ಸದ್ಗುಣ ಸಪನ್ನರಾಗಿ ತಮತಮಗೆ ಬೇಕಾದ ಇಷ್ಟಾರ್ಥಗಳಂ ಪಡೆದುಕೊಂಡು, ಸೌಖ್ಯ ಸಮೃದ್ಧಿಯಿಂದ ಕೂಡಿರುವರು. || ೪೦ || ಎಲೈ ಜನಮೇಜಯನೆ! ಕೇಳು, ಇದೂ ಅಲ್ಲದೆ ಆ ಹಂಸಧ್ವಜನು ಏಕಪತ್ನೀ ವ್ರತವುಳ್ಳವರಾಗಿಯೂ, ಯೌವನ ಸಂಪನ್ನರಾಗಿಯೂ, ಮೃದು ದೇಹವುಳ್ಳವರಾಗಿ ವಿಷ್ಣು ಭಕ್ತರಾಗಿಯೂ, ಮಂಗಳಕರವಾದ ಶರೀರಕ್ಕೆ ನೆಲೆಯಾಗಿಯೂ, ಧೃಡಕಾಯರಾಗಿಯೂ, ಹೆಚ್ಚಾದ ಪರಾಕ್ರಮದಿಂದ ಕೂಡಿ ಯುದ್ಧದಲ್ಲಿ ಚತುರರಾಗಿಯೂ ಇರುವ ಜನರನ್ನೇ ಪ್ರೀತಿಸುತ್ತಲಿದ್ದ ಕಾರಣ, ಆ ನಾಡಿನ ಎಲ್ಲಾಜನರೂ ಮೇಲೆ

ನಿತುಗುಣವೋರ್ವನೊಳಿರಲ್ಕವನ | ನೇಕರೆದು ಮನ್ನಿಸುವನಲ್ಲದರನುಳಿವನಂತೆಲ್ಲರೀತೆಂದನವರು || ೪೧ || ಉಣಲುಡಲ್ತೊಡಲೀಯಲಿರಲ್ಕೆದಲುಂಟಾಗಿ | ದಣಿದಿಹುಪಲಂಕಾರಪುಣ್ಯದಿಂವಸ್ತ್ರಭೂ | ಷಣಗಂಧಮಾಲ್ಯಾನುಲೇಪನಂಗಳ ಪರಿಮಳಂಗಳಿಂಸೊಗಸಿರ್ಪುದು | ಸೆಣಸುಗಳ ಬಿರುದುಗಳಪೆಚ್ಚಿರ್ದಮುಡುಹುಗಳ | ಹೊಣಕೆಗಳತಡಹುಗಳಕಲಿತನದಕಡುಹುಗಳ | (ಕುದಿವು) ರಣದವಕದಿಂಕುಣಿವುತಿಹುದುಹಂಸಧ್ವಜನಪರಿವಾರಮನುದಿನದೊಳು || ೪೨ || ಮಣಿಮಯವರೂಥಮೆಪ್ಪತ್ತೊಂದುಸಾವಿರಂ | ಗಣನೆಗಿಪ್ಪತ್ತೊಂದುಸಾವಿರಂಗಜತುರಗೆ | ಮೆಣಿಸುವರೆಲಕ್ಕಂಪದಾತಿ ಸಾಸಿರ ಮುಳಿಯೆಲಕ್ಷವೋರ್ವನ ಬಳಿಯೊಳು || ಗಣಿಕೆಗಿಹುದಿನಿತುಬಲಮಿನಿತುಬಲದಿಂದವೆಂ | ತೆಣಿಸಿರ್ಪದಳಪತಿಗಳೆಪ್ಪತ್ತುಮಂದಿಸಂ | ದಣಿಸಿಬರುತಿಹುದುಹಂಸಧ್ವಜನೃಪಾಲಕನುಪೊರಮಟ್ಟುನಡೆವೆಡೆಯೊಳು || ೪೩ || ಆತಂಗೆಧನಬಲಚಂದ್ರಸೇನಂಚಂದ್ರ | ಕೇತುವರ

ಪರಾಕ್ರಮದಿಂದ ವಿಶಾರದರ್ (ತೃ. ತ.) || ೪೧ ||

ಟೀ|| ಹಂಸಧ್ವಜನ-ಹಂಸಧ್ವಜನೆಂಬರಸನ, ಪರಿವಾರಂ-ಸೇನೆಯು, ಅನುದಿನದೊಳು - ದಿನಂಪ್ರತಿಯಲ್ಲಿಯೂ, ಉಣಲು-ಊಟಮಾಡುವುದಕ್ಕೂ, ಉಡಲು-ಬಟ್ಟೆಗಳಿಗೂ, ತೊಡಲು-ಮೈಗೆ ಹಾಕಿಕೊಳ್ಳುವುದಕ್ಕೂ, ಈಯಲು-ಇತರರಿಗೆ ಕೊಡುವುದಕ್ಕೂ, ಇರಲು-ತಮ್ಮಲ್ಲಿ ಉಳಸಿಕೊಂಡು ಆಪದ್ಧನವಾಗಿ ಮಾಡಿಕೊಳ್ಳುವುದಕ್ಕೂ. ಐದಲು-ಹೊಂದುವುದಕ್ಕೂ, ಉಂಟಾಗಿ-ಇರತಕ್ಕವರಾಗಿ, ದಣಿದು-ಸಂತುಷ್ಟರಾಗಿ, ಇಪ್ಪದು-ಇರುವುದು, ಅಲಂಕಾರ-ಸಿಂಗರಿಸಿಕೊಳ್ಳುವುದು, ಪುಣ್ಯದಿಂ-ಮನ್ನಣೆಯಿಂದಲೂ, ವಸ್ತ್ರ-ಉಡಿಗೆಗಳು, ಭೂಷಣ-ತೊಡಿಗೆಗಳು, ಗಂಧ-ಸುಗಂಧ ದ್ರವ್ಯಗಳು, ಮಾಲ್ಯ-ಮುತ್ತಿನ ಹಾರಗಳು, ಮತ್ತು ಪುಷ್ಪಮಾಲಿಕೆಗಳು, ಅನುಲೇಪನಂಗಳ-ಗಂಧ ಮೊದಲಾದುವುಗಳ, ಪರಿಮಳಗಳಿಂ-ಸುವಾಸನೆಯಿಂದ, ಸೊಗಸಿರ್ಪುದು-ಅಲಂಕಾರಯುಕ್ತವಾಗಿರುವುದು, ಸೆಣಸುಗಳ-ಯುದ್ಧಾಭಿಲಾಷೆಗಳ, ಬಿರುದುಗಳ ಬಿರುದಾವಳಿಗಳ, ಪೆಚ್ಚಿರ್ದ-ಹೆಚ್ಚಾಗಿದ್ದ, ಮುಡುಹುಗಳು-ಭುಜಗಳು, ಹೊಣಕೆಗಳ-ಸಹಿಸಲು ಸಾಧ್ಯವಾಗಿರುವ, ತಡಹುಗಳ - ವೈರಿಗಳನ್ನಡ್ಡಗಿಸುವ, ಕಲಿತನದ-ವೀರಭಾವದ, ಕಡಹುಗಳ-ಕಟ್ಟಳೆಗಳ, ರಣದ-ಕದನದ, ತವಕದಿಂ-ಆತುರದಿಂದ, ಕುಣಿವುತ-ನಾಟ್ಯವಂ ಮಾಡುತ್ತ, ಇಹುದು-ಇವೆ || ೪೨ ||

ಟೀ|| ಮಣಿಮಯ-ರತ್ನಖಚಿತವಾದ, ವರೂಥಂ-ತೇರು, ಎಪ್ಪತ್ತೊಂದುಸಾವಿರಂ-ಎಪ್ಪತ್ತೊಂದು ಸಹಸ್ರ ಸಂಖ್ಯೆಯಿಂದ ಕೂಡಿರುವುದು, ಗಣನೆಗೆ-ಲೆಕ್ಕಕ್ಕೆ ಬಂದಿರುವುದು, ಇಪ್ಪತ್ತೊಂದುಸಾವಿರ- ಇಪ್ಪತ್ತೊಂದು ಸಹಸ್ರ ಸಂಖ್ಯೆಯ, ಗಜಂ-ಆನೆಗಳು, ಎಣಿಸುವರೆ-ಗಣಿಸಿದಲ್ಲಿ, ತುರಂಗಂ-ಹಯವು, ಲಕ್ಕಂ-ಒಂದು ಲಕ್ಷವು, ಪದಾತಿ-ಕಾಲ್ಬಲವು, ಸಾಸಿರ-ಸಹಸ್ರ ಲಕ್ಷಂ-ಲಕ್ಷವು, ಓರ್ವನ ಬಳಿಯೊಳು-ಒಬ್ಬನ ಸಮೀಪದಲ್ಲಿ, ಗಣಿತಕೆ-ಲೆಕ್ಕಕ್ಕೆ, ಉಳಿಯೆ- ನಿಲ್ಲಲು, ಇನಿತುಬಲಂ-ಇಷ್ಟು ಸೈನ್ಯವು, ಇಹುದು-ಇರುವುದು, ಇನಿತುಬಲದಿಂದ-ಅಪರಿಮಿತವಾದ ಇಂಥಾ ಸೇನೆಯಿಂದ, ವೆಂತಣಿಸಿರ್ಪ-ನೆರದಿರತಕ್ಕ, ದಳಪತಿಗಳು-ಸೇನಾಧಿಕಾರಿಗಳು, ಎಪ್ಪತ್ತುಮಂದಿ-ಎಪ್ಪತ್ತೆಂಬ ಸಂಖ್ಯೆಯುಳ್ಳವರು, ಹಂಸಧ್ವಜನೃಪಾಲಕನ-ಹಂಸಧ್ವಜನೆಂಬ ನರನಾಥನು, ಪೊರಮಟ್ಟು-ಹೊರಟು, ನಡೆವೆಡೆಯೋಳ್-ಬರುವ ಮಾರ್ಗದಲ್ಲಿ, ಸಂದಣಿ - ಒತ್ತಾಗಿ, ಬರುತಿರ್ದುದು-ಬರುತ್ತಲಿತ್ತು. || ೪೩ ||

ಟೀ|| ಆತಂಗೆ-ಹಂಸಧ್ವಜ ರಾಯನಿಗೆ, ಧನಬಲಂ- ಧನಬಲನೆಂಬ, ಚಂದ್ರಸೇನಂ - ಚಂದ್ರಸೇನನೆಂದು ಕರೆಯು

ಹೇಳಿದ ಸದ್ಗುಣಾನ್ವಿತರಾಗಿಯೇ ಇದ್ದರು. ಇಂಥ ಸುಗುಣಗಳಿಲ್ಲದವನನ್ನು ಅವನ ರಾಜ್ಯದಲ್ಲಿಯೆ ಇರಗೊಳಿಸುತ್ತಿರಲಿಲ್ಲವು||೪೧|| ಈರೀತಿಯಾದ ರಾಜಾಜ್ಞೆಯಿಂದ ಆ ದೇಶದ ಪ್ರಜೆಗಳೆಲ್ಲರೂ ಸನ್ಮಾರ್ಗ ಪ್ರವರ್ತಕರಾಗಿ ವಿಷ್ಣು ಪೂಜಾನಿರತರಾಗಿ, ಸುಖವಾಗಿದ್ದರಲ್ಲದೆ ಆ ರಾಯನ ಸೇನಾಜನರೂ ಕೂಡ ಅನ್ನ, ಬಟ್ಟೆ ಒಡವೆಗಳು, ಮೊದಲಾದ ಸುಖೋಪಕರಣಗಳಲ್ಲಿ ಯಾವುದಕ್ಕೂ ಕೊರತೆಯಿಲ್ಲದೆ, ಯಾವಾಗಲೂ ವಸ್ತ್ರಾಭರಣ, ಗಂಧ ಪುಷ್ಪಾದಿಗಳಿಂ ಕೂಡಿ, ಅಗಲವಾದ ಎದೆಯೂ, ಉನ್ನತವಾದ ಭುಜ ಮೂಲವೂ ಉಳ್ಳವರಾಗಿಯೂ, ದೃಢಾಂಗರಾಗಿಯೂ ಇದ್ದು, ಅನೇಕ ಬಿರುದಾವಳಿಗಳಿಂ ಮೆರೆಯುತ್ತ, ಯುದ್ಧಾಕಾಂಕ್ಷಿಗಳಾಗಿರುತ್ತಿದ್ದರು || ೪೨ || ಎಲೈ ಜನಮೇಜಯನೆ ! ಆ ಮಹಾರಾಜನಾದ ಹಂಸಧ್ವಜನ ಸೇನಾವಿವರವನ್ನು ನಿನಗ ಇನ್ನು ಹೇಳುವೆನು. ಕೇಳು ಆ ರಾಜೇಂದ್ರನ ಸೇನೆಗೆ ಮುಖಂಡರಾದ ಎಪ್ಪತ್ತುಮಂದಿ ಪ್ರಧಾನ ದಳಪತಿಗಳುಂಟು. ಅವರಲ್ಲಿ ಪ್ರತಿಯೊಬ್ಬನ ಬಳಿಯಲ್ಲಿಯೂ, ಎಪ್ಪತ್ತೊಂದು ಸಾವಿರ ರತ್ನಖಚಿತವಾದ ರಥಗಳೂ, ಇಪ್ಪತ್ತೊಂದು ಸಾವಿರ ಗಜಗಳೂ, ಒಂದು ಲಕ್ಷ ಕುದುರೆಗಳೂ, ಒಂದು ಕೋಟಿ ಕಾಲ್ಬಲವೂ ಇತ್ತು. ಹಂಸಧ್ವಜರಾಯನು ಯುದ್ಧಕ್ಕೆ ಹೊರಡಲು ಎಪ್ಪತ್ತು ಮಂದಿ ಮುಖ್ಯ ಸೇನಾನಾಯಕರೂ ತಮ್ಮತಮ್ಮ ಸೇನೆಯೊಂದಿಗೆ ಹೊರಟವರಾದರು || ೪೩ || ಹಂಸಧ್ವಜನೆಂಬ ಚಂಪಕಾನಗರದ

ಚಂದ್ರದೇವಂವಿಡೂರಥನುವಿ | ಖ್ಯಾತನಹಧರ್ಮವಾಹಂ ನ್ಯಾಯವರ್ತಿಯೆಂಬವರನುಜರೇಳುಮಂದಿ || ಜಾತರ್ಸುದರ್ಶನಸುಧನ್ವಸುಮನಸಸುರಥರೀತೆರದಿನಾಲ್ವರಿವರೆಲ್ಲರ್ಸಮರ್ಥರ್ಮಹಾತಿಬಲರಮಲ ಧರ್ಮಜ್ಞರಪ್ರತಿಮರ್ಪರಾಕ್ರಮಯುತರ್ವೀರರು || ೪೪ || ವರಶಂಖಲಿಖಿತರೆಂಬವರಣ್ಣತಮ್ಮಂದಿ | ರಿರಲವರೊಳಾಲಿಖಿತನಾಶ್ರಮಕೆಶಂಖನೈ | ತರುತಪೇಳದೆ ಬಿದ್ದಪಣ್ಣನಾಸ್ವಾದಿಸಲ್ಕರಿದಿವಂದೋಷಿಯೆಂದು || ಅರಮನೆಗೆತಂದೊಪ್ಪಿಸಲ್ಕಾನೃಪಂಕರವ | ನರಿಯಲ್ಕೆಮತ್ತೆಲಿಖಿತನತಪೋಬಲದಿಂದ | ಮರಳಿಕೈಯಂಪಡೆದನಾಶಂಖನನಗೀರ್ವರುಂಪುರೋಹಿತರವಂಗೆ || ೪೫ || ಆಶಂಖಲಿಖಿತರೆಂದವೊಲಾತನಿರ್ದಪನಿ | ಳೇಶಕೇಳವನದಿನ್ನೊಂದುಕಟ್ಟಳೆಯುಂಹು | ತಾಶನಜ್ವಾಲೆಯಿಂಕಾಯ್ದುದ್ಕ್ಕುವೆಣ್ಣೆಗೊಪ್ಪರಿಗೆಯೋಳ್ತಾಂಸಮರಕೆ || ಆಶು

---

ಲ್ಪಡುವ, ಚಂದ್ರಕೇತು-ಚಂದ್ರಕೇತುವೆಂಬ ನಾಮಧೇಯವುಳ್ಳ, ವರ-ಶ್ರೇಷ್ಠನಾದ, ಚಂದ್ರದೇವಂ-ಚಂದ್ರದೇವನೆಂಬ ನಾಮಧೇಯವುಳ್ಳ, ವಿಡೂರಥನೆಂಬ ಪ್ರಸಿದ್ಧಿಯಂ ಪಡೆದ, ವಿಖ್ಯಾತನು-ಹೆಸರುವಾಸಿಯಾದವನು, ಅಹ-ಆಗಿರತಕ್ಕ, ಧರ್ಮವಾಹಂ-ಧರ್ಮವಾಹನನೆಂದು ಕರೆಯಲ್ಪಡುವ, ನ್ಯಾಯಮೂರ್ತಿಯು-ನ್ಯಾಯಮೂರ್ತಿ ಎಂದು ಹೆಸರುಗೊಂಡಿರತಕ್ಕ, ಅನುಜರು-ಒಡಹುಟ್ಟಿದವರು, ಏಳುಮಂದಿ-ಏಳು ಜನರು, ಜಾತರ್-ಮಕ್ಕಳಾದರೊ, ಸುದರ್ಶನ, ಸುಧನ್ವ, ಸುಮನಸ, ಸುರಥರು ಎಂಬ ಹೆಸರಿನಿಂದ ಕೂಡಿದವರು, ಈತೆರದಿ-ಈ ರೀತಿಯಾಗಿ, ನಾಲ್ವರ್-ನಾಲ್ಕುಮಂದಿಯು. ಇವರೆಲ್ಲರ್-ಈ ನಾಲ್ಕು ಜನವೂ, ಸಮರ್ಥರ್-ಪರಾಕ್ರಮಿಗಳು, ಮಹ-ಹೆಚ್ಚಾದ, ಅತಿಬಲರ್-ಪರಾಕ್ರಮದಿಂದ ಮೆರೆಯತಕ್ಕವರು, ಅಮಲ-ಶ್ರೇಷ್ಠವಾದ, ಧರ್ಮಜ್ಞರ್-ಧರ್ಮವನ್ನು ಬಲ್ಲವರು, ಅಪ್ರತಿಮರ್-ಎದುರಿಲ್ಲದವರು, ಪರಾಕ್ರಮಯುತರ್-ಸಾಮರ್ಥ್ಯದಿಂದ ಕೂಡಿದವರು, ವೀರರು-ರಣಧೀರರು ಆಗಿದ್ದವರಾದರು. || ೪೪ ||

ಟೀ|| ವರ-ಉತ್ತಮರಾದ, ಶಂಖಲಿಖಿತರು-ಶಂಖಲಿಖಿತರೆಂಬ ಹೆಸರುಳ್ಳ, ಅಣ್ಣತಮ್ಮಂದಿರು-ಒಡಹುಟ್ಟಿದವರು, ಇರಲು-ಇರಲಾಗಿ, ಅವರೊಳು-ಆ ಅಣ್ಣತಮ್ಮಂದಿರೀರ್ವರಲ್ಲಿ, ಆಲಿಖಿತನ-ಆ ಲಿಖಿತನೆನ್ನುವನ. ಆಶ್ರಮಕೆ-ತಪೋವನಕ್ಕೆ, ಶಂಖನು-ಶಂಖನೆಂಬುವನು, ಐತರುತ-ಬರುತ್ತ, ಪೇಳದೆ-ಒಡೆಯನಿಗೆ ಹೇಳದೆ, ಬಿದ್ದಪಣ್ಣನು-ನೆಲದಲ್ಲಿ ಬಿದ್ದಿದ್ದ ಹಣ್ಣನ್ನು. ಆಸ್ವಾದಿಸಲ್ಕೆ-ತಿನ್ನಲಾಗಿ, ಇವಂ-ಲಿಖಿತನಾದರೊ, ಅರಿದು-ಇದನ್ನು ಕಂಡು, ದೋಷಿಯೆಂದು-ತಪ್ಪಿಗೆ ಗುರಿಯಾದವನೆಂದು, ಅರಮನೆಗೆತಂದು-ರಾಜಭವನಕ್ಕೆ ಕರೆದುಕೊಂಡು ಬಂದು, ಒಪ್ಪಿಸಲ್ಕೆ-ಸೇರಿಸಲಾಗಿ, ಆನೃಪಂ-ಆ ಹಂಸಧ್ವಜನೆಂಬರಸು, ಕರವನು-ಕಳ್ಳತನ ಮಾಡಿದ ಹಸ್ತವನ್ನು, ಅರಿಯಲ್ಕೆ-ಕತ್ತರಿಸಿಹಾಕಲು, ಮತ್ತೆ-ಪುನಃ, ಲಿಖಿತನ-ಲಿಖಿತನೆಂಬುವನ, ತಪೋಬಲದಿಂದ-ತಪಃಪ್ರಭಾವದಿಂದ, ಕೈಯಂ-ಕರವನ್ನು, ಆಶಂಖನು-ಆ ಶಂಖನೆಂಬುವನು, ಪಡೆದನು-ತಾಳಿದನು, ಅವರೀರ್ವರುಂ-ಆ ಶಂಖ ಲಿಖಿತರೆಂಬ ಇಬ್ಬರು ಅಣ್ಣತಮ್ಮಂದಿರೂ, ಅವಂಗೆ-ಆ ಹಂಸಧ್ವಜನೆಂಬ ರಾಯನಿಗೆ, ಪುರೋಹಿತರು-ಹವ್ಯಕವ್ಯ ಯಜ್ಞಮೊದಲಾದವನ್ನು ಮಾಡಿಸತಕ್ಕವರು, ಆಗಿದ್ದವರಾದರು || ೪೫ ||

ಟೀ|| ಆಶಂಖಲಿಖಿತರು-ಆ ಶಂಖಲಿಖಿತರೆಂಬುವರು, ಎಂದವೊಲ್-ಹೇಳಿದಂತೆ, ಆತಂ-ಆ ಹಂಸಧ್ವಜನು, ಇರ್ದಪನು-ಇರುತ್ತಿರುವನು, ಇಳೇಶ-ಭೂಕಾಂತನಾದ ಜನಮೇಜಯನೆ! ಅವನದು-ಆ ರಾಜನ ಸಂಬಂಧವಾದ, ಇನ್ನೊಂದುಕಟ್ಟಳೆಯುಂ-ಮತ್ತೊಂದು ನಿಯಮವನ್ನು, ಕೇಳು-ಲಾಲಿಸು, ತಾಂ-ತಾನು, (ಹಂಸಧ್ವಜನು), ಸಮರಕೆ-ಕಾಳಗಕ್ಕೆ, ಆಶುವಿಂ-ಜಾಗ್ರತೆ

---

ರಾಜನಿಗೆ ಧನಬಲ, ಚಂದ್ರಸೇನ, ಚಂದ್ರಕೇತು, ಚಂದ್ರದೇವ, ವಿಡೂರಥ, ಧರ್ಮವಾಹ, ನ್ಯಾಯವರ್ತಿ ಎಂಬ ಏಳುಮಂದಿ ಸಹೋದರರೂ, ಸುದರ್ಶನ, ಸುಧನ್ವ, ಸುಮನಸ, ಸುರಥರೆಂಬ ನಾಲ್ವರು ಮಕ್ಕಳೂ ಇದ್ದರು, ಅವರೆಲ್ಲರೂ, ಮಹಾಪರಾಕ್ರಮಿಗಳೂ, ಧರ್ಮಶಾಸ್ತ್ರಾದಿಗಳಲ್ಲಿ ಚತುರರೂ, ವೀರರ ವೀರರೂ ಆಗಿದ್ದರು || ೪೪ || ಈ ರಾಜೇಂದ್ರನಿಗೆ, ಅಣ್ಣತಮ್ಮಂದಿರಾಗಿದ್ದ ಶಂಖ, ಲಿಖಿತ ಎಂಬೀರ್ವರು ಪುರೋಹಿತರಿರುವರು. ಅವರಲ್ಲಿ ಶಂಖನೆಂಬುವನು ಒಂದಾನೊಂದುದಿನ ಲಿಖಿತನ ಆಶ್ರಮಕ್ಕೆ ಹೋಗುತ್ತಿರುವಾಗ ದಾರಿಯಲ್ಲಿ ಬಿದ್ದಿದ್ದ ಒಂದು ಹಣ್ಣನ್ನು ತಿಂದನು ಇದು ರಾಜನಿಗೆ ತಿಳಿಯಿತು. ಆ ಮರದ ಯಜಮಾನನಿಗೆ ತಿಳಿಸದೆ ಈ ಹಣ್ಣನ್ನು ಶಂಖನು ತಿಂದದ್ದು ದೋಷವೆಂದರಿತು ಅವನ ಕೈಯನ್ನೇ ಕತ್ತರಿಸಿ ಹಾಕಿಸಿದನು. ಆದರೆ ಶಂಖನು ಲಿಖಿತನ ತಪೊಬಲದಿಂದ ಪುನಃ ಕೈಯಂ ಪಡೆದನು. ಹೀಗೆಯೇ ರಾಜನು ನ್ಯಾಯವನ್ನು ತಪ್ಪದೆ ರಾಜ್ಯದ ಆಡಳಿತಗಳನ್ನು ನಡೆಯಿಸುತ್ತಲಿದ್ದನಾದ್ದರಿಂದ ಶಂಖಲಿಖಿತರಿಗೆ ಸ್ವಲ್ಪವೂ ಇದರಿಂದ ಮನಸ್ಸಿಗೆ ಅಸಮಧಾನವಾಗಲಿಲ್ಲ. ಮತ್ತು ರಾಜನೂಕೂಡ ಅವರೀರ್ವರ ಮಾತನ್ನು ಸ್ವಲ್ಪವೂ ಮೀರಿ ನಡೆಯುವನೇ ಅಲ್ಲವು. || ೪೫ || ಎಲೈ ಜನಮೇಜಯನೆ! ಆ ಹಂಸಧ್ವಜನೆಂಬ ಧರಾವಲ್ಲಭನು ಮಾಡಿಕೊಂಡಿದ್ದ ಮತ್ತೊಂದು ಕ್ರೂರತರವಾದ ಆಜ್ಞೆಯ ಬಗೆಯನ್ನರುಹುವೆನು ಕೇಳ. ಪರರಾಜರು ಬಂದು ರಾಜ್ಯಕ್ಕೆ ಮುತ್ತಿದರೆ ಯುದ್ಧಸನ್ನದ್ಧರಾಗಬೇಕೆಂದು ತನ್ನ ಸೈನ್ಯಕ್ಕೆ ಸೂಚಿಸುವ ರಣಭೇರಿಯ ಶಬ್ದಮಂ ಕೇಳಿ

ವಿಂಪೊರಮಡುವದುಂದುಭಿಯಸನ್ನೆಯುಮ | ಹಾಶಬ್ದಮಂಕೇಳ್ದುಹಿಂದುಳಿದಭಟನಂಪ್ರ | ವೇಶಮುಂಮಾಡಿಸುವನಲ್ಲದೊಡೆ
ತನ್ನಭಾಷೆಗೆಭಂಗಮಾಗಿರ್ಪುದು || ೪೬ || ಬಳಿಕನಿಬರೆಲ್ಲರಂಕರೆಸಿಹಂಸಧ್ವಜಂ | ಸೆಲವಿತ್ತುಫಲುಗುಣನತುರಗಮಂಪಿಡಿತಂದು |
ಪೊಳಲೊಳಗೆಕಟ್ಟಬೇಕೆಂದುಸಾರಿಸಿಡಂಗುರಂಪೊಯಿಸಿಪೊರಮಡುತಿರೆ || ಮೊಳಗಿದವುಮೇಲೆನಿಸ್ಸಾಳಂಗಳಾಹವಕೆ | ದಳ
ದುಳಿಸಿತಾಗಸುಭಟಪ್ರತತಿಜೋಡಿಸಿತ | ಖಿಳಕರಿರಥಾಶ್ವಕುಲಮೊದಗಿತುಪದಾತಿಸನ್ನಾಹದಿಂದಾಕ್ಷಣದೊಳು || ೪೭ || ಸುರಪ
ಸುತನೆಂಬವೈರಕೆಧನಂಜಯನಮೇ | ಲಿರದೆಮುಳಿದೆದ್ದುದೋಕುಲಾದ್ರಿಗಳಬಳಗಮೆನೆ | ಕರಿಘಟೆಗಳೈದಿದವುತನ್ನಮಗನಂ
ಕೊಂದನೆಂದುನರನೋಳ್ಕನಲ್ದು || ತರಣಿತಾಳ್ದನೊನಿಜಾಕಾರಕೋಟಿಗಳನೆನೆ | ತೆರಳಿದವುಮಣಿಮಯವರೂಥಂಗಳೀ

ಯಾಗಿ, ಪೊರಮಡುವ–ನಡೆವ, ದುಂದುಭಿಯ–ದುಂದುಭಿಯೆಂಬ ಯುದ್ಧಸೂಚಕವಾದ ವಾದ್ಯದ, ಸನ್ನೆಯ–ಚಿಹ್ನೆಯ, ಮಹಾಶಬ್ದಮುಂ–ದೊಡ್ಡದಾದ ನಿನದವನ್ನು, ಕೇಳ್ದು–ಲಾಲಿಸಿ, ಹಿಂದುಳಿದ–ಹಿಂದೆ ಬಿದ್ದುಹೋದ, ಭಟರಂ–ವೀರರನ್ನು, ಹುತಾಶನ–ಯಜ್ಞೇಶ್ವರನ, ಜ್ವಾಲೆಯಿಂ–ತಾಪದಿಂದ, ಕಾಯ್ದು–ಕಾದುಹೋಗಿ, ಉಕ್ಕುವ–ಮೇಲಕ್ಕೂ ಕೆಳಕ್ಕೂ ಕುದಿಯತಕ್ಕ, ಎಣ್ಣೆ–ಎಣ್ಣೆತುಂಬಿ ಕುದಿದ, ಕೊಪ್ಪರಿಗೆಯೊಳು–ಅಗಲವಾದ ಪಾತ್ರೆಯಲ್ಲಿ, ಪ್ರವೇಶಮುಂ ಮಾಡಿಸುವನು–ಕೆಡವಿಸಿಬಿಡುತ್ತಾನೆ. ಅಲ್ಲದೊಡೆ–ಆರೀತಿ ಮಾಡದಿದ್ದಲ್ಲಿ, ತನ್ನಭಾಷೆಗೆ–ತನ್ನ ಶಪಥಕ್ಕೆ, ಭಂಗಂ–ವ್ಯತಿರಿಕ್ತವಾದದ್ದು, ಆಗಿರ್ಪುದು–ಆಗುತ್ತದೆ ||

ಅ|| ವಿ|| ಸನ್ನೆ (ತ್ಭ)–ಸಂಜ್ಞಾ (ತ್ಸ) ಭಾಷಾ (ಸಂ)–ಭಾಷೆ (ತ್ಭ) || ೪೬ ||

ಟೀ|| ಬಳಿಕ–ಅನಂತರ, ಅನಿಬರೆಲ್ಲರಂ–ಅಷ್ಟೊಂದು ಜನರನ್ನು, ಹಂಸಧ್ವಜನು – ಹಂಸಧ್ವಜನೆಂಬರಸು, ಕರೆಸಿ–ಬರಮಾಡಿ, ಫಲುಗುಣನ–ಪಾರ್ಥನ, ತುರಂಗಮಂ–ಅಶ್ವವನ್ನು, ಪಿಡಿತಂದು–ಹಿಡಿದುತರಿಸಿ, ಪೊಳಲೊಳಗೆ–ತನ್ನರಾಜಧಾನಿಯಲ್ಲಿ, ಕಟ್ಟಬೇಕೆಂದು–ಬಂಧಿಸಿಬಿಡಿ ಎಂಬದಾಗಿ, ಸೆಲವಿತ್ತು–ಆಜ್ಞೆಮಾಡಿ, ಸಾರಿಸಿ – ರಣರಂಗಕ್ಕೆ ಹೊರಡಬೇಕೆಂದು ಪ್ರಕಟಿಸಿ, ಡಂಗುರಂಪೊಯಿಸಿ–ದಂಡೋರೆಯ ಮೂಲಕ ಪ್ರಸಿದ್ಧಮಾಡಿ, ಪೊರಮಡುತಿರೆ–ನಡೆದುಬರುತ್ತಿನಲಾಗಿ, ಮೇಲೆ–ಅನಂತರ, ನಿಸ್ಸಾಳಂಗಳು–ರಣಭೇರಿಗಳು, ಮೊಳಗಿದವು–ಹೊಡೆಯಲ್ಪಟ್ಟವು, ಆಗ–ನಗರದಲ್ಲೆಲ್ಲಾ ಪ್ರಸಿದ್ಧಪಡಿಸಿ ರಣಭೇರಿ ಹೊಡೆಯಲಾರಂಭವಾದನಂತರ, ಆಹವಕೆ–ರಣಕ್ಕೆ, ಸುಭಟಪ್ರತತಿ–ಶೂರರ ಸಮುದಾಯವು, ದಳದಳಿಸಿತು–ಸಾಂದ್ರವಾಗಿ ಸೇರಿತು, ಅಖಿಳ–ಸಮಸ್ತವಾದ, ಕರಿ–ಹಸ್ತಿಗಳು, ರಥ–ತೇರುಗಳು, ಅಶ್ವಗಳ–ಕುದುರೆಗಳ, ಕುಲಂ–ಸಮುದಾಯವು, ಜೋಡಿಸಿತು–ಒಟ್ಟುಗೂಡಿದವು, ಆಕ್ಷಣದೊಳು–ಒಡನೆಯೇ, ಪದಾತಿ–ಕಾಲಾಳುಗಳೆಲ್ಲರೂ, ಸನ್ನಾಹದಿಂದ–ಯುದ್ಧಸಾಮಗ್ರಿಗಳೊಂದಿಗೆ, ಒದಗಿತು–ಬಂದು ಸೇರಿತು. || ೪೭ ||

ಟೀ|| ಕುಲಾದ್ರಿಗಳ–ಸಪ್ತಕುಲ ಪರ್ವತಗಳ, ಬಳಗಂ–ಗುಂಪು, ಸುರಪಸುತನೆಂಬ–ದೇವೇಂದ್ರನ ಕುವರನೆನ್ನುವ, ವೈರಕೆ–ದ್ವೇಷಕ್ಕೋಸ್ಕರ, ಧನಂಜಯನಮೇಲೆ – ಪಾರ್ಥನೊಂದಿಗೆ, ಇರದೆ – ಸುಮ್ಮನೆ ನಿಲ್ಲದೆ, ಮುಳಿದು – ಕೋಪಮಾಡಿಕೊಂಡು, ಎದ್ದುದೋಎನೆ–ಮೇಲಕ್ಕೆ ಬಂದಿರುವುದೋ ಎಂಬಂತೆ, ಕರಿಘಟೆಗಳು–ಆನೆಗಳ ಹಿಂಡು, ಐದಿದವು–ಹೊರಟವು, ತನ್ನ–ಸ್ವಕೀಯನಾದ, ಮಗನಂ–ಪುತ್ರನನ್ನು, ಕೊಂದನೆಂದು–ಸಂಹರಿಸಿದನೆಂಬದಾಗಿ, ನರನೋಳ್–ಪಾರ್ಥನಲ್ಲಿ, ಕನಲ್ದು–ಸಿಟ್ಟುಮಾಡಿಕೊಂಡು, ತರಣಿ – ರವಿಯು, ನಿಜ–ಸ್ವಕೀಯಮಾದ, ಆಕಾರ – ಆಕೃತಿಗಳ, ಕೋಟಿಗಳನು – ಕೋಟಿಸಂಖೆಯನ್ನು, ತಾಳ್ದನೊ–ಧರಿಸಿದನೊ, ಎನೆ–ಎಂಬಂತೆ, ಮಣಿಮಯ–ರತ್ನಖಚಿತಂಗಳಾದ, ವರೂಥಂಗಳು–ರಥಗಳು, ತೆರಳಿದವು–ನಡೆದವು. ಧರೆ–ಇಳೆಯು, ಮಂದಿ–ಪ್ರಜೆಗಳನ್ನೂ, ಕುದುರೆಗಳನು–ಅಶ್ವಗಳನ್ನೂ, ಈದುದೊ–ಪ್ರಸವಿಸಿತೋ, ಎನೆ–ಎಂ

ಯಾರು ಹೇಡಿಗಳಾಗಿ ಹಿಂದುಳಿವರೂ ಅಂಥವರು ಯಾರೇ ಆಗಲಿ ಅವರನ್ನು ಹಿಡಿತರೆಸಿ, ಚನ್ನಾಗಿ ಕಾದು ಕುದಿಯ ಹತ್ತಿರುವ ಎಣ್ಣೆಯ ಕೊಪ್ಪರಿಗೆಯಲ್ಲಿ ಹಾಕಿಸಿ ಬಿಡುತ್ತಿದ್ದನು. || ೪೬ || ಇವೇ ಅವನ ರಾಜಾಜ್ಞೆಗಳು. ಆ ನಾಡಿನ ಪ್ರಜೆಗಳೂ ಪರಿವಾರವೂ ಇವನ ಶಾಸನಕ್ಕೆ ವ್ಯತಿರಿಕ್ತವಾಗಿ ನಡೆದರೆ ರಾಜದಂಡನೆಗೆ ಗುರಿಯಾಗುತ್ತಿದ್ದರು ಎಂದು ಹೇಳಿ, ಮತ್ತೆ ಜುನಮೇಜಯ ನಂಕುರಿತು, ಎಲೈ ಜನಮೇಜಯನೆ! ಆ ಬಳಿಕ ಹಂಸಧ್ವಜರಾಯನು ಯುದ್ಧ ಮಾಡುವುದೆ ಸರಿಯೆಂದು ನಿಶ್ಚೈಸಿಕೊಂಡ, ಅರ್ಜುನನ ಕುದುರೆಯನ್ನು ಹಿಡಿದು ಕಟ್ಟಹಾಕಿರೆಂದು ತನ್ನ ಕಡೆಯವರಿಗೆ ಆಜ್ಞಾಪಿಸಿ, ಎಲ್ಲರೂ ಯುದ್ಧಕ್ಕೆ ಅನುವಾಗಬೇಕೆಂದು ಊರಲ್ಲೆಲ್ಲಾ ಡಂಗೋರೆಯನ್ನು ಹೊಡೆಸಿದನು. ಕೂಡಲೆ ರಣಭೇರಿಯನ್ನು ಹೊಡೆದರು. ಇದನ್ನು ಕೇಳಿದೊಡನೆಯೇ ಕಾಲಾಳುಗಳೆಲ್ಲಾ ಸಿದ್ಧರಾದರು. ಆನೆಗಳೂ, ಕುದುರೆಗಳೂ, ರಥಗಳೂ ಅನುವಾದವು || ೪೭ || ದೇವೇಂದ್ರನಿಂದ ಪರ್ವತಗಳು ರೆಕ್ಕೆಗಳೆಲ್ಲಾಹೋಗಿ ವ್ಯಥೆಯನ್ನೈದುತ್ತಲಿರುವಾಗ, ಅವನ ಕುವರನಾದ ಅರ್ಜುನನು ಬರುತ್ತಲಿರುವದಂ ಕಂಡು ತಂದೆಯಮೇಲಣ ಕೋಪವಂ ತೀರಿಸಿಕೊಳ್ಳುವ ಅಭಿಲಾಷೆಯಿಂದ ಹಿಮವಂತ, ನಿಷದಾದಿಯಾದ, ಕುಲಪರ್ವತಗಳೇ ಗುಂಪಾಗಿ

ದುದೋ | ಧರೆಮುಂದಿಕ-ದುರೆಗೆಳನೆನೆನಡೆದುದಾಹವಕೆಪರಿವಾರಮಾನೃಪತಿಯ ||೪೮|| ಕಂಸಾರಿಬಾರದೆನರಂಗೆಸೋಲುವನಲ್ಲ | ಹಂಸಧ್ವಜಂಧುರದೊಳಿನ್ನುಕೃಷ್ಣನದರ್ಶ | ನಂಸುಲಭಮೆಲ್ಲರ್ಗೆಸಂದೇಹಮಿಲ್ಲದೇಹಮನಾಂತುಜನಿಸಿತೋರ್ಪ || ಸಂಸಾರ ಕಿದುಸಫಲಮಹುದೆಂದುಪರಿತೋಷ | ದಿಂಸಮರಕ್ಕೈದುತಿರ್ದುದುಸಕಲಪಟುಭಟರ | ದಂಸತಿಯರೀಕ್ಷಿಸಿದರುಪ್ಪರಿಗೆಗಳಮೇಲಿನ ಯರನಾದರಿಸಿಕಳುಹಿ||೪೯||ಇಳಿಲಾದನಿರಿಯಬಳಲಿದಮುಡಿಯಸೊಪ್ಪಾದ | ತಿಲಕದಕೆದರ್ದಕಾಡಿಗೆಯಬೆಮರಿದಮೈಯ | ಪುಳಕ ದವಯವದಕೆಂಬಾಸುಗೇರಿಗೆಳಪರಿದನುಲೇಪನದತೊಡಕಿದ || ಗಳದಹಾರದಕೆಂಪುಗದಡಿದಧರದನುಡಿಯ | ಕಳಕಳದಕಡೆಗಣ್ಣ

ಬಂತೆ, ಆ ನೃಪತಿಯ-ಆ ಹಂಸಧ್ವಜರಾಯನ, ಪರಿವಾರಂ-ಸೈನ್ಯವು, ಆ ಹವಕೆ – ಕಾಳಗಕ್ಕೆ, ನಡೆದುದು – ಹೊರಟಂಥಾದ್ದಾಯಿತು ||

ಅ|| ವಿ|| ಕುಲಾದ್ರಿಗಳು–ಹಿಮವಂತ, ನಿಷಧ, ವಿಂಧ್ಯ, ಮಾಲ್ಯವಂತ, ಪಾರಿಯಾತ್ರಕ, ಗಂಧಮಾದನ, ಹೇಮಕೂಟ ಎಂಬ ಏಳು ಪರ್ವತಗಳು ||೪೮||

ಟೀ|| ಹಂಸಧ್ವಜಂ-ಹಂಸಧ್ವಜರಾಯನಾದರೊ, ಕಂಸಾರಿ ಬಾರದೆ-ಕಂಸಾಸುರನಿಗೆ ಶತ್ರುವಾದ ಕೃಷ್ಣಮೂರ್ತಿಯು ಬರದೆ ಹೋದರೆ, ನರಂಗೆ–ಪಾರ್ಥನಿಗೆ, ಸೋಲುವವನು-ಪರಾಜಯವನ್ನು ಪಡೆಯುವವನು, ಅಲ್ಲ–ಅಲ್ಲವು, ಧುರದೊಳ್-ಸಮರಾಂಗಣದಲ್ಲಿ, ಎಲ್ಲರ್ಗೆ-ಸಕಲರಿಗೂ, ಕೃಷ್ಣದರ್ಶನಂ–ಕೃಷ್ಣಸ್ವಾಮಿಯ ದರ್ಶನ ಲಾಭವು, ಸುಲಭಂ–ಕಷ್ಟವಿಲ್ಲದೆ ಲಭಿಸುವುದು, ಸಂದೇಹಂ–ಅನುಮಾನವು, ಇಲ್ಲ–ಇಲ್ಲವು, ದೇಹವನು-ಶರೀರವನ್ನು, ಆಂತು–ಧರಿಸಿ, ತೋರ್ಪ-ತೋರುವ, ಸಂಸಾರಕೆ–ಸಂಸಾರ ಸುಖಕ್ಕೆ, ಇದು–ಈ ಕಾರ್ಯವು, ಸಫಲಂ–ಸಾರ್ಥಕವು, ಅಹುದು-ಆಗುತ್ತದೆ, ಎಂದು–ಎಂಬದಾಗಿ, ಪರಿತೋಷದಿ–ಆನಂದದಿಂದ, ಸಮರಕೆ-ರಣಕ್ಕೆ, ಸಕಲ–ಸಮಸ್ತರಾದ, ಪಟು–ಶೂರರಾದ, ಭಟರು–ಪರಾಕ್ರಮಿಗಳು, ಐದುತಿರ್ದುದು–ಬರುತ್ತಲಿತ್ತು, ಇನಯರನು–ತಮ್ಮ ಗಂಡಂದಿರನ್ನು, ಆದರಿಸಿ-ಮರ್ಯಾದೆಯಿಂದ ಸತ್ಕರಿಸಿ, ಕಳುಹಿ-ಯುದ್ಧಮಾಡಲು ಕಳುಹಿಸಿಕೊಟ್ಟು, ಸತಿಯರು–ಅವರ ಕಾಂತೆಯರು, ಅದಂ-ತಮ್ಮ ಪ್ರಾಣನಾಥರ ಪ್ರಯಾಣದ ತೆರನನ್ನು, ಉಪ್ಪರಿಗೆಗಳ ಮೇಲೆ–ಮಹಡಿಗಳ ಮೇಲ್ಭಾಗದಲ್ಲಿ, ನಿಂತು–ನಿಂತವರಾಗಿ, ಈಕ್ಷಿಸಿದರು-ನಿರುಕಿಸುತ್ತಲಿದ್ದರು.

ಅ|| ವಿ|| ಕಂಸನ ಅರಿ (ಷ.ತ) ಅರಿ–ಶತ್ರು (ನಾಮ) ಅರಿ–ತಿಳಿ (ಕ್ರಿ) ಸಂದೇಹ (ತ್ಸ) ಸಂದೆಗ (ತ್ಭ) ||೪೯||

ಟೀ|| ಇಳಿಲಾದ–ಜಾರಿ ಹೋದ, ನಿರಿಯ–ನೆರಿಗೆಗಳುಳ್ಳ, ಬಳಲಿದ–ಕೆದರಿ ಹೋದ, ಮುಡಿಯ–ತಲೆಯಗಂಟುಳ್ಳ, ಸೊಪ್ಪಾದ-ಮಲಿನವಾದ, ತಿಲಕದ-ಕುಂಕುಮುವನ್ನುಳ್ಳ, ಕೆದರ್ದ-ಅಗಲವಾಗಿ ಹೋಗಿರತಕ್ಕ, ಕಾಡಿಗೆಯ–ಕಪ್ಪುಳ್ಳ, ಬೆಮರಿದ–ಬೆವರು ನೀರಿನಿಂದ ತುಂಬಿದ, ಮೈಯ–ಶರೀರವುಳ್ಳ, ಅವಯವದ-ಶರೀರ ಭಾಗದಲ್ಲೆಲ್ಲಾ, ಪುಳಕದ–ರೋಮಾಂಚವುಳ್ಳ, ಕೆಂಬಾಸುಗೇರಿಗಳ – ಕೆಂಪಗಿರುವ ಗೆರೆಗಳಿಂದ ಕೂಡಿದ, ಪರಿದ- ಹಳೆದಾಗಿ ಹೋಗಿರುವ, ಅನುಲೇಪನದ–ಚಂದನವುಳ್ಳ,

ಬರುತ್ತಲಿರುವುವೊ ಎಂಬಂತೆ ಹಂಸಧ್ವಜನ ಸೈನ್ಯದ ಆನೆಗಳು ತಂಡೋಪತಂಡವಾಗಿ ಅರ್ಜುನನ ಮೇಲೆ ಬೀಳಲು ಬರುತ್ತಲಿದ್ದವು. ತನ್ನ ಕುವರನಾದ ಕರ್ಣನನ್ನು ಕೊಂದ ಅರ್ಜುನನನ್ನು ಈಗ ಧ್ವಂಸಮಾಡಲು ಸಮಯವಾಗಿರುವುದೆಂದರಿತು, ತನ್ನ ಅಶೇಷವಾದ ಕಿರಣಗಳಿಂದೊಡಗೂಡಿ ಅನೇಕಾಕಾರವಾಗಿ ದಿನಕರನೇ ಬರುತ್ತಲಿರುವನೆಂಬ ಭ್ರಾಂತಿಯನ್ನುಂಟು ಮಾಡುವಂತೆ, ಕೋಟಿ ಸೂರ್ಯ ಪ್ರಕಾಶಮಾನವಾಗಿಯೂ, ನವರತ್ನ ಖಚಿತವಾಗಿಯೂ ಇರುವ ತೇರುಗಳು ಹೊರಡಲಾರಂಭಿಸಿದವು. ಭೂದೇವಿಯು ಈಗ ತಾನೆ ಜನರನ್ನೂ ಕುದುರೆಗಳನ್ನೂ ಪ್ರಸವಿಸುತ್ತಲಿರುವಳೆಂಬ ಶಂಕೆಯನ್ನುಂಟುಮಾಡುವಂತೆ ಅಪರಿಮಿತವಾದ ಕಾಲ್ಬಲವೂ, ಅಶ್ವಂಗಳೂ ಗುಂಪು ಗಂಪಾಗಿ ನಡೆದವು, ||೪೮|| ಯುದ್ಧ ಸನ್ನದ್ಧರಾಗಿ ಹೊರಟ ಶೂರರೆಲ್ಲರೂ ತಮ್ಮತಮ್ಮ ಮನದಲ್ಲಿ ಕೃಷ್ಣಮೂರ್ತಿಯು ಬಂದಲ್ಲದೆ ಹಂಸಧ್ವಜನು ಅರ್ಜುನನಿಗೆ ಮಾತ್ರವೇ ಎಂದಿಗೂ ಸೋಲತಕ್ಕವನಲ್ಲವು. ಈ ಲೋಕದಲ್ಲಿ ನಂಜನ್ಮವನ್ನೆತ್ತಿ ಸಂಸಾರದಲ್ಲಿ ಸಿಕ್ಕಿ ನರಳುತ್ತಲಿರುವ ನಮಗೆ ಇಾದು ಕೃಷ್ಣಸ್ವಾಮಿಯ ದರ್ಶನ ಲಾಭವು ಕಷ್ಟವಿಲ್ಲದಯೇ ಸಾಧ್ಯವಾಗುವುದರಿಂದ ನಮ್ಮ ಜನ್ಮವು ಸಾರ್ಥಕವಾಯಿತು ಎಂದು ಸಂತೋಷವಂ ತಾಳುತ್ತ, ಯುದ್ಧಕ್ಕೆ ಹೊರಡುತ್ತಲಿರುವ ವೀರರನ್ನು ಅವರ ಕಾಂತೆಯರು ಮಹಡಿಗಳ ಮೇಲಿರುವ ಕಿಟಕಿಗಳಿಂದ ಇಣಿಕಿನೋಡುತ್ತಲಿದ್ದರು. || ೪೯ || ಆ ಸ್ತ್ರೀಯರಾದರೊ, ಜಾರಿಹೋದ ನೆರಿಗೆಗಳುಳ್ಳವರೂ, ಬಿಚ್ಚಿ ಹೋದ ಜಡೆ ಮುಡಿಯಿಂ ಕೂಡಿದವರೂ, ಕೆದರಿದ ಕುಂಕುಮವುಳ್ಳವರೂ, ವಿಸ್ತರಿಸಿ ಹೋಗಿರುವ ಕಾಡಿಗೆಯ ಅಲಂಕಾರಸಹಿತರೂ ಆಗಿದ್ದರು. ಅವರ ಮೈಮೇಲಿದ್ದ ಬೆವರಿನ ನೀರ್ವನಿಗಳು ಮುತ್ತುಗಳಂತೆ ಕಾಣುತ್ತಿದ್ದವು. ಮೈಮೇಲಿರುವ ಕೂದಲೆಲ್ಲಾ ಮೇಲಕ್ಕೆದ್ದು ಬಿಟ್ಟದ್ದವು. ಕೆಂಪು ಕೆಂಪಾದ ಗೆರೆಗಳು ಮುಖದಲ್ಲಿಯೂ ಮೈಮೇಲೂ ತೋರಿ ಬರುತ್ತಲಿದ್ದವು. ಬಳಿದು ಕೊಂಡಿದ್ದ ಗಂಧದ ಸುವಾಸನೆಯು ಕಡಮೆಯಾಗಿತ್ತು

ಕೆಂಬೊಗರಕದಪುಗಳ | ಕಳೆಯುಕೋಮಲೆಯರಿನಯರ್ಕಳಂಕಳುಪಿನೆಲೆವಾಡವನಡರ್ದರಂದು ||೫೦|| ಇನ್ನುಮರ್ಜುನಕೃಷ್ಣರೊಡನೆಸಂಗರಕೆಸಂ | ಪನ್ನಪಟುಭಟರೊದಗಿಗಾಯುವಡೆಯದಮುನ್ನ | ನಿನ್ನಧರಕೆಂಪಾದುದಬಲೆಕೃಷ್ಣಕ್ಷತಂಪೇಳೆಂದಸಿಯಳೋರ್ವಳು || ಕನ್ನೆಮತ್ತೊರ್ವಳಂಕೇಳ್ದೊಡವಳೆಂದಳೆಲೆ | ಪನ್ನಗಸುವೇಣಿಕೃಷ್ಣಾಂಕಮಿಲ್ಲದವದನ | ಮುನ್ನಿಸಲ್ಬಿಲಕೆಸರಿಯೆಂಬುದಂನೀನರಿಯದಕಟಮರುಳಾದೆಯೆಂದು ||೫೧|| ಒದಗದಿನ್ನೂಮುರಾರಿಯುಸಮರಮರ್ಜುನನ | ಕದನಂಪ್ರವರ್ತಿಸದುಪ್ರದ್ಯುಮ್ನನಾಹವಂ | ಮೊದಲೆತಲೆದೋರಿತಂತೂರೊಳೆಂದೋರ್ವಳೀಪೊಸವಾರ್ತೆಯಂಪೇಳಲು || ಚದುರೆಮತ್ತೊರ್ವ

---

ತೊಡಕಿದ-ಸಿಕ್ಕಾಗಿ ಹೋಗಿರುವ, ಗಳದ-ಕೊರಳಲ್ಲಿ ಧರಿಸಿರುವ, ಹಾರದ-ಮಾಲಿಕೆಯುಳ್ಳ, ಕೆಂಪು-ಕದಡಿದ-ಬಹಳ ಕೆಂಪಾಗಿರುವ, ಅಧರದ-ತುಟಿಯುಳ್ಳ, ನುಡಿಯ-ವಚನದ, ಕಳಕಳದ-ಕಳಕಳವೆಂಬ ಶಬ್ದದ, ಕಡೆಗಣ್ಣ-ಅರೆನೋಟದ, ಕೆಂಬೊಗರ-ಕೆಂಪಾದ ಛಾಯೆಯಿಂದ ಕೂಡಿದ, ಕದಪುಗಳ-ಕಪೋಲಂಗಳ, ಕಳೆಯು-ಪ್ರಕಾಶವುಳ್ಳ, ಕೋಮಲೆಯರು-ಮೃದು ಶರೀರದಿಂದೊಪ್ಪುವ ನಾರೀಮಣಿಗಳು, ಇನಯರ್ಕಳಂ-ಗಂಡಂದಿರನ್ನು, ಕಳುಪಿ-ರಣಕ್ಕೆ ಹೋಗಲು ಒಪ್ಪಿ, ಅಂದು-ಆಗ, ನೆಲೆವಾಡವನು, ಮಹಡಿಯನ್ನು, ಅಡರ್ದರು-ಯುದ್ಧಾರ್ಥಿಗಳಾಗಿ ಹೋಗುವ ತಮ್ಮ ಕಾಂತರನ್ನು ನೋಡಲು ಹತ್ತಿದವರಾದರು ||೫೦||

ಟೀ|| ಇನ್ನುಂ-ಇಷ್ಟು ಹೊತ್ತಾದರೂ, ಅರ್ಜುನ ಕೃಷ್ಣರೊಡನೆ - ನರನಾರಾಯಣರೊಂದಿಗೆ. ಸಂಗರಕೆ-ರಣಕ್ಕೆ, ಪಟುಭಟರು - ಶೂರಾಗ್ರಣಿಗಳು, ಒದಗಿ-ಸೇರಿ, ಗಾಯುವಡೆಯದ - ಘಾಯಮಾಡಿಕೊಳ್ಳದ, ಮುನ್ನ - ಮೊದಲೆ, ಅಬಲೆ-ಎಲೆ ಬಾಲಕೀ! ನಿನ್ನ-ನಿನ್ನ ಸಂಬಂಧವಾದ, ಅಧರ-ತುಟಿಯು, ಕೆಂಪಾದುದು-ಕೆಂಪಗೆ ಆಗಿ ಹೋಯಿತು, ಕೃಷ್ಣಕ್ಷತಂ-ಕೃಷ್ಣಸ್ವಾಮಿಯಿಂದಾದ ಗಾಯವು (ಗಂಡನೊಡನೆ ಹಗಲಿನಲ್ಲಿ ಕ್ರೀಡಾಸುಖವನ್ನು ಹೊಂದಿದ್ದರಿಂದಾದ ತುಟಿಯ ಗಾಯವನ್ನು) ಪೇಳು-ಹೇಳು, ಎಂದು-ಎಂಬತೆರನಾಗಿ, ಓರ್ವಳು-ಒಬ್ಬಾನೊಬ್ಬ, ಅಸಿಯಳು-ಸ್ನೇಹಿತಳು, ಕನ್ನೆ-ಬಾಲೆಯು, ಮತ್ತೋರ್ವಳಂ-ಬೇರೊಬ್ಬಳನ್ನು, ಕೇಳ್ದೊಡೆ-ಕೇಳಲಾಗಿ, ಅವಳು-ಆ ಕನ್ಯಾಮಣಿಯು, ಎಲೆ ಪನ್ನಗಸುವೇಣಿ-ಹಾವಿನಂತೆ ಉದ್ದವಾದ ಜಡೆಯುಳ್ಳ ಎಲೆ ಬಾಲೆ! ಕೃಷ್ಣಾಂಕಂ ಇಲ್ಲದ-ಕೃಷ್ಣಮೂರ್ತಿಯ ಧ್ಯಾನವಂ ಮಾಡದ, ಕರೀನಾಗರಹಾವಿನ ಗುರ್ತುಳ್ಳ, ವದನಂ-ಆಸ್ಯವು, ಕಂಡಿಯು, ಉನ್ನಿಸಲು-ಆಲೋಚಿಸಿದರೆ, ಬಿಲಕೆ-ರಂಧ್ರಕ್ಕೆ, ಸರಿ-ಸಮವಾಗಿರುವುದು, ಎಂದು-ಎಂಬದಾಗಿ, ನೀನು-ನೀನಾದರೊ, ಅರಿಯದೆ-ಯೋಚಿಸದೆ, ಮರುಳಾದೆ-ಭ್ರಾಂತಳಾಗಿದ್ದಿ, ಅಕಟ-ಆಶ್ಚರ್ಯವು, ಎಂದಳು-ಎಂದು ನುಡಿದಳು.

ಅ|| ವಿ|| ಅಬಲೆ-ಬಲವಿಲ್ಲದವಳು, ಪನ್ನಗ ಸುವೇಣಿ=ಪತ್-ಕಾಲಿನಿಂದ, ನಗ- ನಡಿಯದಿರುವುದು (ಕೃ. ವೃ) ಸು-ಒಳ್ಳೆಯದಾದ, ವೇಣಿ-ಜಡೆ, (ವಿ. ಪೂ.) ಪನ್ನಗದಂತೆ-ಸುವೇಣಿಯು ಯಾರಿಗೊ ಅವಳು (ಬ. ಸ.) ||೫೧||

ಟೀ|| ಮುರಾರಿಯು-ಮುರಾಂತಕನಾದ ಕೃಷ್ಣಸ್ವಾಮಿಯು, ಸಮರಂ-ರಣದ ಆರಂಭವು. ಇನ್ನೂ ಒದಗದು-ಇನ್ನೂ ಉಪಕ್ರಮವಾಗಲಿಲ್ಲ, ಅರ್ಜುನನ - ಪಾರ್ಥನ, ಕದನಂ-ರಣವು, ಪ್ರವರ್ತಿಸದು - ಇನ್ನು ಒದಗಲಿಲ್ಲ, ಮೊದಲೆ-ಅರ್ಜುನ ಕೃಷ್ಣರ ಯುದ್ಧಾರಂಭಕ್ಕಿಂತಲೂ ಆದಿಯಲ್ಲಿಯೆ, ಪ್ರದ್ಯುಮ್ನನ-ಮನ್ಮಥನ, ಆಹವವು-ಯುದ್ಧವು, ತಲೆದೋರಿತು-ಗೋಚರವಾಯಿತು, ಎಂತು-ಏನು ಮಾಡಬೇಕು, ಎಂದು-ಎಂಬತೆರನಾಗಿ, ಈ ಪೊಸವಾರ್ತೆಯಂ-ಈ ಹೊಸ ಸುದ್ಧಿಯನ್ನು, ಊರೊಳ್-ರಾಜಧಾನಿಯಲ್ಲಿ, ಓರ್ವಳು-ಒಬ್ಬಾನೊಬ್ಬ ಹೆಂಗಸು, ಪೇಳಲು-ಹೇಳಿದರೆ, ಚದುರೆ-ಚಾತುರ್ಯದಿಂದ ಕೂಡಿದ, ಮತ್ತೋರ್ವಳು-ಬೋರೊಬ್ಬಳು, ಇದು-ಈ ಮಾರನಾಟವು, ಜಗದೊಳ್-ಲೋಕದಲ್ಲಿ, ಅಚ್ಚರಿಯೆ- ವಿಸ್ಮಯವನ್ನುಂಟುಮಾಡತಕ್ಕದ್ದೆ,

---

ಕೊರಳಿನಲ್ಲಿದ್ದ ಹಾರಗಳು ಸಿಕ್ಕಾಗಿ ಹೋಗಿದ್ದವು. ಚೆಂದುಟಿಗಳ ರಕ್ತಛಾಯೆಯು ವಿಸ್ತಾರವಾಗಿ ಹೋಗಿತ್ತು. ಅವರ ಕೆನ್ನೆಗಳಾದರೊ ಹೊಸ ಚಿಗುರಿನಂತೆ ಅತಿ ಕೋಮಲವಾಗಿತ್ತು, ಈ ಬಗೆಯಾದ ಸುಂದರ ಗಾತ್ರದಿಂದನ್ವಿತರಾದ ಬಾಲೆಯರು ತಮ್ಮ ಪತಿಗಳನ್ನು ರೆಪ್ಪೆ ಬಡಿಯದೆ ನೋಡುತ್ತಲಿದ್ದರು ||೫೦|| ಆಗ ಒಬ್ಬ ಬಾಲೆಯು ಮತ್ತೋರ್ವಳಂ ನೋಡಿ, ಕೃಷ್ಣಾರ್ಜುನರೊಂದಿಗೆ ಕಾಳಗವು ಆರಂಭವಾಗಿ ಘಾಯವಾಗುವುದಕ್ಕೆ ಮುಂಚೆಯೇ ನಿನ್ನಧರದಲ್ಲಿ ಆಗಿರುವ ಘಾಯಕ್ಕೆ ಕಾರಣವೇನೆಂದು ಹಾಸ್ಯಮಾಡಲು, ಅವಳನ್ನು ನೋಡಿ, ಎಲೌ ನಾಗವೇಣಿಯೇ! ಕೃಷ್ಣ ಚಿಹ್ನೆಯೇ ಇಲ್ಲದ ಮುಖವು ನೆಲದಲ್ಲಿರುವ ಬಿಕ್ಕೆಗೆ ಸಮನೆಂದು ನಿನಗೆ ತಿಳಿದೇ ಇಲ್ಲವಲ್ಲಾ! ಎಂದು ಸರಸೋಕ್ತಿಗಳಿಂದ ಕೂಡಿ ಸಮಾಧಾನ ಪಡಿಸುತ್ತಲಿರುವಾಗ, ||೫೧|| ಚದುರೆಯೊಬ್ಬಳು ತನ್ನ ಗೆಳತಿಯರನ್ನು ಸಂಬೋಧಿಸಿ, ಕೃಷ್ಣಾರ್ಜುನರು ಹಂಸಧ್ವಜರಾಯನೊಂದಿಗೆ ಯುದ್ಧ ಮಾಡುವುದಕ್ಕೆ ಪ್ರಾರಂಭಿಸಲು ಮುಂಚೆಯೇ ಪ್ರದ್ಯುಮ್ನನು ಊರನ್ನು ಸೂರೆಮಾಡುತ್ತಲಿರುವುದು ಪರಮಾಶ್ಚರ್ಯವು, (ಯುದ್ಧಾರಂಭಕ್ಕೆ ಮೊದಲೇ ವೀರಭಟರು ತಮ್ಮ ಸಖಿಯರೊಂದಿಗೆ ಕ್ರೀಡಿಸಿರುವರೆಂದು ಆಶಯವು) ಎಂದು ನುಡಿದಳು. ಆಗ ಚಮತ್ಕಾರಿಯಾದ

ಳಿದುಜಗದೊಳಚ್ಚರಿಯೆಹರಿ | ಯುದರಕೈಮಿಂಚುವನುನರಸಂಗರಂಜಿತಮಹು | ದುವರ್ತಮಾನದೋಳ್ಜನಜನಿತಮಿಲ್ಲಿನೂತ ನವಮಾತೇಕೆಂದಳು ||೫೨|| ಇಂದುಮಂಡಲದಸಿರಿಯಂಸೂರೆಮಾಡಿದ | ರ್ಬಂದುವಿಷಯದೊಳೂರುಗಳನಿರಿದರೊತ್ತಾಯ | ದಿಂದುರ್ಗಂಗಳಂಕೈಕೊಂಡರೊದಗಿದರ್ಸೆಳಸೂರೆಗಾತುರದೊಳು || ಮುಂದುವರಿದಂಕವೇರಿದರೀಗವರಸುಭಟ | ರೆಂದುಪೊಸ ವಾರ್ತೆಯಂಪ್ರೌಢೆಯೋರ್ವಳುಪೇಳ್ದ | ಡಂದುಬಾಲೆಯರಾಕೆಯಂಜರಿದರರಸನಿಲ್ಲವೆಗೆಲ್ವಡೆಂದುನಗುತ ||೫೩|| ವಿಮಲದಧಿಲಾಜಿ

---

ಹರಿಯು–ಕೃಷ್ಣಮೂರ್ತಿಯು, ಅದರ–ಆ ರಣದ, ಕೈಮಿಂಚುವನು– ಕರದ ಶೀಘ್ರತೆಯುಳ್ಳವನು, ವರ–ಉತ್ತಮವಾದ, ಸಂಗರಂ–ಕಾಳಗವು, ಜಿತನಹುದು–ಗೆಲುವಾಗುತ್ತದೆ, ವರ್ತಮಾನದೋಳ್–ಪ್ರಪಂಚದ ವಾರ್ತೆಯಲ್ಲಿ, ಜನಜನಿತಂ–ಸಕಲರಿಗೂ ತಿಳಿದ ವಿಚಾರವೇ ಆಗಿದೆ, ಇಲ್ಲಿ–ನಮ್ಮೊಂದಿಗೆ, ನೂತನಮಾತೆ–ಹೊಸ ಸುದ್ದಿಯೆ (ಎಂದರೆ ಮಾರನಾಟವು ನಮಗೆ ಗೊತ್ತಾಗಿರುವಲ್ಲಿ ನೀನು ಹೇಳಬೇಕಾದ್ದೇನಿದೆ) ಕೇಳು–ಲಾಲಿಸು, ಎಂದಳು–ಎಂಬುದಾಗಿ ತಿಳಿಸಿದಳು.

ಅ|| ವಿ|| ಅಚ್ಚರಿ, (ತ್ಭ) ಆಶ್ಚರ್ಯ, (ತ್ಸ) ||೫೨||

ಟೀ|| ಇಂದು–ಈ ಹೊತ್ತು, ಮಂಡಲದ–ದೇಶದ, ಸಿರಿಯಂ–ಐಶ್ವರ್ಯವನ್ನು, ಸೂರೆಮಾಡಿದರು–ಕೊಳ್ಳೆ ಹೊಡೆದುಬಿಟ್ಟರು, ವಿಷಯದೊಳು–ನಮ್ಮ ನಾಡಿನಲ್ಲಿ, ಬಂದು–ಪ್ರವೇಶವಂ ಮಾಡಿ, ಊರುಗಳನು–ಹಳ್ಳಿ ಪಳ್ಳಿಗಳನ್ನೆಲ್ಲಾ, ಇರಿದರು–ಹಾಳುಮಾಡಿದರು, ಒತ್ತಾಯದಿಂದ–ಸಾಂದ್ರವಾಗಿ ಸೇರುವುದರಿಂದ, ದುರ್ಗಂಗಳಂ – ಕೋಟೆಗಳನ್ನೆಲ್ಲಾ, ಕೈಕೊಂಡರು–ವಶಮಾಡಿಕೊಂಡರು, ಆತುರದೊಳು–ತಡಮಾಡದೆ, ಸೆಳೆ ಸೂರೆಗೆ–ಸಿಕ್ಕಿದ್ದನ್ನೇ ಬಾಚಿಕೊಂಡು ಲೂಟಿಮಾಡುವುದಕ್ಕೆ, ಒದಗಿದರು–ಅನುವಾದರು, ಈಗ–ಈ ಕಾಲದಲ್ಲಿ, ಸುಭಟರು – ವೀರಾಗ್ರಣಿಗಳು, ಮುಂದುವರಿದು – ಮುಂದು ಮುಂದಾಗಿ ನುಗ್ಗಿ, ಅಂಕವೇರಿದರು–ತಮ್ಮ ಬಾವುಟವನ್ನು ಮೇಲಕ್ಕೆತ್ತಿ ಹಿಡಿದವರಾದರು, (ಇದು ಪರರಾಜರು ಊರನ್ನು ಮುತ್ತಿದರೆಂಬರ್ಥವನ್ನು ಕೊಡುವುದರ ಪರವಾದ ಅರ್ಥವು) ಮತ್ತು, ಇಂದು ಮಂಡಲ– ಚಂದ್ರನಂತಿರುವ ಮುಖದ, ಸಿರಿಯಂ–ಕಾಂತಿಯನ್ನು ಸೂರೆಮಾಡಿದರು–ಕಂಠಾಲಿಂಗನ ಮತ್ತು ಅಧರ ಚುಂಬನಾದಿಗಳಿಂದ, ಕಾಂತಿಯನ್ನು ಕಡಮೆ ಮಾಡಿದರು, ಬಂದು–ಹತ್ತಿರಕ್ಕೆ ಸೇರಿ, ವಿಷಯದೊಳು–ಮರ್ಮಸ್ಥಳದಲ್ಲಿ, ಊರುಗಳನ್ನು–ತಮ್ಮ ಕಟಿ ಪುರೋಭಾಗವನ್ನು (ತೊಡೆಗಳನ್ನು) ಇರಿದರು–ವಿಸ್ತರಿಸಿದರು, ಒತ್ತಾಯದಿಂದ–ಜೋಡಣೆಯಿಂದ, ದುರ್ಗಗಳಂ – ಕುಚಗಳೆಂಬ ಕೋಟೆಗಳನ್ನು, ಕೈಕೊಂಡರು–ತಮ್ಮ ಕೈಗಳಿಂದ ಎದೆಯ ಗಂಟುಗಳನ್ನು ಗಟ್ಟಿಯಾಗಿ ಹಿಡಿದವರಾದರು, ಆತುರದೊಳು–ಮನ್ಮಥಾವಸ್ಥೆಯು ಮೀರಿದ್ದರಿಂದ, ಸಳೆಸೂರೆಗೆ–ಗಾಢಾಲಿಂಗನದಿಂದ ಕ್ರೀಡಿಸುವುದಕ್ಕೆ, ಒದಗಿದರು–ಪ್ರೀತಿಯನ್ನು ಹೆಚ್ಚುಮಾಡಿಕೊಂಡು ಸಿದ್ಧರಾದರು. ಈಗ–ಈ ವೇಳೆಯಲ್ಲಿ, ಸುಭಟರು–ಮನ್ಮಥನಿಂದ ಪೀಡಿತರಾದವರು, ಮುಂದುವರಿದು–ಮೇಲೆ ಹತ್ತಿ, ಅಂಕವೇರಿದರು– ತೊಡೆಗಳಮೇಲೆ ಬಿದ್ದರು, ಎಂದು–ಎಂದು ಹೇಳತಕ್ಕ, ಪೊಸವಾರ್ತೆಯಂ–ಹೊಸ ಸುದ್ದಿಯನ್ನು, ಓರ್ವಳು ಪ್ರೌಢೆ–ಒಬ್ಬಾನೊಬ್ಬ ಚತುರಳು, ಪೇಳ್ದಡೆ–ತಿಳಿಸಲು, (ಕಾಮುಕನ ಪರವಾದ ಅರ್ಥವು) ಅಂದು–ಆ ಕಾಲದಲ್ಲಿ, ಬಾಲೆಯರು–ಕನ್ನೆಯರು, ಆಕೆಯಂ–ಆ ಸ್ತ್ರೀಯನ್ನು, ಗೆಲ್ವಡೆ–ಸೋಲಿಸಬೇಕಾದರೆ, ಅರಸನು–ರಾಜನು ಮತ್ತು ಪತಿಯು, ಇಲ್ಲವೆ–ಇರುವುದಿಲ್ಲವೆ? ಎಂದು–ಎಂಬುದಾಗಿ, ನಗುತ–ಹಾಸ್ಯಮಾಡುತ್ತ, ಜರಿದರು–ತಿರಸ್ಕರಿಸಿದರು. ||೫೩||

ಟೀ|| ವಿಮಲ–ಪರಿಶುದ್ಧವಾದ, ದಧಿ–ಮೊಸರು, ಲಾಜಿ–ಭತ್ತದ ಅರಳು, ದೂರ್ವೆ–ಚಿಗುರು ಹುಲ್ಲು, ಅಕ್ಷತೆಗಳಂ–

---

ಒಬ್ಬ ಬಾಲೆಯು ಇವಳ ಅಭಿಪ್ರಾಯಮಂ ಕಂಡುಕೊಂಡವಳಾಗಿ, ಶ್ರೀ ಕೃಷ್ಣನು ಯುದ್ಧದಲ್ಲಿ ತೋರಿಸುವ ಕರಚಾತುರ್ಯವು ನಮಗೆ ಗೊತ್ತಾಗಿಯೇ ಇರುವುದೆಂದು ನುಡಿದಳು (ಎಂದರೆ ಮಾರಯುದ್ಧವಂ ಮಾಡಿ ನಮ್ಮ ಪತಿಗಳು ರಣಕ್ಕೆ ಹೋಗಿರುವರೆಂದು ಭಾವವು) ||೫೨|| ಹೀಗಿರುವಲ್ಲಿ ಒಬ್ಬಾನೊಬ್ಬ ಪ್ರೌಢೆಯು ತನ್ನ ಸಂಗಾತಿಯರಿದ್ದ ಕಡೆಗೆ ಬಂದು, ಹೊಸ ಸುದ್ದಿಯನ್ನು ಹೇಳುವಂತೆ ಅವರನ್ನು ಕುರಿತು, ಪರರಾಯರು ಬಂದು, ನಮ್ಮ ರಾಷ್ಟ್ರದ ಸಿರಿಯಂ ಕೊಳ್ಳೆಮಾಡಿ, ನಮ್ಮ ರಾಜ್ಯಕ್ಕೆ ಸೇರಿದ ಹಳ್ಳಿ ಪಳ್ಳಿಗಳನ್ನು ಗಿರಿ ದುರ್ಗಗಳನ್ನೂ ಸೂರೆಮಾಡಿದರು. ತಮ್ಮ ಜಯಸೂಚಕವಾದ ಸಂಗತಿಯನ್ನು ತಿಳಿಸಲು ಬಾವುಟವನ್ನು ಮೇಲಕ್ಕೆ ಎತ್ತಿ ಹಿಡಿದರು. (ಎಂದರೆ ಯುದ್ಧಕ್ಕೆ ಹೋದ ಭಟರು ತಮ್ಮ ಪ್ರಾಣನಾಯಕಿಯರೊಂದಿಗೆ ಬೆರೆದು, ಕ್ರೀಡಿಸಿದ್ದರಿಂದ ಮುಖದ ಕಾಂತಿಯು ಕುಂದಿತು. ಕಾಮಾತುರರಾಗಿ ತೊಡೆಯನ್ನೇರಿ ಕಟಿಪುರೋಭಾಗವನ್ನು ವಿಸ್ತರಿಸಿಬಿಟ್ಟರು. ಕುಚಗಳೆಂಬ ದುರ್ಗಗಳಂ ಹಿಡಿದುಕೊಂಡು, ಕಾಮಾತುರರಾಗಿ ತೊಡೆಯಮೇಲೆ ಏರಿದರು. ಎಂದು ಭಾವವು) ಎಂದು ನುಡಿಯಲು ಇತರರು ಪರರಾಜರ ಕಾಟವನ್ನು ತಪ್ಪಿಸುವ ರಾಜನಿರುವಾಗ ನಮಗೇನು ಭಯವೆಂದು ನಗುತ್ತ ಉತ್ತರವನ್ನಿತ್ತರು. ಗಂಡಂದಿರೇ ಈ ಕಾಮರಾಜನ ಬಾಧೆಯನ್ನು ಪರಿಹರಿಸತಕ್ಕದ್ದರಲ್ಲಿ ಬದ್ಧಾದರರಾಗಿದಾರೆಂಬ ಆಶಯವು ||೫೩|| ಈ ತೆರನಾದ

ದೂರ್ವಾಕ್ಷತೆಗಳಂತಳೆದು । ಕ್ರಮದೊಳಗಾರತಿಗಳಂತಂದೆತ್ತಿಯಕ್ಷಕ । ರ್ದಮವಿಲೇಪನಕುಸುಮತಾಂಬೂಲಮಂಕೊಟ್ಟು ಪರಸಿಸೇಸೆಗಳನಿಟ್ಟು ॥ ರಮಣರಂತೆಗೆದುಬಿಗಿಯಪ್ಪಿಶುಭವಾಕ್ಯದಿಂ । ಸಮರಭೂಮಿಗೆಕಳುಹಿಸತಿಯರ್ಸುರತ್ನಕು । ಟ್ಟಿಮದ ಹರ್ಮ್ಯಂಗಳನಡರ್ದರ್ದಿವಿಜಪುರದಲಕ್ಷ್ಮೀಪತಿಯನೋಡಲು ॥೫೪॥

ಸಂಧಿ ೧೦ ಕ್ಕೆ ಪದ್ಯ ೫೨೫ ಕ್ಕಂ ಮಂಗಳಮಸ್ತು.

---

ಮಂತ್ರಾಕ್ಷತೆ ಮೊದಲಾದುವನ್ನೆಲ್ಲಾ, ತಳೆದು–ಮೇಲೆಹಾಕಿ, ಕ್ರಮದೊಳು - ಯಥಾವಿಧಿಯಗಿ, ಆರತಿಗಳಂ–ಆರತಿಗಳನ್ನು, ತಂದು-ತೆಗೆದುಕೊಂಡು ಬಂದು, ಎತ್ತಿ–ಬೆಳಗಿ, ಯಕ್ಷಕರ್ದಮ-ಸುವಾಸನೆಯಾದ ಗಂಧದ, ವಿಲೇಪನ-ಮೈಗೆ ಬಳಿದುಕೊಳ್ಳುವ ಗಂಧ, ಕುಸುಮ- ಪುಷ್ಪವು, ತಾಂಬೂಲಮಂ– ವೀಳೆಯದೆಲೆ ಅಡಿಕೆ ಇವನ್ನು, ಕೊಟ್ಟು–ಇತ್ತು, ಪರಸಿ–ಒಳ್ಳೇದಾಗಲೆಂದು ಬಯಸಿ, ಸೇಸೆಗಳನು–ಮಂತ್ರಾಕ್ಷತೆಗಳನ್ನು, ಇಟ್ಟು-ಹಾಕಿ, ರಮಣರಂ–ತಮ್ಮ ಕಾಂತರನ್ನು, ತೆಗೆದು–ಸೆಳೆದು ಕೊಂಡು, ಬಿಗಿ ಯಪ್ಪಿ-ಭದ್ರವಾಗಿ ತಬ್ಬಿ ಕೊಂಡು, ಶುಭವಾಕ್ಯದಿಂ–ಒಳ್ಳು ಡಿಗಳಿಂದ, ಸಮರ ಭೂಮಿಗೆ–ರಣರಂಗಕ್ಕೆ, ಕಳುಹಿ- ಕಳುಹಿಸಿಕೊಟ್ಟು, ಸತಿಯರು–ನಾರಿಯರು, ಸುರತ್ನ–ಪ್ರಕಾಶಮಾನವಾದ ನವರತ್ನಗಳಿಂದ ಅಲಂಕರಿಸಿದ, ಕುಟ್ಟಿಮದ–ಜಗುಲಿಯಿಂದ ಕೂಡಿದ, ಹರ್ಮ್ಯಂಗಳನು–ಮಹಡಿಗಳನ್ನು, ದಿವಿಜಪುರ–ದೇವಲೋಕ ನಿವಾಸಿಯಾದ, ಲಕ್ಷ್ಮೀಪತಿಯನು-ಲಕ್ಷ್ಮೀಕಾಂತನಾದ ಕೃಷ್ಣ ಸ್ವಾಮಿಯನ್ನು, ನೋಡಲು–ನೋಡುವುದಕ್ಕಾಗಿ, ಅಡರ್ದರು-ಹತ್ತಿದರು. ॥೫೪॥

ಟೀಕಾತಾತ್ಪರ್ಯಸಹಿತವಾದ ಜೈಮಿನಿಭಾರತದೊಳು ಹತ್ತನೆಯ ಸಂಧಿಯು
ಸಮಾಪ್ತಮಾದುದು.

---

ಪರಿಹಾಸ ವಚನಗಳಿಂದ ಕಾಲವಂ ಕಳೆದುಕೊಂಡು, ತಾವು ಆರತಿ, ಅಕ್ಷತೆ, ಕುಸುಮ, ಗಂಧ, ತಾಂಬೂಲಾದಿಗಳಿಂದಲೂ ಸೇಸೆಗಳಿಂದಲೂ ಆಲಿಂಗನಾದಿಗಳಿಂದೂ, ಒಳ್ಳುಡಿಗಳಿಂದಲೂ ಕಳುಹಿಸಿದ ತಮ್ಮ ತಮ್ಮ ಪತಿಗಳು ಯುದ್ಧಾಕಾಂಕ್ಷಿಗಳಾಗಿ ಹೋಗುತ್ತಿರುವುದನ್ನು ಉಪ್ಪರಿಗೆಗಳ ಕಿಟಕಿಗಳಲ್ಲಿ ನೋಡಿ ನೋಡಿ ಹಿಗ್ಗುತ್ತಲೂ, ಕೃಷ್ಣಸ್ವಾಮಿಯ ಸಂದರ್ಶನವು ಯಾವ ಕಾಲಕ್ಕೆ ಲಭಿಸೀತೆಂದು ಹಂಬಲಿಸುತ್ತ ಕಿಟಕಿಗಳಲ್ಲಿ ಅತಿಯಾದ ಕುತೂಹಲದಿಂದ ಎವೆಯಿಕ್ಕದೆ ನೋಡುತ್ತಲೂ ಇದ್ದರು. ॥೫೪॥

ಟೀಕಾತಾತ್ಪರ್ಯಸಹಿತವಾದ ಜೈಮಿನಿಭಾರತದೋಳ್ ಹತ್ತನೆಯ ಸಂಧಿಯ
ಕಥಾಸಾರಾಂಶವು ಸಮಾಪ್ತಮಾದುದು.



## ಹನ್ನೊಂದನೆಯ ಸಂಧಿ.

ಸೂಚನೆ॥ ಹಿಂದುಳಿದ ಸಾಹಸಕ್ಕೆಂದು ಹಂಸಧ್ವಜಂ । ನಂದನನನೆಣ್ಣೆಗಾದಿರ್ದ ಕೊಪ್ಪರಿಗೆಯೊ । ಳ್ತಂದು ಕೆಡಹಿಸಲಚ್ಯುತನಧ್ಯಾನದಿಂ ತಂಪುನಡೆದ ನವನಚ್ಚರಿಯೆನೆ ॥

ಭೂಹಿತಚರಿತ್ರಕೇಳುಳಿಯದೆಸಮಸ್ತಭಟ । ರಾಹವಕೆಪೊರಮಟ್ಟ ಬಳಿಕಹಂಸಧ್ವಜನ । ಮೋಹದಕುಮಾರಂ ಸುಧನ್ವನಾಯತಮಾಗಿ ಬಂದು ನಿಜಮಾತೆಯಡಿಗೆ ॥ ಬಾಹುಯುಗಮಂನೀಡಿ ಸಾಷ್ಟಾಂಗಮೆರಗಿಸಿತ । ವಾಹನನಹರಿಯಂ ಪಿಡಿದುಕಟ್ಟಿ ಕದನದೊ । ಳ್ಸಾಹಸಂಮಾಳ್ಪೆನೆನ್ನಂಪರಸಿಕಳುಹೆಂದು ಕೈಮುಗಿದೊಡಿಂತೆಂದಳು ॥ ೧ ॥ ಕಂದಕೇಳ್ಫಲುಗುಣಂಪಾಲಿಪಂನಾಲ್ಕಡಿಯ । ದೊಂದುಹರಿಯುಂನಿನಗದರಚಿಂತೆಬೇಡಸಾ । ನಂದದಿಂಪಾರ್ಥನಂರಕ್ಷಿಸುವಹರಿಯನೇಹಿಡಿವ

---

ಹನ್ನೊಂದನೆಯ ಸಂಧಿ ಪ್ರಾರಂಭವು.

ಸೂಚನೆ॥ ಟೀ॥ ಹಂಸಧ್ವಜಂ-ಮರಾಳಧ್ವಜನು, ಆಹವಕ್ಕೆ-ಕಾಳಗಕ್ಕೆ, ಹಿಂದೆ - ಹಿಂಗಡೆಯಲ್ಲಿ, ಉಳಿದಂ-ತನ್ನ ಪುತ್ರನಾದ ಸುಧನ್ವನು ನಿಂತನು, ಎಂದು-ಎಂಬದಾಗಿ, ನಂದನನಂ-ತನುಜನಾದ ಸುಧನ್ವನನ್ನು, ಎಣ್ಣೆಗಾದಿರ್ದ-ತೈಲದಿಂದ ತಪ್ತವಾಗಿದ್ದ, ಕೊಪ್ಪರಿಗೆಯೊಳ್-ಕಟಾಹದಲ್ಲಿ, ತಂದು-ಕರದುಕೊಂಡು ಬಂದು, ಕೆಡಹಿಸಲ್-ಬೀಳಗೆಡವಲಾಗಿ, ಅಚ್ಯುತನ-ನಾಶರಹಿತನಾದ ಶ್ರೀ ಕೃಷ್ಣನ, ಧ್ಯಾನದಿಂ - ಸ್ಮರಣೆಮಾಡುವದರಿಂದ, ಅವಂ-ಆ ಸುಧನ್ವನು, ಅಚ್ಚರಿಯೆನೆ-ಸೋಜಿಗವೊ ಎನ್ನುವಂತೆ, ತಂಪುನಡೆದಂ-ಶೈತ್ಯವಂ ಪೊಂದಿದವನಾದನು ॥

ಟೀ॥ ಭೂಹಿತ-ಪೃಥ್ವಿಯಲ್ಲಿ ಜೀವಿಸುವವರಿಗೆ (ಮನುಷ್ಯರಿಗೆ) ಪ್ರೀತಿಪಾತ್ರವಾದ, ಚರಿತ್ರ-ನಡವಳಿಕೆಯುಳ್ಳವನಾದ, ಜನಮೇಜಯರಾಯನೇ ! ಕೇಳು-ಮುಂದಿನ ಕಥಾವಿವರಣೆಯನ್ನು ಕೇಳುವವನಾಗು, ಸಮಸ್ತ-ಸಕಲರಾದ, ಭಟರು-ಶೂರರು, ಉಳಿಯದೆ-ಒಬ್ಬರೂ ನಿಲ್ಲದೆ, ಆಹವಕೆ-ಯುದ್ಧಕ್ಕೆ, ಪೊರಮಟ್ಟು-ಪ್ರಯಾಣಮಾಡಿ ಹೊರಟು, ಬಳಿಕ-ತರುವಾಯ, ಹಂಸಧ್ವಜನ-ಮರಾಳಧ್ವಜನ, ಮೋಹದ - ಪ್ರೇಮವುಳ್ಳವನಾದ, ಕುಮಾರಂ - ಪುತ್ರನಾದ ಸುಧನ್ವನೆಂಬಾತನು, ಆಯತಮಾಗಿ-ಒಡಗೂಡಿದವನಾಗಿ, ಬಂದು-ಹೊರಟುಬಂದು, ನಿಜ-ತನ್ನಯ, ಮಾತೆಯ-ಮಾತೃವಿನ, ಅಡಿಗೆ-ಚರಣಗಳಿಗೆ, ಬಾಹು-ತೋಳಿನ, ಯುಗಮಂ-ಜೊತೆಯನ್ನು, ನೀಡಿ-ಮುಂದೆ ಚಾಚಿಕೊಂಡು, ಸಾಷ್ಟಾಂಗಮಂ-ನಮಸ್ಕಾರವನ್ನು, ಎರಗಿ-ಮಾಡಿದವನಾಗಿ (ಅಷ್ಟಾಂಗದಿಂದ ಅಡ್ಡಬಿದ್ದು), ಸಿತವಾಹನನ-ಧವಳಾಶ್ವವುಳ್ಳ ಪಾರ್ಥನ, ಹರಿಯಂ-ತುರಗವನ್ನು, ಪಿಡಿದು-ಗ್ರಹಿಸಿ, ಕಟ್ಟಿ-ಬಂಧಿಸಿ, ಕದನದೊಳ್-ಆಜಿಯಲ್ಲಿ, ಸಾಹಸಂ-ಪೌರುಷವನ್ನು, ಮಾಳ್ಪೆಂ-ಗೈಯುವೆನು, ಎನ್ನಂ-ನನ್ನಂ, ಪರಸಿ-ಹರಸಿ, (ಆಶೀರ್ವಾದವಂ ಮಾಡಿ), ಕಳುಹು-ಕಳುಹಿಸಿಕೊಡು, ಎಂದು-ಎಂಬದಾಗಿ, ಕೈಮುಗಿದೊಡೆ-ಕೈಜೋಡಿಸಿ ಕೇಳಿಕೊಳ್ಳಲಾಗಿ, ಇಂತು-ಈ ವಿಧವಾಗಿ, ಎಂದಳು-ಉಸಿರಿದಳು ॥

ಅ॥ ವಿ॥ ಎಣ್ಣೆ+ಕಾದಿರ್ದ=ಎಣ್ಣೆಗಾದಿರ್ದ, ಗಕಾರ ಆದೇಶಸಂ, ಚ್ಯುತಿ-ನಾಶವು, ಅ-ಇಲ್ಲದವನು, ನ. ತ. ಅಚ್ಚರಿ-ತ್ಭ. ಆಶ್ಚರ್ಯ-ತ್ಸ, ಕುಮಾರ-ತ್ಸ, ಕುವರ-ತ್ಭ, ಸಿತವಾದ ವಾಹನವುಳ್ಳವನು, ಸಿತವಾಹನ, ಬಹು, ಸ, ಅಡಿ-ಪಾದ, ಹನ್ನೆರಡಂಗುಲ॥೧॥

ಟೀ॥ ಕಂದ-ಎಲೈ ಪ್ರೀತಿಪಾತ್ರನಾದ ಮಗುವೆ; ಕೇಳು-ಆಲಿಸು, ಫಲುಗುಣಂ-ಧನಂಜಯನು, ನಾಲ್ಕಡಿಯ-ನಾಲ್ಕು ಪಾದಗಳುಳ್ಳ, ಅದೊಂದು-ಒಂದಾದ, ಹರಿಯುಂ-ತುರಂಗವನ್ನು, ಪಾಲಿಪಂ-ಸಂರಕ್ಷಿಸುವನು, ನಿನಗೆ-ಮಗುವಾದನಿನಗೆ,

---

ಹನ್ನೊಂದನೆಯ ಸಂಧಿ ಪ್ರಾರಂಭವು.

ತಾ॥ ಎಲೈ ಭೂಪತಿಗಳೊಳಗೆ ಚೂಡಾರತ್ನಪ್ರಾಯನಾದ ಜನಮೇಜಯರಾಯನೆ ಆಲಿಸು :—ಇನ್ನು ಮುಂದೆ ನಡೆದ ಕಥಾ ಸಂದರ್ಭವಂ ವಿವರಿಪೆನು. ಆಗ ಚಂಪಕಾವತೀ ನಗರದ ರಾಜನಾದ ಮರಾಳಧ್ವಜನ ಅಪ್ಪಣೆಯಪ್ರಕಾರ ಸಮಸ್ತರಾದ ಸೈನಿಕರು ತಮ್ಮ ತಮ್ಮ ಗೃಹಗಳಲ್ಲಿ ತಮ್ಮ ಹಿರಿಯರಿಗೂ ತಮ್ಮ ಕುಲದೇವತೆಗಳಿಗೂ ನಮಸ್ಕರಿಸಿದವರಾಗಿ, ಅವರಿಂದ ಆಶೀರ್ವಾದಗಳಂಪೊಂದಿ ಕಾಲವಿಳಂಬ ಮಾಡದೆ ಅತಿ ಶೀಘ್ರವಾಗಿ ಯುದ್ಧಕ್ಕೋಸ್ಕರ ಪ್ರಯಾಣ ಮಾಡಿದರು, ಆದರೆ ಹಂಸಧ್ವಜನ ಪ್ರೀತಿಪಾತ್ರನಾದ ಸುಧನ್ವನೂ ಕೂಡ ಮಹಾ ಘೋರವಾದ ಯುದ್ಧಕ್ಕೆ ಸನ್ನದ್ಧನಾಗಿ ಹೊರಟು, ತನ್ನ ಜನನಿಯ ಪಾದಾರವಿಂದಗಳಿಗೆ ನಮಸ್ಕರಿಸಿ, ತನ್ನ ಉದ್ದವಾದ ತೋಳ್ಗಳನ್ನು ಮುಂದಕ್ಕೆ ಚಾಚಿಕೊಂಡು ಎರಡು ಕೈಗಳನ್ನೂ ಜೋಡಿಸಿದವನಾಗಿ, ಎಲೌ ಮಾತೆಯೆ ಸಿತವಾಹನನ (ಪಾರ್ಥನ) ಅಶ್ವವನ್ನು ಹಿಡಿದುಕಟ್ಟಿ ಆತನೊಡನೆ ಕಾಳಗಕ್ಕೋಸ್ಕರವಾಗಿ ಹೊರಟಿರುವೆನು. ನೀನು ನನಗೆ ಆಶೀರ್ವಾದಗಳನ್ನು ಮಾಡಿ ಕಳುಹೆಂದು ನಮಸ್ಕರಿಸಲಾಗಿ ॥೧॥ ಆಗ ಸುಧನ್ವನ ತಾಯಿಯು, ತನ್ನಯ ಪುತ್ರನಂ ಕುರಿತು ಎಲೈ ನನ್ನ ಮುದ್ದು ಕಂದನೇ! ಆಲಿಸು ; ಆ ತುರಗವನ್ನು ಪಾಂಡುಪುತ್ರನಾದ ಪಾರ್ಥನೆಂಬುವನು ಸಲಹು

ಬುದ್ಧಿಯನೆಮಾಡು ‖ ಹಿಂದೆನಾರದಮುನಿಯಮುಖದಿಂದಕೇಳ್ದೆಂ ಮು | ಕುಂದನವಿಶಾಲಲೀಲಾಮಾಲಿಯಂಕೃಷ್ಣ |
ನಿಂದುಪ್ರೈದೋರಿದೊಡೆ ಕಣ್ಣಾರೆಕಾಣಬಹುದೆಂದೊಡವನಿಂತೆಂದನು ‖ ೨ ‖ ತಾಯೆಚಿತ್ತೈಸಾದೊಡೀಭಾಷೆಯಂಕೃಷ್ಣ |
ರಾಯನಂತನ್ನಡೆಗೆಬರಿಸಿಕೊಂಬುದಕೊಂದು | ಪಾಯಮಂಬಲ್ಲೆನಾಂಕಯ್ಯಂಪಿಡಿದೊಡೆಮೈತಾನೆಬಹುದಿಂದರ್ಜುನನು ‖ ನೋ
ಯಿಸದೊಡಗಧರಂಬಾರದಿರನಾನತರ | (ಅಘಹರಂ) ಪಾಯಮಂಸೈರಿಸಂಬಳಿಕತೋರುವೆನೆಂಬು | ಜಾಯತಾಕ್ಷನಮುಂದೆ

ಅದರ-ಆ ಹಯದ, ಚಿಂತೆ-ಆಲೋಚನೆಯು, ಬೇಡ-ಬೇಕಾಗಿರುವುದಿಲ್ಲ (ಅಗತ್ಯವಿಲ್ಲ), ಸಾನಂದದಿಂ-ಆನಂದದಿಂದ, ಪಾರ್ಥನಂ-ಪೃಥೆಯ ಮಗನಾದ ಫಲುಗುಣನನ್ನು, ರಕ್ಷಿಸುವ-ಸಲಹುತ್ತಿರುವ, ಹರಿಯನೇ-ಪ್ರಾಪಂಚಿಕ ತಾಪತ್ರಯಗಳನ್ನು ಹೋಗಲಾಡಿಸತಕ್ಕವನಾಗಿರುವ ಶ್ರೀ ಕೃಷ್ಣನನ್ನೇ, ಹಿಡಿವ-ಕಂಡುಹಿಡಿಯತಕ್ಕ, ಬುದ್ಧಿಯನೇ-ತಿಳಿವಳಿಕೆಯನ್ನೇ, ಮಾಡು-ಪ್ರಯತ್ನಿಸು, ಹಿಂದೆ-ಕೆಲವುಕಾಲಕ್ಕೆ ಪೂರ್ವದಲ್ಲಿ, ನಾರದಮುನಿಯ-ನಾರದನೆಂಬ ಮಹರ್ಷಿಯ, ಮುಖದಿಂದ-ಆಸ್ಯದಿಂದ ನುಡಿದ ವಚನದಿಂದ, ಮುಕುಂದನ-ಮೋಕ್ಷದಾಯಕನಾದ ಶ್ರೀ ಕೃಷ್ಣನ, ವಿಶಾಲ-ವಿಸ್ತಾರವಾದ, ಲೀಲಾ-ವೈಭವದಿಂದೊಡಗೂಡಿದ ನಟನೆಗಳ, ಮಾಲೆಯಂ-ಸಮೂಹವನ್ನು, ಕೇಳ್ದೆ-ಆಕರ್ಣಿಸಿದೆನು, ಕೃಷ್ಣಂ-ಶ್ರೀ ಕೃಷ್ಣಮೂರ್ತಿಯು, ಇಂದು-ಈ ಸಮಯದಲ್ಲಿ, ಮೈದೋರಿದೊಡೆ-ಪ್ರಸನ್ನನಾದರೆ, ಕಣ್ಣಾರೆ-ನೇತ್ರವು ದಣಿಯುವವರೆಗೂ, ಕಾಣಬಹುದು-ದರ್ಶಿಸಬಹುದು, ಎಂದೊಡೆ-ಎಂಬದಾಗಿ ಪೇಳಲು, ಅವಂ-ಆ ಸುಧನ್ವನು, ಇಂತು-ಈ ಕ್ರಮವಾಗಿ, (ಈರೀತಿಯಾಗಿ) ಎಂದನು-ಆಡಿದನು ‖

ಅ‖ ವಿ‖ ಫಲುಗುಣೀ ನಕ್ಷತ್ರದಲ್ಲಿ ಹುಟ್ಟಿದವನು (ಫಲುಗುಣ) ನಾಲ್ಕಾದ ಅಡಿಗಳ ಸಮಾಹಾರ ನಾಲ್ಕಡಿ, ಸ.ದ್ವಿ.ಸ. ಹರಿ-ಕಪ್ಪೆ, ಸಿಂಹ, ಕುದುರೆ, ಕಪಿ, ಚಂದ್ರ, ವಿಷ್ಣು. ಪೃಥೆಯಮಗ-ಪಾರ್ಥ, ಇಂತು + ಎಂದಂ = ಇಂತೆಂದಂ = ಉಕಾರಲೋ, ಸಂ ‖ ೨ ‖

ಟೀ‖ ತಾಯೆ-ಎಲೌ ಜನನಿಯೇ! ಆದೊಡೆ-ಹಾಗಿದ್ದ ವಿಷಯದಲ್ಲಿ, ಈ ಭಾಷೆಯಂ-ಈ ಹಠವನ್ನು-ಪ್ರಮಾಣವನ್ನು, ಚಿತ್ತೈಸು-ಲಾಲಿಸುವಳಾಗು, ಕೃಷ್ಣರಾಯನಂ-ಶ್ರೀ ಕೃಷ್ಣಮೂರ್ತಿಯನ್ನು, ತನ್ನೆಡೆಗೆ-ನನ್ನ ಸಮೀಪಕ್ಕೇನೆ, ಬರಸಿಕೊಂಬುದಕ್ಕೆ-ಕರೆಯಿಸಿ ಕೊಳ್ಳುವುದಕ್ಕೆ, ಆಂ-ನಾನಾದರೊ, ಒಂದು ಉಪಾಯಂ-ಒಂದುಬಗೆ ತಂತ್ರವನ್ನು, ಬಲ್ಲೆ-ತಿಳಿದಿರುತ್ತೇನೆ. ಕೈಯ-ಹಸ್ತವನ್ನು, ಪಿಡಿದೊಡೆ-ಹಿಡಿದುಕೊಂಡರೆ, ಮೈ-ದೇಹವು, ತಾನೆ-ತಾನಾಗಿಯೇ, ಬಹುದು-ಬರುವುದು (ನಾವು ಅರ್ಜುನನ ತುರಗಮಂ ಪಿಡಿಯೆ ಅವನಿಗೆ ಸಹಾಯಕನಾಗಿ ಕೃಷ್ಣನು ತಾನಾಗಿಯೆ ಬರುವನು ಕರುವನ್ನು ಪಿಡಿದರೆ ಹಸುವು ಹೇಗೆ ಓಡಿ ಬರುವುದೋ ಹಾಗೆ), ಇಂದ್ರಜನನು-ಇಂದ್ರನು ಉಪದೇಶಿಸಿದ್ದ ಮಂತ್ರೋಚ್ಚಾರಣೆಯ ದೆಸೆಯಿಂದ ಜನಿಸಿದ ಪಾರ್ಥನನ್ನು, ನೋಯಿಸಿದೊಡೆ-ಬಾಧೆ ಪಡಿಸಿದ್ದೇಆದರೆ (ಬೇನೆಮಾಡಿದರೆ), ಅಘಹರಂ-ಪಾಪಹರನಾದ ಶ್ರೀ ಕೃಷ್ಣಮೂರ್ತಿಯೂ, ಬಾರದಿರನು-ಬರದೇ ಇರತಕ್ಕವನಲ್ಲ (ಬಂದೇ ಬರುವನು), ಆನತರ-ತನ್ನ ಉಪಾಸಕರ, ಅಪಾಯಮಂ-ತೊಂದರೆಗಳನ್ನು, ಸೈರಿಸಂ-ನೋಡಿ ಸುಮ್ಮನಿರತಕ್ಕವನಲ್ಲ, ಬಳಿಕ-ಆನಂತರದಲ್ಲಿ (ಶ್ರೀ ಕೃಷ್ಣನು ಇಲ್ಲಿಗೆ ಬಂದ ಅನಂತರದಲ್ಲಿ), ಕಂಜ-ತಾವರೆಯ ಪುಷ್ಪದಂತೆ, ಆಯತ-ವಿಶಾಲವಾದ, ಅಕ್ಷ-ನೇತ್ರಗಳುಳ್ಳವನಾದ, ಶ್ರೀ ಕೃಷ್ಣನ ಇದಿರಾಗಿ, ಎನ್ನ-ನಿನ್ನ ಬಾಲನಾದ ನನ್ನ, ಪೌರುಷವನು-ಪರಾಕ್ರಮಾತಿಶಯವನ್ನು, ತೋರಿಸುವೆನು-ಕಾಣಿಸುತ್ತೇನೆ. (ತೋರ್ಪಡಿಸುತ್ತೇನೆ) ಎನೆ-ಎಂಬದಾಗಿ ಹೇಳಲು, ಆಕೆ-ಆ ಸುಧನ್ವನ ಜನನಿಯು, ಮಗುಳೆ-ಪುನಃ, ಇಂತೆಂದಳು-ಈ ಪ್ರಕಾರವಾಗಿ ಪೇಳಿದಳು ‖

ಅ‖ ವಿ‖ (ಅಷ್ಟಾಂಗ-ಪಾದದ್ವಯ, ಭುಜದ್ವಯ, ವಕ್ಷ-ಲಲಾಟ), ಅಗ-ಬೆಟ್ಟವನ್ನು, ಧರ-ಧರಿಸಿದವನು, (ಕೃ-

ವನು ಅದರಚಿಂತೆ ನಿನಗೆ ಬೇಕಾದ್ದಲ್ಲ ಆ ಪಾರ್ಥನನ್ನು ಸಲಹುವ, ತನ್ನ ಭಜಕರನ್ನು ಸಂಸಾರ ಬಂಧದಿಂದ ತನ್ನಬಳಿಗೆ ಸೆಳೆದು ಕಾಪಾಡುವ, ವಿಷ್ಣುನಾಮಕನಾದ ಶ್ರೀ ಕೃಷ್ಣಸ್ವಾಮಿಯನ್ನು ಹಿಡಿಯುವದರಲ್ಲಿ ನಿನ್ನ ಬುದ್ಧಿ ಕುಶಲತೆಯನ್ನುಪಯೋಗಿಸು, ಏಕೆಂದರೆ ಪೂರ್ವದಲ್ಲಿ ದೇವಮುನಿಯಾದ ನಾರದಮಹರ್ಷಿಯ ಮುಖದಿಂದ ನಾಶರಹಿತನು, ವಿಶಾಲವಕ್ಷಸ್ಥಳನು, ಮೋಕ್ಷದಾಯಕನು, ಲಕ್ಷ್ಮೀಪತಿಯು ಆದ ಕೃಷ್ಣಸ್ವಾಮಿಯ, ವಿಶಾಲವಾದ ಲೀಲಾವತಾರಗಳ ಮಾಲೆಯನ್ನು ಕೇಳಿರುವೆನು, ಶ್ರೀ ಕೃಷ್ಣಮೂರ್ತಿಯು ಈಗಲು ಪ್ರತ್ಯಕ್ಷನಾಗಿ, ಪ್ರಸನ್ನನಾದರೆ ಕಣ್ಣುಗಳಿಗೆ ಆಯಾಸವುಂಟಾಗುವಷ್ಟು ನೋಡಬಹುದು, ಮತ್ತು ನಿರತಿಶಯವಾದ ಮೋಕ್ಷ ಸುಖವನ್ನು ಹೊಂದಬಹುದೆಂದು ಹೇಳಿದಳು ‖ ೨ ‖ ಆಬಳಿಕ ಸುಧನ್ವನು ಎಲೌ ಜನನಿಯೇ, ಬಾಲಕನಾದ ನನ್ನಯ ವಿನಯೋಕ್ತಿಗಳಂ ಲಾಲಿಸುವಳಾಗು, ಶ್ರೀ ಕೃಷ್ಣಮೂರ್ತಿಯಂ ನಮ್ಮೆಡೆಗೆ ಬರಮಾಡಿಕೊಳ್ಳುವುದಕ್ಕೋಸ್ಕರವಾಗಿ ನಾನೊಂದುಪಾಯವನ್ನು ಯೋಚಿಸಿರುವೆನು, ಅದೇನಂದರೆ ಈಗ ಎಳೆಗರುವನ್ನು ಪಿಡಿದುಕೊಂಡರೆ ಅದನ್ನು ರಕ್ಷಿಸುವುದಕ್ಕಾಗಿ ಅದರ ತಾಯಿಯು ಹೇಗೆ ನಮ್ಮನ್ನ ಬೆನ್ನಟ್ಟಿ ಬರುವುದೊ, ಮತ್ತು ಹಸ್ತವನ್ನು ಪಿಡಿದೆಳೆದರೆ ಶರೀರವೆಲ್ಲವೂ

ತನ್ನ ಪೌರುಷವನೆನಲಾಕೆಮುಗುಳಿಂತೆಂದಳು ‖ ೩ ‖ ಕರುವನೆಳಗಂದಿತಾನರಸಿಕೊಂಡೈತಪ್ಪ । ತೆರದಿಂದಬಂದಪಂಮುರಹರಂ ಪಾರ್ಥನೆಡೆ । ಗರಿವೆನಿದುನಿಶ್ಚಯಂ ಮಗನೆನೀನಾಹರಿಗೆ ವಿಮುಖನಾದೊಡೆ ತನ್ನನು ‖ ಜರಿವರಿಕ್ಕೆಲದಬಂಧುಗಳಿನ್ನು ಸಮರ ದೊಳ್ನೆರೆ ಕೃಷ್ಣನಂಗೆಲ್ವರುಂಟೆಸಾಕೆನ್ನೊಡಲ । ಮರುಕಮಂ ಬಿಟ್ಟೆನನನಂಕಂಡಬಳಿಕಹಿಮ್ಮೆಟ್ಟದಿರ್ಪೋಗೆಂದಳು ‖ ೪ ‖ ಎಂದೊಡೆಲೆತಾಯೆ ಕೇಳ್ಚಕ್ರಿಗೆವಿಮುಖನಾಗಿ । ಬಂದೆನಾದೊಡೆನಿನ್ನ ಗರ್ಭದಿಂದುದಯಿಸಿದ । ನಂದನನೆಹಂಸಧ್ವಜನ ಕುಮಾ

---

ಕೃಷ್ಣನು), ಅಘ-ಪಾಪವನ್ನು, ಹರ-ಪರಿಹಾರ ಮಾಡುವವನು, ಮುಕುಂದ-ಮೋಕ್ಷದಾಯಕನು, ಆನಂದದಿಂದ ಸಹಿತವಾದದ್ದು ಸಾನಂದ, ಸಹ. ಪೂ. ಬಹು. ‖ ೩ ‖

ಟೀ‖ ಕಂದ-ಎಲೈ ಬಾಲನೆ, ಕರುವಂ-ತನ್ನ ಕರುವನ್ನು (ಹಸುವಿನ ಕರುವನು), ಎಳೆಗಂದಿ-ಕರುಹಾಕಿದ ಪಶುವು, ಅರಸಿಕೊಂಡು- ಹುಡುಕುತ್ತಾ, ತಾಂ-ತಾನು, ಐತಪ್ಪ-ಆಗಮಿಸುವ, ತೆರದಿಂದ-ಕ್ರಮದಿಂದ, ಮುರಹರ-ಮುರಾಂತಕನಾದ ಶ್ರೀ ಕೃಷ್ಣನು, ಪಾರ್ಥನ-ಫಲುಗುಣನ, ಎಡೆಗೆ-ಸಮೀಪಕ್ಕೆ, ಬಂದಪಂ-ಬರುವನು, ತಾಂ-ನಾನು, ಅರಿವೆನು-ತಿಳಿದಿರುತ್ತೇನೆ, ಇದು-ಈ ವಾಕ್ಯವು, ನಿಶ್ಚಯ-ಯಥಾರ್ಥವು, ಮಗನೆ- ಎಲೈ ಪುತ್ರನೆ ! ನೀನು-ನೀನಾದರೋ, ಆ ಹರಿಗೆ-ಆ ಶ್ರೀ ಕೃಷ್ಣನಿಗೆ, ವಿಮುಖನು-ಸೋತು ಹೊದವನು, ಆದೊಡೆ-ಆಗುವದಾದರೆ (ಆದಪಕ್ಷದಲ್ಲಿ), ತನ್ನಂ-ಎನ್ನನ್ನು, ಇಕ್ಕೆಲದ ಬಂಧುಗಳ್-ಮಾತಾಪಿತೃಗಳ ಕಡೆಯ ನೆಂಟರಿಷ್ಟರು, ಮತ್ತು ಆ ಎರಡು ಕಡೆಯ ಕುಲದೇವತಾಭಿಮಾನಿಗಳು, ಇನ್ನು-ಇನ್ನು ಮುಂದೆ, ಜರಿವರ್-ತಿರಸ್ಕರಿಸುತ್ತಾರೆ, ಸಮರದೋಳ್-ಆ ಹವದಲ್ಲಿ, ನೆರೆ-ಪೂರ್ತಿಯಾಗಿ, ಕೃಷ್ಣನಂ-ಶ್ರೀ ಹರಿಯನ್ನು, ಗೆಲ್ವರ್-ಗೆಲ್ಲತಕ್ಕವರು, ಉಂಟೆ-ಎಲ್ಲಿಯಾದರೂ ಇರುತ್ತಾರೆಯೇ? ಸಾಕು-ಶ್ರೀ ಕೃಷ್ಣನನ್ನು ಯುದ್ಧದಲ್ಲಿ ಗೆಲ್ಲುವೆನೆಂಬ ಮಾತು ಬಿಡುವನಾಗು, ಎನ್ನ-ಎನ್ನಯ, ಒಡಲ-ಶರೀರದ, (ದೇಹದಲ್ಲುಂಟಾದ) ಮರುಕಮಂ - ಸಂತಾಪವನ್ನು, ಬಿಟ್ಟೆಂ-ತ್ಯಜಿಸಿದೆನು, ಅನನಂ-ಆ ಶ್ರೀ ಕೃಷ್ಣನಂ ನೋಡಿದ ಅನಂತರದಲ್ಲಿ, ಹಿಮ್ಮೆಟ್ಟದಿರ್-ಎಂದಿಗೂ ಹಿಂದೆಗಿಯದವನಾಗಿರು, ಪೋಗ್-ಹೋಗುವನಾಗು, ಎಂದಳ್-ಎಂಬದಾಗಿ ಪೇಳಿದಳು ‖

ಅ‖ ವಿ‖ ಎಳೆಯ ಕಂದಿ, ಎಳೆಗಂದಿ, ವಿ. ಪೂ. ಕ. ಆಯತ-ವಿಸ್ತಾರ, ಆಯತಾಕಾರ, ಅಚ್ಚರಿ-ದ್ಭ, ಆಶ್ಚರ್ಯ-ತ್ಸ, ಕುಲ-ವಂಶ, ಸಮೂಹ, ಕುಲದಬಂಧು-ಕುಲಬಂಧು, ಷ. ತ. ಅವನು, ಸುಧನ್ವ-ಆ ಸುಧನ್ವ, ಗಮಕ ಸಮಾಸ, ಪೋಗು+ಎಂದು=ಪೋಗೆಂದು=ಉಕಾರ, ಲೋಪ, ಸ. ದಶ ವಿಧಪಾತಕಗಳು-ಮಹಾಪಾತಕ, ಅತಿಪಾತಕ, ಪ್ರಾಸಂಗಿಕ ಪಾತಕ, ಉಪ ಪಾತಕ, ಜಾತಿಭ್ರಂಶಕರ, ಸಂಕೀರ್ಣಕ, ಅಪಾತ್ರಕರಣ, ಮಲಾವಹ, ಪ್ರಕೀರ್ಣಕ) ‖ ೪ ‖

ಟೀ‖ ಎಂದೊಡೆ-ಸುಧನ್ವನ ತಾಯಿಯು ಈರೀತಿ ಹೇಳಲು, ಎಲೆತಾಯೆ- ಎಲೌಜನನಿಯೇ, ಕೇಳ್-ಆಲಿಸುವಳಾಗು, ಚಕ್ರಿಗೆ-ಶ್ರೀ ಕೃಷ್ಣಮೂರ್ತಿಗೆ, ವಿಮುಖನಾಗಿ-ಸೋತು ಹೋದವನಾಗಿ, (ಜಯಿಸದೇ ಹೋದವನಾಗಿ), ಬಂದೆಂ ಆದೊಡೆ-ಬಂದವನಾದರೆ, ಆಂ-ನಾನು, ನಿನ್ನ-ನಿನ್ನಯ ಗರ್ಭದಿಂದ (ಹೊಟ್ಟೆಯಿಂದ), ಉದಯಿಸಿದ-ಆವಿರ್ಭವಿಸಿದ (ಜನಿಸಿದ) ನಂದನನೇ-ಪುತ್ರನಾದೇನೆಯೇ (ಯುದ್ಧದಲ್ಲಿ ಪರಾಜಿತನಾದರೆ, ನಿನ್ನ ಮಗನೆಂದು ಭಾವಿಸಬೇಡ) ಹಂಸಧ್ವಜನ-ಎನ್ನಪಿತನಾದ ಮರಾಳಧ್ವಜನ, ಕುಮಾರನೇ-ಪುತ್ರನೆ ? ಮೇಣು-ಇನ್ನೂ, ಹರಿ-ಕೃಷ್ಣನಿಗೆ, ಕಿಂಕರನೆ-ಭಜಕನೇ ? ವೀರನೇ-ಪರಾಕ್ರಮಿಯೇ?

---

ಹೇಗೆ ಬರುತ್ತದೆಯೋ ಹಾಗೆಯೆ ಈ ಪಾರ್ಥನ ತುರಂಗಮುಂ ಪಿಡಿದು ಅವನೊಡನೆ ಕಾಳಗಕ್ಕೆ ನಿಂತರೆ ತಾನಾಗಿಯೆಯಿರುವ ಎಂದರೆ (ಪಾರ್ಥನೇ ಶ್ರೀ ಕೃಷ್ಣನಾಗಿರುವನೆಂಬ ಅಭಿಪ್ರಾಯ ಶ್ರೀ ಕೃಷ್ಣನು ತನ್ನ ಮೈದುನನಾದ ಧನಂಜಯನನ್ನು ಕಾಪಾಡಿಕೊಳ್ಳಲಿಕ್ಕಾಗಿ ತಾನಾಗಿಯೇ ನಾವಿದ್ದಸ್ಥಳಕ್ಕೆ ಬರುವನು. ಆಗ ಆ ತಾವರೇ ಎಸಳಿನೋಪಾದಿಯಲ್ಲಿ ವಿಸ್ತಾರ ನೇತ್ರಗಳುಳ್ಳವನು, ನೀಲಮೇಘಶ್ಯಾಮನು, ಪೀತಾಂಬರಧಾರಿಯು ಆದ ಶ್ರೀ ಕೃಷ್ಣಮೂರ್ತಿಯ ಎದುರಾಗಿ ನನ್ನಪರಾಕ್ರಮಾಟೋಪವನ್ನು ತೋರಿಸುತ್ತೇನೆ, ಎಂದು ಹೇಳಲಾಗಿ, ಆ ಸುಧನ್ವನ ಮಾತೆಯು ಮತ್ತೆ ಇಂತೆಂದಳು ‖೩‖ ಎಲೈ ಕಂದನೇ ! ಆಕಳ ಕರುವನ್ನು ಪಿಡಿದರೆ ಎಳೆಗಂದಿಯು ತನ್ನ ಕಂದನನ್ನು ಅರಿಸಿಕೊಂಡು ಬರುವುದು ನಿಶ್ಚಯವೆಂದು ನನಿಗೆ ಗೊತ್ತುಂಟು, ಈ ನಿನ್ನಯ ಬಾಲ ನುಡಿಯು ಸತ್ಯವು ಆದರೆ ಆ ಶ್ರೀ ಕೃಷ್ಣನಿಗೆ ಪ್ರತಿಭಟಿಸಿ ನಿಂತು ಕಾಳಗದಲ್ಲಿ ವಿಮುಖನಾಗಿ ಬಂದರೆ ನನ್ನ ಸ್ವಜನರು ಒಡಹುಟ್ಟದವರೇ ಆದಿಯಾಗಿ ಸಕಲರೂ ನನ್ನನ್ನು ತಿರಸ್ಕಾರ ಮಾಡುತ್ತಾರೆ. ರಣದಲ್ಲಿ ಶ್ರೀ ಹರಿಯನ್ನು ಎಲ್ಲಿಯಾದರೂ ಜಯಿಸಲಿಕ್ಕಾದೀತೆ, ಎನ್ನೊಡಲ ಮರುಕವನ್ನು (ಅಂಧಕಾರವನ್ನು) ತ್ಯಜಿಸಿರುವೆನು. ಶ್ರೀ ಕೃಷ್ಣನಂ ನೋಡಿದ ನಂತರದಲ್ಲಿ ಎಂದಿಗೂ ಹಿಮ್ಮೆಟ್ಟದೇ ಇರು ಎಂದು ಆಶೀರ್ವಾದವಂ ಗೈಯ್ದಳು ‖ ೪ ‖ ಆಗ ಸುಧನ್ವನು ಎಲೌ ಮಾತೆಯೆ, ನಾನು ಯುದ್ಧದಲ್ಲಿ ಶ್ರೀ ಕೃಷ್ಣನಿಗೆ ಹಿಮ್ಮೆಟ್ಟಬಂದರೆ (ವಿಮುಖನಾಗಿ ಬಂದರೆ) ನಿನ್ನ ಗರ್ಭದಲ್ಲಿ ಹುಟ್ಟದ ಸುತನೆಂಬುವರೆ, ಅಸಹಾಯ ಶೂರ

ಽನೆಮೇಣುಹರಿಕಿಂಕರನೆವೀರನೆ || ಕೊಂದಪೆಂಪಾರ್ಥನ ಪತಾಕಿನಿಯನವನಘಟ | ನಂದಗೆಡಿಸುವೆನೆನ್ನ ವಿಕ್ರಮನನಚ್ಯುತನ | ಮುಂದೆತೋರಿಸುವೆನನಿತರಮೇಲೆ ಸೋಲುಗೆಲುವುದುಪುಣ್ಯ ವಶನೆಂದನು || ೫ || ಅನಿತರೊಳ್ಕುವಲೆಯೆಂಬವಳೊರ್ವಳಾ ಸುಧ | ನ್ವನಸಹೋದರಿತಂದಳಾರತಿಯನನುಜಕೇ | ಳನುವರದೊಳಿಂದುಶೌರಿಗೆ ವಿಮುಖನಾಗಿನೀಂಬಂದೆಯಾದೊಡೆಮಾವನ || ಮನೆಯೊಳಾಂತಲೆಯೆತ್ತಿನಡಿಯೆನಾನದರಿಂದ | ವನಜಾಕ್ಷನಂ ಮೆಚ್ಚಿಸಾಹನದೊಳೆಂದುಚಂ | ದನದನೂಂಪಿಟ್ಟು ಕರ್ಪುರದವೀಳೆಯುಂಗೊಟ್ಟು ಕಳುಹಿದಳ್ಸೇಸೆದಳಿದು ||೬|| ಅರಸಕೇಳಾಸುಧನ್ವಂಬಳಿಕ ಜನನಿಸೋ | ದರಿಯರಂಬೀಳ್ಕೊಂಡು

---

ಪಾರ್ಥನ-ಆ ಫಲುಗುಣನ, ಪತಾಕಿನಿಯನು-ವಾಹಿನಿಯನ್ನು, ಕೊಂದಪೆಂ- ಸಂಹಾರ ಮಾಡುತ್ತೇನೆ, ಅವನ-ಆ ಪಾರ್ಥನ, ಅಘಟಂ-ಪರಾಕ್ರಮುವನ್ನು, ಅಂದಗೆಡಿಸುವೆಂ-ಭಂದೋಭಂಗಮಾಡುತ್ತೇನೆ, ಅಚ್ಯುತನ-ನಾಶರಹಿತನಾದ ಶ್ರೀಕೃಷ್ಣನ,ಮುಂದೆ-ಎದುರಿನಲ್ಲಿ, ಎನ್ನ-ಎನ್ನಯ, ವಿಕ್ರಮುವನ-ಆಟೋಪಾತಿಶಯವನ್ನು, ತೋರಿಸುವೆಂ-ತೋರಮಾಡುತ್ತೇನೆ, ಅನಿತರಮೇಲೆ-ಇಷ್ಟಾದಾಗ್ಯಾದರೂ, ಸೋಲಿಗೆಲುವುದು-ಅಪಜಯುನನ್ನು, ಜಯುನನ್ನೂ ಪಡೆಯುವವುದು, ಪುಣ್ಯವಶಂ-ನನ್ನಯ ಪುಣ್ಯಾನುಸಾರಿಯಾಗಿರುತ್ತದೆ, ಎಂದು-ಎಂಬದಾಗಿ ಹೇಳಿದನು.

ಅ|| ವಿ|| ಚಕ್ರವುಳ್ಳವನು, ಚಕ್ರಿ=ಕೃಷ್ಣ, ಚಕ್ರಿ-ಹೆಣ್ಣುಚಕ್ರವಾಕ, ಕೃಷ್ಣ, ನಂದನ - ಮಗ, ನಂದನವನ, ಗರ್ಭ-ಹೊಟ್ಟೆ, ಬಸಿರು, ಕುಮಾರ-ತ್ಸ, ಕುವರ-ದ್ಭ, ಪತಾಕ-ಧ್ವಜ, ಅದುಳ್ಳದ್ದು-ಪತಾಕಿನಿ, ಪೃಥೆಯ ಮಗ, ಪಾರ್ಥ-ಅರ್ಜುನ || ೫ ||

ಟೀ|| ಅನಿತರೊಳ್-ಆವೇಳೆಯೊಳಗೆ, ಕುವಲೆಯೆಂಬ - ಕುವಲೆಯೆಂಬ ಹೆಸರುಳ್ಳ, ಅವಳೋರ್ವಳ್-ಅವಳೊಬ್ಬಳಾದ, ಆಸುಧನ್ವನ-ಆ ಸುಧನ್ವನೆಂಬುವನ, ಸಹೋದರಿ-ತನ್ನೊಡಹುಟ್ಟಿದವಳು, ಆರತಿಯನು-ಆ ರಾತ್ರಿಕವನ್ನು ತಂದಳು-ತೆಗದುಕೊಂಡು ಬಂದಳು, ಅನುಜ-ಎಲೈ ಸಹೋದರನಾದ ಸುಧನ್ವನೆ, ಕೇಳು-ಎನ್ನಯ ನುಡಿಯನ್ನು ಆಲಿಸು, ಅನುವರದೊಳ್-ಆ ಹನದಲ್ಲಿ, ಇಂದು-ಈದಿನ, ಶೌರಿಗೆ-ಶ್ರೀ ಕೃಷ್ಣನಿಗೆ, ವಿಮುಖನಾಗಿ-ಸೋತು ಹೋದವನಾಗಿ, ನೀಂ-ನೀನು, ಬಂದೆಯಾದೊಡೆ-ಬಂದದ್ದೇಆದರೆ, ಮಾವನ-ಗಂಡನ ತಂದೆಯ, ಮನೆಯೋಳ್-ಗೃಹದಲ್ಲಿ, ನಾಂ-ನಾನು, ತಲೆಯೆತ್ತಿ-ತಲೆಯನ್ನೆತ್ತಿಕೊಂಡು, ನಡೆಯೆನು-ನಡೆಯಲಾರೆನು (ನನಿಗೆ ಬಹು ಅಪಮಾನವಾಗುತ್ತೆಂಬ ಭಾವವು) ನಾಂ-ನಾನಾದರೊ, ಅದರಿಂದ-ಅದಕ್ಕೋಸ್ಕರವಾಗಿ, ಪೇಳ್ದಂ-ಹೇಳಿದನು, ವನಜಾಕ್ಷನಂ-ಕಮಲಾಂಬಕನಾದ ಶ್ರೀ ಕೃಷ್ಣಮೂರ್ತಿಯನ್ನು, ಮೆಚ್ಚಿಸು-ಬಲಿಯುವಂತೆ ಮಾಡು, ಎಂದು-ಎಂಬದಾಗಿ ಹೇಳಿ, ಚಂದನದ-ಶ್ರೀಗಂಧದಿಂದ ಮಾಡಿದ, ನೂಂಪಿಟ್ಟು-ಚುಕ್ಕೆಯನ್ನಿಟ್ಟು, ಕರ್ಪೂರವೀಳೆಯಂ-ಪಚ್ಚ ಕರ್ಪೂರವೇ ಮೊದಲಾದ ಸುವಾಸನಾ ದ್ರವ್ಯದಿಂದ ಕೂಡಿದ ಅಡಿಕೆಲೆಯನ್ನು ಕೊಟ್ಟವಳಾಗಿ, ಸೇಸೆದಳಿದು-ಮಂತ್ರಾಕ್ಷತೆಯನ್ನು ತಲೆಯಮೇಲೆ ಹಾಕಿ, ಕಳುಹಿದಳ್-ಆಶೀರ್ವಾದಮಾಡಿ ಕಳುಹಿಸಿಕೊಟ್ಟಳು.

ಅ|| ವಿ|| ಸಹ+ಉದರಿ = ಸಹೋದರಿ, ಗುಣಸಂ, ವನಜದಂತೆ, ಅಕ್ಷಿಯುಳ್ಳವಳು= ವನಜಾಕ್ಷಿ, ಉ. ಪೂ. ಬ, ಸ. ಕಪ್ಪುರ-ದ್ಭ, ಕರ್ಪೂರ-ತ್ಸ. ವೀಳೆಯುನಂ ಕೊಟ್ಟು=ವೀಳೆಯಂ ಗೊಟ್ಟು, ಕ್ರಿ. ಸ. || ೬ ||

ಟೀ|| ಅರಸ-ರಾಜನಾದ ಜನಮೇಜಯುರಾಯನೆ, ಕೇಳು - ಆಲಿಸು, ಆಸುಧನ್ವ-ಆ ಸುಧನ್ವನೆಂಬುವನು, ಬಳಿಕ-ಅನಂತರದಲ್ಲಿ, ಜನನಿ-ಮಾತೆಯನ್ನು, ಸೋದರಿಯರಂ-ಅಕ್ಕತಂಗಿಯೇ ಆದಿಯಾದವರನ್ನು, ಬೀಳ್ಕೊಂಡು-ಅವರನ್ನು ಕೇಳಿ ಅಪ್ಪಣೆ ತೆಗದುಕೊಂಡು,ಪೊರಮಟ್ಟು-ಹೊರಟುಬಂದು, ತನ್ನ-ತನ್ನಯ,ಮಂದಿರದ-ಗೃಹದ,ಪೊರೆಗೆ-ಹತ್ತಿರದ ಪ್ರದೇಶದಲ್ಲಿ, ಐತರಲ್ಕೆ-ಬಂದವನಾಗಲು, ಅಂಗಜನ-ಮನಸಿಜನ, ಜಯ-ಜಯಿಸಿದ, ಸಿರಿ-ಶ್ರೀಯಮದವನ್ನುಜಯಿಸಿದ ಜಯಲಕ್ಷ್ಮಿಯು) ತಾಳ-

---

ನಾದ ಹಂಸಧ್ವಜನಿಗೆ ಕುಮಾರಕನೆ, ಮತ್ತು ಹರಿಕಿಂಕರನೆ, ವೀರನೆ ನಿಜವಾಗಿಯೂ ಪಾರ್ಥನ ಪತಾಕಿನಿಯನ್ನು ನಾಶಮಾಡುವೆನು ಮತ್ತು ಅರ್ಜುನನ ಅಹಂಕಾರವನ್ನು ಭಂಗಿಸುತ್ತೇನೆ ಶ್ರೀ ಕೃಷ್ಣನಮುಂದೆ ನನ್ನ ಶಕ್ತಿಯನ್ನೆಲ್ಲಾ ತೋರ್ಪಡಿಸುವೆನು, ಇಷ್ಟರಮೇಲೆ ಜಯಾಪಜಯಗಳೂ ನನ್ನ ಪುಣ್ಯ ಪರಿಪಾಕವಾದುದಾಗಿರುತ್ತದೆ ಎಂದು ಹೇಳಿದನು || ೫ || ಆಗ ಅಷ್ಟರೊಳಗೆ ಸುಧನ್ವನ ಸಹೋದರಿಯಾದ ಕುವಲೆ ಎಂಬುವಳು ಆರತಿಯನ್ನು ಕೈಯಲ್ಲಿ ಹಿಡಿದುಕೊಂಡು, ತಮ್ಮನಾದ ಎಲೈ ಸುಧನ್ವನೆ ನೀನೇನಾದರೂ ಯುದ್ಧದಲ್ಲಿ ಸೋತುಬಂದರೆ ನಾನಂತು ನನ್ನ ಮಾವನ ಮನೆಯಲ್ಲಿ ತಲೆ ಎತ್ತಿಕೊಂಡು ತಿರಗಲಾರೆನು ಶ್ರೀ ಕೃಷ್ಣನಿಗೆ ಎದುರುನಿಂತು ಜಯಶಾಲಿಯಾಗೆನುತ ಆರತಿಯನ್ನು ಎತ್ತಿ ಅಕ್ಷತೆಯ ಕಾಳನ್ನು ತಲೆಯಮೇಲೆ ಹಾಕಿ, ಕರ್ಪೂರವೇ ಮೊದಲಾದ ಸುವಾಸನೆಯ ದ್ರವ್ಯದಿಂದ ಯುಕ್ತವಾದ ತಾಂಬೂಲವನ್ನು ಕೊಟ್ಟುಹೋಗಿಬಾರೆಂದು ಕಳುಹಿದಳು ||೬|| ಎಲೈ ಜನಮೇಜಯುರಾಯನೇ ಆಲಿಸುವನಾಗು ಬಳಿಕ ಸುಧನ್ವನು ತನ್ನ ಜನನಿಯನ್ನು ಸಹೋದರಿಯನ್ನು ಸಂತವಿಟ್ಟು ಹೊರಟು

ಪೊರಮಟ್ಟುತನ್ನನುಂ | ದಿರದಪೊರೆಗೈತರಲ್ಕಿದಿರಾಗಿಪೊಂದಟ್ಟೆಯೊಳ್ಸಂಪಗೆಯಪೂವನು || ಸರಸಪರಿಮಳಗಂಧಕರ್ಪೂರ ವೀಳೆಯವ | ನಿರಿಸಿಕೊಂಡೊಲವಿಂದಬಂದಳಂಗಜನಜಯ | ಸಿರಿತಾನೆನಲ್ಪ್ರಭಾವತಿಯೆನಿಪವನರಾಣಿಸುಶ್ರೋಣಿಸರ್ಪ ವೇಣೀ || ಚಂದ್ರಮಂಡಲಸದೃಶವದನದೆಳೆನಗೆಯನವ | ಚಂದ್ರಿಕೆಯನಲ್ಮೇಲುದಿನದುಕೂಲಂಮೆರೆಯೆ | ಚಂದ್ರತಿಲ ಕದರಾಗಮುಂಚಿತ್ತದನುರಾಗಮುಂಸೂಚಿಸಂತೆಸೊಗಸೆ || ಇಂದ್ರನೀಲದಮಣಿಯಮಿರುಗುವಲಲಿತಕಾಂತಿ | ಸಾಂದ್ರ ಮಾದವೊಲೆಸೆವಳಕಪಾಶದಿಂನಯ | ನೇಂದ್ರಿಯವನುರೆಕಟ್ಟಿಕೆಡಪದಿರಳೆಂಬಿನಿಂರಂಜಿಸಿದಳಾಮೃಗಾಕ್ಷಿ || ೮ || ಸ್ಫುರಿಸುವೊ ಳ್ತೊಡೆಯಬೆಡಗಿನನಡೆಯನಿರಿಯಸಿಂ | ಗರದುಡಿಯತೇಲ್ವಾದಸಿಯಪೊಡೆಯಚೆಲ್ವದಳೆ | ದುರದೆಡೆಯನಿಂಬುಗೊಂಡಿಟ್ಟೆಡೆಯ

ತಾನೆ, ಎನಲ್-ಎಂಬುವ ಹಾಗೆ, ಅವನ-ಆ ಸುಧನ್ವನ, ಸುಶ್ರೋಣಿ-ಸೊಗಸಾದ ಕಟಿಪಶ್ಚಾದ್ಭಾಗವುಳ್ಳ, ಸರ್ಪವೇಣಿ-ಹಾವಿನಂತೆ ಜಡೆಯುಳ್ಳವಳಾದ, ಪ್ರಭಾವತಿಯೆನಿಪ-ಪ್ರಭಾವತಿಯೆಂದು ಅಭಿಧಾನವುಳ್ಳ, ರಾಣಿ-ರಾಜ್ಞಿಯು (ಹೆಂಡತಿಯು) ಇದಿರಾಗಿ-ಎದುರು ಮುಖವಾಗಿ, ಪೊಂದಟ್ಟೆಯೊಳ್- ಚಿನ್ನದ ಹರಿವಾಣದಲ್ಲಿ, ಸಂಪಗೆಯ ಪೂವನು-ಚಂಪಕಾ ಪುಷ್ಪವನ್ನು, ಸರಸ-ರಸಯುಕ್ತಮಾದ, ಪರಿಮಳ-ಸುಗಂಧದ್ರವ್ಯವನ್ನು, ಕರ್ಪೂರ-ಪಚ್ಚ ಕರ್ಪೂರದಿಂದ ಯುಕ್ತಮಾದ, ವೀಳೆಯವನು-ತಾಂಬೂಲವನ್ನು, ಇರಿಸಿಕೊಂಡು-ಇಟ್ಟುಕೊಂಡವಳಾಗಿ, ಒಲವಿಂದ-ಪ್ರೀತಿಯಿಂದ, ಬಂದಳ್-ಐತಂದಳು ||

ಅ|| ವಿ|| ಪೊನ್ನಿನ+ತಟ್ಟೆ=ಪೊಂದಟ್ಟೆ, (ಷ. ತ.) ರಸದೊಡನೆ ಸಹಿತವಾದ್ದು-ಸರಸ, (ಸಹ. ಪೂ. ಬಹು. ಸ.) ಸಿರಿ (ದ್ಭ) ಶ್ರೀ-(ತ್ಸ) ಸುಷ್ಠು, ಶ್ರೋಣಿಯುಳ್ಳವಳು=ಸುಶ್ರೋಣಿ, (ಬ. ಸ.) ಸರ್ಪದಂತೆ ವೇಣಿಯುಳ್ಳವಳು=ಸರ್ಪವೇಣಿ (ಉ.ಪೂ. ಬಹು. ಸ.) ||೭||

ಟೀ|| ಆ ಮೃಗಾಕ್ಷಿ – ಕುರಂಗಾಕ್ಷಿಯಾದ ಪ್ರಭಾವತಿಯು, ಚಂದ್ರಮಂಡಲ – ಇಂದುಬಿಂಬಕ್ಕೆ, ಸದೃಶ-ಸಮವಾಗುಳ್ಳ, ವದನದ-ಆಸ್ಯದಿಂದ ಯುತಳಾದ, ಎಳೆನಗೆಯ-ಮಂದಹಾಸವೆಂಬುವ, ನವಚಂದ್ರಿಕೆಯ-ನೂತನವಾದ ಜ್ಯೋತ್ಸ್ನವೆಂಬಂತಿರುವ, ಮೇಲುದಿನ-ಮೇಲು ಹೊದಿಕೆಯ, (ಸೆರಗಿನ) ದುಕೂಲಂ-ಪಟ್ಟೆಯ ವಸ್ತ್ರವು, ಮೆರೆಯೆ-ಕಾತಿಯಿಂದೊಪ್ಪುತ್ತಿರಲು, ಚಂದ್ರ-ಸಿಂಧೂರದಿಂದ ಮಾಡಿದ, ತಿಲಕದ-ಊರ್ಧ್ವರೇಖೆಯು (ಉದ್ದವಾದ ನಾಮವುಳ್ಳ) ರಾಗಮುಂ-ರಕ್ತ ಬಣ್ಣವು, ಚಿತ್ತದ-ತನ್ನ ಹೃದಯದಲ್ಲಿರುವ, ಅನುರಾಗಮುಂ-ಪ್ರೇಮವನ್ನು, ಸೂಚಿಸಂತೆ- ತೋರ್ಪಡಿಸುವ ಅಂದದಿಂದ, ಸೊಗಸೆ-ಪ್ರಕಾಶಯುತಮಾಗಿರಲು, ಇಂದ್ರ ನೀಲಮಣಿಯ-ಇಂದ್ರನೀಲವೆಂಬ ರತುನದಂತೆ, ಮಿರುಗುವ-ಹೊಳೆಯುವ, ಲಲಿತ-ಮನೋಹರಮಾದ, ಕಾಂತಿ-ಶೋಭೆಯು, ಸಾಂದ್ರ-ಒತ್ತು (ದಟ್ಟವು) ಆದವೋಲ್-ಆದರೀತಿಯಿಂದ, ಎಸೆವ-ಹೊಳೆಯುವ, ಅಳಕ-ಮುಂಗೂದಲಿನಿಂದ ವ್ಯಾಪ್ತವಾದ, ಪಾಶದಿಂದ – ಜಡೆಯೆಂಬ ಪ್ರಗ್ರಹದಿಂದ, ನಯನೇಂದ್ರಿಯವನು-ನೋಟವನ್ನು, ಉರೆ-ಬಹುವಾಗಿ, ಕಟ್ಟಿ-ಬಂಧಿಸಿ, ಕೆಡಪದೆ-ಬೀಳುಗೊಡದೆ, ಇರಳು-ಇರಲಾರಳು, ಎಂಬಿನಿಂ-ಎನ್ನುವ ರೀತಿಯಿಂದ, ರಂಜಿಸಿದಳು-ಪ್ರಕಾಶಿಸಿದಳು ||

ಅ|| ವಿ|| ನೇತ್ರ+ಇಂದ್ರಿಯ=ನೇತ್ರೇಂದಿಯ, ಗುಣ, ಸಂ, ಹಗ್ಗ-ದ್ಭ, ಪ್ರಗ್ರಹ-ತ್ಸ, ಶೃಂಗಾರ-ತ್ಸ ಸಿಂಗೆರ ದ್ಭ, ಚಿತ್ತ-ಮನಸ್ಸು, ಒಂದು ನಕ್ಷತ್ರ, ಜಡೆ-ದ್ಭ, ಜಟಾ-ತ್ಸ, ಮೃಗದಂತೆ, ಅಕ್ಷಿಯುಳ್ಳವಳು. ಮೃಗಾಕ್ಷಿ ಉ.ಪೂ.ಬಹು.ಸ. ||೮||

ಟೀ|| ಅರಸಿ-ಪಟ್ಟಮಹಿಷಿಯಾದ ಪ್ರಭಾವತಿಯು, ನಿಜಪತಿಯ – ತನ್ನ ಗಂಡನಾದ ಸುಧನ್ವನ, ಮುಂದು-ಎದುರಾಗಿ, ಅಂದು-ಆ ಸಮಯದಲ್ಲಿ, ಸ್ಫುರಿಸುವ-ಪ್ರಕಾಶಿಸುತ್ತಲಿರುವ, ಒಳ್ತೊಡೆಯ-ಒಳಭಾಗದ ಊರು ಪ್ರದೇಶವುಳ್ಳ, ಬೆಡ

ತನ್ನ ಮನೆಯ ಮುಂಗಡೆ ಬರಲಾಗಿ, ಗಂಡನಿಗೆ ಎದುರಾಗಿ ಚಿನ್ನದ ಹರಿವಾಣದಲ್ಲಿ ಚಂಪಕಾ ಕುಸುಮವನ್ನು ಪರಿಮಳ ಯುಕ್ತವಾದ ಸುಗಂಧವನ್ನು ಪಚ್ಚ ಕರ್ಪೂರಯುತಮಾದ ವೀಳೆಯನ್ನು ಇರಿಸಿಕೊಂಡು ಬಲು ಪ್ರೀತಿಯಿಂದ ಮನಸಿಜನ ಜಯಲಕ್ಷ್ಮಿಯೇ ತಾನು ಎನ್ನುವಂತೆ ಸುಧನ್ವನ ಧರ್ಮಪತ್ನಿಯು ಪಟ್ಟಮಹಿಷಿಯು ಆದ, ಪ್ರಭಾವತಿಯೆಂಬ ಹೆಸರುಳ್ಳವಳು ಬಂದಳು||೭|| ಆಗ ಕುರಂಗಾಕ್ಷಿಯಾದ ಪ್ರಭಾವತಿಯು ಚಂದ್ರಮಂಡಲಕ್ಕೆ ಸದೃಶನಾದ ಮುಖವು, ಮಂದಹಾಸವೆಂಬ ನವ ಚಂದ್ರಿಕೆಯಂತೆ ಕಂಗೊಳಿಪ ಶರಗುಳ್ಳ ದುಕೂಲವು, ಪ್ರಕಾಶಿಸಲು, ಫಣೆಯಲ್ಲಿ ಧರಿಸಿರುವ ಚಂದ್ರದ ತಿಲಕದ ಕೆಂಪು ಬಣ್ಣವು, ಹೃದಯದಲ್ಲಿರುವ, ಸ್ನೇಹವನ್ನು ಸೂಚಿಸುವಂತೆ ಶೃಂಗಾರವಾಗಿರಲು, ಇಂದ್ರನೀಲ ಮಣಿಯಂತೆ ಪ್ರಕಾಶಿಸುವ ಕೋಮಲಮಾದ ಕಾಂತಿಯ ನಿಬಿಡವು, ಆದರೀತಿಯಿಂದ ಶೋಭಿಸುವ ಮುಂಗುರುಳುಗಳಿಂದ ಕೂಡಿದ, ಜಡೆಯೆಂಬ ಹಗ್ಗದಿಂದ, ನಯನೇಂದ್ರಿಯವನ್ನು ಕಟ್ಟಿ ಕೆಡವದೇ ಇರುವುದಿಲ್ಲ ಎಂಬ ರೀತಿಯಿಂದ ಶೋಭಿಸಿದಳು || ೮ || ಮತ್ತು ಪಟ್ಟಮಹಿಷಿಯಾದ ಪ್ರಭಾವತಿಯು ಹೊಳೆಯುವ ಒಳ ತೊಡೆಯು ರೀತಿಯಿಂದ ಕೂಡಿರುವ ಮಂದಗಮನವುಳ್ಳ ನೆರಿಗೆಯ ಅಲಂಕಾರದಿಂದ ಕೂಡಿರುವ ಪೀತಾಂಬರವು, ಸಿಂಹ ಮಧ್ಯದಂತೆ ಪ್ರಕಾಶಿಸುವ ಮಧ್ಯ ಪ್ರದೇಶವು, ಚೆಲ್ವನ್ನು ಹೊಂದಿರುವ ಉರ

ಬಲ್ಮೊಲೆಯಪೊಳೆವಕಂಣಲರಕಡೆಯ ‖ ತ್ವರಿಪಭುಜವಲ್ಲರಿಯತೊಡವುಗಳ ವ್ಯೆಸಿರಿಯ । ಬಿರಿಮುಗುಳಕಬರಿಯಕಲೆಗಳಿಡಿದಸೌಂದರಿಯ । ದರಸಿವಿಜಪತಿಯ ಮುಂದಚ್ಚರಿಯ ಬಗೆಗೊಂಡಳೆಂದು ಬೇರೊಂದುಪರಿಯ ‖ ೯ ‖ ಮುಡಿಯಪೊಸಮಲ್ಲಿಗೆಯಸೂಸುವೆಳೆನಗೆಯಸವಿ । ನುಡಿಯಬಾಯ್ದೆರೆಯ ಹೊಳಹೊಳೆವ ದಶನದಮಿಸುಪ । ಕಡೆಗಣ್ಣತೊಳಗುವನ ಖಾವಳಿಯಥಳಥಳಿಪಕಂಠನಾಲೆಯ ಮುತ್ತಿನ ‖ ತೊಡವುಗಳಘನಸಾರದನು ಲೇಪನದ ಸಂಣ । ಮಡಿದುಕೂಲದ ಬೆಳ್ಗೆಗಕೋಮಲಾಂಗದೊಳ್ಬಿಡದೆಪಸರಿಸೆಚಂದ್ರಕಾಂತದಿಂನಿರ್ಮಿಸಿದ ಪುತ್ಥಳಿವೊಲವಳೆಸೆದಳು ‖೧೦‖ ಕರಯುಗದೊಳಾಂತಪೊಂದಟ್ಟೆಯನದರಮೇಲಿ

---

ಗಿನ-ಠೀವಿಯಿಂದ ಯುತವಾದ, ನಡೆಯ-ಗಮನವುಳ್ಳವಳಾದ, ನಿರಿಯ-ನೆರಿಗೆ ಹಿಡಿದು, ಸಿಂಗರದ-ಶೃಂಗಾರವುಳ್ಳ, ಉಡಿಗೆಯ-ಉಟ್ಟಿರುವ ವಸ್ತ್ರದ, ತೆಳ್ವಾದ-ತೆಳುವಾದ (ಕೃಶವಾದ), ಆಸಿಯ-ಸೊಂಟಪ್ರದೇಶವುಳ್ಳ (ಮಧ್ಯ ಭಾಗವುಳ್ಳ), ಪೊಡೆಯ-ಉದರದ, ಚಲ್ವ-ಸೊಗಸನ್ನು, ಪಳಿದ-ಪಡೆದಿರುವ, ಉದರ-ಎದೆಯ ಪ್ರದೇಶವಲ್ಲಿ, ಎಡೆಯನು-ಸ್ಥಳವನ್ನು, ಇಂಬುಗೊಂಡು-ವ್ಯಾಪಿಸಿಕೊಂಡು (ಕಾಂತಿಯಂ ಪೊಂದಿ), ಇಟ್ಟೆಡೆಯ-ಸ್ಥಾನವನೊಡಗೊಂಡಿರುವ, ಬಲ್ಮೊಲೆಯ-ಬಲವಾದ (ದಪ್ಪವಾದ) ಸ್ತನಯುಗ್ಮಗಳ, ಪೊಳೆವ-ಪ್ರಕಾಶಿಸುತ್ತಿರುವ, ಕಣ್ಣಲರ-ಕಮಲಪತ್ರದಂತೆ ಆಯತವಾದ ನೇತ್ರಗಳ, ಕಡೆಯ-ಕಡೆಯಭಾಗವುಳ್ಳ (ಕೊನೆಗಣ್ಣಿನ ನೋಟವುಳ್ಳ), ತ್ವರಿಪ-ಆತುರಪಡುತ್ತಿರುವ, ಭುಜವಲ್ಲರಿಯ-ಲತೆಯೋಪಾದಿಯಲ್ಲಿರುವ ಬಾಹುಗಳುಳ್ಳ, ತೊಡವುಗಳ-ಧರಿಸಿರುವ ಕುಪ್ಪಸದ, ಮತ್ತು ಹಸ್ತಾಭರಣವೇ ಮೊದಲಾದ ವಸ್ತುಗಳ, ವ್ಯೆಸಿರಿಯ-ದೇಹದ ಪ್ರಕಾಶಮುಳ್ಳ, ಬಿರಿಮುಗುಳ-ವಿಕಸಿಸಿದ ಮುಕುಳಿಗಳಿಂದ ಕೂಡಿದ, ಕಬರಿಯ-ಕಬರಿಯನ್ನುಳ್ಳ, (ಕೂದಲು ಗಂಟುಳ್ಳ) ಕಲೆಗಳ-ಪ್ರಕಾಶಗಳು, ಇಡಿದ-ವ್ಯಾಪ್ತವಾದ, ಸೌಂದರ್ಯದ-ಲಾವಣ್ಯವುಳ್ಳ, ಬೇರೊಂದುಪರಿಯ- ನೂತನಾಕಾರವುಳ್ಳ, ಅಚ್ಚರಿಯ-ಸೋಜಿಗದ ಬಗೆಗೊಂಡಳು-ಚಂದವನ್ನುಂಟಾಗಿದ್ದಳು ‖

ಅ‖ ವಿ‖ ಬಳ್ಳಿತ್ತು, ತೊಡೆ-ಒಳ್ಳೊಡೆ, ವಿ. ಪೂ. ಕ. ಕಣ್ಣು. ಅಲರಿನಂತೆ-ಕಣ್ಣಲರ್, ಉ. ಉತ್ತ. ಕ. ಮುಕುಳತ್ಸ. ಮೊಗ್ಗು-ದ್ಭ, ಅಚ್ಚರಿ-ದ್ಭ, ಆಶ್ಚರ್ಯ-ತ್ಸ ‖೯‖

ಟೀ‖ ಅವಳ್-ಆ ಸುಧನ್ವನನ ಪತ್ನಿಯಾದ ಪ್ರಭಾವತಿಯು, ಮುಡಿಯ-ಕಬರಿಯಲ್ಲಿನ, ಹೊಸಮಲ್ಲಿಗೆಯ-ನೂತನವಾದ ಮಲ್ಲಿಕಾ ಪುಷ್ಪವನ್ನು, ಸೂಸುವ-ಚೆಲ್ಲುತ್ತಿರುವ, ಎಳೆನಗೆಯ - ಮಂದಹಾಸಯುತವಾದ, ನುಡಿಯ-ವಚನಗಳುಳ್ಳ (ಮಾತುಗಳು), ಬಾಯ್ದೆರೆಯೆ-ಬಾಯಿಯನ್ನು ತೆರೆಯಲಾಗಿ, ಹೊಳೆಹೊಳೆವ-ಅತ್ಯಂತವಾಗಿ ಪ್ರಕಾಶಿಸುವ, ದಶನದ-ರದನದ, ಮಿಸುಪ-ಪ್ರಕಾಶಿಸುತ್ತಿರುವ, ಕಡೆಗಣ್ಣ-ಕಣ್ಣಿನ ಕೊನೆಯನೋಟವುಳ್ಳ, ತೊಳಗುವ-ಹೊಳೆಯುತ್ತಿರುವ, ನಖಾವಳಿಯ-ಕರಜಗಳ ಪಜ್ತಿಗಳ, ಥಳಥಳಿಪ-ಅತ್ಯಂತವಾಗಿ ಪ್ರಕಾಶಿಸುವ, ಕಂಠನಾಲೆಗಳ-ಕಂಠಾಭರಣಗಳ ಹಾರಗಳುಳ್ಳ, ಮುತ್ತಿನ-ಮೌಕ್ತಿಕಗಳಿಂದ ಮಾಡಿದ, ತೊಡವುಗಳ, ಒಡವೆಗಳಿಂದ ಕೂಡಿದ, ಘನ-ಶ್ರೇಷ್ಠವಾದ, ಸಾರದ-ಸುವಾಸನೆಯುಳ್ಳ ಸುಗಂಧದಿಂದ, ಅನುಲೇಪನದ-ಆ ಗಂಧವೇ ಆದಿಯಾದ ಪದಾರ್ಥವುಳ್ಳ, ಸಣ್ಣ-ಭಾರವಿಲ್ಲದ, ಮಡಿ-ಒಗೆದಿರುವಂಥ, ದುಕೂಲದ-ಪಟ್ಟೆವಸ್ತ್ರದ, ಬೆಳ್ಗೆಗರು-ಬಿಳೀಕಾಂತಿಯು, ಕೋಮಲಾಂಗದೊಳ್-ಮನೋಹರವಾದ ದೇಹದಲ್ಲಿ, ಬಿಡದೆ-ತಪ್ಪದೆ, ಪಸರಿಸೆ-ವೃದ್ಧಿಹೊಂದುತ್ತಿರಲು, ಚಂದ್ರಕಾಂತದಿಂ-ಚಂದ್ರಕಾಂತದ ಕಲ್ಲಿನಿಂದ, ನಿರ್ಮಿಸಿದ-ನಿರ್ಮಾಣ ಮಾಡಿದ, (ರಚಿಸಿದ, ಮಾಡಿದ) ಪುತ್ಥಳಿಯೋಲ್-ಪ್ರತಿಮೆಯಂತೆ (ಬೊಂಬೆಯಂತೆ) ಎಸೆದಳ್-ಪ್ರಕಾಶಿಸಿದಳು ‖

ಅ‖ ವಿ‖ ಮಲ್ಲಿಗೆ ತದ್ಭವ, ಮಲ್ಲಿಕಾ-ತ್ಸ. ಬಾಯ್ + ತೆರೆ = ಬಾಯ್ದೆರೆ, ದಕಾರ ಆದೇಶ. ಸಂ. ಮುತ್ತು-ದ್ಭ, ಮೌಕ್ತಿಕ, ತ್ಸ ‖ ೧೦ ‖

ಟೀ‖ ಕರಯುಗದೊಳ್-ಎರಡು ಹಸ್ತಗಳಿಂದಲೂ, ಆಂತ-ಧರಿಸಿರುವ, ಪೊಂದಟ್ಟೆಯನು - ಚಿನ್ನದ ತಬಕನ್ನು,

---

ದೇಶದಲ್ಲಿ ಇಂಬುಗೊಂಡು ಸ್ಥಳವನ್ನಾಕ್ರಮಿಸಿರುವ, ತುಂಡಾದ ಮತ್ತು ದಪ್ಪವಾದ ಕುಚಗಳು, ಕಮಲಪತ್ರದಂತೆ ವಿಶಾಲವಾದ ನೇತ್ರವು. ಬಳ್ಳಿಯಂತೆ ಕೋಮಲವಾದ ತವಕ ಪಡುತ್ತಿಲಿರುವ ಬಾಹುಗಳು ತೊಡವುಗಳ ಕಾಂತಿಯಿಂದೊಪ್ಪುವ ಅಂಗಾಂಗವು, ಅರಳಿದ ಮೊಗ್ಗುಗಳಿಂದ ಪ್ರಕಾಶಿಸುವ ಕಬರಿಯು (ತುರುಬು) ಕಲೆಗಳಿಂದ ತುಂಬಿದ ಲಾವಣ್ಯವೂ, ಉಳ್ಳವಳಾದ ಪ್ರಭಾವತಿಯು ತನ್ನವಲ್ಲಭನ ಮುಂಗಡೆನಿಂದು ವಿಜಾತೀಯವಾದ ಲಕ್ಷಣಗಳಿಂದ ಶೋಭಿಸಿದಳು ‖೯‖ ಬಳಿಕ ಕಬರಿಯಲ್ಲಿನ ಹೊಸಮಲ್ಲಿಗೆಯ ಕುಸುಮಗಳನ್ನು ಸುರಿಸುತ್ತಿರುವ ಕಿರುನಗೆಯುಳ್ಳ ನುಡಿಗಳಿಂದ ಕೂಡಿದ ಬಾಯಿಯನ್ನು ತೆರೆಯಲು ಅತ್ಯಂತವಾಗಿ ಹೊಳೆಯುವ ದಂತ ಪಂಜ್ತಿಗಳು, ಪ್ರಕಾಶಿಸುವ ಕಡೆಗಣ್ಣಿನ ನೋಟವು, ಥಳಥಳನೆ ಹೊಳೆಯುವ ಕಂಠಮಾಲೆಯಲ್ಲಿರುವ ಮುತ್ತಿನ ಸರದ! ಕಾಂತಿಯು, ಒಗೆದ ವಸ್ತ್ರವನ್ನು ಧರಿಸಿರುವುದರ ಕಾಂತಿಯತಿಶಯುವು, ಇವುಗಳು ಪ್ರಭಾವತಿಯ ಕೋಮಲವಾದ ಅಂಗದಲ್ಲಿ ಪ್ರಕಾಶಿಸಲಾಗಿ ಚಂದ್ರಕಾಂತ ಶಿಲೆಯಿಂದ ಮಾಡಿಟ್ಟ ಪ್ರತಿಮೆಯೋ ಎಂಬಂತೆ ಪ್ರಕಾಶಿಸಿ

ಪರಿಪಿರ್ದಸಂಪಗೆಯಪೂಗಳಂತನ್ನಮೈ | ಯ್ಯೊರಿಗೆಸರಿಯಾದಪವೆನೋಡೆಂದುತೋರ್ಪಂತೆಕೊಂಡುಬಂದಿದಿರೆನಿಂದ || ತರ ಳೆಯಂಕಡೆಗಣ್ಣೊಳೊಯ್ಯನೀಕ್ಷಿಸಿನಗುತ | ಸರಸಪರಿಮಳನವ್ಯಕುಸುಮಂಗಳಂಕೊಂಡು | ಭರದಿಂಗಕೊಳುಗುಳಕೆಪೊರ ಮಡುವಗಮನದಿಂಕಾಂತೆಗವನಿಂತೆಂದನು ||೧೧|| ಕಾಂತೆಕೇಳಿಂದುಸಮರದೊಳರ್ಜುನಂಗೆಮಾ | ರಾಂತವನಬಿಂಕಮಂಮುರಿವೆ ನಾಹರಿಖಲಬಕಸು | ರಾಂತಕಂಬಂದೊಡಾತನಮುಂದೆತೋರಿಸುವೆನೆನ್ನಭುಜವಿಕ್ರಮವನು || ನಾಂತಳವೆನಾರ್ಪಿಂದವಿಜ ಯಮುಂಮಿಾರ್ದೊಡೆಭ | ವಾಂತರವನೈದಿಸದಮುಕ್ತಿಯಂಪಡೆದಪೆಂ | ನೀಂತಳವಳಿಸದಿರೆಂದಿನೆಯಳಂಸಂತೈಸಿಪೊರಮಡಲ್ತಡ ದೆಂದಳು || ೧೨ || ಯುಕ್ತಮುಲ್ಲಿದುರಮಣನಿನಗೆಕೇಳ್ಕಾದುವಾ | ಸಕ್ತಿಯಿಂಚಕ್ರಿಗಭಿಮುಖವಾದಬಳಿಕಲ್ಲಿ | ಮುಕ್ತಿಯ

---

ಅವರಮೇಲೆ_ಆ ಹರಿವಾಣದ ಮೇಲ್ಭಾಗದಲ್ಲಿ, ಪರಿಪಿರ್ದ_ವಿಸ್ತರಿಸಿರ್ದ, ಸಂಪಗೆಯಪೂಗಳಂ_ಚಂಪಕಾಕುಸುಮಗಳನ್ನು, ತನ್ನ_ತನ್ನಯ, ಮೈಸಿರಿಗೆ_ಅಂಗದ ಕಾಂತಿಗೆ, ಸರಿಯಾದಪವೆ - ಹೋಲಿಕೆಯಾಗುತ್ತಯೆ? ನೋಡು - ಈಕ್ಷಿಸು, ಎಂದು-ಎಂಬ ದಾಗಿ, ತೋರ್ಪಂತೆ_ತೋರಿಸುವ ಹಾಗೆ, ಕೊಂಡುಬಂದು_ತೆಗೆದುಕೊಂಡು ಬಂದು, ಇದಿರೆ_ಎದುರಿನಲ್ಲಿ, ನಿಂದ_ನಿಂತುಕೊಂ ಡಿರುವವಳಾದ, ತರಳೆಯಂ_ತನ್ನ ರಾಣಿಯನ್ನು (ಸ್ತ್ರೀಯನ್ನು) ಕಡೆಗಣ್ಣೊಳು_ಕಡೆಗಣ್ಣಿನ ನೋಟದಿಂದ, ಒಯ್ಯನೆ_ನಿಧಾನ ವಾಗಿ, ಈಕ್ಷಿಸಿ-ನೋಡಿದವನಾಗಿ, ನಗುತ-ಹರ್ಷಿಸುತ್ತ, ಸರಸ_ರಸಯುಕ್ತವಾದ, ಪರಿಮಳ_ಸುವಾಸನೆಯ ದ್ರವ್ಯ, ನವ್ಯ-ನೂತನವಾದ, ಕುಸುಮಂಗಳಂ_ಪುಷ್ಪಗಳನ್ನು, ಕೊಂಡು_ಗ್ರಹಿಸಿದವನಾಗಿ, ಭರದಿಂದ_ಶೀಘ್ರವಾಗಿ, ಕೊಳುಗುಳಕೆ_ಆಹವಕ್ಕೆ, ಪೊರಮಡುವ_ಹೊರಡತಕ್ಕ, ಗಮನದಿಂ_ಹೊರಡಲುದ್ಯುಕ್ತನಾಗಿ, ಕಾಂತೆಗೆ_ಪ್ರಿಯಳಾದ (ಪತ್ನಿಯಾದ) ಪ್ರಭಾವತಿಗೆ, ಅವಂ-ಆ ಸುಧನ್ವನು, ಇಂತೆಂದನು-ಈ ಪ್ರಕಾರವಾಗಿ ಪೇಳಿದನು.

ಅ|| ವಿ|| ಕರ-ಕಿರಣ, ಕೈ-ಆನೆಯ ಸೊಂಡಿಲು, ಪೊಗದಿ, ಚಂಪಕಾ ತ್ಸ, ಸಂಪಗೆ ದ್ಭ, ನವರತ್ನಗಳು - ವಜ್ರ, ವೈಡೂರ್ಯ, ಗೋಮೇಧಿಕ, ಪುಷ್ಯರಾಗ, ನೀಲ, ಮರಕತ, ಮಾಣಿಕ್ಯ, ವಿದ್ರುಮ, ಮೌಕ್ತಿಕ ||೧೧||

ಟೀ|| ಅವಂ_ಆ ಸುಧನ್ವನು, ತನ್ನ ಹೆಂಡತಿಯಂ ಕುರಿತು, ಕಾಂತೆ_ಪ್ರಕಾಶಯುತಳಾದ ಪ್ರಭಾವತಿಯೇ! ಕೇಳು-ಆಲಿಸು, ಇಂದು_ಈ ದಿನ, ಸಮರದೊಳು_ಯುದ್ಧದಲ್ಲಿ, ಅರ್ಜುನಂಗೆ_ಪಾರ್ಥನಿಗೆ, ಮಾರಾಂತು_ಪ್ರತಿಭಟಿಸಿ, ಅವನ_ಆ ಅರ್ಜು ನನ, ಬಿಂಕಮಂ_ಅಹಂಭಾವವನ್ನು, ಮುರಿವೆಂ - ಹೋಗಲಾಡಿಸುತ್ತೇನೆ, ಆ ಹರಿ-ಆ ಶ್ರೀಕೃಷ್ಣಮೂರ್ತಿಯು, ಖಲ_ನೀಚ ನಾದ, ಬಕ_ಬಕಾಸುರನಿಗೆ, ಅಂತ_ಯಮಪ್ರಾಯನಾದ, ಭೀಮಸೇನನು, ಬಂದೊಡೆ_ಬಂದಾಗ್ಯೂ, ಆತನ_ಆ ಭೀಮಸೇನನ ಮುಂದೆ_ಎದುರಾಗಿ, ಎನ್ನ-ನನ್ನಯ, ಭುಜವಿಕ್ರಮವಂ_ಬಾಹುಗಳ ಪರಾಕ್ರಮಾತಿಶಯವನ್ನು, ತೋರಿಸುವೆನು_ತೋರ್ಪಡಿಸು ತ್ತೇನೆ, ಆಂ_ನಾನಾದರೊ, ಆರ್ಪಿಂದ_ಬಾಹುಬಲದಿಂದ, ವಿಜಯಮಂ_ಜಯವನ್ನು, ತಳೆವೆಂ_ಪಡೆಯುತ್ತೇನೆ, ಮಿಾರ್ದೊಡೆ_ಕೈ ಮಿಂಚಿಹೋದರೆ, ಭವಾಂತರವಂ_ಈ ಸಂಸಾರಾಂತರವನ್ನು, ಐದಿಸದ_ಪುನಃ ಸೇರಿಸದ, ಮುಕ್ತಿಯಂ_ಬಿಡುಗಡೆಯನ್ನು ಎಂದರೆ ಮೋಕ್ಷ ಸುಖವನ್ನು ಪಡೆದಪೆಂ - ಸಂಪಾದಿಸುತ್ತೇನೆ, ನೀಂ_ನೀನಾದರೊ, ತಳವಳಿಸದೆ - ಮನಸ್ಸಿನಲ್ಲಿ ಚಿಂತಿಸದೆ, ಇರೆಂದು-ಇರುತಿರು ಎಂಬದಾಗಿ, ಇನೆಯಳಂ-ಪ್ರೀತಿಪಾತ್ರಳಾದ ಹೆಂಡತಿಯನ್ನು, ಸಂತೈಸಿ_ಸಮಾಧಾನವನ್ನು ಪಡಿಸಿ, ಪೊರಮ ಡಲ್_ಮುಂದೆ ಹೊರಡಲಾಗಿ, ತಡದು_ತನ್ನ ಪತಿಯನ್ನು ಅಡ್ಡಗಟ್ಟಿ, ಇಂತೆಂದಳು-ಈ ಪ್ರಕಾರವಾಗಿ ಪೇಳಿದಳು.

ಅ|| ವಿ|| ಅಂತಕ_ಕೊನೆಗಾಣಿಸತಕ್ಕವನು (ಯಮನು) ವಿಕ್ರಮ_ಪರಾಕ್ರಮ, ವಿಕ್ರಮ ಚಕ್ರವರ್ತಿ, ಮುಕ್ತಿ_ತ್ಸ, ಮುಕುತಿ_ದ್ಭ ||೧೨||

---

ದಳು ||೧೦|| ಆಗ ಪ್ರಭಾವತಿಯು ಎರಡು ಕೈಗಳಿಂದಲೂ ಹಿಡಿದಿರುವ ಚಿನ್ನದ ತಟ್ಟೆಯನ್ನು ಅದರ ಮೇಲೆ ಹರಡಿದ್ದ ಚಂಪಕಾ ಕುಸುಮವನ್ನು ತನ್ನ ದೇಹ ಕಾಂತಿಗೆ ಸಮವಾಗಿರುತ್ತವೆಯೇ ನೋಡು ಎಂಬದಾಗಿ ತೋರ್ಪಂತೆ ಬಂದು ನಿಂತಿರುವ ಚಂಚ ಲಾಕ್ಷಿಯಾದ ತನ್ನ ಹೆಂಡತಿಯನ್ನು ಕಡೆಗಣ್ಣಿನ ನೋಟದಿಂದ ಈಕ್ಷಿಸಿ, ನಗುತ್ತ ರಸಯುಕ್ತವಾದ ಸುಗಂಧದ್ರವ್ಯವನ್ನು ಮತ್ತು ಪುಷ್ಪವನ್ನು ತೆಗೆದುಕೊಂಡು ಭರದಿಂದ ಯುದ್ಧಕ್ಕೆ ಹೊರಡುವ ವೈಭವದಿಂದ ಪ್ರಭಾವತಿಗೆ ಇಂತೆಂದನು ||೧೧|| ಎಲೆ ಕಾಂತಿಯಿಂದ ಶೋಭಿಸುವ ಪ್ರಭಾವತಿಯೇ ಕೇಳು, ಈ ದಿನ ಕಾಳಗದಲ್ಲಿ ಪಾರ್ಥಂಗೆ ಎದುರಾಗಿ ಅವನ ಬಿಂಕವನ್ನು ಮುರಿಯು ವೆನು. ಆ ಶ್ರೀಕೃಷ್ಣನೂ, ಬಕನನ್ನು ಕೊಂದ ಭೀಮಸೇನನೂ ಬಂದಾಗ್ಯೂ ಅವರ ಮುಂದೆ ನನ್ನ ಭುಜ ಪರಾಕ್ರಮಾತಿ ಶಯವನ್ನು ತೋರಿಸುತ್ತೇನೆ, ನಾನು ನನ್ನ ಬಾಹು ಬಲದಿಂದ ಜಯವನ್ನು ಹೊಂದುತ್ತೇನೆ, ಒಂದು ವೇಳೆ ಹಾಗೆ ಗೆಲವು ದುರ್ಲಭವಾದರೆ ಈ ಪ್ರಾಪಂಚಿಕ ಸುಖ ದುಃಖಾದಿಗಳಿಂದ ಕೂಡಿರುವ ಸಾಗರದಂತಹ ಸಂಸಾರ ತಾಪತ್ರಯಂಗಳಂ ತ್ಯಜಿಸಿ, ಮೋಕ್ಷ ಸುಖವನ್ನು ಹೊಂದುವೆನು. ನೀನು ಭಯಪಡದೆ ಇರು ಎಂಬದಾಗಿ ಹೇಳಿ ಹೆಂಡತಿಯನ್ನು ಸಂತೈಸಿ ಹೊರಡಲು, ಆಗ

ಲ್ಲದೆಬೇರೆಜಯಮುಂಟೆಜನಿಸದುವಿವೇಕಸಂತತಿನಿನ್ನೊಳು || ವ್ಯಕ್ತದಿಂತನಗೊಂದಪತ್ಯಮುದಯಿಸದೊಡೆವಿ | ರಕ್ತಿಯಿಂಕೈವ ಲ್ಯಮಾದಪುದೆಸಮರಕು | ದ್ಯುಕ್ತನಪ್ಪಾತಂಗೆಸಂತಾನಮಿಲ್ಲದಿರಲಪ್ಪುದೇಹೇಳೆಂದಳು ||೧೩|| ಅದರಿಂದಲಾತ್ಮಜವಿವೇಕಮಿಲ್ಲ ದೊಡೆನಿನ | ಗಿದುವೆಜಲದೋದಯದಋತುಸಮಯಮೀಪಥದೊ | ಳುದುಭವಿಸುವುದುನಿನ್ನಭೂಮಿಯೊಳ್ಬೀಜಮಂಬಿತ್ತಿ ದೊಡೆಬೆಳೆಬಾಳ್ಕೆಗೆ || ಕದನಕ್ಕೈದುವವೇಳೆಯಿಲ್ಲೆನಲವಂಮುಂದೆ | ಬೆದೆಗಾಲಮುಂಟೆಂದೊಡವಳೆಣಿಸಿಮಗೆಗಳಿಂ | ತುದಿವಿಶಾ

ಟೀ|| ರಮಣ–ವಲ್ಲಭನೆ! ಇದು–ಈ ಸಮಯದಲ್ಲಿ ಕಾಳಗಕ್ಕೆ ಹೊರಡುವುದು, ನಿನಗೆ–ನಿನಗಾದರೊ, ಯುಕ್ತಂ–ಅಲ್ಲ, ಸರಿಯಾದದ್ದು ಆಗಿರುವುದಿಲ್ಲ, ಕೇಳ್–ಆಲಿಸು, ಕಾದುವ–ಜಗಳವಾಡುವ, ಆಸಕ್ತಿಯಿಂ–ಪ್ರೀತಿಯಿಂದ, ಚಕ್ರಿಗೆ–ಶ್ರೀ ಕೃಷ್ಣಸ್ವಾಮಿಗೆ, ಅಭಿಮುಖವಾದ–ಪ್ರತಿಭಟಿಸಿ ನಿಂತ, ಬಳಿಕ–ಅನಂತರದಲ್ಲಿ, ಅಲ್ಲಿ–ಆ ಸ್ಥಳದಲ್ಲಿ, ಎಂದರೆ ಯುದ್ಧರಂಗದಲ್ಲಿ, ಮುಕ್ತಿ–ಮೋಕ್ಷ ಸುಖವು, (ಸ್ವರ್ಗಪ್ರಾಪ್ತಿಯು) ಅಲ್ಲದೆ–ಹೊರ್ತಾಗಿ, ಬೇರೆ–ಇತರವಾದ, ಜಯಂ–ಗೆಲುವು, ಉಂಟೆ–ಲಭಿಸುವುದೆ! ನಿನ್ನೊಳು–ನಿನ್ನಲ್ಲಿ, ವಿವೇಕ ಸಂತತಿ–ತಿಳಿವಳಿಕೆಯಿಂದುಂಟಾಗುವ ವಂಶಾಭಿವೃದ್ಧಿಯು, ಜನಿಸದು–ಆವಿರ್ಭವಿಸಲಾರದು, ವ್ಯಕ್ತದಿಂ–ಸ್ಪಷ್ಟವಾಗೋಣವು ಹೇಗೊ ಹಾಗೆ (ಲೋಕ ವಿಖ್ಯಾತಿಯಿಂ) ತನಗೆ–ಎನಗೆ, (ನನಿಗಾದರೊ) ಒಂದು–ಒಂದಾದ, ಅಪತ್ಯಂ–ಮಗುವು, (ಸಂತಾನವು) ಉದಯಿಸದೊಡೆ–ಉತ್ಪತ್ತಿಯಾಗದಿದ್ದರೆ, ವಿರಕ್ತಿಯಿಂ–ವೈರಾಗ್ಯದಿಂದ, ಕೈವಲ್ಯಂ–ಮೋಕ್ಷಸುಖವು (ಸ್ವರ್ಗವು) ಆದಪುದೆ–ಉಂಟಾದೀತೆ? ಸಮರಕೆ–ಕಾಳಗಕ್ಕೆ, ಉದ್ಯುಕ್ತ–ಆಸಕ್ತನಾದವನು, ಅಪ್ಪ–ಆಗಿರುತ್ತಲಿರುವ, ಆತಂಗೆ–ಅಂಥವನಿಗೆ, ಸಂತಾನಂ–ಪುತ್ರಸಂತಾನವು, ಇಲ್ಲದಿರಲು–ಆಗದಿದ್ದರೆ, (ಇಲ್ಲದಿದ್ದಲ್ಲಿ) ಅಪ್ಪುದೆ–ಆಗುವುದೆ? ಹೇಳೆಂದಳು–ಪೇಳೆಂದು ನುಡಿದಳು.

ಅ|| ವಿ|| ವಿವೇಕಗಳ ಸಂತತಿ–ವಿವೇಕ ಸಂತತಿ, ಷ. ತ. (ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ, ಸಾಯುಜ್ಯ ಇವು ಮೋಕ್ಷ ಚತುಷ್ಟಯ) ||೧೩||

ಟೀ|| ಅದರಿಂದಲ್–ಆದ್ದರಿಂದಲೇನೆ, ಆತ್ಮಜ–ಪುತ್ರರ, ವಿವೇಕಂ–ಇರಬೇಕೆಂಬ ತಿಳಿವಳಿಕೆಯು, ಇಲ್ಲದೊಡೆ–ಹಾಗೆ ಇಲ್ಲದೇ ಹೋದ ಪಕ್ಷದಲ್ಲಿ, ನಿನಗೆ–ನಿನಗಾದರೊ, ಇದುವೆ–ಇದೇನೆ, ಜಲೋದಯದ–ಮೇಘಗಳು ಆವಿರ್ಭವಿಸೋಣದರ, ಎಂದರೆ ಬೀಜ ಬಿತ್ತಲು ಸಿದ್ಧವಾಗಿರುವ ಪ್ರದೇಶದ, ಋತು ಸಮಯಂ–ರಜಸ್ಸು ವ್ಯಾಪಿಸುವ ಕಾಲವು, (ಗರ್ಭಧಾರಣ ಸಮಯವು) ಆಗಿರ್ಪುದು–ಆಗಿರುತ್ತದೆ, ಈ ಪಥದೊಳು–ಈ ಹಾದಿಯಲ್ಲಿ, ನಿನ್ನ–ನಿನ್ನಯ, ಭೂಮಿಯೊಳಗೆ–ಬೀಜ ಬಿತ್ತಲು ಅನುವಾಗಿ ಇರುವ ಪ್ರದೇಶದಲ್ಲಿ, ಬೀಜವಂ–ರೇತವೆಂಬ ಬೀಜವನ್ನು, ಬಿತ್ತಿದೊಡೆ–ಬಿತ್ತಿದ್ದೇ ಆದರೆ, ಬೆಳೆ–ಪುತ್ರ ಸಂತಾನವೆಂಬ ಅಂಕುರವು, ಬಾಳ್ಕೆಗೆ–ಬದುಕುವುದಕ್ಕೆ, (ಅಭಿವೃದ್ಧಿ ಹೊಂದಲಿಕ್ಕೆ) ಉದಭವಿಸುವುದು – ಆವಿರ್ಭವಿಸುವುದು, ಕದನಕೆ–ಆಹವಕ್ಕೆ, ಐದುವ – ಹೊರಡಲು ಸಿದ್ಧವಾಗಿರುವ, ವೇಳೆಯು – ಸಮಯವು, ಇಲ್ಲ–ಆಗಿರುವುದಿಲ್ಲ, ಎನಲು – ಎಂಬದಾಗಿ ಪೇಳಲು, ಅವಂ–ಆ ಸುಧನ್ವನೆಂಬುವನು, ಮುಂದೆ–ಮುಂದಕ್ಕೆ. ಬೆದೆಗಾಲಂ–ಬೀಜ ಬಿತ್ತುವ ಸಮಯವು, (ಗರ್ಭಧಾರಣ ಸಮಯವು) ಉಂಟು–ಉಂಟಾಗಿರುವುದು, ಎಂದೊಡೆ–ಎಂಬದಾಗಿ ಆಲೋಚಿಸಿದರೆ, ಅವಳು–ಆ ಪ್ರಭಾವತಿ ರಾಜ್ಞಿಯು, ಎಣಿಸಿ–ಎಣಿಕೆ ಮಾಡಿ, ಆಲೋಚನೆಯನ್ನು ಮಾಡಿ, ಮಗೆಗಳಿಂ–ಮಘಾ ನಕ್ಷತ್ರ ಮೊದಲುಗೊಂಡು, ತುದಿ–ಕೊನೆಯಾದ ವಿಶಾಖಾನಕ್ಷತ್ರದ ಪರಿಯಂತವೂ, ಬಂದುದು – ಬಂದಿರುತ್ತದೆ, ಇನ್ನುಮೇಲೆ – ಇಲ್ಲಿಂದೀಚೆಗೆ, (ಈ ಮಖಾ ನಕ್ಷತ್ರ ತರುವಾಯದಲ್ಲಿ) ಅಂಕುರಿಸಲು–ಅಂಕುರೋದ್ಭವವಾಗಲು, ಅರಿಯದು–ಕಾಣಬರುವುದಿಲ್ಲ, (ಗರ್ಭವು ಉತ್ಪತ್ತಿಯಾಗಲಾರದು) ಎನಲು–ಎಂಬದಾಗಿ

ಪ್ರಭಾವತಿಯು ವಲ್ಲಭನ ಪ್ರಯಾಣವನ್ನು ತಡೆದು ಇಂತೆಂದಳು ||೧೨|| ಪ್ರೀತಿಪಾತ್ರನಾದ ಪ್ರಿಯನೇ! ಈಗ ನೀನು ಕಾಳಗಕ್ಕೆ ಹೋಗೋಣವು ಯೋಗ್ಯವಾದ್ದಲ್ಲ ಎನ್ನಯ ನುಡಿಯಂ ಲಾಲಿಸು, ಯುದ್ಧ ಮಾಡುವ ಕುತೂಹಲದಿಂದ ಶ್ರೀ ಕೃಷ್ಣನಿಗೆ ಪ್ರತಿಭಟಿಸಿ ನಿಂತ ಬಳಿಕ ನಿನಗೆ ಗೆಲುವು ಎಲ್ಲಿಂದಬಂದೀತು. ಮೋಕ್ಷವಲ್ಲದೆ ಎಂದಿಗೂ ಜಯವಾಗದು. ನಿನಗೆ ಸುಜ್ಞಾನದಿಂದುಂಟಾಗುವ ಸಂತಾನವು ಜನಿಸದು. ವ್ಯಕ್ತದಿಂದ ನನಿಗೊಂದು ಅಪತ್ಯವು (ಕೂಸು) ಹುಟ್ಟದೇ ಹೋದರೆ ವಿರಕ್ತಿಯಿಂದ ಕೈವಲ್ಯವು ಲಭಿಸುವುದೇ (ಎಂದಿಗೂ ಲಭಿಸದು) ಯುದ್ಧೋನ್ಮುಖನಾದವನಿಗೆ ಪುತ್ರ ಸಂತಾನವು ಇಲ್ಲದಿರೆ ಆದೀತೆ? ನೀನೆ ಹೇಳೆಂದು ಪೇಳಿದಳು ||೧೩|| ಆದ್ದರಿಂದಲೆ ಮಕ್ಕಳು ಇರುವ ವ್ಯವಸ್ಥೆಯು ಇಲ್ಲದೇ ಹೋದರೆ ನಿನಗೆ ಇದೇನೆ ಜಲೋದಯದ ಎಂದರೆ ರುತುಸಮಯವು ಆಗಿರುವುದು. ಈ ಪಥದಿಂದ ನಿನ್ನಕ್ಷೇತ್ರದಲ್ಲಿ ಬೀಜವಂ ಬಿತ್ತಿದೊಡೆ ಬೆಳೆಯೆಂಬ ಸಂತಾನುವು ವಂಶಾಭಿವೃದ್ಧಿಗೋಸ್ಕರವಾಗಿ ಉದಯಿಸುವುದು. ಈಗ ನೀನು ಯುದ್ಧಕ್ಕೆ ಹೋಗಲು ಸಮಯವಲ್ಲವೆಂದು ಪ್ರಭಾವತಿಯು ಹೇಳಲಾಗಿ, ಆಗ ಸುಧನ್ವನು ಮುಂದೆ ಬೆದೆಗಾಲವು ಉಂಟು ಎಂದು ಯೋಚಿಸಿದರೆ, ಆ ಪ್ರಭಾವತಿಯು ಗಣಿತಮಾಡಿ ಮಖಾನಕ್ಷತ್ರದಿಂದ ಕೊನೆ

ಖಿಗೆಬಂದುದಿನ್ನುಮೇಲಂಕುರಿಸವೆನಲಿಂತೆಂದನು || ೧೪ || ರಮಣಿನೀನೆಂಬುದನುನಯಮಪ್ಪುದಾದೊಡಂ | ಸಮಯಮ ಲ್ಲಿದುಮೊಳಗುತಿವೆಭೇರಿಪೊರಮಟ್ಟ | ಸಮರಕಯ್ಯಂಪೋದನುಳಿದೆನಾದೊಡೆ ತಾತನಾಜ್ಞೆಗೊಳಗಾಗದಿರೆನು || ಕ್ರಮವ ನರಿಯದಳೆನೀನೆನಗೆಸೈರಿಸಲಳವೆ | ಗಮನಕನುಕೂಲೆಯಾಗೆನುತ ಗಲ್ಲಂಪಿಡಿದು | ಕಮಲಾಕ್ಷಿಯಂ ಮುದ್ದುಗೈದುಬೀಳ್ಕೊಂ ಬಿನಂಕಾತರಿಸಿಮೇಲ್ವಾಯ್ದಳು || ೧೫ || ಅಂಗವಿಲ್ಲದನಸಮರಂಗಮಂಪೊಗಲಂಜಿ | ತುಂಗವಿಕ್ರಮವಿಜಯಸಂಗರಕ್ಕೆಳಸು ವೆನೆಂ | ಬಂಗವಣಿಯೆಂತುಟೆಂದಂಗನೆ ಬಲತ್ಕಾರದಿಂ ಘನಕುಚದ್ವಯವನು || ಸಂಘಟಸುವಂತೆ ಬಿಗಿಯಪ್ಪಿಗಾಢತರದಾ |

---

ಹೇಳಲಾಗಿ, ಅವಂ-ಆ ಸುಧನ್ವನು, ಇಂತು-ಈ ಪ್ರಕಾರವಾಗಿ, ಎಂದನು-ಎಂಬದಾಗಿ ಪೇಳಿದನು ||

ಅ|| ವಿ|| ಋತುವಿನ ಸಮಯ-ಋತು ಸಮಯ, ಷ. ತ. ವಿವೇಕವೆಂಬ, ಸಂತತಿ=ವಿವೇಕ ಸಂತತಿ, ಸಂ. ಪೂ. ಕ. ಇದು ಪಥ=ಈ ಪಥ, ಗಮ ಕ. ಸ. || ೧೪ ||

ಟೀ|| ರಮಣಿ-ಎಲೆ ಕಾಂತಾಶಿರೋಮಣಿಯೇ! ನೀಂ-ನೀನು, ಎಂಬುದು-ಹೇಳತಕ್ಕ ವಿಷಯವು, ಅನುನಯಂ-ಲಲಿತವಾದದ್ದು, (ಸರಿಯಾದದ್ದು,) ಅಪ್ಪುದು-ಆಗಿರುತ್ತದೆ, ಇದು-ಈಗಿನವೇಳೆ, ಸಮಯಂ-ಅವಕಾಶವು, ಅಲ್ಲ-ಆಗಿರುವುದಿಲ್ಲ, ಭೇರಿ-ನಗಾರಿಯು, (ನಗಾರಿಯು), ಮೊಳಗುತಿವೆ-ರವಗೈಯುತ್ತಿದೆ, ಅಯ್ಯಂ-ಜನಕನು, ಸಮರಕೆ-ಕಾಳಗಕ್ಕೆ, ಪೊರಮಟ್ಟು-ಹೊರಟು, ಪೋದನು-ಹೊರಟು ಹೋಗಿರುವನು, ಉಳಿದೆಂ ಆದೊಡೆ-ಇಲ್ಲಿಯೇ ನಿಂತುಬಿಟ್ಟರೆ, ತಾತನ-ಪಿತನ, ಆಜ್ಞೆಗೆ-ಅಪ್ಪಣೆಗೆ, ಒಳಗಾಗದೇ-ಒಳಪಡದೆ, ಇರೆನು-ಇರಲಾರೆನು, ಎಂದರೆ ಶಿಕ್ಷೆಯನ್ನು ಅನುಭವಿಸಬೇಕಾಗುತ್ತೆ, (ಯಾರಾದರೂ ಸರಿಯೆ ಕಾಳಗಕ್ಕೆ ಸಕಾಲದಲ್ಲಿ ಬಾರದಿದ್ದಲ್ಲಿ ಕ್ರೂರವಾದ ಶಿಕ್ಷೆಗೆ ಗುರಿಯಾಗಬೇಕೆಂಬ ನಿಯಮ ವಿರುತ್ತೆ) ಕ್ರಮವು-ಆ ನಮ್ಮ ತಂದೆಯ ರೀತಿಯು, ನೀಂ-ನೀನೂ ಕೂಡ, ಅರಿಯದಳೆ-ತಿಳಿದಿರತಕ್ಕವಳಲ್ಲವೆ? ಎನಗೆ-ನನಿಗಾದರೊ, ಸೈರಿಸಲು-ರಾಜಾಜ್ಞೆಯನ್ನು ಅನುಭವಿಸಲು, ಅಳವೆ-ಸಾಧ್ಯವೇ? ಯೋಗ್ಯವಾದುದೇ? ಗಮನಕೆ-ಎನ್ನ ಪ್ರಯಾಣಕ್ಕೆ, ಅನ-ಕೂಲೆಯಾಗು-ಸಹಾಯಕಳಾಗಿರು, ಎನುತ-ಎಂಬದಾಗಿ ಹೇಳುತ್ತ, ಗಲ್ಲ-ಚುಬುಕಾಗ್ರವನ್ನು, ಪಿಡಿದು-ಹಿಡಿದುಕೊಂಡು, ಕಮಲಾಕ್ಷಿಯಂ-ಪಂಕಜಾಕ್ಷಿಯಾದ ಪ್ರಭಾವತಿಯನ್ನು, ಮುದ್ದುಗೈದು-ಮುದ್ದಾಡಿ, ಬೀಳ್ಕೊಂಡು-ಹೇಳುತ್ತಿರುವ (ಹೊರಟು ಹೋಗುವಂತೆ ಕೇಳುತ್ತಿರುವ), ಇನಂ-ವಲ್ಲಭನನ್ನು ಕುರಿತು, ಕಾತರಿಸಿ-ಹೆದರಿಕೊಂಡು, ಮೇಲ್ವಾಯ್ದಳು - ವಲ್ಲಭನಮೇಲೆ ಬಿದ್ದಳು (ಕಾಮೋದ್ರೇಕದಿಂದ ಬಂದು ಬಿದ್ದಳು) ||

ಅ|| ವಿ|| ತಾತ-ತ್ಸ, ತಂದೆ-ದ್ಭ ಆಜ್ಞೆ-ತ್ಸ. ಅಪ್ಪಣೆ-ದ್ಭ, ಕಮಲದಂತೆ ಅಕ್ಷಿಯುಳ್ಳವಳು = ಕಮಲಾಕ್ಷಿ ಉ, ಪೂ ಬಹು. ಸ, || ೧೫ ||

ಟೀ|| ಅಂಗಂ-ದೇಹವು, ಇಲ್ಲದನ-ಇಲ್ಲದಿರುವವನ, (ಮದನನ) ಸಮರಂಗಮಂ-ಯುದ್ಧವನ್ನು ಕುರಿತು, (ಮನ್ಮಥ ವಿಜಯವನ್ನು ಕುರಿತು, ಇಲ್ಲವೆ ಸಮವಾದ ರತಿಸುಖವನ್ನು ಯೋಚಿಸಿ, ಪೊಗಲ್-ಪ್ರವೇಶಿಸಲು, ಅಂಜಿ-ಹೆದರಿಕೊಂಡು, ತುಂಗ-ಉನ್ನತವಾದ, (ಅತ್ಯಧಿಕವಾದ), ವಿಕ್ರಮ-ಆಟೋಪವುಳ್ಳವನಾದ, ವಿಜಯ-ಪಾರ್ಥನ, ಸಂಗರಕೆ-ಕಾಳಗಕೆ, ಎಳಸುವನು-ಇಚ್ಛಿಸುವನು, ಎಂಬ-ಎನ್ನುವ, ಅಂಗವಣೆ- ಕುತೂಹಲವು, ಎಂತುಟು-ಯಾವ ರೀತಿ ಯಾದುದು, (ಅದು ಹೇಗಾಯಿತು), ಎಂದು-ಎಂಬುದಾಗಿ, ಅಂಗನೆ-ಸ್ತ್ರೀಯಾದ ಪ್ರಭಾವತಿಯು, ಬಲಾತ್ಕಾರದಿಂ-ಅತಿಕ್ರಮ ಪ್ರವೇಶದಿಂದ, ಘನ-ದಪ್ಪ

---

ನೆಯಿಂದ ವಿಶಾಖ ನಕ್ಷತ್ರದವರಿವಿಗೆ ಕಳೆದುಬಂತು ಇನ್ನು ಮುಂದೆ ಅಂಕುರಿಸಲು ಅಪರೂಪವಾಗಿರುತ್ತದೆ ಎನಲು ಮತ್ತೆ ಆ ಸುಧನ್ವನು ಇಂತೆಂದನು || ೧೪ || ಎಲೆ ರಮಣಿಯಾದ ಪ್ರಭಾವತಿಯೇ ನೀನು ಹೇಳತಕ್ಕದ್ದು ನ್ಯಾಯವಾದದ್ದು ಆಗಿರುವುದು. ಈಗ ಅಂಕುರೋದ್ಭವಕ್ಕೆ ಕಾಲವಲ್ಲ ಆಗಲೆ ಭೇರಿ ಮೊದಲಾದ ವಾದ್ಯವಿಶೇಷಗಳು ರವಗೈಯುತ್ತಿರುವುವು ಎನ್ನಯ ಪಿತನು ಯುದ್ಧಕ್ಕಾಗಿ ಹೊರಟು ಹೋದನು ನಾನೇನಾದರು ಇಲ್ಲಿ ನಿಂತುದೇಆದರೆ ತಾತನಾಜ್ಞೆಗೆ ಒಳಗಾಗದೆ ಇರಲಾರೆನು (ಯುದ್ಧಕ್ಕೆ ಹಿಮ್ಮೆಟ್ಟ ನಿಂತಲ್ಲಿ ಶಿಕ್ಷಾರ್ಹನಾಗುತ್ತಾನೆ) ಈ ಕ್ರಮವನ್ನು ನೀನು ತಾನೆ ಅರಿಯದವಳೇ? ನಾನು ಶಿಕ್ಷೆಯನ್ನು ಹೊಂದುವುದು ಸಾಧ್ಯವೇ ನನ್ನ ಪ್ರಯಾಣಕ್ಕೆ ಅನುಕೂಲೆಯಾಗೆಂದು ಸುಧನ್ವನು ತನ್ನ ಪ್ರೀಯಳ ಗಲ್ಲವನ್ನು ಪಿಡಿದು ಕಮಲಾಕ್ಷಿಯಂ ಮುದ್ದಾಡಿ ಹೊರಡಲುದ್ಯುಕ್ತನಾಗಲು, ಆಗ ಪ್ರಭಾವತಿಯು ಪತಿಯಂ ನೋಡಿ ಭಯದಿಂದ ಕಾತರಿಸಿ ಮೇಲೆಬಿದ್ದವಳಾದಳು || ೧೫ || ಬಳಿಕ ಕಾಮನ ಕೇಳಿಗೆ ಹೋಗಲು (ರತಿಕ್ರೀಡೆಯಾಡಲು ಹೊರಡುವುದಕ್ಕೆ) ಭಯಪಟ್ಟು, ಪಾರ್ಥನೊಡನೆ ಕಾದುವುದಕ್ಕೆ ಹೋಗುವೆನು ಎನ್ನುವಲ್ಲಿ ಆಸೆಮಾಡುವುವರ ಉತ್ಸಾಹವು ಹೇಗೆ ಉಂಟಾಯಿತೊ, ಎಂಬದಾಗಿ ಹೇಳಿ ಆ ಪ್ರಭಾವತಿಯು ಬಲಾತ್ಕಾರದಿಂದ ದೊಡ್ಡದಾದ ಕುಚದ್ವಯಗಳು ಸಂಘಟಿಸುವಂತೆ ಬಿಗಿಯಾಗಿ ಆಲಿಂಗನೆಯಂಮಾಡಿದ ನಂತರ

ಲಿಂಗನಂಗೈದುಕುಡಿಗಂಗಳಿಂದವನವೊಗ | ದಿಂಗಿತವನಾರೈವಶೃಂಗಾರಚೇಷ್ಟೆಯಬೆಡಂಗನದನೇವೇಳ್ವೆನು ‖ ೧೬ ‖ ಮಿಡಿದ ೊಡವಂತಮೃತರಸದಿಂದನೆರೆವಪೊಂ | ಗೊಡವೊಲೆಯುನವನವಕ್ಷಸ್ಥಳದೊಳಿಟ್ಟೊತ್ತಿ | ದೊಡೆಹಿಸಿದೊಳಗಣತನಿಸುಧೆಯೊಸ ರಿತೊಟ್ಟಿಡುವಬಿಂದುಗಳಸಾರವೆನಲು ‖ ಕಡಿಕಿಪರಿದೊಗುವ ಮುತ್ತುಗಳಹಾರದಮಣಿಗ | ಳೆಡೆವಿಡದೆ ಸೂಸುತಿರೆ ಸೊಕ್ಕು ತಕ್ಕೆಗೆಸೊಗಸು | ವಡೆದಳಾಕಾಂತೆ ಪ್ರಿಯನಂಗದೋಳ್ಮೋಹನೋತ್ಸಂಗದೋಳ್ಬಗೆಗೊಳುತಿರೆ ‖ ೧೭ ‖ ಪ್ರಿಯನತನುಚಂ ದನಮಹೀಜಮಂಸುತ್ತಿದ ಫಣಿಯೊವಲ್ಲಭಾಂಗದಾಲಸ್ತಂಭಮಂತೊಡ | ರ್ದಯುಗಸ್ಮರಕರಿಯಸೊಂಡಿಲೋಕಾಂತಕಾಯ

---

ವಾದ, ಕುಚದ್ವಯುವನು–ಸ್ತನಯುಗ್ಮವನ್ನು, ಸಂಘಟಿಸುವಂತೆ–ಸೇರುವಹಾಗೆ, ಬಿಗಿಯಪ್ಪಿ-ತಬ್ಬಿಕೊಂಡು, ಗಾಢಾಲಿಂಗನಂ ಗೈದು–ಗಾಢಾಲಿಂಗನವನ್ನು ಮಾಡಿಕೊಂಡು, ಕುಡಿಗಂಗಳಿಂದ–ಕಡೆಗಣ್ಣಿನ ನೋಟದಿಂದ, ಅವನ–ಆ ಸುಧನ್ವನ, ಮೊಗದ– ವದನದ, ಇಂಗಿತವನು–ಮನೋಭಿಪ್ರಾಯಾದಿಗಳನ್ನು, ಆರೈವ – ಗ್ರಹಿಸತಕ್ಕ, ಶೃಂಗಾರಚೇಷ್ಟೆಯ–ರತಿ ಕ್ರೀಡಾಸಂಬಂಧ ವಾದ ಅಂಗವಿಕಾರದ ನಡವಳಿಕೆಯ, ಬೆಡಂಗನು – ರೀತಿಯನ್ನು, (ಸೊಗಸನ್ನು) ಅದಂ-ಆ ವಿಷಯವನ್ನು, ಏವೇಳ್ವೆನು– ಏನೆಂದು ಪೇಳಲಿ ‖

ಅ‖ ವಿ‖ ಘನ–ಮೇಘ, ದೊಡ್ಡದು, ಉನ್ನತ, ಘನಾಕೃತಿ, ಶೃಂಗಾರ–ತ್ಸ. ಸಿಂಗರ–ದ್ಭ, ನವರಸಗಳು ಶೃಂಗಾರ, ವೀರ, ಕರುಣ, ಅದ್ಭುತ, ಹಾಸ್ಯ, ಭಯಾನಕ, ರೌದ್ರ, ಶಾಂತಿ ಇವುಗಳು) ಅಷ್ಟಭೋಗಂಗಳು–ಸ್ನಾನ, ಪಾನ, ಭೋಜನ, ವಸ್ತ್ರ, ಗಂಧ, ಪುಷ್ಪ, ತಾಂಬೂಲ, ಸಂಯೋಗ ‖ ೧೬ ‖

ಟೀ‖ ಮಿಡಿದರೆ–ಹಿಡಿದುಹೀಳಿದರೆ, ಒಡವಂತೆ-ದ್ರವಿಸುವಹಾಗೆ, ಅಮೃತರಸದಿಂದ–ಅಮೃತ ವಸ್ತುವಿನಿಂದ, (ಪಯ ದಿಂದ), ನೆರೆವ–ಕಲೆತಿರುವ, ಪೊಂಗೊಡ– ಚಿನ್ನದ ಘಟದಂತಿರುವ, ಮೊಲೆಯನು – ಕುಚಗಳನ್ನು, ಅವನ–ಆ ಸುಧನ್ವನ, ವಕ್ಷಸ್ಥಳದೊಳು–ಉರಪ್ರದೇಶದಲ್ಲಿ, ಇಟ್ಟು-ಸೇರಿಸಿದವಳಾಗಿ, ಒತ್ತಿದೊಡೆ–ಅಮುಕಲಾಗಿ, ಹಿಸಿದು–ಅದು ವಿಸ್ತರಿಸಿ, ಒಳಗಣ- ಒಳಪ್ರದೇಶದಲ್ಲಿರುವ, ತನಿ–ಮಧುರವಾದ (ನೂತನವಾದ) ಸುಧೆಯು–ಅಮೃತವೆಂಬ ಹಾಲು, ಒಸರಿ-ಸ್ರವಿಸಿ, ತೊಟ್ಟಿಡುವ– ಹನಿಗಳಾಗಿ ಬೀಳುತ್ತಿರುವ, ಸಾರಂ-ಸಾರವು (ಮಂದ ವಸ್ತುವು), ಎನಲು–ಎನ್ನುವಹಾಗೆ, ಕಡಿಕಿ-ಒಟ್ಟಾಗಿ, ಪರಿದು-ಹರಿದು ಹೋಗಿ (ಕಿತ್ತುಹೋಗಿ), ಒಗುವ–ಸೋರುವ, ಮುತ್ತುಗಳ–ಮೌಕ್ತಿಕಗಳ, ಹಾರದ–ಸರದ, ಮಣಿಗಳು–ಮೌಕ್ತಿಕಗಳು, ಎಡೆ ಬಿಡದೆ–ಸ್ಥಳಬಿಡದೆ, ಸೂಸುತಿರೆ-ಚಲ್ಲುತ್ತಿರಲು, ಸೊಕ್ಕು–ಮದವು (ಕಾಮದಿಂದುಂಟಾದ ಕೊಬ್ಬು), ತಕ್ಕೆಗೆ–ಸಮೂಹಕ್ಕೆ, (ಅಜ್ಞಾನಕ್ಕೆ) ಆಕಾಂತೆ–ಆ ಪ್ರಭಾವತಿಯು, ಪ್ರಿಯನ-ತನ್ನ ವಲ್ಲಭನ, ಅಂಗದೋಳ್–ಅವಯವದಲ್ಲಿ, ಮೋಹನೋತ್ಸಂಗ ದೋಳ್-ಮೋಹಿಸತಕ್ಕ ತೊಡೆಯಪ್ರದೇಶದಲ್ಲಿ, ಬಗೆಗೊಳುತಿರೆ-ಆರೀತಿ ಚಂದದಿಂದ ಕಾಣಬರುತ್ತಿರಲು, ಸೊಗಸುವಡೆದಳು– ಕಾಂತ್ಯತಿಶಯವಾಗಿದ್ದಳು.

ಅ‖ ವಿ‖ ಮುತ್ತು–ಆವರಿಸು,ಮೌಕ್ತಿಕ-ಮೌಕ್ತಿಕ-ತ್ಸ,ಮುತ್ತು–ದ್ಭ,ಸೊಗಸಂ-ಪಡೆದಳು-ಸೊಗಸುವಡೆದಳು,ಕ್ರಿ. ಸ.

ಟೀ‖ ಪ್ರಿಯನ-ತನ್ನ ವಲ್ಲಭನ, ತನು–ಅಂಗವೆಂಬುವ, ಮಹೀಜಮಂ-ವೃಕ್ಷವನ್ನು, ಸುತ್ತಿದ–ಬಳಸಿಕೊಂಡಿರುವ, ಫಣಿಯೋ-ಹಾವೋ, ವಲ್ಲಭ–ಪ್ರಿಯನೆಂಬ (ಗಂಡನೆಂಬ), ಆಲಸ್ತಂಭ–ವಟದ್ರುಮವನ್ನು, ತೊಡರ್ದ-ಬಳಸಿಕೊಂಡ, ಅಯುಗ- ಜೊತೆಯಲ್ಲದ (ಸಮವಲ್ಲದ)ವನಾದ, ಸ್ಮರನ-ಮನಸಿಜನ, ಕರಿಯ–ಗಜದ, ಶುಂಡಿಲೊ–ಸೊಂಡಲವೊ (ಕರವೊ), ಕಾಂತ– ತನ್ನ ಗಂಡನ, ಕಾಯ–ಶರೀರದ, ಬಲಮಂ–ಸಾಮರ್ಥ್ಯವನ್ನು ಬಂಧಿಸಿದ–ಸಂಬಂಧಿಸಿದ, ಮದನನ–ಅಂಗಜನ, ಜಯಪಾ ಶವೊ–ಗೆಲವಂ ಪಡೆಯಲು ಹಾಕಿರುವ ಪಗ್ಗವೊ, ರಮಣ–ತನ್ನ ವಲ್ಲಭನ, ದೇಹದ-ವಪುವೆಂಬ, ಕಲ್ಪದ್ರುಮ–ಕೋರಿದ್ದನ್ನು,

---

ಪತಿಯನ್ನು ಬಿಡದೆ ಆಲಂಗಿಸಿಕೊಂಡು ಕೊನೆಗಣ್ಣಿನ ನೋಟದಿಂದ ಆ ಸುಧನ್ವನ ಮುಖದ ವಿಕಾರಾದಿಗಳನ್ನು (ಮನೋಭಿಪ್ರಾ ಯಾದಿಗಳನ್ನು) ತಿಳಿದುಕೊಳ್ಳುವ ಶೃಂಗಾರಚೇಷ್ಟೆಯ ಬೆಡಗನ್ನು ಏನೆಂದು ಬಣ್ಣಿಸಲಿ ‖೧೬‖ ಆಗ ಮಿಡಿದರೆ (ಹಿಸಿದರೆ) ಸುರಿ ದುಹೋಗುವಂತೆ ಅಮೃತರಸದಿಂದ ಕೂಡಿರುವ ಚಿನ್ನದ ಕೊಡದಂತಿರುವ ಕುಚಗಳನ್ನು ಆ ಸುಧನ್ವನ ವಕ್ಷಸ್ಥಳದಲ್ಲಿಟ್ಟು ಒತ್ತಿದರೆ ಅದು ಹಿಸಿದು ಒಳಗಣ ಹೊಸದಾದ ಸುಧೆಯು ಸೇರಿ ಬಿಂದುಗಳಾಗಿ ತೊಟ್ಟಿಡುವ ಸಾರವೋ ಎನ್ನುವಂತೆ ಕಡಿಕಿ, (ಗೊನೆಯಾಗಿ ಪರಿದು) ಒಗುವ ಮುತ್ತುಗಳ ಹಾರದ ಮಣಿಗಳು ಎಡಬಿಡದೆ ಉದುರುತ್ತಿರಲು ಕಾಮದಿಂದುಂಟಾದ ಮತ್ತ ತೆಯ ಕೊಬ್ಬಿಗೆ ಅವಳು ಪ್ರಿಯನ ಅಂಗದೊಳಿರ್ಪ ಮೋಹನೋತ್ಸಂಗದ ಬಗೆಗೊಳ್ಳುತ್ತಿರಲು ಕಾಂತಿಯಿಂದ ಒಪ್ಪಿದ್ದಳು‖೧೭‖ ಆಗ ಸುಧನ್ವನ ಅಂಗವೆಂಬ ವೃಕ್ಷವನ್ನು ಬಳಸಿಕೊಂಡ ಫಣಿಯೋ, ವಲ್ಲಭನೆಂಬ ವಟವೃಕ್ಷವನ್ನು ಬಳಸಿಕೊಂಡ ಪಂಚ ಬಾಣನ ಗಜದ ಸೊಂಡಲವೋ, ಒಡೆಯನ ದೇಹದ ಶಕ್ತಿಯನ್ನು ಬಂಧಿಸುವ ಕಾಮನ ಜಯಪಾಶವೋ, ರಮಣನ ದೇಹ

ಬಲನನ್ನಂಬಂಧಿಸಿದನುದನನು ‖ ಜಯಪಾಶವೋರನುಣದೇಹಕಲ್ಪದ್ರುಮಾ | ಶ್ರಯದ ಕೋಮಲಲತೆಯೊಪೊಸತಾದು
ದೆಂಬಂತೆ | ನೆಯನನಪ್ಪಿದ ಹರಿಣಲೋಚನೆಯನಳಿತೋಳ್ಗಳೆಸೆದವತಿಗಾಢದಿಂದ ‖ ೧೮ ‖ ಕಣ್ಮಲರ್ಕಾತರಿಸೆಮುಡಿಪೂ
ಗಳಂಸೂಸೆ | ನುಣ್ಮೊಗಂಬೇರೊಂದು ಪರಿಯಾಗೆನುಡಿದೈನ್ಯ | ಮುಣ್ಮೆಹೀನಸ್ವರದೊಳೆಸೆಯೆ ಕೈಕಲೆಗಳಂಸೋಂಕೆಮೈ
ಪುಳಕದಿಂದ ‖ ಪೊಣ್ಮೆಮದನಾತುರಂತಲೆದೋರೆಮೇಲುದಂ | ಬಿಣ್ಮೊಲೆಗಳೋ ಸರಿಸೆಸಿರಿಯಬಿಗಿಪೈಸರಿಸೆ | ಪೆಣ್ಮಂಚದಂ
ಚೆದುಪ್ಪಳವಾಸಿಗೆಳದೊಯ್ದಳಿನೆಯನಂಬಲ್ಪಿನಿಂದ ‖ ೧೯ ‖ ಸತಿಗೆಷೋಡಶದ ಋತುಸಮಯಮೇಕಾದಶೀ | ವ್ರತಮಲಂಘ್ಯ

---

ಕೊಡುವ ಕಲ್ಪತರುವೆ, ಆಶ್ರಯದ–ಆಶ್ರಯವಾಗುಳ್ಳ (ಸಹಾಯವಾಗಿರುವ), ಕೋಮಲ–ಮನೋಹರವಾದ, ಲತೆಯೊ–ಲತಾ ವಿಶೇಷವೋ (ಬಳ್ಳಿಯೊ), ಪೊಸತಾದುದು–ಹೊಸದಾಗಿರುತ್ತದೆ, ಎಂಬಂತೆ–ಎನ್ನುವಹಾಗೆ, ಇನೆಯನನು–ತನ್ನ ಗಂಡನನ್ನು, ಅಪ್ಪಿದ–ಆಲಿಂಗನೆ ಮಾಡಿಕೊಂಡ, ಹರಿಣಲೋಚನೆಯ–ಕುರಂಗಾಕ್ಷಿಯಾದ ಪ್ರಭಾವತಿಯ, ನಳಿತೋಳ್ಗಳ್–ಮನೋಹರವಾದ ಬಾಹುಗಳು, ಅತಿಗಾಢದಿಂದ–ಅತ್ಯಂತ ಬಿಗಿಯಾಗಿ, ಎಸೆದುವು–ಹೊಳೆದುವು.

ಅ‖ ವಿ‖ ಏಣದಂತೆ (ಏಣದ ಅಕ್ಷಿಯಂತೆ) ಅಕ್ಷಿಯುಳ್ಳವಳು=ಏಣಾಕ್ಷಿ, ಉ.ಪೂ.ಬಹು. ಫಣ–ಹೆಡೆ, ಅದುಳ್ಳದ್ದು–ಫಣಿ (ಸರ್ಪ) ಕರ–ಕೈ, ಆನೆಯ ಸೊಂಡಿಲು, ಕಿರಣ, ಕಪ್ಪ ‖ ೧೮ ‖

ಟೀ‖ ಆಗ–ಆ ವೇಳೆಯಲ್ಲಿ, ಕಣ್ಮಲರ್ – ನೇತ್ರವೆಂಬ ಪುಷ್ಪವು, ಕಾತರಿಸೆ– ಕಳವಳಗೊಳ್ಳುತ್ತಿರಲು, ಮುಡಿ–ಕೂದಲಗಂಟು (ಕಬರಿಯು), ಪೂಗಳಂ–ಪುಷ್ಪಗಳನ್ನು, ಸೂಸೆ–ಸುರಿಸುತ್ತಿರಲು, (ಚೆಲ್ಲುತ್ತಿರಲು) ನುಣ್ಮೊಗಂ–ಸಮನಾದ ಆಸ್ಯವು (ನುಣುಪಾದ ಮುಖ), ಬೇರೊಂದು–ಇನ್ನೊಂದು, ಪರಿಯಾಗೆ–ಬಗೆಯಾಗಲಾಗಿ, ನುಡಿ–ಮಾತು, ದೈನ್ಯ–ನಮ್ರಭಾವವು (ದೀನತೆಯು), ಪೊಣ್ಮೆ–ಆಗುವಂತೆ, ಹೀನಸ್ವರದೊಳು–ಗದ್ಗದ ಸ್ವರದಿಂದ, ಎಸೆಯೆ–ಶೋಭಿಸಲು, ಕೈ–ಕರವು, ಕಲಾಸ್ಥಾನಗಳನ್ನು, ಸೋಂಕೆ–ಸೋಕುತ್ತಿರಲು, ಮೈ–ಶರೀರವು, ಪುಳಕದಿಂದ–ಶರೀರದಲ್ಲಿ ರೋಮೋದ್ಗಮದಿಂದ, ಪೊಣ್ಮೆ–ವ್ಯಾಪಿಸುತ್ತಿರಲು, ಮದನಾತುರಂ–ಕಾಮಾತುರವು, (ಕ್ರೀಡಾಸಕ್ತಿಯು) ತಲೆದೋರೆ–ಕಾಣಬರುತ್ತಿರಲು, ಬಿಣ್ಮೊಲೆಗಳ್–ಬಿಳೀ ಛಾಯೆಯುಳ್ಳ (ಗಟ್ಟಿಯಾದ)ಕುಚಗಳು, ಮೇಲುದಂ–ಮೇಲು ಹೊದಿಕೆಯನ್ನು(ಸೆರಗನ್ನು), ಓಸರಿಸೆ–ಜಾರಿಸಲು, ನಿರಿಯ–ನೆರಿಗೆಯಾಗಿ ಧರಿಸಿದ್ದ ವಸ್ತ್ರದ, ಬಿಗಿ–ಬಂಧನವು, ಪೈಸರಿಸೆ–ಜಾರಿಬರುತ್ತಿರಲು, ಪೆಣ್–ಸ್ತ್ರೀಯಾದ ಪ್ರಭಾವತಿಯು, ಮಂಚದ–ಪಲ್ಲಂಕದಲ್ಲಿರುವ, ಅಂಚೆದುಪ್ಪಳವಾಸಿಗೆ–ಹಂಸತೂಲಿಕಾತಲ್ಪದಮೇಲಕ್ಕೆ, ಇನೆಯನಂ–ತನ್ನ ವಲ್ಲಭನಾದ ಸುಧನ್ವನನ್ನು, ಬಲ್ಪಿನಿಂದ–ಅತಿಕ್ರಮ ಪ್ರವೇಶದಿಂದ, (ಜುಲುಮು ಮಾಡುವುದು) ಎಳದು–ಸೆಳದುಕೊಂಡು, ಒಯ್ದಳು–ಬರಮಾಡಿಕೊಂಡು ಹೋದಳು.

ಅ‖ ವಿ‖ ನುಣ್ಣಿತ್ತು, ಮೊಗ=ನುಣ್ಮೊಗ, ವಿ. ಪೂ. ಕ. ಮೊಗ–ದ್ಭ, ಮುಖ–ತ್ಸ, ಕಲೆ–ವಿದ್ಯಾ, ಕಾಂತಿ ಮದನ+ಆತುರ=ಮದನಾತುರ, ಸ. ದೀರ್ಘ ಸಂ ‖೧೯‖

ಟೀ‖ ಸತಿಗೆ–ಹೆಂಡತಿಯಾದ ಪ್ರಭಾವತಿಗೆ, ಷೋಡಶದ–ಹದಿನಾರನೆಯ ದಿವಸದ, ರುತುಸಮಯಂ–ಗರ್ಭವನ್ನು ಹೊಂದಲು ಅನುಕೂಲವಾದ ಕಾಲವು, ಏಕಾದಶೀವ್ರತಂ–ಉಪವಾಸ ಮಾಡುವ ದಿನವು (ಹರಿ ದಿನವು), ಅಲಂಘ್ಯಂ–ಅತಿಕ್ರಮಿಸದ್ದು, ಶ್ರಾದ್ಧಂ–ಪಿತೃವಿನ ಮೃತ ದಿನವು (ತಿಥಿಯು), ಇನಿತು–ಇವುಗಳಷ್ಟು, ಒಂದುದಿನವೆ–ಒಂದೇ ದಿನದಲ್ಲಿಯೇ, ಸಂಗತಮಾದೊಡೆ–ಸಂಭವಿಸಿದುದೇ ಆದರೆ, ಎಂತು–ಅದುಹೇಗೆ, ಕರ್ತವ್ಯಂ–ಮಾಡತಕ್ಕ ಕಾರ್ಯವು, ಎನೆ–ಎನ್ನಲಾಗಿ, ಪೈತೃಕ–ಪಿತೃಸಂಬಂಧವಾದ ತಂದೆಯ ಶ್ರಾದ್ಧದ, ಶೇಷಾನ್ನಂ–ಬಾಕಿಯಾದ ಓದನವನ್ನು, ಆಘ್ರಾಣಿಸೆ–ವಾಸನೆ ನೋಡಲು (ಮೂಸಿನೋಡಲಾಗಿ), ಕ್ರತುಭೋಜ್ಯಂ–ಪಿತೃ ಯಜ್ಞದಲ್ಲಿ ಉಳಿದದನ್ನು, ಭುಜಿಸಿದಂತೆ, ಆದಪುದು–ಆದಂತಾಗುವದು, ನಡುವಿನೊಳು–ನಡು

---

ವೆಂಬ ಕಲ್ಪದ್ರುಮವೇ ಆಶ್ರಯವಾದ ಕೋಮಲ ಲತೆಯೋ ಹೊಸದಾಗಿದೆ ಎಂಬಂತೆ ಪ್ರಿಯನನ್ನು ಅಪ್ಪಿದ, ಕುರಂಗಾಕ್ಷಿಯಾದ ಪ್ರಭಾವತಿಯ ಮೃದುವಾದ ತೋಳ್ಗಳು ಅತಿಯಾದ ಬಿಗಿಯಿಂದ, ಪ್ರಕಾಶಿಸಿದವು ‖೧೮‖ ಬಳಿಕ ಪ್ರಭಾವತಿಯು ನೇತ್ರವೆಂಬ ಪುಷ್ಪವು ಚಂಚಲವಾಗುತ್ತಿರಲು, ಕಬರಿಯು ಕುಸುಮಂಗಳನ್ನು ಸೂಸಲು, ನುಣ್ಣಗಿರುವ ಮುಖವು ಬೇರೊಂದು ರೀತಿಯಾಗಲು, ಮಾತು ದೀನತ್ವವು ಉಂಟಾಗುವಂತೆ ಹೀನಸ್ವರದಿಂದ ಪ್ರಕಾಶಿಸಲು, ಕರವು ಕಳಾವಿಶೇಷಸ್ಥಾನಗಳನ್ನು ಹೊಂದುತ್ತಿರಲು, ದೇಹವು ರೋಮೋದ್ಗದಿಂದ ಕೂಡುತ್ತಿರಲಾಗಿ ಅಂಗಜನ ಕ್ರೀಡಾವಿಷಯದ ಆತುರವು ಅಂಕುರೋದ್ಭವವಾಗಲು ಬೆಣ್ಮೊಲೆಗಳು ಮೇಲು ಹೊದಿಕೆಯನ್ನು ಓಸರಿಸುತ್ತಿರಲು ಕೋಮಲಾಂಗಿಯಾದ ಪ್ರಭಾವತಿಯು ಮಂಚದಲ್ಲಿರುವ ಹಂಸತೂಲಿಕಾ ತಲ್ಪದ ಮೇಲಕ್ಕೆ ಪ್ರಿಯನನ್ನು ಬಲಾತ್ಕಾರದಿಂದ ಕರೆದುಕೊಂಡು ಹೋದಳು ‖೧೯‖ ಆಗ ಸುಧನ್ವನು ತನ್ನ ಮನದಲ್ಲಿ ಎನ್ನ ಪ್ರೀಯಳಿಗೆ ಷೋಡಶದ ರುತುಸಮಯವು (ಗರ್ಭಧಾರಣಯೋಗ್ಯಕಾಲವು, ಏಕಾದಶೀ ವ್ರತವು ಅಲಂಘ್ಯಮಾದ ತಂದೆಯ

ಶ್ರಾದ್ಧವಿನಿತೊಂದುದಿನವೆ ಸಂ | ಗತವಾದೊಡೆಂತುಕರ್ತವ್ಯಮೆನೆ ಪೈತೃಕದಶೇಷಾನ್ನಮಾಘ್ರಾಣಿಸೆ || ಕೃತಭೋಜ್ಯಮಾ
ದಪುದುನಡುವಿರುಳ್ಕಳಿದಾವ | ನಿತೆಯನೊಡಗೂಡ ಬಹುದದರಿಂದಧರ್ಮ | ಪದ್ಧತಿಯನೀಕ್ಷಿಸಲಿವಳನಿಂದುಮಿರುವದು ಮತ
ವಲ್ಲೆನ್ದವಂತಿಳಿದನು || ೨೦ || ತಾತನಾಜ್ಞೆಯನುಳಿದು ಕೃಷ್ಣದರುಶನಕ್ಕೈದ | ದೀತರಳೆಗಿಂದುಋತುದಾನನುಂಮಾಡಿದೊಡೆ |
ಪಾತಕಂತನಗಿಲ್ಲಮೆಂದು ನಿಶ್ಚೈಸಿಬಳಿಕಾಸುಧನ್ವಂಮನದೊಳು || ಭೀತಿಯಂತೊರೆದು ಕಾಂತೆಯಕೂಡೆರಮಿಸಿದಂ | ಪ್ರೀ
ತಿಯಿಂದುಗುರೊತ್ತು ಸರಸಚುಂಬನಲಲ್ಲೆ | ವಾತುಗಳರವನೇಮಗಲೆತಾಡನ ಪ್ರೌಢಿಬಂಧಸಮ್ಮೋಹನದೊಳು || ೨೧ || ನಾ
ಣ್ಮೀಸಲಳಿಯದವಯವಭೇಧಮಂ ಮರೆದು | ಜಾಣ್ಮೆಗಳ ಬಂಧಗಳೊಳ್ಬಳಸಿ ಸೊಗಯಿಸುವ | ಗೋಣ್ಮೊಳಗಿನಿಂ ಚರಂಗ
ಳನೆಸಗಿಮೊನೆವಲ್ಲಕದ್ರುಂಕನುಗುರೊತ್ತನು || ಮಾಣ್ಮಾಣೆನಲ್ಕೈಗೊಳಿಸಲಲ್ಲೆಗೈದೊಲವ | ನಾಣ್ಮಂಗೆಕಾಣಿಸಿದಳವಳೊಡನೆ

---

ರಾತ್ರಿಯನ್ನು, ಕಳೆದು_ಹೋಗಲಾಡಿಸಿ, ಆವನಿತೆಯನು_ತನ್ನ ಹೆಂಡತಿಯನ್ನು, ಒಡಗೂಡಬಹುದು_ಒಟ್ಟಿಗೆ ಸೇರಬಹುದು (ಕ್ರೀಡಿಸಬಹುದು) ಅದರಿಂದ_ಅದಕಾರಣದಿಂದ, ಧರ್ಮಪದ್ಧತಿಯಂ-ಧರ್ಮ ಮಾರ್ಗವನ್ನು (ಶಾಸ್ತ್ರಸಮ್ಮತವನ್ನು) ಈಕ್ಷಿಸಲು-ನೋಡಲಾಗಿ, ಇವಳಂ-ಈ ಪ್ರಭಾವತಿಯನ್ನು, ಇಂದು_ಈಗ, ಮಿರುವುದು-ಸಂಭೋಗ ಮಾಡದಿರುವುದು, ಮತವಲ್ಲೆಂದು_ಸರಿಯಾದ್ದಲ್ಲವೆಂಬದಾಗಿ, ಅವಂ-ಆ ಸುಧನ್ವನು, ತಿಳಿದನು_ಭಾವಿಸಿದನು.

ಅ|| ವಿ|| ಪರ್ವಕಾಲ, ಏಕಾದಶೀ ದಿನವು, ಮಾತಾಪಿತೃಗಳ ಶ್ರಾದ್ಧ ದಿನವೂ, ಸ್ತ್ರೀಸಂಭೋಗ ಮಾಡಬಾರದು. ಅಂಚೆ_ದ್ಧ, ಹಂಸ_ತ್ಸ, ಪಿತೃಸಂಬಂಧವಾದ ಕಾರ್ಯ=ಪೈತೃಕ. ಶೇಷ-ಉಳಿದದ್ದು, ಒಂದು ಸರ್ಪ, ತಂದೆಯ ಶ್ರಾದ್ಧ ಕರ್ಮವು, ಸತಿಗೆ_ರುತು ಸ್ನಾನವು, ಏಕಾದಶೀ ವ್ರತವು, ಒಂದೇ ದಿನದಲ್ಲಿ ಸಂಧಿಸಿದರೆ ಹೇಗೆ ಎಂದರೆ—ಅರ್ಕದ್ವಿಪರ್ವರಾತ್ರೌಚ ಚತುರ್ದಶ್ಯಷ್ಟಮೀದಿವಾ | ಏಕಾದಶ್ಯಾಮಹೋರಾತ್ರಂ ಭುಕ್ತ್ವಾಚಾಂದ್ರಾಯಣಂ ಚರೇತ್ || ಅಸಕೃಜ್ಜಲಪಾನಾಚ್ಚ ಸಕೃತ್ತಾಂಬೂಲ ಚರ್ವಣಾತ್ | ಉಪವಾಸೋಪಿನ ಶ್ಯೇತದಿವಾಸ್ವಾಪಾಚ್ಚ ಮೈಥುನಾತ್ || ಎಂಬದಾಗಿ ವಿವರಿಸುವ ಶಾಸ್ತ್ರಾನುಸಾರವಾಗಿ, ನಡೆದರೆ ಯಾವ ದೋಷಕ್ಕೂ ಪಾತ್ರನಾಗುವದಿಲ್ಲ. ||೨೦||

ಟೀ|| ತಾತನ_ಜನಕನಾದ ಮರಾಳಧ್ವಜನ, ಆಜ್ಞೆಯನ -ಅಪ್ಪಣೆಯನ್ನು (ಶಾಸನವನ್ನು) ಉಳಿದು-ಅತಿಕ್ರಮಿಸಿ, ಶ್ರೀಕೃಷ್ಣದರುಶನಕ್ಕೆ-ಶ್ರೀ ಕೃಷ್ಣನನ್ನು ನೋಡುವದಕ್ಕೆ, ಐದದೆ - ಹೊರಡದೆ, ಇಂದು-ಈ ಸಮಯದಲ್ಲಿ, ಈ ತರಳೆಗೆ-ಈ ಚಂಚಲೆಯಾದ ಪ್ರಭಾವತಿಗೆ, ರುತುದಾನನುಂ-ಗರ್ಭಾಧಾನವನ್ನು, ಮಾಡಿದೊಡೆ_ಉಂಟುಮಾಡಿದ್ದೇ ಆದರೆ, ಪಾತಕಂ-ಪಾಪವು (ನರಕ ಪ್ರಾಪ್ತಿಯು), ತನಗೆ_ಎನಗೆ, ಇಲ್ಲ_ಇರುವುದಿಲ್ಲ, ಎಂದು_ಎಂಬದಾಗಿ, ನಿಶ್ಚೈಸಿ_ಗೊತ್ತುಮಾಡಿಕೊಂಡು, ಬಳಿಕ_ಅನಂತರದಲ್ಲಿ, ಆ ಸುಧನ್ವಂ-ಆ ಸುಧನ್ವನು, ಮನದೊಳು - ಚಿತ್ತದಲ್ಲಿ, ಭೀತಿಯಂ-ಭಯವನ್ನು, ತೊರೆದು_ಬಿಟ್ಟವನಾಗಿ, ಕಾಂತೆಯಕೂಡೆ_ಹೆಂಡತಿಯಾದ ಪ್ರಭಾವತಿಯೊಡನೆ, ಪ್ರೀತಿಯಿಂದ_ಸಂತೋಷದಿಂದ, ಉಗುರೊತ್ತು_ನಖಕ್ಷತವು, ಸರಸ_ರಸಯುಕ್ತವಾದ, ಚುಂಬನ_ಅಧರಾಮೃತಪಾನ, ಲಲ್ಲೆವಾತುಗಳ_ಪ್ರೀತಿಯಿಂದಾಡುವ ಮುದ್ದಾದ ಮಾತುಗಳ, ರವ-ಶಬ್ದದ, ನೇಮ_ಇವೇ ಮೊದಲಾದ ನಿಯಮ, ಗಲತಾಡನ_ಕೈಯನ್ನು ಬಡಿಯೋಣ, ಪ್ರೌಢಿ-ಜಾಣತನದ, ಬಂಧ-ಕುಕ್ಕುಟ, ಮಾರ್ಜಾಲ, ಸರ್ಪ, ಹಂಸ, ಈ ಬಂಧಗಳ, ಸಮ್ಮೋಹದೊಳು_ಸೌಖ್ಯದಿಂದುಂಟಾದ ಮರವಿನಿಂದ, ರಮಿಸಿದನು-ಸಂಭೋಗಮಾಡಿದನು ||

---

ಶ್ರಾದ್ಧವು, ಈ ಮೂರು ಒಂದೇ ದಿನದಲ್ಲಿ ಸಂಗತವಾದೊಡೆ ಹೇಗೆ ಮಾಡತಕ್ಕದ್ದು ಎನಲು_ಪೈತೃಕ ಶೇಷಾನ್ನವನ್ನು ಆಘ್ರಾಣಿಸಿದ್ದೇಆದರೆ ಕರ್ತೃವು ಶ್ರಾದ್ಧಶೇಷಾನ್ನವನ್ನು ಭುಜಿಸಿದಂತಾಯಿತು. ನಡುರಾತ್ರಿಯನ್ನು ಕಳೆದು ತನ್ನ ಪತ್ನಿಯಲ್ಲಿ ಸಂಭೋಗಮಾಡಬಹುದು. ಆದ್ದರಿಂದ ಧರ್ಮಪದ್ಧತಿಯನ್ನು ನೋಡಲಾಗಿ ಇವಳನ್ನು, ಈ ದಿನಸದಲ್ಲಿ ಸಂಭೋಗಿಸದೆ ಬಿಡಬಾರದು ಎಂಬದಾಗಿ ಯೋಚಿಸಿದನು "ಮೃತೇಹನಿಪರಿತ್ಯಜ್ಯ ಚಂಡಾಲಾಃ ಕೋಟಿಜನ್ಮಸು" ರುತುಸ್ನಾತಾಂಪರಿತ್ಯಜ್ಯ ಭ್ರೂಣಹತ್ಯಾಮವಾಪ್ನುಯಾತ್ " ಎಂಬ ಶಾಸ್ತ್ರೋಕ್ತ ಪ್ರಕಾರವಾಗಿ ತಂದೆಯ ತಿಥಿಯನ್ನು ಮಾಡದೆ ಬಿಟ್ಟವನಿಗೆ ಒಂದುಕೋಟಿ ಜನ್ಮಾಂತರಗಳವರೆವಿಗೂ, ಕರ್ಮ ಚಂಡಾಲನಾಗಿ ನೀಚತನದಲ್ಲಿರುವನು " ರುತುಸ್ನಾನವಾದ ತನ್ನ ಪತ್ನಿಯಲ್ಲಿ ಸಂಭೋಗಿಸದೇ ಹೋದವನಿಗೆ ಭ್ರೂಣ ಹತ್ಯ ದೋಷಬರುವುದು "ಎಂಬ ಶಾಸ್ತ್ರವನ್ನು ಬಲ್ಲವನಾಗಿದ್ದನು || ೨೦ || ತಂದೆಯ ಅಪ್ಪಣೆಯನ್ನು ಮೀರಿ ಶ್ರೀ ಕೃಷ್ಣಸ್ವಾಮಿಯ ದರ್ಶನಕ್ಕೆ ಹೊರಡದೆ ಈ ವೇಳೆಯಲ್ಲಿ ಈ ಚಂಚಲಾಕ್ಷಿಗೆ ಗರ್ಭಾಧಾನವನ್ನು ಮಾಡಿದರೆ ತನಗೆ ಪಾತಕವು ಬರುವದಿಲ್ಲವೆಂಬ ವಿಷಯಗಳನ್ನು ಮನುಸ್ಮೃತ್ಯಾದಿಗಳಿಂದ ನಿಶ್ಚೈಸಿಕೊಂಡವನಾಗಿ, ಅನಂತರದಲ್ಲಿ ಸುಧನ್ವನು ಭೀತಿಯನ್ನು ತೊರದು ಕಾಂತೆಯೊಂದಿಗೆ ಪ್ರೀತಿಯಿಂದ ಉಗುರೊತ್ತು (ನಖಕ್ಷತಾದಿಗಳು) ಸರಸ ಶೃಂಗಾರಾದಿ

ಕೂರ್ಮೆಯಿಂ | ಮೇಣ್ಮಾನಿನಿಗೆಮದನಕಲೆಗಳಂತೋರಿಸಿದನವನಂದುಸಮರತಿಯೊಳು ‖ ೨೨ ‖ ಒದವಿದಸೊಬಗಿನಶೃಂಗಾರದಾತುರದವೀ | ರದಲಲ್ಲೆವಾತಿನಕರುಣದನಗೆಮೊಗದಹಾ | ಸ್ಯದನಖಕ್ಷತದರೌದ್ರದಕಾತುರದಭಯದಬೆಮರೊಗೆದ ಭೀಭತ್ಸದ ‖ ಪುದಿದರೋಮಾಂಚನಾದ್ಭುತದಸೊಗಸಿನಮೋಹ | ನದಶಾಂತವೆಸೆವನವರಸದೇಳ್ಗೆಯನಲುಸುರ | ತದನವರಸವನೆರೆಸವಿದುಸೊಕ್ಕಿಮೈಮರೆದರನ್ಯೋನ್ಯಭಾವದಿಂದ ‖ ೨೩ ‖ ಕೂರುಗುರ್ಗಳಗೆರೆಯಸೂತ್ರಬಂಧದೊಳೆಸೆವ | ತೋರಮೊಲೆಗಳ

ಅ‖ ವಿ‖ ದ್ವಾದಶ ವಿಧ ಚುಂಬನಗಳು_ನಿಮಿತ್ತಕ, ಸಂಘಟಕ, ಸ್ಫುರಿತಕ, ಭ್ರಾಂತಿಕ, ತಿರ್ಯಗಾಯಿತ, ಅತಿವ್ಯಕ್ತ, ಉತ್ತರ ಸಂಘಟಿತಕ, ಜಿಹ್ವಾಮಿಲನಕ, ಅತಿಜಿಹ್ವಾಯೋಗ, ಸೀತ್ಕಾರ, ದಂಶನಕ ‖೨೧‖

ಟೀ‖ ನಾಣ್-ನಾಚಿಕೆಯ, ಮಿಾಸಲು – ಮಾತಾಡದಿರುವಿಕೆಯು, ಅಳಿದು-ನಾಶವಾಗಿ (ಹೋಗಿ), ಉಳಿದ_ಬಾಕಿಯಾದ, ಅವಯವ-ದೇಹಭಾಗಗಳ, ಭೇದಮಂ_ವ್ಯತ್ಯಾಸವನ್ನು (ಭಿನ್ನಾಂಶವನ್ನು) ಮರೆದು-ಅಜ್ಞಾನದಿಂದ ಮರೆತು ಬಿಟ್ಟು, ಜಾಣ್ಮೆಗಳ_ಚಮತ್ಕಾರಗಳ, ಬಂಧಂಗಳೋಳ್-ಕುಕ್ಕುಟ, ಸರ್ಪ, ಹಂಸಾದಿ ಬಂಧಂಗಳಿಂದ, ಬಳಸಿ_ಪರಿವರ್ತಿಸಿ (ತಿರಿಗಿಸಿ) ಸೊಗಯಿಸುವ_ಆನಂದ ತೋರಿಬರುವ, ಗೋಣ್ಮೊಳಗಿನಿಂಚರಂಗಳಂ_ಮನೋಹರವಾದ ಕಂಠಧ್ವನಿಯನ್ನು, ಎಸಗಿ-ಮಾಡಿದವನಾಗಿ, ಮೊನೆವಲ್ಲ_ಮೊನೆಯಾದ ದಂತಗಳಿಂದ, ಕದ್ಯಂಕನು-ಕಡಿಯೋಣವನ್ನು, ಉಗುರೊತ್ತನು_ಉಗುರಿನ ಒತ್ತುವಿಕೆಯನ್ನು, ಮಾಣ್ಮಾಣ್-ತ್ಯಜಿಸು ತ್ಯಜಿಸು, ಎನಲ್ಕೆ-ಎನ್ನುವ ರೀತಿಯಿಂದ, ಕೈಗೊಳಿಸಿ_ಮಾಡಿದವನಾಗಿ, ಲಲ್ಲೆಗೈದು-ಮುತ್ತುಕೊಟ್ಟು ಒಲವನು_ಮನ್ಮಥವಿಕಾರವಾದ ಪ್ರೀತಿಯನ್ನು, ಆಣ್ಮಂಗೆ_ತನ್ನ ವಲ್ಲಭನಿಗೆ, ಅವಳ್-ಆ ಪ್ರಭಾವತಿಯು, ಕಾಣಿಸಿದಳ್-ತೋರಿಸಿದಳು, ಒಡನೆ_ಕೂಡಲೆ, ಕೂರ್ಮೆಯಿಂ_ಪ್ರೀತಿಯಿಂದ, ಅವಂ_ಆ ಸುಧನ್ವನು, ಅಂದ_ಆ ವೇಳೆಯಲ್ಲಿ, ಸಮರತಿಯೊಳು_ಸಮವಾದ ಸಂಭೋಗಸುಖದಿಂದ (ರಮಿಸುವ ಆಟದಿಂದ) ಮೇಣ್_ಮತ್ತು, ಮಾನಿನಿಗೆ_ಆ ಪ್ರಭಾವತಿಗೆ, ಮದನಕಲೆಗಳಂ_ಅಂಗಜನ ಕಳಾವಿಶೇಷ ಸ್ಥಳಗಳನ್ನು, ತೋರಿಸಿದಂ_ಕಾಣಿಸಿದನು. ‖

ಅ‖ ವಿ‖ ಜಾಣನ ಭಾವ-ಜಾಣ್ಮೆ, ಜಾಣತನ, ಗಳದ ಧ್ವನಿ=ಗಳಧ್ವನಿ ಷ. ತ. ‖೨೨‖

ಟೀ‖ ಒದವಿದ_ಉಂಟಾದ, (ಸೇರಿರುವ) ಶೃಂಗಾರದ- ಶೃಂಗಾರ ರಸವುಳ್ಳ, (ರತಿಸುಖದ) ಆತುರದ_ಗಾಬರಿಯುಳ್ಳ, (ವೇಗದ-ಜಾಗ್ರತೆಯ) ವೀರದ_ವೀರರಸದಿಂದೊಡಗೂಡಿದ, ಲಲ್ಲವಾತಿನ_ಮುದ್ದು ಮಾತಿನ, ಕರುಣದ_ದಯಾರಸವುಳ್ಳ, ನಗೆಮೊಗದ-ನಗುವ ಮುಖವೆಂಬುವ, ಹಾಸ್ಯದ-ಹಾಸ್ಯ ರಸವುಳ್ಳ, ನಖಕ್ಷತದ_ಉಗುರುಗಳ ಒತ್ತುವಿಕೆಯೆಂಬ-ರೌದ್ರದ_ವೀರರಸವುಳ್ಳ, ಕಾತುರದ_ಕಳವಳಿಕೆಯೆಂಬ, ಭಯದ_ಭಯಾನಕ ರಸವುಳ್ಳಂಥ, ಬೆಮರ್_ಸ್ವೇದವು, ಒಗೆದ_ಉದ್ಭವಿಸೋಣವೆಂಬ, ಭೀಭತ್ಸದ-ಭೀಭತ್ಸವೆಂಬ ರಸವುಳ್ಳ, ಪುದಿದ_ಪ್ರಾಪ್ತವಾದ, ರೋಮಾಂಚನ_ಶರೀರದ ಮೇಲಿನ ರೋಮವು ನಿಲ್ಲೋಣವೆಂಬ, ಅದ್ಭುತದ-ಅದ್ಭುತ ರಸವುಳ್ಳ, (ಆಶ್ಚರ್ಯವೆಂಬ ರಸ) ಸೊಗಸಿನ_ಅಲಂಕಾರವೆಂಬ, ಮೋಹನದ_ಮತ್ತತೆಯ, ಶಾಂತವು_ಶಾಂತರಸ ವಿಶೇಷವು, ಎಸೆವ_ಹೊಳೆಯುವ, ನವರಸದ_ಶೃಂಗಾರಾದಿ ನವರಸವುಳ್ಳ, ಏಳ್ಗೆ_ಪೇರ್ಮೆಯು, ಎನಲು-ಎನ್ನುವಂತೆ, ಸುರತದ_ಸಂಭೋಗ ಸುಖದ, (ಕ್ರೀಡಾ ವಿಲಾಸದ) ನವರಸವನು_ನವ ವಿಧಗಳಾದ ರಸ ವಿಶೇಷಗಳನ್ನು, ಸವಿದು-ರುಚಿನೋಡಿ, (ಹೊಂದಿ) ಅನ್ಯೋನ್ಯಭಾವದಿಂದ – ಪರಸ್ಪರ ಪ್ರೀತಿಯಿಂದ, (ಒಂದೇ ಮನಸ್ಸಿನಿಂದ), ಸೊಕ್ಕಿ-ಗರ್ವಿಸಿ, (ಮದಿಸಿ) ಮೈಮರೆದರು-ಶರೀರವನ್ನೇ ಮರೆತಿದ್ದರು, (ಅತಿಯಾಗಿ ರತಿಸುಖದಲ್ಲಿ ಕಾತುರರಾಗಿದ್ದರು).

ರಸಗಳಿಂದ ಕೂಡಿದ ಅಧರಪಾನ, ಮೃದುಧ್ವನಿ, ಕುಚನಿಗ್ರಹವೇ ಮೊದಲಾಗಿ ವಿಷಮ, ಕುಕ್ಕುಟ, ಮಾರ್ಜಾಲ, ಹಂಸ, ಸರ್ಪ ಬಂಧಾದಿಗಳ ಸುಖದಿಂದುಂಟಾದ ಅಜ್ಞಾನದಿಂದ (ಮದದಿಂದ) ರಮಿಸಿದನು ‖೨೧‖ ಆಗ ನಾಚಿಕೆಯು, ಮಾತಾಡದಿರುವಿಕೆಯು ಅಳಿದು ಉಳಿದ ಅವಯವಂಗಳ ಭೇದವನ್ನು ಮರೆತು ಬಿಟ್ಟು ಜಾಣ್ಮೆಗಳ ಹಂಸ, ಸರ್ಪ, ಮಾರ್ಜಾಲಾದಿ ಬಂಧಗಳಲ್ಲಿ ಬಳಸಿದವನಾಗಿ ಸೊಗಯಿಸುವ ಕಂಠ ಧ್ವನಿಯನ್ನು ಗೈದು, ಹದವಾದ ದಂತಗಳ ಕ್ಷತವನ್ನು ಉಗುರೊತ್ತನ್ನು ಸಾಕು ಸಾಕು ತ್ಯಜಿಸು ತ್ಯಜಿಸು ಎಂಬುವಂತೆ ಕೈತೋರಿಸಿ, ಮುದ್ದಾಡಿ (ಪ್ರೀತಿಸಿ) ರತಿ ಸುಖಾಪೇಕ್ಷೆಯನ್ನು ವಲ್ಲಭನಿಗೆ ಆ ಪ್ರಭಾವತಿಯು ಉಂಟುಮಾಡಿದಳು ಒಡನೆ ಕೂರ್ಮೆಯಿಂದ ಆ ಸುಧನ್ವನು ಸಮರತಿಯಲ್ಲಿ ಆ ಪ್ರಿಯಳಿಗೆ ಅಂಗಜನ ಕಲಾವಿಶೇಷ ಸ್ಥಳಗಳನ್ನು ತೋರ್ಪಡಿಸಿದನು ‖೨೨‖ ಬಳಿಕ ಆ ಜಾಯಾಪತಿಗಳು ಒದಗಿದ ರತಿ ಕ್ರೀಡೆಯ ಶೃಂಗಾರರಸವು ಆತುರ ಪಡುತ್ತಿರುವದರ ವೀರರಸವು ಲಲ್ಲೆವಾತೆಂಬ (ಮುದ್ದುಮಾತೆಂಬ) ಕರುಣ ರಸವು, ನಗೆ ಮುಖವೆಂಬ ಹಾಸ್ಯ ರಸವು, ನಖಕ್ಷತವೆಂಬ ರೌದ್ರರಸವು, ಚಂಚಲತ್ವವೆಂಬ ಭಯಾನಕ ರಸವು, ಬೆವರು ಹುಟ್ಟೋಣವೆಂಬ ಭೀಭತ್ಸರಸವು, ವ್ಯಾಪ್ತವಾದ ರೋಮಾಂಚನವೆಂಬ ಅದ್ಭುತರಸವು, ಸೊಗಸಿನ ಮೋಹವೆಂಬ ಶಾಂತಿರಸವು ಪ್ರಕಾಶಿಸುವ ನವರಸದ ಏಳ್ಗೆಯು ಎನ್ನು

ಕುಂಭಸಂಸ್ಥಾಪನಂಗೈದು । ಚಾರುತರಗಳರವದಮಂತ್ರದಿಂರೋಮಾಂಚನದಕುಶಾಗ್ರಂಗಳಿಂದ ॥ ವೀರರತಿಸಾಮ್ರಾಜ್ಯ ಪಟ್ಟದೊಳ್ಬೆಮರ್ವನಿಯ । ವಾರಿಸೇಚನದಿಂದಕೃತಕೃತ್ಯರಾದಂತೆ । ರಾರಾಜಿಸಿದರೊಮ್ಮೆಮೆಲ್ಹಾಸಿನೊಳ್ಮೆರೆವಮಣಿ ಮಂಚದಾಸನದೊಳು ॥ ೨೪ ॥ ಪ್ರಕಟಿಸಿದಕಟಿತಳ್ಳುವಳ್ಳಿಬೆಂಡಾದಮೈ । ಸುಕರಗಳನಾಂತಮೊಲೆಕದಡಲೇಪದಬೆಮ । ವಿಕಸಿತಸುಖದೊಳಿದ್ದಮನವೆದ್ದರೋಮಾಂಚಮುಸವಳಿದಕೈಮುಸುಳ್ದ ॥ ಮಕರಪತ್ರದಕದಪುಮಾಣ್ದರವದೊಳೊತ್ತಿದ ।

ಅ|| ವಿ|| ನವರಸಗಳು-ಶೃಂಗಾರ, ವೀರ, ಕರುಣ, ಅದ್ಭುತ, ಹಾಸ್ಯ, ಭಯಾನಕ, ಭೀಭತ್ಸ, ರೌದ್ರ, ಶಾಂತ ನವರಸಗಳ ಸಮಾಹಾರವು-ನವರಸ, ಸಮಾ, ದ್ವಿ ಸ. ಶಾಂತ-ತಾಳ್ಮೆ, ಶಾಂತಿರಸ. ||೨೩||

ಟೀ|| ಕೂರ್-ಮೊನೆಯಾದ, ಉಗುರ್ಗಳ-ನಖಗಳ, ಗೆರೆಯ-ಗೆರೆಯೆಂಬ, (ತಿಲಕ) ಸೂತ್ರ ಬಂಧದೊಳು-ಕಟ್ಟಿರುವದರಿಂದ, ಎಸೆವ-ಹೊಳೆಯುವ, ತೋರ-ಬಲು ದೊಡ್ಡದಾದ, ಮೊಲೆಗಳ-ಸ್ತನಗಳೆಂಬುವ, ಕುಂಭ-ಕೊಡಗಳ ಅಥವಾ ಕಲಶಗಳ, ಸ್ಥಾಪನಂ-ಪ್ರತಿಷ್ಠೆಯನ್ನು, ಗೈದು-ರಚಿಸಿ, ಚಾರುತರ-ಅತಿಮನೋಹರತ್ವದಿಂದ ಕೂಡಿದ, ಗಳರವದ-ಕಂಠದ ಧ್ವನಿಯುಳ್ಳ. (ಕತ್ತಿನ ದನಿ ಎಂಬುವ) ಮಂತ್ರದಿಂ-ವೇದ ಮಂತ್ರಗಳಿಂದಲೂ, ರೋಮಾಂಚನದ-ರೋಮೋದ್ಗಮವೆಂಬ, ಕುಶಾಗ್ರಂಗಳಿಂ-ದರ್ಭೆಯ ಕೊನೆಯಿಂದಲೂ, ಅಗ್ರ-ದರ್ಭೆಗಳಿಂದಲು, ವೀರ-ರತಿಸುಖದಲ್ಲಿ ಸಮರ್ಥನಾದ, (ಮದನ ಕೇಳಿಯಲ್ಲಿ ಸಮರ್ಥರಾದ) ಜಾಯಾಪತಿಗಳ-ಸಾಮ್ರಾಜ್ಯ ವೈಭವದ, (ರಾಜ ಪದವಿಯ) ಪಟ್ಟದೋಳ್'ಪಟ್ಟಾಭಿಷೇಕವೆಂಬ ಉತ್ಸಾಹದಲ್ಲಿ, ಬೆಮರ್ವನಿಯ-ಸ್ವೇದೋದಕದ ಪನಿಗಳೆಂಬುವ, ವಾರಿಸೇಚನದಿಂದ – ಜಲಾಭಿಷೇಕದಿಂದಲೂ, ಕೃತ ಕೃತ್ಯರಾದಂತೆ-ಮಾಡಿದ ಕಾರ್ಯದಲ್ಲಿ ಪ್ರಯೋಜನವುಳ್ಳವರಂತೆ, (ಕೃತಾರ್ಥರ್ ಆದರೀತಿಯಿಂದ) ಒಮ್ಮೆ-ಒಂದಾವರ್ತಿ, ಮೇಲ್ಹಾಸಿನೋಳ್-ಮೇಲ್ಗಡೆ ಹಾಸಿರುವ ಹಂಸತೂಲಿಕಾತಲ್ಪದಿಂದ, ಮೆರೆವ-ಶೋಭಿಸುವ, ಮಣಿಮಂಚದ-ರತ್ನವಿಕಾರವಾದ ಪರ್ಯಂಕದ, ಆಸನದೋಳ್-ಪೀಠದಲ್ಲಿ, ರಾರಾಜಿಸಿದರ್-ಶೋಭಿಸಿದರು.

ಅ|| ವಿ|| ಕೃತಾರ್ಥ=ಕೃತ-ಮಾಡಿದ ಕಾರ್ಯದಲ್ಲಿ, ಅರ್ಥ-ಫಲವುಳ್ಳವರು, ಬ, ಸ. ವಾರಿಯಸೇಚನೆ=ವಾರಿಸೇಚನೆ ಷ. ತ. ಚಾರುತರ-ಸಂಸ್ಕೃತದ ಗುಣವಾಚಕ, ಜಾಯೆಯೂ, ಪತಿಯೂ=ದಂಪತಿ ದ್ವಂ. ಸ. ಮಣಿಯ ಮಂಚ ಷ. ತ. ||೨೪||

ಟೀ|| ಪ್ರಕಟಿಸಿದ- ಬಹಿರಂಗವಾಗುತ್ತಿರುವ, ಕಟಿ- ನಡುವಿನ ಪ್ರದೇಶವು, ತಳ್ಳುವ- ಮುಂದೆ ನೂಕಿಕೊಂಡು ಬರುವ, ಅಳ್ಳೆ-ಶರೀರದ ಬಗಲಿನ ಪ್ರದೇಶವು, ಬೆಂಡಾದ-ನಿಶ್ಶಕ್ತಿಯಾದ, ಮೈ-ಅಂಗವು, ಸುಕರಗಳಂ-ಒಳ್ಳೆಯದಾದ, ಅಂಗೈಗಳನ್ನು, ಆಂತು-ಹೊಂದಿದ, (ಧರಿಸಿ) ಮೊಲೆ-ಕುಚವು, ಕದಡ-ಕಲೆತ, ಲೇಪದ-ಬಳಿದಿದ್ದ ಸುಗಂಧವೇ ಮೊದಲಾದವುಗಳ, ಬೆಮರ್-ಬೆವರು ನೀರು, ವಿಕಸಿತ-ಅರಳಿದ, (ಉಂಟಾದಂಥ) ರೋಮಾಂಚಂ-ದೇಹದ ಕೂದಲು ನಿಲ್ಲೋಣವು (ರೋಮೋದ್ಗಮವು), ಅಸವಳಿದ-ಸಂಚಾರವಿಲ್ಲದೆ ನಿಂದಿರುವ, ಕೈ-ಕರವು, ಮುಸುಳ್ದ-ಮಾಲಿನ್ಯ ಹೊಂದಿದ, ಮಕರ ಪತ್ರದ-ಮಕರಿಕಾ ಪತ್ರವುಳ್ಳದ್ದಾದ, ಎಂದರೆ ಸ್ತ್ರೀಯರು ಸ್ವಾಭಾವಿಕವಾಗಿ ಸುಗಂಧ ದ್ರವ್ಯದಿಂದ ತಮ್ಮ ಕೆನ್ನೆಯಮೇಲೆ ಮೊಸಳೆಯ ಆಕಾರವನ್ನು, (ಮಾವಿನ ಆಕೃತಿಯನ್ನು ಬರೆಯಿಸಿಕೊಳ್ಳುವ ವಾಡಿಕೆಯುಂಟು) ಆ ಮಕರಿಕಾ ಪತ್ರ ರಚನೆಯು ಅಳಿಸಿಹೋಗಿರುತ್ತೆಂಬ ಭಾವವು) ಕದಪು-ಕೆನ್ನೆಯ ಪ್ರದೇಶವು, ಮಾಣ್ದ-ಅಡಗಿದ, (ತಗ್ಗಿ ಹೋದ) ರವದೋಳ್-ಕಂಠದ ಧ್ವನಿಯಿಂದ, ತೊದಲ್-ಕುಗ್ಗೋಣವು, (ಇಲ್ಲವೆ ತೊದಲು) ಮುಕುಳಿತ-ಹೆಚ್ಚಾದ ಸೌಖ್ಯದಿಂದ ಮುಚ್ಚಲ್ಪಟ್ಟಿರುವ, ವಿಲೋಚನಂ-ನೇತ್ರವುಳ್ಳ, ನೆರೆ-ಸಂಪೂರ್ಣವಾಗಿ, ಸೂಲ್-ಒಂದು ಸಲ, ನಿಮಿರ್ದ-ಮೇಲಕ್ಕೆ ಎತ್ತಿರುವ, ನಾಸಿಕಂ-ಘೋಣವು, (ಮೂಗು) ಅಳಿದ-

---

ವಂತೆ ಸುರತದ ಒಂಭತ್ತು ಬಗೆಯಾದ ರಸ ವಿಶೇಷಗಳನ್ನು ಸವಿದು ಅನ್ಯೋನ್ಯಭಾವದಿಂದ ಸೊಕ್ಕಿ, ಮೈಮರದು ಇರುತ್ತಿದ್ದರು ||೨೩|| ಕ್ರೂರವಾದ ಉಗುರ್ಗಳಿಂದಾದ ರೇಖೆಯೆನ್ನುವ ಸುತ್ತಿರುವ ಸೂತ್ರದಿಂದ (ಧಾರದಿಂದ) ಲೂ ಹೊಳೆಯುತ್ತಿರುವ ದಪ್ಪವಾಗಿ ಬಲಿತ ಸ್ತನಗಳೆಂಬುವ ಕುಂಭ ಸಂಸ್ಥಾಪನೆಯನ್ನು ಮಾಡಿ, ಚಾರುತರಮಾದ ಕಂಠ ಧ್ವನಿಯೆನ್ನುವ, ಮಂತ್ರದಿಂದಲೂ ರೋಮಾಂಚನವೆಂಬ ಕುಶಾಗ್ರಗಳಿಂದಲೂ, ಅಂಗಜನ ವಿಲಾಸದಲ್ಲಿ ವೀರರಾದ ಜಾಯಾಪತಿಗಳ ರಾಜ್ಯಭಾರದ ಪಟ್ಟಾಭಿಷೇಕ ಮಹೋತ್ಸವದಲ್ಲಿ ಬೆಮರಿನ ಹನಿಗಳೆಂಬುವ ವಾರಿ ಸೇಚನದಿಂದಲೂ, ಕೃತ ಕೃತ್ಯರಾದಂತೆ ಒಂದಾವರ್ತಿ ಮೇಲು ಹಾಸಿಗೆಯಿಂದ ಕಂಗೊಳಿಸುವ ರತ್ನ ಖಚಿತಮಾದ ಮಂಚದಲ್ಲಿ ರಾರಾಜಿಸಿದರು ||೨೪|| ಆಗ ಕಾಣ ಬರುತ್ತಲಿರುವ ಮಧ್ಯ ಪ್ರದೇಶವೂ, ಮುಂದು ಮುಂದಕ್ಕೆ ತಳ್ಳುತ್ತಿರುವ ಪಾರ್ಶ್ವ ಭಾಗವೂ, ಹೆಚ್ಚಾಗಿ ಬಳಲಿದ ದೇಹವು ಶ್ರೇಷ್ಠವಾದ ಕರಗಳಿಂದ ಒಪ್ಪುತ್ತಲಿರುವ ಬಿಳುಪಾದ ಬಲಿತ ಕುಚಗಳು ಸುಗಂಧದಿಂದ ಯುಕ್ತಮಾದ ಶ್ರೀಗಂಧದೊಡನೆ ಬೆರತಿರುವ ಬೆವರ ನೀರೂ, ವಿಕಸಿತಮಾದ ರೋಮಾಂಚವೂ, ಚಲನೆ ಇಲ್ಲದೆ ನಿಂತಿರುವ ಕರ ಪದ್ಮವೂ, ಸುಗಂಧ ದ್ರವ್ಯಗಳಿಂದ

ಲ್ಮುಕುಳಿತವಿಲೋಚನಂನೆರೆಸೊಲ್ಲಿಮಿರ್ದನಾ | ಸಿಕಮುಳಿದತಿಲಕಂಪರೆದಕುರುಳ್ಸೊಪ್ಪಾದಧರಮೊಪ್ಪಿತಾಕಾಂತೆಗೆ ||೨೫|| ಮನ್ವಾದಿಋಷಿಗಳನು ಮತವಿಸೆಂದರಿದಾಸು | ಧನ್ವಂರುತುಸ್ನಾತೆಯಂ ಮೀರದೊಡಗೂಡಿ | ತನ್ವಿಯಂಬೀಳ್ಕೊಂಡುಸಮರಕನುವಾಗುತಿರಲಿತ್ತ ಕುರುಕುಲದನೃಪರ || ಅನ್ವಯಕೆತೊಡವಾದ ನರನಹಯಮುಂಕಟ್ಟು | ವನ್ವೇಷಣದೊಳಾಹವಕೆನಡೆವುತತಿಬಲಸ | ಮನ್ವಿತಕುಮಾರನಂಸೇನೆಯೋಳ್ಕಾಣದೆ ಕೆರಳ್ದಂಮರಾಳಕೇತು || ೨೬ || ಪೊರೆಯೊಳಿಹಸಚಿವರಂ ನೋಡುತ

---

ಅಳಿಸಿಹೋಗಿರುವಂಥ, ತಿಲಕಂ-ಕುಂಕುಮದಬೊಟ್ಟು, ಪರೆದ-ಹರಡಿಕೊಂಡಿರುವ, ಕುರುಳ್-ಮುಂಗುರುಳುಗಳು, ಸೊಪ್ಪಾದ-ಅಧರಾಮೃತ ಪಾನಮಾಡಿದ್ದರಿಂದ ಸಾರವಿಲ್ಲದ, ಅಧರಂ-ತುಟಿಯುಪ್ರದೇಶವು, ಆ ಕಾಂತೆಗೆ-ಆ ಸ್ತ್ರೀಯಾದ ಪ್ರಭಾವತಿಗೆ, ಒಪ್ಪಿತು-ರತಿಸುಖಾನಂತರದ ಸಮಯಕ್ಕೆ ಪ್ರಕಾಶಿಸಿತು ||

ಅ|| ವಿ|| ಗಳದ, ಧ್ವನಿ, ಗಳಧ್ವನಿ. ಷ. ತ. ಸಾರವಿಲ್ಲದ್ದು-ನಿಸ್ಸಾರ. ಅತಿ+ಅಂತ=ಅತ್ಯಂತ=ಎಣ್-ಸಂ. ಕಾಂತಿ-ಪ್ರಕಾಶ, ಕಾಂತೆ-ಸ್ತ್ರೀ || ೨೫ ||

ಟೀ|| ಮನ್ವಾದಿ-ಮನುಚಕ್ರವರ್ತಿ ಮೊದಲ್ಗೊಂಡು ಧರ್ಮಶಾಸ್ತ್ರಾಧಿಕಾರಿಗಳ, ಮತಂ- ಆಶಯವು (ಅಭಿಪ್ರಾಯವು) ಇಂದು-ಈ ರುತುಕಾಲ (ಗರ್ಭಧಾರಣೆಯ ಕಾಲದಲ್ಲಿ) ದಲ್ಲಿ ತನ್ನ ಪಾಣಿಗೃಹೀತಳಾದ ಪತ್ನಿಯಲ್ಲಿ ಸಂಭೋಗಮಾಡುವುದು, ಎಂದು-ಆಗಬಹುದೆಂಬದಾಗಿ, ಅರಿದು-ಯೋಚಿಸಿ, (ತಿಳಿದುಕೊಂಡು) ಆಸುಧನ್ವಂ-ಆ ಸುಧನ್ವನು, ರುತುಸ್ನಾತೆಯಂ-ರುತು ಸ್ನಾನವನ್ನು ಮಾಡಿಕೊಂಡು ಸಂಭೋಗಕ್ಕೆ ಅರ್ಹಳಾದ ತನ್ನ ಹೆಂಡತಿಯನ್ನು ಮೀರದೆ-ತಪ್ಪದೆ ಅಥವಾ ತ್ಯಜಿಸದೆ, ಒಡಗೂಡಿ-ಸಂಭೋಗಿಸಿ (ಕ್ರೀಡಿಸಿ), ತನ್ವಿಯಂ-ಪ್ರಭಾವತಿಯನ್ನು, ಬೀಳ್ಕೊಂಡು-ಅವಳನ್ನು ಕೇಳಿದವನಾಗಿ, ಸಮರಕೆ-ಕಾಳಗಕ್ಕೆ, ಅನುವಾಗುತಿರಲು-ಅನುಕೂಲ ಪಡಿಸಿಕೊಳ್ಳುತ್ತಿರಲು, ಇತ್ತ-ಈ ಕಡೆಯಲ್ಲಿ, (ರಾಜನಾದ ಹಂಸಕೇತುವು ಇರುವ ಎಡೆಯಲ್ಲಿ) ಕುರುಕುಲದ-ಕುರುರಾಜವಂಶದ, ನೃಪರ-ಭೂಪಾಲರ, ಅನ್ವಯಕೆ-ಕುಲಕ್ಕೆ, ತೊಡವಾದ-ಆಭರಣ ಪ್ರಾಯನಾಗಿರುವ, ನರನ-ಪಾರ್ಥನ, ಹಯಮುಂ-ಯಜ್ಞಾಶ್ವವನ್ನು, ಕಟ್ಟುವ-ಸಮರ್ಥಿಸುವುದರ, ಅನ್ವೇಷಣದೊಳು-ಹುಡುಕುವಿಕೆಯಲ್ಲಿ, ಆಹವಕೆ-ಯುದ್ಧಮಾಡುವುದಕ್ಕೆ, ನಡೆವುತ-ಪ್ರಯಾಣ ಮಾಡುತ್ತ, ಅತಿಬಲ-ಮಹತ್ತಾದ ಸೈನ್ಯದಿಂದ, ಸಮನ್ವಿತ-ಒಡಗೊಂಡಿರುವ, ಅಥವಾ, ಅತಿ-ಅತಿಶಯವಾದ, ಬಲ-ಸಾಮರ್ಥ್ಯದಿಂದ, ಅನ್ವಿತ-ಕೂಡಿರುವ, ಕೂಮಾರನಂ-ಮಗನಾದ ಸುಧನ್ವನನ್ನು, ಸೇನೆಯೋಳ್-ಸೈನ್ಯದಲ್ಲಿ, ಕಾಣವೆ-ಈಕ್ಷಿಸದೆ, ಮರಾಳಕೇತು-ಹಂಸಕೇತುವು, ಕೆರಳ್ದಂ-ರೇಗಿಕೊಂಡನು.

ಅ|| ವಿ|| ಮನು + ಆದಿ=ಮನ್ವಾದಿ, ಯಣ್‌ಸಂಧಿ. ಕುರುವಿನ, ಕುಲ=ಕುರುಕುಲ, ಷ. ತ. ನೃ-ಮನುಷ್ಯರನ್ನು, ಪಾಲ-ಪಾಲಿಸತಕ್ಕವರು (ರಾಜರು) || ೨೬ ||

ಟೀ|| ಪೊರೆಯೊಳು-ಹತ್ತಿರದಲ್ಲಿ, ಇಹ-ಇರುತ್ತಲಿರುವ, ಸಚಿವರಂ- ಅಮಾತ್ಯರನ್ನು, ನೋಡುತ - ಈಕ್ಷಿಸುತ್ತ, ಅವರೋಳ್-ಆ ಮಂತ್ರಿಗಳಲ್ಲಿ, ಸುಮತಿಗೆ-ಸುಮತಿಯೆಂಬ ಮಂತ್ರಿಯನ್ನು ಕುರಿತು, (ನೋಡಿ) ಅರಸಂ-ರಾಜನಾದ ಹಂಸಕೇತುವು, ನಿರೂಪಿಸಲು-ಅನುಜ್ಞೆಮಾಡಲು, ಅವಂ-ಆ ಸುಮತಿಯೆಂಬ ಮಂತ್ರೀಶ್ವರನು, ಕಡುಗಡಿಗರಾದ - ಮಹಾ ಬಲಾಢ್ಯರಾದ, (ತಲೆಯೊಡೆಯುವ) ಚರರಂ-ಸೇವಕರನ್ನು (ದೂತರನ್ನು), ಅಟ್ಟಿದೊಡೆ-ಸುಧನ್ವನನ್ನು ಕರೆತರಲು-ಕಳುಹಿಸಲಾಗಿ, ಅವರ್-

---

ಬರೆದಿದ್ದು ಅಳಿಸಿಹೋದ ಮಕರಿಕಾ ಪ್ರತ್ರದ ಕೆನ್ನೆಯುಪ್ರದೇಶವೂ, ಗಳಧ್ವನಿಯು ನಿಂತು ಹೋದುದರಿಂದ ಗದ್ಗದ ಧ್ವನಿಯೂ, ಅತ್ಯಂತ ಸುಖದಿಂದ ಮುಚ್ಚಲ್ಪಟ್ಟ ವಿಲೋಚನಯುಗ್ಮವೂ ಚನ್ನಾಗಿ ಒಂದಾವರ್ತಿ ಎತ್ತಲ್ಪಟ್ಟ ನಾಸಿಕವೂ, ಅಳಿಸಿಹೋಗಿರುವ ತಿಲಕವು, ಕೆದರಿರುವ ಮುಂಗುರುಳುಗಳೂ ಚುಂಬನ ಮಾಡಿದ್ದರಿಂದ ನಿಸ್ಸಾರವಾದ ಅಧರ ಪ್ರದೇಶವೂ ಈ ಮೇಲೆ ಹೇಳಿದ ವಿಕಾರಗಳೆಲ್ಲವೂ ರತಿಸುಖಾನಂತರದಲ್ಲಿ ಉಂಟಾದ್ದಾಯಿತು ||೨೫|| ಆ ಬಳಿಕ ಸುಧನ್ವನು ಮನ್ವಾದಿ ಮಹಾ ಚಕ್ರವರ್ತಿಗಳು ಮಾಡಿದ್ದ ಧರ್ಮಶಾಸ್ತ್ರಾನು ಗುಣ್ಯವಾಗಿ ಈ ರುತುಕಾಲದಲ್ಲಿ ಸಂಗಮಮಾಡಬಹುದೆಂದು ಅರಿತು, ಆ ಸುಧನ್ವನು ರುತುಸ್ನಾತೆಯಾದ ಪತ್ನಿಯನ್ನು ಮೀರದೆ ಒಡಗೂಡಿ (ರಮಿಸಿದವನಾಗಿ) ಮೃದ್ವಂಗಿಯಾದ ತನ್ನ ಪ್ರಭಾವತಿಯನ್ನು ಬೀಳ್ಕೊಂಡು ಯುದ್ಧಕ್ಕೆ ಅನುವಾಗುತ್ತಿರಲು, ಈ ಕಡೆಯಲ್ಲಿ ಕುರುಕುಲ ನೃಪಾಲಕರ ವಂಶಕ್ಕೆ ತಿಲಕ ಪ್ರಾಯನಾದ ಪಾರ್ಥನ ತುರಂಗವನ್ನು ಕಟ್ಟುವುದರಲ್ಲಿ, ಅನ್ವೇಷಣೆಯಲ್ಲಿ, ಯುದ್ಧಕ್ಕೆ ಪ್ರಯಾಣಮಾಡುತ್ತ, ಅತಿ ಬಲಾಢ್ಯನಾದ ಕುಮಾರನಾದ ಸುಧನ್ವನನ್ನು ಸೈನ್ಯದಲ್ಲಿ ಕಾಣದೆ ಬಹುವಾಗಿ ಆಗ್ರಹಗೊಂಡನು ||೨೬|| ಆಬಳಿಕ ಹಂಸಧ್ವಜನು ತನ್ನ ಸಮೀಪದಲ್ಲಿದ್ದ ಮಂತ್ರಿಗಳನ್ನು ನೋಡುತ್ತ ಆ ಮಂತ್ರಿಗಳಲ್ಲಿ ಸುಮತಿಯನ್ನು ಕುರಿತು ಆಜ್ಞಾಪಿಸಲಾಗಿ ಆ ಸುಮತಿಯೆಂಬ ಮಂತ್ರಿಶ್ರೇಷ್ಠನು ಬಲು ಸಮರ್ಥರಾದ ಚರರನ್ನು ಆ ಸುಧನ್ವನ ಬಳಿಗೆ ಅಟ್ಟಿದನು. ಆ ದೂತರು ಆ ಸುಧನ್ವನನ್ನು ಬಲಾತ್ಕಾರದಿಂದ ಎಳದುಕೊಂಡು ಕೈಗಳನ್ನು ಹಗ್ಗಗ

ವರೋಳ್ಸುಮತಿ | ಗರಸಂನಿರೂಪಿಸಲವಂಕಡುಗಡಿಗರಾದ | ಚರರನಟ್ಟಿದಡನರ್ಬರಸೆಳೆದು ನಗುತಿಹಸುಧನ್ವನಂದುಡಿಕಿಪಿಡಿದು | ಕರಯುಗಳಮಂನೇಣ್ಗಳಿಂಬಿಗಿದು ತಂದರತಿ | ಭರದಿಂದರಾಯನಿದ್ದೆಡೆಗಾಗಿ ಪೌರಜನ | ಪರಿಜನಂಬೆರಗಾಗೆ ಕದ್ದಾತನಂಕೊಂಡುಬಪ್ಪಂತೆ ನಿಷ್ಠುರದೊಳು ||೨೭|| ಕಟ್ಟುಸಹಿತಾಸುಧನ್ವಂತಾತನಡಿಗೆಪೊಡ | ಮಟ್ಟಡೆಕೆರಳ್ದೆಲವೊ ಮೂಢಾತ್ಮನೀನೆನ್ನ | ಕಟ್ಟಳೆಯನರಿದು ಕೃಷ್ಣನದೀಕ್ಷೆಯಂಮರೆದುರಣದಲುತ್ಸಾಹತೊರೆದು || ಪಟ್ಟಣದೊಳೇಕೆ ತಳುವಿದೆಯೆಂದು ಕುವರನಂ | ಧಟ್ಟಿಸಿಮರಾಳಧ್ವಜಂ ಕೇಳ್ವೊಡಡಿಗಿಟ್ಟ | ದಿಟ್ಟಿಯಿಂದಂಜುತೊಯ್ಯನೆಲಜ್ಜೆವೆರಸಿ ಬಿನ್ನೈಸಿದನವಂ ಪಿತಂಗೆ || ೨೮ || ಸತಿಸಂತತಿಗೆ ಬಯಸಿದಿನಗಳಿದುದಿನ್ನಿಲ್ಲ | ಋತುಸಮಯಮೆಂದೆನಗೆ ಪೇಳ್ವೊಡಲ್ಲಿರ್ದೆನೆನೆ | ಕೃತಕಮಿದು

ಆ ಸೇವಕರು, ಬರೆಸೆಳದು–ಬರಮಾಡಿಕೊಂಡು (ಬರುವಂತೆ ಎಳದುಕೊಂಡು), ನಗುತಿಹ– ನಗುತ್ತಲಿರುವ, ಸುಧನ್ವನಂ–ಸುಧನ್ವನನ್ನು, ದುಡುಕಿ-ಅತಿಕ್ರಮಿಸಿ (ಆತುರಪಟ್ಟು), ಪಿಡಿದು–ಹಿಡಿದುಕೊಂಡು, ಕರಯುಗಳಮಂ – ಕರಯುಗ್ಮವನ್ನು, ನೇಣ್ಗಳಿಂ–ರಜ್ಜುಗಳಿಂದ (ಹಗ್ಗಗಳಿಂದ), ಬಿಗಿದು–ಬಂಧಿಸಿ, ರಾಯನಿದ್ದೆಡೆಗಾಗಿ–ಧೊರೆಯಾದ ಹಂಸಕೇತುವು ಇರುವ ಸ್ಥಳವನ್ನು ಕುರಿತು, ಅತಿಭರದಿಂದ-ಅತಿ ಶೀಘ್ರವಾಗಿ, ಪೌರಜನಂ–ನಾಗರಿಕರು, ಪರಿಜನಂ-ರಾಜಾಜ್ಞೆಗೊಳಪಟ್ಟ ಜನವು (ರಾಜಸಭಾಸದರು) ಬೆರಗಾಗೆ – ಸೋಜಿಗಗೊಳ್ಳುವಂತೆ, ನಿಷ್ಠುರದೊಳು – ಅತಿ ಕಠಿಣತೆಯಿಂದ, (ದಾಕ್ಷಿಣ್ಯವಿಲ್ಲದೆ) ಕದ್ದಾತನಂ–ಕಳವು ಮಾಡಿದಾತನನ್ನು, ಕೊಂಡು–ಹಿಡಿದುಕೊಂಡು, ಬಪ್ಪಂತೆ– ಬರುವ ರೀತಿಯಿಂದ, ತಂದರು–ಕರದುಕೊಂಡು ಬಂದರು ||·

ಅ|| ವಿ|| ಮಂತ್ರ-ರಾಜಕಾರ್ಯಾಲೋಚನೆ, ಅದುಳ್ಳವನು, ಮಂತ್ರಿ. ಪೊರೆ–ಕಾಪಾಡು, ಸಮೀಪ || ೨೭ ||

ಟೀ|| ಅವಂ-ಆ ಸುಧನ್ವನು, ಕಟ್ಟುಸಹಿತ–ಬಂಧನದೊಡನೆಯೇ, ತಾತನ–ಜನಕನಾದ ಹಂಸಧ್ವಜನ, ಅಡಿಗೆ-ಪಾದಗಳಿಗೆ, ಪೊಡಮಟ್ಟಡೆ-ಅಡ್ಡಬೀಳಲಾಗಿ (ನಮಸ್ಕಾರ ಮಾಡಲಾಗಿ), ಕೆರಳ್ದು–ಕೋಪಗೊಂಡು, ಎಲೊ–ಎಲವೊ, ಮೂಢಾತ್ಮ-ಅಜ್ಞಾನಿಯೆ, (ವಿವೇಕಹೀನನೆ) ನೀಂ–ನೀನು, ಎನ್ನ–ಎನ್ನಯ, ಕಟ್ಟಳೆಯಂ–ಆಜ್ಞೆಯನ್ನು (ರಾಜಶಾಸನವನ್ನು), ಅರಿದು–ತಿಳಿದವನಾದರೂ, ಕೃಷ್ಣನ–ಶ್ರೀ ಕೃಷ್ಣಸ್ವಾಮಿಯ, ದೀಕ್ಷೆಯಂ – ಈಕ್ಷಿಸಬೇಕೆಂಬ ನಿರ್ಬಂಧವನ್ನು, (ನಿಯಮವನ್ನು) ಮರೆದು–ಬುದ್ಧಿಭ್ರಮೆಯಿಂದ ಮರತು ಬಿಟ್ಟು, ರಣದೊಳ್–ಕಾಳಗದಲ್ಲಿ, !ಉತ್ಸಾಹ-ಆಸೆಯನ್ನು (ಸಂತೋಷವನ್ನು), ತೊರದು–ತ್ಯಜಿಸಿ, ಪಟ್ಟಣದೊಳು–ಪುರದಲ್ಲಿಯೇ, ಏಕೆ–ಏನು ಕಾರಣದಿಂದ, ತಳುವಿದೆ–ತಡಮಾಡಿದೆ (ಉದಾಸೀನ ಮನಸ್ಕನಾಗಿ ಸಾವಕಾಶಮಾಡಿದೆ), ಎಂದು-ಎಂಬದಾಗಿ ಹೇಳುತ್ತ, ಕುವರನಂ–ಕುಮಾರನಾದ ಸುಧನ್ವನನ್ನು, ದಟ್ಟಿಸಿ–ಆರ್ಭಟಿಸಿ, ಮರಾಳಧ್ವಜಂ–ಹಂಸಕೇತುವು, ಕೇಳ್ವೊಡೆ–ಕೇಳಲಾಗಿ, ಅಡಿಗೆ–ಪಾದಕ್ಕೆ, ಇಟ್ಟ–ಇಟ್ಟರುವ, ದಿಟ್ಟಿಯಿಂದ-ನೋಟದಿಂದ, (ತಲೆಬಾಗಿಸಿಕೊಂಡು ಕೆಳಗಡೆ ನೋಡುತ್ತ), ಅಂಜುತ–ಹೆದರಿಕೊಳ್ಳುತ್ತ, ಒಯ್ಯನೆ-ನಿಧಾನವಾಗಿ, ಲಜ್ಜೆವೆರಸಿ–ಸಂಕೋಚಾನ್ವಿತನಾಗಿ, ಅವಂ–ಆ ಶೂರನಾದ ಸುಧನ್ವನು, ಪಿತಂಗೆ–ತನ್ನ ಜನಕನಿಗೆ, ಬಿನ್ನೈಸಿದಂ–ಅರಿಕೆಮಾಡಿಕೊಂಡನು ||

ಅ|| ವಿ|| ಮೂಢ + ಆತ್ಮ = ಮೂಢಾತ್ಮ, ಸವರ್ಣ. ದೀ. ಸಂಧಿ (ಮೂಢ – ಅಜ್ಞಾನಿ,) ಕುವರ – ದ್ವಕಮಾರ–ತ್ಸ. || ೨೮ ||

ಟೀ|| ಎಲೆದೇವ–ಎಲೈ ಸ್ವಾಮಿಯಾದ ಪಿತನೇ, ಸತಿ–ಎನ್ನ ವಲ್ಲಭೆಯಾದ ಪ್ರಭಾವತಿಯು, ಸಂತತಿಗೆ–ವಂಶಾಭಿವೃದ್ಧಿಗೋಸ್ಕರವಾಗಿ (ಪುತ್ರಾರ್ಥಿಯಾಗಿ), ಬಯಸಿ – ಆಶೆಪಟ್ಟು, ದಿನ-ಗರ್ಭಧಾರಣೆಯ ಕಾಲವು, ಕಳೆದುದು–ಕಳೆದು

ಳಿಂದ ಬಂಧಿಸಿ ಹಸನ್ಮುಖನಾಗಿದ್ದವನನ್ನು ಕಳ್ಳತನಮಾಡಿಡವನನ್ನು ಎಳತರುವಂತೆ ಆ ಮರಾಳಧ್ವಜನ ಬಳಿಗೆ ಕರೆತಂದರು||೨೭|| ಆಗ ಸುಧನ್ವನು ಹಗ್ಗದಿಂದ ಕಟ್ಟದ್ದ ಕೈಗಳಿಂದಲೇ ಜನಕನ ಪಾದಾರವಿಂದಗಳಿಗೆ ಅಡ್ಡಬೀಳಲಾಗಿ ತಂದೆಯಾದ ಹಂಸಕೇತುವು ರೋಷಾಕ್ರಾಂತನಾಗಿ, ಎಲವೊ ಮೂಢಾತ್ಮನೆ ನೀನು (ಯುದ್ಧಕಾಲದಲ್ಲಿ ಮೀರಿದರೆ ಆಗುವ ಶೀಕ್ಷೆಯನ್ನು) ನನ್ನ ಆಚರಣೆಯನ್ನು ತಿಳಿದಿದ್ದರೂ ಕೃಷ್ಣಸ್ವಾಮಿಯನ್ನು ನೋಡುವ ನಿಯಮವನ್ನು ಮರೆತು ಬಿಟ್ಟು ರಣೋತ್ಸಾಹವನ್ನು ತಿರಸ್ಕರಿಸಿದವನಾಗಿ ನಗರವಲ್ಲಿ ಏಕೆ ತಾತ್ಸಾರ ಮನಸ್ಕನಾಗಿ ನಿಂತೆಯೆಂದು ಹಂಸಧ್ವಜನು ಕುಮಾರಕನನ್ನು ಆರ್ಭಟಿಸಿ ಕೇಳಲಾಗಿ ತಲೆಯನ್ನು ಬಗ್ಗಿಸಿಕೊಂಡು ಅತಿವಿನಯದಿಂದಲೂ, ಭಯದಿಂದಲೂ, ಹಗ್ಗದಿಂದ ಬಂಧಿಸಿದ ಕರಗಳನ್ನೇ ಜೋಡಿಸಿಕೊಂಡು ಲಜ್ಜಾಯುತನಾಗಿ ಸುಧನ್ವನು ತಾತನಾದ ಹಂಸಧ್ವಜನಿಗೆ ಈಪ್ರಕಾರವಾಗಿ ಅರಿಕೆಮಾಡಿಕೊಂಡನು ||೨೮|| ಎಲೈ ಜನಕನೇ—ಎನ್ನಯ ಸತಿಯಾದ ಪ್ರಭಾವತಿಯು ಪುತ್ರಸಂತತಿಗೆ ಇಚ್ಛಿಸಿ, ಋತು-ಸಮಯವು ಕಳದು ಹೋಯಿತು. ಇನ್ನು ಕಾಲವಿಲ್ಲವೆಂದು ಪೇಳಲಾಗಿ ನಾನು ಆ ಪ್ರಭಾವತಿಯ ಬಳಿಯಲ್ಲಿದ್ದೆನು ಎಂದು ಹೇಳಿದನು. ಈ ಮಾತುಗಳು ಕೃತಕವಾದುದೇ ಹೊರ್ತು ಬೇರೆ

ನೂಕೀತನಂಕೃಷ್ಣದರುಶನದಕಾಲವೊದಗಿರಲಿತ್ತಲು || ಇತರಧರ್ಮದವೇಳೆಗಡತನಗೆಕರೆಪುರೋ | ಹಿತಶಂಖಲಿಖಿತರಂಬೆಸ ಗೊಂಬೆವಿದಕೆನಿ | ಷ್ಕೃತಿಯನೆನಲರಸನಾಜ್ಞೆಯೊಳವರಪೊರೆಗೆಚರರೈತಂದದಂಪೇಳ್ದರು || ೨೯ || ಅಚರರನುಡಿಕೇಳ್ದುಶಂಖ ಲಿಖಿತರ್ಬಂದು | ವಾಚಿಸಿದರೆಲೆಹಂಸಕೇತುನೀನೇನನಾ | ಲೋಚಿಸುವೆನಿನ್ನತನಯನಮೇಲಣಾಸೆಯಿಂಭಾಷೆತಪ್ಪಿದೆಯಾ ದೊಡೆ || ಈಚಂಪಕಾಪುರದೊಳಿಹುದಿಲ್ಲನಾವುಸ | ತ್ಯಾಚರಣೆಗಾಗಿರುಕ್ಮಾಂಗದಹರಿಶ್ಚಂದ್ರ | ಭೂಚಕ್ರಪಾಲರಾತ್ಮಜರಮೊಗ

---

ಹೋಯಿತು, ರುತುಸಮಯಂ–ಗರ್ಭೋತ್ಪತ್ತಿ ಸಮಯವು, ಇನ್ನಿಲ್ಲ–ಇನ್ನಿರುವುದಿಲ್ಲ, ಎಂದು–ಎಂಬದಾಗಿ, ಎನಗೆ–ನನ್ನ ಸಂಗಡ, (ನನ್ನೊಂದಿಗೆ), ಪೇಳ್ವೊಡೆ–ಪೇಳಲಾಗಿ, ಅಲ್ಲಿರ್ದೆನು–ಆ ಪ್ರಭಾವತಿಯ ಬಳಿಯಲ್ಲಿದ್ದೆನು, ಎನೆ–ಎಂಬದಾಗಿ, ಹೇಳಲು, ಇದು–ಈ ನುಡಿಯು, ಕೃತಕಂ–ಸ್ವತಃ ನಿರ್ಮಿತವಾದದ್ದು, ಈತನಂ–ಈ ಸುಧನ್ವನನ್ನು, ನೂಕು–ಆಚೆಗೆ ತಳ್ಳು, ಕೃಷ್ಣ–ಶ್ರೀಕೃಷ್ಣ ಮೂರ್ತಿಯ, ದರುಶನಂ–ನೋಡುವ ಸಮಯವು, ಒದಗಿರಲು–ಪ್ರಾಪ್ತವಾಗಿರಲು, ತನಗೆ–ನಿನಗೆ, ಇತ್ತಲ್–ಈ ಕಡೆ, ಇತರ–ವಿಧವಾದ, ಧರ್ಮದ–ಪುಣ್ಯದ, ವೇಳೆಗಡ–ಸಮಯವಲ್ಲವೆ? (ಅಲ್ಲವೆಂಬ ಭಾವವು), ಪುರೋಹಿತ–ಪುರೋವೃದ್ಧಿಯನ್ನು ಬಯಸ ತಕ್ಕವರಾದ (ಆಚಾರ್ಯರಾದ), ಶಂಖ ಲಿಖಿತರಂ–ಶಂಖ ಲಿಖಿತರೆಂಬುವರನ್ನು, ಕರೆ–ಬರಮಾಡು, ಇದಕೆ–ಈ ಅಕ್ರಮಕ್ಕೆ (ಪಾತ ಕಕ್ಕೆ), ನಿಷ್ಕೃತಿಯನು–ಪರಿಹಾರವನ್ನು (ಪ್ರಾಯಶ್ಚಿತ್ತವಂ), ಬೆಸಗೊಂಬೆವು – ಕೇಳಿಕೊಳ್ಳುತ್ತೇವೆ, ಎನಲು–ಎಂಬದಾಗಿ ಪೇಳಲು, ಅರಸನ–ರಾಜನಾದ ಹಂಸಧ್ವಜನ, ಆಜ್ಞೆಯೊಳು–ಆಣತಿಯಿಂದ, ಅವರ–ಆ ಶಂಖ ಲಿಖಿತರ, ಪೊರೆಗೆ–ಸಮಿಪಕ್ಕೆ, ಚರರ್–ಸೇವಕರು, ಐತಂದು–ಬಂದವರಾಗಿ, ಅದಂ–ತಮ್ಮ ರಾಜನು ಅಪ್ಪಣೆಮಾಡಿರುವ ಮಾತನ್ನು, ಪೇಳ್ದರು–ವಿಜ್ಞಾಪನೆ ಮಾಡಿಕೊಂಡರು. ||

ಅ|| ವಿ|| ಅವರು, ಚರರ್= ಆಚರಲ್ (ಗ. ಸ.) ಭಗವತ್ + ದರ್ಶನ = ಭಗವದ್ದರ್ಶನ (ಜ. ಸಂ.) ಆಜ್ಞೆ (ತ್ಸ) ಆಣೆ (ದ್ಭ). ||೨೯||

ಟೀ|| ಅವರ್–ಆ ಶಂಖ ಲಿಖಿತರು, ಆ ಚರರ–ಸೇವಕರ, (ದೂತರ) ನುಡಿ–ನುಡಿಯನ್ನು (ಮಾತನ್ನು), ಕೇಳ್ದು–ಕೇಳಿದವರಾಗಿ, ಬಂದು–ಹಂಸಧ್ವಜನ ಹತ್ತಿರಕ್ಕೆ ಬಂದವರಾಗಿ, ವಾಚಿಸಿದರು–ಪೇಳಿದರು, ಎಲೆ ಹಂಸಕೇತು–ಎಲೈ ಮರಾಳ ಧ್ವಜನೆ, ನೀಂ–ನೀನಾದರೋ, ಏನ–ಯಾವರೀತಿಯ, ಆಲೋಚಿಸುವೆ–ಯೋಚಿಸುತ್ತಿರುತ್ತಿ, ನಿನ್ನ–ನಿನ್ನಯ, ತನಯನ–ಮಗ ನಾದ ಸುಧನ್ವನ, ಮೇಲಣ–ಮೇಲಿರುವ, ಆಶೆಯಿಂ–ಹಿಲುಮೆಯನ್ನು, ಪ್ರೀತಿಯಿಂದ, ಭಾಷೆ–ಆಡಿದ ಮಾತನ್ನು, ತಪ್ಪಿದೆಯಾ ದೊಡೆ–ಅತಿಕ್ರಮಿಸಿದ್ದೇ ಆದರೆ, (ಮೀರಿಹೋದವನಾದಲ್ಲಿ) ನಾವ್–ನಾವುಗಳು, (ಶಂಖ ಲಿಖಿತರಾದ ನಾವುಗಳು) ಈ ಚಂಪಕಾ ಪುರದೊಳು–ಈ ಚಂಪಕಾವತಿಯಲ್ಲಿ, ಇಹುದು, ಇಲ್ಲ–ಇರತಕ್ಕವರಲ್ಲ, (ಇರುವದಿಲ್ಲ, ಹೊರಟು ಹೋಗುವೆವು ಎಂಬ ಭಾವವು), ಸತ್ಯಾಚರಣೆಗಾಗಿ–ಸತ್ಯವನ್ನು ಆಚರಿಸುವುದಕ್ಕಾಗಿ, (ತಪ್ಪದೆ ನಿಜವನ್ನು ಅನುಸರಿಸುವುದಕ್ಕಾಗಿ), ರುಕ್ಮಾಂಗದ–ರುಕ್ಮಾಂಗದ ನೆಂಬ ಹರಿಭಕ್ತನಾದ ರಾಜನು, ಹರಿಶ್ಚಂದ್ರ–ಸತ್ಯವ್ರತವನ್ನು ಬಿಡದ ಹರಿಶ್ಚಂದ್ರರಾಜನು, ಭೂಚಕ್ರ–ಈ ಭೂಮಂಡಲದಲ್ಲಿ ರುವ, ಪಾಲರು–ಸತ್ಯ ಪರಿಪಾಲಕರಾದ ರಾಜಶ್ರೇಷ್ಠರು, ಆತ್ಮಜರ–ತಮ್ಮ ಪುತ್ರರ, ಮೊಗ–ಆಸ್ಯವನ್ನು, ನೋಡಿದರೆ–ಈಕ್ಷಿಸಿ ದರೆ, ಹೇಳೆಂದು–ಪೇಳೆಂಬದಾಗಿ, ಅವರ್–ಆ ಶಂಖ ಲಿಖಿತರ್, ನುಡಿದರು–ಆಡಿದವರಾದರು.

ಅ|| ವಿ|| ಷಟ್ಚಕ್ರವರ್ತಿಗಳು–ಹರಿಶ್ಚಂದ್ರ, ನಳ, ಪುರುಕುತ್ಸ, ಪುರೂರವ, ಸಗರ, ಕಾರ್ತವೀರ್ಯ– ಸಪ್ತಪ್ರಕೃತಿ ಗಳು—ಸ್ವಾಮಿ, ಅಮಾತ್ಯ, ಸುಹೃತ್–ಕೋಶ, ರಾಷ್ಟ್ರ, ದುರ್ಗ, ಬಲ|| ರಾಜ............ಗಳು—ಲಾಕ್ಷಾಪ್ರಲೇಪ, ಮಾಂ

---

ಯಲ್ಲ ಈ ನೀಚನನ್ನು ಆಚೆಗೆ ತಳ್ಳು, ಶ್ರೀಕೃಷ್ಣ ದರ್ಶನ ಕಾಲವು ಒದಗಿರಲು, ಇತರ ವಿಧವಾದ ಕಾರ್ಯವು ಬಂದೊದಗಿತೆ? ಎಂದು ಹೇಳಿ, ತನ್ನ ಪುರೋಹಿತ ಶ್ರೇಷ್ಠರಾದ ಶಂಖಲಿಖಿತರಂ ಬರಮಾಡೆಂದು ನಿರೂಪಿಸಲಾಗಿ, ಆ ಶಂಖಲಿಖಿತರು ಬಂದರು. ಅವರಂ ಕುರಿತು ಎಲೈ ಆಚಾರ್ಯವರ್ಯರೆ ಈಗ ಸುಧನ್ವನು ಮಾಡಿದ ಪಾತಕಕ್ಕೆ ಮಾಡತಕ್ಕ ನಿಷ್ಕೃತಿಗಳೇನಿರುತ್ತೆಂದು (ಪ್ರಾಯ ಶ್ಚಿತ್ತವೇನಿರುತ್ತೆಂದು) ಕೃತಾಂಜಲಿಯೊಡನೆ ಬೇಡುವೆವು ಎನಲು, ಆ ಶಂಖಲಿಖಿತರು ಏಕ ಮನಸ್ಕರಾಗಿ ಈ ರೀತಿಯಾಗಿ ಪೇಳಿ ದರು ||೨೯|| ಎಲೈ ರಾಜೇಂದ್ರನೇ ಆಲಿಸು, ರಾಜಾಜ್ಞೆಯ ತಿರಸ್ಕಾರವೂ, ಶ್ರೀಕೃಷ್ಣ ದರ್ಶನಮಾಡುವುದರಲ್ಲಿ ಶ್ರದ್ಧೆಯಿಲ್ಲದಿರೋ ಣವೂ, ಇವೆರಡೂ ಮಹಾ ಪಾತಕವು. ನೀನು ಏನನ್ನ ಯೋಚಿಸುತ್ತಿರುವಿ, ನಿನ್ನ ಮಗನ ಮೇಲಣ ಆಶೆಯಿಂದ ಕಟ್ಟಳೆಯಂ ಮೀರಿ ನಡದುದೇ ಆದರೆ ನಾವು ಈ ಚಂಪಕಾ ನಗರದಲ್ಲಿ ಇನ್ನು ಮುಂದೆ ವಾಸಿಸಲಾರೆವು. ಮತ್ತು ಪೂರ್ವದಲ್ಲಿ ಸತ್ಯವನ್ನು ಕಾಪಾಡಲಿಕ್ಕಾಗಿಯೇ ಸತ್ಯವ್ರತರಾದ ರುಕ್ಮಾಂಗದ ಹರಿಶ್ಚಂದ್ರ ಭೂಪಾಲಕರೆ ಮೊದಲಾದ ಚಕ್ರವರ್ತಿಗಳು ಕೂಡ ತಮ್ಮ

ನೋಡಿದರೆಹೇಳೆಂದುನುಡಿದರವರು ‖ ೩೦ ‖ ಬಳಿಕರಸನಾಸುಮತಿಯಂಕರೆದುಪೇಳ್ದನೀ | ಖಳನಂಕಟಾಹಪೂರಿತತಪ್ತತೈಲ ದೋ | ಳ್ಮುಳುಗಿಸೆನಲವನೊಡೆಯನಾಜ್ಞೆಯಂಮೀರದಾತನಕೈಗಳಂಕಟ್ಟಿಸಿ ‖ ಥಳಥಳನೆಕುದಿವೆಣ್ಣೆಕೊಪ್ಪರಿಗೆಕಾಯ್ವಲ್ಲಿ | ಗೆಳತರಿಸಿಮತ್ತೆಪೊತ್ತುವೊಲುರಿವಪೇರ್ಗೊರಡು | ಗಳಸಿಡಿಸಿಕಳಕಳಿಸುತಿಹಸುಧನ್ವಂಗೆಮರುಗುತಸಚಿವನಿಂತೆಂದನು ‖ ೩೧ ‖ ತಾತನಿನಗಿಂತಾಗಬಹುದೇಲೋಕೈಕವಿ | ಖ್ಯಾತನಭಿಮಾನಿಹರಿಸೇವಕಂಸುಂದರಂ | ಮಾತಾಪಿತೃಪ್ರಿಯಂಕೋವಿದಂ ಕೋಮಲಂಸುಖಿಸಕಲಸಜ್ಜನಸಖಂ ‖ ನೀತಿವಿದನಾಚಾರಸಂಪನ್ನನುತ್ತಮಂ | ದಾತನೆಂಬೀಸುಗುಣಮುಳ್ಳಕುವರಂಸಿನ್ನ | ನೀತ

---

ಸಾದ, ನಿರುಚ್ಛ್ವಾಸ, ನಿಶ್ವಾಸ, ಯುಗ್ಮಾದ್ರಿ, ಶಾಲ್ಮಲಿ, ಮೋಹಪ್ರದೀಪಕ, ಕ್ಷುತ್ಪಿಪಾಸಕ, ಕ್ರಿಮಿಕುಲ. ‖೩೦‖

ಟೀ‖ ಬಳಿಕ-ತರುವಾಯ, ಅರಸನು-ರಾಜನಾದ ಹಂಸಧ್ವಜನು, ಸುಮತಿಯಂ-ಮಂತ್ರಿಯಾದ ಸುಮತಿಯನ್ನು, ಕರದು-ಬರಮಾಡಿ, ಪೇಳ್ದಂ-ಹೇಳಿದನು, ಈ ಖಳನಂ-ಈ ನೀಚನಾದ ಸುಧನ್ವನನ್ನು, ಕಟಾಹ-ಕೊಪ್ಪರಿಗೆಯೊಳಗೆ, ಪೂರಿತ-ತುಂಬಿರುವಂಥ, (ನಿಬಿಡವಾಗಿರುವ) ತಪ್ತ-ಮರಳುತ್ತಿರುವ, ತೈಲದೋಳ್-ತೈಲದಲ್ಲಿ, (ಎಣ್ಣೆಯಲ್ಲಿ) ಮುಳುಗಿಸು-ಮುಗ್ನವಾಗುವಂತೆ ಮಾಡಿಸುವನಾಗು, ಎನಲು-ಎಂಬದಾಗಿ ಹೇಳಲು, ಅವಂ-ಆ ಮಂತ್ರಿಯಾದ ಸುಮತಿಯು, ಒಡೆಯನ-ಪ್ರಭುವಾದ ಹಂಸಕೇತುವಿನ, ಆಜ್ಞೆಯಂ-ಅನುಜ್ಞೆಯನ್ನು, ಮೀರದೆ-ದಾಟದೆ (ಅತಿಕ್ರಮಿಸಿ ನಡೆಯದೆ), ಆತನ-ಆ ಸುಧನ್ವನ, ಕೈಗಳಂ-ಹಸ್ತಗಳನ್ನು, ಕಟ್ಟಿಸಿ-ಬಂಧಿಸಿ, ಥಳಪಳನೆ-ಥಳಪಳವೆನ್ನುವಹಾಗೆ, ಕುದಿವ ಕಾಯುತ್ತಿರುವ, ಎಣ್ಣೆಗೊಪ್ಪರಿಗೆ-ಎಣ್ಣೆಯ ಕೊಪ್ಪರಿಗೆಯು, ಕಾಯ್ವಲ್ಲಿಗೆ-ಮರಳುತ್ತಿರುವ ಪ್ರದೇಶಕ್ಕೇನೆ, ಎಳತರಿಸಿ-ಎಳಸಿಕೊಂಡು ಬಂದವನಾಗಿ, ಮತ್ತೆ-ತಿರಿಗಿ, (ಪುನಃ) ಪೊತ್ತುವೋಲ್-ತೈಲದಲ್ಲಿಯೇ ಜ್ವಾಲೆ ಏರುವಂತೆ, ಉರಿವ-ಪ್ರಜ್ವಲಿಸುತ್ತಿರುವ, ಪೇರ್ಗೊರಡುಗಳನು-ದೊಡ್ಡದಾದ ಕಟ್ಟಿಗೆಯ ತುಂಡುಗಳನ್ನು, ಇಡಿಸಿ-ಹಾಕಿಸಿದವನಾಗಿ, ಕಳಕಳಿಸುತಿಹ-ಪ್ರಜ್ವಲಿಸುತ್ತಿರುವ, ಸುಧನ್ವಂಗೆ-ಸುಧನ್ವನೆಂಬುವನಿಗೆ, ಮರುಗುತ-ಸಂತಾಪಪಡುತ್ತ, ಸಚಿವನು-ಅಮಾತ್ಯನಾದ ಸುಮತಿಯು, ಇಂತೆಂದನು-ಈ ರೀತಿಯಾಗಿ ಹೇಳಿದನು.

ಅ‖ ವಿ‖ ಪಿರಿದು + ಕೊರಡು = ಪೇರ್ಗೊರಡು, (ವಿ. ಪೂ. ಕ.) ಇಂತು + ಎಂದು = ಇಂತೆಂದು (ಉ. ಕಾರ. ಲೊ. ಸಂ.) ‖೩೧‖

ಟೀ‖ ತಾತ-ಎಲೈ ತಂದೆಗೆ ಸಮಾನನೆ, (ಒಬ್ಬರಲ್ಲಿ ಅಧಿಕ ಪ್ರಿಯಾಗಿದ್ದರೆ ಚಿಕ್ಕವರನ್ನು ಅಂದಕ್ಕಾಗಿ ಅಪ್ಪ, ಅಯ್ಯ, ತಂದೆ, ದೇವರು, ಅಣ್ಣ ಎಂದು ಕರೆಯುವುದುಂಟು), ನಿನಗೆ- ನಿನಗಾದರೊ, ಇಂತು- ಈ ಪ್ರಕಾರವಾಗಿ, ಆಗಬಹುದೆ-ಆಗತಕ್ಕದ್ದಾಗಿರುವುದೇ! ಲೋಕ-ಭೂಲೋಕದಲ್ಲಿ, ಏಕ-ಅದ್ವಿತೀಯನಾಗಿ, ವಿಖ್ಯಾತನು-ಪ್ರಸಿದ್ಧ ಪುರುಷನು, ಅಭಿಮಾನಿ-ಸಕಲ ಧರ್ಮಾದಿಗಳಲ್ಲಿ ಮತ್ತು ವರ್ಣಾಶ್ರಮ ಧರ್ಮಾದಿಗಳಲ್ಲು ಅಭಿಮಾನ ಶಾಲಿಯು, ಹರಿಸೇವಕಂ-ವಿಷ್ಣು ಕಿಂಕರನು, ಸುಂದರಂ-ಮನೋಹರನಾದವನು, ಮಾತಾ- ತಾಯಿಯಲ್ಲಿ, ಪಿತೃ- ಜನಕನಲ್ಲು, ಪ್ರಿಯಂ- ಮಮತೆಯುಳ್ಳವನು, (ತಾಯಿ ತಂದೆಗಳಲ್ಲಿ ಪ್ರೀತಿಯುಳ್ಳವನು) ಕೋವಿದಂ-ವಿದ್ವಾಂಸನು, (ಶಾಸ್ತ್ರಜ್ಞಾನವುಳ್ಳವನು) ನೀತಿವಿದಂ-ಸನ್ಮಾರ್ಗ ಪ್ರವರ್ತಕನು, ಕೋಮಲಂ-ಮೃದ್ವಂಗನು, ಸುಖಿ-ಸೌಖ್ಯವುಳ್ಳವನು, ಸಕಲ-ಸಮಸ್ತರಾದ, ಸಜ್ಜನ-ಸತ್ಪುರುಷರಿಗೆ, ಸಖಂ-ಸ್ನೇಹಿತನು, (ಮಿತ್ರನು)ಆಚಾರ-ಸದಾಚಾರಾದಿ ಧರ್ಮಗಳಿಂದ, ಸಂಪನ್ನನು-ಕೂಡಿದವನು, ಉತ್ತಮಂ-ಶ್ರೇಷ್ಠನು, (ಯೋಗ್ಯನಾದವನು) ದಾತನು-ದಾನಶೀಲನು, (ದಾತೃತ್ವವುಳ್ಳವನು) ಎಂಬ-ಎಂಬದಾಗಿ ಹೇಳುತ್ತಿರುವ, ಈ ಸುಗುಣವುಳ್ಳ-ಈ ಮೇಲೆ ಹೇಳಿದ ಸದ್ಗುಣಗಳುಳ್ಳ, ಕುವರಂ-ಕುಮಾರನು, ನಿನ್ನನು-ನಿನ್ನನ್ನು, ಈ ತಪ್ತತೈಲದೊಳಗೆ-ಕುದಿಯುತ್ತಿರುವ ಎಣ್ಣೆಯಲ್ಲಿ, ಎಂತು-

---

ಪುತ್ರರ ಮುಖವ ನೋಡಿದರೆ? ನೀನೇ ಹೇಳೆಂದರು ‖೩೦‖ ಆ ಬಳಿಕ ಆ ಹಂಸಧ್ವಜನು ತನ್ನಯ ಮುಖ್ಯಮಂತ್ರಿಯಾದ ಸುಮತಿಯನ್ನು ಕರೆದು ಎಲೈ ಮಂತ್ರಿವರ್ಯನೇ, ಈ ಖಳನನ್ನು ಕಟಾಹದಲ್ಲಿ ಪೂರಿತವಾಗಿ ಥಳ ಥಳನೆ ಕುದಿಯುತ್ತಲಿರ್ಪ ತೈಲದಲ್ಲಿ ಇವನನ್ನು ಮುಳುಗುವಂತೆ ಮಾಡೆಂಬದಾಗಿ ನಿರೂಪಿಸಲಾಗಿ, ಆಗ ಸುಮತಿಯು ಒಡೆಯನ ಆಜ್ಞೆಯಾದಂತೆ ಆತನ ಕಟ್ಟಳೆಯಂ ಮೀರದೆ ಆತನ ಕೈಗಳನ್ನು ಕಟ್ಟಿಸಿ (ಆ ಸುಧನ್ವನ ಕೈಗಳನ್ನು ಕಟ್ಟಿಸಿ) ಥಳಪಳನೆ ಕಾದು ಕುದಿಯುತ್ತಲಿರ್ಪ ಎಣ್ಣೆ, ಕೊಪ್ಪರಿಗೆಯ ಬಳಿಗೆ ಕರೆತಂದು ಪುನಹ ತೈಲವು ಚೆನ್ನಾಗಿ ಕುದಿಯುವಂತೆ ಮರದ ಕೊರಡುಗಳನ್ನು ಹಾಕಿಸಿ, ಥಳಥಳನೆ ಶೋಭಿಸುತ್ತಿದ್ದ ಆ ಸುಧನ್ವನಂ ಕುರಿತು ಸಂತಾಪ ಪಡುತ್ತ ಆ ಮಂತ್ರಿಯಾದ ಸುಮತಿಯು ಇಂತೆಂದನು ‖೩೧‖ ಅಯ್ಯಾ ಸುಧನ್ವನೇ, ನಿನ್ನಂತಹ ಶೂರನಿಗೆ ಈ ರೀತಿಯಾದ ಶಿಕ್ಷೆಯಾಗಬಹುದೇ! ಲೋಕದಲ್ಲಿ ಮುಖ್ಯವಾಗಿ ವಿಖ್ಯಾತನು, ಕುಲಧರ್ಮಾಚರಣಾದಿಗಳಲ್ಲಿ ನಿಯಮವುಳ್ಳವನು, ಹರಿ ಸೇವಕನು, ಇದೂ ಅಲ್ಲದೆ ಮಾತಾ ಪಿತೃಗಳಲ್ಲಿ ಬಹು ಭಕ್ತಿಯುಳ್ಳವನು, ವಿದ್ವಾಂಸನು, ಷಟ್ಶಾಸ್ತ್ರವನ್ನು ಬಲ್ಲವನು, ಕೋಮಲಾಂಗನು, ಸಕಲ ಜನ ಸನ್ಮಿತ್ರನು, ಆಚಾರ

ಪ್ತತೈಲದೊಳಗೆಂತಕಟಬೀಳಿಸುವೆನೆಂದೊಡವನಿಂತೆಂದನು ||೩೨|| ಅಂಜಬೇಡೆಲೆಸುಮತಿನೀನೀಗಲಿದಕೆಮನ | ಮಂಜರಿವಿಡುವ ನಲ್ಲತಾನಿನ್ನೆಗಂಧರ್ಮ | ಮಂಜಡಿದುನಡೆದುದಿಲ್ಲಾಹವದೊಳಹಿತರೋಳ್ಪೊಯ್ದಾಡಿಮಡಿವೊಡಲಿದು || ಜಂಜಡದೊಳಳಿವುದೆಂ ಬೊಂದುಭಯಮಿಹುದಾದೊ | ಡಂಜನಾರ್ದನನಂ ಶರಣ್ಬೊಗುವೆನಳುಕದೆ | ನ್ನಂಜನಕನಾಜ್ಞೆತಪ್ಪದೆಹಾಯಿಸೆನಲವಂತೆಗ ದೆತ್ತಿಬಿಸುಡಿಸಿದನು ||೩೩|| ಭೋಯೆಂದುದಖಿಳಪರಿವಾರಮಡಿಗಡಿಗೆಹಾ | ಹಾಯೆಂದುಮರುಗಿದುದುನೀನಿಂತಳಿವರೆದಾ | ತಾ ಯೆಂದುಪೊರಳ್ದುದೊಡೆತನಕೆಬೇಸತ್ತುಸತ್ತಾಯೆಂದುಸೈಗೆಡೆದರು || ವಾಯಕಿಂತಕಟಸುಕುಮಾರನಂಕೊಂದನೀ | ರಾಯನ

---

ಹೇಗೆ ತಾನೆ, ಬೀಳಿಸುವೆಂ-ಕೆಡಹಿಸಲಿ! ಅಕಟಾ-ಅಹಹ, ಎಂದೊಡೆ-ಎಂಬದಾಗಿ ಹೇಳಲು, ಅವಂ-ಆ ಸುಧನ್ವನು, ಇಂತೆಂ ದನು-ಈ ಪ್ರಕಾರವಾಗಿ ಪೇಳಿದನು.

ಅ|| ವಿ|| ತಾತ, ತ್ಸ. ತಂದೆ, ದ್ಭ. ಲೋಕ-ಪ್ರಪಂಚ, ಜನ. ಮಾತೆಯೂ+ಪಿತೃವೂ=ಮಾತಾಪಿತೃಗಳು. ದ್ವಂ. ಸ. ಸತ್+ಆಚಾರ=ಸದಾಚಾರ ಜ. ಸಂ. ||೩೨||

ಟೀ|| ಎಲೆ ಸುಮತಿ-ಎಲೈ ಮಂತ್ರೀಶನಾದ ಸುಮತಿಯೆ, ಅಂಜಬೇಡ-ಹೆದರಿಕೊಳ್ಳಬೇಡ, ನೀಂ-ನೀನು, ಈಗಲು-ಈ ಸಮಯದಲ್ಲು, ಇದಕೆ-ಈ ಶಿಕ್ಷೆಗೋಸ್ಕರವಾಗಿ, ಮನ-ಮನಸ್ಸು, ಅಂಜಲು-ಭಯಪಡಲು ಅಥವಾ ಹೆದರಲು, ಜರಿವಿಡುವನಲ್ಲ-ಕೃಶನಾಗತಕ್ಕವನಲ್ಲ, ತಾಂ-ನಾನಾದರೊ, ಇನ್ನೆಗಂ-ಈ ಪರಿಯಂತರವೂ, ಧರ್ಮಮಂ-ಧರ್ಮಾಚರಣೆಯನ್ನು, ಜಡಿದು-ಬಡಿದು, (ಅಥವ ಖಂಡಿಸಿ) ನುಡಿದುದಿಲ್ಲ-ಮಾತನ್ನಾಡಿದವನಲ್ಲ, ಆಹವದೊಳು-ಕಾಳಗದಲ್ಲಿ, ಅಹಿತರೋಳ್-ಹಗೆಗಳಲ್ಲಿ, ಪೊಯ್ದಾಡಿ-ಜಗಳವಾಡಿ, (ಹೊಡೆದಾಡಿ) ಮಡಿವ-ಮೃತಿಯನ್ನು ಪಡೆಯುವ, ಒಡಲು ಇದು-ಈ ದೇಹವಾಗಿರುತ್ತದೆ, ಜಂಜಡದೊಳು-ಬಂಧದಿಂದ, (ಕಷ್ಟಗಳಿಂದ) ಅಳಿವುದು-ಸಾಯುವುದು, ಎಂದೆಂಬ-ಎಂಬದಾಗಿ ಪೇಳುವ, ಒಂದು-ಒಂದಾದ, ಭಯಂ-ಅಂಜಿಕೆಯು, ಇಹುದು-ಇರುತ್ತದೆ, ಆದೊಡಂ-ಹಾಗಿದ್ದಾಗ್ಯೂ, ಜನಾರ್ದನನಂ-ಲೋಕರಕ್ಷಕನಾದ ಈ ಕೃಷ್ಣನನ್ನು, ಶರಣು-ರಕ್ಷಕನೆಂದು, ಒಗುವೆನು-ಆಶ್ರಯ ಬೀಳುವೆನು, (ಮರೆಯನ್ನು ಬೀಳುತ್ತೇನೆ) ಅಳುಕದೆ-ಕೊಂಚವೂ ಅನುಮಾನ ಪಡದೆ (ಸಂದೇಹ ಪಡದೆ) ಎನ್ನಂ-ನನ್ನನ್ನು. (ನಿರಪರಾಧಿಯಾದ ನನ್ನನ್ನು) ಜನಕನ-ತಂದೆಯಾದ ಮರಾಳಧ್ವಜನ, ಆಜ್ಞೆ-ಅಪ್ಪಣೆಯನ್ನು, ತಪ್ಪದೆ-ಅತಿಕ್ರಮಿಸಿ ನಡೆಯದೆ, (ಮೀರಿ ಹೋಗದೆ) ಹಾಯ್ಕಿಸು - ಕಾದೆಣ್ಣೆಗೊಪ್ಪರಿಗೆಯಲ್ಲಿ ಕೆಡಹಿಸುವನಾಗು, ಎನಲು-ಎಂಬದಾಗಿ ಹೇಳಲು, ಅವಂ-ಆ ಸುಮತಿಯು, ತೆಗೆದು, ಎತ್ತಿ-ಹಿಡಿದು, ಎತ್ತಿಕೊಂಡು, ಬಿಸುಡಿಸಿದನು-ಬಿಸಾಡಿಸಿದನು ||೩೩||

ಟೀ|| ಅಖಿಳ-ಸಮುಸ್ತವಾದ, ಪರಿವಾರ-ರಾಜಾಜ್ಞೆಗೆ ಒಳಪಟ್ಟ ಜನವು, ಭೋಯೆಂದು-ಹಾ ಎಂಬದಾಗಿ, (ಅಯ್ಯೋ ಎಂಬದಾಗಿ) ಅಡಿಗಡಿಗೆ - ಬಾರಿಬಾರಿಗೂ, ಹಾಹಾ ಎಂದು-ಹಾಹಾ ಎಂಬದಾಗಿ ಹೇಳುತ್ತ, (ಪರಮಾಶ್ಚರ್ಯದಿಂದಾದ ಸಂತಾಪನನ್ನು ತೋರಿಸುತ್ತ) ಮರುಗಿದುದು-ಗೋಳಾಡಿತು, ನೀಂ-ನೀನು, ಇಂತು - ಈ ಪ್ರಕಾರವಾಗಿ, ಅಳಿವರೆ-ಮರಣ ಹೊಂದುವರೆ, ದಾತಾ-ಎಲೈ ಕೊಡಗೈಯನೇ, (ದಾತೃವೆ) ಎಂದು-ಎಂಬದಾಗಿ, ಪೊರಳ್ದುದು-ವ್ಯಥೆಯಿಂದ ಹೊರಳಾಡಿತು, ಒಡೆತನಕೆ-ರಾಜ್ಯಭಾರ ಮಾಡುವುದಕ್ಕೆ, ಬೇಸತ್ತು-ಬೇಜಾರುಪಟ್ಟು, (ಜಿಗುಪ್ಸೆಯನ್ನು ಹೊಂದಿ) ಸತ್ತ-ಮೃತಿಹೊಂದಿದನು, ಎಂದು-ಎಂಬದಾಗಿ, ಸೈಗೆರದರು- ಮೂರ್ಛಾಕ್ರಾಂತರಾದರು (ಜ್ಞಾನವಿಲ್ಲದವರಾದರು) ವಾಯಕೆ-ಕೆಲಸಕ್ಕೆ ಬಾರದ ತೃಣ

---

ಸಂಪನ್ನನು, ಉತ್ತಮನು, ಒಳ್ಳೆ ದಾತೃವು ಎಂಬೀ ಸುಗುಣಗಳುಳ್ಳ ಕುಮಾರನಾದ ನಿನ್ನನ್ನು ಈ ತಪ್ತತೈಲದೊಳಗೆ ಹೇಗೆ ತಾನೆ ಬೀಳಿಸಲಿ! ಅಕಟಕಟಾ!! ಎಂದು ಚಿಂತಿಸಿ ನುಡಿಯಲು, ಆಗ ಸುಧನ್ವನನು ಈ ರೀತಿಯಾಗಿ ಪೇಳಿದನು. ||೩೨|| ಎಲೈ ಮಂತ್ರಿ! ಪೂಜ್ಯತಮನಾದ ಸುಮತಿಯೇ ನೀನು ಈಗಲೂ ಹೆದರಬೇಕಾದುದಿಲ್ಲ. ನಾನಾದರೋ ಈ ರಾಜಾಜ್ಞೆಗೆ ಕೊಂಚವೂ ಮೀರತಕ್ಕವನಲ್ಲ. ನಾನು ಇಂದಿನ ವರೆಗೆ ಧರ್ಮಾಚರಣೆಯಂ ಮೀರಿ ನಡೆದವನಲ್ಲ, ಯುದ್ಧರಂಗದಲ್ಲಿ ಹಗೆಗಳೊಡನೆ ಹೊಡೆದಾಡಿ, ಮರಣವನ್ನು ಹೊಂದತಕ್ಕ ಈ ದೇಹವು ನಾನಾ ಬಗೆಗಳಾದ ವಿಘಾತಗಳಿಂದ ನಾಶವಾಗುವುದು ಎಂಬ ಚಿಂತೆಯೊಂದು ಮಾತ್ರ ಇರುತ್ತದೆ, ಆದರೂ ಎನ್ನಯ ಸರ್ವಾಪರಾಧಂಗಳಂ ಕ್ಷಮಿಸಿ ಸಲಹೆಂದು ಶ್ರೀ ಕೃಷ್ಣನನ್ನು ಶರಣು ಹೊಂದುವೆನು. ನೀನು ಭಯಪಡದೆ ತಂದೆಯ ಆಣತಿಗೆ ಕೊಂಚವೂ ಮೀರದೆ ಎನ್ನಂ ಆ ತಪ್ತತೈಲಪೂರಿತವಾದ ಕಟಾಹದಲ್ಲಿ ಹಾಕೆಸೆಂದು ಹೇಳಲು, ಅದರಂತೆಯೆ ಆ ಮಂತ್ರಿಯಾದ ಸುಮತಿಯು ಆ ಕೊಪ್ಪರಿಗೆಯೊಳಕ್ಕೆ ಬಿಸುಡಿಸಿದನು. ||೩೩|| ಆಗ ಸಕಲ ಪರಿವಾರ ಜನವೂ ಭೋ ಎಂದುದು, ಪ್ರತಿಯೊಂದು ಮಾತಿಗೂ ಅಯ್ಯೋ ಎಂದು ವ್ಯಸನ ಸೂಚಕವಾದ ಶಬ್ದಗಳನ್ನು ಹೇಳುತ್ತಾ ಮರುಗಿದುದು. ನೀನು ಇಂತಹ ರೀತಿಯಿಂದ ಸಾಯಬಹುದೆ! ಎಲೈ ದಾತಾರನೇ, ಎಂಬದಾಗಿ ಗೋಳಾಡುತ್ತ ಹೊರಳಾಡಿತು

ರಿನಂನೆರೆಸುಡಲಿ ಶಂಖಲಿಖಿತರೆಂಬೀ ಯಮೋಪಮರೇಕೆ ಜನಿಸಿದರು । ಭೂಸುರರೊಳೆಂದು ಮೊರೆಯಿಡುತಿರ್ದುದು ॥ ೩೪ ॥
ಹಿಂದೆಪ್ರಹ್ಲಾದನಂಪಾಲಿಸಿದೆಗಡದ್ರುಪದ । ನಂದನೆಯಮಾನನುಂ ಕಾಯ್ದೆಗಡಭಕ್ತರ್ಗೆ । ಬಂದೆಡರನಾವಗಂಪರಿಹರಿಪೆಗಡ
ದೇವನಿನ್ನಂಪೆಸರ್ಗೊಂಡಡೆ ॥ ಇಂದುಮರೆಯೊಗುವಡಾರಂಕಾಣೆನಕಟಗೋ । ವಿಂದನೀನಲ್ಲದೆವಿಚಾರಿಸುವರಿಲ್ಲಸಲ । ಹೆಂ
ದವಂಚಿತ್ತದೋಳ್ಕೃಷ್ಣನಂಧ್ಯಾನಿಸುತನಿರ್ಭಯದೊಳಿರುತಿರ್ದನು ॥ ೩೫ ॥ ಜಯಜಯಜನಾರ್ದನಮುಕುಂದಮುರಮರ್ದ

---

ಕೆಲಸಕ್ಕೆ, ಇಂತು–ಈ ಪ್ರಕಾರ, ಸುಕುಮಾರನಂ-ಸುಪುತ್ರನನ್ನು, ಕೊಂದಂ–ಸಂಹರಿಸಿದನು, ಅಕಟ–ಅಯ್ಯೋ, ಈ ರಾಯನ-ಈ ಧೊರೆಯಾದ ಮರಾಳಧ್ವಜನ, ಅರಿವಂ–ಜ್ಞಾನವನ್ನು, (ತಿಳುವಳಿಕೆಯನ್ನು) ನೆರೆ–ಚನ್ನಾಗಿ, ಸುಡಲಿ-ಸುಟ್ಟು ಬಿಡಲಿ, (ದಹಿಸಲಿ) ಭೂಸುರರೊಳು– ಭೂದೇವತೆಗಳಾದ ಬ್ರಾಹ್ಮಣರಲ್ಲಿ, ಶಂಖಲಿಖಿತರು–ಶಂಖಲಿಖಿತರೆಂಬುವ ಪುರೋಹಿತರು, ಯಮೋಪರು-ಯಮಧರ್ಮನಿಗೆ ಸಮಾನರಾದವರು, ಏಕೆ ಜನಿಸಿದರು-ಏತಕ್ಕಾಗಿ ಈ ಭೂಲೋಕದಲ್ಲಿ ಆವಿರ್ಭವಿಸಿದರು, ಎಂದು-ಎಂಬದಾಗಿ, ಮೊರೆಯಿಡುತಿರ್ದುದು–ಗೋಳಾಡುತಿತ್ತು.

ಅ॥ ವಿ॥ ಶಂಖನೂ, ಲಿಖಿತನೂ, ಶಂಖಲಿಖಿತರ್=(ದ್ವಂದ್ವ. ಸ) ಯಮ+ಉಪಮ=ಯಮೋಪಮ, (ಗುಣಸಂಧಿ) ರಕ್ಷ ತ್ಸ. ರೆಕ್ಕೆ ದ್ಭ. ಮೃತ್ಯು ತ್ಸ. ಮಿಳ್ತು ದ್ಭ. ॥೩೪॥

ಟೀ॥ ಹಿಂದೆ–ಪೂರ್ವಕಾಲದಲ್ಲಿ, ಪ್ರಹ್ಲಾದನಂ-ಪ್ರಹ್ಲಾದನೆಂಬ ವಿಷ್ಣು ಭಕ್ತನನ್ನು, (ಹಿರಣ್ಯಕಶಿಪುವಿನ ಮಗನನ್ನು) ಪಾಲಿಸಿದೆಗಡ–ಪ್ರಾಣವನ್ನು ಕಾಪಾಡಿದೆಯಲ್ಲವೆ, ದ್ರುಪದ–ದ್ರುಪದರಾಯನ, ನಂದನೆಯ–ಪುತ್ರಿಯಾದ ಪಾಂಚಾಲಿಯ, ಮಾನನಂ-ಮಾನವನ್ನು, ಕಾಯ್ದೆಗಡ–ಕಾಪಾಡಿದೆಯಲ್ಲವೆ! ಭಕ್ತರ್ಗೆ–ನಿನ್ನ ಉಪಾಸಕರಿಗೆ, ಬಂದ–ಸಂಭವಿಸಿದ, ಎಡರ–ಆಪತ್ತನ್ನು, ಪೆಸರ್ಗೊಂಡಡೆ–ನಿನ್ನ ನಾಮಸ್ಮರಣೆ ಮಾಡಿದ ಮಾತ್ರಕ್ಕೆ, ಆವಗಂ–ಯಾವಾಗಲೂ, ಪರಿಹರಿಪೆಗಡ–ಹೋಗಲಾಡಿಸುತ್ತಿಯಲ್ಲವೆ, ನಿನ್ನಂ–ನಿನ್ನನ್ನು, ಇಂದು-ಈ ಸಮಯದಲ್ಲಿ, ಮೊರೆಯೊಗುವಡೆ–ಶರಣು ಹೊಕ್ಕರೆ, ಆವಂ-ಬೇರೆ ಯಾರನ್ನೂ, ಕಾಣೆನು–ನೋಡಲಿಲ್ಲ, ಗೋವಿಂದ–ಗೋಪಾಲಕನೆ, ನೀನಲ್ಲದೆ–ನಿನ್ನ ಹೊರ್ತಾಗಿ (ನಿನ್ನ ವಿನಹ) ವಿಚಾರಿಸುವರು-ಕಾಪಾಡತಕ್ಕವರು, ಇಲ್ಲ-ಇರತಕ್ಕವರಿಲ್ಲವು, ಸಲಹು–ರಕ್ಷಿಸುವನಾಗು, ಎಂದು-ಎಂಬದಾಗಿ, ಆವಂ-ಆ ಸುಧನ್ವನು, ಚಿತ್ತದೋಳ್-ಹೃದಯದಲ್ಲಿ, (ಮನಸ್ಸಿನಲ್ಲಿ) ಕೃಷ್ಣನಂ-ಶ್ರೀ ಕೃಷ್ಣನನ್ನು, ಧ್ಯಾನಿಸುತ–ಸ್ಮರಣೆ ಮಾಡುತ್ತ, ನಿರ್ಭಯದೊಳು–ಯಾವ ವಿಧವಾದ ಭಯವೂ ಇಲ್ಲದೆ ಇರುತಿರ್ದನು-ಇರುತ್ತಿದ್ದನು.

ಅ॥ ವಿ॥ ಭಯವಿಲ್ಲದ್ದು=ನಿರ್ಭಯ, ಅವ್ಯಯೀಭಾವ ಸಮಾಸ, ಪ್ರ–ಅಧಿಕವಾಗಿ ಜನರನ್ನು, ಹ್ಲಾದ-ಸಂತೋಷಪಡಿಸತಕ್ಕವನು, ದ್ರುಪದರಾಯನ ಪುತ್ರಿ–ದ್ರೌಪದಿ ॥೩೫॥

ಟೀ॥ ಆ ಸುಧನ್ವಂ–ಆ ತಪ್ತ ತೈಲದಲ್ಲಿ ಬಿದ್ದು ಶ್ರೀ ಕೃಷ್ಣನಂ ಸ್ಮರಿಸುತ್ತಿರುವ ಸುಧನ್ವನು, ಮಗಿಯದೆ–ಮರತು ಬಿಡದೆ, ಜನ-ಪ್ರಜೆಗಳನ್ನು, ಅರ್ದನ–ಸಂಹರಿಸುವಾಗ್ಯೆ ಲಯಾಂತಕರೂಪನೇ, (ಲಯಾಧಿಪತಿಯೇ) ಮುಕುಂದ-ಮೋಕ್ಷಪ್ರದನೇ, (ಈ ಪ್ರಾಪಂಚಿಕ ವ್ಯಾಪಾರದಿಂದ ತೊಲಗಿಸತಕ್ಕವನೆ), ಮುರ–ಮುರನೆಂಬ ದಾನವನನ್ನು, ಮರ್ದನ–ಸಂಹಾರ ಮಾಡಿದವನೇ, ವಿಜಯ–ಪಾರ್ಥನಿಗೆ, ಮಿತ್ರ–ಗೆಳೆಯನೆ, ಗೋವಿಂದ–ಗೋಪಾಲಕನೆ, (ದೇವೇಂದ್ರನಿಗೆ ಹಗೆಯಾಗಿ ನಿಂತು ಗೋಪಾಲರನ್ನು ಕಾಪಾಡಿದವನೇ) ಪಕ್ಷಿ–ಗರುಡ ಪಕ್ಷಿಯೇ, ವಾಹನ–ವಾಹನವಾಗುಳ್ಳವನೇ (ಧ್ವಜದಲ್ಲುಳ್ಳವನೆ), ಕಮಲ–ಅರವಿಂದದ

---

ರಾಜ್ಯಭಾರಕ್ಕೆ ಬೇಸರಪಟ್ಟು ಮೃತಪಟ್ಟನಲ್ಲಾ ಎಂದು ಸರ್ವರೂ ಮೂರ್ಛಿತರಾದರು. ಇಂತಹ ಅಲ್ಪಕಾರ್ಯಕ್ಕಾಗಿ ಈ ರೀತಿಯಾದ ಶಿಕ್ಷೆಯನ್ನು ವಿಧಿಸಿದ ಈ ಮರಾಳಧ್ವಜನ ವಿವೇಕವು ಸುಡಲಿ ಎಂದರು. ಇಂತಹ ಸುಕುಮಾರನಾದ ಈ ಕೋಮಲಾಂಗನನ್ನು ನಿಷ್ಕಾರಣವಾಗಿ ಕೊಂದನು. ಈ ಭೂಸುರರಲ್ಲಿ ಈ ಶಂಖಲಿಖಿತರು ಏಕೆ ಹುಟ್ಟಿದರೋ ಎಂದು ಮೊರೆಯಿಡುತಿರ್ದರು ॥ ೩೪ ॥ ಆಗ ಸುಧನ್ವನು ಥಳಥಳನೆ ಕುದಿಯುತ್ತಲಿರ್ದ ಎಣ್ಣೆ ಗೊಪ್ಪರಿಗೆಯಲ್ಲಿ ಪೂರ್ವದಲ್ಲಿ ಹಿರಣ್ಯಕಶಿಪುವು ನಿನ್ನ ಭಜಕನೂ, ತನ್ನ ಪುತ್ರನೂ ಆದ ಪ್ರಹ್ಲಾದನನ್ನು ಸಂಹರಿಸುವಾಗ್ಯೆ ಸ್ತಂಭೋದ್ಭವನಾಗಿ ಆ ಖಳರಕ್ಕಸನನ್ನು ಪರಿಹರಿಸಿ ನಿನ್ನ ಉಪಾಸಕನನ್ನು ಕಾಪಾಡಲಿಲ್ಲವೆ? ದುರ್ಯೋಧನನ ಸಭೆಯೊಳಗೆ ಆ ನೀಚನಾದ ದುಶ್ಶಾಸನು ಮಾಡುವ ಮಾನ ಭಂಗಕ್ಕೆ ಅಳುಕಿ ನಿನ್ನಂ ಸ್ಮರಿಸಿದ ದ್ರುಪದ ಕುವರಿಯಂ ಕಷ್ಟವಿಲ್ಲದಂತೆ ಪೊರೆಯ.ಲಿಲ್ಲವೆ! ಭಕ್ತರ್ಗೆ ವಿಪತ್ತು ಬಂದರೆ ನಿನ್ನ ನಾಮಸ್ಮರಣೆ ಮಾಡಿದ ಮಾತ್ರಕ್ಕೆ ಅವರನ್ನು ಪೊರೆಯಲಿಲ್ಲವೆ? ಈಗ ನಾನು ಮರೆಬೀಳಲು ನಿನ್ನ ವಿನಹ ಮತ್ತೆ ಯಾರೂ ಇಲ್ಲ. ಗೋವಿಂದ, ಕೃಷ್ಣ, ಮುರಹರ, ಪದ್ಮನಾಭ ಎನ್ನಂ ಪೊರೆಯೆಂದು ಚಿತ್ತದಲ್ಲಿ ಸರ್ವದಾ ಧ್ಯಾನಿಸುತ್ತಿರ್ದನು ॥೩೫॥ ಆಗ ಸುಧನ್ವನು ಮರಿಯದೆ ಪ್ರಜೆಗಳನ್ನು ಸಂಹರಿಸುವಾಗ ಮೃತ್ಯು ಸ್ವರೂಪನಾದ ಜನಾರ್ದನನೇ! ಮೋಕ್ಷದಾಯಕನಾದ ಮು-

ನವಿ | ಜಯಮಿತ್ರಗೋವಿಂದಪಕ್ಷಿವಾಹನಕಮಲ | ನಯನ ಪೀತಾಂಬರಘನಶ್ಯಾಮಹರಿಕೃಷ್ಣವೈಕುಂಠನಾರಾಯಣ ॥ ಕ್ಷಯರಹಿತರಾಮಲಕ್ಷ್ಮೀರಮಣನತಜನಾ | ಶ್ರಯಧೇನು ಭಕ್ತವತ್ಸಲಕೃಪಾಕರ ಮಹಾ | ಭಯನಿವಾರಣನೃಸಿಂಹತ್ರಾಹಿ ಯೆನುತಿರ್ದನಾಸುಧನ್ವಂ ಮರೆಯದೆ ॥ ೩೬ ॥ ಅರಸಕೇಳಾಶ್ಚರ್ಯಮಂನೋಡಲೆವೆಸೀಸಿಪೋ | ಪುರಿಗೊಂಡುಕಡುಕಾಯ್ದು ಥಳಥಳನೆಕುದಿದುಕ್ಕಿ | ಮೊರೆವಪುರುಕಟಾಹತೈಲಂಮೈಗೆಸೊಗೆಯಿಸುವ ಬಾವನ್ನದಂಪಾಗಿರೆ ॥ ಕೊರಗದಾತನರೋಮ

---

ಎಸಳಿನಂತೆ, ನಯನ-ಅಕ್ಷಿಗಳುಳ್ಳವನೆ, ಪೀತಾಂಬರ-ಪೀತಾಂಬರಧಾರಿಯೆ, (ಪೀತವರ್ಣದ ವಸ್ತ್ರಧಾರಿಯೇ), ಘನಶ್ಯಾಮ-ಮೇಘದಂತೆ ನೀಲಬಣ್ಣವುಳ್ಳವನೇ, ಹರಿ-ಪಾಪಹರ ಅಥವಾ ದುಃಖಹಾರಕನೆ, ಕೃಷ್ಣ-ಈ ಸಂಸಾರ ಬಂಧದಿಂದ ನಿನ್ನ ಕಡೆಗೆ ಸೆಳೆಯುತಕ್ಕವನೇ, ವೈಕುಂಠ-ವಿಕುಂಠನೆಂಬುವನಲ್ಲಿ ಜನಿಯಿಸಿದವನೆ, ನಾರಾಯಣ-ಕ್ಷೀರಾಬ್ಧಿಶಯನನನೇ, ನೀರೇವಾಸಸ್ಥಾನವಾಗುಳ್ಳವನೆ; ಕ್ಷಯರಹಿತ-ನಾಶವಿಲ್ಲದವನೆ, ರಾಮ-ಸಕಲರ ಮನದಲ್ಲಿಯೂ ರಮಿಸತಕ್ಕವನೆ, ಲಕ್ಷ್ಮೀರಮಣ-ಲಕ್ಷ್ಮೀದೇವಿಯವಲ್ಲಭನೆ, ನತ-ಭಕ್ತರಾದ, ಜನ-ಜನರಿಗೆ, ಆಶ್ರಯ-ಆಶ್ರಯಿಭೂತನಾದವನೆ (ನಿನ್ನ ಭಕ್ತರಿಗೆ ಸಹಾಯಕನಾದವನೆ), ಧೇನುವೆ-ವಾಂಛಿತ ವಸ್ತುವನ್ನು ಕೊಡುವ ಕಾಮಧೇನುವೆ, ಭಕ್ತ-ನಿನ್ನ ಉಪಾಸಕರಲ್ಲಿ, ವತ್ಸಲ-ಪ್ರೀತಿಯುಳ್ಳವನೆ (ಆದರವುಳ್ಳವನೆ), ಕೃಪ-ವಿಶ್ವಾಸಕ್ಕೆ ಅಥವ ಪ್ರೀತಿಗೆ, ಆಕರ-ಸ್ಥಾನವಾದವನೆ (ಕರುಣಾಶಾಲಿಯೆ), ಮಹ-ಮಹತ್ತಾದ, ಭಯ-ಅಂಜಿಕೆಯನ್ನು, ನಿವಾರಣ-ಪರಿಹಾರಕನೆ, (ಪ್ರಾಣ ಸಂಕಟವೆಂಬ ಭಯವನ್ನು ಪರಿಹರಿಸತಕ್ಕವನೆ) ನೃಸಿಂಹ-ಮನುಷ್ಯಾಕಾರನಾಗಿಯೂ, ಸಿಂಹಾಕಾರನಾಗಿಯೂ ಇರತಕ್ಕವನೆ (ಮನುಷ್ಯರಲ್ಲಿ ಶ್ರೇಷ್ಠನೆ) ಜಯಜಯ-ಸರ್ವೋತ್ಕೃಷ್ಟನಾಗಿರು, ತ್ರಾಹಿ-ಎನ್ನಂ ಸಂರಕ್ಷಿಸುವನಾಗು, ಎನುತ-ಎಂಬದಾಗಿ ಹೇಳುತ್ತ, ಇರ್ದನು-ಇರುತ್ತಿದ್ದನು.

ಅ॥ ವಿ॥ ಜಯ-ಜಯಸಂವತ್ಸರ, ಗೆಲುವು, ಜಯನೆಂಬುವನು, ಮುರನನ್ನು ಮರ್ದನ ಮಾಡಿದವನು=ಮುರಮರ್ದನ. ಮಿತ್ರ-ಸೂರ್ಯ, ಸ್ನೇಹಿತ, ಕಮಲದಂತೆ ನಯನವುಳ್ಳವನು=ಕಮಲನಯನ, ಉ. ಪೂ. ಬಹು. ಸ. ನೃ-ಮನುಷ್ಯನು, ಸಿಂಹ-ಸಿಂಹವು, ಇವರಂತೆ ಇರುವನು=ನೃಸಿಂಹ, ವಿ, ಉ. ಕ. ಸ. ॥ ೩೬ ॥

ಟೀ॥ ಅರಸ-ರಾಜನಾದ ಜನಮೇಜಯನೇ, ಆಶ್ಚರ್ಯಮಂ- ಸೋಜಿಗವನ್ನು (ಅದ್ಭುತವನ್ನು) ಕುದಿಯುತಲಿದ್ದ ತೈಲವು ಸುಧನ್ವನನ್ನು ಸುಡದಿರುವ ಮಹಾದ್ಭುತವನ್ನು, ಕೇಳು-ಆಲಿಸು, ನೋಡಲು-ಈಕ್ಷಿಸಲು, ಎವೆ-ಕಣ್ಣು ರೆಪ್ಪೆಯು, ಸೀಸಿಪೋಪ-ಸೀದುಹೋಗುತ್ತಲಿರುವ (ಸುಟ್ಟುಹೋಗುವಷ್ಟು), ಉರಿಗೊಂಡು-ಜ್ವಾಲೆಯನ್ನು ಹೊಂದಿದ್ದು, ಕಡು-ಹೆಚ್ಚಾಗಿ, ಕಾಯ್ದು-ಕಾದಿದ್ದ, ಥಳಥಳನೆ-ಥಳಪಳೆಂಬ ಶಬ್ದದಿಂದ, ಮೇಲಕ್ಕೆ ಎಗರುತ್ತ, ಉಕ್ಕಿ - ಮೇಲಕ್ಕೆ ಅಧಿಕವಾಗಿ ಬಂದು, ಮೊರೆವ-ಧ್ವನಿಮಾಡುತ್ತಿರುವ, ಉರು-ಹೆಚ್ಚಾದ, ಕಟಹ-ಕಟಾಹದಲ್ಲಿರುವ, ತೈಲಂ-ಎಣ್ಣೆಯು, ಮೈಗೆ- ದೇಹಕ್ಕೆ, ಸೊಗಯಿಸುವ-ಅಲಂಕಾರವಾಗಿ ಕಾಣಿಸುವ, ಬಾವನ್ನ-ಶ್ರೀಗಂಧದ ಹಾಗೆ, ತಂಪಾಗಿರೆ-ಶೈತ್ಯವಾಗಿರಲು, ಆತನ-ಆ ಹರಿಭಕ್ತನಾದ ಸುಧನ್ವನ, ರೋಮಂ-ರೋಮವು (ಕೂದಲು), ಕೊರಗದು-ಸೀದು ಹೋಗದು, ಅಂಗದ-ದೇಹದ. ಸೊಂಪು-ಅಂದವು (ಸೌಂದರ್ಯವು) ಅಡಸದು-ಕಡಿಮೆಯಾಗಲಿಲ್ಲ, ಕೊರಳ-ಕಂಠದಲ್ಲಿದ್ದ, ತುಲಸಿಯ-ತೊಳಸಿಯ, ದಂಡೆ-ಹಾರವು, ಬಾಡದು-ಒಣಗಿಹೋಗದು, ಮುಡಿದ-ತಲೆಯಲ್ಲಿ ಹೊಂದಿದ್ದ, ಪೂಗಳು-ಕುಸುಮಗಳು, ಅತಿಗುಂದವು-ಕಾಂತಿಹೀನವಾಗಲಿಲ್ಲ, ಮಿತ್ರೋದಯದ-ಶ್ರೇಷ್ಠನಾದ ಭಾಸ್ಕರನ ಆವಿರ್ಭಾವ ಸಮಯದ, ಕಮಲದಂತೆ-ತಾವರೆಯಹಾಗೆ, ಸುಧನ್ವನಮುಖವು-ಸುಧನ್ವನ ಆಸ್ಯವು, ಅರಳ್ದುದು-ವಿಕಸಿತವಾಯಿತು.

---

ಕುಂದನೇ! ಮುರನನ್ನು ಸಂಹರಿಸಿದ ಮುರಾಂತಕನೆ! ಪಾರ್ಥನಿಗೆ ಸ್ನೇಹಿತನಾದವನೇ! ಇಂದ್ರನಿಂದ ಗೋಪಾಲಕರಿಗೆ ಬಂದೊದಗಿದ ಕಷ್ಟಗಳನ್ನು ಪರಿಹರಿಸಿದ ಗೋವಿಂದನೇ! ಗುರುತ್ಮಂತನೇ ವಾಹನವಾಗುಳ್ಳ ಗರುಡವಾಹನನೇ! (ಪನ್ನಗಾರಿಧ್ವಜನೇ) ಪದ್ಮ ಪತ್ರದಂತೆ ವಿಶಾಲನೇತ್ರನಾದ ಪದ್ಮಾಕ್ಷನೇ! ಪೀತಾಂಬರಧಾರಿಯೇ! ಮೇಘಶ್ಯಾಮನೆ! ಪಾಪಹರನಾದ ಹರಿಯೇ! ನಿನ್ನ ಭಕ್ತರನ್ನು ಸಂಸಾರ ಬಂಧದಿಂದ ನಿನ್ನ ಕಡೆಗೆ ಸೆಳೆಯತಕ್ಕ ಕೃಷ್ಣನೇ! ಸರ್ವರಮನದಲ್ಲಿಯೂ ನಲಿದಾಡುವ ಶ್ರೀರಾಮನೇ! ವಿಕುಂಠನಲ್ಲಿ ಜನಿಸಿದ ವೈಕುಂಠನೇ! ನಾಶರಹಿತನಾದ ಅಚ್ಯುತನೇ, ಲಕ್ಷ್ಮೀಪತಿಯೇ! ನತಜನಮಂದಾರಕನೇ! ಕ್ಷೀರಾಬ್ಧಿಶಾಯಿಯಾದ ನಾರಾಯಣನೇ! ಕೃಪಾಕರನೇ! ಪ್ರಾಣಭಯವನ್ನು ಪರಿಹರಿಪ ಪಾಪಹರನೇ, ನೃಸಿಂಹಸ್ವರೂಪವುಳ್ಳವನಾದ ನೃಸಿಂಹನೇ! ತ್ರಾಹಿ ಎಂದು ಇರುತಿದ್ದನು ॥೩೬॥ ಎಲೈ ಜನಮೇಜಯ ಧರಿತ್ರೀಪಾಲ, ಆಗ ಥಳಥಳನೆ ಕುದಿಯುತ್ತಲಿರ್ದ ಕಟಾಹತೈಲವು ಶರೀರಕ್ಕೆ ಅಲಂಕಾರಪ್ರಾಯವಾದ ಶ್ರೀಗಂಧದಂತೆ ಶೈತ್ಯವಾಗಿರಲು; ಆ ಸುಧನ್ವ ಶರೀರದ ರೋಮವು ಸೀಯದು, ಅಂಗಕಾಂತಿಯು ಕಡಿಮೆಯಾಗಲಿಲ್ಲ; ಕೊರಳಲ್ಲಿ ಧರಿಸಿದ್ದ ತುಲಸೀಮಾಲೆಯು ಕೊಂಚವಾದರೂ ಬಾ

ವಡಗದಂಗದಸೊಂಪು | ಕೊರಳತುಳಸಿಯ-ದಂಡೆಬಾಡದುಮುಡಿದಪೂಗ | ಳರೆಗುಂದದರಳ್ದುದುಸುಧನ್ವನಮುಖಸು ಮಿತ್ರೋ
ದಯಕಮಲದಂತೆ || ೩೭ || ಕಂಡುಬೆಂಗಾದುದೆಲ್ಲಾಜನಂಸ್ತುತಿಸಿದ | ಪುಂಡರೀಕಾಕ್ಷನಂಬಳಿಕಲಿಖಿತಂಖತಿಯ | ಗೊಂಡಿವಂ
ಬಲ್ಲನಗ್ನಿಸ್ತಂಭಮಂನಾರಿಕೇಳಂಗಳಂತರಿಸೆನೆ || ಕೊಂಡುಬಂದೆಳೆನೀರ್ಗಳಂಸುರಿಯಲುರಿನಭೋ | ಮಂಡಲವನಪ್ಪಳಿಸಿಹೊ
ಡೆದುದುಪುರೋಹಿತರ | ಗಂಡಸ್ಥಳಂಗಳಂಪಿಡಿದೋಡ್ಗಳಾರಲುಂನಗುತಿರ್ದನಾಕುವರನು || ೩೮ || ನಿಶ್ಚಲಹೃದಯನಾವಿಷ್ಣುನಾ
ಮಂಗಳಪುನ || ಶ್ಚರಣೆಯಿಂದವಂ ಸುಖದೊಳಿರುತಿರೆಕಂಡು | ಪಶ್ಚಾದ್ವಿವೇಕದಿಂದುರೆನೊಂದುಹರಿಕಿಂಕರದ್ರೋಹಮಂಮಾ

---

ಅ|| ವಿ|| ಥಳಥಳ-ಅನುಕರಣಾವ್ಯಯ, ತುಲಸಿ-ತ್ಸ, ತೊಳಸಿ-ದ್ಭ, ಸುಷ್ಠುಮಿತ್ರ=ಸುಮಿತ್ರ. ಸುಮಿತ್ರ=ಉದಯ=ಸುಮಿತ್ರೋದಯ, ಗುಣ ಸಂ. || ೩೭ ||

ಟೀ|| ಎಲ್ಲಾಜನಂ-ಸಮಸ್ತ ಜನವೂ, ಕಂಡು-ಈ ಸುಧನ್ವನು ತಪ್ತತೈಲದಲ್ಲಿ ಸುಡದಿದ್ದನ್ನು ನೋಡಿದವರಾಗಿ, ಬೆರಗಾದುದು-ಆಶ್ಚರ್ಯಯುತವಾಯಿತು, ಪುಂಡರೀಕಾಕ್ಷನಂ - ಪದ್ಮಾಕ್ಷನಾದ ಶ್ರೀ ಕೃಷ್ಣನನ್ನು, ಸ್ತುತಿಸಿದರ್-ಸ್ತೋತ್ರಮಾಡಿದರು, ಬಳಿಕ-ಅನಂತರದಲ್ಲಿ, ಲಿಖಿತಮುನಿಯು, ಖತಿಗೊಂಡು-ರೋಷಗೊಂಡು, ಇವಂ-ಈ ಸುಧನ್ವನು, ಅಗ್ನಿಸ್ತಂಭನಂ-ಬೆಂಕಿಯ ತಾಪವನ್ನು ನಿವಾರಿಸಿಕೊಳ್ಳತಕ್ಕ ವಿದ್ಯೆಯನ್ನು, ಬಲ್ಲನು-ತಿಳಿದವನಾಗುತ್ತಾನೆ, ಎಂದು-ಎಂಬದಾಗಿ ಯೋಚಿಸಿಕೊಂಡು, ನಾರಿಕೇಳಂಗಳಂ-ತೆಂಗಿನಕಾಯಿಗಳನ್ನು, ತರಿಸೆನೆ-ತೆಗದ-ಕೊಂಡು ಬರುವುದು ಎನಲು, ಎಳೆನೀರ್ಗಳಂ ತೆಂಗಿನಕಾಯಿಗಳ ಎಳದಾದ ನೀರನ್ನು, ಸುರಿಯಲು-ಆ ಥಳಥಳನೆ ಕುದಿಯುತ್ತಿರುವ ಕೊಪ್ಪರಿಗೆಯಲ್ಲಿ ಹುಯ್ಯಲಾಗಿ, ಉರಿ-ಬೆಂಕಿಯ ಜ್ವಾಲೆಯು, ನಭೋಮಂಡಲವಂ-ಅಂತರಿಕ್ಷ ಮಂಡಲವನ್ನು, ಅಪ್ಪಳಿಸಿ ಹೊಡೆದುದು-ವ್ಯಾಪಿಸಿಕೊಂಡು ಬಡಿಯಿತು, ಪುರೋಹಿತರ-ಪುರೋಹಿತರಾದ ಶಂಖಲಿಖಿತರೆಂಬುವರ, ಗಂಡಸ್ಥಳಂಗಳಂ-ಗಲ್ಲಪ್ರದೇಶಗಳನ್ನು ನೋಡಿ, ಪಿಡಿದ-ಮೇಲಕ್ಕೆಹಾರಿದಂಥ, ಓಡ್ಗಳ-ಕಂಟಗಳು, ಆರಲುಂ-ಹಾರುತ್ತಿರಲಾಗಿ, ಆ ಕುವರಂ-ಆ ಕುಮಾರನಾದ ಸುಧನ್ವನು, ನಗುತಿರ್ದನು - ಸಂತೋಷಪಡುತ್ತಿದ್ದನು ||

ಅ|| ವಿ|| ಪುಂಡರೀಕದಂತೆ, ಅಕ್ಷವುಳ್ಳವನು, ಪುಂಡರೀಕಾಕ್ಷ, ಉ, ಪೂ. ಬಹು. ಸ. ಪುಂಡರೀಕ-ಹುಲಿ, ಬಿಳೀ ಕಮಲ, ಎಳದು, ನೀರ್-ಎಳನೀರ್, ವಿ ಪೂ. ಕ. ||೩೮||

ಟೀ|| ಆಗ-ಆ ಸುಧನ್ವನು ಆ ಕಟಾಹದಲ್ಲಿ ಸಂತೋಷವಾಗಿರುವಾಗ, ಲಿಖಿತನು-ಲಿಖಿತನೆಂಬ ಮುನಿಯು, ನಿಶ್ಚಲ-ಚಲನೆಯಿಲ್ಲದ, ಹೃದಯನಾಗಿ-ಮನಸ್ಸುಳ್ಳವನಾಗಿ, ವಿಷ್ಣುನಾಮಂಗಳಂ-ಶ್ರೀಕೃಷ್ಣನ ನಾಮೋಚ್ಚಾರಣೆಗಳನ್ನು, ಪುನಶ್ಚರಣೆಯಿಂದ-ಪುನಹ ಉಚ್ಚರಿಸುವದರಿಂದ, ಅವಂ-ಆ ಸುಧನ್ವನು, ಸುಖದೊಳು-ಸೌಖ್ಯದಿಂದ, ಇರುತಿರೆ-ಇರುತ್ತಿರಲಾಗಿ, ಕಂಡು-ಅದನ್ನು ಈಕ್ಷಿಸಿ, ಪಶ್ಚಾತ್-ತದನಂತರದಲ್ಲಿ, ಪ್ರಾಪ್ತವಾದ, ವಿವೇಕದಿಂದ, ಸುಜ್ಞಾನೋದಯದಿಂದ, ಉರೆ-ಹೆಚ್ಚಾಗಿ, ನೊಂದು-ಸಂತಾಪಪಟ್ಟು, ಹರಿಕಿಂಕರ-ವಿಷ್ಣು ಸೇವಕನಿಗೆ, ದ್ರೋಹಮಂ-ಅಪರಾಧದವನ್ನು (ಕೆಡಕನ್ನು), ಮಾಡಿದ-ಉಂಟುಮಾಡಿಸಿದ, ದುಶ್ಚರಿತಕೆ-ದುರ್ನಡತೆಗೆ, ಆವುದು-ಮತ್ತೆ ಯಾವವಿಧವಾದ, ನಿಷ್ಕೃತಿಗಳು-ಪರಿಹಾರಗಳು (ಪ್ರಾಯಶ್ಚಿತ್ತವೇ ಆದಿಯಾದವುಗಳು), ಇಲ್ಲ-ಇರಲಾರವು, ಎಂದು-ಎಂಬದಾಗಿ, ನಿಶ್ಚಯದೊಳು-ಮನೋನಿಶ್ಚಯದೊಳು-ಮನೋನಿಶ್ಚಯದಿಂದ, ಆಗ-ಆವೇಳೆಯಲ್ಲಿ, ಮರಣಾಂತವೇ- ಮರಣ ಪೊಂದುವುದೇ, ತನಗೆ-ನನಗೆ, ಪ್ರಾಯಶ್ಚಿತ್ತಂ-ನಿಷ್ಕೃತಿಯು, ಎಂದು-ಎಂಬದಾಗಿ, ಆಕಟಾಹದೋಳ್-ಆ ಕುದಿಯುತ್ತಿರುವ ಎಣ್ಣೆಗೊಪ್ಪರಿಗೆಯಲ್ಲಿ, ಕುದಿವೆಣ್ಣೆಯೋಳ್-ಕುದಿಯತ್ತಲಿರ್ಪ ತೈಲದಲ್ಲಿ, ಆಲಿಖಿತಂ-ಆ ಪುರೋಹಿತನಾದ ಲಿಖಿತಮುನಿಯು, ಬಿದ್ದನು-ಒಳಕ್ಕೆ ಬಿದ್ದವನಾದನು.

---

ಡಲಿಲ್ಲ. ನೆತ್ತಿಯಲ್ಲಿ ಮುಡಿದಿದ್ದ ಸುವಾಸನೆಯುಳ್ಳ ಕುಸುಮವು ಕಾಂತಿಹೀನವಾಗಲಿಲ್ಲ. ಸೂರ್ಯೋದಯಕಾಲದಲ್ಲಿರುವ ಕಮಲಪುಷ್ಪದಂತೆ ಸುಧನ್ವನ ಮುಖ ಕಾಂತಿಯು ಶೋಭಿಸಿತು ||೩೭|| ಸಮಸ್ತ ಜನವೂ ಸುಧನ್ವನು ಈ ರೀತಿಯಾಗಿ ಆನಂದದಿಂದರುತಿರಲು ಕಂಡು ಬೆರಗಾಗಿ ಪುಂಡರೀಕಾಕ್ಷನಾದ ಶ್ರೀ ಕೃಷ್ಣನನ್ನು ಧ್ಯಾನಿಸಿದರು. ಆಗ ಲಿಖಿತನು ಕೋಪಗೊಂಡು ಈ ಸುಧ್ವನು ಅಗ್ನಿಸ್ತಂಭ ವಿದ್ಯೆಯನ್ನು ಬಲ್ಲವನಾಗಿರುವನೆಂದು ಎಳನೀರುಗಳನ್ನು ತರಿಸಿ, ಅದನ್ನು ಒಡಯಿಸಿ, ಅದರ ತಿಳಿ ನೀರನ್ನು ಆ ತೈಲಕಟಾಹದಲ್ಲಿ ಸುರಿಸಲು ಜ್ವಾಲೆಯು ಅಂತರಿಕ್ಷದವರೆಗೂ ವ್ಯಾಪಿಸಿತು. ಆಗ ಲಿಖಿತನು ಸುಧನ್ವನ ಸ್ಥಿತಿಯನ್ನು ನೋಡಲು ಬಾಗಲಾಗಿ, ಆ ಲಿಖಿತನ ಗಡ್ಡ ಮೀಸೆಗಳೆಲ್ಲಾ ಸೀದು ಹೋದವು. ಈರೀತಿ ಜ್ವಾಲೆಯು ಅತ್ಯದ್ಭುತವಾಗಿದ್ದರೂ ಸುಧನ್ವನು ಪೂರ್ವದಂತೆಯೇ ಆನಂದವಾಗಿರುತ್ತಿದ್ದನು ||೩೮|| ಆಗ ಸುಧನ್ವನು ಆ ಕಟಾಹದಲ್ಲಿ ನಿಶ್ಚಲನಾಗಿ ವಿಷ್ಣುನಾಮಂಗಳನ್ನು ಸ್ಮರಿಸುತ್ತ ಅತಿ ಸುಖದಿಂದಿರುತಿರಲು ಲಿಖಿತನು ಅದನ್ನು ನೋಡಿದ ಬಳಿಕ ಜ್ಞಾನೋದಯವಾಯಿತು

ಡಿದ ‖ ದುಶ್ಚರಿತಕಾವುದಂನಿಷ್ಕೃತಿಗಳಿಲ್ಲೆಂಬ | ನಿಶ್ಚಯದೊಳಾಗಮರಣಾಂತವೇತನಗೆಪ್ರಾ | ಯಶ್ಚಿತ್ತಮೆಂದಾಕಟಾಹದೊ ಳ್ಕುದಿವೆಣ್ಣೆಯೊಳ್ಬಿದ್ದನಾಲಿಖಿತನು ‖೩೯‖ ಆತಪ್ತತೈಲದಕಟಾಹದೆಡೆಲಿಖಿತಂಗೆ | ಶೀತಳಸ್ಥಳಮಾದುದಾಸುಧನ್ವನಸಂಗಮೇ ತರತಿಶಯಮೊ | ಹರಿಭಕ್ತರಂಸಾರ್ದಂಗೆತಾಪಮಿರ್ದಪುದೆಬಳಿಕ ‖ ಆತಗಳ್ಕುದಿವೆಣ್ಣೆಯೊಳ್ಸುಖದೊಳಿರೆಹಂಸ | ಕೇತು ವಿಸ್ಮಿತನಾಗಿಮಂತ್ರಿಗಳೊಡನೆಬಂದು | ಪ್ರೀತಿಯಿಂದವರೀರ್ವರಂತೆಗೆದುತಕ್ಕೈಸಿದಂಸುತಪುರೋಹಿತರನು ‖ ೪೦ ‖ ಪನ್ನೀರ ಮಿಂದುದಿವ್ಯಾಂಬರವನುಟ್ಟುಬಾ | ವನ್ನದಿಗುರಂಗೈದುಕರ್ಮಲರ್ಗಳಂಸೂಡಿ | ಸನ್ನುತಸುಯಕ್ಷಕರ್ದಮವನನುಕರಿಸಿತಿಲ

---

ಅ‖ ವಿ‖ ಯುಕ್ತ+ಅಯುಕ್ತ=ಯುಕ್ತಾಯುಕ್ತ, ಸವರ್ಣ ದೀರ್ಗ. ಸಂ. ವಿಷ್ಣುವಿನ ನಾಮ=ವಿಷ್ಣುನಾಮ, ಷ. ತ. ಅದು ಕಟಾಹ ಗಮಕ ಸ. ‖೩೯‖

ಟೀ‖ ಆ ತಪ್ತತೈಲದ- ಆ ಚನ್ನಾಗಿ ಕಾದಿರುವ ತೈಲವುಳ್ಳ (ಎಣ್ಣೆಯುಳ್ಳ) ಕಟಾಹದೆಡೆ_ಕೊಪ್ಪರಿಗೆಯ ಸ್ಥಳವು. ಲಿಖಿತಂಗೆ_ಲಿಖಿತ ಮುನಿಗೆ, ಶೀತಳ ಸ್ಥಳಂ-ಶೈತ್ಯದಿಂದಿರುವ ಸ್ಥಳವು, ಆದುದು-ಉಂಟಾಯಿತು, ಆ ಸುಧನ್ವನ_ಆ ವಿಷ್ಣುಭಕ್ತ ನಾದ ಸುಧನ್ವನ, ಸಂಗಂ_ಸಹವಾಸವು, ಏತರ_ಎಂತಹ, ಅತಿಶಯಮೋ-ಅಚ್ಚರಿಯಾದುದೊ, ಹರಿಭಕ್ತರಂ_ವಿಷ್ಣುಕಿಂಕರ ರನ್ನು, ಸಾರ್ದಂಗೆ_ಸೇರಿದವನಿಗೆ, ತಾಪಂ-ಬೆಂಕಿಯ ತಾಪವು, ಇರ್ದಪುದೆ_ ಇರುತ್ತದೆಯೆ (ವಿಷ್ಣು ಭಕ್ತರ ಸಹವಾಸಿಗಳಿಗೆ ಯಾವ ಬಗೆಯಾದ ತೊಂದರೆಯೂ ಇರುವದಿಲ್ಲ) ಬಳಿಕ_ಅನಂತರದಲ್ಲಿ, ಆತಗಳು-ಆ ಸುಧನ್ವ ಲಿಖಿತರು, ಕುದಿವೆಣ್ಣೆಯೊಳ್- ಕುದಿಯುತ್ತಿರುವ ತೈಲದಲ್ಲಿ, ಸುಖದೊಳು_ಸೌಖ್ಯವಾಗಿ, ಇರೆ_ಇರುತ್ತಿರಲಾಗಿ, ಹಂಸಕೇತು_ಮರಾಳಧ್ವಜನು, ವಿಸ್ಮಿತನಾಗಿ- ಆಶ್ಚರ್ಯಯುತನಾಗಿ, ಮಂತ್ರಿಗಳೊಡನೆ_ಅಮಾತ್ಯರೊಂದಿಗೆ, ಬಂದು_ಬಂದವನಾಗಿ, ಪ್ರೀತಿಯಿಂದ_ಸಂತೋಷದಿಂದ, ಇವ ರೀರ್ವರಂ-ಆ ಸುಧನ್ವ ಮತ್ತು ಲಿಖಿತರನ್ನು, ತೆಗೆದು_ಆ ತೈಲದ ಕೊಪ್ಪರಿಗೆಯಿಂದೀಚೆಗೆ ತೆಗೆಯಿಸಿ, ಸುತ_ಮಗನಾದ ಸುಧನ್ವ ನನ್ನು, ಪುರೋಹಿತರಾದ_ಲಿಖಿತಮುನಿಗಳನ್ನು, ತಕ್ಕೈಸಿದಂ_ಪ್ರೀತಿಯಿಂದ ಆಲಿಂಗನೆಯಂ ಗೈದನು ‖

ಅ‖ ವಿ‖ ಸುತನೂ+ಪುರೋಹಿತನೂ=ಸುತಪುರೋಹಿತರು (ದ್ವಂ. ಸ.) ಹಂಸವು, ಕೇತುವಾಗುಳ್ಳವನು_ಹಂಸಕೇತು (ಬಹು. ಸ.) ‖೪೦‖

ಟೀ‖ ಅಂದು_ಆ ಕಾಲದಲ್ಲಿ, (ಸುಧನ್ವನನ್ನು ಎಣ್ಣೆಗೊಪ್ಪರಿಗೆಯಿಂದ ತೆಗೆಯಿಸಿದಾಗ) ಸುಧನ್ವಂ_ ಸುಧನ್ವನು, ಪನ್ನೀರ_ಸುವಾಸನೆಯಾದ ಶೈತ್ಯೋದಕದಲ್ಲಿ, ಮಿಂದು-ಜಳಕವನ್ನು ಮಾಡಿ, ದಿವ್ಯ-ಸುಂದರವಾದ, ಅಂಬರಮಂ_ವಸ್ತ್ರವನ್ನು, ಉಟ್ಟು_ಧರಿಸಿಕ್ಕೊಂಡು, ಬಾವನ್ನ_ಶ್ರೀಗಂಧದಿಂದ ಮಾಡಿದ್ದ, ದಿಗುರಂ-ಲೇಪಿಸೋಣವನ್ನು, ಗೈದು-ಮಾಡಿಕ್ಕೊಂಡು, ಕಮ್ಮ ಲರ್ಗಳಂ_ಸುವಾಸನೆಯುಕ್ತಮಾದ ಕುಸುಮಗಳನ್ನು, ಸೂಡಿ-ಧರಿಸಿಕ್ಕೊಂಡು, (ಮುಡಿಯಲ್ಲಿ ಸೇರಿಸಿ), ಸನ್ನುತ-ಸ್ತೋತ್ರಾರ್ಹ ವಾದ, ಯಕ್ಷಕರ್ದಮವಂ_ಸುಗಂಧ ದ್ರವ್ಯಗಳಿಂದ ಮಾಡಿದ ಸುಗಂಧವನ್ನು, ಅನುಕರಿಸಿ-ಲೇಪಿಸಿಕೊಂಡು ಅಥವಾ ಉಪಯೋ ಗಿಸಿಕೊಂಡು, ಹಣೆಗೆ_ಫಣೆಗೆ, ಕತ್ತುರಿ-ಕಸ್ತೂರಿಯಿಂದ ಗೈದ, ತಿಲಕವಂ_ಊರ್ಧ್ವನಾಮವನ್ನು, (ಪುಂಡ್ರವನ್ನು) ಇಟ್ಟು- ಇಟ್ಟುಕೊಂಡು, ರತ್ನದ_ರತ್ನಖಚಿತವಾದ, ಒಡವುಗಳ_ಒಡವೆಗಳನ್ನು, (ಆಭರಣಗಳನ್ನು) ಅನುಕರಿಸಿ_ಧರಿಸಿಕ್ಕೊಂಡು, ವೀಳ ಯಂಗೊಂಡು_ಅಡಿಕೆಲೆಯನ್ನು ತೆಗೆದುಕ್ಕೊಂಡು, ತನ್ನಂ_ತನ್ನನ್ನು, ಉಳುಹಿದ_ಪ್ರಾಣಮಂ ಸಲಹಿದವನಾದ, ದೇವ_ದೇವತೆಗಳ, ಪುರ_ಪಟ್ಟಣವೆ, ನಿಲಯ_ವಾಸಸ್ಥಳವಾಗುಳ್ಳ, ಲಕ್ಷ್ಮೀಪತಿಯನು_ಲಕ್ಷ್ಮೀವಲ್ಲಭನಾದ ವಿಷ್ಣುವನ್ನು, ಇನ್ನು_ಇನ್ನುಮುಂದೆ, ಕಂಡಪೆಂ_ಕಾಣುವೆನು, ಎಂಬ-ಎನ್ನುವ, ಹರ್ಷದಿಂ_ಆನಂದದಿಂದ, ಕಳೆಯೇರಿ_ಕಾಂತಿಯುತನಾಗಿ, ಮೆರದಂ-ಶೋಭಿಸಿದನು. ‖

---

ಅಜ್ಞಾನೋದಯದಿಂದ ಬಹುವಾಗಿ ವ್ಯಥೆಪಟ್ಟು, ಹರಿಭಕ್ತನಿಗೆ ಮಾಡಿದ ದ್ರೋಹಕ್ಕೆ ಮತ್ತೆ ಯಾವ ಪ್ರಾಯಶ್ಚಿತ್ತವೂ ಇಲ್ಲೆಂದು (ನಿಷ್ಕೃತಿಗಳು) ಭಾವಿಸಿಕೊಂಡು ಈ ವಿಷ್ಣು ಭಕ್ತನಿಗೆ ಮಾಡಿದ ದ್ರೋಹಕ್ಕೆ (ಮಾಡಬಾರದ್ದು ಮಾಡಿದರೆ ಮರ ಣವೇ ಸಾಕ್ಷಿಯು) ಮರಣವೇ ಸರಿಯಾದ ನಿಷ್ಕೃತಿಯೆಂದು ತಿಳಿದು ಥಳಥಳನೆ ಕುದಿಯುತ್ತಲಿದ್ದ ಆ ತೈಲ ಕಟಾಹದಲ್ಲಿ ಬಿದ್ದನು ‖೩೯‖ ಆ ಕಾದು ಕುದಿಯುತ್ತಲಿದ್ದ ಕೊಪ್ಪರಿಗೆಯ ತೈಲವು ಆ ಲಿಖಿತನಿಗೆ ಶೀತಳವಾದ ಸ್ಥಳವಾಯಿತು. ಆ ಸುಧ ನ್ವನ ಸಹವಾಸವು ಇನ್ನೆಂತಹ ಅತಿಶಯವಾದುದೋ. ಹರಿಭಕ್ತರ ಸಹವಾಸಿಗಳಿಗೆ ಎಂದಿಗೂ ಆಧ್ಯಾತ್ಮಿಕ, ಆಧಿದೈವಿಕ, ಅಧಿಭೌತಿಕಗಳೆಂಬ ತಾಪತ್ರಯಗಳಾವುವೂ ಒದಗಲಾರವೆಂದು ಸರ್ವರಿಗೂ ಗೋಚರವಾಯಿತು. ಆ ಕಟಾಹದಲ್ಲಿ ಸುಖವಾ ಗಿದ್ದ ಸುಧನ್ವಲಿಖಿತರನ್ನು ಹಂಸಧ್ವಜನು ಕಂಡು ವಿಸ್ಮಿತನಾಗಿ, ಅವರೀರ್ವರಂ ಕೊಪ್ಪರಿಗೆಯಿಂದೀಚೆಗೆ ತೆಗೆಯಿಸಿ, ಸುತ ಪುರೋಹಿತರನ್ನು ಅತ್ಯಧಿಕವಾಗಿ ಆದರಿಸಿದವನಾದನು ‖೪೦‖ ಬಳಿಕ ಸುಧನ್ವನು ಎಣ್ಣೆಗೊಪ್ಪರಿಗೆಯಿಂದ ತೆಗೆಯಿಸಿದ ನಂತರ ದಲ್ಲಿ ಪನ್ನೀರಿನಲ್ಲಿ ಸ್ನಾನವನ್ನು ಮಾಡಿ ದಿವ್ಯವಾದ ಪೀತಾಂಬರವನ್ನುಟ್ಟು ಶ್ರೀಗಂಧ, ಪುನಗು, ಜವಾಜಿಗಳಿಂದ ಮಾಡಿದ ಸುವಾ

ಕವಿಟ್ಟುಹಣೆಗೆ || ರನ್ನದೊಡವುಗಳನನುಕರಿಸಿವೀಳೆಯಗೊಂಡು | ತನ್ನನುಳುಹಿದದೇವಪುರದಲಕ್ಷ್ಮೀಪತಿಯ | ನಿನ್ನುಕಂಡಪೆನೆಂಬಹರುಷದಿಂಕಳೆಯೇರಿಮೆರೆದಂಸುಧನ್ವನಂದು ||೪೧||

ಸಂಧಿ ೧೧ ಕ್ಕೆ ಪದ್ಯ ೫೬೬ ಕ್ಕಂ ಮಂಗಳಮಸ್ತು.

---

ಅ|| ವಿ|| ಲಕ್ಷ್ಮಿಯಪತಿ=ಲಕ್ಷ್ಮೀಪತಿ (ಷ. ತ.) ಪಚ್ಚನೆಯ, ನೀರ್= ಪನ್ನೀರ್, (ವಿ. ಪೂ. ಕ.) ಅಂಬರ–ವಸ್ತ್ರ ಆಕಾಶ, ಕಮ್ಮಿತ್ತು-ಅಲರ್, ಕಮ್ಮಲರ್, (ವಿ. ಪೂ. ಕ.) ಕತ್ತುರಿ (ದ್ಭ.) ಕಸ್ತೂರಿ (ತ್ಸ) ||೪೧||

ಹನ್ನೊಂದನೆಯ ಸಂಧಿಯು ಸಂಪೂರ್ಣವಾದುದು.

---

ಸನೆಯ ದ್ರವ್ಯವನ್ನು ಶರೀರಕ್ಕೆ ಲೇಪಿಸಿಕೊಂಡು, ಕಸ್ತೂರಿ, ಕುಂಕುಮಕೇಸರೀಯುತವಾಗಿ ಮಾಡಿದ ತಿಲಕವನ್ನು ಹಣೆಯಲ್ಲಿ ಧರಿಸಿದವನಾಗಿ, ನವರತ್ನಗಳಿಂದ ಕೆತ್ತಲ್ಪಟ್ಟ ಆಭರಣಗಳನ್ನು ಧರಿಸಿಕೊಂಡು, ತಾಂಬೂಲಾದಿಯಾಗಿ ಪರಿಗ್ರಹಿಸಿ, ಇನ್ನು ದೇವಪುರದೊಡೆಯನಾದ ಶ್ರೀ ಲಕ್ಷ್ಮೀಪತಿಯನ್ನು ಕಾಣುವೆನೆಂಬದಾಗಿ, ಹೆಚ್ಚಾದ ಕಾಂತಿಯತಿಶಯದಿಂದ ಪ್ರಕಾಶಿಸುತ್ತಲಿದ್ದನು. ||೪೧||

ಟೀಕಾತಾತ್ಪರ್ಯ ಸಹಿತವಾದ ಜೈಮಿನಿಭಾರತದಲ್ಲಿ ಹನ್ನೊಂದನೆಯ ಸಂಧಿಯು
ಸಂಪೂರ್ಣವಾದುದು.



## ಹನ್ನೆರಡನೆಯ ಸಂಧಿ.

ಸೂಚನೆ ‖ ಅಪರಿಮಿತ ಸೈನ್ಯಸನ್ನಾಹದಿಂದರ್ಜುನನ | ಚಪಲಹಯಮುಂ ಮರಾಳಧ್ವಜಂ ಪಿಡಿಯಲ್ಕೆ | ತಪನಸು
ತನಂದನ ಸುಧನ್ವರ್ಗೆಕಾಳಗಂ ಪೂಣ್ದುದಾಡಂಬರದೊಳು ‖

ಇನ್ನು ಮೇಲಣ ಕಥೆಯ ನಾಲಿಸೆಲೆ ಭರತಕುಲ | ರನ್ನ ಜನಮೇಜಯ ಸುಧನ್ವಂ ಕಟಾಹದುರಿ | ಯಂನರ
ಸಿಂಹಜಪದಿಂ ಜಯಿಸಿ ಲಿಖಿತನೆಸಗಿದ ವೈಷ್ಣವದ್ರೋಹಕೆ ‖ ತನ್ನರಿವನುರೆ ಜರೆದುಕೊಂಡ ಸುದೊರೆವೆನೆಂದು | ನನ್ನಿ
ಯಿಂದಾ ತೈಲ ದೋಳ್ಬೀಳಲವರ್ಗಳಂ | ಮನ್ನಿಸಿ ನೃಪಂತೆಗೆಸಲಾ ಪುರೋಹಿತ ನವನಿಪತಿಗೆ ಬಳಿಕಿಂತೆಂದನು ‖ ೧ ‖
ಭೂನಾಥ ಕೇಳ್ನಿನ್ನಸುತನ ದೆಸೆಯಿಂದ | ನಮ್ಮಾನೆಲಂ ಪ್ರಜೆನಾಡು ಬೀಡೂರು ಪರಿವಾರ | ಮಾನೆ ಕುದುರೆಗಳ

ಶ್ರೀರಸ್ತು.

ಹನ್ನೆರಡನೆಯ ಸಂಧಿ ಪ್ರಾರಂಭವು.

ಸೂಚನೆ ‖ ಅಪರಿಮಿತ-ಬಹು ಹೆಚ್ಚಾದ, ಸೈನ್ಯ-ಸೈನ್ಯದ, ಸನ್ನಾಹದಿಂದ_ಕಾರ್ಯದಿಂದ, ಮರಾಳಧ್ವಜಂ_ಚಂಪಕಾವತಿಯ ರಾಜನಾದ ಹಂಸಧ್ವಜನು ಅರ್ಜುನನ_ಪಾರ್ಥನ, ಚಪಲ_ಚಂಚಲವಾದ, ಹಯಮಂ_ಅಶ್ವನನ್ನು, ಪಿಡಿಯಲ್ಕೆ-ಹಿಡಿದುಕಟ್ಟಲು, ತಪನಸುತನಂದನ_ವೃಷಧ್ವಜ ಸುಧನ್ವರ್ಗೆ-ಹಂಸಧ್ವಜನ ಮಗನಾದ ಸುಧನ್ವ ಇವರಿಗೆ, ಆಡಂಬರದೊಳು-ಅಟ್ಟಹಾಸದಿಂದ, ಕಾಳಗಂ-ಜಗಳವು, ಪೂಣ್ದುದು_ಉಪಕ್ರಮವಾಯಿತು ‖

ಅ‖ ವಿ‖ ಮರಾಳ-ಹಂಸಪಕ್ಷಿಯು, ಧ್ವಜಂ-ಕೇತುವಿನಲ್ಲುಳ್ಳವನು, ಮರಾಳಧ್ವಜನು ಬಹು. ಸ. ತಪನನ+ಸುತ=ತಪನ ಸುತ, ಷ. ತ. (ಪರಿಮಿತಿ-ಇಲ್ಲದ್ದು) ಅಪರಿಮಿತ ‖

ಟೀ‖ ಭರತ-ಭರತಮಹಾರಾಯನ, ಕುಲ_ವಂಶದಲ್ಲಿ, ರನ್ನ-ರತ್ನಪ್ರಾಯನಾದ, ಜನಮೇಜಯ_ಜನಮೇಜಯನೇ! ಇನ್ನುಮೇಲಣ_ಇಲ್ಲಿಂದ ಮುಂದೆ ಹೇಳುವ, ಕಥೆಯನು-ನಡವಳಿಕೆಯನ್ನು, ಆಲಿಸು-ಕೇಳುವನಾಗು, ಕಟಾಹದ_ಕಾದ ಎಣ್ಣೆ ಕೊಪ್ಪರಿಗೆಯ, ಉರಿಯಂ-ಸುಡುವಿಕೆಯನ್ನು, ನಾರಸಿಂಹಜಪದಿಂ-ನೃಸಿಂಹ ಮಂತ್ರೋಚ್ಚಾರಣೆಯಿಂದ, ಜಯಿಸಿ_ಗೆಲುವನ್ನು ಹೊಂದಿ, ಲಿಖಿತನು-ಲಿಖಿತ ಮುನಿಯು, ಎಸಗಿದ-ಗೈದ, ವೈಷ್ಣವದ್ರೋಹಕೆ-ವಿಷ್ಣುಭಕ್ತಗೆ ಮಾಡಿದ ಪಾಪಕ್ಕೆ, ತನ್ನಅರಿವನ_ತನ್ನಯ ತಿಳಿವಳಿಕೆಯನ್ನು, ಉರೆ_ಬಹುವಾಗಿ, ಜರದುಕೊಂಡು-ದೂಷಿಸಿಕೊಂಡು, ಅಸುದೊರೆವೆನೆಂದು-ಪ್ರಾಣತ್ಯಾಗ ಮಾಡುತ್ತೇನೆಂಬದಾಗಿ, ನನ್ನಿಯಿಂ_ನಿಜದಿಂದ, ಆ ತೈಲದೋಳ್-ಆ ಕಾದ ಎಣ್ಣೆಯಲ್ಲಿ, ಬೀಳಲು_ಬೀಳಲಾಗಿ, ಹಂಸಧ್ವಜಂ-ಹಂಸಕೇತುವು, ಅವರ್ಗಳಂ_ಸುಧನ್ವ ಲಿಖಿತರೀರ್ವರನ್ನು, ಮನ್ನಿಸಿ_ಮರ್ಯಾದೆಮಾಡಿ, ತೆಗೆಸಲು_ಕೊಪ್ಪರಿಗೆಯಿಂದೀಚೆಗೆ ತೆಗೆಯಿಸಲಾಗಿ, ಆ ಪುರೋಹಿತನು_ಪುರೋಹಿತನಾದ ಲಿಖಿತನು, ಅವನಿಪತಿಗೆ_ಭೂಪತಿಗೆ, ಬಳಿಕ_ತರುವಾಯ, ಇಂತೆಂದನು-ಮುಂದಿನಂತೆ ಹೇಳಿದನು ‖

ಅ‖ ವಿ‖ ಭರತ_ರಾಮನನುಜ, ದುಷ್ಯಂತರಾಯನ ಮಗ, (ರನ್ನ-ದ್ಭ), ರತ್ನ (ತ್ಸ) ನೃ-ಮನುಷ್ಯರನ್ನು, ಪ_ಪಾಲಿಸತಕ್ಕವನು_ರಾಜ. ಪುರ_ಪಟ್ಟಣಿಗರಿಗೆ_ಹಿತ_ಮೇಲು ಕೋರುವವನು ‖ ೧ ‖

ಟೀ‖ ಭೂನಾಥ-ಎಲೈ ಜನಮೇಜಯರಾಯನೆ! ಕೇಳು_ಆಲಿಸು, ನಿನ್ನ ಸುತನ ದೆಶೆಯಿಂ ನಿನ್ನಯ ಪುತ್ರನಾದ ಸುಧನ್ವನ ಸಹವಾಸದಿಂದ, ನಮ್ಮ ಈ ನೆಲಂ_ನಮ್ಮಾ ಪೃಥಿವಿಯು, ಪ್ರಜೆ_ಜನವು, ನಾಡು_ರಾಜ್ಯವು, ಬೀಡು_ಬೀಡು ಜನರು (ಅನಾಥರು), ಪರಿವಾರಂ-ರಾಜಕಾರ್ಯೋಪಯೋಗ್ಯರು, ಆನೇಕುದುರೆಗಳು-ಗಜಾಶ್ವಗಳು, ಇದ್ದ-ಇರುವ, ಪಶು_ಗೋವುಗಳು, ಪಕ್ಷಿ-ಹಕ್ಕಿಗಳು, ಮೃಗ_ಜಿಂಕೆ ಮೊದಲಾದುವು, ಕೀಟ_ಹುಳುವಿನಂತಿಹ ಪ್ರಾಣಿಗಳು, ತರು_ವೃಕ್ಷಾದಿಗಳು, ಗುಲ್ಮ-ಹೋದ

ಹನ್ನೆರಡನೆಯ ಸಂಧಿ ಪ್ರಾರಂಭವು.

ತಾತ್ಪರ್ಯ.—ಎಲೈ ಜನಮೇಜಯ ಕ್ಷಿತೀಶನೇ! ಇನ್ನು ಮುಂದೆ ನಡೆದ ವರ್ತಮಾನವನ್ನು ವಿವರಿಸೆನು ಕೇಳು ಆ ಸುಧನ್ವನು ಮರಳಿದ ತೈಲದ ಜ್ವಾಲೆಯ ತಾಪವಂ ನೃಸಿಂಹ ಮಂತ್ರೋಚ್ಚಾರಣೆಯ ದೆಶೆಯಿಂ ಪರಿಹರಿಸಿ, ಯಾವ ತೊಂದರೆಯೂ ಇಲ್ಲದೆ ಸುಖಿಯಾಗಿರುತಿರಲು, ಅನಂತರದಲ್ಲಿ ಲಿಖಿತನು, ತಾನು ವಿಷ್ಣುಭಕ್ತನಾದ ಸುಧನ್ವನಿಗೆ ಮಾಡಿದ ದ್ರೋಹಕ್ಕಾಗಿ, ತಾನೂ ಕಾದೆಣ್ಣೆಯ ಕೊಪ್ಪರಿಗೆಯೋಳ್ಬೀಳಲಾಗಿ, ಅವರೀರ್ವರೂ ಯಾವ ತೊಂದರೆಯೂ, ಇಲ್ಲದೆ ಸುಖವಾಗಿರುವದನ್ನು ಹಂಸಧ್ವಜನು ಕಂಡು, ಅವರನ್ನು ಕೊಪ್ಪರಿಗೆಯಿಂ ತೆಗೆಯಿಸಿ, ಸತ್ಕರಿಸಿದನು. ತರುವಾಯ ಲಿಖಿತನು ಹಂಸಧ್ವಜನಿಗೆ ಹೇಳಿದ್ದೇನಂದರೆ. ‖ ೧ ‖ ಎಲೈ ರಾಜನೇ ಕೇಳು ನಿನ್ನ ಮಗನ ಸತ್ಸಹವಾಸದಿಂದ ನಮ್ಮಾ ರಾಜ್ಯ, ಪ್ರಜೆ, ಪರಿವಾರ,

ದ್ಪಪಶುಪಕ್ಷಿಮೃಗಕೀಟತರುಗುಲ್ಮಲತೆಗಳೆಲ್ಲ ॥ ಈನಿರುದ್ಧಕೆಧನ್ಯರಾದರೇಂಕೃತರೊತಾಂ । ಭಾನುರಶ್ಮಿಗೆಕಣ್ದೆರೆಯದಗೂಗೆ ಯವೊಲ । ಜ್ಞಾನಿದ್ವಿಜಾಧಮಂತಾನಾದೆನೀದ್ರೋಹಕೆಂದು ಲಿಖಿತಂನುಡಿದನು ॥೨॥ ಬಳಿಕಾತನಂಸುಮ್ಮನಿರಿಸಿನುಡಿದಂಶಂಖ । ನೆಲೆಮಹೀಪಾಲಹರಿಶರಣರ್ಗೆಡರ್ಗಳೆ । ತ್ತಲದು ಬೆಳದಿಂಗಳ್ಗೆ ಬೆಮರುಂಟೆ ಬೇಸಿಗೆಯೊಳವನನಿಜಮಂ ಕಾಣದೆ ॥ ಬಳಸಿ ದೆವುಮೂರ್ಖತೆಯನರಿಮರುಳರಾದೆವಿ । ನ್ನುಳಿದಮಾತುಗಳೇಕೆಸಾಕೀಸುಧನ್ವನಂ । ಕಳುಹುಕಾಳಗಕೆನಲ್ಭೂಪನವನಂತೆಗೆದು ಬಿಗಿಯಪ್ಪಿದಂಮುದದೊಳು ॥ ೩ ॥ ತಂದೆಯಚರಣಕೆರಗಿಶಂಖಲಿಖಿತರಪದಕೆ । ವಂದಿಸಿಪರಕೆಗೊಂಡುಸಾರಥಿಯನಾದರಿಸಿ ।

---

ರುಗಳು, ಲತೆಗಳು_ಬಳ್ಳಿ ಮೊದಲಾದವು, ಎಲ್ಲಾ_ಸಮಸ್ತವೂ, ಈ ನಿರುದ್ಧಕೆ-ಇಂದಿನ ದಿವಸಕ್ಕೆ, ಧನ್ಯರು_ಪಾಪರಹಿತರು (ಕೃತಾರ್ಥರು), ಆದರು_ಆಗಿರುವರು, ಏಂಕೃತರೋ-ಎಷ್ಟು ಪುಣ್ಯ ಮಾಡಿದವರೊ, ತಾಂ_ನಾನಾದರೊ, ಭಾನುರಶ್ಮಿಗೆ_ಸೂರ್ಯನಕಾಂತಿಗೆ, ಕಂದೆರೆಯದ_ಕಣ್ಬಿಡದಿರುವ, ಗೂಗೆಯವೋಲ್_ಉಲೂಕದಹಾಗೆ, ಅಜ್ಞಾನಿ-ದಡ್ಡನು, ದ್ವಿಜಾಧಮಂ-ಬ್ರಾಹ್ಮಣರಲ್ಲಿ ನೀಚನು, ತಾನು-ನಾನು, ಈ ದ್ರೋಹಕೆ-ವಂಚನೆಗೆ, ಆದೆನು_ಗುರಿಯಾದೆನು, ಎಂದು-ಎಂಬದಾಗಿ, ಲಿಖಿತಂನುಡಿದನು-ಲಿಖಿತ ಮುನಿಯು ಹೇಳಿದನು ॥

ಅ॥ ವಿ॥ ಗೂಗೆ (ದ್ಭ), ಘೂಕ (ತ್ಸ) ಪಶು ಪಕ್ಷಿ........ಲತೆಗಳು, ಬಹು. ದ್ವ. (ಇದು+ದ್ರೋಹ) ಈ ದ್ರೊಹ, ಗ. ಸ (ಭಾಃ-ಕಾಂತಿ) ಅದುಳ್ಳವನು, ಭಾನು-(ದ್ವಿಜರಲ್ಲಿ+ಅಧಮ) ದ್ವಿಜಾಧಮ, ಸ. ತ ॥೨॥

ಟೀ॥ ಬಳಿಕ_ಅನಂತರದಲ್ಲಿ, ಆತನ-ಆ ಲಿಖಿತಮುನಿಯನ್ನು, ಸುಮ್ಮನೆ ಇರಿಸಿ-ಮಾತನಾಡದಂತೆ ಹೇಳಿ (ಸಮಾಧಾನಮಾಡಿ), ಶಂಖನು_ಶಂಖನೆಂಬ ರುಷಿಯು, ನುಡಿದಂ-ಹೇಳಿದನು, ಎಲೆ ಮಹೀಪಾಲ_ಎಲೈ ಭೂಮಿಪಾಲಕನೆ, ಹರಿಶರಣರ್ಗೆ_ವಿಷ್ಣು ಸೇವಕರಿಗೆ, ಎಡರ್ಗಳು-ವಿಘ್ನಗಳು, ಎತ್ತಣದು_ಎಲ್ಲಿಂದ ಬಂದೀತು, (ಬರುವದಿಲ್ಲ) ಬೇಸಿಗೆಯೊಳು_ಬಿಸಿಲುಕಾಲದಲ್ಲಿ, ಬೆಳದಿಂಗಳಿಗೆ_ಚಂದ್ರಿಕೆಗೆ, ಬೆಮರು_ಸ್ವೇದವು ಉಂಟಾದೀತೆ ! (ಯಾವಾಗ್ಲೂ ಬೆಳದಿಂಗಳಿಗೆ_ಬೆಮರು ಹೇಗೆ ಉಂಟಾಗುವದಿಲ್ಲವೋ ಹಾಗೆಯೆ ವಿಷ್ಣು ಭಕ್ತರಿಗೆ ವಿಪತ್ತುಗಳುಂಟಾಗುವದಿಲ್ಲವೆಂಬ ಭಾವವು) ಅವನ-ಆ ಸುಧನ್ವನ, ನಿಜಮಂ-ವಿಷ್ಣುವಿನಲ್ಲಿರುವ ನಿಶ್ಚಲವಾದ ನಂಬಿಕೆಯನ್ನು, ಕಾಣದೆ_ನೋಡದೆ, ಮೂರ್ಖತೆಯನು_ಹಠವನ್ನು, ಬಳಸಿದೆವು-ಆಚರಿಸಿದೆವು, ಅರಿ-(ಈ ವಿಷಯವನ್ನು) ತಿಳಿ, ಮರುಳರು-ಬುದ್ಧಿಯಿಲ್ಲದವರು, ಆದೆವು_ಆಗಿರುವೆವು, ಇನ್ನು ಉಳಿದ ಮಾತುಗಳು ಏಕೆ_ಇನ್ನು ಮಿಕ್ಕ ವಿಷಯವನ್ನೇಕೆ ಹೇಳಬೇಕು. ಸಾಕು-ಬಿಡು, ಈ ಸುಧನ್ವನಂ_ಈ ಸುಧನ್ವನನ್ನು, ಕಾಳಗಕೆ-ಯುದ್ಧಮಾಡಲಿಕ್ಕೆ, ಕಳುಹು_ಕಳಿಹಿಸಿಕೊಡು, ಎನಲು_ಎಂದು ಹೇಳಲು, ಭೂಪನು_ರಾಜನು, ಅವನಂ-ಆ ಶಂಖಮಹರ್ಷಿಯನ್ನು, ತೆಗೆದು_ಹಿಡಿದು, ಮುದದೊಳು-ಆನಂದದಿಂದ, ಬಿಗಿಯಪ್ಪಿದಂ-ತಬ್ಬಿಕೊಂಡನು ॥

ಅ॥ ವಿ॥ (ಶಂಖ-ಸಮುದ್ರಶಂಖವು, ಶಂಖಚೂಡ, ಶಂಖಮುಷಿ) ಬೇಸಿಗೆ (ದ್ಭ) ವೈಶಾಖ (ತ್ಸ) ಅರಿ_ತಿಳಿ, ಶತ್ರು ಹರಿ-ವಿಷ್ಣು, ಸೂರ್ಯ, ಕುದುರೆ, ಸಿಂಹ, ಕೋತಿ, ನರಿ, ಕಪ್ಪೆ, (ಬಿಳಿದು+ತಿಂಗಳು) ಬೆಳದಿಂಗಳು, (ವಿ. ಪೂ. ಕ.) ಮೂರ್ಖನಭಾವ-ಮೂರ್ಖನ, ಮೂರ್ಖತೆ ॥೩॥

ಟೀ॥ ತಂದೆಯ-ಜನಕನಾದ ಹಂಸಧ್ವಜನ, ಚರಣಕೆ - ಅಡಿಗಳಿಗೆ, ಎರಗಿ - ನಮಸ್ಕಾರಮಾಡಿ, ಶಂಖಲಿಖಿತರ-ಶಂಖ ಮತ್ತು ಲಿಖಿತ ಈ ಇಬ್ಬರ, ಪದಕೆ_ಕಾಲುಗಳಿಗೆ, ನಮಸ್ಕರಿಸಿ_ಅಡ್ಡಬಿದ್ದು, ಪರಕೆಗೊಂಡು_ಮಂಗಳಾಶೀರ್ವಾದವಂ ಪೊಂದಿ, ಸಾರಥಿಯನು-ರಥನಡಿಸುವವನನ್ನು, ಆದರಿಸಿ-ಪ್ರೀತಿಸಿ, ಪೊಂದೇರನು- ಚಿನ್ನದ ರಥವನ್ನು. ಅಳವಡಿಸಿ_ಸಿದ್ಧಪಡಿಸಿಕೊಂಡು, ತುರಂಗಗಳಂ-ಕುದುರೆಗಳನ್ನು, ಪೂಡಿ_ಕಟ್ಟಿ, ಸಿಂಘಮಂ-ಛತ್ರದಿಂದ ಕೂಡಿದ ಕೇತನವನ್ನು, ನೀಡುಮಾಡಿ-ಮೇಲಕ್ಕೆ ಎತ್ತಿಸಿ, ಗೊಂದಣದ_ಅಟ್ಟಲೆಗಳ ಗುಂಪಿನ, ಝಲ್ಲಿಗಳ-ಝಾಲರಿಗಳ, ಕನಕ-ಚಿನ್ನದ, ಮಾಲೆಗಳ_ಹಾರಗಳ,

---

ಹಸ್ತ್ಯಶ್ವ ರಥಪದಾತಿಗಳು, ಪಶುಪಕ್ಷಿ ಮೃಗಾದಿಗಳು ಸಮಸ್ತವೂ ಕೃತಾರ್ಥವಾದವು, ನಾನಾದರೊ ಸೂರ್ಯಕಾಂತಿಗೆ ಕಣ್ಣು ಬಿಡದ ಗೂಬೆಯಂತೆ ವಿವೇಕಶೂನ್ಯನೂ, ವಿಪ್ರಾಧಮನೂ, ಆಗಿರುವೆನೆಂದು ಚಿಂತಿಸುತ್ತಿರಲು ॥ ೨ ॥ ಶಂಖಮಹರ್ಷಿಯು ಆ ಲಿಖಿತನಂ ಸಂತವಿಟ್ಟು, ಎಲೈ ಹಂಸಕೇತುವೇ ! ಹರಿಶರಣರಿಗೆಲ್ಲಿಯಾದರೂ ಕಷ್ಟಗಳುಂಟೆ ! ಬೆಳದಿಂಗಳಿಗೆಲ್ಲಿಯಾದರೂ ಬೆವರುಂಟೆ ಮರಿವುದೆ ? ನಾವು ಹರಿಭಕ್ತನ ಸತ್ಯಮಂ ಅರಿಯದೆ ಹಠವಿಡಿದು ಹುಚ್ಚರಾದೆವು, ಮತ್ತೆಯಾವದನ್ನೂ ಯೋಚಿಸದೆ ಸುಧನ್ವನಿಗೆ ಅನುಜ್ಞೆಯನ್ನಿತ್ತು ಕಾಳಗಕೆ ಕಳುಹಿಸುವನಾಗೆಂದು ಹೇಳಲಾಗಿ, ಹರ್ಷದಿಂದ ಹಂಸಧ್ವಜನು ಶಂಖನನ್ನು ಆಲಿಂಗಿಸಿಕೊಂಡು ತನ್ನ ಮಗನಾದ ಸುಧನ್ವನನ್ನು ಯುದ್ಧಕ್ಕೆ ಹೋಗುವಂತೆ ಅನುಜ್ಞೆಯಂ ಮಾಡಲು ; ॥ ೩ ॥ ಆಗ ಸುಧನ್ವನು ತಂದೆಯಡಿದಾವರೆಗೆರಗಿ, ತನ್ನ ಕುಲ ಪುರೋಹಿತರಾದ ಶಂಖ ಲಿಖಿತರ ಪಾದಾರವಿಂದಗಳಿಗೆ ನಮಸ್ಕರಿಸಿ, ಅವರಿಂದ

ಪೊಂದೇರನಳವಡಿಸಿತುರಗಂಗಳಂಪೂಡಿಸಿಂಧಮುಂನೀಡುಮಾಡಿ ‖ ಗೊಂದಣದಝಲ್ಲಿಗಳಕನಕಮಾಲೆಗಳಸ್ರು | ಕ್ಚಂದನವಿಭೂಷಣಾವಳಿಗಳಿಂಸಿಂಗರಿಸಿ | ಬಂದಡರ್ದಂಜಯರವದೊಳಾಸುಧನ್ವಂತಿರಸ್ಕೃತಕುಸುಮಧನ್ವನು ‖೪‖ ಕೇಳ್ಗುಣಮಣಿಯೆಧರಣಿಪಾಗ್ರಣಿಯೆತನ್ನಮಗ | ನೇಳ್ಗೆಯಂಕಂಡುಬ್ಬಿದಂಮರಾಳಧ್ವಜಂ | ಸೂಳ್ಗೈದವಾಗತಂಬಟಭೇರಿನಿಸ್ಸಾಳಕಹಳಾದಿವಾದ್ಯಂಗಳು ‖ ತೋಳ್ಗುಟ್ಟಿತಾರ್ದುಸುಮ್ಮಾನದಿಂಪಟುಭಟ | ರ್ಕ್ಕೋಳ್ಕೊಂಡುಕುದಿವುತಿರ್ದರುಸಾರ್ಧಯೋಜನದೊ | ಳಾಗಳ್ಚತುರಂಗರಥವಿಟ್ಟಣಿಸಿನಡೆದುದುತ್ಸಾಹದಿಂನರನಮೇಲೆ ‖ ೫ ‖ ಬೆರಬೆರಸುತೊತ್ತಿಡಿದುಮುಂದೆಭರದಿಂದನಡೆ | ವರಸರಸುಗಳಕಂಠಮಾಲೆಗಳತೋರಮು | ತ್ತೊರಸೊರಸುಮಿಗೆಪರಿದವರಸೂಸುದಂಬುಲದಚೆನ್ನೆಲದಮೇಲೊಕ್ಕಿರೆ ‖ ಪೊರೆದಸಂಧ್ಯಾರುಣದಗಗನ

---

ಸ್ರಕ್–ಪೂಸರಗಳಿಂದ, ಚಂದನ-ಶ್ರೀಗಂಧದಿಂದ, ವಿಭೂಷಣ-ಆಭರಣಗಳ, ಆವಳಿಗಳಿಂ–ಸಮೂಹಗಳಿಂದ, ಸಿಂಗರಿಸಿ-ಶೃಂಗಾರ ಮಾಡಿಕೊಂಡು, ತಿರಸ್ಕೃತ-ಹೀಯಾಳಿಸಲ್ಪಟ್ಟ, ಕುಸುಮಧನ್ವನ - ಪೂವಿಲ್ಲನಾದ ಮದನನುಳ್ಳವನಾದ, ಸುಧನ್ವನೆಂಬವನು, ಜಯರವದೊಳು–ಜಯಶಬ್ದದಿಂದ, ಬಂದು–ಬಂದು, ಅಡರ್ದ-ತೇರನ್ನು ಹತ್ತಿದನು. ‖

ಅ‖ ವಿ‖ ಕುಸುಮವೇ-ಬಿಲ್ಲಾಗುಳ್ಳವನು, ಕುಸುಮಧನ್ವನು, ಬಹು. ಸ. ಪೊನ್ನಿನ+ತೇರ್=ಪೊಂದೇರ್, ಷ. ತ. ಶಂಖನೂ+ಲಿಖಿತನೂ, ಇವರು ಶಂಖಲಿಖಿತರು, ದ್ವಿ. ದ್ವಂದ್ವ. ಸ. ಸಿಂಗರ (ದ್ಭ) ಶೃಂಗಾರ (ತ್ಸ) ‖೪‖

ಟೀ‖ ಗುಣಮಣಿಯೆ–ಸದ್ಗುಣಕ್ಕೆ ರತ್ನಪ್ರಾಯನಾದ, ಧರಣಿಪಾಗ್ರಣಿಯೆ - ರಾಜಾಗ್ರಗಣ್ಯನಾದ, ಎಲೈ ಜನಮೇಜಯರಾಯನೇ! ತನ್ನ–ತನ್ನಯ, ಮಗನ-ಪುತ್ರನಾದ ಸುಧನ್ವನ, ಏಳ್ಗೆಯಂ–ಅಭಿವೃದ್ಧಿಯನ್ನು, ಕಂಡು–ಈಕ್ಷಿಸಿ, ಮರಾಳ ಧ್ವಜಂ-ಹಂಸಪಕ್ಷಿಯೆ ಧ್ವಜದಲ್ಲಿ ಉಳ್ಳ ಹಂಸಧ್ವಜನು, ಉಬ್ಬಿದಂ–ಸಂತೋಷದಿಂದ ಹೆಚ್ಚಿದವನಾದನು, ಆಗ–ಆ ಸಮಯದಲ್ಲಿ, ತಂಬಟ–ಕನಕ ತಪ್ಪಟೆಯು, ಭೇರಿ–ದೊಡ್ಡ ನಗಾರಿಯು, ನಿಸ್ಸಾಳ–ಸಣ್ಣ ಭೇರಿಯು, ಕಹಳೆ–ಕೊಂಬಿನ ವಾದ್ಯವು, (ಇವುಗಳೇ) ಆದಿ-ಮೊದಲಾಗುಳ್ಳ, ವಾದ್ಯಗಳು–ವಾದ್ಯವಿಶೇಷಗಳು, ಸೂಳ್ಗೈದವು-ರವಗೈದವು, ತೋಳ್ಗುಟ್ಟುವ–ಬಾಹುಗಳನ್ನಪ್ಪಳಿಸುವ, ಆರ್ದು-ಧ್ವನಿಮಾಡಿ, ಸುಮ್ಮಾನದಿಂ–ಯುದ್ಧಾತುರದಿಂದಾದ ಆನಂದದಿಂದ, ಪಟು–ಬಲಾಢ್ಯರಾದ, ಭಟರು-ಶೂರರು, ಕೋಳ್ಕೊಂಡು–ಬೇಟೆಯಾಡಿಕೊಂಡು, (ಕೋಲಾಹಲ ಮಾಡಿಕೊಂಡು) ಕುದಿವುತ–ಸಿಟ್ಟಿನಿಂದ ಸುಡುತ್ತ, ಇರ್ದರು–ಇರುತ್ತಿದ್ದರು, ಸಾರ್ಧಯೋಜನದೊಳು-ಹದಿನೆಂಟು ಮೈಲು ನೆಲದ ವಿಸ್ತಾರದಲ್ಲಿ, ಚತುರಂಗ ರಥವು–(ಹಸ್ತಿ, ಅಶ್ವ, ರಥ, ಪದಾತಿ ಇವಕ್ಕೆ ಚತುರಂಗವೆಂದು ಹೆಸರು) ನಾಲ್ಕು ಬಗೆಯಾದ ಸೈನ್ಯವೂ ಮತ್ತು ತೇರು, ಇಟ್ಟಣಿಸಿ-ಗುಂಪು ಸೇರಿ, ನರನಮೇಲೆ–ಅರ್ಜುನನ ಮೇಲೆ, ಉತ್ಸಾಹದಿಂದ-ಯುದ್ಧೋತ್ಸಾಹದಿಂದ, ನಡೆದುದು–ಹೊರಟಿತು.

ಅ‖ ವಿ‖ ಗುಣ–ನಡತೆ, ಬಿಲ್ಲಿನ ಹಗ್ಗ, ಮಣಿ–ರತ್ನ, ನಮಸ್ಕಾರಮಾಡುವುದು, (ತೋಳಂ+ಕುಟ್ಟುತ) ತೋಳ್ಗುಟ್ಟುತ, ಕ್ರಿ. ಸ. ಪಟುಗಳಾದ+ಭಟರು, ವಿ. ಪೂ. ಕ. (ಅರ್ಧದಿಂದ ಸಹಿತವಾದ್ದು) ಸಾರ್ಧ, ಸಹ. ಪೂ. ಬಹು. ಚತುರಂಗ-ಹಸ್ತ್ಯಶ್ವ, ರಥಪದಾತಿ ‖೫‖

ಟೀ‖ ಬೆರಬೆರಸುತ–ಒತ್ತೊತ್ತಾಗಿ ಸೇರುತ್ತ, ಒತ್ತಿ-ತಳ್ಳಿ, ಇಡಿದು– ಗುಂಪಾಗಿ, ಮುಂದೆ– ಮುಂಭಾಗದಲ್ಲಿ, ಭರದಿಂದ–ಶೀಘ್ರವಾಗಿ, ನಡೆವ–ಹೋಗುತ್ತಿರುವ, ಅರಸರಸುಗಳ–ರಾಜಾಧಿರಾಜರ, ಕಂಠಮಾಲೆಗಳ–ಕತ್ತಿನಲ್ಲಿ ಹಾಕಿರುವ ಹಾರಗಳ, ತೋರ-ದಪ್ಪಗಳಾದ, ಮುತ್ತುಗಳು – ಮೌಕ್ತಿಕಗಳು, ಒರಸೊರಸು - ಒಂದಕ್ಕೊಂದು ತಗಲಿ ತಗಲಿ, ಪರಿದು–ಕಿತ್ತು ಹೋಗಿ, ಅವರ-ಆ ರಾಜರ, ಸೂಸು–ಸ್ರವಿಸುವ, ದಂಬುಲದ–ಅಡಿಕೆಲೆಯಿಂದಾದ, ರಸದ–ದ್ರವದ, ಚನ್ನು–ಅರುಣವು, ಒತ್ತಿರೆ-ಭೂಮಿಯಮೇಲೆ ಬಿದ್ದಿರಲು, ಪೊರದ–ಹೊರದ, ಸಂಧ್ಯಾರುಣದ–ಸಂಜೆಗೆಂಪಿನ, ಗಗನ ಮಂಡಲದೊಳು–ಅಂತರಿಕ್ಷದಲ್ಲಿ, ಅಂಕುರಿಸಿದ-ಹುಟ್ಟಿದ, ಉಡುಗಣದಂತೆ–ನಕ್ಷತ್ರ ಪುಂಜದಹಾಗೆ, ರಂಜಿಸಿತು–ಕಾಂತಿಯುಕ್ತವಾಗಿತ್ತು, ದೆಸೆದೆಸೆಗೆ–ದಿಕ್ಕು

---

ಮಂಗಳಾಶೀರ್ವಾದವಂ ಪೊಂದಿ, ತನ್ನ ಸಾರಥಿಯನ್ನು ಆದರಿಸಿ ದಿವ್ಯಗಳಾದ ರತ್ನಖಚಿತಗಳಾದ ಆಭರಣಗಳಿಂದಲಂಕರಿಸಿಕೊಂಡು, ಪರಿಮಳಯುಕ್ತವಾದ ಶ್ರೀಗಂಧವಂ ಲೇಪನಮಾಡಿಕೊಂಡು, ಸುಗಂಧದಿಂ ಯುಕ್ತಮಾದ ಪುಷ್ಪಮಾಲಿಕೆಗಳಂ ಧರಿಸಿಕೊಂಡು ಸುವರ್ಣಮಯಮಾದ ರಥವನ್ನು ಹತ್ತಿ ತಿರಸ್ಕೃತ ಮದನನೋಪಾದಿಯಲ್ಲಿ ಅರ್ಜುನನ ಮೇಲೆ ಯುದ್ಧಕ್ಕೆ ಹೊರಡಲು ‖೪‖ ಗುಣಾಢ್ಯನು ರಾಜಶ್ರೇಷ್ಠನು ಆದ ಜನಮೇಜಯರಾಯನೇ ತನ್ನ ಪುತ್ರನ ವೈಭವವನ್ನು ನೋಡಿದ ಹಂಸಧ್ವಜನು ಆನಂದದಿಂದುಬ್ಬಿದವನಾಗಲು, ಸುಧನ್ವನು ಆ ಸಮಯದಲ್ಲಿ ತಂಬಟ, ಭೇರಿ, ಕಹಳೆ, ನಿಸ್ಸಾಳಾದಿ ವಾದ್ಯಧ್ವನಿಗಳಿಂದಲೂ, ಭಟರ ಕೋಲಾಹಲರವದಿಂದಲೂ, ಕೋಪೋದ್ರೇಕವುಳ್ಳವರಾಗಿ ಅರ್ಜುನನಮೇಲೆ ಯುದ್ಧಕ್ಕೆ ಹೊರಟನು ‖೫‖ ಯುದ್ಧಕ್ಕೆ ಹೊರಟಾಗ ಜನಗಳ ಗುಂಪಿನಿಂದ ಒಬ್ಬರನ್ನೊಬ್ಬರು ಒತ್ತುತ್ತಲೂ ತಳ್ಳುತ್ತಲೂ ಇದ್ದುದರಿಂದ ಯುದ್ಧಕ್ಕೆ ನೆರದಿದ್ದ

ಮಂಡಲದೊಳಂ | ಕುರಿಸಿದ ಉಡುಗಣದಂತೆ ರಂಜಿಸಿತು ದೆಸೆದೆಸೆಗೆ | ಪರಿಮಳದೆಲರ್ಪರಿದು ದಗರುಚಂದನ ಯಕ್ಷಕರ್ದಮದ ಮೊಗವಾಸದ ||೬|| ಪಡೆಯೊಳನ್ಯೋನ್ಯಸಂಘರ್ಷಣದೊಳೊಗುವ ಪೊಂ | ದೊಡವುಗಳ ರೇಣುಗಳೋ ಮೈಗಳಂ ಸೋಂಕಿ ಪುಡಿ| ವಡೆದ ಕುಂಕುಮ ಸುಗಂಧಾನುಲೇಪನದ ಚೂರ್ಣಂಗಳೋ ಪದಘಾತಿಗೆ || ಪೊಡವಿಯಿಂದಿರದೇಳ್ವರುಣರಜಂಗಳೊ ತಿಳಿದು | ನುಡಿಯಲರಿದೆಂಬಿನಂ ಮೇರುವಿನ ಬಣ್ಣಮುಂ | ಪಿಡಿದ ದಿವಿಭಾಗಮುಂ ಜನವನೆಚ್ಚರಿಸಂತೆ ಕೆಂಧೂಳಿ ಮುಸುಕಿತಾಗ ||೭|| ಮೊಗದ ಕೈಯಿಂ ತಮ್ಮೊಡಲನೀರನಾನೆಗ | ಳ್ತೆಗೆದು ಚೆಲ್ಲಲ್ಪೊನಲ್ವರಿದ ಮಡುಗಳ ಕೆಸರೊ | ಳೊಗೆದ ನೃಪಮಂಡಲದ ಕನಕಾಭರಣಕಿ

---

ದಿಕ್ಕಿಗೂ, ಅಗರು-ಕೃಷ್ಣಾಗರು ಮತ್ತು ಶ್ವೇತಾಗರುಗಳು, ಚಂದನ–ಶ್ರೀಗಂಧವು, ಯಕ್ಷಕರ್ದಮ–ಕರ್ಪೂರ ಕಸ್ತೂರಿ ಮೊದಲಾದ ಪುಡಿ ಇವುಗಳ, ಮೊಗವಾಸದ-ಮುಖವಾಸನೆಯ, ಪರಿಮಳದ ಎಲರ್–ಸುವಾಸನೆಯಿಂದಾದ ವಾಯುವು, ಪರಿದುದು-ಸಂಚರಿಸಿತು.

ಅ|| ವಿ|| ಬೆರಸು+ಬೆರಸು=ಬೆರಬೆರಸು, ದ್ವಿ. ಕಂಠದ+ಮಾಲೆ=ಕಂಠಮಾಲೆ, ಷ. ತ. ಸಂಧ್ಯಾ (ತ್ಸ) ಸಂಜೆ (ದ್ಭ) ಅರುಣ–ಕೆಂಪು, ಸೂರ್ಯನ ಸಾರಥಿ, ಮುತ್ತು (ದ್ಭ) ಮೌಕ್ತಿಕ (ತ್ಸ) ||೬||

ಟೀ|| ಪಡೆಯೊಳು–ಸೇನೆಯಲ್ಲಿ, ಅನ್ಯೋನ್ಯ-ಪರಸ್ಪರ ಒಬ್ಬರಿಗೊಬ್ಬರಿಗಾದ, ಸಂಘರ್ಷಣದೊಳು – ಉಜ್ಜುವಿಕೆಯಿಂದ, ಒಗುವ–ರೇಣುಗಳಾಗಿ ಉದುರಿಬೀಳುವ, ಪೊಂದೊಡವುಗಳ– ಚಿನ್ನದ ಆಭರಣಗಳ, ರೇಣುಗಳೊ– ಅಣುಗಳೋ, ಮೈಗಳಂ–ಒಡಲುಗಳನ್ನು, ಸೋಂಕಿ–ತಗಲಿ, ಪುಡಿವಡೆದ- ಧೂಳಾದ, ಕುಂಕುಮ–ಕುಂಕುಮ ಕೇಸರಿಯಿಂದೊಡಗೂಡಿದ, ಸುಗಂಧ–ಒಳ್ಳೇ ವಾಸನೆಯುಳ್ಳ, ಅನುಲೇಪನದ-ಹಚ್ಚಿಕೊಂಡಿದ್ದ ಶ್ರೀಗಂಧದ ಚೂರ್ಣಂಗಳೋ, ಪುಡಿಗಳೊ, ಪದಘಾತಿಗೆ–ಪಾದದ ತುಳಿತಕ್ಕೆ, ಪೊಡವಿಯಿಂದ–ಪೃಥ್ವಿಯಿಂದ, ಇರದೆ ಏಳ್ವ-ತಪ್ಪದೇ ಏಳುತ್ತಿರುವ, ಅರುಣ ರಜಂಗಳೋ–ಕೆಂಪಾದ ರೇಣುಗಳೋ, ತಿಳಿದು–ಗ್ರಹಿಸಿ, ನುಡಿಯಲು-ಹೇಳಲು, ಅರಿದು–ಸಾಧ್ಯವಲ್ಲವು, ಎಂಬಿನಂ-ಎನ್ನುವ ರೀತಿಯಿಂದ, ಮೇರುವಿನ-ಕನಕಾಚಲದ, ಬಣ್ಣಮುಂ–ಕಾಂತಿಯುನ್ನು, ಪಿಡಿದ–ಹೊಂದಿಯಿರುವ, ದಿವಿಭಾಗಮುಂ–ಆಕಾಶವನ್ನು ಕುರಿತು, ಜನವನು–ಕಾಣುವ ಜನರನ್ನು, ಎಚ್ಚರಿಸಂತೆ–ಜ್ಞಾಪಕಕ್ಕೆ ತರುವಂತೆ, ಕೆಂಧೂಳಿ–ಕೆಂಪಾದ ಧೂಳು, ಆಗ–ಆ ಸಮಯದಲ್ಲಿ, ಮುಸುಕಿತು-ಆವರಿಸಿಕೊಂಡಿತು.

ಅ|| ವಿ|| (ಕೆಚ್ಚನೆಯ + ಧೂಳಿ) = ಕೆಂಧೂಳಿ, (ವಿ. ಪೂ. ಕ) ಪೊಡವಿ (ದ್ಭ) ಪೃಥ್ವಿ (ತ್ಸ) ವರ್ಣ (ತ್ಸ) ಬಣ್ಣ (ದ್ಭ) ||೭||

ಟೀ|| ಆನೆಗಳು–ಗಜಗಳು, ಮೊಗದ-ಮುಖದ ಹತ್ತಿರವಿರುವ, ಕೈಯಿಂ–ಸೊಂಡಿಲದಿಂದ, ತಮ್ಮೊಡಲ ನೀರನು–ತಮ್ಮ ಶರೀರದಿಂದ ಸುರಿವ ಬೆವರ ನೀರನ್ನು, ತೆಗೆದು–ತೆಗೆದುಕೊಂಡು, ಚಲ್ಲಲು–ಸುತ್ತಲು ಎರಚಲು, ಪೊನಲ್ವರಿದ-ಪ್ರವಹಿಸಿದ ಪ್ರವಾಹದ, ಮಡುವುಗಳ– ಹಳ್ಳಗಳ, ಕೆಸರೊಳು– ಬದಿಯಲ್ಲಿ, ಒಗೆದ- ಜನಿಸಿದ, ನೃಪಮಂಡಲದ- ಧೊರೆಗಳ ಗುಂಪಿನ, ಕನಕಾಭರಣ–ಚಿನ್ನದಿಂದ ನಿರ್ಮಿತವಾದ ಆಭರಣಗಳ, ಕಿರಣ–ಪ್ರಕಾಶಗಳೆಂಬ, ತರುಣ–ಬಲಿಯದ, ಆ ತಪದೊಳು-ಬಿಸಿಲಿನಲ್ಲಿ, ಅಲರ್ದ–ವಿಕಸಿತವಾದ, ಮಿಗೆ–ಹೆಚ್ಚಾಗಿ, ಸುಳಿದ-ತಿರುಗಾಡುವ, ಚಾಮರಂಗಳ–ಚಾಮರಗಳೆಂಬ, ರಾಜಹಂಸದ–ರಾಜಹಂಸಗಳ, ಆವಳಿಗಳ-ಗುಂಪುಗಳ, ಸಂಚಾರಮುಂ– ತಿರುಗಾಟವನ್ನು, ಕಳೆಗೊಂಡ - ಕಾಂತಿಯುಕ್ತವಾದ, ಬೆಳ್ದಾವರೆಗಳ-

---

ರಾಜರ ಕಂಠದಲ್ಲಿದ್ದ ಅಮೌಲ್ಯವಾದ ಮುಕ್ತಾಹಾರಗಳು ಕಿತ್ತು ಹೋಗಿ ದೊಡ್ಡ ಮುತ್ತುಗಳು ಒಡೆದು ಹೋಗಿ ನೆಲದಲ್ಲಿ ಬಿದ್ದುದರಿಂದಲೂ, ಆ ರಾಜರು ಅಡಿಕೆಲೆಯನ್ನು ಹಾಕಿಕೊಂಡು ಅಗಿಯುತ್ತಿದ್ದಾಗ ಬಾಯಿಯಿಂದ ದ್ರವಿಸಿದ ಕೆಂಪಾದ ನೀರು ಭೂಮಿಯಮೇಲೆ ಸುರಿಸಿದ್ದರಿಂದ, ಒಡೆದು ನೆಲದಲ್ಲಿ ಬಿದ್ದಿರುವ ಮುತ್ತುಗಳ ಸಮೂಹವು ನಕ್ಷತ್ರಗಳಿಗೂ, ಕೆಂಪಾದ ದ್ರವವನ್ನು ಅರುಣನಿಗೂ, ಸೋಲಿಸಿದ ಕವಿಚಮತ್ಕಾರಕ್ಕೆ ತಕ್ಕಂತೆಯೇ ಆ ಯುದ್ಧರಂಗವು ನಾನಾಪ್ರಕಾರವಾಗಿ ಕಂಗೊಳಿಸುತ್ತಿತ್ತು ||೬|| ಮತ್ತು ಆ ಸೇನೆಯಲ್ಲಿದ್ದ ರಾಜರ ಮತ್ತು ಚತುರಂಗಬಲಗಳ ತುಳಿದಾಟಕ್ಕೆ ಭೂಮಿಯಿಂದ ಮೇಲಕ್ಕೆದ್ದ ಧೂಳು ಅಂತರಿಕ್ಷವನ್ನು ವ್ಯಾಪಿಸಿತು. ರಾಜರು ಧರಿಸಿದ್ದ ಒಡವೆಗಳು ಒಡೆದು ಚೂರಾದ ಧೂಳಿಗಳೂ ಮತ್ತು ಅವರು ತಮ್ಮ ಶರೀರಕ್ಕೆ ಲೇಪನಮಾಡಿಕೊಂಡಿದ್ದ ಸುವಾಸನೆಯುಕ್ತವಾದ ಶ್ರೀಗಂಧದ ಪುಡಿಯೂ ಆ ಧೂಳಿಯಲ್ಲಿ ಸೇರಿದ್ದರಿಂದ ಅಂತರಿಕ್ಷವು ಸುವರ್ಣಾದ್ರಿಗೆ ಹೋಲುತ್ತಿರಲು ||೭|| ಆ ಸಮಯದಲ್ಲಿ ಆನೆಗಳು ಶರೀರದಿಂದ ಬೆವರು ನೀರನ್ನು ವಿಶೇಷವಾಗಿ ಸುರಿಸಿದವು, ರಾಜರು ಧರಿಸಿದ್ದ ಒಡವೆಗಳು ಕಾಂತಿಯುಕ್ತವಾಗಿದ್ದವು, ವಿಶೇಷವಾಗಿ ಶ್ವೇತಚ್ಛತ್ರಗಳನ್ನು ಹಿಡಿದಿದ್ದರು. ಇದು ಬೆವರು ನೀರಿನ ಪ್ರವಾಹವೆಂಬ ಮಡುಗಳ ಕೆಸರಿನಲ್ಲಿ, ಶ್ವೇತಚ್ಛತ್ರಗಳೆಂಬ ಬಿಳಿದಾವರೆಗಳು, ರಾಜರು ಧರಿಸಿದ್ದ ಒಡವೆಗಳ ಕಾಂತಿ

ರಣತರುಣಾತಪದೊಳಲರ್ದ || ಮಿಗೆಸುಳಿವಚಾಮರಂಗಳ ರಾಜಹಂಸಾವ | ಳಿಗಳಸಂಚಾರಮಂಕಳೆಗೊಂಡಬೆಳ್ವಾವ | ರೆಗಳ ಹಂತಿಗಳೆಂತೆಪಡೆಯೊಳಸೆದವುತಳ್ತಿಡಿದ ಸತ್ತಿಗೆಯಸಾಲ್ಗಳು ||೮|| ಮುಂಕೊಂಬಮಂದಿಕುದುರೆಗೆಧರಾಮಂಡಲಂ | ಸಂಕುಲದವಾದ್ಯಧ್ವನಿಗೆದಿಶಾಮಂಡಲಂ | ಸಂಖ್ಯೆಯಿಲ್ಲದಸಿಂಧಸೀಗುರಿಪತಾಕೆಗೆನಭೋಮಂಡಲಂಮಿಾರಿದ || ಬಿಂಕದಿಂದಿರಿವಕಲಿತನಕೆ ರಣಮಂಡಲಂ | ಸಂಕೋಚಮೆನೆಬಂದುಹಿಡಿದುಪಾರ್ಥನತುರಂಗ | ಮಂಕಟ್ಟಿಬಳಿಸಿಪದ್ಮವ್ಯೂಹಮಾಗಿನಿಂದಾರ್ದುದಾಸೇನೆನಲಿದು || ೯ || ಸುತ್ತಪದ್ಮವ್ಯೂಹಮುಂರಚಿಸಿನಡುವೆನರ | ನುತ್ತಮತುರಂಗಮುಂಕಟ್ಟಿಕಾಳಗಕೆಭಟ | ರೊತ್ತಾಗಿನಿಂದರರಿವೀರರಂಬರಹೇಳೆನುತ್ತರಸನಾಜ್ಞೆಯಿಂದ || ಇತ್ತಪಾರ್ಥಂಗೆಚರರೈತಂದುನುಡಿದರೀ | ವೃತ್ತಾಂತಮುಂಬಳಿಕಪ್ರದ್ಯುಮ್ನನಂ

---

ಬಿಳಿದಾದ ಕಮಲ ಪುಷ್ಪಗಳ, ಹಂತಿಗಳಂತೆ_ಸಾಲುಗಳಹಾಗೆ, ತಳ್ತು-ವಿಕಸಿತವಾಗಿ. (ವಿಸ್ತರಿಸಲ್ಪಟ್ಟು) ಇಡಿದ_ಗುಂಪಾಗಿರುವ, ಸತ್ತಿಗೆಯ_ಕೊಡೆಗಳ, ಸಾಲ್ಗಳು-ಪಙ್ತಿಗಳು, ಎಸೆದವು-ಕಾಂತಿಯುಕ್ತವಾದುವು.

ಅ|| ವಿ|| ರಾಜ (ತ್ಸ) ರಾಯ (ದ್ಭ) ಹಂಸ (ತ್ಸ) ಅಂಚೆ (ದ್ಭ) (ನೃಪರ+ಮಂಡಲ) ಷ. ತ. ||೮||

ಟೀ|| ಮುಂಕೊಂಬ_ಮುಂದಾಗಿ ನುಗ್ಗಿಬರುವ, ಮಂದಿ-ಕಾಲ್ಬಲಕ್ಕೂ, ಕುದುರೆಗೆ_ತುರಗಗಳ ಸೈನ್ಯಕ್ಕೂ, ಧರಾಮಂಡಲಂ_ಈ ಪೃಥ್ವಿಮಂಡಲವು, ಸಂಕುಲದ-ಗುಂಪಾಗಿ ಸೇರಿದ, ವಾದ್ಯಧ್ವನಿಗೆ-ನಗಾರಿ ಮೊದಲಾದವುಗಳ ರವಕ್ಕೆ, ದಿಶಾಮಂಡಲಂ_ದಿಙ್ಮಂಡಲವು, ಸಂಖ್ಯೆಯಿಲ್ಲದ-ಅಸಂಖ್ಯಾತವಾದ, ಸಿಂಧ_ಕೊಡೆಗಳಿಗೂ, ಸೀಗುರಿ-ಚೌರಿಗಳಿಗೂ, ಪತಾಕೆಗೆ_ಬಾವುಟಗಳ ಸಮೂಹಕ್ಕೆ, ನಭೋಮಂಡಲಂ_ಆಕಾಶಮಂಡಲವು, ಮಿಾರಿದ_ಹೆಚ್ಚಾದ, ಬಿಂಕದಿಂದ-ಗರ್ವದಿಂದ, ಇರಿವ_ತಿವಿಯುವ, ಕಲಿತನಕ್ಕೆ-ಪರಾಕ್ರಮಕ್ಕೆ, ರಣಮಂಡಲಂ-ಯುದ್ಧರಂಗವು, ಸಂಕೋಚಂಎನೆ- ಸ್ಥಳಸಾಲದು ಎನ್ನುವಂತೆ, ಬಂದ-ಆಗಮಿಸಿದ, ಪಾರ್ಥನ-ಫಲ್ಗುಣನ, ತುರಂಗಮುಂ-ಕುದುರೆಯನ್ನು, ಕಟ್ಟಿ-ಸಮರ್ಥಿಸಿ, ಬಳಸಿ- ಸುತ್ತಲೂ ಆವರಿಸಿ, ಪದ್ಮವ್ಯೂಹವಾಗಿ_ಕಮಲದಂತೆ ಸೈನ್ಯವನ್ನು ಮೂರ್ತಿಗೊಳಿಸಿ, ನಿಂದು_ನಿಂತುಕೊಂಡು, ಆಸೇನೆ-ಆ ಸುಧನ್ವನ ಸೈನ್ಯವು, ನಲಿದು-ಸಂತೋಷಿಸಿ, ಆರ್ದುದು_ಆಬ್ಬರಿಸಿತು

ಅ|| ವಿ|| ಅಬ್ಬರ (ದ್ಭ) ಆರ್ಭಟ (ತ್ಸ) ಕಲಿಯಭಾವ_ಕಲಿತನ, ಪದ್ಮವ್ಯೂಹ-ಪದ್ಮದ ಆಕೃತಿಯಾದ ಸೈನ್ಯ, ವ್ಯೂಹವು-ಪದ್ಮದಂತೆ, ಪದ್ಮವ್ಯೂಹ, ಉ. ಪೂ. ಕ. ||೯||

ಟೀ|| ಸುತ್ತ-ಅರ್ಜುನನ ಕುದುರೆಯ ಸುತ್ತಲೂ, ಪದ್ಮವ್ಯೂಹಮಂ_ಕಮಲದ ಎಸಳಿನಂತೆ, ಸೇನಾನಿರ್ಮಾಣವನ್ನು, ರಚಿಸಿ_ನಿರ್ಮಿಸಿ, ನಡುವೆ-ಆ ಸೇನೆಯ ಮಧ್ಯದಲ್ಲಿ, ನರನ_ಪಾರ್ಥನ, (ಉತ್ತಮ_ಯೋಗ್ಯವಾದ ಅಶ್ವಮೇಧಯೋಗ್ಯವಾದ) ತುರಗವ-ಂ_ಅಶ್ವವನ್ನು, ಕಟ್ಟಿ-ಸಮರ್ಥಿಸಿ, ಕಾಳಗಕ್ಕೆ-ಜಗಳಕ್ಕೆ, ಪಟುಭಟರು_ಬಲಶಾಲಿಗಳಾದ ವೀರರು, ಅರಸನ-ದೊರೆಯಾದ ಹಂಸಧ್ವಜನ, ಆಜ್ಞೆಯಿಂದ_ಅಪ್ಪಣೆಯಮೇರೆಗೆ, ಅರಿವೀರರರಿ-ಶತ್ರುಗಳಾದ ಶೂರರನ್ನು, ಬರಹೇಳು_ಯುದ್ಧಕ್ಕೆ ಬರುವಂತೆ ಹೇಳು, ಎನುತ್ತ - ಎಂದು ಹೇಳುತ್ತಾ, ಒತ್ತಾಗಿ - ಗುಂಪಾಗಿ, ನಿಂದರು – ನಿಂತುಕೊಂಡರು, ಇತ್ತ - ಈಕಡೆ, ಪಾರ್ಥಂಗೆ_ಅರ್ಜುನನಿಗೆ, ಚರರು_ಸೇವಕರು, ಐತಂದು_ಬಂದು, ಈ ವೃತ್ತಾಂತಮಂ-ಈ ಸಂಗತಿಯನ್ನು, ನುಡಿದರು_ಹೇಳಿದರು, ಬಳಿಕ_ಅನಂತರ, ಪ್ರದ್ಯುಮ್ನನಂ-ಕೃಷ್ಣನ ಮಗನಾದ ಪ್ರದ್ಯುಮ್ನನನ್ನು, ಕರೆಸಿ_ಬರಮಾಡಿ, ಮತ್ತೆ-ಪುನಃ, ವಿಘ್ನಂ-ತೊಂದರೆಯು, ಬಂದುದು_ಪ್ರಾಪ್ತವಾಯಿತು, ಇದಕೆ-ಈ ವಿಘ್ನಕ್ಕೆ, ಇನ್ನು-ಬೇರೆ, ಉಪಾಯಂ_ಯೋಚನೆಯು, ಏಂ ಎಂದೊಡೆಂ_ಏನು ಮಾಡಬೇಕೆನಲು, ಅವನು_ಆ ಪ್ರದ್ಯುಮ್ನನು, ಇಂತೆಂದನು_ಮುಂದಿನಂತೆ ಹೇಳಿದನು.

---

ಯೆಂಬ ಸೂರ್ಯನಿಂದ ಅರಳಿದಾಗ್ಯೂ, ರಾಜಮರ್ಯಾದಾರ್ಥವಾಗಿ ಬೀಸುವ ಚಮರಿಗಳು, ರಾಜಹಂಸ ಪಕ್ಷಿಗಳಂತೆ ಪ್ರಕಾಶಿಸಿತು || ೮ || ಇದೂ ಅಲ್ಲದೆ ಹಸ್ತ್ಯಶ್ವ ರಥಪದಾತಿಗಳು ಭೂಭಾಗವನ್ನೂ, ಭೇರೀಮುಂತಾದವುಗಳ ವಾದ್ಯ ಘೋಷವು ದಿಕ್ಚಕ್ರವನ್ನೂ, ಅಸಂಖ್ಯಾತವಾದ ಛತ್ರಚಾಮರ ಧ್ವಜಪತಾಕಾದಿಗಳು, ಅಂತರಿಕ್ಷ ಭಾಗವನ್ನೂ, ಹೆಚ್ಚಾದ ಗರ್ವದಿಂದೊಡಗೂಡಿದ ವೀರಭಟರ ಸಮೂಹವು ಯುದ್ಧರಂಗವನ್ನೂ ಆವರಿಸಿಕೊಂಡಿರಲು, ಅರ್ಜುನನ ಅಶ್ವಮೇಧಯೋಗ್ಯಮಾದ ಕುದುರೆಯ ಸುತ್ತಲೂ ಸುತ್ತುಗಟ್ಟಿಕೊಂಡು ಹಂಸಧ್ವಜನ ಸೇನೆಯು ಸಂತೋಷದಿಂದಾರ್ಭಟಿಸಿತು || ೯ || ಆಗ ಅರ್ಜುನನ ಕುದುರೆಯ ಸುತ್ತಲೂ, ಕಮಲಪತ್ರದಂತೆ ಸೇನಾರಚನೆಯನ್ನೇರ್ಪಡಿಸಿಕೊಂಡು, ಮೈಮ್ಗುಲಿಗಳಾದ ಯೋಧರು ಹಂಸಧ್ವಜನ ಅಪ್ಪಣೆಯಂತೆ ಮಹಾಶೂರರಾದ ಶತ್ರುರಾಜರನ್ನು ಕಾಳಗಕೆ ಬರುವಂತೆ ಹೇಳಿಕಳುಹಿಸಿ, ವೀರಭರು ಒತ್ತಾಗಿ ನಿಂತಿರಲು ಹಂಸಧ್ವಜನ ಕಡೆಯ ಭೃತ್ಯರು ಅರ್ಜುನನನ್ನು ಯುದ್ಧಕ್ಕೆ ಬರಹೇಳಿದ ಸಂಗತಿಯನ್ನರಿತವರಾಗಿ ಪ್ರದ್ಯುಮ್ನನಂ ಬರಮಾಡಿಕೊಂಡು, ಪುನಹ ಅಶ್ವಮೇಧ ಕುದುರೆಯು ಮುಂದರಿಯಲು, ಮಹತ್ತಾದ ವಿಘ್ನಬಂದೊದಗಿದ ಸಂಗತಿಯನ್ನು ತಿಳಿಯಪಡಿಸಿ

ಕಲಿಸಿ | ಮತ್ತೆ ಬಂದುದು ವಿಘ್ನವಿದಕಿನ್ನು ಪಾಯಮೇನೆಂದೊಡನಿಂತೆಂದನು ॥೧೦॥ ನಿನ್ನ ಕಳುಹುವಂದು ಹಯದ ಮೇಲಾರೈಕೆ|
ಗೆನ್ನನಟ್ಟಿದನಲಾ ಪಿತನಾತನಾಜ್ಞೆಯಂ | ಮನ್ನಿಸುವಕಾಲವಲ್ಲವೆ ತನಗೆ ನೀನಿದಕ್ಕೆಣಿಕೆಗೊಳಬಹುದೆ ಬರಿದೆ ॥ ತನ್ನ ಭುಜಬಲದಿಂದ
ಬಿಡಿಸಿ ತಂದಪೆನಶ್ವ | ಮಂನೋಡು ಸಾಕೆನುತ ಪಾರ್ಥನಂ ಬೀಳ್ಕೊಂಡು | ಪನ್ನಗಾರಿಧ್ವಜನತನಯನೈದಿದನಹಿತ ಮೋಹರಕೆ ಸೇನೆ
ಸಹಿತ ॥೧೧॥ ಲಟಕಟಿಸಿತಾಗ ಸಾತ್ಯಕಿ ಸಾಂಬ ಕೃತವರ್ಮ| ಶಠನಿಶಠನನಿರುದ್ಧ ಗದಮುಖ್ಯರಾದ ಪಟು | ಭಟರಖಿಳಯಾದವ ಚತುರ್ಬ

---

ಅ॥ ವಿ॥ ನರ–ಅರ್ಜುನ, ಮನುಷ್ಯ, ಪಾರ್ಥ–ಪೃಥೆಯ ಮಗ, ಆಜ್ಞೆ (ತ್ಸ) ಅಪ್ಪಣೆ (ದ್ಭ) ॥೧೦॥

ಟೀ॥ ನಿನ್ನಂ–ಪಾರ್ಥನಾದ ನಿನ್ನನ್ನು, ಕಳುಹುವಂದು–ಶ್ರೀ ಕೃಷ್ಣನು ಕುದುರೆಯ ಸಂಗಡ ಕಳುಹಿಸುವಾಗ, ಹಯದ–ಕುದುರೆಯ, ಮೇಲೆ ಆರೈಕೆಗೆ–ಮೈಗಾವಲಿಗಾಗಿ, ಪಿತನು–ಎನ್ನ ತಂದೆಯಾದ ಕೃಷ್ಣನು, ಎನ್ನನು–ನನ್ನಂ, ಅಟ್ಟಿದಂ ಅಲಾ–ಕಳುಹಿಸಿದನಲ್ಲವೆ, ಆತನ–ಆ ಕೃಷ್ಣನ, ಅನುಜ್ಞೆಯಂ–ಅನುಜ್ಞೆಯನ್ನು, ಮನ್ನಿಸುವ–ಮರ್ಯಾದೆಯಿಂದ ನಡೆಯಿಸುವ, ಕಾಲಂ–ವೇಳೆಯು, ತನಗೆ–ನನಗೆ, ಅಲ್ಲವೆ–ಈಗ ಆಗಿರುವುದಿಲ್ಲವೆ? ನೀಂ–ನೀನು, ಇದಕೆ– ಈ ಅಲ್ಪಕಾರ್ಯಕ್ಕೆ, ಬರಿದೆ–ಸುಮ್ಮನೆ, ಎಣಿಗೆ–ಆಲೋಚನೆಯನ್ನು, ಗೊಳಬಹುದೆ–ಮಾಡಬಹುದೆ, ತನ್ನ–ನನ್ನ, ಭುಜಬಲದಿಂದ– ಬಾಹುಶಕ್ತಿಯಿಂದ, ಅಶ್ವಮಂ–ಕುದುರೆಯನ್ನು, ಬಿಡಿಸಿ–ಬಿಡುಗಡೆ ಮಾಡಿಕೊಂಡು, ತಂದಪೆನು–ತರುತ್ತೇನೆ, ನೋಡು–ಈಕ್ಷಿಸು, ಸಾಕು–ಬಿಡು, (ಯೋಚನೆ ಮಾಡಬೇಡ) ಎನುತು–ಹೀಗೆಂದು ಹೇಳುತ್ತ, ಪಾರ್ಥನಂ–ಅರ್ಜುನನನ್ನು, ಬೀಳ್ಕೊಂಡು–ಸಮಾಧಾನಮಾಡಿಕೊಂಡು, ಪನ್ನಗಾರಿ–ಸರ್ಪಗಳಿಗೆ ಶತ್ರುವಾದ ಗರುಡನೆ, ಧ್ವಜನ–ಧ್ವಜವಾಗುಳ್ಳ ಕೃಷ್ಣನ, ತನಯನು–ಮಗನಾದ ಪ್ರದ್ಯುಮ್ನನು ಅಹಿತಮೋಹರಕೆ–ಹಗೆಗಳ ಸೇನೆಗೆ, ಸೇನೆಸಹಿತ–ಸೇನಾಯುಕ್ತನಾಗಿ, ಐದಿದನು–ಸೇರಿದನು.

ಅ॥ ವಿ॥ ಆಜ್ಞೆ (ತ್ಸ), ಆಣೆ (ದ್ಭ) (ಪತ್–ಕಾಲು, ನ–ಇಲ್ಲದೆ, ಗ–ಗಮಿಸುವುದು) ಸರ್ಪ, ಪನ್ನಗಕ್ಕೆ ಅರಿ ಪನ್ನಗಾರಿ, ಚ. ತ. ಪನ್ನಗಾರಿಯೇ ಟೆಕ್ಕೆಯಾಗುಳ್ಳವನು, ಪನ್ನಗಾರಿ ಧ್ವಜ, ಬಹು. ಸ. ಕಾಲ–ಸಮಯ, ಯಮಧರ್ಮ ॥೧೧॥

ಟೀ॥ ಆಗ–ಆ ವೇಳೆಗೆ ಸರಿಯಾಗಿ, ಸಾತ್ಯಕಿ–ಸತ್ಯಕನ ಪುತ್ರನು, ಸಾಂಬ–ಜಾಂಬವತಿಯ ನಂದನನು, ಕೃತವರ್ಮ–ಯದುಸೇನಾಧ್ಯಕ್ಷನು, ಶಠ–ಶಠನೆಂಬುವನು, ನಿಶಠ–ನಿಶಠನು, ಅನಿರುದ್ಧ – ಅನಿರುದ್ಧನು, ಗದ–ಗದನೆ, ಆದಿ–ಮೊದಲ್ಗೊಂಡು, ಮುಖ್ಯರಾದ–ಆದಿಯಾದ, ಪಟುಭಟರು–ಬಲಾಢ್ಯರಾದ ವೀರರು, ಅಖಿಳಯಾದವರ– ಸಮಸ್ತ ಯದುರಾಜರ, ಚತುರ್ಬಲಂ–ಆನೆ, ಕುದುರೆ, ರಥ, ಕಾಲಾಳು, ಇವುಗಳು, ಲಟಕಟಿಸಿ–ತಂಡತಂಡವಾಗಿಸೇರಿ, ಸರ್ವ–ಸಕಲವಾದ, ಸನ್ನಾಹದಿಂದ–ಕಾರ್ಯದಿಂದ, (ಜೋಡಿಸಿತು–ಸೇರಿವ್ವಾಯಿತು, ಇಂದು–ಈಗ), ಅಜಾಂಡ–ಬ್ರಹ್ಮನ ಅಖಂಡವಾದ ಈ ಭೂಮಂಡಲವು, ಒಡೆಯದೆ–ಹೋಲಾಗದೆ, ಇರದು–ಇರಲಾರದು, ದಿಟಂ–ನಿಜವು, ಎಂಬಿಸಿಂ–ಎನ್ನುವಹಾಗೆ, ಪಟಹ–ತಮ್ಮಟೆಯು, ಡಿಂಡಿಮ–ಸಣ್ಣ ನಗಾರಿ, ಡೌಡೆ–ಡೋಲು, ಭೇರಿ–ದೊಡ್ಡ ನಗಾರಿಯು, ನಿಸ್ಸಾಳ–ಸಣ್ಣನಗಾರಿಯು, ತಮ್ಮಟೆ–ತಪ್ಪಟೆಯು, ಮುರಜ–ಶಂಖವು, ಢಕ್ಕೆ–ಢಕ್ಕೆ ಎಂಬ ವಾದ್ಯವು, ಡಮರುಗೆ–ಬುಡುಬುಡುಕೆಯು, ಕೊಂಬು–ಕೋಡಿನಂತೆ ಇರುವ ವಾದ್ಯ ವಿಶೇಷವು, ಕಹಳೆ–ಕಹಳಾ ಎಂಬ ವಾದ್ಯ ವಿಶೇಷವು, ಇವುಗಳ–ಇವೇ ಆದಿಯಾಗುಳ್ಳ, ಬಹುವಾದ–ಹೆಚ್ಚಾದ, ರವಂ–ಶಬ್ದವು, ಅಳ್ಳಿರಿದುದು–ಎರಡು ಪಕ್ಕೆಗಳಲ್ಲಿಯೂ ತುಂಬಿಕೊಂಡಿತು.

ಅ॥ ವಿ॥ ಬಲ–ಬಲರಾಮ, ಸೈನ್ಯ, ಶಕ್ತಿ, ದಶಾವತಾರಗಳು–ಮತ್ಸ್ಯ, ಕೂರ್ಮ. ವರಾಹ, ನಾರಸಿಂಹ, ವಾಮನ,

---

ಕೇಳಲಾಗಿ, ಪ್ರದ್ಯುಮ್ನನು ಮುಂದೆ ಬರುವಂತೆ ಹೇಳಿದನದೆಂತೆನೆ ॥ ೧೦ ॥ ನಿನ್ನನ್ನು ಕುದುರೆಯ ಸಂಗಡ ಕಳುಹಿಸುವಾಗ ಕುದುರೆಯ ಕಾವಲಿಗೆ ಶ್ರೀ ಕೃಷ್ಣನು ನನ್ನನ್ನು ಕಳುಹಿಸಲಿಲ್ಲವೇ? ಈಗ ಎನ್ನ ತಂದೆಯಾದ ಕೃಷ್ಣನ ಅಪ್ಪಣೆಯನ್ನು ನಡಿಸಲಿಕ್ಕೆ ಸಮಯನಲ್ಲವೇ? ಇಂಥಾ ಅಲ್ಪವಾದ ಕಾರ್ಯಕ್ಕೆ ಚಿಂತಿಸಬಹುದೆ? ನನ್ನ ಭುಜಪರಾಕ್ರಮದಿಂದ ಕುದುರೆಯಂ ಬಿಡಿಸಿ ತಂದೆಪೆನೆನುತ ಪಾರ್ಥನಂ ಬೀಳ್ಕೊಂಡು ಪ್ರದ್ಯುಮ್ನನು ಸೇನಾಸಮೇತನಾಗಿ ಹೊರಟು ಹೋದನು ॥ ೧೧ ॥ ಆಗ ಸಾತ್ಯಕಿ, ಸಾಂಬ, ಕೃತವರ್ಮ, ಶಠ, ನಿಶಠ, ಅನಿರುದ್ಧ, ಗದ ಇವರೇ ಮುಖ್ಯರಾದ ಸೇನಾಜನರು, ವಾದ್ಯರವದಿಂದ ಕೂಡಿದವರಾಗಿ ಪ್ರಯಾಣಮಾಡಿ ಯುದ್ಧಕ್ಕೆ ಬಂದರು. ಆ ಸಮಯದಲ್ಲಿ ಹಸ್ತ್ಯಶ್ವರಥಪದಾತಿ ಇವೇ ಮೊದಲಾದ ಚತುರಂಗಬಲವೂ ಸೇರಿ ತಮಟೆ, ಡೋಲು, ನಗಾರಿ, ರಣಭೇರಿ, ದೊಡ್ಡನಗಾರಿ, ರಣದೌರಿ, ಢಕ್ಕೆ, ಶಂಖ, ದುಂದುಭಿ, ಕೊಂಬು, ಕಾಳಗತಮ್ಮಟೆ, ಇವೇ ಮೊದಲಾದ ವಾದ್ಯವಿಶೇಷಗಳು, ರವಗೈಯುತ್ತಿರಲು, ಪಕ್ಕದ ಎರಡು ಭಾಗಗಳೂ ತುಂಬಿಕೊಳ್ಳುವಂತೆ ಇತ್ತು. ಸಮಸ್ತ ಯಾದವ ಸೈನ್ಯವೂ ಪುಂಖಾನು ಪುಂಖವಾಗಿ ಬರುತ್ತ ಕಾಲಕ್ಕೆ ಅನುಸಾರವಾಗಿಯೂ, ನಿಯಮಕೆ ತಪ್ಪದೆಯೂ ಬಂದು ಒದಗಲು, ಬ್ರಹ್ಮಾಂಡವೇನಾದರು ಒಡೆದು ಹೋಗುತ್ತದೆಯೋ ಎಂಬಂತೆ ಯುದ್ಧಕ್ಕೆ ಅನುವಾಯಿತು ॥

ಲಂಜೋಡಿಸಿತುಸರ್ವಸನ್ನಾಹದಿಂದ ‖ ದಿಟಮೆಂದಜಾಂಡಘಟಮೊಡೆಯದಿರದೆಂಬಿನಿಂ | ಪಟಹಡಿಂಡಿಮಡೌಡೆಭೇರಿನಿಸ್ಸಾಳತಂ | ಬಟಮುರಜಢಕ್ಕೆಡಮರುಗಕೊಂಬುಕಹಳೆಗಳಬಹಳರವಮುಳ್ಳಿರಿದುದು ‖ ೧೨ ‖ ಮೊಗದುದರಿಬಲವನನುಸಾಲ್ವಕನಸೇನೆಯೊ | ನ್ಮೊಗದೊಳೆರೆಯುಗಿದಫಣಿಕುಲದಂತೆರಣದನಕ | ಮೊಗದೊಡಗಿದಂಬುಧಿಯತೆರೆಯಂತೆಯೌವನಾಶ್ವನಸೈನ್ಯಮೊಂದೆಸೆಯೊ ಳು ‖ ಯುಗದಂತ್ಯದಭ್ರದಂತೆದ್ದುದುರವಣಿಸಿ ಸಂ | ಯುಗಕೆನೀಲಧ್ವಜನಸೈನಿಕಂಬಳಿಕಕರ | ಯುಗಳಮಂಮುಗಿದುಕಿರೀಟಿ ಗೆವಿನಯದಿಂದಬಿನ್ನೈಸಿದಂಕರ್ಣಸೂನು ‖ ೧೩ ‖ ತಾತಚಿತ್ತೈಸುಗೋಷ್ಪದಜಲಕೆಹರಿಗೋಲ | ದೇತಕೆವೃಥಾಕುದುರೆಮಂ ದಿಯಂನೋಯಿಸದಿ | ರೀತಿಗಳನೆಲ್ಲರಂತೆಗಸೆನಗೆಸೆಲವಿಂದಿನಾಹವಂಪರಬಲವನು ‖ ಘಾತಿಸಿತುರಂಗಮುಂತಾರದೊಡೆಬಳಿಕ ರವಿಜಾತನಕು| ಮಾರಕನೆನೋಡು ಸಾಕೆನುತವೃಷ | ಕೇತುಪಾರ್ಥನಬೆಸಂಬಡೆದುರಥವೇರಿದಂಮಿಾರಿದಪರಾಕ್ರಮದೊಳು ‖೧೪‖

---

ಪ:ಶ ರಾಮ, ರಘುರಾಮ, ಕೃಷ್ಣ–ಬೌದ್ಧ, ಕಲ್ಕಿ ‖೧೨ ‖

ಟೀ‖ ಅನುಸಾಲ್ವಕನ–ಸಾಲ್ವನ ಮಗನಾದ ಅನುಸಾಲ್ವಕನ, ಸೇನೆ–ಸೈನ್ಯವು, ಅರಿಬಲವನು–ಶತ್ರು ಸೈನ್ಯವನ್ನು, ಎರೆಯುಗಿದ-ಪರೆಯನ್ನು ಬಿಟ್ಟ, ಫಣಿಕುಲದಂತೆ–ಹಾವುಗಳ ಸಮೂಹದ ಹಾಗೆ, ಮೊಗದುದು–ಆವರಿಸಿಕೊಂಡಿತು, ಮತ್ತು ರಣದನಕ-ಯುದ್ಧಾಕಾಂಕ್ಷೆಯು, ಮೊಗದೊಡಗಿತು – ಉಪಕ್ರಮವಾಯಿತು. ಅಂಬುಧಿಯ–ಕಡಲಿನ, ತೆರೆಯಂತೆ-ಅಲೆಯ ಹಾಗೆ, ಯೌವನಾಶ್ವನ–ಯೌವನಾಶ್ವನೆಂಬುವನ, ಸೇನೆ–ಸೈನ್ಯವು, ಒಂದೆಸೆಯೊಳು-ಒಂದು ದಿಕ್ಕಿನಲ್ಲಿ, ಮೊಗದೊಡಗಿತು-ಎದು ರಾಗಿನಿಂತಿತು, ನೀಲಧ್ವಜನ-ಜ್ವಾಲೆಯ ಗಂಡನ, ಸೈನಿಕಂ–ಸೇನೆಯು, ಯುಗದಂತ್ಯದ–ಪ್ರಪಂಚನಾಶಸಮಯದ, ಅಭ್ರದಂತೆ–ಜಲಧರದ ಹಾಗೆ, ಸಂಯುಗಕೆ–ಕಾಳಗಕ್ಕೆ, ಉರವಣಿಸಿ-ರೇಗಿ, ಎದ್ದುದು–ಸಿದ್ಧವಾಯಿತು, ಬಳಿಕ–ಅನಂತರದಲ್ಲಿ, ಕರ್ಣಸೂನು–ವೃಷಧ್ವಜನು, ಕರಯುಗಳಂ–ಕೈಗಳೆರಡನ್ನೂ, ಮುಗಿದು–ಸೇರಿಸಿಕೊಂಡು, ಕಿರೀಟಿಗೆ–ಪಾರ್ಥನಿಗೆ, ವಿನಯದಿಂದ–ನಮ್ರತೆ ಯಿಂದ, ಬಿನ್ನೈಸಿದಂ–ಅರಿಕೆಮಾಡಿಕೊಂಡನು.

ಅ‖ ವಿ‖ ಸಾಲ್ವನಮಗ–ಅನುಸಾಲ್ವ, (ಅರಿಯ+ಬಲ) ಅರಿಬಲ, ಷ. ತ. (ಎರೆಯನ್ನು+ಉಗಿದ) ಕ್ರಿ. ಸ. (ಫಣಿಯ+ಕುಲ) ಷ. ತ. ಫಣ–ಹೆಡೆ, ಅದುಉಳ್ಳದ್ದು ಫಣಿ, ಕರ–ಕೈ, ಕಿರಣ, ಆನೆಯ ಸೊಂಡಿಲು, ಕಾಣಿಕೆ ‖೧೩‖

ಟೀ‖ ತಾತ–ಎಲೈ ತಂದೆಯಾದ ಪಾರ್ಥನೇ! ಗೋಷ್ಪದ–ಆಕಳಿನ ಹೆಜ್ಜೆಯಲ್ಲಿ ನಿಂತಿರುವ, ಜಲಕೆ-ನೀರಿಗೆ, ಹರಿಗೋಲು–ದೋಣಿಯು, ಅದೇತಕೆ–ತರುವದರಿಂದೇನುಫಲ, ವೃಥಾ ನಿಷ್ಕಾರಣವಾಗಿ, ಕುದುರೆ–ಅಶ್ವಗಳನ್ನು, ಮಂದಿಯಂ–ಜನ ರನ್ನೂ, ನೋಯಿಸದಿರಿ-ಆಯಾಸಪಡಿಸಬೇಡಿ, ಈತಗಳನೆಲ್ಲರಂ–ಹೋಟಿರುವ ಇವರೆಲ್ಲರನ್ನೂ, ತೆಗಸು–ಹಿಂದಕ್ಕೆ ಬರಮಾಡು, ಇಂದಿನ–ಈಹೊತ್ತಿನ, ಆಹವಂ-ಕಾಳಗವು, ಎನಗೆ–ನನಗೆ, ಸೆಲವು-ಅನುಜ್ಞೆಯಾಗಲಿ, ಪರಬಲವನು-ಅರಿಸೇನೆಯನ್ನು, ಘಾತಿಸಿ–ನಾಶಮಾಡಿ, ತುರಂಗಮುಂ–ನನ್ನು ಕುದುರೆಯನ್ನು, ತಾರದೊಡೆ–ತರದೇ ಇದ್ದರೆ, ಬಳಿಕ–ತರುವಾಯ. ರವಿಜಾತನ–ಕರ್ಣನ, ಕುಮಾರಕನೇ-ಮಗನಾದೇನೆ, ನೋಡು–ಈಕ್ಷಿಸು, ಸಾಕು–ಬಲಹೀನನೆಂಬ ಅನುಮಾನವನ್ನುಬಿಡು, ಎನುತ–ಎಂದು ಹೇಳುತ್ತಾ–ವೃಷಕೇತು–ವೃಷಧ್ವಜನು, ಪಾರ್ಥನ–ಫಲ್ಗುಣನ, ಬೆಸಂ–ಅನುಜ್ಞೆಯನ್ನು, ಬಡೆದು–ಹೊಂದಿ, ಮಿಾರಿದ–ಅತಿಕ್ರಮಿಸಿದ, ಪರಾ ಕ್ರಮದೊಳು–ಶೌರ್ಯದಿಂದ, ರಥಂ-ತೇರನ್ನು, ಏರಿದಂ–ಹತ್ತಿದನು.

ಲ‖ ವಿ‖ (ಗೋವಿನ+ಪದ) ಷ. ತ. ಹೆಜ್ಜೆ-ಹ. ಪಜ್ಜೆ (ರವಿಯಿಂದ+ಜಾತ) ತೃ. ತ. ‖ ೧೪ ‖

---

ಅನುಸಾಲ್ವಕನೆಂಬುವನ ಸೇನೆಯು ಅರಿಬಲವನ್ನು ಪರೆಬಿಟ್ಟ ಫಣಿಯಂತೆ ಆವರಿಸಿಕೊಂಡಿತು. ಮತ್ತು ಯೌವನಾಶ್ವನ ಸೇನೆಯು ಸಮುದ್ರದಲ್ಲಿ ಉಬ್ಬಿ ಮೇಲಕ್ಕೇಳುವ ತರಂಗದ ರೀತಿಯಿಂದ ಒಂದು ಭಾಗದಲ್ಲಿ ಆವರಿಸಿಕೊಂಡಿತು. ಮತ್ತೊಂದುಕಡೆಯಲ್ಲಿ ನೀಲಧ್ವಜನೆಂಬ ವೀರನ ಸೈನ್ಯವು ಜಲಪ್ರಳಯದ ಮೇಘದ ರೀತಿಯಿಂದ ಮುತ್ತಿಗೆಯನ್ನು ಹಾಕಿತು. ಬಳಿಕ ಕರ್ಣನ ಮಗನಾದ ವೃಷಧ್ವಜನು ಕೈಗಳಂ ಮುಗಿದುಕೊಂಡು, ನಮ್ರಭಾವದಿಂದ ಅರಿಕೆ ಮಾಡಿಕೊಂಡನು ‖ ೧೩ ‖ ಎಲೈ ತಾತನಾದ ಧನಂಜಯನೇ! ಆಕಳಿನ ಹೆಜ್ಜೆಯ| ಗುರ್ತಿನಲ್ಲಿ ನಿಂತಿರುವ| ಜಲಕ್ಕೆ (ಅದನ್ನು ದಟಲು) ತೆಪ್ಪಬೇಕಾದೀತೆ? ಅದೇಕೆ ವೃಥಾ ಸೈನಿಕರನ್ನು ನೋಯಿಸುತ್ತಿ? ಇವರನ್ನೆಲ್ಲಾ ಹಿಂದಕ್ಕೆ ಬರುವಂತೆ ಮಾಡು, ಈದಿನ ನನಿಗೆ ಅನುಜ್ಞೆಯಾದಲ್ಲಿ ಶತ್ರು ಸೈನ್ಯವನ್ನೆಲ್ಲಾ ನಾಶಮಾಡಿ, ಕುದುರೆಯನ್ನು ಬಿಡಿಸಿ ತರುವೆನು, ಹಾಗೆ ನಾನು ತಾರದಿದ್ದರೆ ನನ್ನನ್ನು ಸೂತ್ಯ ಪುತ್ರನಾದ ಕರ್ಣನಕುಮಾರನೆಂದು ಕರೆದಾರೆ! ನಾನು ಬಾಲಕನೆಂಬ ಅನುಮಾನಬೇಡ, ನನ್ನ ಪರಾಕ್ರಮವಾದರೂ ನೋಡೆಂದು ರಥವನ್ನೇರಿದನು ‖ ೧೪ ‖ ಆಗ ವೃಷಕೇತುವು ತಾರಕಾಸುರನ ದೊಡ್ಡದಾದ ಸೈನ್ಯಕ್ಕೆ ಎದುರುಪಕ್ಷವಾಗಿ

ತಾರಕಾಸುರನಪೇರ್ಬಡೆಗೆಮ್ಮೆದೋರುವಕು | ಮಾರನಂತಾನಭ್ರಮಾರ್ಗದೋ | ಳ್ಸುಳಿವಮುಂಗಾರಮಿಂಚಂತನ್ನಹೊಂದೇರ ಜಲಕೆರಗ.ವಶನಿಯಂತನ್ನಘಾತಿ || ಹೇರಡವಿಗೈದುವದವಾಗ್ನಿಯಂತನ್ನಪ್ರ | ಚಾರಂನೆಗಳ್ವನಡುವಗಲರವಿಯಂತನ್ನವೀರ | ಪ್ರತಾಪಂತಿರಸ್ಕರಿಸೆವೃಷಕೇತುರಿಪುಸೈನ್ಯಮಂಪೊಕ್ಕನು || ೧೫ || ದೂರದೋಳ್ಕಂಡಂಸುಧನ್ವನಾತನಬರವ | ನಾರಿವಂಪಾರ್ಥ ನಾದೊಡೆಕಪಿಧ್ವಜಮಿಹುದು | ದಾರವೃಷಭಾಂಕಿತದಕೇತುದಂಡದಸುಭಟನಾವನೋಪಾಂಡವರೊಳು | ವೀರನಹನೆನುತಬಂದಿದಿ ರಾಂತನಿಂದುಪರಿವಾರಮಂತೆಗಿಸಿಬಿಲ್ದಿರುವನೊದರಿಸುತಕೈ | ವಾರಿಸುತನಸುನಗುತಬಾಣಮಂತೂ | ಗುತಿನಸುತಜನಂಬೆಸ ಗೊಂಡನು || ೧೬ || ಎಲವೊನೀನಾರ್ನಿನ್ನಪೆಸರದೇನಾವರ್ಷಿ | ಕುಲದವಂನಿನ್ನಪಿತನಾವಾತನೆಂಬುದಂ| ತಿಳುಪೆನಗೆತಾನೀಗವೀರ

---

ಟೀ|| ತಾನು ವೃಷಧ್ವಜನು ತಾರಕಾಸುರನ-ತಾರಕನೆಂಬ ದೈತ್ಯನ, ಪೇರ್ಬಡೆಗೆ-ದೊಡ್ಡದಾದ ಸೈನ್ಯಕ್ಕೆ, ಮೈದೋ ರುವ-ಎದುರಾಗಿ ಪ್ರವೇಶಿಸುವ, ಕುಮಾರಕನಂ-ಸುರಸೇನಾಧಿಪತಿಯಾದ ಗುಹನನ್ನು, ತನ್ನ-ತನ್ನಯ, ಹೊಂದೇರ-ಸುವರ್ಣ ಮಯವಾದ ರಥವು, ಅಭ್ರಮಾರ್ಗದೋಳ್-ಅಂತರಿಕ್ಷದಲ್ಲಿ, (ಮೇಘಮಾರ್ಗದಲ್ಲಿ) ಸುಳಿವ-ತಿರುಗಾಡುವ, ಮುಂಗಾರಮಿಂಚು-ಕಾರ್ಗಾಲದ ಆದಿಯಲ್ಲಿ ಉಂಟಾಗುವ ಹೊಳಪನ್ನು, ತನ್ನಘಾತಿ-ತನ್ನಯ ಪೆಟ್ಟು, ಜಲಕಕ್ಕೆ-ಉದುಕಕ್ಕೆ, ಎರಗುವ-ತಗಲುವ, ಅಶನಿಯಂ-ಸಿಡಿಲನು, ತನ್ನ-ತನ್ನಯ, ಪ್ರಚಾರಂ-ಅಭಿವೃದ್ಧಿಯು, ಹೇರಡವಿಗೆ-ದೊಡ್ಡ ಕಾಡಿಗೆ, ಐದುವ-ಉಂಟಾಗುವ, ದವಾಗ್ನಿಯಂ-ಕಾಡುಗಿಚ್ಚನ್ನು, ತನ್ನವೀರಪ್ರತಾಪಂ-ಶೂರತ್ವದ ಆಟೋಪವು, ನೆಗಳ್ವ - ಆವರಿಸಿ, ನಡುವಗಲರವಿಯಂ-ಮಧ್ಯಾಹ್ನ ಸಮಯದ ಭಾನುವನ್ನು, ತಿರಸ್ಕರಿಸೆ-ಹೀಯಾಳಿಸುತ್ತಿರಲು, ವೃಷಕೇತು-ಕರ್ಣನ ಮಗನಾದ ವೃಷಧ್ವಜನು, ರಿಪು ಸೈನ್ಯಮಂ-ಅರಿಬಲನನ್ನು, ಪೊಕ್ಕನು-ಪ್ರವೇಶಿಸಿದನು.

ಅ|| ವಿ|| (ಕಾರಿನ+ಮುಂದು) ಅ. ಸ. (ವೀರರ+ಪ್ರತಾಪ) ಷ. ತ. ವೀರ ತ್ಸ. ಬೀರ ದ್ಭ. ಅರಣ್ಯದಲ್ಲಿ ಕಾಳ್ಗಿಚ್ಚು, ಭೂಮಿಯಲ್ಲಿ ಗರ್ಭಾಗ್ನಿಯೂ, ಸಮುದ್ರದಲ್ಲಿ ಬಾಡವಾಗ್ನಿಯೂ ಇರುವುವಂತೆ || ೧೫ ||

ಟೀ|| ಸುಧನ್ವಂ-ಸುಧನ್ವನು, ಆತನ-ಆ ವೃಷಧ್ವಜನ, ಬರವನು-ಬರುವಿಕೆಯನ್ನು, ದೂರದೋಳ್-ದೂರದಿಂದಲೇ, ಕಂಡನು-ನೋಡಿದನು, ಇವಂ-ಈತನು, ಆರು-ಯಾರಾಗಿರಬಹುದು, ಪಾರ್ಥನು ಆದೊಡೆ-ಫಲ್ಗುಣನು ಆಗಿದ್ದರೆ, ಕಪಿಧ್ವಜಂ-ಕೇತುವಿನಲ್ಲಿ ಕೋತಿಯನ್ನುಳ್ಳದ್ದಾಗಿ, ಇಹುದು-ಇರುವುದು, ಉದಾರ-ಹೆಚ್ಚಾದ, ವೃಷಭ-ಎತ್ತೇ, ಅಂಕಿತದ-ಚಿಹ್ನೆಯುಳ್ಳ, ಕೇತುದಂಡದ-ಟೆಕ್ಕೆಯ ಕಂಬದ, ಸುಭಟನು-ವೀರನು, ಅಹನು-ಆಗಿರುವನು, ಎನುತ-ಎಂದು ಹೇಳುತ್ತ, ಬಂದು-ಬರದವ ನಾಗಿ, ಇದಿರಾಗಿ-ಎದುರಾಗಿ, ನಿಂದು-ನಿಂತುಕೊಂಡು, ಪರಿವಾರಮಂ-ತನ್ನ ಸುತ್ತಲಿದ್ದ ಜನವನ್ನು ತೆಗೆಸಿ-ಅಡ್ಡಬರದಂತೆ ಮಾಡಿ, ಬಿಲ್ದಿರುವನ.-ಧನುಸ್ಸಿನ ಹಗ್ಗವನ್ನು, ಒದರಿಸುತ-ಟಂಕಾರಧ್ವನಿಮಾಡುತ್ತಾ, ಕೈವಾರಿಸುತ-ಕೈಬಡಿಯುತ್ತ, ಶ್ಲಾಘಿ ಸುತ-ಸ್ತುತಿಸುತ್ತಾ, ನಸುನಗುತ-ಮುಗುಳ್ನಗೆನಗುತ್ತಾ, ಬಾಣಮಂ-ಅಂಬನ್ನು, ತೂಗುತ-ತಿರಿಗಿಸುತ್ತಾ, ಇನ-ಸೂರ್ಯನ, ಸುತ-ಪುತ್ರನಾದ ಕರ್ಣನಿಂದ, ಜನಂ-ಜನಿಸಿದ ವೃಷಕೇತುವನ್ನು, ಬೆಸಗೊಂಡನು-ಮಾತನಾಡಿಸಿದನು.

ಅ|| ವಿ|| ಇನ-ಸೂರ್ಯ. ಗಂಡ, (ಕೈಯ್ಯಂ + ಬಾರಿಸು) ಕ್ರಿ. ಸ. (ಬಿಲ್ + ತಿರವು) ದ. ಅ. ಸಂ (ಸುಷ್ಠು + ಭಟ) || ೧೬ ||

ಟೀ|| ಎಲವೊ - ಎಲೈ ! ನೀನುಆರು - ನೀನು ಯಾರು ? ನಿನ್ನಪೆಸರು - ನಿನ್ನ ನಾಮಧೇಯವು, ಅದೇನು ಯಾವುದು ? ಆವರ್ಷಿಕುಲದವಂ - ಯಾವ ಋಷಿಕುಲ ಪ್ರಸೂತನು, ನಿನ್ನಪಿತನು - ನಿನ್ನ ತಂದೆಯು, ಆವಾತನು- ಯಾರು ! ಎಂಬುದಂ-ಎಂಬ ವಿಷಯವನ್ನು, ಎನಗೆ-ನನಗೆ, ತಿಳಿಸು-ತಿಳಿಯಪಡಿಸು, ತಾನು-ನಾನು, ವೀರ-ಪರಾಕ್ರಮಿಯಾದ, ಹಂಸಧ್ವಜ

---

ಹೋಗುವ ದೇವತೆಗಳ ಸೇನಾಧ್ಯಕ್ಷನಾದ ಗುಹನನ್ನು, ತನ್ನ ಸ್ವರ್ಣಮಯವಾದ ರಥವು ಅಂತರಿಕ್ಷಮಾರ್ಗದಲ್ಲಿ ಸಂಚಾರಿಸುವ ಮುಂಗಾರು ಮಳೆಯಲ್ಲಿ ಬರುವ ಮಿಂಚನ್ನು, ತನ್ನಹೊಡೆತವು ನೀರಿಗೆ ಹೊಡೆಯುವ ಅಶನಿಯನ್ನು, ತನ್ನ ವ್ಯಾಪನೆಯು ಹೇರಡ ವಿಗೆ ಬಂದುಹೋಗುವ ದವಾನಲನನ್ನು, ತನ್ನ ಶೂರತ್ವದ ಆಟೋಪವು, ಮೇಘಾವರಣವಿಲ್ಲದೆ ವ್ಯಾಪಿಸಿ, ಮಧ್ಯಾಹ್ನಕಾಲದ ಭಾಸ್ಕರನನ್ನೂ ತಿರಸ್ಕಾರ ಮಾಡುತ್ತಿರಲು, ವೃಷಧ್ವಜನು ಅರಿಬಲನನ್ನು ಹೊಕ್ಕನು ||೧೫|| ಆ ಬಳಿಕ ಸುಧನ್ವನು, ವೃಷಕೇತು ವಿನ ಬರುವಿಕೆಯನ್ನುನೋಡಿ ಇವನು ಯಾರಿರಬಹುದು? ಅರ್ಜುನನಾಗಿದ್ದಪಕ್ಷದಲ್ಲಿ ಕಪಿಧ್ವಜನಲ್ಲವೆ? ದೊಡ್ಡದಾದ ಹೋರಿಯೇ ಧ್ವಜದಲ್ಲುಳ್ಳವನಾಗಿರ್ಪನು, ವೀರಭಟನಾಗಿರುವನು ಎಂದು ಹೇಳುತ್ತ ತನ್ನಸೈನ್ಯವನ್ನು ಕ್ರಮಗೊಳಿಸಿ, ವೃಷಧ್ವಜಂಗೆದುರಾಗಿ ಬಂದುನಿಂತು ಬಿಲ್ಲಿನ ಹೆದೆಯನ್ನುಸರಿಪಡಿಸಿಕೊಳ್ಳುತ್ತಾ ಕರ್ಣನ ಪುತ್ರನಾದ ವೃಷಕೇತುವಂ ಈರೀತಿಯಾಗಿ ವಿಚಾರಿಸಿದನು||೧೬|| ಏನೆಂದರೆ :—ಎಲವೊ ನೀನು ಯಾರು ? ನಿನ್ನ ನಾಮಧೇಯವೇನು ? ನೀನು ಯಾವ ಋಷಿಕುಲಕ್ಕೆ ಸೇರಿದವನು ? ನಿನ್ನತಂದೆ

ಹಂಸಧ್ವಜನೃಪನಕುಮಾರಂತನ್ನನು ‖ ಇಳೆಯೋಳ್ಸುಧನ್ವನೆಂಬರ್ಮಧುಚ್ಛಂದಮುನಿ | ತಿಲಕನಿಂದಾಯ್ತೆಮ್ಮವಂಶಮೆನೆ ಕರ್ಣಜಂ | ಬಳಿಕನಸುನಗೆಯೊಳೆಡಗೈಯಕೋದಂಡಮಂತಿರುಗಿಸುತಲಿಂತೆಂದನು ‖೧೭‖ ಗೂಢಮಾಗಿರ್ದಲರಪರಿಮಳಂಪ್ರಕಟಿಸದೆ | ರೂಢಿಸಿದವಂಶವಿಸ್ತಾರಮಂಪೌರುಷದ | ಹೇಡಿಯಿಂದರಿಯಬಾರದೆಸಮರಸಾಧನಮಿದರೊಳಹುದೆನಿನಗಾದೊಡೆ ‖ ಮೂಢಕೇಳ್ಕಶ್ಯಪನಕುಲವೆಮ್ಮದೆಂಬರಾ | ರೂಢನಾಗಿಹದಿನಮಣಿಯತನಯನಾಹವ | ಪ್ರೌಢಕರ್ಣಣಸುತಂಪೆಸರೆನಗೆವೃಷಕೇತುವೆಂದೊಡನನಿಂತೆಂದನು ‖೧೮‖ ಕರ್ಣಸುತನಾದೊಡೊಳ್ಳಿತುವೀರನಹುದುನೀ | ನಿರ್ಣೈಸಬಲ್ಲೆರಣರಂಗಮಂಮೂಢರಾ | ವರ್ಣಕದಮಾತುಗಳನರಿಯೆವೆನುತೆಚ್ಚಂಸುಧನ್ವನೀತನಸರಿಸಕೆ ‖ ಸ್ವರ್ಣಪುಂಖದಕಣೆಗಳೈದಿದವುಮಿಂಚಿನವೊ | ಗರ್ನಭೋ

---

ನೃಪನ–ಹಂಸಧ್ವಜನೆಂಬರಾಜನ, ಕುಮಾರಂ–ಪುತ್ರನು, ತನ್ನಂ–ನನ್ನನ್ನು, ಇಳೆಯೊಳ್–ಭೂಮಿಯಲ್ಲಿ, ಸುಧನ್ವಂ–ಸುಧನ್ವನು, ಎಂಬರ್–ಎಂದು ಕರೆಯುವರು, ಎಮ್ಮ–ನಮ್ಮ, ವಂಶಂ–ಗೋತ್ರವು, ಮಧುಚ್ಛಂದ ಮುನಿಯಿಂ–ಮಧುಚ್ಛಂದ ಮಹರ್ಷಿಯಿಂದ, ಆಯಿತು–ನಿರ್ಮಿತವಾಯಿತು, ಎನೆ–ಎಂದು ಹೇಳಲಾಗಿ, ಕರ್ಣಜಂ–ಕರ್ಣನ ಮಗನಾದ ವೃಷಕೇತುವು, ಬಳಿಕ–ಅನಂತರದಲ್ಲಿ, ನಸುನಗೆಯೊಳು–ಮಂದಹಾಸದಿಂದ, ಎಡಕೈಯ–ಎಡಕೈಯಲ್ಲಿದ್ದ, ಕೋದಂಡಂ–ಧನುವನ್ನು, ತಿರಿಗಿಸುತಲಿ–ತಿರುಗಿಸುತ್ತ, ಇಂತೆಂದನು–ಈ ಪ್ರಕಾರವಾಗಿ ಹೇಳಿದನು.

ಅ‖ ವಿ‖ ಎಡದ–ಕೈ, ಎಡಗೈ ಷ. ತ. ವಂಶ–ಕುಲ, ಬಿದಿರು, ಮಹ+ಋಷಿ=ಮಹರ್ಷಿ ಗುಣ ಸಂಧಿ ‖೧೭‖

ಟೀ‖ ಗೂಢಂ ಆಗಿರ್ದ–ಅಂತರಂಗವಾಗಿದ್ದ, ಅಲರ–ಹುವ್ವಿನ, ಪರಿಮಳಂ–ಸುವಾಸನೆಯು, ಪ್ರಕಟಿಸದೆ–ಬಹಿರಂಗಪಡಿಸದೆ ಹೋದೀತೆ, ರೂಢಿಸಿದ–ಬಹಿರಂಗವಾಗಿರುವ, ವಂಶ–ಗೋತ್ರದ, ವಿಸ್ತಾರಮಂ–ಬಿತ್ತರವನ್ನು (ವಿವರವನ್ನು), ಪೌರುಷದ ಹೇಡಿಯಿಂದ–ಪರಾಕ್ರಮವುಳ್ಳ ಕೈಲಾಗದವನಿಂದ, ಅರಿಯಬಾರದು–ತಿಳಿಯತಕ್ಕದ್ದಲ್ಲ, ಸಮರಕೆ–ಯುದ್ಧಕ್ಕೆ, ಸಾಧನಂ–ಸಾಮಗ್ರಿಯು, ಇದರೋಳ್–ನನ್ನನ್ನು ವಿಚಾರಿಸಿ ತಿಳಿಯುವದ್ದರಿಂದ, ನಿನಗೆ–ಪರಾಕ್ರಮಿಯಾದ ನಿನಗೆ, ಅಹುದೆ–ಆದೀತೆ, (ಆಗಲಾರದು) ಮೂಢ–ಅಜ್ಞಾನಿಯೆ, ಕೇಳ್–ತಿಳಿ, ಕಶ್ಯಪನ–ಕಶ್ಯಪಋಷಿಯ, ಕುಲವು–ಗೋತ್ರವು, ಎಮ್ಮದು–ನಮ್ಮದಾಗಿರುವುದು, ಎಂಬರು–ಈ ವಿಧದಿಂದ ಜನರು ಹೇಳುತ್ತಾರೆ, ಆರೂಢಂ ಆಗಿಹ–ಆ ಹೆಸರುವಾಸಿಯಾಗಿರುವ, ದಿನಮಣಿಯ–ಸೂರ್ಯನ, ತನಯನು–ಕುಮಾರನು, ಆಗಿ–ಆಗಿರುವ, ಆಹವ–ಕಾಳಗದಲ್ಲಿ, ಪ್ರೌಢ–ಬಲಾಢ್ಯನಾದ, ಕರ್ಣಸುತಂ–ಕರ್ಣನಿಗೆ ಪುತ್ರನು, ಎನಗೆ–ನನಗೆ, ಪೆಸರು–ಹೆಸರು, ವೃಷಕೇತುವು–ವೃಷಧ್ವಜನು, ಎಂದೊಡೆ–ಎಂದು ತಿಳಿಯಪಡಿಸಲು, ಅವನು–ಆ ಸುಧನ್ವನು, ಇಂತೆಂದನು–ಮುಂದಿನಂತೆ ಹೇಳಿದನು.

ಅ‖ ವಿ‖ ವಂಶ–ಬಿದಿರು, ಸಂತತಿ, (ಅಲರಿನ+ಪರಿಮಳ) ಷ. ತ. (ದಿನದ+ಮಣಿ) ಷ. ತ. ಮಣಿ–ರತ್ನ, ನಮಸ್ಕಾರಮಾಡುವುದು, ಕರ್ಣ–ಕಿವಿ, ಸೂರ್ಯಪುತ್ರ ‖೧೮‖

ಟೀ‖ ಕರ್ಣಸುತನು– ಕರ್ಣನಿಗೆ ಮಗನು, ಆದೊಡೆ– ಆಗಿದ್ದರೆ, ಒಳ್ಳಿತು– ಮೇಲಾಯಿತು, ವೀರನು–ಸಮರ್ಥನು, ಅಹುದು–ಆಗಿರಬಹುದು, ರಣರಂಗಮಂ–ಯುದ್ಧರಂಗವನ್ನು, ನೀ–ನೀನು, ನಿರ್ಣೈಸಬಲ್ಲೆ– ದೃಢಪಡಿಸಬಲ್ಲೆ, ಆವು–ನಾವಾದರೋ, ಮೂಢರು–ಏನೂ ತಿಳಿಯದವರು, ವರ್ಣಕದ–ಜಂಭದ, ಮಾತುಗಳಂ–ಮಾತುಗಳನ್ನು, ಅರಿಯೆವು–ತಿಳಿದವರಾಗಿಲ್ಲ, ಎನುತ– ಎಂದು ಹೇಳುತ್ತ, ಸುಧನ್ವಂ– ಸುಧನ್ವನು, ಎಚ್ಚಂ– ಬಾಣ ಪ್ರಯೋಗ ಮಾಡಿದನು, ಈತನ– ಈ ವೃಷಧ್ವಜನ, ಸರಿಸಕೆ–ಸಮೀಪಕ್ಕೆ, ಸ್ವರ್ಣ–ಕಾಂಚನಯುಕ್ತವಾದ, ಪುಂಖದ–ರೆಕ್ಕೆಗಳುಳ್ಳ, ಕಣೆಗಳು– ಅಂಬುಗಳು, ಐದಿದವು–ಹೊಂದಿದವು, ಮಿಂಚಿನ–ಹೊಳಪಿನ, ಬಗೆರ್–ಕಾಂತಿಯು, ನಭೋಮಂಡಲವನ್ನು – ಅಂತರಿಕ್ಷವನ್ನು, ಅಂಡಲೆಯಲು– ತುಂಬಿರಲು,

---

ಯಾರು ? ಎಂಬಂಶವನ್ನು ವಿವರಗೊಳಿಸುವನಾಗು. ನಾನಾದರೋ ಅಸಹಾಯಶೂರನಾದ ಚಂಪಕಾವತಿಯ ರಾಜನಾದ ಹಂಸಧ್ವಜನ ಕುಮಾರನು, ನನ್ನನ್ನು ಪೃಥ್ವಿಯಲ್ಲಿ ಸುಧನ್ವನೆಂದು ತಿಳಿವರು, ನಮ್ಮ ಕುಲವಾದರೋ ಮಧುಚ್ಛಂದಮಹರ್ಷಿಯಿಂದಾದುದು ಎನಲು ‖೧೭‖ ಆ ಬಳಿಕ ವೃಷಧ್ವಜನು ಕೋದಂಡವನ್ನು ಕೈಯ್ಯಲ್ಲಿ ತಿರುವುತ್ತ, ಗುಪ್ತವಾಗಿದ್ದ ಪುಷ್ಪದ ಪರಿಮಳವು ವ್ಯಕ್ತವಾಗದೆ ಹೋದೀತೆ? ನನ್ನಕುಲಗೋತ್ರಾದಿಗಳನ್ನು ವಿಚಾರಿಸುವುದು ಹೇಡಿಯಾದ ನಿನ್ನಿಂದಾದೀತೆ? ಸುಲಭೋಪಾಯವಾಗಿ ನಿನ್ನಿಂದ ತಿಳಿಯಲಾದೀತೆ? ಎಲೋ ಮೂಢನೆ! ಕೇಳು, ನಾನು ಕಶ್ಯಪಋಷಿಯ ಕುಲದವಂ, ಎಮ್ಮ ತಂದೆಯು ಸೂರ್ಯ ಪುತ್ರನಾದ ಕರ್ಣನೇ, ನಾನು ಅಂಥಾ ಕರ್ಣನಿಗೆ ಮಗನಾಗಿಯವೆನು, ಇಳೆಯೊಳಗೆನ್ನಂ ವೀರ ವೃಷಾಂಕನೆಂದಪರು, ಎನ್ನಲಾಗಿ, ಆಗ ಸುಧನ್ವನು ‖೧೮‖ ವೃಷಧ್ವಜನಂ ಕುರಿತು ಎಲೋ! ನೀನು ಕರ್ಣನ ಮಗನೇ ಆಗಿರಬಹುದು, ಅದರೆ ಬಹು ಒಳ್ಳೇದಾಯಿತು, ಯುದ್ಧರಂಗದಲ್ಲಿ ನಿನ್ನನ್ನು ನೀನು ಚಮತ್ಕಾರಮಾಗಿ ಕಾಪಾಡಿಕೊಳ್ಳಲು ಬಲ್ಲವನಾಗಿರುತ್ತಿ, ನಾವೇ

ಮಂಡಲನನಂಡಲೆಯಲಾಕ್ಷಣಂ | ದುರ್ನಿರೀಕ್ಷಣಮಾಗಲೆಡೆಯೊಳವನೆಲ್ಲನಂತರಿದಿವಂಕೋಲ್ಗರೆದನು ‖೧೯‖ ಬರಸಿಡಿಲಭರದಿಂದ ಮಿಂಚಿನಹೊಳಹಿನಿಂದ | ಬಿರುವಳೆಗಳೊತ್ತಿಂದಕರ್ಣಜಂಕಣೆಗಳಂ | ಕರೆವುತಿರೆನಡುವೆಖಂಡಿಸಿದಂಸುಧನ್ವನಾತನಸರಳ್ಗಳೆಡೆಯೊಳು ‖ ತರಿದಂವೃಷಧ್ವಜಂಬಳಿಕವನಕೋಲ್ಗಳಂ | ಬರಿಕ್ಯೆದನಾಮರಾಳಧ್ವಜನಸುತಸಿಂತು | ತೆರಹುಗುಡದೋರ್ವರೋರ್ವರಮೇಲೆಮುಳಿದುಜರಿದೆಚ್ಚಾಡಿದರ್ಧುರದೊಳು ‖೨೦‖ ಕ್ಷೋಣಿಗೆಸುಧನ್ವತಾನಿರೆನೀಂಸುಧನ್ವನೆ | ಮಾಣಿಸುವೆನೀಪೆಸರನೀಕ್ಷಣದೊಳೆಂದುಪೊಸ | ಸಾಣೆಯಲಗಿನಸರಳ್ಗಳನೆಚ್ಚುಕರ್ಣಜಂಪೋಳ್ಗಳವನಮ್ಯೆಯೊಳು ‖ ಕಾಣಿಸೆಕೆರಳ್ದೆಲವೊಮೇದಿನಿಗರಿಪುಪಂಚ | ಬಾಣವೃಷಕೇತುತಾನಿರಲಾಗಿವೃಷಕೇತು | ಮೇಣಂಟೆಪೇಳೆನುತಕೂರ್ಗಣೆಗರೆದನವನತನುವನು

---

ಆಕ್ಷಣಂ–ಆ ಕಾಲವು, ದುರ್ನಿರೀಕ್ಷಣಂ-ನೋಡಲು ಕಷ್ಟವಾದದ್ದು, ಆಗಲು–ಆಗಲಾಗಿ, ಅವಂ–ಆ ವೃಷಧ್ವಜನು, ಅವಂ-ಎಲ್ಲವಂ ಆ ಬಾಣಗಳೆಲ್ಲವನ್ನೂ, ಎಡೆಯೊಳು–ಬರುತ್ತಿರುವ ಮಾರ್ಗದಲ್ಲಿಯೇ, ತರಿದು-ತುಂಡುಮಾಡಿ, ಕೋಲ್ಗರೆದನು–ಬಾಣವನ್ನು ಸುರಿಸಿದನು.

ಅ‖ ವಿ‖ ಕೊಲ್+ಕರೆ ಗ. ಆ. ಸಂಧಿ. ಸ್ವರ್ಣ, (ತ್ಸ) ಚಿನ್ನ (ದ್ಭ) ‖೧೯‖

ಟೀ‖ ಬರಸಿಡಿಲ–ಬರಗಾಲದ ಸಿಡಿಲು ಬೀಳುವಿಕೆಯ, ಭರದಿಂದ–ಜಾಗ್ರತೆಯಿಂದ, ಮಿಂಚಿನ-ಹೊಳಪಿನ, ಹೊಳಹಿನಿಂದ–ಪ್ರಕಾಶಿಸುವದರಿಂದ, ಬಿರುಮಳೆಗಳ–ಬಿರುಸಾದ ವೃಷ್ಟಿಗಳ, ಒತ್ತಿನಿಂದ-ಗುಂಪಿನಿಂದ, ಕರ್ಣಜಂ–ಕರ್ಣನ ಮಗನಾದ ವೃಷಕೇತುವು, ಕಣೆಗಳಂ-ಶರಗಳನ್ನು, ಕರೆವುತಿರೆ–ಸುರಿಸುತ್ತಿರಲು, ನಡುವೆ–ಮಧ್ಯಭಾಗದಲ್ಲಿ, ಸುಧನ್ವಂ–ಸುಧನ್ವನು, ಖಂಡಿಸಿದಂ-ಛೇದಿಸಿದನು, ಆತನ–ಆ ಸುಧನ್ವನ, ಸರಳ್ಗಳಂ-ಕೋಲ್ಗಳನ್ನು, ಎಡೆಯೊಳು-ಬರುವ ದಾರಿಯಲ್ಲಿಯೇ, ವೃಷಧ್ವಜಂ-ವೃಷಕೇತುವು, ತರಿದಂ–ತುಂಡುಮಾಡಿದನು, ಬಳಿಕ–ತರುವಾಯ, ಅವನ–ಆ ವೃಷಕೇತುವಿನ, ಕೋಲ್ಗಳಂ – ಬಾಣಗಳನ್ನು, ಆ ಮರಾಳಧ್ವಜನ ಸುತಂ-ಹಂಸಧ್ವಜನ ಮಗನಾದ ಸುಧನ್ವನು, ಬರಿಗೈದನು-ಏನೂ ಇಲ್ಲದಂತೆ ಮಾಡಿದನು, ಇಂತು–ಈ ರೀತಿಯಾಗಿ, ತೆರಹುಗೊಡದೆ-ಅವಕಾಶಕೊಡದೆ, ಓರ್ವರು-ಒಬ್ಬರು, ಓರ್ವರಮೇಲೆ–ಇನ್ನೊಬ್ಬರ ಮೇಲೆ, ಮುಳಿದು-ಸಿಟ್ಟುಗೊಂಡು, ಜರೆದು–ತಿರಸ್ಕರಿಸಿ, ಧುರದೋಳ್–ಸಮರದಲ್ಲಿ, ಎಚ್ಚಾಡಿದರ್–ಬಡಿದಾಡಿದರು.

ಅ‖ ವಿ‖ ಜರೆ–ಮುಪ್ಪು, ತಿರಸ್ಕಾರ, (ಬಿರುಸಾದ ಮಳೆ) ವಿ. ಪೂ. ಕ. ಶರ–ಬಾಣ, ನೀರು. ‖೨೦‖

ಟೀ‖ ಕ್ಷೋಣಿಗೆ–ಭೂಮಿಯೊಳಗೆ, ತಾನು–ನಾನು, ಸುಧನ್ವ–ಉತ್ತಮವಾದ ಬಿಲ್ಲುಳ್ಳವನಾದ್ದರಿಂದ ಸುಧನ್ವನೆಂಬ ಪೆಸರಿಗೆ ಯೋಗ್ಯನಾದ ನಾನು, ಇರೆ–ಇರಲು, ನೀಂ–ನೀನು, ಸುಧನ್ವನೆ–ಒಳ್ಳೆ ಬಿಲ್ಲುಳ್ಳವನಾದೀಯ? ಈ ಕ್ಷಣದೊಳು-ಒಂದು ಕ್ಷಣಮಾತ್ರದಲ್ಲಿ, ಈ ಪೆಸರಂ-ಈ ಹೆಸರನ್ನು, ಮಾಣಿಸುವೆಂ–ಕಳೆದು ಬಿಡುವೆನು, ಎಂದು-ಎಂಬದಾಗಿ, ಪೊಸ–ನೂತನವಾಗಿ, ಸಾಣೆಯಂ–ತೀಡಿಯಿದ್ದ, ಅಲಗಿನ–ಮೊನೆಯುಳ್ಳ, ಸರಳ್ಗಳ – ಬಾಣಗಳನ್ನು, ಅವಂ ಕರ್ಣಜಂ–ಆ ವೃಷಕೇತುವು, ಅವನಂ–ಆ ಸುಧನ್ವನನ್ನು, ಎಚ್ಚು–ಹೊಡೆದು, ಅವನಮ್ಯೆಯ್ಯೊಳು–ಶರೀರದಲ್ಲಿ, ಪೋಳ್ಗಳ-ಘಾಯಗಳನ್ನು, ಕಾಣಿಸೆ–ಉಂಟುಮಾಡಲಾಗಿ, ಆವಂ–ಆ ಸುಧನ್ವನು, ಕೆರಳ್ದು–ಕೋಪಿಸಿ, ಎಲವೊ–ಎಲಾ, ಮೇದಿನಿಗೆ–ಪೃಥ್ವಿಯೊಳಗೆ, ರಿಪು–ಹಗೆಯೆಂಬ, ಪಂಚಬಾಣ–ಮದನನಿಗೆ, ವೃಷಕೇತು-ಈಶ್ವರಪ್ರಾಯನು, (ವೃಷಭಾಂಕನು) ಎಂದರೆ ವೃಷಧ್ವಜನೆಂಬ ಹೆಸರಿಗೆ ಅರ್ಹನಾದವನು, ತಾಂ–ನಾನು, ಇರೆ–ಇರಲಾಗಿ, ಮೇಣ್–ಮತ್ತು, ವೃಷಕೇತು–ವೃಷಧ್ವಜನೆಂಬುವನು, ಉಂಟೆ– ಇದಾರೆಯೆ, ಹೇಳೆನುತ–ಪೇಳು ಎನ್ನುತ್ತ, ಅವನ–ಆ ವೃಷಕೇತುವಿನ, ತನುವಂ–ಶರೀರವನ್ನು, ಉಚ್ಚಳಿಸುವಂತೆ-ಎಗರಿ ಬೀಳುವ ಹಾಗೆ, ಕೂರ್ಗಣೆಗರೆದನು–ಹರಿತವಾದ ಬಾಣಗಳನ್ನು ಸುರಿಸಿದನು.

---

ನೋ ಮೂಢರೆಂಬುದನ್ನು ಬಲ್ಲೆ, ನಿನ್ನಂತೆ ಬಿನ್ನಾಣದ ಮಾತುಗಳನ್ನು ಅರಿತವನಲ್ಲ, ಎಂದು ಬಾಣವಂ ಪ್ರಯೋಗಿಸಲು ಅವು ವೃಷಧ್ವಜನ ಹತ್ತಿರಕ್ಕೆ ಮಿಂಚನ್ನು ತಿರಸ್ಕರಿಸುವ ಚಿನ್ನದ ಪುಂಖಗಳುಳ್ಳ ಗರಿಗಳಿಂದಾವೃತವಾದದ್ದಾಗಿ ಬರುತ್ತಿರಲು ದಾರಿಯಲ್ಲಿಯೇ ಕತ್ತರಿಸಿ, ವೃಷಧ್ವಜನು ಆ ಸುಧನ್ವನಮೇಲೆ ಬಾಣವೃಷ್ಟಿಯಂ ಸುರಿಸಿದನು ‖ ೧೯ ‖ ಆಗ ವೃಷಕೇತುವು ಸುರಿಸಿದ ಬಾಣಗಳು ಮಹತ್ತರವಾದ ಅಶನಿಪಾತದ ರಭಸದಿಂದಲೂ, ಮಿಂಚಿನಂತೆ ಹೊಳಪಿನಿಂದಲೂ, ಬಿರುಮಳೆಗಳ ಸಂಗದಿಂದಲೂ, ಅತಿ ರಭಸವಾಗಿ ಬರುತ್ತಿರಲು, ಅವು ಬರುವ ಮಾರ್ಗದಲ್ಲಿಯೇ ಸುಧನ್ವನು ಕತ್ತರಿಸಿದನು. ಆ ಸುಧನ್ವನ ಶರಗಳನ್ನು ವೃಷಕೇತುವೂ ಕೂಡ ಅವು ಬರುವ ಮಾರ್ಗದಲ್ಲಿಯೇ ಕತ್ತರಿಸಿದನು. ಈ ಪ್ರಕಾರವಾಗಿ ಒಬ್ಬರನ್ನೊಬ್ಬರು ತಿರಸ್ಕಾರಮಾಡುತ್ತ ಯುದ್ಧಮಾಡುತ್ತಿದ್ದರು ‖೨೦‖ ಆಬಳಿಕ ವೃಷಕೇತುವು ಸುಧನ್ವನಂ ನೋಡಿ ಎಲವೊ! ಪೃಥ್ವಿಯಲ್ಲಿ ಒಳ್ಳೆಯ ಧನುಸ್ಸುಳ್ಳ ನಾನು ಸುಧನ್ವನೆಂದಿರಲಾಗಿ, ನೀನು ಸುಧನ್ವನಾದೀಯಾ? ಈ ಹೆಸರನ್ನು ಈಗಲೇ ತೋರಿಸುತ್ತೇನೆ ನೋಡೆಂದು

ಚ್ಚಳಿಸುವಂತೆ ‖ ೨೧ ‖ ಭುಗಿಭುಗಿಸೆಕೋಪಾಗ್ನಿಮೂಡಿಗೆಯಕೋಲ್ಗಳಂ । ತೆಗೆತೆಗೆದುಕರ್ಣತನಯುಂಸುಧನ್ವನರಥದ । ಬಗೆಬಗೆಯೊಳಮರ್ದೆಸೆವಛತ್ರಚಾಮರಸಿಂಧುಸೀಗುರಿಪತಾಕೆಗಳನು ‖ ಮೊಗವೊಗಿಸಿಮುಂಬರಿವಕುದುರೆಸಾರಥಿಗಳಂ । ಝುಗಝುಗಿಪಕವಚಮುಂತನ್ನ ಕಣೆಯುಂನಡುವೆ । ತಗತಗವಕೋಲ್ಗಳಂತರಿದವನಬಿಲ್ಲನಿಕ್ಕಡಿಗೈದ.ಬೊಬ್ಬಿರಿದನು ‖೨೨‖ ತಂದರಾಗಳೆ ಸುಧನ್ವಂಗೆಮಣಿಮಯದಮು । ತ್ತೊಂದ.ರಥಮುಂಬಳಿಕಬಿಲ್ವಿಡಿದುಜೇಗೈದು । ನಿಂದುನಿಡುಗಣೆಗಳಿಂತೆಗದೆಚ್ಚುಕರ್ಣಜನ ಕೈಮೆಗಿಮ್ಮಿಗಿಲಾಗಲು ‖ ಸ್ಯಂದನತುರಂಗಸಾರಥಿಗಳಂಕವಚಮುಂ । ಸಿಂಧುಸೀಗುರಿಛತ್ರಚಾಮರಪತಾಕೆಗಳ । ನಂದುಕತ್ತ

ಅ‖ ವಿ‖ (ಕೂರ್+ಕಣೆ ಕೂರ್ಗಣೆ), ಆದೇಶಸಂಧಿ. ಸಾಣೆ (ದ್ಭ) ಶಾಣ (ತ್ಸ) ‖೨೧‖

ಟೀ‖ ಕೋಪಾಗ್ನಿ – ಮುನಿಸೆಂಬ ಅಗ್ನಿಯು, ಭುಗಿಭುಗಿಸೆ - ಭುಗ್ ಭುಗ್ ಎಂದು ಉರಿಯುತ್ತಿರಲು, ಕರ್ಣತನಯುಂ-ಕರ್ಣನ ಪುತ್ರನಾದ ವೃಷಧ್ವಜನು, ಮೂಡಿಗೆಯ-ಬತ್ತಳಿಯಲ್ಲಿರುವ, ಕೋಲ್ಗಳಂ-ಬಾಣಗಳನ್ನು, ತೆಗೆತೆಗದು-ಬಹುವಾಗಿ ತೆಗದುಕೊಂಡು, ಸುಧನ್ವನ, ರಥದ-ವರೂಥದ, ಬಗೆಬಗೆಯೊಳು- ನಾನಾವಿಧವಾಗಿ, ಅಮರ್ದು - ಯೋಗ್ಯವಾಗಿ, ಎಸೆವ-ಹೊಳೆಯುವ, ಛತ್ರ-ಕೊಡೆಯು, ಚಾಮರ-ಚೌರಿಯು, ಸಿಂಧ - ಕೇತನವು, ಸೀಗುರಿ - ಸೂರೆಪಾನೆಯು, ಪತಾಕೆಗಳನು-ನಿಶಾನಿ ಇವುಗಳನ್ನು, ಮೊಗವೊಗಿಸಿ-ಸುತ್ತಿಸುತ್ತಿಸಿ, ಮುಂಬರಿವ - ಮುಂದಕ್ಕೆ ಓಡಿಬರುವ, ಕುದುರೆಸಾರಥಿಗಳಂ-ತುರಗ ಮತ್ತು ರಥ ಹೊಡೆವವನನ್ನು, ಝುಗಝುಗಿಪ-ಹೊಳೆಯುತ್ತಿರುವ, ಕವಚಮುಂ-ಅಂಗಿಯನ್ನು, ತನ್ನ-ಸುಧನ್ವನ, ಕಣೆಯುಂ-ಶರವನ್ನು, ನಡುವೆ-(ಬಾಣವು ಬರುತ್ತಿರುವಾಗ) ಮಧ್ಯಭಾಗದಲ್ಲಿ ತಗತಗವ-ಭಿನ್ನಿಸುತ್ತಿರುವುದಾದ, ಕೋಲ್ಗಳಂ-ಬಾಣಗಳನ್ನು, ತರಿದು-ಕತ್ತರಿಸಿ, ಅವನ ಬಿಲ್ಲನು-ಆ ಸುಧನ್ವನ ಧನುವನ್ನು, ಇಕ್ಕಡಿಗೈದು-ಎರಡು ಭಾಗಮಾಡಿ, ಬೊಬ್ಬಿರಿದನು-ಗರ್ಜಿಸಿದನು.

ಅ‖ ವಿ‖ ಭುಗ್ ಭುಗ್-ಅ, ಅವ್ಯಯ, (ಇರ್+ಕಡಿ) ದ್ವಂ, ಸ. (ಕೋಪವೆಂಬ ಅಗ್ನಿ, ಕೋಪಾಗ್ನಿ) ಸಂ. ಪೂ. ಕ. ಛತ್ರ ಚಾಮರ ಸಿಂಧಸೀಗುರಿ ಪತಾಕೆಗಳು) ಬಹು. ದ್ವಂ. ಸ. ‖೨೨‖

ಟೀ‖ ಸೇವಕರು, ಆಗಳೆ-ಕೂಡಲೆ, ಸುಧನ್ವಂಗೆ-ಸುಧನ್ವನಿಗೆ, ಮಣಿಮಯದ-ರತ್ನಖಚಿತವಾದ, ಮತ್ತೊಂದು-ಬೇರೆಯಾದ (ಹೊಸದಾದ) ರಥವನು-ವರೂಥವನ್ನು, ತಂದರು-ತೆಗದುಕೊಂಡು ಬಂದರು, ಬಳಿಕ-ತರುವಾಯ, ಬಿಲ್ವಿಡಿದು-ಧನುರ್ಧಾರಿಯಾಗಿ, ಜೇಗೈದು-ಬಿಲ್ಲಿನ ಹಗ್ಗವನ್ನು ಬಿಗಿಮಾಡಿ, ನಿಂದು-ನಿಂತುಕೊಂಡು, ನಿಡುಕಣೆಗಳಿಂ-ಉದ್ದವಾದ ಬಾಣಗಳಿಂದ, ತೆಗದೆಚ್ಚು-ಪ್ರಯೋಗಿಸಲಾಗಿ, ಕರ್ಣಜನ-ವೃಷಕೇತುವಿನ, ಕೈಯ್ಮೆಗೆ-ಕೈ ಚಳಕಕ್ಕೆ. ಇಮ್ಮಿಗಿಲ್ ಆಗಲುಎರಡುಪಾಲು ಹೆಚ್ಚಿಬರಲು, ಸ್ಯಂದನ-ತೇರು, ತುರಂಗ-ಕುದುರೆ, ಸಾರಥಿ-ರಥ ನಡಿಸುವವರನ್ನು, ಕವಚಮುಂ-ಧರಿಸಿದ್ದ ಅಂಗಿಯನ್ನು, ಸಿಂಧ-ಧ್ವಜವು, ಸೀಗುರಿ-ಸೂರೇಪಾನವು, ಛತ್ರ ಕೊಡೆಯು, ಚಾಮರ-ಚೌರಿಯು, ಪತಾಕೆಗಳಂ-ಸಣ್ಣನಿಶಾನಿ ಇವುಗಳನ್ನು, ಅಂದು-ಆಗ, ಕತ್ತರಿಸಿ-ಛೇದಿಸಿ, ವೃಷಕೇತುವಿನ-ವೃಷಧ್ವಜನ, ಕರದ-ಕೈಯಲ್ಲಿರುವ, ಕೋದಂಡಮಂ-ಬಿಲ್ಲನ್ನು, ಖಂಡಿಸಿದಂ-**ತುಂಡ**.ಮಾಡಿದನು.

ಅ‖ ವಿ‖ (ಬಿಲ್ಲಂ + ಪಿಡಿದು ಬಿಲ್ವಿಡಿದು) ಕ್ರಿ. ಸ. (ಕರದ + ಕೋದಂಡ, ಕರಕೋದಂಡ) ಷ. ತ. ನಿಡಿದು +

ಸುಧನ್ವನ ಶರೀರದಲ್ಲಿ ನರಗಳು ಕಿತ್ತುಬರುವಂತೆ ಬಾಣಪ್ರಯೋಗವನ್ನು ಮಾಡಲಾಗಿ, ಆಗ ಸುಧನ್ವನು ರೇಗಿ ಎಲೋ, ಮೇದಿನಿಯಲ್ಲಿ ಪಂಚಬಾಣನಿಗೆ ಶತ್ರುವಾದ ಎಂದರೆ ಫಾಲಾಕ್ಷ ಸ್ವರೂಪನಾದ (ಸುಧನ್ವನಾದ), ನಾನು ಇರಲಾಗಿ, ನಿನಿಗೆ ವೃಷಧ್ವಜನೆಂಬ ಪೆಸರು ಸಲ್ಲುವುದೇ? (ಎಂದಿಗೂ ಇಲ್ಲ) ಎಂಬದಾಗಿ ವೃಷಕೇತುವಿನ ಶರೀರವು ಕತ್ತರಿಸಿ ತುಂಡಾಗಿ ಹೋಗುವಂತೆ ಬಾಣಪ್ರಯೋಗಮಾಡಿ, ಈ ಬಾಣಪ್ರಹಾರದಿಂದ ಜೀವಿತನಾಗಿದ್ದರೆ ನನಿಗೆ ಉತ್ತರವನ್ನು ಹೇಳೆಂದು ದೂಷಿಸಿದನು ‖ ೨೧ ‖ ಆಗ ಕೋಪವೆಂಬ ಅಗ್ನಿಯು ಪ್ರಜ್ವಲಿಸುತ್ತ ಕೆಂಗೆಂಡಗಳನ್ನು ಉದರಿಸುತ್ತಿರಲು, ವೃಷಕೇತುವು ಬತ್ತಳಿಕೆಯಿಂದ ಶರಗಳನ್ನು ತೆಗೆದು ತೆಗೆದು, ಸುಧನ್ವನ ರಥದಲ್ಲಿ ನಾನಾಬಗೆಯಾಗಿ ಕಂಗೊಳಿಸುತ್ತಿದ್ದ ಛತ್ರ, ಚಾಮರಾದಿಗಳನ್ನೂ ಧ್ವಜ, ಪತಾಕೆಗಳಳನ್ನೂ, ಮುಂದಾಗಿ ನುಗ್ಗಿಬರುವ ವೀರರನ್ನೂ ಮತ್ತು ಹಸ್ತ್ಯಶ್ವರಥ ಪದಾತಿಗಳನ್ನೂ, ಸಾರಥಿಯನ್ನೂ ಹೊಳೆಹೊಳೆವ ಕವಚವನ್ನೂ ಇವೇ ಮೊದಲಾದವನ್ನೆಲ್ಲಾ ಕತ್ತರಿಸಿ ಅರ್ಭಟಿಸಿದನು ‖೨೨‖ ಆಗಲೇ ಆ ಸುಧನ್ವಂಗೆ ಬೇರೊಂದು ಮಣಿಮಯ ವರೂಥವನ್ನು ಅವನ ಕಡೆಯವರು ಸಿದ್ಧಪಡಿಸಲು ಸುಧನ್ವನು ಅದನ್ನು ಏರಿದವನಾಗಿ ಧನುಷ್ಟಂಕಾರವಂ ಮಾಡಿ, ಉದ್ದವಾದ ನಾರಾಚಗಳಿಂದ ವೃಷಕೇತುವಿನ ಕೈಚಳಕಕ್ಕೆ ಮೂರರಷ್ಟೋ ಎನ್ನುವಂತೆ, ಕರ್ಣನ ಮಗನ ಆನೆ, ಕುದುರೆ, ರಥ, ಪದಾತಿ, ಛತ್ರ, ಚಾಮರ, ಮೊದಲಾದವನ್ನು ಕತ್ತರಿಸಿ ವೃಷಾಂಕನ ಕರದ ಕೋದಂಡವನ್ನು ಎರಡು ತುಂಡುಮಾಡಿ ಬೊಬ್ಬಿರಿದನು ‖

ರಿಸಿವೃಷಕೇತುವಿನಕರದಕೋದಂಡನುಂಖಂಡಿಸಿದನು ‖ ೨೩ ‖ ವಿರಥನಾದೊಡೆಕರ್ಣಸೂನುಕೈಗೆಡದೆಸಂ | ಗರದೊಳಸಿಮುದ್ಗರಮುಸುಂಡಿತೋಮರಖಡ್ಗ | ಪರಶುಗದೆಚಕ್ರಡೊಂಕಣಿಕುಂತಶೂಲಪಟ್ಟಿಸಭಿಂಡಿವಾಳಶಕ್ತಿ ‖ ಸುರಗಿಮೊದಲಾಗಿರ್ದ ಕೈದುಗಳಪರಿವಿಡಿಯೊ | ಳುರವಣಿಸಿಪೊಯ್ದಂಸುಧನ್ವನಂಮತ್ತವನ | ಪೊರೆಯುಪರಿವಾರಮಂನಾನಾಪ್ರಹಾರದಿಂದೈದೆಘಾತಿಸುತಿರ್ದನು ‖ ೨೪ ‖ ಅತ್ತಲಂತಿರಲಿತ್ತಲಿನನಸಾರಥಿಬೇಗ | ಮತ್ತೊಂದುರಥಮಂತರಲ್ಕದನಡರ್ದುಮಸೆ | ವೆತ್ತಕೂರ್ಗಣೆಗಳಂ ಕರ್ಣಜಂತೆಗದೆಚ್ಚಡಾಸುಧನ್ವನಮೈಯೊಳು ‖ ತೆತ್ತಿಸಿದವಂಬೊಡಲೊಳಿಡಿದತನಿವೀರರಸ | ವೊತ್ತರಿಸಿಮೈಯ್ಯುಕ್ಕುವಂದದಿಂ ಬಸಿನಬಿಸಿ | ನೆತ್ತರೆಸದಿರೆಕೆರಳ್ದೆಚ್ಚಡಾಕೋಲ್ಗಳಂತರಿವುತ್ತಲಿವನೆಚ್ಚನು ‖ ೨೫ ‖ ನಭಕುಪ್ಪರಿಸಿನೆಲಕೆಪಾಯ್ದೆಡಬಲಕೆಮುರಿದು | ರಭಸದಿಂದಾರ್ದೋರ್ಗ್ರೋರ್ಗ್ರರಂಪಿಸಾರ್ದೊದಗಿ | ವಿಭವದಿಂದಖಿಳಶಸ್ತ್ರಾಸ್ತ್ರದಿಂಸಮವಿಷಮಸೋಲುಗೆಲವುಗಳಿಲ್ಲದೆ ‖

---

ಕಣೆ-ನಿಡ ಗಣೆ) ವಿ. ಪೂ. ಕ. ಕವಚ-ಅಂಗಿ, ಕುಪ್ಪಸ, (ಕವಚವುಳ್ಳವನು-ಕವಚಿ) ‖ ೨೩ ‖

ಟೀ‖ ಕರ್ಣಸೂನು-ಕರ್ಣನ ಮಗನಾದ ವೃಷಕೇತುವು, ವಿರಥನು-ತೇರಿಲ್ಲದವನು, ಆದೊಡೆ-ಆಗಿದ್ದಾಗ್ಯೂ, ಕೈಗೆಡದೆ-ಕೈ ಚಮತ್ಕಾರ ಕೆಡದಂತೆ, ಸಂಗರದೊಳು-ಕಾಳಗದಲ್ಲಿ, ಅಸಿ-ಕತ್ತಿಯು, ಮುದ್ಗರ-ಮುಮ್ಮೊಲೆಯುಳ್ಳ ಆಯುಧವು, ಮುಸುಂಡಿ-ಸಣ್ಣ ದೊಣ್ಣೆಯು, ತೋಮರ-ಕೋಲು, ಖಡ್ಗ-ಕತ್ತಿಯು, ಪರಶು-ಗಂಡಗೊಡಲಿಯು, ಗದೆ-ಗದಾಯುಧವು, ಚಕ್ರ-ಗುಂಡಾದ ಆಯುಧವು. ಡೊಂಕಣಿ-ಆಯುಧ ವಿಶೇಷವು, ಕುಂತ-ಕೊಂತಾಯುಧವು, ಶೂಲ-ತ್ರಿಶೂಲವು, ಪಟ್ಟಿಸ-ಮಸೆಯಿಟ್ಟಕತ್ತಿಯು, ಭಿಂಡಿವಾಳ-ಲಾಳ ಮುಂಡಿಗೆಯು, ಶಕ್ತಿ-ಶಕ್ತ್ಯಾಯುಧವು, ಸುರಗಿ-ಸುರಗಿಯು, ಮೊದಲಾಗಿರ್ದ-ಆದಿಯಾಗಿದ್ದಂಥ, ಕೈದುಗಳ-ಆಯುಧಗಳ, ಪರಿವಿಡಿಯೊಳು-ವರಸೆಯಿಂದ, ಉರುವಣಿಸಿ-ಕೋಪಮಾಡಿ, ಸುಧನ್ವನಂ-ಸುಧನ್ವನನ್ನು, ಪೊಯ್ದಂ-ಪುನಹ ಹೊಡೆದನು, ಮತ್ತೆ-ಇನ್ನು, ಅವನ- ಆ ಸುಧನ್ವನ, ಪೊರೆಯು-ಹತ್ತಿರದಲ್ಲಿರುವ, ಪರಿವಾರಮಂ-ಕಾವಲಿದ್ದ ಜನರನ್ನು, ನಾನಾಪ್ರಹಾರದಿಂದ-ಅನೇಕವಿಧವಾಗಿ ಹೊಡೆಯುವಿಕೆಯಿಂದ, ಘಾತಿಸುತಿರ್ದನು-ಕೊಲ್ಲುತ್ತಿದ್ದನು.

ವ್ಯಾ‖ ವಿ‖ (ಕೈ+ಕೆಡೆ, ಕೈಗೆಡೆ) ಗ. ಕಾರ. ಆ ಸಂಧಿ ‖ ೨೪ ‖

ಟೀ‖ ಅತ್ತಲು-ಆ ವೃಷಕೇತುವಿರುವ ಕಡೆಯಲ್ಲಿ, ಅಂತಿರಲು-ಆರೀತಿಯಾಗಿರುತ್ತಿರಲು, ಇತ್ತಲು-ಈಕಡೆಯಲ್ಲಿ, ಇವನಸಾರಥಿ-ಇವನ ರಥ ನಡಿಸುವನು, ಬೇಗ- ಜಾಗ್ರತೆಯಿಂದ, ಮತ್ತೊಂದು ರಥಮಂ- ಹೊಸ ರಥವನ್ನು, ತರಲ್ಕೆ-ತರಲಾಗಿ, ಅದಂ-ಆ ಹೊಸ ರಥವನ್ನು, ಅಡರ್ದು-ಹತ್ತಿಕೊಂಡು, ಮಸೆವೆತ್ತ-ಸಾಣಿ ಹಿಡಿದಿದ್ದ, ಕೂರ್ಗಣೆಗಳಂ-ಹರಿತವಾದ ಬಾಣಗಳನ್ನು, ಕರ್ಣಜಂ-ವೃಷಕೇತುವು, ತೆಗದೆಚ್ಚಡೆ-ಬಾಣಪ್ರಯೋಗ ಮಾಡುತ್ತಿರಲಾಗಿ, ಮೈಯೊಳು-ಶರೀರದಲ್ಲಿ, ತೆತ್ತಿಸಿದುವು-ನೆಟ್ಟುವು, ಅಂಬು-ಶರವು, ಒಡಲೊಳು-ಶರೀರದಲ್ಲಿ, ಇಡಿದ-ತುಂಬಿದ್ದ, ತನಿ-ತಂಪಾದ(ಹದವಾದ) ವೀರರಸಂ-ಶೂರರಸವು, ಒತ್ತರಿಸಿ-ಬಲವಾಗಿ ನೂಕಿ, ಮೈ-ದೇಹದಿಂದ, ಉಕ್ಕುವಂದದಿಂ-ಉಬ್ಬಿಬರುವ ರೀತಿಯಿಂದ, ಬಸಿನ-ಸುರಿಯುವ, ಬಿಸಿನೆತ್ತರ್-ಬೆಚ್ಚಗಿರುವ ರಕ್ತವು, ಎಸೆದಿರೆ - ಕಾಂತಿಯುಕ್ತನಾಗಿರಲು, ಅನಂ-ಆ ಸುಧನ್ವನು, ಕೆರಳ್ದು-ರೇಗಿ, ಎಚ್ಚಡೆ-ಹೊಡೆಯಲು, ಇವಂ-ಈ ವೃಷಧ್ವಜನು. ಆಕೋಲ್ಗಳಂ-ಆ ಬಾಣಗಳನ್ನು, ತರಿವುತ್ತಲ್-ಕತ್ತರಿಸುತ್ತಲೂ, ಎಚ್ಚನು - ಬಾಣಪ್ರಯೋಗ ಮಾಡಿದನು.

ವ್ಯಾ‖ ವಿ‖ (ಅತ್ತಲ್-ಇತ್ತಲ್ ಇವು) ಅವ್ಯಯಗಳು, (ಕೂರಿತ್ತು + ಕಣೆ, ಕೂರ್ಗಣೆ) ವಿ. ಪೂ. ಕ. (ಅವು+ಕೋಲ್ಗಳು, ಆಕೋಲ್ಗಳು) ಗ. ಸ. ‖ ೨೫ ‖

ಟೀ‖ ನಭಕೆ-ಅಂತರಿಕ್ಷಕ್ಕೆ, ಉಪ್ಪರಿಸಿ - ಎಗರಿ, ನೆಲಕೆ-ಭೂಮಿಗೆ, ಹಾಯ್ದು-ಇಳಿದು (ಧುಮುಕಿ) ಎಡಬಲಕೆ-ಎ

---

ಆಗ ವೃಷಧ್ವಜನು ರಥವಿಲ್ಲದವನಾದಾಗ್ಯೂ ಕೈಚಳಕವನ್ನು ಬಿಲ್ಲಿಸದೆ, ಕತ್ತಿ, ಮುದ್ಗರ, ಮುಸುಂಡಿ, ಬಲ್ಲೆ, ತೋಮರ, ಪರಶು, ಸುರಗಿ, ಕೊಂತ, ಗದೆ, ಖಡ್ಗ, ಚಕ್ರ, ಡೊಂಕಣೆ, ಶೂಲ, ಈಟಿ, ಒರೆಗತ್ತಿ, ಭಿಂಡಿವಾಳ, ಮೊದಲಾದವನ್ನು ಹಿಡಿದು ಯುದ್ಧ ಮಾಡುವ ರೀತಿಯಿಂದ ರೇಗಿ ಮೇಲೆ ಬಿದ್ದು ಸುಧನ್ವನಂ ಹೊಡೆದನು ‖ ೨೪ ‖ ಆಗ ವೃಷಕೇತುವು, ಆರೀತಿ ವಿರಥನಾಗಿ ಯುದ್ಧಮಾಡುತ್ತಿರಲಾಗಿ ವೃಷಕೇತುವಿನ ಸಾರಥಿಯು ಬೇರೊಂದಾದ ರಥವನ್ನು ತರಲು ಅದನ್ನು ಹತ್ತಿಕೊಂಡು, ಮಸೆದ ಬಾಣಂಗಳಿಂದ ಸುಧನ್ವನನ್ನು ಹೊಡೆಯಲು ಆ ವೃಷಕೇತುವಿನ ಬಾಣಗಳು ಸುಧನ್ವನ ಶರೀರದಲ್ಲಿ ನಟ್ಟು ಬಹುವಾಗಿ ಬೇನೆಯನ್ನುಂಟುಮಾಡಿದವು, ಸುಧನ್ವನು ರೇಗಿಕೊಂಡು ವೃಷಕೇತುವನ್ನು ಪುನಹ ಹೊಡೆಯಲು ಅವುಗಳನ್ನು ವೃಷಕೇತುವು ಕತ್ತರಿಸಿ ತಾನು ಪುನಹ ಶರಪ್ರಯೋಗ ಮಾಡಿದನು ‖೨೫‖ ಆ ಬಳಿಕ ಅಂತರಿಕ್ಷಕ್ಕೆ ಹಾರಿ ಭೂಮಿಗೆ ಧುಮುಕಿ, ಎಡಬಲ ಪಕ್ಕಗಳಿಗೆ ಓರೆಯಾಗಿ, ಬಾಗಿ. ಶೀಘ್ರವಾಗಿ ಎದ್ದು ಬೊಬ್ಬೆಯಿಟ್ಟು, ಒಬ್ಬರಿಗಿಂತಲೂ ಒಬ್ಬರು ಅಧಿಕರೆನಿಸಿಕೊಂಡು ಬಹುಪರಾ

ತ್ರಿಭುವನಕೆರಣರಂಗದೊಳ್ಸುಭಟನರ್ತನವ | ನಭಿನಯಿಸುವಂತೆಲಾಘವದೃಷ್ಟಿಮುಷ್ಟಿಗಳೊ | ಳುಭಯವೀರರ್ಖತಿಯೊಳೆಚ್ಚಾಡಿದರ್ಕರ್ಣನಂದನಸುಧನ್ವರಂದು ‖ ೨೬ ‖ ಬತ್ತುವರೆಸೆವರೆಚ್ಚ ಕಣೆಗಳಂ ಕಣೆಗಳಿಂ | ಕತ್ತರಿಸಿಬಿಸುಡುವರ್ಬಿಸುಟೊಡಲೊಳಿಡಿದಂಬ | ಕಿತ್ತುಮೆತ್ತುವರಸೃಗ್ವಾರಿಯುಂವಾರಿಯಿಂತೊಳದೊಡನೆಕವಳಗೊಂಡು ‖ ಮತ್ತೆಕೈಗೆಡದಾರ್ದುಬೊಬ್ಬಿಡುವರೀತೆರದೊ | ಳಿತ್ತಂಡದಗ್ಗಳಿಕೆಸಮನಾಗೆಖತಿಯೊಳೊಂ | ಭತ್ತುನಾರಾಚದಿಂದಾಸುಧನ್ವಂಕರ್ಣತನಯನಂಘಾತಿಸಿದನು ‖ ೨೭ ‖ ರಾಯಕೇಳಾಗಪೂರಾಯಘಾಯದೊಳಶ್ರು | ತೋಯದಿಂದನಯವಂತೋಯಲಳವಳಿದುರಾ | ಧೇಯಜಂಬಹಳಬಾಧೇಯುನಾ

ಡಬಲಭಾಗಗಳಿಗೆ, ಮುರಿದು-ತಿರುಗಿ, ರಭಸದಿಂದ-ಶಬ್ದದಿಂದ, ಆರ್ದು-ಗರ್ಜಿಸಿ, ಓರೋರ್ವರಂ-ಒಬ್ಬರನ್ನು ಮತ್ತೊಬ್ಬರು, ಮೀರ್ದು-ಅತಿಕ್ರಮಿಸಿ, ಒದಗಿ-ಪುನಹ ಯುದ್ಧಕ್ಕೆ ಸಿದ್ಧರಾಗಿ, ವಿಭವದಿಂದ-ಅಟ್ಟಹಾಸದಿಂದ, ಅಖಿಳ-ಸಕಲವಾದ, ಶಸ್ತ್ರ-ಆಯುಧ ರೂಪವಾದ ಬಾಣದಿಂದಲೂ, ಅಸ್ತ್ರ-ಮಂತ್ರರೂಪವಾದ ಬಾಣದಿಂದಲೂ, ಸಮ-ಸಮನಾದ, ವಿಷಮ-ಅಸಮವಾದ, ಸೋಲುಗೆಲುವುಗಳಿಲ್ಲದೆ-ಜಯಾಪಜಯಗಳಿಲ್ಲದೆ, ತ್ರಿಭುವನಕೆ-ಮೂರು ಲೋಕಗಳಿಗೂ, ರಣರಂಗದೊಳ್-ಯುದ್ಧರಂಗದಲ್ಲಿ, ಅಥವ ನಾಟ್ಯಸ್ಥಳದಲ್ಲಿ, ಸುಭಟ-ವೀರ ಭಟರು, ನರ್ತನವನು-ನಾಟ್ಯವನ್ನು, ಅಭಿನಯಿಸುವಂತೆ-ಅಂಗವಿನ್ಯಾಸಗಳಿಂದ ತೋರ್ಪಡಿಸುವಂತೆ, ಲಾಘವ-ಚಾತುರ್ಯ, ದೃಷ್ಟಿ-ನೋಡುವಿಕೆಯು, ಮುಷ್ಟಿಗಳೊಳು-ಹಿಡಿಗಳಿಂದ, ಉಭಯ ವೀರರು-ಎರಡು ಕಡೆಯ ಕಲಿಗಳಾದ ಕರ್ಣಸುತ ಸುಧನ್ವರು-ಕರ್ಣನ ಮಗನಾದ ವೃಷಧ್ವಜನು, ಹಂಸಧ್ವಜನ ಮಗನಾದ ಸುಧನ್ವನು, ಇವರು, ಅಂದು-ಆ ಸಮಯದಲ್ಲಿ, ಖತಿಯೋಳ್-ಕೋಪಾವಿಷ್ಟರಾಗಿ, ಎಚ್ಚಾಡಿದರ್-ಜಗಳವಾಡಿದರು.

ಅ‖ ವಿ‖ (ತ್ರಿಭುವನಗಳ ಸಮಾಹಾರ, ತ್ರಿಭುವನ) ಸಮಾಹಾರ, ದ್ವಿಗು, (ಅಸ್ತ್ರ-ಮಂತ್ರಿಸಿದ ಬಾಣ, ಶಸ್ತ್ರ-ಆಯುಧರೂಪವಾದ ಬಾಣ) ಸುಷ್ಠು-ಭಟ, ಸುಭಟ) ವಿ. ಪೂ. ಕ. (ಕರ್ಣನ+ನಂದನ=ಕರ್ಣನಂದನ) ಷ. ತ. ‖೨೬‖

ಟೀ‖ ಬತ್ತುವರ್-ಆದುಮುವರು, ಎಸೆವರ್-ಬಾಣಪ್ರಯೋಗಮಾಡುವರು, ಎಚ್ಚ-ಒಬ್ಬರನ್ನು ಒಬ್ಬರು ಹೊಡೆದ, ಕಣೆಗಳಂ-ಬಾಣಗಳನ್ನು, ಕಣೆಗಳಿಂ-ಬಾಣಗಳಿಂದ, ಕತ್ತರಿಸಿ ಬಿಡುವರ್-ತುಂಡುಮಾಡಿ ಬಿಸಾಡುವರು, ಬಿಸುಟು-ಬಿಸಾಡಿ, ಒಡಲೊಳ್-ಶರೀರದಲ್ಲಿ, ಇಡಿದ-ನಾಟಿದ್ದ, ಅಂಬ-ಬಾಣವನ್ನು, ಕಿತ್ತು-ತೆಗೆದು ಹಾಕಿ, ಮೆತ್ತುವರ್-ಔಷಧಿಯನ್ನು ಬಳಿಯುವರು, ಅಸೃಗ್ವಾರಿಯಂ-ರಕ್ತವನ್ನು, ವಾರಿಯಿಂ-ನೀರಿನಿಂದ, ತೊಳೆದು-ಪ್ರಕ್ಷಾಳನೆ ಮಾಡಿ, ಒಡನೆ-ಸಂಗಡಲೆ, ಕವಳಗೊಂಡು-ಆಹಾರವನ್ನು ತೆಗೆದುಕೊಂಡು, ಮತ್ತೆ-ಪುನಹ, ಕೈಗೆಡದೆ-ಹಿಂದೆಗೆಯದೆ, ಆರ್ದು-ಕರೆದು, ಬೊಬ್ಬಿಡುವ-ಅಬ್ಬರಿಸುತ್ತಿರುವ, ಈ ರೀತಿಯೊಳು-ಈ ಕ್ರಮದಿಂದ, ಇತ್ತಂಡದ-ಎರಡು ಕಡೆಯ, ಅಗ್ಗಳಿಕೆ-ಪರಾಕ್ರಮವು, ಸಮಂ ಆಗೆ-ಸರಿಯಾಗಿರಲು, ಖತಿಯೊಳು-ಕೋಪದಿಂದ, ಒಂಭತ್ತು ನಾರಾಚದಿಂದ-ನವ ಬಾಣಂಗಳಿಂದ, ಸುಧನ್ವಂ-ಸುಧನ್ವನು, ಕರ್ಣತನಯನಂ-ವೃಷಕೇತುವನ್ನು, ಘಾತಿಸಿದನು-ಹಿಂಸೆ ಪಡಿಸಿದನು, (ಪ್ರಯೋಗಿಸಿದನು.)

ಅ‖ ವಿ‖ (ಅಸೃಕ್+ವಾರಿ, ಅಸೃಗ್ವಾರಿ) ಜ. ಸಂಧಿ. (ಒಂಭತ್ತಾದ ನಾರಾಚಗಳ ಸಮಾಹಾರ, ಒಂಭತ್ತು ನಾರಾಚ) ಸ ದ್ವಿಗು. (ಕೈಯ್ಯಂ+ಕೆಡದೆ) ಕ್ರಿ. ಸ. ಇಸು-ಬಾಣಪ್ರಯೋಗ ಮಾಡುವುದು. ‖೨೭‖

ಟೀ‖ ರಾಯ-ಎಲೈ ಜನಮೇಜಯನೆ, ಕೇಳು-ಆಲಿಸು, ಆಗ-ಆ ಸಮಯದಲ್ಲಿ, ಎಂದರೆ ಸುಧನ್ವನು ವೃಷಕೇತುವನ್ನು ಒಂಭತ್ತು ಬಾಣಗಳಿಂದ ಹೊಡೆದಾಗ, ಪೂರಾಯ-ಸಂಪೂರ್ಣವಾದ, ಘಾಯದೊಳು-ಹುಣ್ಣಿನಿಂದ (ವ್ರಣದಿಂದ) ಅಶ್ರುತೋಯದಿಂದ-ಕಂಬನಿಯಿಂದ, ಅನಯವಂ-ಶರೀರವು, ತೋಯಲು-ಒದ್ದೆಯಾಗಿ ಹೋಗಲು, ರಾಧೇಯಜಂ-ವೃಷಧ್ವಜನು, ಅಳವಳಿದು-ಶಕ್ತಿಗುಂದಿ, ಬಹಳ-ಅಧಿಕವಾದ, ಬಾಧೆಯಂ-ಬೇನೆಯುಳ್ಳವನು, ಆಗಲ್ಕೆ-ಆಗಲಾಗಿ, ಅವನ ಸಾರಥಿ-

ಕ್ರಮದಿಂದ ಸಕಲವಾದ ಶಸ್ತ್ರಾಸ್ತ್ರಪ್ರಯೋಗವಂ ಮಾಡಿ ಯುದ್ಧಮಾಡುತ್ತಿರಲು, ಸೋಲುಗೆಲವುಗಳನ್ನು ನಿಶ್ಚಯಿಸುವುದು ಅಸಾಧ್ಯವೆನ್ನುವಂತೆ ಕಲಿಗಳಾದ ಕರ್ಣ ವೃಷಕೇತು ಇವರು ಬಹು ರೋಷದಿಂದ ಹೋರಾಡಿದರು ‖೨೬‖ ಹೀಗೆ ಒಬ್ಬರಿಗೊಬ್ಬರು ಜಗಳವಾಡುತ್ತ ಒಬ್ಬನು ಪ್ರಯೋಗಿಸಿದ ನಾರಾಚವನ್ನು ಮತ್ತೊಬ್ಬನು ಕತ್ತರಿಸುತ್ತ ತಮ್ಮ ಶರೀರದಲ್ಲಿ ನಾಟಿದ್ದ ಅಂಬನ್ನು ಕಿತ್ತು ಆ ಬಾಣದ ಘಾಯಕ್ಕೆ ಮದ್ದನ್ನು ಹಾಕುತ್ತಲೂ, ಶರೀರದಿಂದ ಹೊರಟ ರಕ್ತವನ್ನು ನೀರಿನಿಂದ ತೊಳೆದುಕೊಂಡು ಬಳಿಕ ಆಯಾಸದಿಂದ ಚೇತರಿಸಿಕೊಂಡೆದ್ದು, ಆರ್ಭಟಿಸಿ, ಒಬ್ಬರನ್ನೊಬ್ಬರು ತಿರಸ್ಕಾರಮಾಡುವರು. ಆಗ ಸುಧನ್ವನು ರೋಷಗೊಂಡು ಒಂಬತ್ತು ಬಾಣಗಳನ್ನು ತೆಗೆದು ಕೊಂಡು ಕರ್ಣತನಯನು ಘಾಸಿಯಾಗುವಂತೆ ಪ್ರಯೋಗಿಸಿದನು ‖೨೭‖ ಎಲೈ ಜನಮೇಜಯ ಧರಿತ್ರೀಪಾಲ! ಕೇಳು, ಆಗ ರಾಧೇಯನ ಮಗನು ಬಹುವಾಗಿ ಘಾಸಿಯಾಗಿ ಕಣ್ಣೀರಿನಲ್ಲಿ ಶರೀರವನ್ನು ನೆನೆಯಿಸಿಕೊಂಡು ಬಹುವಾಗಿ ಬಲಹೀನನಾಗಲು ಅವನ ಸಾರಥಿಯು ರಥವನ್ನು ಹಿಂದಕ್ಕೆ ತಿರುಗಿಸಲಾಗಿ,

ಗಳ್ಳವನಸಾರಥಿರಥವತಿರುಗಿಸೆ ॥ ಜೇಯನೇರಿಸಿಬಿಲ್ಗಜೇಯಹರಿಸೂನುಸಹಸಾಯತಿಕೆಯಿಂದ । ನಿಜಸಾಯಕವನುಗಿವುತಡ
ಹಾಯಿದಂ ಕರಸಿಕೊಳ್ಸಹಾಯಿಗಳನೆನುತಕಡುಗಲಿಸುಧನ್ವನಸರಿಸಕೆ ॥ ೨೮ ॥ ಅರಿದನಚ್ಯುತನಸುತನೆಂಬುದಂಟೆಕ್ಕೆಯದ ।
ಕುರುಪಿಂದನುಡಿವನೇವಿಲ್ಲಿನಿನಗಬಲೆಯರ । ಮರೆಯಿಲ್ಲನಿನ್ನೆಸುಗೆಗಳುಕುವರರಾರೆನುತಕಲಿಸುಧನ್ವಂ ಕಣೆಗಳ ॥ ಬಿರುವಳೆಗರ
ಯಲಿಡೆಯೊಳರಿದೆಲವೊಸಂಗರದೊ । ಳುರುವಜಯವಧುತನ್ನಭುಜದೊಳಿಹಳೆನುತಕೆಂ । ಗರಿಯಬಾಣಂಗಳಿಂಮುಸುಕಿದಂ
ಪ್ರದ್ಯುಮ್ನನನರಥವೆಣ್ದೆಸೆಯೊಳು ॥ ೨೯ ॥ ಅಸಮಸಾಯಕನೆಂದುಬಣ್ಣಿಪರ್ನಿನ್ನನಿಂ । ದಸಮಸಾಯಕನಾನೊನೀನೊ

---

ಆವೃಷಕೇತುವಿನ ಸೂತನು, ರಥವನು-ತೇರನ್ನು, ತಿರಿಗಿಸೆ-ಹಿಂದಿರುಗಿಸಲು, ಅಜೇಯ-ಜಯಿಸಲಸಾಧ್ಯನಾದ, ಹರಿಸೂನು-ಕೃಷ್ಣನ ಮಗನಾದ ಪ್ರದ್ಯುಮ್ನನು, ಜೇಯ-ಸಿಂಜಿನಿಯನ್ನು, ಬಿಲ್ಗೆ ಏರಿಸಿ-ಧನುಸ್ಸಿಗೆ ಕಟ್ಟಿ, ಸಹಸಾಯತಿಕೆಯಿಂದ-ಪರಾಕ್ರಮಾತಿಶಯದಿಂದ, ನಿಜ ಸಾಯಕವನು-ತನ್ನ ಶರವನ್ನು, ಉಗಿವುತ-ಪ್ರಯೋಗಿಸುತ್ತ, (ಹಿರಿಯುತ್ತ) ಸಹಾಯಿಗಳಂ-ಸಹಾಯಕರನ್ನು, ಕರಸಿಕೊಳ್-ಬರಮಾಡಿಕೊಳ್ಳುವನಾಗು, ಎನುತ-ಎಂದು ಹೇಳುತ್ತ, ಕಡುಗಲಿ-ಮಹಾ ಶೂರನಾದ, ಸುಧನ್ವನ ಸರಿಸಕೆ-ಸುಧನ್ವನ ಸಮೀಪಕ್ಕೆ, ಅಡಹಾಯಿದಂ-ಕರ್ಣಜನಿಗೆ ಸಹಾಯಕನಾಗಿ ಬಂದನು (ಅಡ್ಡವಾಗಿ ಬಂದಂ).

ಅ॥ ವಿ॥ (ಹರಿಯ+ಸೂನು, ಹರಿಸೂನು) ಷ. ತ. (ಕಡು+ಕಲಿ, ಕಡುಗಲಿ) ಗಕಾರ ಆದೇಶ ಸಂಧಿ. ಆಯತಿಕೆ-ಬತ್ತಳಿಕೆ, ಕರ್ಣನಿಗೆ-ರಾಧೇಯ ಎಂಬ ಹೆಸರುಂಟು ರಾಧೆ ಎಂಬವಳು ಸಾಕಿದ್ದರಿಂದ ರಾಧೇಯನಾದನು. ॥೨೮॥

ಟೀ॥ ಆ ಸುಧನ್ವನು ಅಚ್ಯುತನ-ಕೃಷ್ಣನ, ಸುತಂ-ಪುತ್ರನು, ಎಂಬುದಂ-ಎನ್ನುವದನ್ನು, ಟಕ್ಕೆಯದ-ನಿಕೇತನದ, ಕುರುಪಿಂದ-ಸಂಜ್ಞೆಯಿಂದ, ಅರಿದಂ-ತಿಳಿದವನಾದವನು, ಏಂ, ಇಲ್ಲಿ, ನಿನಗೆ-ರಣಭೂಮಿಯಲ್ಲಿ, ನಿನಗೇನು ಕೆಲಸ ತಾನೆ ಇರ್ಪುದು, ಅಬಲೆಯರ-ಸ್ತ್ರೀಯರ, ಮರೆ-ಆಶ್ರಯವು, ಇಲ್ಲ-ಈ ಸ್ಥಳವಲ್ಲ, ನಿನ್ನ-ನಿನ್ನಯ ಎಸುಗೆಗಳಿಗೆ-ಬಾಣ ಪ್ರಯೋಗಕ್ಕೆ, (ಹೂ ಬಾಣಗಳ ಪ್ರಯೋಗಕ್ಕೆ) ಅಳಕುವವರು-ಹೆದರತಕ್ಕವರು, ಆರು-ಯಾರಿರುವರು? ಎನುತ-ಎಂದು ಹೇಳುತ್ತ, ಸುಧನ್ವಂ-ಸುಧನ್ವಂ-ಸುಧನ್ವನು, ಕಣೆಗಳ-ನಾರಾಚಗಳು, ಬಿರುಮಳೆಗರೆಯಲು-ದೊಡ್ಡ ಮಳೆಯನ್ನು ಸುರಿಸಲಾಗಿ, ಎಡೆಯೊಳು-ಬರುವ ದಾರಿಯಲ್ಲಿಯೆ, ಅರಿದು-ಕತ್ತರಿಸಿ, ಎಲವೊ-ಎಲಾ, ಸಂಗರದೊಳು-ಕಾಳಗದಲ್ಲಿ, ಉರುವ-ಶ್ರೇಷ್ಠವಾದ, ಜಯವಧು-ಜಯಲಕ್ಷ್ಮಿಯೆಂಬ ಸ್ತ್ರೀಯು, ತನ್ನ ಭುಜದೊಳ್-ತನ್ನ ಭುಜದಲ್ಲಿ, ಇಹಳು-ಇರುವಳು, ಎನುತ-ಎಂದು ಹೇಳುತ್ತ, ಕೆಂಗರಿಯ-ಕೆಂಪುಗರಿಗಳುಳ್ಳ, ಬಾಣಂಗಳಿಂ-ಅಂಬುಗಳಿಂದ, ಪ್ರದ್ಯುಮ್ನನು, ಅವನ-ಆ ಸುಧನ್ವನ, ರಥದ-ತೇರಿನ, ಎಣ್ದೆಸೆಯೊಳು-ಎಂಟು ದಿಕ್ಕುಗಳಲ್ಲಿಯೂ, ಮುಸುಕಿದಂ-ಮುತ್ತಿದನು (ತುಂಬಿದನು).

ಅ॥ ವಿ॥ (ಚ್ಯುತ-ನಾಶ, ಅ-ಇಲ್ಲದವನು, ನಾಶರಹಿತನು) ಕೃಷ್ಣ, (ಕಲಿಯಾದ+ಸುಧನ್ವ) ವಿ. ಪೂ. ಕ. ಕಲಿ-ಶೂರ, ಕಲಿಯುಗ, ಮಳೆಯಂ+ಕರೆ=ಮಳೆಗರೆ ಕ್ರಿ. ಸ. ॥೨೯॥

ಟೀ॥ ಅಸಮಸಾಯಕನು-ಬೆಸ ಸಂಖ್ಯೆಗಳ ಬಾಣಗಳುಳ್ಳವನು. (ಪಂಚ ಬಾಣಗಳುಳ್ಳವನು) ಎಂದು-ಎಂತ, ನಿನ್ನಂ-ನಿನ್ನನ್ನು, ಬಣ್ಣಿಪರ್-ಹೊಗಳುತ್ತಾರೆ, ಇಂದು-ಈಗ, ಅಸಮಸಾಯಕನು-ಸಮಾನವಿಲ್ಲದ ಬಾಣಗಳುಳ್ಳವನು, (ಪಂಚಬಾಣನು) ಆನೋ-ನಾನೋ, ನೀನೋ-ನೀನಾಗಿರುತ್ತೀಯೊ, ನೋಡು, ಎನುತ-ನನ್ನ ಸಾಮರ್ಥ್ಯವನ್ನು ನೋಡೆಂಬದಾಗಿ, ಪೊಸ ಮಸೆಯ-ನೂತನವಾಗಿ ಹದಗೊಟ್ಟ, ವಿಶಿಖಂಗಳಂ-ಶರಗಳನ್ನು, ಆತನ-ಆ ಪ್ರದ್ಯುಮ್ನನ, ಕಣೆಗಳಂ-ಕೋಲ್ಗಳನ್ನು, ಖಂಡಿಸಿ-ತುಂಡುಮಾಡಿ, ಸುರಿದಂ-ಚೆಲ್ಲಿದನು, ವಸುಮತಿಗೆ-ಭೂಮಿಯಲ್ಲಿ, ವೀರಂ-ಪರಾಕ್ರಮಿಯು ನೀಂ-ನೀನು, ಅಸಮಸಾಯಕನು-

---

ಆಗ ಕೃಷ್ಣನ ಮಗನಾದ ಪ್ರದ್ಯುಮ್ನನು ರಥವನ್ನು ಸಿದ್ಧಪಡಿಸಿಕೊಂಡು ಭರದಿಂದ ಬಂದು ಧನುಷ್ಟಂಕಾರವನ್ನು ಮಾಡಿ ಬಾಣಗಳನ್ನು ಬಿಡುತ್ತ ಸಹಾಯಕರನ್ನು ಜಾಗ್ರತೆಯಿಂದ ಬರಮಾಡಿಕೊಳ್ಳುವನಾಗೆಂದು ಪ್ರದ್ಯುಮ್ನನು ಸುಧನ್ವನ ಸಮೀಪಕ್ಕೆ ಬರಲಾಗಿ (ವೃಷಧ್ವಜನಿಗೆ ಅಡ್ಡಲಾಗಿ ಬರಲು) ॥೨೮॥ ಆಗ ಸುಧನ್ವನು ಧ್ವಜದ ಗುರ್ತಿನಿಂದ ಕೃಷ್ಣನ ಮಗನಾದ ಪ್ರದ್ಯುಮ್ನನೆಂದು ತಿಳಿದು ಮಾತನ್ನಾಡಿಸಿದನು. ಆ ಬಳಿಕ ಎಲಯ್ಯಾ ರಣಭೂಮಿಯಲ್ಲಿ ನಿನಗೇನು ಇರುತ್ತದೆ! ಸ್ತ್ರೀಯರ ಆಶ್ರಯಸ್ಥಳವು ಇದಲ್ಲ, ನಿನ್ನ ಪುಷ್ಪಬಾಣ ಪ್ರಯೋಗಕ್ಕೆ ಅಂಜುವವರು ಆರಿರುವರು? ಎಂಬದಾಗಿ ಹೇಳಿ ಅತಿ ಕಠಿಣವಾದ ಬಾಣಗಳನ್ನು ಸುರಿಸಲು, ಆ ಬಾಣಗಳು ಬರುವ ಮಾರ್ಗದಲ್ಲಿಯೇ ತುಂಡುಮಾಡಿ, ಎಲೋ! ಜಯಲಕ್ಷ್ಮಿಯು ನನ್ನ ಹೆಗಲಿನಲ್ಲಿರುತ್ತಾಳೆ ಎಂಬದಾಗಿ ಕೆಂಗರಿಗಳಿಂದ ವ್ಯಾಪ್ತವಾದ ಪೊಸ ನಾರಾಚಗಳನ್ನು ಬಿಡಲು, ಅವನು ಸುಧನ್ವನ ವರೂಥದ ಎಂಟು ದಿಕ್ಕುಗಳಲ್ಲಿಯೂ ತುಂಬುವಂತೆ ಮಾಡಿದನು. ॥೨೯॥ ಆಗ ಸುಧನ್ವನು ಪ್ರದ್ಯುಮ್ನನನ್ನು ನೋಡಿ ಅಸಮಬಾಣನೆಂದು ನಿನ್ನನ್ನು ಕರೆಯುತ್ತಾರೆ (ಬಣ್ಣಿಪರು)ಅಸಮಸಾಯಕನು ನಾನೊ ನೀನೊ ನೋಡೆನುತ, ಹೊಸದಾಗಿ ಹದವಿಟ್ಟದ್ದ ಬಾಣಗಳಿಂದ ಆ ಪ್ರದ್ಯುಮ್ನನ ನಾರಾಚ

ನೋಡೆನುತಪೂಸ| ಮಸೆಯುವಿಶಿಖಂಗಳಂಸುರಿದಂಸುಧನ್ವನಾತನಕಣೆಗಳಂಖಂಡಿಸಿ|| ವಸುಮತಿಗೆವೀರನೀನಸಮಸಾಯಕನಾದೊ
ಡುಸುರೆನಗೆಯುಸಮ್ಮಸಾಯಕರಾರ್ತ್ರಿಲೋಕದೋ| ಳ್ಪುಸಿಯಬೇಡೆನುತಕೂರಂಬುಗಳನಂಬರಕೆತುಂಬಿದಂಶಂಬರಾರಿ || ೩೦ ||
ಬರಿಯಪೂಗೋಲಿಸುಗೆಯಲ್ಲದಾಹನದೊಳುಂ | ಕಿರಿದುಶರಸಂಧಾನಮುಂಟಲಾನಿನಗೆಂದು | ಜರಿದೆಂಟುಬಾಣದಿಂದೆಚ್ಚಂಸುಧ
ನ್ವನಾತನಕೋಲ್ಗಳಂಸ್ಯೈರಿಸಿ || ಬಿರುಸರಳಸಾರದಿಂದನಸರ್ವಾಂಗಮಂ | ತುರುಗಿದಂಕವಚಸೀಸಕಬಾಹುರಕ್ಷೆಗ | ಳ್ತಿರಿವಿ
ನಿಂಕೆನ್ನೀರ್ಗಳೊರವಿನಿಂನೊಂದುಮೈಮರವಿನಿಂಪ್ರದ್ಯುಮ್ನನು || ೩೧ || ಕೃಷ್ಣಸುತನೆಂದಿನ್ನೆಗಂಸೈರಿಸಿದೊಡೆನೀ | ನುಷ್ಣ
ಮುಳ್ಳವನಾದೆತನ್ನಬಾಣಾವಳಿಯ | ತೃಷ್ಣೆಗರುಣಾಂಬುವಂನಿನ್ನೊಡಲೊಳೂಡಿಸದೆಬಿಡುವೆನೇಮೇಣಸುವನು || ಉಷ್ಣಮಂ

ಸಮವಲ್ಲದ (ಐದು ಬಾಣಗಳುಳ್ಳವನು) ಬಾಣಗಳುಳ್ಳವನು, ಆದೊಡೆ-ಆಗಿದ್ದರೆ, ತ್ರಿಲೋಕದೋಳ್_ಮೂರು ಲೋಕಗಳಲ್ಲಿಯೂ, ಅಸಮಸಾಯಕರು_ಐದು ಬಾಣಗಳುಳ್ಳವರು (ಪಂಚಬಾಣನೆಂಬ ಬಿರುದಾಂಕಿತರು) ಆರ್_ಯಾರಾಗಿರುವರು? ಪುಸಿಯಬೇಡ_ಹುಸಿಮಾತನ್ನಾಡಬೇಡ, ಎನುತ_ಎಂದೆನ್ನುತ್ತ, ಕೂರಂಬುಗಳಂ-ಕ್ರೂರವಾದ ಬಾಣಗಳನ್ನು, ಶಂಬರಾರಿ_ ಶಂಬರನೆಂಬ ರಕ್ಕಸನಿಗೆ ಹಗೆಯಾದ ಪ್ರದ್ಯುಮ್ನನು, ಅಂಬರಕೆ-ಅಂತರಿಕ್ಷಕ್ಕೆಲ್ಲಾ, ತುಂಬಿಸಿದಂ_ತುಂಬಿಕೊಳ್ಳುವಂತೆ ಮಾಡಿದನು.

ಅ|| ವಿ| (ತ್ರಿಲೋಕಗಳ ಸಮಾಹಾರ_ತ್ರಿಲೋಕ) ಸ. ದ್ವಿಗು. (ಕೂರಿತ್ತು+ಅಂಬು, ಕೂರಂಬು) ವಿ. ಪೂ. ಕ. (ಅಂಬರ_ಅಂತರಿಕ್ಷ, ಬಟ್ಟೆ) || ೩೦ ||

ಟೀ|| ಎಲಾ-ಎಲೋ ಪ್ರದ್ಯುಮ್ನನೆ! ಬರಿಯ_ಬರಿದಾದ, (ವ್ಯರ್ಥವಾದ) ಪೂಗೋಲಿಸುಗೆಯಲ್ಲದೆ-ಪುಷ್ಪಬಾಣಗಳಂ ಪ್ರಯೋಗಿಸುವದೇ ಹೊರ್ತು, ಆಹನದೊಳುಂ - ಯುದ್ಧದಲ್ಲಿಯೂ, ಕಿರಿದು_ಧ್ವನಿಗೈದು, ಶರಸಂಧಾನಂ- ಬಾಣವನ್ನು ಬಿಲ್ಲಿಗೇರಿಸೋಣವು, ನಿನಗೆ ಉಂಟೇ-ನಿನಗೆ ಬರುವದೋ? ಎಂದು_ಎಂಬದಾಗಿ, ಜರಿದು_ಹಿಯ್ಯಾಳಿಸಿ, ಎಂಟುಬಾಣದಿಂ-ಎಂಟು ಬಾಣಗಳಿಂದ, ಸುಧನ್ವನು, ಎಚ್ಚಂ_ಹೊಡೆದನು, ಆತನ-ಆ ಸುಧನ್ವನ, ಕೋಲ್ಗಳಂ_ಶರಗಳನ್ನು, ಸೈರಿಸಿ_ತಡದು, ಬಿರುಸರಳ-ಬಿರುಸಾದ ಬಾಣಗಳ, (ವೇಗವಾಗಿ ಬರುವ ಬಾಣಗಳ) ಸಾರದಿಂದ-ಬಲದಿಂದ, ಕವಚ_ಅಂಗಿಯು, ಸೀಸಕ-ಪಾಗು, ಬಾಹುರಕ್ಷೆಗಳ್-ಬಾಹು ಮುರಿಗೆಗಳು, ಪರಿವಿನಿಂ-ಕಿತ್ತುಹೋಗುವ ಮಾರ್ಗದಿಂದ, ಕೆನ್ನೀರ್ಗಳ_ರಕ್ತಾಂಬುವಿನ, ಬರವಿನಿಂ-ಸ್ರವಿಸುವಿಕೆಯಿಂದ, ನೊಂದು-ಬಾಧೆಪಟ್ಟು, ಮೈಮರವಿನಿಂ-ಮೂರ್ಛೆಹೊಂದುವಿಕೆಯಿಂದ, ಅವನ- ಆ ಸುಧನ್ವನ ಸರ್ವಾಂಗಮಂ_ಶರೀರವನ್ನೆಲ್ಲಾ, ಪ್ರದ್ಯುಮ್ನ-ಕೃಷ್ಣನ ಮಗನಾದ ಪ್ರದ್ಯುಮ್ನನು, ತುರಗಿದಂ_ಮುತ್ತಿಸಿದನು.

ಅ|| ವಿ|| ಪೂವಿನ+ಕೋಲ್, ಪೂಗೋಲ್) ಷ. ತ. (ಕವಚವೂ-ಸೀಸಕವೂ ಬಾಹುರಕ್ಷೆಗಳೂ ಇವು ಕವಚ-ಸೀಸಕ ಬಾಹುರಕ್ಷೆಗಳ್) ಬಹು. ದ್ವಂ. || ೩೧ ||

ಟೀ|| ಕೃಷ್ಣಸುತನು_ತನ್ನೊಡೆಯನ ಮಗನಾದ ಪ್ರದ್ಯುಮ್ನನು, ಎಂದು-ಎಂಬದಾಗಿ, ಇನ್ನೆಗಂ_ಇದುವರೆಗೂ, ಸೈರಿಸಿದೊಡೆ_ಸಮಾಧಾನವಾಗಿದ್ದರೆ (ಸುಮ್ಮನಿದ್ದರೆ) ನೀಂ-ನೀನು, ಉಷ್ಣಮುಳ್ಳವಂ- ತೀಕ್ಷ್ಣತೆಯುಳ್ಳವನು, ಆದೆ_ಆಗಿರುತ್ತಿ, ತನ್ನ-ನನ್ನ, ಬಾಣಾವಳಿಯ-ಅಂಬುಗಳ ಸಮೂಹದ, ತೃಷ್ಣೆಗೆ-ದಾಹಕ್ಕೆ, ಅರುಣಾಂಬುವಂ_ಕೆಂಪು ನೀರನ್ನು (ರಕ್ತವನ್ನು) ನಿನ್ನ ಒಡಲೊಳು_ನಿನ್ನಯ ಅಂಗದಲ್ಲಿ, ಊಡಿಸದೆ_ತೆಗಿಸದೆ, ಬಿಡುವೆನೆ_ಬಿಟ್ಟೇನೆಯೇ, ಮೇಣ್-ಮತ್ತು, ಸಾಕು_ಬಿಡು, ಇನ್ನು-ಇನ್ನು ಮುಂದಕ್ಕೆ, ಜಿಷ್ಣುವಂ_ಅರ್ಜುನನ್ನು, ಕರೆಸು_ಬರಮಾಡು, ತೊಲಗು_ಹೋಗು, ಎನುತ_ಎಂದು ಹೇಳುತ್ತ, ಒಂದು ಸರಳಿಂದ_ಒಂದು ಶರದಿಂದ, ವೃಷ್ಣಿಕುಲ_ವೃಷ್ಣಿ ಎಂಬ ದೊರೆಯ ವಂಶದಲ್ಲಿ ಹುಟ್ಟಿದವರೊಳಗೆ, ತಿಲಕನ_ಶ್ರೇಷ್ಠನಾದ,

ಗಳನ್ನು ಕತ್ತರಿಸಿ. ಪ್ರಪಂಚದಲ್ಲಿ ವಿಷಮ ಬಾಣನು, ಈಗಲೂ ಯಾರು? ಪೇಳೆನುತ ತೀಕ್ಷ್ಣಗಳಾದ ಬಾಣಗಳನ್ನು ಪ್ರಯೋಗಿಸಲು ಆಗ ಪ್ರದ್ಯುಮ್ನನು ಆ ಸುಧನ್ವನ ಶರಗಳನ್ನು ತುಂಡ ಮಾಡಿ ತ್ರಿಲೋಕಗಳಲ್ಲೂ ವಿಷಮ ಬಾಣನು ಯಾರು? ಈಗಲೂ ಹೇಳೆನುತ ಶರವೃಷ್ಟಿಯನ್ನು ಕರೆದನು || ೩೦ || ಬಳಿಕ ಸುಧನ್ವನು ಪ್ರದ್ಯುಮ್ನನನ್ನು ನೋಡಿ ಎಲಾ ಪ್ರದ್ಯುಮ್ನ! ಸುಮ್ಮನೆ ಪೂಬಾಣಗಳಂ ಬಿಡುವೆಯಲ್ಲದೆ, ಯುದ್ಧದಲ್ಲಿ ಹುಂಕಾರವನ್ನು ಸಹ ಮಾಡುತ್ತ, ಶರಗಳಂ ಜೋಡಿಸುವರೀತಿ ಯಾದರೂ ನಿನಗೆ ಗೊತ್ತಿರುವುದೆ? ಎಂದು ಎಂಟು ಬಾಣಗಳನ್ನು ಪ್ರಯೋಗಿಸಲು, ಆಗ ಪ್ರದ್ಯುಮ್ನನು ಆತನ ಬಾಣದ ಪೆಟ್ಟನ್ನು ಸಹಿಸಿಕೊಂಡು ರೇಗಿ ತಿರಿಗಿ ಸುಧನ್ವನ ಚತುರಂಗಬಲವನ್ನೂ ಅವನ ಅಂಗಿ, ಬಿಲ್ಲು, ಮೊದಲಾದ ಸಕಲ ಬಿರುದಾವಳಿಗಳನ್ನೂ ಕತ್ತರಿಸಿ, ಮೂರ್ಛೆ ಬೀಳುವಂತೆ ಮಾಡಿದನು || ೩೧ || ಬಳಿಕ ಸುಧನ್ವನು ಎಲಾ ನೀನು ನನ್ನ ಸ್ವಾಮಿಯಾದ ಶ್ರೀ ಕೃಷ್ಣನ ಮಗನೆಂದು ಇದುವರೆಗೂ ಸೈಸಿದ್ದರೆ ನೀನು ಬಹು ಕೈಚಮತ್ಕಾರವುಳ್ಳವನಾಗಿರುತ್ತಿ, ನನ್ನ ಶರದ ಸಮೂಹದ ಬಾಯಾರಿಕೆಗೆ, ನಿನ್ನ ದೇಹದಲ್ಲಿ ರಕ್ತವನ್ನು ಹೊರಡಿಸದೆ ಬಿಡುವೆನೇ. ಇನ್ನು ನಿನ್ನ ಯುದ್ಧವನ್ನು ನಿಲ್ಲಿಸು. ಸಹಾಯಕ್ಕೆ ನಿಮ್ಮ

ನಾಡಿಸಗೆನರ್ಣ್ಣಪನೆಸಾಕಿನ್ನು | ಜಿಷ್ಣುವಂಕರೆಸುತೊಲಗೆನುತೊಂದುಸರಳಿಂದ | ವೃಷ್ಣಿಕುಲತಿಲಕನಕುಮಾರಕನಧನುವ ನೇಳುತ್ತುಂಡಾಗಿಖಂಡಿಸಿದನು || ೩೨ || ಬಿಲ್ಮುರಿಯೆಕಾರ್ಷ್ಣಿಕಡುಗೋಪದಿಂದಾಕ್ಷಣಂ | ಪಲ್ಮೊರೆವುತಸಿವಲಗೆವಿಡಿದನನ ಮೇಲೆನಡೆ | ಯಲ್ಮುಂದಕಡಹಾಯ್ದನರಿಯಲಾರಿವುರೌದ್ರಕರ್ಮಕೃತವರ್ಮಕನನು || ಬಲ್ಮೆಯುಳ್ಳದನಹೆನ್ವೃಷಧ್ವಜಪ್ರದ್ಯುಮ್ನ ರೋಳ್ಮಹಾವೀರರಿಲ್ಲನರೋಳ್ಪೊಣರ್ದೆನೀ | ನಿಲ್ಮದೀಯಾಸ್ತ್ರವಿಸ್ತಾರಮಂನೋಡೆನುತತೆಗೆದೆಚ್ಚುಬೊಬ್ಬಿರಿದನು || ೩೩ || ಲೇ ಸಾದುದಖಿಳಯಾದವರೊಳಗೆಕೃತವರ್ಮ | ನೇಸಮರ್ಥಂಕಾಣಬಹುದುಕಾಳಗದೊಳೆನು | ತಾಸುಧನ್ವಂತೆಗೆದೆಸಲ್ಕವನಕಣೆ

---

ಕೃಷ್ಣನ, ಕುಮಾರಕನಾದ-ಮಗನಾದ ಪ್ರದ್ಯುಮ್ನನ, ಧನುವನು-ಬಿಲ್ಲನ್ನು, ಏಳುತುಂಡಾಗಿ-ಏಳು ಭಾಗವಾಗಿ, ಖಂಡಿಸಿದಂ-ತುಂಡು ಮಾಡಿದನು.

ಅ|| ವಿ|| (ವೃಷ್ಣಿಯ+ಕುಲ, ವೃಷ್ಣಿಕುಲ) ಷ. ತ. ಕುಮಾರ-ಮಗ, ಷಣ್ಮುಖ. ತೃಷ್ಣೆ-ದಾಹ, ಆಶೆ. ಕೃಷ್ಣ-ಕಪ್ಪು, ಸೂರ್ಯ, ಅಗ್ನಿ, || ೩೨ ||

ಟೀ|| ಕಾರ್ಷ್ಣಿ-ಕೃಷ್ಣನ ಮಗನಾದ ಪ್ರದ್ಯುಮ್ನನು, ಬಿಲ್ಮುರಿಯೆ-ತನ್ನ ಕೈಯಲ್ಲಿದ್ದ ಧನಸ್ಸು ಮುರಿದು ಹೋಗಲು, ಕಂಡು-ಅದಂನೋಡಿ, ಕಡು-ಅಧಿಕವಾದ, ಕೋಪದಿಂದ-ಮುನಿಸಿನಿಂದ, ಆಕ್ಷಣಂ-ಕೂಡಲೆ, ಪಲ್ಮೊರೆವುತ-ದಂತಗಳನ್ನು ಕಡಿಯುತ್ತ, ಅಸಿನಲಗೆ-ಕತ್ತಿಯೆಂಬ ಹಲಿಗೆಯನ್ನು, ಪಿಡಿದು-ಹಿಡಿದು, ಅನನಮೇಲೆ-ಆ ಸುಧನ್ವನಮೇಲೆ, ನಡೆಯಲು-ಪ್ರತಿಯಾಗಿ ಬರಲು, ಅರಿವು- ಆ ಹಗೆಯಾದ ಸುಧನ್ವನು, ಅರಿಯಲು - ಜ್ಞಾಪಕ ಮಾಡಿಕೊಳ್ಳುವಂತೆ, ರೌದ್ರಕರ್ಮ-ಘೋರಕರ್ಮಿಯಾದ, (ಶತ್ರುನಾಶಕನಾದ) ಕೃತವರ್ಮಕನನು-ಕೃತವರ್ಮನನ್ನು ನೋಡಿ, ಮುಂದಕೆ-ಮುಂದುಕಡೆಗೆ ಹೋಗದಂತೆ, ನುಗ್ಗಿ-ಹೊಕ್ಕು, ಅಡ್ಡಹಾಯ್ದನು-ಮಧ್ಯವಾಗಿ ಬಂದನು, ಬಲ್ಮೆಯುಳ್ಳವನು-ಬಲವುಳ್ಳವನು, ಅಹೆ-ಆಗಿರುತ್ತಿ, ವೃಷಧ್ವಜ ಪ್ರದ್ಯುಮ್ನರವೋಲ್-ವೃಷಕೇತು ಪ್ರದ್ಯುಮ್ನರಂತೆ, ಮಹಾವೀರರು - ಅಧಿಕವೀರರು, ಇಲ್ಲ-ಯಾರೂ ಇರುವದಿಲ್ಲ, ಇವರೋಳ್-ಈರೀತಿಯಲ್ಲಿರುವವರ ಸಂಗಡ, ಪೊಣರ್ದೆ-ಜಗಳವಾಡಿದವನಾದೆ, ನೀಂ-ನೀನು, ನಿಲ್-ನನ್ನೆದುರಿಗೆ ನಿಲ್ಲು. ಮದೀಯ-ನನ್ನ ಸಂಬಂಧವಾದ, ಅಸ್ತ್ರವಿಸ್ತಾರಮಂ-ಬಾಣಗಳ ಪ್ರಾಚುರ್ಯವನ್ನು, ನೋಡೆನುತ-ನೋಡೆಂದು, ಎಚ್ಚು-ಬಾಣಪ್ರಯೋಗಮಾಡಿ, ಬೊಬ್ಬಿರಿದನು-ಆರ್ಭಟಿಸಿದನು.

ಅ|| ವಿ|| (ಪಲ್ಲಂ+ಮೊರೆವುತ, ಪಲ್ಮೊರೆವುತ) ಕ್ರಿ. ಸ. (ಅದು+ಪುದು, ಅವುದು) ಗ. ಸ. ಪಲ್-ಹಳೆಗನ್ನಡ ಪದ, ಹಲ್ಲು. ಹೊ. ಕ || ೩೩ ||

ಟೀ|| ಲೇಸು ಆದುದು-ಒಳ್ಳೇದಾಯಿತು, ಅಖಿಳ-ಸಕಲರಾದ, ಯಾದವರೊಳಗೆ- ಯದುಸೇನಾಪತಿಗಳಲ್ಲಿ, ಕೃತವರ್ಮನೆ-ಕೃತವರ್ಮನೆಂಬುವನೇ, ಕಾಳಗದೊಳು-ಯುದ್ಧದಲ್ಲಿ, ಸಮರ್ಥಂ- ಶೂರನು, ಎಂಬುದಂ-ಎನ್ನುವದನ್ನು, ಕಾಣಬಹುದು-ನೋಡಬಹುದು, ಎನುತ-ಎನ್ನುತ, ಆಸುಧನ್ವಂ-ಸುಧನ್ವನು, ತೆಗದು-ಬಾಣವನ್ನು ತೆಗದುಕೊಂಡು, ಎಸಲ್ಕೆ-ಎಸಯಲಾಗಿ, ಅವನ-ಆ ಸುಧನ್ವನ, ಕಣೆಗಳಂ-ಬಾಣಗಳನ್ನು, ಇವಂ-ಈ ಕೃತವರ್ಮನು, ಕಡಿದು-ಕತ್ತರಿಸಿ, ಮಗುಳ್-ಪುನಃ, ಎಚ್ಚಡೆ-ಬಾಣಪ್ರಯೋಗಮಾಡಲು, ಅವಂ-ಆ ಸುಧನ್ವನು, ಆಸರಳ್ಗಳಂ-ಆ ಬಾಣಗಳನ್ನು, ತರಿದು-ಕತ್ತರಿಸಿ, ಹತ್ತಂಬಿನಿಂ-ಹತ್ತು ಬಾಣಗಳಿಂದ, ಘಾಸಿಮಾಡಿದೊಡೆ- ಹಿಂಸೆ ಪಡಿಸಲಾಗಿ, ಇವಂ-ಈ ಕೃತವರ್ಮನು, ಪದಿನೈದುಮಾರ್ಗಣದೊಳು-ಹದಿನೈದು ಶರಗಳಿಂದ, ಓಸರಿಸದೆ-ಲಕ್ಷ್ಯಮಾಡಿಬಿಡದೆ, ಅವನ-ಆ ಸುಧನ್ವನ, ಸರ್ವಾಂಗಮಂ-ಶರೀರವನ್ನೆಲ್ಲಾ, ಅರುಣಜಲದ-ರಕ್ತದ, ಒರತೆ-ಒದ್ದೆಯು, (ಹರಿಯುವಿಕೆಯ) ಮಸಗೆ-ಆಗುವಂತೆ, ಕೀಲಿಸಿದಂ-ಮುಟ್ಟಿಸಿದನು.

---

ಪಾರ್ಥನಂ ಬರಮಾಡಿಕೊ ಎಂಬದಾಗಿ ಹೇಳಿ ನೀನು ಬೇರೆ ಯಾಗೆನುತ, ಒಂದೇ ನಾರಾಚದಿಂದ ವೃಷ್ಣಿಕುಲದಲ್ಲಿ ತಿಲಕಪ್ರಾಯನಾದ ಕೃಷ್ಣನ ಪುತ್ರನಾದ ಪ್ರದ್ಯುಮ್ನನ ಬಿಲ್ಲನ್ನು ಏಳು ಭಾಗಮಾಡಿದನು ||೩೨|| ಆಗ ಪ್ರದ್ಯುಮ್ನನು ತನ್ನ ಚಾಪವು ತುಂಡುಗಳಾದುದನ್ನು ನೋಡಿ, ಅತಿ ಕೋಪದಿಂದ ಹಲ್ಕಡಿಯುತ್ತ ಕೈಯಲ್ಲಿ ಕತ್ತಿಯನ್ನು ಹಲಿಗೆಯನ್ನೂ ಪಿಡಿದು ಸುಧನ್ವನ ಮೇಲೆ ನುಗ್ಗಿಬರಲು, ಆಗ ಕೃತವರ್ಮನು ಮುಂದೆ ಹೋಗದಂತೆ ಅಡ್ಡಗಟ್ಟಿ ಎಲಾ ಸುಧನ್ವನೆ! ನೀನು ವೃಷಕೇತು ಮೊದಲಾದ ವೀರರೊಡನೆ ಕಾದಿದೆ, ಆದರೆ ಈಗ ನನ್ನಮುಂದೆ ನಿನ್ನ ಶೌರ್ಯವನ್ನು ತೋರಿಸೆನುತ ಅವನನ್ನು ತಿರಸ್ಕರಿಸಿ ಬಾಣಪ್ರಯೋಗ ಮಾಡಿದನು ||೩೩|| ತರುವಾಯ ಸುಧನ್ವನು, ಕೃತವರ್ಮನ ಬಾಣಗಳನ್ನು ಕತ್ತರಿಸಿ ಬದಲಾಗಿ ಪ್ರಯೋಗಿಸಿದನು ಅದನ್ನು ಕೃತವರ್ಮನು ಛೇದಿಸಿ ಪುನಹ ಬಾಣ ಪ್ರಯೋಗಮಾಡಿದನು. ಆಗ ಸುಧನ್ವನು ಆ ಬಾಣವನ್ನು ಕಡಿದು ಹತ್ತು ಬಾಣಗಳಿಂದ ಘಾಯಪಡುವಂತೆ ಕೃತವರ್ಮನನ್ನು ಹೊಡೆಯಲು ಆಗ ಅವನು ಆ ಸುಧನ್ವನ ಅಂಬುಗಳನ್ನು ಕತ್ತರಿಸಿ ಪುನಹ ಹ

ಗಳಂಕಡಿದಿನಂನುಗುಳಿಚ್ಚಡೆ || ಆಸರಳ್ಳಳನನಂತರಿದ.ಹತ್ತಂಬಿನಿಂ | ಘಾಸಿಮಾಡಿದೊಡಿವಂಪದಿನೈದುಮಾರ್ಗಣದೊಳೀಸ |
ರಿಸದವನಸರ್ವಾಂಗಮುಂಕೀಲಿಸಿದನಸೃಣಜಲದೊರತೆಮಸಗೆ || ೩೪ || ಹಾರ್ದಿಕ್ಯನೆಸುಗೆಯಿಂದುರೆನೊಂದುಕೋಪದಿಂ | ದಾ
ರ್ದಸುಧನ್ವನಿಪ್ಪತ್ತುನಾಲ್ಕಂಬಿನಿಂ | ತೇರ್ದೆಗೆವಕುದುರೆಗಳಕಾಲ್ಗಳಂಗಾಲಿಗಳಕೀಲ್ಗಳಂಮೂಡಿಗೆಯುನು || ಮಿಾರ್ದೆಸೆವಚಾ
ಪಮುಂಸಾರಥಿಯುಕರಮುಂಕ್ಷ | ಣಾರ್ಧದೊಳ್ಕಡಿಯೆಕೃತವರ್ಮನಳವಳಿದುಕೆಲ | ಸಾರ್ದೊಡಾಪಥದೊಳನುಸಾಲ್ವನಿದಿರಾದ
ನತಿವೇಗದಿಂದವನರಥಕೆ ||೩೫|| ಸಾಲ್ವಾನುಜಂಕಣಾತಾನೆನ್ನೊಳಾಹವಕೆ | ಮೇಲ್ವಾಯ್ದಡನುಪಮಸುರೇಂದ್ರನಪರಾಕ್ರಮಕೆ |
ಸೋಲ್ವೆನೇತನ್ನೊಳ್ಪೊಣರ್ದಸಾಯದೆಧರ್ಮರಾಜನನರಂಕಾಣ್ಬುದು || ತೇಲ್ವುದುರಣಾಗ್ರದಿಂದಲ್ಲದೊಡುಳುಹೆನೆನುತ |
ಕೋಲ್ಮಳೆಗರೆದನವಂಪ್ರಳಯಜೀಮೂತಮಂ | ಪೋಲ್ವಿನಿಂಮುಸುಕಿತುಸುಧನ್ವನವರೂಥಮಂಬಹಳಂಥಬ.ರೂಥಮಂದು ||೩೬||

---

ಅ|| ವಿ|| (ಅಖಿಳರಾದ+ಯಾದವ, ಅಖಿಳ ಯಾದವ) ವಿ. ಪೂ. ಕ. (ಅವನು+ಸುಧನ್ವಂ) ಗ.ಸ.(ಹತ್ತಾದ+ಅಂಬುಗಳ ಸಮಾಹಾರ ಹತ್ತಂಬು, ಸಮಾಹಾರ. ದ್ವಿಗುಸಮಾಸ. ||೩೪||

ಟೀ|| ಹಾರ್ದಿಕ್ಯನ-ಕೃತವರ್ಮಕನ, ಎಸುಗೆಯಿಂದ - ಶರಪ್ರಯೋಗದಿಂದ, ಉರೆ ನೊಂದು - ಬಹಳವಾಗಿ ಬೇನೆ ಹೊಂದಿ, ಕೋಪದಿಂದ-ಸಿಟ್ಟಿನಿಂದ, ಆರ್ದು-ಕೂಗಿ, ಆ ಸುಧನ್ವಂ-ಆ ಸುಧನ್ವನು, ಇಪ್ಪತ್ತು ನಾಲ್ಕಂಬಿನಿಂ-ಇಪ್ಪತ್ತುನಾಲ್ಕು ಬಾಣಗಳಿಂದ, ತೇರ್-ವರೂಥವನ್ನು, ತೆಗೆವ-ಎಳೆಯುವ, ಕುದುರೆಗಳ ಕಾಲ್ಗಳಂ-ಅಶ್ವಗಳ ಕಾಲುಗಳನ್ನು, ಗಾಲಿಗಳ ಕೀಲ್ಗಳಂ-ರಥಚಕ್ರದ ಕೀಲುಗಳನ್ನು, ಮೂಡಿಗೆಯನು-ಬತ್ತಳಿಕೆಯನ್ನು, ಮಿಾರ್ದು-ಹೆಚ್ಚಾಗಿ, ಎಸೆವ-ಹೊಳೆಯುವ, ಚಾಪಮುಂ-ಧನುಸ್ಸನ್ನು, ಸಾರಥಿಯು-ರಥ ನಡಿಸುವನ. ಕರಮುಂ-ಹಸ್ತವನ್ನು, ನಿನಿ-ಹಾರ್ಧದೊಳು-ಅರ್ಧಕ್ಷಣದಲ್ಲಿ, ಕಡಿಯೆ-ತುಂಡುಮಾಡಲು, ಕೃತವರ್ಮಂ-ಕೃತವರ್ಮನು, ಅಳವಳಿದು-ಶಕ್ತಿಗುಂದಿ, ಕೆಲಸಾರ್ದೊಡೆ-ದೂರವಾಗಿ ಹೋಗಿರಲಾಗಿ (ಬಿದ್ದಿರಲಾಗಿ) ಆ ಪಥದೊಳು-ಆಮಾರ್ಗದಲ್ಲಿ, ಅನುಸಾಲ್ವಂ-ಸಾಲ್ವನ ಮಗನಾದ ಅನುಸಾಲ್ವನು, ಅತಿ ವೇಗದಿಂದ-ಬಹು ಶೀಘ್ರವಾಗಿ ಅವನ-ಆ ಸುಧನ್ವನ, ರಥಕೆ-ತೇರಿಗೆ, ಇದಿರಾದನು-ಎದುರಾದನು (ಎದರು ನಿಂತನು).

ಅ|| ವಿ|| (ತೇರ್+ತೆಗೆ, ತೇರ್ದೆಗೆ) ದಕಾರ. ಆ. ಸಂಧಿ. (ಅಳವಂ+ಅಳಿದು, ಅಳವಳಿದು) ಕ್ರಿ. ಸ. ||೩೫||

ಟೀ|| ತಾಂ-ನಾನು, ಸಾಲ್ವಾನುಜಂ-ಸಾಲ್ವನ ತಮ್ಮನಾದ ಅನುಸಾಲ್ವನು, ಕಣಾ-ಅಲ್ಲವೆ? ಎನ್ನೊಳು-ನನ್ನ ಕೂಡ, ಆ ಹವಕೆ-ಯುದ್ಧಕ್ಕೆ, ಮೇಲ್ವಾಯ್ದಡೆ-ಮೇಲೆ ಬಂದು ಬಿದ್ದರೆ, ಅನುಪಮ-ಹೋಲಿಕೆಯಿಲ್ಲದ, ಸುರೇಂದ್ರನ-ದೇವೇಂದ್ರನ, ಪರಾಕ್ರಮಕೆ-ಶೌರ್ಯಕ್ಕೆ, ಸೋಲ್ವನೇ-ಸೋತು ಹೋಗತಕ್ಕವನೇ? ತನ್ನೊಳ್-ನನ್ನೊಡನೆ, ಪೊಣರ್ದು-ಹೊಡದಾಡಿ, ಸಾಯದೆ-ವ್ಯಾತಿ ಹೊಂದದೆ, ಧರ್ಮರಾಜನನರಂ- ಧರ್ಮರಾಯನನ್ನು, ಕಾಣ್ಬುದು-ನೋಡುವನಾಗು, ರಣಾಗ್ರದಿಂದ ಅಲ್ಲದೆ-ಯುದ್ಧರಂಗವನ್ನು ಹೊರ್ತಾಗಿ, ತೇಲ್ವದು - ಮರೆಮಾಡಿಕೊಂಡು ಹೋಗು, ಅಲ್ಲದೊಡೆ - ಹಾಗಾಗದಿದ್ದರೆ, ಉಳುಹೆನು- ಜೀವದಿಂದ ಇರುವಂತೆ ಮಾಡೆನು, (ಕೊಲ್ಲುವೆನು) ಎನುತ-ಹೀಗೆಂದು ಹೇಳುತ್ತ, ಅವಂ-ಆ ಅನುಸಾಲ್ವನು, ಕೋಲ್ಮಳೆಗರೆದಂ-ಬಾಣವೃಷ್ಟಿಯನ್ನು ಸುರಿಸಿದನು, ಅಂದು-ಆಗ, ಆ ಬಾಣವೃಷ್ಟಿಯು, ಬಹಳ-ಹೆಚ್ಚಾದ, ಪ್ರಳಯ-ಪ್ರಪಂಚನಾಶಕಾಲದ, ಜೀಮೂತಮಂ-ಮೇಘವನ್ನು, ಪೋಲ್ವಿನಿಂ-ಹೋಲುವ ರೀತಿಯಿಂದ, ಸುಧನ್ವನ, ವರೂಥಮುಂ-ರಥವನ್ನು, ಮುಸುಕಿತು-ಆವರಿಸಿತು.

ಅ|| ವಿ|| (ಸಾಲ್ವನ+ಅನುಜ, ಸಾಲ್ವಾನುಜ) ಷ. ತ. (ಸುರ+ಇಂದ್ರ, ಸುರೇಂದ್ರ) ಗುಣಸಂಧಿ. ||೩೬||

---

ದಿನೈದು ಬಾಣಗಳಿಂದ ಸುಧನ್ವನ ಸರ್ವಾಂಗದಲ್ಲೂ ರಕ್ತಪ್ರವಾಹ ಹೊರಡುವಂತೆ ಗುರಿ ತಪ್ಪದೆ ಎಸೆದನು || ೩೪ || ಆಗ ಸುಧನ್ವನು ಕೃತವರ್ಮನ ಬಾಣ ಪ್ರಯೋಗದಿಂದ ಅತಿಯಾಗಿ ತಾಪಗೊಂಡು, ಚೇತರಿಸಿಕೊಂಡು, ಗರ್ಜಿಸುತ್ತ ಇಪ್ಪತ್ತುನಾಲ್ಕು ಬಾಣಂಗಳಿಂದ ಆ ಕೃತವರ್ಮನ ಹಸ್ತಿ, ಕುದುರೆ, ರಥ, ಪದಾತಿ ಇವುಗಳನ್ನು ನಾಶಮಾಡಿದನಲ್ಲದೆ, ಅರ್ಧಕ್ಷಣದೊಳಗಾಗಿ, ಕೃತವರ್ಮನ ಕರದ ಬಿಲ್ಲನ್ನು ತುಂಡುಮಾಡಿ, ಸಾರಥಿಯ ಕೈಗಳನ್ನು ಸಹ ಕತ್ತರಿಸಿದನು. ಆಗ ಸುಧನ್ವನ ಶರಪ್ರಹಾರದ ಹೊಡೆತಕ್ಕೆ ಕೃತವರ್ಮನು ಅತಿಯಾಗಿ ನೊಂದು ಬಹು ಆಯಾಸದಿಂದ ಒಂದು ಕಡೆ ಬಿದ್ದಿರಲು, ಅವನ ಹತ್ತಿರದಲ್ಲಿದ್ದ ಅನುಸಾಲ್ವನು ಸುಧನ್ವನ ಎದುರಿಗೆ ಬಂದು ನಿಂತನು ||೩೫|| ಅನಂತರದಲ್ಲಿ ಸುಧನ್ವನಂ ಕುರಿತು, ಎಲೊ ನಾನು ಸಾಲ್ವನತಮ್ಮನಾದ ಅನುಸಾಲ್ವನೆಂಬುದನ್ನು ಕಾಣೆಯಾ? ನಾನು ರೇಗಿ ಯುದ್ಧಕ್ಕೆ ನಿಂತರೆ ಸಮವಲ್ಲದ ಸುರೇಂದ್ರನ ಪರಾಕ್ರಮಕ್ಕೆ ಸೋಲತಕ್ಕವನೇ? ನನ್ನಲ್ಲಿ ಯುದ್ಧಮಾಡಿ ಸಾಯುವುದಕ್ಕಿಂತಲೂ, ಧರ್ಮನಂದನನನ್ನು ನೋಡಿ ಶರಣಾಗತನಾಗು. ರಣರಂಗವನ್ನು ಬಿಟ್ಟು ಹೋಗು, ಮರೆಯಾಗು ಎಂದು ಹೇಳಿ, ಬಾಣವೃಷ್ಟಿಯನ್ನು ಸುರಿಸಲು, ಅದು ಪ್ರಳಯಕಾಲದ ಮೇಘವರ್ಣ

ಬಲ್ಲೆನನುಸಾಲ್ವನೆಂದಳವಿಯಂಬಿಟ್ಟಡಾಂ | ಬಿಲ್ಲಾಳಿಪೇಳ್ಧರ್ಮರಾಜನವರಂಕಾಣ್ಬ | ನಲ್ಲಕಾಣಿಸುವೆನೀಗಳೆಧರ್ಮರಾಜನ ವರಂತರಹರಿಸುನಿನ್ನನು || ಎಲ್ಲಿತೋರಿಸುವಜ್ರಿಗೆಸದಳದಬಲ್ಮೆಯಂ | ಕೊಲ್ಲಬೇಕಾದೊಡಿದ್ದಪೆನೆನುತಕೋಲ್ಗಳಂ | ಚೆಲ್ಲಿದಂಹಂಸಧ್ವಜನಸುತಂಕಾಶಿರಾಜನಸುತಂಘಾಸಿಯಾಗೆ ||೩೭|| ಫಡಫಡೆಲವೆಲವೊತೊಲತೊಲಗೆನುತರೋಷದಿಂ | ಘುಡಿಘುಡಿಸಿಕಾರಿಡುವಕಾಯದಿಂದನುಸಾಲ್ವ | ನೊಡನೊಡನೆಪೊಳಪೊಳೆವಪೊಸಮಸೆಯನಿಡುನಿಡುಸರಳ್ಗಳಂತೆಗೆದೆಸುತಿರೆ || ಎಡೆಯೆಡೆಯೊಳಡಿಗಡಿಗೆಹಂಸಧ್ವಜಾತ್ಮಜಂ | ಕಡಿಕಡಿದುಮೀರಿದಪರಾಕ್ರಮದೊಳಸುರನಂ | ಬಿಡಬಿಡದೆಘಾತಿಸಿದನಿಪ್ಪತ್ತುಬಾಣದಿಂಬಿಸಿಬಿಸಿಯನೆತ್ತರೊಸರೆ || ೩೮ || ಮತ್ತೆಕಿಡಿಯಿಡೆಕೋಪಮನುಸಾಲ್ವನಬ್ಧಿಯಂ | ಮತ್ತೆಗೊಂಬುರಿಗೆಸರಿಯಾ

---

ಟೀ|| ಹಂಸಧ್ವಜನಸುತಂ-ಹಂಸಧ್ವಜನ ಮಗನಾದ ಸುಧನ್ವನು, ಅನುಸಾಲ್ವನು ಎಂದು-ಅನುಸಾಲ್ವನು ಎಂಬದಾಗಿ, ಬಲ್ಲೆನು-ತಿಳಿದಿರುವೆನು, ಅಳವಿಯಂ-ಪರಾಕ್ರಮವನ್ನು, (ಯುದ್ಧ) ಬಿಟ್ಟಡೆ-ಬಿಟ್ಟದ್ದೇ ಆದರೆ, ಆಂ-ನಾನು, ಬಿಲ್ಲಾಳೆ-ಧನುರ್ಧಾರಿಯೆ, ಪೇಳ್-ಹೇಳು, ಧರ್ಮರಾಜನವರಂ- ಧರ್ಮರಾಜನನ್ನು, ಕಾಣ್ಬಂ ಅಲ್ಲ-ನೋಡತಕ್ಕವನಲ್ಲ, ಈಗಳೇ-ಈ ಕ್ಷಣವೇ, ನಿನ್ನನು-ನಿನ್ನನ್ನು, ಧರ್ಮರಾಜನವರಂ-ಯಮನ ಕಡೆಯವರನ್ನು, ಕಾಣಿಸುವೆನು-ನೋಡಿಸುತ್ತೇನೆ, ತರಹರಿಸು-ಕೊಂಚ ಉಪಚರಿಸಿಕೊ, ವಜ್ರಿಗೆ-ದೇವೇಂದ್ರನಿಗೆ, ಅಸದಳದ-ಹೆಚ್ಚಾದ, ಬಲ್ಮೆಯಂ-ಸಾಮರ್ಥ್ಯವನ್ನು, ಎಲ್ಲಿ ತೋರಿಸು-ನನ್ನಲ್ಲಿ ತೋರ್ಪಡಿಸು, (ಎನ್ನನು-ನನ್ನನ್ನು) ಕೊಲ್ಲಬೇಕಾದೊಡೆ-ಸಂಹರಿಸಬೇಕಾಗಿದ್ದರೆ, ಇದ್ದಪೆನು-ಎದುರಾಗಿಯೆ ನಿಂತಿರುವೆನು, ಎನುತ-ಹೀಗೆಂದು ಹೇಳುತ್ತ, ಕಾಶಿರಾಜನ ಸುತಂ-ಕಾಶಿರಾಯನ ಮಗನಾದ ಅನುಸಾಲ್ವನು, ಘಾಸಿಯಾಗೆ-ಆಯಾಸಪಡುವಂತೆ, ಕೋಲ್ಗಳಂ-ಶರಗಳನ್ನು, ಚೆಲ್ಲಿದಂ-ಸುರಿದನು, (ಎರಚಿದನು).

ಅ|| ವಿ|| (ವಜ್ರವುಳ್ಳವನು ವಜ್ರಿ, ಇಂದ್ರ), ವಜ್ರ-ವಜ್ರಾಯುಧ, ಘಟ್ಟ. ||೩೭||

ಟೀ|| ಎಲವೆಲವೊ-ಎಲಾ ಎಲಾ ಸುಧನ್ವನೆ, ಫಡಫಡ-ಛೀ ಛೀ, ತೊಲತೊಲಗು-ಹೋಗು ಹೋಗು, (ಕೆಲಸಕ್ಕೆ ಬಾರದ ನೀಚನೆ ಆಚೆಗೆ ಹೋಗು) ಎನುತ-ಎಂದು ಹೇಳುತ್ತ, ರೋಷದಿಂ-ಕೋಪದಿಂದ, ಘುಡಿಘುಡಿಸಿ-ಗುಡಗಿನಂತೆ ಶಬ್ದ ಮಾಡಿ, ಕಾರಿಡುವ-ಕಪ್ಪಾದ, ಕಾಯದಿಂದ-ದೇಹದಿಂದ, ಅನುಸಾಲ್ವಂ-ಅನುಸಾಲ್ವನು, ಒಡನೊಡನೆ-ಜಾಗ್ರತೆ ಜಾಗ್ರತೆಯಾಗಿ, ಪೊಳೆಪೊಳೆವ-ಹೆಚ್ಚಾಗಿ ಹೊಳೆಯುವ, ಪೊಸಮಸೆಯ-ಹೊಸದಾಗಿ ಸಾಣೆಯಿಕ್ಕಿದ, ನಿಡುನಿಡು-ಉದ್ದಉದ್ದವಾದ, ಸರಳ್ಗಳಂ-ಬಾಣಗಳನ್ನು, ತೆಗೆದು-ತೆಗೆದುಕೊಂಡು, ಎಸುತಿರೆ-ಪ್ರಯೋಗಿಸುತ್ತಿರಲು, ಹಂಸಧ್ವಜಾತ್ಮಜಂ- ಹಂಸಧ್ವಜನ ಮಗನಾದ ಸುಧನ್ವನು, ಎಡೆಎಡೆಯೊಳು-ಅಲ್ಲಲ್ಲಿಯೆ, ಅಡಿಗಡಿಗೆ-ಅಷ್ಟಷ್ಟಕ್ಕೆ, ಕಡಿಕಡಿದು-ಕತ್ತರಿಸಿ ಕತ್ತರಿಸಿ, (ತುಂಡುತುಂಡು ಮಾಡಿ) ಮೀರಿದ-ಅಧಿಕವಾದ, ಪರಾಕ್ರಮದೊಳು-ಸಾಮರ್ಥ್ಯದಿಂದ, ಅಸುರನಂ-ರಾಕ್ಷಸನಾದ ಅನುಸಾಲ್ವನನ್ನು, ಬಿಸಿಬಿಸಿಯ-ಬೆಚ್ಚಗಿರುವ, ನೆತ್ತರು-ರಕ್ತವು, ಒಸರೆ-ಸೋರುವಂತೆ, (ಸುರಿಯುವಂತೆ) ಬಿಡಬಿಡದೆ-ಅವಕಾಶವಿಲ್ಲವೆ, ಇಪ್ಪತ್ತು ಬಾಣದಿಂ-ಇಪ್ಪತ್ತು ಬಾಣಗಳಿಂದ, ಘಾತಿಸಿದಂ-ಹಿಂಸೆಪಡಿಸಿದನು (ಪ್ರಯೋಗಿಸಿದನು).

ಅ|| ವಿ|| (ಫಡ, ಫಡ, ಘುಡ, ಘುಡ) ಇವು ಅವ್ಯಗಳು. ಎಡೆಎಡೆ, ಕಡಿಕಡಿದು, ಬಿಡಬಿಡದೆ, ಆಧಿಕ್ಯಾರ್ಥದಲ್ಲಿ ದ್ವಿರುಕ್ತಿ ಬಂದಿದೆ. ||೩೮||

ಟೀ|| ಅನುಸಾಲ್ವಂ-ಅನುಸಾಲ್ವನು, ಮತ್ತೆ-ತಿರುಗಿ, ಕೋಪಂ-ಸಿಟ್ಟು, ಕಿಡಿಯಿಡೆ-ಬೆಂಕಿ ಕಿಡಿಯನ್ನು ಸುರಿಸು

---

ದಂತೆ ಸುಧನ್ವನ ಚತುರಂಗಬಲವನ್ನು ಆವರಿಸಿಕೊಂಡಿತು ||೩೬|| ಆಗ ಹಂಸಧ್ವಜನ ಪುತ್ರನಾದ ಸುಧನ್ವನು ಅವನಂ ನೋಡಿ ಎಲಾ, ನೀನು ಅನುಸಾಲ್ವನೆಂಬುದನ್ನು ನಾನು ಬಲ್ಲೆನು, ನಾನು ಯುದ್ಧವನ್ನು ಬಿಟ್ಟು ಹೋಗತಕ್ಕವನೆ, ನಾನೇನೋ ಧರ್ಮರಾಯನನ್ನು ನೋಡುವದಿಲ್ಲ, ಆದರೆ ನಾನು ನಿನಗೆ ಯಮಧರ್ಮನ ದೂತರ ದರ್ಶನ ಮಾಡಿಸುತ್ತೇನೆ ನಿನ್ನ ಶೌರ್ಯವನ್ನು ಸಾಕು ಮಾಡು ಇಂದ್ರನಿಗೆ ಅಸಾಧ್ಯವಾದ ನಿನ್ನ ಆಟೋಪವನ್ನು ನನ್ನಲ್ಲಿ ತೋರ್ಪಡಿಸು, ನೀನು ನನ್ನನ್ನು ಕೊಲ್ಲುವುದಾದರೆ ನಿನ್ನ ಎದುರಾಗಿಯೇ ಇರುವೆನು ಎನುತ ಕಾಶೀರಾಜನ ಪುತ್ರನು ಘಾಸಿಯಾಗುವಂತೆ ಸುಧನ್ವನು ಬಾಣಪ್ರಯೋಗಮಾಡಿದನು ||೩೭|| ಆಗ ಅನುಸಾಲ್ವನು ಸುಧನ್ವನಂ ನೋಡಿ ಆಗಬಹುದು, ಆಗಬಹುದು, ಸುಮ್ಮನೆ ಓರೆಯಾಗು, ಎನ್ನುತ ಮೇಘದಂತೆ ಘರ್ಜಿಸಿ, ಅತಿ ರೋಷಾಕ್ರಾಂತನಾಗಿ ಕರೀಬಣ್ಣದಿಂ ಕೂಡಿದ ದೇಹವುಳ್ಳ ಅನುಸಾಲ್ವನು, ಬೇಗನೆ ಹೊಸದಾಗಿ ಮಸೆದ, ಉದ್ದವಾಗಿರುವ ಶರಗಳನ್ನು ತೆಗದುಕೊಂಡು ಬಿಡುತ್ತಿರಲು ಆಗ ಸುಧನ್ವನು ಆ ಬಾಣಗಳು ಬರುವ ಮಾರ್ಗದಲ್ಲಿಯೆ ತುಂಡುತುಂಡಾಗಿ ಕತ್ತರಿಸಿ ಮತ್ತೆ ಅನುಸಾಲ್ವನನ್ನು ಬಿಸಿಯಾದ ರಕ್ತವು ಈಚೆಗೆ ಹೊರಡುವಂತೆ ಅತಿ ತೀಕ್ಷ್ಣಗಳಾದ ಇಪ್ಪತ್ತುನಾಲ್ಕು ಬಾಣಗಳಿಂದ ಹೊಡೆದನು. ||೩೮|| ಆ ಬಳಿಕ ಅನುಸಾಲ್ವನು ಸುಧನ್ವನ ಬಾಣ ಪ್ರಯೋಗಕ್ಕೆ ಘಾಸಿಯಾಗಿ, ರೋಷಾವೇಶದಿಂದ ಕಂಗಳಲ್ಲಿ

ದೊಂದುಬಾಣನುಂ । ಕಿತ್ತುಹೂಡಿದನಿದಂತರಹರಿಸಿಕೊಳ್ಳೆನುತತೆಗದೆಚ್ಚುಬೊಬ್ಬಿರಿಯಲು ॥ ಕತ್ತರಿಸುವೆಸೆಗಣೆಗಳಮಿಾರಿ ನಡುವೆದೆಯ । ನುತ್ತರಿಸಿಕೋಲತ್ತಲಡಗಿತವನಿಯೊಳಾಗ । ಪುತ್ತುಪೊಗುವಹಿಯಂತೆಬಳಿಕಮೈಮರೆದಂಸುಧನ್ವನದನೇವೇಳ್ವೆನು ॥ ೪೯ ॥ ಎಲೆಲೆಕವಿಕವಿಯೆನುತ್ತವನಬಲಕಂಡುಸಂ । ಕಲೆಗಡಿದಮುಗಿಲಂತಿವನಮೇಲೆಕೈದುಗಳ । ಮಳೆಗರೆವುತಿಟ್ಟಣಿಸಿನೂಕಲನುಸಾಲ್ವಂಕನಲ್ದುಜಗದಳಿವಿನಂದು ॥ ಸುಳಿವಬಿರುಗಾಳಿಯಂಸೋಲಿಸುವನಿಡುಸರ । ಳ್ಗಳಗರಿಯಭರದನಿಲಘಾತದಿಂಬಯಲಾದು । ದಳವಿಯೆನಲೆಸುಗೆಯಂಕೈಗೊಂಡುಸರಿದಂಬಂದರಿಪುನೋಹರವನು ॥ ೫೦ ॥ ಕಣ್ತೆರದುಕಂಡಂ ಸುಧನ್ವನಾಬಳಿಕ । ಖತಿಯಿಂದಕೋದಂಡಮಂಕೊಂಡೆಲವೊಕಲಿಯಾಗಿ । ನಿಂದಿದಂಸೈರಿಸಿದೆಯಾದೊಡಿನ್ನೆಸವುದಿಲ್ಲಾವುಹೋಗೆ

---

ತ್ತಿರಲು, ಅಬ್ಧಿಯಂ-ಸಮುದ್ರವನ್ನು, ಮುತ್ತುಗೊಂಬ-ಆವರಿಸುವ, ಉರಿಗೆ_ಬಡಬಾನಲನ ಉರಿಗೆ (ತಾಪಕ್ಕೆ) ಸರಿಯಾದ_ಸಮವಾದ, ಒಂದು ಬಾಣಮುಂ ಕಿತ್ತು_ಬತ್ತಳಿಕೆಯಿಂದ ಒಂದು ಅಂಬನ್ನು ತೆಗೆದುಕೊಂಡು, ಹೂಡಿದಂ_ಧನುಸ್ಸಿನಲ್ಲಿ ಸೇರಿಸಿದನು, ಇದಂ-ಈ ಬಾಣವನ್ನು, ತರಹರಿಕೊಳ್ ಎನುತ-ತಡೆದುಕೊ ಎಂದು ಹೇಳುತ್ತ, ತೆಗೆದು_ಕಿವಿಯ ಪರಿಯಂತರಕ್ಕೆ ಎಳೆದು, ಎಚ್ಚು_ಪ್ರಯೋಗಿಸಿ, ಬೊಬ್ಬಿರಿಯಲು-ಘರ್ಜಿಸಲು, ಕತ್ತರಿಸುವ_ತುಂಡು ಮಾಡುವ, ಎಡೆಗಣೆಗಳಂ_ದಾರಿಯಲ್ಲಿಯೆ ಕತ್ತರಿಸಿ ಹೋಗುವಂತೆ ಸುಧನ್ವನು ಬಿಟ್ಟ ಬಾಣಗಳನ್ನು, ಮಿಾರಿ_ದಾಟಹೋಗಿ, ಸುಧನ್ವನ, ನಡುವೆದೆಯನು-ಎದೆಯ ಮಧ್ಯಭಾಗವನ್ನು, ಉತ್ತರಿಸಿ_ಭೇದಿಸಿ, ಕೋಲ್_ಬಾಣವು, ಪುತ್ತುಪೊಗುವ-ಹುತ್ತವನ್ನು ಪ್ರವೇಶಿಸುವ, ಅಹಿಯಂತೆ_ಹಾವಿನಂತೆ, ಅವನಿಯೊಳು_ಭೂಮಿಯಲ್ಲಿ. ಅತ್ತಲ್ ಅಡಗಿತು_ಆ ಕಡೆ ಮರೆಮಾಡಿಕೊಂಡಿತು, ಆಗ, ಬಳಿಕ-ತರುವಾಯ, ಸುಧನ್ವಂ_ಸುಧನ್ವನು, ಮೈಮರದಂ_ಮೈಮರತನು, (ಮೂರ್ಛೆಹೊಂದಿದನು) ಅದಂ_ಆ ಸಂಗತಿಯನ್ನು, ಏವೇಳ್ವೆ_ಏನು ಹೇಳಲಿ.

ಅ॥ ವಿ॥ (ಬಾಡಬವೆಂಬ ಹೆಣ್ಣು ಕುದುರೆಯ ಮುಖದಲ್ಲಿರುವ ಬೆಂಕಿಗೆ ಬಡಬಾನಲ) ಎಸೆಯುವ+ಕಣೆ=ಎಸೆಗಣೆ) ವಿ. ಪೂ. ಕ. ॥೪೯॥

ಟೀ॥ ಅವನ_ಆ ಸುಧನ್ವನ, ಬಲ_ಸೈನ್ಯವು, ಕಂಡು_ಸುಧನ್ವನು ಮೂರ್ಛೆಯಲ್ಲಿರುವುದಂ ನೋಡಿ, ಎಲೆ ಎಲೆ_ಎಲೊ ಎಲೊ, ಕವಿಕವಿ-ಶತ್ರುಸೈನ್ಯವನ್ನು ಮುತ್ತು ಮುತ್ತು, ಎನುತ_ಎಂದು ಹೇಳುತ್ತ, ಸಂಕಲೆಗಡಿದ-ಬಂಧದಿಂದ ತಪ್ಪಿದ, ಮುಗಿಲಂತೆ-ಮೇಘದ ಹಾಗೆ, ಇವನ ಮೇಲೆ-ಈ ಅನುಸಾಲ್ವನ ಮೇಲೆ, ಕೈದುಗಳ ಮಳೆಗರೆವುತ-ಬಾಣವೃಷ್ಟಿಯನ್ನು ಸುರಿಸುತ್ತ, ಇಟ್ಟಣಿಸಿ-ಗುಂಪು ಸೇರಿಸಿ, ನೂಕಲು_ಒತ್ತಿ ಬರಲು, ಅನುಸಾಲ್ವಂ_ಅನುಸಾಲ್ವನು, ಕನಲ್ದು-ಕೋಪಗೊಂಡು, ಜಗದ_ಪ್ರಪಂಚದ, ಅಳಿವಿನಂದು_ನಾಶವಾಗುವ ಕಾಲ ಬಂದಾಗ, ಸುಳಿವ_ಸಂಚರಿಸುವ, ಬಿರುಗಾಳಿಯಂ_ಬಿರುಸಾದ ಗಾಳಿಯನ್ನು, ಸೋಲಿಸುವ_ಹಿಂದಕ್ಕೆ ಬೀಳಿಸುವ ಎಂದರೆ (ಗಾಳಿಗಿಂತಲೂ ಜಾಗ್ರತೆಯಾಗಿ ಹೋಗುವ), ನಿಡುಸರಳ್ಗಳ_ಉದ್ದವಾದ ಬಾಣಗಳ, ಗರಿಯ ಭರದ-ರೆಕ್ಕೆಗಳ ವೇಗವುಳ್ಳ, ಅನಿಲ ಘಾತದಿಂ_ಗಾಳಿಯ ಹೊಡೆತದಿಂದ, ಇಳೆ-ಭೂಮಿಯು, ಬರಿದಾದುದು_ಇಲ್ಲದಂತಾಯಿತು, ಎನಲು_ಎನ್ನುವಂತೆ, ಎಸುಗೆಯಂ_ಶರಪ್ರಯೋಗವನ್ನು, ಕೈಕೊಂಡು_ಅನುಸರಿಸಿ, ಬಂದ_ತನ್ನ ಮೇಲೆ ಬೀಳಲು ಬಂದಿರುವ, ರಿಪುನೋಹರವನು_ಪರಬಲವನ್ನು, ಸವರಿದಂ_ಭೇದಿಸಿದನು.

ಅ॥ ವಿ॥ (ಅನಲ-ಬೆಂಕಿ, ಅನಿಲ_ವಾಯು) ಕವಿ_ಆವರಿಸು, ಕವಿತ್ವ ಮಾಡುವವನು, ಕಲೆ-ಕಾಂತಿ, ಬೆರೆ (ಮುಗಿಲು_ಆಕಾಶ, ಮಿಗಿಲು_ಹೆಚ್ಚು. ॥೫೦॥

ಟೀ॥ ಬಳಿಕ-ಅನಂತರದಲ್ಲಿ, ಸುಧನ್ವ-ಸುಧನ್ವನು, ಕಣ್ತೆರದು_ಕಣ್ಣು ಬಿಟ್ಟು, ಕಂಡಂ_ನೋಡಿದನು, ಖತಿಯಿಂ

---

ಬೆಂಕಿ ಕಿಡಿಗಳನ್ನು ಉದುರಿಸುತ್ತ, ಜಲಧಿಯನ್ನೆಲ್ಲಾ ವ್ಯಾಪಿಸುವ ಬಡಬಾನಲನಿಗೆ ಸಮನಾದ ಒಂದು ಬಾಣವನ್ನು ಬತ್ತಳಿಕೆಯಿಂದ ಸೆಳೆದು ಸಂಧಾನಮಾಡಿ, ಇದನ್ನು ತಡದುಕೊ ಎನುತ ಕಿವಿ ಪರಿಯಂತರವೂ ಸೆಳೆದು ಬಿಟ್ಟು ಆರ್ಭಟಿಸಿದನು. ಆಬಳಿಕ ಅನುಸಾಲ್ವನು ಸುಧನ್ವನು ಬಿಟ್ಟ ಮಾರ್ಗಣಗಳನ್ನು ಮಾರ್ಗದಲ್ಲಿಯೆ ತುಂಡುಮಾಡಿದ ನಂತರ, ಸುಧನ್ವನ ಹೃದಯುವು ಕತ್ತರಿಸಿ ಹೋಗುವಂತೆ ಪ್ರಯೋಗಿಸಲು, ಆ ಬಾಣವು ಸುಧನ್ವನ ಶರೀರದಲ್ಲಿ ನುಗ್ಗಿ, ಸರ್ಪವು ಹುತ್ತವನ್ನು ಹೊಗುವಂತೆ, ಭೂಮಿಯಲ್ಲಿ ಪ್ರವೇಶಿಸಿತು. ಆಗ ಸುಧನ್ವನು ಮೂರ್ಛೆ ಹೊಂದಲು ॥೪೯॥ ಆ ಸುಧನ್ವನ ಸೇನಾ ಜನವು, ಕಣ್ಣಿನಲ್ಲಿ ನೀರು ಸುರಿಸುತ್ತ ಎಲ ಎಲಾ, ತಿವಿ ತಿವಿ, ಕೊಲ್ಲು ಕೊಲ್ಲು, ಮೇಲೆ ಬೀಳು ಮೇಲೆ ಬೀಳು, ಎನ್ನುತ ಪ್ರಳಯ ಕಾಲದ ಮೇಘಮಂಡಲದಂತೆ, ಅನುಸಾಲ್ವನ ಮೇಲೆ ಆಯುಧ ಸಮೇತರಾಗಿ ನುಗ್ಗಿ ಬರಲು, ಆಗ ಅನುಸಾಲ್ವನು ರೇಗಿ ಪ್ರಪಂಚವನ್ನೆಲ್ಲಾ ನಾಶಮಾಡುವ ಪ್ರಳಯಕಾಲದಲ್ಲಿ ಬೀಸುವ ಬಿರುಗಾಳಿಯನ್ನು ಸೋಲಿಸುವಂತೆ ಅತಿವೇಗವಾಗಿ ನಿಡುದಾದ ಶರಗಳಿಂದ, ತನ್ನ ಮೇಲೆ ನುಗ್ಗಿ ಬರುವ ಸೇನೆಯನ್ನೆಲ್ಲಾ ನಾಶಮಾಡಿ ಬಹು ಕಲಿತನದಿಂದ ಕಾದಿ ಅರಿಬಲವನ್ನು ನಾಶಮಾಡಿದನು ॥೫೦॥ ಆ ತರುವಾಯ

ನುತಹೆದೆಗೆ || ಒಂದುಸರಳಂಪೂಡಿಕಿವಿವರೆಗೆತೆಗೆದೆಚ್ಚ | ಡಂದುಸಾಲ್ವಾನುಜನಪೇರುರವನುಚ್ಚಳಿಸೆ | ನೊಂದಿಳೆಗುರುಳ್ದನಾ ಮುದುಮೂರ್ಛೆಪೊಕ್ಕನುರವಣಿಸಿಪಾರ್ಥನಬಲವನು || ೪೧ || ಹಾಣೆಹೊಕ್ಕವನೆಸೆವಬಾಣಂಗಳರಿಭಟರ | ಗೋಣನರಿದುಚ್ಚಳಿಸೆಮಾಣದೆಗಗನಕೇಳ್ವ | ಶೋಣಿತದಧಾರೆಗಳ್ಶೋಣಾಭ್ರದಂತಿರಲ್ಪ್ರಾಣಿಗಳದೃಷ್ಟಿಗಳ್ಗೆ || ಕಾಣಿಸಿದುದಾಲಿಸೈಕ್ಷೋಣಿಪಸುಧನ್ವನ | ಕ್ಷೀಣವಿಕ್ರಮಶಿಖಿಯಚೂಣಿಯ ಮಹಾಜ್ವಾಲೆ | ಕೇಣಿಗೊಂಡರಿಬಲಶ್ರೇಣಿಯೆಂಬೊಂದಡವಿದಾಣಮಂ ಹೊಕ್ಕಂತಿರೆ ||೪೨|| ಸಂದಣಿಸಿದಂತಿಗಳಘಟೆಗಳೊತ್ತರಿಸಲ್ಕೆ | ಸಂದಣಿಸಿದಂಸರಳಸಾರದಿಂಕೆಡಹಿದಂ | ಕೊಂದನುರವಣಿಸಿಕಾ

---

ದ-ಸಿಟ್ಟನಿಂದ, ಕೋದಂಡಮಂ-ಧನುಸ್ಸನ್ನು, ಕೊಂಡು-ತೆಗೆದುಕೊಂಡು, ಎಲವೊ-ಎಲಾ! ಕಲಿಯಾಗಿ-ಮಹಾಶೂರನಾಗಿ, ನಿಂದು-ನಿಂತುಕೊಂಡು, ಇದಂ-ಈ ಶರವನ್ನು, ಸೈರಿಸಿದೆಯಾದೊಡೆ-ಸಹಿಸಿಕೊಂಡವನಾದರೆ, ಇನ್ನು-ಇನ್ನುಮುಂದೆ, (ಈ ತರುವಾಯ) ಆವು-ನಾವು, ಎಸೆವುದಿಲ್ಲ-ಬಾಣ ಪ್ರಯೋಗ ಮಾಡುವುದಿಲ್ಲ, ಹೋಗೆನುತ-ಹೋಗೆಂದು ಹೇಳುತ್ತ, ಹೆದೆಗೆ-ಸಿಂಜಸಿಗೆ, ಒಂದು ಸರಳಂ-ಒಂದು ಬಾಣವನ್ನು, ಪೂಡಿ-ಹೂಡಿ, ಕಿವಿವರೆಗೆ ತೆಗೆದು-ಕಿವಿಯವರೆಗೂ ಎಳೆದು, ಎಚ್ಚಡೆ-ಹೊಡೆಯಲಾಗಿ, ಅಂದು-ಆಗ, ಸಾಲ್ವಾನುಜನ-ಸಾಲ್ವನ ಮಗನಾದ ಅನುಸಾಲ್ವನ, ಪೇರುರವನು-ವಿಸ್ತಾರವಾದ ಎದೆಯನ್ನು, ಉಚ್ಚಳಿಸೆ-ಛೇದಿಸಿ ಹೋಗುವಂತೆ, ನೊಂದು-ಬೇನೆ ಹೊಂದಿ, ಇಳೆಗೆ-ಭೂಮಿಗೆ, ಉರುಳ್ದನು-ಬಿದ್ದನು, ಮೂರ್ಛೆ-ಮೈಮರವು, (ಜ್ಞಾನತಪ್ಪುವುದು) ಆದುದು-ಉಂಟಾಯಿತು, ಸುಧನ್ವನು, ಉರವಣಿಸಿ-ರೇಗಿ, ಪಾರ್ಥನ-ಫಲ್ಗುಣನ, ಬಲವನು-ಸೇನೆಯನ್ನು, ಪೊಕ್ಕನು-ಪ್ರವೇಶಿಸಿದನು.

ಅ|| ವಿ|| (ಕಣ್+ತೆರೆ) ದ, ಆದೇಶ ಸಂಧಿ. (ಪಿರಿದು+ಉರ=ಪೇರುವ) ವಿ. ಪೂ. ಕ. ||೪೧||

ಟೀ|| ಅವಂ-ಆ ಸುಧನ್ವನು, ಎಸೆವ-ಪ್ರಯೋಗಿಸುತ್ತಿರುವ, ಬಾಣಂಗಳು-ಶರಗಳು, ಹಾಣೆ-ಅರಿಸೇನೆಯ ಚೂಣಿಯನ್ನು, ಹೊಕ್ಕು-ನುಗ್ಗಿ, ಅರಿಭಟರ-ಶತ್ರು ವೀರರ, ಗೋಣಂ-ಕತ್ತನ್ನು, ಅರಿದು-ಛೇದಿಸಿ, ಉಚ್ಚಳಿಸೆ-ಮೇಲಕ್ಕೆ ಎಗರಲು, ಮಾಣದೆ-ಆ ಸ್ಥಳದಲ್ಲಿರದೆ, ಗಗನಕೆ-ಅಂತರಿಕ್ಷಕ್ಕೆ, ಏಳ್ವ-ಹೊರಡುತ್ತಿರುವ, ಶೋಣಿತದ-ರಕ್ತದ, ಧಾರೆಗಳ್-ಆಸಾರಗಳು, (ಹನಿಗಳು) ಶೋಣಾಭ್ರದಂತೆ-ರಕ್ತದ ಜೀಮೂತದಂತೆ, ಇರಲ್-ಇರಲಾಗಿ, ಪ್ರಾಣಿಗಳ-ಜೀವರಾಶಿಗಳ, ದೃಷ್ಟಿಗಳಿಗೆ-ನೇತ್ರಮಾರ್ಗಗಳಿಗೆ, ಸುಧನ್ವನ, ಅಕ್ಷೀಣ-ತಗ್ಗದ, ವಿಕ್ರಮ-ಪರಾಕ್ರಮಾತಿಶಯವು ಎಂಬ, ಶಿಖಿಯ-ಬೆಂಕಿಯ, ಚೂಣಿಯ-ಕೊನೆಭಾಗದ, ಮಹಾಜ್ವಾಲೆ-ಮಹತ್ತಾದ ಉರಿಯು, ಕೇಣಿಗೊಂಡು-ವಿಸ್ತರಿಸಿಕೊಂಡು, ಅರಿಬಲಶ್ರೇಣಿಯೆಂಬ-ಹಗೆಯ ಸೇನೆಯೆಂಬುವ, ಒಂದಡವಿ-ಒಂದು ಕಾಡಿನ, ತಾಣವಂ-ಪ್ರದೇಶವನ್ನು, ಹೊಕ್ಕಂತಿರೆ-ನುಗ್ಗಿದ ಹಾಗಿರಲು, ಕ್ಷೋಣಿಪ-ಪೃಥ್ವೀಪತಿಯಾದ ಜನಮೇಜಯನೆ, ಆಲಿಸೈ-ತಿಳಿಯೈ, ಎಂದನು-ಎಂಬದಾಗಿ ತಿಳಿಸಿದನು.

ಅ|| ವಿ|| (ಕ್ಷೋಣಿಯನ್ನು+ಪ, ಕ್ಷೋಣಿಪ) ದ್ವಿ. ತ. ವಿಕ್ರಮ-ಶೌರ್ಯ, ವಿಕ್ರಮ ಶಕೆ, ಶಿಖಿ-ನವಿಲು, ಬೆಂಕಿ, ಬ್ರಾಹ್ಮಣ. ||೪೨||

ಟೀ|| ದಂತಿಗಳ-ಗಜಗಳ, ಘಟೆಗಳ್-ಗುಂಪು, ಸಂದಣಿಸಿ-ಗುಂಪಾಗಿ ಸೇರಿಕೊಂಡು, ಒತ್ತರಿಸಲು-ಒತ್ತಾಗಿ ಬರುತ್ತಿರಲು, ಸರಳ-ಅಂಬಿನ, ಸಾರದಿಂ-ಸಾಮರ್ಥ್ಯದಿಂದ, ಉರವಣಿಸಿ-ರೇಗಿಕೊಂಡು, ಮುಳಿದು-ಕೋಪಿಸಿಕೊಂಡು, ಕಾಲಾಳ್ಗಳಂ-ಪದಾತಿಯನ್ನು, ಸಂದಣಿಸಿದಂ-ದಣಿಯುವಂತೆ ಮಾಡಿದನು, ಕೆಡಹಿದಂ-ಬೀಳಿಸಿದನು, ಕೊಂದಂ-ಕೊಂದನು, ಬಳಿಕ-ತರುವಾಯ, ರಣದೊಳು-ಕಾಳಗದಲ್ಲಿ, ಒಂದಂ ಉಳಿಯದೆ-ಒಂದನ್ನಾದರೂ ಬಿಡದೆ, ಬಂದವಾಜಿಗಳಂ-ಅಶ್ವಗಳನ್ನು,

---

ಸುಧನ್ವನು ಕಂಗಳಂ ತೆರೆದುಕೊಂಡು ಈಕ್ಷಿಸಿದನು. ತರುವಾಯ ಸುಧನ್ವನು ಬಿಲ್ಲನ್ನು ತೆಗೆದುಕೊಂಡು ಎಲವೋ! ಶೂರನಾಗಿ ನಿಂತು ಈ ಬಾಣದ ಪ್ರಹಾರವಂ ತಡೆದುಕೊಂಡವನಾದರೆ ಇನ್ನು ಮುಂದೆ ಬಾಣಪ್ರಯೋಗಮಾಡುವುದಿಲ್ಲ ಎಂದು ಹೇಳಿ ಬಿಲ್ಲಿನ ಸಿಂಜಿನಿಗೆ ಒಂದು ಬಾಣವಂ ಸೇರಿಸಿ ಕಿವಿಯಪರಿಯಂತರವೂ ಸೆಳೆದು ಪ್ರಯೋಗಿಸಲು ಆ ಬಾಣವು ವೇಗದಿಂದ ಬಂದು ಸಾಲ್ವಾನುಜನ ವಿಸ್ತಾರವಾದ ಎದೆಯನ್ನು ಹೊಗಲಾಗಿ ಅವನು ವ್ಯಥೆಯಿಂದ ಮೂರ್ಛೆಗೊಂಡನು. ಕೂಡಲೆ ಸುಧನ್ವನು ಅರ್ಜುನನ ಸೈನ್ಯದೊಳಕ್ಕೆ ಪ್ರವೇಶಿಸಿದನು ||೪೧|| ಸುಧನ್ವನು ಪ್ರಯೋಗಿಸಿದ ನಾರಾಚಗಳು ಅರಿ ಬಲವನ್ನು ಹೊಕ್ಕು ಅರಿಬಲದ ಕುತ್ತಿಗೆಯನ್ನು ಕತ್ತರಿಸಿ, ಮೇಲಕ್ಕೆ ಹಾರಿಸಲಾಗಿ, ರಕ್ತದ ಧಾರೆಯು, ವೇಗವಾಗಿ ಮೇಲಕ್ಕೆ ಹಾರುತ್ತಿರಲು ಕೆಂಬಣ್ಣದಿಂದ ವ್ಯಾಪ್ತವಾದ ಶೋಣಾಭ್ರದಂತೆ ಇರಲಾಗಿ, ಸುಧನ್ವನ ಶೌರ್ಯವೆಂಬ ಶಿಖಿಯು ಜ್ವಾಲೆಯು ಶತ್ರುಗಳ ಸೇನೆಯೆಂಬ ಪೇರಡವಿಯಂ ಪ್ರವೇಶಿಸಿದಂತೆ ಕಾಣಬರುತ್ತಿತ್ತು ||೪೨|| ಎಲೈ ಜನಮೇಜಯ ಧರಿತ್ರೀಪಾಲನೆ! ಲಾಲಿಸು, ಗಜಗಳ ಹಿಂಡು ಗುಂಪಾಗಿ ನುಗ್ಗಲು ಅವುಗಳಂ ಕತ್ತರಿಸಿ, ಮೇಲೆ ಬಿದ್ದು ಬರುವ ಕಾಲಾಳ್ಗಳನ್ನು ನಾಶಮಾಡಿದನು. ವಾಜಿಗಳ ಸಮೂ

ಲಾಳ್ಗಳಂಮುಳಿದುಬಳಿಕೊಂದನುಳಿಯದೆರಣದೊಳು || ಬಂದವಾಜಿಗಳನಾನಳವಿಯೋಳ್ಕಾಣೆನೆಂ | ಬಂದವಾಗಲ್ಕೆತಡೆಗಡಿದು ಮೆದೆಗೆಡಹಿದಂ | ಮುಂದಿಟ್ಟಣಿಸಿಬಿದ್ದುದಾಗರಥಿಕವ್ರಾತಮುಂದಿಟ್ಟನೆಸುಗೆಯಿಂದ ||೪೩|| ಕೆಡದೊಡದಸೀಳಿಂದಕಡಿವಡೆದತೋಳಿಂದ| ತೊಡೆಯುಡಿದತುಂಡಿಂದನೆಣವಸೆಯುಜೊಂಡಿಂದ| ಬಿಡುಮಿದುಳತುಂಡದಿಂತಂಡದಿಂರುಂಡದಿಂಮುಂಡದಿಂಖಂಡದಿಂದ|| ಅಡಗುಗಳತಿರುಳಿಂದನಿಡುನರದಕರುಳಿಂದ | ಕೆಡವಿಡಿವನೆತ್ತರಿಂದೆಡೆವಿಡದೆಸತ್ತರಿಂ | ದಿಡಿದಿರ್ದುದಾರಣದಲೋರಣದನಾರಣದ ಕಾರಣದಪೂರಣದೊಳು || ೪೪ || ಕಾಕಬಕಗೃಧ್ರಗೋಮಾಯುಸಂತತಿಗಳಿಂ | ಡಾಕಿನಿಪಿಶಾಚವೇತಾಳಭೂತಂಗಳಿಂ | ಭೀಕ

---

ಅಳವಿಯೋಳ್-ಸೌಖ್ಯದಲ್ಲಿ (ಯುದ್ಧದಲ್ಲಿ) ಕಾಣೆನು-ಕಾಣಲಿಲ್ಲ, ಎಂಬ-ಎನ್ನುವ, ಅಂದವು-ರೀತಿಯು (ಚಂದವು) ಆಗಲ್ಕೆ-ಉಂಟಾಗಲಾಗಿ, ತಡೆಗಡಿದು-ತಡೆಮ ತುಂಡುಮಾಡಿ, ಮೆದೆ-ಬಣವೆಯನ್ನು, ಗೆಡಹಿದಂ-ಉಂಟುಮಾಡಿದನು, (ಕೆಡಹಿದನು), ಮುಂದಿಟ್ಟನ-ಧೈರ್ಯಶಾಲಿಯಾದ ಸುಧನ್ವನ, ಎಸುಗೆಯಿಂದ-ಶರಪ್ರಯೋಗದಿಂದ, ಆಗ-ಆ ಸಮಯದಲ್ಲಿ, ರಥಿಕ-ಯುದ್ಧಗಾರರ, ವ್ರಾತ-ಸಂಘವು, ಮುಂದೆ-ಮುಂಭಾಗದಲ್ಲಿ, ಇಟ್ಟಣಿಸಿಬಿದ್ದುದು-ರಾಶಿಯಾಯಿತು.

ಅ|| ವಿ|| (ದಂತ-ಕೊಂಬು, ಅದುಳ್ಳದ್ದು, ದಂತಿ), (ಆಜಿ-ಯುದ್ಧ. ವಾಜಿ-ಕುದುರೆ) (ಮೆದೆಯುಂ + ಕೆಡಹಿದಂ, ಮೆದೆಗೆಡಹಿದಂ) ಕ್ರಿ. ಸ || ೪೩ ||

ಟೀ|| ಆರಣದಲಿ-ಆ ಯುದ್ಧದಲ್ಲಿ, ಓರಣದ-ಕ್ರಮವಾದ, ಮಾರಣದ-ನಾಶಮಾಡೋಣದರ, (ಮರಣದ), ಕಾರಣದ-ನಿಮಿತ್ತದ, ಪೂರಣದೊಳು-ಸಂಪೂರ್ಣದೊಳಗೆ, ಕೆಡದೊಡೆದ-ಒಡೆದು ಕೆಳಗೆಬಿದ್ದು (ಎರಡು ಭಾಗವಾದ) ಸೀಳಿನಿಂದ-ಭಾಗದಿಂದಲೂ, ಕಡಿವಡೆದ-ಕತ್ತರಿಸಲ್ಪಟ್ಟ, ತೋಳಿಂದ-ಬಾಹುಗಳಿಂದಲೂ,ತೊಡೆಯುಡಿದ-ತೊಡೆಗಳು ಬಿಟ್ಟುಹೋದ, ತುಂಡದಿಂ-ಮುರಿದ ದೇಹದಿಂದಲೂ, ನೆಣನಸೆಯು-ಒದ್ದೆಯಾದ ಹುಳಿದ್ರವದ, ಜೊಂಡಿಂದ-ಅಂಟನಿಂದಲೂ, (ಕೆಟ್ಟವಾಸನೆಯಿಂದಲೂ), ಬಿಡುಮಿದುಳ-ಬೇರೆಯಾದ ಮೇದಸ್ಸುಳ್ಳವರಾದವರು, ತುಂಡದಿಂ-ತಲೆಯಿಂದಲೂ, ತಂಡದಿಂ-ಸಮೂಹದಿಂದಲೂ,ರುಂಡದಿಂ-ತಲೆಬುರುಡೆಗಳಿಂದಲೂ, ಮುಂಡದಿಂ-ಶಿರಸ್ಸಿಲ್ಲದ ಶರೀರದಿಂದಲೂ, ಖಂಡದಿಂದ-ಮಾಂಸದ ಭಾಗಗಳಿಂದಲೂ (ಮಾಂಸಖಂಡ) ಅಡಗುಗಳ-ಶರೀರದ ಒಳಗಡೆಯಿರುವ ಮಾಂಸದ, ತಿರುಳಿಂದ-ತಿರುಳಿಂದಲೂ, ನಿಡು-ಉದ್ದವಾದ, ನರದ-ನಾಡಿಗಳ, ಕರುಳಿಂದ-ಕರುಳಿನಿಂದಲೂ, ಕೆಡವಿಡುವ-ದ್ರವಿಸುವ, ನೆತ್ತರಿಂದ-ರುಧಿರದಿಂದಲೂ, ಎಡವಿಡದೆ-ಸ್ಥಳಕೊಡದೆ, ಸತ್ತರಿಂ-ಮೃತಪಟ್ಟವರಿಂದಲೂ, ಇಡಿದಿರ್ದುದು-ಪೂರ್ಣವಾಗಿತ್ತು.

ಅ|| ವಿ|| (ಇಂ, ಇಂದಂ, ಇಂದೆ, ಹಳೆಗನ್ನಡ ತೃತಿಯಾ ವಿಭಕ್ತಿ ಪ್ರತ್ಯಯಗಳು, ಮರದಿಂ, ಮರದಿಂದಂ, ಮರದಿಂದೆ ತೃತೀಯಾ ವಿಭಕ್ತಿ) || ೪೪ ||

ಟೀ|| ಅಲ್ಲಿ-ಆ ರಣರಂಗದಲ್ಲಿ, ಕಾಕ-ಕಾಗೆಯು, ಬಕ-ಬಕಪಕ್ಷಿಯು (ಕೊಕ್ಕರೆ) ಗೃಧ್ರ-ರಣಹದ್ದು, ಗೋಮಾಯು-ಜಂಬುಕವು (ನರಿಯು) ಇವೇ ಮೊದಲಾದವುಗಳ, ಸಂತತಿಗಳಿಂದ-ಸಮೂಹಗಳಿಂದಲೂ, (ಈ ವಿಧವಾದ ಜಾತಿಭೇದಗಳಿಂದಲೂ) ಡಾಕಿನೀ-ಡಾಕಿನೀ ಎಂಬ ಗ್ರಹಸಮೂಹವು, ಪಿಶಾಚ-ಗ್ರಹಗಳು, (ದೆವ್ವ) ವೇತಾಳ-ಬೇತಾಳ ಗ್ರಹವು, ಭೂತಂಗಳಿಂ-ನಾನಾಬಗೆಗಳಾದ ಗ್ರಹವಿಶೇಷಗಳಿಂದ, ಭೀಕರದೊಳು-ಭಯದಿಂದ, ಆರ್ದು-ಘರ್ಜಿಸಿ, ರಿಂಗಣ-ಹಾರಿ (ನೆಗದು) ಕುಣಿವ-ಕುಣಿಯುವ, ಕಲಿಗಳ-ವೀರರ-ಶೂರರ, ಕಪಾಲಂಗಳು-ತಲೆಯ ಚಿಪ್ಪುಗಳು, ಅಂಜಿಸಿದವು-ಹೆದರಿಸಿದವು, ಲೋಕದ-ಪ್ರಪಂಚದ, ಅಖಿಳ-ಸಕಲರಾದ, ಪ್ರಾಣಿಗಳಂ-ಜೀವರಾಶಿಗಳನ್ನೂ, ಉಂಡು-ಭುಜಿಸಿ, ಅಜೀರ್ಣದಿಂದ-ಅರಗದೆಹೋದುದರಿಂದ, ಕಾಲಂ-ಯಮಧರ್ಮನು, ಓಕರಿಸಿದನೊ-ವಮನಮಾಡಿದನೋ, ಎಂಬಿನಿಂ-ಎನ್ನುವಂತೆ, ಕಳಂಕ-ಚಿಹ್ನೆ (ಮಸುಕಿನ) ಯಿಂದ, ಆಕುಳ-ತುಂಬಿದ, ಮಾಂಸದ-ಮಾಂಸದಿಂದ ಯುಕ್ತವಾದ, ಕರ್ದಮ-ಬದಿಯುಳ್ಳ, ರುಧಿರ-ರಕ್ತ

---

ಹದಲ್ಲಿ ಒಂದಾದರೂ ಉಳಿಯಲಿಲ್ಲ. ಈರೀತಿಯಿಂದ ಧೀರನಾದ ಸುಧನ್ವನು ಉರವಣಿಸಿ ಹೆಣಗಳ ಮೆದೆಯನ್ನು ಹಾಕಿದನು ||೪೩|| ಆಗರಣದಲ್ಲಿ ಕ್ರಮವಾದ ಯುದ್ಧದಿಂದ ಪೆಟ್ಟುತಿಂದು ಮಡಿದುಬಿದ್ದು ತಲೆ, ಕೈ, ಕಾಲು, ಮಾಂಸ ನರ, ಕರುಳು ಇವೇ ಮೊದಲಾದುದರಿಂದ ರಣರಂಗವು ವ್ಯಾಪ್ತವಾಗಿರಲು, ನಾನಾಬಗೆಗಳಾದ ಹೆಣಗಳ ಕೊಬ್ಬು ಮಾಂಸಾಸ್ಥಿಗಳಿಂದ ದುರ್ವಾಸನೆ ಯುಂಟಾಗಿ, ಮುಂಡರುಂಡಗಳಿಂದ ವ್ಯಾಪ್ತವಾಗಿತ್ತು ||೪೪|| ಆಗ ಅಬಳಿಯಲ್ಲಿ ಕಾಗೆ, ಹದ್ದು, ರಣಹದ್ದು, ಗೂಬೆ, ನರಿ ಮೊದಲಾದವುಗಳಿಂದಲು, ಡಾಕಿನಿ, ಶಾಕಿನಿ, ಪಿಶಾಚ, ಬೇತಾಳಾದಿಗಳಿಂದಲೂ ಭಯಂಕರವಾದ್ದರಿಂದ, ಕೂಗಿ ಕರತಾಡನ ಮಾಡಿಕೊಂಡು ನರ್ತಿಸುವ ಕಲಿಗಳ ಶಿರೋಮುಂಡಗಳು ಅತಿಯಾಗಿ ಭಯವನ್ನುಂಟು ಮಾಡಿದವು. ಆಗ ರಣಭೂಮಿಯು ಲೋಕದ ಸಕಲ ಪ್ರಾಣಿಗಳನ್ನು ಕಾಲಮೃತ್ಯುವು ಯುದ್ಧದಲ್ಲಿ ತಿಂದು ಅಜೀರ್ಣದಿಂದ ಓಕರಿಸಿದನೋ ಎಂಬಂತೆ ರಕ್ತಮ

ರದೊಳಂಜಿಸಿದವಾರ್ದುರಿಂಗಣಗ.ಣಿನಕಲಿಗಳಕಪಾಲಂಗಳು ‖ ಲೋಕದವಿಕಪ್ರಾಣಿಗಳನುಂಡಜೀರ್ಣಿಯಿಂ । ದೋಕರಿಸಿ ಪನೊಕಾಲನೆಂಬಿಸಿಂ ಕಣ್ಗೆಸೆದು । ದಾಕಳಂಕಾಕುಳದನೂಂಸಕರ್ದಮ‌ಉಧಿರನೆಣನಸೆಮೆದುಳ್ಗಳಿಂದ ‖ ೪೫ ‖ ನೋಡಿದಂ ಸಾತ್ಯಕಿಸುಧನ್ವನಾಟೋಪಮಂ । ಮಾಡಿದಂಬದ್ಧಭೃಕುಟಿಯಿಂದಕೋಪಮಂ । ತೀಡಿದಂತಿರುವನೇರಿಸಿಮಿಡಿದುಚಾಪಮಂತಾಗಿದನನನಂಥವನು ‖ ಆಡಿದಂನಿಜನಾಮಧೇಯಪ್ರತಾಪಮಂ । ಪೂಡಿದಂತೆಗೆದಂಬನಚ್ಚರಿಯಮೋಘಮಂ । ತೋಡಿದಂಮುವ್ವತ್ತುಬಾಣದಿಂತಾಪಮಂಕುರಿಸುವಂತವನನೊಡಲೊಳು ‖ ಘಾಯವಡೆದಿಕ್ಕಲನತೆರದಿಂಕೆರಳ್ದು । ಶೈನೇಯನಂಮಗುಳೆಮುವ್ವತ್ತೈದುಕೋಲ್ಗಳಿಂ । ನೋಯಿಸಿದನಾಸುಧನ್ವಂಬಳಿಕಸಾತ್ಯಕಿಸಹಸ್ರಸಂಖ್ಯಾತಮಾದ ‖ ಸಾಯಕದೊಳಾತನವರೂಥಹಯ

---

ದ, ನೆಣನಸೆ–ತೇವವಾದ ಹುಳಿದ್ರವದ, ಮೆದುಳ್ಗಳಿಂ–ತಲೆಬುರುಡೆಯಲ್ಲಿರುವ ಮೇದಸ್ಸಿನಿಂದ (ನೋಡುವ–ಈ ವಿಪರೀತವನ್ನು ಕಾಣತಕ್ಕವರ) ಕಣ್ಗೆ–ಕಣ್ಣುಗಳಿಗೆ, ಎಸೆದ–ದು–ಕಾಂತಿಯಿಂದೊಡಗೂಡಿತು, (ಹೊಳೆಯುತಿತ್ತು).

ಅ‖ ವಿ‖ (ಕಾಕ ಬಕಗೃಧ್ರ, ಗೋಮಾಯುಗಳು) ಬಹು. ದ್ವಂ. ಕಾಕ (ತ್ಸ) ಕಾಗೆ (ದ್ಭ) ಗೃಧ್ರ (ತ್ಸ) ಹದ್ದು (ದ್ಭ), ಕಾಲ–ಯಮ, ಸಮಯ ‖ ೪೫ ‖

ಟೀ‖ ಸಾತ್ಯಕಿ–ಸತ್ಯಕನ ಮಗನಾದ ಸಾತ್ಯಕಿಯು, ಸುಧನ್ವನ–ಸುಧನ್ವನೆಂಬುವನ, ಆಟೋಪಂ–ಹೆಚ್ಚಿಗೆಯನ್ನು, ನೋಡಿದಂ–ಈಕ್ಷಿಸಿದನು, ಬದ್ಧ–ಕಟ್ಟಿದ, ಭೃಕುಟಿಯಿಂದ–ಕಣ್ಣುಹುಬ್ಬಿನಿಂದ, ಗಂಟುಕಟ್ಟಿದ ಕಣ್ಣುಹುಬ್ಬಿನಿಂದ, ಕೋಪಮಂ ತೀಡಿದಂ–ಸಿಟ್ಟನ್ನು ಮಾಡಿಕೊಂಡು, ತಿರುವಂ–ಬಿಲ್ಲಿನ ಹುರಿಯನ್ನು, ಏರಿಸಿ–ಹತ್ತಿಸಿ, ಚಾಪಮಂ–ಧನುಸ್ಸನ್ನು, ಮಿಡಿದು–ಧ್ವನಿ ಮಾಡಿ, ಅನನ–ಆ ಸುಧನ್ವನ, ರಥವನು–ವರೂಥವನ್ನು, ನೋಡಿ, ತಾಗಿದಂ–ಜಗಳಕ್ಕೆ ಅನುವಾದನು. ನಿಜ–ತನ್ನ, ನಾಮಧೇಯ–ನಾಮದ (ಹೆಸರಿನ), ಪ್ರತಾಪಮಂ–ಆಟೋಪಮಂ (ಬಿರುದಾವಳಿಯನ್ನು), ಆಡಿದಂ–ಹೇಳಿದನು (ತಿಳಿಸಿದನು), ಅಚ್ಚರಿಯ–ಆಶ್ಚರ್ಯದ, ಅಮೋಘಮಂ–ಶ್ರೇಷ್ಠತೆಯನ್ನು, ತೆಗೆದಅಂಬನು–ಬತ್ತಳಿಕೆಯಿಂದ ಈಚೆಗೆ ತೆಗೆದ ಬಾಣವನ್ನು, ಪೂಡಿದಂ–ಬಿಲ್ಲಿನಲ್ಲಿ ಅನುಸಂಧಾನ ಮಾಡಿದನು, ಅವನ–ಆ ಸುಧನ್ವನ, ಒಡಲೊಳು–ದೇಹದಲ್ಲಿ, ತಾಪಂ–ಕುದಿಯುವಿಕೆಯು, ಅಂಕುರಿಸುವಂತೆ–ಉದ್ಭವಿಸುವಂತೆ, ಮೂವತ್ತುಬಾಣದಿಂ–ಮೂವತ್ತು ಶರಗಳಿಂದ, ತೋಡಿದಂ–ರಂಧ್ರಬೀಳುವಂತೆ ಮಾಡಿದನು ‖

ಅ‖ ವಿ‖ (ಸಾತ್ಯಕಿಯು ಸುಧನ್ವನು ಇವರು ಸಾತ್ಯಕಿ ಸುಧನ್ವರ್), ದ್ವಿಪ. ದ್ವಂ. ಅಚ್ಚರಿ, (ದ್ಭ) ಆಶ್ಚರ್ಯ (ತ್ಸ) ‖ ೪೬ ‖

ಟೀ‖ ಘಾಯವಡೆದ–ಪೆಟ್ಟುತಿಂದ, (ವ್ರಣದಿಂದ ಕೂಡಿದ), ಎಕ್ಕಲನ–ಗಂಡುಸೂಕರದ, ತೆರದಿಂ–ಪ್ರಕಾರದಿಂದ, ಕೆರಳ್ದು–ಕೋಪಿಸಿಕೊಂಡು, ಶೈನೇಯನಂ–ಸಾತ್ಯಕಿಯನ್ನು, ಮಗುಳೆ–ತಿರಿಗಿ, ಮೂವತ್ತೈದುಕೋಲ್ಗಳಿಂ – ಮೂವತ್ತೈದು ಶರಗಳಿಂದ, ಆ ಸುಧನ್ವಂ–ಆ ಸುಧನ್ವನು, ನೋಯಿಸಿದಂ–ನೋವನ್ನುಂಟು ಮಾಡಿದನು, ಬಳಿಕ–ತರುವಾಯ, ಸಾತ್ಯಕಿ–ಸಾತ್ಯಕಿಯು, ಸಹಸ್ರಸಂಖ್ಯಾತಮಾದ–ಸಹಸ್ರ ಸಂಖ್ಯೆಯಿಂದ ಸೇರಿದ, ಸಾಯಕದೊಳು–ನಾರಾಚಗಳಿಂದ, ಆತನ–ಆ ಸುಧನ್ವನ, ವರೂಥ–ತೇರು, ಹಯ–ಅಶ್ವ, ಸಾರಥಿ–ರಥನಡಿಸುವವನು, ಯುಗ–ಅಚ್ಚುಮರವು, ಆಯತ–ಎತ್ತರವಾದ, ಧ್ವಜ–ಕೇತನವು, ಛತ್ರ–ಛತ್ರಿಯು, ಚಮರಮಂ–ಚಾಮರಗಳನ್ನು, ತರಿದೊಡೆ–ಕತ್ತರಿಸಲಾಗಿ, ಅವನು–ಆ ಸುಧನ್ವನು, ಈಯಾದವನ–ಸಾತ್ಯಕಿಯ, ತೇರನು–ವರೂಥವನ್ನು, ಮುರಿಯಲು–ಕತ್ತರಿಸಲು, ಅವರು ಈರ್ವರುಂ–ಸಾತ್ಯಕಿ–ಸುಧನ್ವರಿಬ್ಬರೂ, ಧುರದೊಳು–ಯುದ್ಧದಲ್ಲಿ. ವಿರಥರು ಆದರು–ತೇರಿಲ್ಲದವರಾದರು ‖

---

ಯವಾಗಿ ದುರ್ವಾಸನೆಯಿಂದಲೂ, ಹುಳಿನೀರಿನಿಂದಲೂ ಕಂಗೊಳಿಸುತ್ತಿತ್ತು ‖ ೪೫ ‖ ಆಗ ಸತ್ಯಕನ ಮಗನಾದ ಸಾತ್ಯಕಿಯು ಸುಧನ್ವನ ಆಟೋಪವಂ ಕಂಡು ಕೊಪಾಗ್ನಿಯಿಂದ ಹುಬ್ಬನ್ನು ಕಂಟುಹಾಕಿಕೊಂಡು ಮಣಿರಥವನ್ನೇರಿ ಧನುವಿನ ಹೆದೆಯನ್ನು ಸರಿಮಾಡಿ, ಟಂಕಾರಮಾಡುತ್ತ ಸುಧನ್ವನ ಎದುರಾಗಿ ಯುದ್ಧಕ್ಕೆ ಅರ್ಭಟಿಸಿ ನಿಂತನು. ಅನಂತರ ತನ್ನಯ ವಂಶಕ್ರಮಾಗತವಾಗಿ ಬಂದ ಬಿರುದಾವಳಿಯನ್ನು ವಿವರಿಸಿ, ಅತಿಶಯವಾದ ಮತ್ತು ಶ್ರೇಷ್ಠವಾದ ಬತ್ತಳಿಕೆಯಿಂದ ಯೋಗ್ಯವಾದ ಬಾಣವನ್ನು ಚಾಪದಲ್ಲಿ ಸೇರಿಸಿ, ಸುಧನ್ವನ ದೇಹದಲ್ಲಿ ಮೂವತ್ತು ಬಾಣಗಳಿಂದ ನಾಟುವಂತೆ ಮಾಡಿದನು ‖ ೪೬ ‖ ಬಳಿಕ ಸುಧನ್ವನು ಸಾತ್ಯಕಿಯಿಂದ ಬಹುವಾಗಿ ಬೇನೆ ಹೊಂದಿ ಎಚ್ಚತ್ತು ಮರಳಿ ರೇಗಿ ತಾನೂ ಭೂಮಿ ಪುತ್ರನಾದ ಸಾತ್ಯಕಿಯನ್ನು ಮೂವತ್ತೊಂದು ನಾರಾಚಗಳಿಂದ ಹೊಡೆಯಲು, ಆ ಸಂತಾಪವನ್ನು ಸಹಿಸಿ, ಮತ್ತೆ ಸಾತ್ಯಕಿಯು ಒಂದು ಸಹಸ್ರ ಸಂಖ್ಯಾತಮಾದ ಸಾಯಕಗಳಿಂದ ಸುಧನ್ವನ ವರೂಥ, ಹಯ, ತುರಗ, ಸಾರಥಿ, ಅಚ್ಚುಮರ, ಉದ್ದವಾದ ಪತಾಕೆ, ಛತ್ರಚಾಮರಾದಿಗಳನ್ನು ಛೇದಿಸಲು, ಸುಧನ್ವನೂ ಸಾತ್ಯಕಿಯ ವರೂಥಾದಿಗಳನ್ನು ಕತ್ತರಿಸಿದನು ಇಬ್ಬರೂ (ಸುಧನ್ವ ಸಾತ್ಯಕಿ

ಸಾರಥಿಯು । ಗಾಯತಧ್ವಜಛತ್ರಚಮರಮಂತರಿದೊಡನ । ನೀಯಾದವನತೇರನುರೆಮುರಿಯಲೀರ್ವರುಂವಿರಥರಾದರ್ದುರ ದೊಳು ॥ ೪೭ ॥ ನಿಂದುಕಾದಿದರೊಮ್ಮೆಕೈದುಕೈದುಗಳೊಳ್ಳೆ । ತಂದುಕಾದಿದರೊಮ್ಮೆಮತ್ತೆಪೊಸತೇರ್ಗಳಿಂ । ಬಂದುಕಾದಿ ದರೊಮ್ಮೆ ಕೂಡೆತಮತಮಗೊದಗಿದೆಡಬಲದಪಡಿಬಲವನು ॥ ಕೊಂದುಕಾದಿದರೊಮ್ಮೆಶರಶರದಹತಿಗಳಿಂ । ನೊಂದು ಕಾದಿದರೊಮ್ಮೆಚಳಬಳಿಕೆಯಿಂದಸಲೆ । ಸಂದುಕಾದಿದರೊಮ್ಮೆಸಾತ್ಯಕಿಸುಧನ್ವರೋರೋರ್ವರ್ಗೆಸರಿಮಿಗಿಲೆನೆ ॥ ೪೮ ॥ ಬವರಮಿರ್ವರ್ಗೆಸರಿಯಾಗೆಕಡುಗೋಪದಿಂ । ದವಗಡಿಸಿದಂಸುಧನ್ವಂಬಳಿಕಸಾತ್ಯಕಿಯ । ಸವಗಸೀಸಕಬಾಣಬತ್ತಳಿಕೆ ಸಿಂಧಸೀಗುರಿಛತ್ರಚಾಮರವನು ॥ ಸವರಿಸಾರಥಿಯುಂವರೂಥಹಯಚಕ್ರಮಂ । ಕವಲಂಬುಗಳೊಳೆಚ್ಚುಕತ್ತರಿಸಿಕರದಚಾಪ

---

ಅ॥ ವಿ॥ (ಆಯತವಾದ+ಧ್ವಜ, ಆಯತಧ್ವಜ) ವಿ. ಪೂ. ಕ. ಧುರ-ಯುದ್ಧ, ದರ್ದುರ-ಕಪ್ಪೆ, ಕೋಲ್-ಬಾಣ, ಕಟ್ಟಿಗೆ. ಯುಗ (ತ್ಸ), ನೊಗ (ದ್ಭ) ॥ ೪೭ ॥

ಟೀ॥ ಸಾತ್ಯಕಿ ಸುಧನ್ವರ್-ಸಾತ್ಯಕಿಯು, ಸುಧನ್ವನು ಇವರಿಬ್ಬರೂ, ಓರೋರ್ವರ್ಗೆ-ಒಬ್ಬನು, ಇನ್ನೊಬ್ಬನಿಗೆ, ಸರಿಮಿಗಿಲೆನೆ-ಸಮಾನರೋ ಎನ್ನುವಂತೆ, ಒಮ್ಮೆ-ಒಂದಾವರ್ತಿ, ನಿಂದು-ನೆಲದಮೇಲೆ ನಿಂತುಕೊಂಡು, ಕೈದುಕೈದುಗಳೊಳು-ಆಯುಧಗಳಿಂದಲೂ, ಕಾದಿದರ್-ಜಗಳವಾಡಿದರು, ಒಮ್ಮೆ-ಒಂದಾವರ್ತಿ, ಐತಂದು-ಬಂದವರಾಗಿ, ಪೊಸತೇರ್ಗಳಿಂ-ನವನರೂಥಗಳಿಂದ, ಬಂದು - ತೆಗದುಕೊಂಡು ಬಂದು, ಕಾದಿದರ್- ಯುದ್ಧ ಮಾಡಿದರು, ಕೂಡೆ- ಸಂಗಡಲೆ, ತಮತಮಗೆ-ತಮಗೆ ತಮಗೆ, ಒದಗಿದ-ದೊರೆತ, ಎಡಬಲದ-ಎರಡು ಕಡೆಯಲ್ಲೂ ಇರುವ, ಪಡಿಬಲವನು-ಅರಿಸೇನೆಯನ್ನು, ಕೊಂದು-ಸಂಹರಿಸಿ, ಕಾದಿದರ್-ಜಗಳ ಮಾಡಿದರು, ಒಮ್ಮೆ-ಮತ್ತೊಂದು ಸಲ, ಶರಶರದ-ಬಾಣಗಳ, ಹತಿಗಳಿಂ-ಪೆಟ್ಟುಗಳಿಂದ, ನೊಂದು-ವ್ಯಥೆಪಟ್ಟು, ಕಾದಿದರ್-ಯುದ್ಧಮಾಡಿದರು, ಒಮ್ಮೆ-ಇನ್ನೊಂದುಸಲ, ಛಳಬಳಿಕೆಯಿಂದ-ಛಲದ ರೂಢಿಯಿಂದ, ಸಲೆ-ಅನುಕೂಲವಾಗಿ (ಚೆನ್ನಾಗಿ), ಸಂದು-ಹೊಂಚುಹಾಕಿ, ಕಾದಿದರ್-ಯುದ್ಧಮಾಡಿದರು.

ಅ॥ ವಿ॥ (ಪೊಸದು+ತೇರು=ಪೊಸದೇರು), ವಿ. ಪೂ. ಕ. ಬಲ-ಬಲರಾಮ, ಶಕ್ತಿ, ಸೈನ್ಯ. ಶರ-ನೀರು, ಬಾಣ, ದರ್ಭೆ, ನೀರು ॥ ೪೮ ॥

ಟೀ॥ ಬವರಂ-ಕಾಳಗವು, ಈರ್ವರ್ಗೆ-ಸಾತ್ಯಕಿ ಮತ್ತು ಸುಧನ್ವ ಇವರಿಬ್ಬರಿಗೆ ಸಮವಾಗಿ ಹೋಲುತ್ತಿರಲು, ಸುಧನ್ವಂ-ಸುಧನ್ವನು, ಕಡುಕೋಪದಿಂದ-ಅತಿಯಾದ ಸಿಟ್ಟಿನಿಂದ, ಅವಘಡಿಸಿದಂ-ಬಹಳ ಪ್ರಯಾಸ ತೆಗೆದುಕೊಂಡನು (ಬಹಳತೊಂದರೆ ಪಟ್ಟನು) ಬಳಿಕ-ಅನಂತರದಲ್ಲಿ, ಸಾತ್ಯಕಿಯ-ಶೂರನಾದ ಸಾತ್ಯಕಿಯ, ಸವಗ-ಕವಚವನ್ನು, ಸೀಸಕ-ಕಿರೀಟವನ್ನು, ಬಾಣ-ಶರವನ್ನು, ಬತ್ತಳಿಕೆ-ಬಾಣದ ಬುಟ್ಟಿಯನ್ನೂ, ಸಿಂಧ-ಕೇತನವನ್ನು, ಸೀಗುರಿ-ಸೂರೆಪಾನವನ್ನು, ಛತ್ರ-ಕೊಡೆಯನ್ನು, ಚಾಮರ-ಚಾಮರಂಗಳನ್ನು, ಸವರಿ-ಬಾಣದಿಂದ ಕತ್ತರಿಸಿ, ಸಾರಥಿಯನು-ರಥಗಾರನನ್ನು, ವರೂಥ-ತೇರನ್ನು, ಹಯ-ಕುದುರೆಯನ್ನು, ಚಕ್ರಮಂ-ರಥದ ಗಾಲಿಗಳನ್ನು, ಕವಲಂಬುಗಳೊಳು-ಕೊಂಬೆಗಳುಳ್ಳ ಬಾಣಗಳಿಂದ, ಎಚ್ಚು-ಬಾಣಪ್ರಯೋಗಮಾಡಿ, ಕತ್ತರಿಸಿ-ತುಂಡುಮಾಡಿ, ಕರದ-ಸಾತ್ಯಕಿಯ ಹಸ್ತದಲ್ಲಿದ್ದ, ಚಾಪವಂ-ಬಿಲ್ಲನ್ನು, ಐದುಕಡಿಯಾಗಿಮಾಡಿ-ಐದು ಭಾಗಗಳಾಗಿಮಾಡಿ, ಪೇರುರಕೆ-ವಿಶಾಲವಾದ ಎದೆಯ ಪ್ರದೇಶಕ್ಕೆ, ಮೊನೆಗಣೆಗಳಂ-ತೀಕ್ಷ್ಣಗಳಾದ ಶರಗಳನ್ನು, ಮೋಹಿಸಿದಂ-ಜ್ಞಾನತಪ್ಪುವಂತೆ ಪ್ರಯೋಗಿಸಿದನು.

---

ಇವರಿಬ್ಬರೂ) ರಥವಿಲ್ಲದವರಾದರು ॥ ೪೭ ॥ ಆಗ ಸಾತ್ಯಕಿ ಸುಧನ್ವರಿಬ್ಬರೂ, ಒಬ್ಬರಿಗೊಬ್ಬರು ಸರಿ, ಮಿಗಿಲಾಗಿ ಒಂದು ಸಲವೂ, ನೆಲದಮೇಲೆ ನಿಂತು ಕತ್ತಿ ಮೊದಲಾದ ಆಯುಧಗಳಿಂದಲೂ, ರಥಾರೂಢರಾಗಿ ನಿಂತು ಬಾಣಗಳಿಂದಲೂ, ಪರಸ್ಪರವಾಗಿ ಹೋರಾಡುತ್ತ ತಮ್ಮ ಎಡಬಲಗಳಲ್ಲಿದ್ದ ಶತ್ರುಸೇನೆಯನ್ನು ನಾಶಮಾಡಿದರು ಆದ್ದರಿಂದ ಇಬ್ಬರೂ ಸರಿಸಮಾನಸ್ಕಂಧರಾಗಿ ತಮ್ಮಗಳ ಹಠವನ್ನು ತೀರಿಸಿಕೊಳ್ಳುತ್ತಿದ್ದರು ॥ ೪೮ ॥ ಕಾಳಗವು ಸಾತ್ಯಕಿ ಸುಧನ್ವರ್ಗೆ ಸಮವಾಗುತ್ತಿರಲು ಆಗ ಸುಧನ್ವನು ರೇಗಿ, ಆ ಸಾತ್ಯಕಿಯ ಕವಚ, ಕಿರೀಟ ಬಾಣಗಳನ್ನು ಬತ್ತಳಿಕೆಯನ್ನು, ಪತಾಕೆಯನ್ನು, ಸೀಗುರಿಯನ್ನು, ಛತ್ರ, ಚಾಮರಗಳನ್ನು, ಹಸ್ತ್ಯಶ್ವರಥ ಪದಾತಿಗಳನ್ನು, ಚಕ್ರಗಳನ್ನು ಕವಲಂಬುಗಳಿಂದ ಹೊಡೆದು ಕತ್ತರಿಸಿ, ಕರದಲ್ಲಿದ್ದ ಚಾಪವನ್ನು ಐದು ಕಡಿಯಾಗಿಮಾಡಿ, ವಿಸ್ತಾರವಾದ ಪೇರುರಕ್ಕೆ ಮೊನೆಗಣೆಗಳನ್ನು ಪ್ರಯೋಗಿಸಿ, ಮೂರ್ಛೆಹೊಂದಿ

ವನ್ನೈದುಕಡಿಯಾಗಿಮಾಡಿಪೇರುರಕೆಮೊನೆಗಣೆಗಳಂ ಮೋಹಿಸಿದನು ‖ ೪೯ ‖ ಸತ್ಯಕಸುತಂಗೆಪರಿಭವಮಾಗೆಭುಜಬಲದೊ | ಳತ್ಯಧಿಕಯೌವನಾಶ್ವಾಸಿತಧ್ವಜಗದಾ | ದಿತ್ಯಭವಸೂನುಶಠನಿಶಠಕೃತವರ್ಮಸಾಂಬಾನುಸಾಲ್ವಪ್ರಮುಖರು ‖ ಪ್ರತ್ಯೇಕ ವೀರರಿನಿತೆಲ್ಲರುಂಪಡೆಸಹಿತ | ಸತ್ಯವಿಕ್ರಮಸುಧನ್ವನಸಮ್ಮುಖಕೆನಡೆವ | ಕೃತ್ಯಮಂಕಂಡರ್ಜುನಂಕೋಪದಿಂದಕಾಳಗಕೆ ತಾನನುವಾದನು ‖ ೫೦ ‖ ಮಂಜೀರಗಳನಳವಡಿಸಿವೀರಪಳಿಯಂಬಿಗಿದು | ರಂಜಿಪತನುತ್ರಶೀಸಕವನಾಂತಮರಗಣ | ಕಂಜಳಿಯನೆತ್ತಿಪಳವಿಗೆಯಹನುಮಂಗೆರಗಿಬಲವಂದುಮಣಿರಥವನು ‖ ಮಂಜುಳಹಯಂಗಳಂಬೋಳೈಸಿಮಣಿದುತೇ | ರಂಜಯನಿ

ಅ‖ ವಿ‖ (ಚಮರೀ ಮೃಗದಿಂದಾದುದು, ಚಾಮರ) (ಕವಲಾದ, ಅಂಬುಗಳು, ಕವಲಂಬುಗಳು) ವಿ. ಪೂ. ಕ. (ಪಿರಿದು+ಉರ, ಪೇರುರ) ವಿ. ಪೂ. ಕ. ‖ ೪೯ ‖

ಟೀ‖ ಸತ್ಯಕಸುತಂಗೆ_ಸತ್ಯಕನ ಮಗನಾದ ಸಾತ್ಯಕಿಗೆ, ಪರಿಭವಂ-ಅಪಜಯವು, ಆಗೆ-ಆಗಲಾಗಿ, ಭುಜಬಲದೊಳು-ಬಾಹುಶಕ್ತಿಯಲ್ಲಿ, ಅತ್ಯಧಿಕ_ಬಹಳ ಹೆಚ್ಚಾದ, ಯೌವನಾಶ್ವ-ಯುವನಾಶ್ವನ ಮಗನಾದ ಯೌವನಾಶ್ವನು, ಅಸಿತಧ್ವಜ_ನೀಲಧ್ವಜನು, ಗದ_ಗದನೆಂಬುವನು, ಆದಿತ್ಯಭವಸೂನು-ಕರ್ಣನ ಮಗನಾದ ವೃಷಧ್ವಜನು, ಶಠ_ಶಠನು, ನಿಶಠ_ನಿಶಠನು, ಕೃತವರ್ಮ-ಕೃತವರ್ಮನು, ಸಾಂಬ-ಜಾಂಬವತಿಯ ಮಗನಾದ ಸಾಂಬನು, ಅನುಸಾಲ್ವ-ಅನುಸಾಲ್ವನು ಮೊದಲಾದ ಇವರೆ, ಪ್ರಮುಖರು_ಮುಖ್ಯರಾದವರು, ಪ್ರತ್ಯೇಕವೀರರು-ಉಳಿದ ಇತರ ಶೂರರೆಲ್ಲರೂ, ಇನಿತು ಎಲ್ಲರುಂ-ಇಷ್ಟು ಜನ ಶೂರರೆಲ್ಲರೂ, ಸತ್ಯ-ಯತಾರ್ಥವಾದ, ವಿಕ್ರಮ-ಆಟೋಪವುಳ್ಳ, ಸುಧನ್ವನ-ಹಂಸಧ್ವಜನ ಮಗನಾದ ಸುಧನ್ವನ, ಸಮ್ಮುಖಕೆ-ಎದುರಾಗುವುದಕ್ಕೆ, ನಡೆವ_ಹೊರಡುತ್ತಿರುವ, ಕೃತ್ಯಮಂ-ಕಾರ್ಯವನ್ನು, ಅರ್ಜುನಂ_ಪಾರ್ಥನು, ಕಂಡು_ನೋಡಿ, ತಾಂ_ತಾನು ಸಹ, ಕಾಳಗಕೆ-ಯುದ್ಧಕ್ಕೆ, ಕೋಪದಿಂ-ಸಿಟ್ಟಿನಿಂದ, ಅನುವಾದನು_ಯುದ್ಧಕ್ಕೆ ಸಿದ್ಧನಾದನು ‖

ಅ‖ ವಿ‖ (ವಿಕ್ರಮವುಳ್ಳ ಸುಧನ್ವ ವಿಕ್ರಮಸುಧನ್ವ) ಉ. ಮ. ಕ. ವಿಕ್ರಮ-ಪರಾಕ್ರಮ, ವಿಕ್ರಮಶಕೆ (ಮುಖ ಮೋರೆ, ಮುಖ-ಯಜ್ಞ) ‖ ೫೦ ‖

ಟೀ‖ ಅರ್ಜುನಂ_ಪಾರ್ಥನು, ಮಂಜೀರವಂ_ಮಂಜೀರವೆಂಬ ಕಾಲ್ಬಿರುದನ್ನು, ಆಳವಡಿಸಿ_ಧರಿಸಿಕೊಂಡು, ವೀರ-ಅಸಹಾಯ ಶೂರನೆಂಬ ಬಿರುದುಳ್ಳ, ಪಳಿಗೆಯ-ನಿಶಾನಿಯ ಬಿರುದನ್ನು, ಬಿಗಿಬಿಗಿದು_ಕಟ್ಟಿಕೊಂಡು, ರಂಜಿಪ_ಹೊಳೆಯುತ್ತಿರುವ, ತನುತ್ರ- ಕವಚವನ್ನು, ಶೀಸಕವಂ- ತಲೆಪಾಗನ್ನು, ಆಂತು- ಹೊಂದಿ, ಅಮರ-ಸೂರ್ಯ ಚಂದ್ರಾದಿ ಗ್ರಹಾದಿಗಳ, ಗಣಕೆ_ಸಮೂಹಕ್ಕೆ, ಅಂಜಳಿಯನೆತ್ತಿ- ಕೈಯನ್ನು ಮುಗಿದು, ಪಳವಿಗೆಯ- ಕೇತನದಲ್ಲಿರುವ, ಹನುಮಂಗೆ-ಕಪೀಶ್ವರನಾದ ಹನುಮಂತಮೂರ್ತಿಗೆ, ಎರಗಿ-ನಮಸ್ಕಾರವಂಮಾಡಿ, ಮಣಿರಥವನು_ರತ್ನಮಯವಾದ ವರೂಥವನ್ನು, ಬಲವಂದು-ಬಲಗಡೆಯಿಂದ ತಿರಗಿ (ಪ್ರದಕ್ಷಿಣವಂಮಾಡಿ) ಮಂಜುಳ_ಶ್ರೇಷ್ಠವಾದ, ಹಯಂಗಳಂ_ಅಶ್ವಗಳನ್ನು, ಬೋಳೈಸಿ_ಶರೀರವನ್ನು ಸವರಿ, (ನೇವರಿಸಿ) ಮಣಿದು_ನಮಸ್ಕರಿಸಿ, ಮನದೊಳು_ಮನದಲ್ಲಿ, ದೇವಪುರನಿಲಯ_ದೇವಪುರವೇ ವಾಸಸ್ಥಳವಾಗಿ ಉಳ್ಳ, ಲಕ್ಷ್ಮೀಪತಿಯನು_ರಮಾರಮಣನಾದ ಶ್ರೀ ಕೃಷ್ಣನನ್ನು, ಧ್ಯಾನಿಸುತ_ಸ್ಮರಿಸುತ್ತ, ಜಯನಿನಾದದಿಂದ_ಶುಭಧ್ವನಿಯಿಂದ, ಸಮರಕೆ_ಸುಧನ್ವನಮೇಲೆ ಕಾಳಗಕ್ಕಾಗಿ, ತೇರಂ_ವರೂಥವನ್ನು, ಏರಿದಂ-ಅಡರ್ದನು ‖

ಅ‖ ವಿ‖ (ಧನಂ_ದ್ರವ್ಯವನ್ನು. ಜಯ_ಜೈಸತಕ್ಕವನು), (ದೇವತೆಗಳ_ಪುರ, ದೇವಪುರ) ಷ.ತ. (ದೇವಪುರನಿಲಯಂ

ಸಿದನು ‖ ೪೯ ‖ ಸತ್ಯಕನ ಪುತ್ರನಿಗೆ ಅಪಜಯವಾಗಲು, ತಮ್ಮ ಭುಜದಾಟೋಪದಿಂದ, ಯೌವನಾಶ್ವನು, ಅಸಿತಧ್ವಜನು (ನೀಲಧ್ವಜನು) ಗದನು. ಆದಿತ್ಯಭವಸೂನುವು (ವೃಷಕೇತುವು) ಶಠನು, ನಿಶಠನು, ಅನಿರುದ್ಧನು, ಸಾಂಬನು. ಅನುಸಾಲ್ವನು, ಇವರೇ ಪ್ರಮುಖರಾದರು, ಇನ್ನು ಇತರ ಶೂರರೂ, ಒಟ್ಟುಗೂಡಿ ಅಮಿತವಾದ ಬಲದಿಂದ ಸುಧನ್ವನಿಗೆ ಪ್ರತಿಭಟಿಸಿ ಹೊರಡುವುದನ್ನ ಪಾರ್ಥನು ಕಂಡು, ಅತಿಯಾದ ರೋಷದಿಂದ ತಾನೇ ಯುದ್ಧಕ್ಕೆ ಅನುವಾದನು ‖ ೫೦ ‖ ಬಳಿಕ ಅರ್ಜುನನು, ಕಾಲಿಗೆ ಮಂಜೀರವೆಂಬ ತೊಡವನ್ನು ಧರಿಸಿಕೊಂಡು, ವೀರರ ಬಿರುದಾಂಕಿತನಾಗಿ ಅಸಹಾಯಶೂರನೆಂದು ಬರೆದಿರುವ ಭಂಗಾರದ ಪಟ್ಟಿಯನ್ನು ಬಿಗಿದುಕೊಂಡು, ಥಳಥಳನೆ ಹೊಳೆಯುವ ವಜ್ರಕವಚವನ್ನು ಧರಿಸಿಕೊಂಡು, ಮಣಿಖಚಿತವಾದ ಕಿರೀಟವನ್ನು ತಲೆಯಲ್ಲಿಟ್ಟುಕೊಂಡು, ದೇವಾದಿದೇವತೆಗಳಿಗೂ, ಸೂರ್ಯಚಂದ್ರರೇ ಮೊದಲಾದ ಗ್ರಹಗಳಿಗೂ, ದುರ್ಗಾ ಮೊದಲಾದ ಸಪ್ತಮಾತೃಕೆಯರಿಗೂ, ಅಭಿಮಾನ ಶಾಲಿಗಳಾದ ದೇವಗಳ ಸಮೂಹಕ್ಕೂ ನಮಸ್ಕಾರವನ್ನು ಮಾಡಿ, ಧ್ವಜಸ್ತಂಭದಲ್ಲಿರುವ ಆಂಜನೇಯಸ್ವಾಮಿಗೆ ಅಡ್ಡಬಿದ್ದು ರತ್ನಪಿಕಾರವಾದ ವರೂಥವನ್ನು ಪ್ರದಕ್ಷಿಣೆಮಾಡಿ ಮಂಜುಳವಾದ ರಥಾಶ್ವಗಳ ಮಯ್ಯನ್ನು ತಡವಿ ನಮಸ್ಕರಿಸಿ, ಧನಂಜಯನು ಮನಸ್ಸಿನಲ್ಲಿ ದೇವಪುರವೇ ವಾಸಸ್ಥಾನವಾಗುಳ್ಳ

ನಾದದಿಂದೇರಿದಂಸಮರಕೆಥ | ನಂಜಯಂಧ್ಯಾನಿಸುತಮನದೊಳಗೆದೇವಪುರನಿಲಯಲಕ್ಷ್ಮೀಪತಿಯನು ||೫೧||

ಸಂಧಿ ೧೨ ಕ್ಕೆ ಪದ್ಯ ೬೧೭ ಕ್ಕಂ ಮಂಗಳಮಸ್ತು.

---

ಬಹು. ಸ. (ಲಕ್ಷ್ಮಿಯಪತಿ, ಲಕ್ಷ್ಮೀಪತಿ) ಷ. ತ. [ಹನುಮಂಗೆ, ಹ. ಕ. ಚತುರ್ಥೀವಿಭಕ್ತಿಯಲ್ಲಿದೆ] ||೫೧||

ಹನ್ನೆರಡನೆಯ ಸಂಧಿ ಸಮಾಪ್ತವಾದುದು.

---

ಲಕ್ಷ್ಮೀಪತಿಯಾದ ಶ್ರೀಕೃಷ್ಣನಂ ಧ್ಯಾನಿಸುತ್ತ ಜಯರವದೊಡನೆ ಕೂಡಿ ಸುಧನ್ವನೊಡನೆ ಕಾಳಗಕ್ಕೋಸ್ಕರ ತೇರನ್ನು ಏರಿದವನಾದನು.

ಟೀಕಾ ತಾತ್ಪರ್ಯಸಹಿತವಾದ ಜೈಮಿನಿಭಾರತದಲ್ಲಿ ಹನ್ನೆರಡನೆಯ ಸಂಧಿಯು ಸಮಾಪ್ತವಾದುದು.



## ಹದಿಮೂರನೆಯ ಸಂಧಿ.

ಸೂಚನೆ॥ ಹಂಸಧ್ವಜನಸುತನಸಮರನುರಿದಾಗಿಬರೆ । ಕಂಸಾರಿಬಂದುಸಾರಥಿಯಾಗಿನರನಶರ । ದಿಂಸುಧನ್ವನ ಶಿರನನರಿಸಿದಂಮೇಲೆಸುರಗಣನೈದಿಕೊಂಡಾಡಲು ॥

ಕೇಳೆಲೆ ನೃಪಾಲ ಕುಲಮೌಳಿ ಬಳಿಕರ್ಜುನಂ । ಕಾಳಗಕೆನಡೆವ ಭಟರಂಸಿಲಿಸಿ ಮುಂದುವರಿ । ವಾಳಪಡೆಯಂ ತೆಗಿಸಿ ಭರದಿಂದ ನೂಕಿದಂ ಕಲಿಸುಧನ್ವನ ಸರಿಸಕೆ ॥ ಗಾಳಿಯಜವಂ ಪೊಡೆವ ಸಿಡಿಲಗರ್ಜನೆ ರವಿಯ । ಮೇಳಮುಂದಾವಾಗ್ನಿಯಾಟೋಪ ಮಂತಕನ । ಕೋಲಾಹಳಂ ಕೂಡಿಕೊಂಡೊಂದುರೂಪಾದ ವೋಲ್ಕಾಣಿಸುವ ರಥವನು ॥ ಕುದುರೆಗಳ ಖುರಪುಟಧ್ವನಿ ನಿಜವರೂಥದ ಚ । ಕ್ರದರವಂ ದೇವದತ್ತದ ಘೋಷಮೆಸೆವ ಸಿಂ । ಧದತುದಿಯ ಕಪಿಯಬ್ಬರಣೆ ಧನು

---

ಹದಿಮೂರನೆಯ ಸಂಧಿ ಪ್ರಾರಂಭವು.

ಸೂಚನೆ॥ ಹಂಸಧ್ವಜನ ಸುತನ–ಹಂಸಧ್ವಜನ ಮಗನಾದ ಸುಧನ್ವನ, ಸಮರಂ-ಕಾಳಗವು, ಅರಿದಾಗಿ ಬರೆ–ಅಸಾಧ್ಯವಾಗಿ ಬರಲು, ಕಂಸಾರಿ–ಕಂಸಾಸುರನಿಗೆ ಶತ್ರುವಾದ ಕೃಷ್ಣನು, ಬಂದು-ಬಂದವನಾಗಿ, ಸಾರಥಿಯಾಗಿ-ಅರ್ಜುನನ ತೇರನ್ನು ನಡಸುವವನಾಗಿ, ಮೇಲೆ–ಅಂತರಿಕ್ಷದಲ್ಲಿ, ಸುರಗಣಂ–ದೇವತೆಗಳ ಸಮೂಹವು, ಐದಿ-ಬಂದವರಾಗಿ, ಕೊಂಡಾಡಲು-ಸ್ತುತಿಸುತ್ತಿರಲು. ನರನ–ಪಾರ್ಥನ, ಶರದಿಂ–ಬಾಣದಿಂದ, ಸುಧನ್ವನ, ಶಿರನನು-ಶಿರಸ್ಸನ್ನು, ಅರಿಸಿದಂ–ಕತ್ತರಿಸಿದನು.

ಅ॥ ವಿ॥ (ಕಂಸನ+ಅರಿ=ಕಂಸಾರಿ) ಷ. ತ. (ಸುರರ+ಗಣ=ಸುರಗಣ) ಷ. ತ. (ಕೊಂಡು ಆಡು–ತೆಗೆದುಕೊಂಡು ಆಡು) ಕೊಂಡಾಡು–ಹೊಗಳು)

ಟೀ॥ ಎಲೆ–ಎಲಯ್ಯ, ನೃಪಾಲ-ರಾಜರ, ಕುಲ-ವಂಶಕ್ಕೆ, ಸಮೂಹಕ್ಕೆ. ಮೌಳಿ–ಕಿರೀಟಪ್ರಾಯನಾದವನೆ! ಕೇಳು–ಆಲಿಸು, ಬಳಿಕ–ಅನಂತರ, ಅರ್ಜುನಂ–ಪಾರ್ಥನು, ಕಾಳಗಕೆ–ಜಗಳಕ್ಕೆ, ನಡೆವ-ಹೋಗುತ್ತಿರುವ, ಭಟರಂ–ವೀರರನ್ನು, ನಿಲಿಸಿ-ತಡೆದು, ಮುಂದುವರಿವ–ಮುಂದುಗಡೆ ಒತ್ತಿ ಬರುತ್ತಿರುವ, ಆಳ–ಕಾಲ್ಬಲದ, ಪಡೆಯಂ–ಬಲವನ್ನು, ತೆಗಿಸಿ–ಪ್ರವೇಶಿಸದಂತೆ ಅಡ್ಡಿಪಡಿಸಿ, ಭರದಿಂದ–ಶೀಘ್ರವಾಗಿ, ಸುಧನ್ವನ ಸರಿಸಕೆ–ಸುಧನ್ವನ ಹತ್ತಿರಕ್ಕೆ, ಗಾಳಿಯ–ವಾಯುವಿನ, ಜವಂ–ಜಾಗ್ರತೆಯಾಗಿ ಬೀಸೋಣವು (ವೇಗವು), ಪೊಡೆವ–ಬಡಿಯುವ, ಸಿಡಿಲಗರ್ಜನೆ–ಅಶನಿಯ ಆರ್ಭಟವು, ರವಿಯ–ಭಾಸ್ಕರನ, ಮೇಳಮಂ–ಮಧ್ಯಕಾಲದ ಬಿಸಲು, ದವಾಗ್ನಿಯ–ಕಾಡ್ಕಿಚ್ಚಿನ, ಆಟೋಪಂ–ಆಧಿಕ್ಯವು, ಅಂತಕನ-ಕಾಲನ, ಕೋಲಾಹಳಂ–ಕಲಕಲಧ್ವನಿಯು, ಕೂಡಿಕೊಂಡು–ಬೆರದುಕೊಂಡು, ಒಂದು ರೂಪಾದವೋಲ್–ಒಂದು ಆಕೃತಿಯಾದ ರೀತಿಯಿಂದ, ಕಾಣಿಸುವ–ಕಂಡು ಬರುವ, ರಥವನು-ವರೂಥವನ್ನು, ನೂಕಿದಂ–ಹೊಡೆದನು (ತಳ್ಳಿದನು).

ಅ॥ ವಿ॥ ಮೌಳಿ–ತಲೆ, ಕಿರೀಟ, (ಕಲಿಯಾದ- ಸುಧನ್ವ, ಕಲಿಸುಧನ್ವ) ವಿ.ಪೂ.ಕ. ಶರ–ನೀರು, ಬಾಣ, ದರ್ಭೆ ॥೧॥

ಟೀ॥ ಕುದುರೆಗಳ–ಅಶ್ವಗಳ, ಖುರಪುಟಧ್ವನಿ-ಪಾದ (ಗೊರಸು) ಗಳಿಂದಾಗುವ ಶಬ್ದವು, ನಿಜ-ತನ್ನ, ವರೂಥದ–ತೇರಿನ, ಚಕ್ರದ–ಬಂಡಿಗಳ, ರವಂ–ಧ್ವನಿಯು, ದೇವದತ್ತದ–ದೇವದತ್ತವೆಂಬ ಶಂಖದ, ಘೋಷಂ–ಸದ್ದು, ಎಸೆವ–ಪ್ರಕಾಶಿಸುವ. ಸಿಂಧದ–ಪತಾಕೆಯ, ತುದಿಯ–ಕೊನೆಯುಲ್ಲಿರುವ, ಕಪಿಯ–ಕಪಿಯಾದ ಆಂಜನೇಯನ, ಅಬ್ಬರಣೆ–ಆರ್ಭಟವು, ಧನು–ಬಿಲ್ಲಿನ, ಝೇಂಕಾರಂ–ಟಂಕೃತಿಯು, ಒಂದಾಗಿ–ಒಟ್ಟುಗೂಡಿ, ಭೀಕರದೊಳು–ಭಯವನ್ನುಂಟುಮಾಡುವ ರೀತಿಯಿಂದ, ಪದಿನಾಲ್ಕು ಲೋಕಮುಂ–ಹದಿನಾಲ್ಕು ಲೋಕಗಳನ್ನು, ಬೆದರಿಸಲ್ಕೆ–ಹೆದರಿಸಲು, ಇದು–ಈ ಶಬ್ದವು, ನರನ–ಪಾರ್ಥನ, ಕದನದ–ಯುದ್ಧದ, ಆಟೋಪಂ – ವೈಖರಿಯು, ಎಂದು – ಎಂಬದಾಗಿ, ಅರಿದು – ತಿಳಿದು (ಗ್ರಹಿಸಿ) ಅಂಬುಜಾಸನಂ – ಕಮಲಾಸನನಾದ ಬೊಮ್ಮನು, ಮೊದಲಾದ – ಆದಿಯಾದ, ನಿರ್ಜರರ್–ಅನಿಮಿಷರು, ತಂತಮ್ಮ – ತಮ್ಮಗಳ, ವಾಹನ–ಹೊ

---

ಹದಿಮೂರನೆಯ ಸಂಧಿ ಪ್ರಾರಂಭವು.

ತಾತ್ಪರ್ಯ—ಎಲೈ ರಾಜ ಕುಲಕ್ಕೆ ಕಿರೀಟಪ್ರಾಯನಾದ ಜನಮೇಜಯರಾಯನೇ! ಕೇಳು, ಪೃಥೆಯ ಮಗನಾದ ಪಾರ್ಥನು, ಸಾತ್ಯಕಿ, ವೃಷಕೇತು, ಪ್ರದ್ಯುಮ್ನ, ಯೌವನಾಶ್ವ, ಸಾಲ್ವಾನುಜ, ಅಸಿತಧ್ವಜನೇ ಆದಿಯಾದ ಮಹಾವೀರರು, ಹಂಸಧ್ವಜನ ಪುತ್ರನಾದ ಸುಧನ್ವನಂ ರಣದೋಳ್ ಸೋಲಿಸಿದ್ದನ್ನೂ, ಉಳಿದ ವೀರಾದಿಗಳು ಯುದ್ಧಕ್ಕೆ ಹೊರಟಿರುವುದನ್ನೂ ಕಂಡು, ಆ ಸೇನಾ ಜನರನ್ನು ಒಂದಕ್ಕೆ ನಿಲ್ಲಿಸಿ ಸುಧನ್ವನ ಹತ್ತಿರಕ್ಕೆ ಗಾಳಿಯ ವೇಗವೂ, ಹೊಡೆವ ಸಿಡಿಲ ಧ್ವನಿಯೂ, ಸೂರ್ಯನ ತಾಪವೂ, ದವಾಗ್ನಿಯಾಧಿಕ್ಯವೂ, ಅಂತಕನ ಕೋಲಾಹಲವೂ ಇವೆಲ್ಲವೂ ಏಕೀಭವಿಸಿ ಒಂದಾದ ರೀತಿಯಿಂದ ಕಾಣಬರುವ ರಥವನ್ನು ನಡೆಯಿಸುತ್ತಿದ್ದನು ॥೧॥ ಆ ಸಮಯದಲ್ಲಿ ಅರ್ಜುನನ ಚತುರಂಗ ಬಲದ

ಝೇಂಕಾರಮೊಂದಾಗಿಭೀಕರದೊಳು ॥ ಪದಿನಾಲ್ಕುಲೋಕಮಂಬೆದರಿಸಲ್ಕಿದುನರನ । ಕದನದಾಟೋಪಮೆಂದರಿದಂಬುಜಾಸನಂ । ಮೊದಲಾದನಿರ್ಜರರ್ತಂತಮ್ಮವಾಹನವಿಮಾನದಿಂದೈತಂದರು ॥ ೨ ॥ ವಾನರಸಮುನ್ನತಧ್ವಜವರೂಥದೊಳೈದು । ವಾನರಸಮಂಭರವನರಿದುಕಾಳಗಕೆನಾ । ವಾನರಸಮರ್ಥನೆಂದರ್ಜುನಂಬಹನೆಂದುನಿಜಸಾರಥಿಗೆಸೂಚಿಸಿ ॥ ದಾನವನರಾನಿಮಿಷರೊಳುನೀನೆಭಟನಹೆನಿ । ದಾನವನನೇಕಮುಖದಿಂಕೇಳ್ದುಸಂಗ್ರಾಮ । ದಾನವನರಸಿಬಂದೆನೆಂದೆಚ್ಚನಾಸುಧನ್ವಂ ಪಾರ್ಥನಂಧುರದೊಳು ॥೩॥ ಕ್ರುದ್ಧನಾದಂಧನಂಜಯನಿದೇಕೆನ್ಮೊಡನೆ । ಯುದ್ಧವನಪೇಕ್ಷಿಸುವೆಶಿವಶಿವಾನೀನಪ್ರ । ಬುದ್ಧ

---

ರುವುದಕ್ಕೆ ಯೋಗ್ಯವಾದ ಆನೆ ಮೊದಲಾದವುಗಳಿಂದಲೂ, ವಿಮಾನದಿಂ-ಅಂತರಿಕ್ಷದಲ್ಲಿ ಸಂಚರಿಸುವ ರಥಾದಿಗಳಿಂದಲೂ, ಐತಂದರು-ಬಂದವರಾದರು ॥

ಅ॥ ವಿ॥ (ಐತರ್-ಧಾತು), (ಪದಿನಾಲ್ಕುಲೋಕಗಳ ಸಮಾಹಾರ, ಪದಿನಾಲ್ಕು ಲೋಕ) ಸ. ದ್ವಿಗು. (ಕದನದ+ಆಟೋಪ=ಕದನದಾಟೋಪ) ಲೋ. ಸಂಧಿ. (ಜರ-ಮುಪ್ಪು ಅದಿಲ್ಲದವರು, ನಿರ್ಜರರು) ಅ. ಸ. (ಖುರದ-ಪುಟ) ಖುರಪುಟ ಷ. ತ. ॥೨॥

ಟೀ॥ ವಾನರ-ಅಂಜನೇಯನಿಂದ ಯುಕ್ತಮಾದ, ಸಮುನ್ನತ-ಮೇಲಕ್ಕೆ ಎತ್ತಲ್ಪಟ್ಟಿರುವ, ಧ್ವಜ-ಕೇತನವುಳ್ಳ, ವರೂಥದೊಳು-ತೇರಿನಲ್ಲಿ, ಐದುವ-ಪ್ರಯಾಣಮಾಡುತ್ತಿರುವ, ಆ ನರ-ಆ ಪಾರ್ಥನ, ಸಮರ-ಕಾಳಗದ, ಭರವಂ-ಜಾಗ್ರತೆಯನ್ನು, ಅರಿದು-ಗ್ರಹಿಸಿ, ನಾವು-ನಾವುಗಳು, ಆ ನರ-ಆ ಫಲ್ಗುಣನಿಗಿಂತಲೂ, ಸಮರ್ಥಂ ಎಂದು-ಶೂರನು ಎಂಬದಾಗಿ, ಅರ್ಜುನಂ-ಪಾರ್ಥನು, ಬಹನು ಎಂದು-ಬರುತ್ತಿರುವನು ಎಂಬದಾಗಿ, ನಿಜ-ತನ್ನ, ಸಾರಥಿಗೆ-ಸೂತನಿಗೆ, ಸೂಚಿಸಿ-ತಿಳಿಯಪಡಿಸಿ (ಎಚ್ಚರಿಸಿ), ದಾನವ-ದೈತ್ಯರಲ್ಲಿ, ನರ-ಮನುಜರಲ್ಲಿ, ಅನಿಮಿಷರೊಳು-ದೇವತೆಗಳಲ್ಲಿಯೂ ಕೂಡ, ನೀನೇ-ನೀನೊಬ್ಬನು ಮಾತ್ರವೇ, ಭಟಂ-ವೀರನು, ಅಹೆ-ಆಗಿರುತ್ತಿ, ನಿದಾನವಂ-ಈ ಮೂಲತತ್ವವನ್ನು, ಅನೇಕ ಮುಖದಿಂ-ಬಹು ಜನರಮುಖೇನ, ಕೇಳ್ದು-ತಿಳಿದು, ಸಂಗ್ರಾಮ-ಯುದ್ಧದ, ದಾನವಂ-ಯುದ್ಧಾಡಂಬರವನ್ನು, ಅರಸಿ-ಹುಡುಕಿ, (ಅಪೇಕ್ಷಿಸಿ) ಬಂದೆನು-ಬಂದಿರುವೆನು, ಎಂದು-ಎಂಬದಾಗಿ, ಆ ಸುಧನ್ವಂ-ಆ ಸುಧನ್ವನು, ಪಾರ್ಥನಂ-ಫಲ್ಗುಣನನ್ನು, ಧುರದೊಳು-ಯುದ್ಧದಲ್ಲಿ, ಎಚ್ಚಂ-ಬಾಣ ಪ್ರಯೋಗ ಮಾಡಿದನು.

ಅ॥ ವಿ॥ (ವಾನರರಲ್ಲಿ+ಸಮರ್ಥಂ=ವಾನರಸಮರ್ಥಂ) ಸ. ತ. (ನಿಮಿಷ-ಕಣ್ಣಿನ ರೆಪ್ಪೆಯ ಕೂದಲು, ಅ-ಇಲ್ಲದವರು, ಅನಿಮಿಷರು) ಅನಿಮಿಷ-ದೇವತೆಗಳು, ಮೀನು, ರೆಪ್ಪೆ ಕೂದಲು ಇಲ್ಲದವರು, ಅರಸಿ-ಹುಡುಕಿ, ರಾಣಿ. ॥೩॥

ಟೀ॥ ಧನಂಜಯಂ-ಪಾರ್ಥನು, ಕ್ರುದ್ಧನಾದಂ-ಕುಪಿತನಾದನು, ಇದೇಕೆ-ಇದು ಏತಕ್ಕಾಗಿ, ನಮ್ಮೊಡನೆ-ನಮ್ಮಲ್ಲಿ, ಯುದ್ಧವಂ-ಕಾಳಗವನ್ನು, ಅಪೇಕ್ಷಿಸುವೆ-ಅಪೇಕ್ಷಿಸುತ್ತಿ, ಶಿವಶಿವ-ಪರಮೇಶ್ವರನೇ, ನೀಂ-ನೀನು, ಅಪ್ರಬುದ್ಧನು-ತಿಳುವಳಿಕೆಯಿಲ್ಲದವನು, ಅಲ್ಲವೆ-ಆಗಿರುತ್ತಿ (ಆಗಿಲ್ಲವೆ), ದೇವ-ದೇವತೆಗಳಲ್ಲಿಯೂ, ದೈತ್ಯ-ರಕ್ಕಸರಲ್ಲಿಯೂ, ಮಾನವರೊಳು-ಮನುಷ್ಯರಲ್ಲಿಯೂ, ಮದೀಯ-ನನ್ನ, ವೈರದೊಳು-ಶತ್ರುತ್ವದಿಂದ, ಬಾಳ್ದ-ಜೀವಿಸಿರುವ, ಉದ್ಧತ-ಅಧಿಕರಾದ, ಪರಾಕ್ರಮಿಗಳು - ಯುದ್ಧದಲ್ಲಿ ಆಟೋಪವುಳ್ಳವರು, ಉಂಟೆ - ಇರುವರೇ, ಸಂಗರಕೆ - ಕಾಳಗಕ್ಕೆ, ಸನ್ನದ್ಧರಾದ - ಅನುವಾದ, ಇನಸುತ-ಸೂರ್ಯಪುತ್ರನಾದ ಕರ್ಣನು, ದ್ರೋಣ-ದ್ರೋಣಾಚಾರ್ಯನು, ಭೀಷ್ಮ-ಭೀಷ್ಮನು, ಇನರೆ, ಆದಿ-ಮೊದಲಾದ, ಪ್ರಸಿದ್ಧ-

---

ನಿನದವೂ, ದೇವದತ್ತದ ಘೋಷವೂ, ಧನುಸ್ಸಿನ ಝೇಂಕಾರವೂ ಇವೆಲ್ಲ ಏಕೀಭವಿಸಿ ಪದಿನಾಲ್ಕು ಲೋಕಂಗಳಂ ಬೆದರಿಪ ನಿನದಮಂ ಕೇಳ್ದು, ಬ್ರಹ್ಮಾದಿ ದೇವತೆಗಳು ಅರ್ಜುನನ ಕದನದಾಟೋಪನಂ ನೋಡಲ್ಕೆ ತಮ್ಮ ವಾಹನಾದಿಗಳಂ ಹತ್ತಿ ಐತಂದರು ನೋಡುತ್ತಿರಲು ॥೨॥ ಅತ್ತಲಾ ಸುಧನ್ವನು ಕಪಿಧ್ವಜನಾದ ಅರ್ಜುನನಂ ನೋಡಿ, ತನ್ನ ಸಾರಥಿಯುಂ ಎಚ್ಚರಿಸಿ, ತನ್ನ ಇತರ ಸೇನಾಧಿಕಾರಿಗಳಿಂದ ಜಯಿಸಲಾಗದೆಂದು ತಿಳಿದು ಪಾರ್ಥನೇ ಯುದ್ಧಕ್ಕೆ ಬರುತ್ತಲಿರುವನು, ಈ ಮಹನೀಯನ ಪರಾಕ್ರಮಾತಿಶಯವನ್ನು ಅನೇಕರಿಂದ ತಿಳಿದಿರೋಣವಾಗಿದೆ, ನರರಲ್ಲಿಯೂ, ದೇವಾದಿ ದೇವತೆಗಳಲ್ಲಿಯೂ ನೀನೇ ಸಮರ್ಥನು, ಆದರೂ ನಾನು ನಿನ್ನೊಡನೆ ಕದನಮನೆಸಗಲ್ಕೆ ಬಂದಿರ್ಪೆನೆಂದು ಅರ್ಜುನನಮೇಲೆ ಬಾಣಪ್ರಯೋಗಮಾಡಲಾಗಿ ॥ ೩ ॥ ಅರ್ಜುನನು, ಕೋಪೋದ್ರೇಕವುಳ್ಳವನಾಗಿ, ಎಲೈ ಸುಧನ್ವನೇ! ನೀನು ನನ್ನೊಡನೆ ಯುದ್ಧಕ್ಕಾಗಿ ಬಂದಿರ್ಪೆಯಾ! ಅಗತ್ಯವಾಗಿ ಯುದ್ಧಮಾಡಬಹುದು, ಆದರೆ ನೀನೇನೋ ವಿವೇಕಿಯೆಂದು ಭಾವಿಸಿದ್ದೆನು, ದೇವಾದಿದೇವತೆಗಳಲ್ಲಿಯೂ, ನರಮನುಷ್ಯರಲ್ಲಿಯೂ, ಯಾರೂ ಯುದ್ಧಮಾಡಿ ಬದುಕಿದವರಿಲ್ಲ, ಮತ್ತು ಅತ್ಯಂತ ಪರಾಕ್ರಮಿಗಳಾದ ಭೀಷ್ಮ ದ್ರೋಣಾದಿಗಳು ನನ್ನೊಡನೆ ಕಾದಿ ಯಾವ ಗತಿಯಂ ಪೊಂದಿದರು. ಮರುಳೆ ನನ್ನಂ ನೀಂ ಜಯಿಸುವುದೆಂದರೇನು, ಸುಮ್ಮನೆ ಹೊರಟು ಹೋಗು ಎನುತ ಅರ್ಜು

ಸಲ್ಲನೆಪೇವದೈತ್ಯನಾನವರೋಳ್ಮ್ರದೀಯುವೈರದೊಳೆಬಾಳ್ದ || ಉದ್ಧತಪರಾಕ್ರಮಿಗಳುಂಟೆಸಂಗರಕೆಸಂ | ನ್ನದ್ಧರಾದಿನಸುತ ದ್ರೋಣಭೀಷ್ಮಾದಿಪ್ರ | ಸಿದ್ಧಭಟರೇನಾದರರಿಯುಲಾಮುರುಳೆಹೋಗೆನುತೆಚ್ಚನಾಪಾರ್ಥನು ||೪|| ಸಾರಥಿಯಬಲ್ಪಿಂದಕೌರ ವನಬಲದಖಿಳ | ವೀರರಂಗೆಲ್ದಿಯಲ್ಲದೆನಿನ್ನನೀಧರೆಯೊ | ಳಾರರಿವರಕಟನೀಂಕೃಷ್ಣನಂಕರಸಿಕೊಂಡಳವಿಗೊಂಡುಬಳಿಕೆ ನ್ನೊಳು || ಸಾರನ್ನೆಗಂಬರಿದೆಬಳಲಬೇಡೆನ್ಮಲ್ಲಿ | ಹಾರೈಸದಿರ್ಜಯವನೆನುತೆಚ್ಚಡರ್ಜುನನ | ತೇರಿರದೆತಿರ್ರನೆಬುಗುರಿಯಂತೆ ತಿರುಗಿತದನೇನೆಂಬೆನದ್ಭುತವನು ||೫|| ಪೂತುರೆಸುಧನ್ವಸತ್ವಾತಿಶಯದಿಂದವಿ | ಖ್ಯಾತನಹೆಮದ್ರಥವನೀತೆರದೊಳೆಸೆವರಂ | ಪಾತಾಳಸುರನಿಲಯಭೂತಳಪಟುಭಟವ್ರಾತದೋಳ್ಕಾಣೆನಿನ್ನು || ನೀತರಳನಕಟಬರಿದೇತಕಳಿದಪೆನಿನ್ನ | ತಾತನಂಬರಹೇಳು

---

ಲೋಕವಿಖ್ಯಾತರಾದ, ಭಟರ್_ಶೂರರು, ಏನಾದರು_ಯಾವ ಫಲವನ್ನು ಹೊಂದಿದರು, ಅರಿ_ತಿಳಿ, ಎಲಾ ಮರುಳೆ-ಎಲೆ ಮೂಢನೆ, ಹೋಗೆನುತ_ಕಾಳಗವಂ ಬಿಟ್ಟು ನಡೆ ಎಂದು, ಆ ಪಾರ್ಥನು_ಆ ಫಲ್ಗುಣನು, ಎಚ್ಚನು-ಬಾಣಪ್ರಯೋಗಮಾಡಿದನು.

ಅ|| ವಿ|| (ಅದಿತಿಯ ಮಕ್ಕಳು-ದೇವತೆಗಳು, ದಿತಿಯ ಮಕ್ಕಳು-ರಕ್ಕಸರು) (ಅವನು_ಪಾರ್ಥ, ಆಪಾರ್ಥ) ಗ. ಸ. (ಇನನ+ಸುತ_ಇನಸುತ) ಷ. ತ. ದ್ರೋಣನುಂ-ಭೀಷ್ಮನೂ, (ದ್ರೋಣ ಭೀಷ್ಮರು) ದ್ವಿ. ದ್ವಂ. ||೪||

ಟೀ|| ಸಾರಥಿಯ_ರಥವನ್ನು ನಡೆಯಿಸುವ, ಕೃಷ್ಣನ, ಬಲ್ಪಿಂದೆ- ಸಾಮರ್ಥ್ಯದಿಂದ, ಕೌರವನ_ದುರ್ಯೋಧನನ, ಬಲದ_ಸೈನ್ಯದ, ಅಖಿಳ-ಸಮಸ್ತರಾದ, ವೀರರಂ_ಶೂರರನ್ನು, ಗೆಲ್ದೆ-ಜಯಿಸಿದೆ, ಅಲ್ಲದೆ_ಹಾಗಲ್ಲದಿದ್ದರೆ, ನಿನ್ನಂ-ನಿನ್ನನ್ನು, ಈ ಧರೆಯೊಳು_ಈ ಪೃಥ್ವಿಯಲ್ಲಿ, ಆರರಿವರ್_ಯಾರು ತಾನೆ ತಿಳಿದಿರ್ಪರು, ಅಕಟ_ಅಯ್ಯೋ, ನೀಂ_ನೀನು, ಕೃಷ್ಣನಂ ಕರಸಿಕೊಂಡು_ಕೃಷ್ಣನನ್ನು ಬರಮಾಡಿಕೊಂಡು, ಎನ್ನೊಳು-ನನ್ನೊಡನೆ, ಅಳವಿಗೊಡು-ಕಾಳಗವಂ ಮಾಡು, ಅನ್ನೆಗಂ_ಅದುವರೆಗೂ, ಸಾರು_ಹೋಗು, (ಬೇರೆಯಿರು) ಬರಿದೆ_ವ್ಯರ್ಥವಾಗಿ, ಎನ್ಮಲ್ಲಿ-ನನ್ಮೊಡನೆ ಯುದ್ಧಮಾಡಿ, ಬಳಲಬೇಡ_ಆಯಾಸಪಡಬೇಡ, ಜಯನಂ_ಗೆಲ್ಲುವಿಕೆಯನ್ನು, ಎಮ್ಮಲ್ಲಿ-ನಮ್ಮಲ್ಲಿ, ಹಾರೈಸದಿರ್_ಅಪೇಕ್ಷಿಸಬೇಡ, ಎನುತ_ಎಂದು ಹೇಳುತ್ತ, ಎಚ್ಚಡೆ_ಶರಪ್ರಯೋಗಮಾಡಲು, ತೇರು-(ಅರ್ಜುನನ) ವರೂಥವು, ಇರದೆ-ನಿಂತಿರದೆ, ತಿರ್ರನೆ_ತಿರ್ರೆಂಬ ಧ್ವನಿಯಿಂದ, ಬುಗುರಿಯಂತೆ_ಬುಗುರಿಯಹಾಗೆ, ತಿರುಗಿತು_ಸುತ್ತಿತು, ಅದ್ಭುತವನು_ಈ ಅತಿಶಯವನ್ನು, ಏನೆಂಬೆನು_ಏನೆಂದು ವರ್ಣಿಸಲಿ.

ಅ|| ವಿ|| ತಿರ್ರನೆ_ಅನುಕರಣ ಶಬ್ದ (ಕೌರವನ ಬಲ, ಕೌರವನ-ಬಲ) ಅಲುಕ್‌ಷಷ್ಠಿ ||೫||

ಟೀ|| ಸುಧನ್ವ_ಎಲೈ ಸುಧನ್ವನೆ; ಪೂತುರೆ_ಶಹಬಾಸು, ಸತ್ವ- ಪರಾಕ್ರಮದ, ಅತಿಶಯದಿಂದ-ಆಟೋಪದಿಂದ, ವಿಖ್ಯಾತನು-ಲೋಕಪ್ರಸಿದ್ಧನು, ಅಹೆ-ಆಗಿರುತ್ತಿ, ಮದ್ರಥನ_ನನ್ನ ವರೂಥವನ್ನು, ಈ ತೆರದೊಳು_ಈ ರೀತಿಯಿಂದ, ಎಸೆವರಂ_ಬಾಣಪ್ರಯೋಗಮಾಡಿ ಹಿಂದಟ್ಟಿದವರನ್ನು, ಪಾತಾಳ_ಕೆಳಲೋಕದಲ್ಲಿಯೂ, ಸುರ-ದೇವತೆಗಳಿಗೆ, ನಿಲಯ_ಆವಾಸವಾದ ಸ್ವರ್ಗಲೋಕದಲ್ಲಿಯೂ, ಭೂತಳ – ಮರ್ತ್ಯಲೋಕದಲ್ಲಿಯೂ ಇರುವ, ಪಟು – ಸಮರ್ಥರಾದ, ಭಟ_ವೀರರ, ವ್ರಾತದೋಳ್_ಗುಂಪಿನಲ್ಲಿ, ಕಾಣೆನು_ನೋಡಿರುವುದಿಲ್ಲ, ಇನ್ನು-ಈಗಲೂ, ನೀ_ನೀನು, ತರಳಂ-ಹುಡುಗನು, (ಆಗಿರುತ್ತಿ) ಅಕಟ_ಅಯ್ಯೋ, ಬರಿದೆ_ವ್ಯರ್ಥವಾಗಿ, ಏಕೆ-ಏತಕ್ಕಾಗಿ, ಅಳಿದಪೆ_ಪ್ರಾಣಬಿಡುತ್ತಿ, ನಿನ್ನ_ನಿನ್ನಯ, ತಾತನಂ-ತಂದೆಯಾದ ಹಂಸಧ್ವಜನನ್ನು, ಬರಹೇಳು_ಬರುವಂತೆ ಹೇಳು, ನಾವು-ನಾವುಗಳು, ಘಾತಿಸುವರು_ಸಂಹರಿಸತಕ್ಕವರು, ಅಲ್ಲ-ಆಗಿರುವುದಿಲ್ಲ, ಆ ತುರಂಗಮಂ_ಆ ಯಜ್ಞಾಶ್ವವನ್ನು, ಬಿಡದೆ_ ಬಿಟ್ಟುಕೊಡದೆ, ಧಾತುಗೆಡಬೇಡ_ ಅಧೈರ್ಯಪಡಬೇಡ, ಎನುತಲಿ_ಎಂದು ಹೇಳುತ್ತಾ, ಆತನಂ_ಆ ಸುಧನ್ವನನ್ನು, ನರಂ_ಅರ್ಜುನನು, ಎಚ್ಚನು_ಬಾಣದಿಂದ ಹೊಡೆದನು.

---

ನನು ಶರಗಳಂ ಪ್ರಯೋಗಿಸಿದನು ||೪|| ಆ ಮಾತಂ ಕೇಳಿ, ಸುಧನ್ವನು ಸಾರಥಿಯಾದ ಶ್ರೀ ಕೃಷ್ಣನ ಸಹಾಯದಿಂದ, ಬಲಶಾಲಿಗಳಾದ ಕೌರವಾದಿಗಳಂ ಜಯಿಸಿದೆಯೇ ಹೊರ್ತು, ನಿನ್ನ ಸಾಮರ್ಥ್ಯದಿಂ ಪೇನಾದರೂ ಜಯಿಸಿದೆಯಾ! ಲೋಕದಲ್ಲಿ ನಿನ್ನಂ ಯಾರು ತಾನೆ ಶೂರನೆಂದರಿವರು, ಆದ್ದರಿಂದ ನೀನು ಕೃಷ್ಣನಂ ಬರಮಾಡಿಕೊಂಡು ನನ್ನೊಡನೆ ಯುದ್ಧಮಾಡು, ಹಾಗೆ ಮಾಡದೆ ವೃಥಾ ನನ್ನೊಡನೆ ಕಾದಿ ಆಯಾಸಪಡಬೇಡ, ಕೃಷ್ಣನಿಲ್ಲದೆ ನನ್ನಲ್ಲಿ ನಿನಗೆ ಜಯವಾದೀತೇ? ಎಂದಿಗೂ ಜಯವನ್ನು ಅಪೇಕ್ಷಿಸಬೇಡವೆಂದು ಬಾಣ ಪ್ರಯೋಗವಂ ಮಾಡಲು, ಅರ್ಜುನನ ವರೂಥವು ಗರ್ರನೆ ಬುಗುರಿಯಂತೆ ತಿರುಗಿ ಸಮಸ್ತರಿಗೂ ಆಶ್ಚರ್ಯವನ್ನುಂಟುಮಾಡಿತು ||೫|| ಆಗ ಅರ್ಜುನನು ಸುಧನ್ವನಂ ನೋಡಿ ಎಲೈ ಸುಧನ್ವನೇ ಶಹಬಾಸು, ಪರಾಕ್ರಮಾತಿಶಯದಿಂದ ವಿಖ್ಯಾತನಾಗಿರುತ್ತಿ, ಈ ರೀತಿಯಾಗಿ ಬಾಣಪ್ರಯೋಗವಂ ಮಾಡಿ, ನನ್ನ ರಥವನ್ನು ಹಿಂದಕ್ಕೆ ನೂಕಿದ ವೀರರು ತ್ರಿಲೋಕಗಳಲ್ಲಿ ಯಾರನ್ನೂ ಕಾಣೆ, ನೀನು ಇನ್ನೂ ಬಾಲಕ, ನಿಮ್ಮ ತಂದೆಯನ್ನಾದರೂ ಯುದ್ಧಕ್ಕೆ ಬರ ಹೇಳು, ಅನ್ಯಾಯವಾಗಿ ಅಲ್ಪಾಯುಸ್ಸಿನಲ್ಲಿ ಪ್ರಾಣ ಬಿಡಬೇಡ, ಯಜ್ಞಾಶ್ವವನ್ನು ಬಿಡದೆ ಆಯಾಸಪಡಬೇಡವೆಂದು ಬಾಣವಂ ಪ್ರಯೋಗಿಸಲಾಗಿ

ಘಾತಿಸುವರಲ್ಲನಾ | ವಾತುರಗನುಂಬಿಡದೆಧಾತುಗೆಡಬೇಡೆನುತಲಾತನಂನರನೆಚ್ಚನು ‖ ೬ ‖ ಇನ್ನುಹಯಮಂಬಿಡುವನಲ್ಲನನಗೆ ಮ್ಮತಾ | ತನ್ನಳಿವನಾಭನಸಹಾಯಮಿಲ್ಲದೆಬರಿದೆ | ತನ್ನನಳುಕಿಸಲರಿಯೆಕಕ್ಕುಲಿತೆಬೇಡನಡೆಹಸ್ತಿನಾಪುರಕೆಮರಳಿ ‖ ಸನ್ನು ತತುರಂಗಮೇಧಾಧ್ವರಕೆದೀಕ್ಷೆಗೊಂ | ಬಂನರೇಂದ್ರಾಗ್ರಣಿಮರಾಳಧ್ವಜಂಬಳಿಕ | ನಿನ್ನವಿಕ್ರಮದಿಂದಜಯಿಸುಭೂಮಂಡಲ ವನೆನುತನಂತೆಗದೆಚ್ಚನು ‖ ೭ ‖ ಈಚಾಪಮೀಬಾಣಮೀದಿವ್ಯರಥಮೀವ | ನೇಚರಧ್ವಜಮೀಮಹಾಶ್ವಂಗಳೀಸವ್ಯ | ಸಾಚಿ ತ್ವಮೀದೇವದತ್ತಶಂಖಂತನಗಿದೇಕೆನಿನ್ನಂಜಯಿಸದೆ ‖ ಈಚತುರ್ದಶಜಗವನಣುವೆಂದರಿಯೆನಕಟ | ಗೋಚರವೆನೀನೆನಗೆಘಡ ಯೆನುತತೆಗದುನಾ | ರಾಚವೇಳ್ನೂರನೆಚ್ಚಂಸುಧನ್ವನಮೇಲೆಪಾರ್ಥನೆಣ್ದೆಸೆಕಂಪಿಸೆ ‖ ೮ ‖ ದಿವ್ಯರಥಹಯಚಾಪಶರಕೇತು

---

ಅ‖ ವಿ‖ (ಪೂತುರೆ-ಮಹಾರಾಷ್ಟ್ರಪದ,) (ಸ್ವರ್ಗ, ಮರ್ತ್ಯ, ಪಾತಾಳ ಇವು ತ್ರಿಲೋಕಗಳು) ಮುತ್ + ರಥ = ಮುದ್ರಥ), ಜ ಸಂಧಿ, (ತುರಂಗ-ಕುದುರೆ, ಕುರಂಗ-ಜಿಂಕೆ) ‖ ೬ ‖

ಟೀ‖ ಇನ್ನು-ಇನ್ನುಮೇಲೆ, (ಅಶ್ವಮಂ ಹಿಡಿದು ಕಟ್ಟಿದನಂತರ) ಎಮ್ಮ-ನಮ್ಮ, ತಾತಂ-ಜನಕನು, ನಿನಗೆ-ನಿನ ಗೋಸ್ಕರ, ಹಯಮಂ-ತುರಗವನ್ನು, ಬಿಡುವಂ ಅಲ್ಲ-ಬಿಡತಕ್ಕವನಾಗಿಲ್ಲ, ನಳಿನ-ಪದ್ಮವೇ, ನಾಭನ-ನಾಭಿಯಾಗುಳ್ಳ ಶ್ರೀಕೃಷ್ಣನ, ಸಹಾಯಂ-ಉಪಕಾರವು, ಇಲ್ಲದೆ-ಹೊರ್ತಾಗಿ, ಬರಿದೆ-ಸುಮ್ಮನೆ, ತನ್ನಂ-ನನ್ನನ್ನು, ಅಳುಕಿಸಲ್-ಹೆದರಿಸಲು, ಅರಿಯೆ-ತಿಳಿಯಲಾರೆ (ಸಾಧ್ಯವಲ್ಲ), ಕಕ್ಕುಲಿತೆಬೇಡ-ಕುದುರೆಯ ಮೇಲಿನ ಅಪೇಕ್ಷೆಯಂ ಬಿಡು, (ಕುದುರೆಯು ಪುನಹ ನಿನಗೆ ದೊರೆಯಲಾರದು) ಮರಳಿ-ಹಿಂದಿರುಗಿ, ಹಸ್ತಿನಾಪುರಕೆ-ಗಜನಗರಿಗೆ, ನಡೆ-ಹೊರಡು, ನರೇಂದ್ರ-ಭೂಪಾಲರಲ್ಲಿ, ಅಗ್ರಣಿ-ಯೋಗ್ಯನಾದ, ಮರಾಳಧ್ವಜಂ-ಹಂಸಪಕ್ಷಿಯೆ ಧ್ವಜವಾಗುಳ್ಳ ಹಂಸಕೇತುವು, ಸನ್ನುತ-ಸ್ತುತಿಸಲ್ಪಟ್ಟ, ತುರಂಗಮೇಧಾಧ್ವರಕೆ-ಅಶ್ವಮೇಧಯಜ್ಞಕ್ಕೆ, ದೀಕ್ಷೆಗೊಂಬಂ - ಕಂಕಣಬದ್ಧನಾಗುವನು, ಬಳಿಕ-ಅನಂತರದಲ್ಲಿ, (ನಾವು ಯಜ್ಞಮಾಡಿದನಂತರ) ನಿನ್ನ ವಿಕ್ರಮದಿಂದ-ನಿನ್ನ ಪರಾಕ್ರಮಾತಿಶಯದಿಂದ, ಭೂಮಂಡಲವಂ-ಈ ಪ್ರಪಂಚವನ್ನೆಲ್ಲಾ, ಜಯಿಸು-ಗೆಲ್ಲುವನಾಗು, ಎನುತ-ಎಂದು ಹೇಳುತ್ತಾ, ಅವಂ-ಆ ಸುಧನ್ವನು, ತೆಗದೆಚ್ಚನು-ಬಾಣಪ್ರಯೋಗವಂ ಮಾಡಿದನು.

ಅ‖ ವಿ‖ (ನಳಿನವೆ ನಾಭಿಯಾಗುಳ್ಳವನು, ನಳಿನನಾಭ) ಬಹು. ಸ. (ನರ + ಇಂದ್ರ = ನರೇಂದ್ರ) ಗುಣ. ಸಂಧಿ. (ಸತ್ + ನುತ = ಸನ್ನುತ) ಅನು ಸಂ‖ ಹಸ್ತಿ ಎಂಬ ಪುರ ಸಂ. ಪೂ. ಕ. (ಹಸ್ತಿ-ಆನೆಯ, ಪುರ-ಪಟ್ಟಣ, ಗಜಪುರಿ) ‖೭‖

ಟೀ‖ ಈ ಚಾಪಂ-ಈ ಧನುಸ್ಸು, ಈಬಾಣಂ- ಈ ಶರವು, ಈದಿವ್ಯ-ಈ ದೇವತಾಯೋಗ್ಯವಾದ, ರಥಂ-ವರೂಥವೂ, ಈವನೇಚರ-ಕೋಡಗನಿಂದ ಯುಕ್ತವಾದ, ಧ್ವಜಂ-ಕೇತನವು, ಈ ಮಹಾಶ್ವಂಗಳು-ಈ ಶ್ರೇಷ್ಠವಾದ ಕುದುರೆಗಳು, ಈಸವ್ಯಸಾಚಿತ್ವಂ-ಎರಡು ಕೈಗಳಿಂದಲೂ ಬಾಣಪ್ರಯೋಗಮಾಡುವುದು, ಈದೇವದತ್ತಶಂಖಂ-ದೇವರಿಂದ ಕೊಡಲ್ಪಟ್ಟ ಶಂಖವೂ, ನಿನ್ನಂಜಯಿಸದೆ-ನಿನ್ನನ್ನು ಗೆಲ್ಲದೆ, ತನಗೆ-ನನಗೆ, ಇದೇತಕೆ-ಇದು ಏತಕ್ಕಾಗಿ ಪ್ರಯೋಜನಕ್ಕೆ ಬಂದೀತು, ಈಚತುರ್ದಶ ಜಗವಂ-ಈ ಹದಿನಾಲ್ಕು ಲೋಕಗಳುಳ್ಳ ಪ್ರಪಂಚವನ್ನು, ಅಣುವೆಂದು-ಒಂದು ತೃಣಕ್ಕೆ ಸಮಾನವಾದುದು ಎಂಬದಾಗಿ, ಅರಿಯೆ-ಯೋಚಿಸಿದವನಾಗಲಿಲ್ಲವೆ, ಅಕಟ-ಅಯ್ಯೋ, ನೀಂ-ನೀನು, ಎನಗೆ-ನನಗೆ, ಗೋಚರವೆ-ಗಣ್ಯವೆ, ಘಡ-ಛೆ, (ಇರು) ಎನುತ-ಎಂದು ಹೇಳುತ್ತಾ, ಪಾರ್ಥಂ-ಫಲ್ಗುಣನು, ಎಣ್ದೆಸೆ-ಎಂಟು ದಿಕ್ಕುಗಳೂ, ಕಂಪಿಸೆ-ಅಲ್ಲಾಡುವಂತೆ, ಸುಧನ್ವನಮೇಲೆ-ಸುಧನ್ವನಿಗೋಸ್ಕರವಾಗಿ, ನಾರಾಚವೇಳ್ನೂರಂ-ಏಳುನೂರು ಶರಗಳನ್ನು, ಎಚ್ಚಂ-ಹೊಡೆದನು.

ಅ‖ ವಿ‖ (ಎಂಟುದಿಕ್ಕುಗಳು-ಇಂದ್ರ, ಅಗ್ನಿ ಯಮ, ವರುಣ, ನಿರುತಿ, ವಾಯು, ಕುಬೇರ, ಈಶಾನ) (ಇದು + ಚಾಪಂ = ಈಚಾಪಂ) ಗ. ಸ. ಘಡ-ಅನ್ವಯ, ಎಂಟುದೆಸೆಗಳ ಸಮಾಹಾರಂ-ಎಣ್ದೆಸೆ. ಸಮಾ. ದ್ವಿಗು ‖ ೮ ‖

ಟೀ‖ ದಿವ್ಯ-ದೇವತಾಯೋಗ್ಯವಾದ, ರಥ-ವರೂಥವೂ, ಹಯ-ಅಶ್ವವೂ, ಚಾಪ - ಧನುಸ್ಸು, ಶರ-ಬಾಣಗಳು,

---

‖೬‖ ಪುನಹ ಸುಧನ್ವನು, ಕಟ್ಟಿದ ಅಶ್ವವನ್ನು ನಮ್ಮ ತಂದೆ ತಾನೆ ಹೇಗೆ ಕೊಟ್ಟಾನು (ಕೊಡತಕ್ಕವನಲ್ಲ) ಶ್ರೀಕೃಷ್ಣನ ಸಹಾಯವಿಲ್ಲದೆ ನಿನ್ನಿಂದಾಗಲಾರದು, ನನ್ನನ್ನು ಹೆದರಿಸುವದರಿಂದ ಫಲವಿಲ್ಲ, ಆಯಾಸಪಡದೆ ಹಸ್ತಿನಾವತಿಗೆ ಹೋಗಿ ಸೇರಿಕೊ ನಮ್ಮ ತಂದೆಯೇ ಯಜ್ಞವನ್ನು ಮಾಡಲುಪಕ್ರಮಿಸುವನು, ನಾವು ಯಜ್ಞವಂ ಪೂರೈಸಿದನಂತರ, ನೀನು ಭೂಮಂಡಲವನ್ನೆಲ್ಲಾ ಜಯಿಸುವನಾಗೆಂದು ಬಾಣಪ್ರಯೋಗವಂ ಗೈಯ್ದನು ‖ ೭ ‖ ಎಲೈ ಸುಧನ್ವನೇ ನನ್ನ ಈ ಗಾಂಡೀವವೆಂಬ ಧನುಸ್ಸು ದೇವತಾಯೋಗ್ಯವಾದ ರಥ, ಈ ಕಪಿಧ್ವಜ, ಶ್ರೇಷ್ಠವಾದ ಅಶ್ವಗಳು, ಎರಡು ಕೈಗಳಲ್ಲಿಯೂ ಬಾಣಪ್ರಯೋಗಮಾಡುವ ಚಾತುರ್ಯ, ದೇವದತ್ತವಾದ ಈ ಶಂಖ ಇವೆಲ್ಲಾ ಇರಲಾಗಿ, ತೃಣಪ್ರಾಯನಾದ ನಿನ್ನನು ನಾನು ಜಯಿಸುವದಸಾಧ್ಯವೆ ! ಎಂದು ಹೇಳಿ ಅರ್ಜುನನು ಎಂಟು ದಿಕ್ಕುಗಳೂ ಕದಲುವಂತೆ, ಏಳ್ನೂರು ಬಾಣಂಗಳಿಂ ಪ್ರಯೋಗಿಸಿದನು ‖ ೮ ‖ ಆಗ ಸುಧ

ಕಂಬುಗ | ಳ್ಸವ್ಯಸಾಚಿತ್ವಮಿವುನಿನಗೊದಗಿದವುರಣದೊ | ಳವ್ಯಯಂಸಾರಥ್ಯಮಂಮಾಡಲಿನ್ನುಜಯಮಹುದೆಹುಲುಸೂತನಿಂದ || ಹವ್ಯವಾಹನಸಖಿಂತೊಲಗಿಸುವಬಹಳಮೇಘ | ವ್ಯೂಹಸಂಘಾತದೊಡ್ಡವಣೆಮುರಿವುದೆಕೃ | ತವ್ಯಜನವಾತದಿಂದೆಲೆಮರುಳೆಹೋಗೆನುತವಂಕಿರೀಟಿಯನೆಚ್ಚನು || ೯ || ಪಾಂಡವಂಬಳಿಕಬೇಸಗೆಯನಡುವಗಲಮಾ | ರ್ತಾಂಡನಂತಿಹಕಲಿಸುಧನ್ವನಂ ಕಂಡುಮಿಗೆ | ಕಾಂಡವದಹನಲಬ್ಧಮಾಗಿಮೂಡಿಗೆಯೊಳಿದ್ದಾಗ್ನೇಯಮಾರ್ಗಣವನು || ಗಾಂಡೀವಕಳವಡಿಸಿತಗವಿನಿಂಕಾರ್ಬೊಗೆಯು | ಜಾಂಡಮಂತೀವಿದುದುಕಾದವುಕುಲಾದ್ರಿಗ | ಳ್ಭಾಂಡಜಲದಂದದಿಂಕುದಿದುಕ್ಕಿದುದುಕಡಲ್ಪೇಳ್ಪೇಳಲೇನದ್ಭುತವನು||೧೦|| ಆವಗಂಪೀರ್ವಡಾಸರ್ಗೊಂಡುದೀರಥವು | ಹಾವಾರ್ಧಿಜಲವನೊಂದೇಸಾರಿಸುರಿಗೊಂಬ | ದಾವರದೊಳೆದ್ದವಡಬಾಗ್ನಿಯೋ

---

ಕೇತು-ಟೆಕ್ಕೆಯು, ಕಂಬುಗಳ್-ಶಂಖವೇ ಮೊದಲಾದವುಗಳು, ಸವ್ಯಸಾಚಿತ್ವಂ-ಎರಡು ಕೈಗಳಿಂದಲೂ ಬಾಣಪ್ರಯೋಗ ಮಾಡುವಿಕೆಯೂ, ಇವು-ಇವುಗಳು, ನಿನಗೆ-ಅವ್ಯಯಂ-ಪಾಪರಹಿತ (ನಾಶರಹಿತನಾದ) ಕೃಷ್ಣನು, ರಣದೊಳ್-ಯುದ್ಧದಲ್ಲಿ, ಸಾರಥ್ಯಂ-ರಥನಡಿಸತಕ್ಕ ಕಾರ್ಯವನ್ನು, ಮಾಡಲ್-ಮಾಡಲಾಗಿ, ಒದಗಿತು-ಉಂಟಾಯಿತು, ಇನ್ನ-ಹಾಗಲ್ಲದೆ, ಹುಲುಸೂತನಿಂದ-ಒಂದು ಹುಲ್ಲುಕಡ್ಡಿಗೆ ಸಮಾನ ಮನುಷ್ಯನಾದ ಸೂತನಿಂದ, ಜಯ-ಗೆಲುವು, ಅಹುದೆ-ಆದೀತೆ, ಹವ್ಯವಾಹನ-ಬೆಂಕಿಗೆ, ಸಖ-ಸ್ನೇಹಿತನಾದ ವಾಯುದೇವನು, ತೊಲಗಿಸುವ - ಹೋಗಲಾಡಿಸುವ, ಬಹಳ-ಹೆಚ್ಚಾದ, ಮೇಘ-ಜಲಧರಗಳ, ವ್ಯೂಹ-ಸಮೂಹದ, ಸಂಘಾತದ-ಗುಂಪಿನಿಂದ ಒಡ್ಡವಣೆ - ತೊಲಗಿಸುವ ಕೆಲಸವು, ಕೃತ-ಮನುಷ್ಯರಿಂದ ಮಾಡಲ್ಪಟ್ಟ, ವ್ಯಜನ-ಬೀಸಣಿಗೆಯಿಂದ ಹುಟ್ಟುವ, ವಾತದಿಂದ-ವಾಯುವಿನಿಂದ, ಮುರಿವುದೆ-ಬೇರೆಯಾದೀತೆ, ಎಲೆಮರುಳೆ-ಎಲಾ ಮೂಢನೆ, ಹೋಗು ಎನುತ-ಹೋಗೆಂದು ಹೇಳುತ್ತ, ಅವಂ-ಆ ಸುಧನ್ವನು, ಕಿರೀಟಿಯಂ-ಪಾರ್ಥನನ್ನು, ಎಚ್ಚನು-ಬಾಣದಿಂದ ಹೊಡೆದನು.

ಅ|| ವಿ|| (ದಿವ್ಯವಾದ-ರಥ, ದಿವ್ಯರಥ) ವಿ. ಪೂ. ಕ. (ವ್ಯಯವಿಲ್ಲದ್ದು-ಅವ್ಯಯ) ವ್ಯಜನ-ಬೀಸಣಿಗೆ, ವಾತ-ಗಾಳಿ, ವಾತ-ಬೀಳುವಿಕೆ || ಸವ್ಯ-ಎಡಗೈಯಿಂದಲೂ ಸಾಚಿತ್ವ, ಬಾಣಪ್ರಯೋಗಮಾಡುವಿಕೆ || ೯ ||

ಟೀ|| ಪಾಂಡವಂ-ಪಾರ್ಥನು, ಬಳಿಕ-ಅನಂತರ, ಬೇಸಗೆಯ - ವೈಶಾಖಮಾಸದ, ನಡುವಗಲ - ಮಧ್ಯಹಗಲಿನ (ಮಧ್ಯಾಹ್ನಕಾಲ) ಲ್ಲಿರುವ, ಮಾರ್ತಾಂಡನಂತೆ-ಭಾಸ್ಕರನಹಾಗೆ, ಇಹ - ಇರುತ್ತಲಿರುವ, ಕಲಿ-ಶೂರನಾದ, ಸುಧನ್ವನಂ-ಸುಧನ್ವನನ್ನು, ಕಂಡು-ನೋಡಿ, ಮಿಗೆ-ಹೆಚ್ಚಾಗಿ, ಕಾಂಡವ-ಇಂದ್ರನ ಕಾಂಡವ ವನವನ್ನು, ದಹನ-ದಹಿಸುವ ಅಗ್ನಿಯಿಂದ, ಆಗಿ-ಉಂಟಾಗಿ, ಮೂಡಿಗೆಯೊಳು-ಬಾಣದ ಚೀಲದಲ್ಲಿ, ಇದ್ದ-ಇದ್ದಂಥ. ಆಗ್ನೇಯ ಮಾರ್ಗಣವನು-ಯಜ್ಞೇಶ್ವರ ದೇವತಾಕವಾದ ಶರವನ್ನು, ಗಾಂಡೀವಕೆ-ಅರ್ಜುನನ ಧನುಸ್ಸಿಗೆ, ಅಳವಡಿಸಿ- ಸೇರಿಸಿ, ತೆಗವಿನಿಂ- ಪ್ರಯೋಗಮಾಡುವದರಿಂದ. ಕಾರ್ಬೊಗೆ-ಕಪ್ಪಾದ ಹೊಗೆಯು, ಅಜಾಂಡಂ-ಭೂಮಂಡಲವ (ಬ್ರಹ್ಮಾಂಡವು) ನ್ನು, ತೀವಿದುದು-ವ್ಯಾಪಿಸಿಕೊಂಡಿತು, ಕುಲಾದ್ರಿಗಳ್-ಸಪ್ತಕುಲಾಚಲಗಳು, ಕಾದವು-ಬೆಚ್ಚಗಾದವು, ಕಡಲು- ಸಮುದ್ರವು, ಭಾಂಡಜಲದಂದದಿಂ - ಗಡಿಗೆಯಲ್ಲಿರುವ ಉದಕದಂತೆ, ಕುದಿದು-ಕೊತಕೊತನೆಕಾದು, ಉಕ್ಕಿದುದು-ಮೇಲಕ್ಕೆ ಬಂದಿತು, ಅದ್ಭುತವನು-ವೈಖರಿಯನ್ನು, ಪೇಳಲ್ ಏಂ-ಏನೆಂದು ಹೇಳಲಿ.

ಅ|| ವಿ|| (ಅರ್ಜುನನ ಧನುಸ್ಸಿಗೆ ಗಾಂಡೀವವೆಂದು ಹೆಸರು) ಮಹೇಂದ್ರ, ಮಲಯ, ಸಹ್ಯ, ಸಾನುಮಂತ, ಋಕ್ಷ, ವಿಂಧ್ಯ, ಪಾರಿಯಾತ್ರ ಇವು ಕುಲಪರ್ವತಗಳು, ಅಗ್ನಿದೇವತಾಕವಾದುದು, (ಭಾಂಡದಜಲ-ಭಾಂಡಜಲ) ಷ. ತ. ||೧೦||

ಟೀ|| ಆವಗಂ-ಸರ್ವದಾ, ಪೀರ್ವಡೆ-ನೀರನ್ನು ಕುಡಿಯುತ್ತ ಬಂದರೆ, ಆಸರ್ಗೊಂಡು-ಬಳಲಿಕೆಯಂ ಪೊಂದಿ,

---

ಸ್ವನು ಸಾರಥಿಯ ಬಲದಿಂದ, ಈ ಸವ್ಯಸಾಚಿತ್ವವು ಗಾಂಡೀವಾದಿ ಯುದ್ಧ ಸಾಮಗ್ರಿಗಳು ಇವೇ ಮೊದಲಾದುವೆಲ್ಲಾ, ನಿನಗೆ ಸಹಾಯಕಗಳಾಗಿದ್ದವು, ಈಗ ಈ ಕೆಲಸಕ್ಕೆ ಬಾರದ ಸಾರಥಿಯಿಂದ ನನ್ನನ್ನು ಜಯಿಸ ಬಲ್ಲೆಯ? ಹವ್ಯವಾಹನ ಸಖನಾದ ವಾಯುದೇವನಿಂದ ತೊಲಗಿಸಲು ಸಾಧ್ಯವಾದ ಮೇಘಗಳ ಸಮೂಹವನ್ನು ಕೈಯಿಂದ ಮಾಡಿದ ಬೀಸಣಿಗೆಯಿಂದುತ್ಪನ್ನವಾದ ಗಾಳಿಯಿಂದ ಚೆದರಿ ಹೋಗುವಂತೆ ಮಾಡಲು ಸಾಧ್ಯವೆ! ಎಲೈ ಹುಚ್ಚನೆ ಏಕೆ ವೃಥಾ ಆಯಾಸ ಪಡುತ್ತಿ ಸುಮ್ಮನೆ ಹೋಗೆಂದು ಅರ್ಜುನನಿಗೆ ಬಾಣಪ್ರಯೋಗವನ್ನು ಮಾಡುತ್ತಿದ್ದನು || ೯ || ತರುವಾಯ ಅರ್ಜುನನು ಬಿಸಿಲುಕಾಲದ ನಡುವಗಲಿನಂತಿರುವ ಸೂರ್ಯನಂತೆ ಹೊಳೆಯುತ್ತಿರುವ ಸುಧನ್ವನಂ ನೋಡಿ ಅಗ್ನಿ ದೇವತಾಕವಾದ ಬಾಣಮಂ ಪ್ರಯೋಗಿಸಲು, ಆ ಬಾಣದ ಹೊಗೆಯು ಬ್ರಹ್ಮಾಂಡವನ್ನು ಆವರಿಸಿಕೊಂಡಿತು, ಕುಲಾದ್ರಿಗಳ್ ಕಾದುಹೋದವು, ಸಮುದ್ರವು ಗೂಡಾಣದ ನೀರಿನಂತೆ ಕಾದು ಮೇಲಕ್ಕೆ ಉಕ್ಕಿ ಬಂತು ಈಅದ್ಭುತವನ್ನು ಏನೆಂದು ಹೇಳಲಿ ||೧೦||ಮತ್ತು ಮಹಾ ಸಮು

ವಿಲಯರುದ್ರನಫಣೆಯಕಣ್ಗಿಚ್ಚಿದೋ ॥ ಭಾವಿಸುವಡರಿದೆಂಬೊಲಾದುದುಧನಂಜಯನ | ಪಾವಕಾಸ್ತ್ರಂಬಳಿಕತೆಗೆದುಬೊಬ್ಬಿರಿದು
ಗಾಂ | ಡೀವದಿಂಪಾರಿಸಿದೊಡಾಸುಧನ್ವನಸರಿಸಕಡರಿತುರಿಕಡುಭರದೊಳು ॥ ೧೧ ॥ ತೆಕ್ಕೆವರಿದೇಳ್ವಕಾರ್ಬೊಗೆಯಹೊರಳಿಗಳ
ದಶ | ದಿಕ್ಕುಗಳನಪ್ಪಳಿಪಕೇಸುರಿಯಚೂಣಿಗಳ | ಮಿಕ್ಕುಸೂಸುವತೂರುಗಿಡಿಗಳಕಣಾಳಿಗಳಕಾರಿಡುವಪೊತ್ತಿಗೆಗಳ ॥ ಕೊಕ್ಕ
ರಿಸುತೊಗುವತನಿಗೆಂಡದಿಂಡೆಗಳಸಲೆ | ಮುಕ್ಕುಳಿಸಿಮೊಗೆವಪೇರ್ಗಿಚ್ಚುಗಳಬೆಂಕಿಮೇ | ಲಿಕ್ಕಿದುದುಹಂಸಧ್ವಜನಸೇನೆಬೆಂದು
ಬೇಗುದಿಗೊಂಡುದಾಕ್ಷಣದೊಳು ॥ ೧೨ ॥ ಕಾದವುಭಟರಕೈದುಗಳ್ಪಿಡಿಯಲರಿಯದೆನ | ಲ್ಕಾದವುಶರಾಗ್ನಿಗಾಹುತಿಗಜಹ
ಯಾದಿಗ | ಳ್ಕಾದವುಧನಂಜಯನಮುಂದೆಮ್ಮಬಲಮೆಂದುಕಲಿಸುಧನ್ವಂಕೆರಳ್ದು ॥ ಕೋದಂಡಕತಿವೇಗದೊಳ್ವಾರುಣಾಸ್ತ್ರ

ತೀರದ-ಆ ದಡದ, ಮಹಾವಾರ್ಧಿ-ಅಧಿಕವಾದ ಅಬ್ಧಿಯ, ಜಲವಂ-ಉದಕವನ್ನು, ಒಂದೇಸಾರಿ-ಒಟ್ಟಿಗೆ, ಸುರಿಗೊಂಬ-ಬಗ್ಗಿಸಿಕೊಳ್ಳುವ, ದಾವರದೊಳು-ದಾಹದಿಂದ, ಎದ್ದ-ಮೇಲ್ಗಡೆಗೆ ಬಂದ, ಬಡವಾಗ್ನಿಯೊ-ಸಮುದ್ರದಲ್ಲಿರುವ ಬೆಂಕಿಯೊ, ವಿಲಯರುದ್ರ-ಪ್ರಳಯದ ರುದ್ರನ-ಭಯಂಕರಾಕಾರದ ಈಶ್ವರನ, ಕಣ್ಗಿಚ್ಚು-ಫಾಲದ ನೇತ್ರದಲ್ಲಿರುವ ಅಗ್ನಿಯು, ಇದೊ-ಇದಾಗಿರುವುದೊ? ಭಾವಿಸುವೊಡೆ-ಊಹಿಸಲು, ಅರಿದು-ಅಸಾಧ್ಯವು, ಎಂಬವೋಲ್-ಎನ್ನುವಂತೆ, ಧನಂಜಯ-ಪಾರ್ಥನ, ಪಾವಕಾಸ್ತ್ರಂ-ಅಗ್ನಿ ಸಂಬಂಧವಾದ ಬಾಣವು, ಆದುದು-ಉಂಟಾಯಿತು, ಬಳಿಕ-ತರುವಾಯ, ತೆಗೆದು-ತೆಗೆದುಕೊಂಡು, ಬೊಬ್ಬಿರಿದು-ಗರ್ಜಿಸಿ, ಗಾಂಡೀವದಿಂ-ಧನುಸ್ಸಿನಿಂದ, ಪಾರಿಸಿದೊಡೆ-ಹಾರಿಸಲಾಗಿ, ಆ ಸುಧನ್ವನ ಸರಿಸಕೆ-ಆ ಸುಧನ್ವನ ಹತ್ತಿರಕ್ಕೆ, ಉರಿ-ಜ್ವಾಲೆಯು, ಕಡು ಭರದೊಳು-ಅತಿ ಜಾಗ್ರತೆಯಿಂದ, ಅಡರಿತು-ಹತ್ತಿತು.

ಅ॥ ವಿ॥ (ತೀರ-ದಡ, ಪೂರ್ತಿ) ಸಮುದ್ರದಲ್ಲಿರುವ ಬಡಬವೆಂಬುವ ಹೆಣ್ಣು ಕುದುರೆ ಮುಖದಲ್ಲಿರುವ ಅಗ್ನಿಗೆ ಬಡಬಾಗ್ನಿ, ಫಣ (ತ್ಸ), ಹಣೆ (ದ್ಭ) ಈಶ್ವರನ-ಒಂದು ಕಣ್ಣಿನಲ್ಲಿ ಸೂರ್ಯನು, ಇನ್ನೊಂದರಲ್ಲಿ-ಚಂದ್ರನು, ಹಣೆಗಣ್ಣಿನಲ್ಲಿ-ಅಗ್ನಿಯ, ಇರುವರು ॥೧೧॥

ಟೀ॥ ಧನಂಜಯನಿಂ ಬಿಡಲ್ಪಟ್ಟ ಆಗ್ನೇಯಾಸ್ತ್ರವು-ತೆಕ್ಕೆ-ಕೇತವನ್ನು, ಪರಿದು-ಅತಿಕ್ರಮಿಸಿ, ಏಳ್ವ-ಮೇಲ್ಮುಖವಾಗಿ ಹೊರಡುತ್ತಿರುವ, ಕಾರ್ಬೊಗೆಯ-ಕಪ್ಪಾದ ಹೊಗೆಯ, ಹೊರಳಿಗಳ-ಹೊರಳುವಿಕೆಗಳುಳ್ಳ, ದಶದಿಕ್ಕುಗಳನು-ಇಂದ್ರಾಗ್ನಿಯೇ ಮೊದಲಾದ ಹತ್ತು ದಿಕ್ಕುಗಳನ್ನು, ಅಪ್ಪಳಿಪ-ತಟ್ಟುತ್ತಿರುವ, ಕೇಸುರಿಯ-ಜಡೆಗಳಂತೆ ಇರುವ ಬೆಂಕಿಯ ಉರಿಯು, ಚೂಣಿಗಳ-ಕೊನೆಭಾಗಗಳುಳ್ಳ, ಮಿಕ್ಕ-ಉಳಿಯಲಾಗಿ, ಸೂಸುವ-ಸುರಿಸುತ್ತಿರುವ, ತೂರು-ವಾಯುವಿನಿಂದ ಊದುತ್ತಿರುವ, ಕಿಡಿಗಳ-ಅಗ್ನಿಕಣಗಳ, ಕಣ-ಸಣ್ಣ ಕಿರಣಗಳ, ಆಳಿಗಳ-ಸಂಘಗಳ, ಕಾರಿಡುವ-ಕತ್ತಲೆಯನ್ನುಂಟು ಮಾಡುತ್ತಿರುವ, ಪೊತ್ತಿಗಳ-ಉರಿವ ಕೊಳ್ಳಿಗಳ, ಕೊಕ್ಕರಿಸುತ-ಎಗರುತ್ತ, ಒಗುವ-ಸುರಿಸುತ್ತಿರುವ, ತನಿಗೆಂಡದ-ಹೊಸ ಕಣಗಳ, ದಿಂಡೆಗಳ-ಭಾಗಗಳುಳ್ಳ, ಸಲೆ-ತುಂಬಾಗಿ, ಮುಕ್ಕಳಿಸಿ-ಉಗುಳುತ್ತ, (ದಹಿಸುತ್ತ) ಸುತ್ತಿಕೊಂಡು, ಮೊಗೆವ-ಪೂರ್ತಿ ಮಾಡುವ, ಪೇರ್ಗಿಚ್ಚುಗಳ-ಅಧಿಕಾಗ್ನಿಯ, ಬೆಂಕಿಯ-ಅಗ್ನಿಯು, ಮೇಲಿಕ್ಕಿದುದು-ಮೇಲೆ ಬಿದ್ದಿತು, ಆ ಕ್ಷಣದೊಳು-ಆ ತಕ್ಷಣವೇ, ಹಂಸಧ್ವಜನ ಸೇನೆ-ಹಂಸಧ್ವಜನ ಸೈನ್ಯವು, ಬೆಂದು-ಸುಡಲ್ಪಟ್ಟು, ಬೇಗುದಿಗೊಂಡುದು-ಪಚನವಾಗುತ್ತಿತ್ತು.

ಅ॥ ವಿ॥ (ಕರಿದು+ಪೊಗೆ=ಕಾರ್ಬೊಗೆ) ವಿ ಪೂ. ಕ. (ಇಂದ್ರ, ಅಗ್ನಿ, ಯಮ, ನಿರುತಿ, ವರುಣ, ವಾಯು, ಕುಬೇರ, ಈಶಾನ, ಊರ್ಧ್ವ, ಅಧೋದಿಕ್ಕು ಇವು ದಶ ದಿಕ್ಕುಗಳು. ॥೧೨॥

ಟೀ॥ ಭಟರ-ಸೈನಿಕರ, ಕೈದುಗಳ್-ಕೈಯಲ್ಲಿ ಹಿಡಿದಿದ್ದ ಆಯುಧಗಳು, ಪಿಡಿಯಲು-ಹಿಡಿಯಲು, ಅರಿದು ಎನಲ್ಕೆ-ಅಸಾಧ್ಯವು ಎನ್ನುವಂತೆ, ಕಾದವು-ಬೆಚ್ಚಗಾದವು, ಗಜಹಯಾದಿಗಳ್-ಆನೆ ಕುದುರೆ ಮೊದಲಾದ ಬಲಗಳು, ಶರಾಗ್ನಿಗೆ-

ದ್ರದ ಉದಕವನ್ನು, ಒಂದೇ ಸಾರಿ ಸುರಿಕೊಂಬುವ ನೀರಡಿಕೆಯಿಂದ ಮೇಲಕ್ಕೆ ಎದ್ದು ಬಂದ ಬಡಬಾಗ್ನಿಯೋ? ಪ್ರಳಯ ಕಾಲದ ಭೈರವ ಮೂರ್ತಿಯ ಫಣೆಯಲ್ಲಿರುವ ನೇತ್ರಜ್ವಾಲೆಯೋ? ಎನ್ನುವಂತೆ ಭಾವಿಸಲು ಅಸಾಧ್ಯವಾದದ್ದಾಗಿ, ಅರ್ಜುನನ ಆಗ್ನೇಯಾಸ್ತ್ರವು ಈ ರೀತಿಯಾಗಿ ದಹಿಸುವಂತೆ ಗಾಂಡೀವದಿಂದ ಹೊರಟು, ಅತ್ಯಧಿಕವಾದ ವೇಗದಿಂದ ಆ ಬಾಣವು ಸುಧನ್ವನ ಸಾಮಿಪ್ಯವಂ ಕುರಿತು ದಹಿಸುತ್ತ ಅಡರಿತು ॥೧೧॥ ಆಗ ಧನಂಜಯನಿಂದ ಬಿಡಲ್ಪಟ್ಟ ಆಗ್ನೇಯಾಸ್ತ್ರವು, ಸುಧನ್ವನ ಸಾಮೀಪ್ಯವಂ ಕುರಿತು ಬರುತ್ತಿರಲು, ಆ ಬಾಣದ ಜ್ವಾಲೆಯಿಂದ ಸುಧನ್ವನ ಸೈನಿಕರು ಹಿಡಿದಿದ್ದ ಆಯುಧಗಳೆಲ್ಲವೂ ಕಾದು ಬಿಸಿಯಾದವು, ದಶದಿಕ್ಕುಗಳೂ ಕಾರ್ಬೊಗೆಯಿಂದ ತುಂಬಲ್ಪಟ್ಟು, ಅಂಧಕಾರದಿಂದ ಕೂಡಿರಲು, ಬಾಣದಿಂದ ಹೊರಡುತ್ತಿರುವ ಬೆಂಕಿ ಕಿಡಿಗಳ ಕಾಂತಿಯು ಆ ತಿಮಿರವನ್ನೆಲ್ಲಾ ಹೋಗಲಾಡಿಸಿ ಸುಧನ್ವನ ಸೈನ್ಯವನ್ನೆಲ್ಲಾ ಸುಡುತ್ತಿತ್ತು ॥೧೨॥ ಈರೀತಿಯಾಗಿ ತನ್ನ ಸೇನಾಜನವು ಹಸ್ತ್ಯಶ್ವರಥ ಪದಾತಿಗಳು, ಆಗ್ನೇಯಾಸ್ತ್ರದಿಂದ ಸುಟ್ಟು ನಾಶವಾಗುತ್ತಿರುವದಂ ಮರಾಳಧ್ವಜನ ಮಗ

ಮಂ | ಕೋದಂಡಕಂಡಲೆವಶಿಖಿಜ್ವಾಲೆಯುಂನಿಲಿಸಲಿದ | ಕೋದಂಡಮೆನ್ನೊಳೆನುತಾರ್ದುತೆಗೆದೆಚ್ಚಡುರಿನಂದಿಜಲಮಯಮಾಗಲು ||೧೩|| ನಾದವುಸಮಸ್ತಬಲಮಖಿಳವಾದ್ಯಂಗಳನಿ | ನಾದವುಡುಗಿತುನನೆದುಗಜವಾಜಿನಿಕರಮೇ | ನಾದವುದಕದೊಳೆಂಬುದಂಕಾಣೆನಾಸುಧನ್ವನವಾರುಣಾಸ್ತ್ರದಿಂದ || ತೋದಳವಳಿದರೆಲ್ಲರಂಬುಧಾರಿಗಳೆನಂ | ತೋದಳನನೊರಗಿಸಿತುಫಲುಗುಣಂ ಬೆರಗುವೆ | ತ್ತೋದಳವಡದವಟುವಿನಂತಿರ್ದನಾಹವದೊಳರಸಕೇಳ್ಕೌತುಕವನು || ೧೪ || ಬಳಿಕವಾಯುವ್ಯಾಸ್ತ್ರದಿಂದ ಶೋಷಿಸಿದನಾ | ಜಲವನರ್ಜುನನದ್ರಿಬಾಣಮುಂಪೂಡಿದಂಕಲಿಸುಧನ್ವಂ | ತೊಟ್ಟನೈಂದ್ರಶರಮುಂಫಲುಗುಣಂತಿಮಿರಸಾಯಕವನು | ಸೆಳೆದಂಮರಾಳಧ್ವಜನಸುತಂತೆಗೆದನು | ಜ್ವಲರವಿಕಲಂಬಮುಂಭೀಭತ್ಸುತುಡುಕಿದಂ | ಮುಳಿದವಂಗರಳವಿಶಿಖ

---

ಬಾಣದ ಬೆಂಕಿಗೆ, (ಆಗ್ನೇಯಾಸ್ತ್ರದ ಬೆಂಕಿಗೆ), ಆಹುತಿ ಆದವು-ಆಹಾರವಾದವು, ಧನಂಜಯನ ಮುಂದೆ_ಪಾರ್ಥನ ಎದುರಾಗಿ, ಎಮ್ಮ ಬಲಂ_ನಮ್ಮ ಸೈನ್ಯವು, ಕಾದುವು-ಸುಟ್ಟು ಹೋದವು, (ಬಿಸಿಯಾದವು), ಎಂದು-ಎಂಬದಾಗಿ ಹೇಳುತ್ತ, ಕಲಿ ಸುಧನ್ವಂ-ವೀರನಾದ ಸುಧನ್ವನು, ಕೆರಳ್ದು-ಕೋಪಾವಿಷ್ಟನಾಗಿ, ಅತಿವೇಗದೊಳ್ - ಅತಿ ತ್ವರೆಯಿಂದ, ಕೋದಂಡಕೆ_ತನ್ನ ಚಾಪಕ್ಕೆ, ವಾರುಣಾಸ್ತ್ರಮುಂ_ವರುಣದೇವತಾಕವಾದ ಬಾಣವನ್ನು, ಕೋದು_ಕೊಬ್ಬಿ, ಅಂಡಲೆವ-ಬಾಧೆ ಪಡಿಸುತ್ತಿರುವ, ಶಿಖಿ ಜ್ವಾಲೆಯುಂ_ಬೆಂಕಿಯ ಉರಿಯನ್ನು, ನಿಲಿಸಲು-ಅಡ್ಡ ಪಡಿಸಲು, ಎನ್ನೊಳ್_ನನ್ನಲ್ಲಿ, ದಂಡಂ-(ಆಗ್ನೇಯಾಸ್ತ್ರವನ್ನು ಶಮನ ಮಾಡುವ ವಾರುಣಾಸ್ತ್ರವು) ಪ್ರತಿಯಾದುದು, ಇದಕೋ_ಇಗೋ, ಈಕ್ಷಿಸುವನಾಗು, ಎನುತ_ಎಂದು ಹೇಳುತ್ತ, ಆರ್ದು-ಗರ್ಜಿಸಿ, ತೆಗದೆಚ್ಚಡೆ_ಕಿವಿ ಪರಿಯಂತರವೂ ಎಳದು ಪ್ರಯೋಗಿಸಲು. ಉರಿ_ಸುಡಿತವು, ನಂದಿ_ಶಮನವಾಗಿ, ಜಲಮಯಂ_ನೀರಿನಿಂದ ತುಂಬಲ್ಪಟ್ಟದ್ದು, ಆಗಲು_ಉಂಟಾಗಲು.

ಅ|| ವಿ|| (ವರುಣನ ಸಂಬಂಧವಾದ್ದು, ವಾರುಣ) (ಶಿಖ ಉಳ್ಳದ್ದು-ಶಿಖಿ) ನವಿಲು, ಬ್ರಾಹ್ಮಣ, ಬೆಂಕಿ. ||೧೩||

ಟೀ|| ಸಮಸ್ತ ಬಲಂ_ಸಕಲ ಸೇನೆಯೂ, ಅಖಿಳ_ಸಮಸ್ತವಾದ, ವಾದ್ಯಂಗಳು_ಭೇರಿ ಮುಂತಾದ ವಾದ್ಯ ವಿಶೇಷಗಳು, ನಾದವು-ಉದಕದಿಂದ ನೆನದು ಹೋದವು, ನಿನಾದ_ಧ್ವನಿಯು, ಉಡುಗಿತು-ನಿಶ್ಶಬ್ಧವಾಯಿತು, ಗಜವಾಜಿನಿಕರಂ ಹಸ್ತ್ಯಶ್ವಗಳ ಸಮೂಹವು, ನನದ_ನೆಂದ, ಉದಕದೊಳು_ಜಲದಲ್ಲಿ, ಏನಾದವು-ಯಾವ ಗತಿಯನ್ನು ಹೊಂದಿದವು, ಎಂಬುದಂ-ಎಂಬ ಸಂಗತಿಯನ್ನು, ಕಾಣೆನು_ನೋಡಿ ಬರಲಿಲ್ಲ, ಆ ಸುಧನ್ವನ ವಾರುಣಾಸ್ತ್ರದಿಂದ-ಆ ಸುಧನ್ವನ ವರುಣ ದೇವತಾಕವಾದಂಬಿನಿಂದ, ಎಲ್ಲರೂ_ಸಮಸ್ತರೂ, ತೋದು_ನೆನದು, ಅಳವಳಿದರು_ಶಕ್ತಿಗುಂದಿದರು, ಅಂಬುಧಾರೆಗಳು-ಉದಕ ಬಿಂದುಗಳು, ದಳವನು_ಸೈನ್ಯವನ್ನು, ಅದೆಂತು_ಅದು ಹೇಗೋ, ಓರಗಿಸಿತು-ಬೀಳಗೆಡವಿತು, ಫಲುಗುಣಂ - ಪಾರ್ಥನು, ಬೆರಗುವೆತ್ತು_ಆಶ್ಚರ್ಯಮಂ ಪೊಂದಿ, ಓದು_ವಿದ್ಯಾಭ್ಯಾಸವು, ಅಳವಡದ_ಇಲ್ಲದ, ವಟುವಿನಂತೆ-ಬ್ರಹ್ಮಚಾರಿಯಂತೆ, ಇರ್ದಂ_ಇರುತ್ತಿದ್ದನೆಂಬಂಶವನ್ನು, ಅರಸ_ಎಲೈ ಜನಮೇಜಯರಾಯನೆ! ಆ ಹವದೊಳು_ ಕಾಳಗದಲ್ಲಿ ನಡೆದ, ಕೌತುಕವನು - ಆಶ್ಚರ್ಯವನ್ನು, ಕೇಳು_ಆಲಿಸು.

ಅ|| ವಿ|| ಗಜವೂ_ವಾಜಿಯೂ, ಇವು ಗಜವಾಜಿಗಳು, ದ್ವಿ. ದ್ವಂ. ಆಜಿ_ಯುದ್ಧ, ವಾಜಿ_ಕುದುರೆ, (ಅಂತು_ಇಂತು_ಎಂತು ಇವು ಅವ್ಯಯಗಳು), ಅಂಬು_ಬಾಣ, ನೀರು ||೧೪||

ಟೀ|| ಬಳಿಕ_ಅನಂತರದಲ್ಲಿ, ಅರ್ಜುನಂ_ಫಲುಗುಣನು, ವಾಯುವ್ಯಾಸ್ತ್ರದಿಂದ_ ವಾಯುದೇವನಿಂದ ಅಭಿಮಂತ್ರಿತವಾದ ಬಾಣದಿಂದ, ಆ ಜಲವನು-ಆ ಉದಕವನ್ನು, ಶೋಷಿಸಿದಂ - ಒಣಗಿಸಿದನು, (ಆರಿಸಿದನು) ಬಳಿಕ - ತರುವಾಯ, ಕಲಿ_ಶೂರನಾದ, ಸುಧನ್ವಂ_ಸುಧನ್ವನು, ಅದ್ರಿಬಾಣಮುಂ_ಪರ್ವತಗಳ ಸಂಬಂಧವಾದ ಅಂಬನ್ನು, ಪೂಡಿದಂ_ಅನುಸಂಧಾನ ಮಾಡಿದನು, ಫಲುಗುಣಂ-ಪಾರ್ಥನು, ಐಂದ್ರಶರಮುಂ_ಇಂದ್ರ ದೇವತಾಕಮಾದ ಶರನನ್ನು, (ವಜ್ರಾಯುಧವನ್ನು) ತೊ

---

ನಾದ ಅಸಹಾಯ ಶೂರನಾದ ಕಲಿಸುಧನ್ವನು ಕಂಡು ಕೋಪಾವಿಷ್ಟನಾಗಿ, ಅತಿ ತ್ವರಿತದಿಂದ ತನ್ನ ಧನುಸ್ಸಿನಲ್ಲಿ ಆಗ್ನೇಯಾಸ್ತ್ರಕ್ಕೆ ಪ್ರತೀಕಾರವಾಗಿ ವಾರುಣಾಸ್ತ್ರವನ್ನು ಅನುಸಂಧಾನಮಾಡಿ ಕಿವಿಯಪರಿಯಂತರವೂ ಸೆಳೆದು ಬಿಟ್ಟು ಆರ್ಭಟಿಸಲಾಗಿ ಆ ವಾರುಣಾಸ್ತ್ರವು ಆಗ್ನೇಯಾಸ್ತ್ರವನ್ನು ತನ್ನ ಬಲದಿಂದ ಶಮನಮಾಡಿದುದಲ್ಲದೆ ಎಲ್ಲಾ ಕಡೆಯೂ ಜಲಮಯವಾಯಿತು ||೧೩|| ಇದರಿಂದ ಅರ್ಜುನನ ಸೇನೆಯೂ ನೆನೆದು ಹೋಯಿತು. ಭೇರಿ ಮೊದಲಾದ ವಾದ್ಯಧ್ವನಿಗಳೂ ಉದಕದ ದೆಸೆಯಿಂದ ನಿಶ್ಶಬ್ದಮಾದುವು, ಚತುರಂಗ ಬಲವೆಲ್ಲವೂ ಈ ಜಲಪ್ರಳಯದಂತಿರುವ ಉದಕದಲ್ಲಿ ಏನು ಗತಿಯನ್ನು ಹೊಂದಿದುವೊ ಎಂಬ ಸಂಗತಿಯು ಬಣ್ಣಿಸಲರಿದು, ಆ ಸುಧನ್ವನ ವಾರುಣಾಸ್ತ್ರದ ಪೇರ್ಮೆಯನ್ನು ಪಾರ್ಥನು ಪರಾಮರಿಸಿ ವಿದ್ಯಾಭಾಸಮಾಡದ ವಟುವಿನಂತೆ ಏನೂ ತೋರದೆ ಆಶ್ಚರ್ಯಪಡುತ್ತಲಿದ್ದನೆಂಬಂಶವನ್ನು ಎಲೈ ಜನಮೇಜಯರಾಯನೇ! ಕೇಳುವನಾಗು || ೧೪ || ಎಂದು ಹೇ

ವನುಗಿದನಾನರಂಗಾರುಡಶಿಲೀಮುಖನನು ‖ ೧೫ ‖ ಈತೆರದೊಳಖಿಳಮಂತ್ರಾಸ್ತ್ರಂಗಳೆಸುಗೆಗಳ | ಚಾತುರ್ಯದಿಂದೋರ್ವರೋರ್ವರಂಗೆಲ್ವಸ | ತ್ವಾತಿಶಯದಿಂದಕಾದಿದರಾಸುಧನ್ವಾರ್ಜುನರ್ಬಳಿಕರೋಷದಿಂದ ‖ ಭೀತಿಗೊಳೆಮೂಜಗಂತೆಗೆದು ಬ್ರಹ್ಮಾಸ್ತ್ರಮಂ | ಶ್ವೇತವಾಹನನಾರ್ದೆಸಲ್ಕೆಹಂಸಧ್ವಜನ | ಜಾತಂಪ್ರತೀಕಾರಕಾಪಿತಾಮಹಶರವನೆಚ್ಚೊಡನೆಬೊಬ್ಬಿರಿದನು ‖ ೧೬ ‖ ಅವರಬ್ರಹ್ಮಾಸ್ತ್ರಮೆರಡುಂಪೊಣರ್ದಡಗೆ | ಲಾವಿಜಯನೆಣಿಕೆಗೊಂಡೀತನಂಗೆಲ್ವಬಗೆಯಾವುದೆಂದುಗಿದುಪೂಡಿದನಕ್ಷಯಾಸ್ತ್ರಮಂತನ್ನರಥಕವನತೇರ್ಗ ‖ ತೀವಿದವುಬಾಣಂಗಳಾಕಾಶಮಂಕಾಣೆ | ನೀವಸುಧೆಯೆತ್ತಣದುಶಶಿರವಿಕುಲಾ

ಟ್ಟನು-ಹೂಡಿದನು, ಮರಾಳಧ್ವಜನಸುತಂ-ಸುಧನ್ವನು, ತಿಮಿರಸಾಯಕವನು-ಅಂಧಕಾರವನ್ನುಂಟು ಮಾಡುವ ಬಾಣವನ್ನು, ಸೆಳೆದಂ-ಎಳದು ಪ್ರಯೋಗಿಸಿದನು, ಭೀಭತ್ಸು-ಪಾರ್ಥನು, ಉಜ್ವಲ-ಉರಿಯುತ್ತಿರುವ, ರವಿಕಳಂಬಮುಂ-ಸೂರ್ಯದೇವತಾಕಮಾದ ಅಸ್ತ್ರವನ್ನು, (ಸೂರ್ಯ ಬಾಣವನ್ನು) ತುಡುಕಿದಂ-ಪ್ರಯೋಗಿಸಿದನು, ಅವಂ-ಆ ಸುಧನ್ವನು, ಮುಳಿದು-ಕೋಪಗೊಂಡು, ಗರಳವಿಶಿಖವಂ-ಸರ್ಪಾಸ್ತ್ರವನ್ನು, ತುಡುಕಿದಂ-ಪ್ರಯೋಗಿಸಿದನು, ಆನರಂ-ಆ ಫಲುಗುಣನು, ಗಾರುಡ-ಗರುಡದೇವತಾಕಮಾದ, ಶಿಲೀಮುಖವನು-ಅಂಬನ್ನು, ಉಗಿದಂ-ಪ್ರಯೋಗಿಸಿದನು.

ಅ‖ ವಿ‖ ಇಂದ್ರಸಂಬಂಧವಾದ್ದು-ಐಂದ್ರ, ಇದರಂತೆಯೇ- ವಾರುಣ-ಗಾರುಡ, ಆಗ್ನೇಯ, ತಾಮಸ ಇತ್ಯಾದಿ (ಮರಾಳವೇ ಧ್ವಜವಾಗುಳ್ಳವನು-ಮರಾಳಧ್ವಜ) ಬಹು. ಸ. ‖ ೧೫ ‖

ಟೀ‖ ಅವರೀರ್ವರ್-ಆ ಸುಧನ್ವಾರ್ಜುನರು, ಈತೆರದೊಳು- ಈರೀತಿಯಾಗಿ, ಅಖಿಳ - ಸಮಸ್ತವಾದ, ಮಂತ್ರಾಸ್ತ್ರಂಗಳ- ಮಂತ್ರಿತ ಮಾದ ಶರಗಳ, ಎಸುಗೆಗಳ - ಪ್ರಯೋಗಿಸುವುದರ (ಹೊಡಿಯೋಣದರ), ಚಾತುರ್ಯದಿಂದ-ಚತುರತೆಯಿಂದ, (ಕೈಚಳಕದಿಂದ) ಓರ್ವರ್-ಒಬ್ಬರು, ಓರ್ವರಂ-ಇನ್ನೊಬ್ಬರನ್ನು, ಗೆಲ್ವ-ಗೆಲ್ಲತಕ್ಕ, ಸತ್ವಾತಿಶಯದಿಂದ-ಬಲಾಧಿಕ್ಯದಿಂದ, ಆಸುಧನ್ವಾರ್ಜುನರ್-ಆ ಸುಧನ್ವನು ಮತ್ತು ಅರ್ಜುನ ಇವರಿಬ್ಬರು, ಕಾದಿದರ್-ಜಗಳವಾಡಿದರು, ಬಳಿಕ-ತರುವಾಯ, ರೋಷದಿಂದ ಕೋಪದಿಂದ, ಮೂಜಗಂ-ಸ್ವರ್ಗ, ಮರ್ತ್ಯ, ಪಾತಾಳವೆಂಬ ಮೂರು ಲೋಕಗಳೂ, ಭೀತಿಗೊಳೆ-ಹೆದರುವಂತೆ, ಶ್ವೇತವಾಹನನು-ಪಾರ್ಥನು, ಬ್ರಹ್ಮಾಸ್ತ್ರಮುಂ-ಪಿತಾಮಹ ಸಂಬಂಧವಾದ ಬಾಣವನ್ನು, ಆರ್ದು-ಆರ್ಭಟಿಸಿ, ಎಸಲ್ಕೆ-ಪ್ರಯೋಗಿಸಲಾಗಿ, ಹಂಸಧ್ವಜನಜಾತಂ-ಹಂಸಧ್ವಜನ ಮಗನಾದ ಸುಧನ್ವನು, ಪ್ರತೀಕಾರಕೆ-ಪ್ರತಿಯಾಗಿ ಪ್ರಯೋಗಿಸಲಿಕ್ಕೆ, ಆಪಿತಾಮಹಶರವನೆ-ಆ ಬ್ರಹ್ಮಸಂಬಂಧವಾದ ಬಾಣವನ್ನೆ, (ಬ್ರಹ್ಮಾಸ್ತ್ರವನ್ನೆ), ಎಚ್ಚು-ಹೊಡೆದು, ಒಡನೆ-ತಕ್ಷಣವೆ, ಬೊಬ್ಬಿರಿದನು-ಘರ್ಜಿಸಿದನು.

ಅ‖ ವಿ‖ ಶ್ವೇತವಾದ ವಾಹನವುಳ್ಳವನು, ಶ್ವೇತವಾಹನ, ಬಹು. ಸ. ಮೂರು ಜಗಗಳ ಸಮಾಹಾರ, ಮೂಜಗ. ಸ. ದ್ವಿಗು. ‖ ೧೬ ‖

ಟೀ‖ ಅವರ-ಆ ಪಾರ್ಥ ಸುಧನ್ವರ, ಬ್ರಹ್ಮಾಸ್ತ್ರಂ ಎರಡುಂ-ಎರಡು ಬ್ರಹ್ಮ ದೇವತಾಕಮಾದ ಬಾಣಗಳೂ, ಪೊಣರ್ದು-ಹೋರಾಡಿ, ಅಡಗಲ್-ಸುಮ್ಮನಾಗಲು, ಆ ವಿಜಯನು-ಆ ಫಲುಗುಣನು, ಎಣಿಕೆಗೊಂಡು-ವ್ಯಥೆಪಟ್ಟು, (ಚಿಂತಿಸಿ) ಈತನಂ-ಈ ಸುಧನ್ವನನ್ನು, ಗೆಲ್ವ-ಗೆಲ್ಲುವ, ಬಗೆ-ಕ್ರಮವು, ಆವುದು ಎಂದು - ಯಾವುದೆಂಬದಾಗಿ, ತನ್ನ-ತನ್ನಯ, ರಥಕೆ-ವರೂಥಕ್ಕೆ, ಅಕ್ಷಯಾಸ್ತ್ರಮುಂ-ನಾಶವಿಲ್ಲದೆ ಹುಟ್ಟುತ್ತಲೇ ಇರುವ ಶರಂಗಳ ಸಮುದಾಯದಿಂದ ಕೂಡಿದ ಬಾಣ ವಿಶೇಷವನ್ನು, ಉಗಿದು-ಪ್ರಯೋಗಿಸಿ, ಮಾಡಿದನು-ಬೇಗಾಗುವಂತೆ ಕಾಳಗ ವಾಡಿದನು, ಬಾಣಂಗಳು-ಅಂಬುಗಳು, ಅವನತೇರ್ಗೆ-

ಳಿದನು, ಆ ಬಳಿಕ ಪಾರ್ಥನು ವಾಯುದೇವನಿಂದ ಉಪದೇಶಿಸಲ್ಪಟ್ಟ ವಾಯುವ್ಯಾಸ್ತ್ರವನ್ನು ಪ್ರಯೋಗಿಸಿ, ಜಲವನ್ನೆಲ್ಲಾ ನಿಮಿಷಾರ್ಧದೊಳಗೆ ಹೀರುವಂತೆ ಮಾಡಿದನು. ತರುವಾಯ ಶೂರನಾದ ಸುಧನ್ವನು, ಅದ್ರಿ ಬಾಣಮುಂ ಪ್ರಯೋಗಿಸಲು ಆರ್ಜುನನು ಅದನ್ನು ಪರಿಹರಿಸಲಿಕ್ಕಾಗಿ, ಐಂದ್ರ ಶರಮುಂ ಪ್ರಯೋಗಿಸಿದನು, ಮತ್ತೆ ಸುಧನ್ವನು ತಿಮಿರಸಾಯಕವಂ ಪ್ರಯೋಗಿಸಲು ಅದಕ್ಕೆ ಪ್ರತಿಯಾಗಿ ಪಾರ್ಥನು ಸೂರ್ಯದೇವತಾಕಮಾದ ಬಾಣಮುಂ ಹೂಡಲು, ಮರಾಳಧ್ವಜನ ಸುತನು ರೇಗಿ ಸರ್ಪಾಸ್ತ್ರವಂ ತೊಡಲು, ಫಲುಗುಣನು ಗಾರುಡಾಸ್ತ್ರವಂ ಪ್ರಯೋಗಿಸಿದನು ‖೧೫‖ ಈರೀತಿಯಾಗಿ ಪಾರ್ಥಸುಧನ್ವರೀರ್ವರೂ ಮಹಾಪರಾಕ್ರಮಾತಿಶಯದಿಂದ ಒಬ್ಬರನೊಬ್ಬರು ಜಯಿಸುವ ತಾತ್ಪರ್ಯದಿಂದ ಹೋರಾಡುತ್ತ, ಅರ್ಜುನನು ಕೋಪಾವಿಷ್ಟನಾಗಿ ಮೂಜಗಂಗಳೂ ತಲ್ಲಣಿಸುವಂತೆ ಬ್ರಹ್ಮಾಸ್ತ್ರವಂ ಪ್ರಯೋಗಿಸಲಾಗಿ, ಆ ಸುಧನ್ವನು ಅದನ್ನು ಪರಿಹರಿಸಲಿಕ್ಕೆ, ಪಿತಾಮಹಾಸ್ತ್ರಮುಂ ತೊಡಲು ಆ ಬಾಣಂಗಳೆರಡೂ ಹೋರಾಡಿ ಸುಮ್ಮನಾದವು ‖೧೬‖ ಹೀಗೆ ಪಾರ್ಥಸುಧನ್ವರ ಜಯಾಪಜಯಗಳು ಗೊತ್ತಾಗದೆ ಅರ್ಜುನನು ಈ ಸುಧನ್ವನಂ ಗೆಲ್ಲುವ ಬಗೆ ಹೇಗೆಂದು ಚಿಂತಿಸುತ್ತಾ ಕಡೆಗೆ ದಶದಿಕ್ಕುಗಳು, ಕುಲಾದ್ರಿಗಳು, ಏನಾದು

ದ್ರಿತಾ | ರಾವಳಿಗಳೇನಾದವೆಣ್ದೆಸೆಯನರಿವರಾರೆಂಬಿನಿಂ ಕೈಗೈದನು ||೧೭|| ಇಚ್ಚಾರಿಗೊಂಡು ನರನೆಚ್ಚ ಕೆಂಗರಿಗೋಲ | ಬಿಚ್ಚಳಿಯ ಪೊಸನಸೆಯ ನಿಚ್ಚಳದ ನಿಡುಸರ | ಪೆಚ್ಚಿದುವು ನಿಮಿಷದೊಳ್ಮುಚ್ಚಿದುವು ಗಗನಮಂ ಕೊಚ್ಚಿದವು ಪರಬಲವನು || ಬಿಚ್ಚಿದುವು ಕವಚಮಂ ಕಚ್ಚಿದುವು ಖಂಡಮಂ | ಚುಚ್ಚಿದವು ಕೂಡೆ ಘಟ್ಟುಚ್ಚಿದುವು ಪೀಳಾಗಿ | ಹಚ್ಚಿದುವು ಮೈಯೊಳಗೆ ಹೊಚ್ಚಿದುವು ಹೊಗರಲಗು ಮುಚ್ಚಿದುವು ನೆಣವಸೆಯನು || ೧೮ || ಗೌರಿಯರಸನ ಕೂಡೆ ಕಾದಿದ ಪರಾಕ್ರಮದ | ಸೌರಂಭಮಿನಿತುಟೆ ನಿವಾತ ಕವಚರನಿರಿದ | ಗೌರವಮಿದೀಗಲೇ ಭೀಷ್ಮ ಕರ್ಣ ದ್ರೋಣ ಮಾದ್ರಪತಿ ಮೊದಲಾಗಿಹ | ಕೌರವಬಲದೊಳಖಿಳ ವೀರಭಟರಂಗೆ

ಆ ಸುಧನ್ವನ ರಥಕ್ಕೆ, ತೀವಿದವು-ತುಂಬಿದವು, ಆಕಾಶಮಂ-ಆಗಸವನ್ನು, ಕಾಣೆಂ-ನೋಡಲಿಲ್ಲವು, ಈವಸುಧೆ-ಈ ಪೃಥ್ವಿಯು, ಎತ್ತಣದು-ಎಷ್ಟು ಮಾತ್ರದ್ದು, (ಎಲ್ಲಿಯೊ) ಶಶಿ ರವಿ-ಇಂದು ಭಾಸ್ಕರರು, ಕುಲಾದ್ರಿ-ಸಪ್ತ ಕುಲಾಚಲಗಳು, ತಾರಾವಳಿಗಳು, ನಕ್ಷತ್ರ ವ್ಯೂಹಂಗಳು, ಏನಾದವೊ-ಏನಾಗಿ ಹೋದವೊ, ಎಣ್ದೆಸೆಯನು-ಅಷ್ಟ ದಿಕ್ಕುಗಳನ್ನು, ಅರಿವರು ಆರು-ತಿಳಿದುಕೊಳ್ಳ ತಕ್ಕವರು ಯಾರಿರುವರು, (ಸಾಧ್ಯವಲ್ಲ) ಎಂಬಿನಿಂ-ಎನ್ನುವಂತೆ, ಅಂಬುಗಳು-ಶರಗಳು, ತುಂಬುವಂತೆ-ವ್ಯಾಪಿಸುವಂತೆ, ಕೈಗೈದನು-ಕೈ ಚಳಕವಂ ತೋರ್ಪಡಿಸಿದನು.

ಅ|| ವಿ|| (ಇಸನು ಎಂಬುವದಕ್ಕೆ ಗೌರವಾರ್ಥದಲ್ಲಿ ಈತನು, ಅವನು, ಆತನು, ಎಂದು ವರ್ತಿಸುವದು) ವರ-ಶ್ರೇಷ್ಠ, ಆಳಿಯು, ಪ್ರಸಾದ, ಅಕ್ಷಯ, ಕ್ಷಯ-ನಾಶವು. ಅ-ಇಲ್ಲದ್ದು, (ಕ್ಷಿ-ಕ್ಷಯ್-ನಾಶ) || ೧೭ ||

ಟೀ|| ನರನು-ಪಾರ್ಥನು, ಇಚ್ಚಾರಿಗೊಂಡು-ಎಡಬಲ ಕೈಗಳ ಕ್ರಮದಿಂದ, ಎಚ್ಚ-ಬಾಣವನ್ನು ಹೊಡಿಯುವ, ಕೆಂಗರಿಗೋಲ-ಕೆಂಪಾದ ರೆಕ್ಕೆಗಳುಳ್ಳ ಬಾಣಗಳ, ಬಿಚ್ಚಳಿಯ-ಬಿಚ್ಚಿಕೊಂಡು ಬರುವ ಧಾರದಂತೆ ಬರುತಿರ್ಪ, ಪೊಸಮಸೆಯ-ಹೊಸದಾಗಿ ಹದಮಾಡಿರುವ, ನಿಚ್ಚಳದ-ಶಾಶ್ವತವಾದ, ನಿಡುಸರಲ್-ದೀರ್ಘವಾದ ಶರವು, ಪೆಚ್ಚಿದವು-ವೃದ್ಧಿಯಾದವು, ನಿಮಿಷದೊಳ್-ಕಣ್ಣರೆಪ್ಪೆ ಬಡಿಯುವಷ್ಟು ಕಾಲದಲ್ಲಿ, ಗಗನಮಂ-ಆಕಾಶವನ್ನು, ಮುಚ್ಚಿದವು-ಮರೆಯಾಗಿ ಮಾಡಿದವು, ಪರಬಲವನು-ಅರಿಸೇನೆಯನ್ನು, ಕೊಚ್ಚಿದವು-ಕತ್ತರಿಸಿದವು, ಕವಚಮಂ-ತೊಟ್ಟಿದ್ದ ಅಂಗಿಯನ್ನು, ಬಿಚ್ಚಿದವು-ಬೇರೆಮಾಡಿದವು, ಖಂಡಮಂ-ಶರೀರದ ಮಾಂಸ ಖಂಡವನ್ನು, ಕಚ್ಚಿಕೊಂಡವು-ಹಿಡಿದುಕೊಂಡವು, ಕೂಡೆ-ತತ್ಕ್ಷಣವೇ, ಚುಚ್ಚಿದವು-ನಾಟಲ್ಪಟ್ಟವು, ಘಟ್ಟು-ಹೊಂದಿ, ಉಚ್ಚಿದವು-ಸುರಿಸಿದವು, ಪೀಳಾಗಿ-ಭಾಗವಾಗಿ, ಹೆಚ್ಚಿದವು-ಚೂರು ಚೂರಾದವು, ಮೈಯೊಳಗೆ-ಶರೀರದಲ್ಲಿ, ಹೊಚ್ಚಿದವು-ಆಚ್ಛಾದಿಸಿದವು, ಹೊಗಲರಗು-ಕಾಂತಿಯುಕ್ತವಾದ ಅಂಬು, ನೆಣವಸೆಯನು-ಮೂಳೆಯಲ್ಲಿ ಅಂಟಿರುವ ಕೊಬ್ಬನ್ನು, ಮುಚ್ಚಿದವು-ಮರೆ ಮಾಡಿದವು, ಎಂದರೆ ಅರ್ಜುನನು ಪ್ರಯೋಗಿಸಿದ ಅಂಬುಗಳು ಅನೇಕ ಪ್ರಕಾರವಾಗಿ ಶತ್ರು ಸೈನ್ಯದಲ್ಲಿ ವ್ಯಾಪಿಸುತ್ತಿತ್ತು.

ಅ|| ವಿ|| (ಪೆಚ್ಚ, ಬಿಚ್ಚ, ಮುಚ್ಚ, ಚುಚ್ಚ, ಧಾತುಗಳು), ಹೊಗರಾದ-ಅಲಗು, ಹೊಗರಲಗು, ವಿ. ಪೂ. ಕ. (ನಿಮಿಷ-ರೆಪ್ಪೆಯ ಕೂದಲು, ನಿಮಿ-ನಿಮಿ ಚಕ್ರವರ್ತಿ) || ೧೮ ||

ಟೀ|| ಗೌರಿಗೆ-ಕಾತ್ಯಾಯನಿಗೆ, ಅರಸನ-ಪತಿಯಾದ ಪರಮೇಶ್ವರನ, ಕೂಡೆ-ಸಂಗಡ, ಕಾದಿದ-ಜಗಳವಾಡಿದ, ಪರಾಕ್ರಮದ-ಆಟೋಪದ, ಸೌರಂಭಂ-ಸಿಟ್ಟು, ಇನಿತುಟೆ-ಇಷ್ಟು ಮಾತ್ರವೇನೋ? ನಿವಾತಕವಚರಂ-ನಿವಾತ ಕವಚರನ್ನು, ಇರಿದ-ಸಂಹರಿಸಿದ, ಗೌರವಂ-ದೊಡ್ಡಸ್ತಿಕೆಯು, ಇದೀಗಲೆ- ಇದೇನೊ? ಭೀಷ್ಮ-ಭಾಗೀರಥಿಯ ಮಗನಾದ ಭೀಷ್ಮನು, ಕರ್ಣ-ಸೂರ್ಯ ಪುತ್ರನಾದ ಕರ್ಣನು, ದ್ರೋಣ-ಅಶ್ವತ್ಥಾಮನ ತಂದೆಯಾದ ದ್ರೋಣನು, ಮಾದ್ರಪತಿ-ಮದ್ರ ದೇಶದ ದೊರೆಯಾದ, ಶಲ್ಯ-ಶಲ್ಯನು, ಮೊದಲಾಗಿಹ-ಆದಿಯಾಗಿರುವಂಥ, ಕೌರವ-ದುರ್ಯೋಧನಾದಿಗಳ, ಬಲದೊಳು-ಸೈನ್ಯದಲ್ಲಿ,

ವೊ? ತಾರಕಾಳಿಗಳೆಲ್ಲಿರ್ಪವೋ? ಸೂರ್ಯ ಚಂದ್ರರೆಂತಿರ್ಪರೋ? ಎಂದೂಹಿಸುವಂತೆ ಬಾಣವೃಷ್ಟಿಯಂ ಸುರಿಸುತ್ತ ಕೈ ಚಳಕವಂ ತೋರ್ಪಡಿಸಲು, ||೧೭|| ಪಾರ್ಥನು ಎಡಬಲ ಕೈಗಳಿಂ ಪ್ರಯೋಗಿಸಿದ ಕೆಂಪಾದ ರೆಕ್ಕೆಗಳಿಂದ ಕೂಡಿದ, ಬಿಚ್ಚಿಕೊಂಡು ನೂಲಿನಂತೆ ಬರುತ್ತಿರುವ ನೂತನವಾಗಿ ಸಾಣೆಗಿಟ್ಟು ಉದ್ದವಾದ ಬಾಣಗಳು ಅಭಿವೃದ್ಧಿಯಾಗಿ, ಒಂದು ಕ್ಷಣ ಮಾತ್ರದೋಳ್ ಆಕಾಶವನ್ನು ಮರೆಯಾಗುವಂತೆ ಆಚ್ಛಾದಿಸಿ, ಶತ್ರುಗಳ ಶರೀರದ ಮಾಂಸ ಖಂಡಗಳನ್ನು ಗಟ್ಟಿಯಾಗಿ ಹಿಡಿದು ತೊಟ್ಟಿದ್ದ ಅಂಗಿಯನ್ನು ಬೇರ್ಪಡಿಸಿ, ಶರೀರದಲ್ಲಿರುವ ಮೂಳೆಗಳಿಗೆ ಅಸ್ಯತವಾದ ಮೇದಸ್ಸನ್ನು ಆವರಿಸಿಕೊಂಡು ನಾನಾವಿಧವಾಗಿ ತುಂಬುತ್ತಿದ್ದವು ||೧೮|| ಆಗ ಸುಧನ್ವನು ಅರ್ಜುನನನ್ನು ನೋಡಿ ಎಲಾ ಅರ್ಜುನ ! ಗೌರೀಪತಿಯಾದ ಪರಮೇಶ್ವರನೊಡನೆ ಕಾಳಗಮಾಡಿದ ಪರಾಕ್ರಮವಿದೇನೊ? ಕಾಲಕೂಟ ನಿವಾತಕವಚರು ಇವರನ್ನು ಸಂಹರಿಸಿದ ಪರಾಕ್ರಮವು ಇಷ್ಟೇನೆ? ಕರ್ಣ, ದ್ರೋಣ ಭೀಷ್ಮಾದಿಗಳಲ್ಲಿ ಹೋರಾಡಿ ತೋರ್ಪಡಿಸಿದ ನಿನ್ನ ಪರಾಕ್ರಮಾಟೋಪವು ಇಷ್ಟುಮಾತ್ರವೇನೆ? ಬಹುಚೆನ್ನಾ

ಲ್ಪ | ಪೌರುಷಮಿನಿತೆಸಾಕುಬರಿದೆಬಳಲಿಸಬೇಡ | ಶೌರಿಯುಂಕರಸೆನುತಕಣೆಗಳಂಕಡಿದೆಚ್ಚನಾಸುಧನ್ವಂನರನನು || ೧೯ || ಕೇಳವನಿಪಾಲಕಸುಧನ್ವನೆಸುವೆಸುಗೆಯಿಂ | ಪೇಳಲರಿಯೆಂತಿರುಗುತಿರ್ದುದುವರೂಥಂಕು | ಲಾಲಚಕ್ರದವೋಲ್ಬಸವಳಿದಕಪೀಶ್ವರಂಭ್ರಮಣೆಯಿಂಧ್ವಜದಮೇಲೆ || ಕಾಲಾಟನಡಗಿದವುಕುದುರೆಗಳಸೂತನಂ | ಕಾಲನೊಯಿದಂಧನಂಜಯನನೊಡಲೊಳಂಬುಗ | ಳ್ಕೀಲಿಸಿದವಿಕ್ಕೆಲದಸೇನೆಯಂಸವರಿದುವುಹೊಗರೊಗುವಹೊಸಕಣೆಗಳು || ೨೦ || ವ್ಯಥಿಸಿದಂಘಾಯದಿಂಸೂತನಳಿಯಲ್ಕೆಸಾ | ರಥಿತನವನುಂತಾನೆಮಾಡುತಿದಿರಾದನತಿ | ರಥರೊಳಗ್ಗಳೆಯನರ್ಜುನನಾಸುಧನ್ವಂಗೆಬಳಿಕೀತನಂಧುರದೊಳು || ಮಥಿಸದಿರ್ದೊಡೆತನ್ನನೇಕೆಪಡೆದಳೊಬರಿದೆ | ಪೃಥೆನೆಲಕೆಪೊರೆಯಾಗಿಶಿವಶಿವಾಬಂದುದೆ | ಪೃಥಿವಿಪನನುಖಕೆಡರಕಟೆನುತಮ

---

ಅಖಿಳ-ಸಕಲವಾದ, ವೀರ-ಕಲಿಗಳಾದ, ಭಟರಂ- ಶಕ್ತಿವಂತರಂ, ಗೆಲ್ದ-ಗೆದ್ದ, ಪೌರುಷಂ-ಪರಾಕ್ರಮವು, ಇನಿತೆ-ಇಷ್ಟು ಮಾತ್ರವೇ? ಸಾಕು-ಸಾಕಾಗಿರುವುದು, ಬಳಲಿಸಬೇಡ-ತೊಂದರೆ ಪಡಿಸಬೇಡ, ಶೌರಿಯುಂ-ಶ್ರೀ ಕೃಷ್ಣನನ್ನು, ಕರೆಸು-ಬರಮಾಡು, ಎನುತ-ಎಂದು ಹೇಳುತ್ತ, ಕಣೆಗಳಂ-ಬಾಣಗಳಂ, ಕಡಿದು-ಕತ್ತರಿಸಿ, ಆ ಸುಧನ್ವಂ-ಆ ಸುಧನ್ವನು, ನರನನು-ಪಾರ್ಥನನ್ನು, ಎಚ್ಚಂ-ಬಾಣ ಪ್ರಯೋಗ ಮಾಡಿದನು.

ಅ|| ವಿ|| ದ್ರೋಣ-ಅಶ್ವತ್ಥಾಮನ ತಂದೆ, ಡೊಂಬಕಾಗಿ, ಬಲ-ಸೈನ್ಯ, ಬಲರಾಮ, ಶೌರಿ-ಶೂರನ ಕುಲದಲ್ಲಿ ಹುಟ್ಟಿದವನು, ಶೌರ್ಯವುಳ್ಳವನು-ಶೌರಿ. ||೧೯||

ಟೀ|| ಅವನಿಪಾಲಕ-ಭೂಪಾಲಕನಾದ ಜನಮೇಜಯರಾಯನೆ! ಕೇಳು-ಆಲಿಸು, ಸುಧನ್ವಂ-ಹಂಸಧ್ವಜನ ಮಗನಾದ ಸುಧನ್ವನು, ಎಸುವ-ಹೊಡೆಯುವ, ಎಸುಗೆಯಿಂ-ಬಾಣ ಪ್ರಯೋಗದಿಂದ, ವರೂಥಂ-ಪಾರ್ಥನ ತೇರು, ಕುಲಾಲ-ಕುಂಬಾರನ, ಚಕ್ರದವೋಲ್-ಚಕ್ರದಂತೆ, ತಿರುಗುತಿರ್ದುದು-ಸುತ್ತುತ್ತಿತ್ತು, ಇತ್ತ-ಈ ಕಡೆ, ಧ್ವಜದ-ಕೇತನದ, ಮೇಲೆ-ಮೇಲ್ಭಾಗದಲ್ಲಿ, ಕಪೀಶ್ವರಂ-ಕಪಿಗಳ ಒಡೆಯನಾದ ಆಂಜನೇಯನು, ಭ್ರಮಣೆಯಿಂ-ತಲೆ ತಿರುಗುವಿಕೆಯಿಂದ, ಬಸವಳಿದಂ-ಆಯಾಸಪಟ್ಟನು, ಕುದುರೆಗಳ-ಅಶ್ವಗಳ, ಕಾಲಾಟ-ಸಂಚಾರವು, ಅಡಗಿದವು-ಇಲ್ಲದಂತಾದವು, (ನಿಂತವು) ಸೂತನಂ-ರಥ ಹೊಡೆವವನನ್ನು, ಕಾಲಂ-ಯಮಧರ್ಮನು, ಒಯಿದಂ-ಕೊಂಡು ಹೋದನು, (ಸತ್ತನು) ಧನಂಜಯನ-ಪಾರ್ಥನ, ಒಡಲೊಳ್-ಶರೀರದಲ್ಲಿ, ಅಂಬುಗಳು-ನಾರಾಚಗಳು, ಕೀಲಿಸಿದುವು-ನೆಟ್ಟವು, (ನಾಟಕೊಂಡವು) ಹೊಗರು-ಪ್ರಕಾಶವನ್ನು, ಒಗುವ-ಚೆಲ್ಲುತ್ತಿರುವ, ಹೊಸ ಕಣೆಗಳು-ನೂತನವಾದ ಶರಗಳು, ಇಕ್ಕೆಲದ-ಪಾರ್ಥನ ಉಭಯ ಪಾರ್ಶ್ವದಲ್ಲಿರುವ, ಸೇನೆಯ-ಸೈನ್ಯವನ್ನು, ಸವರಿದವು-ಭೇದಿಸಿದವು, (ಕತ್ತರಿಸಿದವು) ಪೇಳಲರಿಯೆಂ-ಈ ವಿಷಯವನ್ನು ವಿವರಿಸಲಾರೆನು.

ಅ|| ವಿ|| (ಕಪಿ+ಈಶ್ವರ=ಕಪೀಶ್ವರ) ಸ. ದೀ. ಸಂ. (ಕುಲಾಲನ+ಚಕ್ರ=ಕುಲಾಲಚಕ್ರ) ಷ. ತ. ಹೊಸ+ಕಣೆ=ಹೊಸಗಣೆ, ಗ. ಕಾರ ಆ. ಸಂ. ||೨೦||

ಟೀ|| ಸೂತನು-ರಥ ನಡಿಸತಕ್ಕವನು, ಅಳಿಯಲ್ಕೆ-ಮೃತಿಯನ್ನು ಹೊಂದಲು, ಘಾಯದಿಂ-ಶರ ಪ್ರಹಾರದಿಂದಾದ ಗಾಯದಿಂದ, ವ್ಯಥಿಸಿದಂ-ದುಃಖಪಟ್ಟನು, ಸಾರಥಿತನವನುಂ- ರಥ ನಡಿಸತಕ್ಕ ಕಾರ್ಯವನ್ನು, ತಾನೆ-ಆ ಪಾರ್ಥನೆ, ನಡೆಸುತ್ತ, ಅತಿರಥರೊಳು-ಯುದ್ಧಗಾರರಲ್ಲಿ, ಅಗ್ಗಳೆಯ-ಸಮರ್ಥನಾದ, ಅರ್ಜುನಂ-ಆ ಪಾರ್ಥನು, ಸುಧನ್ವಂಗೆ-ಸುಧನ್ವನಿಗೆ, ಇದಿರಾದನು-ಎದುರಾದನು, ಬಳಿಕ-ತರುವಾಯ, ಈತನಂ-ಹಂಸಧ್ವಜನ ಮಗನಾದ ಸುಧನ್ವನನ್ನು, ಧುರದೊಳು-ಕಾಳಗದಲ್ಲಿ, ಮಥಿಸದಿರ್ದೊಡೆ- ಸಂಹರಿಸದೇ ಹೋದರೆ, ಪೃಥೆ-ಪೃಥಾದೇವಿಯು, (ಕುಂತಿಯು) ತನ್ನನು-ತನ್ನನ್ನು, ನೆಲಕೆ-ಪೃಥ್ವಿಗೆ, ಪೊರೆಯಾಗಿ- ಹೊರೆಯಾಗಿ, ಬರಿದೆ- ವ್ಯರ್ಥವಾಗಿ ಏಕೆ ಪಡೆದಳೊ, ಅದು ಏತಕ್ಕಾಗಿ ಪ್ರಸುವಿಸಿದಳೋ, ಶಿವಶಿವ-ಈಶ್ವ

---

ಗಿದೆ! ನೀನು ಯುದ್ಧಮಾಡುವ ಕೈಚಮತ್ಕಾರವು ಬಹು ಶ್ಲಾಘ್ಯವಾಗಿದೆ! ಬಾಲನಾದ ನನ್ನನ್ನು ಆಯಾಸ ಪಡಿಸಬೇಡ, ಶ್ರೀ ಕೃಷ್ಣನನ್ನು ಬರಮಾಡಿಕೊಳ್ಳೆನುತ ಉಗ್ರವಾದ ಬಾಣಂಗಳಂ ಪ್ರಯೋಗಿಸಿದಂ ||೧೯|| ಭೂಮಿಪತಿಯಾದ ಜನಮೇಜಯರಾಯನೆ! ಆಲಿಸು, ಆಗ ಸುಧನ್ವನು ಎಸೆದ ಬಾಣಂಗಳ ದೆಸೆಯಿಂದ ಅರ್ಜುನನ ರಥವು ಕುಲಾಲಚಕ್ರದಂತೆ ತಿರುಗಿತು. ಧ್ವಜದಲ್ಲಿರುವ ಕಪೀಶ್ವರನು, ಬಹಳವಾಗಿ ಆಯಾಸ ಪಟ್ಟನು. ಕುದುರೆಗಳ ಸಂಚಾರವು ನಿಂತು ಹೋಯಿತು. ಸೂತನು ಮೃತಪಟ್ಟನು. ಅರ್ಜುನನ ಶರೀರದಲ್ಲಿ ಬಾಣಂಗಳು ನಾಟಿದ್ದಲ್ಲದೆ ಪರಬಲವನ್ನೆಲ್ಲಾ ನಾಶಮಾಡಿದವು ||೨೦|| ತರುವಾಯ ಅರ್ಜುನನು, ಸುಧನ್ವನು ಪ್ರಯೋಗಿಸಿದ ಶರಪ್ರಹಾರದಿಂದ ಬೇನೆ ಹೊಂದಿ, ತನ್ನ ಸಾರಥಿ ಮಡಿದದ್ದರಿಂದ ತಾನೇ ಸಾರಥಿತ್ವವಂ ಮಾಡುತ್ತ ಅಸಹಾಯಶೂರನಾದ ಪಾರ್ಥನು ಈ ಶತ್ರು ಬಲಕ್ಕೆ ಎದುರಾದ ಬಳಿಕ ಈ ಸಮರದೋಳ್ ಈ ಸುಧನ್ವನಂ ಸಂಹರಿಸದೆ ಹೋದರೆ ಕುಂತಿದೇವಿಯು ತನ್ನನ್ನು ಭೂಭಾರವಾಗಿ ವೃಥಾ ಏಕೆ ಪಡೆದಳೋ, ಶಿವ ಶಿವ! ಪೃಥಿವೀಪತಿಯಾದ ಪಾಂಡವಾ

ನದೊಳಗೆಕೃಷ್ಣನಂಧ್ಯಾನಿಸಿದನು ||೨೧|| ಅರಸಕೇಳರ್ಜುನಂಧ್ಯಾನಿಸಲ್ಕಾಗಳಿಭ | ಪುರದೊಳರಿದಂಮುರಧ್ವಂಸಿಹಂಸಧ್ವಜನ | ಧುರಮಂಸುಧನ್ವನಪರಾಕ್ರಮುವನೆಚ್ಚರಿಸಿಧರ್ಮತನಯಾದಿಗಳ್ಗೆ || ತೆರಳದುಕಿರೀಟಿಗಾಹವಮೆಂದುವಹಿಲದಿಂಗರುಡವಾಹನನಾಗಿಬಂದನಾಕ್ಷಣಕಲ್ಲಿ | ಗರವಿಂದನಾಭನಾನತರನೆನಹಿಗೆನಿತ್ಯನೆಂಬುದಂತೋರುವಂತೆ || ೨೨ || ಕಶ್ಯಪವಸಿಷ್ಠಾದಿಪರಮಋಷಿಮುಖ್ಯರಾ | ಲಸ್ಯಮಿಲ್ಲದೆಮಾಡುವಧ್ಯಾನಕೊಮ್ಮೆಯುಂ | ದೃಶ್ಯನಲ್ಲದಚಿನ್ಮಯಾನಂದರೂಪನೀಕುಂತೀಕುಮಾರಕರ್ಗೆ || ವಶ್ಯನಾಗಿಹನೆಂತೊಶಿವಶಿವಾನೀಲಮೇ | ಘಶ್ಯಾಮಲನಲೀಲೆಪೊಸತೆಂದುಸುರರುಲಿಯೆ | ಸ್ವಶ್ಯಾಲಕನರಥಾಗ್ರಕೆಸುಪರ್ಣಸ್ಕಂ

ರನೆ. ಪೃಥಿವಿಪನ-ಭೂಮಿಯನ್ನು ಪಾಲಿಸತಕ್ಕ ಧರ್ಮರಾಯನ, ಮಖಕೆ-ಕ್ರತುವಿಗೆ, (ಯಾಗಕ್ಕೆ) ಅಕಟ-ಅಕ್ಕಟಾ, ಎಡರ್-ತೊಂದರೆಯು, ಬಂದುದೇ-ಬರುವುದಾಯಿತೆ, ಎನುತ-ಎಂದು ಕೊಳ್ಳುತ್ತ, ಮನದೊಳಗೆ-ಮನಸ್ಸಿನಲ್ಲಿ, ಆಗ-ಆ ತಕ್ಷಣದಲ್ಲಿ, ಕೃಷ್ಣನಂ-ಶ್ರೀ ಕೃಷ್ಣನನ್ನು, ಧ್ಯಾನಿಸಿದನು-ಸ್ಮರಿಸಿದನು.

ಅ|| ವಿ|| ಪೃಥೆಯ ಮಗ-ಪಾರ್ಥ, ಶಿವಶಿವ-ಕಷ್ಟಕಾಲದಲ್ಲಿ ದೇವರನ್ನು ನೆನೆಯುವಾಗ ದ್ವಿರುಕ್ತಿಯಲ್ಲಿ ಹೇಳುವುದುಂಟು. ಚಿತ್ತ-ಮನಸ್ಸು, ನಕ್ಷತ್ರ. ಧರ್ಮನ+ಪುತ್ರ=ಧರ್ಮಪುತ್ರ ಷ. ತ. ||೨೧||

ಟೀ|| ಅರಸ-ಎಲೈ ಜನಮೇಜಯರಾಯನೆ! ಅರ್ಜುನಂ-ಪಾರ್ಥನು, ಧ್ಯಾನಿಸಲ್ಕೆ-ಶ್ರೀ ಕೃಷ್ಣನನ್ನು ಮನದೊಳ್ ನೆನೆಯಲು, ಆಗ-ಆ ತಕ್ಷಣವೇ, ಇಭಪುರದೊಳು- ಗಜಪುರದಲ್ಲಿ, ಮುರಧ್ವಂಸಿ-ಶ್ರೀ ಕೃಷ್ಣನು, ಅರಿದಂ-ತಿಳಿದವನಾದನು, ಹಂಸಧ್ವಜನ-ಮರಾಳಧ್ವಜನ, ಧುರಮುಂ-ಕಾಳಗವನ್ನು, ಸುಧನ್ವನ, ಪರಾಕ್ರಮವಂ-ಆಟೋಪವನ್ನು, ಧರ್ಮತನಯಾದಿಗಳಿಗೆ-ಧರ್ಮರಾಜನೇ ಮೊದಲಾದವರಿಗೆ, ಎಚ್ಚರಿಸಿ-ಜ್ಞಾಪಿಸಿ, ಕಿರೀಟಗೆ-ಪಾರ್ಥನಿಗೆ, ಆಹವಂ-ಕಾಳಗವು, ತೆರಳದು-ಜರಗದು, (ಸುಧನ್ವನೊಡನೆ ಯುದ್ಧಮಾಡಲು ಆಗುವುದಿಲ್ಲ) ಎಂದು-ಎಂಬದಾಗಿ, ವಹಿಲದಿಂ-ಜಾಗ್ರತೆಯಿಂದ, ಗರುಡವಾಹನಂ ಆಗಿ-ಗರುಡನನ್ನೇ, ವಾಹನ ಮಾಡಿಕೊಂಡು, ಅರವಿಂದನಾಭಂ-ಪದ್ಮನಾಭನಾದ ಕೃಷ್ಣನು, ಆನತರ-ತನ್ನ ಉಪಾಸಕರ, (ಭಜಕರ) ನೆನಹಿಗೆ-ಅಪೇಕ್ಷೆಗೆ, ನಿತ್ಯನು-ಶಾಶ್ವತಮಾಗಿ ಬರತಕ್ಕವನು, ಎಂಬುದಂ-ಎನ್ನುವುದನ್ನು, ತೋರುವಂತೆ-ತೋರ್ಪಡಿಸುವಹಾಗೆ, ಅಲ್ಲಿಗೆ-ಆ ಅರ್ಜುನನು ಯುದ್ಧಮಾಡುತ್ತಿರುವ ಸ್ಥಳಕ್ಕೆ, ಬಂದನು-ಬರುವನಾದನು.

ಅ|| ವಿ|| ಮುರ-ಮುರಾಸುರನನ್ನು, ಧ್ವಂಸಿ-ನಾಶಮಾಡಿದವನು, ಮುರಧ್ವಂಸಿ, ಕೃಷ್ಣನು. ಅರವಿಂದ-ಕಮಲ (ಅರವಿಂದವೇ ನಾಭಿಯಾಗುಳ್ಳವನು ಅರವಿಂದನಾಭನು) ಬಹು. ಸ. ||೨೨||

ಟೀ|| ಕಶ್ಯಪವಸಿಷ್ಠಾದಿ-ಕಶ್ಯಪ ವಸಿಷ್ಠರೆ ಆದಿಯಾಗುಳ್ಳ, ಪರಮಋಷಿ-ಶ್ರೇಷ್ಠರಾದ ಮುನಿಗಣದಲ್ಲಿ, ಮುಖ್ಯರ್-ಹೆಸರಾದವರು, ಆಲಸ್ಯಂ-ಬೇಜಾರು, ಇಲ್ಲದೆ-ತ್ಯಜಿಸಿ, ಮಾಡುವ-ಎಸಗುತಿರ್ಪ, ಧ್ಯಾನಕ್ಕೆ-ಭಜನೆಗೆ, ಒಮ್ಮೆಯುಂ-ಒಂದಾವರ್ತಿಯಾದರೂ, ದೃಶ್ಯನಲ್ಲದ-ಕಂಡು ಬರದ, ಚಿದಾನಂದರೂಪಂ-ಚಿನ್ಮಯಾತ್ಮಕಸ್ವರೂಪನು, ಈ ಕುಂತೀಕುಮಾರಕರ್ಗೆ-ಕುಂತೀದೇವಿಯ ಮಕ್ಕಳಾದ ಧರ್ಮರಾಯಾದಿಗಳಿಗೆ, ವಶ್ಯನಾಗಿ-ವಶನಾಗಿ, ಇಹಂ-ಇರುವನು, ಎಂತೊ-ಅದು ಹೇಗೆ ವಶನಾದನೊ? ಶಿವಶಿವ-ಓ ಪರಮೇಶ್ವರನೆ! ನೀಲಮೇಘ-ನೀಲವರ್ಣದ ಜಲದಂತೆ, ಶ್ಯಾಮಲನ-ಕಪ್ಪಾದವನಾದ ಶ್ರೀಕೃಷ್ಣನ, ಲೀಲೆ-ವೈಭವವು, ಪೊಸತು ಎಂದು-ನೂತನವಾದು ಎಂದು, ಸುರರು-ದೇವಯೋನಿಗಳು, ಉಲಿಯೆ-ಹೇಳುವಂತೆ, ಸ್ವಶಾಲಕನ-ತನ್ನ ಮೈದುನನಾದ ಪಾರ್ಥನ, ರಥಾಗ್ರಕೆ-ವರೂಥದ ಮುಂಗಡೆಗೆ, ಮುರಹರನು-ಮುರಧ್ವಂಸಿಯಾದ ಶ್ರೀ ಕೃಷ್ಣನು, ಸುಪರ್ಣ ಸ್ಕಂಧದಿಂದ-ಗರುಡನ ಕುತ್ತಿಗೆಯ ದೆಸೆಯಿಂದ, ಇಳಿದಂ-ಇಳಿದವನಾದನು.

ಗ್ರಜನ ಯಜ್ಞಕಾರ್ಯಕ್ಕೆ ಈ ರೀತಿಯಾದ ತೊಂದರೆ ಪ್ರಾಪ್ತಮಾದುದಲ್ಲಾ ಎಂದು ಯೋಚಿಸುತ್ತಾ, ಶ್ರೀ ಕೃಷ್ಣನಂ ಏಕಭಾವದೊಳು ಧ್ಯಾನಿಸಿದನು ||೨೧|| ಎಲೈ ಜನಮೇಜಯರಾಯನೇ! ಆಗ ಅರ್ಜುನನು ಕೃಷ್ಣಮೂರ್ತಿಯಂ ಧ್ಯಾನಿಸಲಾಗಿ ಆ ತಕ್ಷಣವೇ ತಿಳಿದು, ಹಂಸಧ್ವಜನ ಯುದ್ಧವನ್ನು ಮತ್ತು ಸುಧನ್ವನ ಯುದ್ಧ ಚಮತ್ಕಾರವನ್ನೂ ಮನದೊಳೇ ಅವಲೋಕಿಸಿ, ಇನ್ನು ಇಂತಹ ಪರಾಕ್ರಮಿಗಳೊಡನೆ ಅರ್ಜುನಂಗೆ ಯುದ್ಧಮಾಡಲು ಅಸಾಧ್ಯವೆಂಬ ಅಂಶವನ್ನು ಧರ್ಮರಾಯಾದಿಗಳಿಗೆ ತಿಳಿಯ ಪಡಿಸಿ, ಭಕ್ತರ ಅಪೇಕ್ಷೆಗೆ ನಿತ್ಯನೆಂಬುದು ಸತ್ಯವೆಂಬಂತೆ (ಭಗವಂತನು ಭಕ್ತರಧೀನನೆಂಬುವಂತೆ) ಅರ್ಜುನನು ಯುದ್ಧಮಾಡುವ ಸ್ಥಳಕ್ಕೆ ಗರುಡವಾಹನನಾಗಿ ಬಂದವನಾಗಲು ||೨೨|| ಕಶ್ಯಪ ವಸಿಷ್ಠಾದಿ ಸಪ್ತಋಷಿಗಳು ವಿರಾಮವಿಲ್ಲದೆ ಧ್ಯಾನಮಾಡಿದಾಗ್ಯೂ ತನ್ನ ಸಂದರ್ಶನವನ್ನು ಒಂದು ಸಾರಿಯಾದರೂ ತೋರದ ಚಿನ್ಮಯಾನಂದ ಸ್ವರೂಪಿಯಾದ ಶ್ರೀ ಕೃಷ್ಣಮೂರ್ತಿಯು, ಈ ಪಾಂಡುಪುತ್ರರ ಅಧೀನನಾಗಿರುವುದು ನೋಡಿದರೆ ಆಶ್ಚರ್ಯವಾಗಿರುವುದು. ಶ್ರೀ ಪದ್ಮನಾಭನ ಪ್ರೇಮೆ ಇನ್ನೆಂತುಟೊ ಎಂಬಂತೆ ನೀಲಮೇಘಶ್ಯಾಮನಾದ ಶ್ರೀ ಕೃಷ್ಣನು ತನ್ನ ಮೈದುನನಾದ ಅರ್ಜುನನ ರಥದ ಮುಂಗಡೆಗೆ ಸುಪ

ಥದಿಂಮುರಹರನಿಳಿದನು ॥ ೨೩ ॥ ಮೊಳಗಿದವುನಿಸ್ಸಾಳಕೋಟಿಗಳ್ಫಲುಗುಣನ | ದಳದೊಳಗೆತನತನಗೆರಗುತಿರ್ದುದುತ್ಸವದ | ಆಳಿಮುಸಗಿಕಳಕಳದಬೊಬ್ಬೆಯಿಂಮಿಕ್ಕುಳಿದುರಭಸಮಬ್ಧಿಘೋಷಣವನು ॥ ಬಳಿಕನಸುನಗುತಚರಣಕೆಮಣಿದಪಾರ್ಥನಂ ॥ ಸೆಳೆದುಬಿಗಿಯಪ್ಪಿಮೈದಡವಿಬೋಳೈಸಿರಥ | ದೊಳಗೆಕುಳ್ಳಿರ್ದುನಲವಿಂದಮುರರಿಪುಕುದುರೆಗಳವಾಘೆಯುಂಕೊಂಡನು ॥ ೨೪ ॥ ಇನಿತೆಲ್ಲಮುಂನೋಡುತಿರ್ದಂಸುಧನ್ವನನು | ದಿನನುಂತರಂಗದೋಳ್ಧ್ಯಾನಿಸುವನಿರ್ಮಲಾ | ತ್ಮನದಿವ್ಯಮೂರ್ತಿಯಂಪಾರ್ಥನರ ಥಾಗ್ರದೋಳ್ಕಂಡುಪುಳಕೋದ್ಗಮದೊಳು ॥ ತನುವನೀಡಾಡಿಸಾಷ್ಟಾಂಗಪ್ರಣಾಮದಿಂ | ಮನದೊಳಗೆಹಿಗ್ಗಿತನ್ನಾಳ್ತನಕೆಸಾಕಿನ್ನು | ಮನದೆಣಿಕೆಕೈಸಾರ್ದುದೆಂದುಕಣ್ದೆರೆದಚ್ಯುತನಂನಿರೀಕ್ಷಿಸಿದನು ॥ ೨೫ ॥ ಅತಸೀಕುಸುಮಗಾತ್ರನಂಕಮಲನೇ

---

ಅ॥ ವಿ॥ ಮುರಹರ-ಮುರ-ಮುರಾಸುರನನ್ನು, ಹರ-ಸಂಹರಿಸಿದವನು, ಕೃ, ವೃ. (ಚಿತ್+ಆನಂದ) ಜ. ಸಂ. (ಚಿತ್+ಮಯ) ಅ. ಸಂ. ಕಶ್ಯಪ-ಋಷಿ, ಶಿವ-ಹರ-ಮಂಗಳ. ನೀಲವಾದ-ಮೇಘ, ನೀಲಮೇಘ, ವಿ. ಪೂ. ಕ. ಮೇಘದಂತೆ ಶ್ಯಾಮ, ಮೇಘಶ್ಯಾಮ, ಉ. ಪೂ. ಕ. ॥ ೨೩ ॥

ಟೀ॥ ಆಗ-ಶ್ರೀ ಕೃಷ್ಣನು ಗರುಡನಿಂದ ನೆಲಕ್ಕೆ ಇಳಿದಾಗ, ಕೋಟಿಗಳ್-ಲೆಕ್ಕವಿಲ್ಲದ, ನಿಸ್ಸಾಳ-ದೊಡ್ಡ ನಗಾರಿಗಳು, ಮೊಳಗಿದವು-ಧ್ವನಿಗೈದವು, ಫಲುಗುಣನ-ಪಾರ್ಥನ, ದಳದೊಳು-ಸೈನ್ಯದಲ್ಲಿ, ತನತನಗೆ-ತಾವಾಗಿಯೇ, ಎರಗುತಿರ್ದುದು-ಶ್ರೀ ಕೃಷ್ಣಗೆ ನಮಸ್ಕರಿಸುತ್ತಿದ್ದರು, ಉತ್ಸವದ-ವೈಭವದ, ಆಳಿ-ನಾಶವು, ಮುಸಗಿ-ಉಂಟಾಗಿ, ಕಳಕಳದ-ಕಲಕಲಧ್ವನಿಯಿಂದ ಯುಕ್ತವಾದ, ಬೊಬ್ಬೆಯಿಂ-ಶಬ್ದದಿಂದ, ರಭಸಂ-ಸದ್ದು, ಅಬ್ಧಿ-ಜಲಧಿಯ, ಘೋಷಣವನು-ಶಬ್ದವನ್ನು, ಮಿಕ್ಕುದು-ಅತಿಕ್ರಮಿಸಿತು, ಬಳಿಕ-ತರುವಾಯ, ನಸುನಗುತ-ಮುಗುಳನಗೆಯಿಂದ, ಚರಣಕೆ-ಶ್ರೀ ಕೃಷ್ಣನ ಪಾದಗಳಿಗೆ, ಮಣಿದ-ನಮಸ್ಕರಿಸಿದ, ಪಾರ್ಥನಂ-ಫಲುಗುಣನನ್ನು, ಸೆಳೆದು-ಬಲವಂತದಿಂದ ಎಳೆದುಕೊಂಡು, ಬಿಗಿಯಪ್ಪಿ-ತಬ್ಬಿಕೊಂಡು, ಮೈದಡವಿ-ಶರೀರವನ್ನೇ ಸವರಿಸಿ, ಬೋಳೈಸಿ-ತಲೆಯನ್ನು ಸವರಿ, ರಥದೊಳಗೆ-ವರೂಥದಲ್ಲಿ, ಕುಳ್ಳಿರ್ದು-ಕೂತುಕೊಂಡು, ನಲವಿಂದ-ಆದರಣೆಯಿಂದ, ಮುರರಿಪು-ಶ್ರೀ ಕೃಷ್ಣನು, ಕುದುರೆಗಳ-ಅಶ್ವಗಳ, ವಾಘೆಯಂ-ಲಗಾಮನ್ನು, ಕೊಂಡನು-ಅರ್ಜುನನಿಂದ ಹೊಂದಿದನು ॥

ಅ॥ ವಿ॥ ಕೋಟಿ-ಸಂಖ್ಯೆ, ಬಿಲ್ಲಿನ ತುದಿ. ಅಳಿ-ನಾಶ, ಭ್ರಮರ. ॥ ೨೪ ॥

ಟೀ॥ ಸುಧನ್ವಂ-ಸುಧನ್ವನು, ಇನಿತೆಲ್ಲಮುಂ-ಅರ್ಜುನನ ಕಡೆಯಲ್ಲಾದ ಉತ್ಸಾಹಾದಿಗಳನ್ನೆಲ್ಲಾ, ನೋಡುತಿರ್ದಂ-ಈಕ್ಷಿಸುತಿರ್ದನು, ಅನುದಿನಂ-ಪ್ರತಿನಿತ್ಯದಲ್ಲೂ, ಅಂತರಂಗದೋಳ್-ಮನಸ್ಸಿನಲ್ಲಿ, ಧ್ಯಾನಿಸುವ-ಭಜಿಸುತ್ತಿರುವ, ನಿರ್ಮಲಾತ್ಮನ-ಪರಿಶುದ್ಧಾತ್ಮಕನಾದ, ದಿವ್ಯಮೂರ್ತಿಯಂ - ಸುಂದರಾಕಾರವಾದ (ಸತ್ವಗುಣಯುತನಾದ) ಶ್ರೀ ಕೃಷ್ಣಮೂರ್ತಿಯನ್ನು, ಪಾರ್ಥನ-ಫಲುಗುಣನ, ರಥಾಗ್ರದೋಳ್-ವರೂಥಾಗ್ರದಲ್ಲಿ (ತೇರಿನ ಮುಂಗಡೆಯಲ್ಲಿ), ಕಂಡು-ಈಕ್ಷಿಸಿ, ಪುಳಕೋದ್ಗಮದೊಳು-ರೋಮಾಂಚದಿಂದ, (ಅತಿ ಭಯವೂ ಅತಿ ಹರ್ಷವೂ ಉಂಟಾದರೆ ಶರೀರದ ರೋಮಗಳೆಲ್ಲವೂ ನೆಟ್ಟಗೆ ನಿಲ್ಲುವುವು) ತನುವಂ-ತನ್ನ ಶರೀರವನ್ನು, ಈಡಾಡಿ-ಮರೆತುಬಿಟ್ಟು, ಸಾಷ್ಟಾಂಗಪ್ರಣಾಮದಿಂ-ಅಡ್ಡಬೀಳುವಿಕೆಯಿಂದ, ಮನದೊಳಗೆ-ತನ್ನ ಮನಸ್ಸಿನಲ್ಲಿಯೆ, ಹಿಗ್ಗಿ-ಸಂತೋಷಪಟ್ಟು, ತನ್ನ-ನನ್ನ, ಆಳ್ತನಕೆ-ಆಟೋಪಕ್ಕೆ, ಸಾಕು-ಸಾಕಾಯಿತು (ತಾನು ಭೂಮಿಯಲ್ಲಿ ಜೀವಿಸಿದ್ದು ಸಾಕು), ಇನ್ನು-ಇನ್ನುಮೇಲೆ, ಮನದೆಣಿಕೆ-ಮನಸ್ಸಿನ ಕೋರಿಕೆಯು, ಕೈಸಾರ್ದುದು-ಕೈವಶವಾಯಿತು, ಎಂದು-ಎಂಬದಾಗಿ, ಕಣ್ದೆರೆಯದೆ-ಕಣ್ಣುಬಿಡದೆ, ಅಚ್ಯುತನಂ-ಶ್ರೀ ಕೃಷ್ಣನನ್ನು, ನಿರೀಕ್ಷಿಸಿದಂ-(ಮನದಣಿಯೆ) ಕಂಡನು ॥

ಅ॥ ವಿ॥ ಕೈಯಂ-ಸಾರ್ದುದು, ಕೈಸಾರ್ದುದು, ಕ್ರಿ. ಸ. (ಚ್ಯುತಿ-ನಾಶ, ಅ. ಇಲ್ಲದವನು, ಅಚ್ಯುತ), ಅಷ್ಟಾಂಗಗಳು-ಪಾದದ್ವಯ, ಭುಜದ್ವಯ, ಹಸ್ತದ್ವಯ, ವಕ್ಷ, ಲಲಾಟ ॥ ೨೫ ॥

---

ರ್ಣಸ್ಕಂಧದಿಂದ ದೇವತೆಗಳು ಹೊಗಳುವಂತೆ ಅವನಿಗವತರಿಸಿದಂ ॥೨೩॥ ಅನಂತರದಲ್ಲಿ ಅಸಂಖ್ಯಾತವಾದ ನಗಾರಿ ಮೊದಲಹ ವಾದ್ಯವಿಶೇಷಗಳು ಧ್ವನಿಗೈದವು. ಅರ್ಜುನನ ಸೇನೆಯ ಜನರು ತಾವುತಾವಾಗಿ ಶ್ರೀ ಕೃಷ್ಣನಿಗೆ ನಮಸ್ಕರಿಸಿ, ಆನಂದಪರವಶರಾದರು. ಕೂಡಲೇ ಆ ಅರ್ಜುನನು, ಮಂದಹಾಸದಿಂದ, ಶ್ರೀಹರಿಯ ಪಾದಾರವಿಂದಗಳಿಗೆ ನಮಸ್ಕರಿಸಲು, ಶ್ರೀ ಕೃಷ್ಣನು, ಆತನಂ ಆನಂದದಿಂದ ಬಿಗಿಯಪ್ಪಿ, ಮೈಯನ್ನು ಸವರಿ, ಸಂತೈಸಿ, ವರೂಥದಲ್ಲಿ ಕುಳಿತುಕೊಂಡು ತನ್ನ ಮೈದುನನ ಕೈಯಿಂ ಕುದುರೆಗಳ ಕಡಿವಾಣನುಂ ಬಿಡಿಸಿದನು ॥೨೪॥ ಆಗ ಸುಧನ್ವನು ಈರೀತಿಯಾದುದನ್ನೆಲ್ಲಾ ನೋಡುತ್ತಿದ್ದು, ಪ್ರತಿನಿತ್ಯದಲ್ಲೂ ಭಜಿಸುತ್ತಿದ್ದ ಶ್ರೀ ಕೃಷ್ಣನನ್ನು ಪಾರ್ಥನ ರಥದ ಮುಂಗಡೆಯೋಳ್ ನೋಡಿ, ರೋಮಾಂಚಯುತನಾಗಿ, ನಮಸ್ಕರಿಸಿ, ನಲಿದು, ಇನ್ನು ಈ ಸಂಸಾರ ವ್ಯಥೆಯು ಸಾಕು. ನನ್ನ ಮನೋಭೀಷ್ಟವು ನೆರವೇರಿತು ಎಂದು ನಾಶರಹಿತನಾದ

ತ್ರನಂ । ಸ್ಮಿತರುಚಿರಶುಭರದನನಂಚಾರುವದನನಂ । ಕೃತಮೃಗಮದೋಲ್ಲಸತ್ಸುಲಲಾಟನಂಮಣಿಕಿರೀಟನಂ ಕಂಬುಗಳದ ॥ ಅತುಲತುಲಸೀಮಾಲನಂರಮಾಲೋಲನಂ । ಧೃತಕೌಸ್ತುಭೋದ್ಭಾಸನಂಪೀತವಾಸನಂ । ನುತಸಮಸ್ತಾಭರಣನಂಪುಣ್ಯಚರಿತ್ರನಂ ಕಲಿಸುಧನ್ವಂಕಂಡನು ॥ ೨೬ ॥ ಜಯಚತುರ್ಮುಖಜನಕಜಯಚಾರುಚಾರಿತ್ರ । ಜಯಚಿದಾನಂದಜಯಚೀರಾಂಬರಜ್ಞೇಯ । ಜಯಜಯಚ್ಯುತಿದೂರಜಯಚೂಡಬರ್ಹಶೋಭಿತಚೇತನಸ್ವರೂಪ ॥ ಜಯಚೈದ್ಯಮಥನಜಯಚೋದಿತಾಖಿಳಲೋಕ । ಜಯಚೌರ್ಯಕೃತಲೀಲಜಯಚಂಡಕಿರಣಶತ । ಜಯಚಕ್ರಧರಎಂದುಕೃಷ್ಣನಂಕಲಿಸುಧನ್ವಂಪೊಗಳ್ದಂಮನದೊಳು ॥ ೨೭ ॥ ಜೀಯಜಗದಂತರಾತ್ಮಕಸರ್ವಚೈತನ್ಯ । ಜೀಯಶುದ್ಧಾದ್ವಯನಿರಂಜನನಿರಾವರಣ । ಜೀಯನಿನ್ನೊಳಗೀಸಮ

ಟೀ॥ ಅತಸೀಕುಸುಮ-ಕಪ್ಪಾದ ಅಗಸ್ತ್ಯ ಪುಷ್ಪದಂತೆ, ಗಾತ್ರನುಂ-ದೇಹವುಳ್ಳವನಾದ, ಕಮಲನೇತ್ರನಂ-ಅರವಿಂದಾಕ್ಷನಾದ, ಸ್ಮಿತರುಚಿರ-ಮಂದಹಾಸದಿಂದ ಕಾಂತಿಯುಕ್ತನಾದ, ಶುಭರದನನಂ-ಮಂಗಳಕರವಾದ ದಂತಗಳುಳ್ಳವನಾದ, ಚಾರು-ಮನೋಹರವಾದ, ವದನನಂ-ಮುಖವುಳ್ಳವನಾದ, ಮೃಗಮದ-ಕಸ್ತೂರಿಯಿಂದ, ಲಸತ್-ಪ್ರಕಾಶಮಾನವಾಗಿ, ಕೃತ-ಮಾಡಲ್ಪಟ್ಟ (ಕಸ್ತೂರೀತಿಲಕದಿಂದ ಯುಕ್ತವಾದ), ಸುಲಲಾಟನಂ-ಶ್ರೇಷ್ಠವಾದ ಹಣೆಯುಳ್ಳವನಾದ, ಅಂದರೆ (ಕಸ್ತೂರೀ ತಿಲಕದಿಂ ಯುಕ್ತವಾದ ಲಲಾಟವುಳ್ಳ), ಮಣಿಕಿರೀಟನಂ-ರತ್ನಖಚಿತವಾದ ಮಕುಟವುಳ್ಳವನಾದ, ಕಂಬುಗಳದ-ಶಂಖಾಕೃತಿಯಾದ ಕುತ್ತಿಗೆಯುಳ್ಳ, ಅತುಲ-ಸಾಮ್ಯವಿಲ್ಲದ, ತುಲಸೀಮಾಲನಂ-ತುಳಸೀಹಾರವುಳ್ಳವನಾದ, ರಮಾಲೋಲನಂ-ಲಕ್ಷ್ಮೀಪತಿಯಾದ, ಧೃತ-ಧರಿಸಿರುವ, ಕೌಸ್ತುಭ-ಕೌಸ್ತುಭರತ್ನದಿಂದ, ಉದ್ಭಾಸನಂ-ಕಾಂತಿಯಿಂದೊಡಗೂಡಿದವನಾದ, ಪೀತವಾಸನಂ-ಪೀತಾಂಬರವನ್ನು ಧರಿಸಿದವನಾದ, ನುತ-ಸ್ತೋತ್ರಮಾಡಲ್ಪಟ್ಟ, ಸಮಸ್ತಾಭರಣನಂ-ಸಕಲಾಭರಣಯುತನಾದ, ಪುಣ್ಯ-ಪುಣ್ಯವನ್ನುಂಟುಮಾಡುವ, ಚರಣನಂ-ಪಾದಾರವಿಂದವುಳ್ಳ ಶ್ರೀ ಕೃಷ್ಣನನ್ನು, ಕಲಿ-ಸಮರ್ಥನಾದ, ಸುಧನ್ವಂ-ಬಿಳ್ಳಿಯ ಧನುರ್ಧಾರಿಯಾದ ಸುಧನ್ವನು, ಕಂಡನು-ನೋಡಿದನು ॥

ಅ॥ ವಿ॥ ಅಗಸ್ತ್ಯ (ತ್ಸ), ಅಗಸೆ, (ದ್ಭ), ಗಾತ್ರ-ಶರೀರ, ದಪ್ಪ, (ಕಮಲದಂತೆ-ನೇತ್ರವುಳ್ಳವನು, ಕಮಲನೇತ್ರನು) ಉ.ಬಹು.ಸ. (ಪೀತವಾದ-ವಾಸವು ಯಾರಿಗೋ, ಅವನು) ಸ.ಬಹು.ಸ. (ಕಲಿಯಾದ-ಸುಧನ್ವ, ಕಲಿಸುಧನ್ವ) ವಿ.ಪೂ.ಕ.॥೨೬॥

ಟೀ॥ ಚತುರ್ಮುಖ - ಕಮಲಾಸನನಿಗೆ, ಜನಕ-ಪಿತನಾದವನೇ ! ಜಯ - ಜಯಶೀಲನಾಗು, ಚಾರು-ಮನೋಹರವಾದ, ಚಾರಿತ್ರ-ನಡವಳಿಕೆಯುಳ್ಳವನೆ ! ಜಯ-ಜಯವನ್ನು ಹೊಂದು, ಚಿದಾನಂದ-ಜ್ಞಾನಾನಂದ ಸ್ವರೂಪನಾದವನೆ ! ಜಯ-ಜಯಶೀಲನಾಗು, ಚೀರಾಂಬರ-ನಾರು ಬಟ್ಟೆಯುಳ್ಳವನಾದ ಋಷಿಗಳಿಂದ, ಜ್ಞೇಯ-ತಿಳಿಯತಕ್ಕವನೆ, ಚ್ಯುತಿ-ನಾಶಕ್ಕೆ, ವಿದೂರ-ದೂರನಾದವನೆ ! ಜಯಜಯ - ಜಯವನ್ನು ಹೊಂದು, ಚಾರುಬರ್ಹಿ - ಮಯೂರದ ಗರಿಗಳಿಂದ, ಶೋಭಿತ-ವಿಭೂಷಿತನಾದ, ಚೇತನ-ಚೈತನ್ಯವೇ (ಶಕ್ತಿಯೆ) ಸ್ವರೂಪ-ಆಕಾರವುಳ್ಳವನೆ, (ಪರಮಾತ್ಮ ಸ್ವರೂಪನೆ), ಚೈದ್ಯ-ಶಿಶುಪಾಲನನ್ನು, ಮಥನ-ಸಂಹರಿಸಿದವನೆ ! ಜಯ-ಉತ್ಕೃಷ್ಟನಾಗಿರು, ಚೋದಿತ-ಆಜ್ಞಾಪಿಸಲ್ಪಟ್ಟ, ಅಖಿಳಲೋಕ-ಸಮಸ್ತವಾದ ಪ್ರಪಂಚಗಳುಳ್ಳವನೆ ! ಜಯ-ಸಮಸ್ತಕ್ಕೂ ಶ್ರೇಷ್ಠನಾಗಿರು, ಚೌರ್ಯಕೃತ-ಕಳ್ಳತನವನ್ನು ಮಾಡುವದರಲ್ಲಿ, (ಹಾಲು ಬೆಣ್ಣೆಗಳನ್ನು) ಲೀಲ-ವೈಭವವುಳ್ಳವನೆ! ಚಂಡ-ಕ್ರೂರವಾದ, ಕಿರಣಶತ-ನೂರು ಕಿರಣಗಳುಳ್ಳವನಿಗಿಂತ (ನೂರು ಸೂರ್ಯರಿಗಿಂತ) ಕಾಂತಿಯುಕ್ತನಾದವನೆ ! ಜಯ-ಜಯವನ್ನು ಹೊಂದು, ಚಕ್ರ-ಚಕ್ರವನ್ನು (ಸುದರ್ಶನವೆಂಬ ಚಕ್ರವನ್ನು), ಧರ-ಧರಿಸಿರುವವನೆ ! ಜಯ-ಜಯಶೀಲನಾಗು, ಎಂದ-ಎಂಬದಾಗಿ, ಕಲಿ-ಶೂರನಾದ, ಸುಧನ್ವಂ-ಸುಧನ್ವನು, ಮನದೊಳು-ಮನಸ್ಸಿನಲ್ಲಿ, ಪೊಗಳ್ದಂ-ಶ್ರೀ ಕೃಷ್ಣನನ್ನು ಹೊಗಳಿದನು ॥

ಶ್ರೀ ಕೃಷ್ಣನನ್ನು ಮುಂದೆ ಹೇಳುವಂತೆ ಸ್ತುತಿಸಿದನು ॥೨೫॥ ಮತ್ತು ಆ ಸುಧನ್ವನು ಕಪ್ಪಾದ ಅಗಸೆಯ ಹೂವಿನಂತೆ ಕಾಂತಿಯುತನಾದ, ಅರವಿಂದಾಕ್ಷನಾದ, ಮಂದಹಾಸದಿಂದ ಶೋಭಿಸುವ ದಂತಗಳುಳ್ಳವನಾದ, ಕಸ್ತೂರಿ ತಿಲಕದಿಂದ ಕೂಡಿದ ಲಲಾಟವುಳ್ಳ, ರತ್ನ ಖಚಿತವಾದ ಮುಕುಟಧರನಾದ, ಕಂಬುಕಂಠನಾದ, ಪೀತಾಂಬರಧರನಾದ, ಸಕಲಾಭರಣಯುತನಾದ, ಪುಣ್ಯಪ್ರದನಾದ ಶ್ರೀ ಕೃಷ್ಣನನ್ನು ನೋಡಿದವನಾಗಿ ॥ ೨೬ ॥ ಎಲೈ ಪದ್ಮಾಸನನಿಗೆ ಪಿತನಾದ, ಮನೋಹರಶೀಲನಾದ (ಪುಣ್ಯಪ್ರದನಾದ) ಜ್ಞಾನಾನಂದಮೂರ್ತಿಯಾಗಿಯೂ, ಮಹರ್ಷಿಗಳ ಸೇವೆಗೆ ವಿಷಯನಾದವನಾಗಿಯೂ, ಜರಾಮರಣಗಳಿಲ್ಲದವನಾಗಿಯೂ, ಮಯೂರಬರ್ಹದಿಂ ಶೋಭಿತನಾಗಿಯೂ, ಚೈತನ್ಯಸ್ವರೂಪನಾಗಿಯೂ, ಶಿಶುಪಾಲನನ್ನು ಸಂಹರಿಸಿದವನಾಗಿಯೂ, ಸಮಸ್ತಲೋಕಗಳು, ಸಪ್ತಜಲಧಿಗಳು, ಮುಂತಾದವುಗಳನ್ನು ತನ್ನ ಅಂತರಂಗದಲ್ಲಿ ಕೂಡಿದವನಾಗಿಯೂ, ಹಾಲು, ಮೊಸರು, ಬೆಣ್ಣೆ ಮುಂತಾದವನ್ನು ಕದ್ದ ವೈಭವವುಳ್ಳವನಾಗಿಯೂ, ಸುದರ್ಶನ ಚಕ್ರವನ್ನು ಧರಿಸಿದವನಾಗಿಯೂ, ಇರುವ

ಸ್ತಮಧ್ಯಸ್ಥವಾಗಿದೆನೀನೆಸತ್ಯರೂಪ ‖ ಜೀಯನಾರಾಯಣಮುಕುಂದಮಾಧವಕೃಷ್ಣ | ಜೀಯಚಕ್ರಿಯೆಪೀತವಾಸಲಕ್ಷ್ಮೀಲೋಲ | ಜೀಯಸರ್ವಸ್ವತಂತ್ರನೆಬಿಡಿಸುಸಂಸಾರಪಾಶದಿಂದೆನ್ನನೆಂದು ‖೨೮‖ ಭಯಭರಿತಭಕ್ತಿಯಿಂಭಾವಿಸಿದನಾಜಗನ್ಮಯನಂಬಳಿಕದೇವಕೇಳ್ನಿನ್ನಸರ್ವಜ್ಞ | ತೆಯನೆನಗೆತೋರಿಸಿದೆಲೇಸಾಯ್ತುನಿನ್ನಕೃಪೆಯಿಲ್ಲದೊಡೆಪಾಂಡವರ್ಗೆ ‖ ಜಯ

---

ಅ‖ ವಿ‖ (ಚತುರ್ಮುಖ) ಬಹು. ಸ. (ಚಿತ್+ಆನಂದ=ಚಿದಾನಂದ) ಜ. ಸಂಧಿ. (ಚಿದಂಬರ) ಬಹು. ಸ. ಜನಕ–ತಂದೆ, ಜನಕರಾಯ, ಮುಖ (ತ್ಸ). ಮೊಗ (ದ್ಭ). ಜಯ–ಗೆಲವು, ಸಂವತ್ಸರ, ವಿಷ್ಣುವಿನ ದ್ವಾರಪಾಲಕ. ‖೨೭‖

ಟೀ‖ ಜಗದಂತರಾತ್ಮಕ, ಜಗತ್–ಲೋಕಕ್ಕೆ, (ಸ್ಥಾವರ ಜಂಗಮಾತ್ಮಕವಾದೀ ಪ್ರಪಂಚಕ್ಕೆ) ಅಂತರ–ಅಂತರಂಗದ, ಆತ್ಮಕ–ಆತ್ಮ ಸ್ವರೂಪನಾದವನೆ! (ಪ್ರತ್ಯಕ್ಷ ಭೂತನಾದವನೆ) ಸರ್ವಚೈತ್ಯನ್ಯ–ಸಕಲವಾದ ಪ್ರಾಣಿಗಳ ಚೇತನ ಸ್ವರೂಪನಾದವನೆ! ಶುದ್ಧಾದ್ವಯ– ಪರಿಶುದ್ಧವಾದ (ನಿರ್ವಿಶೇಷವಾದ) ಆವಿರ್ಭದ - ಗುಣದೋಷಗಳಿಲ್ಲದ, ಅದ್ವಯ– ಆತ್ಮಗಳ ಭೇದವಿಲ್ಲದವನೆ! ನಿರಂಜನ– ನಿರ್ಲಿಪ್ತನಾದವನೆ! ನಿರಾವರಣ–ಆವರಣ ರಹಿತನಾದವನೆ! ಎಂದರೆ (ಅಜ್ಞಾನಾದಿ ಅಂಧತೆಯಿಲ್ಲದವನೆ), ಜೀಯ–ಕಾಮ ಕ್ರೋಧಾದಿ ಅರಿಷಡ್ವರ್ಗಗಳನ್ನು ಜಯಿಸಿದವನೆ! ನಿನ್ನೊಳಗೆ–ನಿನ್ನ ಅಂತರಂಗದಲ್ಲಿ, ಈ ಸಮಸ್ತಂ–ಈ ಸಕಲವಾದೀ ಲೋಕವೆಲ್ಲವೂ, ಅಧ್ಯಸ್ತವಾಗಿ–ಪ್ರಕಾಶಿಸತಕ್ಕದಾಗಿ, ಇದೆ–ಇರುವುದು, ಜೀಯ–ಎಲೈ ಪ್ರಭುವೇ! ನೀನೆ–ಸರ್ವ ಚೈತನ್ಯ ಸ್ವರೂಪನಾದ ನೀನೊಬ್ಬನೇ, ಸತ್ಯರೂಪ–ನಿಜಗುಣ ಸ್ವರೂಪನು, ಜೀಯ–ಮಾಯಾ ಸ್ವರೂಪವನ್ನು ಜಯಿಸಿದವನೆ, ನಾರಾಯಣ– ಕ್ಷೀರ ಸಮುದ್ರವೇ ವಾಸಸ್ಥಾನನಾದವನೆ, ಮುಕುಂದ - ಮುಕ್ತಿದಾಯಕನೆ, ಮಾಧವ–ರಮಾಪತಿಯೇ, ಕೃಷ್ಣ–ಸಂಸಾರ ಬಂಧದಿಂದ ನಿನ್ನ ಕಡೆಗೆ ಆಕರ್ಷಣ ಮಾಡತಕ್ಕವನೆ, ಜೀಯ–ಎಲೈ ಸ್ವಾಮಿಯೆ, ಚಕ್ರಿಯೆ–ಚಕ್ರಧರನಾದವನೆ, ಪೀತವಾಸ – ಪೀತಾಂಬರಧಾರಿಯೆ, ಲಕ್ಷ್ಮೀಲೋಲ– ಲಕ್ಷ್ಮೀದೇವಿಯಲ್ಲಿ ಆಸಕ್ತನೆ, ಸರ್ವ ಸ್ವತಂತ್ರ– ಪರರಧೀನನಲ್ಲದವನೆ, ಜೀಯ–ಎಲೈ ಮಹಾನುಭಾವನಾದ ಶ್ರೀಕೃಷ್ಣಮೂರ್ತಿಯೆ, ಎನ್ನಂ–ನನ್ನನ್ನು, ಸಂಸಾರ ಪಾಶದಿಂದೆ–ಈ ಅಶಾಶ್ವತವಾದ ಸಂಸಾರ ಬಂಧದಿಂದ, ಬಿಡಿಸು–ಬೇರೆಮಾಡು, (ಮುಕ್ತಿಯನ್ನು ದಯೆಪಾಲಿಸು) ಎಂದು–ಎಂಬದಾಗಿ, ಪ್ರಾರ್ಥಿಸಿದನು ‖

ಅ‖ ವಿ‖ (ನಿರ್–ಆವರಣ) ಅ. ಸಮಾಸ. (ಮಾ–ಲಕ್ಷ್ಮಿಯ, ಧವ–ಗಂಡ). ಸಂಸಾರ ಬಂಧ–ಜನನ ಮರಣಾದಿಗಳಿಂದ ಯುಕ್ತವಾದುದು, (ಧರ್ಮ, ಅರ್ಥ, ಕಾಮ, ಮೋಕ್ಷ ಇವುಗಳು. ಚತುರ್ವಿಧ ಫಲಗಳು) ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯ ಇವು ಅರಿಷಡ್ವರ್ಗಗಳು, ಕೃಷ್ಣ–ಕಪ್ಪು ಬಣ್ಣ, ವಿಷ್ಣು, ಅರ್ಜುನ, ಪರಮಾತ್ಮ, ಕೃಷ್ಣಪಕ್ಷ, ಸೂರ್ಯ, ಬೆಂಕಿ. ‖೨೮‖

ಟೀ‖ ಭಯ–ಹೆದರಿಕೆಯಿಂದ, ಭರಿತ–ತುಂಬಲ್ಪಟ್ಟ, ಭಕ್ತಿಯಲಿ–ಸೇವೆಯಿಂದ, ಆ ಜಗನ್ಮಯನಂ–ಸರ್ವಾಂತರ್ಯಾಮಿಯಾದ ಕೃಷ್ಣನನ್ನು, ಭಾವಿಸಿದನು–ಚಿಂತಿಸಿದನು (ಧ್ಯಾನಮಾಡಿದನು), ಬಳಿಕ–ಅನಂತರ, ದೇವ–ಎಲೈ ಸ್ವಾಮಿಯೆ, ಕೇಳ್–ಲಾಲಿಸು, ನಿನ್ನ–ನಿನ್ನಯ, ಸರ್ವಜ್ಞತೆಯನು–ಈ ಪ್ರಾಪಂಚಿಕ ವ್ಯಾಪಾರಾದಿಗಳ ತಿಳುವಳಿಕೆಯನ್ನು, ಎನಗೆ–ನನಗೆ, ತೋರಿಸಿದೆ–ಪ್ರತ್ಯಕ್ಷಮಾಡಿದವನಾದೆ, ಲೇಸಾಯ್ತು–ಬಹು ಉತ್ತಮವಾಯಿತು, ನಿನ್ನ–ನಿನ್ನಯ, ಕೃಪೆ–ದಯೆಯು, ಇಲ್ಲದೊಡೆ–ಇಲ್ಲದೆ ಹೋದಲ್ಲಿ, ಪಾಂಡವರ್ಗೆ–ಧರ್ಮರಾಯಾದಿಗಳಿಗೆ, ಲೋಕದೋಳ್–ಈ ಪೃಥ್ವಿಯಲ್ಲಿ, ಜಯಂ–ಗೆಲುವು, ಎತ್ತಣದು–ಎಲ್ಲಿಂದ ಆಗುತ್ತಲಿತ್ತು, ಸಾಕು–ಬಿಡು, ಅದಂತಿರಲಿ–ಆ ವಿಷಯ ಹಾಗಿರಲಿ, ಬಯಲಭಂಜನೆ–ಕೆಲಸಕ್ಕೆ ಬಾರದ ಕಾಳಗವು, ಬೇಡ–ಬೇಕಾಗಿಲ್ಲವು, ಅರ್ಜುನನು–ಪಾರ್ಥನು, ನಿನ್ನ ಮುಂದೆ–ನಿನ್ನ ಎದುರಾಗಿ, ಎನ್ನ ಮೇಲೆ–ನನ್ನಲ್ಲಿ, ಒಂದು ಪ್ರತಿಜ್ಞೆಯಂ–

---

ನಾದ ಶ್ರೀ ಕೃಷ್ಣನನ್ನು ಧ್ಯಾನಿಸಿದವನಾಗಿ ‖೨೭‖ ಸ್ಥಾವರಜಂಗಮಾತ್ಮಕವಾದೀ ಪ್ರಪಂಚಕ್ಕೆ ಪ್ರತ್ಯಕ್ಷ ದರ್ಶಿಯಾಗಿಯೂ, ಸಕಲ ಪ್ರಾಣಿಗಳ ಅಂತರ್ಯಾಮಿಯಾಗಿಯೂ, ಜ್ಞಾನಾಜ್ಞಾನ ದೋಷಗಳಿಲ್ಲದವನಾಗಿಯೂ, ಸುಖ ದುಃಖಾದಿಗಳೂ ಜರಾಮರಣಾದಿಗಳೂ ಭೇದಾಭೇದಗಳೂ ಇಲ್ಲದವನಾಗಿಯೂ, ಮಾಯಾಸ್ವರೂಪನಾಗಿಯೂ, ಸಂಸಾರ ಬಂಧದಿಂದ ತನ್ನ ಭಜಕರನ್ನು ಬಿಡುಗಡೆ ಮಾಡಿಸತಕ್ಕವನಾಗಿಯೂ, ಕ್ಷೀರ ಸಮುದ್ರಶಾಯಿಯಾಗಿಯೂ, ರಮಾಪತಿಯಾಗಿಯೂ, ಮುಕ್ತಿಪ್ರದನಾಗಿಯೂ, ಕಳಂಕರಹಿತನಾಗಿಯೂ, ಶಂಖಚಕ್ರಾದಿಯುತನಾಗಿಯೂ, ಅರಿಷಡ್ವರ್ಗಗಳನ್ನು ಜಯಿಸಿದವನಾಗಿಯೂ ಇರುವ ಎಲೈ ಸ್ವಾಮಿಯೆ! ನನ್ನನ್ನು ಈ ಅಶಾಶ್ವತವಾದ ಪ್ರಪಂಚದಿಂದ ಬೇರ್ಪಡಿಸಿ ಸಲಹೆಂದು ಸ್ತುತಿಸಿ ‖೨೮‖ ಬಹು ಭಯಭಕ್ತಿಯುತನಾಗಿ, ಸರ್ವಾಂತರ್ಯಾಮಿಯಾದ ಶ್ರೀ ಕೃಷ್ಣನನ್ನು ಮನದೋಳ್ಧ್ಯಾನಿಸಿ, ಎಲೈ ಸ್ವಾಮಿಯೆ! ಲಾಲಿಸು, ಈ ಪ್ರಾಪಂಚಿಕ ವ್ಯಾಪಾರಾದಿಗಳೆಲ್ಲವನ್ನು ನನಗೆ ಮನವರಿಕೆ ಮಾಡಿದವನಾದೆ, ಬಹು ಸಂತೋಷವಾಯಿತು, ನಿನ್ನ ಕೃಪೆಯಿಲ್ಲದಿದ್ದಲ್ಲಿ ಈ ಪಾಂ

ಮೆತ್ತಣದುಲೋಕದೊಳ್ಪಾಕದಂತಿರಲಿ । ಬಯಲಭಂಜನೆಬೇಡನೂಡಲೊಂದುಪ್ರತಿ । ಜ್ಞೆಯನರ್ಜುನಂನಿನ್ನಮುಂದೆನ್ನ ವೇಳೆನುತ್ತಾಸುಧನ್ವಂನುಡಿದನು ॥೨೯॥ ಅರ್ಜುನಂಕೇಳ್ದನೆಲೆಮರುಳೆನೋಡಾದೊಡಿ । ನ್ನಾರ್ಜಿಸಿದಸುಕೃತವೆಳ್ಳನಿತಿಲ್ಲದಿಹ ಪುಣ್ಯ । ವರ್ಜಿತನಲೋಕಮಾಗಲಿತನಗೆನಿನ್ನತಲೆಯಂಮೂರುಬಾಣದಿಂದ । ನಿರ್ಜರರ್ಮೆಚ್ಚಲರಿಯದೊಡೆಂದುನುಡಿಯಲ್ಕೆ । ದುರ್ಜಯನಿವಂನಿನಗೆಸಾಧ್ಯನಲ್ಲೆಂದುಹರಿ । ಗರ್ಜಿಸಿದನಾಪಾರ್ಥನಂಬಳಿಕಹಂಸಧ್ವಜನತನಯನಿಂತೆಂದನು ॥೩೦॥ ಗರ್ವದಿಂ ನುಡಿದೆಲಾಪಾರ್ಥಕೃಷ್ಣನಮುಂದೆ । ಗೀರ್ವಾಣರೆಲ್ಲರುಂನೋಡುತಿರಲೀಗನೀಂ। ಸರ್ವಶಕ್ತಿಯೊಳೆಸೆವಮೂರುಬಾಣಂಗಳಂನಡು ವೆಖಂಡಿಸದಿರ್ದೊಡೆ ॥ ಉರ್ವಿಯೋಳ್ಪಾತಕಿಗಳಾಗಿರ್ದವರಗತಿಗ । ಡರ್ವೆನೆಂದಾಸುಧನ್ವಂಬಳಿಕಮೇದಿನಿಯ । ದುರ್ವಿನಿಂತೆಗೆದೆಚ್ಚಡರ್ಜುನನತೇರೊಂದುಪಲ್ಯಮಾತ್ರಂತೊಲಗಲು ॥೩೧॥ ತೇರ್ಮುಗುಳ್ದಳಪಿಯಂತೊಲಗಿಬೆಂಡಾಗಿನಾಂ । ನೂರ್ಮೊಳಂಪೋಗ

---

ಒಂದು ಹಠ (ಶಪಥವನ್ನು) ವನ್ನು, ಮಾಡಲಿ–ಮಾಡುವನಾಗಲಿ, ಎಂದು–ಎಂಬದಾಗಿ, ಆ ಸುಧನ್ವಂ–ಆ ಸುಧನ್ವನು, ನುಡಿದನು–ಹೇಳಿದನು.

ಅ॥ ವಿ॥ (ಭಯದಿಂದ+ಭರಿತ=ಭಯಭರಿತ) ತೃ. ತ. ಭಕ್ತಿ (ತ್ಸ) ಬಕುತಿ (ದ್ಭ) ಜಗತ್+ಮಯ = ಜಗನ್ಮಯ ಅನು. ಸಂ. ಚಿತ್+ಆನಂದ=ಚಿದಾನಂದ ಜ. ಸಂಧಿ. ॥೨೯॥

ಟೀ॥ ಅರ್ಜುನಂ–ಪಾರ್ಥನು, ಇದಂ–ಈ ಸುಧನ್ವನು ಪೇಳ್ದ ವಚನಮಂ, ಕೇಳ್ದ–ಆಲಿಸಿದನು, ಎಲೆ ಮರುಳೆ–ಎಲಾ ಮೂಢನೆ, ಆದೊಡೆ–ಹಾಗಾದ ಪಕ್ಷದಲ್ಲಿ, ಇನ್ನು–ಇನ್ನು ಮುಂದೆ, ನೋಡು–ಈಕ್ಷಿಸು, ನಿರ್ಜರರ್–ದೇವತೆಗಳು, (ಮುಪ್ಪಿಲ್ಲದವರು) ಮೆಚ್ಚಲು–ಒಪ್ಪಿಕೊಳ್ಳಲು, ನಿನ್ನ ತಲೆಯಂ–ನಿನ್ನಯ ಶಿರಸ್ಸನ್ನು, ಮೂರು ಬಾಣದಿಂದ–ಮೂರಂಬುಗಳಿಂದ, ಅರಿಯದೊಡೆ–ಛೇದಿಸದಿದ್ದರೆ, ಆರ್ಜಿಸಿದ–ಗಳಿಸಿಟ್ಟ, ಸುಕೃತಂ–ಪುಣ್ಯವು, ಎಳ್ಳನಿತಿಲ್ಲದಿಹ–ಒಂದು ಎಳ್ಳುಕಾಳಷ್ಟೂ ಇಲ್ಲದಿರುವ, ಪುಣ್ಯವರ್ಜಿತನ–ಪುಣ್ಯ ವಿಹೀನನಿಗೆ (ಪಾಪಿಷ್ಠನಿಗೆ) ಆಗತಕ್ಕ, ಲೋಕಂ–ದುಃಖಕ್ಕೆ ಆವಾಸವಾದ ನರಕವು, ಆಗಲಿ–ಸಂಭವಿಸಲಿ, ಎಂದು–ಎಂಬದಾಗಿ, ನುಡಿಯಲ್ಕೆ–ತಿಳಿಯಿಸಲಾಗಿ, (ಆಡಲಾಗಿ) ಇವಂ–ಈ ಸುಧನ್ವನು, ದುರ್ಜಯಂ–ಗೆಲ್ಲಲು ಅಸಾಧ್ಯನು, ನಿನಗೆ ಸಾಧ್ಯಂ ಅಲ್ಲ–ನಿನಗೆ ಸ್ವಾಧೀನನಾಗತಕ್ಕವನಲ್ಲ, (ನೀನು ಅವನನ್ನು ಸೋಲಿಸಲಾರೆ) ಎಂದು–ಎಂಬದಾಗಿ, ಹರಿ–ಶ್ರೀ ಕೃಷ್ಣನು, ಆ ಪಾರ್ಥನಂ–ಆ ಫಲುಗುಣನನ್ನು ನೋಡಿ, ಗರ್ಜಿಸಿದನು–ಹೆದರಿಸಿದನು, (ಕೂಗಿಕೊಂಡನು) ಬಳಿಕ–ಅನಂತರ, ಹಂಸಧ್ವಜನತನಯಂ–ಮರಾಳಧ್ವಜನ ಮಗನಾದ ಸುಧನ್ವನು, ಇಂತೆಂದನು–ಈ ರೀತಿಯಾಗಿ ಆಡಿದನು ॥

ಅ॥ ವಿ॥ (ಸುಷ್ಠು+ಕೃತ = ಸುಕೃತ) ವಿ. ಪೂ. ಕ. (ಜರೆಯಿಲ್ಲದವರು – ನಿರ್ಜರರು) ಬ. ಸ. ಪೃಥೆಯ ಮಗ ಪಾರ್ಥ. ॥೩೦॥

ಟೀ॥ ಎಲಾ–ಎಲೈ ಫಲುಗುಣನೆ, ಕೃಷ್ಣನಮುಂದೆ–ಶ್ರೀ ಕೃಷ್ಣನ ಎದುರಾಗಿ, ಗರ್ವದಿಂ–ಅಹಂಕಾರದಿಂದ, ನುಡಿದೆ–ಆಡಿಬಿಟ್ಟೆ, ಈಗ–ಈ ಸಮಯದಲ್ಲಿ, ಗೀರ್ವಾಣರೆಲ್ಲರುಂ–ಸುರರೆಲ್ಲರೂ, ನೋಡುತಿರಲಿ–ನೋಡುತ್ತಿರುವವರಾಗಲಿ, ನೀಂ–ನೀನು, ಸರ್ವಶಕ್ತಿಯೊಳು–ಸಮಸ್ತ ಬಲದಿಂದಲೂ, ಎಸೆವ–ಹೊಡೆಯುವ, ಮೂರು ಬಾಣಂಗಳಂ–ಮೂರು ಅಂಬುಗಳನ್ನು, ನಡುವೆ–ಅವು ಬರುವ ಮಧ್ಯದಾರಿಯಲ್ಲಿ, ಕತ್ತರಿಸದಿರ್ದೊಡೆ–ತುಂಡುಮಾಡದೆ ಹೋದರೆ, ಉರ್ವಿಯೋಳ್–ಭೂಮಂಡಲದಲ್ಲಿ, ಪಾತಕಿಗಳಾಗಿರ್ದವರ–ಪಾಪಾತ್ಮರಾಗಿರತಕ್ಕವರ, ಗತಿಗೆ–ಮಾರ್ಗಕ್ಕೆ, (ನರಕಕ್ಕೆ) ಅಡರ್ವೆಂ–ಹತ್ತುವೆನು, (ಹೊಂದುವೆನು) ಎಂದು–ಎಂಬದಾಗಿಹೇಳಿ, ಆಸುಧನ್ವಂ–ಆ ಹಂಸಧ್ವಜನ ಮಗನಾದ ಸುಧನ್ವನು, ಬಳಿಕ–ಅನಂತರ, ಮೇದಿನಿಯು–ಪಾರ್ಥಸಿದ್ಧ ಪೃಥ್ವಿಯನ್ನು, ಉರ್ವಿನಿಂ–ಶೀಘ್ರದಿಂದ, ತೆಗೆದೆಚ್ಚಡೆ–ಕಿವಿಸರಿಯುಂತವೂ ಎಳೆದು ಬಿಡಲು, ಅರ್ಜುನನ–ಪಾರ್ಥನ, ತೇರು–ವರೂಥವು, ಒಂದು ಪಲ್ಯಮಾತ್ರಂ–ನಾನೂರು ಮೊಳದವರೆಗೂ, ತೊಲಗಿತು–ನೂಕಿಕೊಂಡು ಹೋಯಿತು.

---

ಡವರಿಗೆ ಈ ಪ್ರಪಂಚದಲ್ಲಿ ಗೆಲುವೆಲ್ಲಿಂದ ಬಂದೀತು, ಅದಂತಿರ್ಕುಮೆ, ಈ ಅರ್ಜುನನು ನಿನ್ನೆದುರಿಗೆ ನನ್ನೊಡನೆ ಯಾವುದಾದರೊಂದು ಪ್ರತಿಜ್ಞೆಯಂ ಗೆಯ್ಯಲಿ, ಎಂದು ಹೇಳಲಾಗಿ ॥೨೯॥ ಆ ಮಾತಂ ಪಾರ್ಥನು ಆಕರ್ಣಿಸಿ, ಎಲೈ ಅವಿವೇಕಿಯೆ! ನೀನು ಹೇಳಿದಂತೆ ಆಗಬಹುದು, ಇಲ್ಲಿ ನೋಡು, ಸ್ವರ್ಗವಾಸಿಗಳಾದ ದೇವಾದಿದೇವತೆಗಳು ಮೆಚ್ಚುವಂತೆ ನಿನ್ನ ತಲೆಯನ್ನು ಮೂರು ಬಾಣಗಳಿಂದ ಕತ್ತರಿಸದಿದ್ದರೆ ಈ ಪ್ರಪಂಚದಲ್ಲಿ ಒಂದು ಎಳ್ಳುಕಾಳಿನಷ್ಟಾದರೂ ಪುಣ್ಯಾರ್ಜನೆ ಮಾಡದಿರುವನಗತಿ ನನಗಾಗಲೆಂದು ಹೇಳಲು, ಆಗ ಶ್ರೀ ಕೃಷ್ಣನು! ಅರ್ಜುನನನ್ನು ನೋಡಿ ಎಲಾ ಅರ್ಜುನ! ಈ ಸುಧನ್ವನು ಮಹಾ ಸಮರ್ಥನು, ಹರಿಭಕ್ತರಲ್ಲಿ ಅಗ್ರೇಸರನು ಇವನನ್ನು ಜಯಿಸುವುದು ನಿನಗೆ ಸಾಧ್ಯವಲ್ಲ, ಎಂದು ಹೇಳಿದ್ದ ಬಳಿಕ ಆ ಸುಧನ್ವನು ಅರ್ಜುನನನ್ನು ಕುರಿತು ॥ ೩೦ ॥ ಎಲಾ ಅರ್ಜುನ! ಶ್ರೀ ಕೃಷ್ಣನ ಮುಂದೆ ಗರ್ವದಿಂದ ಪ್ರತಿಜ್ಞೆ ಮಾಡಿದೆ ಆಗಲಿ, ನೀನು ನಿನ್ನ ಸರ್ವಶಕ್ತಿ

ಳ್ಕೆತಲೆದೂಗಿಮುರಹರಂ । ಕಾರ್ಮೊಳಗುವಂತಿರೆಸುಧನ್ವಂಕೊಂಡಾಡಿನೋಡಿಪಾರ್ಥನಮೊಗವನು ॥ ಘೂರ್ಮಿಸಿದನಂದಿನಜಯದ್ರಥನಕಥೆಬಂದು । ದಾರ್ಮುಳಿದೊಡಂಮಣಿವನಲ್ಲಮೇಣಿವನೊಡನೆ । ಮಾರ್ಮಲೆವರಿಲ್ಲನೀನೆನ್ನೊಳಾಲೋಚಿಸದೆನುಡಿದೆಭಾಷೆಯನೆಂದನು ॥ ೩೨ ॥ ಇವನೇಕಪತ್ನೀವ್ರತಸ್ಥನಾಗಿಹುದರಿಂ । ತವೆತಾತನಾಜ್ಞೆಯಂಪಾಲಿಸುತಬಹುದರಿಂ । ಕವಲಿಲ್ಲದೆಂಮನರ್ಚಿಪಭಕ್ತನಹುದದರಿಂದಲಜಭವಸುರೇಶ್ವರರ್ಗೆ । ಬವರದೋಳ್ಮಣಿವನಲ್ಲಂನಿನ್ನಶೌರ್ಯಮುಂ । ಜವಗೆಡಿಸಿನಮ್ಮನುರೆಬಳಲಿಸು

---

ಅ॥ ವಿ॥ ಗೀರ್ವಾಣ-ಸಂಸ್ಕೃತ, ಗೀರ್ವಾಣರ್-ದೇವತೆಗಳು, ಗೀರ್ವಾಣಿ-ಶಾರದೆ. ॥ ೩೧ ॥

ಟೀ॥ ತೇರು-ಅರ್ಜುನನ ವರೂಥವು, ಮಗುಳ್ದು-ಕೆಳಗು ಮೇಲಾಗಿ ಬಿದ್ದುಹೋಗಿ, ಅಳವಿಯಂ-ಬೇರೆಯಾದ ರೀತಿಯಿಂದ, ತೊಲಗಿ-ನೂಕಿಕೊಂಡು ಹೋಗಿ, ಬೆಂಡಾಗಿ-ಸತ್ವವಿಲ್ಲದ್ದಾಗಿ, ಎಂದರೆ (ಬಿಗಿತವು ಕಡಿಮೆಯಾಗಿ ಹೋಗಿ) ನಾನೂರ್ಮೊಳಂ-ನಾಲ್ಕುನೂರು ಮೊಳದ ಪರಿಯಂತವೂ, ಪೋಗಲ್ಕೆ-ಹೊರಟು ಹೋಗಲಾಗಿ, ಮುರಹರಂ-ಶ್ರೀ ಕೃಷ್ಣನು, ತಲೆದೂಗಿ-ತಲೆಯನ್ನು ಅಲ್ಲಾಡಿಸಿ, ಕಾರು-ವರ್ಷಾಕಾಲದ ಮೇಘವು, ಮೊಳಗುವಂತಿರೆ - ಗುಡುಗುವ ರೀತಿಯಲ್ಲಿರಲಾಗಿ, ಸುಧನ್ವಂ-ಸುಧನ್ವನನ್ನು ಸ್ತುತಿಸಿ, ಪಾರ್ಥನಮೊಗವನು-ಫಲುಗುಣನ ಮುಖವನ್ನು, ನೋಡಿ- ಈಕ್ಷಿಸಿ, ಘೂರ್ಮಿಸಿದಂ-ತಲೆಯನ್ನಲ್ಲಾಡಿಸಿದನು, ಅಂದಿನ-ಪೂರ್ವದಲ್ಲಿ ನಡೆದ ಭಾರತಯುದ್ಧದಲ್ಲಿ ಬಂದ, ಜಯದ್ರಥನ-ಸೈಂಧವ ರಾಜನ, ಕಥೆ-ಸಮಾಚಾರವು, ಬಂದುದು-ಪ್ರಾಪ್ತಮಾದುದು, ಆರ್ಮುಳಿದೊಡಂ-ಯಾರು ಸಿಟ್ಟುಮಾಡಿಕೊಂಡಾಗ್ಯಾದರೂ, ಮಣಿವನು-ಸಮಸ್ಕರಿಸತಕ್ಕವನು (ಬಾಗತಕ್ಕವನು), ಅಲ್ಲ-ಆಗಿರುವುದಿಲ್ಲ, ಮೇಣ್ - ಮತ್ತು, ಇವನೊಡನೆ-ಈ ಮರಾಳಧ್ವಜನ ಮಗನಾದ ಸುಧನ್ವನ ಸಂಗಡ, ಮಾರ್ಮಲೆವರ್ ಇಲ್ಲ-ಪ್ರತಿಭಟಿಸಿ ಯುದ್ಧಕ್ಕೆ ನಿಲ್ಲುವವರುಂ ಇಲ್ಲ-ಇರುವುದಿಲ್ಲ, ನೀಂ-ನೀನು, ಎನ್ನೊಳು-ನನ್ನೊಡನೆ, ಆಲೋಚಿಸದೆ-ಯೋಚನೆ ಮಾಡದೆ, ಭಾಷೆಯಂ-ಶಪಥವನ್ನು, ನುಡಿದೆ-ಆಡಿಬಿಟ್ಟೆ, ಎಂದನು-ಕೃಷ್ಣನು ಈ ರೀತಿ ಹೇಳಿದನು ॥

ಅ॥ ವಿ॥ ತೆರು-ದಂಡಕೊಡು, ತೇರ್-ರಥ. ಅಳವಿ-ಯುದ್ಧ, ಭೂಮಿ, (ತಲೆಯಂ-ತೂಗು), ತಲೆತೂಗು), ಕ್ರಿ. ಸ. ತಲೆ+ತೂಗು=ತಲೆದೂಗು, ದ. ಆ. ಸಂ. ॥ ೩೨ ॥

ಟೀ॥ ಪಾರ್ಥ-ಎಲೈ ಅರ್ಜುನ! ಇವಂ-ಈ ಸುಧನ್ವನು, ಏಕಪತ್ನಿ-ತನ್ನ ಹೆಂಡತಿಯೊಬ್ಬಳಲ್ಲಿ, ವ್ರತಸ್ಥಂ-ನಿಯಮವುಳ್ಳವನು, ಆಗಿಹುದರಿಂದ-ಆಗಿರುತ್ತಾನಾದ್ದರಿಂದಲೂ, ಮೇಣ್-ಇನ್ನೂ, ತವೆ-ಚನ್ನಾಗಿ, ತಾತನ-ತಂದೆಯಾದ ಹಂಸಕೇತುವಿನ, ಆಜ್ಞೆಯಂ-ಅನುಮತಿಯನ್ನು, ಪಾಲಿಸುತ-ಪೊರೆಯುತ್ತ, ಬಹುದರಿಂ- ಬರುತ್ತಿರುವುದರಿಂದಲೂ, ಕವಲಿಲ್ಲದೆ-ಬೇರೆ ಬುದ್ಧಿಯಿಲ್ಲದೆ (ತದೇಕಧ್ಯಾನದಿಂದ), ಎಮ್ಮನು - ನಮ್ಮನ್ನು, ಅರ್ಚಿಪ - ಪೂಜೆಮಾಡತಕ್ಕ, ಭಕ್ತ-ಭಜಕನು, ಆಹುದರಿಂ-ಆಗಿರುವದರಿಂದಲೂ, ಅಜಭವಸುರೇಶ್ವರರ್ಗೆ-ಬ್ರಹ್ಮ, ಈಶ್ವರ, ಇಂದ್ರಾದಿಗಳಿಗೆ, ಬವರದೋಳ್-ಯುದ್ಧದಲ್ಲಿ, ಮಣಿವವನು-ಸೋತು ನಮಸ್ಕಾರ ಮಾಡತಕ್ಕವನು, (ಶರಣಾಗತನಾಗತಕ್ಕವನು). ಅಲ್ಲ - ಆಗಿರುವದಿಲ್ಲ, ನಿನ್ನ-ನಿನ್ನಯ, ಶೌರ್ಯ-ಆಟೋಪವನ್ನು, ಜವಗೆಡಿಸಿ - ಹಿಯ್ಯಾಳಿಸಿ, ನಮ್ಮಂ - ನಮ್ಮನ್ನು, ಉರೆ-ಬಹುವಾಗಿ, ಬಳಲಿಸುವ - ಆಯಾಸಪಡಿಸುವ, ಧೈರ್ಯಮುಂ - ದಿಟ್ಟತನವನ್ನು, ಭುವನತ್ರಯಮುಂ - ಸ್ವರ್ಗ, ಮರ್ತ್ಯ, ಪಾತಾಳಗಳೆಂಬೀ ಮೂರು ಲೋಕಗಳನ್ನು, ಅಂಜಿಸುವ-ಹೆದರಿಸುವ, ವಿಪುಲ-ಹೆಚ್ಚಾದ, ವೀರ್ಯಮುಂ-ಶೌರ್ಯವನ್ನು, ನೋಡೆಂದು-ಈಕ್ಷಿಸೆಂಬದಾಗಿ, ಹರಿ-ಶ್ರೀ ಕೃಷ್ಣನು, ನುಡಿದನು-ಆಡಿದನು ॥

ಅ॥ ವಿ॥ ಆಜ್ಞೆ (ತ್ಸ). ಆಣೆ (ದ್ಭ). ಪತ್ನೀ - ಈಕಾರಾಂತ ಸ್ತ್ರೀಲಿಂಗ. ಪತಿ - ಪುಲ್ಲಿಂಗ. ಭಕ್ತ (ತ್ಸ). ಬಹು

---

ಯಿಂದ ನನ್ನಮೇಲೆ ಬಿಡುವ ಮೂರು ಬಾಣಂಗಳಂ ದೇವಾದಿ ದೇವತೆಗಳೆಲ್ಲರೂ ಪ್ರೇಕ್ಷಿಸುತ್ತಲಿರುವಂತೆಯೇ ನಡುವೆ ಛೇದಿಸದಿದ್ದರೆ ಭೂಮಿಯಲ್ಲಿರುವ ಪಾಪಾತ್ಮರಗತಿಗೆ ನಾನೂ ಭಾಗಿಯಾಗಿರುವೆನೆಂದು ಬಾಣಪ್ರಯೋಗಮಾಡಲು ಅರ್ಜುನನ ವರೂಥವು ನಾನೂರು ಮೊಳದಷ್ಟುದೂರ ಹಿಂದಕ್ಕೆ ಹೋಯಿತು ॥ ೩೧ ॥ ಕೂಡಲೆ ಅರ್ಜುನನ ರಥವು ನಾನೂರ್ಮೊಳದ ಹಿಂಹಕ್ಕೆ ಹೋಗಿ ಮೇಲುಕೆಳಗಾಗಲು, ಶ್ರೀ ಕೃಷ್ಣನು ಸುಧನ್ವನಂ ಕಂಡು ತಲೆದೂಗಿ, ವರ್ಷಾಕಾಲದ ಮೇಘವು ಮೊಳಗುವಂತೆಯಿರಲು ಎಲಾ ಪಾರ್ಥ! ಭಾರತಯುದ್ಧಕಾಲದಲ್ಲಿದ್ದ ಸೈಂಧವ ಕಥೆಯು ಅನುಸರಿಸಿದಂತೆಯೆ ಈ ಸುಧನ್ವನು ಕೂಡ ಯಾರು ಕುಪಿತರಾದರೂ ಹೆದರಿ ಬಾಗತಕ್ಕವನಲ್ಲ, ಇವನ ಎದುರಾಗಿ ನಿಂತು ಸಮವಾಗಿ ಯುದ್ಧಮಾಡತಕ್ಕವರಿಲ್ಲ. ಆದರೆ ನನ್ನಲ್ಲಿ ಆವ ಕಾರ್ಯವನ್ನೂ ಯೋಚಿಸದೆ ಸುಧನ್ವನಲ್ಲಿ ಪ್ರತಿಜ್ಞೆಮಾಡಿರುತ್ತಿ! ॥ ೩೨ ॥ ಈ ಸುಧನ್ವನಾದರೊ ತನ್ನ ಪತ್ನಿಯಲ್ಲಿಯೇ ನಿಯಮವುಳ್ಳವನು, ತಾಯಿತಂದೆಗಳ ಮಾತುಗಳನ್ನು ತಪ್ಪದೆ ನಡಿಸಿಕೊಳ್ಳತಕ್ಕವನು, ನಿಷ್ಕಳಂಕನಾಗಿ ನಮ್ಮನ್ನು ಭಜನೆ ಮಾಡತ

ವನ್ಯೈಶ್ವರ್ಯನುಂ । ಭುವನತ್ರಯನನಂಜಿಸುವವಿಪುಲವೀರ್ಯನುಂನೋಡೆಂದುಹರಿನುಡಿದನು ॥ ೩೩ ॥ ಅನಿತರೊಳ್ಕಲಿಸುಧನ್ವಂ ಕೇಳ್ದುನುಡಿದನೆಲೆ । ವನಜಾಕ್ಷಬೆಟ್ಟವುಂಕೊಡೆವಿಡಿದ-ಬಟ್ಟೆಯಂ । ನೆನೆಯಲೀಯದವೋಲೀಪಾರ್ಥನಂರಕ್ಷಿಸುವೆನೀಂಕೃಪೆಯೊಳಾವುಬರಿದೆ ॥ ತೊನೆವಡೇನಹುದಿನ್ನುರಣದೊಳೀದೇಹಮುಂ । ನಿನಗೊಪ್ಪಿಸದೆಬಿಡೆಂಸಾಕದಂತಿರಲೊಮ್ಮೆ । ಮುನಿದುನೋಡಳುಕಿದೊಡೆನಿನ್ನಕಿಂಕರನಲ್ಲೆನುತರಥವನೊಡೆಯೆಚ್ಚನು ॥ ೩೪ ॥ ಸುರ್‍ರನೆಸುಳಿದುಸುತ್ತಿಬೆಂಡಾಗಿಕುದುರೆಗಳ್ । ಕ್ಕಿರ್‍ರನೆಕಪೀಶ್ವರಂಪಲ್ಗಿರಿದುಚೀರಲ್ಕೆ । ಕರ್‍ರನೆಕವಿಯೆಕಣ್ಗೆಕತ್ತಲೆಶಿರೋಭ್ರಮಣೆಯಿಂಕೃಷ್ಣಫಲುಗುಣರ್ಗೆ ॥ ಘರ್‍ರನೆಪೊರಳ್ದುಗಾಲಿಗ

---

ತ (ದ್ವ). ಸುರ+ಈಶ್ವರ=ಸುರೇಶ್ವರ, ಗುಣಸಂ (ಸುರ+ಈಶ್ವರ=ಸುರೇಶ್ವರ), ಷ. ತ. ಹರಿ-ವಿಷ್ಣು, ಕೃಷ್ಣ, ಸೂರ್ಯ, ಸಿಂಹ, ಕುದುರೆ, ಕೋತಿ, ಕಪ್ಪೆ, ಹೇಳುವುದು ॥ ೩೩ ॥

ಟೀ॥ ಅನಿತರೊಳ್-ಆ ಒಳಗಾಗಿ, ಕಲಿಸುಧನ್ವಂ - ಶೂರನಾದ ಸುಧನ್ವನು, ಕೇಳ್ದು-ಕೃಷ್ಣನ ಮಾತುಗಳನ್ನಾಲಿಸಿ, ಎಲೆ-ಎಲೈಯ್ಯ ! ವನಜಾಕ್ಷ-ಅರವಿಂದಾಕ್ಷನಾದ ಕೃಷ್ಣನೇ, ಬೆಟ್ಟಮುಂ-ಗೋವರ್ಧನ ಗಿರಿಯನ್ನು, ಕೊಡೆವಿಡಿದು-ಕೊಡೆಯರೂಪವಾಗಿ ಹಿಡಿದುಕೊಂಡು, ಬಟ್ಟೆಯಂ-ದನಕಾಯುವವರ ವಸ್ತ್ರಗಳನ್ನು, ನೆನೆಯಲೀಯದವೋಲ್-ತೋಯ್ದು ಹೋಗದಂತೆ, ಈಪಾರ್ಥನಂ-ಈ ಫಲ್ಗುಣನನ್ನು, ನೀಂ-ನೀನು, ಕೃಪೆಯೊಳು-ಪ್ರೀತಿಯಿಂದ, ರಕ್ಷಿಸುವೆ-ಸಲಹುವವನಾಗುತ್ತಿ, ಆವು-ನಾವುಗಳು, ಬರಿದೆ-ವ್ಯರ್ಥವಾಗಿ, ತೊನೆದೊಡೆ-ಗೆಲ್ಲುವೆವೆಂದು ಹೋರಾಡಿದರೆ, ಏನಹುದು-ಏನುತಾನೆ ಆದೀತು, ಇನ್ನು-ಇನ್ನಾದರೊ, ರಣದೊಳ್-ಕಾಳಗದಲ್ಲಿ, ಈದೇಹಮುಂ-ಈ ನನ್ನ ದೇಹವನ್ನು, ಒಪ್ಪಿಸದೆಬಿಡೆಂ-ಸಮರ್ಪಿಸದೆ ಬಿಡುವುದಿಲ್ಲ (ಒಪ್ಪಿಸುತ್ತೇನೆ), ಸಾಕು-ನೀನು ನನ್ನನ್ನು ಹೊಗಳಿದ್ದು ಬಿಡುವವನಾಗು, ಅದು-ಆ ವಿಷಯವು, ಅಂತಿರಲಿ-ಆಕಡೆಯಲ್ಲಿರಲಿ, ಒಮ್ಮೆ-ಒಂದುಸಲ, ಮುನಿದು-ರೇಗಿಕೊಂಡು, ನೋಡಿ-ಕಂಡು, ಅಳುಕಿದೊಡೆ-ಭಯಪಟ್ಟದ್ದೆಯಾದರೆ, ನಿನ್ನ-ನಿನ್ನಯ, ಕಿಂಕರನು-ಸೇವಕನು (ಭಕ್ತನು), ಅಲ್ಲೆನುತ-ಅಲ್ಲವೆಂದು ಹೇಳುತ್ತ, ರಥವಂ-ವರೂಥವನ್ನು, ಒಡನೆ-ತಕ್ಷಣವೆ, ಎಚ್ಚನು-ಬಾಣಪ್ರಯೋಗ ಮಾಡಿದನು ॥

ಅ॥ ವಿ॥ (ಕಲಿಯಾದ ಸುಧನ್ವ. ಕಲಿಸುಧನ್ವ) ವಿ ಪೂ. ಕ. (ವನಜದಂತೆ ಅಕ್ಷಿಯುಳ್ಳವನು ವನಜಾಕ್ಷ) ಉಪಪೂ ಬಹು. ಕೊಡೆಯುಂಪಿಡಿದು, ಕೊಡೆವಿಡಿದು. ಕ್ರಿ. ಸ. (ಇದು+ದೇಹ=ಈದೇಹ) ಗ. ಸ. ॥೩೪॥

ಟೀ॥ ಕುದುರೆಗಳ್-ಅರ್ಜುನನ ರಥಕ್ಕೆ ಕಟ್ಟದ ಅಶ್ವಗಳು, ಸುರ್‍ರನೆ-ಸುರ್‍ರೆಂಬ ಧ್ವನಿಯಿಂದ, ಸುಳಿದು-ಗುಂಡಾಗಿ ಸುತ್ತಿ, ಬೆಂಡಾಗೆ-ನಿಶ್ಶಕ್ತಿಯುಳ್ಳದ್ದಾಗಲು, ಕಪೀಶ್ವರಂ-ಧ್ವಜದಲ್ಲಿರುವ ಆಂಜನೇಯನು, ಕಿರ್‍ರನೆ-ಕಿರ್‍ರೆಂಬ ಶಬ್ದದಿಂದ, ಪಲ್ಗಿರಿದು-ಹಲ್ಲುಗಳನ್ನು ಬಿಟ್ಟು, ಚೀರಲ್ಕೆ-ಕೂಗಿಕೊಳ್ಳಲು, ಕರ್‍ರನೆ-ಕರೀದಾದ, ಕಣ್ಗೆ-ಕಣ್ಣುಗಳಿಗೆ, ಕತ್ತಲೆ-ತಮವು, ಕವಿಯೆ-ಮುಚ್ಚಿಕೊಳ್ಳಲು, ಕೃಷ್ಣಫಲ್ಗುಣರ್ಗೆ-ನರನಾರಾಯಣರಿಗೆ, ಶಿರೋಭ್ರಮಣೆಯಿಂ-ತಲೆಸುತ್ತುವಿಕೆಯಿಂದ, ಘರ್‍ರನೆ-ಘರ್‍ರೆಂಬ ನಿನದದಿಂದ, ಗಾಲಿಗಳು-ರಥದ ಬಂಡಿಗಳು, ಪೊರಳ್ದು-ಪೊರಳಿ, ಧರಣಿಯಿಂ-ಪೃಥ್ವಿಯಿಂದ, ಏಳೆ-ಭೂಮಿಯಿಂದ ಮೇಲಕ್ಕೆ ಏಳಲು, ತಿರ್‍ರನೆತಿರಗುವ-ತಿರ್‍ರೆಂದು ಸುತ್ತುವ, ಸುಂಟರುಗಾಳಿಯುಂದದಿ-ಸುಳಿಗಾಳಿಯ ರೀತಿಯಿಂದ, ರಥಂ-ವರೂಥವು, ಸರ್‍ರನೆ-ಸರ್‍ರೆಂದು, ಹಿಂದಕೆ-ಹಿಂಗಡೆಗೆ, ಸರಿದುದು-ನಡೆಯಿತು (ಜರಿಗಿತು), ಮತ್ತೆ-ಪುನಹ, ಅಸುರಾರಿ-ಶ್ರೀ ಕೃಷ್ಣನು, ಅವನಂ-ಆ ಸುಧನ್ವನನ್ನು, ಬಣ್ಣಿಸಿದನು-ವರ್ಣನೆ ಮಾಡಿದನು ॥

ಅ॥ ವಿ॥ ಸರ್‍ರನೆ, ಕಿರ್‍ರನೆ, ತಿರ್‍ರನೆ-ಇವು ಅನುಕರಣಾವ್ಯಯಗಳು, (ಕೃಷ್ಣನೂ-ಅರ್ಜುನನೂ, ಇವರು ಕೃಷ್ಣಾ

---

ಕ್ಕವನೂ ಆಗಿರುವದ್ದರಿಂದಲೂ ಬ್ರಹ್ಮ, ಶಿವ, ಇಂದ್ರಾದಿಗಳಿಗೆ ಕೂಡಯುದ್ಧದಲ್ಲಿ ಸೋತು ಶರಣಾಗತನಾಗತಕ್ಕವನಲ್ಲ, ಇವನಂತೆ ನಿನ್ನ ಪರಾಕ್ರಮಾತಿಶಯಮುಂ ತಿರಸ್ಕರಿಸಿ, ನಮ್ಮನ್ನುಯುದ್ಧದಲ್ಲಿ ಬಹುವಾಗಿ ಆಯಾಸಪಡಿಸುವ ಪರಾಕ್ರಮಾತಿಶಯುವುಳ್ಳವನು ಮೂರ್ಲೋಕದಲ್ಲಿಯೂ ಇಲ್ಲ ಈ ಶೌರ್ಯವನ್ನು ನೋಡೆಂದು ಅರ್ಜುನನನ್ನುಕುರಿತು ಶ್ರಿ ಕೃಷ್ಣನು ಹೇಳಿದನು ॥೩೩॥ ಆ ಬಳಿಕ ಸುಧನ್ವನು ಕೃಷ್ಣನು ಪಾರ್ಥನೊಡನೆ ಹೇಳಿದ ಸಂಗತಿಯನ್ನು ಕೇಳಿದವನಾಗಿ, ಎಲೈ ಕಮಲಾಕ್ಷನೆ! ಗೋವರ್ಧನಗಿರಿಯುಂ ಕೊಡೆಯಾಗಿ ಪಿಡಿದು ದನಕಾಯುವ ಗೊಲ್ಲರೆಲ್ಲರಂ ಪೊರೆದೆ, ಅದರಂತೆ ಈ ಪಾರ್ಥನಂ ಸಲಹುವನಾಗುತ್ತಿ. ನಾವು ಯುದ್ಧಮಾಡುವದರಿಂದ ಫಲವಿಲ್ಲ. ನನ್ನ ದೇಹವನ್ನೇ ನಿನಗೆ ಅರ್ಪಿಸಿರುವೆನು, ವೃಥಾ ನನ್ನನ್ನು ಏಕೆ ಹೊಗಳುತ್ತೀಯೆಂದು ಹೇಳಿ ರಣಗಳ್ಳನಾದೊಡೆ ನಿನ್ನ ಕಿಂಕರನಲ್ಲವೆಂದು ರೇಗಿ ಅರ್ಜುನನ ರಥಕ್ಕೆ ಬಾಣಪ್ರಯೋಗಮಾಡಲಾಗಿ ॥೩೪॥ ಆಗ ಅರ್ಜುನನ ರಥದ ಕುದುರೆಗಳು ಸುರ್‍ರನೆ ಸುತ್ತಿ ನಿಶ್ಶಕ್ತಿಯುಳ್ಳದ್ದಾಗಲು, ಧ್ವಜದಲ್ಲಿದ್ದ ಕಪೀಶ್ವರನು ಹಲ್ಗಿರಿಯಲು, ಕಣ್ಗೆ ಕತ್ತಲೆಯುಂಟಾಗಿ ಕೃಷ್ಣಾರ್ಜುನರ ತಲೆ ತಿರುಗಿ ಗಾಲಿಗಳು ಮೇಲಕ್ಕೇಳುತ್ತ ಸುಳಿಗಾಳಿಯಂದದಿಂ ಅರ್ಜುನನ ವರೂಥಂ ಹಿಂದಕ್ಕೆಹೋ

ಳೇಳಿಧರಣಿಯಿಂ|ತಿರ್‍ರನೆತಿರುಗುವಸುಂಟರಗಾಳಿಯುಂದದಿಂ| ಸರ್‍ರನೆಸರಿದುದುಹಿಂದಕೆರಥಂಮತ್ತ್ತವನನಸುರಾರಿಬಣ್ಣಿಸಿದನು||೩೫|| ಪೊಡವಿಪತಿಕೇಳ್ಬಳಿಕಕಣ್ಗೆಂಡದಂತಾಗೆ | ಕುಡಿಹುಬ್ಬುಧೂಮಲತೆಯೆಂಬೊಲಿರೆಹುಂಕಾರ | ದೊಡನೆನಿಶ್ವಾಸಮಂಬಿಡುವನಾಸಾಪ್ರಟಂಜ್ವಾಲೆಯಂದದೊಳೊಪ್ಪಿರೆ || ಕಿಡಿಯಿಡುವಕೋಪಮಂತಾಳ್ದಂಧನಂಜಯಂಕಡೆಗಾಲದಂದಿನಧನಂಜಯಂತಾನೆನಲ್ಪಡೆನಡುಗೆಬೊಬ್ಬಿರಿದುಪೂಡಿದಂಬಾಣಮಂಸೆಳೆದುನಿಜಕಾರ್ಮುಕವನು || ೩೬ || ಖತಿಯಿಂದಫಲುಗುಣಂಪೂಡಿದಮಹಾಸ್ತ್ರಮಂ | ಶತಪತ್ರಲೋಚನಂಕಂಡದಕೆಮುನ್ನತಾ | ನತುಲಗೋವರ್ಧನವನಾಂತುಗೋಕುಲವನೋವಿದಸುಕೃತಫಲವನಿತ್ತು || ಅತಿಶಯುದಶಕ್ತಿಯಂನೆಲೆಗೊಳಿಸಿಬೇಗದಿಂ | ಪ್ರತಿಭಟನಶಿರವನಿಳುಹಿನ್ನೆಂದುಬೆಸಸಲು | ನ್ನತಪರಾಕ್ರಮಿಧನಂಜಯನಾರ್ದುಕಿವಿವರೆಗೆತೆಗದೆಚ್ಚನಾಶರವನು || ೩೭ || ಆಹಹಮುರಹರ ಪಾರ್ಥನೆಸೆವಬಾಣಕೆನಿನ್ನ | ಬಹಳ ಸುಕೃತವನಿತ್ತೆಲೇಸಾ

---

ರ್ಜುನರು) ದ್ವಂ. ಸ. ಕಿಂ–ಹೇಳಿದ ಕಾರ್ಯವಂ, ಕರ–ಮಾಡತಕ್ಕವನು, ಅಸುರ–ರಕ್ಕಸನಿಗೆ, ಅರಿ–ಶತ್ರುವು, ಕೃಷ್ಣನು ||೩೫||

ಟೀ|| ಪೊಡವಿಪತಿ–ಪೃಥ್ವೀಪತಿಯಾದ ಜನಮೇಜಯರಾಯನೆ, ಬಳಿಕ–ಸುಧನ್ವನ ಅಂಬು ಈ ರೀತಿ ಮಾಡಿದ ತರುವಾಯ, ಧನಂಜಯಂ–ಪಾರ್ಥನು, ಕಣ್ಣು–ಆಲಿಯು, ಕೆಂಡದಂತೆ ಆಗೆ–ಬೆಂಕಿಕೆಂಡದಹಾಗೆ ಆಗಲು, ಕುಡಿಹುಬ್ಬು–ಹುಬ್ಬಿನ ಕೊನೆಯ ಭಾಗವು, ಧೂಮಲತೆಯೆಂಬೊಲ್‌-ಹೊಗೆಯ ಬಳ್ಳಿಯಹಾಗೆ, ಇರೆ-ಇರುತ್ತಿರಲು, ಹುಂಕಾರದೊಡನೆ–ಹುಂಕಾರದ ಶಬ್ದದಿಂದ, ನಿಶ್ವಾಸಮಂ-ನಿಟ್ಟುಸಿರನ್ನು, ಬಿಡುವ-ಬಿಡುತ್ತಿರುವ, ನಾಸಾಪುಟಂ-ಮೂಗಿನ ಹೊಳ್ಳೆಯು, ಜ್ವಾಲೆಯಂದದೋಳ್‌-ಬೆಂಕಿಯ ಉರಿಯೋಪಾದಿಯಲ್ಲಿ, ಒಪ್ಪಿರೆ–ಉಂಟಾಗಿರಲಾಗಿ, ಕಿಡಿಯಿಡುವ–ಬೇಂಕಿಕೆಂಡಗಳನ್ನು ಸುರಿಸುವ, ಕೋಪಮಂ–ಕೋಪವನ್ನು, ಕಡೆಗಾಲದ–ಅಂತ್ಯದ, (ಪ್ರಳಯಸಮಯದ) ಅಂದಿನ–ಆ ಕಾಲದವನಾದ, ಧನಂಜಯಂ–ಪಾರ್ಥನು, (ಪ್ರಳಯಾಗ್ನಿಯು) ತಾನೆನಲ್–ಅವನೇ ಎನ್ನುವಂತೆ, ಕೋಪಮಂ–ರೇಗೋಣವನ್ನು, ತಾಳ್ದ-ಹೊಂದಿದನು, ಪಡೆ–ಸೈನ್ಯವು, ನಡುಗೆ–ಭಯಪಡುವಂತೆ, (ಅಲ್ಲಾಡುವಂತೆ) ಬೊಬ್ಬಿರಿದು–ಆರ್ಭಟಿಸಿ, ನಿಜಕಾರ್ಮುಕವಂ–ತನ್ನ ಚಾಪವನ್ನು, ಸೆಳೆದು-ಹೆದೆಯನ್ನು ಸರಿಪಡಿಸಿ, ಬಾಣಮಂ–ಅಂಬನ್ನು, ಪೂಡಿದಂ–ಸೇರಿಸಿದನು.

ಅ|| ವಿ|| (ಕಡೆ+ಕಾಲ=ಕಡೆಗಾಲ) ಗ. ಆದೇಶ. ಸ. ಕಣ್ಣು+ಕೆಂಡದಂತೆ=ಕಣ್ಗೆಂಡ ಉ. ಉತ್ತ. ಕ. ಪಡೆ–ಸೈನ್ಯ, ಹೊಂದು. ||೩೬||

ಟೀ|| ಫಲುಗುಣನು–ಅರ್ಜುನನು, ಖತಿಯಿಂದ–ಸಿಟ್ಟಿನಿಂದ, ಪೂಡಿದ–ಬಿಲ್ಲಿನಲ್ಲಿ ಸೇರಿಸಿದ, ಮಹಾಸ್ತ್ರಮಂ–ಮಂತ್ರಿತಮಾದ ಮಹಾ ಬಾಣವನ್ನು, ಶತಪತ್ರಲೋಚನಂ– ಅರವಿಂದಾಕ್ಷನಾದ ಶ್ರೀ ಕೃಷ್ಣನು, ಕಂಡು–ಈಕ್ಷಿಸಿ, ಅದಕ್ಕೆ–ಆ ಬಾಣಕ್ಕೆ ಮುನ್ನ–ಪೂರ್ವದಲ್ಲಿ, ತಾಂ-ತಾನು, ಅತುಲ–ಸಾಮ್ಯವಿಲ್ಲದ, ಗೋವರ್ಧನವಂ–ಗೋವರ್ಧನ ಗಿರಿಯನ್ನು, ಆಂತು–ಹೊಂದಿ, ಗೋಕುಲವಂ-ದನಗಳ ಹಿಂಡನ್ನು, ಓವಿದ–ಕಾಪಾಡಿದ, ಸಕೃತ–ಪುಣ್ಯದ, ಫಲವನು–ಉತ್ಪತ್ತಿಯನ್ನು, ಇತ್ತು–ಧಾರೆಯೆರೆದು, ಅತಿಶಯದ-ಹೆಚ್ಚಾದ, ಶಕ್ತಿಯಂ-ಬಲವನ್ನು, ನೆಲೆಗೊಳಿಸಿ–ನಿಲ್ಲಿಸಿ, (ಸ್ಥಾಪಿಸಿ) ಬೇಗದಿಂ–ಜಾಗ್ರತೆಯಿಂದ, ಪ್ರತಿಭಟನ–ಶತ್ರುವಾದ ಸುಧನ್ವನ, ಶಿರವಂ–ಶಿರಸ್ಸನ್ನು, (ತಲೆಯಂ) ಇಳುಹು–ತೆಗಿ, (ಇಳಿಸು) ಎಂದು–ಎಂಬದಾಗಿ, ಬೆಸಸಲ್-ಆಜ್ಞಾಪಿಸಲಾಗಿ, ಉನ್ನತ ಪರಾಕ್ರಮಿ–ಅಸಹಾಯಶೂರನಾದ, ಧನಂಜಯಂ–ಪಾರ್ಥನು, ಆರ್ದು-ಆರ್ಭಟಿಸಿ, ಕಿವಿವರೆಗೆ–ಕರ್ಣಪರಿಯಂತವೂ, ತೆಗೆದು–ಸೆಳದು, ಆ ಶರವನು-ಆ ಅಂಬನ್ನು, ಎಚ್ಚನು–ಪ್ರಯೋಗಿಸಿದನು.

ಅ|| ವಿ|| ಶತ–ನೂರು, ಪತ್ರ–ಎಸಳುಗಳುಳ್ಳದ್ದು, ಶತಪತ್ರ (ಕಮಲ), ಶತಪತ್ರದಂತೆ ಲೋಚನವುಳ್ಳವನು, ಶತಪತ್ರ ಲೋಚನಂ ಉ. ಪೂ. ಬಹು. ಸ. (ಶಿರ–ತಲೆ, ತುದಿ, ಶಿಖರ, ದಿಕ್ಕು). || ೩೭ ||

---

ಗಲು ಪುನಹ ಶ್ರೀ ಕೃಷ್ಣನು ಸುಧನ್ವನ ಪರಾಕ್ರಮಾತಿಶಯಮಂ ಕುರಿತು ಬಣ್ಣಿಸಿದನು ||೩೫|| ಎಲೈ ಜನಮೇಜಯರಾಯನೆ! ಆಗ ಅರ್ಜುನನು ಸುಧನ್ವನ ಪರಾಕ್ರಮಾತಿಶಯಮಂ ಕಂಡು ಶರಪ್ರಹಾರದಿಂದ ತನಗುಂಟಾದ ತೊಂದರೆಯನ್ನು ಸಹಿಸಿ, ರೇಗಿ ಕಂಗಳಲ್ಲಿ ಬೆಂಕಿ ಕೆಂಡಗಳಂ ಸುರಿಸುತ್ತ ಹುಬ್ಬು ಗಂಟಿಕ್ಕಿದವನಾಗಿ ಹುಂಕಾರದಿಂದ ನಿಶ್ವಾಸವನ್ನು ಬಿಡುತ್ತ ನಾಸಾಪುಟವು ಉಬ್ಬಲು, ಬೆಂಕಿಯ ಉರಿಯಂದದಿ ಕೋಪಾವಿಷ್ಟನಾಗಿ ಕಂಗಳಲ್ಲಿ ಕೆಂಡಮಂ ಸುರಿಸುತ್ತ, ಪ್ರಳಯಕಾಲದ ರುದ್ರನೋ ಎಂಬಂತೆ, ಕುಪಿತನಾಗಿ ಆರ್ಭಟಿಸಿ, ಧನುಷ್ಟಂಕಾರವಂ ಮಾಡಿದನು ||೩೬|| ಆಗ ಶ್ರೀ ಕೃಷ್ಣನು ಅರ್ಜುನನಿಂದ ಬಿಲ್ಲಿಗೇರಿಸಲ್ಪಟ್ಟದ್ದ ಬಾಣಕ್ಕೆ, ತಾನು ಪೂರ್ವದಲ್ಲಿ, ಗೋವರ್ಧನಗಿರಿಯನ್ನು ಕೊಡೆಯ ರೂಪನಾಗಿ ಹಿಡಿದು, ಸಕಲ ಗೋಪಾಲಕರಂ ಪೊರೆದ ಪುಣ್ಯವನ್ನೆಲ್ಲಾ ಆ ಬಾಣಕ್ಕೆ ಧಾರೆಯೆರದು, ಜಾಗ್ರತೆಯಿಂದ ಅರಿ ಶಿರವ ನರಿಯೆನುತ ಆಜ್ಞಾಪಿಸಲಾಗಿ, ಅರ್ಜುನನು ಆರ್ಭಟಿಸಿ, ಕರ್ಣಪರಿಯಂತ ಸೆಳೆದು ಆ ಬಾಣವಂ ಪ್ರಯೋಗಿಸಿದನು || ೩೭ || ಎಲೈ ಮುರಹರನೆ! ಪರಮಾಶ್ಚರ್ಯಮಾ

ದಿದನರಿಯ | ಬಹುದೆನೋವಿಲ್ಲಲಾನಿನಗೆನುತತೀವ್ರದಿಂಕೊರಳಸರಿಸಕೆನಭದೊಳು || ಬಹಸರಳನೆಚ್ಚನಿಮಿಷಾರ್ಧದೋ
ಳ್ಕಡಿದುಮಿಗೆಗಹಗಹಿಸುವಾಸುಧನ್ವನಂಕಂಡುಸೈನ್ಯದೋ | ಳ್ಕಹಳೆಗಳ್ಸೂಳೈಸಿದರ್ಮೆಚ್ಚಿದರ್ದಿವಿಜರಚ್ಯುತಂಬೆರಗಾದನು ||೩೮||
ಮೂರುಬಾಣದೊಳಿವನತಲೆಯನರಿದಪನೆಂದು | ತೋರಿಮಾಡಿದಪ್ರತಿಜ್ಞೆಯನದರೊಳೊಂದುಶರ | ಮಾರಿಪೋದುದುಕೋ
ಲೆರಡರಿಂದರಿಪುಶಿರವನಿಳುಹಬೇಕೆನುತನರನು || ಏರಿಸಿದನಂಬಂಶರಾಸನಕೆಬಳಿಕದಕೆ | ಹೇರಿದಂಹರಿತನ್ನಕೃಷ್ಣಾವತಾರದೋ |
ಳ್ಧಾರಿಣಿಯಂಪೊರೆದಪುಣ್ಯಮುಂಮೇಲೆಫಲುಗುಣನೆಚ್ಚನಾಕಣೆಯನು || ೩೯ || ಆಗಲತಿರೋಷದಿಂದಾಲಿಗಳ್ಕೆಂಪಡರ | ಲೀ
ಗಲರ್ಜುನನಬಾಣಕೆನಿನ್ನಪುಣ್ಯಮುಂ | ನೀಗಿದೆಯಲಾದೇವನೋಡುಬಹದಿವ್ಯಾಸ್ತ್ರಮುಂಕತ್ತರಿಸದಿರ್ದೊಡೆ || ಭೋಗದೊಳರುಂ
ಧತಿಯಕೂಡಿಹವಸಿಷ್ಠನಂ | ಪೋಗಿಕೊಂದವನದುರ್ಗತಿಗೆತಾನಿಳಿವೆನೆನು | ತಾಗಸದೊಳರ್ಕನಂತೈತಪ್ಪಸರಳಂಸುಧನ್ವನಿಕ್ಕಡಿ

ಟೀ|| ಮುರಹರ-ಮುರಾಸುರನನ್ನು ಸಂಹರಿಸಿದ ಕೃಷ್ಣನೆ! ಅಹಹ-ಆಶ್ಚರ್ಯವು, ಪಾರ್ಥನು-ಫಲುಗುಣನು, ಎಸೆವ-ನೊಡೆಯುತ್ತಿರುವ, ಬಾಣಕೆ-ನಾರಾಚಕ್ಕೆ, ನಿನ್ನ-ನಿನ್ನಯ, ಬಹಳ-ಹೆಚ್ಚಾದ, ಸುಕೃತವಂ-ಕೃಪೆಯನ್ನು (ಪುಣ್ಯವನ್ನು) ಇತ್ತೆ-ಕೊಟ್ಟವನಾದೆ, ಲೇಸಾದುದು-ಬಹು ಮೇಲಾಯಿತು, ಇದಂ-ಈ ಸಂಗತಿಯಂ, ಅರಿಯ ಬಹುದೆ-ತಿಳಿದುಕೊಳ್ಳಬಹುದೆ, (ಆಗಲಾರದು), ನಿನಗೆ ನೋವು ಇಲ್ಲ, ಅಲ್ಲ-ನಿನಗೆ ಬೇನೆಯು (ಸಂಕಟವು) ಇಲ್ಲವಷ್ಟೆ? ಎನುತ-ಹೀಗೆಂದು ಹೇಳುತ್ತ, ತೀವ್ರದಿಂ-ಅತಿವೇಗದಿಂದ, ಕೊರಳ-ಕತ್ತಿನ, ಸರಿಸಕೆ-ಸಾಮೀಪ್ಯವನ್ನು ಕುರಿತು, ನಭದೊಳು-ಅಂತರಿಕ್ಷಮಾರ್ಗದಲ್ಲಿ, ಬಹ-ಬರುತ್ತಿರುವ, ಸರಳನು-ಅಂಬನ್ನು, ಎಚ್ಚ-ಪ್ರಯೋಗಿಸಿ, ನಿಮಿಷಾರ್ಧದೊಳು-ಅರ್ಧ ನಿಮಿಷದಲ್ಲಿ, ಕಡಿದು-ತುಂಡುಮಾಡಿ, ಮಿಗೆ-ಬಹುವಾಗಿ, ಗಹಗಹಿಸುವ-ಹೆಚ್ಚಾಗಿ ನಗುವ, ಆ ಸುಧನ್ವನ-ಆ ಸುಧನ್ವನನ್ನು, ಕಂಡು-ಈಕ್ಷಿಸಿ, ಸೈನ್ಯದೊಳು-ಸೇನೆಯಲ್ಲಿ, ಕಹಳೆಗಳ್-ಕಹಳೆಯೆಂಬ ವಾದ್ಯ ವಿಶೇಷಗಳನ್ನು, ಸೂಳೈಸಿದರ್-ಶಬ್ದಮಾಡಿದರು, ದಿವಿಜರ್-ಸುರರು, ಮೆಚ್ಚಿದರ್-ಬಲಶಾಲಿಯೆಂದು ಒಪ್ಪಿಗೊಂಡರು, ಅಚ್ಯುತಂ-ನಾಶರಹಿತನಾದ ಕೃಷ್ಣನು, ಬೆರಗಾದನು-ಸ್ತಬ್ಧನಾದನು (ಆಶ್ಚರ್ಯಪಟ್ಟನು).

ಅ|| ವಿ|| (ಮುರನನ್ನು ಹರಿಸಿದವನು-ಮುರಹರ) ಬಹು. ಸ. ಸುಸ್ಠು-ಕೃತ, ಸುಕೃತ ||೩೮||

ಟೀ|| ಮೂರು ಬಾಣದೊಳ್-ಮೂರು ಬಾಣಗಳಲ್ಲಿ, ಇವನ-ಈ ಸುಧನ್ವನ, ತಲೆಯಂ-ಶಿರವನ್ನು, ಅರಿದಪೆಂ-ಛೇದಿಸುತ್ತೇನೆ ಎಂಬದಾಗಿ, ತೋರಿ-ಯೋಚಿಸಿ, (ಶಪಥಮಾಡಿ) ಆಡಿದ-ಹೇಳಿದ, ಪ್ರತಿಜ್ಞೆಯಂ-ಶಪಥವನ್ನು ಮಾಡಿದ್ದರಲ್ಲಿ ಅದರೊಳು-ಆ ಮೂರು ಬಾಣಂಗಳಲ್ಲಿ, ಒಂದು ಶರಂ-ಒಂದು ಬಾಣವು, ಮಾರಿ ಪೋದುದು-ಫಲವಿಲ್ಲದ್ದಾಯಿತು, ಕೋಲೆರಡರಿಂ-ಶರದ್ವಯದಿಂದ, ರಿಪುಶಿರವಂ-ಅರಿಯ ಶಿರಸ್ಸನ್ನು, ಇಳುಹಬೇಕು-ಇಳಿಸಬೇಕು, (ಕತ್ತರಿಸಬೇಕು) ಎನುತ-ಎಂಬದಾಗಿ ಹೇಳುತ್ತ, ನರನು-ಪಾರ್ಥನು, ಅಂಬಂ-ಶರವನ್ನು, ಶರಾಸನಕೆ-ಧನುಸ್ಸಿಗೆ, ಏರಿಸಿದನು-ಸೇರಿಸಿದನು, (ಸಂಧಾನಮಾಡಿದನು) ಬಳಿಕ-ತರುವಾಯ, ಹರಿ-ಶ್ರೀ ಕೃಷ್ಣನು, ಅದಕೆ-ಆ ಶರಕ್ಕೆ, ತನ್ನ-ತನ್ನಯ, ಕೃಷ್ಣಾವತಾರದೋಳ್-ಕೃಷ್ಣನ ಅವತಾರಮಾಡಿದ ಸಮಯದಲ್ಲಿ, ಧರೆಯಂ-ಈ ಪೃಥ್ವಿಯನ್ನು, ಮಿಗೆ-ಅಧಿಕವಾಗಿ, ಪೊರೆದ-ಕಾಪಾಡಿದ, ಎಂದರೆ [ದುಷ್ಟನಿಗ್ರಹ ಶಿಷ್ಟಪರಿಪಾಲನೆ ಮಾಡಿದ], ಪುಣ್ಯಮುಂ-ಫಲವನ್ನು, ಹೇರಿದಂ-ಆ ಬಾಣಕ್ಕೆ ಸೇರಿಸಿಟ್ಟನು, ಮೇಲೆ-ಅನಂತರದಲ್ಲಿ, ಫಲುಗುಣಂ- ಪಾರ್ಥನು, ಆ ಕಣೆಯನು-ಆ ಅಂಬನ್ನು, ಎಚ್ಚಂ-ತೆಗದು ಹೊಡೆದನು.

ಅ|| ವಿ|| (ಮೂರಾದ ಬಾಣಗಳ ಸಮಾಹಾರ-ಮೂರು ಬಾಣ) ಸ. ದ್ವಿಗು. (ಕೃಷ್ಣ-ಅವತಾರ) ಸವರ್ಣ ದೀರ್ಘ ಸಂ. ಅದು+ಕಣೆ=ಆ ಕಣೆ ಗ. ಸ. ||೩೯||

ದುದು, ಅರ್ಜುನನು ಹೊಡೆಯುವ ಬಾಣಕ್ಕೆ, ನೀನು ಸಂಪಾದಿಸಿದ ಪುಣ್ಯವನ್ನೆಲ್ಲಾ ಕೊಟ್ಟಿರುತ್ತಿ, ಆಗಬಹುದು ಸಾಯುವುದಕ್ಕೆ ನನಗೇನೂ ವ್ಯಥೆಯಿಲ್ಲ ಎಂದು ಹೇಳುತ್ತಾ ತನ್ನ ಕೊರಳಂ ಕತ್ತರಿಸಲಿಕ್ಕೆ ತನ್ನ ಸಾಮೀಪ್ಯವಂ ಕುರಿತು ಬರುವ ಶರವನ್ನು ಎರಡು ತುಂಡುಮಾಡಿ ಅಬ್ಬರಿಸಿದ ಕೂಡಲೆ, ಆ ಸುಧನ್ವನ ಸೇನೆಯಲ್ಲಿ, ನಿಸ್ಸಾಳಾದಿ ವಾದ್ಯಂಗಳು ಧ್ವನಿಗೈದವು ||೩೮|| ಆ ಬಳಿಕ ಅರ್ಜುನನು ತನ್ನ ಬಾಣವು ಕತ್ತರಿಸಿಪೋದುದಂ ಕಂಡು, ತಾನು ಮೂರು ಬಾಣಂಗಳಿಂದ ಅರಿ ಶಿರವಂ ಅರಿವಪೆನೆಂದು ಮಾಡಿದ ಪ್ರತಿಜ್ಞೆಯಲ್ಲಿ ಒಂದು ಬಾಣಂ ನಷ್ಟವಾದುದು ಬಳಿಕ ಎರಡನೆಯ ಶರದಿಂದವನ ಶಿರವನಿಳುಹಬೇಕೆನುತ ಚಾಪಕ್ಕೆಬಾಣವಂ ಏರಿಸಲು, ಆಗ ಕೃಷ್ಣನು, ಭೂಮಿಯಲ್ಲಿ ಕೃಷ್ಣಾವತಾರಮಾಡಿ ಆರ್ಜಿಸಿದ್ದ ಪುಣ್ಯವನ್ನೆಲ್ಲಾ, ಆ ಬಾಣಕ್ಕೆ ಧಾರೆಯಾಗಿ ಎರೆದನಂತರ ಪಾರ್ಥನು ಆ ಬಾಣವಂ ಪ್ರಯೋಗಿಸಿದನು ||೩೯|| ಶ್ರೀ ಕೃಷ್ಣನು ಅರ್ಜುನನಿಗೆ ಈ ರೀತಿಯಾಗಿ ಸಹಾಯಮಾಡಿದುದನ್ನು ನೋಡಿ ಸುಧನ್ವನು ಕಂಗಳಂ ಕೆಂಪು ಮಾಡಿಕೊಂಡು, ಎಲೈ ಸ್ವಾಮಿಯೇ! ನೀನು ಸಂಪಾದಿಸಿದ್ದ ಪುಣ್ಯವನ್ನೆಲ್ಲಾ ಅರ್ಜುನನ ಬಾಣಕ್ಕೆ ಸೂರೆಮಾಡಿದೆ (ಕಳೆದು ಬಿಟ್ಟೆ) ಆಗಲಿ ಈಗ ನೋಡು, ಆ ದಿವ್ಯಾಸ್ತ್ರವನ್ನೂ ನಾನು ಕತ್ತರಿಸದಿದ್ದರೆ ಸೌಖ್ಯಕ್ಕಾಗಿ,

ಗೈದನು ॥ ೪೦ ॥ ಕೂಡೆಮೊಳಗಿದವುನಿಸ್ಸಾಳಂಗಳ್ಗೈದೆಕೊಂ । ಡಾಡಿದರ್ಸುರರಭ್ರದೋಳ್ಬಳಿಕಕೃಷ್ಣನಂ । ನೋಡಿ ದುಪಾರ್ಥನೆರಡಂಬುಮುರಿದುದಿನ್ನೊಂದರೊಳಿವನಶಿರವನು ॥ ರೂಢಿಯಿಂದರಿಯದೊಡೆಹರಿಹರವಿಭೇದಮಂ । ಮಾಡಿನಿಂದಿಸಿದವನಗತಿಯಾಗಲೆನುತವಂ । ಪೂಡಿದಂ ಮತ್ತೆ ಕೋದಂಡದೋಳ್ಬಾಣಮಂ ನೃಪತಿಕೇಳದ್ಭುತವನು ॥ ೪೧ ॥ ಆಹೂಡಿದರ್ಜುನನಮಾರ್ಗಣದಮೊದಲೊಳಂ । ವಾಹನಂಗೈದುಕಮಲಜನಂನಿಲಿಸಿವೃಷಭ । ವಾಹನನಕೋಲ್ನಡುವಿಗೆತಂದಿರಿಸಿಸಾಯಕದನಡುವೆತಾನೇವ್ಯಾಪಿಸಿ ॥ ಕಾಹುಗಳನೆರೆಬಲಿದುರಾಮಾವತಾರದೋ । ಳ್ದೇಹಮುಳ್ಳನಿತುದಿನಮಾರ್ಜಿಸಿದಪುಣ್ಯಮಂ ।

---

ಟೀ॥ ಸುಧನ್ವಂ-ಸುಧನ್ವನು, ಆಗಲ್-ಆ ಸಮಯದಲ್ಲಿ (ಕೃಷ್ಣನು ಪಾರ್ಥಗೆ ಸಹಾಯ ಮಾಡಿದ ಕಾಲದಲ್ಲಿ) ಅತಿ-ಹೆಚ್ಚಾದ, ರೋಷದಿಂದ-ಕೋಪದಿಂದ, ಆಲಿಗಳ್ - ನೇತ್ರಗಳು, ಕೆಂಪಡರಲ್-ಕೆಂಗೆಂಡದಂತಾಗಲು, (ಕೆಂಪಗೆ ಆಗಲು) ಎಲೆದೇವ-ಎಲೈ ಸ್ವಾಮಿಯೆ ! ಈಗಲ್-ಈಗಲೂ ಕೂಡ, (ನಿನ್ನ ಭಕ್ತನಾದ ನಾನು ನಿನ್ನೆದುರಿಗಿರುವಾಗಲೂ) ಅರ್ಜುನನ-ಪಾರ್ಥನ, ಬಾಣಕೆ-ಅಂಬಿಗೆ, ನಿನ್ನಪುಣ್ಯಮಂ-ನೀನು ಆರ್ಜಿಸಿದ್ದ ಪುಣ್ಯವೆಲ್ಲವನ್ನು, ನೀಗಿದೆಯಲಾ-ಕಳೆದುಕೊಂಡೆಯಲ್ಲವೆ, ನೋಡಬಹುದು-ಪರೀಕ್ಷಿಸುತ್ತಿರಬಹುದು, ದಿವ್ಯಾಸ್ತ್ರಮಂ-ಈ ಶ್ರೇಷ್ಠವಾದ ಬಾಣವನ್ನು, ಕತ್ತರಿಸದಿರ್ದೊಡೆ-ತುಂಡುಮಾಡದೆಹೋದರೆ, ಭೋಗದೋಳ್ - ಸೌಖ್ಯದಲ್ಲಿ, ಅರುಂಧತಿಯಕೂಡೆ - ಹೆಂಡತಿಯಾದ ಅರುಂಧತಿಯೊಡನೆ, ಇಹ-ಇರುವ, ವಸಿಷ್ಠನಂ-ವಸಿಷ್ಠ ಋಷಿಯನ್ನು, (ಯೋಚಿಸಿ) ಪೋಗಿ-ಆ ಮುನಿಯಬಳಿಗೆ ಹೋಗಿ, ಕೊಂದವನ-ಪ್ರಾಣ ತೆಗೆದವನ, ದುರ್ಗತಿಗೆ-ನರಕಯಾತನೆಗೆ, ತಾಂ-ತಾನು, (ನಾನು) ಇಳಿವೆಂ-ಇಳಿಯುವೆನು (ಹೋಗುವೆನು), ಎನುತ-ಎಂದು ಹೇಳುತ, ಆಗಸದೊಳ್-ಅಂತರಿಕ್ಷದಲ್ಲಿ, ಅರ್ಕನಂತೆ-ಭಾಸ್ಕರನಹಾಗೆ, ಐತಪ್ಪ-ಬರುತ್ತಲಿರುವ, ಸರಳಂ-ಶರವನ್ನು, ಸುಧನ್ವಂ-ಸುಧನ್ವನು, ಇಕ್ಕಡಿಗೈದನು-ಎರಡುಭಾಗ ಮಾಡಿದನು ॥

ಅ॥ ವಿ॥ (ಇರ್+ಕಡಿ=ಇಕ್ಕಡಿ), ದ್ವಿ. ಸ. ಆಲಿ-ಸಖಿ, ಕಣ್ಣು, ಸಮೂಹ, ತುಂಬಿ. ಭೋಗ-ಸುಖ, ಉಪಯೋಗ, ಹೆಡೆ, (ಆಗಲ್-ಈಗಲ್, ಅವ್ಯಯಗಳು) ಅರ್ಕ-ಸೂರ್ಯ, ಕಿರಣ, ಆದಿತ್ಯವಾರ, ವಿಷ್ಣು, ಎಕ್ಕದ ಗಿಡ. ॥೪೦॥

ಟೀ॥ ಕೂಡೆ-ಸುಧನ್ವನು ಅರ್ಜುನನಿಂದ ಬಿಡಲ್ಪಟ್ಟ ಬಾಣವನ್ನು ಕತ್ತರಿಸಿದ ತರುವಾಯ, ನಿಸ್ಸಾಳಂಗಳ್-ನಗಾರಿ ಮೊದಲಾದ ವಾದ್ಯಗಳು, ಮೊಳಗಿದವು-ರವಗೈದವು, ಅಭ್ರದೋಳ್-ಅಂತರಿಕ್ಷದಲ್ಲಿ, ಸುರರ್-ದೇವಾದಿದೇವತೆಗಳು, ಐದೆ-ಬಹುವಾಗಿ, ಕೊಂಡಾಡಿದರ್-ಸ್ತುತಿಸಿದರು, ಬಳಿಕ-ಅನಂತರದಲ್ಲಿ, ಪಾರ್ಥಂ - ಫಲುಗುಣನು, ಕೃಷ್ಣನಂನೋಡಿ-ಕೃಷ್ಣನನ್ನು ಈಕ್ಷಿಸಿ, ಎರಡಂಬು-ಎರಡು ನಾರಾಚಗಳು, ಮುರಿದುದು-ಕತ್ತರಿಸಿ ಹೋದವು, ಇನ್ನೊಂದರೋಳ್-ಇನ್ನು ಉಳಿದಿರುವ ಒಂದು ಬಾಣದಿಂದ, ಇವನ-ಈ ಸುಧನ್ವನ, ಶಿರವನು-ತಲೆಯನ್ನು, ರೂಢಿಯಿಂದ-ಬಳಿಕೆಯಿಂದ (ಪ್ರಸಿದ್ಧಿಯಿಂದ) ಅರಿಯದೊಡೆ - ತೆಗಿಯದಿದ್ದರೆ (ಛೇದಿಸದಿದ್ದಲ್ಲಿ), ಹರಿಹರವಿಭೇದಂ ಮಾಡಿ - ವಿಷ್ಣು ಮತ್ತು ಈಶ್ವರ ಇವರಿಬ್ಬರಿಗೆ ವ್ಯತ್ಯಾಸವನ್ನು ಮಾಡಿ, ನಿಂದಿಸಿದವನ-ತಿರಸ್ಕಾರ ಮಾಡಿದವನ, ಗತಿಯಾಗಲಿ-ಮಾರ್ಗವಾಗಲಿ (ನರಕವಾಗಲಿ) ಎನುತ-ಎಂದು ಹೇಳುತ್ತ, ಅವಂ-ಆ ಅರ್ಜುನನು, ನುಡಿದಂ-ಹೇಳಿದನು, ಬಳಿಕ-ತರುವಾಯ, ಮತ್ತೆ - ಪುನಹ, ಕೋದಂಡದೋಳ್-ಚಾಪದಲ್ಲಿ, ಬಾಣಮಂ-ಅಂಬನ್ನು, ಪೂಡಿದಂ-ಸೇರಿಸಿದನು ; ಅರಸ-ಎಲೈ ಜನಮೇಜಯರಾಯನೆ, ಅದ್ಭುತವನು-ಈ ಆಶ್ಚರ್ಯವಂ, ಕೇಳು-ಆಲಿಸು ॥

ಅ॥ ವಿ॥ ಮೊಳಗು-ಧ್ವನಿ, ಗುಡುಗು, ವೃಕ್ಷಭೇದ, (ಹರಿಯೂ-ಹರನೂ, ಹರಿಹರರ್), ದ್ವಂ. ಸ. ॥೪೧॥

ಟೀ॥ ಆಗ ಶ್ರೀ ಕೃಷ್ಣನು, ಆ ಹೂಡಿದ-ಬಿಲ್ಲಿಗೆ ಅಂಬನ್ನೇರಿಸಿದ, ಅರ್ಜುನನ-ಪಾರ್ಥನ, ಮಾರ್ಗಣದ-ಬಾಣದ, ಮೊದಲೋಳ್-ಆದಿಯಲ್ಲಿ, ಕಮಲಜನಂ-ಪದ್ಮೋದ್ಭವನನ್ನು (ಬ್ರಹ್ಮನನ್ನು), ಆವಾಹನಂಗೈದು-ಸ್ಥಾಪಿಸಿ, (ನಿಲ್ಲಿಸಿ) ನಿಲಿಸಿ-

---

ಪರಮ ಮುನಿಯಾದ ವಸಿಷ್ಠರು ಹೆಂಡತಿಯಾದ ಅರುಂಧತಿಯೊಡನೆ ಸೇರಿರುವಾಗ್ಗೆ ಅಂತಹ ಮುನಿಯನ್ನು ಸಂಹರಿಸಿದರೆ ಉಂಟಾಗುವ ಪಾತಕಕ್ಕೆ ನಾನು ಗುರಿಯಾಗುವೆನೆಂದು ಹೇಳುತ್ತ ಆಕಾಶಮಾರ್ಗದೊಳಗೆ ಸೂರ್ಯನಂತೆ ಬರುತ್ತಲಿರ್ಪ ಆ ಬಾಣವನ್ನು ಎರಡು ತುಂಡು ಮಾಡಿ ಬೊಬ್ಬಿರಿಯಲು ॥೪೦॥ ಆ ಸುಧನ್ವನ ಸೇನೆಯಲ್ಲಿ ನಿಸ್ಸಾಳವಾದ್ಯಗಳು ಧ್ವನಿಗೈದುವು, ಅಭ್ರಮಾರ್ಗದಲ್ಲಿದ್ದ ದೇವತೆಗಳು ಸುಧನ್ವನಂ ಶ್ಲಾಘಿಸಿದರು, ಪಾರ್ಥನು ಕೃಷ್ಣನಂ ಕಂಡು ಎರಡು ಬಾಣಂಗಳೂ ಮುರಿಹೋದವು, ಇನ್ನೊಂದರಲ್ಲಿ ಅರಿಶಿರವಂ ಕತ್ತರಿಸಬೇಕೆಂದು ಶರಸಂಧಾನಮಾಡಿ, ಈ ಬಾಣದಿಂದ ಆ ಸುಧನ್ವನ ಶಿರವನ್ನು ಕತ್ತರಿಸದಿದ್ದರೆ ಹರಿಹರ ಭೇದ ಮಾಡಿದವರಿಗೆ ಸಂಭವಿಸುವ ದುರ್ಗತಿಯಂ ಪೊಂದುವೆನೆಂದು ಶಪಥಮಾಡಿದನು. ಎಲೈ ಜನಮೇಜಯರಾಯನೆ ! ಇನ್ನು ಮುಂದೆ ನಡಿಯುವ ಆಶ್ಚರ್ಯವನ್ನು ಕೇಳುವವನಾಗು ॥೪೧॥ ಆಗ ಶ್ರೀ ಕೃಷ್ಣನು ಚಾಪಕ್ಕೆ ಬಾಣವನ್ನೇರಿಸಿದ ಅರ್ಜುನನ ಬಾ

ರೂಹುಗಾಣಿಸಿಕೊಟ್ಟುಶಕ್ತಿಯಂನೆಲೆಗೊಳಿಸಿಮುರಹರಂತೋಳ್ವೊಯ್ದನು ‖ ೪೨ ‖ ಕೋಟಿಸಿಡಿಲೊಮ್ಮೆಗರ್ಜಿಸುವವೊಲೂದಿದನಾನಿ । ಶಾಟದಲ್ಲಣಂಪಾಂಚಜನ್ಯವನಾಕಿ । ರೀಟಿಪಿಡಿದಂದೇವದತ್ತಮಂಸಪ್ತಾಬ್ಧಿರಭಸವೊಬ್ಬುಳಿಸುವಂತೆ ‖ ವಿಾಟಾಡಿಸಿತುಭೂಮಿಯಂಮೇರುಶೈಲಮಂ । ದೂಟಾಡಿಸಿತುರಾಶಿತಾರಾಗ್ರಹಂಗಳಂ । ತಾಟಾಡಿಸಿತುಹನುಮನಬ್ಬರಣೆಲಗ್ಗೆವರೆವೊಳಗಿದವುನಿಜಬಲದೊಳು ‖ ೪೩ ‖ ಕಂಡನೀತೆರನಂಸುಧನ್ವನಿಂತೆಂದನೆಲೆ । ಪುಂಡರೀಕಾಕ್ಷನಿನ್ನಯಪುಣ್ಯಮಂಸೂರೆ । ಗೊಂಡವಂತಾನೊಧನಂಜಯನೊಪ್ಪುಸಿಯದುಸಿರೆನಗೆಸಾಕಿನ್ನುಬರಿದೆ ‖ ಕೊಂಡಾಡಬೇಡಬಿಡಿಸಂಬನದನೆಡೆಯೊ

---

ನಿಲ್ಲುವಂತೆ ಮಾಡಿ, ಕೋಲ್ದುದಿಗೆ-ಅಂಬಿನ ಕೊನೆಯ ಭಾಗಕ್ಕೆ, ವೃಷಭವಾಹನನ-(ಲಯಾಧಿಪತಿಯಾದ) ಈಶ್ವರನನ್ನು, ತಂದಿರಿಸಿ-ಸ್ಥಾಪನೆಮಾಡಿಟ್ಟು, ಸಾಯಕವ ನಡುವೆ-ಆ ಅಂಬಿನ ಮಧ್ಯಭಾಗದಲ್ಲಿ, ತಾನೆ-ವಿಷ್ಣುರೂಪಿಯಾದ ಕೃಷ್ಣನೆ, ವ್ಯಾಪಿಸಿ-ಪ್ರವೇಶಿಸಿ (ಹೊಂದಿ), ಕಾಹುಗಳ-ಶರೀರಪೋಷಕರಾದ ದೇವತೆಗಳನ್ನು, ನೆರೆ-ಚೆನ್ನಾಗಿ, ಬಲಿದು-ಬಲಪಡಿಸಿ, (ಬಾಣಕ್ಕೆ ಅನುಸಂಧಾನಮಾಡಿ), ರಾಮಾವತಾರವೋಳ್-ಶ್ರೀರಾಮನಾಗಿ ಅವತಾರಮಾಡಿದ ಕಾಲದಲ್ಲಿ, ದೇಹಂ-ಶರೀರವನ್ನು, ಉಳ್ಳ-ಹೊಂದಿದ್ದ, ಅನಿತುದಿನಂ-ಅಷ್ಟುದಿವಸದ ಪರಿಯಂತರವೂ, ಆರ್ಜಿಸಿದ-ತಾನು ಗಳಿಸಿದ್ದ, ಪುಣ್ಯಮಂ-ಫಲವನ್ನು, ರೂಹುಗಾಣಿಸಿಕೊಟ್ಟು-ರೂಪವಂ ಧರಿಸಿ ನಿಲ್ಲುವಂತೆ ಮಾಡಿ, ಶಕ್ತಿಯಂ-ಶಕ್ತಿಯೆಂಬ ದೇವತೆಯನ್ನು ಎಂದರೆ (ಮಹಿಷಾಸುರನೆಂಬ ರಕ್ಕಸನಂ ಸಂಹರಿಸೆಂದು ತ್ರಿಮೂರ್ತಿಗಳ ತೇಜಸ್ಸಿನಿಂದ ನಿರ್ಮಿತವಾದ ಆಕೃತಿಗೆ ಶಕ್ತಿ ಎಂದೆಂಬರು), ನೆಲೆಗೊಳಿಸಿ-ಸ್ಥಿರಪಡಿಸಿ, ಆವಾಹನೆಗೈದು, ಮುರಹರಂ-ಕೃಷ್ಣನು, ತೋಳ್ವೊಯ್ದನು-ಪಾರ್ಥನ ಬಾಹುವನ್ನು ಬಡಿದನು ‖

ಅ‖ ವಿ‖ ಮಾರ್ಗಣ-ಬಾಣ, ಭಿಕ್ಷುಕ, ಪ್ರಾರ್ಥನೆ, (ಕಮಲದಲ್ಲಿ-ಜ, ಕಮಲಜ), ಕೋಲ್+ತುದಿ=ಕೋಲ್ದುದಿ, ದ. ಆ. ಸಂ. (ರಾಮ+ಅವತಾರ=ರಾಮಾವತಾರ) ಸವರ್ಣ, ದೀ.ಸಂ. (ಪ್ರಭು, ಮಂತ್ರ, ಉತ್ಸಾಹ. ಇವು ಶಕ್ತಿತ್ರಯಗಳು), ತೋಳ್ಗೆ+ಪೊಯ್ದನು=ತೋಳ್ವೊಯ್ದನು) ಕ್ರಿ. ಸ. ‖೪೨‖

ಟೀ‖ ಅನಿಶಾಟದಲ್ಲಣಂ-ರಾಕ್ಷಸಾಂತಕನಾದ ಕೃಷ್ಣನು, ಕೋಟಿ-ನೂರು ಲಕ್ಷವಾದ, ಸಿಡಿಲ್-ಸಿಡಿಲು, ಒಮ್ಮೆ-ಒಟ್ಟಿಗೆ, ಗರ್ಜಿಸುವವೊಲ್-ಅಬ್ಬರಮಾಡುವಂತೆ, ಅತುಳ-ಸಮವಲ್ಲದ, ಪಾಂಚಜನ್ಯವಂ-ಪಾಂಚಜನ್ಯವೆಂಬುವ ಶಂಖವನ್ನೂ ಆಕಿರೀಟಿ-ಆ ಪಾರ್ಥನು, ಸಪ್ತಾಬ್ಧಿ-ಸಪ್ತಜಲನಿಧಿಗಳ, ರಭಸಂ-ಸದ್ದು, ಒಬ್ಬುಳಿಸುವಂತೆ-ಒಟ್ಟುಗೂಡುವಂತೆ, ದೇವದತ್ತಮಂ-ದೇವರಿಂದ ಕೊಡಲ್ಪಟ್ಟ ಶಂಖವನ್ನು, ಪಿಡಿದಂ-ಒಡಿದನು (ಊದಿದನು), ಹನುಮನ-ಕಪೀಶ್ವರನ, ಅಬ್ಬರಣೆ-ಶಬ್ದವು (ಅಬ್ಬರವು), ಭೂಮಿಯಂ-ಪೃಥಿವಿಯನ್ನು, ವಿಾಟಾಡಿಸಿತು-ನಡುಗುವಂತೆ ಮಾಡಿತು, ಮೇರುಶೈಲಮಂ-ಮೇರುಪರ್ವತವನ್ನು (ಸುವರ್ಣಾದ್ರಿ), ದೂಟಾಡಿಸಿತು-ಎಗರುವಂತೆ ಮಾಡಿತು, ರಾಶಿ-ಮೇಷ, ವೃಷಭಾದಿ ರಾಶಿಗಳನ್ನೂ, ತಾರಾಗ್ರಹಂಗಳಂ-ನಕ್ಷತ್ರಾದಿಗಳನ್ನೂ ಮತ್ತು ಸೂರ್ಯಚಂದ್ರಾದಿ ಗ್ರಹಗಳನ್ನೂ, ತಾಟಾಡಿಸಿತು-ಒಂದರಮೇಲೊಂದು ಬೀಳುವಂತೆ ಮಾಡಿತು, ನಿಜ-ತನ್ನಯ, ಬಲದೊಳು-ಸೈನ್ಯದಲ್ಲಿ, ಲಗ್ಗೆವರೆ-ಒಬ್ಬರನೊಬ್ಬರು ಹೊಡೆದಾಡುವ ಸದ್ದಾಗಲು, ವೊಳಗಿದವು-ನಾನಾವಿಧಗಳಿಂದ ವಾದ್ಯಗಳ ಶಬ್ದಗಳು ಉಂಟಾದುವು ‖

ಅ‖ ವಿ‖ (ಲವಣ-ಇಕ್ಷು-ಸುರ-ಸರ್ಪಿ-ದಧಿ-ಕ್ಷೀರ-ಜಲ-ಇವು ಸಪ್ತ ಸಮುದ್ರಗಳು), ಮೇಷ, ವೃಷಭ, ಮಿಥುನ, ಕರ್ಕಾಟಕ, ಸಿಂಹ, ಕನ್ಯ, ತುಲ, ವೃಶ್ಚಿಕ, ಧನುಸ್ಸು, ಮಕರ, ಕುಂಭ, ಮೀನ ೧೨ ರಾಶಿಗಳು ‖೪೩‖

ಟೀ‖ ಸುಧನ್ವಂ-ಸುಧನ್ವನು, ಈ ತೆರನಂ-ಕೃಷ್ಣನು ಆ ಬಾಣಕ್ಕೆ ಮಾಡಿದ ಪ್ರತಿಷ್ಠಾದಿಗಳನ್ನು, ಕಂಡು-ನೋಡಿದನು, ಇಂತೆಂದಂ-ಈ ಮುಂದೆ ಹೇಳುವಂತೆ ಹೇಳಿದನು, ಎಲೆ ಪುಂಡರೀಕಾಕ್ಷ-ಕಮಲಾಕ್ಷನಾದ ಶ್ರೀ ಕೃಷ್ಣನೆ! ನಿನ್ನಯ-

---

ಣದ ಮೂಲದಲ್ಲಿ ಬ್ರಹ್ಮನನ್ನ ಪ್ರತಿಷ್ಠೆಮಾಡಿ, ಕೊನೆಯ ಭಾಗಕ್ಕೆ ರುದ್ರನನ್ನು ಆವಾಹನ ಮಾಡಿ, ಬಾಣದ ಮಧ್ಯದಲ್ಲಿ ತಾನೇ ನಿಂತು (ವ್ಯಾಪಿಸಿ) ದೇವಾದಿ ದೇವತೆಗಳನ್ನೂ ಶಕ್ತಿಯನ್ನೂ ಆವಾಹನೆಮಾಡಿ, ತಾನು ರಾಮಾವತಾರದಲ್ಲಿ ಆರ್ಜಿಸಿನ ಪುಣ್ಯವನ್ನೆಲ್ಲಾ ಅದಕ್ಕೆ ಧಾರೆಯೆರದು ಇದರಿಂದಲಾದರೂರಿಶಿರವ ನಿಳುಹೆಂದು ಅರ್ಜುನನ ಭುಜಮಂ ತಟ್ಟಿದನು ‖ ೪೨ ‖ ಕೂಡಲೆ ರಾಕ್ಷಸಾಂತಕನಾದ ಶ್ರೀ ಕೃಷ್ಣನು, ಒಂದು ಕೋಟಿ ಸಂಖ್ಯೆಯ ಸಡಿಲು ಒಟ್ಟುಗೂಡಿ ಶಬ್ದಮಾಡುವಂತೆ ಸಾಮ್ಯವಿಲ್ಲದ ಪಾಂಚಜನ್ಯವೆಂಬ ಶಂಖವನ್ನು, ಅರ್ಜುನನು ಸಪ್ತಜಲಧಿಗಳೂ ಒಟ್ಟುಗೂಡಿ ರವಗೈವಂತೆ ದೇವದತ್ತವನ್ನೂ ಊದಲಾಗಿ, ಪಾರ್ಥನ ಧ್ವಜದಲ್ಲಿದ್ದ ಕಪೀಶ್ವರನ ಆರ್ಭಟವು ಭೂಮಿಯನ್ನು ನಡುಗುವಂತೆ ಮಾಡಿತು, ಮೇರು ಪರ್ವತವನ್ನೂ ಮೇಲಕ್ಕೆ ಎಗರುವಂತೆ ಮಾಡಿತು, ಮೇಷಾದಿ ರಾಶಿಗಳನ್ನೂ, ನಕ್ಷತ್ರಾದಿಗಳನ್ನೂ, ಸೂರ್ಯಚಂದ್ರಾದಿಗಳನ್ನೂ ಒಂದರಮೇಲೊಂದು ಬೀಳುವಂತೆ ಮಾಡಿತು, ಸೈನ್ಯದಲ್ಲಿ ಲಗ್ಗೆಹತ್ತಲು ನಿಸ್ಸಾಳಾದಿ ವಾದ್ಯಗಳು ಧ್ವನಿಗೈದವು ‖೪೩‖ ಶ್ರೀಕೃಷ್ಣನು ಆ ಪಾರ್ಥನ ಬಾಣಕ್ಕೆ

ಳಾಂ | ಖಂಡಿಸದೊಡೆನ್ನಣುಗನೆಂಬಳೇವಾತೆಸತಿ | ಗಂಡನೆಂದೆಣಿಸುವಳೆಸುತನೆತಾತಂಗೆತಾಂಕೇಳ್ಪ್ರತಿಜ್ಞೆಯನೆಂದನು ||೪೪|| ಭೂಸುರರ್ಬಂದು ಕಾಶಿಯೊಳೆಸೆವ ಮಣಿಕರ್ಣಿ | ಕಾಸಲಿಲದೊಳ್ಮಿಂದು ಶಾಸ್ತ್ರವಿಧಿಯಿಂದ ಉಪವಾಸಮಂ ಮಾಡಿ | ಶಿವ ರಾತ್ರಿಯೋಳ್ವಿರಚಿಸಿದ ವಿಶ್ವೇಶಪೂಜೆಗಳನು || ಹೇಸದೆಡಗಾಲಿಂದ ನೂಕಿದಾತನ ದೋಷ | ಮೀ ಸಾಯಕವನೆಡೆಯೊಳರಿಯದಿರಲಾಗಲೆಂ | ದಾಸುಧನ್ವಂ ತನ್ನಭುಜಬಲದೊಳಾರ್ದು ನಿಜಧನುವ ನೊದರಿಸುತಿರ್ದನು || ೪೫ || ಅನಿತರೊಳ್ ತ್ರೈಮೂರ್ತಿಗಳದಿವ್ಯಶಕ್ತಿಯಿಂ | ವಿನುತರಾಮಾವತಾರದಪುಣ್ಯಶಕ್ತಿಯಿಂ | ದನುಪಮಧನುರ್ವೇದದುರುಮಂತ್ರಶಕ್ತಿ

---

ನಿನ್ನಿಂದಾರ್ಜಿತಮಾದ, ಪುಣ್ಯವ-ಂ-ಸುಕೃತಮಂ, ಸೂರೆಗೊಂಡವಂ- ಲೂಟಮಾಡಿಕೊಂಡವನು, ತಾನೊ-ನಾನೊ, ಇಲ್ಲವೆ, ಧನಂಜಯನೊ-ಪಾರ್ಥನೊ? ಪುಸಿಯದೆ-ಹುಸಿ ಹೇಳದೆ, ಎನಗೆ-ನನಗೆ, ಉಸಿರ್-ಪೇಳುವನಾಗು, ಇನ್ನು ಸಾಕು-ಇನ್ನು ಬಿಡು, ಬರಿದೆ-ನಿರರ್ಥಕವಾಗಿ, ಕೊಂಡಾಡಬೇಡ-ನನ್ನನ್ನು ಸ್ತುತಿಸಬೇಡ, ಪಾರ್ಥನಿಂ-ಅರ್ಜುನನಿಂದ, |ಅಂಬನು-ಶರವನ್ನು, ಬಿಡಿಸು-ಬಿಡುವಂತೆ ಮಾಡಿಸು, ಅದಂ-ಆ ಅಂಬನ್ನು, ಎಡೆಯೊಳು-ಆ ದಾರಿಯುಲ್ಲಿಯೆ, ಖಂಡಿಸದೊಡೆ-ಛೇದಿಸದೆ ಹೋದರೆ, ಮಾತೆ-ಎನ್ನ ಜನನಿಯು, ಎನ್ನ-ನನ್ನನ್ನು, ಅಣುಗಂ-ಮಗನು, ಎಂಬಳೆ-ಎನ್ನುತ್ತಾಳೆಯೆ? ಸತಿ-ನನ್ನ ಹೆಂಡತಿಯು, ಗಂಡಂ-ನನ್ನನ್ನು ಗಂಡನು, ಎಂದು-ಎಂಬದಾಗಿ, ಎಣಿಸುವಳೆ-ತಿಳಿಯುತ್ತಾಳೆಯೆ? ತಾಂ-ನಾನು, ತಾತಂಗೆ- ತಂದೆಯಾದ ಹಂಸಕೇತುವಿಗೆ, ಮಗನೆ-ತನಯನಾದೇನೆ, ಪ್ರತಿಜ್ಞೆಯಂ-ನನ್ನ ಶಪಥವನ್ನು, ಕೇಳ್-ಆಲಿಸು.

ಅ|| ವಿ|| [ಪುಸಿಯದೆ-ಉಸಿರು. ಪುಸಿಯದುಸಿರು] ಎ. ಲೊ. ಸಂ. ಪುಂಡರೀಕದಂತೆ+ಅಕ್ಷಿಗಳುಳ್ಳವನು=ಪುಂಡರೀಕಾಕ್ಷ ಉಪ. ಪೂ. ಬಹು. ಸ. ಪುಂಡರೀಕ-ಬಿಳೀ ಕಮಲ, ಹುಲಿ, ಅಕ್ಷ-ಕಣ್ಣು, ಅಚ್ಚು, ಜಪ. ||೪೪||

ಟೀ|| ಭೂಸುರರ್-ಭೂದೇವತೆಗಳಾದ ಬ್ರಾಹ್ಮಣರು, ಬಂದು-ಬಂದವರಾಗಿ, ಕಾಶಿಯೋಳ್ - ಕಾಶೀಕ್ಷೇತ್ರದಲ್ಲಿ, ಎಸೆವ-ಪ್ರಕಾಶಿಸುವ, ಮಣಿಕರ್ಣಿಕಾ ಸಲಿಲದೊಳ್-ಗಂಗೋದಕದಲ್ಲಿ, [ತಾರಕೇಶ್ವರನ ಪಾದ ಸಮೀಪದಲ್ಲಿ ಬರುತ್ತಿರುವ ದೇವಗಂಗಾ ಜಲದಲ್ಲಿ], ಮಿಂದು-ಸ್ನಾನಮಾಡಿ, ಶಾಸ್ತ್ರವಿಧಿಯಿಂದಲಿ-ಶಾಸ್ತ್ರಕ್ಕೆ ಅನುಸಾರವಾದ ನಿಯಮದಿಂದ, ಉಪವಾಸಮಂ-ನಿರಾಹಾರನಿಯಮವನ್ನು, ಮಾಡಿ-ಗೈದು, ಶಿವರಾತ್ರಿಯೋಳ್-ಈಶ್ವರನು ಅವತಾರಮಾಡಿದ ದಿನದಲ್ಲಿ, [ಬ್ರಹ್ಮ ವಿಷ್ಣು ಇವರಿಬ್ಬರ ವ್ಯಾಜ್ಯವನ್ನು ಹೋಗಲಾಡಿಸುವುದಕ್ಕಾಗಿ, ಮಹಾಲಿಂಗಾವತಾರವಂ ಗೈದದಿನದೋಳ್] ವಿಶ್ವೇಶಪೂಜೆಗಳನು-ಪ್ರಪಂಚಕ್ಕೆಲ್ಲಾ ಒಡೆಯನಾದ ಕಾಶೀ ವಿಶ್ವನಾಥೇಶ್ವರನ ಪೂಜೆಗಳನ್ನು, ಹೇಸದೆ-ಪಾಪಕಾರ್ಯಕ್ಕೆ ಅಂಜದೆ, ಎಡಗಾಲಿಂದ-ಎಡದ ಕಾಲಿನಿಂದ, ನೂಕಿದ-ಒದೆದ, (ತಳ್ಳಿದ) ಆತನ-ಅಂತಹ ಮನುಷ್ಯನ, ದೋಷಂ-ಪಾಪವು, (ಕೆಡಕು) ಈ ಸಾಯಕವನು-ಈ ಬಾಣವನ್ನು, ಎಡೆಯೊಳು-ಬರುವ ಹಾದಿಯಲ್ಲಿಯೇ, ಅರಿಯದಿರಲ್-ತುಂಡುಮಾಡದೆ ಹೋದರೆ, ಆಗಲಿ ಎಂದು-ನನಗೆ ಲಭಿಸಲಿ ಎಂಬದಾಗಿ, ಆ ಸುಧನ್ವಂ-ಆ ಸುಧನ್ವನು, ತನ್ನ ಭುಜಬಲದೊಳು-ತನ್ನಯ ಬಾಹು ಶಕ್ತಿಯಿಂದ, ಆರ್ದು-ಆರ್ಭಟಿಸಿ, ನಿಜಧನುವನು-ತನ್ನ ಚಾಪವನ್ನು, ಒದರಿಸುತಿರ್ದನು-ಟಂಕಾರಮಾಡುತ್ತಿದ್ದನು.

ಅ|| ವಿ|| (ಭೂಮಿಯ+ಸುರರ್=ಭೂಸುರರ್) ಷ. ತ. ವಿಧಿ-ವ್ರತ, ನಿಯಮ, ಬ್ರಹ್ಮ, ಹಣೆ ಬರಹ, ಸೂತ್ರ, (ಎಡ+ಕಾಲು=ಎಡಗಾಲು) ಗ. ಆದೇಶ. ಸಂ. ||೪೫||

ಟೀ|| ಅನಿತರೋಳ್-ಆ ಕಾಲದೊಳಗಾಗಿ, ತ್ರೈಮೂರ್ತಿಗಳ-ಬ್ರಹ್ಮ, ವಿಷ್ಣು, ಮಹೇಶ್ವರ ಇವರ, ದಿವ್ಯ-ದೇವತಾಯೋಗ್ಯಮಾದ, ಶಕ್ತಿಯಿಂ-ಸಾಮರ್ಥ್ಯದಿಂದ, ವಿನುತ-ಶ್ರೇಷ್ಠವಾದ, ರಾಮಾವತಾರದ- ಶ್ರೀರಾಮಚಂದ್ರನ ಹುಟ್ಟುವಿಕೆ

---

ಮಾಡಿದ ಸನ್ನಾಹಾದಿಗಳನ್ನು ನೋಡಿ ಎಲೈ ಕಮಲಾಕ್ಷನೆ! ನಿನ್ನಿಂದಾರ್ಜಿಸಲ್ಪಟ್ಟ ಪುಣ್ಯವನ್ನು ಸೂರೆ ಮಾಡಿಕೊಂಡವನು ನಾನೊ, ಧನಂಜಯನೊ? ಸುಳ್ಳನ್ನಾಡದೆ ನನಗೆ ಉಸಿರು. ನಿರರ್ಥಕವಾಗಿ ಹೊಗಳುವುದರಿಂದ ಫಲವೇನಾದೀತು, ಜಾಗ್ರತೆಯಾಗಿ ಅರ್ಜುನನಿಂದ ಬಾಣಪ್ರಯೋಗವಂ ಮಾಡಿಸು, ಆ ಬಾಣವಂ ನಾನು ಬರುವ ಮಾರ್ಗದಲ್ಲೇ ಕತ್ತರಿಸದಿದ್ದರೆ, ಎನ್ನ ತಾಯಿ ನನ್ನನ್ನು ಮಗನೆನ್ನುವಳೆ? ನನ್ನ ಹೆಂಡತಿಯು ನನ್ನನ್ನು ಗಂಡನೆಂದು ತಿಳಿವಳೆ? ನಮ್ಮ ತಂದೆಗೆ ನಾನು ಮಗನಾದೇನೆ? ಈ ನನ್ನ ಶಪಥವನ್ನಾದರೂ ಲಾಲಿಸು ||೪೪|| ಎಂಬದಾಗಿ ಶ್ರೀ ಕೃಷ್ಣನನ್ನು ನೋಡಿ ಎಲೈ ಅರವಿಂದನಾಭನೆ! ನಾನು ಆ ಅರ್ಜುನನ ಬಾಣವಂ ತರಿಯದಿರ್ದೊಡೆ ಬ್ರಾಹ್ಮಣರು ಕಾಶೀಕ್ಷೇತ್ರಕ್ಕೆ ಬಂದು, ಶಿವರಾತ್ರಿಯ ದಿನ ಮಣಿಕರ್ಣಿಕಾ ನದಿಯಲ್ಲಿ ಸ್ನಾನವಂ ಗೈದು ಉಪೋಷ್ಯವಂ ಮಾಡಿ ವಿಶ್ವನಾಥಸ್ವಾಮಿಯನ್ನು ಪೂಜಿಸುತ್ತಿದ್ದರೆ ಆ ಪೂಜೆಗಳನ್ನು, ಪಾಪಕಾರ್ಯಕ್ಕೆ ಹೆದರದೆ ಪೂಜೆಯನ್ನು ಕಾಲಿನಿಂದ ತಳ್ಳಿದವನಿಗೆ ಉಂಟಾಗುವ ಪಾತಕಕ್ಕೆ ನಾನು ಗುರಿಯಾಗುವೆನು ಎಂಬದಾಗಿ, ಸುಧನ್ವನು ಧನುಷ್ಟಂಕಾರ ಮಾಡುತ್ತಿದ್ದನು ||೪೫|| ಅಷ್ಟರೊಳಗಾಗಿ ಬ್ರಹ್ಮ, ವಿಷ್ಣು, ಮಹೇಶ್ವರ ಈ ತ್ರಿಮೂರ್ತಿಗಳ ಶಕ್ತಿಯಿಂದಲೂ, ರಾಮಾ

ಯಿಂ ತೀವಿದಮಹಾಶರವನು || ತನಗೆಭುಜಬಲದೊಳುಂಟಾದನಿಜಶಕ್ತಿಯಿಂ | ಕನಲಿಕಿವಿವರಗೆತೆಗದಾರ್ದುಫಲುಗುಣನೆಚ್ಚ | ನೆ
ನಿತುಸತ್ವಾಧಿಕಕಲಿಸುಧನ್ವಂಧರೆಯೊಳೇನೆಂಬೆನದ್ಭುತವನು || ೪೬ || ಹೆದರಿತುಭಯರಸೇನೆಕೆದರಿತುಸುರಸ್ತೋಮ | ಒದ
ರಿತಿನಮಂಡಲಂ ಬೆದರಿತುಜಗತ್ರಯಂ | ಬೆದರಿತುಕುಲಾದ್ರಿಚಯ ಮುದುರಿತುಡುಸಂದೋಹ ಮದರಿತಿಳೆತತ್ಕ್ಷಣದೊಳು ||
ಕದಡಿತುಮಹಾರ್ಣವಂಕದಲಿದಂಕಚ್ಛಪಂ | ಪುದುಗಿತೆಣ್ದೆಸೆಯಾನೆಪದುಗಿದಂಭೋಗಿಪಂ | ಗದಗದಿಸಿತಾಸಾಯಕದಬೇಗೆಬ್ರ

ಯು (ದೇವಯೋನಿಗಳು ನರಕಲೋಕದಲ್ಲಿ ಹುಟ್ಟಿದವರ ಅವತಾರ), ಪುಣ್ಯಶಕ್ತಿಯಿಂ-ಒಳ್ಳೇ ಫಲದ ಬಲದಿಂದಲೂ, [ಸುಕೃತದ ಸಾಮರ್ಥ್ಯದಿಂದಲೂ] ಅನುಪಮ_ಉಪಮಾನರಹಿತವಾದ, ಧನುರ್ವೇದ_ಧನುರ್ವಿದ್ಯೆಯು, (ಧನುಸ್ಸನ್ನು ಉಪಯೋಗಿಸುವ ವಿದ್ಯೆದ) ಉರು-ಹೆಚ್ಚಾದ, ಮಂತ್ರಶಕ್ತಿಯಿಂ-ಮಂತ್ರದ ಸಾಮರ್ಥ್ಯದಿಂದಲೂ, ತೀವಿದ_ತುಂಬಿರುವ, ಮಹಾ ಶರವನು_ಮಹತ್ತಾದ ಅಂಬನ್ನು, ತನಗೆ_ಪಾರ್ಥನಿಗೆ, ಭುಜಬಲದೊಳು_ಬಾಹು ಶಕ್ತಿಯಲ್ಲಿ, ಉಂಟಾದ-ಹೊಂದಿದ, (ಒದಗಿದ) ನಿಜ ಶಕ್ತಿಯಿಂ-ದೇವತಾ ಸ್ವರೂಪವಾದ (ನಾರಾಯಣ ಸ್ವರೂಪ) ಸಾಮರ್ಥ್ಯದಿಂದಲೂ, ಕನಲಿ_ಕೋಪಿಸಿಕೊಂಡು, ಕಿವಿವರೆಗೆ_ಕರ್ಣ ದವರಿಯಂತ, ತೆಗದು-ಸೆಳೆದು, ಆರ್ದು-ಅಬ್ಬರಿಸಿ, ಫಲುಗುಣಂ-ಅರ್ಜುನನು, ಎಚ್ಚಂ_ಪ್ರಯೋಗಿಸಿದನು, ಕಲಿ-ಅಸಹಾಯ ಶೂರನಾದ, ಸುಧನ್ವಂ_ಸುಧನ್ವನು, ಧರೆಯೊಳ್-ಪೃಥ್ವಿಯಲ್ಲಿ, ಎನಿತು-ಎಷ್ಟು, ಸತ್ವಾಧಿಕನೊ-ಬಲಾಢ್ಯನೊ, ಅದ್ಭುತವನ-ಉತ್ಪಾತವನ್ನು, (ಆಶ್ಚರ್ಯವನ್ನು), ಏನೆಂಬೆನು-ಏನೆಂದು ಹೇಳಲಿ,

ಅ|| ವಿ|| (ಬ್ರಹ್ಮ ವಿಷ್ಣು ಮಹೇಶ್ವರ ತ್ರಿಮೂರ್ತಿಗಳು) (ಪ್ರಭು ಮಂತ್ರ ಉತ್ಸಾಹ ಶಕ್ತಿತ್ರಯಗಳು) (ನರನೂ+ನಾರಾಯಣನೂ=ನರನಾರಾಯಣರ್) ದ್ವಂ. ಸ. ಫಲ್ಗುನೀ ನಕ್ಷತ್ರದಲ್ಲಿ ಜನಿಸಿದವಂ ಫಲುಗುಣ, ಚತುರ್ಥಿ (ತ್ಸ). ಚೌತಿ (ದ್ಭ) ||೪೬||

ಟೀ|| ಉಭಯ_ಪಾರ್ಥ ಮತ್ತು ಸುಧನ್ವರ, ಸೇನೆ-ಸೈನ್ಯವು, ಬೆದರಿತು_ಭಯಪಟ್ಟಿತು, ಸುರಸ್ತೋಮ_ದೇವತಾ ಸಮೂಹವೆಲ್ಲವೂ, ಕೆದರಿತು_ಹರಡಿತು, (ದಿಕ್ಕಾಪಾಲಾಗುವಂತೆ ಮಾಡಿತು) ಇನ ಮಂಡಲಂ_ಸೂರ್ಯಮಂಡಲವು, ಒದರಿತು_ಅಲ್ಲಾಡಿ ಹೋಯಿತು, ಜಗತ್ರಯಂ_ಸ್ವರ್ಗ, ಮರ್ತ್ಯ, ಪಾತಾಳಗಳೆಂಬ ಮೂರು ಲೋಕಂಗಳೂ, ಬೆದರಿತು_ಘಾಬರಿಯಾಯಿತು, (ಅಂಜಿತು) ಕುಲಾದ್ರಿಚಯಂ_ಕುಲಾಚಲಗಳ ಸಮೂಹವು, ಬೆದಿರಿತು_ಅಲ್ಲಾಡಿತು, ಉಡು ಸಂದೋಹಂ_ನಕ್ಷತ್ರಗಳ ಪುಂಜವು, ಉದುರಿತು_ಬಿದ್ದು ಹೋದವು, ಇಳೆ-ಭೂಮಂಡಲವು, ಅದಿರಿತು_ನಡುಗಿತು, ತತ್ಕ್ಷಣದೊಳ್_ಆ ಕಾಲದಲ್ಲಿ, ಮಹಾರ್ಣವಂ_ಮಹತ್ತಾದ ಜಲನಿಧಿಯು, ಕದಡಿತು-ಕಲಕಿ ಹೋಯಿತು, ಕಚ್ಛಪಂ_ಭೂಭಾರವಂ ಹೊತ್ತ ಕೂರ್ಮನು, ಕದಲಿದಂ_ಸ್ಥಳ ಜರಗಿದನು, ಎಣ್ದೆಸೆಯಾನೆ_ ಅಷ್ಟ ದಿಗ್ಗಜಗಳು, ಪುದುಗಿತು-ಹುದುಗಿಕೊಂಡವು, ಭೋಗಿಪಂ_ನಾಗೇಂದ್ರನು (ಆದಿಶೇಷನು), ಪುದಗಿದಂ_ಹೆದರಿಕೆಯಿಂದ ಅಡಗಿಕೊಂಡನು, ಆ ಸಾಯಕದ-ಆ ಶರದ, ಬೇಗೆ-ಸುಡೋಣವು, (ಸಂತಾಪವು) ಬ್ರಹ್ಮಾಂಡಂ-ಭೂಮಂಡಲವನ್ನು, ಗದಗದಿಸಿತು_ಸಂತಾಪವನ್ನು ಉಂಟುಮಾಡಿತು, ಅದಂ-ಆ ಆಶ್ಚರ್ಯವನ್ನು, ಏಂ-ಏನನ್ನು, (ಹೇಗೆ) ಬಣ್ಣಿಸುವೆನು_ವಿವರಣೆ ಪಡಿಸಲಿ?

ಅ|| ವಿ|| (ಸುರರ+ಸ್ತೋಮ=ಸುರಸ್ತೋಮ) ಷ. ತ. ಇನ_ಗಂಡ, ಸೂರ್ಯ, ಜಗತ್ರಯ-ಸ್ವರ್ಗ, ಮರ್ತ್ಯ, ಪಾತಾಳ_ಕುಲಾದ್ರಿಗಳು-ಹಿಮವತ್, ನಿಷಧ. ವಿಂಧ್ಯ, ಮಾಲ್ಯವಂತ, ಪಾರಿಯಾತ್ರಕ, ಗಂಧಮಾದನ, ಹೇಮಕೂಟ, ಅಷ್ಟ ದಿಗ್ಗಜಗಳು_ಐರಾವತ, ಪುಂಡರೀಕ, ವಾಮನ, ಕುಮುದ, ಅಂಜನ, ಪುಷ್ಪದಂತ, ಸಾರ್ವಭೌಮ, ಸುಪ್ರತೀಕ. ||೪೭||

ವತಾರದಲ್ಲಿ ತಾನು (ಕೃಷ್ಣನು) ಮಾಡಿದ್ದ ಪುಣ್ಯವನ್ನು ಧಾರೆ ಎರೆದಿದ್ದರ ಪ್ರಭಾವದಿಂದಲೂ, ಅರ್ಜುನನ ಧನುರ್ವಿದ್ಯೆಯ ಚಮತ್ಕಾರದಿಂದಲೂ, ಮಂತ್ರಶಕ್ತಿಯಿಂದಲೂ, ತುಂಬಿದ ಮಹತ್ತಾದ ಬಾಣವಂ ತನ್ನ ಬಲವಾದ ಶಕ್ತಿಯಿಂದ ಪಾರ್ಥನು ಕಿವಿಪರಿಯಂತ ಎಳೆದು ಆರ್ಭಟಮಾಡಿ, ಬಾಣಪ್ರಯೋಗಮಾಡಲಾಗಿ, ಅಸಹಾಯ ಶೂರನಾದ ಸುಧನ್ವನು ಪೃಥ್ವಿಯಲ್ಲಿ ಇನ್ನೆಂತಹ ಪುಣ್ಯಶಾಲಿಯೊ, ಮತ್ತು ಬಲಾಢ್ಯನೊ ಈ ಆಶ್ಚರ್ಯವನ್ನು ಏನೆಂದು ಹೇಳಲಿ |೪೬|| ಆ ಬಳಿಕ ಅರ್ಜುನನ ಘೋರವಾದ ಬಾಣಕ್ಕೆ, ಪಾರ್ಥಸುಧನ್ವರ ಉಭಯ ಕಡೆಯ ಸೈನ್ಯವೂ, ಅತ್ಯಂತವಾಗಿ ಭಯಪಟ್ಟಿತು, ಇವರುಗಳ ಯುದ್ಧ ಚಮತ್ಕಾರವಂ ಈಕ್ಷಿಸಲು ಅಂತರಿಕ್ಷದಲ್ಲಿ ನೆರದಿದ್ದ ದೇವತಾ ಸಮೂಹವೆಲ್ಲವೂ ಚದರಿಹೋಯಿತು, ಸೂರ್ಯ ಮಂಡಲವು ಅಲ್ಲಾಡಿತು, ಸ್ವರ್ಗ ಮರ್ತ್ಯ ಪಾತಾಳಗಳೆಂಬ ಮೂಲೋಕಂಗಳೂ ಬೆದರಿತು, ಕುಲಾಚಲಗಳು ಗಡಗಡನೆ ಅಲುಗಾಡಿ ಹೋದವು, ನಕ್ಷತ್ರ ಪುಂಜವು ಭೂಪತನವಾದವು, ಭೂಮಂಡಲವು ಅದಿರಿತು, ಮಹತ್ತಾದ ಸಪ್ತ ಸಮುದ್ರಗಳೂ ಅಲ್ಲಕಲ್ಲೋಲವಾದವು, ಭೂಧರನಾದ ಕಚ್ಛಪನ ಸ್ಥಳ ಕದಲಿದು, ಭೋಗೀಂದ್ರನಾದ ಆದಿಶೇಷನು ಶಿರವನ್ನಲ್ಲಾಡಿಸಿದನು ಈ ರೀತಿಯಾದ ಆಶ್ಚರ್ಯವಂ ನಾನೇನೆಂದು

ಹ್ಮಾಂಡಮುದನೇಂಬಣ್ಣಿಸುವೆನು ‖ ೪೭ ‖ ಬೆಚ್ಚಿದನೆಬೆದರಿದನೆಚಿತ್ತದೋಳ್ಕಲಿತನದ | ಕೆಚ್ಚುಕೊರಗಿತೆಬಹಮಹಾಶರನ ನಾಗಳಾ | ರ್ದೆಚ್ಚಂಸುಧನ್ವನಿಕ್ಕಡಿಯಾದುದಂಬುಬಿದ್ದುದುಹಿಂದಣರ್ಧಮಿಳೆಗೆ ‖ ಉಚ್ಚಳಿಸಿಬಂದುಕೋಲ್ತುದಿಯವನಕಂಠ ಮಂ | ಕೊಚ್ಚಿಹಾಯ್ದುತ್ತಲಾರ್ದುದುಮೇದಿನಿಯೊಳಾಗ | ಲಚ್ಯುತಮುರಾರಿಕೇಶವರಾಮಯೆನುತಿರ್ದುದಾತಲೆಚಿಗಿದುನಭದೊಳು ‖ ೪೮ ‖ ಕಂದುಕುಂದಿಲ್ಲದಸುವೃತ್ತದಿಂದೆಸೆವತನ | ಗೊಂದುಭಾರಿಯುಮಿನ್ನುಪರಪೀಡೆಲೇಸಲ್ಲ | ಮೆಂದುನಿಜವೈರಮಂ ಬಿಟ್ಟುಕಮಲಂಗಳಂಸಂತೈಸೆಗಗನದಿಂದ ‖ ಬಂದಪನೊಸಂಪೂರ್ಣಕಲೆಗಳಿಂದಾರಾಜಿ | ಪಿಂದುವೆನೆಕೃಷ್ಣನಪದಾಂಬೋಜ

ಟೀ‖ ಕಲಿಸುಧನ್ವಂ–ಶೂರನಾದ ಸುಧನ್ವನು, ಆಬಾಣಕೆ–ಪ್ರಪಂಚವನ್ನು ಸುಡುತ್ತ ಬರುತ್ತಲಿರುವ ಆ ಅಂಬಿಗೆ, ಚಿತ್ತದೋಳ್–ಮನಸ್ಸಿನಲ್ಲಿ, ಬೆಚ್ಚಿದನೆ–ಹೆದರಿಕೊಂಡನೆ, ಬೆದರಿದನೆ–ಮನದಲ್ಲಿ ಅಂಜಿಕೆಯನ್ನಾದರೂ ಹೊಂದಿದನೆ (ಇಲ್ಲ), ಕಲಿತನದ-ಶೌರ್ಯದ, ಕೆಚ್ಚು–ಅಹಂಕಾರವು, ಕೊರಗಿತೆ-ಅಲ್ಪವಾಯಿತೆ? ಬಹ–ಬರುತ್ತಲಿರ್ಪ, ಮಹಾಶರನಂ–ಮಹತ್ತಾದ ಅಂಬನ್ನು, ಆಗಳ್–ಕೂಡಲೆ, ಆರ್ದ್–ಘರ್ಜಿಸಿ, ಎಚ್ಚಂ–ಹೊಡೆದನು, ಅಂಬು-ಅರ್ಜುನನ ಬಾಣವು, ಇಕ್ಕಡಿಯಾದುದು–ಎರಡು ಭಾಗವಾಯಿತು, ಹಿಂದಣರ್ಧಂ-ಹಿಂಭಾಗದ ಅರ್ಧವು, ಇಳೆಗೆ–ಭೂಮಿಗೆ, ಬಿದ್ದುದು–ಬಿತ್ತು, ಕೋಲ್ತುದಿಯು–ಬಾಣದಗ್ರಭಾಗವು (ಕೊನೆಯ ಭಾಗವು), ಉಚ್ಚಳಿಸಿ–ಮೇಲಕ್ಕೆಗರಿಬಂದು, ಅವನ–ಆ ಸುಧನ್ವನ, ಕಂಠಮಂ-ಕತ್ತನ್ನು, ಕೊಚ್ಚಿ-ಕತ್ತರಿಸಿ, ಹಾಯ್ದು-ಹೊರಟು, ಅತ್ತಲ್–ಆಕಡೆಯು, ಮೇದಿನಿಯೋಳ್–ಭೂಮಿಯಲ್ಲಿ, ಅಣಗಿತು–ಐಕ್ಯವಾಯಿತು (ತಗ್ಗಿತು), ಆಗ–ಆತರುವಾಯ, ಅಚ್ಯುತ–ನಾಶರಹಿತನೆ! ಮುರಾರಿ–ಮುರಾಸುರನ ವೈರಿಯೆ! ಕೇಶವ–ಕೇಶಿಯನ್ನು ಸಂಹರಿಸಿದವನೆ! ರಾಮ–ಎಲ್ಲರ ಮನದಲ್ಲೂ ನಲಿದಾಡುವವನೇ! ಎನುತ–ಎಂದು ಹೇಳುತ್ತ, ಆತಲೆ–ಆ ಸುಧನ್ವನ ಶಿರವು, ಚಿಗಿದು–ಮೇಲಕ್ಕೆ ಹಾರಿ, ನಭದೊಳು-ಅಂತರಿಕ್ಷದಲ್ಲಿ, ಇರ್ದುದು–ಇರುತ್ತಿತ್ತು.

ಅ‖ ವಿ‖ ಚಿತ್ತ–ಮನಸ್ಸು, ನಕ್ಷತ್ರ. ಕೋಲಿನ+ತುದಿ=ಕೋಲ್ತುದಿ, ಷ. ತ. ‖ ೪೮ ‖

ಟೀ‖ ಆಸುಧನ್ವನಶಿರಂ – ಆ ಹಂಸಧ್ವಜನ ಮಗನಾದ ಸುಧನ್ವನ ತಲೆಯು, ಕಂದು-ಒಣಗುವಿಕೆಯು, ಕುಂದು–ತಗ್ಗುವಿಕೆಯು, (ಕುಂದು–ನ್ಯೂನತೆಯು), ಇಲ್ಲದ–ಆಗದಿರುವ, ಸುವೃತ್ತದಿಂದ-ವೃತ್ತ (ಗುಂಡು) ದ ಆಕಾರವಾಗಿರುವ ರೀತಿಯಿಂದ, ಎಸೆವ–ಪ್ರಜ್ವಲಿಸುತ್ತಿರುವುದಾದ್ದಾಗಿ, ತನಗೆ–ನನಿಗೆ, ಒಂದುಬಾರಿಯುಂ-ಒಂದಾವರ್ತಿಯಾದರೂ, ಇನ್ನು–ಇನ್ನು ಮುಂದೆ, ಪರಪೀಡೆ–ಇತರರಿಗೆ ತೊಂದರೆಯನ್ನುಂಟುಮಾಡುವುದು, ಲೇಸಲ್ಲಂ–ಉಚಿತವಾದುದಲ್ಲ, ಎಂದು-ಎಂಬದಾಗಿ, ನಿಜ–ತನ್ನ, ವೈರಮಂ–ಹಗೆತನವನ್ನು, ಬಿಟ್ಟು–ತ್ಯಜಿಸಿ, ಕಮಲಂಗಳಂ–ತಾವರೆ ಹೂಗಳನ್ನು, ಸಂತೈಸೆ–ಮನಸ್ಸಿನ ಸಂತಾಪವಂ ಹೋಗಲಾಡಿಸಲು, ಗಗನದಿಂದ–ಅಂತರಿಕ್ಷದಿಂದ, ಸಂಪೂರ್ಣ–ಪೂರ್ತಿಯಾದ, ಕಲೆಗಳಿಂದ–ಷೋಡಶಕಲೆಗಳಿಂದ ಯುಕ್ತನಾಗಿ, ರಾರಾಜಿಪ–ಹೊಳೆಯುತ್ತಿರುವ, ಇಂದುವು–ಕುಮುದ ಬಾಂಧವನು (ಚಂದ್ರನು), ಬಂದಪನು–ಬರುತ್ತಲಿರುವನು, ಎನೆ–ಎನ್ನುವಂತೆ, ಕೃಷ್ಣನ ಪಾದಾಂಭೋಜಯುಗಳಕೆ–ಶ್ರೀ ಕೃಷ್ಣನ ಪಾದಾರವಿಂದಗಳ ಮೇಲೆ, ಹರಿ-ಶ್ರೀ ಕೃಷ್ಣನ, ನಾಮಾವಳಿಯಂ–ನಾಮೋಚ್ಚಾರಣಾವಳಿಯನ್ನು, ಉಚ್ಚರಿಸುತ–ಹೇಳಿಕೊಳ್ಳುತ್ತ, ಐತಂದುಬಿದ್ದುದು–ಬಂದು ಬಿದ್ದಿತು ‖

ಅ‖ ವಿ‖ (ಕಂದು – ಒಣಗು, ಕುಂದು – ತಗ್ಗು), (ಸುಷ್ಠು – ವೃತ್ತ, ಸುವೃತ್ತ), (ಇಂದು – ಚಂದ್ರ, ಈಗ), ಪದಾಂಭೋಜ–ಪದವು ಅಂಭೋಜದಂತೆ. ಉ. ಉತ್ತ. ಕ. ಪದಾಂಭೋಜಗಳ ಯುಗಳ, ಪದಾಂಭೋಜಯುಗಳ ಷ. ತ. (ಹರಿಯನಾಮ, ಹರಿನಾಮ), ಷ. ತ. ಚಂದ್ರನ ಷೋಡಶ ಕಲೆಗಳು–ಅಮೃತ, ಮಾನದ, ಪೂಷ, ತುಷ್ಟಿ, ಪುಷ್ಟಿ

ಬಣ್ಣಿಸಲಿ ‖ ೪೭ ‖ ಆ ಸಮಯದಲ್ಲಿ ಈ ರೀತಿಯಾದ ಉತ್ಪಾತಗಳಾದಾಗ್ಯೂ, ಶೂರನಾದ ಸುಧನ್ವನು ಆ ಸಾಯಕಕ್ಕೆ ಬೆಚ್ಚಿದನೆ? ಬೆದರಿದನೆ? (ಮನದಲ್ಲಿ ಭಯಗೊಂಡನೆ) ಶೌರ್ಯವೇನಾದರೂ ಕಡಿಮೆಯಾಯಿತೆ? (ಯಾವುದೂ ಇಲ್ಲ) ಅರ್ಜುನ ಬಾಣವನ್ನೋಡಿ ಬರುವ ಮಾರ್ಗದಲ್ಲೇ ಎರಡು ತುಂಡುಮಾಡಿದ ನಂತರ ಬಾಣದ ಮೊದಲು ತುಂಡು ನೆಲಕ್ಕೆ ಬಿದ್ದುಹೋಯಿತು ಕೊನೆಯ ಭಾಗವು ಮೇಲಕ್ಕೆಹಾರಿ ಸುಧನ್ವನ ಶಿರವಂ ಕತ್ತರಿಸಿ ಆ ಕಡೆಯ ಭಾಗದಿಂದ ಭೂಮಿಯಲ್ಲಿ ಸೇರಿಕೊಂಡಿತು. ಆಗ ಸುಧನ್ವನ ಶಿರವು ಅಚ್ಯುತ, ಮುರಾರಿ, ಕೇಶವ, ರಾಮನಾಮಾದಿಗಳಂ ಪಠಿಸುತ್ತಮೇಲಕ್ಕೆ ಎಗರಿಹೋಗಿ ಅಂತರಿಕ್ಷದಲ್ಲಿರ್ದುದು‖೪೮‖ ಆಗ ಸುಧನ್ವನ ಶಿರವು ಕಾಂತಿಹೀನವಾಗದೆಯೂ ಕುಂದದೆಯೂ ವೃತ್ತಾಕಾರಮಾದ ರೀತಿಯಿಂ ಪ್ರಜ್ವಲಿಸುತ್ತಿರುವುದಾಗಿ ಇನ್ನು ಮುಂದೆ ನನಗೆ ಪರರನ್ನು ತೊಂದರೆ ಪಡಿಸುವುದು ಸರಿಯಲ್ಲವೆಂದು ತನ್ನ ಹಗೆತನಮಂ ತ್ಯಜಿಸಿ ಕಮಲಂಗಳಂ ಸಂತೈಸಲ್ಕೆ ಷೋಡಶ ಕಳಾಯುಕ್ತನಾಗಿ ಹೊಳೆಯುತ್ತಲಿರ್ಪ ಚಂದ್ರನೇ ಬರುತ್ತಲಿರ್ಪನೋ ಎಂಬಂತೆ ಶ್ರೀ ಕೃಷ್ಣನಾಮಾವಳಿಯಂ ಉಚ್ಚರಿಸುತ ಶ್ರೀ ಕೃಷ್ಣನ ಪಾದಾರವಿಂದ ಯುಗ್ಮದೋಳ್ ಬಂದು ಬಿದ್ದಿತು ‖ ೪೯ ‖ ಆ ಬಳಿಕ ಕೃಷ್ಣನು ಸುಧ

ಯುಗಳಕ್ಕೈ | ತಂದುಬಿದ್ದುದುಸುಧನ್ವನಸಿರಂಹರಿಯುನಾಮಾವಳಿಯನುಚ್ಚರಿಸುತ || ೪೯ || ತಪ್ಪಿದನಲಾಚಕ್ರಿಹಾಯೆಂದುಸುರರುಲಿಯು | ಲುಪ್ಪರಿಸಿತಲೆಚಿಗಿಯುಲವನಟ್ಟೆತೋಳ್ಗಳಂ | ಚಪ್ಪರಿಸಿಕೊಂಡೆದ್ದುಬಂದುರಣರಂಗದೊಳ್ತಿರುತಿರುಗಿಜಾರಿವರಿದು | ಅಪ್ಪಳಿಸಿಹೊಯ್ದೆಳದುಸದೆದಿಟ್ಟೊರಸಿಮೆಟ್ಟಿ | ಸೊಪ್ಪಿಸಿಪೊರಳ್ದರದುತೆವರಿಪರಿದರೆಯಟ್ಟೆ | ಚಿಪ್ಪುಚೀರಾಗಿಸಿತುಸಕಲಪರಿವಾರನುಂಮುರಹರಂಬೆಗಾಗಲು || ೫೦ || ಹೊಳೆವಕುಂಡಲದಕದಪಿನಮುರಿದೆಸೆವಮಿಸೆ | ಗಳನಗೆಮೊಗದರದನಪಙ್ತಿಗಳಬಿಟ್ಟಕಂ | ಗಳಬಿಗಿದಹುಬ್ಬುಗಳಪೆರೆನೊಸಲತಿಲಕದನವಿಲಹಿಣಿಲಕಾಂತಿಯಿಂದ || ಕಳಕಳಿಪತನಿವೀರರಸದುರುಳಿಯಂತೆ

---

ರತಿ, ಧೃತಿ, ಶಶಿನಿ, ಚಂದ್ರಿಕಾ, ಕಾಂತಿ, ಜ್ಯೋತ್ಸ್ನಾ, ಶ್ರೀ, ಅಂಗದಾ, ಪೂರ್ಣಾ, ಅನ್ಯತಾ, ಕಾಮದಾಯಿನಿ. ||೪೯||

ಟೀ|| ಚಕ್ರಿ-ಶ್ರೀ ಕೃಷ್ಣನು, ತಪ್ಪಿದಂಅಲಾ-ಅತಿಕ್ರಮಿಸಿ ಹೋದವನಲ್ಲವೆ, ಹಾ-ಆಹಾ, ಎಂದು-ಎಂಬುದಾಗಿ, ಸುರರು-ದೇವತೆಗಳು, ಉಲಿಯುಲು-ಕೂಗಿಕೊಳ್ಳಲು, ತಲೆ-ಸುಧನ್ವನ ಶಿರವು, ಉಪ್ಪರಿಸಿ-ಮೇಲಕ್ಕೆಎಗರಿ, ಚಿಗಿಯುಲು-ಹಾರಲಾಗಿ, ಅವನ-ಆ ಸುಧನ್ವನ, ಅಟ್ಟೆ-ಶಿರವಿಲ್ಲದ ದೇಹಬಾಗವು, ತೋಳ್ಗಳಂ-ಭುಜಗಳನ್ನು, ಚಪ್ಪರಿಸಿಕೊಂಡು-ತಟ್ಟಿಕೊಂಡು, ಎದ್ದು-ಮೇಲಕ್ಕೆ ಎದ್ದುನಿಂತು, ಬಂದು-ಶತ್ರು ಸೈನ್ಯದ ಕಡೆಗೆ ಬಂದು, ರಣರಂಗದೊಳ್-ಯುದ್ಧಮಾಡುವ ಸ್ಥಳದಲ್ಲಿ, ತಿರುತಿರುತಿ-ಬಹುವಾಗಿ ಅಲೆದಾಡಿ, ಜಾರಿ-ನುಣಚಿಕೊಂಡು, ವರಿದು-ಪರಿದುಹೋಗಿ, ಅಪ್ಪಳಿಸಿ-ಬಡಿದು, ಹೊಯ್ದು - ಹೊಡದದ್ದಾಗಿ, ಎಳದು-ತನ್ನ ಬಳಿಗೆ ಬರಮಾಡಿಕೊಂಡು, ಸದೆದು-ಸಂಹರಿಸಿ, ಇಟ್ಟು-ಕೆಳಕ್ಕೆ ಕುಕ್ಕಿ, ಒರೆಸಿ-ಬಳಿದು, ಮೆಟ್ಟಿ-ತುಳಿದುಕೊಂಡು, ಸೊಪ್ಪಿಸಿ-ಬಲಹೀನತೆಯುಂ ಪೊಂದಿ, ಪೊರಳ್ದು-ಹೊರಳಾಡಿ, ಅರದು-ತೀಡಿ, (ತಿಕ್ಕಿ), ತೆವರಿ-ತ್ವಕ್ಕನು ತೆಗೆದು, ಪರಿದು-ಓಡಿ ಹೋಗಿ, ಅರೆಯಟ್ಟೆ-ಅಟ್ಟಿಕೊಂಡು ಹೋಗಿ, ಮುರಹರಂ-ಶ್ರೀ ಕೃಷ್ಣನು, ಬೆರಗಾಗಲು-ಸ್ತಬ್ಧನಾಗಲು (ಯಾವದೂ ತೋಚದಿರಲು) ಇಲ್ಲವೆ ಆಚ್ಚರಿಯಿಂದ ಸುಮ್ಮನಿರಲು, ಸಕಲ ಪರಿವಾರನುಂ-ಸಮಸ್ತ ಸೈನ್ಯದ ಜನರನ್ನು, ಚಿಪ್ಪುಚೀರಾಗಿಸಿತು-ಛಿನ್ನ ಭಿನ್ನವಂ ಮಾಡಿತು ||

ಅ|| ವಿ|| ಚಕ್ರವುಳ್ಳವನು, ಚಕ್ರಿ. ಅಟ್ಟೆ-ಮುಂಡ, ಮೊಟ್ಟೆ-ಗುಡ್ಡ ||೫೦||

ಟೀ|| ಆಗ-ಆ ಸುಧನ್ವನ ಶಿರವು ಶ್ರೀ ಕೃಷ್ಣನ ಪಾದಯುಗ್ಮದಲ್ಲಿ ಬಂದು ಬಿದ್ದಾಗ, ನಳಿನ-ಕಮಲ ಪುಷ್ಪದ, ದಳ-ಎಸಳಿನಂತೆ, ಲೋಚನಂ-ಲೋಚನಗಳುಳ್ಳ ಕೃಷ್ಣನು, ಪೊಳೆವ-ಪ್ರಕಾಶಿಸುತ್ತಿರುವ ಕರ್ಣಾಭರಣವುಳ್ಳ, ಕದಪಿನ-ಚುಬಕಪ್ರದೇಶವುಳ್ಳುದಾದ,ಮುರಿದು-ತಿರಿನಾಡಿ,ಎಸೆವ-ಹೊಳೆಯುವ, ಮಿಸೆಯು-ಮಿಸೆಕೂದಲುಳ್ಳ, ನಗೆಮೊಗದ-ನಗುವಂತಿರುವ ಮುಖಕಾಂತಿಯುಕ್ತವಾದ, ರದನಪಙ್ತಿಗಳ-ದಂತಶ್ರೇಣಿಗಳುಳ್ಳ, ಬಿಟ್ಟ-ತೆರದಿರುವ, ಕಂಗಳ-ನೇತ್ರಗಳುಳ್ಳ, ಬಿಗಿದ-ಬಿಗಿದುಕೊಂಡಿರುವ, ಪುರ್ಬುಗಳ-ಹುಬ್ಬುಗಳುಳ್ಳ.ಪೆರ-ವಿಸ್ತಾರವಾದ,ನೊಸಲ-ಹಣೆಯಲ್ಲಿ, ತಿಲಕದ-ಕಸ್ತೂರಿಯ ತಿಲಕವುಳ್ಳ(ಉರ್ಧ್ವರೇಖೆಯುಳ್ಳದ್ದಾದ), ನವಿಲ-ಮಯೂರದ, ಹಿಣಿಲ-ಗರಿಗಳ ಕಾಂತಿಯಿಂದ-ಪ್ರಕಾಶದಿಂದ, ಕಳಕಳಿಪ-ಹೊಳೆಹೊಳೆಯುತ್ತಲಿರ್ಪ, ತನಿ-ಹೊಸದಾದ, ವೀರರಸದ-ಭಯಂಕರರಸವುಳ್ಳ,ಉರುಳಿಯಂತೆ-ಉರುಳಿಯಹಾಗೆ, (ಪೂರ್ವದಂತೆ) ತೊಳತೊಳಗುವ-ಅತ್ಯಂತವಾಗಿ ಪ್ರಕಾಶಿಸುವ, ಸುಧನ್ವನ-ಹಂಸಧ್ವಜನ ಮಗನಾದ ಸುಧನ್ವನ, ಶಿರವಂ-ತನ್ನ ಪಾದದಲ್ಲಿದ್ದಶಿರವನ್ನು, ಎರಡುಕೈಗಳಿಂ-ತನ್ನೆರಡು ಕರಗಳಿಂದಲೂ, ಹಿಡಿದೆತ್ತಿಕೊಂಡು-ಕೈಗೆ ತೆಗೆದುಕೊಂಡು, ನೋಡಿದಂ-ಈಕ್ಷಿಸಿದನು, ಅವಂ-ಆ ಸುಧನ್ವನು, ಎಂ-ಎಷ್ಟು

---

ನ್ವನು ಆಡಿದ ಪ್ರತಿಜ್ಞೆಯಿಂ ತಪ್ಪಿದನಲಾ ಅಯ್ಯೋ ಎಂದು ಅಂತರಿಕ್ಷದಲ್ಲಿದ್ದ ದೇವಾದಿದೇವತೆಗಳು ಕೂಗಿಕೊಳ್ಳಲಾಗಿ ಅರ್ಜುನಶರಪ್ರಹಾರದಿಂ ಕತ್ತರಿಸಲ್ಪಟ್ಟ ಸುಧನ್ವನ ಶಿರವು ಮೇಲೆಹಾರಿ ಹೋಗಲಾಗಿ ಅವನ ತಲೆಯಿಲ್ಲದ ಮುಂಡವು ಭುಜಗಳಂ ತಟ್ಟಿಕೊಂಡು ಮೇಲಕ್ಕೆ ಎದ್ದು ನಿಂತು ಶತ್ರು ಸೈನ್ಯದ ಕಡೆಗೆ ನುಗ್ಗಿ ಯುದ್ಧರಂಗದಲ್ಲಿ ತಿರುತಿರುಗಿ ನುಣಚಿ-ಜಾರಿ ಶತ್ರುಗಳಂ ಹಿಡಿದು ಬಡಿದು ನೆಲಕ್ಕೆ ಅಪ್ಪಳಿಸಿ ಹಿಸುಕಿ, ಸೀಳಿ ಚರ್ಮ ಸುಲಿದು ನೆಲದಮೇಲೆ ತಿಕ್ಕಿ ಹೊಸೆದು ಕೆಳಕ್ಕೆ ಕುಕ್ಕಿ ಬಲಹೀನತೆಯಿಂ ಕೆಳಗೆ ಬಿದ್ದುಬಿದ್ದಾಡಿ ಅರಿಗಳಂ ಅಟ್ಟಿಕೊಂಡುಹೋಗಿ ನಾನಾಹಿಂಸೆಯುಂ ಗೈಯುತೆ ಶ್ರೀ ಕೃಷ್ಣನು ಆಶ್ಚರ್ಯದಿಂದ ಸ್ತಬ್ಧನಾಗುವಂತೆ ಅರ್ಜುನನ ಸೇನೆಯನ್ನೆಲ್ಲಾ ನಾಶನಾಡುತ್ತ ಬಂದಿತು ||೫೦|| ಸುಧನ್ವನ ಶಿರವು ಶ್ರೀ ಕೃಷ್ಣಪಾದಕಮಲದ ಮೇಲೆ ಬಂದು ಬಿದ್ದಾಗ ಕಮಲದ ಎಸಳಿನೋಪಾದಿಯಲ್ಲಿ ನೇತ್ರಗಳುಳ್ಳ ಕೃಷ್ಣನು, ಶೋಭಿಸುತ್ತಲಿರ್ಪ ಕರ್ಣಕುಂಡಲಗಳುಳ್ಳ, ಚುಬುಕಾಗ್ರವುಳ್ಳದ್ದಾದ, ತಿರಿನಾಡಿದ ಮಿಸೆಗಳುಳ್ಳ, ಮಂದಹಾಸಯುಕ್ತವಾದ ಮುಖದ ರದನಪಙ್ತಿಗಳುಳ್ಳ, ತೆರದಿರುವ ನೇತ್ರಗಳುಳ್ಳ, ದೊಡ್ಡದಾದ ಹಣೆಯಲ್ಲಿ ಊರ್ಧ್ವ ಪುಂಡ್ರವುಳ್ಳ, ನವಿಲ್ಗರಿಯ ಪ್ರಕಾಶದಿಂದ ಹೊಳಯುತ್ತಲಿರುವ ಹೊಸದಾದ ಭಯರಸದಿಂದ ಯುಕ್ತವಾದ, ಮೊದಲಿನಂತೆಯೇ ಇದ್ದ ಸುಧನ್ವನ ಶಿರವು ತನ್ನ ಪಾದಯುಗ್ಮದಲ್ಲಿ ಬೀಳಲಾಗಿ, ಶ್ರೀ ಕೃಷ್ಣನು ಅವನ ಶಿರವಂ ತನ್ನೆರಡು ಕರತಳದಿಂದ ಎತ್ತಿನೋಡಿದನು, ಪೃಥ್ವಿಯಲ್ಲಿ ಸುಧನ್ವನು ಇನ್ನೆಂತಹ ಪುಣ್ಯಾಶಾಲಿಯೊ

ತೊಳ| ತೊಳಗುವಸುಧನ್ವನಶಿರವನೆಡುಕೈಗಳಿಂನಳಿನದಳಲೋಚನಂಪಿಡಿದೆತ್ತಿಕೊಂಡುನೋಡಿದನವನದೇಂಸುಕೃತಿಯೊ ||೫೧|| ಕೈದಳದೊಳೆಸೆವತಲೆಯುಂ ನಾಸಿಕಾಗ್ರದೆಡೆಗೆ | ಗೊಯ್ದುಮುರಮಥನನಾಘ್ರಾಣಿಸಿದನಾತನೇ | ಗೈದನೆಂಬುದನಚ್ಯುತನೆಬಲ್ಲನಾಗಳಾಮೊಗದಿಂದ ತನ್ನಮೊಗಕೆ || ಐದಿತವನಾತ್ಮನತಿತೇಜದಿಂಬಳಿಕಮರ | ರೈದೆಬಣ್ಣಿಸಿದರಾಶಿರವನಸುರಾಂತಕಂಮೈದುನಂಗುರೆತೋರಿಹಂಸಧ್ವಜನಮುಂದಕಿಡಲಟ್ಟೆ ಬಿದ್ದುದಿಳೆಗೆ || ೫೨ || ಭೂಪಾಲಕೇಳ್ಸೋಡುತಿರ್ದಂಸುಧನ್ವನಾ | ಟೋಪಮಂತಲೆಪಾರ್ಥನಸ್ತ್ರದಿಂಪರಿಯೆ ಸಂ | ತಾಪದಿಂ ಮರುಗುತಿಳೆಯೊಳ್ಪೊರಳ್ವನವಿಾಶಿರಂ ತನ್ನಬಳಿಗೆ ಬರಲು || ಹಾ ಪುತ್ರಯೆನುತೆತ್ತಿಕೊಂಡು ಮುಂಡಾಡಿಪಣೆ | ಗಾಪಣೆಯ ನೊಂದಿಸಿ ಪೊಸದುಚೀರ್ದುಬಹಳ ಪ್ರ | ಲಾಪದಿನಳಲ್ದಂಮರಾಕಧ್ವಜಂ ಪೊರೆ

---

ಸುಕೃತಿಯೋ-ಪುಣ್ಯವಂತನೋ-ಅದೃಷ್ಟಶಾಲಿಯೋ ||

ಅ|| ವಿ|| ಕುಂಡಲ-ಒಂಟಿ, ಕರ್ಣಾಭರಣ, ಜಾತಕ ಚಕ್ರ, (ಕುಂಡಲಿ. ಸರ್ಪ), ಪೆರ-ದೊಡ್ಡದು, ಚಂದ್ರ, ಪಿರಿದು, ನೊಸಲು, ವಿ. ಪೂ. ಕ. ತಿಲಕ-ಶ್ರೇಷ್ಠ, ಊರ್ಧ್ವಪುಂಡ್ರ, ನಳಿನದಳದಂತೆ-ಲೋಚನವುಳ್ಳವನು, ಉ. ಪೂ. ಬಹು. ಸ.||೫೧||

ಟೀ|| ಮುರಮಥನನು-ಕೃಷ್ಣನು, ಕೈದಳದೊಳ್-ತನ್ನ ಕರತಳದಲ್ಲಿ, ಎಸೆವ-ಹೊಳೆಯುತ್ತಲಿರುವ, ತಲೆಯಂ-ಸುಧನ್ವನ ಶಿರಸ್ಸನ್ನು, ನಾಸಿಕ-ಮೂಗಿನ, ಅಗ್ರದ-ಕೊನೆಯ, ಎಡೆಗೆ-ಹತ್ತಿರಕ್ಕೆ (ಸ್ಥಳಕ್ಕೆ) ಒಯ್ದು-ಕೊಂಡುಹೋಗಿ, ಅಘ್ರಾಣಿಸಿದಂ-ವಾಸನೆ ನೋಡಿದನು (ಮೂಸಿನೋಡಿದನು), ಆತಂ-ಆ ಸುಧನ್ವನು, ಏಗೈದನೆಂಬುದಂ-ಏನುಮಾಡಿದ್ದನೆಂಬುವದನ್ನು, ಅಚ್ಯುತನೆ-ನಾಶರಹಿತನಾದ ಶ್ರೀಕೃಷ್ಣನೆ, ಬಲ್ಲನು-ತಿಳಿದಿರತಕ್ಕವನು, ಆಗಳ್-ಆ ಸಮಯದಲ್ಲಿ, ಆಮೊಗದಿಂ-ಆ ಸುಧನ್ವನಮೋರೆಯಿಂದ, ತನ್ನಮೊಗಕೆ-ತನ್ನಯ ಮುಖಕ್ಕೆ, ಅವನ-ಆ ಸುಧನ್ವನ, ಆತ್ಮವು-ಜೀವಾತ್ಮವು (ಸತ್ವವು), ಅತಿತೇಜದಿಂ-ಅತ್ಯಂತ ಕಾಂತಿಯುತಿಶಯದಿಂದ, ಐದಿತು-ಪ್ರವೇಶನಾಡಿತು, ಬಳಿಕ-ತರುವಾಯ, ಅಮರರ್-ದೇವತೆಗಳು, ಐವೆ-ಬಹುವಾಗಿ, ಬಣ್ಣಿಸಿದರ್-ಸುಧನ್ವನಂ ಸ್ತೋತ್ರನಾಡಿದರು, ಆಬಳಿಕಲ್-ಆತರುವಾಯ, ಅಸುರಾಂತಕಂ-ಶ್ರೀಕೃಷ್ಣನು, ಆಶಿರವಂ-ಆ ಸುಧನ್ವನ ತಲೆಯನ್ನು, ಮೈದುನಂಗೆ-ಪಾರ್ಥನಿಗೆ, ಉರೆ-ಹೆಚ್ಚಾಗಿ, ತೋರಿ-ತೋರಿಸಿ, ಹಂಸಧ್ವಜನಮುಂದಕೆ-ಸುಧನ್ವನ ತಂದೆಯಾದ ಮರಾಳಧ್ವಜನ ಮುಂಭಾಗಕ್ಕೆ, ಇಡಲ್-ಹಾಕಲು (ಇಡಲಾಗಿ) ಅಟ್ಟೆ-ಶಿರವಿಲ್ಲದ ಶರೀರವು, ಇಳೆಗೆ-ಭೂಮಿಗೆ, ಬಿದ್ದುದು-ಬಿದ್ದಿತು ||

ಅ|| ವಿ|| ಕೈಯ್ಯ+ದಳ=ಕೈದಳ, ಷ. ತ. ಮುರನನ್ನು ಮಥಿಸಿದವನು ಮುರಮಥ, ಕೃ. ವೃ. ಅಟ್ಟೆ-ಮುಂಡ, ಅಸುರರ-ಅಂತಕ, ಅಸುರಾಂತಕ, ಷ. ತ || ತೇಜ-ಕಾಂತಿ, ಐಶ್ವರ್ಯ. ಅದು-ಶಿರ, ಆಶಿರ, ಗಮಕ ಸ. ||೫೨||

ಟೀ|| ಭೂಪಾಲ-ಭೂಮಿಪಾಲಕನಾದ ಜನಮೇಜಯರಾಯನೆ! ಕೇಳ್-ಆಲಿಸು, ಹಂಸಧ್ವಜಂ-ಸುಧನ್ವನ ತಂದೆಯಾದ ಹಂಸಧ್ವಜನು. ಸುಧನ್ವನ ಆಟೋಪವಂ-ಸುಧನ್ವನ ಪರಾಕ್ರಮಾತಿಶಯವನ್ನು, ನೋಡುತಿರ್ದಂ-ಈಕ್ಷಿಸುತ್ತಿದ್ದನು, ತಲೆ-ಸುಧನ್ವನ ಶಿರವು, ಪಾರ್ಥನ-ಫಲುಗುಣನ, ಅಸ್ತ್ರದಿಂ-ಶರೀರದಿಂದ, ಪರಿಯೆ-ಕತ್ತರಿಸಲ್ಪಡಲು, ಸಂತಾಪದಿಂ-ಪರಿತಾಪದಿಂದ (ವ್ಯಥೆಯಿಂದ), ಮರುಗುತ-ದುಃಖಪಡುತ್ತ (ಕೊರಗುತ್ತ), ಇಳೆಯೊಳ್-ಭೂಮಿಯಲ್ಲಿ, ಪೊರಳ್ವನಂ-ಹೊರಳುತ್ತಲಿರುವಾಗ, ಈಶಿರಂ-ಈ ಸುಧನ್ವನ ತಲೆಯು, ತನ್ನಬಳಿಗೆಬರಲು-ತನ್ನ ಸಮಿಾಪಕ್ಕೆ ಬರಲಾಗಿ, ಹಾಪುತ್ರ ಎನುತ-ಅಯ್ಯೋ ಕಂದನೆ ಎನ್ನುತ್ತ, ಎತ್ತಿಕೊಂಡು-ತನ್ನಕೈಗೆ ತೆಗೆದುಕೊಂಡು, ಮುಂಡಾಡಿ - ಮುದ್ದುಕೊಟ್ಟು, ಪಣೆಗೆ-ತನ್ನಹಣೆಗೆ, ಅಪಣೆಯುಂ-ಆ ಸುಧನ್ವನ ಹಣೆಯನ್ನು, ಒಂದಿಸಿ-ಸೇರಿಸಿ, ಪೊಸದು-ಪುನಹ (ಉಜ್ಜಿಕೊಂಡು), ಚೀರ್ದು-ಘಟ್ಟಿಯಾಗಿ ಅತ್ತು, ಬಹಳ ಪ್ರಲಾಪದಿಂದ-ಬಹುವಾದ ರೋದನದಿಂದ ಕೂಡಿದ ಮಾತುಗಳಿಂದ, ಪೊರೆಯ-ಸಮಿಾಪದಲ್ಲಿರುವ, ಕಲ್ಮರ-ಕಲ್ಲುಗಳು ಮತ್ತು ಮರಗಳು, ಕರಗುವಂತೆ-ವ್ಯಥೆಯಿಂದ, ಕುಗ್ಗಿಹೋಗುವಂತೆ-(ಸವೆದು ಹೋಗುವಂತೆ), ಅಳಲ್ದಂ-ಪ್ರಲಾಪಿಸಿದನು (ರೋದಿಸಿದನು.)

ಅ|| ವಿ|| (ಭೂಮಿಯನ್ನು-ಪಾಲ, ಪಾಲಿಸತಕ್ಕವನು, ಭೂಪಾಲ) ಕೃ. ವೃ. ||೫೩||

---

ಕಾಣೆ || ೫೧ || ಆಬಳಿಕ ಕೃಷ್ಣನು ತನ್ನ ಕೈತಳದಲ್ಲಿ ಪ್ರಕಾಶಿಸುತ್ತಲಿರುವ ಸುಧನ್ವನ ಶಿರಸ್ಸನ್ನು ನಾಸಿಕಾಗ್ರದೆಡೆಗೆ ತಂದು ಅಘ್ರಾಣಿಸಿದನು ಆ ವೀರನಾದ ಸುಧನ್ವನು ಏನು ಮಾಡಿದ್ದನೆಂಬುದನ್ನು ಅಚ್ಯುತನೇ ತಿಳಿದವನು. ಆಗ ಸುಧನ್ವನು ಮುಖದಿಂದ ತನ್ನ ಮುಖಕ್ಕೆ ಅತ್ಯಂತ ತೇಜದಿಂದ ಯುಕ್ತವಾದ ಜೀವಾತ್ಮವು ಪ್ರವೇಶಿಸಲಾಗಿ ಮೇಲ್ಗಡೆ ದೇವಾದಿ ದೇವತೆಗಳು ಆ ಸುಧನ್ವನಂ ಬಹುವಾಗಿ ಸ್ತುತಿಸಿದರು, ಕೃಷ್ಣನು ಸುಧನ್ವನ ಶಿರಸ್ಸನ್ನು ಅರ್ಜುನನಿಗೆ ತೋರಿಸಿ, ಹಂಸಧ್ವಜನ ಬಳಿಗೆ ಹಾಕಲಾಗಿ ಮುಂಡವು ಕೆಳಕ್ಕೆ ಬಿತ್ತು || ೫೨ || ಎಲೈ ಜನಮೇಜಯರಾಯನೆ ಆಲಿಸು, ಆಗ ಸುಧನ್ವನ ಶಿರವು ನೆಲದಲ್ಲಿ ಬಿದ್ದು ಹೊರಳಾಡುತ್ತಿದ್ದ ಹಂಸಧ್ವಜನ ಬಳಿಗೆ ಬಂದು ಬೀಳಲಾಗಿ ಆಯ್ಯೋ ಮಗುವೇ ಎಂದು ಆ ಶಿರವನ್ನು ತನ್ನ ಕೈಗೆ ಎತ್ತಿಕೊಂಡು ಮುದ್ದಾಡಿ ತನ್ನ ಹಣೆಗೆ ಅದರ ಹಣೆಯಂ ಜೋಡಿಸಿ ಗಟ್ಟಿಯಾದ ರೋದನದ ಮಾತುಗಳಿಂದ, ತನ್ನ ಬಳಿಯಲ್ಲಿರ್ದ

ಂಬಕಲ್ಮರಂಕರಗುವಂತೆ || ೫೩ || ಬೀಳ್ವೆನೋ ಶೈಲಾಗ್ರದಿಂದಕಂಮಡುವಿನೊಳ | ಗಾಳ್ವೆನೋನಿನ್ನನಿಟ್ಟೆರ್ಪತನ್ನ ಕಂಗಳಂ | ಕೀಳ್ವೆನೋಪರಸಿಪಡೆದೊಡಲನುರೆಸೀಳ್ವೆನೋನಿನ್ನನುಡಿಗಳನೆಂದಿಗೆ || ಕೇಳ್ವೆನೋಜನ್ಮಜನ್ಮಾಂತರದೊಳಾದೊಡಂ | ಪೇಳ್ವೆನೋನಿನಗೆಬೆಸನಂಮಗನೆಶೋಕಮಂತಾಳ್ವೆನೋತಾನೆ ನ್ನೊಳುಸಿರಲಾಗದೆ ಮೌನವೇಕಕಟ ನಿನಗೆಂದನು || ೫೪ || ಕೊಳುಗುಳಕೆನಡೆತಂದೆಬಿಲ್ವಿಡಿವುತೈತಂದೆ | ಫಲುಗುಣನೊಡನೆಹೋರಿಜಯಿಸಬೇಡವೆತಂದೆ | ಕಲಿತನದೊಳುಂಕಂದದಾತನೀನೇಕಂ ದನಳಿದೆರಣದೊಳಗೆ ಕಂದ || ನಿಲಯಕಾನೆ (ನೇಂಹೋಗುವೆನುಳಿದು ನಿನ್ನನು ವೊಗುವೇ) ಮರಿಯೆವುಳಿದುನಿನ್ನನುಮರಿಯೆ |

ಟೀ|| ಹಂಸಧ್ವಜನು, ತನ್ನ ಮಗನಂ ನೋಡಿ, ಶೈಲಾಗ್ರದಿಂದ– ಪರ್ವತದ ತುದಿಯಿಂದ, ಬೀಳ್ವೆನೊ–ಬಿದ್ದು ಹೋಗಲೋ, ಕಮ್ಮಡುವಿನೊಳಗೆ–ಜಲಸಂಮೃದ್ಧಿಯಾದ ಹಳ್ಳದಲ್ಲಿ, ಆಳ್ವೆನೋ–ಮಗ್ನನಾಗಿ (ಹೋಗಲೋ? ಮುಳುಗಿಹೋಗಲೊ) ನಿನ್ನನಿಟ್ಟಿಪ–ನಿನ್ನನ್ನು ನೋಡುತ್ತಲಿರುವ, ಕಂಗಳಂ–ಕಣ್ಣುಗಳನ್ನು, ಕೀಳ್ವೆನೋ–ಕಿತ್ತುಹಾಕಿಬಿಡಲೊ, ಪರಸಿ–ಬೇಡಿಕೊಂಡು (ಪ್ರಾರ್ಥನೆ ಮಾಡಿಕೊಂಡು) ಪಡದ–ನಿನ್ನ ಪೊಂದಿದ, ಒಡಲನು–ಹೊಟ್ಟೆಯನ್ನು (ಶರೀರವನ್ನು) ಉರೆ–ಬಹುವಾಗಿ, ಸೀಳ್ವೆನೋ–ಸೀಳಬಿಡಲೊ, ನಿನ್ನ–ನಿನ್ನಯ, ನುಡಿಗಳಂ–ಮಾತುಗಳನ್ನು, ಎಂದಿಗೆ–ಇನ್ನು ಎಷ್ಟುಹೊತ್ತಿಗೆ, ಕೇಳ್ವೆನೊ–ಕೇಳುತ್ತೇನೆಯೊ, ಜನ್ಮಜನ್ಮಾಂತರದೋಳ್–ಮುಂದಿನ ಜನ್ಮದಲ್ಲಿ, ಆದೊಡಂ–ಆದಾಗ್ಯಾದರೂ, ನಿನಗೆ ಬೆಸನಂ–ನಿನಗೆ ಕಾಳಗವಾಡುವಹಾಗೆ ಅಪ್ಪಣೆಯನ್ನು, ಪೇಳ್ವೆನೋ–ಹೇಳುತ್ತೇನೆಯೆ, ಮಗನೆ–ಎಲೈ ಕಂದನೆ ! ಶೋಕಮಂ–ದುಃಖವನ್ನು, ತಾಂ–ನಾನು, ತಾಳ್ವೆನೊ–ಅನುಭವಿಸುವೆನೊ, (ಸುಖಿಸುತ್ತೇನೆಯೋ) ಎನ್ನೊಳ್ – ನನ್ನೊಡನೆ, ಉಸಿರಲ್ಆಗದೆ–ಹೇಳಬಾರದ ಮಾತಾಗಿರುವುದೆ, ನಿನಗೆ. ಎನ್ನೊಳ್ನನ್ನಲ್ಲಿ, ಮೌನಂ ಏಕೆ–ನನ್ನಲ್ಲಿ ಮಾತನ್ನಾಡದಿರುವಿಕೆಯು ಏತಕ್ಕೆ, ಅಕಟ–ಅಯ್ಯೊ, ಎಂದನು–ಎಂಬದಾಗಿ ಹೇಳಿದನು (ಅತ್ತನು) ||

ಅ|| ವಿ|| (ಶಿಲೆಯಿಂದಾದದ್ದು–ಶೈಲ) ಶೈಲದ–ಅಗ್ರ, ಶೈಲಾಗ್ರ, ಷ.ತ. (ಕರಿದು–ಮಡು, ಕಮ್ಮಡು) ವಿ.ಪೂ.ಕ.||೫೪||

ಟೀ|| ತಂದೆ–ಎಲೈ ಅಯ್ಯನೆ, ಕೊಳುಗುಳಕೆ–ಆ ಹವಕ್ಕೆ, ನಡೆತಂದೆ–ಬಂದವನಾದೆ, ಬಿಲ್ವಿಡಿವುತ–ಚಾಪವಂಧರಿಸುತ, ಐತಂದೆ–ಬಂದವನಾದೆ, ತಂದೆ–ತಂದೆಯೇ, ಫಲುಗುಣನೊಡನೆ–ಪಾರ್ಥನ ಸಂಗಡ, ಹೋರಿ–ಹೊಡೆದಾಡಿ, ಜಯಿಸಬೇಡವೆ–ಅರ್ಜುನನ್ನು ಗೆಲ್ಲಬೇಡವೆ, (ಆರೀತಿ ಅರ್ಜುನನ್ನು ಜಯಿಸಲಿಲ್ಲವಲ್ಲ) ಕಂದ–ಎಲೈ ಪ್ರೀತಿಪಾತ್ರನಾದ ಮಗುವೆ, ಕಲಿತನದೊಳಗೆ–ಪರಾಕ್ರಮಾತಿಶಯದಿಂದ, ಕಂದದಾತ–ಕಾಂತಿಹೀನನಾಗದವನು, (ಮುಖವಿಕಾರವನ್ನು ಹೊಂದದವನು) ನೀಂ–ನೀನು, ರಣದೊಳಗೆ–ಕಾಳಗದಲ್ಲಿ, ಏಕೆ–ಏನುಕಾರಣ, ಅಂದವಳಿದೆ–ರೀತಿಗೆಟ್ಟವನಾದೆ, ಆಂ–ನಾನು, ನಿನ್ನಂ–ನಿನ್ನನ್ನು, ಉಳಿದು–ಇಲ್ಲಿಯೆ ಬಿಟ್ಟು, ನಿಲಯಕೆ–ಗೃಹಕ್ಕೆ, ಆನೆಮರಿಯೆ–ಗಜಶಿಶುವಿನಂದದ ಬಾಲನೆ, (ಮನೆಗೆ) ಏಂ ಹೋಗುವೆಂ–ಏನೆಂದು ಹೋಗಲಿ, ಎಂದರೆ (ಪುತ್ರನನ್ನು ಕಳೆದುಕೊಂಡು ಹೇಗೆ ಹೋಗಲಿ), ಅರಿಯೆಂ–ತಿಳಿಯೆನು, ನಮ್ಮಯ್ಯಾ–ನಮ್ಮ ತಂದೆಗೆ ಸಮಾನನೆ, ಸಲಹುಬಾ–ನಮ್ಮನ್ನೆಲ್ಲಾ ಶತ್ರುಭಯವಿಲ್ಲದಂತೆ ಕಾಪಾಡುಬಾರೈ; ದಮ್ಮಯ್ಯಾ–ನಿನ್ನ ಪ್ರಾರ್ಥಿಸಿಕೊಳ್ಳುವೆನು (ಬೇಡಿಕೊಂಬೆನು), ಎನ್ನಂ–ನನ್ನನ್ನು, ಬಳಲಿಸದೆ–ಆಯಾಸವಂಪಡಿಸದೆ, ಇರೈ–ಇರಪ್ಪಾ, ತಮ್ಮನಂ–ನಿನ್ನ ಸಹೋದರನಾದ ಸುರಥನನ್ನು, ಬಮ್ಮೆ–ಬಂದಾವರ್ತಿ, ನೋಡ್ಪೈ–ನೋಡುವನಾಗು, ಎಂದು–ಎಂಬದಾಗಿ, ಅಳಲೊಳು–ಸಂಕಟದಲ್ಲಿ, ಅವಂ–ಆ ಹಂಸಧ್ವಜನು, ಅಳ್ದನು–ಮುಳುಗಿದನು (ಅತ್ತನು) ||

---

ಕಲ್ಮರಂಗಳ್ ಕರಗಿಹೋಗುವಂತೆ ಪ್ರಲಾಪಿಸಿದನು || ೫೩ || ಆಗ ಹಂಸಧ್ವಜನು ತನ್ನ ಅಳಿದಿರುವ ಪುತ್ರನಂ ಕಂಡು ಹಾಪುತ್ರನೇ! ಬೆಟ್ಟದ ಅಗ್ರಭಾಗದಿಂದ ಬಿದ್ದುಹೋಗಲೋ, ಜಲಸಮೃದ್ಧಿಯಾದ ಮಹಾಮಡುವಿನಲ್ಲಿ ಬಿದ್ದು ಮುಳುಗಿಹೋಗಲೋ ನಿನ್ನನ್ನು ನೋಡುತ್ತಲಿರುವ ಕಂಗಳಂ ಕಿತ್ತುಬಿಡಲೋ, ನಾನಾ ದೇವಾದಿ ದೇವತೆಗಳಿಗೆ ಪೂಜಿಸಿ ವರವಂ ಪೊಂದಿ ನಿನ್ನಪಡದ ಒಡಲಂ ಸೀಳಿಹಾಕಲೋ, ನಿನ್ನ ಮಾತುಗಳನ್ನು ಇನ್ನೆಂದಿಗೆ ಕೇಳುವೆನೋ, ಜನ್ಮಜನ್ಮಾಂತರದಲ್ಲಾದರೂ ನಿನಗೆ ಅರ್ಜುನನೊಡನೆ ಯುದ್ಧಮಾಡೆಂಬದಾಗಿಯಾದರೂ, ಅಪ್ಪಣೆ ಮಾಡುತ್ತೇನೆಯೆ? ನಿನ್ನಂ ಕಳೆದುಕೊಂಡ ಶೋಕವನ್ನು ಸಹಿಸಲಾಪನೆ? ಅಯ್ಯೋ ನನ್ನ ಪ್ರೀತಿಪಾತ್ರನಾದ ಮಗುವೇ ನನ್ನ ಸಂಗಡ ಮಾತನ್ನಾಡದೆ ಏಕೆ ಮೌನವಾಗಿರುತ್ತಿ? ನನ್ನೊಡನೆ ಮಾತಾಡು ಎಂದು ಬಹುವಾಗಿ ಪ್ರಲಾಪಿಸುತ್ತ ||೫೪|| ಯುದ್ಧಕ್ಕಾಗಿ ಬಂದೆ, ಧನುರ್ಧಾರಿಯಾಗಿ ಬಂದೆಯಲ್ಲವೆ? ಎಲೈ ತಂದೆಯೆ ಪ್ರೀತಿಯಿಂದ ಮಗನನ್ನು(ಅಪ್ಪ ತಂದೆ ಎಂದುಕರೆವ ರೂಢಿಯುಂಟು) ಪಾರ್ಥನೊಂದಿಗೆ ಹೋರಾಡಿ ಅವನಂ ಜಯಿಸಬೇಡವೆ? ಅಂತಹ ಶೂರನಾದ ನೀನು ಈ ಯುದ್ಧರಂಗದಲ್ಲಿ ಅಂದವಳಿದೇಕೆ ಸುಮ್ಮನಿರುತ್ತಿ? ನಿನ್ನಂ ಕಳದುಕೊಂಡು ಮನೆಗೆ ನಾನೆಂತುಹೋಗಲಿ! ಎಲಾ ಅಪ್ಪಾ ಸಾಮರ್ಥ್ಯದಿಂದ ಜಯಿಸಿ ನಮ್ಮಗಳಂ ರಕ್ಷಿಸುವನಾಗು, ನನ್ನ ಸಂಗಡ ಮಾತಾಡು, ನನ್ನನ್ನು ಆಯಾಸಪಡಿಸಬೇಡ, ನಿನ್ನ ಪ್ರೀತಿಪಾತ್ರನಾದ ತಮ್ಮನಾದ ಸುರಥನಂ ಬಂದಾವರ್ತಿ ನೋಡು, ತಂದೆಯೇ! ಎಂದು, ಬಹು ದುಃಖದಿಂದ

ಸಲಹುಬಾನಮ್ಮಯ್ಯವಾತಾಡುದಮ್ಮಯ್ಯ | ಬಳಲಿಸದಿರೈತಮ್ಮನೊಮ್ಮೆನೋಡೈತಮ್ಮನೆಂದಳಲೊಳವನಾಳ್ದನು || ೫೫ || ಮೋಹಮುಳ್ಳಡೆತಪ್ತತೈಲಪೂರಿತಘನಕ | ಟಾಹದೋಳ್ಕೆಡಪಿಸುವೆನೇತಂದೆತನಯುನಂ | ಬಾಹಿರಂಗದಲೋಕವೆಂದುಜರೆಯದೆ ಲೋಕವಿಾಗಹಲುಬಲ್ತನ್ನನು || ದ್ರೋಹಮಂಮಾಡಿದೆಂನಿನಗೆನ್ನಮೇಲೆಮುಳಿ | ದಾಹವದೊಳಳಿದ್ಯೆಸುಧನ್ವಕಾದೆಂಣೆಯೋ | ಳ್ದೇಹಮಂಕಾಯ್ದುಕೃಷ್ಣಂಕಾದಲಹಿತನೇಕಾದನ್ಯೆನಿನಗೆಂದನು ||೫೬|| ಅಣ್ಣದೇವಂಕದನಮಂಜಯಿಸಿಬಹನೆಂದು | ಬಣ್ಣದ ಸೊಡರ್ಗಳಂಕೈಗೈಸುವನುಜೆಯಂ | ಹುಣ್ಣಿಮೆಯುಶಶಿಯಂದದಾಸ್ಯದೆಳೆನಗೆಯೊಳೈತಹನಿನ್ನವಲ್ಲಭೆಯುನು || ಹಣ್ಣಿದುತ್ಸಾಹ

---

ಅ|| ವಿ|| ಬಿಲ್ಲಂ – ಪಿಡಿದು, ಬಿಲ್ವಿಡಿದು, ಕ್ರಿ, ಸ, ಫಲುಗುನೀನಕ್ಷತ್ರದಲ್ಲಿ ಹುಟ್ಟಿದವನು ಫಲ್ಗುಣ, ಕಂದ-ಮಗು, ಗಡ್ಡೆ, ಮೇಘ, ತಾವರೆಗಡ್ಡೆ, ಕದನ–ಯುದ್ಧ, ||೫೫||

ಟೀ|| ತಂದೆ–ಅಯ್ಯನೆ, ಮೋಹಂ-ಮನಸ್ಸಿನಲ್ಲಿ ಆಶೆಯು, ಉಳ್ಳೊಡೆ – ಇದ್ದಿದ್ದರೆ, ತಪ್ತ-ಕಾದಿದ್ದ, ತೈಲ – ಎಣ್ಣೆಯಿಂದ, ಪೂರಿತ-ತುಂಬಿದ್ದ, ಘನ-ಬಹು ದೊಡ್ಡದಾದ, ಕಟಾಹದೋಳ್-ದೊಡ್ಡಬಾಣಲಿಗೆ, [ಕೊಪ್ಪರಿಗೆ]ಯಲ್ಲಿ, ತನಯುನಂ-ಮಗನನ್ನ, ಕೆಡವಿಸುವನೆ-ಬೀಳಿಸುತ್ತಲಿದ್ದನೆ, ಬಾಹಿರಂಗದ–ಹೊರಗಡೆ ಇರುವಂಥ, ಶೋಕಂ–ವ್ಯಸನವು, ಎಂದು – ಎಂಬದಾಗಿ, ಲೋಕಂ-ಪ್ರಪಂಚದ ಜನವು. ಈಗಲ್–ಈ ಸಮುಯದಲ್ಲಿ, ಹಲುಬಲ್ – ಜ್ಞಾಪಿಸಿಕೊಂಡು ದುಃಖಪಟ್ಟರೆ, ತನ್ನನು–ಎನ್ನನ್ನು, ಜರೆಯದೆ – ನಿಂದಿಸುವದಿಲ್ಲವೆ, ತಾಂ – ನಾಸಾದರೊ, ನಿನಗೆ ದ್ರೋಹಮಂಮಾಡಿದೆಂ-ನಿನಗೆ ಪಾಪವನ್ನು ಮಾಡಿದೆ [ಅನ್ಯಾಯವಂಮಾಡಿಪೆನು] ಸುಧನ್ವ-ಎಲ ಸುಧನ್ವನೆ, ಎನ್ನಮೇಲೆ – ನನ್ನಲ್ಲಿ, ಮುಳಿದು–ಕೋಪಿಸಿಕೊಂಡು, ಆಹವದೊಳು–ಕಾಳಗದಲ್ಲಿ [ಬವರದಲ್ಲಿ] ಅಳಿದ್ಯೆ-ಮಡಿದೆಯುಲ್ಲವೆ, ಕಾದ–ಬಿಸಿಯಾಗಿದ್ದ, ಎಣ್ಣೆಯೋಳ್-ತೈಲದಲ್ಲಿ, ದೇಹಮುಂ–ನಿನ್ನ ಶರೀರವನ್ನು, ಕಾಯ್ದು-ರಕ್ಷಿಸಿದ, ಕೃಷ್ಣಂ-ಶ್ರೀ ಕೃಷ್ಣನು, ಕಾದಲ್–ನಿನ್ನಲ್ಲಿ ಜಗಳವಾಡಲು, ಅಹಿತಂ–ಹಗೆಯು, ಏಕಾದನ್ಯೆ-ಏನು ಕಾರಣನಾದನಯ್ಯ, ಎಂದನು–ಎಂಬದಾಗಿ ಹೇಳಿದನು.

ಅ|| ವಿ|| ತಪ್ತವಾದ – ತೈಲ, ತಪ್ತತೈಲ, ವಿ. ಪೂ. ಕ. ತೈಲದಿಂದ ಪೂರಿತ-ತೈಲಪೂರಿತ ತೃ, ತ. ಲೋಕ–ಜನ, ಪ್ರಪಂಚ, ಹಿತನಲ್ಲದವನು ಅಹಿತ, ಶತ್ರು ||೫೬||

ಟೀ|| ಕಂದ–ಎಲೈ ಮುಗುವೆ, [ಎಲೈ ಸುಧನ್ವನೆ] ಅಣ್ಣದೇವಂ–ಅಗ್ರಜನಾದ ಸುಧನ್ವನು, ಕದನಮುಂ-ಕಾಳಗವನ್ನು, ಜಯಿಸಿ–ಗೆಲವನ್ನು ಹೊಂದಿ, ಬಹಂ ಎಂದು – ಬರುವೆನೆಂಬದಾಗಿ, ಬಣ್ಣದ ಸೊಡರ್ಗಳಂ – ಬಣ್ಣದಿಂದ ದೀಪಗಳನ್ನು, ಕೈಗೈಸುವ–ಕರದಲ್ಲಿ ಧರಿಸಿ ಬರುತ್ತಲಿರುವ, ಅನುಜೆಯಂ-ಸಹೋದರಿಯನ್ನು (ತಂಗಿಯುನ್ನು), ಹುಣ್ಣುಮೆಯು-ಪೂರ್ಣಿಮಾದಿನದಲ್ಲಿರ್ಪ, ಶಶಿಯ – ನಿಶಾಕರನ, ಅಂದದ–ಚಂದದಿಂದಿರುವ, (ರೀತಿಯಲ್ಲಿರುವ) ಆಸ್ಯದ–ಮುಖವುಳ್ಳ, ಎಳೆನಗೆಯೊಳು – ಮಂದಹಾಸದಿಂ ಯುಕ್ತಳಾದವಳಾಗಿ, ಐತಹ–ಬರುತ್ತಲಿರ್ಪ, ನಿನ್ನ–ನಿನ್ನಯ, ವಲ್ಲಭೆಯುನು – ಪತ್ನಿಯನ್ನು, ಹಣ್ಣಿದ–ಪಕ್ವವಾದ, (ಫಲವುಳ್ಳ) ಎಂದರೆ–ಅಧಿಕವಾದ, ಉತ್ಸಾಹವಂಕೇಳ್ದು-ಯುದ್ಧದ ಔತ್ಸುಕ್ಯವಂ ಆಲಿಸಿ (ತನ್ನ ಪುತ್ರನು ಯುದ್ಧದಲ್ಲಿ ಜಯವಂ ಹೊಂದಿಬರ್ಪನೆಂಬ ವಿಷಯುವನ್ನು ಕೇಳಿ) ತನ್ನ–ತನ್ನಯ, ಒಡಲೊಳು–ಹೊಟ್ಟೆಯಲ್ಲಿ, (ಶರೀರದಲ್ಲಿ) ತಣ್ಣಸಂ-ಹರ್ಷವೆಂಬ ತನುವನ್ನು, ತಾಳ್ದು-ಪಡೆದು, ಬಹ–ಬರುತ್ತಲಿರ್ಪ, ನಿಜಮಾತೆಯಂ–ನಿನ್ನ ತಾಯಿಯನ್ನು, ವಿಪರೀತಂ–ಉತ್ಸಾಹವಿಲ್ಲದಿರುವ ಎಂದರೆ, ಸಂತೋಷಭಂಗವು, ಆದೊಡೆ–ಆದರೆ, ಅಕಟ-ಅಯ್ಯೋ, ಕಣ್ಣಾರೆ-ಪೂರ್ತಿಯಾದ ನೋಟದಿಂದ (ಕಣ್ಣುತುಂಬ) ಎಂತು-ಅದುಹೇಗೆ, ಕಾಣ್ಬೆಂ–ಈಕ್ಷಿಸಲಿ, (ಕಾಣಲಿ) ತನಯು–ಎಲೈ ಪುತ್ರನಾದ ಸುಧನ್ವನೆ, ಹೇಳು, ಎಂದನು (ನನ್ನಲ್ಲಿ) ಮಾತನಾಡೆಂದು ಹೇಳಿದನು.

---

ಅತ್ತನು ||೫೫|| ಹಾಗೆ ನಿನ್ನಲ್ಲಿ ಪ್ರೀತಿಯುದ್ದಿದ್ದರೆ ಕಾದೆಣ್ಣೆ ಗೊಪ್ಪರಿಗೆಯಲ್ಲಿ ಕೆಡವಿಸುತ್ತಲಿದ್ದೆನೋ, ಆಗ ಆ ಕಾರ್ಯಮಾಡಿ ಈಗ ನಿನ್ನನ್ನು ನೋಡಿ ಅತ್ತರೆ ಲೋಕವು ನನ್ನನ್ನು ದೂಷಿಸುವದಿಲ್ಲವೆ? ಆದ್ದರಿಂದ ನನ್ನಲ್ಲಿ ಕುಪಿತನಾಗಿ ಈ ಯುದ್ಧರಂಗದಲ್ಲಿ ಪ್ರಾಣಬಿಟ್ಟಿರುತ್ತಿ, ನಿನಗೆ ನಾನು ಬಹು ದ್ರೋಹಿಯಾದೆನು, ನೀನು ಕಾದೆಣ್ಣೆಯಲ್ಲಿದ್ದಾಗ ನಿನ್ನನ್ನು ಸಲಹಿದ ಶ್ರೀ ಕೃಷ್ಣನು ನಿನ್ನೊಡನೆಯೆ ಯುದ್ಧಮಾಡಲು ಶತ್ರುವೇಕಾದನು? ಎಂಬದಾಗಿ ರೋದಿಸುತ್ತ ಅಪ್ಪ ಮಗುವೇ || ೫೬ || ನಮ್ಮ ಅಗ್ರಜನಾದ ಸುಧನ್ವನು ಯುದ್ಧದಲ್ಲಿ ಜಯವಂ ಹೊಂದಿ ಬರುವನೆನುತ ಬಣ್ಣದಾರತಿಗಳಂ ಧರಿಸಿ ಬರುತ್ತಲಿರುವ ನಿನ್ನ ಸಹೋದರಿಯನ್ನು, ಪೂರ್ಣಿಮಾಚಂದ್ರನಂತೆ ಚಂದದ ಆಸ್ಯಯುತಳಾದ ಮಂದಹಾಸದಿಂದೊಪ್ಪುತ ಬರುತಲಿರುವ ನಿನ್ನ ಪತ್ನಿಯನ್ನು, ಪರಿಪಕ್ವವಾದ (ಫಲಿತವಾದ) ಹೃದಯವುಳ್ಳ ಉತ್ಸಾಹಯುತಳಾಗಿ ನಿನ್ನ ಜಯೋತ್ಸವವಂ ನೋಡಲೋಸುಗ ಬರುತ್ತಲಿರ್ಪ ನಿನ್ನಯ ಮಾತೆಯನ್ನೂ ಭಗ್ನೋತ್ಸಾಹಯುತನಾಗಿ, ಅವರಂ ನನ್ನ ಕಣ್ಣಾರ ಹೇಗೆ ಕಾಣಲಿ, ಎಲೈ ಮಗುವೇ ನನ್ನಲ್ಲಿ ಮಾತ

ಪಟೊಳಗೆ | ಕಣ್ಣಸಂತಳ್ಪಬಹನಿನ್ನನಿಜಮಾತೆಯುಂ | ಕಣ್ಣಾರೆಕಾಣ್ಬೆನೆಂತಕಟವಿಪರೀತಮಾದೊಡೆತನಯಹೇಳೆಂದನು ||೫೭||
ತಾತನಲ್ಲನೆನಿನಗೆನೆನ್ನೊಳಿಂತಕಟ | ಮಾತಾಡದಿಹರೆನಿನ್ನಂಪಡೆದಳಂವೀರ | ಮಾತೆಯೆಂಬರ್ಕಟ್ಟುನರನಹಯಮುಂಕಾ
ದನಡೆಕೃಷ್ಣಫಲುಗುಣರೊಳು || ಏತಕೆಬರಿದೆಸುಮ್ಮನಿಹೆಕಂಠನಾಲೆಯೋಳ್ | ಜಾತಿನಾಯಕರತ್ನಮಂತೆಗೆದುಬಿಸುಟಂತೆ
ಧಾತುಗೆಟ್ಟದೆತನ್ನಬಲಮೆಂದುಹಲುಬಿದಂಧರೆಯೋಳ್ಪೊರಳ್ದುಮಲಗಿ || ೫೮ || ಅಂಬಿಸಿದನತಿಶೋಕಭಾರದಿಂಮೊಗಮಿಟ್ಟು |
ಚುಂಬಿಸಿದನಡಿಗಡಿಗೆನಾನಾಪ್ರಕಾರದಿಂ | ಪಂಬಲಿಸಿಸುತನಗುಣಶೀಲಂಗಳಂನೆನೆದುಹಳವಳಿಸಿದಂಪೇರ್ಚಿದ || ಕಂಬನಿಯ
ಕಡಲೊಳಗೆಡಾವರಿಪವಡಬಶಿಖಿ | ಯೆಂಬಿನಿಂಕಾಣಿಸುನಬಲ್ಗಿಚ್ಚಿಗವನೊಡಲ | ನಿಂಬುಗೊಟ್ಟಂಮರುಗುತಿರ್ದುದುಸಮ

---

ಅ|| ವಿ|| [ಹುಣ್ಣಿಮೆಯ–ಶಶಿ, ಹುಣ್ಣಿಮೆಯಶಶಿ] ಅ. ಸ [ಅನು-ತನ್ನಂ ಅನುಸರಿಸಿ, ಜೆ–ಹುಟ್ಟಿದವಳು, ಅನುಜೆ] ಶಶಿ [ತ್ಸ] (ದ್ಭ) ಸಸಿ-ಚಂದ್ರ (ಮೊಲವುಳ್ಳವನು) (ಹಣ್ಣಿದ–ಉತ್ಸಾಹ, ಹಣ್ಣಿದುತ್ಸಾಹ) ವಿ ಪೂ. ಕ. ||೫೭||

ಟೀ|| ಎಲೈ ಕಂದ, ತಾಂ – ತಾನು, ನಿನಗೆ, ತಾತಂ–ನಿನಗೆ ಪಿತನು, ಅಲ್ಲವೆ-ಆಗಿಲ್ಲವೆ, ಎನ್ನೊಳು – ನನ್ನ ಸಂಗಡ, ಇಂತು–ಈ ರೀತಿಯಾಗಿ, ಮಾತಾಡದೆ–ಮಾತನ್ನಾಡದೆ, ಇಹರೆ – ಇರುತ್ತಾರೆಯೆ ! (ಇರುವದಿಲ್ಲವಲ್ಲ) ಅಕಟ–ಅಯ್ಯೊ, ಅಕ್ಕಟಾ (ಅಹಾ) ನಿನ್ನಂ–ನಿನ್ನನ್ನು, ಪಡದಳಂ–ಪ್ರಸುವಿಸಿದವಳಂ ಹೆತ್ತವಳಂ, ವೀರಮಾತೆ-ಶೂರನಜನನಿಯು, ಎಂಬರ್-ಎನ್ನುತ್ತಾರಲ್ಲವೆ ನರನ-ಪಾರ್ಥನ, ಹಯಮಂ–ಅಶ್ವವನ್ನು, ಕಟ್ಟು–ಬಂಧಿಸುವನಾಗು, ಕೃಷ್ಣಫಲುಗುಣರೊಳು – ನರನಾರಾಯಣರಲ್ಲಿ (ಕೃಷ್ಣ ಪಾರ್ಥರೊಂದಿಗೆ) ಅವರಸಂಗಡ, ಕಾದು–ಜಗಳಮಾಡು, ನಡೆ–ಹೊರಡುವನಾಗು, ಏತಕೆ–ಏನುಕಾರಣ, ಬರಿದೆ–ವ್ಯರ್ಥಮಾಗಿ, ಸುಮ್ಮನಿಹೆ–ಮಾತನಾಡದೆ ಯಿರುತ್ತೀ, ಕಂಠನಾಲೆಯೋಳ್–ಕಂಠೀಸರದಲ್ಲಿ (ಕತ್ತಿಗೆ ಧರಿಸಿರುವ ಸರದಲ್ಲಿ) ಇರ್ದ–ಇದ್ದಂಥ, ಜಾತಿನಾಯಕ–ಬಳ್ಳೀ ಯೋಗ್ಯಮಾದ, ರತ್ನಮಂ–ರನ್ನಮಣಿಯಂ, ತೆಗದು – ತೆಗೆದುಕೊಂಡು, ಬಿಸುಟಂತೆ – ಚೆಲ್ಲಿದ ಹಾಗೆ ಬೀಸುವ ರೀತಿಯಿಂದ, ತನ್ನಬಲಂ–ತನ್ನಯ ಸೇನೆಯು, ಧಾತುಗೆಟ್ಟದೆ–ಕಾಂತಿಹೀನವಾಗಿರುವುದು (ಧೈರ್ಯಗುಂದಿದೆ) ಎಂದು–ಎಂಬದಾಗಿ, ಧರೆಯೋಳ್–ಪೃಥಿವಿಯಲ್ಲಿ ಮಲಗಿ-ಮಲಗಿಕೊಂಡು, ಪೊರಳ್ದು–ಹೊರಳಾಡಿ, ಹಲುಬಿದಂ–ಪ್ರಲಾಪಿಸಿದನು.

ಅ|| ವಿ|| ತಾತ (ತ್ಸ) ತಂದೆ (ತ್ಭ) ಕೃಷ್ಣನು ಫಲುಗುಣನು ಕೃಷ್ಣಫಲುಗುಣರು (ದ್ವಂ. ಸ.) ಮಾಲೆ (ದ್ಭ) ಮಾಲಾ (ತ್ಸಮ) ರತ್ನ (ತ್ಸ) ತತುನ (ದ್ಭ) ಧಾತು–ಕಾಂತಿ, ಬೆಳ್ಳಿ ಮುಂತಾದ ಲೋಹಗಳು ||೫೮||

ಟೀ|| ಹಂಸಧ್ವಜಂ – ಮರಾಳಧ್ವಜನು, ಅತಿ–ಹೆಚ್ಚಾದ, ಶೋಕಭಾರದಿಂ – ದುಃಖಾತಿಶಯದಿಂದ, ಅಂಬಿಸಿದಂ–ಕಂಬನಿಯನ್ನು ಸುರಿಸಿದನು, ಮೊಗಂ-ತನ್ನ ಮುಖವನ್ನು, ಇಟ್ಟು – ಸುಧನ್ವನ ಮುಖದಮೇಲಿಟ್ಟು, ಚುಂಬಿಸಿದಂ – ಚುಂಬನ ಮಾಡಿಕೊಂಡನು (ಮುದ್ದುಕೊಟ್ಟನು) ಅಡಿಗಡಿಗೆ-ಬಾರಿಬಾರಿಗು (ಆಗಿಂದಾಗ್ಯೆ) ಪಂಬಲಿಸಿ–ಅತ್ತು (ಕಳವಳಗೊಂಡು) ಸುತನ–ಮಗನಾದ ಸುಧನ್ವನ, ಗುಣಶೀಲಂಗಳಂ–ಸದ್ಗುಣವೂ ಮತ್ತು ನಡವಳಿಕೆಯೂ ಇವುಗಳನ್ನೂ, ನೆನದು-ಜ್ಞಾಪಿಸಿಕೊಂಡು, ಹಳವಳಿಸಿದಂ–ಚಿಂತಿಸಿದನು, ಪೇರ್ಚಿದ-ಅಧಿಕವಾದ, ಕಂಬನಿಯ – ನೇತ್ರೋದಕದ, ಕಡಲೊಳಗೆ–ಜಲಧಿಯಲ್ಲಿ, ಡಾವರಿಪ–ದಹಿಸುತ್ತಲಿರುವ, ವಡಬಶಿಖಿ – ಬಡಬಾಲನನು, ಎಂಬಿನಿಂ-ಎನ್ನುವಹಾಗೆ, ಕಾಣಿಸುವ–ಕಂಡುಬರುವ, ಬಲ್ಗಿಚ್ಚಿಗೆ – ಅಧಿಕವಾದ ಬೆಂಕಿಗೆ, ಅವಂ – ಆ ಹಂಸಧ್ವಜನು, ಇಂಬುಗೊಟ್ಟಂ – ಆಶ್ರಯವನ್ನು ಕೊಟ್ಟನು, ಆತನ-ಆ ಸುಧನ್ವನ, ಸುತ್ತಲೂ ಎಲ್ಲಾ ಕಡೆಯಲ್ಲಿಯೂ, ಸಮಸ್ತಪರಿವಾರಂ–ಸುತ್ತಲಿರ್ದ ಸಮಸ್ತರೂ, ಮರುಗುತಿರ್ದುದು–ಪ್ರಲಾಪಿಸುತ್ತಿತ್ತು.

ಅ|| ವಿ|| ಗುಣ–ನಡತೆ ಬಿಲ್ಲಿನ ಹಗ್ಗ (ಕಣ್–ಪನಿ ಕಂಬನಿ) ಅ. ಸಂ. ಬಡಬ – ಸಮುದ್ರದಲ್ಲಿರುವ ಹೆಣ್ಣು ಕುದುರೆಯ ಮುಖದಲ್ಲಿರುವ ಅಗ್ನಿಗೆ (ಬಡಶಿಖಿ ಎಂಬರು).

ಟೀ|| ಕಾಳಗಕೆ – ಯುದ್ಧಕ್ಕೆ, ಮುಂಕೊಂಡು – ಮುಂದಾಗಿನುಗ್ಗಿ, ನಡೆಸರ್ – ಹೋಗತಕ್ಕವರು, ಇನ್ನು – ಇನ್ನು ಮುಂದೆ, ಆರ್ – ಯಾರಿರುತ್ತಾರೆ [ನಿನ್ನ ವಿನಹ ಯಾರೂ ಇಲ್ಲ], ಇನ್ನು – ಮುಂದೆ, ತಮಗೆ – ನಮ್ಮಗಳಿಗೆ ಎಂದರೆ ಸೈನ್ಯ

---

ನಾಡೆಂದು ಹೇಳಿದನು || ೫೭ || ಮತ್ತು ಎಲೈ ಕಂದ ! ನಾನು ನಿನಗೆ ತಂದೆಯಲ್ಲವೇ ? ನನ್ನಲ್ಲಿ ಮಾತನಾಡದೆ ಈ ರೀತಿಯಾಗಿ ಮೌನದಿಂದಿರುವರೆ ! ಅಯ್ಯೋ ನಿನ್ನನ್ನು ಹೆತ್ತವಳಿಗೆ ವೀರಮಾತೆಯೆಂಬರಲ್ಲವೆ ? ಅರ್ಜುನನ ಕುದುರೆಯಂ ಬಂಧಿಸಿ, ಕೃಷ್ಣಾರ್ಜುನರೊಡನೆ ಕಾಳಗಮಾಡಲ್ಕೆ ನಡೆ, ಏನುಕಾರಣ ನನ್ನೊಡನೆ ಮಾತನಾಡದೆ ಮೌನವಾಗಿರುತ್ತಿ ? ಕಂಠಹಾರದಲ್ಲಿ ಜಾತಿರತ್ನದ ಮಣಿಯನ್ನು ತೆಗೆದು ಬಿಸುಟಂತೆ ತನ್ನ ಸೈನ್ಯವೆಲ್ಲಾ ಕಾಂತಿಹೀನವಾಗಿರ್ಪುದು, ಎಂದು ಭೂಮಿಯಲ್ಲಿ ಹೊರಳಾಡಿ ಪ್ರಲಾಪಿಸಿದನು || ೫೮ || ಮತ್ತು ಹಂಸಧ್ವಜನು ಅಧಿಕವಾದ ಶೋಕದಿಂದ ಕಣ್ಣೀರನ್ನು ಸುರಿಸುತ್ತ ಸುಧನ್ವನ ಮುಖದಲ್ಲಿ ತನ್ನ ಮುಖವನ್ನಿಟ್ಟು ಮುದ್ದಾಡಿ ಅಡಿಗಡಿಗೆ ಹಂಬಲಿಸಿ, ಕಳವಳಂಗೊಂಡು ಮಗನ ಪ್ರೇಮೆಯನ್ನೂ, ಸದ್ಗುಣಾವಳಿಗಳನ್ನೂ

ಸ್ವಪರಿವಾರ ಮಾತನಸುತ್ತ್ಯಲು || ೫೯ || ಕಾಳಗಕೆಮುಂಕೊಂಡುನಡೆವರಾರಿನ್ನು | ಊಳಿಗವನಿತ್ತುಬೆಸಸುವರುಂಟೆನೀನೆ | ಟ್ಟಾಳೆಂಬರೀಗಳಿಂತಳಿದಪರೆದಾತಾರವೀರ ಸುಕುಮಾರಧೀರ || ಕಾಳಾದುದಕಟಚಂಪಕನಗರದರಸುಗಳ | ಬಾಳುವೆಮಹಾದೇವಹಾಯೆಂದೊರಲ್ದುಪಡೆ | ಗೋಳಿಟ್ಟುದಾನೆಕುದುರೆಗಳೊರೆವಕಂಬನಿಬಳಲ್ಗಿವಿಗಳಂಜೋಲ್ದವು || ೬೦ || ಬಳಿಕಾಸುಧನ್ವನ ಸಹೋದರಂಸುರಥಂ | ಬಹಳಶೋಕಭಾರಮಂತಳೆದಿರ್ದವಂಕೂಡೆ | ತಿಳಿದುಕಡುಗೋಪದಿಂಬಿಲ್ಗೊಂಡು ನುಡಿದನೆಲೆ ತಾತ ಕೇಳೀತನಿಂದು || ನಳಿನನಾಭನಮುಂದೆ ಭಾಷೆಯಂ ಪೂರೈಸಿ | ಕೊಳುಗುಳದೊಳಳಿದ ನಿದಕಿನ್ನುದುಃಖಿಸಲೇತ | ಕಳದಿ

---

ದ ಜನಕ್ಕೆ) ಊಳಿಗವಂ-ಕಾರ್ಯವನ್ನು, ಇತ್ತು-ದಯಪಾಲಿಸಿ, ಬೆಸಸುವರ್-ಈರೀತಿಯಾಗಿ ಮಾಡೆಂದು ಆಜ್ಞೆಮಾಡತಕ್ಕವರು, ಉಂಟೆ-ಇದ್ದಾರೆಯೆ, ನೀನೆ-ನೀನೊಬ್ಬನೆ, ಕಟ್ಟಾಳು-ಯುದ್ಧಗಾರನು (ಬಹು ಸಮರ್ಥನು) ಎಂಬರ್- ಎನ್ನುತ್ತಾರೆಯಲ್ಲವೆ, ಈಗಳ್-ಈಗಲಾದರೊ, ಇಂತು-ಹೀಗೆ, ಅಳಿದಪರೆ-ಮರಣಹೊಂದುವರೆ, ದಾತಾರ-ಎಲೈ ದಾತೃವೇ (ಚಾಗಿಯೆ) ವೀರ-ಪರಾಕ್ರಮಶಾಲಿಯೇ, ಸುಕುಮಾರ-ನಮ್ಮ ರಾಜನಾದ ಹಂಸಧ್ವಜನಿಗೆ ಸುಪುತ್ರನೆ, ಧೀರ-ದಿಟ್ಟತನವುಳ್ಳವನೆ (ಧೈರ್ಯಶಾಲಿಯ) ಅಕಟಾ-ಆಹಾ, (ಅಯ್ಯೋ) ಚಂಪಕನಗರದ-ಚಂಪಕಾವತಿಯೆಂಬ ಪಟ್ಟಣದ, ಅರಸುಗಳ-ರಾಜರುಗಳ, ಬಾಳುವೆ-ಬದುಕುವಿಕೆಯೆ, (ಜೀವಿತಕಾಲವೆ) ಕಾಳಾದುದು-ನಾಶವಾಗಿ ಹೋಯಿತು, ಮಹಾದೇವ-ಶ್ರೇಷ್ಠನಾದ ಸ್ವಾಮಿಯೆ! (ಈಶ್ವರನೆ) ಹಾ-ಕಷ್ಟವು, ಎಂದು-ಎಂಬದಾಗಿ, ಒರಲ್ದು-ಗಟ್ಟಿಯಾಗಿ ಕೂಗಿ, ಪಡೆ-ಸುಧನ್ವನಕಡೆ (ಸೈನ್ಯವು,) ಗೋಳಿಟ್ಟುದು-ಪ್ರಲಾಪಿಸಿತು, ಆನೆಕುದುರೆಗಳು-ಗಜಾಶ್ವಗಳು, ಒರೆವ-ದ್ರವಿಸುತ್ತಲಿರುವ, (ಸ್ರವಿಸುತ್ತಲಿರುವ) ಕಂಬನಿ-ಬಾಷ್ಪವು, ಬಳಲ್ಗಿವಿಗಳಂ-ವ್ಯಥೆಯಿಂದ ಆಯಾಸಪಟ್ಟ ಕರ್ಣಗಳನ್ನು, ಯೋಚಿಸಿ, ಜೋಲ್ದವು-ಜೋಲುಬಿದ್ದವು (ಇಳೀಬಿದ್ದವು) ||

ಅ|| ವಿ|| ಕುಮಾರ (ತ್ಸ) ಕುವರ (ತ್ಭ) ಚಂಪಕ, (ತ್ಸ) ಸಂಪಿಗೆ (ದ್ಭ) ಚಂಪಕವೆಂಬ ನಗರ, ಚಂಪಕಾನಗರ, ಸಂ. ಪೂ. ಕ. ಬಲ್ಲಿತ್ತು+ಕಿವಿ=ಬಲ್ಗಿವಿ. ವಿ. ಪೂ. ಕ. ||೬೦||

ಟೀ|| ಬಳಿಕ-ತರುವಾಯ, ಆ ಸುಧನ್ವನ-ಅಲ್ಲಿ ಸತ್ತುಬಿದ್ದಿರುವ ಸುಧನ್ವನ, ಸಹೋದರಂ-ಅನುಜನಾದ, ಸುರಥಂ-ಸುರಥನೆಂಬುವನು, ಬಹಳ-ಅತ್ಯಧಿಕಮಾದ, ಶೋಕಭಾರಮಂ-ಬಹು ವ್ಯಥೆಯನ್ನು, ತಳೆದಿರ್ದವಂ-ಹೊಂದಿದ್ದ ಸುರಥನು, ಕೂಡೆ-ತಕ್ಷಣವೆ, ತಿಳಿದು-ಜ್ಞಾಪಕಕ್ಕೆ ತಂದುಕೊಂಡು, ಕಡು-ಹೆಚ್ಚಾದ, ಕೋಪದಿಂ-ಮುಳಿಸಿನಿಂದ, ಬಿಲ್ಗೊಂಡು-ಧನುರ್ಧಾರಿಯಾಗಿ, ನುಡಿದಂ-ಮುಂದಿನರೀತಿಯಾಗಿ ಆಡಿದನು, ತಾತ-ಎಲೈ ಜನಕನೆ! ಕೇಳು-ಆಲಿಸು, ಈತಂ-ಈ ಅಣ್ಣನಾದ ಸುಧನ್ವನು, ಇಂದು-ಈ ದಿನಸ, ನಳಿನನಾಭನ ಮುಂದೆ-ಪದ್ಮನಾಭನಾದ ಶ್ರೀ ಕೃಷ್ಣನ ಎದುರಾಗಿ, ಭಾಷೆಯುಂ-ಆಡಿದ ಮಾತಂ ನೆರವೇರಿಸಿ, ಕೊಳುಗುಳದೊಳ್ - ಕದನದಲ್ಲಿ (ಯುದ್ಧದಲ್ಲಿ), ಅಳಿದಂ - ಮೃತಿಯುಂ ಪೊಂದಿದನು, ಇದಕೆ - ಈ ಕಾರ್ಯಕ್ಕಾಗಿ, ಇನ್ನು-ಇನ್ನುಮುಂದೆ, ದುಃಖಿಸಲೇತಕೆ-ವ್ಯಥೆಯನ್ನು ಪಡುವುದು ಏಕೆ, (ಏನೂ ಫಲವಿಲ್ಲ, ಸತ್ತವನು ಎಂದಿಗೂ ಬಾರನು), ಅಳದಿರರ್-ಸಂತಾಪ ಪಡದೇ ಇರು, ಧುರದೊಳ್-ಕಾಳಗದಲ್ಲಿ, ಎನ್ನಾಟೋಪಮುಂ-ನನ್ನ ಪರಾಕ್ರಮಾತಿಶಯವನ್ನು, ನೋಡು-ಈಕ್ಷಿಸು, ಎನಲ್ಕೆ-ಎಂದು ಹೇಳಲಾಗಿ, ಅರಸಂ-ರಾಜನಾದ ಹಂಸಧ್ವಜನು, ಇಂತೆಂದನು-ಮುಂದಿನ ರೀತಿಯಿಂ ಪೇಳ್ದನು ||

ಅ|| ವಿ|| ಅವನು+ಸುಧನ್ವಂ=ಆ ಸುಧನ್ವಂ, ಗಮಕ. ಸ. ಸಹ+ಉದರ=ಸಹೋದರ, ಗುಣ. ಸ. ಬಿಲ್+ಕೊಂಡು=ಬಿಲ್ಗೊಂಡು, ಗ. ಆದೇಶ. ಸಂ. (ನಳಿನವೇನಾಭಿಯಲ್ಲುಳ್ಳವನು, ನಳಿನನಾಭ) ಬಹು. ಸ. ||೬೧||

---

ನೆನೆನೆನೆದು ದುಃಖಿಸಿದನು, ಮತ್ತು ನೇತ್ರೋದಕವೆಂಬ ಜಲಧಿಯಲ್ಲಿ ಶರೀರ ತಾಪವೆಂಬ ಬಡವಾನಲಕ್ಕೆ ಆಶ್ರಯನಾಗಿದ್ದನು ಆಬಳಿಕ ಆ ಸುಧನ್ವನ ಸುತ್ತಲೂ ತನ್ನ ಪರಿವಾರವೆಲ್ಲಾ ಅತಿಯಾದ ದುಃಖದಿಂದ ಪ್ರಲಾಪಿಸುತ್ತಿತ್ತು ||೫೯|| ಇನ್ನು ಮುಂದೆ ಯುದ್ಧಕ್ಕೆ ಮುಂದಾಗಿ ನುಗ್ಗಿ ನಮ್ಮೆಲ್ಲರಿಗೂ ನೀವುನೀವು ಇಂತಿಂತಹ ಕಾರ್ಯವನ್ನು ಹೀಗೀಗೆ ಮಾಡತಕ್ಕುದೆಂತ ಅಪ್ಪಣೆ ಕೊಡುವರಾರು? ಅಯ್ಯೋ! ದುರ್ದೈವವೆ! ಎಲೈ ದಾತೃವೆ! ವೀರನಾದ ನಮ್ಮರಾಜ ಹಂಸಧ್ವಜನ ಪುತ್ರನಾದ ಧೈರ್ಯಶಾಲಿಯೇ! ಚಂಪಕಾವತೀ ಪಟ್ಟಣದ ರಾಜ್ಯಭಾಗ ಕ್ರಮವು ಇನ್ನು ಪರಿಸಮಾಪ್ತಮಾದುದೆ? ಆಹಾ ಕಷ್ಟವು ಎಂಬದಾಗಿ ಆ ಸುಧನ್ವನ ಚತುರಂಗಬಲವೆಲ್ಲಾ ಕಂಬನಿಯಂ ಸುರಿಸುತ್ತ ಕಿವಿಗಳಂ ಜೋಲ್ದುವು || ೬೦ || ಬಳಿಕ ಆ ಸುಧನ್ವನ ಸಹೋದರನಾದ ಸುರಥನು ಅತ್ಯಂತಶೋಕದಿಂದೊಡಗೂಡಿದ್ದು, ಕೂಡಲೆ ಅಂತರಂಗದಲ್ಲಿ ಭಾವಿಸಿ, ಧನುರ್ಧಾರಿಯಾಗಿ, ಎಲೈತಂದೆಯೇ! ಈ ನಮ್ಮ ಅಣ್ಣನಾದ ಸುಧನ್ವನು ಈ ದಿನ ಪದ್ಮನಾಭನ ಎದುರಾಗಿ ಪ್ರತಿಜ್ಞೆಯಂ ಮಾಡಿ ಅದಂ ನೆರವೇರಿಸಿದನಂತರ

ಧುರದೊಳೆನ್ನಾಟೋಪಮಂ ನೋಡೆನಲ್ಕರಸನಿಂತೆಂದನು ॥ ೬೧ ॥ ಉಂಟುಕೃಷ್ಣನಮುಂದೆಭಾಷೆಯಂ ಪೂರೈಸಿ । ಟೆಂಟಣಿ ಸುವೊಡಲಂತೊರೆದುಮುಕ್ತಿರಾಜ್ಯಮಂ । ವೆಂಟಣಿಸಿಕೊಂಡಂಸುಧನ್ವನಿದಕಾಗಿಧೃತಿಗೆಟ್ಟಂತಳಲ್ವುದಿಲ್ಲ ॥ ಕಂಠಮಂಕತ್ತರಿಸ ಲಾಶಿರಂತನ್ನೆಡೆಗೆಬಟ್ಟೆಗೆಡದೈದಿದೊಡೆತೆಗೆದೆತ್ತಿಕೊಂಡುವೈ । ಕುಂಠನೀಕ್ಷಿಸಿಮತ್ತೆಬಿಸುಟನೆಂಬುದಕೆಮರುಗುವೆನೆಂದೊಡಿಂ ತೆಂದನು ॥ ೬೨ ॥ ತಾತಚಿತ್ತೈಸಿದರೊಳೇನಹುದುತಿರುಗಿಬಿಸುಡೀತಲೆಯುನಸುರಾಂತಕನಚರಣದೆಡೆಗೆಸಹ । ಜಾತನಂಕೊಂ ದಾತನಂಕೊಲ್ವೆನೆಂದುಸುರಥಂರಥಕಡರ್ದಬಳಿಕ । ಖಾತಿಯಿಂದಾಶಿರವನಾಮುರಾಳಧ್ವಜಂಪೀತಾಂಬರನ ಪೊರೆಗೆಹಾಯ್ಕಲಾ

---

ಟೀ॥ ಎಲೈ ಸುರಥ-ಎಲೈಯ್ಯಾ ಸುರಥನೆ! ಉಂಟು-ನೀನು ಹೇಳಿದ ವಿಷಯ ನಿಶ್ಚಯ, ಕೃಷ್ಣನಮುಂದೆ-ಶ್ರೀಕೃಷ್ಣನೊಡನೆ, ಭಾಷೆಯಂ-ಪ್ರತಿಜ್ಞೆಯನ್ನು, ಪೂರೈಸಿ-ಮುಗಿಸಿದವನಾಗಿ (ನೆರವೇರಿಸಿದವನಾಗಿ), ಟೆಂಕಣಿಸುವ-ಶಾಶ್ವತವಿಲ್ಲದೆ ಹೋಗುವ ಒಡಲಂ ದೇಹವನ್ನ, ತೊರೆದು - ತ್ಯಜಿಸಿ, ಮುಕ್ತಿರಾಜ್ಯಮಂ - ಶಾಶ್ವತ ಸುಖವನ್ನುಂಟುಮಾಡುವ ರಾಜ್ಯವನ್ನು (ಮೋಕ್ಷದ ದೇಶವನ್ನು), ಸುಧನ್ವಂ- ಸುಧನ್ವನು, ವೆಂಟಣಿಸಿಕೊಂಡಂ - ಸಂಪಾದಿಸಿಕೊಂಡನು, ಇದಕಾಗಿ-ಈ ಕಾರ್ಯಕ್ಕಾಗಿ, ಧೃತಿಗೆಟ್ಟು-ಧೈರ್ಯಗುಂದಿ (ಅಧೈರ್ಯದಿಂದ), ಇಂತು-ಈರೀತಿಯಾಗಿ, ಅಳಲ್ವುದಿಲ್ಲ-ರೋದಿಸಿದವನಲ್ಲ, ಕಂಠಮಂ-ಕತ್ತನ್ನು, ಕತ್ತರಿಸಲು-ಬೇರೆಮಾಡಲು (ತೆಗಿಯಲು), ಆಶಿರಂ-ಆ ತಲೆಯ ಬುರುಡೆಯು, ತನ್ನೆಡೆಗೆ-ತನ್ನ ಸಮೀಪಕ್ಕೆ, ಬಟ್ಟೆಗೆಡದೆ-ಮಾರ್ಗಚ್ಯುತಿಯಿಲ್ಲದೆ (ಮಾರ್ಗತಪ್ಪದೆ), ಐದಿದೊಡೆ-ಬರಲಾಗಿ, ವೈಕುಂಠಂ-ವೈಕುಂಠವಾಸಿಯಾದ ಶ್ರೀ ಕೃಷ್ಣನು, ತೆಗೆದೆತ್ತಿಕೊಂಡು-ಆ ಶಿರವನ್ನು ತನ್ನ ಕೈಗೆ ತೆಗೆದುಕೊಂಡು, ಈಕ್ಷಿಸಿ-ಕಂಡು, ಮತ್ತೆ-ತಿರುಗಿ, ಬಿಸುಟಂ-ನನ್ನ ಬಳಿಗೆ ಎಸೆದನು, ಎಂಬುದಕೆ-ಎನ್ನುವುದಕ್ಕಾಗಿ, ಮರುಗುವೆಂ-ವ್ಯಥೆಪಡುವೆನು, ಎಂದೊಡೆ-ಎಂದು ಹೇಳಲಾಗಿ, ಸುರಥಂ-ಸುರಥನು, ಇಂತೆಂದಂ-ಈ ವಿಧವಾಗಿ ಪೇಳಿದನು ॥

ಅ॥ ವಿ॥ ಭಾಷೆ-(ತ್ಸ) ಬಾಸೆ-(ದ್ಭ) ಕಾರ್ಯ-(ತ್ಸ) ಕಜ್ಜ-(ದ್ಭ) (ಮುಕ್ತಿಯ+ರಾಜ್ಯ=ಮುಕ್ತಿರಾಜ್ಯ) ಷ. ತ. ಧೃತಿಯಂ+ಕೆಟ್ಟು=ಧೃತಿಗೆಟ್ಟು ಕ್ರಿ. ಸ. ॥೬೨॥

ಟೀ॥ ತಾತ-ಎಲೈ ತಂದೆಯೆ! ಚಿತ್ತೈಸು-ನನ್ನ ವಿನಯೋಕ್ತಿಯಂ ಲಾಲಿಸು, (ಮನಸ್ಸುಕೊಡು) ಇದರೋಳ್-ಇದರಿಂದ, ಏಂ ಅಹುದು-ಈರೀತಿಯಾದುದರಿಂದೇನಾದೀತು, ಅಸುರಾಂತಕ- ಶ್ರೀ ಕೃಷ್ಣನ, ಚರಣದೆಡೆಗೆ-ಪಾದಸನ್ನಿಧಿಗೆ, ಈತಲೆಯಂ-ಈ ಶಿರವನ್ನು, ತಿರುಗಿ-ಪುನಹ, ಬಿಸುಡು-ಎಸೆಯುವನಾಗು, ಸಹಜಾತನಂ-ನಮ್ಮ ಅಣ್ಣನಾದ ಸುಧನ್ವನನ್ನು, ಕೊಂದಾತನಂ-ಸಂಹಾರಮಾಡಿದ ಪಾರ್ಥನನ್ನು, ಕೊಲ್ವೆಂಎಂದು-ಸಂಹರಿಸುತ್ತೇನೆಂಬದಾಗಿ, ಸುರಥಂ-ಸುರಥನು, ರಥಕ್ಕೆ-ವರೂಥಕ್ಕೆ ಅಡರ್ದ-ಏರಿದ, ಬಳಿಕ-ಅನಂತರದಲ್ಲಿ, ಖಾತಿಯಿಂದ-ಸಿಟ್ಟನಿಂದ, ಆಮರಾಳಧ್ವಜಂ-ಹಂಸಧ್ವಜನು, ಆಶಿರವಂ-ಆ ಸುಧನ್ವನ ಶಿರವನ್ನು, ಪೀತಾಂಬರನ-ಪೀತಾಂಬರಧರನಾದ ಶ್ರೀ ಕೃಷ್ಣನ, ಪೊರೆಗೆ-ಸಮೀಪಕ್ಕೆ, ಹಾಯ್ಕಲ್-ಬಿಸುಡಲಾಗಿ, ಆ ಮುರಹರಂ-ಆ ಮುರಮಥನನಾದ ಶ್ರೀ ಕೃಷ್ಣನು, ಅದಂ-ಆ ತಲೆಯನ್ನು, ಪ್ರೀತಿಯಿಂ-ಅಕ್ಕರೆಯಿಂದ, ತೆಗೆದು-ಎತ್ತಿಕೊಂಡು, ನಭಕೆ-ಗಗನಕ್ಕೆ, ಇಡಲ್-ಹಾಕಲಾಗಿ, ಅಲ್ಲಿ-ಅಂತರಿಕ್ಷದಲ್ಲಿ, ಶಿವನು-ಮಂಗಳಕರನಾದ ಈಶ್ವರನು, ಅದಂ-ಆ ಶಿರವನ್ನು, ರುಂಡಮಾಲೆಯೋಳ್-ತಲೆಬುರುಡೆಗಳಿಂದ ಮಾಡಿದ್ದ ಸರದಲ್ಲಿ, ಆಂತನು-ಹೊಂದಿಸಿದವನಾದನು ॥

ಅ॥ ವಿ॥ ತಾತ-ತ್ಸ, ತಂದೆ-ದ್ಭ, ಇದು+ತಲೆ=ಈತಲೆ, ಗ.ಸ. ಸುರನಲ್ಲದವಂ, ಅಸುರ, ರಾಕ್ಷಸ, ಅಸುರನ+ಅಂತಕ=ಅಸುರಾಂತಕ, ಷ. ತ. ಅಥವ ಚ. ತ. ಅಂತ-ಅವಸಾನವಂ, ಕ. ತೋರಿಸುವವನು, ಅಂತಕ. ಸು-ಒಳ್ಳೆಯದಾದ, ರಥಂ-ತೇರುಳ್ಳವನು ॥

---

ಮೃತಿಯಂ ಪೊಂದಿದನು, ಇನ್ನು ಇದಕ್ಕಾಗಿ ನೀನು ವೃಥಾ ದುಃಖಿಸುವದೇತಕ್ಕೆ, ಸಂತಾಪ ಪಡಬೇಡ, ಯುದ್ಧದಲ್ಲಿ ನನ್ನ ಪರಾಕ್ರಮಾತಿಶಯವನ್ನು ನೋಡೆಂಬದಾಗಿ ಹೇಳಲಾಗಿ ಆಗ ಹಂಸಧ್ವಜನು ಸುರಥನಂಕುರಿತು, ಇಂತೆಂದನು ॥೬೧॥ ಎಲೆಯ್ಯಾ ಸುರಥನೆ! ನೀನು ಹೇಳಿದುದೆಲ್ಲಾ ಸತ್ಯವೇಸರಿ, ಶ್ರೀ ಕೃಷ್ಣನ ಮುಂದೆ ಪ್ರತಿಜ್ಞೆಯಂಮಾಡಿ, ತಾನು ಮಾಡಿದ ಪ್ರತಿಜ್ಞೆಯಂ ಪೂರೈಸಿ, ನಶ್ವರವಾಗಿ ಹೋಗುವ ದೇಹವಂ ತೊರೆದು, ಮುಕ್ತಿರಾಜ್ಯವಂ ಪೊಂದಿದವನಾದನು, ಇದಕ್ಕಾಗಿ ನಾನು ಅತ್ತವನಲ್ಲ ಕತ್ತರಿಸಿದ ತಲೆಯು ದಾರಿ ತಪ್ಪದೆ ಶ್ರೀ ಕೃಷ್ಣನ ಪಾದ ಸನ್ನಿಧಿಯಲ್ಲಿ ಬೀಳಲಾಗಿ ಮೊದಲು ತಾನು ಕೈಗೆ ತೆಗೆದುಕೊಂಡು ಪುನಹ ನನ್ನೆಡೆಗೆ ಹಾಕಿದ್ದಕ್ಕಾಗಿ ದುಃಖಿಸುವೆನೆಂದನು, ಆಗ ಸುರಥನು ತಂದೆಯಂ ಕುರಿತು ಈ ವಿಧವಾಗಿ ಹೇಳಿದನು ॥ ೬೨ ॥ ಎಲೈ ಪಿತನೆ! ಸದ್ಗುಣಯುತನೆ! ನನ್ನ ವಿನಯೋಕ್ತಿಯಂ ಲಾಲಿಸುವನಾಗು, ಈ ರೀತಿಯಾದುದರಿಂದೇನಹುದು, ಈ ಶಿರವಂ

ಮುರಹರಂಪ್ರೀತಿಯಿಂತೆಗೆದುನಭಕಿಡಲದಂರುಂಡಮಾಲೆಯೊಳಾಂತನಲ್ಲಿಶಿವನು ||೬೩|| ಅಡಗಿತಾಶಿರನುಲ್ಲಿಹಂಸಧ್ವಜಂತನ್ನ | ಪಡೆಸಹಿತನಿಂದನಾಹವಕೆಸನ್ನಾಹದಿಂ || ಪೊಡಹುಟ್ಟಿದಂಮಡಿದಳಲ್ಗೆಸುರಥಂರಥಕಡರ್ದುನಿಜಕಾರ್ಮುಕವನು | ಪಿಡಿದು ಕೃಷ್ಣಾರ್ಜುನರಸರಿಸಕೈತರಲವನ | ಕಡುಶೌರ್ಯಮಂಕಂಡುಶಂಕೆಯಿಂದೇವಪುರದೊಡೆಯಲಕ್ಷ್ಮೀವರಂ | ಮಾಡಿದಂತನ್ನ ಮೈದುನನೊಳಾಲೋಚನೆಯನು ||೬೪||

ಸಂಧಿ ೧೩ ಕ್ಕೆ ಪದ್ಯ ೬೪೦ ಕ್ಕಂ ಮಂಗಳಮಸ್ತು.

ಟೀ|| ಆಶಿರಂ-ಕೃಷ್ಣನಿಂದ ಅಂತರಿಕ್ಷಕ್ಕೆ ಬಿಸುಟ ಶಿರವು, ಅಲ್ಲಿ-ಆ ಶಿವನ ರುಂಡಮಾಲೆಯೊಳಗೆ, ಅಡಗಿತು-ಕಲೆಯಿತು (ಬೆರೆಯಿತು), ಹಂಸಧ್ವಜಂ-ಮರಾಳಧ್ವಜನು, ತನ್ನ-ತನ್ನಯ, ಪಡೆಸಹಿತ-ಸೈನ್ಯಯುತನಾಗಿ, ಆಹವಕೆ-ಅರ್ಜುನನ ಮೇಲೆ ಕಾಳಗಕ್ಕೆ, ಸನ್ನಾಹದಿಂದ-ಸಲಕರಣೆಯಿಂದ, ನಿಂದಂ-ಪಾರ್ಥಗೆ ಎದುರಾಗಿ ನಿಂತುಕೊಂಡನು, ಆಗ-ಆ ಸಮಯದಲ್ಲಿ, ಸುರಥಂ-ಸುರಥನು, ಒಡಹುಟ್ಟಿದಂ-ಅಗ್ರಜನಾದ ಸುಧನ್ವನು, ಮಡಿದ-ಮೃತಪಟ್ಟ, ಅಳಲ್ಗೆ-ದುಃಖಕ್ಕೋಸ್ಕರ, ರಥಕೆ-ವರೂಥಕ್ಕೆ, ಅಡರ್ದು-ಏರಿ, ನಿಜ-ತನ್ನಯ, ಕಾರ್ಮುಕವನು-ಧನಸ್ಸನ್ನು, ಪಿಡಿದು-ಧರಿಸಿ, ಕೃಷ್ಣಾರ್ಜುನರ-ಕೃಷ್ಣ ಮತ್ತು ಅರ್ಜುನ ಇವರುಗಳ, ಸರಿಸಕೆ-ಸಾಮೀಪ್ಯವಂ ಕುರಿತು, ಐತರೆ-ಬರಲಾಗಿ, ಅವನ-ಆ ಸುರಥನ, ಕಡು ಶೌರ್ಯಮಂ-ಅಧಿಕವಾದ ಆಟೋಪವನ್ನು, ಕಂಡು-ಈಕ್ಷಿಸಿ, ಶಂಕೆಯಿಂ-ಹೆದರಿಕೆಯಿಂದ, (ಪಾರ್ಥನು ಭೀತನಾದಾನೆಂಬ ಯೋಚನೆಯಿಂದ) ದೇವಪುರದ-ಅಮರಪುರದ, ಒಡೆಯ-ಪ್ರಭುವಾದ, ಲಕ್ಷ್ಮೀವರಂ-ಲಕ್ಷ್ಮೀಪತಿಯಾದ ಶ್ರೀ ಕೃಷ್ಣನು, ತನ್ನ-ತನ್ನಯ, ಮೈದುನನೊಳು-ಮೈದುನನಾದ ಪಾರ್ಥನ ಸಂಗಡ, ಆಲೋಚನೆಯನು-ಯುದ್ಧ ಕಾರ್ಯಾಲೋಚನೆಯನ್ನು, ಮಾಡಿದಂ-ಮಾಡಿದವನಾದನು (ನೆರವೇರಿಸಿದನು).

ಅ|| ವಿ|| ಪಡೆ-ಸೈನ್ಯ, ಹೊಂದು. ಕೃಷ್ಣನೂ+ಅರ್ಜುನನೂ=ಇವರು ಕೃಷ್ಣಾರ್ಜುನರು ದ್ವಂ. ಸ. ಶೂರನ ಭಾವ, ಶೂರತನ, ದೇವತೆಗಳ + ಪುರ = ದೇವಪುರ, ಷ. ತ. ದೇವಪುರದ ಒಡೆಯ, ದೇವಪುರದೊಡೆಯ ಷ. ತ. ಲಕ್ಷ್ಮಿಯ-ವರ, ಲಕ್ಷ್ಮೀವರ. ||೬೪||

ಹದಿಮೂರನೆಯ ಸಂಧಿ ಸಂಪೂರ್ಣವಾದುದು.

ಅಸುರಾಂತಕನ ಸನ್ನಿಧಿಗೆ ಪುನಃ ಬಿಸುಡು, ನಮ್ಮ ಸೋದರನಂ ಸಂಹರಿಸಿದವನಂ ನಾನು ಈಗ ಸಂಹರಿಪೆಂ ಎಂದು ಸುರಥಂ ರಥಾರೂಢನಾಗಲು ಆ ಬಳಿಕ ಅತ್ಯಧಿಕ ರೋಷದಿಂದ ಆ ತಲೆಯಂ ಶ್ರೀ ಕೃಷ್ಣನ ಪಾದಾರವಿಂದಕ್ಕೆ ಬಿಸುಡಲಾಗಿ ಆಗ ಶ್ರೀ ಕೃಷ್ಣನು ಬಹು ಅಕ್ಕರೆಯಿಂದ ಎತ್ತಿಕೊಂಡು ಅಂತರಿಕ್ಷಕ್ಕೆ ಎಸೆಯಲು, ಶಿವಂಕರನಾದ ಶಿವನು ಆ ತಲೆಯಂ ತನ್ನ ರುಂಡಮಾಲೆಯಲ್ಲಿ ಧರಿಸಿದವನಾದನು ||೬೩|| ಆ ಶಿರವು ರುದ್ರನ ರುಂಡಮಾಲೆಯಲ್ಲಿ ಸೇರಲಾಗಿ, ಹಂಸಧ್ವಜನು ತನ್ನ ಚತುರಂಗ ಬಲಯುತನಾಗಿ ಪಾರ್ಥನ ಎದುರಾಗಿ ಯುದ್ಧಕ್ಕೆ ನಿಲ್ಲಲು, ಆಗ ಸುರಥನು ಅಗ್ರಜನಾದ ಸುಧನ್ವನು, ಮೃತಿಯಂ ಪೊಂದಿದ ದುಃಖಕ್ಕೋಸ್ಕರವಾಗಿ ರಥವಂ ಹತ್ತಿ, ತನ್ನ ಧನುವಂ ಪಿಡಿದು, ಕೃಷ್ಣಾರ್ಜುನರ ಸಾಮೀಪ್ಯವಂ ಕುರಿತು, ಬರಲಾಗಿ ಆ ಸುರಥನ ಶೌರ್ಯವಂ ಕಂಡು ಪಾರ್ಥನು, ಭಯಪಟ್ಟಾನೆಂಬ ಯೋಚನೆಯಿಂದ ದೇವಪುರದೊಡೆಯನಾದ, ಲಕ್ಷ್ಮೀಪತಿಯಾದ ಶ್ರೀ ವಿಷ್ಣುವಿನ ಅವತಾರಿಯಾದ ಶ್ರೀ ಕೃಷ್ಣನು ತನ್ನ ಮೈದುನನೊಡನೆ ಯುದ್ಧ ಕಾರ್ಯಾಲೋಚನೆಯಂ ಗೈಯ್ದನು ||೬೪||

ಟೀಕಾ ತಾತ್ಪರ್ಯಸಹಿತನಾದ ಜೈಮಿನಿಭಾರತದಲ್ಲಿ ಹದಿಮೂರನೆಯ ಸಂಧಿ ಸಂಪೂರ್ಣವಾದುದು.



## ಹದಿನಾಲ್ಕನೆಯ ಸಂಧಿ.

ಸೂಚನೆ॥ ಚಂಡಸುರಥನಶಿರವನಸುರಹರನಾಜ್ಞೆಯಿಂ । ಕೊಂಡುಗರುಡಂಪ್ರಯಾಗವನೈದಲೀಶ್ವರಂ । ಕಂಡು ವೃಷರಾಜನಂ ಕಳುಹಿತರಿಸಿದನವಂರುಂಡಮಾಲೆಯತೊಡವಿಗೆ ॥

ಕೇಳ್ದೈನೃಪಾಲಕ ಸುಧನ್ವನಗ್ಗಳಿಕೆಯಂ । ಪೇಳ್ವೆಂ ನಿನಗಾಲಿವುದು ಸುರಥನಂಕಮಂ । ತಾಳ್ದನತಿ ರೋಷಮಂ ರಥವೇರಿ ವಿನುತ ಕೋದಂಡಮಂ ಜೇಗೈವುತ ॥ ಬಾಳ್ದಪನೆ ಫಲುಗುಣಂ ಮೇಣಿಳಾಮಂಡಲವ । ನಾಳ್ದಪನೆ ಧರ್ಮಜಂ ಕಾಣಬಹುದಿಂದೆನ್ನ । ತೋಳ್ದೀಟೆಯಂ ಕಳೆವೆನೆನುತ ಕೃಷ್ಣಾರ್ಜುನರ ಸರಿಸಕೈತರುತಿರ್ದನು ॥ ೧ ॥ ಸುರಥನೈತಹ ರಣೋತ್ಸಾಹಮಂ ಕಂಡು ಹರಿ । ನರನೊಳಾಲೋಚಿಸಿ ನುಡಿದನಿವಂ ಧರೆಯೊಳಾ । ಚರಿಸದಿಹ ಪುಣ್ಯಕರ್ಮಂಗಳೊಂ

---

ಹದಿನಾಲ್ಕನೆಯ ಸಂಧಿ ಪ್ರಾರಂಭವು.

ಸೂಚನೆ॥ ಅಸುರಹರನ-ರಾಕ್ಷಸಾಂತಕನಾದ ಶ್ರೀ ಕೃಷ್ಣನ, ಆಜ್ಞೆಯಿಂ-ಅನುಜ್ಞೆಯ ಮೇರಿಗೆ, ಗರುಡಂ-ವಿನುತೆಯ ಮಗನಾದ ಗರುಡನು, ಚಂಡ - ಭಯಂಕರನಾದ ಸುರಥನ, ಅರ್ಜುನನೊಂದಿಗೆ ಕಾದಿಮಡಿದ ಸುರಥನ, ಶಿರವಂ - ಶಿರಸ್ಸನ್ನು, (ತಲೆಯನ್ನು) ಕೊಂಡು-ಹೊಂದಿ, (ಪಡೆದು ಬಂದು) ಪ್ರಯಾಗವಂ-ಪ್ರಯಾಗವಂ-ಪ್ರಯಾಗವೆಂಬ ಪುಣ್ಯಸ್ಥಳವನ್ನು (ಗಂಗಾಯಮುನಾ ಸಂಗಮ ಕ್ಷೇತ್ರವಾದ ವಾರಣಾವತವನ್ನು) ಐದಲು-ಆ ಕ್ಷೇತ್ರದಲ್ಲಿ ಹಾಕಲಿಕ್ಕಾಗಿ ಬರಲು, ಈಶ್ವರಂ-ಜಗದೀಶನಾದ ಪರಮೇಶ್ವರನು, ಕಂಡು-ವೈನತೇಯನು ಸುರಥನ ಶಿರವಂ ತಂದುದನ್ನು ನೋಡಿ, ವೃಷರಾಜನಂ-ತನ್ನ ವಾಹನನಾದ ವೃಷಭೇಶನಂ, ಕಳುಹಿ-ಕಳುಹಿಸಿಕೊಟ್ಟು, ಅದಂ-ಆ ಶಿರವನ್ನು, ಶಿವಂ-ಈಶ್ವರನು, ರುಂಡಮಾಲೆಯ-ತಲೆಯ ಬರುಡೆಗಳಿಂದೆಸಗಿದ ಹಾರದ, ತೊಡವಿಗೆ-ಆಭರಣಕ್ಕಾಗಿ, ತರಿಸಿದಂ-ವೃಷಭೇಶ್ವರನಿಂದ ತರಿಸಿದನು.

ಟೀ॥ ನೃಪಾಲಕ-ರಾಜನಾದ ಜನಮೇಜಯನೇ, ಸುಧನ್ವನ ಅಗ್ಗಳಿಕೆಯಂ-ಸುಧನ್ವನ ಪರಾಕ್ರಮಾತಿಶಯಮಂ, ಕೇಳ್ದೈ-ಆಲಿಸಿದೆಯಷ್ಟೆ, ಪೇಳ್ವೆಂ-ಸುಧನ್ವನ ತಮ್ಮನಾದ ಸುರಥನ ಶೌರ್ಯಾದಿಗಳಂ ಪೇಳುವೆನು, ಆಲಿವುದು-ಆಕರ್ಣಿಸುವುದು, ಸುರಥಂ-ಸುರಥನೂ ಕೂಡ, ಅಂಕಮಂ-ಪರಾಕ್ರಮದಿಂ ಯುತಮಾದ ಕಾಳಗೋದ್ಯೋಗವನ್ನು, ತಾಳ್ದಂ-ಹೊಂದಿದನು, (ಕೈಗೊಂಡನು) ಅತಿ ರೋಷದಿಂ-ಅಧಿಕವಾದ ಕೋಪದಿಂದ, ರಥವ-ವರೂಥವನ್ನು, ಏರಿ-ಹತ್ತಿ, ವಿನುತ-ಸ್ತೋತ್ರಾರ್ಹವಾದ, ಕೋದಂಡಮಂ-ಧನುಸ್ಸನ್ನು, ಜೇಗೈವುತ-ಝೇಂಕಾರಮಾಡುತ್ತ, ಫಲುಗುಣಂ-ಪಾರ್ಥನು, ಬಾಳ್ದಪನೆ-ಭೂಮಿಯಲ್ಲಿ ಜೀವಿಸಲಾಪನೆ, ಮೇಣ್-ಮತ್ತು, ಧರ್ಮಜಂ-ಧರ್ಮರಾಯನು, ಇಳಾಮಂಡಲವಂ-ಈ ಪೃಥ್ವೀಮಂಡಲವನ್ನು, ಆಳ್ದಪನೆ-ಪಾಲಿಸುತ್ತಾನೆಯೆ, ಇಂದು-ಈಗ, (ಈದಿವಸ) ಕಾಣಬಹುದು-ನೋಡಬಹುದು, ಎನ್ನ-ನನ್ನಯ, ತೋಳ್ದೀಟೆಯಂ-ತೋಳಿನ ನವೆಯನ್ನು, (ಜೋರನ್ನು) ಕಳೆವೆಂ-ಹೋಗಲಾಡಿಸುವೆನು, ಎನುತ-ಎಂಬದಾಗಿ ಹೇಳಿಕೊಳ್ಳುತ್ತಾ, ಕೃಷ್ಣಾರ್ಜುನರ-ಕೃಷ್ಣ ಪಾರ್ಥರ, ಸರಿಸಕೆ-ಸಾಮೀಪ್ಯವಂ ಕುರಿತು, ಐತರುತ್ತಿರ್ದನು-ಬರುತ್ತಲಿದ್ದನು.

ಅ॥ ವಿ॥ ಅಂಕ-ಪರಾಕ್ರಮ, ತೊಡೆ, ಗುರುತು, ನಾಟಕದ ವಿಭಾಗ, ಧರ್ಮ-ಯಮಧರ್ಮನ ಉಪದೇಶ ಮಂತ್ರದಿಂದ, ಜ-ಹುಟ್ಟಿದವನು, (ನೃ-ಮನುಷ್ಯರನ್ನು, ಪಾಲಕ-ಕಾಪಾಡತಕ್ಕವನು) ಧರ್ಮನಿಂದ+ಜ=ಧರ್ಮಜ ತೃ. ತ. ತೋಳ್+ತೀಟೆ=ತೋಳ್ದೀಟೆ ದ. ಆದೇಶಸಂಧಿ. ತೋಳಿನ-ತೀಟೆ ಷ. ತ. ॥೧॥

ಟೀ॥ ಸುರಥಂ-ಸುರಥನು, ಐತಹ-ತಮ್ಮ ಸಮೀಪಕ್ಕೆ ಬರುತ್ತಿರುವ, ರಣೋತ್ಸಾಹಮಂ- ಯುದ್ಧೋತ್ಸುಕ್ಯವನ್ನು, ಕಂಡು-ನೋಡಿ. ಹರಿ-ಶ್ರೀ ಕೃಷ್ಣನು, ನರನೊಳು-ಪಾರ್ಥನಲ್ಲಿ, (ಅರ್ಜುನನ ಕೂಡ) ಆಲೋಚಿಸಿ-ಯೋಚನೆಯಂಗೈದು, ನುಡಿದಂ-ಹೇಳಿದನು, ಇವಂ-ಈ ಸುರಥನು, ಧರೆಯೊಳ್-ಪೃಥ್ವಿಯಲ್ಲಿ, ಆಚರಿಸದೆ-ನೆರವೇರಿಸದೆ, ಇಹ-ಇರುವಂಥ, ಪುಣ್ಯಕರ್ಮಂಗಳು-ಪುಣ್ಯ (ಒಳ್ಳೇ) ಕಜ್ಜಂಗಳು, (ಸತ್ಕಾರ್ಯಗಳು) ಒಂದಿಲ್ಲ-ಉಳಿದಿರುವುದಾವುದೂ ಇಲ್ಲ, (ಸಕಲ ಪುಣ್ಯಪ್ರದ

---

ಹದಿನಾಲ್ಕನೆಯಸಂಧಿ ಪ್ರಾರಂಭವು.

ಎಲೈ ಭೂಪತಿಯಾದ ಜನಮೇಜಯರಾಯನೆ, ಇದುವರೆಗೂ, ಹಂಸಧ್ವಜನಪುತ್ರನಾದ ಸುಧನ್ವನ ಪರಾಕ್ರಮಾತಿಶಯವೆಲ್ಲವಂ ಕೇಳಿದ್ದಾಯಿತು, ಈಗ ಆ ಸುಧನ್ವನ ತಮ್ಮನಾದ ಸುರಥನ ಪರಾಕ್ರಮಾತಿಶಯವಂ ವಿವರಿಪೆನು ಅಲಿವುದು, ಅನಂತರದಲ್ಲಿ ಸುರಥನು ಪರಾಕ್ರಮದಿಂ ಯುತವಾದ ಯುದ್ಧದ ಕಾರ್ಯವನ್ನು ತಾಳ್ದು, ಸ್ತೋತ್ರಾರ್ಹವಾದ ಚಾಪವಂ ಪಿಡಿದು ಅತಿ ಕೋಪೋದ್ರೇಕದಿಂದ ವರೂಥಾರೂಢನಾಗಿ, ಧನುಷ್ಟಂಕಾರವಂ ಗೈವುತ, ನನ್ನೊಡನೆ ಯುದ್ಧಮಾಡುವಲ್ಲಿ ಪಾರ್ಥನು, ಧರ್ಮಪುತ್ರನು ಈ ಭೂಮಂಡಲವನ್ನು ಪರಿಪಾಲಿಸಲಾಪರೆ, ಎನ್ನಯ ಭುಜದ ತೀಟೆಯನ್ನು ಹೋಗಲಾಡಿಸಿಕೊಳ್ಳುವೆವೆನುತ ಕೃಷ್ಣಾರ್ಜುನರ ಸಾಮೀಪ್ಯಮಂ ಕುರಿತು ಬರುತ್ತಲಿದ್ದನು ॥ ೧ ॥ ಆ ಬಳಿಕ ಶ್ರೀ ಕೃಷ್ಣನು ಸುರಥನ ಯುದ್ಧಾ

ದಿಲ್ಲಿವಂ ಮರದಾದೊಡಂ ಮಾಡಿದ ॥ ದುರಿತಲವಮಂ ಕಾಣೆನಾರ್ಜಯಿಪರೀತನಂ । ಸರಿಸದೋಳ್ನಿಂದೆವಾದೊಡೆ ಬಹುದು ನಮಗೀಗ । ಪರಿಭವಂ ಪ್ರದ್ಯುಮ್ನ ಮೊದಲಾದ ಪಟುಭಟರ್ಕಾದಲಿವನೊಡ ನೆಂದನು ॥ ೨ ॥ ರಾಜೀವನೇತ್ರ ನಿಂತೆನುತಲಂಧಕವೃಷ್ಣಿ । ಭೋಜರೆನಿಪಖಿಳಯಾದವಕುಲದಪಟುಭಟಸ । ಮಾಜಮಂಪ್ರದ್ಯುಮ್ನನೊಡನೆಸುರಥನರಥಕ್ಕೆಣೆಯೊಡ್ಡಿನರನರಥದ ॥ ವಾಜಿಗಳವಾಘೆಯಂತಿರುಹಿಹಿಂದಕೆಮೂರು । ಯೋಜನದೊಳಿಟ್ಟಣಿಸಿನಿಂದುಘರ್ಜಿಸುವಸೇ । ನಾಜಲಧಿಮಧ್ಯದೋಳ್ಬಂದುನಿಂದರೆನೆಲೆಯಸುಯಿಧಾನಮಂಬಲಿದನು ॥ ೩ ॥ ಇತ್ತಲಾಹವಕೆಮುಂಕೊಂಡುಬಹಸುರಥನಂ । ತೆತ್ತಿಸಿ

---

ಮಾದ ಕೆಲಸಗಳೆಲ್ಲಾ ಮಾಡಿರುವನು) ಇವಂ-ಈ ಸುರಥನು, ಮರದಾದೊಡಂ-ಅಜ್ಞಾನದಿಂದಾದರೂ, ಮಾಡಿದ-ಆಚರಿಸಿದ, ದುರಿತಂ-ಪಾಪವು, ಲವಂ-ಕೊಂಚವಾದರೂ, ಕಾಣೆನು - ನೋಡಿದವನಲ್ಲ, ಆರು-ಯಾರುತಾನೆ, ಈತನಂ - ಈ ಸುರಥನನ್ನು, ಜಯಿಪರು-ಗೆಲ್ಲುವರು, ಸರಿಸದೋಳ್-ಎದುರಾಗಿ, ನಿಂದೆವಾದೊಡೆ-ನಿಂತುಕೊಂಡವರಾದದ್ದೇಯಾದರೆ, ನಮಗೆ-ನಮ್ಮಗಳಿಗೆ, ಈಗ-ಈ ಸಮಯದಲ್ಲಿ, ಪರಿಭವಂ - ಸೋಲುವಿಕೆಯು, ಬಹದು - ಉಂಟಾಗುವುದು, ಪ್ರದ್ಯುಮ್ನನೇ ಮೊದಲಾದ - ಪ್ರದ್ಯುಮ್ನನೇ ಆದಿಯಾಗುಳ್ಳ, ಪಟುಭಟರ್-ಸಮರ್ಥರಾದ ವೀರರು, ಇವನೊಡನೆ - ಈ ಸುರಥನೊಂದಿಗೆ, ಕಾದಲಿ-ಕಾಳಗವಾಡಲಿ, ಎಂದನು-ಎಂದು ಹೇಳಿದನು.

ಅ॥ ವಿ॥ ರಣ+ಉತ್ಸಾಹ, ರಣೋತ್ಸಾಹ, ಗುಣ, ಸಂ. ಪುಣ್ಯದ-ಕರ್ಮ, ಪುಣ್ಯಕರ್ಮ (ಷ. ತ.) ॥೨॥

ಟೀ॥ ರಾಜೀವನೇತ್ರನು-ಅರವಿಂದಾಕ್ಷನಾದ ಶ್ರೀಕೃಷ್ಣನು, ಇಂತು ಈ ರೀತಿಯಾಗಿ, ಎನುತಲೆ-ಹೇಳಿದ ಕೂಡಲೆ, ಅಂಧಕವೃಷ್ಣಿ - ಅಂಧಕ, ವೃಷ್ಣಿಯು, ಭೋಜರು, ಎನಿಪ-ಎನ್ನುವ, ಅಖಿಳ - ಸಮಸ್ತಮಾದ, ಯಾದವಕುಲದ - ಯದುವಂಶದವರ ಗುಂಪಿನ, ಪಟುಭಟ - ಸಮರ್ಥರಾದ ಶೂರರ, ಸಮಾಜ-ಗುಂಪು, ಪ್ರದ್ಯುಮ್ನನೊಡನೆ - ಪ್ರದ್ಯುಮ್ನನ ಸಂಗಡ, ಸುರಥನರಥಕೆ - ಸುರಥನವರೂಥಕ್ಕೆ, ಎಣೆ-ಬದಲಾಗಿ, ಒಡ್ಡಿ-ನಿಲ್ಲಿಸಿ (ಚಾಚಿಕೊಂಡು) ನರನ-ಅರ್ಜುನನ, ರಥದ - ವರೂಥದ, ವಾಜಿಗಳ-ಕುದುರೆಗಳ, ವಾಘೆಯಂ-ಲಗಾಮನ್ನು, ಹಿಂದಕೆ - ಹಿಂಭಾಹಕ್ಕೆ, ತಿರುಹಿ-ತಿರುಗುವಂತೆಮಾಡಿ, ಮೂರುಯೋಜನದೋಳ್ - ಮೂಗಾವುದದ ಮಾರ್ಗದಲ್ಲಿ, ಇಟ್ಟಣಿಸಿ - ಗುಂಪುಕೂಡಿ, ನಿಂತು - ನಿಂತುಕೊಂಡು, ಗರ್ಜಿಸುವ - ಆರ್ಭಟಿಸುವ, ಸೇನಾಜಲಧಿ - ಸೈನ್ಯವೆಂಬುವ ಸಮುದ್ರದ, ಮಧ್ಯದೋಳ್ - ನಡುಭಾಗದಲ್ಲಿ, ಬಂದುನಿಂದಿರೆ - ಬಂದು ನಿಂತಿರಲು, ನೆಲೆಯ - ಸೈನ್ಯನಿಂತಿರುವ ಸ್ಥಳದ, ಸುಯಿಧಾನದಿಂ - ಎಚ್ಚರಿಕೆಯಾಗಿರುವ ವ್ಯೂಹನಿರ್ಮಾಣದಿಂದ, ಬಲಿದನು - ಬಲಪಡಿಸಿದನು.

ಅ॥ ವಿ॥ (ರಾಜೀವದಂತೆ-ನೇತ್ರಗಳುಳ್ಳವನು, ರಾಜೀವನೇತ್ರ) ಉ, ಪೂ. ಬಹು. ವೃಷ್ಣಿ, ಟಗರು, ಕಿರಣ, ಯದುವಂಶದ ವೀರ. ಜಲ-ನೀರಿಗೆ, ಧಿ-ನಿಕ್ಷೇಪಸ್ಥಾನ, (ನಿಲ್ಲುವಸ್ಥಳ) ॥೩॥

ಟೀ॥ ಇತ್ತಲ್-ಈಕಡೆ, ಆಹವಕ್ಕೆ - ಯುದ್ಧಕ್ಕೆ, ಮುಂಕೊಂಡು - ಮೇಲೆನುಗ್ಗಿ, ಬಹ-ಬರುವ, ಸುರಥನಂ-ಸುರಥನನ್ನು, ಪ್ರದ್ಯುಮ್ನಂ-ಪ್ರದ್ಯುಮ್ನನು, ಅಂಬಿನಿಂ-ಶರದಿಂದ, ತೆತ್ತಿಸಿದಂ-ಆವರಿಸಿಕೊಳ್ಳುವಂತೆ ಮಾಡಿದನು, ಅವಂ-ಆ ಸುರಥನು, ಆತನಂ-ಆ ಪ್ರದ್ಯುಮ್ನನನ್ನು, ಅಂಬಿನಿಂ-ನಾರಾಚದಿಂದ, ಮುತ್ತಿದಂ-ಕವಿಯುವಂತೆ ಮಾಡಿದನು, ಈಗ-ಈ ಸಮಯದಲ್ಲಿ, ಶೌರಿಸಹಿತ - ಕೃಷ್ಣನ ಸಂಗಡ, ಪಾರ್ಥಂ-ಕಿರೀಟಿಯು, ಎತ್ತ-ಯಾವಕಡೆ, ಜಾರಿದನು - ಓಡಿಹೋದನು ! ಮತ್ತೆ-

---

ಟೋಪಮಂ ಕಂಡು, ಅರ್ಜುನನೊಂದಿಗೆ ಮಾತಾಡುತ್ತಲಿದ್ದನು. ಎಲೈ ಪಾರ್ಥ, ಈಗ ಯುದ್ಧಕ್ಕೆ ಬರುತ್ತಲಿರ್ಪ ಹಂಸಧ್ವಜನ ಎರಡನೆಯ ಮಗನಾದ ಸುರಥನು ಈ ಭೂಲೋಕದಲ್ಲಿ ನರಮನುಷ್ಯರು ಮಾಡಬೇಕಾಗಿರುವ ಪುಣ್ಯಕಾರ್ಯಗಳನ್ನೆಲ್ಲಾ ಗೈದಿರ್ಪನು. ಇನ್ನು ಉಳಿದಿಹ ಕಾರ್ಯ ಒಂದೂ ಇಲ್ಲ. ಮರೆತಾದರೂ ಒಂದು ಅಕೃತ್ಯಸಹ ಮಾಡಿರುವನಲ್ಲ. ನಾವು ಈತನ ಸಂಗಡ ಯುದ್ಧಕ್ಕೆ ಪ್ರತಿಭಟಿಸಿ ನಿಂತೆವಾದರೆ, ನಮ್ಮಗಳಿಗೆ ಎಂದಿಗೂ ಜಯವಾಗಲಾರದು, ಆದ್ದರಿಂದ ಪ್ರದ್ಯುಮ್ನನೇ ಆದಿಯಾದ ಸಮರ್ಥರಾದ ವೀರರೆಲ್ಲರೂ, ಈ ಸುರಥನೊಡನೆ ಯುದ್ಧಮಾಡುವರಾಗಲಿ ಎಂದು ಹೇಳಿದನು ॥ ೨ ॥ ಅರವಿಂದಾಕ್ಷನಾದ ಶ್ರೀ ಕೃಷ್ಣನು ಈ ಪ್ರಕಾರವಾಗಿ, ನುಡಿದು ಕೂಡಲೆ, ಯದುವಂಶದ ಮಹಾ ಶೂರರ ಸಮೂಹದಿಂದೊಡಗೂಡಿದ ಪ್ರದ್ಯುಮ್ನನೊಡನೆ, ಅಂಧಕ ವೃಷ್ಣಿ, ಭೋಜರೇ ಮೊದಲಾದವರನ್ನು ಸುರಥನ ರಥಕ್ಕೆ ಎದುರಾಗಿ ನಿಲ್ಲಿಸಿ, ಅರ್ಜುನನ ರಥದ ಅಶ್ವಂಗಳ ಕಡಿವಾಣವಂ ಪಿಡಿದು ರಥವನ್ನು ಹಿಂದಕ್ಕೆ ತಿರುಗಿಸಿ, ಮೂರು ಗಾವುದಗಳ ಮಾರ್ಗದಲ್ಲಿ ಗುಂಪುಗೂಡಿ ಆರ್ಭಟಿಸುವ ಸೇನಾಜಲಧಿಯ ಮಧ್ಯದಲ್ಲಿ, ನಿಂತಿರಲು, ಎಚ್ಚರಿಕೆಯಿಂದಿರುವ ವ್ಯೂಹನಿರ್ಮಾಣದಿಂದ ಬಲಪಡಿಸಿದನು ॥ ೩ ॥ ಈ ಕಡೆಯಲ್ಲಿ ಯುದ್ಧಕ್ಕೆ ಮುಂದಾಗಿ ಮೇಲೆಬಿದ್ದು ಬರುವ ಸುರಥನನ್ನು ಪ್ರದ್ಯುಮ್ನನು ಬಾಣಗಳಿಂದ ಮುತ್ತಿದನು, ಅದಕೆ,

ದನಂಬಿನಿಂಪ್ರದ್ಯುಮ್ನನಾತನಂಮೆತ್ತಿದನವಂಬಾಣದಿಂಪಾರ್ಥನೆತ್ತಜಾರಿದನೀಗಶೌರಿಸಹಿತ ‖ ಮತ್ತಗಜದಗ್ಗಳಿಕೆಮಕ್ಷಿಕದೊಳ
ಹುಮಗಡ | ಮುತ್ತಿದವುಕರಿತುರಗರಥಪದಾತಿಗಳಿಲ್ಲಿ | ಹೊತ್ತುಗಳೆವರೆಸುಧನ್ವನಹರಿಬನಲ್ಲೆನುತತೆಗೆದೆಚ್ಚನಾಭಟರನು ‖೪‖
ತವಕದಿಂಪ್ರದ್ಯುಮ್ನನಂಗೆಲ್ದುಸಾತ್ಯಕಿಯ | ನವಘಡಿಸಿಕೃತವರ್ಮಸಾಂಬಾನುಸಾಲ್ವರಂ | ಜವಗೆಡಿಸಿಕಲಿಯೌವನಾಶ್ವನಂ
ಸದೆದುನೀಲಧ್ವಜನನುರೆಘಾತಿಸಿ ‖ ರವಿಸುತನಸೂನುವಂಪರಿಭವಿಸಿನಿಖಿಳಯಾ | ದವಸುಭಟರಂಜಯಿಸಿಚತುರಂಗಸೈನ್ಯಮಂ |
ಸವರಿಸಮರಥಮಹಾರಥರನೊಂದೇರಥದೊಳಾಸುರಥನೊಡೆದುಳಿದನು ‖ ೫ ‖ ಸೊಕ್ಕಾನೆಪೊಕ್ಕುಕಾಸಾರಮಂಕಲಕುವಂ |
ತಕ್ಕಜದೊಳೊಕ್ಕಲಿಕ್ಕಿದನಿಖಿಲಸೈನ್ಯಮಂ | ಮಿಕ್ಕದೊಂದೆಕ್ಕಲಂಬೀದಿವರಿದಟ್ಟುವಂತೋಡಿಸಿದನತಿಬಲರನು ‖ ಕಕ್ಕಸದೊ

---

ಇನ್ನು, ಗಜದಗ್ಗಳಿಕೆ-ಹಸ್ತಿಗಳ ಆಧಿಕ್ಯವು (ಆನೆಗಳ ಶಕ್ತಿಯು), ಮಕ್ಷಿಕದೊಳು-ನೊಣದಸಂಗಡ, ಅಹದು-ಉಂಟಾಗುವುದು, ಗಡ-ಅಲ್ಲವೆ ? ಕರಿ-ಆನೆಯೂ, ತುರಗ-ಅಶ್ವವೂ, ರಥ-ವರೂಥವೂ, ಪದಾತಿಗಳ್-ಕಾಲ್ಬಲವೇ ಮೊದಲಾದ ಚತುರಂಗಬಲವೂ, ಮುತ್ತಿದುವು-ಆವರಿಸಿಕೊಂಡವು, ಇಲ್ಲಿ-ಈ ಕಾಳಗದಲ್ಲಿ, ಹೊತ್ತುಗಳೆವರೆ-ಕಾಲವನ್ನು ಕಳೆಯುತ್ತಾರೆಯೆ?, ಸುಧನ್ವನ-ಹಂಸಧ್ವಜನ ಸುತನಾದ ಸುಧನ್ವನ, ಹರಿಬವು-ಕೆಲಸವು, ಅಲ್ಲೆನುತ-ಅಲ್ಲವೆಂದು, ಆ ಭಟರನು-ಆ ಯೋಧರನ್ನು, ತೆಗದೆಚ್ಚನು-ಶರದಿಂದ ಪ್ರಹಾರಮಾಡಿದನು.

ಅ‖ ವಿ‖ ಅತ್ತಲ್-ಇತ್ತಲ್-ಎತ್ತಲ್ ಇವು ಅವ್ಯಯಗಳು, ಪೃಥೆಯಮಗ - ಪಾರ್ಥ, ಶೂರನಕುಲದವನು - ಶೌರಿ, ಚತುರಂಗಬಲ-ಹಸ್ತಿ, ಅಶ್ವ, ರಥ, ಪದಾತಿ ‖೪‖

ಟೀ‖ ಆಗ-ಆ ಪ್ರದ್ಯುಮ್ನಾದಿಗಳು ಸುರಥನನ್ನು ಮುತ್ತಿದಾಗ, ಆ ಸುರಥಂ-ಆ ಸುರಥನಾದರೊ, ತವಕದಿಂ-ಅವಸರದಿಂದ, ಪ್ರದ್ಯುಮ್ನನಂ-ಪ್ರದ್ಯುಮ್ನನನ್ನು, ಗೆಲ್ದು-ಗೆದ್ದು, ಸಾತ್ಯಕಿಯಂ-ಸಾತ್ಯಕಿಯನ್ನು, ಅವಘಡಿಸಿ-ಮುತ್ತಿಕೊಂಡು, ಕೃತವರ್ಮ - ಕೃತವರ್ಮನು, ಸಾಂಬ - ಸಾಂಬನು, ಅನುಸಾಲ್ವರಂ - ಅನುಸಾಲ್ವನೇ ಮೊದಲಾದ ವೀರರನ್ನು, ಜವಗೆಡಿಸಿ-ಶಕ್ತಿಗುಂದಿಸಿ, ಕಲಿ-ಶೂರನಾದ, ಯೌವನಾಶ್ವನಂ-ಯೌವನಾಶ್ವನನ್ನು, ಸದೆದು-ಶರಪ್ರಹಾರಮಾಡಿ, ನೀಲಧ್ವಜನಂ-ಜ್ವಾಲೆಯ ಗಂಡನಾದ ನೀಲಧ್ವಜನನ್ನು, ಉರೆ - ಬಹುವಾಗಿ, ಘಾತಿಸಿ - ಆಯಾಸಪಡಿಸಿ (ಹಿಂಸೆಪಡಿಸಿ), ರವಿಸುತನ - ಸೂರ್ಯಪುತ್ರನಾದ ಕರ್ಣನ, ಸೂನುವಂ - ಮಗನಾದ ವೃಷಧ್ವಜನನ್ನು, ಪರಿಭವಿಸಿ - ಅಪಜಯಪಡಿಸಿ ಎಂದರೆ ಗೆದ್ದು, ಅಖಿಳ - ಸಮಸ್ತವಾದ, ಯಾದವ-ಯದುವಂಶದ, ಪಟುಭಟರಂ - ಬಲಾಢ್ಯರಾದ ವೀರರನ್ನು, ಜಯಿಸಿ - ಗೆದ್ದು, ಚತುರಂಗಸೈನ್ಯಮಂ-ಹಸ್ತ್ಯಶ್ವರಥ ಪದಾತಿ ಇವೇ ಮೊದಲಾದುವನ್ನು, ಸವರಿ-ಕತ್ತರಿಸಿ, ಸಮರಥಮಹಾರಥರಂ-ಸಮರಥ ಮಹಾರಥರನ್ನು, ಒಂದೇರಥದೋಳ್-ತನ್ನ ರಥವೊಂದರಿಂದಲೇ, ಒಡೆದು-ಬಾಣಪ್ರಯೋಗಮಾಡಿ ಚದರಿಸಿ, ಉಳಿದನು-ನಿಂತನು.

ಅ‖ ವಿ‖ ಕೃತವರ್ಮನೂ, ಸಾಂಬನೂ, ಅನುಸಾಲ್ವನೂ, ಇವರು-ಕೃತವರ್ಮಸಾಂಬಾನುಸಾಲ್ವರು, ಬಹು (ದ್ವಂ.) ಸತಿ-ಹೆಂಡತಿ, ಸುತ-ಮಗ ‖೫‖

ಟೀ‖ ಸೊಕ್ಕಾನೆ-ಮದಿಸಿದಾನೆಯು, ಕಾಸಾರವಂ-ಸರೋವರವನ್ನು, ಪೊಕ್ಕು-ಪ್ರವೇಶಿಸಿ, ಕಲಕುವಂತೆ-ಕದಡುವ ಹಾಗೆ, ಅಕ್ಕಜದೊಳ್-ಪ್ರೀತಿಯಿಂದ, ಒಕ್ಕಲಿಕ್ಕಿದ-ಒಂದಾಗಿ ಸೇರಿದ್ದ, ನಿಖಿಳ-ಸಮಸ್ತವಾದ, ಸೈನ್ಯಮಂ-ವಾಹಿನಿಯನ್ನು, ಅದು-ಆ ಹಸ್ತಿಯು, ಮಿಕ್ಕು-ಅತಿಕ್ರಮಿಸಿ, ಒಂದೆಕ್ಕಲಂ - ಒಂದು ಮದಗಜವು, (ಕಾಡುಹಂದಿ) ಬೀದಿವರಿದು - ವೀಧಿಯಲ್ಲಿ ಪರಿದಾಡಿ, ಅಟ್ಟುವಂತೆ- ಹಿಮ್ಮೆಟ್ಟಿಸುವ ಹಾಗೆ, ಅತಿಬರಲನು-ಅತಿಬಲರನ್ನು, ಓಡಿಸಿದಂ - ಅಟ್ಟಿದನು, ಕಕ್ಕಸದೊಳು-ಕರ್ಕಶವಾಗಿ, ಎಕ್ಕಳಿಸುತ - ರೋಷಗೊಳುತ್ತ, ಐತಂದು - ಬಂದಿರುವ, ವೀರರಂ - ಪರಾಕ್ರಮಿಗಳನ್ನು, ಮುಕ್ಕುರಿಸಿ - ನಾಸಿಕವ

---

ಪ್ರತಿಯಾಗಿ ಸುರಥನು ಪ್ರದ್ಯುಮ್ನನನ್ನು ಶರಗಳಿಂದ ಮುತ್ತಿದನು, ಈಕಡೆ ಕೃಷ್ಣಸಹಿತನಾಗಿ ಪಾರ್ಥನು ಎಲ್ಲಿ ಓಡಿಹೋದನೋ ತಿಳಿಯದು. ಇನ್ನು ಮದಿಸಿದ ಆನೆಗಳ ಹೆಚ್ಚಿಗೆಯು ನೊಣಕ್ಕೆ ಸಮವಾಯಿತು. ಚತುರಂಗಬಲವನ್ನು ಮುತ್ತಲು ಸುಧನ್ವನಂತೆ ಕಾಲಕಳೆವರೆ ಎಂದು, ಸುರಥನು ಆ ಶೂರರಾದ ಭಟರನ್ನು ಹೊಡೆದನು ‖ ೪ ‖ ಪ್ರದ್ಯುಮ್ನಾದಿಗಳು ಸುರಥನಂ ಮುತ್ತಿದಾಗ ಸುರಥನು ಪ್ರದ್ಯುಮ್ನನನ್ನು ಜಯಿಸಿ, ಸಾತ್ಯಕಿಯನ್ನು ಮುತ್ತಿ ಕೃತವರ್ಮ ಸಾಂಬಾನುಸಾಲ್ವರನ್ನು ಶಕ್ತಿಗುಂದಿಸಿ, ಶೂರನಾದ ಯೌವನಾಶ್ವನನ್ನು ಗಾಯಪಡಿಸಿ, ನೀಲಧ್ವಜನನ್ನು ಹಿಂಸಿಸಿ, ಸೂರ್ಯನ ಮೊಮ್ಮಗನಾದ ವೃಷಕೇತುವನ್ನು ಅಪಜಯಗೊಳಿಸಿ, ಸಮಸ್ತರಾದ ಯಾದವಸೈನ್ಯವನ್ನೆಲ್ಲಾ ಕತ್ತರಿಸಿ, ಅವರಲ್ಲಿ ಮಹಾಮಹಾ ಪರಾಕ್ರಮಿಗಳನ್ನೆಲ್ಲಾ ಗೆದ್ದು, ಚತುರಂಗಬಲವನ್ನೆಲ್ಲಾ ನಾಶಮಾಡಿ, ಅತಿರಥ ಮಹಾರಥರನ್ನು ತನ್ನದೊಂದು ರಥದಿಂದಲೇ ಹೊಡೆದು ತಾನು ಮಾತ್ರ ಯುದ್ಧಕ್ಕೆ ಅನುವಾಗಿ ನಿಂತನು ‖ ೫ ‖ ಮದೋದಕದಿಂದ ಕೂಡಿದ ಆನೆಯು ಸರೋವರವನ್ನು ಪ್ರವೇಶಿಸಿ, ಸಮ

ಳೆಕ್ಕಳಿಸುತ್ತೈತಂದವೀರರಂ | ಮುಕ್ಕುರಿಕಿತೆಕ್ಕೆಗೆಡಿಸಿದನಾರಣಾಗ್ರದೋಳ್ | ಳ್ಪೆಕ್ಕಳಿಸಿದುಕ್ಕಂದದಧಟಿಂದಸುರಥನರಸಿದನಚ್ಯುತಾರ್ಜುನರನು || ೬ || ಘೋರಸಂಸಾರದೊಳ್ಮುಸುಕಿರ್ದಮರನೆಯುನಿ | ವಾರಿಸಿಮಹಾಯೋಗಿ ಜೀವಪರಮಾತ್ಮರವಿ ಚಾರಿಸುವತೆರದಿಂದರಿಪುವ್ಯೂಹದೊಳೊತ್ತಿ ಕವಿವಭಟರಂಗಣಿಸದೆ || ವೀರಸುರಥಂ ಕೃಷ್ಣಫಲುಗುಣರನರಸಿದನು | ದಾರವಿಕ್ರಮಪರಿಜ್ಞಾನದಿಂದೆಡಬಲವ | ನಾರಯ್ಯದೇಕಾಗ್ರಚಿತ್ತದಿಂವಸುಮತೀಕಾಂತಕೇಳದ್ಭುತವನು || ೭ || ಅದ್ಭುತಪರಾಕ್ರಮದೊಳಾನಿಖಿಳಸೇನೆಗೆಮ | ಹದ್ಭಯವಬೀರುತ್ತೈತಹಸುರಥನಂ ಕಾಣು | ತುದ್ಭವಿಸಿತರ್ಜುನಂಗತಿರೋಷಮೆಂದ ವಸುರಾಂತಕನೊಳಿನನ

ನ್ನು ಕದಡಿದಂತೆಮಾಡಿ (ಅವಮಾನಪಡಿಸಿ), ತೆಕ್ಕೆಗೆಡಿಸಿದಂ-ನಿಲ್ಲದಂತೆ ಓಡಿಸಿದನು, ಆರಣಾಗ್ರದೋಳ್-ಆ ಯುದ್ಧರಂಗದಲ್ಲಿ, ವೆಕ್ಕಳಿಸಿದ-ಹೆಚ್ಚಾದ, ಪೆಕ್ಕಳಿಸಿದ-ಗುಂಪುಕೂಡಿದ, ಉಕ್ಕಂದದ-ಸರ್ವತ್ರವ್ಯಾಪಿಸಿರುವ, ಅಧಟಿಂದ-ಪರಾಕ್ರಮದಿಂದ, ಸುರಥಂ-ಸುರಥನು, ಅಚ್ಯುತಾರ್ಜುನರನು-ಕೃಷ್ಣಫಲುಗುಣರನ್ನು, ಅರಸಿದಂ-ಹುಡುಕಿದವನಾದನು ||

ಅ|| ವಿ|| ಕಾಸಾರ-ತ್ಸ, ಕಾಸರ-ದ್ಭ, ಕಕ್ಕಸ-ದ್ಭ, ಕರ್ಕಶ-ತ್ಸ, ಸೊಕ್ಕಿದ+ಆನೆ=ಸೊಕ್ಕಿದಾನೆ ವಿ. ಪೂ. ಕ. ಅಚ್ಯುತನೂ ಅರ್ಜುನನೂ ಇವರು-ಅಚ್ಯುತಾರ್ಜುನರು, ದ್ವಂ. ಗ ||೬||

ಟೀ|| ಘೋರ-ಭಯವನ್ನುಂಟುಮಾಡುವ, ಸಂಸಾರದೊಳ್ - ಸಂಸಾರದಲ್ಲಿ, ಮುಸುಕಿರ್ದ - ಮುತ್ತಿಕೊಂಡಿದ್ದ, ಮರನೆಯ-ಮರವನ್ನು (ಅಜ್ಞಾನವನ್ನು), ನಿವಾರಿಸಿ-ಹೋಗಲಾಡಿಸಿ, ಮಹಾಯೋಗಿ-ಯೋಗಾಭ್ಯಾಸವುಳ್ಳವನು, ಎಂದರೆ ಯಮ, ನಿಯಮ-ಆಸನ-ಪ್ರಾಣಾಯಾಮ. ಪ್ರತ್ಯಾಹಾರ, ಧ್ಯಾನ, ಧಾರಣ, ಸಮಾಧಿ, ಈ ಎಂಟು ಯೋಗಗಳುಳ್ಳವನಿಗೆ ಯೋಗಿ ಎಂದು ಹೆಸರು, (ಯತಿಯು) ಜೀವಪರಮಾತ್ಮರ-ಜೀವ ಮತ್ತು ಪರಮಾತ್ಮ ಇವರನ್ನು (ಜೀವ ಬ್ರಹ್ಮ ಇವರನ್ನು) ವಿಚಾರಿಸುವ-ಕೇಳಿ ತಿಳಿಯುವ, ತೆರದಿಂದ-ಕ್ರಮದಿಂದ, ರಿಪುವ್ಯೂಹದೊಳು-ಅರಿಬಲದಲ್ಲಿ. ಒತ್ತಿ-ನುಗ್ಗಿ, ಕವಿವ-ಆವರಿಸುವ, ಭಟರಂ-ಯೋಧರನ್ನು, ಗಣಿಸದೆ-ಲಕ್ಷ್ಯಮಾಡದೆ, ವೀರ-ಅಸಹಾಯಶೂರನಾದ, ಸುರಥಂ-ಸುರಥನು, ಉದಾರ-ಹೆಚ್ಚಾದ, ವಿಕ್ರಮ-ಆಟೋಪದಿಂದೊಡಗೂಡಿದ, ಪರಿಜ್ಞಾನದಿಂ-ತಿಳುವಳಿಕೆಯೆಂಬ ಯೋಗದಿಂದ, ಎಂದರೆ ಪಾರ್ಥನೆ ಜೀವಾತ್ಮನು, ಕೃಷ್ಣನೆ ಪರಮಾತ್ಮನೆಂಬ ತಿಳುವಳಿಕೆಯಿಂದ, ಎಡಬಲವಂ-ಎಡ ಮತ್ತು ಬಲಭಾಗಗಳನ್ನು, ಆರೈಯದೆ-ಈಕ್ಷಿಸದೆ, ಏಕಾಗ್ರಚಿತ್ತದಿಂದ-ಒಂದೇ ಮನೋನಿಶ್ಚಯದಿಂದ, ಅರಸಿದಂ-ಕಾಣಲು ಹೊರಟನು || ವಸುಮತೀಕಾಂತ-ಭೂಮಿಪತಿಯಾದ ಜನಮೇಜಯರಾಯನೇ ! ಅದ್ಭುತವನು-ಆಶ್ಚರ್ಯವನ್ನು, ಕೇಳು-ಆಲಿಸು, ಜೀವನೇ ಬೇರೆ, ಪರಮಾತ್ಮನೆ ಬೇರೆಯೆಂದು ದ್ವೈತಿಗಳೂ, ಜೀವಾತ್ಮನಿಗೂ, ಪರಮಾತ್ಮನಿಗೂ ಭೇದವೇ ಇಲ್ಲವೆಂದು ಅದ್ವೈತಿಗಳೂ ವಾದಿಸುವರು ||

ಅ|| ವಿ|| ಘೋರವಾದ+ಸಂಸಾರ=ಘೋರಸಂಸಾರ, ವಿ. ಪೂ. ಕ ಜೀವ-ಜೀವಾತ್ಮ, ಬೃಹಸ್ಪತಿ ||೭||

ಟೀ|| ಅದ್ಭುತ - ಆಶ್ಚರ್ಯವಾದ, ಪರಾಕ್ರಮದೊಳು - ವಿಕ್ರಮದಿಂದ (ಶೌರ್ಯದಿಂದ), ನಿಖಿಳಸೇನೆಗೆ - ಸಮಸ್ತವಾದ ಸೈನ್ಯಕ್ಕೂ, ಮಹದ್ಭಯಂ-ಹೆಚ್ಚಾದ ಅಂಜಿಕೆಯನ್ನು, ಬೀರುತ-ಪಡಿಸುತ್ತ, (ಚೆಲ್ಲುತ್ತ) ಐತಹ-ಬರುತ್ತಲಿರುವ, ಸುರಥನಂ-ಸುರಥನನ್ನು, ಕಾಣುತ-ನೋಡುತ್ತಲೇ, ಅರ್ಜುನಂಗೆ-ಅರ್ಜುನನಿಗೆ, ಅತಿರೋಷ-ಅಧಿಕವಾದ ಕೋಪವು, ಉದ್ಭವಿಸಿತು-ಹುಟ್ಟಿತು, ಎಲೆದೇವ - ಎಲೈ ಸ್ವಾಮಿಯಾದ ಕೃಷ್ಣನೆ, ಮತ್-ನನ್ನ, ಭುಜದೊಳು - ಭುಜದಲ್ಲಿ, ಈ ಚಾಪಂ-ಈ ಧನುಸ್ಸು, ಇರ್ದು-ಇದ್ದರೂ, ಪಾವಕನಸ್ತ್ರದ-ಅಗ್ನ್ಯಸ್ತ್ರದ, ಅಭ್ಯುದಯಕಂ-ಏಳಿಗೆಯಂ ಕುರಿತು, (ಜಯವನ್ನು ಕುರಿತು) ಅಮಮ-ಆಶ್ಚರ್ಯವು. ಆಶ್ಚರ್ಯವು, ನೋಡುವೆಂ-ಪರೀಕ್ಷಿಸುತ್ತೇನೆ, ಇವನ-ಈ ಸುರಥನನ್ನು, ಜಯಕೆ-ಗೆಲ್ಲುವ ವಿಷಯಕ್ಕೆ, ತ್ವತ್-ನಿನ್ನ

ಸಿಯ ಉದಕವನ್ನು ಕದಡುವ ರೀತಿಯಿಂದ ಅಕ್ಕರೆಯಿಂದ ಕೂಡಿ ಬರುವ ಸಕಲ ಸೇನೆಯುನ್ನೂ ಆ ಸಲಗನು (ಹಂದಿ) ಬೀದಿಯಲ್ಲಿ ಹರಿದಾಡಿ ಓಡಿಸುವ ರೀತಿಯಿಂದ ಅತಿಬಲರನು ಓಡಿಸಿ ಅಧಿಕವಾಗಿ ರೋಷಗೊಳ್ಳುತ ಬರುವ ವೀರರನ್ನು ಅಪಮಾನ ಪಡಿಸಿ ಆ ರಣರಂಗದಲ್ಲಿ ನಿಲ್ಲಗೊಡವೆ ಓಡಿಸಿದನು, ಅನಂತರ ಬಲಾನ್ವಿತನಾದ ಸುರಥನು ಕೃಷ್ಣ ಫಲುಗುಣರನ್ನು (ಹುಡುಕಿದನು ||೬|| ಆಗ ಸುರಥನು ಘೋರವಾದ ಮಹಾ ಸಂಸಾರ ಪಾಶವನ್ನು ತಿರಸ್ಕರಿಸಿ, ಅಷ್ಟವಿಧವಾದ ಯೋಗಾಭ್ಯಾಸಗಳನ್ನು ನಿಯಮದಿಂದ ನೆರವೇರಿಸುವ ಯೋಗೀಶ್ವರನಹಾಗೆ ಎಡಬಲಭಾಗಗಳನ್ನು ಈಕ್ಷಿಸದೆ ಜಿತೇಂದ್ರಿಯನಾಗಿ ಏಕಾಗ್ರಚಿತ್ತದಿಂದ ಅರ್ಜುನನೆ ಜೀವನೆಂತಲೂ, ಕೃಷ್ಣನೇ ಪರಮಾತ್ಮನೆಂತಲೂ, ಯೋಚಿಸುತ್ತಿರುವನಂತೆ ಕೃಷ್ಣಾರ್ಜುನರನ್ನು ಹುಡುಕುತ್ತ ಅಧಿಕವಾದ ಪರಾಕ್ರಮಾತಿಶಯದಿಂದ ಕೂಡಿದವನಾಗಿ, ಹೋಗುತ್ತಿದ್ದನು ಎಲೈ ಭೂಪಾಲಕನಾದ ಜನಮೇಜಯರಾಯನೆ ಈ ಅದ್ಭುತವನ್ನು ಕೇಳುವವನಾಗೆಂದನು || ೭ || ಆಗ ಅತ್ಯಧಿಕವಾದ ಪರಾಕ್ರಮದಿಂದ ಸಮಸ್ತ ಸೈನ್ಯವನ್ನೂ ಓಡಿಸಿ, ಅರಿಬಲಕ್ಕೆ ಭಯವನ್ನುಂಟುಮಾಡುತ್ತ ಬರುತ್ತಲಿರುವ ಸುರಥನಂ ಅರ್ಜುನನು ನೋಡಿ ಬಹುವಾಗಿ ಕೋಪಿಸಿಕೊಂಡು ದೈ

ಷಯಕೆ ‖ ತ್ವದ್ಭಾವದೊಳ್ತೋರಿದೆಣಿಕೆಯೇನೆಲೆದೇವ | ಮದ್ಭುಜದೊಳೀಚಾಪವಿರ್ದುಪಾವಕನಸ್ತ್ರ | ದಭ್ಯುದಯಕವನು ನೋಡುವೆನೆನುತಬಿಲ್ದಿರುವನೊದರಿನರನಿದಿರಾದನು ‖ ೮ ‖ ಎಲವೊಸೋದರನಳಿದಳಲ್ಗಾಗಿನವ್ಮೊಡನೆ | ಕಲಹಕ್ಕೈದುವನಿನ್ನ ಕೊಲುವದನುಚಿತಮೆಂದು | ತೊಲಗಿದೊಡೆನೀನರಿದುದಿಲ್ಲಲಾತಲೆಬಲ್ಲಿತೆಂದು ಕಲ್ಲಂಪಾಯ್ವೆಲ ‖ ಕಲಿಯಾಗಿನಿಂದುನೀಂಸಮರದೊಳ್ಕಾದಿದೊಡೆ | ಗೆಲವಹುದೆಮರುಳಾಗಬೇಡಹಯಮಂಬಿಟ್ಟು | ನೆಲದೆರೆಯ ಧರ್ಮಸುತನಂ ಕಂಡುಬದುಕುವದುಲೇಸೆಂದು ನರನೆಚ್ಚನು ‖ ೯ ‖ ಗಣ್ಯವೇನುತ್ಸಹಭವಂಗೆ ನೀಂ ಹರಿಹರಹಿ | ರಣ್ಯಗರ್ಭಾದಿಗಳ್ಮುಳಿದರಳಿದಪನೆಕಾ | ರುಣ್ಯದಿಂನಿನ್ನನುದ್ಧ

---

ಯ, ಭಾವದೊಳ್-ಯೋಚನೆಯಲ್ಲಿ, ತೋರಿದ_ಕಾಣಬಂದ ವಿಷಯವು, ಏನು-ಯಾವ ವಿಧವಾಗಿರುತ್ತೆ? ಎಂದು_ಎಂಬದಾಗಿ, ಅಸುರಾಂತಕನೊಳು_ದೈತ್ಯಾರಿಯಾದ ಕೃಷ್ಣನಲ್ಲಿ, ಎಂದನು_ಮೇಲೆ ಹೇಳಿದಂತೆ ಹೇಳಿದನು, ಎನುತ-ಈರೀತಿಯಾಗಿ ಹೇಳುತ್ತ, ಬಿಲ್ದಿರುವನು-ಚಾಪದ ಹುರಿಯನ್ನು, ಒದರಿ_ಟಂಕಾರಶಬ್ದಗೊಳಿಸಿ, ನರನು_ಅರ್ಜುನನು, ಇದಿರಾದನು_ಸುರಥನಿಗೆ ಪ್ರತಿಭಟಿಸಿ ನಿಂತನು ‖

ಅ‖ ವಿ‖ ತ್ವತ್ + ಭಾವ = ತದ್ಭಾವ, ಜ. ಸ. ದೇವ-ಸ್ವಾಮಿ, ದೇವತೆ. ಇದು + ಚಾಪ = ಈಚಾಪ, ಗ. ಸ. ರೋಷ-(ತ್ಸ) ರೋಸ (ದ್ಭ) ‖ ೮ ‖

ಟೀ‖ ಎಲವೊ-ಎಲೋ ಸುರಥ, ಸೋದರನು-ಅಗ್ರಜನಾದ ಸುಧನ್ವನು, ಅಳಿದ_ಮೃತಪಟ್ಟ, ಅಳಲ್ಗಾಗಿ_ವ್ಯಥೆಗೋಸ್ಕರನಾಗಿ, ನವ್ಮೊಡನೆ-ನಮ್ಮ ಸಂಗಡ, ಕಲಹಕೆ-ವ್ಯಾಜ್ಯಕ್ಕೆ, ಐದುವ-ಬರುತ್ತಲಿರುವ, ನಿನ್ನ_ನಿನ್ನಂ, ಕೊಲುವುದು-ಸಂಹರಿಸತಕ್ಕದ್ದು, ಅನುಚಿತಂ_ಯೋಗ್ಯವಲ್ಲವು, ಎಂದು-ಎಂಬದಾಗಿ, ತೊಲಗಿದೊಡೆ_ಬೇರೆ ಹೋಗಿದ್ದರೆ, ನೀಂ_ನೀನು, ಅರಿದುದಿಲ್ಲಲಾ_ಜ್ಞಾಪಕ ಮಾಡಿಕೊಂಡವನಾಗಲಿಲ್ಲವೆ! ತಲೆ_ಶಿರವು, ಬಲ್ಲಿತೆಂದು_ಬಲವಾದುದೆಂಬದಾಗಿ, ಕಲ್ಲಂ-ಶಿಲೆಯನ್ನು, ಪಾಯ್ವೆಲಾ_ಹಾಯತಕ್ಕವನಾಗಿರುತ್ತಿ ಅಲ್ಲವೇ? ನೀಂ_ನೀನು, ಸಮರದೊಳ್-ಕಾಳಗದಲ್ಲಿ, ಕಲಿಯಾಗಿ_ಸಮರ್ಥನಾಗಿ, (ಶೂರನಾಗಿ) ನಿಂದು_ಪ್ರತಿಭಟಿಸಿ ನಿಂತು, ಕಾದಿದೊಡೆ_ಜಗಳವಾಡಿದುದೇ ಆದರೆ, ಗೆಲವು – ಜಯವು, ಅಹುದೇ_ಆದೀತೆ? ಮರುಳಾಗಬೇಡ_ಅಜ್ಞಾನಿಯಾಗಬೇಡ, ಹಯಮಂ_ಅಶ್ವಮಂ, ಬಿಟ್ಟು_ತ್ಯಜಿಸಿ, ನೆಲದೆರೆಯ_ಭೂಪತಿಯಾದ, ಧರ್ಮಸುತನಂ_ಯಮಧರ್ಮನ ಮಗನನ್ನು, ಕಂಡು_ನೋಡಿ, ಬದುಕುವುದು_ಜೀವಿಸುವುದು, ಲೇಸೆಂದು_ಯೋಗ್ಯವಾದದ್ದೆಂದು, ನರಂ-ಪಾರ್ಥನು, ಎಚ್ಚಂ_ಬಾಣಪ್ರಯೋಗ ಮಾಡಿದನು ‖

ಅ‖ ವಿ‖ ಸಹ-ಸಮಾನವಾದ, ಉದರ_ಹೊಟ್ಟೆಯುಳ್ಳವನು, ಒಬ್ಬ ತಾಯಿ ಗರ್ಭದಲ್ಲಿ ಹುಟ್ಟಿದವನು, ಕೊಲುವುದು+ಅನುಚಿತ=ಕೊಲುವುದನುಚಿತ, ಉ ಲೋಪ. ಸಂಧಿ. ‖೯‖

ಟೀ‖ ಮತ್ಸಹಭವಂಗೆ_ನನ್ನ ಸಹೋದರನಾದ ಸುಧನ್ವನಿಗೆ, ನೀಂ ಗಣ್ಯವೆ_ನೀನು ತಾಳಿಕೆಯಾಗಿರುತ್ತೀಯ? (ಇಲ್ಲನೆಂಬ ಭಾವವು), ಹರಿ-ವಿಷ್ಣುವು, ಹರ-ಪರಮೇಶ್ವರನು, ಹಿರಣ್ಯಗರ್ಭ-ಬ್ರಹ್ಮನು ಇವರೇ, ಆದಿ-ಮೊದಲಾದ ದೇವಯೋನಿಗಳು, ಮುಳಿದೊಡೆ_ಕೋಪಮಾಡಿದರೆ ತಾನೆ, ಅಳಿದಪನೆ_ನಾಶವಾಗತಕ್ಕವನೆ? ಕಾರುಣ್ಯದಿಂ_ಕೃಪೆಯಿಂದ, ಅಚ್ಯುತಂ_ನಾಶರಹಿತನಾದ ಕೃಷ್ಣನು, ನಿನ್ನಂ_ನಿನ್ನನ್ನು, ಉದ್ಧರಿಸಲೆಂದು_ ರಕ್ಷಿಸಬೇಕೆಂಬದಾಗಿ, ತನ್ನ ಅವತಾರದ_ತನ್ನಯ ರಾಮಾದಿ ದಶಾವತಾರಗಳ, ಪುಣ್ಯದಿಂ- ಸುಕೃದಿಂದ, ಮಡಿದು – ಮೃತಪಟ್ಟು, ಮುಕ್ತಿಗ- ವೀರಸ್ವರ್ಗಕ್ಕೆ, ಸಂದನು_ನಡದನು (ಪ್ರಯಾಣ ಮಾಡಿದನು), ನಾವ್-ನಾವುಗಳು, ಇದಕೆ-ಈ ಕೆಲಸಕ್ಕಾಗಿ, ನಿರ್ವಿಣ್ಣರು_ಆಶ್ಚರ್ಯ ಪಡತಕ್ಕವರು, (ಖಿನ್ನ) ಅಹುದಿಲ್ಲ

---

ತ್ಯಾರಿಯಾದ ಶ್ರೀ ಕೃಷ್ಣನೊಡನೆ ಹೇಳಿದನು, ಎಲೈ ಸ್ವಾಮಿಯೇ, ಈ ಸುರಥನನ್ನು ಕಾಳಗದಲ್ಲಿ ಗೆಲ್ಲುವ ವಿಷಯಕ್ಕೆ ತಮ್ಮ ಅಭಿಮತವೇನಿರುತ್ತೆ? ನನ್ನ ಬಾಹುವಿನಲ್ಲಿರುವ ಈ ಚಾಪವೂ, ಯಜ್ಞೇಶ್ವರನ ಅನುಗ್ರಹದಿಂದ ಪ್ರಾಪ್ತವಾದ ಅಗ್ನ್ಯಸ್ತ್ರವೂ, ಇವಕ್ಕೆ ಈ ಪ್ರಯೋಜನವನ್ನು ನೋಡುತ್ತೇನೆ (ಇದನ್ನು ಉಪಯೋಗಿಸುತ್ತೇನೆ ಎಂದು ಗರ್ಜಿಸುತ, ಬಿಲ್ಲಿನ ಹುರಿಯನ್ನು ಸರಿಪಡಿಸಿ ಧ್ವನಿಮಾಡುತ್ತ, ಸುರಥನಿಗೆ ಎದುರಾಗಿ ನಿಂತು ‖೮‖ ಪೇಳಲುಪಕ್ರಮಿಸಿದನು_ಎಲಾ ಸುರಥನೆ! ನಿನ್ನ ಸಹೋದರನಾದ ಸುಧನ್ವನು ನನ್ನೊಡನೆ ಕಾದಿ ಏನಾದನು? ನಿಮ್ಮ ಅಣ್ಣ ಸುಧನ್ವನು ಮಡಿದ ದುಃಖಕ್ಕಾಗಿ ನಮ್ಮ ಸಂಗಡ ಯುದ್ಧಕ್ಕೆ ಬರುವ ನಿನ್ನನ್ನು ಸಂಹರಿಸುವುದು ಸರಿಯಾದುದಲ್ಲವೆಂತ ಬಾಪಿಸಿ, ಮರೆಯಾದಾಗ್ಯೂ ಅವನ್ನು ತಿಳಿಯದೇ ಹೋದೆಯಲ್ಲವೆ? ತಲೆಬುರುಡೆಯು ಗಟ್ಟಿಯಾಗಿದೆಯೆಂದು ಕಲ್ಲನ್ನು ಹಾಯಬಹುದೆ? (ಕೂಡದು) ವೃಥಾ ಯುದ್ಧಮಾಡಿ ನಾಶವಾಗಬೇಡ, ಕುದುರೆಯನ್ನು ಬಿಟ್ಟು ಕೊಟ್ಟು ಭೂಪತಿಯಾದ ಧರ್ಮರಾಜನಂ ಕಂಡು ಸುಖಿಯಾಗಿ ಜೀವಿಸೆನುತ ಪಾರ್ಥನು ಬಾಣಪ್ರಹಾರವಂ ಮಾಡಲು ‖ ೯ ‖ ಆಗ ಸುರಥನು ಎಲೈ ಪಾರ್ಥ! ನನ್ನ ಒಡಹುಟ್ಟಿದವನಾದ ಸುಧನ್ವಂಗೆ ನೀನು

ರಿಸಲೆಂದಚ್ಯುತಂಕೊಟ್ಟತನ್ನವತಾರದ ‖ ಪುಣ್ಯದಿಂಮಡಿದುಮುಕ್ತಿಗೆಸಂದನಿದಕೆನಿ । ರ್ವಿಣ್ಣರಹದಿಲ್ಲನಾವಿನ್ನುಹಯಮುಂಬಿಡಲ । ರಣ್ಯವಾಸಿಗಳಲ್ಲನೋಡೆಮ್ಮಸಾಹಸವನೆನ ತೆಚ್ಚನಾಸುರಥನು ‖೧೦‖ ಎಸೆಯುಲುಚ್ಛಳಿಸಿಪಾಯ್ವಸುರಥನಂಬಿನಗರಿಯ । ಬಿಸಿಯಗಾಳಿಯುಬಾಧೆಯಿಂದುರಿದುಭುಗಿಲೆಂದು । ಮಸಗಿದತಿಶಯದರೋಷಜ್ವಾಲೆಯಿಂಧನಂಜಯನಾದನೀನರನೆನೆ ‖ ದೆಸೆಯಾವುದಿಳೆಯಾವುದಿನಬಿಂಬವಾವುದಾ । ಗಸಮಾವುದೆಂಬಿನಿಂಪೊಸಮಸೆಯವಿಶಿಖಮಂ । ಮುಸುಕಿದಂಸಾರಥಿಧ್ವಜಹಯಗಳೆಡೆಗೆಡೆಗೆಸುರಥಂವಿರಥನಾಗಲು ‖೧೧‖ ಕೂಡೆಮತ್ತೊಂದುಪೊಸರಥವನಳವಡಿಸಿಕೊಂ । ಡೀಡಿರಿದನಂಬಿನಿಂಪಾರ್ಥನವರೂ

---

ಆಗತಕ್ಕವರಲ್ಲ, ಇನ್ನು ಮುಂದೆ–ಇನ್ನುಮೇಲೆ, ಹಯವಂ ಬಿಡಲು- ತ್ಯಜಿಸಲು, ಅರಣ್ಯವಾಸಿಗಳ್- ಮುನಿಗಳು, ಅಲ್ಲ–ಆಗಿರುವುದಿಲ್ಲ, ಎಮ್ಮ-ನಮ್ಮಯ, ಸಾಹಸಂ-ಸಾಮರ್ಥ್ಯವನ್ನು, ನೋಡು–ಪರೀಕ್ಷಿಸು, ಎನುತ–ಎಂದು ಹೇಳುತ್ತ, ಆ ಸುರಥಂ–ಆ ಸುರಥನು, ಎಚ್ಚಂ-ಬಾಣ ಪ್ರಯೋಗ ಮಾಡಿದನು.

ಅ‖ ವಿ‖ ತ್ರಿಮೂರ್ತಿಗಳು–ಬ್ರಹ್ಮ, ವಿಷ್ಣು, ಮಹೇಶ್ವರ ಇವರು, ಹಿರಣ್ಯ–ಬಂಗಾರವೆ, ಗರ್ಭಂ–ಹೊಟ್ಟೆಯಲ್ಲಿ ಉಳ್ಳವನು, ಹಿರಣ್ಯಗರ್ಭ, (ಬ್ರಹ್ಮ) ಹಿರಣ್ಯ-ಬಂಗಾರ, ಗರ್ಭ–ಬಸಿರು, ಹೊಟ್ಟೆ, ಚ್ಯುತಿ–ನಾಶ, ಅ–ಇಲ್ಲದವನು, ಅಚ್ಯುತ, ಆನು+ಸುರಥ=ಆ ಸುರಥ, ಗಮಕ ಸಮಾಸ. ಸಾಹಸ–ಸಾಸ, ಮಹಿಮೆ–ಮೈಮೆ, ಮಾಲಕುಮಿ-ಮಹಾಲಕ್ಷ್ಮಿ. ‖೧೦‖

ಟೀ‖ ಸುರಥಂ–ಸುರಥನು, ಎಸಲು-ಬಾಣವನ್ನು ಹೊಡೆದದ್ದರಿಂದ, ಉಚ್ಛಳಿಸಿ–ಅಂತರಿಕ್ಷದಲ್ಲಿ ಎಗರಿ, ಪಾಯ್ವ-ಹಾದು ಬರುತ್ತಲಿರುವ, ಸುರಥನ, ಅಂಬಿನ–ಸುರಥನ ಬಾಣದ, ಗರಿಯ–ರೆಕ್ಕೆಗಳ, ಬಿಸಿಯ-ಬೆಚ್ಚನೆಯ, ಗಾಳಿಯ–ವಾಯುವಿನ, ಬಾಧೆಯಿಂದ–ತೊಂದರೆಯಿಂದ, ಉರಿದು–ಪ್ರಜ್ವಲಿಸಿ, ಭುಗಿಲ್ ಎಂದು–ಭುಗ್ ಎಂಬ ಧ್ವನಿಯಿಂದ, ಮಸಗಿದ–ಉರಿದ, ಅತಿಶಯದ-ಹೆಚ್ಚಾದ, ರೋಷ-ಸಿಟ್ಟೆಂಬ, ಜ್ವಾಲೆಯಿಂ–ಉರಿಯ ದೆಸೆಯಿಂದ, ಧನಂಜಯಂ-ಅಗ್ನಿಯೇ, (ಧನಂಜಯನೆಂಬ ನಾಮವುಳ್ಳ) ನರಂ–ಪಾರ್ಥನು, ಎನೆ–ಇರುವನೋ ಎನ್ನುವಂತೆ, ದೆಸೆ–ದಿಶಾ, (ದಿಕ್ಕು) ಆವುದು–ಯಾವುದೊ, ಇಳೆ–ಪೃಥ್ವಿಯು, ಆವುದು-ಯಾವುದೋ, ಇನಬಿಂಬಂ-ರವಿ ಮಂಡಲವು, ಆವುದು–ಯಾವುದೋ, ಆಗಸಂ–ಅಂತರಿಕ್ಷವು, ಆವುದು–ಯಾವುದೋ, ಎಂಬಿನಿಂ–ಎನ್ನುವ ತೆರದಿಂದ, ಪೊಸ-ನೂತನವಾಗಿ, ಮಸೆಯ-ಹದಗೊಳಿಸಿದ, ವಿಶಿಖಮಂ–ಅಂಬನ್ನು, ಸುರಥಂ–ಸುರಥನು, ವಿರಥನು–ತೇರಿಲ್ಲದವನು, ಆಗಲು–ಉಂಟಾಗುವಂತೆ, ಸಾರಥಿ–ರಥ ನಡಿಸತಕ್ಕವನು, ಧ್ವಜ–ಟೆಕ್ಕೆ, ಹಯಗಳ–ಕುದುರೆ ಇವೇ ಮೊದಲಾದವುಗಳ, ಎಡೆಗೆಡೆಗೆ–ಹತ್ತಿರಕ್ಕೆ, ಮುಸುಕಿದಂ-ಕವಿಯುವಂತೆ ಮಾಡಿದನು.

ಅ‖ ವಿ‖ ಸು–ಒಳ್ಳೆಯದಾದ, ರಥಂ–ತೇರುಳ್ಳವನು=ಸುರಥ ಧನಂಜಯ- ಅರ್ಜುನ, ಅಗ್ನಿ, ಬಿಂಬ–ಮಂಡಲ, ಗುಂಡು, ಇನ–ಸೂರ್ಯ, ಗಂಡ, ರೋಷವೆಂಬ+ಜ್ವಾಲೆ=ರೋಷಜ್ವಾಲೆ ಸಂ.ಪೂ.ಕ. ಆಗಸ (ದ್ಭ) ಆಕಾಶ (ತ್ಸ) ಪದ ‖೧೧‖

ಟೀ‖ ಸುರಥಂ–ಸುರಥನು, ಕೂಡೆ-ತಕ್ಷಣವೆ, ಮತ್ತೊಂದು– ಬೇರೆಯಾದ ಒಂದು, ಪೊಸರಥವಂ- ನವ ವರೂಥವನ್ನು, ಅಳವಡಿಸಿಕೊಂಡು–ಒದಗಿಸಿಕೊಂಡವನಾಗಿ, ಪಾರ್ಥನ–ಫಲುಗುಣನ, ವರೂಥಂ–ರಥವನ್ನು, ಅಂಬಿನಿಂ-ಶರದಿಂದ, ಈಡಿರಿದಂ–ಬದಲಾಗಿ ಬಾಣ ಪ್ರಯೋಗ ಮಾಡಿದನು, (ಎಚ್ಚನು) ಕೂಡೆ-ಸಂಗಡಲೆ, ಆ ರಥಂ–ಆ ಪಾರ್ಥನ ರಥವು, ಐನೂರು ಬಿಲ್ಲಂತರಕೆ–ಐದು ನೂರುಬಾರು (ಬಿಲ್ಲಿನಳತೆ) ದೂರಪ್ರದೇಶದ, ಹಿಂಭಾಗಕೆ-ಹಿಂಗಡೆಗೆ, ಪೋದುದು–ಹೋದುದು, ಆ ಸಂಗರದೊಳು–ಆ ಯುದ್ಧದಲ್ಲಿ, ಕೃಷ್ಣನ ಶರೀರದೋಳ್-ಕೃಷ್ಣನ ದೇಹದಲ್ಲಿ, ಗಾಯಮಂ-ವ್ರಣವನ್ನು, ಮಾಡಿದಂ–ಉಂಟು ಮಾಡಿದನು, ಕುದುರೆಗಳ-ಅಶ್ವಗಳ, ಒಡಲ್ಗಳಂ–ಶರೀರಗಳನ್ನು, ತೋಡಿದಂ–ಹಳ್ಳ ಬೀಳುವಂತೆ ಮಾಡಿದನು, ನರನಂ–ಪಾರ್ಥನನ್ನು, ವಿಭಾ

---

ಗಣ್ಯನಾಗಿರುವೆಯಾ? ಬ್ರಹ್ಮವಿಷ್ಣು ಮಹೇಶ್ವರಾದಿಗಳಲ್ಲಿ ಯಾರು ಕುಪಿತರಾದರೂ ನನ್ನ ಸಹೋದರನು ಸಾಯತಕ್ಕವನೆ! ಕೃಪೆಯಿಂದ ಶ್ರೀ ಕೃಷ್ಣನು ನಿನ್ನನ್ನು ರಕ್ಷಿಸಬೇಕೆಂಬ ಯೋಚನೆಯಿಂದ ತಾನು ಮಾಡಿದ ಅವತಾರಗಳಲ್ಲಿ ಸಂಪಾದಿಸಿದ ಪುಣ್ಯವನ್ನೆಲ್ಲಾ ಧಾರೆಯೆರೆದು ಕೊಟ್ಟುದರಿಂದ, ಸಾಲೋಕ್ಯಪದವಿಯನ್ನು ಹೊಂದಿದನೇ ಹೊರತಾಗಿ, ನಿನ್ನಿಂದ ಎಂದಿಗೂ ಸೋಲತಕ್ಕವನಲ್ಲ, ಅಧ್ವರದ ಅಶ್ವವನ್ನು ಬಿಡಲು ನಾವು ಅರಣ್ಯದಲ್ಲಿ ಕಂದಮೂಲಾದಿಗಳನ್ನು ತಿಂದು ಜೀವಿಸುವ ಋಷಿಗಳಲ್ಲ, ನನ್ನ ಸಾಹಸವನ್ನಾದರೂ ನೋಡೆಂದು ಸುರಥನು ಬಾಣಪ್ರಯೋಗವಂ ಮಾಡಲು ‖೧೦‖ ಆಗ ಅರ್ಜುನನು ಸುರಥನು ಪ್ರಯೋಗಿಸಿದ್ದರಿಂದ ಅದು ಅಂತರಿಕ್ಷದಲ್ಲಿ ಹಾರಿ ಬರುತ್ತಲಿರುವ ಬಾಣದ ರೆಕ್ಕೆಗಳ ಬಿಸಿಯಾದ ಗಾಳಿಯ ತೊಂದರೆಯಿಂದ ಬಹುವಾಗಿ ಕೋಪಾವಿಷ್ಟನಾಗಿ, ಅಗ್ನಿಯೇ ಪಾರ್ಥನ ಆಕಾರವಾಗಿದೆಯೋ ಎನ್ನುವಂತೆ, ಭೂಮಿ, ಆಕಾಶ, ಸೂರ್ಯ ಅಷ್ಟದಿಕ್ಕುಗಳು, ಇವು ಯಾವುವೂ ಕಂಡು ಬರದ ಹಾಗೆ, ಹೊಸದಾಗಿ ಸಾಣೆಯಿಟ್ಟ ಬಾಣವನ್ನು, ಸುರಥನು ವಿರಥನಾಗುವ ರೀತಿಯಿಂದ ಸಾರಥಿ, ಧ್ವಜ, ಕುದುರೆ, ಇವುಗಳ ಸಮೀಪಕ್ಕೆ ಕವಿಯುವಂತೆ ಮಾಡಿದನು ‖೧೧‖ ಮತ್ತೆ ಸುರಥನು ಕೂಡಲೆ

ಥನಂ | ಕೂಡೆಹಿಂಭಾಗಕ್ಕೈನೂರುಬಿಲ್ಲಂತರಕೆಪೋದುದಾಸಂಗರದೊಳು || ಮಾಡಿದಂಕೃಷ್ಣನಶರೀರದೊಳ್ಗಾಯಮುಂ | ತೋ
ಡಿದಂಕುದುರೆಗಳೊಡಲ್ಗಳಂನರನುಂವಿ | ಭಾಡಿಸಿದನಾಸುರಥನೊಂದುಶಪಥದೊಳೆಸೆವುತಿದರೊಳೇನಹುದೆಂದನು ||೧೩|| ಶಪಥ
ಮೇನುಂಟಿದಕೆನಿನ್ನನಾಂಕೊಲ್ಲದೊಡೆ | ವಿಪುಲಪಾತಕರಾಶಿತನಗೆಸಂಘಟಿಸದಿ | ರ್ದಪುದೆಪೇಳೆನುತತೆಗದೆಚ್ಚಡಾಬಾಣಮುಂ
ಸುರಥನಂನಡುವೆಖಂಡಿಸಿ. || ಅಪಹಾಸದಿಂದಿಳೆಗೆನಿನ್ನನೀರಥದಿಂದನಿಪತನಂಗೈಯದೊಡೆತನಗೆಪರಲೋಕದೋ | ಳ್ವಿಪರೀತ

ಸಿಡಿದಂ-ಭೇದಿಸಿ ಹೋಗುವಂತೆ ಪ್ರಯೋಗಿಸಿದನು, ಆ ಸುರಥಂ-ಆ ಸುರಥನು, ಒಂದು ಶಪಥದೊಳು-ಒಂದು ಆಣೆಯಿಂದ, ಎಸೆವುತ-ಬಾಣಪ್ರಯೋಗಮಾಡುತ್ತ, ಇದರೊಳು-ಈ ಪ್ರಕಾರವಾಗಿ ಪ್ರಯೋಗಿಸಿದ್ದರಿಂದ, ಏಂ-ಏನುತಾನೆ, ಅಹುದು-ಆದೀತು, ಎಂದನು-ಎಂಬದಾಗಿ ಹೇಳಿದನು.

ಅ|| ವಿ|| ಪೊಸತು+ರಥ=ಪೊಸರಥ ವಿ. ಪೂ. ಕ. ಅವನು+ಪಾರ್ಥಂ-ಆ ಪಾರ್ಥಂ ಗಮಕ ಸ. ||೧೩||

ಟೀ|| ಆಗ-ಆ ಸಮಯದಲ್ಲಿ, ಪಾರ್ಥಂ-ಅರ್ಜುನನು, ಸುರಥನಂ ನೋಡಿ, ಇದಕ್ಕೆ-ಈ ವಿಷಯಕ್ಕೆ, ಶಪಥಂ-ಆಣೆಯು (ಪ್ರತಿಜ್ಞೆಯು), ಏಂ ಉಂಟು-ಏನುತಾನೆ ಇರುವುದು? ನಿನ್ನಂ-ನಿನ್ನನ್ನು, ನಾಂ-ನಾನು, ಕೊಲ್ಲದೊಡೆ-ಪ್ರಾಣವನ್ನು ತೆಗೆಯದಿದ್ದರೆ, ವಿಪುಲ-ಅಧಿಕವಾದ, ಪಾತಕರಾಶಿ-ದೋಷದ ಸಮೂಹವು (ಪಾಪದ ಸಮೂಹಂ), ತನಗೆ ಸಂಘಟಿಸದಿರ್ದಪುದೆ-ನನಗೆ ಹೊಂದದೇ ಇದ್ದೀತೆ, (ಹೊಂದುವುದು) ಪೇಳ್-ಹೇಳುವನಾಗು, ಎನ್ನುತ-ಎನ್ನುತ್ತ, ಪಾರ್ಥಂ-ಅರ್ಜುನನು, ತೆಗದೆಚ್ಚಡೆ- ಬಾಣ ಪ್ರಯೋಗಮಾಡಲು, ಸುರಥಂ- ಸುರಥನು, ಆ ಬಾಣಮುಂ- ಆ ಶರವನ್ನು, ನಡುವೆ- ಮಧ್ಯಮಾರ್ಗದಲ್ಲಿಯೇ, ಖಂಡಿಸಿ-ತುಂಡುಮಾಡಿ, ಅಪಹಾಸದಿಂದ-ಹಾಸ್ಯಮಾಡುವಿಕೆಯಿಂದ, ಆಂ-ನಾನು, ನಿನ್ನಂ-ನಿನ್ನನ್ನು, ಈ ರಥದಿಂದ-ಈ ವರೂಥದಿಂದ, ಇಳೆಗೆ-ಪೃಥ್ವಿಗೆ, ನಿಪತನಂ-ಬೀಳಿಸುವಿಕೆಯನ್ನು, ಗೈಯದೊಡೆ-ಎಸಗದಿದ್ದರೆ, ತನಗೆ-ನನಗೆ, ಪರಲೋಕದೋಳ್-ಬೇರೆ ಲೋಕದಲ್ಲಿ ವಿಪರೀತಗತಿಯು-ನರಕ ಪ್ರಾಪ್ತಿಯು, ಅಗದೆ-ಲಭಿಸದೇ, ಇರ್ದಪುದೆ-ಇದ್ದೀತೆ? ಪೇಳೆಂದು-ಹೇಳು ಎಂಬದಾಗಿ, ತೆಗೆದು-ಬಾಣವನ್ನು ತೆಗೆದುಕೊಂಡು, ಎಚ್ಚನು-ಹೊಡೆದನು, ಬೊಬ್ಬಿರಿದನು-ಗರ್ಜಿಸಿದನು.

ಅ|| ವಿ|| ವಿಪುಲವಾದ+ಸಾಯಕ = ವಿಪುಲಸಾಯಕ ವಿ. ಪೂ. ಕ. ಉಂಟು + ಇದಕೆ = ಉಂಟಿದಕೆ ಉ. ಲೋಪ ಸಂಧಿ. ||೧೪||

ಟೀ|| ಸುರಥನ ಎಸುಗೆಯೊಳು-ಸುರಥನ ಶರ ಪ್ರಹಾರದಿಂದ, ಅರ್ಜುನಂ-ಪಾರ್ಥನು, ನೊಂದು-ಬೇನೆಯುಂಟಾದವನಾಗಿ, ಮುಂಗಾಣದೆ-ಮುಂದೇನು ಮಾಡಬೇಕೆಂಬುದು ತೋಚದೆ, ಇರೆ-ಇರಲಾಗಿ, ಮುರಾಂತಕಂ- ಮುರವೈರಿಯಾದ ಶ್ರೀ ಕೃಷ್ಣನು, ಅವನ-ಆ ಸುರಥನ, ತೋಳ್ಗಳಂ-ಬಾಹುಗಳನ್ನು, ಬೇಗ-ಶೀಘ್ರವಾಗಿ, ಕತ್ತರಿಸು-ಛೇದಿಸು, ದಿವ್ಯಾಸ್ತ್ರಮುಂ-ದೇವತಾಯೋಗ್ಯಮಾದ ಬಾಣವನ್ನು, ಪೂಡೆಂದು-ಅಂಬಿನಲ್ಲಿ ಸೇರಿಸೆಂಬದಾಗಿ ಹೇಳಿ, ತಾಂ-ತಾನಾದರೊ, ಪಾಂಚಜನ್ಯಮುಂ-ಪಾಂಚಜನ್ಯವೆಂಬ ಶಂಖವನ್ನು, ಪೂರೈಸಲು-ಊದಲಾಗಿ, ನರಂ-ಅರ್ಜುನನು, ಆನುಡಿಗೆ-ಆ ಮುರಾರಿಯ ವಚನಕ್ಕೆ, ಮುನ್ನಲೆ-ಮುಂದಾಗಿಯೇ, ಎಚ್ಚು-ಬಾಣವನ್ನು ಹೊಡೆದು, ಆತನ-ಆ ಸುರಥನ, ಉರು-ದೊಡ್ಡದಾದ, (ಉನ್ನತವಾದ) ಭುಜವನು-ಬಾಹುವನ್ನು, ಕೆಡಪಿದಂ-ಬೀಳಿಸಿದನು, ಆಗಳ್-ಆಗ, ಆ ಸುರಥನ ಬಾಹುವು, ಐವೆಡೆಯ-ಐಯ್ದು ಹೆಡೆಗಳುಳ್ಳ, ಭುಜಗೇಂದ್ರನ-ಸರ್ಪರಾಜನ, ಅಂದದಿಂ-ಚಂದದಿಂದ, ಧರೆಯೊಳ್-ಪೃಥ್ವಿಯಲ್ಲಿ, ಪೊರಳ್ದು-ಹೊರಳಾಡಿ, ಉರುಳ್ದು-ಉರುಳಿ, ಉರೆ-ಹೆಚ್ಚಾಗಿ, ಪೊಯ್ದು-ಹೊಡದು, ಅರೆದು-ತಿಕ್ಕಿ. ಆ ಕ್ಷಣಂ-ಕೂಡಲೆ, ಪರಬಲವನು-ರಿಪು ಸೇನೆಯನ್ನು, ಕೊಂದುದು-ನಾಶ ಮಾಡಿತು.

ಬೇರೊಂದು ರಥನನ್ನು ಸಿದ್ಧಪಡಿಸಿಕೊಂಡು, ಅರ್ಜುನನ ರಥನನ್ನು ಪ್ರತಿಯಾಗಿ ಬಾಣಗಳಿಂದ ಹೊಡೆದನು, ಕೂಡಲೇ ಆ ಅರ್ಜುನನ ರಥವು ಐನೂರು ಮಾರು ದೂರ ಹಿಂಗಡಗೆ ಸರಿಯಲು, ಆ ಕಾಳಗದಲ್ಲಿ ಸುರಥನು ಕೃಷ್ಣನ ಶರೀರದಲ್ಲಿ ಗಾಯ ಪಡಿಸಿ, ಅಶ್ವಗಳ ಶರೀರಗಳಲ್ಲಿ ಹಳ್ಳ ಬೀಳುವಂತೆ ಮಾಡಿ, ಅರ್ಜುನನನ್ನು ಬಹುವಾಗಿ ಹೊಡೆದನು. ಈ ರೀತಿಯಾಗಿ ಯುದ್ಧ ಮಾಡಿಕೊಂಡು ಬರುವುದಕ್ಕಿಂತಲೂ, ಯಾವುದಾದರೊಂದು ಶಪಥನನ್ನು ಮಾಡಿಕೊಂಡು ಯುದ್ಧಮಾಡುವುದು ಉತ್ತಮವಾದುದೆಂದು ಹೇಳುತ್ತಾ, ಅತ್ಯಧಿಕವಾಗಿ ಬಾಣಂಗಳಂ ಪ್ರಯೋಗಿಸಿದನು ||೧೩|| ಆಗ ಅರ್ಜುನನು ಸುರಥನಂ ನೋಡಿ ಈ ವಿಷಯಕ್ಕೆ ಪ್ರತಿಜ್ಞೆ ಮಾಡತಕ್ಕದ್ದೇನಿರುತ್ತೆ? ನಿನ್ನನ್ನು ನಾನು ಸಂಹರಿಸದೇ ಹೋದ ಪಕ್ಷದಲ್ಲಿ, ಹೆಚ್ಚಾದ ಪಾಪವು ಸಂಘಟನೆಯಾಗಲೆಂದು ಹೇಳುತ್ತ ಅರ್ಜುನನು ಬಾಣ ಪ್ರಯೋಗವನ್ನು ಮಾಡಲು, ಸುರಥನು ಆ ಬಾಣವನ್ನು ಮಧ್ಯಮಾರ್ಗದಲ್ಲೇ ಕತ್ತರಿಸಿ, ಹಾಸ್ಯಮಾಡುವಿಕೆಯಿಂದ ಎಲೋ! ಅರ್ಜುನ! ನಿನ್ನನ್ನು ನಾನು ನಿನ್ನ ರಥದಿಂದ ಕೆಳಕ್ಕೆ ಕೆಡವಿ ಅವಮಾನ ಪಡಿಸದಿದ್ದರೆ, ಪ

ಗತಿಯಾಗದಿರ್ದಪುದೆಪೇಳೆಂದುತೆಗೆದೆಚ್ಚುಬೊಬ್ಬಿರಿದನು ‖ ೧೩ ‖ ಸುರಥನೆಸುಗೆಯೊಳರ್ಜುನಂನೊಂದುಮುಂಗಾಣ | ದಿರೆ ಮುರಾಂತಕನವನತೋಳ್ಗಳಂಬೇಗಕ | ತ್ತರಿಸುದಿವ್ಯಾಸ್ತ್ರಮಂಪೂಡೆಂದುಪಾಂಚಜನ್ಯಮಂಪೂರೈಸಲು ‖ ನರನಾನುಡಿಗೆಮುನ್ನ ಲೆಚ್ಚುಕೆಡಪಿದನಾತ | ನುರುಭುಜವನ್ನೆನೆಡೆಯುಭುಜಗೇಂದ್ರನಂದದಿಂ | ಧರೆಯೊಳ್ಪೊರಳ್ದುರುಳ್ಪುರೆಪೊಯ್ಯುದುಕೊಂದುದಾ ಕ್ಷಣಂಪರಬಲವನು ‖ ೧೪ ‖ ಒತ್ತೋಳನುತ್ತರಿಸಲೊತ್ತೋಳಸತ್ವದಿಂ | ಮತ್ತಾತನುರವಣಿಸಿಮತ್ತದಂತಿಯತೆರದಿ | ನೊತ್ತಿ ಭರದಿಂಪಾರ್ಥನೊತ್ತಿಗೈತರೆಕಂಡುಹರಿವಿಜಯನಂಜರೆಯಲು ‖ ತತ್ತಳಂಗೊಳದೆಚ್ಚುತತ್ತಳವಿಗೈದವನ | ನೆತ್ತಲುಜವನರಿಯೆ ನೆತ್ತರಾಗಸಕೆಚಿ | ಮ್ಮಿತ್ತುರಣದೋಕುಳಿಯುಮಿತ್ತುವಿನಜೀರ್ಕೊಳವಿಯುಗುಳ್ವಕೆನ್ನೀರ್ಗಳಂತೆ ‖ ೧೫ ‖ ತೋಳ್ಗಳೆರಡುಂ

---

ಅ‖ ವಿ‖ (ಅಸ್ತ್ರ - ಮಂತ್ರಿಸಿಬಿಡುವಬಾಣ, ಶಸ್ತ್ರ-ಆಯುಧರೂಪವಾದ ಬಾಣ) ಉರಗ + ಇಂದ್ರ = ಉರಗೇಂದ್ರ (ಗು. ಸ.) ಉರು-ಹೆಚ್ಚು, ಉರ-ಎದೆ, ಪರ-ಶತ್ರು, ಅನ್ಯ-ಶ್ರೇಷ್ಠ, ಕೀಳ, ‖೧೪‖

ಟೀ‖ ಪಾರ್ಥ - ಅರ್ಜುನನು, ಒತ್ತೋಳಂ - ಒಂದು ಭುಜವನ್ನು, ಉತ್ತರಿಸಲ್ - ಕತ್ತರಿಸಲಾಗಿ, ಒತ್ತೋಳ- ಒಂದು ಭುಜದ, ಸತ್ವದಿಂ - ಶಕ್ತಿಯಿಂದ, ಮತ್ತೆ-ಪುನಹ, ಆತನು - ಆ ಸುರಥನು, ಉರವಣಿಸಿ - ಕೋಪಗೊಂಡು ಮತ್ತ ಮದದಿಂದ ಕೂಡಿದ, ದಂತಿಯ-ಗಜದ, ತೆರದಿ-ಕ್ರಮದಿಂದ, ಒತ್ತಿ - ನುಗ್ಗಿ, ಪಾರ್ಥನ - ಫಲುಗುಣನ, ಒತ್ತಿಗೆ-ಹತ್ತಿರಕ್ಕೆ, ಭರದಿಂ-ಶೀಘ್ರದಿಂದ, ಐತರೆ-ಬರುತ್ತಿರಲು, ಹರಿ-ಶ್ರೀ ಕೃಷ್ಣನು, ಕಂಡು-ಸುರಥನಂ ಈಕ್ಷಿಸಿ, ವಿಜಯನಂ - ಪಾರ್ಥನನ್ನು, ಜರಿಯಲು - ತಿರಸ್ಕಾರಮಾಡಲು, ಆಗ-ಆ ಕಾಲದಲ್ಲಿ, ಪಾರ್ಥಂ-ಅರ್ಜುನನು, ತತ್ತಳಂಗೊಳದೆ-ಭ್ರಾಂತಿಯನ್ನು ಹೊಂದದೆ, ಎಚ್ಚು - ಬಾಣಪ್ರಯೋಗ ಮಾಡಿ, ತತ್ತಳವಿಗೆ - ಫಲುಗುಣನ ಸಮೀಪಕ್ಕೆ, ಐದುವ - ಬರುತ್ತಿರುವ, ಅವನ - ಆ ಸುರಥನ, ಭುಜವನು-ಬಾಹುವನ್ನು, ಅರಿಯೆ-ಛೇದಿಸಲು, ಎತ್ತಲ್-ಸುತ್ತಲೂ, ನೆತ್ತರ್-ನೆತ್ತರು, (ರಕ್ತವು) ಆಗಸಕೆ - ಅಂತರಿಕ್ಷಕ್ಕೆ, ರಣದ-ಯುದ್ಧರಂಗ ಸ್ಥಳದಲ್ಲಿ ನಡೆಯುತ್ತಿರುವ, ಓಕುಳಿಯ-ವಸಂತೋದಕದ, (ಕೆಂಪಾದ ನೀರಿನ) ವಿಹಾರ ಸ್ಥಾನವುಳ್ಳ, ಮಿತ್ತುವಿನ-ಮೃತ್ಯುದೇವತೆಯೆಂಬ ಸ್ತ್ರೀಯ, ಜೀರ್ಕೊಳವಿಯು - ನೀರನ್ನು ಮುಂದಕ್ಕೆ ಸಾಗಿಸುವ ಯಂತ್ರವು (ಪಿಚಗಾರಿಯು) ಉಗುಳ್ವ-ಹೊರಗೆ ಬಿಡುತ್ತಿರ್ಪ, ಕೆನ್ನೀರ್ಗಳಂತೆ-ಕೆಂಪಿನ ನೀರಿನ ಹಾಗೆ, ಚಿಮ್ಮಿತ್ತು-ಮೇಲಕ್ಕೆ ಎಗರಿಸುತಿತ್ತು.

ಅ‖ ವಿ‖ ಒರ್ + ತೋಳ್ - ಒತ್ತೋಳ್. (ಒಂದಕ್ಕೆ ಒರ್ ಎಂದೂ ಎರಡಕ್ಕೆ ಇರ್ ಎಂಬಾ ದೇಶವೂ ಬರ್ವುದು) ಆಗಸ (ದ್ಭ) ಆಕಾಶ (ತ್ಸ) ಮಿತ್ತು (ದ್ಭ) ಮೃತ್ಯು (ತ್ಸ) ಕೆಚ್ಚನೆಯ-ನೀರ್-ಕೆನ್ನೀರ್, (ವಿ. ಪೂ. ಕ) ‖೧೫‖

ಟೀ‖ ಆಗ ಅರ್ಜುನನು, ತೋಳ್ಗಳೆರಡುಂ - ಸುರಥನ ಎರಡು ಬಾಹುಗಳನ್ನೂ, ಕತ್ತರಿಸಿ, ಬೀಳೆ - ಕಡಿದು ಬೀಳಲಾಗಿ, ಮತ್ತೆ-ತಿರುಗಿ, ಕಟ್ಟಾಳ್ಗಳ-ಶ್ರಮ ಸಹಿಷ್ಣುಗಳಾದ ವೀರರಲ್ಲಿ, ಶಿರೋಮಣಿ - ಸೀಮಂತ ರತ್ನಪ್ರಾಯನಾದ, ಸುರಥಂ-ಸುರಥನು, ಆ ಕಿರೀಟಿಯುಂ-ಆ ಪಾರ್ಥನನ್ನು, ಕಾಲ್ಗಳಿಂದ-ಪಾದಗಳಿಂದ, ಒದೆದು-ತಾಡನೆ ಮಾಡಿ, ಕೆಡಹುವೆನು - ಬೀಳಿಸುತ್ತೇನೆ, ಎಂಬ-ಎಂಬದಾಗಿ ಹೇಳುವ, ಭರದಿಂದ ಜಾಗ್ರತೆಯಿಂದ ಬೊಬ್ಬಿರಿವುತ-ಗರ್ಜಿಸುತ್ತ, ಐತರಲ್ಕೆ-ಬರಲಾಗಿ, ಪಾರ್ಥಂ-ಅರ್ಜುನನು, ಅವನ - ಆ ಸುರಥನ, ತೊಡೆಗಳಂ - ಊರುಗಳನ್ನು, ಕೋಲ್ಗಳಿಂ - ಅಂಬುಗಳಿಂದ, ಕತ್ತರಿಸೆ - ಕಡಿಯಲು, ಅರುಣಾಂಬುವಿಂದ-ಶೋಣಿತದಿಂದ, (ಕೆಂಪು ನೀರಿನಿಂದ ಅಥವಾ ರಕ್ತದಿಂದ), ಧೂಳ್ಗಳು-ಧೂಳುಗಳು, (ರಜಸ್ಸು, ರೇಣು), ನಾದಿದವು-ತೋಯ್ದು ಹೋದವು, ಎದೆಯೊಳು-ಉರಸ್ಸಿನಲ್ಲಿಯೆ, ತೆವಳ್ದ-ದೇಕಿಕೊಂಡು ಬರುವ, ಅಹಿಯವೋಲ್ - ಹಾವಿನ ಹಾಗೆ, ಗಂಡುಗಲಿ-ಮನುಷ್ಯರಲ್ಲಿ ಶೂರನಾದ, ಧನಂಜಯನ-ಪಾರ್ಥನ, ಸಮ್ಮುಖಕೆ-ಎದರು ಭಾಗಕ್ಕೆ, ಮೇಲ್ವಾಯ್ದಂ-ಮೇಲೆ ಹಾಯ್ದನು (ನುಗ್ಗಿದನ), ಅವನಂ - ಆ ಸುರಥನ ಸಾಮರ್ಥ್ಯವನ್ನು ಕುರಿತು, ಏವೇಳ್ವೆನು-ಏನು ಪೇಳಲಿ !

---

ರ ಲೋಕದಲ್ಲಿ ನರಕಭಾಗಿಯಾಗುವೆನೆಂದು ಬಾಣಪ್ರಯೋಗವನ್ನು ಮಾಡಿ ಗರ್ಜಿಸಿದನು ‖ ೧೩ ‖ ಆ ಬಳಿಕ ಸುರಥನ ಬಾಣ ಪ್ರಹಾರದಿಂದ ಅರ್ಜುನನು ಸಂಕಟಪಟ್ಟು, ಯಾವುದೂ ತೋರದಿರಲು, ಶ್ರೀ ಕೃಷ್ಣನು ಸುರಥನ ತೋಳುಗಳನ್ನು ಶೀಘ್ರವಾಗಿ ಕತ್ತರಿಸಲು, ದೇವತಾಯೋಗ್ಯವಾದ ಬಾಣವನ್ನು ಧನುವಿನಲ್ಲಿ ಸೇರಿಸೆಂದು ಹೇಳಿ ಪಾಂಚಜನ್ಯವೆಂಬ ಶಂಖವನ್ನು ಊದಿದನು. ಆಗ ಅರ್ಜುನನು ಶ್ರೀ ಕೃಷ್ಣನ ಮಾತು ಕೇಳುವಷ್ಟರಲ್ಲೇ, ಬಾಣವನ್ನು ಹೊಡೆದು, ಸುರಥನ ಉದ್ದವಾದ ಬಾಹುವನ್ನು ಬೀಳಗೆಡಹಿದನು. ಆಗ ಆ ತೋಳು ಐದು ಹೆಡೆಯ ಸರ್ಪದಂತೆ ಭೂಮಿಯಲ್ಲಿ ಹೊರಳಾಡಿ ಪರಬಲವನ್ನು ನಾಶಮಾಡಿತು ‖೧೪‖ ಆಗ ಅರ್ಜುನನು ಸುರಥನ ಒಂದು ತೋಳನ್ನು ಮಾತ್ರ ಕತ್ತರಿಸಲು, ಆ ಬಳಿಕ ಸುರಥನು ಒಂದು ತೋಳಿನ ಶಕ್ತಿಯಿಂದಲೆ ಮದಿಸಿದ ಆನೆಯೋಪಾದಿಯಲ್ಲಿ, ಪಾರ್ಥನ ಸಮೀಪಕ್ಕೆ ಬರುತ್ತಿರಲು, ಶ್ರೀ ಕೃಷ್ಣನು ಆ ಸುರಥನನ್ನು ಕಂಡು ಅರ್ಜುನನನ್ನು ತಿರಸ್ಕಾರಮಾಡಲು, ಮತ್ತೆ ಅರ್ಜುನನು ತನ್ನ ಬಳಿಗೆ ಅತಿ ತ್ವರೆಯಾಗಿ ಬರುತ್ತಲಿರುವ ಸುರಥನ ಮತ್ತೊಂದು

ಕತ್ತರಿಸಿಬೀಳೆಮತ್ತೆ ಕಟ್ಟಾಳ್ಗಳಶಿರೋಮಣಿಸುರಥನಾಕಿರೀಟಿಯುಂ | ಕಾಲ್ಗಳಿಂದೊದೆದುಕೆಡಹುವೆನೆಂಬಭರದಿಂದಬೊಬ್ಬಿರಿವುತೈತರಲ್ಕೆ || ಕೋಲ್ಗಳಿಂತೊಡೆಗಳಂಕತ್ತರಿಸೆನಾದಿದವು | ಧೂಳ್ಗಳರುಣಾಂಬುವಿಂದೆದೆಯೊಳ್ತೆವಳ್ದಹಿಯ | ವೋಲ್ಬಂದು ಗಲಿಧನಂಜಯನಸಮ್ಮುಖಕೆಮೇಲ್ವಾಯ್ವನನನೇವೇಳ್ವೆನು || ೧೬ || ಆಗಮುರಹರನಾಜ್ಞೆಯಿಂದೆಚ್ಚುಫಲುಗುಣಂ | ಬೇಗಸುರಥನಶಿರವನರಿಯಲಾತಲೆಬಂದು | ತಾಗಿತತಿಭರದಿಂದನರನವಕ್ಷವಕೆಡಹಿತಾವರೂಥಾಗ್ರದಿಂದ || ನೀಗಿದಂಮರವೆಯಿಂದರಿವಂ ಧನಂಜಯಂ | ಮೇಗೆಕೃಷ್ಣನಚರಣಕೈತಂದುಬಿದ್ದುಹರಿ | ರಾಘವಜನಾರ್ಧನಮುಕುಂದಯೆನುತಿರ್ದುದಾಶಿರಮತಿವಿಕಾಸ

ಅ|| ವಿ|| ಕಡಿದು+ಆಳ್-ಕಟ್ಟಾಳ್, (ವಿ. ಪೂ. ಕ.) ಅರುಣ-ಕೆಂಪು, ಸೂರ್ಯನ ಸಾರಥಿ ||೧೫||

ಟೀ|| ಆಗ – ಆ ಸುರಥನು ಎದೆಯಲ್ಲಿ ದೇಕಿಕೊಂಡು ಬರುತ್ತಿರುವಾಗ, ಫಲುಗಣಂ - ಪಾರ್ಥನು, ಮುರಹರನ-ಮುರಾಸುರನನ್ನು ಸಂಹರಿಸಿದ ಕೃಷ್ಣನ, ಆಜ್ಞೆಯಿಂದೆ-ಅನುಜ್ಞೆಯಂತೆ, ಎಚ್ಚು-ಬಾಣ ಪ್ರಯೋಗಮಾಡಿ, ಬೇಗ – ಶೀಘ್ರವಾಗಿ, ಸುರಥನ ಶಿರವಂ–ಸುರಥನ ಶಿರಸ್ಸನ್ನು, ಅರಿಯಲ್-ಕತ್ತರಿಸಲಾಗಿ, ಆ ತಲೆ ಬಂದು – ಆ ಸುರಥನ ತಲೆಯು ಕತ್ತರಿಸಿ ಬಂದು, ಅತಿಭರದಿಂದ–ಅತ್ಯಧಿಕವಾದ ರಭಸದಿಂದ, ನರನ - ಪಾರ್ಥನ, ವಕ್ಷವ–ವಕ್ಷಸ್ಥಳವನ್ನು (ಎದೆಯ ಪ್ರದೇಶವನ್ನು), ತಾಗಿತು-ಸೋಕಿತು, ಆ ವರೂಥಾಗ್ರದಿಂದ–ಆ ತೇರಿನ ಮುಂಭಾಗದಿಂದ, ಕೆಡಹಿತು-ಅರ್ಜುನನ್ನು ಬೀಳಿಸಿತು, ಧನಂಜಯಂ–ಫಲುಗುಣನು, ಮರವೆಯಿಂ-ಅಜ್ಞಾನದಿಂದ, ಅರಿವ–ತಿಳುವಳಿಕೆಯನ್ನು, ನೀಗಿದಂ–ಹೋಗಲಾಡಿಸಿಕೊಂಡನು. ಮೇಗೆ–ತರುವಾಯ, ಆಶಿರಂ–ಆ ತಲೆಬುರುಡೆಯು, ಹರಿ-ಹರಿಯೇ! ರಾಘವ–ರಘುವಂಶೋತ್ಪನ್ನನೆ! ಜನಾರ್ದನ-ಜನಾರ್ದನನೆ! ಮುಕುಂದ–ಮುಕ್ತಿದಾಯಕನೆ! ಎನುತ – ಎಂಬದಾಗಿ ಹೇಳುತ್ತ, ಐತಂದು - ಬಂದು, ಕೃಷ್ಣನ ಚರಣಕೆ – ಕೃಷ್ಣನ ಪಾದಕ್ಕೆ, ಬಿದ್ದಿರ್ದುದು - ಬಿತ್ತು, ಅತಿ – ಹೆಚ್ಚಾದ, ಸಾಸದಿಂದ – ಪರಾಕ್ರಮದಿಂದ, ಇಲ್ಲವೆ, ಹರ್ಷಾತಿಶಯದಿಂದ, ಇರ್ದುದು - ಇರುವಂಥಾದ್ದಾಯಿತು.

ಅ|| ವಿ|| ಕಡು+ಕಲಿ – ಕಡುಗಲಿ, ಗ, ಕಾರಾದೇಶ ಸಂಧಿ, ಜನ - ಜನರನ್ನು, ಅರ್ದನ, ಲಯಪಡಿಸತಕ್ಕವನು, ಮುಕುಂದ–ಮುಕ್ತಿದಾಯಕ, ಕೃಷ್ಣ–ತನ್ನ ಭಕ್ತರನ್ನು ಸಂಸಾರ ಬಂಧದಿಂದ ತನ್ನ ಕಡೆಗೆ ಸೆಳೆಯತಕ್ಕವನು ||೧೬||

ಟೀ|| ಕಮಲಾಕಾಂತಂ – ಲಕ್ಷ್ಮೀಪತಿಯಾದ ಶ್ರೀ ಕೃಷ್ಣನು, ಆಶಿರವಂ – ಆ ಸುರಥನ ಶಿರಸ್ಸನ್ನು, ಶ್ರೀ–ಸಂಪದ್ಯುಕ್ತವಾದ, ಕರ–ಹಸ್ತವೆಂಬುವ, ಅಂಬುಜ – ಕಮಲಪುಷ್ಪದ, ಯುಗ್ಮದಿಂದ – ಜೊತೆಯಿಂದ, ಎತ್ತಿಕೊಂಡು – ತೆಗೆದುಕೊಂಡು, ಕರುಣದಿಂದಲಿ – ದಯೆಯಿಂದೆ, ಈಕ್ಷಿಸಿ – ನೋಡಿದವನಾಗಿ, ಆಕಾಶದೆಡೆಯೊಳಿಹ – ಅಂತರಿಕ್ಷ ಪ್ರದೇಶದಲ್ಲಿರುವ, ಗರುಡನಂ–ವೈನತೇಯನನ್ನು, ಕರದಿತ್ತು-ಬರಮಾಡಿ ಕೊಟ್ಟು, ಜವದಿಂ - ಬೇಗನೆ (ಶೀಘ್ರವಾಗಿ), ಪ್ರಯಾಗಕೆ-ವಾರಣಾವತ ಕ್ಷೇತ್ರಕ್ಕೆ, ಐದಿ–ಹೋಗಿ (ಹೊಂದಿ), ಈಕಪಾಲವಂ – ಈ ತಲೆಯನ್ನು, ಅಲ್ಲಿ-ಆ ಪ್ರಯಾಗ ಕ್ಷೇತ್ರದಲ್ಲಿ, ಹಾಯ್ಕು-ಹಾಕುವುದು), ಎಂದು – ಎಂಬದಾಗಿ, ಬೆಸಸಲ್ – ಅಪ್ಪಣೆ ಮಾಡಲಾಗಿ, ಆಖಗೇಶ್ವರಂ – ವಿಹಂಗಾಧಿಪನಾದ ಗರುತ್ಮಂತನು (ಗರುಡನು, ಅದನು-ಆ ತಲೆಯನ್ನು, ಗಗನಪಥದೋಳ್ – ಅಂತರಿಕ್ಷ ಮಾರ್ಗದಲ್ಲಿ, ಒಯ್ಯುತಿರೆ – ತೆಗದುಕೊಂಡು ಹೋಗುತ್ತಾ ಇರುವಾಗ್ಯೆ, ಪಿನಾಕಿ-ಈಶ್ವರನು, ಆತಲೆಯಂ–ಆ ಶಿರವನ್ನು, ಕಂಡು – ಈಕ್ಷಿಸಿ, ಅರ್ಥಿಯಿಂ – ಕಾಂಕ್ಷೆಯಿಂದ, ಮುದದೊಳು–ಪ್ರೀತಿಯಿಂದ, ಭೃಂಗೀಶನಂ–ಭೃಂಗೀಶ್ವರನನ್ನು (ಶಿವನ ಸಭೆಯಲ್ಲಿ ನೃತ್ಯಮಾಡುವ ಪ್ರಮಥನು), ಕಳುಹಿದಂ – ಆ ತಲೆಯಂ ತರುವಂತೆ ಕಳುಹಿಸಿದನು.

---

ಬಾಹುವನ್ನೂ. ಕತ್ತರಿಸಲು, ಸುತ್ತಲೂ ರಕ್ತವು ಆಕಾಶದ ವರೆಗೂ ಎಗರಿತು, ಅದು ಹೇಗೆಂದರೆ:—ಯುದ್ಧರಂಗವೆಂಬ ಪ್ರದೇಶದಲ್ಲಿ ಮೃತ್ಯುದೇವತೆಯೆಂಬ ಸ್ತ್ರೀಯ ಜೀರ್ಕೊಳವಿಯಿಂದ ಮೇಲಕ್ಕೆ ಹಾರುತ್ತಿರುವ ವಸಂತೋದಕವೋ ಎಂಬಂತೆ ಪ್ರಕಾಶಿಸುತ್ತಿತ್ತು ||೧೫|| ಅರ್ಜುನನು ಸುರಥನ ಬಾಹುಗಳೆರಡನ್ನೂ ಕತ್ತರಿಸಲಾಗಿ, ಅಸಹಾಯಶೂರನಾದ ಸುರಥನು, ಅರ್ಜುನನನ್ನು ಕಾಲುಗಳಿಂದ ಒದೆಯುತ್ತೇನೆಂದು, ಅರ್ಭಟಿಸಿ ಬರುತ್ತಿರಲಾಗಿ, ಅರ್ಜುನನು ಸುರಥನ ತೊಡೆಗಳೆರಡನ್ನು ಕತ್ತರಿಸಲು, ಆ ರಕ್ತದಿಂದ ಧೂಳುಗಳೆಲ್ಲಾ ನೆನೆದುಹೋದವು, ಆಗ ಸುರಥನು ಸರ್ಪದಂತೆ ಎದೆಯಲ್ಲಿ ದೇಕಿಕೊಂಡು ಪುರುಷರಲ್ಲೆಲ್ಲಾ ಬಲಾಢ್ಯನಾದ, ಅರ್ಜುನನ ಮುಂಗಡೆಗೆ ಬರುತ್ತಿದ್ದನು, ಆಹಹ! ಆ ಸುರಥನ ಸಾಮರ್ಥ್ಯವನ್ನು ಏನೆಂದು ಹೇಳೋಣ||೧೬|| ಆಗ ಸುರಥನು ಕೈಗಳನ್ನೂ, ಕಾಲುಗಳನ್ನೂ ಕಳೆದುಕೊಂಡು ಎದೆಯಲ್ಲಿಯೇ ದೇಕಿಕೊಂಡು ಅರ್ಜುನನ ಸಮೀಪಕ್ಕೆ ಬರುತ್ತಲಿರುವದನ್ನು ಶ್ರೀ ಕೃಷ್ಣನು ನೋಡಿ, ಆ ಸುಧನ್ವನ ಶಿರವನ್ನು ಶೀಘ್ರವಾಗಿ ಕತ್ತರಿಸೆಂದ ಹೇಳಿದ ತರುವಾಯ ಆದೇಶಪ್ರಕಾರ ಅವನ ತಲೆಯನ್ನು ಕತ್ತರಿಸಿದ ಕೂಡಲೇ ಆ ತಲೆಯು ಹಾರಿಬಂದು ಅರ್ಜುನನ ವಕ್ಷಸ್ಥಳಕ್ಕೆ ಬಡಿದು, ಅರ್ಜುನನ್ನು ರಥದಿಂದ ಕೆ

ದಿಂದ ‖ ೧೭ ‖ ಶ್ರೀಕರಾಂಬುಜಯುಗ್ಮದಿಂದೆತ್ತಿಕೊಂಡುಕಮಲಾಕಾಂತನಾಶಿರವನೀಕ್ಷಿಸಿಕರುಣದಿಂದ । ಲಾಕಾಶದೆಡೆಯೊಳಿಹಗರುಡನಂಕರೆದಿತ್ತುಜವದಿಂಪ್ರಯಾಗಕ್ಕೈದಿ ‖ ಈಕಪಾಲವನಲ್ಲಿಹಾಯ್ಕೆಂದುಬೆಸಸಲದ । ನಾಖಗೇಶ್ವರನೊಯ್ಯುತಿರೆಗಗನಪಥದೋಳ್ಪಿ । ನಾಕಿಕಂಡಾತಲೆ ಯನರ್ಥಿಯಿಂಕಳುಹಿದಂಭೃಂಗೀಶನಂಮುದದೊಳು ‖೧೮‖ ಎಲ್ಲಿಗೊಯ್ವಪನೀಗಸುರಥನತಲೆಯ ಗರುಡ । ನಿಲ್ಲಿಹುದುರುಂಡಮಾಲೆಯೊಳವನಸೋದರನ । ಸಲ್ಲಲಿತಶಿರಮದರಸಂಗಡಕೆಕೊಂಡುಬಾಯೆಂದುಮದನಾರಿಬೆಸಸೆ ‖ ನಿಲ್ಲದೈತಂದುಭೃಂಗೀಶ್ವರಂಬೇಡೆಖಗ । ವಲ್ಲಭಂಪತಿನಿರೂಪನುನೊಮ್ಮೆಯುಂಮೀರ್ವ । ನಲ್ಲೆಂದತಿಕ್ರಮಿಸಿನಡೆಯಲಾಪಕ್ಷ

---

ಅ॥ ವಿ॥ ಭೃಂಗಿ-ತ್ಸ, ಬಿಂಗಿ_ದ್ಭ, ಖಗ + ಈಶ = ಖಗೇಶ. ಗುಣ ಸಂ. ಭೃಂಗಿ + ಈಶ = ಭೃಂಗೀಶ, ಸವರ್ಣ ದೀರ್ಘ. ಸಂ. ಗಗನದ + ಪಥ = ಗಗನಪಥ, ಷ. ತ. ಪಿನಾಕವನ್ನುಳ್ಳವನು, ಪಿನಾಕಿ, (ಈಶ್ವರ), ಕಪಾಲ, ತಲೆ ಬುರುಡೆ, ರಾಶಿ, ಭಿಕ್ಷುಕನ ಬಟ್ಟಲು ‖ ೧೮ ‖

ಟೀ॥ ಗರುಡ_ನಾಗಾಂತಕನು, ಸುರಥನ ತಲೆಯಂ_ಸುರಥನ ಶಿರವನ್ನು, ಎಲ್ಲಿಗೆ ಒಯ್ವಪಂ-ಯಾವ ಕಡೆ (ಸ್ಥಳ) ಗೆ ತೆಗದುಕೊಂಡು ಹೋಗುವನು, ಇಲ್ಲಿ, ರುಂಡ ಮಾಲೆಯೊಳು-ಈ ಪರಮೇಶ್ವರನಲ್ಲಿರುವ ಕಪಾಲಗಳ ಹಾರದಲ್ಲಿ. ಅವನ_ಆ ಸುಧನ್ವನ, ಸೋದರನ-ಅಗ್ರಜನಾದ ಸುಧನ್ವನ, ಸಲ್ಲಲಿತ-ಮನೋಹರವಾದ, ಶಿರಂ-ಕಪಾಲವು, ಇಹುದು_ಇರುತ್ತಿದೆ, ಅದರ_ಆ ಸುಧನ್ವನ ಶಿರಸ್ಸಿನ, ಸಂಗಡಕೆ-ಹತ್ತಿರದಲ್ಲಿ ಸೇರಿಸುವುದಕ್ಕೋಸ್ಕರವಾಗಿ, ಕೊಂಡು ಬಾ ಎಂದು_ತೆಗದು ಕೊಂಡು ಬರುವನಾಗೆಂದು, ಮದನಾರಿ-ಸ್ಮರಹರನಾದ ರುದ್ರನು, ಬೆಸಸೆ-ಅಪ್ಪಣೆ ಮಾಡಲು, ಭೃಂಗೀಶ್ವರಂ-ಭೃಂಗಿಗಳೊಡೆಯನಾದ ಪ್ರಮಥನು, ನಿಲ್ಲದೆ_ನಿಂತುಕೊಳ್ಳದೆ (ಸಾವಕಾಶ ಮಾಡದೆ), ಐತಂದು_ಬಂದವನಾಗಿ, ಬೇಡೆ-ಆ ಸುರಥನ ಶಿರಸ್ಸನ್ನು ಕೊಡುವಂತೆ ಕೇಳಲಾಗಿ, ಖಗವಲ್ಲಭಂ_ವಿಹಂಗೇಶನಾದ ವೈನತೇಯನು, ಪತಿ_ಒಡೆಯನಾದ ಕೃಷ್ಣನ, ನಿರೂಪವನು- ಆಜ್ಞೆಯನ್ನು, ಒಮ್ಮೆಯುಂ_ಒಂದು ಸಲವೂ, ಮೀರ್ವಂ-ಅತಿಕ್ರಮಿಸುವವನು, ಅಲ್ಲೆಂದು-ಅಲ್ಲವೆಂಬದಾಗಿ ಹೇಳಿ, ಅತಿಕ್ರಮಿಸಿ_ಭೃಂಗೀಶನ ಮಾತನ್ನು ಲಕ್ಷ್ಯಮಾಡದೆ, ನಡಿಯಲು_ಹೋಗಲಾಗಿ, ಆ ಪಕ್ಷಘಾತದೊಳು_ಆ ಗರುಡನ ಗರಿಗಳ ಹೊಡೆತದಿಂದ, ಆತನು-ಆ ಭೃಂಗಿಗಳೊಡೆಯನು, ಅಳವಳಿದನು-ಶಕ್ತಿಗುಂದಿದನು (ಆಯಾಸಪಟ್ಟನು) ‖

ಅ ವಿ॥ (ಇದು+ಶಿರ=ಈಶಿರ), ಗ. ಸ. (ಮದನನ+ಅರಿ=ಮದನಾರಿ), ಷ. ತ. ಪಕ್ಷ-ರೆಕ್ಕೆ, ಭುಜ, ಪಕ್ಕ, ಅರೆದಿಂಗಳು. ಅಲ್ಲಿ ಎಲ್ಲಿ ಇಲ್ಲಿ. ಸ್ಥಾನ ವಾಚಕಾವ್ಯಯಗಳು ‖೧೯‖

ಟೀ॥ ಗರುಡನ-ಪಕ್ಷಿರಾಜನ, ಗರಿಯ- ಎರಕೆಯ, ಗಾಳಿಯೋಳ್ - ಗಾಳಿಯಲ್ಲಿ, ಸಿಕ್ಕಿ - ವಶವಾಗಿ, ಬೆಂಡಾಗಿ-ಆಯಾಸಪಟ್ಟು, ತಿರಿಗಿಬಂದು_ಹಿಂದಕ್ಕೆ ಬಂದವನಾಗಿ, ಭೃಂಗಿಪಂ-ಭೃಂಗೀಶನು, ಅಭವಂಗೆ-ಈಶ್ವರನಿಗೆ (ಹುಟ್ಟು ಸಾವುಗಳ ಕೊರತೆಗಳಾವುವೂ ಇಲ್ಲದಿರುವವನು), ಬಿನ್ನೈಸುತ್ತಿರೆ -ಬಿನ್ನವಿಸುತ್ತಿರಲು, ಎಂದರೆ (ಅರಿಕೆಮಾಡಿಕೊಳ್ಳುತ್ತಿರಲು), ಗಿರಿಜೆ_ಹೈಮವತಿಯು, ಕೇಳ್ದು_ಭೃಂಗೀಶ್ವರನ ಮಾತುಗಳನ್ನು ಆಲಿಸಿ, ನಸುನಗುತ_ಕಿರುನಗೆಯಿಂದ ನಗುತ್ತ, ಹರಿವಾಹನನ_ಕೃಷ್ಣನ ವಾಹನವಾದ ವೈನತೇಯನ, ಬಲ್ಮೆಯಂ-ಸಾಮರ್ಥ್ಯವನ್ನು, ನೆರೆ_ಬಹಳವಾಗಿ, ಪೊಗಳ್ದು-ಸ್ತುತಿಸಿ, ಪಿರಿದು_ಬಹಳವಾಗಿ, ಆತನಂ_ಭೃಂಗೀಶನನ್ನು, ಜರಿಯೆ_ಹೀಯ್ಯಾಳಿಸಲಾಗಿ, ತಲೆವಾಗಿ_ಶಿರವನ್ನು ಬಗ್ಗಿಸಿಕೊಂಡು, ಲಜ್ಜಿಸಲು - ನಾಚಿಕೆಯನ್ನು ಹೊಂದುತ್ತಿರಲು, ಪುರಹರಂ_ಈಶ್ವರನು, ಕೃಪೆಯೊಳು_ಪ್ರೀತಿಯಿಂದ, ಅವನಂ_ಆ ಭೃಂಗೀಶನನ್ನು, ಮತ್ತೆ_ಪುನಹ, ಸಂತೈಸಿ_ಮನಶ್ಶಾಂತಿ ಪಡಿಸಿ, ಕರೆದು_ತನ್ನ ಹತ್ತಿರಕ್ಕೆ ಬರಮಾಡಿ, ವೃಷರಾಜಂಗೆ_ವೃಷಭೇಶನಾದ ನಂದಿಗೆ, ಬೆಸಸೆ - ಅನುಜ್ಞೆಮಾಡಲು, ನಭದೊಳು_ಗಗನದಲ್ಲಿ, ಪತ್ರೀಂದ್ರನಂ - ಪಕ್ಷಿರಾಜನಾದ ವೈನತೇಯನನ್ನು, ಬೆಂಬತ್ತಿದಂ - ಹಿಂಬಾಲಿಸಿಕೊಂಡು ಹೋದನು ‖

---

ಳಕ್ಕೆ ಕೆಡವಿತು, ಅರ್ಜುನನು ಅಜ್ಞಾನವನ್ನು ಹೊಂದಿ ಪುನಹ ಚೇತರಿಸಿಕೊಂಡನು, ಆಬಳಿಕ ಆ ಸುರಥನ ಶಿರವು ಹರಿ, ರಾಘವ, ಜನಾರ್ದನ, ಮುಕುಂದ ಎಂಬದಾಗಿ ಸ್ಮರಣೆಮಾಡುತ್ತ ಬಂದು ಶ್ರೀ ಕೃಷ್ಣನ ಪಾದದಲ್ಲಿ ಬಿದ್ದಿತು ‖ ೧೭ ‖ ಆಗ ಲಕ್ಷ್ಮೀಪತಿಯಾದ ಶ್ರೀ ಕೃಷ್ಣನು ತನ್ನ ಪಾದದಮೇಲೆ ಬಿದ್ದ ಶಿರಸ್ಸನ್ನು ಅತ್ಯಂತ ಪ್ರೀತಿಪುರಸ್ಸರವಾಗಿ ತನ್ನ ಕೈಗೆ ತೆಗೆದುಕೊಂಡು ನೋಡಿ, ಅಂತರಿಕ್ಷದಲ್ಲಿ ಸಂಚರಿಸುತ್ತಿದ್ದ ತನ್ನ ವಾಹನನಾದ ಗರುಡನಂ ಕರೆದು ಈ ರುಂಡವನ್ನು ಪ್ರಯಾಗ ಕ್ಷೇತ್ರದಲ್ಲಿ ಹಾಕಿ ಬಾರೆಂದು ಅಪ್ಪಣೆಮಾಡಲು, ಅದರಂತೆಯೆ ವೈನತೇಯನು ಆ ಶಿರವೊಡನೆ ಗಗನಪಥದಲ್ಲಿ ಹೋಗುತ್ತಿರಲು ಪಿನಾಕಿಯು ಅದಂ ಕಂಡು ಆ ಕಪಾಲವನ್ನು ತನಗೆ ತಂದು ಕೊಡುವಂತೆ ಭೃಂಗೀಶ್ವರನನ್ನು ಪ್ರೀತಿಯಿಂದ ಕಳುಹಿಸಿದನು ‖೧೮‖ ಆಗ ಖಗೇಶ್ವರನು ಆ ಶಿರವನ್ನು ತೆಗದುಕೊಂಡು ಅಂತರಿಕ್ಷಮಾರ್ಗದಲ್ಲಿ ಹೋಗುತ್ತಿರುವುದನ್ನು ಕಂಡು, ಈ ವೈನತೇಯನು ಆ ಸುರ

ಘಾತದೊಳಾತನಳವಳಿದನು ‖ ೧೯ ‖ ಗರುಡನಗರಿಯಗಾಳಿಯೊಳ್ಸಿಕ್ಕಿಬೆಂಡಾಗಿ । ತಿರುಗಿಬಂದಭವಂಗೆ ಭೃಂಗಿಪಂಬಿನ್ನೈಸು । ತಿರೆಕೇಳ್ದುಗಿರಿಜೆನಸುನಗುತ ಹರಿವಾಹನನಬಲ್ಮೆಯಂನೆರೆಪೊಗಳ್ದು ‖ ಪಿರಿದಾತನಂಜರಿಯೆತಲೆವಾಗಿಲಜ್ಜಿಸ । ಲ್ಪುರಹರಂಕೃಪೆಯೊಳವನಂಮತ್ತೆ ಸಂತೈಸಿ । ಕರೆದುವೃಷರಾಜಂಗೆಬೆಸಸೆಬೆಂಬತ್ತಿದಂ ಪಕ್ಷೀಂದ್ರನಂನಭದೊಳು ‖ ೨೦ ‖ ಬೇಗದಿಂದೈದಿನಂದೀಶ್ವರಂಗರುಡನಂ । ಪೋಗದಿರ್ತಲೆಯನಾಭರಣಕ್ಕೆತಾರೆಂದು । ನಾಗಭೂಷಣನಟ್ಟಿದಂತನ್ನ ನೀಯದೊಡೆನಿನಗೆ ಬಹುದುಪಹತಿಯೆನೆ ‖ ಆಗಲದಕೇನ ಸುರಮರ್ದನನಬೆಸದಿಂ ಪ್ರ । ಯಾಗದೊಳ್ಬಿಡುವೆನೀಶಿರಮಂ ಬರಿದೆಘಾಸಿ । ಯಾಗದಿರ್ತಿರುಗುನೀ

---

ಅ‖ ವಿ‖ ಪತ್ರಗರಿ, ಪತ್ರವುಳ್ಳದ್ದು ಪತ್ರಿ-ಪಕ್ಷಿ ಪತ್ರಿ+ಇಂದ್ರ=ಪತ್ರೀಂದ್ರ, ಸ. ಸಂಧಿ. ಗಿರಿ-ಪರ್ವತದಲ್ಲಿ ಜ-ಹುಟ್ಟಿದವಳು ಗೌರಿ, ಪತ್ರಿ-ಪಕ್ಷಿ, ಬಾಣ, ರಥ. ತ್ರಿಪುರಗಳ ಸಮಾಹಾರ-ತ್ರಿಪುರ, ಸಮಾಹಾರ ದ್ವಿಗು. ಸ. ತ್ರಿಪುರಹರ-ತಾರಕ, ತಾರಕಾಕ್ಷ, ವಿದ್ಯುನ್ಮಾಲಿ ಎಂಬ ಅಣ್ಣತಮ್ಮಂದಿರಾದ ರಕ್ಕಸರು ಕಂಚು, ಬೆಳ್ಳಿ, ತಾಮ್ರದ ರೂಪನಾದ ಮೂರು ಪಟ್ಟಣಗಳಿಗೆ ಅರಸರಾಗಿ ಅಂತರಿಕ್ಷದಲ್ಲಿ ಸಂಚರಿಸುತ್ತ ದೇವಾದಿದೇವತೆಗಳನ್ನು ಹಿಂಸೆ ಪಡಿಸುತ್ತಿದ್ದರು, ದೇವತೆಗಳ ಪ್ರಾರ್ಥನೆಯಂತೆ ಈಶ್ವರನು ಆ ಲೀಳಪದದಿಂದ ಆ ಮೂರು ಪುರಗಳೂ ಒಟ್ಟುಗೂಡುವುದನ್ನು ನಿರೀಕ್ಷಿಸುತ್ತಿದ್ದು ಸರಿಯಾದ ಕಾಲದಲ್ಲಿ ಆ ಮೂವರನ್ನು ಒಂದೇ ಬಾಣದಿಂದ ಸಂಹರಿಸಿದನು ‖೨೦‖

ಟೀ‖ ನಂದೀಶ್ವರಂ-ನಂದೀಶ್ವರನು, ಬೇಗದಿಂ-ಶೀಘ್ರವಾಗಿ, ಐದಿ-ಹೋಗಿ, ಸೇರಿ, ಗರುಡನಂ-ಖಗೇಶ್ವರನನ್ನು ನೋಡಿ, ಪೋಗದಿರ್-ಮುಂದಕ್ಕೆ ಹೋಗಬೇಡ, ನಾಗಭೂಷಣಂ-ಸರ್ಪಾಭರಣನಾದ ಈಶ್ವರನು, ತಲೆಯಂ-ನೀನು ತೆಗದುಕೊಂಡು ಹೋಗುತ್ತಿರುವ ಶಿರಸ್ಸನ್ನು, ಆಭರಣಕೆ-ಈಶ್ವರನ ರುಂಡದ ಸರಕ್ಕೆ, ತಾರೆಂದು-ತೆಗೆದುಕೊಂಡು ಬರುವಂತೆ, ತನ್ನಂ-ನನ್ನನ್ನು, ಅಟ್ಟಿದಂ-ಕಳುಹಿಸಿರುವನು, ಈಯದೊಡೆ-ಆ ರುಂಡವನ್ನು ಕೊಡದೇ ಹೋದರೆ, ನಿನಗೆ, ಉಪಹತಿಯು-ಉಪದ್ರವವು (ಮರಣವು), ಬಹುದು-ಬರುವುದು, ಎನೆ-ಎಂದು ಹೇಳಲಾಗಿ, ಅಗಲಿ-ಅಗತ್ಯವಾಗಿ ಆಗಬಹುದು, ಅದಕೇನು-ಆಕಾರ್ಯಕ್ಕೇನು ತೊಂದರೆ, ನಾಂ-ನಾನು, ಅಸುರಮರ್ದನನ-ರಾಕ್ಷಸಾಂತಕನಾದ ಕೃಷ್ಣನ, ಬೆಸದಿಂ-ಆಜ್ಞೆಯಂತೆ, ಈ ಶಿರಮಂ-ಈ ತಲೆ ಬುರುಡೆಯನ್ನು, ಪ್ರಯಾಗದೊಳ್-ಪ್ರಯಾಗ ಕ್ಷೇತ್ರದಲ್ಲಿ, ಬಿಡುವೆಂ-ಬಿಡುತ್ತೇನೆ, ನೀಂ-ನೀನು, ಬರಿದೆ-ವ್ಯರ್ಥವಾಗಿ, ಘಾಸಿಯಾಗದೆ-ಆಯಾಸ ಪಡದೆ ಇರುವವನಾಗು, ತಿರುಗು-ಹಿಂದಕ್ಕೆ ಹೊರಡುವನಾಗು, ಎಂದು-ಎಂಬದಾಗಿ, ವಿನತಾಸುತಂ-ವಿನತೆಯ ಮಗನಾದ ವೈನತೇಯನು, ಆಗಸದೊಳು-ಅಂತರಿಕ್ಷದಲ್ಲಿ, ಸೈವರಿದಂ-ಮುಂದೆ ಹೊರಟನು ‖

ಅ‖ ವಿ‖ ತಾರೆ-ತಾರಾದೇವಿ, ನಕ್ಷತ್ರ, ಕಣ್ಣಿನ ಕರಿಯಗುಡ್ಡು, ನಾಗವೇ ಭೂಷಣವಾಗುಳ್ಳವನು-ನಾಗಭೂಷಣ, ಬಹು. ಸ. ಸುರನಲ್ಲದನು-ಅಸುರ, ಅಸುರ-ರಾಕ್ಷಸರನ್ನು, ಮರ್ದನ-ನಾಶಮಾಡಿದವನು ಕೃಷ್ಣನು ‖೨೧‖

---

ಥನ ಶಿರಸ್ಸನ್ನು ತೆಗೆದುಕೊಂಡು ಎಲ್ಲಿಗೋ ಹೋಗುತ್ತಿರುವನು, ಈಗಲಾದರೋ ಈ ಸುರಥನ ಅಗ್ರಜನಾದ ಸುಧನ್ವನ ಅತಿ ಮನೋಹರವಾದ ಶಿರಸ್ಸು ತನ್ನ ರುಂಡಮಾಲೆಯಲ್ಲಿರುವುದು, ಅದರ ಸಂಗಡ ಇರುವುದಕ್ಕೋಸ್ಕರವಾಗಿ ಈ ತಲೆಯ ಬುರುಡೆಯನ್ನು ತೆಗೆದುಕೊಂಡು ಬರುವಂತೆ ಮನಸಿಜವೈರಿಯಾದ ಪರಮೇಶ್ವರನು ಅಪ್ಪಣೆ ಮಾಡಲು, ಅತಿ ತ್ವರೆಯಾಗಿ ಬಂದು ಆ ವೈನತೇಯನನ್ನು ಆ ಸುರಥನ ರುಂಡವನ್ನು ಕೊಡುವಂತೆ ಕೇಳಲಾಗಿ, ಆ ಮಾತನ್ನು ಕೇಳಿ ಖಗೇಶ್ವರನು, ನಮ್ಮ ಒಡೆಯನ ಮಾತನ್ನು ಲೇಶಮಾತ್ರವೂ ಮಿಾಂತಕ್ಕವನಲ್ಲವೆಂದು, ಭೃಂಗೀಶ್ವರನನ್ನು ಲಕ್ಷ್ಯಮಾಡದೆ ಮುಂದಕ್ಕೆ ಹೊರಡಲು ಆಗ ಭೃಂಗೀಶ್ವರನು ಗರುಡನ ಗರಿಯ ಘಾಳಿಯ ಹೊಡತಕ್ಕೆ ಸಿಕ್ಕಿ ಬಹುವಾಗಿ ಆಯಾಸವನ್ನು ಹೊಂದಿದನು ‖೧೯‖ ಈರೀತಿಯಾಗಿ ಆಯಾಸಪಟ್ಟು ಪುನಹ ಈಶ್ವರ ಸಭೆಗೆ ಬಂದು, ಅಲ್ಲಿ ನಡೆದ ಸಂಗತಿಗಳನ್ನೆಲ್ಲಾ ವಿಜ್ಞಾಪನೆ ಮಾಡಿಕೊಳ್ಳುತ್ತಿರಲಾಗಿ, ಪಾರ್ವತಿಯು ಈ ಭೃಂಗೀಶನ ಮಾತನ್ನು ಕೇಳಿ ಮಂದಹಾಸಯುತಳಾಗಿ ಆ ವೈನತೇಯನ ಪ್ರರಾಕ್ರಮಾತಿಶಯಕ್ಕೆ ಅವನನ್ನು ಹೊಗಳಿ ಭೃಂಗೀಶ್ವರನನ್ನು ಹಿಯ್ಯಾಳಿಸಲು, ಲಜ್ಜೆಯಿಂದ ತಲೆಬಾಗಿಸಿ ನಿಂತಿರುವ ಭೃಂಗೀಶ್ವರನನ್ನು, ಉಮಾಪತಿಯಾದ ಈಶ್ವರನು ಪ್ರೀತಿಯಿಂದ ಸಮಾಧಾನಮಾಡಿ, ತನ್ನ ಬಳಿಯೊಳಿದ್ದ ವೃಷಭೇಶ್ವರನಾದ ನಂದೀಶ್ವರನನ್ನು ಆ ಸುರಥನ ಶಿರಸ್ಸನ್ನು ತರುವಂತೆ ಕಳುಹಿಸಲಾಗಿ, ನಂದೀಶ್ವರನು ಆ ವೈನತೇಯನ ಬೆನ್ನಹತ್ತಿಹೋದನು ‖೨೦‖ ಆಗ ನಂದೀಶ್ವರನು ಶೀಘ್ರವಾಗಿ ಸೇರಿ ಅಂತರಿಕ್ಷಮಾರ್ಗದಲ್ಲಿ ಹೋಗುತ್ತಿರುವ ಖಗೇಶ್ವರನನ್ನು ನೋಡಿ ಮುಂದಕ್ಕೆ ಹೊರಡಬೇಡ ನಿನ್ನಲ್ಲಿರುವ ರುಂಡವನ್ನು ತನ್ನ ರುಂಡಮಾಲೆಗೆ ಧರಿಸಲೋಸುಗ, ನಾಗಾಭರಣನಾದ ಶ್ರೀ ಪರಮೇಶ್ವರನು ಅದನ್ನು ತೆಗದುಕೊಂಡು ಬರುವಂತೆ ನನ್ನನ್ನು ಕಳುಹಿಸಿರುವನು, ಆ ಮಾತನ್ನು ಲಕ್ಷ್ಯಕ್ಕೆತಾರದೆ ಹೊರಬರೆ ನಿನಗೆ ತೊಂದರೆಯಾಗಲು ಸಂದೇಹವಿಲ್ಲ, ಎಂದು ಹೇಳಲಾಗಿ ಆ ಮಾತಂ ಕೇಳಿದ ಗರುಡನು ಅಗತ್ಯವಾಗಿ ತೆಗದುಕೊಳ್ಳಬಹುದು, ಆ ಕೆಲಸಕ್ಕೇನೂ ತೊಂದರೆ ಇಲ್ಲ, ನಾನಾದರೆ ನಮ್ಮೊಡೆ

ನೆಂದುವಿನತಾಸುತಂಸ್ಯೈವರಿದನಾಗಸದೊಳು ||೨೧|| ತ್ರಿಭುವನನನಲ್ಲಾಡಿಸುವಗರಿಯಗಾಳಿಗಳ | ರಭಸದಿಂದ್ಯೈದುವಸುಪರ್ಣನಂ ಹಿಂದೆಬಹವೃ | ಷಭರಾಜನುಚ್ಛ್ವಾಸನಿಶ್ವಾಸಮಾರುತಂತಡದತ್ತಲಿತ್ತಲೆಳೆಯೆ|| ನಭದೊಳೊಯ್ಯೊಯ್ಯನಾಯಾಸದಿಂಪೋಗಿದು| ರ್ಲಭನೆನಿಸುವಮಲಪ್ರಯಾಗದೋಳ್ಕಲಿಪೊಗರೊಳಭಿ|ಶೋಭಿಸುವಸುರಥನಶಿರವನಾಗೋಪತಿಗೆಕೊಡದೆಬಿಸುಟಂಗರುಡನು||೨೨|| ಆಗರುಡನಾಶಿರವನಾಪ್ರಯಾಗದಜಲದೊ | ಳಾಗಗನದಿಂದಬಿಸುಟಾಕೃಷ್ಣನಿದ್ದಬಳಿ | ಗಾಗಿತಿರುಗಿದನಾಗಳಾತಲೆಯನಲ್ಲಿಂದಲಾವೃಷಭನೆತ್ತಿಕೊಂಡು || ಆಗಿರೀಶನರಾಜನಾಸಭೆಗೆತಂದುಕೊಡ | ಲಾಗೋಪತಿಯಮೆಚ್ಚುತಾರುಂಡಮಾಲೆಗದ | ನಾಗೌ

ಟೀ|| ತ್ರಿಭುವನನಂ- ಮೂಲೋಕಗಳನ್ನು, ಅಲ್ಲಾಡಿಸುವ- ಕಂಪಾಯಮಾನ ಮಾಡುವ, ಗರಿಯ-ಗರುಡನ ರೆಕ್ಕೆಗಳ, ಗಾಳಿಗಳ-ಮಾರುತದ, ರಭಸದಿಂದ-ಜಾಗ್ರತೆಯಿಂದ, ಐದುವ-ಪ್ರಯಾಣ ಮಾಡುತ್ತಿರುವ, ಸುಪರ್ಣನಂ-ಪನ್ನಗಾಶನನನ್ನು, ಹಿಂದೆ ಬಹ-ಹಿಂಬಾಲಿಸಿ ಬರುತ್ತಲಿರುವ, ವೃಷಭರಾಜನು-ವೃಷಭೇಶನಾದ ನಂದಿಯು, ಉಚ್ಛ್ವಾಸನಿಶ್ವಾಸ ಮಾರುತಂ-ಶ್ವಾಸೋಚ್ಛ್ವಾಸ ವಾಯುವು, ತಡೆದು-ಅಡ್ಡಿಮಾಡಿ, ಅತ್ತಲ್-ಆ ಕಡೆಗೆ, ಇತ್ತಲ್-ಈ ಕಡೆಗೆ, ಎಳೆಯೆ-ಸೆಳೆಯಲಾಗಿ, ಗರುಡ-ವೈನತೇಯನು, ಆಯಾಸದಿಂದ-ತೊಂದರೆಯಿಂದ, (ಬಲಹೀನತೆಯಿಂದ) ಒಯ್ಯೊಯ್ಯನೆ-ನಿದಾನವಾಗಿ, ನಭದೊಳು-ಗಗನದಲ್ಲಿ, ಪೋಗಿ-ಪ್ರಯಾಣಮಾಡಿ, ದುರ್ಲಭಂ ಹೊಂದಲು ಅಸಾಧ್ಯವಾದದ್ದು, ಎನಿಸುವ-ಎನ್ನಿಸಿಕೊಳ್ಳುವ, ಅಮಲ-ನಿರ್ಮಲವಾದ, ಪ್ರಯಾಗದೊಳ್-ತ್ರಿವೇಣೀ ಸಂಗಮದಲ್ಲಿ, (ಗಂಗಾ, ಯಮುನೆ, ಸರಸ್ವತಿ ಈ ಮೂರು ಕೂಡುವ ಸ್ಥಳದಲ್ಲಿ) ಕಲಿಪೊಗರೊಳು-ಶೂರತ್ವದ ತೇಜದಿಂದ, ಅಭಿಶೋಭಿಸುವ-ಹೊಳೆಯುವ, ಸುರಥನ ಶಿರವಂ-ಸುರಥನ ಶಿರಸ್ಸನ್ನು, ಆ ಗೋಪತಿಗೆ-ವೃಷಭೇಶ್ವರನಿಗೆ, ಕೊಡದೆ-ವಶಮಾಡದೆ, ಬಿಸುಟಂ-ಎಸೆದನು ||

ಅ|| ವಿ|| ತ್ರಿಭುವನಗಳ ಸಮಾಹಾರವು - ತ್ರಿಭುವನ ಸ. ದ್ವಿಗು. ಭುವನ-ಪ್ರಪಂಚ, ನೀರು, ಭವನ-ಮನೆ, ಸು-ಒಳ್ಳೆಯದಾದ, ಪರ್ಣ-ಗರಿಗಳುಳ್ಳವನು, ಗರುಡ. ಮಲ (ಕೊಳೆ) ಇಲ್ಲದ್ದು-ನಿರ್ಮಲ (ನ. ತ.) ಶಿವನೇ ವಿಷ್ಣುವು ವಿಷ್ಣುವೇ ಶಿವನು. ಧರ್ಮ ವೃಷಭಗಳೇ - ವಿಷ್ಣು ರುದ್ರರು. ವಿಷ್ಣು ರುದ್ರರೇ - ಧರ್ಮ ವೃಷಭಗಳು. ರಾವಣ, ತಾರಕ, ಹಿರಣ್ಯಕಶಿಪು ಮೊದಲಾದವರ ಶಿರಸ್ಸುಗಳ ಸಂಗಡ ಸುಧನ್ವನ ಶಿರಸ್ಸೂ ಸೇರಿರುತ್ತದೆ. ||೨೨||

ಟೀ|| ಆ ಗರುಡಂ-ಆ ವೃಷಭನಿಂದ ಆಯಾಸಪಟ್ಟ ವೈನತೇಯನು, ಆ ಶಿರವಂ-ಆ ಸುರಥನ ತಲೆಯ ಬುರುಡೆಯನ್ನು, ಆ ಪ್ರಯಾಗದ-ಆ ಪ್ರಸಿದ್ಧವಾದ ಪ್ರಯಾಗ ಕ್ಷೇತ್ರದ, ಜಲದೊಳ್-ಉದಕದಲ್ಲಿ, ಆ ಗಗನದಿಂದ-ಆ ಅಂತರಿಕ್ಷ ಮಾರ್ಗದಿಂದ, ಬಿಸುಟು-ಎಸೆದು, ಆ ಕೃಷ್ಣಂ-ತನ್ನೊಡೆಯನಾದ ಕೃಷ್ಣನು, ಇದ್ದ ಬಳಿಗಾಗಿ-ಇರತಕ್ಕ ಪ್ರದೇಶವನ್ನು ಕುರಿತು, ತಿರುಗಿದಂ-ಹಿಂದಿರುಗಿದನು, ಆಗಳ್-ಆಗ, ಆ ವೃಷಭಂ-ಆ ವೃಷಭೇಶ್ವರನು, ಆ ತಲೆಯಂ-ಆ ಶಿರಸ್ಸನ್ನು, ಅಲ್ಲಿಂದಲೆ-ಆ ಪ್ರಯಾಗಕ್ಷೇತ್ರದಿಂದಲೆ, ಎತ್ತಿಕೊಂಡು-ತೆಗೆದುಕೊಂಡು, ಆ ಗಿರೀಶನ-ಈಶ್ವರನ, ರಾಜಿಪ-ಹೊಳೆಯುತ್ತಿರುವ, ಆ ಸಭೆಗೆ-ಶಿವನ ಓಲಗಕ್ಕೆ, ತಂದು ಕೊಡಲ್-ತಂದು ಕೊಡಲಾಗಿ, ಆ ಗೌರಿ-ಪಾರ್ವತಿಯು, ಆನಂದದಿಂ-ಹರ್ಷದಿಂದ, ಕೊಂಡಾಡಲು-ಹೊಗಳಲು, ಶಂಕರಂ-ಈಶ್ವರನು, ಆ ಗೋಪತಿಯಂ-ವೃಷಭೇಶ್ವರನನ್ನು, ಮೆಚ್ಚುತ- ಒಪ್ಪಿಕೊಳ್ಳುತ್ತ, ನಲಿದು-ಪ್ರೀತಿಸಿ, ಅದಂ-ಆ ಸುರಥನ ಶಿರವನ್ನು, ರುಂಡುಮಾಲೆಗೆ-ತಲೆಯ ಬುರುಡೆಯ ಹಾರಕ್ಕೆ, ತಾಳ್ದನು-ಹೊಂದಿದನು (ಧರಿಸಿಕೊಂಡನು).

ಅ|| ವಿ|| ಅವನು+ಗರುಡ=ಆ ಗರುಡ ಗಮಕ. ಸ. ಗೌರಿಯ+ಈಶ=ಗೌರೀಶ ಷ. ತ. ಶಂ-ಸುಖವನ್ನು, ಕರ-ಉಂಟು ಮಾಡತಕ್ಕವನು ||೨೩||

ಯನ ಅಪ್ಪಣೆಯನ್ನ ಎಂದಿಗೂ ಮೀರಿ ನಡೆಯತಕ್ಕವನಲ್ಲ, ಆದ್ದರಿಂದ ಮುರಾರಿಯು ಅಪ್ಪಣೆಯಂತೆ ಈ ರುಂಡವನ್ನು ಪ್ರಯಾಗ ಕ್ಷೇತ್ರದಲ್ಲಿಡುವೆನು ಸುಮ್ಮನೆ ಏಕೆ ಆಯಾಸ ಪಡುತ್ತಿ? ಎಂದು ವೈನತೇಯನು ಹೇಳಿ ಮುಂದರಿಯಲು || ೨೧ || ಆ ಬಳಿಕ ನಂದೀಶ್ವರನು ಮೂಲೋಕಗಳನ್ನು ಕಂಪಿಸುವಂತೆ ಮಾಡುವ ಗರಿಯ ಗಾಳಿಯ ರಭಸದಿಂದ ಹೋಗುತ್ತಲಿರುವ ನಾಗಾಂತಕನನ್ನು ಹಿಂಬಾಲಿಸಿ ಹೋಗುತ್ತ ತನ್ನ ಶ್ವಾಸೋಚ್ಛ್ವಾಸಗಳನ್ನು ತಡೆದು ಬಿಡಲಾಗಿ, ಅದರಿಂದ ಗರುಡನು ಆ ಕಡೆಗೆ ಈ ಕಡೆಗೆ ಎಳೆದಾಗ್ಯೂ ಅತಿಯಾಗಿ ನೊಂದು ಪಾಪಿಗಳಿಗೆ ದುರ್ಲಭವಾದ ಪ್ರಯಾಗದ (ತ್ರಿವೇಣಿ ಸಂಗಮದಲ್ಲಿ) ಕಾಂತಿಯತಿಶಯದಿಂದ ಕೂಡಿದ ಆ ಶಿರವನ್ನು ವೃಷಭರಾಜನಿಗೆ ಕೊಡದೆ ಎಸೆದನು || ೨೨ || ಅನಂತರದಲ್ಲಿ ವೈನತೇಯನು ತನ್ನ ಒಡೆಯನ ಮಾತಿನಂತೆ ಕಾರ್ಯವನ್ನು ನೆರವೇರಿಸಿ ಪುನಃ ಶ್ರೀ ಕೃಷ್ಣನಿದ್ದ ಸ್ಥಳವನ್ನು ಕುರಿತು ಹಿಂದಿರುಗಿದನು, ಆಗ ವೃಷಭೇಶ್ವರನಾದ ನಂದಿಯು ಆ ತಲೆಯ ಬುರುಡೆಯನ್ನು ಆ ಪ್ರಯಾಗ ಕ್ಷೇತ್ರದಿಂದಲೇ ಆ ಸುರಥನ ಶಿರವನ್ನು ತೆಗೆದುಕೊಂಡು, ಪ್ರಕಾಶಿಸುತ್ತಲಿರುವ ಪಾರ್ವತೀ ಪತಿಯ ಸಭೆಗೆ ಬಂದು ಕೊಡಲಾಗಿ, ಆಗ ಗೌರಿಯು ಸಂತೋಷದಿಂದ ನಂದೀಶ್ವರನನ್ನು ಕೊಂಡಾಡಲು, ಶಂ

ರಿಕೊಂಡಾಡಲಾನಂದದಿಂದನಲಿದಾಶಂಕರಂತಾಳ್ದನು ॥ ೨೩॥ ಇತ್ತಲರ್ಜುನಕೃಷ್ಣರಿಂದಸುರಥಂಮಡಿದ । ವೃತ್ತಾಂತನುಂ ಕಂಡುಹಂಸಧ್ವಜಂತನ್ನ । ಚಿತ್ತದೋಳ್ಕಡುನೊಂದಳಲ್ದುಮಿಗೆಮರಣವಂನಿಶ್ಚೈಸಿರೋಷದಿಂದ ॥ ದತ್ತರಣದೊಳ್ಕಾದಿಮುರ ಹರಂಮೆಚ್ಚಲಾ । ನುತ್ತಮದಗತಿಪಡೆವೆನೆಂದುರಥವೇರಿಬಾ । ಗೊತ್ತಿನಿಜಚಾಪಮುಂಜೇಗೈದುಪಡೆಸಹಿತಫಲುಗುಣಂಗಿದಿರಾದ ನು ॥೨೪॥ ಮುಳಿದುಹಂಸಧ್ವಜಂಕಾಳಗಕೆನಿಲ್ಲಲಾಗ । ನಳಿನಭವನಳುಕಿದಂಲೋಕಸೃಷ್ಟಿಗೆಮತ್ತೆ । ಬಳಲಬೇಕೆಂದುರವಿ ಮಂಡಲಂನಡುಗಿತೊಡನೈದುವಭಟರರಭಸಕೆ । ಪ್ರಳಯಮಿಂದಹುದೆಂದುಕಂಪಿಸಿತುಧರೆಸಗ್ಗ । ಪೊಳಲೊಳಗೆತೆರಪಿಲ್ಲದೆಂದು

ಟೀ॥ 'ಇತ್ತಲ್'-ಈ ಯುದ್ಧರಂಗದಲ್ಲಿ, ಸುರಥಂ-ಸುರಥನು, ಅರ್ಜುನ ಕೃಷ್ಣರಿಂದ-ಕೃಷ್ಣಾರ್ಜುನರಿಂದ, ಮಡಿದ-ಮೃತಪಟ್ಟ, ವೃತ್ತಾಂತವಂ-ವರ್ತಮಾನವನ್ನು, ಹಂಸಧ್ವಜಂ-ಮರಾಳಧ್ವಜನು, ಕಂಡು-ನೋಡಿ, ತನ್ನ-ತನ್ನಯ, ಚಿತ್ತದೋಳ್-ಮನದಲ್ಲಿ, ಕಡುನೊಂದು-ಬಹಳವಾಗಿ ಸಂಕಟಪಟ್ಟು, ಅಳಲ್ದು-ಪ್ರಲಾಪಿಸಿ, ಮಿಗೆ-ಅಧಿಕವಾಗಿ, ಮರಣಮುಂ-ಸಾವನ್ನು ನಿಶ್ಚೈಸಿ-ದೃಢಪಡಿಸಿ, ರೋಷದಿಂದ-ಕೋಪದಿಂದ, ತತ್ತ-ಲಭಿಸಿರುವ, ರಣದೋಳ್-ಕಾಳಗದಲ್ಲಿ, ಕಾದಿ-ಜಗಳವಾಡಿ, ಮುರಹರಂ-ಮುರಾರಿಯಾದ ಶ್ರೀ ಕೃಷ್ಣನು, ಮೆಚ್ಚಲು-ಒಪ್ಪುವಂತೆ, ಆಂ-ನಾನು, ಉತ್ತಮಗತಿ-ಮೋಕ್ಷವನ್ನು, (ಯೋಗ್ಯವಾದ ಮಾರ್ಗವನ್ನು) ಪಡೆವೆಂ-ಪಡೆಯುತ್ತೇನೆ, ಎಂದು-ಎಂಬದಾಗಿ, ರಥವೇರಿ-ವರೂಥಾರೋಹಣಮಾಡಿ, ನಿಜಚಾಪಮುಂ-ತನ್ನಯ ಧನುವನ್ನು, ಜಾಗೊತ್ತಿ-ಬೊಗ್ಗುವಂತೆಮಾಡಿ, ಜೇಗೈದು-ಹುರಿಯನ್ನು ಕಟ್ಟಿ, ಪಡೆಸಹಿತ-ಸೈನ್ಯದ ಕೂಡ, ಫಲುಗುಣಂಗೆ-ಪಾರ್ಥನಿಗೆ, ಇದಿರಾದನು-ಪ್ರತಿಭಟಿಸಿ ನಿಂತನು.

ಅ॥ ವಿ॥ ಉತ್ತಮಗತಿ-ಮೋಕ್ಷ, ಪಡೆ-ಸೈನ್ಯ, ಹೊಂದು, ಫಲುಗುಣ-ಫಲ್ಗುನಿ ನಕ್ಷತ್ರದಲ್ಲಿ ಹುಟ್ಟಿದವನು, ಚಿತ್ತ-ಮನಸ್ಸು, ಚಿತ್ತ ನಕ್ಷತ್ರ, ರೋಷ (ತ್ಸ) ರೋಸ (ದ್ಭ) ॥೨೪॥

ಟೀ॥ ಹಂಸಧ್ವಜಂ- ಮರಾಳಧ್ವಜನು, ಮುಳಿದು- ರೋಷಯುತನಾಗಿ, ಕಾಳಗಕೆ - ಆಹವಕೆ, ನಿಲಲ್- ನಿಂತುಕೊಳ್ಳಲು, ಆಗ-ಆಕಾಲದಲ್ಲಿ, ನಳಿನಭವಂ-ಪದ್ಮಜನಾದ ವಿರಂಚಿಯು, ಲೋಕ-ಪ್ರಪಂಚದ, ಸೃಷ್ಟಿಗೆ-ನಿರ್ಮಾಣಕ್ಕೆ, ಮತ್ತೆ-ಪುನಹ, ಬಳಲಬೇಕು-ಆಯಾಸಪಡಬೇಕು, ಎಂದು-ಎಂಬದಾಗಿ, ಅಳುಕಿದಂ-ಭಯಗೊಂಡನು, ರವಿಮಂಡಲಂ-ಸೂರ್ಯಮಂಡಲವು, ಒಡನೆ-ಸಂಗಡಲೇ, ಐದುವ-ಬರುವ, ಭಟರ-ವೀರರ, ರಭಸಕೆ-ಆರ್ಭಟಕ್ಕೆ ನಡುಗಿತು-ಅಲ್ಲಾಡಿತು, ಧರೆ-ಪೃಥ್ವಿಯಲ್ಲಿರುವ ಜನವು, (ಭೂಮಿಯು) ಇಂದು-ಈ ದಿವಸ, ಪ್ರಳಯಂ-ಕಲ್ಪಾಂತವು, (ಮರಣವು) ಅಹುದು-ಆಗುತ್ತದೆ, ಎಂದು-ಎಂಬದಾಗಿ, ಕಂಪಿಸಿತು-ನಡುಗಿತು, ಸಗ್ಗ-ದೇವಲೋಕದ, ಪೊಳಲೊಳಗೆ-ನಗರದಲ್ಲಿ, (ಅಮರಾವತಿಯಲ್ಲಿ) ತೆರಪಿಲ್ಲದೆ-ಅವಕಾಶವಿಲ್ಲದೆ, ಎಂದುಂ-ಸರ್ವದಾ, ಗಜಬಜಿಸಿ-ಗುಂಪು ಕೂಡಿ, (ಗಜಬಜವೆಂಬ ಶಬ್ದದಿಂದ ಕೂಡಿ) ಸುರಕುಲಂ-ದೇವತೆಗಳ ಸಮೂಹವು, ಐದೆ-ಹೊರಡಲು, ಕಂಗೆಟ್ಟುದು-ಏನೂ ತೋರದಿತ್ತು, ಅಸುರಾರಿ-ರಾಕ್ಷಸರ ಹಗೆಯಾದ ಕೃಷ್ಣನು, ಚಿಂತಿಸಿದನು-ಯೋಚಿಸಿದನು, ಅರಸ-ಎಲೈ ಜನಮೇಜಯರಾಯನೆ! ಅದ್ಭುತವನು-ಸೋಜಿಗವನ್ನು, ಕೇಳು-ಆಲಿಸು.

ಅ॥ ವಿ॥ ನಳಿನ-ವಿಷ್ಣುವಿನ ನಾಭೀ ಕಮಲದಲ್ಲಿ, ಭವ-ಹುಟ್ಟಿದವನು, (ಬ್ರಹ್ಮ) ಲೋಕ-ಪ್ರಪಂಚ, ಜನ. ಅದ್ಭುತ-ಆಶ್ಚರ್ಯ, ಅದ್ಭುತರಸ, ಇಂದು-ಈಗ, ಚಂದ್ರ. ಸುರರ+ಕುಲ=ಸುರಕುಲ ಷ. ತ. ॥೨೫॥

ಕರನು ಆ ಗೋಪತಿಯ ಕೆಲಸಕ್ಕೆ ಮೆಚ್ಚಿಕೊಂಡು, ಅತಿ ಹರ್ಷಯುತನಾಗಿ ಆ ಶಿರವನ್ನು ತನ್ನ ರುಂಡಮಾಲೆಯಲ್ಲಿ ಸೇರಿಸಿಕೊಂಡನು ॥ ೨೩॥ ಮತ್ತು ಈ ಕಡೆ ಯುದ್ಧರಂಗದಲ್ಲಿ, ಸುರಥನನ್ನು ಕೃಷ್ಣಾರ್ಜುನರು ಹತಮಾಡಿದ ಸಂಗತಿಯನ್ನು (ಸಂಹರಿಸಿದ) ಹಂಸಧ್ವಜನು ನೋಡಿ ಬಹುವಾಗಿ ನೊಂದು, ಪ್ರಲಾಪಿಸಿ ತಾನೂ ಸಾವನ್ನು ನಿಶ್ಚಯಮಾಡಿಕೊಂಡು, ಅತಿ ರೋಷಯುತನಾಗಿ, ಲಭಿಸಿರುವ ಕಾಳಗದಲ್ಲಿ ಜಗಳವಾಡಿ ಶ್ರೀ ಕೃಷ್ಣನು ಮೆಚ್ಚುವಂತೆ ನಾನೂ ಸದ್ಗತಿಯನ್ನು ಹೊಂದುತ್ತೇನೆಂದು ರಥವನ್ನೇರಿ ತನ್ನ ಚಾಪವನ್ನು ಬೊಗ್ಗಿಸಿ, ಹೆದೆಯನ್ನೇರಿಸಿ ಸೈನ್ಯದೊಡನೆ ಪಾರ್ಥನಿಗೆ ಎದುರಾಗಿ ನಿಂತನು ॥೨೪॥ ಆಗ ಹಂಸಧ್ವಜನು ಯುದ್ಧಮಾಡಲು ಉಪಕ್ರಮಿಸಿದುದೇ ಆದರೆ, ಪ್ರಪಂಚ ಸೃಷ್ಟಿಯು ಪುನಹ ಒದಗುವುದಲ್ಲಾ ಎಂದು ಬ್ರಹ್ಮನು ಭಯಗೊಂಡನು, ಸೂರ್ಯಮಂಡಲವು, ಸೇನಾನ್ವಿತನಾಗಿ ಬರುತ್ತಿರುವ ಹಂಸಧ್ವಜನ ಭಟರ ರಭಸಕ್ಕೆ ಅಲ್ಲಾಡಿತು, ಪ್ರಪಂಚದ ಜನವಾದರೊ ಈ ದಿವಸ ಮಹಾ ಪ್ರಳಯವು ಉಂಟಾಗುವುದರಲ್ಲಿ ಸಂದೇಹವಿಲ್ಲವೆಂದು ಗಡಗಡನೆ ನಡುಗಿದರು. ಮತ್ತು ದೇವತೆಗಳು ಅಮರಾವತಿಯಲ್ಲಿ ಕೊಂಚವೂ ಅವಕಾಶವಿಲ್ಲದೆ ಗಜಬಿಜೆಯಿಂದೊಪ್ಪುತ್ತಿರಲು, ಈ ಹಂಸಕೇತುವು ಯುದ್ಧಕ್ಕೆ ಬಂದುದನ್ನು ಕಂಡು ರಾಕ್ಷಸಾಂತಕನಾದ ಶ್ರೀ ಕೃಷ್ಣನೂ ಚಿಂತಿಸಿದನು. ಎಲೈ ಜನಮೇಜಯರಾಯನೇ ಈ ಸೋಜಿಗವನ್ನು ಕೇಳು ॥೨೫॥ ಆಗ ಶ್ರೀ ಕೃಷ್ಣನು ಹಂಸಧ್ವಜನು ನನ್ನಲ್ಲಿ ಯುದ್ಧಮಾಡಿದರೆ ಮುಂದೇನಾದೀತೊ ಎಂದು ಯೋಚಿ

ಗಜಬಜಿಸಿಸುರ | ಕುಲವ್ಯೈದೆಕಂಗೆಟ ನಸುರಾರಿಚಿಂತಿಸಿದನರಸಕೇಳದ್ಭುತವನು ‖ ೨೫ ‖ ಹಂಸಧ್ವಜಂಕಾದಲೆಂತಹುದೊಯೆನುತಲಾ | ಕಂಸಾಂತಕಂನಿದಾನಿಸಿಕೊಂಡುಶಕ್ರಸುತ | ನಂಸ್ಥೈರಿಸೆನುತಕುದುರೆಗಳವಾಘೆಯನಿಲಿಸಿಜಗಳ್ದ ಪೀತಾಂಬರವನು ‖ ಅಂಸದೋಳ್ಸಾರ್ಚುತವರೂಥಮನಿಳಿದುಸಿಂಹ | ಮಂಸೋಲಿಸುವಗತಿಯೊಳೈತಂದನಾಗತ | ನ್ನಂಸೇವಿಪರ್ಗೆಸೇವಕನೆಂಬುದಂತೋರುತಾತನಸಮಿಾಪಕಾಗಿ ‖ ೨೬ ‖ ಮಿಸುಪಮಕುಟದನೊಸಲತಿಲಕದಿಂದಲಕದಿಂ | ದೆಸಳುಗಂಗಳತೊಳಪಕದಪಿನಿಂ | ಪಸರಿಸುವನಸುನಗೆಯುವದನದಿಂರದನದಿಂಪೊಳೆನಚುಬುಕಾಗ್ರದಿಂದ ‖ ತ್ರಿಸರಕೌಸ್ತುಭಸುಕೇಯೂರದಿಂಹಾರದಿಂ | ದೊಸೆದುಟ್ಟಪೊಂಬೊಟ್ಟೆಯುಡಿಗೆಯಿಂತೊಡಿಗೆಯಿಂ | ದೆಸೆವನೀಲೋತ್ಪಲಶ್ಯಾಮಲಂಕೋಮಲಂಬರುತಿರ್ದನವನಿದಿ

ಟೀ‖ ಹಂಸಧ್ವಜಂ-ಹಂಸಧ್ವಜನು, ಕಾದಲ್-ಯುದ್ಧಮಾಡಲು, ಎಂತಹುದೊ-ಮುಂದೇನಾದೀತೋ? ಎನುತಲ್-ಎಂಬದಾಗಿ ಹೇಳುತ್ತ, ಆಕಂಸಾಂತಕಂ - ಕಂಸಾರಿಯಾದ ಕೃಷ್ಣನು, ನಿದಾನಿಸಿಕೊಂಡು - ತಡಮಾಡಿಕೊಂಡು, ಶಕ್ರಸುತನಂ-ಪಾರ್ಥನನ್ನು, ಸ್ಥೈರಿಸೆನುತ-ಕೊಂಚ ನಿಧಾನಿಸೆಂಬದಾಗಿ, (ಆತುರಪಡಬೇಡವೆಂದು) ಹೇಳುತ್ತ, ಕುದುರೆಗಳ-ರಥದಶ್ವಗಳ, ವಾಘೆಯ - ಲಗಾಮನ್ನು, ನಿಲ್ಲಿಸಿ-ತಡೆದು, ಜಗುಳ್ದ-ಸರಿದು ಹೋಗಿರುವ, ಪೀತಾಂಬರವನು - ಹಳದಿಯ ವಸ್ತ್ರವನ್ನು, ಅಸಂದೋಳ್ - ಬಾಹುವಿನಲ್ಲಿ, ಸಾರ್ಚುತ - ಸರಿಪಡಿಸುತ್ತ ಎಂದರೆ (ಭುಜದಲ್ಲಿ ಸರಿಯಾಗಿ ಇಡುತ್ತ) ವರೂಥಮಂ ಇಳಿದು ತೇರನ್ನು ಇಳಿದವನಾಗಿ, ಸಿಂಹಮಂ-ಸಿಂಹಮೃಗವನ್ನು, ಸೋಲಿಸುವ-ಜಯಿಸುವ, ಗತಿಯೋಳ್-ಹಾದಿಯಲ್ಲಿ, (ಗಮನದಿಂದ) ಆಗ-ಆ ಸಮಯದಲ್ಲಿ (ಪಾರ್ಥ ಮತ್ತು ಹಂಸಕೇತುವನ್ನು ರಕ್ಷಿಸಲಿಕ್ಕೆ ಬರುವಾಗ್ಯೆ) ತನ್ನಂ ಸೇವಿಪರ್ಗೆ-ತನ್ನನ್ನು ಆರಾಧಿಸುವವರಿಗೆ, ಸೇವಕಂ - ಸೇವಿಸತಕ್ಕವನು, (ಚಾಕರನು) ಎಂಬುದಂ - ಎಂದು ಹೇಳುವುದನ್ನು, ತೋರುತ - ತೋರ್ಪಡಿಸುತ್ತ, ಆತನ-ಆ ಹಂಸಧ್ವಜನ, ಸಮಿಾಪಕಾಗಿ-ಹತ್ತಿರಕ್ಕಾಗಿ, ಐತಂದನು-ಬಂದವನಾದನು.

ಅ‖ ವಿ‖ ಕಂಸನ ಅಂತಕನು = ಕಂಸಾಂತಕನು, (ಷ. ತ.) ಕಂಸ - ಕಂಸಾಸುರ, ಕಂಚು, ಪಾನಪಾತ್ರೆ, ಐತರ್, ಧಾತು-ಪ್ರಥಮಪುರುಷೈಕವಚನ, ಭೂತರೂಪ, ‖೨೬‖

ಟೀ‖ ಮಿಸುಪ-ಪ್ರಕಾಶಿಸುತ್ತಲಿರುವ, ಮಕುಟದ-ತಲೆಯ ಮಕುಟವುಳ್ಳ (ಕಿರೀಟ) ನೊಸಲ - ಫಾಲದಲ್ಲಿರುವ, ತಿಲಕದಿಂ - ಊರ್ಧ್ವಪುಂಡ್ರದಿಂದಲೂ, ಅಲಕದಿಂ - ಮುಂಗುರುಳಿನಿಂದಲೂ, ಎಸಳು - ಪದ್ಮಪತ್ರದಂತಿರುವ, ಕಂಗಳ-ನೇತ್ರಗಳುಳ್ಳ, ತೊಳಪ-ಕಾಂತಿಯುಕ್ತಮಾದ, ಕದಪಿನಿಂ-ಚುಬುಕದಿಂದಲೂ, (ಕೆನ್ನೆಗಳಿಂದಲೂ) ಪದಪಿನಿಂ-ಸೌಂದರ್ಯದಿಂದಲೂ, ಪಸರಿಸುವ-ಆವರಿಸುವ, ನಸುನಗೆಯ-ಮಂದಹಾಸವುಳ್ಳ, ವದನದಿಂ-ಆಸ್ಯದಿಂದಲೂ, ರದನದಿಂ-ಹಲ್ಲುಗಳಿಂದಲೂ, ಪೊಳೆವ-ಪ್ರಕಾಶಿಸುವ, ಚುಬುಕಾಗ್ರದಿಂದ - ಕೆನ್ನೆಯ ಕೊನೆಭಾಗದಿಂದಲೂ, ತ್ರಿಸರ-ತ್ರಿವಳಿಗಳಿಂದಲೂ (ಹೊಟ್ಟೇ ಮೇಲಿರುವ ಮೂರು ಪದರಗಳು) ಕೌಸ್ತುಭ-ಕೌಸ್ತುಭರತ್ನದಿಂದಲೂ, ಸುಕೇಯೂರದಿಂ-ಯೋಗ್ಯವಾದ ಬಾಹುಮುರಿಗೆಯಿಂದಲೂ, ಹಾರದಿಂ - ವೈಜಯಂತಿಯೇ ಮೊದಲಹ ಮುಕ್ತಾಹಾರಗಳಿಂದಲೂ, ಒಸದು - ನೆರಿಗೆ ಹಿಡಿದು, ಉಟ್ಟ-ಧರಿಸಿರುವ, ಪೊಂಬಟ್ಟೆಯ-ಬಂಗಾರದಿಂದ ಕೆತ್ತಲ್ಪಟ್ಟ, (ಜರತಾರಿಯಿಂದ ಕೂಡಿದ) ಉಡಿಗೆಯಿಂ-ಉಟ್ಟಿರುವ ಬಟ್ಟೆಯಿಂದಲೂ, ತೊಡಿಗೆಯಿಂ-ಅಂಗಿ ಮುಂತಾದವುಗಳಿಂದಲೂ, ಕೋಮಲ - ಮೆತ್ತಗಿರುವ, ಎಸೆವ - ಹೊಳೆಯುವ, ನೀಲೋತ್ಪಲ - ಕನ್ನೈದಿಲೆಯ ಹಾಗೆ, ಶ್ಯಾಮಲಂ - ಶ್ಯಾಮಲವರ್ಣವುಳ್ಳವನಾದ ಶ್ರೀ ಕೃಷ್ಣನು, ಅವನ-ಆ ಹಂಸಧ್ವಜನ, ಇದಿರೊಳು - ಎದುರುಭಾಗದಲ್ಲಿ, ಬರುತಿರ್ದನು-ಬರುತ್ತಲಿದ್ದನು.

ಸುತ್ತ ಕಂಸಾರಿಯಾದ ಕೃಷ್ಣನು, ನಿಧಾನಮಾಡಿ, ಪಾರ್ಥನನ್ನು ನೋಡಿ ಕೊಂಚ ನಿಧಾನಮಾಡು ಎಂದು ಹೇಳುತ್ತ ರಥಾಶ್ವಗಳ ಕಡಿವಾಣವನ್ನು ಎಳೆದು ನಿಲ್ಲಿಸಿ, ಜಾರಿದ್ದ ಪೀತಾಂಬರವನ್ನು ಹೆಗಲ ಮೇಲೆ ಸರಿಯಾಗಿ ಹಾಕಿಕೊಂಡು, ರಥದಿಂದಿಳಿದು, ಸಿಂಹಗಮನವನ್ನು ತಿರಸ್ಕರಿಸುವ, ಗಮನದಿಂದ, ತನ್ನ ಭಕ್ತರನ್ನು ಸಲಹುವ ಸಲುವಾಗಿ ಬಂದಿರುವ ಶ್ರೀ ಕೃಷ್ಣನು, (ಭಗವಂತನು ಭಕ್ತಾಧೀನನೆಂಬುವುದನ್ನು ತೋರಿಸುವಂತೆ) ಆ ಹಂಸಧ್ವಜನ ಸಮಿಾಪಕ್ಕೆ ಬಂದನು ‖೨೬‖ ಮತ್ತು ಪ್ರಕಾಶಿಸುತ್ತಿರುವ ಕಿರೀಟವುಳ್ಳ, ಹಣೆಯಲ್ಲಿ ಕಸ್ತೂರಿ ತಿಲಕದಿಂದಲೂ, ಮುಂಗುರುಳುಗಳಿಂದಲೂ, ಕಮಲ ಪತ್ರದಂತೆ ವಿಸ್ತಾರವಾದ ನೇತ್ರಗಳುಳ್ಳ, ಕಾಂತಿಯುಕ್ತಮಾದ ಕೆನ್ನೆಗಳಿಂದಲೂ, ದಂತಪಜ್ಕ್ತಿಗಳಿಂದಲೂ, ಲಾವಣ್ಯದಿಂದಲೂ, ಚುಬುಕಾಗ್ರಭಾಗದಿಂದಲೂ, ಪಸರಿಸುವ ಮಂದಹಾಸದಿಂದ ಕೂಡಿದ ಮುಖದಿಂದಲೂ, ತ್ರಿವಳಿಗಳಿಂದಲೂ, ವೈಜಯಂತಿಯೇ ಮೊದಲಾದ ವನಮಾಲೆಗಳಿಂದಲೂ, ಧರಿಸಿರುವ ಕೌಸ್ತುಭ ಮಣಿಯಿಂದಲೂ, ಮುಕ್ತಾಹಾರದಿಂದಲೂ, ನೆರಿಗೆ ಹಿಡಿದು ಉಟ್ಟಿರುವ ಭಂಗಾರದ ಜರತಾರಿಯಿಂದ ಕೂಡಿದ ವಸ್ತ್ರದಿಂದಲೂ ತೊಡಿಗೆಯಿಂದಲೂ, ಅತಿ ಮೃದುವಾದ ಮತ್ತು ಹೊಳೆಯುತ್ತಿರುವ ಕನ್ನೈ

ದೊಳು ॥ ೨೭ ॥ ರಥದಿಂದಲಿಳಿದುತನಗಿದಿರಾಗಿಬಹದನುಜ | ಮಥನನಂಕಾಣುತಮರಾಳಧ್ವಜಂಮನೋ | ವ್ಯಥೆಯೆಲ್ಲಮಂಮ ರೆದುಹರ್ಷದಿಂಪಿಡಿದಶರಧನುಗಳಂಕೆಲದೊಳಿರಿಸಿ ॥ ಪೃಥ್ವಿಗೆವರೂಥದಿಂಧುಮ್ಮಿಕ್ಕಿಹರಿಯಮುಂ | ಪಥದೊಳಡಿಗೆಡೆವುತೆಲೆದೇವ ಬಿಜಯಂಗೈದ | ಕಥನವನೆನಗೆನಿರೂಪಿಸಬೇಹುದೆಂದಾತನೆದ್ದುಕೈಗಳಮುಗಿದನು ॥ ೨೮ ॥ ಆಮಹೀಪತಿಯನುಡಿಗಸುರಾರಿನಗು ತಸಂ | ಗ್ರಾಮದೊಳ್ಪಾರ್ಥನಂಗೆಲ್ವೆನೆಂಬೀಕ್ಷಾತ್ರ | ತಾಮಸವಿದೇಕೆವಿಜಯಂಗಾವುಮಾಡುವಸಹಾಯಮುಂಕಂಡುಕಂಡು ॥ ನೀಮಕ್ಕಳಂಬರಿದೆಕೊಲಿಸಿಕೆಡಿಸಿದೆಸಾಕು | ಬಾಮಿತ್ರಭಾವದಿಂದೆಮ್ಮನಾಲಿಂಗಿಸುವೃ | ಥಾಮನೋವ್ಯಥೆಬೇಡತುರಗಮುಂ

---

ಅ॥ ವಿ॥ ನೀಲವಾದ ಉತ್ಪಲ=ನೀಲೋತ್ಪಲ, (ವಿ. ಪೂ. ಕ.) ನೀಲ+ಉತ್ಪಲ=ನೀಲೋತ್ಪಲ, ಗುಣ ಸಂ, (ಕದಪು-ಸೌಂದರ್ಯ, ವದನ-ಮುಖ, ರದನ-ದಂತ) ॥೨೭॥

ಟೀ॥ ಮರಾಳಧ್ವಜಂ - ಹಂಸಧ್ವಜನು, ರಥದಿಂದಲಿ - ವರೂಥದಿಂದ, ಇಳಿದು - ಕೆಳಕ್ಕೆ ಇಳಿದು, ತನಗೆ-ಹಂಸಧ್ವಜನಿಗೆ, ಇದಿರಾಗಿ - ಎದುರಾಗಿ, ಬಹ - ಬರುತ್ತಿರುವ, ದನುಜಮಥನನಂ - ರಾಕ್ಷಸಧ್ವಂಸಿಯಾದ ಕೃಷ್ಣನನ್ನು, ಕಾಣುತ-ನೋಡಿದ ತಕ್ಷಣವೆ, ಮನೋವ್ಯಥೆಯೆಲ್ಲಮಂ-ಮನಸ್ಸಿನ ಸಂತಾಪವೆಲ್ಲವನ್ನೂ, ಮರೆದು-ಮರೆತುಬಿಟ್ಟು, ಹರ್ಷದಿಂ-ಹರ್ಷದಿಂದ, ಪಿಡಿದ-ಅರ್ಜುನನೊಡನೆ ಕಾದುವದಕ್ಕಾಗಿ ಹಿಡಿದಿದ್ದ, ಶರ-ಬಾಣವೂ, ಧನುಗಳಂ-ಧನುಸ್ಸೂ ಇವೆಲ್ಲವನ್ನೂ, ಕೆಲದೊಳು-ಒಂದು ಕಡೆಯಲ್ಲಿ, ಇರಿಸಿ-ಇಟ್ಟವನಾಗಿ, ವರೂಥದಿಂದ-ತೇರಿನಿಂದ, ಪೃಥ್ವಿಗೆ - ನೆಲಕ್ಕೆ, ಧುಮ್ಮಿಕ್ಕಿ - ಎಗರಿ, (ಕುಪ್ಪಳಿಸಿ) ಹರಿಯ-ಶ್ರೀ ಕೃಷ್ಣನ, ಮುಂಪಥದೊಳು-ಮುಂಭಾಗದಲ್ಲಿ, (ಎದುರಾಗಿ) ಅಡಿಗೆಡೆವುತ - ನಮಸ್ಕಾರಮಾಡುತ್ತಾ, ಎಲೆದೇವ - ಎಲೈ ಪ್ರಭುವೇ! ಬಿಜಯಂಗೈದ-ಬಿಜಯಮಾಡಿಸಿದ (ದಯಮಾಡಿಸಿದ) ಕಥನವಂ-ವಿಷಯವನ್ನು, ಎನಗೆ-ಅಲ್ಪಜ್ಞಾನಾದ ನನಗೆ, ನಿರೂಪಿಸಬೇಹುದು-ಅನುಜ್ಞೆ ಕೊಡಿಸಬೇಕು, ಎಂದು-ಎಂಬದಾಗಿ, ಆತಂ-ಆ ಮರಾಳಧ್ವಜನು, ಎದ್ದು-ಮೇಲಕ್ಕೆ ಎದ್ದವನಾಗಿ, ಕೈಗಳಮುಗಿದನು-ಕೈಜೋಡಿಸಿದನು (ನಮಸ್ಕರಿಸಿದನು.)

ಅ॥ ವಿ॥ ಶರವೂ, ಧನುವೂ ಇವು, ಶರಧನುಗಳ್, ದ್ವಿ, ದ್ವಂ, ಪೃಥ್ವಿ. (ತ್ಸ) ಪೊಡವಿ (ದ್ಭ) ಮುಂದಿನ ಪಥ=ಮುಂಪಥ, (ಅ, ಸ.) ಕೈಯಂ, ಮುಗಿದನು=ಕೈಮುಗಿದನು (ಕ್ರಿ. ಸ.) ॥೨೮॥

ಟೀ॥ ಅಸುರಾಂತಕಂ - ರಾಕ್ಷಸಾಂತಕನಾದ ಕೃಷ್ಣನು, ಆ ಮಹೀಪತಿಯ - ಭೂಮಿಪತಿಯಾದ ಮರಾಳಧ್ವಜನ, ನುಡಿಗೆ-ಹೇಳಿದ ಮಾತಿಗೆ, ನಗುತ-ಹರ್ಷಿಸುತ್ತ, ಸಂಗ್ರಾಮದೋಳ್-ಯುದ್ಧದಲ್ಲಿ, ಪಾರ್ಥನಂ-ಫಲ್ಗುಣನನ್ನು, ಗೆಲ್ವೆನು-ಜಯಿಸುವೆನು, ಎಂಬ-ಎನ್ನುವ, ಈಕ್ಷಾತ್ರ-ಈ ಕ್ಷತ್ರಿಯರಿಗೆ ಯೋಗ್ಯವಾದ, (ಕ್ಷತ್ರಿಯರ ಸಂಬಂಧವಾದ), ತಾಮಸಂ-ದಡ್ಡತನದಗುಣವು; (ಅಜ್ಞಾನವು) ಇದೇಕೆ-ಇದು ಏಕೆ ಬಂತು, (ಏತಕ್ಕೆ ಬಂತು) ವಿಜಯಂಗೆ-ಪಾರ್ಥನಿಗೆ, ಆವು-ನಾವು, ಮಾಡುವ-ಮಾಡುತ್ತಿರುವ, ಸಹಾಯಮುಂ - ನೆರವನ್ನು, ಕಂಡುಕಂಡು - ನೋಡಿದ್ದರೂ, ನೀ-ನೀನು, ಮಕ್ಕಳಂ-ಪುತ್ರರನ್ನು (ಸುಧನ್ವ ಮತ್ತು ಸುರಥನನ್ನು) ಬರಿದೆ ವ್ಯರ್ಥವಾಗಿ, ಕೊಲಿಸಿ ಕೆಡಿಸಿದೆ - ನಾಶಮಾಡಿಸಿಬಿಟ್ಟೆ (ಅಲ್ಪಾಯುವಿನಲ್ಲಿ ಸಾಯುವಂತೆ ಮಾಡಿಸಿದೆ) ಸಾಕು - ಇನ್ನಾದರೂ ಯುದ್ಧಪ್ರಸಕ್ತಿಯನ್ನು ಬಿಡು, ಬಾ - ಬರುವನಾಗು, ಮಿತ್ರಭಾವದಿಂದ - ಸ್ನೇಹಧರ್ಮದಿಂದ, ಎಮ್ಮ-ನಮ್ಮನ್ನು, ಆಲಂಗಿಸು - ಅಪ್ಪಿಕೊಳ್ಳುವನಾಗು, ವೃಥಾ-ವ್ಯರ್ಥವಾಗಿ, ಮನೋವ್ಯಥೆ-ಮನಸ್ಸಿನ ಸಂತಾಪವು, ಬೇಡ-ಬೇಡವು, (ಅನುಭವಿಸಬೇಕಾದ್ದಿಲ್ಲ), ತುರಂಗಮುಂ - ಯಜ್ಞಾಶ್ವವನ್ನು, ಬಿಡು - ಬಿಡುವವನಾಗು, ಯಜ್ಞಕೆ - ಧರ್ಮಜನು ಮಾಡುವ ಯಜ್ಞಕಾರ್ಯಕ್ಕೆ, ಅನುಕೂಲನಾಗು-ಸಹಾಯಕನಾಗಿರು, ಎಂದನು-ಎಂಬದಾಗಿ ಹೇಳಿದನು.

---

ದಲೆಯ ಪುಷ್ಪದಂತೆ ಶ್ಯಾಮಲವರ್ಣದಿಂದ ಕೂಡಿದ ಶ್ರೀ ಕೃಷ್ಣನು ಮರಾಳಧ್ವಜನ ಎದುರಿಗೆ ಬರುತ್ತಲಿದ್ದನು ॥ ೨೭ ॥ ಆಗ ಮರಾಳಧ್ವಜನು ತನ್ನ ಎದುರಿಗೆ ಬರುತ್ತಿರುವ ಶ್ರೀ ಕೃಷ್ಣನಂ ಕಂಡು ತನಗುಂಟಾಗಿದ್ದ ಪುತ್ರಶೋಕಾದಿಗಳನ್ನು ಮರೆತು ಬಿಟ್ಟು, ಉತ್ಸಾಹದಿಂದ ಪಾರ್ಥನ ಮೇಲೆ ಕಾಯುವುದಕ್ಕಾಗಿ ಧರಿಸಿದ್ದ ಧನುರ್ಬಾಣಾದಿಗಳನ್ನು ಒಂದು ಪಾರ್ಶ್ವದಲ್ಲಿಟ್ಟು, ರಥದಿಂದ ಕೆಳಕ್ಕೆ ಧುಮಿಕಿ ಶ್ರೀ ಕೃಷ್ಣನಿಗೆ ಮುಂದುಗಡೆ ಅಡಿಗೆರಗಿ, ಮೇಲಕ್ಕೆ ಎದ್ದು ಎಲೈ ಸ್ವಾಮಿಯೆ! ಈಗ ಬಿಜಯಮಾಡಿಸಿದ ಸಂಗತಿ ಏನು? ಮೂಢಾತ್ಮನಾದ ನನ್ನಲ್ಲಿ ಅನುಜ್ಞೆ ಕೊಡಿಸಬೇಕೆಂದು, ಕೈಗಳಂ ಜೋಡಿಸಿಕೊಂಡು ಕೇಳಿಕೊಳ್ಳಲು ॥೨೮॥ ಬಳಿಕ ಅಸುರಾಂತಕನಾದ ಶ್ರೀ ಕೃಷ್ಣನು, ಹಂಸಧ್ವಜನು ನುಡಿದ ಮಾತಿಗೆ ನಲಿದು, ಈ ಯುದ್ಧದಲ್ಲಿ ಪಾರ್ಥನನ್ನು ಜಯಿಸುತ್ತೇನೆಂಬ ಕ್ಷಾತ್ರಧರ್ಮವುಳ್ಳ ಈ ದಡ್ಡತನವು ನಿನಗೇಕೆ? ಅರ್ಜುನನಿಗೆ ನಾವು ಸಹಾಯಮಾಡುತ್ತಿರುವ ಸಂಗತಿಯನ್ನು ತಿಳಿದಿದ್ದರೂ ನೀನು ನಿನ್ನ ಪುತ್ರರಾದ ಸುಧನ್ವಸುರಥರನ್ನು, ನಿಷ್ಕಾರಣವಾಗಿ ಕೊಲ್ಲಿಸಿದೆ, ಇನ್ನು ಸಾಕು ಇನ್ನಾದರೂ ಯುದ್ಧದ ಪ್ರಸಕ್ತಿಯನ್ನು ಬಿಡು, ಬಾ, ಸ್ನೇಹಧರ್ಮದಿಂದ ನಮ್ಮನ್ನು ಆಲಂಗಿಸುವನಾಗು, ವೃಥಾಮನೋ

ಬಿಡುಯಜ್ಞಕನುಕೂಲನಾಗೆಂದನು ‖ ೨೯ ‖ ಕ್ಷತ್ರಿಯರಬಿರುದಿನಹಯಂಬರಲ್ಕಟ್ಟಿದೆ ಧ । ರಿತ್ರಿಯನದೆಂತಾಳ್ವಪಂಬಳಿಕಗೆ
ಲ್ದೊಡಂ । ಶತ್ರುವಿಂದಳಿದೊಡಂಕೇಡಾವುದಾತಂಗೆ ಸಾಕದಂತಿರಲಿನಿಮ್ಮ ‖ ಮಿತ್ರಭಾವದೊಳೊಪ್ಪಿದೊಡೆಮೇಲೆತನಗಿನ್ನು ।
ಪುತ್ರಶೋಕಾದಿಗಳ ದುಃಖಂಗಳಿರ್ದಪವೆ । ಚಿತ್ರವಿದುಜಾಹ್ನವಿಯೊಳಾಳ್ದಂಗೆದಾಹಮೆತ್ತಣದೆನಗೆಬೆಸಸೆಂದನು ‖ ೩೦ ‖ ಆ
ದೊಡೆಲೆನೃಪಸಖ್ಯದಿಂ ನೆಮ್ಮನೀಗಸೀ । ನಾದರಿಸಿಪಾರ್ಥನಂಕಂಡುಧರ್ಮಜನಹಯ । ಮೇಧಕೆಸಹಾಯಮಾಗಿಹುದೆಂದುಕೃಷ್ಣ
ನವನಂತೆಗೆದುತಕ್ಕೈಸಲು ‖ ಕಾದಿಮಡಿದಾತ್ಮಜರ ಶೋಕಮಂ ಮರೆದುಮಧುಸೂದನಂಗೆರಗಿದೊಡೆಮುಗುಳಪ್ಪಿಸಂತೈಸು ।

---

ಅ‖ ವಿ‖ ಅವನ+ಮಹೀಪತಿ=ಆ ಮಹೀಪತಿ, ಗ. ಸ. ಮಹಿಯಪತಿ, ಷ. ತ. (ಮಹಿ-ಭೂಮಿ, ಅಹಿ-ಸರ್ಪ), ಕ್ಷತ್ರಿಯ ಸಂಬಂಧವಾದ್ದು-ಕ್ಷಾತ್ರ. ಮಿತ್ರ-ಸೂರ್ಯ, ಸ್ನೇಹಿತ ‖೨೯‖

ಟೀ‖ ಎಲೈ ದೇವ! ಕ್ಷತ್ರಿಯರ ರಾಜ್ಯ ಪರಿಪಾಲನೆಗೆ ಅರ್ಹರಾದವರ, ಬಿರುದಿನ-ಬಿರುದಾವಳಿಯಿಂದ ಕೂಡಿದ, ಹಯಂ-ಕುದುರೆಯು. ಬರಲ್-ನಮ್ಮದೇಶಕ್ಕೆ ಬರಲಾಗಿ, ಕಟ್ಟಿದೆ-ಆ ಅಶ್ವವನ್ನು ಬಂಧಿಸಿದೆನು, ಧರಿತ್ರಿಯಂ-ಪೃಥ್ವಿಯನ್ನು, ಅದೆಂತು-ಅದು ಹೇಗೆತಾನೆ, ಆಳ್ವಪಂ-ಕ್ಷಾತ್ರಧರ್ಮ ವಿಲ್ಲದಿದ್ದರೆ ಪರಿಪಾಲಿಸುವನು, ಬಳಿಕ-ಆ ಕುದುರೆಯನ್ನು ಬಂಧಿಸಿದ ನಂತರ, ಗೆಲ್ದೊಡಂ-ಯುದ್ಧದಲ್ಲಿ ಜಯ ಹೊಂದಿದರೂ, ಇಲ್ಲವೆ, ಶತ್ರುವಿನಿಂದ-ಹಗೆಯಿಂದ, ಅಳಿದೊಡಂ-ಮೃತನಾದರೂ, ಆತಂಗೆ-ಆ ಮನುಷ್ಯನಿಗೆ, ಕೇಡು-ಕೆಟ್ಟದ್ದು. ಆವುದು-ಯಾವುದಿರುತ್ತೆ? (ಯುದ್ಧದಲ್ಲಿ ಗೆದ್ದರೆ ಮಹಾ ಪರಾಕ್ರಮಿ ಎನಿಸಿಕೊಳ್ಳುವನು, ಇಲ್ಲವೆ ಸತ್ತರೆ ವೀರಸ್ವರ್ಗವಂ ಪೊಂದುವನು ಎಂದು ಭಾವವು), ಸಾಕು-ಆ ವಿಷಯ ಈಗ ಬೇಕಿಲ್ಲ, ಅದಂತಿರಲಿ-ಅದಾತು ಹಾಗಿರಲಿ, ಮಿತ್ರಭಾವದೋಳ್-ಸ್ನೇಹ ಭಾವದಿಂದ, ನಿಮ್ಮಂ-ನಿಮ್ಮನ್ನು, ಅಪ್ಪಿದೊಡೆ-ಆಲಂಗಿಸಿದರೆ, ತನಗೆಇನ್ನು-ನನಿಗೆ ಇನ್ನು ಮುಂದೆ, ಪುತ್ರಶೋಕಾದಿ ದುಃಖಂಗಳ್-ಮಕ್ಕಳು ಅಳಿದ ದುಃಖಾದಿಗಳ ಸಂತಾಪವು, ಇರ್ದಪವೆ-ಇರುತ್ತವೆಯೆ? (ಇರುವುದಿಲ್ಲ) ಇದು-ಈ ಮಾತು, ಚಿತ್ರಂ-ಸೋಜಿಗವಾಗಿರುವುದು, ಜಾಹ್ನವಿಯೊಳು-ಗಂಗೆಯಲ್ಲಿ (ಗಂಗಾ ನದಿಯಲ್ಲಿ) ಆಳ್ದಂಗೆ-ಮುಳುಗಿರುವವನಿಗೆ, ದಾಹಂ-ನೀರಡಕೆಯು, ಎತ್ತಣದು-ಎಲ್ಲಿ ಬಂದೀತು? ಬೆಸಸು-ಆಜ್ಞೆಯನ್ನು ಕೊಡು, ಎಂದನು-ಎಂಬದಾಗಿ ಹೇಳಿದನು ‖

ಅ‖ ವಿ‖ ಮಿತ್ರ-ಸೂರ್ಯ, ಸ್ನೇಹ, ಮಿತ್ರನಭಾವ-ಮಿತ್ರತ್ವ, ಮಿತ್ರತೆ. ಪುತ್ರರ + ಶೋಕ = ಪುತ್ರಶೋಕ. ಷ. ತ. ಜಹ್ನು ಋಷಿಯ ಮಗಳು=ಜಾಹ್ನವಿ ‖ ಚಿತ್ರ-ಪಠ, ಸೋಜಿಗ ‖೩೦‖

ಟೀ‖ ಎಲೆನೃಪ-ಎಲೈ ರಾಜನೆ! ಆದೊಡೆ-ಹಾಗಿದ್ದರೆ, ನೀಂ-ನೀನು, ಎಮ್ಮಂ-ನಮ್ಮನ್ನು, ಈಗ-ಈ ಕಾಲದಲ್ಲಿ, ಆದರಿಸಿ-ಸತ್ಕರಿಸಿ, ಪಾರ್ಥನಂ-ಫಲುಗುಣನನ್ನು, ಕಂಡು-ನೋಡಿ, ಧರ್ಮಜನ-ಧರ್ಮರಾಯನ, ಹಯಮೇಧಕೆ-ಅಶ್ವಮೇಧ ಯಾಗಕ್ಕೆ, ಸಹಾಯನಾಗಿ-ಸಹಾಯ ಮಾಡತಕ್ಕವನಾಗಿ, ಇಹುದು-ಇರತಕ್ಕದ್ದು, ಎಂದು-ಎಂಬದಾಗಿ, ಕೃಷ್ಣಂ- ಶ್ರೀಕೃಷ್ಣನು, ಅವನಂ-ಆ ಮರಾಳಧ್ವಜನನ್ನು, ತೆಗೆದುತಕ್ಕೈಸಲು-ಕರೆದು ಉಪಶಮನ ಮಾಡಲು (ಶಾಂತಪಡಿಸಲು), ಅವಂ-ಆ ಹಂಸಧ್ವಜನು, ಕಾದಿ-ಜಗಳವಾಡಿ, ಮಡಿದ-ಮೃತಪಟ್ಟ, ಆತ್ಮಜರ-ಪುತ್ರರ, ಶೋಕಮಂ-ವ್ಯಥೆಯನ್ನು, ಮರೆದು-ಮರೆತು ಬಿಟ್ಟು, ಮಧುಸೂದನಂಗೆ-ಮಧುವೆಂಬ ರಾಕ್ಷಸನಂ ಕೊಂದ ಕೃಷ್ಣನಿಗೆ, ಎರಗಿದೊಡೆ-ಅಷ್ಟಬೀಳಲು, ಮುಗುಳೆ-ಪುನಃ, ಅಪ್ಪಿ-ಹಂಸಧ್ವಜನನ್ನು ಆಲಂಗಿಸಿಕೊಂಡು, ಅದಯಾಂಬುಧಿ-ದಯೆಗೆ ಸಮುದ್ರಪ್ರಾಯನಾದ (ಕೃಪಾಜಲಧಿ) ಕೃಷ್ಣನು, ವಿ

---

ವ್ಯಥೆಪಡಬೇಡ, ಅಶ್ವವನ್ನು ಬಿಟ್ಟು ನೀನೂ ಧರ್ಮಪುತ್ರನು ಮಾಡುವ ಯಜ್ಞಕಾರ್ಯಕ್ಕೆ ಸಹಕಾರಿಯಾಗಿರು, ಎಂದು ಹೇಳಿದನು ‖ ೨೯ ‖ ಶ್ರೀ ಕೃಷ್ಣನ ವಚನವನ್ನು ಕೇಳಿದ ಬಳಿಕ ಹಂಸಕೇತುವು, ಎಲೈ ಸ್ವಾಮಿಯೆ! ರಾಜ್ಯಪರಿಪಾಲನೆಗೆ ಅರ್ಹರಾದವರ ಬಿರುದಾಂಕಿತವಾದ ಕುದುರೆಯು ನಮ್ಮದೇಶಕ್ಕೆ ಬರುತ್ತಿರಲು, ಕಟ್ಟಿಹಾಕಿದೆನು, ಕ್ಷತ್ರಿಯರ ಧರ್ಮವು ಇಲ್ಲದಿದ್ದರೆ ಅವು ಹೇಗೆ ರಾಜನೆನಿಸಿಕೊಂಡು ರಾಜ್ಯವಾಳುವನು? ಶತ್ರುವಿನೊಡನೆ ಯುದ್ಧಮಾಡಿ ಗೆದ್ದಾಗ್ಯೂ ಇಲ್ಲವೇ ಸೋತಾಗ್ಯೂ ಧರ್ಮವಲ್ಲವೆ? ಯುದ್ಧದಲ್ಲಿ ಗೆದ್ದವನಾದರೆ ಪೊಗದಿ ಮೊದಲಾದುದೆಲ್ಲಾ ಶತ್ರುವಿನಿಂದ ಹೊಂದಿ ಮತ್ತೂ ಪರಾಕ್ರಮಿಯಾಗುವನು, ಒಂದುವೇಳೆ ಸತ್ತರೆ ವೀರಸ್ವರ್ಗವನ್ನು ಹೊಂದುವನು, ಆ ಮಾತು ಸಾಕು, ಮೈತ್ರಿಯೊಡನೆ ನಿಮ್ಮನ್ನು ಆಲಿಂಗನೆ ಮಾಡಿದರೆ ಪುತ್ರಶೋಕಾದಿಗಳು ಎಲ್ಲಿ ಬಂದಾವು? ಇದು ಆಶ್ಚರ್ಯವಲ್ಲವೆ? ದೇವಗಂಗೆಯಲ್ಲಿ ಅವಗಾ ಮುಳುಗಿರುವವರಿಗೆ ದಾಹ ಉಂಟಾದೀತೇ? ಎಂದಿಗೂ ಇಲ್ಲ ಎಂದು ಹೇಳಿದನು ‖೩೦‖ ಆ ಬಳಿಕ ಶ್ರೀಕೃಷ್ಣನು ಹಂಸಧ್ವಜನನ್ನು ನೋಡಿ-ಎಲೈ ಮರಾಳಧ್ವಜನೆ! ಹಾಗಾದರೆ ನೀನು ಈಗ ನಮ್ಮನ್ನುಪಚರಿಸಿ, ಪಾರ್ಥನಂ ಕಂಡು ಧರ್ಮರಾಯನುಪಕ್ರಮಿಸಿರುವ ಅಶ್ವಮೇಧ ಯಾಗಕ್ಕೆ ಸಹಾಯ ಮಾಡತಕ್ಕವನಾಗಿಹುದು ಎಂದು ಹೇಳಿ ಮತ್ತಾತನಂ ಸಮಾಧಾನಪಡಿಸಲು ಆ ಹಂಸಧ್ವಜನು ಯುದ್ಧ

ತಾವಯಾಂಬುಧಿವಿಜಯನಂಕರೆದುಮೈತ್ರಿಯಿಂದಾತನಂಕೂಡಿಸಿದನು ‖ ೩೧ ‖ ಅರಸಕೇಳ್ಬಳಿಕುಳಿದಸೇನೆಯಂಸುತಸಹೋದರಬಂಧುವರ್ಗಮುಂಸಚಿವಸಾಮಂತರಂ । ಗುರುಪುರೋಹಿತರಂಚಮೂಪರಂ ಚತುರಂಗದಗ್ಗಳೆಯಪಟುಭಟರನು ‖ ಕರೆದುಹರಿಪಾರ್ಥರಂಕಾಣಿಸಿದ ನಗರದಿಂ । ತರಿಸಿದಂ ವಿವಿಧಭಂಡಾರದರ್ಥಂಗಳಂ । ಪರಿಪರಿಯವಸ್ತುಗಳ ನಿಭಹಯವರೂಥಮುಂ ಗೋಮಹಿಷಿಯುವತಿಯರನು ‖ ೩೨ ‖ ಕಡೆಯಮಾತೇನವಂಸಪ್ತಪ್ರಕೃತಿಗಳಂ । ತಡೆಯದೆಲ್ಲವನಿವರ್ಗೊಪ್ಪಿಸಿದನಾನ

---

ಜಯನಂ-ಪಾರ್ಥನನ್ನು, ಕರೆದು-ಬರಮಾಡಿ, ಮೈತ್ರಿಯಿಂದ-ಸಖತನದಿಂದ, ಆತನಂ-ಆ ಮರಾಳಧ್ವಜನನ್ನು, ಕೂಡಿಸಿದನು-ಸ್ನೇಹವನ್ನು ಮಾಡಿದನು ‖

ಅ‖ ವಿ‖ ನೃ-ಮನುಷ್ಯರನ್ನು, ಪ-ಪಾಲಿಸುವನು=ರಾಜ, (ಮೇಧ-ಯಜ್ಞ. ವೇದ- ಶ್ರುತಿ) ದಯೆಯ ಅಂಬುಧಿ ದಯಾಂಬುಧಿ, ಷ. ತ. ಸ. ‖ ೩೧ ‖

ಟೀ‖ ಅರಸ-ಎಲೈ ದೊರೆಯಾದ ಜನಮೇಜಯರಾಯನೆ ! ಕೇಳ್-ತಿಳಿ, ಬಳಿಕ-ಅನಂತರದಲ್ಲಿ, ಉಳಿದ-ಮಿಕ್ಕಿರುವ ಸೈನ್ಯವನ್ನು, ಸುತ-ಮಕ್ಕಳನ್ನು, ಸಹೋದರ-ಅಣ್ಣತಮ್ಮಂದಿರನ್ನು, ಬಂಧುವರ್ಗಮುಂ-ನೆಂಟರ ಗುಂಪನ್ನು, ಸಚಿವ-ಅಮಾತ್ಯರನ್ನು, ಸಾಮಂತರಂ-ನಾಡೊಡೆಯರನ್ನು (ಅಧೀನರಾಜರನ್ನು), ಗುರು-ದೊಡ್ಡವರನ್ನು, (ಆಚಾರ್ಯ ಪುರುಷರನ್ನು) ಪುರೋಹಿತರಂ-ಪೂರ್ವಾಪರ ಕರ್ಮಾದಿಗಳನ್ನು ಮಾಡಿಸುವವರನ್ನು, ಚಮೂಪರಂ-ಸೈನ್ಯಾಧಿಕಾರಿಗಳನ್ನು, ಚತುರಂಗದ-ಹಸ್ತ್ಯಶ್ವರಥ ಪದಾತಿಗಳಲ್ಲಿರುವ, ಅಗ್ಗಳೆಯ-ಅಧಿಕರಾದ, ಪಟು-ಬಲಾಢ್ಯರಾದ, ಭಟರನು-ವೀರರನ್ನು, ಕರೆದು-ಬರಮಾಡಿ, ಹರಿ-ಶ್ರೀ ಕೃಷ್ಣನನ್ನು, ಅರ್ಜುನ-ಧನಂಜಯನನ್ನು, ಕಾಣಿಸಿದನು-ನೋಡಿಸಿದನು, ನಗರದಿಂ-ಪಟ್ಟಣದಿಂದ, ವಿವಿಧ-ನಾನಾ ವಿಧಗಳಾದ, ಭಂಡಾರದ-ಬೊಕ್ಕಸದಲ್ಲಿರುವ, ಅರ್ಥಂಗಳ-ದ್ರವ್ಯಗಳನ್ನು, ಪರಿಪರಿಯ-ನಾನಾಬಗೆಗಳಾದ, ವಸ್ತುಗಳಂ-ಆಭರಣಾದಿಗಳನ್ನು, ಇಭ-ಗಜಗಳನ್ನು, ಹಯ-ಕುದುರೆಗಳನ್ನು, ವರೂಥಮುಂ-ತೇರನ್ನು, ಗೋ-ಆಕಳುಗಳನ್ನು, ಮಹಿಷಿ-ಎಮ್ಮೆಮೊದಲಾದುವನ್ನು, ಯುವತಿಯರನು-ಯೌವನ ಸ್ತ್ರೀಯರನ್ನು, ತರಿಸಿದಂ-ತರಿಸಿಕೊಟ್ಟನು ‖

ಅ‖ ವಿ‖ ಗುರು-ಉಪಾಧ್ಯಾಯ, ಬೃಹಸ್ಪತಿ, ದೊಡ್ಡದು, ಮಹಿಷಿ-ಎಮ್ಮೆ, ಪಟ್ಟದರಸಿ, ಹರಿಯೂ, ಪಾರ್ಥನೂ, ಹರಿಪಾರ್ಥರ್, ದ್ವಿ. ದ್ವಂ. ಸ. ಅರ್ಥ-ದ್ರವ್ಯ, ಪ್ರಯೋಜನ ‖೩೨‖

ಟೀ‖ ಕಡೆಯಮಾತೇನು-ಇನ್ನು ಹೆಚ್ಚಾಗಿ ಹೇಳತಕ್ಕದ್ದೇನು, ಹಂಸಧ್ವಜಂ - ಮಯೂರಧ್ವಜನು, (ತನ್ನ ದೇಶದಲ್ಲಿದ್ದ ಸಮಸ್ತ ವಸ್ತುಗಳನ್ನೂ ತಂದೊಪ್ಪಿಸಿದನು), ಸಪ್ತಪ್ರಕೃತಿಗಳಂ-ಸ್ವಾಮಿಯಾದ ತನ್ನನ್ನು, ಅಮಾತ್ಯನನ್ನು-ಸುಹೃತ್ (ಸ್ನೇಹಿತರನ್ನು. ಕೋಶವನ್ನು, ರಾಷ್ಟ್ರವನ್ನು, ದುರ್ಗವನ್ನು, ಬಲವನ್ನು) ತಡೆಯದೆ-ಸಾವಕಾಶಮಾಡದೆ, ಎಲ್ಲವಂ-ಸಮಸ್ತವನ್ನೂ, ಇವರ್ಗೆ- ಕೃಷ್ಣಪಾರ್ಥರಿಗೆ, ಒಪ್ಪಿಸಿದನು - ಒಪ್ಪಿಸಿಬಿಟ್ಟನು, ಆ ನಗರದ - ಆ ಚಂಪಕಾವತಿ ಪಟ್ಟಣದ, ಎಡೆಯೊಳು-ಹತ್ತಿರದಲ್ಲಿ, ಐದಿರುಳು-ಐದು ರಾತ್ರಿಯ ಪರಿಯಂತರ, ಇರ್ದು-ವಾಸಮಾಡಿ, ಹಂಸಧ್ವಜಂಸಹಿತ-ಮರಾಳಧ್ವಜನು ಸಹಿತವಾಗಿ, ಪಾರ್ಥನ-ಅರ್ಜುನನ, ತುರಂಗದೊಡನೆ-ಯಜ್ಞದ ಕುದುರೆಯೊಂದಿಗೆ, ಕಳುಹಿ-ಕಳುಹಿಸಿದವನಾಗಿ, ಪಡೆಯ-ಸೇನೆಯ, ಸನ್ನಾಹದಿಂದ-ಕೆಲಸದಿಂದ, ಪಾರ್ಥನ-ವಿಜಯನನ್ನು, ತುರಂಗದೊಡನೆ-ಅಶ್ವದ ಸಂಗಡ, ಕಳುಹಿ-ಕಳುಹಿಸಿ, ಹಯಂ-ಅಶ್ವವು, ಮುಂದಕೆ-ಬೇರೆ ಕಡೆಗೆ, ನಡೆಯಲ್ - ಹೋಗಲಾಗಿ, ಅಲ್ಲಿಯ-ಆ ಚಂಪಕಾವತಿಯಲ್ಲಿದ್ದ, ವಸ್ತುಗಳ್ವೆರಸಿ-ಪದಾರ್ಥಗಳೊಡನೆ ಕೂಡಿಕೊಂಡು, ದೇವಪುರದ-ಅಮರಾವತಿಯ, ಒಡೆಯ-ಸ್ವಾಮಿಯಾದ, ಲಕ್ಷ್ಮೀ-ಲಕ್ಷ್ಮೀ ದೇವಿಯ, ವರಂ-

---

ಮಾಡಿ ವೀರಸ್ವರ್ಗವಂ ಪೊಂದಿದ ಮಕ್ಕಳ ವ್ಯಥೆಯನ್ನು ಮರೆತುಬಿಟ್ಟು, ಶ್ರೀ ಕೃಷ್ಣನಿಗೆ ನಮಸ್ಕರಿಸಲು, ಆ ದಯಾನಿಧಿಯಾದ ಶ್ರೀ ಕೃಷ್ಣಸ್ವಾಮಿಯು ಪುನಹ ಆತನಂ ಅಪ್ಪಿಕೊಂಡು ಪಾರ್ಥನಂ ಬರಮಾಡಿ ಹಂಸಧ್ವಜ ಪಾರ್ಥರಿಬ್ಬರಿಗೂ ಸ್ನೇಹವನ್ನು ಮಾಡಿಸಿದನು ‖೩೧‖ ಎಲೈ ಪೃಥ್ವಿಪತಿಯಾದ ಜನಮೇಜಯರಾಯನೆ ! ಕೇಳು—ಅಬಳಿಕ ಹಂಸಧ್ವಜನು ಪಾರ್ಥನೊಡನೆ ಮಿತ್ರತ್ವವನ್ನು ಮಾಡಿದ ಅನಂತರದಲ್ಲಿ ಉಳಿದ ಸೈನ್ಯಾಧಿಕಾರಿಗಳನ್ನು ಮಕ್ಕಳನ್ನು ಸಹೋದರರನ್ನು, ಬಂಧುವರ್ಗವನ್ನೂ, ಅಮಾತ್ಯರನ್ನು, ಸಾಮಂತ ರಾಜರನ್ನೂ, ಕುಲಪುರೋಹಿತರನ್ನು, ಗುರುಗಳನ್ನು, ಚತುರಂಗ ಬಲದ ಮುಖ್ಯಾಧಿ ಕಾರಿಗಳನ್ನು ಮತ್ತು ಮಹಾಬಲಾನ್ವಿತರಾದ ಶೂರರನನ್ನೂ ಬರಮಾಡಿ, ಕೃಷ್ಣಾರ್ಜುನರನ್ನು ನೋಡಿಸಿದನು, ಮತ್ತು ರಾಜಧಾನಿಯಿಂದ ನಾನಾಬಗೆಗಳಾದ ದ್ರವ್ಯಗಳನ್ನು, ಆಭರಣಾದಿಗಳನ್ನು ಆನೆ, ಕುದುರೆ, ರಥ ಮತ್ತು ಕಾಲಾಳು ಇವುಗಳನ್ನು ಆಕಳುಗಳನ್ನು, ಎಮ್ಮೆಗಳನ್ನು ಮತ್ತು ಯುವತಿಯರನ್ನು ತರಿಸಿ ಕೊಟ್ಟನು ‖ ೩೨ ‖ ಆದರೆ ಇನ್ನು ಹೇಳತಕ್ಕದ್ದೇನು ಒಂದು ಪದಾರ್ಥವೂ ಮಿಗದಂತೆ ತರಿಸಿ ಕೃಷ್ಣಾರ್ಜುನರಿಗೆ ಒಪ್ಪಿಸಿದನಂತರ ಸ್ವಾಮಿಯಾದ ತಾನು ಅಮಾತ್ಯನು, ಸ್ನೇಹಿತನು, ಕೋಶವು,

ಗರ | ದೆಡೆಯೊಳೈದಿರುಳಿದ್ದುಹಂಸಧ್ವಜಂಸಹಿತಪಾರ್ಥನತುರಂಗದೊಡನೆ || ಪಡೆಯಸನ್ನಾಹದಿಂಕಳುಹಿಮುಂದಕೆಹಯಂ | ನಡೆಯಲಲ್ಲಿಯವಸ್ತುಗಳ್ವೆರಸಿದೇವಪುರ | ದೊಡೆಯಲಕ್ಷ್ಮೀವರಂಗಜನಗರಿಗೈತಂದುಭೂಪಾಲನಂಕಂಡನು ||೩೩||

ಸಂಧಿ ೧೪ ಕ್ಕೆ ಪದ್ಯ ೭೧೩ ಕ್ಕಂ ಮಂಗಳಮಸ್ತು.

---

ಗಂಡನಾದ ಶ್ರೀ ಕೃಷ್ಣನು, ಗಜನಗರಿಗೆ-ಹಸ್ತಿನಾವತಿ ಪುರಕ್ಕೆ, ಐತಂದು-ಬಂದವನಾಗಿ, ಭೂಪಾಲನಂ-ಭೂಮಿಯನ್ನು ಪಾಲಿಸುವ ಧರ್ಮನಂದನನನ್ನು, ಕಂಡನು-ನೋಡಿದವನಾದನು (ಈಕ್ಷಿಸಿದನು).

ಅ|| ವಿ|| ಲಕ್ಷ್ಮಿಯ+ವರ=ಲಕ್ಷ್ಮೀವರ ಷ. ತ. ವರ-ಗಂಡ, ಆಳಿಯ, ಪ್ರಸಾದ, ಶ್ರೇಷ್ಠ. ದೇವತೆಗಳ+ಪುರ= ದೇವಪುರ, ಷ. ತ. ಸಪ್ತ ಪ್ರಕೃತಿಗಳು-ಸ್ವಾಮಿ, ಅಮಾತ್ಯ, ಸುಹೃತ್, ಕೋಶ, ರಾಷ್ಟ್ರ, ದುರ್ಗ, ಬಲ. ||೩೩||

ಹದಿನಾಲ್ಕನೆಯ ಸಂಧಿ ಸಂಪೂರ್ಣಮಾದುದು.

---

ರಾಷ್ಟ್ರವು, ದುರ್ಗವು, ಬಲವೇ ಮೊದಲಾದ ರಾಜ್ಯದ ಸಪ್ತ ಪ್ರಕೃತಿಗಳನ್ನು ಸಾವಕಾಶಮಾಡದೆ ಇವರ್ಗೆ ಒಪ್ಪಿಸಿ, ಚಂಪಕಾವತಿಯಲ್ಲಿ ಐದು ದಿನಗಳು ವಾಸಮಾಡಿ ಅನಂತರ ಹಂಸಧ್ವಜ ಸಹಿತನಾಗಿ, ಪಾರ್ಥನ ಯಜ್ಞಾಶ್ವದ ಸಂಗಡ ಕಳುಹಿಸಿ ವಿಜಯನನ್ನು ಕುದುರೆಯೊಂದಿಗೆ ಕಳುಹಿಸಿದನು. ಆ ಕುದುರೆಯು ಬೇರೆ ದೇಶವನ್ನು ಕುರಿತು ಹೊರಡಲು, ಆ ಚಂಪಕಾವತಿಯಲ್ಲಿದ್ದ ಸಮಸ್ತ ವಸ್ತುಗಳಿಂದೊಡಗೂಡಿ, ಅಮರಪುರಕೊಡೆಯನಾಗಿ ಲಕ್ಷ್ಮೀಪತಿಯಾದ ಶ್ರೀ ಕೃಷ್ಣನು ಹಸ್ತಿನಾವತಿಗೆ ಬಂದು ಧರ್ಮರಾಯನನ್ನು ಕಂಡನು "ನಮೇಭಕ್ತಃ ಪ್ರಣಶ್ಯತಿ" ಎಂಬುದು ದಿಟವಲ್ಲವೆ? ||೩೩||

ಟೀಕಾ ತಾತ್ಪರ್ಯಸಹಿತಮಾದ ಜೈಮಿನಿಭಾರತದಲ್ಲಿ ಹದಿನಾಲ್ಕನೆಯ ಸಂಧಿಯು ಸಂಪೂರ್ಣಮಾದುದು.





# ಹದಿನೈದನೆಯ ಸಂಧಿ.

ಸೂಚನೆ|| ತಣ್ಗದಿರನನ್ವಯದಪಾರ್ಥನತುರಂಗಮದು | ಪೆಣ್ಗುದುರೆಯಾಗಿಪೆರ್ಬುಲಿಯಾಗಿಪಳೆಯಂತೆ | ಕಣ್ಗೊ
ಳಿಸುತಮಲಾಶ್ವಮಾಗುತಾಶ್ಚರ್ಯದಿಂಸ್ತ್ರೀರಾಜ್ಯಮುಂಪೊಕ್ಕುದು ||

ವಿಸ್ತರಿಪೆನಿನ್ನುಮೇಲ್ಕಥೆಯನಾಲಿಸುನೃಪರ | ಮಸ್ತಕದಮೌಳಿಜನಮೇಜಯಧರಾನಾಥ | ಹಸ್ತಿನಾಪುರಕೆಬಂದಸುರಾರಿಹಂಸಧ್ವಜನದೇಶದಿಂದತಂದ || ವಸ್ತುಗಳನವನಿಪತಿಗೊಪ್ಪಿಸಿದನಲ್ಲಿಯಸ | ಮಸ್ತವೃತ್ತಾಂತಮುಂವಿವರಿಸಿದನಿತ್ತಸುಭ | ಟಸ್ತೋಮಸಹಿತರ್ಜುನಂಬಡಗಮುಂತಾಗಿತಿರುಗಿದಂತುರಗದೊಡನೆ || ೧ || ಅಲ್ಲಿಂದಮುಂದೆನಡೆದುದುಗ್ರೀಷ್ಮಕಾಲ

---

ಹದಿನೈದನೆಯಸಂಧಿ ಪ್ರಾರಂಭವು.

ಸೂಚನೆ|| ತಣ್ಗದಿರನ–ತಂಪಾದ ಕಿರಣವುಳ್ಳ ಇಂದುವಿನ (ಚಂದ್ರನ), ಅನ್ವಯದ–ವಂಶೋದ್ಭವನಾದ, ಪಾರ್ಥನ–ಫಲುಗುಣನ, ತುರಂಗಂ–ಯಜ್ಞಾದ ಕುದುರೆಯು, ಅದು–ಅದೇ ಕುದುರೆಯೇ, ಪೆಣ್ಗುದುರೆ ಆಗಿ–ಹೆಂಗುದುರೆಯಾಗಿ, ಪೆರ್ಬುಲಿ ಆಗಿ–ದೊಡ್ಡ ವ್ಯಾಘ್ರವಾಗಿ, ಮೇಣ್–ಮತ್ತು, ಪಳೆಯಂತೆ–ಹಿಂದಿನ ರೂಪದಂತೆ, ಕಂಗೊಳಿಸುತ–ಹೊಳೆಯುತ್ತ, ಅಮಲ–ಕೊಳೆಯಿಲ್ಲದ, (ನಿರ್ಮಲವಾದ) ಅಶ್ವಂ–ತುರುಗವು, ಆಗುತ್ತಾ–ರೂಪವಂ ಧರಿಸುತ್ತ, ಆಶ್ಚರ್ಯದಿಂದ–ಸೋಜಿಗವನ್ನುಂಟು ಮಾಡುವ ರೀತಿಯಿಂದ, ಸ್ತ್ರೀ ರಾಜ್ಯಮುಂ – ಸ್ತ್ರೀಯರ ದೇಶವನ್ನು ಎಂದರೆ (ಮಲಯಾಳ ದೇಶವನ್ನು), ಪೊಕ್ಕುದು–ಹೊಕ್ಕಿತು.

ಅ|| ವಿ|| ತಣ್ಣಿತ್ತು+ಕದಿರ್=ತಣ್ಗದಿರ್ ವಿ. ಪೂ. ಕ. ತಣ್ಗದಿರುಳ್ಳವನು ಯಾರೋ ಅವನು, ಕಣ್ಗದಿರ ಬಹು. ಸ. ಅನ್ವಯ–ಕುಲ, ವಂಶ, ಪೃಥೆಯ ಮಗ, ಪಾರ್ಥ. ಪೆಣ್+ಕುದುರೆ=ಪೆಣ್ಗುದುರೆ ಗಕಾರ ಆದೇಶ ಸಂ. ಪಿರಿದು+ಪುಲಿ=ಪೆರ್ಬುಲಿ ವಿ. ಪೂ. ಕ. ಸ್ತ್ರೀಯರ+ರಾಜ್ಯ=ಸ್ತ್ರೀರಾಜ್ಯ ಷ. ತ. ಪೂಕ್ಕುದು ಪೋಗು ಧಾತು, ಪೊಕ್ಕುದು ಕ್ರಿಯಾಪದ, ಭೂತರೂಪ, ಏಕವಚನ, ಪ್ರಥಮಪುರುಷ (ಕುದುರೆಯು ಸ್ತ್ರೀರಾಜ್ಯಮಂ ಪೊಕ್ಕುದು ಎಂಬೀ ವಾಕ್ಯವು, ಸಾಮಾನ್ಯವಾಕ್ಯವಾಗಿದೆ, ಪ್ರಥಮಾಂತ ಕರ್ತೃ, ದ್ವಿತಿಯಾಂತಕರ್ಮ ಕ್ರಿಯಾಪದವೂ ಇದೆ ಆದ್ದರಿಂದ ಸಕರ್ಮಕ ಕರ್ತರೀ ಪ್ರಯೋಗವು.)

ಟೀ|| ನೃಪರ–ರಾಜರ, ಮಸ್ತಕದ– ಶಿರದ ಮೇಲಿನ, ಮೌಳಿ–ಕಿರೀಟದ ಹಾಗೆ ಉತ್ತಮನಾದ, ಜನಮೇಜಯ–ಜನಮೇಜಯನೆಂಬ ಹೆಸರುಳ್ಳ, ಧರಾನಾಥ–ಪೃಥಿವೀಪತಿಯೆ! ಇನ್ನು–ಇನ್ನು ಮುಂದೆ, ಮೇಲ್ಕಥೆಯನು–ಮೇಲೆ ಸೂಚನೆಯ ರೂಪವಾಗಿ ಹೇಳಿದ ಕಥಾಂಶವನ್ನು, ವಿಸ್ತರಿಪೆಂ–ವಿವರ ಗೊಳಿಸುತ್ತೇನೆ, ಆಲಿಸು–ಕೇಳುವನಾಗು, ಅಸುರಾರಿ–ಶ್ರೀ ಕೃಷ್ಣನು, ಹಸ್ತಿನಾಪುರಕೆ ಬಂದು–ಇಭನಗರಕ್ಕೆ ಬಂದವನಾಗಿ, ಹಂಸಧ್ವಜನ–ಮರಾಳಧ್ವಜನ, ದೇಶದಿಂದ–ರಾಜ್ಯದಿಂದ, ತಂದ–ತೆಗಸಿಕೊಂಡು ಬಂದಿರುವ, ವಸ್ತುಗಳಂ–ಸಮಸ್ತ ವಸ್ತ್ರಾಭರಣಾದಿಗಳನ್ನು, ಅವನಿಪತಿಗೆ–ಭೂಮಿಪತಿಯಾದ ಧರ್ಮಜನಿಗೆ, ಒಪ್ಪಿಸಿದಂ–ಒಪ್ಪಿಸಿದನು, ಅಲ್ಲಿಯ–ಆ ಹಂಸಧ್ವಜನ ರಾಜ್ಯದಲ್ಲಿ ನಡೆದ, ಸಮಸ್ತ–ಸಕಲವಾದ, ವೃತ್ತಾಂತಮಂ–ವರ್ತಮಾನವನ್ನು, ವಿವರಿಸಿದಂ–ಬಿತ್ತರಿಸಿದನು, ಇತ್ತ–ಈ ಸ್ಥಳದಲ್ಲಿ, ಸುಭಟ–ಯೋಗ್ಯರಾದ ವೀರರ, ಸ್ತೋಮ–ಗುಂಪಿನ, ಸಹಿತ–ಕೂಡ, ಅರ್ಜುನಂ–ಪಾರ್ಥನು, ತುರಗದ–ಯಜ್ಞಾಶ್ವದ, ಒಡನೆ–ಸಂಗಡಲೆ, ಬಡಗ–ಉತ್ತರ ಭಾಗದಲ್ಲಿರುವ ರಾಜ್ಯವೇ, ಮುಂತಾಗಿ–ಆದಿಯಾಗಿ ತಿರುಗಿದಂ–ಸಂಚಾರ ಮಾಡಿದನು.

ಅ|| ವಿ|| ಬಿತ್ತರ (ದ್ಭ) ವಿಸ್ತಾರ (ತ್ಸ) ಮೇಲಿನ ಕಥೆ–ಮೇಲ್ಕಥೆ ವಿ. ಪೂ. ಕ. ಮೌಳಿ–ಕಿರೀಟ, ಶ್ರೇಷ್ಠ. ಧರೆಯ+ನಾಥ=ಧರಾನಾಥ ಷ. ತ. ಹಸ್ತಿನವೆಂಬ+ಪುರ=ಹಸ್ತಿನಾಪುರ ಸಂ. ಪೂ. ಕ. ಅಥವಾ ರೂಪಕ ಸಮಾಸ ||೧||

---

ಹದಿನೈದನೆಯ ಸಂಧಿ ಪ್ರಾರಂಭವು.

ರಾಜ ಕುಲಕ್ಕೆ ಕಿರೀಟಪ್ರಾಯನಾದ ಎಲೈ ಜನಮೇಜಯರಾಯನೇ! ಇನ್ನು ಮುಂದೆ ನಡೆದ ಕಥಾಸಂದರ್ಭವನ್ನು ವಿವರಿಸುತ್ತೇನೆ ಆಲಿಸು, ಶ್ರೀ ಕೃಷ್ಣನು ಹಂಸಧ್ವಜನ ನಗರವಾದ ಚಂಪಕಾವತಿ ನಗರದಿಂದ ತಂದ ರತ್ನಾಭರಣಾದಿ ಸಕಲೈಶ್ವರ್ಯವನ್ನೂ, ವಸ್ತು ವಾಹನಾದಿಗಳನ್ನೂ ಗಜಪುರಿಯಲ್ಲಿದ್ದ ಧರ್ಮರಾಯನಿಗೆ ಒಪ್ಪಿಸಿ, ಅಲ್ಲಿ ನಡೆದ ಸಂಗತಿಗಳನ್ನೆಲ್ಲಾ ವಿಸ್ತಾರವಾಗಿ ವಿವರಗೊಳಿಸಿ ಸರ್ವರೂ ಸುಖದಿಂದಿರುತ್ತಿರಲು, ಇತ್ತಲಾ ಅರ್ಜುನನು ತುರಗದ ಸಂಗಡ ಉತ್ತರದಿಕ್ಕಿನಲ್ಲಿರುವ ದೇಶಾದಿಗಳನ್ನು ಸಂಚರಿಸುತ್ತಿದ್ದನು. ||೧|| ಅನಂತರದಲ್ಲಿ ಅತಿ ಮನೋಹರವಾಗಿ ರಾಜಿಸುವ ಯಜ್ಞಾಶ್ವವು ಗ್ರೀಷ್ಮರುತು

ದೋ | ಳ್ಸಲ್ಲಲಿತವಾಜಿಸಾರಿಪ್ಲವಕೆಭೂತಳದೊ | ಳೆಲ್ಲಿಯುಂಕೆರೆತೊರೆಗಳೊರತೆಬರತುದುನೀರ್ನೆಳಲ್ಗಳಸರಿಪಾಂಥರು ‖ ಘಲ್ಲಿಸುವಬೇಸಿಗೆಯಬಿಸಿಲಿನಿಂದಮೂಜಗಂ | ತಲ್ಲಣಿಸಿತಿಳೆಯಕಾಹಿಳಿದುಪಾತಾಳದಹಿ | ವಲ್ಲಭನಪಡೆಮಣಿಯರುಚಿಗಳಾತಪದಂತೆಕಾಣಿಸದೆಮಾಣವೆನಲು ‖ ೨ ‖ ಒಂದುಕಡೆಯೋಳ್ಸೋವಲೊಂದುಕಡೆಯೊಳ್ತಮಕೆ | ನಿಂದುಮರೆಯಾಗಿರ್ಪುದಿನ್ನಿದಂಕರಗಿಸುವೆ | ನೆಂದುಕನಕಾಚಲವನುರುಪುವನೊತರಣಿಕಿರಣದೊಳೆನೆಬಿಸಿಲ್ಗರೆಯಲು ‖ ಬೆಂದುಬೆಂಡಾಗಿಕುಲಶೈಲಂಗಳಾಸರಿಂ | ಕಂದರದಮೊಗದಿಂದಬಿಡುವಬಿಸುಸುಯ್ಯೆಲ | ರ್ಬಂದವುದೆನಲ್ಕೆಜಳದಿಂದಬಿಡದೆಬೀಸುತಿರೆಬಿರುಗಾಳಿಬೇಸಗೆಯೊಳು ‖ ೩ ‖ ಅವನಿಯೊಳ್ಸಕಲಭೂಭೃತ್ಕುಲದಸೀಮೆಗಳ | ನವಘಡಿಸಿಪೊಕ್ಕುನಿಖಿಳಪ್ರಾಣಿಗಳ್ಗೆತಾ | ಪವನೊದಗಿಸುವದು

---

ಟೀ‖ ಸಲ್ಲಲಿತ–ಅತಿ ಮನೋಹರವಾದ, ವಾಜಿ–ಆ ಯಜ್ಞಾಶ್ವವು, ಅಲ್ಲಿಂದ - ಆ ಮರಾಳಧ್ವಜನ ರಾಷ್ಟ್ರದಿಂದ, ಗ್ರೀಷ್ಮಕಾಲದೊಳ್–ಗ್ರೀಷ್ಮರುತುವಿನಲ್ಲಿ (ಜ್ಯೇಷ್ಠಾಷಾಢ ಮಾಸಗಳಲ್ಲಿ), ಪಾರಿಪ್ಲವಕ್ಕೆ–ಪಾರಿಪ್ಲವಕ್ಕೆ–ಪಾರಿಪ್ಲವವೆಂಬ ರಾಜ್ಯಕ್ಕೆ, ಮುಂದೆ–ಮೊದಲೆ, ನಡೆದುದು–ಹೋಯಿತು, ಭೂತಳದೊಳು–ಪೃಥ್ವಿಯಲ್ಲಿ, ಕೆರೆ–ಕೆರೆಯು, ತೊರೆ–ಸಣ್ಣ ಹೊಳೆಯು, ಒರತೆ–ಜೌಗು ನೀರಿರುವ ಸ್ಥಳವು, ಒರತುದು–ಬತ್ತುತ್ತ ಬಂತು, ಪಾಂಥರು–ಪ್ರಯಾಣಿಕರು, ನೀರ್ನೆಳಲ್ಗಳಂ–ನೀರು ಮತ್ತು ಛಾಯೆಯನ್ನು, ಅರಸೆ–ಹುಡುಕಲು, ಇಳೆಯ–ಪೃಥ್ವಿಯ, ಕಾಹು – ಕಾಕವು, ಇಳಿದು - ಕೆಳಭಾಗಕ್ಕೆ ಹೋಗಿ, ಪಾತಾಳದ - ಪಾತಾಳಲೋಕದ, ಅಹಿವಲ್ಲಭನ–ಸಾಸಿರ ಹೆಡೆಗಳುಳ್ಳ ಆದಿಶೇಷನ, ಪೆಡೆ–ಪೆಡೆಯ ಪ್ರದೇಶದಲ್ಲಿರುವ, ಮಣಿ–ಜೀವ ರತ್ನಾದಿಗಳ, ರುಚಿಗಳು–ತೇಜಸ್ಸುಗಳು, ಆತಪದಂತೆ – ಬಿಸಲಿನ ಹಾಗೆ, ಕಾಣಿಸದೆ – ತೋರ್ಪಡಿಸದೆ, ಮಾಣವೆನಲು – ಬಿಡಲಾರವು ಎಂಬಂತೆ, ಘಲ್ಲಿಸುವ–ಬೇಗೆಯನ್ನುಂಟುಮಾಡುವ, ಬೇಸಗೆಯ–ಚೈತ್ರ ವೈಶಾಖ ಮಾಸದ, ಬಿಸಿಲಿಂದ–ಬಿಸಲಿನಿಂದ, ಮೂಜಗಂ–ಮೂರು ಲೋಕಗಳೂ, ತಲ್ಲಣಿಸಿತು–ತಾಪಗೊಂಡಿತು.

ಅ‖ ವಿ‖ ಲಲಿತವಾದ, ವಾಜಿ–ಲಲಿತವಾಜಿ, (ವಿ. ಪೂ. ಕ.) ತುರ–ವೇಗವಾಗಿ, ಗ=ಗಮಿಸುವುದು–ಕುದುರೆ. ಪಾರಿಪ್ಲವ–ಚಂಚಲ, ಪಾರಿಪ್ಲವ ದೇಶ, ಭೂಮಿಯ + ತಳ–ಭೂತಳ, (ಷ. ತ.) ಕೆರೆಯೂ, ತೊರೆಯೂ, ಇವು - ಕೆರೆತೊರೆಗಳು, (ದ್ವಂ. ಸ.) ಬೇಸಗೆ, (ದ್ಭ.) ವೈಶಾಖ, (ತ್ಸ.) ‖೨‖

ಟೀ‖ ಒಂದು ಕಡೆಯೋಳ್–ಒಂದೆಡೆಯಲ್ಲಿ. ಸೋವಲ್ – ಅಂಧಕಾರವನ್ನು ಹೋಗಲಾಡಿಸಲು, ತಮಕೆ – ಆ ಅಂಧಕಾರಕ್ಕೆ, ಒಂದುಕಡೆಯೋಳ್–ಇನ್ನೊಂದು ಕಡೆಯಲ್ಲಿ, ನಿಂದು–ನಿಂತುಕೊಂಡುದಾಗಿ, ಮರೆಯಾಗಿ–ಯಾರಿಗೂ ಕಾಣಿಸದಂತೆ, ಇರ್ಪುದು–ಇರುತ್ತದೆ, ಇನ್ನು–ಇನ್ನು ಮುಂದೆ, ಇದಂ – ಈ ಅಂಧಕಾರವನ್ನು, ಕರಗಿಸುವೆಂ–ಹೋಗಲಾಡಿಸುವೆನು, ಎಂದು–ಎಂಬದಾಗಿ ಪೇಳಿ, ಕನಕಾಚಲವನು–ಸುವರ್ಣಾದ್ರಿಯನ್ನು, ಎಂದರೆ (ಮೇರು ಪರ್ವತವನ್ನೆಲ್ಲಾ), ತರಣಿ–ಭಾಸ್ಕರನು, ಕಿರಣದೊಳು–ಕದಿರ್ಗಳಿಂದ (ಕಾಂತಿಯಿಂದ), ಉರುಪುವನೋ – ಉರಿಸುತ್ತಾನೆಯೋ ಎಂದರೆ (ಕರಗಿಸುವನೊ), ಎನೆ – ಎನ್ನುವಂತೆ, ಬಿಸಿಲ್ಗರೆಯಲು–ಬಿಸಿಲನ್ನುಂಟುಮಾಡಲಾಗಿ, ಬೆಂದು–ದಹಿಸಿ, ಬೆಂಡಾಗಿ–ಹಗುರವಾಗಿ, ಕುಲಶೈಲಂಗಳು–ಸಪ್ತ ಕುಲಾಚಲಗಳು, ಆಸರಿಂ - ದಣಿವಿನಿಂದ, ಕಂದರದ - ಗಹ್ವರದ, ಮೊಗದಿಂದ – ಆಸ್ಯದಿಂದ, ಎಂದರೆ (ಗರಿಗಳೆಂಬ ಮುಖದಿಂದ), ಬಿಡುವ–ವಿಸರ್ಜಿಸುವ, ಸುಯ್ಯೆಲರ್–ದೀರ್ಘನಿಶ್ವಾಸದ ಗಾಳಿಯು, ಬಂದವುದು–ಬರುವುದು, ಎನಲ್ಕೆ–ಎಂಬುವಹಾಗೆ, ಜಳದಿಂದ–ಬಿಸಿಲ ದಾಹದಿಂದ, ಬಿಡದೆ–ಅವಕಾಶವಿಲ್ಲದೆ, ಗಾಳಿ–ಗಾಳಿಯು, (ಮಾರುತವು), ಬೇಸಿಗೆಯೊಳು–ಬೇಸಿಗೆಯ ಕಾಲದಲ್ಲಿ, ಬೀಸುತ್ತಿರೆ–ಚಲಿಸುತ್ತಿರಲು (ಬೇಸಿಗೆಯುಂಟಾಯಿತು).

ಅ‖ ವಿ‖ ಬಿಸಿಲ್ + ಕರೆ–ಬಿಸಿಲ್ಗರೆ, ಗ, ಆದೇಶ, ಸಂ, ಬೆಚ್ಚನೆಯಸುಯ್–ಬಿಸುಸುಯ್, (ವಿ. ಪೂ. ಕ.) ಎಲರ್–

---

ವಿನಲ್ಲಿ (ಜ್ಯೇಷ್ಠ ಆಷಾಢ ಗ್ರೀಷ್ಮರುತುವು) ಪಾರಿಪ್ಲವವೆಂಬ ರಾಜ್ಯಕ್ಕೆ ಮೊದಲೇ ಪ್ರವೇಶಿಸಿತು, ಭೂತಳದಲ್ಲಿ ಕೆರೆ ತೊರೆಗಳು, ಕೂಪತಟಾಕಾದಿಗಳು, ಒರತೆ ಮೊದಲಾದ ಜೌಗುಪ್ರದೇಶಗಳು, ಬತ್ತಿಹೋಗಲುಪಕ್ರಮವಾದವು, ಪ್ರಯಾಣಿಕರು ದಾಹಗೊಂಡು ನೀರು ಮತ್ತು ನೆಳಲುಗಳನ್ನು ಹುಡುಕಲು ಪ್ರಾರಂಭಿಸಿದರು, ಭೂಮಿಯ ಕಾಕವು ಪಾತಾಳಲೋಕದವರೆಗೂ ಇಳಿಯಿತು, ಅಲ್ಲಿರುವ ಸಾಸಿರಫಣಾಧರನಾದ, ಆದಿಶೇಷನ ಹೆಡೆಗಳಲ್ಲಿನ ಜೀವರತ್ನಾದಿಗಳ ತೇಜಸ್ಸುಗಳು, ಆತಪದಂತೆ ತೋರದೆ ಇರಲಾರವೋ ಎಂಬಂತೆ, ತಾಪವನ್ನುಂಟುಮಾಡುವ ಬಿಸಲಿನ ತಾಪದಿಂದ ಮೂಲೋಕಗಳೂ ತಾಪಗೊಂಡವು ‖೨‖ ಆಗ ಒಂದು ಕಡೆಯಲ್ಲಿ ತಮವನ್ನು ಹೊರಡಿಸಲು, ಆತಮಕ್ಕೆ ಮತ್ತೊಂದೆಡೆಯಲ್ಲಿ ನೆಲೆಯನೀವುದು, ಇದನ್ನು ಕರಗಿಸುತ್ತೇನೆ (ಇಲ್ಲದ ಹಾಗೆ ಮಾಡುವೆನು) ಎಂಬದಾಗಿ ಕನಕಾಚಲನನ್ನೆಲ್ಲಾ, ಸೂರ್ಯನು ತನ್ನ ಕಿರಣಗಳಿಂದ ಉರಿಸುವನೋ ಎಂಬಂತೆ ತೀಕ್ಷ್ಣವಾಗಿ ಬಿಸಿಲ್ಗರೆಯಲು ಸುಟ್ಟು ನಿಶ್ಶಕ್ತಿಯಾಗಿ, ಸಪ್ತಕುಲಪರ್ವತಗಳು, ದಣಿವಿನಿಂದ ಗುಹೆಗಳೆಂಬ ಮುಖ

ರ್ಘರಾಗ್ರೀಷ್ಮರಾಜಂನೆಗಳ್ದಚತುರಂಗಮೆನಲು ‖ ರವಿಯಕಡುಗಾಯಗಳ್ತೇರ್ರೈಸಲೊತ್ತರಿಸಿ | ಕವಿದುವ್ರುಬಿಸುಲ್ಗುದುರೆಗಳ್ಕಾದುರಿಯುಕರಿಗ | ಳವಧಿಯಿಲ್ಲದೆಮುಸುಕಿದವ್ರುಬಹಳತರುಗಳಿತದಳದಳಾಳಿಗಳಳಿದವು ‖ ೪ ‖ ಅರವಟ್ಟಗೆಯೊಳಿರ್ದುನೀರೆರವ ತರಳೆಯರ | ಬರಿಬೇಟಕೆಳಸಿತಪಿಸುವಪಥಿಕರಂಬಯ | ಲ್ದೊರೆಗಾಸಿಯಿಂಪರಿದುಬಳಲುವಮೃಗಂಗಳಂಕರುವಾಡದೋಳ್ದಳದೊಳು | ಉರುವಕಾಂತೆಯರಕೂಟದಸೊಕ್ಕುದಕ್ಕೆಯೋ | ಳ್ಮಿರುಗುವಧರಾಮುತನನೀಂಟಿಸೊಗಸುವಸುಖಿಗ | ಳುರೆಜರಿವ

---

ಗಾಳಿ, ಅಲರ್-ಹೂ, ಕನಕದ + ಅಚಲ-ಕನಕಾಚಲ, (ಷ. ತ.) ಸಪ್ತಕುಲಪರ್ವತಗಳು-ಹಿಮವಂತ, ನಿಷದ, ವಿಂಧ್ಯ, ಮಾಲ್ಯವಂತ, ಪಾರಿಯಾತ್ರಕ, ಗಂಧಮಾದನು, ಹೇಮಕೂಟ ‖೪‖

ಟೀ‖ ಅರವಟ್ಟಗೆಯೊಳ್ – ನೀರನ್ನು ಕುಡಿಯಲು ಯೋಗ್ಯವಾದ ಮನೆಯಲ್ಲಿ, ಇರ್ದು – ಇದ್ದುಕೊಂಡು, ನೀರ-ಉದಕವನ್ನು, ಎರೆವ – ಜನರಿಗೆ ಹಾಕುವ, (ನೀರನ್ನು ಕೊಡುವ), ತರಳೆಯರ - ಸ್ತ್ರೀಯರ, ಬರಿ – ನಿಷ್ಪ್ರಯೋಜನವಾದ, ಬೇಟಕೆ-ಲೀವಿಗೆ, ಅಂದರೆ (ಸ್ವಚ್ಛಂದನಾದಿ ವಿಷಯಗಳಿಗೆ), ಎಳಸಿ-ಆಸೆಪಟ್ಟು, ತಪಿಸುವ_ಕಾಮಾತಿಶಯದಿಂದ ತಾಪಪಡುತ್ತಿರುವ, ಪಥಿಕರಂ_ದಾರಿಗರನ್ನು, ಬಯಲ್ದೊರೆ_ಮರೀಚಿಕೆಯ, ಗಾಸಿಯಂ – ನೀರಿನ ಭ್ರಾಂತಿಯಿಂದ, ಪರಿದು – ಹರಿದಾಡಿ, ಓಡಾಡಿ, ಬಳಲುವ_ಆಯಾಸ ಪಡುವ, ಮೃಗಂಗಳಂ-ಜಿಂಕೆಗಳನ್ನು, ಕರುವಾಡದ-ಮಹಡಿಯ, ಒಳ್ದಳದೊಳು-ಒಳಗಿನ ಭಾಗದಲ್ಲಿ, ಉರುವ_ಪ್ರಕಾಸಿಸುತ್ತಿರುವ, ಕಾಂತೆಯರ-ಸ್ತ್ರೀಯರ, ಕೂಟದ – ಗುಂಪಿನ, ಸೊಕ್ಕು-ಕಾಮಾತಿಶಯದಿಂದ ಉಂಟಾದ ಅಹಂಕಾರವು, ದಕ್ಕೆಯೋಳ್ – ಬಾಯಾರಿಕೆಯಲ್ಲಿ (ದಾಹ), ಮಿರುಗುವ - ಪ್ರಜ್ವಲಿಸುವ, ಅಧರ – ತುಟಿಯುಲ್ಲಿರುವ, ಅಮೃತವನು-ಸೊದೆಯನ್ನು, ಈಂಟಿ – ಪಾನಮಾಡಿ, ಸೊಗಸುವ – ಅಲಂಕಾರಾದಿಗಳಿಂದ ಪ್ರಕಾಶಿಸುವ, ಸುಖಿಗಳು – ವಿಷಯಿಗಳು, (ಭೋಗ ಭೋಕ್ತೃಗಳು), ಉರೆ – ಬಹುವಾಗಿ, ಜರಿವ_ತಿರಸ್ಕರಿಸುವ, ತನಿ – ಹೊಸದಾಗಿ ಬಂದಿರುವ, ಬೇಸಿಗೆಯ – ಬಿಸಿಲು ಕಾಲದ, ದಿನದೊಳು – ದಿನದಲ್ಲಿ, ಪಡೆ – ಪಾರ್ಥನ ಸೇನೆಯು, ಅಧ್ವರ – ಯಜ್ಞದ, ಅಶ್ವದ-ತುರುಗದ, ಕೂಡೆ – ಸಂಗಡ, ನಡೆದುದು_ಹೊರಟಿತು.

ಅ‖ ವಿ‖ ಅಧ್ವರದ+ಅಶ್ವ=ಅಧ್ವರಾಶ್ವ (ಷ. ತ. ಸಂಧಾ (ತ್ಸ.) ಸೊದೆ (ದ್ಭ.)

ಟೀ‖ ಅನುಸಾಲ್ವ – ಅನುಸಾಲ್ವನೆಂಬುವನು, ಪ್ರದ್ಯುಮ್ನ – ಕೃಷ್ಣನ ಮಗನಾದ ಪ್ರದ್ಯುಮ್ನನೆಂಬುವನು, ವೃಷಕೇತು-ಕರ್ಣನ ಮಗನು, ಯೌವನಾಶ್ವನ – ಯುವನನ ಮಗನಾದ ಯೌವನಾಶ್ವನೆಂಬುವನ, ತನಯ_ಪುತ್ರನಾದ, ಸುವೇದನನೆಂಬುವನು, ನೀಲಧ್ವಜರು – ನೀಲಧ್ವಜನೇ ಮೊದಲಾದವರುಗಳು, ಇವರ್=ಐವರ್-ಈ ಐದು ಮಂದಿಗಳು, ನರಂಗೆ-ಪಾರ್ಥನಿಗೆ, ಅನುವರ್ತಿಗಳ್-ಹಿಂಬಾಲಿಸಿಕೊಂಡು ನಡೆಯತಕ್ಕವರಾಗಿದ್ದರು, ಬಳಿಕ-ಅನಂತರದಲ್ಲಿ, ಹಂಸಧ್ವಜನ – ಮರಾಳಧ್ವಜನ, ಸಖ್ಯಂ-ಸ್ನೇಹಭಾವವು, ಆದುದಕೆ-ಆದ ತರುವಾಯ, ಇಮ್ಮಡಿ – ಎರಡರಷ್ಟು ಸೇನೆಯು, ಎನೆ – ಎಂಬುವಂತೆ, ತನತನಗೆ-ತಮ್ಮತಮ್ಮಷ್ಟಕ್ಕೆ, ಮುಂಕೊಂಡು – ಮುಂದಾಗಿ ನುಗ್ಗಿ, ಅನಿಬರ – ಆ ಸಕಲ ರಾಜರ, ಚತುರ್ಬಲಂ – ನಾಲ್ಕು ಬಗೆಯಾದ ಸೇನೆಯು, ಆತುರಗದ – ಆ ಕುದುರೆಯ, ಒಡನೆ-ಸಂಗಡ, ಬಹಳ_ಹೆಚ್ಚಾದ, ಗಿರಿ_ಪರ್ವತಗಳು, ಪುರ_ಪಟ್ಟಣವೇ ಮೊದಲಾದವುಗಳು, ದೇಶ-ನಾಡುಗಳು, ಕಾಡು – ಅರಣ್ಯ ಪ್ರದೇಶಗಳು, ಬೀಡುಗಳು_ಹಾಳು ಪ್ರದೇಶಗಳು, ವನ_ಉದ್ಯಾನ ವನಗಳು, ಪಳ್ಳ-ಹಳ್ಳ ಮೊದಲಾದವುಗಳು, ಕೊಳ್ಳಂಗಳ_ದಿಣ್ಣೆ ಮೊದಲಾದವುಗಳನ್ನು, ತುಳಿದು – ಮೆಟ್ಟಿ (ಸಂಡರಿಪಿ), ಕಣದ_ಧಾನ್ಯವನ್ನು ಬಡಿಯುವುದಕ್ಕಾಗಿ ಮಾಡಿದ ಸ್ಥಳದ, ಘಟ್ಟಣೆಯಂತೆ – ದೊಣ್ಣೆಯಿಂದ ಬಡಿದು ಸಮಮಾಡಿದಂತೆ, ಸಮಂ – ಹಳ್ಳ, ತಿಟ್ಟಲ್ಲದಂತೆ ಸಮನಾಗಲು_ಸರಿಯಾದದ್ದು ಆಗಲಾಗಿ.

ಅ‖ ವಿ‖ ಅದು, ತುರುಗ, ಆ ತುರುಗ, ಗಮಕ. ಸ. ವೃಷಭವೇ ಧ್ವಜದಲ್ಲಿ ಉಳ್ಳವನು, ವೃಷಭಧ್ವಜ (ಬ. ಸ.) ಎರ

---

ದಿಂದ ತ್ಯಜಿಸುವ ನಿಡಿದುಸಿರ್ಗಾಳಿಯು ಬರುತಿರ್ಪುದೊ ಎನ್ನುವಂತೆ ಬಿಸಲಿನ ತಾಪದಿಂದ ವಿರಾಮವಿಲ್ಲ, ಭೂಮಿಯ ಸಮಸ್ತವಾದ ಪರ್ವತಪ್ರಾಂತವನ್ನಾವರಿಸಿ, ಸಕಲ ಪ್ರಾಣಿಗಳಿಗೂ ಪರಿತಾಪವನ್ನುಂಟುಮಾಡುತ್ತಿರುವ, ಸಹಿಸಲಸಾಧ್ಯನಾದ, ಗ್ರೀಷ್ಮಋತುವೆಂಬ ರಾಜನು, ಸೂರ್ಯನ ತಾಪದಿಂದುಂಟಾಗುವ ಬಿಸಿಲ್ದೊರೆಗಳೆಂಬ ಕುದುರೆಗಳಿಂದಲೂ, ಸೂರ್ಯನ ಕಾವೆಂಬ ರಥದಿಂದಲೂ, ಬಿಸಲಿನ ಆತಪದಿಂದುಂಟಾದ ಜ್ವಾಲೆಯೆಂಬ ಆನೆಗಳಿಂದಲೂ, ಅಧಿಕವಾಗಿ ಆವರಿಸಿಕೊಂಡಿರುವ ವೃಕ್ಷಗಳಿಂದ ಉದುರಿದ್ದ ಎಲೆಗಳೆಂಬ ಸೈನ್ಯದಿಂದಲೂ, ಯುದ್ಧಕ್ಕೆ ಸನ್ನದ್ಧನಾಗಿ ಬರುವಂತೆ ತೋರಿಬರುತ್ತಿದ್ದನು, ಎಂದರೆ_ವಿಶೇಷವಾಗಿ ಬಿಸಿಲು ತಾಪವನ್ನುಂಟುಮಾಡುತ್ತಿತ್ತು (ಉತ್ಪ್ರೇಕ್ಷಾಲಂಕಾರ,) ಆಗ ಅರವಟ್ಟಗೆಯಲ್ಲಿದ್ದುಕೊಂಡು ಪಾಂಥರಿಗೆ ನೀರನ್ನು ಎರೆಯುತ್ತಿರುವ ಸ್ತ್ರೀಯರ ನಿಷ್ಪ್ರಯೋಜನವಾದ ಲಾವಣ್ಯಕ್ಕೆ, ಆಸೆಪಟ್ಟು ಕಾಮಾತಿಶಯದಿಂದ, ದಹಿಸುತ್ತಲಿ

ತನಿವೇಸಗೆಯದಿನದೊಳಧ್ವರಾಶ್ವದಕೂಡೆಪಡೆನಡೆದುದು || ೫ || ಅನುಸಾಲ್ವಪ್ರದ್ಯುಮ್ನವೃಷಕೇತುಯೌವ್ವನಾ | ಶ್ವನತನಯ ನೀಲಧ್ವಜರ್ನರಂಗಿಸೆಲ್ವೆಸ | ರನುವರ್ತಿಗಳ್ಬಳಿಕಹಂಸಧ್ವಜನಸಖ್ಯಮಾದುದದಕಿಮ್ಮಡಿಯೆನೆ|| ತನತನಗೆಮುಂಕೊಂಡುನಡೆದ.ದಾ ತುರಗದೊಡ | ನನಿಬರಚತುರ್ಬಲಂಬಹಳಗಿರಿಪುರ್ದೇಶ || ವನಪಳ್ಳಕೊಳ್ಳಂಗಳಂತುಳಿದುಕಣದಘಟ್ಟಣೆಯಂತೆಸಮನಾಗ ಲು || ೬ || ಹಯಮುತ್ತರಾಭಿಮುಖಮಾಗಿಪಾರಿಪ್ಲವಧ | ರೆಯೊಳೈದಿಪೆಣ್ಗುದುರೆಯಾಗಿಪುಲಿಯಾಗಿವಿ | ಸ್ಮಯದಿಂದಪಾರ್ಥ ನಂಬೆದರಿಸಿಮುರಾರಿಯಮಹಿಮೆಯಿಂದಮುನ್ನಿನಂತೆ || ನಿಯಮಿತಮಖಾಶ್ವಮಾದಂತೆನಲ್ಕಾಗಸಂ | ಶಯದಿಂದಜನಮೇಜ ಯಂಮುನಿಪತಿಳಿಪುನಿ | ಶ್ಚಯವನೀತುರಗಮಿಂತಾದಕಥನವನೆಂದ.ಬೆಸಗೊಂಡೊಡಿಂತೆಂದನು ||೭|| ಧರಣಿಪತಿಕೇಳಾದೊಡಿನ್ನು

---

ಡು ಪದ್ಯಗಳಿಗೆ ಒಂದೇ ಕ್ರಿಯಾಪದವಿದ್ದರೆ (ಯುಗ್ಮವೆಂದೂ), ಮೂರು ಪದ್ಯಗಳಿಗೆ ಒಂದೇ ಕ್ರಿಯಾಪದವಿದ್ದರೆ (ವಿಶೇಷಕ ವೆಂದೂ), ನಾಲ್ಕುಪದ್ಯಗಳಿಗೆ ಒಂದೇ ಕ್ರಿಯಾಪದವಿದ್ದರೆ (ಕಲಾಪಕವೆಂದೂ), ನಾಲ್ಕರ ಮೇಲೆ ಅನೇಕ ಪದ್ಯಗಳಿಗೆ ಒಂದೇ ಕ್ರಿಯಾಪದ ವಿದ್ದರೆ (ಕುಳಕವೆಂದೂ ಸಂಜ್ಞೆಯುಂಟು) ||೬||

ಟೀ|| ಹಯಂ-ಆ ಯಜ್ಞಾಶ್ವವು, ಉತ್ತರಾಭಿಮುಖಂಆಗಿ - ಉತ್ತರ ದೇಶಕ್ಕೆ ಎದುರು ಭಾಗಕ್ಕೆ, ಪಾರಿಪ್ಲವ- ಪಾರಿಪ್ಲವವೆಂಬ, ಧರೆಯೊಳು-ಭೂಮಿಯಲ್ಲಿ, ಐದಿ-ಪ್ರವೇಶಮಾಡಿ, ಪೆಣ್ಗುದುರೆ ಆಗಿ-ಹೆಣ್ಣು ಕುದುರೆಯಾಗಿ, ಪುಲಿಯಾಗಿ- ಹುಲಿಯ ರೂಪವನ್ನು ಹೊಂದಿ, ವಿಸ್ಮಯದಿಂದ-ಆಶ್ಚರ್ಯದಿಂದ, ಪಾರ್ಥನಂ-ಫಲುಗುಣನನ್ನು, ಬೆದರಿಸಿ-ಅಂಜಿಕೊಳ್ಳುವಂತೆ ಮಾಡಿ, ಮುರಾರಿಯ-ಮುರಾಂತಕನಾದ ಶ್ರೀ ಕೃಷ್ಣನ, ಮಹಿಮೆಯಿಂದ-ಮಹತ್ಮೆಯಿಂದ, ಮುನ್ನಿನಂತೆ-ಮೊದಲಿನಹಾಗೆ, ನಿಯಮಿತ-ಸರಿಯಾದ, ಮಖಾಶ್ವಂ-ಯಜ್ಞದ ಕುದುರೆಯು, ಆದಂತೆ-ಆದಹಾಗೆ, ಎನಲ್ಕೆ-ಎಂಬದಾಗಿ ಹೇಳಲು. ಆಗ-ಆವೇಳೆ ಯಲ್ಲಿ, ಸಂಶಯದಿಂದ-ಅನುಮಾನದಿಂದ, (ಸಂದೇಹದಿಂದ) ಜನಮೇಜಯಂ-ಜನಮೇಜಯರಾಯನು, ಮುನಿಪ-ಎಲೈ ಮುನಿ ಶ್ರೇಷ್ಠನಾದ ಜೈಮಿನಿಮುನೀಂದ್ರನೆ ! ತುರಂಗಂ-ಆ ಕುದುರೆಯು, ಇಂತಾದ-ಈರೀತಿಯಾದ, ಕಥನವ-ಕಥಾ ಸಂದರ್ಭದ, ನಿಶ್ಚಯಂ-ನಿಜವನ್ನು, ತಿಳುಪು-ತಿಳಿಸುವನಾಗು, ಎಂದು-ಎಂತ, ಬೆಸಗೊಂಡೊಡೆ - ಕೇಳಿಕೊಳ್ಳಲಾಗಿ, ಆನಂ-ಆ ಜೈಮಿನಿ ಋಷಿಯು, ಇಂತು ಎಂದನು-ಈ ಪ್ರಕಾರವಾಗಿ ಹೇಳಲುಪಕ್ರಮಿಸಿದನು ||

ಅ|| ವಿ|| ಪೆಣ್+ಕುದುರೆ=ಪೆಣ್ಗುದುರೆ, ಆದೇಶ ಸಂ. ಮುರ-ಮುರನೆಂಬ ರಕ್ಕಸನಿಗೆ, ಅರಿ-ಶತ್ರುವು-ಕೃಷ್ಣನು, (ಮಖ-ಯಜ್ಞ, ಮುಖ-ಮೋರೆ) ||೭||

ಟೀ|| ಧರಣಿಪತಿ-ಪೃಥ್ವೀಪತಿಯಾದ ಜನಮೇಜಯರಾಯನೆ ! ಆದೊಡೆ - ಆ ಕಥಾ ಸಂದರ್ಭವನ್ನು ತಿಳಿಯಬೇ

---

ರುವ ದಾರಿಗರನ್ನು ಬಿಸಿಲ್ಗುದುರೆಯಲ್ಲಿ ನೀರಿನ ಭ್ರಾಂತಿಯಿಂದ ಸುಳಿದಾಡುತ್ತ ಬಳಲುವ ಜಿಂಕೆಗಳನ್ನು, ಮಹಡಿಯ ಒಳಗಿನ ಭಾಗದಲ್ಲಿ ಪ್ರಕಾಶಿಸುತ್ತಿರುವ ಸ್ತ್ರೀಯರ ಸಂಗಡ ಕಾಮಾತಿಶಯದಿಂ ಅಧರಾಮೃತವನ್ನು ಪಾನಮಾಡಿ, ಸೊಕ್ಕಿರುವ ರಸಿಕರನ್ನು ಅಲಂಕಾರಾದಿಗಳಿಂದ ಪ್ರಕಾಶಿಸುವ ವಿಷಯಗಳನ್ನೂ, ಅಧಿಕವಾಗಿ ತಿರಸ್ಕರಿಸುವ ಬೇಸಿಗೆಯ ದಿನದಲ್ಲಿ ಪಾರ್ಥನ ಸೇನೆಯು ಯಜ್ಞಾಶ್ವದ ಸಂಗಡ ಹೊರಟಿತು, || ೫ || ಆಬಳಿಕ ಅನುಸಾಲ್ವ, ಪ್ರದ್ಯುಮ್ನ, ವೃಷಕೇತು. ಯೌವನಾ ಶ್ವನ ಪುತ್ರನಾದ ಸುವೇಗ, ನೀಲಧ್ವಜ ಇವರೇ ಮೊದಲಾಗಿರುವ ಈ ಐದು ಮಂದಿಗಳು ಯಾವಾಗಲೂ ಪಾರ್ಥನನ್ನು ಅನುಸರಿಸಿ ನಡೆಯತಕ್ಕವರಾಗಿದ್ದರು, ತರುವಾಯ ಹಂಸಧ್ವಜನ ಮೈತ್ರಿಯುಂಟಾದ ಅನಂತರದಲ್ಲಿ ಎರಡರಷ್ಟು ಸೇನೆ ಯಾಗುವಂತೆ ತಾವು ತಾವೆ, ಮುಂದಾಗಿನುಗ್ಗಿ ಸಕಲ ರಾಜರ ಚತುರ್ಬಲವೂ ಆ ಯಜ್ಞಾಶ್ವದ ಸಂಗಡಲೇ ಅನೇಕವಾದ ಪರ್ವ ತಗಳು, ನಗರಗಳು, ಪಟ್ಟಣಗಳು, ಕಾಡುಗಳು, ಗಟ್ಟಗಳಪ್ರದೇಶಗಳು, ಹಳ್ಳಗಳು. ಉದ್ಯಾನವನಗಳು, ದೇಶಗಳು, ಹಾಳುನೆಲ ಗಳು ಇವೇ ಮೊದಲಾದುವನ್ನು ತುಳಿದುತುಳಿದು ಧಾನ್ಯವನ್ನು ಬಡಿಯಲೋಸುಗವಾಗಿ ಮಾಡಿರುವ ಕಣಗಳಪ್ರದೇಶದಂತೆ ಗಟ್ಟಿಣಿ ಯಾಗಿ ಸಮನಾಗಿಸಿತು. || ೬ || ಆಗ ಕುದುರೆಯು ಉತ್ತರಕ್ಕೆ ಅಭಿಮುಖವಾಗಿ ಪಾರಿಪ್ಲವವೆಂಬ ಭೂಪ್ರದೇಶವಲ್ಲಿ ಹೋಗಿ, ಮೊದಲು ಹೆಣ್ಣು ಕುದುರೆಯಾಗಿ, ಅನಂತರ ಪೆಬ್ಬುಲಿಯಾಗಿ, ಆಶ್ಚರ್ಯದಿಂದ ಪಾರ್ಥನನ್ನು ಹೆದರಿಸಿ, ಮುರಾರಿ ಯಾದ ಶ್ರೀ ಕೃಷ್ಣನ ಸಹಾಯದಿಂದ ಮೊದಲಿನಂತೆ ಸರಿಯಾದ ಯಜ್ಞಾಶ್ವವು ಆದಂತೆ ಎಂದು ಹೇಳಲು, ಆಸಮಯದಲ್ಲಿ ಅನುಮಾನದಿಂದ ಭೂಪಾಲನಾದ ಜನಮೇಜಯರಾಯನು ಮುನಿಗಳಲ್ಲಿ ಶ್ರೇಷ್ಠನಾದ ಜೈಮಿನಿ ಮುನೀಂದ್ರನಂ ಕುರಿತು ಎಲೈ ರುಷಿವರ್ಯನೆ ! ಆ ಕುದುರೆಯು ನಾನಾ ರೀತಿಯಾದ ಬದಲಾವಣೆಗಳನ್ನು ಹೊಂದಲು ಕಾರಣವೇನು ? ಇದರ ನಿಜಾಂ ಶವನ್ನು ತಿಳಿಯಿಸುವನಾಗೆಂದು ಕೇಳಿಕೊಳ್ಳಲಾಗಿ ಜೈಮಿನಿ ಮುನೀಂದ್ರನು ಮುಂದಿನ ರೀತಿಯಿಂದ ಹೇಳಲುಪಕ್ರಮಿಸಿದ ನು ||೭|| ಎಲೈ ಪೃಥ್ವೀಪತಿಯಾದ ಜನಮೇಜಯರಾಯನೆ ! ಆ ಕುದುರೆಯು ನಾನಾ ವಿಕಾರವನ್ನುಹೊಂದಲುಂಟಾದ ಕಥಾಸಂ

ಪೂರ್ವದೊಳಿಂದು | ಧರನಂಮನೋಭಾವದಿಂದರ್ಚಿಸುವೆನೆಂದು | ಗಿರಿತನುಜೆತಪಕೆಪುಣ್ಯಾರಣ್ಯಮಾವುದೆಂದರಸಿಕೊಂಡೈತ ರಲ್ಕೆ || ಪರಿಶೋಭಿಸಿತುಮುಂದೆಹಂಸಕಾರಂಡಮಧು | ಕರಕೋಕಮುಘರನ್ಮೃದುತರಕಲಸ್ವನಮದೋ | ತ್ಕರಕಮಲಕುವ ಲಯವಿರಾಜಿತಶ್ರೀಕರಂಪದ್ಮಾಕರಂಚೆಲ್ವೆನೆ ||೮|| ಲಸದನುಲರತ್ನಸೋಪಾನದಿಂಮಿನದಿಂ | ಬಿಸನನಾಸ್ವಾದಿಸುವಚಕ್ರದಿಂನಕ್ರ ದಿಂ | ದೆಸೆದೆಸೆಗೆಬೀರ್ವತನಿಗಂಪಿನಿಂತಂಪಿನಿಂ ತೊಳಪಹಿಮಕರಕಾಂತದ || ಪೊಸಸಣ್ಣಿಗೆಯೊಳಿಡಿದಪುಳಿನದಿಂನಳಿನದಿಂ | ದೊಸೆ ದುಬಿನದಿಪಹಂಸಕೇಳಿಯಿಂದೋಳಿಯಿಂ | ದೆಸೆನಸೀರ್ವಕ್ಕಿಕೆಳಸಂಗಳಿಂಭೃಂಗದಿಂದಾಕೊಳಂಕಣ್ಗೆಸೆದುದು || ೯ || ತಳದೊಳೊ

ಕಾಗಿದ್ದರೆ, ಇನ್ನು ಕೇಳ್-ಇನ್ನು ಮುಂದೆ ವಿವರಿಸುವೆನು ಆಲಿಸು, ಪೂರ್ವದೋಳ್-ಕೆಲವು ಕಾಲದ ಹಿಂದೆ, ಗಿರಿತನುಜೆ-ಪರ್ವ ತರಾಜನಾದ ಹಿಮಂತನ ಪುತ್ರಿಯಾದ ಹೈಮವತಿಯು, ಇಂದುಧರನಂ-ಚಂದ್ರ ಶೇಖರನಾದ ಪರಮೇಶ್ವರನನ್ನು, ಮನೋಭಾ ವದಿಂ-ಮನೋವ್ಯಾಪಾರದಿಂದ, ಅರ್ಚಿಸುವೆನು-ಸೇವಿಸುವೆನು (ಪೂಜಿಸುತ್ತೇನೆ), ಎಂದು- ಎಂಬದಾಗಿ, ತಪಕೆ-ತಪಸ್ಸನ್ನು ಮಾಡಲಿಕ್ಕೆ, ಪುಣ್ಯ-ಪವಿತ್ರನಾದ, ಅರಣ್ಯಂ-ವನಪ್ರದೇಶವು, ಆವುದು-ಯಾವದಿರುತ್ತದೆ? ಎಂದು-ಅಂದುಕೊಂಡು, ಅರಸಿ ಕೊಂಡು-ಅನ್ವೇಷಣೆ ಮಾಡುತ್ತಾ (ಹುಡುಕುತ್ತಾ), ಐತರಲ್ಕೆ-ಬರಲಾಗಿ, ಮುಂದೆ-ಮುಂಗಡೆಯಲ್ಲಿ, ಹಂಸ-ಮರಾಳವು, ಕಾ ರಂಡ-ಬಾತುಕೋಳಿಯು, ಮಧುಕರ-ದುಂಬಿಯು, ಕೋಕ-ರಥಾಂಗವು (ಚಕ್ರವಾಕ ಪಕ್ಷಿಯು) ಇವೇ ಆದಿಯಾದ ಪಕ್ಷಿಗಳ, ಮಧುರ-ಸವಿಯಾದ, ಮೃದುತರ-ಅತಿ ಮೆತ್ತಗಿರುವ, ಕಲ-ಮಧುರವಾದ ಕಲಕಲದ, ಸ್ವನ-ಶಬ್ದದ, ಮದೋತ್ಕರ-ಮದಾಧಿಕ್ಯ ದಿಂದ ಕೂಡಿದ, ಕಮಲ-ಅರವಿಂದಗಳಿಂದಲೂ, ಕುವಲಯ-ಕನ್ನೈದಿಲೆಗಳಿಂದಲೂ, ವಿರಾಜಿತ-ಕಾಂತಿಯಿಂ ಬೀರುತ್ತಿರುವ ದಾದ, ಪದ್ಮಾಕರಂ-ಪುಷ್ಕರಣಿಯು, ಚಲ್ವೆನೆ-ಸುಂದರವಾಗಿರುವಂತೆ, ಕಾಣಿಸಿತು-ತೋರಿಬಂತು ||

ಅ|| ವಿ|| ಇಂದುವನ್ನು ಧರಿಸುವವನು, ಇಂದುಧರ, ಕೃ. ವೃ. ಗಿರಿತನುಜೆ-ಗಿರಿಯತನುಜೆ, ಷ. ತ. ಪುಣ್ಯ-ಸುಕೃತ, ಸುಖವನ್ನು ಕೊಡುವ ಧರ್ಮ, ಪವಿತ್ರ. ಸುಂದರ. ಹಂಸ. ತ್ಸ. ಅಂಚೆ. ದ್ಭ. ಮೃದುತರ ಗುಣವಾಚಕ. ಕುವಲಯ-ಕನ್ನೈ ದಿಲೆ, ಭೂಮಿ. ಆಕರ. ತ್ಸ. ಆಗರ. ದ್ಭ. || ಪದ್ಮ-ಕಮಲಗಳಿಗೆ, ಆಕರ-ಆಶ್ರಯವಾದದ್ದು-ಸರಸ್ಸು ||೮||

ಟೀ|| ಅದು-ಆ ಪದ್ಮಾಕರವು, ಲಸತ್-ಪ್ರಕಾಶಮಾನವಾದ, ಅಮಲ - ನಿರ್ಮಲವಾದ, ರತ್ನ- ರತ್ನಮಣಿಗಳಿಂದ ಯುತವಾದ, ಸೋಪಾನದಿಂ-ಪಾವಟಿಗಳಿಂದಲೂ, ಮಿನದಿಂ-ಮೀನುಗಳಿಂದಲೂ, ಬಿಸನನು-ತಾವರೆಯ ನಾಳವನ್ನು, ಆಸ್ವಾ ದಿಸುವ-ರುಚಿನೋಡುವ, ಚಕ್ರದಿಂ-ರಥಾಂಗಗಳಿಂದಲೂ, ನಕ್ರ-ದೊಡ್ಡ ಮೀನುಗಳಿಂದಲೂ, ದೆಸೆದೆಸೆಗೆ-ಪ್ರತಿದಿಕ್ಕಿಗೂ, ಬೀರ್ವ- ಎರಚುತ್ತಿರುವ, ತನಿ-ನೂತನವಾದ, ಗಂಪಿನಿಂ-ಸುವಾಸನೆಯಿಂದಲೂ, ತಂಪಿನಿಂ-ಶೈತ್ಯದಿಂದಲೂ, ತೊಳಪ-ಪ್ರಕಾಶಿಸುವ, ಹಿಮಕರಕಾಂತದ-ಹಿಮವನ್ನುಂಟುಮಾಡುವ ಶಿಲೆಯು ಅಂದರೆ (ಚಂದ್ರಕಾಂತಶಿಲೆಯು), ಪೊಸ - ಹೊಸದಾದ, ಸಣ್ಣಿಗೆ ಯೊಳು-ಅಣು ರೂಪದಿಂದ, ಇಡಿದ-ವ್ಯಾಪ್ತವಾದ, ಪುಳಿನದಿಂ-ಮಳಲು ದಿಣ್ಣೆಗಳಿಂದಲು, ನಳಿನದಿಂ-ಪದ್ಮಗಳಿಂದಲೂ, ಒಸ ದು-ಸುಂದರವಾಗಿ (ಪ್ರೀತಿಸಿ), ಬಿನದಿಪ-ಮಧುರ ಧ್ವನಿಮಾಡುತ್ತಿರುವ, ಹಂಸ-ಅಂಚೆಗಳ, ಕೇಳಿಯಿಂದ-ಕ್ರೀಡೆಯಿಂದ, ಓಳಿ ಯಿಂದ-ಸಮೂಹದಿಂದ, ಎಸೆವ-ಹೊಳೆಯುವ, ನೀರ್ವಕ್ಕಿಗಳ-ಸಾರಸ ಪಕ್ಷಿಗಳ, ಸಂಘದಿಂ-ಸಮೂಹದಿಂದಲು, ಭೃಂಗದಿಂದ- ಷಟ್ಪದಗಳಿಂದಲೂ, ಆಕೊಳಂ-ಆ ಪದ್ಮಾಕರವು, ಕಣ್ಗೆ-ಕಣ್ಣುಗಳಿಗೆ, ಎಸೆದುದು-ಹೊಳೆಯಿತು ||

ಅ|| ವಿ|| ಲಸತ್ + ಅಮಲ = ಲಸದಮಲ, ಜ. ಸ. (ರತ್ನ-ತ್ಸ) (ರನ್ನ-ದ್ಭ). ಹಿಮ-ಹಿಮವನ್ನು, ಕರ-ಉಂಟು ಮಾಡತಕ್ಕವನು-ಹಿಮಕರ. ಕೃ. ವೃ. ||೯||

ಟೀ|| ಮೇಣ್-ಮತ್ತು, ಆಕೊಳಂ-ಆ ಸರಸ್ಸು, ತಳದೊಳು-ಕೆಳಭಾಗದಲ್ಲಿ, ಒಪ್ಪುವ-ಹೊಂದಿರುವ, ಪಸರು-ಹ

ದರ್ಥವನ್ನು ತಿಳಿಯಬೇಕಾಗಿದ್ದರೆ ಅದನ್ನು ವಿವರಿಸುತ್ತೇನೆ ಕೇಳುವವನಾಗು. ಪೂರ್ವದಲ್ಲಿ ಪರ್ವತರಾಯನ ಪುತ್ರಿಯಾದ ಪಾರ್ವ ತಿಯು, ಚಂದ್ರಧರನಾದ ಈಶ್ವರನನ್ನು ಮನೊವ್ಯಾಪಾರದಿಯಿಂದ ಸೇವಿಸುತ್ತೇನೆಂದ ಪುಣ್ಯಪ್ರದನಾದು ಸ್ಥಳವನ್ನು ಹುಡು ಕುತ್ತ ಬರಲಾಗಿ ಆ ಪಾರ್ವತಿಯ ಮುಂಭಾಗದಲ್ಲಿ ಮರಾಳವು, ನೀರುಹಕ್ಕಿಯು, ಭ್ರಮರವು, ಚಕ್ರವಾಕವು, ಅತಿ ಮೃದು ವಾದ ಅವ್ಯಕ್ತ ಮಧುರ ಸ್ವನಂಗಳಿಂದ ಯುತವಾಗಿ ಕಮಲ, ಕನ್ನೈದಿಲೆ ಮೊದಲಾದ ಪುಷ್ಪಗಳಿಂ ವಿರಾಜಿಸುತ್ತಿರುವುದಾದ ಒಂದು ಪುಷ್ಕರಣಿಯು ಪಾರ್ವತೀದೇವಿಯ ಕಂಗಳಿಗೆ ಕಂಡು ಬಂತು || ೮ || ಆ ಪದ್ಮಾಕರವು ಪ್ರಕಾಶಮಾನವಾದ ಮತ್ತು ನಿರ್ಮಲವಾದ ರತ್ನಖಚಿತವಾದ ಸೋಪಾನಗಳಿಂದಲೂ, ಮೀನುಗಳಿಂದಲೂ, ತಾವರೆಯ ನಾಳವನ್ನು ಸವಿನೋ ಡುವ ಚಕ್ರವಾಕ ದಂಪತಿಗಳಿಂದಲೂ, ದೊಡ್ಡದೊಡ್ಡ ಮೊಸಳೆಗಳಿಂದಲೂ, ನಾಲ್ಕು ದಿಕ್ಕುಗಳಿಗೂ ಬಡಿಯುತ್ತಿರುವ ನೂತನ ವಾದ ಸುವಾಸನೆಗಳಿಂದಲೂ, ಶೈತ್ಯದಿಂದಲೂ, ಪ್ರಕಾಶಿಸುವ ಚಂದ್ರಕಾಂತ ಶಿಲೆಗಳಿಂದಲೂ, ನೂತನವಾದ ಮತ್ತು ಸಣ್ಣ

ಪ್ರುನಪಸುರೆಸಳರೋಚಿಯಿಂನಡುವೆ | ತೊಳಪಕೆಂದಳದದೀಧಿತಿಯಿಂದಮೇಲೆಕಂ | ಗೊಳಿಪಹೊಂಗೇಸರದಕಾಂತಿಯಿಂದೆರ
ಗುವಸಿತಾಳಿಯುಮರೀಚಿಯಿಂದ || ಹೊಳೆಹೊಳೆಪಕೋಕನದಪಙ್ಕ್ತಿಗಳಬಣ್ಣಮು | ಜ್ವಲದಿಂದ್ರಚಾಪದಾಕಾರಮಂಸಂತತಂ |
ಪಳಿವಂತೆಕೊಳದೊಳಾರಾಜಿಸಿತುತುಹಿನಗಿರಿರಾಜನಂದನೆಯಕಣ್ಗೆ || ೧೦ || ನಿರುತಂಕುಮುದಶೋಭಿನೈರುತ್ಯದಂತೆವಾ | ನರ
ಸೈನ್ಯದಂತೆಕಮಲೋದರೋದ್ಭಾಸಿಭಾ | ಸುರಶುಕ್ಲಪಕ್ಷದಂತಹಿತಲ್ಪದಂತೆಕವಿಸೇವಿತಂಗಗನದಂತೆ || ಧರಣಿಪಾಲಯದಂತೆ

---

ಸರು ಬಣ್ಣವಾಗಿರುವ, ಎಸಳ್-ಪತ್ರಗಳ, ರೋಚಿಯಿಂ-ಪ್ರಕಾಶದಿಂದಲು, ನಡುವೆ-ಮಧ್ಯ ಭಾಗದಲ್ಲಿ, ತೊಳಪ-ಪ್ರಕಾಶಿಸುವ, ಕೆಂದಳದ-ಕೆಂಪಾದ ಪದ್ಮದ ಎಸಳಿನಿಂದ ಕೂಡಿದ, ದೀಧಿತಿಯಿಂದ-ಕಾಂತಿಯಿಂದ, ಮೇಲೆ-ಮೇಲಿನ ಪ್ರದೇಶದಲ್ಲಿ, ಕಂಗೊಳಿಪ-ಹೊಳೆಯುತ್ತಿರುವ, (ಕಂಗಳಿಗೆ ಪ್ರಕಾಶಿಸುತ್ತಿರುವ) ಹೊಂಗೇಸರದ-ಹೊನ್ನಿನ ಬಣ್ಣದ ಹುವ್ವಿನ, ಕಾಂತಿಯಿಂದ-ಪ್ರಭೆಯಿಂದ, ಎರಗುವ-ಬಂದು ಬೀಳುತ್ತಿರುವ, ಅಸಿತ-ಕರಿದಾದ, ಅಳಿಯ-ದುಂಬಿಯ, ಮರೀಚಿಯಿಂದ-ಕಾಂತಿಯಿಂದಲು, ಹೊಳಹೊಳೆಪ-ಅತ್ಯಂತವಾಗಿ ಪ್ರಕಾಶಿಸುವ, ಕೋಕನದ-ಕೆಂದಾವರೆಯ, ಪಙ್ಕ್ತಿಗಳ ಹಂತಿಗಳ, ಬಣ್ಣಂ-ಬಣ್ಣವು. ಉಜ್ವಲದ-ಹೊಳೆಯುತ್ತಿರುವುದಾದ, ಇಂದ್ರಚಾಪದ-ಇಂದ್ರನ ಬಿಲ್ಲಿನ, ಆಕಾರಮಂ-ರೀತಿಯನ್ನು. ಸಂತತಂ-ಸರ್ವದಾ, ಪಳಿವಂತೆ-ತಿರಸ್ಕರಿಸುವ ಹಾಗೆ, ಕೊಳದೊಳು-ಸರೋವರದಲ್ಲಿ, ತುಹಿನ-ಮಂಜಿನ, ಗಿರಿ-ಪರ್ವತದ, ರಾಜ-ದೊರೆಯ. ನಂದನೆಯ-ಮಗಳಾದ ಪಾರ್ವತಿಯ, (ಹಿಮವಂತನ ಮಗಳಾದ ಹೈಮವತಿಯ) ಕಣ್ಗೆ-ಕಂಗಳಿಗೆ, ಆರಾಜಿಸಿತು-ಕಾಂತ್ಯತಿಶಯದಿಂದಿತ್ತು.

ಅ|| ವಿ|| ಹೊನ್ನಿನಂತಿರುವ+ಕೇಸರ=ಹೊಂಗೇಸರ ಉ ಪೂ.ಕ. ಇಂದ್ರನ+ಚಾಪ=ಇಂದ್ರಚಾಪ ಷ.ತ. ಕೇಸರ-ಸಿಂಹದ ಕತ್ತಿನ ಸುತ್ತಲಿರುವ ಕೂದಲು, ಹುವ್ವಿನ ಕುಸುಮ, ಬಕುಳ ವೃಕ್ಷ, ನಾರು, ಗಡ್ಡೆ, ಸುರಗೀಮರ. ||೧೦||

ಟೀ|| ತತ್ಸರಂ-ಆ ಪದಾತ್ಮಕರವು, ನಿರುತಂ-ಯಾವಾಗಲೂ, ನೈಋತ್ಯದಂತೆ-ನೈಋತ್ಯನೆಂಬ ರಾಕ್ಷಸನ ದೆಸೆಯ ಹಾಗೂ, ವಾನರ-ಕಪಿಯ, ಸೈನ್ಯದಂತೆ-ಸೇನೆಯ ಹಾಗೆಯೂ, ಶೋಭಿ-ಪ್ರಕಾಶಿಸುವುದು, ಹೇಗೆಂದರೆ ರಾಕ್ಷಸದಿಕ್ಕಿನ ಪರವಾಗಿ ನಿರುತಂ-ಸರ್ವದಾ, ಕುಮುದ-ಕುಮುದವೆಂಬ ದಿಗ್ಗಜದಿಂದ, ಶೋಭಿ-ಪ್ರಕಾಶಿಸುತ್ತಿರುವುದು, ನೈಋತ್ಯದಿಕ್ಕು. ವಾನರ ಸೈನ್ಯದ ಪರವಾಗಿ—ನಿರುತಂ- ಯಾವಾಗಲೂ, ಕುಮುದ- ಕುಮುದನೆಂಬ ಕಪಿಶ್ರೇಷ್ಠನಿಂದ, ಶೋಭಿ- ಪ್ರಕಾಶಿಸುವುದು ವಾನರ ಸೈನ್ಯವು. ಸರಸ್ಸಿನ ಪರವಾಗಿ—ನಿರುತಂ-ಸರ್ವದಾ, ಕುಮುದ-ನೈದಿಲೆಗಳಿಂದ, ಶೋಭಿ-ಪ್ರಕಾಶಿಸುವುದು ಸರಸ್ಸು, ಕಮಲೋದರ-ವಿಷ್ಣುವಿನಂತೆ, ಉದ್ಭಾಸಿ-ಪ್ರಕಾಶಿಸುವುದು, ಹೇಗಂದರೆ:— ವಿಷ್ಣುವಿನ ಪರವಾಗಿ— ಕಮಲ- ಕಮಲ ಪುಷ್ಪವೇ, ಉದರ-ನಾಭಿಯಾಗುಳ್ಳವನು ವಿಷ್ಣುವು. ಕಮಲ ಪುಷ್ಪಗಳೇ, ಉದರ-ಒಳಗಡೆಯಲ್ಲಿ ಉಳ್ಳದ್ದು ಸರೋವರವು. ಭಾಸುರ-ಮನೋಹರವಾದ, ಶುಕ್ಲ ಪಕ್ಷದಂತೆ-ಚಂದ್ರನ ಕಳೆಯು ಹೆಚ್ಚುವ ಕಾಲದಂತೆ, ಉದ್ಭಾಸಿ-ಪ್ರಕಾಶಿಸುವುದು. ಹೇಗೆಂದರೆ—ಶುಕ್ಲಪಕ್ಷ-ಶುಕ್ಲಪಕ್ಷದಿಂದ, ಉದ್ಭಾಸಿ-ಪ್ರಕಾಶಿಸುವನು ಚಂದ್ರನು. ಭಾಸುರ- ಪ್ರಕಾಶಮಾನವಾದ, ಶುಕ್ಲ-ಬಿಳುಪಾದ, ಪಕ್ಷ-ಪಕ್ಷಿಗಳ ಗರಿಗಳಿಂದ, ಉದ್ಭಾಸಿ-ಪ್ರಕಾಶಿಸುವುದು ಸರಸ್ಸು. ಅಹಿತಲ್ಪದಂತೆ- ಆದಿಶೇಷನೆಂಬ ಹಾಸಿಗೆಯಂತೆ, ಉದ್ಭಾಸಿ-ಪ್ರಕಾಶಿಸುವುದು, ಹೇಗೆಂದರೆ:— ಕಮಲ-ಇಂದುವು, ಲಕ್ಷ್ಮೀ-ಲಕ್ಷ್ಮೀದೇವಿಯು, ಕಮಲೋದರನು, ಉದರ-ಮಧ್ಯದಲ್ಲಿರುವುದರಿಂದ, ಉದ್ಭಾಸಿ-ಪ್ರಕಾಶಿಸುವುದು ಆದಿಶೇಷನೆಂಬ ತಲ್ಪವು. ಅಹಿ-ಹಾವುಗಳ, ತಲ್ಪ-ಸಮೂಹದಿಂದ, ಉದ್ಭಾಸಿ-ಪ್ರಕಾಶಿಸುವುದು ಸರಸ್ಸು ಗಗನದಂತೆ-ಅಂತರಿಕ್ಷದಂತೆಯೂ, ಧರಣಿಪ-ರಾಜನ, ಆಲಯದಂತೆ-ಗೃಹದೋಪಾದಿಯಲ್ಲಿಯೂ, ಶೋಭಿ-ಶೋಭಿಸುತ್ತಿರುವುದು. ಹೇಗಂದರೆ—ಕವಿ-ಶುಕ್ರಾಚಾರ್ಯನಿಂದ, ಸೇವಿತಂ- ಹೊಂದಿರುವುದು, ಗಗನ-ಅಂತರಿಕ್ಷವು,

---

ಗಿರುವ ಮಳಲು ದಿಣ್ಣೆಗಳಿಂದಲೂ, ಪದ್ಮಗಳಿಂದಲೂ. ಸುಂದರವಾದ ಮಧುರಧ್ವನಿಗೈವ ರಾಜಹಂಸಪಕ್ಷಿಗಳಿಂದಲೂ, ಸಾರಸಗಳ ಜಲಕ್ರೀಡೆಗಳಿಂದಲೂ, ನಾನಾ ಬಗೆಗಳಾದ ಜಲಚರಗಳಿಂದಲೂ, ಭ್ರಮರಗಳಿಂದಲೂ, ನೋಟಕರ ಕಣ್ಗೆ ಪ್ರಕಾಶಿಸುತ್ತಿತ್ತು ||೯|| ಮತ್ತು ಆ ಸರಸ್ಸು, ತನ್ನ ಒಳಭಾಗದಲ್ಲಿ ಕಾಂತ್ಯತಿಶಯವಾದ ಚಿಗುರಿನಿಂದ ಹಸುರಾದ ಎಲೆಗಳ ಪ್ರಕಾಶದಿಂದಲು, ಮಧ್ಯಭಾಗದಲ್ಲಿ ಥಳಥಳಿಸುವ ಕೆಂಪು ಕಮಲಗಳಿಂದಾವೃತವಾದ ಕಾಂತಿಯಿಂದಲೂ, ಆ ಕಮಲಗಳ ಮೇಲ್ಗಡೆ ಮಕರಂದಕ್ಕಾಗಿ ಕೂತಿದ್ದ ಕಪ್ಪಾದ ಬಣ್ಣದಿಂದ ಪ್ರಕಾಶಿಸುವ ಭ್ರಮರಗಳ ಪಙ್ಕ್ತಿಗಳ ಕಾಂತಿಯಿಂದಲೂ, ಅತ್ಯಂತವಾಗಿ ಪ್ರಕಾಶಿಸುವ ಕನ್ನೈದಿಲೆಯ ರಾಜಿಗಳಿಂದಲು, ಸರ್ವ ಕಾಲದಲ್ಲಿಯೂ, ಪಂಚ ವರ್ಣಗಳಿಂದ ಶೋಭಿಸುತ್ತಿರುವ ಇಂದ್ರ ಚಾಪವನ್ನು ತಿರಸ್ಕರಿಸುತ್ತ ಪ್ರಕಾಶಿಸುತ್ತಿತ್ತು || ೧೦ || ಆ ವನಪ್ರದೇಶದಲ್ಲಿದ್ದ ಕಾಸಾರವು ಕನ್ನೈದಿಲೆ

ಸುಮನೋಹರಂನಿಶಾ | ಚರವಂಶದಂತೆಮ್ಮಾಲಾಕಾರಜನದಂತೆ | ಹರಿಜನ್ಮಭೂಮಿಗೋಕುಲದಂತೆವನದಂತೆತತ್ಸರಂಕಂಗೊಳಿಸಿತು ||೧೧|| ವನಮಾಲಿಯಂದದಿಂಪದ್ಮಿಪದ್ಮಿನಿಯುವೋಲ್ಬ | ವನಕುಕ್ಷಿಭುವನಕುಕ್ಷಿಯತೆರದಿಹಂಸಲೋ | ಚನಶೋಭಿ ಹಂಸಲೋಚನಶೋಭಿಯಂತೆವರಚಕ್ರಿವರಚಕ್ರಿಯುವೊಲು || ಅನಿಮಿಷಾಶ್ರಯಮೂರ್ತಿಯನಿಮಿಷಾಶ್ರಯಮೂರ್ತಿ | ಯೆನೆ ಕುವಲಯಾಧಾರಿಕುವಲಯಾಧಾರಿಯೋ| ಲ್ವನಮಾಲಿವನಮಾಲಿಯಂತೆರಂಜಿಸುವಕಾಸಾರಮಂಸರ್ವಮಂಗಳೆಕಂಡಳು ೧೨|| ಅಳಿ

---

ವಿ-ಕವಿಗಳಿಂದ, ಸೇವಿತಂ-ಹೊಂದಿರುವುದು, ಧರಣಿಪಾಲಯಂ-ರಾಜನ ಅರಮನೆಯು, ಕವಿ-ನೀರು ಹಕ್ಕಿಗಳಿಂದ, ಸೇವಿತಂ-ಆಶ್ರಯಿಸಲ್ಪಟ್ಟಿರುವುದು, ಸರಸ್ಸು-ಸರೋವರವು, ನಿಶಾಚರ - ರಾಕ್ಷಸರ, ವಂಶದಂತೆ - ಕುಲದ ಹಾಗೆಯೂ, ಮಾಲಾಕಾರ-ಮಾಲೆಯನ್ನು ಮಾಡುವವರ (ಹೂವಾಡಿಗರ), ಜನದಂತೆ - ಜನಗಳ ಹಾಗೆಯೂ, ಎಸೆಗುಂ - ಪ್ರಕಾಶಿಸುವದು, ಹೇಗಂದರೆ-ಸುಮನ-ಸುರರನ್ನು, ಹರಂ - ಸಂಹರಿಸುವವರು ರಾಕ್ಷಸರು, ಸುಮನ - ಪುಷ್ಪಗಳನ್ನು, ಹರಂ-ಅಪಹರಿಸುವವರು, ಹೂವಾಡಿಗರು, ಸುಮನ-ಚೆನ್ನಾಗಿ ಜನರ ಮನಸ್ಸನ್ನು, ಹರಂ-ತನ್ನ ಕಡೆಗೆ ಅಪಹರಿಸುವದು ಸರಸ್ಸು, ಗೋಕುಲದಂತೆ - ಗೋಕುಲದ ಹಾಗೆಯೂ, ವನದಂತೆ-ಅರಣ್ಯ, ಮತ್ತು ನೀರಿನ ಹಾಗೆಯೂ, ಶೋಭಿಕುಂ-ಪ್ರಕಾಶಿಸುವುದು, ಹೇಗಂದರೆ:—ಹರಿ-ಶ್ರೀ ಕೃಷ್ಣಸ್ವಾಮಿಗೆ, ಜನ್ಮಭೂಮಿ - ಉತ್ಪತ್ತಿಯಾದ ಸ್ಥಳವು, ಗೋಕುಲವು. ಹರಿ-ಸಿಂಹ, ಹುಲಿ, ಕರಡಿ, ನರಿ, ಗಿಳಿ ಮೊದಲಾದ ಪ್ರಾಣಿಗಳಿಗೆ, ಜನ್ಮಭೂಮಿ - ಹುಟ್ಟಿದ ಸ್ಥಳವು ಅರಣ್ಯವು. ಹರಿ-ಕಪ್ಪೆ, ಹಾವು ಮೊದಲಾದವುಗಳಿಗೆ, ಜನ್ಮಭೂಮಿ-ಜನಿಸಿದ ಸ್ಥಳವಾಗಿರುವುದು ಸರೋವರವು ಇಂತು-ಈ ಪ್ರಕಾರವಾಗಿ, ಕಂಗೊಳಿಸಿತು-ಕಂಗಳಿಗೆ ಸಂತೋಷವನ್ನುಂಟುಮಾಡಿತು.

ಅ|| ವಿ|| ಧರಣಿಪನ+ಆಲಯ=ಧರಣಿಪಾಲಯ, ಷ. ತ. ಕುಮುದ-ನೈದಿಲೆ, ಕುಮುದವೆಂಬ ಆನೆ, ಕುಮುದನೆಂಬ ಕಪಿ. ಕಮಲ-ಲಕ್ಷ್ಮಿ, ತಾವರೆ, ಪಕ್ಷ-ಹದಿನೈದು ದಿನಗಳು, ರೆಕ್ಕೆ, ಕಡೆ ||೧೧||

ಟೀ|| ಆಕಾಸಾರಂ - ಆ ಸರೋವರವು, ವನಮಾಲಿಯಂತೆ - ವಿಷ್ಣುವಿನ ರೀತಿಯಿಂದ (ಪ್ರಕಾಶಿಸುವುದು) ಪದ್ಮಿ-ಲಕ್ಷ್ಮೀಯುತನಾದವನು ವಿಷ್ಣುವು, ಪದ್ಮಿ - ಕಮಲ ಪುಷ್ಪಗಳುಳ್ಳದ್ದು, ಸರಸ್ಸು, ಆದ್ದರಿಂದ, ಪದ್ಮಿಯುವೋಲ್ - ಲಕ್ಷ್ಮೀದೇವಿಯಿಂದೊಪ್ಪಿರುವ ವಿಷ್ಣುವಿನ ಹಾಗೆ, ಭುವನ-ಸಮಸ್ತ ಲೋಕಗಳನ್ನು, ಕುಕ್ಷಿ-ಹೊಟ್ಟೆಯಲ್ಲುಳ್ಳವನು. ಭುವನ-ಉದಕವು, ಕುಕ್ಷಿ-ಉದರದಲ್ಲಿ ಉಂಟಾಗಿರುವದ್ದರಿಂದ ಭುವನ ಕುಕ್ಷಿಯ - ನಾರಾಯಣನ, ತೆರದಿ-ಅಂದದಿಂದ, ಹಂಸ-ಭಾಸ್ಕರನೆಂಬ, ಲೋಚನ-ಕಣ್ಣುಗಳುಳ್ಳವನು ವಿಷ್ಣುವು, ಹಂಸ-ಅಂಚೆಗಳ ಲೋಚನ-ನೋಟವುಳ್ಳದ್ದು ಸರೋವರವು ಆದ್ದರಿಂದ, ಹಂಸಲೋಚನ-ವಿಷ್ಣುವಿನ, ತೆರದಿ-ಅಂದದಿಂದ, ವರ-ಉತ್ತಮವಾದ, ಚಕ್ರಿ-ಚಕ್ರವೆಂಬ ಆಯುಧದಿಂದ ಯುತನು, ವರ-ಉತ್ತಮವಾದ ಚಕ್ರಿ - ರಥಾಂಗಗಳುಳ್ಳದ್ದು ಸರಸ್ಸು. ಆದ್ದರಿಂದ, ವರಚಕ್ರಿಯೊಲು - ವಿಷ್ಣುವಿನ ಹಾಗೆಯು, ಅನಿಮಿಷ - ದೇವತೆಗಳಿಗೆ, ಆಶ್ರಯ-ಆಶ್ರಯವಾಗುಳ್ಳ, ಮೂರ್ತಿ-ಆಕೃತಿಯುಳ್ಳವನು, ಅನಿಮಿಷ-ಮೀನುಗಳಿಗೆ, ಆಶ್ರಯ-ಆಧಾರವಾಗುಳ್ಳದ್ದು ಸರೋವರವಾದ್ದರಿಂದ, ಅನಿಮಿಷಾಶ್ರಯ ಮೂರ್ತಿಯಂತೆ ನಾರಾಯಣನು ಎನೆ-ಎನ್ನುವಹಾಗೆ, ಕುವಲಯ-ಪೃಥ್ವಿಗೆ, ಆಧಾರಿ-ಆಶ್ರಯವಾಗುಳ್ಳವನು, ಕುವಲಯ-ಕರಿನೈದಿಲೆಗೆ, ಆಧಾರಿ-ಆಶ್ರಯವಾಗುಳ್ಳದ್ದು ಸರಸ್ಸು, ಆದ್ದರಿಂದ, ಕುವಲಯಾಧಾರಿಯವೋಲ್-ವಿಷ್ಣುವಿನ ರೀತಿಯಿಂದ, ವನಮಾಲಿ-ಅರಣ್ಯದಲ್ಲಿ ಹುಟ್ಟಿದ ತೊಳಸಿಯಿಂದ ರಚಿಸಿದ ಸರವನ್ನುಳ್ಳವನು, ವನಮಾಲಿ-ಜಲವೇ ಮಾಲೆಯಾಗಿರುವುದು ಸರಸ್ಸಾದ್ದರಿಂದ, ವನಮಾಲಿಯುವೋಲ್ - ವಿಷ್ಣುವಿನ ರೀತಿಯಿಂದ, ರಂಜಿಸುವ - ಹೊಳೆಯುತ್ತಿರುವ, ಕಾಸಾರಮಂ - ಸರೋವರವನ್ನು, ಸರ್ವಮಂಗಳೆ - ಸಕಲ ಜನರಿಗೂ ಮಂಗಳ ಸ್ವರೂಪಳಾದ ಹೈಮವತಿಯು, ಕಂಡಳು-ನೋಡಿದವಳಾದಳು.

ಅ|| ವಿ|| ಪದ್ಮ-ಕಮಲ, ಅದುಳ್ಳದ್ದು. ಪದ್ಮಿ. ಪದ್ಮಾ-ಲಕ್ಷ್ಮಿ, ಕಮಲ ವನವೇ ಕುಕ್ಷಿಯಲ್ಲಿ ಉಳ್ಳವನು = ವನಕುಕ್ಷಿ, ಬಹು. ಸ. ||೧೨||

---

ಗಳಿಂದ ಆವೃತಮಾಗಿದ್ದುದರಿಂದ ರಾಕ್ಷಸ ದಿಕ್ಕಿನಂತೆಯೂ, ವಾನರ ಸೈನ್ಯದಂತೆಯೂ, (ಕುಮುದನೆಂಬ ದಿಗ್ಗಜದಿಂದ ಕೂಡಿದ್ದು ನೈರುತ್ಯದಿಕ್ಕು, ಕುಮುದನೆಂಬ ಕಪಿಯಿಂದ ಸೇರಿದ್ದು ವಾನರ ಸೈನ್ಯವು), ಲಕ್ಷ್ಮೀಪತಿಯಾದ ವಿಷ್ಣುವಿನಂತೆಯೂ (ಪದ್ಮವೇ ನಾಭಿಯಲ್ಲುಳ್ಳವನು ವಿಷ್ಣುವು, ಕಮಲವೇ ಒಳಗಡೆಯಲ್ಲಿರುವದು ಸರಸ್ಸು), ಶುಕ್ಲಪಕ್ಷದ ಚಂದ್ರನಂತೆಯೂ ಶುಕ್ಲಪಕ್ಷದಿಂದ ಯುತವಾದವನು ಚಂದ್ರನು, ಬಿಳಿಯ ಪಕ್ಷಿಗಳಿಂದ ಕೂಡಿದ್ದು ಸರಸ್ಸು), ಅಂತರಿಕ್ಷದಂತೆಯೂ, ರಾಜನ ಅರಮನೆಯಂತೆಯೂ, ಶುಕ್ರಾಚಾರ್ಯನಿಂದ ಕೂಡಿರುವುದು ಅಂತರಿಕ್ಷವು, ಕವಿಗಳಿಂದ ಕೂಡಿರುವುದು ರಾಜಗೃಹವು, ನೀ

ಯವರ್ಗವನಾದರಿಸುತಮಿತ್ರಸ್ನೇಹ | ದೊಳೆಸಂದುಸುತರಂಗಲೀಲೆಯಂಲಾಲಿಸುತ | ಕುಲಸದಭ್ಯುದಯಮಂನೆಲೆಗೈಯುಂ ಕಾಂತಾನುಕೂಲರಮಣೀಯಮಾಗಿ || ಲಲಿತಲಕ್ಷ್ಮೀನಿವಾಸಸ್ಥಾನಮೆನಿಸಿಮಂ | ಗಳವಿಭವಕೆಡೆಗೊಟ್ಟುಸಕಲಸೌಭಾಗ್ಯ ಮಂ | ತಳೆದಸಂಸಾರಿಕನತೆರದಿಂದವಿಮಲಪದ್ಮಾಕರಂಕಣ್ಗೆಸೆದುದು || ೧೩ || ಕಲಹಂಸಮಾಕೀರ್ಣಮಾಗಿರ್ದುಕಾಳಗದ | ಕ ಳನಲ್ಲವಿಷಭರಿತಮಾಗಿರ್ದುಸರ್ಪಸಂ | ಕುಲವಲ್ಲಕುಮುದಯುತಮಾಗಿರ್ದುಖಳರಂತರಂಗದಾಲಾಪಮಲ್ಲ || ಅಳಿದುಳಿದಭಂಗ ಮಯಮಾಗಿರ್ದುಮುರಿದನೃಪ | ದಳಮಲ್ಲಬಹುವಿಚಾರಸ್ಥಾನಮಾಗಿರ್ದು | ತಿಳಿಯಲ್ಕುಪದ್ರವಸ್ಥಳಮಲ್ಲಮೆನಿಸಿರ್ದುದಾವಿ ಮಲಸರಿಸಿಕಣ್ಗೆ || ೧೪ || ಆಸರಸ್ತಟದಲ್ಲಿಕಲ್ಪಿಸಿದಳಾಶ್ರಮನಿ | ವಾಸಮಂಭಕ್ತಿಯಿಂಭಜಿಸಿದಳಗೇಂದ್ರಜೆಸು | ಧಾಸೂತಿ

---

ಟೀ|| ಕಾಸಾರವನ್ನು ಕವಿಯು ಒಬ್ಬ ಗೃಹಸ್ಥನಿಗೆ ಹೋಲಿಸಿರುವನು :—ಹೇಗೆಂದರೆ, ಗೃಹಸ್ತನಪರವಾಗಿ ಅಳಿಯ–ಮಗಳನ್ನು ಕೊಟ್ಟಿರುವ ಅಳಿಯನ, ವರ್ಗವನು–ಸಮೂಹವನ್ನು, ಆದರಿಸುತ–ಆದರಣೆ ಮಾಡುತ್ತ, ಮಿತ್ರ–ಹಿತರ, ಸ್ನೇಹದೊಳೆ–ಅಕ್ಕರೆಯಿಂದಲೆ, ಸಂದು–ಅನುಕೂಲವಾಗಿದ್ದುಕೊಂಡು, ಸುತನ–ಪುತ್ರರ, ಅಂಗಲೀಲೆಯಂ–ಕೈಕಾಲಾಡಿಸಿಕೊಂಡು ಆಡುವ ವಿನೋದವನ್ನು, ಲಾಲಿಸುತ–ಹರ್ಷದಿಂದ ನೋಡುತ್ತ, ಕುಲ–ಗೋತ್ರದಲ್ಲಿ, ಸತ್-ಉತ್ತಮವಾದ, ಅಭ್ಯುದಯಮಂ-ಏಳಿಗೆಯನ್ನು, ನೆಲೆಗೈದು-ಗೊತ್ತುಮಾಡಿ (ಶಾಶ್ವತ ಗೊಳಿಸಿ), ಕಾಂತಾ-ಪತ್ನಿಯ, ಅನುಕೂಲ–ಅನುಕೂಲತೆಯಿಂದ, ರಮಣೀಯಮಾಗಿ–ಮನೋಹಾರಿಯಾಗಿ, ಲಲಿತ–ಮನೋಹರಮಾದ, ಲಕ್ಷ್ಮೀನಿವಾಸಸ್ಥಾನಂ–ಲಕ್ಷ್ಮೀದೇವಿಗೆ ವಾಸ ಮಾಡಲು ಯೋಗ್ಯಮಾದ ಸ್ಥಳವು, ಎನಿಸಿ – ಎನ್ನಿಸಿಕೊಂಡು, ಮಂಗಳ – ಶುಭಕರಗಳಾದ, ವಿಭವಕ್ಕೆ - ವೈಭವಾದಿಗಳಿಗೆ, ಎಡೆಗೊಟ್ಟು–ಸ್ಥಳವನ್ನು ಕೊಟ್ಟು. ಸಕಲಸೌಭಾಗ್ಯಮಂ–ಸಮಸ್ತ ವಿಧವಾದ ಐಶ್ವರ್ಯಗಳನ್ನು ಹೊಂದಿರುವವನಾದ, ಸಂಸಾರಿಕನು-ಸಂಸಾರಿಯು (ಗೃಹಸ್ಥನು) ||

ಟಿ|| ಸರೋವರದ ಪರವಾಗಿ :—ಅಳಿಯ-ದುಂಬಿಗಳ, ವರ್ಗವನು–ಗುಂಪನ್ನು, ಆದರಿಸುತ - ಆಹಾರಾದಿಗಳನ್ನು ಕೊಟ್ಟು ಕಾಪಾಡುತ್ತ, ಮಿತ್ರ-ಭಾಸ್ಕರನ (ಸೂರ್ಯನ), ಸ್ನೇಹದೊಳು–ವಿಶ್ವಾಸದಿಂದ, ಸಂದು–ಸೇರಿ (ಹೊಂದಿ), ಸು-ಬಿಳ್ಳಿಯದಾದ, ತರಂಗ-ಅಳೆಗಳ, ಲೀಲೆಯಂ–ವೈಭವವನ್ನು. ಲಾಲಿಸುತ–ಮಮತೆಯಿಂದ ಕೇಳುತ್ತ, ಕು–ಪೃಥ್ವಿಯಲ್ಲಿ, ಲಸತ್-ಹೊಳೆಯುವ, ಅಭ್ಯುದಯಮಂ-ಅಭಿವೃದ್ಧಿಯನ್ನು (ಹುಟ್ಟುವಿಕೆಯನ್ನು), ನೆಲೆಗೈದು-ಶಾಶ್ವತಗೊಳಿಸಿ, ಕ–ಉದಕದ, ಅಂತ–ಕೊನೆಯಲ್ಲಿ, ಅನುಕೂಲ-ಅನುಕೂಲವಾದ, ರಮಣೀಯಮಾಗಿ-ಮನೋಹಾರಿಯಾಗಿ, ಲಲಿತ–ಮನೋಹರಲಾದ, ಲಕ್ಷ್ಮೀ-ಲಕ್ಷ್ಮೀದೇವಿಗೆ, ನಿವಾಸ–ವಾಸಯೋಗ್ಯಮಾದ, ಸ್ಥಾನಂ-ಸ್ಥಳವು, ಎನಿಸಿ-ಎನ್ನಿಸಿಕೊಂಡು, ಮಂಗಳ-ಶುಭಕರಗಳಾದ, ವಿಭವಕ್ಕೆ-ವೈಭವಕ್ಕೆ (ಅಭಿವೃದ್ಧಿಗೆ), ಎಡೆಗೊಟ್ಟು-ಅವಕಾಶ ಕೊಟ್ಟು, ಸಕಲ–ಸಕಲ ವಿಧವಾದ, ಸೌಭಾಗ್ಯಮಂ–ಐಶ್ವರ್ಯವನ್ನು (ಸಂಪದವನ್ನು), ತಳೆದ–ಹೊಂದಿರುವ, ಪದ್ಮಾಕರಂ–ಸರೋವರವು, ಕಣ್ಗೆ–ಕಂಗಳಿಗೆ, ಎಸೆದುದು–ಶೋಭಿಸಿತು.

ಅ|| ವಿ|| ಅಳಿ–ನಾಶವಾಗು, ದುಂಬಿಹುಳು. ಮಿತ್ರ–ಸ್ನೇಹಿತ, ಸೂರ್ಯ. ಸುತ–ಮಕ್ಕಳ, ರಂಗ-ವಿನೋದ, ಸು–ಬಿಳ್ಳಿಯದಾದ, ತರಂಗ–ಅಲೆ, ಮಂಗಳ-ಶುಭ, ಮಂಗಳ ಗ್ರಹವು-ಮಂಗಳ ದೇವಿಯು, ಕುಲ–ವಂಶ, ಗೋತ್ರ. ವಿಭವ–ವಿನೋದ, ಐಶ್ವರ್ಯ. ವಿಭವ ಸಂವತ್ಸರ, ಸತ್ + ಅಭ್ಯುದಯ = ಸದಭ್ಯುದಯ, ಜ. ಸ. ಲಕ್ಷ್ಮಿಯ + ನಿವಾಸ = ಲಕ್ಷ್ಮೀನಿವಾಸ, ಷ. ತ. || ೧೩ || ಇದು ಶ್ಲೇಷಾಲಂಕಾರವು.

---

ಹಕ್ಕಿಗಳಿಂದಾವೃತಮಾದುದು ಸರಸ್ಸು), ರಾಕ್ಷಸರ ವಂಶದಂತೆಯೂ, ಹೂವಾಡಿಗ ಜನರಂತೆಯೂ, (ದೇವತೆಗಳನ್ನು ಕೊಲ್ಲುವವರು ರಾಕ್ಷಸರು, ಸುಮನ ಪುಷ್ಪಗಳನ್ನು ಬಿಡಿಸಿಕೊಳ್ಳುವವರು ಹೂವಾಡಿಗ ಜನವು, ಚೆನ್ನಾಗಿ ಮನುಷ್ಯರ ಮನಸ್ಸನ್ನು ತನ್ನ ಕಡೆಗೆ ಎಳೆಯುವುದು ಸರಸ್ಸು) ಗೋಕುಲದಂತೆಯೂ, ಅರಣ್ಯದಂತೆಯೂ, (ಹರಿ–ಕೃಷ್ಣನಿಗೆ ಜನ್ಮಭೂಮಿಯಾದದ್ದು ಗೋಕುಲವು, ಹರಿ-ಸಿಂಹ, ಹುಲಿ, ಕಪಿಗಳಿಂದ ವ್ಯಾಪ್ತಮಾದದ್ದು ಅರಣ್ಯವು, ಹರಿ–ಕಪ್ಪೆ, ಹಾವುಗಳಿಂದ ವ್ಯಾಪ್ತವಾದದ್ದು ಸರಸ್ಸು) ಕಂಗೊಳಿಸುತ್ತಿತ್ತು || ೧೧ || ಮತ್ತು ಆ ಸರಸ್ಸು ವಿಷ್ಣುವಿನಂತೆ ರಂಜಿಸುವುದು. ನೀತಿಮಾಲೆಯಾಗಿರುವದ್ದರಿಂದಲೂ, (ವನ–ತುಲಸಿಯ ಹಾರವೇ ಮಾಲೆಯಾಗುಳ್ಳವನು ವಿಷ್ಣುವು), ಪದ್ಮದಿಂದ ಕೂಡಿದ್ದರಿಂದಲೂ (ಪದ್ಮ–ಲಕ್ಷ್ಮೀಯುತನಾದವನು ವಿಷ್ಣುವು), ನೀರೇ ಉದರದಲ್ಲಿರುವುದರಿಂದಲೂ (ಭುವನ–ಪ್ರಪಂಚವೇ ಉದರದಲ್ಲುಳ್ಳವನು ವಿಷ್ಣುವು) ಹಂಸೆಗಳ ನೋಟವುಳ್ಳದ್ದರಿಂದಲೂ (ಹಂಸಲೋಚನ – ಸೂರ್ಯನೆಂಬ ನೇತ್ರವುಳ್ಳವನು ವಿಷ್ಣುವು), ಶ್ರೇಷ್ಠವಾದ ಚಕ್ರವಾಕ ಪಕ್ಷಿಗಳಿಂದ ಕೂಡಿದ್ದರಿಂದಲೂ (ವರಚಕ್ರ – ಶ್ರೇಷ್ಠವಾದ ಚಕ್ರಾಯುಧವುಳ್ಳವನು ವಿಷ್ಣುವು), ಮತ್ಸ್ಯಗಳಿಗೆ ಆಶ್ರಯವಾಗಿರುವದ್ದರಿಂದಲೂ (ಅನಿಮಿಷ – ದೇವತೆಗಳಿಗೆ ಆಶ್ರಯನಾದವನು ವಿಷ್ಣುವು), ಕನ್ಯ

ಮೌಳಿಯುಮೆಚ್ಚಿದಂಶಂಭುವರನುಂಕೊಟ್ಟನಿಲ್ಲಿನಿಂದ ‖ ಮಿಾಸಲತಪಕೆಡರ್ಬಾರದಿರಲೆಂದುಬಳಿ | ಕೋಸರಿಸದಲ್ಲಿಚಿರಕಾಲಮಿ ರುತಿರ್ದಳು | ಲ್ಲಾಸದಿಂಧೂರ್ಜಟಿಯರಾಣಿಯೋಗಿನಿಯೆನಿತಾನೆಂಬತೆರದಿಂಬನದೊಳು ‖ ೧೫ ‖ ಇಂದುಮೌಳಿಯಪದಧ್ಯಾನ ಮುಂಮಾಡುವಾ | ನಂದಮಿನ್ನೇತರತಿಶಯವೆಂಶಿವನರೆನ್ನೈಯೊ | ಳೊಂದಿರ್ದಸೌಖ್ಯಮುಂಮರೆದಪಾರ್ವತಿತಪಸ್ವಿನಿಯಾಗಿತಿ ಳಿಗೊಳದೊಳು ‖ ನಿಂದನುದಿನಂಜಪತಪಸಮಾಧಿನಿಯಮಂಗ | ಳಿಂದಭಜಿಸಿದಳಂತರಾತ್ಮನಂಸಕಲಸುರ | ವೃಂದವಂದಿತ ಪಾದಪದ್ಮನಂಸುಜ್ಞಾನಸದ್ಮನಂಕಾನನದೊಳು ‖೧೬‖ಬೀಸದುಬಿರುಸುಗಾಳಿಬಿಸಿಯಬಿಸಿಲವನಿಯಂ| ಕಾಸದುದವಾಗ್ನಿಪುಲ್ಗಳೊ

ಟೀ‖ ಅವಿಮಲ-ನಿರ್ಮಲವಾದ, ಸರಸಿ-ಆ ಸರೋವರವು, ಕಣ್ಗೆ-ಚಕ್ಷುಗಳಿಗೆ, ಕಲಹಂ-ಹೊಡದಾಟವು. ಸಮಾಕೀರ್ಣಂ-ಉಂಟಾಗಿರುವಂಥಾದ್ದು (ವ್ಯಾಪ್ತವಾದದ್ದು), ಆಗಿರ್ದು- ಆಗಿದ್ದರೂ, ಕಾಳಗದ - ಜಗಳದ, ಕಳನು-ಸ್ಥಾನವು, ಅಲ್ಲ-ಆಗಿರುವದಿಲ್ಲ, ಹೇಗೆಂದರೆ :—ಕಲಹಂಸಂ-ಅರಸಂಚೆಗಳಿಂದ, ಆಕೀರ್ಣಂ-ವ್ಯಾಪ್ತವಾಗಿರುತ್ತೆಂಬ ಅಭಿಪ್ರಾಯವು, ವಿಷ-ನಂಜಿನಿಂದ, ಭರಿತಂ-ತುಂಬಿದ್ದು ಆಗಿದ್ದರೂ, ಸರ್ಪ-ಅಹಿಗಳಿಂದ, ಸಂಕುಲಂ-ತುಂಬಿರುವಂಥಾದ್ದು, ಅಲ್ಲ-ಆಗಿರುವದಿಲ್ಲವು, ಹೇಗಂದರೆ :—ವಿಷ-ನೀರಿನಿಂದ, ಭರಿತಂ-ತುಂಬಿರುತ್ತೆಂಬಭಿಪ್ರಾಯವು, ಕುಮುದ-ಕೆಟ್ಟ ಜನಗಳಿಂದ, ಯುತಂ-ಹೊಂದಿರುವಂಥಾದ್ದು, ಆಗಿರ್ದು-ಆಗಿದ್ದರೂ, ಖಳ-ನೀಚರ, ಅಂತರಂಗದ-ಗುಟ್ಟಾದ, ಆಲಾಪಂ-ಸಲ್ಲಾಪವು, ಅಲ್ಲ-ಆಗಿರುವದಿಲ್ಲ, ಎಂದರೆ-ಕುಮುದ-ನೈದಿಲೆ ಪುಷ್ಪಗಳಿಂದ, ಯುತಂ-ಯುಕ್ತವಾಗಿತ್ತೆಂಬ ಅಭಿಪ್ರಾಯವು, ಅಳಿದು-ಹತವಾಗಿ, ಉಳಿದ-ಮಿಕ್ಕ, ಭಂಗಮಯಮಾಗಿ-ಸೋಲುವಿಕೆಯ ವಿಕಾರ ಉಳ್ಳದ್ದಾಗಿ, ಇರ್ದ-ಇದ್ದರೂ, ಮುರಿವ - ಓಡಿಹೋದ, ನೃಪ-ರಾಜನ, ದಳಂ-ಸೇನೆಯು, ಅಲ್ಲ-ಆಗಿರುವದಿಲ್ಲ, ಹೇಗಂದರೆ ;—ಅಳಿದು-ಬಿಸಲು ಮತ್ತು ವಾಯು ಇವುಗಳಿಂದ ಇಂಗಿ ಹೋಗಿ, ಉಳಿದು-ಬಣಗುತ್ತಿದ್ದರೂ, ಧ್ರುವಜಲದಿಂದಕೂಡಿ ಭಂಗವಯುಮಾಗಿ-ಅಲೆಗಳ ಸಮೂಹದಿಂದ ಕೂಡಿದ್ದಾಗಿ, ಇತ್ತೆಂಬ ಅಭಿಪ್ರಾಯವು, ಬಹು-ಅಧಿಕವಾಗಿ, ವಿಚಾರಸ್ಥಾನಂ - ವಿಷಯಗಳನ್ನು ತಿಳಿಯತಕ್ಕ ತಾವು, ಆಗಿ-ಆಗಿದ್ದರೂ, ತಿಳಿಯಲ್ಕೆ-ಗ್ರಹಿಸುವದಕ್ಕೆ, ಉಪದ್ರವ-ತೊಂದರೆಯುಂಟಾಗುವ, ಸ್ಥಳಂ-ಪ್ರದೇಶವು, ಅಲ್ಲ-ಆಗಿರುವದಿಲ್ಲ, ಏಕಂದರೆ—ವಿ-ಹಕ್ಕಿಗಳ, ಚಾರ-ಸಂಚರಿಸುವುದಕ್ಕೆ, ಸ್ಥಾನಮಾಗಿ-ಸ್ಥಳವಾಗಿರುತ್ತೆಂಬ ಅಭಿಪ್ರಾಯವು, ಎನಿಸಿರ್ದುದು-ಎನ್ನಿಸಿಕೊಂಡಿತ್ತು ‖ ಶಬ್ದದಲ್ಲೂ, ಶ್ಲೇಷವು, ಅರ್ಥದಲ್ಲೂ ಶ್ಲೇಷಾರ್ಥವು ಉಳ್ಳ ವಿರೋಧಾಭಾಸಾಲಂಕಾರವು.

ಅ‖ ವಿ‖ ಅಳಿದು + ಉಳಿದು = ಅಳಿದುಳಿದು, ಕ. ಲೋಪ. ಸ. ನೃಪನ + ದಳ =ನೃಪದಳ, ಷ. ತ. ವಿಮಲವಾದ, ಸರಸಿ-ವಿಮಲಸರಸಿ, ವಿ. ಪೂ. ಕ. ವಿ-ಪಕ್ಷಿ, ವಿಂಗಡ, ಕುದುರೆ, ಸೋಮ, ಯಾಜ್ಞಿಕ ‖೧೪‖

ಟೀ‖ ಅಗೇಂದ್ರ-ಪರ್ವತಗಳಿಗೆ ಧೊರೆಯಾದ ಹಿಮವಂತಂಗೆ, ಜೆ-ಜನಿಸಿದವಳಾದ ಹೈಮವತಿಯು, ಆಸರ-ಆ ಸರೋವರದ, ತಟದಲ್ಲಿ-ದಡದಲ್ಲಿ, ಆಶ್ರಮ-ತಪೋಯೋಗ್ಯಮಾದ, ನಿವಾಸಮಂ-ಎಲೆಮನೆಯನ್ನು, ಕಲ್ಪಿಸಿದಳ್-ಉಂಟುಮಾಡಿಕೊಂಡಳು, ಸುಧಾಸೂತಿ-ಅಮೃತಯುತನಾದ ಇಂದುವೆ, ಮೌಳಿಯಂ-ತಲೆಯಲ್ಲಿ ಧರಿಸಿರುವನಾದ ಚಂದ್ರಶೇಖರ ಸ್ವಾಮಿಯನ್ನು (ಪರಮೇಶ್ವರನನ್ನು), ಭಕ್ತಿಯಿಂ-ಭಕುತಿಯಿಂದ, ಭಜಿಸಿದಳ್-ಆರಾಧಿಸಿದಳು, ಶಂಭು - ಈಶ್ವರನು, ಮೆಚ್ಚಿದಂ-ಪಾರ್ವತಿಯ ಭಕ್ತಿಪುರಸ್ಸರವಾದ ಪ್ರೀತಿಗೆ ಪ್ರತ್ಯಕ್ಷನಾದನು, ವರಮುಂ-ಪ್ರಸಾದವನ್ನು (ಇಷ್ಟಾರ್ಥವನ್ನು), ಕೊಟ್ಟನು-ದಯೆಪಾಲಿಸಿದನು, ಇಲ್ಲಿಂದ - ಮುಂದೆ, ಮಿಾಸಲು - ಶಾಸ್ತ್ರಾನುಸಾರವಾಗಿ ನೆರವೇರಿಸುವ, ತಪಕೆ - ತಪಸ್ಸು ಮಾಡುವುದಕ್ಕೆ, ಎಡರು-ಬಾಧಕವು (ವಿಘ್ನವು), ಬಾರದಿರಲಿ-ಉಂಟಾಗದಿರಬೇಕು, ಎಂದು-ಎಂಬದಾಗಿ, ಬಳಿಕ-ತರುವಾಯ, ಓಸ

ದಿಲೆಗಳಿಂದ ವ್ಯಾಪ್ತವಾದದ್ದರಿಂದಲೂ (ಕುವಲಯ-ಭೂಮಿಗೆ ಆಧಾರಭೂತನಾದವನು ವಿಷ್ಣುವು), ವಿಷ್ಣುವಿನ ರೀತಿಯಿಂದ ಪ್ರಕಾಶಿಸುತ್ತಿದ್ದ ಪದ್ಮಾಕರವನ್ನು ಸಕಲ ಜನರಿಗೂ ಮಂಗಳ ಸ್ವರೂಪಳಾದ ಪಾರ್ವತಿಯು ಕಂಡಳು ‖ ೧೨ ‖ ಆ ಪದ್ಮಾಕರವು ಭ್ರಮರಗಳ ವರ್ಗಕ್ಕೆ ಆಹಾರಾದಿಗಳನ್ನು ಕೊಟ್ಟು ಕಾಪಾಡುತ್ತಲೂ (ಅಳಿಯ-ಮಗಳ ಗಂಡನ ವರ್ಗವನ್ನು ಉಪಚಾರಮಾಡುತ್ತಲೂ), ಸೂರ್ಯನ ವಿಶ್ವಾಸವನ್ನು ಹೊಂದಿಯೂ, (ಮಿತ್ರ-ಸ್ನೇಹದಿಂದಲೆ ಅನುಕೂಲವಾಗಿದ್ದುಕೊಂಡು), ಬಿಳ್ಳಿಯದಾದ ಅಲೆಗಳ ಸಮೂಹವನ್ನು ಮಮತೆಯಿಂದ ಕೇಳುತ್ತಲೂ (ಸುತ-ಮಕ್ಕಳ, ರಂಗ-ಆಟಪಾಟಗಳನ್ನು ಹರ್ಷದಿಂದ ನೋಡುತ್ತಲೂ), ಕಾಂತಿಯಿಂದ ಒಪ್ಪುತ್ತಿರುವ ನೈದಿಲೆಗಳಿಗೆ ಶಾಶ್ವತಗೊಳಿಸುವುದರಿಂದಲೂ (ಕುಲ-ಸತ್, ವಂಶದಲ್ಲಿ ಉತ್ತಮವಾದ ಏಳಿಗೆಯನ್ನು ಸ್ಥಿರಪಡಿಸುತ್ತಲು), ನೀರಿನ ಕೊನೆಯ ಭಾಗದಲ್ಲಿ ಮನೋಹರವಾಗಿಯೂ (ಕಾಂತಾ-ಪತ್ನಿಯಿಂದೊಡಗೂಡಿಯೂ), ಲಕ್ಷ್ಮೀದೇವಿಗೆ ಆವಾಸವಾದ ಸ್ಥಳವಾದ್ದರಿಂದಲೂ (ಲಕ್ಷ್ಮಿಗೆ-ಐಶ್ವರ್ಯಕ್ಕೆ ಆಶ್ರಯನಾದ್ದರಿಂದ) ಈ ರೀತಿಯಾಗಿ ಸಕಲವಿಧವಾದ ಸೌಭಾಗ್ಯವನ್ನು ಗೃಹಸ್ಥನಂತೆ ಹೊಂದಿ ನೋಟಕರ ಕಂಗಳಿಗೆ ಶೋಭಿಸುತ್ತಿತ್ತು ‖ ೧೩ ‖

ಳೊಂದನಾದೊಡಂ । ಬೇಸದುಮುಗಿಲ್ಗಳತಿಭರದಿಂಸಿಡಿಲ್ಮಿಂಚುಗಳಕೂಡೆಪೇರ್ಮಳೆಯನು ॥ ಸೂಸದುದಳದಪೂದಳಿರ್ಗಳಿಂ ಪಿನಸೊಂಪು । ಮಾಸದುತರುಗಳಲ್ಲಿಪಣ್ಗಾಯ್ಗಳಂಬೀಯಲೀಸದುಸಮಸ್ತಋತುಸಮಯಂಗಳಚಲೇಂದ್ರತನುಜೆತಪಮಿರೆಬನದೊಳು ॥೧೭॥ ಅಂಚೆಗಳೊತ್ತಲಗವಾಮಳೆಗಾಲದೋಳ್ಪೋಗಿ । ಲೆಗಳಿಂಚರವನುಳಿದಿರವುಮಾಗಿಯೋಳ್ಪೇಸುಗೆಯೊ । ಳುಂಚಿಗುರಿದೆಳೆವುಲ್ಮೃಗಂಗಳಿಗೆಬೀಯದಗಲದುಚಕ್ರವಾಕಮಿರುಳು ॥ ಹೊಂಚದಪಗಲ್ಗೂಗೆಸಂಪಗೆಯಲರ್ಗಳಿಂ । ಚಂಚರೀಕಂಗಳಡರದೆಮಾಣದೆಸೆನಕಮು । ಲಂಚಂದ್ರನುದಯಕುತ್ಪಲವಿನಕಿರಣಕೆಬಾಡದುಬನದೊಳುಮೆಯಿರಲ್ಕೆ ॥೧೮॥ ಕಾಡಾನೆಗ

ರಿಸದೆ-ಜಿಗುಪ್ಸೆಯನ್ನು ಹೊಂದದೆ, ಅಲ್ಲಿ-ಆ ಅರಣ್ಯಪ್ರದೇಶದಲ್ಲಿ. ಧೂರ್ಜಟಿಯ_ಪರಮೇಶ್ವರನ, ರಾಣಿ_ರಾಜ್ಞಿಯಾದ ಪಾರ್ವತೀ ದೇವಿಯು, ಬನದೊಳು - ಆ ಕಾಡಿನಲ್ಲಿ, ತಾಂ - ತಾನು, ಯೋಗಿನಿಯೊ (ದುರ್ಗಾದೇವಿಯಿಂದ ಹುಟ್ಟಿ ಆಕೆಯ ಸೇವೆಯನ್ನು ಮಾಡುವ ಎಂಟುಮಂದಿ ಸ್ತ್ರೀಯರಲ್ಲಿ ಒಬ್ಬಳೊ) ಯೋಗಸಿದ್ಧಿಯುಳ್ಳ ಸ್ತ್ರೀಯೋ, ಎಂಬ_ಎಂಬದಾಗಿ ಹೇಳುವ, ತೆರದಿಂದ_ಕ್ರಮದಿಂದ, ಚಿರಕಾಲಂ_ದೀರ್ಘಕಾಲದ ವರೆಗೂ, ಉಲ್ಲಾಸದಿಂ_ಸಂತಸದಿಂದ, ಇರುತಿರ್ದಳ್_ವಾಸಿಸುತ್ತಿದ್ದಳು.

ಅ॥ ವಿ॥ ಅದು, ಸರಸ್ಸು = ಆಸರಸ್ಸು, ಗ. ಸ. ಅಗ + ಇಂದ್ರ = ಆಗೇಂದ್ರ, ಗುಣ, ಸ. ಅಗಗಳ, ಇಂದ್ರ= ಅಗೇಂದ್ರ, ಷ. ತ. ॥೧೭॥

ಟೀ॥ ಇಂದು-ಹಿಮಕರನೆ, ಮೌಳಿಯ_ಶಿರಸ್ಸಿನಲ್ಲುಳ್ಳ ಚಂದ್ರಮೌಳೀಶ್ವರನ, ಪದ_ಅಡಿಗಳ, ಧ್ಯಾನಮಂ-ಚಿಂತನೆಯನ್ನು, ಮಾಡುವ-ನೆರವೇರಿಸುವ, ಆನಂದಂ_ಸಂತೋಷವು, ಇನ್ನೇತರ_ಇನ್ನು ಯಾವ ಬಗೆಯಾದ, ಅತಿಶಯಮೊ_ಶ್ರೇಷ್ಠವಾದುದೊ, ಶಿವನ_ಈಶ್ವರ, ಅರಮೈಯೊಳು_ಅರ್ಧಾಂಗದಲ್ಲಿ, ಬಂದಿರ್ದ ಒಟ್ಟುಗೂಡಿದ್ದ. ಸೌಖ್ಯಮಂ_ಆನಂದವನ್ನು, ಮರದು ಮರೆತುಹೋಗಿ, ಪಾರ್ವತಿ_ಹೈಮವತಿಯು, ತಪಸ್ವಿನಿಯಾಗಿ_ತಪವನ್ನೆಸಗುವಳಾಗಿ, ಅನುದಿನದೊಳು_ಪ್ರತಿದಿನವೂ, ತಿಳಿಗೊಳದೊಳು_ನಿರ್ಮಲವಾದ ನೀರ್ಗೊಳದಲ್ಲಿ, ಮಿಂದು-ಸ್ನಾನವಂಮಾಡಿ, ಜಪ_ಮಂತ್ರಾನುಷ್ಠಾನವನ್ನು, ತಪ_ತಪಸ್ಸನ್ನು, ಸಮಾಧಿ-ಅಂಗೀಕರಿಸುವಿಕೆಯಿಂದ, ನಿಯಮಂಗಳಿಂದ - ವಿಧ್ಯುಕ್ತರೀತಿಯಾಗಿ, (ಕಾಲಕಾಲಕ್ಕೆ ನೆರವೇರಿಸತಕ್ಕ ಕರ್ಮಗಳಿಂದ) ಅಂತರಾತ್ಮನಂ_ಸಕಲ ಪ್ರಾಣಿಗಳಲ್ಲಿಯೂ ಅಂತರ್ಯಾಮಿಯಾದ, ಸಕಲ_ಎಲ್ಲಾ, ಸುರ - ಆನಿಮಿಷರ, ವೃಂದ - ಗುಂಪಿನಿಂದ, ವಂದಿತ-ಎರಗಲ್ಪಟ್ಟ, ಪಾದಪದ್ಮನಂ_ಕಮಲದಂತೆ ಪಾದವುಳ್ಳವನಾದ, ಸು_ಒಳ್ಳೆಯದಾದ, ಜ್ಞಾನ_ತಿಳಿವಳಿಕೆಗೆ, ಸದ್ಮನಂ-ಗೃಹದಂತೆ ಯಿರುವವನಾದ ಈಶ್ವರನನ್ನು, ಕಾನನದೊಳು_ವನದಲ್ಲಿ, ಭಜಿಸಿದಳು_ಆರಾಧಿಸಿದಳು.

ಅ॥ ವಿ॥ ಸಗುಣಾರಾಧನೆ, ನಿರ್ಗುಣಾರಾಧನೆ. ಎಂಬೆರಡರಲ್ಲಿ, ಸಗುಣಾರಾಧನೆಯಲ್ಲಿ ಧ್ಯಾನಿಸಿದಳು, ತಪಸ್ಸನ್ನು ಆಚರಿಸುವವಳು_ತಪಸ್ವಿನಿ, ಏಕಮಾತ್ರೋಭವೇತ್ ಹ್ರಸ್ವಃ ದ್ವಿಮಾತ್ರಂದೀರ್ಘ ಉಚ್ಯತೇ । ತ್ರಿಮಾತ್ರಸ್ತುಪ್ಲುತಂಜ್ಞೇಯಂ ವ್ಯಂಜನಂತ್ವರ್ಧ ಮಾತ್ರಕಂ ॥ ಇಂದು_ಚಂದ್ರ, ಈಗ. ಇಂದುವೇ ಮೌಳಿಯಲ್ಲಿ ಉಳ್ಳವನು = ಇಂದುಮೌಳಿ ಬಹು. ಸ. ಸುರರ + ವೃಂದ=ಸುರವೃಂದ, ಷ. ತ. ವೃಂದದಿಂದ, ವಂದಿತ, ವೃಂದವಂದಿತ ತೃ. ತ. ॥೧೮॥

ಆ ನಿರ್ಮಲೋದಕದಿಂದ ಕಂಗೊಳಿಸುತ್ತಿದ್ದ ಸರಸ್ಸು, ರಾಜಹಂಸಗಳಿಂದ ಯುತವಾಗಿಯೂ, ಅಧಿಕವಾದ ಉದಕದಿಂದ ಕೂಡಿದ್ದಾಗಿಯೂ, ಕನ್ನೈದಿಲೆ ಪುಷ್ಪಗಳಿಂದ ಕೂಡಿದ್ದಾಗಿಯೂ, ಬಿಸಿಲು ಗಾಳಿ ಇವುಗಳಿಂದ ನೀರು ತಗ್ಗುತ್ತಿದ್ದರೂ, ಧ್ರುವ ಜಲದಿಂದ ಪ್ರಕಾಶಿಸುತ್ತಲೂ, ಪಕ್ಷಿಗಳಿಗೆ ಸಂಚಾರಮಾಡುವುದಕ್ಕೆ ಅನುಕೂಲವಾದ ಸ್ಥಳವಾಗಿತ್ತು ॥೧೭॥ ಆಗ ಪರ್ವತರಾಜನ ಕುವರಿಯಾದ ಪಾರ್ವತೀದೇವಿಯು ಆ ಸರೋವರದ ತೀರದಲ್ಲಿ ತಪಸ್ಸಿಗೆ ಯೋಗ್ಯವಾದ ಸ್ಥಳವನ್ನು ಮಾಡಿಕೊಂಡು ಅಮೃತ ಕಲೆಗಳಿಂದಯುತನಾದ ಚಂದ್ರನನ್ನು ಧರಿಸಿರ್ಪ ಚಂದ್ರಶೇಖರನನ್ನು ಹೆಚ್ಚಾದ ಭಕ್ತಿಪುರಸ್ಸರವಾಗಿ ಸೇವಿಸಿದಳು. ಈಶ್ವರನು ಪಾರ್ವತಿಯ ಭಕ್ತಿಯತಿಶಯವಾದ ಪ್ರೀತಿಗೆ ಮೆಚ್ಚಿ ಪ್ರತ್ಯಕ್ಷನಾಗಿ ಆಕೆಯ ಇಷ್ಟಾರ್ಥವನ್ನು ನೆರವೇರಿಸಿದವನಾಗಲು ಪಾರ್ವತೀದೇವಿಯು ತನ್ನ ತಪಸ್ಸಿಗೆ ಯಾವ ವಿಘ್ನವೂ ಬಾರದಂತೆ ಬೇಜಾರುಪಡದೆ ಆ ಅರಣ್ಯದಲ್ಲಿ ಯೋಗಿನಿಯಂತೆ ಕ್ರಮವಾಗಿ ಚಿರಕಾಲ ಉಲ್ಲಾಸದಿಂದ ಇರುತ್ತಿದ್ದಳು ॥೧೮॥ ಆಗ ಚಂದ್ರಮೌಳೀಶ್ವರನ ಭಜನೆಯೆಂಬುವುದು ಇನ್ನೆಂತಹ ಆನಂದವನ್ನು ಉಂಟುಮಾಡುವುದೊ! ಶ್ರೀ ಪರಮೇಶ್ವರನ ಅರ್ಧಾಂಗದಲ್ಲಿ ಸೇರಿದ್ದ ಸುಖವನ್ನು ಮರೆತುಬಿಟ್ಟು ಹೈಮವತಿಯು ತಪವನ್ನೆಸಗುವಳಾಗಿ ಪ್ರತಿನಿತ್ಯದಲ್ಲಿಯೂ ನಿರ್ಮಲವಾದ ನೀರ್ಗೊಳದಲ್ಲಿ ಸ್ನಾನವಂ ಮಾಡಿ ಜಪ ತಪ, ಇವುಗಳನ್ನು ಅಂಗೀಕರಿಸುವಿಕೆಯಿಂದ ವಿಧಿಗನುಸಾರವಾಗಿ ಕಾಲಕಾಲಕ್ಕೆ ಕರ್ಮಗಳನ್ನು ನೆರವೇರಿಸಿ, ಸಕಲ ಪ್ರಾಣಿಗಳಲ್ಲೂ ಅಂತರಾತ್ಮನಾದ ಸಕಲ ದೇವಾದಿದೇವತೆಗಳಿಂದಲೂ, ನರಮನುಷ್ಯರಿಂದಲೂ ನಮಸ್ಕರಿಸಲ್ಪಟ್ಟ ಪಾದಾರವಿಂದನಾದ ಸುಜ್ಞಾನಕ್ಕೆ ಗೃಹದಂತಿರುವವನಾದ ಪರಮೇಶ್ವರನನ್ನು ಆ ಅರಣ್ಯದಲ್ಲಿರುವ ತಪೋವನದಲ್ಲಿ ಆರಾಧಿಸುತ್ತಿದ್ದಳು ॥೧೮॥

ಕ್ಕೇಸರಿಗಳಮರಿಗಳ್ಗೆನೊಳೆ | ಯೂಡುವುವುವುಲಿಗಳೊಳ್ಳೆದೆವುಲ್ಲೆಗಳ್ಸರಸ | ವಾಡುವುವುಸಾವುಮುಂಗುಸಿಗಳೊಡಗೂಡುವವು
ಮೂಷಕಂಮೇಲೆಬಿದ್ದು | ಕಾಡುವದುಮಾರ್ಜಾಲನುಂಮೊಲಂತೋಳನಂ| ಬೇಡುನವುಮೇವುಗಳನೊಂದುಬಳಿಯೋಳ್ಗೂಡು |
ಮಾಡುನವುಪದ್ಮುಕಾಗೆಗಳಿಂತೊಸಾತ್ತ್ವಿಕಮುಪರ್ಣೆಯತಪೋಬನದೊಳು || ಪರಿಚಯಮುಂಮಾಡುನವುಕೋಡಗಂಗಳಿ | ರ್ದರೆ
ಗಿಳಿಗಳಾಡುನವುಕೂಡೆಸರಸೋಕ್ತಿಯಿಂ | ಬರಿಕ್ಕೆಗಳಂನೀಡಿಪಣ್ಣಾಯಪೂಗಳಂದಂತಿಗಳ್ಕೊಡುತಿರ್ಪವು || ಪಿರಿದುಬಯುಪಿ

ಟಿ|| ಅಚಲೇಂದ್ರನ–ಹಿಮವಂತನ, ತನುಜೆ–ಪುತ್ರಿಯಾದ, ಪಾರ್ವತಿಯು, ಬನದೊಳು–ಕಾನನದಲ್ಲಿ, ತಪಂ–ತಪಸ್ಸನ್ನು, ಇರೆ-ಗೈಯ್ಯುತ್ತಿರಲು, ಆಕಾನನದೊಳು–ಆ ತಪಸ್ಸು ಮಾಡುವ ಆರಣ್ಯದಲ್ಲಿ, ಬಿರುಸುಗಾಳಿ – ಬಿರುಸಾದ ವಾಯುವು (ಚಂಡ ಮಾರುತವು), ಬೀಸದು – ಚಲಸುವುದಿಲ್ಲ, ಬಿಸಿಯ – ಕಾಖವಾದ, ಬಿಸಿಲು – ಸೂರ್ಯನ ಬಿಸಲು, ಅವನಿಯಂ–ಭೂಮಿಯನ್ನು, ಕಾಸದು-ಸುಡುವುದಿಲ್ಲ, ದವಾಗ್ನಿ–ಕಾಳ್ಗಿಚ್ಚು, ಪುಲ್ಗಳೊಳು–ತೃಣಪ್ರದೇಶದಲ್ಲಿ, ಒಂದಂ ಆದಡಂ – ಒಂದು ವಸ್ತುವನ್ನಾದರೂ, ಬೇಸದು – ಬೇಯಿಸುವುದಿಲ್ಲ (ಸುಡಲಾರದು), ಮುಗಿಲ್ಗಳ್ – ಮೋಡಗಳು, ಅತಿ–ಹೆಚ್ಚಾದ, ಭರದಿಂ–ರಭಸದಿಂದ, ಸಿಡಿಲು – ಅಶನಿ ಪಾತವು, ಮಿಂಚುಗಳ – ವಿದ್ಯುತ್ತುಗಳ, (ಹೊಳವುಗಳು) ಕೂಡೆ–ಸಂಗಡ, ಪೇರ್ಮಳೆಯನು–ದೊಡ್ಡ ವೃಷ್ಟಿಯನ್ನು, ಸೂಸದು – ಕರೆಯುವುದಿಲ್ಲ (ಸುರಿಸುವುದಿಲ್ಲ), ದಳದ – ಒಟ್ಟಿಗೆ ಕೂಡಿರುವ ರೇಕಿನ, ಪೂದಳಿರ್ಗಳ–ಹೂ ಮತ್ತು ಚಿಗುರು ಮೊದಲಾದವುಗಳ, ಇಂಪಿನ – ಚಂದದ, ಸೊಂಪು – ಅಲಂಕಾರವು, ಮಾಸದು – ಕಳೆಗುಂದುವುದಿಲ್ಲ, ಅಲ್ಲಿ–ಆ ತಪೋವನದಲ್ಲಿ, ತರುಗಳು – ವೃಕ್ಷಗಳು, ಪಣ್ಕಾಯ್ಗಳಂ – ಹಣ್ಣು ಮತ್ತು ಕಾಯಿ ಇವುಗಳನ್ನು, ಬೀಯಲೀಸದು–ಬಂಜೆಗಿಡಗಳಾಗಿ ಮಾಡವು (ಫಲವಿಲ್ಲದವುಗಳಾಗಿ ಮಾಡುವುದಿಲ್ಲ), ಸಮಸ್ತ–ಸಕಲ ವಿಧವಾದ, ಋತುಸಮಯಂ – ಋತುಗಳ ಧರ್ಮವು ಹೊಂದಿದ್ದವು ||

ಅ|| ವಿ|| (ಚೈತ್ರ–ವೈಶಾಖ) ವಸಂತಋತು, (ಜ್ಯೇಷ್ಠ–ಆಷಾಢ) ಗ್ರೀಷ್ಮಋತು, (ಶ್ರಾವಣ–ಭಾದ್ರಪದ) ವರ್ಷಋತು, (ಆಶ್ವಯುಜ-ಕಾರ್ತಿಕ) ಶರದೃತು, (ಮಾರ್ಗಶಿರ–ಪುಷ್ಯ) ಹಿಮಂತಋತು, (ಮಾಘ–ಫಾಲ್ಗುಣ) ಶಿಶಿರಋತು, ಪೂಗಳ್+ತಳಿರ್ಗ್ = ಪೂತಳಿರ್ಗಲ್, ದ್ವಂ. ಸ. ಇಂದ್ರ – ದೊರೆ, ದೇವೇಂದ್ರ, ಬೆಟ್ಟತ್ತು ಗಾಳಿ – ಬಿರುಗಾಳಿ, ವಿ. ಪೂ. ಕ. ಸಿಡಿಲೂ ಮಿಂಚೂ-ಸಿಡಿಲ್ಮಿಂಚುಗಳು, ದ್ವಂ. ಸ. ||೧೭||

ಟೀ|| ಉಮೆ – ಕಾತ್ಯಾಯನಿಯು, ಬನದೊಳು – ಅರಣ್ಯದಲ್ಲಿ, ಇರಲ್ಕೆ – ಚಂದ್ರಮೌಳಿಯಂ ಕುರಿತು ಧ್ಯಾನಿಸುತ್ತಿರಲು, ಆ ಮಳೆಗಾಲದೊಳ್ – ಆ ವರ್ಷರ್ತುವಿನಲ್ಲಿ, (ವರ್ಷಾಕಾಲದಲ್ಲಿ), ಅಂಚೆಗಳ್–ಮರಾಳಗಳು, ತೊಲಗವು–ಮಳೆಗಾಲವು ತಮ್ಮಗಳಿಗೆ ಅನಾರೋಗ್ಯವಾಗಿದ್ದರೂ, ಆ ಸ್ಥಳವನ್ನು ಬಿಟ್ಟು ಹೋಗಲಾರವು, ಮಾಗಿಯೋಳ್–ಮಾಗಿಯಕಾಲದಲ್ಲಿ, (ಹಿಮಂತ ಋತುವಿನಲ್ಲಿ), ಕೋಗಿಲು–ಪರಪುಟ್ಟವು, ಇಂಚರಮಂ – ತನ್ನ ಮಧುರಧ್ವನಿಯನ್ನು, ಉಳಿದು – ತ್ಯಜಿಸಿ, ಇರವು – ಇರುತ್ತಿರಲಿಲ್ಲ, [ಕೋಗಿಲೆ ಪಕ್ಷಿಗಳಿಗೆ ಹಿಮಂತಋತುವು ಅಸೌಖ್ಯವಾದದ್ದು ಆಗಿದ್ದರೂ, ಪಾರ್ವತಿಯು ತಪಶ್ಶಕ್ತಿಯಿಂದ ಆ ಕಾಲದಲ್ಲೂ ಕೂಗುತ್ತ ಇದ್ದವು], ಬೇಸಿಗೆಯೊಳು–ಚೈತ್ರ ವೈಶಾಖಮಾಸಗಳಲ್ಲಿಯೂ, ಚಿಗುರಿದ–ಅಂಕುರದಿಂದ ಕೂಡಿ ಬೆಳೆದಿರುವ, ಎಳೆ – ಎಳೆಯದಾದ, ಪುಲ್ – ತೃಣವು, ಮೃಗಂಗಳಿಗೆ – ಪಶ್ವಾದಿಪ್ರಾಣಿಗಳಿಗೆ, ಬೀಯದು – ಇಲ್ಲದೆ ಇರುತ್ತಿರಲಿಲ್ಲ [ಬಹಳವಾಗಿತ್ತೆಂಬ ಭಾವವು], ಇರುಳು – ರಾತ್ರಿಕಾಲದಲ್ಲಿ, ಚಕ್ರವಾಕಂ – ರಥಾಂಗಗಳು, ಅಗಲದು–ಗಂಡುಹೆಣ್ಣು ಬೇರೆಯಾಗವು [ರಾತ್ರಿಯಾದಕೂಡಲೆ ದಂಪತಿಪಕ್ಷಿಗಳು ಒಂದನ್ನೊಂದು ಅಗಲುವವು ಇಲ್ಲಿ ಹಾಗಿರಲಿಲ್ಲ], ಪಗಲು – ಹಗಲುಕಾಲದಲ್ಲಿ, ಗೂಗೆ ಕೌಶಿಕಪಕ್ಷಿಯು, [ಗೂಬೆಯು], ಹೊಂಚದು – ಹೊಂಚುಕಾಯುತ್ತಿರದು, ತನ್ನ ಆಹಾರವನ್ನು ಹುಡುಕುತ್ತಿರುವುದು, ಚಂಚರೀಕಂಗಳು – ಅಳಿಗಳು, ಸಂಪಗೆಯಲರ್ಗಳಂ–ಚಂಪಕಾ ಪುಷ್ಪಗಳನ್ನು, ಅಡರದೆ–ಆದರಲ್ಲಿ ಹೊಗದೆ, ಇರದು–ಇರುತ್ತಿರಲಿಲ್ಲ. ಎಸೆವ – ಶೋಭಿಸುವ, ಕಮಲಂ – ತಾವರೆಯು, ಚಂದ್ರನ – ಶೀತರೋಚಿಯ, ಉದಯಕ್ಕೆ – ಆವಿರ್ಭವಿಸಿದುದಕ್ಕೆ

ಹಿಮಂತನ ಪುತ್ರಿಯಾದ ಪಾರ್ವತಿಯು ಆ ಅರಣ್ಯದಲ್ಲಿ ತಪಸ್ಸನ್ನು ಮಾಡುತ್ತಿರುವ ಕಾಲದಲ್ಲಿ ಆ ಕಾನನದಲ್ಲಿ ಚಂಡಮಾರುತವು ಬೀಸದೆ ನಿಧಾನವಾಗಿ ಬೀಸುತ್ತಿತ್ತು, ಸೂರ್ಯನ ತಾಪವು ತೀಕ್ಷ್ಣವಾಗಿರದೆ ಶಾಂತವಾಗಿದ್ದಿತು. (ಭೂಮಿಯನ್ನು ವಿಶೇಷವಾಗಿ ಕಾವುಮಾಡುತ್ತಿರಲಿಲ್ಲ, ಮುಗಿಲ್ಗಳು ಕಠಿಣವಾದ ಗುಡುಗು, ಸಿಡಿಲು, ಮಿಂಚನಿಂದಾವೃತವಾದ ಬಿರುಮಳೆಯನ್ನು ಸುರಿಸುತ್ತಿರಲಿಲ್ಲ. ದವಾಗ್ನಿಯು ಸವಿಧಸ್ಥಳಂಗಳಲ್ಲಿ ತನ್ನ ಶಕ್ತಿಯನ್ನು ತೋರಿಸುತ್ತಿರಲಿಲ್ಲ. ಯಾವಾಗ್ಯೂ ಭ್ರಮರಗಳು ಮಕರಂದಕ್ಕಾಗಿ ಪದ್ಮಗಳಲ್ಲಿ ಸೇರುತ್ತಿದ್ದವು. ೩H ವೃಕ್ಷಾದಿಗಳು ಬಂಜೆಯಾಗಿರದೆ ಸರ್ವಕಾಲದಲ್ಲೂ ಫಲ, ಪುಷ್ಪ ಅಂಕುರಾದಿಗಳಿಂದ ಶೋಭಿಸುತ್ತಿರುವವು, ಆಯಾ ಋತುಗಳು ಋತುಧರ್ಮಕ್ಕೆ ಅನುಸಾರವಾಗಿ ನಡಿಸುತ್ತಿದ್ದವು || ೧೭ || ಈ ರೀತಿ

ದವಸ್ತುಗಳನಿತ್ತಪವುಕಲ್ಪ | ತರುಗಳೆಡೆಯಾಡದಾಸರ್ಗಳಂಕಳೆದಪವುಪರಿಮುಳದೆಲರ್ಗಳಗಜೆಯ | ತಪೋವನದೊಳಾವಾಸಮಾ

ಉತ್ಪಲಂ-ನೈದಿಲೆಪುಷ್ಪವು, ಇನ-ಭಾಸ್ಕರನ, ಕಿರಣಕೆ-ಪ್ರಕಾಶಕ್ಕೆ, ಬಾಡದು-ಒಣಗಿ ಹೋಗದು, (ಮುಚ್ಚಿಕೊಳ್ಳುವುದು.)

ಅ|| ವಿ|| ಷಟ್+ಋತು=ಷಡ್ರುತು, ಜ. ಸಂ. ಮೃಗ-ಜಿಂಕೆ, ಕಾಡುಮೃಗ, ಗೂಗೆ ದ್ಭ. ಘೂಕ ತ್ಸ. ರಾತ್ರಿಯಲ್ಲಿ ಕನುಲಗಳು ಮುಕುಳಿತವಾಗದಿರುವುದು, ಹಗಲಿನಲ್ಲಿ ಉತ್ಪಲಗಳು ವಿಕಸಿಸುವುದು, ಗೂಬೆಗಳು ಹಗಲಲ್ಲಿ ಆಹಾರವನ್ನು ಹುಡುಕುವುದು, ಅಂಚೆಗಳು ಮಳೆಗಾಲದಲ್ಲಿ ಮಾನಸ ಸರಸ್ಸಿಗೆ ಹೊರಡದೆ ಇರುವುದು ಈ ವಿರೋಧಾತಿಶಯಗಳೆಲ್ಲವೂ ಪಾರ್ವತೀದೇವಿಯ ತಪಶ್ಶಕ್ತಿಯ ಅತಿಶಯದಿಂದ ನಡೆಯುತ್ತಿದ್ದವು ||೧೮||

ಟೀ|| ಕಾಡಾನೆಗಳ್-ವನಗಜಗಳು, ಕೇಸರಿಗಳ್- ಮೃಗೇಂದ್ರಗಳ, ಮರಿಗಳ್ಗೆ-ಮರಿಗಳಿಗೆ, ಮೊಲೆಯ-ಸ್ತನ್ಯಕ್ಕಾಗಿ ಮೊಲೆಯನ್ನು, ಊಡುನವು-ನೀಡುವುವು, ಪುಲಿಗಳೊಳ್-ಶಾರ್ದೂಲಗಳೊಂದಿಗೆ, ಪುಲ್ಲೆಗಳ್-ಎರಳೆಗಳು, (ಜಿಂಕೆಗಳು) ಇದೆ-ಬಹುವಾಗಿ, ಸರಸವ-ವಿನೋದಗಳನ್ನು, ಆಡುವುವು-ಆಡುತ್ತಲಿರುವುವು, ಪಾವು-ಹಾವುಗಳು, ಮುಂಗಿಲಿಗಳ-ನಕುಲಗಳ, ಒಡಗೂಡುವವು-ಸಂಗಡ ಸೇರಿಕೊಳ್ಳುವವು, ಮೂಷಕಂ-ಆಖುವು, (ಇಲಿಯು) ಮಾರ್ಜಾಲಮಂ-ಬಿಡಾಲವನ್ನು, (ಓತುವನ್ನು) ಮೇಲೆ ಬಿದ್ದು-ಆದರ ಮೇಲ್ಗಡೆ ಬಿದ್ದುಕೊಂಡು, ಕಾಡುವುದು-ಬಾಧೆಪಡಿಸುವುದು, ಮೊಲಂ-ಶಶವು, ತೋಳನಂ-ತೋಳನೆಂಬ ಮೃಗವನ್ನು ನೋಡಿ, ಮೇವುಗಳನು-ಆಹಾರಾದಿಗಳನ್ನು, ಬೇಡುನವು-ಯಾಚಿಸುನವು, ಪದ್ದು-ರಣಹದ್ದು ಮೊದಲಾದವುಗಳು, ಕಾಗೆಗಳು-ಚಿರಜೀವಿಗಳು, (ವಾಯಸವೇ ಮೊದಲಾದವುಗಳು) ಒಂದು ಬಳಿಯೊಳ್-ಒಕ್ಕಡೆಯಲ್ಲಿ, ಗೂಡುಮಾಡುವವು-ವಾಸಿಸಲು ಗೂಡನ್ನು ಮಾಡುವವು, ಇಕ್ಕೆ-ಸ್ಥಳವನ್ನು ಮಾಡುವವು, ಅಪರ್ಣೆಯ-ಅಂಬಿಕೆಯ, ತಪೋಬನದೊಳ್-ತಪಸ್ಸನ್ನು ಮಾಡುತ್ತಿರುವ ಬನದಲ್ಲಿ, ಸಾತ್ವಿಕಂ-ನಿರ್ದುಷ್ಟವಾದ ಗುಣವು, ಎಂತೊ-ಅದು ಎಷ್ಟು ಆಶ್ಚರ್ಯಕರವಾದುದೊ.

ಅ|| ವಿ|| ಕೇಸರ-ಸಿಂಹದ ಕತ್ತಿನ ಸುತ್ತಲಿರುವ ಕೂದಲಿಗೆ ಕೇಸರವೆಂದು ಹೆಸರು, ಕೇಸರುಳ್ಳದ್ದು ಕೇಸರಿ, ಕಾಕ ತ್ಸ. ಕಾಗೆ ದ್ಭ. ಕೋಕಿಲ ತ್ಸ. ಕೋಗಿಲೆ ದ್ಭ. ಗೃಧ್ರ ತ್ಸ. ಹದ್ದು ದ್ಭ. ||೧೯||

ಟೀ|| ಅಗಜೆಯ-ದಾಕ್ಷಾಯಣಿಯ, ತಪೋವನದೊಳು- ತಪಸ್ಸು ಮಾಡುವ ಅರಣ್ಯದಲ್ಲಿ, ಆವಾಸಂ-ವಾಸಮಾಡಿಕೊಂಡು, ಇರ್ಪ-ಇರುತ್ತಿರುವ, ಅನರ್ಗೆ-ಅಂಥವರಿಗೆ, ಕೋಡಗಗಳ್-ಮರ್ಕಟಗಳು, ಇರ್ದಡೆ-ಇರುತ್ತಿದ್ದರೆ, ಪರಿಚರ್ಯೆಯಂ-ಸೇವೆಯ ಕೆಲಸವನ್ನು, ಮಾಡುವವು-ಗೈಯ್ಯುವವು, ಗಿಳಿಗಳು-ಕೀರಗಳು, ಕೂಡೆ-ಒಡನೆಯೇ, ಸರಸ-ರಸಯುಕ್ತವಾದ, ಉಕ್ತಿಯಿಂ-ಹೇಳುವಿಕೆಯಿಂದ, ಮಾತನ್ನು ಆಡುವವು-ಆಡುತ್ತಿರುನವು, ದಂತಿಗಳ್-ಇಭಗಳು, (ಆನೆಗಳು) ಬರಿಕೈಗಳಂ-ಬರಿದಾದ ಸೊಂಡಿಲನ್ನು, ನೀಡೆ- ಮುಂದಕ್ಕೆ ಚಾಚಿಕ್ಕೊಂಡರೆ, ಪಣ್ಗಾಯಿ ಪೂಗಳಂ- ಫಲಪುಷ್ಪಾದಿಗಳನ್ನು, ಕೊಡುತ- ಕೊಡುತ್ತ, ಇರ್ಪವು-ಇರುತ್ತಿರುನವು, ಕಲ್ಪತರುಗಳು-ಕಲ್ಪ ವೃಕ್ಷಗಳು, (ಅಲ್ಲಿದ್ದುಕ್ಕೊಂಡು) ಪಿರಿದು-ಅಧಿಕವಾಗಿ, ಬಯಸಿದ-ಅಪೇಕ್ಷಿಸಿದ, ವಸುಗಳನು- ವಸ್ತುಗಳನ್ನು, ಇತ್ತಪವು- ಈಯ್ಯುವವು, ಅಗಜೆಯ - ಕಾತ್ಯಾಯನಿಯ, ತಪೋವನದೊಳು-ತಪ

ಯಾಗಿ ಕಾತ್ಯಾಯಿನಿಯು ತಪೋವನದಲ್ಲಿ ಚಂದ್ರಶೇಖರನಂ ಕುರಿತು ತಪವನ್ನು ಮಾಡುತ್ತಿರಲು, ವರ್ಷಋತುವು ಅಂಚೆಗಳಿಗೆ ಅನಾರೋಗ್ಯವಾಗಿದ್ದರೂ ಮಾನಸ ಸರಸ್ಸಿಗೆ ಹೋಗದೆ ಅಲ್ಲಿಯೇ ಇರುತ್ತಿದ್ದವು, ಮಾಗಿಯ ಕಾಲದಲ್ಲಿ ಕೋಕಿಲ ಪಕ್ಷಿಗಳ ಕಂಠವು ಹುಣ್ಣಾಗಿರುತ್ತದೆ. ಹಾಗಿದ್ದರೂ ಮಾಗಿಯ ಕಾಲದಲ್ಲೂ ಮಧುರಧ್ವನಿ ಮಾಡುತ್ತಿದ್ದವು ಚೈತ್ರ ವೈಶಾಖಮಾಸಂಗಳಲ್ಲಿ ಬಿಸಲಿನ ತಾಪದಿಂದ ತೃಣಾದಿಯಾಗಿ ಸಕಲವೂ ಒಣಗಿಹೋಗ-ವುದಾಗಿದ್ದರೂ, ಮೃಗಪಕ್ಷ್ಯಾದಿಗಳಿಗೆ ಚಿಗುರಿನಿಂದ ಕೂಡಿದ ಹುಲ್ಲು ಮೊದಲಾದುವು ಸಮೃದ್ಧಿಯಾಗಿರುತ್ತಿತ್ತು, ರಾತ್ರಿಯಕಾಲದಲ್ಲಿ ಚಕ್ರವಾಕಂಗಳು ಗಂಡು ಹೆಣ್ಣು ಬೇರೆಯಾಗುವದು ಸ್ವಾಭಾವಿಕವಾಗಿದ್ದರೂ ಹಗಲಿನಂತೆಯೆ ಒಟ್ಟುಗೂಡಿದ್ದವು, ಹಗಲಲ್ಲಿ ಗೂಗೆಗಳು ಆಹಾರಕ್ಕಾಗಿ ಸಂಚರಿಸದಾವರೂ ಸಂಚರಿಸುತ್ತಿದ್ದವು ಭ್ರಮರಗಳು ಚಂಪಕಾ ಪುಷ್ಪಗಳಿಗೆ ಎಡರುತ್ತಿದ್ದವು. ರಾತ್ರಿ ಕಾಲದಲ್ಲಿ ಕನುಲವೂ ಹಗಲಿನಲ್ಲಿ ನೈದಿಲೆಯೂ ಮುಕುಳಿತವಾಗುವವಾದರೂ ಸರ್ವಕಾಲದಲ್ಲಿಯೂ ವಿಕಸಿತವಾಗಿಯೆ ಇರುವವು ||೧೮|| ಮತ್ತು ಕಾಡಾನೆಗಳು ಸಿಂಹದ ಮರಿಗಳಿಗೆ ಮೊಲೆಯನ್ನೂಡುವವು, ಹುಲಿಗಳೊಂದಿಗೆ ಜಿಂಕೆಗಳು ಸರಸವಾಗಿ ಆಡಿಕೊಂಡಿರುವವು, ಹಾವುಗಳು ಮುಂಗುಸಿಗಳಿಗೆ ಆಹಾರಾದಿಗಳನ್ನು ತಂದುಕೊಡುವವು, ಇಲಿಗಳು ಬೆಕ್ಕುಗಳನ್ನು ಕಾಡುತ್ತಿರುವವು, ಮೊಲವು ತೋಳ ಮೊದಲಾದುವನ್ನು ನೋಡಿ ಆಹಾರಾದಿಗಳನ್ನು ಯಾಚಿಸುವವು. ಹದ್ದು, ರಣಹದ್ದು ಮೊದಲಾದುವು ಸ್ನೇಹವಾಗಿರುತ್ತ ಕಾಗೆಗಳ ಗೂಡುಗಳ ಬಳಿಯಲ್ಲಿ ತಮ್ಮ ಗೂಡುಗಳನ್ನು ಮಾಡುನವು, ಈ ಮೇಲಿನ ಗುಣಾತಿಶಯಗಳು ಪಾರ್ವತೀದೇವಿಯ ತಪಃ ಪ್ರಭಾವದಿಂದ ಹೊಂದಿದ್ದವು ||೧೯|| ಆಗ ಗಿರಿಜೆಯು ತಪಸ್ಸುಮಾಡುತ್ತಿದ್ದ ತಪೋವನದಲ್ಲಿ, ಯಾರಾದರೂ ಇದ್ದರೆ, ಕೋಡಗಂಗಳು ಉಪಚಾರಾದಿಗಳನ್ನೂ, ಮ

ಗಿರ್ಪನರ್ಗೆ ‖೨೦‖ ಅಷ್ಟಯೋಗಿನಿಯರಣಿಮಾದಿಗಳ್ವಿನುತಚೌ । ಷಷ್ಟಿಕಲೆಗಳ್ಸಪ್ತಮಾತೃಗಳ್ಜಗದೊಳು । ತ್ಕೃಷ್ಟನದಿಗಳ್ದಿವಾರಾತ್ರಿಗಳ್ತಿಥಿತಾರಕಾಪ್ಸರೋವಿಸರಂಗಳು ‖ ತುಷ್ಟಿದಯೆಪುಷ್ಟಿಧೃತಿಮತಿಶಾಂತಿದಾಂತಿಕೃತಿ । ನಿಷ್ಠೆನುತಿಗಳ್ಸಕಲಮಂತ್ರವರಶಕ್ತಿಗ । ಳ್ಸೃಷ್ಟಿಯಸಮಸ್ತಾಭಿಮಾನದೇವತೆಯರಿರ್ದರುದೇವಿಯಂಸೇವಿಸಿ ‖ ೨೧ ‖ ಆವನದೊಳೆಸಗಿದಳ್ಪಾವನ

---

ಸ್ನುಮಾಡುವ ವನದಲ್ಲಿ (ಕಾಡಿನಲ್ಲಿ) ಆವಾಸ-ವಾಸಮಾಡಿಕ್ಕೊಂಡು, ಇರ್ಪ-ಇರುತ್ತಿರುವ, ಅವರ್ಗೆ-ಅಂಥವರಿಗೆ, ಪರಿಮಳದ-ಒಳ್ಳೆಯ ವಾಸನೆಯಿಂದ ಸೇರಿದ, ಎಲರ್ಗಳ್-ಗಾಳಿಗಳು, ಎಡೆಯಾಡದ-ಸಂಚರಿಸದ, ಆಸರ್ಗಳಂ-ಬೇಜಾರನ್ನು, ಕಳೆದಪವು-ಪರಿಹಾರಮಾಡುವುವು.

ಅ‖ ವಿ‖ ಕಲ್ಪವೃಕ್ಷ-ಕೇಳಿದ ವಸ್ತುಗಳನ್ನು ನೀಡುವ ಮರ, ದಂತವುಳ್ಳದ್ದು-ದಂತಿ (ಆನೆ) ತರು-ವೃಕ್ಷ, ತುರು-ಆಕಳು, ಕರ-ಕೈ, ಕಪ್ಪ, ಕಿರಣ, ಆನೆಯ ಸೊಂಡಿಲು ‖೨೦‖

ಟೀ‖ ಅಷ್ಟಯೋಗಿನಿಯರ್- ಎಂಟುಜನ ಯೋಗಿನಿಯರಾದ, ಅಣಿಮಾದಿಗಳ್-ಅಣಿಮಾದಿ ಈಶತ್ವಾದಿಗಳೆಂಬ ಎಂಟು ವಿಧವಾದ ಯೋಗಿನಿಯರು, ವಿನುತ-ಹೊಗಳಲ್ಪಟ್ಟ, ಚೌಷಷ್ಟಿಕಲೆ-ಅರವತ್ತು ನಾಲ್ಕು ಬಗೆಗಳಾದ ವಿದ್ಯೆಗಳು, ಸಪ್ತ-ಏಳಾದ, ಮಾತೃಕೆಯರು-ಬ್ರಾಹ್ಮಿಯೆ ಮೊದಲಾದ ಮಾತೃಕೆಯರು, ಜಗದೊಳು- ಪ್ರಪಂಚದಲ್ಲಿ, ಉತ್ಕೃಷ್ಟ-ಯೋಗ್ಯಗಳಾದ, ನದಿಗಳು-ಗಂಗಾ ಯಮುನಾದಿ ನದಿಗಳ ಅಧಿ ದೇವತೆಯರು, ಹಗಲು ರಾತ್ರಿಗಳ್-ಹಗಲು ಮತ್ತು ರಾತ್ರಿಗಳೆಂಬ ಅಭಿಮಾನ ದೇವತೆಯರು, ತಿಥಿ-ತಿಥಿಯು, (ದಿನವು) ತಾರಕ-ನಕ್ಷತ್ರವು, ಅಪ್ಸರ-ದೇವತಾ ಸ್ತ್ರೀಯರು, (ರಂಭಾದಿ ದೇವತಾ ಸ್ತ್ರೀಯರು) ವಿಸರಂಗಳು-ಗುಂಪುಗಳು, ತುಷ್ಟಿ-ತೃಪ್ತಿ ಎಂಬ ಅಭಿಮಾನ ದೇವತೆಯು, ದಯೆ-ದಯಾಭಿಮಾನಿ ದೇವತೆಯು, ಪುಷ್ಟಿ-ಏಳಿಗೆಯ ಅಭಿಮಾನಿ ದೇವತೆಯು, ಧೃತಿ-ಧೈರ್ಯವೆಂಬ ಅಭಿಮಾನ ದೇವತೆಯು, ಮತಿ-ತಿಳಿವಳಿಕೆ ಎಂಬ ಅಭಿಮಾನ ದೇವತೆಯು, ಶಾಂತಿ-ತಾಳ್ಮೆಯೆಂಬಭಿಮಾನದೇವತೆಯು, ದಾಂತಿ-ಪಂಚೇಂದ್ರಿಯ ನಿಗ್ರಹವೆಂಬ ಅಭಿಮಾನ ದೇವತೆಯು, ಕೃತಿ-ಪ್ರಯತ್ನವೆಂಬ ಅಭಿಮಾನ ದೇವತೆಯು, ನಿಷ್ಠೆ-ಯಮವೆಂಬಭಿಮಾನದೇವತೆಯು, ನುತಿಗಳು-ಸ್ತೋತ್ರಗಳೆಂಬ ಅಭಿಮಾನದೇವತೆಗಳು, ಸಕಲ-ಸರ್ವ ವಿಧವಾದ, ಮಂತ್ರ- ಬೀಜಾಕ್ಷರಗಳೆಂಬ ಅಭಿಮಾನದೇವತೆಯರು, ವರ-ಯೋಗ್ಯಗಳಾದ- ಶಕ್ತಿಗಳು, ಇಚ್ಛಾ ಕ್ರಿಯಾ ಜ್ಞಾನಗಳೆಂಬ ಶಕ್ತಿತ್ರಯಗಳು, ಸೃಷ್ಟಿಯ-ಪ್ರಪಂಚದ ಉತ್ಪತ್ತಿಯ, ಸಮಸ್ತ-ಸಕಲ ವಿಧವಾದ, ಅಭಿಮಾನ ದೇವತೆಯರು, ದೇವಿಯಂ-ಹೈಮವತೀ ದೇವಿಯನ್ನು, ಸೇವಿಸಿ-ಆರಾಧಿಸಿ, ಇದ್ದರು-ಇರುತ್ತಿದ್ದರು.

ಅ‖ ವಿ‖ ಅಷ್ಟ ಯೋಗಿನಿಯರು-ಅಣಿಮಾ, ಮಹಿಮಾ, ಗರಿಮಾ, ಲಘಿಮಾ, ಪ್ರಾಪ್ತಿ, ಪ್ರಾಕಾಮ್ಯ, ಈಶತ್ವ, ವಶಿತ್ವ ಎಂಬ ಎಂಟು ಯೋಗಿನಿಯರು, ಸಪ್ತಮಾತೃಕೆಯರು-ಬ್ರಾಹ್ಮಿ, ಮಹೇಶ್ವರಿ, ಕೌಮಾರಿ, ವೈಷ್ಣವಿ, ವಾರಾಹಿ, ಇಂದ್ರಾಣಿ, ಚಾಮುಂಡಿ ಎಂಬ ಸಪ್ತ ಮಾತೃಕೆಯರು, ಶ್ರೇಷ್ಠಗಳಾದ ನದಿಗಳು—ಗಂಗಾ, ಯಮುನಾ, ಗೋದಾವರಿ, ಸರಸ್ವತಿ, ನರ್ಮದಾ, ಸಿಂಧು, ಕಾವೇರಿ ಇವುಗಳು ಊರ್ವಶೀ, ಮೇನಕಾ, ರಂಭಾ, ಘೃತಾಚಿ, ತಿಲೋತ್ತಮೆ, ಸುಕೇಶೀ, ಮಂಜುಘೋಷಿ ಇವರು ದೇವತಾಪ್ಸರ ಸ್ತ್ರೀಯರು ‖೨೧‖

ಟೀ‖ ಆ ವನದೊಳ್-ಆ ತಪೋವನದಲ್ಲಿ, ಅಗಜೆ-ಹೈಮವತಿಯು, ಪಾವನ-ನಿರ್ಮಲಮಾದ, ಚರಿತ್ರನು-ನಡವಳಿಕೆಯುಳ್ಳವನು, ಕೃಪಾ-ಪ್ರೀತಿಗೆ, ವನಧಿ-ಜಲನಿಧಿಪ್ರಾಯನು, ವಿಶ್ವಭಾವನ-ಪ್ರಪಂಚಕ್ಕೆ ವಿರಾಟ್ ಸ್ವರೂಪನು, ಭಕ್ತ-ತನ್ನ

---

ತ್ತು ಶುಕಾದಿಗಳು ಮೃದು ಮಧುರ ಸರಸ ಸಲ್ಲಾಪಾದಿಗಳನ್ನೂ ಮಾಡುತ್ತಿದ್ದವು, ಆನೆಗಳು ಬೆರಳುಗಳಿಲ್ಲದ ತಮ್ಮ ಕೈಗಳನ್ನು (ಸೊಂಡಿಲನ್ನು) ನೀಡಿದರೆ, ಹಣ್ಣು ಕಾಯಿ ಮೊದಲಾದುವುಗಳನ್ನು ಗಿಣಿ ಮೊದಲಾದ ಪ್ರಾಣಿಗಳು ಕೊಡುತ್ತಿದ್ದವು. ಯಾರಾದರೂ ತಮಗೆ ಬೇಕಾದ ಹೆಚ್ಚು ವಸ್ತುಗಳನ್ನಪೇಕ್ಷಿಸಿದರೆ, ಕಲ್ಪ ವೃಕ್ಷಗಳು ಅಲ್ಲಿದ್ದುಕೊಂಡು ಈಯುವವು, ಆ ಅರಣ್ಯದಲ್ಲಿ ವಾಸಮಾಡುತ್ತಿದ್ದವರಿಗೆ ಸುವಾಸನೆಯಿಂದೊಡಗೂಡಿದ ವಾಯುವು ಸೋಕೋಣದರಿಂದ ಆನಂದವನ್ನುಂಟುಮಾಡುತ್ತಿತ್ತು ‖೨೦‖ ಆಗ ಆ ಪಾರ್ವತೀದೇವಿಯನ್ನು ಅಣಿಮಾದಿಗಳೆಂಬ ಅಷ್ಟಯೋಗಿನಿಯರು ಸ್ತೋತ್ರಾರ್ಹಮಾದ ಅರವತ್ತು ನಾಲ್ಕು ವಿದ್ಯೆಗಳು, ಬ್ರಾಹ್ಮಿ ಮಾಹೇಶ್ವರೀತ್ಯಾದಿ ಸಪ್ತ ಮಾತೃಕೆಯರು ಪ್ರಪಂಚದಲ್ಲಿ ಅತಿ ಶ್ರೇಷ್ಠಗಳಾದ ಗಂಗಾದಿ ನದಿಗಳ ಅಭಿಮಾನದೇವತೆಯರು, ಅಹೋರಾತ್ರಿಗಳೆಂಬ ಅಭಿಮಾನ ದೇವತೆಯರು ತಿಥಿ, ವಾರ, ನಕ್ಷತ್ರಾದಿಗಳೆಂಬ ಅಭಿಮಾನದೇವತೆಯರು, ರಂಭೆ, ಊರ್ವಶೀ ಮೊದಲಾದ ದೇವಲೋಕದ ಅಪ್ಸರಸ್ತ್ರೀಯರು, ಶಾಂತಿ, ದಯೆ, ಪುಷ್ಟಿ, ತುಷ್ಟಿ, ಧೃತಿ, ಮತಿ, ಕೃತಿ, ನಿಷ್ಠೆ, ನುತಿ, ಮೊದಲಾದ ಅಭಿಮಾನದೇವತೆಯರು, ಸಕಲವಾದ, ಇಚ್ಛಾ, ಕ್ರಿಯಾ, ಜ್ಞಾನಗಳೆಂಬ ಶಕ್ತಿತ್ರಯಗಳ ಅಭಿಮಾನ ದೇವತೆಯರು ಇವರೇ ಆದಿಯಾಗಿ ಸೇವಿಸುತ್ತಿದ್ದರು ‖೨೧‖ ಆ ಬಳಿಕ ಕಾತ್ಯಾಯನಿಯು ಪರಿಶುದ್ಧಮಾದ ಚರಿತ್ರೆಯು

ಚರಿತ್ರನಕೈ | ಪಾವನಧಿಯಂವಿಶ್ವಭಾವನನಭಕ್ತಸಂಜೀವ | ನನತ್ರಿಜಗಮುಂಕಾವನಸುವಾಂಛಿತವನೀವನಹಿಮಾಂಶುಧರನ ||
ದೇವನರನಾಗದೈತ್ಯಾವನತಪಾದರಾ | ಜೀವನಾಭನಾಂಭೋಧಿನಾವನದುರಿತವಿಪಿನ | ದಾವನಕಲಿತವಿಷಗ್ರೀವನಶಿವನನುಹಾ
ದೇವನಭಜನೆಯನಗಜೆ || ೨೨ || ನಿಜನಿರ್ಮಲಿತರೂಪನಂಪೂರ್ವಪೂರ್ವನಂ | ಗಜದಾನವಧ್ವಂಸಿಯಂಕಾಲಕಾಲನಂ | ರ
ಜನೀಶಕೋಟೀರನಂಭಕ್ತಭಕ್ತನಂಬಹಳತೇಜೋಮಯನನು || ಅಜಿನಾಂಬರನನಖಿಳದಿಕ್ಪಾಲಪಾಲನಂ | ಭುಜಗಧರನಂಸ

---

ಉಪಾಸರಿಗೆ, ಸಂಜೀವಕನು-ಪ್ರಾಣಾಧಾರಿಯು, ತ್ರಿಜಗಮುಂ-ಸ್ವರ್ಗ, ಮರ್ತ್ಯ, ಪಾತಾಳಗಳೆಂಬ ಮೂರು ಲೋಕಗಳನ್ನು, ಕಾವನು-ಕಾಪಾಡತಕ್ಕವನು, ಸುವಾಂಛಿತವನು-ಪ್ರಾರ್ಥಿಸಿದ್ದನ್ನು, ಈವನ-ಕೊಡತಕ್ಕವನು, ಹಿಮಾಂಶು – ತಣ್ಗದಿರನನ್ನು, ಧರನ-ಹೊಂದಿರುವವನಾದ, ದೇವ-ಇಂದ್ರಾದಿ ದೇವತೆಗಳಿಂದಲೂ, ನರ-ಭೂಲೋಕದ ಜನರಿಂದಲೂ, ನಾಗ-ಆದಿಶೇಷನೇ ಮೊದಲಾದ ಸರ್ಪಗಳಿಂದಲು. ದೈತ್ಯ-ರಾಕ್ಷಸಾದಿಗಳಿಂದಲು, ಅವನತ-ನಮಸ್ಕರಿಸಲ್ಪಟ್ಟ, ಪಾದ-ಅಡಿಗಳೆಂಬ, ರಾಜೀವನ-ಪದ್ಮಗಳುಳ್ಳವನಾದ, ಭವ-ಸಂಸಾರ ತಾಪತ್ರಯಗಳೆಂಬ, ಅಂಭೋಧಿ-ಕಡಲಿಗೆ, ನಾವನ-ತೆಪ್ಪದ ಸ್ವರೂಪನಾದವನ, ದುರಿತ-ಕಲ್ಮಷವೆಂಬ (ಪಾಪವೆಂಬ), ವಿಪಿನ-ಕಾಡಿಗೆ, ದಾವನ-ದವಾಗ್ನಿ ಪ್ರಾಯನಾದ, ಕಲಿತ-ಬೆರತುಕೊಂಡಿರುವ, ವಿಷಗ್ರೀವನ-ವಿಷಕಂಠನಾದ, ಶಿವನ-ಭದ್ರಸ್ವರೂಪನಾದ, ಮಹಾದೇವನ-ವಿಷ್ಣುವೇ ಆದಿಯಾದ ದೇವತೆಗಳಿಗೆ ಒಡೆಯನಾದ ಸಾಕ್ಷಾತ್ ಈಶ್ವರನ, ಭಜನೆಯ-ಆರಾಧನೆಯನ್ನು, ಎಸಗಿದಳ್-ನೆರವೇರಿಸಿದಳು ||

ಅ|| ವಿ|| ಮಹತ್ತಾದ + ದೇವ = ಮಹಾದೇವ, ವಿ. ಪೂ. ಕ. ದೇವತೆಗಳೂ, ನರರೂ, ನಾಗರೂ, ದೈತ್ಯರೂ, ಇವರು ದೇವನರನಾಗ ದೈತ್ಯರು=ಬಹು. ದ್ವಂ. ಸ. ಪಾದವು ರಾಜೀವದಂತೆ=ಪಾದರಾಜೀವ, ಉ. ಉತ್ತರಪದ ಕ. ಸ. ಭವವೆಂಬ ಅಂಭೋಧಿ=ಭವಾಂಭೋಧಿ, ಸಂ. ಪೂ. ಕ. ||೨೨||

ಟೀ|| ಆಗಜೆ-ಹೈಮವತಿಯು, ಬನದೊಳು-ತಪೋವನದಲ್ಲಿ, ನಿಜ-ನಿಶ್ಚಲವಾದ, ನಿರ್ಮಲ-ದೋಷವಿಲ್ಲದ, ರೂಪನಂ-ಆಕಾರನಾದ (ಚಿತ್ಸ್ವರೂಪನಾದ), ಪೂರ್ವ-ಅನಾದಿಯಾದ, ಎಂದರೆ ಮಾಯಾಶಕ್ತ್ಯಾದಿಗಳಿಗೆ, ಪೂರ್ವನಂ-ಕಾರಣ ಪ್ರಕೃತಿಯುಳ್ಳವನಾದ, ಗಜ-ಆನೆಯ ರೂಪವಾಗಿ ತೊಂದರೆ ಪಡಿಸುತ್ತಿರುವ, ದಾನವ-ರಕ್ಕಸನನ್ನು, ಧ್ವಂಸಿಯಂ-ನಾಶಮಾಡಿದವನಾದ, ಕಾಲ-ಅಂತಕನಿಗೆ, ಕಾಲನುಂ-ಮೃತ್ಯುಸ್ವರೂಪನಾದಂಥಾ, (ಮೃತ್ಯುಂಜಯನಾದ), ರಜನೀಶ-ನಿಶಾಕರನಾದ ಚಂದ್ರನನ್ನು, ಕೋಟೀರನಂ-ತಲೆಯಲ್ಲಿ ಧರಿಸಿದವನಾದ, ಭಕ್ತ-ತನ್ನ ಉಪಾಸಕರಿಗೆ, ಭಕ್ತನಂ-ಉಪಾಸಕ ಸ್ವರೂಪನಾದ, (ಭಜನೀಯ), ಬಹಳ-ಅಧಿಕವಾದ, ತೇಜೋಮಯನನಿ-ಜ್ಯೋತಿರ್ಮಯನಾದ, ಅಜಿನ-ಚಿಗರೆಯ ತ್ವಕ್ಕನ್ನು (ಆನೆಯ ಮತ್ತು ವ್ಯಾಘ್ರ ಚರ್ಮ ಇವುಗಳನ್ನು) ಅಂಬರನನು-ವಸ್ತ್ರವಾಗುಳ್ಳವನಾದ, ಅಖಿಳ-ಸಕಲರಾದ, ದಿಕ್ಪಾಲರಂ-ಎಂಟು ದಿಕ್ಕಿನ ಪಾಲಕರನ್ನು (ಇಂದ್ರಾದಿ ಅಷ್ಟದಿಕ್ಪಾಲಕರನ್ನು), ಪಾಲನಂ-ಪೋಷಿಸತಕ್ಕವನಾದ, ಭುಜಗ-ಭುಜಂಗಗಳನ್ನು, ಧರನ-ಧರಿಸಿದವನಾದ, ಸಖೀಕೃತ-ಸ್ನೇಹಿತನಾಗಿ ಮಾಡಿಕೊಂಡ, ರಾಜರಾಜನಂ-ಧನಾಧಿಪನನ್ನುಳ್ಳವನಾದ, ಸುಜನ-ಸತ್ಪುರುಷರನ್ನು, ರಕ್ಷಾ-ಸಂರಕ್ಷಿಸುವ, ಶೀಲನಂ-ನಡತೆಪರನಾದ (ಸ್ವಭಾವವುಳ್ಳವನು). ದೇವ-ದೇವತೆಗಳಿಗೆ, ದೇವನಂ-ಸ್ವಾಮಿಸ್ವರೂಪನಾದ (ಒಡೆಯನಾದ) ಪರಮೇಶ್ವರನನ್ನು, ಭಜಿಸಿದಳು-ಆರಾಧಿಸಿದಳು (ಸೇವೆಯನ್ನು ಮಾಡಿದಳು) ||

ಅ|| ವಿ|| ಮಲವಿಲ್ಲದ್ದು, ನಿರ್ಮಲ, ಅ. ಸ. ರಜನೀ-ರಾತ್ರಿಗೆ, ಈಶ-ಒಡೆಯ (ಚಂದ್ರ), ಅಷ್ಟದಿಕ್ಪಾಲಕರು-ಇಂದ್ರ, ವಹ್ನಿ, ಪಿತೃಪತಿ, ನೈರುತ, ಮರುತ್, ಕುಬೇರ, ಈಶಾನ ಇವರು, ಸುಷ್ಠುಜನ = ಸುಜನ, ವಿ. ಪೂ. ಕ. ಅಂಬರ-ವಸ್ತ್ರ, ಅಂತರಿಕ್ಷ. ಕಾಲ-ಯಮ, ಕಾಲಭೇದ. ಆಗದ+ಜೆ=ಆಗಜೆ, ಕೃ. ವೃ. ಪೂರ್ವ-ದಿಕ್ಕು, ಪೂರ್ವಕಾಲ || ೨೩ ||

---

ಳ್ಳವನು. ದಯೆಗೆ ಜಲಧಿಪ್ರಾಯನು-ಲೋಕಕ್ಕೆಲ್ಲಾ ವಿರಾಟ್‌ಸ್ವರೂಪನು. ತನ್ನ ಉಪಾಸಕರಿಗೆ ಸಂಜೀವನಪ್ರಾಯನು ತ್ರಿಲೋಕಗಳನ್ನು ಪಾಲಿಸತಕ್ಕವನು, ಇಷ್ಟಾರ್ಥವನ್ನು ದಯಪಾಲಿಸತಕ್ಕವನು ಚಂದ್ರಮೌಳೀಶ್ವರನು, ಇಂದ್ರಾದಿ ದೇವತೆಗಳಿಂದಲೂ ನರಮನುಷ್ಯರಿಂದಲೂ ಸೇವಿಸಿಕೊಳ್ಳತಕ್ಕ ಪಾದಾರವಿಂದನು. ಸಂಸಾರಬಂಧವೆಂಬ ಸಮುದ್ರಕ್ಕೆ ಹಡಗಿನೋಪಾದಿಯಲ್ಲಿರತಕ್ಕವನು, ಪಾಪವೆಂಬ ವನಕ್ಕೆ ದವಾಗ್ನಿಪ್ರಾಯನು, ವಿಷಕಂಠನು, ಸರ್ವಮಂಗಳಪ್ರದನು, ವಿಷ್ಣ್ವಾದಿದೇವತಗಳಿಗೆ ಒಡೆಯನು ಆಗಿರುವ ಈಶ್ವರನನ್ನು ಭಜಿಸುತ್ತಿದ್ದಳು. || ೨೨ || ಆ ಅರಣ್ಯದಲ್ಲಿ ಹೈಮವತಿಯು ನಿರ್ದೋಷಿಯು ಅನಾದಿಯು ಜ್ಯೋತಿರ್ಮಯನು ಗಜಚರ್ಮಾಂಬರಧಾರಿಯು ಮೃತ್ಯುಂಜಯನು ಚಂದ್ರಮೌಳೀಶ್ವರನು ಭಕ್ತರಿಗೆ ಭಜಿಸಲು ಅರ್ಹನು ಫಾಲಾಕ್ಷನು, ನಾಗಾಭರಣ ಭೂಷಿತನು ತ್ರಿಶೂಲಧರನು ಧನಾಧಿಪನ ಮಿತ್ರನಾಗಿರತಕ್ಕವನು ಆದ ಪರಮೇಶ್ವರನನ್ನು ಆರಾಧಿಸುತ್ತಿದ್ದಳು || ೨೩ || ಆ ತಪೋವನದಲ್ಲಿ ಕಾತ್ಯಾಯನಿಯು ಜರಾಮರಣಾದಿಗಳಿಲ್ಲದ ಅಭವನಾದ ಸುಖಪ್ರದನಾದ ಶಂಭು,

ಷೀಕೃತರಾಜರಾಜನಂ । ಸುಜನರಕ್ಷಾಶೀಲನಂದೇವದೇವನಂಭಜಿಸಿದಳಗಜಿಬನದೊಳು ‖ ೨೩ ‖ ಅಗರುಚಂದನಸುಗಂಧಾಕ್ಷತೆಯಪರಿಮಳದ । ಬಗೆಬಗೆಯಬಿರುಮುಗುಳಮಂಜರಿಯಗುಗ್ಗಳದ । ಪೊಗೆಯಧೂಪದಬಹಳವರ್ತಿಗಳಕರ್ಪೂರನೀರಾಜನದಕಂಪಿನ ‖ ಒಗುಮಿಗೆಯವಿವಿಧೋಪಹಾರನಸುವಾಸಿತದ । ಮೊಗವಾಸದಮಲತಾಂಬೂಲದಪರಿಕ್ರಮದ । ಸೊಗಸಿನಕೃತೋಪಚಾರಂಗಳಿಂದರ್ಚಿಸಿದಳಭವನಂಕಾತ್ಯಾಯನೀ ‖ ೨೪ ‖ ಮೋಕ್ಷದಾಯಕಿಸಕಲಮಂತ್ರನಾಯಕಿಮಾಯೆ । ಸಾಕ್ಷಾಜ್ಜಗನ್ಮಾತೆನಿಜಶಕ್ತಿತಾನೆಂಬ । ದಾಕ್ಷಾಯಣಿಗೆತಪಮಿದೇಕೆಂದುಪಂಕಜಭವಾದಿನಿರ್ಜರಮುಖ್ಯರು ‖ ಅಪೇಕ್ಷಿಸಲ್ಕೆವಿಪಿನದೊಳಿಂತುಬಿಡದೆಭಾಳಾಕ್ಷನಂ । ಧ್ಯಾನಿಸುತಗಿರಿಜೆಯಿರುತಿರಲೋರ್ವ । ರಾಕ್ಷಸಂಕಾಂತಾರಮಂತಿರುಗುತೈತಂದುಕಂಡನಾಪಾರ್ವತಿ

---

ಟೀ॥ ಕಾತ್ಯಾಯನಿ - ಗೌರಿ ದೇವಿಯು, ಅಭವನಂ - ಜನನಮರಣಾದಿಗಳಿಲ್ಲದ ಶಂಭುವನ್ನು, ಅಗರು - ಕೃಷ್ಣಾಗರುಶ್ವೇತಾಗರು, ಚಂದನ-ಗಂಧವು ಇವೇ ಮೊದಲಾದ ಸುಗಂಧದಿಂದ, ಅಕ್ಷತೆ - ಮಂತ್ರಾಕ್ಷತೆಯ (ತಿಲಾಕ್ಷತೆಯ) ಪರಿಮಳದ-ಸುಗಂಧಥಿಂದ ಕಲಿತ, ಬಗೆಬಗೆಯ-ನಾನಾ ವಿಧಗಳಾದ, ಬಿರುಮುಗುಳ-ಬಿರುಸಾದ ಮೊಗ್ಗೆಗಳ, ಮಂಜರಿಯ-ಹೂಗೊಂಚಲುಗಳ, ಗುಗ್ಗುಳದ-ರಾಳದ ಪುಡಿಯ, ಪೊಗೆಯ-ಧೂಮದ, ಧೂಪದ-ಧೂಪದಿಂದಾದ ಧೂಮದ, ಬಹಳ-ಹೆಚ್ಚಾದ, ವರ್ತಿಗಳ-ಬತ್ತಿ ಮೊದಲಾದವುಗಳ, ಆರತಿಯ-ಆರಾರ್ತಿಕ (ಮಂಗಳಾರತಿ ಮೊದಲಾದ), ಕಂಪಿನಿಂ-ಸುಗಂಧದಿಂದಲೂ, ಒಗುವಿಗೆಯ-ಒಂದಕ್ಕೆ ಮತ್ತೊಂದು ಅಧಿಕವಾದ, ವಿವಿಧ-ಅನೇಕ ಬಗೆಗಳಾದ, ಉಪಹಾರದ-ನೈವೇದ್ಯವೇ ಮೊದಲಾದ, ಸುವಾಸಿತ=ಸುವಾಸನೆಯಿಂದೊಪ್ಪುವ, ಮೊಗವಾಸದ-ಮುಖಕ್ಕೆ ಸುಗಂಧವನ್ನು ಕೊಡತಕ್ಕ, ಅಮಲ-ನಿರ್ಮಲವಾದ, ತಾಂಬೂಲದ-ಅಡಿಕೆ ಎಲೆ ಮೊದಲಾದ, ಪರಿಕ್ರಮ-ಸುತ್ತಲೂ ಕ್ರಮವಾಗಿ ಸಿದ್ಧಪಡಿಸಿದ, ಸೊಗಸಿನ-ಸೌಂದರ್ಯದ, ಕೃತ-ನೆರವೇರಿಸಲ್ಪಟ್ಟ, ಉಪಚಾರಂಗಳಿಂದ-ಷೋಡಶೋಪಚಾರಂಗಳಿಂದ, ಕೂಡಿದ-ಉಪಾಸನೆಯಿಂದ, ಅರ್ಚಿಸಿದಳು-ಸೇವಿಸಿದಳು- (ಆರಾಧಿಸಿದಳು) ॥

ಅ॥ ವಿ॥ ಷೋಡಶೋಪಚಾರಂಗಳು—ಧೂಪ, ದೀಪ, ನೈವೇದ್ಯ, ತಾಂಬೂಲ, ಗಂಧ, ಪುಷ್ಪ, ಕರ್ಪೂರ ಜಲ, ತೈಲ, ದರ್ಪಣ, ಚಾಮರ, ಛತ್ರ, ಧ್ವಜ, ವ್ಯಜನ, ವಸ್ತ್ರ, ತಾಲವೃಂತ, ಬನ-ದ್ಯ, ವನ-ತ್ಸ. ಪಂಚಸುಗಂಧಗಳು-ಕರ್ಪೂರ ತಕ್ಕೋಲ, ಲವಂಗಪುಷ್ಪ, ಪಟವಾಸ, ಜಾತೀಫಲ. ಷಟ್ಸಮಾಧಿಗಳು-ಅಭ್ಯಂತರ, ದೃಶ್ಯಾನುವಿದ್ಧ, ಅಭ್ಯಂತರದರ್ಶ ನಾನುವಿದ್ಧ ಅಭ್ಯಂತರ ನಿರ್ವಿಕಲ್ಪ, ಬಾಹ್ಯದೃಶ್ಯಾನುವಿದ್ಧ, ಬಾಹ್ಯಶಬ್ದಾನುವಿದ್ಧ, ಬಾಹ್ಯನಿರ್ವಿಕಲ್ಪ, ಕಾತ್ಯಾಯನ ಋಷಿಯಪುತ್ರಿಯು-ಕಾತ್ಯಾಯನಿ, ಅಜಿನ-ಜಿಂಕೆಯಚರ್ಮ, ಜಿನ-ಜಿನದೇವರು ॥೨೪॥

ಟೀ॥ ಮೋಕ್ಷದಾಯಕಿ-ಮುಕ್ತಿಪ್ರದಳಾದ, ಸಕಲ-ಸಮಸ್ತವಾದ ಮಂತ್ರಾಮಂತ್ರಾದಿಗಳಿಗೂ, ನಾಯಕಿ-ಒಡೆಯಳಾದ, ಮಾಯ-ಮಾಯಾಸ್ವರೂಪಳಾದ, (ಆದಿ ಪ್ರಕೃತಿಯಾದ), ಜಗತ್-ಲೋಕಕ್ಕೆ, ಮಾತೆ-ಜನನಿಯಾದ, ನಿಜಶಕ್ತಿ-ಸಕಲ ಶಕ್ತಿಸ್ವರೂಪಳು, ತಾನೆಂಬ-ತಾನೇ ಎನ್ನಿಸಿಕೊಳ್ಳುವ, ದಾಕ್ಷಾಯಣಿಗೆ-ದಕ್ಷಬ್ರಹ್ಮನ ಪುತ್ರಿಯಾದ ಗೌರೀದೇವಿಗೆ, ಇದು-ಈ ಘೋರವಾದ, ತಪಂ-ತಪಸ್ಸು ಮಾಡೋಣವು, ಏಕೆ-ಏತಕ್ಕೆ ಬೇಕಾಗಿರುತ್ತೆ ! ಎಂದು-ಎಂಬದಾಗಿ, ಪಂಕಜಭವ-ವಿಧಾತೃವೇ (ಪದ್ಮೋದ್ಭವನೆ) ಆದಿ-ಮೊದಲಾಗಿ, ನಿರ್ಜರರು-ಅಮರರಲ್ಲಿ, ಮುಖ್ಯರು-ಗಣನಗೆ ಅರ್ಹರಾದವರು, ಅಕ್ಷೇಪಿಸಲ್ಕೆ-ಸಂದೇಹ ಪಡುತ್ತಿರಲು (ಆಕ್ಷೇಪಣೆ ಮಾಡಲು), ವಿಪಿನದೋಳ್-ಆ ತಪೋವನದಲ್ಲಿ, ಇಂತು-ಈ ಪ್ರಕಾರವಾಗಿ, ಬಿಡದೆ-ತಪ್ಪದೆ (ನಿಯಮವನ್ನು ಬಿಡದೆ), ಫಾಳಾಕ್ಷನಂ - ಹಣೆಗಣ್ಣನನ್ನು, ಧ್ಯಾನಿಸುತ-ಧ್ಯಾನಮಾಡುತ್ತ (ಸ್ಮರಿಸುತ್ತ) ಗಿರಿಜೆ ಕಾತ್ಯಾಯನಿಯು-ಇರುತಿರೆ - ವಾಸಿಸುತ್ತಿರಲು, ಓರ್ವ ರಾಕ್ಷಸಂ - ಒಬ್ಬಾನೊಬ್ಬ ಅಸುರನು, ಕಾಂತಾರಮಂ - ಆ ಅರಣ್ಯವನ್ನು, ತಿರುಗುತ - ಸಂಚಾರ ಮಾಡುತ್ತ, ಐತಂದು-ಬಂದವನಾಗಿ, ಆ ಪಾರ್ವತಿಯನು - ಗಿರಿಜೆಯನ್ನು, ಕಂಡನು - ಈಕ್ಷಿಸಿದನು ॥

ಅ॥ ವಿ॥ ಮೋಕ್ಷ-ಮುಕ್ತಿಯನ್ನು, ದಾಯಕಿ-ಕೊಡುವವಳು (ಮುಕ್ತಿಪ್ರದಳು) ಗುಣತ್ರಯ-ಸತ್ವ, ರಜ, ತಮ, ವರ್ಗತ್ರಯ-ಕ್ಷಯ, ಸ್ಥಾನ, ವೃದ್ಧಿ. ಪ್ರಾರಬ್ಧತ್ರಯ-ಇಚ್ಛಾ, ಅನಿಚ್ಛಾ, ಪರೇಚ್ಛಾ. ತ್ರಿಪುಟಗಳು-ಜ್ಞಾತೃ, ಜ್ಞಾನ, ಜ್ಞೇಯ॥೨೫॥

---

ವನ್ನು ಕೃಷ್ಣಾಗರು ಶ್ರೀಗಂಧ, ಇವುಗಳ ಗಂಧದಿಂದಲೂ ತಿಲಾಕ್ಷತೆಗಳಿಂದಲೂ ಮಲ್ಲಿಕಾ, ಜಾಜಿ, ಚಂಪಕ, ಪುನ್ನಾಗ, ಕರವೀರಾದಿ ಪುಷ್ಪಗಳಿಂದಲೂ ಕಟ್ಟಿದ ಪರಿಮಳಿತವಾದ ಪೂಸರಗಳಿಂದಲೂ ಧೂಪ, ದೀಪ, ನೈವೇದ್ಯ ತಾಂಬೂಲ ಮೊದಲಾದವುಗಳಿಂದ ಮಾಡಲ್ಪಟ್ಟ ಷೋಡಶೋಪಚಾರಂಗಳಿಂದಲೂ ರಾಜೋಪಚಾರ ಭಕ್ತ್ಯೋಪಚಾರ ಶೈಕ್ತ್ಯೋಪಚಾರಂಗಳಿಂದಲೂ ಅರ್ಚಿಸಿದವಳಾದಳು (ಷೋಡಶೋಪಚಾರಗಳು) ‖ ೨೪ ‖ ಹೈಮವತಿಯು ಈ ರೀತಿಯಲ್ಲಿ ಶಂಕರನ್ನು ಸೇವಿಸುತ್ತಿ

ಯನು ॥ ೨೫ ॥ ಹೈಮವತಿಯಂಕಾಣುತಭಿವಂದಿಸದೆಖಳಂ | ಕೈಮಾಡುವಂಗಜನಪೂಗೋಲಘಾಯದಿಂ | ಮೈಮರೆದುಕಾ
ತರಿಸಿಮುಂದುಗೆಟ್ಟೆದೆಯಾರಿಬೇಟದತಿಕಟಕೆಯಿಂದ | ಐವೊಗನರಾಣಿಯಂನುಡಿಸಿದೊಡೆಭೂಪಕೇ | ಳ್ಳೈಮುರಿದುನೋಡಿದ
ಳ್ಭುವನಮಾತೆಯಖತಿಯ | ವೈಮನಸ್ಯದೊಳುಳಿವನಾರಸುರನುರಿದುಪೋದಂ ಕೊಡೆಬೂದಿಯಾಗಿ ॥ ೨೬ ॥ ಬೆಂದುಪೋದಂದಾ
ನವಂಬಳಿಕದೇವಿಖತಿ | ಯಿಂದನುಡಿದಳ್ಶಾಪರೂಪದಿಂದೀವನ | ಕ್ಕೆಂದುಮೊದಲಾಗಿಪುರುಷಪ್ರಾಣಿಗಳ್ಪೊಕ್ಕಡಾಗಲಿಸ್ತ್ರೀತ್ವ
ಮವಕೆ ॥ ಬಂದುಸಮನಿಸಲಿತನ್ನಾಜ್ಞೆತಪ್ಪದೆನಡೆಯ | ಲೆಂದುಸಕಲಸ್ಥಾವರಾದಿದೇವತೆಯರೊಡ | ನಂದುಸಾರಿದಳಲ್ಲಿಚಿರ

ಟೀ॥ ಖಳಂ–ದುಷ್ಟನಾದ ಆ ಅಸುರನು, ಹೈಮವತಿಯಂ – ಕಾತ್ಯಾಯನಿಯನ್ನು, ಕಾಣುತೆ-ನೋಡುತ್ತಲೆ, ಅಭಿವಂದಿಸದೆ–ಅಡ್ಡಬೀಳದೆ (ನಮಸ್ಕರಿಸದೆ) ಕೈಮಾಡುವ – ಆ ಅಗಜೆಯಲ್ಲಿ ಕಾಮಾಂಧನಾಗುವ, ಅಂಗಜನ – ಮನಸಿಜನ, (ಮನ್ಮಥನ) ಪೂಗೋಲ–ಹೂಬಾಣಗಳಿಂದ, ಹೊಂದಿದ, ಘಾಯದಿಂ–ನೋವಿನಿಂದ, (ವ್ರಣದಿಂದ) ಮೈಮರೆದು–ಜ್ಞಾನತಪ್ಪಿ (ಅಜ್ಞಾನದಿಂದ), ಕಾಮಾತುರನಾಗಿ ಎಂಬ ಅಭಿಪ್ರಾಯ, ಕಾತರಿಸಿ – ಚಂಚಲಮನಸ್ಕನಾಗಿ, ಮುಂದೆಗೆಟ್ಟು - ಮುಂದೆ ಏನಾದೀತೋ ಎಂಬ ಭಯವಿಲ್ಲದೆ, ಎದೆ–ಮನಸ್ಸು (ಹೃದಯವು) ಆರಿ–ಬಣಗಿ, (ಬತ್ತಿಹೋಗಿ) ಬೇಟದ–ಕಾಮೋದ್ರೇಕದ, ಅತಿ-ಅತ್ಯಧಿಕವಾದ, ಕಟಕೆಯಿಂದ–ಕರ್ಕಶವಾದ ಮನದಿಂದ (ಕಠಿಣತೆಯಿಂದ) ಐವೊಗನ-ಪಂಚಾನನನಾದ ಈಶ್ವರನ, ರಾಣಿಯಂ–ರಾಜ್ಞಿಯಾದ ಗೌರಿಯನ್ನು ಕುರಿತು, ನುಡಿಸಿದೊಡೆ – ಮಾತನಾಡಿಸಲುದ್ಯುಕ್ತನಾಗಲು, ಭೂಪ – ಎಲೈ ಭೂಮಿಪತಿಯಾದ ಜನಮೇಜಯರಾಯನೆ ! ಕೇಳ್ಳೈ–ಆಲಿಸೈಯ್ಯಾ, ಭುವನ-ಸಮಸ್ತ ಲೋಕಗಳಿಗೂ, ಮಾತೆ - ಜನನಿಯಾದ ಕಾತ್ಯಾಯನಿಯು, ಸಿಟ್ಟುಗೊಂಡು–ಕೋಪಾವಿಷ್ಟಳಾಗಿ, ನುಡಿದಳ್-ಆಡಿದಳು, ಖತಿಯ-ಸಿಟ್ಟಿನ, ವೈಮನಸ್ಯದೊಳು - ಸಮಾಧಾನವಿಲ್ಲದ ವೃತ್ತಿಯಿಂದ, ಉಳಿವನು–ತೊಂದರೆಯನ್ನು ಹೊಂದದೆ ಯಿರುವನು, ಆರು–ಯಾರುತಾನೆ ಯಿರುವರು ? ಕೊಡೆ-ಆ ತಕ್ಷಣವೇ, ಅಸುರನು-ಆ ರಾಕ್ಷಸನು, ಬೂದಿಯಾಗಿ–ಬೂದಿಯ ರೂಪವಾಗಿ ಆಗುವಂತೆ, ಉರಿದುಪೋದಂ-ಸುಟ್ಟುಹೋದನು (ಉರಿದು ಬೂದಿಯಾದನು) ನಾಶವಾದನೆಂಬ ಅಭಿಪ್ರಾಯ.

ಅ॥ ವಿ॥ ರಾಕ್ಷಸ, ತ್ಸ. ರಕ್ಕಸ ದ್ಭ ಮನಸ್ಸು ಇಲ್ಲದ್ದು - ವೈಮನಸ್ಸು, ಹಿಮವಂತನಮಗಳು .. ಹೈಮವತಿ; ಪೂಗೋಲುಗಳು - ಅರವಿಂದ, ಅಶೋಕ, ಚೂತ, ನವಮಲ್ಲಿಕ, ನಿಲೋತ್ಪಲ, ಇವುಗಳು. ಪೂವೇ ಕೋಲಾಗುಳ್ಳವನು, ಪೂಗೋಲ = ಬಹು. ಸ. ॥೨೬॥

ಟೀ॥ ದಾನವಂ–ಆ ದೈತ್ಯನು, ಬೆಂದು-ಸುಟ್ಟು, ಪೋದಂ-ಹೋದನು, ಬಳಿಕ–ಅನಂತರದಲ್ಲಿ, ದೇವಿ - ದಾಕ್ಷಾಯಣಿಯು, ಖತಿಯಿಂದ–ರೋಷದಿಂದ ಎಂದರೆ (ಕೋಪದಿಂದ) ಶಾಪರೂಪದಿಂದ–ಶಾಪಸ್ವರೂಪವಾಗುವ ಕ್ರಮದಿಂದ, ನುಡಿದಳ್–ಆಡಿದಳು, ಇಂದು–ಈದಿನ, ಮೊದಲಾಗಿ–ಪ್ರಾರಂಭದಿಂದ, ಪುರುಷಪ್ರಾಣಿಗಳ್-ಗಂಡು ಜೀವಜಂತುಗಳು, ಈವನಕೆ– ಈ ಕಾಡಿಗೆ, ಪೊಕ್ಕಡೆ – ಪ್ರವೇಶಮಾಡಿದರೆ, ಅವಕೆ - ಆ ಜೀವರಾಶಿಗಳಿಗೆ, ಸ್ತ್ರೀತ್ವಂ – ಹೆಂಗಸಿನ ಭಾವವು, ಸಮನಿಸಲಿ - ಪ್ರಾಪ್ತವಾಗಲಿ,

ರುವಲ್ಲಿ, ಮುಕ್ತಿಪ್ರದಳು ಸಮಸ್ತ ವೇದಗಳಿಗೂ ಈಶ್ವರ ಸ್ವರೂಪಳು, ಮಾಯೆಯು, ಲೋಕಕ್ಕೆಲ್ಲಾ ಜನನಿಯು, ಸಕಲ ಶಕ್ತಿಸ್ವರೂಪಳು, ದಕ್ಷಬ್ರಹ್ಮನ ಪುತ್ರಿಯೂ, ಆದ ಈ ಪಾರ್ವತಿಗೆ ಈ ರೀತಿಯಾದ ಘೋರತಮವಾದ ತಪವನ್ನೆಸಗುವದಕ್ಕೇನು ಕಾರಣವೆಂಬದಾಗಿ ಪದ್ಮೋದ್ಭವನು ದೇವಾದಿದೇವತೆಗಳಲ್ಲಿ ಅತಿ ಗಣ್ಯರಾದವರೂ ಇವರೇ ಆದಿಯಾಗಿ, ಆಕ್ಷೇಪಿಸುತ್ತಿರಲು ಆ ಅರಣ್ಯದಲ್ಲಿ ಈ ರೀತಿಯಾಗಿ ನಿಯಮಾದಿಗಳಿಗನುಸಾರವಾಗಿ ತಪ್ಪದೆ ಫಾಲಾಕ್ಷನಂ ಸೇವಿಸುತ್ತಿದ್ದಳು, ಆ ಸಮಯದಲ್ಲಿ ಒಬ್ಬ ದೈತ್ಯನು ವನವಿಹಾರಮಾಡಿಕೊಂಡು ಬರುತ್ತಿರುವಲ್ಲಿ ಈ ವನದಲ್ಲಿದ್ದ ಈ ಪಾರ್ವತೀದೇವಿಯನ್ನು ನೋಡಿದವನಾದನು ॥೨೫॥ ಆಗ ಆ ಖಳನಾದ ರಾಕ್ಷಸನು ಕಾತ್ಯಾಯನಿಯನ್ನು ನೋಡುತ್ತಲೆ ನಮಸ್ಕಾರವನ್ನು ಮಾಡಿ ತನ್ನ ಪಾಪಪರಿಹಾರ ಮಾಡಿ ಕಾಪಾಡಬೇಕೆಂದು ಪ್ರಾರ್ಥಿಸದೆ, ಕಾಮೋದ್ರೇಕದಿಂದ ಪೀಡಿತನಾಗಿ ಅಜ್ಞಾನದಿಂದ ಮದನನ ಪಾಶಕ್ಕೊಳಬಿದ್ದವನಾಗಿ, ತನಗೆ ಮುಂದೇನಾದೀತೋ ಎಂಬ ಭಯರಹಿತನಾಗಿ ಅತಿಕರ್ಕಶಗಳಾದ ಮಾತುಗಳಿಂದ ಪಂಚಾನನನಾದ ಫಾಲಾಕ್ಷನ ರಾಜ್ಞಿಯಾದ ಗೌರೀದೇವಿಯನ್ನು ಮಾತನಾಡಿಸಲು, ಭೂಮಿಪತಿಯಾದ ಜನಮೇಜಯರಾಯನೆ ! ಲಾಲಿಸು, ಆಗ ಲೋಕಮಾತೆಯಾದ ಪಾರ್ವತಿಯು ರೋಷಾಕ್ರಾಂತಳಾದರೆ ಆ ಕೋಪದ ಅಸಮಾಧಾನೋಕ್ತಿಯಲ್ಲಿ ಯಾರುತಾನೆ ಕೇಡನ್ನು ಹೊಂದದೆಯಿರುವರು ಆ ಕೂಡಲೆ ಆ ರಕ್ಕಸನು ಆಕೆಯ ತಪೋಜ್ವಾಲೆಯತಿಶಯದಿಂದ ಸುಟ್ಟು ಬೂದಿಯಾದನು ॥ ೨೬ ॥ ಆ ನೀಚನಾದ ದೈತ್ಯನು ಮಾಡಿದ ಪಾಪಕ್ಕೆ ಅನುಭವಿಸಿದ್ದೆ ಸಾಕ್ಷಿಯೆಂಬಂತೆ ಸುಟ್ಟು ಭಸ್ಮವಾಗಲು, ಅನಂತರದಲ್ಲಿ ಪಾರ್ವತಿಯು, ಈ ದಿನ

ಕಾಲಮಿರ್ದುಪೂರ್ೖಸಿದಳ್ಕಲ್ಪಿತವನು ‖ ೨೭ ‖ ತನ್ನನರ್ಚಿಸಿದರ್ಗಭೀಷ್ಟಮಂಕೊಡುವಸಂ | ಪನ್ನೆವಂಗೌರಿತಪದಿಂದೊಲಿಸಲೀ
ಶಂಪ್ರ | ಸನ್ನನಾದಂಕೆಲವುಕಾಲದಿಂಮೇಲೆಬಿಜಯಂಗೈದಳುತ್ಸವದೊಳು ‖ ಉನ್ನತದಕೈಲಾಸಗಿರಿಶಿಖರಂಕಂದುಮೊದ | ಲಿನ್ನು
ಮಾವನಕೆಪೊಕ್ಕಡೆಗಂಡುಪೆಣ್ಣಹುದು | ಪನ್ನಗಮೃಗಾದಿಪಶುಪಕ್ಷಿಗಳ್ಮುಂತಾದಜಂತುಜಾಲಂಗಳೆಲ್ಲ ‖ ೨೮ ‖ ರಾಜೇಂದ್ರ
ಕೇಳಾಗಲಾವನಕೆಪೊಕ್ಕಲ್ಲಿ | ರಾಜಿಸುವತಿಗೊಳದನೀರ್ಗುಡಿದುಫಲುಗುಣನ | ವಾಜಿಪೊರಮಟ್ಟುಬಂದಾಗಳದುಪೆಣ್ಗ

---

ತನ್ನ ಆಜ್ಞೆ-ತನ್ನಯ ಅನುಜ್ಞೆಯು, ತಪ್ಪದೆ-ಮೀರದೆ, ನಡೆಯಲಿ-ನಡದು ಬರುವುದಾಗಲಿ, ಎಂದು-ಎಂಬದಾಗಿ, ಸಕಲ-ಸಮಸ್ತವಾದ ಸ್ಥಾವರಾದಿದೇವತೆಗಳೊಡನೆ - ಸ್ಥಿರತ್ವವನ್ನುಂಟಾಗಿರುವ ಅಭಿಮಾನದೇವತೆಗಳೊಂದಿಗೆ, ಅಂದು-ಆ ದಿವಸದಲ್ಲಿ, ಸಾರಿದಳ್-ಪ್ರಕಟಪಡಿಸಿದಳು, ಅಲ್ಲಿ-ಆ ತಪಸ್ಸುಮಾಡುವ ಅರಣ್ಯದಲ್ಲಿ, ಚಿರಕಾಲಂ-ದೀರ್ಘಕಾಲದವರೆಗೂ, ಇರ್ದು-ವಾಸಮಾಡಿಕೊಂಡು, ಕಲ್ಪಿತವಂ-ಯೋಚನೆಮಾಡಿದ್ದ ವಿಧಿಯನ್ನು (ವ್ರತವನ್ನು) ಪೂರೈಸಿದಳ್-ನೆರವೇರಿಸಿದಳು.

ಅ‖ ವಿ‖ ದನುವಿನ ಕುಲದವನು, ದಾನವ, ಬೂದಿ (ದ್ಭ.) ಭೂತಿ (ತ್ಸ.) ತಪದ + ವನ = ತಪೋವನ (ಷ. ತ.) ಇದುವನ = ಈವನ, (ಗ. ಸ) ಆಜ್ಞೆ (ತ್ಸ.) ಅಪ್ಪಣೆ (ದ್ಭ.) ಅಂದು, ಇಂದು, ಎಂದು, ಇವು ಅನ್ವಯಗಳು. ಸ್ತ್ರೀಯಭಾವ ಸ್ತ್ರೀತ್ವ ‖೨೭‖

ಟೀ‖ ತನ್ನನು - ಕಾತ್ಯಾಯನಿಯನ್ನು, ಅರ್ಚಿಸಿದವರ್ಗೆ - ಆರಾಧಿದವರಿಗೆ (ಪೂಜೆಯನ್ನು ಮಾಡಿದವರಿಗೆ) ಅಭೀಷ್ಟವಂ-ಕೋರಿದ ಇಷ್ಟಾರ್ಥವನ್ನು, ಕೊಡುವ-ದಯೆಪಾಲಿಸುವವಳಾದ, ಸಂಪನ್ನೆ-ಊರ್ಜಿತಳಾದ, ಗೌರಿ-ದಾಕ್ಷಾಯಣಿಯು, ತಪದಿಂದ-ನಿರಶನವ್ರತದಿಂದಿ, ಒಲಿಸಲ್ - ಒಪ್ಪುವಂತೆ ಮಾಡಲು, ಈಶಂ-ಪರಮೇಶ್ವರನು, ಪ್ರಸನ್ನನು - ಪ್ರತ್ಯಕ್ಷವಾದವನು, ಆದಂ-ಆದನು, ಪಾರ್ವತಿಯ ತಪಸ್ಸಿಗೆ, ಮೆಚ್ಚಿ (ಸಂತುಷ್ಟನಾಗಿ) ಕೆಲವುಕಾಲದಿಂ-ಕೆಲವು ಕಾಲದಿಂದೀಚೆಗೆ, ಉತ್ಸವದೊಳು-ವಿವಾಹಮಹೋತ್ಸವದಿಂದ, ಉನ್ನತ - ಅತಿ ಎತ್ತರವಾದ, ಕೈಲಾಸಶಿಖರಕೆ - ಕೈಲಾಸವೆಂಬ ಪರ್ವತದ ಕೊನೆಯಭಾಗಕ್ಕೆ, ಬಿಜಯಂಗೈಯ್ದಳ್ - ಬಿಜಯಮಾಡಿಸಿದಳು (ಹೊರಟುಹೋದಳು) ಅಂದುಮೊದಲು-ಆ ದಿವಸ ಮೊದಲುಗೊಂಡು, ಇನ್ನು-ಇನ್ನುಮುಂದೆ, ಆವನಕೆ - ಆ ಅರಣ್ಯಕ್ಕೆ, ಪೊಕ್ಕಡೆ - ಪ್ರವೇಶಿಸಿದ್ದೇ ಆದರೆ, ಪನ್ನಗ - ಹಾವು, ಮೃಗ - ಜಿಂಕೆ ಮೊದಲಾದ ಪಶ್ವಾದಿಪ್ರಾಣಿಗಳು, ಪಕ್ಷಿಗಳು-ವಿಹಂಗವೇ ಆದಿಯಾದವುಗಳು, ಜಂತು-ಪ್ರಾಣಿಗಳ, ಜಾಲಂಗಳೆಲ್ಲ-ಗುಂಪುಗಳೆಲ್ಲವೂ, ಗಂಡು-ಗಂಡುಪ್ರಾಣಿಯು, ಹೆಣ್ಣು-ಸ್ತ್ರೀರೂಪವಾಗಿ, ಅಹುದು-ಆಗುವುದು.

ಅ‖ ವಿ‖ ವಿಹ-ಅಂತರಿಕ್ಷದಲ್ಲಿ, ಗನು-ಗಮಿಸುವುದು (ಪಕ್ಷಿ), ಉನ್ನತವಾದ, ಕೈಲಾಸ-ಉನ್ನತಕೈಲಾಸ ವಿ. ಪೂ. ಕ. ಗಿರಿಯ+ಶಿಖರ=ಗಿರಿಶಿಖರ ಷ. ತ. ಆದ್ದರಿಂದ ಪಾರ್ವತೀದೇವಿಯ ಶಾಪಬಂದ ಸ್ಥಳಕ್ಕೆ ಈ ಕುದುರೆಯು ಪ್ರವೇಶಿಸಿದುದರಿಂದ ಹೆಂ ಗುದುರೆಯಾಯಿತು ‖೨೮‖

ಟೀ‖ ರಾಜೇಂದ್ರ-ರಾಜರಲ್ಲಿ ಇಂದ್ರಪ್ರಾಯನಾದ, ಜನಮೇಜಯರಾಯನೆ! ಕೇಳು-ಆಲಿಸು, ಆಗಲು-ಆ ಸಮಯದಲ್ಲಿ (ಆ ಕುದರೆಯು ಕೊಳದಬಳಿಗೆ ಬಂದಾಗ) ಆವನಕೆ-ಆ ಕಾಡಿಗೆ. ಪೊಕ್ಕು - ಹೊಕ್ಕು, ಅಲ್ಲಿ - ಆ ಎಡೆಯಲ್ಲಿ, ರಾಜಿಸುವ-ಹೊಳೆಯುವ, ತಿಳಿಗೊಳದ-ನಿರ್ಮಲವಾಗಿರುವ ಸರಸ್ಸಿನ, ನೀರ್ಗುಡಿದು-ಉದಕವನ್ನು ಪಾನಮಾಡಿ, ಫಲುಗುಣನ-ಪಾರ್ಥನ, ವಾಜಿ - ಅಶ್ವವು, ಪೊರಮಟ್ಟು - ಬಿಟ್ಟು ಹೊರಟು, ಬಂದಾಗಳ್ - ಬರುವಾಗಲೆ (ದಾರಿಯಲ್ಲೆ) ಅದು - ಆ ಅಶ್ವವು, ಪೆಣ್ಗುದರೆಯಾಗಿ-ಹೆಂಗುದರೆಯಾಗಿ, ಇರ್ದುದು-ಇರುತ್ತಿತ್ತು, ಇದು-ಈ ರೀತಿ ಗಂಡು ಹೆಣ್ಣಾದದ್ದು, ಸೋಜಿಗಂ-ವಿಸ್ಮಯವು, ಏವೇ

---

ಮೊದಲು ಗಂಡಾದ ಯಾವ ಪ್ರಾಣಿಯೇ ಆಗಲಿ ಇಲ್ಲಿಗೆ ಬಂದುದೆಯಾದರೆ ಆಗಂಡು ಪ್ರಾಣಿಗಳಿಗೆಲ್ಲ ಸ್ತ್ರೀತ್ವ ಉಂಟಾಗಲೆಂಬದಾಗಿ ಕೋಪಾವಿಷ್ಟಳಾಗಿ ಶಾಪವನ್ನು ಸಕಲ ಸ್ಥಾವರಾದಿ ದೇವತೆಗಳೊಡನೆ ಕೊಟ್ಟು ಅನಂತರದಲ್ಲಿ ಚಿರಕಾಲ ತಪವಂಗೈಯ್ದು ಸಂಕಲ್ಪಿತವಾದ ವಿಧಿಯನ್ನು ಪೂರೈಸಿದಳು ‖೨೭‖ ಆಗ ತನ್ನನ್ನು ಭಕ್ತಿಪುರಸ್ಸರವಾಗಿ ಅರ್ಚಿಸಿದವರಿಗೆ ಇಷ್ಟಾರ್ಥವನ್ನು ಕೊಡತಕ್ಕ ಶಕ್ತಳಾದ ಪಾರ್ವತೀದೇವಿಯು, ನಿರಶನವ್ರತದಿಂದ, ಮೆಚ್ಚಿಸಲು, ಪರಮೇಶ್ವರನು ಆಕೆಯ ತಪಃ ಪ್ರಭಾವಕ್ಕೆ ಮೆಚ್ಚಿ ಪ್ರತ್ಯಕ್ಷನಾಗಲು ಆ ಬಳಿಕ ಪಾರ್ವತಿಯು, ವಿವಾಹ ಮಹೋತ್ಸವದಿಂದ ಕೈಲಾಸಪರ್ವತ ಶಿಖರಕ್ಕೆ ಪ್ರಯಾಣ ಮಾಡಿದಳು, ಅಂದಿನಿಂದ ಈ ವನಕ್ಕೆ ಪ್ರವೇಶಿಸಿದುದೇ ಆದರೆ, ಪನ್ನಗ, ಮೃಗ, ಪಶು, ಪಕ್ಷಿ, ಮೃಗಾದಿಗಳೆಲ್ಲಾ, ಗಂಡು ಹೆಣ್ಣಾಗುವುವು ‖೨೮‖ ರಾಜಕುಲಕ್ಕೆ ತಿಲಕಪ್ರಾಯನಾದ ಜನಮೇಜಯರಾಯನೆ ! ಕೇಳು. ಆ ಸರಸ್ಸಿನ ಬಳಿಗೆ ಆ ಅಶ್ವವು ಬಂದು ಆ ತಪೋವನಕ್ಕೆ ಪ್ರವೇಶಿಸಿ ವಿರಾಜಮಾನವಾದ ಪದ್ಮಾಕರದಲ್ಲಿ ನಿರ್ಮಲೋದಕವನ್ನು ಪಾನಮಾಡಿ, ಪಾರ್ಥನ ತುರಂಗವು ಬರು

ದುರೆಯಾಗಿರ್ದುದೇವೇಳ್ವೆನು ‖ ಸೋಜಿಗಮಿದೆಂದುಸೈವೆರಗಾಗುತಿರ್ದುದೆ । ಲ್ಲಾಜನಂಪಾಂಡವಂಕಂಡುಶಿವಶಿವಾಪೊಸತೆ । ಲಾಜಗದೊಳೀಕಥನಮೆಂದುವಿಸ್ಮಿತನಾಗಿಕೃಷ್ಣನಂಧ್ಯಾನಿಸಿದನು ‖ ೨೯ ‖ ಎಣಿಕೆಗೊಳುತಿರ್ದನಾಪಾರ್ಥನಂದಿತ್ತಹಿಂ । ದಣ ಕೃತಯುಗದಮೊದಲುಕಾಲದೊಳ್ಸಕಲಧಾ । ರುಣಿಯತೀರ್ಥಂಗಳಂಬಳಸಿ ಬರುತಕೃತವ್ರಣಾಖ್ಯ ಭೂಸುರನೋರ್ವನು ‖ ಪ್ರಣುತಸಲಿಲಸ್ನಾನಕೊಂದುಸರಕಿಳಿದುವಾ । ರುಣಮಂತ್ರಮಂವಾರಿಯೋಳ್‌ಜಪಿಸುತಿರ್ದನಾ । ಕ್ಷಣದೊಳವನಂಘ್ರಿಯಂ ಬಂದುಪಿಡಿದುದುನೆಗಳ್ಬಿಗಿದುದಂತಂಗಳಿಂದ ‖ ೩೦ ‖ ತನ್ನಕಾಲ್ಪಿಡಿದುನಡುನೀರ್ಗೆಳವಜಂತುವಿದು । ಪನ್ನಗನೋಮೇಣುಸುರನಾ

---

ಳ್ವೆನು_ಏನಂತ ಪೇಳಲಿ? ಎಂದು_ಎಂದು ಕೊಳ್ಳುತ್ತ, ಸೈವೆರಗಾಗುತ_ಆಶ್ಚರ್ಯಪಡುತ್ತ, ಎಲ್ಲಾ ಜನ_ಸರ್ವ ಜನವೂ, ಇರ್ದುದು-ಇರುತ್ತಿತ್ತು, ಪಾಂಡವಂ_ಪಾರ್ಥನು, ಕಂಡು_ಈ ಹೆಣ್ಣು ಕುದುರೆಯಾದ ರೀತಿಯನ್ನು ಈಕ್ಷಿಸಿ, ಶಿವಶಿವ_ಓ ಈಶ್ವರನೆ! ಪೊಸತೆಲಾ_ಹೊಸರೀತಿಯಾಯಿತಲ್ಲವೆ? ಜಗದೊಳು-ಪ್ರಪಂಚದಲ್ಲಿ, ಈ ಕಥನ-ಈ ನಡವಳಿಕೆಯು, (ಈ ರೀತಿಯಾದ ಚರಿತ್ರೆಯು) ಎಂದು_ಎನ್ನುತ್ತ, ವಿಸ್ಮಿತನಾಗಿ_ಆಶ್ಚರ್ಯವನ್ನು ಹೊಂದಿದವನಾಗಿ, ಕೃಷ್ಣನಂ-ಶ್ರೀ ಕೃಷ್ಣಸ್ವಾಮಿಯನ್ನು, ಧ್ಯಾನಿಸಿದಂ_ಮನಸ್ಸಿನಲ್ಲಿ ಸ್ಮರಣೆಯನ್ನು ಮಾಡಿದನು.

ಅ‖ ವಿ‖ ವಾಜಿ-ಕುದುರೆ, ಆಜಿ_ಯುದ್ಧ) ಪೆಣ್+ಕುದುರೆ=ಪೆಣ್ಗುದರೆ ಗಕಾರ ಆದೇಶ ಸಂಧಿ. ಶಿವಶಿವ_ಕಷ್ಟ ಕಾಲದಲ್ಲಿ ದೇವರನ್ನು ದ್ವಿರುಕ್ತಿಯಲ್ಲಿ ಧ್ಯಾನಿಸುವುದುಂಟು. ಅದು+ಜಗ=ಆ ಜಗ. ಇದು+ಕಥೆ=ಈ ಕಥೆ, ಇವೆರಡೂ ಗಮಕ ಸ. ‖ ೨೯ ‖

ಟೀ‖ ಪಾರ್ಥಂ_ಆ ಫಲುಗುಣನು, ಎಣಿಕೆಗೊಳುತ- ಆಲೋಚನೆಯನ್ನು ಮಾಡುತ್ತ, ಇರ್ದನು- ಇರುತ್ತಿದ್ದನು, ಇತ್ತ_ಈ ಕಡೆ ಎಂದರೆ ಅಶ್ವದ ಕಡೆಯಲ್ಲಿ, ಹಿಂದಣ_ಪೂರ್ವದ, (ಕಳೆದು ಹೋದ) ಕೃತಯುಗದ_ಯುಗಗಳಲ್ಲಿ ಮೊದಲನೆಯದಾದ, ಮೊದಲ ಕಾಲದೋಳ್-ಪ್ರಾರಂಭದ ಸಮಯದಲ್ಲಿ, ಸಕಲ_ಸಮಸ್ತವಾದ, ಧಾರುಣಿಯ-ಪೃಥ್ವಿಯಲ್ಲಿರುವ ತೀರ್ಥಂಗಳಂ-ಪಾವನಮಾಡುವ ಉದಕಗಳನ್ನು (ಪರಿಶುದ್ಧವಾದ ಉದಕಗಳನ್ನು) ಬಳಸಿ-ಸಂಚರಿಸಿಕೊಂಡು, ಬರುತ್ತಾ-ಸಂಚಾರ ಮಾಡುತ್ತ, ಕೃತವ್ರಣ-ಕೃತವ್ರಣನೆಂಬ, ಆಖ್ಯ-ನಾಮಧೇಯವುಳ್ಳವನಾದ, ಭೂಸುರನು-ಭೂದೇವನಾದ ಬ್ರಾಹ್ಮಣನು, ಓರ್ವನು-ಒಬ್ಬ ಮನುಜನು, ಪ್ರಣುತ-ಸ್ತೋತ್ರಾರ್ಹವಾದ, ಸಲಿಲ-ಉದಕದ, ಸ್ನಾನಕೆ-ಜಳಕಮಾಡಲಿಕ್ಕೆ, ಒಂದುಸರಕೆ-ಒಂದು ಸರಸ್ಸಿಗೆ, ಇಳಿದು_ಕೆಳಗಡೆ ಇಳಿದುಬಂದು, ವಾರುಣ_ನೀರಿಗೆ ಅಧಿದೇವತೆಯಾದ ವರುಣನ, ಮಂತ್ರಮಂ_ವೇದದಅಂಶವನ್ನು, ವಾರಿಯೋಳ್-ಜಲದಲ್ಲಿ, ಜಪಿಸುತ-ಧ್ಯಾನಿಸುತ್ತ (ಹೇಳುತ್ತ), ಇರ್ದಂ-ಇರುತ್ತಿದ್ದನು, ಆಕ್ಷಣದೊಳು_ಆತಕ್ಷಣವೇ, ಅವನ-ಆ ಕೃತವ್ರಣನೆಂಬ ಬ್ರಾಹ್ಮಣನ, ಅಂಘ್ರಿಯಂ_ಪಾದವನ್ನು, ನೆಗಳ್-ಒಂದು ಮೊಸಳೆಯು, ದಂತಂಗಳಿಂದ_ರದನಗಳಿಂದ (ಹಲ್ಲುಗಳಿಂದ), ಬಿಗಿದು_ಘಟ್ಟಿಯಾಗಿ, ಪಿಡಿದುದು-ಹಿಡಿದುಕೊಂಡಿತು ‖

ಅ‖ ವಿ‖ ಚತುರ್ಯುಗಗಳು - (ಕೃತ, ತ್ರೇತ, ದ್ವಾಪರ, ಕಲಿ) ಚತುರ್ವೇದಗಳು_ (ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವಣವೇದ), ತೀರ್ಥ, ನೀರು, ಪವಿತ್ರವಾದದ್ದು, ಭೂಮಿಯ+ಸುರ=ಭೂಸುರ, ಷ. ತ. ಲೋಕ_ಪ್ರಪಂಚ, ಜನ. ‖ ೩೦ ‖

ಟೀ‖ ಆತಂ_ಆ ಕೃತವ್ರಣನೆಂಬ ಭೂಸುರನು, ತನ್ನ-ತನ್ನಯ, ಕಾಲ್-ಪಾದವನ್ನು, ಪಿಡಿದು-ಹಿಡಿದು ಕೊಂಡು, ನಡುನೀರ್ಗೆ-ಮಧ್ಯದ ಜಲಕ್ಕೆ, ಎಳೆವ-ಸೆಳೆಯುತ್ತಿರುವ, ಜಂತುವು-ಜೀವವುಳ್ಳಪ್ರಾಣಿಯು, ಪನ್ನಗನೊ_ನಾಗನೋ, ಮೇಣ್-

---

ವಾಗಲೆ ಆ ಕುದುರೆಯು ಹೆಣ್ಣು ಕುದುರೆಯಾಯಿತು, ಈ ಗಂಡುಕುದುರೆಯು ಹೆಣ್ಣಾದುದನ್ನು ನೋಡಿ ಪಾರ್ಥನು, ಬಹಳವಾಗಿ ಆಶ್ಚರ್ಯಪಟ್ಟು ವಿಸ್ಮಯ ಚಿತ್ತನಾಗಿ, ಏನು ಮಾಡುವುದಕ್ಕೂ ತೋರದೆ ಶಿವಶಿವ ಎಂದು ಧೈರ್ಯಗುಂದಿ ಕಳವಳಂಗೊಂಡು ಶ್ರೀ ಕೃಷ್ಣಸ್ವಾಮಿಯಂ ತನ್ನ ಮನದಲ್ಲಿ ನೆನೆದವನಾದನು. ಅನಂತರದಲ್ಲಿ ಪಾರ್ಥನು ಈರೀತಿಯಾಗಿ ಕುದುರೆಯವಿಷಯದಲ್ಲಿ ಚಿಂತಿಸುತ್ತಿರಲು ‖ ೨೯ ‖ ಕಳೆದ ಕೃತಯುಗದ ಆದಿಯಲ್ಲಿ ಭೂಲೋಕದಲ್ಲಿದ್ದ ಪವಿತ್ರಗಳಾದ ಪುಣ್ಯತೀರ್ಥಾದಿಗಳನ್ನು ಸುತ್ತಿಕೊಂಡು ಬರುತ್ತಾ, ಕೃತವ್ರಣನೆಂಬ ಭೂಸುರನೋರ್ವನು, ಅತಿ ಶ್ಲಾಘ್ಯವಾದ ತೀರ್ಥೋದಕದಲ್ಲಿ ಮಿಾಯಲು, ಸರಸ್ಸಿಗೆ ಬಂದು ಇಳಿದು, ನೀರಿಗೆ ಅಧಿದೇವತೆಯಾದ ವರುಣಮಂತ್ರೋಚ್ಚಾರಣೆಯಿಂ ಮಾಡುತ್ತಿರ್ದನು. ಆವೇಳೆಗೆ ಸರಿಯಾಗಿ, ಒಂದು ಮೊಸಳೆಯು ಬಂದು ಆಕೃತವ್ರಣನೆಂಬ ಭೂಸುರನ ಕಾಲಹಿಮ್ಮಡಿಯನ್ನು ಅತಿ ಬಲವಾಗಿ ಹಲ್ಲುಗಳಿಂದ ಕಚ್ಚಿಕೊಂಡು ಹಿಡಿಯಲು ‖ ೩೦ ‖ ತನ್ನ ಕಾಲಂ ಪಿಡಿದು ನಡುನೀರಿಗೆ ಸೆಳೆಯುತ್ತಿರುವ ಪ್ರಾಣಿಯು ಜಂತುವೊ, ಪನ್ನಗವೊ, ಪುಲಿ

.......................................................................................ಇನ್ನಿದಕುಪಾಯಮೇ
ಯೂಮಯಮೋಜಲೋ | ತ್ಪನ್ನಪಾಠೀನವೊಮಹಾಗ್ರಹವೊಶಿವಶಿವಾದುಷ್ಟಭಾವಿತಮಾಯ್ತಲಾ || ಇನ್ನಿದಕುಪಾಯಮೇ
ನೆಂದುಚಿಂತಿಸಿವಿಪ್ರ | ನುನ್ನತತಪೋಬಲದೊಳಂಘ್ರಿಯಂಬಿದಿರಲ್ಕೆ | ಬಿನ್ನಿಸದೆಬಿಗಿದಿರ್ದಬಲ್ಮೆಗಳದಂತಂಗಳುಡಿದುವದನೇನೆಂ
ಬೆನು ||೩೧|| ಮಡುವಿನೊಳುಮಿಡಿವಿಡಿದನೆಗಳಂಬಲೋತ್ಕರದಿ | ಬಿಡಿಸಿಕೊಂಡೊಡೆಮುರಿದುತಡಿಗಡರಿಕೋಪದಿಂ | ನುಡಿದನು
ದಕಸ್ಥಮಾಗಿರ್ದದೇವತೆಗಳಿಗೆ ದುಷ್ಟಭಾವದಜಲಮಿದು || ಕಡುಭಯಂಕರದಿಂದೆನಗೆ ತೋರಿತದರಿಂದ | ಪೊಡವಿಗತಿಭೀತಿ
ಯಂಮಾಡುವಂತಿಲ್ಲಿನೀ | ರ್ಗುಡಿದಜೀವಿಗಳಿನ್ನುಪುಲಿಯಾಗಲಿಂದುಮೊದಲೆಂದುಮುನಿಶಾಪಿಸಿದನು ||೩೨|| ಎಂದಾದುದಾಕೃತ
ವ್ರಣಶಾಪಮಾಸರಿಸಿ | ಗಂದುಮೊದಲಾಗಿಭೀಕರಮೆನಿಸುತಿರ್ಪುದಿಳೆ | ಗೊಂದುಜೀವಿಗಳುದಕವನ್ನೊಲ್ಲವದರೊಳುಗ್ರವ್ಯಾಘ್ರ

---

ಅಥವಾ, ಅಸುರ-ದೈತ್ಯರ, ಮಾಯಾಮಯವೊ-ಮಾಯಾವಿಕಾರಾಕೃತಿಯೊ, ಜಲ-ಉದಕದಲ್ಲಿ, ಉತ್ಪನ್ನ-ಜನಿಸಿರುವ, ಪಾಠೀನವೊ-ನಕ್ರವೊ, (ಮೀನೊ) ಮಹಾಗ್ರಹವೊ-ಮಹತ್ತಾದ ಭೂತವೊ, ಶಿವಶಿವ-ಓ ಶಿವನೆ! ದುಷ್ಟ-ಕೆಟ್ಟದ್ದಾದ, ಭಾವಿತಂ-ಆಲೋಚನೆಯುಳ್ಳದ್ದು, ಆಯ್ತು-ಉಂಟಾಯಿತಲ್ಲವೇ! ಇದಕೆ-ಈ ಕಷ್ಟಕ್ಕೆ, ಉಪಾಯಂ-ಹೋಗಲಾಡಿಸಿಕೊಳ್ಳುವ ಮಾರ್ಗವು, ಏನೆಂದು-ಯಾವುದಿರುತ್ತದೆಂದು, ಚಿಂತಿಸಿ-ಆಲೋಚನೆಯನ್ನು ಮಾಡಿ, ವಿಪ್ರನು-ಆ ಭೂಸುರನು, ಉನ್ನತ-ಅತ್ಯಧಿಕವಾದ, ತಪೋಬಲದೊಳು-ತಪಸ್ಸಿನ ಶಕ್ತಿ ಪ್ರಭಾವದಿಂದ, ಅಂಘ್ರಿಯಂ-ಕಾಲನ್ನು, ಬಿದಿರಲ್ಕೆ-ಗಟ್ಟಿಯಾಗಿ ಒದರಲಾಗಿ, ಭಿನ್ನಿಸದೆ-ಬೇರೆಯಾಗದೆ, ಬಿಗಿದಿರ್ದ-ಗಟ್ಟಿಯಾಗಿ ಹುಲ್ಲಿನಿಂದ ಹಿಡಿದಿದ್ದ, ಬಲ್ಮೆಗಳ-ಶಕ್ತಿಗಳುಳ್ಳ, ದಂತಂಗಳು-ಪಲ್ಲುಗಳು, ಉಡಿದುವು-ಮುರಿದುಕೊಂಡು ಹೋದವು, ಏನೆಂಬೆನು-ಈ ಆಶ್ಚರ್ಯವನ್ನು (ಏನೆಂತ ವರ್ಣನೆ ಮಾಡಿ) ಹೇಳಲಿ.

ಅ|| ವಿ|| ಉತ್ಪನ್ನವಾದ+ಪಾಠೀನ=ಉತ್ಪನ್ನಪಾಠೀನ ವಿ.ಪೂ.ಕ. ಕಾಲಂ+ಪಿಡಿದು=ಕಾಲ್ವಿಡಿದು ಕ್ರಿ. ಸ. ಅಂಘ್ರಿ-ಪಾದ, ಕಿರಣ, ಬೇರು. ಸುರನಲ್ಲದವನು=ಅಸುರ, ಗ್ರಹ ತ್ಸ. ಗರ ದ್ಭ. ||೩೧||

ಟೀ|| ಮಡುವಿನೊಳು-ಜಲ ಸಮೃದ್ಧಿಯಾದ ಹಳ್ಳದಲ್ಲಿ, ಮಿಡಿ-ಬೆರಳನ್ನು, ಪಿಡಿದ-ಹಿಡಿದುಕೊಂಡ, ನೆಗಳಂ-ನಕ್ರವನ್ನು, ಬಲೋತ್ಕರದಿ-ಹೆಚ್ಚಾದ ಬಲದಿಂದ, (ಶಕ್ತಿಯಿಂದ) ಬಿಡಿಸಿಕೊಂಡರೆ-ಬಿಡಿಸಿಕೊಳ್ಳಲಾಗಿ, ಮುರಿದು-ತನ್ನ ತಪೋಬಲದಿಂದ ಸಂಹರಿಸಿ, ತಡಿಗೆ-ತೀರಕ್ಕೆ, (ಮೇಲಕ್ಕೆ) ಅಡರಿ-ಹತ್ತಿಕೊಂಡು, ಕೋಪದಿಂ-ರೋಷದಿಂದ, (ಈ ಕಾಸಾರದ ಜಲಂ-ಈ ಸರಸ್ಸಿನ ನೀರು), ಎನಗೆ-ವಿಪ್ರನಾದ ನನಗೇನೆ, ಕಡು-ಹೆಚ್ಚಾದ. ಭಯಂಕರದಿಂದ-ಹೆದರಿಕೆಯನ್ನುಂಟುಮಾಡುವ ರೀತಿಯಿಂದ, ತೋರಿತು-ಕಂಡುಬಂದಿತು, ಆದರಿಂದ-ಆದಕಾರಣದಿಂದ, ಪೊಡವಿಗೆ-ಪೃಥ್ವಿಗೆ, ಅತಿ-ಅಧಿಕವಾಗಿ, ಭೀತಿಯಂ-ಭಯವನ್ನು, ಮಾಡುವಂತೆ-ಉಂಟುಮಾಡುವಹಾಗೆ, ಇಲ್ಲಿ-ಈ ಕಾಸಾರದಲ್ಲಿ, ನೀರ್ಗುಡಿದ-ಜಲಪಾನ ಮಾಡಿದ, ಜೀವಿಗಳು-ಜೀವರಾಶಿಗಳು, ಇಲ್ಲಿ-ಇಲ್ಲಿಂದೀಚಿಗೆ, ಇನ್ನು ಮೊದಲು-ಈ ದಿನದ ಪ್ರಾರಂಭದಿಂದ, ಪುಲಿಯು-ವ್ಯಾಘ್ರವು, ಆಗಲಿ-ಉಂಟಾಗಲಿ (ಆಕಾರವನ್ನು ಹೊಂದಲಿ) ಎಂದು-ಎಂಬದಾಗಿ, ಮುನಿ-ಋಷಿಯಾದ ಕೃತವ್ರಣನು, ಶಾಪಿಸಿದನು-ಶಾಪವನ್ನಿತ್ತಿದನು ||

ಅ|| ವಿ|| ತಟ-ತ್ಸ. ದಡ-ದ್ಭ, ಕಡುವಾದ + ಭಯಂಕರ = ಕಡುಭಯಂಕರ, ವಿ. ಉಭಯ ಕ. ಪೊಡವಿ-ದ್ಭ ಪೃಥ್ವಿ-ತ್ಸ, ಇಂದು-ಈಗ, ಚಂದ್ರ. ಮಿಂದು-ಮೀ-ಧಾತು, ಮೀ (ಸ್ನಾನ ಮಾಡುವುದು) ಭಯವನ್ನು + ಕರ = ಭಯಂಕರ, ಕ್ರಿ. ಸ. || ೩೨ ||

ಟೀ|| ಆ ಸರಸಿಗೆ- ಆ ಕಾಸಾರಕ್ಕೆ, ಆಕೃತವ್ರಣಶಾಪಂ - ಕೃತವ್ರಣನೆಂಬ ಭೂಸುರನ ಶಾಪವು, ಎಂದಾದುದೊ-ಯಾ ದಿನಬಂದಿತೊ, ಅಂದುಮೊದಲಾಗಿ-ಆದಿನ ಪ್ರಾರಂಭದಿಂದ, ಭೀಕರಂ-ಭಯಂಕರವಾದದ್ದು, ಎನಿಸುತ-ಎಂಬದಾಗಿಹೇಳಿಸಿಕೊಳ್ಳುತ್ತ, ಇರ್ಪುದು-ಆ ಪದ್ಮಾಕರವಿರುತ್ತಿರುವುದು, ಇಳೆಗೆ-ಪೃಥ್ವಿಗೆ, ಒಂದುಜೀವಿಯು-ಒಂದು ಜೀವಜಂತುವು, ಆದಾಗ್ಯೂ

---

ಯೊ, ಅಥವಾ ದೈತ್ಯನೋ ಇಲ್ಲವೆ ಮಾಯಾಸ್ವರೂಪವೊ ನೀರಿನಲ್ಲಿ ಉತ್ಪನ್ನವಾದ ನಕ್ರವೊ, ಮಹಾಗ್ರಹವೊ, ಹರಹರ, ಮಹಾ ಕಷ್ಟಪ್ರಾಪ್ತಿಯಾದುದೇ! ಈ ಪ್ರಾಣಿಯಿಂದ ತಪ್ಪಿಸಿಕೊಳ್ಳುವ ಉಪಾಯವುಯಾವುದೆಂದು ಚಿಂತಿಸಿದನು ಆಗ ಕೃತವ್ರಣನು ತನ್ನ ಮಹೋನ್ನತ ಜ್ವಾಲೆಯಿಂದೊಡಗೂಡಿದ ತಪೋಬಲದಿಂದ ಮೊಸಳೆಯು ಹಿಡಿದಿದ್ದ ಪಾದವನ್ನು ಗಟ್ಟಿಯಾಗಿ ಒದರಲಾಗಿ ಬಿಡದೆ ತನ್ನ ಹಲ್ಲುಗಳಿಂದ ಕಚ್ಚಿಕೊಂಡಿದ್ದ, ಬಲವಾದ ರದನ ಪಙ್ತಿಗಳು ಮುರಿದುಹೋಗಿ, ಆ ನಕ್ರವು ದೀರ್ಘನಿದ್ರೆಯಂ ಪೊಂದಿತು ||೩೧|| ಆಗ ಕೃತವ್ರಣನು ಮಿರಮಿರನೆ ಬಂದು ತನ್ನ ಕಾಲಂ ಪಿಡಿದಿದ್ದ ನಕ್ರವನ್ನು ಸಂಹರಿಸಿ, ಸರಸಿಯ ತಡಿಗೆ ಬಂದು, ಅತಿ ಕೋಪದಿಂದ "ಬ್ರಾಹ್ಮಣನಾದ ನನಿಗೂ ಈ ಸರಸ್ಸಿನಲ್ಲಿ ಅತ್ಯಂತ ಭಯವುಂಟಾಗುತಿರ್ಪುದು" ಇನ್ನು ಮುಂದೆ ಈ ಸರಸ್ಸಿನಲ್ಲಿ ಯಾವ ಪ್ರಾಣಿಯೆ ಆಗಲಿ ಜಲಪಾನ ಮಾಡಿದ ಕೂಡಲೆ ವ್ಯಾಘ್ರವಾಗಲಿ ಎಂಬದಾಗಿ ಶಾಪವನ್ನಿತ್ತನು. || ೩೨ || ಆ ಸರಸ್ಸಿಗೆ ಕೃತವ್ರಣನೆಂಬ ಭೂಸುರನ ಶಾಪವು ಯಾವ ಕಾಲದಲ್ಲಿ ಉಂಟಾದುದೋ ಆದಿನ ಮೊದಲು

ಮಪ್ಪಭಯಕೆ ‖ ಅಂದುಪೆಣ್ಗುದುರೆಯಾಗಿರ್ದವಿಜಯನವಾಜಿ । ಬಂದುಕೊಳನಂಪೊಕ್ಕುನೀರ್ಗುಡಿದುಪುಲಿಯಾಗಿ । ಮುಂದ
ಗೆಡಿಸಿತುಮತ್ತೆಫಲ್ಗುಣಂಕಂಡು ವಿಸ್ಮಿತನಾಗಿಚಿಂತಿಸಿದನು ‖ ೩೩ ‖ ನೃಪನಹಯಮೇಧಮಿನ್ನೆಂತಹುದೊಮೂಜಗದೊಳ । ಪ
ಹಾಸಕೆಡೆಯಾದುದಾರಶಾಪದಫಲವೊ । ವಿಪರೀತಮಿದುಶಿವಶಿವಾಯೆನುತನಡನಡುಗಿಪಾರ್ಥನತಿಭೀತಿಯಿಂದ ‖ ಕಪಟದೋಳ್ಪಿಂ
ತೆದುರ್ಯೋಧನಾದಿಗಳೆಸಗಿ । ದುಪಹತಿಗಳಂತೆಗೆಸಿತಲೆಗಾಯ್ದೆಲ್ವೆಕೃಷ್ಣ । ಕೃಪೆಮಾಡಬೇಕುದೆನಗೆಂದು ಮುರವೈರಿಯಂ
ನೆನೆದುಚಿಂತಿಸುತಿರ್ದನು ‖ ೩೪ ‖ ಭಯನಿವಾರಣಸಕಲಸೃಷ್ಟಿಕಾರಣಜಗ । ನ್ಮಯಜನಾರ್ದನದುಷ್ಟದೈತ್ಯಮರ್ದನನತಾ ।

---

ಉದಕವನು_ಜಲವನ್ನು, ಅದರೊಳು_ಆ ಉದಕದಲ್ಲಿ, ಉಗ್ರ_ಭೀಕರಮಾದ, ವ್ಯಾಘ್ರಂ_ಶಾರ್ದೂಲವು, ಅಪ್ಪ-ಉಂಟಾಗುವ, ಭಯಕೆ_ಹೆದರಿಕೆಗೋಸ್ಕರ, ಒಲ್ಲವು-ಉದಕವನ್ನು ಅಪೇಕ್ಷಿಸವು, ಅಂದು-ಆದಿನ, ಪೆಣ್ಗುದುರೆಯಾಗಿರ್ದ-ಹೆಂಗುದುರೆಯಾಗಿದ್ದ, ವಿಜಯನ-ಪಾರ್ಥನ, ವಾಜಿ_ಯಜ್ಞಾಶ್ವವು, ;ಬಂದು_ಆ ಸರಸ್ಸಿನ ಬಳಿಗೆ ಬಂದು, ಕೊಳನಂ_ಪುಷ್ಕರಣಿಯನ್ನು ಪ್ರವೇಶಿಸಿ, ನೀರ_ಉದಕವನ್ನು, ಕುಡಿದು_ಪಾನಮಾಡಿ, ಪುಲಿಯಾಗಿ_ವ್ಯಾಘ್ರವಾಗಿ, ಮುಂದು-ಮುಂದಕ್ಕೇನೂ ತೋರದಂತೆ, ಗೆಡಸಿತು_ಕೇಡನ್ನು ಉಂಟುಮಾಡಿತು, ಮತ್ತೆ_ತಿರಿಗಿ, ಫಲ್ಗುಣಂ-ಪಾರ್ಥನು, ವಿಸ್ಮಿತನಾಗಿ (ಕುದುರೆಯು ಈ ರೀತಿಯಾದ ವಿರೂಪವನ್ನು ಹೊಂದಿದುದಕ್ಕೆ), ಬೆರಗಾದವನಾಗಿ, ಚಿಂತಿಸಿದನು_ಆಲೋಚಿಸಿದನು ‖

ಅ‖ ವಿ‖ ಭೀಕರ_ಅಂಜಿಕೆಯನ್ನುಂಟುಮಾಡುವ, ಪೆಣ್ + ಕುದುರೆ= ಪೆಣ್ಗುದರೆ, ಕ. ಕಾರಕ್ಕೆ ಗ. ಕಾರ ಆದೇಶ. ಪಿರಿದು, ಪುಲಿ_ಪೆರ್ಬುಲಿ, ವಿ. ಪೂ. ಕ. ವಿಜಯ_ಅರ್ಜುನ, ವಿಜಯ ಸಂವತ್ಸರ, ಗೆಲುವು. ಬದೋಣ. ‖೩೩‖

ಟೀ‖ ಆಗ ಅರ್ಜುನಂ_ಪಾರ್ಥನು, ತನ್ನಮನದೊಳಗೆ_ತನ್ನ ಮನಸ್ಸಿನಲ್ಲಿ, ನೃಪ_ದೊರೆಯಾದ ಧರ್ಮನಂದನನ, ಹಯಮೇಧಂ-ಅಶ್ವಮೇಧಯಾಗವು, ಎಂತು_ಯಾವರೀತಿಯಲ್ಲಿ, ಅಹುದೊ-ಆದೀತೋ, ಮೂಜಗದೊಳು_ಸ್ವರ್ಗ, ಮರ್ತ್ಯ, ಪಾತಾಳಗಳೆಂಬ ಮೂಲೋಕಗಳಲ್ಲಿಯೂ, ಅಪಹಾಸಕೆ_ಹಾಸ್ಯಮಾಡುವಿಕೆಗೆ (ನಿಂದನೆಗೆ), ಎಡೆಯಾದುದು_ಅವಕಾಶಮಾದುದು, ಆರ-ಯಾವ ಮಹನೀಯನ, ಶಾಪದ-ಶಪಿಸುವುದರ (ಕೇಡಾಗಲೆಂದು ದೂಷಿಸುವುದರ), ಫಲವೊ_ಪ್ರಾಪ್ತಿಯೊ (ಪ್ರಯೋಜನವೋ), ಇದು_ಈ ಕುದುರೆಯು ವ್ಯಾಘ್ರವಾದುದು, ವಿಪರೀತಂ-ಬೇರೆ ವಿಧವಾಗಿರುವುದು (ವಿಪರ್ಯಯಮಾಗಿರ್ಪುದು), ಶಿವಶಿವ_ಓ ಈಶ್ವರನೇ, ಎನುತ-ಎಂಬದಾಗಿ ಧ್ಯಾನಿಸುತ, ನಡನಡುಗಿ_ಬಹಳವಾಗಿ ಕಂಪಿಸಿದವನಾಗಿ, ಪಾರ್ಥನು_ಕಿರೀಟಿಯು, ಅತಿಭೀತಿಯಿಂದ_ಹೆಚ್ಚಾದ ಹೆದರಿಕೆಯಿಂದ, ಕಪಟದೋಳ್-ವಂಚನೆಯಿಂದ (ಕೃತ್ರಿಮದಿಂದ), ಪಿಂತೆ-ಮೊದಲು, ದುರ್ಯೋಧನಂ_ದುರ್ಯೋಧನನೆಂಬ ಕುರುವಂಶಜನು, ಆದಿ_ಮೊದಲುಗೊಂಡು, ಎಸಗಿದ_ಉಂಟುಮಾಡಿದ, ಉಪಹತಿಗಳಂ _ ತೊಂದರೆಗಳನ್ನು, ತೆಗಸಿ_ನಿರ್ಮೂಲಮಾಡಿ (ಹೋಗಲಾಡಿಸಿ), ತಲೆ_ನಮ್ಮ ಯ ಶಿರವನ್ನು, ಕಾದೆ_ಸಲಹಿದವನಾದೆ, ಎಲ್ವೆಕೃಷ್ಣ_ಎಲೈಯ್ಯಾ ಕೃಷ್ಣಸ್ವಾಮಿಯೆ ! ಕೃಪೆಮಾಡಬೇಕು-ಕೃಪೆಯಿಂದ ರಕ್ಷಿಸಬೇಕು, ಎಂದು_ಎಂದು ಸ್ಮರಿಸುತ್ತ, ಮುರವೈರಿಯಂ_ಮುರಧ್ವಂಸಿಯಾದ ಶ್ರೀ ಕೃಷ್ಣನನ್ನು, ನೆನದು_ಸ್ಮರಿಸಿ, ಚಿಂತಿಸುತಿರ್ದನು_ಆಲೋಚನೆಯಂ ಮಾಡುತ್ತಿದ್ದನು ‖

ಅ‖ ವಿ‖ ಹಯದ+ಮೇಧ=ಹಯಮೇಧ, ಷ. ತ. ಮೂರಾದ_ಜಗಗಳ, ಸಮಾಹಾರ_ಮೂಜಗ, ಸಮಾಹಾರ-ದ್ವಿಗು ಸ. ಕಪಟ-ವಂಚನೆ, ಬಾವಲಿ. ತಲೆಯಂ+ಕಾಯ್ದೆ=ತಲೆಗಾಯ್ದೆ. ಕ್ರಿ. ಸ. ‖೩೪‖

---

ಗೊಂಡು, ಭಯಂಕರ ವೆಂದೆನಿಸಿಕೊಳ್ಳುತ್ತ ಆ ಸರೋವರ ವಿರುವುದು. ಈ ಭೂಮಿಯಲ್ಲಿ ಬಂದು ಜೀವಿಸಿದಾಗ್ಯೂ ಆ ಉದಕವಂ ಪಾನಮಾಡಿ ಅತಿಭಯಂಕರನಾದ ವ್ಯಾಘ್ರ ಜನ್ಮವನ್ನು ಹೊಂದಲು ಅಪೇಕ್ಷಿಸದು, ಆಗ ಹೆಣ್ಣು ಕುದುರೆಯಾಗಿದ್ದ ಪಾರ್ಥನ ತುರಗವು ಆ ಸರೋವರವಂ ಪೊಕ್ಕು ಜಲವನ್ನು ಪಾನಮಾಡಲಾಗಿ, ಹುಲಿಯ ರೂಪವನ್ನು ಹೊಂದಿತು, ಈ ವಿಚಿತ್ರಾದಿಗಳನ್ನೆಲ್ಲಾ ಧನಂಜಯನು ನೋಡಿ ಪುನಹ ವಿಸ್ಮಿತ ಹೃದಯನಾಗಿ, ಶಿವ ಶಿವ ! ಪುನಹ ಈರೀತಿಯಾದ ಆಶ್ಚರ್ಯ ಉಂಟಾಯಿತೆ ! ಎಂದು ಚಿಂತಿಸಿದನು ‖ ೩೩ ‖ ಆಗ ಅರ್ಜುನನು ಭೂಪತಿಯಾದ ಧರ್ಮನಂದನನ ಹಯಮೇಧವು ಯಾವ ರೀತಿಯಲ್ಲಿ ನೆರವೇರುವುದೋ ! ತ್ರಿಲೋಕದಲ್ಲೂ ಅಪಹಾಸ್ಯಕ್ಕೆ ಆಸ್ಪದ ಉಂಟಾಯಿತು ಯಾವ ಮಹನೀಯನ ಶಾಪದ ಫಲವೋ ಶಿವ ಶಿವ, ಈ ಅಶ್ವವು ಹುಲಿಯಾದದ್ದು ಇನ್ನೂ ವಿಪರೀತವಾಗಿರುವುದು. ಎಂದು ಬಹಳವಾಗಿ ಕಂಪಿತನಾಗಿ, ಪಾರ್ಥನು ಅತಿಯಾದ ಭಯದಿಂದ, ಹಿಂದೆ ದುರ್ಯೋಧನಾದಿಗಳು ಮಾಡಿದ ಕೆಡಕುಗಳನ್ನೆಲ್ಲಾ ಹೋಗಲಾಡಿಸಿ ತಲೆಗಾಯ್ದವನಾದೆ. ಎಲೈ ಶ್ರೀ ಕೃಷ್ಣಸ್ವಾಮಿಯೆ ? ನನ್ನಲ್ಲಿ ಒಲಿಯಬೇಕೆಂದು ಮುರಹರನಂ ವಿನಯದಿಂದ ಬೇಡಿಕೊಂಡವನಾಗಿ ಮನದೋಳ್ ಚಿಂ

ಶ್ರಯಧರಾಧರಕಮಲಸಂಭವೋದರ ಘನಶ್ಯಾಮಯದುಕುಲಲಲಾಮ ॥ ಲಯವಿವರ್ಜಿತಪುಣ್ಯನಾಮನಿರ್ಜಿತದುರಿತ । ಚಯ
ವಿರಾಜಿತಸರ್ವಲೋಕಪೂಜಿತಪದ । ದ್ವಯಕೃಪಾಕರ ಕೃಷ್ಣಬಿಡಿಸುಭೀಕರವನೆಂದರ್ಜುನಂ ಘೋಷಿಸಿದನು ॥ ೩೫ ॥ ಪುಷ್ಕ
ರಗದಾಶಂಖಚಕ್ರಶೋಭಿತಕರಚ । ತುಷ್ಕದಿಂಶ್ರೀವತ್ಸಕೌಸ್ತುಭಾಭರಣದಿಂ । ನಿಷ್ಕಳಂಕೇಂದುಮಂಡಲಸದೃಶವದನದಿಂನವ

ಟೀ॥ ಅರ್ಜುನಂ-ಪಾರ್ಥನು ಕೃಷ್ಣನಂ ಕುರಿತು, ಭಯ-ಭೀತಿಯನ್ನು, ನಿವಾರಣ-ಹೋಗಲಾಡಿಸುವವನು, ಸಕಲ-ಸರ್ವವಿಧವಾದ, ಸೃಷ್ಟಿ-ನಿರ್ಮಾಣಕ್ಕೆ, ಕಾರಣ-ಬೀಜಸ್ವರೂಪನು (ಹೇತುವಾದವನು), ಜಗನ್ಮಯ- ಪ್ರಪಂಚಸ್ವರೂಪನು, ಜನಾರ್ದನ-ಜನರನ್ನು ರಕ್ಷಕನು, ದುಸ್ಟ-ನೀಚರಾದ, ದೈತ್ಯ-ದನುಜರನ್ನು, ಮರ್ದನ-ಶಿಕ್ಷಿಸತಕ್ಕವನು, ನತ-ಸೇವಕರಿಗೆ,ಆಶ್ರಯ-ಆಶ್ರಯಭೂತನು, ಧರಾಧರ-ಪೃಥ್ವಿಯನ್ನು (ಬೆಟ್ಟ) ಧರಿಸತಕ್ಕವನು (ಹೊತ್ತವನು), ಕಮಲಸಂಭವ-ಕಮಲೋದ್ಭವನಾದ ಬ್ರಹ್ಮನನ್ನು, ಉದರ-ನಾಭಿಯ ಪದ್ಮದಲ್ಲಿ ಹೊಂದಿರತಕ್ಕವನು, ಘನ-ಮೇಘದಂತೆ, ಶ್ಯಾಮ-ನೀಲಿಯ ಬಣ್ಣವುಳ್ಳವನು, ಯದು-ಯದುರಾಯನ, ಕುಲ-ಕುಲಕ್ಕೆ, ಲಲಾಮ-ತಿಲಕಪ್ರಾಯನು, ಲಯ-ಮರಣದಿಂದ, ವಿವರ್ಜಿತನು-ಬೇರೆಯಾದವನು (ಜರಾಮರಣಾದಿಗಳಿಲ್ಲದವನು), ಪುಣ್ಯ-ಪರಿಶುದ್ಧವಾದ, ನಾಮ-ನಾಮಧೇಯವುಳ್ಳವನು, ನಿರ್ಜಿತ-ಜಯಿಸಲ್ಪಟ್ಟ (ಹೋಗಲಾಡಿಸಲ್ಪಟ್ಟ), ದುರಿತ-ತನ್ನ ಭಜಕರಪಾಪದ, ಚಯ-ಸಮೂಹಮುಳ್ಳವನು, ತಾಂ-ತಾನು, ಪಾಪರಹಿತನು-ಪುಣ್ಯಸ್ವರೂಪನು, ವಿರಾಜಿತ-ಸ್ವಯಂತೇಜೋಮಯನು, ಸರ್ವ-ಸಕಲವಾದ, ಲೋಕ-ಪ್ರಪಂಚದ ಜನರಿಂದ, ಪೂಜಿತ-ಅರ್ಚಿಸಲ್ಪಟ್ಟ, ಪಾದದ್ವಯ-ಪಾದಯುಗ್ಮವುಳ್ಳವನು, ಕೃಪಾಕರ-ದಯೆಗೆ ಗಣಿಯಾಗಿರತಕ್ಕವನೂ ಆಗಿರುವ, ಕೃಷ್ಣ-ಶ್ರೀ ಕೃಷ್ಣಮೂರ್ತಿಯೇ! ಭೀಕರವನು-ಕುದುರೆಯ ವಿಷಯದಲ್ಲಿ ನನಗುಂಟಾಗುವ ಹೆದರಿಕೆಯನ್ನು, ಬಿಡಿಸು-ಹೋಗಲಾಡಿಸು, ಎಂದು-ಎಂಬದಾಗಿ, ಘೋಷಿಸಿದನು-ಗಟ್ಟಿಯಾಗಿ ಕೂಗಿಕೊಂಡನು ॥

ಅ॥ ವಿ॥ ಜಗತ್ + ಮಯ = ಜಗನ್ಮಯ, ಅನು. ಸ. ಮೇಘದಂತೆ + ಶ್ಯಾಮ = ಮೇಘಶ್ಯಾಮ, ಉ. ಪೂ. ಕ. ಯದುವಿನ + ಕುಲ = ಯದುಕುಲ, ಷ. ತ. ಕೃಪೆಗೆ, ಆಕರ, ಷ. ತ. ಕೃಪಾ + ಆಕರ = ಕೃಪಾಕರ, ಸವರ್ಣದೀರ್ಘ ಸಂಧಿ ಆಕರ-ತ್ಸ. ಆಗರ-ದ್ಭ. ಪಾದ-ಕಿರಣ ಕಾಲು ಬೇರು ಇತ್ಯಾದಿ ॥ ೩೫॥

ಟೀ॥ ಎಲಿದೇವ-ಎಲೈ ಪ್ರಭುವೆ! ಪುಷ್ಕರ-ಪದ್ಮವು, ಗದಾ-ಗದೆಯೆಂಬ ಆಯುಧವು, ಶಂಖ-ಶಂಖವು, ಚಕ್ರ-ಚಕ್ರಾಯುಧವು, ಇವುಗಳಿಂದ, ಶೋಭಿತ - ಕಾಂತಿಯಿಂದೊಡಗೂಡಿದ, ಕರ-ಹಸ್ತಗಳ, ಚತುಷ್ಕದಿಂ - ನಾಲ್ಕರಿಂದಲೂ, ಶ್ರೀವತ್ಸ-ಶ್ರೀವತ್ಸವೆಂಬ ಗುರ್ತಿನಿಂದ, ಕೌಸ್ತುಭ-ಕೌಸ್ತುಭವೆಂಬ ಮಣಿಯಿಂದ, ಆಭರಣದಿಂ-ಅಲಂಕಾರದಿಂದಲೂ ನಿಷ್ಕಳಂಕ-ಕಳಂಕರಹಿತವಾದ, ಇಂದುಮಂಡಲ-ಚಂದ್ರಬಿಂಬಕ್ಕೆ, ಸದೃಶ - ಸಮವಾದ, ವದನದಿಂ - ಮುಖದಿಂದಲೂ, ನವ-ನೂತನವಾದ, ಪೀತ-ಹಳದಿಯ ವರ್ಣದಿಂದ ಯುತವಾದ, ವಾಸದಿಂ - ವಸನದಿಂದಲು, (ಪೀತಾಂಬರದಿಂದಲು) ಪುಷ್ಕರ-ಕರಿನೈದಿಲೆಯಂತೆ, ಶ್ಯಾಮಲ-ನೀಲೀಚ್ಛಾಯೆಯಾದ, ಕೋಮಲ-ಮೃದುತ್ವವುಳ್ಳ, ರಾಮಣೀಯಕ-ಮನಸ್ಸನ್ನು ಅಪಹರಿಸತಕ್ಕ, ವಪುಸ್ಕಾಂತಿಯಿಂದ-ಅಂಗಕಾಂತಿಯಿಂದಲು, ಎಸೆವ-ಹೊಳೆಯುತ್ತಿರುವ, ನಿನ್ನ-ನಿನ್ನಯ, ರೂಪು-ಆಕಾರವು, ಎದೆಯೊಳು-ನನ್ನ ಮನಸ್ಸಿನಲ್ಲಿ (ನನ್ನ ಹೃದಯದಲ್ಲಿ) ಇರೆ-ಇರಲಾಗಿ, ದುಷ್ಕಂಟಕದ-ಕೆಟ್ಟ ಮುಳ್ಳಿನ ಪ್ರಾಯವಾದೀ ಕ್ರೂರಜೀವಜಂತುವಿನ, ಭೀತಿಯು-ಅಂಜಿಕೆಯು, ಎನಗೆ-ನನಗೆ, ಅದೇಕೆ-ಅದೆಲ್ಲಿಂದ ಲಭಿಸೀತು? ಆದಕಾರಣದಿಂದ, ಸಲಹು-ರಕ್ಷಿಸು, ಎಂದು-ಎಂದು ಹೇಳುತ್ತ, ಆ ಪಾರ್ಥಂ-ಆ ಫಲುಗುಣನು, ಎಂದನು-ಆಡಿದನು ॥

ತಿಸುತ್ತಿದ್ದನು ॥೩೪॥ ಆಬಳಿಕ ಭಯವನ್ನು ನಿವಾರಣೆ ಮಾಡುವವನಾಗಿಯೂ, ಸಕಲ ಸೃಷ್ಟಿ ಸ್ಥಿತಿ ಲಯಾದಿಗಳಿಗೆ ಕಾರಣಭೂತನಾಗಿಯೂ, ಈ ಪ್ರಪಂಚವೇ ತಾನಾಗಿ ಕಂಡು ಬರುವನಾಗಿಯೂ, ಭೂಮಿಯನ್ನು (ಬೆಟ್ಟ) ಹೊತ್ತವನಾಗಿಯೂ ಚತುರ್ಮುಖ ಬ್ರಹ್ಮನನ್ನು ನಾಭಿಕಮಲದಲ್ಲಿ ಹೊಂದಿರುವವನಾಗಿಯೂ, ನೀಲಮೇಘಶ್ಯಾಮನಾಗಿಯೂ, ಜರಾಮರಣಾದಿಗಳಿಲ್ಲದವನಾಗಿಯೂ, ಪಾಪರಹಿತನಾಗಿಯೂ, ಸಮಸ್ತ ಲೋಗರಿಂದಲೂ ಪೂಜಿಸಿಕೊಳ್ಳತಕ್ಕ ಪಾದದ್ವಯವುಳ್ಳವನಾಗಿಯೂ ಇರುವ ಶ್ರೀ ಕೃಷ್ಣನೇ! ಈಗ ನನಗೆ ಬಂದಿರುವ ವಿಪತ್ತುಗಳನ್ನು ಪರಿಹಾರ ಮಾಡಿ ಕಾಪಾಡ ಬೇಕೆಂದು ಆರ್ತಸ್ವರದಿಂದ ಪಾರ್ಥನು ಪ್ರಲಾಪಿಸಿದನು ॥ ೩೫ ॥ ಬಳಿಕ ಪಾರ್ಥನು ಶ್ರೀ ಕೃಷ್ಣನನ್ನು ಕುರಿತು ಎಲೈ ದೇವ, ನೀರಜ, ಗದೆ, ಚಕ್ರ ಇವುಗಳಿಂದ, ಅಲಂಕೃತಗಳಾದ ಕರಗಳ ನಾಲ್ಕರಿಂದಲೂ, ಶ್ರೀವತ್ಸವೆಂಬ ಮಚ್ಚೆಯಿಂದಲೂ, ಕೌಸ್ತುಭವೆಂಬ ಮಣಿಯ ಆಭರಣದಿಂದಲೂ, ಕಳಂಕರಹಿತನಾದ ಇಂದು ಬಿಂಬಕ್ಕೆ ಸದೃಶನಾದ ಆಸ್ಯದಿಂದಲೂ, ಹೊಸದಾದ ಪೀತಾಂಬರದಿಂದಲೂ, ಶಾಮಲವರ್ಣವಾದ ಕೋಮಲವಾದ ನೀಲಮೇಘಶ್ಯಾಮ ಕಾಯದಿಂದಲೂ, ಪ್ರಕಾಶಿಸುವ ನಿನ್ನಯ ರೂಪವು

ಪೀತವಾಸದಿಂದ ‖ ಪುಷ್ಕರಶ್ಯಾಮಕೋಮಲರಾಮಣೀಯಕವ | ಪುಷ್ಕಾಂತಿಯಿಂದೆಸೆವನಿನ್ನರೂಪೆದೆಯೊಳಿರೆ | ದುಷ್ಕಂಟಕದಭೀತಿಯೆನಗದೇಕೆಲೆದೇವಸಲಹೆಂದನಾಪಾರ್ಥನು ‖೩೬‖ ನಿನ್ನೊಂದುಪೆಸರಪ್ರೋಲ್ಕೆಯೊಳಂದಜಾಮಿಳಂ | ತನ್ನಪಾತಕಕೋಟಿಯುಂಪರಿಹರಿಸಿಕೊಂಡ | ನಿನ್ನನಾನೆಂದುನಂಬಿರ್ದನಿಜಶರಣರ್ಗೆಭಯಮುಂಟೆಮೂಜಗದೊಳು ‖ ಎನ್ನಭೀತಿಯನೀಗೆಬಿಡಿಸುವೊಡೆಕೃಪೆಯೊಳ್ | ಸನ್ನನಾಗಚ್ಯುತಮುಕುಂದಕೇಶವಕೃಷ್ಣ | ಪನ್ನಗಾರಿಧ್ವಜನೆಯೆನುತನರಹರಿಯನಾಮಂಗಳಂವಾಚಿಸಿದನು ‖೩೭‖ ಅದ್ಭುತವ್ಯಾಘ್ರಮಾದಶ್ವಮಂಕಾಣುತಮ | ಹದ್ಭಯದೊಳಸುರಾರಿಯಂಪಾರ್ಥನಿಂತಿಂತು | ಸದ್ಭಾವದಿಂಪ್ರಾರ್ಥಿಪನ್ನೆಗಂದೈವವಶದಿಂತನ್ನತಾನೆಬಳಿಕ ‖ ಉದ್ಭವಿಸಿತಾಹಯಕೆಮುನ್ನಿನಾಕಾರಮಾ | ಪದ್ಮೀಶಿಪಾಂಡವರ್ಗೆ

---

ಅ‖ ವಿ‖ ಪುಷ್ಕರ-ಆಕಾಶ, ನೀರು, ಕಮಲ, ಕತ್ತಿಯ ಅಲಗು, ಆನೆಯ ಸೊಂಡಿಲ ತುದಿ. ಕು-ಭೂಮಿಯನ್ನು, ಸ್ತುಭ-ಆವರಿಸಿರುವುದು ಕುಸ್ತುಭ (ಸಮುದ್ರ) ಕುಸ್ತುಭದಲ್ಲಿ ಹುಟ್ಟಿದ್ದು ಕೌಸ್ತುಭ. ಅಕಳಂಕ+ಇಂದು= ಅಕಳಂಕೇಂದು ಗುಣ. ಸಂಧಿ. ಪೀತವಾದ + ವಾಸ = ಪೀತವಾಸ ವಿ. ಪೂ. ಕ. ರಮಣೀಯವಾದದ್ದು ರಾಮಣೀಯಕ. ಪೃಥೆಯ ಮಗ ಪಾರ್ಥ ‖೩೬‖

ಟೀ‖ ಅಂದು-ಕೆಲವು ಕಾಲದ ಹಿಂದೆ, ನಿನ್ನ-ನಿನ್ನಯ, ಒಂದು ಪೆಸರ-ಒಂದು ನಾಮೋಚ್ಚಾರಣೆಯ, ಪೋಲ್ಕೆಯೊಳು-ಹೋಲಿಸೋಣದರಿಂದ, ಅಜಾಮಿಳಂ-ಅಜಾಮಿಳನೆಂಬ ಭೂಸುರನು, ತನ್ನ-ತನ್ನಯ, ಪಾತಕ-ಕೊಲೆಯ ಎಂದರೆ ಪಾಪದ, ಕೋಟಿಯುಂ-ಒಂದು ಕೋಟಿಯನ್ನೂ, ಪರಿಹರಿಸಿಕೊಂಡ- ಪರಿಹಾರಮಾಡಿಕೊಂಡನು, ನಿನ್ನಂ-ನಿನ್ನನ್ನು, ಅಂ-ನಾನೇ, ಎಂದು-ಎಂಬದಾಗಿ, ಎಂದರೆ (ನೀನೇ ನಾನು ಎಂಬದಾಗಿ) ದ್ವೈತಾದ್ವೈತ ಭೇದದಿಂದ, ನಂಬಿರ್ದ-ನೆಚ್ಚಿಕೊಂಡಿದ್ದ, ನಿಜ-ನಿನ್ನಲ್ಲಿ ನಿಜವಾದಭಕುತಿಯುಳ್ಳ, ಶರಣರ್ಗೆ-ಮರೆಹೊಕ್ಕವರಿಗೆ, ಮೂಜಗದೊಳು-ಮೂಲೋಕಗಳಲ್ಲಿಯೂ, ಭಯಂ-ಭೀತಿಯು, ಉಂಟೆ- ಇರುತ್ತದೆಯೇ, (ಎಂದಿಗೂ ಭಯವಿರುವುದಿಲ್ಲ) ಎನ್ನ- ನನ್ನಯ, ಭೀತಿಯನು – ಹೆದರಿಕೆಯನ್ನು, ಈಗ-ಈ ವೇಳೆಯಲ್ಲಿ, ಬಿಡಿಸುವಡೆ-ಹೋಗಲಾಡಿಸುವುದಾಗಿದ್ದರೆ, ಕೃಪೆಯೊಳು-ಕರುಣದಿಂದ, ಪ್ರಸನ್ನನಾಗು-ಎದುರಿಗೆ ಬರುವವನಾಗು, ಅಚ್ಯುತ- ನಾಶರಹಿತನಾದ, ಮುಕುಂದ- ಮುಕ್ತಿದಾಯಕನಾದ, ಕೇಶವ-ಕೇಶಿಯೆಂಬ ರಾಕ್ಷಸಿಯನ್ನು ನಾಶಮಾಡಿದವನಾದ, ಪನ್ನಗ-ಸರ್ಪಗಳಿಗೆ, ಅರಿ-ಶತ್ರುವಾದ, ಗರುಡನೆ, ಧ್ವಜ-ಕೇತನದಲ್ಲಿ ಉಳ್ಳವನಾದ, ಕೃಷ್ಣ-ತನ್ನ ಭಕ್ತರನ್ನ ಸಂಸಾರ ಬಂಧದಿಂದ ನಿನ್ನ ಕಡೆಗೆ ಎಳೆಯತಕ್ಕವನೆ, ಎನುತ-ಎಂಬದಾಗಿ ಉಚ್ಚರಿಸುತ್ತ, ನರಹರಿಯ-ನೃಸಿಂಹನ ಅವತಾರವಂ ನಿರ್ಮಿಸಿದವನಾದ ನಾರಾಯಣಮೂರ್ತಿಯ, ನಾಮಂಗಳಂ-ಹೆಸರುಗಳನ್ನು, (ನಾಮಗಳನ್ನು) ವಾಚಿಸಿದನು-ಉಚ್ಚಾರಣೆ ಮಾಡಿದವನಾದನು.

ಅ‖ ವಿ‖ ಪೂರ್ವಕಾಲದಲ್ಲಿ ಅಜಾಮಿಳನೆಂಬ ಜಾತಿಭ್ರಷ್ಟನಾದ ಬ್ರಾಹ್ಮಣನು ಶೂದ್ರಸ್ತ್ರೀಯಲ್ಲಿ ಸಂಸಾರಮಾಡಿಕೊಂಡಿರುವಾಗ್ಗೆ, ಯಮ ದೂತರು ಬಂದು ಆ ಅಜಾಮಿಳನನ್ನು ಎಳೆದೊಯ್ಯುವಾಗ, ಬಹು ಭಯದಿಂದ ತನ್ನ ಪುತ್ರನಾದ ನಾರಾಯಣನನ್ನು ಗಟ್ಟಿಯಾಗಿ ಕೂಗಿಕೊಂಡನು. ಈ ರೀತಿಯಾಗಿ ಕೂಗಿಕೊಂಡ ಮಾತ್ರಕ್ಕೇನೆ ಶ್ರೀಮನ್ನಾರಾಯಣನು ಒಲಿದು ಅವನಿಗೆ ಸದ್ಗತಿಯಂ ಕೊಟ್ಟನು. ನಾರಾಯಣನಾಮೋಚ್ಚಾರಣೆಯ ಮಹತ್ವವು ಪೃಥ್ವಿಯಲ್ಲಿ ಇನ್ನೆಂಥಾದ್ದೊ!

---

ಎನ್ನಯ ಹೃದಯದಲ್ಲಿರಲು, ಕ್ರೂರ ಪ್ರಾಣಿಗಳ ಭಯವು ನನಗೆ ಎಲ್ಲಿಂದ ಲಭಿಸೀತು, ಆದಕಾರಣ ಸಂರಕ್ಷಿಸುವನಾಗು, ಎಂದು ಪಾರ್ಥನು ಶ್ರೀ ಕೃಷ್ಣನಂ ಧ್ಯಾನಿಸಿದನು ‖೩೬‖ ಮತ್ತು ಧನಂಜಯನು ಎಲೈ ಸ್ವಾಮಿಯೆ! ಪೂರ್ವದಲ್ಲಿ ನಿನ್ನಯ ಒಂದು ನಾಮ ಮಾತ್ರವನ್ನು ಉಚ್ಚಾರಣೆಮಾಡಿ ಅಸಂಖ್ಯಾಕವಾದ ಪಾಪಗಳನ್ನು ಪರಿಹರಿಸಿಕೊಂಡ ಅಜಾಮಿಳನ ಧನ್ಯನಾಗಲಿಲ್ಲವೆ? ನೀನೇ ನಾನೆಂದು ಅದ್ವೈತಾವಲಂಬಿಗಳಂತೆ ನಂಬಿರ್ದ ನಿನ್ನ ಭಜಕರಿಗೆ ನಿನ್ನನ್ನೇ ಅನುಸರಿಸಿ ಕೊಂಡಿರುವವರಿಗೆ ಮೂಲೋಕಗಳಲ್ಲಿಯಾದರೂ ಭಯವುಂಟಾದೀತೆ? ಎನಗೆ ಲಭಿಸಿರುವ ಭಯವನ್ನು ಈ ಕಾಲದಲ್ಲಿ ಪರಿಹರಿಸುವುದಾಗಿದ್ದರೆ ಕೂಡಲೆ ಪ್ರಸನ್ನನಾಗು; ನಾಶರಹಿತನಾದ ಮುಕ್ತಿಪ್ರದನಾದ ಕ್ಷೀರೋದಧಿಶಯನನಾದ ಪನ್ನಗಾರಿಧ್ವಜನಾದ, ಮುರಹರನಾದ ಲಕ್ಷ್ಮೀಪತಿಯಾದ ಶ್ರೀ ಕೃಷ್ಣಮೂರ್ತಿಯೇ! ಎಂಬದಾಗಿ ಹೃದಯದಲ್ಲಿ ಧ್ಯಾನಿಸುತ್ತಾ ನೃಸಿಂಹಾವತಾರ ಮಾಡಿದ ಶ್ರೀಮನ್ನಾರಯಣನ ನಾಮೋಚ್ಚಾರಣೆಗಳಂ ಗೈಯ್ಯನು ‖೩೭‖ ಈಗ ಅತ್ಯದ್ಭುತವಾಗಿ ಅತ್ಯಾಶ್ಚರ್ಯಕರವಾದ ಈ ವ್ಯಾಘ್ರರೂಪವನ್ನು ಧರಿಸಿದೀ ಹಯವನ್ನು ನೋಡುತ್ತ, ಮಹತ್ತಾದ ಭಯದಿಂದ ಪಾರ್ಥನು, ಈ ಪ್ರಕಾರವಾಗಿ ಸದ್ಭಾವದಿಂದ, ಶ್ರಿಯಃಪತಿಯಾದ ಶ್ರೀಮನ್ನಾರಾಯಣ ಮೂರ್ತಿಯನ್ನು ಬೇಡಿಕೊಳ್ಳುವ ಆ ಸಮಯಕ್ಕೆ ದೈವವಶದಿಂದ ಆ ತರುವಾಯ ಆ ಕುದುರೆಯು ತನ್ನಷ್ಟಕ್ಕೆ ತಾನೆ ಪೂರ್ವದ ಆಕಾರವನ್ನೇ ಹೊಂದಿತು. ಆಗ ಆ ಪಾರ್ಥನ ಸೇನಾಜನವು ಪಾಂಡುರಾಯನ

ತ್ತಣದುಮುರರಿಪುಸು | ಹೃದ್ಭಂಗನುಂಸೈರಿಸುವನಲ್ಲೆನುತಕಟಕದಾಮುಂದಿಕೊಂಡಾಡಲು || ೩೮ || ಆಟವಿಕನೊಂದೊಂದು ಬಹುರೂಪಮಂತಾಳ್ದು | ನಾಟಕವನಾಡಿಮುನ್ನಿನತನ್ನರೂಪಮಂ (ತನ್ನ ವೇಷಮುಂ) | ನೋಟಕರಕಣ್ಗೆ ಕಾಣಿಸುವಂತೆ ಪೆಣ್ಗುದುರೆಯಾಗಿವುಲಿಯಾಗಿಮತ್ತೆ || ಘೋಟಕೋತ್ತಮಮಾದುದೆಂದಿನಂದದಲಾನಿ | ಕಾಟದಲ್ಲಣನಂಪೊಗಳ್ದುದೆಲ್ಲಾಜನಂ |

---

ಕೋಟಿ-ಕೊನೆ, ಸಂಖ್ಯೆ, ಚ್ಯುತಿ-ನಾಶ, ಅ_ಇಲ್ಲದವನು(ಅಚ್ಯುತ), ಮು_ಮುಕ್ತಿಯನ್ನು, ಕುಂ-ಭಕ್ತಿಯನ್ನು, ದ-ಕೊಡತಕ್ಕವನು, ಮಾ_ಲಕ್ಷ್ಮಿಯ, ಧವ-ಪತಿಯು, (ವಿಷ್ಣುವು), ನರನರೂಪವಾಗಿಯೂ, ಹರಿರೂಪವಾಗಿಯೂ, ಇರುವವನು (ನರಹರಿ), ನರನೂ, ಹರಿಯೂ=ನರಹರಿ, ವಿ. ಉ. ಕ. ||೩೭||

ಟೀ|| ಆಗ-ಅ ಸಮಯದಲ್ಲಿ, ಅದ್ಭುತ_ಅತ್ಯಾಶ್ಚರ್ಯಕರಮಾದ, ವ್ಯಾಘ್ರಮಾದ_ಶಾರ್ದೂಲವಾದ, ಅಶ್ವಮಂ_ತುರಗೆವನ್ನು, ಕಾಣುತ_ಈಕ್ಷಿಸುತ್ತಲೆ, ಮಹತ್ - ಅಧಿಕವಾದ, ಭಯದೊಳು - ಹೆದರಿಕೆಯಿಂದ, ಪಾರ್ಥಂ_ಫಲುಗುಣನು, ಅಸುರಾರಿಯಂ_ದೈತ್ಯಾರಿಯಾದ ಶ್ರೀ ಕೃಷ್ಣನನ್ನು, ಇಂತಿಂತು_ಈ ಪ್ರಕಾರವಾಗಿ, ಸದ್ಭಾವದಿಂ_ನಿರ್ಮಲಚಿತ್ತದಿಂದ, ಪ್ರಾರ್ಥಿಪ_ಕೇಳಿಕೊಳ್ಳುತ್ತಿರುವ, ಅನ್ನೆಗಂ_ಅಷ್ಟು ಹೊತ್ತಿಗೆ, ದೈವವಶದಿಂದ - ವಿಧಿಗನುಸಾರಮಾದ ಶಕ್ತಿಯಿಂದ, ಬಳಿಕ - ಅನಂತರದಲ್ಲಿ, ತನ್ನತಾನೆ_ತನ್ನನ್ನು ತಾನಾಗಿಯೆ, ಆಹಯಕೆ_ಆ ಅಶ್ವಕ್ಕೆ, ಪಾಂಡವರಿಗೆ-ಪಾಂಡುರಾಯನ ಪುತ್ರರಿಗೆ ಆಪದ್ಭೀತಿ_ಕಷ್ಟದ ಅಂಜಿಕೆಯು, ಎತ್ತಣದು - ಎಲ್ಲಿಂದ ಬಂದೀತು, (ಎಂದಿಗೂ ಪಾಂಡವರಿಗೆ ವಿಪದ್ಭಯಗಳೇ ಇಲ್ಲ), ಮುರರಿಪು - ಮುರವೈರಿಯಾದ ಶ್ರೀ ಕೃಷ್ಣನು, ಸುಹೃತ್_ತನ್ನ ಮಿತ್ರರಿಗೆ ಉಂಟಾದ, ಭಂಗಮಂ - ನ್ಯೂನತೆಯನ್ನು (ಅಪಮಾನವನ್ನು) ಅಥವಾ, ಕೊರತೆಯನ್ನು, ಸಹಿಸುವನು - ಸಹಿಸತಕ್ಕವನು, ಅಲ್ಲ_ಅಲ್ಲವು, ಎನುತ_ಎಂದು ಹೇಳುತ್ತ, ಕಟಕದ-ಸೇನೆಯ, ಮಂದಿ_ಕಾಲ್ಬಲವು, (ಜನರು), ಕೊಂಡಾಡಲು-ಸ್ತೋತ್ರಮಾಡಲಾಗಿ, ಆಹಯಕೆ_ಆ ಅಶ್ವಕ್ಕೆ, ಮುನ್ನಿನ_ಹಿಂದಿನ (ಗಂಡುರೂಪವು), ಆಕಾರಂ_ಆಕೃತಿಯು, ಉದ್ಭವಿಸಿತು_ಹುಟ್ಟಿತು ||

ಅ|| ವಿ|| ಅಸುರ_ರಾಕ್ಷಸರಿಗೆ, ಅರಿ_ಶತ್ರುವು, (ಕೃಷ್ಣನು), ಸತ್ + ಭಾವ=ಸದ್ಭಾವ, ಜ. ಸಂ. ಪ್ರತಿ + ಅಕ್ಷ=ಪ್ರತ್ಯಕ್ಷ ಯಣ್, ಸಂ|| ಮಿತ್ರ - ಸೂರ್ಯ, ಸ್ನೇಹಿತ. ಪಾಂಡುವಿನ ಮಕ್ಕಳು - ಪಾಂಡವರು - ಧರ್ಮರಾಯ, ಭೀಮ, ಅರ್ಜುನ, ನಕುಲ, ಸಹದೇವ ||೩೮||

ಟೀ|| ಆಟವಿಕನು-ವಿನೋದಗಾರನು,ಒಂದೊಂದು_ಅನುಕ್ರಮವಾದ, ಬಹುರೂಪಮಂ_ಆಕಾರಗಳನ್ನು (ವೇಷವನ್ನು), ತಾಳ್ದು_ಹೊಂದಿ, ನಾಟಕವನು_ಆಟದ ಸಂಬಂಧವನ್ನು (ಆಟವನ್ನು), ಆಡಿ_ನಟಿಸಿ ತೋರಿಸಿ, ಮುನ್ನಿನ-ಮೊದಲಲ್ಲಿದ್ದ, ತನ್ನ-ತನ್ನಯ, ರೂಪಮಂ-ನಿಜವೇಷವನ್ನು, ನೋಟಕರ-ಪ್ರೇಕ್ಷಕರ, ಕಣ್ಗೆ-ಕಂಗಳಿಗೆ, ಕಾಣಿಸುವಂತೆ_ತೋರಿಬರುವ ರೀತಿಯಿಂದ, ಪೆಣ್ಗುದರೆಯಾಗಿ-ಹೆಣ್ಣಿನ ರೂಪವನ್ನು ಹೊಂದಿದ ಅಶ್ವವಾಗಿ, ಪುಲಿಯಾಗಿ_ವ್ಯಾಘ್ರವಾಗಿ, ಮತ್ತೆ-ಪುನಹ, ಎಂದಿನ - ಮೊದಲಿದ್ದ, ಅಂದದಲಿ_ಚಂದದಿಂದ (ರೀತಿಯಿಂದ) ಘೋಟಕೋತ್ತಮಂ - ಉತ್ತಮವಾದ (ಯಜ್ಞಕ್ಕೆ ಅರ್ಹವಾದ) ತುರಂಗವು, ಆದುದು_ಉಂಟಾಯಿತು, ಆನಿಕಾಟ-ದೈತ್ಯರನ್ನು, ದಲ್ಲಣ - ತಲ್ಲಣಿಸುವಂತೆ ಮಾಡುವವನಾದ (ರಾಕ್ಷಸಾಂತಕನಾದ) ಶ್ರೀಕೃ

---

ಪುತ್ರರಾದವರಿಗೆ, ಆಪದ್ಭೀತಿಯು ಎಲ್ಲಿಂದ ಬಂದೀತು, ಶ್ರೀ ಕೃಷ್ಣನು ಈ ರೀತಿಯಾದ ಅಪಮಾನವಂ ಸಹಿಸುವನೆ? ಎಂಬದಾಗಿ ಹೇಳಿಕೊಂಡು ಆ ಯಜ್ಞಾಶ್ವವು ಈ ರೀತಿಯಾದುದನ್ನು ಕಂಡು ಪರಮಾನಂದ ಭರಿತರಾದರು || ೩೮ || ನಾಟಕವನ್ನು ಆಡುವವನು, ಒಂದೊಂದು ಬಗೆಯಾದ ಆಕೃತಿಯನ್ನು ತಾಳಿ, ವಿನೋದಗಳಂ ನಟಿಸಿ, ಪೂರ್ವದಲ್ಲಿದ್ದ ತನ್ನಯ ರೂಪವನ್ನು ನೋಟಕರ ನೇತ್ರಂಗಳಿಗೆ ಕಾಣಿಸಿಕೊಳ್ಳುವಂತೆ, ಹೆಣ್ಣು ಕುದುರೆಯಾಗಿ, ಹುಲಿಯಾಗಿ, ಮತ್ತೆ ಪುನಹ ಪೂರ್ವದ ಆಕಾರಮಾದ ಶ್ರೇಷ್ಠತರಮಾದ ಯಜ್ಞಪಶುವಾಗಿ, ಆಯಿತು, ಆ ರಾಕ್ಷಸಾಂತಕನಾದ ಶ್ರೀ ಕೃಷ್ಣನನ್ನು ಸಕಲಜನವೂ, ಸ್ತೋತ್ರಮಾಡಿತು. ಸೇನೆಯು ಉಳಿದಿದ್ದ ಪ್ರದೇಶದಲ್ಲಿ ಮಹೋತ್ಸವದಿಂದ ಸಕಲಮಾದ ಕೋಲಾಹಲದಿಂದ ಕೂಡಿದ ವಾದ್ಯಧ್ವನಿಯುಂಟಾಯಿತು ||೩೯|| ಆಗ ತುರಂಗವು ಎಂದಿನಂತೆಯೆ ಜನಗಳಿಂದ ಸೇವಿಸಲು ಯೋಗ್ಯಮಾದುದಾಗಿತ್ತು. ಮಹಾ ವ್ಯಾಘ್ರರೂಪವು ಅಡಗಿ ಹೋಯಿತು ಶ್ರೀ ಕೃಷ್ಣನು ತನ್ನ ಭಕ್ತರ ವಿಪತ್ತುಗಳನ್ನು ಪರಿಹರಿಸಿ ರಕ್ಷಿಸತಕ್ಕವನೆಂಬುದನ್ನ ಸಕಲರ ಮನಸ್ಸಿಗೂ ತೋರ್ಪಡಿಸಿದನು. ಅಡಿಗಡಿಗೆ ಈ ಸಕಲಜನವೂ ಈ ಪಾಂಡುನಂದನರಿಗೆ ಸಂಕಟವೇ ಮೊದಲಹ ಅನರ್ಥಂಗಳು ಹೋಗಲಾಡಿಸಿ ಸರ್ವಕಾಲದಲ್ಲೂ ಅವರನ್ನು ಕಾಪಾಡುತ್ತಿರುವುದೇ, ಕೃಪಾಸಮುದ್ರನಾದ, ಲಕ್ಷ್ಮೀಪತಿಯಾದ ಶೇಷಶಾಯಿಯಾದ ಅಜ್ಞಾನತಿಮಿರವನ್ನು ಪರಿಹರಿಸಿ, ಸುಜ್ಞಾನವನ್ನು ದಯಪಾಲಿಸತಕ್ಕವನಾದ ಶ್ರೀ ಕೃಷ್ಣನನ್ನು ನಾನಾ ಪ್ರಕಾರವಾಗಿ ವಿವಿಧೋಪಚಾರಗಳಿಂದ ಧ್ಯಾನಿಸಲಾಗಿ, ಅಸಹಾಯಶೂರನಾದ ಧನಂಜಯನು ಬಹಳವಾಗಿ ಸಂತೋಷದಿಂದ ಉಬ್ಬಿದವನಾದನು ||೪೦||

ಕೋಟಿಸಂಖ್ಯೆಯೊಳೊದರಿದವುನಿಖಿಳವಾದ್ಯಂಗಳುತ್ಸವದಿಪಾಳಯದೊಳು ॥ ೩೯ ॥ ಸೇವ್ಯಮಾಗಿರ್ದುದೆಂದಿನವೊಲ್ತುರಂ
ಗಮು । ಹಾವ್ಯಾಘ್ರರೂಪಡಗಿತಸುರಾರಿಭಕ್ತರ । ಕ್ಷಾವ್ಯಸನಿಯೆಂಬುದಂಕಾಣಿಸಿದನಡಿಗಡಿಗೆಕಟಕದಸಮುಸ್ತಜನರು ॥ ಈ
ವ್ಯಾಳರಾಜಶಾಯಿಗೆಬಂದಬಂದನಾ । ನಾವ್ಯಥೆಯನಪಹರಿಸಿಪಾಂಡುಸುತರಂಪೊರೆವ । ದೇವ್ಯವಹರಣೆಯೆಂದುಕೃಷ್ಣನಂ
ಕೊಂಡಾಡಲುಬ್ಬೇರಿದಂಪಾರ್ಥನು ॥ ೪೦ ॥ ಬಳಿಕಪಾರಿಪ್ಲವಧರಿತ್ರಿಯಿಂದಾಹಯಂ । ತಳೆದುದತಿವೇಗದಿಂಬಹಳದೇಶಂಗಳಂ
ಕಳೆಕಳೆದುಬರಿಯವನಿತಾಮಯದರಾಜ್ಯದೊಳುಪೀಮೆಗುತ್ಸಾಹದಿಂದ ॥ ಫಲುಗುಣನಸೇನೆನಡೆದುದುಕೂಡೆಭರದಿಂ । ದಿಳೆ

---

ಷ್ಣನನ್ನು, ಎಲ್ಲಾಜನಂ-ಸಮುಸ್ತಜನವೂ, ಪೊಗಳ್ದುದು-ಸ್ತೋತ್ರಮಾಡಿತು, ಪಾಳಯದೊಳು-ಸೇನಾನಿವೇಶನದಲ್ಲಿ, (ಸೈನ್ಯವಿದ್ದ ಜಾಗದಲ್ಲಿ), ಉತ್ಸವದಿ - ವೈಭವದಿಂದ, ನಿಖಿಲ - ಸಮುಸ್ತವಾದ, ವಾದ್ಯಂಗಳು - ವಾದ್ಯವಿಶೇಷಗಳು, ಕೋಟಿಸಂಖ್ಯೆಯೋಳ್-ಕೋಟಿ ಸಂಖ್ಯೆಗಳಿಂದ (ಅತ್ಯದ್ಭುತಮಾಗಿ), ಒದರಿದವು-ರವವಂಗೈದವು ॥

ಅ॥ ವಿ॥ ಅವನು + ನಿಶಾಟ=ಆನಿಶಾಟ ಗ. ಸ. ನಿಖಿಳವಾದ+ವಾದ್ಯಂಗಳು = ನಿಖಿಳವಾದ್ಯಂಗಳು ವಿ. ಪೂ. ಕ. ವ್ಯಾಘ್ರ - ತ್ಸ. ವೆಗ್ಗ - ತದ್ಭವರೂಪ ॥೩೯॥

ಟೀ॥ ತುರಂಗಂ-ಆ ಯಜ್ಞಾಶ್ವವು, ಎಂದಿನವೋಲ್ - ಮೊದಲು ತಾನಿದ್ದಂತೆಯೇ, ಸೇವ್ಯಂ-ಜನರಿಂದ ಉಪಚರಿಸಲು ಅರ್ಹವಾದದ್ದು, ಇಗಿಇರ್ದುದು-ಉಂಟಾಗಿತ್ತು, ಮಹಾವ್ಯಾಘ್ರರೂಪು - ಮಹತ್ತಾದ ದೊಡ್ಡ ಶಾರ್ದೂಲದ ಆಕಾರವು, ಅಡಗಿತು - ಕಾಣದೇ ಹೋಯಿತು, ಅಸುರಾರಿ - ರಾಕ್ಷಸವೈರಿಯಾದ ಶ್ರೀಕೃಷ್ಣನು, ಭಕ್ತ-ತನ್ನ ಉಪಾಸಕರನ್ನು, ರಕ್ಷಾ-ಸಂರಕ್ಷಿಸುವ, ವ್ಯಸನಿ-ಪರಿತಾಪವುಳ್ಳವನು, ಎಂಬುದಂ-ಎನ್ನತಕ್ಕ ವಿಷಯವನ್ನು, ಕಾಣಿಸಿದನು-ಬಹಿರಂಗಪಡಿಸಿದನು (ಹುಲಿರೂಪವನ್ನು ಹೊಂದಿದ್ದ ಅಶ್ವನನ್ನು ಪೂರ್ವದಂತೆ ಗಂಡುಕುದುರೆಯಾಗಿ ಮಾಡಿದ್ದನ್ನು), ಅಡಿಗಡಿಗೆ- ಆಗಿಂದಾಗ್ಯೆ, ಸಮುಸ್ತ-ಸಕಲರಾದ, ಜನರು - ಜನವು, ಈ ವ್ಯಾಳರಾಜ - ಆದಿಶೇಷನಮೇಲೆ, ಶಾಯಿಗೆ - ಶಯನಮಾಡುವ ಶ್ರೀಕೃಷ್ಣನಿಗೆ, ಬಂದಬಂದ-ಆಗಿಂದಾಗ್ಯೆ ಸಂಭವಿಸುತ್ತಿದ್ದ, ನಾನಾ-ಅನೇಕಬಗೆಗಳಾದ, ವ್ಯಥೆಯನು-ಪರಿತಾಪವನ್ನು, ಅಪಹರಿಸಿ-ಪರಿಹಾರಮಾಡಿ, ಪಾಂಡುಸುತರಂ-ಪಾಂಡುರಾಯನಪುತ್ರರಾದ ಧರ್ಮರಾಯಾದಿಗಳನ್ನು, ಪೊರೆವುದೆ - ಕಾಪಾಡತಕ್ಕದ್ದೆ, ವ್ಯವಹರಣೆ - ಆಚರಣೆಯು, ಎಂದು-ಎಂಬದಾಗಿ, ಕೃಷ್ಣನಂ-ಶ್ರೀಕೃಷ್ಣನನ್ನು, ಕೊಂಡಾಡಲು - ಹೊಗಳಲಾಗಿ, ಪಾರ್ಥನು-ಆ ಫಲುಗುಣನು, ಉಬ್ಬೇರಿದಂ-ಸಂತೋಷದಿಂದ ಕೂಡಿದವನಾದನು ॥

ಅ॥ ವಿ॥ ಸೇವಿಸಲು, ಅರ್ಹವಾದದ್ದು, ಸೇವ್ಯ (ತುರಂಗ-ಅಶ್ವ. ಕುರಂಗ - ಜಿಂಕೆ,) ವ್ಯಾಳಗಳ ರಾಜ = ವ್ಯಾಳರಾಜ, ಷ. ತ. ವ್ಯಾಳರಾಜನಲ್ಲಿ ಶಾಯಿಯಾದವನು ವ್ಯಾಳರಾಜಶಾಯಿ ಕೃ. ವೃ. ॥೪೦॥

ಟೀ॥ ಬಳಿಕ - ಅನಂತರದಲ್ಲಿ, ಆಹಯಂ - ಆ ಯಜ್ಞಾಶ್ವವು, ಪಾರಿಪ್ಲವಧರಿತ್ರಿಯಿಂದ - ಪಾರಿಪ್ಲವವೆಂಬ ರಾಜ್ಯದಿಂದ, ತಳೆದು-ಪ್ರಯಾಣಮಾಡಿ, ಅತಿವೇಗದಿಂದ-ಅತಿ ಜಾಗ್ರತೆಯಾಗಿ, ಬಹಳ-ನಾನಾವಿಧಗಳಾದ, ದೇಶಂಗಳಂ-ರಾಜ್ಯಗಳನ್ನು ಕಳಕಳದು-ದಾಟಿಕೊಂಡು, ಬರಿಯ - ತುಂಬಾ, (ಅತಿ ಹೆಚ್ಚಾದ) ವನಿತಾಮಯದ - ಹೆಂಗಸರಿಂದಲೇ ನಿಬಿಡೀಕೃತವಾದ, ರಾಜ್ಯದ-ದೇಶದ, ಒಳಸೀಮೆಗೆ-ಒಳಗಡೆಯ ರಾಷ್ಟ್ರಕ್ಕೆ, ಉತ್ಸಾಹದಿಂದ-ಸಂತೋಷದಿಂದ (ಆನಂದದಿಂದ) ಫಲುಗುಣನ-ಧನಂಜಯನ, ಸೇನೆ-ವಾಹಿನಿಯುನಿ, ಕೂಡೆ-ಆ ಯಜ್ಞದ ತುರಗದ ಸಂಗಡ, ನಡೆದುದು - ಪ್ರಯಾಣಮಾಡಿತು, ಇಳೆ-ಧರಿತ್ರಿಯು, ಭಾರದಿಂದ-ಹೊರೆಯಿಂದ, (ಭರದಿಂದ) ಮುಂದಕೆ-ಮುಂಗಡೆಗೆ, ಓರ್ಗುಡಿಸಿ-ಬಗ್ಗಿ ಹೋಗಿ, ಮುಗ್ಗಲು-ಹಳ್ಳವಾಗಿ ಬೀಳಲು (ತಗ್ಗಿ ಹೋಗಲು) ಒಂದೆಸೆಯೊಳು-ಒಂದು ಭಾಗದಲ್ಲಿ, ರಥ-ವರೂಥವು, ಗಜ-ಇಭವು, ತುರಂಗ - ಅಶ್ವವು, ಇವುಗಳು ಉಬ್ಬಳಿಸಿದವು-ಆವರಿಸಿಕೊಂಡವು, ಎಂಬತೆರದಿಂದ-ಎನ್ನುವ ರೀತಿಯಾಗಿ, ಸಂದಣಿಸಿತು-ಒಟ್ಟುಗೂಡಿತು, ಏವೇಳ್ವೆನು - ಈ ಅದ್ಭುತವನ್ನು ಏನೆಂದು ಪೇಳಲಿ.

ಅ॥ ವಿ॥ ಏಂಪೇಳ್ವೆಂ = ಏವೇಳ್ವೆನು ಕ್ರಿ. ಸ. ವನಿತೆಯರ + ಮಯ = ವನಿತಾಮಯ, ಕಳಮ, ಕಳದು, ಕಳ

---

ಅನಂತರದಲ್ಲಿ ಆ ಯಜ್ಞಾಶ್ವವು. ಪಾರಿಪ್ಲವಧರಿತ್ರಿಯಿಂದ ಮುಂದೆ ಪ್ರಯಾಣಮಾಡಿತು, ಅತಿ ಶೀಘ್ರವಾಗಿ ಬಹಳ ರಾಜ್ಯಗಳನ್ನು ಕಳದುಕೊಂಡು ಅತಿಶಯಮಾಗಿ ವನಿತಾಮಯರಾಜ್ಯದ ಒಳದೇಶಕ್ಕೆ ಉತ್ಸಾಹದಿಂದ ಪಾರ್ಥನ ಸೇನೆಯು ಆ ತುರಂಗದ ಸಂಗಡಲೇ ಹೊರಟಿತು. ಆಗ ಪೃಥ್ವಿಯು ಭಾರದಿಂದ ಓರೆಯಾಗಿ ತಗ್ಗಿಬರಲು, ಮತ್ತೊಂದು ಕಡೆಯಲ್ಲಿ ಹಸ್ತಿ, ಅಶ್ವ, ರಥ, ಪದಾತಿ ಮೊದಲಾದ ಚತುರಂಗಬಲವು ಆವರಿಸಿತು. ಪಾರ್ಥನ ಸಕಲ ವಿಧವಾದ ಸೈನ್ಯವೂ ಒಂದು ಕಡೆಯಲ್ಲಿ ಗುಂಪು ಸೇರಿತು. ಈ ಅದ್ಭುತವನ್ನು ನಾನು ಏನೆಂದು ವಿವರಿಸಲಿ ॥೪೧॥ ಎಲೈ ಭೂಮಿಪತಿ ಕುಲತಿಲಕನಾದ ಜನಮೇಜ

ಮುಂದಕೋರ್ಗುಡಿಸಿಮುಗಮುಗ್ಗಲೊಂದೆಸೆಯೊಳು | ಬ್ಬುಳಿಸಿದವುರಥಗಜತುರಗಮೆಂಬತೆರದಿಂದಸಂದಣಿಸಿತೇವೇಳ್ಸೆನು ||೪೧||
ರಾಯಕೇಳಾರಾಜ್ಯದೊಳ್ಬರಿಯನಾರಿಯರ್ | ಪ್ರಾಯತೆಯರಾಗಿಮಧುಪಾನಮತ್ತೆಯರಾಗಿ | ಕಾಯಜಕಲಾಕೋವಿದೆಯರಾಗಿ
ರೂಪಲಾವಣ್ಯವಿಲಸಿತೆಯರಾಗಿ || ಗೇಯನರ್ತನವೇಣುವೀಣಾವಿನೋದರಮ | ಣೀಯಭೋಗಾನ್ವಿತೆಯರಾಗಿಮತ್ತದರೊಳಾ |
ಸ್ತ್ರೀಯೊರ್ವಳರಸಾಗಿರಲ್ಕವಳಕೆಳಗಾಗಿಬದುಕುವರ್ಭಾಗ್ಯರಾಗಿ || ೪೨ || ಅಲ್ಲಿಗೈದಿದಪುರುಷರೋರ್ವರುಂಜೀವಿಸುವ |
ದಿಲ್ಲಬಂದಾತನಂಕಂಡುಲಲಿತಾಂಗಿಯ | ರ್ಚೆಲ್ಲಗಂಗಳನೋಟಮಂಬೀರಿಸವಿವೇಟಮಂತೋರಿಮಿಗೆಸೊಗಸುವ || ಸೆಳ್ಳುಗು

---

ಕಳದು, ಈ ದ್ವಿರುಕ್ತಿಯಲ್ಲಿ ಮೊದಲದುವಿಗೆ ಲೋಪಂ || ಶಬ್ದಮಣಿದರ್ಪಣ, ಸೂ, ೨೫|| ಹಸ್ತ್ಯಶ್ವ ರಥ ಪದಾತಿ ಇವು ಚತುರಂಗಬಲ ||೪೧||

ಟೀ|| ರಾಯ - ರಾಜನಾದ ಜನಮೇಜಯರಾಯನೆ! ಕೇಳು-ಆಲಿಸು, ಆರಾಜ್ಯದೋಳ್ - ಆ ಮಳಯಾಳವೆಂಬ ದೇಶದಲ್ಲಿ, ಬರಿಯ-ಎಲ್ಲರೂ, ನಾರಿಯರ್ - ಹೆಂಗಸರೆ ಆಗಿರುತ್ತಾರೆ, ಪ್ರಾಯತೆಯರು - ಪ್ರಾಯಭರಿತರಾದವರು, ಮತ್ತು-ಇನ್ನೂ, ಮಧುಪಾನ-ಮದ್ಯವನ್ನು ಪಾನಮಾಡುವದರಿಂದ, ಮತ್ತೆಯರು - ಮೈಮರತವರು, (ಮೈಕವನ್ನುಂಟಾಗಿರುವವರು) ಕಾಯಜ-ಮನಸಿಜನ, ವಿದ್ಯಾ-ವಿದ್ಯೆಯಲ್ಲಿ, ಕೋವಿದೆಯರು-ಪಂಡಿತರು, ಆಗಿ-ಆಗಿಯೂ, ರೂಪ-ಆಕಾರದಿಂದಲೂ, ಲಾವಣ್ಯ-ಸೌಂದರ್ಯದಿಂದಲೂ, ವಿಲಸಿತೆಯರು ಆಗಿ - ಅಲಂಕಾರಭೂಷಿತೆಯುರು ಆಗಿಯೂ, ಗೇಯ - ಹಾಡಗಾರಿಕೆಗೆ ಯೋಗ್ಯವಾದ, ನರ್ತನ-ನಾಟ್ಯವಾಡುವಿಕೆ, ವೇಣು-ಪಿಳ್ಳಗೋವಿ ವಾದ್ಯ, ವೀಣಾ-ವೀಣೆಯೆಂಬ ವಾದ್ಯವಿಶೇಷವು, ಈ ಶಾಸ್ತ್ರಗಳಲ್ಲಿ, ವಿನೋದ-ಅಟ್ಟಹಾಸದಿಂದ, ರಮಣೀಯ - ಮನಸ್ಸನ್ನು ಅಪಹರಿಸತಕ್ಕ, ಭೋಗ - ಸೌಖ್ಯದಲ್ಲಿ, ಅನ್ವಿತೆಯರು - ಒಡಗೂಡಿದವರು, ಆಗಿ-ಆಗಿಯೂ, ಮತ್ತು-ಇನ್ನೂ, ಇದಲ್ಲದೆ-ಮೇಲೆ ಹೇಳಿದ ವಿಷಯಗಳಲ್ಲದೆ, ಅವರೋಳ್-ಆ ಸ್ತ್ರೀಯರಲ್ಲಿ, ಓರ್ವಳ್-ಒಬ್ಬಳು, ಸ್ತ್ರೀ-ವನಿತೆಯು, ಅರಸಾಗಿ-ದೊರೆಯಾಗಿ, ಇರಲ್ಕೆ-ಇರುತ್ತಿರಲಾಗಿ, ಅವಳ-ಆ ರಾಜ್ಯಭಾರಮಾಡತಕ್ಕವಳ, ಕೆಳಗಾಗಿ-ಅಧೀನರಾಗಿ, ಭಾಗ್ಯರಾಗಿ-ಐಶ್ವರ್ಯವಂತರಾಗಿ, (ಲಕ್ಷ್ಮೀಯುತರಾಗಿ) ಬದುಕುವರ್-ಜೀವಿಸುತ್ತಿರುವರು ||

ಅ|| ವಿ|| ಭೋಗ-ಸೌಖ್ಯ, ಹಾವಿನಹೆಡೆ. ವೀಣಾ ತ್ಸ. ಬೀಣೆ ದ್ಭ.ಸಿರಿ ದ್ಭ. ಶ್ರೀ ತ್ಸ. ಮಧು-ಹೆಂಡ, ಜೇನುತುಪ್ಪ, ಇಂಪು, ಮಧುವೆಂಬ ರಕ್ಕಸ. ರಾಯ ತದ್ಭವ. ರಾಜ. ತ್ಸ|| ತೂರ್ಯತ್ರಯ-ನೃತ್ಯ, ಗೀತ, ವಾದ್ಯ. ತ್ರಿಲೋಕಸ್ವರ್ಗ, ಮರ್ತ್ಯ, ತಾತಾಳ ||೪೨||

ಟೀ|| ಅಲ್ಲಿಗೆ-ಆ ವನಿತೆಯರ ದೇಶಕ್ಕೆ, ಐದಿದ-ಬಂದಂಥ, ಓರ್ವನು - ಒಬ್ಬನಾದರೂ, ಪುರುಷಂ - ಮನುಷ್ಯನು, ಜೀವಿಸುವುದು-ಬದುಕಿಕೊಂಡಿರುವದು, ಇಲ್ಲ-ಇರುವದಿಲ್ಲ, ಬಂದಾತನಂ-ವಿದೇಶದಿಂದ ಈ ದೇಶಕ್ಕೆ ಬಂದವನನ್ನು, ಲಲಿತಾಂಗಿಯರ್ - ಕೋಮಲವಾದ ಅಂಗವುಳ್ಳವರು (ಮೃದುವಾದ ಶರೀರವುಳ್ಳ ಸ್ತ್ರೀಯರು), ಕಂಡು-ಆ ಪರದೇಶದಿಂದ ಬಂದವನಂ ನೋಡಿ, ಚೆಲ್ಲಗಂಗಳ-ಚಪಲವಾದ ನೇತ್ರಗಳ, ನೋಟವುಂ - ದಿಟ್ಟಿಯನ್ನು (ನೋಡೋಣವನ್ನು). ಬೀರಿ ಎರಚಿ (ಚೆಲ್ಲಿ), ಸವಿ-ಹಿತವಾದ (ರುಚಿಯಾದ). ವೇಟವುಂ-ಬೆಡಗನ್ನು, ತೋರಿ-ತೋರ್ಪಡಿಸಿ, ಮಿಗೆ-ಹೆಚ್ಚಾಗಿ (ಅಧಿಕವಾಗಿ), ಸೊಗಸುವ-ಅಂದವಾದ (ಸುಂದರವಾದ), ಸೆಳ್ಳು-ಮಂದವಿಲ್ಲದ, ಉಗುರ್ಗಳ - ನಖಗಳನ್ನು, ಊರಿ-ಅದಿಮಿ, ಮೆಲ್ಲಮೆಲ್ಲನೆ-ಮಂದವಾಗಿ, ಎಂದರೆ ನಿಧಾನವಾಗಿ, ಕೀರಿ-ಶಿರವನ್ನು ಸವರಿ, ತಲೆಬಾಚಿ-ತಲೆಯನ್ನು ಮುಂದಕ್ಕೆ ಬಲಾತ್ಕಾರದಿಂದೆಳೆದು, ಲಲ್ಲೆ-ಪ್ರೇಮದ ಮುದ್ದನ್ನು, ಗೈವುತ-ನೆರವೇರಿಸುತ್ತ, ಬಲ್ಮೊಲೆಗಳಂ-ದಪ್ಪವಾದ ಸ್ತನಗಳನ್ನು, ಪೇರಿ-ಗಂಡಸಿನ ಎದೆಯಮೇಲೆ ಹೊರಿಸಿ, ಪುಲ್ಲ-ವಿಕಸಿತವಾದ ಅಲರ್-ಹೂವೇ. ಶರ-ಅಂಬಾಗುಳ್ಳ, ಕಾಮದೇವನ-ಮದನನ, ಕೇಳಿಯೋಳ್-ವಿಲಾಸದಲ್ಲಿ, ಅವರು-ಆ ಗಂಡ

---

ಯರಾಯನೇ ಆಲಿಸು, ಆ ಸ್ತ್ರೀಯರ ರಾಜ್ಯದಲ್ಲಿ, ಪುರುಷರಿಲ್ಲದ ಬರಿಯ ಹೆಂಗಸರೇ ಆಗಿರುತ್ತಾರೆ. ಪ್ರಾಯಸಮರ್ಥರಾದ ಯುವತಿಯರು, ಮತ್ತು ಮಧುಪಾನಮಾಡುವುದರಿಂದ ಮತ್ತೆಯರಾಗಿ, ಕಾಯಜನ ವಿದ್ಯಾಭ್ಯಾಸದಲ್ಲಿ ಸಕಲ ಕಲಾಯುತರಾಗಿ ಆಕಾರದಿಂದಲೂ, ಸೌಂದರ್ಯದಿಂದಲೂ, ಸೊಗಸಾಗಿ ನೃತ್ಯ, ಗೀತ, ನಾಟ್ಯಾದಿಗಳಲ್ಲಿ ಬುದ್ಧಿಕುಶಲೆಯರಾಗಿ, ವೀಣಾವಿದ್ಯೆಯಲ್ಲಿ ಪ್ರವೀಣೆಯರಾಗಿ, ಸ್ವಚ್ಛಂದನಾದಿ ಸುಖಭೋಗಗಳಲ್ಲಿ ಲಾಲಸರಾಗಿ, ಇದೂ ಅಲ್ಲದೆ ಆ ವನಿತೆಯರಲ್ಲಿಯೇ ಓರ್ವ ಸ್ತ್ರೀಯು ಅರಸಾಗಿ ಇತರರು ರಾಜ್ಯಭಾರಮಾಡತಕ್ಕವಳಿಗೆ ಅಡಿಯಾಗಿ, ಸಕಲ ಭಾಗ್ಯಯುತರಾಗಿ, ವಾಸಮಾಡಿಕೊಂಡು ಇರುತ್ತಲಿದ್ದರು ||೪೨|| ಆ ವನಿತೆಯರ ರಾಜ್ಯಕ್ಕೆ ಬಂದ ಒಬ್ಬನಾದರೂ ಗಂಡಸು ಪ್ರಾಣವನ್ನು ಧರಿಸಿರುವುದಿಲ್ಲ. ಈ ಸ್ತ್ರೀರಾಜ್ಯವನ್ನು ಕುರಿತು ಬೇರೆ ರಾಜ್ಯದಿಂದ ಬಂದವನನ್ನು ಕಂಡು ಚಂಚಲವಾದ ನೇತ್ರಗಳುಳ್ಳ, ಮೃದುವಾದ ಅಂಗವುಳ್ಳವರಾದ ಅಂಗನೆಯರು ತಮ್ಮ ಸೌಂದರ್ಯವನ್ನು ತೋರ್ಪಡಿಸಿ, ಹೆಚ್ಚಾಗಿಸುಂದರವಾದ, ತೆಳುವಾದ ಉಗುರ್ಗಳನ್ನು ಒತ್ತಿ ಮೆಲ್ಲ ಮೆಲ್ಲನೆ

ಗ೯ಳನೂರಿಮೆಲ್ಲಮೆಲ್ಲನೆಕೀರಿ । ಲಲ್ಲೆಗೈವುತಮಿಾರಿಬಲ್ಮೊಲೆಗಳಂಪೇರಿ । ಫುಲ್ಲಶರಕೇಳಿಯೊಳ್ಮದವೇರಿಸುವರವರ್ಮರುಳ
ಹವೊಲರಿವುಜಾರಿ ॥ ೪೩ ॥ ಸಮರತಿಯೊಳೊಮ್ಮೆಬೆರಸಿದಬಳಿಕವಿಷಯದ । ಭ್ರಮೆಯಿಂದಮಗ್ನನಾಗಿಹನಾಪುರುಷನಲ್ಲಿ ।
ರಮಿಸುವರವನಕೂಡೆನಾನಾಪ್ರಕಾರದಿಂದಾಪಂಕರುಹಮುಖಿಯರು ॥ ಕ್ರಮದೋಳೀತೆರದಿಸುಖಿಸುವರೊಂದುತಿಂಗಳು । ತ್ತ
ಮಸುಗಂಧಾನುಲೇಪನದಿಂದಮೊಗವಾಸ । ದಮಲತಾಂಬೂಲದಿಂಮಧುರಮಧುಪಾನದಿಂದೆಸೆವಸಂಯೋಗದಿಂದ ॥ ೪೪ ॥
ವಿಧವಿಧದೊಳೆಸೆವಕುಸುಮೋತ್ಕರದಪರಿಮಳದ । ಮಧುರಾಸವಕೆತಮ್ಮಮುಖವಾಸದೋಳ್ಗಂಪಿ । ನಧರದಿನೆಯನ ಬೆರ

---

ಸರು, ಅರಿವುಜಾರಿ–ಪ್ರಜ್ಞೆತಪ್ಪಿ (ಜ್ಞಾನತಪ್ಪಿದವನಾಗಿ), ಮರುಳ್–ಅಜ್ಞಾನವು, (ಹುಚ್ಚು) ಅಹ–ಉಂಟಾಗುವ, ಪೊಲ್–ಅಂತೆ, ಮದವ–ಮದವನ್ನು (ಮೋಹಪಾಶಕ್ಕೆ ಒಳಬಿದ್ದವರನ್ನಾಗಿ), ಏರಿಸುವರ್–ಹತ್ತುವಂತೆ ಮಾಡುವರು ॥

ಅ॥ ವಿ॥ ಕಾಯ–ಶರೀರದಲ್ಲಿ, ಜ–ಹುಟ್ಟಿದವನು, (ಮನ್ಮಥ) ಕಲಾ–ವಿದ್ಯೆ, ಕಳೆ, ಮಧುವಿನ+ಪಾನ=ಮಧುಪಾನ, ಷ. ತ. ಬಲ್ಲಿತ್ತಾದ+ಮೊಲೆ=ಬಲ್ಮೊಲೆ, ವಿ. ಪೂ. ಕ.. ಸ್ತ್ರೀಯ+ರಾಜ್ಯ=ಸ್ತ್ರೀರಾಜ್ಯ, ಷ. ತ. ಗಾತ್ರ–ದಪ್ಪ, ಶರೀರ, (ಕೀರ–ಗಿಣಿ, ಕೀರಿ–ತಲೆಯನ್ನು ಸವರಿ) ॥೪೩॥

ಟೀ॥ ಸಮರತಿಯೊಳು–ಸಮನಾದ ಮದನಕೇಳಿಯಲ್ಲಿ (ರತಿಕ್ರೀಡೆಯಿಂದ), ಒಮ್ಮೆ–ಒಂದಾವರ್ತಿ, ಬೆರಸಿದ–ಕೂಡಿಸಿದ, ಬಳಿಕ–ಅನಂತರದಲ್ಲಿ, ಪುರುಷನು–ಆ ಮನುಷ್ಯನು, ವಿಷಯ–ಸ್ತ್ರೀಸಂಭೋಗ ಸೌಖ್ಯದ, ಭ್ರಾಂತಿಯಿಂದ–ಕಳವಳದಿಂದ, ಮಗ್ನನಾಗಿ–ಸಂಭೋಗಸುಖದಲ್ಲಿ ಮುಳುಗಿದವನಾಗಿ, ಇಹನು–ಇರ್ಪನು, ಆ ಪಂಕರುಹ– ಕಮಲ ಪುಷ್ಪದಂತೆ, ಮುಖಿಯರು–ವದನವುಳ್ಳ ಸ್ತ್ರೀಯರು, ಅಲ್ಲಿ–ಆ ಸ್ತ್ರೀರಾಜ್ಯದಲ್ಲಿ, ಅವನ–ಆ ಮನುಷ್ಯನೊಡನೆ, ನಾನಾ–ಹಲವು ಬಗೆಗಳಾದ. ಪ್ರಕಾರದಿಂದ–ಕ್ರಮದಿಂದ, ರಮಿಸುವರು–ರತಿಸುಖವನ್ನು ಅನುಭವಿಸುವರು, (ಮದನಕೇಳಿಯನಾಡುವರು) ಕ್ರಮದೊಳು–ಕ್ರಮಪ್ರಕಾರವಾಗಿ, ಈ ತೆರದಿಂದ–ಈ ರೀತಿಯಿಂದ, ಒಂದುತಿಂಗಳು–ಒಂದು ಮಾಸದ ಪರಿಯಂತವಾಗಿ, ಉತ್ತಮ–ಯೋಗ್ಯವಾದ, ಸುಗಂಧ–ಒಳ್ಳೇ ವಾಸನೆಯುಳ್ಳ ಪದಾರ್ಥಗಳ, ಅನುಲೇಪನದಿಂದ–ಬಳಿಯೋಣದರಿಂದ, ಮೊಗವಾಸದ–ವದನವು ಸುವಾಸನೆಯಾಗುವ, ಅಮಲ–ಪರಿಶುದ್ಧವಾದ, ತಾಂಬೂಲದಿಂ–ಎಲೆ ಅಡಿಕೆ ಮೊದಲಾದ ಆಹಾರಜೀರ್ಣಮಾಡುವ ವಸ್ತುಗಳಿಂದ, ಮಧುರ–ರುಚಿಯಾದ (ಇಂಪಾದ), ಮ.ಧು.ಪಾನದಿಂ–ಸಾರಾಯಿ ಹೆಂಡ ಮೊದಲಾದುವುಗಳನ್ನು ಕುಡಿಯೋಣದರಿಂದ, ಎಸೆವ–ಹೊಳೆಯುವ, ಸಂಯೋಗದಿಂದ – ಸೇರುವಿಕೆಯಿಂದ (ಒಬ್ಬರೊಡನೆ ಒಬ್ಬರು ಬೆರೆಯೋಣದರಿಂದ), ಸುಖಿಸುವನು–ಸೌಖ್ಯವನ್ನು ಅನುಭವಿಸಿಕೊಂಡಿರುವನು ॥

ಅ॥ ವಿ॥ ಸಮವಾದ+ರತಿ=ಸಮರತಿ, ವಿ. ಪೂ. ಕ. (ರತಿ–ಕಾಮನ ಹೆಂಡತಿ) ಪಂಕದಲ್ಲಿ + ರುಹ = ಪಂಕರುಹ, ಕೃ. ಕ. (ಪಂಕ– ಕೆಸರು, ಪಾಪ) ಪಂಕರುಹದಂತೆ, ವದನವುಳ್ಳವರು, ಪಂಕರುಹವದನೆಯರು ಉ. ಪೂ. ಬಹು. ಸ. ಮೊಗ–ದ್ಭ. ಮುಖ–ತ್ಸ. ವ್ಯೆಥ–ನಾಷ್ಟಾಂಗಗಳು–ಸ್ಮರಣ, ಕೀರ್ತನ, ಕೇಳಿ, ಭಾಷಣ, ಸಂಕಲ್ಪ, ಅಧ್ಯವಸಾಯ, ಕ್ರಿಯಾನಿಷ್ಪತ್ತಿ ॥ ೪೪ ॥

ಟೀ॥ ಈ ವಿಧದೋಳ್–ಈ ಪರಿಯಾಗಿ, ವಿಧವಿಧದೊಳು–ನಾನಾ ಬಗೆಗಳಿಂದ, ಎಸೆವ–ಶೋಭಿಸುವ, ಕುಸುಮೋ

---

ತಲೆಯನ್ನು ಸವರಿ ಮುದ್ದಾಡಿ ತಮಗೆ ಅವರಲ್ಲಿರುವ ಪ್ರೀತಿಯನ್ನು ಒಂದು ಕ್ಷಣ ಮಾತ್ರದಲ್ಲಿ ತೋರಿಸಿ ಅವರನ್ನು ವಶಮಾಡಿ ಕೊಂಡು, ದಪ್ಪವಾದ ಸ್ತನಗಳನ್ನು ಅವರಮೇಲೆ ಹೊರಸಿ (ಎದೆಗೆ ಸೇರಿಸಿ) ವಿಕಸಿತ ಕೋಮಲ ಪುಷ್ಪವೇ ಬಾಣವಾಗುಳ್ಳ, ಕಾಮದೇವನ ಕೇಳಿಯಲ್ಲಿ ಅವರಜ್ಞಾನವು ಜಾರಿ ಅವರಲ್ಲಿ ಐಕ್ಯವಾಗುವಂತೆ ಮದಾಂಧತೆಯನ್ನುಂಟುಮಾಡುವರು॥೪೩॥ ಆ ಅಂಗನೆಯರು ತಮ್ಮ ವಶವಾದ ವಿದೇಶಿಯಾದ ಪುರುಷನಲ್ಲಿ ಒಂದು ಸಮಯದಲ್ಲಿ ಸಮರತಿ ಸುಖದಲ್ಲಿ ಸೇರಿದ ತರುವಾಯ, ಆ ಪುರುಷನು ಸ್ತ್ರೀ ಸಂಭೋಗ ಸುಖದ ಕಳವಳದಿಂದ, ಅವರಲ್ಲಿ ಮಗ್ನನಾಗಿರುತ್ತಾನೆ. ಪಂಕಜ ಮುಖಿಯರಾದ ಆ ಯುವತಿಯರು, ಆ ದೇಶದಲ್ಲಿ ಆ ಪುರುಷನ ಸಂಗಡ, ಸ್ತ್ರೀಸುಖ ಭ್ರಾಂತಿಯಿಂದ, ನಾನಾ ಬಗೆಗಳಾದ ರತಿಸುಖದ ಕ್ರೀಡೆಗಳಿಂದ ಭೋಗಿಸುವರು. ಕ್ರಮವಾಗಿ ಈ ತೆರದಿಂದ ಸುಮಾರು ಒಂದು ತಿಂಗಳ ಪರಿಯಂತವು, ಉತ್ತಮವಾದ ಸುವಾಸನೆಯುಳ್ಳ ವಸ್ತುಗಳ ಬಳಿಯುವಿಕೆಯಿಂದ ಮುಖವು ಸುವಾಸನೆಯಾಗುವ ಒಳ್ಳೆಯ ತಾಂಬೂಲದಿಂದ ಸಿಹಿಯಾದ ಮಧುವೆಂಬ ಹೆಂಡದ ಪಾನದಿಂದ ಪ್ರಕಾಶಿಸುವ ಸಂಭೋಗದಿಂದ ಸುಖವನ್ನು ಅನುಭವಿಸುತ್ತಿರುತ್ತಾರೆ ॥ ೪೪ ॥ ಈ ರೀತಿಯಿಂದ ಶೋಭಿಸುವ ಶ್ರೇಷ್ಠವಾದ ಪುಷ್ಪದ ಸುಗಂಧಕ್ಕೆ ತಮ್ಮಯ ಮುಖವಾಸನೆಯಿಂದ, ಸುವಾಸನೆಯುಳ್ಳಂಥ, ಅಧರದಿಂದ ಈ ಆಸವವನ್ನು ಬೆರಸುವಂತೆ ಮುಖವನ್ನಿಟ್ಟು, ಹೊನ್ನಿನ ಬಟ್ಟಲಿನಲ್ಲಿ ರುಚಿಯನ್ನು ಪರೀಕ್ಷಿಸಿ ಬಾಕಿಯಾದ ಮಧುವ

ಸುಮಂತೆಮೊಗವಿಟ್ಟುಪೊಂಬಟ್ಟಲೊಳ್ಸವಿದುಮಿಕ್ಕ ‖ ಮಧುವಂಮಧುರನೇತ್ರದಿಂನೋಡಿ ನಸುನಗೆಯ । ಸುಧೆಯನೊಯ್ಯನೆಸೂಸಿಸರಸದಿಂದಾದರಿಸಿ । ವಿಧುಬಿಂಬವದನೆಯರ್ಕೊಟ್ಟರೀಂಟುವ ಸೊಗಸಿಗೆಳಸದವರಾರಿಳೆಯೊಳು ‖ ೪೫ ‖ ಪೊಂಬಟ್ಟಲೊಳ್ತೀವಿದಾಸವದರುಚಿಗೀರ್ವ । ರುಂಬಿಡದೆ ಮೊಗಮಿಟ್ಟರಲ್ಲದರೊಳೆಸೆವಪ್ರತಿ । ಬಿಂಬದಾನನದಭಾವಂಗಳಂ ಕಾಣುತನ್ಯೋನ್ಯಸಂಪ್ರೀತಿಯಿಂದ ‖ ತುಂಬಿರ್ದಚಷಕಮಧುತೀರಲ್ಕೆಬಯಲಪ್ಪು । ದೆಂಬಶಂಕೆಯೊಳೊಯ್ಯನೊಯ್ಯನಾಸ್ವಾದಿಸಿವಿ । ಳಂಬನುಂಮಾಡುವರದೆಂತೊಪುರುಷಸ್ತ್ರೀಯರೊಂದಾಗಿಸವಿವಸೊಗಸು ‖ ೪೬ ‖ ಕವಿಸುವರ್ಮೋಹನವನೆಸೆವರತಿಕೇಳಿಯೋ । ಳ್ಸವಿಸುವರ್ಚೆಂದುಟಿಯುತನಿರಸವನತಸರಂ । ತವಿಸುವರ್ಪೊಲ್ಮೊಲೆಯೊಳೊತ್ತಿಬಿಗಿಯಪ್ಪಿದನಿಗೈವಪಾರಿ

---

ತ್ಕರದ–ಶ್ರೇಷ್ಠವಾದ ಹುವ್ವಿನ, ಪರಿಮಳದ–ಸುಗಂಧದ, ಆಸವಕ್ಕೆ-ಹುವ್ವಿನಲ್ಲಿರುವ ಮಕರಂದಕ್ಕೆ (ಪುಷ್ಪರಸಕ್ಕೆ), ತಮ್ಮ–ತಮ್ಮಯ, ಮುಖವಾಸದೋಳ್–ಮೊಗದ ಸುಗಂಧದಿಂದ, ಗಂಪಿನ-ಕಂಪಿನ (ಬಳ್ಳಿವಾಸನೆಯಿಂದೊಡಗೂಡಿದ), ಅಧರದಿ–ಓಷ್ಠಗಳಿಂದ (ತುಟಿಗಳಿಂದ), ಇದಂ–ಈ ಪುಷ್ಪಮಕರಂದವನ್ನು, ಸೇರಿಸುವಂತೆ–ಕೂಡಿಸುವಹಾಗೆ (ಸೇರಿಸುವಹಾಗೆ), ಮೊಗಂ–ಆಶ್ಯವನ್ನು, ಇಟ್ಟು-ಇಟ್ಟುಕೊಂಡು, ಪೊಂಬಟ್ಟಲೋಳ್–ಚಿನ್ನದ ಬಟ್ಟಲಲ್ಲಿ, ಸವಿದು–ಪಾನಮಾಡಿ, (ರುಚಿಯನ್ನು ಪರೀಕ್ಷಿಸಿ) ಮಿಕ್ಕ–ಬಾಕಿಯಾಗಿದ್ದ (ಉಳಿದ), ಮಧುವಂ–ಹೆಂಡವನ್ನು (ಮದ್ಯವನ್ನು), ಮಧುರ-ಮನವನ್ನು ಅಪಹರಿಸುವ, ನೇತ್ರದಿಂ–ಕಂಗಳಿಂದ, ನೋಡಿ–ಕಂಡು, ನಸುನಗೆಯ-ಮುಗುಳನಗೆಯೆಂಬುವ, ಸುಧೆಯನು–ಸೊದೆಯನ್ನು (ಅಮೃತವನ್ನು), ಒಯ್ಯನೆ–ನಿಧಾನವಾಗಿ, ಸೂಸಿ–ಚೆಲ್ಲಿ, (ಸುರಿಸಿ-ಎರಚಿ) ಸರಸದಿಂ–ಯೋಗ್ಯವಾದ ಪ್ರೀತಿಯಿಂದ (ಶೃಂಗಾರರಸದಿಂದ), ಆದರಿಸಿ–ಪೋಷಿಸಿ, ಇಂದು–ಇಂದುವಿನ, ಬಿಂಬ–ಮಂಡಲದಹಾಗಿರುವ, ವದನೆಯರು-ಆಸ್ಯದಿಂದಕೂಡಿದ ಸ್ತ್ರೀಯರು, ಕೊಟ್ಟರೆ–ಪಾನಮಾಡುವುದಕ್ಕಾಗಿ ಇತ್ತರೆ, ಈಂಟುವ–ಪಾನಮಾಡುವ, ಸೊಗಸಿಗೆ–ಸೌಂದರ್ಯಕ್ಕೆ. ಎಳಸದವರು–ಕಾಂಕ್ಷೆಗೊಳ್ಳದವರು (ಆಸೆಮಾಡದವರು), ಇಳೆಯೊಳು–ಪೃಥ್ವಿಯಲ್ಲಿ, ಆರು–ಯಾರುತಾನೆ ಇರುವರು, (ಸರ್ವರೂ ಆಸೆಪಡುತ್ತಾರೆ, ಪಡದಿರುವವರೇ ಇಲ್ಲ) ‖

ಅ‖ ವಿ‖ ಕುಸುಮ + ಉತ್ಕರ = ಕುಸುಮೋತ್ಕರ, ಗುಣ. ಸ. ಪೊನ್ನಿನ + ಬಟ್ಟಲ್ = ಪೊಂಬಟ್ಟಲ್, ಷ. ತ. ಸುಧಾ–ತ್ಸ, ಸೊದೆ–ದ್ಭ, ವಿಧುವಿನ + ಬಿಂಬ = ವಿಧುಬಿಂಬ, ಷ. ತ. ವಿಧುಬಿಂಬದಂತೆ ವದನ ಉಳ್ಳವರು, ವಿಧುಬಿಂಬವದನೆಯರು, ಉ. ಪೂ. ಬಹು. ಸ. ಕಿರಿದು + ನಗೆ = ಕಿರುನಗೆ, ವಿ. ಪೂ. ಕ. (ನವರಸಗಳು-ಶೃಂಗಾರ, ವೀರ, ಕರುಣ, ಅದ್ಭುತ, ಹಾಸ್ಯ, ಭಯಾನಕ, ಭೀಭತ್ಸ, ರೌದ್ರ, ಶಾಂತ) ‖೪೫‖

ಟೀ‖ ಪೊಂಬಟ್ಟಲೋಳ್–ಚಿನ್ನದ ಪಾತ್ರೆಯಲ್ಲಿ (ಬಟ್ಟಲಲ್ಲಿ), ತೀವಿದ–ತುಂಬಿರುವ (ಭರ್ತಿಯಾದ), ಆಸವದ–ಕಬ್ಬಿನ ಹಾಲಿನಿಂದಾಗುವ ಸಾರಾಯಿಯಿಂದಲು, ದ್ರಾಕ್ಷಾರಸವೇ ಮೊದಲಾದವುಗಳಿಂದಲೂ, ಮಾಡಿದ ಮಾದಕ ದ್ರವ್ಯದ, ರುಚಿಗೆ-ಮಾಧುರ್ಯಕ್ಕೆ, ಈರ್ವರುಂ–ಪಾನಮಾಡಿದ ಹೆಂಗಸು ಮತ್ತು ಗಂಡಸು, ಇಬ್ಬರೂ, ಬಿಡದೆ - ತಪ್ಪದೆ, ಮೊಗಂ–ಆಸ್ಯವನ್ನು, ಇಟ್ಟು-ಇಟ್ಟುಕೊಂಡು, ಇರಲ್ಕೆ-ಇರಲಾಗಿ, ಅದರೊಳು-ಆ ಮದ್ಯದಲ್ಲಿ, ಎಸೆವ – ಕಾಂತಿಯತಿಶಯದಿಂದ ಕಂಡು

---

ನ್ನು, ಮನೋಹರವಾದ ನೇತ್ರದಿಂದ ನೋಡಿ, ಕಿರುನಗೆಯಿಂದ ಅಮೃತವನ್ನು ಮೆಲ್ಲಗೆ ದ್ರವಿಸಿ, ಸರಸಸಲ್ಲಾಪವೆಂಬ ಪ್ರೀತಿಯಿಂದ ಆದರಿಸಿ ಚಂದ್ರ ಬಿಂಬದಂತೆ ಮುಖವುಳ್ಳ ವನಿತೆಯರು, ಪಾನಮಾಡಲಿಕ್ಕೆ ಕೊಡಲು ಪಾನಮಾಡುವ ಅಂದಕ್ಕೆ ‘ಆಶೆ ಪಡದವರು ಪೃಥ್ವಿಯಲ್ಲಿ ಯಾರುತಾನೆ ಇರುವರು? (ಸರ್ವರೂ ಈ ಕಾರ್ಯದಲ್ಲಿ ಮಗ್ನರಾಗಿರುತ್ತಾರೆ) ‖೪೫‖ ಆಗ ಹೊಂಬಟ್ಟಲಿನಲ್ಲಿ ತುಂಬಿದ್ದ ಸುವಾಸನೆಯಿಂದಲೂ, ದ್ರಾಕ್ಷಾದಿಫಲಗಳಿಂದ ಮಾಡಿದ್ದ ಮಾದಕ ಪದಾರ್ಥಗಳಿಂದಲೂ ಮಾಡಿದ ಮದ್ಯದ ರುಚಿಗೆ ಸ್ತ್ರೀಪುರುಷರಿಬ್ಬರೂ ಬಿಡದೆ ಮುಖವನ್ನು ಇಟ್ಟಿರಲಾಗಿ ಅದರಲ್ಲಿ ಪ್ರಕಾಶಿಸುವ, ಅವರ ಪ್ರತಿಬಿಂಬದ ಮುಖದ ಭಾವಂಗಳನ್ನು ಕಾಣುತ್ತಾ, ಅನ್ಯೋನ್ಯ ಪ್ರೀತಿಯಿಂದ ತುಂಬಿದ್ದ ರಸದಿಂದ, ಭಂಗಾರದ ಬಟ್ಟಲಿನ ಮದ್ಯವು ತೀರಿ ಹೋಗಲು, ಮುಖವು ಪುನಹ ಕಾಣಿಸದೇ ಹೋಗುವುದು ಎಂಬ ಕಳವಳದಿಂದ ಕೊಂಚ ಕೊಂಚವಾಗಿ ಸವಿನೋಡುತ್ತಾ, ಕಾಲವಿಳಂಬವನ್ನು ಮಾಡುವರು, ಗಂಡು ಮತ್ತು ಹೆಣ್ಣು ಏಕೀಭವಿಸಿ ಸವಿನೋಡುವ ಆನಂದವು ಇನ್ನು ಯಾವರೀತಿಯಾದದ್ದೊ, ವಿವರಿಸಲು ಸಾಧ್ಯವಾಗದು ‖ ೪೬ ‖ ತರುವಾಯ ಪ್ರಕಾಶಿಸುವ ರತಿಕ್ರೀಡೆಯಲ್ಲಿ, ಮ್ಯೆಕವನ್ನುಂಟುಮಾಡುವರು. ಚಂದುಟಿಯ ಇಂಪಾದ ರಸವನ್ನು ಸವಿಸುವರು. ಗಾತ್ರಗಳಾದ ಕುಚಗಳಿಂದ ಅಮುಕಿ ಗಟ್ಟಿಯಾಗಿ ಆಲಿಂಗನೆ ಮಾಡಿಕೊಂಡು ಆಯಾಸವನ್ನು ಪರಿಹಾರಮಾಡಿಕೊಳ್ಳುವರು, ಧ್ವನಿಮಾಡುವ ಪಾರಿವಾಳಗಳಂತೆ ಇರುವ ರೀತಿಯಿಂದ, ಕಂಠದಲ್ಲಿ ಧ್ವನಿ ಮಾಡುವರು, ರತಿಕ್ರೀಡೆಯಲ್ಲಿ ಕುಕ್ಕುಟ, ಶ್ವಾನ, ಮಾರ್ಜಾಲ, ಸರ್ಪ ಮೊದಲಾದ ಬಂಧಗಳಿಂದ ಸುಖವನು-

ವದಂತಿರೆ ‖ ರಮಿಸುವರ್ಕಂಠದೊಳ್ಬಂಧಗಳಬಗೆಯನನುಭವಿ | ಸುವರ್ಕೂಟದೊಳ್ಮನಮುಳುಗಿಸೌಖ್ಯದಿಂ | ದ್ರವಿ
ಸುವರ್ಕಾಮಕಲೆಯರಿದಂಗನೆಯರಲ್ಲಿದೊರಕೊಂಡಪುರುಷರೊಡನೆ ‖ ೪೭ ‖ ಮರಣಮುಕುದೆಂದರಿದುವಡಮುರಿದವಲ್ಲಭನ |
ಚರಣಕೆರಗುವ ರೊಡಂಬಡಿಸುವ ದೈರ್ನ್ಯದಿಂ | ಕರುಣಭಾವಂಗಳಂ ತೋರುವಮಿರ್ಾರಿದೊಡೆ ಚೀರುವರ್ಘಾತಿಸುವರು ‖

---

ಬರುವ, ಪ್ರತಿಬಿಂಬದ-ತಮ್ಮನೆರಳಿನ, ಆನನದ-ವದನದ, ಭಾವಂಗಳಂ - ಶೃಂಗಾರವಿಕಾರಗಳನ್ನು, ಕಾಣುತ - ಈಕ್ಷಿಸುತ್ತ, ಅನ್ಯೋನ್ಯ-ಒಬ್ಬರಿಗೊಬ್ಬರಿಗೆ, ಸಂಪ್ರೀತಿಯಿಂದ-ಮಮತೆಯಿಂದ (ಲಾಲನೆಯಿಂದ), ತುಂಬಿದ್ದ-ಪ್ರೇಮರಸದಿಂದ ಕೂಡಿದ್ದ, ಚಷಕ-ಪಾನಪಾತ್ರೆಯ, ಮಧು-ಸಾರಾಯಿಯು, (ಮಾದಕದ್ರವ್ಯವು), ತೀರಲ್ಕೆ-ಪೂರ್ತಿಯಾಗಿ ಹೋಗಲು, ಬಯಲಪ್ಪುದು-ಪ್ರತಿಬಿಂಬ ತೋರಿಬರದೇ ಹೋಗುವುದು, ಎಂಬ-ಎನ್ನಿಸಿಕೊಳ್ಳುವ, ಶಂಕೆಯೋಳ್ - ಸಂದೇಹದಿಂದ, ಒಯ್ಯನೊಯ್ಯನೆ-ನಿಧಾನ, ನಿಧಾನವಾಗಿ, ಆಸ್ವಾದಿಸಿ-ಸವಿನೋಡುತ್ತಾ, ವಿಳಂಬಮಂ-ಕಾಲಹರಣೆಯನ್ನು, ಮಾಡುವರ್-ಗೆಯ್ಯುವರು, ಪುರುಷ-ಗಂಡಾದವನೂ, ಸ್ತ್ರೀ-ಹೆಣ್ಣಾದವಳು, ಒಂದಾಗಿ - ಒಟ್ಟುಗೂಡಿ, ಸವಿನ - ಮಾಧುರ್ಯವನ್ನು ಪರೀಕ್ಷಿಸುವ, ಸೊಗಸು - ಅಲಂಕಾರವು, ಅದೆಂತೊ - ಅದು ಯಾವರೀತಿಯಾದುದೋ! ಎಂದರೆ ವರ್ಣಿಸಲಸಾಧ್ಯವು, ಈ ಪದ್ಯವು ಉತ್ಪ್ರೇಕ್ಷೆಯಾಗಿ ಕವಿವರ್ಣನೆ ಯಿರುವದ್ದರಿಂದ, ಉತ್ಪ್ರೇಕ್ಷಾಲಂಕಾರವು ‖

ಅ‖ ವಿ‖ ಮೊಗವಂ, ಇಟ್ಟು = ಮೊಗವಿಟ್ಟು, ಕ್ರಿ. ಸ. ಮೊಗ ದ್ಭ. ಮುಖ ತ್ಸ. ಮಧು - ಹೆಂಡ, ಜೇನುತುಪ್ಪ, ಮಧುಮಾಸ, ವಸಂತಋತು, ಮಧುವೆಂಬ ರಕ್ಕಸ ‖ ಪುರುಷನೂ, ಸ್ತ್ರೀಯು = ಪುರುಷ ಸ್ತ್ರೀಯರು, ದ್ವಂ. ಸ. ಒಂದು+ಆಗಿ = ಒಂದಾಗಿ, ಉ, ಕಾರ, ಲೋಪಸಂಧಿ ‖೪೬‖

ಟೀ‖ ಎಸೆವ-ಹೊಳೆಯುವ, ರತಿಕೇಳಿಯೋಳ್-ಕಂದರ್ಪನ ಕ್ರೀಡೆಯಲ್ಲಿ (ಸಂಭೋಗಸುಖದಲ್ಲಿ) ಮೋಹನವನು-ಒಬ್ಬರನ್ನೊಬ್ಬರು ಒಲಿಸೋಣವನ್ನು, ಕವಿಸುವರ್ - ಮುಚ್ಚಿಕೊಳ್ಳುವಂತೆ ಮಾಡುವರು, ಚೆಂದುಟಿಯ - ಚೆಲುವಾದ ತುಟಿಯನ್ನು, ತನಿ-ನೂತನವಾದ, ರಸವನು-ಅಧರಾಮೃತವನ್ನು, ಸವಿಸುವರ್-ಸವಿಯನ್ನು ನೋಡಿಸುವರು, ಬಲ್ಮೊಲೆಯೋಳ್-ದಪ್ಪವಾದ ಕುಚಗಳಲ್ಲಿ, ಒತ್ತಿ - ಅಮುಕಿ, ಬಿಗಿಯಪ್ಪಿ - ಗಟ್ಟಿಯಾಗಿ ತಬ್ಬಿಕೊಂಡು, (ಗಾಢಾಲಿಂಗನವಂ ಮಾಡಿಕೊಂಡು) ಆಸರಂ-ದಣಿವನ್ನು, ತವಿಸುವರ್-ಕಡಿಮೆಮಾಡಿಕೊಳ್ಳುವರು, ದನಿಗೈಯ್ದು-ಶಬ್ದವನ್ನು ಮಾಡುವ, ಪಾರಿವದಂತೆ-ಪಾರಿವಾಳದ ಹಕ್ಕಿಯ ಹಾಗೆ, ಇರೆ - ಇರುವಂತೆಯೆ, ಕಂಠಮೋಳ್ - ಕತ್ತಿನಲ್ಲಿ, ರವಿಸುವರ್ - ರವವಂಗೈಯ್ಯುವರು, ಕೂಟದೋಳ್-ಜೋಡಿಕೆಯಲ್ಲಿ (ರತಿಸುಖದಲ್ಲಿ), ಬಂಧಗಳ-ಸರ್ಪವೇ ಮೊದಲಾದ ಬಂಧಗಳ, ಬಗೆಯನು-ಕ್ರಮವನ್ನು, ಅನುಭವಿಸುವರ್-ಹೊಂದುವರು, ಕಾಮುಕಲೆ - ಕಾಯಜನಕಲೆಯನ್ನು, ಅರಿದ-ತಿಳಿದಿರತಕ್ಕ, ಅಂಗನೆಯರು - ಸ್ತ್ರೀಯರು, ಅಲ್ಲಿ - ಆ ಸ್ತ್ರೀರಾಜ್ಯದಲ್ಲಿ, ದೊರೆಕೊಂಡ-ಆ ಹೆಂಗಸರಲ್ಲಿ ಸಿಕ್ಕಿ ಬಿದ್ದ, ಪುರುಷರ-ಗಂಡಾಳುಗಳ, ಒಡನೆ-(ಸಂಗಡಲೇ, ಜೊತೆಯಲ್ಲೆ), ಸೌಖ್ಯದಿಂ-ಸುಖವಾಗಿ, ಮನಮುಳಿದು-ಮನವೊಪ್ಪಿ(ಸಂಪೂರ್ಣಮಾಗಿ) ದ್ರವಿಸುವರ್-ಕರಗುವರು ‖

ಅ‖ ವಿ‖ ರತಿಯ, ಕೇಳಿ = ರತಿಕೇಳಿ, ಷ. ತ. ಕಾಮನ, ಕಲೆ = ಕಾಮುಕಲೆ, ಷ. ತ. ಧ್ವನಿಯಂ + ಗೈದು= ಧ್ವನಿಗೈದು, ಕ್ರಿ. ಸ. ಅಷ್ಟಭೋಗಗಳು-ಸ್ನಾನ, ಪಾನ, ಭೋಜನ, ವಸ್ತ್ರ, ಗಂಧ, ಪುಷ್ಪ, ತಾಂಬೂಲ, ಸಂಯೋಗ, (ದಶಕಾಮಾವಸ್ಥೆಗಳು-ಅಭಿಲಾಷೆ, ಚಿಂತೆ, ಸಂಸ್ಮೃತಿ, ವಿಭುಗುಣಸ್ಮೃತಿ, ಸಂತಾಪನ, ಕ್ರಿಯಾದ್ವೇಷ, ವಿಕಲ, ಮೌನ, ಮೂರ್ಛೆ, ಮರಣ), ದ್ವಾದಶವಿಧಚುಂಬನಗಳು - ನಿಮಿತ್ತಕ, ಸಂಘಟಕ, ಸ್ಫುರಿತಕ, ಭ್ರಾಂತಿಕ, ತಿರ್ಯಗಾಮಿತಕ, ಅತಿ ಧೃಷ್ಟಕ, ಉತ್ತರ ಸಂಘಟಿತಕ, ಜಿಹ್ವಾಮೇಳನಕ, ಜಿಹ್ವಕ, ಅತಿಜಿಹ್ವಾಯೋಗ, ಸೀತ್ಕಾರ, ದಂತ, ನಖ (ಪಂಚದಶಕಲಾಸ್ಥಾನಗಳು - ಬೆಟ್ಟು, ಅಡಿ, ಹರಡು, ಮೊಣಕಾಲು, ಜಘನ, ಹೊಕ್ಕಳು, ಎದೆ. ಕುಚ, ಕಕ್ಷ, ಕೊರಳು, ಕದಪು, ತುಟಿ, ಕಣ್ಣು, ಹಣೆ, ನೆತ್ತಿ ‖೪೭‖

ಟೀ‖ ಅಲ್ಲಿಯ-ಆ ದೇಶವಾಸಿಗಳಾದ, ವಿಷಾಂಗನೆಯರು - ವಿಷವುಳ್ಳ ಹೆಂಗಸರು (ವಿಷಕನ್ನಿಕೆಯರು), ಮರಣಂ-

---

ಅನುಭವಿಸುವರು, ಕಾಮುಕಳೆಯನ್ನು ತಿಳಿದ ಅಂಗನೆಯರು ಆ ರಾಜ್ಯದಲ್ಲಿ ಸಿಕ್ಕಿಕೊಂಡ ಪುರುಷನೊಂದಿಗೆ ಸುಖವಾಗಿ ರಮಿಸಿಕೊಂಡಿರುವರು ‖ ೪೭ ‖ ಆ ಸ್ತ್ರೀರಾಜ್ಯದಲ್ಲಿರುವವರಾದ, ವಿಷಾಂಗನೆಯರು (ತಮ್ಮೊಡನಿರುವ ಪುರುಷರು) ಮರಣವುಂಟಾಗುತ್ತೆಂದು ತಿಳಿದು, ತಮ್ಮೊಡನೆ ರತಿಸುಖಕ್ಕೆ ಆಶಿಸದ ತಮ್ಮ ವಲ್ಲಭನ, ಚರಣಕ್ಕೆ ವಂದಿಸುವರು, ಅತಿ ದೀನತೆಯಿಂದ ಒಪ್ಪುವಂತೆ ಮಾಡುವರು, ಕರುಣಾಭಾವಂಗಳನ್ನು ಪ್ರಕಟಿಪಡಿಸುವರು, ಇಷ್ಟು ಉಪಚರಿಸಿದಾಗ್ಯೂ ಈ ರತಿಸುಖಕ್ಕೆ ಒಪ್ಪದಿದ್ದರೆ ಆ ಪುರುಷರೊಂದಿಗೆ ಜಗಳವಾಡುವರು ಘಾತಿಸುವರು, ಕೆಂದುಟಿಯ ಚುಂಬನವನ್ನು ಕೊಟ್ಟು ಬೆರಳುಗ

ಅರುಣಾಧರದಚುಂಬನವನಿತ್ತು ಕರಜಪ್ರ । ಹರಣದಿಂ ಕಲೆಗಳಂತುಡುಕಿಸೊಗಸಂಬಲಿದು । ಹರಣಮಳಿವಪರಿಯಂತರಂಬಿಡ
ರವನನಲ್ಲಿಯವಿಷಾಂಗನೆಯರು ॥೪೮॥ ಅಚ್ಛ ಸಂಪಗೆಯಲರ್ಗೆರಗಿದಾರಡಿಯಂತೆ । ಮೆಚ್ಚಿ ಮಡಿವಂ ಮಾಸದೋಳ್ಬಳಿಕವನಕೂಡೆ ।
ಕಿಚ್ಚಿನೋಳ್ಪೊಗುವಳವಳಲ್ಲದೊಡೆಗರ್ಭಮಂಧರಿಸಿಪೆಣ್ಣಂಪಡೆವಳು ॥ ಪೆಚ್ಚಿರ್ಪರಂತಲ್ಲಿನಾರಿಯರ್ಬಳಿಕಬಂ । ದಚ್ಚರಿಯನ

---

ಸಾಯೋಣವು, ಅಹುದು, ಎಂದು-ಆಗುವುದೆಂಬದಾಗಿ, ಅರಿದು-ತಿಳಿದವರಾಗಿ, ಒಡಮುರಿದು-ಒಡನೆಯೇ ಸಂಭೋಗಕ್ಕೆ ಒಪ್ಪದ, ವಲ್ಲಭನ-ಒಡೆಯನ (ಗಂಡನ), ಚರಣಕೆ-ಅಡಿಗಳಿಗೆ, ಎರಗುವರ್-ನಮಸ್ಕರಿಸುವರು, (ಅಡ್ಡಬೀಳುವರು) ದೈನ್ಯದಿಂ-ಅತಿ ವಿನಯದಿಂದ (ದೈನ್ಯವೃತ್ತಿಯಿಂದ ದೀನತ್ವದಿಂದ), ಒಡಂಬಡಿಸುವರ್-ಅನುಮೋದಿಸುವಂತೆ ಮಾಡುವರು, ಕರುಣಾಭಾವಂಗಳಂ-ಕರುಣಾರಸಪೂರಿತರೀತಿಯನ್ನು, (ಕೃಪಾರಸದಿಂದ) ತೋರುವರ್-ತೋರ್ಪಡಿಸುವರು, ಮೀರಿದೊಡೆ-ಆ ಅಂಗನೆಯರ ಇಷ್ಟಾರ್ಥವನ್ನು ಒಪ್ಪದಿದ್ದರೆ, ಚೀರುವರ್-ಕಲಹಮಾಡುವರು, ಘಾತಿಸುವರ್-ನಾಶಮಾಡುವರು (ಸಾಯುವಂತೆ ಮಾಳ್ಪರು), ಅರುಣ-ರಕ್ತಛಾಯೆಯ, ಅಧರದ-ತುಟಿಯ ಪ್ರದೇಶದ, ಚುಂಬನವನು-ಚುಂಬಿಸೋಣವನ್ನು, (ಚಪ್ಪರಿಸೋಣವನ್ನು) ಇತ್ತು-ಕೊಟ್ಟವರಾಗಿ, ಕರಜ-ತಮ್ಮ ಕೈಯುಗುರ್ಗಳ, ಪ್ರಹರಣದಿಂ-ಆಯುಧಗಳಿಂದ, ಕಲೆಗಳಂ-ಮದನ ಕಲೆಗಳನ್ನು, ತುಡಿಕಿ-ಸೋಕಿಸಿ, (ಮುಟ್ಟಿ) ಸೊಗಸಂ-ಆನಂದವನ್ನು, ಬಲಿದು-ವೃದ್ಧಿಗೊಳಿಸಿ, ಹರಣಂ-ಗಂಡಸಿನ ಪ್ರಾಣವು, ಅಳಿವ-ನಾಶವನ್ನು ಹೊಂದುವ, ಪರಿಯಂತ-ಆ ವರೆಗೂ, ಅವನನು-ಆ ಮನುಷ್ಯನನ್ನು, ತ್ಯಜಿಸರ್-ಬಿಡಲೊಲ್ಲರು.

ಅ॥ ವಿ॥ ವಿಷಪದಾರ್ಥಗಳನ್ನು ಭಕ್ಷಿಸಿ, ತಮಗೆ ಯಾವ ರೋಗಾದ್ಯುಪದ್ರವಗಳೂ ಬಾರದಂತೆ ಮಾಡಿಕೊಳ್ಳುವರು ಆದ್ದರಿಂದ ಈ ರೀತಿಯಾದ ಸ್ತ್ರೀಯರಿಗೆ ವಿಷಕನ್ನೆಯರು, ವಿಷಾಂಗನೆಯರು ಎಂಬದಾಗಿ ಪೆಸರಿರ್ಪುದು ಹೇಗೆಂದರೆ:— ನಮ್ಮ ನಾಡಿನಲ್ಲಿ ಬೇವಿನ ಸೊಪ್ಪನ್ನು ಕೆಲವು ದಿನ ಸಾಧನೆಯನ್ನು ಮಾಡಿ ತಮ್ಮ ದೇಹವನ್ನು ಕಾಪಾಡಿಕೊಂಡಿರುವರು ಇದರಿಂದ ವಿಷಜಂತುಗಳಾದ ಸರ್ಪಾದಿಗಳು ಯಾವುದು ಕಡಿದಾಗ್ಯೂ ನಂಜೇರುವುದಿಲ್ಲ ವಿಷವಸ್ತುವನ್ನು ಸೇವಿಸಿ ತಮ್ಮ ಶರೀರವನ್ನು ದೃಢಪಡಿಸಿಕೊಂಡಿರುವ ಪುರುಷರೊಂದಿಗೆ ಆ ವಸ್ತುವನ್ನು ಸೇವಿಸದ ಸ್ತ್ರೀಯು ಸಂಭೋಗಿಸಿದರೆ ಆ ಸ್ತ್ರೀಗೆ ಮರಣವು ಸಿದ್ಧವಾಗಿರುವುದು. ಅದರಂತೆಯೇ ಗಂಡಸರಿಗೂ ಇದೇರೀತಿಯಾದ ಫಲವಾಗುವುದು. ಸ್ತ್ರೀ ಪುರುಷರಿಬ್ಬರೂ ಆ ವಿಷ ವಸ್ತುಗಳನ್ನು ಸೇವಿಸುತ್ತಿದ್ದರೆ ಯಾವ ತೊಂದರೆಯೂ ಇಲ್ಲದೆ ಆರೋಗ್ಯ ದೃಢಾಂಗರಾಗಿ ಆಹಾರಾದಿ ಜೀರ್ಣಶಕ್ತಿಯುಳ್ಳವರಾಗಿರುತ್ತಾರೆ. ಅಚ್ಚರಿ ದ್ಭ. ಆಶ್ಚರ್ಯ ತ್ಸ. (ಹರ-ಶಿವ, ಹರಣ-ಪ್ರಾಣ) (ಮರಣ-ಸಾವು) ದೀನನ ಭಾವ ದೀನತೆ ಭಾವನಾಮ ॥೪೮॥

ಟೀ॥ ಅಚ್ಛ-ನಿರ್ಮಲವಾದ, ಸಂಪಿಗೆಯ-ಸಂಪಿಗೆಯ ಹೂವ್ವಿಗೆ, ಎರಗಿದ-(ಬರುವ) ಆರಡಿಯಂತೆ-ಮುತ್ತಿರುವ ಭೃಂಗದಹಾಗೆ, (ಷಟ್ಪದಿಯಂತೆ) ಮೆಚ್ಚಿ-ವಿಷಧಾರಿಗಳಾದ ಸ್ತ್ರೀಯರ ಲಾವಣ್ಯಕ್ಕೆ ಒಪ್ಪಿಕೊಂಡು, ಮಾಸದೋಳ್-ತಿಂಗಳಲ್ಲಿ, (ಮೂವ್ವತ್ತು ದಿನಗಳೊಳಗೆ), ಮಡಿವಂ-ಮೃತಿ ಪೊಂದುವನು, ಅವಳು-ಆ ವಿಷಾಂಗನೆಯು, ಬಳಿಕ-ತನ್ನೊಡೆಯನು ಮೃತನಾದ ಮೇಲೆ, ಅವನ ಕೂಡೆ-ಆ ವಲ್ಲಭನೊಂದಿಗೆ, ಕಿಚ್ಚಿನೋಳ್-ಅಗ್ನಿಯಲ್ಲಿ, ಪೊಗುವಳ್-ಪ್ರವೇಶಮಾಡುವಳು, ಎಂದರೆ (ಅಗ್ನಿಪ್ರವೇಶವಂ ಮಾಡುವರು) ಅಲ್ಲದೊಡೆ-ಆ ರೀತಿಯಲ್ಲದಿದ್ದರೆ, ಗರ್ಭಮಂ-ಬಸುರನ್ನು, ಧರಿಸಿ-ಹೊಂದಿ, (ಗರ್ಭಿಣಿಯರಾಗಿ) ಪೆಣ್ಣಂ-ಹೆಣ್ಣು ಮಗುವನ್ನು, ಪಡೆವಳ್-ಪ್ರಸವಿಸುವಳು, (ಹೆರುವಳು) ಅಲ್ಲಿ-ಆ ರಾಜ್ಯದಲ್ಲಿ, ಅಂತು-ಆ ರೀತಿಯಿಂದ, ನಾರಿಯರು-ಅಂಗನೆಯರು, ಪೆರ್ಚ್ಚಿ-ಅಭಿವೃದ್ಧಿ ಹೊಂದಿ, ಇರ್ಪರ್-ಇರುತ್ತಿರುವರು, ಬಳಿಕ-ಆ ಪಾರ್ಥ ಸೈನ್ಯವು ಸ್ತ್ರೀರಾಜ್ಯಕ್ಕೆ ಬಂದನಂತರ, ಬಂದು-ಆ ಸ್ಥಳಕ್ಕೆ ಪ್ರವೇಶಮಾಡಿ, ಅರ್ಜುನಂ-ಪಾರ್ಥನು, ಕೇಳ್ದು-ಆಲಿಸಿ, ಆಗ-ಆ ಕಾಲದಲ್ಲಿ, ತನ್ನ ಪಡೆಗೆ-ತನ್ನಯ ಸೈನ್ಯಕ್ಕೆ, ಎಚ್ಚರಿಕೆಯಾಗಿ-ಜಾಗರೂಕರಾಗಿ (ಆ ವಿಷಾಂಗನೆಯರ ಕಾಮಬಾಣಕ್ಕೆ ಒಳಪಡದಹಾಗ), ಇರ್ಪುದು-

---

ರ್ಗಳ ಪ್ರಹರಣದಿಂದ ಕಲಾಸ್ಥಾನವನ್ನು ಮುಟ್ಟದವರಾಗಿ, ಶೃಂಗಾರವನ್ನು ಬಲಪಡಿಸಿಕೊಂಡು, ಪುರುಷನ ಹರಣವು (ಪ್ರಾಣವು) ಹೋಗುವ ಪರಿಯಂತವೂ, ಆ ಪುರುಷನನ್ನು ಬಿಡುವುದಿಲ್ಲ ॥ ೪೮ ॥ ಮತ್ತು ಸಂಪಿಗೆಯ ಪುಷ್ಪಕ್ಕೆ ಎರಗಿದ ಭೃಂಗದಂತೆ ಮೆಚ್ಚಿ, (ವಿಷಾಂಗನೆಯರ ರೂಪಲಾವಣ್ಯಕ್ಕೆ ಒಲಿದವನಾಗಿ) ಒಂದು ತಿಂಗಳಲ್ಲಿಯೆ ಮರಣವಂ ಪೊಂದುವನು ಆ ಪುರಷನಂ ಹೊಂದಿದ್ದ ಸ್ತ್ರೀಯಾದರೋ, ಆ ಮನುಷ್ಯನು ಸತ್ತ ಕೂಡಲೆ ಆ ಮನುಜನ ಒಡನೆಯೆ ಅಗ್ನಿಪ್ರವೇಶವನ್ನು ಮಾಡುವಳು, ಹಾಗೆ ಅಗ್ನಿಯಲ್ಲಿ ತನ್ನ ವಲ್ಲಭನೊಂದಿಗೆ ಸಾಯದಿದ್ದರೆ, ಗರ್ಭವನ್ನು ಧರಿಸಿದವಳಾಗಿ, ಹೆಣ್ಣು ಮಗುವನ್ನು ಹೆರುವಳು ಈ ಪ್ರಕಾರವಾಗಿ ಆ ಸ್ತ್ರೀರಾಜ್ಯದಲ್ಲಿ ಹೆಂಗಸರು ಹೆಚ್ಚಿದವರಾಗಿರುತ್ತಾರೆ. ಬಳಿಕ ಆ ಸೇನೆಯು ಅಂಗನಾ ರಾಜ್ಯಕ್ಕೆ ಪ್ರವೇಶಿಸಲಾಗಿ ಪಾರ್ಥನು ಇದನ್ನು ನೋಡಿ, ಆಗ ತನ್ನ ಸೈನ್ಯ ಜನಕ್ಕೆ ಹೆಂಗಸರ ಮರುಳ ತನಕ್ಕೆ ಒಳಗಾಗದೆ

ರ್ಜುನಂಕೇಳ್ವಾಗತನ್ನಪಡೆ । ಗೆಚ್ಚರಿಕೆಯಾಗಿರ್ಪುದೆಂದೊರೆದುಕೂಡೆಪಾಳಯದೊಳಗೆಸಾರಿಸಿದನು ॥೪೯॥ ವಿಷಕನ್ನಿಕೆಯರಿನ ಕ್ಕಂಡಮಾತ್ರದೊಳಾಕ । ರುಷಣಮಂಮಾಡುವರ್ಬೆರಸಿದೊಡೆಪುರುಷನಾ । ಯುಷವನಪಹರಿಪರಿದುನಿಶ್ಚಯಂನೀವಿಲ್ಲಿಮರದಾ ದೊಡಂಮನದೊಳು ॥ ವಿಷಯುಕೆಳಸದೆಬುದ್ಧಿವಂತರಾಗಿಹುದೆಂದು । ವೃಷಕೇತುಮೊದಲಾದವೀರರ್ಗೆನುಡಿದನನಿ । ಮಿಷನಗರ ದೊಡೆಯಲಕ್ಷ್ಮೀಪತಿಯಮೈದುನಂಕಟಕದೋಳ್ಸಾರಿಸಿದನು ॥೫೦॥

ಸಂಧಿ ೧೫ ಕ್ಕೆ ಪದ್ಯ ೭೬೩ ಕ್ಕಂ ಮಂಗಳಮಸ್ತು.

---

ಇರತಕ್ಕದ್ದು, ಎಂದು–ಎಂಬದಾಗಿ, ಒರೆದು–ತಿಳಿಯಪಡಿಸಿ, (ಆಜ್ಞಾಪಿಸಿ) ಪಾಳೆಯದೊಳು–ದಂಡಿರುವ ಕಡೆಯಲ್ಲಿ, ಸಾರಿಸಿದಂ–ಬಹಿರಂಗಪಡಿಸಿದನು.

ಅ॥ ವಿ॥ ಅಚ್ಚ ದ್ಭ. ಅಚ್ಛ ತ್ಸ. ಸಂಪಗೆ ದ್ಭ. ಚಂಪಕಾ ತ್ಸ. ಗರ್ಭ-ಬಸಿರು, ಹೊಟ್ಟೆ. ಮೃತಿಯಂ+ಪೊಂದುವರ=ಮೃತಿ ಪೊಂದುವರು ಕ್ರಿ. ಸ. ಅರ್ಜುನ–ಪಾರ್ಥ, ಅರ್ಜುನ–ಪುಷ್ಪ. ॥೪೯॥

ಟೀ॥ ಅನಿಮಿಷ ನಗರದ – ದೇವತೆಗಳ ಪಟ್ಟಣದ, ಒಡೆಯ – ಪ್ರಭುವಾದ, ಲಕ್ಷ್ಮೀಪತಿಯ – ರಮಾಪತಿಯಾದ ಕೃಷ್ಣನ, ಮೈದುನಂ–ಮೈದುನನಾದ ಪಾರ್ಥನು, (ತನ್ನ ಕಡೆಯ ಸೈನಿಕರನ್ನು ಕುರಿತು) ಇವರು–ಈ ವಿಷಾಂಗನೆಯರು ಕಂಡ ಮಾತ್ರದೊಳು–ನೋಡಿದ ಒಡನೆಯೇ, ಆಕರುಷಣಂ–ತನ್ನ ಕಡೆಗೆ ಎಳದುಕೊಳ್ಳೋಣವನ್ನು (ರತಿಕ್ರೀಡೆಗೆ ಒರಮಾಡಿಕೊಳ್ಳುವಿಕೆಯನ್ನು), ಮಾಡುವರ್–ಗೆಯ್ಯುವರು, ಬೆರಸಿದೊಡೆ–ಆ ವಿಷಕನ್ನಿಕೆಯರೊಡನೆ ಬೆರತದ್ದೇಯಾದರೆ, ಪುರುಷನ-ಮನುಷ್ಯನ, ಆಯುಷವನು–ಆಯುಷ್ಯವನ್ನು, ಅಪಹರಿಪರು – ತೆಗದುಕೊಳ್ಳುತಾರೆ, ನೀವು–ನೀವುಗಳಾದರೋ, ಮರದಾದೊಡಂ-ಭ್ರಮೆಯಿಂದ ಮರೆತು ಆದಾಗ್ಯೂ, ಮನದೊಳು–ಮನಸ್ಸಿನಲ್ಲಿ, ವಿಷಯಕೆ-ಸ್ರಕ್ ಚಂದನಾದಿ ಸ್ತ್ರೀಯರಲ್ಲಿರುವ ಸೌಖ್ಯಕ್ಕೆ, ಎಳಸದೆ-ಆಪೇಕ್ಷೆಪಡದೆ, ಬುದ್ಧಿವಂತರಾಗಿ–ವಿವೇಕಿಗಳಾಗಿ, ಇಹುದು-ಇರತಕ್ಕದ್ದು, ಎಂದು–ಎಂಬದಾಗಿ, ವೃಷಕೇತು-ಕರ್ಣನ ಸುತನಾದ ವೃಷಧ್ವಜನೇ, ಮೊದಲಾದ–ಆದಿಯಾದವರ, ವೀರರ್ಗೆ–ಕಲಿಗಳಿಗೆ, ನುಡಿದನು–ಬುದ್ಧಿವಾದಗಳನ್ನು ಪೇಳಿದನು, ಮೇಣ್–ಮತ್ತು, ಕಟಕದೋಳ್–ಸೇನಾನಿವೇಶನದಲ್ಲಿ, ಸಾರಿಸಿದನು–ಪ್ರಕಟನೆ ಮಾಡಿಸಿದನು.

ಅ॥ ವಿ॥ ಆಯುಷ ತ್ಸ. ಆಯಿಸ ದ್ಭ. (ಧರ್ಮ, ಅರ್ಥ, ಕಾಮ, ಮೋಕ್ಷ, ಚತುರ್ವಿಧ ಫಲಪುರುಷಾರ್ಥಗಳು, ಅನಿಮಿಷ-ದೇವತೆ, ಮೀನು. ದೇವತೆಗಳ+ಪುರ=ದೇವಪುರ ಷ. ತ. ಪುರದ+ಒಡೆಯ=ಪುರದೊಡೆಯ ಷ. ತ. ಲಕ್ಷ್ಮೀ-ಕಮಲಾ, ಲಕ್ಷ್ಮೀದೇವಿ, ಮನವಂ+ಪಿಡಿದು=ಮನವಿಡಿದು ಕ್ರಿ. ಸ. ಬಸಿರ್-ಹೊಟ್ಟೆ, ಗರ್ಭ. ॥೫೦॥

ಹದಿನೈದನೆಯ ಸಂಧಿ ಸಂಪೂರ್ಣವಾದುದು.

---

ಜಾಗರೂಕರಾಗಿರುವಂತೆ ಎಲ್ಲಾ ಕಡೆಯಲ್ಲೂ ಪ್ರಕಟಪಡಿಸಿದನು ॥೪೯॥ ಆಗ ಅನಿಮಿಷ ನಗರದ ಪ್ರಭುವಾದ, ಲಕ್ಷ್ಮೀಪತಿಗೆ ಭಾವಮೈದುನನಾದ ಧನಂಜಯನು ಈ ರಾಜ್ಯಾಂಗನೆಯರು ಗಾಂಜಾ, ಅಫೀಮು, ಹೊಗೇಸೊಪ್ಪು ಮೊದಲಾದ ವಿಷ ವಸ್ತುಗಳ ಸೇವನೆಯನ್ನು ಮಾಡಿ ಅದರಿಂದ ಬೆಳದವರಾಗಿರುತ್ತಾರೆ. ಅಂತಹ ವಿಷಾಂಗನೆಯರು ಬೇರೊಂದು ದೇಶದ ಪುರುಷನಂ ಕಂಡ ಮಾತ್ರದಿಂದಲೇ ಆಕರ್ಷಣಮಾಡಿ, ತಮ್ಮ ಮೋಹಪಾಶಕ್ಕೆ ಬೀಳಗೊಡಿಸಿ ತಮ್ಮ ವಶಪಡಿಸಿಕೊಳ್ಳುತ್ತಾರೆ, ಅವರು ಆ ಹೆಂಗಸರೊಂದಿಗೆ ಸೇರಿದ ಮಾತ್ರದಿಂದಲೇ ಆ ಮನುಷ್ಯರ ಆಯುವನ್ನು ಅಪಹರಿಸುತ್ತಾರೆ ಸೈನಿಕರಾದ ನೀವುಗಳೆಲ್ಲರೂ ಮರೆತಾದರೂ ಮನದಲ್ಲಿ ಈ ಸ್ತ್ರೀ ಸುಖಕ್ಕೆ ಆಶೆಪಡದೆ ಬುದ್ಧಿಶಾಲಿಗಳಾಗಿ ಇರತಕ್ಕದ್ದು ಎಂಬದಾಗಿ ವೃಷಕೇತು ಮೊದಲಾದ ವೀರರಿಗೆ ತಿಳಿಸಿದ್ದಲ್ಲದೆ ಸೇನಾನಿವೇಶದಲ್ಲಿಯೂ ಪ್ರಕಟಪಡಿಸಿದನು ॥೫೦॥

ಟೀಕಾ ತಾತ್ಪರ್ಯ ಸಹಿತವಾದ ಜೈಮಿನಿಭಾರತದಲ್ಲಿ ಹದಿನೈದನೆಯ ಸಂಧಿಯು
ಸಂಪೂರ್ಣವಾದುವು.



# ಹದಿನಾರನೆಯ ಸಂಧಿ.

ಸೂಚನೆ॥ ಸ್ತ್ರೀರಾಜ್ಯದೋಳ್ಪ್ರಮಿಳೆಯನೊಡಂಬಡಿಸಿವಿ | ಸ್ತಾರಮಾಗಿರ್ದಬಹುದೇಶಂಗಳಂತೊಳಲಿ | ಘೋರ ಭೀಷಣದೈತ್ಯನಂಮುರಿದುಫಲುಗುಣಂಮಣಿಪುರಕೆನಡೆತಂದನು ||

ಕೇಳವನಿಪಾಲಕುಲತಿಲಕತುರಗದಕೂಡೆ | ಪಾಳಯಂತೆರಳಿಬಂದಲ್ಲಿಬಿಟ್ಟರ್ಜುನಂ | ಪೇಳಿದಂತಿರುತಿರ್ದುದನ್ನೆಗಂ ಕುದುರೆತನ್ನಿಚ್ಛೆಯಿಂದೈದೆಕಂಡು || ಭಾಳಪಟ್ಟದಲೇಖನವನೋದಿಕೊಂಡುನೀ | ಲಾಳಕಿಯರಾಗನಡೆತಂದುಕೈಮುಗಿದು ಪ್ರ | ಮಿಳೆಯೆಂಬರಸಾಗಿಹಸ್ತ್ರೀಶಿರೋಮಣಿಗೆಸಂಭ್ರಮದೊಳಿಂತೆಂದರು || ೧ || ಶಶಿಕುಲೋದ್ಭವಯುಧಿಷ್ಠಿರನೃಪನಕುದುರೆ

---

ಹದಿನಾರನೆಯ ಸಂಧಿ.

ಸೂಚನೆ॥ ಫಲುಗುಣಂ–ಪಾರ್ಥನು, ಸ್ತ್ರೀರಾಜ್ಯದೋಳ್–ಹೆಂಗಸರ ರಾಜ್ಯದಲ್ಲಿ, ಪ್ರಮಿಳೆಯಂ–ಪ್ರಮಿಳೆಯೆಂಬ ರಾಜ್ಞಿಯನ್ನು, ಒಡಂಬಡಿಸಿ–ಸಮಾಧಾನಪಡಿಸಿ, ವಿಸ್ತಾರ–ವಿಸ್ತೀರ್ಣವು, ಆಗಿರ್ದ–ಆಗಿರುವುದಾಗಿದ್ದ, ಬಹುದೇಶಂಗಳಂ–ಅನೇಕ ರಾಜ್ಯಗಳನ್ನು, ತೊಳಲಿ–ಬಹು ಶ್ರಮಪಟ್ಟು ಸಂಚಾರಮಾಡಿಕೊಂಡು, ಘೋರ–ಭಯಂಕರನಾದ, ಭೀಷಣನ–ಭೀಷಣನೆಂಬುವ, ದೈತ್ಯನಂ–ರಾಕ್ಷಸನನ್ನು, ಮುರಿದು–ಸಂಹರಿಸಿ, ಮಣಿಪುರಕೆ–ರತ್ನಪುರವೆಂಬ ಪಟ್ಟಣಕ್ಕೆ, ನಡೆತಂದನು–ಐತಂದನು.

ಅ॥ ವಿ॥ ಸ್ತ್ರೀಯರ+ರಾಜ್ಯ=ಸ್ತ್ರೀರಾಜ್ಯ ಷ. ತ. ಘೋರನಾದ + ಭೀಷಣ=ಘೋರಭೀಷಣ ವಿ.ಪೂ.ಕ. ಮಣಿಯ+ ಪುರ=ಮಣಿಪುರ ಷ. ತ. ಮಣಿಪುರವೆಂಬ+ನಗರ=ಮಣಿಪುರ ನಗರ ಸ.ಪೂ.ಕ. ಮಣಿ–ನಮುಸ್ಕಾರಮಾಡುವುದು, ರತ್ನ, ಭೀಷಣ–ಭೀಷಣನೆಂಬ ದೈತ್ಯ, ಕ್ರೂರ. ರಾಕ್ಷಸ–ತ್ಸ. ರಕ್ಕಸ–ದ್ಭ.

ಟೀ॥ ಅವನಿ–ಪೃಥ್ವಿಯನ್ನು, ಪಾಲ–ಕಾಪಾಡುವವರಾದ ರಾಜರ, ಕುಲ–ಸಮೂಹಕ್ಕೆ, ತಿಲಕ–ಲಲಾಮನಾದ ಜನಮೇಜಯರಾಯನೆ! ಕೇಳು–ಲಾಲಿಸು, ತುರಗದ–ಕುದುರೆಯ, ಕೂಡೆ–ಒಡನೆ, ಪಾಳೆಯಂ–ಸೈನ್ಯವು, ತೆರಳಿ–ಪ್ರಯಾಣಮಾಡಿ, ಬಂದು–ಬಂದವನಾಗಿ, ಅಲ್ಲಿ–ಆ ಸ್ಥಳದಲ್ಲಿ, ಬಿಟ್ಟು–ಆ ಸೈನ್ಯವನ್ನು ನಿಲುನಂತೆ ಮಾಡಿ, ಅರ್ಜುನಂ–ಪಾರ್ಥನು, ಪೇಳಿದಂತೆ–ಹೇಳಿದ ಪ್ರಕಾರವಾಗಿ, ಇರುತಿರ್ದುದು–ಇದ್ದಿತು, ಅನ್ನೆಗಂ–ಅಷ್ಟುಹೊತ್ತಿಗೆ, ಕುದುರೆ–ತುರಗವು, ತನ್ನ–ತನ್ನಯ, ಇಚ್ಛೆಯಿಂದ–ಮನಸ್ಸು ಬಂದ ಬಗೆಯಿಂದ, ಐದೆ–ನಡೆದು ಬರುತ್ತಿರಲು, ಕಂಡು–ಆ ಕುದುರೆಯನ್ನು ನೋಡಿ, ನೀಲ–ಕಪ್ಪಾಗಿರುವ, ಅಳಕಿಯರು–ಮುಂಗುರುಳುಗಳುಳ್ಳ ಸ್ತ್ರೀಯರು, ಭಾಳ–ಕುದುರೆಯ ಹಣೆಯಲ್ಲಿರುವ, ಪಟ್ಟದ–ಚಿನ್ನದ ಪಟ್ಟಿಯಲ್ಲಿ ಬರೆದಿರುವ, ಲೇಖನವನು–ಬರಹವನ್ನು, ಓದಿಕೊಂಡು–ಓದಿನೋಡಿಕೊಂಡು, ಆಗ–ಆ ವೇಳೆಯಲ್ಲಿ, ನಡೆತಂದು–ಬಂದವರಾಗಿ, ಕೈಮುಗಿದು–ಕರಗ ಜೋಡಿಸಿಕೊಂಡು, (ನಮುಸ್ಕಾರ ಮಾಡಿ) ಪ್ರಮಿಳೆಯೆಂಬ–ಪ್ರಮಿಳೆಯೆಂಬ ನಾಮಧೇಯದ, ಅರಸಾಗಿಹ–ಅರಸಿಯಾಗಿರುತ್ತಿರುವ, ಸ್ತ್ರೀ ಶಿರೋಮಣಿಗೆ–ವನಿತೆಯರಲ್ಲಿ ಶಿರೋರತ್ನ ಪ್ರಾಯಳಾದವಳಿಗೆ, ಸಂಭ್ರಮದೊಳು–ಅತಿ ವೈಭವದಿಂದ, ಇಂತೆಂದರು–ಮುಂದಿನ ರೀತಿಯಿಂದ ಹೇಳಿದರು.

ಅ॥ ವಿ॥ ಅವನಿಯನ್ನು+ಪಾಲನೆಮಾಡುವವನು=ಅವನಿಪಾಲ ಕೃ. ವೃ. ತಿಲಕ - ಊರ್ಧ್ವಪುಂಡ್ರ, ತಿಲಕವೃಕ್ಷ, ಶ್ರೇಷ್ಠ, ನೀಲವಾದ+ಅಳಕ=ನೀಲಾಳಕ ವಿ.ಪೂ.ಕ. ನೀಲವಾದ+ಅಳಕವುಳ್ಳವಳು=ನೀಲಾಳಕಿಯರು ಬಹು. ಸ. ಕೈಯಂ+ ಮುಗಿದು=ಕೈಮುಗಿದು ಕ್ರಿ. ಸ. ಇಂತು+ಎಂದು=ಇಂತೆಂದು ||೧||

---

ಹದಿನಾರನೆಯ ಸಂಧಿ.

ಭೂಮಿಪಾಲರ ಕುಲಕ್ಕೆ ಶಿರೋರತ್ನಪ್ರಾಯನಾದ ಜನಮೇಜಯರಾಯನೇ! ಆಲಿಸು, ಮುಂದಿನ ಕಥಾಸಂದರ್ಭವನ್ನು ವಿಸ್ತಾರವಾಗಿ ವಿವರಿಸುತ್ತೇನೆ, ಆಗ ಅರ್ಜುನನು ಯಜ್ಞಾಶ್ವದ ಸಂಗಡ ಹೊರಟು ತನ್ನ ಸೇನೆಯನ್ನು ಒಂದು ಕಡೆಯಲ್ಲಿ ನಿಲ್ಲುನಂತೆ ಮಾಡಲು, ಆ ಸೇನೆಯು ತಮ್ಮ ಒಡೆಯನ ಮಾತಿನ ಪ್ರಕಾರವಾಗಿಯೆ ನಡೆದುಕೊಂಡಿರಲು ಆ ಹೊತ್ತಿಗೆ ಆ ಕುದುರೆಯು ತನ್ನ ಮನಸ್ಸು ಬಂದ ರೀತಿಯಿಂದ ಸ್ತ್ರೀ ರಾಜ್ಯದಲ್ಲಿ ಬರುತ್ತಿರಲು, ದುಂಬಿಯ ಮೈ ಬಣ್ಣದಂತೆ ಕಪ್ಪಾದ ಮುಂಗುರುಳುಗಳುಳ್ಳ ಕಾಂತೆಯರು ಆ ಯಜ್ಞಾಶ್ವದ ಹಣೆಯಲ್ಲಿರುವ ಚಿನ್ನದ ಪಟ್ಟಿಯಲ್ಲಿ ಬರೆದಿದ್ದ ಬರವಣಿಗೆಯನ್ನು ಮನನ ಮಾಡಿಕೊಂಡು ಬಂದು ಆಗ ತಮ್ಮ ರಾಜ್ಯಕ್ಕೆ ರಾಣಿಯಾಗಿದ್ದ ಪ್ರಮಿಳೆಯೆಂಬ ನಾಮದಿಂದ ಧೊರೆಯಾದ ಸ್ತ್ರೀಯರಿಗೆಲ್ಲಾ ಸೀಮಂತರತ್ನ ಪ್ರಾಯಳಾದ ನಾರೀ ಶಿರೋಮಣಿಗೆ ಕೈಮುಗಿದುಕೊಂಡು ಅತ್ಯಂತ ವೈಭವದೊಡನೆ ಈ ರೀತಿಯಾಗಿ ಪೇಳಿದರು ||೧|| ಎಲೌ ಮಹಾರಾಜ್ಞಿಯೇ ಆಲಿಸು, ಚಂದ್ರವಂಶೋತ್ಪನ್ನನಾದ ಧರ್ಮರಾಯನೆಂಬ ರಾಜನ

ಗಡ | ವಸುಧೆಯೊಳಿದಂಬಲ್ಲಿದಕಟ್ಟಬೇಕುಗಡ | ದೆಸೆಯೊಳಿದಕರ್ಜುನನಕಾವಿನಾರೈಕೆಗಡಪಿಡಿದರೆಬಿಡಿಸಿಕೊಂಬರು || ಪೊಸತಲಾನಮಗೆಂದುನಾರಿಯರ್ಬಿನ್ನೈಸೆ | ನಸುನಗುತಲಾಯದೋಳ್ಕಟ್ಟಿಸಿದಳಾಹಯವ | ನೆಸೆವಭದ್ರಾಸನವನಿಳಿದು ಸಂಗ್ರಾಮಕ್ಕೆಪೊರಮಟ್ಟಳಾಪ್ರಮಿಳೆ || ೨ || ಕಣ್ಣಹೊಳಹಿನಚಪಲೆಯರಕುದುರೆಲಕ್ಷದಿಂ | ತಿಣ್ಣಮೊಲೆಯಲಸಗಮನೆಯರಾನೆಲಕ್ಷದಿಂ | ಹುಣ್ಣಿಮೆಯಶಶಿಯಂತೆಸೆವಬಟ್ಟಮೊಗದನೀರೆಯರಥಲಕ್ಷದಿಂದ || ಸಣ್ಣನಡುವಿನಸೆಸೊಕ್ಕುಜವ್ವನದ ಪೊಸಮಿಸು | ವಣ್ಣದಂಗದ ಬಾಲೆಯರ್ಮೂರುಲಕ್ಷದಿಂ | ಪೆಣ್ಣದಳಮೈದೆಜೋಡಿಸಿತುಪಾರ್ಥನಸಮರಕಾಪ್ರಮಿಳೆಯಸುತ್ತಲು || ೩ ||

ಟೀ|| ಶಶಿಕುಲ-ಇಂದುವಿನ ಕುಲದಲ್ಲಿ ಜನಿಸಿದವನಾದ, ಯುಧಿಷ್ಠಿರ-ಧರ್ಮಪುತ್ರನೆಂಬ, ನೃಪನ-ರಾಜನ, ಕುದುರೆಗಡ-ತುರಗವಂತೆ, ವಸುಧೆಯೊಳು-ಪೃಥ್ವಿಯಲ್ಲಿ, ಇದಂ-ಈ ಅಶ್ವವನ್ನು, ಬಲ್ಲಿದರ್-ಬಲಾಢ್ಯರು, ಕಟ್ಟಬೇಕುಗಡ-ಬಂಧಿಸಬೇಕಂತೆ, ದೆಸೆಯೊಳು-ನಾನಾ ದಿಕ್ಕುಗಳಲ್ಲಿ, ಇದಕೆ-ಈ ತುರಗಕ್ಕೆ, ಅರ್ಜುನನ-ಪಾರ್ಥನ, ಕಾವಿನ-ರಕ್ಷಿಸುವಿಕೆಯ, ಆರೈಕೆಗಡ-ಪೋಷಣೆಯಂತೆ, ಪಿಡಿದರೆ-ಆ ಅಶ್ವವನ್ನು ಯಾರಾದರು ಹಿಡಿದರೆ-ಹಿಡಿದುಕೊಂಡರೆ, ಬಿಡಿಸಿಕೊಂಬರು-ಸ್ವಾಧೀನ ಪಡಿಸಿಕೊಳ್ಳುತ್ತಾರೆ, ನಮಗೆ-ನಮ್ಮಗಳಿಗೆ, ಪೊಸತಲಾ-ಹೊಸದಾದ ಸಂಗತಿಯಲ್ಲವೆ! ಎಂದು-ಎಂದು ಹೇಳುತ್ತ, ನಾರಿಯರ್-ಸ್ತ್ರೀಯರು, ಬಿನ್ನೈಸೆ-ಅರಿಕೆಮಾಡಿಕೊಳ್ಳಲು, ಆಪ್ರಮಿಳೆಯು-ಆ ಪ್ರಮಿಳೆಎಂಬ ರಾಣಿಯು, ನಸುನಗುತ-ಮುಗುಳು ನಗೆನಗುತ್ತ, ಲಾಯದೊಳ್-ಕುದುರೆಗಳಂ ಬಂಧಿಸುವ ಸ್ಥಳದಲ್ಲಿ, (ತುರಗ ಶಾಲೆಯಲ್ಲಿ) ಆಹಯವಂ-ಆ ತುರಗವನ್ನು, ಕಟ್ಟಿಸಿದಳು-ಸೇವಕರಿಂದ ಬಂಧಿಸಿದಳು, ಎಸೆವ-ಪ್ರಜ್ವಲಿಸುವ, ಭದ್ರಾಸನವನು-ಮಂಗಳ ಪೀಠವನ್ನು, (ದರಬಾರ್ ಮಾಡುವ ಪೀಠವನ್ನು) ಇಳಿದು-ಕೆಳಗೆ ಇಳಿದವಳಾಗಿ, ಸಂಗ್ರಾಮಕೆ-ಕಾಳಗಕ್ಕೆ, ಪೊರಮಟ್ಟಳು-ಬಿಟ್ಟು ಹೊರಟಳು ||

ಅ|| ವಿ|| ಶಶ-ಮೊಲ, ಅದನ್ನುಳ್ಳದ್ದು=ಶಶಿ, (ಶಶಿಯ+ಕುಲ=ಶಶಿಕುಲ, ಷ. ತ. ಕುಲ + ಉದ್ಭವ = ಕುಲೋದ್ಭವ, ಗುಣಸಂಧಿ. ಯುಧಿಷ್ಠಿರ-ಯುದ್ಧದಲ್ಲಿ ಸ್ಥಿರವಾಗಿ ನಿಲ್ಲತಕ್ಕವನು, ಗಡ-ಅವ್ಯಯರೂಪ, ಭದ್ರವಾದ + ಆಸನ = ಭದ್ರಾಸನ, ವಿ. ಪೂ. ಕ. ಭದ್ರ-ಮಂಗಳ, ಜೋಪಾನ || ೨ ||

ಟೀ|| ಕಣ್ಣ-ಕಂಗಳ, ಹೊಳಹಿನ-ಪ್ರಕಾಶಿಸುವಿಕೆಯುಳ್ಳವರು, ಚಪಲೆಯರು-ಮಿಂಚಿನಂತೆ ಚಂಚಲವಾದ ಸ್ತ್ರೀಯರ, ಕುದುರೆ-ತುರಗಗಳ, ಲಕ್ಷದಿಂ-ಒಂದು ಲಕ್ಷ ಸಂಖ್ಯೆಯಿಂದ, ತಿಣ್ಣ-ಕರ್ಕಶವಾದ (ಗಟ್ಟಿಯಾದ), ಮೊಲೆಯ-ಕುಚಗಳುಳ್ಳವರಾದ, ಅಲಸದ-ನಿಧಾನವಾದ, ಗಮನೆಯರ-ಗಮನವುಳ್ಳವರಾದ (ನಡೆಗೆಯುಳ್ಳವರಾದ), ಹೆಂಗಳ-ಹೆಂಗಸರ, ಆನೆ-ಇಭಗಳ, ಲಕ್ಷದಿಂ-ಒಂದು ಲಕ್ಷ ಸಂಖ್ಯೆಯಿಂದಲೂ, ಹುಣ್ಣಿಮೆಯ-ಹುಣ್ಣಿಮೆಯ ದಿನದಲ್ಲಿರುವ, ಶಶಿಯಂತೆ-ಇಂದುವಿನಹಾಗೆ, ಎಸೆವ-ಹೊಳೆಯುವ, ಬಟ್ಟ-ಮಂಡಲಾಕಾರವಾದ (ಗುಂಡಗಿರುವ), ಮೊಗದ-ಆಸ್ಯವುಳ್ಳವರಾದ, ನೀರೆಯರ-ಕಾಂತೆಯರ, ರಥ-ವರೂಥಗಳ, ಲಕ್ಷದಿಂದ-ಒಂದು ಲಕ್ಷ ಸಂಖ್ಯೆಯಿಂದಲೂ, ಸಣ್ಣ-ಸಣ್ಣಗಿರುವ, (ಕೃಶವಾಗಿರುವ) ನಡುವಿನ ಮಧ್ಯಗಳುಳ್ಳ, ಸೊಕ್ಕು-ಕೊಬ್ಬಿದ, ಜವ್ವನದ-ಪ್ರಾಯವುಳ್ಳವರಾದ, ಪೊಸ-ನೂತನವಾದ, ಮಿಸುನಿ-ಚಿನ್ನದ, ವಣ್ಣದ-ವರ್ಣವುಳ್ಳ, ಅಂಗದ-ದೇಹವುಳ್ಳವರಾದ, ಬಾಲೆಯರ-ಸ್ತ್ರೀಯರ, ಮೂರುಲಕ್ಷದಿಂದ-ಮೂರುಲಕ್ಷ ಸಂಖ್ಯೆಗಳಿಂದಲೂ, ಪೆಣ್ಣ-ಹೆಂಗಸರ, ದಳಂ-ಸೈನ್ಯವು, ಐದು-ಬಂದದ್ದಾಗಿ, ಪಾರ್ಥನ-ಫಲುಗುಣನ, ಸಮರಕೆ-ಕಾಳಗಕ್ಕೆ, ಆ ಪ್ರಮಿಳೆಯ-ಆ ಪ್ರಮಿಳೆಯೆಂಬ ರಾಣಿಯ, ಸುತ್ತಲೂ-ಎಲ್ಲಾ ಭಾಗದಲ್ಲಿಯೂ, ಜೋಡಿಸಿತು-ಯುದ್ಧಕ್ಕೆ ಸನ್ನದ್ಧವಾಯಿತು ||

---

ತುರಗವಂತೆ, ಭೂಮಿಯಲ್ಲಿ ಬಲಾಢ್ಯರಾದವರು ಇದನ್ನು ಹಿಡಿದು ಕಟ್ಟಿಹಾಕಬೇಕಂತೆ, ನಾನಾ ದೇಶಗಳಲ್ಲಿಯೂ, ಈ ಅಶ್ವವು ಸಂಚರಿಸುತ್ತಿರುವಾಗ್ಗೆ ಅದರ ವ್ಯಗಾವಲಿಗೆ ಅರ್ಜುನನನ್ನು ನೇಮಿಸಿರುತ್ತಾರಂತೆ, ಬಲಶಾಲಿಗಳಾದವರು ಈ ಯಜ್ಞಾಶ್ವವನ್ನು ಪಿಡಿದರೆ ಅದನ್ನು ಬಿಡಿಸಿಕೊಳ್ಳುತ್ತಾರಂತೆ, ಇದು ನಮ್ಮಗಳಿಗೆ ಹೊಸ ಸಂಗತಿಯಲ್ಲವೆ! ಎಂಬದಾಗಿ ವಿಜ್ಞಾಪನೆಯನ್ನು ಮಾಡಿಕೊಳ್ಳಲಾಗಿ, ರಾಜ್ಞಿಯಾಗಿ ಪ್ರಮಿಳೆಯು ಆ ತುರಗವನ್ನು ತನ್ನ ಅಶ್ವಶಾಲೆಯೋಳ್ಕಟ್ಟಿಸಿ, ಭದ್ರಾಸನದಿಂದ ಕೆಳಕ್ಕೆ ಇಳಿದು ಯುದ್ಧಕ್ಕೆ ಹೊರಟಳು || ೨ || ನೇತ್ರಗಳ ಹೊಳೆಯುವಿಕೆಯುಳ್ಳ ಮಿಂಚಿನಂತೆ ಚಂಚಲ ಮನಸ್ಕರಾದ, ಸ್ತ್ರೀಯರ, ಒಂದು ಲಕ್ಷ ಸಂಖ್ಯೆ ಕುದುರೆಗಳು ಸೈನ್ಯವನ್ನು ಅತಿ ಕಠಿನ ಸ್ತನವುಳ್ಳವರು ಮಂದಗಮನೆಯರೂ ಆದ ಹೆಂಗಸರುಳ್ಳ ಆನೆಗಳೂ, ರಾಕಾಚಂದ್ರ ಬಿಂಬಕ್ಕೆ ಸಮಾನ ಮುಖಿಯರಾದ ರಥದಿಂದ ಸೇರಿದ ಹೆಂಗಸರ ಒಂದು ಲಕ್ಷದಿಂದಲೂ, ಕೃಶವಾದ ನಡುವು ಮದ ಇವುಗಳಿಂದ ಕೂಡಿದ ಪ್ರಾಯಸಮರ್ಥರಾದ ಸ್ತ್ರೀಯರ ಒಂದು ಲಕ್ಷ ಸಂಖ್ಯೆಯೂ ಚಿನ್ನದಂತೆ ಅತಿ ತೇಜಸ್ಕರಾದ ಅಂಗಕಾಂತಿಯುತರಾದ ಹೆಂಗಳ ಮೂರುಲಕ್ಷ ಸಂಖ್ಯೆಯ ಕಾಲ್ಬಲವೂ (ಈ ನಾಲ್ಕು ಬಗೆಯಾದ ಚತುರಂಗ ಬಲವು) ತಮ್ಮ ರಾಜ್ಞಿಯಾಗಿ, ಅರ್ಜುನನೊಂದಿಗೆ ಕಾಳಗಕ್ಕೆ ನಿಂತಿರುವ ಅರಸಿಯ ಎಲ್ಲಾ ಕಡೆಯಲ್ಲಿಯೂ

ತೆಗೆದುಟ್ಟಚಲ್ಲಣವಬಿಗಿದಮೊಲೆಕಟ್ಟುಗಳ | ಪೊಗರೊಗುವವೇಣಿಗಳಮೃಗಮದದಬೊಟ್ಟುಗಳ | ತಿಗುರಿದನುಲೇಪನದವ ಘುಮಘಿಪಕಂಪುಗಳಝುಗಝುಗಿಪುವಾಭರಣದ | ನಗೆಮೊಗದಮಿಂಚುಗಳದೃಗುಯುಗಳಕಾಂತಿಗಳ | ಮಿಗೆತೊಳಗುವಂಘ್ರಿಗಳ ಸೊಗಯಿಸುವಬಾಹುಗಳ | ಬಗೆಬಗೆಯಕೈದುಗಳವಿಗಡೆಯರ್ನರರದುಕಾಳಗಕೆಮುಂಕೊಳುತಿರ್ದರು || ೪ || ಮಂದಮತಿಯಿಂ ದನಳಿತೋಳಿಂದಕುಂಭಕುಚ | ದಿಂದಜವ್ವನದಮದದಿಂದಭದ್ರಾಕಾರ | ದಿಂದನವಕನಕಮಾಣಿಕದಬಂಧಗಳಿಂದಭೃಂಗಾಳಿ ಕಂಗಳಿಂದ || ಸಿಂದೂರದಿಂದಲಾರಾಜಿಸುವಸೀಮಂತ | ದಿಂದಮಂಜುಳಕಿಂಕಿಣಿಗಳಕಾಂಚೀದಾಮ | ದಿಂದೆಸೆವಪೆಣ್ಣಾನೆಗ

---

ಅ|| ವಿ|| ಚಪಲ–ಮಿಂಚು, ಚಂಚಲ, ಶಶಿ–ತ್ಸ, ಸಸಿ–ದ್ಭ, ಹುಣ್ಣಿಮೆ–ದ್ಭ, ಪೂರ್ಣಿಮಾ, ತ್ಸ. ಲಕ್ಷ–ತ್ಸ, ಲಕ್ಕ–ದ್ಭ. || ೩ ||

ಟೀ|| ತೆಗೆದು–ತೆಗದುಕೊಂಡು, ಉಟ್ಟ–ಧರಿಸಿದ, ಚಲ್ಲಣದ–ಚಲ್ಲಣವುಳ್ಳವರು (ಚಡ್ಡಿಯನ್ನುಧರಿಸಿದ್ದವರು), ಬಿಗಿದ–ಬಿಗಿಯಾಗಿ ಕಟ್ಟಿದ, ಮೊಲೆಕಟ್ಟುಗಳ – ಸ್ತನಗಳಿಗೆ ಕಟ್ಟಿಕೊಂಡಿರುವ ಕುಪ್ಪಸದ ಗಂಟುಳ್ಳವರು, ಪೊಗರ್ – ಪ್ರಕಾಶವು, ಒಗುವ–ದ್ರವಿಸುವ (ಹೊರಡುತ್ತಿರುವ), ವೇಣಿಗಳ–ಜಡೆಗಳುಳ್ಳವರು. ಮೃಗಮದದ–ಕತ್ತುರಿಯಿಂದ ರಚಿಸಿದ, ಬೊಟ್ಟುಗಳ–ಚುಕ್ಕೆಗಳುಳ್ಳವರು, ತಿಗುರಿದ–ಲೇಪಿಸಿಕೊಂಡ, ಅನುಲೇಪದ–ಸುವಾಸನೆ ವಸ್ತುವುಳ್ಳ, ಘುಮಘುಮಿಪ–ಸುವಾಸನೆಯುತಮಾದವರು, ಕಂಪುಗಳ–ಒಳ್ಳೇವಾಸನೆಗಳುಳ್ಳ, ಝುಗಝುಗಿಪ–ಹೊಳೆಹೊಳೆಯುವ, ಆಭರಣದ–ತೊಡಿಗೆಗಳುಳ್ಳವರು, ನಗೆಮೊಗದ–ಮಂದಹಾಸದಿಂದ ಕೂಡಿದ (ಮುಗುಳನಗೆಯಿಂದ ಕೂಡಿದ ಮುಖವುಳ್ಳ), ದೃಗುಯುಗಳ–ಎರಡು ನೇತ್ರಗಳ, ಕಾಂತಿಗಳ–ಕಾಂತಿಯುತರಾದವರು, ಮಿಗೆ–ಅತ್ಯಧಿಕವಾಗಿ, ತೊಳಗುವ–ಪ್ರಕಾಶಿಸುತ್ತಿರುವ, ಅಂಘ್ರಿಗಳ–ಅಡಿಗಳುಳ್ಳವರು, ಸೊಗಯಿಸುವ–ಮನೋಹರವಾದ, ಬಾಹುಗಳ–ಭುಜಗಳುಳ್ಳವರಾದರು, ಬಗೆಬಗೆಯ–ಹಲವು ರೀತಿಗಳಾದ, ಕೈದುಗಳ– ಕತ್ತಿ ಮೊದಲಾದ ಆಯುಧಗಳುಳ್ಳವರು, ವಿಗಡೆಯರು–ವಿಕಟರಾದ ಸ್ತ್ರೀಯರು (ಶತ್ರುಗಳಾದ ಸ್ತ್ರೀಯರು), ಕಾಳಗಕೆ–ಜಗಳಮಾಡಲಿಕ್ಕೆ, ಮುಂಕೊಳುತಿರ್ದರು–ಮುಂದುಮುಂದಾಗಿ ಆಗಮಿಸುತ್ತಿದ್ದರು ||

ಅ|| ವಿ|| ವಿಗಡ–ದ್ಭ, ವಿಕಟ–ತ್ಸ, (ಕಂಪು–ವಾಸನೆ, ಕೆಂಪು–ಕೆಂಪುಬಣ್ಣ), ಅಂಘ್ರಿ–ಪಾದ, ಕಿರಣ–ದುರದ ಬೇರು, ನಗೆಯ + ಮೊಗ = ನಗೆಮೋಗ, ವಿ. ಪೂ. ಕ. ಮೊಗ–ದ್ಭ. ಮುಖ–ತ್ಸ. (ಮುಖ–ಮೋರೆ ಮುಖ, ಯಜ್ಞ) ವೇಣಿ–ಸರ್ಪಾಕಾರವಾದ ಹೆರಳು, ಒಂದು ನದಿ ||

ಟೀ|| ಮಂದಗತಿ–ನಿಧಾನವಾಗಿ ನಡಿಯುವಿಕೆಯಿಂದಲೂ, ನಳಿತೋಳಿಂದ–ತಾವರೆಯ ನಾಳದಂತಿರುವ ಭುಜಗಳಿಂದಲೂ, ಕುಂಭ–ಗಜದ ಕುಂಭಸ್ಥಳದಹಾಗೆ ದೊಡ್ಡದಾಗಿರುವ, ಕುಚಗಳಿಂದ–ಮೊಲೆಗಳಿಂದಲೂ, ಜವ್ವನದ–ಪ್ರಾಯದ ಮದದಿಂದ, ಕೊಬ್ಬಿನಿಂದಲೂ, ಭದ್ರಾಕಾರದಿಂದ–ಶುಭಕರವಾದ ಆಕೃತಿಯಿಂದಲೂ, ನವ–ನೂತನವಾದ, ಕನಕ–ಚಿನ್ನದಿಂದಲೂ, ಮಾಣಿಕ–ಮಾಣಿಕ್ಯದಿಂದಲೂ, (ರತ್ನದಿಂದಲೂ ನಿರ್ಮಿತವಾದ), ಬಂಧಗಳಿಂದ–ಕೈಮುರಿಗೆ, ಬಾಹುವರಿಗೆ, ಸೊಂಟದ ನಡುಕಟ್ಟು ಮೊದಲಾದವುಗಳಿಂದಲೂ, ಭೃಂಗ–ಭ್ರಮರಕ್ಕೆ ಸಮಾನ ಕಾಂತಿಯುಳ್ಳ, ಅಲಕಂಗಳಿಂ–ಮುಂಗೊದಲುಗಳಿಂದಲೂ, ಸಿಂದೂರದಿಂದ–ಕುಂಕುಮ ಧೂಳಿಯಿಂದ, ಆರಾಜಿಸುವ–ಹೊಳೆಯುವ, ಸೀಮಂತದಿಂದ–ಬೈತಲೆ ಬೊಟ್ಟಿನಿಂದಲೂ, ಮಂಜುಳ–ಪ್ರಕಾಶಮಾನವಾದ, ಕಿಂಕಿಣಿಗಳ–ಕಿರಿಗೆಜ್ಜೆಗಳಿಂದ ಕೂಡಿದ, ಕಾಂಚೀದಾಮದಿಂದ–ನಡುವಿಗೆ ಬಿಗಿಯುವ ಪಟ್ಟಿಯಿಂದಲೂ, ಎಸೆವ–ಹೊಳೆಯುವ, ಪೆಣ್ಣಾನೆಗಳ–ಹೆಣ್ಣುಗಜಗಳ, ಮೇಲೆ–ಮೇಲ್ಭಾಗದಲ್ಲಿ, ಆಯತಂಗಳಿಂದ–ವಿಶಾಲದಿಂದ, ಅವರು–ಆ ಸ್ತ್ರೀಯರು, ಬರುತಿರ್ದರು–ಆಗಮಿಸುತ್ತಿದ್ದರು ||

---

ವ್ಯಾಪ್ತವಾಯಿತ. || ೩ || ಆಗ ಆ ಪ್ರಮಿಳೆ ಹತ್ತಿರದಲ್ಲಿ ಪ್ರಮಿಳೆಯ ಕಡೆಯವರು ಚಡ್ಡಿಗಳನ್ನು ಧರಿಸಿದ ಸ್ತನಗಳನ್ನು ಬಿಗಿಯಾಗಿ ಕಟ್ಟಿಕೊಂಡ ಕುಪ್ಪುಸದ ಗಂಟುಗಳುಳ್ಳ, ಕಾಂತಿಯುತವಾಗಿ ಸರ್ಪಾಕಾರವಾದ ಹೆರಳುಗಳುಳ್ಳ, ಕಸ್ತೂರಿ ಬೊಟ್ಟನಿಂದ ಕೂಡಿದ ಮುಖಗಳುಳ್ಳ, ಸುವಾಸನೆಯಿಂದೊಡಗೂಡಿದ, ಗಂಧವನ್ನು ಲೇಪನಮಾಡಿಕೊಂಡಿರುವ ಕಾಂತಿಯುತಿಶಯವಾಗಿ ಪ್ರಕಾಶಿಸುತ್ತಿರುವ ಆಭರಣವುಳ್ಳವರಾದ, ಪ್ರಕಾಶಿಸುತ್ತಿರುವ ಪಾದಗಳುಳ್ಳವರಾದ, ಸುಂದರವಾದ ಭುಜಗಳುಳ್ಳವರಾದ, ಬಗೆಬಗೆಯ ಕೈದುಗಳುಳ್ಳವರಾಗಿ ಅರ್ಜುನನಲ್ಲಿ ದ್ವೇಷಿಗಳಾದ ಸ್ತ್ರೀಯರು ಕಾಳಗಕ್ಕೆ ಹೊರಡುತ್ತಿದ್ದರು || ೪ || ನಿಧಾನವಾದ ನಡಗೆಯಿಂದಲೂ, ತಾವರೆ ಎಸಳಿನಂತೆ ನೀಳವಾದ ತೋಳಿನಿಂದಲೂ ಆನೆಯ ಕುಂಭಸ್ಥಳದಂತೆ ದಪ್ಪವಾಗಿರುವ ಕುಚಗಳಿಂದಲೂ ಚಿನ್ನದಿಂದಲೂ ಮತ್ತು ರತ್ನದಿಂದಲೂ ಕೆತ್ತಲ್ಪಟ್ಟ ಆಭರಣಗಳಿಂದಲೂ, ಬಾಹು ಮುರಿಗೆ ಮೊದಲಹ ತೊಡವುಗಳಿಂದಲೂ. ಭ್ರಮರಗಳ ಮೈಬಣ್ಣದಂತೆ ಹೊಳೆವ ಮುಂಗುರುಳುನಿಂದಲೂ, ಪ್ರಕಾಶಿಸುತ್ತಿರ್ಪ ರತ್ನ ಖಚಿತವಾದ ಬೈತಲೆ ಬೊಟ್ಟನಿಂದಲೂ, ಮಂಜುಳ ರವಗೈವ ಕಿರುಗೆಜ್ಜೆಗಳಿಂದಲೂ, ಹೊಳೆ ಹೊಳೆಯುತ್ತಿರುವ ಒಡ್ಯಾಣ

ಳಮೇಲೆಬರುತಿರ್ದರವರಾಯತಂಗಳಿಂದ ॥ ೫ ॥ ಸ್ಫುರದುತ್ಕಟಾಕ್ಷದಿಂಲಲಿತೋರುಯುಗ್ಮದಿಂ । ಗುರುಪಯೋಧರವಿಜಿತ ಚಕ್ರಶೋಭಿತದಿಂದ । ಪರಿಲುಳಿತಚಾಪಲತೆಯಿಂಪ್ರಣಯಕಲಹದೊಳಗಲ್ದಿನೆಯರಂಜಯಿಸಿದ ॥ ವರಮನೋರಥದೊಳೈದುವ ಕಾಮಿನಿಯರೀಗ । ನರಸಂಗರಕೆಪೊಂದೇರ್ಗಳನಡರ್ದುಬರು । ತಿರೆಚಿತ್ರಮೆಂದುಸಲೆನೋಡುತಿರ್ದರುಸಕಲಪರಿವಾರದೊಳ್ವೀರರು ॥ ೬ ॥ ಚಂಚಲಾಕ್ಷಿಯರಥಳಥಳಿಪಕಡೆಗಣ್ಣಕುಡಿ । ಮಿಂಚುಗಳಡರ್ದುತೇಜಿಗಳದುವ್ವಾಳಿಯಂ । ಮುಂಚಿದುವ್ವನಳಿತೋಳ್ಗಳಿಂಜಡಿದುಝಳಪಿಸುವಕೈದುಗಳದೀಧಿತಿಗಳು ॥ ಹೊಂಚಿದವುವಜ್ರಮಣಿಭೂಷಣದಕಾಂತಿಯಂ । ಪಂಚಬಾಣಪ್ರ

---

ಅ॥ ವಿ॥ ಗತಿ-ಮಾರ್ಗ, ದಿಕ್ಕು, ಮಂದವಾದ-ಗತಿ + ಮಂದಗತಿ, ವಿ. ಪೂ. ಕ. ಕುಂಭ-ಆನೆಯ ತಲೆಯಮೇಲಿರುವ ಗುಪ್ಪು, ಮಡಿಕೆ, ಗುಗ್ಗುಳದ ಗಿಡ, ಜನ್ಮನ ತ್ಭ. ಯನ್ಮನ ತ್ಸ. ಸಿಂದೂರ-ಆನೆ, ಚಂದ್ರ ॥೫॥

ಟೀ॥ ಸ್ಫುರತ್-ಪ್ರಕಾಶಿಸುವ, ಉತ್-ಯೋಗ್ಯಮಾದ, ಕಟಾಕ್ಷದಿಂ - ಕೊನೆಗಣ್ಣಿನ ವೀಕ್ಷಣೆಯಿಂದಲೂ, ಲಲಿತ-ಮೃದುವಾದ, ಊರು-ತೊಡೆಗಳ, ಯುಗ್ಮದಿಂ-ಜೊತೆಯಿಂದಲೂ, ಗುರು-ದಪ್ಪವಾದ, ಪಯೋಧರ-ಕುಚಗಳಿಂದ, ವಿಜಿತ-ಗೆಲ್ಲಲ್ಪಟ್ಟ, ಚಕ್ರ-ದಂಪತಿಪಕ್ಷಿಗಳ, ಶೋಭಿತದಿಂದ-ಕಾಂತಿಯಿಂದಲೂ, ಪರಿಲುಲಿತ-ಸುತ್ತಲೂ ಓಡಿಯಾಡುವ, ಚಾಪಲತೆಯಿಂ-ಚಂಚಲತ್ವದಿಂದಲೂ, ಪ್ರಣಯ-ಪ್ರೀತಿಯಿಂದುಂಟಾದ, ಕಲಹದೋಳ್-ವ್ಯಾಜ್ಯದಲ್ಲಿ, ಅಗಲ್ದು-ಬೇರೆಯಾದ, ಇನಯರಂ-ವಲ್ಲಭರನ್ನು, ಜಯಿಸಿ-ಗೆದ್ದ, ವರ-ಯೋಗ್ಯಮಾದ, ಮನೋರಥದೊಳು - ಮನಸ್ಸಿನ ಅಭಿಪ್ರಾಯದಿಂದ, ಐದುವ-ಬರುತ್ತಲಿರುವ, ಕಾಮಿನಿಯರು-ಸ್ತ್ರೀಯರು, ಈನರನ-ಈ ಪಾರ್ಥನ, ಸಂಗರಕೆ-ಕಾಳಗಕ್ಕಾಗಿ, ಪೊಂದೇರ್ಗಳನು - ಚಿನ್ನದಿಂದ ನಿರ್ಮಿತಮಾದ ವರೂಥಗಳನ್ನು, ಅಡರ್ದು-ಹತ್ತಿಕೊಂಡು, ಬರುತಿರೆ-ಬರುತ್ತಿರಲಾಗಿ, ಸಕಲ-ಎಲ್ಲಾ, ಪರಿವಾರದೋಳ್-ಸಮೂಹದವರಲ್ಲಿ, ವೀರರು-ಕಲಿಗಳು, ಚಿತ್ರಂ ಎಂದು-ಸೋಜಿಗ ಎಂಬದಾಗಿ, ಸಲೆ-ಬಹಳವಾಗಿ, ನೋಡುತಿರ್ದ್ದರ್-ನಿರೀಕ್ಷಿಸುತ್ತಿರ್ದರು.

ಅ॥ ವಿ॥ ಲಲಿತವಾದ ಊರು-ಲಲಿತೋರು, ವಿ. ಪೂ. ಕ. ಲಲಿತ + ಊರು = ಲಲಿತೋರು. ಗುಣ ಸಂ. ಗುರು-ದೊಡ್ಡದು, ಬೃಹಸ್ಪತಿ, ಗುರುವರ್ಣ-ವಿದ್ಯಾಬೋಧಕ, ಪಯೋಧರ-ಸ್ತನ, ಮೇಘ, ಪಯ-ಹಾಲನ್ನು ಧರ - ಧರಿಸಿರುವುದು (ಸ್ತನ,) ಪಯ-ನೀರನ್ನು, ಧರ ಹೊತ್ತಿರುವುದು (ಮೇಘ) ॥೬॥

ಟೀ॥ ಚಂಚಲ - ಚಪಲವಾದ, ಅಕ್ಷಿಯರ - ನೇತ್ರಗಳುಳ್ಳ ಸ್ತ್ರೀಯರ, ಥಳಥಳಿಪ - ಹೊಳಹೊಳೆವ, ಕಡೆಗಣ್ಣ-ನೇತ್ರದ ಕೊನೆಯು, ಕುಡಿಮಿಂಚುಗಳು - ಹೊಳಪಿಗೆ ಸಮಾನವಾದ ಕಾಂತಿಯ ಕೊನೆಗಳು, ಅಡರ್ದು-ಏರಿ, ತೇಜಿಗಳ-ತುರಗಗಳ, ದುವ್ವಾಳಿಯಂ - ಮೇಲಕ್ಕೆ ಎಗರಿಸೋಣವನ್ನು, ಮಿಂಚಿದು-ವು - ಅತಿಕ್ರಮಿಸಿದುವು, (ಎಂದರೆ ಆ ಸ್ತ್ರೀಯರ ಕಡೆಗಣ್ಣಿನ ನೋಟವು ತುರಗದ ವೇಗಕ್ಕಿಂತಲೂ ಹೆಚ್ಚಾಗಿತ್ತು ಎಂಬ ಅಭಿಪ್ರಾಯ) ನಳಿ - ತಾವರೆ ಬಳ್ಳಿಯಹಾಗೆ ಕೋಮಲವಾದ, ತೋಳ್ಗಳಿಂ-ಬಾಹುಯುಗ್ಮಗಳಿಂದ, ಜಡಿದು-ಶಕ್ತಿಯಿಂದ ಗ್ರಹಿಸಿ, ಝಳಪಿಸುವ-ಅಲ್ಲಾಡಿಸುವ, ಕೈದುಗಳ-ಕತ್ತಿ ಮೊದಲಾದ ಆಯುಧಗಳ, ದೀಧಿತಿಗಳು-ಪ್ರಕಾಶಗಳು, ವಜ್ರಮಣಿ-ರತ್ನಮಣಿಗಳಿಂದ ವ್ಯಾಪ್ತವಾದ, ಭೂಷಣದ - ಆಭರಣಗಳು, ಕಾಂತಿಯಂ-ಪ್ರಕಾಶವನ್ನು, ಹೊಂಚಿದುವು - ಜಯಿಸಲು ಮರೆಮಾಡಿಕೊಂಡಿದ್ದವು, ನೈಕ-ನಾನಾಬಗೆಗಳಾದ, (ಅಧಿಕಗಳಾದ) ಅಸ್ತ್ರಪ್ರಪಂಚ-ಅಸ್ತ್ರ (ಬಾಣಗಳ) ಸಮೂಹದಮಯವು, ಪಂಚಬಾಣ-ಮದನನ, ಪ್ರಯೋಗದೊಳು-ಉಪಯೋಗಿಸೋಣದಲ್ಲಿಯೇ (ಪಂಚಬಾಣ-ಐದು ಬಾಣಗಳು), ಅಡಗಿತು-ಮಗ್ನವಾಯಿತು, ಎಸೆವ-ಹೊಳೆಯುವ, ಸಿಂಗಾಡಿಗಳು-ಚಾಪಗಳನ್ನು, ಅವರ-ಆ ಸ್ತ್ರೀಯರ, ಪುರ್ಬಿನ-ಪುಬ್ಬುಗಳ, ಗಾಡಿಗಳ್ - ಕಾಂತ್ಯತಿಶಯಾದಿಗಳು, ಮಿಕ್ಕವು-ಹೆಚ್ಚಾದ್ದೆಂಬದಾಗಿ, ಉಳಿದವು.

---

ಗಳಿಂದಲೂ, ಪ್ರಕಾಶಿಸುವ ಸ್ತ್ರೀ ಸಮೂಹವು ಹೆಣ್ಣಾನೆಗಳ ಮೇಲೆ ಕುಳಿತು ವಿಸ್ತಾರವಾಗಿ ಬರುತ್ತಿದ್ದರು ॥ ೫ ॥ ಮತ್ತು ಹೊಳೆಯುತ್ತಿರುವ ಯೋಗ್ಯಮಾದ, ಕಡೆಗಣ್ಣಿನ ವೀಕ್ಷಣೆಯಿಂದಲೂ, ಕದಳೀಸ್ತಂಭಗಳಿಗೆ ಸದೃಶಮಾದ ತೊಡೆಗಳ ಯುಗ್ಮದಿಂದಲೂ, ಗಾತ್ರವಾದ ಪಯೋಧರಗಳಿಂದ ಜಯಿಸಿದ ಚಕ್ರವಾಕಪಕ್ಷಿಗಳ ಪ್ರಕಾಶದಿಂದಲೂ, ಉಲಿದಾಡುವ ಚಂಚಲತ್ವದಿಂದಲೂ, ಪ್ರೀತಿಯಿಂದುಂಟಾದ ಕಲಹದಲ್ಲಿ ಅಗಲಿದ ವಲ್ಲಭರನ್ನು ಜಯಿಸಿದ ಶ್ರೇಷ್ಠವಾದ ಮನೋಭಿಪ್ರಾಯಗಳಿಂದ ಬರುವ ಸ್ತ್ರೀಯರು, ಅರ್ಜುನನಲ್ಲಿ ಯುದ್ಧಕ್ಕೆ ಸ್ವರ್ಣವಿಕಾರಮಾದ ವರೂಥವನ್ನು ಹತ್ತಿಕೊಂಡು ಬರುತ್ತಿರಲು, ಸಮಸ್ತ ಪರಿವಾರದಲ್ಲಿ ವೀರರು ಶಹಬಾಸ್, ಆಶ್ಚರ್ಯವೆಂದು ಚನ್ನಾಗಿ ನೋಡುತ್ತಿದ್ದರು ॥ ೬ ॥ ಆಗ ಚಂಚಲವಾದ ನೇತ್ರಗಳುಳ್ಳ ಸ್ತ್ರೀಯರ, ಅತ್ಯಂತವಾಗಿ ಪ್ರಕಾಶಿಸುವ, ನೇತ್ರಾಗ್ರದ, ಮಿಂಚಿಗೆ ಸಮಾನವಾದ ಕಾಂತಿಯ ಕುಡಿಗಳು, ಕುದುರೆಯ ವೇಗಕ್ಕಿಂತಲೂ ಹೆಚ್ಚಾಗಿ ವಿಸ್ತರಿಸುತ್ತಿತ್ತು, ಕಮಲದ ನಾಳದಂತೆ ಕೋಮಲವಾದ ಬಾಹುಗಳಿಂದ ಅಲ್ಲಾಡಿಸುವ, ಕತ್ತಿ ಮೊದಲಾದ ಆಯುಧಗಳ ಕಾಂತಿಗಳು ವಜ್ರಖಚಿತಮಾದ ಆಭರಣಗಳ ಕಾಂತಿಯನ್ನು ತಿರ

ಯೋಗದೊಳನೇಕಾಸ್ತ್ರಪ್ರ | ಪಂಚವಡಗಿತೆಸೆವಸಿಂಗಾಡಿಗಳನವರಪುರ್ಬಿನಗಾಡಿಗಳ್ಮಿಕ್ಕುವು || ೭ || ಲೀಲೆಮಿಗೆಪೆಣ್ದಳಂಬಂದು ವಿಜಯನಪಡೆಯು | ಮೇಲೆದ್ದುದುಕರಿತುರಗರಥಪದಾತಿಗಳ | ಸಾಲೆಸೆಯೆಸಂದಣಿಸಿನಾನಾಪ್ರಕಾರದಿಂಕೈದುಗಳೆಮಳಗರೆವುತ || ಬಾಲಾರ್ಕಬಿಂಬಮುಂಶಶಿಮಂಡಲಮುಮೇಕ | ಕಾಲದೊಳ್ಮೂಡಿಬಪ್ಪಂತೆಪೊಂದೇರೊಳ್ಪ್ರ | ಮೀಳೆಮುಖಕಾಂತಿಕಳಕಳಿಸೆನಡೆತರುತಿರ್ದಳರಸುಮೋಹರದನಡುವೆ || ೮ || ಬಳಿಕಾಪ್ರಮೀಳೆಪಾರ್ಥನಮೋಹರಕೆತನ್ನ | ದಳಸಹಿತನಡೆತಂದುಕಂಡಳುನ್ನತದಕಪಿ | ಪಳವಿಗೆಯಮಣಿರಥದೊಳೊಪ್ಪುವಕಿರೀಟಿಯುಂನಗುತಮಾತಾಡಿಸಿದಳು || ಫಲುಗುಣಂನೀನೆನಿನ್ನಶ್ವಮುಂತಡೆದೆ

ಅ|| ವಿ|| ಚಂಚಲವಾದ, ಅಕ್ಷಿಯುಳ್ಳವರು = ಚಂಚಲಾಕ್ಷಿಯರ್, ಬಹು, ಸ. ಕಡೆ+ಕಣ್ = ಕಡೆಗಣ್ ಗ. ಆದೇಶ ಸಂ. (ಪಂಚಬಾಣಗಳು_ಅರವಿಂದ ಅಶೋಕ, ಚೂತ, ನೀಲೋತ್ಪಲ, ನವಮಲ್ಲಿಕ) ಅರವಿಂದದಂತೆ, ವದನಉಳ್ಳವರು = ಅರವಿಂದವದನೆಯರು, ಉ. ಪೂ. ಬಹು. ಸ. ||೭||

ಟೀ|| ಲೀಲೆ_ವೈಭವವು, ಮಿಗೆ-ಹೆಚ್ಚಾಗುವಂತೆ, ಪೆಣ್ದಳಂ - ಸ್ತ್ರೀಸೇನೆಯು, ಬಂದು - ಬಂದುದಾಗಿ, ವಿಜಯನ-ಪಾರ್ಥನ, ಪಡೆಯಮೇಲೆ_ವಾಹಿನಿಯಮೇಲೆ, ಬಿದ್ದುದು_ನುಗ್ಗಿತು (ಬಿತ್ತು) ಕರಿ_ಹಸ್ತಿ, ತುರಗ-ಅಶ್ವ, ರಥ_ವರೂಥ, ಪದಾತಿಗಳ_ಕಾಲ್ಬಲಗಳ, ಸಾಲು-ಕ್ರಮವು (ಪಙ್ತಿಯು) ಎಸೆಯೆ-ಹೊಳೆಯಲು, ಸಂದಣಿಸಿ-ಗುಂಪಾಗಿಸೇರಿ, ನಾನಾಪ್ರಕಾರದಿಂ_ಅನೇಕವಿಧಗಳಂದ) ಕೈದುಗಳ - ಶರಗಳ, ಮಳೆ_ವೃಷ್ಟಿಯನ್ನು, ಗರೆವುತ - ಸುರಿಸುತ್ತ, ಬಾಲ - ಎಳೆಯದಾದ, ಅರ್ಕ-ಸೂರ್ಯನ, ಬಿಂಬಮುಂ_ಬಿಂಬವು (ಎಳೇ ಸೂರ್ಯಬಿಂಬವು), ಶಶಿಮಂಡಲಮುಂ_ಚಂದ್ರಬಿಂಬವೂ, ಏಕಕಾಲದೋಳ್ - ಒಂದೇ ಕಾಲದಲ್ಲಿಯೇ, ಮೂಡಿ - ಉತ್ಪತ್ತಿಯಾಗಿ, ಬಪ್ಪಂತೆ_ಬರುವ ರೀತಿಯಿಂದ, ಪೊಂದೇರೋಳ್ - ಚಿನ್ನದಿಂದ ನಿರ್ಮಿತಮಾದ ವರೂಥದಲ್ಲಿ, ಪ್ರಮೀಳೆಯ_ಪ್ರಮೀಳೆ ಯೆಂಬ ಅರಸಿಯ, ಮುಖಕಾಂತಿ_ಮೊಗರಾಗವು, ಕಳಕಳಿಸೆ_ಅತ್ಯಂತವಾಗಿ ಶೋಭಿಸುತ್ತಿರಲು, ಮೋಹರದ-ಸೇನೆಯ, ನಡುವೆ-ಮಧ್ಯಭಾಗದಲ್ಲಿ, ಅರಸು_ಪ್ರಭು (ದೊರೆ)ವಾದ ಪ್ರಮೀಳೆಯು, ನಡೆತರುತ_ಆಗಮಿಸುತ್ತ, ಇರ್ದಳು_ಇರುತ್ತಿರ್ದಳು.

ಅ|| ವಿ|| ಪೆಣ್ಣಿನ+ದಳ=ಪೆಣ್ದಳ, ಷ. ತ. ವಿಜಯ_ಅರ್ಜುನ, ಜಯಶಾಲಿ, ವಿಜಯಸಂವತ್ಸರ. ಕರ_ಸೊಂಡಿಲು, ಅದುಳ್ಳದ್ದು, ಕರಿ, (ಕರಿ-ಆನೆ, ಕಪ್ಪು), ಪೊನ್ನಿನ+ತೇರ್=ಪೊಂದೇರ್, ಷ. ತ. ಬಾಲನಾದ ಅರ್ಕ_ಬಾಲಾರ್ಕ, ವಿ. ಪೂ. ಕ. (ಅರ್ಕ-ಸೂರ್ಯ, ಎಕ್ಕದ ಗಿಡ) |೮||

ಟೀ|| ಆ ಬಳಿಕ_ಅನಂತರದಲ್ಲಿ, ಆ ಪ್ರಮೀಳೆ ಎಂಬ ಅರಸಿಯು, ಪಾರ್ಥನ_ಫಲುಗುಣನ, ಮೋಹರಕ್ಕೆ_ಸೇನೆಗೆ, ತನ್ನ - ತನ್ನಯ, ದಳಸಹಿತ_ಸೇನಾನ್ವಿತನಾಗಿ, ನಡೆತಂದು - ಬಂದವನಾಗಿ, ಉನ್ನತ_ಎತ್ತರವಾದ, ಕಪಿ - ಆಂಜನೇಯನೇ, ಪಳವಿಗೆಯ_ಹಳವಿಗೆಯಲ್ಲಿರುವ, ಮಣಿವರೂಥದೊಳು_ರತ್ನದಿಂದ ನಿರ್ಮಿತವಾದ ವರೂಥದಲ್ಲಿ, ಒಪ್ಪುವ_ಹೊಂದಿಕೆಯಾಗಿರುವ, ಕಿರೀಟಿಯುಂ_ಪಾರ್ಥನನ್ನು, ಕಂಡಳು_ಈಕ್ಷಿಸಿದಳು, ನಗುತ_ನಗುತ್ತ, ಮಾತಾಡಿಸಿದಳು_ಮಾತನ್ನಾಡಿಸಿದಳು, ಫಲುಗುಣಂ_ಧನಂಜಯನು, ನೀನೆ_ನೀನೇಅಷ್ಟೆ, ಆಂ_ನಾನು, ನಿನ್ನ-ನಿನ್ನಯ, ಅಶ್ವಮಂ-ತುರಗವನ್ನು, ತಡೆದೆನು_ಬಂಧಿಸಿದೆನು, ಛಲವೊ-

---

ಸ್ಕರಿಸುವಂತೆ ಪ್ರಜ್ವಲಿಸುತ್ತಿದ್ದವು, ಅನೇಕಗಳಾದ ಅಸ್ತ್ರ ಸಮೂಹದ, ಪೇರ್ಮೆಯು ಮನ್ಮಥನ ಪ್ರಯೋಗದಲ್ಲಿಯೇ ಅದೃಶ್ಯವಾಯಿತು, (ಐದು ಬಾಣಗಳ ಪ್ರಯೋಗದಲ್ಲಿಯೇ) ಪ್ರಕಾಶಿಸುವ ಬಿಲ್ಲುಗಳನ್ನು ಆ ಅಂಗನೆಯರ ಪುರ್ಬುಗಳ ಸೌಂದರ್ಯವನ್ನು ಮೀರಿಸಿದ್ದವು (ಎಂದರೆ ಆ ಸ್ತ್ರೀಯರು ಅಷ್ಟು ಸೌಂದರ್ಯವತಿಯರಾಗಿದ್ದರು) ।೭|| ಆ ಬಳಿಕ ವೈಭವವು ಅಧಿಕವಾಗುವಂತೆ ಸ್ತ್ರೀ ಬಲವು ಬಂದು ಅರ್ಜುನನ ಸೇನೆಯಮೇಲೆ ಬಿತ್ತು. ಮತ್ತು ಹಸ್ತ್ಯಶ್ವರಥ ಪದಾತಿಗಳಿಂದಲೂ, ಅನೇಕ ಬಗೆಗಳಾದ ಆಯುಧ ವಿಶೇಷಗಳಿಂದಲೂ, ಸಂದಣಿಸಿರಲು, ಬಾಣವೃಷ್ಟಿಯನ್ನು ಕರೆಯುತ್ತ ಬಾಲಾರ್ಕ ಬಿಂಬವೂ, ಇಂದುಬಿಂಬವೂ ಏಕಕಾಲದಲ್ಲಿ ಉದಯಿಸುವಂತೆ (ಹುಟ್ಟಿಬರುವಂತೆ) ಸ್ವರ್ಣವಿಕಾರಮಾದ ವರೂಥದಲ್ಲಿ ಪ್ರಮೀಳೆ ಎಂಬರಸಿಯ ವದನಕಾಂತಿಯು ಪ್ರಕಾಶಿಸುತ್ತಿರಲು, ಸೈನ್ಯದ ಮಧ್ಯಪ್ರದೇಶದಲ್ಲಿ ಆ ರಾಜ್ಞಿಯಾದ ಪ್ರಮೀಳೆಯು ಬರುತ್ತಿದ್ದಳು || ೮ || ಬಳಿಕ ಪ್ರಮೀಳೆಯು ಪಾರ್ಥನ ಸೇನೆಗೆ (ಸೈನ್ಯಕ್ಕೆ ಸರಿಯಾಗಿ) ತನ್ನ ಸೇನೆಯಿಂದ ಕೂಡಿ ಬಂದು ಉದ್ದವಾದ ಹನುಮದ್ಧ್ವಜಾನ್ವಿತವಾದ ಮಣಿರಥದಲ್ಲಿ ಒಪ್ಪವಾಗಿ ಕುಳಿತಿರುವ ಕಿರೀಟಿಯನ್ನು ಕಂಡು ಹರ್ಷಿಸುತ್ತ ಅರ್ಜುನ ನೆಂಬಾತನು ನೀನೇನೊ, ನಾನಾದರೆ ನಿನ್ನ ಯಜ್ಞಾಶ್ವವನ್ನು ಹಿಡಿದು ಕಟ್ಟಿ ಬಿಟ್ಟೆನು. ಆದರೆ ನಿನಗೆ ನನ್ನಲ್ಲಿ ಯುದ್ಧಮಾಡಬೇಕೆಂಬ ಹಟವೇನಾದರೂ ಇದೆಯೋ? ಇಲ್ಲವೆ ಸಮಾಧಾನವಾಗಿ ನನ್ನ ಅಭಿಪ್ರಾಯಾನುಸಾರವಾಗಿ ಬರುತ್ತೀಯೋ? ತುರಗವನ್ನು ಬಿಡಿಸಿಕೊಂಡು ಹೋಗುವ ಯಾವ ಮಾರ್ಗವನ್ನು ಯೋಚಿಸಿರುತ್ತಿ? ನನ್ನ ಪರಾಕ್ರಮವನ್ನಾದರೂ ಪರೀಕ್ಷಿಸೆಂದು ಧನುಷ್ಟಂಕಾರನಂ

ನಾಂ | ಛಳವೊವಿನಯವೊಬಿಡಿಸಿಕೊಂಬಬಗೆಯಾವುದಿಂ | ನಳವಿಯೋಳ್ಕಾಣಬಹುದೆನುತಬಿಲ್ಗೆಗೆದುಜೇಗಯ್ಯೆನರನಿಂತೆಂದನು || ೯ || ನಾರಿಯೊಳ್ಕಾಳೆಗವೆತನಗಕಟಕಡುಗಿಮದ | ನಾರಿಯೊಳ್ಕಾದಿದುಗ್ಗಡದನಿಜ ಕಾರ್ಮುಕದ | ನಾರಿಯೋಳ್ಕಣೆಯಂ ತೊಡುವನೆಂತೊಶಿವಶಿವಾಪರ್ಯಂಕಮಂಸಾರ್ದೊಡೆ || ನೀರಜಶರಾಹನದೊಳೊದಗುವಡೆಕಡುಚದುರೆ | ವೀರಣದೊಳಾಳ್ತನವನೆನ್ನೊಡನೆತೋರಿದೊಡೆ | ನೀರಸವೆನಿಸದೆಪೇಳೆಂದುಕುಂತೀಸುತಂನುಡಿದೊಡವಳಿಂತೆಂದಳು || ೧೦ || ಪರಿಯಂಕಮಂಸಾರ್ದೊಡಂಗಜಾಹವದೊಳಗ | ಪರಿಮಿತಸುಖಾವಹದಸುರತತಂತ್ರದಕಲೆಯ | ಪರಿವಿಡಿಗಳಂತೋರಿಸುವೆನೀಗಳೆನ್ನಂವರಿಸಿದೊಡ

---

ನನ್ನಲ್ಲಿ ಕಾಳಗವಾಡಬೇಕೆಂಬ ಶಪಥವೇನಾದರೂ ಇರುತ್ತದೆಯೇ? ವಿನಯವೋ-ನನ್ನಮಾತಿಗೆ ಒಪ್ಪಿಕೊಂಡು ವಿಧೇಯತೆಯಿಂದ ಇರೋಣವೋ, ಬಿಡಿಸಿಕೊಂಬ-ಕುದುರೆಯನ್ನು ಬಿಡಿಸಿಕೊಂಡು ಹೋಗುವಂತಹ, ಬಗೆ-ಅಭಿಪ್ರಾಯವೊ? ಯಾವುದು-ಆವಬಗೆಯಾದುದು, ಇನ್ನು-ಇನ್ನುಮುಂದೆ, ಅಳವಿಯೋಳ್-ಯುದ್ಧದಲ್ಲಿ (ಪರಾಕ್ರಮದಲ್ಲಿ), ಕಾಣಬಹುದು-ಈಕ್ಷಿಸಬಹುದು, ಎನುತ-ಎಂಬದಾಗಿ ಹೇಳುತ್ತ, ಬಿಲ್ಗೆಗದು-ಚಾಪವನ್ನು ಈಚೆಗೆ ತೆಗದು-ಜೇಗೈಯೆ-ಟಂಕಾರವನ್ನು ಮಾಡಲು, ನರನು-ಪಾರ್ಥನು, ಇಂತೆಂದನು-ಈರೀತಿಯಾಗಿ ಹೇಳಿದನು ||

ಅ|| ವಿ|| ಫಲುಗುನೀ ನಕ್ಷತ್ರದಲ್ಲಿ ಹುಟ್ಟಿದವನು-ಫಲ್ಗುಣ. ತುರ-ಶೀಘ್ರವಾಗಿ, ಗ-ಗಮಿಸುವುದು, ಇಂತು + ಎಂದು = ಇಂತೆಂದಂ=ಉಕಾರ ಲೋಪಸಂಧಿ. ಬಳಿಕ-ಕಾಲವಾಚಕಾವ್ಯಯವು. ದಳ-ಸೈನ್ಯ-ದಳ-ಬೇಳೆ. ಶಶಿಯ + ಮಂಡಲ = ಶಶಿಮಂಡಲ. ಷ. ತ. ಪಂಚ-ಐದಾದ, ಬಾಣ-ಬಾಣಗಳುಳ್ಳವನು, (ಮನ್ಮಥ) ಪಂಚಬಾಣಂಗಳ ಸಮಾಹಾರ, ಪಂಚಬಾಣ-ಸ. ದ್ವಿಗು ಸಮಾ. || ೯ ||

ಟೀ|| ತನಗೆ-ಅರ್ಜುನನಾದ ನನಗೆ (ಗಂಡಸಾದ ನನಗೆ), ನಾರಿಯೋಳ್-ಅಂಗನೆಯೊಂದಿಗೆ, ಕಾಳಗವೇ-ಜಗಳವೆ? (ಹೆಂಗಸಿನ ಸಂಗಡ ಯುದ್ಧವು ಯೋಗ್ಯವೇ) ಅಕಟಕಟ-ಅಯ್ಯೋ (ಆಹ), ಕಡು-ಅಧಿಕವಾಗಿ ಬಿಗಿದಿರುವ (ಕೊಬ್ಬಿರುವ), ಮದನಾರಿಯೋಳ್-ಮನಸಿಜನನ್ನು ಉರಿಹಿ ಬೂದಿಮಾಡಿದವನಲ್ಲಿ, (ಹಗೆಯೆಂದು ಹೆಸರುಳ್ಳವನ ಸಂಗಡ) ಕಾದಿ-ಜಗಳವಾಡಿ, ಉಗ್ಗಡದ-ಹೆಚ್ಚಾದ, ನಿಜ-ತನ್ನಯ, ಕಾರ್ಮುಕದನಾರಿಯೋಳ್-ಬಿಲ್ಲಿನ ಶಿಂಜನಿಯಲ್ಲಿ, ಕಣೆಯಂ-ಶರವನ್ನು, ಎಂತು-ಯಾವರೀತಿಯಾಗಿ, ತುಡುವೆನು-ಬಿಲ್ಲಿನಲ್ಲಿ ಸೇರಿಸುವೆನು, ಶಿವಶಿವ-ಈಶ್ವರ, ಈಶ್ವರ, ಪರ್ಯಂಕಮಂ-ಮಂಚವನ್ನು ಎಂದರೆ ಹಾಸಿಗೆಯನ್ನು, ಸಾರ್ದೊಡೆ-ಹೊಂದಿದರೆ, ನೀರಜ-ತಾವರೆಯೇ ಶರ-ಬಾಣಗಳುಳ್ಳ ಮನ್ಮಥನ, ಆಹವದೊಳು-ಸಂಭೋಗವೆಂಬ ಕಾಳಗದಲ್ಲಿ, ಒದಗುವಡೆ-ಸಂಧಿಸಬೇಕಾಗಿದ್ದ ಪಕ್ಷದಲ್ಲಿ, ಕಡು-ಹೆಚ್ಚಾಗಿ, ಚದುರೆ-ಪ್ರೌಢಿಮೆಯುಳ್ಳವಳು, ನೀನು-ಈರೀತಿ ಅಬಲೆಯಾದ ನೀನು, ರಣದೋಳ್-ಆಹವದಲ್ಲಿ, ಆಳ್ತನವಂ-ಪರಾಕ್ರಮವನ್ನು, ಎನ್ನೊಡನೆ-ನನ್ನ ಎದುರಿನಲ್ಲಿ, ತೋರಿದೊಡೆ-ಕಾಣಿಸುವವಳಾದರೆ (ತೋರ್ಪಡಿಸುವವಳಾದರೆ), ನೀರಸವು-ಸಾರವಿಲ್ಲದ್ದು (ಎಂದು) ಎನಿಸದೆ-ಎನ್ನಿಸಿಗೊಳ್ಳುವದಿಲ್ಲವೆ? ಪೇಳೆಂದು-ಹೇಳು ಎಂಬದಾಗಿ, ಕುಂತೀಸುತಂ-ಕುಂತೀ ಪುತ್ರನಾದ ಪಾರ್ಥನು, ನುಡಿದೊಡೆ-ಹೇಳಲಾಗಿ, ಅವಳು-ಆಕೆಯು (ಆ ಪ್ರಮೀಳೆಯು), ಇಂತೆಂದಳು-ಈರೀತಿಯಾಗಿ ಪೇಳಿದಳು ||

ಅ|| ವಿ|| ನಾರಿ-ಹೆಂಗಸು, ಹೆದೆ. ಮದನಾರಿ-ಮನ್ಮಥ, ಮದವುಳ್ಳ ಸ್ತ್ರೀಯು. ನೀರ-ಉದಕದಲ್ಲಿ, ಜ-ಹುಟ್ಟಿದ್ದು, ಕಮಲ, (ಕಾಮನ ಬಾಣ) ಕುಂತಿಯ + ಸುತ = ಕುಂತೀಸುತ, ಷ. ತ. ||೧೦||

ಟೀ|| ಎಲಾ-ಅರ್ಜುನ, ಈಗಳೇ-ಕೂಡಲೇ, ಎನ್ನಂ-ನನ್ನನ್ನು, (ಅರಸಿಯಾದ ನನ್ನನ್ನು) ವರಿಸಿದೊಡೆ-ಮದುವೆಯನ್ನುಮಾಡಿಕೊಂಡರೆ (ಸ್ವಯಂವರಮಾಡಿಕೊಂಡರೆ) ಪರ್ಯಂಕಮಂ-ಮಂಚವನ್ನು (ಹಾಸಿಗೆ) ಸಾರ್ದೊಡೆ-ಸೇರಲು, ಅಂಗಜಾಹವದೊಳಗೆ-ಮದನವಿಜಯದಲ್ಲಿ, ಅಪರಿಮಿತ-ಅತಿಹೆಚ್ಚಾದ, ಸುಖಾವಹದ-ಸೌಖ್ಯವನ್ನುಂಟುಮಾಡುವ, ಸುರತ-ಸಂಭೋಗಸುಖದ,

---

ಮಾಡಲು || ೯ || ಆ ಪ್ರಮೀಳೆಯು ಮಾತನ್ನಾಲಿಸಿದ ಪಾರ್ಥನು ತನಗ ಹೆಂಗಸಿನ ಸಂಗಡ ಯುದ್ಧವೆ? ಅಕಟಕಟ, ಅತಿಯಾಗಿ ಕಾದಿ ಮದನನನ್ನು ಭಸ್ಮಮಾಡಿದವನಿಗೆ ಶತ್ರುವೆಂದು ಹೆಸರಾದ ಈಶ್ವರನ ಸಂಗಡ ಯುದ್ಧಮಾಡಿದ ನಾನು ಈ ನಾರಿಯ ಎದುರಾಗಿ ನಿಂತು ಬಿಲ್ಲಿನಲ್ಲಿ ಶರಸಂಧಾನವಂ ಮಾಡುವಂತಾಯಿತೆ? ಹರಹರ! ಮಂಚವನ್ನು ಸೇರಿದರೆ, ಕಮಲ ಬಾಣನ ಕೇಳಿಯಲ್ಲಿ ಯುದ್ಧ ಕೊಡುವುದಕ್ಕೆ ಅತ್ಯಂತವಾದ ಚಮತ್ಕಾರ ಚಿಂತಾಮಣಿ ಯಾಗಿರುತ್ತಿ. ಇಂತಹ ನಾರೀಶಿರೋಮಣಿಯಾದ ನೀನು ನನ್ನಲ್ಲಿ ನಿನ್ನ ಪ್ರತಾಪವನ್ನು ತೋರಿಸಿದರೇನು ಫಲವಾದೀತು (ನಿಷ್ಪ್ರಯೋಜನವಾದ್ದು) ಎಂಬುದು ತಿಳಿಯದೆ ಹೇಳೆಂದು ಕುಂತೀ ಪುತ್ರನಾದ ಪಾರ್ಥನು ಪ್ರಮೀಳೆಯಂ ಕುರಿತು ಹೇಳಲಾಗಿ || ೧೦ || ಎಲೈ ಪಾರ್ಥ! ನೀನು ಈಗಲೇ ನನ್ನನ್ನು ವರಿಸಿದರೆ, ಮದನ ಕೇಳಿಯಲ್ಲಿ ಅಪರಮಿತವಾದ ರತಿ ಕ್ರೀಡೆಯ ತಂತ್ರದ ವಿದ್ಯೆಯ ನಾನಾ ರೀತಿಗಳನ್ನೂ ತೋರ್ಪಡಿಸು

ಲ್ಲನೊಡನಿನ್ನ || ತುರುಗನುಂಬಿಡುವುದಿಲ್ಲಧಟಂದಕಾದುವಾ | ತುರಮುಳ್ಕೊಡಿದಿರಾಗಿನೋಡುಸಾಕೆನ್ನೊಳೆನು | ತುರವಣಿಸು ತವಳೆಚ್ಚೊಡರ್ಜುನಂಸೈರಿಸುತ್ತೆಳೆನಗೆಯೊಳಿಂತೆಂದದು ||೧೧|| ವಿಷಯೋಪಭೋಗಮುಂಬಯುಸಿನಿನಗಾನೊಲಿಯೆ | ವಿಷಯೋಗ ವಾಗದಿರುವುದೆಪೇಳ್ಪುರುಷರೀ | ವಿಷಯೋದ್ಭವಸ್ತ್ರೀಯರಂಬೆರಸಿಬಾಳ್ವಪರೆಸಾಕದಂತಿರಲಿನಿನಗೆ || ವೃಷಭಾಯತದೊಳಾಂತಭಟರೋಳ್ಪಂಚುವಪು | ರುಷಭಾಷಿತವನಬಲೆನಿನ್ನೊಳಾಡುವದುತ್ಕ | ರುಷಭಾವಮಲ್ಲಬಿಡುವಾಜಿಯಂಪೆಣ್ಗೊಲೆಗಳಂಕುವೆನೆಂದಂಪಾರ್ಥನು || ೧೨ || ಕಾದಲಂಬಿಂದಕೊಂದಪೆನೀಗಳಲ್ಲದೊಡೆ | ಕಾದಲಂನಿನಗಾಗಿಸುರತಮೋಹನಕೆಪ | ಕ್ಕಾದಲಂ

---

ತಂತ್ರದ_ಯುಕ್ತಿಯು, ಕಲೆಯ_ವಿದ್ಯದ, ಪರಿವಿಡಿಗಳಂ_ಪ್ರತಿಕ್ರಮುವನ್ನೂ, ತೋರಿಸುವೆನು-ತೋರಿಸುತ್ತೇನೆ, ಅಲ್ಲದೊಡೆ_ ನೀನು ನನ್ನನ್ನು ವರಿಸದಿದ್ದರೆ, ನಿನ್ನ-ನಿನ್ನಯ, ತುರಗನುಂ-ಅಶ್ವವನ್ನು, ಬಿಡುವದಿಲ್ಲ_ಬಿಟ್ಟುಕೊಡುವದಲ್ಲ, ಅಧಟಂದ_ಪರಾಕ್ರಮಾತಿಶಯದಿಂದ, ಕಾದುವ_ನನ್ನಲ್ಲಿ ಜಗಳವಾಡುವ, ಆತುರಂ-ಅಭಿಲಾಷೆಯು, ಉಳ್ಕೊಡೆ_ಹೊಂದಿದ್ದ ಪಕ್ಷದಲ್ಲಿ, ಇದಿರಾಗು_ ಪ್ರತಿಭಟಿಸಿ ನಿಲ್ಲು, (ನನ್ನ ಸಂಗಡ ಕಾಳಗಕ್ಕೆ ಎದುರು ನಿಂತುನೋಡು) ಇನ್ನು-ಇಲ್ಲಿಂದ ಮುಂದಕ್ಕೆ, ಎನ್ನೊಳು_ನನೊಂದಿಗೆ, ಸಾಕು-ಮಾತಾಡುವುದು ಸಾಕಾಗಿರುತ್ತೆ, ಎನುತ_ಎಂದು ಹೇಳುತ್ತ, ಉರವಣಿಸುತ_ಮೇಲೆ ನುಗ್ಗಿಬರುತ್ತ, ಅವಳು_ಆಕೆಯು, ಎಚ್ಚಡೆ_ಬಾಣವಂ ಪ್ರಯೋಗಿಸಲಾಗಿ, ಅರ್ಜುನಂ_ಪಾರ್ಥನು, ಸೈರಿಸುತ್ತ-ಸಹಿಸಿಕೊಳ್ಳುತ್ತ, ಎಳೆನಗೆಯೊಳು_ಮಂದಹಾಸದಿಂದ, ಇಂತೆಂದನು_ಹೀಗೆಂದು ಹೇಳಿದವನಾದನು ||

ಅ|| ವಿ|| ಅಂಗಜಾಹವ_ಮದನವಿಜಯ, ಅಂಗಜನ, ಆಹವ_ಅಂಗಜಾಹವ, ಷ. ತ. ಕಲೆ_ಕಾಂತಿ, ವಿದ್ಯ, ಪರ್ಯಂಕ-ಮಂಚ, ಹಾಸಿಗೆ. ಎಳದು + ನಗೆ = ಎಳನಗೆ, ವಿ. ಪೂ. ಕ. ||೧೧||

ಟೀ|| ,ವಿಷಯ_ವನಿತಾ ಸಂಬಂಧವಾದ, ಉಪಭೋಗಮುಂ-ಪ್ರಕ್ಚಂದನಾದಿ ಸೌಖ್ಯವನ್ನು, ಬಯಸಿ_ದಾಹಗೊಂಡು (ಆಶಿಸಿ), ಆಂ_ನಾನು, ನಿನಗೆ_ಅರಸಿಯಾದ ನಿನಗೆ, ಒಲಿಯೆ_ವಶನಾಗತಕ್ಕವನಲ್ಲ, ಹಾಗಾದರೆ ವಿಷಯೋಗಂ_ನಂಜಿನ ಪ್ರಯೋಗವು, ಆಗದಿರ್ದಪುದೆ-ಆಗದೇ ಹೋದೀತೆ, (ಆಗಲೇ ಆಗುತ್ತೆ) ಪೇಳ್-ಹೇಳುವಳಾಗು, ಪುರುಷರು_ಗಂಡಾಳುಗಳು, ಈವಿಷಯ_ಈ ಹೆಣ್ಣುರಾಜ್ಯದಲ್ಲಿ, ಉದ್ಭವ-ಜನಿಸಿರುವ, ಸ್ತ್ರೀಯರಂ_ವಿಷಧಾರಿಗಳಾದ ಹೆಂಗಸರನ್ನು, ಬೆರಸಿ-ಕಲೆತು, (ಸೇರಿ) ಬಾಳ್ವಪರೆ_ ಬದುಕಲಾಪರೆ! ಎಂದಿಗೂ ಇಲ್ಲ) ಸಾಕು-ಆಮಾತು ಬಿಡು, ಅದು_ಆ ವಿಷಯವು, ಅಂತು_ಹಾಗೆ, ಇರಲಿ-ಇರುತ್ತಿರಲಿ, ನಿನಗೆ_ ಪ್ರಮೀಳೆಯಾದ ನಿನಗೆ, ವೃಷಭಾಯತದೊಳು-ಹೋರಿಗಳು ಜಗಳವಾಡುವ ಕ್ರಮದಿಂದ, ಆಂತ_ಹೊಂದಿದ, ಭಟರೋಳ್_ ವೀರರ ಸಂಗಡ, ಪಳಂಚುವ-ಹೆಸರುವಾಸಿಯಾಗಿರುವ, ಪುರುಷಭಾಷಿತವನು_ಗಂಡಾಳುಗಳು ಆಡುವ ಮಾತನ್ನು, ಅಬಲೆ_ ಬಲರಹಿತಳಾದ (ಹೆಂಗಸಾದ), ನಿನ್ನೊಳು_ನಿನ್ನೊಡನೆ, ಆಡುವುದು – ಯುದ್ಧಮಾಡತಕ್ಕದ್ದು, ಉತ್ಕರ್ಷಭಾವಂ-ಹಿರಿತನವು (ದೊಡ್ಡಸ್ತಿಕೆಯು), ಅಲ್ಲ-ಆಗಿರುವುದಿಲ್ಲ, ವಾಜಿಯಂ-ಯಜ್ಞಾಶ್ವವನ್ನು, ಬಿಡು_ಬಿಟ್ಟು ಕಳುಹು, ಪೆಣ್ಗೊಲೆಗೆ_ಸ್ತ್ರೀ ಹತ್ಯಕ್ಕೆ, ಅಳುಕುವೆನು-ಹೆದರುತ್ತೇನೆ, ಎಂದು_ಎಂಬದಾಗಿ, ಪಾರ್ಥ-ಫಲುಗುಣನು, ಎಂದಂ_ಆಡಿದನು.

ಅ|| ವಿ|| ವಿಷಯ + ಉಪಭೋಗ = ವಿಷಯೋಪ ಭೋಗ, ಗುಣ ಸಂ. ವಿಷ-ನಂಜು, ನೀರು. ಭೋಗ_ಸುಖ, ಸರ್ಪವಹೆಡೆ, ವೃಷಭವ+ಆಯತ_ವೃಷಭಾಯತ, ಷ. ತ. (ವಿಷನ್ನರ-ಈಶ್ವರ, ಮೇಘ) (ತರಣಿ_ಸೂರ್ಯ, ತರುಣಿ-ಸ್ತ್ರೀ) ||೧೨||

ಟೀ|| ಕಾದಲು-ಎನ್ನೊಡನೆ ಯುದ್ಧಮಾಡಲು, ಅಂಬಿಂದ-ಶರದಿಂದ, ಈಗಳೆ-ಈ ತಕ್ಷಣವೇ, ನಿನ್ನಂ_ಪಾರ್ಥನಾ

---

ತ್ತೇನೆ, ಹಾಗೆ ನನ್ನನ್ನು ಸ್ವಯಂವರ ಮಾಡಿಕೊಳ್ಳದೆ ಹೋದರೆ ನಿನ್ನ ಅಶ್ವವನ್ನು ಎಂದಿಗೂ ಬಿಡುವಳಲ್ಲ. ಸಾಮರ್ಥ್ಯದಿಂದ ಕಾಳಗ ಮಾಡುವ ಯೋಚನೆಯು ಇದ್ದರೆ ಪ್ರತಿಭಟಿಸಿ ನಿಂತು ಪರೀಕ್ಷಿಸು, ಇನ್ನು ನನ್ನ ಸಂಗಡ ಮಾತಾಡುವದನ್ನು ಸಾಕು ಮಾಡು ಎಂದು ರೇಗಿ ಮೇಲೆಬಿದ್ದು ಬರುತ್ತಾ, ಆ ಪ್ರಮೀಳೆಯು ಬಾಣಪ್ರಯೋಗ ಮಾಡಲು ಅರ್ಜುನನು ಅದನ್ನು ಸಹಿಸಿಕೊಂಡು ಮುಗುಳನಗೆಯಿಂದ ಹೀಗೆಂದನು ||೧೧|| ಆಗ ಅರ್ಜುನನು ಪ್ರಮೀಳೆಯಂ ಕುರಿತು ಸ್ತ್ರೀ ಸಂಬಂಧವಾದ ಸುಖವನ್ನೇ ಅಪೇಕ್ಷಿಸಿ ನಾನು ನಿನಗೆ ಒಲಿದು ಎಂದಿಗೂ ಸ್ವಾಧೀನನಾಗತಕ್ಕವನಲ್ಲ ಹಾಗಾದರೆ (ಆರೀತಿಯಾಗಿ ನಾನು ನಿನ್ನಲ್ಲಿ ಒಲಿದರೆ ವಿಷಪ್ರಯೋಗವೇ ಆಗುತ್ತೆ) ತಪ್ಪುವದಿಲ್ಲ, ಗಂಡಸರು ಈ ಸ್ತ್ರೀರಾಜ್ಯದಲ್ಲುದ್ಭವಿಸಿರುವ, ವಿಷಾಂಗನೆಯರಂ ಬೆರತು ಬದುಕಲಾಪರೆ? ಎಂದಿಗೂ ಬದುಕುವದಿಲ್ಲ. ಆಮಾತು ಅದು ಹಾಗಿರಲಿ, ನಿನಗೆ ಹೋರಿಗಳಂತೆ ಜಗಳವಾಡುವರೀತಿಯಿಂದ ಕಾದಲು ಸಿದ್ಧವಾಗಿರುವ ವೀರರಲ್ಲಿ ಪ್ರಸಿದ್ಧಿಯಾಗಿರುವ ಪುರುಷ ಭಾಷಿತವನ್ನು ಅಬಲೆಯಾದ ನಿನ್ನಲ್ಲಿ ನಾವು ಆಡುವುದು ದೊಡ್ಡಸ್ತಿಕೆಯಾದ್ದಲ್ಲ. ತುರಗವನ್ನು ಬಿಟ್ಟು ಕಳುಹು ನಾನು ಸ್ತ್ರೀಹತ್ಯಮಾಡಲಿಕ್ಕಾಗಿ ಬಹುವಾಗಿ ಹೆದರುತ್ತೇನೆ ಎಂದು ಅರ್ಜುನನು ಹೇಳಿದನು ||೧೨|| ಆ ಅರ್ಜುನನ ಮಾತಂ ಕೇಳಿದ ಪ್ರಮೀಳೆಯು, ಅರ್ಜುನನಂ ಕುರಿತು ನೀನು ನನ್ನೊಡನೆ ಯುದ್ಧ

ನಸೌಖ್ಯಮಂತಳೆದಬಳಿಕಹುದುಮೃತಿತಪ್ಪದೆಂತುಮಳಿವು ‖ ಸಾದರದೊಳೆನ್ನೊಡನೆರಮಿಸುವುದುನಿನಗೆಸೊಗ | ಸಾದರನುಕರಿಸುಮೇಣ್ಕಲಹವೇಬೇಕೆಲೇ | ಸಾದರಥಟಂತೋರಿಸೆಂದಾಪ್ರಮೀಳೆಪಾರ್ಥನಮೇಲೆಕಣೆಗರೆದಳು ‖ ೧೩ ‖ ಪಿಂತೆಶೂರ್ಪಣಖಿಲಕ್ಷ್ಮಣನನಂಡಲೆದುಪಡೆ | ದಂದಮಂನೆನೆದವಳನೀಕ್ಷಣವೆಭಂಗಿಸುವೆ | ನೆಂದುಸಮ್ಮೋಹನಾಸ್ತ್ರವನುಗಿದುಗಾಂಡೀವದೋಳ್ಪೂಡಿಪಾರ್ಥನೆಸಲು ‖ ಮಂದಸ್ಮಿತದೊಳದರಕಡಿದುಬಿಲ್ದಿರುವನೆ | ಚ್ಚಿಂದುಮುಖಿಶಕ್ರಸುತನಂನೋಯಿಸಲ್ಕೆಮ |

ದ ನಿನ್ನನ್ನು, ಕೊಂದಪೆಂ-ಸಂಹರಿಸುತ್ತೇನೆ, ಅಲ್ಲದೊಡೆ-ಜಗಳಮಾಡದಿದ್ದರೆ, ಅಂ-ನಾನು, ನಿನಗಾಗಿ-ನಿನಗೆ ಸಲುವಾಗಿ, ಕಾದಲು-ಮದನಕೇಳಿಯನ್ನೆಸಗಲು, ಪಕ್ಕಾದಳ್-ಸಾಮರ್ಥ್ಯವುಳ್ಳವಳು, ಅಂಪಿನ-ಆಲಿಂಗನೆ ಮಾಡಿಕೊಳ್ಳುವದರ, ಸೌಖ್ಯಂ-ಭೋಗವನ್ನು, ತಳೆದ-ಹೊಂದಿದ, ಬಳಿಕ-ಅನಂತರದಲ್ಲಿ, ಮೃತಿ-ಸಾವು, ಅಹುದು-ಸಂಭವಿಸುತ್ತದೆ, ಎಂತು-ಯಾವರೀತಿಯಾದಾಗ್ಯೂ, ಅಳಿವು-ಮರಣವು, ತಪ್ಪದು-ಉಂಟೇ ಆಗುವುದು, (ತಪ್ಪುವುದಿಲ್ಲ) ಸಾದರದೊಳು-ಅಕ್ಕರೆಯಿಂದ, ಎನ್ನೊಳು-ನನ್ನೊಡನೆ, ರಮಿಸುವುದು-ಕ್ರೀಡೆಯನ್ನೆಸಗುವುದು, ನಿನಗೆ-ಪಾರ್ಥನಾದ ನಿನಗೆ, ಸೊಗಸಾದರೆ-ಸರಿಯಾದ್ದಾಗಿ ತೋರಿ ಬಂದರೆ, ಅನುಕರಿಸು-ನನ್ನ ಮಾತನ್ನು ಒಪ್ಪುವನಾಗು, ಮೇಣ್-ಮತ್ತೆ, ಕಲಹವೇ-ಕಾಳಗವೇ, ಬೇಕಾದರೆ-ಬೇಕಾಗಿದ್ದ ಪಕ್ಷದಲ್ಲಿ, ಇಲ್ಲವೆ ಕಲಹವೇ-ಜಗಳವೆ, ಬೇಕೇ-ಬೇಕಾಗಿದೆಯೋ? ಲೇಸು-ಹಾಗಾದರೆ ಒಳ್ಳೇದು, ಆದರೆ ಹಾಗೆ ಯುದ್ಧಮಾಡುವುದೇ ಗೊತ್ತಾಗಿದ್ದರೆ, ಅಥಟಂ-ನಿನ್ನಯ ಪರಾಕ್ರಮಾತಿಶಯವನ್ನು, ತೋರಿಸು-ಪ್ರತ್ಯಕ್ಷಪಡಿಸುವನಾಗು, ಎಂದು-ಎಂಬದಾಗಿ ಹೇಳುತ್ತ, ಆವಳು-ಆ ಪ್ರಮೀಳೆಯು, ಪಾರ್ಥನಮೇಲೆ-ಫಲುಗುಣನಮೇಲೆ, ಕಣೆಗರೆದಳು-ಶರಪ್ರಯೋಗವನ್ನು ಮಾಡಿದಳು.

ಅ‖ ವಿ‖ ಅಂಬು-ನೀರು, ಬಾಣ. ಸುರತ-ಮೈಥುನ, ದಯಾಳು. ಆದರದೊಡನೆ+ಸಹಿತವಾದದ್ದು= ಸಾದರ, ಸಹಪೂ. ಬಹು. ಸ, ‖೧೩‖

ಟೀ‖ ಪಿಂತೆ-ಹಿಂದಕ್ಕೆ, (ತ್ರೇತಾಯುಗದಲ್ಲಿ) ಶೂರ್ಪನಖಿ-ಮೊರದಂತೆ ಅಗಲವಾದ ಉಗುರುಳ್ಳ ಒಬ್ಬ ದೈತ್ಯಸ್ತ್ರೀಯು, ಲಕ್ಷ್ಮಣನನ್ನು-ರಾಮನ ತಮ್ಮನಾದ ಲಕ್ಷ್ಮಣನನ್ನು, ಅಂಡಲೆದು-ತನಗೆ ವಲ್ಲಭನಾಗೆಂತ ಹಿಂಸೆಪಡಿಸಿ, ಪಡೆದ-ಹೊಂದಿದ, (ಕರ್ಣ ನಾಸಿಕಗಳನ್ನು ಕಳೆದುಕೊಂಡು) ಅಂದಮಂ-ಚಂದವನ್ನು, ನೆನೆದು-ಭಾವಿಸಿಕೊಂಡು (ಮನಸ್ಸಿನಲ್ಲಿ ಜ್ಞಾಪಿಸಿಕೊಂಡು), ಇವಳನು-ಈ ಪ್ರಮೀಳೆಯನ್ನು, ಈಕ್ಷಣವೆ-ಈಗಲೇ, ಭಂಗಿಸುವೆನು-ಶೂರ್ಪನಖಿಯಂತೆ ಅವಮಾನಪಡಿಸುವೆನು, ಎಂದು-ಎಂಬದಾಗಿ ಯೋಚನೆಮಾಡಿ, ಸಮ್ಮೋಹನಾಸ್ತ್ರನನು-ಜ್ಞಾನವನ್ನು ಹೋಗಲಾಡಿಸುವ ಮಂತ್ರದಿಂದ ಮಂತ್ರಿತವಾದ ಶರವನ್ನು, ಉಗಿದು-ಬಾಣದ ಬುಟ್ಟಿಯಿಂದ ತೆಗೆದು, ಗಾಂಡೀವದೋಳ್-ತನ್ನ ಧನುಸ್ಸಾದ ಗಾಂಡೀವವೆಂಬ ಚಾಪದಲ್ಲಿ, ಪೂಡಿ-ಸಂಧಾನಮಾಡಿ (ಸೇರಿಸಿ), ಪಾರ್ಥನು-ಫಲುಗುಣನು, ಎಸಲು-ಬಾಣಮಂ ಪ್ರಯೋಗಿಸಲು, ಇಂದು ಮುಖಿ-ಚಂದ್ರನೋಪಾದಿಯಲ್ಲಿ ಆಸ್ಯವುಳ್ಳವಳಾದ ಪ್ರಮೀಳೆಯು, ಮಂದಸ್ಮಿತದೊಳು-ಕಿರುನಗೆಯಿಂದ, ಅದಂ-ಅರ್ಜುನನು ಪ್ರಯೋಗಿಸಿದ ಸಮ್ಮೋಹನಾಸ್ತ್ರವನ್ನು, ಕಡಿದು-ತುಂಡುಮಾಡಿ, ಬಿಲ್ದಿರುವನು-ಧನುಸ್ಸಿನ ಹಗ್ಗವನ್ನು, (ಹಿಂಜನಿಯನ್ನು) ಎಚ್ಚು-ಕತ್ತರಿಸಿ, ಶಕ್ರಸುತನಂ-ಪಾರ್ಥನನ್ನು, ನೋಯಿಸಲ್ಕೆ-ಬೇನೆಯುಂಟಾಗುವಂತೆ ಪ್ರಯೋಗಿಸಲು, ನರಂ-ಆ ಪಾರ್ಥನು, ಮತ್ತೊಂದು-ಇನ್ನೊಂದಾದ, ಹೆದೆಯಂ-ಬಿಲ್ದಿರುವನ್ನು, ಚಾಪಕ್ಕೆ-ಬಿಲ್ಲಿಗೆ (ಗಾಂಡೀವಕ್ಕೆ) ಏರಿಸಿ - ಕೂಡಿಸಿ (ಸೇರಿಸಿ), ದಿವ್ಯಮಾರ್ಗಣವನು - ಅತ್ಯುತ್ತಮ ಬಾಣವನ್ನು, ಪೂಡಿದಂ-ಅನುಸಂಧಾನ ಮಾಡಿದನು, (ಬಿಲ್ಲಿನಲ್ಲಿ ಸೇರಿಸಿದನು).

ಮಾಡುತ್ತಲೇ ಬಂದರೆ ಅಂಬಿನಿಂದ ನಿನ್ನನ್ನು ಸಂಹರಿಸುತ್ತೇನೆ. ಯುದ್ಧಮಾಡದೆ ಹೋದರೆ ನಾನು ನಿನಗೆಸಲವಾಗಿ ಮದನಕೇಳಿಯನ್ನೆಸಗಲು ಸಮರ್ಥಳಾಗಿ ಕಾದಿರುವೆನು, ನಿನ್ನನ್ನು ನಾನು ಆಲಿಂಗನೆಮಾಡಿಕೊಂಡು ಸುಖವನ್ನು ಹೊಂದಿದ ತರುವಾಯ ಮರಣವನ್ನು ಹೊಂದುವೆನು. ಹೇಗಾದಾಗ್ಯೂ ಸಾವು ತಪ್ಪುವುದಲ್ಲ(ಬರಲೇ ಬರುತ್ತೆ) ಆದರ ಪೂರ್ವಕಮಾಗಿ ನೀನು ಎನ್ನೊಳು ರಮಿಸುವುದು ಯುಕ್ತವಾಗಿ ತೋರಿಬಂದರೆ ಅಗತ್ಯವಾಗಿ ನನ್ನ ಮಾತನ್ನು ಅನುಮೋದಿಸುವನಾಗು, ಹಾಗಿಲ್ಲದಿದ್ದರೆ ನನ್ನೊಡನೆ ನಿನಗೆ ಕಲಹವೇ ಬೇಕೆ ? ಅದೂ ಆಗಬಹುದು, ಹಾಗೆ ನೀನು ಯುದ್ಧವೇ ಮಾಡಬೇಕೆಂಬ ಕುತೂಹಲವಿದ್ದರೆ ನಿನ್ನ ಪರಾಕ್ರಮಾತಿಶಯುವನ್ನು ತೋರಿಸುವನಾಗೆಂದು ಆ ಪ್ರಮೀಳೆಯು ಆ ಪಾರ್ಥನ ಸಂಗಡ ಹೇಳಿ ಶರವೃಷ್ಟಿಯಂ ಕರೆದಳು ‖೧೩‖ ಆಗ ಪಾರ್ಥನು ಪ್ರಮೀಳೆಯನ್ನು ಕುರಿತು ತ್ರೇತಾಯುಗದಲ್ಲಿ ಶೂರ್ಪಣಕಿ ಎಂಬೊಬ್ಬ ರಾಕ್ಷಸಸ್ತ್ರೀಯು ಶ್ರೀರಾಮನ ತಮ್ಮನಾಗಿ ಸಕಲ ಗುಣಾನ್ವಿತನಾದ ಲಕ್ಷ್ಮಣನನ್ನು ನೋಡಿ ನನಗೆ ನೀನು ವಲ್ಲಭನಾಗೆಂದು ಹಿಂಸೆಪಡಿಸಿ, ಕಿವಿ ಮೂಗನ್ನು ಕಳೆದುಕೊಂಡು ಹೋದ ಸಂಗತಿಯನ್ನು ಜ್ಞಾಪಕಮಾಡಿಕೊಂಡು ಈ ಪ್ರಮೀಳೆಯನ್ನು ಈಗಲೆ ಜಯಿಸುವೆನು ಮತ್ತು ಶೂರ್ಪಣಕಿಯಂತೆ ಭಂಗಪಡಿಸುತ್ತೇನೆಂದು ಅಂದುಕೊಂಡು, ಸಮ್ಮೋಹನಾಸ್ತ್ರವನ್ನು ಬತ್ತಳಿಕೆಯಿಂದ ತೆಗೆದು ಧನುವಿನಲ್ಲಿ

ತೊಟ್ಟಂದುಹೆದೆಯುಂಚಾಪಕೇರಿಸಿನರಂಪೂಡಿದಂದಿವ್ಯಮಾರ್ಗಣವನು ‖ ೧೪ ‖ ಆಸಮಯದೊಳ್ನುಡಿದುದಶರೀರವಾಕ್ಯಮಾ |
ಕಾಶದೊಳ್ಬೇಡಬೇಡೆಲಿಪಾರ್ಥಹೆಂಗೊಲೆಗೆ | ಹೇಸದೆಮಹಾಸ್ತ್ರಮಂತೊಡುವೆನೀಮುಳಿದಯುತವರುಷಮಿನ್ನವಳಕೂಡೆ ‖
ಬೇಸರದೆಕಾದಿದರುತೀರಲರಿಯದುಮನದ | ವಾಸಿಯಂಬಿಟ್ಟುವರಿಸೀಕೆಯಂಸತಿಯಾಗೆ | ಲೇಸಹುದುಮುಂದೆನಿನಗೆಂದುನಿಡು
ಸರದಿಂದಸಕಲಜನಮುಂಕೇಳ್ವೊಲು ‖ ೧೫ ‖ ಆಲಿಸಿದನಶರೀರವಾಣಿಯಂಪೂಡಿರ್ದ | ಕೋಲನೊಯ್ಯನೆಶರಾಸನದಿಂದಲಿಳು
ಪಿದಂ | ಮೇಲಣವಿಚಾರಮಂಚಿತ್ತದೊಳ್ತಿಳಿದನಾಳೋಚಿಸಿದನಾಪ್ತರೊಡನೆ ‖ ಆಲಲನೆಯಂತನ್ನೆಡೆಗೆಬರಿಸಿಕೊಂಡುತ | ತ್ಯಾ

---

ಅ‖ ವಿ‖ (ಕೃತ, ತ್ರೇತ, ದ್ವಾಪರ, ಕಲಿ ಇವು ಚತುರ್ಯುಗಗಳು) ಶೂರ್ಪ-ಮೊರ, ಶೂರ್ಪ-ಮೊರದಹಾಗೆ ನಖ-ಉಗುರನ್ನುಳ್ಳವಳು, ಸತ್+ಮೋಹನ=ಸಮ್ಮೋಹನ, ಅನುನಾಸಿಕಸಂಧಿ, ಕೃತ-ಮಾಡಿದ ಉಪಕಾರವನ್ನು, ಜ್ಞ - ತಿಳಿಯತಕ್ಕವನು, (ರಾಮ-ಎಲ್ಲರಮನಸ್ಸಿನಲ್ಲಿಯೂ ರಮಿಸತಕ್ಕವನು) ಲಕ್ಷ್ಮಣ-ಸರ್ವಲಕ್ಷಣಗಳಿಂದ ಯುತನಾದವನು ‖೧೪‖

ಟೀ‖ ಆಸಮಯದೋಳ್-ಅರ್ಜುನನು ಪ್ರಮೀಳೆಯಮೇಲೆ ತಾನು ಸಂಧಾನಮಾಡಿದ ನಂತರದಲ್ಲಿ, ಆಕಾಶದೋಳ್ ಆಗಸದಲ್ಲಿ, ಅಶರೀರವಾಕ್ಯಂ - ಆಕಾರವಿಲ್ಲದ ಎಂದರೆ ಶರೀರವಿಲ್ಲದವರಿಂದಾದ ವಾಕ್ಯವು, (ಭಗವಂತನು ತನ್ನ ಭಕ್ತರಿಗೆ ಆವ ವಿಪತ್ತೂ ಬಾರದಂತೆ ಸಲಹುವುದು ಸಹಜವಾಗಿದ್ದುದರಿಂದ ಸರ್ವಾಂತರ್ಯಾಮಿಯೂ, ಸಕಲರೂಪಚೈತನ್ಯನೂ, ಪಂಚಭೂತ ಸ್ವರೂಪನೂ ಜಗದೀಶನೂ ಆದ ಶ್ರೀ ಪರಮೇಶ್ವರನು, ಅಂತರಿಕ್ಷಾಭಿಮಾನಿಯಾದ ಅಧಿದೇವತೆಯಲ್ಲಿ ಗುಪ್ತನಾಗಿ ಧ್ವನಿಯ ಆಕಾರದಿಂದ ಎಚ್ಚರಿಸಿದನು) ಅರ್ಜುನನಂ ಕುರಿತು, ಎಲೆಪಾರ್ಥ - ಎಲೆ ಧನಂಜಯನೆ! ಹೆಂಗೊಲೆಗೆ - ಅಬಲೆಯನ್ನು ಸಂಹಾರ ಮಾಡಲಿಕ್ಕೆ (ಸ್ತ್ರೀಹತ್ಯಕ್ಕೆ) ಹೇಸದೆ - ಹಿಂದೆಗೆಯದೆ (ಭಯಪಡದೆ) ಮಹಾಸ್ತ್ರಮಂ - ಮಹಾದೇವತಾಕವಾದ ಶರವನ್ನು, ತೊಡುವೆ-ಬಿಲ್ಲಿನಲ್ಲಿ ಸೇರಿಸುತ್ತೆ, ನೀಂ-ನೀನು, ಮುಳಿದು-ಕೋಪಾವಿಷ್ಟನಾಗಿ, ಇನ್ನು-ಇನ್ನುಮುಂದೆ, ಅಯುತವರ್ಷಂ-ಹತ್ತು ಸಾಸಿರ ವರ್ಷಂಗಳು, ಬೇಸರದೆ-ಜಿಗುಪ್ಸೆಯಂ ಪೊಂದದೆ, ಅವಳ - ಅರಸಿಯಾದ ಪ್ರಮೀಳೆಯ, ಕೂಡೆ - ಒಡನೆ, ಕಾದಿದರೆ-ಯುದ್ಧವಂ ಗೆಯ್ದರೆ, ತೀರಲರಿಯದು-ಪೂರೈಸುವಂತೆ ಕಾಣುವುದಿಲ್ಲ, ಮನದ-ನಿನ್ನ ಹೃದಯದಲ್ಲಿರುವ, ವಾಸಿಯಂ-ದುರಹಂಕಾರವನ್ನು, ಬಿಟ್ಟು-ವಿಸರ್ಜಿಸಿ, ಈಕೆಯುಂ ಈ ಪ್ರಮೀಳೆಯನ್ನು, ವರಿಸು-ಸ್ವಯಂವರಮಾಡಿಕೊ, ಸತಿಯಾಗೆ-ಪತ್ನಿಯಾಗಿ ಮಾಡಿಕೊಂಡರೆ, ನಿನಗೆ-ನಿನಗಾದರೊ, ಮುಂದೆ-ಇನ್ನು ಮುಂದಕ್ಕೆ, ಲೇಸು-ಒಳ್ಳೇದು, ಅಹುದು-ಆಗುವುದು, ಎಂದು-ಎಂಬದಾಗಿ, ನಿಡುಸರದಿಂದ-ಉದ್ದವಾದ ಸ್ವನದಿಂದ, ಸಕಲ-ಸಮಸ್ತವಾದ, ಜನಮುಂ-ಜನರೂ, ಕೇಳ್ವೊಲು-ಆಲಿಸುವಂತೆ, ನುಡಿದುದು-ಆಡಿತು.

ಅ‖ ವಿ‖ ಶರೀರವಿಲ್ಲದ್ದು=ಅಶರೀರ, ನ. ತ. ಆಕಾಶ ತ್ಸ. ಆಗಸ ದ್ಭ. ಹೆಣ್ + ಕೊಲೆ = ಹೆಂಗೊಲೆ, ಗಕಾರ ಆದೇಶ ಸಂ. (ವಾಕ್ಯ-ಸಂಪೂರ್ಣಾರ್ಥಮಂ ಕೊಡುವ ಪದಗಳ ಗುಂಪಿಗೆ ವಾಕ್ಯವೆಂದು ಹೆಸರು), ವಾಣಿ-ಸರಸ್ವತಿ, ಮಾತು ‖೧೫‖

ಟೀ‖ ಪಾರ್ಥಂ-ಆ ಫಲುಗುಣನು, ಅಶರೀರವಾಣಿಯಂ-ಶರೀರವಿಲ್ಲದೆ ನುಡಿದ ವಾಕ್ಯವನ್ನು, ಆಲಿಸಿದನು-ಕೇಳಿದವನಾದನು, ಪೂಡಿರ್ದ-ಚಾಪಕ್ಕೆ ಸಂಧಾನಮಾಡಿದ್ದ, ಕೋಲನು-ಅಂಬನ್ನು, ಒಯ್ಯನೆ-ನಿಧಾನವಾಗಿ, ಶರಾಸನದಿಂದ-ತನ್ನ ಬಿಲ್ಲಾದ ಗಾಂಡೀವದಿಂದ, ಇಳುಪಿದಂ-ಇಳುಹಿದನು, ಮೇಲಣ-(ಮೇಲೆ ನಡೆದ ಕಥಾಸಂದರ್ಭದ) ಮುಂದೆ ನಡೆಯಿಸತಕ್ಕ ಕಾರ್ಯಕ್ಕೆ ವಿಚಾರಮಂ-ಸಮಾಚಾರವನ್ನು, ಚಿತ್ತದೋಳ್-ಹೃದಯದಲ್ಲಿ, ತಿಳಿದನು- ಗ್ರಹಿಸಿಕೊಂಡನು, ಆಪ್ತರೊಡನೆ-ಹಿತಚಿಂತಕರಾದ ಅಮಾತ್ಯರೊಂದಿಗೆ, ಆಲೋಚಿಸಿದನು-ಆಲೋಚನೆಯನ್ನು ಮಾಡಿದನು, ಆ ಲಲನೆಯಂ- ಆ ಪ್ರಮೀಳೆಯನ್ನು, ತನ್ನ

---

ಹೂಡಿ, ಪಾರ್ಥನು ಪ್ರಯೋಗಿಸಲು, ಚಂದ್ರವದನೆಯಾದ ಪ್ರಮೀಳೆಯು, ಮಂದಹಾಸದಿಂದ ಆ ಸಮ್ಮೋಹನವನ್ನು ಕತ್ತರಿಸಿ ಶಕ್ರಸುತನ ಬಿಲ್ದಿರುವನ್ನು (ಬಿಲ್ಲಿನ ಹಗ್ಗವನ್ನು) ಕತ್ತರಿಸಿ, ನೋವುಂಟಾಗುವಂತೆ ಪಾರ್ಥನನ್ನು ಹೊಡೆಯಲು ಆಗ ಪಾರ್ಥನು ಬಿಲ್ಲಿಗೆ ಮತ್ತೊಂದು ಹುರಿಯನ್ನು ಕಟ್ಟಿ ಮತ್ತೊಂದು ಯೋಗ್ಯವಾದ ಶರವನ್ನು ಸಂಧಾನಮಾಡಿದನು ‖೧೪‖ ಆ ವೇಳೆಗೆ ಸರಿಯಾಗಿ ಅಂತರಿಕ್ಷದಲ್ಲಿ ಅಶರೀರವಾಕ್ಯರೂಪವಾಗಿ ಭಗವಂತನು ಭಕ್ತರಿಗಧೀನನೆಂಬಂತೆ ಸರ್ವಾಂತರ್ಯಾಮಿಯಾಗಿಯೂ ಸಕಲ ಗುಣಾನ್ವಿತನಾಗಿಯೂ ಅಷ್ಟವಿಧವಾದ ರೂಪವುಳ್ಳವನಾಗಿಯೂ, ಇರುವ ಲೋಕೇಶನಾದ ಭಗವಂತನು ಅಂತರಿಕ್ಷಮೂರ್ತಿ ಸ್ವರೂಪದಲ್ಲಿ ಅಡಗಿ ತನ್ನ ಭಜಕರಿಗೆ ತೊಂದರೆ ಬಾರದಂತೆ, ಎಲಾ ಪಾರ್ಥ ಹೆಂಗೊಲೆಗೆ ಹಿಮ್ಮೆಟ್ಟದೆ ಮಹಾಸ್ತ್ರವನ್ನು ಸಂಧಾನ ಮಾಡುವೆಯಾ? ನೀನು ರೋಷಗೊಂಡು ಇನ್ನು ಹತ್ತು ಸಾಸಿರ ವರ್ಷಂಗಳು ಬೇಜಾರು ಹೊಂದದೆ ಆ ಪ್ರಮೀಳೆಯ ಸಂಗಡ ಯುದ್ಧಮಾಡಿದರೆ ಯುದ್ಧವು ಎಂದಿಗೂ ಮುಗಿಯುವುದಿಲ್ಲ, ನಿನ್ನ ಮನೋಹಂಭಾವವನ್ನು ಬಿಟ್ಟು ಈ ಪ್ರಮೀಳೆಯನ್ನು ಸ್ವಯಂವರ ಮಾಡಿಕೊ, ಹೀಗೆ ಈಕೆಯನ್ನು ವರಿಸಿದ್ದೇ ಆದರೆ ಇದರಿಂದ ನಿನಗೆ ಮುಂದೆ ಒಳ್ಳೇದಾಗುವುದೆಂದು ದೀರ್ಘವಾದ ಧ್ವನಿಯಿಂದ ಸರ್ವರೂ ಆಲಿಸುವಂತೆ ನುಡಿದುದು ‖೧೫‖ ಆ ಬಳಿಕ ಅರ್ಜುನನು ಆ ಅಶರೀರವಾಕ್ಯಮನಾಕರ್ಣಿಸಿ, ಧನುಸ್ಸಿಗೆ ಏರಿಸಿದ್ದ

ಲೋಚಿತದೊಳೊಡಂಬಡಿಸಿಕೈವಿಡಿದನನು | ಕೂಲೆಯಾಗಿರೆಬಳಿಕನಸುನಗುತವಿನಯದಿಂಕಲಿಪಾರ್ಥನಿಂತೆಂದನು || ೧೬ ||
ಕಣ್ಣಳವಿದಲ್ಲಬಲೆಕೇಳ್ದೀಕ್ಷೆಗೊಂಡಿರ್ಪ | ನಣ್ಣದೇವಂತಾನುಮನ್ನೆಗಂಪ್ರತಿಯಾಗಿ | ಪೆಣ್ಣೋಳ್ಬೆರೆಯೆನೆಂದುಃಪೊರಮಟ್ಟೆನಶ್ವ
ರಕ್ಷಣೆಗೆಮುಂದೆಗಜಪುರದೊಳು || ಪಣ್ಣುವಧ್ವರಕೆನೀಂಬಂದುಕನ್ನೈದಿಲೆಯ | ಬಣ್ಣದಮುರಾರಿಯುಂಕಂಡುವಿಷವಧುತನದ |
ತಿಣ್ಣಮುಂಕಳೆದೆನ್ನೊಳೊಡಗೂಡುಸೌಖ್ಯಮಹುದಲ್ಲಿಗೈತಹುದೆಂದನು ||೧೭|| ಎನಲಾಪ್ರಮಿಳೆಪಾರ್ಥನಮಾತಿಗೊಪ್ಪಿಕರ | ವವ

ಎಡೆಗೆ-ತನ್ನಯ ಸಮೀಪಕ್ಕೆ, ಬರಸಿಕೊಂಡು_ಬರಮಾಡಿಕೊಂಡು, ತತ್ಕಾಲೋಚಿತದೊಳು_ಕಾಲಕ್ಕೆ ಅನುಕೂಲಿಸುವಂತೆ, ಒಡಂಬಡಿಸಿ-ಒಪ್ಪುವಂತೆಮಾಡಿ, ಕೈವಿಡಿದನು-ಕೈಯನ್ನು ಹಿಡಿದನು ಎಂದರೆ ಪಾಣಿಗ್ರಹಣಮಾಡಿಕೊಂಡನು, (ಪ್ರಮಾಣಪೂರ್ವಕ ಮಾಗಿ ನಿನ್ನನ್ನು ವರಿಸಿರುವೆನೆಂದು ಭಾಷೆಮಾಡಿಕೊಟ್ಟನು), ಅನುಕೂಲೆಯಾಗಿರೆ - ತನ್ನ ಮನೋಭಿಪ್ರಾಯಾನುಸಾರಿಯಾಗಿ ನಡೆದುಕೊಳ್ಳುವಳಾದ್ದರಿಂದ, ಬಳಿಕ_ಅನಂತರದಲ್ಲಿ, ನಸುನಗುತ-ಮುಗುಳುನಗೆಯನ್ನು ನಗುತ್ತ, ವಿನಯದಿಂ-ನಮ್ರಭಾವದೊಡನೆ, ಕಲಿ_ಅಸಹಾಯಶೂರನಾದ, ಪಾರ್ಥಂ-ಫಲುಗುಣನು, ಇಂತೆಂದನು-ಈ ಪ್ರಕಾರವಾಗಿ ಪೇಳಿದನು ||

ಅ|| ವಿ|| ಪೃಥೆಯ + ಮಗ = ಪಾರ್ಥ. ಅಶರೀರವಾಣಿ_ಶರೀರವಿಲ್ಲದ ಮಾತು, ಶರೀರವಿಲ್ಲದ್ದು, ಅಶರೀರ, ನ. ತ. ಕೋಲು - ಬಾಣ, ಕಟ್ಟಿಗೆ. ಮಂತ್ರ - ರಾಜಕಾರ್ಯಾಲೋಚನೆ, ಅದುಳ್ಳವನು ಮಂತ್ರಿ, ಶರ+ಆಸನ=ಶರಾಸನ, ಸ. ಸಂ. ಪಾಣಿ - ಹಸ್ತವನ್ನು, ಗ್ರಹಣ - ಹಿಡಿಯುವದು. (ಮದುವೆಮಾಡಿಕೊಳ್ಳುವುದು.) ವಿನಾಯಕ ತ್ಸ. ಬೆನಕ ದ್ಭ. ಹಗ್ಗ ದ್ಭ. ಪ್ರಗ್ರಹ ತ್ಸ. ಕಾಲ_ಯಮ, ವೇಳೆ. ||೧೬||

ಟೀ|| ಅಬಲೆ-ಸ್ತ್ರೀಯಾದ ಪ್ರಮೀಳೆಯೇ, ಕಣ್ಣ_ಕಂಗಳ, ಅಳವಿ_ಸಂತುಷ್ಟಿಯು, ಸಮಾಧಾನವು, ಇದು - ಈ ಕೈ ಹಿಡಿಯೋಣವು, ಅಲ್ಲ-ವಿವಾಹಾಂಗನೆಯಾಗಿರುವುದರಿಂದಲು, ನಮ್ಮ ಅಗ್ರಜನಾದ ಧರ್ಮರಾಯನು ದೀಕ್ಷೆಗೊಂಡಿರುವದ್ದರಿಂದಲು, ತುರಗದ ಪೋಷಕನಾದ ನಾನು ಸ್ತ್ರೀಸಂಭೋಗಮಾಡುವುದಿಲ್ಲವೆಂದು ಆಣೆಮಾಡಿಕೊಂಡಿರುವದ್ದರಿಂದಲು, ನಾನು ನಿನ್ನಲ್ಲಿ ಕ್ರೀಡಿಸುವ ಸಮಯವಲ್ಲ, ಕೇಳು_ಆಲಿಸು (ಆ ವಿಷಯವನ್ನು ವಿಸ್ತರಿಪೆನು), ಅಣ್ಣದೇವಂ - ನಮ್ಮ ಸ್ವಾಮಿಯಾದ, ಮತ್ತು ಅಗ್ರಜನಾದ ಧರ್ಮಪುತ್ರನು, ದೀಕ್ಷೆ - ಕಂಕಣವನು, (ಅಸಿಪತ್ರವ್ರತವೆಂಬ ಪ್ರತಿಜ್ಞೆಯನ್ನು), ಕೈಗೊಂಡು - ಅನುಸರಿಸಿ, ಇರ್ಪನು_ಇರುತ್ತಾನೆ, ಅನ್ನೆಗಂ_ಆ ದೀಕ್ಷಾವ್ರತವು ನೆರವೇರುವ ಪರಿಯಂತವೂ, ತಾಂ_ನಾನಾದರೊ, ಪ್ರತಿಯಾಗಿ_ಬದಲಾಗಿ (ಆ ಅಸಿಪತ್ರವ್ರತಕ್ಕೆ ಬದಲಾಗಿ), ಪೆಣ್ಣೋಳ್_ಸ್ತ್ರೀಯಲ್ಲಿ, ಬೆರೆಯೆನು - ಕೂಡಲೊಲ್ಲೆನು (ಸ್ತ್ರೀಸಂಭೋಗವಿಲ್ಲ), ಎಂದು_ಎಂತ, ಅಶ್ವರಕ್ಷೆಗೆ_ಕುದುರೆಯ ಕಾವಲಿಗೆ, ಪೊರಮಟ್ಟೆನು_ಹೊರಟಿರುತ್ತೇನೆ. ಮುಂದೆ_ಇನ್ನು ಮುಂದೆ, ಗಜಪುರದೊಳು_ಇಭನಗರದಲ್ಲಿ, ಪಣ್ಣುವ_ಗೈಯ್ಯುವ, ಅಧ್ವರಕೆ_ಮಖಕಾರ್ಯಕ್ಕೆ, ನೀಂ_ನೀನೂಸಹ, ಬಂದು_ಬಂದವಳಾಗಿ, ಕನ್ನೈದಿಲೆಯ_ಕನ್ನೈದಿಲೆಯಂತೆ ನೀಲವರ್ಣವಾದ, ಬಣ್ಣದ - ವರ್ಣವುಳ್ಳವನಾದ, ಮುರಾರಿಯಂ - ಮುರಹರನಾದ ಶ್ರೀ ಕೃಷ್ಣನನ್ನು, ಕಂಡು_ನೋಡಿದವಳಾಗಿ, ವಿಷ_ನಂಜಿನ ಸಂಬಂಧವಾದ, ವಧುತನದ_ವಧೂತ್ವದ, ತಿಣ್ಣಮಂ_ತೀಕ್ಷ್ಣತೆಯನ್ನು, ಕಳೆದು_ಹೊಗಲಾಡಿಸಿಕ್ಕೊಂಡು, ಎನ್ನೊಳು_ನನ್ನೊಡನೆ ಒಡಗೂಡು_ಸೇರುವವಳಾಗು, ಸೌಖ್ಯಂ-ಸ್ವಚ್ಛಂದನಾದಿ ಭೋಗವು, ಅಹುದು_ಉಂಟಾಗುತ್ತದೆ, ಅಲ್ಲಿಗೆ-ಆ ಗಜಪುರಿಗೆ, ಐತಹುದು_ಬರಬೇಕು, ಎಂದನು_ಎಂಬದಾಗಿ ಹೇಳಿದನು ||

ಅ|| ವಿ|| ಅಶ್ವದ ರಕ್ಷೆ, ಷ. ತ. ಮುರ_ಮುರಾಸುರನಿಗೆ, ಅರಿ ಶತ್ರುವಾದವನು ಕೃಷ್ಣನು. ತಿಣ್ಣ ದ್ಭ. ತೀಕ್ಷ್ಣ ತ್ಸ.

ಮಹಾಶರವನ್ನು ನಿದಾನವಾಗಿ, ಇಳಿಸಿಕೊಂಡು, ತನ್ನ ಮನಸ್ಸಿನಲ್ಲಿ ಯೋಚಿಸಿ ತಿಳಿದವನಾಗಿ, ಆಗ ಸವಾಣಿಯಂತೆ, ಕಾರ್ಯವನ್ನು ನೆರವೇರಿಸಲು, ತನ್ನ ಹಿತಮಂತ್ರಿಗಳಾದವರ ಸಂಗಡ ಆಲೋಚಿಸಿ ಆ ಪ್ರಮೀಳೆಯನ್ನ ತನ್ನಯ ಸಮೀಪಕ್ಕೆ ಬರಮಾಡಿಸಿಕೊಂಡು ತತ್ಕಾಲೋಚಿತಮಾದ ಮಾತುಗಳಿಂದ ಆ ಪ್ರಮೀಳೆಯನ್ನು ಸಮಾಧಾನಪಡಿಸಿ, ಪಾಣಿಗ್ರಹಣವಂ ಮಾಡಿಕೊಂಡನು (ವಿವಾಹ ಮಾಡಿಕೊಂಡನು) ತದನಂತರದಲ್ಲಿ ಸಹಚರಿಯಾಗಿ ಬಂದುದರಿಂದ, ನಸುನಗುತ ಅತ್ಯಂತ ವಿಧೇಯತೆಯೊಡನೆ ಅಸಹಾಯ ಶೂರನಾದ ಅರ್ಜುನನು ಈ ಪ್ರಕಾರವಾಗಿ ಹೇಳಿದನು ||೧೬|| ಎಲೆ ಪ್ರಮೀಳೆಯೇ ನಮ್ಮ ಅಣ್ಣನಾದ ಧರ್ಮನಂದನನು, ಯಜ್ಞದೀಕ್ಷೆಯನ್ನು ಕೈಗೊಂಡು ಯಿರುವನು (ಅಸಿಪತ್ರವ್ರತವನ್ನು ಅಂಗೀಕರಿಸಿರುವನು), ನಾನಾದರೊ, ಆ ಯಜ್ಞವು ಪೂರೈಸುವ ಪರಿಯಂತವೂ, ಸ್ತ್ರೀನಿಯಮವುಳ್ಳವನಾಗಿರುತ್ತೇನೆ. ಆ ನಮ್ಮ ಸ್ವಾಮಿಯಾದ ಧರ್ಮಪುತ್ರನ ಯಜ್ಞಕಾರ್ಯ ಕೈಗೂಡುವ ಪರಿಯಂತವೂ ನಾನು ಸ್ತ್ರೀ ಸಂಭೋಗಮಾಡುವದಿಲ್ಲವೆಂದು ದೀಕ್ಷೆಗೊಂಡಿರುವೆನು. ಆದ್ದರಿಂದ ನೀನೂ ಸಹ ನಮ್ಮ ಅಗ್ರಜನು ಎಸಗುವ ಯಜ್ಞ ಕಾರ್ಯಕ್ಕೆ ಬಂದು, ಅಧ್ವರವನ್ನು ನೋಡಿ, ಮುರಹರನಾದ ನೀಲಮೇಘಶ್ಯಾಮನಾದ, ಶ್ರೀ ಕೃಷ್ಣನ ಸಂದರ್ಶನವಂ ಮಾಡಿಕೊಂಡು, ನಿನ್ನಲ್ಲಿರುವ ವಿಷವನ್ನು ಹೋಗಲಾಡಿಸಿಕೊಳ್ಳುವಳಾಗು, ಅನಂತರದಲ್ಲಿ ನೀನು ನನ್ನೊಡನೆ ಸುಖಿಸಲು

ಜಮುಂನೀಡಿನಂಬಿಗೆಗೊಂಡುಕುದುರೆಯಂ । ಮನೆಯಿಂತರಿಸಿಕೊಟ್ಟುತನ್ನಾಲಯದೊಳಿರ್ಪವಿವಿಧರತ್ನಾಳಿಗಳನು ॥ ಜನಪದದೊ ಳಿರ್ದವಸ್ತುಗಳೆಲ್ಲಮುಂಕೊಂಡು । ವನಿತೆಯರಮೋಹರಂವೆರಸಿಪೊರಮಟ್ಟುಯಮ । ತಯನಂಕಾಣ್ಬಕಡುತವಕದಿಂಬಂದಳಿಭ ನಗರಿಗತಿಸಂಭ್ರಮದೊಳು ॥ ೧೮ ॥ ಗಜನಗರಿಗಾಕೆಯಂಕಳುಹಿಕುದುರೆಯಕೂಡೆ । ವಿಜಯನೈತರೆಮುಂದೆದೇಶಂಗಳಿರ್ದ ವಜ । ಗಜಗೋಶ್ವಮಹಿಷಾದಿನಿಕರಂಗಳಿಂದಪೂರಿತಮಾಗಿಕಂಗೊಳಿಸಲು ॥ ಕುಜಕುಜಂಗಳಪೊದರೊಳತಿಸೂಕ್ಷ್ಮಜೀವ ರಂ । ಬುಜಮಿತ್ರನುದಯಕುದ್ಭವಿಸಿಮಧ್ಯಾಹ್ನದೋ । ಳ್ನಿಜದಜವ್ವನದಿಂದಬಾಳ್ದಸ್ತಮಯಕಿಳಿವುತಿರೆಕಂಡುಬೆರ

ಟೀ॥ ಎನಸಲು-ಪಾರ್ಥನು ಈ ಪ್ರಕಾರವಾಗಿ ಹೇಳಲಾಗಿ, ಅಪ್ರಮಿಳೆ – ಆ ಅರಸಿಯಾದ ಪ್ರಮಿಳೆ ಎಂಬುವಳು, ಪಾರ್ಥನ-ಧನಂಜಯನ, ಮಾತಿಗೆ-ವಚನಕ್ಕೆ, ಒಪ್ಪಿ-ಅನುಮೋದಿಸಿ, ಕರವನಜಮುಂ-ಪಾಣಿಪದ್ಮವನ್ನು, ನೀಡಿ-ಮುಂದಕ್ಕೆ ಚಾಚಿ, ನಂಬಿಗೆ-ಪ್ರಮಾಣವನ್ನು, ಗೊಂಡು-ತೆಗೆದುಕೊಂಡು, ಕುದುರೆಯಂ – ಕುದುರೆಯನ್ನು, ಮನೆಯಿಂ – ತನ್ನ ಅರಮನೆಯಿಂದ, ತರಿಸಿಕೊಟ್ಟು-ಬರಮಾಡಿಕೊಟ್ಟವಳಾಗಿ, ತನ್ನ-ತನ್ನಯ, ಆಲಯದೊಳು – ಮಂದಿರದಲ್ಲಿ, ಇರ್ದ-ಇರತಕ್ಕ, ವಿವಿಧ – ಬಗೆಬಗೆ ಯಾದ, ರತ್ನಾಳಿಗಳನು – ರತ್ನವೆ ಮೊದಲಾದ ವಸ್ತುಗಳನ್ನು, ಜನಪದದೊಳು-ತನ್ನ ರಾಜ್ಯದಲ್ಲಿ, ಇರ್ದ-ಇರುವ, ವಸ್ತುಗ ಳೆಲ್ಲಮುಂ-ಸಮಸ್ತ ಪದಾರ್ಥಗಳನ್ನು, ಕೊಂಡು-ವಹಿಸಿ, ವನಿತೆಯರ – ಸ್ತ್ರೀಯರ, ಮೋಹರಂ-ಸೇನೆಯು, ವೆರಸಿ – ಸೇರಿಸಿ ಕೊಂಡು, ಯಮತನಯಂ – ಯಮಧರ್ಮನ ಮಗನಾದ ಧರ್ಮರಾಯನನ್ನು, ಕಾಣ್ಬ-ನೋಡತಕ್ಕ, ಕಡು – ಹೆಚ್ಚಾದ, ತವಕ ದಿಂದ-ಅಪೇಕ್ಷೆಯಿಂದ, ಪೊರಮಟ್ಟು-ತನ್ನ ರಾಜ್ಯವನ್ನು ಬಿಟ್ಟು ಹೊರಟು, ಅತಿ ಸಂಭ್ರಮದೊಳು-ಹೆಚ್ಚಾದ ವೈಭವದಿಂದ, ಇಭನಗರಿಗೆ-ಹಸ್ತಿನಾವತಿ ಪಟ್ಟಣಕ್ಕೆ, ಬಂದಳು-ಬಂದು ತಲಪಿದಳು.

ಅ॥ ವಿ॥ ಅವಳು+ಪ್ರಮಿಳೆ = ಅಪ್ರಮಿಳೆ, ಗ. ಸ. ಕರವು + ವನಜದಂತೆ = ಕರವನಜ, ಉ. ಉ. ಕ. (ವನ-ನೀರು, ಕಾಡು) ಯಮನ+ತನಯ=ಯಮತನಯ, ಷ. ತ. ॥೧೮॥

ಟೀ॥ ಗಜನಗರಿಗೆ – ಇಭನಗರಕ್ಕೆ, ಆಕೆಯಂ – ಆ ಪ್ರಮಿಳೆಯನ್ನು, ಕಳುಹಿ-ಕಳುಹಿಸಿಕೊಟ್ಟು, ಕುದುರೆಯ-ಆ-ಯಜ್ಞತುರಗದ, ಕೂಡೆ-ಜಡನೆಯೆ, ವಿಜಯನು-ಪಾರ್ಥನು, ಐತರೆ-ಬರುತ್ತಿರಲು, ಮುಂದೆ-ಮುಂಭಾಗದಲ್ಲಿ, ದೇಶಂಗಳು-ರಾಜ್ಯಗಳು, ಅಜ-ಮೇಕೆ, ಗಜ – ಕರಿ, ಗೋ-ಹಸುವು, ಅಶ್ವ-ಹಯ, ಮಹಿಷ – ಮಹಿಷವೇ, ಆದಿ – ಮುಂತಾದ ಪ್ರಾಣಿಗಳ, ನಿಕರಂಗಳಿಂ-ಗುಂಪುಗಳಿಂದ, ಪೂರಿತಮಾಗಿ-ತುಂಬಲ್ಪಟ್ಟದ್ದಾಗಿ, ಕಂಗೊಳಿಸಲು-ಹೊಳೆಯುತ್ತಿರಲು, ಇರ್ದವು-ಇರುತ್ತಿದ್ದವು, ಕುಜಕುಜಗಳ-ವೃಕ್ಷವೃಕ್ಷಗಳ, ಪೊದರೊಳು – ಹೊದರಿನಲ್ಲಿ, ಅತಿಸೂಕ್ಷ್ಮ-ಅತ್ಯಂತ ಅಣು ಪ್ರಮಾಣವುಳ್ಳ, ಜೀವರು – ಜೀವ ರಾಶಿಗಳು, ಅಂಬುಜ-ತಾವರೆಗೆ, ಮಿತ್ರ ಹಿತನಾದ-ಭಾಸ್ಕರನ, ಉದಯಕೆ – ಉದಯವಾಗುವ ಸಮಯಕ್ಕೆ, ಉದ್ಭವಿಸಿ – ಜನಿಸಿ ಮಧ್ಯಾಹ್ನದೋಳ್-ಹಗಲಿನ ಮಧ್ಯದಲ್ಲಿ (ನಡು-ಹಗಲಿನಲ್ಲಿ) ನಿಜದ ಜವ್ವನದಿಂದ-ಹೊಂದಿದ್ದ ಯವ್ವನದ ದೆಶೆಯಿಂದ, ಬಾಳ್ದು ಜೀವಿಸಿಕ್ಕೊಂಡು ಅಸ್ತಮಯಕೆ-ಸಂಧ್ಯಾಕಾಲಕ್ಕೆ, ಅಳಿವುತಿರೆ-ಮೃತಿ ಹೊಂದುತ್ತಿರಲು, ಕಂಡು-ಅದನ್ನು ಪರೀಕ್ಷಿಸಿ, ಬೆಂಗಾ ದನು-ಆಶ್ಚರ್ಯವನ್ನು ಹೊಂದಿದನು ॥

ಅ॥ ವಿ॥ ಗಜದ+ನಗರಿ = ಗಜನಗರಿ; ಷ. ತ. ಅವಳು ಎಂಬದಕ್ಕೆ ಆಕೆ ಎಂಬದು ಗೌರವಾರ್ಥದಲ್ಲಿ ಬಂದಿದೆ ಉ-ಇವನು-ಈತನು, ಅವನು-ಆತನು, ಅವಳು-ಆಕೆ, ಇವಳು-ಈಕೆ, ಗಜವು-ಗೋವು, ಅಶ್ವವು + ಮಹಿಷವು = ಗಜಗೋಶ್ವ ಮಹಿ ಷಾದಿಗಳು, ಬಹು-ದ್ವಂ. ಸ. ಮಿತ್ರ-ಸೂರ್ಯ, ಸ್ನೇಹಿತ ॥೧೯॥

ಅರ್ಹಳಾಗುತ್ತಿ ಅದ್ದರಿಂದ ಗಜಪುರಿಗೆ ಹೋಡು-ವಳಾಗು ಎಂಬದಾಗಿ ಹೇಳಿದನು ॥ ೧೭ ॥ ಪಾರ್ಥನು ಈ ಪ್ರಕಾರವಾಗಿ ಹೇಳಲಾಗಿ, ಆ ಪ್ರಮಿಳೆಯು ಅರ್ಜುನನ ಮಾತಿಗೆ ಒಪ್ಪಿಕೊಂಡು ಕರಕಮಲವಂ ನೀಡಿ ನಂಬಿಕೆಯನ್ನು ಪಡೆದುಕೊಂಡು ಯಜ್ಞಾಶ್ವವನ್ನು ಅಶ್ವಶಾಲೆಯಿಂದ ತರಿಸಿಕೊಟ್ಟು ತನ್ನ ಮನೆಯಲ್ಲಿದ್ದ ನಾನಾ ವಿಧವಾದ ರತ್ನಾದಿಗಳನ್ನು ತನ್ನ ದೇಶದಲ್ಲಿದ್ದ ಪಶು ಮೊದಲಾದ ಪ್ರಾಣಿಗಳನ್ನೂ ಸೇರಿಸಿಕೊಂಡು ವನಿತೆಯರ ಸೇನೆಯಿಂದ ಕೂಡಿದವಳಾಗಿ ಧರ್ಮನಂದನನನ್ನು ಕಾಣುವ ಉದ್ದೇಶ್ಯದಿಂದ ಹೊರಟು ಅತಿ ವೈಭವದಿಂದ ಇಭನಗರಕ್ಕೆ ಬಂದು ಸೇರಿದಳು ॥ ೧೮ ॥ ಆಗ ಪಾರ್ಥನು ಆ ಪ್ರಮಿಳೆಯನ್ನು ಗಜನಗರಿಗೆ ಕಳುಹಿಸಿ ಕುದುರೆಯ ಮೈಗಾವಲಿಗೆ ಧನಂಜಯನು ಹೊರಟು-ಬರಲು ಮುಂದೆ ಕಂಡುಬರುವ ದೇಶಂಗಳು ಅಜ, ಗಜ, ಗೋ, ಅಶ್ವ, ಮಹಿಷ, ಆದಿಯಾದ ಪ್ರಾಣಿಗಳ ಸಮುದಾಯಗಳಿಂದ ಪೂರಿತವಾಗಿ ಶೋಭಿಸಲು ಅರ್ಹವಾಗಿದ್ದವು, ತರುತರುಗಳ ಪೊದರುಗಳಲ್ಲಿ ಅತಿ ಸಣ್ಣ ತರದ ಜೀವರಾಶಿಗಳು ಕಮಲಮಿತ್ರನಾದ ಸೂರ್ಯನ ಉದಯಕ್ಕೆ ಸರಿಯಾಗಿ ಆವಿ ರ್ಭವಿಸಿ ಮಧ್ಯಾಹ್ನ ಕಾಲದಲ್ಲಿ ಪ್ರಾಯ ಸಮರ್ಥತೆಯನ್ನು ಪೊಂದಿ ಬಾಳಿಕೊಂಡು ಅಸ್ತಮಯ ಸಮಯಕ್ಕೆ ಸರಿಯಾಗಿ

ಗಾದನು ‖ ೧೯ ‖ ಮತ್ತೆಮುಂದೈದುವತುರಂಗಮದಕೂಡೆನಡೆ | ವುತ್ತಬರಿದೊಗಲುಡಿಗೆಯವರವಕ್ರಾಂಗಿಗಳ | ನೊತ್ತೋಳವರನೊಂದು ಕಾಲವರನೊಂದು ಕಣ್ಣವರಮೂರಡಿಗಳವರ ‖ ಉತ್ತುಂಗನಾಸಿಕದವರಮೂರುಕಣ್ಣವರ | ನೆತ್ತಿಕೋಡೆರಡುಳ್ಳವರನೊಂದು ಕೋಡವರ | ಕತ್ತೆಮೊಗಕುದುರೆ ಮೊಗದವರ ದೇಶಂಗಳಂಕಂಡನಾಕಲಿಪಾರ್ಥನು ‖೨೦‖ ಅಲ್ಲಿಗಲ್ಲಿಗೆತುರಂಗಮದಕೂಡೆಕೌಂತೇಯ | ನಿಲ್ಲದಿಲ್ಲದಚಿತ್ರಮಂನೋಡುತ್ತೈತರ | ಲ್ಮೆಲ್ಲಮೆಲ್ಲನೆಹಯಂಪೋಯ್ತುಭೀಷಣನೆಂಬಸುರನಪುರಕದರೊಳವನ ‖ ಸೊಲ್ಲುಸೊಲ್ಲಿಗೆ ಹೈಹಸಾದವೆನುತವನಿಯೊಳ್ಸಲ್ಲದಕೃತ್ಯಮೆಲ್ಲಮಂ ನೆರೆಮಾಡ | ಬಲ್ಲಬಲ್ಲಿದರಕ್ಕಸ

---

ಟೀ‖ ಮತ್ತೆ-ಇನ್ನು, ಮುಂದೆ-ಮುಂದಿನ ರಾಜ್ಯಕ್ಕೆ, ಐದುವ-ಪ್ರಯಾಣಮಾಡುತ್ತಿರುವ, ತುರಂಗಮದ-ಅಶ್ವದ, ಕೂಡೆ-ಒಂದಿಗೆ, ನಡೆವುತ್ತ-ಪ್ರಯಾಣಮಾಡುತ್ತ, ಬರಿದೊಗಲು-ಬರಿತೊಗಲಿನಿಂದ ಮಾಡಿರುವ, ಉಡಿಗೆಯ-ಉಡುವುಳ್ಳವರನ್ನು, ವಕ್ರಾಂಗಿಗಳು-ವಿಕಾರವಾದ ಶರೀರವುಳ್ಳವರನ್ನು, ಒತ್ತೋಳವರನು-ಒಂದೇ ತೋಳುಳ್ಳವರನ್ನು, ಒಂದುಕಾಲವರನು-ಒಂದೇ ಕಾಲುಳ್ಳವರನು, ಒಂದುಕಣ್ಣವರನು - ಒಂದೇ ಚಕ್ಷುವುಳ್ಳವರನ್ನು, ಮೂರಡಿಗಳವರ-ಮೂರು ಕಾಲುಳ್ಳವರನ್ನು, ಉತ್ತುಂಗದ-ಎತ್ತರವಾದ, ನಾಸಿಕದವರ-ಮೂಗುಳ್ಳ ಜನರನ್ನು, ಮೂರುಕಣ್ಣವರ-ಮೂರು ಕಂಗಳುಳ್ಳವರನ್ನು, ನೆತ್ತಿ-ತಲೆಯಮೇಲೆ, ಕೋಡೆರಡುಳ್ಳವರನು- ಎರಡು ಶೃಂಗಗಳುಳ್ಳವರನ್ನು, ಒಂದುಕೋಡವರ - ಏಕಶೃಂಗವುಳ್ಳವರನ್ನು, ಕತ್ತೆಮೊಗದ-ಖರಮುಖವುಳ್ಳ, ಕುದುರೆಮೊಗದವರ - ಅಶ್ವಮುಖವುಳ್ಳವರ, ದೇಶಂಗಳಂ - ಮೇಲೆ ಹೇಳಿದ ಜನರಿರುವ ರಾಜ್ಯಗಳನ್ನು, ಆಕಲಿಪಾರ್ಥನು-ಅಸಹಾಯಶೂರನಾದ ಧನಂಜಯನು, ಕಂಡನು-ಈಕ್ಷಿಸಿದನು ‖

ಅ‖ ವಿ‖ ವಕ್ರವಾದ+ಅಂಗವುಳ್ಳವರು=ವಕ್ರಾಂಗಿಗಳು, ಬಹು. ಸ. ಮೂರಾದ ಕಣ್ಣುಗಳ ಸಮಾಹಾರವು = ಮೂಗಣ್ಣು, ಸಮ. ದ್ವಿ. ಸ. ಕೋಡು-ದ್ಭ. ಕೂಟ-ತ್ಸ. ಮೊಗ-ದ್ಭ. ಮುಖ-ತ್ಸ. ಕಲಿ-ಶೂರ, ಕಲಿಯುಗ. ಕಲಿಯಾದ + ಪಾರ್ಥ = ಕಲಿಪಾರ್ಥ, ವಿ. ಪೂ. ಕ. ‖ ೨೦ ‖

ಟೀ‖ ಅಲ್ಲಿಗಲ್ಲಿಗೆ-ಅಷ್ಟಷ್ಟು ಸ್ಥಳಗಳಿಗೆ, ತುರಂಗದ-ಅಶ್ವದ, ಕೂಡೆ-ಒಂದಿಗೆ, ಕೌಂತೇಯನು-ಪಾರ್ಥನು, ನಿಲ್ಲದೆ-ಸುಮ್ಮನಿರದೆ, ಇಲ್ಲದ-ಯಾವಕಡೆಯೂ ಸಿಕ್ಕದ, ಚಿತ್ರಮಂ-ಅಚ್ಚರಿಯನು, ನೋಡುತ-ಕಾಣುತ್ತ, ಐತರಲ್-ಸಂಚರಿಸುತ್ತಿರಲು, ಮೆಲ್ಲಮೆಲ್ಲನೆ-ಮೆತ್ತಮೆತ್ತಗೆ, ಹಯಂ-ಆ ಯಜ್ಞಾಶ್ವವು, ಭೀಷಣನೆಂಬ-ಭೀಷಣನೆಂಬತಕ್ಕ, (ಭಯಂಕರನಾದ) ಅಸುರನ-ದೈತ್ಯನ, ಪುರಕೆ-ನಗರಕ್ಕೆ, ಪೋಯಿತು-ಪ್ರವೇಶಿಸಿತು, ಅದರೊಳು-ಆ ಭೀಷಣನ ಪಟ್ಟಣದಲ್ಲಿ, ಅವನ-ಆತನ, ಸೊಲ್ಲುಸೊಲ್ಲಿಗೆ-ವಚನ ವಚನಕ್ಕೂ, ಹಸಾದವೆನುತ-ಮಹಾಸ್ವಾಮಿಯ ಅಪ್ಪಣೆಯೆಂದು ಹೇಳುತ್ತ, ಅವನಿಯೊಳ್- ಪೃಥ್ವಿಯಲ್ಲಿ, ಸಲ್ಲಸಲ್ಲದ-ಯೋಗ್ಯವಲ್ಲದ, ಕೃತ್ಯಮೆಲ್ಲಮಂ-ಕಾರ್ಯಗಳನ್ನೆಲ್ಲಾ, ನೆರೆ-ಬಹಳವಾಗಿ, ಮಾಡಬಲ್ಲ- ಗೆಯ್ಯಲು ಬಲ್ಲವರಾದ, ಬಲ್ಲಿದರು-ಮಹಾ ಬಲಾಢ್ಯರಾದ, ರಕ್ಕಸರು-ದೈತ್ಯರು, ಮೂರುಕೋಟಿ-ಮೂರುಕೋಟಿ ಸಂಖ್ಯೆ ಜನರು, ಅತಿ ಭಯಂಕರದೊಳು-ಹೆಚ್ಚಾದ ಹೆದರಿಕೆಯನ್ನುಂಟುಮಾಡುವ ಕ್ರಮ-ದಿಂದ, ತಳ್ತಿಹುದು-ವ್ಯಾಪ್ತವಾಗಿರುವದು ‖

ಅ‖ ವಿ‖ ಕುಂತಿಯ ಮಗ-ಕೌಂತೇಯ, (ಅರ್ಜುನ) ಸುರನಲ್ಲದವನು-ಅಸುರ, ನ. ತ. ಹಸಾದ-ತ್ಭ. ಪ್ರಸಾದ-ತ್ಸ. ಕಾರ್ಯ-ತ್ಸ. ಕಜ್ಜ-ದ್ಭ. ರಕ್ಕಸ-ದ್ಭ. ರಾಕ್ಷಸ-ತ್ಸ. ‖೨೧‖

---

ಮರಣ ಹೊಂದುತ್ತಿರಲು ಅದಂ ಕಂಡು ಆಶ್ಚರ್ಯಯುತನಾದನು ‖ ೧೯ ‖ ಮತ್ತೆ ಮುಂದಿನ ರಾಷ್ಟ್ರಕ್ಕೆ ಪ್ರಯಾಣ ಮಾಡುತ್ತಿರುವ ಯಜ್ಞಾಶ್ವದ ಕೂಡೆ ನಡೆಯುತ್ತಾ ಬರೀ ತೊಗಲಿನಿಂದ ಮಾಡಿರುವ ವಸ್ತ್ರವುಳ್ಳವರನ್ನೂ, ವಕ್ರಾಂಗಿಗಳನ್ನೂ, ಒಂದು ತೋಳುಳ್ಳವರನ್ನೂ, ಒಂದೇ ಕಾಲುಳ್ಳವರನ್ನೂ, ಒಂದೇ ಕಣ್ಣುಳ್ಳವರನ್ನೂ, ಮೂರು ಅಡಿಗಳು ಮಾತ್ರ ಉದ್ದವುಳ್ಳವರನ್ನೂ, ಎತ್ತರವಾದ ನಾಸಿಕವುಳ್ಳವರನ್ನೂ, ಮುಕ್ಕಣ್ಣರನ್ನೂ, ತಲೆಯಮೇಲೆ ಎರಡು ಕೊಂಬುಳ್ಳವರನ್ನೂ, ಒಂದೇ ಕೊಂಬುಳ್ಳವರನ್ನೂ, ಕತ್ತೆ ಮೊಗದವರನ್ನೂ, ಕುದುರೆ ಮೊಗದವರನ್ನೂ, ಈ ಜನರು ವಾಸಮಾಡುವ ಸ್ಥಳಾದಿಗಳನ್ನೂ, ಅಸಹಾಯಶೂರನಾದ ಧನಂಜಯನು ನೋಡಿದವನಾಗಿ ಮನಸ್ಸಿನಲ್ಲಿ ಅತ್ಯಾಶ್ಚರ್ಯ ಹೊಂದಿದನು ‖ ೨೦ ‖ ಆಯಾಯ ಸ್ಥಳಗಳಿಗೆ ತುರಂಗದ ಸಂಗಡ ಕುಂತೀ ಪುತ್ರನಾದ ಕೌಂತೇಯನು ಸ್ವಲ್ಪವೂ ವಿಶ್ರಮಿಸಿಕೊಳ್ಳದೆ ಮತ್ತೆಯಾವ ಕಡೆಯಲ್ಲಿಯೂ ನೋಡದ ವೈಚಿತ್ರ್ಯವನ್ನೂ, ನೋಡುತ ಬರುತ್ತಿರುವನಾಗಲು ಮೆಲ್ಲಮೆಲ್ಲಗೆ ಆ ಹಯವು ರಾಕ್ಷಸೇಂದ್ರನಾದ ಭೀಷಣನ ಪಟ್ಟಣಕ್ಕೆ ಪ್ರವೇಶಿಸಿತು. ಆ ನಗರದಲ್ಲಿ ಆ ಭೀಷಣನ ಮಾತುಮಾತಿಗೂ ಹಸಾದವೆನುತ ಅವನಿಯಲ್ಲಿ ಮಾಡಬಾರದ ಕಾರ್ಯಗಳನ್ನು ಮಾಡಹೇಳಲು, ರಾಜಾಜ್ಞೆಯಂತೆ ಆ ಕಾರ್ಯಗಳನ್ನು ನೆರವೇರಿಸಲು ಬಲಾಢ್ಯರಾದ ರಕ್ಕಸರು, ಮೂರುಕೋಟಿ ಮಂದಿಗಳು, ಅತಿಭಯಂಕರಾಕಾರದಿಂದ ತುಂಬಿರುವರು ‖ ೨೧ ‖ ಆಬಳಿಕ ದಾನವರೆಲ್ಲರೂ, ದೀರ್ಘ ದೇಹವುಳ್ಳವರೂ, ಅತ್ಯಧಿಕ

ರಾತ್ರಿರುಕೋಟಿತಳಿತ್ತಹದತಿಭಯಂಕರದೊಳು ॥ ೨೧ ॥ ರಕ್ಕಸರನಿಬರೆಲ್ಲರುಂ ದೀರ್ಘದೇಹಿಗ । ಳ್ವಿಕ್ಕಸದಕೋಪಿಗ
ಳ್ಮೇಲೆ ಪುರುಷಾಧಮ । ರ್ಕಕ್ಕಸದಮುಸುಡನರ್ಬ ಹಳಮಾಯಾವಿಗಳ್ನಿರ್ದಯರ್ಕೊಲೆಗಡಿಕರು ॥ ಹೊಕ್ಕಸಮರಕ್ಕೆ
ಹಿಮ್ಮೆಟ್ಟರುನ್ಮತ್ತರೆನೆ । ಮಿಕ್ಕಸದಳವನದೇವೇಳ್ವೆನರ್ಜುನನಹಯ । ಮೆಕ್ಕಸರದೊಳ್ಬಂದು ಪೊಕ್ಕುದವನೀಶಕೇಳಿನ್ನು
ಮಹದದ್ಭುತವನು ॥ ೨೨ ॥ ಆಹಾರಕಡವಿಯಂತೊಳಲಿಬರುತಿರ್ದಮೇ ॥ ದೋಹೋತನೆಂಬವಂದಾನವೇಂದ್ರಂ
ಗೆಪೌ । ರೋಹಿತ್ಯಮಂಮಾಡುವಂ ಬ್ರಹ್ಮರಾಕ್ಷಸಂಕಂಡು ಪಾರ್ಥನಹಯವನು ॥ ಊಹಿಸಿದನಿದುಯಜ್ಞತುರಗಮಿ
ದಳವಿದರ । ಕಾಹಿನದುಮೇಣಿದಕೆಕರ್ತನರನೆಂದರಿದು । ಬಾಹುವಂಚಪ್ಪರಿಸಿಕೊಂಡುತ್ಸವದೊಳಸುರನೋಲಗಕೆ ಪರಿ

---

ಟೀ॥ ಅವನಿಪ–ಎಲೈ ಜನಮೇಜಯರಾಯನೆ, ಕೇಳು–ಆಲಿಸು, ರಕ್ಕಸರು–ದೈತ್ಯರು, ಅನಿಬರು– ಎಲ್ಲರು–ಅಷ್ಟುಜನರೂ, ದೀರ್ಘ–ದೊಡ್ಡದಾದ, ದೇಹಿಗಳು–ಅಂಗವುಳ್ಳವರು, ವೆಕ್ಕಸದ–ಅತಿ ಕಠಿಣವಾದ, ಕೋಪಿಗಳು–ರೋಷವುಳ್ಳವರು, ಮೇಲೆ–ಇಷ್ಟೂ ಅಲ್ಲದೆ, ಪುರುಷಾಧಮರ್–ಮನುಷ್ಯರಲ್ಲಿ ಕೆಡುಕರು, ಕಕ್ಕಸದ–ಅತಿಕರ್ಕಶವಾದ, ಮುಸುಡನರ್–ಮೋರೆಯುಳ್ಳವರು, ಬಹಳ–ಹೆಚ್ಚಾದ, ಮಾಯಾವಿಗಳ್–ಮಾಯಾಕಾರಿಗಳು, (ಕಂಡರೂ ಕಾಣದೆ ಇರತಕ್ಕವರು), ನಿರ್ದಯರ್–ದಯಾಶೂನ್ಯರಾದವರು, ಕೊಲೆಗಡಿಕರ್–ಜೀವರಾಶಿಗಳನ್ನು ಸಂಹರಿಸತಕ್ಕವರು, ಹೊಕ್ಕ–ತಾವು ಪ್ರವೇಶಿಸಿದ, ಸಮರಕೆ–ಕಾಳಗಕ್ಕೆ, ಹಿಮ್ಮೆಟ್ಟರು–ಹಿಮ್ಮುಖರಾಗುವದಿಲ್ಲ, ಉನ್ಮತ್ತರ್–ಅಜ್ಞಾನಿಗಳು, ಎನೆ–ಎನ್ನುವಂತೆ, ಮಿಕ್ಕ–ಬಾಕಿಯಾಗಿರುವ, ಅಸದಳವನು–ಸಾಧ್ಯವಿಲ್ಲದ ಭಾಗವನ್ನು, ಏವೇಳ್ವೆನು–ಯಾವರೀತಿಯಿಲ್ಲಿ ಪೇಳಲಿ, ಅರ್ಜುನನ–ಪಾರ್ಥನ, ಹಯಂ–ಕುದುರೆಯು, ಎಕ್ಕಸರದೊಳ್–ಒಂದೇ ಶ್ವಾಸಕ್ಕೆ, ಬಂದು ಪೊಕ್ಕುದು–ಬಂದು ಸೇರಿತು ॥

ಅ॥ ವಿ॥ ರಕ್ಕಸ–ದ್ಭ, ರಾಕ್ಷಸ–ತ್ಸ, ಕಕ್ಕಸ–ದ್ಭ, ಕರ್ಕಶ–ತ್ಸ, ದೀರ್ಘ–ಉದ್ಧ, ದೀರ್ಘಾಕ್ಷರ, ಪುರುಷರಲ್ಲಿ + ಅಧಮರು = ಪುರುಷಾಧಮರ್, ಸ. ತ. ಸ. ಅವನಿ + ಈಶ = ಅವನೀಶ, ಸ. ಸಂ. ಕೋಟಿ–ಕೊನೆ, ಕೋಟಿಸಂಖ್ಯೆ ॥ ೨೨ ॥

ಟೀ॥ ಆಹಾರಕೆ–ತಿಂಡಿಗೋಸ್ಕರವಾಗಿ, ಅಡವಿಯಂ–ಅರಣ್ಯವನ್ನು, ತೊಳಲಿ–ತಿರುಗಾಡಿಕೊಂಡು, ಬರುತಿರ್ದ–ಆಗಮಿಸುತ್ತಿದ್ದ, ಮೇದೋಹೋತಂ–ಮೇದೋಹೋತನು, ಎಂಬ–ಎನ್ನಿಸಿಕೊಳ್ಳುವ ! ದಾನವೇಂದ್ರಂಗೆ–ದೈತ್ಯರಿಗೆಲ್ಲಾರಾಜನಾದ ಭೀಷಣನಿಗೆ, ಪೌರೋಹಿತ್ಯಮಂ–ಪುರೋಹಿತ ಕಾರ್ಯವನ್ನು, ಮಾಡುವಂ–ಮಾಡುತ್ತಲಿರುವ, ಬ್ರಹ್ಮರಾಕ್ಷಸಂ–ಬ್ರಹ್ಮರಾಕ್ಷಸನೆಂಬುವನು, ಪಾರ್ಥನ–ಧನಂಜಯನ, ಹಯವನು–ವಾಜಿಯನ್ನು, ಕಂಡು–ಈಕ್ಷಿಸಿ, ಇದು–ಈ ವಾಜಿಯು, ಯಜ್ಞತುರಗಂ–ಯಜ್ಞಾಶ್ವವು, ಈ ದಳಂ–ಈ ಸೈನ್ಯವು, ಇದರ–ಈ ಕುದರೆಯ, ಕಾಹಿನದು–ಕಾಪಾಡುವದು, ಮೇಣ್–ಇದೂ ಅಲ್ಲದೆ, ಇದಕೆ–ಈ ವಾಜಿಗೆ, ಕರ್ತ–ಒಡೆಯನಾದವನು, ನರನು–ಪಾರ್ಥನು, ಎಂದು ಊಹಿಸಿದನು–ಎಂಬದಾಗಿ ಆಲೋಚನೆ ಮಾಡಿದನು, ಅರಿದು–ಹನುಮಧ್ವಜಾದಿ ಚಿಹ್ನೆಗಳಿಂದ ತಿಳಿದು, ಬಾಹುವಂ–ತೋಳುಗಳನ್ನು, ಚಪ್ಪರಿಸಿಕೊಂಡು - ಒಡಿದುಕೊಂಡವನಾಗಿ, ಉತ್ಸವದೊಳು–ಮನೋಲ್ಲಾಸದಿಂದ, ಅಸುರನ–ದೈತ್ಯೇಂದ್ರನಾದ ಭೀಷಣನ, ಓಲಗಕೆ–ಆಸ್ಥಾನಕ್ಕೆ, ಪರಿತಂದನು–ಓಡಿಬಂದವನಾದನು॥

ಅ॥ ವಿ॥ ದಾನವ + ಇಂದ್ರ = ದಾನವೇಂದ್ರ, ಗು. ಸಂ. ಪುರೋಹಿತನಭಾವ = ಪೌರೋಹಿತ್ಯ– ಭಾವನಾಮ, ಯಜ್ಞ–ತ್ಸ, ಜನ್ನ–ದ್ಭ. ಅಶ್ವ–ಕುದುರೆಯ, ಮೇಧ–ಯಜ್ಞ ॥ ೨೩ ॥

---

ವಾದ, ಕೋಪೋದ್ರೇಕವುಳ್ಳವರು, ಇದೂ ಅಲ್ಲದೆ ಪುರುಷಾಧಮರು, ಅತಿ ಕಠಿಣವಾದ ಆಶೆವುಳ್ಳವರು, ಅತಿಶಯವಾದ ಮಾಯಾವಿಗಳು, ದಯಾಶೂನ್ಯರು, ಪ್ರಾಣಹಿಂಸೆ ಮಾಡುವುದರಲ್ಲಿ ನಿಷ್ಕರುಣಿಗಳು, ತಾವು ಯತ್ನಪಟ್ಟ ಸಮರಕಾರ್ಯಕ್ಕೆ ಎಂದಿಗೂ ಹಿಮ್ಮೆಟ್ಟದವರು, ಬಹಳವಾಗಿ ಕೊಬ್ಬಿದ್ದರು, ಉಳಿದ ಭಾಗವನ್ನು ಯಾವ ರೀತಿಯಲ್ಲಿ ಹೇಳಲಿ, ಪಾರ್ಥನ ತುರಂಗವು ಒಂದೇ ಶ್ವಾಸಕ್ಕೆ ಈ ದೈತ್ಯಾಧಿಪನಾದ ಭೀಷಣನ ಪುರಕ್ಕೆ ಬಂದು ಸೇರಿತು. ಎಲೈ ಧರಿತ್ರೀಪಾಲನಾದ ಜನಮೇಜಯರಾಯನೇ, ಇನ್ನು ಮುಂದೆ ನಡೆದ ಕಥಾ ಸಂದರ್ಭದ ಆಶ್ಚರ್ಯಗಳನ್ನು ಪೇಳುವೆನು ಲಾಲಿಸುವನಾಗು ॥೨೨॥ ಆ ಸಮಯಕ್ಕೆ ಸರಿಯಾಗಿ ಆಹಾರಕ್ಕೋಸ್ಕರ ವನಪ್ರದೇಶವನ್ನು ತಿರುಗಿ ಸಂಚಾರಮಾಡಿಕೊಂಡು ಬರುತ್ತಲಿದ್ದ ಮೇದೋಹೋತನೆಂಬುವನು ದಾನವರಿಗೆ ರಾಜನಾದ ಭೀಷಣನಿಗೆ ಪೌರೋಹಿತ್ಯವನ್ನು ಮಾಡುವ ಬ್ರಹ್ಮರಾಕ್ಷಸನೆಂಬುವನು, ಆ ಅರ್ಜುನನ ಯಜ್ಞದ ಕುದುರೆಯನ್ನು ಕಂಡು, ಇದು ಯಜ್ಞಪಶುವು, ಈ ಸೈನ್ಯಕ್ಕೆ ಇದರ ಪೋಷಣೆಯ ಕೆಲಸವು, ಮತ್ತು ಈ ಅಶ್ವದ ಒಡೆಯನು ಪಾರ್ಥನು ಎಂಬುದನ್ನು ಆಲೋಚಿಸಿದನು, ಹನುಮದ್ಧ್ವಜಾದಿ ಅಂಕಿತಗಳಿಂದ ತಿಳಿದುಕೊಂಡು ಬಾಹುಗಳನ್ನು ಬಡಿದುಕೊಂಡು ಅತ್ಯುತ್ಸಾಹದಿಂದ, ದಾನವಾಧಿಪನಾದ ಭೀಷಣನ ರಾಜಾಸ್ಥಾನಕ್ಕೆ ಓಡಿಬಂದನು ॥ ೨೩ ॥ ಆಗ ಆ ಮೇದೋಹೋತನೆಂಬ ದಾನವೇಂದ್ರನ ಪುರೋಹಿತನು ಮನುಷ್ಯರ ನರಗಳಿಂದ ಮಾಡಲ್ಪಟ್ಟ

ತಂದನು ‖೨೩‖ ನರವಿನುಪವೀತದಿಂಕಣ್ಣಾಲಿಗಲ್ಕೋದ | ಕೊರಳತಾವಡದಿಂದನರರತಲೆಗಳಜಪದ | ಸರದಿಂದಪಸಿದೊಗಲ ಧೋತ್ರದಿಂದೊಂಟಿಯೆಲುಗಳಕುಂಡಲಂಗಳಿಂದ | ಕರಿಶಿರದಡೊಣೆಯಸಲಿಲದಕಮಂಡಲದಿಂದ | ಉರುಗಜದಬೆನ್ನಸ್ಥಿಯಷ್ಟಿಯಿಂಸಲೆಭಯಂ | ಕರರೂಪನಾದಮೇದೋಹೋತನೈತಂದಡಿದಿರೆದ್ದನಸುರೇಂದ್ರನು ‖೨೪‖ ಏನಿಬಿಜಯಂಗೈದಿರೆನಲಟ್ಟಹಾಸದಿಂ | ದಾನವಂಗೆಂದನೇತಕೆಸುಮ್ಮನಿರ್ದಪೆನಿ | ಧಾನವನೆಡಹಿಕಂಡವೊಲಾಯ್ತುನಿಮ್ಮಯ್ಯಬಕನಂಕೊಂದಭೀಮನೆಂಬ ‖ ಮಾನವನತಮ್ಮನರ್ಜುನನೀಗಬಂದನಿದ | ಕೋನಿನ್ನಪೊಲಸೀಮೆಗಾತನಂಪಿಡಿತಂದು | ನೀನುರುವನರಮೇಧಮುಂಮಾಡೆನಲ್ಕವಂ

---

ಟೀ‖ ನರವಿನ–ಶರೀರದ ನರದಿಂದ ಮಾಡಿದ, ಉಪವೀತದಿಂ–ಜನಿವಾರದಿಂದಲೂ, ಕಣ್ಣಾಲಿಗಳ–ನೇತ್ರಗಳ ಗುಡ್ಡುಗಳು, ಕೋದ–ಕೊರೆದು ಸೇರಿಸಿರುವ, ಕೊರಳ–ಕತ್ತಿನ, ತಾವಡದಿಂದ–ಕಂಠಸರದಿಂದಲೂ, ನರರ–ಮನುಜರ, ತಲೆಗಳ–ಶಿರಗಳ, ಜಪದ ಸರದಿಂದ–ಜಪದ ಹಾರದಿಂದಲೂ, ಪಸಿದೊಗಲ–ಹಸಿತೊಗಲಿನ, ಧೋತ್ರದಿಂದ–ಬಟ್ಟೆಯಿಂದಲೂ, ಒಂಟಿ–ಒಂಟೆಯ, ಎಲವುಗಳ–ಮೂಳೆಗಳಿಂದ, ಮಾಡಿದ–ನಿರ್ಮಿಸಿದ, ಕುಂಡಲಂಗಳಿಂದ–ಕರ್ಣಾಭರಣಗಳಿಂದಲೂ, ಕರಿ–ಗಜದ, ಶಿರದ–ತಲೆಯ ಪ್ರದೇಶದಲ್ಲಿರುವ, ಡೊಣೆಯ ಸಲಿಲದ–ದೊಣೆಯ ಉದಕದಿಂದ ಸೇರಿದ, ಕಮಂಡಲದಿಂದ–ನೀರಿನ ಪಾತ್ರೆಯಿಂದಲೂ, ಉರು–ಹೆಚ್ಚಾದ, ಗಜದ–ಕರಿಯ, ಬೆನ್ನಸ್ಥಿ–ಬೆನ್ನಿನ ಎಲವುಗಳಿಂದ ನಿರ್ಮಿಸಿದ, ಯಷ್ಟಿಯಿಂ–ಕೋಲಿನಿಂದಲೂ, ಸಲೆ–ಬಹಳವಾಗಿ, ಭಯಂಕರ– ಹೆದರಿಕೆಯನ್ನುಂಟುಮಾಡತಕ್ಕ, ರೂಪನಾದ– ಆಕೃತಿಯುಳ್ಳವನಾದ, ಮೇದೋಹೋತನು–ಮೇದೋಹೋತನೆಂಬ ಪುರೋಹಿತನು, ಐತಂದಡೆ–ರಾಜಾಸ್ಥಾನಕ್ಕೆ ಬರಲು, ಅಸುರೇಂದ್ರನು–ದೈತ್ಯೇಂದ್ರನಾದ ಭೀಷಣನು, ಇದಿರೆದ್ದನು–ತಾನು ಕುಳಿತಿದ್ದ ಸ್ಥಳದಿಂದ ಮೇಲಕ್ಕೆದ್ದು ಮರ್ಯಾದೆ ಮಾಡಿದನು.

ಅ‖ ವಿ‖ ಯಜ್ಞ+ಉಪವೀತ= ಯಜ್ಞೋಪವೀತ, ಗು. ಸಂ. ಕಣ್ಣಿನ+ಆಲಿ= ಕಣ್ಣಾಲಿ ಷ. ತ. ಪಸಿತೊಗಲು–ಪಸಿತೊಗಲು ದಕಾರ. ಆ. ಸಂಧಿ. ಕರ–ಸೊಂಡಿಲು, ಅದುಳ್ಳದ್ದು ಕರಿ ‖೨೪‖

ಟೀ‖ ಏನಿ–ಏನಿರಯ್ಯ, ಬಿಜಯಂಗೈದಿರಿ–ಬಿಜಯಮಾಡಿದಿರಿ, ಎನಲು–ಎಂಬದಾಗಿ ಹೇಳಲು, ಅಟ್ಟಹಾಸದಿಂ–ಅತ್ಯಂತ ವೈಭವದಿಂದ, ದಾನವಂಗೆ–ರಾಕ್ಷಸನಾದ ಭೀಷಣನಿಗೆ, ಎಂದನು–ಮುಂದಿನಂತೆ ಹೇಳಿದನು, ಏತಕೆ–ಏತಕ್ಕಾಗಿ, ಸುಮ್ಮನೆ–ಕಾಲವಿಳಂಬಮಾಡಿಕೊಂಡು, ಇರ್ದಪೆ–ಇರುತ್ತಿ, ನಿಧಾನವನು–ದ್ರವ್ಯದ ಗಂಟನ್ನು, ಎಡಹಿ–ಬಿದೆದುಕೊಂಡು, ಕಂಡವೊಲ್–ಈಕ್ಷಿಸಿದ ಹಾಗೆ, ಆಯಿತು–ಉಂಟಾಯಿತು, ನಿಮ್ಮಯ್ಯ–ನಿನ್ನ ಜನಕನಾದ, ಬಕನಂ–ಬಕನೆಂಬ ರಕ್ಕಸನನ್ನು, ಕೊಂದ–ನಾಶಮಾಡಿದ, ಭೀಮನೆಂಬ–ಭೀಮನು ಎಂಬ ಹೆಸರುಳ್ಳ, (ಭಯಂಕರನಾದವನು ಎನಿಸಿಕೊಂಡ) ಮಾನವನ–ಮನುಜನ, ತಮ್ಮ–ಸಹೋದರನಾದ, ಅರ್ಜುನ–ಪಾರ್ಥನು, ಈಗ–ಇದೇ ತಾನೆ, ನಿನ್ನ–ನಿನ್ನಯ, ಪೊಲಸೀಮೆಗೆ–ಹೊಲದ ಬಳಿ ಇರುವ ಸ್ಥಳಕ್ಕೆ (ಊರಿನ ಹೊರಗಡೆಯಲ್ಲಿ) ಇದಕೊ–ಇಗೋ ನೋಡು, ಬಂದನು–ಪ್ರವೇಶಿಸಿದನು, ಆತನಂ–ನಿನ್ನ ಅಪ್ಪಣೆಯಿಲ್ಲದೆ ನಿನ್ನ ದೇಶಕೆ, ಬಂದ ಪಾರ್ಥನನ್ನು, ಪಿಡಿತಂದು–ಹಿಡಿದುಕೊಂಡು ಬಂದು, ನೀನು–ನೀನಾದರೋ, ಉರುವ–ಮಹಾ ಹೆಚ್ಚಾದ, ನರಮೇಧಮಂ–ನರನ ಅಧ್ವರವನ್ನು, ಮಾಡು–ನೆರವೇರಿಸು, ಎನಲು–ಎಂದು ಹೇಳಲಾಗಿ, ಅಸುರೇಂದ್ರನು–ದೈತ್ಯೇಶ್ವರನಾದ ಭೀಷಣನು, ಇಂತೆಂದನು–ಈ ರೀತಿಯಾಗಿ ಪೇಳಿದನು.

---

ಯಜ್ಞೋಪವೀತದಿಂದಲು, ಕಣ್ಣುಗುಡ್ಡುಗಳಲ್ಲಿ ರಂಧ್ರಮಾಡಿ ಸೇರಿಸಲ್ಪಟ್ಟಿರುವ ಕೊರಳಿನ ಹಾರದಿಂದಲೂ, ಮನುಜರ ತಲೆಯ ಬುರುಡೆಗಳ ಜಪದ ಹಾರದಿಂದಲೂ, ಹಸೀತೊಗಲಿನ ಧೋತ್ರದಿಂದಲೂ, ಒಂಟೆಯ ಮೂಳೆಗಳಿಂದ ಮಾಡಿದ ಕರ್ಣ ಕುಂಡಲಗಳಿಂದಲೂ, ಗಜದ ತಲೆ ಬುರುಡೆಯಲ್ಲಿರುವ ದೊಣೆಯ ಜಲದಿಂದ ಕೂಡಿದ ಜಲಧಾರಾ ಪಾತ್ರೆಯಿಂದಲೂ, ಉದ್ದವಾದ ಗಜದ ಬೆನ್ನೆಲವಿನಿಂದ ಮಾಡಿದ ದಂಡದಿಂದಲೂ ಬಹಳವಾಗಿ ಹೆದರಿಕೆಯನ್ನುಂಟುಮಾಡುವ ರೂಪವುಳ್ಳವನಾದ ಪುರೋಹಿತನು ಬರಲಾಗಿ, ಅಸುರೇಂದ್ರನು ಶೀಘ್ರವಾಗಿ ಎದ್ದು ಮರ್ಯಾದೆಯಂ ಮಾಡಿ, ಉಚಿತಾಸನದಲ್ಲಿ ಕುಳ್ಳಿರಿಸಿಕೊಂಡನು‖೨೪‖ ಆಗ ದಾನವೇಂದ್ರನಾದ ಭೀಷಣನು, ಮೇದೋಹೋತನಂ ಕುರಿತು ಮುಂದೆ ಹೇಳುವಂತೆ ಮಾತನಾಡಿಸಿದನು. ಏನಿರಯ್ಯ ದಯಮಾಡಿಸಿದಿರಿ? ಬಿಜಯಮಾಡಿಸಿದ ಕಾರ್ಯವೇನು ಎಂದು ಕೇಳಲು ಅಟ್ಟಹಾಸದಿಂದ ದಾನವನಂ ಕುರಿತು, ಎಲೈ ದಾನವೇಂದ್ರನೇ! ಇನ್ನೂ ಏತಕ್ಕೆ ಉದಾಸೀನ ಮನಸ್ಕನಾಗಿರುತ್ತೀ, ನಿಕ್ಷೇಪವನ್ನು ಎಡವಿ ಅದನ್ನು ನೋಡಿದಂತೆ ಆಗಿರುವುದು, ನಿಮ್ಮಯ್ಯನಾದ ಬಕಾಸುರನನ್ನು ಸಂಹಾರಮಾಡಿದ ಭೀಮಸೇನನೆಂಬುವನ ಸಹೋದರನಾದ ಪಾರ್ಥನೆಂಬುವನು ಇದೇ ತಾನೆ ನಿನ್ನಯ ಊರ ಹೊರಗಿನ ಆರಾಮ ಪ್ರದೇಶಕ್ಕೆ ಇಗೋ ಪ್ರವೇಶಿಸಿದನು, ಆತನನ್ನು ನಿನ್ನ ರಾಜ್ಯದಲ್ಲಿ ನಿನ್ನ ಅಪ್ಪಣೆಯಿಲ್ಲದೆ ಪ್ರವೇಶಮಾಡಿದ್ದಕ್ಕಾಗಿ ಹಿಡಿದುಕೊಂಡು ಬಂದು, ಬಕಾಸುರನ ಪುತ್ರನಾದ ನೀನು ಅತಿ ಶ್ರೇಷ್ಠವಾದ

ನಸುರೇಂದ್ರನಿಂತೆಂದನು ‖೨೫‖ ಮತ್ತಾತನಂಕೊಂದವನತಮ್ಮನಂಪಿಡಿದು । ಮತ್ತಾತನಂಸದೆವೆನವನಹರಿಬಕೆಬಂದ । ಮತ್ತಾತನಂಸೀಳ್ವೆನಂತಿರಲಿನೀವೆನ್ನೊಳೆಂದಯಜ್ಞದಪಶುವಿಗೆ ‖ ಸತ್ತಾತನಾದಪನೆಪೇಳ್ಸಾಕುನಿನ್ನಿಂದ । ಸತ್ತಾತನಾದಪವನನಂ ನಿನ್ನನುಡಿಗೆ । ಸತ್ತಾತನಾದಪನೆನಾನಕಟನೋಡೆನುತಭೀಷಣಂಗರ್ಜಿಸಿದನು ‖ ೨೬ ‖ ರಾಕ್ಷಸೋತ್ತಮರೊಳಾರ್ಪಿಂತೆನರ ಮೇಧಮಖ । ದೀಕ್ಷೆಯಂಕೈಕೊಂಡರಿದಕೆಋತ್ವಿಜರಾರ । ಪೇಕ್ಷಿತವದೇನಾರ್ಗೆಸಂತುಷ್ಟಿಪೇಳೆಂದುಭೀಷಣಂಬೆಸಗೊಳಲ್ಕೆ ‖ ರೂಕ್ಷವದನವಂತೆರೆದಟ್ಟಹಾಸದಿಂ । ದಾಪೇಕ್ಷಿಸುತನುಡಿದನೆಲೆಮರುಳೆರಾವಣಂ । ಸಾಕ್ಷಿಯಲ್ಲವೆತತ್ಕ್ರತುವನೆಸಗಿಮೂಜ

ಅ‖ ವಿ‖ ಬಕ-ಬಕಪಕ್ಷಿ, ಬಕಾಸುರ. ದಾನವ+ಇಂದ್ರ=ದಾನವೇಂದ್ರ ಗು. ಸಂ. ಭೀಮ-ಭೀಮಸೇನ, ಭಯಂಕರ. ನರ-ಮನುಷ್ಯರ, ಮೇಧ-ಯಜ್ಞ, ಉಕ್ಕೆವ ದ್ಭ. ಉತ್ಸವ ತ್ಸ.

ಟೀ‖ ಮತ್-ಎನ್ನಯ, ತಾತನಂ-ಜನಕನಾದ ಬಕಾಸುರನನ್ನು, ಕೊಂದವನ-ನಾಶಮಾಡಿದವನಾದ ಭೀಮಸೇನನ, ತಮ್ಮನಂ-ಸಹೋದರನಾದ ಪಾರ್ಥನನ್ನು, ಪಿಡಿದು-ಹಿಡಿದುಕೊಂಡು, ಮತ್ತೆ-ತಿರುಗಿ, ಆತನಂ-ಆ ಪಾರ್ಥನನ್ನು, ಸದೆವೆನು-ಯಜ್ಞಪಶುವನ್ನಾಗಿ ಮಾಡಿಕೊಂಡು ಸಂಹರಿಸುವೆನು, ಅವನ-ಆ ಪಾರ್ಥನ, ಹರಿಬಕೆ-ಸಹಾಯಮಾಡಲಿಕ್ಕಾಗಿ, ಬಂದ-ಬಂದಂಥ, ಆತನಂ-ಆ ಸಹಾಯಮಾಡಲಿಕ್ಕೆ ಬಂದವನನ್ನು, ಮತ್ತೆ-ತಿರುಗಿ, ಸೀಳ್ವೆನು-ವಿಭಾಗಮಾಡುತ್ತೇನೆ, ಅಂತೆ-ಆ ವಿಷಯ ಹಾಗೆಯೇ ಇರಲಿ-ಇರುವುದಾಗಲಿ, ನೀವು-ನೀವುಗಳು, ಎನ್ನೊಳು-ನನ್ನೊಡನೆ, ಎಂದ- ಹೇಳಿದಂಥ, ಪಶುವಿಗೆ- ಯಜ್ಞದ ಪಶುವಾಗಿ ಮಾಡುವ ಕಾರ್ಯಕ್ಕೆ, ಸತ್ತಾತನು-ಪ್ರಾಣಹೋದವನು, ಆದಪನೆ-ಆದಾನೆಯೇ ಹೇಗೆ? ಸಾಕು-ಆ ಪಾರ್ಥನನ್ನ ವಶಕ್ಕೆ ದೊರಕಿದರೆ ಸಾಕಾದೀತು, ನಿನ್ನಿಂದ-ನಿನ್ನ ಸಹಾಯದಿಂದ, ಅವಂ-ಆ ಪಾರ್ಥನು, ಸತ್ತಾತನು-ಮರಣವನ್ನು ಹೊಂದಿದವನು, ಆದಪನೊ-ಉಂಟಾಗುವನೊ? ನಾನು-ದೈತ್ಯೇಂದ್ರನಾದ ನಾನಾದರೋ, ನಿನ್ನ-ನಿನ್ನಯ, ನುಡಿಗೆ-ವಚನಕ್ಕೆ, ಬೇಸತ್ತ-ಬೇಜಾರು ಹೊಂದಿದ. ಆತನು-ಆ ರೀತಿಯಾದವನು, ಆದಪನೆ-ಆದೇನೆಯೆ? ಅಕಟ-ಅಯ್ಯೋ, ನೋಡು-ಈಕ್ಷಿಸು, ಎನುತ-ಎಂಬದಾಗಿ ಹೇಳುತ್ತ, ಭೀಷಣಂ-ಭೀಷಣನೆಂಬ ದೈತ್ಯೇಂದ್ರನು, ಗರ್ಜಿಸಿದನು-ಅಬ್ಬರವನ್ನು ಮಾಡಿದನು.

ಅ‖ ವಿ‖ ತಾತ ತ್ಸ. ತಂದೆ ದ್ಭ. ಅಕಟ-ಅವ್ಯಯ, ದೈತ್ಯ+ಇಂದ್ರ=ದೈತ್ಯೇಂದ್ರ ಗು. ಸಂ. ಸತ್ತ+ಆತ=ಸತ್ತಾತ ಅ. ಲೋಪ. ಸಂ ‖೨೬‖

ಟೀ‖ ರಾಕ್ಷಸೋತ್ತಮರೊಳು- ರಾಕ್ಷಸಾಧಿಪರಲ್ಲಿ, ಪಿಂತೆ- ಪೂರ್ವಕ್ಕೆ, ಆರು-ಯಾರು ತಾನೆ, ನರಮೇಧ-ಮನುಜ ಯಜ್ಞವೆಂಬ, ಮಖ-ಅಧ್ವರದ, ದೀಕ್ಷೆಯಂ-ಕಂಕಣವನ್ನು, ಕೈಕೊಂಡರು-ನೆರವೇರಿಸಿದರು? ಇದಕೆ-ಈ ಮನುಜ ಯಜ್ಞಕ್ಕೆ, ಋತ್ವಿಜರು-ಯಜ್ಞಕಾರ್ಯವನ್ನು ಮಾಡಿಸತಕ್ಕವರು, ಆರು-ಯಾರು ಯಾರು, (ಎಷ್ಟು ಮಂದಿ ಋತ್ವಿಜರು ಬೇಕಾದೀತು) ಅಪೇಕ್ಷಿತವು-ಆಲೋಚಿಸಿ ಮಾಡಬೇಕಾದ ಕಾರ್ಯವು, ಅದೇನು-ಅದು ಯಾವ ಬಗೆಯಾದದ್ದು? ಆರ್ಗೆ-ಆವ ದೈವಕ್ಕೆ, ಸಂತುಷ್ಟಿ-ದಣಿವು ತೀರುವುದು? ಪೇಳೆಂದ-ಈ ವಿಷಯಗಳನ್ನೆಲ್ಲಾ ಹೇಳು ಎಂಬದಾಗಿ, ಭೀಷಣಂ-ಭೀಷಣನು, ಬೆಸಗೊಳಲ್ಕೆ-ವಿಜ್ಞಾಪನೆ ಮಾಡಿಕೊಳ್ಳಲು, ಅವಂ- ಆ ಮೇದೋಹೋತನೆಂಬ ದೈತ್ಯರ ಪುರೋಹಿತನು, ರೂಕ್ಷ - ಕ್ರೂರವಾದ, ವದನವನು-ಆಸ್ಯವನ್ನು, ತೆರೆದು-ವಿಸ್ತರಿಸಿಕೊಂಡು, ಅಟ್ಟಹಾಸದಿಂದ- ಬಹಳ ಆನಂದಾತಿಶಯದಿಂದ, ಆಕ್ಷೇಪಿಸುತ-ಪ್ರತಿಬಂಧಕವನ್ನು ಹೇಳುತ್ತಾ, (ಎಂದರೆ ಸಂದೇಹಗಳನ್ನು ಹೋಗಲಾಡಿಸುವುದಕ್ಕೆ ಪ್ರಯತ್ನಿಸುತ್ತ) ನುಡಿದನು-ಆಡಿದನು, ಎಲೆ-ಎಲೈಯ್ಯಾ, ಮರುಳೆ-ಅಜ್ಞಾನಿಯೇ? ತತ್ಕ್ರತುವನು- ಆ ಮನುಜ ಯಜ್ಞವನ್ನು, ಎಸಗಿ-ವಿರಚಿಸಿ, ಮೂಜಗವನು- ಸ್ವರ್ಗ, ಮರ್ತ್ಯ,

---

ನರಮೇಧವನ್ನು ನಡೆಯಿಸುವನಾಗು ಎಂಬದಾಗಿ ಹೇಳಲು, ಅಸುರೇಂದ್ರನಾದ ಭೀಷಣನು ಪುರೋಹಿತನಾದ ಮೇದೋಹೋತನಂ ಕುರಿತು ಇಂತೆಂದನು ‖೨೫‖ ನನ್ನಯ ಪಿತನಾದ ಬಕನನ್ನು ಕೊಂದ ಭೀಮಸೇನನ ಸಹೋದರನಾದ ಫಲುಗುಣನನ್ನು ಹಿಡಿದುಕೊಂಡು ಬಂದು ಆ ಫಲುಗುಣನನ್ನು ಒಂದು ಪಶುವನ್ನಾಗಿ ಎಣಿಸಿ ಕೊಲ್ಲುತ್ತೇನೆ. ಆ ಪಾರ್ಥನನ್ನು ಬಿಡಿಸಿಕೊಳ್ಳಬೇಕೆಂದು ಸಹಾಯಕ್ಕೆ ಬಂದಾತನನ್ನು ಸಹಾ ಸೀಳಿ ಹಾಕುವೆನು, ಹಾಗೇಯೇ ಈ ವಿಷಯವಿರಲಿ, ನೀವು ನನ್ನೊಡನೆ ಹೇಳಿದ ನರಮೇಧಕ್ಕೆ ಸತ್ತ ಪಶುವು ಆದಾನೆಯೇ, (ನನ್ನ ಹೆಸರನ್ನು ಹೇಳಿದ ಕೂಡಲೆ ಆ ಅರ್ಜುನನು ಸತ್ತವನಾದನು ಎಂಬ ಅಭಿಪ್ರಾಯವು) ಆ ಪಾರ್ಥನು ನನ್ನ ಕೈಗೆ ಮಾತ್ರ ಸಿಕ್ಕಿದ್ದೇ ಆದರೆ, ನಿನ್ನ ನುಡಿಗೆ ಎಂದಿಗೂ ಬೇಸರವಿಲ್ಲದೆ ನೆರವೇರಿಸುವೆನು. ಅಹಹಾ, ನೋಡು ಎಂಬದಾಗಿ ರಾಕ್ಷಸೇಂದ್ರನಾದ ಭೀಷಣನು ಗರ್ಜನೆಯನ್ನು ಮಾಡಿದನು ‖ ೨೬ ‖ ಆಗ ಆ ಅಸುರೇಂದ್ರನು ಮೇದೋಹೋತನಂ ಕುರಿತು, ಎಲೈ ಹಿತಚಿಂತಕನೇ ರಾಕ್ಷಸೋತ್ತಮರು ಪೂರ್ವಕಾಲದಲ್ಲಿ ಯಾರಾದರೂ ಮನುಜ ಯಜ್ಞವನ್ನು ಕೈಕೊಂಡಿದ್ದರೇ? ಈ ನರಮೇಧಕ್ಕೆ ಅಧ್ವರ ಕಾರ್ಯವನ್ನು ನೆರವೇರಿಸಲಿಕ್ಕೆ ಎಷ್ಟು ಜನರಿ

ಗವನ್ನೈದೆಗೆಲ್ವುದಕೆಂದನು ‖ ೨೭ ‖ ಸುರನೆತ್ತರಿಂದಚಾತುರ್ಮಾಸ್ಯಮಂಕಳೆದ | ಹಿರಿಯರಮಾಸೋಪವಾಸಿಗಳತಲೆಮಿದುಳ |
ನುರುತರಶ್ರಾವಣಕ್ಕೊದಗಿಪರುಯತಿನಾಂಸಮಂಭಾದ್ರಪದಕೆಬಿಡದೆ ‖ ದೊರೆಯಿಸುವರಿದೆವರಾಶ್ವಿಜಕೆಜಡೆಮುಡಿಯವರ |
ಕರುಳನಾರ್ಜಿಸುವರಿದೆಕಾರ್ತೀಕಕೆಳೆವೆಣ್ಗ | ಳುರದಗುಂಡಿಗೆಯನರಸುವಮಹಾವ್ರತಿಗಳಿದೆಬ್ರಹ್ಮರಾಕ್ಷಸರೆಂದನು ‖ ೨೮ ‖
ಇನ್ನುಮಿವರಲ್ಲದೆಮಹಾಬ್ರಹ್ಮರಾಕ್ಷಸ | ರ್ಮುನ್ನಿನಯುಗಂಗಳವರಿದ್ದಪರ್ಪಿರಿಯರ್ಸ | ಮುನ್ನತವಟದ್ರುಮನಿವಾಸಿಗಳನೇಕವು

---

ಪಾತಾಳಗಳೆಂಬ ಮೂರು ಲೋಕಗಳನ್ನು, ಐದೆ-ಚೆನ್ನಾಗಿ, ಗೆಲ್ವುದಕೆ-ಜಯಿಸಿದ್ದಕ್ಕೆ, ರಾವಣಂ_ಲಂಕೇಶ್ವರನಾದ ದಶಕಂಠನು, ಸಾಕ್ಷಿಯು-ನಿದರ್ಶನವು, ಅಲ್ಲವೆ-ಆಗಿರುವುದು ಕೇಳಿಲ್ಲವೆ, ಎಂದನು_ಎಂದು ನುಡಿದನು.

ಅ‖ ವಿ‖ ರಾಕ್ಷಸ+ಉತ್ತಮ=ರಾಕ್ಷಸೋತ್ತಮ, ಗು. ಸ. ನರನ+ಮೇಧ=ನರಮೇಧ, ಷ. ತ. (ವದನ_ಮುಖ ಸದನ_ಮನೆ) ಮದನ_ಮನ್ಮಥ. ತುಷ್ಟಿ ತ್ಸ. ತುಟ್ಟಿ ದ್ಭ ‖೨೭‖

ಟೀ‖ ಸುರ_ದೇವತೆಗಳ, ನೆತ್ತರಿಂದ_ರುಧಿರದಿಂದ, ಚಾತುರ್ಮಾಸಮಂ - ಚಾತುರ್ಮಾಸ್ಯವ್ರತವನ್ನು (ಶ್ರಾವಣ, ಭಾದ್ರಪದ, ಆಶ್ವೀಜ, ಕಾರ್ತಿಕಗಳೆಂಬ ನಾಲ್ಕು ಮಾಸಗಳು) ಕಳೆದ-ಅನುಭವಿಸಿದ, ಹಿರಿಯರು_ಜ್ಞಾನವೃದ್ಧರು, ಮತ್ತು ವಯೋವೃದ್ಧರು, ಇದೆ_ಇರುವರು, ಮಾಸೋಪವಾಸಿಗಳ_ಮನುಜರಲ್ಲಿ, ಊಟಮಾಡುವ ಮತ್ತು ಊಟಮಾಡದೆ ಇರುವ ವ್ರತವನ್ನು ನಿಯಮವಾಗಿ ಮಾಡಿದ ಮಹಾತ್ಮರ, ತಲೆಮಿದಳನು_ತಲೆಬುರುಡೆಯಲ್ಲಿರುವ, ಮೆದುಳನ್ನು ಉರುತರ-ಅತಿ ಶ್ರೇಷ್ಠವಾದ, ಶ್ರಾವಣಕೆ_ಶ್ರಾವಣಮಾಸಕ್ಕೂ, ಒದಗಿಪರು-ಒದಗಿಸಿಕೊಳ್ಳುವರು, ಯತಿ-ಯತೀಶ್ವರರ, ಮಾಂಸಮಂ_ಅಡಗನ್ನು, ಭಾದ್ರಪದಕ್ಕೆ-ಭಾದ್ರಪದ ಮಾಸಕ್ಕೂ, ಬಿಡದೆ - ಅತಿಕ್ರಮಿಸದೆ, ದೊರೆಯಿಸುವರು - ಒದಗಿಸಿಕೊಳ್ಳುವರು, ಇದೆ_ಇರುತ್ತಾರೆ, ಆಶ್ವೀಜಕೆ-ಆಶ್ವೀಜಮಾಸದ ಭೋಜನಕ್ಕೆ, ಜಡೆಮುಡಿಯವರ_ಜಟಾಧರರಾಗಿ ಅರಣ್ಯದಲ್ಲಿ ವಾಸಮಾಡುವ ಮನುಷ್ಯರಾದ ಮುನಿಗಳ, ಕರುಳನು_ಕರುಳಿನ ಭಾಗವನ್ನು, ಆರ್ಜಿಸುವರು - ಸಂಪಾದನೆ ಮಾಡತಕ್ಕವರು, ಇದೆ - ಇದ್ದಾರೆ, ಕಾರ್ತೀಕಕೆ - ಕಾರ್ತೀಕಮಾಸದ ಭೋಜನಕ್ಕೆ, ಎಳೆವೆಣ್ಗಳ - ಬಾಲಸ್ತ್ರೀಯರ, ಉರದ - ಹೃದಯದ, ಗುಂಡಿಯನು - ಜಠರಕೋಶವನ್ನು, ಅರಸುವ_ಹುಡುಕಿಕೊಂಡು ತರತಕ್ಕ, ಮಹಾವ್ರತಿಗಳು - ಅತಿಶಯವಾದ ವ್ರತವುಳ್ಳವರು, ಆದ - ಆಗಿರುವ, ಬ್ರಹ್ಮರಾಕ್ಷಸರು - ಬ್ರಹ್ಮರಾಕ್ಷಸರೆಂಬುವರು, ಇದೆ_ಇರುತ್ತಾರೆ, ಎಂದನು-ಎಂದುನುಡಿದನು.

ಅ‖ ವಿ‖ ಸುರರ + ನೆತ್ತರ್ = ಸುರನೆತ್ತರ್, ಷ. ತ. ಚಾತುರ್ಮಾಸ್ಯ, ಆಷಾಢ, ಶ್ರಾವಣ, ಭಾದ್ರಪದ, ಆಶ್ವೀಜ, ಕಾರ್ತಿಕ, ಅಕ್ಷಿಯೊಡನೆ ಸಹಿತವಾದದ್ದು, ಸಾಕ್ಷಿ, ಸಹ, ಪೂ. ಬ. ಮಾಸ+ಉಪವಾಸಿ=ಮಾಸೋಪವಾಸಿ ಗು. ಸ. ಶ್ರವಣ ನಕ್ಷತ್ರ ಯುಕ್ತವಾದದ್ದು, ಶ್ರಾವಣಿ ‖೨೮‖

ಟೀ‖ ಇವರಲ್ಲದೆ - ಈಗ ಹೇಳಿದ ಇಷ್ಟುಜನರು ಮಾತ್ರವೇ ಅಲ್ಲದೆ, ಇನ್ನೂ - ಮತ್ತೂ, ಬ್ರಹ್ಮರಾಕ್ಷಸರ್ - ಬ್ರಹ್ಮರಾಕ್ಷಸರೆಂಬ ದೈತ್ಯಶ್ರೇಷ್ಠರು, ಮುನ್ನಿನ_ಪೂರ್ವದ, ಯುಗಂಗಳವರು_ಯುಗಗಳಲ್ಲಿದ್ದಂಥ, ಪಿರಿಯರು - ಹಿರಿಯರಾದ (ಬಹು

---

ಬೇಕು? ಈ ಕಾರ್ಯವನ್ನು, ಯಾರ ಉದ್ದೇಶದಿಂದ ಮಾಡಬೇಕು? ಯಾವ ದೇವರಿಗೆ ಈ ಕ್ರತುವು ತೃಪ್ತಿಯಾಗುವುದು? ವಿಶದಪಡಿಸೆಂದು ಕೇಳಲು, ಆಗ, ಆ ಮೇಧೋ ಹೋತನೆಂಬ ಪುರೋಹಿತನು, ಘೋರ ವದನವನ್ನು ಬಿಟ್ಟುಕೊಂಡು ಅಟ್ಟಹಾಸದಿಂದ ನಗುತ್ತ, ಅವನ ಅನುಮಾನಗಳಿಗೆ ಪರಿಹಾರವನ್ನು ಹೇಳಿದನು. ಎಲೈ ಮರುಳನೇ ಆ ನರಮೇಧವನ್ನು, ವಿರಚಿಸಿ, ಸ್ವರ್ಗ, ಮರ್ತ್ಯ, ಪಾತಾಳಗಳೆಂಬ ಮೂಲೋಕಗಳನ್ನು ಗೆಲ್ವುದಕೆ ಲಂಕೇಶ್ವರನಾದ ರಾವಣನೇ ಸಾಕ್ಷಿಯಾಗಿರುವನು, ಈ ವಿಷಯ ಗೊತ್ತಿಲ್ಲವೇ? ಎಂದು ನುಡಿದನು ‖ ೨೭ ‖ ಆ ಕ್ರತುವಿಗೆ ದೇವತೆಗಳ ರುಧಿರದಿಂದ ಆಷಾಢ, ಶ್ರಾವಣ ಭಾದ್ರಪದ, ಆಶ್ವೀಜ, ಕಾರ್ತಿಕಗಳೆಂಬ, ನಾಲ್ಕು ತಿಂಗಳುಗಳಿಂದೊಡಗೂಡಿದ ಚಾತುರ್ಮಾಸ್ಯವಂ ಕಳೆದ ಹಿರಿಯರು ಇರುತ್ತಾರೆ. ಒಂದು ತಿಂಗಳು, ೨ ತಿಂಗಳು ಅಥವಾ ೩ ತಿಂಗಳು ಪರಿಯಂತರವೂ ಮನುಜರಲ್ಲಿ ಒಪ್ಪತ್ತು ಊಟ ಮಾಡುವುದಿಲ್ಲ. ಇಲ್ಲವೆ ಎರಡು ಹೊತ್ತೂ ಊಟಮಾಡುವದಿಲ್ಲ. ಈ ರೀತಿಯಾಗಿ ವ್ರತನಿಯಮವುಳ್ಳವರಾಗಿರುವರ ತಲೆ ಬುರುಡೆಯಲ್ಲಿರುವ ಮೇದಸ್ಸೆಂಬ ಪದಾರ್ಥವನ್ನು ಅತಿ ಶ್ರೇಷ್ಠವಾದ ಶ್ರಾವಣಮಾಸಕ್ಕೆ ಒದಗಿಸಿಕೊಳ್ಳುವರು. ಬ್ರಹ್ಮರಾಕ್ಷಸರು ಯತಿವರ್ಯರ ಮಾಂಸವನ್ನು ಶ್ರೇಷ್ಠವಾದ ಭಾದ್ರಪದ ಮಾಸಕ್ಕೆ ಬಿಡದೆ ಅನುಕೂಲಪಡಿಸಿಕೊಳ್ಳುವವರು ಇರುತ್ತಾರೆ. ಆಶ್ವಯುಜ ಮಾಸದ ಭೋಜನಕ್ಕಾಗಿ ಜಟಾಧಾರಿಗಳಾಗಿ ಅರಣ್ಯವಾಸಿಗಳಾದ ಮನುಷ್ಯರಾದ ಋಷಿಗಳ ಕರುಳುಗಳನ್ನು ಒದಗಿಸಿಕೊಳ್ಳುತ್ತಾರೆ. ಕಾರ್ತೀಕ ಮಾಸಕ್ಕಾದರೋ ಬಾಲಸ್ತ್ರೀಯರ ಯದೆಗುಂಡಿಗೆಯನ್ನು ಹುಡುಕಿತರುವ ನಿಯಮವುಳ್ಳವರಿರುತ್ತಾರೆ ಎಂದನು ‖೨೮‖ ಇವರಲ್ಲದೆ ಅನೇಕಜನ ಬ್ರಹ್ಮರಾಕ್ಷಸರು ಹಿಂದಣಯುಗದವರಲ್ಲಿ ಬಲು ದೊಡ್ಡವರು ಎತ್ತರವಾದ ವಟ

ರುಷಾರ್ಥಕರ್ರುದ್ದರ್ಶರು ‖ ನಿನ್ನನರಮೇಧಕಾರ್ತ್ವಿಜ್ಯಮಂಮಾಳ್ಪರಿದ । ಕೆನ್ನನಾಚಾರ್ಯನಾಗಿಯೆವರಿಸುತದ್ಯಾಗ । ಮಂನೆಗ ಳ್ಚಲ್‌ಸುರರ್ಗೆತುಷ್ಟಿಯುಪ್ಪುದುಜಯಂನಿನಗೆಸಮನಿಪುದೆಂದನು ‖ ೨೯ ‖ ದಾನವರದಂಪತಿಸಹಸ್ರಮುಂಪ್ರತಿದಿನಂ । ಮಾನ ವರಮಾಂಸಭೋಜನದಿಂದದಣಿಸಬೇ| ಕಾನವರನುಪಚರಿಪೆನಧ್ವರವನೆಸಗುನೀಂಮಂಟಪವನಿಲ್ಲಿರಚಿಸು ‖ ಸೇನೆಸಹಿತಾಪಾರ್ಥನಂ ಪಿಡಿದುತಂದೊಡೆಸ । ಮಾನಮಿಲ್ಲಸುರರೋಳ್ನಿನಗೆನಡದಪುದುಮುಖ । ಮೇನೆಂಬೆನಿದರುತ್ಸವವನೆನೆಪುರೋಹಿತಂಗಾದೈತ್ಯ ನಿಂತೆಂದನು ‖ ೩೦ ‖ ಪೊಕ್ಕುಪಡೆಯೋಳ್ವಿಜಯನಂಪಿಡಿದುನರಮೇಧ । ಕಿಕ್ಕುವೆಂಬೇಗಕಟ್ಟಿಸುಮಂಟಪವನೆಂದು । ಹೆಕ್ಕ

ದೊಡ್ಡವರಾದ, ಸಮುನ್ನತ_ಎತ್ತರವಾದ, ವಟದ್ರುಮ_ವಟವೃಕ್ಷದಲ್ಲಿ, ನಿವಾಸಿಗಳ್-ವಾಸಮಾಡುತ್ತಿರುವವರು, ಅನೇಕ_ಬಹಳ ಜನರಾದ, ಪುರುಷ_ಮನುಜರನ್ನು, ಅರ್ದಕರು - ಸಂಹಾರಮಾಡಿದವರು, ದುರ್ದರ್ಶರು - ಈಕ್ಷಿಸಲಸಾಧ್ಯವಾದವರು, ಇರ್ದ ಪರ್_ಇರುತ್ತಲಿರುವರು, ನಿನ್ನ - ನಿನ್ನಯ, ನರಮೇಧಕೆ - ಮನುಜಯಜ್ಞಕಾರ್ಯಕ್ಕೆ, ಆರ್ತ್ವಿಜ್ಯಮಂ - ಋತ್ವಿಜರು ಮಾಡತಕ್ಕ ಕರ್ಮವನ್ನು, ಮಾಳ್ಪರು-ನಡಿಸುವರು, (ಮಾಡುತ್ತಾರೆ) ಎನ್ನನು_ನನ್ನನ್ನಾದರೋ, ಆಚಾರ್ಯನಾಗಿಯೇ_ಆಚಾರ್ಯಪುರುಷನನ್ನಾ ಗಿಯೇ (ಎಂದರೆ ಪುರೋಹಿತನನ್ನಾಗಿಯೆ,) (ಯಜ್ಞಕಾರ್ಯ ನಡಿಸತಕ್ಕವನನ್ನಾಗಿಯೇ) ವರಿಸು_ಇಚ್ಛಿಸುವನಾಗು, ತದ್ಯಾಗಮಂ- ಆ ಕ್ರತುಕಾರ್ಯವನ್ನು ನೆಗಳ್ಚಲ್_ನೆರವೇರಿಸಲು, ಸುರರ್ಗೆ_ಸ್ವರ್ಗವಾಸಿಗಳಾದ, ಅಮರರಿಗೆ, ತುಷ್ಟಿಯು - ಮನಶ್ಶಾಂತಿಯು, ಅಪ್ಪುದು_ಉಂಟಾಗುವುದು, ಜಯಂ_ವಿಜಯವು, ನಿನಗೆ_ರಾಕ್ಷಸಾಧಿಪನಾದ ನಿನಗೆ, ಸಮನಿಪುದು-ಉಂಟಾಗುವುದು, ಎಂದನು- ಎಂಬದಾಗಿ ಹೇಳಿದನು.

ಅ‖ ವಿ‖ ಪತಿಯೂ + ಜಾಯೆಯೂ = ದಂಪತಿ, ತತ್ + ಯಾಗ = ತದ್ಯಾಗ, ಆರ್ಯ ತ್ಸ. ಅಜ್ಜ ದ್ಭ. ಫಲಪುರು ಷಾರ್ಥಗಳು - ಧರ್ಮ, ಅರ್ಥ, ಕಾಮ, ಮೋಕ್ಷ ಕೃತ್ತಿಕಾನಕ್ಷತ್ರಸಹಿತವಾದ್ದು ಕಾರ್ತೀಕ. ವನದಲ್ಲಿ+ವಾಸ=ವನ ವಾಸ ಸ. ತ. ‖೨೯‖

ಟೀ‖ ದಾನವರ_ದೈತ್ಯರ, ದಂಪತಿ - ಪತಿ - ಪತ್ನಿಗಳ, ಸಹಸ್ರಮುಂ_ಒಂದು ಸಾಸಿರವನ್ನು, ಪ್ರತಿದಿನಂ - ದಿನಂ ಪ್ರತಿಯಲ್ಲೂ, ಮಾನವರ_ಮನುಜರ, ಮಾಂಸಭೋಜನದಿಂದ - ಮಾಂಸವನ್ನು ಭೋಜನಮಾಡಿಸೋಣದರಿಂದ, ದಣಿಸಬೇಕು. ಮನಸ್ಸಂತೋಷವನ್ನು ಪಡಿಸಬೇಕು, ಆನುಂ - ನಾನಾದರೂ, ಅವರನು_ಆ ಸಾಸಿರಜನ ಜಾಯಾಪತಿಗಳನ್ನು, ಉಪಚರಿಪೆನು- ಉಪಚಾರವನ್ನು ಮಾಡುತ್ತೇನೆ, ನೀಂ - ನೀನು, ಅಧ್ವರವನು - ಈ ಮಹಾ ಕ್ರತುವನ್ನು, ಎಸಗು - ನಿರ್ಮಿಸುವನಾಗು, ಮಂಟಪವನು_ಅಧ್ವರಾಲಯವನ್ನು, ಇಲ್ಲಿ-ಈ ಸ್ಥಳದಲ್ಲಿ, ರಚಿಸು_ಏರ್ಪಡಿಸುವನಾಗು, ಸೇನೆ-ಸೇನೆಯ, ಸಹಿತ_ಒಡನೆಯೇ- ಆಪಾರ್ಥನಂ-ಆ ಫಲುಗುಣನನ್ನು, ಪಿಡಿದು-ಹಿಡಿದುಕೊಂಡು, ತಂದೊಡೆ_ತೆಗದು ತಂದದ್ದೇಯಾದರೆ, ಅಸುರರೋಳ್ - ದೈತ್ಯ ರಲ್ಲಿ, ನಿನಗೆ_ನಿನಗಾದರೋ, ಸಮಾನಂ_ಸಮಾನವು (ಜೊತೆಗಾರರು) ಇಲ್ಲ - ಇರುವದಿಲ್ಲ, ಮಖಂ_ಕ್ರತುವು, ನಡೆದಪುದು - ನೆರ ವೇರಿಸುವುದು, ಇದರ_ಈ ಜನ್ನಕಾರ್ಯದ, ಉತ್ಸವವನು - ವೈಭವವನ್ನು, ಏನೆಂಬೆನು - ಏನೆಂತ ಪೇಳಲಿ, ಎನೆ - ಎಂಬದಾಗಿ ಹೇಳಲು, ಪುರೋಹಿತಂಗೆ-ಪುರೋಹಿತನಾದ ಮೇದೋಹೋತನಿಗೆ, ಆದೈತ್ಯನು_ದಾನವೇಂದ್ರನಾದ, ಭೀಷಣನು, ಇಂತೆಂದನು- ಈ ಪ್ರಕಾರವಾಗಿ ಹೇಳಿದವನಾದನು.

ಅ‖ ವಿ‖ ಸಹಸ್ರ ತ್ಸ. ಸಾಸಿರ ದ್ಭ. ಯಜ್ಞ ತ್ಸ. ಜನ್ನ ದ್ಭ. ಭುಜಿಸಲು ಯೋಗ್ಯವಾದದ್ದು-ಭೋಜ್ಯ (ಪಂಚಭಕ್ಷ್ಯ ಗಳು - ಭಕ್ಷ್ಯ, ಭೋಜ್ಯ, ಚೋಷ್ಯ, ಲೇಹ್ಯ, ಪಾನೀಯ) ‖೩೦‖

ಟೀ‖ ಪಡೆಯೋಳ್‌ಪೊಕ್ಕು-ಸೇನಾನ್ವಿತನಾಗಿ,(ಅರ್ಜುನನ ಸೇನೆಯಲ್ಲಿ ನುಗ್ಗಿ)ವಿಜಯನಂ-ಪಾರ್ಥನನ್ನು, ಹಿಡಿದುತಂದು

ವೃಕ್ಷದಲ್ಲಿ ವಾಸಿಗಳಾದ ಋಷಿ ಪುತ್ರರನ್ನು ಕೊಂದವರು ಇರುವರು. ನಿನ್ನ ನರಮೇಧಕ್ಕೆ ಆರ್ತ್ವಿಜ್ಯವನ್ನು ಮಾಡುವರು, ನನ್ನನ್ನು ಆಚಾರ್ಯನನ್ನಾಗಿಯೇ ಅಧ್ವರಕಾರ್ಯಕ್ಕೆ ಅಪೇಕ್ಷಿಸುವನಾಗು, ಆ ಕ್ರತುವನ್ನು ನೀನು ಮಾಡಿದ್ದೇಯಾದರೆ ದೇವಾದಿ ದೇವತೆ ಗಳು ತೃಪ್ತಿ ಹೊಂದುವರು, ಯಾವ ಕಾರ್ಯಕ್ಕೂ ನಿನಗೆ ಆಯಾಸವಿಲ್ಲದೆ ಜಯವು ಲಭಿಸುವುದರಲ್ಲಿ ಸಂಶಯವಿರುವುದಿಲ್ಲ. ಎಂದು ಹೇಳಿದನು ‖೨೯‖ ದೈತ್ಯರ ಜಾಯಾಪತಿಗಳ ಒಂದು ಸಹಸ್ರವನ್ನು ಪ್ರತಿ ದಿನದಲ್ಲಿಯೂ ಮನುಜರ ಮಾಂಸಾಹಾರದಿಂದ ತೃಪ್ತಿಪಡಿಸಬೇಕು. ನಾನು ಆ ದಂಪತಿಗಳ ಸಹಸ್ರವನ್ನು ಕ್ರಮವಾಗಿ ಉಪಚರಿಸುವೆನು. ನೀನಾದರೋ ಆ ಯಜ್ಞಶಾಲೆ ಯನ್ನು ಈ ಸ್ಥಳದಲ್ಲಿ ಏರ್ಪಡಿಸು, ಸೇನಾನ್ವಿತನಾಗಿ ಆ ಪಾರ್ಥನನ್ನು ಹಿಡಿದು ತಂದರೆ ರಾಕ್ಷಸರಲ್ಲಿ ನಿನಿಗೆ ಸಮಾನರಾದವರಿಲ್ಲ ಅಧ್ವರವು ಈ ರೀತಿಯಾಗಿ ನರಮೇಧವಾಗಿ ಜರುಗುವದು. ಇದರ ಅತಿಶಯವನ್ನು ಏನೆಂದು ವರ್ಣಿಸಲಿ ಎಂಬದಾಗಿ ಪುರೋಹಿತ ನಾದ ಮೇದೋಹೋತನು ಇಂತೆಂದನು. ಆಗ ಆ ಮಾತನ್ನು ಕೇಳಿ ಭೀಷಣನು ಆ ಪುರೋಹಿತನಿಗೆ ಇಂತೆಂದನು ‖೩೦‖ ನಾನಾ

ಳದೊಳಾತನಂಬೀಳ್ಕೊಂಡುಭೀಷಣಂಮುಳಿದೆದ್ದುನಡೆವುತಿರಲು | ಮುಕ್ಕೋಟಿರಕ್ಕಸರ್ಪೊರಮಟ್ಟರವನಕೂ | ಡಕ್ಕರಿಂಜಗ
ವನೊಂದೇಬಾರಿಕೊಲ್ವತವ | ಕಕ್ಕೆಬಹುರೂಪಮಂತಾಳ್ದನೋಕಾಲಭೈರವನೆಂಬತೆರನಾಗಲು || ೩೧ || ಭೀಷಣನೊಡನೆ
ಮೂರುಕೋಟಿದೈತೇಯರತಿ | ರೋಷದಿಂದೈದುತಿರ್ದರುಕಾಳಗಘೋರ | ವೇಷದಮಹಾರಾಕ್ಷಸಿಯರಂದೊಡಲ್ಗಳಂರುಧಿರ
ಮಾಂಸಂಗಳಿಂದ || ಪೋಷಿಸುವತವಕದಿಂಪೊರಮಟ್ಟುಬಂದುಸಂತೋಷದಿಂಬೆಟ್ಟದುದಿಗಳನಡರಿಕಂಡರು | ದ್ಘೋಷದಮ
ಹಾಬ್ಧಿಯಂಜರಿವಂತೆನಡೆದುಬಹಪಾರ್ಥನಪತಾಕಿನಿಯನು || ೩೨ || ಆರಾಕ್ಷಸಿಯೊಳೋರ್ವಳಾಧನಂಜಯನಪೊಂ | ದೇರ
ಪಳವಿಗೆದುದಿಯಹನುಮಂತನಂಕಂಡು | ದೂರಕೋಡಿದಳಂದು ಲಂಕಿಣಿಯನೊದೆದಕೋಡಗಮೆಂದು ಮತ್ತೋರ್ವಳು ||

ನರಮೇಧಕೆ–ಮನುಜ ಯಜ್ಞಕಾರ್ಯಕ್ಕೆ, ಇಕ್ಕುವೆಂ-ಇಡುತ್ತೇನೆ, ಮಂಟಪವನು–ಕ್ರತುರಚನಾಲಯವನ್ನು, ಬೇಗ–ತ್ವರೆಯಾಗಿ, ಕಟ್ಟಿಸು-ಏರ್ಪಡಿಸು, ಎಂದು–ಎಂದು ಹೇಳುತ್ತಾ, ಹೆಕ್ಕಳದೊಳು–ದುರಭಿಮಾನದಿಂದ, ಆತನಂ-ಆ ಪುರೋಹಿತನಾದ ಮೇದೋಹೋತನೆಂಬ ರಕ್ಕಸನನ್ನು, ಬೀಳ್ಕೊಂಡು–ಆಜ್ಞೆಯನ್ನು ಹೊಂದಿದವನಾಗಿ, ಭೀಷಣನು–ರಕ್ಕಸಾಧಿಪನಾದ ಭೀಷಣನು, ಮುಳಿದು–ಕೋಪಮಾಡಿಕೊಂಡು, ಎದ್ದು–ರಾಜಾಸ್ಥಾನದಿಂದ ಮೇಲಕ್ಕೆ ಎದ್ದವನಾಗಿ, ನಡೆವುತಿರಲ್–ಪಾರ್ಥನನ್ನು ಹಿಡಿತರಲು ಪ್ರಯಾಣಮಾಡುತ್ತಿರವಾಗ್ಗೆ, ಮುಕ್ಕೋಟಿ–ಮೂರುಕೋಟಿ ಸಂಖ್ಯೆಯಿಂದ ಕೂಡಿದ, ರಕ್ಕಸರು–ದಾನವರು, ಅಕ್ಕರಿಂ-ಸಂತೋಷದಿಂದ, ತವಕಕ್ಕೆ-ಅಪೇಕ್ಷೆಗಾಗಿ, ಕಾಲಭೈರವನು–ಪ್ರಳಯಕಾಲದ ಭೈರವಮೂರ್ತಿಯು, ಬಹು–ನಾನಾ ವಿಧಗಳಾದ, ರೂಪಮಂ–ಆಕಾರಾತಿಶಯಗಳನ್ನು, ತಾಳ್ದನೊ–ಹೊಂದಿರುತ್ತಾನೆಯೊ, ಎಂಬ–ಎನ್ನುವಂಥ, ತೆರನು–ಕ್ರಮವು, ಆಗಲು–ಉಂಟಾಗುವ ರೀತಿಯಿಂದ, ಪೊರಮಟ್ಟರು–ಹೊರಟವರಾದರು.

ಅ|| ವಿ|| ಪಡೆ–ಸೈನ್ಯ, ಹೊಂದು. ವಿಜಯ–ಸಂವತ್ಸರ, ಜಯನ ತಮ್ಮ. ಮೂರು ಕೋಟಿಗಳ+ಸಮಾಹಾರ=ಮುಕ್ಕೋಟಿ ಸಮಾ. ದ್ವಿ. ಸ. ||೩೧||

ಟೀ|| ಭೀಷಣನ–ದೈತ್ಯೇಂದ್ರನಾದ ಭೀಷಣನೆಂಬುವನ, ಒಡನೆ–ಸಹವಾಸದೊಂದಿಗೆ, ಮೂರು ಕೋಟಿ–ಮೂರು ಕೋಟಿ ಸಂಖ್ಯೆಯಿಂದ ಕೂಡಿದವರಾದ, ದೈತೇಯರು–ದಿತಿದೇವಿಯ ವಂಶಿಕರಾದ ರಾಕ್ಷಸರು, ಅತಿ ರೋಷದಿಂದ–ಅತಿಶಯವಾದ ಕೋಪದಿಂದ, ಕಾಳಗಕೆ–ಆ ಹವಕ್ಕೆ, ಐದುತಿರ್ದರು-ಆಗಮಿಸುತ್ತಿದ್ದರು, ಘೋರ–ಅತಿ ಭಯಂಕರವಾದ, ವೇಷದ–ಆಕಾರವುಳ್ಳವರಾದ, ರಾಕ್ಷಸಿಯರು–ದಾನವರ ಹೆಂಗಸರು, ಅಂದು–ಆ ಕಾಲದಲ್ಲಿ, ರುಧಿರ–ರಕುತಗಳಿಂದ, ಮಾಂಸಗಳಿಂದ–ಅಡಗುಗಳಿಂದ, ಒಡಲ್ಗಳಂ–ತಮ್ಮಯ ಅಂಗಗಳನ್ನು, ಪೋಷಿಸುವ-ಕಾಪಾಡಿಕೊಳ್ಳುವ, ತವಕದಿಂ–ಔತ್ಸುಕ್ಯದಿಂದ, ಪೊರಮಟ್ಟು– ಹೊರಟು, ಬಂದು - ಬಂದವರಾಗಿ. ಸಂತೋಷದಿಂ - ಆದರದಿಂದ, ಬೆಟ್ಟ- ನಗಗಳ, ತುದಿಗಳನು- ಅಗ್ರ ಭಾಗಗಳನ್ನು (ಶಿಖರಗಳ ಕೊನೆಯನ್ನು) ಅಡರಿ–ಹತ್ತಿದವರಾಗಿ, ಉದ್ಘೋಷದ–ಹೆಚ್ಚಾಗಿ ಧ್ವನಿಮಾಡುತ್ತಿರುವ, ಮಹಾಬ್ಧಿಯಂ–ದೊಡ್ಡ ಜಲಧಿಯನ್ನು, ಜರಿವಂತೆ–ಹೀಯಾಳಿಸುವಹಾಗೆ, ಬಹ–ಬರುತ್ತಲಿರ್ಪ, ಪಾರ್ಥನ–ಫಲ್ಗುಣನ, ಪತಾಕಿನಿಯನು–ವಾಹಿನಿಯನ್ನು, ಕಂಡರು–ಈಕ್ಷಿಸಿದವರಾದರು.

ಅ|| ವಿ|| ಮೂರುಕೋಟಿ– ಮೂರುಕೊನೆ. ಮೂರುಕೋಟಿ ಸಂಖ್ಯೆ ಪತಾಕವುಳ್ಳದ್ದು–ಪತಾಕಿನಿ. ಮಹತ್ತಾದ+ಅಬ್ಧಿ=ಮಹಾಬ್ಧಿ ವಿ. ಪೂ. ಕ. ಸ. ಮಹಾ+ಅಬ್ಧಿ=ಮಹಾಬ್ಧಿ ಸ. ಸಂಧಿ. ||೩೨||

ಟೀ|| ಆ ರಾಕ್ಷಸಿಯೊಳು–ಆ ರಾಕ್ಷಸ ಸ್ತ್ರೀಯರಲ್ಲಿ, ಓರ್ವಳು-ಒಬ್ಬಳು, ಧನಂಜಯನ-ಪಾರ್ಥನ, ಪೊಂದೇರ-ಸ್ವರ್ಣ

ದರೋ ಆ ಪಾರ್ಥನ ಸೇನೆಯಲ್ಲಿ ನುಗ್ಗಿ ಆ ವಿಜಯನನ್ನು ಹಿಡಿದು ನರಮೇಧಕ್ಕೆ ಏರ್ಪಡಿಸುವೆನು. ಅಧ್ವರ ಶಾಲೆಯನ್ನು ಜಾಗ್ರತೆಯಾಗಿ ಕಟ್ಟಿಸು ಎಂಬದಾಗಿ ಹೆಮ್ಮೆಯಿಂದ ಆ ಮೇದೋಹೋತನನ್ನು ಸಮಾಧಾನಪಡಿಸಿ ಅವನಿಂದ ಅಪ್ಪಣೆಯಂ ಪಡೆದು ಭೀಷಣನು ಕೋಪಾಕ್ರಾಂತನಾಗಿ ರಾಜಾಸ್ಥಾನದಿಂದ ಎದ್ದು ಪಾರ್ಥನನ್ನು ಹಿಡಿಯಲೋಸುಗ ಹೋಗುತ್ತಿರಲು ಮುಕ್ಕೋಟಿ ದಾನವರು ಅಕ್ಕರಿಂದ ತೆಕ್ಕೆತೆಕ್ಕೆಗಳಾಗಿ ಪ್ರಳಯಕಾಲದ ಕಾಲಭೈರವನು ನಾನಾ ಆಕಾರವನ್ನು ಧರಿಸಿಕೊಂಡು ಇರ್ಪನೋ ಎನ್ನುವಂತೆ ಪೊರಮಟ್ಟರು||೩೧|| ಆಗ ಭೀಷಣನ ಸಂಗಡ ಮುಕ್ಕೋಟಿ ದೈತ್ಯರು ಅತಿ ರೋಷದಿಂದ ಕಾಳಗಕ್ಕೆ ಬರುತ್ತಲಿದ್ದರು. ಭಯಂಕರವಾದ ರೂಪವುಳ್ಳವರಾದ ದನುಜೆಯರು ಆ ಸಮಯದಲ್ಲಿ ಶೋಣಿತದಿಂದಲೂ ಮಾಂಸಗಳಿಂದಲೂ ತಮ್ಮ ಶರೀರವನ್ನು ಪೋಷಿಸುವ ತವಕದಿಂದ ಹೊರಟು ಬಂದು ಆನಂದದಿಂದ ಪರ್ವತಗಳ ಶಿಖರಗಳನ್ನೇರಿಕೊಂಡು ಭಯಂಕರವಾಗಿ ಉದ್ಘೋಷಿಸುವ ಜಲಧಿಯನ್ನು ತಿರಸ್ಕರಿಸುವ ರೀತಿಯಿಂದ ಬರುತ್ತಲಿರುವ ಪಾರ್ಥನ ಪತಾಕಿನಿಯನ್ನು ಕಂಡವರಾದರು ||೩೨|| ಆ ದನುಜೆಯರಲ್ಲಿ ಒಬ್ಬ ರಕ್ಕಸಿಯು ಧನಂಜಯನ ಸ್ವರ್ಣವಿಕಾರವಾದ ರಥದ ಸ್ತಂಭದ ತುದಿಯಲ್ಲಿರುವ ಕಪೀಶ್ವರನಂ ಕಂಡು

ಊರಂಸುಡುವುದೆಂದುತನ್ನಸದನದಸರಕ | ನಾರೈವುದಕೆಪೋದಳ್ದನುಜೆಮತ್ತೊರ್ವ | ಳೋರಂತೆಣಿಸಿಕೊಂಡಳೀಕಪಿನೆಳಲ್ಗೆ ಸೈರಿಸದೆಂದುಸೈವರಿದಳು ||೩೩|| ಆಗಸಕೆಚಿಗಿದುರವಿಯಂತುಡುಕಿಧಿಂಕಿಟ್ಟು | ಸಾಗರಕೆಸೀತೆಯಂಕಂಡುಬನಮಂಕಿತ್ತು | ತಾಗಿದನಿಶಾಟರಂಸದೆದುಲಂಕೆಯನುರುಪಿದಶವದನನಂಭಂಗಿಸಿ || ಪೋಗಿಪಾತಾಳದಸುರರನೊಕ್ಕಲಿಕ್ಕಿಪಿರಿ | ದಾಗಿಬೆಟ್ಟಂಗಳಂಪೊತ್ತುಮಿರಿದಕಪಿಯು | ನೀಗನಿಟ್ಟಸೆಬೆದರದಿರ್ದಪೆನದೆಂತುಟೆಂದೋರ್ವರಕ್ಕಸಿನುಡಿದಳು ||೩೪|| ಬೆದರದಿರಿಬರಿದೆನೀವೀಕೋತಿಯಂತನ್ನ | ತುದಿವೊಲೆಗಳಿಂದಪ್ಪಳಿಸಿನರನಸೈನ್ಯಮಂ | ಸದೆದುಕೆಡವುವೆನೆಂದುಯೋಜನಸ್ತನಿಯೆಂಬರಕ್ಕಸಿನು

---

ವಿಕಾರವಾದ ರಥದ, ಪಳವಿಗೆ_ಪತಾಕೆಯ, ತುದಿಯ_ಅಗ್ರಭಾಗದಲ್ಲಿರುವ, ಹನುಮಂತನಂ_ಕಪೀಶ್ವರನನ್ನು, ಕಂಡು_ಈಕ್ಷಿಸಿ, ಅಂದು_ಆ ಕಾಲದಲ್ಲಿ, ಲಂಕಿಣಿಯನು_ಲಂಕಿಣಿ ಎಂಬ ರಕ್ಕಸಿಯನ್ನು, ಒದೆದ_ಒದ್ದು ಕೆಡವಿದ ವಾನರವು, ಎಂದು_ಎನ್ನುತ್ತಾ, ದೂರಕೆ_ದೂರವಾದ ಸ್ಥಳಕ್ಕೆ, ಓಡಿದಳು_ಪರಿಧಾನಮಾಡಿದಳು, ಮತ್ತೊರ್ವಳು_ ಮತ್ತೊಬ್ಬ ರಕ್ಕಸಿಯು, ಊರಂ-ಪುರವನ್ನು, ಸುಡುವುದೆಂದು_ದಹಿಸುವುದೆಂಬದಾಗಿ, ತನ್ನ_ತನ್ನಯ, ಸದನದ-ಗೃಹದಲ್ಲಿರುವ, ಸರಕನು_ಪದಾರ್ಥಗಳನ್ನು, ಆರೈವುದಕ್ಕೆ-ರಕ್ಷಿಸಿಸುವುದಕ್ಕೋಸ್ಕರ, ಪೋದಳ್-ಹೊರಟಳು, ದನುಜೆ-ರಾಕ್ಷಸಿಯಾದ, ಮತ್ತೊರ್ವಳು-ಬೇರೊಬ್ಬಳು, ಓರಂತೆ-ಕೋಡಗ ಚೇಷ್ಟೆಯಂತೆ, ಎಣಿಸಿಕೊಂಡಳು_ಗ್ರಹಿಸಿದವಳಾದಳು, ಕಪಿ-ವಾನರವು, ನೆಳಲ್ಗೆ-ನೆರಳಿಗೋಸ್ಕರವಾಗಿ ಮಾಡಿಕೊಂಡಿರುವ ಸ್ಥಳವನ್ನು, ಸೈರಿಸದು_ಸಹನೆಯನ್ನು ಹೊಂದದು, ಎಂದರೆ (ಕಿತ್ತುಹಾಕದೇ ಇರುವುದಿಲ್ಲ) ಎಂದು-ಎಂದು ಆಡಿಕೊಳ್ಳುತ್ತಾ, ಸೈವರಿಸಿದಳು_ಕೂಗಿಕ್ಕೊಂಡು ಹೇಳಿದಳು.

ಅ|| ವಿ|| ಕೋಡಗ_ಕೋತಿ, (ಸದನ_ಮನೆ, ವದನ_ಮುಖ) ದನು_ದನುವಿನ ಕುಲದಲ್ಲಿ, ಜೆ_ಹುಟ್ಟಿದಳು. ||೩೩||

ಟೀ|| ಆಗಸಕೆ_ಅಂತರಿಕ್ಷಕ್ಕೆ, ಚಿಗಿದು_ಮೇಲಕ್ಕೆ ಎಗರಿ, ರವಿಯಂ-ಭಾಸ್ಕರನನ್ನು, ತುಡುಕಿ-ಹಿಡಿದು ನೊಣೆಯುವುದಕ್ಕೆ ಪೋಗಿ, ಸಾಗರಕ್ಕೆ_ಸಮುದ್ರಕ್ಕಿಂತಲೂ ದೊಡ್ಡದಾದ ಜಲಭಾಗಕ್ಕೆ, ಧಿಂಕಿಟ್ಟು_ಹಾರಿಕೊಂಡು, ಸೀತೆಯಂ_ಜಾನಕೀದೇವಿಯನ್ನು, (ಶ್ರೀರಾಮರ ಧರ್ಮಪತ್ನಿಯಾದ ಸೀತಾದೇವಿಯನ್ನು) ಕಂಡು_ಈಕ್ಷಿಸಿ, ಬನವಂ_ಅಶೋಕವನವನ್ನು, ಕಿತ್ತು_ನಾಶಮಾಡಿ, ತಾಗಿದ_ವನವನ್ನು ನಾಶಮಾಡಿದ ಕೋಡಗವನ್ನು ಹಿಡಿಯುವದಕ್ಕಾಗಿ ತಗುಲಿ ಬಿದ್ದ, ನಿಶಾಟರಂ_ದಾನವರನ್ನು ಸದೆದು_ಸಂಹರಿಸಿ, ಲಂಕೆಯ_ಲಂಕೆಯೆಂಬ ನಗರವನ್ನು, ಉರುಪಿ-ದಹಿಸಿ, ದಶವದನನಂ_ಹತ್ತುತಲೆಗಳುಳ್ಳ ರಾವಣಾಸುರನನ್ನು, ಭಂಗಿಸಿ-ಮಾನವನ್ನು ಕಳೆದು, ಪೋಗಿ-ತಳಲೋಕಕ್ಕೆ ಪೋಗಿ, (ಪಾತಾಳಲೋಕವನ್ನು ಪ್ರವೇಶಿ) ಪಾತಾಳದ ಅಸುರರನ್ನು_ಪಾತಾಳಲೋಕವಾಸಿಗಳಾದ ರಾಕ್ಷಸಾದಿಗಳನ್ನು, ಒಕ್ಕಲಿಕ್ಕಿ-ನಾಶಮಾಡಿ, ಪಿರಿದಾಗಿ-ಅಧಿಕವಾಗಿ, ಬೆಟ್ಟಂಗಳಂ_ಅಚಲಗಳನ್ನು, ಪೊತ್ತು_ಧರಿಸಿಕೊಂಡು, ಮಿರಿದ_ಅತಿಕ್ರಮಿಸಿದ, ಕಪಿಯನು_ವಾನರವನ್ನು, ಈಗ-ಈ ಕಾಲದಲ್ಲಿ ನಿಟ್ಟಿಸಿ-ಕಂಡವಳಾಗಿ, ಬೆದರದೆ-ಹೆದರಿಕ್ಕೊಳ್ಳದೆ, ಇರ್ದಪೆನು-ಇರುತ್ತೇನೆ, ಅದೆಂತುಟೊ_ಅದೆಂಥಾದ್ದೊ, ಎಂದು_ಎಂದುಕೊಳ್ಳುತ್ತಾ, ಓರ್ವ ರಕ್ಕಸಿ_ಒಬ್ಬ ದನುಜೆಯು, ನುಡಿದಳು_ಪೇಳಿದಳು.

ಅ|| ವಿ|| ಆಗಸ_ದ್ಭ. ಆಕಾಶ_ತ್ಸ. ಸಾಗರ-ಸಗರನ ಪುತ್ರರಿಂದಾದುದು ಸಾಗರ. ಬನ-ದ್ಭ. ವನ_ತ್ಸ. ದಶವದನಗಳನ್ನುಳ್ಳವನು=ದಶವದನನು ಬ. ಸ. ||೩೪||

ಟೀ|| ನೀವು-ನೀವುಗಳಾದರೊ, ಬರಿದೆ- ವ್ಯರ್ಥವಾಗಿ, ಬೆದರದೆ_ ಅಂಜಿಕೊಳ್ಳದೆ, ಇರಿ-ಇರುತ್ತಿರಿ, ಈ ಕೋತಿ

---

ಪೂರ್ವದಲ್ಲಿ ರಾವಣನ ದ್ವಾರಪಾಲಕಿಯಾಗಿದ್ದ ಲಂಕಿಣಿಯನ್ನು ಒದೆದ ಕೋಡಗವು ಎಂಬದಾಗಿ ಹೇಳುತ್ತಾ ದೂರಕ್ಕೆ ಓಡಿದಳು, ಆಗ ಮತ್ತೊರ್ವಳು ಊರನ್ನು ದಹಿಸುವುದೆಂದು ತನ್ನ ಗೃಹದಲ್ಲಿರುವ ಸರಕನ್ನು ಕಾಪಾಡುವುದಕ್ಕಾಗಿ ಹೊರಟಳು. ರಕ್ಕಸಿಯಾದ ಮತ್ತೊರ್ವಳು ಕಪಿಯ ಚೇಷ್ಟೆಯೆಂದು ಯೋಚಿಸಿಕ್ಕೊಂಡು ಹಿಂತಿರುಗಿದಳು. ಮತ್ತೊಬ್ಬಳು ಈ ಕಪಿಯು ಬಿಸಿಲಿಗೆ ಮರೆಯಾಗಿ ಮಾಡಿದ್ದ ಪರ್ಣಶಾಲೆಯನ್ನು ನಾಶಮಾಡುತ್ತೆಂದು ಕೂಗಿಕೊಂಡಳು ||೩೩|| ಮತ್ತೊಬ್ಬ ದನುಜೆಯು ಆ ಕೋಡಗನಂ ನೋಡಿ ಇದು ಪೂರ್ವದಲ್ಲಿ ಆಕಾಶಕ್ಕೆ ಹಾರಿ ಸೂರ್ಯನನ್ನು ಹಿಡಿದು ನುಂಗುವುದಕ್ಕೆ ಹೋಗಿ ಸಾಗರಕ್ಕೆ ಲಂಘಿಸಿ ರಾಮಚಂದ್ರನ ಧರ್ಮಪತ್ನಿಯಾದ ಸೀತೆಯನ್ನು ಕಂಡು ರಾವಣನ ಅಶೋಕವನವನ್ನು ನಾಶಮಾಡಿ ತನ್ನನ್ನು ಹಿಡಿಯಲಿಕ್ಕೆ ಬಂದವರನ್ನು ಅಂತಕನ ಮನೆಗೆ ಕಳುಹಿಸಿ ಲಂಕೆಯನ್ನು ಅಗ್ನಿಯಿಂದ ಉರುಹಿ ದಶಕಂಠನನ್ನು ಅವಮಾನಪಡಿಸಿ ಪಾತಾಳಲೋಕಕ್ಕೆ ನುಗ್ಗಿ ಅಲ್ಲಿದ್ದ ರಕ್ಕಸರನ್ನು ಸಂಹರಿಸಿ ಹೆಚ್ಚಾಗಿ ಬೆಟ್ಟಗಳನ್ನು ಹೊತ್ತು ಮಿಂಚಿದ ಕಪಿಯನ್ನು ಈವಾಗ ನೋಡಿ ಹೆದರದೆ ಇರುವುದೆಂತುಟೋ ಎಂದು ಓರ್ವ ರಕ್ಕಸಿ ನುಡಿದಳು || ೩೪ || ಎಲೈ ದನುಜರಿರಾ ನೀವು ಬೆದರ

ಡಿಯೆಲಾಲಿಸಿ ‖ ಗದಗದಿಸೆಬೇಡಪೇರೊಡಲೊಳಡಸುವೆನಿನಿತು ಸದರಮಂನೋಡುತಿರಿಸಾಕೆಂದುರೋಷದಿಂ । ದೊದರಿದಳು ಮತ್ತೊತ್ತೀರ್ವಳಸುರೆಲಂಬೋದರೀ ನಿಶಾಚರಿಮಹಾಭಯಕರಿ ‖ ೩೫ ‖ ಬಳಿಕುಳಿದರಕ್ಕಸಿಯರೆಲ್ಲರುಂಫಲುಗುಣನ । ಬಲಮಂಪೊಡೆದುನುಂಗಲೆಂದುಬಾಯ್ದೆರೆದುಕಿಡಿ । ಗಳನುಗುಳುತಾರ್ಭಟಿಸುತೈದಿದರ್ಕೂಡೆಲಂಬೋದರಿನರನಪಡೆಯನು ‖ ಸೆಳೆದೊಡಲ್ಗಡಸಿಕೊಳುತಿರ್ದಳೊಡನೊಡನೆಬಾಂದಳಕಡ । ರ್ದೇಳ್ವನಿಡುಮೊಲೆಗಳಿಂಬಲವನ । ಪ್ಪಳಿಸಿದಳ್ತಿರುತಿರುಗಿಬೀಸುತಯೋಜನಸ್ತನಿಕನಲ್ದಾಕ್ಷಣದೊಳು ‖೩೬‖ ಅಸುರಕೋಟಿತ್ರಯದೊಡನೆಬಂದುಭೀಷಣಂ।ಮುಸುಕಿದಂಕೈದುಗಳಮಳೆಗಳಂಕರೆವುತ್ತ।

---

ಯಂ–ಈ ಕೋಡಗನನ್ನು, ತನ್ನ-ಎನ್ನಯ, ತುದಿಮೊಲೆಗಳಿಂದ-ಕುಚದ ಅಗ್ರಭಾಗದಿಂದ, ಅಪ್ಪಳಿಸಿ-ಬಡಿದು, ನರನ–ಪಾರ್ಥನ, ಸೇನೆಯಂ–ವಾಹಿನಿಯನ್ನು, ಸದೆದು–ನಾಶಮಾಡಿ, ಕೆಡಪುವೆನು–ಬೀಳುವಂತೆ ಮಾಡುವೆನು, ಎಂದು–ಎಂಬದಾಗಿ ಹೇಳಿ, ಯೋಜನಸ್ತನಿ–ಒಂದು ಯೋಜನ ಉದ್ದವಾದ ಕುಚಗಳುಳ್ಳವಳು, ಎಂಬ–ಎಂಬದಾಗಿ ಹೆಸರುಳ್ಳ, ರಕ್ಕಸಿ-ದನುಜೆಯು, ನುಡಿಯಲು–ಆಡಲಾಗಿ, ಆಲಿಸಿ–ಕೇಳಿದವಳಾಗಿ, ಗದಗದಿಸಬೇಡ–ಸುಳ್ಳುಮಾತನ್ನಾಡಬೇಡ, ಪೇರುಡಲೊಳು–ದೊಡದಾದ ಉದರದಲ್ಲಿ, ಅಡಸುವೆನು–ಈ ವಾಹಿನಿಯನ್ನೆಲ್ಲಾ ಭಕ್ಷಿಸಿ ಭರ್ತಿಮಾಡಿಕೊಳ್ಳುತ್ತೇನೆ (ದೊಡ್ಡಹೊಟ್ಟೆಯಲ್ಲಿ ಈ ಸೈನ್ಯದವರನ್ನೆಲ್ಲಾ ಅವುಕಿಕೊಳ್ಳುತ್ತೇನೆ), ಇನಿತು–ಇಷ್ಟುಮಾತ್ರ, ಸದರಮಂ–ಅರಿಗಳಂ ಜಯಿಸುವ ಕಷ್ಟವಿಲ್ಲದ ಸಾಮರ್ಥ್ಯವನ್ನು, ನೋಡುತಿರಿ-ಈಕ್ಷಿಸುತ್ತಿರುವರಾಗಿ, ಸಾಕು–ಮಾತಾಡುವಿಕೆಯನ್ನು ನಿಲ್ಲಿಸುವರಾಗಿ, ಎಂದು–ಎಂಬದಾಗಿ ಹೇಳಿ, ರೋಷದಿಂದ–ಕೋಪೋದ್ರೇಕದಿಂದ, ಮತ್ತೊತ್ತೀರ್ವಳ್–ಮಗದೊಬ್ಬಳಾದ, ಲಂಬೋದರಿ–ನೇತಾಡುವ ಉದರವುಳ್ಳವಳಾದ, ಮಹಾ–ಅತ್ಯಧಿಕವಾದ, ಭಯಂಕರಿ–ಹೆದರಿಕೆಯನ್ನುಂಟುಮಾಡುವಳಾದ, ನಿಶಾಚರಿ–ನಿಶಿಯಲ್ಲಿ ತಿರುಗಾಡುವಳಾದ, ಅಸುರೆ–ದೈತ್ಯಸ್ತ್ರೀಯು, ಒದರಿದಳು–ಕಾಡು ಹರಟೆಯನ್ನು ಆಡಿದಳು ‖

ಅ‖ ವಿ‖ ಲಂಬ-ಉದ್ದವಾದ, ಉದರಿ-ಹೊಟ್ಟೆಯುಳ್ಳವಳು = ಲಂಬೋದರಿ, ಬಹು. ಸ. ಲಂಬ+ಉದರಿ = ಲಂಬೋದರಿ, ಗುಣಸಂಧಿ, ರಕ್ಕಸಿ-ತ್ಧ್ಭ. ರಾಕ್ಷಸಿ-ತ್ಸ. ತುದಿಯಾದ + ಮೊಲೆ = ತುದಿಮೊಲೆ, ವಿ. ಪೂ. ಕ. ಸ್ತನಗಳುಳ್ಳವಳು–ಸ್ತನಿ. ಸ್ತ್ರೀ, ಇದು + ಕೋತಿ = ಈಕೋತಿ, ಗ. ಸ. (ಮೊಲೆ, ಸ್ತನ, ಮಲೆ–ಗರ್ವಪಡುವುದು) ಪಿರಿದು + ಒಡಲ್ = ಪೇರೊಡಲ್, ವಿ. ಪೂ. ಕ. ‖೩೫‖

ಟೀ‖ ಬಳಿಕ-ಆತರುವಾಯದಲ್ಲಿ, ಉಳಿದ–ಬಾಕಿಯಾಗಿದ್ದ, ರಕ್ಕಸಿಯರೆಲ್ಲರುಂ–ದೈತ್ಯಸ್ತ್ರೀಯರೆಲ್ಲರೂ, ಫಲುಗುಣನ–ಪಾರ್ಥನ, ಬಲಮಂ–ಸೇನೆಯನ್ನು, ಪೊಡೆದು–ಶಿಕ್ಷಿಸಿ, ನುಂಗಲೆಂದು– ನೊಣೆಯಬೇಕೆಂಬದಾಗಿ, ಬಾಯ್ದೆರದು-ಆಸ್ಯವನ್ನು ತೆರದುಕೊಂಡು, ಕಿಡಿಗಳನು–ಅಗ್ನಿಯ ಕಣಗಳನ್ನು, ಉಗುಳುತ–ವಮನಮಾಡುತ್ತ, ಆರ್ಭಟಿಸುತ–ಅಬ್ಬರಿಸುತ್ತ, ಐದಿದರು–ಆಗಮಿಸಿದರು, ಕೂಡೆ-ಒಡನೆಯೇ, ಲಂಬೋದರಿ–ಜೋಲು ಉದರವುಳ್ಳ ರಕ್ಕಸಿಯು (ಜೋಲಾಡುತ್ತಿರುವ ಉದರವುಳ್ಳವಳಾದ್ದರಿಂದ ಈ ಹೆಸರು ಬಂದಿತು), ನರನ–ಫಲುಗುಣನ, ಪಡೆಯನು–ಸೇನೆಯನ್ನು, ಸೆಳೆದು–ತನ್ನಬಳಿಗೆ ಎಳೆದುಕೊಂಡು, ಒಡಲ್ಗೆ–ತನ್ನಯ ಉದರಕ್ಕೆ, ಅಡಸಿಕೊಳ್ಳುತ-ಭರ್ತಿಮಾಡಿಕೊಳ್ಳುತ (ಭಕ್ಷಿಸುತ್ತ), ಇರ್ದಳು–ಇರುತ್ತಿದ್ದಳು, ಒಡನೆ–ತಕ್ಷಣವೇ, (ಕೂಡಲೆ) ಬಾಂದಳಕೆ–ಅಂತರಿಕ್ಷಕ್ಕೆ, ಅಡರ್ದು–ಏರಿದವಳಾಗಿ, ಏಳ್ವ-ಏಳುತ್ತಲಿರುವ, (ಬೀಸಿಕೊಂಡು ಬರುತ್ತಲಿರುವ), ನಿಡು-ನಿಡುವಾದ, ಮೊಲೆಗಳಿಂ–ಕುಚಗಳ ದೆಸೆಯಿಂದ, ಬಲವನು–ಸೇನೆಯನ್ನು, ತಿರುತಿರುಗಿ–ತಿರುಗಿ ತಿರುಗಿಕೊಂಡು, ಬೀಸುತ್ತ–ಚಲಿಸುತ್ತ, ಕನಲ್ದು-ಆಗ್ರಹಗೊಂಡು, ಯೋಜನಸ್ತನಿ-ಒಂದು ಯೋಜನ ಉದ್ದವಾದ ಸ್ತನಗಳುಳ್ಳ ರಾಕ್ಷಸಿಯು, ಆಕ್ಷಣದೊಳು–ಆವೇಳೆಯಲ್ಲಿ, ಅಪ್ಪಳಿಸಿದಳು–ಬಡಿದಳು ‖

---

ದಿರಿ ಈ ಕೋತಿಯನ್ನು ನನ್ನ ಮೊಲೆಯ ತೊಟ್ಟಿನಿಂದ ಅಪ್ಪಳಿಸಿ ನರನ ಸೈನ್ಯವನ್ನು ಹೊಡದು ಕೆಡವುತ್ತೇನೆ. ಎಂದು ಯೋಜನಸ್ತನಿಯೆಂಬ ರಕ್ಕಸಿಯು ಹೇಳಲು ಅದಂ ಕೇಳಿ ಸುಳ್ಳುಮಾತನ್ನಾಡಬೇಡ ಎನ್ನಪೇರೊಡಲೊಳು ಈ ಸೈನ್ಯವನ್ನೆಲ್ಲಾ ತಿಂದು ಅಡಗಿಸಿಕೊಳ್ಳುತ್ತೇನೆ. ಇಷ್ಟು ಸುಲಭ ಶಕ್ತಿಯನ್ನು ನೋಡುತ್ತಾ ಇರಿ ಎಂಬದಾಗಿ ಮತ್ತೊತ್ತೀರ್ವಳಾದ ಲಂಬೋದರಿಯೆಂಬ ರಕ್ಕಸಿಯು ಪೇಳಿದಳು. ‖೩೫‖ ಬಳಿಕ ಮಿಕ್ಕ ರಕ್ಕಸಿಯರೆಲ್ಲರೂ ಫಲುಗುಣನ ಸೈನ್ಯವನ್ನು ಹೊಡೆದು ನುಂಗಬೇಕೆಂದು ಬಾಯ್ದೆರದು ಬೆಂಕಿಯ ಕಿಡಿಗಳನ್ನು ಕಾರುತ್ತಾ ಆರ್ಭಟಿಸುತ್ತಾ ಬಂದರು. ಕೂಡಲೇ ಲಂಬೋದರಿ ಎಂಬ ಹೆಸರುಳ್ಳ ರಕ್ಕಸಿಯು ಪಾರ್ಥನ ಸೈನ್ಯವನ್ನು ಎಳದುಕೊಂಡು ತನ್ನಹೊಟ್ಟೆಗೆ ತುಂಬಿಕೊಳ್ಳುತ್ತಾ ಇದ್ದಳು. ಒಡನೆಯೆ ಅಂತರಿಕ್ಷಕ್ಕೆ ಹಾರಿಕೊಂಡು ಬರುತ್ತಿರುವ ಉದ್ದವಾದ ಮಾಲೆಗಳಿಂದ ಬಲವಾದ ಸೇನೆಯನ್ನು ತಿರುತಿರುಗಿ ಬೀಸುತ್ತಾ ರೋಷಗೊಂಡು ಒಂದು ಗಾವುದ ಉದ್ದಸ್ತನವುಳ್ಳ ರಕ್ಕಸಿಯು ಆಕ್ಷಣದಲ್ಲಿ ಅಪ್ಪಳಿಸಿದಳು ‖ ೩೬ ‖ ಆಬಳಿಕ ಭೀಷಣನೆಂಬ ರಕ್ಕಸನು ಕೋಟಿತ್ರ

ಮುಸುಗಿದುರಿ ಪೊಗೆಸಿಡಿಲ್ಮಿಂಚುಕತ್ತಲೆಗಾಳಿ ಮುಗಿಲೊಡ್ಡುಧೂಳ್ಗಳಿಂದ ॥ ದೆಸೆಗೆಡಿಸುತಹಿಸಿಂಹಶರಭಗಜಭೇರುಂಡ । ಪಸಿದ ಪುಲಿಪಂದಿವೃಕವೃಷಭಂಗಳಾಗಿ ಗ । ರ್ಜಿಸುತುಗ್ರಭೂತಂಗಳಾಗಿ ಬಾಯ್ದೆರೆದಬ್ಬರಿಸುತ ಪಾರ್ಥನಪಡೆಯನು ॥ ೩೭ ॥ ಮುಸಗಿ ದಂಬಳಿಕ ರಣಭೀಷಣಂಭೀಷಣಂ । ವಸುಮತಿಗೆಕಾಲಾಂತಕೋಪಮಂಕೋಪಮಂ । ಪಸರಿಸದನರಿದಂನಿದಾನವಂದಾನವಂ ಫಲುಗುಣನಮುಂದೆನಿಂದು ॥ ಬಸೆದೆನ್ನನೈದೆಪೆತ್ತಾತನಂತಾತನಂ । ಕುಸುರಿದರಿದನಿಲಜನತಮ್ಮನೇತಮ್ಮನೇ । ಳಿಸುತ ಬಹನಿನ್ನಹದನಾವುದೈನಾವು ದೈತ್ಯರ್ಕೊಲ್ಲದಿರೆವೆಂದನು ॥೩೮॥ ಈಗಳದರಿಂದ ನಿನ್ನಂಪಿಡಿದುನರಮೇಧ । ಯಾಗೆಕ್ಕೆಪಶುಮಾಳ್ಪೆನೆಂದು

---

ಅ॥ ವಿ॥ ಚಾತ್ಯೈಕವಚನವು ಕೆಲವುವೇಳೆ ಬಹುತ್ವದಲ್ಲ ಬರುವುದುಂಟು ಉ. ದಾ. ಜೇನುಹುಳ ಮುತ್ತಿತು-ಜೇನುಹುಳ ಮುತ್ತಿದವು ॥ ಆರ್ಭಟ-ತ್ಸ, ಅಬ್ಬರ-ದ್ಭ. ॥೩೬॥

ಟೀ॥ ಭೀಷಣಂ-ರಾಕ್ಷಸಾಧಿಪತಿಯಾದ ಭೀಷಣನೆಂಬುವನು, ಅಸುರ-ದಾನವರ, ಕೋಟಿತ್ರಯದ - ಮುಕ್ಕೋಟಿಯ, ಬಡನೆ-ಬಂದಿಗೆ, ಕೈದುಗಳ-ಕತ್ತಿ ಮೊದಲಾದ ಆಯುಧಗಳ, ಮಳೆಗಳಂ-ವೃಷ್ಟಿಗಳನ್ನು, ಕರೆವುತ್ತ-ಬೀಳಿಸುತ್ತ (ಸುರಿಯುತ್ತಾ) ಮುಸುಕಿದಂ-ಆವರಿಸಿಕೊಂಡನು, ಮಸಗಿದ-ವ್ಯಾಪ್ತವಾದ, ಉರಿ-ಬೆಂಕಿಯ ಜ್ವಾಲೆಯು, ಪೊಗೆ-ಧೂಮವು, ಸಿಡಿಲು-ಅಶನಿಪಾತವೂ, ಮಿಂಚು-ಹೊಳವುಗಳೂ, ಕತ್ತಲೆ-ಅಂಧಕಾರವೂ, ಗಾಳಿ-ವಾಯುವೂ, ಮುಗಿಲ-ಮೋಡದ, ಒಡ್ಡು-ಸಮುದಾಯವೂ, ಧೂಳ್ಗಳಿಂದ-ರಜಸ್ಸೇ ಮೊದಲಾದವುಗಳಿಂದ, ಅಹಿ-ನಾಗವು, ಸಿಂಹ-ಪಂಚಾನನವೂ, ಶರಭ-ಶರಭವೆಂಬ ಮೃಗವೂ, ಗಜ-ಹಸ್ತಿಯೂ, ಬೇರುಂಡ-ಬೇರುಂಡವೆಂಬ ಎರಡು ಮುಖವುಳ್ಳ ಪಕ್ಷಿಯೂ, ಪಸಿದ-ಹಸಿವೆಯುಳ್ಳ, ಪುಲಿ-ಶಾರ್ದೂಲವೂ, ಪಂದಿ-ವರಾಹವೂ, ವೃಕ-ತೋಳವೂ, ವೃಷಭಗಳೂ-ಎತ್ತೇ ಮೊದಲಾದ ಪ್ರಾಣಿಗಳೂ, ಆಗಿ-ಮೊದಲಾಗಿ, ಬಾಯಿತೆರದು-ಬಾಯಿಯನ್ನು ವಿಸ್ತರಿಸಿಕೊಂಡು, ಅಬ್ಬರಿಸುತ-ಗರ್ಜಿಸುತ್ತಾ, ಪಾರ್ಥನ-ಫಲುಗುಣನ, ಪಡೆಯನು-ವಾಹಿನಿಯನ್ನು, ಉಗ್ರಭೂತಂಗಳಾಗಿ-ಭಯಂಕರವಾದ ಪಿಶಾಚಸ್ವರೂಪಗಳಾಗಿ, ದೆಸೆಗೆಡಿಸಿತು-ದಿಕ್ಕುತೋರದಂತೆ ಮಾಡಿತು ॥

ಅ॥ ವಿ॥ ದೆಸೆಯಂ + ಕೆಡಿಸಿತು = ದೆಸೆಗೆಡಿಸಿತು, ಕ್ರಿ. ಸ. ಸಿಂಹ-ತ್ಸ. ಸಿಂಗ-ದ್ಭ. ಮಳೆ + ಕರೆ = ಮಳೆಗರೆ, ಗಕಾರ, ಆ. ಸಂಧಿ ॥ ೩೭॥

ಟೀ॥ ಬಳಿಕ-ಅನಂತರದಲ್ಲಿ, ರಣ-ಕಾಳಗವು, ಭೀಷಣಂ-ಭಯಂಕರಾಕಾರನಾದ, ಭೀಷಣಂ-ಭೀಷನೆಂಬ ರಕ್ಕಸನು, ಮಸಗಿದಂ-ರೋಷಗೊಂಡನು, ವಸುಮತಿಗೆ-ಪೃಥ್ವಿಗೆ, ಕಾಲ-ಪ್ರಳಯಕಾಲದ, ಅಂತಕ-ಯಮಧರ್ಮನಿಗೆ, ಉಪಮಂ-ಸಾಮ್ಯವಾಗಿ ಉಳ್ಳ, ಕೋಪಮಂ-ರೋಷವನ್ನು, ಪಸರಿಸಿದಂ-ಅಭಿವೃದ್ಧಿಪಡಿಸಿದನು, ದಾನವಂ-ದೈತ್ಯನಾದ ಭೀಷಣನು, ನಿದಾನವಂ-ಕಾಳಗನನ್ನು, ಅರಿದಂ-ತಿಳಿದುಕೊಂಡನು, ಫಲುಗುಣನು-ಧನಂಜಯನ, ಮುಂದೆ-ಮುಂಭಾಗಕ್ಕೆ, ನಿಂದು-ನಿಂತುಕೊಂಡು, ಬಸೆದು-ಶ್ರಮಪಟ್ಟು, ಐದೆ-ಬಂದುದಾಗಿ, ಎನ್ನಂ-ನನ್ನನ್ನು, ಪೆತ್ತಾತನಂ-ಪಡೆದವನಾದ, ತಾತನಂ-ಜನಕನಾದ ಬಕಾಸುರನನ್ನು, ಕುಸುರಿ-ಕತ್ತರಿಸಿ, ತರಿದ-ನಾಶಮಾಡಿದವನಾದ, ಅನಿಲಜನ-ಭೀಮಸೇನನ, ತಮ್ಮನೆ-ಸಹೋದರನಾದ ಪಾರ್ಥನೆ, ನೀನು, ಎಮ್ಮನು-ನಮ್ಮಗಳನ್ನು, ಏಳಿಸುತ-ರೇಗಿಸುತ್ತಾ (ಹಾಸ್ಯಮಾಡುತ್ತಾ), ಬಹ- ಬರುತ್ತಲಿರುವ ನಿನ್ನ-[illegible]ಯ, ಹದನು-ವಿಷಯವು, ಆವುದೈ-ಯಾವುದಾಗಿರುತ್ತಯ್ಯಾ, ನಾವು-ನಾವುಗಳಾದರೊ, ದೈತ್ಯರು-ದಾನವರಾಗಿರುತ್ತೇವೆ, ಕೊಲ್ಲದೆ-ಸಂಹರಿಸದೆ, ಇರೆವು-ಇರಲಾರೆವು, ಎಂದನು-ಎಂಬದಾಗಿ ನುಡಿದನು ॥

ಅ॥ ವಿ॥ ರಣದಲ್ಲಿ + ಭೀಷಣ = ರಣಭೀಷಣ, ಸ. ತ. ಕುಸರದೆ + ಇರಿ = ಕುಸರದಿರಿ, ಎ. ಲೋ. ಸಂಧಿ. ಆರ್ಭಟ-ತ್ಸ, ಅಬ್ಬರ-ದ್ಭ. ॥೩೮॥

---

ಯದ ಸೈನ್ಯದೊಡನೆ ಆಯುಧಗಳ ವರ್ಷಗಳನ್ನು ಕರೆಯುತ್ತಾ ಮುತ್ತಿಕೊಂಡನು, ಆಗ ವ್ಯಾಪಿಸಿಕೊಂಡ ಬೆಂಕಿಯ ಜ್ವಾಲೆ, ಧೂಮ, ಸಿಡಿಲು, ಮಿಂಚುಗಳು, ಕತ್ತಲೆ, ಗಾಳಿ, ಮೋಡದ ಗುಂಪು, ಧೂಳಿ, ಸರ್ಪ, ಸಿಂಹ, ಶರಭ, ಗಜ, ಬೇರುಂಡ, ಹಸ, ಹುಲಿ, ವರಾಹ, ವೃಕ, ಎತ್ತುಗಳು ಮೊದಲಾಗಿ ಭಯಂಕರವಾದ ಧ್ವನಿಮಾಡುತ್ತಾ ಭಯಂಕರಳಾದ ಭೂತಗಳು ಆಗಿಯೂ ಬಾಯಿಯ ತೆರದುಕೊಂಡು ಅಬ್ಬರಿಸುತ ಪಾರ್ಥನ ಪಡೆಯನ್ನು ದಿಕ್ಕುತೋಚದಂತೆ ಮಾಡಿದವು ॥ ೩೭ ॥ ಬಳಿಕ ಕಾಳಗದಲ್ಲಿ ಭಯಂಕರಾಕಾರನಾದ ಭೀಷಣನು ರೋಷಗೊಂಡು ಪೃಥ್ವಿಗೆ ಪ್ರಳಯಕಾಲದ ಅಂತಕನಿಗೆ ಉಪಮಾನವಾಗಿ ರೋಷವನ್ನು ವಿಸ್ತರಿಸಿದನು, ದಾನವನಾದ ಭೀಷಣನು ಯುದ್ಧ ಕಾರಣವನ್ನು ಅರಿದವನಾಗಿ, ಪಾರ್ಥನ ಎದುರಿಗೆ ನಿಂತುಕೊಂಡು ಆಯಾಸಪಟ್ಟು ಬಂದು ಎನ್ನ ಹೆತ್ತಾತನಾದ ಬಕನನ್ನು ಸಂಹರಿಸಿದ ಭೀಮನ ಸಹೋದರನೇ ನೀನು? ನಮ್ಮನ್ನು ರೇಗಿಸುತ್ತ ಬರುತ್ತಿರುವ ನಿನ್ನಯ ವಿಚಾರವೇನು? ನಾವಾದರೋ ರಾಕ್ಷಸರು, ಮಹಾ ಹಿಂಸಕರು. ನಿನ್ನನ್ನು ತೊಂದರೆ ಪಡಿಸದೇ ಬಿಡುವರಲ್ಲ

ಲುಗುಣನರಥ । ಕಾಗಿಭೀಷಣನೆರಗಲರ್ಜುನಂನಗುತರಕ್ಷೋಘ್ನ ಬಾಣವನೆಪೂಡಿ ॥ ಬೇಗದಿಂದೆಸಲಸುರನಳವಳಿದನವನಪಡೆ । ಬೀಗಿದುದುಬಿರುಗಾಳಿಬೀಸಿದೊಡೆಬಿಣ್ಪಿಡಿದ । ಮೇಘಸಂಕುಲಮಿರದೆಪರಿವಂತೆಶರಘಾತಿಗೊಗ್ಗೊಡೆದುಕಂಡಕಡೆಗೆ ॥ ೩೯ ॥ ಮಡಿದವರ್ಕೆಲರಂಗಭಂಗದಿಂಕೈಕಾಲ್ಗ । ಳುಡಿದವರ್ಕೆಲರೆಚ್ಚಕೂರ್ಗಣೆಗಳವಯವದೊ । ಳಿಡಿದವರ್ಕೆಲರೇರ್ಗಳಿಂದವೇದನೆಗಳಂಸೈರಿಸದೆಕಳೆದಸುವನು ॥ ಬಡಿದವರ್ಕೆಲರಲ್ಲಿಗಿಡುಮರನನೆಡೆಗೊಂಡು । ಪಿಡಿದವರ್ಕೆಲರೋಡಿಬದುಕಿದೆವುತಾವೆಂದು ನುಡಿದವರ್ಕೆಲರಾದರರ್ಜುನನೆಸುಗೆಯಿಂದಲಾಕ್ಷಣಂರಾಕ್ಷಸರೊಳು ॥ ೪೦ ॥ ಪಿಡಿಸಿಬಲಾಘಮುಂಬೀಸಿಬಿರುವೊಲೆಗಳಿಂ । ತಾಡಿ

---

ಟೀ॥ ಅದರಿಂದ-ಎನ್ನಯ ಪಿತನು ಸಂಹರಿಸಿದ್ದರಿಂದ, ನಿನ್ನಂ-ಆ ಭೀಮನ ತಮ್ಮನಾದ ನಿನ್ನನ್ನು, ಪಿಡಿದು-ಹಿಡಿದು ಕೊಂಡು, ನರಮೇಧಯಾಗಕೆ-ಮನುಜರ ಅಧ್ವರಕ್ಕೆ, ಪಶು-ಯಜ್ಞಪಶುವಾಗಿ, ಮಾಳ್ಪೆಂ-ಮಾಡುವೆನು, ಎಂದು-ಎಂಬದಾಗಿ ಹೇಳಿ, ಫಲುಗುಣನ - ಆ ಪಾರ್ಥನ, ರಥಕಾಗಿ - ವರೂಥಕ್ಕಾಗಿ, ಭೀಷಣಂ - ಭೀಷಣನು, ಎರಗಲು - ಪ್ರತಿಭಟಿಸಿ ಬರಲು, ಅರ್ಜುನಂ-ಆ ಧನಂಜಯನು, ನಗುತ-ನಲಿಯುತ್ತ, ರಕ್ಷೋಘ್ನ-ರಕ್ಕಸರಂ ನಾಶಮಾಡತಕ್ಕದ್ದಾದ, ಬಾಣವನೆ-ನಾರಾಚವನ್ನೇ ಪೂಡಿ-ಬಿಲ್ಲಿಗೆ ಸೇರಿಸಿ, ಬೇಗದಿಂದ-ಅತಿ ಶೀಘ್ರವಾಗಿ, ಎಸಲು-ಪ್ರಯೋಗಮಾಡಲಾಗಿ, ಅಸುರನು-ರಕ್ಕಸನಾದ ಭೀಷಣನು, ಅಳವಳಿದನು-ಶಕ್ತಿಗುಂದಿದವನಾದನು (ಸೋತುಹೋದನು) ಅವನ-ಆ ಭೀಷಣನ, ಪಡೆ-ಸೇನೆಯು, ಬಿರುಗಾಳಿ - ಬಿರುಸಾದ ಗಾಳಿಯು, ಬೀಸಿದೊಡೆ-ಚಲಿಸಲಾಗಿ, ಬಿಣ್ಪಿಡಿದ-ಗುಂಪಾಗಿ ಕೂಡಿರುವ, ಮೇಘಸಂಕುಲಂ-ಪಯೋಧರವ್ಯೂಹವು, ಪರಿವಂತೆ-ಚೆದರಿಕೊಂಡು ಹೋಗುವಹಾಗೆ, ಶರಘಾತಿಗೆ-ಅಂಬಿನ ಹೊಡೆತಕ್ಕೆ, ಒಗ್ಗು-ಗುಂಪು, ಒಡೆದು-ಭಗ್ನವಾಗಿ, ಕಂಡಕಡೆಗೆ-ಅನು ಕೂಲವಾದ ಸ್ಥಳಕ್ಕೆ, ಬೀಗಿದುದು-ಚದರಿಕೊಂಡು ಹೋಯಿತು ॥

ಅ॥ ವಿ॥ ನರನ+ಮೇಧ=ನರಮೇಧ, ಷ. ತ. ಬೆಟ್ಟತ್ತು. ಗಾಳಿ - ಬಿರುಗಾಳಿ, ಪೂ. ಕ. ಸ. ಭೀಷಣ - ಭೀಷಣನೆಂಬ ಒಬ್ಬ ರಕ್ಕಸ, ಭಯಂಕರ ॥೩೯॥

ಟೀ॥ ಕೆಲರು-ಮತ್ತೆ ಕೆಲವರು, ಮಡಿದವರ್-ತಮ್ಮ ಪ್ರಾಣವನ್ನು ಕಳಕೊಂಡವರು, ಅಂಗಭಂಗದಿಂ - ಶರೀರದ ಭಾಗಗಳನ್ನು ಕಳೆದುಕೊಳ್ಳುವದರಿಂದಲೂ, ಕೈಕಾಲ್ಗಳು-ಕರ ಮತ್ತು ಅಡಿಗಳು, ಉಡಿದವರ್-ನಾಶಮಾಡಿಕೊಂಡವರು, ಕೆಲರ್-ಕೆಲವರಿರುವರು, ಮತ್ತೆಕೆಲವರ್ - ಮತ್ತೆ ಕೆಲವರು, ಎಚ್ಚ - ಅರ್ಜುನನಿಂದ ಹೊಡೆಯಲ್ಪಟ್ಟ, ಕೂರ್ಗಣೆಗಳು - ಕ್ರೂರ ವಾದ ಶರಗಳು, ಅವಯವದೊಳು-ಶರೀರದಲ್ಲಿ, ಇಡಿದವರ್-ನಾಟಿಕ್ಕೊಂಡಿರುವವರು, ಕೆಲರ್-ಕೆಲವರು, ಏರ್ಗಳಿಂದ-ಪೆಟ್ಟುಗಳಿಂದ, ವೇದನೆಗಳಂ - ಬೇನೆಗಳನ್ನು, ಸೈರಿಸದೆ - ತಡೆಯಲಾರದೆ, ಅಸುವನು ಜೀವಗಳನ್ನು, ಕಳೆದು - ತ್ಯಜಿಸಿ, ಒಡಿದವರ್-ಉರುಳಿರುವವರು, ಕೆಲವರು-ಮತ್ತೆ ಕೆಲವರು, ಅಲ್ಲಿ-ಆ ಪ್ರದೇಶದಲ್ಲಿ, ಗಿಡುಮರವನು-ಗಿಡ ಮರಗಳನ್ನು (ಕುರುಚು ಮರಗಳನ್ನು) ಎಡೆಗೊಂಡು-ಆಶ್ರಯವನ್ನು ಮಾಡಿಕೊಂಡು, ಪಿಡಿದವರ್-ಹಾರಿಹೋದವರು, ಕೆಲರ್-ಕೆಲವರು, ಓಡಿ-ಓಡಿಹೋಗಿ, ತಾವ್-ತಾವುಗಳು, ಬದುಕಿದೆವು, ಜೀವವಂತರಾದೆವು, ಎಂದು-ಎಂಬದಾಗಿ, ನುಡಿದವರ್-ಆಡಿದವರು, ರಾಕ್ಷಸರೊಳು - ದನುಜರೊಳಗೆ, ಅರ್ಜುನನ-ಪಾರ್ಥನ, ಎಸುಗೆಯಿಂದಲೂ-ಶರಪ್ರಯೋಗದಿಂದಲೂ, ಆಕ್ಷಣಂ-ಆ ಕ್ಷಣವೇ, ಆದರು ಈ ಪ್ರಕಾರವಾಗಿ ಭಂಗಪಟ್ಟರು ॥೪೦॥

---

ಎಂಬದಾಗಿ ನುಡಿದನು ॥ ೩೮ ॥ ಆದ್ದರಿಂದ ನಮ್ಮ ಜನಕನನ್ನು ಸಂಹರಿಸಿದ್ದರಿಂದ ನಿನ್ನನ್ನು ಪಿಡಿದು ನರಮೇಧಯಾಗಕ್ಕೆ ಪಶುವನ್ನಾಗಿ ಮಾಡುತ್ತೇನೆ. ಎಂದು ಪಾರ್ಥನ ರಥಕ್ಕೆ ಎದುರು ಬಿದ್ದು ಭೀಷಣನು ಬರುತ್ತಿರಲು, ಆಗ ಧನಂಜಯನು ನಗುತ್ತ ರಾಕ್ಷಸಾಂತಕವಾದ ಬಾಣವನ್ನೇ ಧನುಸ್ಸಂಧಾನಮಾಡಿ ಜಾಗ್ರತೆಯಿಂದ ಪ್ರಯೋಗಿಸಿದನು. ಆಗ ಆ ಭೀಷಣನ ಸೇನೆಯು ಬಿರುಗಾಳಿ ಬೀಸಿಕೊಂಡು ಗುಂಪಾಗಿ ಸೇರಿಕೊಂಡಿರುವ ಮೇಘಸಮುದಾಯವು ಕೊಚ್ಚಿ ಹೋಗುವಂತೆ ಶರದ ಘಾತಿಗೆ ಒಡದು ಚದರಿ ಹೋಗುವಂತೆ ದಿಕ್ಕೆಟ್ಟು ಹೋಯಿತು ॥೩೯॥ ಅರ್ಜುನನು ಪ್ರಯೋಗಿಸಿದ ಬಾಣದ ಪೆಟ್ಟಿಗೆ ಕೆಲವರು ತಕ್ಷಣವೆ ಪ್ರಾಣವನ್ನು ಬಿಟ್ಟರು ಕೆಲವರು ಅಂಗಗಳನ್ನು ನಾಶಮಾಡಿಕ್ಕೊಂಡು ಅಂಗವಿಕಾರಿಗಳಾದರು, ಕೆಲವರು ಬಾಣದ ಅಲಗುಗಳು ತಮ್ಮ ಶರೀರದಲ್ಲಿ ನಾಟಿಕೊಂಡಿದ್ದರಿಂದ ಆ ಬೇನೆಯನ್ನು ಪಡಲಾರದೆ ಪ್ರಾಣಬಿಟ್ಟರು ಮತ್ತೆ ಕೆಲವರು ಶರದ ರಭಸಕ್ಕೆ ಅಂಜಿದವರಾಗಿ ಪಲಾಯನಂ ಗೆಯ್ದರು ಇನ್ನು ಕೆಲವರು ಭಯದಿಂದ ಕುರುಚಲು ಮರಗಳ ಆಶ್ರಯದಲ್ಲಿದ್ದುಕೊಂಡು ಸಾವನ್ನು ತಪ್ಪಿಸಿಕೊಂಡರು ಇನ್ನೂ ಕೆಲವರು ನಾವು ಸಜೀವಿಗಳಾದೆವೆಂದು ಚವರಿ ಓಡಿಹೋದರು, ರಕ್ಕಸರ ಸಮೂಹದಲ್ಲಿ ಪಾರ್ಥನ ಬಾಣಪ್ರಯೋಗದ ರಭಸವು ಈ ಪ್ರಕಾರವಾಗಿ ಮಾಡಿತು ॥ ೪೦ ॥ ಆಗ ಅರ್ಜುನನ ಬಾಣವು ಭೀಷಣನ ಸೇನೆಯನ್ನು ಓಡಿಸಿ ಗಟ್ಟಿಯಾದ ಸ್ತನಗಳಿಂದ ಬೀಸಿ ಹೊಡೆಯುವ, ಯೋಜನಸ್ತನಿ ಎಂಬ ರಕ್ಕಸಿಯನ್ನು ಬಾಯ್ಬಿಂದು ತನ್ನ ದೇಶದ ಸೇನೆಯನ್ನೆ

ಸುವಯೋಜನಸ್ತನಿಯನುರೆಬಾಯ್ದೆರೆದು| ನಾಡಪಡೆಯಂತುತ್ತುಗೊಂಬಲಂಬೋದರಿಯನುಳಿದಸುರೆಯರಕೃತ್ಯಮಂ | ನೋಡಿ ವಿಸ್ಮಿತನಾಗಿಪೂರ್ವಮಂನೆನೆದುಕೊಂ | ಡಾಡಿನಸುನಗುತದೆಸೆದೆಸೆಗೆವಾಲಾಗ್ರಮಂ | ನೀಡಿತೆಗೆತೆಗೆದಿಳೆಯೊಳಪ್ಪಳಿಸಿಕೊಂದನವ ರೆಲ್ಲರಂ ಕಲಿಹನುಮನು ||೪೧|| ನರನಶರಜಾಲದಿಂಕಡಿವಡೆದುವೀರವಾ | ನರನಲಾಂಗೂಲದಿಂಬಡಿವಡೆದುರಕ್ಕಸರ | ನೆರವಿ ಹೇರಾಳದಿಂಪುಡಿವಡೆದುಬಯಲಾಗೆಭೀಷಣಂಭೀತಿಗೊಂಡು || ವಿರಚಿಸಿದನೊಂದುಪಾಯಾಂತರವನಲ್ಲಿಮೈ | ಗರೆದನಾಗಳೆ ಮಾಯದಿಂದಮುನಿಯಾದನದು | ಸುರನದಿಯತೀರನಾದುದುಕಣ್ಗೆ ಕಾಣಿಸಿತುಪುಣ್ಯಾಶ್ರಮಂಪೊಸತೆನೆ || ೪೨ || ಎಲ್ಲಿನೋಡಿ ದೊಡೆಗಂಗಾಪ್ರವಾಹದಸಲಿಲ | ಮೆಲ್ಲಿನೋಡಿದೊಡೆಪುಣ್ಯಾಶ್ರಮಕುಟೀರಂಗ | ಳೆಲ್ಲಿನೋಡಿದೊಡೆನಿಬಿಡದ್ರುಮಚ್ಛಾಯೆಗೆ ಳ್ಕುಸುಮಫಲಮೂಲಂಗಳು || ಎಲ್ಲಿನೋಡಿದೊಡೆಶುಕಪಿಕಮಯೂರಧ್ವನಿಗ | ಳೆಲ್ಲಿನೋಡಿದೊಡೆಸಾತ್ವಿಕಮಾದಮುನಿನಿಕರ |

---

ಟೀ|| ಬಲ – ವಾಹಿನಿಯ, ಓಘಮಂ - ಸಮುದಾಯವನ್ನು, ಓಡಿಸಿ–ಅಟ್ಟಿಬಿಟ್ಟು, ಬಿರುಮೊಲೆಗಳಿಂ – ಬಿರುಸಾದ ಸ್ತನಗಳಿಂದ, ಎಸೆದು-ಬೀಸಿ, ತಾಡಿಸುವ–ಬಡಿಯುವ, ಯೋಜನಸ್ತನಿಯನು – ಒಂದು ಯೋಜನ ನೀಳವಾದ ಸ್ತನಗಳುಳ್ಳ ರಾಕ್ಷಸಿಯನ್ನು, ಬಾಯ್ದೆರದು–ಬಾಯಿಯನ್ನು ಬಿಟ್ಟುಕೊಂಡು, ನಾಡಪಡೆಯಂ-ರಾಷ್ಟ್ರದಿಂದ ಬಂದಿರುವ ವಾಹಿನಿಯನ್ನು, ತುತ್ತುಗೊಂಬ-ಕವಳವಾಗಿ ಭಕ್ಷಿಸುತ್ತಿರುವ, ಲಂಬೋದರಿಯನು–ಜೋಲುಬಿದ್ದಿರುವ ಉದರವುಳ್ಳ ದನುಜೆಯನ್ನು, ಉಳಿದ–ಬಾಕಿಯಾದ, ಅಸುರೆಯರ–ದೈತ್ಯಾಂಗನೆಯರ, ಕೃತ್ಯಮಂ–ಕಾರ್ಯವನ್ನು, ನೋಡಿ–ಕಂಡು, ವಿಸ್ಮಿತನಾಗಿ–ಸೋಜಿಗವುಳ್ಳವನಾಗಿ, ಪೂರ್ವಮಂ–ಲಂಕಾದ್ವೀಪದಲ್ಲಿದ್ದ ದನುಜ ಸ್ತ್ರೀಯರ ಬಗೆಯನ್ನು, ನೆನದು – ಜ್ಞಾಪಕಮಾಡಿಕೊಂಡು, ಕೊಂಡಾಡಿ–ಸ್ತೋತ್ರಮಾಡಿ, ನಸುನಗುತ–ನಸುಗೆಯನ್ನು ಹೊಂದುತ್ತ, ದೆಸೆದೆಸೆಗೆ-ಪ್ರತಿದಿಕ್ಕಿಗೂ, ವಾಲಾಗ್ರಮಂ-ಲಾಂಗೂಲದ ಕೊನೆಯನ್ನು, ನೀಡಿ–ಮುಂದೆ ಬೆಳಸಿ, ತೆಗತೆಗೆದು-ಆ ದನುಜೆಯರನ್ನು ತೆಗದುಕೊಂಡು, ಇಳೆಯೊಳು–ಭೂಮಿಯಲ್ಲಿ, ಅಪ್ಪಳಿಸಿ–ಬಡಿದು, ಅವರೆಲ್ಲರಂ–ಆ ರಾಕ್ಷಸ ಸ್ತ್ರೀಯರೆಲ್ಲರನ್ನೂ, ಕಲಿ–ಬಲಾಢ್ಯನಾದ, ಹನುಮನು-ಕಪೀಶ್ವರನು, ಕೊಂದನು-ನಾಶಮಾಡಿದನು.

ಅ|| ವಿ|| ಬಲ–ಬಲರಾಮ, ಸೈನ್ಯ ಬಿರುಸಾದ+ಮೊಲೆ=ಬಿರುಮೊಲೆ, ವಿ. ಪೂ. ಕ. ಬಾಯ್ + ತೆರೆ = ಬಾಯ್ದೆರೆ, ದ. ಕಾರ. ಆದೇಶ ಸಂಧಿ. ತುತ್ತನ್ನು+ಕೊಂಬ=ತುತ್ತುಕೊಂಬ ಕ್ರಿ. ಸ. ಕವಳ ತ್ಸ. ಕಬಳ ದ್ಭ. ||೪೧||

ಟೀ|| ನರನ–ಪಾರ್ಥನ, ಶರಜಾಲದಿ–ನಾರಾಚಗಳ ಗುಂಪಿನಿಂದ, ಕಡಿವಡೆದು-ಭೇದಿಸಲ್ಪಟ್ಟು, ವೀರ–ಪರಾಕ್ರಮಶಾಲಿಯಾದ, ವಾನರ - ಕಪಿಶ್ರೇಷ್ಠನಾದ ಆಂಜನೇಯನ, ಲಾಂಗೂಲದಿಂ - ವಾಲದ ದೆಶೆಯಿಂದ, ಬಡಿವಡದು-ಏಟುತಗಲಿ, ರಕ್ಕಸರ-ದಾನವರ, ನೆರವಿ - ಸಮುದಾಯವು ಏರಾಳದಿಂ – ಅತಿ ವೈಭವದಿಂದ, ಪುಡಿವಡೆದು – ಚೂರುಚೂರಾಗಿ, ಬಯಲಾಗೆ–ನಿರ್ವಸ್ತು ಪ್ರದೇಶವಾಗಲು, ಭೀಷಣಂ–ರಕ್ಕಸಾಧಿಪನಾದ ಭೀಷಣನು, ಭೀತಿಗೊಂಡು–ಹೆದರಿಕೆಯನ್ನು ಹೊಂದಿ, ಅಲ್ಲಿ–ಆ ಸಮರಾಂಗಣದಲ್ಲಿ, ಒಂದು ಉಪಾಯಾಂತರವನು-ಯಾವದಾದರೂ ಒಂದು ತಪ್ಪಿಸಿಕೊಳ್ಳೋಣವನ್ನು, ವಿರಚಿಸಿದನು-ಉಂಟುಮಾಡಿದನು, ಆಗಳೆ-ಆ ತಕ್ಷಣದಲ್ಲಿಯೆ, ಮಾಯದಿಂದ–ರಕ್ಕಸರ ಮಾಯಾಸ್ವರೂಪದಿಂದ, ಮೈಗರದನು–ಬದಲಾದ ಆಕಾರವನ್ನುಪಡೆದುಕೊಂಡನು, ಮುನಿಯು–ತಪಸ್ವಿಯು, ಆದನು-ರೂಪವನ್ನು ಹೊಂದಿದನು, ಅದು–ಆ ಪ್ರದೇಶವು, ಸುರನದಿಯ–ದೇವಗಂಗಾನದಿಯ, ತೀರಂ–ಕೂಲವು, ಆದುದು–ಉಂಟಾಯಿತು, ಪೊಸತೆನೆ-ನೂತನವಾದ್ದೆನ್ನುವಂತೆ, ಪುಣ್ಯಾಶ್ರಮಂ-ಮುನಿಗಳ ವಾಸಕ್ಕೆ ಅರ್ಹವಾದ ಪ್ರದೇಶವು, ಆಗಿ–ಉಂಟಾಗಿ, ಕಣ್ಗೆ-ನೋಟಕರ ಕಣ್ಣುಗಳಿಗೆ, ಕಾಣಿಸಿತು–ಕಂಡುಬಂತು.

ಅ|| ವಿ|| ಶರದ + ಜಾಲ = ಶರಜಾಲ. ಷ. ತ. ಶರ–ಬಾಣ, ನೀರು. ಜಾಲ, ಬಲೆ ಸಮೂಹ. ಗವಾಕ್ಷ, ಪುಣ್ಯ+ಆಶ್ರಮ=ಪುಣ್ಯಾಶ್ರಮ, ಸ. ದೀರ್ಘಸಂದಿ. ಋಷಿ ತ್ಸ. ರಿಸಿ ದ್ಭ. ||೪೨||

---

ಲ್ಲಾ, ತುತ್ತುಗೊಳ್ಳುತ್ತೇನೆಂದು ಪ್ರತಿಜ್ಞೆಮಾಡಿದ್ದ ಜೋಲುವ ಉದರವುಳ್ಳವಳಾದ ಲಂಬೋದರಿ ಎಂಬಳನ್ನು ಬಾರಿಯಾದ ಇತರ ದನುಜೆಯರ ಕ್ರೂರಕೃತ್ಯವನ್ನೂ ಕಂಡು, ಆಶ್ಚರ್ಯಯುತನಾಗಿ, ಪೂರ್ವದಲ್ಲಿ ಲಂಕಾಪಟ್ಟಣದ ರಾಕ್ಷಸಸ್ತ್ರೀಯರ ಗತಿಯನ್ನು ನೆನೆದು ಕೊಂಡಾಡಿ ನಸುನಗುತ್ತ ಅವರನ್ನೆಲ್ಲಾ ದಿಕ್ಕಾಪಾಲಾಗಿ ಓಡಿಸಿದನು, ಮತ್ತೆ ಕೆಲವರನ್ನು ತನ್ನ ವಾಲಾಗ್ರದಿಂದ ಹಿಡಿದು ಅಪ್ಪಳಿಸಿ, ಕೆಳಕ್ಕೆ ಕುಕ್ಕಿ ಶೂರನಾದ ವೀರಹನುಮನು ನಾಶಮಾಡಿದನು||೪೧|| ಆಗ ಪಾರ್ಥನ ಬಾಣ ಸಮೂಹದಿಂದ ಭೇದಿಸಲ್ಪಟ್ಟು, ಶೂರನಾದ ಕಪೀಶ್ವರನ, ಲಾಂಗೂಲದಿಂದ ಏಟು ತಿಂದು ರಕ್ಕಸರ ಸಮೂಹವು ಅತಿಶಯವಾಗಿ ಪುಡಿಪುಡಿಯಾಗಿ ನಾಶವಾಗಿ, ಬಯಲಾಗಲು, ಆಗ ಭೀಷಣನು ಅತಿ ಭೀತಿಗೊಂಡು ಆ ಸಮರಾಂಗಣದಲ್ಲಿ ಒಂದು ಉಪಾಯವನ್ನು ಕಲ್ಪಿಸಿ, ಆ ತಕ್ಷಣವೇ ಮಾಯಾವಿಶೇಷದಿಂದ, ರೂಪಾಂತರವನ್ನುಹೊಂದಿ ಒಬ್ಬ ಮುನಿವೇಷಧಾರಿಯಾದನು. ಆ ಸ್ಥಳವೇ ಒಂದು ಋಷ್ಯಾಶ್ರಮವಾಗಿ ಕಂಗೊಳಿಸಿತು ||೪೨|| ಆಗ ಯಾವ ಪ್ರದೇಶದಲ್ಲಿ ನೋಡಿದಾಗ್ಯೂ ದೇವಗಂಗಾನದಿಯ ಸಲಿಲವೂ, ಯಾವ ಕಡೆ ನೋ

ಮೆಲ್ಲಿನೋಡಿದೊಡೆ ಸಂಚರಿಪತಾಪಸವಟುಗಳೆಸೆದು ವರ್ಜುನನ ಕಣ್ಗೆ ‖ ೪೩ ‖ ಆದಿವ್ಯಋಷಿಗಳಾಶ್ರಮದಿಂದಲೋರ್ವಮುನಿ | ಸಾದರದೊಳೈತಂದುಫಲುಗುಣನ ಮುಂದೆನಿಂ | ದೀದನುಜರಂಕೊಂಡೇನ ಹುದುಪರ ಹಿಂಸೆಲೇಸಲ್ಲಬಲ್ಲನರ್ಗೆ ‖ ಮಾಧವ ಮಹೇಶ್ವರಾರ್ಚನೆಗಳಂಜಪತಪಸ | ಮಾಧಿಗಳನುತ್ತಮ ಸ್ವಾಧ್ಯಾಯಗತಿಗಳಂ | ಸಾಧಿಸುವಡಿದೆಪುಣ್ಯನದಿಗಂಗೆ ಶುದ್ಧಪ್ರದೇಶ ಮಿದುನಿನಗೆಂದನು ‖೪೪‖ ಬೆರಗಾದನರ್ಜುನಂದಾನವನಕೃತಕಮೆಂ | ದರಿದುಮುನಿಯಾಗಿರ್ದವನ ತುಡುಕಲಾಮಾಯೆ| ಬರತು ಮುಸ್ಸಿನರಾಕ್ಷಸಾ ಕೃತಿಗೆನಿಲಲಾಗಿಪಿಡಿದಾಕ್ರಮಿಸಿ ಮನೆಯೊಳು ‖ ತುರುಗಿರ್ದ್ದಸಕಲಭೂಷಣವಿವಿಧಮಣಿಗಳಂ | ತರತರದ

ಟೀ‖ ಎಲ್ಲಿ–ಯಾವ ಸ್ಥಳದಲ್ಲಿ, ನೋಡಿದರೆ- ಪರೀಕ್ಷಿಸಿದರೆ, ಗಂಗಾಪ್ರವಾಹದ - ದೇವಗಂಗಾ ನದಿಯೆಂಬನಿರ್ಝರದ, ಸಲಿಲಂ-ನೀರು, ಎಲ್ಲಿನೋಡಿದರೆ–ಯಾವ ಪ್ರದೇಶದಲ್ಲಿ ನೋಡಿದಾಗ್ಯೂ, ಪುಣ್ಯಾಶ್ರಮ-ಪರಿಶುದ್ಧವಾದ ಆಶ್ರಮದ, ಕುಟೀರಂಗಳು–ಎಲೆಮನೆಗಳು, ಎಲ್ಲಿನೋಡಿದರೆ–ಯಾವ ಪ್ರದೇಶದಲ್ಲಿ ನೋಡಿದಾಗ್ಯೂ, ನಿಬಿಡ–ಸಾಂದ್ರವಾದ, ದ್ರುಮ–ವೃಕ್ಷಗಳ, ಛಾಯೆಗಳು–ನೆಳಲಿನ ರೀತಿಗಳು, ಕುಸುಮ–ಪುಷ್ಪಗಳು, ಫಲ–ಫಲಗಳು, ಮೂಲಂಗಳು–ಗೆಡ್ಡೆಗೆಣಸುಗಳೂ, ಎಲ್ಲಿನೋಡಿದೊಡೆ–ಯಾವ ಪ್ರದೇಶದಲ್ಲಿ ನೋಡಿದಾಗ್ಯೂ, ಸಾತ್ವಿಕಮಾದ- ನಿರಪರಾಧಿಯಾದ, ಮೃಗ–ಜಿಂಕೆ ಮೊದಲಾದ ಕಾಡುಮೃಗಗಳ, ನಿಕರಂ–ಸಮುದಾಯವು. ಎಲ್ಲಿನೊಡಿದೊಡೆ–ಮತ್ತೆ ಯಾವ ಪ್ರದೇಶದಲ್ಲಿ ನೋಡಿದಾಗ್ಯೂ, ಸಂಚರಿಪ–ಸಂಚಾರ ಮಾಡುತ್ತಿರುವ, ತಾಪಸ–ತಪಸ್ವಿಗಳಾದ ಮುನಿಗಳ, ವಟುಗಳು–ವೇದಾಧ್ಯಯನಕ್ಕೆ ಅರ್ಹರಾದ ಬಾಲಕರು, ಅರ್ಜುನನ-ಪಾರ್ಥನ, ಕಣ್ಗೆ-ನೇತ್ರಗಳಿಗೆ, ಎಸೆದವು–ಕಾಂತಿಯಿಂದೊಡಗೂಡಿದ್ದವು.

ಅ‖ ವಿ‖ ಛಾಯೆ–ನೆಳಲು, ಛಾಯಾಸೇವಿ. ಕುಸುಮವು+ಫಲವು + ಮೂಲವು ಇವುಕುಸುಮ ಫಲಮೂಲಂಗಳ್, ಬಹು. ದ್ವಂ. ಸ. ‖೪೩‖

ಟೀ‖ ಆದಿವ್ಯ-ಆ ದೇವತಾರ್ಹವಾದ, ಋಷಿಗಳ–ತಪಸ್ವಿಗಳ, ಆಶ್ರಮದಿಂದಲೆ–ತಪೋವನದಿಂದಲೆ, ಓರ್ವಮುನಿ–ಒಬ್ಬ ಋಷೀಶ್ವರನು, ಸಾದರದೊಳು–ಪ್ರೀತಿಯಿಂದೊಡಗೂಡಿ, ಐತಂದು-ಪ್ರವೇಶಿಸಿ, ಫಲುಗುಣನ-ಧನಂಜಯನ, ಮುಂದೆ–ಎದುರುಭಾಗದಲ್ಲಿ, ನಿಂದು–ನಿಂತುಕೊಂಡು, ಈದನುಜರ–ಈ ದಾನವರನ್ನು, ಕೊಂದೊಡೆ–ನಾಶಮಾಡಿದರೆ, ಏನಹುದು–ಏನು ಫಲವಾದೀತು, ಬಲ್ಲವರ್ಗೆ-ಬುದ್ಧಿವಿಶಾರದರಿಗೆ, ಪರ–ಬೇರೆಯಾದವರನ್ನು, ಹಿಂಸೆ–ಸಂಹಾರಮಾಡೋಣವು, ಲೇಸು–ಉತ್ತಮವಾದದ್ದು, ಅಲ್ಲ–ಅಲ್ಲವು, ಮಾಧವ–ಲಕ್ಷ್ಮೀರಮಣನ, ಮಹೇಶ್ವರ–ಶಂಕರನ, ಅರ್ಚನೆಗಳಂ-ಆರಾಧನೆಗಳನ್ನು, ಜಪ–ಗಾಯತ್ರಿ ಮಂತ್ರಗಳನ್ನು, ತಪ-ತಪಸ್ಸನ್ನು, ಸಮಾಧಿಗಳನು-ಪರಮಾತ್ಮ ಮೂರ್ತಿಸ್ಮರಣೆಯನ್ನು, ಸ್ವಸ್ವರೂಪಸ್ಥಿತಿಯು-ಪದಾರ್ಥ ಸ್ವರೂಪ ಕ್ರಮವು, ಉತ್ತಮ–ಯೋಗ್ಯಗಳಾದ, ಸ್ವಾಧ್ಯಾಯ-ಸ್ಮೃತಿಗಳ ಮನನಮಾಡೋಣವು, ಗತಿಗಳಂ–ಮೋಕ್ಷವನ್ನು ಪಡೆಯತಕ್ಕ ಮಾರ್ಗಗಳನ್ನು, ಕರ್ಮಮಾರ್ಗ–ಕರ್ಮಾಚರಣೆಯನ್ನು, ಸಾಧಿಸುವಡೆ–ಪೂರೈಸಬೇಕಾದರೆ, ಪುಣ್ಯನದಿ–ಪಾಪಹರಮಾದ ಪುಣ್ಯಪ್ರದಮಾದ ಗಂಗೆಯೆಂಬ ನದಿಯಿಂದ, ಶುದ್ಧ-ನಿರ್ಮಲವಾದ, ಪ್ರದೇಶಂ–ಸ್ಥಳವು, ಇದು–ಈ ಪ್ರದೇಶವು, ನಿನಗೆ–ಪಾರ್ಥನಾದ ನಿನಗೆ, ಎಂದನು-ಎಂಬದಾಗಿ ಹೇಳಿದನು ‖

ಅ‖ ವಿ‖ ಜಪ–ಗಾಯತ್ರಿ ಮಂತ್ರ, ತಪ–ತಪಸ್ಸು, ಆದರದೊಡನೆ ಸಹಿತವಾದದ್ದು–ಸಾದರ ಸಹ. ಪೂ. ಬಹು. ಸ. ‖೪೪‖

ಟೀ‖ ಅರ್ಜುನಂ–ಆ ಧನಂಜಯನು, ಬೆರಗಾದನು–ಆಶ್ಚರ್ಯದಿಂದ ಏನೂ ತೋಚದವನಾದನು, ದಾನವನ–ರಕ್ಕಸನಾದ ಭೀಷಣನ, ಕೃತಕ–ನಿರ್ಮಾಣವಾದದ್ದು, ಎಂದು–ಎಂದು ಎಂದುಕೊಳ್ಳುತ್ತಾ, ಅರಿದನು-ಗ್ರಹಿಸಿದನು, ಮುನಿಯಾಗಿ–ತಪಸ್ವಿಯಾಗಿ, ಇರ್ದವನ–ಇರತಕ್ಕವನನ್ನು, ತುಡುಕಲು–ಅತಿಕ್ರಮಿಸಿ ಹಿಡಿದುಕೊಳ್ಳಲು, ಆಮಾಯೆ-ಆ ಮಾಯಾಸ್ವರೂಪವು,

ಾದಾಗ್ಯೂ ಪುಣ್ಯಾಶ್ರಮಂಗಳ ಕುಟೀರಂಗಳು ಎಲ್ಲಿನೋಡಿದಾಗ್ಯೂ ಪರ್ಣಶಾಲಾದಿಗಳೂ, ಮತ್ತೆಲ್ಲಿ ನೋಡಿದಾಗ್ಯೂ ಛಾಯಾಪ್ರದಮಾದ ಮರದ ನೆಳಲುಗಳು, ಎಲ್ಲಿ ನೋಡಿದರೂ ಶುಕಪಿಕಾದಿಗಳ ಉಲುಹುಗಳು, ಎಲ್ಲಿ ನೋಡಿದರೂ ಸಾತ್ವಿಕ ಮೃಗಂಗಳ ಸಮೂಹವು ನಿಬಿಡೀಕೃತವಾಗಿ ಕಣ್ಗೆ ಪ್ರಕಾಶಿಸುತ್ತಿತ್ತು ‖೪೩‖ ಬಳಿಕ ವೀರ ಹನುಮನು ಈರೀತಿಯಾಗಿ ನಾಶಮಾಡಲು, ಆ ಸಮಯದಲ್ಲಿ ದೇವತಾಯೋಗ್ಯಮಾದ ಋಷಿಗಳ ಆಶ್ರಮದಿಂದಲೇ ಓರ್ವ ಮುನಿವರ್ಯನು ಸಾದರದೊಳು ಐತಂದು, ಫಲುಗುಣನ ಇದಿರಾಗಿ ನಿಂದು, ಈ ರಕ್ಕಸರಂ ಸಂಹರಿಸದೊಡೆ ನಿನಗೇನಾಗುವುದು? ತಿಳಿದವರಿಗೆ ಅನ್ಯರನ್ನು ಸಂಹರಿಸುವುದು ಯೋಗ್ಯವಾದ್ದಲ್ಲವು. ಲಕ್ಷ್ಮೀರಮಣ, ಮಹೇಶ್ವರ ಇವರ ಆರಾಧನೆಯನ್ನು ಮಾಡುತ್ತ ಜಪ ತಪ ಸಮಾಧಿ ನಿಷ್ಠನಾಗಿ, ವೇದಪಾರಾಯಣವನ್ನು ಮಾಡುತ್ತ, ಪರಲೋಕ ಕಾಮಿತನಾಗಿ ಕರ್ಮ ಮಾರ್ಗಗಳಂ ಅನುಸರಿಸಿಕೊಂಡು ಇರಲಿಕ್ಕೆ ಈ ಗಂಗಾ ಮಹಾತೀರಪ್ರದೇಶ ವು ನಿನಗೆ ಬಹು ಅರ್ಹವಾದ ಸ್ಥಳವು ಎಂದನು ‖ ೪೪ ‖ ಆಗ ಅರ್ಜುನನು ಆ ಮಾಯಾವಿಯಾದ ರಕ್ಕಸನ

ವಸ್ತುಗಳನುತ್ತಮಗಜಂಗಳಂ | ಮಿರುಪಹಯರತ್ನಂಗಳಂಕೊಂಡುದೈತ್ಯರಂದೆಸೆಗೆಡಿಸಿದಂ ಪಾರ್ಥನು || ೪೫ || ಕೋಳೊಡವೆ ಮುಂತಾಗಿ ತಿರುಗಿದಂ ಫಲುಗುಣಂ | ಮೇಲೆನಡೆದುದು ಕುದುರೆ ತೆಂಕ ದೆಸೆಗೊಡನೆಕೆಂ | ಧೂಳಿಡುತಬಹಳ ಬಲಸಹಿತಲತಿ ವೇಗದಲಿ ಮಣಿನಗರಮೆಂಬಪುರಕೆ || ಪೇಳಲೇನರ್ಜುನನಸುತಬಭ್ರುವಾಹನಂ | ಪಾಲಿಸುವನಾ ಪೊಳಲನೀನರಂಬಂದುದಂ ಕೇಳಲೇಗೈದಪನೊದೇವಪುರನಿಲಯ ಲಕ್ಷ್ಮೀಪತಿಯ ಮೈದುನಂಗೆ || ೪೬ ||

ಸಂಧಿ ೧೬ ಕ್ಕೆ ಪದ್ಯ ೮೧೯ ಕ್ಕಂ ಮಂಗಳಮಸ್ತು.

---

ಬರತು-ಕುಗ್ಗಿಹೋಗಿ, ಮುನ್ನಿನ-ಮೊದಲಲ್ಲಿ ಧರಿಸಿದ್ದ, ರಾಕ್ಷಸಾಕೃತಿಗೆ-ದಾನವನ ರೂಪಕ್ಕೆ, ನಿಲಲಾಗಿ-ಹೊಂದಿರಲಾಗಿ, ಪಿಡಿದು-ಗ್ರಹಿಸಿ, ಅಕ್ರಮಿಸಿ-ಅತಿಕ್ರಮಿಸಿ, ಮನೆಯೊಳು-ಆ ರಕ್ಕಸಾಧಿಪನಾದ ಭೀಷಣನ ಗೃಹದಲ್ಲಿ, ತುರುಗಿದ್ದ-ವ್ಯಾಪ್ತವಾಗಿದ್ದ, ಸಕಲ-ಸಮಸ್ತವಿಧವಾದ, ಭೂಷಣವ-ಆಭರಣಗಳನ್ನು, ವಿವಿಧ-ನಾನಾಬಗೆಗಳಾದ, ಮಣಿಗಳಂ-ನವರತ್ನಗಳನ್ನು, ತೆರತೆರದ-ಬಗೆಬಗೆಗಳಾದ, ವಸ್ತುಗಳನು-ಸಾಮುಗ್ರಿಗಳನ್ನು, ಉತ್ತಮ-ಅಧಿಕಗಳಾದ, ಗಜಂಗಳಂ-ಕರಿಗಳನ್ನು, ಮಿರುಪ-ಪ್ರಕಾಶಿಸುತ್ತಿರುವ, ಹಯರತ್ನಂಗಳಂ-ಯೋಗ್ಯವಾದ ಅಶ್ವಗಳನ್ನು, ಕೊಂಡು-ಪಡೆದುಕೊಂಡು, ಪಾರ್ಥನು-ಧನಂಜಯನು, ದೈತ್ಯರಂ-ದಾನವರನ್ನು, ದೆಸೆಗೆಡಿಸಿದಂ-ಚದರಿಹೋಗುವಂತೆ ಮಾಡಿದನು ||

ಅ|| ವಿ|| ಮಣಿ-ನಮಸ್ಕಾರ ಮಾಡುವದು, ರತ್ನ ||೪೫||

ಟೀ|| ಕೋಳೊಡವೆ-ಬೇಟೆಯಲ್ಲಿ ಲಭಿಸಿದ ಪದಾರ್ಥವು, ಮುಂತಾಗಿ-ಆದಿಯಾಗಿ, ಫಲುಗುಣಂ-ಪಾರ್ಥನು, ತಿರುಗಿದಂ-ಹಿಂತಿರುಗಿದನು, ಮೇಲೆ-ತರುವಾಯ. ಕುದುರೆ-ಆ ಯಜ್ಞಪಶುವು, ಒಡನೆ-ಸಂಗಡಲೆ, ಟೆಂಕಣದೆಸೆಗೆ-ದಕ್ಷಿಣ ದಿಕ್ಕಿನ ಕಡೆಗೆ, ಕೆಂಧೂಳು-ಕೆಂಪುರೇಣುವು, ಇಡುತ-ಉಂಟುಮಾಡುತ್ತಾ, ಬಹಳ-ಅಧಿಕವಾದ, ಬಲ-ಸೈನ್ಯದ, ಸಹಿತಲು-ಒಂದಿಗೆ, ಅತಿವೇಗದಿಂದ-ಹೆಚ್ಚಾದ ವೇಗದಿಂದ, ಮಣಿನಗರವು-ರತ್ನಪುರಿಯು, ಎಂಬ - ಎಂದು ಕರೆಸಿಕೊಳ್ಳುವ, ಪುರಕೆ-ನಗರಕ್ಕೆ, ನಡೆದುದು-ಹೊರಟು ಹೋಯಿತು, ಪೇಳಲು-ವಿವರಿಸಲು, ಏನು-ಏನಾದೀತು, ಅರ್ಜುನಂಗೆ-ಪಾರ್ಥನಿಗೆ, ಸುತ-ತನುಜನಾದ ಬಭ್ರುವಾಹನ ನೆಂಬುವನು, ಆ ಪೊಳಲನು-ಆ ಮಣಿಪುರವನ್ನು ಪಾಲಿಸುವನು-ಕಾಪಾಡುತ್ತಿರುವನು, ಈನರಂ-ಈ ಧನಂಜಯನು, ಬಂದುದಂ-ಬಂದಿರುವದನ್ನು, ಕೇಳಲು-ಶ್ರವಣಮಾಡಿದರೆ, ದೇವಪುರ-ಅಮರಾವತಿಯೆಂಬ ಪಟ್ಟಣವೆ, ನಿಲಯ-ವಾಸಸ್ಥಾನವಾಗುಳ್ಳ, ಲಕ್ಷ್ಮೀಪತಿಯ-ಶ್ರೀಪತಿಯಾದ ಕೃಷ್ಣನಿಗೆ, ಮೈದುನಂಗೆ-ಮೈದುನನಾದ ಪಾರ್ಥನಿಗೆ, ಏಗೈದಪನೊ ಏನನ್ನು ಮಾಡುತ್ತಾನೆಯೊ. ||೪೬||

ಹದಿನಾರನೆಯ ಸಂಧಿ ಮುಗಿದುದು.

---

ಮಾತನ್ನು ಕೇಳಿ ಬಹು ಆಶ್ಚರ್ಯಯುತನಾಗಿ ಬೆರಗಾದವನಾಗಲು ದಾನವನಾದ ಭೀಷಣನಿಂದ ಕಲ್ಪಿತವಾಗಿ ಮಾಡಿದ್ದು ಎಂಬ ಸಂಗತಿಯನ್ನು ಗ್ರಹಿಸದವನಾಗಿ ಮುನಿಶ್ರೇಷ್ಠನಾಗಿದ್ದವನನ್ನು ಬಲಾತ್ಕಾರವಾಗಿ ಹಿಡಿಯಲು ಆ ಮಾಯಾವಿಯೂ ಮೋಸಗಾರಿಕೆಯಲ್ಲಿ ನಿಸ್ಸೀಮನೂ ಆದ ಭೀಷಣನು ಮುನಿಯ ರೂಪವನ್ನು ತ್ಯಜಿಸಿ ಪುನಹ ರಾಕ್ಷಸನ ಆಕಾರವನ್ನೇ ಧರಿಸಿದವನಾಗಲು ಅತಿಕ್ರಮಿಸಿ ಆ ಭೀಷಣನ ಅರಮನೆಯಲ್ಲಿದ್ದ ಸಕಲ ವಿಧವಾದ ಧನಕನಕ ವಸ್ತ್ರಾಭರಣಾದಿಗಳನ್ನೂ, ನಾನಾ ಬಗೆಗಳಾದ ನವರತ್ನಗಳನ್ನು ಅತ್ಯುತ್ತಮಗಳಾದ ಹಸ್ತಿಗಳನ್ನು, ಅಶ್ವಗಳನ್ನು ತೆಗೆದುಕೊಂಡು ಪಾರ್ಥನು ದಾನವರನ್ನು ದೆಸೆಗೆಡಿಸಿ ಓಡಿಸಿದನು || ೪೫ || ಆಬಳಿಕ ಫಲುಗುಣನು ಲೂಟಿ ಮಾಡಿದ್ದರಲ್ಲಿ ದೊರಕಿದ ವಸ್ತುವಾಹನಾದಿಗಳಿಂದ ಹಿಂದಕ್ಕೆ ಹೊರಟು ಹೋಗಲು, ಆ ಯಃಜ್ಞಾಶ್ವವು ಸಂಗಡಲೆ, ತೆಂಕಣ ದಿಕ್ಕಿಗೆ ಕೆಂದೂಳಿಯನ್ನು ಮೇಲಕ್ಕೆ ಎಬ್ಬಿಸುತ್ತಾ, ಅಧಿಕವಾದ ಬಲದೊಡನೆ ಅತಿವೇಗದಿಂದ ಮಣಿಪುರವೆಂಬುವ ನಗರಕ್ಕೆ ಹೊರಟು ಹೋಯಿತು. ಆ ಮಣಿನಗರದಲ್ಲಿ ಅರ್ಜುನನ ಮಗನಾದ ಬಭ್ರುವಾಹನನು ವಾಸಮಾಡಿಕೊಂಡು ರಾಜ್ಯವಾಳುತ್ತಿದ್ದನು. ಈ ಪಾರ್ಥನು ಆ ಸ್ಥಳಕ್ಕೆ ಬಂದುದನ್ನು ಕೇಳಿದರೆ ದೇವಪುರವೇ ನಿಲಯವಾಗುಳ್ಳ ಶ್ರೀ ರಮಾಪತಿಯಾದ ಶ್ರೀ ಕೃಷ್ಣಗೆ ಮೈದುನನಾದ ಪಾರ್ಥನಿಗೆ ಏನುಮಾಡುವನೋ ಎಂಬದಾಗಿ ಕಾಣುವಂತೆ ಕಲಿ ಬಭ್ರುವಾಹನನು ಇರುತ್ತಿದ್ದನು || ೪೬ ||

ಹದಿನಾರನೆಯ ಸಂಧಿ ಸಂಪೂರ್ಣವಾದುದು.



## ಹದಿನೇಳನೆಯ ಸಂಧಿ.

ಸೂಚನೆ॥ ವಿನಯದಿಂದೈತಂದುಕಾಣಲ್ಕೆಬಭ್ರುವಾ | ಹನನಂಜರೆದುನರಂನೂಕಿದೊಡೆಬಳಿಕವಂ | ಕನಲಿಪಾರ್ಥನ ಚಾತುರಂಗದೋಳ್ಕಾದಲ್ಕೆಸೇನೆಸಹಿತಿದಿರಾದನು ॥

ಭೂಭುಜಲಲಾಮಕೇಳಿಂದ್ರತನಯನತುರುಗ | ಮಾಭೀಷಣನ ಸೀಮೆಯಂ ಕಳೆದುಬರೆ ಮುಂದೆ | ಶೋಭಿಸಿತು ವರ್ಷಾಗಮುಂ ಧರೆಯಬೇಸಗೆಯ ಬೇಸರಂತವೆತವಿಸುತ ॥ ಲಾಭಿಸುವಚಾತಕ ಪ್ರೀತಿಯಂ ಕಂಡಸೂ | ಯಾಭರವನಂಚೆಗಳ್ತಾಳಲಾರದೆ ಘನ | ಕ್ಷೋಭದಿಂದೋಡಿದವುಪರರಸಿರಿಯಂಸೈರಿಸದವಿಜಾತಿಯಜನಮೆನೆ ॥ ೧ ॥ ಎದ್ದವುಮುಗಿಲ್ಗಳೆಸೆ

---

ಹದಿನೇಳನೆಯ ಸಂಧಿ.

ಟೀ॥ ವಿನಯದಿಂದ-ನಮ್ರೀಭಾವದಿಂದ, ಐತಂದು-ಬಂದವನಾಗಿ, ಕಾಣಲ್ಕೆ-ಕಾಣಲಾಗಿ, (ಪಿತನಾದ ಅರ್ಜುನನನ್ನು ನೋಡಲಾಗಿ) ಆ ಪಾರ್ಥಂ_ಆ ಪಾರ್ಥನು, (ಅರ್ಜುನನು) ಬಭ್ರುವಾಹನನಂ-ಪುತ್ರನಾದ ಬಭ್ರುವಾಹನನೆಂಬುವನನ್ನು, ಜರೆದು-ತಿರಸ್ಕರಿಸಿ, (ದೂಷಿಸಿ) ನೂಕಿದೊಡೆ-ಕಳುಹಿಸಲಾಗಿ, ಅವಂ-ಆ ಬಭ್ರುವಾಹನನು, ಕನಲಿ_ತನಗಾದ ಅವಮಾನಕ್ಕೆ ರೋಷಗೊಂಡು, ಕಲಿ_ಶೂರನಾದ, ಪಾರ್ಥನ_ಫಲುಗುಣನ, ಚಾತುರಂಗದೋಳ್_ಹಸ್ತ್ಯಶ್ವರಥ ಪದಾತಿಗಳೊಂದಿಗೆ, ಕಾದಲ್ಕೆ-ಕಾಳಗ ಮಾಡಲೋಸುಗವಾಗಿ, ಸೇನೆ_ತನ್ನಯ ಸೈನ್ಯದ, ಸಹಿತ_ಸಂಗಡ, ಇದಿರಾದನು_ಪ್ರತಿಭಟಿಸಿ ಬಂದವನಾದನು.

ಅ॥ ವಿ॥ ಕಲಿಯಾದ+ಪಾರ್ಥ = ಕಲಿಪಾರ್ಥ ವಿ ಪೂ. ಕ. ಬಭ್ರು_ಮುಂಗಸಿಯೇ, ವಾಹನ_ಧ್ವಜದಲ್ಲುಳ್ಳವನು ಬಹು. ಸಮಾಸ.

ಟೀ॥ ಭೂಭುಜ_ರಾಜರಲ್ಲಿ, ಲಲಾಮ-ತಿಲಕಪ್ರಾಯನಾದ, ಜನಮೇಜಯರಾಯನೇ, ಕೇಳು_ಆಲಿಸು, ಇಂದ್ರ-ದೇವೇಂದ್ರನ, ತನಯ-ಪುತ್ರನಾದ ಪಾರ್ಥನ, ಕುದುರೆ_ಯಜ್ಞಾಶ್ವವು, ಆ ಭೀಷಣನ-ಭೀಷಣನೆಂಬ ರಕ್ಕಸನ, ಸೀಮೆಯಂ-ರಾಜ್ಯವನ್ನು, ಕಳೆದು_ದಾಟಿಕೊಂಡು, ಮುಂದೆ-ಮುಂದೆ ಬರುವ ಮಣಿಪುರಕ್ಕೆ, ಬರೆ_ಬರಲಾಗಿ, ವರ್ಷಾಗಮುಂ-ಮಳೆಗಾಲವು, (ವರ್ಷಋತುವು) ಧರೆಯ_ಪೃಥ್ವಿಯ, ಬೇಸಗೆಯ_ಬಿಸಿಲಿನ ತಾಪದ, ಬೇಸರಂ-ಜುಗುಪ್ಸೆಯನ್ನು, ತವೆ-ಬಹುವಾಗಿ, ತವಿಸುತ-ದಹಿಸುತ್ತ, (ಪರಿತಾಪವನ್ನು ಬಿಡುತ್ತ) ಲಾಭಿಸುವ_ಬರುವ, (ಆಗಮಿಸುವ) ಚಾತಕ_ಮೇಘ ಪಕ್ಷಿಗಳ, (ಚಾತಕಪಕ್ಷಿಗಳ) ಪ್ರೀತಿಯಂ_ಲವಲವಿಕೆಯನ್ನು, ಕಂಡು_ನೋಡಿದವುಗಳಾಗಿ, ಅಸೂಯಾ_ಸಹಿಸದೇ ಇರುವ, (ಹೊಟ್ಟೆಕಿಚ್ಚಿನ), ಭರವನು-ಹೊರೆಯನ್ನು, (ಗುರುತ್ವವನ್ನು) ಅಂಚೆಗಳ್-ಹಂಸಗಳು, ತಾಳಲಾರದೆ_(ಅವುಗಳ ನಲಿದಾಟವನ್ನು ನೋಡಿ) ಸಹಿಸದೆ, ಘನ-ನೋಡಗಳ, (ದಟ್ಟವಾದ) ಅಧಿಕವಾದ, ಕ್ಷೋಭದಿಂದ-ತೊಂದರೆಯಿಂದ, ಪರ_ಇತರರ, ಸಿರಿಯಂ-ವೈಭವವನ್ನು, ಐಶ್ವರ್ಯವನ್ನು ಸೈರಿಸದ_ತಾಳಲಾರದ, ವಿಜಾತೀಯ_ಬೇರೊಂದು ಜಾತಿಯವರಾದ, ಜನರು-ಜನಗಳು, ಎನೆ_ಎನ್ನುವಂತೆ, ಓಡಿದುವು-ಓಡಿಹೋದವು, ಎನೆ-ಎನ್ನುವಹಾಗೆ, ಶೋಭಿಸಿತು-ಪ್ರಕಾಶಿಸಿತು.

ಅ॥ ವಿ॥ ಭೂಭುಜರಲ್ಲಿ ಲಲಾಮ=ಭೂಭುಜಲಲಾಮ ಸ. ತ. ಸ. ಇಂದ್ರನ+ತನಯ=ಇಂದ್ರತನಯ ಷ. ತ. ವರ್ಷ-ಮಳೆ, ಸಂವತ್ಸರ. ಘನ-ದೊಡ್ಡದು, ಮೇಘ, ಘನಾಕೃತಿ. ಸಿರಿ_ದ್ಭ. ಶ್ರೀ-ತ್ಸ. ಅಂಚೆ_ದ್ಭ. ಹಂಸ_ತ್ಸ. (ಚತುರಂಗ ಬಲ-ಆನೆ, ಕುದುರೆ, ರಥ, ಪದಾತಿ ಇವುಗಳು) ಕನಲಿ_ರೇಗಿ, ಕನಕ_ಚಿನ್ನ, ವರ್ಷಾ+ಋತು=ವರ್ಷರ್ತು ಗುಣ ಸಂಧಿ. ॥೧॥

---

ಹದಿನೇಳನೆಯ ಸಂಧಿ.

ರಾಜಶ್ರೇಷ್ಠನಾದ ಜನಮೇಜಯರಾಯನೆ ಆಲಿಸು, ಅರ್ಜುನನು ಭೀಷಣನೆಂಬ ರಾಕ್ಷಸನನ್ನು ಜಯಿಸಿದ ಬಳಿಕ ಯಜ್ಞಾಶ್ವವು ಇವನ (ಈ ಪಾರ್ಥನ) ಮಗನಾದ ಮುಂಗಸಿಯೇ ಧ್ವಜವಾಗಿ ಉಳ್ಳ ಬಭ್ರುವಾಹನನ ರಾಜಧಾನಿಯಾದ ಮಣಿಪುರಕ್ಕೆ ಬರಲಾಗಿ, ಶ್ರಾವಣ ಭಾದ್ರಪದ ಮಾಸಂಗಳಾದ ವರ್ಷಾಕಾಲವು ಬರಲಾಗಿ, ಬೇಸಿಗೆಯ ಕಾಲದ ಬಿಸಿಲಿನ ತಾಪದಿಂದ ಭೂಮಿಯಲ್ಲಿದ್ದ ತಾಪವು ಕಡಿಮೆಯಾಯಿತು. ಆಗ ಬೇಸರಿಕೆಯಿಂದ ಬಹುವಾಗಿ ತಾಪಪಡುತ್ತಿದ್ದ ಚಾತಕ ಪಕ್ಷಿಗಳು ಬಹುವಾಗಿ ಹರ್ಷಿಸಿ ಮೇಘಾವರಣದಲ್ಲಿ ಬಾಯ್ದೆರದುಕೊಂಡು ನಲಿಯುತ್ತಿರುವುದನ್ನು ಕಂಡು ಅಸೂಯಾತಿಶಯದಿಂದ ನೊಂದ ಹಂಸಗಳು ಹೆಚ್ಚಾದ ವ್ಯಥೆಯಿಂದ ಗುಂಪಾಗಿ, ಒಬ್ಬರ ಐಶ್ವರ್ಯವನ್ನು ನೋಡಿ ಹೊಟ್ಟೆಕಿಚ್ಚು ಪಡುವ ವಿಜಾತೀಯ ಜನರಹಾಗೆ ಹೋಗುತ್ತ ಶೋಭಿಸಿದವು ॥೧॥ ಆಗ ವರ್ಷಾಕಾಲದ ಮೇಘಗಳು ಎಣ್ದೆಸೆಗಳಲ್ಲೂ ಎದ್ದು ನಾನಾ ಬಗೆಗಳಾಗಿ ಕಣ್ಣುಗಳಿಗೆ

ಗಳೊಳ್‌ಥಂಥರದೊ | ಳಿದ್ದುವುಗಿರಿಗಳಂತೆಮಿಂಚಿದುವುದಿಗ್ವಧುಗ | ಳುದ್ದಂಡದಿಂದಪರ್ಜನ್ಯನಂಸೆಣಸಿನೋಡುವಚಲಾ
ಪಾಂಗದಂತೆ || ಸದ್ದಾತೃವಾಗಿತನ್ನವೊಲಿರದಲೋಭಿಯಂ | ಗದ್ದಿಸುವತೆರದಿಂದಮೊಳಗಿದವುಹಂಸಾಳಿ | ಸಾರ್ದವಾಗಸಕೆ
ಚಾತಕಶುಕದ್ವಿಪಕೃಷಿಕಶಿಖಿಗಳ್ಗೆಮುದಮೊದವಲು || ೨ || ವರನೀಲಕಂಠನೃತ್ಯದಲಂಧಕಾಸುರನ | ಧರಣಿಯಂಕುವಲಯಾ
ನಂದಕರಮಾದಘನ | ಪರಿಶೋಭೆಯಿಂದಚಂದ್ರೋದಯವನಾಲೋಕಚಂಚಲೋದ್ಭಾಸದಿಂದ || ತರುಣಿಯಕಟಾಕ್ಷಮಂ
ರಾಜಹಂಸಪ್ರಭಾ | ಹರಣದಿಂಪರಶುರಾಮಪ್ರತಾಪವನಧಿಕ | ತರವಾಹಿನಿಘೋಷದಿಂದನೃಪಯಾತ್ರೆಯಂಪೊಲ್ದುಕಾರೆಸೆ

ಟೀ|| ಆಗ-ಆ ವರ್ಷಾಕಾಲದಲ್ಲಿ, ಮುಗಿಲ್ಗಳ್-ಮೋಡಗಳು, ಗಿರಿಗಳಂತೆ-ಬೆಟ್ಟಗಳಹಾಗೆ, ಎಣ್ದೆಸೆಯೊಳ್-ಎಂಟು ದೆಸೆಗಳಲ್ಲಿಯೂ, ಎದ್ದುವು ಹುಟ್ಟಿದವು, ಥರಥರದೊಳು-ನಾನಾವಿಧಗಳಿಂದ, ಗಿರಿಗಳಂ-ಅಚಲಗಳ ಹಾಗೆ, ಇದ್ದವು-ಬಗೆ ಬಗೆಯ ರೂಪಾದಿಗಳುಳ್ಳವುಗಳಾಗಿದ್ದವು, ದಿಗ್ವಧುಗಳ್- ದೆಸೆಗಳೆಂಬ ಯುವತಿಯರು, ಪರ್ಜನ್ಯನಂ- ವೃಷ್ಟಿಯ ಅಧಿದೇವತೆಯನ್ನು, ಸೆಣಸಿ-ಕೋಪಗೊಂಡು, ನೋಡುವ- ಈಕ್ಷಿಸುವ, ಚಲ-ಚಲಿಸುತ್ತಿರುವ, ಅಪಾಂಗದಂತೆ- ಕಣ್ಣಿನ ಕಡೆಯ ನೋಟದಹಾಗೆ, ಉದ್ದಂಡದಿಂದ-ಹೆಚ್ಚಿಗೆಯಿಂದ, (ಅಧಿಕತೆಯಿಂದ) ಮಿಂಚಿದವು-ಕಾಂತಿಯನ್ನು ತೋರ್ಪಡಿಸಿದವು, ತನ್ನವೋಲ್-ನನ್ನ ರೀತಿ ಯಿಂದ, ಸದ್ದಾತೃವಾಗಿ-ಉತ್ತಮವಾದ ದಾನಶೀಲನಾಗಿ, ಇಂದ-ಇಲ್ಲದಿರುವ, (ದಾನಮಾಡದಿರುವ) ಲೋಭಿಯಂ-ಜಿಪುಣನನ್ನು, ಗದ್ದರಿಸುವ-ಧಟ್ಟಿಸುವ, ಗದರಿಸುವ, ತೆರದಿಂದ-ಬಗೆಯಿಂದ, ಮೊಳಗಿದವು-ಧ್ವನಿಮಾಡಿದವು, ಚಾತಕ-ಚಾತಕ ಪಕ್ಷಿಯು, ಶುಕ-ಕೀರವು, ದ್ವಿಪ-ಗಜವು, ಕೃಷಿಕ-ಬೇಸಾಯಗಾರನು, (ಬೇಸಾಯಮಾಡುವ ಕಾಲ್ನಡೆಯು) ಶಿಖಿ-ಮಯೂರವು, ಇವೇ ಮೊದಲಾದವುಗಳಿಗೆ, ಮುದಂ-ಹರ್ಷವು, ಒದಗಲು-ಉಂಟಾಗಲು, ಹಂಸಾಳಿ-ಹಂಸಪಕ್ಷಿಗಳ ಗುಂಪು, ಆಗಸಕೆ-ಆಕಾಶಕ್ಕೆ, ಸಾರ್ದವು-ಹೊಂದಿದವು (ಹೊಕ್ಕವು).

ಅ|| ವಿ|| ಎಂಟು ದೆಸೆಗಳ ಸಮಾಹಾರ = ಎಣ್ದೆಸೆ, ಸಮಾಹಾರದ್ವಿಗು. ಸ. ಹಂಸಗಳ+ಆಳಿ = ಹಂಸಾಳಿ ಷ. ತ. ಚಾತಕ-ತ್ಸ. ಚಾದಗೆ-ದ್ಭ. ಶುಕ-ಗಿಣಿ, ಶುಕಮುನಿ. ಅಂಚೆ-ದ್ಭ. ಹಂಸ-ತ್ಸ. ವರ್ಷರ್ತುವಿನಲ್ಲಿ ಮೇಘಗಳು (ನೀಲವರ್ಣದ ಮೋಡಗಳು) ಗುಂಪುಗುಂಪಾಗಿ ಹಾರಿ ಹೋಗುವುದು ಸ್ವಾಭಾವಿಕವಾದ್ದರಿಂದ ಇದು ಸ್ವಭಾವೋಕ್ತ್ಯಲಂಕಾರವು. || ||

ಟೀ|| ಕಾರ್ಗಾಲಂ- ಆ ವರ್ಷಾಕಾಲವು, ವರ- ಉತ್ತಮವಾದ, ನೀಲಕಂಠ- ಕರಿ ಗೊರಲನ, (ಪರಮೇಶ್ವರನು) ಮಯೂರದ, ನೃತ್ಯದಿಂದ-ಕುಣಿಯೋಣದರಿಂದ, (ಮತ್ತು ನೃತ್ತಮಾಡೋಣದರಿಂದ) ಅಂಧಕಾಸುರನ-ಅಂಧನೆಂಬ ದೈತ್ಯನ, ಧರಣಿಯಂ-ಪೃಥ್ವಿಯನ್ನು, ಕುವಲಯ-ಕನ್ನೈದಿಲೆಗಳಿಗೆ, ಭೂಮಂಡಲಕ್ಕೆ, ಆನಂದಕರಮಾದ-ಮನೋಹರವಾದ, ಹರ್ಷಪ್ರದ ವಾದ, ಘನ-ದಟ್ಟವಾದ (ಒತ್ತಾದ), ಮೋಡದ, ಪರಿಶೋಭೆಯಿಂದ-ಬಿಳಿದು ತಿಂಗಳಿಂದಲೂ, (ಕಾಂತ್ಯತಿಶಯದಿಂದ) ಚಂದ್ರೋದಯಂ-ಚಂದ್ರನ ಉದಯಿಸೋಣವನ್ನು, ಆಲೋಕ-ಈಕ್ಷಿಸುವುದು, ಕಾಂತಿ, ಚಂಚಲ-ಸ್ಥಿರಮನವಿಲ್ಲದೆ, ಉದ್ಭಾಸದಿಂ-ಶೋಭಿಸುವುದರಿಂದ, ಥಳಥಳಿಸುವುದರಿಂದ, ಯುವತಿಯರ-ತರುಣಿಯರ, ಪ್ರಾಯಸಮರ್ಥರಾದ ಸ್ತ್ರೀಯರ, ಕಟಾಕ್ಷಮಂ-ಕಡೆಗಣ್ಣಿನ ನೋಟವನ್ನು, ರಾಜ-ಭೂಪಾಲರಲ್ಲಿ, ಹಂಸ- ಉತ್ತಮವಾದ, ಅರಸಂಚೆಗಳ, ಪ್ರಭಾ-ಕಾಂತಿಯತಿಶಯುವನ್ನು, (ಪ್ರಕಾಶವನು) ಐಶ್ವರ್ಯದ ಕಾಂತಿಯನ್ನು, ಹರಣದಿಂ-ತೆಗೆದುಕೊಳ್ಳೋಣದರಿಂದ, ಪರಶುರಾಮ- ಭಾರ್ಗವನ ಪ್ರತಾಪ ವಂ-ಅಧಿಕ ಶೌರ್ಯವನ್ನು, ಅಧಿಕತರ-ಬಹು ಹೆಚ್ಚಾದ, ವಾಹಿನೀ-ಸೈನ್ಯದ, ನದಿಗಳ, ಘೋಷದಿಂದ-ರಭಸದಿಂದ, (ಧ್ವನಿಯಿಂದ) ನೃಪ-ರಾಜರುಗಳ, ಯಾತ್ರೆಯಂ-ಯುದ್ಧ ಯಾತ್ರೆಯನ್ನು, ಪೋಲ್ದು-ಹೊಂದಿ, ಎಸೆದಿರ್ದುದು-ಶೋಭಿಸುತ್ತಿತ್ತು.

ಆನಂದನನ್ನುಂಟುಮಾಡುವಂತೆ ಗಿರಿಗಳಂತೆ ಶೋಭಿಸಿದವು. ದಿಗ್ವಧುಗಳು ದಿಕ್ಕುಗಳೆಂಬ ಪರ್ಜನ್ಯನನ್ನು ಸೆಣಸಿ ಈಕ್ಷಿಸುವ ಚಪಲವಾದ ಅಪಾಂಗದಂತೆ ಅಧಿಕತೆಯಿಂದ ಮಿಂಚಿದವು ವರ್ಷಾಕಾಲದ ಮುಗಿಲಿನಂತೆ ಒಳ್ಳೇ ದಾತೃವಾಗಿ ಇರದ ಲೋಭಿಯನ್ನು ಗದರಿಸುವ ತೆರದಿಂದ ಮೊಳಗಿದವು. ಚಾತಕ ಪಕ್ಷಿ, ಶುಕ, ಗಜ ಕೃಷಿಕ, ಎತ್ತು, ಮಯೂರ ಇವೇ ಆದಿಯಾದವುಗಳಿಗೆ ಹರ್ಷವು ಉಂಟಾಗಲು ಮರಾಳಗಳ ಹಿಂಡು ಆಕಾಶಕ್ಕೆ ಹಾರಿಹೋದವು. ವರ್ಷಾಕಾಲದಲ್ಲಿ ಕಾರ್ಮುಗಿಲೇಳುವುದು, ಮಿಂಚುವುದು, ಗುಡುಗುವುದು, ಚಾತಕಾದಿಗಳು ನಲಿದಾಡುವುದು ಸ್ವಭಾವವಾದ್ದರಿಂದ ಇದು ಸ್ವಭಾವೋಕ್ತ್ಯಲಂಕಾರವು ||೨|| ವರ್ಷಾಕಾಲವು ಉತ್ತಮವಾದ ನವಿಲುಗಳ ನಾಟ್ಯದಿಂದಲೂ ಈಶ್ವರನ ನಾಟ್ಯದಿಂದಲೂ ಅಂಧಕನೆಂಬ ರಕ್ಕಸನನ್ನೂ ಪೃಥ್ವಿಯನ್ನೂ ನೈದಿಲೆಗಳಿಗೆ ಆನಂದಕರನಾದ ಮತ್ತು ದಟ್ಟವಾದ ಮೇಘಗಳ ಪರಿಶೋಭೆಯಿಂದ ಚಂದ್ರೋದಯುವನ್ನು (ಭೂಮಂಡಲಕ್ಕೆ ಅನುಕೂಲವಾದ ಮೇಘಗಳ ಪ್ರಕಾಶದಿಂದಲೂ) ನೋಡುವಿಕೆಯ ಚಂಚಲವಾದ ಉದ್ಭಾಸದಿಂದ ಯುವತಿಯರ ಕಟಾಕ್ಷವನ್ನು ರಾಜ ಹಂಸಪಕ್ಷಿಗಳ ಕಾಂತಿಯುತಿಶಯವನ್ನು ಎಂದರೆ ಸಕಲೈಶ್ವರ್ಯವನ್ನು ಅಪಹರಿಸುವದರಿಂದ ಪರಶುರಾಮನ ಪರಾಕ್ರಮವನ್ನು

ದಿರ್ದುದು ‖ ೩ ‖ ಜಾತನವಶಾಡ್ವಲದಸೊಂಪಿಡಿದೆಸೆವನೆಲದ | ಪೂತೆಸೆವಜಾಜಿಗಳ ವರಕುಟಜರಾಜಿಗಳ | ಕೇತಕಿಯಧೂಳಿಗಳ ಕೆದರುತಿಹಗಾಳಿಗಳಲಸದಿಂದ್ರಗೋಪಚಯದ ‖ ಕಾತೆಳೆಯಮಾವುಗಳ ಬನಬನದತಾವುಗಳ | ನೂತನಸುವಾರಿಗಳ ನೆಡೆಗೊಂಡದಾರಿಗಳ | ಭೂತಳದಸಿರಿಮೆರೆಯೆ ಮುಗಿಲ್ಮೈದೆಮಳೆಗರೆಯೆ ವರುಷರ್ತುಚೆಲ್ವಾದುದು ‖ ೪ ‖ ತುಂಗನವಚಿತ್ರಮಯಸುಪ್ರಭಾಸುರಕಾರ್ಮು | ಕಂಗಳಿಂಸುರಕಾರ್ಮುಕಂಗಳಂವಿವಿಧವಾ | ದ್ಯಂಗಳಗಭೀರಘನಘೋಷಂಗಳಿಂದಘನಘೋಷಂಗಳಂನೆ

---

ಅ‖ ವಿ‖ ಚಂದ್ರ + ಉದಯ = ಚಂದ್ರೋದಯ, ಗು. ಸಂ. ತರಣಿ–ಸೂರ್ಯ, ತರುಣಿ–ಸ್ತ್ರೀ, ನೀಲಕಂಠ-ಈಶ್ವರ, ನವಿಲು, ವಾಹಿನಿ–ಸೇನೆ, ನದಿ, ಘನ–ಮೇಘ, ಸಾಂದ್ರ, ಕುವಲಯ–ನೈದಿಲೆ, ಭೂಮಿ ‖ ೩ ‖

ಟೀ‖ ಜಾತ–ಉಂಟಾದ, ನವ–ನೂತನವಾದ, ಶಾಡ್ವಲದ-ಹಸಿಯ ಗರಿಕೆಯ, ವರ್ಣದ-ಬಣ್ಣದ, ಸೊಂಪು–ಅಲಂಕಾರವು, ಇಡಿದ–ತುಂಬಿಕೊಂಡಿರುವ, ನೆಲದ–ಪೃಥ್ವಿಯ, ಪೂತು–ಹೂಬಿಟ್ಟು, ಎಸೆವ–ಶೋಭಿಸುವ, ಜಾಜಿಗಳ–ಜಾಜೀ ಗಿಡಗಳ, ವರ–ಉತ್ಕೃಷ್ಟವಾದ, ಕುಟಜ-ಕುರಟಗನ ಗಿಡದ ಪುಷ್ಪದ, (ಗೋರಂಟೀಗಿಡದ), ರಾಜಿಗಳ–ಸಾಲುಗಳ, ಕೇತಕಿಯ–ಕೇದಿಗೇಹೂಗಳ, ಧೂಳಿಗಳ-ಪರಾಗಗಳನ್ನು, ಕೆದರುತಿಹ–ವಿಸ್ತರಿಸುತ್ತಿರುವ, ಗಾಳಿಗಳ-ಅನಿಲಗಳ, ಲಸತ್–ಪ್ರಕಾಶಿಸುವ, ಇಂದ್ರಗೋಪ–ಮಿಣ್ಣಂಗೀ ಹುಳಗಳ, (ಮಳೆಗಾಲವು ಪ್ರಾರಂಭವಾದಕೂಡಲೆ ಈ ತೆರವಾದ ಹುಳುವು ಹೆಚ್ಚುವುದು) ಅಥವಾ ಚಿತ್ರ ವಿಚಿತ್ರವರ್ಣವುಳ್ಳ ನಾನಾ ಬಗೆಯಾದ ಜೀವರಾಶಿಗಳ, ಚಯದ–ಒಡ್ಡಿನ, (ಗುಂಪಿನ) ಕಾತ-ಫಲವನ್ನು ಬಿಡತಕ್ಕ, (ಫಲಿಸತಕ್ಕ) ಎಳೆಯ ಮಾವುಗಳ–ಎಳದಾದ ಸಹಕಾರ ವೃಕ್ಷಗಳ (ಚೂತಗಳ), ಬನಬನದ-ಪ್ರತಿಯೊಂದು ಕಾಡುಪ್ರದೇಶದ, ತಾವುಗಳ–ಸ್ಥಾನಗಳ, ನೂತನ-ನವೀನವಾದ, ಸುವಾರಿಗಳಂ-ಯೋಗ್ಯವಾದ ಜಲಗಳನ್ನು (ಶ್ರೇಷ್ಠವಾದ ಅಂಬನ್ನು), ಎಡೆಗೊಂಡ–ಉಂಟಾಗಿರತಕ್ಕ (ಸ್ಥಳಗಳನ್ನಾಕ್ರಮಿಸಿರುವ), ದಾರಿಗಳ–ಹಾದಿಗಳ (ಮೇಲೆ ಹೇಳಿದವುಗಳನ್ನುಳ್ಳದ್ದಾದ), ಭೂತಳದ-ಭೂಭಾಗದ (ಪೃಥ್ವಿಯ), ಸಿರಿ–ಐಶ್ವರ್ಯವು ಅಥವಾ ವೈಭವವು, ಮೆರೆಯೆ-ಹೊಳೆಯಲು, ಮುಗಿಲು–ಮೋಡವು, ಐದೆ–ಉಂಟಾಗಲು (ಉದ್ಭವವಾಗಲು), ಮಳೆ–ಮಳೆಯು (ವೃಷ್ಟಿಯು), ಕರೆಯೆ–ಕರೆಯಲು, ಅಥವಾ ಬೀಳಲು-ಸುರಿಸಲು, ವರ್ಷಋತು-ಶ್ರಾವಣ ಭಾದ್ರಪದ ಮಾಸಗಳ ಕಾಲಕ್ಕೆ ಈ ಹೆಸರು) ವರ್ಷಾಕಾಲವು, ಚೆಲ್ವಾದುದು-ಮನೋಹರವಾಗಿತ್ತು ‖

ಅ‖ ವಿ‖ ಇಂದ್ರಗೋಪ–ಮಿಣ್ಣಂಗಿಹುಳು, ಮಿಂಚುಹುಳು. ವರ್ಷಾ + ಋತು = ವರ್ಷಋತು. ಗುಣಸಂ. ಸುಷ್ಠು + ವಾರಿ = ಸುವಾರಿ, ವಿ. ಪೂ. ಕ. (ಭವನ–ಪ್ರಪಂಚ, ಭವನ–ಮನೆ), ಸಿರಿ-ದ್ಭ. ಶ್ರೀ–ತ್ಸ. ‖ ೪ ‖

ಟೀ‖ ತುಂಗ–ದೊಡ್ಡದಾದ, ಎತ್ತರವಾದ, ಚಿತ್ರಮಯ-ನಾನಾ ಬಗೆಯಾದವುಗಳಿಂದ ಕೂಡಿದ, ಸುಪ್ರಭಾಸುರ-ಅತಿ ಹೆಚ್ಚಾಗಿ ಹೊಳೆಯುವುದಾದ, ಕಾರ್ಮುಕಂಗಳಿಂ-ಧನುಸ್ಸುಗಳಿಂದ, ಸುರಕಾರ್ಮುಕಂಗಳಂ–ಕಾಮನ ಬಿಲ್ಲುಗಳನ್ನು (ಇಂದ್ರಚಾಪಂಗಳನ್ನು), ವಿವಿಧ–ನಾನಾಬಗೆಯಾದ, ವಾದ್ಯಂಗಳ-ಭೇರಿ, ನಗಾರಿ, ಕಹಳೆ, ಮುಂತಾದ ವಾದ್ಯಧ್ವನಿಗಳ, ಗಭೀರ–ಗುಂಭಿತವಾದ, ಘೋಷಂಗಳಿಂದ–ಧ್ವನಿಗಳಿಂದ, ಘನ-ಮೋಡಗಳ, ಘೋಷಂಗಳಂ–ಆರ್ಭಟಗಳನ್ನು, ನೆಗಳ್ದು–ಉಂಟಾಗಿ (ವ್ಯಾಪಿಸಿಕೊಂಡು), ವಾಹಿನಿಗಳಿಂ–ಸೈನ್ಯಗಳಿಂದ, ವಾಹಿನಿಗಳಂ–ಹೊಳೆಗಳನ್ನು, ಗೆಲ್ದು-ಜಯಿಸಿ, ವೀರ–ಪರಾಕ್ರಮಿಯಾದ, ಪಾಂಡವ–ಪಾರ್ಥನ, ಸೈನ್ಯಸಾಗರಂ-ವಾಹಿನಿಯೆಂಬ ವಿಸ್ತಾರವಾದ ಜಲಭಾಗವು. ಕಂಗೊಳಿಪ-ಶೋಭಿಸುವ, ಕಾರ್ಗಾಲದಂತೆ-ವರ್ಷಾಕಾಲದ ಹಾಗೆ, ಎಸೆಯೆ–ಹೊಳೆಯಲು, ವಾಜಿ-ಆ ಯಜ್ಞಾಶ್ವವು. ಮಣಿಪುರಕಾಗಿ–ರತ್ನಪುರವನ್ನು ಕುರಿತು, ನಡೆತಂದುದು-ಪ್ರವೇಶಿಸಿತು ‖

---

ಅಧಿಕವಾದ ನವಿಗಳ ಘೋಷದಿಂದ ನೃಪರ ಜೈತ್ರಯಾತ್ರೆಯ ಹೋಲಿಕೆಯನ್ನು ಹೊಂದಿ ಪ್ರಕಾಶಿಸುತ್ತಿತ್ತು. ಎಂದರೆ ವರ್ಷರ್ತುವನ್ನು ರಾಜರು ಯುದ್ಧಪ್ರಯಾಣಕ್ಕೆ ಹೊರಡುವ ಕಾಲದಂತೆ ಹೋಲಿರುತ್ತಿತ್ತು ‖ ೩ ‖ ಆ ಕಾಲದಲ್ಲಿ ಹೊಸದಾಗಿ ಬೆಳೆದಿರುವ ಗರಿಕೆ ಹುಲ್ಲುಗಳ ಹಸರು ಬಣ್ಣದಿಂದ ವ್ಯಾಪ್ತವಾದ ಸೊಗಸು ಭೂಮಿಯ ಎಲ್ಲಾಕಡೆಯಲ್ಲೂ ಹೂ ಬಿಟ್ಟು ಪ್ರಕಾಶಿಸುವ ಜಾಜೀ ಪುಷ್ಪಗಳು ಶ್ರೇಷ್ಠವಾದ ಕುಟಜ ಪುಷ್ಪಗಳು, ಇವುಗಳ ಸಾಲುಗಳು ಕೇದಿಗೆಯ ಹುವ್ವಿನ ಧೂಳಿಯನ್ನು ಎಲ್ಲಾ ಕಡೆಯಲ್ಲೂ ಬೀರುತ್ತಿರುವ ಸುವಾಸನೆಯಿಂದೊಡಗೂಡಿದ ಮಂದಮಾರುತವು ನಾನಾ ಬಣ್ಣಗಳಿಂದ ಒಪ್ಪುತ್ತಿರುವ ಮಿಣ್ಣಂಗಿ ಹುಳಗಳ ಸಮೂಹಗಳು ಕೋಮಲವಾಗಿ ಬೆಳದು ಹೂ ಕಾಯಿಗಳಿಂದ ಬಲಿತು ತುಂಬಿರುವ ಸಹಕಾರ ವೃಕ್ಷಗಳ ವನಗಳು ಎಲ್ಲಿ ನೋಡಿದಾಗೂ ಹೊಸ ಉದಕಗಳಿಂದ ಕೂಡಿದ ದಾರಿಗಳು ಭೂಮಿಯು ಸಂಪತ್ತಿನವೃದ್ಧಿಯಿಂದ ಪ್ರಕಾಶಿಸುತ್ತಿರಲು ವರ್ಷಾಕಾಲವು ಅತ್ಯಂತ ಪ್ರಕಾಶಮಾನವಾಗಿತ್ತು ‖ ೪ ‖ ಬಳಿಕ ಅತಿ ಎತ್ತರವಾದ ನಾನಾ ಚಿತ್ರ ವಿಚಿತ್ರಬಣ್ಣಗಳಿಂದ ಕೂಡಿದ ಬಹಳವಾಗಿ ಶೋಭಿಸುವ ಯುದ್ಧ ಭಟರ ಬಿಲ್ಲುಗಳಿಂದ ವರ್ಷಾಕಾಲದಲ್ಲುದ್ಭವಿಸುವ ಕಾಮನ ಬಿಲ್ಲುಗಳನ್ನು,

ಗಳ್ಸ || ಸಂಗತನೃಪಾಲವಾಹಿನಿಗಳಿಂ ವಾಹಿನಿಗ | ಳಂಗೆಲ್ದು ವೀರಪಾಂಡವಸೈನ್ಯಸಾಗರಂ | ಕಂಗೊಳಿಪಕಾರ್ಗಾಲದಂತೆಸೆಯೆ ವಾಜಿಮಣಿಪುರಕಾಗಿ ನಡೆತಂದುದು || ೫ || ಕ್ಷೋಣೀಂದ್ರಕೇಳರ್ಜುನನಕಣ್ಗೆ ಮಣಿಪುರಂ | ಕಾಣಿಸಿತು ಕನಕರಜತದಕೋಟೆ ಕೊತ್ತಳದ | ಮಾಣಿಕದವಜ್ರವೈಡೂರ್ಯಗೋಮೇಧಿಕದ ಮುಗಿಲಟ್ಟಳೆಯಸಾಲ್ಗಳ || ಶೋಣಪ್ರವಾಳಮಣಿರುಚಿಯತೋರಣದ ಕ | ಟ್ಟಾಣಿಮುತ್ತುಗಳ ಲೋವೆಗಳ ಗೋಪುರದ ಬಿಂ | ನಾಣದಸುಚಿತ್ರಪತ್ರದ ಕುಸುಕದೆಸಕದಿಂ ಮೆರೆವಬಾಗಿಲ್ಗಳಿಂದ ||೬|| ಪಗಲದೆಸೆಗಳುಕಿಪರೆದಿರ್ದಬೆಳದಿಂಗಳೀ | ನಗರಮಂಪೊಕ್ಕು ವೆಂಟಣಿಸಿಮಾರ್ಮಲೆವುತಿರೆ | ಮಿಗೆಮೋಹರಿಸಿಬಂದು ಮುತ್ತಿಗೆಯ ನಿಕ್ಕಿಕೊಂಡಿರ್ಪೆಳೆವಿಸಿಲ್ಗಳೆನಲು || ಗಗನವನಡರ್ದಸೌಧಂಗಳ ಮರೀಚಿಯಿಂ | ಪೊಗರೊಗುವಪೊಚ್ಚಪೊಸಪೊನ್ನಕೊ

---

ಅ|| ವಿ|| ಸರನ + ಕಾರ್ಮುಕ = ಸುರಕಾರ್ಮುಕ, ಷ. ತ. ಕಾರ್ + ಕಾಲ = ಕಾರ್ಗಾಲ, ಗಕಾರ. ಆದೇಶ. ಸಂ. ಮಣಿ ಎಂಬಪುರ = ಮಣಿಪುರ ಸಂಭಾವನಾ ಪೂ. ಕ. ಮಣಿಯ + ಪುರ = ಮಣಿಪುರ ಷ. ತ. ನವವಾದ, ಚಿತ್ರವಾದ = ನವ ಚಿತ್ರ, ವಿ. ಉಭಯ. ಕ. || ೫ ||

ಟೀ|| ಕ್ಷೋಣೀಂದ್ರ-ಪೃಥ್ವೀಪತಿಯಾದ ಜನಮೇಜಯರಾಯನೆ, ಆಮಣಿಪುರಂ-ಅರ್ಜುನನ ಮಗನಾದ ಬಭ್ರುವಾಹನನ ರತ್ನಪುರಿಯು, ಅರ್ಜುನನ-ಪಾರ್ಥನ, ಕಣ್ಗೆ-ಕಂತಳಿಗೆ, ಕನಕ-ಚಿನ್ನದ, ರಜತ-ಬೆಳ್ಳಿಯಿಂದಲು ನಿರ್ಮಿತವಾದ, ಕೋಟೆ ಕೊತ್ತಳದ-ಕೋಟೆಯ ಮೇಲಬುರಜುಳ್ಳದ್ದಾದ, ಮಾಣಿಕದ-ಮಾಣಿಕ್ಯದಿಂದಲೂ, ವಜ್ರದಿಂದಲೂ, ವೈಡೂರ್ಯದಿಂದಲೂ, ಗೋಮೇಧಿಕದ-ಗೋಮೇಧಿಕದಿಂದಲೂ ನಿರ್ಮಿತವಾದ, ಮುಗಿಲಟ್ಟಲೆಯ-ಅಂತರಿಕ್ಷದವರಿಗೂ ಸೋಕುವ ಕೋಟೆತೆನೆಗಳ, ಸಾಲ್ಗಳ-ಪಙ್ತಿಗಳಿಂದಲೂ, ಶೋಣ-ರಕ್ತವರ್ಣದಂತಿರುವ, ಪ್ರವಾಳಮಣಿ-ಪವಳದ ಮಣಿಯಿಂದ, ರುಚಿ-ಪ್ರಕಾಶವುಳ್ಳ, ತೋರಣದ-ತೋರಣದಿಂದಲೂ, ಕಟ್ಟಾಣಿಮುತ್ತುಗಳ-ಒಂದೇ ಸಮವಾಗಿ ಗುಂಡಾಗಿರುವ ಮೌಕ್ತಿಕಗಳ, ಲೋವೆಗಳ-ಲೋವೆಗಳುಳ್ಳ, ಗೋಪುರದ-ಪುರದ್ವಾರದಿಂದಲೂ, ಬಿನ್ನಾಣದ-ಠೀವಿಯಿಂದೊಪ್ಪುವ, ಸುಚಿತ್ರ-ಒಳ್ಳೇ ಅಲಂಕಾರದಿಂದ ಚಿತ್ರಿಸಿದ, ಪತ್ರಗಳಿಂ-ಪತ್ರಗಳಿಂದಲೂ, ಕುಸುಕದ-ನೆಡಲ್ಪಟ್ಟ, ಎಸಕದಿಂ-ಕೈಚಮತ್ಕಾರವಾದ ಕಾರ್ಯದಿಂದ, ಎಸೆವ-ಹೊಳೆಯುತ್ತಿರುವ ಬಾಗಿಲ್ಗಳಿಂದ-ಕದಗಳಿಂದಲೂ, ಕಾಣಿಸಿತು-ಕಂಡುಬಂತು ||

ಅ|| ವಿ|| ಕ್ಷೋಣಿ + ಇಂದ್ರ = ಕ್ಷೋಣೀಂದ್ರ, ಸವರ್ಣ ದೀ. ಸಂ. ಸೈನ್ಯವೆಂಬ ಸಾಗರ, ಅಂ. ಪೂ. ಕ. ಸಗರನ ಪುತ್ರರಿಂದಾದದ್ದು, ಸಾಗರ || ೬ ||

ಟೀ|| ಪಗಲದೆಸೆಯಿಂದ - ಹಗಲಿನ ತೊಂದರೆಯಿಂದ, ಅಳುಕಿ-ಭಯಗೊಂಡು, ಪರದಿರ್ದ - ಓಡಿಹೋಗಿದ್ದ ಬೆಳದಿಂಗಳು-ಚಂದ್ರಿಕೆಯು, ಈನಗರಮಂ-ಈ ರತ್ನಪುರವನ್ನು, ಪೊಕ್ಕು-ಹೊಕ್ಕು, ವೆಂಟಣಿಸಿ-ಪ್ರಬಲವಾಗಿ, ಮಾರ್ಮಲೆವುತ-ಪ್ರತಿಭಟಿಸಿ (ಎದುರು ಬೀಳುತ್ತ), ಇರೆ-ಇರುತ್ತಿರಲು, ಮಿಗೆ-ಹೆಚ್ಚಾಗಿ, ಮೋಹರಿಸಿ-ಸೈನ್ಯದಿಂದೊಡಗೂಡಿ, ಬಂದು-ಈ ಮಣಿಪುರಕ್ಕೆ ಹೊಕ್ಕು, ಮುತ್ತಿಗೆಯನು-ಮುತ್ತಿಗೆಯನ್ನು, ಇಕ್ಕಿಕೊಂಡು-ಹಾಕಿಕೊಂಡು, ಇರ್ಪ-ಇರುತ್ತಲಿರುವ, ಎಳೆವಿಸಿಲ್ಗಳ್-ಬಾಲಾತಪಗಳು, ಎನಲ್-ಎನ್ನುವಂತೆ, ಗಗನವನು-ಅಂತರಿಕ್ಷವನ್ನು, ಅಡರ್ದ-ಹತ್ತುವಂತಿರುವ, ಸೋಕುವಂತಿರುವ, ಸೌಧಂಗಳ-ಮೇಲು ಮಹಡಿಗಳ, ಮರೀಚಿಯಿಂ-ಪ್ರಕಾಶದಿಂದ, (ಕಿರಣದಿಂದ) ಪೊಗರ್-ಕಾಂತಿಗಳಾಗಿ, ಒಗುವ-ವ್ಯಾಪಿಸುವ, ವಿಸ್ತೀ

---

ನಾನಾ ವಿಧಗಳಾದ ಭೇರಿಮೊದಲಾದ ವಾದ್ಯ ಧ್ವನಿಗಳಿಂದ ಗುಡುಗುಗಳ ಧ್ವನಿಗಳನ್ನು (ಮೇಘಗಳ ರವವನ್ನು) ಪ್ರಸಿದ್ಧಿಯಾಗಿ ಸರ್ವದಾ ಸಂಗಡಲಿರುವ ಮರಾಳಧ್ವಜಾದಿ ರಾಜರುಗಳ ಸೈನ್ಯಗಳಿಂದ ಉದ್ಧವಾಗಿ ಪ್ರವಹಿಸುವ ನದಿಗಳನ್ನು ಸೋಲಿಸಿ (ಜಯವನ್ನು ಹೊಂದಿ) ವೀರನಾದ ಪಾರ್ಥನ ಸೈನ್ಯವೆಂಬ ಸಾಗರವು ಕಣ್ಗೊಳಿಸುವ ಕಾರ್ಗಾಲದಂತೆ ಶೋಭಿಸುತ್ತಿರಲಾಗಿ ಯಜ್ಞಾಶ್ವವು ಮಣಿಪುರವನ್ನು ಕುರಿತು ನಡೆತಂದುದು ||೫|| ಎಲೈ ಭೂಪಾಲಕನಾದ ಜನಮೇಜಯರಾಯನೇ! ಆಲಿಸು, ಅರ್ಜುನನ ಕಣ್ಣುಗಳಿಗೆ ಚಿನ್ನ ಬೆಳ್ಳಿಗಳಿಂದ ನಿರ್ಮಿತವಾದ ಕೋಟೆಯು ಕೊತ್ತಳವು, ಮಾಣಿಕ್ಯ, ರತ್ನ, ವಜ್ರ, ವೈಡೂರ್ಯ, ಗೋಮೇಧಿಕಗಳಿಂದ ರಚಿತವಾದ ಮೇಘಾವರಣವನ್ನು ಮುಟ್ಟುತ್ತಿರುವ ಕೋಟೆಯ ತೆನೆಗಳು, ಚಿಗುರಿನಂತೆ ಕೆಂಪಾದ ಹವಳ ಮಣಿಗಳಿಂದ ಪ್ರಜ್ವಲಿಸುವ ತೋರಣದ ಕಂಭಗಳು ಅಂದವಾಗಿ ಪಚ್ಚೆಗಳ ಮಣಿಗಳಿಂದ ನಿರ್ಮಿತವಾದ ಮಕರ ತೋರಣಗಳು ದುಂಡಗೆ ಅತಿಗುಂಡಾಗಿರುವ ಆಣಿ ಮುತ್ತುಗಳಿಂದ ಖಚಿತವಾದ ಲೋವೆಗಳು ನಾನಾ ಬಗೆಯಾದ ಬಣ್ಣಗಳಿಂದ ಕೂಡಿ ಅತಿಮನೋಹರವಾಗಿ ರಂಜಿಸುವ ಕೋಟೆಯ ಬಾಗಿಲ ಪ್ರದೇಶವು ಇವುಗಳಿಂದ ಶೋಭಿಸುವ ಬಭ್ರುವಾಹನನ ರಾಜಧಾನಿಯಾದ ರತ್ನಪುರವು ಕಾಣಿಸಿತು ||೬|| ಆಗ ಪಗಲಿನ ದೆಸೆಯಿಂದ ಭಯಗೊಂಡು ಓಡಿಹೋಗಿದ್ದ ಬೆಳದಿಂಗಳು ಈ ರತ್ನಪುರವನ್ನು ಹೊಕ್ಕು ವೃದ್ಧಿಗೊಂಡು ಪ್ರತಿಭಟಿಸುತ್ತಿರಲಾಗಿ ಅಧಿಕವಾಗಿ ಸೇನೆಯನ್ನೊಡಗೊಂಡು ಈ ರತ್ನಪುರಕ್ಕೆ ಮುತ್ತಿಗೆಯನ್ನು ಹಾಕಿಕೊಂ

ಟೆಗಳಕಾಂ | ತಿಗಳ್ಳೈದೆನುುಸುಕಿಕೊಂಡೆಸೆದಿರ್ದವರ್ಜುನನಕಣ್ಗೆ ಕೌತುಕಮಾಗಲು ‖ ೭ ‖ ಮೇರುಗಿರಿಯಂಜರೆವಕಾಂಚನದ ಗೋಪುರಂ | ತೋರವೊಲೆರಾಜಮಾರ್ಗಂಬಾಹುಲತೆನೃಪಾ | ಗಾರಂಮುಖಾಂಬುಜಂಚಿತ್ರತಪತಾಕೆಗಳ್ಚಲಿಸುವಳಕಾವಳಿಗಳು ‖ ತೋರಣಂಮಣಿಹಾರಮೆಸೆವಕೋಟಾವಲಯ | ಮಾರಾಜಿಪಾಂಬರಂಪರಿಘಮೇಖಲೆಗೃಹ | ಸುಧಾರೋಚಿದರಹಾಸಮಾಗಲಾನಗರಿನಾರಿಯಚೆಲ್ವಿನಂತಿರ್ದುದು ‖ ೮ ‖ ಕೋಟೆಗಾವಲಭಟರವಿವಿಧಾಯುಧಂಗಳಕ | ವಾಟರಕ್ಷೆಯಬಲದಸನ್ನಾಹಸಾಧನದ | ಕೂಟದತಿ ಭೀಕರದದುರ್ಗದಭಿಮಾನದೇವತೆ ಸಕಲಭೂವಲಯಕೆ ‖ ಮಿಾಟೆನಿಸುವಾತನೀ ಪೊಳಲಾಣ್ಮನೋ

---

ರಿಸುತ್ತಿರುವ, ಪೊಚ್ಚ-ಹಳದಿಯ ವರ್ಣದ, ಪೊಸ-ಹೊಸದಾದ, ಪೊನ್ನ-ಚಿನ್ನದ, ಕೋಟೆಗಳ-ಕೋಟೆಗಳುಳ್ಳ, (ತುದಿಗಳುಳ್ಳ) ಕಾಂತಿಗಳು-ಪ್ರಕಾಶಗಳು, ಐದೆ-ಉಂಟಾಗಿ, (ಚೆನ್ನಾಗಿ) ಅರ್ಜುನನ-ಪಾರ್ಥನ, ಕಣ್ಗೆ-ಕಣ್ಣುಗಳಿಗೆ, ಕೌತುಕಂ-ಕುತೂಹಲವು, ಆಗಲು-ಆಗುವಂತೆ, ಎಸೆದಿರ್ದವು-ಹೊಳೆಯುತ್ತಿದ್ದವು.

ಅ‖ ವಿ‖ ಬಿಳಿದು+ತಿಂಗಳು=ಬೆಳದಿಂಗಳು ವಿ. ಪೂ. ಕ. ಎಳೆಯದಾದ+ಬಿಸಿಲ್=ಎಳೆವಿಸಿಲ್ ವಿ.ಪೂ.ಕ. ಆಗಸ-ದ್ಭ ಆಕಾಶ-ತ್ಸ. ಮರೀಚಿ-ಕಿರಣ, ಮೆಣಸು, ಮರೀಚಿ ಋಷಿ.

ಟೀ‖ ಮೇರುಗಿರಿಯಂ- ಸುವರ್ಣಾದ್ರಿಯನ್ನು, ಜರೆವ-ಹಿಯ್ಯಾಳಿಸುವ, (ತಿರಸ್ಕಾರಮಾಡುವ) ಕಾಂಚನದ-ಚಿನ್ನದಿಂದ ನಿರ್ಮಿತವಾದ, ಗೋಪುರಂ-ಪುರದ್ವಾರದಲ್ಲಿರುವ ಶಿಖರಗಳೇ, ತೋರ-ದೊಡ್ಡದಾದ, ಮೊಲೆ-ಕುಚಗಳಂತೆಯೂ, ರಾಜಮಾರ್ಗ-ರಾಜಬೀದಿಗಳೆ, (ದೊಡ್ಡದಾದ ರಸ್ತೆಗಳೆ) ಬಾಹುಲತೆ-ಲತಾಕೃತಿಯಾದ ಬಾಹುಗಳಂತೆಯೂ, ನೃಪ-ರಾಜನ, ಆಗರಂ-ಮನೆಯೇ, ಮುಖಾಂಬುಜಂ-ಮುಖಪದ್ಮದಂತೆಯೂ, ಚಿತ್ರಿತ-ನಾನಾರೀತಿಯಾಗಿ ಚಿತ್ರಿಸಿರುವ, ಪತಾಕೆಗಳು-ಬಾವುಟಗಳೇ, (ತೇರುಗಳು) ಚಲಿಸುವ-ಅಲುಗಾಡುವ, (ಅಲ್ಲಾಡುತ್ತಿರುವ) ಅಳಕಾಳಿಗಳು-ಮುಂಗುರುಳುಗಳ ಸಮೂಹಗಳಂತೆಯೂ, ತೋರಣಂ-ಬಾಗಿಲಿಗೆ ಕಟ್ಟಿರುವ ತೋರಣವೇ, ಮಣಿಹಾರಂ-ರತ್ನನಿರ್ಮಿತವಾದ ಹಾರದಂತೆಯೂ, ಎಸೆವ-ಶೋಭಿಸುವ, ಕೋಟಾವಲಯ-ಸುತ್ತಲೂ ಸುತ್ತಿಕೊಂಡಿರುವ ಕೋಟೆಯ ಪ್ರದೇಶವೇ, ಆರಾಜಿಪ-ಹೊಳೆಯುತ್ತಿರುವ, ಅಂಬರಂ-ಧರಿಸಿದ್ದ ಪಟ್ಟೆಯ ವಸ್ತ್ರದಂತೆಯೂ, ಪರಿಘ-ಕಂದಕವೇ, ಮೇಖಲೆ-ಒಡ್ಯಾಣದಂತೆಯೂ, (ನಡುವಿನ ಪಟ್ಟೆಯಂತೆಯೂ) ಗೃಹ-ಸದನಗಳಿಗೆ ಹಚ್ಚಿರುವ,ಸುಧಾ-ಚೂರ್ಣದ, (ಸುಣ್ಣದ) ರೋಚಿ-ಪ್ರಕಾಶವೇ, ದರಹಾಸಂ-ಮಂದಹಾಸದಂತೆಯೂ, ಆಗಲು-ಉಂಟಾಗುತ್ತಿರುವದರಿಂದ, ಆ ನಗರಿ- ಆ ರತ್ನಪುರವು, ನಾರಿಯ-ಸ್ತ್ರೀಯ, ಚೆಲ್ವಿನಂತೆ-ಲಾವಣ್ಯದ ಹಾಗೆ, ಇರ್ದುದು-ಇರುತ್ತಲಿತ್ತು.

ಅ‖ ವಿ‖ ಕೋಟೆಯ+ವಲಯ= ಕೋಟಾವಲಯ ಷ. ತ. ಸೂತ್ರ-ವಿಧಿ, ದಾರ. ಅದು+ನಗರಿ=ಆ ನಗರಿ ಗ. ಸ. ರತ್ನ-ತ್ಸ. ರನ್ನ-ದ್ಭ. ಮಾಣಿಕ್ಯ-ತ್ಸ. ಮಾಣಿಕ-ದ್ಭ. ಅಂಬರ-ವಸ್ತ್ರ, ಆಕಾಶ. ನಗರಿ-ಪಟ್ಟಣ. ನಾರಿ-ಸ್ತ್ರೀ, ಮುಖವು, ಅಂಬುಜದಂತೆ=ಮುಖಾಂಬುಜ ಉ. ಉತ್ತರ. ಕ. ‖೮‖

ಟೀ‖. ಕೋಟೆ-ದುರ್ಗವನ್ನು, ಕಾವಲ-ಪಾಲಕರಾದ, ಭಟರ-ಶೂರರ,ವಿವಿಧ-ನಾನಾಬಗೆಗಳಾದ, ಆಯುಧಂಗಳ-ಆಯುಧಗಳ, (ಕತ್ತಿ ಮೊದಲಾದ ಆಯುಧಗಳ) ಕವಾಟ-ಕದಗಳನ್ನು, ರಕ್ಷೆಯ-ಕಾಪಾಡತಕ್ಕ, ಬಲದ-ಸೇನಾ ಸನ್ನಾಹದ, ಸನ್ನಾಹದ-

---

ಡಿರುವ ಎಳೆಯದಾದ ಬಿಸಿಲ್ಗಳು ಎನ್ನುವಂತೆ ಅಂತರಿಕ್ಷವನ್ನು ಚುಂಬಿಸುತ್ತಿರುವ ಉಪ್ಪರಿಗೆ ಮನೆಗಳ ಮರೀಚಿಯಿಂದ ಪ್ರಭೆಗಳಾಗಿ ಪ್ರಸರಿಸುತ್ತಿರುವ ಅರಸಿನ ವರ್ಣದ ಹೊಸದಾದ ಮತ್ತು ಪರಿಶುದ್ಧವಾದ ಅಪರಂಜಿಯ ಕೋಟೆಗಳ ಕಾಂತಿಗಳು ಬಂದು ಮುತ್ತಿಕೊಂಡು ಪಾರ್ಥನ ನೇತ್ರಗಳ್ಗೆ, ಅದ್ಭುತವು ಎಂದು ಕಾಣುತ್ತಿರಲು ಶೋಭಿಸಿತು ‖ ೭ ‖ ಆ ಬಳಿಕ ಆ ಮಣಿಪುರವು, ಸುವರ್ಣಾದ್ರಿಯನ್ನು ತಿರಸ್ಕರಿಸುವ ಚಿನ್ನದ ಗೋಪುರಗಳೇ ದಪ್ಪನಾದ ಕುಚಗಳೆಂತಲೂ, ಉದ್ದವಾದ ರಾಜಬೀದಿಗಳೇ ಲತೆಯಂತಿರುವ ತೋಳುಗಳೆಂತಲೂ ದೊರೆಯ ರಾಜಮಂದಿರವೇ ಮುಖಾಂಬುಜವೆಂತಲೂ, ನಾನಾ ಬಗೆಗಳಾಗಿ ಮಾಡಲ್ಪಟ್ಟ ಪತಾಕೆಗಳ ಸಮೂಹವೇ ಮುಂಗುರುಳುಗಳೆಂತಲು ತೋರಣಕ್ಕಾಗಿ ಬಂಧಿಸಿರುವ ಸೂತ್ರವೇ ರತ್ನಖಚಿತವಾದ ಕಂಠೀಸರವೆಂತಲೂ, ಸುತ್ತಲೂ ಗುಂಡಾಗಿಸುತ್ತಿರುವ ಕೋಟೆಯ ಪ್ರಾಕಾರವೆ ಪ್ರಕಾಶಮಾನವಾದ ಪಟ್ಟೆಯ ವಸ್ತ್ರವೆಂತಲು, ಆ ಕೋಟೆಯ ಸುತ್ತಲಿರುವ ಪರಿಘವೆ ಶೋಭಿಸುವ ಒಡ್ಯಾಣವೆಂತಲು, ಮನೆಗಳಿಗೆ ಹಚ್ಚಿರುವ ಬಿಳಿಯ ಬಣ್ಣವೇ ಪ್ರಕಾಶಮಾನವಾದ ಕಾಂತಿಯ ಕಿರುನಗೆಯೆಂತಲು, ಈ ಪ್ರಕಾರವಾಗಿ ಆ ರತ್ನಪುರವು ಕಾಂತಿಯಿಂದೊಪ್ಪುತ್ತಾ ಸುಂದರ ಸ್ತ್ರೀಯಂತೆ ಪ್ರಕಾಶಿಸುತ್ತಿತ್ತು ‖೮‖ ಆಗ ಕೋಟೆಯನ್ನು ರಕ್ಷಿಸುವಂಥ ಭಟರ ವಿಧವಿಧಗಳಾದ ಆಯುಧಗಳ ಕವಾಟಗಳನ್ನು ರಕ್ಷಣೆಯುದಾದ ಸೇನೆಯ ಯುದ್ಧದ ಕಾರ್ಯಕ್ಕೆ ಸಹಾಯಭೂತವಾದ, ಪಿರಂಗೀ ಮೊದಲಾದವುಗಳ ಸಮೂಹದಿಂದ ಅತಿಯಾಗಿ ಭಯಂಕರನಾದ ದುರ್ಗದ ಜಯಸ್ತಂಭದಲ್ಲಿರುವ ಅಭಿಮಾನದೇವತೆಯು ಸಕಲರಾದ ಭೂಪಾಲರ ಗೃಹಗಳಿಗೆ ಅತ್ಯಧಿಕವಾದನನೆನಿಸಿಕೊಳ್ಳುವ ಆತನು ಈ ನಗ

ರ್ವನೆಸ | ಘಾಟಿಕೆಯೊಳೆಂದುಬೆರಳೆತ್ತಿ ತೋರಿಸುವಂತೆ | ನೋಟಕರಕಣ್ಗೆಕಾಣಿಸಿತುನಿಂದೆಸೆವಡೆಂಕಣಿಯಪಳವಿಗೆಕೈಗಳು ||೯||
ತಂಡತಂಡದೊಳಾಪೊಳಲ್ಪೊಗುವ ಪೊರಮಡುವ | ಶುಂಡಾಲವಾಜಿಗಳ ಪುರಜನದಪರಿಜನದ | ಮಂಡಲಾಧಿಪರೆನಿಪ ಹಂಸ
ಧ್ವಜಾದಿಭೂಭುಜರನುದಿನಂ ತಪ್ಪದೇ || ಕೊಂಡುಬಂದೀವಕಟ್ಟಳೆಯ ಕಪ್ಪದ ಪೊನ್ನ | ಭಂಡಿಗಳಸಾವಿರದ ಸಂದಣಿಯ
ಕಾಣಬಹ | ಕಂಡುಮರಳುವಮನ್ನೆಯರಮಹಾವಿಭವಂಗಳೆಸೆದುವಾನಗರದೊಳಗೆ || ೧೦ || ನೆಟ್ಟನೆಹಯಂಪೋಗಿವಹಿಲದಿಂ

ಕಾಳಗಕ್ಕೆ ಯತ್ನಮಾಡೋಣದರ, (ಯತ್ನಮಾಡುವಿಕೆಯ) ಕೂಟದ-ಗುಂಪಿನ, (ಸಂಪುದ) ಅತಿ–ಹೆಚ್ಚಾಗಿ, ಭೀಕರದ–ಭಯವನ್ನುಂಟುಮಾಡತಕ್ಕ, ದುರ್ಗದ–ಗಮಿಸಲು ಸಾಧ್ಯವಲ್ಲದ ಪ್ರಾಕಾರದ, ಅಭಿಮಾನದೇವತೆ–ಅಭಿಮಾನಶಾಲಿಯಾದ ಧ್ವಜದಲ್ಲಿರುವ ದೇವತಾಪ್ರತಿಮೆಯು, ಅಖಿಲ-ಸಮಸ್ತ, ಭೂಪ–ರಾಜರುಗಳ, ಆಲಯಕೆ–ಅರಮನೆಗಳಿಗೆ, ಮಿಾಟೆನಿಸುವ–ಶ್ರೇಷ್ಠವಾದ್ದೆನಿಸಿಕೊಳ್ಳುವ, ಆತನು-ಅಂತಹ ಮನುಷ್ಯನು, ಈ ಪೊಳಲ-ಈ ನಗರದ, ಅಣ್ಮನು–ಸಂರಕ್ಷಕನಾದ ರಾಜನು, ಓರ್ವನು–ಒಬ್ಬನು ಮಾತ್ರವೇ, ಸಘಾಟಿಕೆಯೊಳು–ಕ್ರಮವಾದ ರೀತಿಯಿಂದ, (ಸುಸ್ಥಿತಿಯಲ್ಲಿ) ಇರುವನು, ಎಂದು–ಎಂಬದಾಗಿ ಹೇಳಿ, ಬೆರಳ–ಕೈಬೆಟ್ಟನ್ನು, ಎತ್ತಿ–ಮೆಲಕ್ಕೆ ಎತ್ತಿಕೊಂಡು, ತೋರಿಸುವಂತೆ-ತೋರ್ಪಡಿಸುವ ರೀತಿಯಿಂದ, ನೋಟಕರ-ಪ್ರೇಕ್ಷಕರ, ಕಣ್ಗೆ–ಕಂಗಳಿಗೆ, (ಚಕ್ಷುಗಳಿಗೆ) ನಿಂದು–ನಿಂತುಕೊಂಡು, ಎಸೆವ–ಶೋಭಿಸುವ, ಡೆಂಕಣಿ–ಪತಾಕೆಯ ಸ್ತಂಭದ, ಪಳವಿಗೆ–ನಿಶಾನಿಯ, ಅಥವ ಧ್ವಜಪಟದಲ್ಲಿರುವ ದೇವತೆಯ, ಕೈಗಳು–ಕರಗಳು, ಕಾಣಿಸಿತು–ಕಂಡು ಬಂದಿತು.

ಅ|| ವಿ|| ಗ–ಗಮಿಸಲು, ದುರ್–ಸಾಧ್ಯವಲ್ಲದ್ದು, ದುರ್ಗ. ಚೂರ್ಣ–ತ್ಸ. ಸ–ಣ್ಣ–ದ್ಭ. ಪಳವಿಗೆಯ ಕೈ- ಪಳವಿಗೆ ಕೈ ಷ. ತ. ||೯||

ಟೀ|| ಆ ನಗರದೊಳು–ಆ ಮಣಿಪುರದಲ್ಲಿ, ತಂಡತಂಡದೊಳು-ಗುಂಪುಗುಂಪಾಗಿ, (ಸಮೂಹವಾಗಿ) ಪೊಳಲ–ಪಟ್ಟಣವನ್ನು, ಪೊಗುವ–ಹೊಗುತ್ತಿರುವ, (ಪ್ರವೇಶಮಾಡುತ್ತಿರುವ) ಶುಂಡಾಲ-ಗಜಗಳ, ವಾಜಿಗಳ–ಅಶ್ವಗಳ, ಪುರಜನದ–ನಾಗರೀಕರ, (ಪಟ್ಟಣದ ಜನಗಳ) ಪರಿಜನದ–ಆ ರತ್ನಪುರದ ಸುತ್ತಲು ಪ್ರದೇಶದಲ್ಲಿರುವ ಜನದ, ಮಂಡಲಕೆ–ರಾಜ್ಯಕ್ಕೆ, ಅಧಿಪ–ಪ್ರಭುಗಳು, ಎನಿಪ-ಎನ್ನಿಸಿಕೊಂಡು ಇರುವಂಥ, ಹಂಸಧ್ವಜಾದಿ–ಮರಾಳಧ್ವಜನೇ ಆದಿಯಾದ, ಭೂಭುಜರು-ರಾಜರುಗಳು, ಅನುದಿನಂ-ಪ್ರತಿದಿನವಲ್ಲಿಯೂ, (ಗೊತ್ತಾದ ದಿನಂ ಪ್ರತಿಯಲ್ಲೂ) ತಪ್ಪದೆ–ವಾಯಿದೆಯನ್ನು ಅತಿಕ್ರಮಿಸದೆ, (ಮಿಾರಿನಡೆಯದೆ) ಕೊಂಡು ಬಂದು-ಹೊತ್ತುಕೊಂಡು ಬಂದು, (ಕಪ್ಪ ಕಾಣಿಕೆಗಳನ್ನು ಹೊತ್ತುಕೊಂಡು ಬಂದು) ಈವ–ಕೊಡತಕ್ಕ, ಕಟ್ಟಳೆಯ–ಪದ್ಧತಿಯನ್ನು ಅನುಸರಿಸಿರುವ, ಕಪ್ಪದ–ಕಾಣಿಕೆಯ, ಪೊನ್ನ-ಸುವರ್ಣ (ದ್ರವ್ಯ) ವನ್ನು, ತುಂಬಿರುವ–ಪೂರ್ತಿಯಾಗಿರುವ, (ಭರ್ತಿಯಾಗಿರುವ) ಭಂಡಿಗಳ–ಗಾಡಿಗಳ, ಸಾವಿರದ–ಒಂದು ಸಾಸಿರ ಸಂಖ್ಯೆಯುಳ್ಳ, ಸಂದಣಿಯ-ಗುಂಪಿನ, ಕಾಣ–ತನ್ನ ರಾಜನನ್ನು ನೋಡಲೋಸುಗ, ಬಹ–ಬರುತ್ತಲಿರುವವರಾದ, ಮೇಣ್-ಮತ್ತು, ಕಂಡು–ತಮ್ಮ ರಾಜನನ್ನು ಈಕ್ಷಿಸಿ (ತಮ್ಮೊಡೆಯನಾದ ಬಭ್ರುವಾಹನನನ್ನು ನೋಡಿದವರಾಗಿ), ಮರಳುವ–ಹಿಂತಿರುಗಿ ಹೋಗುತ್ತಿರುವವರಾದ, ಮನ್ನೆಯರ-ಮರ್ಯಾದೆಯುಳ್ಳ ಸ್ತ್ರೀ ಪುರುಷರ, ಮಹಾ–ಹೆಚ್ಚಾದಂಥ, ವಿಭವಂಗಳು-ಅಟ್ಟಹಾಸಗಳು, (ಅಲಂಕಾರಂಗಳು) ಆ ನಗರದೊಳಗೆ–ಬಭ್ರುವಾಹನನ ಪುರವಾದ ರತ್ನಪುರದಲ್ಲಿ, ಎಸೆದುವು-ಶೋಭಿಸಿದುವು.

ಅ|| ವಿ|| ಮಂಡಲದ + ಅಧಿಪರ್ = ಮಾಡಲಾದಿಪರ್, ಷ. ತ. ವಿಭವ–ವೈಭವ, ಒಂದು ಸಂವತ್ಸರ, ತಂಡತಂಡ-ಗುಂಪು ಗುಂಪು, ಭಂಡಿ–ಭಂಡಿ, (ಅತಿ ಹೆಚ್ಚಾಗಿದ್ದವೆಂಬ ಬಾವವು) || ೧೦ ||

ರದ ರಾಜನು ಓರ್ವನೇ ಸರಿಯಾದ ರೀತಿಯಲ್ಲಿರುತ್ತಾನೆಂದು ಬೆರಳನ್ನು ಮೇಲಕ್ಕೆ ಎತ್ತಿಕೊಂಡು ತೋರಿಸುವಂತೆ ನೋಟಕರ ಕಣ್ಣುಗಳಿಗೆ ಸ್ಥಿರವಾಗಿ ನಿಂತು ಶೋಭಿಸುವ ಧ್ವಜಪಟದಲ್ಲಿರುವ ಪ್ರತಿಮೆಯ ಕೈಗಳು ಕಾಣಿಸಿತು||೯||ಆ ಬಳಿಕ ಗುಂಪುಗುಂಪಾಗಿ ರತ್ನಪುರವನ್ನು ಪೊಗುವ ಗಜಗಳ ವಾಜಿಗಳ ಪುರಜನದ ಪರಿಜರ, ರಾಜ್ಯಕ್ಕೆ ಭೂಮಿಾಶ್ವರರು ಎನ್ನಿಸಿಕೊಂಡಿರುವ ಹಂಸಧ್ವಜ ಭೂಪಾಲನೇ ಆದಿಯಾದ ಧೊರೆಗಳು ಪೊಗದಿಯನ್ನು ಸಲ್ಲಿಸುವ ಗೊತ್ತುಮಾಡಿಕೊಂಡಿರುವ ದಿನಗಳಲ್ಲಿ ತಪ್ಪದೆ ಕಪ್ಪಕಾಣಿಕೆಗಳನ್ನು ಸಲ್ಲಿಸುವ ಪೊಗದಿಯ ಹಣವನ್ನು ತುಂಬಿರುವ ಸಾವಿರಾರು ಬಂಡಿಗಳಿಂದಲೂ, ರಾಜನ ಕಾಣಿಕೆ ಮೊದಲಾದವುಗಳನ್ನು ಕೊಟ್ಟು ರಾಜದರ್ಶನಮಾಡಿಕೊಂಡು ವಾಪಸ್ಸು ಬರುವ ಜನರಿಂದಲೂ, ರಾಜನಾದ ಬಭ್ರುವಾಹನನ ರಾಜಾಸ್ಥಾನಕ್ಕೆ ಹೋಗಿ ಬರುತ್ತಿರುವ ಜನರಿಂದಲೂ, ರಾಜಶಾಸನಕ್ಕೆ ಮಿಾರಿ ನಡೆದರೆ ತಮಗುಂಟಾಗುವ ತೊಂದರೆಯ ಹೆದರಿಕೆಯಿಂದ ಕ್ಲುಪ್ತಕಾಲಕ್ಕೆ ಸರಿಯಾಗಿ ಸಲ್ಲಿಸತಕ್ಕ ರಾಜಮರ್ಯಾದೆಗಳನ್ನು ಸಲ್ಲಿಸಿ ನಿರ್ಭಯದಿಂದ ಬೀದಿಬೀದಿಗಳಲ್ಲಿ ಸಂಚರಿಸುತ್ತಿರುವ ಅಧಿಕಾರಿಗಳಿಂದಲೂ, ಆ ನಗರವು ಅತಿ ವೈಭವದಿಂದ ಕಣ್ಗೊಳಿಸುತ್ತಿತ್ತು || ೧೦ || ಅನಂತರವಲ್ಲಿ ಪಾರ್ಥನ ಯಜ್ಞಾಶ್ವವು ನೆಟ್ಟನೆ ಶೀಘ್ರವಾಗಿ ಹೊರ

ಪೊಕ್ಕುದಾ | ಪಟ್ಟಣವನದರೊಡನೆನಡೆತಂದು ಪಾಳಯಂಬಿಟ್ಟುದು ಪುರೋದ್ಯಾ | ನವೀಧಿಗಳೊಳರ್ಜುನಂ ನಗರಮಂನೋಡಿ
ನಗುತ || ಕಟ್ಟೆಸಕದಿಂದಕಂಗೊಳಿಸುತಿದೆ ಪೊಳಲಿದಂ | ಮುಟ್ಟಪಾಲಿಪವೀರನಾವನಂ ಕುದುರೆಯಂ | ಕಟ್ಟುವನೆಪೇಳೆಂದು
ಹಂಸಧ್ವಜಕ್ಷಿತಿಪನಂ ಕೇಳ್ದೊಡನನಿಂತೆಂದನು || ೧೧ || ನೀನರಿದುದಿಲ್ಲಲಾಪಾರ್ಥ ಮಣಿಪುರಮೆಂಬು | ದೀನಗರಮಂ ಬಭ್ರು
ವಾಹನಂಪ್ರಖ್ಯಾತ | ಭೂನಾಥನಿಲ್ಲಿಗೆರಸನವನಿಪರೊಳಗ್ಗಳಿಯನವನ ಸಿದ್ಧಾಯಕೆ || ಏನೆಂಬೆನೊಂದುಸಾವಿರ ಬಂಡಿಕನಕ
ಮಂ | ನ್ಯೂನಮಿಲ್ಲದೆ ತೆತ್ತುಬಹೆವುನಾವೆಲ್ಲರುಂ | ಹೀನಮಾದೊಡೆದಂಡಿಸುವನೆಂಬಭೀತಿಯಿಂಪ್ರತಿದಿನದೊಳುಂತಪ್ಪದೇ||೧೨||

---

ಟೀ|| ಆ ಹಯಂ-ಆ ಪಾರ್ಥನ ಯಜ್ಞಾಶ್ವವು, ನೆಟ್ಟನೆ-ಕ್ರಮವಾಗಿ, ವಹಿಲದಿಂದ-ಶೀಘ್ರವಾಗಿ, ಪೋಗಿ-ಪ್ರವೇಶಿಸಿ, ಆಪಟ್ಟಣವನ್ನು-ಆ ರತ್ನಪುರವನ್ನು, ಪೊಕುದು-ಪ್ರವೇಶಿಸಿತು, ಅದರೊಡನೆ-ಆ ತುರಗದಕೂಡೆ, ನಡೆತಂದು-ಬಂದುದಾಗಿ, ಪುರ-ನಗರದ, ಉದ್ಯಾನ-ಆರಾಮುಗಳ, ವೀಧಿಗಳೊಳು-ಬೀದಿಗಳಲ್ಲಿ (ಹಾದಿಗಳಲ್ಲಿ), ಪಾಳೆಯಂ-ಸೈನ್ಯವು, ಬಿಟ್ಟುದು-ಇಳಿದುಕೊಂಡಿತು, ಅರ್ಜುನಂ-ಪಾರ್ಥನು, ನಗರಮಂ-ರತ್ನಪುರವನ್ನು, ನೋಡಿ-ಕಂಡು, ನಗುತ-ಹರ್ಷಿಸುತ್ತ, ಕಟ್ಟೆಸಕದಿಂದ-ಚಮತ್ಕಾರದ ರೀತಿಯಿಂದ, ಕಂಗೊಳಿಸುತಿದೆ-ಹೊಳೆಯುತ್ತಿದೆ. ಇದಂ-ಈ ಮಣಿಯಪುರವನ್ನು, ಮುಟ್ಟ-ಮನಪೊಲಿವ ರೀತಿಯಿಂದ (ವಿಶ್ವಾಸಪೂರ್ವಕದಿಂದ), ಪಾಲಿಪ - ಪರಿಪಾಲನೆ ಮಾಡತಕ್ಕ, ವೀರನು - ಪರಾಕ್ರಮಶಾಲಿಯು, ಆವನಂ-ಯಾರು ಇರುತ್ತಾರೆ, ಕುದುರೆಯಂ-ತುರಂಗವನ್ನು, ಕಟ್ಟುವನೆ-ಸಮರ್ಥಿಸುತ್ತಾನೆಯೋ, ಪೇಳ್-ಹೇಳು, ಎಂದು-ಎಂಬದಾಗಿ, ಹಂಸಧ್ವಜ-ಮರಾಳಧ್ವಜನೆಂಬ, ಕ್ಷಿತಿಪನಂ-ಭೂಪಾಲನನ್ನು, ಕೇಳ್ದಡೆ-ಕೇಳಲಾಗಿ, ಹಂಸಧ್ವಜಂ-ಮಯೂರಧ್ವಜನು, ಇಂತು-ಈ ಪ್ರಕಾರವಾಗಿ, ಎಂದನು-ಪೇಳಿದನು ||

ಅ|| ವಿ|| ವೀರ-ಹೊಸಗನ್ನಡ, ಬೀರ-ಹಳೆಗನ್ನಡ, ಕುಂತಿಗೆ ಪೃಥಾದೇವಿ ಎಂದೂ ಹೆಸರುಂಟು. ಪೃಥೆಯ ಮಗ ಪಾರ್ಥ. ಇದು + ಪುರ = ಈಪುರ, ಗಮಕ. ಸ. ವೀಥೀ-ತ್ಸ. ಬೀದಿ-ತ್ಭ. ||೧೧||

ಟೀ|| ಪಾರ್ಥ-ಎಲೈ ಫಲುಗುಣನೆ! ನೀಂ-ನೀನು, ಅರಿದುದಿಲ್ಲಲಾ - ತಿಳಿದಿರುವವನಾಗಲಿಲ್ಲವೆ? ಈನಗರಂ - ಈಗ ನಾವು ಬಂದಿರುವ ಪಟ್ಟಣವು, ಮಣಿಪುರಮೆಂಬುದು-ರತ್ನಪುರವೆಂದು ಹೆಸರುಳ್ಳದ್ದಾಗಿರುವುದು, ಇಲ್ಲಿಗೆ-ಈ ಮಣಿಪುರಕ್ಕೆ, ಬಭ್ರುವಾಹನಂ-ಮುಂಗಸಿಯೇ ಧ್ವಜದಲ್ಲುಳ್ಳವನಾದ ಬಭ್ರುವಾಹನನೆಂಬುವ, ಅರಸು-ರಾಜನು, ಪ್ರಖ್ಯಾತ-ಪ್ರಖ್ಯಾತನಾದ (ಹೆಸರುವಾಸಿಯಾದ), ಭೂನಾಥಂ-ಭೂಮಿಪತಿಯು, ಆಗಿರ್ಪನು-ಆಗಿರುವನು, ಅವಂ-ಆ ಬಭ್ರುವಾಹನನೆಂಬುವನು, ಅವನಿಪರೊಳು-ಭೂಪಾಲಕರಲ್ಲಿ, ಅಗ್ಗಳಿಯನು-ಮಹಾಪರಾಕ್ರಮಶಾಲಿಯು, ಅವನ-ಆ ಬಭ್ರುವಾಹನನ, ಸಿದ್ಧಾಯಕೆ-ನಿಗದಿಯಾಗಿ ಕೊಡತಕ್ಕ ಕಾಣಿಕೆಗೆ, ಏಂ ಎಂಬೆನು-ಯಾವರೀತಿಯಾಗಿ ಪೇಳಲಿ (ಏನು ಹೇಳಲಿ), ಒಂದು-ಒಂದಾದ, ಸಾವಿರ-ಸಾಸಿರ ಸಂಖ್ಯೆಯುಳ್ಳ, ಬಂಡಿ-ಶಕಟಗಳಲ್ಲಿ, ತುಂಬಿದ-ಅಡಕಿದ (ಭರ್ತಿಮಾಡಿದ), ಕನಕಮಂ-ಸುವರ್ಣ ನಾಣ್ಯವನ್ನು, ನ್ಯೂನಂಇಲ್ಲದೆ-ಕಡಿಮೆಯಾಗದೆ, ನಾವ್-ನಾವುಗಳು, ಎಲ್ಲರುಂ-ಸಮಸ್ತರೂ, ಹೀನಂ-ಆ ಹಣದಲ್ಲಿ ಏನಾದರೂ ಕೊರತೆಯಾದಲ್ಲಿ, ದಂಡಿಸುವಂ-ತರ್ಜಿಸುತ್ತಾನೆ, ಎಂಬ-ಎನ್ನುವ, ಭೀತಿಯಿಂ-ಭಯದ ದೆಸೆಯಿಂದ, ತಪ್ಪದೆ-ಮೀರಿನಡೆಯದೆ, ಪ್ರತಿದಿನಂ-ಕಾಣಿಕೆ ಕೊಡಲು ಏರ್ಪಡಿಸಿದ ಪ್ರತಿ ದಿನದಲ್ಲಿಯೂ, ತೆತ್ತು-ದಂಡವಾಗಿ ಕೊಟ್ಟು, ಬಹೆವು-ಬರುತ್ತಲಿರುವೆವು ||

ಅ|| ವಿ|| ಸಾವಿರವಾದ ಬಂಡಿಗಳ ಸಮಾಹಾರ=ಸಾವಿರಬಂಡಿ ಸಮಾಹಾರ, ದ್ವಿ. ಸ. ಕೈಯ + ಮೇಗು = ಮೇಗೈ, ಅನ್ಯಯಿಾ ಭಾವ ಸಮಾಸ. ವಾಕ್ + ಮಯ = ವಾಙ್ಮಯ, ಅನುನಾ ಸಂ. ಭೂಮಿಯ + ನಾಥ = ಭೂನಾಥ, ಷ.ತ.||೧೨||

---

ಟು ಆ ರತ್ನಪುರವನ್ನು ಪ್ರವೇಶಿಸಲಾಗಿ ಆ ಯಜ್ಞಾಶ್ವದ ಸಂಗಡಲೇ ಪಾರ್ಥನ ಸೇನೆಯು ಬಂದು ಆ ರತ್ನಪುರದಲ್ಲಿರುವ ಉದ್ಯಾನವನದಲ್ಲಿದ್ದ ಬೀದಿಗಳಲ್ಲಿ ನಿಂತು ವಿಶ್ರಮಿಸಿಕೊಳ್ಳಲುಪಕ್ರಮಿಸಿತು. ಆಗ ಆ ಧನಂಜಯನು ಆ ಮಣಿಪುರದ ಆಕಾರವನ್ನೆಲ್ಲಾ ನೋಡಿ ನಗುತ್ತ ಈ ಪಟ್ಟಣವು ಅತಿ ರಮಣೀಯವಾಗಿ ಕಂಗೊಳಿಸುತ್ತಿದೆ. ಈ ಪಟ್ಟಣವನ್ನು ಪಾಲಿಸುವ ವೀರನು ಯಾರಿರಬಹುದು? ಈ ನಮ್ಮ ಅಧ್ವರದ ವಾಜಿಯನ್ನು ಈ ರಾಜನು ಕಟ್ಟಬಹುದೆ? ಈ ವಿಷಯವನ್ನು ನಿನಗೆ ತಿಳಿದಮಟ್ಟಿಗೆ ವಿಶದಗೊಳಿಸೆಂದು ಹಂಸಧ್ವಜನನ್ನು ಕುರಿತು ಪಾರ್ಥನು ಕೇಳಲಾಗಿ ||೧೧|| ಆಗ ಪಾರ್ಥನ ಮಾತುಗಳನ್ನು ಕೇಳಿದ ಹಂಸಧ್ವಜನು ಧನಂಜಯನನ್ನು ಕಂಡು ಎಲೈ ಧನಂಜಯನೆ ಈ ವಿಷಯಗಳೆಲ್ಲಾ ನೀನು ತಿಳಿದಿರುವದಿಲ್ಲವೆ? ಆದರೆ ಲಾಲಿಸುವನಾಗು ಈ ನಗರವು ರತ್ನಪುರವೆಂಬ ಹೆಸರುಳ್ಳದ್ದು ಈ ನಗರಕ್ಕೆ ಬಭ್ರುವಾಹನನೆಂಬುವ ರಾಜನು ಪ್ರಖ್ಯಾತನಾದ ಭೂಪಾಲನಾಗಿರುತ್ತಾನೆ ಆ ನಕುಲಧ್ವಜನೂ ಈ ಭೂಮಂಡಲದ ವೀರನಾದ ರಾಜರಲ್ಲಿ ಹಿಬ್ಬನಾಗಿರುತ್ತಾನೆ, ಆ ರಾಜನಿಗೆ ಸಾಮಂತರಾಜರಾದ ನಾವುಗಳೆಲ್ಲರೂ ಕ್ಲುಪ್ತಕಾಲಗಳಲ್ಲಿ ಸಲ್ಲಿಸಬೇಕಾದ ಕಪ್ಪಕಾಣಿಕೆಗಳ ಸಾವಿರಾರು ಭಂಡಿಗಳಲ್ಲಿ ಕೊಂಚ ಮಟ್ಟಿಗೆ ನ್ಯೂನತೆಯಾದರೂ ನಮ್ಮ

ಈತಂಗೆಸಚಿವಂ ಸುಬುದ್ಧಿಯೆಂಬವನೋರ್ವ | ನಾತನೇಪಾಲಿಸುವನಿವನಭೂತಳಮಂನಿ | ಜಾತಿಶಯಧರ್ಮದಿಂದೆಳ್ಳನಿತುಳೋ
ಷಮಿಲ್ಲದೆ ಸಾವಧಾನದಿಂದ || ನೀತಿಪಥಮುಂಬಿಡದೆ ವಿವಿಧವರ್ಣಾಶ್ರಮದ | ಜಾತಿಭೇದವನರಿದು ಸಂತತಂಪ್ರಜೆಗಳಂ | ಪ್ರೀತಿ
ಯಿಂಪೊರೆದುಪುರಜನಕೆ ಪದುಳಿಗನಾಗಿಭೂಪನಂ ಪೋಷಿಸುವನು || ೧೩ || ಒಂದುಕೊಡಕೆಯ ಕಪ್ಪಿನಿಂದೆಸೆವತೇಜಿಗಳ |
ಕುಂದೇಂದುಧವಳಾಂಗ ದಾನೆಗಳಮಣಿಮಯದ | ಪೊಂದೇರ್ಗಳಿನಿತೆಂದರಿಯರಿವನ ಕರಣಿಕರ್ಮಿಕ್ಕರಥಕರಿಘಟೆಗಳ || ಮಂದಿಕು
ದುರೆಯ ಪವಣನರಿವರಾರ್ಭೂಪಾಲ | ವೃಂದದೋಳ್ಪಡಿಯುಂಟೆ ಬಭ್ರುವಾಹಂಗೆಕಡು | ಪೊಂದಿದತಿಶಯವೀರನೀತುರಗಮಂ

---

ಟೀ|| ಈತಂಗೆ-ಈತನಿಗೆ (ಈ ಬಭ್ರುವಾಹನನಿಗೆ), ಸುಬುದ್ಧಿ-ಸುಬುದ್ಧಿಯು, ಎಂಬುವಂ-ಎನ್ನತಕ್ಕವನು, ಓರ್ವಂ-ಒಬ್ಬನಾದ, ಸಚಿವಂ-ಅಮಾತ್ಯನು, ಇರ್ಪಂ-ಇರುವನು, ಆತನೆ-ಆ ಸುಬುದ್ಧಿ ಎಂಬ ಸಚಿವನೇ, ಇವನ-ಈತನ (ಈ ಬಭ್ರುವಾಹನನ), ಭೂತಳವಂ-ದೇಶವನ್ನು, ನಿಜ-ಯಥಾರ್ಥದಿಂದಲೂ (ಸತ್ಯದಿಂದಲೂ), ಅತಿಶಯ-ಅತ್ಯಧಿಕವಾದ, ಧರ್ಮದಿಂ-ಧರ್ಮದಿಂದಲೂ (ಅನ್ಯಾಯವಿಲ್ಲದೆಯೂ), ಎಳ್ಳನಿತು-ಒಂದು ತಿಲಮಾತ್ರದಷ್ಟು, ದೋಷಂ-ಪಾಪವು, ಇಲ್ಲದೆ-ಬಾರದಂತೆ, ಸಾವಧಾನದಿಂದ, ನಿಧಾನಪ್ರಕೃತಿಯಿಂದ, (ತಾಳ್ಮೆಯಿಂದ) ಪಾಲಿಸುವಂ-ಕಾಪಾಡುತ್ತಿರುವನು (ರಾಜ್ಯಭಾರ ಮಾಡುತ್ತಿರುತ್ತಾನೆ), ನೀತಿ-ನೀತಿಯ, ಪಥಮುಂ-ಹಾದಿಯನ್ನು (ಸನ್ಮಾರ್ಗವನ್ನು), ಬಿಡದೆ-ತಪ್ಪಿ ನಡೆಯದೆ, ವಿವಿಧ-ಅನೇಕ ಬಗೆಗಳಾದ, ವರ್ಣ-ನಾಲ್ಕುವರ್ಣಾಶ್ರಮಗಳ, ಆಶ್ರಮದ-ನಾಲ್ಕುಬಗೆಯಾದ ಆಶ್ರಮಗಳ, ಜಾತಿಭೇದವಂ-ಆಯಾ ಇತರ ವಿಧವಾದ ಜಾತಿಭಾಗಗಳನ್ನು, ಅರಿದು-ಬಲ್ಲವನಾಗಿ, ಸಂತತಂ-ಸರ್ವಕಾಲದಲ್ಲೂ, ಪ್ರಜೆಗಳಂ-ತನ್ನ ರಾಷ್ಟ್ರದ ಜನರನ್ನು, ಪ್ರೀತಿಯಿಂ-ವಿಶ್ವಾಸದಿಂದ, (ಉಪಚಾರದಿಂದ) ಪೊರೆದು-ಸಂರಕ್ಷಿಸಿ, ಪುರಜನಕೆ-ನಾಗರಿಕರಿಗೆ (ಪಟ್ಟಣದಲ್ಲಿರುವವರಿಗೆ), ಪದುಳಿಗನು-ಕ್ಷೇಮಚಿಂತಕನು, ಸಂಪ್ರೀತಿಯಿಂ-ಆದರದಿಂದ, ಭೂಪನಂ-ರಾಜನಾದ ಬಭ್ರುವಾಹನನನ್ನು, ಪೋಷಿಸುವಂ-ಸಂರಕ್ಷಿಸುವನು ||

ಅ|| ವಿ|| (ವರ್ಣಗಳು ನಾಲ್ಕು-ಬ್ರಹ್ಮ, ಕ್ಷತ್ರಿಯ, ವೈಶ್ಯ, ಶೂದ್ರ,) ಆಶ್ರಮಗಳು ನಾಲ್ಕು-ಬ್ರಹ್ಮಚರ್ಯ, ಗೃಹಸ್ಥ, ವಾನಪ್ರಸ್ಥ, ಸನ್ಯಾಸ ಇವುಗಳು), ಕಾಲತ್ರಯ-ಭೂತ, ಭವಿಷ್ಯತ್, ವರ್ತಮಾನ, ಋಣತ್ರಯ-ದೇವಋಣ, ಪಿತೃಋಣ, ಋಷಿಋಣ. ಲಿಂಗತ್ರಯ-ಪುಂ. ಸ್ತ್ರೀ. ನಪುಂಸಕ, ಕುಂಬಾರ-ದ್ಭ. ಕುಂಭಕಾರ-ತ್ಸ. ಕುಂದ+ಇಂದು=ಕುಂದೇಂದು, ಗುಣಸಂ||

ಟೀ|| ಒಂದುಕೊಡಕೆಯ-ಒಂದು ಕರ್ಣದ, ಕಪ್ಪಿನಿಂದ-ನೀಲವರ್ಣದಿಂದ, ಎಸೆವ-ಶೋಭಿಸುವ, ತೇಜಿಗಳ-ಅಶ್ವಗಳ, ಕುಂದ-ತುಂಬೇಹುವ್ವು,(ಬೆಟ್ಟಮಲ್ಲಿಗೇ ಹುವ್ವು) ಇಂದು-ತುಹಿನಕರ, ಇವರಂತೆ, ಧವಳ-ಶುಭ್ರವಾದ, ಆನೆಗಳ-ಇಭಗಳ, ಮಣಿಮಯದ-ರತ್ನವಿಕಾರಗಳಾದ, ಪೊಂದೇರ್ಗಳು-ಸ್ವರ್ಣ ವಿಕಾರಮಾದ ವರೂಥಗಳು, ಇನಿತೆಂದು-ಇಷ್ಟೇ ಎಂಬದಾಗಿ, ಇವನ-ಈ ಮಣಿಪುರದರಸನಾದ ಬಭ್ರುವಾಹನನ, ಕರಣಿಕರ್-ಶಾನುಭಾಗರೇ ಮೊದಲಾದವರು, ಅರಿಯರು-ಬಲ್ಲವರಾಗಿಲ್ಲ, (ಅಶ್ವಶಾಲಾಧ್ಯಕ್ಷರು, ಗಜಶಾಲಾಧ್ಯಕ್ಷರು, ಸಹ ಯಾರೊಬ್ಬರೂ ಇವುಗಳ ಗಣಿತವನ್ನು ಬಲ್ಲವರಾಗಿಲ್ಲ ಎಂದರೆ ವಿಶೇಷವಾಗಿತ್ತೆಂಬ ಭಾವವು), ಮಿಕ್ಕ-ಬಾಕಿಯಾದ, ಕರಿಘಟಗಳ-ಇಭಯೂಥವ, ಮಂದಿ-ಜನರು, ಕುದುರೆಯ-ಕುದುರೆಗಳ, ಪವಣರೀತಿಯನ್ನು, (ಪ್ರಮಾಣವನ್ನು), ಅರಿವರ್-ಬಲ್ಲವರು (ವಿಚಾರಮಾಡತಕ್ಕವರು), ಆರ್-ಯಾರಿರುವರು (ಒಬ್ಬರೂ ಇಲ್ಲ), ಭೂಪಾಲರೋಳ್-ಪೃಥ್ವೀಪಾಲಕರಲ್ಲಿ, ಬಭ್ರುವಾಹಂಗೆ-ಬಭ್ರುವಾಹನನೆಂಬುವಂಗೆ, ವೃಂದದೋಳ್-ಗುಂಪಿನಲ್ಲಿ, ಪಡಿಯುಂಟೆ-ಯಾರು ಬದಲಾಗಿರುತ್ತಾರೆ, ಎಂದರೆ (ರಾಜ ಸಮೂಹದಲ್ಲಿ ಈ ಬಭ್ರುವಾಹನನಿಗೆ ಸಮಾನರೇ ಇಲ್ಲವೆಂಬ ಭಾವವು), ಕ

---

ಗಳನ್ನು ಕ್ರೂರವಾಗಿ ಶಿಕ್ಷಿಸುವೆನೆಂಬ ಭಯದಿಂದ ಕ್ರಮವಾಗಿ ಪದ್ಧತಿಗನುಸಾರವಾಗಿ ಸಲ್ಲಿಸುತ್ತಿರುವೆವು ||೧೨|| ಈತಂಗೆ ಸುಬುದ್ಧಿಯೆಂಬುವ ನಾಮಧೇಯವುಳ್ಳ ಒಬ್ಬ ಮಂತ್ರಿ ಶ್ರೇಷ್ಠನಿರುವನು, ಆ ಸುಬುದ್ಧಿಯೆಂಬಾತನೇ ಈ ಭೂತಳವನ್ನು ಕ್ರಮವಾಗಿ ನ್ಯಾಯದಿಂದಲು, ಸತ್ಯದಿಂದಲು, ಸುಗುಣದಿಂದಲು, ತಿಲಾಂಶವಷ್ಟಾದರೂ ದೋಷವುಂಟಾಗದಂತೆ ದುಷ್ಟನಿಗ್ರಹ. ಶಿಷ್ಟಪರಿಪಾಲನೆಯನ್ನುಮಾಡಿ ಸಾವಧಾನಚಿತ್ತದಿಂದ ಪರಿಪಾಲಿಸುವನು ನ್ಯಾಯವನ್ನು ತಪ್ಪದೆ ನಾನಾರೀತಿಯಾದ ಬ್ರಹ್ಮ, ಕ್ಷತ್ರಿಯ ವೈಶ್ಯ, ಶೂದ್ರವರ್ಣಗಳ, ಬ್ರಹ್ಮಚರ್ಯ ಗೃಹಸ್ಥ ವಾನಪ್ರಸ್ಥಾಶ್ರಮಗಳ, ತಿಗಳ, ಗಾಣಿಗ, ನಾಯಿಂದ, ಮೊದಲಾದ ವರ್ಣಾಂತರ ಕುಲಗಳಲ್ಲಿ ನಡೆಯಬೇಕಾದ ಧರ್ಮಾಧರ್ಮ ಭೇದಾದಿಗಳನ್ನು ತಿಳಿದು ಅನವರತವೂ ದೇಶದ ಜನರನ್ನು ಅಕ್ಕರೆಯಿಂದ ಪೊರೆದು ಪಟ್ಟಣಿಗರಿಗೆ ಸರ್ವದಾ ಹಿತವನ್ನೆಬಯಸತಕ್ಕವನಾಗಿ ಬಭ್ರುವಾಹನನೆಂಬ ರಾಜನನ್ನು ಪೋಷಿಸುತ್ತಿರುವನು ||೧೩|| ಒಂದು ಕರ್ಣದಲ್ಲಿ ಕಪ್ಪಾಗಿ ಹೊಳೆಯುವ ಅಶ್ವಮೇಧಕ್ಕೆ ಯೋಗ್ಯವಾದ ಅಶ್ವಗಳು, ಮೊಲ್ಲೇಹುವ್ವು ಮತ್ತು ಚಂದ್ರನು ಇವರುಗಳಿಗೆ ಸಮಾನವಾದ ಕಾಂತಿಯುಳ್ಳ ದವಳ ವರ್ಣದ ಗಜಗಳೂ ರತ್ನಖಚಿತಗಳಾದ ಚಿನ್ನದ ವರೂಥಗಳೂ ಇವೇ ಮೊದಲಾದವುಗಳು ಇಷ್ಟೆಂದು ನಿರ್ಣಯಿಸಲಿಕ್ಕೆ ಅಶ್ವಶಾಲಾ ಗಜಶಾಲಾ ರಥಶಾಲಾ ಇವುಗಳ ಮುಖ್ಯಾಧಿಕಾರಿಗಳಾದ ಶಾನುಭೋಗ

ಕಟ್ಟದಿರ್ದಪನೆಪೇಳೆಂದನು ||೧೪|| ಈಪುರದೊಳಿರ್ದಮಾನವರೆಲ್ಲರುಂಸದಾ | ಶ್ರೀಪತಿಯಭಜನೆಯಲ್ಲದೆಪೆರತರಿಯರತಿದ | ಯಾಪರರ್ವೇದಾರ್ಥಕೋವಿದರ್ಸತ್ಯವ್ರತಾಚಾರಸಂಪನ್ನರು || ಕೋಪವರ್ಜಿತರಹಿಂಸಾಮತಿಗಳಾತ್ಮಸ್ವ | ರೂಪಜ್ಞರತಿಬಲರ್ದಾನಿಗಳ್ಶುಚಿಗಳ್ಪ್ರ | ತಾಪಿಗಳ್ವೀರರ್ಕಳಾನಿಪುಣರನಸೂಯರಸ್ತ್ರಶಸ್ತ್ರಪ್ರೌಢರು || ೧೫ || ಯೋಗಿಜನದಂತೆಮುಕ್ತಾಹಾರದಿಂ ಪೂಜ್ಯ | ಮಾಗಿಹುದುಪಾತಾಳನಿಲಯದಂತಾವಗಂ | ಭೋಗಿಪವಿಲಾಸಮಂತಳೆದಿಹುದುಸಂತತಂಗಾಂಧರ್ವಶಾಸ್ತ್ರದಂತೆ || ರಾಗಾನುಬಂಧಮೋಹನಮಧುರಕಾಲಂಬ | ಮಾಗಿಹುದುಪಾರ್ಥಕೇಳೀಪುರದಸಕಲನಾ | ರೀಗಣಂಮೇಣಂತುಮಲ್ಲದೆಪತಿವ್ರ

ಡು-ಹೆಚ್ಚಾಗಿ, ಪೊಂದಿದ-ಧರಿಸಿದ, ಅತಿಶಯದ-ಮಹತ್ತಾದ, ವೀರನು-ಪರಾಕ್ರಮಾತಿಶಯವುಳ್ಳವನು, ಈ ತುರಗಮಂ-ಈ ಯಜ್ಞಾಶ್ವವನ್ನು, ಕಟ್ಟದೆ-ಸಮರ್ಥಿಸದೆ, ಇರ್ದಪನೆ-ಇರುತ್ತಾನೆಯೋ, ಪೇಳ್-ಹೇಳುವನಾಗು, ಎಂದನು-ಎಂಬದಾಗಿ ಪೇಳಿದನು.

ಅ|| ವಿ|| ಧವಳ+ಅಂಗ=ಧವಳಾಂಗ ಸವರ್ಣ ದೀ. ಸಂ. ಧವಳವಾದ+ಅಂಗ=ಧವಳಾಂಗ ವಿ. ಪೂ. ಕ. ಪವನ್-ಹ. ಕ. ಪ್ರಮಾಣ ತ್ಸ. ಪದ. ||೧೪||

ಟೀ|| ಈ ಪುರದೊಳು-ಈ ರತ್ನಪುರದಲ್ಲಿ, ಇರ್ದ-ಇರತಕ್ಕವರಾದ, ಮಾನವರು-ಮನುಕುಲಜರು, ಎಲ್ಲರುಂ-ಸರ್ವರೂ, ಸದಾ-ಸರ್ವ ಕಾಲದಲ್ಲೂ, ಶ್ರೀಪತಿಯ-ರಮಾಪತಿಯಾದ ವಿಷ್ಣುವಿನ, ಭಜನೆ-ಆರಾಧನೆಯು, (ಭಜಿಸೋಣವು) ಅಲ್ಲದೆ-ಅದು ಹೊರ್ತಾಗಿ, (ಶ್ರೀ ವಿಷ್ಣುವಿನ ಸೇವೆಯಲ್ಲದೆ) ಪೆರತು-ಎರಡನೆಯ ಮಾರ್ಗವನ್ನೆ, ಅರಿಯರು-ಬಲ್ಲವರಾಗಿಲ್ಲ, ಅತಿ-ಅಧಿಕವಾಗಿ, ದಯಾಪರರು-ಕೃಪಾಳುಗಳು, ವೇದಾರ್ಥ-ಶ್ರುತ್ಯರ್ಥ ವಿಚಾರವನ್ನು, ಕೋವಿದರು-ಬಲ್ಲವರು, (ವೇದಾರ್ಥಾದಿಗಳನ್ನು ಬಲ್ಲ ವಿದುಷರು) ಸತ್ಯ-ಯಥಾರ್ಥವನ್ನು ಹೇಳುವುದರಲ್ಲಿಯೂ, ವ್ರತ-ಆಚರಣೆಯಿಂದಲೂ, ಆಚಾರ-ಸನ್ಮಾರ್ಗದಿಂದಲೂ, ಸಂಪನ್ನರು-ಕೂಡಗೂಡಿದವರು, ಕೋಪ-ರೋಷದಿಂದ, ವರ್ಜಿತರು-ಬಿಡುಗಡೆಯಾದವರು, (ಕೋಪವಿಲ್ಲದವರು) ಅಹಿಂಸಾಮತಿಗಳು-ಪ್ರಾಣಿಮಾತ್ರಕ್ಕೆ ಹಿಂಸೆಮಾಡಬಾರದೆಂಬ ಜ್ಞಾನವುಳ್ಳವರು, ಆತ್ಮ-ಶ್ರೀ ಪರಮಾತ್ಮನ, ಸ್ವರೂಪ-ಆಕಾರವನ್ನು. ಜ್ಞರು-ಬಲ್ಲವರು (ತಿಳಿದವರು) ಅತಿಬಲರ್-ಅಧಿಕಮಾದ ಬಲಾನ್ವಿತರು, ದಾನಿಗಳ್-ದಾನಮಾಡತಕ್ಕವರು, (ಉದಾರಿಗಳು) ಶುಚಿಗಳ್-ಅಂತಶ್ಶುದ್ಧಿ-ಬಹಿಶ್ಶುದ್ಧಿಯುಳ್ಳವರು, ಪ್ರತಾಪಿಗಳ್-ಪರಾಕ್ರಮಾತಿಶಯವುಳ್ಳವರು, ವೀರರ್-ಮಹಾ ಶೂರರು, ಕಳಾ-ಸಕಲ ಶಾಸ್ತ್ರಗಳಲ್ಲು, ನಿಪುಣರ್-ಪ್ರವೀಣರು (ಯೋಗ್ಯರು) ಅನಸೂಯರು-ಹೊಟ್ಟೆಕಿಚ್ಚು ಪಡದವರು, ಅಸ್ತ್ರ-ಮಂತ್ರಿಸಿ ಬಿಡುವ ವಿದ್ಯದಲ್ಲಿಯೂ, ಶಸ್ತ್ರ-ಕತ್ತಿ ಮೊದಲಾದ ಆಯುಧಗಳನ್ನು ಪ್ರಯೋಗಿಸುವ ವಿದ್ಯದಲ್ಲಿಯೂ, ಪ್ರೌಢರು-ಜ್ಞಾನಿಗಳು, (ಮಹಾತಿಳಿವಳಿಕೆ ಯುಳ್ಳವರು) ಆಗಿರ್ಪರ್-ಆಗಿರುತ್ತಾರೆ.

ಅ|| ವಿ|| ಶ್ರೀಯಪತಿ-ಶ್ರೀಪತಿ ಷ. ತ. ಶ್ರೀ-ತ್ಸ. ಸಿರಿ ದ್ಭ. ವೇದಗಳು-ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವಣವೇದ. ಷಟ್ಛಾಸ್ತ್ರಗಳು-ವೇದಾಂತ, ವೈಶೇಷಿಕ, ಭಾಟ್ಟ, ವ್ಯಾಕರಣ, ಪೂರ್ವ ಮೀಮಾಂಸ, ಉತ್ತರ ಮೀಮಾಂಸ. ಷಡ್ದರ್ಶನ-ಸಾಂಖ್ಯ, ಯೋಗ, ನ್ಯಾಯ. ವೈಶೇಷಿಕ, ಮೀಮಾಂಸ, ವೇದಾಂತ ||೧೫||

ಟೀ|| ಪಾರ್ಥ-ಎಲೈ ಫಲುಗುಣನೆ, ಕೇಳು-ಆಲಿಸು, ಈ ಪುರದ-ಈ ರತ್ನಪುರದ, ಸಕಲ-ಸಮಸ್ತರಾದ, ನಾರೀಗಣ-ಸ್ತ್ರೀಯರ ಸಮೂಹವು, ಯೋಗಿಜನದಂತೆ-ಯೋಗೀಶ್ವರರ ಹಾಗೆ, (ರೇಚಕ, ಪೂರಕ, ಕುಂಭಾದಿಗಳನ್ನು ಕಲಿತ ಯೋಗಿಗಳ ರೀತಿಯಿಂದ) ಆಗಿಹುದು-ಆಗಿರುವುದು, ಹೇಗೆಂದರೆ ಮುಕ್ತ-ಬಿಡಲ್ಪಟ್ಟ, ಆಹಾರದಿಂ- ಪಾನೀಯಾದಿ ಆಹಾರಾದಿಗಳಿಂದ,

ಕರಣಿಕರೇ ಆದಿಯಾದವರಿಗೆ ಸಹಾ ತಿಳಿಯದೆ ಹೋಗುವುದರಿಂದ, ಆ ಬಭ್ರುವಾಹನನ ಐಶ್ವರ್ಯವನ್ನು ಗೊತ್ತುಮಾಡಲಿಕ್ಕೆ ಸಾಧ್ಯವಿಲ್ಲವಾಗಿರುತ್ತೆ. ಈತನಿಗೆ ಸಮಾನರಾದ ಭೂಪಾಲರು ಭೂಮಿಯಲ್ಲಿ ಯಾರೂ ಇಲ್ಲವೆಂಬಂತೆ ಅತಿ ಪರಾಕ್ರಮಶಾಲಿಯಾಗಿಯೂ, ಸತ್ಯಸಂಧನನಾಗಿಯೂ ಇರುವನು. ಈ ರೀತಿಯಾದ ಪರಾಕ್ರಮಶಾಲಿಯಾದ ಬಭ್ರುವಾಹನನು ಈ ತುರಗವನ್ನು ಶೌರ್ಯದಿಂದ ಬಂಧಿಸದೇ ಬಿಟ್ಟಾನೆ ನೀನೆ ಯೋಚಿಸೆಂದು ಪೇಳಿದನು || ೧೪ || ಮತ್ತು ಈ ಮಣಿಪುರವಾಸಿಗಳು ದೇಶವತ್ಸಲರು, ಧರ್ಮಮಾರ್ಗ ಪ್ರವರ್ತಕರು ತಪೋನಿಷ್ಠರು, ಸತ್ಯಸಂಧನರು, ಅಸೂಯಾರಹಿತರಾದವರು, ಶ್ರೀಲಕ್ಷ್ಮೀರಮಣ ಸೇವಾ ನಿರಂತರೋದ್ಯೋಗಿಗಳು, ವೇದವಿದರು, ಸಕಲ ಕಲಾಕೋವಿದರು, ವೇದಾಧ್ಯಯನ ಸಂಪನ್ನರು, ಸಕಲ ಸೈನಿಕರೂ ಬಾಹು ಬಲಾನ್ವಿತರು, ಸಾಹಸಿಗಳಾದ ಯೋಧರು, ಮಹಾ ಯುಕ್ತಿ ಶಕ್ತಿ ಧೈರ್ಯಾವಲಂಬಿತರೂ ಆಗಿರುತ್ತಾರೆ. ರಾಜಭಕ್ತಿಯಲ್ಲಿ ಅಗ್ರಗಣ್ಯರಾಗಿರುವರು || ೧೫ || ಎಲೈ ಕುಂತೀ ಪುತ್ರನಾದ ಫಲುಗುಣನೆ ಆಲಿಸು, ಈ ಪುರದ ಸಮಸ್ತರಾದ ನಾರೀಗಣವೂ ಮುಕ್ತಾಹಾರದಿಂದ ಪೂಜ್ಯವಾಗಿಯೂ, ಸುಖವನ್ನು ಅನುಭವಿಸುವ ಜನರ ವಿಲಾಸವನ್ನು ಹೊಂದಿರತಕ್ಕದ್ದಾಗಿಯೂ, ಕಾಮುಕರ ಅನುರಾಗದಿಂದ ಸೇರಿರುವ, ಮೋಹವನ್ನು ಜನರಲ್ಲಿ ಉತ್ಪಾದನೆ ಮಾಡುವ ಮಧುವಿನಂತೆ ಮಧುರವಾದ

ಶಾಶೀಲಮಂತಾಳ್ದೆಸೆವುದು ॥ ೧೬ ॥ ಇಲ್ಲಿಪುರುಷಸ್ತ್ರೀಯರೋರ್ವರುಂಪಾತಕಿಗ | ಳಲ್ಲದಿಹಕಾರಣಂಸಾನ್ನಿಧ್ಯದಿಂರಮಾ | ವಲ್ಲಭಂಪೊರೆವನೀನಗರನುಂತನಗಿದೆರಡನೆಯವೈಕುಂಠಮೆಂದು ॥ ನಿಲ್ಲದೆತುರಂಗಮದುಪೊಗಿಪೊಕ್ಕದುಬಿಡಿಸ | ಬಲ್ಲರಂಕಾ ಣೆನಾಂಫಲುಗುಣಮುರಾಂತಕನ | ಮೆಲ್ಲಡಿಯಕರುಣಮೆಂತಹುದೆಂದರಿಯೆನೆಂದನಾಹಂಸಕೇತುನೃಪನು ॥ ೧೭ ॥ ಭೂಲೋ

ಪೂಜ್ಯಂ-ಪೂಜನಿಯವಾದದ್ದಾಗಿ, ಇಹುದು-ಇರುವುದು, (ಯೋಗಿಜನವು) ವಿಮುಕ್ತ-ಮುತ್ತುಗಳ, ಹಾರದಿಂ-ಸರಗಳಿಂದ, ಪೂಜ್ಯಮಾಗಿ- ಶ್ರೇಷ್ಠವಾದದ್ದಾಗಿ, ಇಹುದು-ಇರುವುದು, (ನಾರೀಗಣವು) ಪಾತಾಳನಿಲಯದಂತೆ- ಪಾತಾಳಲೋಕವೆಂಬುವ ಗೃಹದ ಹಾಗೆ, ಇಹುದು-ಇರುತ್ತಲಿರುವುದು, ಹೇಗೆಂದರೆ, ಅನಗಂ-ಸರ್ವಕಾಲದಲ್ಲೂ, ಭೋಗಿಪ-ನಾಗೇಂದ್ರನಾದ ಆದಿಶೇಷನ, ವಿಲಾಸಮುಂ-ವೈಭವವನ್ನು, (ಆಟಗಳನು) ತಳೆದಿಹುದು-ಹೊಂದಿರುತ್ತದೆ, (ಆದಿಶೇಷನು ಹೊಂದಿರುವನು) ಅನಗಂ-ಸರ್ವದಾ, ಭೋಗಿಪ-ವಿಷಯಾಸಕ್ತತೆಯಿಂದ (ಕ್ರೀಡಿಸುವ ಜನಗಳ) ವಿಲಾಸಮುಂ-ವೈಭವವನ್ನು, ತಳೆದಿಹುದು-ಪಡೆದಿರುವುದು, (ನಾರೀ ಗಣಂ) ಸಂತತಂ-ಯಾವಾಗ್ಯೂ, ಗಾಂಧರ್ವಶಾಸ್ತ್ರದಂತೆ-ಗಾನಶಾಸ್ತ್ರದಹಾಗೆ, ಇಹುದು-ಇರುತ್ತಿರುವುದು, ಹೇಗೆಂದರೆ, ಸಂತ ತಂ-ಸರ್ವದಾ, ರಾಗ-ಕಲ್ಯಾಣಿ, ಮಧ್ಯಮಾವತಿ, ಮೋಹನವೇ ಆದಿಯಾದ ಸಂಗೀತರಾಗಂಗಳ, ಅನುಬಂಧ-ಕೂಡಿರುವುದ ರಿಂದ, ಮೋಹನ-ಭ್ರಾಂತಿಪಡಿಸುವ, ಮಧುರಕೆ-ಇಂಪಿಗೆ, (ಮಾಧುರ್ಯಕ್ಕೆ) ಆಲಂಬವಾಗಿ-ಆಶ್ರಯವಾಗಿ, ಇಹುದು-ಇರ್ಪುದು, (ಗಾಂಧರ್ವ ಶಾಸ್ತ್ರವು) ರಾಗ-ಪ್ರಿಯನ ಅನುರಾಗದಿಂದ, ಅನುಬಂಧ-ಸೇರಿರುವ, ಮೋಹನ-ಮೋಹವನ್ನು ಜನಗಳಿಗುಂಟು ಮಾಡತಕ್ಕ, ಮಧುರಕೆ- ಅಧರ ರಸಾಸ್ವಾದನೆಯ ಇಂಪಿಗೆ, (ಮಧುರಕ್ಕೆ) ಆಲಂಬಮಾಗಿ-ಸ್ವರೂಪವಾಗಿ, (ಆಶ್ರಯವಾಗಿ) ಇಹುದು-ಇರುತ್ತಲಿರುವುದು (ನಾರೀಗಣಂ) ಮೇಣ್-ಇನ್ನೂ, ಅಂತು-ಆ ರೀತಿಯಾಗಿ, ಅಲ್ಲದೆ-ಹೊರ್ತಾಗಿ, (ಅಲ್ಲದೇನೆ) ಪತಿ-ತನ್ನ ಪ್ರಿಯನಲ್ಲಿ, (ಗಂಡನಲ್ಲಿ) ವ್ರತ-ವ್ರತವಾಗುಳ್ಳವರ, (ನಿಯಮವಾಗುಳ್ಳವರ) ಶೀಲಮುಂ-ರೀತಿಯನ್ನು, (ಆಚಾರವನ್ನು ನಿಯಮವನ್ನು) ತಾಳ್ಪು-ಹೊಂದಿದ್ದಾಗಿ, ಎಸೆವುದು-ಶೋಭಿಸುತ್ತಿರುವುದು.

ಅ॥ ವಿ॥ ಸಪ್ತ ಸ್ವರಗಳು-ನಿಷಾದ, ಋಷಭ, ಗಾಂಧಾರ, ಷಡ್ಜ, ಮಧ್ಯಮ, ಧೈವತ, ಪಂಚಮ ಇವುಗಳೇ ಈಶ್ವರ ಮುಖದಿಂದ ಉತ್ಪತ್ತಿಯಾದವು. ಸಪ್ತತಾಳಗಳು-ಧ್ರುವ, ಮಟ್ಟ, ರೂಪಕ, ಜಂಪೆ, ತ್ರಿಪುಟ, ಅಷ್ಟ, ಏಕ. ॥೧೬॥

ಟೀ॥ ಇಲ್ಲಿ-ಈ ಮಣಿಪುರದಲ್ಲಿರುತ್ತಿರುವ, ಪುರುಷ ಸ್ತ್ರೀಯರ್- ಗಂಡಸು ಮತ್ತು ಹೆಂಗಸರು, ಓರ್ವರುಂ-ಒಬ್ಬರಾ ದರೂ, ಪಾತಕಿಗಳ್- ದೋಷಯುಕ್ತರಾದವರು, (ಪಾಪಾನ್ವಿತರು) ಅಲ್ಲದಿಹ-ಆಗದಿರುವ, ಕಾರಣಂ-ವ್ಯಾಜದಿಂದ, ರಮಾ ವಲ್ಲಭಂ-ಲಕ್ಷ್ಮೀರಮಣನಾದ ನಾರಾಯಣನು, ಸಾನ್ನಿಧ್ಯದಿಂ-ಸನ್ನಿಧಾನವಿರುವದರ ದೆಸೆಯಿಂದ, (ತಾನಾಗಿಯೇ ವಾಸಮಾಡು ವುದರಿಂದ) ತನಗೆ-ಆ ಲಕ್ಷ್ಮೀಪತಿಗೆ, ಇದು- ಈ ಮಣಿಪುರವು, ಎರಡನೆಯ-ಎರಡನೆಯದಾದ, ವೈಕುಂಠಂ ಎಂದು-ಸ್ವರ್ಗ ವಾಗಿರುತ್ತೆಂದು, (ವೈಕುಂಠವೇ ಇದು ಎಂಬದಾಗಿ ಭಾವಿಸಿ) ಈ ನಗರಮುಂ-ಈ ರತ್ನಪುರವನ್ನು. ಪೊರೆವಂ-ಸಂರಕ್ಷಿಸುತ್ತಿರು ವನು, ಅದು ತುರಗಂ-ಆ ಕುದುರೆಯು, ನಿಲ್ಲದೆ-ತಪ್ಪದೆ, (ಒಂದು ಕಡೆ ನಿಂತುಕೊಳ್ಳದೇ- ವಿಶ್ರಮಿಸಿಕೊಳ್ಳದೇ), ಪೊಗಿ-ಹೊಕ್ಕು, ಪೊಕ್ಕದು-ಪ್ರವೇಶಿಸಿತು, ಬಿಡಿಸಬಲ್ಲರಂ-ಅಶ್ವವಂ ಬಿಡಿಸಿಕೊಂಡು ಬರುವ ಪರಾಕ್ರಮಿಗಳನ್ನು, ಆಂ-ನಾನಾದರೊ, ಕಾಣೆಂ-ನೋಡಿರುವುದಿಲ್ಲ, ಫಲುಗುಣ-ಎಲೈ ಪಾರ್ಥನೆ. ಮುರಾಂತಕನ-ಮುರಾರಿಯಾದ ಶ್ರೀ ಕೃಷ್ಣನ, ಮೆಲ್ಲಡಿಯ-ಮೆಲ್ಲಿತಾದ ಚರಣದ, (ಮೃದುವಾದ ಪಾದವೇ) ಕರುಣಂ-ದಯೆಯು, (ಕೃಪೆಯು) ಎಂತು-ಯಾವರೀತಿಯಿಂದ, ಇರುವುದೆಂದು-ಇರುತ್ತ ದೆಂದು, ಅರಿಯೆಂ-ನನಗೆ ಗೊತ್ತಾಗುವದಿಲ್ಲ, (ಎಂದು-ಎಂದು ಹೇಳಿ), ಹಂಸಕೇತು-ಹಂಸಕೇತುವೆಂಬ, ನೃಪನು-ದೊರೆಯು,

ಅಧರಾಮೃತಾ ಸ್ವಾದನೆಯಲ್ಲಿ ಗಣಿಯಾಗಿರುವಂತೆ ರಂಜಿಸುವುದು. ಮತ್ತು ಇದೂ ಅಲ್ಲದೆ ತನ್ನ ಗಂಡನಲ್ಲಿಯೇ ನಿಯಮ ವುಳ್ಳವರಾಗಿಯೂ, ಒಳ್ಳೆ ಶೀಲಸ್ವಭಾವಾದಿಗಳಿಂದ ಮೆರೆಯುತ್ತಿರುವವರಾಗಿಯೂ, ಉದಾರಿಗಳಾಗಿಯೂ ಕಂಗೊಳಿಸುತ್ತಿರು ವರು ॥ ೧೬ ॥ ಈ ಮಣಿಪುರದಲ್ಲಿರುವ ಸರ್ವರಾದ ಪುರುಷ ಸ್ತ್ರೀಯರಲ್ಲಿ ಯಾರೊಬ್ಬರೂ ದೋಷಾಕರರಾಗದೆ ಇರುವ ಕಾರಣ ಲಕ್ಷ್ಮೀಪತಿಯಾದ ಶ್ರೀಮನ್ನಾರಾಯಣನು ತಾನಾಗಿಯೆ ವಾಸಮಾಡುತ್ತಿರುವುದರಿಂದ, ತನಗೆ ಈ ಮಣಿಪುರವು ಎರಡನೆಯ ವೈಕುಂಠವೋ ಎಂಬದಾಗಿ ಭಾವಿಸಿ ಬಹು ಪ್ರೀತಿಯಿಂದ ಈ ರತ್ನಪುರವನ್ನು ರಕ್ಷಿಸುತ್ತಿರುವನು, ಮತ್ತೆ ಯಾವ ಕಡೆಗೂ ಹೊರಡದೆ ಆ ಯಜ್ಞಾಶ್ವವು ಈ ಪುರವನ್ನು ಹೊಕ್ಕಿರುತ್ತದೆ. ನಮ್ಮಿಂ ಯಜ್ಞಾಶ್ವವನ್ನು ಬಿಡಿಸಿಕೊಂಡು ಬರತಕ್ಕ ಶೂರಾಗ್ರೇಸರರನ್ನು ನಮ್ಮ ಸೇನಾಜಾಲದಲ್ಲಿ ಯಾರನ್ನೂ ಕಾಣೆನು. ಎಲೈ ಪೃಥಾಸುತನಾದ ಪಾರ್ಥನೇ ಮುರಾಂತಕನಾದ ಶ್ರೀ ಕೃಷ್ಣನ ಪಾದಾರವಿಂದದ ಕೃಪಾಕಟಾಕ್ಷವು ನಮ್ಮಗಳಲ್ಲಿ ಹೇಗಿರುತ್ತದೆಯೋ ನನಗೆ ಬೇರೆ ಗೊತ್ತಾಗುವದಿಲ್ಲವೆಂದು ಮರಾಳಧ್ವಜನು ಹೇಳಿದನು. ॥೧೭॥ ಎಲೈಯ್ಯಾ ಜನಮೇಜಯರಾಯನೇ ಕೇಳು, ಫಲುಗುಣನು ಈ ರೀತಿಯಾದ ವಚನಗ

ಲಕೇಳ್ಮರಾಳಧ್ವಜನಮಾತನಿಂ | ತಾಲಿಸುವಪಾರ್ಥನಕಿರೀಟಾಗ್ರದೋಳ್ಬಂದು | ಕಾಲೂರಿನಿಂದಿರ್ದುದೊಂದುಪದ್ದೇನೆಂಬೆನದ್ಭುತವನು || ನೀಲಧ್ವಜಾದಿನೃಪರೆಲ್ಲರುಂತಮತಮಗೆ | ಮೇಲಣಪಜಯಸೂಚನೆಯಲಾನರನಿಗಕಟ | ಕಾಲಗತಿಯೆಂತಾದುದೊ ಶಿವಶಿವಾಯೆನುತಮನನಳುಕಿಚಿಂತಿಸುತಿರ್ದರು || ೧೮ || ಇತ್ತಲೀತೆರದೊಳಿರುತಿರಲತ್ತಲಾಪುರದೊ | ಳುತ್ತಮಹಯಾಗಮನ ಕೊಡನೆಬಂದಿಹನೃಪರ | ವೃತ್ತಾಂತಮಂಬಭ್ರುವಾಹನಂಕೇಳ್ದು ಭಟರಂ ಕಳುಹಿತೊಳತೊಳಗುವ || ಮುತ್ತುಗಳಮಾಲೆಯಿಂ ಕನಕದಾಭರಣದಿಂ | ಬಿತ್ತರದಗಂಧಮಾಲ್ಯಾಕ್ಷತೆಗಳಿಂಪೂಜೆ | ವೆತ್ತೆಸೆನತುರಗಮಂತರಿಸಿಕಟ್ಟದನೋದಿಕೊಂಡುಪಟ್ಟಣ

ಎಂದನು-ಎಂಬದಾಗಿ ಹೇಳಿದನು.

ಅ|| ವಿ|| ಪುರುಷನೂ+ಸ್ತ್ರೀಯೂ=ಪುರುಷ ಸ್ತ್ರೀಯರು ದ್ವಿ.ದ್ವ.ಸ. ರಮೆಯುವಲ್ಲಭ=ರಮಾವಲ್ಲಭ ಷ.ತ. ಮೆಲ್ಲಿತು+ಅಡಿ=ಮೆಲ್ಲಡಿ ವಿ. ಪೂ. ಕ. ||೧೭||

ಟೀ|| ಭೂಲೋಲ-ಪೃಥ್ವಿಯಲ್ಲಿ ಆಸಕ್ತನಾದ ಜನಮೇಜಯರಾಯನೆ, ಕೇಳ್-ಆಲಿಸುವನಾಗು, ಮರಾಳಧ್ವಜನ-ಹಂಸಕೇತು ಭೂಪಾಲನ, ಮಾತಂ-ಆ ನುಡಿಯನ್ನು, ಇಂತು-ಈ ಪ್ರಕಾರವಾಗಿ, ಆಲಿಸುವ-ಲಾಲಿಸುತ್ತಿರುವವನಾದ, ಪಾರ್ಥನ-ಧನಂಜಯನ, ಕಿರೀಟಾಗ್ರದೋಳ್-ಮಕುಟಾಗ್ರದಲ್ಲಿ, (ಕಿರೀಟದ ಕೊನೆಯಲ್ಲಿ) ಒಂದು ಪದ್ದು-ಒಂದಾನೊಂದು ಗೃಧ್ರವು, ಬಂದು- ಬಂದುದಾಗಿ, ಕಾಲೂರಿ- ಕಾಲನ್ನಿಟ್ಟುಕೊಂಡು, ನಿಂದಿರ್ದುದು- ನಿಂತುಕೊಂಡಿತ್ತು, ಉತ್ಪಾತದ- ಅಶುಭ ಸೂಚಕದ (ಅಮಂಗಳದ) ಅದ್ಭುತವಂ-ಆಶ್ಚರಿಯನ್ನು. (ಸೋಜಿಗವನ್ನು) ಏನೆಂಬೆನು-ಏನು ಹೇಳಲಿ, ನೀಲಧ್ವಜ-ಅಸಿತಧ್ವಜನೇ, ಆದಿ-ಮೊದಲಾದವರಾದ, ನೃಪರೆಲ್ಲರುಂ-ಭೂಪಾಲರೆಲ್ಲರೂ, (ಸಮಸ್ತ ರಾಜರೂ) ತಮತಮಗೆ-ತಮ್ಮಲ್ಲಿ ತಾವೆ, ಮೇಲಣ-ಅರ್ಜುನನ ಮಕುಟಾಗ್ರದಲ್ಲಿ ಹದ್ದು ಕೂತದ್ದರಿಂದ ಮುಂದೆಯಾಗತಕ್ಕ, ಅಪಜಯ-ಸೋಲುವಿಕೆಯ, ಸೂಚನೆಯಲಿ-ಗುರ್ತಿನಿಂದ, ಆ ನರಂಗೆ-ಆ ಫಲುಗುಣನಿಗೆ, ಕಾಲಗತಿ-ದೈವಾನುಕೂಲ ಕಾಲವು, ಎಂತು-ಯಾವರೀತಿಯಾಗಿ, ಆಹುದೊ-ಆಗುತ್ತದೆಯೊ, ಶಿವಶಿವ-ಹರಹರ, ಅಕಟ-ಅಹಹ, ಎನುತ-ಎಂಬದಾಗಿ ಹೇಳುತ್ತ, ಮನವು-ಮನಸ್ಸು, (ಹೃದಯವು) ಅಳುಕಿ-ಭಯಗೊಂಡು, ಚಿಂತಿಸುತಿರ್ದರು-ಆಲೋಚಿಸುತ್ತಿದ್ದರು.

ಅ|| ವಿ|| ಹದ್ದು-ದ್ಭ. ಗೃಧ್ರ-ತ್ಸ. ಉತ್ಸವ-ಸಂತೋಷ, ಹಬ್ಬ. ಕಿರೀಟಾಗ್ರ ಷ. ತ್ರ. ಶಿವ ಶಿವ. ಹರಹರ. ಅಕಟಕಟ ಇವುಗಳು ವ್ಯಸನ ಸೂಚನೆಯಲ್ಲಿ ದ್ವಿರುಕ್ತಿಯಾಗಿ ಬಂದಿವೆ ||೧೮||

ಟೀ|| ಇತ್ತಲ್-ಈ ಎಡೆಯಲ್ಲಿ, ಈ ತೆರದೋಳ್-ಈ ಬಗೆಯಾಗಿ, ಇರುತಿರಲ್-ಇರುತ್ತಿರಲಾಗಿ, ಅತ್ತಲ್-ಆ ಎಡೆಯ, ಆ ಪುರದೊಳು-ಆ ಮಣಿಪುರದಲ್ಲಿ, ಉತ್ತಮ-ಶ್ರೇಷ್ಠವಾದ, ಹಯಾಗಮನಕೆ-ತುರಗದ ಬಂದಿರುವಿಕೆಗೆ, ಒಡನೆ-ಆ ಹಯದ ಕೂಡೆ, ಬಂದಿಹ-ಬಂದಿರುವಂಥ, ನೃಪರ-ರಾಜರುಗಳ, ವೃತ್ತಾಂತಮಂ-ವರ್ತಮಾನಾದಿಗಳನ್ನು, ಬಭ್ರುವಾಹನಂ-ಬಭ್ರುವಾಹನನು, ಕೇಳ್ದು-ಆಲಿಸಿ, (ಆಕರ್ಣಿಸಿ) ಭಟರಂ-ತನ್ನ ಕಡೆಯ ವೀರರನ್ನು, ಕಳುಹಿ-ಕಳುಹಿಸಿಕೊಟ್ಟು. ತೊಳತೊಳಗುವ-ಅತ್ಯಂತವಾಗಿ ಪ್ರಕಾಶಿಸುವ, ಮುತ್ತುಗಳ-ಮೌಕ್ತಿಕಗಳ, ಮಾಲೆಯಿಂ-ಹಾರದಿಂದಲೂ, ಕನಕದ-ಸ್ವರ್ಣಮಯವಾದ, ಆಭರಣದಿಂ-ಹಸ್ತಾಭರಣ (ಕಂಠಾಭರಣವೆಂಬ) ಆಭರಣಗಳಿಂದಲೂ, ಬಿತ್ತರದ-ವಿಸ್ತಾರವಾಗಿ ಮಾಡಿದ, (ಅತಿಶಯವಾಗಿ ಮಾಡಿದ) ಗಂಧ-ಶ್ರೀಗಂಧವೇ ಮೊದಲಾದ ಸುಗಂಧದ, ಮಾಲ್ಯ-ಪುಷ್ಪಮಾಲೆಯು, ಅಕ್ಷತೆಗಳಿಂ-ಮಂತ್ರಾಕ್ಷತೆ ಮೊದಲಾದವುಗಳಿಂದಲೂ, ಪೂಜೆವೆತ್ತು-ಸೇವೆಯನ್ನು ಹೊಂದಿ, (ಪೂಜೆಯನ್ನು ಹೊಂದಿ) ಎಸೆವ-ಶೋಭಿಸುವ, ತುರಗಮಂ-ಹಯವನ್ನು, ತರಿಸಿ-ತನ್ನ ಬಳಿಗೆ ಹಿಡಿದು ತರಿಸಿಕೊಂಡು, ಪಟ್ಟದ-ಪಟ್ಟದಲ್ಲಿ ಲಿಖಿಸಿರುವ, ಲಿಪಿಯನು-ಬರಹವನ್ನು, (ಬರಹದ ರೀತಿಯನ್ನು) ಓದಿಕೊಂಡು-ವಾಚಿಸಿ

---

ಳನ್ನು ಹಂಸಧ್ವಜನಿಂದ ಕೇಳುತ್ತಿದ್ದ ಸಮಯದಲ್ಲಿಯೇ, ಪಾರ್ಥನ ಕಿರೀಟಾಗ್ರದಲ್ಲಿ ಒಂದು ವೃದ್ಧ ಗೃಧ್ರವು (ಮುದಿಹದ್ದು) ಕೂತುಕೊಂಡಿತು. ಈ ಉತ್ಪಾತವನ್ನು ಏನೆಂದು ಹೇಳೋಣ, ನೀಲಧ್ವಜನೇ ಆದಿಯಾದ ನೃಪಾಲರು ಸಮಸ್ತರೂ, ತಮಗೆ ತಾವೆ ಅಪಜಯಸೂಚಕವಾದ ನೀತಿಯಿಂದ, ನಮ್ಮಾ ಪಾರ್ಥನಿಗೆ ಕಾಲಗತಿಯು ಯಾವ ಪ್ರಕಾರವಾಗಿರುತ್ತದೆಯೋ ಅಕಟಕಟ ಅಯ್ಯೋ! ಶಿವಶಿವ, ಎಂಬದಾಗಿ ಹೇಳುತ್ತ ಮನಬೆದರಿನರಾಗಿ ಬಹುವಾಗಿ ಆಲೋಚಿಸುತ್ತಿದ್ದರು || ೧೮ || ಇತ್ತಲು ಈ ವಿಧವಲ್ಲಿರುತ್ತಿರಲಾಗಿ, ಅತ್ತಲು ಆ ಮಣಿಪುರದೊಳು, ಉತ್ತಮವಾದ ಯಜ್ಞಾಶ್ವವು ಬಂದಿರುವ ವಿಷಯಕ್ಕೆ. ಯಜ್ಞಾಶ್ವದಕೂಡ ಬಂದಿರುವಂಥ ನೃಪಾಲರ ವೃತ್ತಾಂತವನ್ನು ಬಭ್ರುವಾಹನನು ಕೇಳಿದವನಾಗಿ, ಭಟರನ್ನು ಕಳುಹಿ, ಅತ್ಯಧಿಕವಾಗಿ ಪ್ರಜ್ವಲಿಸುತ್ತ ಮುತ್ತಿನ ಕಂಠೀಸರದಿಂದಲೂ, ಕನಕದ ಆಭರಣಗಳಿಂದ ಅಲಂಕಾರವಾಗಿಯೂ, ಗಂಧ ಪರಿಮಳಾದಿ ಸುಗಂಧಂಗಳಿಂದ ಪೂಜಿಸಿದ್ದಾಗಿಯೂ ಇರುವ ಯಜ್ಞಾಶ್ವವನ್ನು ಹಿಡಿತರಿಸಿಕೊಂಡು, ಆ ಅಶ್ವದ ಹಣೆಯಲ್ಲಿ ಭಂಗಾರದ ಪಟ್ಟಿಯಮೇಲೆ ಬರೆದಿದ

ನಲಿಪಿಯನು ॥೧೯॥ ಅರಸಕೇಳಾದುದನಿತರೊಳಸ್ತಮಯಸಮಯ । ಮರವಿಂದದಲರ್ಗಳೊಳ್ಸೆರೆಯಾದುವಾರಡಿಗ । ಳಿರದೆಸರಿದುವುಬಿಸಿಲಬೀಡುಗಳ್ಗೂಡುಗೊಂಡವುಕೂಡೆಪಕ್ಷಿಜಾತಿ ॥ ಪಿರಿದೆನಿಪಕತ್ತಲೆಯರಾಶಿಯಂಪೊತ್ತುಕೊಂ । ಡುರಿವಬೆಂಕಿಯಕಡೆಯಲುಳಿದಕೆಂಗೆಂಡಮೆನೆ । ತರಣಿಮುಂಡಲಮೆಸೆದುದಪರದಿಗ್ಭಾಗದೊಳ್ಕೊರಗಿದುವುಕೋಕಂಗಳು ॥೨೦॥ ಸುಲಲಿತಾಂಬರಮಣಿವಿಭೂಷಣವನುಳಿದುಮಂ । ಗಳರಾಗಮುಂತಾಳ್ದುತಾರಾಭರಣವನಾಂ । ತಳೊಸಂಜೆವೆಣ್ಣೆನಲ್ಕೆಂಪಿಡಿದುಡುಗಣಂಗಳೆಸೆದುವಾಗಸದೊಳಾಗ ॥ ನಳಿನಾಳಿನಾಳಿನಳಿಕುಲಕೀರವಿಸರಪಿ । ಮಳಸಾರಮಧುವೆಂಬಬಾಗಿಲ್ಗಳಂಪೂಡಿ । ಕೊಳುತಿರ್ಪವೆಂಬಂತೆನಂಗಿವುತಿರ್ದುದುಕೂಡೆತೀವಿದವುಕತ್ತಲೆಗಳು ॥ ೨೧ ॥ ಏನೆಂಬೆನರ್ಜುನನಕಟಕಮಿರ್ದುದುಮಹಾಂ । ಭೋಸಿಧಿಯಮುಸಕದಿಂಪೊಳಲಪೊರವಳೆಯುದು । ದ್ಯಾನವೀಧಿಗಳೊಳತ್ತಲ್ಬಭ್ರುವಾಹನಂನಗರದೊಳೆಣಿಕೆಗೊಳ್ಳದೆ ॥ ತಾನಮಲಸಂಧ್ಯಾದಿ

---

ವನಾಗಿ) ಅದಂ-ಆ ಕುದುರೆಯನ್ನು, ಕಟ್ಟಿದಂ-ಕಟ್ಟಿಸಿದನು (ಸಮರ್ಥಿಸಿದನು).

ಅ॥ ವಿ॥ ಮುಕ್ತಾ-ತ್ಸ. ಮುತ್ತು-ದ್ಭ. ಗಂಧವೂ ಮಾಲ್ಯವೂ ಅಕ್ಷತೆಯೂ=ಗಂಧಮಾಲ್ಯಾಕ್ಷತೆಗಳ್ ಬಹು.ದ್ವಂ.ಸ. ಅಕ್ಷತ-ತ್ಸ. ಅಕ್ಕಿ-ದ್ಭ ॥೧೯॥

ಟೀ॥ ಅರಸ-ದೊರೆಯಾದ ಜನಮೇಜಯರಾಯನೆ, ಕೇಳ್-ಆಲಿಸುವನಾಗು, ಅನಿತರೋಳ್-ಅಷ್ಟರೊಳಗಾಗಿ, (ಬಭ್ರುವಾಹನನು ಕುದುರೆಯನ್ನು ಚರರಿಂದ ಲಾಯದಲ್ಲಿ ಬಂಧಿಸಿದನಂತರದಲ್ಲಿ) ಅಸ್ತಮಯ-ಸೂರ್ಯನು ಮುಳುಗುವ ಸಮಯಂ-ವೇಳೆಯು (ಕಾಲವು, ಸಾಯಂಕಾಲವು) ಆದುದು-ಆಯಿತು, (ಸಂಜೆಯಾಯಿತು) ಅರವಿಂದ-ಕಮಲದ, ಅಲರ್ಗಳೊಳ್-ಹೂಗಳಲ್ಲಿ, ಆರಡಿಗಳು-ಭೃಂಗಗಳು, (ಷಟ್ಪದಿಗಳು) ಸೆರೆಯಾದವು-ಈಚೆಗೆ ಬರದಂತಾದುವು, (ಕಮಲ ಪುಷ್ಪಕ್ಕೆ ಮಧುಪಾನಕ್ಕಾಗಿ ಬಂದಿದ್ದ ಭ್ರಮರಗಳು, ಸೂರ್ಯಾಸ್ತಮಯವಾದುದರಿಂದ ಕಮಲಗಳಾಗ ಮುಕುಳಿತವಾದುದರಿಂದ ಆ ಪುಷ್ಪಗಳಲ್ಲಿಯೇ ಈ ಭ್ರಮರಗಳಿದ್ದವು) ಇರದೆ-ತಪ್ಪದೆ, ಬಿಸಿಲ-ಬಿಸಿಲಿನ, ಬೀಡುಗಳ್-ಗುಂಪುಗಳು, ಸರಿದವು-ಜಾರಿಹೋದವು, (ಬಿಸಿಲು ಹೋಗಿ ಕತ್ತಲಾಯಿತು) ಪಕ್ಷಿಜಾತಿ-ಹಕ್ಕಿಗಳ ಗುಂಪು, ಗೂಡುಗೊಂಡವು-ತಮ್ಮಗಳ ಆಶ್ರಯವನ್ನು ಹೊಂದಿದುವು. ಪಿರಿದೆನಿಪ-ಆತಿಶಯವಾದ್ದೆನಿಸಿಕೊಳ್ಳುವ, ಕತ್ತಲೆಯ-ಅಂಧಕಾರದ, ರಾಶಿಯುಂ-ಸಮೂಹವನ್ನು, ಪೊತ್ತುಕೊಂಡು-ಹೊರೆಯಾಗಿ ಹೊತ್ತು ಉರಿವ-ಜ್ವಲಿಸುತ್ತಿರುವ ಬೆಂಕಿಯ-ಬೆಂಕಿಯನ್ನು, ಕಡೆಯಲು-ಮಥಿಸಲಾಗಿ, ಉಳಿದ-ಮಿಕ್ಕಿರುವ, ಕೆಂಗೆಂಡಂ-ಕೆಂಪಾಗಿರುವ ಅಗ್ನಿಯ ಕೆಂಡವೋ, ಎನೆ-ಎನ್ನುವಂತೆ, ಅಪರ ದಿಗ್ಭಾಗದೊಳ್-ಅಪರ ದಿಕ್ಕಿನಲ್ಲಿ, (ಪಶ್ಚಿಮದಿಕ್ಕಿನ ಭಾಗದಲ್ಲಿ) ತರಣಿಮಂಡಲಂ-ಇನಬಿಂಬವು, (ಸೂರ್ಯಬಿಂಬವು) ಎಸೆದುದು-ಶೋಭಿಸಿತು, ಕೋಕಂಗಳು-ದಂಪತಿ ಪಕ್ಷಿಗಳು, ಕೊರಗಿದವು-ವ್ಯಥೆಯನ್ನು ಹೊಂದಿದವು (ದುಃಖಿಸಿದವು).

ಅ॥ ವಿ॥ ಕೋಕ-ಚಕ್ರವಾಕ, ಕೋಕಿಲ, ಚೆಟ್ಟದಾವರೆ (ತರಣಿ-ಸೂರ್ಯ, ತರುಣಿ-ಹೆಂಗಸು,) ಹರ-ಈಶ್ವರ, ಪರ-ಹಗೆ, ಅನ್ಯ, (ಅಲರ್-ಪುಷ್ಪ, ಎಲರ್-ಗಾಳಿ) ॥೨೦॥

ಟೀ॥ ಸಂಜೆ-ಸಂಧ್ಯಾಕಾಲವೆಂಬ, ಪೆಣ್-ಹೆಣ್ಣು, (ಸ್ತ್ರೀಯು) ಸು-ಉತ್ತಮವಾದ, ಲಲಿತ-ಮನೋಹರವಾದ, ಇಂಪುಗೊಂಡ, ಅಂಬರ-ಅಂತರಿಕ್ಷವೆಂಬ ವಸ್ತ್ರವನ್ನೂ, ಅಂಬರಮಣಿ-ಸೂರ್ಯನೆಂಬ, ಭೂಷಣವನು-ಒಡವೆಯನ್ನೂ, ಮಣಿವಿಭೂಷಣವನು-ರತ್ನಾಭರಣಗಳನ್ನೂ, ಉಳಿದು-ತ್ಯಜಿಸಿ, ಮಂಗಳ-ಮಂಗಳ ಗ್ರಹದ, ರಾಗಮುಂ-ಸಾಯಂಕಾಲದಲ್ಲಿ ಉಂಟಾದ ಕೆಂಪು ಬಣ್ಣವೆಂಬ, ರಾಗಮುಂ-ಕಾಂತಿಯನ್ನು, ಸುಗಂಧವನ್ನು ತಾಳ್ದು-ಹೊಂದಿ ಎಂದರೆ ಲೇಪನಮಾಡಿಕೊಂಡು, ತಾರಾ-

---

ಲಿಖಿತವನ್ನು ಓದಿಕೊಂಡವನಾಗಿ ಆ ತುರಗವನ್ನು ಅಶ್ವಶಾಲೆಯಲ್ಲಿ ಕಟ್ಟುವಂತೆ ಅಪ್ಪಣೆಮಾಡಿದನು. ॥೧೯॥ ಪೃಥ್ವೀಪತಿಯಾದ ಜನಮೇಜಯರಾಯನೆ ಆಲಿಸು, ಆ ವೇಳೆಗೆ ಸರಿಯಾಗಿ ಅಸ್ತಮಯವಾಗಲು, ಕಮಲಪುಷ್ಪಗಳಲ್ಲಿ ಮಕರಂದದ ಪಾನಕ್ಕಾಗಿ ಬಂದಿದ್ದ ಆರಡಿಗಳೆಲ್ಲವೂ ಸೆರೆಗೆ ಸಿಕ್ಕಿದವು (ಸೂರ್ಯಾಸ್ತಮಯವಾಗಲು ಕಮಲಗಳೆಲ್ಲಾ ಮುಕುಳಿತವಾದವೆಂಬ ಭಾವವು) ಪಕ್ಷಿಜಾತಿಗಳೆಲ್ಲವೂ ತಮ್ಮತಮ್ಮ ಗೂಡುಗಳನ್ನು ಸೇರಿಕೊಂಡವು, ಬಿಸಿಲ ತಾಪವು ತಗ್ಗಿಹೋಯಿತು, ಮಹಾತಿಶಯವೆಂದೆನ್ನಿಸಿಕೊಂಡಿರುವ, ಅಂಧಕಾರದ ರಾಶಿಯನ್ನು ಆವರಿಸಿಕೊಂಡು ದಹಿಸುತ್ತಲಿರುವ ಬೆಂಕಿಯನ್ನು ಪಡೆಯಲು, ಉಳಿದಿರುವ ಕೆಂಗೆಂಡವೋ ಎಂಬಂತೆ ಅಪರ ದಿಗ್ಭಾಗದಲ್ಲಿ ತರಣಿಮಂಡಲವು ಕಾಂತಿಯಿಂದೊಡಗೂಡಿತ್ತು. ಕೋಕಂಗಳು ಅಗಲಿಕೆಯನ್ನು ಹೊಂದಿ ಕೊರಗುತ್ತಿದ್ದವು ॥೨೦॥ ಆಗ ಸಂಜೆಯ ಕಾಲವೆಂಬ ನಾರಿಯು, ಲಲಿತವಾದ ಅಥವ ಈಕ್ಷಿಸಲು ಮನೋಹರವಾದ ಗಗನಮಣಿ (ಸೂರ್ಯ) ಎಂಬ ಉಡಿಗೆಯನ್ನು ಆಭರಣಾದಿಗಳನ್ನು, ನವರತ್ನ ಖಚಿತವಾದ ಒಡ್ಯಾಣವನ್ನು ತ್ಯಜಿಸಿ, ಮಂಗಳವೆಂಬ ನಕ್ಷತ್ರದ, ರಕ್ತವರ್ಣವೆಂಬ ಕೆಂಪು ಬಣ್ಣವುಳ್ಳ, ಕೇಸರಿಯ ಸುಗಂಧವನ್ನು ಧರಿಸಿಕೊಂಡು (ಲೇಪಿಸಿಕೊಂಡು)

ವಿಧಿಯನಾಚರಿಸಿಸು | ಮ್ಮಾನದಿಂಪತ್ತುಸಾವಿರಕಂಭದೆಸಕದಾ | ಸ್ಥಾನಮಂಟಪಕೆಬಂದೋಲಗಂಗೊಟ್ಟನತಿಸಂಭ್ರಮದೊಳಂದಿನಿರುಳು || ೨೨ || ಪಳಕುಗಳನೆಲೆಕಟ್ಟುಮರಕತಂಗಳಜಗುಲಿ | ಪೊಳೆವನೀಲದಭಿತ್ತಿ ಬಜ್ಜರದಕಂಭಮುರೆ | ತೊಳಪ

---

ನಕ್ಷತ್ರಗಳೆಂಬುವ ದುಂಡಾದ ಮುತ್ತುಗಳಿಂದ ವ್ಯಾಪ್ತವಾದ, ಆಭರಣಮಂ_ಒಡವೆಯನ್ನು, ಆಂತಳೊ_ಹೊಂದಿರುತ್ತಾಳೆಯೋ (ಇಟ್ಟುಕೊಂಡು ಇರುತ್ತಾಳೆಯೋ) ಎನಲ್-ಎನ್ನುವ ರೀತಿಯಿಂದ, ಕೆಂಪಿಡಿದ_ಸಂಧ್ಯಾಕಾಲದ ಕೆಂಪಿನಿಂದ ಕೂಡಿದ, ಉಡುಗಣಂಗಳ್_ತಾರಾನಿವಹಗಳು, ಆಗಸದೊಳು-ಅಂತರಿಕ್ಷದಲ್ಲಿ, ಎಸೆದುವು-ಹೊಳೆದುವು, ಆಗ_ಆ ಕಾಲದಲ್ಲಿ, ನಳಿನ_ತಾವರೆಗಳ, ಆಳಿ-ಗುಂಪು, ನಾಳಿನ-ನಾಳೆಯದಿನದಲ್ಲಿ ಆಗಮಿಸುವ, ಅಳಿ-ಷಟ್ಪದಿಗಳ, (ದುಂಬಿಗಳ) ಕುಲ_ಗುಂಪಿಗೆ, (ತಂಡಕ್ಕೆ) ಕೀರಕ_ಶುಕಕ್ಕೂ, ಪರಿಮಳದ_ಸುಗಂಧದಿಂದ ವ್ಯಾಪ್ತವಾದ, ಸಾರ_ಶ್ರೇಷ್ಠವಾದ, ಮಧು_ಹುವ್ವಿನ ರಸವು, ಎಂಬ_ಮುಂದೆ ಬರುವ ಆರಡಿಗಳಿಗೋಸ್ಕರವಾಗಲಿ ಎಂದು, ಬಾಗಿಲ್ಗಳಂ_ತಾವರೆ ಎಸಳೆಂಬ ಬಾಗಿಲುಗಳನ್ನು, ಪೂಡಿ_ಹೂಡಿ, (ಸರಿದು) (ಮುಚ್ಚಿಕೊಂಡು) ಕೊಳುತಿರ್ಪವು_ಹೊಂದುತ್ತಿರುವವು, ಎಂಬಂತೆ_ಎಂದು ಹೇಳುವ ರೀತಿಯಿಂದ, ಮುಗಿವುತಿರ್ದುದು-ಮುಚ್ಚಿಕೊಳ್ಳುತಿತ್ತು, ಕೂಡೆ_ಒಡನೆಯೆ, ಕತ್ತಲೆಗಳ್-ತಮಗಳು, ತೀವಿದುವು_ತುಂಬಿಕೊಂಡವು.

ಅ|| ವಿ|| ಸೂರ್ಯಾಸ್ತಮಯವಾಯಿತು, ಪಶ್ಚಿಮದಿಕ್ಕಿನಲ್ಲಿ ಕೆಂಪು ಬಣ್ಣವುಂಟಾಯಿತು, ಕಮಲಗಳೆಲ್ಲಾ ಮುಕುಳಿತವಾದವು ಇವೆಲ್ಲವೂ ಆ ಸಂಧ್ಯಾಕಾಲದಲ್ಲಿ ಆಗುವುದು ಸ್ವಭಾವವಾದ್ದರಿಂದ ಸ್ವಭಾವೋಕ್ತ್ಯಲಂಕಾರವಾಗುತ್ತದೆ ಈ ಪದ್ಯವನ್ನೆ ಶ್ಲೇಷಾರ್ಥದಲ್ಲಿ ವಿವರಿಸಿರುತ್ತೆ. ಸಂಜೆಯೆಂಬ+ಪೆಣ್=ಸಂಜೆಪೆಣ್ ಅವಧಾರಣಾ ಪೂ. ಕ. ಅಂಬರ_ಆಕಾಶ, ವಸ್ತ್ರ, ಅಂಬರಮಣಿ, ಸೂರ್ಯ, ತ್ರೇತಾಗ್ನಿಗಳು (ದಕ್ಷಿಣಾಗ್ನಿ, ಗಾರ್ಹಪತ್ಯ, ಆಹವನೀಯ, ಮಂಗಳ_ಶುಭ, ಮಂಗಳಗ್ರಹ, ನಳಿನಾಳಿ-ತಾವರೆಗಳ ಗುಂಪು, ನಾಳಿನಳಿ-ನಾಳೆಯ ದಿನದ ಭ್ರಮರ, ಆಗಸ_ದ್ಭ, ಆಕಾಶ_ತ್ಸ, ಷಟ್ಪದಿಗಳು-ಶರ, ಕುಸುಮ, ಭೋಗ, ಭಾಮಿನಿ, ಪರಿವರ್ಧಿನಿ, ವಾರ್ಧಕ, ಎಂದು ಆರು ವಿಧವು ||೨೧||

ಟೀ|| ಅರ್ಜುನನ-ಪಾರ್ಥನನ, ಕಟಕಂ-ಸೇನೆಯು, ಮಹಾಂಭೋನಿಧಿಯ_ಮಹತ್ತಾದ ಸಮುದ್ರದ, ಮುಸಕದಿಂ_ಉಬ್ಬುವಿಕೆಯಿಂದ, ಪೊಳಲ_ನಗರದ, ಪೊರವಳಯದ-ಹೊರಪ್ರಾಕಾರದ, ಉದ್ಯಾನ_ಆರಾಮ, ಅಥವಾ ವೃಕ್ಷಾದಿಗಳ ಗುಂಪಿನ, ವೀಥಿಗಳೋಳ್-ಹಾದಿಗಳಲ್ಲಿ, ಇರ್ದುದು-ಇತ್ತು, (ಇಳಿದುಕೊಂಡಿತ್ತು) ಏನೆಂಬೆನು-ಆ ಆಶ್ಚರ್ಯವನ್ನು ಏನೆಂದು ಹೇಳಲಿ, ಅತ್ತಲ್-ಆ ಎಡೆಯಲ್ಲಿ, ಬಭ್ರುವಾಹನಂ_ಬಭ್ರುವಾಹನನೆಂಬುವನು, ನಗರದೊಳು-ರತ್ನಪುರದಲ್ಲಿ, ಎಣಿಕೆಗೊಳ್ಳದೆ_ಯೋಚನೆಯನ್ನು ಮಾಡದೆ, (ಯೋಚಿಸದೆ) ತಾಂ_ತಾನು, ಅಮಲ-ಕೊಳೆಯಿಲ್ಲದ, (ಪರಿಶುದ್ಧವಾದ) ಸಂಧ್ಯಾದಿ_ಸಂಧ್ಯಾಕಾಲದ ವಂದನೆಯೆ, ಆದಿ-ಮೊದಲುಗೊಂಡು, ವಿಧಿಯನು_ನೈಮಿತ್ತಿಕ ವ್ಯಾಪಾರವನ್ನು, (ವಿಧ್ಯುಕ್ತದಿಂದ) ಆಚರಿಸಿ_ಅನುಸರಿಸಿ, (ನೆರವೇರಿಸಿಕೊಂಡು) ಸುಮ್ಮಾನದಿಂ_ಅತ್ಯಂತ ಮದದಿಂದ, ಪತ್ತು_ಹತ್ತಾದ, ಸಾವಿರ_ಸಾಸಿರದ ಸಂಖ್ಯೆಯಿಂದ ಕೂಡಿದ, ಕುಂಭದ-ಕುಂಭಗಳ, ಎಸಕದ_ಕೈ ಚಮತ್ಕಾರದಿಂದ ಮಾಡಿದ, ಆ ಸ್ಥಾನಮಂಟಪಕೆ-ಸಭಾಸ್ಥಾನಕ್ಕೆ, (ದರ್ಬಾರ್ ಮಾಡುವ ಪ್ರದೇಶಕ್ಕೆ) ಬಂದು_ಬಂದವನಾಗಿ, ಅತಿ ಸಂಭ್ರಮದೊಳು-ಹೆಚ್ಚಾದ ಉಲ್ಲಾಸದಿಂದ, (ಸಂತೋಷದಿಂದ) ಅಂದಿನ_ಆ ದಿವಸದ, ಇರುಳು-ನಿಶಿಯಲ್ಲಿ, ಓಲಗಂ ಗೊಟ್ಟನು_ಉದ್ಯೋಗಮಾಡಿದನು, (ಓಲಗವನ್ನು ಕೊಟ್ಟನು)

---

ನಕ್ಷತ್ರಗಳೆಂಬ ಗುಂಡಾದ ಮುಕ್ತಾಹಾರವನ್ನು ಧರಿಸಿಕೊಂಡಿರ್ಪಳೋ ಎಂಬಂತೆ ಸಂಧ್ಯಾರಾಗದಿಂದೊಡಗೂಡಿದ ತಾರಕಾನಿವಹಂಗಳು ಅಂತರಿಕ್ಷದಲ್ಲಿ ಕಾಂತಿಯಿಂದೊಡಗೂಡಿದ್ದವು, ಆ ಸಮಯದಲ್ಲಿ ನಳಿನಗಳ ಸಮೂಹವು, ನಾಳೆಯ ದಿನದಲ್ಲಿ ಪುನಹ ಬರತಕ್ಕ ಆರಡಿಗಳ, ಮತ್ತು ಶುಕಗಳ ಸಮುದಾಯಕ್ಕೆ ಮಕರಂದವು ಕೊಂಚ ಮಟ್ಟಿಗಾದರೂ ಉಳಿದಿರಲೆಂಬಂತೆ ಮುಕುಳಿತವಾದವು. (ಸಂಧ್ಯಾಕಾಲದಲ್ಲಿ ಪಶ್ಚಿಮದಿಕ್ಕಿನಲ್ಲಿ ಅರುಣೋದಯವಾಗುವುದು, ಅಂತರಿಕ್ಷದಲ್ಲಿ ನಕ್ಷತ್ರಗಳ ಸಮೂಹವು ಉದ್ಭವಿಸುವುದೂ, ಕಮಲ ಪುಷ್ಪಗಳೆಲ್ಲಾ ಮುಕುಳಿತವಾಗುವುದೂ ಸಹಜವಾಗಿರುವುದು ಸ್ವಭಾವೋಕ್ತಿ) ಕೂಡಲೆ ಅಂಧಕಾರವು ಕವಿಯಿತು ||೨೧|| ಆ ಬಳಿಕ ಪಾರ್ಥನ ವಾಹಿನಿಯು, ಮಹಾಜಲಧಿಯ ಕಪ್ಪುಬಣ್ಣದ ಕಾಂತಿಯ ರೀತಿಯಿಂದ ಮಣಿಪುರದ ಹೊರಗಡೆಯಲ್ಲಿರುವ ತೋಟಗಳ ಬೀದಿಗಳಲ್ಲಿ ಇಳಿದಿತ್ತು, ಆ ಸೇನಾಜಲಧಿ ವಿಷಯವನ್ನು ಕುರಿತು ಏನೆಂದು ಹೇಳಲಿ, ಈ ಮಣಿಪುರದಲ್ಲಿ ನಕುಲಧ್ವಜನು ನಗರದಲ್ಲಿ ಯಾವ ವಿಷಯಕ್ಕೂ ಯೋಚನೆಗೊಳ್ಳದೆ, ಸಂಧ್ಯಾವಂದನೆಯೇ ಮೊದಲಾದ ಕರ್ಮಗಳನ್ನು ವಿಧಿಯಲ್ಲಿ ಹೇಳಿರುವ ಮೇರೆಗೆ ನೆರವೇರಿಸಿಕೊಂಡು ಬಹಳ ಸಂತೋಷದಿಂದ ಒಂದು ಸಾಸಿರ ಕಾಲುಗಳಿಂದ ನಿರ್ಮಿತಮಾದ ಸಭಾ ಮಂಟಪಕ್ಕೆ (ದರ್ಬಾರು ನಡಿಸುವ ಸ್ಥಳಕ್ಕೆ) ಬಂದು, ಆ ದಿನದಲ್ಲಿ ಮಾಡತಕ್ಕ ರಾಜಕಾರ್ಯಾಲೋಚನೆಗಳನ್ನು (ಓಲಗವನ್ನು) ಮಾಡಿದನು ||೨೨|| ಆ ಬಭ್ರುವಾಹನನ ಸಭಾಸ್ಥಾನವು ಚಂದ್ರಕಾಂತ ಶಾಲೆ

ವೈಡೂರಿಯದಮದಕೈಮಿರುಪಗೋಮೇಧಿಕದಬೋದಿಗೆಗಳು ॥ ಸಲೆಪುಷ್ಯರಾಗದತೊಲೆಗಳೆಸೆವಮಾಣಿಕಂ | ಗಳಲೋವೆ
ಮುತ್ತುಗಳಸೂಸುಕಂಮಿಸುಗುವಪ | ವಳದಪುತ್ಥಳಿಪೊನ್ನಪೊದಕೆ ರಂಜಿಸಿತುಚಾವಡಿಯ ಚೌವಸರದೆಡೆಯೊಳು ॥ ೨೩ ॥
ಸಜ್ಜುಕಂಮುಡಿವತಿಲಕಮನಿಡುವಮೊಗಮುರಿವ | ಕಜ್ಜಳಂಬರೆವಕನ್ನಡಿಯನಿಟ್ಟಿಪಪಾಡು | ವುಜ್ಜುಗಳನರ್ತನದಕೋವು
ಗಳವೀಣಾದಿವಾದ್ಯಮಂಬಿತ್ತರಿಸುವ ॥ ಕಜ್ಜದಪಲವುಕಲೆಗಳಂತೋರುವಭಿನವದ | ಸಜ್ಜೀವಮಾಗಿರ್ದಪುತ್ಥಳಿಗಳವಯದ

---

ಅ॥ ವಿ॥ ಓಲಗವಂ+ಕೊಟ್ಟನು=ಓಲಗಂಗೊಟ್ಟನು ಕ್ರಿ. ಸ. ಕಟಕ-ತ್ಸ. ಕಡಗ-ದ್ಭ. ಮಲವಿಲ್ಲದ್ದು-ಅಮಲ ತ್ಸ. ಅಂಧ-ಕುರುಡ, ಅಂಧಕಾಸುರ, ಕತ್ತಲೆ. ಕೀರ-ದ್ಭ. ಕ್ಷೀರ-ತ್ಸ. ॥೨೨॥

ಟೀ॥ ಆ ಚಾವಡಿಯ-ಆ ಬಭ್ರುವಾಹನನ ಸಭಾಮಂದಿರದ, (ದರ್ಬಾರ್ ಮಾಡುವ ಸ್ಥಳದ) ಚೌಸರದ-ಚೌಕವಾದ ಸಾಲಿನಿಂದ ಮಾಡಿದ ತೊಟ್ಟಿಯ ಪ್ರದೇಶದ, ಎಡೆಯೊಳು-ಆ ಪ್ರದೇಶದಲ್ಲಿ, ಪಳಕುಗಳ-ಸ್ಫಟಿಕದ ಶಿಲೆಗಳ ಅಥವ ಚಂದ್ರಕಾಂತಮಣಿಯು, ನೆಲಕಟ್ಟು-ಪ್ರಸರಿಸಿರುವ ನೆಲದ ಕಲ್ಲುಗಳು, ಮರಕತಂಗಳ-ಪಚ್ಚೆಯ ಬಣ್ಣದ ಕಲ್ಲುಗಳ ಸಮೂಹದಿಂದ ಪ್ರಕಾಶಿಸುವ ರನ್ನ ಮಣಿಗಳ, ಜಗಲಿ-ಜಗುಲಿಯ, (ವೇದಿಕಾ ಪ್ರದೇಶವು) ದೇಶಗಳು, ನೀಲದ-ಇಂದ್ರನೀಲಮಣಿಯಿಂದ ಮಾಡಿದ ಭಿತ್ತಿ-ಕುಡ್ಯಗಳು, ಬಜ್ಜರದ-ವಜ್ರಮಣಿಗಳಿಂದ ಮಾಡಿದ, ಕಂಭಂ-ಕಂಭಗಳು, ಉರೆ-ಅತ್ಯಧಿಕವಾಗಿ, ತೊಳಪ-ಪ್ರಕಾಶಿಸುವ, ವೈಡೂರ್ಯದ-ವೈಡೂರ್ಯವೆಂಬ ರತ್ನಮಣಿಯಿಂದ ರಚಿಸಿದ, ಮದನಕೈ-ಪಡಸಾಲೆ (ಹಜಾರಕ್ಕೆ) ಗೆ ಅನುಕೂಲಮಾದ ಗೋಡೆಯ ಭಾಗವು, ಮಿರುಪ-ಶೋಭಿಸುವ, ಗೋಮೇಧಿಕದ-ಗೋಮೇಧಿಕವೆಂಬ ರತ್ನದ, ಬೋದಿಗೆಗಳು-ಕಂಭದ ಕೊನೆಯು, (ಅಡ್ಡ ತೊಲೆಯು) ಸಲೆ-ಚೆನ್ನಾದ, (ಅಂದವಾದ) ಪುಷ್ಯರಾಗದ-ಪುಷ್ಯರಾಗವೆಂಬ, ರನ್ನ-ಮಣಿಗಳ, ತೊಲೆ-ಅಡ್ಡಮರಗಳು, ಎಸೆವ-ಶೋಭಿಸುವ, ಮಾಣಿಕಂಗಳ-ಮಾಣಿಕ್ಯ ಮಣಿಗಳ, ಲೋವೆ-ದೋಣಿಗಳ ಬಳಿಯಲ್ಲಿ ಕಟ್ಟುವ ಆಕೃತಿಯು, ಮುತ್ತುಗಳ-ಮೌಕ್ತಿಕಂಗಳ, ಸೂಸಕಂ-ಝುಲ್ಲರಿ (ಜಾಲರಿಯ ಆಕಾರವು) ಯು, ಗೊಂಚಲು-ಗೊನೆಯು, ಮಿಸುಗುವ-ಪ್ರಕಾಶಿಸುತ್ತಿರುವ, ಪವಳದ-ವಿದ್ರುಮದ, ಪುತ್ಥಳಿ-ಪ್ರತಿಮೆಗಳು, ಪೊನ್ನ-ಚಿನ್ನದಿಂದ ಮಾಡಿದ, ಪೊದಿಕೆ-ಹೊದಿಕೆಯು, (ಮೇಲಿನ ಹೊದಿಕೆಯು) ಇಂತು-ಈ ಪ್ರಕಾರವಾಗಿ, ರಂಜಿಸಿತು-ಹೊಳೆಯಿತು.

ಅ॥ ವಿ॥ ನವರತ್ನಗಳು-ವಜ್ರ, ವೈಡೂರ್ಯ, ಮಾಣಿಕ್ಯ, ಪುಷ್ಯರಾಗ, ನೀಲ, ಮರಕತ, ಗೋಮೇಧಿಕ, ಹವಳ, ಮುತ್ತು. ಬಜ್ಜರ-ದ್ಭ, ವಜ್ರ-ತ್ಸ, ಸ್ಫಟಿಕ-ತ್ಸ, ಪಳುಕ-ದ್ಭ, ರಾಗ-ಕೆಂಪು ಬಣ್ಣ, ಪ್ರೀತಿ, ಚೌಕವಾದ+ಸರ=ಚೌಸರ ವಿ. ಪೂ. ಕ. ದೋಣಿ-ದ್ಭ. ದ್ರೋಣಿ-ತ್ಸ. ರತ್ನ-ತ್ಸ. ರನ್ನ-ದ್ಭ. ॥೨೩॥

ಟೀ॥ ಸಜ್ಜುಕಂ-ಮುಕುಳಗಳನ್ನು, (ಮೊಗ್ಗುಗಳನ್ನು) ಮುಡಿವ-ಕಬರಿಯಲ್ಲಿ ಧರಿಸುತ್ತಿರುವ, (ಮುಡಿದುಕೊಳ್ಳುವ) ತಿಲಕವಂ-ಫಣೆಯಲ್ಲಿ ನಾಮವನ್ನು, ಇಡುವ-ಧರಿಸಿಕೊಳ್ಳುವವರಾದ, ಮೊಗಂ-ಆಸ್ಯವನ್ನು ಒರೆವ-ಸೊಗಸಿಗಾಗಿ ನೀರಿನಿಂದ ತೊಳೆದುಕೊಳ್ಳುವವರಾದ, ಕಜ್ಜಳಮಂ-ಅಂಜನವನ್ನು, (ಕಪ್ಪನ್ನು) ಬರೆವ-ಅಲಂಕಾರಕ್ಕಾಗಿ ಸೋಗೆಯನ್ನು ತೆಗೆದುಕೊಳ್ಳುವವರಾದ, ಕನ್ನಡಿಯ-ದರ್ಪಣವನ್ನು, ನಿಟ್ಟಿಸುವ-ಈಕ್ಷಿಸುವವರಾಗಿರುವ, ಪಾಡುವ-ಸಂಗೀತವನ್ನು ಹಾಡುವವರಾದ, ಉಜ್ಜುಗಳ-ಪಿಟಿಲು ಮೊದಲಾದವನ್ನು ಶ್ರುತಿಮಾಡುವವರಾದ, ನರ್ತನದ-ನಾಟ್ಯಕ್ಕೆ ಅನುಕೂಲವಾದ, ಕೋವುಗಳ-ಪಿಳ್ಳಂಗೋವಿಯೆ ಮೊದಲಾದವುಗಳ, ವೀಣಾ-ವೀಣೆಯೆ, ಆದಿ-ಆದಿಯಾದ, ವಾದ್ಯಮಂ-ವಾದ್ಯವಿಶೇಷವನ್ನು, ಬಿತ್ತರಿಸುವ-ಪ್ರಕಟಿಸುವ, ವಿಸ್ತರಿಸುವ, ಕಜ್ಜದ-ಕಾರ್ಯಗಳನ್ನು ನೆರವೇರಿಸತಕ್ಕವರಾದ, ಪಲವು-ಹಲವು ಬಗೆಯಾದ, ಕಲೆಗಳಂ-ಕಲಾ ಕೌಶಲಗಳನ್ನು, ತೋರು

---

ಯನೆಲ ಕಟ್ಟುಗಳಿಂದಲು, ಮರಕತ ಮಾಣಿಕ್ಯ ರತ್ನಗಳ ವೇದಿಕೆಗಳಿಂದಲೂ. ಕಾಂತಿಯತಿಶಯಮಾದ ಇಂದ್ರನೀಲದ ಮಣಿಯ ಭಿತ್ತಿಗಳಿಂದಲೂ, ಬಜ್ಜರದ ಸ್ತಂಭಗಳಿಂದಲೂ, ಅತ್ಯಧಿಕವಾಗಿ ಥಳಥಳಿಸುವ ವೈಡೂರ್ಯ ಮಣಿಗಳಿಂದ ನಿರ್ಮಿತಮಾದ ಕೈಸಾಲೆಗಳಿಂದಲೂ, ಕಂಗೊಳಿಸುವ ಗೋಮೇಧಿಕದ ಬೋದಿಗೆಗಳಿಂದಲೂ, ಸೊಗಸಾದ ಪುಷ್ಯರಾಗಮಣಿಯ ತೊಲೆಗಳಿಂದಲೂ, ಶೋಭಿಸುವ ಮಾಣಿಕ್ಯ, ಪುಷ್ಯರಾಗ, ಕೆಂಪು, ಪಚ್ಚೆ ಮತ್ತು ವೈಡೂರ್ಯ ಮಣಿಗಳಿಂದ ನಿರ್ಮಿತಮಾದ ಲೋವೆ ಮೊದಲಾದವುಗಳಿಂದಲು, ಮುತ್ತು ಗೊಂಚಲುಗಳಿಂದಲೂ, ಪವಳದ ಪುತ್ಥಳಿಗಳಿಂದಲೂ, ಕಾಂಚನದ ಮೇಲು ಹೊದಿಕೆಯಿಂದಲೂ, ಅತ್ಯಂತೋಪಯುಕ್ತಮಾಗಿ ಶೋಭಿಸಿತು ॥೨೩॥ ಮತ್ತು ಆ ಸಭಾಮಂಟಪದಲ್ಲಿ ಪೂ ಮೊಗ್ಗುಗಳನ್ನು ಮುಡಿಯುವ, ತಿಲಕವನ್ನು ಪಣೆಯಲ್ಲಿ ಧರಿಸುತ್ತಿರುವ, ಅಲಂಕಾರಾರ್ಥಮಾಗಿ ಮುಖವನ್ನು ಒರಸಿಕೊಳ್ಳುವ, ಕಾಡಿಗೆಯನ್ನು ಧರಿಸುತ್ತಿರುವ, ಕನ್ನಡಿಯನ್ನು ನೋಡಿಕೊಳ್ಳುವ, ವೀಣೆ, ಪಿಟೀಲ್, ತಂಬೂರಿ, ಮೃದಂಗಾದಿಗಳನ್ನು ಬಾಜಿಸುತ್ತಿರ್ಪ, ಸಂಗೀತವನ್ನು ಹಾಡುವ, ಭರತಶಾಸ್ತ್ರಾನುಸಾರವಾಗಿ ಅಭಿನಯಿಸುವ, ನೂತನವಾದ ಸಜೀವನಾಗಿರುವ ಪುತ್ಥಳಿಗಳ ಹಾಗಿರುವ ಅವಯವದ ಭಾಗಗಳುಳ್ಳ

ಪಜ್ಜಳಿಪನವರತ್ನಭೂಷಣದ ಕಾಂತಿಗಳ್ಕಣ್ಗೆಸೆದುವಾಸಭೆಯೊಳು ॥ ೨೪ ॥ ಅಂಚೆಗಳ್ಕೊಳರ್ವಕ್ಕಿಗಳ್ಜೊನ್ನವಕ್ಕಿಗ । ಳ್ಪಿಂಚೆಗಳ್ಗಿಳಿಗಳೆಣೆವಕ್ಕಿಗಳ್ಪರಮೆಗ । ಳ್ಕೊಂಚೆಗಳ್ಕೋಗಿಲೆಗಳಲ್ಲಲ್ಲಿ ರಂಜಿಸಿತುಸಜ್ಜೀವಭಾವದಿಂದ ॥ ಪಂಚಾನನಾದಿಮೃಗತತಿಗಜಹಯಾವಳಿ ವಿ । ರಂಚಿಸೃಷ್ಟಿಯೊಳುಳ್ಳಮೂಜಗದ ನಾನಾಪ್ರ । ಪಂಚಗಳಚಿತ್ರಪತ್ರಂಗಳೆಸೆದಿರ್ದುವಾಸಭೆಯೊಳ್ಮನೋಹರಮೆನೆ ॥ ೨೫ ॥ ನೀಲಮಣಿಕಾಂತಿಗಳ ಕತ್ತಲೆಯಮುತ್ತುಗಳ । ಡಾಳಗಳಕೌಮುದಿಯಮಾಣಿಕದರಶ್ಮಿಗಳ । ಬಾಲಾತಪದವಿದ್ರುಮಚ್ಛವಿಯ ಸಂಜೆಗೆಂಪಿನ ಪಗಲಿರುಳ್ಗಳಲ್ಲಿ ॥ ತೀಲದಿಹವಲ್ಲದೆ ದಿವಾರಾತ್ರಿಯುಂಟೆಂಬ । ಕಾಲಭೇದನ

---

ವ-ಪರೀಕ್ಷೆ ಕೊಡತಕ್ಕವರಾದ, ಅಭಿನವದ-ನೂತನಮಾದ, ಸಜ್ಜೀವಮಾಗಿರ್ದ- ಪ್ರಾಣಸಹಿತವಾಗಿರುತ್ತಿದ್ದ, ಪುತ್ಥಳಿಗಳ-ಪ್ರತಿಮೆಗಳಂ (ಬೊಂಬೆಗಳ) ತೆ, ಅವಯವದ-ಶರೀರಭಾಗಗಳುಳ್ಳ ಸ್ತ್ರೀಯರ, ಪಜ್ಜಳಿಪ-ಹೊಳೆಯುತ್ತಿರುವ, (ಪ್ರಜ್ವಲಿಸುತ್ತಿರುವ) ನವರತ್ನ-ಒಂಭತ್ತು ವಿಧವಾದ ರತ್ನಮಣಿಗಳಿಂದ ಕೆತ್ತಲ್ಪಟ್ಟ, ಭೂಷಣದ-ಆಭರಣಗಳ, ಕಾಂತಿಗಳ್-ಪ್ರಕಾಶಗಳು (ಹೊಳಹುಗಳು) ಆ ಸಭೆಯೊಳಗೆ-ಆ ಬಭ್ರುವಾಹನನ ಆಸ್ಥಾನಮಂಟಪದಲ್ಲಿ, ಕಣ್ಗೆ-ಪ್ರೇಕ್ಷಕರ ದೃಷ್ಟಿಗಳಿಗೆ ಎಸೆದುವು-ಶೋಭಿಸಿದುವು.

ಅ॥ ವಿ॥ ಪಜ್ಜಳ-ದ್ಭ, ಪ್ರಜ್ವಲ-ತ್ಸ, ಮೊಗ್ಗೆ-ದ್ಭ, ಮುಕುಳ-ತ್ಸ, ವೀಣಾ-ತ್ಸ, ವೀಣೆ-ದ್ಭ, ತಿಲಕ-ತಿಲಕ ವೃಕ್ಷ, ನಾಮ, ಶ್ರೇಷ್ಠ (ತೂರ್ಯತ್ರಯ-ನೃತ್ಯಗೀತ, ವಾದ್ಯ) ॥೨೪॥

ಟೀ॥ ಆ ಸಭೆಯೋಳ್-ಆ ಓಲಗಮಂಟಪದಲ್ಲಿ, ಅಂಚೆಗಳ್-ಮರಾಳ ಪಕ್ಷಿಗಳು, ಕೊಳರ್ವಕ್ಕಿಗಳ್-ನೀರನ್ನಾಶ್ರಯಿಸಿರುವ ಪಕ್ಷಿಗಳು, (ನೀರುಹಕ್ಕಿಗಳು) ಅಥವಾ ಕೊಕ್ಕರೆಗಳು, ಜೊನ್ನವಕ್ಕಿಗಳ್-ಬೆಳದಿಂಗಳಿಗೆ ಹರ್ಷಿಸುವ ಪಕ್ಷಿಗಳು, ಪಿಂಚೆಗಳ್-ಶಿಖಿಗಳು, (ಮಯೂರಗಳು) ಗಿಳಿಗಳ್-ಶುಕಗಳು, ಎಣೆವಕ್ಕಿಗಳ್-ದಂಪತಿ ಪಕ್ಷಿಗಳು, (ಚಕ್ರವಾಕಂಗಳು) ಪರಮೆಗಳ್-ಷಟ್ಪದಿಗಳು, (ಭ್ರಮರಗಳು) ಕೊಂಚೆಗಳ್-ಬೆಳ್ವಕ್ಕಿಗಳು, (ಕ್ರೌಂಚಂಗಳು) ಕೋಗಿಲೆಗಳ್-ಪಿಕಗಳು, (ಪರಪುಟ್ಟಗಳು) ಸಜ್ಜೀವಭಾವದಿಂ- ಜೀವಸಹಿತಮಾಗಿರ್ಪುವೋ ಎಂಬಂತೆ, ಅಲ್ಲಲ್ಲಿ- ಆಯಾಯಸ್ಥಳಗಳಲ್ಲಿ, ರಂಜಿಸಿತು-ಪ್ರಕಾಶಿಸಿತು, ಪಂಚಾನನ-ಮೃಗೇಂದ್ರನೆ, ಆದಿ-ಮೊದಲುಗೊಂಡು, ಮೃಗ-ವನ ಮೃಗಗಳ, ತತಿ-ನಿಕರವು, (ಗುಂಪು) ಗಜ-ದಂತಿಗಳ, ಹಯ-ತುರಗಗಳ, ಆವಳಿ-ಸಮೂಹವು, ವಿರಂಚಿ-ಪದ್ಮಜನ, (ಬೊಮ್ಮನ) ಸೃಷ್ಟಿಯೋಳ್-ನಿರ್ಮಾಣದಲ್ಲಿ, ಉಳ್ಳ-ಉಂಟಾಗಿರುವ, ಮೂಜಗದ-ತ್ರಿಲೋಕಗಳ, (ಮೂರು ಲೋಕಂಗಳ) ನಾನಾ-ಚಿತ್ರವಿಚಿತ್ರಮಾದ, ಪ್ರಪಂಚಗಳ-ಅತಿ ಹೆಚ್ಚಾದ, (ಪೃಥ್ವಿಯಲ್ಲಿರತಕ್ಕ) ಚಿತ್ರಪತ್ರಂಗಳು-ತಸ್ವೀರು ಮೊದಲಾದ ನಾನಾ ಬಗೆಗಳಾದ ಪಟಗಳು, ಮನೋಹರಂ-ಮನಸ್ಸನ್ನು ಅಪಹರಿಸತಕ್ಕದ್ದು, ಎನೆ-ಎನ್ನುವ ರೀತಿಯಿಂದ, ಎಸೆದಿರ್ದವು-ಶೋಭಿಸುತ್ತಿದ್ದವು.

ಅ॥ ವಿ॥ ಅಂಚೆ-ದ್ಭ, ಹಂಸ-ತ್ಸ, ಕೊಂಚೆ-ದ್ಭ, ಕ್ರೌಂಚ-ತ್ಸ, ಮೂರಾದ ಲೋಕಗಳ ಸಮಾಹಾರವು=ಮೂಲೋಕ, ಸಮಾಹಾರ ದ್ವಿ. ಸ. ಜೊನ್ನ-ದ್ಭ, ಜ್ಯೋತ್ಸ್ನಾ-ತ್ಸ. ಜೀವದೊಡನೆ+ಸಹಿತವಾದದು=ಸಜ್ಜೀವ ಸ. ಪೂ. ಬಹು ಸ. ಕರಿ-ಆನೆ, ಕಪ್ಪು ॥೨೫॥

ಟೀ॥ ಆ ಮಹಾ ಸಭೆ- ಆ ಬಭ್ರುವಾಹನನ ಸಭಾಸ್ಥಾನವು, ನೀಲಮಣಿ- ಇಂದ್ರನೀಲದ ಮಣಿಯ, ಕಾಂತಿಗಳ್-ಪ್ರಕಾಶಗಳೆಂಬ, ಕತ್ತಲೆಯ-ತಿಮಿರದ, ಮುತ್ತುಗಳ-ಮೌಕ್ತಿಕಗಳ, ಡಾಳ-ಕಾಂತಿಯೆಂಬುವ ಕೌಮುದಿಯ, ಚಂದ್ರಿಕೆಯ-ಚಂದ್ರಿಕೆಯ, ಮಾಣಿಕದ-ಮಾಣಿಕ್ಯವೆಂಬ ರತ್ನದ, (ಚೆಂಗಲ್ಲಿನ) ರಶ್ಮಿಗಳ-ಕಾಂತಿಗಳೆಂಬ, ಬಾಲಾತಪದ-ಎಳೆಯದಾದಂಥ ಬಿಸಿಲಿನ, ವಿದ್ರುಮ-ಪವಳದ, ಛವಿ-ಶೋಭೆಯೆಂಬ, ಸಂಜೆಗೆಂಪಿನ-ಸಾಯಂಕಾಲದ ಕೆಂಪುಬಣ್ಣವುಳ್ಳ, ಪಗಲಿರುಳ್ಗಳ್-ಹಗಲುಮತ್ತು

---

ಸ್ತ್ರೀಯರ ಹೊಳೆಯುತ್ತಿರುವ ನವರತ್ನಗಳಿಂದ ನಿರ್ಮಿತವಾದ ರತ್ನಾಭರಣಗಳ ಪ್ರಭೆಗಳು ಆ ಬಭ್ರುವಾಹನನ ಸಭೆಯಲ್ಲಿ ಪ್ರೇಕ್ಷಕರ ದೃಷ್ಟಿಗಳಿಗೆ ಅತಿ ರಮಣೀಯಮಾಗಿ ಶೋಭಿಸಿದವು ॥ ೨೪ ॥ ಅಂಚೆಗಳು, ನೀರ ಹಕ್ಕಿಗಳು ಅಥವಾ ಜಲಪಕ್ಷಿಗಳು ಜೊನ್ನವಕ್ಕಿಗಳು, ಮಯೂರಗಳು, ಶುಕಗಳು, ಪಿಕಗಳು, ದಂಪತಿ ಪಕ್ಷಿಗಳು, ಭ್ರಮರಗಳು, ಕೊಂಚೆಗಳು ಇವೇ ಮೊದಲಾದ ಪಕ್ಷಿ ಜಾತಿಗಳೂ, ಮೃಗೇಂದ್ರವು, ಗಜವು, ಹುಲಿಯು, ಮೃಗವು, ಹಯವು ಇವೇ ಮೊದಲಾದ ಸಾಧು ಮತ್ತು ಕ್ರೂರ ಮೃಗಗಳ ಸಮುದಾಯವೂ ಸಹ ಸಜ್ಜೀವ ಭಾವದಿಂದ ಕೂಡಿರುವುದೋ ಎಂಬ ಭಾವದಿಂದ ಆಯಾ ಸ್ಥಳಗಳಲ್ಲಿ ಶೋಭಿಸುತ್ತಿತ್ತು. ಮತ್ತು ವಿರಂಚಿಯು ನಿರ್ಮಾಣದಲ್ಲಿ ಉಳ್ಳ, ಮೂಜಗದ ನಾನಾ ಬಗೆಗಳಾದ ಪ್ರಾಣಿಕೋಟಿ, ಸಸ್ಯಕೋಟಿ ಮೊಲಾದವುಗಳು ಚಿತ್ರಪಟಗಳೂ ಅಲ್ಲಲ್ಲಿ ಪ್ರಕಾಶಿಸುತ್ತಿದ್ದವು ॥ ೨೫ ॥ ಇಂದ್ರನೀಲ ಮಣಿಗಳು ಕಾಂತಿ ಎಂಬುವ ಕತ್ತಲೆಯೂ, ಮುಕ್ತಾಫಲಗಳ ಕಾಂತಿಯೆಂಬ ಕೌಮುದಿಯೂ, ಮಾಣಿಕ್ಯ ರತ್ನಗಳ ರಶ್ಮಿಗಳೆಂಬುವ ಬಾಲಾತಪಂಗಳೂ, ವಿದ್ರುಮಲತೆಗಳ ಕಾಂತಿಯೆಂಬ ಪಗಲಿರುಳ್ಗಳೂ, ಆ ಓಲಗದ ಮಂಟಪದಲ್ಲಿ ಪ್ರಕಟವಾಗದೆ ಹಗಲಿರುಳ್ಗಳ ಕಾಲಭೇದಂಗಳೇ ಗೊ

ನಿಯುದಾನುಸಾಸಭೆ ಸುರಪ | ನೋಲಗದ ಮಂಟಪದಸೌಭಾಗ್ಯಕೆಂಟುಮಡಿಯಾಗಿರ್ದು ದಚ್ಚರಿಯೆನೆ || ೨೬ || ಕಸ್ತುರಿ
ಜವಾಜಿಗಳ ಸಾರಣೆಯು ಕುಂಕುಮಪ | ರಿಸ್ತರಣದಗರುಚಂದನ ಧೂಪವಾಸಿತದ | ವಿಸ್ತರದ ಕರ್ಪೂರತೈಲದಿಂದಲ್ಲಲ್ಲಿ
ಉರಿವ ಬೊಂಬಾಳಂಗಳ || ಶಸ್ತ್ರರತ್ನಪ್ರದೀಪಜ್ವಾಲೆಗಳಸಭೆ ಸ | ಮಸ್ತಸೌಭಾಗ್ಯದಿಂದೊಪ್ಪುತಿರಲಾಗಭೂ | ಪಸ್ತೋಮ
ಸಹಿತ ಬಂದಾ ಬಭ್ರುವಾಹನಂ ಕುಳ್ಳಿರ್ದ ನೋಲಗದೊಳು || ೨೭ || ಓಲಗಕೆ ಬಂದ ನೃಪಕೋಟಿ ಕೋಟೀರಪ್ರ |
ಭಾಲಹರಿ ಹರಿದುಮುಸುಕಿತು ತತ್ಸಭಾಮಣಿ | ಜ್ವಾಲೆಗಳ ನಿಕರಮಂ ಕೈಮುಗಿವ ವೀರಭಟ ಸಂಘ ಸಂಘರ್ಷಣದೊಳು ||

---

ರಾತ್ರಿ ಇವುಗಳು, ಅಲ್ಲಿ-ಆ ಬಭ್ರುವಾಹನನ ಸಭಾಮಂದಿರದಲ್ಲಿ (ದರ್ಬಾರುಮಾಡುವ ಆಸ್ಥಾನದಲ್ಲಿ) ತೇಲದೆ-ತೊಲಗಿ ಹೋಗದೆ (ತಿಳಿಯದೆ) ಇಹವು, ಅಲ್ಲದೆ-ಇರುತ್ತವೆಯಲ್ಲದೆ, (ಇದ್ದೇ ಇರುತ್ತವೆ) ದಿವಾ-ಪಗಲು, ರಾತ್ರಿಯು-ನಿಶಿಯು, ಉಂಟೆಂಬ-ಸಮ ಕಾಲದಲ್ಲಿಯೇ ಇರುತ್ತೆಂಬ, ಕಾಲಭೇದನನು-ಕಾಲಾಂತರಗಳನ್ನು, (ವೇಳಾ ವ್ಯತ್ಯಾಸಗಳನ್ನು) ಅರಿಯದ-ಗೊತ್ತಾಗದ, ಆ ಮಹಾ ಸಭೆ-ಆ ಶ್ರೇಷ್ಠವಾದ ಸಭೆಯು, (ರಾಜಾಸ್ಥಾನವು) ಸುರಪನ-ದೇವೇಂದ್ರನ, ಓಲಗದ-ರಾಜಾಸ್ಥಾನದ, (ಸಭಿಕರು ಕಲೆಯುವ ಸ್ಥಳದ) ಮಂಟಪದ-ಪ್ರದೇಶದ, ಸೌಭಾಗ್ಯಕ್ಕೆ-ಸಕಲೈಶ್ವರ್ಯಕ್ಕೂ, ಎಂಟು ಮಡಿಯಾಗಿ-ಎಂಟುಪಾಲು ಹೆಚ್ಚಾಗಿ, ಅಚ್ಚರಿಯೆನೆ-ಅದ್ಭುತವೋ ಎನ್ನುವಂತೆ, (ಸೋಜಿಗವೋ ಎನ್ನುವಂತೆ) ಇರ್ದುದು-ಇರುತ್ತಿತ್ತು.

ಅ|| ವಿ|| ಮಾಣಿಕ-ದ್ಭ. ಮಾಣಿಕ್ಯ-ತ್ಸ. ಬಾಲವಾದ+ಆತಪ= ಬಾಲಾತಪ ವಿ. ಪೂ. ಕ. ದಿವವೂ+ರಾತ್ರಿಯೂ, ಇವುಗಳು=ದಿವಾರಾತ್ರಿಗಳು ದ್ವಿ. ದ್ವಂ. ಸ. ||೨೬||

ಟೀ|| ಕಸ್ತುರಿ=ಕತ್ತುರಿಯ, ಜವಾಜಿಗಳ-ಶ್ರೇಷ್ಠವಾದ ಪುನಗು ಇವುಗಳಿಂದ ಮಾಡಿದ, ಸಾರಣೆಯು-ಬಳಿಯುವಿಕೆಯುಳ್ಳ, ಕುಂಕುಮ-ಕುಂಕುಮಕೇಸರಿಯಿಂದ ಮಾಡಿದ, ಪರಿಸ್ತರಣದ-ಗೋಡೆಯ ಬುಡದಲ್ಲಿ ಹಚ್ಚುವ ಬಣ್ಣದ ಗೆರೆಯು (ಕಾರಣೆಯು) ಳ್ಳದ್ದಾದ, ಅಗರು-ಕೃಷ್ಣಾಗರು ಶ್ವೇತಾಗರು ಇವುಗಳು, ಚಂದನ-ಶ್ರೀಗಂಧದ ಪುಡಿ ಇವುಗಳಿಂದ ಕೂಡಿದ, ಧೂಪ-ಧೂಮದಿಂದ, ವಾಸಿತ-ಸುವಾಸನೆಯುಳ್ಳ, ವಿಸ್ತರದ-ಪ್ರಶಸ್ತಮಾದ (ವೈಶಾಲ್ಯವುಳ್ಳ) ಕರ್ಪೂರ-ಪಚ್ಚಕಪ್ಪುರದಿಂದ ಬೆರದ, ತೈಲದಿಂದ-ಎಣ್ಣೆಯಿಂದ, ಅಲ್ಲಲ್ಲಿಗೆ-ಆಯಾ ಎಡೆಗಳಲ್ಲಿ, ಉರಿವ-ಪ್ರಜ್ವಲಿಸುವ, ಬೊಂಬಾಳಂಗಳ-ದೊಡ್ಡ ಪಂಜುಗಳ (ದೊಡ್ಡ ದೀವಟಿಗೆಗಳ) ಶಸ್ತ-ಉತ್ತಮಮಾದ, ರತ್ನ-ರನ್ನಮಣಿಗಳೆಂಬ, ಪ್ರದೀಪ-ಹೆಚ್ಚಾದದ್ದಾಗಿ ಹೊಳೆಯುತ್ತಲಿರುವ ದೀಪಗಳ, ಜ್ವಾಲೆಗಳ-ಕಾಂತಿಗಳ, (ಪ್ರಕಾಶಗಳ) ಸಭೆ-ಆ ರಾಜಾಸ್ಥಾನವು, (ಓಲಗದ ಚಾವಡಿಯು) ಸಮಸ್ತ-ಸಕಲ ವಿಧವಾದ, ಸೌಭಾಗ್ಯದಿಂದ-ಅಟ್ಟಹಾಸದಿಂದ, ಒಪ್ಪುತ್ತ-ಕಂಗೊಳಿಸುತ್ತ, ಇರಲು-ಇರುತ್ತಿರಲಾಗಿ, ಆಗ-ಆ ದಿನ ರಾತ್ರಿಯಲ್ಲಿ, ಭೂಪ-ಭೂಪತಿಗಳಾದ ರಾಜರ, ಸ್ತೋಮ-ಸಂಘದಿಂದ, (ವೃಂದದಿಂದ) ಸಂಗಡ-ಒಡನೆಯೆ, ಬಂದು-ಬಂದವನಾಗಿ, ಆ ಬಭ್ರುವಾಹನಂ-ರತ್ನಪುರೀಶನಾದ ಬಭ್ರುವಾಹನನೆಂಬ ರಾಜನು, ಓಲಗದೊಳು-ಸಭಾಮಂಟಪದಲ್ಲಿ, ಕುಳ್ಳಿರ್ದನು-ಕೂತುಕೊಂಡಿದ್ದನು.

ಅ|| ವಿ|| ಕಸ್ತೂರಿ-ತ್ಸ. ಕತ್ತುರಿ-ದ್ಭ. ||೨೭||

ಟೀ|| ಓಲಗಕೆ-ಬಭ್ರುವಾಹನನ ಸಭಾಸ್ಥಾನಕ್ಕೆ, ಬಂದ-ಬಂದಿರತಕ್ಕ, ನೃಪ-ರಾಜರುಗಳ, ಕೋಟಿ-ಕೋಟಿಸಂಖ್ಯಾಕಮಾದ, ಕೋಟೀರ-ಮಕುಟಗಳ, ಪ್ರಭಾ-ಹೊಳವಿನ, (ಪ್ರಕಾಶದ) ಲಹರಿ-ಸೆಳವು, (ಅಮಲು) ಹರಿದು-ಪ್ರವಹಿಸಿ, (ವ್ಯಾಪ್ತನಾಗಿ) ತತ್ಸಭಾ-ಆ ಓಲಗದ, (ಆ ರಾಜ ಸಭೆಯ) ಮಣಿ-ನವ ಮಣಿಗಳ, ಜ್ವಾಲೆ-ಪ್ರಕಾಶಗಳ, ನಿಕರಮಂ-ಸಮೂ

---

ತ್ತಾಗದೆ ಇರುವ ಮಹೇಂದ್ರನ ಒಡ್ಡೋಲಗದ ಚಾವಡಿಗೆ ಇಮ್ಮಡಿಯೋ ಎಂಬಂತೆ ಈ ಬಭ್ರುವಾಹನನ ಸಭೆಯೂ ಕೂಡ ರಂಜಿಸುತ್ತಿತ್ತು ||೨೬|| ಕಸ್ತೂರಿ, ಜವಾಜಿ ಮೊದಲಾದ ಸುವಾಸನಾ ದ್ರವ್ಯಗಳ ಸಾರಣೆಯಿಂದಲೂ, ಕುಂಕಮಕೇಸರಿ ಪಚ್ಚಕರ್ಪೂರವೇ ಆದಿಯಾದ ರಂಗವಲ್ಲಿಗಳಿಂದಲೂ, ಕೃಷ್ಣಾಗರು ಶ್ವೇತಾಗರುಗಳ ಸುಧೂಪಂಗಳಿಂದಲೂ, ಪಚ್ಚಕರ್ಪೂರಯುಕ್ತಮಾದ ತೈಲಗಳಿಂದ ಪ್ರಜ್ವಲಿಸುತ್ತಿರುವ, ದೊಡ್ಡ ದೊಡ್ಡ ದೀವಿಟಿಗೆಗಳಿಂದಲೂ, ಶೋಭಿಸುತ್ತಿರ್ದುದಲ್ಲದೆ ನವರತ್ನಗಳ ಕಾಂತಿಯಿಂದಲೂ ಒಪ್ಪುತ್ತಿರುವ ಆ ಮಹಾ ಸಭೆಯಲ್ಲಿ, ಸಕಲೈಶ್ವರ್ಯಯುತನಾದ, ಬಾಲಸೂರ್ಯ ಪ್ರಕಾಶಮಾನನಾದ, ಚಿತ್ರಾಂಗದೆಯ ಮಗನಾದ ಬಭ್ರುವಾಹನನು ಮಿತವಾದ ಪರಿವಾರದೊಡನೆ ಬಂದು ಆ ಓಲಗದ ಚಾವಡಿಯಲ್ಲಿ ಅತಿ ವೈಭವದಿಂದ ಪ್ರಕಾಶಿಸುತ್ತಿದ್ದನು. ಈ ಸಭಾಮಂಟಪದ ಚಿತ್ರ ವಿಚಿತ್ರತರಮಾದ ಸೌಭಾಗ್ಯದ ಪೇರ್ಮೆಯನ್ನು ಬಣ್ಣಿಸಲು ಸಾಸಿರ ಶಿರನಾದ ಆದಿಶೇಷನಿಗೂ ಕೂಡ ಅಸದಳವಾದ್ದೊ ಎಂಬಂತೆ ಕಂಗೊಳಿಸುತ್ತಿತ್ತು ||೨೭|| ರಾಜಾಸ್ಥಾನಕ್ಕಾಗಿ ಬಂದಿದ್ದ ಸಾಮಂತ ನರಪತಿಗಳ ಕಿರೀಟಕೋಟಿಗಳ ಕಾಂತಿಯ ಲಹರಿಯು ಪ್ರವಹಿಸಿ, ತತ್ಸಭಾಸ್ಥಾನದಲ್ಲಿರುವ ನವರತ್ನಂಗಳ ಕಾಂತಿಪುಂಜವನ್ನು ಆವರಿಸಿಕೊಂಡಿತ್ತು. ಮತ್ತು ಕೈಮುಗಿದು ನಮಸ್ಕರಿಸುವ ವೀರಭಟರ ಸಮೂಹದ ಸಂಘರ್ಷಣದಲ್ಲಿ, ತಾವುಗಳು ಧರಿಸಿದ್ದ ಮುಕ್ತಾ

ತೇಲಕಟ್ಟಿದಕಂಠಮಾಲೆಗಳಗಳಿತಮು | ಕ್ತಾಳಿಗಳಗಲಕೆಪರಿದೆಸೆವಮುತ್ತಿನರಂಗ | ವಾಲಿಗಳನಿಕ್ಕಿದರೊದರ-ಶನೋತ್ಸವ
ಕೆಂಬತೆರನಾದುದಾಸ್ಥಳದೊಳು ||೨೮|| ವಿಭ್ರಾಜಿತದರಾಜಮಿತ್ರಮಂಡಲವಕಂ | ಡಭ್ರದಲ್ಲಿಯರಾಜಮಂಡಲಂತನಗಿನ್ನು |
ವಿಭ್ರಮುದವೃತ್ತಮೇಕೆಂದುಲಜ್ಜಿಸಿನೀಳ್ದತೆರದಿಂದಕಂಗೊಳಿಸುವ || ಶುಭ್ರಚಾಮರಮಂನಿಮಿರ್ದುಚಿಮ್ಮಿಸಿದರ್ಚ | ಲಭ್ರ
ಮರಕುಂತಲದಕಮಲದಳನೇತ್ರೆಯ | ರ್ಬಭ್ರುವಾಹನಮಹೀಪಾಲಕನಕೆಲಬಲದೊಳಂದಿನಿರುಳೋಲಗದೊಳು ||೨೯|| ಬಳಿ

---

ವನ್ನು, ಮುಸುಕಿತು- ವ್ಯಾಪಿಸಿಕೊಂಡಿತು, ಕೈಮುಗಿವ- ಕೈ ಜೋಡಿಸುವ, (ನಮಸ್ಕರಿಸುವ) ವೀರಭಟರ-ಪರಾಕ್ರಮಿಗಳಾದ ಬೀರರ, ಸಂಘ-ಗುಂಪಿನ, ಸಂಘರ್ಷಣದೊಳು-ಒಬ್ಬರಿಗೊಬ್ಬರು ತಿಕ್ಕೋಣದಲ್ಲಿ, ತೇಲಕಟ್ಟಿದ- ಸಡಿಲವಾಗಿರುವಂತೆ ಬಂಧಿಸಿದ, (ನೇತಾಡುವಂತೆ ಕಟ್ಟಿದ) ಕಂಠಮಾಲೆಗಳ-ಕಂಠಹಾರಗಳಿಂದ, (ಕೊರಳಿನ ಸರಗಳ) ಗಳಿತ-ಉದುರಿಹೋದ, ಮುಕ್ತಾಳಿಗಳು-ಮೌಕ್ತಿಕ ಸಮೂಹಗಳು, ಅಗಲಕೆ-ಅಗಲಕ್ಕೆ, (ಆಯತಕ್ಕೆ) ಪರಿದು-ಹರಿದು ಹೋಗಿ, ಎಸೆಯೆ-ಶೋಭಿಸಲು, ದರುಶನೋತ್ಸವಕೆ-ರಾಜನ ದರ್ಶನಾರ್ಥದ ಉತ್ಸಾಹಕ್ಕಾಗಿ, ರಂಗವಾಲಿಗಳನು-ರಂಗೋಲಿಯ ಹಸೆಗಳನ್ನು, ಇಕ್ಕಿದರೋ-ಇಟ್ಟಿರುವರೋ, ಎಂಬ-ಎನ್ನುವ, ತೆರನು-ಕ್ರಮವು, ಆ ಸ್ಥಳದೊಳು-ಆ ರಾಜಾಸ್ಥಾನದಲ್ಲಿ, ಆದುದು-ಉಂಟಾಯಿತು.

ಅ|| ವಿ|| (ಕೋಟಿ-ಕೊನೆ, ಕೋಟಿ ಸಂಖ್ಯೆ, ಕೋಟೀರ-ಕಿರೀಟ) ನೃಪರ+ವೃಂದ=ನೃಪವೃಂದ ಷ. ತ. ಕೈಯ್ಯಂ ಮುಗಿದು-ಕೈ ಮುಗಿದು ಕ್ರಿ. ಸ. ದರುಶನ+ಉತ್ಸವ=ದರುಶನೋತ್ಸವ ಷ. ತ. ದರುಶನ+ಉತ್ಸವ=ದರುಶನೋತ್ಸವ ಗು.ಸಂ ಅದು+ಸ್ಥಾನ=ಆಸ್ಥಾನ ಗ. ಸ. ||೨೮||

ಟೀ|| ಅಂದಿನ-ಆವತ್ತಿನ ದಿವಸದ, ಇರುಳೋಲಗದೊಳು-(ನಿಶಿ) ರಾತ್ರಿಯಲ್ಲಿ ನಡೆದ ರಾಜ್ಯಕಾರ್ಯ ನಿರ್ವಾಹದಲ್ಲಿ ನಡೆಸಿದ, ಬಭ್ರುವಾಹನ-ಬಭ್ರುವಾಹನನೆಂಬುವ, ಮಹೀಪಾಲನ-ಭೂಪಾಲಕನಾದ ರಾಜನ, ಕೆಲಬಲದೊಳು-ಇಕ್ಕಡೆಗಳಲ್ಲಿಯೂ, ಚಲ-ಚಲನೆಯುಳ್ಳ, (ಚಲಿಸುತ್ತಿರುವ) ಭ್ರಮರ-ಭೃಂಗಗಳಂತೆ, ಇರ್ಪ-ಇರುವ, ಕುಂತಲದ-ತಲೆಯ ಕೂದಲುಳ್ಳ, ಕಮಲ-ತಾವರೆ ಎಸಳಿನಂತೆ ಆಯತಮಾದ ನೇತ್ರೆಯರು-ಕಂಗಳುಳ್ಳ ಅಂಗನೆಯರು, ವಿಭ್ರಾಜಿತ-ಹೊಳೆಯುತ್ತಿರುವ, ರಾಜ-ಇನನು, ಮಿತ್ರ-ಭಾಸ್ಕರನೂ ಇವರೀರ್ವರೂ, ರಾಜ-ರಾಜರುಗಳು, ಮಿತ್ರ- ಸ್ನೇಹಿತರು ಇನರ, ಮಂಡಲವ- ಗುಂಪನ್ನು, (ವೃತ್ತಾಕಾರವಾಗಿರುವುದನ್ನು) ಕಂಡು-ಈಕ್ಷಿಸಿದವರಾಗಿ, ಅಭ್ರದಲ್ಲಿಯ-ಅಂತರಿಕ್ಷ ಮಂಡಲದಲ್ಲಿರುವ, ರಾಜಮಂಡಲವಂ-ಚಂದ್ರಬಿಂಬವು, ಕಂಡು-ನೋಡಿದ್ದಾಗಿ, ತನಗೆ-ಚಂದ್ರನಾದ ತನಗೆ, ಇನ್ನು-ಇನ್ನು ಮುಂದೆ, ವಿಭ್ರಮದ-ವೈಭವದಿಂದ ಕೂಡಿದ, (ವಿಲಾಸದಿಂದ ಕೂಡಿದ) ವೃತ್ತಂ-ವೃತ್ತಾಕಾರವು, (ಗುಂಡಾದ ಆಕಾರವು) ಏಕೆಂದು-ಏತಕ್ಕೆಂಬದಾಗಿ, (ಇರುವದರಿಂದ ಪ್ರಯೋಜನವಿಲ್ಲವೆಂದು) ಲಜ್ಜಿಸಿ-ನಾಚಿಕೆಯಿಂದ ಯುಕ್ತವಾಗಿ, ನೀಳ್ದ-ಉದ್ದವಾಗಿರುವ, (ಉದ್ದವಾಗಿ ಬಾಗಿ ನಮಸ್ಕರಿಸುವ) ತೆರದಿಂದ-ಬಗೆಯಿಂದ, ಕಂಗೊಳಿಸುವ-ಶೋಭಿಸುತ್ತಲಿರುವ, (ತೋರಿ ಬರುವ) ಶುಭ್ರ-ಬೆಳ್ಳಗಿರುವ, ಚಾಮರಮಂ-ಚಾಮರಗಳನ್ನು, (ಚಮರೀ ಮೃಗದಿಂದಾದ ಚೌರಿಗಳನ್ನು) ನಿಮಿರ್ದು-ಮೇಲ್ಗಡೆಗೆ ಎತ್ತಿಕೊಂಡು, ಚಿಮ್ಮಿಸಿದರ್-ಹಾರಿಸುತ್ತಿದ್ದರು (ಬೀಸುತ್ತಿದ್ದರು).

ಅ|| ವಿ|| ಅಕ್ಷತ-ತ್ಸ, ಅಕ್ಷತೆ-ದ್ಭ, ಬಿತ್ತರ-ದ್ಭ, ವಿಸ್ತಾರ-ತ್ಸ, ಗಂಧವೂ+ಮಾಲ್ಯವೂ+ಅಕ್ಷತೆಯೂ=ಗಂಧಮಾಲ್ಯಾಕ್ಷತೆಗಳು ಬಹು. ದ್ವಂ. ಸ. ಇರುಳಿನ+ಓಲಗ=ಇರುಳೋಲಗ ಷ. ತ. ||೨೯||

---

ಫಲಂಗಳ ಕಂಠೀಸರಗಳು ಕಿತ್ತು ಹೋಗಿ, ಅವುಗಳಿಂದ ಗಳಿತವಾದ ಮುತ್ತುಗಳ ಸಮುದಾಯವು ವಿಸ್ತಾರವಾಗಿ ಹರಿದುಹೋಗಿ ಪ್ರಕಾಶಿಸಲಾಗಿ, ರಾಜಸಂದರುಶನೋತ್ಸವಕ್ಕಾಗಿ, ರಂಗವಲ್ಲಿಗಳಿಂದ ಹಸೆಗಳನ್ನು ಹಾಕಿರುವವರೋ ಎಂಬಂತೆ ಶೋಭಿಸುತ್ತಿತ್ತು ||೨೮|| ಪಾರ್ಥನ ಯಜ್ಞಾಶ್ವವನ್ನು ತಮ್ಮ ಅಶ್ವಶಾಲೆಯಲ್ಲಿ ಬಂಧಿಸಿದ ದಿನದ ರಾತ್ರಿಯಲ್ಲಿ ನಡೆಸಿದ, ರಾಜಕಾರ್ಯಾಲೋಚನೆಯುಳ್ಳ ಬಭ್ರುವಾಹನನ ಕೆಲಬಲದಲ್ಲಿ, ಚಲಿಸುತ್ತಿರುವ ಭ್ರಮರಗಳ ಕಾಂತಿಯಂತಿರುವ ಕುಂತಳಗಳುಳ್ಳ ಕಮಲದ ಎಸಳಿನೋಪಾದಿಯಲ್ಲಿ ವಿಸ್ತಾರವಾದ ನೇತ್ರಗಳುಳ್ಳ, ಯುವತಿಯರು ಪ್ರಕಾಶಮಾನವಾದ, ದಿನಕರ, ರಜನೀಶ್ವರರು, ರಾಜ ಮತ್ತು ರಾಜಸಖರು ಇವರುಗಳ ಮಂಡಲವನ್ನು ಕಂಡವರಾಗಿ, ಅಂತರಿಕ್ಷದಲ್ಲಿರುವ ರಾಜಮಂಡಲವು (ಚಂದ್ರಮಂಡಲ), ನೋಡಿ, ತನಗೆ ಇನ್ನು ಚಲಿಸುತ್ತಿರುವಿಕೆಯು, ಮತ್ತು ವೃತ್ತಾಕಾರವಾಗಿರುವಿಕೆಯು ಏತಕ್ಕೆ? ಎಂಬದಾಗಿ ಲಜ್ಜಿಸಿ, ಕೆಳಗಡೆಗೆ ಬಾಗಿ ವಂದಿಸುವರೋ ಎಂಬ ತೆರದಿಂದ ಕಂಗೊಳಿಸುವ, ಧವಳವರ್ಣದ ಛಾಯೆಯಿಂದ ಕೂಡಿದ ಚಾಮರಗಳನ್ನು ಮೇಲಕ್ಕೆತ್ತಿ ಚಿಮ್ಮಿಸುತ್ತಿದ್ದರು ||೨೯|| ಅನಂತರದಲ್ಲಿ ಸಭಾ ಮಂದಿರದಲ್ಲಿದ್ದ ನಕುಲಧ್ವಜನು ಸಂಪ್ರೀತಿಯಿಂದ ನಗುತ್ತಾ ತನ್ನ ಅಮಾತ್ಯನನ್ನು ಸಾಮಂತ ನರಪತಿಗಳನ್ನು ನೋಡಿ ಅವರಂ ಕುರಿತು, ಪರದೇಶದ ರಾಜರ ಯಜ್ಞಾಶ್ವವು ಈ ನಮ್ಮ ಮಣಿ

ಆಮಹಾಸ್ಥಾನದೋಳ್ಬಭ್ರುವಾಹನಂ | ನಲವಿಂದಕುಳ್ಳಿರ್ದುನಗುತಪರಮಂಡಲ | ಸ್ಥಳದಿಂದಬಂದರಾಯರಯಜ್ಞತುರಗಮಂ ಕಟ್ಟಿಕೊಂಡೆವುಮನೆಯೊಳು || ಕೊಳುಗುಳಕೆಮಿಡುಕುಳ್ಳವರ್ನಾಳೆನಾವುಹಿಂ | ದುಳಿಯಬಾರದುಕದನಕನುವಾಗಿರಲಿಪಾಯ | ದಳಮೆಂದುನುಡಿದಂ ಸುಬುದ್ಧಿಮೊದಲಾಗಿಹ ಶಿರಃಪ್ರಧಾನಿಗಳಕೂಡೆ || ೩೦ || ಇಂತಿಲ್ಲಿ ನಡೆದವೃತ್ತಾಂತಂಗಳಂಕೇಳ್ದ | ಅಂತಃಪುರದೊಳರ್ಜುನನಗುಣಾವಳಿಗಳಂ | ಸಂತತಂನೆನೆದುಚಿಂತಿಪ ಬಭ್ರುವಾಹನನ ನಿಜಮಾತೆ ಚಿತ್ರಾಂಗದೆ || ಸಂತೋಷ ಮಂತಾಳ್ದುತನಯನೋಲಗಕೆಭರ | ದಿಂತಳರ್ದಿದಿರೆದ್ದಕುಮಾರನಂತೆಗೆದುಬಿಗಿಯಪ್ಪಿ | ಕುಂತೀಕುಮಾರಕನವಾಜಿಯಂ ಕಟ್ಟಿದೈಲೇಸುಮಾಡಿದೆಯೆಂದಳು ||೩೧|| ಕ್ಷುದ್ರಬುದ್ಧಿಯನೆಲ್ಲಿಕಲಿತೆನೀನೀಪರಿಗು | ರುದ್ರೋಹಕೆಂತೊಡರ್ದುದುನಿನ್ನಮನ

ಟೀ|| ಬಳಿಕ-ಅನಂತರದಲ್ಲಿ, ಆ ಮಹಾಸ್ಥಾನದೋಳ್-ಆ ಶ್ರೇಷ್ಠವಾದ ರಾಜಸ್ಥಾನದಲ್ಲಿ, ಬಭ್ರುವಾಹನಂ_ಬಭ್ರುವಾಹನನು, ನಲವಿಂದ_ಹರ್ಷದಿಂದ, ಕುಳ್ಳಿರ್ದು-ಕುಳಿತುಕೊಂಡಿದ್ದು, ನಗುತ-ಸಂತೋಷಪಡುತ್ತ, ಪರಮಂಡಲಸ್ಥಳದಿಂದ, ಪರಭೂಪತಿಗಳ ದೇಶದಿಂದ, ಐತಂದ_ಬಂದ, ರಾಯರ-ರಾಜರ, ತುರಗಮಂ-ಯಜ್ಞಾಶ್ವವನ್ನು, ಮನೆಯೊಳು_ನಮ್ಮ ಗೃಹದಲ್ಲಿಯೇ, ಕಟ್ಟಿ ಕೊಂಡೆವು-ಬಂಧಿಸಿಕೊಂಡಿರುತ್ತೇವೆ, ಕೊಳಗುಳಕೆ- ಕಾಳಗಕ್ಕೆ, ಮಿಡುಕುಳ್ಳವರ್- ಕೋಪಾವೇಶವುಳ್ಳವರು ನಾವು-ನಾವುಗಳಾದರೊ, ನಾಳೆ_ಮಾರನೆಯದಿನ, ಹಿಂದು-ಹಿಂದಕ್ಕೆ, ಉಳಿಯಬಾರದು- ನಿಲ್ಲಬಾರದು, ಕದನಕೆ_ಯುದ್ಧಕ್ಕೆ, ಪಾಯದಳಂ_ಪದಾತಿಯು, ಅನುವಾಗಿ_ಹಾಜರಾಗಿ, ಇರಲಿ_ಇರುತ್ತಿರಲಿ, ಎಂದು-ಎಂಬದಾಗಿ, ಸುಬುದ್ಧಿ ಮೊದಲಾಗಿ-ಮಂತ್ರಿವರ್ಯನಾದ ಸುಬುದ್ಧಿಯೇ ಮೊದಲುಗೊಂಡು, ಮೊದಲಾಗಿಹ_ಮೊದಲಾಗಿರತಕ್ಕ, ಶಿರಃಪ್ರಧಾನಿಗಳ್-ಮುಖ್ಯಾಮಾತ್ಯರ ಸಂಗಡ, ನುಡಿದಂ_ಹೇಳಿದವನಾದನು.

ಅ|| ವಿ|| ಬಳಿಕ-ಕಾಲ ವಾಚಕಾವ್ಯಯ, ಪರ_ಹಗೆ, ಅನ್ಯ, ಅದು+ಸಭೆ=ಆ ಸಭೆ ಗಮಕ ಸ. ಸ್ಥಾನ_ತ್ಸ, ತಾಣ_ದ್ಭ. ಮಿತ್ರ-ಸೂರ್ಯ, ಸ್ನೇಹಿತ, ರಾಯ_ದ್ಭ. ರಾಜ-ತ್ಸ. ಯಜ್ಞ-ತ್ಸ. ಜನ್ನ-ದ್ಭ. ||೩೦||

ಟೀ|| ಇಂತು_ಈ ವಿಧದಿಂದ, (ಈ ಕ್ರಮವಾಗಿ) ನಡೆದ-ಜರಿಗಿದ, ವೃತ್ತಾಂತಂಗಳಂ_ವರ್ತಮಾನಗಳನ್ನು, ಅಂತಃಪುರದೊಳ್-ಅರಮನೆಯಲ್ಲಿ, (ಘೋಷಾಜನರು ವಾಸಮಾಡುವ ಕಡೆಯಲ್ಲಿ) ರಾಣಿವಾಸದಲ್ಲಿ) ಅರ್ಜುನನ-ಪಾರ್ಥನ, ಗುಣಾವಳಿಗಳಂ-ಸುಗುಣಾತಿಶಯಂಗಳನ್ನು, ಸಂತತಂ-ಸರ್ವಕಾಲದಲ್ಲಿಯೂ, ನೆನೆದು_ಜ್ಞಾಪಕಮಾಡಿಕೊಂಡು, (ಧ್ಯಾನಿಸಿ) ಚಿಂತಿಪ_ಆಲೋಚಿಸುತ್ತಿರುವವಳಾದ, ಬಭ್ರುವಾಹನನ_ಬಭ್ರುವಾಹನನೆಂಬುವನ, ನಿಜ_ಸ್ವಕೀಯವಾದ, ಮಾತೆ-ಜನನಿಯಾದ, ಚಿತ್ರಾಂಗದೆ ಎಂಬುವಳು, ಸಂತೋಷಮಂ-ಆನಂದವನ್ನು, ತಾಳ್ದು_ಹೊಂದಿದವಳಾಗಿ, ಭರದಿಂದ-ಜಾಗ್ರತೆಯಿಂದ, (ಶೀಘ್ರವಾಗಿ) ತನಯನ-ಪುತ್ರನಾದ ಬಭ್ರುವಾಹನನ, ಓಲಗಕೆ-ರಾಜಾಸ್ಥಾನಕ್ಕೆ, (ಸಭಾಸ್ಥಾನಕ್ಕೆ) ತಳರ್ದು-ಬರುವವಳಾಗಲು, ಇರದೆ-ಸುಮ್ಮನೆ ಕುಳಿತಿರದೆ, ಎದ್ದ_ಜನನಿಯನ್ನು ಕಾಣುವುದಕ್ಕೋಸ್ಕರವಾಗಿ ಎದ್ದಿರುವ, ಕುವರನಂ_ಕುಮಾರನಾದ ಬಭ್ರುವಾಹನನನ್ನು, ಬಿಗಿಯುಪ್ಪಿ-ತೆಗೆದು ತಬ್ಬಿಕೊಳ್ಳಲು, (ಅತಿ ಹರ್ಷದಿಂದ ಆಲಿಂಗನೆಮಾಡಿಕೊಳ್ಳಲು) ಕುಂತೀಕುಮಾರನ_ಪಾರ್ಥನ, ವಾಜಿಯುಂ_ಯಜ್ಞದ ತುರಗವನ್ನು, ಕಟ್ಟಿದೈ-ಸಮರ್ಥಿಸಿದೆಯಾ, (ಬಂಧಿಸಿದೇನಯ್ಯ) ಲೇಸು-ಬಹು ಒಳ್ಳೆಯದಾಯಿತು, (ಒಳ್ಳೆಯಕೆಲಸಮಾಡಿದೆ) ಎಂದಳು_ಎಂಬದಾಗಿ ಹೇಳಿದಳು.

ಅ|| ವಿ|| ಕುಂತಿಯ+ಕುಮಾರ=ಕುಂತೀಕುಮಾರ ಷ. ತ. (ಆಜಿ_ಯುದ್ಧ, ವಾಜಿ_ತುರಗ) ಗುಣ+ಆವಳಿ=ಗುಣಾವಳಿ ಸವರ್ಣ ದೀ. ಸಂ. ಕುವರ-ದ್ಭ. ಕುಮಾರ_ತ್ಸ ||೩೧||

ಪುರಕ್ಕೆ ಬಂದುದರಿಂದ ನಾವೇನೋ ಕ್ಷಾತ್ರಧರ್ಮಕ್ಕೆ ಅನುಗುಣವಾಗಿ ಆ ಯಜ್ಞಾಶ್ವವನ್ನು ಹಿಡಿತರಿಸಿ ನಮ್ಮ ಅಶ್ವಶಾಲೆಯಲ್ಲಿ ಕಟ್ಟಿಸಿದ್ದಾಯಿತು. ವೀರತ್ವವುಳ್ಳ ನಾವುಗಳಾರೂ ನಾಳೆ ಜರುಗುವ ಕಾಳಗಕ್ಕೆ ಹಿಂದೆಗೆಯಬಾರದು, ಕದನಕ್ಕೆ ಅನುವಾಗಿ ನಾಳೆಯದಿನ ಚತುರಂಗ ಬಲವೂ ಸಿದ್ಧವಾಗಿರಬೇಕೆಂದು ತನ್ನ ಮುಖ್ಯಮಂತ್ರಿಯಾದ ಸುಬುದ್ಧಿಯನ್ನು ಕುರಿತು ಹೇಳಿದನು. ಇಷ್ಟೂ ಅಲ್ಲದೆ ಮುಖ್ಯ ಸೇನಾಪತಿಗಳಿಗೂ ಎಚ್ಚರಿಸಿದನು ||೩೦|| ಈ ಪರಿಯಾಗಿ ನಡೆದ ಸಕಲ ವರ್ತಮಾನಗಳನ್ನು ಅಂತಃಪುರದಲ್ಲಿದ್ದು ಪಾರ್ಥನ ಸದ್ಗುಣಾವಳಿಗಳನ್ನೇ ಅನವರತವೂ ಧ್ಯಾನಿಸುತ್ತಲಿರ್ಪ ಬಭ್ರುವಾಹನನ ನಿಜಮಾತೆಯಾದ ಚಿತ್ರಾಂಗದೆಯು ಕೇಳಿ ಹರ್ಷಗೊಂಡು, ಅಲ್ಲಿ ನಿಲ್ಲದೆ ಅತಿ ಶೀಘ್ರವಾಗಿ ತನ್ನ ಮಗನಾದ ಬಭ್ರುವಾಹನನ ಸಭಾಮಂದಿರಕ್ಕೆ ಬಂದವಳಾಗಲು, ಬಭ್ರುವಾಹನನು ಸುಮ್ಮನೆ ಕುಳಿತಿರದೆ ಎದ್ದು ತನ್ನ ಜನನಿಯಂ ವಂದಿಸಲಾಗಿ ಚಿತ್ರಾಂಗದೆಯು ತನ್ನ ಮಗನಾದ ಬಭ್ರುವಾಹನನಂ ಆನಂದದಿಂದ ಬಿಗಿಯಪ್ಪಿಕೊಂಡು, ಕುಂತೀಪುತ್ರನ ಯಜ್ಞಾಶ್ವವನ್ನು ಹಿಡಿದುಕಟ್ಟಿದೆಯಾ? ಬಹುಒಳ್ಳೆಯ ಕೆಲಸಮಾಡಿದೆ ಎಂದು ಹೇಳಿ ಬಹುವಾಗಿ ಹರ್ಷಗೊಂಡಳು ||೩೧|| ಎಲೈ ಕಂದನೇ ನೀನು ಈ ಕ್ಷುದ್ರಬುದ್ಧಿಯನ್ನು ಎಲ್ಲಿ ಕಲಿತೆ? ನಿನ್ನ ಮನವು

ಮಕಟ । ಮದ್ರಮಣನಾಗಮಂನಿನಗೆವಿರಹಿತಮಾದುದಾತನುದರದೊಳಜನಿಸಿ ॥ ಉದ್ರೇಕದಿಂದಕಟ್ಟಿದೆಯಲಾತುರಗಮಂ ।
ಭದ್ರಮಾದುದುರಾಜಕಾರ್ಯಮಿಂದಮೃತಕೆಸ । ಮುದ್ರಮಂಮಥಿಸೆವಿಷಮುದಯಿಸಿದೊಲಾಯ್ತುನಿನ್ನುದ್ಭವಂತನಗೆಂದಳು ॥೩೨॥
ಮಾತೆಯನುಡಿಗೆನಡನುಡುಗಿಬಭ್ರುವಾಹನಂ । ಭೀತಿಯಿಂದಡಿಗೆರಗಿಕ್ಷತ್ರಿಯರಪಂಥದಿಂ । ದಾತನತುರಂಗಮಂಕಟ್ಟಿದೆಂನಿಮ್ಮ
ಚಿತ್ತಕೆಬಾರದಿರ್ದಬಳಿಕ ॥ ನೀತಿಯಾದಪುದೆತನಗಿನ್ನುನಿಮ್ಮಡಿಗೆಸಂ । ಪ್ರೀತಿಯೆಂತಾದಪುದದಂಬೆಸಸಿದೊಡೆಮಾಳ್ಪೆ । ನೇ

ಟೀ॥ ಆ ಬಳಿಕ- ಆ ತರುವಾಯ, ನೀಂ- ಬಭ್ರುವಾಹನನಾದ ನೀನು, ಕ್ಷುದ್ರಬುದ್ಧಿಯಂ- ನೀಚಬುದ್ಧಿಯನ್ನು, (ಕೆಡಕು ಬುದ್ಧಿಯನ್ನು) ಎಲ್ಲಿಕಲಿತೆ-ಯಾವ ಸ್ಥಳದಲ್ಲಿ ಅಭ್ಯಾಸಮಾಡಿರುತ್ತಿ? ನಿನ್ನ-ನಿನ್ನಯ, ಮನಂ-ಚಿತ್ತವಾದರೊ, (ಮನಸ್ಸಾದರೊ) ಈ ಪರಿಯ-ಈ ರೀತಿಯಾದ, ಗುರುದ್ರೋಹಕೆ-ಜನಕನ ದ್ರೋಹಕ್ಕೆ, ಎಂದು-ಹೇಗೆತಾನೆ, ಒಡರ್ದುದು-ಅಂಗೀಕರಿಸಿತು, (ಸಮ್ಮತಿಸಿತು) ಅಕಟ-ಅಹಹ, ಮದ್ರಮಣನ-ಎನ್ನೊಡೆಯನಾದ ಅರ್ಜುನನ, ಆಗಮಂ-ಆಗಮಿಸುವಿಕೆಯು (ಬರೋಣವು) ಆತನ-ಎನ್ನ ಪತಿಯಾದ ಪಾರ್ಥನ, ಉದರದೋಳ್-ಹೊಟ್ಟೆಯಲ್ಲಿ, ಜನಿಸಿ-ಉದ್ಭವಿಸಿ, ನಿನಗೆ-ಬಭ್ರುವಾಹನನಾದ ನಿನಗೆ, ವಿರಹಿತಂ-ಅಹಿತವಾದದ್ದು, (ಇಷ್ಟವಿಲ್ಲದ್ದು) ಆದುದು-ಉಂಟಾಯಿತು, ಉದ್ರೇಕದಿಂದ-ಗರ್ವದಿಂದ, (ದುರಹಂಕಾರದಿಂದ) ತುರಗಮಂ-ಯಜ್ಞಾಶ್ವವನ್ನು, ಕಟ್ಟಿದೆಯಲಾ-ಬಂಧಿಸಿದೆಯಲ್ಲವೆ, (ಬಿಗಿಸಿದೆಯಲ್ಲವೆ) ಇಂದು-ಈವಾಗ್ಗೆ, (ಇಂದಿಗೆ) ರಾಜಕಾರ್ಯಂ-ದೊರೆತನದ ಕೆಲಸವು, (ರಾಜೋದ್ಯೋಗವು) ಭದ್ರಂ-ಮಂಗಳಕರವು, ಆದುದು-ಉಂಟಾಯಿತು, ಅಮೃತಕೆ-ಸುಧೆಗೋಸ್ಕರವಾಗಿ, ಸಮುದ್ರಮಂ-ಜಲನಿಧಿಯನ್ನು, ಮಥಿಸೆ-ಮಥಿಸಲು, (ಕಡೆಯಲಾಗಿ) ವಿಷಂ-ನಂಜು, ಉದಯಿಸಿದಂತೆ-ಜನಿಸಿದರೀತಿಯಿಂದ, (ಆವಿರ್ಭವಿಸಿದಹಾಗೆ), ನಿನ್ನ-ನಿನ್ನಯ, ಉದ್ಭವಂ-ಆವಿರ್ಭಾವವು, ತನಗೆ-ಎನಗೆ, ಆಯಿತು-ಉಂಟಾಯಿತು, ಎಂದಳು-ಎಂಬದಾಗಿ ಹೇಳಿದಳು.

ಅ॥ ವಿ॥ ಮತ್+ರಮಣ=ಮದ್ರಮಣ ಜಶ್ತ್ವ. ಸಂ. ಭದ್ರ-ಮಂಗಳ, ಜೋಕೆ, ಸುಧಾ-ತ್ಸ, ಸೊದೆ-ದ್ಭ.

ಟೀ॥ ಬಭ್ರುವಾಹನಂ-ಬಭ್ರುವಾಹನನು, ಮಾತೆಯ-ಜನನಿಯಾದ ಚಿತ್ರಾಂಗದೆಯ, ಅಡಿಗೆ-ಚರಣಗಳಿಗೆ, ಎರಗಿ-ನಮಸ್ಕಾರವನ್ನು ಮಾಡಿ, ನುಡಿಗೆ-ಆ ತಾಯಿಯ ಮಾತಿಗೆ, ನಡುನಡುಗಿ-ಅತ್ಯಂತವಾಗಿ ಹೆದರಿ, (ಕಂಪನಮಾಡಿ) ಭೀತಿಯಿಂದ-ಹೆದರಿಕೆಯಿಂದ ಕ್ಷತ್ರಿಯರ ಪಂಥದಿಂ-ಕ್ಷತ್ರಿಯರಿಗೆ ಯೋಗ್ಯವಾದ ಮಾರ್ಗದಿಂದ, (ರಾಜಧರ್ಮಕ್ಕನುಸಾರಮಾಗಿ) ಆತನ-ಆ ಪಾರ್ಥನ, ತುರಂಗಮಂ-ಅಶ್ವವನ್ನು ಕಟ್ಟಿದೆಂ-ಕಟ್ಟಿರುತ್ತೇನೆ, (ಸಮರ್ಥಿಸಿರುತ್ತೇನೆ) ನಿಮ್ಮ-ನಿಮ್ಮಗಳ, ಚಿತ್ತಕೆ-ಮನಕ್ಕೆ, (ಅಭಿಪ್ರಾಯಕ್ಕೆ) ಬಾರದಿರ್ದ-ಒಪ್ಪದಿದ್ದ, ಬಳಿಕ-ಅನಂತರದಲ್ಲಿ, ಇನ್ನು-ಇನ್ನುಮುಂದೆ, ತನಗೆ-ಎನಗೆ, (ಕ್ಷತ್ರಿಯರ ಮತದಿಂದ ನಡೆವ ಎನಗೆ) ನೀತಿಯು-ಯೋಗ್ಯವಾದುದು, ಆದಪುದೇ-ಆಗುತ್ತದೆಯೇ. (ತಾಯಿಯ ಹಿತಕ್ಕೆ ಬೇರೆ ನಡೆವುದು ಧರ್ಮವಲ್ಲ) ನಿಮ್ಮ-ಜನನಿಯಾದ ನಿಮ್ಮಯ, ಚರಣಕೆ-ಅಡಿಗೆ, (ಪಾದಕ್ಕೆ) ಸಂಪ್ರೀತಿ-ಹರ್ಷವು, (ಮನವೊಪ್ಪೋಣವು) ಎಂತು-ಯಾವ ರೀತಿಯಿಂದ, ಆದಪುದು-ಆಗುತ್ತದೆ, ಅದಂ-ಆ ನಿಮ್ಮ ಮನೋಭಿಪ್ರಾಯವನ್ನು, ಬೆಸಸಿದೊಡೆ-ಆಜ್ಞಾಪಿಸಿದ್ದೆ ಆದರೆ, (ಅಪ್ಪಣೆ ಪಾಲಿಸಿದರೆ) ಮಾಳ್ಪೆಂ-ಆ ರೀತಿಯಾಗಿ ನಡಿಸುತ್ತೇನೆ, ಏತಕೆ-ಯಾವುದಕ್ಕೋಸ್ಕರವಾಗಿ, ಆತುರಂ-ಗಾಬರಿಯು, (ಆತುರವು) ಎಂದು-ಎಂಬದಾಗಿ ಹೇಳಿ, ಕೈಮುಗಿದೊಡೆ-ನಮಸ್ಕಾರಮಾಡಲಾಗಿ, (ಕೈಜೋಡಿಸಲಾಗಿ) ಆಗ-ಆ ವೇಳೆಯಲ್ಲಿ, ಚಿತ್ರಾಂಗದೆ-ಜನನಿಯಾದ ಚಿತ್ರಾಂಗದೆ ಎಂಬುವಳು, ನಿರೂಪಿಸಿದಳು-ಆಜ್ಞಾಪಿಸಿದಳು, (ಆಜ್ಞೆಮಾಡಿದಳು).

---

ಕೂಡ ಗುರುದ್ರೋಹಕ್ಕೆ ಹೇಗೆ ಒಡಂಬಟ್ಟಿತು? ಅಕಟ! ವಿಧಿಯೇ! ನನ್ನ ಪತಿಯಾದ ಪಾರ್ಥನ ಉದರದಲ್ಲಿ ನೀನು ಏಕೆ ಜನಿಸಿದೆ ? ನನಗೆ ಬೇಡವಾದದ್ದು ನಿನಗೆ ಬೇಕಾಯಿತಲ್ಲ! ಅಧಿಕವಾದ ಕೊಬ್ಬಿನಿಂದ ಕೂಡಿದವನಾಗಿ ಪಾರ್ಥನ ಯಜ್ಞಾಶ್ವವನ್ನು ಕಟ್ಟಿದವನಾದೆ. ಇದು ನಿನಗೆ ಎಂದಿಗೂ ಶ್ರೇಯಸ್ಸಾಗಲಾರದು, ಈ ದಿನವೇ ನಿನ್ನ ರಾಜ್ಯಭಾರಕ್ಕೆ ಅಂತ್ಯವು. ಅಮೃತದ ಆಶೆಗೆ ಕ್ಷೀರ ಸಮುದ್ರವನ್ನು ಮಥಿಸಲಾಗಿ ಹಾಲಾಹಲವು ಉದ್ಭವಿಸಿದಂತೆ ನೀನು ನನ್ನುದರದಲ್ಲಿ ಜನಿಸಿರುತ್ತಿ. ನಿನ್ನ ವಿಪರೀತ ಬುದ್ಧಿಯನ್ನು ಏನೆಂದು ಹೇಳಲಿ ಎಂದು ಬಹುವಾಗಿ ಚಿಂತಿಸಿದಳು ॥೩೨॥ ಆಗ ಪುತ್ರನಾದ ಬಭ್ರುವಾಹನನು ಮಾತೆಯಾದ ಚಿತ್ರಾಂಗದೆಯ ಮಾತನ್ನು ಲಾಲಿಸಿ, ಗಡಗಡನೆ ಕಂಪಿಸುತ್ತ, ಅತ್ಯಂತವಾದ ಭಯದಿಂದ, ತಾಯಿಯ ಪಾದಾರವಿಂದಗಳಿಗೆರಗಿ ಕ್ಷಾತ್ರಧರ್ಮಕ್ಕೆ ಸರಿಯಾಗಿ ಆ ಫಲುಗುಣನ ಯಜ್ಞಾಶ್ವವನ್ನು ಬಂಧಿಸಿದೆನು, ನಾನು ಮಾಡಿದ ಕಾರ್ಯವು ನಿಮ್ಮ ಚಿತ್ತಕ್ಕೆ ಒಪ್ಪದಿದ್ದರೆ, ಆ ವಿಧವು ನನಗೆ ಎಂದಿಗೂ ನ್ಯಾಯವಾದುದಲ್ಲ, ತಮ್ಮ ಚಿತ್ತಕ್ಕೆ ವಿರೋಧವಾಗಿ ನಡೆದಲ್ಲಿ ನನಗೆ ಶ್ರೇಯಸ್ಸು ತಾನೆ ಆದೀತೆ? ತಮ್ಮಯ ಮನವು ಆವ ವಿಧವಾಗಿರುತ್ತದೆಯೋ ಅದರಂತೆ ನುಡಿದರೆ ಕೃತಾಂಜಲಿಯೊಡನೆ ಕಾದಿರುವೆನು. ತಮ್ಮ ಅನುಮತಿಯಾಗಬೇಕೆಂದು ಅತಿದೀನನಾಗಿ ಕೈಜೋಡಿಸಿ ಕೇಳಿಕೊಳ್ಳಲು, ಆಗ ಚಿತ್ರಾಂಗದೆಯು ಮಗನನ್ನು ಕುರಿತು ಇಂತೆಂ

ತರಾತುರಮೆಂದುಕೈಮುಗಿದೊಡಾಗಚಿತ್ರಾಂಗದೆನಿರೂಪಿಸಿದಳು ‖ ೩೩ ‖ ಮಗನೆಕೇಳೆನ್ನನಂದರ್ಜುನಂಬಿಟ್ಟುನಿಜ । ನಗರಿ
ಗೈದಿದನಂದುಮೊದಲಾಗಿತಾನವನ । ನಗಲ್ದಸಂತಾಪದಿಂತಪಿಸುತಿರ್ದೆಂಪುಣ್ಯವಶದಿಂದಬಂದನಿಂದು ‖ ಬಗೆಯದಿರ್ದಪೆನೆಂ
ತೊಕಾಂತನಂನಾನಿಂದು । ಮೊಗದೋರಿನಿನ್ನಸರ್ವಸ್ವಮಂತಾತನಂ । ಘ್ರಿಗೆಸಮರ್ಪಿಸಿದೊಡಾಂಮಾಡಿದತಪೋನಿಷ್ಠೆಸಫಲ
ಮಾದುದೆಂದಳು ‖೩೪‖ ಕಂದನೀನಿಂದುನಿನ್ನಖಿಳಸರ್ವಸ್ವಮಂ । ತಂದೆಗೊಪ್ಪಿಸಿಯುಧಿಷ್ಠಿರನೃಪನವೈರಿಗಳ । ಮುಂದೆತೋರಿ
ಸುನಿನ್ನಶೌರ್ಯಮಂತನುಧನಪ್ರಾಣಂಗಳವರದಾಗಿ ‖ ನಿಂದೆಗೊಳಗಾಗದಿರ್ದುಷ್ಟಸಂತಾನವಂ । ತೊಂದಿಸದಿರಗತಿಯಂತನ್ನ

---

ಅ‖ ವಿ‖ ಆದು+ತುರಗ=ಆತುರಗ, ಗಮಕ. ಸ. ಕೈಯಂ+ಮುಗಿದಂ=ಕೈಮುಗಿದಂ ಕ್ರಿ. ಸ. ‖೩೩‖

ಟೀ‖ ಮಗನೆ-ಎಲೈ ಪುತ್ರನೆ, ಕೇಳು-ಎನ್ನಯ ವಚನವನ್ನಾಲಿಸು, ಅರ್ಜುನಂ-ಪಾರ್ಥನು, ಎನ್ನಂ-ಪತ್ನಿಯಾದ ನನ್ನನ್ನು, ಎಂದು-ಯಾವಾಗ್ಗೆ, ಬಿಟ್ಟು-ಎನ್ನ ಜನನಿಯ ಗೃಹದಲ್ಲಿರುವಂತೆ ಮಾಡಿ, ನಿಜ-ಸ್ವಕೀಯವಾದ (ತನ್ನದಾದ) ನಗರಿಗೆ-ಪಟ್ಟಣವಾದ ಹಸ್ತಿನಾಪುರಕ್ಕೆ, ಐದಿದಂ-ಪ್ರಯಾಣಮಾಡಿದನೋ, ಅಂದು ಮೊದಲಾಗಿ-ಆ ದಿನ ಮೊದಲ್ಗೊಂಡು, ತಾಂ-ತಾನು, (ಚಿತ್ರಾಂಗದೆಯಾದ ನಾನು) ಅವನಂ-ಆ ಪತಿಯಾದ ಧನಂಜಯನನ್ನು, ಅಗಲ್ದ-ಬೇರೆಯಾದ, ಸಂತಾಪದಿಂ-ವ್ಯಥೆಯಿಂದ, (ಪರಿತಾಪದಿಂದ) ತಪಿಸುತಿರ್ದೆಂ-ಸುಡುತ್ತಿದ್ದೆನು, (ದುಃಖಿಸುತ್ತಿದ್ದೆನು) ಪುಣ್ಯವಶದಿಂದ-ಪೂರ್ವಜನ್ಮದ ಸುಕೃತ ಫಲದಿಂದ, (ಪುಣ್ಯಾಶ್ರಯದಿಂದ) ಇಂದು-ಈ ದಿವಸ, ಬಂದಂ-ಬಂದವನಾದನು, ಕಾಂತನಂ-ವಲ್ಲಭನನ್ನು, ಎಂತೊ-ಹೇಗೆಯೊ, ಬಗೆಯದೆ-ಯೋಚಿಸದೆ, ಇರ್ದಪೆಂ-ಇರುವೆನು, ನೀಂ-ನೀನಾದರೊ, ಇಂದು-ಈ ಸಮಯದಲ್ಲಿ, ಮೊಗದೋರಿ-ಮುಖವನ್ನು ತೋರಿಸಿಕೊಂಡು, (ಎದುರುಗೊಂಡು) ನಿನ್ನ-ನಿನ್ನಯ, ಸರ್ವಸ್ವಮುಂ-ಸಮಸ್ತ ವಿಧಗಳಾದ ಪದಾರ್ಥಗಳನ್ನೂ, ತಾತನ-ಜನಕನಾದ ಪಾರ್ಥನ, ಅಂಘ್ರಿಗೆ-ಪಾದಾರವಿಂದಕ್ಕೆ, (ಚರಣಕ್ಕೆ) ಸಮರ್ಪಿಸಿದೊಡೆ-ವಿನಿಯೋಗಿಸಿದುದೇ ಆದರೆ, (ಒಪ್ಪಿಸಿ ಬಿಟ್ಟರೆ) ಆಂ-ನಾನು, ಮಾಡಿದ-ಎಸಗಿದ, ತಪೋನಿಷ್ಠೆ-ತಪಸ್ಸಿದ್ಧಿಯು, (ಪುಣ್ಯಪರಿಪಾಕವು) ಸಫಲಂ-ಫಲಪ್ರದವಾದದ್ದು, (ಉಪಯೋಗವುಳ್ಳದ್ದು) ಆದಪುದು-ಆಗುತ್ತದೆ, ಎಂದಳು-ಎಂಬದಾಗಿ ಹೇಳಿದಳು.

ಅ‖ ವಿ‖ ಫಲದೊಡನೆ+ಸಹಿತವಾದದ್ದು=ಸಫಲ ಸಹ. ಪೂ. ಬಹು. ಸ. ಮೊಗ-ದ್ಭ. ಮುಖ-ತ್ಸ, ಅಂಘ್ರಿ-ಪಾದ, ಕಿರಣ, ಬೇರು. ‖೩೪‖

ಟೀ‖ ಕಂದ-ಎಲೈ ಬಾಲನೇ, ನೀಂ-ನೀನು, ಇಂದು-ಈ ಕಾಲದಲ್ಲಿ, ನಿನ್ನ-ನಿನ್ನಯ, (ನಿನ್ನ ಸಂಬಂಧವಾದ) ಅಖಿಳ-ಸಮಸ್ತರಾದ, ಪ್ರಕೃತಿಗಳಂ-ರಾಷ್ಟ್ರಕ್ಕೆ ಬೇಕಾಗಿರುವ ಸಪ್ತಪ್ರಕೃತಿಗಳನ್ನು, ತಂದೆಗೆ-ಪಿತನಾದ ಪಾರ್ಥನಿಗೆ, ಒಪ್ಪಿಸಿ-ಅಧೀನವನ್ನು ಮಾಡಿ, ಯುಧಿಷ್ಠಿರ-ಯುದ್ಧದಲ್ಲಿ ಸ್ಥಿರವಾಗಿ ನಿಲ್ಲುವ ಧರ್ಮರಾಯನೆಂಬುವ, ನೃಪನ-ರಾಯನ, ವೈರಿಗಳ-ಹಗೆಗಳ, ಮುಂದೆ-ಸಮ್ಮುಖದಲ್ಲಿ, (ಪ್ರತಿಪಕ್ಷದಲ್ಲಿ) ನಿನ್ನ-ನಿನ್ನಯ, ಶೌರ್ಯಮಂ-ಪರಾಕ್ರಮವನ್ನು, ತೋರಿಸು-ತೋರ್ಪಡಿಸು, ತನು-ನಿನ್ನ ದೇಹವೂ, ಧನ-ಐಶ್ವರ್ಯವೂ, ಪ್ರಾಣಂಗಳು-ಜೀವಗಳೂ, ಅವರದಾಗಿ-ಆ ಪಾಂಡುಪುತ್ರರದಾಗಿ, ನಿಂದೆಗೆ-ಲೋಕಾಪವಾದಕ್ಕೆ, (ಜನರ ನಿಂದನೆಗೆ) ಒಳಗಾಗದೆ-ಒಳಬೀಳದೆ (ಸಿಕ್ಕದಂತೆ) ಇರು-ಇರುತ್ತಿರು, ತನ್ನ-ಎನ್ನಯ, ಪಾತಿವ್ರತ್ಯಕೆ-ಪತಿವ್ರತಾನಿಯಮಕ್ಕೆ, (ತನ್ನೊಡೆಯನಲ್ಲಿರುವ ಪತಿನಿಯಮಕ್ಕೆ) ದುಷ್ಟ-ಕೆಟ್ಟುದಾದ, ಸಂತಾನದಂತೆ-ವಂಶದಹಾಗೆ (ಕುಲದಂತೆ) ಅಗತಿಯಂ-ದುರ್ಮಾರ್ಗವನ್ನು (ಕೆಟ್ಟಹಾದಿಯನ್ನು) ಒಂದಿಸದಿರು-ಸೇರಿಸದೇ ಇರುವವನಾಗು (ದುರ್ಮಾರ್ಗಪ್ರವರ್ತಕನಾಗಬೇಡ) ಎಂದು-ಎಂದು

---

ದಳು ‖೩೩‖ ಎಲೈ ಕಂದನೇ, ಎನ್ನಯ ನುಡಿಯನ್ನು ಲಾಲಿಸುವನಾಗು, ನಿನ್ನ ಜನಕನಾದ ವಿಜಯನು ಎನ್ನನು ಎನ್ನಯ ನಿಜ ಮಾತೆಯ ಮನೆಯಲ್ಲಿರುವಂತೆ ಹೇಳಿ ನನ್ನನ್ನು ಎಂದು ಅಗಲಿದನೋ ಆದಿನ ಮೊದಲ್ಗೊಂಡು ನನ್ನ ವಲ್ಲಭನ ಬರುವಿಕೆಯನ್ನೇ ಹಾರೈಸುತ್ತಿದ್ದ ಸಂಗತಿಯು ನಿನಗೆ ತಿಳಿದಿದ್ದರೂ ಕೂಡ, ಏನೋ ಒಂದು ಸುಕೃತವಶದಿಂದ ಎನ್ನ ವಲ್ಲಭನು ಯಜ್ಞಾಶ್ವದೊಡನೆ ಬಂದಿರುವಾಗ್ಗೆ, ಆ ನಿಮ್ಮ ಜನಕನಲ್ಲಿ ನಿನ್ನ ನಮ್ರತೆಯನ್ನು ತೋರ್ಪಡಿಸಿ, ಆತನ ಆಶೀರ್ವಾದವಂ ಪೊಂದಿ ಬಂದಿದ್ದರೆ ಎಷ್ಟು ಉತ್ತಮವಾಗಿತ್ತು. ಈಗಲೂ ಕಾಲ ವಿಳಂಬವನ್ನು ಮಾಡದೆ, ಪಾರ್ಥನಿರುವ ಜಾಗವಂ ಪೊಂದಿ, ಅತಿ ವಿನಯಭಾವದಿಂದ ಆತನಿಗೆ ವಂದಿಸಿ, ನಿನ್ನ ಸರ್ವಸ್ವವನ್ನೂ, ತಾತನ (ತಂದೆಯಾದ ಅರ್ಜುನನ) ಪಾದಾರವಿಂದಕ್ಕೆ ಸಮರ್ಪಿಸಿದ್ದೇ ಆದರೆ, ನಾನು ನಿನ್ನಂ ಪಡಿಯಲಿಕ್ಕೆ ಮಾಡಿದ ಸುಕೃತವು ಅತ್ಯುತ್ತಮವಾದ ಫಲವುಳ್ಳದ್ದೆಂದು ನಾನು ನಂಬಿರುವೆನೆಂದಳು ‖೩೪‖ ಮತ್ತೆ ಚಿತ್ರಾಂಗದೆಯು ಮಗನನ್ನು ಕುರಿತು ಎಲೈ ನನ್ನ ಮುದ್ದು ಕಂದನೆ? ನೀನು ಈ ದಿನವೇ ನಿನ್ನಯ ಸಮಸ್ತವಾದ, ಸ್ವಾಮಿ, ಅಮಾತ್ಯ, ಸುಹೃತ್, ಕೋಶ, ರಾಷ್ಟ್ರ, ದುರ್ಗ, ಬಲ ಇವೇ ಮೊದಲಾದ ರಾಜ್ಯಾಂಗ ಪ್ರಕೃತಿಗಳನ್ನೂ ನಿನ್ನಯ ತಂದೆಗೊಪ್ಪಿಸಿ, ಅಶ್ವ

ಪಾತಿವ್ರತ್ಯ | ಕೆಂದುಸೂನುಗೆಬುದ್ಧಿಗಲಿಸಿಪಾರ್ಥನಬರವಿಗುಬ್ಬಿದಳ್ಚಿತ್ರಾಂಗದೆ ‖ ೩೫ ‖ ಜನನಿಯಂಮನೆಗೆಮನ್ನಿಸಿಕಳುಹಿಬಭ್ರುವಾ | ಹನನಾಸುಬುದ್ಧಿಯನೋಡಿಪಿತನಂಕಾಣ್ಬು | ದನುಚಿತಮೊಮೇಣುಚಿತಮಾದಪುದೋಪೇಳಿದರನಿಶ್ಚಯವನೀಗಳೆನಲು ‖ ನಿನಗೆಣಿಕೆಬೇಡಮೊದಲರಿಯದಾದೆವುಧರ್ಮ | ತನಯಂಗೆನಿಮ್ಮಯ್ಯನನುಜನಾತನರಕ್ಷೆ | ವಿನುತಹಯಮಿದನಿನ್ನು ಕಲಿತನದಿಕಟ್ಟುವದುನೀತಿಪಥಮಲ್ಲೆಂದನು ‖೩೬‖ ಇನ್ನು ಕಟ್ಟಸುಗುಡಿಗಳಂಬೇಗಪಟ್ಟಣಕೆ | ನಿನ್ನಖಿಳರಾಜ್ಯಪದವಿಯನೊಪ್ಪಿ

---

ಹೇಳಿದವಳಾಗಿ, ಸೂನುವಿಗೆ-ಪುತ್ರನಾದ ಬಭ್ರುವಾಹನನಿಗೆ, ಬುದ್ಧಿ-ತಿಳುವಳಿಕೆಯನ್ನು, (ಬುದ್ಧಿವಾದವನ್ನು) ಕಲಿಸಿ-ಹೇಳಿಕೊಟ್ಟು, (ಬೋಧಿಸಿ) ಎಂದರೆ ಬುದ್ಧಿವಾದವನ್ನು ಬೋಧಿಸಿ, ಪಾರ್ಥನ-ಧನಂಜಯನ, ಬರವಿಗೆ_ಬರುವಿಕೆಗೆ, (ಬರುವುದಕ್ಕೆ) ಚಿತ್ರಾಂಗದೆ_ಚಿತ್ರಾಂಗದೆ ಎಂಬ ಅರ್ಜುನನ ಪತ್ನಿಯು, ಉಬ್ಬಿದಳ್-ತನ್ನ ಗಂಡನು ಬರುವ ಆನಂದದಿಂದ ಕೊನರಿದಳು_ಗರ್ವಪಟ್ಟಳು.

ಅ॥ ವಿ॥ ಯುಧಿ-ಯುದ್ಧದಲ್ಲಿ, ಸ್ಥಿರ_ನೆಲೆಯಾಗಿ ನಿಲ್ಲುವವನು ಯುಧಿಷ್ಠಿರ. ಪತಿ_ತನ್ನ ಗಂಡನಲ್ಲಿಯೆ, ವ್ರತ_ನಿಯಮವುಳ್ಳವಳು ಪತಿವ್ರತೆ, ಸಪ್ತಪ್ರಕೃತಿಗಳು ಸ್ವಾಮಿ_ಅಮಾತ್ಯ, ಸೂಹೃತ್, ಕೋಶ, ರಾಷ್ಟ್ರ, ದುರ್ಗ, ಬಲ, ಇವುಗಳು ಸಭಾಸಪ್ತಾಂಗಗಳು_ವಿದ್ವಾಂಸ, ಕವಿ, ಭಟ್ಟ, ಗಾಯಕ, ಪರಿಹಾಸಕ, ಪೌರಾಣಿಕ. ‖೩೫‖

ಟೀ॥ ಆ ಬಭ್ರುವಾಹನಂ_ಮುಂಗಸಿಯೇ ಧ್ವಜದಲ್ಲುಳ್ಳ ಬಭ್ರುವಾಹನನೆಂಬುವನು, (ನಕುಲಧ್ವಜನು) ಜನನಿಯಂ-ತನ್ನ ಮಾತೆಯನ್ನು, ಮನ್ನಿಸಿ_ಮರ್ಯಾದೆಯನ್ನು ಮಾಡಿ, ಮನೆಗೆ-ರಾಜಮಂದಿರಕ್ಕೆ, ತಳುಹಿ_ಕಳುಹಿಸಿಕೊಟ್ಟು, ಸುಬುದ್ಧಿಯಂ-ಮಂತ್ರಿಯಾದ ಸುಬುದ್ಧಿಯೆಂಬುವನನ್ನು, ನೋಡಿ_ಕಂಡವನಾಗಿ, ಪಿತನ_ತಂದೆಯಾದ ಫಲುಗುಣನನ್ನು, ಕಾಣ್ಬುದು-ಈಕ್ಷಿಸುವುದು, ಅನುಚಿತವೊ_ಅಯೋಗ್ಯವಾದ ಕಾರ್ಯವೊ, (ಯಜ್ಞಾಶ್ವವನ್ನು ಹಿಡಿದು ಬಂದಿಸಿದ್ದು ಯುಕ್ತವಾದ್ದೊ) ಮೇಣ್-ಇಲ್ಲವೆ, ಉಚಿತಂ_ನ್ಯಾಯವಾದದ್ದು, ಆದಪುದೊ-ಆಗ ಬಂದೀತೊ, (ಯೋಗ್ಯವಾದದ್ದೊ) ಇದರ_ಈ ಕೆಲಸದ, ನಿಶ್ಚಯವಂ_ಮನೋ ನಿಶ್ಚಯವನ್ನು, ಈಗಳೇ_ಈ ತಕ್ಷಣವೇ, ಪೇಳು_ಹೇಳುವನಾಗು, ಎನಲು_ಎಂಬದಾಗಿ ಪೇಳಲು, ನಿನಗೆ_ರಾಜನಾದ ನಿನಗೆ, ಎಣಿಕೆ_ಆಲೋಚನೆಯು, ಬೇಡ-ಬೇಕಾಗಿರುವುದಿಲ್ಲ, (ನೀನು ಯಾವುದಕ್ಕೂ ಯೋಚಿಸಬೇಕಾದುದಿಲ್ಲ) ಮೊದಲು_ಆ ಯಜ್ಞಾಶ್ವವನ್ನು ಬಂಧಿಸುವುದಕ್ಕೆ ಪೂರ್ವದಲ್ಲಿಯೇ, ಅರಿಯದೆ_ನಿಜಾಂಶವನ್ನು ತಿಳಿಯದೇನೆ, ಆದೆವು-ಅಶ್ವವನ್ನು ಬಂಧಿಸಿದೆವು, ಧರ್ಮತನಯಂಗೆ-ಯಮನ ನಂದನನಾದ ಧರ್ಮರಾಯಂಗೆ, ನಿಮ್ಮಯ್ಯನು_ನಿಮ್ಮ ಜನಕನಾದ ಅರ್ಜುನನು, ಅನುಜನು-ಹಿಡಹುಟ್ಟಿದವನಾಗಬೇಕು, (ಸಹೋದರನಾಗಬೇಕು) ಆತನ_ಆ ಧರ್ಮರಾಯನ ಸಹೋದರನಾದ ಧನಂಜಯನ, ವಿನುತ_ಲೋಕವಿಖ್ಯಾತವಾದ, ರಕ್ಷೆ-ರಕ್ಷಣೆಯುಳ್ಳದ್ದು, (ಅರ್ಜುನನೇ ಅಶ್ವಪಾಲಕನಾಗಿರುವನು) ಹಯಂ_ಇಂತಹ ತುರಗವಾಗಿರುತ್ತದೆ. ಇದಂ_ಈ ಯಜ್ಞಾಶ್ವವನ್ನು, ಕಲಿತನದಿ_ಪರಾಕ್ರಮಾತಿಶಯದಿಂದ, ಕಟ್ಟುವುದು_ಸಮರ್ಥಿಸುವುದು (ಕಟ್ಟತಕ್ಕದು) ನೀತಿಪಥಂ_ಸನ್ಮಾರ್ಗಪ್ರವರ್ತನೆಯು, ಅಲ್ಲ_ಆಗಿರುವುದಿಲ್ಲ, ಎಂದನು-ಎಂಬದಾಗಿ ಆ ಸುಬುದ್ಧಿಯು ಹೇಳಿದನು.

ಅ॥ ವಿ॥ ಧರ್ಮ_ಪುಣ್ಯ, ಧರ್ಮರಾಯ. ಬರ_ಬರುವಿಕೆ, ಕ್ಷಾಮ. ಕಾರ್ಯ-ತ್ಸ. ಕಜ್ಜ-ದ್ಭ. ನೀತಿಯ+ಪಥ=ನೀತಿಪಥ ಷ. ತ. ಕಲಿ-ಶೂರ, ಕಲಿಯುಗ, ಪುತ್-ಪುತ್ ಎಂಬುವ ನರಕದ ದೆಸೆಯಿಂದ, ತ್ರ-ತನ್ನ ಕುಲವನ್ನು ಕಾಪಾಡತಕ್ಕವನು, (ಮಗ) (ಪುನ್ನಾಮ್ನೋನರಕಾತ್ತ್ರಾತಾ) ‖೩೬‖

---

ಮೇಧಯಾಗಕ್ಕೆ ದೀಕ್ಷೆಪೊಂದಿರ್ಪ ಯುಧಿಷ್ಠಿರನ ವೈರಿಗಳ ಮುಂದೆ ತೋಳ್ಬಲವನ್ನು ತೋರ್ಪಡಿಸುವನಾಗು. ನಿನ್ನ ದೇಹವು ಧನ, ಕನಕ, ವಸ್ತ್ರಾಭರಣಾದಿಗಳೂ, ಆ ಪಂಚ ಪಾಂಡವರದಾಗಿರುತ್ತೆಂದು ಅವರಲ್ಲಿ ನಂಬಿಕೆಗೋಸು ಲೋಕಾಪವಾದಕ್ಕೆ ಎಂದಿಗೂ ಗುರಿಯಾಗಬೇಡ, ಎನ್ನ ಪತಿವ್ರತಾ ಧರ್ಮಕ್ಕೆ ಕೆಟ್ಟ ಸಂತಾನವೆಂಬ ಅಪಕೀರ್ತಿಯನ್ನುಂಟುಮಾಡದೆ ಇರುವನಾಗೆಂದು ಬುದ್ಧಿವಾದವನ್ನು ಹೇಳಿ ತನ್ನ ಪತಿಯಾದ ಫಲುಗುಣನ ಆಗಮನವನ್ನೇ ಎದುರುನೋಡುತ್ತ, ಅತ್ಯಾತುರವುಳ್ಳವಳಾಗಿ, ಬಹುವಾದ ಆನಂದದಿಂದ ಉಬ್ಬಿದವಳಾದಳು ‖೩೫‖ ಆಗ ಬಭ್ರುವಾಹನನು ತನ್ನಯ ಜನನಿಯ ಬುದ್ಧಿವಾದಗಳನ್ನು ಶಿರದೊಳಾಂತು, ತಾಯಿಯನ್ನು ಅತಿ ನಮ್ರತೆಯಿಂದ ಸನ್ಮಾನಿಸಿ, ತನ್ನ ಗೃಹಕ್ಕೆ ಕಳುಹಿಸಿಕೊಟ್ಟು, ಮುಖ್ಯಾಮಾತ್ಯನಾದ ಸುಬುದ್ಧಿಯಂ ಕಂಡು, ಎಲೈ ಮಂತ್ರಿವರ್ಯನೇ, ನಾವು ಈ ಪಾರ್ಥನ ಯಜ್ಞಾಶ್ವವನ್ನು ಕ್ಷತ್ರಿಯರ ಮತದಿಂದ ಹಿಡಿದು ಕಟ್ಟಿದೆವು. ಈ ರೀತಿ ಮಾಡಿದ್ದು ಯುಕ್ತವೊ? ಅಯುಕ್ತವೊ? ಪುನಃ ಈಗ ಹೋಗಿ ಪಾರ್ಥನನ್ನು ಕಾಣುವುದು ಉಚಿತವಾದುದೆ? ಅನುಚಿತವಾದದ್ದೆ? ಯಾವ ವಿಷಯಗಳಿಗೂ ಈ ತಕ್ಷಣದಲ್ಲಿಯೇ ನಿನ್ನಯ ಮನೋಭಿಪ್ರಾಯವೇನಿರುವುದೆಂಬುದನ್ನು ಪೇಳೆನಲು. ಆಗ ಮಂತ್ರೀಶನಾದ ಸುಬುದ್ಧಿಯು, ಎಲೈ ಪ್ರಭುವರ್ಯನೇ, ಈ ವಿಷಯಕ್ಕಾಗಿ ನಿನಗೇಕೆ ಈ ಪರಿಯಾದ ಕಳವ

ಸಯ್ಯಂಗೆ । ಮನ್ನೆಯರ್ಚಾತುರಂಗದಸೇನೆನಾಗರಿಕಜನಮಲಂಕರಿಸಿಕೊಳಲಿ ॥ ಕನ್ನೆಯರ್ಲಾಜೆದಧಿದೂರ್ವಾಕ್ಷತೆಗಳಿಂದ ಕನ್ನಡಿಕಲಶವಿಡಿದುಬರಲಿಸಂದರುಶನಕೆ । ಸನ್ನುತಸುವಸ್ತುಗಳನಿತುಮಂತೆಗಿಸುತಡವೇಕೆಂದನಾಸುಬುದ್ಧಿ ॥ ೩೭ ॥ ವರಸುಬುದ್ಧಿಯಬುದ್ಧಿಯಂಕೇಳ್ದನಾಪಾರ್ಥಿ । ದೊರೆದೊರೆಗಳೆಲ್ಲರಂಕಳುಪಿದಂಮನೆಗಳ್ಗೆ । ಪುರದೊಳಗೆಡಂಗುರಂಪೊಯಿಸದದತೆಗಿಸಿದಂಕೋಶದಸುವಸ್ತುಗಳನು ॥ ತರಿಸಿದಂಕನಕಪೂರಿತಶಕಟನಿಕರಮಂ । ತರುಣಿಗೋಮಹಿಷಿಮದಕುಂಜರಕುಲಾಶ್ವಮಣಿ ।

ಟೀ॥ ಆ ಸುಬುದ್ಧಿ-ಬಭ್ರುವಾಹನನ ಮಂತ್ರಿಯಾದ ಸುಬುದ್ಧಿ ಎಂಬುವನು, ಅವನಂ-ಆ ಬಭ್ರುವಾಹನನನ್ನು ಕುರಿತು, ಇನ್ನು-ಈಲಾಗಾಯಿತು, (ಈ ತರುವಾಯದಿಂದ) ಪಟ್ಟಣಕೆ-ಮಣಿಪುರಕ್ಕೆ, ಗುಡಿಗಳಂ-ದೇವಾಲಯಗಳನ್ನು, (ಧ್ವಜಗಳನ್ನು) ಕಟ್ಟಿಸು- ಅಣಿಮಾಡಿಸುವನಾಗು, ನಿನ್ನ- ನಿನ್ನಯ, ಅಖಿಳ- ಸಮಸ್ತ ವಿಧವಾದ, ರಾಜ್ಯಪದವಿಯಂ- ರಾಜ್ಯೈಶ್ವರ್ಯವನ್ನು, (ದೇಶದ ಸಕಲ ಭಾಗ್ಯವನ್ನು) ಅಯ್ಯಂಗೆ-ತಾತನಾದ ಅರ್ಜುನನಿಗೆ, ಒಪ್ಪಿಸು-ಅಧೀನ ಪಡಿಸುವನಾಗು, ಮನ್ನೆಯರ್-ಮರ್ಯಾದಾಯುತರಾದ ಯುವತಿಯರು, ಚಾತುರಂಗ-ಚತುರಂಗ ಬಲದಿಂದಾವೃತವಾದ, ಸೇನೆಯು, ನಾಗರಿಕಜನ-ನಾಗರಿಕರು, (ಪೌರಜನರು) ಅಲಂಕರಿಸಿಕೊಳ್ಳಲಿ-ಆಭರಣಾದಿಗಳಿಂದ ಅಲಂಕಾರಮಾಡಿಕೊಳ್ಳುವರಾಗಲಿ, ಕನ್ನೆಯರ್-ಬಾಲಕಿಯರು, ಲಾಜೆ-ಬತ್ತದರಳು. ದಧಿ-ದಧಿಯು, (ಮೊಸರು) ದೂರ್ವ-ಗರಿಕೆಯ ಹುಲ್ಲು, ಅಕ್ಷತೆಗಳಿಂದ-ಆರತಿ ಮೊದಲಾದ ಮಂತ್ರಾಕ್ಷತೆಗಳಿಂದ, ಕನ್ನಡಿ-ಆದರ್ಶವನ್ನು, (ಕನ್ನಡಿಯನ್ನು) ಕಲಶ-ನೀರಿನಿಂದ ತುಂಬಿದ ಮಂಗಳ ಕಲಶಗಳನ್ನು, ಪಿಡಿದು-ಗ್ರಹಿಸಿ, (ಹಿಡಿದುಕೊಂಡು) ಸಂದರುಶನಕೆ-ಪಾರ್ಥನನ್ನು ನೋಡಲೋಸುಗ, ಬರಲಿ-ಬರುವಂಥವರಾಗಲಿ, ಸನ್ನುತ- ಸ್ತೋತ್ರಾರ್ಹವಾದ, ಸುವಸ್ತುಗಳ್-ಉತ್ತಮವಾದ ಪದಾರ್ಥಗಳ, ಎಲ್ಲಮಂ-ಸರ್ವವನ್ನು, (ಸಕಲವನ್ನು) ತೆಗಿಸು-ರಾಜಾಜ್ಞೆಯಿಂದ ಬರಮಾಡುವನಾಗು, ತಡವು-ಕಾಲವಿಳಂಬವು, ಏಕೆ-ಏತಕ್ಕಾಗಿ ಮಾಡಬೇಕು, ಎಂದು-ಎಂಬದಾಗಿ ಹೇಳಿ, ಆ ಸುಬುದ್ಧಿ-ಮಂತ್ರಿಯಾದ ಸುಬುದ್ಧಿಯು, ಎಂದನು-ಎಂಬದಾಗಿ ಪೇಳಿದನು.

ಅ॥ ವಿ॥ ಚತುರಂಗಬಲ-ಹಸ್ತಿ, ಅಶ್ವ, ರಥ, ಪದಾತಿ. ಮಂತ್ರ-ರಾಜಕಾರ್ಯಾಲೋಚನೆ, ಅದುಳ್ಳವನು ಮಂತ್ರಿ. ಗುಡಿ-ದೇವಾಲಯ, ಧ್ವಜ, ಸಮೂಹ, ತುದಿ. ಸತ್+ನುತ=ಸನ್ನುತ ಅನುನಾಸಿಕ. ಸಂ. ॥೩೭॥

ಟೀ॥ ಆಗ-ಆ ಸುಬುದ್ಧಿಯು ಹೇಳಿದ ತರುವಾಯ, ಬಭ್ರುವಾಹನಂ-ನಕುಲಧ್ವಜನು, ವರ-ಯೋಗ್ಯನಾದ, ಸುಬುದ್ಧಿಯ-ಮಂತ್ರಿಯಾದ ಸುಬುದ್ಧಿ ಎಂಬುವನ, ಬುದ್ಧಿಯಂ-ವಿವೇಕವನ್ನು (ಜ್ಞಾನವನ್ನು) ಎಂದರೆ ನೀತಿಯನ್ನು, ಕೇಳ್ದಂ-ಆಲಿಸಿದ, ಆ ಪಾರ್ಥಿ-ಆ ಪಾರ್ಥನ ಮಗನಾದ ಬಭ್ರುವಾಹನನು, ದೊರೆದೊರೆಗಳ್-ತನ್ನ ಸಮಸ್ತ ಸಾಮಂತರಾಜರ, ಎಲ್ಲರಂ-ಸಕಲರನ್ನೂ, ಮನೆಗಳ್ಗೆ-ಅವರವರ ಗೃಹಗಳಿಗೆ, ಕಳುಪಿದಂ-ಬೀಳ್ಕೊಟ್ಟವನಾದನು. (ಕಳುಹಿಸಿ ಕೊಟ್ಟನು) ಪುರದೊಳಗೆ-ಮಣಿಪುರದ ಪಟ್ಟಣದಲ್ಲಿ, (ರತ್ನಪುರಿಯಲ್ಲಿ) ಡಂಗುರಂ- ಪ್ರಕಟಣ ಭೇರಿಯನ್ನು, ಪೊಯಿಸಿದಂ- ಹೊಡೆಯುವಂತಾಜ್ಞಾಪಿಸಿದನು, ಕೋಶದ-ಖಜಾನೆಯಲ್ಲಿರುವ, (ಭಂಡಾರದಲ್ಲಿರುವ) ಸುವಸ್ತುಗಳಂ-ಶ್ರೇಷ್ಠವಾದ ಪದಾರ್ಥಗಳನ್ನು, (ಬಳ್ಳೆಯ ಬೆಲೆಯುಳ್ಳ ವಸ್ತುಗಳನ್ನು) ತೆಗೆಸಿದಂ-ತಂದೆಗೊಪ್ಪಿಸುವುದಕ್ಕಾಗಿ ತರುವಂತೆ ಮಾಡಿದನು, ಕನಕ-ಚಿನ್ನದ ನಾಣ್ಯದಿಂದ, ಪೂರಿತ-

---

ಳವು. ಈ ವಿಧವಾದ ಯೋಚನೆಯು ತಿಲಮಾತ್ರವೂ ಬೇಕಾದ್ದಿಲ್ಲ, ಮೊದಲು ನಾವು ಸರಿಯಾಗಿ ಆಲೋಚಿಸದೆ ಈ ಯಜ್ಞಾಶ್ವವನ್ನು ಕಟ್ಟಿದೆವು, ಧರ್ಮರಾಯಂಗೆ ನಿಮ್ಮ ತಂದೆಯಾದೀ ಫಲುಗುಣನು ಸಹೋದರನಾಗಿರುವನು. ಅಂಥಾ ಪಾರ್ಥನ ಅಂಗರಕ್ಷಣೆಯುಳ್ಳ ಯಜ್ಞಾಶ್ವವು. ಈ ಪರಿಯಾದ ಅಶ್ವವನ್ನು ಶೌರ್ಯದಿಂದ ಬಂಧಿಸುವುದು ಯುಕ್ತವಾದ್ದಲ್ಲವೆಂದು ಮಂತ್ರೀಶನಾದ ಸುಬುದ್ಧಿಯು ತನಗೆ ತೋರಿದ ಬುದ್ಧಿವಾದವನ್ನು ಪೇಳಿದನು ॥೩೬॥ ಈ ರೀತಿಯಾಗಿ ತಂದೆಯೊಡನೆ ಹಠಮಾಡಿ ಕಾಳಗ ಮಾಡಲಿಕ್ಕೆ ಬದಲಾಗಿ ಇನ್ನು ಮುಂದೆ ತಟಾಕಗಳನ್ನು ತೋಡಿಸು, ಧರ್ಮಮಾರ್ಗದಿಂದ ಐಶ್ವರ್ಯವನ್ನು ಆರ್ಜಿಸು. ಬ್ರಹ್ಮಸ್ಥಾಪನ ಮಾಡು. ದೇವಾಲಯಗಳನ್ನು ಪ್ರತಿಷ್ಠಿಸು, ವಿಸ್ತಾರವಾದ ತೋಪುಗಳನ್ನು ಹಾಕಿಸು, ಸದ್ಗ್ರಂಥವನ್ನು ರಚಿಸುವನಾಗು ವಂಶಾಭಿವೃದ್ಧಿಕಾರ್ಯಗಳನ್ನು ಮಾಡು, ಮತ್ತು ನಿನ್ನಯ ಅಖಿಳ ರಾಜ್ಯಪದವಿಯನ್ನು ತಂದೆಯಾದ ಪಾರ್ಥಂಗೆ ಸಮರ್ಪಿಸು, ಮನ್ನೆಯರು ಹಸ್ತ್ಯಶ್ವ ರಥ ಪದಾತಿಗಳಿಂದ ಯುಕ್ತನಾದ ಚತುರಂಗ ಬಲವು, ನಾಗರಿಕ ಜನವು ತಮ್ಮ ಮನವಿದ್ದಂತೆ ಶೀಘ್ರದಿಂದಲಂಕರಿಸಿಕೊಳ್ಳಲಿ ಬಾಲಕಿಯರು ಶೃಂಗಾರಮಾಡಿಕೊಂಡು ಲಾಜೆ, ದಧಿ, ದೂರ್ವ, ಅಕ್ಷತೆ, ಕಳಶ, ಕನ್ನಡಿಗಳನ್ನು ಹಿಡಿದುಕೊಂಡು ನೋಡುವುದಕ್ಕೆ ಬರುವರಾಗಲಿ, ಶ್ಲಾಘ್ಯತನವಾದ ಸುವಸ್ತುಗಳನ್ನೆಲಾ ಭಂಡಾರದಿಂದ ತೆಗೆಯಿಸುವನಾಗು, ಇನ್ನು ಏಕೆ ಕಾಲವಿಳಂಬಮಾಡುತ್ತಿರುವೆಯೆಂಬದಾಗಿ ಆ ಸುಬುದ್ಧಿಯು ಈ ವಿಧವಾದ ಬುದ್ಧಿಯಂ ಪೇಳಿದನು ॥೩೭॥ ಆಗ ಪಾರ್ಥಿಯು ಮಂತ್ರೀಶನಾದ ಸುಬುದ್ಧಿಯು ಬುದ್ಧಿವಾದವನ್ನು ಲಾಲಿಸಿ, ಸಮಸ್ತ ಸಾಮಂತರಾಜರೂ ರಾಜಕಾರ್ಯಾಲೋಚನಪರರು ಇನ

ವಿರಚಿತರಥಂಗಳಂಕಾಂಚನಮಯದ ವಸ್ತುಭಾಂಡಕೊಪ್ಪರಿಗೆಗಳನು ‖ ೩೮ ‖ ನವ್ಯಚಿತ್ರಾಂಬರಾಭರಣಂಗಳಂ ವಿವಿಧ ‖ ದಿವ್ಯ ರತ್ನಂಗಳಂತರತರದಪರಿಮಳ | ದ್ರವ್ಯಂಗಳಂಕನಕಪಟಯುತದ ಹಂಸತೂಲದಮೃದುಲತಲ್ಪಗಳನು ‖ ಸುವ್ಯಜನಚಾಮರ ಸಿತಾತಪತ್ರಂಗಳಂ | ಸವ್ಯಸಾಚಿಯಕಾಣಿಕೆಗೆ ತರುವುದೆಂದುಕ | ರ್ತವ್ಯದಿಂಜೋಡಿಸಿದನಾಬಭ್ರುವಾಹಂದೂತರಿಗಖಿಳವಸ್ತುಗಳನು ‖ ೩೯ ‖ ಸ್ವರಗೈದುದನಿತರೊಳ್ ಚರಣಾಯುಧಂಜಾರೆ | ಯರಮನಂಬೆಚ್ಚಿದುದು ಮೂಡದೆಸೆಬೆಳಗಿದುದು ಪ | ಸರಿ

---

ಪೂರ್ತಿಯಾಗಿರುವ (ತುಂಬಲ್ಪಟ್ಟಿರುವ), ಶಕಟ–ಗಾಡಿಗಳ, ನಿಕರಮಂ–ಸಮುದಾಯವನ್ನು, ತರಿಸಿದಂ-ಬರಮಾಡಿಸಿದನು (ತರುವಂತೆ ಏರ್ಪಡಿಸಿದನು), ತರುಣಿ–ಯುವತಿಯರು, ಗೋ-ಗೋವುಗಳು (ಹಸುಗಳು), ಮಹಿಷಿ–ಮಹಿಷಿಗಳು, (ಎಮ್ಮೆ ಮೊದಲಾದವುಗಳು) ಮದ–ಕೊಬ್ಬಿದ, ಕುಂಜರ–ಗಜಗಳ, ಕುಲ–ಸಮೂಹವು, ಅಶ್ವ–ಹಯಗಳು, ಮಣಿ-ನವರತ್ನಗಳಿಂದ, ವಿರಚಿತ–ರಚಿತಮಾದ (ಮಾಡಲ್ಪಟ್ಟ), ರಥಂಗಳಂ–ವರೂಥಗಳನ್ನು, ಕಾಂಚನಮಯದ–ಸ್ವರ್ಣ ವಿಕಾರದಿಂದ ಕೂಡಿದ, (ಸುವರ್ಣಮಯವಾದ) ವಸ್ತು–ವಸ್ತುಗಳ, (ಪದಾರ್ಥಗಳ) ಭಾಂಡ-ಘಟಗಳನ್ನು (ಪಾತ್ರೆಗಳನ್ನು), ಕೊಪ್ಪರಿಗೆಗಳಂ–ಕಟಾಹಗಳನ್ನು, ತರಿಸಿದಂ–ಈಚೆಗೆ ತೆಗಿಸಿಕೊಂಡನು ‖

ಅ‖ ವಿ‖ ಕೋಶ-ಖಜಾನೆ, ಮೊಗ್ಗು, ನಿಘಂಟು. ಭಾಂಡ–ಗಡಿಗೆ, ಪಾತ್ರೆ, ಅಲಂಕಾರ, ಕುದುರೆಗೆ ಅಲಂಕರಿಸುವ ಒಡವೆ, ಮಹಿಷಿ–ಸ್ತ್ರೀಲಿಂಗ, ಮಹಿಷ–ಪುಲ್ಲಿಂಗ, ಶಕಟಗಳ + ನಿಕರ = ಶಕಟನಿಕರ, ಷ. ತ. ರತ್ನಗಳ ಆಭರಣ, ರತ್ನಾಭರಣ, ಷ. ತ. ‖ ೩೮ ‖

ಟೀ‖ ನವ್ಯ–ನೂತನಗಳಾದ, ಚಿತ್ರ – ವಿಚಿತ್ರತರಗಳಾದ, ಅಂಬರ-ಬಟ್ಟೆಬರೆಗಳನ್ನು, (ಪೀತಾಂಬರಾದಿಗಳನ್ನು) ಆಭರಣಂಗಳಂ–ಆಭರಣಗಳನ್ನು (ಒಡವೆ ಮೊದಲಾದವುಗಳನ್ನು), ವಿವಿಧ-ಅನೇಕ ವಿಧಗಳಾದಂಥ, ದಿವ್ಯ–ದೇವತಾಯೋಗ್ಯಗಳಾದ (ಮನೋಹರಗಳಾದ), ರತ್ನಂಗಳಂ–ನವರತ್ನಗಳನ್ನು, ತರತರದ-ನಾನಾವಿಧಗಳಾದ, ಪರಿಮಳ– ಸುವಾಸನೆಗಳುಳ್ಳ, ದ್ರವ್ಯಂಗಳಂ–ಪದಾರ್ಥಗಳನ್ನು, ಕನಕ–ಸ್ವರ್ಣಮಯವಾದ (ಚಿನ್ನದಿಂದ ಮಾಡಿದ), ಪಟ-ಪಟ್ಟೆವಸ್ತ್ರಗಳಿಂದ, ಯುತ–ಸೇರಿರುವ (ಕಲತಿರುವದಾದ), ಹಂಸತೂಲದ–ಹಂಸಪಕ್ಷಿಗಳ ಮೃದುವಾದ ಗರಿಗಳಿಂದ ಮಾಡಿದ, ಮೃದು–ಮೆತ್ತಗಿರುವ (ಮನೋಹರವಾದ), ತಲ್ಪಗಳನು–ಹಾಸಿಗೆ ಹೊದಿಕೆ ಮೊದಲಾದವುಗಳನ್ನು, ಸುವ್ಯಜನ–ಉತ್ತಮವಾದ ಬೀಸಣಿಗೆ ಮೊದಲಾದ ಚಾಮರ–ಚಮರಗಳು (ಚಾಮರಂಗಳ-), ಸಿತಾತಪತ್ರಂಗಳಂ-ಶ್ವೇತಛತ್ರಿ ಮೊದಲಾದುವನ್ನು (ಬೆಳುಗೊಡೆಗಳನ್ನು), ಸವ್ಯಸಾಚಿಯ–ತಂದೆಯಾದ ಪಾರ್ಥನ, ಕಾಣಿಕೆಗೆ–ಪೂಗದಿಗಾಗಿ ಅಥವಾ ನಜರಿಗಾಗಿ (ಕಪ್ಪಕ್ಕಾಗಿ), ತರುವುದೆಂದು-ತರತಕ್ಕದ್ದೆಂದು ಎಂಬದಾಗಿ, ಬಭ್ರುವಾಹನಂ–ನಕುಲಧ್ವಜನಾದ ಬಭ್ರುವಾಹನನು, ಕರ್ತವ್ಯದಿಂದ–ಅತ್ಯವಶ್ಯಕವಾದ ಕೆಲಸದಿಂದ, ಅಖಿಳ–ಸಕಲಗಳಾದ, ವಸ್ತುಗಳಂ–ಪದಾರ್ಥಾದಿಗಳನ್ನು, ದೂತರಿಗೆ–ಸೇವಕರಿಗೆ, ಸಜ್ಜುಗೊಳಿಸುವಂತೆ (ಕ್ರಮವಾಗಿ ಸಿದ್ಧಪಡಿಸುವಂತೆ ಅಪ್ಪಣೆಮಾಡಿ), ಜೋಡಿಸಿದಂ–ಅಣಿಮಾಡಿದನು ‖

ಅ‖ ವಿ‖ ಚಮರಿಯ ಮೃಗದಿಂದಾದುದು–ಚಾಮರ, ವ್ಯಜನ-ಬೀಸಣಿಗೆ, ವ್ಯಂಜನ-ಲಾಂಛನ, ಗುರುತು ಬಾಕಿವೇಸ, ಬಿಸುದು, ಮೇಲೋಗರ, ಸವ್ಯಸಾಚಿ–ಎರಡು ಕೈಗಳಲ್ಲೂ ಬಾಣವನ್ನು ಪ್ರಯೋಗಿಸವವನು ‖ ೩೯ ‖

ಅನಿತರೊಳು – ಆ ವೇಳೆಗೆ (ಅಷ್ಟು ಕಾಲದೊಳಗೆ), ಚರಣಾಯುಧಂ–ಕುಕ್ಕುಟವು (ಕೋಳಿಯು), ಸ್ವರಗೈದುದು–ಶಬ್ದವನ್ನು ಮಾಡಿತು (ಕೂಗಿತು), ಜಾರೆಯರ–ವ್ಯಭಿಚಾರ ಮಾಡುವ ಸ್ತ್ರೀಯರ, (ಕುಲಟಾಂಗನೆಯರ) ಮನಂ–ಮ

---

ರೇ ಮೊದಲಾದವರನ್ನು ಮನೆಗಳಿಗೆ ಕಳುಹಿಸಿ ನಗರದಲ್ಲಿ ಪ್ರಕಟಣ ಭೇರಿಯನ್ನು ಹೊಡಿಸಿ, ಬೊಕ್ಕಸದಲ್ಲಿರುವ ಅತ್ಯಮೌಲ್ಯವಾದ ವಸ್ತುಗಳನ್ನು ತೆಗೆಯಿಸಿ, ನಾನಾವಿಧಗಳಾದ ನವರತ್ನ ಖಚಿತಗಳಾದ ಆಭರಣಗಳನ್ನು ಭಂಡಿಗಳಲ್ಲಿ ತುಂಬಿಸಿದನು, ಇಷ್ಟು ಪ್ರಯತ್ನವೂ ಸಾಲದೆ ತನ್ನರಮನೆಯಲ್ಲಿರುವ ಯುವತಿಯರು, ಹಸುಗಳು, ಹೋರಿಗಳು, ಮಹಿಷಿಗಳು, ಜಾತ್ಯಶ್ವಗಳೂ, ರತ್ನಖಚಿತಮಾದ ವರೂಥಾದಿಗಳೂ, ಚಿನ್ನಬೆಳ್ಳಿಗಳಿಂದ ನಿರ್ಮಿತವಾದ ಪಾತ್ರೆಗಳು ಬಳಕೆಯ ಸಣ್ಣ ದೊಡ್ಡ ಪಾತ್ರೆಗಳು ಇವೇ ಮೊದಲಾದವುಗಳನ್ನೆಲ್ಲಾ ತಂದೆಗೊಪ್ಪಿಸಲಿಕ್ಕಾಗಿ ಕ್ರಮಪಡಿಸಿದನು ‖೩೮‖ ಮತ್ತು ನೂತನಗಳಾದ ಚಿತ್ರಬಣ್ಣಗಳಿಂದ ಕೂಡಿರುವ ವಸ್ತ್ರಾದಿಗಳನ್ನು, ನವರತ್ನಖಚಿತಗಳಾದ ಕನಕಾಭರಣಗಳನ್ನು, ಕಾಂಚನವಿಕಾರವಾದ ಪಟ್ಟೆಯವಸ್ತ್ರಗಳನ್ನು, ಹೊಂದಿರುವ ಅತಿ ಮೃದುವಾದ ಹಂಸತೂಲಿಕಾ ತಲ್ಪಗಳನ್ನು, ಸುವ್ಯಜನಗಳನ್ನು. ನವರತ್ನಾಲಂಕೃತದಿಂದ ನಿರ್ಮಿತವಾದ ಛತ್ರ ಚಾಮರಗಳನ್ನು, ಪಾರ್ಥನಿಗೆ ಮರ್ಯಾದಾರ್ಥವಾಗಿ ಈಚೆಗೆ ತೆಗೆಯಿಸಿ ಸರ್ವವಸ್ತುಗಳನ್ನು ಸಿದ್ಧಪಡಿಸುವಂತೆ ಭೃತ್ಯರಿಗೆ ಅಪ್ಪಣೆಮಾಡಿ ಕ್ರಮವಾಗಿ ವಿಂಗಡಿಸಿ ಇರಿಸಿದನು ‖ ೩೯ ‖ ಆವೇಳೆಗೆ ಸರಿಯಾಗಿ ಚರಣಾಯುಧವು (ಕುಕ್ಕುಟವು) ಸ್ವರಗೈದುದು

ಸಿತುತಂಗಾಳಿಖಗನಿಕರಮುಲಿದೆದ್ದವರಳಿದುವು ತಾವರೆಗಳು ‖ ಮೊರೆದುದಾರಡಿನೆರದವೆಸೆವಕ್ಕಿದಾರೆಗ | ಳ್ಪರಿದವಿಡಿದಿರ್ದಕತ್ತಲೆತೊಲಗಿತುತ್ಪಲಂ | ಕೊರಗಿದುದುಜನದಕಂಣೆವೆದೆರೆದುದೊದರಿದುವುದೇಗುಲದವಾದ್ಯಂಗಳು ‖ ೪೦ ‖ ಅರಳ್ದಶೋಣಾಂಬರಚ್ಛಾಯೆಗಳಡರ್ದುವೆನೆ | ಭರದಿಂದಕತ್ತಲೆಯಮೇಲೆ ಬಹರವಿಯರಥ | ತುರಗಖುರಪುಟದಿಂದಲೇಳ್ವಕೆಂಧೂಳ್ಗಳೆನೆ ಪ್ರಾಚೀನಿತಂಬವತಿಗೆ ‖ ಸಂಸದಿಂತರುಣಿಯೋಳ್ನೆರವ ಸಮಯದೊಳಾದ | ಕರರುಹಕ್ಷತದಕಿಸುಬಾಸುಳ್ಗಳೆನೆ ಸವಿ | ಸ್ತರದಸಂಧ್ಯಾ

---

ನಸ್ಸು (ಮನವು), ಬೆಚ್ಚಿದುದು-ಬೆದರಿತು (ಭಯಗೊಂಡಿತು), ಮೂಡದೆಸೆ-ಮೂಡಲದಿಕ್ಕು (ಪೂರ್ವದಿಕ್ಕು), ಬೆಳಗಿದುದು-ಪ್ರಕಾಶಯುತಮಾದದು (ಬಿಳುಪಾಯಿತು), ತಂಗಾಳಿ-ಮಂದಮಾರುತವು (ತಣ್ಣೆಲರ್), ಪಸರಿಸಿತು-ವ್ಯಾಪಿಸಿತು (ಚಲಿಸಿತು), ಖಗ-ವಿಹಂಗಗಳ (ಹಕ್ಕಿಗಳ), ನಿಕರ-ಸಮುದಾಯವು (ಗುಂಪು), ಉಲಿದು-ಧ್ವನಿಗೈದು, ಎದ್ದುವು-ನಿದ್ರೆಯಿಂದ ಎದ್ದುವು,(ಎಚ್ಚರವಾದುವು), ತಾವರೆಗಳ್-ಅರವಿಂದಗಳು, ಅರಳಿದವು-ಪುಷ್ಪಿಸಿದುವು (ಮೊಗ್ಗಾಗಿದ್ದದ್ದು ಹೂವಾದವು, ಆರಡಿ-ಭೃಂಗವು (ದುಂಬಿಯು), ಮೊರೆದುದು-ಝೇಂಕಾರಮಾಡಿದವು (ಧ್ವನಿಮಾಡಿದವು), ಎಸೆವಕ್ಕಿ-ದಂಪತಿ ಪಕ್ಷಿಗಳು, ನೆರದವು - ಜೊತೆಗೂಡಿದವು (ಒಂದಾದವು), ತಾರೆಗಳ್-ತಾರಕಗಳು (ನಕ್ಷತ್ರಾದಿಗಳು), ಪರಿದುವು-ಹಾರಿಹೋದವು (ಓಡಿದವು), ಇಡಿದಿರ್ದ-ತುಂಬಿದ್ದ ಎಂದರೆ ವ್ಯಾಪ್ತವಾಗಿದ್ದ, ಕತ್ತಲೆ-ಕತ್ತಲೆಯು (ತಿಮಿರವು), ತೊಲಗಿತು-ಹೊರಟುಹೋಯಿತು, ಉತ್ಪಲಂ-ಕರಿನೈದಿಲೆಯ ಪುಷ್ಪವು, ಕೊರಗಿದುದು-ಮುಚ್ಚಿಕೊಂಡಿತು (ಮೊಗ್ಗಾಯಿತು), ಜನದ-ಜನಗಳ, ಕಣ್ಣೆವೆ-ಕಣ್ಣಿನ ರೆಪ್ಪೆಯು, ತೆರೆದುದು-ತೆರೆಯಲ್ಪಟ್ಟಿತು (ನಿದ್ರೆಯಲ್ಲಿದ್ದ ಜನರು ಎದ್ದರು), ದೇಗುಲದ-ದೇವಸ್ಥಾನಗಳಲ್ಲಿರುವ, ವಾದ್ಯಂಗಳು-ನಗಾರಿ ಮೊದಲಾದ ವಾದ್ಯವಿಶೇಷಗಳು, ಒದರಿದುವು-ರವಗೈದವು (ಶಬ್ದಮಾಡಲ್ಪಟ್ಟವು) ‖

ಅ‖ ವಿ‖ ಚರಣವೇ ಆಯುಧವಾಗುಳ್ಳದ್ದು—ಚರಣಾಯುಧ, ಬಹು. ಸ. ಸ್ವರ - ತ್ಸ, ಸರ - ದ್ಭ. ಚಂದ್ರೋದಯ ಕಾಲಗಳಲ್ಲಿ, ಕರಿಯ ನೈದಿಲೆಗಳು ವಿಕಸಿತವಾಗುವುವು, ತಾರೆ-ನಕ್ಷತ್ರ, ತಾರಾದೇವಿ, ಕಣ್ಣಿನೊಳಗಿನ ಕರಿಯಗುಡ್ಡು. ಸಪ್ತಸಂತಾನಗಳು-ತಟಾಕ, ಧನನಿಕ್ಷೇಪ, ಬ್ರಹ್ಮಸ್ಥಾಪನ, ದೇವಾಲಯ ಪ್ರತಿಷ್ಠೆ, ವನಪ್ರತಿಷ್ಠೆ, ಸದ್ಗ್ರಂಥರಚನೆ, ಪುತ್ರೋತ್ಪಾದನ ‖ ೪೦ ‖

ಟೀ‖ ಅರಳ್ದ ವಿಕಸಿತಮಾದ, ಶೋಣ-ರಕ್ತವರ್ಣವಾಗಿರುವ, ಅಂಬುಜ- ಅರವಿಂದಗಳೆ, ಛಾಯೆಗಳು - ಕೆಚ್ಚನೆಯ ನೆಳಲುಗಳು (ಕೆಂಬಣ್ಣದ ನೆಳಲುಗಳು), ಅಡರ್ದವು-ಹತ್ತಿದವು (ಮೇಲಕ್ಕೇರಿದವು), ಎನೆ-ಎನ್ನುವಂತೆ, ಎನ್ನುವ ರೀತಿಯಿಂದ ಭರದಿಂದ-ಶೀಘ್ರವಾಗಿ (ಜಾಗ್ರತೆಯಿಂದ), ಕತ್ತಲೆಯಮೇಲೆ-ತಿಮಿರದ ಮೇಲ್ಭಾಗದಲ್ಲಿ, ಬಹ-ಆಗಮಿಸುತ್ತಿರುವ, (ಬರುತ್ತಲಿರುವ) ರವಿಯ-ಭಾಸ್ಕರನ, ರಥ-ವರೂಥದ, ತುರಗ-ಅಶ್ವದ, ಖುರಪುಟದಿಂದ-ಉಗುರಿನ ಪ್ರದೇಶದಿಂದ, ಏಳ್ವ-ಮೇಲ್ಗಡೆಗೆ ವ್ಯಾಪಿಸುತ್ತಿರುವ, ಕೆಂದೂಳ್ಗಳ್-ಕೆಂಪು ರೇಣುಗಳು (ಕೆಂಪಾದ ದೂಳುಗಳು), ಎನೆ-ಎನ್ನುವ ರೀತಿಯಿಂದ, ಪ್ರಾಚೀ-ಪೂರ್ವದೆಸೆಯೆಂಬ, ನಿತಂಬವತಿಗೆ-ಸ್ತ್ರೀಗೆ, ಸರಸದಿಂ-ಶೃಂಗಾರ ಚೇಷ್ಟೆಯಿಂದ, ತರಣಿಯೊಳ್-ಇನನಲ್ಲಿ (ಸೂರ್ಯನ ಸಂಗಡ), ನೆರೆದ-ಸೇರಿದ (ಕಲೆತ), ಸಮಯದೋಳ್-ಕಾಲದಲ್ಲಿ, ಆದ-ಆಗಿರುವ (ಉಂಟಾದಂಥ), ಕರರುಹ-ನಖಾಗ್ರಗಳಿಂದಾದ, ಕ್ಷತದ-ಉಗುರಿನಿಂದಾದ ಗಾಯದ, ಕಿಸು-ಬಾಸುಳ್ಗಳ್ - ಕಿರಿದಾಪೆಟ್ಟಿನ ಗುರುತುಗಳು (ಬಾಸುಂಡೆಗಳ್), ಎನೆ - ಎನ್ನುವಂತೆ

---

(ಕೋಳಿ ಕೂಗಿತು) ಜಾರಸ್ತ್ರೀಯರ ಮನವು ಬೆಚ್ಚಿದುದು, ಮೂಡಣ ದೆಸೆಯಲ್ಲಿ ಬೆಳಕು ತೋರಿತು ಮಂದ ಮಾರುತವು ಬೀಸಲುಪಕ್ರಮಿಸಿತು, ನಾನಾ ಬಗೆಗಳಾದ ವಿಹಂಗತತಿಗಳು ಕಲಕಲ ಧ್ವನಿಯನ್ನು ಮಾಡಲುಪಕ್ರಮಿಸಿದವು. ಅರವಿಂದಗಳು ವಿಕಸಿತವಾದ್ದರಿಂದ ಭೃಂಗಗಳು ನಲಿದು ಝೇಂಕಾರಮಾಡಲುಪಕ್ರಮಿಸಿದವು, ಕೋಕಂಗಳು ನಲಿದು ನೆರದವು, ತಾರಕಾನಿವಹಂಗಳು ಪರಿದುವು, ವ್ಯಾಪ್ತಮಾಗಿರ್ದ ಅಂಧಕಾರವು ತೊಲಗಿ ಹೋದುದು, ಉತ್ಪಲಂಗಳು ಕೊರಗಿ ಕೋಗಿ ಮುಕುಳಿತ ವಾದವು ಗಾಢನಿದ್ರೆಯೊಳಗಿದ್ದ ಜನರು ಎಚ್ಚರಗೊಂಡರು, ದೇವಾಲಯಂಗಳಲ್ಲಿ ಮಂಗಳ ವಾದ್ಯಗಳು ದನಿಗೈಯ್ದುವು. ಅರಮನೆಯಲ್ಲಿ ಮುಜರೆಯ ವಾದ್ಯಂಗಳಾದ ನಗಾರಿ ಭೇರಿ ಮೊದಲಾದ ವಾದ್ಯಭೇದಂಗಳುಂಟಾದವು ‖ ೪೨ ‖ ಆಗ ರಕ್ತವರ್ಣಗಳಂತಿರುವ ಅರವಿಂದಗಳ ಛಾಯೆಗಳು, ಮೇಲಕ್ಕೇರಿದುವೊ ಎನ್ನುವಂತೆ ಶೀಘ್ರದಿಂದ ಕತ್ತಲೆಯಮೇಲೆ ಬರುವ ಭಾಸ್ಕರನ ರಥದ ತೇಜಿಗಳ ಖುರಪುಟಗಳಿಂದ ಮೇಲಕ್ಕೇಳ್ವ ಕೆಂದೂಳ್ಗಳೋ ಎನ್ನುವಂತೆ ಪೂರ್ವದಿಕ್ಕೆಂಬುವ ಯುವತಿಗೆ ಶೃಂಗಾರ ಚೇಷ್ಟೆಯಿಂದ ತರಣಿಯೋಳ್ ಬೆರದ ಸಮಯದಲ್ಲಿ ಆದ ಕರರುಹಕ್ಷತದ ಕಿರಿದಾದ ಬಾಸಳ್ಗಳೋ ಎನ್ನುವಹಾಗೆ ಸವಿಸ್ತರದ ಸಂಧ್ಯಾರಾಗವು ಮೂಡಣದೆಶೆಯಲ್ಲಿ ಆದಿನದಲ್ಲುಂಟಾಗಲು ಬಾಲಾತಪದಿಂದ ಕೂಡಿದ ಪ್ರಾತಃಕಾಲವು ಪ್ರತಿಯೊಂದು ಬಗೆಯಿಂದಲೂ ವಿರಾಜಸುತ್ತಿತ್ತು ‖ ೪೧ ‖ ಆ ಸಮಯದಲ್ಲಿ ಪೂರ್ವಾಚಲದಲ್ಲಿ ಆವಿರ್ಭವಿಸಿದ ಭಾಸ್ಕರನು (ಸೂರ್ಯನು) ಅಂಧಕಾರವನ್ನು

ರಾಗಮೈದೆರಂಜಿಸುತಿರ್ದುದಂದುಮೂಡಣದೆಸೆಯೊಳು ॥ ೪೧ ॥ ಜಿತತಮಂಭುವನಮಧ್ಯಪ್ರಕಾಶಂವಿರಾ । ಜಿತವರಾಹ ಶ್ರೀಧರಂಪಂಚಮುಖಮೂರ್ತಿ । ನಂತಕಾಶ್ಯಪಂ ರಾಜತೇಜೋಹರಂ ದೂಷಣಾರಿಗೊಕುಲಜಾತನು ॥ ಅತಿಕಾಂತಿಶೋಭಿತದಿ

ಸವಿಸ್ತರದ-ಮಹಾ ವಿಶಾಲವಾದಂಥ, ಸಂಧ್ಯಾರಾಗಂ-ಸಾಯಂಕಾಲದ ಕೆಂಪುವರ್ಣವು, ಮೂಡದೆಸೆಯೋಳ್-ಪ್ರಾಗ್ದೆಸೆಯಲ್ಲಿ (ಪೂರ್ವದೆಸೆಯಲ್ಲಿ), ಅಂದು-ಆಕಾಲದಲ್ಲಿ, ಐದೆ-ಚೆನ್ನಾಗಿ, ರಂಜಿಸುತಿರ್ದುದು-ಶೋಭಿಸುತ್ತಿತ್ತು (ಹೊಳೆಯುತ್ತಿತ್ತು ॥

ಅ॥ ವಿ॥ ಶೋಣ-ಕೆಂಪು, ಶೋಣಾನದಿ. ರವಿಯ + ರಥ = ರವಿರಥ, ಷ. ತ. ರಸದೊಡನೆ ಸಹಿತವಾದ್ದು, ಸರಸ, ಸಹ, ಪೂ. ಬಹು. ಸ. ಕಿರಿದು + ಬಾಸುಳ್ಗಳ್ = ಕಿಸುಬಾಸುಳ್ಗಳ್, ವಿ. ಪೂ. ಕ. ॥೪೧॥

ಟೀ॥ ಈ ಪದ್ಯವು ಶ್ಲೇಷಾರ್ಥಮಾಗಿರ್ಪುದು ॥ ಸೂರ್ಯನ ಪರವಾಗಿಯೂ, ವಿಷ್ಣುವಿನ ಪರವಾಗಿಯೂ ಆಗುವುದು. ಸೂರ್ಯನ ಪರವಾಗಿ ॥ ಅಂದು-ಆವೇಳೆಯಲ್ಲಿ, ಪೂರ್ವಾಚಲದೊಳ್-ಪೂರ್ವಾದ್ರಿಯಲ್ಲಿ, ಎಸೆವ-ಶೋಭಿಸುತ್ತಲಿರುವ, ದಿನಪಂ-ಭಾಸ್ಕರನು, ಜಿತ-ಜಯಿಸಿದ (ಗೆದ್ದ), ತಮಂ-ಅಂಧಕಾರ ಉಳ್ಳವನಾಗಿಯೂ, ಭುವನ-ಪ್ರಪಂಚಗಳ, ಮಧ್ಯ-ಮಧ್ಯದ ಎಂದರೆ ಮಧ್ಯಭಾಗದಲ್ಲಿ, ಪ್ರಕಾಶಂ- ಕಾಂತಿಯಿಂದೊಡಗೂಡಿ ಪ್ರಜ್ವಲಿಸುತ್ತಿರುವನಾಗಿಯೂ, ವಿರಾಜಿತ - ಹೊಳೆಯುತ್ತಿರುವಂಥ, ವರ-ಶ್ರೇಷ್ಠವಾದಂಥ, ಅಹಃ-ಹಗಲುಹೊತ್ತಿನಲ್ಲಿ (ಪ್ರಾತಃಕಾಲದಲ್ಲಿ), ಶ್ರೀ-ಕಾಂತಿಯನ್ನು, ಧರಂ-ಹೊಂದಿರತಕ್ಕವನಾಗಿಯೂ, ಪಂಚ-ಐದಾದ, ಮುಖ-ಆಸ್ಯಗಳುಳ್ಳ ಈಶ್ವರನ, ಮೂರ್ತಿ-ಅಷ್ಟಮೂರ್ತಿಗಳೊಳಗೆ ಒಂದು ಸ್ವರೂಪವಾದ (ಒಂದು ಮೂರ್ತಿಯಾದ) ವನಾಗಿಯೂ, ನುತ-ಸ್ತೋತ್ರಮಾಡಲ್ಪಟ್ಟ, ಕಾಶ್ಯಪಂ-ಕಶ್ಯಪ ಮಹರ್ಷಿಯ ಪುತ್ರನಾಗಿಯೂ, ರಾಜ-ನಿಶಾಕರನ (ಚಂದ್ರನ), ತೇಜ-ಪ್ರಕಾಶವನ್ನು, ಹರಂ-ಪರಿಹರಿಸತಕ್ಕವನಾಗಿಯೂ (ಹೊಂದತಕ್ಕವನಾಗಿಯೂ), ದೂಷಣ-ನಿಂದೆಗೆ (ದೋಷ, ಪಾಪಕ್ಕೆ), ಅರಿ-ಹಗೆಯಾಗಿರುವವನಾಗಿಯೂ, (ಅಘಹರನಾಗಿಯೂ) ಗೊ- ಕಾಂತಿಗಳ, (ವೀಚಿಗಳ) ಕುಲ-ಗುಂಪಿನಿಂದ, ಜಾತನು-ಉದಯಿಸಿದವನಾಗಿಯೂ, ಅತಿ-ಹೆಚ್ಚಾದ, (ಬಹಳವಾದ) ಕಾಂತಿ-ಕಿರಣಗಳಿಂದ, (ಶೋಭೆಯಿಂದ) ಶೋಭಿತ-ಹೊಳೆಯತಕ್ಕ, ದಿಕ್-ದೆಶೆಗಳೂ, ಅಂಬರ-ಅಂತರಿಕ್ಷವೂ, ಇವನ್ನು ಉಳ್ಳವನಾಗಿಯೂ, ಕಲಿ-ಹೆಚ್ಚಾದಂಥ, ತಾಪ-ಪರಿತಾಪದಿಂದ, ಹೃತ-ಅಪಹರಿಸಲ್ಪಟ್ಟ, ಕುವಲಯನು-ಕನ್ನೈದಿಲೆಗಳುಳ್ಳವನಾಗಿಯೂ, ಚಕ್ರಿಯ-ಕೃಷ್ಣನ, ವಿಷ್ಣುವಿನ, ಅವತಾರ-ಅವತಾರಗಳ (ಅವತರ್-ಆಗು, ಬರು, ಇಳಿ), ದಶಕದ-ಹತ್ತಾದ, ಉನ್ನತಿಗಳಂ-ಅಧಿಕತೆಗಳನ್ನು (ಅಧಿಕ್ಯವನ್ನು) ತಳೆದು-ಪಡೆದವನಾಗಿ, (ಹೊಂದಿ) ಉದಯಂ-ಪ್ರಾತಃಕಾಲವನ್ನು (ಆವಿರ್ಭಾವವನ್ನು), ಗೈದನು-ಉಂಟುಮಾಡಿದನು ॥

ಟೀ॥ ವಿಷ್ಣುನಪರವಾಗಿ:-ಜಿತ-ಗೆಲ್ಲಲ್ಪಟ್ಟ, ತಮಂ- ತಾಮಸಗುಣವುಳ್ಳ, (ದಾನವನನ್ನು ಜಯಿಸಿ ಚತುರ್ವೇದಗಳನ್ನು ಉದ್ಧಾರಮಾಡಿ, ಅಜ್ಞಾನವೆಂಬ ಕತ್ತಲೆಯನ್ನು ಪರಿಹರಿಸತಕ್ಕವನಾಗಿಯೂ) ಭುವನ-ಕ್ಷೀರಾಂಬುಧಿಯ, ಮಧ್ಯೆ-ಮಧ್ಯ ಪ್ರದೇಶದಲ್ಲಿ, ಪ್ರಕಾಶಂ-ಕಾಂತಿಯಿಂದೊಡಗೂಡಿದವನಾಗಿಯೂ, ವಿರಾಜಿತ-ಶೋಭಿಸುತ್ತಿರುವ, ವರಾಹ-ಹಂದಿಯರೂಪವನ್ನು, ಶ್ರೀ-ಲಕ್ಷ್ಮೀದೇವಿಯನ್ನು, (ಕಾಂತಿಯತಿಶಯವನ್ನು) ಧರಿಸಿದವನಾಗಿಯೂ, ಪಂಚಮುಖ-ಮೃಗೇಂದ್ರನ, (ನರಸಿಂಹಾವತಾರಿಯಾಗಿಯೂ) ರೂಪ-ಆಕೃತಿಯುಳ್ಳವನಾಗಿಯೂ, ನುತ-ಸ್ತೋತ್ರಾರ್ಹನಾಗಿಯೂ, ಕಾಶ್ಯಪಂ-ಕಶ್ಯಪ ಋಷಿಗೆ ಪುತ್ರನಾಗಿಯೂ, ರಾಜ-ಭೂಪಾಲಕರ, ತೇಜ-ತೇಜಸ್ಸನ್ನು, (ಶಕ್ತಿಯನ್ನು) ಹರಂ-ಹೋಗಲಾಡಿಸಿದವನಾಗಿಯೂ, (ನಾಶ ಮಾಡಿದವನಾಗಿಯೂ) ದೂಷಣ-ದೂಷಣನೆಂಬ ರಕ್ಕಸನಿಗೆ, ಅರಿ-ಹಗೆಯಾದವನು ಆಗಿಯೂ, ಗೋಕುಲ-ಗೋಪಾಲಕರ ಪಳ್ಳಿಗಳಲ್ಲಿ, ಜಾತ-ಜನಿಸಿದವನಾಗಿಯೂ, (ಆವಿರ್ಭವಿಸಿದವನಾಗಿಯೂ) ಅತಿ-ಅತಿಶಯವಾದ, (ಹೆಚ್ಚಾದ) ಕಾಂತಿ-ಪ್ರಕಾಶದಿಂದ, ಶೋಭಿತ-ಹೊಳೆಯುತ್ತಿರುವ, ದಿಕ್-ದೆಶೆಗಳೇ, ಅಂಬರ-ಬಟ್ಟೆಯಾಗುಳ್ಳವನಾಗಿಯೂ, ಕಲಿ-ಕಲಿಯೆಂಬುವ ಯುಗದಲ್ಲಿ, ; ತಾಪ-ನೀಚರಿಂದುಂಟಾದ ಪರಿತಾಪವನ್ನು, ಹೃತ್-ಹೋಗಲಾಡಿಸಲ್ಪಟ್ಟ, (ಬಿಡುಗಡೆ ಮಾಡಿದ) ಕು-ಪೃಥ್ವಿಯ, ವಲಯಂ-ಮಂಡಲವುಳ್ಳವನಾಗಿಯೂ ಇರುವವನು ವಿಷ್ಣುವು ॥

ಹೋಗಲಾಡಿಸಿದವನಾಗಿಯೂ, (ತಮೋಗುಣವುಳ್ಳ ರಕ್ಕಸನನ್ನು ಜೈಸಿ ವೇದವನ್ನು ಪುನಹ ತಂದುಕೊಟ್ಟು), ಲೋಗರ ಅಜ್ಞಾನಾಂಧಕಾರವನ್ನು ಹೋಗಲಾಡಿಸಲೋಸುಗ ವಿಷ್ಣುವು ಮತ್ಸ್ಯಾವತಾರವಂ ಪೊಂದಿದನು) ಪ್ರಪಂಚದ ಮಧ್ಯಭಾಗದಲ್ಲಿ ಕಾಂತ್ಯತಿಶಯದಿಂದ ದೀಪ್ಯಮಾನನಾಗಿಯೂ (ಕ್ಷೀರಾಂಬುಧಿಯ ಮಧ್ಯದಲ್ಲಿ ವಾಸಮಾಡುವವನಾದ ವಿಷ್ಣುವು ಕೂರ್ಮಾವತಾರವಂ ಮಾಡಿದನು) ಪ್ರಕಾಶಿಸುವ ಹಗಲಿನಲ್ಲಿ ಶ್ರೇಷ್ಠವಾದ ಕಾಂತಿಯನ್ನು ಹೊಂದಿದವನಾಗಿಯೂ, (ವಿರಾಜಿತಮಾದ ವರಾಹ ರೂಪವನ್ನು ಧರಿಸಿ ಕಾಂತ್ಯತಿಶಯದಿಂದ ಯುಕ್ತನಾದವನು ವಿಷ್ಣುವು) ಪಂಚಮುಖನಾದ ಮಹೇಶ್ವರನ, ಅಷ್ಟಮೂರ್ತಿಗಳಲ್ಲಿ ಒಂದು ಮೂರ್ತಿ ಸ್ವರೂಪನಾಗಿಯೂ, (ನರಹರಿಯ ರೂಪವನ್ನು ಧರಿಸಿ ಹಿರಣ್ಯ ಕಶಿಪುವನ್ನು ನಾಶ

ಗಂಬರಂಕಲಿತಾಪ | ಹೃತಕುವಲಯಂ ಚಕ್ರಿಯವತಾರದಶಕದು | ನ್ನತಿಗಳಂತಳಿದೆಸೆವ ದಿನಪನುದಯಂಗೈದನಂದು ಪೂರ್ವಾಚಲಮೊಳು ||೪೨|| ಒಂದುಮಾರ್ಗದೊಳೆನಡೆಯದೆ ಸದಾದ್ವಿಜನಿಕರ | ದಂದವಂಕೆಡಿಸಿಗುರುಬುಧನುಂ ಗಳೋನ್ನತಿಗೆ | ಕುಂದನಿತ್ತುದರಿಂದ ಸಾರಥಿಹೆಳವನಾದ ನಾತ್ಮಜಂಲೋಕನುರಿಯೆ || ಮಂದನಾದಂನಿನ್ನಪತಿಗೆಂದುಪದ್ಮಿನಿಯ | ಮುಂದೆನಗುವಸಿ

ಅ|| ವಿ|| ವೇದವನ್ನು ಕದ್ದ ದಾನವನನ್ನು ಶಿಕ್ಷಿಸಲು ಮತ್ಸ್ಯಾವತಾರವನ್ನೂ, ಕ್ಷೀರಾಂಬುಧಿಯ ಮಥನಕಾಲದಲ್ಲಿ ಕೂರ್ಮಾವತಾರವನ್ನೂ, ತನ್ನ ಭಕ್ತನಾದ ಪ್ರಹ್ಲಾದನಂ ಪೊರೆವಾಗ ನೃಸಿಂಹಾವತಾರವನ್ನೂ, ಕುಸಿದು ಹೋಗಿದ್ದ ಪೃಥ್ವಿಯನ್ನು ಸ್ಥಿರಪಡಿಸಲು, ವರಾಹಾವತಾರವನ್ನೂ, ಬಲಿಚಕ್ರವರ್ತಿಯ ಅಹಂಕಾರವನ್ನು ಖಂಡಿಸಲೋಸುಗ, ವಾಮನಾವತಾರವನ್ನೂ ರಾಜಕುಲದ ಪ್ರಭುಗಳ ಗರ್ವವನ್ನು ತಗ್ಗಿಸಲು ಪರಶುರಾಮಾವತಾರವನ್ನೂ, ದುಷ್ಟರಾದ ರಾವಣ ಖರದೂಷಣಾದಿಗಳನ್ನು ಶಿಕ್ಷಿಸಲು ರಾಮಾವತಾರವನ್ನೂ, ಗೋಕುಲದಲ್ಲಿ ಹುಟ್ಟಿ ಗೋಪಾಲರನ್ನು ಗೋವುಗಳನ್ನು ರಕ್ಷಿಸಲು ಕೃಷ್ಣಾವತಾರವನ್ನೂ, ದಿಕ್ಕುಗಳನ್ನೇ ವಸ್ತ್ರವಾಗಿ ಧರಿಸಿದ್ದ ಬೌದ್ಧಾವತಾರವನ್ನೂ, ಮ್ಲೇಛರ ಬಾಧಾನಿವಾರಣಾರ್ಥವಾಗಿ ಕಲ್ಕ್ಯವತಾರವನ್ನೂ ಈ ರೀತಿಯಾಗಿ ವಿಷ್ಣುವು ದಶಾವತಾರಗಳನ್ನು ಮಾಡಿದನು. ಈಶ್ವರನ ಪಂಚಮುಖಗಳು–ಸದ್ಯೋಜಾತ, ವಾಮದೇವ, ಅಘೋರ, ತತ್ಪುರುಷ, ಈಶಾನ. ಅಷ್ಟಮೂರ್ತಿಗಳು–ಪೃಥ್ವಿ, ಅಪ್ಪು, ತೇಜಸ್ಸು, ವಾಯು, ಆಕಾಶ, ಚಂದ್ರ, ಸೂರ್ಯ ಯಜಮಾನ. ಗೋ–ಆಕಳು, ಸರಸ್ವತಿ, ಭೂಮಿ, ಪರ್ವತ, ನೀರು, ಆಕಾಶ, ಸ್ವರ್ಗ ||೪೨||

ಟೀ|| ಒಂದು ಮಾರ್ಗದೊಳೆ–ಒಂದೇ ರೀತಿಯಾದ ಪುಣ್ಯಮಾರ್ಗದಲ್ಲಿಯೇ, ನಡೆಯದೆ–ಅನುಸರಿಸಿಹೋಗದೆ, ಸದಾ–ನಿರಂತರದಲ್ಲಿಯೂ, ದ್ವಿಜ–ವಿಹಂಗಗಳ, ದ್ವಿಜ–ಭೂಸುರರ, ನಿಕರದ–ಗುಂಪಿನ, ಅಂದಮಂ–ರೀತಿಯನ್ನು, (ಚಂದವನ್ನು) ಕೆಡಿಸಿ–ಮಲಿನಮಾಡಿ, (ಹೋಗಲಾಡಿಸಿ) ಗುರು–ದೊಡ್ಡವರು, (ಜ್ಞಾನೋಪದೇಶವನ್ನು ಮಾಡತಕ್ಕವರು) ಬುಧ-ವಿದ್ವಾಂಸರು, ಮಂಗಳ–ಕಲ್ಯಾಣವನ್ನು ಊಹಿಸುವ ಜನಗಳು, ಇವರು–ಇಂತಹ ಜನರ, ಉನ್ನತಿಗೆ–ಏಳಿಗೆಗೆ, (ಮರ್ಯಾದೆಗೆ) ಗುರು–ಬೃಹಸ್ಪತಿಯು, ಬುಧ–ಬುಧಗ್ರಹ, (ಸೌಮ್ಯನು) ಮಂಗಳ-ಅಂಗಾರಕನೆಂಬುವನು, ಇವರುಗಳ–ಇಂತಹ ವಿವೇಕಿಗಳ, ಉನ್ನತಿಗೆ–ಏಳಿಗೆಗೆ (ಪ್ರವರ್ಧಮಾನಕ್ಕೆ) ಕುಂದನು–ಬಾಧಕವನ್ನು, (ತೊಂದರೆಯನ್ನು) ಇತ್ತುದರಿಂದ-ಉಂಟುಮಾಡಿದ್ದರಿಂದ, ನಿನ್ನ-ನಿನ್ನಯ, ಪತಿಗೆ–ವಲ್ಲಭನಾದ ಭಾಸ್ಕರನಿಗೆ, (ಇನನಾದ ಸೂರ್ಯನಿಗೆ) ಸಾರಥಿ-ರಥನಡಿಸುವವನಾದ, ಅರುಣನೆಂಬುವನು. ಹೆಳವಂ ಆದನು–ಎರಡುಕಾಲೂ ಇಲ್ಲದವನಾದನು, ಆತ್ಮಜ–ನನ್ನ ತನುಜನಾದ ಶನೀಶ್ವರನು, ಮಂದನಾದಂ–ನಿಧಾನಗಮನವುಳ್ಳವನಾದನು, (ಮಂದಗಮನವುಳ್ಳವನಾದನು) ಎಂದು–ಎಂಬದಾಗಿಹೇಳಿ, ಪದ್ಮಿನಿಯ–ತಾವರೆಯ, ಮುಂದೆ–ಎದುರಾಗಿ, ನಗುವ-ನಿಶಾವೇಳೆಯಲ್ಲಿ ವಿಕಶಿಸಿ ಹರ್ಷಗೊಳ್ಳುವ, ಸಿತೋತ್ಪಲಂಗಳು–ಬಿಳೀ ತಾವರೆಗಳು, (ಬಿಳಿಯ ನೈದಿಲೆ ಹೂಗಳು) ಇನನ-ಭಾಸ್ಕರನ, (ಪ್ರಿಯನ) ಉದಯದೋಳ್–ಉದ್ಭವಿಸುವ ಸಮಯದಲ್ಲಿ, ಕಂದಿದವು–ಕಾಂತಿ ಹೀನವಾದವು. ಪರ-ಇತರರ, (ಬೇರೆಯಾದವರ) ನಿಂದೆ-ತಿರಸ್ಕಾರವನ್ನು, ಗೈದ

ಮಾಡಿದವನು ವಿಷ್ಣುವು), ಸ್ತೋತ್ರಾರ್ಹನಾದ ಕಾಶ್ಯಪ ಮಹರ್ಷಿಗೆ ಪುತ್ರನಾಗಿಯೂ, (ಸ್ತೋತ್ರಾರ್ಹನಾದ ಕಾಶ್ಯಪ ಋಷಿ ಪುತ್ರನಾಗಿ ವಾಮನಾವತಾರವನ್ನು ಮಾಡಿದವನು ವಿಷ್ಣುವು), ನಿಶಾಕರನ (ಚಂದ್ರಕಾಂತಿಯನ್ನು ಅಪಹರಿಸಿದವನಾಗಿಯೂ) ಭೂಮಿಪಾಲಕ (ರಾಜರ) (ತೇಜಸ್ಸನ್ನು ಅಥವಾ ಶಕ್ತಿಯನ್ನು ಅಪಹರಿಸಿದವನು ಪರಶುರಾಮಾವತಾರಿಯಾದ ವಿಷ್ಣುವು) ಪಾಪಹರನಾಗಿಯೂ (ದೂಷಣನೆಂಬ ದಾನವನನ್ನು ಸಂಹರಿಸಿದವನು ವಿಷ್ಣುವು( ಕಿರಣಗಳ ಸಮುದಾಯದಿಂದ ಉದ್ಭವಿಸಿದವನಾಗಿಯೂ, (ಗೋಪಾಲಕರ ಪಳ್ಳಿಯಲ್ಲುದ್ಭವಿಸಿದವನಾದ ಕೃಷ್ಣಾವತಾರಿಯಾದ ವಿಷ್ಣುವು), ಅತ್ಯತಿಶಯವಾದ ಪ್ರಭೆಯಿಂದ ಕೂಡಿದ ದೆಶೆಗಳಿಂದಲೂ, ಆಕಾಶದಿಂದಲೂ ಯುಕ್ತನಾಗಿಯೂ, (ಅತ್ಯತಿಶಯವಾದ ದಿಕ್ಕುಗಳೇ ಅಂಬರವಾಗುಳ್ಳವನು ಎಂದರೆ ಬೌದ್ಧಾವತಾರಿಯಾದ ವಿಷ್ಣುವು), ಅತ್ಯಧಿಕವಾದ ತಾಪದಿಂದ ಹೊರಗಾಣಿಸಲ್ಪಟ್ಟ ನೈದಿಲೆಗಳುಳ್ಳವನಾಗಿಯೂ), ಕಲಿಯುಗದಲ್ಲಿ ಲೋಕಬಾಹಿರರ ಮತ್ತು ಮ್ಲೇಛ್ಛಾದಿನಿಕರದಿಂದುಂಟಾದ ತೊಂದರೆಯ ದೆಸೆಯಿಂದ ಬಿಟ್ಟಿರುವ ಭೂಭಾಗವುಳ್ಳ ಕಲ್ಕ್ಯವತಾರಿಯಾದವನು ವಿಷ್ಣುವು, ಈ ರೀತಿಯಾಗಿ ಮಹಾ ವಿಷ್ಣುವಿನ ದಶಾವತಾರಗಳನ್ನು ತಳೆದವನಾಗಿ ಉದಯಿಸಿದವನಾದನು. (ಸೂರ್ಯೋದಯವಾಯಿತು, ಸೂರ್ಯನನ್ನು ವಿಷ್ಣುವೆಂಬದಾಗಿ ಪೂಜಿಸುತ್ತಾರೆ ಇದು ಸತ್ಯವಾದದ್ದೆ ಸರಿ), || ೪೨ ||

ಧರ್ಮಮಾರ್ಗ ಪ್ರವರ್ತಕನಾಗದೆ ದ್ವಿಜರ ಪಕ್ಷಿಗಳ ರೀತಿಯನ್ನು ಮಲಿನಮಾಡಿ, ಗುರುಗಳು, ಪಂಡಿತ ಶ್ರೇಷ್ಠರು, ಮಂಗಳವನ್ನು ಕಲ್ಪಿಸುವವರು, ಇವರುಗಳ ಉನ್ನತಿಗೆ ಬೃಹಸ್ಪತಿಯು, ಬುಧನು, ಮಂಗಳನು (ಅಂಗಾರಕ ಗ್ರಹವು), ಇವರುಗಳ ಏಳಿಗೆಗೆ ಕುಂದಕವನ್ನುಂಟುಮಾಡಿದುದರಿಂದ, ನಿನ್ನ ಪತಿಯಾದ ಸೂರ್ಯನಿಗೆ ಸಾರಥಿಯು ಹೇಳವನಾದನು, ಪುತ್ರನಾದ ಶನೈಶ್ಚರನು ನಿಧಾನವಾದ ಗಮನವುಳ್ಳವನಾದನು ಎಂಬದಾಗಿ ಪದ್ಮಿನಿಯ ಮುಂದೆ ನಗುತ್ತ ಸಂಧ್ಯಾಕಾಲದಲ್ಲಿ ವಿಕಸಿಸಿ ನಲಿಯುತ್ತಿರುವ ಸಿತೋತ್ಪಲಂಗಳು (ಕರೆನೈದಿಲೆ ಮತ್ತು ಬಿಳಿ ನೈದಿಲೆಗಳು) ಸೂರ್ಯೋದಯ ಕಾಲದಲ್ಲಿ, ಬಾಡಲುಪಕ್ರಮಿಸಿ

ತ್ತೋತ್ಪಲಂಗಳಿನನುದಯದೋ | ಳ್ಕಂದಿದವುಪರನಿಂದೆಗೈದರ್ಗೆ ಪರಿಭವಂ ಕಯ್ಯೊಡನೆತೋರದಿಹುದೆ ‖ ೪೩ ‖ ಆದಿತ್ಯನುದಯ ದೋಳ್ಫಲುಗುಣನಸೂನುಸಂ | ಧ್ಯಾದಿಗಳನಾಚರಿಸಿವಸ್ತುಗಳನೈದೆಸಂ | ಪಾದಿಸಿಕಿರೀಟಿಯಂಕಾಣಲನುವಾದನರ್ಜುನನಿತ್ತ ಪಾಳೆಯದೊಳು ‖ ಸಾಧಿಸಿಸಕಲನಿತ್ಯಕೃತ್ಯಮಂಮಾಡಿಮಧು | ಸೂದನನಚರಣಮಂನೆನೆದುವೃಷಕೇತುಮೊದ | ಲಾದ ವೀರರ್ಕಳಂಕರೆಸಿದಂ ಹಯಂಬಿಡಿಸಿಕೊಂಬ ತವಕದಿಂದ ‖ ೪೪ ‖ ಅನುಸಾಲ್ವಕನ ಸೇನೆಯಾದವರ ಚತುರಂಗ | ಮಿನಸುತನ ಸೂನುವಿನವೋಹರಂ ಯೌವನಾ | ಶ್ವನಪಾಯದಳ ಮತುಳಹಂಸಕೇತುವಿನ ಪಡೆನೀಲಧ್ವಜನವಾಹಿನೀ ‖ ದನುಜಾರಿ

ಗೆ–ಮಾಡಿದಂಥವರಿಗೆ, (ಎಸಗಿದವರಿಗೆ) ಪರಿಭವಂ–ಅವಮರ್ಯಾದೆಯು, ಕೈಯೊಡನೆ–ತತ್ಕ್ಷಣವೇ, ತೋರದೆ–ಕಾಣಬರದೆ, ಇಹುದೇ–ಇದ್ದೀತೆ? (ತತ್ಕ್ಷಣವೇ ಅಮರ್ಯಾದೆಯಾಗುತ್ತದೆ.)

ಅ‖ ವಿ‖ ಸಿತವಲ್ಲದ್ದು–ಅಸಿತ ನ. ತ. ದ್ವಿಜ–ಬ್ರಾಹ್ಮಣ, ಹಕ್ಕಿ, ಹಲ್ಲು. ಬುಧ–ವಿದ್ವಾಂಸ, ಬುಧಗ್ರಹ. ಜ್ಞಾನ+ಉದಯ=ಜ್ಞಾನೋದಯ ಗುಣ. ಸ. ಮಂಗಳ–ಶುಭ, ಮಂಗಳಗ್ರಹ. ಅಸಿತವಾದ+ಉತ್ಪಲ=ಅಸಿತೋತ್ಪಲ ವಿ. ಪೂ. ಕ. ಭುವನ–ಪ್ರಪಂಚ, ಜನ, ನೀರು. ಸೂರ್ಯೋದಯವಾಗಲು ತಾವರೆಗಳು ಅರಳಿದವು, ನೈದಿಲೆಗಳು ಮುಕುಳಿತವಾದವು ‖೪೩‖

ಟೀ‖ ಫಲುಗುಣನ-ಧನಂಜಯನ, ಸೂನು–ತನುಜನಾದ ಬಭ್ರುವಾಹನನು, ಆದಿತ್ಯನ–ಭಾಸ್ಕರನ, ಉದಯದೋಳ್–ಆವಿರ್ಭಾವದಲ್ಲಿಯೆ, (ಎಂದರೆ ಸೂರ್ಯೋದಯಕಾಲದಲ್ಲಿ) ಸಂಧ್ಯಾದಿಗಳಂ–ಸಂಧ್ಯಾವಂದನೆಯೇ ಆದಿಯಾದ ಕರ್ಮಗಳನ್ನು, ಆಚರಿಸಿ–ನೆರವೇರಿಸಿಕೊಂಡು, (ಮಾಡಿಕೊಂಡು) ವಸ್ತುಗಳಂ–ಅರ್ಜುನನಿಗೆ ಒಪ್ಪಿಸತಕ್ಕ ಪದಾರ್ಥಗಳನ್ನು, ಸಂಪಾದಿಸಿ–ಅಣಿಮಾಡಿಕೊಂಡು, (ಆರ್ಜಿಸಿ) ಕಿರೀಟಿಯಂ–ಪಾರ್ಥನನ್ನು, ಕಾಣಲು-ನೋಡುವ ಉದ್ದೇಶದಿಂದ, (ದರ್ಶನಮಾಡಿಕೊಳ್ಳಲೋಸುಗ) ಐದೆ–ಆಗಮಿಸುತ್ತಿರಲು, ಅರ್ಜುನಂ-ಫಲುಗುಣನು, ಇತ್ತ-ತಾನು ನಿಂತಿರುವ ಸೇನೆಯ ಕಡೆ, ಪಾಳಯದೊಳು–ಗುಂಪಿನಲ್ಲಿ, (ತಂಡದಲ್ಲಿ) ಸಕಲ–ಸರ್ವ ವಿಧವಾದ, ನಿತ್ಯಕೃತ್ಯಮಂ–ನಿತ್ಯನೈಮಿತ್ತಿಕ ಕಾರ್ಯಗಳನು, (ನಿತ್ಯವೂ ಮಾಡತಕ್ಕ ಕರ್ಮಗಳನ್ನು) ಸಾಧಿಸಿ–ನೆರವೇರಿಸಿಕೊಂಡು, ಮಧುಸೂದನನ–ಮಧುವೆಂಬ ದೈತ್ಯನನ್ನು ಸಂಹರಿಸಿದ ಶ್ರೀ ಕೃಷ್ಣನ, ಚರಣಮಂ-ಪಾದಾರವಿಂದವನ್ನು, ನೆನದು–ಸ್ಮರಿಸಿ, (ಸ್ಮರಣೆಮಾಡಿ) ವೃಷಕೇತು–ವೃಷಧ್ವಜನೆ, ಮೊದಲಾದ–ಆದಿಯಾದ, ವೀರರ್ಕಳಂ–ಪರಾಕ್ರಮಶಾಲಿಗಳನ್ನು ಕುರಿತು, ಹಯಮಂ–ಯಜ್ಞಾಶ್ವವನ್ನು. ಬಿಡಿಸಿಕೊಂಬ–ಬಭ್ರುವಾಹನನಿಂದ ಬಿಡಿಸಿಕೊಳ್ಳತಕ್ಕ, ತವಕದಿಂದ–ಅಭಿಪ್ರಾಯದಿಂದ, (ಆತುರದಿಂದ) ಕರೆಸಿದಂ–ತನ್ನ ಬಳಿಗೆ ಕರೆಯಿಸಿಕೊಂಡನು.

ಅ‖ ವಿ‖ ವಿಧಿ+ಉಕ್ತಿ=ವಿಧ್ಯುಕ್ತಿ ಯಣ್. ಸಂ. ಕಾರ್ಯ-ತ್ಸ. ಕಜ್ಜ–ದ್ಭ. ಮಧು–ಹೆಂಡ, ರಾಕ್ಷಸ, ಜೇನುತುಪ್ಪ‖೪೪‖

ಟೀ‖ ಅನುಸಾಲ್ವನ-ಸಾಲ್ವಾನುಜನಾದ ಅನುಸಾಲ್ವನ, ಸೇನೆ–ಸೈನ್ಯವು, ಯಾದವರ–ಯದುವೀರರಾದ ಪ್ರದ್ಯುಮ್ನಾದಿಗಳ, ಚತುರಂಗ–ಹಸ್ತ್ಯಶ್ವರಥಪದಾತಿಗಳಿಂದಾವೃತವಾದ ಸೇನೆಯು, ಇನ-ಸೂರ್ಯನ, ಸುತನ– ಮಗನಾದ ಕರ್ಣನ, ಸೂನುವಿನ-ಪುತ್ರನಾದ ವೃಷಧ್ವಜನೆಂಬುವನ, ವೋಹರಂ-ಸೇನೆಯು, ಯೌವನಾಶ್ವನ–ಯುವನಾಶ್ವನ ಪುತ್ರನಾದ ಯೌವನಾಶ್ವನೆಂಬುವನ, ಪಾಯದಳಂ–ಪದಾತಿಯು, ಅತುಲ–ಸಾಮ್ಯವಿಲ್ಲದ, (ಅಧಿಕವಾದ) ಹಂಸಕೇತುವಿನ–ಹಂಸಧ್ವಜನ, ಪಡೆ-ಸೈನ್ಯವು, ನೀಲಧ್ವಜನ-ಅಸಿತಧ್ವಜನ, ವಾಹಿನಿ–ದಂಡು, ದನುಜ–ದಾನವರಿಗೆ, ಅರಿ–ಹಗೆಯಾದ ಶ್ರೀ ಕೃಷ್ಣನ, ನಂದನನ-ಸುತನಾದ ಪ್ರದ್ಯುಮ್ನನೆಂಬುವನ, ನೇಮದಿಂ–ಆಜ್ಞಾನುಸಾರವಾಗಿ, (ಅಣತಿಯಾದ ಮೇರೆಗೆ) ಸಂಗ್ರಾಮಕೆ–ಕಾಳಗಕ್ಕೆ, (ಆಹವಕ್ಕೆ) ಅನುವಾಗಿ–

ದುವು, ಲೋಕದಲ್ಲಿ ಅನ್ಯರನ್ನು ನಿಂದಿಸಿದುದೇಯಾದರೆ ತಮಗೂ ಪರಿಭವವು ಒಡನೆಯೇ ಬರುತ್ತದೆಂಬುದು, ಸಹಜವಾದುದು (ಸೂರ್ಯೋದಯವಾಗಲು ಕಮಲಂಗಳು ಅರಳಿದವು, ಕನ್ನೈದಿಲೆಗಳು ಮುಕುಳಿತವಾದವು) ‖೪೩‖ ಆಗ ಫಲುಗುಣನ ಪುತ್ರನಾದ ಬಭ್ರುವಾಹನನು, ಸೂರೋದಯಕಾಲದಲ್ಲಿಯೇ ವಿಧಿಯಲ್ಲಿ ಹೇಳಿರುವ ಪ್ರಕಾರ ಅಘಮರ್ಷಣಂಗೆಯ್ದು ಅರ್ಘ್ಯಮಂ ಇತ್ತು ಸಂಧ್ಯಾದಿ ಕರ್ಮಗಳನ್ನಾಚರಿಸಿಕೊಂಡು, ತನ್ನ ಜನಕನಾದ ಪಾರ್ಥನನ್ನು ಕಾಣಲೋಸುಗ ವಸ್ತುವಾಹನಾದಿ ಸಕಲ ವಿಧ ವಸ್ತುಗಳೊಡಗೊಂಡು ಬರುತ್ತಿರಲಾಗಿ, ಇತ್ತಲೀ ಪಾರ್ಥನ ಸೇನಾ ಶಿಬಿರದಲ್ಲಿ ಕುಂತೀಪುತ್ರನಾದ ಪಾರ್ಥನು, ಸೂರ್ಯೋದಯ ಕಾಲಕ್ಕೆ ಸರಿಯಾಗಿ ಸಂಧ್ಯಾದಿ ಕರ್ಮಗಳನ್ನು ಪೂರೈಸಿಕೊಂಡು, ಶ್ರೀ ಕೃಷ್ಣನ ಚರಣಾರವಿಂದವನ್ನು ಧ್ಯಾನಿಸಿದವನಾಗಿ ವೃಷಕೇತು, ಪ್ರದ್ಯುಮ್ನಾದಿಗಳನ್ನು, ಯಜ್ಞಾಶ್ವವನ್ನು ಬಿಡಿಸಿಕೊಂಡು ಬರುವ ಮಾರ್ಗವನ್ನು ಯೋಚಿಸಲು ತನ್ನ ಬಳಿಗೆ ಬರಮಾಡಿಕೊಂಡನು ಆಗ ಹಂಸಧ್ವಜನ ಗಣಿತಕ್ಕೊದಗದ ಸೇನೆಯು, ಅನುಸಾಲ್ವಕನ ಅಪರಿಮಿತವಾದ ವಾಹಿನಿಯು, ವೃಷಕೇತುವಿನ ಲಕ್ಷಾಂತರ ಸೈನ್ಯವು, ಯಾದವರ ಹಸ್ತ್ಯಶ್ವರಥ ಪದಾತಿಗಳಿಂದ ಕೂಡಿದ ಸೇನೆಯು, ಸಾಂಬ ಅನಿರುದ್ಧ,

ನಂದನನನೇಮುದಿಂ ಸಂಗ್ರಾಮ | ಕನುವಾಗಿ ಪೊರಮಟ್ಟುದಾಗ ಸನ್ನಾಹದಿಂ | ಘನವಾದ್ಯ ರಭಸದಿಂದರ್ಜುನಂ ಬಂದು
ನಿಂದಂ ಮುಂದೆ ದೊರೆಗಳೊಡನೆ ‖ ೪೫ ‖ ಆ ಸಮಯದೊಳ್ಬಭ್ರುವಾಹನಂಪೊರಮಟ್ಟ | ನಾಸುಬುದ್ಧಿಪ್ರಮುಖಮಂತ್ರಿಗೆ
ಳಗಡಣದಿಂ | ದಾಸಕಲವಸ್ತು ಸಹಿತಾಕುದುರೆಯಂಕೊಂಡು ನಿಖಿಳಚತುರಂಗ ದೊಡನೆ ‖ ಭಾಸುರದ ಕಲಶಕನ್ನಡಿವಿಡಿದು
ನಡೆತಹವಿ ‖ ಲಾಸಿನಿಯರೊಗ್ಗಿನಿಂ ಸಂದಣಿಯ ಪುರಜನದ | ಭೂಸುರಸ್ತೋಮದಿಂ ಗುಡಿತೋರಣಾವಳಿಯ ಸಿಂಗರದ
ಪದಪಿನಿಂದ ‖ ೪೬ ‖ ಎಲ್ಲಿಕೌಂತೇಯನಿರ್ದಪನಲ್ಲಿಗಾಗಿ ಬಂ | ದಲ್ಲಿ ನಿಲ್ಲದೆಸಂಭ್ರಮದಲಿನಡೆತಂದು ಮೈ | ಭುಲ್ಲವಿಸೆ

---

ಸನ್ನದ್ಧವಾಗಿ, ಪೊರಮಟ್ಟುದು–ಬಿಟ್ಟು ಹೊರಟಿತು, (ನಡೆಯಿತು) ಆಗ–ಆ ಕಾಲದಲ್ಲಿ, ಸನ್ನಾಹದಿಂದ–ಯುದ್ಧದ ನಿಮಿತ್ತದಿಂದ, (ಯುದ್ಧಕಾರ್ಯದಿಂದ) ಘನ–ದಟ್ಟವಾದ, (ನಿಬಿಡವಾದ) ವಾದ್ಯ–ಭೇರಿ, ನಗಾರಿ ಮೊದಲಾದ ವಾದ್ಯ ವಿಶೇಷಗಳ, ರಭಸದಿಂದ–ವೇಗದಿಂದ, (ಆರ್ಭಟದಿಂದ) ಅರ್ಜುನಂ–ಪಾರ್ಥನು, ದೊರೆಗಳೊಡನೆ-ಸಾಮಂತ ನರಪತಿಗಳ ಸಂಗಡ, ಮುಂದೆ–ಸೈನ್ಯದ ಮುಂದುಗಡೆಯಲ್ಲಿ, ಬಂದು-ಬಂದವನಾಗಿ, ನಿಂದಂ–ನಿಂತುಕೊಂಡನು.

ಅ‖ ವಿ‖ ನಂದನ–ಮಗ, ಇಂದ್ರನ ಉದ್ಯಾನ ವನ, ನಂದನ ಸಂವತ್ಸರ. ದನು–ದನುವಿನಲ್ಲಿ, ಜ-ಹುಟ್ಟಿದನು. ದನುಜ+ಅರಿ=ದನುಜಾರಿ ಷ. ತ. ಘನ–ಮೇಘ, ಅಧಿಕ, ಘನಾಕೃತಿ. ‖೪೫‖

ಟೀ‖ ಆ ಸಮಯದೋಳ್–ಆ ಕಾಲದಲ್ಲಿ, ಬಭ್ರುವಾಹನಂ–ನಕುಲಧ್ವಜನಾದ ಬಭ್ರುವಾಹನನು, ಆ ಸುಬುದ್ಧಿ–ಆ ಸುಬುದ್ಧಿಯೆಂಬುವ ಅಮಾತ್ಯನೆ, ಪ್ರಮುಖ–ಶ್ರೇಷ್ಠರಾದ, (ಆದಿಯಾದ) ಮಂತ್ರಿಗಳ-ಅಮಾತ್ಯರ, (ಮಂತ್ರೀಶ್ವರರ) ಗಡಣದಿಂದ–ಸಮುದಾಯದಿಂದ, (ಅಬ್ಬರದಿಂದ) ಆ ಸಕಲವಸ್ತು-ಆ ಸರ್ವ ವಿಧವಾದ ಪದಾರ್ಥಗಳ, ಸಹಿತ–ಸಮೇತವಾಗಿ, ಆ ಕುದುರೆಯಂ–ಆ ಯಜ್ಞದ ತುರಗವನ್ನು, ಕೊಂಡು–ತನ್ನ ಸಂಗಡಲೇ ತೆಗೆದುಕೊಂಡು, ನಿಖಿಲ–ಸಮಸ್ತವಾದ, ಚತುರಂಗದೊಡನೆ-ಚತುರಂಗ ಬಲಾನ್ವಿತನಾಗಿ, (ಹಸ್ತಿ, ಅಶ್ವ, ರಥ ಪದಾತಿಗಳೊಡನೆ) ಭಾಸುರ–ಪ್ರಕಾಶಮಾನವಾದ, ಕಲಶ-ನೀರು ತುಂಬಿದ ಕಲಶವು, ಕನ್ನಡಿ–ದರ್ಪಣವು, ಇವೇ ಮೊದಲಾದುವನ್ನು, ಪಿಡಿದು–ಹೊಂದಿದವರಾಗಿ, (ಹಿಡಿದುಕೊಂಡು) ನಡೆತಹ–ನಡೆದು ಬರುತ್ತಲಿರುವ, ವಿಲಾಸಿನಿಯರ–ವೈಭವವುಳ್ಳ ಸ್ತ್ರೀಯರ, ಒಗ್ಗಿನಿಂ–ಸಮುದಾಯದಿಂದ, ಸಂದಣಿಯ–ಒಟ್ಟಾಗಿರುವ, ಪುರಜನದ–ನಾಗರಿಕರ, (ಪಟ್ಟಣಿಗರ) ಭೂಸುರ–ಭೂ ದೇವತೆಗಳಾದ ವಿಪ್ರರ, ಸ್ತೋಮದಿಂ–ಸಮುದಾಯದಿಂದ, (ಸಂಘದಿಂದ) ಗುಡಿ–ಧ್ವಜಗಳ, ತೋರಣ–ಮಕರ ತೋರಣಗಳ, ಆವಳಿಯ–ಸಮೂಹದ, (ಸಾಲಿನ) ಸಿಂಗರದ–ಶೃಂಗಾರದ, ಪದಪಿನಿಂ-ವೈಭವಾತಿಶಯದಿಂದ, ಪೊರಮಟ್ಟನು–ಹೊರಟವನಾದನು.

ಅ‖ ವಿ‖ ಅದು+ಕುದುರೆ=ಆ ಕುದುರೆ ಗಮಕ. ಸ. (ಚತುರಂಗ ಬಲ–ಹಸ್ತ್ಯಶ್ವರಥ ಪದಾತಿ) ಪ್ರಮುಖ–ಶ್ರೇಷ್ಠ, ಸಮೂಹ. ಪುನ್ನಾಗ–ವೃಕ್ಷ, ಚತುರೋಪಾಯ–ಸಾಮ, ದಾನ, ಭೇದ, ದಂಡ. ಮೋಹಚತುಷ್ಟಯ-ಲಜ್ಜಾಮೋಹ, ವಿಭವಮೋಹ, ಕರುಣಮೋಹ, ನಿಜಮೋಹ ‖೪೬‖

ಟೀ‖ ಬಭ್ರುವಾಹನಂ–ನಕುಲಧ್ವಜನು, ಕೌಂತೇಯನು-ಕುಂತೀ ಪುತ್ರನಾದ ಪಾರ್ಥನು, ಎಲ್ಲಿ-ಆವ ಪ್ರದೇಶದಲ್ಲಿ, ಇರ್ದಪಂ-ಇರುತ್ತಿದ್ದನೊ, ಅಲ್ಲಿಗಾಗಿ–ಆ ಪ್ರದೇಶವನ್ನು ಕುರಿತು, ಬಂದು-ಬಂದವನಾಗಿ, ಅಲ್ಲಿ-ಆ ಅರ್ಜುನನಿದ್ದ ಸ್ಥಳದಲ್ಲಿ,

---

ಪ್ರದ್ಯುಮ್ನ, ಅಸಿತಧ್ವಜಾದಿಗಳ ಸುಶಿಕ್ಷಿತಮಾದ ಸೇನೆಯು, ಯೌವನಾಶ್ವನ ಕಾಲ್ಬಲವು, ಪರೆಯುಗಿದ ಉರಗದಂತೆ ರೋಷಯುಕ್ತವಾಗಿಯೂ ಅಂಬುಧಿಯ ತೆರೆಯಂತೆ ಅತ್ಯಧಿಕವಾಗಿಯೂ, ನಿಶಾಚರರಿಗೆ ಹಗೆಯಾದ ಶ್ರೀಕೃಷ್ಣನ ನಂದನನಾದ ಪ್ರದ್ಯುಮ್ನನ ನೇಮದಂತೆ ಅನುವಾಗಿ ಸಂಗ್ರಾಮಕ್ಕೆ ಪೊರಮಟ್ಟಿತು. ಆ ಸಮಯದಲ್ಲಿ ಯುದ್ಧೋತ್ಸಾಹದಿಂದ ನಿಬಿಡೀಕೃತಮಾದ ಭೇರಿ, ರಣಮಾರೀ, ಪಟಹ, ಢಕ್ಕೆ, ಕಹಳೆ, ಮುರಜವೇ ಮೊದಲಾದವುಗಳ ಆರಭಸದಿಂದ ಪಾರ್ಥನು ತನ್ನ ಚತುರಂಗ ಸೈನ್ಯದಿಂದಲೂ, ಸಾಮಂತರಾಜರೊಡನೆಯೂ ಬಂದು ಸೇನಾ ಮುಖದಲ್ಲಿ ಮುಂದಾಳಾಗಿ ನಿಂತನು ‖ ೪೫ ‖ ಆ ವೇಳೆಗೆ ಸರಿಯಾಗಿ ಬಭ್ರುವಾಹನನು ತನ್ನ ಮುಖ್ಯಮಂತ್ರಿಯಾದ ಸುಬುದ್ಧಿಯೇ ಆದಿಯಾಗಿರುವ ಪ್ರಮುಖರಾದ ಮಂತ್ರಿಗಳ ಗಡಣದಿಂದ ತಂದೆಯಾದ ಕಿರೀಟಿಗೊಪ್ಪಿಸತಕ್ಕ ಸಕಲೈಶ್ವರ್ಯವನ್ನೂ, ವಿವಿಧ ವಸ್ತು ವಾಹನಾದಿ ಪದಾರ್ಥಗಳನ್ನೂ, ಬರೆಯಿಸಿ ಹಸ್ತ್ಯಶ್ವರಥ ಪದಾತಿಗಳಿಂದ ಕೂಡಿದವನಾಗಿಯೂ, ಪೂರ್ಣ ಕುಂಭವೇ ಮೊದಲಾದ ಕಲಶ ಕನ್ನಡಿ ಮೊದಲಾದವುಗಳಿಂದ ಯುತರಾದ ಯುವತಿಯರಿಂದಲೂ, ಪುರಜನದ ಸ್ತೋಮದಿಂದಲೂ, ಭೂಸುರವ್ರಾತದಿಂದಲೂ, ಸಕಲ ವಿಧಗಳಾದ ರಾಜ ಮರ್ಯಾದೆಗಳಿಂದಲೂ, ಸಿಂಗರದ ಪದಪಿನಿಂದಲೂ ಪೊರಮಟ್ಟನು ‖೪೬‖ ಅನಂತರದಲ್ಲಿ ಬಭ್ರುವಾಹನನು ತನ್ನ ಜನಕನಾದ ಪಾರ್ಥನು ಇದ್ದ ಸ್ಥಳಕ್ಕೆ

ಷದಿಂ ಪಾರ್ಥನಂಡುಂಡು ನಿಜಮೌಳಿಯಂ ತೆಗೆದು ನರನ‌ || ಮೆಲ್ಲಡಿಗನರ್ಘ್ಯ ರತ್ನಂಗಳಂಸುರಿದು ಕರ | ಪಲ್ಲವದ್ವಿತಯಮುಂ ಮುಗಿದು ಭಯಭಕ್ತಿಯಿಂ | ಚೆಲ್ಲಿದ ನೊಡಲನಿಳೆಯೊಳಾಬಭ್ರುವಾಹನಂ ನೀಡಿ ಸಾಷ್ಟಾಂಗದಿಂದ ||೪೭|| ಅರಸಕೇಳಾ ಬಭ್ರುವಾಹನನೊಡನೆ ಬಂದ | ಪರಿವಾರಮಾ ಪುರಜನಂಗಳಾಕಾಮಿನಿಯ | ರರಳಮಳೆ ಮುಕ್ತಾಫಲಂಗಳಂ ಸುರಿದರರ್ಜುನನ ಮಸ್ತಕದಮೇಲೆ || ವರ ಸುಬುದ್ಧಿ ಪ್ರಮುಖ ಮಂತ್ರಿಗಳ್ಪಂ ದರೊ | ತ್ತರಿಸಿ ಕಾಣಿಕೆಗೊಂಡು ಬಳಿಕ ವಿಸ್ಮಿತನಾಗಿ | ನರನೆಲೆ

---

ನಿದೆ-ಸುಮ್ಮನೆ ನಿಂತುಕೊಳ್ಳದೆ, (ಸುಮ್ಮನಿರದೆ) ಸಂಭ್ರಮದಲಿ-ವೈಭವದಿಂದ, (ಆತುರದಿಂದ) ನಡೆತಂದು-ಬಂದವನಾಗಿ, ಮೈ-ಅಂಗವು, (ದೇಹವು) ಘುಲ್ಲವಿಸೆ-ಆನಂದದಿಂದುಬ್ಬಲು, ಹರ್ಷದಿಂ-ಪ್ರೀತಿಯಿಂದ, ಪಾರ್ಥನಂ-ಫಲುಗುಣನನ್ನು, ಕಂಡು-ನೋಡಿದವನಾಗಿ, ನಿಜ-ತನ್ನಯ, ಮೌಳಿಯಂ-ಕಿರೀಟವನ್ನು, (ಮರ್ಯಾದಾರ್ಥವಾಗಿ ತೆಗೆದು) ನರನ-ಪಾರ್ಥನ, ಮೆಲ್ಲಡಿಗೆ-ಮೃದುವಾದ ಚರಣಕ್ಕೆ, ಅನರ್ಘ್ಯ-ಅತಿಶಯವಾದ, ರತ್ನಂಗಳಂ-ನವರತ್ನಗಳನ್ನು, ಸುರಿದು-ರಾಶಿಹಾಕಿ, ಕರಪಲ್ಲವ-ಚಿಗುರಿನಂತಿರುವ ಹಸ್ತಗಳ, ದ್ವಿತಯಮುಂ-ಯುಗ್ಮವನ್ನು, (ಚಿಗುರಿ ಗೆಣೆಯಾದ ಹಸ್ತದ್ವಯವನ್ನು) ಮುಗಿದು-ಜೋಡಿಸಿಕೊಂಡು, ಭಯಭಕ್ತಿಯಿಂ-ಹಿರಿಯರಲ್ಲಿ ಕಿರಿಯರಿಗಿರಬೇಕಾದ ಭಯದಿಂದ ಕೂಡಿದ ಬಕುತಿಯಿಂದ, ಸಾಷ್ಟಾಂಗದಿಂ-ಅಷ್ಟವಿಧವಾದ ದೇಹದ ನಮಸ್ಕಾರದಿಂದ, (ಅಷ್ಟಾಂಗಗಳೊಡನೆ) ನೀಡಿ-ಶರೀರವನ್ನು ಉದ್ದವಾಗಿ ಚಾಚಿಕೊಂಡು, ಇಳೆಯೊಳು-ಭೂಮಿಯಲ್ಲಿ, ಒಡಲನು-ತನ್ನಯ ದೇಹವನ್ನು, ಚಲ್ಲಿದನು-ನೀಡಿದನು. [ಉದ್ದವಾಗಿ ನಮಸ್ಕಾರ ಮಾಡಿದನು] ||

ಅ|| ವಿ|| ಸಾಷ್ಟಾಂಗ-ಪಾದದ್ವಯ, ಭುಜದ್ವಯ, ಹಸ್ತದ್ವಯ, ವಕ್ಷ, ಲಲಾಟ, ಅಷ್ಟಪ್ರಮಾಣಗಳು- ಪ್ರತ್ಯಕ್ಷ, ಅನುಮಾನ, ಆಗಮ, ಅರ್ಥಾಪತ್ತಿ, ಉಪಮಾನ, ಅನುಪಲಬ್ಧಿ, ಸಂಭವ, ಐತಿಹ್ಯ. ಅಷ್ಟೈಶ್ವರ್ಯ-ದಾಸೀಜನ, ಭೃತ್ಯ, ಪುತ್ರ, ಬಂಧುವರ್ಗ, ವಸ್ತ್ರ, ವಾಹನ, ಧನ, ಧಾನ್ಯ ||೪೭||

ಟೀ|| ಅರಸ-ಎಲೈ ಜನಮೇಜಯ ಭೂಪಾಲನೇ, ಕೇಳು-ಆಲಿಸುವನಾಗು, ಆ ಬಭ್ರುವಾಹನನ-ಆ ನಕುಲಧ್ವಜನ, ಒಡನೆ-ಕೂಡೆ, (ಸಹವಾಸದಿಂದ) ಬಂದ-ಬಂದಿರುವ, ಪರಿವಾರಂ-ರಾಜಕಾರ್ಯೋದ್ಯೋಗಿಗಳು, ಆ ಪುರಜನಂಗಳು-ಆ ಮಣಿಪುರದಲ್ಲಿ ವಾಸಮಾಡುವ ಜನರು, ಆಕಾಮಿನಿಯರು-ಆ ವಿಲಾಸಿನಿಯರು, (ಆ ಹೆಂಗಸರು) ಅರಳ-ಅರಳಿನ, (ಬತ್ತದರಳಿನ) ಮತ್ತು-ಇನ್ನು, ಪುಷ್ಪಗಳ, ಮಳೆ-ವೃಷ್ಟಿಯು, ಮುಕ್ತಾಫಲಂಗಳಂ-ಮೌಕ್ತಿಕಗಳನ್ನು, ಅರ್ಜುನನ-ಪಾರ್ಥನ, ಮಸ್ತಕದ ಮೇಲೆ-ಶಿರದ ಮೇಲ್ಭಾಗದಲ್ಲಿ, ಸುರಿದರು-ಹೊಯ್ದರು, (ಹಾಕಿದರು) ವರ-ಪ್ರಮುಖರಾದ, (ಯೋಗ್ಯರಾದ) ಸುಬುದ್ಧಿ-ಸುಬುದ್ಧಿಯೆಂಬಾತನೆ, ಪ್ರಮುಖ-ಆದಿಯಾದ, ಮಂತ್ರಿಗಳು-ಸಚಿವರುಗಳು, ಕಾಣಿಕೆಗೊಂಡು-ರಾಜಮರ್ಯಾದೆಗಳನ್ನು ತೆಗೆದುಕೊಂಡು, (ಕಾಣಿಕೆಯನ್ನು ತೆಗದುಕೊಂಡು) ಒತ್ತರಿಸಿ-ಒಗ್ಗಟ್ಟಾಗಿ, (ಗುಂಪುಕೂಡಿ) ಬಂದರ್-ಬಂದವರಾದರು, ಬಳಿಕ-ಅನಂತರದಲ್ಲಿ, ನರನು-ಆ ಫಲುಗುಣನು, ವಿಸ್ಮಿತನಾಗಿ-ಬೆರಗಾದವನಾಗಿ, (ಆಚ್ಚರಿಯುತನಾಗಿ) ಎಲೆ-ಎಲೈಯ್ಯಾ ! ನೃಪಾಲ-ರಾಜನೆ, (ನರಪಾಲನೆ) ನೀನು ಆರು-ನೀನು ಯಾರು ? (ಯಾರಾಗಿರುತ್ತಿ) ಎನಲ್ಕೆ-ಎಂದು ಹೇಳಲಾಗಿ, ಅನನು-ಆ ನಕುಲಧ್ವಜನು, (ಬಭ್ರುವಾಹನನು) ಎದ್ದು-ಮೇಲಕ್ಕೆ ಎದ್ದವನಾಗಿ, ಕೈಮುಗಿವುತ-ಕೈಯ್ಯನ್ನು ಜೋಡಿಸುತ್ತ ಎಂದರೆ ನಮಸ್ಕಾರವನ್ನು ಮಾಡುತ್ತ, ಇಂತೆಂದನು-ಈರೀತಿಯಾಗಿ ಹೇಳಿದನು ||

ಅ|| ವಿ|| ಪಲ್ಲವದಂತಿರುವಕರ=ಕರಪಲ್ಲವ, ಉ. ಉತ್ತರ. ಕ. ಅವರು+ ಕಾಮಿನಿಯರು = ಆ ಕಾಮಿನಿಯರು, ಗಮಕಸ. ಮೌಳಿ-ತಲೆ, ಕಿರೀಟ, ಶ್ರೇಷ್ಠವಾದ, ಅರಳು-ಪುಷ್ಪ, ಅರಳು. ಕರ-ಕಿರಣ, ಕೈ, ಆನೆಯ ಸೊಂಡಿಲು. ಕಪ್ಪ ||೪೮||

---

ನೇ ಅತಿ ಶೀಘ್ರವಾಗಿ ಬಂದು ತನ್ನ ತಂದೆಯಂ ಕಂಡ ಆನಂದಕ್ಕಾಗಿ ಶರೀರವು ಉಬ್ಬಲು ಅತಿ ಹರ್ಷದಿಂದ ಪಾರ್ಥನನ್ನು ಕಂಡು, ತನ್ನ ಶಿರವನ್ನು ತಂದೆಯಾದ ಪಾರ್ಥನ ಚರಣಾರವಿಂದದಲ್ಲಿ ಇಟ್ಟು (ನಮಸ್ಕರಿಸಿ), ಅಮೌಲ್ಯಗಳಾದ ರತ್ನಾಭರಣಾದಿಗಳನ್ನು ರಾಶಿಯಾಗಿ ಸುರಿಸಿ, ಎಳೆದಳಿರಿಗೆ ಸಮಾನವಾದ ಕರಯುಗವನ್ನು ನೀಡಿಕೊಂಡು ಅತ್ಯಧಿಕವಾದ ಭಯದಿಂದಲೂ, ಭಕ್ತಿಯಿಂದಲೂ, ಸಾಷ್ಟಾಂಗ ನಮಸ್ಕಾರವನ್ನು ಮಾಡಿ, ಶರೀರಾವಯವಗಳನ್ನೆಲ್ಲಾ ಕುಗ್ಗಿಸಿಕೊಂಡು ಅತಿಯಾಗಿ ನಮ್ರಭಾವದಿಂದ ನಿಂತನು || ೪೭ || ಎಲೈ ಜನಮೇಜಯ ಧರಿತ್ರೀಪಾಲನೇ ಕೇಳು, ಆ ಬಭ್ರುವಾಹನನ ಸಂಗಡಲೇ ಬಂದ ಪರಿವಾರವು ಆ ಪುರಜನಂಗಳು, ಆ ಕಾಮಿನಿಯರು, ಭತ್ತದ ಅರಳಿನ ಮಲ್ಲಿಕಾ ಮೊದಲಾದ ವಾಸನೆಯುಳ್ಳ ಪುಷ್ಪಗಳ ವೃಷ್ಟಿಯನ್ನು ಮತ್ತು ಮುಕ್ತಾಫಲಗಳನ್ನು ಅರ್ಜುನನ ಶಿರದಲ್ಲಿ ಸುರಿಸಿದರು. ಮಂತ್ರೀಶನಾದ ಸುಬುದ್ಧಿಯೇ ಪ್ರಮುಖರಾದ ಮಂತ್ರಿವರ್ಯರು ಕಾಣಿಕೆಗಳನ್ನು ಅಥವಾ ರಾಜಮರ್ಯಾದೆಗಳಿಗಾಗಿ ತಂದ ನಜರನ್ನು ತೆಗದುಕೊಂಡು ಸಮುದಾಯವಾಗಿ ಬಂದರು. ಆ ಬಳಿಕ ಆ ಪಾರ್ಥನು ಈ ರೀತಿಯಾದ ಉಪಚಾರಾದಿಗಳನ್ನು ನೋಡಿ ವಿಸ್ಮಿತನಾಗಿ, ಎಲೈ ನೃಪಾಲ ! ನೀನಾರು ? ಎಂದು

ನೃಪಾಲ ನೀನಾರೆನಲ್ಕವನೆದ್ದು ಕೈಮುಗಿವುತಿಂದೆಂದನು || ೪೮ || ತಾತಚಿತ್ತೈಸು ನಿನ್ನಾತ್ಮಜಂತಾನೆನ್ನ | ಮಾತೆ ಚಿತ್ರಾಂಗದೆಯು ಸಲಹಿದಳು ಲೂಪಿಸಂ | ಪ್ರೀತಿಯಿಂದಿವರಾದರ ರಸಿಯರ್ನೀನೆಂದು ತೀರ್ಥ ಯಾತ್ರೆಗೆ ಬಂದಿರೆ || ಜಾತನಾದೆಂಬಭ್ರುವಾಹನಂ ತಾನೀಗ | ಳೀತುರಗಮಂ ಪಿಡಿದು ಕಟ್ಟಿ ತಪ್ಪಿದೆ ಗುಣಾ | ತೀತಮಂ ಕ್ಷಮಿಸೆಂದು ಮಗುಳೆರಗಿದಂ ಪಾರ್ಥನಡಿಗವಂ ಭೀತಿಯಿಂದ ||೪೯|| ಮಗುಳೆಮಗುಳಡಿಗೆರಗಿ ಭಯಭರಿತಭಕ್ತಿಯಿಂ | ಮಿಗೆ ಬೇಡಿಕೊಳ್ಳುತಕಾಲ್ಪಿಡಿದಿರ್ಪತನಯನಂ | ಮೊಗನೋಡಿ ಮಾತಾಡಿಸದೆ ಬೆಗಡುವಡದಂತೆ ಕೆತ್ತುಕೊಂಡಿಹ ವಿಜಯನ || ಬಗೆಯ ನೀಕ್ಷಿಸಿ ಹಂಸಕೇತುನೀಲಧ್ವಜಾ | ದಿಗಳೆಲ್ಲ

ಟೀ|| ತಾತ-ಎಲೈ ಜನಕನೇ ! ಚಿತ್ತೈಸು-ಮನಃಪೂರ್ವಕವಾಗಿ ಅನುಮೋದಿಸು, (ಆಲಿಸುವನಾಗು) ತಾನು-ನಾನಾದರೋ, (ನಕುಲಧ್ವಜನೆಂಬ ನಾನು) ನಿನ್ನ-ನಿನ್ನಯ, ಆತ್ಮಜಂ-ತನಯನು, ಎನ್ನ-ಎನ್ನಯ, ಮಾತೆ-ತಾಯಿಯಾದರೊ, ಚಿತ್ರಾಂಗದೆ-ಚಿತ್ರಾಂಗದೆ ಎಂಬುವಳು, ಉಲೂಪಿ-ಉಲೂಪಿ ಎಂಬುವಳು, ಸಂಪ್ರೀತಿಯಿಂದ-ಬಹು ಅಕ್ಕರೆಯಿಂದ, ಸಲಹಿದಳ್-ನನ್ನನಿಲ್ಲಿ ಸಂರಕ್ಷಣೆ ಮಾಡಿದವಳಾದಳು, ನೀಂ-ಪಾರ್ಥನಾದ ನೀನಾದರೊ, ಅಂದು-ಆ ವೇಳೆಯಲ್ಲಿ, ತೀರ್ಥಯಾತ್ರೆಗೆ-ಪುಣ್ಯ ನದ್ಯಾದಿಗಳ ಯಾತ್ರಾರ್ಥಿಯಾಗಿ, ಬಂದಿರೆ-ಬಂದಿರಲಾಗಿ, ಇವರು-ಈ ಚಿತ್ರಾಂಗದೆ ಮತ್ತು ಉಲೂಪಿ ಇವರಿಬ್ಬರೂ, ಅರಸಿಯರು-ರಾಜಪತ್ನಿಯರು, (ರಾಣಿವಾಸದವರು) ಆದರು-ಆದವರಾದರು, ಬಭ್ರುವಾಹನಂ-ನಕುಲಧ್ವಜನೆಂಬ ತಾನಾದರೊ, ಜಾತನು-ಆವಿರ್ಭವಿಸಿದವನು, (ಹುಟ್ಟಿದವನು) ಆದೆ-ಆಗಿರುತ್ತೇನೆ, ಈಗಳ್-ಈಗಲಾದರೊ, ಈ ತುರಗವನ್ನು-ಈ ಯಜ್ಞಾಶ್ವವನ್ನು, ಪಿಡಿದು-ಹಿಡಿದುಕೊಂಡು, ಕಟ್ಟಿ-ಬಂಧಿಸಿ, ತಪ್ಪಿದೆ-ಅಪರಾಧಸ್ಥನಾದೆನು. ಎನ್ನ-ನನ್ನಯ, ಗುಣಾತೀತಮಂ-ದುಡುಕಿ ಮಾಡಿದ್ದನ್ನು, ಕ್ಷಮಿಸೆಂದು-ಮನ್ನಿಸುವನಾಗು ಎಂಬದಾಗಿ, ಅವಂ-ಆ ನಕುಲಧ್ವಜನು, ಭೀತಿಯಿಂದ-ಅಂಜಿಕೆಯಿಂದ, (ಹೆದರಿಕೆಯಿಂದ) ಪಾರ್ಥನ-ಫಲುಗುಣನ, ಅಡಿಗೆ-ಚರಣಗಳಿಗೆ, ಎರಗಿದಂ-ಪ್ರಣಾಮವಂಗೈದನು, (ಅಡ್ಡಬಿದ್ದನು) ||

ಅ|| ವಿ|| ತಾತ-ತ್ಸ. ತಂದೆ-ದ್ಭ. ಬಭ್ರುವೆ + ವಾಹನವಾಗುಳ್ಳವನು = ಬಭ್ರುವಾಹನ, ಬಹು. ಸ. ಕಯ್ಯಂ + ಮುಗಿದಂ = ಕೈಮುಗಿದಂ, ಕ್ರಿ. ಸ. ||೪೯||

ಟೀ|| ಅವಂ-ಆ ಬಭ್ರುವಾಹನನು, ಮಗುಳೆ ಮಗುಳೆ-ಪುನಃ ಪುನಃ, (ಬಾರಿಬಾರಿಗೂ) ಅಡಿಗೆ-ಅರ್ಜುನನ ಪಾದಗಳಿಗೆ, ಎರಗಿ-ನಮಸ್ಕಾರವನ್ನು ಮಾಡಿ, ಬೇಡಿಕೊಳ್ಳುತ-ಕೃತಾಂಜಲಿಯಾಗಿ ಕೇಳಿಕೊಳ್ಳುತ್ತ, ಕಾಲ-ಅಡಿಗಳನ್ನು, (ಪಾದಗಳನ್ನು) ಪಿಡಿದಿರ್ಪ-ಹಿಡಿದುಕೊಂಡಿರುವಂಥ, ತನಯನಂ-ಪುತ್ರನಾದ ಬಭ್ರುವಾಹನನನ್ನು ನೋಡಿ, ಮೊಗ-ಮೋರೆಯನ್ನು, (ಆಸ್ಯವನ್ನು) ನೋಡಿ-ಈಕ್ಷಿಸಿ, ಮಾತಾಡಿಸದೆ-ಬಭ್ರುವಾಹನನ್ನು ಮಾತನಾಡಿಸದೇನೆ, ಬೆಡಗುವಡೆದಂತೆ-ಆಶ್ಚರ್ಯಪಟ್ಟವನಹಾಗೆ, (ಹೆದರಿದವನಹಾಗೆ) ಕೆತ್ತುಕೊಂಡಿಹ-ಉಗ್ರಮುಖವುಳ್ಳವನನಾಗಿರುವ, ವಿಜಯನ - ಪಾರ್ಥನ, ಬಗೆಯನು - ಅಂದವನ್ನು, (ರೀತಿಯನ್ನು) ಈಕ್ಷಿಸಿ-ಕಂಡವನಾಗಿ, ಹಂಸಕೇತು-ಮರಾಳಧ್ವಜನು, ನೀಲಧ್ವಜ-ಅಸಿತಧ್ವಜನೆ, ಆದಿಗಳ್-ಆದಿಯಾದವರು. (ಸಮಸ್ತರೂ) ಎಲ್ಲರೂ- ಸಕಲರೂ, ಆಗ-ಆ ಸಮಯದಲ್ಲಿ, (ಅರ್ಜುನನು ಬೆರಗಾಗಿ ನಿಂದ ಅನಂತರದಲ್ಲಿ) ವಿಸ್ಮಿತರಾಗಿ-ಸೋಜಿಗಗೊಂಡವರಾಗಿ, (ಆಶ್ಚರ್ಯವನ್ನು ಹೊಂದಿದವರಾಗಿ) ಚಿಂತಿಸಿ-ಆಲೋಚನೆಯನ್ನು ಮಾಡಿ, ಅತಿ-ಅಧಿಕವಾದ, ಕರುಣರಸ-ಕೃಪಾರಸದ, (ದಯಾರಸದ) ಭಾವದಿಂದ-ಕೋರಿಕೆಯಿಂದ, (ಅಭಿಪ್ರಾಯದಿಂದ) ಕರಗಿದರು-ಭಯಭರಿತ ಮನಸ್ಕರಾದರು, (ದಯಾರ್ದ್ರಭಾವದಿಂದ ಕೂಡಿದವರಾದರು) ಅಪಕೃತದ-ದುಷ್ಕಾರ್ಯದ, ಸೂಚಕವನು-ಚಿಹ್ನೆಯನ್ನು ಕುರಿತು, ಏನೆಂಬೆನು-ಏನೆಂದು ಹೇಳಲಿ, (ಯಾವರೀತಿಯಾಗಿ ವಿವರಿಸಲಿ) ||

ಕೇಳಲಾಗಿ ಆ ಬಭ್ರುವಾಹನನು ನಮಸ್ಕಾರವನ್ನು ಮಾಡುತ್ತ ಈ ರೀತಿಯಾಗಿ ಹೇಳಿದನು || ೪೮ || ಎಲೈ ಜನಕನೆ ! ಆಲಿಸು-ಬಭ್ರುವಾಹನನೆಂಬ ನಾನು ನಿನ್ನಯ ತನುಜನು ನನ್ನ ತಾಯಿ ಚಿತ್ರಾಂಗದೆಯು. ಉಲೂಪಿ ಎಂಬಾಕೆಯು ನನ್ನನ್ನು ಸಂಪ್ರೀತಿಯಿಂದ ಸಂರಕ್ಷಿಸಿದಳು. ನೀನು ಪೂರ್ವದಲ್ಲಿ ತೀರ್ಥಯಾತ್ರೆಯ ನಿಮಿತ್ತವಾಗಿ ಬಂದಿದ್ದಾಗ್ಯೆ ಚಿತ್ರಾಂಗದೆ ಮತ್ತು ಉಲೂಪಿಯರು ನಿನಗೆ ಪತ್ನಿಯರಾದರು. ಬಭ್ರುವಾಹನನೆಂಬ ನಾನು ನಿನ್ನ ತನುಜನಾಗಿ ಜನಿಸಿದೆನು. ನಾನು ನಿನಗೆ ಸಹಾಯಕನಾಗಿರುವದಕ್ಕೆ ಬದಲಾಗಿ ನಿನ್ನ ಯಜ್ಞಾಶ್ವವನ್ನು ಅವಿವೇಕದಿಂದ ಕಟ್ಟಿದೆನು. ಈ ನನ್ನಯ ಅಪರಾಧವನ್ನು ಕ್ಷಮಿಸನನಾಗು ಎಂದು ಆ ಬಭ್ರುವಾಹನನು ಭಯದಿಂದ ಕಂಪಿಸುತ್ತ ಅತ್ಯಧಿಕವಾದ ನಮ್ರತೆಯಿಂದ ಕೈಗಳಂ ಜೋಡಿಸಿಕೊಂಡು, ಅಡಿಗಡಿಗೆ ಕೇಳಿ ಕೊಳ್ಳುತ್ತಿದ್ದನಲ್ಲದೆ ಈ ದೇಶ, ಈ ಕೋಶ ಮೊದಲಾದುವೆಲ್ಲಾ ನಿನ್ನದಾಗಿವೆಯೇ ಹೊರ್ತು ಮತ್ತೆ ಬೇರೆಯಲ್ಲ. ಈ ಮರ್ಯಾದಾರ್ಥವಾಗಿ ತಂದಿರುವ ಈ ವಸ್ತುಗಳನ್ನು ಮನಃಪೂರ್ವಕವಾಗಿ ಅಂಗೀಕರಿಸಬೇಕೆಂದು ಬೇಡಿಕೊಂಡನು || ೪೯ || ಬಭ್ರುವಾಹನನು ಈ ರೀತಿಯಾಗಿ ಬಾರಿಬಾರಿಗೂ ಬೇಡಿಕೊಳ್ಳುತ್ತಿದ್ದುದಲ್ಲದೆ ಅತಿ ದೀನತೆಯಿಂದ ಪಾರ್ಥನ ಚರಣಾರವಿಂದ

ರಾಗವಿಸ್ಮಿತರಾಗಿಚಿಂತಿಸಿಕ । ರಗಿದರತಿಕರುಣರಸಭಾವದಿಂದೇನೆಂಬೆನಪಕೃತದಸೂಚಕವನು ॥ ೫೦ ॥ ಪ್ರದ್ಯುಮ್ನಹಂಸ
ಧ್ವಜಾದಿಗಳ್ಬಳಿಕಿದೇ । ನುದ್ಯೋಗಮೆಲೆಪಾರ್ಥನಿನ್ನತನುಭವನೀತ । ನುದ್ಯತ್ಪರಾಕ್ರಮಿಮಹಾವೈಭವಶ್ಲಾಘ್ಯನಭಿ
ಮಾನಿಮಾನ್ಯನಿಳೆಗೆ ॥ ಖದ್ಯೋತಸನ್ನಿಭಂನಿನ್ನಹೋಲುವೆಯನಿರ । ವದ್ಯರೂಪಂಪದಾವನತನಾಗಿರ್ದಪಂ । ಹೃದ್ಯನಿವನಂ
ಪರಿಗ್ರಹಿಸಿಮನ್ನಿಸದೇಕೆಸುಮ್ಮನಿರ್ದಪೆಯೆಂದರು ॥ ೫೧ ॥ ಭೂಪಕೇಳವರಿಂತೆನಲ್ಕೆಬಳಿಕರ್ಜುನಂ । ಕೋಪದಿಂದವನನಿಟ್ಟಿಸು
ತೆಂದನಾಗತಲೆ । ಪೋಪುದಕೆತನ್ನಕಾಲ್ಬೊಣೆಯೆಂಬಧರೆಯನಾಣ್ಣುಡಿತಪ್ಪದಾದುದೆನಲು ॥ ಆಪುತ್ರನಹಬಭ್ರುವಾಹನನ

ಅ॥ ವಿ॥ ಶೃಂಗಾರ, ವೀರ, ಕರುಣ, ಅದ್ಭುತ, ಹಾಸ್ಯ, ಭಯಾನಕ, ಭೀಭತ್ಸ, ರೌದ್ರ, ಶಾಂತ, ಇವು ನವರಸಗಳು. ಕರುಣದ+ರಸ=ಕರುಣಾರಸ, ಷ. ತ. ಅಡಿ–ಹನ್ನೆರಡಂಗುಲಗಳು. ಪಾದ. ಭಕ್ತಿ ತ್ಸ. ಬಕುತಿ ದ್ಭ. ಬೆಡಗಂ+ಪಡೆದಂ=ಬೆಡಗುವಡೆದಂ ಕ್ರಿ, ಸ॥ ಕುಂತಿಯ ಪುತ್ರನು=ಕೌಂತೇಯ ॥೫೦॥

ಟೀ॥ ಪ್ರದ್ಯುಮ್ನ–ಕೃಷ್ಣನ ಮಗನಾದ ಪ್ರದ್ಯುಮ್ನನು, ಹಂಸಧ್ವಜ–ಮರಾಳಧ್ವಜನೇ, ಆದಿಗಳ್–ಮೊದಲಾದಂಥವರು, ಬಳಿಕ–ಅನಂತರದಲ್ಲಿ, ಎಲೆಪಾರ್ಥ–ಎಲೈ ಧನಂಜಯನೇ! ಇದೇನು–ಇದು ಯಾವರೀತಿಯಾದ, ಉದ್ಯೋಗಂ–ಉಜ್ಜುಗವು, (ಕೆಲಸವು) ಈತನು – ಈ ನಕುಲಧ್ವಜನು, ನಿನ್ನ – ನಿನ್ನಯ, ತನುಭವನು – ತನುಜನು (ಪುತ್ರನು) ಉದ್ಯತ್ ಪರಾಕ್ರಮಿ–ಅತಿಶಯುಮಾದಾ ಟೋಪವುಳ್ಳವನು, ಮಹಾ–ಹೆಚ್ಚಾದ, ವೈಭವ–ವಿಭವದಿಂದ, (ಐಶ್ವರ್ಯದಿಂದ), ಶ್ಲಾಘ್ಯನು–ಸ್ತೋತ್ರಮಾಡಲ್ಪಟ್ಟವನು, ಅಭಿಮಾನಿ–ತನ್ನಯ ಧರ್ಮವನ್ನು ಕಾಪಾಡಿಕೊಳ್ಳುವುದರಲ್ಲಿ ಆಶೆಯುಳ್ಳವನು, ಇಳೆಗೆ – ಪ್ರಪಂಚದಲ್ಲಿರುವ ಜನರಿಗೆ, ಮಾನ್ಯನು–ಗೌರವವುಳ್ಳವನು, (ಮರ್ಯಾದೆಯುಳ್ಳವನು), ಖದ್ಯೋತ–ದಿನಕರನಿಗೆ (ಭಾಸ್ಕರನಿಗೆ) ಸನ್ನಿಭಂ–ಸರಿಯಾದವನು, ನಿನ್ನ–ನಿನ್ನನ್ನು, ಹೋಲುವೆಯ – ಹೊಂದಿಕೆಯುನ್ನುಳ್ಳ (ಹೋಲಿಕೆಯುನ್ನುಳ್ಳ) ನಿರವದ್ಯ – ಶ್ರೇಷ್ಠವಾದ, (ಉತ್ತಮವಾದ), ರೂಪಂ–ಆಕಾರವನ್ನುಳ್ಳವನು, ಪದ–ನಿನ್ನಯ ಪಾದಗಳಿಗೆ, ಅವನತನು–ನಮ್ರಭಾವವುಳ್ಳವನು, ಆಗಿರ್ದಪಂ–ಆಗಿರುತ್ತಾನೆ, ಇವನಂ–ಈ ಬಭ್ರುವಾಹನನಂ (ನಕುಲಧ್ವಜನನ್ನು) ಸಂಗ್ರಹಿಸಿ–ನಮ್ಮಗಳ ಗುಂಪಿಗೆ ಸೇರಿಸಿಕೊಂಡು ಮನ್ನಿಸಬೇಕು ಮರ್ಯಾದೆಯನ್ನು ಮಾಡಬೇಕು, ಎಂದರೆ (ಸಲಹಬೇಕು) ಸುಮ್ಮನೆ–ವ್ಯರ್ಥವಾಗಿ (ಯಾವವಿಧವಾಗಿಯೂ ಹೇಳದೆ), ಇರ್ದಪೆ–ಇರುತ್ತಿ, ಎಂದರು–ಎಂಬದಾಗಿ ಹೇಳಿದರು.

ಅ॥ ವಿ॥ ತನು–ವಿನಲ್ಲಿ+ಭವಂ=ತನುಭವಂ, ಸ. ತ. ರಕ್ಕಸ ದ್ಭ. ರಾಕ್ಷಸ ತ್ಸ. ಹಂಸವೇಧ್ವಜದಲ್ಲುಳ್ಳವನು=ಹಂಸಧ್ವಜಂ, ಬಹು. ಸ. ಸತ್+ನುತ=ಸನ್ನುತ, ಅನುನಾಸಿಕ ಸಂ. ॥೫೧॥

ಟೀ॥ ಭೂಪ – ಭೂಪಾಲಕನಾದ ಜನಮೇಜಯರಾಯನೆ, ಕೇಳು – ಆಲಿಸು, ಅವರು – ಆ ಹಂಸಧ್ವಜಾದಿಗಳು, ಅಂತು–ಆ ರೀತಿಯಾಗಿ, ಎನಲ್ಕೆ–ಎಂದು ಹೇಳಲಾಗಿ, ಬಳಿಕ–ಅನಂತರದಲ್ಲಿ, ಅರ್ಜುನಂ–ಫಲುಗುಣನು, ಕೋಪದಿಂದ–ರೋಷದಿಂದ, ಅವನಂ–ಆ ನಕುಲಧ್ವಜನನ್ನು, ನಿಟ್ಟಿಸುತ–ದೃಷ್ಟಿಸುತ್ತ (ಈಕ್ಷಿಸುತ್ತ) ಆಗ–ಆ ವೇಳೆಯಲ್ಲಿ, ಎಂದನು – ಇಂತು ಹೇಳಿದನು, ತಲೆ–ತಲೆಯು, (ಶಿರಸ್ಸು) ಪೋಪುದಕೆ–ಹೋಗುವದಕ್ಕೆ, ತನ್ನ–ತನ್ನಯ, ಕಾಲು–ಅಡಿಯು, ಹೊಣೆಯು–ಬದಲಾಗಿರು

ಕ್ಕೆ ಅಡ್ಡಬಿದ್ದು, ನನ್ನಯ ಅಪರಾಧವನ್ನು (ನಾನು ವಿವೇಕವಿಲ್ಲದೇ ಮಾಡಿದ ಕಾರ್ಯವನ್ನು) ಕ್ಷಮಿಸೆಂದು ಅಡಿಗಳನ್ನು ಪಿಡಿದುಕೊಂಡಿರಲು, ಬಭ್ರುವಾಹನನನ್ನು ಕುರಿತು ಅವನನ್ನು ಮಾತಾಡಿಸದೆ, ಅವನ ಮುಖಾವಲೋಕನವನ್ನು ಮಾಡದೆ, ಬೆಗಡುವಡದಂತೆ (ಸುಳ್ಳನ್ನು ಹೇಳಿದ್ದರಿಂದ ಅಸಮಾಧಾನವನ್ನು ಹೊಂದಿದವನಂತೆ), ಕೋಪಾವಿಷ್ಟನಾಗಿರುವ ಮುಖವುಳ್ಳವನಾದ ಪಾರ್ಥನ ಮನೋಭಿಪ್ರಾಯವನ್ನು ಕಂಡ ಹಂಸಕೇತು, ಅಸಿತಧ್ವಜ, ಪ್ರದ್ಯುಮ್ನ, ಅನುಸಾಲ್ವ ಇವರೇ ಆದಿಯಾದವರು ಸರ್ವರೂ ಆಗ ಅರ್ಜುನನ ಭಾವವನ್ನು ನೋಡಿ ವಿಸ್ಮಿತರಾಗಿ, ಚಿಂತಿಸಿ, ಅತಿ ಕರುಣಾರಸಭಾವದಿಂದ ಕರಗಿದರು. ಈ ಪಾಪಕೃತ್ಯದ ಸೂಚನೆಯನ್ನು ಏನೆಂದು ಹೇಳೋಣ ॥ ೫೦ ॥ ಆಗ ಪ್ರದ್ಯುಮ್ನ, ಹಂಸಧ್ವಜ, ಅಸಿತಧ್ವಜಾದಿಗಳು, ಎಲೈ ಪಾರ್ಥ! ಇದೇನುಕಾರ್ಯ? ಈ ರೀತಿಯಾಗಿ ಕ್ರೂರಸ್ವಭಾವಿಯಾಗಿರುವೆ? ಈ ಬಭ್ರುವಾಹನನು ನಿನ್ನಯ ತನುಜನು, ಅತ್ಯಧಿಕವಾದ ಪರಾಕ್ರಮಶಾಲಿಯು, ಅತ್ಯಧಿಕವಾದ ವಿನಯಗುಣ ಸಂಪನ್ನನು, ಸಕಲೈಶ್ವರ್ಯಯುತನು, ಧರ್ಮಕಾರ್ಯ ಪ್ರವರ್ತಕನು, ಮಹಾ ಯಶೋವಂತನು, ಪೃಥ್ವಿಯಲ್ಲಿರುವ ಜನರಲ್ಲಿ ಮಹಾ ಗುಣಾಢ್ಯನು ಮತ್ತು ಸನ್ಮಾನಿತನು, ಸೂರ್ಯನಿಗೆ ಸಮಾನ ತೇಜೋವಂತನು, ನಿನ್ನಯ ಹೋಲುವಿಕೆಯುಳ್ಳ ನಿರವದ್ಯ ಸ್ವರೂಪವನ್ನುಳ್ಳವನು ನಿನ್ನಯ ಪಾದ ಸೇವಕನಾಗಿ ನಮ್ರಭಾವವುಳ್ಳವನಾಗಿರುವನು ಆದ್ದರಿಂದ ಈ ಬಭ್ರುವಾಹನನ್ನು ಸನ್ಮಾನಿಸಬೇಕು ಮತ್ತು ಪುತ್ರನಾದ್ದರಿಂದ ಆದರಣೆಯಂ ಮಾಡಬೇಕು. ಯಾವ ಮಾತನ್ನೂ ಆಡದೆ ಸುಮ್ಮನಿರುವರೇ? ಎಂದರು ॥೫೧॥ ಎಲೈ ಭೂಮಿಪತಿಯಾದ ಜನಮೇಜಯರಾಯನೇ! ಲಾಲಿಸುವ

ನೊದೆದೆಲವೊ | ನೀಪಂದೆಲೋಕದೊಳ್ತನಗೆಸಂಭವಿಸಿದವ | ನೀಪರಿಯೊಳಂಜುವನೆಮೊದಲಶ್ವಮಂಕಟ್ಟಿಮತ್ತೆಕಾದದೆಬಿಡುವನೆ ॥ ೫೨ ॥ ಚಿತ್ರಾಂಗದೆಗೆವೈಶ್ಯನಿಂದಸಂಭವಿಸಿರ್ದ | ಪುತ್ರನಲ್ಲದೆತನಗೆಜನಿಸಿದೊಡೆಬಿಡುವೆಯಾ | ಕ್ಷತ್ರಿಯರಮತಮಂಸುಭದ್ರೆಗೆನ್ನಿಂದುದಿಸಿದಭಿಮನ್ಯುತಾನೊಬ್ಬನೇ ॥ ಶತ್ರುಗಳವಿಗಡಚಕ್ರವ್ಯೂಹದಲ್ಲಿಗೆಧ | ರಿತ್ರೀಶನಂಮೀರಿನಡೆದುಸಂಗ್ರಾಮದೊಳ | ಮಿತ್ರಭಟರಂಗೆಲಲಳಿದನಾತನಲ್ಲದಾತ್ಮಜರುಂಟೆತನಗೆಂದನು ॥ ೫೩ ॥ ಜಂಬುಕಂಜನಿಸುವುದೆಸಿಂಗದುದರದೊಳಕಟ | ಹೆಂಬೇಡಿನೀನೆಲವೊಕುಲಗೇಡಿತನ್ನಬಸು | ರಿಂಬಂದಪರೆಖೂಳಕುದರೆಯಂಕಾದದೇತಕೆತಂದೆಪಂದೆನಿನಗೆ ॥ ಡೊಂ

---

ತ್ತದೆ, ಎಂಬ-ಎಂಬದಾಗಿ ಪೇಳುವ, ಧರೆಯ-ಲೋಕದ, ನಾಣ್ನುಡಿ-ಜಾಣ್ಮೆಯಮಾತು, (ಜನರಾಡಿಕೊಳ್ಳುವಮಾತು) ತಪ್ಪದೆ_ಅತಿಕ್ರಮಿಸದೆ, ಆದುದು_ಉಂಟಾಯಿತು, ಎನಲು-ಎಂಬದಾಗಿ ಪೇಳಲು, ಆಪುತ್ರನಹ-ಆ ತನುಜನಾಗಿರುವ, ಆ ಬಭ್ರುವಾಹನನಂ-ಬಭ್ರುವಾಹನನನ್ನು, ಒದೆದು_ಪಾದತಾಡನೆ ಮಾಡಿ, ಎಲವೊ-ಎಲಾ, ಪಂದೆ_ಕೈಲಾಗದವನಾಗಿರುತ್ತಿ, ಲೋಕದೋಳ್_ಪೃಥ್ವಿಯಲ್ಲಿ, ತನಗೆ_ಅರ್ಜುನನಾದ ನನಿಗೆ, ಸಂಭವಿಸಿದವನು-ಆವಿರ್ಭವಿಸಿದವನು, (ಜನಿಸಿದವನು) ಈ ಪರಿಯೊಳು_ಈ ವಿಧದಿಂದ (ಈ ಸ್ಥಿತಿಯಿಂದ) ಅಂಜುವನೆ ಭಯಪಡುತ್ತಾನೆಯೆ, ಏನು ? (ನನ್ನ ಮಗನಾಗಿದ್ದರೆ ಎಂದಿಗೂ ಹೆದರಿ ಈ ರೀತಿ ಕೇಳಿಕೊಳ್ಳುತ್ತಿರಲಿಲ್ಲ) ಮೊದಲು-ಪೂರ್ವದಲ್ಲಿ, (ಮೊದಲಿನಲ್ಲಿ) ಅಶ್ವಮಂ-ಯಜ್ಞಾಶ್ವವನ್ನು, ಕಟ್ಟಿ_ಸಮರ್ಥಿಸಿ, ಮತ್ತೆ-ತಿರುಗಿ, ಕಾದದೆ_ನಮ್ಮಲ್ಲಿ ಕಾಳಗಮಾಡದೆ, ಬಿಡುವನೆ_ಬಿಟ್ಟುಬಿಡುವನೆ (ನನ್ನ ಮಗನೇ ಆಗಿದ್ದ ಪಕ್ಷದಲ್ಲಿ ಎಂದಿಗೂ ಕಟ್ಟಿದ ಕುದುರೆಯನ್ನು ಬಿಡುತ್ತಿರಲಿಲ್ಲ.)

ಅ॥ ವಿ॥ ಅವನು + ಪುತ್ರ = ಆ ಪುತ್ರ, ಗ. ಸ. ಪಂಚಪಿತೃಗಳು – ಜನಕ, ಉಪನೇತ, ಕನ್ಯಾದಾತ, ಅನ್ನದಾತ ಭಯತ್ರಾತ. ಪಂಚಮಹಾಯಜ್ಞಗಳು_ಆತ್ಮಪೂಜೆ, ಪಿತೃಪೂಜೆ, ದೇವಪೂಜೆ, ವೇದಪೂಜೆ, ಮನುಷ್ಯಪೂಜೆ, ಷಟ್ಕರ್ಮಗಳು_ಯಜನ, ಯಾಜನ, ಅಧ್ಯಯನ, ಅಧ್ಯಾಪನ, ದಾನ, ಪ್ರತಿಗ್ರಹ, ಭಾವತ್ರಯ_ಜ್ಞಾನವಿಕೃತೀ ಭಾವ, ವರ್ತನ ವಿಕೃತೀಭಾವ, ಮೋಹ ವಿಕೃತೀಭಾವ ॥೫೨॥

ಟೀ॥ ಚಿತ್ರಾಂಗದೆಗೆ_ಚಿತ್ರಾಂಗದೆಯೆಂಬುವಳಿಗೆ, ವೈಶ್ಯನಿಂದ_ಒಬ್ಬ ವ್ಯಾಪಾರಿಯಾದ ಕೋಮಟಿಯಿಂದ ಸಂಭವಿಸಿದ_ಜನಿಸಿದ (ಆವಿರ್ಭವಿಸಿದ), ಪುತ್ರನು-ಸುತನು, ಅಲ್ಲದೆ – ಹೊರ್ತಾಗಿ (ಹಾಗಾಗದೆ) ತನಗೆ_ಅರ್ಜುನನಾದ ಎನಗೆ, ಜನಿಸಿದೊಡೆ - ಆವಿರ್ಭವಿಸಿದ್ದರೆ (ಸಂಭವಿಸಿದ್ದೆಯಾಗಿದ್ದರೆ) ಕ್ಷತ್ರಿಯರ – ಕ್ಷಾತ್ರರ (ಕ್ಷಾತ್ರಧರ್ಮವನ್ನು ಬಲ್ಲವರ) ಮತಮಂ ಪಕ್ಷವನ್ನು (ಬಿರುದೆಂಬುವದನ್ನು), ಬಿಡುವೆಯ_ಬಿಟ್ಟು ಬಿಡುತ್ತಿದ್ದೆಯಾ ? ಸುಭದ್ರೆಗೆ_ಕೃಷ್ಣನ ಸಹೋದರಿಯಾದ ಸುಭದ್ರೆ ಎಂಬುವಳಿಗೆ, ಎನ್ನಿಂದ_ಎನ್ನದೆಸೆಯಿಂದ, ಉದಿಸಿದ_ಜನಿಸಿದ, ಅಭಿಮನ್ಯುವು-ಅಭಿಮನ್ಯು ಎಂಬುವನು, ತಾನು_ಅವನು, (ಅಂಥವನು), ಒಬ್ಬನೇ_ಒಬ್ಬನು ಮಾತ್ರವೇ, ಶತ್ರುಗಳ-ಅರಿಗಳಾದವರ, ವಿಗಡ_ಕ್ರೂರವಾದ. ಚಕ್ರವ್ಯೂಹದಲ್ಲಿಗೆ-ಚಕ್ರವ್ಯೂಹವೆಂಬಲ್ಲಿಗೆ (ಪದ್ಮಾಕೃತಿಯಾಗಿ ನಿಲ್ಲಿಸಿದ್ದ ಸೇನೆಯ ಹತ್ತಿರಕ್ಕೆ), ಧರಿತ್ರೀಶನಂ_ಪೃಥ್ವೀಶ್ವರನಾದ ಧರ್ಮನಂದನನನ್ನು, ಮೀರಿ_ಉಲ್ಲಂಘನೆ ಮಾಡಿಕೊಂಡು, ನಡೆದು_ಪ್ರವೇಶಿಸಿ (ಹೊಕ್ಕು), ಸಂಗ್ರಾಮದೋಳ್_ಕಾಳಗದಲ್ಲಿ, ಅಮಿತ್ರ-ಹಗೆಗಳಾದ, ಭಟರಂ-ಪರಾಕ್ರಮಶಾಲಿಗಳನ್ನು (ಶೂರರನ್ನು), ಗೆಲ್ದು_ಜೈಸಿಕೊಂಡು, ಅಳಿದನು_ಮೃತಪಟ್ಟನು, ಆತನು_ಅಂಥಾ ಅಭಿಮನ್ಯುವು, ಅಲ್ಲದೆ_ಅವನ ವಿನಹ, ತನಗೆ - ಅರ್ಜುನನಾದ ಎನಗೆ, ಆತ್ಮಜರು – ತನೂಜರು (ಪುತ್ರರು), ಉಂಟೆ – ಇರುತ್ತಾರೆಯೆ ? (ಇಲ್ಲವೆಂಬ ಭಾವವು), ಎಂದನು_ಎಂಬದಾಗಿ ಹೇಳಿದನು.

---

ನಾಗು ಆಗ ಹಂಸಕೇತು, ಅನಿಲಧ್ವಜ, ಪ್ರದ್ಯುಮ್ನಾದಿಗಳು ಆ ರೀತಿಯಾಗಿ ಹೇಳಲು, ಅನಂತರದಲ್ಲಿ ಪಾರ್ಥನು ಹೆಚ್ಚಾದ ರೋಷದಿಂದ, ಆ ಬಭ್ರುವಾಹನನ್ನು ಈಕ್ಷಿಸುತ್ತ, ಹೇಳಿದ್ದೇನೆಂದರೆ:— ತಲೆಯು ಹೋಗುವುದಕ್ಕೆ ತನ್ನಯ ಚರಣವು ಪ್ರತಿಯಾಗಿರುವುದು (ಹೊಣೆಯಾಗಿರುವುದು), ಎನ್ನತಕ್ಕನಾಣ್ನುಡಿ (ಜನರಾಡಿಕೊಳ್ಳುವ ಮಾತು), ತಪ್ಪದೇ ಉಂಟಾಯಿತು ಎಂದು ಹೇಳುವಹಾಗೆ, ಆ ಮಗನಾಗಿರುವ ಬಭ್ರುವಾಹನನನ್ನು ಕಾಲಿನಿಂದ ತಾಡಿಸಿ, ಎಲವೋ ಖೂಳ ! ಕೈಲಾಗದವನಾಗಿರುತ್ತಿ, ಲೋಕದಲ್ಲಿ ತನಗೆ ಸಂಭವಿಸಿದವನು, ಈ ಪರಿಯೊಳು ಅಂಜುವನೇ? ಮೊದಲು ತುರಗವನ್ನು ಬಂಧಿಸಿ ಈಗ ನನ್ನಲ್ಲಿ ಯುದ್ಧಮಾಡದೆ ಈ ರೀತಿಯಾಗಿ ಅತಿ ದೈನ್ಯದಿಂದಿರುವನೆ? (ಎಂದಿಗೂ ಹಿಂದೆಗೆಯಲಾರನು) ॥ ೫೨ ॥ ಚಿತ್ರಾಂಗದೆಗೆ ವೈಶ್ಯನಿಂದ ಸಂಜನಿಸಿದ ಪುತ್ರನು ಆಗಿರುತ್ತಾನೆಯೇ ಹೊರ್ತು ನನಿಗೆ ಸಂಜನಿಸಿದವನಲ್ಲ, ಹಾಗೆ ಹುಟ್ಟಿದ್ದ ಪಕ್ಷದಲ್ಲಿ ಕ್ಷಾತ್ರಧರ್ಮನ್ನು ಬಿಟ್ಟು ಈ ರೀತಿಯಾಗಿ ದೈನ್ಯದಿಂದ ಬರುತ್ತಿದ್ದೆಯಾ ? ಶ್ರೀ ಕೃಷ್ಣನ ತಂಗಿಯಾಗಿರುವ ಸುಭದ್ರೆಗೆ ನನ್ನಿಂದುದ್ಭವಿಸಿದ ಮಗನು ಅಭಿಮನ್ಯುವು, ಅವನೊಬ್ಬನು ಮಾತ್ರವಾಗಿರುವನು, ಶತ್ರುಗಳ ವಿಗಡವಾದ ಚಕ್ರವ್ಯೂಹದಲ್ಲಿಗೆ ಧರಿತ್ರೀಶನಾದ ಧರ್ಮರಾಯನಂ

ಬಿನಚತುರ್ಬಲಮಿದೇಕೆಭೂಪಾಲರಾ | ಡಂಬರದಛತ್ರಚಾಮರಗಳೇತಕೆಬಯಲ | ಡಂಬಕದಕೈದುಗಳಿವೇಕೆಸುಡುಸುಡುನಿನ್ನ ಜೀವದಾಸೆಯನೆಂದನು ‖ ೫೪ ‖ ಆಹಹನರ್ತಕಿಯಲಾಗಂಧರ್ವನಾಯಕನ | ದುಹಿತೃವಲ್ಲಾನಿನ್ನಮಾತೆಚಿತ್ರಾಂಗದೆಯು | ವಿಹಿತಮಿದುನಿನಗೆಭೂಪಾಲಕರವೇಷಮಂತಳೆದನಾಟಕದರಚನೆ ‖ ಬಹಳಪೌರುಷಮಾದುದಿಂದುಹಯಮಂತಡೆದ | ರಹಿಣಿ

ಅ‖ ವಿ‖ ಪುತ್ರ-ಪುತ್ ಎಂಬ ನರಕದ ದೆಸೆಯಿಂದ ತ್ರ-ತನ್ನ ಕುಲವನ್ನು ಕಾಪಾಡತಕ್ಕವನು. ಸು-ಚಿಳ್ಳೆ, ಭದ್ರ-ಮಂಗಳ ಸ್ವರೂಪಳು. ಚಕ್ರದಂತೆ+ವ್ಯೂಹ=ಚಕ್ರವ್ಯೂಹ ಉ.ಪೂ.ಕ. ಧರಿತ್ರೀ+ಈಶ=ಧರಿತ್ರೀಶ ಸವರ್ಣದೀರ್ಘ ಸಂಧಿ‖೫೩‖

ಟೀ‖ ಸಿಂಗದ-ಮೃಗೇಂದ್ರದ, ಉದರದೋಳ್-ಗರ್ಭದಲ್ಲಿ, ಜಂಬುಕಂ-ಗುಳ್ಳೇನರಿಯೆಂಬ ಸಣ್ಣಪ್ರಾಣಿಯು, ಜನಿಸುವುದೆ-ಹುಟ್ಟುತ್ತದೆಯೆ, (ಸಿಂಹದ ಹೊಟ್ಟೆಯಲ್ಲಿ ಸಿಂಹವೇ ಹುಟ್ಟುವುದು) ಅಕಟ-ಅಹಹ, ಎಲವೋ-ಎಲೋ, ನೀಂ-ನೀನಾದರೋ, ಹೆಂಬೇಡಿ-ಅಬಲೆಯ ಹಾಗೆ ಕೇಳಿಕೊಳ್ಳುವ ಕೈಲಾಗದವನೇ, ಕುಲಗೇಡಿ-ವೀರಕ್ಷತ್ರಿಯರ ವಂಶಕ್ಕೆ ಅಪಮಾನ ಪಡಿಸುವವನೇ, ತನ್ನ-ಎನ್ನಯ, ಬಸುರಿಂ-ಉದರದಿಂದ, ಬಂದಪನ್-ಜನಿಸಿದವನೆ, (ಅಲ್ಲ ಹುಟ್ಟಿದವನೇ ಅಲ್ಲ) ಖೂಳ-ಕೆಡಕನೆ, (ದುಷ್ಟನೆ) ಕಾದದೆ-ಎಮ್ಮಲ್ಲಿ ಕ್ಷಾತ್ರಧರ್ಮದಿಂದ ಜಗಳವಾಡದೆ, ಕುದುರೆಯಂ-ಯಜ್ಞಾಶ್ವವನ್ನು, ಏತಕೆ-ಏನುಕಾರಣವಾಗಿ, ತಂದೆ-ಹಿಂದಕ್ಕೆ ತಂದವನಾದೆ, ಪಂದೆ-ಕೈಲಾಗದವನೆ, (ಶುಂಠನೆ)ನಿನಗೆ-ಬಭ್ರುವಾಹನನೆಂಬ ನಿನಗಾದರೊ, ದೊಂಬಿನ-ಗಲಭೆಯಿಂದ ಸೇರಿಸಿರುವ, ಚತುರ್ಬಲಂ-ಹಸ್ತ್ಯಶ್ವರಥ ಪದಾತಿಗಳೆಂಬ ಚತುರಂಗ ಸೇನೆಯೂ, ಇದು, ಏಕೆ-ಇವೆಲ್ಲ ಏತಕ್ಕೆ ಪ್ರಯೋಜನ? (ಇವುಗಳನ್ನು ಸೇರಿಸಿರುವುದರಿಂದ ಫಲವೇನು) ಭೂಪಾಲರ- ಭೂಮಿಪತಿಗಳ, ಆಡಂಬರದ- ವೈಭವದಿಂದ ಕೂಡಿದ, ಛತ್ರಚಾಮರಗಳ್-ಆತಪತ್ರವು, ಚೌರಿಯು ಇವೇ ಮೊದಲಾದವುಗಳು, ಏತಕೆ-ಏಕೆ ಹೊಂದಿರುತ್ತಿ, (ಇದ್ದರೇನು ಫಲ) ಬಯಲ-ಹೊರಗಡೆ ಪ್ರದೇಶದ, ಡಂಭದ-ಡಂಭಾಚಾರದ, ಠೀವಿಯ, (ವೈಭವದ) ಕೈದುಗಳ್-ಕತ್ತಿ ಮೊದಲಾದ ಆಯುಧಗಳು, ಇವು ಏಕೆ-ಇವುಗಳೆಲ್ಲಾ ಏತಕ್ಕೆ ಬಂದಾವು? ನಿನ್ನ-ನಿನ್ನಯ, ಜೀವದ-ಪ್ರಾಣದ ಮೇಲಿರುವ, ಆಶೆಯನು-ಅಪೇಕ್ಷೆಯನ್ನು, (ಇಚ್ಛೆಯನ್ನು) ಸುಡುಸುಡು-ದಹಿಸು ದಹಿಸು, ಎಂದನು-ಎಂಬದಾಗಿ ಹೇಳಿದನು.

ಅ‖ ವಿ‖ ಜೀವ-ಪ್ರಾಣ, ಬೃಹಸ್ಪತಿ. ಸಿಂಗ ದ್ಭ. ಸಿಂಹ ತ್ಸ. ಜಂಬುಕ-ನರಿ, ಜಂಬುಕಾಸುರ. ಛತ್ರವೂ, ಚಾಮರವೂ, ಇವುಗಳು-ಛತ್ರಚಾಮರಗಳ್ ದ್ವಿ. ದ್ವಂ. ಸ. ‖೫೪‖

ಟೀ‖ ಎಲಾ-ಎಲೋ ನೀಚನೆ, ನಿನ್ನ-ನಿನ್ನಯ, ಮಾತೆ-ಜನನಿಯಾದ, ಚಿತ್ರಾಂಗದೆ-ಚಿತ್ರಾಂಗದೆ ಎಂಬುವಳು, ಆಹಹ-ಸೋಜಿಗವು, (ಆಶ್ಚರಿಯು) ನರ್ತಕಿಯಲಾ-ನಾಟ್ಯಗಾತಿಯಾದವಳಲ್ಲವೆ? (ಬೆಲೆವೆಣ್ ಅಲ್ಲವೆ) ಗಂಧರ್ವನಾಯಕನ-ಗಂಧರ್ವನೆಂಬ ರಾಜನ, ದುಹಿತೃವಲಾ-ಪುತ್ರಿಯಾದವಳಲ್ಲವೆ? ಇದು-ರಾಜಕುರುಹುಗಳಾದ ಈ ಬಿರುದಾವಳಿಗಳು, ವಿಹಿತಂ-ಸರಿಯಾದದ್ದು, (ನಿನ್ನಂಥವನಿಗೆ ಅರ್ಹವಾದದ್ದು) ನಿನಗೆ-ನಿನಗಾದರೊ, ಭೂಪಾಲಕರ-ಭೂಮಿಪತಿಗಳಾದ ರಾಜರ, ವೇಷಂ-ವೇಷವನ್ನು, (ರೂಪವನ್ನು) ತಳೆದ-ಧರಿಸಿಕೊಂಡಿರುವ, ನಾಟಕದ-ಕಪಟ ವಿದ್ಯದ, ರಚನೆ-ನಿರ್ಮಾಣವಾಗಿರುವುದು. (ಅಲಂಕಾರ

---

ಮೀರಿ ನಡೆದು, ಸಂಗ್ರಾಮದಲ್ಲಿ ಶತ್ರುಭಟರನ್ನೆಲ್ಲಾ ಜೈಸಿ, ಕಡೆಗೆ ಆ ಹನದಲ್ಲಿ ಸತ್ತು ವೀರಸ್ವರ್ಗವನ್ನು ಪೊಂದಿದನು, ಅಂತಹ ಅಭಿಮನ್ಯುವು ಹೊರ್ತಾಗಿ ನನಿಗೆ ಪುತ್ರರೇ ಇಲ್ಲವೆಂಬದಾಗಿ ಹೇಳಿದನು ‖ ೫೩ ‖ ಎಲಾ ಬಭ್ರುವಾಹನ! ಸಿಂಗದ ಹೊಟ್ಟೆಯಲ್ಲಿ ಸಿಂಹದ ಮರಿಯು ಹುಟ್ಟದೆ ಎಲ್ಲಿಯಾದರೂ ಜಂಬುಕವು ಹುಟ್ಟೀತೇ! ಎಲಾ ನೀಚನೆ! ನೀನು ಹೆಂಗರುಳುಳ್ಳವನಾದ ಕೈಲಾಗದ ಹೇಡಿಯಾಗಿರುತ್ತಿ, ಕ್ಷತ್ರಿಯರ ಕುಲಕ್ಕೆ ದೊಡ್ಡ ಅಪಕೀರ್ತಿಯನ್ನು ತಂದವನಾಗಿರುತ್ತೀ, ನನ್ನ ಹೊಟ್ಟೆಯಲ್ಲಿ ನೀನು ಹುಟ್ಟಿದವನೇ ಅಲ್ಲ, ಹಾಗಿದ್ದ ಪಕ್ಷದಲ್ಲಿ ಹೇಡಿಗಳಹಾಗೆ ಮೊದಲು ತುರಗವನ್ನು ಕಟ್ಟಿಹಾಕಿ ಈಗ ಈ ರೀತಿಯಾಗಿ ನನ್ನೊಡನೆ ಯುದ್ಧ ಮಾಡದೆ ಕುದುರೆಯನ್ನು ತಂದಿರುತ್ತಿ? ನೀನು ಎಂದಿಗೂ ನನಗೆ ಸಂಜನಿಸಿದವನೇ ಅಲ್ಲ, ನೀನು ಸರಿಯಾದ ರಾಜನಾಗಿದ್ದಲ್ಲಿ ಈ ರೀತಿಯಾಗಿ ತರುತ್ತಿದ್ದೆಯಾ? ಕೆಲಸಕ್ಕೆ ಬಾರದೆ ದೊಂಬಿಯಾಗಿ ಕೂಡಿಸಿರುವ ಈ ನಾಲ್ಕು ಬಗೆಯಾದ ಸೈನ್ಯವುತಾನೆ ಏಕೆ? ಭೂಪಾಲರಿಗೆ ಯೋಗ್ಯವಾದೀ ಛತ್ರಚಾಮರಾದಿಗಳುತಾನೆ ಏಕೆ? ಎಲ್ಲಿಯಾದರೂ ಹೊರಗಡೆಯಲ್ಲಿ ಸುಮ್ಮನೆ ಕೈದುಗಳನ್ನು ಹಿಡಿದುಕೊಂಡು ನಿಂತಿರುವುದಕ್ಕೆ ಬದಲಾಗಿ ಒಂದು ಗುಂಪಾಗಿ ಸೇರಿಸಿ ತಂದಿರುವೆಯಾ? ಈ ಕೈದುಗಳು ತಾನೆ ನಿನಗೇಕೆ ಪ್ರಯೋಜನಕ್ಕೆ ಬಂದಾವು? ಕ್ಷತ್ರಿಯನಾಗಿದ್ದಲ್ಲಿ ತನ್ನ ಪ್ರಾಣದ ಮೇಲಿನ ಆಶೆಯನ್ನಿಡುವನೇ? ನೀನು ಬದುಕಿದ್ದು ವ್ಯರ್ಥ, ನಿನ್ನ ಬಾಳ್ವೆಯನ್ನು ಸುಡು ಸುಡು ಆಚೆಗೆ ನಡೆಯೆಂದು ಹೇಳಿದನು ‖೫೪‖ ನಿನ್ನ ಮಾತೆಯಾದ ಚಿತ್ರಾಂಗದೆಯು ಅಹಹ ನರ್ತಕಿಯಲ್ಲವೇ? ಗಂಧರ್ವ ನಾಯಕನ ದುಹಿತೃವಲ್ಲವೇ? ಈ ರಾಜಕುರುಹು ವಿಹಿತವಾದದ್ದೋ, ನಿನಗೆ ಭೂಪಾಲಕರ ವೇಷವನ್ನು ತಳೆದಿರುವುದು ನಾಟಕದ ರಚನೆಯಾಗಿರುವುದು. ಈ ದಿವಸದಲ್ಲಿ ರಾಯರ ಎದುರಾಗಿ ತುರಗವನ್ನು ತಡೆದ ಬಹಳ ಅಧಿಕವಾದ ಪೌರುಷವು ಸಾಕಾ

ರಾಯರಮುಂದೆ ಹೋಗೆಂದು ದುಷ್ಕೃತಿಯ | ಕುಹಕದಿಂಬೈದುಭಂಗಿಸಿ ಜರಿದನಾತ್ಮಜನನರ್ಜುನಂಕೋಪದಿಂದ ||೫೫|| ಬಿರುನುಡಿಗಳಿಂತನ್ನ ಮೊಗನೋಡದರ್ಜುನಂ | ಜರಿದೊಡಾತನ ಬಗೆಯನಾಸುಬುದ್ಧಿಗೆತೋರು | ತುರೆಕನಲ್ದುರಿದೆದ್ದುಪಳಿದೆಲಾಮಾತೆಯಂತನಗೆ ಸೀವರಿಸಿದೆಯಲಾ || ಅರಿಯಬಹುದಿನ್ನು ಕೇಳ್ನಿನ್ನದಲೆಗೆಡಹದೊಡೆ | ಕುರುಹಿಟ್ಟುನೀನಾಡಿದಿನಿತೆಲ್ಲ ಮಂದಿಟಂ | ಮರೆಯದಿರ್ಪ್ಪೆಕೆಂದುತಿರುಗಿದಂ ಬಭ್ರುವಾಹನನಂದುಕುದುರೆಸಹಿತ ||೫೬|| ತೆಗೆಸಿದಂತಂದಖಿಳವಸ್ತುವಂಕು

ವಾಗಿರುವುದು) ಇಂದು-ಈಗಿನ ವೇಳೆಯಲ್ಲಿ, ರಾಯರ-ರಾಜರುಗಳ, ಮುಂದೆ-ಮುಂಗಡೆಯಲ್ಲಿ, ಹಯಮಂ-ಅಶ್ವವನ್ನು, ತಡದ-ಅಡ್ಡಿಮಾಡಿದ, ಬಹೀಕಿ-ಸೋಜಿಗ ಕೆಲಸವು, (ಆಶ್ಚರ್ಯಕಾರ್ಯವು) ಬಹಳ-ಹೆಚ್ಚಾದ, ಪೌರುಷಂ-ಪರಾಕ್ರಮಾತಿಶಯವು, ಆದುದು-ಉಂಟಾಗಿರುವುದು, (ಬಹಳ ಶ್ರಮಪಟ್ಟು ಕೆಲಸಮಾಡಿದೆ) ಹೋಗು-ಹೊರಕ್ಕೆ ನಡೆಯುವನಾಗು, ಎಂದು-ಎಂಬದಾಗಿ ಹೇಳಿ, ದುಷ್ಕೃತಿಯ-ಆಯುಕ್ತವಾದ ಕೆಲಸವನ್ನು ಮಾಡಿದ ಬಭ್ರುವಾಹನನನ್ನು ನೋಡಿ, ಆಚರಿಸುವ-ಕುಹಕದಿಂ(ಕಪಟದ) ವಂಚನೆಯಮಾತುಗಳಿಂದ. ಬೈದು-ನಿಂದಿಸಿ. (ದೂಷಿಸಿ) ಆಡಿ-ಉಚ್ಚರಿಸಿ, (ಹೇಳಿದವನಾಗಿ) ಭಂಗಿಸಿ-ಅಗೌರವಪಡಿಸಿ, ಅರ್ಜುನಂ-ಆ ಪಾರ್ಥನು, ಕೋಪದಿಂದ-ಅತಿ ರೋಷದಿಂದ, ಆತ್ಮಜನನು-ಪುತ್ರನಾದ ಬಭ್ರುವಾಹನನನ್ನು, ಜರಿದಂ-ನಿಂದಿಸಿದನು, (ತಿರಸ್ಕರಿಸಿದನು-ಹಿಯ್ಯಾಳಿಸಿದನು.)

ಅ|| ವಿ|| ರಾಜ-ತ್ಸ. ರಾಯ-ದ್ಭ. ಶೃಂಗಾರ-ತ್ಸ. ಸಿಂಗಾರ-ದ್ಭ ||೫೫||

ಟೀ|| ಅಂದು-ಅರ್ಜುನನು ನಿಂದಿಸಿದ ಸಮಯದಲ್ಲಿ, ಬಭ್ರುವಾಹನಂ-ನಕುಲಧ್ವಜನು, ಅರ್ಜುನಂ-ಪಾರ್ಥನು, ತನ್ನ-ತನ್ನಯ, ಮೊಗನೋಡದೆ-ಮೋರೆಯನ್ನು ನೋಡದೆ, (ಇಂಥವನೆಂದು ಸರಿಯಾಗಿ ತಿಳಿಯದೆ) ಬಿರು ನುಡಿಗಳಿಂ-ಬಿರುಸಾದ ಮಾತುಗಳಿಂದ, ಜರಿದೊಡೆ-ಹಿಯ್ಯಾಳಿಸಲಾಗಿ, (ನಿಂದಿಸಲಾಗಿ) ಆತನ-ಆ ಪಾರ್ಥನ, ಬಗೆಯನು-ಇರುವ ಅಂದವನ್ನು, ಆ ಸುಬುದ್ಧಿಗೆ-ತನ್ನ ಸಚಿವನಾದ ಸುಬುದ್ಧಿಯೆಂಬುವನಿಗೆ, ತೋರುತ-ನೋಡಿಸುತ್ತ, ಉರೆ-ಬಹಳವಾಗಿ, ಕನಲ್ದು-ರೇಗಿಕೊಂಡು, ಉರಿದು-ಪ್ರಜ್ವಲಿಸಿ, (ಉರಿಯಾಗಿ) ಎದ್ದು-ಮೇಲಕ್ಕೆ ಎದ್ದು, ಮಾತೆಯಂ-ತನ್ನ ಜನನಿಯಾದ ಚಿತ್ರಾಂಗದೆಯನ್ನು, ಪಳಿದೆಲಾ-ಹಿಯ್ಯಾಳಿಸಿದೆಯಲ್ಲವೆ! (ನಿಂದಿಸಿದೆಯಲ್ಲವೆ) ತನಗೆ-ಬಭ್ರುವಾಹನನಾದ ಎನಗೆ, ಸೀವರಿಸಿದೆಯಲಾ-ದೂಷಿಸಿದೆಯಲ್ಲವೆ (ಬೈದೆಯಲ್ಲವೆ) ಇನ್ನು-ಇನ್ನು ಮುಂದಾಗುವ ಕೆಲಸವನ್ನು, ಅರಿಯಬಹುದು-ತಿಳಿದುಕೊಳ್ಳಬಹುದು, ಕೇಳು-ತಿಳಿಯುವನಾಗು, ನಿನ್ನ-ನಿನ್ನಯ, ತಲೆ-ಶಿರಸ್ಸನ್ನು, ಕೆಡಹದೊಡೆ-ಕೆಳಕ್ಕೆ ಬೀಳುವಂತೆಮಾಡದಿದ್ದರೆ, ಕುರುಹಿಟ್ಟು-ಗುರ್ತಿಸಿ, (ಗುರಿನೋಡಿಕೊಂಡು) ನೀನು-ಅರ್ಜುನನಾದ ನೀನಾದರೊ, (ಎನ್ನ ತಂದೆಯಾದ ನೀನು) ಆಡಿದ-ಉಚ್ಚರಿಸಿದ, (ಹೇಳಿದಂಥ) ಇನಿತೆಲ್ಲಮುಂ-ಇಷ್ಟು ವಿಷಯಗಳೆಲ್ಲವೂ, ದಿಟಂ-ನಿಶ್ಚಯವಾದದ್ದು, (ನಂಬತಕ್ಕದ್ದು) ಮರೆಯದೆ-ಮರೆತು ಬಿಡದೆ, ಇರು-ಇರುವನಾಗು, ಸಾಕು-ಬಿಡು, (ಈ ರೀತಿಯಾಗಿ ನನ್ನ ತಾಯಿಯನ್ನೂ ನನ್ನನ್ನೂ ದೂಷಣೆಮಾಡಿದ್ದು) ಎಂದು-ಎಂದು ಹೇಳಿದವನಾಗಿ, ಕುದುರೆ ಸಹಿತ-ಯಜ್ಞಾಶ್ವಸಹಿತನಾಗಿ, ತಿರುಗಿದಂ-ಪುನಃ ತನ್ನ ಮನೆಗೆ ಬಂದನು, (ಹಿಂದಕ್ಕೆ ಬಂದವನಾದನು.)

ಅ|| ವಿ|| ಬಿರುಸಾದ+ನುಡಿ=ಬಿರುನುಡಿ ವಿ. ಪೂ. ಕ. (೧) ಅಷ್ಟವಿಧ ವಿವಾಹ-ಏನೂ ತೆಗದುಕೊಳ್ಳದೆ ಹುಡುಗಿಯನ್ನು ಕೊಡುವುದು, ಬ್ರಹ್ಮ. (೨) ಯಜ್ಞದಲ್ಲಿ ಯಜ್ಞದಕ್ಷಿಣೆಯಾಗಿ ಕೊಡುವುದು, ದೈವ. (೩) ಒಂದು ಹೋರಿ, ಒಂದು ದನ ಇವನ್ನು ಪ್ರತಿಫಲವಾಗಿ ತೆಗೆದುಕೊಂಡು ಕೊಡುವುದು, ಆರ್ಷ. (೪) ಹುಡುಗಿಯ ಮನಸ್ಸುಳ್ಳವನಿಗೆ ಏನೂ ತೆಗದುಕೊಳ್ಳದೆ ಕೊಡುವುದು, ಪ್ರಾಜಾಪತ್ಯ. (೫) ತಾವು ತಾವೆ ಮಾತಾಡಿಕೊಂಡು ದಂಪತಿಗಳಾಗುವುದು, ಗಾಂಧರ್ವ. (೬) ಹೆಣ್ಣಿನ ತಂದೆ

ಯಿತು. ಇನ್ನು ನಿನ್ನ ಕಾರ್ಯಕ್ಕೆ ಆಚೆಗೆ ನಡೆ ಎಂದು, ದುಷ್ಕಾರ್ಯವನ್ನು ನಡಿಸಿದವನನ್ನು ದಂಡಿಸುವರೀತಿಯಿಂದ, ಕುಹಕದಿಂದ ಕೂಡಿದ ಅಗೌರವದ ಮಾತುಗಳನ್ನಾಡಿ, ಕೆಟ್ಟ ಭಾಷೆಗಳಿಂದ ನಿಂದಿಸಿ, ಬಭ್ರುವಾಹನನನ್ನು ಅಪಮಾನಪಡಿಸಿ ಪಾರ್ಥನು ಸಿಟ್ಟಿನಿಂದ ಆತ್ಮಜನನ್ನು ಜರಿದನು ||೫೫|| ಆಗ ಬಭ್ರುವಾಹನನು ತನ್ನ ತಂದೆಯಾದ ಪಾರ್ಥನು ತನ್ನ ಮುಖ ನೋಡದೇ ಆಡಿದ ಬಿರಿ ನುಡಿಗಳನ್ನು ಕೇಳಿದವನಾಗಿ, ಆ ಕಿರೀಟಿಯ ಅಭಿಪ್ರಾಯವನ್ನು ತನ್ನ ಮುಖ್ಯ ಮಂತ್ರಿಯಾದ ಸುಬುದ್ಧಿಗೆ ತಿಳುಹಿ ತೋರಿಸುತ್ತ ಅತ್ಯಧಿಕವಾಗಿ ಉರಿದೆದ್ದು ನನ್ನ ಜನನಿಯಂ ನಿಂದಿಸಿ, ಅಪಮಾನದ ಬಿರುನುಡಿಗಳನ್ನಾಡಿದೆ, ನನ್ನನ್ನು ನಿನ್ನ ಮನಬಂದಂತೆ ನಿಂದಿಸಿ ತಿರಸ್ಕರಿಸಿದೆ ನೀನಾಡಿದ ಮಾತುಗಳೆಲ್ಲವೂ ಅಗತ್ಯವಾಗಿ ಆಗಬಹುದು. ನಾನು ನಿನ್ನ ಸುತನೇ ಆಗಿದ್ದ ಪಕ್ಷದಲ್ಲಿ ನಿನ್ನಯ ಶಿರವನ್ನು ಕೆಡಹುತ್ತೇನೆ, ನಿನ್ನ ಪುತ್ರನಾಗದ ವಿಷಯದಲ್ಲಿ ನೀನು ಗರ್ವದಿಂದ ಆಡಿದ ಮಾತುಗಳೆಲ್ಲವೂ ನನಿಗೂ ಮತ್ತು ನಮ್ಮ ಜನನಿಗೂ ಅನ್ವಯಿಸಲಿ, ಇದುವರಿವಿಗೆ ನೀನಾಡಿದ ಅಯುಕ್ತವಾದ ನುಡಿಗಳು ಸಾಕು. ನನ್ನ ತೋಳ್ಬಲವನ್ನು ಮುಂದೆ ಕಾಣುವೆ ಎಂದು ತಂದ ತುರಗದೊಡನೆ ಅತಿ ರೋಷದಿಂದ ಹಿಂತಿರುಗಿದನು ||೫೬|| ತರುವಾಯ ಬಭ್ರುವಾಹನನು ತಂದೆಯಾದ ಪಾರ್ಥನ

ದುರೆಯಂ । ಬಿಗಿಸಿದಂಲಾಯದೋಳ್ಪುರಜನಸ್ತ್ರೀಯರಂ । ಪೊಗಿಸಿದಂಪಟ್ಟಣಕೆಕರೆಸಿದಂಸಚಿವರಂಸೇನಾಧಿನಾಯಕರನು ॥ ಚಿಗಿದಂಚತುರಂಗನುಂನೆರಹಿಧಾತ್ರಿಯಂ । ಮಿಗಿಸಿದಂವಾದ್ಯರವದಿಂದಬ್ಧಿಘೋಷಮಂ । ಮುಗಿಸಿದಂತಾವರೆಯನಾಬಭ್ರುವಾಹನಂಧೂಳ್ಗಳಿನಿನಂಮುಸುಕಲು ॥ ೫೭ ॥ ಕೇಳೆಲೆನೃಪಾಲಕುಲತಿಲಕಮುಂದದ್ಭುತಕ । ಥಾಲಾಪಮಂಬಳಿಕಪೂಡಿದುದುಕರ್ಕಶದ । ಕಾಳಗಂಸವ್ಯಸಾಚಿಗೆಬಭ್ರುವಾಹನನಕೂಡೆಮಹದಾಹವದೊಳು ॥ ಹೇಳಲೇನೆಂದುಕರ್ಣಂಗೆಪಾರ್ಥನೊ

ತಾಯಿ, ಬಂಧು ಬಳಗಗಳಿಗೆ ಹಣಕೊಟ್ಟು ಮದುವೆಯಾಗುವದು, ಆಸುರ, (೭) ಹೆಣ್ಣನ್ನು ಕದ್ದುಕೊಂಡು ಹೋಗಿ ಮದುವೆಯಾಗುವುದು, ಪೈಶಾಚ (೮) ಬಲಾತ್ಕಾರದಿಂದ ಮದುವೆಯಾಗುವುದು, ರಾಕ್ಷಸ ॥೫೬॥

ಟೀ॥ ಆ ಬಭ್ರುವಾಹನಂ – ಆ ನಕುಲಧ್ವಜನು, ತಂದ–ತಂದೆಯಾದ ಪಾರ್ಥನ ಪಾದಕಾಣಿಕೆಗಾಗಿ ತೆಗೆದುಕೊಂಡು ಬಂದಿದ್ದ, ಅಖಿಳ – ಸಮಸ್ತವಾದ, ವಸ್ತುವ – ಪದಾರ್ಥಗಳನ್ನು, ತೆಗೆಸಿದಂ–ತನ್ನಹಿಂದೆಯೆ ತರಿಸಿದನು, ಕುದುರೆಯಂ–ಆ ಅರ್ಜುನನ ಕುದುರೆಯನ್ನು, ಲಾಯದೋಳ್ – ತನ್ನಯ ಅಶ್ವಶಾಲೆಯಲ್ಲಿ, ಬಿಗಿಸಿದಂ – ಕಟ್ಟಿಹಾಕಿಸಿದನು, ಪುರ–ಮಣಿಪುರದ, ಜನ–ತನ್ನಬಳಿಗೆ ಕರೆಸಿದ್ದ ಜನರನ್ನು, ಸ್ತ್ರೀಯರಂ – ವಿಲಾಸಿನಿಯರನ್ನು, ಪಟ್ಟಣಕೆ – ಮಣಿಪುರಕ್ಕೆ, ಪೊಗಿಸಿದಂ – ಪ್ರವೇಶಿಸುವಂತೆ ಮಾಡಿದನು, (ಕಳುಹಿಸಿಕೊಟ್ಟನು) ಸಚಿವರಂ – ಅಮಾತ್ಯರನ್ನು, ಸೇನಾಧಿನಾಯಕರಂ – ಸೇನಾಪತಿಗಳನ್ನು, (ಸೈನ್ಯದ ಮುಖ್ಯಾಧಿಕಾರಿಗಳನ್ನು) ಕರೆಸಿದಂ – ತನ್ನ ಬಳಿಗೆ ಬರಮಾಡಿಕೊಂಡನು. ಚತುರಂಗಮಂ – ಆನೆ ಕುದುರೆ ರಥ ಪದಾತಿಗಳನ್ನು ಚಿಗಿಸಿದಂ–ವೃದ್ಧಿಗೊಳಿಸಿದನು, (ಅಧಿಕವಾಗಿ ಜೊತೆಪಡಿಸಿದನು) ನೆರಹಿ–ವಿಸ್ತರಿಸಿ, ಧಾತ್ರಿಯಂ – ಪೃಥ್ವಿಯನ್ನು, ಮಿಗಿಸಿದಂ–ಉಳಿಯುವಂತೆ ಮಾಡಿದನು (ಸೈನ್ಯ ಹೆಚ್ಚಾದ್ದರಿಂದ ಸ್ಥಳ ಸಾಲದೆಂಬ ಭಾವವು) ವಾದ್ಯರವದಿಂದ–ಭೇರಿ ನಗಾರಿ ಮೊದಲಾದ ವಾದ್ಯಗಳ ಶಬ್ದವಿಶೇಷದಿಂದ, ಅಬ್ಧಿ–ಕಡಲಿನ (ಜಲಧಿಯ) ಘೋಷಮಂ–ಸದ್ದನ್ನು (ಆರ್ಭಟವನ್ನು) ಮುಗಿಸಿದಂ–ಮುಚ್ಚಿ ಹೋಗುವಂತೆ ಮಾಡಿದನು, ಧೂಳ್ಗಳ್ – ಧೂಳಿ ಮೊದಲಾದವುಗಳು (ರಜಸ್ಸುಗಳು) ಇನನಂ– ಭಾಸ್ಕರನನ್ನು, ತಾವರೆಯನ್ನು–ಮುಖಪದ್ಮವನ್ನು, ಮುಸುಕಲು–ಆಚ್ಛಾದನೆಯಾಗಲು (ಆವರಿಸುವಂತೆ) ಮಾಡಿದಂ–ಉಂಟುಮಾಡಿದನು.

ಅ॥ ವಿ॥ ಧಾತ್ರಿ – ದಾದಿ, ನೆಲ್ಲಿಯುಮರ, ಭೂಮಿ. ದಶವಾದ್ಯಗಳು – ಭದ್ರವೆಂಬ ಕರಾಡಿ, ಕಾಸಕವೆಂಬ ನಗಾರಿ, ಭೀಷಣವೆಂಬ ತ್ರಾಸಾ, ಘೋಷಣವೆಂಬುವ ಹುಡುಕ್ಕಾ, ಡಿಂಡಿಮವೆಂಬ ಡೋಲು. ಝುರ್ಝುರವೆಂಬ ಡಿಕ್ಕಿ – ಡಮರುವೆಂಬ ಉರುಮಾಲು, ಕಾಹಳವೆಂಬ ಕಹಳೆ, ದುಂದುಭಿಯೆಂಬ ಧೋರ, ಘಂಟಿಕೆಯೆಂಬ ಘಂಟೆ ॥೫೭॥

ಟೀ॥ ಎಲೆ–ಎಲೈಯ್ಯಾ ! ನೃಪಾಲ–ರಾಜರುಗಳ, ಕುಲ – ಸಮೂಹಕ್ಕೆ, ತಿಲಕ–ಲಲಾಮನಾದ (ಅಲಂಕಾರಪ್ರಾಯನಾದ), ಜನಮೇಜಯ–ಜನಮೇಜಯರಾಯನೇ, ಮುಂದಣ – ಮುಂದೆಬರುವ, ಅದ್ಭುತದ – ಮಹದಾಶ್ಚರ್ಯಕರನಾದ, ಕಥಾ ಕಥೆಯ, (ನಡವಳಿಕೆಯ), ಆಲಾಪವನು–ಸಂಭಾಷಣೆಯನ್ನು, (ಹೇಳುವಿಕೆಯನ್ನು) ಕೇಳು–ಆಲಿಸುವನಾಗು, ಬಳಿಕ–ಅನಂತರದಲ್ಲಿ, ಕರ್ಕಶದ–ಕ್ರೂರವಾದ, ಕಾಳಗಂ–ಯುದ್ಧವು (ಜಗಳವು), ಬಭ್ರುವಾಹನನ–ನಕುಲಧ್ವಜನ, ಕೂಡೆ–ಜೊತೆಗೆ (ಹತ್ತಿರದಲ್ಲಿ) ಸವ್ಯಸಾಚಿಗೆ–ಫಲುಗುಣನಿಗೆ, ಮಹದಾಹವದೊಳು – ಘೋರವಾದ ಕಾಳಗದಲ್ಲಿ, ನಡೆದ ವಿಷಯವನ್ನು, ಏನು–ಏನೆಂದು ಹೇಳಲಿ, ಅಂದು–ಪೂರ್ವದಲ್ಲಿ ನಡೆದ ಭಾರತಯುದ್ಧದಲ್ಲಿ, ಕರ್ಣಂಗೆ–ಸೂರ್ಯಪುತ್ರನಾದ ಕರ್ಣನಿಗೆ, ಪಾರ್ಥನೊಳು–ಫಲುಗುಣನಲ್ಲಿ (ಅರ್ಜುನನೊಂದಿಗೆ) ಆದ–ಜರಿಗಿದ (ಉಂಟಾದಂಥ) ಕೋಲಾಹಳದ – ಮಹಾತಿಶಯವಾದ, ಕದನದಂತೆ – ಕಾಳಗದರೀತಿಯಿಂದಲೂ, ಮುನ್ನ–ಪೂರ್ವದಲ್ಲಿ, (ತ್ರೇತಾಯುಗದಲ್ಲಿ ಆದ) ಅಧ್ವರದ–ಶ್ರೀರಾಮನು ಮಾಡಿದ ಅಶ್ವಮೇಧಯಾಗದ, ಬೇಳಂಬದಿಂದ–ವ್ಯಾಜಾಂತರದಿಂದ (ಕಾರಣದಿಂದ) ರಾಮಂಗೆ – ಶ್ರೀರಾಮಮೂರ್ತಿಗೆ, ಕುಶಲವರೊಡನೆ–ತನ್ನ ಪುತ್ರನಾದ–ಕುಶ, ಲವ ಇವರ ಸಂಗಡ, ಬಂದ–ಘಟಿಸಿದ (ಪ್ರಾಪ್ತವಾದ) ಸಂಗ್ರಾಮದಂತೆ–ಕಾಳಗದ ರೀತಿಯಿಂದ, ಪೊಡಿದುದು–ಪ್ರಾರಂಭವಾಯಿತು

ರಾಜಮರ್ಯಾದಾರ್ಥವಾಗಿ ತಂದಿದ್ದ ಸಕಲ ವಿಧವಾದ ವಸ್ತುವಾಹನಾದಿಗಳನ್ನು ಹಿಂದಕ್ಕೆತರಿಸಿ, ಆ ಯಜ್ಞಾಶ್ವವನ್ನು ತನ್ನ ಕುದುರೆಯ ಲಾಯದಲ್ಲಿಯೆ ಕಟ್ಟಿಸಿ, ನಗರದಿಂದ ತನ್ನೊಡನೆ ಬಂದಿದ್ದ ಪ್ರಜೆಗಳನ್ನು ಬ್ರಾಹ್ಮಣರನ್ನು, ಯುವತಿಯವರನ್ನು, ಕಳಸ, ಕನ್ನಡಿ, ತೋರಣಾದಿಗಳನ್ನೂ, ಹಿಂದಕ್ಕೆ ಕರೆತರಿಸಿ, ತಮ್ಮ ತಮ್ಮ ಸ್ವಸ್ಥಾನಕ್ಕೆ ಹೊರಡುವಂತೆ ಅಜ್ಞಾಪಿಸಿದನು. ಅನಂತರ, ಸಚಿವರನ್ನೂ, ಸೇನಾಧಿನಾಯಕರನ್ನೂ ಬರಮಾಡಿಕೊಂಡು, ಚತುರಂಗಬಲವಾದ ಆನೆ, ಕುದುರೆ, ರಥ ಪದಾತಿಗಳನ್ನು ಅತ್ಯಧಿಕವಾಗಿ ಸೇರುವಂತೆ ಮಾಡಿದನು. ಚತುರಂಗಬಲವೂ ಯುದ್ಧರಂಗದಲ್ಲಿ ನಿಲ್ಲಲು ಸ್ಥಳಸಾಲದ್ದರಿಂದ, ಇನ್ನೂ ಮಿಗುವಂತೆ ಮಾಡಿದನು (ಹೆಚ್ಚಾಗಿ ಸೇನೆಯು ನೆರದಿತ್ತೆಂಬ ಭಾವವು). ದುಂದುಭಿ ಭೇರಿ ಮೊದಲಾದ ವಾದ್ಯಧ್ವನಿಯು ಜಲಧಿಯು ಆಚ್ಛಾದಿಸಿ ಘೋಷವನ್ನುದಯಿಸಿತು, ಸೇನಾಜಾಲದ ತುಳಿತದಿಂದೆದ್ದ ಧೂಳು ಅಂತರಿಕ್ಷಮಂಡಲದಲ್ಲಿದ್ದ ಸೂರ್ಯನ ಮುಖಪದ್ಮ

ಳಾದ | ಕೋಲಾಹಳದಕದನಮಂತೆಮುನ್ನಧ್ವರದ | ಬೇಳಂಬದಿಂದರಾಮಂಗೆಕುಶಲವರೊಡನೆಬಂದಸಂಗ್ರಾಮದಂತೆ ॥೫೮॥
ಆಲಿಸಿದನಲ್ಲಿಪರ್ಯಂತಜನಮೇಜಯಂ | ಮೇಲಣಕಥೆಯನೊಲಿದುಬೆಸಗೊಡನೆಲೆಮುನಿಪ | ಹೋಲಿಸಿನುಡಿದೆಕರ್ಣಫಲುಗುಣರ
ಸಮರಮಂಕೇಳ್ದೆನದನಾನಿನ್ನೊಳು ॥ ಹೇಳಬಹುದುರಾಘವಂಗೆಸುತರೊಡನಾದ | ಕಾಳಗದಸಂಗತಿಯನೆನಗೆಂದೆನಲ್ಕೆಭೂ |
ಪಾಲಂಗೆವಿರಚಿಸಿದನೀತೆರದೊಳಾತಪೋನಿಧಿಬಳಿಕಸಂತಸದೊಳು ॥ ೫೯ ॥ ಪ್ರೇಮದಿಂದ್ಯೆದೆವಿಸ್ತರಿಸಿದಂನೃಪಕುಲೋ |
ದ್ದಾಮ ಜನಮೇಜಯಂಬೆಸಗೊಳಲ್ ಜೈಮಿನಿ ಮ | ಹಾಮುನೀಂ ದ್ರಂಕೂರುತ್ತ ಕೇಳ್ವರ್ಗೆ ರೋಮಾಂಚನಂದುಪೊ

(ಉಪಕ್ರಮಿಸಿ)

ಅ॥ ವಿ॥ ತಿಲಕ–ನಾಮ, ಶ್ರೇಷ್ಠ, ತಿಲಕವೃಕ್ಷ. ಕಥೆಯ, ಆಲಾಪ = ಕಥಾಲಾಪ, ಷ. ತ. ಕಥಾ+ಆಲಾಪ=ಕಥಾಲಾಪ, ಸವರ್ಣ, ದೀ, ಸಂ. ಕ–ಶ–ರಾಮನ ಮಗ. ದರ್ಭೆ, ಲವ–ಲವನೆಂಬುವನು, ಹಸುವಿನ ಬಾಲದ ಕೂದಲು ॥೫೮॥

ಟೀ॥ ಜನಮೇಜಯಂ–ಜನಮೇಜಯರಾಯನು, ಅಲ್ಲಿಪರಿಯಂತ–ಅಲ್ಲಿಯವರೆಗೂ, ಆಲಿಸಿದಂ–ಕೇಳಿದವನಾದನು, ಒಲಿದು–ವಿಶ್ವಾಸವಿಟ್ಟು (ಪ್ರೀತಿಸಿ), ಮೇಲಣ – ಮುಂದೆಬರುವ, ಕಥೆಯನು – ಕಥೆಯನ್ನು, (ಚಾರಿತ್ರಕವಿಷಯವನ್ನು ಅಥವಾ ನಡೆದ ಸಂಗತಿಯನ್ನು), ಬೆಸಗೊಂಡನು–ವಿಜ್ಞಾಪನೆ ಮಾಡಿಕೊಂಡನು, (ಕೇಳಿಕೊಂಡನು), ಎಲೆಮುನಿಪ–ಎಲೈ ಜೈಮಿನಿಮುನೀಶ್ವರನೆ, ಕರ್ಣಫಲುಗುಣರ–ಕರ್ಣ ಮತ್ತು ಪಾರ್ಥ ಇವರುಗಳ, ಸಮರಂ–ಕಾಳಗವನ್ನು, ಹೋಲಿಸಿ–ಹೊಂದಿಸಿ (ಹೋಲಿಕೆಯಾಗಿ ಮಾಡಿ), ನುಡಿದೆ–ಹೇಳಿದವನಾದೆ, ಅದನು–ಆ ಕರ್ಣ ಮತ್ತು ಅರ್ಜುನರಿಗಾದ ಕಾಳಗವನ್ನು, ಆಂ–ನಾನಾದರೊ, ನಿನ್ನೊಳು–ನಿನ್ನ ಸಹಾಯದಿಂದ (ನಿನ್ನಲ್ಲಿ) ಕೇಳ್ದೆಂ – ಕೇಳಿದವನಾದೆನು, ರಾಘವಂಗೆ – ಶ್ರೀ ರಾಮಚಂದ್ರಮೂರ್ತಿಗೆ, ಸುತರೊಡನೆ–ತನ್ನ ಪುತ್ರರಾದ ಕುಶಲವರೊಂದಿಗೆ, ಆದ–ಜರಗಿದ, (ನಡೆದ) ಕಾಳಗದ–ಆಹವದ, ಸಂಗತಿಯನು–ವೃತ್ತಾಂತವನ್ನು, (ವಿಷಯವನ್ನು) ಎನಗೆ–ನನಿಗೋಸ್ಕರವಾಗಿ, ಹೇಳಬೇಹುದು – ಅಪ್ಪಣೆ ಕೊಡಿಸಬೇಕು, (ಹೇಳಬೇಕು) ಎಂದು–ಎಂಬದಾಗಿ, ಎನಲ್ಕೆ–ಎಂದು ಹೇಳಲು, ಆ ತಪೋನಿಧಿ–ತಪಸ್ಸೇ ನಿಕ್ಷೇಪವಾಗುಳ್ಳ ಜೈಮಿನಿಮುನೀಂದ್ರನು, ಭೂಪಾಲಂಗೆ–ಭೂಮಿಪತಿಯಾದ ಜನಮೇಜಯರಾಯನಂ ಕುರಿತು, ಬಳಿಕ–ಅನಂತರದಲ್ಲಿ, ಸಂತಸದೊಳು–ಸಮಾಧಾನ ಚಿತ್ತವೃತ್ತಿಯಿಂದ, (ಹರ್ಷದಿಂದ) ಈತೆರದೊಳು ಈ ವಿಧವಾಗಿ (ಈ ಪರಿಯಾಗಿ) ವಿರಚಿಸಿದಂ–ಮಾಡಿದನು (ಬೋಧಿಯಂಗೈದನು)

ಅ॥ ವಿ॥ ಕರ್ಣನೂ, ಫಲುಗುಣನೂ – ಕರ್ಣಫಲುಗುಣರು, ದ್ವಿ. ದ್ವ. ಸ. ತಪಸ್ಸೇನಿಧಿಯಾಗಿ ಉಳ್ಳವನು=ತಪೋನಿಧಿ ॥೫೯॥

ಟೀ॥ ನೃಪಕುಲ–ದೊರೆಗಳ ಸಮೂಹದಲ್ಲಿ, ಉದ್ದಾಮ–ಶ್ರೇಷ್ಠನಾದ, ಜನಮೇಜಯಂ – ಜನಮೇಜಯರಾಯನು, ಬೆಸಗೊಳಲ್–ಕೇಳಲಾಗಿ, (ಜೈಮಿನಿ ಮುನೀಂದ್ರನನ್ನು ಕೇಳಲಾಗಿ), ಮಹಾ – ಶ್ರೇಷ್ಠನಾದ, ಮುನೀಂದ್ರ – ಋಷೀಶ್ವರನಾದ

---

ವನ್ನು ಮುಸುಕಿತು ॥ ೫೭ ॥ ರಾಜವಂಶಕ್ಕೆ ತಿಲಕಪ್ರಾಯನಾದ ಎಲೈ!ಜನಮೇಜಯರಾಯನೇ ಮುಂದಣ ಅತ್ಯಾಶ್ಚರ್ಯಕರವಾದ ಕಥಾಸಂದರ್ಭವನ್ನು ಏನೆಂದು ಹೇಳಲಿ, ಕಿರೀಟಿಯು ತನ್ನ ಪುತ್ರನಾದ ಬಭ್ರುವಾಹನನ್ನು ತಿರಸ್ಕಾರಮಾಡಿದ ನಂತರ, ಕರ್ಕಶವಾದ ಕಾಳಗವು ನಕುಲಧ್ವಜನಿಗೆ, ಸವ್ಯಸಾಚಿಯೊಡನೆ ಹಿಂದೆ ಭಾರತಯುದ್ಧದಲ್ಲಿ ಸೂರ್ಯಪುತ್ರನಾದ ಕರ್ಣಂಗೆ ಪಾರ್ಥನೊಡನೆ ಸಂಭವಿಸಿದ ಮಹಾತಿಶಯವಾದ ಕದನದಂತೆಯೂ, ಹಿಂದೆ ತ್ರೇತಾಯುಗದಲ್ಲಿ ಶ್ರೀರಾಮಚಂದ್ರನು ಮಾಡಿದ ಅಶ್ವಮೇಧ ಯಾಗದ ಕಾರಣದಿಂದ ಶ್ರೀರಾಮಚಂದ್ರನಿಗೆ ಋಷ್ಯಾಶ್ರಮದಲ್ಲಿ ವಾಸವಾಗಿದ್ದ ತನ್ನ ಪುತ್ರರಾದ ಕುಶಲವರೊಡನೆಯುಂಟಾದ ಸಂಗ್ರಾಮದಂತೆಯೂ, ಪ್ರಾರಂಭವಾಯಿತು ॥ ೫೮ ॥ ಹಿಂದಿನ ಕಥಾಸಂದರ್ಭವನ್ನೆಲ್ಲಾ ಅಲ್ಲಿಯ ಪರ್ಯಂತವೂ ಆಲಿಸಿದೆನು, ಮುಂದಿನ ಕಥಾಸಂದರ್ಭವನ್ನು ಕುರಿತು, ಎಲೈ ಜೈಮಿನಿ ಮುನೀಂದ್ರನೇ ನೀನು ಈ ಪಾರ್ಥ ಬಭ್ರುವಾನರ ಕಾಳಗಕ್ಕೆ ಕರ್ಣಾರ್ಜುನರಿಗೂ, ರಾಮಚಂದ್ರನಿಗೂ ಮತ್ತು ಕುಶಲವರಿಗೂ ನಡೆದ ಯುದ್ಧದ ಸಂಗತಿಗಳನ್ನು ಹೋಲಿಸಿ ಹೇಳಿರುವೆಯಷ್ಟೆ? ಅದರಲ್ಲಿ ಕರ್ಣಾರ್ಜುನರಿಗುಂಟಾದ ಯುದ್ಧಾಡಂಬರವನ್ನು ನಿನ್ನಿಂದಲೇ ಕರ್ಣಾನಂದವಾಗಿ ಕೇಳಲಾದೆನು, ಶ್ರೀರಾಮಚಂದ್ರನಿಗೆ ತನ್ನ ಸುತರೊಡನೆ ಉಂಟಾದ ಕಾಳಗದ ವಿಷಯವನ್ನು ಕೇಳಲು ಅತ್ಯುತ್ಸಾಹವುಳ್ಳವನಾಗಿರುತ್ತೇನೆ. ದಯಗೈಯ್ದು ರಾಮಾಶ್ವಮೇಧದ ಸಂಗತಿಯನ್ನು ವಿವರಗೊಳಿಸಬೇಕೆನಲ್ಕೆ, ಆ ಜೈಮಿನಿ ಮುನೀಂದ್ರನು ಆ ವಿನಯೋಕ್ತಿಯಂ ಲಾಲಿಸಿ ಅತ್ಯಾದರದೊಡನೆ ಜನಮೇಜಯ ಭೂಪಾಲಂಗೆ ರಾಮಾಶ್ವಮೇಧ ಕಥಾಸಂದರ್ಭವನ್ನು ಈ ರೀತಿಯಿಂದ ಜನಮೇಜಯರಾಯನಿಗೆ ಬೋಧಿಸಲುದ್ಯುಕ್ತನಾದನು ॥ ೫೯ ॥ ಆಗ ಋಷೀಶ್ವರನಾದ ಜೈಮಿನಿ ಮುನೀಂದ್ರನು, ರಾಜಕುಲಕ್ಕೆ ಸೀಮಂತ ರತ್ನಪ್ರಾಯನಾದ ಜನಮೇಜಯರಾಯನು ರಾಮಕಥಾಮೃತವನ್ನು ಬೋಧಿಸುವಂತೆ ಕೇಳಿದ್ದರಿಂದ, ಮನಃಪೂ

ಣ್ಕೆಹರುಷನೂಣ್ಕೆ ॥ ರಾಮಾವತಾರದೊಳ್ದೇವಪುರನಿಲಯಲ | ಕ್ಷ್ಮೀಮನೋವಲ್ಲಭಂತನ್ನಸುತರೊಡನೆಸಂ | ಗ್ರಾಮದೋಳ್ಕಾದಿದಕಥಾಮೃತವನದರಕಾರಣಸಹಿತತುದಿಮೊದಲನು ||೬೦||

ಸಂಧಿ ೧೭ ಕ್ಕೆ ಪದ್ಯಗಳು ೮೬೯ ಕ್ಕೆ ಮಂಗಳಮಸ್ತು.

---

ಜೈಮಿನಿ_ಜೈಮಿನಿಮುನಿಯು, ಕುರ್ತು_ಲಕ್ಷ್ಯಕೊಟ್ಟು, (ಬುದ್ಧಿಪೂರ್ವಕವಾಗಿ) ಕೇಳ್ವರ್ಗೆ_ಆಲಿಸತಕ್ಕವರಿಗೆ, ರೋಮಾಂಚಂ_(ಶರೀರದ ಮೇಲಿನ ಕೂದಲು ನೆಟ್ಟನೆ ನಿಲ್ಲುವಂತೆ) ರೋಮಾಂಚವು, ಪೊಣ್ಮೆ-ಉಂಟಾಗಲು, ಹರ್ಷ_ಕೂರ್ಮೆಯು, (ಆನಂದವು) ಊಣ್ಮೆ-ತೋರ್ಪಡಲು, ರಾಮಾವತಾರದೊಳ್_ವಿಷ್ಣುವು ಪೃಥ್ವಿಯಲ್ಲಿ ದಶರಥನ ಪುತ್ರನಾಗಿ ಆವಿರ್ಭವಿಸಿದ ವೇಳೆಯಲ್ಲಿ, ದೇವಪುರ_ದೇವಪುರವೆಂಬುದೇ, ನಿಲಯ_ವಾಸಸ್ಥಾನವಾಗುಳ್ಳ, ಲಕ್ಷ್ಮೀಮನೋವಲ್ಲಭಂ-ಲಕ್ಷ್ಮೀದೇವಿಯ ರಮಣನಾದ ವಿಷ್ಣುವು, ಸಂಗ್ರಾಮದೊಳ್_ಯುದ್ಧದಲ್ಲಿ, ತನ್ನ-ತನ್ನಯ, ಸುತರೊಡನೆ_ಪುತ್ರರಾದ ಲವಕುಶರ ಸಂಗಡ, ಕಾದಿದ_ಜಗಳವಾಡಿದ, ಕಥಾಮೃತವನು-ಅಮೃತಕ್ಕೆ ಸಮಾನವಾದ ಚರಿತ್ರೆಯನ್ನು, ಅದರ_ಆ ಚರಿತ್ರೆಯ, ಕಾರಣ_ಉಂಟಾದ ಹೇತುವಿನ, ಸಹಿತ_ಕೂಡ, ತುದಿ ಮೊದಲನು-ಮೊದಲಿನಿಂದ ಕೊನೆಯನ್ನು, ಪ್ರೇಮದಿಂ-ಅತಿ ಪ್ರೀತಿಯಿಂದ, (ವಿಶ್ವಾಸದಿಂದ) ಐದೆ_ವಿಶದವಾಗಿ, ವಿಸ್ತರಿಸಿದಂ-ಪ್ರಕಟಪಡಿಸಿದನು.

ಅ|| ವಿ|| ಕಥೆಯೆಂಬ+ಅಮೃತ=ಕಥಾಮೃತ ಸಂ.ಪೂ.ಕ. ಮುನಿಗಳಲ್ಲಿ+ಇಂದ್ರನು=ಮುನೀಂದ್ರನು ವಿ.ಉತ್ತ.ಕ. ದಶಾವತಾರಗಳು_ಮತ್ಸ್ಯ, ಕೂರ್ಮ, ವರಾಹ, ನರಸಿಂಹ, ವಾಮನ, ಪರಶುರಾಮ, ರಘುರಾಮ, ಕೃಷ್ಣ, ಬೌದ್ಧ, ಕಲ್ಕಿ.||೬೦||

ಹದಿನೇಳನೆಯ ಸಂಧಿಯು ಸಂಪೂರ್ಣವಾದುದು.

---

ರ್ವಕವಾಗಿಯೂ, ಸಾದಾರದೊಡನೆಯೂ, ಕೇಳ್ವರ್ಗೆ ರೋಮೋದ್ಗಮಮುಂಟಾಗಲು, ಶ್ರೀ ರಾಮಾವತಾರದಲ್ಲಿ ದೇವಪುರವೇ ವಾಸಸ್ಥಳವಾಗುಳ್ಳ, ಲಕ್ಷ್ಮೀಮನೋವಲ್ಲಭನಾದ ಶ್ರೀ ವಿಷ್ಣುವು ಸಂಗ್ರಾಮದಲ್ಲಿ ತನ್ನವಳಿ ಮಕ್ಕಳೊಂದಿಗೆ ಕಾಳಗವಾಡಿದ ಕಥಾಮೃತವನ್ನು, ಅದರ ಕಾರಣ ಸಹಿತ ತುದಿಮೊದಲ್ಗೊಂಡು ಸಂಪ್ರೀತಿಯಿಂದ ಅತಿ ವಿಸ್ತಾರವಾಗಿ ವಿವರಿಸಿದನು ||೬೦||

ಟೀಕಾ ತಾತ್ಪರ್ಯಸಹಿತಮಾದ ಜೈಮಿನಿಭಾರತದಲ್ಲಿ ಹದಿನೇಳನೆಯ ಸಂಧಿಯು
ಸಮಾಪ್ತವಾದುದು.



## ಹದಿನೆಂಟನೆಯ ಸಂಧಿ.

ಸೂಚನೆ|| ಸಾಮ್ರಾಜ್ಯಮಂತಾಳ್ದಿಸೆವರಾಘವೇಂದ್ರನಿಂ | ತಾಮ್ರಪ್ರವಾಳದಂತಿರೆವಿರಾಜಿಸುತಿರ್ಪ | ತಾಮ್ರಧರೆ ಯರಸೀಮಂತಮಣಿಸೀತಾರಮಣಿಗರ್ಭಮಂತಾಳ್ದಳು ||

ಭೂಪಾಲಕೇಳಾದೊಡಿನ್ನು ಪೂರ್ವದೊಳವನಿ | ಜಾಪತಿಯಕುಶಲವರಸಂಗರದಕೌತುಕವ | ನಾಪನಿತನೊರವೆನಿಕ್ಷ್ವಾಕು ಮೊದಲಾದರವಿಕುಲದನೃಪರೇಳ್ಗೆಗಳನು || ವ್ಯಾಪಿಸಿದಸಂಪದಕೆನೆಲೆವನೆಯೆನಿಪ್ಪಯೋ | ಧ್ಯಾಪುರದೊಳವತರಿಸಿದಂಮಹಾ ವಿಷ್ಣುಸುತ | ರೂಪದಿಂರಾಮಾಭಿಧಾನದೋಳ್ಪುತ್ರಕಾಮೇಷ್ಟಿಯಿಂದಶರಥಂಗೆ ||೧|| ತೊಳೆದುಜನನಿಯಜಠರಮಂಜನಿಸಿಭವನ

---

ಹದಿನೆಂಟನೆಯ ಸಂಧಿ.

ಸೂಚನೆ|| ಟೀ|| ತಾಮ್ರ-ಕೆಂಪಗಿರುವ, ಪ್ರವಾಳದಂತೆ-ಚಿಗುರಿನ ಹಾಗೆ, ಅಥವಾ ಕೆಂಪಗಿರುವ ಹವಳದಂತೆ, ವಿರಾಜಿಸುತ-ಹೊಳೆಯುತ್ತ, ಇರ್ಪ-ಇರುತ್ತಿರುವ, ತಾಮ್ರ-ಚಿಗುರಿನಂತೆ ಕೆಂಪಗಿರುವ, ಅಧರೆಯರ-ತುಟಿಗಳುಳ್ಳ ಸ್ತ್ರೀಯರಲ್ಲಿ, (ಕೆಂದುಟಿಗಳುಳ್ಳ ಸುಂದರ ಸ್ತ್ರೀಯರ) ಸೀಮಂತಮಣಿ-ಸೀಮಂತರತ್ನದೋಪಾದಿಯುಲ್ಲಿರುವ, (ಮುಂದಲೆ ಬೊಟ್ಟನಂತಿರುವ) ಸೀತಾರಮಣಿ-ಸೀತಾದೇವಿಯೆಂಬ ಸ್ತ್ರೀಯು, ಸಾಮ್ರಾಜ್ಯಮಂ-ಚಕ್ರಾಧಿಪತ್ಯವನ್ನು, (ಸಾರ್ವಭೌಮಾಧಿಪತ್ಯವನ್ನು) ತಾಳ್ದು-ಹೊಂದಿದವನಾಗಿ, ಎಸೆವ-ಶೋಭಿಸುತ್ತಿರುವ, ರಾಘವೇಂದ್ರನಿಂ-ಶ್ರೀ ರಾಮಚಂದ್ರ ಸ್ವಾಮಿಯಿಂದ, (ರಘುಕುಲತಿಲಕನಾದ ಶ್ರೀರಾಮನಿಂದ) ಗರ್ಭಮಂ-ಗರ್ಭವನ್ನು, (ಬಸಿರನ್ನು) ತಾಳ್ದಳು-ಧರಿಸಿದಳು, (ಪಡೆದಳು.)

ಅ|| ವಿ|| ಸಾಮ್ರಾಜ್ಯ-ವೈಭವ, ಚಕ್ರವರ್ತಿ ಪದವಿ-ಭೂಮಂಡಲಾಧಿಪತ್ಯ, ತಾಮ್ರ-ತಾಮ್ರಲೋಹ, ಕೆಂಪು ಬಣ್ಣ. ಪ್ರವಾಳ-ಚಿಗುರು, ಹವಳ, ವೀಣೆಯ ದಂಡಿಗೆ, ಬಾಲಕ. ತಾಮ್ರದಂತೆ+ಅಧರವುಳ್ಳವರು=ತಾಮ್ರಾಧರೆಯರು ಉ. ಪೂ. ಬ. ಹು. ಸ. ಸೀಮಂತ-ಬೈತಲೆ, ಸಂಜ್ಞಾ ಸ್ತಂಭ, ಗಡಿಕಲ್ಲು.

ಟೀ|| ಭೂಪಾಲ-ಎಲೈ ಭೂಮಿಪತಿಯಾದ ಜನಮೇಜಯರಾಯನೇ! ಆದೊಡೆ-ಆದರೆ, ಇನ್ನು-ಇನ್ನು, ವಿವರಿಪ ವಿಷಯವನ್ನು, ಕೇಳು-ಆಲಿಸು, ಅವನಿಜಾಪತಿಯ-ಭೂಪುತ್ರಿಯಾದ ಸೀತಾದೇವಿಯ ಒಡೆಯನಾದ ಶ್ರೀರಾಮನ, ಕುಶಲವರ-ಶ್ರೀರಾಮನ ಪುತ್ರರಾದ ಲವಕುಶರೆಂಬುವರ, ಸಂಗರದ-ಯುದ್ಧಾಡಂಬರದ, ಕೌತುಕವನು-ಕುತೂಹಲವನ್ನು, (ಆಶ್ಚರಿಯ ಸಂಗತಿಯನ್ನು) ಆನಿತನು-ತಿಳಿದಷ್ಟು ವಿಷಯವನ್ನು, ಒರೆವೆನು-ಹೇಳುತ್ತೇನೆ, (ಪೇಳುತ್ತೇನೆ) ಇಕ್ಷ್ವಾಕು ಮೊದಲಾದ-ಇಕ್ಷ್ವಾಕು ಚಕ್ರವರ್ತಿಯೇ ಮೊದಲುಗೊಂಡು, ರವಿಕುಲದ-ಇನವಂಶದ, (ಸೂರ್ಯನ ವಂಶದ) ನೃಪರ-ದೊರೆಗಳ, ಏಳ್ಗೆಗಳಂ-ಹೆಚ್ಚುವಿಕೆಯನ್ನು, (ಪ್ರವರ್ಧಮಾನವನ್ನು) ವ್ಯಾಪಿಸಿದ-ತುಂಬಿದ, (ವ್ಯಾಪ್ತವಾದ) ಸಂಪದಕೆ-ಐಶ್ವರ್ಯಗಳಿಗೆ, ನೆಲೆಮನೆ ಎನಿಪ್ಪ-ತೌರು ಮನೆ ಎನ್ನಿಸಿಕೊಂಡಿರುವ, (ಸ್ಥಿರವಾಸಸ್ಥಳವಾದ) ಅಯೋಧ್ಯಾಪುರದೊಳು-ಅಯೋಧ್ಯಾನಗರದಲ್ಲಿ, ಪುತ್ರ-ಮಗನನ್ನು, ಕಾಮು-ಕೋರತಕ್ಕ, ಇಷ್ಟಿಯಿಂ-ಯಜ್ಞದಿಂ, (ಪುತ್ರನನ್ನು ಪಡೆಯಲು ಮಾಡತಕ್ಕ ಯಜ್ಞದಿಂದ) ದಶರಥಂಗೆ-ದಶರಥನೆಂಬ ಮಹಾರಾಜನಿಗೆ, ಮಹಾ ವಿಷ್ಣು-ವಿಷ್ಣುವು, ರಾಮಾಭಿಧಾನದೊಳ್-ಶ್ರೀರಾಮಚಂದ್ರನೆಂಬ ನಾಮಧೇಯದಿಂದ, ಅವತರಿಸಿದಂ-ಆವಿರ್ಭವಿಸಿದನು, (ಸಂಜನಿಸಿದನು.)

---

ಹದಿನೆಂಟನೆಯ ಸಂಧಿ.

ಭೂಪಾಲಕನಾದ ಜನಮೇಜಯರಾಯನೇ! ಆದರೆ ಲಾಲಿಸುವನಾಗು, ಜಾನಕೀಪತಿಯಾದ ಶ್ರೀರಾಮಚಂದ್ರನ ಮತ್ತು ಆತನ ಮಕ್ಕಳಾದ ಕುಶಲವರ ಕಾಳಗದ ಕೌತುಕವನ್ನು ನನಗೆ ತಿಳಿದ ಮಟ್ಟಿಗೂ ವಿಶದವಾಗಿ ವಿವರಿಸುತ್ತೇನೆ ಕೇಳು, ಇಕ್ಷ್ವಾಕುವೇ ಮೊದಲಾದ ರವಿಕುಲದ ಭೂಪಾಲರ ಏಳ್ಗೆಯಿಂದ ತುಂಬಿದ ಸಂಪದಕ್ಕೆ ನೆಲೆಯೆನಿಪ್ಪ ಅಯೋಧ್ಯಾಪಟ್ಟಣದಲ್ಲಿ ಪುತ್ರಕಾಮೇಷ್ಟಿಯೆಂಬ ಕ್ರತು ವಿಶೇಷದಿಂದ ದಶರಥಮಹಾರಾಜನಿಗೆ ಶ್ರೀಮನ್ನಾರಾಯಣನು ರಾಮಾಭಿದಾನದಿಂದ ಅವತರಿಸಿದನು. ಈ ವಿಷಯವನ್ನು ಶ್ರೀ ವಾಲ್ಮೀಕಿ ಮಹರ್ಷಿಯು ಅತ್ಯಾದರದಿಂದ ಸಮಗ್ರವಾಗಿ ಶ್ಲೋಕರೂಪವಾಗಿ ರಚಿಸಿ ಆ ಗ್ರಂಥಕ್ಕೆ ಶ್ರೀಮದ್ವಾಲ್ಮಿಕಿ ರಾಮಾಯಣವೆಂಬ ಪೆಸರಿಟ್ಟನು. ಈ ಶ್ರೀರಾಮ ಚರಿತ ಕಥಾಮೃತವನ್ನು ಅತ್ಯಾದರದಿಂದ ಓದಿದವರಿಗೂ, ಪ್ರೀತಿಯಿಂದ ಆಲಿಸಿದವರಿಗೂ, ಸನ್ಮಾರ್ಗದಿಂದ ಓದಿಸಿದವರಿಗೂ ಸಹ ತಾನು ಮೊದಲುಗೊಂಡು ಮುಂದೆ ಏಳು ತಲೆಗಳವರು ತನ್ನ ಹಿಂದಿನ ಏಳು ತಲೆಗಳವರೂ ಸಂಶಯವಿಲ್ಲದೆ ಇಹದಲ್ಲಿ ಕೀರ್ತಿಯನ್ನೂ ಮತ್ತು ಸೌಖ್ಯವನ್ನೂ, ಪರದಲ್ಲಿ ಸದ್ಗತಿಯನ್ನೂ, (ಮೋಕ್ಷ ಸುಖವನ್ನೂ) ಪಡೆದರು. || ೧ || ಆಗ ಶ್ರೀ ರಾಮಚಂದ್ರ ಸ್ವಾಮಿಯು ಜನನಿಯಾದ ಕೌಸಲ್ಯಾದೇವಿ

ದೊ | ಬೈಳೆದುಲಕ್ಷ್ಮಣಭರತಶತ್ರುಘ್ನರೊಡಗೂಡಿ | ತಳೆದುಕೌಶಿಕನಮಖಮುಂಕಾಯ್ದು ತಾಟಕಿಯನೊರಸಿಮುನಿಸತಿಯ ಘವನು || ಕಳೆದುಮಿಥಿಲೆಗೆಪೋಗಿಭಾರ್ಗವನಗರ್ವಮಂ | ಸೆಳೆದುಹರಚಾಪಮಂ ಮುರಿದೊಲಿಸಿಸೀತೆಯಂ | ತಳೆದುತ್ಸವದೊ

---

ಅ|| ವಿ|| ಭೂಮಿಯನ್ನು ಪಾಲ-ಪಾಲಿಸತಕ್ಕವನು (ರಾಜ) ಅಯೋಧ್ಯೆ+ಎಂಬ ಪುರ=ಅಯೋಧ್ಯಾಪುರ, ಸ. ಪೂ. ಕ. ಪುತ್ರ-ಮಗನನ್ನು, ಕಾಮ-ಕೋರತಕ್ಕ, ಇಷ್ಟಿ-ಯಾಗ, ಅವನಿ-ಭೂಮಿಯಲ್ಲಿ, ಜ-ಜನಿಸಿದವಳು, (ಸೀತೆ) ಶ್ರೀರಾಮಚಂದ್ರವಂಶವು ಶ್ರೀಮನ್ನಾರಾಯಣನ ನಾಭಿಕಮಲದಿಂದ ಚತುರ್ಮುಖ ಬ್ರಹ್ಮನು ಸಂಜನಿಸಿದನು, ಆ ಚತುರ್ಮುಖಬ್ರಹ್ಮನಿಗೆ ಮರೀಚಿಯು ಪುತ್ರನಾದನು, ಆ ಮರೀಚಿ ಮಹರ್ಷಿಗೆ ಕಶ್ಯಪನು ಹುಟ್ಟಿದನು, ಆ ಕಶ್ಯಪನಿಗೆ ಅದಿತಿಯ ಗರ್ಭಧಲ್ಲಿ ಸೂರ್ಯನು ಜನಿಸಿದನು, ಸೂರ್ಯನಿಗೆ ವೈವಸ್ವತನೆಂಬ ಮನುವು ಮಗನಾದನು, ಆತನಿಗೆ ಇಕ್ಷ್ವಾಕು ಎಂಬುವನು ಮಗನಾದನು, ಆ ಇಕ್ಷ್ವಾಕು ಚಕ್ರವರ್ತಿಯೇ ಅಯೋಧ್ಯಾನಗರದಲ್ಲಿ ಚಕ್ರವರ್ತಿಯಾಗಿ ಆಳಿದನು. ಆ ಇಕ್ಷ್ವಾಕುವಿಗೆ ಕುಕ್ಷಿ ಎಂಬ ಮಗನು ಹುಟ್ಟಿದನು, ಆತನಿಗೆ ವಿಕುಕ್ಷಿಯೆಂಬುವನು ತನುಜನಾದನು, ಈ ವಿಕುಕ್ಷಿಗೆ ಬಾಣನೆಂಬ ಪುತ್ರನಾದನು, ಅವನಿಗೆ ಅನರಣ್ಯನು ಹುಟ್ಟಿದನು ಆತನಿಗೆ ಪೃಥುರಾಜನು ಜನಿಸಿದನು, ಆ ಪೃಥುರಾಜನಿಗೆ ತ್ರಿಶಂಕುವು, ಆತನಿಗೆ ದುಂದುಮಾರನೆಂಬುವನು ಸಂಜನಿಸಿದನು, ಆತನಿಗೆ ಯೌವನಾಶ್ವನೆಂಬುವನೂ. ಆ ಯೌವನಾಶ್ವಂಗೆ ಮಾಂಧಾತನೂ ಹುಟ್ಟಿದನು, ಮಾಂಧಾತನಿಗೆ ಸುಸಂಧಿಯು ಮಗನಾದನು, ಆ ಸುಸಂಧಿಗೆ ಧ್ರುವಸಂಧಿ, ಪ್ರಸೇನಜಿತು ಎಂಬ ಇಬ್ಬರು ಪುತ್ರರು ಹುಟ್ಟಿದರು, ಧ್ರುವಸಂಧಿಗೆ ಭರತನೆಂಬುವನು, ಭರತನಿಗೆ ಅಸಿತನು, ಅಸಿತನೆಂಬವಂಗೆ ಸಗರನು, ಸಗರನೆಂಬವಂಗೆ ಅಸಮುಂಜನೆಂಬವನು, ಅಸಮುಂಜನಿಗೆ ಅಂಶುಮಂತನು ಪುತ್ರನಾದನು, ಅಂಶುಮಂತನಿಗೆ ದಿಲೀಪನು ಹುಟ್ಟಿದನು, ಆ ದಿಲೀಪನಿಗೆ ಭಗೀರಥರಾಯನು, ಆ ಭಗೀರಥರಾಜನಿಗೆ ಕಕುತ್ಸ್ಥನು ಹುಟ್ಟಿದನು, ಆ ಕಕುತ್ಸ್ಥನಿಗೆ ರಘುಮಹಾರಾಜನು ಹುಟ್ಟಿದನು, ರಘುರಾಜನಿಗೆ ಕಲ್ಮಾಷಪಾದನು ಜನಿಸಿದನು, ಆ ಕಲ್ಮಾಷಪಾದನಿಗೆ ಶಂತನು ಕುವರನಾದನು, ಆ ಶಂತನುವಿಗೆ ಸುದರ್ಶನನು ಮಗನಾದನು, ಆ ಸುದರ್ಶನನಿಗೆ ಅಗ್ನಿವರ್ಣನು ಹುಟ್ಟಿದನು, ಅಗ್ನಿವರ್ಣನಿಗ ಶೀಘ್ರಗನು ಜನಿಸಿದನು, ಆತನಿಗೆ ಮರುವು ಹುಟ್ಟಿದನು, ಆ ಮರುವಿಗೆ ಪ್ರಶುಶ್ರುಕನು ಹುಟ್ಟಿದನು, ಆ ಪ್ರಶುಶ್ರುಕನಿಗೆ ಅಂಬರೀಷನು ಮಗನಾದನು, ಆ ಅಂಬರೀಷನಿಗೆ ನಹುಷನುದಿಸಿದನು, ನಹುಷನಿಗೆ ಯಯಾತಿಯು ಹುಟ್ಟಿದನು, ಆತನಿಗೆ ನಾಭಾಗನು ಜನಿಸಿದನು. ಆ ನಾಭಾಗನಿಗೆ ಅಜನು ಮಗನಾದನು, ಆ ಅಜಮಹಾರಾಯಂಗೆ ದಶರಥನೆಂಬ ಪುತ್ರನು ಹುಟ್ಟಿದನು, ಆ ದಶರಥರಾಯನು ಹತ್ತುಸಹಸ್ರ ವರ್ಷಂಗಳವರೆಗೂ ಪುತ್ರಸಂತಾನವಿಲ್ಲದಿರಲು ಪುತ್ರಕಾಮೇಷ್ಟಿಯೆಂಬ ಯಜ್ಞವನ್ನು ಗೈದು ಆ ಯಜ್ಞದಲ್ಲಿ ಯಜ್ಞಪುರುಷನು ಕೊಟ್ಟ ಪರಮಾನ್ನದಲ್ಲಿ ಕೌಸಲ್ಯೆ, ಕೈಕೆಯಿ, ಸುಮಿತ್ರೆ ಎಂಬ ಮೂವರು ಪತ್ನಿಯರಿಗೂ ಹಂಚಿಕೊಟ್ಟುದರಿಂದ ದೇವತೆಗಳಿಂದ ಪ್ರಾರ್ಥಿಸಲ್ಪಟ್ಟ ಶ್ರೀಮನ್ನಾರಾಯಣನು ರಾವಣಾದಿ ರಾಕ್ಷಸರ ಬಾಧಾನಿವೃತ್ತಿಗಾಗಿ ತಾನು ಕೌಸಲ್ಯೆಯ ಉದರದಲ್ಲಿ ಹುಟ್ಟಿದನು. ಭರತನು ಕೈಕೇಯಿಯ ಗರ್ಭದಲ್ಲಿಯೂ, ಲಕ್ಷ್ಮಣ ಮತ್ತು ಶತೃಘ್ನರು ಸುಮಿತ್ರಾ ಗರ್ಭದಲ್ಲಿಯೂ ಸಂಜನಿಸಿದರು. || ೧ ||

ಟೀ|| ರಾಘವಂ-ಶ್ರೀರಾಮನು, ಜನನಿಯ-ಮಾತೆಯಾದ ಕೌಸಲ್ಯಾ ದೇವಿಯ, ಜಠರಮಂ-ಗರ್ಭಕೋಶವನ್ನು, ತೊಳೆದು-ಪಾವನಂಗೈದು, (ಪರಿಶುದ್ಧವಾದ್ದನ್ನಾಗಿಮಾಡಿ) ಜನಿಸಿ-ಉದಯಿಸಿ, ಲಕ್ಷ್ಮಣಭರತಶತ್ರುಘ್ನರೊಡಗೂಡಿ-ಲಕ್ಷ್ಮಣನು, ಶತ್ರುಘ್ನನು, ಭರತನು ಇವರುಗಳಿಂದೊಡಗೂಡಿದವನಾಗಿ, ಭವನದೊಳ್-ರಾಜಮಂದಿರದಲ್ಲಿ, ಬೆಳೆದು-ವೃದ್ಧಿಹೊಂದಿ, ತಳೆದು-ಪಿತನಾಣತಿಯಂಪೊಂದಿ, ಕೌಶಿಕನ-ವಿಶ್ವಾಮಿತ್ರ ಮಹರ್ಷಿಯ, ಮಖಮಂ-ಅಧ್ವರವನ್ನು, (ಯಾಗವನ್ನು) ಕಾಯ್ದು-ಕಾಪಾಡಿದವನಾಗಿ, ತಾಟಕಿಯಂ-ತಾಟಕಿಯೆಂಬ ದೈತ್ಯಸ್ತ್ರೀಯನ್ನು, ಒರಸಿ-ಸಂಹಾರಮಾಡಿ, ಮುನಿಸತಿಯ-ಗೌತಮ ಮಹರ್ಷಿಯ ಧರ್ಮಪತ್ನಿಯಾದ ಅಹಲ್ಯೆ ಎಂಬವಳ, ಅಘವನು-ದೇವೇಂದ್ರನು ಭಂಗಪಡಿಸಿದ್ದರಿಂದುಟಾದ ದೋಷವನ್ನು, ಕಳೆದು-ಹೋಗ

---

ಯ ಉದರವಂ ಪಾವನಂ ಗೈಯ್ದು ಜನಿಸಿ, ಲಕ್ಷ್ಮಣ ಭರತ ಶತ್ರುಘ್ನರೊಡಗೂಡಿ, ರಾಜ ಭುವನದಲ್ಲಿ ಬಾಲಸೂರ್ಯನಂತೆ ವೃದ್ಧಿಯನ್ನು ಹೊಂದಿ, ತಂದೆಯಾದ ದಶರಥಮಹಾರಾಜನ ಅಪ್ಪಣೆಯಂ ಪಡೆದು, ಕೌಶಿಕ ಮುನಿಪನ ಯಜ್ಞ ಸಂರಕ್ಷಣೆಯನ್ನುಮಾಡಿ ಯಜ್ಞವನ್ನು ಭಂಗಪಡಿಸಲು ಬಂದ ದೈತ್ಯರನ್ನು ಸಂಹರಿಸಿ ತಾಟಕಿಯೆಂಬ ರಕ್ಕಸಿಯನ್ನು ಕೊಂದು, ಗೌತಮ ಮಹರ್ಷಿಯ ಧರ್ಮಪತ್ನಿಯಾದ ಅಹಲ್ಯೆಯ ಶಾಪವನ್ನು ಪರಿಹರಿಸಿ, ದೇವೇಂದ್ರನು ಗೌತಮ ಮಹರ್ಷಿಯ ಧರ್ಮಪತ್ನಿಯಾದ ಅಹಲ್ಯೆಯನ್ನು ವಂಚನೆಯಿಂದ ಮಾನಭಂಗಮಾಡಿದ್ದನು. ಗೌತಮನು ಆವಿಷಯವನ್ನು ತಿಳಿದವನಾಗಿ ಶಿಲೆಯಾಗಿರುವಂತೆ ಅಹಲ್ಯೆಗೆ ಶಾಪವನ್ನಿತ್ತು ಪುನಹ ಕರುಣದಿಂದ ಶ್ರೀರಾಮಚಂದ್ರಸ್ವಾಮಿಯ ಪಾದಾರವಿಂದದ ಧೂಳಿಯು ಬಿದ್ದೊಡನೆಯೇ ಈ ಶಾಪವು ಪರಿಹಾರವಾಗುತ್ತದೆ. ಅನಂತರದಲ್ಲಿ ನಿನ್ನಂ ಗೃಹಿಣಿಯನ್ನಾಗಿ ಮಾಡಿಕೊಳ್ಳುವೆನೆಂದು ಅಹಲ್ಯೆಗೆ ವರವನ್ನು ಕೊ

ಅಯೋಧ್ಯಾಪುರಿಗೆದಶರಥನೊಡನೆರಾಘವಂಬಂದನು ‖ ೨ ‖ ವರ್ಧಿಪಕುಮಾರಂಗೆಭೂಮೀಶ್ವರಂಬಳಿಕ | ಮೂರ್ಧಾಭಿಷೇಚನಂ ಮಾಡಲನುಗಯ್ಯೆನೃಪ | ನರ್ಧಾಂಗಿತಡೆಯೆಪೊರಮಟ್ಟು ಬನಕೈದೆನರಪತಿಪುತ್ರಶೋಕದಿಂದ ‖ ಸ್ವರ್ಧಾಮುಕಡರೆಕೇಳುತಭರ ತನಂಕಳುಹಿ | ದುರ್ಧರದರಣ್ಯಪ್ರವೇಶಮುಂಮಾಡಿದಂ | ಸ್ಪರ್ಧಿಸುವದನುಜರಂಮುರಿದುಮುನಿಗಳನೋವಿಸತಿಸಹಿತಕಾಕುತ್

ಲಾಡಿಸಿದವನಾಗಿ, ಮಿಥಿಲೆಗೆ_ಜನಕರಾಯನ ಪಟ್ಟಣವಾದ ಮಿಥಿಲಾನಗರಕ್ಕೆ, ಪೋಗಿ_ ಪ್ರವೇಶಿಸಿ, ಭಾರ್ಗವನ_ ಭೃಗುಕುಲೋತ್ಪನ್ನನಾದ ಪರಶುರಾಮನ, ಗರ್ವಮಂ_ ಅಹಂಕಾರದಿಂದ ಯುಕ್ತವಾದ ಕಾಂತಿಯನ್ನು, ಸೆಳೆದು-ಪರಿಹರಿಸಿ, ಹರಚಾಪಮಂ_ಶೈವಧನುವನ್ನು, ಮುರಿದು_ತುಂಡುಮಾಡಿ, ಸೀತೆಯಂ-ಸೀತಾದೇವಿಯನ್ನು ಒಲಿಸಿ_ಮನಸ್ಸೊಪ್ಪುವಂತೆ ಮಾಡಿ, ತಳೆದು_ಸೀತಾಸಮೇತನಾಗಿ (ಸೀತೆಯನ್ನು ಮದುವೆ ಮಾಡಿಕೊಂಡು), ದಶರಥನೊಡನೆ_ತಂದೆಯಾದ ದಶರಥಮಹಾರಾಯನ ಸಂಗಡ, ಅಯೋಧ್ಯಾಪುರಿಗೆ_ ರಾಜಧಾನಿಯಾದ ಅಯೋಧ್ಯಾನಗರಕ್ಕೆ, ಉತ್ಸವದೊಳು - ವೈಭವದಿಂದ, (ಉತ್ಸಾಹದಿಂದ) ಬಂದನು_ಬಂದವನಾದನು ‖

ಅ‖ ವಿ‖ ಲಕ್ಷ್ಮಣ_ಸಕಲಗುಣ ಸಂಪನ್ನನು, ಭರತ_ತನ್ನ ಖ್ಯಾತಿಯನ್ನು ಪ್ರಪಂಚದಲ್ಲೆಲ್ಲಾ ಹರಡತಕ್ಕವನು, ಶತ್ರುಘ್ನ_ಶತ್ರುಗಳನ್ನು ನಾಶಮಾಡತಕ್ಕವನು, ರಾಮ_ಸಕಲರ ಮನಸ್ಸಿನಲ್ಲಿಯೂ ರಮಿಸತಕ್ಕವನು ‖ ಕೌಶಿಕ ಮಹರ್ಷಿಯು ರಚಿಸುತ್ತಿದ್ದ ಯಜ್ಞ ಕಾರ್ಯಗಳನ್ನೆಲ್ಲಾ ಕೆಡಿಸುತ್ತಿದ್ದ ರಾಕ್ಷಸರ ಬಾಧಾನಿವೃತ್ತಿಗಾಗಿ ಅಯೋಧ್ಯಾಪಟ್ಟಣಕ್ಕೆ ಬಂದು, ದಶರಥನಂ ಸಂತವಿಟ್ಟು ರಾಮಲಕ್ಷ್ಮಣರನ್ನು ಸಂಗಡ ಕರೆದುಕೊಂಡು ಬರುತ್ತಿದ್ದನು. ದಾರಿಯಲ್ಲಿ ತಾಟಕಿಯೆಂಬ ಒಬ್ಬ ರಕ್ಕಸಿಯು ರಾಮಲಕ್ಷ್ಮಣರನ್ನು ನುಂಗಲೋಸುಗ ಬರಲಾಗಿ ರಾಮನು ಆ ದುಷ್ಟರಕ್ಕಸಿಯನ್ನು ಸಂಹರಿಸಿ ಮುಂದೆ ಹೊರಟನು. ದೇವೇಂದ್ರನು ಗೌತಮ ಮಹರ್ಷಿಯ ಹೆಂಡತಿಯಾದ ಅಹಲ್ಯೆಯನ್ನು ಮೋಸದಿಂದ ಮಾನಭಂಗ ಮಾಡಿದ್ದಕ್ಕೆ ಗೌತಮನು ಮುಂದೆ ಹೀಗಾಗುವದೆಂದು ತಿಳಿದು ಶಿಲೆಯಾಗಿ ಬಿದ್ದಿರುವಂತೆ ಶಾಪವನ್ನು ಕೊಟ್ಟಿದ್ದನು. ಅದೇ ಮಾರ್ಗವಾಗಿ ರಾಮಲಕ್ಷ್ಮರು ಬರುತ್ತಿರಲಾಗಿ ಆ ಶಿಲೆಗೆ ಶ್ರೀರಾಮನ ಪಾದರಜವು ಸೋಕಿದ್ದರಿಂದ ಶಾಪವು ಪರಿಹಾರವಾಗಿ ಪೂರ್ವದ ಋಷಿಪತ್ನಿಯಾದಳು. ಜಠರ_ತ್ಸ. ಹೊಟ್ಟೆ_ದ್ಭ. ಮಖ_ಯಜ್ಞ, ಮುಖ_ಮೋರೆ ‖ ೨ ‖

ಟೀ‖ ಭೂಮೀಶ್ವರಂ_ಪೃಥ್ವೀಪತಿಯಾದ ದಶರಥರಾಜನು, ವರ್ಧಿಪ-ಪ್ರವರ್ಧಮಾನವನ್ನು ಹೊಂದುತಿದ್ದ ಎಂದರೆ ಸಕಲವಾದ ಒಳ್ಳೆಯ ಶೀಲಸ್ವಭಾವಾದಿಗಳಿಂದ ಏಳ್ಗೆಯನ್ನು ಹೊಂದುತಿದ್ದ, ಕುಮಾರಂಗೆ_ಪುತ್ರನಾದ ಶ್ರೀರಾಮಚಂದ್ರಸ್ವಾಮಿಗೆ, ಮೂರ್ಧಾಭಿಷೇಚನಂ_ಪಟ್ಟದ ಅಭಿಷೇಚನೆಯನ್ನು, (ಪಟ್ಟಾಭಿಷೇಚನೆಯ ಮಹೋತ್ಸವವನ್ನು) ಮಾಡಲು-ನೆಂವೇರಿಸಲು, ಅನುಗೈಯ್ಯೆ-ಅಣಿಮಾಡಲಾಗಿ, (ಯತ್ನಪಡಲಾಗಿ) ನೃಪನ_ರಾಜನಾದ ದಶರಥರಾಯನ, ಅರ್ಧಾಂಗಿ_ವಲ್ಲಭೆಯಾದ ಕೈಕೇಯಿದೇವಿಯು, ತಡೆಯೆ-ಶ್ರೀರಾಮ ಪಟ್ಟಾಭಿಷೇಕವನ್ನ ತಪ್ಪಿಸಿ ತನ್ನ ಪುತ್ರನಾದ ಭರತನಿಗೆ ರಾಜ್ಯಾಭಿಷೇಕವನ್ನು ಮಾಡಿಸಲಿಕ್ಕಾಗಿ ಅಡ್ಡಿಮಾಡಲಾಗಿ, ಶ್ರೀರಾಮಂ_ಮಂಗಳಕರನಾದ ರಾಮನು, ಬನಕೆ_ಅರಣ್ಯವನ್ನು ಕುರಿತು,| ಪೊರಮಟ್ಟು-ಪಟ್ಟಣವಾದ ಅಯೋಧ್ಯೆಯನ್ನು ಬಿಟ್ಟು ಹೊರಟು, ಐದೆ_ಪ್ರಯಾಣಮಾಡಲಾಗಿ, ನರಪತಿ-ರಾಜನಾದ ದಶರಥರಾಜನು, ಪುತ್ರಶೋಕದಿಂದ-ಮಗನಾದ ಶ್ರೀ ರಾಮನು ಅರಣ್ಯಪ್ರಯಾಣವನ್ನು ಮಾಡಿದ ದುಃಖದಿಂದ, ಸ್ವರ್ಧಾಮುಕೆ_ಪರಲೋಕಕ್ಕೆ, (ಸ್ವರ್ಗಕ್ಕೆ) ಅಡರೆ_ಹತ್ತಲು, (ಲೋಕಾಂತರವನ್ನೈದಲಾಗಿ) ರಾಮಂ_ಶ್ರೀರಾಮಚಂದ್ರನು, ಕೇಳುತ_ತಂದೆಯಾದ ದಶರಥನು ಸ್ವರ್ಗಗತನಾದ

ಟ್ಟಿದ್ದನು. ಈಗ ಶ್ರೀರಾಮಚಂದ್ರನ ಪಾದ ರಜಸ್ಸು ಆ ಶಿಲೆಯಮೇಲೆ ಬಿದ್ದುದರಿಂದ ಶಾಪವಿಮೋಚನೆಯಾಗಿ(ಪೂರ್ವದ ಅಹಲ್ಯೆಯಾದಳು) ಮಿಥಿಲೆಗೆ ಹೋಗಿ ಶೈವಧನುವನ್ನು ಖಂಡಿಸಿ ಮಿಥಿಲಾಧಿಪನಾದ ಜನಕ ಸುತೆಯಾದ ಜಾನಕಿಯನ್ನು ಕೈಪಿಡಿದು ಭೃಗುಪುತ್ರನಾದ ಪರಶುರಾಮನ ಗರ್ವವನ್ನು ಭಂಗಿಸಿ, ಸೀತಾದೇವಿಯನ್ನೊಡಗೊಂಡು ತಂದೆಯಾದ ದಶರಥನ ಸಂಗಡ ಅಯೋಧ್ಯೆಗೆ ಬಂದನು ‖ ೨ ‖ ಆಗ ಭೂಮಿಪತಿಯಾದ ದಶರಥರಾಯನು ವಿನಯ ಶೌರ್ಯೌದಾರ್ಯಾದಿ ಸದ್ಗುಣಗಳಿಂದ ಬಾಲಚಂದ್ರನಂತೆ ಅಭಿವೃದ್ಧಿ ಹೊಂದುತ್ತಿರ್ಪ ಪುತ್ರರತ್ನನಾದ ಶ್ರೀರಾಮ ಮೂರ್ತಿಗೆ ಮೂರ್ಧಾಭಿಷೇಚನವನ್ನು ನೆರವೇರಿಸಬೇಕೆಂದು ಯತ್ನಮಾಡಲಾಗಿ, ದಶರಥಮಹಾರಾಯನ ಅರ್ಧಾಂಗಿಯಾದ ಕೈಕೇಯಿಯು ತಡೆಯಲು ಎಂದರೆ (ಮಂಥರೆಯ ಮಾತಿನಿಂದ ತನ್ನ ಮಗನಾದ ಭರತಂಗೆ ರಾಜ್ಯಾಭಿಷೇಕ ಮಾಡಬೇಕೆಂತಲೂ, ಶ್ರೀರಾಮನು ಜಟಾಚೀರಧರನಾಗಿ ಹದಿನಾಲ್ಕುವರುಷ ಪರಿಯಂತ ಅರಣ್ಯವಾಸ ಮಾಡಬೇಕೆಂತಲೂ, ದಶರಥನಿಂದ ವರದ್ವಯಗಳನ್ನು ಬೇಡಿದ್ದಳು) ನರಪತಿಯಾದ ದಶರಥರಾಯನ ಅನುಜ್ಞೆಯಂತೆ ಶ್ರೀರಾಮಚಂದ್ರನು ಅರಣ್ಯವಾಸವನ್ನು ಕುರಿತು ಪ್ರಯಾಣಮಾಡಿದನು. ಅನಂತರದಲ್ಲಿ ದಶರಥಚಕ್ರವರ್ತಿಯು ಪುತ್ರಶೋಕದಿಂದ ಸಂತಪ್ತನಾಗಿ ಪರಂಧಾಮವನ್ನೈದಿದನು, ಶ್ರೀರಾಮನು ತನ್ನ ಅನುಜನಾದ ಭರತನಿಂದ ಪಿತೃವಿನ ಸಂಗತಿಯನ್ನು ತಿಳಿ

ಸ್ಥನು ॥೩॥ ದಂಡಕಾರಣ್ಯದೊಳಿರಲ್ಕೆಶೂರ್ಪನಖಿಬಂ| ದಂಡಲೆಯಲಾಕೆಯಂಭಂಗಿಸಿಖರಾದ್ಯರಂ | ಖಂಡಿಸಿಕನಕಮೃಗವ್ಯಾಜದಿಂ
ದೈದೆಲಕ್ಷ್ಮಣನಗಲೆಕಪಟದಿಂದ ॥ ಕೊಂಡೊಯ್ಯೆರಾವಣಂಸೀತೆಯಂಕಾಣದುರೆ | ಬೆಂಡಾಗಿವಿರಹದಿಂಬಿದ್ದಿಹಜಟಾಯು

---

ಸಂಗತಿಯನ್ನು ಭರತನಿಂದ ತಿಳಿದವನಾಗಿ, ಭರತನಂ – ತಮ್ಮನಾದ ಭರತನನ್ನು, ಕಳುಹಿ–ಕಳುಹಿಸಿಕೊಟ್ಟು, ಕಾಕುತ್ಸ್ಥನು–ಕಕುತ್ಸ್ಥರಾಜ ಸಂತತಿಯವನಾದ ರಾಮನು, ಸ್ಪರ್ಧಿಸುವ – ಎದುರುಬಿದ್ದು ಬರುವ, ದನುಜರಂ – ರಾಕ್ಷಸಾದಿ ವೀರರನ್ನು (ಕಬಂಧ ಖರದೂಷಣಾದಿ ರಕ್ಕಸರನ್ನು) ಮುರಿದು-ನಾಶಮಾಡಿ, (ಸಂಹಾರಮಾಡಿ) ಮುನಿಗಳಂ–ಆ ಯೆಡೆಯಲ್ಲಿ ವಾಸವಾಗಿದ್ದ ತಪಸ್ವಿಗಳನ್ನು, ಓವಿ–ಸಲಹಿದವನಾಗಿ, ಸತಿಸಹಿತ–ಧರ್ಮಪತ್ನಿಯಾದ ಜಾನಕಿಯೊಡನೆ, ದುರ್ಧರದ – ಹೊಂದಲಶಕ್ಯವಾದ, (ಸಂಚಾರಕ್ಕೆ ಯೋಗ್ಯವಲ್ಲದ) ಅರಣ್ಯಪ್ರವೇಶಮಂ–ದಂಡಕಾರಣ್ಯ ಪ್ರವೇಶವನ್ನು, ಮಾಡಿದಂ-ಗೆಯ್ದನು, (ಕೈಗೊಂಡನು).

ಅ॥ ವಿ॥ ಭೂಮಿ + ಈಶ = ಭೂಮೀಶ, ಸವರ್ಣ ದೀ. ಸಂ. ಮೂರ್ಧ–ತಲೆ, ಪಟ್ಟ, ಹಣೆ, ಶಿಖರ, ಮುಖ್ಯಸ್ಥ. ಬನ ದ್ಭ. ವನ ತ್ಸ. ದಶ-ಹತ್ತುದಿಕ್ಕುಗಳಲ್ಲೂ, ರಥ-ರಥಸಂಚಾರವುಳ್ಳವನು (ದಶರಥ), ದಶಸಂಸ್ಕಾರಗಳು – ಜನನ, ಜೀವನ, ತಾಡನ, ಬೋಧನ, ಅಭಿಷೇಕ, ಕಮಲೀ ಕರಣ, ಆಪ್ಯಾಯನ, ತರ್ಪಣ, ದೀಪನ, ಗುಪ್ತಿ. ದಶೋಪಚಾರಗಳು – ಪಾದ್ಯ, ಅರ್ಘ್ಯ, ಆಚಮನ, ಗಂಧ, ಪುಷ್ಪ, ಧೂಪ, ದೀಪ, ನೈವೇದ್ಯ, ಪುನರಾಚಮನ, ತಾಂಬೂಲ ॥೩॥

ಟೀ॥ ರಾಮಂ–ಶ್ರೀ ರಾಮಚಂದ್ರನು, ದಂಡಕಾರಣ್ಯದೊಳು–ದಂಡಕಾವನದಲ್ಲಿ, ಇರಲ್ಕೆ – ಸೀತಾಲಕ್ಷ್ಮಣರೊಡನೆ ವಾಸಮಾಡಿಕೊಂಡಿರಲಾಗಿ, ಶೂರ್ಪನಖಿ – ಮೊರದಂತೆ ಉಗುರುಳ್ಳ ರಕ್ಕಸಿಯು, (ರಾವಣಾಸುರನ ಸಹೋದರಿಯಾದ ಶೂರ್ಪನಖಿಯೆಂಬುವಳು) ಬಂದು–ರಾಮಲಕ್ಷ್ಮಣರ ಹತ್ತಿರಕ್ಕೆ ಪ್ರವೇಶಿಸಿ, ಅಂಡಲೆಯಲು–ತೊಂದರೆಯನ್ನುಂಟುಮಾಡಲು, ಆಕೆಯಂ–ಆ ಶೂರ್ಪನಖಿಯನ್ನು, ಭಂಗಿಸಿ – ಅಪಮಾನಪಡಿಸಿ, (ಮೂಳಿಯಾಗಿಮಾಡಿ) ಖರಾದ್ಯರಂ – ಸಹೋದರರಾದ ಖರದೂಷಣ ತ್ರಿಶಿರರನ್ನು, ಖಂಡಿಸಿ – ಸಂಹಾರಮಾಡಿ, (ಕತ್ತರಿಸಿ) ಕನಕ – ಸ್ವರ್ಣವಿಕಾರಮಾದ, ಮೃಗ–ಜಿಂಕೆಯೆಂಬ ಮಾಯಾಮೃಗದ, ವ್ಯಾಜದಿಂದ-ಅದನ್ನು ಹಿಡಿಯುವ ನಿಮಿತ್ತದಿಂದ, ಐದೆ – ಶ್ರೀ ರಾಮನು ಹೊರಡಲು, ಲಕ್ಷ್ಮಣಂ – ಲಕ್ಷ್ಮಣಸ್ವಾಮಿಯು, ಸೀತೆಯನ್ನು ಬಿಟ್ಟು ರಾಮನಬಳಿಗೆ ಬರಲು, (ಬೇರೆಯಾಗಲು) ರಾವಣಂ – ಲಂಕೇಶ್ವರನಾದ ರಾವಣಾಸುರನು, ಕಪಟದಿಂದ–ವಂಚನೆಯಿಂದ, (ಮೋಸದಿಂದ) ಸೀತೆಯಂ–ಜಾನಕಿಯನ್ನು, ಕೊಂಡೊಯ್ಯೆ – ಕದ್ದುಕೊಂಡುಹೋಗಲಾಗಿ, ರಘುನಾಥನು–ರಘುಕುಲಕ್ಕೆ ಒಡೆಯನಾದ ಶ್ರೀರಾಮನು, ಕಾಣದೆ – ಭೂಮಿಜೆಯಾದ ಸೀತೆಯನ್ನು ನೋಡದೆ, ವಿರಹದಿಂದ-ಹೆಂಡತಿಯನ್ನು ಬಿಟ್ಟು ಅಗಲಿದ್ದರಿಂದಾದ ವಿರಹತಾಪದಿಂದ, ಉರೆ – ಅತಿಶಯವಾಗಿ, ಬೆಂಡಾಗಿ – ನಿಸ್ತ್ರಾಣನಾಗಿ, (ನಿರ್ಬಲನಾಗಿ) ಬಿದ್ದಿಹ–ರಾವಣನು ಕಪಟವೇಷದಿಂದ ಬಂದು ರಾಮಲಕ್ಷ್ಮಣರಿಲ್ಲದ ವೇಳೆಯಲ್ಲಿ ಜಾನಕಿಯನ್ನು ಕದ್ದುಕೊಂಡು ಹೋಗುವ ಸಮಯದಲ್ಲಿ ಅವನೊಡನೆ ಕಾದಿ ಅಪಜಯವನ್ನು ಹೊಂದಿ ನಿರ್ಬಲನಾಗಿ ಬಿದ್ದಿರುವಂಥ, ಜಟಾಯುವಂ-ಜಟಾಯುವೆಂಬ ಗೃಧ್ರರಾಜನನ್ನು ಕಂಡು-ಈಕ್ಷಿಸಿದವನಾಗಿ, ಪೊಲಬಂ–ಅಲ್ಲಿ ನಡೆದ ಕೆಟ್ಟಸಮಾಚಾರವನ್ನು, ಕೇಳ್ದು–ಆಲಿಸಿ, ಮುಂದೆ-ಅಲ್ಲಿಂದಾಚೆಗೆ ಜಾರಿ, ಸೌಮಿತ್ರಿಸಹಿತ–ಸುಮಿತ್ರಾತ್ಮಜನಾದ ಲಕ್ಷ್ಮಣನೊಡನೆ, ನಡೆದಂ–ಸೀತಾನ್ವೇಷಣೆಗಾಗಿ ಪ್ರಯಾಣಮಾಡಿದನು.

---

ದ, ಭರತನನ್ನು ಸಮಾಧಾನ ಪಡಿಸಿ ಕಳುಹಿ ನಂದಿಗ್ರಾಮದಲ್ಲಿರುವಂತೆ ಹೇಳಿದನು. ತರುವಾಯ ಶ್ರೀರಾಮನು ತನ್ನೊಡನೆ ಪ್ರತಿಭಟಿಸಿ ನಿಂತು ಜಗಳವಾಡುವ ಕಬಂಧಾದಿ ರಾಕ್ಷಸರನ್ನು ಸಂಹಾರಮಾಡಿ, ಅರಣ್ಯವಾಸಿಗಳಾದ ತಪೋಧನರನ್ನು ಯಾವ ಭಯವೂ ಇಲ್ಲದಂತೆ ಸಂರಕ್ಷಿಸಿ, ದುರ್ಧರವಾದ ದಂಡಕಾರಣ್ಯಕ್ಕೆ ತನ್ನಿನಿಯಳಾದ ಸೀತಾದೇವಿಯೊಡನೆ ಪ್ರವೇಶಮಾಡಿದನು॥೩॥ ಹೀಗೆ ಶ್ರೀರಾಮನು ದಂಡಕಾರಣ್ಯದಲ್ಲಿರುತಿರಲ್ಕೆ ಲಂಕಾಧಿಪನಾದ ರಾವಣನ ಸಹೋದರಿಯಾದ ಶೂರ್ಪನಖಿಯೆಂಬೊಬ್ಬ ರಕ್ಕಸಿಯು, ತನ್ನಂವರಿಸೆಂದು ನಾನಾವಿಧವಾಗಿ ರಾಮಲಕ್ಷ್ಮಣರನ್ನು ಬಾಧಿಸಲು ಅವಳನ್ನು ಮೂಗು ಹರಕಿಯನ್ನಾಗಿಯೂ, ಮೂಳಿಯನ್ನಾಗಿಯೂ ಮಾಡಿದನು. ಈ ರೀತಿಯಾದ ಮಾನಭಂಗಪಟ್ಟ ಸಹೋದರಿಯ ಸಂತಾಪವನ್ನು ಪರಿಹರಿಸಲೋಸುಗ ಶ್ರೀ ರಾಮನ ಮೇಲೆ ದಂಡೆತ್ತಿಬಂದ ಖರದೂಷಣ ತ್ರಿಶಿರರನ್ನು ಸಂಹಾರಮಾಡಿ, ಕನಕ ಮೃಗರೂಪಿಯಾದ ಮಾರೀಚನನ್ನು ಸೀತೆಯ ಅಭಿಪ್ರಾಯದಂತೆ ಹಿಡಿತರಬೇಕೆಂದು ಹೊರಡಲು, ಲಕ್ಷ್ಮಣನು ಸಹವ್ಯಾಚಾಂತರದಿಂದ ಸೀತೆಯನ್ನಗಲಿ ರಾಮನ ಬಳಿಗೆ ಬರಲು, ರಾವಣನು ಕಪಟವೇಷಧಾರಿಯಾಗಿ ಬಂದು ಸೀತಾದೇವಿಯನ್ನು ಕೊಂಡೊಯ್ಯಲು, ಶ್ರೀರಾಮನು ತನ್ನ ಪ್ರಾಣಕಾಂತೆಯನ್ನು ಕಾಣದೆ ವಿರಹಾಗ್ನಿಯಿಂದ ಬೆಂದು ಬೆಂಡಾಗಿ ಕಂಗೆಟ್ಟು ಕುಂದಿ ಕುಗ್ಗಿ ಸೀತೆಯನ್ನು ರಾವಣನು ಕೊಂಡೊಯ್ಯುವ ಕಾಲದಲ್ಲಿ ತಡೆದು ಜಗಳವಾಡಿ ಆ ರಾವಣನಿಂದ ಸೋತು ಬಿದ್ದಿದ್ದ ಕುಟಕಜೀವಿಯಾದ ಜಟಾಯುವಿನಿಂದ ನಡೆದ ಸಂಗತಿಯನ್ನು ಗ್ರಹಿಸಿ ಮುಂದಕ್ಕೆ ಸೌಮಿತ್ರಿಸಹಿತನಾಗಿ ಸೀತಾನ್ವೇಷಣೆಗೋಸ್ಕರ ಹೊರಟನು ॥ ೪ ॥ ಶ್ರೀರಾಮನು ಮಾರ್ಗದಲ್ಲಿ ಬರುತ್ತ

................................................................................... ಪಥದೊಳ್ಕಬಂಧನಂಕೊಂದುಶಬರಿಯ
ವಂ | ಕಂಡುಪೊಲಬಂಕೇಳ್ದುಸೌಮಿತ್ರಿಸಹಿತನಡೆದಂನುಂದೆರಘುನಾಥನು ‖ ೪ ‖ ಪಥದೊಳ್ಕಬಂಧನಂಕೊಂದುಶಬರಿಯ
ಮನೋ | ರಥಮಂಸಲಿಸಿಕರುಣದಿಂದಾಂಜನೇಯನಂ | ಪ್ರಥಮದೊಳ್ಕಂಡುಸುಗ್ರೀವಂಗೆಕೈಗೊಟ್ಟುವಾಲಿಯಂಬಾಣದಿಂದ‖
ಮಥಿಸಿರಾವಣನಮೇಲಣರಾಜಕಾರ್ಯದ | ಕಥನಕಾಲೋಚಿಸಿಕರಡಿಕಪಿಗಳಂನೆರಪಿ | ಪೃಥಿವಿಜೆಯನರಸಲ್ಕೆವೀರಹನುಮಂತನಂ
ಕಳುಹಿದಂಕಾಕುತ್ಸ್ಥನು ‖೫‖ ಧಿಂಕಿಟ್ಟುಶರಧಿಯಂದಾಂಟಮೇದಿಯಸುತೆ | ಗಂಕಿತಮುದ್ರಿಕೆಯನಿತ್ತುಬೀಳ್ಕೊಂಡುನಿ |
ಶ್ಯಂಕೆಯಲಶೋಕವನಮಂಕಿತ್ತುದನುಜರಂಸದೆದಕ್ಷನಂಮರ್ದಿಸಿ ‖ ಅಂಕದೊಳ್ಬಳಿಕಿಂದ್ರಜಿತುವಿನಬ್ರಹ್ಮಾಸ್ತ್ರ | ದಂಕೆ

---

ಅ‖ ವಿ‖ ದಂಡಕವೆಂಬ+ಅರಣ್ಯ=ದಂಡಕಾರಣ್ಯ, ಸಂ. ಪೂ. ಕ. ಗೃಧ್ರ ತ್ಸ. ಹದ್ದು ದ್ಭ. ಶೂರ್ಪ–ಮೊರದಂತೆ ವಿಶಾಲವಾದ, ನಖ–ಉಗುರುಳ್ಳವಳು (ಶೂರ್ಪನಖಿ) ಸುಮಿತ್ರೆಯಮಗ-ಸೌಮಿತ್ರಿ ‖೪‖

ಟೀ‖ ಕಾಕುತ್ಸ್ಥನು-ಶ್ರೀರಾಮಚಂದ್ರನು, ಪಥದೋಳ್ – ಮಾರ್ಗದಲ್ಲಿ, ಕಬಂಧನಂ–ಕಬಂಧನೆಂಬ ದಾನವನನ್ನು ಕೊಂದು-ಸಂಹಾರಮಾಡಿ, ಶಬರಿಯ–ಶಬರಿಯೆಂಬ ಅತಿ ಭಕ್ತಳಾದ ವ್ಯಾಧಸ್ತ್ರೀಯ, ಮನೋರಥಮಂ-ಮನಸ್ಸಿನ ಕೋರಿಕೆಯನ್ನು, ಮನೋಭಿಪ್ರಾಯವನ್ನು) ಸಲಿಸಿ–ನೆರವೇರಿಸಿಕೊಟ್ಟು, ಆಂಜನೇಯನಂ – ಅಂಜನಾಸುತನಾದ ಆಂಜನೇಯನನ್ನು, ಕರುಣದಿಂದ–ಕೃಪೆಯಿಂದ, ಪ್ರಥಮದೊಳ್–ಆದಿಯಲ್ಲಿ, ಕಂಡು – ನೋಡಿದವನಾಗಿ, ಸುಗ್ರೀವಂಗೆ-ಸುಗ್ರೀವನೆಂಬ ವಾನರೇಶ್ವರನಿಗೆ ಕೈಗೊಟ್ಟು-ಸಹಾಯಕನಾಗಿರುವೆನೆಂದು ಪ್ರಮಾಣಮಾಡಿ, ವಾಲಿಯಂ – ವಾಲಿಯೆಂಬ ಸುಗ್ರೀವನ ಸಹೋದರನನ್ನು, ಬಾಣದಿಂ–ಅಂಬಿನಿಂದ, ಮಥಿಸಿ–ಸಂಹಾರವನ್ನು ಮಾಡಿ, ರಾವಣನ ಮೇಲಣ–ಲಂಕೇಶ್ವರನಾದ ರಾವಣಾಸುರನ ಮೇಲೆ ನಡಿಸಬೇಕಾದ, ರಾಜಕಾರಿಯದ–ರಾಯಭಾರಿಕೃತ್ಯದ, (ರಾಜನಕೃತ್ಯದ) ಕಥನದೊಳು-ವಿವರಣೆಯಿಂದ, (ಪೇಳುವುದರಿಂದ) ಆಲೋಚಿಸಿ-ಯೋಚನೆಯನ್ನು ಮಾಡಿ, ಕರಡಿಕಪಿಗಳಂ–ಕರಡಿ ಮತ್ತು ಕೋತಿಗಳನ್ನು, (ಜಾಂಬವಂತಾಂಜನೇಯಾದಿಗಳನ್ನು) ನೆರಪಿ–ಸಮೂಹದಿಂದ ಸೇರಿಸಿಕೊಂಡು, ಪೃಥಿವಿಜೆಯಂ–ಭೂಪುತ್ರಿಯಾದ ಜಾನಕಿಯನ್ನು, ಅರಸಲ್ಕೆ–ಹುಡುಕುವ ಸಲುವಾಗಿ, ವೀರ–ಅಸಹಾಯಶೂರನಾದ, ಹನುಮಂತನಂ–ಆಂಜನೇಯನನ್ನು, ಕಳುಹಿದಂ–ಕಳುಹಿಸಿಕೊಟ್ಟನು.

ಅ‖ ನಿ‖ ವೀರನಾದ+ಹನುಮ=ವೀರಹನುಮ ವಿ. ಪೂ. ಕ. ಕಬಂಧ–ತಲೆಯಿಲ್ಲದ ಮುಂಡ, ಕಬಂಧಾಸುರ, ನೀರು, ಆಂಜನೆಯ+ಮಗ=ಆಂಜನೇಯ, ಅಂಜನ–ಅಂಜನಾದೇವಿ, ಸು–ಒಳ್ಳೇ, ಗ್ರೀವ–ಕಂಠವುಳ್ಳವನು ‖೫‖

ಟೀ‖ ವೀರಹನುಮಂ–ಶೂರನಾದ ಆಂಜನೇಯನು, ಧಿಂಕಿಟ್ಟು–ಕುಪ್ಪಳಿಸಿ, ಶರಧಿಯಂ–ಜಲನಿಧಿಯನ್ನು, ದಾಂಟಿ–ದಾಟಿಕೊಂಡು, (ಅತಿಕ್ರಮಿಸಿ) ಮೇದಿನಿಯಸುತೆಗೆ – ಭೂಪುತ್ರಿಯಾದ ಸೀತೆಗೆ, ಅಂಕಿತದ – ಶ್ರೀರಾಮಚಂದ್ರನ ಹೆಸರುಳ್ಳ ಮುದ್ರಿಕೆಯನ್ನು-ಮುದ್ರೆಯ ಉಂಗುರವನ್ನು, ಇತ್ತು–ಕೊಟ್ಟವನಾಗಿ, ಬೀಳ್ಕೊಂಡು–ಜಾನಕಿಯ ಶಾಸನವಂ ಪಡೆದುಕೊಂಡು, ನಿಶ್ಶಂಕೆಯಲಿ–ನಿರ್ಭೀತಿಯಿಂದ, ಅಶೋಕಮಂ – ರಾವಣನ ಉದ್ಯಾನವಾದ ಅಶೋಕವನವನ್ನು, ಕಿತ್ತು – ಹಾಳುಮಾಡಿ, ದನುಜರಂ–ತನ್ನಂ ಹೆದರಿಸಲು ಬಂದ ರಕ್ಕಸರನ್ನು, ಸದೆದು–ಸಂಹರಿಸಿ, ಬಳಿಕ-ಅನಂತರದಲ್ಲಿ, ಅಕ್ಷನಂ–ರಾವಣನ ಪುತ್ರನಾದ ಅಕ್ಷಯಕುಮಾರನನ್ನು, ಮರ್ದಿಸಿ–ಕೊಂದವನಾಗಿ, ಅಂಕದೋಳ್-ನಿರ್ಬಂಧ ಸೂಚನೆಗೆ–(ಬ್ರಹ್ಮಾಸ್ತ್ರಕ್ಕೆ ತಾನು ಮುಹೂರ್ತತ್ರಿತಯ ಒಳಬೀಳುವೆನೆಂಬ ಮಾತಿಗನುಸಾರವಾಗಿ) ಇಂದ್ರಜಿತುವಿನ–ರಾವಣನ ಪುತ್ರನಾದ ಇಂದ್ರಜಿತುವೆಂಬುವನ, ಬ್ರಹ್ಮಾಸ್ತ್ರದ–ಬ್ರಹ್ಮಾಸ್ತ್ರವೆಂಬ ಬಾಣದ, ಅಂಕೆಯೊಳ್–ತೊಡಕಿನಲ್ಲಿ (ಸಿಕ್ಕಿನಲ್ಲಿ) ನಿಂದು–ನಿಂತು (ಒಳಗಾಗಿ) ವಾಲಧಿಗೆ–ಲಾಂಗೂಲಕ್ಕೆ (ಬಾಲದ ತುದಿಗೆ) ಇಕ್ಕಿದ–ದಾನವರಿಟ್ಟಂಥ, ಉರಿಯಿಂದ–ಬೆಂಕಿಯ ಉರಿಯ ದೆಸೆಯಿಂದ, ಲಂಕೆಯಂ-ಲಂಕಾಪಟ್ಟಣವನ್ನು, ಸುಟ್ಟು–

---

ಕಬಂಧನೆಂಬ ದೈತ್ಯನನ್ನು ಸಂಹರಿಸಿ, ಪರಮಭಕ್ತ ಶಿರೋಮಣಿಯಾದ ಬೇಡರ ಸ್ತ್ರೀಯ ಮನೋರಥವನ್ನು ನಡಸಿಕೊಟ್ಟು ಆಂಜನೇಯನನ್ನು ಕೃಪಾಕಟಾಕ್ಷದಿಂದ ಆದಿಯಲ್ಲಿ ನೋಡಿ, ಸುಗ್ರೀವನಿಗೆ ಅಭಯಪ್ರದಾನವಂ ಮಾಡಿ, ಸುಗ್ರೀವನ ಸಹೋದರನಾದ ವಾಲಿಯನ್ನು ಬಾಣದಿಂದ ಮಥಿಸಿ, ಸೀತಾಪಹಾರಿಯಾದ ನೀಚರಾವಣನ ಮೇಲೆ ನಡಿಸಬೇಕಾದ ಕಾರ್ಯಕ್ಕೆ (ರಾಜಕಾರ್ಯಾಲೋಚನೆಗೆ) ಬೇಕಾದ ಸಲಹೆಗಳನ್ನು ಕಲ್ಪಿಸಿಕೊಂಡು ಕರಡಿ ಕಪಿಗಳಂ ಜೊತೆ ಮಾಡಿಕೊಂಡು ಪೃಥಿವಿಜೆಯ ಅನ್ವೇಷಣೆಗಾಗಿ ವೀರಹನುಮಂತನನ್ನು ಕಳುಹಿಸಿಕೊಟ್ಟನು ‖ ೪ ‖ ಆಗ ಅಂಜನಾಸುತನಾದಾಂಜನೇಯನು ಶ್ರೀರಾಮಚಂದ್ರನ ಅಪ್ಪಣೆಯಂ ಪೊಂದಿ, ಹಾರಿ, ಶರಧಿಯಂ ದಾಂಟಿ ಭೂಮಿಜೆಯಾದ ಸೀತಾದೇವಿಗೆ ಶ್ರೀರಾಮನಾಮಾಂಕಿತಮಾದ ಮುದ್ರೆಯುಂಗರವನ್ನು ಕೊಟ್ಟು, ಶ್ರೀ ಜಾನಕಿಯ ಅಪ್ಪಣೆಯನ್ನು ಹೊಂದಿದವನಾಗಿ, ನಿರ್ಭೀತಿಯಿಂದ ರಾವಣನ ಅಶೋಕವನವನ್ನು ನಾಶಮಾಡಿ, ತನಗೆ ಎದುರಾಳಿಗಳಾಗಿ ಬಂದ ರಾಕ್ಷಸರನ್ನೂ, ರಾವಣನ ಕಿರಿಯಮಗನಾದ, ಅಕ್ಷಯಕುಮಾರನನ್ನೂ ಸಂಹರಿಸಿ ಆ ಬಳಿಕ ರಾವಣನ ಹಿರಿಯಮಗನಾದ ಇಂದ್ರಜಿತುವಿನ ಬ್ರಹ್ಮಾಸ್ತ್ರಕ್ಕೆ ಒಳಪಟ್ಟು, ಅಪಮಾನಾಸ್ಪದವಾಗಿ ತನ್ನ ಬಾಲಕ್ಕೆ

ಯೊಳ್ನಿಂದುವಾಲಧಿಗಿಕ್ಕಿದುರಿಯಿಂದ । ಲಂಕೆಯಂಸುಟ್ಟುಬಂದೊಸಗೆವೇಳ್ದನಿಲಜನನಸುರಾರಿಮನ್ನಿಸಿದನು ‖ ೬ ‖ ಗಣನೆ
ಯಿಲ್ಲದಕಪಿಗಳಂಕೂಡಿಕೊಂಡುತೆಂ । ಕಣಕಡಲತೀರದೊಳ್ಬಿಟ್ಟುಬಂದೊಡೆವಿ । ಭೀಷಣನಂಪರಿಗ್ರಹಿಸಿಲಂಕಾಧಿಪತ್ಯಮಂ
ಕೊಟ್ಟುಜಲಧಿಯನೆಕಟ್ಟಿ ‖ ರಣದೊಳಸುರರಕುಲದಹೆಸರುಳಿಯದಂತೆರಾ । ವಣಕುಂಭಕರ್ಣಮೊದಲಾದರಕ್ಕಸರನುರೆ ।
ಹಣಿದವಾಡಿದನುರುವಣಿಸಿಧೂಳಿಗೋಟೆಯುಂಕೊಂಡನಾರಘುವೀರನು ‖ ೭ ‖ ರಾವಣನಪದಮುಂವಿಭೀಷಣಂಗೊಲಿದಿತ್ತು । ದೇ

---

ಉರುಹಿ (ದಹಿಸಿ) ಬಂದು-ಬಂದವನಾಗಿ, ಬಸಗೆವೇಳ್ದ-ಹರ್ಷವಾರ್ತೆಯನ್ನು ಹೇಳಿದಂಥ, ಅನಿಲಜನಂ-ವಾಯು ಪುತ್ರನಾದ ಆಂಜನೇಯನನ್ನು, ಅಸುರಾರಿ-ರಾಕ್ಷಸಾಂತಕನಾದ ಶ್ರೀರಾಮನು, ಮನ್ನಿಸಿದಂ-ಮರ್ಯಾದೆಯನ್ನು ಮಾಡಿದನು (ಮನ್ನಣೆಯುಂಗೈದನು)

ಅ‖ ವಿ‖ ಮುದ್ರಿಕಾ-ತ್ಸ. ಮುದ್ದಿಕೆ-ದ್ಭ. ಅಶೋಕ- ಅಶೋಕ ಚಕ್ರವರ್ತಿ, ಅಶೋಕ ವೃಕ್ಷ, ಅಶೋಕ ವನ. ಅಸುರ+ಅರಿ=ಅಸುರಾರಿ, ಸ. ದೀ. ಸಂ. ಷ ತ. ಅನಿಲ-ವಾಯು, ಅನಲ-ಅಗ್ನಿ. ವಾಲ-ಬಾಲ. ಕಾಲ-ಯಮ. ‖೬‖

ಟೀ‖ ಆ ರಘುವೀರನು-ಆ ರಘುವಂಶದಲ್ಲಿ ಶೂರನಾದ ಶ್ರೀರಾಮಚಂದ್ರನು, ಗಣನೆಯಿಲ್ಲದ-ಅಸಂಖ್ಯಾಕವಾದ, ಕಪಿಗಳಂ-ವಾನರಗಳನ್ನು, ಕೂಡಿಕೊಂಡು-ಸೇರಿಸಿಕೊಂಡು, (ಜೊತೆಮಾಡಿಕೊಂಡು) ತೆಂಕಣ-ದಕ್ಷಿಣ ದಿಕ್ಕಿನ, ಕಡಲ-ಸಮುದ್ರದ, (ಜಲಧಿಯ) ತೀರದೊಳು-ದಡದಲ್ಲಿ, ಬಿಟ್ಟು-ಬಿಟ್ಟುಕೊಂಡು, (ತಡೆದುಕೊಂಡು) ಬಂದಡೆ-ಬರಲಾಗಿ, ಎಂದರೆ ತನ್ನ ಅನುಜನಾದ ರಾವಣನೊಡನೆ ಜಗಳವಾಡಿ ಬರಲು, ವಿಭೀಷಣನಂ-ರಾವಣನ ತಮ್ಮನಾದ ವಿಭೀಷಣನೆಂಬುವನನ್ನು, ಪರಿಗ್ರಹಿಸಿ-ಬಳಿಗೆ ಬರಮಾಡಿಕೊಂಡು, (ಆ ವಿಭೀಷಣನ ದೀನತೆಗೆ ಒಪ್ಪಿ) ಲಂಕಾಧಿಪತ್ಯಮಂ-ಲಂಕಾಪಟ್ಟಣದ ರಾಜ್ಯಾಧಿಪತ್ಯವನ್ನು, (ರಾಜಪದವಿಯನ್ನು) ಕೊಟ್ಟು-ಕೊಟ್ಟವನಾಗಿ, ಜಲಧಿಯನೆ-ಅಂಬುಧಿಯನ್ನೆ, ಕಟ್ಟಿ-ಸೇತುವೆಯನ್ನು ರಚಿಸಿ, ರಣದೊಳು-ಕಾಳಗದಲ್ಲಿ, ಅಸುರಕುಲದ-ದಾನವರ ಸಮೂಹದ, ಹೆಸರು-ನಾಮವು, ಉಳಿಯದಂತೆ-ನಿಲ್ಲದ ರೀತಿಯಿಂದ, ರಾವಣ-ರಾವಣನು, ಕುಂಭಕರ್ಣ-ಕುಂಭಕರ್ಣನು, ಮೊದಲಾದ-ಆದಿಯಾದ, ರಕ್ಕಸರಂ-ದೈತ್ಯವೀರರನ್ನು, ಉರೆ-ಅತ್ಯಧಿಕವಾಗಿ, ಹಣಿದ ವಾಡಿದನು-ಕೊಂದವನಾದನು, ಉರುವಣಿಸಿ-ರೋಷಗೊಂಡು, ಧೂಳಿಗೋಟೆಯುಂ ಗೊಂಡನು-ಧೂಳಿಯಾಗುವಂತೆ ಮಾಡಿದನು, (ಪೂರ್ತಿಯಾಗಿ ನಾಶವನ್ನು ಮಾಡಿದನು.)

ಅ‖ ವಿ‖ ಜಲ-ನೀರು, ಧಿ-ನಿಲ್ಲುವ ಸ್ಥಳ, ಅಸುರರ+ಕುಲ=ಅಸುರ ಕುಲ ಷ. ತ. ಅಂಜನ-ಆನೆ, ಕಾಡಿಗೆ, ಅಂಜನ ಪರ್ವತ, ಅಂಜನಾದೇವಿ, ರಾವಣನೂ+ಕುಂಭಕರ್ಣನೂ=ರಾವಣ ಕುಂಭಕರ್ಣರ್ ದ್ವಿ. ದ್ವಂ. ಸ. ಆವನು+ರಘುವೀರನು=ಆ ರಘುವೀರನು ‖೭‖

ಟೀ। ರಾಮಂ-ಶ್ರೀರಾಮಚಂದ್ರನು, ರಾವಣನ-ರಾವಣಾಸುರನ, ಪದಮಂ-ಪದವಿಯನ್ನು, (ಧೊರೆತನವನ್ನು) ವಿಭೀಷಣಂಗೆ-ರಾವಣನ ತಮ್ಮನಾದ ವಿಭೀಷಣನಿಗೆ, ಒಲಿದು-ಮನವೊಪ್ಪಿ, (ಸಂತೋಷಪಟ್ಟು) ಇತ್ತು-ಕೊಟ್ಟವನಾಗಿ, ದೇವರ್ಕಳಂ - ದೇವತೆಗಳನ್ನು, ಪೊರೆದು - ರಾಕ್ಷಸ ಬಾಧೆಯಿಲ್ಲದಂತೆ ಸಂರಕ್ಷಿಸಿ, ಸೆರೆಯಿರ್ದ - ರಾವಣನ ಉದ್ಯಾನವನದಲ್ಲಿ ನಿರ್ಬಂಧದಲ್ಲಿದ್ದ, ಸೀತೆಯುಂ-ಜಾನಕಿಯನ್ನು, ಪಾವಕನ ಮುಖದಿಂದ-ಬೆಂಕಿಯ ಮುಖದಿಂದ, (ಎಂದರೆ ಅಗ್ನಿಪ್ರವೇಶಮಾಡಿದ್ದರ ದೆಸೆಯಿಂದ) ಪರಿಗ್ರಹಿಸಿ-ಪುನಃ ಸೀತೆಯೊಡನೆ ಕೂಡಿ, ಮೂಜಗಂ-ಸ್ವರ್ಗ, ಮರ್ತ್ಯ, ಪಾತಾಳಗಳೆಂಬ ಮೂರು ಲೋಕದ ಜನರೂ, ಮೆಚ್ಚೆ-ಒಪ್ಪುವಂತೆ, ವಿಜಯೋತ್ಸವದೊಳು-ಜಯೋತ್ಸವದಿಂದ, (ಗೆದ್ದ ಹರ್ಷೋತ್ಸವದಿಂದ) ಭೂವರಂ-ಶ್ರೀರಾಮನು, ಸೌಮಿತ್ರಿ-ಸುಮಿತ್ರಾತ್ಮಜನಾದ ಲಕ್ಷ್ಮಣನು, ದಶವದನನ-ದಶಾನನನಾದ ರಾವಣನ, ಅನುಜ-ಸಹೋದರನಾದ ವಿಭೀಷಣನು, ಸುಗ್ರೀವ-ಸುಗ್ರೀವನೇ, ಆದಿಗಳ-ಮೊದಲಾದವರ, ಗಡಣದಿಂದ-ಗುಂಪಿನಿಂದ, (ಸಂಘದಿಂದ) ಭರತನಂ-ಅನುಜನಾದ ಭರತನೆಂಬುವನನ್ನು, ಪಾಲಿಸಲ್ಕೆ-ಸಲಹುವವ್ಯಾಜದಿಂದ, ಅಮಲ-ನಿರ್ಮಲವಾದ, ಮಣಿ-ರತ್ನ ಖಚಿತವಾದ, ಪುಷ್ಪಕದ ಮೇಲೆ-ವಿಮಾನದಲ್ಲಿ, ಅಯೋಧ್ಯಾಪುರಿಗೆ-ಅಯೋಧ್ಯಾ ಪಟ್ಟಣವನ್ನು ಕುರಿತು, ದೂವಾಳಿಸಿದನು-ದಯಮಾಡಿಸಿದನು, (ಬಿಜಯಮಾಡಿಸಿದನು)

---

ಇಟ್ಟ ಅಗ್ನಿಯಿಂದ ಲಂಕಾನಗರಿಯನ್ನು ದಹಿಸಿ, ತಾನು ಮಾಡಿದ ಸಂಗತಿಗಳನ್ನೆಲ್ಲಾ ಅಸುರಾರಿಯಾದ ಶ್ರೀರಾಮಚಂದ್ರಮೂರ್ತಿಗೆ ತಿಳಿಯಿಸಲು ಶ್ರೀರಾಮನು ಅಂಜನಾಸುತಗೆ ಮನ್ನಣೆಯನ್ನು ಮಾಡಿದನು ‖ ೬ ‖ ರಘುವೀರನು, ಅಸಂಖ್ಯಾಕವಾದ ಕಪಿಗಳಂ ಕೂಡಿಸಿಕೊಂಡು ದಕ್ಷಿಣ ಸಮುದ್ರದ ತೀರದಲ್ಲಿ ಸೇರಿಸಿಕೊಂಡು, ರಾವಣನೊಡನೆ ವ್ಯಾಜ್ಯಮಾಡಿಕೊಂಡು ಶ್ರೀರಾಮ ಚರಣಾರವಿಂದವಂ ನೆನೆಯುತ್ತ ತನ್ನ ಬಳಿಗೆ ಬಂದ ವಿಭೀಷಣನನ್ನು ಪರಿಗ್ರಹಿಸಿ, ಲಂಕಾಧಿಪತ್ಯವನ್ನು ವಿಭೀಷಣನಿಗೆ ದಯೆಪಾಲಿಸಿ, ಜಲಧಿಯಲ್ಲಿ ಸೇತು ಬಂಧನೆಯಂ ಮಾಡಿ ರಾವಣನೊಂದಿಗೆ ವೀರಾದಿವೀರರನ್ನು ಸಂಹರಿಸಿ, ರಾಕ್ಷಸಕುಲವನ್ನೆಲ್ಲಾ ನಾಶಮಾಡಿ, (ನುಚ್ಚುನೂರಾಗಿ ಮಾಡಿ), ಕೋಟೆಕೊತ್ತಲಾದಿಗಳನ್ನು ಧೂಳಿಗೋಟೆಯಂಮಾಡಿ, (ಕೋಟೆಕೊತ್ತ

ವಡ್ಡಳಂಪೊರೆದುಸೆರೆಯಿರ್ದಸೀತೆಯಂ | ಪಾವಕನಮುಖದಿಂಪರಿಗ್ರಹಿಸಿಮೂಜಗಂಮೆಚ್ಚೆವಿಜಯೋತ್ಸವದೊಳು || ಭೂವರಂ ಸೌಮಿತ್ರಿದಶವದನನನುಜಸು | ಗ್ರೀವಾದಿಗಳಗಡಣದಿಂದಯೋಧ್ಯಾಪುರಿಗೆ | ದೂವಾಳಿಸಿದನಮಲಮಣಿಪುಷ್ಪಕದಮೇಲೆಭರ ತನಂಪಾಲಿಸಲ್ಕೆ || ೮ || ವರಪುಷ್ಪಕವನಿಳಿದುಭರತಶತ್ರುಘ್ನರಂ | ಕರುಣದಿಂತೆಗೆದಪ್ಪಿಕೌಶಿಕವಸಿಷ್ಠಾದಿ | ಗುರುಗಳಂಸತ್ಕರಿಸಿ ಕೈಕೆಮೊದಲಾಗಿರ್ದಮಾತೃಜನಕ್ಕೆದೆನಮಿಸಿ || ಅರಮನೆಯಸತಿಯರಂಸಚಿವರಂಪ್ರಜೆಗಳಂ | ಪರಿಜನಪ್ರಕೃತಿಗಳನಿರದೆಕಾಣಿಸಿ ಕೊಂಡು | ಬರವನೇಹಾರೈಸಿಕೃಶೆಯಾದಕೌಸಲ್ಯೆಗಭಿವಂದಿಸಿದನು || ೯ || ಕೈದಳದೊಳೊಯ್ಯನೊಯ್ಯನೆಘನಸ್ನೇಹದಿಂ |

---

ಅ|| ವಿ|| ಮಲವಿಲ್ಲದ್ದು-ಅನುಲ, ಮಣಿ-ರತ್ನ, ನಮಸ್ಕಾರಮಾಡುವುದು, ಪಾವನ-ಪರಿಶುದ್ಧವಾದ, ಪಾವಕ-ಅಗ್ನಿ. ಪತಿ-ಗಂಡನು, ಪತ್ನಿ-ಹೆಂಡತಿ. ವಿಜಯ+ಉತ್ಸವ=ವಿಜಯೋತ್ಸವ, ಗುಣ. ಸಂ. ವಿಜಯ-ಸಂವತ್ಸರ, ಅರ್ಜುನ, ಜಯವನ್ನ ಹೊಂದುವುದು ||೭||

ಟೀ|| ರಾಮಂ-ಶ್ರೀರಾಮನು, ವರ-ಶ್ರೇಷ್ಠವಾದ, ಪುಷ್ಪಕವಂ - ವಿಮಾನವನ್ನು, ಇಳಿದು-ಇಳಿದವನಾಗಿ, ಭರತ ಶತ್ರುಘ್ನರಂ-ಅನುಜರಾದ ಭರತ ಶತ್ರುಘ್ನರನ್ನು, ಕರುಣದಿಂ-ವಿಶ್ವಾಸದಿಂದ, ತೆಗದಪ್ಪಿ-ಆಲಿಂಗನೆಯಂ ಮಾಡಿಕೊಂಡು ಕೌಶಿಕ-ವಿಶ್ವಾಮಿತ್ರನು, ವಶಿಷ್ಠ-ವಶಿಷ್ಠನು, ಆದಿ-ಮೊದಲ್ಗೊಂಡು, ಗುರುಜನರಂ-ದೊಡ್ಡವರಾದವರನ್ನು, (ಗುರುಶ್ರೇಷ್ಠರನ್ನು) ಸತ್ಕರಿಸಿ-ಸೇವಿಸಿ, (ಸಾಷ್ಟಾಂಗಪ್ರಣಾಮಾದಿಗಳಿಂದ ಸೇವಿಸಿ) ಕೈಕೆಮೊದಲಾಗಿರ್ದ - ಕೈಕೇಯಿಯೇ ಮೊದಲಾದ. ಮಾತೃಜನಕೆ-ತಾಯಿಯರಿಗೆ, ಐದೆ-ಅಧಿಕವಾಗಿ, ನಮಿಸಿ-ವಂದಿಸಿ, ಅರಮನೆಯಸತಿಯರಂ-ರಾಣಿವಾಸದ ಸ್ತ್ರೀಯರನ್ನು, ಸಚಿವರಂ-ಮಂತ್ರಿಶ್ರೇಷ್ಠರನ್ನು, ಪ್ರಜೆಗಳಂ - ನಗರಿಗರನ್ನು, ಪರಿಜನಪ್ರಕೃತಿಗಳಂ - ಪರಿಚಾರಕಜನಗಳನ್ನು, (ರಾಜಾಜ್ಞೆಗೊಳಪಟ್ಟವರನ್ನು) ಇರದೆ- ತಡಮಾಡದೆ, ಕಾಣಿಸಿಕೊಂಡು- ನೋಡಿದವನಾಗಿ, ಬರವನೇ- ಶ್ರೀ ರಾಮನಾಗಮನವನ್ನೇ, ಹಾರೈಸಿ- ಅಪೇಕ್ಷಿಸಿ, (ಇಚ್ಛಿಸಿ)ಕೃಶೆಯಾದ-ಬಡವಾದ, ಕೌಸಲ್ಯೆಗೆ-ಕೌಸಲ್ಯಾದೇವಿಗೆ, ಅಭಿವಂದಿಸಿದನು-ಸಾಷ್ಟಾಂಗನಮಸ್ಕಾರವನ್ನು ಮಾಡಿದನು.

ಅ|| ವಿ|| ಕುಶಿಕವಂಶೋತ್ಪನ್ನ=ಕೌಶಿಕ, ಗುರು-ಉಪಾಧ್ಯಾಯ, ಗುರುವರ್ಣ, ಬೃಹಸ್ಪತಿ, ದೊಡ್ಡದು. ಪ್ರಕೃತಿ-ಸ್ವಭಾವ ಮೂಲಪ್ರಕೃತಿ, ಕಾರಣ, ||೯||

ಟೀ|| ರಾವಣಾರಿ-ರಾವಣನ ಹಗೆಯಾದ ಶ್ರೀ ರಾಮನು, ಕೈದಳದೊಳು - ಅಂಗೈಯಿಂದ, (ಅಡಿಗೈಯಿಂದ) ಒಯ್ಯನೊಯ್ಯನೆ - ಮೆಲ್ಲ ಮೆಲ್ಲಗೆ, (ಅತ್ಯಂತ ಮೆತ್ತಗೆ) ತಕ್ಕೈಸಿ-ಮೇಲಕ್ಕೆ ಎಬ್ಬಿಸಿ, ಘನಸ್ನೇಹದಿಂ - ಅತ್ಯಂತ ಸಂತೋಷದಿಂದ, ಮೈದಡವಿ-ಶರೀರವನ್ನು ತಡವಿ, (ಸವರಿದವಳಾಗಿ) ಮಗನಂ-ಪುತ್ರನಾದ ಶ್ರೀ ರಾಮನನ್ನು, ಮುಂಡಾಡಿ-ಮುದ್ದಾಡಿ, ಕೈದುಗಳ-ಕತ್ತಿ ಮೊದಲಾದ ಆಯುಧಗಳಿಂದಾದ, ಗಾಯಮಂ-ಹುಣ್ಣನ್ನು, (ಗಾಯವನ್ನು) ಕಂಡು-ಈಕ್ಷಿಸಿ, ಕರಗುತ-ಮನಃಕ್ಲೇಶಪಡುತ್ತ, (ಮನೋವ್ಯಥೆಯನ್ನು ಪಡುತ್ತ) ಮಗನೆ - ಎಲೈ ತನುಜನೇ! ನಿನ್ನ-ನಿನ್ನಯ, ಕೋಮಲತನುವಂ - ಮೃದುವಾದ ಅಂಗವನ್ನು, (ಮನೋಹರವಾದ ಶರೀರವನ್ನು) ಪೊಯ್ದವರು - ಹೊಡೆದಂಥವರು, ಅದಾರು - ಯಾರು, ಅಕಟ-ಅಹಹ, ಎನ್ನೊಡಲು - ಎನ್ನಯ ಹೊಟ್ಟೆಯು (ಎನ್ನ ದೇಹವು), ಬೆಂದುದು - ಸುಟ್ಟು ಹೋಯಿತು, ಎಂದು - ಎಂಬದಾಗಿ,

---

ತ್ತಳಗಳನ್ನು ನಾಶಮಾಡಿ)ದನು ||೭|| ಅನಂತರದಲ್ಲಿ ಶ್ರೀರಾಮಚಂದ್ರನು, ರಾವಣನ ಪದವಿಯನ್ನು, ಎಂದರೆ ಲಂಕಾರಾಜ್ಯಾಧಿಪತ್ಯವನ್ನು ವಿಭೀಷಣನಿಗೆ ಆದರಪೂರ್ವಕವಾಗಿ ಕೊಟ್ಟು, ದೇವತೆಗಳಂ ಸನ್ಮಾನಿತರನ್ನಾಗಿ ಸಲಹಿ, ರಾವಣಾಸುರನ ಸೆರೆಯಲ್ಲಿದ್ದ ಜಾನಕಿಯನ್ನು ಪಾವಕನ ಮುಖದಿಂದ (ಅಗ್ನಿಯಲ್ಲಿ ಪ್ರವೇಶಮಾಡಿಸಿ) ಪರಿಗ್ರಹಿಸಿ, ಸ್ವರ್ಗಮರ್ತ್ಯ ಪಾತಾಳಗಳೆಂಬ ಮೂರು ಲೋಕಗಳವರು ಮೆಚ್ಚುವಂತೆ ವಿಜಯೋತ್ಸವದಿಂದ ಹರ್ಷಯುತನಾಗಿ, ಭೂವರನಾದ ರಾಮನು ಸೌಮಿತ್ರಿ ದಶಕಂಠನನುಜನಾದ ವಿಭೀಷಣನು ಸುಗ್ರೀವ ಜಾಂಬವಾದಿಗಳ ಸಮುದಾಯದಿಂದ ಹಿಂತಿರುಗಿ ಭರತನನ್ನು ತಾನು ಹೇಳಿದ್ದ ಮಾತಿನ ಪ್ರಕಾರ ಸಲಹುವ ಸಲುವಾಗಿ ದೋಷರಹಿತವಾದ ನವರತ್ನಾದಿಗಳಿಂದ ಕೆತ್ತಲ್ಪಟ್ಟಿದ್ದ ಪುಷ್ಪಕದಲ್ಲಿ ಕುಳಿತು, ಅತಿ ವೈಭವದಿಂದ ಅಯೋಧ್ಯಾಪುರಿಗೆ ಬಿಜಯಮಾಡಿದನು || ೮ || ಬಳಿಕ ರಾಮಚಂದ್ರನು ವರಪುಷ್ಪಕವನ್ನಿಳಿದು, ಸಹೋದರರಾದ ಭರತ ಶತ್ರುಘ್ನರನ್ನು ಕರುಣದಿಂದ ಆಲಿಂಗನೆಯಂ ಮಾಡಿಕೊಂಡು ಕೌಶಿಕ ವಶಿಷ್ಠಾದಿ ಗುರುಗಳಾದ ಮಹರ್ಷಿಗಳನ್ನು ಸಾಷ್ಟಾಂಗ ನಮಸ್ಕಾರ ಪೂರ್ವಕವಾಗಿ ಸತ್ಕರಿಸಿ, ಕೈಕೇಯಿ ಮೊದಲಾದ ಮಾತೃವರ್ಗದವರಿಗೆ ಆದರ ಪುರಸ್ಸರವಾಗಿ ನಮಸ್ಕಾರಗಳನ್ನು ಮಾಡಿ, ಅರಮನೆಯ ಸತಿಯರನ್ನು, ಮಂತ್ರಿ ಸಚಿವಾದಿಗಳನ್ನು, ಸೇನಾಪತಿಗಳನ್ನು, ಪರಿಜನ ಪ್ರಕೃತಿಗಳನ್ನು ಆನಂದ ಪೂರ್ವಕವಾಗಿ ಕಾಣಿಸಿಕೊಂಡು ಶ್ರೀರಾಮಾಗಮನವನ್ನೇ ಹಾರೈಸಿಕೊಂಡಿದ್ದ, ಕೃಶಾಂಗಿಯಾದ ಕೌಸಲ್ಯಾದೇವಿಗೆ ಅಭಿನಂದಿಸಿದನು || ೯ || ಆಗ ರಾವಣಾರಿಯಾದ ಶ್ರೀ ರಾಮನು, ಕರಯುಗ್ಮದಿಂದ

ಮೈದಡವಿತನಯನಂತಕ್ಕೈಸಿಮುಂಡಾಡಿ । ಕೈದುಗಳಗಾಯಮಂಕಂಡುಕರಗುತಮಗನೆನಿನ್ನ ಕೋಮಲತನುವನು ॥ ಪೊಯ್ವ ವರದಾರಕಟಬೆಂದುವೆನ್ನೊಡಲೆಂದು । ಸುಯ್ದುಮುಗ್ಧಭಾವದಿಂತನ್ನ ಸವತಿಯಂ । ಬೈದುಮರುಗುವಮಾತೆಯುಂನೋಡಿನಗುತಸಂತೈಸಿದಂರಾವಣಾರಿ ॥ ೧೦ ॥ ಮೇಲೆತಾಳ್ದಂಶುಭಮುಹೂರ್ತದೊಳ್ವಾರಿನಿಧಿ ಮೇರೆಯಾದವನಿಯಂಪಟ್ಟಾಭಿಷೇಚನದ । ಕಾಲದೊಳ್ಕಂಡರುಸಮಸ್ತಮುನಿಗೀರ್ವಾಣನರನಾಗದನುಜರಂದು ॥ ಮೂಲೋಕಮೈದೆಕೊಂಡಾಡೆ ಬಳಿಕುರ್ವಿಯಂ । ಪಾಲಿಸುತಲಿರ್ದನೊಂಭತ್ತು ಸಾವಿರವರುಷ । ವೋಲೈಸಿದುದು ರಾಘವೇಂದ್ರನಂ ನಿಖಿಳಭೂಭುಜಚಯಂಪ್ರೀತಿಯಿಂದ ॥ ೧೧ ॥ ಯೂಪಮಯ ಮಾಯ್ತುಧರೆಯಲ್ಲಮುಂವರಜಾತ । ರೂಪಮಯಮಾಯ್ತು ಮನೆಯಲ್ಲಮುಂತುಕಪಿಕಕ । ಲಾಪಮಯಮಾ

---

ಸುಯ್ದು–ಬೆಚ್ಚನೆಯ ನಿಡಿದುಸಿರುಬಿಟ್ಟು, ಮುಗ್ಧಭಾವದಿಂ–ಅಜ್ಞಾನಿಗಳಾದ ಹೆಂಗಸರಹಾಗೆ, ಸವತಿಯಂ–ಸಪತ್ನಿಯಾದ ಕೈಕೆಯನ್ನು, ಬೈದು–ದೂಷಿಸಿದವಳಾಗಿ, ಮರುಗುವ–ವ್ಯಥೆಯನ್ನು ಪಡುತ್ತಲಿರ್ದ, ಮಾತೆಯುಂ–ಜನನಿಯಾದ ಕೌಸಲ್ಯೆಯನ್ನು, ನೋಡಿ–ಈಕ್ಷಿಸಿ, (ಕಂಡು) ನಗುತ–ನಗುತ್ತ, (ಹರ್ಷಿಸುತ್ತ) ಸಂತೈಸಿದಂ–ಸಂತಾಪವನ್ನು ಹೋಗಲಾಡಿಸಿದನು, (ಸಮಾಧಾನವನ್ನುಂಟುಮಾಡಿದನು) ॥

ಅ॥ ವಿ॥ ಅರಿ–ಶತ್ರು. ತಿಳಿ, ಕೈದಳ–ಕೈಯ + ತಳ = ಕೈದಳ, ಷ. ತ. ಸ. ।ಮೈಯ್ಯಂ + ತಡವಿ = ಮೈದಡವಿ, ಕ್ರಿ. ಸ. ದಕಾರ. ಆದೇಶ ಸಂ. ಮುಗ್ಧ–ತ್ಸ. ಮುಗುದ–ದ್ಭ. ಸಪತ್ನಿ–ತ್ಸ. ಸವತಿ–ದ್ಭ. ॥೧೦॥

ಟೀ॥ ರಾಮಂ–ಶ್ರೀರಾಮನು, ಮೇಲೆ–ಅನಂತರದಲ್ಲಿ, ವಾರಿನಿಧಿ–ನಾಲ್ಕು ಜಲನಿಧಿಗಳೆ, ಮೇರೆಯಾದ–ಸರಹದ್ದಾಗುಳ್ಳ, ಅವನಿಯಂ–ಪೃಥ್ವಿಯನ್ನು, (ಪ್ರಪಂಚವನ್ನು) ಶುಭ–ಶುಭಕರವಾದ, ಮುಹೂರ್ತದೊಳ್–ಮುಹೂರ್ತದೊಳಗೆ, (ಹನ್ನೆರಡು ಗಳಿಗೆಯೊಳಗೆ) ತಾಳ್ದಂ–ಧರಿಸಿದನು, (ಪಡೆದುಕೊಂಡನು) ಅಂದು–ಆ ಸಮಯದಲ್ಲಿ, ಸಮಸ್ತ–ಎಲ್ಲಾ, (ಸಕಲ) ಮುನಿ–ಕಶ್ಯಪಾದಿ ಸಪ್ತ ಋಷಿಗಳು, ಗೀರ್ವಾಣ–ದೇವಾದಿ ದೇವತೆಗಳು, (ಅಮರರು) ನರ–ಮನುಜರು, ನಾಗ–ನಾಗರು, (ಸರ್ಪಶ್ರೇಷ್ಠರು, ನಾಗಲೋಕದವರು) ದನುಜರು–ದಾನವರಾದ ವಿಭೀಷಣನೇ ಆದಿಯಾದವರು, ಪಟ್ಟಾಭಿಷೇಚನದ–ಪಟ್ಟಾಭಿಷೇಕೋತ್ಸವ ಕಾಲದ, (ರಾಜ್ಯಾಭಿಷೇಕದ) ಕಾಲದೊಳ್–ಸಮಯದಲ್ಲಿ, (ವೇಳೆಯಲ್ಲಿ) ಕಂಡರು–ಶ್ರೀ ರಾಮಚಂದ್ರನನ್ನು ನೋಡಿದವರಾದರು, ಮೂಲೋಕಂ–ಸ್ವರ್ಗ ಮರ್ತ್ಯ ಪಾತಾಳಗಳೆಂಬ ಮೂಲೋಕದ ಜನರು, ಐದೆ–ಬಂದವರಾಗಿ, (ಬಹಳವಾಗಿ) ಕೊಂಡಾಡೆ–ಸ್ತುತಿಸುತ್ತಿರಲಾಗಿ, ಬಳಿಕ–ತರುವಾಯ, ಒಂಬತ್ತುಸಾವಿರವರುಷಂ–ಒಂಬತ್ತು ಸಾವಿರ ವರ್ಷಂಗಳವರೆಗೂ, ಉರ್ವಿಯಂ–ಭೂಮಂಡಲವನ್ನು, ಪಾಲಿಸುತಿರ್ದಂ–ಪರಿಪಾಲನೆಯಂ ಗೈಯುತ್ತಿದ್ದನು, ನಿಖಿಲ–ಸಮಸ್ತವಾದ, ಭೂಭುಜಚಯಂ–ಭೂಪಾಲಕರಾದ ಸಾಮಂತ ರಾಜಸಮುದಾಯವು, ರಾಘವೇಂದ್ರನಂ–ಶ್ರೀ ರಾಮಚಂದ್ರಮೂರ್ತಿಯನ್ನು, ಪ್ರೀತಿಯಿಂದ–ಅತಿ ವಿಶ್ವಾಸದಿಂದ, ಓಲೈಸಿದುದು–ಸೇವೆಯಂಗೈಯುತ್ತಿತ್ತು ॥

ಅ॥ ವಿ॥ ಮೂರಾದ ಲೋಕಗಳ ಸಮಾಹಾರ–ಮೂಲೋಕ. ಸಮಾಹಾರ. ದ್ವಿಗು ಸ. ಸಪ್ತ ಋಷಿಗಳು–ಕಶ್ಯಪ ಅತ್ರಿ. ಭರದ್ವಾಜ, ವಿಶ್ವಾಮಿತ್ರ, ಗೌತಮ, ಜಮದಗ್ನಿ, ವಸಿಷ್ಠ. ಸಪ್ತ ಶರಧಿಗಳು–ಲವಣ, ಇಕ್ಷು, ಸುರಾ, ಸರ್ಪಿ, ದಧಿ, ಕ್ಷೀರ, ಜಲ. ಮೂಲೋಕ–ಸ್ವರ್ಗ, ಮರ್ತ್ಯ, ಪಾತಾಳ ॥ ೧೧ ॥

---

ಒಯ್ಯನೊಯ್ಯನೆ ತಕ್ಕೈಸಿ, ಅತಿಯಾದ ಪ್ರೀತಿಯಿಂದ ಮೈದಡವಿ ತನ್ನ ಪ್ರಿಯ ಪುತ್ರನಾದ ಮಗನನ್ನು ಮುದ್ದಾಡಿ ಕೈದುಗಳಿಂದಾದ ಗಾಯಗಳನ್ನು ಕಂಡು ಮನೋವ್ಯಥೆಪಡುತ್ತ ಅತಿಯಾಗಿ ಕರಗಿದವಳಾಗಿ, ಮಗನೆ! ನಿನ್ನಯ ಕೋಮಲವಾದೀ ದೇಹದಲ್ಲಿ ಪೊಯ್ವವರಾದರು, ಅಕಟಕಟ ಎನ್ನೊಡಲು ಬೆಂದು ಪೋಪುದು ಎಂದು ಬೆಚ್ಚನೆಯ ಉಸಿರನ್ನು ಬಿಟ್ಟು ಮುಗ್ಧಭಾವದಿಂದ ಸಪತ್ನಿಯಾದ ಕೈಕೆಯನ್ನು ನಿಂದಿಸಿ ಅತ್ಯಧಿಕವಾಗಿ ಶೋಕಿಸುತಿರ್ದ ಜನನಿಯಂ ನೋಡಿ ನಗುತ್ತ ಸಂತೈಸಿದನು ॥೧೦॥ ಆಬಳಿಕ ಶ್ರೀರಾಮನು ನಾಲ್ಕು ಸಮುದ್ರಗಳೇ ಎಲ್ಲೆಯಾಗುಳ್ಳ ಪೃಥ್ವಿಯನ್ನು ಶುಭಮುಹೂರ್ತದಲ್ಲಿ ಹೊಂದಿದವನಾದನು (ರಾಜ್ಯಧುರಂಧರನಾದನು) ಆವೇಳೆಯಲ್ಲಿ ಸಕಲರಾದ ತಪೋನಿಧಿಗಳಾದ ಮುನಿವರ್ಯರು (ಕಶ್ಯಪಾದಿ ಸಪ್ತಋಷಿಗಳು) ಗೀರ್ವಾಣರು (ದೇವತೆಗಳು) ಭೂಲೋಕದ ಮನುಜರು, ನಾಗಲೋಕದ ನಾಗಗಳು (ಸರ್ಪಶ್ರೇಷ್ಠರು) ವಿಭೀಷಣಾದಿ ದಾನವರು ಶ್ರೀರಾಮಚಂದ್ರನ ಪಟ್ಟಾಭಿಷೇಕ ಮಹೋತ್ಸವಕಾಲದಲ್ಲಿ ಶ್ರೀರಾಮ ದರ್ಶನವಂ ಮಾಡಿಕೊಂಡರು. ಸ್ವರ್ಗಮರ್ತ್ಯಪಾತಾಳಗಳೆಂಬ ಮೂರು ಲೋಕದಜನರೂ ಬಂದು ಕೊಂಡಾಡಿದರು. ಅನಂತರದಲ್ಲಿ ಒಂಭತ್ತುಸಾವಿರ ವರ್ಷಗಳ ಪರಿಯಂತವೂ ಏಕಚಕ್ರಾಧಿಪತಿಯಾಗಿ ಭೂಮಂಡಲವನ್ನೆಲ್ಲಾ ಪರಿಪಾಲಿಸುತ್ತಲಿರ್ದನು. ಸಕಲರಾದ ಸಾಮಂತರಾಜಮಂಡಲಿಯೆಲ್ಲವೂ ರಾಘವೇಂದ್ರನಂ ಆತ್ಮಾದರದಿಂದ ಓಲೈಸುತ್ತಿತ್ತು ॥೧೧॥ ಈ ರೀತಿಯಾಗಿ ದಶರಥರಾಮನು ರಾಜ್ಯ ಪರಿಪಾಲನೆಯಂ

ಯ್ತು ವನಮೆಲ್ಲಮುಂ ವರ್ಧಿಪಪ್ರಜೆಗಳುಂ ಸಂಚರಿಸುವ ॥ ಗೋಪಮಯಮಾಯ್ತು ಗಿರಿಯೆಲ್ಲಮುಂರತ್ನ | ಪ್ರದೀಪಮಯಮಾಯ್ತು ತಮಮೆಲ್ಲಮುಂ ರಘುಜಪ್ರ | ತಾಪಮಯಮಾಯ್ತು ಮೂಜಗಮೆಲ್ಲಮುಂದಾಶರಥಿರಾಜ್ಯಮಂ ಪಾಲಿಸೆ ॥ ೧೨ ॥ ಪಣ್ಗಾಯಿಪೂದಳಿರ್ಬೀತತರುಲತೆಯಿಲ್ಲ | ತಣ್ಗೊಳಂ ಕೆರೆಕಾಲುವೆಗಳಿಲ್ಲದಿಳೆಯಿಲ್ಲ | ಪೆಣ್ಗಂಡುಗಳೊಳೋರ್ವರುಂನಿಜಾಚಾರವಿರಹಿತರಾಗಿ ನಡೆವರಿಲ್ಲ | ಬಿಣ್ಗೆಚ್ಚಲಿಕ್ಕಿ ಕೊಡವಾಲ್ಗರೆಯದಾವಿಲ್ಲ | ನುಣ್ಗಾಡಿವೆತ್ತಿರದಪಶುಪಕ್ಷಿಮೃಗವಿಲ್ಲ | ಕಣ್ಗೊಳಿಪರಾಮ

---

ಟೀ॥ ದಾಶರಥಿ ದಶರಥಾತ್ಮಜನಾದ ಶ್ರೀ ರಾಮನು, ರಾಜ್ಯಮಂ-ಭೂಮಂಡಲವನ್ನು, ಪಾಲಿಸೆ-ಪರಿಪಾಲನೆಯಂ ಗೈಯುತ್ತಿರಲಾಗಿ ಧರೆಯೆಲ್ಲಮುಂ - ಭೂಮಂಡಲವೆಲ್ಲವೂ, ಯೂಪಮಯಂ ಆಯ್ತು - ಸರ್ವಕಡೆಗಳಲ್ಲೂ ಯಜ್ಞಸ್ತಂಭಗಳಾದವು ಎಂದರೆ ಬಹುವಾಗಿ ಯಜ್ಞಾದಿಗಳುಪಕ್ರಮವಾದವು, ಮನೆಯಲ್ಲಮುಂ-ಸಕಲ ಪ್ರಜೆಗಳ ಮನೆಯೆಲ್ಲವೂ, ವರ-ಶ್ರೇಷ್ಠವಾದ, ಜಾತರೂಪಮಯಂ-ಸುವರ್ಣದಿಂದ ತುಂಬಿದಂಥಾದ್ದು, ಆಯ್ತು-ಉಂಟಾಯಿತು, ವನಮೆಲ್ಲಮುಂ ವನಪ್ರದೇಶಾದಿಗಳೆಲ್ಲವೂ, ಶುಕ-ಪಂಡಿತಪಕ್ಷಿಗಳ, (ಕೀರಗಳ) ಪಿಕ-ಪರಪುಟ್ಟಗಳ, (ಕೋಕಿಲಗಳ) ಕಲಾಪಿ-ನವಿಲುಗಳ, ಮಯಂ-ಆಯ್ತು-ಇವುಗಳಿಂದ ತುಂಬಿದಂಥಾದ್ದಾಯಿತು. ಅಥವಾ ಗಿಣಿ ಕೋಕಿಲ ಇವುಗಳ ಮಧುರಧ್ವನಿಯಿಂದ ತುಂಬಿತ್ತು ಎಂಬ ಭಾವವು. ವರ್ಧಿಪ-ಅಭಿವೃದ್ಧಿ ಹೊಂದುತಲಿರ್ಪ, ಪ್ರಜೆಗಳುಂ-ಪ್ರಜೆಗಳು, (ಜನರೂ) ಎಂದರೆ ಏಳ್ಗೆಯಂ ಹೊಂದುತಲಿರ್ಪ ಭೂಮಂಡಲವೂ, ಗಿರಿಯಲ್ಲಮುಂ-ಪರ್ವತಗಳೆಲ್ಲವೂ, ಸಂಚರಿಸುವ-ಸಂಚಾರಮಾಡುವ, ಗೋಪಮಯಂ ಆಯ್ತು-ಗೋಪಾಲಕರಿಂದ ವ್ಯಾಪ್ತವಾಯಿತು, ತಮಮೆಲ್ಲಮುಂ-ಅಂಧಕಾರವೆಲ್ಲವೂ, ರತ್ನಪ್ರದೀಪಮಯಂ ಆಯ್ತು- ರತ್ನಮಣಿಗಳ ಕಾಂತಿಗಳೆಂಬ ದೀವಿಗೆಗಳಿಂದ ವ್ಯಾಪ್ತವಾದವು. ಮೂಜಗಮೆಲ್ಲಮುಂ-ಮೂರು ಲೋಕಗಳೂ ಕೂಡ, ರಘುಪ್ರತಾಪ-ಶ್ರೀರಾಮಚಂದ್ರನಾಟೋಪದಿಂದ, ಮಯಂ ಆಯ್ತು-ತುಂಬಿದಂತಾಯಿತು ॥

ಅ॥ ವಿ॥ ಶುಕ-ಗಿಣಿ, ಪಿಕ-ಕೋಗಿಲೆ. ಕಲಾಪ-ನವಿಲಗರಿ, ಅದುಳ್ಳದ್ದು ಕಲಾಪಿ, ಜಾತ-ಹುಟ್ಟಿದಂಥ, ಜಾತವೇದಸ್ಸು ಅಗ್ನಿ. ಜಾತರೂಪ-ಭಂಗಾರ. ಜಾತಾಪತ್ಯೆ-ಬಾಣಂತಿ. ರಾಘವ + ಇಂದ್ರ = ರಾಘವೇಂದ್ರ, ಗುಣ ಸಂ. ॥೧೨॥

ಟೀ॥ ಕಣ್ಗೊಳಿಪ-ನೇತ್ರಾನಂದಕರಮಾದ, ರಾಮರಾಜ್ಯದೊಳು-ಶ್ರೀ ರಾಮಚಂದ್ರನ ರಾಜ್ಯಭಾರಕ್ರಮದಲ್ಲಿ, ಪಣ್-ಪಣ್ಣು, ಕಾಯ್-ಕಾಯಿ, ಪೂ-ಪುಷ್ಪವು, ತಳಿರ್- ಪ್ರವಾಳವು, (ಚಿಗುರು) ಇವುಗಳು, ಬೀತ-ಇಲ್ಲದಿರ್ಪ, ತರು-ಮರವು, ಲತೆ - ಬಳ್ಳಿಗಳು, ಇಲ್ಲ - ಇರಲಿಲ್ಲ, ಎಂದರೆ ಪ್ರತಿ ವೃಕ್ಷವು ಪಣ್ಗಾಯಿ ಪೂದಳಿರುಗಳಿಂದ ನಿಬಿಡೀಕೃತವಾಗಿತ್ತು, ತಣ್ಗೊಳಂ - ತಂಪಾದ ನೀರಿರುವ ತಟಾಕಗಳು, ಕೆರೆ - ಕಟ್ಟೆಗಳು, ಕಾಲುವೆ - ಕುಲ್ಯಗಳು, ಇಲ್ಲದ - ಇಲ್ಲದಿರ್ಪ, ಇಳೆಯಿಲ್ಲ - ಪೃಥಿವಿಯೇ ಇಲ್ಲ. (ಎಲ್ಲಾ ಪ್ರದೇಶಗಳಲ್ಲೂ ತಂಪಾದ ನೀರಿನಿಂದ ಕೂಡಿರುವ ಕೆರೆ ಕೊಳ ಕಾಲುವೆಗಳಿಂದ ತುಂಬಿದ್ದವು) ಪೆಣ್ - ಹೆಂಗಸರು, ಗಂಡುಗಳೋಳ್ - ಗಂಡಸರುಗಳ, ಓರ್ವರುಂ - ಒಬ್ಬರಾದರೂ, ನಿಜ - ತಮ್ಮ ಆಚಾರ-ನಡವಳಿಕೆಗಳನ್ನು, (ಸದಾಚಾರಗಳನ್ನು) ವಿರಹಿತರಾಗಿ-ತ್ಯಜಿಸಿದವನಾಗಿ, ಇಲ್ಲ-ಇರುತ್ತಿರಲಿಲ್ಲ, (ಸಕಲರೂ ಆಯಾ

---

ಗೈಯುತಿರಲಾಗಿ, ಭೂಮಂಡಲದಲ್ಲಿ ಎಲ್ಲಿ ನೋಡಿದಾಗ್ಯೂ ಯಜ್ಞ ಕಾರ್ಯಾದಿಗಳು ನಡಿಯುತ್ತಲಿದ್ದವು. ಸಕಲ ಪ್ರಜೆಗಳ ಮನೆಯಲ್ಲಿಯೂ ಚಿನ್ನ ಬೆಳ್ಳಿ ರತ್ನಾದಿಗಳು ತುಂಬಿದ್ದವು. ಯಾರೊಬ್ಬರೂ ದೌರ್ಭಾಗ್ಯದಿಂದ ಪೀಡಿತರಾಗದೆ ಸೌಖ್ಯದಿಂದಿರುತಿದ್ದರು. ಕಾಲಕಾಲಕ್ಕೆ ಸುವೃಷ್ಟಿಯು ಬರುತ್ತಿದ್ದುದರಿಂದ ನದಿನದಾದಿಗಳೂ, ತಟಾಕಾದಿಗಳೂ, ತುಂಬಿ ತುಳುಕಾಡುತ್ತಿದ್ದವು. ನೆಲವೆಲ್ಲವೂ ಪೈರು ಪಚ್ಚೆಗಳಿಂದ ನಿಬಿಡೀಕೃತವಾಗಿತ್ತು. ಅರಣ್ಯದ ತೋಪುಗಳಲ್ಲಿಯೂ, ಉದ್ಯಾನವನಗಳಲ್ಲಿಯೂ, ಶುಕ, ಪಿಕ, ಮಯೂರಾದಿಗಳ, ಇಂಚರದಿಂದ (ಮಧುರಧ್ವನಿಯಿಂದ) ರಂಜಿತವಾಗಿ ರವಗೈಯುತ್ತಿದ್ದವು. ಪ್ರಜೆಗಳೆಲ್ಲರೂ ಆಧ್ಯಾತ್ಮಿಕ, ಅಧಿದೈವಿಕ, ಅಧಿಭೌತಿಕ ತಾಪತ್ರಯಗಳಿಗೆ ಒಳಗಾಗದೆ ಸರ್ವದಾ ಸುಖಿಗಳಾಗಿರುತ್ತಿದ್ದರು. ಪಶುಜಾತಿಗಳೆಲ್ಲವೂ ಕ್ಷುದ್ರ ಮೃಗಗಳ ಭಯವಿಲ್ಲದೆ ಗಿರಿಗಳಲ್ಲಿಯೂ, ವನಗಳಲ್ಲಿಯೂ, ಉದ್ಯಾನಗಳಲ್ಲಿಯೂ ನಿರ್ಭಯದಿಂದ ಸಂಚಾರಮಾಡಿಕೊಂಡು ತಮ್ಮ ಆಹಾರ ಪಾನಿಯಗಳನ್ನು ಹುಡುಕಿಕೊಂಡು ಸಂಚರಿಸುತ್ತಿದ್ದವು. ಷಡೃತುಗಳು ತಮ್ಮ ಋತುಧರ್ಮಗಳನ್ನು ತಪ್ಪದೇ ನಡಿಸುತ್ತಿದ್ದವು. ಆಯಾಯ ವರ್ಣಾಶ್ರಮದವರು ತಮ್ಮಮತಧರ್ಮಗಳನ್ನು ಬಿಡದೆ ಆಚರಿಸುತ್ತ ಹೆಚ್ಚಿಗೆಗೆ ಹೋಗದೆಯೂ, ಇದ್ದುದನ್ನು ಬಿಡದೆಯೂ ಆಚರಿಸುತ್ತಿದ್ದರು. ಬಾಲಕರ ಮುಂದೆ ವೃದ್ಧರು ಮೃತಿಹೊಂದುತ್ತಿದ್ದರೇಹೊರ್ತು ಈ ಕಲಿಧರ್ಮದಂತೆ ಮುದುಕರ ಮುಂದೆ ಬಾಲಕರು ಸಾಯರು. (ಅಪ್ರಾಪ್ತ ವಯಸ್ಸಿನಲ್ಲಿ ಸಾಯುತ್ತಿರಲಿಲ್ಲ). ತ್ರಿಲೋಕದವರೂ ಶ್ರೀರಾಮನಾಮಾಮೃತವನ್ನು ಪಾನಮಾಡುತ್ತಿದ್ದರು (ತ್ರಿಕಾಲದಲ್ಲೂ ಶ್ರೀ ಸೀತಾರಾಮ ಸ್ಮರಣೆಯಂ ಗೈಯುತ್ತಿದ್ದರು) ॥೧೨॥ ಮನೋಲ್ಲಾಸಕರಮಾದ ಶ್ರೀರಾಮಚಂದ್ರನ ರಾಜ್ಯಭಾರಕ್ರಮದಲ್ಲಿ ವೃಕ್ಷಾದಿಗಳೆಲ್ಲವೂ ಚಿಗುರಿ, ಹೂ, ಕಾಯಿ, ಪಣ್ಣುಗಳುಳ್ಳ

ರಾಜ್ಯದೊಳಕಾಲದಮರಣವಿಲ್ಲಖಿಳಜೀವಿಗಳ್ಗೆ ‖ ೧೩ ‖ ಕಾಳಿಂದಿಸುರನದಿಗೆಕೃಷ್ಣನಮೃತಾಬ್ಧಿಗಳ | ಕಾಳಿವಾಣಿಗೆಕಳಂಕಿಂದುಮಂಡಲಕೆವರ | ಕಾಳಿಕಾಪಾಲಿಗೆಮದಂದೇವಗಜಕೆನಂಜಹಿಪತಿಗೆತೊಡವಾಗಿರೆ ‖ ಕಾಳಿಮದಕೂಟವೆನಗಿಲ್ಲೆಂಬ ಮುನಿಸತಿವಿ | ಕಾಳಿಸಲಮಲಕೀರ್ತಿಕಾಂತೆಪೊರಮಟ್ಟು ಲೋ | ಕಾಳಿಯಂತಿರುಗುವಳೆನಲ್ಕೆರಾಮನಯಶೋವಿಸ್ತರವನೇಂಪೊಗಳ್ವೆನು ‖ ೧೪ ‖ ಸರ್ವಸಂಪತ್ಸಮೃದ್ಧಿಗಳಿಂಸ್ವಧರ್ಮದಿಂ | ನಿರ್ವಿಘ್ನಮಾಗಿಸಕಲಪ್ರಕೃತಿಜಾತಚಾ | ತುರ್ವರ್ಣಮುಂ

---

ಯ ಕುಲಪದ್ಧತಿಗೆ ಅನುಸಾರವಾಗಿ ಸದಾಚಾರಸಂಪನ್ನರಾಗಿದ್ದರು) ಬೆಣ್ಕೆಚ್ಚಲ್ - ಬಿಳಿಯದಾದ ಕೆಚ್ಚಲನ್ನು, 'ಇಕ್ಕೆ-ಇಟ್ಟು ಕೊಡವಾಲ್'-ಒಂದು ಕೊಡದಷ್ಟು ಹಾಲನ್ನು, ಕರೆಯದ-ಕರೆಯದಿರತಕ್ಕ, ಆವು-ದನವು (ಹಸುಗಳು) ಇಲ್ಲ-ಇರಲಿಲ್ಲ, ಅಂದರೆ ಬೇಕಾದಷ್ಟು ಹಾಲನ್ನು ಕರೆಯುತ್ತಿದ್ದವು, ಗುಣ್ಪೊಡುವೆತ್ತ-ಮನೋಹರವಾದ ವಾಸಸ್ಥಾನಗಳನ್ನು ಮಾಡಿಕೊಂಡು, ಇರದ-ಇರದಿರುವ, ಪಶು - ಪಕ್ಷಿ, ಮೃಗಂ, ಇಲ್ಲ - ಪಶ್ವಾದಿಗಳು, ವಿಹಂಗಾದಿಗಳು ಮತ್ತು ವನಮೃಗಗಳೂ, ಇರುತ್ತಿರಲಿಲ್ಲ, (ಸಕಲ ಪ್ರಾಣಿಗಳೂ ತಮತಮಗೆ ಅನುಕೂಲಮಾದ ಆಶ್ರಯವನ್ನುಂಟಾಗಿದ್ದವು) ಅಖಿಳ - ಸಮಸ್ತವಾದ, ಜೀವಿಗಳ್ಗೆ - ಪ್ರಾಣಿಗಳ ಗುಂಪಿಗೆ, (ಪ್ರಾಣಿವರ್ಗಕ್ಕೆ) ಅಕಾಲದ-ಕಾಲವಲ್ಲದ, ಮರಣಂ-ಸಾವು, ಇಲ್ಲ-ಇರುತ್ತಿರಲಿಲ್ಲ ಯಾವ ಪ್ರಾಣಿಯೇ ಆಗಲಿ ಅಕಾಲದಲ್ಲಿ ಸಾಯುತ್ತಿರಲಿಲ್ಲ, ಸಕಲ ಪ್ರಾಣಿಗಳೂ ದೀರ್ಘಾಯುಗಳಾಗಿದ್ದವು.

ಅ‖ ವಿ‖ ಪಣ್ಣೂ, ಕಾಯೂ, ಪೂವೂ, ತಳಿರೂ, ಇವುಗಳು = ಪಣ್ಗಾಯಿಪೂತಳಿರ್, ಬಹು. ದ್ವಂ. ಸ. ತರುವೂ ಲತೆಯೂ ತರುಲತೆಗಳ್ = ದ್ವಿ. ದ್ವ. ಸ. ತಣ್ಣಿತ್ತು ಕೊಳ=ತಣ್ಗೊಳ, ವಿ. ಪೂ. ಕ. ಆಚಾರದಿಂದ ವಿರಹಿತ=ಆಚಾರವಿರಹಿತ ತೃ. ತ. ಕೊಡ + ಪಾಲ್ = ಕೊಡವಾಲ್, ವಕಾರಾದೇಶ ಸಂಧಿ ‖೧೩‖

ಟೀ‖ ಸುರನದಿಗೆ - ಜಾಹ್ನವಿಗೆ, (ದೇವಗಂಗಾನದಿಗೆ) ಕಾಳಿಂದೀ - ಯಮುನಾನದಿಯಂತೆಯೂ, ಅಮೃತಾಬ್ಧಿಗೆ-ಕ್ಷೀರೋದಧಿಗೆ, ಕೃಷ್ಣಂ-ಕೃಷ್ಣನಂತೆಯೂ, (ಮಹಾವಿಷ್ಣುವಿನಹಾಗೂ) ವಾಣಿಗೆ-ಶಾರದಾಂಬೆಗೆ, (ಶಾರದಾದೇವಿಗೆ) ಅಳಕಾಳಿ - ಮುಂಗೂದಲು, (ಮುಂಗುರುಳು) ಗಳ ಸಮೂಹದಂತೆಯೂ, ಇಂದುಮಂಡಲಕೆ - ಇಂದುವಿನ ಬಿಂಬಕ್ಕೆ, (ಚಂದ್ರಬಿಂಬಕ್ಕೆ) ಕಳಂಕ - ಚಿಹ್ನೆಯಂತೆಯೂ, (ದೋಷವು) ಕಾಪಾಲಿಗೆ - ಕಪಾಲಧರನಾದ ಈಶ್ವರನಿಗೆ, ವರಕಾಳಿ-ಪಾರ್ವತೀದೇವಿಯಂತೆಯೂ, ದೇವಗಜಕೆ-ಇಂದ್ರನ ಆನೆಯಾದ ಐರಾವತಕ್ಕೆ, ಮದಂ-ಮದಜಲದಂತೆಯೂ, ಅಹಿಪತಿಗೆ-ಸರ್ಪಗಳಿಗೊಡೆಯನಾದ ಆದಿಶೇಷನಿಗೆ, ನಂಜು-ವಿಷದಂತೆಯೂ, ತೊಡವಾಗಿರೆ-ಹೊಂದಿರಲಾಗಿ, ಕಾಳಿಮದ-ಕಪ್ಪಿನ, (ನೀಲಬಣ್ಣದ) ಕೂಟಂ-ಸೇರೋಣವು, (ಕೂಡುವಿಕೆಯು) ಎನಗೆ-ನನಗೆ, ಇಲ್ಲೆಂಬ - ಇಲ್ಲವೆನ್ನುವ, ಮುನಿಸು - ಸಿಟ್ಟು, (ಕೋಪಮಾಡುವುದು) ಅತಿ-ಹೆಚ್ಚಾಗಿ, ವಿಕಾಳಿಸಲು-ಪ್ರಸರಿಸಲು, ಅಮಲ-ನಿರ್ದೋಷವಾದ, ಕೀರ್ತಿ - ಯಶಸ್ಸೆಂಬ, ಕಾಂತೆ - ಹೆಂಗಸು, (ತರುಣಿಯು, ಸ್ತ್ರೀಯು) ಪೊರಮಟ್ಟು-ಹೊರಟವಳಾಗಿ, ಲೋಕಾಳಿಯಂ - ಪ್ರಪಂಚಗಳ ಸಮುದಾಯವನ್ನು, ತಿರುಗುವಳ್-ಸಂಚಾರಮಾಡುವಳು, ಎನಲ್ಕೆ-ಎನ್ನುವಂತೆ, ರಾಮನ-ಶ್ರೀರಾಮಚಂದ್ರನ, ಯಶೋವಿಸ್ತರವಂ-ಕೀರ್ತಿಯ ಪ್ರವಾಹವನ್ನು, (ಯಶೋತಿಶಯವನ್ನು) ಏಂ-ಏನೆಂದು, ಪೊಗಳ್ವೆನು-ಸ್ತೋತ್ರಮಾಡಲಿ (ವರ್ಣಿಸಲಿ).

ಅ‖ ವಿ‖ ಕೃಷ್ಣ-ವಿಷ್ಣು-ಅರ್ಜುನ, ಕಪ್ಪು, ಮೆಣಸು. ಕೃಷ್ಣಪಕ್ಷ, ಕಲಿಯುಗ. ಪರಮಾತ್ಮ, ಕಣ್ಣಿನ ಕಪ್ಪು, ಕೃಷ್ಣಾನದಿ. ಅಮೃತ+ಅಬ್ಧಿ=ಅಮೃತಾಬ್ಧಿ ಸ. ದೀ. ಸಂ. ವಾಣಿ-ಸರಸ್ವತಿ, ಸ್ವರ, ಭಾಷೆ, ನೆಯಿಗೆ. ಕೀರ್ತಿಯೆಂಬ, ಕಾಂತೆ-ಕೀರ್ತಿಕಾಂತೆ ಸಂ. ಪೂ. ಕ. ‖೧೪‖

---

ವಾಗಿದ್ದವು, ಸರಸ್ಸುಪುಷ್ಕರಣಿಗಳು ತಂಪಾದ ನೀರಿನಿಂದ ತುಂಬಿ ನಳಿನಾಳಿಗಳಿಂದಲೂ, ನೈದಿಲೆಗಳಿಂದಲೂ ತುಂಬಿ ರಂಜಿಸುತ್ತಿದ್ದವು, ಪ್ರತಿಯೊಂದು ಜೀವರಾಶಿಗಳೂ ಸ್ವಾಭಾವಿಕ ದ್ವೇಷವನ್ನು ಬಿಟ್ಟು ಅನ್ಯೋನ್ಯಪ್ರೀತಿಯುಳ್ಳವುಗಳಾಗಿದ್ದವು. ಪುರುಷ ಸ್ತ್ರೀಯರೆಲ್ಲರೂ, ಪರಸ್ಪರಾನುರಾಗವುಳ್ಳವರಾಗಿ ಸತ್ಕರ್ಮ, ಮತ್ತು ಸ್ವಧರ್ಮಾಚರಣೆಯಲ್ಲಿರುತ್ತಲಿದ್ದರು. ಹಸುಗಳೆಲ್ಲವೂ ಬಿಳಿ ಕೆಚ್ಚಲನ್ನಿಟ್ಟು ಒಂದೊಂದು ಕೊಡದ ತುಂಬಾ ಹಾಲನ್ನು ಕರೆಯುತ್ತಲಿದ್ದವು. ಪಕ್ಷಿಜಾತಿಗಳೆಲ್ಲವೂ ತಮಗೆ ಅನುಕೂಲವಾದ ಗೂಡುಗಳನ್ನು ಮಾಡಿಕೊಂಡು ಸುಖದಿಂದಿರುತ್ತಿದ್ದವು ‖೧೩‖ ದೇವಗಂಗಾನದಿಗೆ ಕಾಳಿಂದಿಯು, ಅಮೃತಾಬ್ಧಿಗೆ ಶ್ರೀಕೃಷ್ಣನು, ಶಾರದೆಗೆ ಅಳಕಾಳಿಯು, ಇಂದು ಮಂಡಲಕ್ಕೆ ಕಳಂಕವು, ಕಪಾಲಿಗೆ ವರಕಾಳಿಯು, ಇಂದ್ರನ ಐರಾವತಕ್ಕೆ ಮದೋದಕವು ಅಹಿಪತಿಗೆ ಹಾಲಾಹಲವು (ನಂಜು) ತೊಡವಾಗಿರಲು ನೀಲವರ್ಣದ (ಕಳಂಕದ) ಸಂಬಂಧವು ತನಗಿಲ್ಲೆಂಬ ಮುನಿಸು ಅತ್ಯಧಿಕಮಾಗಿ ವಿಕಾಳಿಸಲಾಗಿ, ಅಮಲಕೀರ್ತಿಯೆಂಬ ಕಾಂತೆಯು ಪೊರಮಟ್ಟು, ಲೋಕಾಳಿಗಳಲ್ಲಿ ಸಂಚಾರಮಾಡುವಳೋ ಎನ್ನಲು ಶ್ರೀರಾಮನ ಯಶೋವಿಸ್ತರವನ್ನು ಏನೆಂದು ಪೊಗಳಲಿ (ಅಷ್ಟು ಅತಿಶಯವಾಗಿತ್ತೆಂಬ ಭಾವವು) ‖೧೪‖ ಶ್ರೀರಾಮನು ಸರ್ವ

ಬಿಡದೆಪೊರೆವಲ್ಲಿನೀತಿಶಾಸ್ತ್ರಂಗಳಿಗೆಪಳಿವೊರಿಸದೆ ‖ ಉರ್ವಿಯಂನವಸಹಸ್ರಾಬ್ದಮಂಪಾಲಿಸಿದ । ನುರ್ವಸಂತಾನಮಂಕಾಣ ದಿಕ್ಷ್ವಾಕುಕುಲ । ನಿರ್ವಾಹಮಂನೆನೆದುರಘುವರಂನುಡಿದನೇಕಾಂತದೋಳ್ಜಾನಕಿಯೊಳು ‖ ೧೫ ‖ ಕಾಂತೆಕೇಳಿಕ್ಷ್ವಾಕು ವಂಶಮೆನ್ನಲ್ಲಿಬಂದಾಂತುದಿಲ್ಲಿಂದಸಂತತಿನಡೆಯದಿರ್ದೊಡೆಕು । ಲಾಂತಕಂತಾನಾದಪೆಂಸಾಕದಂತಿರಲಿಮನುಜರ್ಗೆಸಂಸಾರದ ‖ ಭ್ರಾಂತಿಯಂಬಿಡಿಸುವಡಪತ್ಯದೇಳ್ಗೆಗಳವಿ । ಶ್ರಾಂತಿಯಲ್ಲದೆಪೆಱತವೇನುಂಟುಮುಂದೆವು । ತ್ರಾಂತರವನ್ನದದಿರ್ದಪೆ

ಟೀ॥ ರಘುವರಂ-ಶ್ರೀರಾಮಚಂದ್ರಮೂರ್ತಿಯು, ಸರ್ವ-ಸಮಸ್ತವಾದ, ಸಂಪತ್-ಅಷ್ಟೈಶ್ವರ್ಯಾದಿಗಳಿಂದ, ಸಮೃದ್ಧಿಗಳಿಂ-ತುಂಬಿರುವಿಕೆಯಿಂದಲೂ, ಸ್ವಧರ್ಮದಿಂ-ತಮ್ಮ ತಮ್ಮ ಧರ್ಮಾಚಾರಾದಿಗಳಿಂದಲೂ, ನಿರ್ವಿಘ್ನವಾಗಿಯೂ (ಯಾವುದೊಂದು ಅಡಚಣೆಯಿಲ್ಲದೆ) ಸಕಲ-ಎಲ್ಲಾ, ಪ್ರಕೃತಿಜಾತ-ಮೂಲಪ್ರಕೃತಿಗಳಿಂದ ಉಂಟಾದ, (ಅನಾದಿಯಿಂದಬಂದ) ಚಾತುರ್ವರ್ಣ್ಯಮಂ-ನಾಲ್ಕು ಜಾತಿ ಭೇದಗಳವರ್ಣಾಶ್ರಮಧರ್ಮವನ್ನು, ಬಿಡದೆ-ತಪ್ಪದಂತೆ, (ಕೊಂಚವೂ ಲೋಪಬಾರದಂತೆ) ಪೊರೆವಲ್ಲಿ - ಕಾಪಾಡುತ್ತಿರಲಾಗಿ, ನೀತಿ ಶಾಸ್ತ್ರಗಳಿಗೆ - ಸನ್ಮಾರ್ಗವನ್ನು ಬೋಧಿಸುವ ಶಾಸ್ತ್ರಗಳಿಗೆ, (ಧರ್ಮಶಾಸ್ತ್ರಾದಿಗಳಿಗೆ) ಪಳಿವೊರಿಸದೆ-ತೊಂದರೆ ಬರದಹಾಗೆ, ಉರ್ವಿಯಂ-ಭೂಮಂಡಲವನ್ನು, ನವಸಹಸ್ರಾಬ್ದಮಂ-ಒಂಭತ್ತು ಸಾಸಿರವರ್ಷಂಗಳ ಪರಿಯಂತವು, ಪಾಲಿಸಿದನು-ಪರಿಪಾಲನೆ ಮಾಡಿದನು, ರಾಮಂ-ಶ್ರೀರಾಮನು, ಉರ್ವ-ಹೊಂದಿದ, ಸಂತಾನಮಂ-ವಂಶಾಭಿವೃದ್ಧಿಯನ್ನು, ಕಾಣದೆ-ನೋಡದೆ ಎಂದರೆ ಹೊಂದದೆ, ಇಕ್ಷ್ವಾಕು-ಇಕ್ಷ್ವಾಕುರಾಯನ, ಕುಲ-ಸಂತತಿಯ, ನಿರ್ವಾಹಮಂ-ಸ್ಥಾನವನ್ನು, (ತನ್ನ ಮೂಲಪುರುಷನಾದ ಇಕ್ಷ್ವಾಕುವಿನ ಸ್ಥಾನವನ್ನು) ನೆನೆದು-ಸ್ಮರಿಸಿ, (ಯೋಚಿಸಿ) ಜಾನಕಿಯೊಳು-ಭೂಮಿಜೆಯಲ್ಲಿ (ಸೀತೆಯ ಸಂಗಡ) ಏಕಾಂತದೊಳ್-ಗುಟ್ಟಾಗಿ, (ಬಬ್ಬರಿಗೂ ತಿಳಿಯದಂತೆ) ನುಡಿದಂ-ಮಾತನಾಡಿದನು (ಪೇಳಿದನು.)

ಅ॥ ವಿ॥ ಸಂಪತ್ + ಸಮೃದ್ಧಿ = ಶ್ಚುತ್ವ, ಸಂ. ಪ್ರ. ಉ. ಅಷ್ಟೈಶ್ವರ್ಯ-ದಾಸೀಜನ ಭೃತ್ಯ, ಪುತ್ರ, ಬಂಧುವರ್ಗ ವಸ್ತ್ರ, ವಾಹನ, ಧನ, ಧಾನ್ಯ. ಅಷ್ಟಭಾಗ್ಯ-ರಾಜ್ಯ, ಭಂಡಾರ, ಸೈನ್ಯ, ಆನೆ, ಕುದುರೆ, ಛತ್ರ, ಚಾಮರ, ಆಂದೋಳ. ಚಾತುರ್ವರ್ಣ್ಯ-ಬ್ರಹ್ಮ, ಕ್ಷತ್ರಿಯ, ವೈಶ್ಯ, ಶೂದ್ರ. ಚತುರ್ಯುಗ - ಕೃತ, ತ್ರೇತ, ದ್ವಾಪರ, ಕಲಿ, ಚತುರಾಶ್ರಮ - ಬ್ರಹ್ಮಚಾರಿ, ಗೃಹಸ್ಥ. ವಾನಪ್ರಸ್ಥ, ಯತಿ. ಜನಕರಾಯನ ಮಗಳು-ಜಾನಕಿ ‖೧೫‖

ಟೀ॥ ದಾಶರಥಿ-ದಶರಥಾತ್ಮಜನಾದ ಶ್ರೀರಾಮನು, ಕಾಂತೆ-ಎಲೆ ಲಾವಣ್ಯವತಿಯೇ! ಕೇಳು-ತಿಳಿ (ಆಲಿಸು) ಇಕ್ಷ್ವಾಕುವಂಶಂ-ಇಕ್ಷ್ವಾಕುವಿನ ಸಂತತಿಯು, ಬಂದು-ಅನುಕ್ರಮದಿಂದ ಬಂದುದಾಗಿ, ಎನ್ನಲ್ಲಿ-ನನ್ನಲ್ಲಿ ಆಂತುದು - ಸೇರಿಹೋಯಿತು, ಇಲ್ಲಿಂದ-ಎನ್ನಿಂದ, ಸಂತತಿ-ವಂಶವು, (ಗೋತ್ರವು) ನಡೆಯದಿರ್ದೊಡೆ-ಅಭಿವೃದ್ಧಿಯನ್ನು ಪಡೆಯದಿದ್ದಲ್ಲಿ ಕುಲಾಂತಕಂ-ಕುಲಕ್ಕೆ ಮೃತ್ಯುಸ್ವರೂಪನು, (ವಂಶನಾಶಕನು) ತಾಂ - ನಾನಾದರೋ ಆದಪೆಂ - ಆಗುತ್ತೇನೆ, ಸಾಕು-ಆ ವಿಷಯಬಿಡು, ಅದಂತಿರಲಿ, ಆ ಮಾತುಹಾಗೆ ಯಿರಲಿ, ಮನುಜರ್ಗೆ-ಮಾನವರಿಗೆ, (ಮನುಷ್ಯರಾದವರಿಗೆ) ಸಂಸಾರದ-ಸಂಸೃತಿಯ, ಭ್ರಾಂತಿ-ಕಳವಳವು, (ಆಶೆಯು) ಬಿಡಿಸವೊಡೆ-ವಿಸರ್ಜಿಸಬೇಕಾದರೆ, (ತಪ್ಪಿಸಬೇಕಾದರೆ) ಅಪತ್ಯದ-ಮಗನ, (ಹುಡುಗರ) ಏಳ್ಗೆಗಳೇ-ಪೆರ್ಚಿಕೆಯೇ, (ಪ್ರವರ್ಧಮಾನವೆ) ವಿಶ್ರಾಂತಿಯು - ವಿರಾಮವು, (ಸಂಸಾರಭ್ರಾಂತಿಯಿಂದ ಬಿಡಗಡೆಯು) ಅಲ್ಲದೆ - ಅದು ಹೊರತಾಗಿ, (ಅದುಬಿಟ್ಟರೆ) ಪೆಱತು-ಅನ್ಯವಾದುದು, ಅದು, ಏಂ. ಉಂಟು - ಮತ್ತೆಯಾವುದು ತಾನೆ ಇರುತ್ತದೆ (ಅಪುತ್ರಸ್ಯಗತಿರ್ನಾಸ್ತಿ) ಎಂಬಂತೆ ಪುತ್ರಹೀನನಿಗೆ ಎಂದಿಗೂ ಸದ್ಗತಿಯುಂಟಾಗದು, ಪುತ್ರವಂತನು ಸಂಸಾರಭಾರವನ್ನು ತನ್ನ ಪುತ್ರನಿಗೆ ಒಪ್ಪಿಸಿ ತಾನು ವಿಶ್ರಾಂತಿಸುಖವನ್ನು ಅನುಭವಿಸಲು ವಾನಪ್ರಸ್ಥಾಶ್ರಮವನ್ನು ಹೊಂದುವನು ಮುಂದೆ ಇನ್ನಾದರೂ ಎಂದರೆ ಇಲ್ಲಿಂದೀಚೆಗೆ

ಸಂಪತ್ಸಮೃದ್ಧಿಗಳಿಂದಲೂ, ಸ್ವಧರ್ಮಗಳಿಂದಲೂ, ನಿರ್ವಿಘ್ನವಾಗಿ ಸಕಲವಾದ ಜನಸಮೂಹದಲ್ಲಿ ಚಾತುರ್ವರ್ಣ್ಯವನ್ನು ಬಿಡದೆ, (ಯಾವ ವಿಧವಾದ ತೊಂದರೆಯೂ ಬಾರದ ಹಾಗೆ) ರಾಜ್ಯಪರಿಪಾಲನಂ ಗೈಯುತ್ತಿರಲು, ನೀತಿಶಾಸ್ತ್ರಗಳಿಗೆ ಯಾವುದೊಂದೂ ಕುಂದು ಬಾರದಂತೆ ಉರ್ವಿಯನ್ನು ಒಂಭತ್ತು ಸಾಸಿರವರ್ಷಗಳ ಪರಿಯಂತ ಪರಿಪಾಲನೆ ಮಾಡಿದನು ಶ್ರೀರಾಮಚಂದ್ರನು ಅಷ್ಟು ಕಾಲದವರಿಗೂ, ಪುತ್ರಸಂತಾನವನ್ನು ಕಾಣದೆ, ಇಕ್ಷ್ವಾಕುರಾಜನೆಂಬ ತನ್ನ ಮೂಲಪುರುಷನ ವಂಶದ ವಿಚಾರವನ್ನು ಜ್ಞಾಪಿಸಿ ಮನದೊಳು ಚಿಂತಿಸಿದವನಾಗಿ, ಪ್ರಾಣಕಾಂತೆಯಾದ ಜಾನಕಿಯೊಡನೆ ಏಕಾಂತದಲ್ಲಿ ಹೇಳಿದನು ‖೧೫‖ ಎಲೈ ಪ್ರಾಣಕಾಂತೆಯೇ ಕೇಳು, ಇಕ್ಷ್ವಾಕುವಂಶವು ನನ್ನಲ್ಲಿ ಬಂದು ನೆಲೆಗೊಂಡಿತು. ನನ್ನ ದೆಸೆಯಿಂದ ವಂಶಾಭಿವೃದ್ಧಿಯು ನಡೆಯದಿದ್ದರೆ ಕುಲಕ್ಕೆ ಮೃತ್ಯುಪ್ರಾಯನಾಗುತ್ತೇನಲ್ಲವೆ. ಅದು ಹಾಗಿರಲಿ ಈ ವಿಷಯಬೇಕಾದುದಿಲ್ಲ. ಮಾನವರಿಗೆ ಸಂಸಾರ ಭ್ರಾಂತಿಯನ್ನು ಹೋಗಲಾಡಿಸಬೇಕಾಗಿದ್ದ ಪಕ್ಷದಲ್ಲಿ ಪುತ್ರಸಂತಾನಾದಿ ಅಭಿವೃದ್ಧಿಗಳೇ ಹೇತುವಾಗಿರುವುದು. (ವಿಶ್ರಾಂತಿಯಾಗಿರುತ್ತದೆ) ಹಾಗೆ ಸಂತಾನಾಭಿವೃದ್ಧಿಯಾಗದಿದ್ದರೆ ಸಂಸಾರಭ್ರಾಂತಿಯನ್ನು ಬಿಡಲು ಬೇರೆಯಾದ ಮಾರ್ಗವಾವುದುಂಟು? (ಪುನಾ

ನೆಂತೊಪೇಳೆಂದುದಾಶರಥಿಬಿಸುಸುಯ್ದನು ‖ ೧೬ ‖ ಸಂತಾನಮಂದಾರದೊಳ್ಪಡೆದತುಳವಿಭವ | ಮಂತಳೆದುನಂದನೋತ್ಸವದಮೃತಪಾನದ | ತ್ಯಂತಸೌಖ್ಯಮನೈದಿದೇವೇಂದ್ರನಂತೆಸುಮ್ಮಾನಮಾಗಿರದೆಬರಿದೆ ‖ ಸಂತತಂಜಾತರೂಪವನೆಕಾಣದೆ ತಾಪ | ದಿಂತೊಳಲಿ ಬಳಲುವ ದರಿದ್ರನಂದದೊಳೈದೆ | ಚಿಂತಿಸುವ ಸಂಸಾರಮೇಕೆ ಮಾನವಜನ್ಮಕೆಂದು ರಘುಪತಿನುಡಿದನು ‖೧೭‖ ನೀರಿರ್ದಕಾಸಾರಕರವಿಂದಮಿಲ್ಲದೊಡೆ | ತಾರಕಿಗಳಿರ್ದಗಗನಕೆಚಂದ್ರನಿಲ್ಲದೊಡೆ | ಚಾರುಯೌವನಮಿರ್ದಪೆಣ್ಗೆನೆಯನಿಲ್ಲದೊಡೆಸನ್ನುತಪ್ರಜೆಗಳಿರ್ದ ‖ ಧಾರಿಣಿಗೆಧರ್ಮಧರನಿಲ್ಲದೊಡೆಸಿರಿಯಿರ್ದ | ದಾರವಂಶಕೆಕುವರನಿಲ್ಲದೊಡೆಮ

---

ಪುತ್ರಾಂತರವನು-ಪುತ್ರಸಂತಾನವನ್ನು, (ಮಕ್ಕಳನ್ನು) ಐದದಿರ್ದಪೆನೆ-ಪೊಂದುತ್ತೇನೆಯೊ ಇಲ್ಲವೊ, ಎಂತೋ-ಅದು ಆವರೀತಿಯಾಗುತ್ತದೆಯೊ, ಪೇಳೆಂದು-ಹೇಳೆಂಬದಾಗಿ, ಬಿಸುಸುಯ್ದನು-ನಿಡಿದುಸಿರನ್ನು ಬಿಟ್ಟವನಾದನು.

ಅ‖ ವಿ‖ ಕಾಂತೆ-ಪ್ರಿಯಳು, ಹೆಂಡತಿ, ಪ್ರಿಯಂಗುವಲ್ಲಿ, ದೊಡ್ಡ ಏಲಕ್ಕಿ, ಭೂಮಿ. ಬೆಚ್ಚನೆಯ+ಸುಯ್=ಬಿಸುಸುಯ್ ವಿ. ಪೂ. ಕ. ‖೧೬‖

ಟೀ‖ ರಘುಪತಿ-ಶ್ರೀರಾಮಚಂದ್ರನು, ಸಂತಾನ-ಪುತ್ರಸಂತಾನವೆಂಬ, ಮಂದಾರದೊಳ್-ಕಲ್ಪವೃಕ್ಷದಲ್ಲಿ, ಅತುಳ-ಸಾಮ್ಯವಿಲ್ಲದ, ವೈಭವಮಂ-ವಂಶಾಭಿವೃದ್ಧಿಯೆಂಬ ವೈಭವವನ್ನು, (ಪುತ್ರಸಂತಾನವೆಂಬ ಐಶ್ವರ್ಯವನ್ನು) ತಳೆದು-ಪಡದುಕೊಂಡು, ನಂದನೋತ್ಸವದ-ಪುತ್ರನು ಉದ್ಭವಿಸಿದನೆಂಬ ಆನಂದದ, ಅಮೃತದ-ಸುಧೆಯ, ಪಾನದ-ಆಸ್ವಾದನೆಯ, ಅತ್ಯಂತಸೌಖ್ಯಮಂ-ಅತಿ ಹೆಚ್ಚಾದ ಹರ್ಷವನ್ನು, ಐದಿ-ಪೊಂದಿದವನಾಗಿ, ದೇವೇಂದ್ರನಂತೆ-ದೇವತೆಗಳೊಡೆಯನಾದ ಇಂದ್ರನಹಾಗೆ, ಸುಮ್ಮಾನಮಾಗಿರದೆ-ಆನಂದ ಸುಖವನ್ನು ಅನುಭವಿಸಿಕೊಂಡಿಂದೆ, ಬರಿದೆ-ನಿರರ್ಥಕಮಾಗಿ, ಜಾತರೂಪವನೇ-ಭಂಗಾರವನ್ನೇ, ಕಾಣದೆ-ನೋಡದೆ, ತಾಪದಿಂ-ಚಿಂತೆಯಿಂದ, (ವ್ಯಥೆಯಿಂದ) ತೊಳಲಿ-ಸುತ್ತಿ, (ಬಳಸಿ) ಬಳಲುವ-ಶ್ರಮೆಯನ್ನು ಪಡುವ, ದರಿದ್ರನಂದದೊಳ್-ನಿರ್ಭಾಗ್ಯನ ಹಾಗೆ, ಐದೆ-ಅತಿ ಹೆಚ್ಚಾಗಿ, ಚಿಂತಿಸುವ-ಸಂತಾಪಪಡುವ, ಸಂಸಾರವು-ಸಂಸೃತಿಯು, ಏಕೆ-ಏತಕ್ಕೆ, ಪ್ರಯೋಜನವಾದೀತು, ಆ ರೀತಿಯಾದ ಮಾನವ ಜನ್ಮವು-ಮನುಜನ ಆವಿರ್ಭಾವವು, (ಹುಟ್ಟುವಿಕೆಯು) ಏಕೆ-ಏತಕ್ಕೆ, ಎಂದು-ಎಂಬದಾಗಿ, ನುಡಿದನು-ಹೇಳಿದನು.

ಅ‖ ವಿ‖ ಅಮೃತ-ಸುಧೆ, ಧನ್ವಂತರಿ, ಇಂದ್ರ, ಸೂರ್ಯ, ವಿಷ್ಣು, ಶಿವ, ಜೆಣ್ಣೆ, ಹಾಲು, ಕಾಂತಿ. ದಾರ-ಹೆಂಡತಿ, ಹರಕು, ಬಿರುಕು. ನಂದನ-ಮಗ, ಸಂವತ್ಸರ, ಇಂದ್ರನ ವನ. ನಂದನ+ಉತ್ಸವ=ನಂದನೋತ್ಸವ ಸಣ. ಸಂ. ದೇವತೆಗಳ+ಇಂದ್ರ=ದೇವೇಂದ್ರ ಷ. ತ. ‖೧೭‖

ಟೀ‖ ನೀರಿರ್ದ-ಜಲಾನ್ವಿತವಾದ, (ನೀರಿನಿಂದ ತುಂಬಿರುವ) ಕಾಸಾರಕೆ-ಸರೋವರಕ್ಕೆ, ಅರವಿಂದಂ-ಪದ್ಮಗಳು, (ತಾಮರಸಗಳು) ಇಲ್ಲದೊಡೆ-ಇಲ್ಲದೇ ಹೋದರೂ, ತಾರಕಿಗಳ್-ಉಡುಗಣಗಳು, (ನಕ್ಷತ್ರಾದಿಗಳು) ಇರ್ದ-ಇರುವ, ಗಗನಕೆ-ಅಂತರಿಕ್ಷಕ್ಕೆ, ಚಂದ್ರಂ-ನಿಶಾಕರನು, (ಕಲಾಧರನಾದ ಚಂದ್ರನು) ಇಲ್ಲದೊಡೆ-ಇಲ್ಲದಿದ್ದರೂ, ಚಾರು-ಮನೋಹರವಾದ, ಯೌವ್ವನಂ-ಹರೆಯವು, (ಯೌವನವು) ಇರ್ದ-ಉಂಟಾಗಿರುವ, ಪೆಣ್ಗೆ-ಹೆಂಗಸಿಗೆ, ಇನಿಯನು-ವಲ್ಲಭನು, ಇಲ್ಲದೊಡೆ-ಇಲ್ಲದೇ

---

ಮ್ನೋನರಕಾತ್‌ತ್ರಾತಾ ಎಂಬ ವಾಕ್ಯವು ಸಹಜವೇ ಸರಿ) ಪುತ್ರವಂತನೇ ಪಿತೃ ಮಾತೃ ಋಣಗಳಿಂದ ವಿಮುಕ್ತನಾಗುತ್ತಾನೆ, ಆ ರೀತಿಯಾಗಿ ಎಷ್ಟುಕಾಲ ಅಪುತ್ರವಂತನಾಗಿ ಜೀವಿಸಿದ್ದರೆ ತಾನೆ ಫಲವೇನು? ಇನ್ನು ಮುಂದಾದರೂ ನಾನು ಪುತ್ರವಂತನಾಗಿ ಆಪೇನೆಯೆ? ಅಥವ ಇಲ್ಲವೆ, ಮತ್ತೆ ಯಾವರೀತಿ ಪರಿಣಮಿಸುತ್ತದೆಯೊ ಹೇಳೆಂಬದಾಗಿ ದಾಶರಥಿಯು ಬಿಸುಸುಯ್ದು ಚಿಂತಿಸುತಿರ್ದನು ‖೧೬‖ ಸಂತಾನಾಭಿವೃದ್ಧಿಯನ್ನು ಧರ್ಮಪತ್ನಿಯಲ್ಲಿ ಪಡೆದು, ಸಾಮ್ಯವಿಲ್ಲದ ಪುತ್ರ ಸಂಪತ್ತನ್ನು ತಳೆದು, ಪುತ್ರೋತ್ಸವವೆಂಬ ಅಮೃತಪಾನದ ಅತ್ಯಂತ ಸೌಖ್ಯವನ್ನು ಪಡೆದು ದೇವೇಂದ್ರನಂತೆ ಸಂತೋಷಾತಿಶಯದಿಂದ ಕೂಡಿಂದೆ, ನಿರರ್ಥಕವಾಗಿ ಸುವರ್ಣವನ್ನೇ ಕಾಣದೆ, ಪರಿತಾಪದಿಂದ ತೊಳಲಿ ಶ್ರಮಪಡುತ್ತಿರುವ ನಿರ್ಭಾಗ್ಯನಂದದಿಂದ ಅತ್ಯಧಿಕವಾಗಿ ಸಂತಾಪಪಡುವ ಸಂಸಾರಸಾಗರವು ಆದೇಕೆ? ಆ ರೀತಿಯಾದ ಮಾನವ ಜನ್ಮವು ಏಕೆ ಪ್ರಯೋಜನಕ್ಕೆ ಬಂದೀತು? ಎಂದರೆ ಪುತ್ರಸಂತಾನವಿಲ್ಲದವನಿಗೆ ಎಷ್ಟು ವಿಧವಾದ ನಿಧಿ ನಿಕ್ಷೇಪಾದಿಗಳು ಇದ್ದರೂ ಪ್ರಯೋಜನವಿಲ್ಲವಾಗಿರುತ್ತದೆ. (ಅಜಾಗಳ ಸ್ತನದಂತೆ ಫಲಕಾರಿಯಾಗದು) ಎಂದು ಹೇಳಿದನು‖೧೭‖ಮತ್ತು ಎನ್ನ ಪ್ರಾಣವಲ್ಲಭೆಯೇ ಜಲದಿಂದ ತೀವಿರ್ದ ಕಾಸಾರಕ್ಕೆ ಪಂಕಜಗಳು ಇಲ್ಲದಿದ್ದರೂ, ಉಡುಗಣದಿಂ ತೀವಿರ್ದ ಗಗನಕ್ಕೆ ಚಂದ್ರನಿಲ್ಲದಿದ್ದರೂ, ಚಾರು ಯೌವನವಿದ್ದ ಯುವತಿಗೆ ಪ್ರಾಣವಲ್ಲಭನಿಲ್ಲದಿದ್ದರೂ, ಸನ್ನುತ ಪ್ರಜೆಗಳಿದ್ದ ಧಾರಿಣಿಗೆ ಪ್ರಭುವಿಲ್ಲದಿದ್ದರೂ, ಐಶ್ವರ್ಯದಿಂದೊಪ್ಪುವ ನಿಷ್ಕಳಂಕವಾದ ಕುಲಕ್ಕೆ ಪುತ್ರನಿಲ್ಲದಿದ್ದರೂ, ಎಂದಿಗಾದರೂ

ರೆವುದೇ | ನಾರಿಪೇಳೆನೆಲ್ಲಜ್ಜೆಯಿಂದತಲೆವಾಗಿನಿಜಪತಿಗೆಜಾನಕಿನುಡಿದಳು ||೧೮|| ಕಾಂತನೀಂಪೇಳ್ದೊಡೇಂಪುತ್ರವತಿಯಹುದು
ಜ | ನ್ಮಾಂತರದಪುಣ್ಯಮೈಸಲೆಪೆಣ್ಗೆ ಮುನ್ನತಾಂನೋಂತಡಲ್ಲದೆ | ಬಂದಪುದೇಬರಿದೆಬಯಸಿದೊಡೆಸುಕುಮಾರನಂಪಡೆವುದು ||
ಅಂತೊಳಗೆವುದುಗಿರ್ದಪರಿಮಳದೊಳೊಪ್ಪುವಲ | ತಾಂತಕುಟ್ಮಲದಂತೆವರಗರ್ಭಲಾಂಛನದ | ಕಾಂತಿಯಂತಳೆವುದಂಗನೆಯ
ರೆಲ್ಲರ್ಗೆದೊರೆವುದೆಮೇದಿನಿಯೊಳೆಂದಳು || ೧೯ || ಕಂದನಾಡುವಬಾಲಲೀಲೆಯಂನೋಡಿತೊದ | ಳೊಂದಿದಿನಿವಾತನುರೆಕೇ

ಹೋದರೂ, ಸನ್ನುತ-ಸ್ತೋತ್ರಾರ್ಹರಾದ, ಪ್ರಜೆಗಳ್-ಜನಗಳು, ಇರ್ದು-ಇದ್ದುಕೊಂಡು, ಧಾರುಣಿಗೆ-ಸ್ಥಿತಿಗೆ, (ಪೃಥ್ವಿಗೆ) ಅರಸಿಲ್ಲದೊಡೆ-ದೊರೆಯಿಲ್ಲದಿದ್ದರೂ, ಸಿರಿ-ಐಶ್ವರ್ಯವು, ಇರ್ದ-ಇರುವ, ಉದಾರ-ನಿರ್ಮಲವಾದ, (ಶ್ರೇಷ್ಠವಾದ) ವಂಶಕೆ-ಸಂತಾನಕ್ಕೆ, (ಕುಲಕ್ಕೆ) ಕುವರಂ-ಕುಮಾರನು, ಇಲ್ಲದೊಡೆ-ಇಲ್ಲದಿದ್ದರೂ, ಮೆರೆವುದೆ-ಶೋಭಿಸುತ್ತದೆಯೆ, ನಾರಿ-ಸ್ತ್ರೀಯಾದ ಸೀತೆಯೆ, ಪೇಳ್-ಹೇಳುವಳಾಗು, ಎನೆ-ಎಂಬದಾಗಿ ಹೇಳಲು, ಲಜ್ಜೆಯಿಂದ-ನಾಚಿಕೆಯದೆಸೆಯಿಂದ, ತಲೆವಾಗಿ-ಶಿರವನ್ನು ಕೆಳಕ್ಕೆ ತಗ್ಗಿಸಿಕೊಂಡು, ನಿಜ-ತನ್ನಯ, ಪತಿಗೆ-ಒಡೆಯನಾದ ಶ್ರೀರಾಮನಿಗೆ, ಜಾನಕಿ-ಸೀತಾದೇವಿಯು, ನುಡಿದಳು-ಪೇಳಿದಳು.

ಅ|| ವಿ|| ಸಿರಿ-ದ್ಭ, ಶ್ರೀ-ತ್ಸ. ತಾರಕ-ನಕ್ಷತ್ರ, ತಾರಕಮಂತ್ರ, ಕಣ್ಣಿನ ಕರಿಯಗುಡ್ಡು, ಪ್ರಾಯ-ತ್ಸ. ಹರಯ-ದ್ಭ. ಸತ್+ನುತ=ಸನ್ನುತ ಅನುನಾಸಿಕ. ಸಂಧಿ. ತಲೆಯಂ+ಬಾಗಿ=ತಲೆಬಾಗಿ ಕ್ರಿಯಾ. ಸ. ನಾರಿ-ಸ್ತ್ರೀ, ಬಿಲ್ಲಿನ ಹೆದೆ. ಕುವರ-ದ್ಭ. ಕುಮಾರ-ತ್ಸ. ಅರಸ-ಅಕಾರಾಂತ ಪ್ರಕೃತಿ, ಪುಲ್ಲಿಂಗ, ಅರಸಿ-ಸ್ತ್ರೀಲಿಂಗ ||೧೮||

ಟೀ|| ಕಾಂತ-ಎಲೈ ವಲ್ಲಭಸ್ವಾಮಿಯೇ, ನೀಂ-ನೀನು, ಪೇಳ್ದೊಡೆ-ಈ ರೀತಿ ಚಿಂತಿಯಿಂದ ಹೇಳಿದರೆ ತಾನೆ, ಏಂ-ಏನಾಗುವುದು? (ಈ ರೀತಿಯಲ್ಲಿ ಹೇಳಿದ್ದರಿಂದ ಏನು ಪ್ರಯೋಜನ) ಪೆಣ್ಗೆ-ಹೆಂಗಸಿಗೆ, ಪುತ್ರವತಿಯಹುದು-ಮಕ್ಕಳನ್ನುಳ್ಳವಳಾಗುವುದು, ಜನ್ಮಾಂತರದ-ಪೂರ್ವಜನ್ಮಫಲೋದಯದ, (ಹಿಂದಿನ ಜನ್ಮದಲ್ಲಿ ಮಾಡಿದ ಪುಣ್ಯಪರಿಪಾಕದ) ಪುಣ್ಯಂ-ಸುಕೃತವು, ಐಸಲೆ-ಅಲ್ಲವೇ, ಮುನ್ನ-ಹಿಂದಿನ ಜನ್ಮದಲ್ಲಿ, ತಾಂ-ನಾನು, (ಸ್ತ್ರೀಯರು) ನೋಂತಡಲ್ಲದೆ-ಭಗವತ್ಪ್ರಾರ್ಥನೆಯನ್ನು ಮಾಡಿದ ಹೊರ್ತಾಗಿ, (ಭಗವಂತನ ಪೂಜೆ ಮಾಡಿದ ಹೊರ್ತು) ಸುಕುಮಾರನಂ-ಶ್ರೇಷ್ಠನಾದ ಮಗನನ್ನು, ಪಡೆವುದು-ಹೊಂದತಕ್ಕದ್ದು, ಬರಿದೆ-ನಿರರ್ಥಕಮಾಗಿ, ಬಯಸಿದೊಡೆ-ಕಾಂಕ್ಷೆಗೊಂಡರೆ, (ಆಶೆಮಾಡಿದರೆ) ಆ ಪೆಣ್ಗೆ-ಆ ಸ್ತ್ರೀಗೆ, ಬಂದಪುದೆ-ಬರುತ್ತದೆಯೆ, (ಬರಲಾದೀತೆ) ಅಂ-ನಾನಾದರೊ, ತೊಳಗೆ-ಆಯಾಸಪಡಲು, (ಶ್ರಮಪಡಲು) ಏಂ-ಏನಾದೀತು, ಪುದುಗಿರ್ದ-ವ್ಯಾಪ್ತಮಾದ, ಪರಿಮಳದೊಳು-ಸುಗಂಧದಿಂದ, ಒಪ್ಪುವ-ಪ್ರಕಾಶಿಸುವ, ಲತಾಂತ-ಬಳ್ಳಿಯನ್ನು ಹೊಂದಿರುವ, (ಲತೆಯಲ್ಲಿ ಬಿಟ್ಟು ಇರುವ) ಕುಟ್ಮಲದಂತೆ-ಕೋಶದ ಹಾಗೆ, (ಮೊಗ್ಗಿನ ರೀತಿಯಿಂದ) ವರ-ಶ್ರೇಷ್ಠರಾದ, ಗರ್ಭಲಾಂಛನದ-ಬಸುರಿನ ಗುರ್ತಿನ. (ಬಸುರಿನ ಚಿಹ್ನೆಯ) ಕಾಂತಿಯಂ-ಶೋಭೆಯನ್ನು ತಳೆವುದು-ಪಡೆಯತಕ್ಕದ್ದು, ಮೇದಿನಿಯೋಳ್-ಈ ಭೂಮಂಡಲದಲ್ಲಿ, ಅಂಗನೆಯರ್-ಅಬಲೆಯರು, (ಸ್ತ್ರೀಯರು) ಎಲ್ಲರ್ಗೆ-ಸಕಲರಿಗೂ, ದೊರೆವುದೇ-ಲಭಿಸುತ್ತದೆಯೆ? ಎಂದಳು-ಎಂಬದಾಗಿ ಹೇಳಿದಳು.

ಅ|| ವಿ|| ಲತೆಯನ್ನು+ಅಂತ=ಲತಾಂತ ದ್ವಿ. ತ. ಗರ್ಭ-ಬಸಿರು, ಹೊಟ್ಟೆ. ಲಾಂಛನ-ಕುಂದು, ಚಿಹ್ನೆ, ಕಳಂಕ ಮಧುಕೈಟಭರೆಂಬ ರಕ್ಕಸರ ಮೇಧಸ್ಸಿನಿಂದಾದದು=ಮೇದಿನಿ. ||೧೯||

ಟೀ|| ಕಂದ-ಪುತ್ರನು, (ಮಗುವು) ಆಡುವ-ಆಟವಾಡುವ, ಬಾಲಲೀಲೆಯಂ-ಮಕ್ಕಳ ಆಟವನ್ನು, ನೋಡಿ-ಕಂಡು, ತೊಡಲೊಂದಿದ-ತೊಡಕಾದ, (ಸಿಕ್ಕನ್ನು ಹೊಂದಿರುವ ಇನಿವಾತಂ-ಮಧುರವಾದ ಮಾತನ್ನು) ಮನಸ್ಸಿಗೆ ಹಿತವಾದ ಮಾ

ಶೋಭಿಸುತ್ತದೆಯೇ! (ಎಂದಿಗೂ ಶೋಭಿಸಲಾರದೆಂಬ ಭಾವವು) ಪುತ್ರ ರತ್ನವಂ ಪಡೆಯದವಳು ಭುವಿಯೊಳು ಒಬ್ಬ ಹೆಂಗಸಾಗಿರ್ಪಳೇ! ಹೇಳೆನಲು ಲಜ್ಜೆಯಿಂದ ತಲೆವಾಗಿ ತನ್ನ ಪ್ರಾಣಕಾಂತನಿಗೆ ಈ ರೀತಿಯಾಗಿ ಪೇಳಿದಳು ||೧೮|| ಜಾನಕಿಯು ಎಲೈ ಪ್ರಾಣವಲ್ಲಭನೇ! ನೀನು ಈ ರೀತಿಯಿಂದ ಹೇಳಿದ್ದರಿಂದ ನನಗೇನೂ ಕೊರತೆಯಿಲ್ಲ. ಪುತ್ರವತಿಯಾಗುವುದು ಜನ್ಮಾಂತರದ ಸತ್ಕರ್ಮ ಫಲಪಾಕವು ಅಲ್ಲವೆ? ಪೂರ್ವಜನ್ಮದಲ್ಲಿ ಭಕ್ತಿಪುರಸ್ಸರವಾಗಿ ತಾನು ದೇವತಾರಾಧನೆಯನ್ನು ಮಾಡಿದ ಹೊರ್ತು ಪುತ್ರ ಸಂತಾನವಾಗಲಾರದು. ಹಾಗಿಲ್ಲದೆ ವಾಮನನು (ಕುಳ್ಳಾಗಿರುವವನು) ಅತಿ ಎತ್ತರದಲ್ಲಿರುವ ವೃಕ್ಷದ ಫಲವನ್ನು ಹೊಂದಲು ಬಯಸಿದಂತೆಯೂ, ಮೂಕನು ಮಾತನಾಡಲು ಇಚ್ಛಿಸಿದಂತೆಯೂ, ಹಿಂದಣ ಜನ್ಮದಲ್ಲಿ ಯಾವ ದೇವತಾರಾಧನೆಯೂ ಮಾಡದೆ ಪುತ್ರವತಿಯರಾಗಲು ಬಯಸಿದರೆ ಆದಾರೆಯೇ? ಎಂದಿಗೂ ಆಗಲಾರರು. ಆದ್ದರಿಂದ ನಾನು ವೃಥಾ ಚಿಂತಿಸುವುದರಿಂದ ಫಲವೇನಾದೀತು? ಪರಿಮಳದಿಂದ ಶೋಭಿಸುವ ಲತಾಕುಟ್ಮಲದಂತೆ (ಬಳ್ಳಿಯ ಮಧ್ಯಭಾಗದಲ್ಲಿರುವ ಸುವಾಸನೆಯುಳ್ಳ ಮೊಗ್ಗಿನಂತೆ) ಶ್ರೇಷ್ಠವಾದ ಗರ್ಭಲಾಂಛನವನ್ನು ಹೊಂದುವುದು ಮೇದಿನಿಯಲ್ಲಿ ಅಂಗನೆಯರಿಗೆಲ್ಲರಿಗೆ ಸುಲಭಸಾಧ್ಯವಾದೀತೆ?||೧೯|| ಗೃಹದಲ್ಲಿ ಕಂದನಾಡುವ ಬಾಲಕ್ರೀಡೆಗಳನ್ನು ನೋಡಿ ತೊದಲೊಂದಿದ ಇನಿವಾತ (ಇಂಪಾದಮಾತನ್ನು) ಅಧಿಕವಾಗಿ ಕೇಳಿ, ಮು

ಳ್ಸುಮುದ್ದಿನಮುದ್ದೆ | ಯಂದದಂಗವನೆತ್ತಿಕೊಂಡುನಳಿತೋಳ್ಗಳಿಂದಪ್ಪಿಕೆಂಗುರುಳ್ಗಳೆಸೆವ || ಮುಂದಲೆಯಕಂಪನಾಘ್ರಾಣಿಸಿ ತೊರೆದಜೊಲ್ಲ | ಕೆಂದುಟಿಯಬಾಯ್ದೆರೆಯನ್ನೈದೆ ಚುಂಬಿಸಿ ಸೊಗಸುಗುಂದದಾಯೆಂದು ಪಂಚೇಂದ್ರಿಯ ಪ್ರೀತಿಯಂಪಡೆವ ರಿನ್ನಾವಕೃತರೊ || ೨೦ || ತೆಲ್ದೋಸರಸಿಮೇಲುದಂಸೆಳೆವಕಮಲಮಂ | ಪೋಲ್ವಕಣ್ಗೊನೆಯಿಂದತಾಯಮೊಗಮುಂನೋಳ್ಪ | ಕಾಲ್ಬುದಿಗಳಂಬಿದಿರಿತಡವರಿಸಿಕೈವಿಡಿವಬಾಲಂಗೆಮೋಹದಿಂದ || ಜೋಲ್ದೊಲವಹಾರಮಂಸರಿದುಮೇಲುದಸಾರ್ಚಿ | ಪಾಲ್ದೊರೆವಮೊಲೆಯೂಡಿಕೂಡೆತೊಟ್ಟಲೊಳಿಟ್ಟು | ಸಾಲ್ದಸೈಪಿಂದಜೋಗುಳವಾಡಿತೂಗುವಳದೇಂಸುಕೃತಿಯೋಧರೆಯೊಳು ||೨೧|| ಇಂ

ತನ್ನು (ಉರ_ಬಹಳವಾಗಿ, ಕೇಳ್ಸು-ಆಲಿಸಿ, ಮುದ್ದಿನ_ಪ್ರೇಮದ, ಮುದ್ದೆಯಂದದ_ಉಂಡೆಯಂತಿರುವ), ಮುದ್ದೆಯಹಾಗಿರುವ ಅಂಗವನು-ದೇಹವನ್ನು, (ಮೈಯನ್ನು) ಎತ್ತಿಕೊಂಡು_ಕರೆದುಕೊಂಡು, ನಳಿತೋಳ್ಗಳಿಂದ - ಮನೋಹರವಾದ ತೋಳುಗಳಿಂದ, ಅಪ್ಪಿ-ತಬ್ಬಿಕೊಂಡು, (ಆಲಿಂಗನೆಯಂ ಮಾಡಿಕೊಂಡು) ಕೆಂಗುರುಳ್ಗಳೆಸೆವ_ಕೆಂಪಾಗಿರುವ ಮುಂಗುರುಳ್ಗಳಿಂದ ಶೋಭಿಸುವ, ಮುಂದಲೆಯ-ಮುಂದಿನ ತಲೆಯ, (ನೆತ್ತಿಯ ಭಾಗದ) ಕಂಪನು_ಒಳ್ಳೆಯ ವಾಸನೆಯನ್ನು, ಆಘ್ರಾಣಿಸಿ_ವಾಸನೆಯನ್ನು ನೋಡಿ, ತೊರೆದ-ಸ್ರವಿಸುತ್ತಿರುವ, (ಸುರಿಯುತ್ತಿರುವ) ಜೊಲ್ಲ_ಜೊಲ್ಲುರಸವುಳ್ಳ ಲಾಲಾಜಲವುಳ್ಳ), ಕೆಂದುಟಿಯ_ಕೆಚ್ಚನೆಯತುಟಿಯ, ಬಾಯ್ದೆರೆಯನು-ಬಾಯಿಯನ್ನು (ತುಟಿ) ಬಿಟ್ಟುಕೊಂಡಿರುವ ಮಗುವು, ಐದೆ_ಹತ್ತಿರಕ್ಕೆಬರಲಾಗಿ, ಚುಂಬಿಸಿ-ಮುದ್ದಾಡಿ, ಸೊಗಸುಗುಂದದೆ_ಅಲಂಕಾರವು ಕಡಿಮೆಯಾಗದಂತೆ, ಆಯಂದು_ಆಹಾ ಎಂಬದಾಗಿ, ಪಂಚೇಂದ್ರಿಯ_ತ್ವಕ್‌ಚಕ್ಷುಗಳೇ ಆದಿಯಾದ ಪಂಚೇಂದ್ರಿಯಗಳಿಗೆ, ಪ್ರೀತಿಯಂ_ಸಂತೋಷವನ್ನು, (ಆನಂದವನ್ನು) ಪಡೆವರು_ಉಂಟಾಗತಕ್ಕವರು, (ಹೊಂದತಕ್ಕವರು) ಇನ್ನಾವ_ಇನ್ನುಯಾವರೀತಿಯಾದ, ಕೃತರೊ_ಪೂರ್ವಜನ್ಮ ಫಲವುಳ್ಳವರೋ, ಎಂದಳು_ಎಂಬದಾಗಿ ಹೇಳಿದಳು.

ಅ|| ವಿ|| ಇನಿದು+ಮಾತು=ಇನಿವಾತು, ವಿ. ಪೂ. ಕ. ಬಾಲರ+ಕ್ರೀಡೆ=ಬಾಲಕ್ರೀಡೆ, ಷ. ತ. ಪಂಚೇಂದ್ರಿಯಗಳು-ತ್ವಕ್_ಚಕ್ಷು, ಶ್ರೋತ್ರ, ರಸನ, ಘ್ರಾಣ, ವಾಯುಪಂಚಕ-ಪ್ರಾಣ, ಅಪಾನ, ಉದಾನ, ವ್ಯಾನ, ಸಮಾನ ||೨೦||

ಟೀ|| ತೆಲ್ದು_ತೆಗೆದುಕೊಂಡು, ಓಸರಿಸಿ_ಬಾಗಿಸಿ, ಅಥವಾ ಬೇರೆಯಾಗಿಮಾಡಿ (ಓರೆಯಾಗಿಮಾಡಿ) ಮೇಲುದಂ-ಮೈಮೇಲಿರುವ ವಸ್ತ್ರವನ್ನು, (ಮೇಲು ಹೊದಿಕೆಯನ್ನು) ಸೆಳೆವ-ಬಲಾತ್ಕಾರಮಾಗಿ ಎಳೆಯುವ. ಕಮಲಮಂ-ತಾವರೆಯಪುಷ್ಪವನ್ನು, ಪೋಲ್ವ-ಪೋಲುತ್ತಿರುವ (ಸಾಮ್ಯವಾಗುವ) ಕಣ್ಗೊನೆಯಿಂದ_ಕಡೆಗಣ್ಣಿನ ನೋಟದಿಂದ, ತಾಯ-ಜನನಿಯ, ಮೊಗಮಂ_ಆಸ್ಯವನ್ನು, ನೋಳ್ಪ-ಈಕ್ಷಿಸುವಂಥ, ಕಾಲ್ಬುದಿಗಳಂ_ಪಾದಗಳ ತುದಿಗಳನ್ನು,ಬಿದಿರಿ_ಝಾಡಿಸಿ, (ಒದರಿ) ತಡವರಿಸಿ_ಕಣ್ಣುಮುಚ್ಚಿಕೊಂಡು ಹುಡುಕಿ, ಕೈವಿಡಿದು_ಕರವನ್ನು ಹಿಡಿದುಕೊಂಡು, ಬಾಲಂಗೆ_ಆ ಮಗುವಿಗೆ, (ಆ ಮಗುವಿಗೆ) ಮೋಹದಿಂದ_ಆನಂದದಿಂದ, (ಹರ್ಷದಿಂದ) ಜೋಲ್ದು-ಬಾಗಿಕೊಂಡು, ಒಲೆವ_ಅಲ್ಲಾಡುವಂಥ, ಹಾರಮಂ-ಮುಕ್ತಾಹಾರವನ್ನು, (ಮುತ್ತಿನ ಮಾಲೆಯನ್ನು) ಸರಿದು_ಓರೆಯಾಗಿಮಾಡಿಕೊಂಡು, ಮೇಲುದ_ಮೇಲಿನ ಹೊದಿಕೆಯನ್ನು, (ಸೀರೆಯ ಸೆರಗನ್ನು) ಸಾರ್ಚಿ-ಮರೆಯಾಗಿ ಮಾಡಿಕೊಂಡು, ಪಾಲ್ದೊರೆವ-ಹಾಲಿನಿಂದ ತುಂಬಿರುವ, ಮೊಲೆಯೂಡಿ-ಹೊಟ್ಟೆಗೆಕೊಟ್ಟು, (ಮೊಲೆಯನ್ನು ಊಡಿಸಿ) ತೊಟ್ಟಲೊಳು_ತೊಟ್ಟಲಿನಲ್ಲಿ ಇಟ್ಟು ಮಲಗಿಸಿ, ಸಾಲ್ದ_ಸಾಲದಿರುವ, (ಮನವೊಪ್ಪದ) ಸೈಪಿಂದೆ_ಹರ್ಷದಿಂದ, (ಆನಂದದಿಂದ) ಜೋಗುಳವಾಡಿ_ನಿದ್ರೆಯು ಬರುವ ಹಾಡನ್ನು ಹಾಡಿ, ತೂಗುವಳು_ತೂಗುತಕ್ಕವಳು, ಧರೆಯೊಳು_ಸೃಷ್ಟಿಯಲ್ಲಿ. ಅದೇಂಸುಕೃತಿಯೊ-ಅದು ಇನ್ನೆಂತಹ ಪುಣ್ಯಶಾಲಿಯೋ, ಎಂದು-ಎಂಬದಾಗಿ, ಪೇಳ್ದಳ್_ಹೇಳಿದವಳಾದಳು ||

ಅ|| ವಿ|| ಮುಕ್ತಾ-ತ್ಸ. ಮುತ್ತು-ದ್ಭ. ಜೋಗುಳವಂ+ಪಾಡಿ=ಜೋಗುಳವಾಡಿ, ಕ್ರಿ. ಸ. ||೨೧||

ಟೀ|| ಇಂತು_ಈಪರಿಯಾಗಿ, ಸುತರಿಲ್ಲದ_ಪುತ್ರರಿಲ್ಲದ, (ಮಕ್ಕಳಿಲ್ಲದ) ಆಸರದೊಳು_ಶ್ರಮೆಯಲ್ಲಿ.(ಕೊಂದರೆಯಲ್ಲಿ)

ದ್ದಿನ ಮುದ್ದೆಯಂತಿರುವ ಅಂಗವನ್ನು ಎತ್ತಿಕೊಂಡು ಮನೋಹರವಾದ ಬಾಹುಗಳಿಂದ ಅಪ್ಪಿಕೊಂಡು ಕೆಚ್ಚನೆಯ ಕೂದಲುಗಳಿಂದೆಸೆವ ಮುಂದಲೆಯ ಸುವಾಸನೆಯನ್ನು ಆಘ್ರಾಣಿಸಿ, ಜೊಲ್ಲುನೀರಿನಿಂದ ಕೂಡಿರುವ ಕೆಂದುಟಿಯುಳ್ಳ ಬಾಯಿಯನ್ನು ತೆರದುಕೊಂಡಿರುವ ಮಗುವು ಬರಲಾಗಿ, ಚುಂಬಿಸಿ ಸೊಗಸು ಗುಂದದಂತೆ ಹಾ ಎಂಬದಾಗಿ ಪಂಚೇಂದ್ರಿಯಗಳಿಗೂ ಆನಂದವನ್ನು ಹೊಂದುವವರು ಇನ್ನು ಎಂತಹ ಪುಣ್ಯಶಾಲಿಗಳೋ ಕಾಣೆನು ಆರೀತಿಯಾದ ಆನಂದವನ್ನು ನಾನೆಂದಿಗೆ ಪಡೆವೆನೊ ಎಂದು ಲಜ್ಜಾನ್ವಿತಳಾಗಿ ಚಿಂತಿಸಿರ್ದಳು || ೨೦ || ಪುತ್ರವತಿಯಾದವಳು ಮಕ್ಕಳು ರೋದಿಸಿದಾಗ ಮೇಲಿನ ಸೆರಗನ್ನು ವಾರೆಮಾಡಿ ಸ್ತನ್ಯವನ್ನು ಕೊಡುತ್ತಿರುವಲ್ಲಿ ಕಣ್ಗೊನೆಯಿಂದ ತಾಯಿಯ ಮೊಗವನ್ನು ಈಕ್ಷಿಸುವ ಕಾಲ್ತುದಿಗಳಂ ಝಾಡಿಸುವ ತಡವರಿಸಿ ಕೈಯನ್ನು ಹಿಡಿದುಕೊಳ್ಳುವ ಬಾಲಂಗೆ ಮೋಹದಿಂದ ಜೋಲಿ (ಬಗ್ಗಿಕೊಂಡು ಚಲಿಸುವ ಮುಕ್ತಾಹಾರವನ್ನು ಓರೆಮಾಡಿ ಸೆರಗನ್ನು ಮುಚ್ಚಿಕೊಂಡು ಹಾಲಿನಿಂದುಕ್ಕುತ್ತಿರುವ ಸ್ತನ್ಯವನ್ನೂಡಿಸಿ ನಿದ್ರೆಯ ಹಾಡನ್ನು ಹೇಳಿ ಸುಖನಿದ್ರೆಯನ್ನು ಹೊಂಗಿಸಿ

ತುಸುತರಿಲ್ಲದಾಸರೊಳವರ್ಗಳಿೀರ್ವರು । ಚಿಂತಿಸುವಸಮಯಕೆವಸಿಷ್ಠಮುನಿಪತಿಬಂದು । ಸಂತಾನದಭ್ಯುದಯಮಾದಪುದು ಮುಂದೆನಿಮಗೆಂದುಸುರೆಪ್ರೀತಿಯಿಂದ ॥ ಸಂತೈಸೆಬಳಿಕರಘುಕುಲಸಾರ್ವಭೌಮನ । ತ್ಯಂತಹರುಷಿತನಾಗಿರಲ್ಕೆತಲೆದೋರಿತು ವ । ಸಂತಕಾಲಂವಿರಾಜಿತರಸಾಲಂವಿರಹಿಹೃದಯಶೂಲಂತಾನೆನೆ॥ ೨೨ ॥ಅರಸಂಚೆಸರಸಿಯಂಕಲಪಿಕಂತಳಿತಮಾ । ಮರಂಚಕೋರತತಿಚಂದ್ರಿಕೆಯನಳಿಕುಲಂ । ಬಿರಿಮುಗುಳನರಗಿಳಿಬನಂಗಳಂವಿರಹಿಗಳ್ಕೂರ್ಪರಂಸಾರ್ದೆಸೆಯಲು ॥ ಧರೆಯೊಳೆಳೆಗಾಳಿಯಂ

ಅವರ್ಗಳ್-ಆ ದಂಪತಿಗಳಿಬ್ಬರೂ (ಶ್ರೀ ಸೀತಾರಾಮರು) ಚಿಂತಿಸುವ-ಆಲೋಚಿಸುತ್ತಿರುವ (ದುಃಖಿಸುತ್ತಿರುವ), ಸಮಯಕೆ-ವೇಳೆಗೆ, (ಕಾಲಕ್ಕೆ ಸರಿಯಾಗಿ) ವಸಿಷ್ಠಮುನಿ-ಕುಲಪುರೋಹಿತನಾದ ವಸಿಷ್ಠಮಹರ್ಷಿಗಳು, ಬಂದು-ಬಂದವನಾಗಿ, ಸಂತಾನದ-ವಂಶಾಭಿವೃದ್ಧಿಯ, (ಮಕ್ಕಳ) ಅಭ್ಯುದಯಂ-ಉಂಟಾಗೋಣವು, ಮುಂದೆ-ಮುಂದಕ್ಕೆ ನಿಮಗೆ-ನಿಮ್ಮಗಳಿಗೆ, ಆದಪುದು-ಆಗುತ್ತದೆ, (ವಂಶಾಭಿವೃದ್ಧಿಯಾಗುವದು) ಎಂದು-ಎಂಬದಾಗಿ ಹೇಳಿ, ಸಂತೈಸೆ-ಮನಸ್ಸಮಾಧಾನವನ್ನು ಪಡಿಸಲು, ಪ್ರೀತಿಯಿಂದ-ಸಂತೋಷದಿಂದ, ವಿಶ್ವಾಸದಿಂದ, ಉಸುರೆ-ಪೇಳಲಾಗಿ, ಬಳಿಕ-ತರುವಾಯ, ರಘುಕುಲ-ರಘುವಂಶಕ್ಕೆ, ಸಾರ್ವಭೌಮನು-ಭೂಮಂಡಲಾಧಿಪನಾದ ಶ್ರೀ ರಾಮಚಂದ್ರನು, ಅತ್ಯಂತಹರ್ಷಿತನಾಗಿ-ಅತ್ಯಧಿಕಮಾದ ಮನಸ್ಸಂತೋಷವುಳ್ಳವನಾಗಿ, ಇರಲ್ಕೆ-ಇರುತ್ತಿರಲಾಗಿ, ವಿರಾಜಿತ-ಕಾಂತಿಗೊಳಿಸಲ್ಪಟ್ಟ, ರಸಾಲಂ-ಮಾವಿನ ತರುವುಳ್ಳ, ವಸಂತಕಾಲಂ-ವಸಂತಕಾಲವು, (ಚೈತ್ರವೈಶಾಖಮಾಸವು) ತಾಂ-ಅಂತಹ ವಸಂತಕಾಲವು, ವಿರಹಿ-ಕಾಮುಕರಾದ ಜನಗಳ, ಹೃದಯ-ಮನಸ್ಸಿನ, (ಎದೆಗೆ) ಶೂಲಂ-ಶೂಲಾಯುಧಪ್ರಾಯವಾದದ್ದು, ಎನೆ-ಎನ್ನುವರೀತಿಯಿಂದ, ತಲೆದೋರಿತು-ತಲೆಗಾಣಿಸಿಕೊಂಡಿತು, ಪ್ರಾಪ್ತವಾಯಿತು॥

ಅ॥ ವಿ॥ ಸರ್ವಭೂಮಿಗೂ ಒಡೆಯನು, ಸಾರ್ವಭೌಮ (ಚಕ್ರವರ್ತಿ) ರಸಾಲ-ಮಾವಿನಮರ, ಕಬ್ಬು. ಶ್ರೀಗಂಧ, ರಸಿಕ, ಜಾಣ. ಷಡೃತುಗಳು-ವಸಂತರುತು, ಗ್ರೀಷ್ಮರುತು, ವರ್ಷರ್ತು, ಶರದೃತು, ಹಿಮಂತರುತು, ಶಿಶಿರರುತು॥ ಹೃದಯ॥ ತ್ಸ. ಎದೆ-ದ್ಭ. ತಲೆ+ತೋರು=ತಲೆದೋರು, ದಕಾರಾದೇಶ ಸಂ ॥ ಸಪ್ತಸಂತಾನಗಳು-ತಟಾಕ, ಧನನಿಕ್ಷೇಪ, ಬ್ರಹ್ಮಸ್ಥಾಪನ, ದೇವಾಲಯ ಪ್ರತಿಷ್ಠೆ, ವನಪ್ರತಿಷ್ಠೆ, ಸದ್ಗ್ರಂಥರಚನ, ಪುತ್ರೋತ್ಪಾದನ, ಸಪ್ತಲೋಕಗಳು-ಭೂ, ಭುವ, ಸ್ವ, ಮಹ, ಜನ, ತಪ, ಸತ್ಯ ॥ ೨೨ ॥

ಟೀ॥ ಪರಿವೃತ-ಆವರಿಸಿಕೊಂಡಿರುವ, (ವ್ಯಾಪ್ತವಾಗಿರುವ) ವಸಂತಕಾಲದೊಳ್-ಬೇಸಿಗೆಯಕಾಲದಲ್ಲಿ, (ಚೈತ್ರವೈಶಾಖಮಾಸಗಳಲ್ಲಿ) ಅರಸಂಚೆ-ರಾಜಹಂಸಗಳು, (ರಾಜಮರಾಳಗಳು) ಸರಸಿಯಂ-ಸರೋವರಗಳನ್ನು, ಕಲ-ಅವ್ಯಕ್ತಮಧುರಧ್ವನಿಮಾಡುತ್ತಿರುವ, ಪಿಕಂ-ಕೋಕಿಲಪಕ್ಷಿಗಳು, ತಳಿತ-ಪಲ್ಲವಿಸಿರುವ, ಮಾಮರನಂ-ಚೂತವೃಕ್ಷವನ್ನು, (ಮಾವಿನ ಮರವನ್ನು) ಚಕೋರತತಿ-ಬೆಳದಿಂಗಳ ಹಕ್ಕಿಗಳ ಸಮುದಾಯವು, ಚಂದ್ರಿಕೆಯುಂ-ಚಂದ್ರಕಿರಣವನ್ನು, (ಬೆಳ್ದಿಂಗಳನ್ನು) ಅಳಿಕುಲಂ-ಭೃಂಗಗಳ ಸಮುದಾಯವು, ಬಿರಿಮುಗಳಂ-ವಿಕಶಿಸಿದ ಕುಸುಮಗಳನ್ನು, ಅರಗಿಳಿ-ರಾಜಗಿಣಿಗಳು, ಬನಂಗಳಂ-ಉದ್ಯಾನವನಗಳನ್ನು, ವಿರಹಿಗಳ್-ಸ್ತ್ರೀಯನ್ನು ಅಗಲಿ ಬಳಲುವರು, (ಕಾಮುಕನು) ಕೂರ್ಪರಂ-ವಿಟಗಾರರನ್ನು, (ಪ್ರೀತಿಯುಳ್ಳವರನ್ನು)

ತೊಟ್ಟಲಿನಲ್ಲಿಟ್ಟು, ತೃಪ್ತಿಯಿಲ್ಲದೆ ಪುನಹ ಜೋಗುಳವಂಪೇಳಿ ಆನಂದವನ್ನುಪಡುವಳು ಭೂಮಿಯಲ್ಲಿ ಆದಿನ್ನೆಂತಹ ಸುಕೃತಶಾಲಿನಿಯೋ ತಿಳಿಯದು॥ ೨೧ ॥ಹೀಗೆ ಶ್ರೀಸೀತಾರಾಮರೀರ್ವರೂ ಕೆಲವುಕಾಲ ಅಪುತ್ರವಂತರಾಗಿ ಅತ್ಯಧಿಕಮಾದ ಶೋಕ ಸಮುದ್ರದಲ್ಲಿ ಮುಳುಗಿರಲು ಆ ಸಮಯಕ್ಕೆ ಸರಿಯಾಗಿ ಕುಲಗುರುಗಳಾದ ವಸಿಷ್ಠಮಹರ್ಷಿಯು ಬಂದು ಆ ದಂಪತಿಗಳು ದಾಂಪತ್ಯಾನುಕೂಲರಾಗಿ ಚಿಂತಿಸುವ ವಿಷಯವನ್ನು ಯೋಚಿಸಿ ನಿಮಗೆ ಪುತ್ರಸಂತಾನಾಭಿ ವೃದ್ಧಿಯಾಗುವುದು ನೀವು ವೃಥಾ ಚಿಂತಿಸುವ ನಿಮಿತ್ತವಿಲ್ಲವೆಂಬದಾಗಿ ಅವರೀರ್ವರನ್ನೂ ಸಂತೈಸಲು ಬಳಿಕ ರಘುಕುಲ ಸಾರ್ವಭೌಮನಾದ ಶ್ರೀರಾಮಚಂದ್ರನು ಅತ್ಯಂತ ಹರ್ಷಿತನಾಗಿ ಇರುತ್ತಿರಲು, ವಿರಾಜಿತಮಾದ ರಸಾಲ ವೃಕ್ಷಗಳುಳ್ಳ ವಸಂತಕಾಲವು ವಿರಹಿಗಳ ಹೃದಯಶೂಲವೋ ಎಂಬಂತೆ ತಲೆದೋರಿತು. ಆಗ ಸೀತಾರಾಮರಿಬ್ಬರೂ ಏಕಮನಸ್ಕರಾಗಿ ತಮ್ಮ ಕುಲಪುರೋಹಿತರಾದ ಮಹರ್ಷಿಗಳಿಗೆ ಅರ್ಘ್ಯಪಾದ್ಯಾದಿಗಳಿಂ ಸತ್ಕರಿಸಿ, ಸೇವೆಯಂಗೈಯ್ಯಲು, ಬಳಿಕ ವಸಿಷ್ಠಮುನೀಂದ್ರನು ಸಾದರದೊಡನೆ ಮುಂದಕ್ಕೆ ತನ್ನಾಶ್ರಮಂ ಕುರಿತು ತೆರಳಿದನು ॥ ೨೨ ॥ ಆಗ ಪ್ರಾಪ್ತಮಾಗಿರ್ದ ವಸಂತಕಾಲದಲ್ಲಿ ರಾಜಹಂಸಗಳು ಪದ್ಮಾಕರಗಳನ್ನು, ಪಂಚಮ ಸ್ವರಗೈವ ಕೋಕಿಲಂಗಳು ಚಿಗುರಿದ ರಸಾಲ ತರುಗಳನ್ನು, ಚಕೋರಗಳ ಸಮುದಾಯವು ಬೆಳದಿಂಗಳನ್ನು, ಭ್ರಮರಗಳ ಕುಲವು ವಿಕಶಿಸಿದ ಪುಷ್ಪಗಳನ್ನು, ಅರಗಿಳಿಗಳ ಸಮೂಹವು ಫಲದಿಂದ ನಿಬಿಡಮಾದ ಉದ್ಯಾನವನಗಳನ್ನು,ವಿರಹಿಗಳ ಸಮುದಾಯವು ವಿಟಪುರುಷರನ್ನೂ, ಹೊಂದಿದವರಾಗಿ ನಲಿದಾಡುತ್ತಿರಲಾಗಿ ಪೃಥ್ವಿಯಲ್ಲಿ ಜನರು ತಂಗಾಳಿಗೆ ಮೈತೆತ್ತು ತಣ್ಣೀರನ್ನು ಪಾನಮಾಡುತ್ತ ವಿಶಾಲ ಛಾಯಾಪ್ರದಮಾದ ಮರದ ನೆಳಲುಗಳನ್ನು ಸೇರುತ್ತ, ಹರ್ಷಗೊಳ್ಳುತ್ತಿದ್ದರು. ಈ ರೀತಿಯಾಗಿ ವಸಂತ ಋತುವು ತನ್ನ

ಶೀತಳದವಾರಿಯಂ | ತರುಗಳನೆರಳ್ಗಳಂಸೇರತೊಡಗಿತ-ಜನಂ | ಪರಿವೃತವಸಂತಕಾಲದೋಲಂತಿರಲ್ಬಳಿಕಸೀತೆರುತುಮತಿಯಾದಳು ||೨೩|| ಮಲ್ಲಿಕಾಸ್ಮಿತರುಚಿರೆಕುಂದಕುಟ್ಮಲರದನೆ | ಪಲ್ಲವಾಧರೆಭೃಂಗಕುಂತಳೆಕುಸುಮಗಂಧಿ | ಸಲ್ಲಲಿತಕೋಕಿಲಾಲಾಪೆ ಚಂಪಕವರ್ಣೆಮೃದುಮಧುರಕೀರವಾಣೀ || ಫುಲ್ಲಲೋಚನೆಚಾರುಚಂದ್ರಬಿಂಬಾನನೆಯು | ಸಲ್ಲಲಿತಗಾತ್ರಿಜಾನಕಿವಿರಾಜಿಸಿದಳ್ಸಮುಲ್ಲಾಸದಿಂ | ಪುಷ್ಪವತಿಯಾಗಿವಿದಳಿತವಸಂತಲಕ್ಷ್ಮಿಯತೆರದೊಳು ||೨೪|| ಮೊಡವಿನಮೂಡಿದನೊಗಂಸೊಗಡು

---

ಸಾರ್ದು-ಸೇರಿದವರಾಗಿ, ಎಸೆಯಲು_ಆನಂದಪಡುತ್ತಿರಲಾಗಿ, ಧರೆಯೊಳು_ಭೂಮಂಡಲದಲ್ಲಿ, ಜನಂ_ಜನಗಳು, ಎಳೆಗಾಳಿಯಂ-ತಂಗಾಳಿಯನ್ನು, (ತಣ್ಣಗೆ ಬೀಸುವ ಗಾಳಿಯನ್ನು) ಶೀತಳದ_ಶೈತ್ಯದಿಂದೊಡಗೂಡಿದ, ವಾರಿಯಂ_ಜಲವನ್ನು, ತರುಗಳ_ವೃಕ್ಷಗಳ, ನೆರಳ್ಗಳಂ - ನೆಳಲುಗಳನ್ನು, (ಛಾಯೆಯನ್ನು) ಸೇರತೊಡಗಿತು - ಆಶ್ರಯಮಾಡಲು ಪ್ರಯತ್ನಮಾಡಿದರು, ಇಂತು_ಈ ಪ್ರಕಾರವಾಗಿ, ಇರೆ-ಶೋಭಿಸುತ್ತಿರಲು, ಬಳಿಕ - ಅನಂತರದಲ್ಲಿ, ಸೀತೆ - ಜಾನಕಿಯು, ರುತುಮತಿಯಾದಳು - ಪುಷ್ಪವತಿಯಾದಳು.

ಅ|| ವಿ|| ಅರಸು + ಅಂಚೆ = ಅರಸಂಚೆ, ಉಕಾರ ಲೊ. ಸಂ. ಅಂಚೆ ದ್ಭ. ಹಂಸ ತ್ಸ. ಅಳಿಯಕುಲ = ಅಳಿಕುಲ ಷ. ತ. ಬಿರಿದ+ಮುಗುಳ್=ಬಿರಿಮುಗುಳ್, ವಿ. ಪೂ. ಕ. ತರು_ಗಿಡ, ತುರು_ಆಕಳು) ವಾರಿ_ನೀರು, ನಾರಿ_ಹೆಂಗಸು, ವಸಂತ ತ್ಸ. ಬಸಂತ ದ್ಭ. ಬಿಳಿತು+ತಿಂಗಳು=ಬೆಳದಿಂಗಳು, ಜ್ಯೋತ್ಸ್ನಾ ತ್ಸ. ಜೊನ್ನ ದ್ಭ ||೨೩||

ಟೀ|| ಸೀತೆ-ರುತುಮತಿಯಾದ ಸೀತಾದೇವಿಯು, ಮಲ್ಲಿಕಾ_ಮಲ್ಲಿಗೆಯ ಕುಸುಮದಂತೆ, ಸ್ಮಿತ_ಮಂದಹಾಸದಿಂದ, ರುಚಿರೆ-ಶೋಭಿತಳಾದ, ಕುಂದ-ಮೊಲ್ಲೇಹೂವಿನ, ಕುಟ್ಮಲ_ಮೊಗ್ಗಿನೋಪಾದಿಯಲ್ಲಿ, ರದನೆ - ದಂತಪಜ್ಙ್ತಿಗಳಿಂದ ಸುಂದರಳಾದ, ಪಲ್ಲವಾಧರೆ_ಚಿಗುರಿನಂತಿರುವ ಚೆಂದುಟಿಯುಳ್ಳವಳಾದ, ಭೃಂಗ-ದುಂಬಿಯಂತೆ ಕಪ್ಪುಬಣ್ಣವುಳ್ಳ, ಕುಂತಳೆ-ಅಲಕಾವಳಿಗಳುಳ್ಳ, ಕುಸುಮಗಂಧಿ- ಹೂಗಳಂತೆ ಸುಗಂಧವನ್ನುಳ್ಳ, ಸಲ್ಲಲಿತ - ಮನೋಹರಮಾದ, ಕೋಕಿಲ - ಪರಪುಟ್ಟಗಳಂತೆ, (ಕೋಗಿಲೆಗಳ) ಆಲಾಪೆ - ಧ್ವನಿಯೋಪಾದಿಯಲ್ಲಿ ಧ್ವನಿಯುಳ್ಳ, ಚಂಪಕವರ್ಣೆ - ಚಂಪಕಾಕುಸುಮದಂತೆ ಮೈಕಾಂತಿಯುಳ್ಳ, ಮೃದು_ಮನೋಹರಮಾದ, ಮಧುರ-ಇನಿದಾದ (ಸವಿಯಾದ) ಕೀರವಾಣಿ-ಶುಕಗಳ ಮಾತಿನಂತೆ ಆಲಾಪಗಳುಳ್ಳ, (ಮಾತಾಡುವಿಕೆಯುಳ್ಳ), ಫುಲ್ಲ_ವಿಕಸಿತವಾದ ಪುಷ್ಪದಹಾಗೆ, ಲೋಚನೆ-ನೇತ್ರಗಳುಳ್ಳ, ಚಾರು_ಮನೋಹರವಾದ, ಚಂದ್ರಬಿಂಬ-ಚಂದ್ರಮಂಡಲದಹಾಗೆ ಗುಂಡಾದ, ಆನನೆ_ಮುಖಪದ್ಮವುಳ್ಳವಳಾದ, ಸಲ್ಲಲಿತ_ಅತಿ ಮನೋಹರವಾದ, ಗಾತ್ರಿ_ದೇಹವುಳ್ಳವಳಾದ, (ಅಂಗವುಳ್ಳವಳಾದ) ಜಾನಕಿ-ಜನಕರಾಯನ ಪುತ್ರಿಯಾದ ಸೀತೆಯು, ಪುಷ್ಪವತಿಯಾಗಿ_ರುತುಮತಿಯಾಗಿ, ಸಮುಲ್ಲಾಸದಿಂ-ಅತ್ಯಾನಂದದಿಂದ, ವಿದಳಿತ_ತುಂಬಿದ (ಬಿರಿದ, ಸೀಳಿದ) ಅಥವಾ ಶೋಭಿಸುವ, ವಸಂತ_ವಸಂತರುತುವೆಂಬುವ, ಲಕ್ಷ್ಮಿಯ_ಲಕ್ಷ್ಮೀದೇವಿಯ, ತೆರದೊಳು_ರೀತಿಯಿಂದ, ವಿರಾಜಿಸಿದಳ್_ಶೋಭಿಸಿದಳು (ಕಾಂತಿಯನ್ನು ಹೊಂದಿದಳು).

ಅ|| ವಿ|| ಚಂದ್ರನ+ಬಿಂಬ=ಚಂದ್ರಬಿಂಬ, ಷ. ತ. ಕುಂದವು, ಕುಟ್ಮಲವು-ಕುಂದಕುಟ್ಮಲಗಳ್, ದ್ವಿ. ದ್ವಂ. ಸ. ಪಲ್ಲವದಂತೆ ಅಧರವುಳ್ಳವಳು-ಪಲ್ಲವಾಧರೆ, ಉ. ಪೂ. ಬಹು ಸ. ಭೃಂಗಕುಂತಳೆ, ಕೋಕಿಲಾಲಾಪೆ, ಕೀರವಾಣಿ ಇವುಗಳು ಉಪಮಾನ, ಪೂ. ಬಹು ಸ. ||೨೪||

ಟೀ|| ರುತುಮತಿಯಾಗಲು-ಪುಷ್ಪವತಿಯಾಗಿರಲು, ಅವನಿಸುತೆಗೆ_ಭೂಮಿಜೆಯಾದ ಸೀತಾದೇವಿಗೆ, ಮೊಡವಿ_ಪ್ರಾಯದ

---

ಋತುಧರ್ಮವನ್ನು ಸಾಧಿಸುತ್ತಿರಲು ಜಾನಕಿಯು ರುತುಮತಿಯಾದಳು ||೨೩|| ಆಗ ಮಲ್ಲಿಕಾಪುಷ್ಪದಂತೆ ಮಂದಹಾಸದಿಂದ ಕೂಡಿ ಸುಂದರಳಾಗಿ, ಕುಂದಕುಟ್ಮಲದ ಹಾಗಿರುವ ರದನಪಙ್ಕ್ತಿಗಳುಳ್ಳ, ಎಳೆದಳಿರಂತೆ ಕೆಂಪಾದ ಅಧರವುಳ್ಳ, ಭೃಂಗಗಳ ಹಾಗೆ ಕಪ್ಪಾದ ಕೂದಲುಳ್ಳ, ಕುಸುಮಗಳಂತೆ ಸುವಾಸನೆಯುಳ್ಳ, ಮನೋಹರಮಾದ ಕೋಕಿಲಪಕ್ಷಿಗಳಂತೆ ಮೃದುವಾದ ಮಾತುಗಳುಳ್ಳ, ಚಂಪಕಾಕುಸುಮದಂತೆ ದೇಹಕಾಂತಿಯುಳ್ಳ, ಗಿಣಿಗಳಂತೆ ಮೃದುವಾದ ಮತ್ತು ಮಧುರವಾದ ಮಾತುಗಳುಳ್ಳವಳಾದ, ಕಮಲಪುಷ್ಪದ ಎಸಳಿನಂತೆ ವಿಶಾಲನೇತ್ರೆಯಾದ, ಮನೋಲ್ಲಾಸಕರಮಾದ ಚಂದ್ರಬಿಂಬಕ್ಕೆ ಸದೃಶವಾದ ಆಸ್ಯವುಳ್ಳ, ಸಲ್ಲಲಿತಗಾತ್ರವುಳ್ಳ, ಕೃಶಾಂಗವುಳ ಸಿಂಹದ ಮಧ್ಯದಂತೆ ಮಧ್ಯವುಳ್ಳ ಜಾನಕೀದೇವಿಯು ಪುಷ್ಪವತಿಯಾಗಿ, ಸಂತೋಷದಿಂದ ವಿದಳಿತಮಾದ ಪ್ರಕಾಶಯುತಳಾದ ವಸಂತ ಲಕ್ಷ್ಮಿಯೋಪಾದಿಯಲ್ಲಿ ವಿರಾಜಿಸಿದಳು ಎಂದು ಜೈಮಿನಿ ಮುನೀಂದ್ರನು ಭೂಮಿಪತಿಯಾದ ಜನಮೇಜಯರಾಯನಂ ಕುರಿತು ಸೀತಾದೇವಿಯ ವರ್ಣನೆಯನ್ನು ಹೇಳಿದನು || ೨೪ || ಈ ರೀತಿ ಸುಂದರೀಮಣಿಯಾದ ಜಾನಕಿಗೆ ಮೊಡವೆ ಗುಳ್ಳೆಗಳಿಂದ ಕೂಡಿದ ಆಸ್ಯವೂ, ಹೊಸಗಂಪಿನಿಂದಾವೃತಮಾದ ದೇಹವೂ) ನನರತ್ನಾಲಂಕೃತಮಾಗಿ ಆಭರಣಗಳಿಂದ ರಹಿತಮಾದ ಅವಯವಗಳೂ, ಜಾಜೀ ಚಂಪಕಾ, ಮಲ್ಲಿಕಾ ಮೊದ

ಗಂಪೊಗೆದನ್ನೈ | ತೊಡವುಗಳತೊಡರಿಲ್ಲದನಯವಂಪೂಗಳಂ | ಮುಡಿಯದಬಳಲ್ಸುರುಬುನಿಚ್ಚಳದಕೆಂಗಳ್ತೊಳಪಘಣೆಯುಮಿರುಪಕದವು || ಕಡುಬಿಣ್ಪಿಡಿದಕುಚಂಮಾಧವೀಲತೆಯುಸೆಳೆ | ವಿಡಿದಕೈನಿರಿಯಳಿದನಸುಮಾಸಿದಂಬರಂ | ಕುಡಿವರಿವಲಜ್ಜೆಸಿಂಗರಕೆಮಿಗಿಲಾಯ್ತವನಿಸುತೆಗೆಳಯತುಮತಿಯಾಗಲು || ೨೫ || ಸಮುಚಿತಸ್ತ್ರೀಧರ್ಮದಿಂದನಾಲ್ಕನೆಯದಿನ | ದಮಲಮಜ್ಜನದಲಂಕಾರದೊಳೆಸೆದಳಂದು | ನಿಮಿಷದೊಳ್ತ್ರಿಜಗಮುಂಗೆಲ್ವೆನೆಂದಂಗಜಂಮಸದಾಯುಧೋತ್ತಮವೆನೆ || ಕ್ರಮದಿಂದಮನ್ಮಥಂಕಲುಷಮುಂಶೋಧಿಸಿದ | ರಮಣೀಯಸೌಂದರ್ಯಸಾರಮೋಸ್ಮರನನಿರು | ಪಮಯಶಃಶ್ರೀಸಾಕಾರಮೋಪೇಳೆನಲ್ಸೀತೆರಾಘವನಕ

ಗುಳ್ಳೆಗಳಿಂದ, ಮೂಡಿದ-ವ್ಯಾಪ್ತವಾದ, (ಹುಟ್ಟಿದ) ಮೊಗಂ - ಆನನವೂ, ಸೊಗಡುಗಂಪು - ಸುವಾಸನೆಯಿಂದ ಕಂಪಿನಿಂದ, (ಸೊಗಡುವಾಸನೆಯಿಂದ) ಒಗೆದ-ಉಂಟಾದ, (ಕೂಡಿದ) ಮೈ-ಅಂಗವೂ, ತೊಡವುಗಳ-ಒಡವೆಗಳ, ತೊಡರಿಲ್ಲದ-ವಿಘ್ನವಿಲ್ಲದಿರುವ, (ಬಾಧೆಯಿಲ್ಲದ) ಅವಯವಂ-ದೇಹದ ಭಾಗಗಳು, (ಅಂಗಾಂಗಗಳು) ಪೂಗಳಂ-ಕುಸುಮಗಳನ್ನು, ಮುಡಿಯದ-ಧರಿಸದಿರುವ, ಬಳಲ್ದುರುಬು-ಸಡಿಲವಾದ ಕಬರಿಯೂ, ನಿಚ್ಚಳದ-ಚಲನೆಯಿಲ್ಲದ, (ಚಂಚಲವಿಲ್ಲದ) ಕಂಗಳ್-ನೇತ್ರಗಳು, ತೊಳಪ-ಹೊಳೆಯುತ್ತಿರುವ, ಘಣೆಯು - ಹಣೆಯ ಪ್ರದೇಶವು, ಮಿರುಪ-ಥಳಥಳಿಸುವ, ಕದಪು-ಚುಬಕಗಳು, (ಕೆನ್ನೆಯ ಪ್ರದೇಶಗಳು) ಕಡು-ಅಧಿಕವಾಗಿ, ಬಿಣ್ಪಿಡಿದ-ಬಿಳಿಯ ಛಾಯೆಯಿಂದ ಕೂಡಿರುವ, ಕುಚಂ-ಮೊಲೆಗಳು, (ಉರೋಜಗಳು) ಮಾಧವೀಲತೆಯ-ಮಲ್ಲಿಗೆಯಬಳ್ಳಿಯ, ಸೆಳೆವಿಡಿದ-ಲಾವಣ್ಯವನ್ನು ಹೊಂದಿದ, (ಚಲನೆಯಂ ಪೊಂದಿದ) ಕೈ-ಹಸ್ತಗಳು, ನೆರಿಯುಳಿದ-ಮುರಿತಪ್ಪಿಹೋದ, (ಮುರಿಗೆ ತಪ್ಪಿಹೋದ) ನಸುಮಾಸಿದ-ಕೊಂಚ ಮಾಸಿಯಿರುವ, (ಮಲಿನವಾದ) ಅಂಬರಂ-ಧರಿಸಿದ್ದ ವಸನವೂ, (ವಸ್ತ್ರವು) ಕುಡಿವರಿವ-ಕೂಡಿಬರುತ್ತಿರುವ, ಲಜ್ಜೆ-ಲಜ್ಜೆಯು ಇವುಗಳು, ಸಿಂಗರಕೆ - ಅಲಂಕಾರಮಾಡಿಕೊಂಡದ್ದಕ್ಕಿಂತಲೂ, ಮಿಗಿಲಾಯಿತು-ಹೆಚ್ಚಾದ್ದಾಯಿತು.

ಅ|| ವಿ|| ಬಳಲಿದ, ತುರುಬು=ಬಳಲ್ದುರುಬು, ವಿ. ಪೂ. ಕ. ಸಿಂಗರ ದ್ಭ. ಶೃಂಗಾರ ತ್ಸ. ಅವನಿಯಸುತೆ=ಅವನಿಸುತೆ, ಷ. ತ. ಉತ್ಪ್ರೇಕ್ಷಾಲಂಕಾರವು ||೨೫||

ಟೀ|| ಸೀತೆ - ಜಾನಕಿದೇವಿಯು, ಸಮುಚಿತ-ಅರ್ಹವಾದ, ಯೋಗ್ಯವಾದ, ಸ್ತ್ರೀಧರ್ಮದಿಂದ-ಹೆಂಗಸರ ಸುಶೀಲತೆಯಿಂದ, (ಒಳ್ಳೇನಡತೆಯಿಂದ) ನಾಲ್ಕನೆಯ-ನಾಲ್ಕನೆಯದಾದ, ದಿನದ-ದಿವಸದ, ಅಮಲ-ನಿರ್ಮಲವಾದ ನೀರಿನಲ್ಲಿ, ಮಜ್ಜನದ-ಜಳಕವುಳ್ಳ, (ನಿರ್ಮಲೋದಕಸ್ನಾನವುಳ್ಳ) ಅಲಂಕಾರದೋಳ್ - ವಸ್ತ್ರಾಭರಣದಲಂಕಾರಗಳಿಂದ, ಎಸೆದಳು-ಶೋಭಿಸಿದಳು, ಅಂದು-ಆ ವೇಳೆಯಲ್ಲಿ, ಅಂಗಜಂ - ಮನಸಿಜನು, ತ್ರಿಜಗಮುಂ - ಸ್ವರ್ಗ ಮರ್ತ್ಯ ಪಾತಾಳಗಳೆಂಬ ಮೂರು ಲೋಕಗಳನ್ನು, ನಿಮಿಷದೋಳ್-ಕಣ್ಣುರೆಪ್ಪೆ ಬಡಿಯುವಷ್ಟು ಕಾಲದಲ್ಲಿ, ಗೆಲ್ವೆನೆಂದು-ಗೆಲ್ಲುತ್ತೇನೆಂಬದಾಗಿ, ಮಸದ-ಒರೆಯಿಟ್ಟ, (ತೀಡಿದ-ಹದಮಾಡಿದ), ಆಯುಧೋತ್ತಮಂ-ಶ್ರೇಷ್ಠವಾದ ಆಯುಧವೂ, ಎನೆ-ಎನ್ನುವಂತೆ, ಅಂಗಜಂ-ಮನಸಿಜನು, ಕ್ರಮದಿಂದ-ಅನುಕ್ರಮವಾಗಿ, ಕಲುಷಮುಂ-ಕಲಂಕವವನ್ನು, ಅಥವಾ ಕೊಳೆಯನ್ನು, ಶೋಧಿಸಿದ-ಪರಿಶೋಧನೆಯನ್ನು ಮಾಡಿದ, ರಮಣೀಯ-ಮನೋಹರವಾದ, ಸೌಂದರ್ಯಸಾರಮೊ-ಲಾವಣ್ಯದ ಜೀವಾಳವೋ, (ಸಾರಾಂಶವೊ) ಅಥವಾ ಹಾಗಿಲ್ಲದಿದ್ದರೆ, ಸ್ಮರನ-ಅಂಗಜನ, ನಿರುಪಮ-ಸಾಮ್ಯವಿಲ್ಲದ, (ಅಸದೃಶಮಾದ) ಯಶಃ - ಯಶಸ್ಸೆಂಬ, ಶ್ರೀಯ-ಲಕ್ಷ್ಮೀದೇವಿಯ, ಸಾಕಾರಮೋ-ಆಕಾರದಿಂದೊಡಗೂಡಿರುವುದೊ, (ರೂಪವೊ) ಪೇಳೆನಲ್-ಹೇಳು ಎನ್ನುವಂತೆ, ರಾಘವನ-ಶ್ರೀರಾಮಚಂದ್ರನ, ಕಣ್ಗೆ-ನೇತ್ರಗಳಿಗೆ, ಎಸೆದಳು-ಪರಿಶೋಭಿಸಿದಳು ||

ಅ|| ವಿ|| ಸಿಂಗರ ದ್ಭ. ಶೃಂಗಾರ ತ್ಸ. ಮಲವಿಲ್ಲದ್ದು = ನಿರ್ಮಲ, ನ. ತ. ಮೂರು ಲೋಕಗಳ ಸಮಾಹಾರ=ಮೂಲೋಕ ಸ. ದ್ವಿ. ಸ. ಕಮಲಪುಷ್ಪವನ್ನು ಸ್ತ್ರೀಯರ ಮುಖಕ್ಕೂ, ತಾವರೆ ಯೆಸಳನ್ನು ವಿಶಾಲವಾದ ನೇತ್ರಗಳಿಗೂ,

ಲಾದ ಸುವಾಸನೆಯನ್ನೀಯುವ ಪುಷ್ಪಗಳನ್ನು ಮುಡಿಯದ ಗಳಿತವಾದ (ಬಿಚ್ಚಿಹೋಗಿರುವ) ಕಬರಿಯೂ, ಚಲನೆಯಿಲ್ಲದ ನೇತ್ರಂಗಳೂ, ಪ್ರಕಾಶಮಾನವಾದ ಫಾಲಪ್ರದೇಶವೂ, ಥಳಥಳಿಸುವ ಕದಪುಗಳೂ, ಅತಿಯಾಗಿ ಧವಳವರ್ಣಾನ್ವಿತವಾದ ಸ್ತನಗಳೂ ಮಾಧವೀಲತೆಯಂತೆ ಚಲನೆಯುಳ್ಳ ಕರಪದ್ಮಗಳೂ, ನೆರಿಗೆಯು ಬಿಚ್ಚಿಹೋಗಿ ಕೊಂಚಕೊಂಚ ಮಾಸಲು ವರ್ಣವುಳ್ಳ ವಸ್ತ್ರವೂ, ಬರುತ್ತಿರುವ ಲಜ್ಜೆಯೂ ಇವುಗಳು ನಾನಾ ಬಗೆಗಳಾದ ವಸ್ತ್ರಾಭರಣಗಳ ಅಲಂಕಾರಕ್ಕಿಂತಲೂ, ಅತಿಶಯಮಾದವುಗಳಾಗಿದ್ದವು ||೨೫|| ಆ ಬಳಿಕ ವೈದೇಹಿಯು, ಸಮುಚಿತ ಸ್ತ್ರೀಯರ ಆಚಾರದಂತೆ ನಾಲ್ಕನೆಯದಿನದ ಪರಿಶುದ್ಧಮಾದ ಜಲಸ್ನಾನದಿಂ ವಸ್ತ್ರಾಭರಣಾದ್ಯಲಂಕಾರಗಳಿಂದ ಶೋಭಿಸುತ್ತಿದ್ದಳು. ಆ ಕಾಲದಲ್ಲಿ ಮನಸಿಜನು ತ್ರಿಲೋಕಗಳನ್ನೂ ನಿಮಿಷಮಾತ್ರದಲ್ಲಿ ಜೈಸುವೆನೆಂದು ಉತ್ತಮವಾಗಿ ಮಸೆದಾಯುಧವೋ ಎಂಬಂತೆ ಮನಸಿಜನು, ಕ್ರಮದಿಂದ ಕಲುಷವನ್ನು

ಣ್ಗೆ ॥೨೬॥ ಸ್ಫುರದುತ್ಕಟಾಕ್ಷಚಂಚಲದಿಂದಚಾರುಪೀ । ವರಪಯೋಧರದಿಂದಪರಿವೃತಸುಮೇಖಲಾ । ತರಳಕಿಂಕಿಣಿಯಘನ ರವದಿಂದರಾರಾಜಿಸುವಕಂಕಣಂಗಳಿಂದ ॥ ಸರಸತರಲಾವಣ್ಯಪೂರಪ್ರವಾಹದಿಂ । ಭರಿತಕಬರೀಬರ್ಹಿಲೀಲೆಯಿಂಮಳೆಗಾಲ । ದಿರವನೆಚ್ಚರಿಪರಸಿಯಂಕಂಡುರಾಮನಮನಶ್ಚಾತಕಂನಲಿದುದು ॥ ೨೭ ॥ ಮಂದಗಮನೆಯುಮಂದಹಾಸದವಿಲಾಸಮುಂ । ಕುಂ ದರದನೆಯಕುಂದದವಯವದಸೌಂದರ್ಯ । ದಂದಮುಂವಕ್ರಕುಂತಳೆಯುವಕ್ರಾವಲೋಕನದಭಾವದಬಗೆಯನು ॥ ಚಂದನಸುಗಂಧಿ

---

ಕೆಂಪಾದ ಚಿಗುರನ್ನು ಅಧರಕ್ಕೂ, ಬಿಟ್ಟ ಮಲ್ಲಿಗೆಯನ್ನು ರದನಗಳಿಗೂ, ಚಂಪಕಾಕುಸುಮವನ್ನು ನಾಸಿಕಕ್ಕೂ, ಗೇದಿಗೆಯ ಪುಷ್ಪದ ವರ್ಣವನ್ನು ದೇಹಕಾಂತಿಗೂ, ಕವಿಯು ವರ್ಣಿಸಿರುವನು ॥೨೬॥

ಟೀ॥ ಸ್ಫುರತ್-ಕಾಂತಿಯತಿಶಯವಾದ, ಉತ್ಕಟಾಕ್ಷ-ವಿಶಾಲವಾದ ಕೊನೆಗಣ್ಣಿನ ನೋಟವೆಂಬುವಂಥ, ಚಂಚಲ ದಿಂದ-ಹೊಳವಿನಿಂದಲೂ, ಚಾರು-ಮನೋಹರವಾದ, ಪೀವರ-ದೊಡ್ಡದಾದ, ಪಯೋಧರದಿಂದ- ಕುಚಗಳೆಂಬ ಮೋಡಗ ಳಿಂದ, ಪರಿವೃತ-ಮಧ್ಯವನ್ನು ಬಳಸಿಕೊಂಡಿರುವ, ಸುಮೇಖಲಾ-ಸೊಗಸಾದ ಒಡ್ಯಾಣದ, (ಉತ್ತಮವಾದ ಒಡ್ಯಾಣವುಳ್ಳ) ತರಳ-ಚಲಿಸುವ, (ಚಂಚಲವಾದ) ಕಿಂಕಿಣಿಯ-ಸಣ್ಣದಾದ ಗೆಜ್ಜೆಗಳ, ಘನರವದಿಂದ-ಮನೋಹರವಾದ ಸದ್ದೆಂಬುವ ಮೊಳಗಿ ನಿಂದಲೂ, ಎಂದರೆ ಮೇಘಗರ್ಜನೆಯಿಂದಲೂ, ರಾರಾಜಿಪ-ಪರಿಶೋಭಿಸುವ, ಕಂಕಣಂಗಳಿಂದ-ಕಡಗಗಳೆಂಬುವ ನೀರಿನ ಬಿಂ ದುಗಳಿಂದಲೂ, ಸರಸ-ಶೃಂಗಾರಾದಿ ರಸದಿಂದ, ಸರಸತರ-ಅತಿ ದ್ರವರೂಪದಿಂದ ಕೂಡಿದ, ಲಾವಣ್ಯಪೂರ-ಮನೋಹರಾತಿಶಯ ವೆಂಬುವ, ಪ್ರವಾಹದಿಂದ-ಅನುಕ್ರಮದಿಂದಲೂ, ನೀರು ಹರಿಯೋಣದರಿಂದಲೂ, ಭರಿತ-ವಿಶಾಲವಾದ, (ತುಂಬಿರುವ) ಕಬರೀ-ಮುಡಿಯೆಂಬುವ, (ತುರುಬೆನ್ನುವಂಥ) ಬರ್ಹಿಲೀಲೆಯಿಂ-ಮಯೂರಗಳ ವೈಭವದಿಂದಲೂ, ಮಳೆಗಾಲದ-ವರ್ಷಋತುವಿನ (ಮಳೆಯಕಾಲದ) ಇರವನು-ರೀತಿಯನ್ನ, ಎಚ್ಚರಿಪ-ಎಚ್ಚರಿಸುವ, (ತೋರುವಂತೆ ಮಾಡುವ) ಅರಸಿಯಂ-ರಾಜ್ಞಿಯಾದ ಜಾನ ಕೀದೇವಿಯನ್ನು, ಕಂಡು-ಈಕ್ಷಿಸಿ, ರಾಮನ-ಶ್ರೀರಾಮಚಂದ್ರನ, ಮನಃ-ಮನಸ್ಸೆಂಬುವ, ಚಾತಕಂ-ಚಾತಕವೆಂಬ ಹಕ್ಕಿಯು, (ಜಲಪಕ್ಷಿಯು-ಜೊನ್ನವಕ್ಕಿಯು) ನಲಿದುದು-ಸಂತೋಷವನ್ನು ಪಡೆಯಿತು.

ಅ॥ ವಿ॥ ಪಯೋಧರ-ಮೇಘ, ಸ್ತನ. ಮೇಖಲ-ಒಡ್ಯಾಣ, ಕಂದಕ. ಘನ-ಮೇಘ. ಘನರವ-ಗುಡುಗು, ಘನರಸ-ನೀರು. ರಸದೊಡನೆ ಸಹಿತವಾದ್ದು = ಸರಸ. ಸ. ಬಹು. ಬರ್ಹವುಳ್ಳದ್ದು = ಬರ್ಹಿ. ಮನವೆಂಬ + ಚಾತಕ = ಮನಶ್ಚಾತಕ. ಸಂ. ಪೂ. ಕ. ॥ ೨೭ ॥

ಟೀ॥ ಮಂದಗಮನೆಯು-ಮೆಲ್ಲಿತ್ತಾದ ನಡಿಗೆಯುಳ್ಳ ಜಾನಕಿಯ, ಮಂದಹಾಸದ-ಕಿರುನಗೆಯುಳ್ಳ, (ಕಿರುನಗೆಯ) ವಿಲಾಸಮುಂ-ವೈಭವವನ್ನು, (ಸ್ತ್ರೀಯರ ಚೇಷ್ಟೆಯನ್ನು) ಕುಂದರದನೆಯ-ಮಲ್ಲೆಹುಷ್ಪಿನ ಮೊಗ್ಗಿನಂತಿರುವ, (ಮಲ್ಲಿಗೆ ಮೊಗ್ಗಿ ನಂತಿರುವ) ದಂತಪಜ್ತ್ತಿಯುಳ್ಳ ಭೂಮಿಜೆಯ, ಕುಂದದ-ಕಡಮೆಯಾಗದೆ ಇರುವ, ಅವಯವದ-ಶರೀರಭಾಗಗಳ, ಸೌಂದರ್ಯ ದ-ಲಾವಣ್ಯದ, (ಅಲಂಕಾರದ) ಅಂದಮುಂ-ಬಗೆಯನ್ನು, ವಕ್ರ-ನೆಟ್ಟಗಿಲ್ಲದಿರುವ, ಕುಂತಳೆಯ-ಕೇಶಗಳುಳ್ಳ, (ಕೂದಲುಳ್ಳ) ಸೀತಾದೇವಿಯ, ವಕ್ರ-ಸೊಟ್ಟಾದ ಅಥವಾ ಓರೆಯಾದ,ಅವಲೋಕನದ-ನೋಡುವಿಕೆಯುಳ್ಳ,(ದೃಷ್ಟಿಯುಳ್ಳ) ಭಾವದ-ಚಿತ್ತವೃ

---

ಶುಚಿನಾಡಿ, ಅತಿ ಸುಂದರವಾದ ಸೌಂದರ್ಯ ಸಾರವೊ ಹಾಗಿಲ್ಲದಿದ್ದರೆ ಸ್ಮರನ ಸಾಮ್ಯಮಿಲ್ಲದ ಯಶೋಲಕ್ಷ್ಮಿಯ ಆಕಾ ರವೋ (ರೂಪವೊ) ಹೇಳು ಎನ್ನುವಂತೆ ಶ್ರೀರಾಮ ಚಂದ್ರನ ನೇತ್ರಗಳಿಗೆ ಅತಿ ಹರ್ಷದಿಂದ (ಪ್ರಕಾಶಿಸಿದಳು) ॥ ೨೬ ॥ ಮತ್ತೆ ಜಾನಕಿಯು ಶೋಭಾಮಯವಾದ ಮತ್ತು ಅತಿಯಾದ ಕಡೆಗಣ್ಣಿನ ನೋಟವೆಂಬ ಚಾಂಚಲ್ಯದಿಂದಲೂ (ಮಿಂಚಿನಿಂ ದಲೂ) ಮನೋಹರವಾದ ಮತ್ತು ದಪ್ಪನಾದ ಪಯೋಧರಗಳೆಂಬ (ಸ್ತನಗಳೆಂಬುವ) ಮೋಡದಿಂದಲೂ, ಮಧ್ಯವನ್ನು ಬಳಸಿ ಕೊಂಡಿರುವ ಪ್ರಕಾಶವಾನವಾಗಿ ಮನೋಹರವಾದ ಒಡ್ಯಾಣದ ಚಂಚಲವಾದ ಕಿರುಗೆಜ್ಜೆಗಳ ಗಂಭೀರಸ್ವರವೆಂಬ ಗುಡುಗಿನ ರವದಿಂದಲೂ, ಶೋಭಿಸುವ ಕಂಕಣಗಳೆಂಬ ಉದಕಬಿಂದುಗಳಿಂದಲೂ, ದ್ರವದಿಂದ ಅತಿ ಮನೋಹರವಾದ ಸೌಂದರ್ಯಾತಿ ಶಯವೆಂಬ ಪ್ರವಾಹದಿಂದಲೂ, (ಉದಕ ಪ್ರವಾಹದಿಂದಲೂ) ವಿಶಾಲವಾದ ಕಬರಿಯೆಂಬ (ತುರುಬೆಂಬುವ) ಮಯೂರಗಳ ವಿಲಾಸದಿಂದಲೂ, ಮಳೆಗಾಲದ ಹೋಲಿಕೆಯನ್ನು ತೋರ್ಪಡಿಸುತ್ತ ಶ್ರೀರಾಮಚಂದ್ರನ ಮನಸ್ಸಿಗೆ ಆನಂದವನ್ನುಂಟುಮಾ ಡುತ್ತಿದ್ದಳು ॥ ೨೭ ॥ ಮಂದವಾದ ನಡಿಗೆಯುಳ್ಳವಳಾದ ಜಾನಕಿಯ ಕಿರುನಗೆಯ ವಿಲಾಸವನ್ನೂ, ಮಲ್ಲಿಕಾಪುಷ್ಪಗಳ ಮೊಗ್ಗುಗಳಂತೆ ವಿರಾಜಿಸುವ ದಂತಗಳುಳ್ಳ ವೈದೇಹಿಯ ಕೃಶವಾಗದವಯವಗಳ ಲಾವಣ್ಯದ ಅಂದವನ್ನೂ ವಕ್ರವಾದ ಕೂದ ಲುಳ್ಳ ಭೂಮಿಜೆಯ ಓರೆಗಣ್ಣಿನ ನೋಟದ ಮನೋವ್ಯಾಪಾರದ ರೀತಿಯನ್ನೂ ಚಂದನದಂತೆ ಸುಗಂಧವನ್ನು ಬೀರುವ ಸೀತಾ ದೇವಿಯ ಚಂದ್ರಬಿಂಬಕ್ಕೆ ಸದೃಶವಾದಾಸ್ಯದ ಕಾಂತಿಯನ್ನೂ ಬಾಧೂಕ ಪುಷ್ಪದಂತೆ ಶೋಭಿತವಾದ ಅಧರ ಪ್ರದೇಶವು

ನಿಯಚಂದ್ರಾಸ್ಯದೆಸಕಮುಂ | ಬಂದುಗೆಯುದುಟಿಯುಬಂಧುರದಶಿಂಗರವನೇ | ನೆಂದುಬಣ್ಣಿಸಬಹುದುರಾಮಣೀಯ್ಯಕಮಾದರಾ
ಮನಮಡದಿಯೊಲವನು || ೨೮ || ನೊಸಲೊಳಾರಾಜಿಸುವತಿಲಕದಿಂದಲಕದಿಂ | ಮಿಸುಪಮ್ಮೈನಸುದೋರ್ವವಸನದಿಂದಶನದಿಂ|
ಪಸರಿಪೆಳೆನಗೆಯತೆಳ್ಳದಪಿನಿಂಪದಪಿನಿಂದಮರ್ದಪೊಂದುಡಿಗೆಯಿಂದ || ಅಸಿವೆರಳೊಳೊಪ್ಪುವವುಗುರ್ಗಳಿಂತಿಗುರ್ಗಳಿಂ | ಪೊಸ
ತೆನಿಪಕುಂಕುಮದಗಂಪಿನಿಂದಿಂಪಿನಿಂ | ತ್ರಿಸಂದೋಳ್ಮೆರವಗುರುಕುಚದಿಂದಕಚದಿಂದಕಾಂತೆಕಣ್ಗೆಸೆದಿರ್ದಳು || ೨೯ ||

ತ್ರಿಯ, ಬಗೆಯುನು-ರೀವಿಯನ್ನು, ಚಂದನ-ಶ್ರೀಗಂಧದಹಾಗೆ, ಸುಗಂಧಿನಿಯ-ಸುಗಂಧದಿಂದ ಕೂಡಿದ ಅವಯವವುಳ್ಳ ಸೀತಾ ದೇವಿಯ, ಚಂದ್ರಾಸ್ಯದ-ಚಂದ್ರಬಿಂಬದಂತೆ ಮುಖಪದ್ಮವುಳ್ಳ, ಎಸಕಮಂ-ಕಾಂತಿಯತಿಶಯವನ್ನು, ಬಂದುಗೆಯತುಟಿಯ-ಬಂಧೂಕ ಪುಷ್ಪದಂತೆ ಚಂದುಟಿಯುಳ್ಳ ಭೂಪುತ್ರಿಯಾದ ಸೀತೆಯ, ಬಂಧುರದ-ಮನೋಹರವಾದ, ಸಿಂಗರವನು-ಅಲಂಕಾರ ವನ್ನು, (ಸಿಂಗರವನ್ನು) ರಾಮಣೀಯಕಮಾದ-ಮನೋಹರಮಾದ, ರಾಮನ-ಶ್ರೀರಾಮಚಂದ್ರನ, ಮಡದಿಯ-ಪತ್ರಿಯಾದ ಜಾನಕಿಯ, ಒಲವನು-ಒಪ್ಪಿಗೆಯನ್ನು, (ಪ್ರೀತಿಯನ್ನು) ಏನೆಂದು-ಏನೆಂಬದಾಗಿ, ಎಷ್ಟುವಿಧವೆಂದು, ಬಣ್ಣಿಸಬಹುದು-ವರ್ಣಿ ಸುವುದಕ್ಕೆ ಸಾಧ್ಯವಾದೀತು ||

ಅ|| ವಿ|| ಮಂದವಾದಗಮನೆಯುಳ್ಳವಳು=ಮಂದಗಮನೆ, ಬಹು. ಸ. ಕುಂದಕುಟ್ಮಲದಂತೆ ರದನೆಯುಳ್ಳವಳು, ಕುಂದರದನೆ, ಉ. ಪೂ. ಬಹು. ಕೆಚ್ಚನೆಯ + ತುಟಿ = ಚೆಂದುಟಿ, ವಿ. ಪೂ. ಕ. ಬಂದುಗೆ-ದ್ಭ. ಬಂಧೂಕ-ತ್ಸ. ಸಿಂಗರ-ದ್ಭ. ಶೃಂಗಾರ-ತ್ಸ. || ೨೮ ||

ಟೀ|| ನೊಸಲೊಳು-ಫಾಲದಲ್ಲಿ ಎಂದರೆ ಹಣೆಯಲ್ಲಿ, ಆರಾಜಿಸುವ-ಶೋಭಿಸುತ್ತಿರುವ ತಿಲಕದಿಂದ, (ಕಸ್ತೂರಿ ಯಿಂದ ಮಾಡಿದ ಊರ್ಧ್ವಪುಂಡ್ರದಿಂದಲೂ) ಅಲಕದಿಂ-ಮುಂಗೂದಲುಗಳಿಂದಲೂ, ಮಿಸುಪ-ಶೋಭಿಸುವ, ಮೈ-ಅಂಗವೂ, (ದೇಹವೂ) ನಸುದೋರುವ-ಕೊಂಚವಾಗಿ ತೋರಿಬರುವ, ವಸನದಿಂ-ಪಟ್ಟೆಯ ವಸ್ತ್ರದಿಂದಲೂ, ದಶನದಿಂ-ದಂತಂಗಳಿಂ ದಲೂ, ಪಸರಿಪ-ವಿಸ್ತಾರವಾಗುತ್ತಿರುವ, ಎಳೆನಗೆಯ-ಕಿರುನಗೆಯುಳ್ಳ, ತೆಳ್ಳದಪಿನಿಂ-ತೆಳುವಾಗಿರುವ ಚುಬುಕಗಳಿಂದಲೂ, ಪದಪಿನಿಂದ-ಸೊಬಗಿನಿಂದಲೂ, (ಕಾಂತಿಯಿಂದಲೂ) ಅಮರ್ದ-ವ್ಯಾಪ್ತವಾದ, ಪೊಂದೊಡಗೆಯಿಂದ-ಕಾಂಚನದ ಆಭರಣಗ ಳಿಂದಲೂ, ಅಸಿವೆರಳೊಳು-ಕತ್ತಿಯಂತಿರುವ ಎಂದರೆ ಹದನಾದ ಬೆಟ್ಟುಗಳಲ್ಲಿ, ಒಪ್ಪುವ-ಒಪ್ಪುತ್ತಿರುವ, ಉಗುರ್ಗಳಿಂ-ನಖಗ ಳಿಂದಲೂ, ತಿಗುರ್ಗಳಿಂ-ಉಗುರುಗಳಿಗೆ ಬಳಿದಿರುವ ಗೋರಂಟಿಮೊದಲಾದ ಬಣ್ಣಗಳಿಂದಲೂ, ಪೊಸತೆನಿಪ-ಹೊಸದಾದದ್ದು ಎನ್ನಿಸಿಕೊಳ್ಳುವ, ಕುಂಕಮದ-ಕುಂಕುಮಕೇಸರಿಯಿಂದ ಮಾಡಿದ, ಸಂಪಿನಿಂ-ಸುಗಂಧದಿಂದಲೂ, (ಒಳ್ಳೆಯವಾಸನೆಯಿಂದ ಲೂ) ಇಂಪಿನಿಂ-ಮನೋಹರದಿಂದಲೂ, ತ್ರಿಸರದೋಳ್-ಮೂರು ಹಾರಗಳಿಂದ ಕೂಡಿದ ಮಾಲೆಗಳಿಂದಲೂ, ಮೆರೆವ-ಪ್ರಕಾಶಿ ಸುವ, ಗುರು-ಬಲು ದಪ್ಪವಾದ, ಕುಚದಿಂದ-ಸ್ತನಗಳಿಂದಲೂ, ಕಚದಿಂದ-ಕೇಶಪಾಶಗಳಿಂದಲೂ, ಕಾಂತೆ-ಭೂಮಿಜೆಯಾದ ಜಾನಕಿಯು, ಕಣ್ಗೆ-ನೇತ್ರಗಳಿಗೆ, ಎಸೆದಿರ್ದಳು-ಪ್ರಕಾಶಿಸುತ್ತಿದ್ದಳು ||

ಅ|| ವಿ|| ತಿಲಕ-ನಾಮ, ತಿಲಕವೃಕ್ಷ, ಶ್ರೇಷ್ಠ. ಅಲಕ-ಮುಂಗುರುಳು, ವಸನ-ವಸ್ತ್ರ, ದಶನ-ಹಲ್ಲು, ಕದಪು-ಕೆನ್ನೆ, ಪದಪು-ಸೊಗಸು, ಉಗುರು-ನಖ, ತಿಗುರು-ತಿದ್ದು, ಬಳಿ. ಕಂಪು-ಸುವಾಸನೆ, ಇಂಪು-ಮಾಧುರ್ಯ ತ್ರಿಸರಗಳ ಸಮಾ ಹಾರ, ತ್ರಿಸರ-ಸಮಾಹಾರ, ದ್ವಿ. ಸ. ||೨೯||

ಳ್ಳ ಜಾನಕಿಯ ವಿಸ್ತಾರವಾದ ಶೃಂಗಾರವನ್ನೂ, ರಾಮನ ರಮಣೀಯ ಧರ್ಮಪತ್ನಿಯಾದ ಸೀತೆಯ ರೀವಿಯನ್ನೂ ಯಾವರೀತಿ ಯಾಗಿ ಬಣ್ಣಿಸಲಿಕ್ಕಾದೀತು ||೨೮|| ಆಗ ಮಂಗಳವತಿಯಾದ ಜಾನಕಿಯು ಹಣೆಯಲ್ಲಿ ವಿರಾಜಿಸುವ ಕಸ್ತೂರಿಯ ತಿಲಕದಿಂ ದಲೂ, ಮುಂಗುರುಳುಗಳಿಂದಲೂ, ಶೋಭಿಸುವ ಮೈಯಿಂದಲೂ, ಕೊಂಚವಾಗಿ ಕಾಣಬರುವ ವಸನದಿಂದಲೂ, ರದನದಿಂದ ಲೂ, ವಿಸ್ತರಿಸುತ್ತಲಿರುವ ಎಳೆನಗೆಯುಳ್ಳ ತೆಳುವಾದ ಕದಪಿನಿಂದಲೂ, ಪ್ರಕಾಶದಿಂದಲೂ, ಧರಿಸಿಕೊಂಡಿರುವ ಸುವರ್ಣದ ಆಭ ರಣಗಳಿಂದಲೂ, ತೆಳ್ಳುಗುರ್ಗಳಲ್ಲಿ (ತೆಳುವಾದ ಉಗುರ್ಗಳಲ್ಲಿ) ಒಪ್ಪುತ್ತಿರುವ ಉಗುರುಗಳಿಂದಲೂ, ಉಗುರುಗಳಿಗೆ ಹಚ್ಚಿ ರುವ ಗೋರಂಟಿಯ ಬಣ್ಣದಿಂದುಂಟಾದ ಪ್ರಕಾಶದಿಂದಲೂ, ಕುಂಕುಮಕೇಸರಿಯ ಸುವಾಸನೆಯಿಂದಲೂ, ಸೊಬಗಿನಿಂದ ಲೂ, ಮೂರೆಳೆಯುಳ್ಳ ಮುಕ್ತಾಹಾರದಿಂದ ಶೋಭಿತವಾದ ದಪ್ಪನಾದ ಸ್ತನಗಳಿಂದಲೂ, ವೇಣಿಯಿಂದಲೂ, (ಜಡೆಯಿಂದಲೂ) ನೇತ್ರಗಳಿಗೆ ಅಂದವಾಗಿ ಪ್ರಕಾಶಿಸಿದಳು || ೨೯ || ಅನಂತರದಲ್ಲಿ ಪ್ರಜ್ವಲಿಸುತ್ತಲಿರುವ ರತ್ನಗಳೆಂಬ ಪ್ರದೀಪಗಳಿಂದಲೂ, ಹೊಸದಾದ ನವರತ್ನಗಳಿಂದ ನಿಬಿಡವಾದ ಪರ್ಯಂಕದಿಂದಲೂ (ಮಂಚದಿಂದಲೂ) ಆ ಮಂಚದಲ್ಲಿ ಹಂಸತೂಲಿಕಾ ತಲ್ಪದಿಂ ದಲೂ, ಕುರಂಗದ ಮಣಿಗಳಿಂದ ಶೋಭಿಸುವ ಮೇಲುಹಾಸಿಗೆಯಿಂದಲೂ, ರಾಜೋಪಭೋಗ್ಯವಾದ ಶಯ್ಯಾಗೃಹದಲ್ಲಿ

ಪಜ್ಜಳಿಪರತ್ನಪ್ರದೀಪಂಗಳಿಂದಪೊಸ | ಬಜ್ಜರದಮಣಿಮಂಚದಿಂದಂಚೆದುಪ್ಪಳಿಂ | ಸಜ್ಜುಕದರಳ್ಗಳಿಂದೆಸೆವಮೇಲ್ಪಾಸಿನಿಂರಾ
ಜೋಪಭೋಗ್ಯಮಾದ ‖ ಸಜ್ಜೆವನೆಯೊಳ್ವಿರಾಜಿಪಕಾಂತನೆಡೆಗೆನಸು | ಲಜ್ಜೆಮಂದಸ್ಮಿತಂಕಿರುಬೆಮರ್ಕಾತರಂ | ಪಜ್ಜೆದೋರ
ಲ್ಮೊಗದೊಳೈತಂದುಸಾರ್ದಳೊಯ್ಯನೆಮತ್ತಗಜಗಾಮಿನಿ ‖ ೩೦ ‖ ಬೆಂಗೊಡದೆಮೋಸವೋಗದೆತವಕಮುಡುಗಿಹರೆ | ಹಿಂಗದೆ
ವಿಘಾತಿಗಳುಕದೆಕೈಮರೆಯದೆಚದು | ರಿಂಗದೆನೆಗಳ್ದಪುಳಕಂಬಿಡದೆತಳ್ಕಕ್ಕರಡಗದಲಸಿಕೆದೋರದೆ ‖ ಅಂಗಜಶ್ರಮವನೀಂಟಿಸದೆ

ಟೀ‖ ಮತ್ತ-ಮದಿಸಿದ, ಗಜ-ಆನೆಯ ನಡಿಗೆಯಂತೆ, ಗಾಮಿನಿ-ನಡಿಗೆಯುಳ್ಳ ಸೀತಾದೇವಿಯು, (ಮಂದಗಾಮಿನಿಯಾದ ಸೀತಾದೇವಿಯು) ಪಜ್ಜಳಿಪ-ಪ್ರಜ್ವಲಿಸುವ, (ಹೊಳೆಯುವ) ರತ್ನ-ನವರತ್ನಗಳೆಂಬ, ಪ್ರದೀಪಂಗಳಿಂದ-ಹೊಳವುಗಳಿಂದ, (ಶೋಭೆಗಳಿಂದ) ಪೊಸ-ನೂತನವಾದ, ಬಜ್ಜರದ-ವಜ್ರದ, ಮಣಿ-ರತ್ನಗಳಿಂದ ಖಚಿತಮಾದ, ಮಂಚದಿಂದ-ಪರ್ಯಂಕದಿಂದಲೂ, ಅಂಚೆ-ಹಂಸಪಕ್ಷಿಗಳ, ತುಪ್ಪಳಿಂ-ತುಪ್ಪಳದಿಂದ ನಿರ್ಮಿತವಾದ ಹಾಸಿಗೆಯಿಂದಲೂ, (ಹಂಸ ಪಕ್ಷಿಯ ತೂಲಿಕಾತಲ್ಪದಿಂದಲೂ), ಸಜ್ಜುಕದರಳ್ಗಳಿಂದ-ಸಜ್ಜುಕವೆಂಬ ಮೊಗ್ಗೆಗಳಿಂದಲೂ, ಎಂದರೆ ಕೆಂಪು ರತ್ನಮಣಿಗಳಿಂದಲೂ, ಎಸೆವ-ಶೋಭಿಸುತ್ತಿರುವ, ಮೇಲ್ಪಾಸಿನಿಂದ-ಮೇಲು ಹಾಸಿಗೆಯಿಂದಲೂ, (ಮಗ್ಗಲು ಹಾಸಿಗೆಯಿಂದಲೂ) ರಾಜ-ಮಹಾರಾಜರಿಗೆ, ಉಪಭೋಗ್ಯಮಾದ-ಅನುಭವಿಸಲು ಅರ್ಹವಾದ, ಸಜ್ಜೆಮನೆಯೊಳು-ಶಯ್ಯಾಗೃಹದಲ್ಲಿ, (ಮಲಗತಕ್ಕಮನೆಯೊಳ್) ವಿರಾಜಿಪ-ಪ್ರಕಾಶಿಸುವ, ಕಾಂತನ-ವಲ್ಲಭನಾದ ಶ್ರೀರಾಮಚಂದ್ರನ, ಎಡೆಗೆ-ಸಾಮಿಪ್ಯವನ್ನು ಕುರಿತು, ಮೊಗದೊಳು-ಆಸ್ಯದಲ್ಲಿ, ಲಜ್ಜೆ-ನಾಣ್‌ನಿಂದಲೂ, (ಲಜ್ಜೆಯಿಂದಲೂ) ಮಂದಸ್ಮಿತ-ಕಿರುನಗೆಯಿಂದಲೂ, ಕಿರುಬೆಮರ್-ಕೊಂಚವಾದ ಬೆವರು, (ಸ್ವೇದವು), ಕಾತರಂ-ಚಪಲತೆಯು, (ಚಪಲವು) ಪಜ್ಜೆದೋರಲ್-ಪ್ರಾಪ್ತವಾಗಿರಲು, ಐತಂದು-ಬಂದವಳಾಗಿ, ಒಯ್ಯನೆ-ನಿಧಾನವಾಗಿ, ಸಾರ್ದಳ್-ರಾಮಚಂದ್ರನ ಸಮಿಾಪವನ್ನು ಸೇರಿದವಳಾದಳು.

ಅ‖ ವಿ‖ ಮೇಲಿನ+ಪಾಸು=ಮೇಲ್ಪಾಸು ಷ. ತ. ಪಜ್ಜಳ-ದ್ಭ. ಪ್ರಜ್ವಲ-ತ್ಸ. ಬಜ್ಜರ-ದ್ಭ. ವಜ್ರ-ತ್ಸ. ರತ್ನ-ತ್ಸ. ರನ್ನ-ದ್ಭ. ರಾಜ+ಉಪಭೋಗ=ರಾಜೋಪಭೋಗ ಗುಣ ಸಂ. ಸಜ್ಜೆ-ದ್ಭ. ಶಯ್ಯಾ-ತ್ಸ. ಮತ್ತಗಜದಂತೆ+ಗಮನವುಳ್ಳವಳು=ಮತ್ತಗಜಗಾಮಿನಿ ಉ. ಪೂ. ಬಹು. ಸ. ‖೩೦‖

ಟೀ‖ ಅವರ್-ಆ ದಂಪತಿಗಳು, ಬೆಂಗೊಡದೆ-ಬೆನ್ನನೀಯದೇಲೂ, ಮೋಸವೋಗದೆ-ಮೋಸವನ್ನು ಪಡದೇಲು, ತವಕ-ಔತ್ಸುಕ್ಯವು, (ಸಂತೋಷವು) ಉಡುಗಿಹರೆ-ಕಡಿಮೆಯಾಗದೇಲೂ, ಹಿಂಗದೆ-ಬತ್ತಿ ಹೋಗದೇಲೂ, ವಿಘಾತಿಗೆ-ತೊಂದರೆಗೆ, (ಕಾಯಕ ಕಷ್ಟಗಳಿಗೆ) ಅಳುಕದೆ-ಹೆದರದೇಲೂ, ಕೈಮರೆಯದೆ-ಹಸ್ತಕೌಶಲವನ್ನು ಮರೆತುಹೋಗದೇಲೂ, (ಕೈಚಮತ್ಕಾರವನ್ನು) ಚದುರಿಂಗದೆ-ಚತುರತೆಯು ಕಡಿಮೆಯಾಗದೇಲೂ, ನೆಗಳ್ದ-ಪ್ರಾಪ್ತವಾದ, (ಮೇಲಕ್ಕೆ ಎದ್ದ) ಪುಳಕಂ-ಆನಂದದಿಂದುಂಟಾದ ರೋಮೋದ್ಗಮವು, ಬಿಡದೆ-ತಪ್ಪಿ ಹೋಗದೇಲೂ, ತಳ್ಕಕ್ಕರು-ಗಾಢಾಲಿಂಗನೆಯು, ಅಡಗದೆ-ಕಡಮೆಯಾಗದೇಲೂ, ಅಲಸಿಕೆ-ದೇಹಾಯಾಸವು, ತೋರದೆ-ಕಾಣಬರದೆಯೂ, ಅಂಗಜಶ್ರಮವ-ಅವಯವಗಳಲ್ಲುಂಟಾದ ತೊಂದರೆಗಳನ್ನು, (ಮನಸಿಜನ ತೊಂದರೆಯನ್ನು) ನೀಂಟಿಸದೆ-ಗಣನೆಗೆ ತಾರದೇಲೂ, ಸಂಗರ ಸದಾಳಾಪದಿಂದ-ಮದನಕೇಳಿಯಲ್ಲಿ ಉಂಟಾಗುವ ಮಾತುಗಳ ಜಾಣ್ಮೆಯಿಂದ, (ಸರಸ ಸಲ್ಲಾಪಾದಿಗಳಿಂದ) ಒಂದಿನಿಸು-ಕೊಂಚಮಟ್ಟಿಗಾದರೂ, ಭಂಗಮಿಲ್ಲದೆ-ವಿಘ್ನವಿಲ್ಲದಹಾಗೆ, ವೀರಭಟರು-ಪರಾಕ್ರಮಶಾಲಿಗಳಾದ ಯುದ್ಧ ಭಟರು, ಒದಗುವಂತೆ-ಹೋರಾಡುವದಕ್ಕೆ ಬೆರೆಯುವಂತೆ, (ಜಗಳಕ್ಕೆ ಸೇರುವಂತೆ)

ವಿರಾಜಿಸುತ್ತಿರುವ, ವಲ್ಲಭನಾದ ಶ್ರೀರಾಮಚಂದ್ರನ, ಸಮಿಾಪವನ್ನು ಕುರಿತು ಮತ್ತಗಜಗಮನೆಯಾದ ವೈದೇಹಿಯು, ಮುಖದಲ್ಲಿ ಲಜ್ಜೆಯುಂಟಾಗಲು, ಮಂದಹಾಸವು, ಕಿರುಬೆಮರು, ಚಾಂಚಲ್ಯವು ಉಂಟಾಗಲು, ಬಂದು ಮೆಲ್ಲಮೆಲ್ಲನೆ ಶಯ್ಯಾಗೃಹವನ್ನು ಸೇರಿದಳು ‖೩೦‖ ಆಗ ಆ ದಂಪತಿಗಳಾದ ಶ್ರೀ ಸೀತಾರಾಮರು ಬೆನ್ನಂ ಕೊಡದೆಯು, ಮೋಸವೋಗದೆಯು ಉತ್ಸಾಹವು ಕಡಿಮೆಯಾಗದೆಯು, ದೇಹಪ್ರಯಾಸಕ್ಕೆ ಭಯಪಡದೆಯು, ಕರಕೌಶಲವನ್ನು ಮರೆಯದೆಯು, ಚದುರಮಾದ ಜಾಣ್ಮೆಯು ತಗ್ಗದೆಯು, ಅತಿಶಯಮಾದ ಆನಂದದಿಂದುಂಟಾದರೋಮೋದ್ಗಮವು ತಪ್ಪದೆಯು, ಗಾಢಾನುರಾಗವು ಅಡಗದೆಯು, ಅಲಸಿಕೆಯು ತೋರದೆಯೂ, ಅವಯವಗಳಲ್ಲುಂಟಾಗುವ ತೊಂದರೆಯನ್ನೂ, ಮದನ ಬಾಧೆಯನ್ನೂ ಲಕ್ಷ್ಯಮಾಡದೆ, ಮದನಕೇಳಿಯಲ್ಲಿ (ಮದನ ಯುದ್ಧದಲ್ಲಿ) ಸಂಭೋಗಕಾಲದಲ್ಲಿ ಅನುಗುಣವಾದ ಸಂಭಾಷಣೆಯಿಂದ, ಕೊಂಚವಾದರೂ ಕುಂದಿಲ್ಲದೆ ವೀರಭಟರು ಒದಗುವ ಹಾಗೆ, ಸಮಾನವಾದ ರತಿಸುಖದಲ್ಲಿ ಶೋಭಿಸಿದರು ‖ ೩೧ ‖ ರಘುಕುಲತಿಲಕನಾದ ಶ್ರೀರಾಮಚಂದ್ರನು ಕ್ಷೀರಾಂಬುಧಿಯಲ್ಲಿ ಫಣಿತಲ್ಪದಮೇಲೆ ಲಕ್ಷ್ಮೀದೇವಿಯೊಡನೆ ಸಂಭೋಗಿಸುವ ರೀತಿಯಿಂದ (ಸುಖಪಡುವರೀತಿಯಿಂದ) ಜನಕರಾಯನ ಪುತ್ರಿಯಾದ ಜಾನಕಿಯು ಸಂಭೋಗದಿಂದ ಪ್ರಕಾಶಿಸಿದನು. ಮನುಷ್ಯರ ಲೀಲಾವಿಲಾಸಕ್ಕೆ ಈ ರೀತಿಯಾದ ಸು

ಸಲೆರಂಜಿಸುವ | ಸಂಗರಸದಾಳಾಪದಿಂದೆಸೆದರೊಂದಿನಿಸು | ಭಂಗಮಿಲ್ಲದೆವೀರಭಟರೊದಗುವಂತೆಸಮರತಿಯೊಳಾದಂಪತಿ ಗಳು ||೩೧|| ಸಾಗರದನಡುವೆಫಣಿತಲ್ಪದೊಳ್ಸಿರಿಯೊಡನೆ | ಭೋಗಿಸುವತೆರದಿಂದಮಿಥಿಳೇಂದ್ರಸುತೆಯಸಂ | ಭೋಗದಿಂ ರಘುಕುಲಲಲಾಮನೆಸೆದಂಮನುಜಲೀಲೆಗಿದುಸಾರ್ಥಮೆನಲು || ರಾಗರಸದಿಂದಪುಳಕಂಪೊಣ್ಮೆನಲಿದುಮದ | ನಾಗಮಪ್ರೌಢಿ ಯಿಂಸಕಲರತಿಕಲೆಗಳಿಂ | ಪಾಗಲ್ಪರಸ್ಪರವಿಚಾರಮಂಮರದೈಕ್ಯಭಾವದಿಂಸೊಗಸುಗೊಳಿಸಿ || ೩೨ || ಇಂತೆಸೆವಸಮರತಿಯ ಸೊಬಗಿಂದಲವರೀರ್ವ | ರುಂತೊಳಲುತಿರೆಬಳಿಕವರವಿಷ್ಣುನಕ್ಷತ್ರ | ದಂತದೊಳ್ವೈದೇಹಿಗಾಯ್ತುಗರ್ಭಾಧಾನಮದರಫಲ

---

ಸಮರತಿಯೊಳು-ಸರಿಯಾದ ಸಂಭೋಗದ ಆಟಗಳಿಂದ, ಆ ದಂಪತಿಗಳ್-ಆ ಜಾಯಾಪತಿಗಳಾದ ಸೀತಾರಾಮರು, ಎಸೆದರು-ಶೋಭಿಸಿದರು ಕಾಂತಿಯುತಿಶಯದಿಂದ ಕೂಡಿದ್ದರು.

ಅ|| ವಿ|| ಆವರು+ದಂಪತಿಗಳ್-ಆ ದಂಪತಿಗಳ್ ಗ ಸ. ಸೀತೆಯೂ+ರಾಮನೂ=ಸೀತಾರಾಮರು ದ್ವಿ. ದ್ವಂ. ಸ. ಬೆನ್ನಂ+ಕೊಡದೆ=ಬೆಂಗೊಡದೆ ಕ್ರಿ. ಸ. ||೩೧||

ಟೀ|| ರಘುಕುಲ-ರಘುರಾಜನ ಕುಲದಲ್ಲಿ, (ರಘುವಂಶದಲ್ಲಿ) ಲಲಾಮ-ತಿಲಕಪ್ರಾಯನಾದ ಶ್ರೀರಾಮನು, ಸಾಗರದ-ಕ್ಷೀರಾಬ್ಧಿಯ, (ಪಾಲ್ಕಡಲಿನ) ನಡುವೆ-ಮಧ್ಯಭಾಗದಲ್ಲಿ, (ಒಳಗಡೆಯಲ್ಲಿ) ಫಣಿತಲ್ಪದೊಳ್-ಆದಿಶೇಷನೆಂಬ ಶಯ್ಯೆಯಲ್ಲಿ, ಸಿರಿಯೊಡನೆ-ಲಕ್ಷ್ಮೀದೇವಿಯುತನಾಗಿ, ಭೋಗಿಸುವ-ಸಂಭೋಗಿಸುವ (ರತಿಸುಖವ), ತೆರದಿಂದ-ಪರಿಯಿಂದ, ಮಿಥಿಳೇಂದ್ರಸುತೆಯ-ಜನಕರಾಯನ ಪುತ್ರಿಯಾದ ಜಾನಕಿಯ, ಸಂಭೋಗದಿಂ-ಸಹವಾಸಸುಖದಿಂದ, (ರತಿಸುಖದಿಂದ) ಎಸೆದಂ-ಪ್ರಕಾಶಿಸಿದನು, ಮನುಜಲೀಲೆಗೆ-ಮನುಷ್ಯಾವತಾರ ವಿನೋದಕ್ಕೆ, ಇದು-ಈ ಸೌಖ್ಯ ಸಂಪತ್ತು, ಸಾರ್ಥಂ-ಯೋಗ್ಯವಾದದ್ದು, ಎನಲು-ಎನ್ನುವಂತೆ, ರಾಗರಸದಿಂದ-ಪ್ರೀತಿಯೆಂಬ ರಸನಿಂದ, (ಅನುರಾಗರಸದಿಂದ) ಪುಳಕಂ-ರೋಮೋದ್ಗಮವು, ಪೊಣ್ಮೆ-ವ್ಯಾಪ್ತವಾಗಲು, (ಹೊಂದಲು) ನಲಿದು-ಹರ್ಷಗೊಂಡು (ಪ್ರೀತಿಸಿ), ಮದನಾಗಮಪ್ರೌಢಿಯಿಂ-ಮದನ ವಿದ್ಯಾ ಪ್ರೌಢಿಮೆಯಿಂದ, (ಮನ್ಮಥನ ವಿದ್ಯಾಜಾಣ್ಮೆಯಿಂದ) ಸಕಲ-ನಾನಾ ಬಗೆಗಳಾದ, ರತಿಕಲೆಗಳಿಂ-ಹಂಸ ಸರ್ಪ ಮಾರ್ಜಾಲಾದಿ ಬಂಧ ಭೇದಂಗಳಿಂದ, ಇಂಪಾಗಲು-ಆನಂದವನ್ನು ಹೊಂದಲು (ಮಾಧುರ್ಯವನ್ನು ಹೊಂದಲು), ಪರಸ್ಪರ ವಿಚಾರಮಂ-ಅನ್ಯೋನ್ಯವಾದ ಪರಿಶೀಲನೆಗಳನ್ನು, ಮರೆದು-ಮರೆತುಬಿಟ್ಟು, ಐಕ್ಯಭಾವದಿಂ-ಒಬ್ಬರಲೊಬ್ಬರು ಸೇರುವಿಕೆಯಿಂದ, (ಒಂದೇ ಎಂಬ ರೀತಿಯಿಂದ) ಸೊಗಸುಗೊಳಿಸಿ-ಆನಂದವನ್ನುಂಟುಮಾಡಿ (ಹರ್ಷಗೊಳಿಸಿ).

ಅ|| ವಿ|| ಫಣಿಯತಲ್ಪ-ಫಣಿತಲ್ಪ ಷ. ತ. ಸಿರಿ-ದ್ಭ. ಶ್ರೀ-ತ್ಸ. ದಶ ಕಾಮಾವಸ್ಥೆಗಳು-ಅಭಿಲಾಷೆ, ಚಿಂತೆ, ಸಂಸ್ಮೃತಿ, ವಿಭುಗುಣಸ್ಮೃತಿ, ಸಂತಾಪನ, ಕ್ರಿಯಾದ್ವೇಷ, ವಿಕಲ, ಮೌನ, ಮೂರ್ಛೆ, ಮರಣ. ಕಲೆ-ವಿದ್ಯ, ಕಳೆ, ಕಾಂತಿ. ಇಂತು+ಎಂದ=ಇಂತೆಂದ ಉಕಾರ ಲೋಪಸಂಧಿ. ||೩೨||

ಟೀ|| ಇಂತು-ಈ ಪ್ರಕಾರವಾಗಿ, ಎಸೆವ-ಶೋಭಿಸುವ, ಸಮರತಿಯ-ಸಮವಾದ ಸಂಭೋಗ ಕ್ರೀಡೆಯ, ಸೊಬಗಿಂದಲಿ-ಲಾವಣ್ಯದಿಂದ, ಅವರೀರ್ವರುಂ-ಆ ಜಾಯಾಪತಿಗಳಾದ ಸೀತಾರಾಮರು, ತೊಳಲುತಿರೆ-ರತಿ ಕ್ರೀಡೆಯಲ್ಲಿ ಬಳಸುತ್ತಿರಲು, ಬಳಿಕ-ಅನಂತರದಲ್ಲಿ, ವಿಷ್ಣು ನಕ್ಷತ್ರದ-ವಿಷ್ಣುವಿನ ಹೆಸರುಳ್ಳ ಉಡುವಿನ, (ವಿಷ್ಣುನಾಮವುಳ್ಳ ನಕ್ಷತ್ರದ) ಅಂತದೊಳು-ಕೊನೆಯಲ್ಲಿ, ವೈದೇಹಿಗೆ-ವಿದೇಹ ದೇಶದ ರಾಜನ ಮಗಳಾದ ಜಾನಕಿಗೆ, ಗರ್ಭಾಧಾನಂ-ಗರ್ಭವನ್ನು ಹೊಂದುವಿಕೆಯು, ಆಯ್ತು-ಉಂಟಾಯಿತು, ಅದರ-ಆ ಗರ್ಭವನ್ನು ಹೊಂದುವಿಕೆಯ, ಒಂದು ಮುಹೂರ್ತಕಾಲದ, ಫಲಮಂ-ಫಲಿತಾಂಶವನ್ನು, ನೋಡಲು-ಕಾಣಲು, ಎಂತಾದೊಡಂ-ಯಾವರೀತಿಯಾದರೂ, ತನ್ನ-ತನ್ನಯ, ಕಾಂತನಂ - ವಲ್ಲಭನಾದ ರಾಮಚಂದ್ರನನ್ನು, ಅಗಲ್ದು-ಬೇರೆಯಾಗಿ, ಬಿಟ್ಟು, ಸೀಮಂತಿನಿ-ಜಾನಕೀದೇವಿಯು, ಪರಸ್ಥಳದೊಳು-ಬೇರೆ ಪ್ರದೇಶದಲ್ಲಿ, ಅಣುಗರಂ-ಬಾಲಕರನ್ನು, ಪಡೆದಪಳು-ಹೊಂದುವಳು (ಪ್ರಸವಿಸುವಳು), ಆ ಕಾಂತೆ-ಆ ಜಾನಕಿಯು, ಅದಂ-ಆ ವಿಷಯವನ್ನು,

---

ಖವು ಸಾರ್ಥಕವಾದುದು ಎನ್ನುವಂತೆ ಅನುರಾಗ ರಸದಿಂದ ರೋಮೋದ್ಗಮವುಂಟಾಗಲು, ಆನಂದತುಂದಿಲನಾಗಿ ಕಳಾಶಾಸ್ತ್ರಾನುಗುಣ್ಯವಾಗಿ ಹಂಸ, ಮಾರ್ಜಾಲಾದಿ, ನಾನಾ ಬಗೆಗಳಾದ ಬಂಧ ಭೇದಗಳಿಂದ ಇಂಪಾಗಲು ಪರಸ್ಪರ ವಿಚಾರಮಂ ಮರೆದು ಐಕ್ಯಭಾವದಿಂದ ಕಂಗೊಳಿಸುತ್ತಾ || ೩೨ || ಈ ಪ್ರಕಾರವಾಗಿ ಶೋಭಿಸುವ ಸಮರತಿಯ ಸೊಬಗಿನಿಂದ ಆ ಶ್ರೀ ಸಿತಾರಾಮರಿಬ್ಬರೂ, ತೊಳಲುತಿರಲು (ಪರಸ್ಪರ ಪ್ರೀತಿಯಿಂದೊಪ್ಪುತ್ತಿರಲು) ಅನಂತರದಲ್ಲಿ ಶ್ರೇಷ್ಠವಾದ ವಿಷ್ಣು ನಕ್ಷತ್ರದ ಕೊನೆಯ ಭಾಗದಲ್ಲಿ ವಿದೇಹ ರಾಜಪುತ್ರಿಯಾದ ಸೀತಾದೇವಿಗೆ ಗರ್ಭಾಧಾನವುಂಟಾಯಿತು. ಆ ಗರ್ಭಧಾರಣೆಯ ಮುಹೂರ್ತದ ಪ್ರಯೋಜನವನ್ನು ಯೋಚಿಸಲು ಯಾವರೀತಿಯಾದಾಗ್ಯೂ ತನ್ನ ವಲ್ಲಭನಾದ ಶ್ರೀರಾಮಚಂದ್ರನನ್ನು ಅಗಲ್ದು, ಜಾನಕಿಯು ಪರ

ಮಂ ನೋಡಲು || ಎಂತಾದೊಡಂತನ್ನಕಾಂತನನಗಲ್ದು ಸೀ | ಮಂತಿನಿಪರಸ್ಥಳದೊಳಣುಗರಂಪಡೆದಪಳ | ದಂತಿಳಿಯದುತ್ಸವದೊಳಿರ್ದಳಾಕಾಂತೆಬಸುರಾದಲಾಂಛನವನಾಂತು ||೩೩|| ಸಣ್ಣಾನಡುಬೆಳೆಯೆತ್ರಿವಳಿಗಳಡಗೆತೆಳುವಾಸೆ | ನುಣ್ಣನೆಪೊಗರ್ವೊಗೆಯೆಚೂಚುಕದಕಪ್ಪೊಣ್ಕೆ | ತಿಣ್ಣಮೊಲೆಬಿಣ್ಪಡರೆಕಾಲ್ಮಂದಗತಿಗಲಸೆನಗೆಮೊಗಂಬಿಣ್ಪುದೋರೆ || ಕಣ್ಣೆವೆಯಪುರ್ಬಿನನವಿರ್ಮಿಂಚುದಳೆಯೆತನು | ತಣ್ಣಸದೊಳೆಸೆಯೆಪೊಸಗಾಡಿವೆತ್ತಿರ್ದಳೀ | ವಣ್ಣಿಸುವೆನುಲ್ಲಸತ್ಕಾಂಚನಲತಾಂಗಿಸುತಲಾಂಛನದಗರ್ಭದಿಂದ || ೩೪ || ಬೆಳ್ದಾವರೆಯೊಳೆರಗಿದಳಿಕುಲಂಗಗನಾಗ್ರ | ದೋಳ್ದಿನದಿನಕೆಬೆಳೆವಚಂದ್ರಕಲೆಕನಕಾದ್ರಿ | ಯೊಳ್ದಿಟ್ಟ

---

ತಿಳಿಯದೆ_ತಿಳಿದುಕೊಳ್ಳದೆ, ಬಸುರಾದ_ಗರ್ಭವನ್ನು ಹೊಂದಿದ, ಲಾಂಛನವನು_ಗುರುತನ್ನು (ಗುರುತನ್ನು) ಅಂತು-ಧರಿಸಿದವಳಾಗಿ, ಉತ್ಸವದೊಳು_ಉತ್ಸಾಹದಿಂದ, ಹರ್ಷದಿಂದ, ಇರ್ದಳು_ಇರುತ್ತಿದ್ದಳು ||

ಅ|| ವಿ|| ಗರ್ಭ-ಬಸಿರು, ಹೊಟ್ಟೆ, ವರ-ಶ್ರೇಷ್ಠ, ಅಳಿಯ, ಗಂಡ, ಪ್ರಸಾದ. ಗರ್ಭದ + ಧಾರಣೆ= ಗರ್ಭಧಾರಣೆ, ಷ. ತ. ಸೀಮಂತಉಳ್ಳವಳು-ಸೀಮಂತಿನಿ, ಲಾಂಛನ-ಗುರ್ತು, ಕಳಂಕ,ದೊಷ,ಚಿಹ್ನೆ ||೩೩||

ಟೀ|| ಉಲ್ಲಸತ್_ಕಾಂತಿಯತಿಶಯವಾದ, ಕಾಂಚನ-ಚಿನ್ನದಿಂದ ನಿರ್ಮಿತವಾದ, ಲತಾ-ಬಳ್ಳಿಯೋಪಾದಿಯಲ್ಲಿ, ಅಂಗಿ_ಶರೀರವುಳ್ಳವಳಾದ ಜಾನಕಿಯು, ಸುತ-ಪುತ್ರರನ್ನು ಹೊಂದತಕ್ಕ, ಲಂಛನದ-ಗುರ್ತುಗಳುಳ್ಳ, ಗರ್ಭದಿಂದ-ಬಸಿರನ್ನು ಹೊಂದಿದ ದೆಸೆಯಿಂದ, ಸಣ್ಣ_ಸಣ್ಣನಾದ, ನಡು-ಮಧ್ಯಪ್ರದೇಶವು, ಬೆಳೆಯೆ-ವೃದ್ಧಿಹೊಂದಲು, ತ್ರಿವಳಿಗಳು_ಹೊಟ್ಟೆಯ ಮೇಲಿರುವ ಮೂರು ತಿರಿಗಳು, ಅಡಗೆ - ಕಾಣದೇ ಹೋಗಲು, ತೆಳುವಾಸೆ – ಅತಿವಿರಳವಾದ ರೋಮಗಳ ಪಙ್ತಿಯು, ನುಣ್ಣನೆ-ನುಣುಪಾಗಿ, ಪೊಗರ್ವೊಗೆಯೆ-ಕಾಂತಿಯಂ ಪೊಂದಲು, ಎಂದರೆ ದಪ್ಪನಾದ ರೀತಿಯನ್ನು ಪಡೆಯಲು, ಚೂಚುಕದ-ಕುಚಗಳ ಕೊನೆಯ ಭಾಗಗಳ (ಸ್ತನಗಳ ಕೊನೆಯ), ಕಪ್ಪು-ನೀಲೀ ಬಣ್ಣವು, ಉಣ್ಕೆ-ಹೊಂದಲಾಗಿ, ತಿಣ್ಣ_ಗಟ್ಟಿಯಾದ (ಕರ್ಕಶವಾದ), ಮೊಲೆ-ಸ್ತನಗಳು, ಬಿಣ್ಪಡರೆ-ಬಿಳಿಯ ಛಾಯೆಯನ್ನು ಪೊಂದಲಾಗಿ, ಕಾಲ್-ಪಾದಗಳು, ಮಂದಗತಿಗೆ-ಮೆಲ್ಲಿನ ನಡಿಗೆಗೆ (ಮೆಲ್ನಡಿಗೆಗೆ), ಅಲಸೆ-ಆಯಾಸವನ್ನು ಹೊಂದಲು, ನಗೆಮೊಗಂ_ಹರ್ಷದಿಂದ ಯುಕ್ತವಾದ ಮುಖವು, ಬಿಣ್ಪುದೋರೆ_ಬಿಳಿಯ ಛಾಯೆಯನ್ನು ಹೊಂದಲು, ಕಣ್ಣೆವೆಯ-ಕಣ್ಣಿನ ರೆಪ್ಪೆಗೂದಲುಗಳ, ಪುರ್ಬಿನ-ಪುರ್ಬುಗಳ, (ಹುಬ್ಬುಗಳ ಪ್ರದೇಶದ), ನವಿರ್_ಕಾಂತಿಯು, (ತೇಜಸ್ಸು) ಮಿಂಚುದಳೆಯೆ-ಹೊಳಪನ್ನು ಹೊಂದುತ್ತಿರಲು, ತನು-ದೇಹವು, ತಣ್ಣಸದೊಳು-ಶೈತ್ಯದಿಂದ, (ತನುವಿನಿಂದ) ಎಸೆಯೆ_ಸೋಭಿಸಲು, (ಕಾಂತಿಯನ್ನು ಪೊಂದಲಾಗಿ) ಪೊಸ_ನೂತನವಾದ, ಗಾಡಿವೆತ್ತು-ಅಂದವನ್ನು ಪಡೆದು, ಇರ್ದಳು_ಇರುತ್ತಿದ್ದಳು ||

ಅ|| ವಿ|| ಗಾಡಿಯಂ ಪೆತ್ತು_ಗಾಡಿವೆತ್ತು, ಕ್ರಿಯಾ ಸ. ಕಾಂಚನದ+ಲತಾ=ಕಾಂಚನಲತಾ, ಷ. ತ. ಲತೆಯಂತೆ ಅಂಗವುಳ್ಳವಳು ಲತಾಂಗಿ, ಉ. ಪೂ. ಬಹು. ಸ. || ೩೪ ||

ಟೀ|| ಆಕಾಂತೆ_ಆ ಜಾನಕೀದೇವಿಯ, ಬೆಳ್ಗಳೆದ – ತೇಜಸ್ಸನ್ನು ಪಡೆದಿರುವ, ಚೆಲ್ವಿನ - ಲಾವಣ್ಯಾಯುತವಾದ, ಆನನದೊಳು_ಆಸ್ಯದಲ್ಲಿ, ಉರು-ಅಧಿಕವಾಗಿ, ಮಿರುಗುವ_ಶೋಭಿಸುವ, ಕುರುಳ್ಗೊಂಗಲ್_ಕೇಶಗಳ ಸಮೂಹವು. ಕೂದಲುಗಳ ಸಮುದಾಯವು, ಬೆಳ್ದಾವರೆಯೊಳು-ಪುಂಡರೀಕದಲ್ಲಿ, (ಬಿಳಿಯ ಪದ್ಮದಲ್ಲಿ) ಎರಗಿದ_ಮುತ್ತಿದ್ದ, ತುಂಬಿದ, ಅಳಿಕುಲಂ-ಭ್ರಮರಗಳ ಸಮೂಹವು, ರಾಜಿಸುವತೆರದೊಳು-ಶೋಭಿಸುವ ರೀತಿಯಹಾಗು, ಅಸಿನಡುವಿನೊಳು_ಕತ್ತಿಯೋಪಾದಿಯಲ್ಲಿ

---

ಸ್ಥಳದಲ್ಲಿ ಪುತ್ರರನ್ನನ್ನು ಹೊಂದುವಳು. ಆ ವೈದೇಹಿಯು ಆ ಸಂದರ್ಭವನ್ನು ತಿಳಿಯದೆ ಗರ್ಭಿಣಿಯ ಚಿಹ್ನೆಯನ್ನು ಹೊಂದಿದವಳಾಗಿ ಅತಿ ಹರ್ಷದಿಂದಿರುತಿರ್ದಳು ||೩೩|| ಶೋಭಾಯಮಾನವಾದ ಕಾಂಚನದ ಲತೆಯಂತೆ ಇರುವ ಶರೀರವುಳ್ಳವಳಾದ ಭೂಪುತ್ರಿಯಾದ ಜಾನಕಿಯು ಮಕ್ಕಳಂ ಪಡೆಯುವ ಲಾಂಛನವುಳ್ಳ, ಗರ್ಭವನ್ನು ಹೊಂದಿದ್ದರದೆಸೆಯಿಂದ, ಕೃಶವಾದ ಮಧ್ಯಪ್ರದೇಶವು ದಪ್ಪನಾಗುತ್ತಾ ಬರಲಾಗಿ, ಉದರದ ಮೇಲ್ಗಡೆಯಲ್ಲಿರುವ ತ್ರಿವಳಿಗಳು (ಮೂರು ಮಡಿಕೆಗಳು) ಕಡಿಮೆ ಯಾಗುತ್ತಾ ಬರಲು, ತೆಳುವಾದ ರೋಮಪಙ್ತಿಯು ನುಣ್ಣನಾಗಿ ಕಾಂತಿಯಿಂದೊಡಗೂಡಿರಲು, ಸ್ತನಾಗ್ರಭಾಗಗಳಲ್ಲಿ ಕಪ್ಪು ಬಣ್ಣವಾಗಲು, ಗಟ್ಟಿಗಿದ್ದ ಸ್ತನಗಳು ಬಿಳಿಯ ಛಾಯೆಯನ್ನು ಹೊಂದಲು, ಪಾದಗಳು ಮಂದಗತಿಗೆ ಬೀಳಲು (ನಡಿಗೆಯು ಗರ್ಭದ ಭಾರದಿಂದ ಮಂದಗತಿಗೆ ಬರಲು) ಮಂದಹಾಸ ಯುತವಾದ ಮುಖವು ಬಿಳಿ ಛಾಯೆಯನ್ನು ಹೊಂದಲು, ಕಣ್ಣೆವೆಯು ಮತ್ತು ಪುರ್ಬುಗಳ ಕಾಂತಿಯು ಮಿಂಚುತ್ತಿರಲು, ದೇಹವು ತನುವಿನಿಂದ ಪ್ರಕಾಶಿಸಲು, ನೂತನವಾದ ಸೌಂದರ್ಯವನ್ನು ಪಡೆದು ಪ್ರಕಾಶಿಸುತ್ತಿದ್ದಳು || ೩೪ || ಆಗ ವೈದೇಹಿಯು ಅತ್ಯಂತವಾದ ಕಾಂತಿಯನ್ನು ಹೊಂದಿ ಲಾವಣ್ಯಯುತವಾದ ಆಸ್ಯದಲ್ಲಿ ಎಂದರೆ ಮುಖದಲ್ಲಿ ಅತ್ಯಧಿಕವಾದ ಮಿರುಗುವ ಕೂದಲುಗಳ ಸಮೂಹವು ಬಿಳಿದಾದ ತಾವರೆಯಲ್ಲಿ ಎರಗಿದ ಭ್ರಮರಗಳ ಸ

ಗೊಳಿಸುವ ಸಿತಾಂಬುಜಂರಾಜಿಸುವತೆರದೊಳಾಕಾಂತೆಯ ‖ ಬಳ್ದಿಳಿದಚಲ್ವಿನಾನನದೊಳುರೆಮಿರುಗುವಕು | ರುಳ್ಗೊಂಗ ಳಿಸಿನಮುವಿನೊಳ್ಪೊಳೆವಗರ್ಭಂನೆ | ಗಳ್ದುಕುಚದೊಳ್ಮಿಸುಪಚೂಚುಕದಕಪ್ಪುಚೆಲ್ವಿನಿಂದ ಕಣ್ಗೆಸೆದಿರ್ದುದು ‖ ೩೫ ‖ ಚಂದ್ರ ಮುಖಿಯಾದ ವೈದೇಹಿಯಜಠರಮೆಂಬ | ಚಂದ್ರಕಾಂತದಮಣಿಯ ಮಧ್ಯದೊಳ್ತವೆರಾಮ | **ಚಂದ್ರನೆಂಬ ಖಿಳಲೋ ಕಾನಂದಕರಮಾದ ಸಂಪೂರ್ಣಕಲೆಗಳುಳ್ಳ** ‖ ಚಂದ್ರನವಿರಾಜಿಸುವಪ್ರತಿಬಿಂಬಮಾಗಿರ್ದ | ಚಂದ್ರನೆನೆಶಿಶುಗರ್ಭದೊಳ್ಪೊ ಳೆಯೆಕೂಡಿರ್ದ ಚಂದ್ರಿಕೆಯೊಳಂಗರುಚಿಬೆಳ್ಪಡರಲೊಪ್ಪಿನಿಂದೊಪ್ಪಿರ್ದಳುತ್ಪಲಾಕ್ಷಿ ‖ ೩೬ ‖ ಕಾಂಚನಲತಾಕೋಮಲಾಂಗಿಗ

---

ಬಳುಕುವ ಉದರದಲ್ಲಿ, ಪೊಳೆಯುವ - ಹೊಳೆಯುತ್ತಿರುವ, ಗರ್ಭಂ- ಹೊಟ್ಟೆಯಲ್ಲಿರುವ ಕೂಸು, (ಗರ್ಭೋತ್ಪತ್ತಿಯು) ಗಗನಾಗ್ರದೊಳ್-ಅಂತರಿಕ್ಷ ಮಂಡಲದಲ್ಲಿ, (ಆಕಾಶದಲ್ಲಿ) ದಿನದಿನಕೆ-ಪ್ರತಿನಿತ್ಯವೂ, ಬೆಳೆವ-ಅಭಿವೃದ್ಧಿಯನ್ನು ಹೊಂದುವ, ಚಂದ್ರಕಲೆ-ಎಳೆವೆರೆಯು ಎಂದರೆ ಬಾಲೇಂದುವು, ರಾಜಿಸುವ-ಶೋಭಿಸುವ, ತೆರದೊಳು-ಅಂದದಿಂದ, ನೆಗಳ್ದ-ಕಾಂತಿಯನ್ನು ಹೊಂದಿ (ಪ್ರಸಿದ್ಧಿಯನ್ನು ಹೊಂದಿ), ಕುಚದೊಳ್-ಮೊಲೆಗಳಲ್ಲಿ, (ಉರೋಜಗಳಲ್ಲಿ) ಮಿಸುವ-ಹೊಳೆಯುತ್ತಿರುವ, ಚೂಚುಕದ-ಕುಚಾಗ್ರಗಳ, ಕಪ್ಪು-ನೈಲ್ಯವು, ಕನಕಾದ್ರಿಯೊಳ್- ಸುವರ್ಣಾದ್ರಿಯಲ್ಲಿ, (ಮೇರುಪರ್ವತದಲ್ಲಿ) ದಿಟ್ಟಗೊಳಿಸುವ-ಕಂಗೊಳಿಸುವ, ಅಸಿತಾಂಬುಜಂ-ಕರಿನೈದಿಲೆಯು, ರಾಜಿಸುವ-ಶೋಭಿಸುವ - ತೆರದೊಳು-ರೀತಿಯಿಂದ, ಚೆಲ್ವಿಂದ-ಲಾವಣ್ಯದಿಂದ, ಕಣ್ಗೆ-ನೇತ್ರಗಳಿಗೆ, ಎಸೆದಿರ್ದುದು-ಶೋಭಿಸುತ್ತಿತ್ತು ‖

ಅ‖ ವಿ‖ ಅಳಿ-ಭ್ರಮರ, ಸಾಲು, ಕುಲ-ಗುಂಪು, ವಂಶ, ಕನಕದ + ಅದ್ರಿ = ಕನಕಾದ್ರಿ, ಷ. ತ. ಸಿತವಲ್ಲದ್ದು. ಅಸಿತ, ಅಸಿತವಾದ + ಅಂಬುಜ = ಅಸಿತಾಂಬುಜ, ವಿ. ಪೂ. ಕ. ಬಿಳಿದು + ತಾವರೆ = ಬೆಳ್ದಾವರೆ, ವಿ. ಪೂ. ಕ. ಬಿಳಿದ + ತಿಂಗಳು = ಬೆಳ್ದಿಂಗಳು, ವಿ. ಪೂ. ಕ. ಕಲೆ-ವಿದ್ಯೆ, ಕಾಂತಿ, ಅನುಕ್ರಮಾಲಂಕಾರವಾಗಿರ್ಪುದು ‖೩೫‖

ಟೀ‖ ಉತ್ಪಲಾಕ್ಷಿ-ನೈದಿಲೆಯಂತೆ ನೇತ್ರಗಳುಳ್ಳ, ವೈದೇಹಿ-ವಿದೇಹರಾಜಪುತ್ರಿಯಾದ ಸೀತೆಯು, ಜಠರವೆಂಬುವ-ಉದರವೆಂಬುವ, (ಹೊಟ್ಟೆಯೆನ್ನತಕ್ಕ) ಚಂದ್ರಕಾಂತದಮಣಿಯ-ಚಂದ್ರಕಾಂತ ಶಿಲೆಯ, ಮಧ್ಯದೊಳ್-ನಡುವಣ ಪ್ರದೇಶದಲ್ಲಿ, ತವೆ-ಅತ್ಯಂತವಾಗಿ, ರಾಮಚಂದ್ರನೆಂಬ-ರಾಮಚಂದ್ರಮೂರ್ತಿಯೆಂಬುವ, ಅಖಿಳ-ಸಮಸ್ತವಾದ, ಲೋಕ-ಪ್ರಪಂಚದ ಜನರಿಗೆ, ಆನಂದಕರಮಾದ-ಸಂತೋಷವನ್ನುಂಟುಮಾಡತಕ್ಕ, ಸಂಪೂರ್ಣಕಲೆಗಳುಳ್ಳ-ಷೋಡಶಕಲೆಗಳಿಂದ ಕೂಡಿದ, ಚಂದ್ರನ-ನಿಶಾಕರನ, ವಿರಾಜಿಸುವ-ಶೋಭಿಸುವ, ಪ್ರತಿಬಿಂಬಮಾಗಿರ್ದ - ಬದಲು ಬಿಂಬದಹಾಗೆಯಿದ್ದ, (ಪ್ರತಿಬಿಂಬದ ರೀತಿಯಿಂದಯಿರ್ದ) ಚಂದ್ರನನೆ-ಇಂದುವೋ ಎನ್ನುವ ರೀತಿಯಿಂದ, ಶಿಶು-ಸೀತೆಯ ಗರ್ಭದಲ್ಲಿರುವ ಮಗುವು, ಗರ್ಭದೊಳ್-ಹೊಟ್ಟೆಯಲ್ಲಿ, (ಜಠರದಲ್ಲಿ) ಪೊಳೆಯೆ-ಶೋಭಿಸಲಾಗಿ, ಕೂಡಿರ್ದ-ಕಲೆತಿರುವ, (ನೆರೆದಿರುವ) ಚಂದ್ರಿಕೆಯೊಲು-ಜ್ಯೋತ್ಸ್ನದಂತೆ, (ಬೆಳದಿಂಗಳೋಪಾದಿಯಲ್ಲಿ) ಅಂಗರುಚಿ-ದೇಹಕಾಂತಿಯು, (ಜಾನಕಿಯ ಶರೀರದ ತೇಜಸ್ಸು) ಬೆಳ್ಪಡರಲು-ಬಿಳಿಯ ಛಾಯೆಯನ್ನು ಪೊಂದಲಾಗಿ, ಚಂದ್ರಮುಖಿಯಾದ-ಇಂದುವಿನಂತೆ ವದನವುಳ್ಳ ವೈದೇಹಿಯು, ಒಪ್ಪಿನಿಂದ-ಚಲ್ವಿಕೆಯಿಂದ, (ಚಂದದಿಂದ) ಒಪ್ಪಿರ್ದಳು-ಶೋಭಿಸುತ್ತಿದ್ದಳು ‖

ಅ‖ ವಿ‖ ಚಂದ್ರನಂತೆ ಮುಖವುಳ್ಳವಳು-ಚಂದ್ರಮುಖಿ. ಉ ಪೂ. ಬಹು. ಸ. ಉತ್ಪಲಾಕ್ಷಿ, ಉ. ಪೂ. ಬಹು. ಸ. ವಿದೇಹರಾಜನ ಮಗಳು-ವೈದೇಹಿ, ಬಿಳುಪನ್ನು + ಅಡರೆ = ಬೆಳ್ಪಡರೆ, ಕ್ರಿ. ಸ. ರೂಪಕಾಲಂಕಾರ ‖೩೬‖

ಟೀ‖ ಇನಕುಲ-ಸೂರ್ಯವಂಶಕ್ಕೆ, ಅಧೀಶ್ವರಂ-ಸಾರ್ವಭೌಮನಾದ, (ಸೂರ್ಯವಂಶಕ್ಕೊಡೆಯನಾದ) ಶ್ರೀ ರಾಮಚಂದ್ರನು, ಕಾಂಚನ ಭಂಗಾರದ, ಲತಾ-ಲತೆಯಂತೆ, (ಬಳ್ಳಿಯಂತೆ) ಕೋಮಲಾಂಗಿ-ಮೃದ್ವಂಗಿಯಾದ, (ಮೋಹನಾಂಗಿಯಾದ)

---

ಮೂಹವು ಶೋಭಿಸುವಹಾಗೆಯೂ, ಖಡ್ಗದಂತೆ ತೊಳತೊಳಗುವ ಹೊಟ್ಟೆಯಲ್ಲಿ ಶೋಭಿಸುವ ಗರ್ಭವು ಗಗನಾಗ್ರದಲ್ಲಿ ಪ್ರತಿನಿತ್ಯವೂ ತೊಳಗುವ ಬಾಲಚಂದ್ರನು ಪ್ರಕಾಶಿಸುವ ರೀತಿಯಿಂದಲೂ ಆಧಿಕ್ಯವನ್ನು ಹೊಂದಿ, ಸ್ತನಗಳಲ್ಲಿ ಹೊಳೆಯುವ ಸ್ತನಾಗ್ರಗಳ ನೈಲ್ಯವು ಕನಕಾಚಲದಲ್ಲಿ ಪ್ರಕಾಶಿಸುವ ಕನ್ನೈದಿಲೆಯು ಶೋಭಿಸುವ ಅಂದದಿಂದ ಚೆನ್ನಾಗಿ ಪ್ರಕಾಶಿಸುತ್ತಿತ್ತು ಕ್ರಮಾಲಂಕಾರಂ ‖ ೩೫ ‖ ಚಂದ್ರನಂತೆ ಮನೋಲ್ಲಾಸಕರಮಾದ ವದನವುಳ್ಳ ಜಾನಕಿಯು, ಜಠರವೆಂಬುವ ಚಂದ್ರಕಾಂತದ ಮಣಿಯ ಮಧ್ಯದಲ್ಲಿ ಬಹುವಾಗಿ ರಾಮಚಂದ್ರನೆಂಬುವ ಅಖಿಳ ಲೋಕಾನಂದಕರಮಾದ ಸಂಪೂರ್ಣ ಕಳೆಗಳುಳ್ಳ ಚಂದ್ರನ ಶೋಭಿಸುವ ಪ್ರತಿಬಿಂಬದ ಹಾಗಿರುವ ಚಂದ್ರನೋ ಎನ್ನುವಂತೆ, ಶಿಶುವು ಗರ್ಭದಲ್ಲಿ ಹೊಳೆಯಲು ವ್ಯಾಪ್ತಮಾದ ಚಂದ್ರಿಕೆಯಲ್ಲಿ ವೈದೇಹಿಯ ದೇಹಕಾಂತಿಯು, ಧವಳವರ್ಣಮಂ ಪೊಂದಲಾಗಿ ಉತ್ಪಲಾಕ್ಷಿಯಾದ ಜಾನಕಿಯು ಅಂದದಿಂದ ಚೆನ್ನಾಗಿ ಒಪ್ಪಿದ್ದಳು (ಶೋಭಿಸುತ್ತಿದ್ದಳು) ‖೩೬‖ ಅನಂತರದಲ್ಲಿ ಇನಕುಲಾಧೀಶ್ವರನಾದ ಶ್ರೀರಾಮಚಂದ್ರನು ಕಾಂಚನದ ಲತೆಯೋಪಾದಿ

ರ್ಭಿಣಿಯಾದ । ಲಾಂಛನವನಿನಕುಲಾಧೀಶ್ವರಂಕಂಡುರೋ । ಮಾಂಚನದಹರುಷದಿಂನಾಲ್ಕನೆಯತಿಂಗಳೊಳ್ವಿಭವದಿಂಭೂ
ಸುರರ್ಗೆ ॥ ವಾಂಛಿತವನಿತ್ತುಪುಂಸವನಸೀಮಂತಮಂ । ತಾಂ ಚಾರುಲೋಚನೆಗೆವಿಸ್ತರಿಸಿದಂಚಿತ್ತಚಾಂಚಲ್ಯಮಿಲ್ಲದೆವಸಿಷ್ಠ
ವಿಶ್ವಾಮಿತ್ರರುಕ್ತದಿಂಮಾಡಿಸಲ್ಕೆ ॥ ೩೭ ॥ ಯೋಜನತ್ರಯದಗಲದುತ್ಸವದಶಾಲೆಯಂ । ರಾಜಿಸಲ್ಕೈಗೈಸಿಬಳಿಕಲ್ಲಿನೆರದನಾ ।
ನಾಜನಕೆದಿವಿಜರ್ಗೆ ಸುಗ್ರೀವಮೊದಲಾದಕಪಿಗಳ್ಗೆ ಭೂಸುರರ್ಗೆ ॥ ರಾಜವರ್ಗಕೆ ವಿಭೀಷಣಮುಖ್ಯದೈತ್ಯರ್ಗೆ । ಭೋಜನ

---

ಜಾನಕಿದೇವಿಯು), ಗರ್ಭಿಣಿಯಾದ_ಗರ್ಭವತಿಯಾದ, ಲಾಂಛನವನು-ಕುರುಹನ್ನು, (ಗುರುತನ್ನು) ಕಂಡು-ಈಕ್ಷಿಸಿ, ರೋಮಾಂ
ಚನದ_ಹರ್ಷಪುಳಕದ, (ರೋಮೋದ್ಗಮದ) ಹರ್ಷದಿಂ_ಮುದದಿಂದ, (ಸಂತೋಷದಿಂದ) ನಾಲ್ಕನೆಯತಿಂಗಳೊಳ್_ನಾಲ್ಕ
ನೆಯ ಮಾಸದಲ್ಲಿ, ವಿಭವದಿಂ_ವಿಜೃಂಭಣೆಯಿಂದ, (ಆಟ್ಟಹಾಸದಿಂದ) ಭೂಸುರರ್ಗೆ_ಭೂದೇವತೆಗಳಾದ ಬ್ರಾಹ್ಮಣರಿಗೆ, ವಾಂ
ಛಿತವನು_ಕೇಳಿದ ವಸ್ತುವನ್ನು, (ಇಚ್ಛೆಪಟ್ಟ ಪದಾರ್ಥಗಳನ್ನು) ಇತ್ತು_ದಾನವಾಗಿಕೊಟ್ಟು, ವಸಿಷ್ಠ ವಿಶ್ವಾಮಿತ್ರರು_ಕುಲ
ಪುರೋಹಿತರೂ ಮತ್ತು ಕುಲಗುರುಗಳೂ ಆದ ವಸಿಷ್ಠ ವಿಶ್ವಾಮಿತ್ರಋಷಿಗಳು, ಉಕ್ತದಿಂ_ವಿಧ್ಯುಕ್ತದಿಂದ, (ವೇದದಲ್ಲಿ ಹೇಳಿ
ರುವ ಪ್ರಕಾರ) ಮಾಡಿಸಲ್ಕೆ_ನೆರವೇರಿಸಲಾಗಿ, ಚಾರುಲೋಚನೆಗೆ_ಚಂಚಲಾಕ್ಷಿಯಾದ ಎಂದರೆ ಮನೋಹರವಾದ ನೇತ್ರಗಳುಳ್ಳ
ಜಾನಕೀದೇವಿಗೆ, ಪುಂಸವನ_ಸ್ತ್ರೀಯರು ಗರ್ಭಧಾರಿಣಿಯರಾದಾಗ ಮಾಡುವ ಕರ್ಮವನ್ನು, ಸೀಮಂತಮಂ_ಸೀಮಂತವೆಂಬ
ಪ್ರಸ್ತುತವನ್ನು, ತಾಂ-ಶ್ರೀರಾಮಚಂದ್ರನು, ಚಿತ್ತ-ಮನವು, (ಹೃದಯವು) ಚಾಂಚಲ್ಯಮಿಲ್ಲದೆ-ಚಪಲತೆಯನ್ನು ಹೊಂದದೆ,
ವಿಸ್ತರಿಸಿದಂ-ನೆರವೇರಿಸಿದನು (ಉಂಟು ಮಾಡಿಸಿದನು.)

ಅ॥ ವಿ॥ ಇನನ+ಕುಲ=ಇನಕುಲ ಷ. ತ. ಇನಕುಲದ+ಅಧೀಶ್ವರ=ಇನಕುಲಾಧೀಶ್ವರ ಷ. ತ. ಕುಲ+ಅಧೀಶ=ಕುಲಾ
ಧೀಶ ಸ. ದೀ. ಸಂಧಿ. ಕಾಂಚನದ+ಲತಾ=ಕಾಂಚನಾಲತಾ ಷ. ತ. ಚಿತ್ತ-ಮನಸ್ಸು, ಚಿತ್ತಾ_ನಕ್ಷತ್ರ. ಚಂದ್ರನ ಷೋಡಶಕಲೆ
ಗಳು-ಅಮೃತ, ಮಾನದ, ಪೂಷ, ತುಷ್ಟಿ, ಪುಷ್ಟಿ, ರತಿ, ಧೃತಿ, ಶಶಿನೀ, ಚಂದ್ರಿಕಾ, ಕಾಂತಿ, ಜ್ಯೋತ್ಸ್ನಾ, ಶ್ರೀ. ಅಂಗದಾ,
ಪೂರ್ಣ, ಅಮೃತಾ, ಕಾಮದಾಯಿನಿ. ॥೩೭॥

ಟೀ॥ ರಾಘವಂ_ರಘುಕುಲೋತ್ಪನ್ನನಾದ ಶ್ರೀರಾಮನು, ಯೋಜನತ್ರಯದ_ಮೂರುಯೋಜನ ಪ್ರಮಾಣದ, ಅಗ
ಲದ_ವೈಶಾಲ್ಯವುಳ್ಳ, ಉತ್ಸವಶಾಲೆಯಂ_ಉತ್ಸವದ ಮಂದಿರವನ್ನು, ರಾಜಿಸಲ್ಕೆ-ಪ್ರಜ್ವಲಿಸುವ ಹಾಗೆ (ಕಂಗೊಳಿಸುವ ಹಾಗೆ),
ಗೈಸಿ_ಏರ್ಪಡಿಸಿ ಬಳಿಕ-ಅನಂತರದಲ್ಲಿ, ನೆರದ_ಕೂಡಿದ, ನಾನಾ ಜನಕೆ_ಸಕಲರಾದ ಜನಸಮೂಹಕ್ಕೂ, ಎಂದರೆ_ದಿವಿಜರ್ಗೆ_
ಅಮರರಿಗೂ, ಸುಗ್ರೀವ-ಸುಗ್ರೀವನೆ, ಮೊದಲಾದ_ಆದಿಯಾದ. ಕಪಿಗಳ್ಗೆ-ವಾನರಶ್ರೇಷ್ಠರಿಗೂ, ಭೂಸುರರ್ಗೆ-ಭೂದೇವತೆಗ
ಳಾದ ಬ್ರಾಹ್ಮಣರಿಗೂ, ರಾಜವರ್ಗಕೆ_ರಾಜಮಂಡಲಿಯವರಿಗೂ, ವಿಭೀಷಣ_ರಾವಣನ ತಮ್ಮನಾದ ವಿಭೀಷಣನೆ, ಮುಖ್ಯ-
ಮೊದಲಾದ, ದೈತ್ಯರ್ಗೆ_ದನುಜಶ್ರೇಷ್ಠರಿಗೂ, ಭೋಜನ-ಆಹಾರಾದಿಗಳನ್ನು, ಸುಗಂಧ_ಸುವಾಸನೆಯುಳ್ಳ ಗಂಧ ಪರಿಮಳ
ವನ್ನು, ತಾಂಬೂಲ-ಎಲೆ ಅಡಿಕೆ ಮೊದಲಾದುವನ್ನೂ, ಕುಸುಮ_ಪುಷ್ಪವು, ಅಕ್ಷತೆಯ_ಮಂತ್ರಾಕ್ಷತೆಯುಕ್ತವಾದ, ಪೂಜೆ-
ಅರ್ಚನೆಯು, ವಸ್ತ್ರಾಭರಣದ_ಉಡಿಗೆ ತೊಡವುಗಳನ್ನು, ಕೊಟ್ಟು_ಮರ್ಯಾದಾರ್ಥವಾಗಿ ದಯೆಪಾಲಿಸಿ, ಮನ್ನಿಸಿದನು_ಮನ್ನಣೆ
ಯನ್ನು ಮಾಡಿದನು.

ಅ॥ ವಿ॥ ಮಾನ್ಯತಾ_ತ್ಸ. ಮನ್ನಣೆ-ದ್ಭ. ಉಡುಗೆಯೂ+ತೊಡಿಗೆಯೂ ಇವುಗಳು=ಉಡುಗೆ ತೊಡಿಗೆಗಳು ದ್ವಿ.

---

ಮನೋಹರಾಂಗಿಯಾದ ಭೂಮಿಜೆಯು, ಗರ್ಭಿಣಿಯಾದ ಲಾಂಛನವನ್ನು ಕಂಡು ರೋಮೋದ್ಗಮದ ಹರ್ಷದಿಂದ ನಾಲ್ಕನೆಯ
ಮಾಸದಲ್ಲಿ ಅತ್ಯಧಿಕವಾದ ವೈಭವದಿಂದ, ಭೂ ದೇವತೆಗಳಾದ ಬ್ರಾಹ್ಮಣರಿಗೆ ಅವರು ಕೋರಿದ ವಸ್ತುಗಳನ್ನು ದಾನಮಾಡಿ
ಗುರುಗಳಾದ ವಶಿಷ್ಠ ವಿಶ್ವಾಮಿತ್ರ ಇವರುಗಳು ಹೇಳಿದ ಕ್ರಮದಿಂದ. (ವೇದೋಕ್ತಮಾರ್ಗದಿಂದ) ಮಂಗಳ ಕಾರ್ಯಗಳನ್ನು
ಮಾಡಿಸಲಾಗಿ ಚಂಚಲಾಕ್ಷಿಯಾದ ಜಾನಕಿಗೆ ಪುಂಸವನ ಸೀಮಂತಗಳನ್ನು ತಾನು ಚಿತ್ತಚಾಂಚಲ್ಯವಿಲ್ಲದವನಾಗಿ ನೆರವೇರಿಸಿ
ದನು ॥೩೭॥ ಬಳಿಕ ಶ್ರೀರಾಮಚಂದ್ರಮೂರ್ತಿಯು, ಮೂರುಯೋಜನ ವಿಸ್ತಾರದ ಉತ್ಸವ ಶಾಲೆಯನ್ನು ಪ್ರಕಾಶಿಸುವಂತೆ
ನಾನಾವಿಧವಾದ ವೈಭವಗಳಿಂದ ಏರ್ಪಡಿಸಿ, ತರುವಾಯ ಆ ಉತ್ಸವ ಶಾಲೆಯಲ್ಲಿ ಅನ್ಯೋನ್ಯವಾಗಿ ಕಲೆತಿದ್ದ ನಾನಾವರ್ಗದ
ಜನರಿಗೆ ಎಂದರೆ ದೇವತೆಗಳಿಗು, ಸುಗ್ರೀವನೇ ಮೊದಲಾದ ವಾನರ ಸೈನ್ಯದವರಿಗೂ ಭೂ ದೇವತೆಗಳಾದ ಬ್ರಾಹ್ಮಣ
ರಿಗೂ, ರಾಜವರ್ಗದವರಿಗೂ, ವಿಭೀಷಣನೇ ಆದಿಯಾದ ಮುಖ್ಯ ದೈತ್ಯಶ್ರೇಷ್ಠರಿಗೂ, ಭೋಜನವು, ಸುಗಂಧವು, ತಾಂಬೂಲ,
ಪುಷ್ಪವು, ಅಕ್ಷತೆಯು ಇವೇ ಮೊದಲಾದವುಗಳಿಂದ ಆದರಿಸಿ ಪೂಜಿಸಿ, ಉಡುಗೊರೆಗಳನ್ನಿತ್ತು ಮನ್ನಿಸಿದನು॥೩೮॥ ಶರಣಜನರಲ್ಲಿ
ಆದರವುಳ್ಳ ಆ ಶ್ರೀರಾಮಚಂದ್ರನು ಪುಂಸವನ, ಸೀಮಂತೋತ್ಸವಕ್ಕೋಸ್ಕರವಾಗಿ ಬಂದಿದ್ದ ಸಕಲರನ್ನೂ ಯುಕ್ತಾನುಸಾರವಾಗಿ

ಸುಗಂಧತಾಂಬೂಲಪುಷ್ಪಾಕ್ಷತೆಯು | ಪೂಜೆವಸ್ತ್ರಾಭರಣದುಡುಗೊರೆಗಳಂಕೊಟ್ಟುರಾಘವಂಮನ್ನಿಸಿದನು || ೩೮ || ಉತ್ಸವಕೆಬಂ
ದನಿಬರೆಲ್ಲರಂಶರಣಜನ | ವತ್ಸಲಂಸತ್ಕರಿಸಿಬೀಳ್ಕೊಟ್ಟುರಾಜಸಂ | ಪತ್ಸುಖದೊಳಿಪ್ಪನಿತರೊಳ್ಬಳಿಕಸೀತೆನಿಜಕಾಂತನೇ
ಕಾಂತಕೈದಿ || ಕುತ್ಸಿತಂಪೊದ್ದದಾಶ್ರಮಕೆಋಷಿಪತ್ನಿಯರ | ಸತ್ಸಂಗದೊಳ್ತನ್ನಬೇಸರಂತವಿಸುವೆನಿ | ದುತ್ಸುಕಂತನಗದಿ
ರಲಿನ್ನೊಮ್ಮೆಬನಕೆತನ್ನಂಕಳುಹಬೇಕೆಂದಳು || ೩೯ || ಆಕ್ಷಿತಿಜೆಬಯಕೆಯಂಬಿನ್ನೈಸೆಕೇಳ್ದುನಗು | ತಾಕ್ಷೇಪದಿಂದಕಳು
ಹುವನಾಗಿಸಂತೈಸಿ | ರಾಕ್ಷಸಾಂತಕನಿರಲ್ಕೊಂದಿರುಳ್ಕನಸುಕಂಡೇಳುತವಸಿಷ್ಠನೊಡನೆ || ಈಕ್ಷೋಣಿಸುತೆಗಂಗೆಯಂಕಳೆದು

---

ದ್ವಂ. ಸ. ಭೂಮಿಯ+ಸುರ=ಭೂಸುರ ಷ. ತ. ರಾಜವರ್ಗ ಷ. ತ. ಭೋಜನವೂ, ಸುಗಂಧವೂ, ತಾಂಬೂಲವೂ, ಪುಷ್ಪವೂ, ಭೋಜನ ಸುಗಂಧ ತಾಂಬೂಲ ಪುಷ್ಪಗಳು ಬಹು. ದ್ವಂ. ಸ. ||೩೮||

ಟೀ|| ಶರಣಜನ-ಮರೆಹೊಂದಿದ ಜನಗಳಲ್ಲಿ, ವತ್ಸಲಂ-ಮಮತೆಯುಳ್ಳ ಶ್ರೀರಾಮನು, ಉತ್ಸವಕೆ-ಪುಂಸವನ ಸೀಮಂತವೇ ಮೊದಲಾದ ಮಂಗಳ ಕಾರ್ಯಕ್ಕೆ ಬಂದಿದ್ದ, ಅನಿಬರೆಲ್ಲರಂ-ಸಕಲರನ್ನೂ, ಸತ್ಕರಿಸಿ-ಉಪಚಾರವನ್ನು ಮಾಡಿ, ಬೀಳ್ಕೊಟ್ಟು-ಪುನಹ ಕಳುಹಿಸಿಕೊಟ್ಟು, ರಾಜಸಂಪತ್ಸುಖದೊಳು-ರಾಜ್ಯಭಾರದ ಸುಖ ಸಂಪತ್ತಿನಿಂದ, ಇರ್ಪ-ಇರುತ್ತಿರುವ, ಅನಿತರೊಳ್-ಅಷ್ಟರೊಳಗೆ, ಬಳಿಕ-ತರುವಾಯ, ಸೀತೆ-ಜಾನಕಿಯು, ನಿಜಕಾಂತನ-ವಲ್ಲಭನಾದ ಶ್ರೀರಾಮನ, ಏಕಾಂತಕೆ-ಅಂತರಂಗಸ್ಥಳಕ್ಕೆ, ಐದಿ-ಬಂದವಳಾಗಿ, ಕುತ್ಸಿತಂ-ಕೃತ್ರಿಮವನ್ನು (ಕಪಟವನ್ನು), ಪೊದ್ದದ-ಪ್ರಾಪ್ತವಾಗದ, (ಪೊಂದದ) ಆಶ್ರಮಕೆ-ಋಷ್ಯಾಶ್ರಮಕ್ಕೆ, ಋಷಿಪತ್ನಿಯರ - ಋಷಿಗಳ ಹೆಂಗಸರ, ಸತ್ಸಂಗದೊಳ್- ಸತ್ಸಹವಾಸದಲ್ಲಿ, ತನ್ನ-ತನ್ನಯ, ಬೇಸರಂ-ಬಯಕೆಯ ಬೇಜಾರನ್ನು, ತವಿಸುವೆನು-ಪರಿಹರಿಸಿಕೊಳ್ಳುವೆನು, ತನಗೆ-ಎನಗೆ, ಇದು-ಈ ರೀತಿಯಾದ, ಉತ್ಸುಕಂ-ಕೋರಿಕೆಯು, (ಅಪೇಕ್ಷೆಯು) ಇರಲಿ-ಇರುತ್ತಿರಲಿ, ಇನ್ನೊಮ್ಮೆ-ಮತ್ತೊಂದಾವರ್ತಿ, (ಎರಡನೆಯ ಸಲ) ತನ್ನಂ-ಎನ್ನನ್ನು, ಬನಕೆ-ಅರಣ್ಯವಾಸಕ್ಕೆ, ಕಳುಹಬೇಕು-ಕಳುಹಿಸಿಕೊಡಬೇಕು, ಎಂದಳು-ಎಂಬದಾಗಿ ಹೇಳಿದಳು.

ಅ|| ವಿ|| ಋಷಿಯ+ಪತ್ನಿ=ಋಷಿಪತ್ನಿ ಷ. ತ. ಸತ್+ಸಂಗ=ಸತ್ಸಂಗ ಶ್ಚುತ್ವಸಂಧಿಗೆ ಪ್ರತಿ. ಪ್ರ. ಬನ-ದ್ಭ. ವನ-ತ್ಸ. ಗರ್ಭಿಣಿಯರು ಬಯಸಿದ ಬಯಕೆಯನ್ನು ಹೋಗಲಾಡಿಸದಿದ್ದರೆ ಗರ್ಭವು ಚೆನ್ನಾಗಿ ಬೆಳೆವುದಿಲ್ಲ. ||೩೯||

ಟೀ|| ರಾಕ್ಷಸಾಂತಕಂ-ದಾನವರಿಗೆ ಯಮಸ್ವರೂಪನಾದ ಶ್ರೀರಾಮಚಂದ್ರನು, ಆ ಕ್ಷಿತಿಜೆ-ಆ ಸೀತೆಯು, ಭೂಮಿಜೆಯಾದ ಸೀತೆಯು, ಬಯಕೆಯಂ-ತನ್ನ ಕೋರಿಕೆಯನ್ನು, ಬಿನ್ನೈಸೆ-ವಿಜ್ಞಾಪನೆಯನ್ನು ಮಾಡಲಾಗಿ, ಕೇಳ್ದು-ಆ ವಿಷಯವನ್ನು ಕೇಳಿ, ನಗುತ-ನಗುತ್ತಾ, (ಹರ್ಷಿಸುತ್ತ) ಆಕ್ಷೇಪದಿಂದ-ಅಡ್ಡಿಯಿಂದ, (ಆಕ್ಷೇಪಣೆಯಿಂದ) ಕಳುಹುವನನಾಗಿ-ಕಳುಹಿಸಿಕೊಡಲು ಒಪ್ಪಿದವನಾಗಿ, ಸಂತೈಸಿ-ಮನಸ್ಸಮಾಧಾನವನ್ನು ಪಡಿಸಿ, ಇರಲ್ಕೆ-ಇರುತ್ತಿರಲಾಗಿ, ಒಂದಿರುಳು-ಒಂದುದಿನ ರಾತ್ರಿಯಲ್ಲಿ, ಕನಸಂ-ಕನವರಿಕೆಯನ್ನು, (ಕನಸ್ಸನ್ನು) ಕಂಡು-ಈಕ್ಷಿಸಿ, ಏಳುತ-ಏಳುತ್ತ, (ಮೇಲಕ್ಕೆ ಏಳುತ್ತ) ವಸಿಷ್ಠರೊಡನೆ-ಕುಲಪುರೋಹಿತರಾದ ವಸಿಷ್ಠಮುನಿಗಳ ಸಂಗಡ, ಈ ಕ್ಷೋಣಿಸುತೆ-ಭೂಪುತ್ರಿಯಾದ ಜಾನಕಿಯು, ಗಂಗೆಯಂ-ಜಾಹ್ನವಿಯನ್ನು (ದೇವಗಂಗೆಯನ್ನು), ಕಳೆದು-ಅತಿಕ್ರಮಿಸಿ, ಕಾಡೊಳ್-ಅರಣ್ಯದಲ್ಲಿ, ಮಹಾ-ಅಧಿಕವಾಗಿ, ಕ್ಷೀಣೆಯಾಗಿ-ಕೃಶಳಾಗಿ, ದೇಶಿಗರಂತೆ-ಪರದೇಶಿಯಹಾಗೆ, (ಅನಾಥರಹಾಗೆ) ದೆಸೆವೆಸೆಯಂ-ಎಂಟು ದಿಕ್ಕುಗಳನ್ನು, ಈಕ್ಷಿಸುತ-ಕಾಣುತ್ತ, ಅಳುತಿರ್ದುದಂ-ರೋದನಗೈಯುತ್ತಿದ್ದುದನ್ನು, ಕಾಣ್ಬೆನು- ನೋಡಿದೆನು, ಇದು-ಈ ರೀತಿಯಾದ ಕನವರಿಕೆಯು, ಲೇಸಹುದೆ- ಮೇಲಾಗುತ್ತದೆಯೆ, ಪೇಳ್-ಹೇಳು, ಎಂದನು-ಎಂದು ಹೇಳಿದನು.

---

ಮರ್ಯಾದೋಪಚಾರಗಳಿಂದ ಸತ್ಕರಿಸಿ, ಕಳುಹಿಸಿಕೊಟ್ಟು ರಾಜ ಸಂಪತ್ಸುಖದಲ್ಲಿ ಇರುವಷ್ಟರಲ್ಲಿಯೇ ಜಾನಕಿಯು ತನ್ನ ಪ್ರಾಣವಲ್ಲಭನಾದ ಶ್ರೀರಾಮಚಂದ್ರನ ಏಕಾಂತಗೃಹಕ್ಕೆ ಬಂದು ಅಕೃತ್ಯ ಮೋಸಾದಿಗಳನ್ನು ಹೊಂದದ ಋಷ್ಯಾಶ್ರಮಕ್ಕೆ ಹೋಗಿ ಋಷಿಪತ್ನಿಯರ ಸತ್ಸಹವಾಸದಲ್ಲಿ ಕೆಲಗಾಲವಿದ್ದು ತನ್ನ ಬೇಜಾರನ್ನು ಹೋಗಲಾಡಿಸಿಕೊಳ್ಳಬೇಕೆಂದು ನನಗೆ ಅತಿಯಾಗಿ ಮನವು (ಬಯಕೆಯು) ಬಾಧಿಸುತ್ತಿರುವುದು. ಆದ್ದರಿಂದ ದಯೆಗೈಯ್ದು ಮತ್ತೊಂದಾವರ್ತಿ ನನ್ನನ್ನು ಬನಕೆ ಕಳುಹಿಕೊಡೆನುತ ಬೇಡಿದಳು || ೩೯ || ಆಗ ರಾಕ್ಷಸಾಂತಕನಾದ ಶ್ರೀರಾಮಚಂದ್ರನು, ಭೂಪುತ್ರಿಯಾದ ಜಾನಕಿಯ ಬಯಕೆಯನ್ನೆಲ್ಲಾ ಲಾಲಿಸಿದವನಾಗಿ ನಗುತ್ತ ಆಕ್ಷೇಪದಿಂದ ಕಳುಹಿಸುವವನಾಗಿ ಸಮಾಧಾನವನ್ನು ಪಡಿಸಿ ಇರಲು, ಒಂದಾನೊಂದು ದಿನ ಕನಸನ್ನು ಕಂಡು ಏಳುತ್ತ, ಕುಲಗುರುಗಳಾದ ವಸಿಷ್ಠಮಹರ್ಷಿಯ ಸಂಗಡ ಈ ಭೂಮಿಜೆಯಾದ ಸೀತಾದೇವಿಯು, ದೇವಗಂಗೆಯನ್ನು ಅತಿಕ್ರಮಿಸಿ, ಕಾಡಿನಲ್ಲಿ ಕಂಗೆಟ್ಟು ಅತಿಯಾಗಿ ಬಳಲಿ, ಅನಾಥರಹಾಗೆ ಬಹುವಾಗಿ ಆಯಾಸವಂ ಪೊಂದಿ, ದೆಸೆದೆಸೆಯನ್ನು ನೋಡುತ್ತ ಪ್ರಲಾಪಿಸುತ್ತಿರ್ದುದನ್ನು ನೋಡಿದವನಾದೆನು. ಈ ರೀತಿಯಾದ ಸ್ವಪ್ನವು ಉತ್ತಮವಾದುದೇ? ಅಥವಾ

ಕಾಡೊಳ್ಕೆ | ಹಾಕ್ಷೀಣೆಯಾಗಿದೇಸಿಗರಂತೆದೆಸೆದೆಸೆಯ | ನೀಕ್ಷಿಸುತಮುರುಗುತಳುತಿರ್ಪುದಂಕಾಣ್ಬೆನಿದುಲೇಸಹುದೆನೇಳೆಂದನು || ೪೦ || ಎನೆಕನಸಿದೊಳ್ಳಿತಲ್ಲೆಂದದಕೆಶಾಂತಿಯಂ | ಮುನಿವರವಸಿಷ್ಠಂನೆಗಳ್ಚಿದಂಬಳಿಕಮನ | ದನುತಾಪದಿಂಪ್ರಜೆಯ ನಾರೈವುದಂಮರದೆರಡುಮೂರುದಿವಸಮಿರ್ದು || ಜನಮುಲಸಿದವುವೆಂದುರಾತ್ರಿಯೊಳ್ಪೊರಮಟ್ಟು | ದಿನಪಕುಲತಿಲಕನೇಕಾಂತದೋಳ್ನಗರಶೋ | ಧನೆಯಚರರೊಳಗೊರ್ವನಂಕರೆಸಿಕೇಳ್ದನಿಂತೆಂದುವಿನಯೋಕ್ತಿಯಿಂದ || ೪೧ || ನಿಂದಿಸರಲೇಪ್ರಜೆಗಳಿನ್ನೆಗಂತನ್ನಗುಣ | ಕೊಂದಿಸರಲೇಪಳಿವನಮುಲತರಕೀರ್ತಿಯಂ | ಕಂದಿಸರಲೇದೂಸರಿಂದಭುಜವಿಜಯಪ್ರತಾಪತೇಜವನಿಳೆ

---

ಅ|| ವಿ|| ಅವನಿಯಲ್ಲಿ+ಜೆ, ಅವನಿಜೆ, ಕೃ. ವೃ. ಕ್ಷತ-ಗಾಯ, ಕ್ಷಿತಿ-ಭೂಮಿ, ಅರಿ-ತಿಳಿ ಶತ್ರು. ಹರಿ-ವಿಷ್ಣು, ನಾಮ-ಹೆಸರು. ನೇಮ-ನಿಯಮ, ಇವಳು ಕ್ಷೋಣಿಸುತೆ, ಈ ಕ್ಷೋಣಿಸುತೆ, ಗ. ಸ. ||೪೦||

ಟೀ|| ದಿನಪ-ಭಾಸ್ಕರನ, ಕುಲ-ವಂಶದಲ್ಲಿ, ತಿಲಕಂ-ತಿಲಕಪ್ರಾಯನಾದ, (ಶ್ರೇಷ್ಠನಾದ) ಶ್ರೀರಾಮನು, ಎನೆ-ಎಂಬದಾಗಿ ಹೇಳಲು, ಕನಸಿದು-ಈ ಕನವರಿಕೆಯು, ಒಳ್ಳಿತು – ಯೋಗ್ಯವಾದದ್ದು, ಅಲ್ಲ – ಆಗಿರುವದಿಲ್ಲ, ಎಂದು-ಎಂಬದಾಗಿ, ಅದಕೆ-ಆ ಕೆಟ್ಟ ಕನಸಿಗೆ, ಶಾಂತಿಯಂ-ಪರಿಹಾರವನ್ನು, (ಸಮಾಧಾನವನ್ನು) ಮುನಿವರ-ಋಷಿಶ್ರೇಷ್ಠನಾದ, ವಸಿಷ್ಠಂ-ವಸಿಷ್ಠ ಮಹರ್ಷಿಯು, ನೆಗಳ್ಚಿದಂ-ನೆರವೇರಿಸಿದನು, ಬಳಿಕ-ಅನಂತರದಲ್ಲಿ, ಮನದ-ಮನಸ್ಸಿನ, ಅನುತಾಪದಿಂ-ವ್ಯಥೆಯಿಂದ (ಶೋಕದಿಂದ) ಪ್ರಜೆಯ-ನಾಗರಿಕರನ್ನು, ಆರೈವುದಂ-ಸಂರಕ್ಷಿಸುವುದನ್ನು, ಮರೆದು-ವಿಸ್ಮೃತಿಯನ್ನು ಹೊಂದಿ, ಎರಡು ಮೂರು ದಿವಸಂ-ಎರಡು ಮೂರು ದಿನಗಳು, ಇರ್ದು-ಇದ್ದುಕೊಂಡು, ಬಳಿಕ-ತರುವಾಯ, ಜನಂ-ಪ್ರಜೆಯು, ಅಲಸಿದವುದು-ಆಯಾಸವನ್ನು ಹೊಂದಿರುವುದು, ಎಂದು-ಎಂಬದಾಗಿ, ರಾತ್ರಿಯೊಳ್-ರಾತ್ರಿಯಕಾಲದಲ್ಲಿ, ಪೊರಮೊಟ್ಟು-ಬಿಟ್ಟು ಹೊರಟು, ನಗರ-ಪಟ್ಟಣದಲ್ಲಿ, ಶೋಧನೆಯ-ಶೋಧಿಸುವ, (ಹುಡುಕುವ) ಚರರೊಳಗೆ-ಸೇವಕರಲ್ಲಿ ಅಂದರೆ, (ರಾತ್ರಿಯಕಾಲ ಗಸ್ತು ಕೊಡುವ ಜನರಲ್ಲಿ) ಓರ್ವನಂ-ಒಬ್ಬ ದೂತನನ್ನು, ಏಕಾಂತದೊಳ್-ಗುಟ್ಟಾಗಿ, (ಗುಪ್ತವಾಗಿ) ಕರೆಸಿ-ಬರಮಾಡಿಕೊಂಡು, ವಿನಯೋಕ್ತಿಯಿಂದ-ನಮ್ರಭಾವದ ಮಾತುಗಳಿಂದ, ಇಂತೆಂದು-ಈ ರೀತಿಯಾಗಿ, ಕೇಳ್ದಂ-ಕೇಳಿದವನಾದನು ||

ಅ|| ವಿ|| ವಿನಯ+ಉಕ್ತಿ=ವಿನಯೋಕ್ತಿ, ಗುಣ. ಸಂ. ಮುನಿಗಳಲ್ಲಿವರ-ಮುನಿವರ ಸ. ತ. ದಿನಪನಕುಲ-ದಿನಪಕುಲ, ಷ. ತ. ಇನ-ಸೂರ್ಯ, ಗಂಡ. ಭೂ – ಭೂಮಿಯಲ್ಲಿ, ಸುರ – ದೇವತೆ ಭೂದೇವತೆ (ಬ್ರಾಹ್ಮಣ) ಮನದ – ಮನಸ್ಸಿನ. ಮದನ-ಕಾಮ. ಬನ ದ್ಭ. ವನ ತ್ಸ. ||೪೧||

ಟೀ|| ರಾಘವಂ – ರಘುಕುಲ ಶ್ರೇಷ್ಠನಾದ ಶ್ರೀ ರಾಮಚಂದ್ರನು, ಇನ್ನೆಗಂ – ಇದುವರೆಗೂ, ಪ್ರಜೆಗಳು – ಜನಗಳು, ತನ್ನ-ತನ್ನನ್ನು, ನಿಂದಿಸರಲೇ-ದೂಷಿಸುವದಿಲ್ಲವೆ? ಗುಣಕೆ-ಎನ್ನಯ ನಡತೆಗಳಿಗೆ, ಪಳಿವಂ-ದೂಷಣೆಯನ್ನು (ನಿಂದನೆಯನ್ನು) ಒಂದಿಸರಲೇ ಸೇರಿಸುವದಿಲ್ಲವೆ? (ಪೊಂದಿಸುವದಿಲ್ಲವೆ) ದೂಸರಿಂ – ಅಪವಾದದಿಂದ, ಅಮಲತರ-ಅತಿ ನಿರ್ದೋಷವಾದ, ಕೀರ್ತಿಯಂ – ಎನ್ನಯ ಯಶಸ್ಸನ್ನು, ಕಂದಿಸರಲೆ – ಮಲಿನಪಡಿಸುವದಿಲ್ಲವೆ? ಭುಜ – ಬಾಹುಗಳ, ವಿಜಯ-ಜಯದ, ಪ್ರತಾಪದ – ಆಟೋಪದ, ತೇಜಮಂ – ಕಾಂತಿಯನ್ನು, ಇಳೆಯೊಳು-ಪೃಥ್ವಿಯಲ್ಲಿ, ನಂದಿಸರಲೆ-ಆರಿಸುವದಿಲ್ಲವೆ?

---

ಕೆಟ್ಟದ್ದೇ? ತಿಳಿಸಬೇಕೆಂದು ಕೇಳಿದವನಾದನು || ೪೦ || ಸೂರ್ಯವಂಶಕ್ಕೆ ತಿಲಕಪ್ರಾಯನಾದ ಶ್ರೀರಾಮಚಂದ್ರನು ಮೇಲೆ ಹೇಳಿದ ರೀತಿಯಿಂದ ಕುಲಗುರುಗಳಾದ ವಸಿಷ್ಠಮಹರ್ಷಿಯೊಡನೆ ಹೇಳಲಾಗಿ, ಆ ರೀತಿಯಾದ ಸ್ವಪ್ನವು ಒಳ್ಳೆಯದಲ್ಲವೆಂದು ಆ ದುಸ್ವಪ್ನದ ಅನಿಮಿತ್ತಕ್ಕೆ ಶಾಂತಿ ಮೊದಲಾದವುಗಳನ್ನು ವಸಿಷ್ಠರು ಮಾಡಿಸಿದರು. ಬಳಿಕ ಮನಸ್ಸಿನ ಅನುತಾಪದಿಂದ ಪ್ರಜೆಗಳನ್ನು ರಕ್ಷಿಸುವಿಕೆಯನ್ನು ಸಹ ಮರೆತು ಎರಡು ಮೂರು ದಿವಸ ಸುಮ್ಮನಿರ್ದು ಅನಂತರದಲ್ಲಿ ತನ್ನ ಪ್ರಜೆಗಳೆಲ್ಲವೂ ಅತಿಯಾಗಿ ಆಯಾಸಗೊಂಡಿರುವುದೆಂದು ಭಾವಿಸಿ, ಆ ರಾತ್ರಿಯಲ್ಲಿ ಹೊರಟು, ನಗರವನ್ನು ರಾತ್ರಿಯ ಕಾಲದಲ್ಲಿ ಶೋಧನೆಯನ್ನು ಮಾಡುವ (ನಗರಶೋಧಕರು ಗಸ್ತುಮಾಡುವರು) ಚರರಲ್ಲಿ ಒಬ್ಬನನ್ನು ಏಕಾಂತದಲ್ಲಿ ಕರೆದು ಅತಿ ವಿನಯವಾದ ಮಾತುಗಳಿಂದ ಈ ರೀತಿಯಾಗಿ ಆ ಚರನನ್ನು ವಿಚಾರಿಸಿದನು || ೪೧ || ಶ್ರೀರಾಮಚಂದ್ರನು ಆ ಚರನನ್ನು ಕುರಿತು ಎಲೈ ಚಾರನೆ ಈ ವರೆಗೂ ಪ್ರಜೆಗಳು ಎನ್ನಂ ನಿಂದಿಸಲಿಲ್ಲವೇ? ದೂಷಣೆ ಮಾಡೋಣದರಿಂದ ಅಮಲತರವಾದೆನ್ನ ಕೀರ್ತಿಯನ್ನು ಹೋಗಲಾಡಿಸುವದಿಲ್ಲವೇ? ಎನ್ನ ಬಾಹುಪರಾಕ್ರಮಾತಿಶಯದ ಯಶಸ್ಸನ್ನು ಪೃಥ್ವಿಯಲ್ಲಿ ಕುಂದಿಸಲಿಲ್ಲವೇ? ತಿರಸ್ಕರಿಸಿ ತನ್ನ ಸಂತಾನದ ಏಳ್ಗೆಯನ್ನು ಕೊರತೆಪಡಿಸಲಿಲ್ಲವೆ? ನ್ಯೂನಾತಿರಿಕ್ತಗಳನ್ನು ತಿಳಿದು ದೂರದವರಿಗೂ ದೂಷಣೆಯನ್ನು ಮಾಡಲಿಲ್ಲವೇ? ಎನ್ನ ವಿಷಯದಲ್ಲಾಗಲಿ, ಎನ್ನ ರಾಜ್ಯಭಾರವಿಚಾರದಲ್ಲಾಗಲಿ, ಲೋಗರು ಆಡಿಕೊಂಡ ವಾರ್ತೆಗಳನ್ನು ಎನ್ನಲ್ಲಿ ಮರೆಮಾಚದೆ ಉಸಿರೆಂದು ಆ ದೂತನನ್ನು ಅತಿ ಖಿನ್ನಮನಸ್ಕನಾಗಿ ಬೆಸಗೊಂಡನು ||೪೨|| ಆಗ ಆ ಚಾರನು ಆ ಶ್ರೀರಾಮಚಂದ್ರನ ಮಾತುಗಳನ್ನು

ಮೊಳ್ ॥ ನಂದಿಸರಲೇಜರಿದುನಿಜವಂಶದೇಳ್ಗೆಯಂ | ಕುಂದಿಸರಲೇಖೋಡಿಗಳೆದುವಹಮಾನದೋ | ಳ್ಸಂಧಿಸರಲೇಕೊಂಕು ಕೊಂತೆಗಳನೆಂದವನನಸುರಾರಿಬೆಸಗೊಂಡನು ॥ ೪೨ ॥ ದೇವನಿನ್ನಂಪೆಸರಿಸಿದೊಡೀಶನಾದಪಂ | ಸೇವಿಸಿದನಂಚತುರ್ಮುಖ ನಾಗಲುಳ್ಳನಂ| ಕಾವುದೆಂದ್ಯೆದೆಮೊರೆಯೊಕ್ಕವಂಜಗದೊಳಾಚಂದ್ರಾರ್ಕಮಾಗಿಬಾಳ್ವ॥ ಶ್ರೀವಿಭವದಿಂಶಕ್ರಪದವಿಯಂಪಡೆದಪಂ| ಭೂವಲಯದೊಳ್ನಿಂದಿಸುವರುಂಟೆತರಣಿಯಂ | ಕಾವಳಂಮುಸುಕಿರ್ದೊಡೇನಾದುದೆಂದವಂಬಿನ್ನೈಸಿಕೈಮುಗಿದನು ॥ ೪೩ ॥ ಏನಾದೊಡಂಕಟಕಿಯಾಗಿರ್ಪುದೀಮಾತು | ಭಾನುನಂಕಾವಳಂಮುಸುಕಲೇನೆನಲೆನ್ನ | ಧೀನವಾದರಸುತನಕಾವುದೂಣೆಯ

---

(ನಾಶಪಡಿಸುವದಿಲ್ಲವೆ) ಜರಿದು - ಹಿಯ್ಯಾಳಿಸಿ, (ಮೂದಲಿಸಿ) ನಿಜ–ತನ್ನಯ, ಕುಲದ–ವಂಶದ, ಏಳ್ಗೆಯಂ – ಪೇರ್ಮೆಯನ್ನು, (ಆಧಿಕ್ಯವನ್ನು) ಕುಂದಿಸಂಲೆ–ನ್ಯೂನತೆಗೆ ತರುವದಿಲ್ಲವೆ? ಕೊಂಕು – ವಕ್ರಮಾರ್ಗದ, ಕೊಂತೆಗಳಂ – ಚಿಂತೆಯನ್ನು ಎಂದರೆ, (ಯೋಚನೆಗಳನ್ನು) ಖೋಡಿಗಳೆದು–ನಿಂದಿಸಿ (ಹಿಯ್ಯಾಳಿಸಿ) ವಹಮಾನದೋಳ್–ಅಪಖ್ಯಾತಿಯಲ್ಲಿ, ಸಂಧಿಸಲ್–ಸೇರಿಸುವದಿಲ್ಲವೆ? ಎಂದು–ಎಂಬದಾಗಿ, ಅವನಂ–ಆ ಚಾರನನ್ನು, (ಆ ಗ್ರಾಮರಕ್ಷಕನನ್ನು) ಬೆಸಗೊಂಡನು–ವಿಚಾರಿಸಿದನು, (ಕೇಳಿದವನಾದನು.)

ಅ॥ ವಿ॥ ನುಲ-ಕೊಳೆ, ಮೊಲ-ಒಂದು ಪ್ರಾಣಿ. ಗ-ಣ–ನಡತೆ. ಶಿಂಜನಿ, ದೋಷವಿಲ್ಲದ್ದು–ನಿರ್ದೋಷ, ವಿಜಯ–ಅರ್ಜುನ, ಸಂವತ್ಸರ. ಸುರ–ಹೆಂಡ, ದೇವತೆ ॥ ೪೨॥

ಟೀ॥ ದೇವ - ಎಲೈ ಪ್ರಭುವೇ ! (ಒಡೆಯನೆ). ನಿನ್ನ–ನಿನ್ನಯ, ಪೆಸರಿಸಿದೊಡೆ – ನಾಮೋಚ್ಚಾರಣೆ ಮಾಡಿದುದೇ ಆದರೆ, ಈಶನಾದಪಂ - ಒಡೆಯನಾಗುವನು, (ಸ್ವಾಮಿಯಾಗುವನು) ಸೇವಿಸಿದವಂ – ಭಜಿಸಿದಾತನು, ಚತುರ್ಮುಖಂ – ಪದ್ಮಜನು, ಆಗಲುಳ್ಳವಂ-ಆಗಲು ಸಮರ್ಥನಾಗುವನು. ಕಾವುದೆಂದು–ಸಂರಕ್ಷಿಸಬೇಕೆಂದು, ಐದೆ-ಸಮೀಪಕ್ಕೆ ಬಂದು, ಮೊರೆಯೊಕ್ಕವಂ – ಶರಣಾಗತನಾದವನು, ಜಗದೊಳು–ಪ್ರಪಂಚದಲ್ಲಿ, ಆಚಂದ್ರಾರ್ಕನಾಗಿ – ದಿನಕರರಜನೀಶ್ವರರಿರ್ಪವರೆಗೂ, ಬಾಳ್ವ–ಜೀವಿಸುವ, ಶ್ರೀ–ಐಶ್ವರ್ಯಯುತವಾದ, ವಿಭವದಿಂದ–ವೈಖರಿಯಿಂದ, ಠೀವಿಯಿಂದ, ಶಕ್ರ–ದೇವೇಂದ್ರನ, ಪದವಿಯಂ–ಸ್ಥಾನವನ್ನು, ಪಡೆದಪಂ – ಪಡೆವನು, ಅನುಭವಿಸುವನು, ಭೂವಲಯದೊಳ್ - ಈ ಪೃಥ್ವೀಮಂಡಲದಲ್ಲಿ, ನಿಮ್ಮಂ – ನಿಮ್ಮನ್ನು, ನಿಂದಿಸುವರು–ದೂಷಣೆಯನ್ನು ಮಾಡತಕ್ಕವರು, ಉಂಟೆ–ಇರುತ್ತಾರೆಯೆ? ತರಣಿಯಂ – ಭಾಸ್ಕರನ್ನು, ಕಾವಳಂ – ಹಿಮವು, (ಅಂಧಕಾರವು) ಮುಸುಕಿರ್ದೊಡೆ–ಆವರಿಸಿಕೊಂಡಿರಲು, ಏನಾದ-ದು - ಏನಾದಂತಾಯಿತು, ಎಂದು–ಎಂಬದಾಗಿ, ಅವಂ–ಆ ದೂತನು, ಬಿನ್ನೈಸಿ–ವಿಜ್ಞಾಪಿಸಿ, ಕೈಮುಗಿದನು–ಕೈಜೋಡಿಸಿದನು ॥

ಅ॥ ವಿ॥ ನಿನ್ನಯಪೆಸರ್–ನಿನ್ನಪೆಸರ್. ಷ. ತ. ಚತುರಗಳಾದ + ಮುಖಗಳುಳ್ಳವನು = ಚತುರ್ಮುಖ, ಬ. ಸ. ಮುಖ ತ್ಸ. ಮೊಗ ತ್ಭ. (ಮುಖ–ಮೋರೆ, ಮುಖ–ಯಜ್ಞ) ವಂಶ–ಕುಲ, ಬಿದಿರು, ಬ್ರಹ್ಮ ತ್ಸ. ಬೊಮ್ಮ ದ್ಭ. ಭೂಮಿಯ+ವಲಯ=ಭೂವಲಯ, ಷ. ತ. ಸ. ॥ ೪೩॥

ಟೀ॥ ಜೀಯ – ಎಲೈ ಸ್ವಾಮಿಯೇ ! ಈ ಮಾತುಏನಾದೊಡಂ–ಈ ವಿಷಯವೇನಾದಾಗ್ಯೂ, ಕಟಕಿಯಾಗಿರ್ಪುದು–ಕೃತ್ರಿಮವಾಗಿರುತ್ತದೆ. ಕಾವಳಂ – ಮಂಜು, ಭಾನುನಂ – ಭಾಸ್ಕರನನ್ನು, ಮುಸುಕಲ್ – ಆಚ್ಛಾದಿಸಲು, ಏನು – ಏನು ಫಲವಾದೀತು, ಎನಲು-ಈ ರೀತಿ ಹೇಳಿದ್ದರಿಂದ, ಎನ್ನ–ಎನ್ನಯ, ಅಧೀನವಾದ–ಹತ್ತಿರದಲ್ಲಿರುವ, ಕೈಯ್ಯಲ್ಲಿರುವ, ಅರಸುತನಕೆ–ರಾಜತ್ವಕ್ಕೆ, ಆವುದು–ಯಾವುದಾದರೂ, ಊಣೆಯಂ–ಕಳಂಕವನ್ನು, ಎಂಬರು–ಎನ್ನುವರು, ಎಂದು-ಎಂಬದಾಗಿ, ರಘುಪತಿ–ಶ್ರೀ ರಾಮಚಂದ್ರನು ಕೇಳಲು - ವಿಚಾರಿಸಲಾಗಿ, ನೀನೆ - ನೀನೊಬ್ಬನೆ, (ನೀನುಮಾತ್ರ) ಪಾವನರೂಪ – ಪರಿಶುದ್ಧಾತ್ಮ

---

ಲಾಲಿಸಿ,— ಎಲೈ ಪ್ರಭುವೆ ! ನಿನ್ನ ನಾಮೋಚ್ಚಾರಣೆಯನ್ನು ಮಾಡಿದ ಮಾತ್ರದಿಂದಲೇ ಒಡೆಯನಾಗುತ್ತಾನೆ. (ಮಹೇಶನಾಗುವನು.) ಭಕ್ತಿಪುರಸ್ಸರವಾಗಿ ಸೇವಿಸಿದಾತನು ಚತುರ್ಮುಖಬ್ರಹ್ಮನಾಗುವನು. ಶರಣಾಗತನಾಗಿ ಬಂದು ಕಾಪಾಡೆಂದು ಬೇಡಿಕೊಳ್ಳುವನು ಜಗದೊಳಗೆ ಚಂದ್ರಾರ್ಕಪರಿಯಂತವೂ ಬಾಳುವ ಅಷ್ಟೈಶ್ವರ್ಯ ಮೊದಲಾದ ಸಂಪತ್ತುಗಳಿಂದ ದೇವೇಂದ್ರಪದವಿಯನ್ನು ಪಡೆಯುವನು. ಈ ಭೂಮಂಡಲದಲ್ಲಿ ನಿನ್ನನ್ನು ನಿಂದಿಸುವರು ಯಾರಾದರೂ ಇದ್ದಾರೆಯೇ? (ಎಂದಿಗೂ ಯಾರೂ ನಿಂದಿಸತಕ್ಕವರಿಲ್ಲ); ತೇಜೋಮಯನಾದ ಭಾಸ್ಕರನನ್ನು (ಸೂರ್ಯನನ್ನು) ಹಿಮವು ಆವರಿಸಿಕೊಂಡರೆ ಏನಾದೀತು? ಎಂಬದಾಗಿ ಆ ಚರನು ಕೈಗಳಂ ಜೋಡಿಸಿಕೊಂಡು ಬಿನ್ನೈಸಿದನು ॥ ೪೩ ॥ ಆಗ ಶ್ರೀರಾಮನು ಏನಾದರೂ ಆಗಲಿ ಆ ಮಾತು ಮೋಸಕರವಾಗಿರುವುದಲ್ಲದೆ ಅನುಮಾನಾಸ್ಪದವಾಗಿರ್ಪುದು. ಸೂರ್ಯನನ್ನು ಮಂಜು ಮುಸುಕಲೇನು ಎಂದುದರಿಂದ ಎನ್ನ ಅಧೀನದಲ್ಲಿರುವ ಅರಸುತನಕ್ಕೆ ಯಾವುದೋ ಒಂದು ಕುಂದನ್ನು ಜನರು ಆಡಿಕೊಳ್ಳುವಂತೆ ಕಾಣುತ್ತೆ. ಆದರೆ ಆ ಅನುಮಾನವನ್ನು ಹೋಗಲಾಡಿಸಿ ತಿಳಿಯಬೇಕೆಂದು ಶ್ರೀ ರಘುಶ್ರೇಷ್ಠನಾದ ರಾಮಚಂದ್ರನು ಆ ಚರ

ಮೆಂಬರೆಂದುರಘುಪತಿಕೇಳಲು ‖ ನೀನೆಪಾವನರೂಪನೆಂಬುದಂಮುನಿಯವಧು | ತಾನೆತೋರಿಸಳೆಲೋಕದಜನಕೆಜಗದೊಳ | ಜ್ಞಾನಿಗಳುನುಡಿದನಿಂದೆಯನುಸುರಲಮ್ಮೆನೆಂದವನೆರಗಿದಂಪದದೊಳು ‖೪೪‖ ಏಳಂಜಬೇಡಿನ್ನುಮಾಜದಿರ್ತನ್ನಾಣೆ| ಹೇಳೆಂದು ರಘುಕುಲಲಲಾಮನೊತ್ತಾಯದಿಂ | ಕೇಳಲವನೆಂದನವಧರಿಸೊರ್ವಮಡಿವಾಳಿಮಲಿನಮಂತೊವನಾಗಿ ‖ ಕಾಳುಗೆಡದಂಜೇಯುಸದ್ಗುಣಚರಿತ್ರನಾ | ಮಾಳಿಯಿಂಜಗನುಂಪುನೀತಮಂಮಾಳ್ಪನಿ | ನ್ನೇಳಿಗೆಯನವನೆತ್ತಬಲ್ಲನೆನಲೇ ನೆಂದನೆನಲಾತನಿಂತಂ

---

ಸ್ವರೂಪನು, ಎಂಬುದಂ-ಎನ್ನುವ ವಿಷಯವನ್ನು, ಮುನಿಯ-ಋಷಿಯಾದ ಗೌತಮನ, ವಧು-ಪತ್ನಿಯಾದ ಅಹಲ್ಯೆಯೆಂಬುವಳು, ಲೋಕದಲ್ಲಿ-ಈ ದೋಷಯುಕ್ತಮಾದೀ ಭುವನದ, ಜನರಿಗೆ-ಜನಗಳಿಗೋಸ್ಕರವಾಗಿ, ತಾನೆ-ಆಕೆಯೆ, ತೋರಿಸಳೆ-ತೋರ್ಪಡಿಸಲಿಲ್ಲವೆ? ಜಗದೊಳು-ಈ ಭೂವಲಯದಲ್ಲಿ, ಅಜ್ಞಾನಿಗಳು-ಜ್ಞಾನಶೂನ್ಯರು, ನುಡಿದ-ಆಡಿದ, (ಪೇಳಿದ) ನಿಂದೆಯಂ-ದೋಷವನ್ನು, ತಿರಸ್ಕಾರವನ್ನು, ಉಸುರಲಮ್ಮೆನು-ಪೇಳಲಾರೆನು, ಎಂದು-ಎಂಬದಾಗಿ, ಅವಂ-ಆ ದೂತನು, ಪದದೊಳು-ರಾಮನ ಚರಣಗಳಲ್ಲಿ, ಎರಗಿದಂ-ನಮಸ್ಕಾರವನ್ನು ಮಾಡಿದನು ‖

ಅ‖ ವಿ‖ ಇದು+ಮಾತು=ಈಮಾತು, ಗಮಕ ಸ. ಅರಸುತನ-ಭಾವನಾಮ ಜ್ಞಾನವಿಲ್ಲದವನು ಅಜ್ಞಾನಿ. ಋಷಿಶ್ರೇಷ್ಠನಾದ ಗೌತಮ ಮಹರ್ಷಿಯ ಧರ್ಮಪತ್ನಿಯಾದ ಅಹಲ್ಯಾ ಎಂಬುವಳನ್ನು ಇಂದ್ರನು ಮೋಸದಿಂದ ಮಾನಭಂಗಪಡಿಸಿದನು, ಗೌತಮರ ಶಾಪದಿಂದ ಆಕೆಯು ಶಿಲೆಯಾದಳು. ಇಂದ್ರನು ಸಹಸ್ರಯೋನಿಯುತನಾದನು ‖೪೪‖

ಟೀ‖ ಏಳು-ಮೇಲಕ್ಕೇಳುವನಾಗು, ಇನ್ನು-ಇನ್ನಾದರೊ, ಅಂಜಬೇಡಂ- ಹೆದರಬೇಕಾದ್ದಿಲ್ಲವು, ಮಾಜದೆ-ಮುಚ್ಚಿಕೊಳ್ಳದೆ, (ಮನಸ್ಸಿನಲ್ಲಿಡದೆ) ಇರು-ಇರುವವನಾಗು, ತನ್ನ-ತನ್ನಯ, ಆಣೆ-ಭಾಷೆಯು, (ನನ್ನಾಣೆ ಹೇಳು) ಹೇಳೆಂದು-ಹೇಳು ಎಂಬದಾಗಿ, ರಘುಕುಲಲಾಮಂ-ರಘುವಂಶದಲ್ಲಿ ಶ್ರೇಷ್ಠನಾದ ಶ್ರೀರಾಮನು, ಒತ್ತಾಯದಿಂ-ಒತ್ತಿಕೇಳುವಿಕೆಯಿಂದ ಎಂದರೆ ಬಲಾತ್ಕಾರಮಾಗಿ, ಕೇಳಲು-ವಿಚಾರಿಸಲಾಗಿ, ಅವಂ-ಆ ಚಾರನು, ಎಂದನು-ಈರೀತಿ ಹೇಳಿದನು, ಜೀಯ-ಓ ಪ್ರಭುವೇ, ಅವಧರಿಸು-ಲಾಲಿಸುವನಾಗು, ಓರ್ವ-ಒಬ್ಬಾನೊಬ್ಬ, ಮಡಿವಾಳಿ-ಬಟ್ಟೆಯನ್ನು ಒಗೆಯುವವನು, (ಅಗಸನು) ಮಲಿನಮಂ-ಮಾಲಿನ್ಯಹೊಂದಿದ ವಸ್ತ್ರಗಳನ್ನು, ತೊಳೆವನಾಗಿ-ಒಗೆಯುತ್ತಿರುವವನಾಗಿ, ಕಾಳುಕೆಡದಂ-ದೂಷಣೆಯನ್ನು ಮಾಡಿದನು, ಸದ್ಗುಣ-ಒಳ್ಳೆಯ ನಡತೆಗಳ, ಚರಿತ್ರ-ಚರಿತ್ರೆಯ, ನಾಮಾವಳಿಯಿಂ-ಹೆಸರುಗಳ ಸಮುದಾಯದಿಂದ, ಜಗಮಂ-ಈ ಲೋಕಗಳನ್ನು (ಈ ಪ್ರಪಂಚವನ್ನು) ಪುನೀತವಂ-ಪರಿಶುದ್ಧವಾದದ್ದನ್ನಾಗಿ, ಮಾಳ್ಪ-ಮಾಡತಕ್ಕ, ನಿನ್ನ-ನಿನ್ನಯ,ಏಳ್ಗೆಯಂ-ಗೌರವವನ್ನು, (ಪೇರ್ಮೆಯನ್ನು) ಅವನು-ಆ ದುರುಳನಾದ ಅಗಸರವನು, ಎತ್ತಬಲ್ಲಂ-ಏನುತಾನೆ ತಿಳಿದಿರುತ್ತಾನೆ? ಎನಲು-ಎಂದು ಹೇಳಲಾಗಿ, ಅದು-ಆ ಮಡಿವಾಳಿಯ ಮಾತು, ಏನು-ಯಾವಬಗೆಯಾದದ್ದು, ಎಂದು-ಎಂಬದಾಗಿ, ಎನಲು-ಎನ್ನಲಾಗಿ, ಆತಂ-ಆ ಚರನು, ಇಂತೆಂದನು-ಈರೀತಿಯಾಗಿ ಹೇಳಿದನು ‖

ಅ‖ ವಿ‖ ಸತ್ + ಗುಣ = ಸದ್ಗುಣ, ಜ. ಸಂ. ನಾಮ + ಆವಳಿ = ನಾಮಾವಳಿ, ಸವರ್ಣ. ದೀ. ಸಂ. ಲೋಕ-ಪ್ರಪಂಚಜನ, ಅವನು + ನೀಚ = ಆನೀಚ ಗ. ಸ. ‖೪೫‖

ಟೀ‖ ಅವನ-ಆ ರಜಕನ, ಪೆಂಡತಿ-ಪತ್ನಿಯು, ತವರ್ಮನೆಗೆ-ತಾಯಿಯ ಮನೆಗೆ, ಮುಳಿದು- ಕೋಪಗೊಂಪು, ಪೇಳದೆ-ಗಂಡನಾದ ರಜಕನಿಗೆ ಹೇಳದೆ, ಚಂಡಿತನಕೆ-ಕಠಿಣತೆಗೆ, ಮೂರ್ಖತನಕ್ಕಾಗಿ, ಅವಳ-ಆ ರಜಕಸ್ತ್ರೀಯು, ತಾಯ್ತಂದೆಗ

---

ನನ್ನು ಮರೆಮಾಚದೆ ಪೇಳೆನಲು (ಒಂದು ತಿಲಾಂಶವಷ್ಟುಆದರೂ ಅನುಮಾನವು ಬೇಕಿಲ್ಲ. ನಿನಗೆ ತಿಳಿದದ್ದನ್ನು ಅನುಮಾನಿಸದೆ ಹೇಳು), ಎನುತ್ತೆ ಕೇಳಲು, ಜೀಯ! ನೀನೆ ಪಾವನಮೂರ್ತಿಯೆಂಬುವದಕ್ಕೆ ಸಾದೃಶ್ಯವಾಗಿ ಗೌತಮ ಮಹರ್ಷಿಯ ಧರ್ಮಪತ್ನಿಯಾದ ಅಹಲ್ಯೆಯು ಲೋಕದ ಜನರಿಗೆತಾನೇ "ಶ್ರೀರಾಮಚಂದ್ರನು ಸಾಕ್ಷಾತ್ಪಾವನಮೂರ್ತಿಯು ಎಂಬುವ ಅಂತವನ್ನುತೋರಿಸಲಿಲ್ಲವೆ? ಎಂದರೆ ಶಿಲೆಯಾಗಿ ಶಾಪಗ್ರಸ್ತಳಾಗಿದ್ದವಳು ಶ್ರೇಷ್ಠವಾದ ತಮ್ಮ ಪಾದಾರವಿಂದದ ಧೂಳಿಯು ಸೋಕೋಣದರಿಂದ ಪುನಹ ತನ್ನ ಪೂರ್ವರೂಪವಾದ ಸ್ತ್ರೀರೂಪವನ್ನು ಧರಿಸಿದಳು ಎಂಬ ಭಾವವು. ಲೋಕದಲ್ಲಿ ಜ್ಞಾನಶೂನ್ಯರು ನುಡಿದ ನಿಂದನೆಯನ್ನುನಾನು ಹೇಳಲಾರೆನು ಎಂಬದಾಗಿ ಆ ಚಾರನು ಶ್ರೀರಾಮಚಂದ್ರನ ಪಾದದಲ್ಲಿ ಬಿದ್ದನು" ‖ ೪೪ ‖ ಬಳಿಕ ಶ್ರೀರಾಮನು. ಚಾರನು ವ್ಯಥೆಯಿಂದ ತನ್ನ ಪಾದದಲ್ಲಿ ಬಿದ್ದಿರುವದನ್ನು ನೋಡಿ, ಎಲೈ ಚಾರನೆ! ಏಳು, ಇನ್ನು ಮರೆಮಾಚದೆಯಿರು, ನನ್ನಆಣೆ ಭಯಪಡದೆ, ದುಃಖಿಸದೆ ನಿಜಸಂಗತಿಯನ್ನು ನನಗೆ ತಿಳುಹೆಂದು ಬಲಾತ್ಕಾರಮಾಡಿ ಕೇಳಲು, ಅನಂತರದಲ್ಲಿ ಆ ಚರನು ಎಲೈ ರಾಜೇಂದ್ರನೇ! ಲಾಲಿಸು, ಒಬ್ಬಾನೊಬ್ಬ ಮಡಿವಾಳಿಯು ಮಲಿನ ವಸ್ತ್ರಗಳನ್ನು ಒಗೆಯುವನಾಗಿ ತಿರಸ್ಕಾರದ ಮಾತುಗಳನ್ನಾಡಿದನು. ಎಲೈ ಪ್ರಭುವೇ! ಸದ್ಗುಣ ಚರಿತ್ರೆಯುಳ್ಳ ನಿನ್ನಯ ನಾಮಾವಳಿಯಿಂದ ತ್ರಿಲೋಕಗಳು ಪುನೀತವಾಗಿಯವವು

ನು ‖ ೪೫ ‖ ಪೆಂಡತಿತವರ್ಮನೆಗೆಮುಳಿದುಪೇಳದೆಪೋದ | ಚಂಡಿತಕನಳತಾಯ್ತಂದೆಗೆಳ್ಕಳುಹಬಂ | ದಂಡಲೆದೊಡಿನ್ನೊಲ್ಲೆನ ಗಲಿರ್ದನುಡದಿಯಂಮತ್ತೆರಘುನಾಥನಂತೆ ‖ ಕೊಂಡಾಳುವವನಲ್ಲತಾನೆಂದುರಜಕನು | ದ್ದಂಡದೊಳ್ನುಡಿಯೆಕಿವಿಮುಚ್ಚಿಕೊಂ ಡೆಂದೇವ | ಖಂಡಿತದಮಂತ್ರಪೂರಿತಹವಿಯನರಿದೆಂಜಲಿಪುದೆವಾಯಸನೆಂದನು ‖ ೪೬ ‖ ಎಂದುಬಿನ್ನೈಸೆಕೇಳ್ದಾತನಂಕಳುಹಿ ರಘು | ನಂದನಂಬಂಧನಕ್ಕೊಳಗಾದಮತ್ತಗಜ | ದಂದದಿಂನಿಜಶಿರವನೊಲೆದುಮೂಗಿನಮೇಲೆಬೆರಳಿಟ್ಟುಮೌನದಿಂದ ‖ ನಿಂದು

---

ಳ್-ಮಾತಾಪಿತೃಗಳು, ಕಳುಹೆ_ಕಳುಹಿಸಿಕೊಡಲು, ಬಂದು_ಬಂದವನಾಗಿ, ಅಂಡಲೆದೊಡೆ_ಪೀಡಿಸಲಾಗಿ, (ಬಾಧೆಯನ್ನು ಪಡಿಸಲಾಗಿ) ಇನ್ನು-ಇನ್ನುಮುಂದೆ, ಒಲ್ಲೆಂ-ಅಪೇಕ್ಷಿಸೆನು, ಅಗಲಿರ್ದ_ನನ್ನ ಹತ್ತಿರದಿಂದ ಬೇರೆಯಾಗಿದ್ದ, (ತನ್ನ ಮನೆಯನ್ನು ಬಿಟ್ಟು ಇತರರ ಮನೆಯಲ್ಲಿದ್ದ) ಮಡದಿಯಂ-ಪತ್ನಿಯಾದ ಜಾನಕಿಯನ್ನು, ಮತ್ತೆ-ತಿರುಗಿ, ರಘುನಾಥನಂತೆ_ರಘುಶ್ರೇಷ್ಠನಾದ ಶ್ರೀರಾಮನ ಹಾಗೆ, ಕೊಂಡು_ತನ್ನ ಸಮೀಪವನ್ನು ಬಿಟ್ಟಿದ್ದ ಸೀತೆಯನ್ನು ಕೂಡಿರುವಂತೆ, ತಾಂ_ತಾನು, ಆಳುವವನಲ್ಲ-ಸಂಸಾರಮಾಡತಕ್ಕವನಲ್ಲ, ಎಂದು_ಎಂಬದಾಗಿ, ರಜಕನು_ಆ ಅಗಸನು, ಉದ್ದಂಡದೊಳ್_ಗರ್ವದಿಂದ, (ಕೊರ್ವಿನಿಂದ) ನುಡಿಯೆ_ಮಾತನಾಡಲು, ದೇವ-ಎಲೈ ಪ್ರಭುವೆ! ಅಂ_ನಾನು, ಕಿವಿಮುಚ್ಚಿಕೊಂಡೆಂ-ಆ ಮಾತನ್ನು ಕೇಳಲಾರದೆ ಕಿವಿಯನ್ನು ಮುಚ್ಚಿದೆನು, ಖಂಡಿತ-ನಿಯಮಿತವಾದ, ಗೊತ್ತಾದ, ಮಂತ್ರ_ವೇದೋಕ್ತಮಂತ್ರಗಳಿಂದ, ಪೂರಿತ-ತುಂಬಿರುವಂಥ, ಹವಿಯನು_ಹವಿಸ್ಸನ್ನು, (ಹೋಮಾದಿಗಳಿಗೆ ಉಪಯೋಗಿಸತಕ್ಕ ತುಪ್ಪ ಮೊದಲಾದ ಆಹುತಿಯ ವಸ್ತುಗಳನ್ನು) ವಾಯಸಂ_ವಾಯಸವು, (ಚಿರಜೀವಿಯು) ಎಂಜಲಿಪುದೆ_ಉಚ್ಛಿಷ್ಟವನ್ನಾಗಿ ಮಾಡಲಾದೀತೆ. ಎಂದನು_ಎಂಬದಾಗಿ ಹೇಳಿದನು ‖

ಅ‖ ವಿ‖ ಶ್ರೀ ರಾಮನು ಆತನ ಪಿತನಾಣತಿಯಂತೆ ಹದಿನಾಲ್ಕುವರ್ಷಗಳು ಅರಣ್ಯವಾಸವನ್ನು ಪೂರೈಸಿಕೊಂಡು ಪುನಹ ಅಯೋಧ್ಯಾನಗರಕ್ಕೆ ಬಂದು ರಾಜ್ಯಪರಿಪಾಲನೆಯನ್ನು ಮಾಡುತ್ತ ಒಂದುದಿನ ತನ್ನ ದೂತರಲ್ಲಿ (ರಾತ್ರಿಯಕಾಲದ ಗ್ರಾಮ ರಕ್ಷಕರಲ್ಲಿ) ಒಬ್ಬನನ್ನು ಕುರಿತು ರಹಸ್ಯವಾಗಿ ನನ್ನ ರಾಜ್ಯಭಾರಕ್ರಮದ ವಿಷಯವಾಗಿ ಜನರು ಆಡಿಕೊಳ್ಳುವ ವಿಷಯವೇನಾದರೂ ಉಂಟೇ? ಎನಲು ಆ ಚಾರನು ಆ ರಜಕನ ವರ್ತಮಾನವನ್ನೆಲ್ಲಾ ವಿವರಿಸಿದನು. ಮೂರ್ಖನ ಭಾವ ಮೌರ್ಖ್ಯ. ತಾಯಿಯೂ + ತಂದೆಯೂ = ತಾಯ್ತಂದೆಗಳು. ದ್ವಿ. ದ್ವಂ ಹವಿ_ಅಗ್ನಿ, ಹೋಮದ್ರವ್ಯ. ಕಾಗೆ_ತದ್ಭವ. ಕಾಕ_ತ್ಸ. ‖೪೬‖

ಟೀ‖ ಎಂದು-ಮೇಲೆ ಹೇಳಿದ ರೀತಿಯಿಂದ, ಬಿನ್ನೈಸೆ_ಚರನು ವಿಜ್ಞಾಪನೆಯನ್ನು ಮಾಡಿಕೊಳ್ಳಲಾಗಿ, ರಘುನಂದನಂ_ ರಘುಕುಲೋತ್ಪನ್ನನಾದ ಶ್ರೀರಾಮನು, ಕೇಳ್ದು_ ಆ ರಜಕನ ಮಾತುಗಳನ್ನು ಆಕರ್ಣಿಸಿ, ಆತನಂ_ ಆ ದೂತನನ್ನು, (ಗೂಢಾಚಾರನನ್ನು) ಕಳುಹಿ_ಹಿಂದಕ್ಕೆ ಕಳುಹಿಸಿಕೊಟ್ಟು, ಬಂಧನಕ್ಕೆ-ನಿರ್ಬಂಧಕ್ಕೆ, ಒಳಗಾದ_ಒಳಬಿದ್ದ ಹೊಣೆಯಾದ, ಮತ್ತಗಜದ_ಮದದಿಂದ ಕೂಡಿದ ಆನೆಯು, ಅಂದದಿಂ_ರೀತಿಯಿಂದ, ನಿಜ_ತನ್ನಯ, ಶಿರವಂ_ಶಿರಸ್ಸನ್ನು, ಒಲೆದು_ತೂಗಾಡಿಸಿ, ಮೂಗಿನಮೇಲೆ_ನಾಸಿಕದ ಮೇಲ್ಗಡೆಯಲ್ಲಿ, ಬೆರಳಿಟ್ಟು_ಬೆರಳನ್ನು ಇಟ್ಟುಕೊಂಡು, ಮೌನದಿಂದ-ಮಾತನ್ನಾಡದಿರುವಿಕೆಯಿಂದ, ನಿಂದು_ನಿಂತುಕೊಂಡು, ಸೈವೆಂಗಾಗಿ_ಸೋಜಿಗಗೊಂಡವನಾಗಿ, ನೆನೆನೆನದು-ಸ್ಮರಿಸಿ ಸ್ಮರಿಸಿ, ಚಿತ್ತದೋಳ್_ಹೃದಯದಲ್ಲಿ (ಮನದಲ್ಲಿ) ನೊಂದು_ಪರಿತಾಪವನ್ನು ಹೊಂದಿ, ಬಿಸುಸುಯ್ದು-ಬೆಚ್ಚನೆಯ ಉಸಿರನ್ನು ಬಿಟ್ಟು, ಕಡು_ಅಧಿಕವಾಗಿ, ಪಳಿದು-ಪತ್ನಿಯನ್ನು ಮೂದಲಿಸಿ, ಕಾತರಿಸಿ_ಲೋಕಾಪವಾದಕ್ಕೆ ಹೆದರಿ, ಕಳೆಗುಂದಿ_ಕಳಾಹೀನನಾಗಿ, ದುರ್ಧ್ಯಾನದಿಂ_ದುಗುಡದಿಂದ, (ವ್ಯಥೆಯಿಂದ) ಅಂತಃಪುರಕೆ-ಏಕಾಂತ ಗೃಹಕ್ಕೆ ರಹಸ್ಯಮಂದಿರಕ್ಕೆ, ಪುತ್ತ-ಹುತ್ತವನ್ನು, ಪೊಗುವ_ಪ್ರವೇಶವನ್ನು ಮಾಡುವ, ಅಹಿಪನಂತೆ_ಆದಿಶೇಷನ ರೀತಿಯಿಂ, (ಸರ್ಪಶ್ರೇಷ್ಠನಹಾಗೆ) ಪೊಕ್ಕಂ_ಹೊಕ್ಕವನಾದನು ‖

---

ನಿನ್ನ ಏಳ್ಗೆಯನ್ನು ಆಲೋಕಬಾಹಿರನಾದ ಅಗಸನು ಏನುತಾನೆ ತಿಳಿದಿರುವನು? ಎಂಬದಾಗಿ ಆ ಚರನು ಈ ಪ್ರಕಾರವಾಗಿ ಪೇಳಿದನು ‖ ೪೫ ‖ ಎಲೈರಘುಕುಲೋತ್ತಂಸನೇ! ಆಲಿಸತಕ್ಕುದು, ಆ ರಜಕನ ಹೆಂಡತಿಯು ಕುಪಿತಳಾಗಿ ತನ್ನಯ ತವರ್ಮನೆಗೆ ತನ್ನ ಗಂಡನಿಗೆ ತಿಳಿಸದೇನೇ ಹೋಗಲು, ಅವಳ ಚಂಡಿತನಕ್ಕೆ ತಕ್ಕ ವಿನಯೋಕ್ತಿಗಳಂ ಪೇಳಿ ಪುನಹ ಆ ರಜಕ ಸ್ತ್ರೀಯ ತಾಯ್ತಂದೆಗಳು ಗಂಡನ ಮನೆಗೆ ಕಳುಹಲು, ಅವರು ಬಂದು ತೊಂದರೆಯನ್ನು ಪಡಿಸಲು ನಾನು ಇವಳೊಡನೆ ಜೀವಿಸಲು ಅಪೇಕ್ಷಿಸೆನು, ನನ್ನ ಅನುಜ್ಞೆಯಿಲ್ಲದೆ ಮನೆಯನ್ನು ಬಿಟ್ಟು ಇತರರಮನೆಯಲ್ಲಿದ್ದ ಹೆಂಡತಿಯೊಡನೆ ನಾನು ಸಂಸಾರಮಾಡಿಕೊಂಡಿರಲು ನಾನೇನೂ ರಾಮನಾಗಿಲ್ಲವೆಂದು ಹೇಳಿದ ಕೂಡಲೆ ಕೈಗಳಿಂದ ಕಿವಿಗಳನ್ನು ಮುಚ್ಚಿಕೊಂಡೆನು. ವೇದಮಂತ್ರಾದಿಗಳಿಂದ ಪೂರಿತಮಾಗಿದ್ದ ಹವಿಸ್ಸನ್ನು ವಾಯಸವು ಎಂಜಲಾಗುವಂತೆ ಮಾಡಲಿಕ್ಕಾದೀತೆ! ಹರಹರ ಎಂದು ಬಿಸುಸುಯ್ದನು ‖ ೪೬ ‖ ಆಗ ಆ ಚರನು-ಮಡಿವಳನುಸರಿಸಿದ ಮಾತನ್ನು ಹೇಳಲಾಗಿ ಶ್ರೀರಾಮಚಂದ್ರಸ್ವಾಮಿಯು ಆ ವಿಷಯವನ್ನೆಲ್ಲಾ ಕೇಳಿದವನಾಗಿ ಆ ಚಾರನನ್ನು ಕಳುಹಿ ನಿರ್ಬಂಧಕ್ಕೆ ಒಳಗಾದ ಮದಗಜದಹಾಗೆ ತನ್ನಯ ಶಿರವನ್ನು ಅಲ್ಲಾಡಿಸಿ, ಮೂಗಿನ

ಸೈವೆರಗಾಗಿನೆನನೆನದುಚಿತ್ತದೊ | ಳೊಂದುಬಿಸುಸುಯ್ದುಕಡುಪಳಿದುಕಾತರಿಸಿ | ಕಳೆಗುಂದಿದುಮ್ಮಾನದಿಂಪೊಕ್ಕನಂತಃ
ಪುರಕೆಪುತ್ತಪೊಗುವಹಿಪನಂತೆ ‖ ೪೭ ‖ ಓಲಗಂಗೊಡದೆಬಾಗಿಲ್ಗೆ ಬಂದಖಿಳಭೂ | ಪಾಲರಂಕರೆಸಿಕಾಣಿಸಿಕೊಳ್ಳದೊಳಗೆಚಿಂ |
ತಾಲತಾಂಗಿಯಕೇಳಿಗೆಡೆಕೊಟ್ಟುರಾಜೇಂದ್ರನಿರೆಕೇಳ್ದುಭೀತಿಯಿಂದ ‖ ಆಲಕ್ಷ್ಮಣಾದಿಗಳ್ಪೊಕ್ಕರಂತಃಪುರವ | ನಾಲಿಂಗಿಸಿದ
ಜಾಡ್ಯದಿಂದಜಡಿದವಯವದ | ನೀಲಾಂಗನಂಕಂಡುಕಾಲ್ಗೆರಗಿನುಡಿಸಲಮ್ಮದೆಸುಮ್ಮನಿರುತಿರ್ದರು ‖೪೮‖ ಎದ್ದುಕುಳ್ಳಿರ್ದುಕರು
ಣಾಳುಗಳಬಲ್ಲಹಂ | ಮುದ್ದುಗೈದನುಜರಂಕರೆದಿಳೆಯೊಳಿಂದೆನಗೆ | ಪೊದ್ದಿದಪವಾದಮಂನೀವರಿದುದಿಲ್ಲಕಟಸಾಕಿನ್ನುನೆರವಿಗೆ

ಅ‖ ವಿ‖ ಪುಗು – ಧಾತು. ಪೊಕ್ಕಂ – ಕ್ರಿಯಾಪದ, ಭೂತರೂಪ, ಏಕವಚನ, ಪ್ರಥಮಪುರುಷ. ರಾಮನು ಕರ್ತೃ. ಬೆರಳ್‌ + ಇಟ್ಟಂ = ಬೆರಳಿಟ್ಟಂ, ಕ್ರಿ. ಸ. ಅಚ್ಚರಿ ದ್ಭ. ಆಶ್ಚರ್ಯ ತ್ಸ. ಕಾಂತಿ–ಕಳೆ, ಕಾಂತೆ–ಸ್ತ್ರೀ ‖೪೭‖

ಟೀ‖ ರಾಜೇಂದ್ರನು-ಸಾರ್ವಭೌಮನಾದ ಶ್ರೀ ರಾಮಚಂದ್ರನು, ಓಲಗಂಗೊಡದೆ–ರಾಜಸಭೆಯನ್ನು ಕೊಡದೇಲು, (ರಾಜಕಾರ್ಯವನ್ನು ಮಾಡದೆ) ಬಾಗಿಲ್ಗೆ–ಕೊಠಡಿಯ ಬಾಗಿಲ ಹತ್ತಿರಕ್ಕೆ, ಬಂದ–ಬಂದವರಾದ, ಅಖಿಳ–ಸಮಸ್ತರಾದ, ಭೂಪಾಲರಂ–ಸಾಮಂತರಾಜರನ್ನು, ಕರೆಸಿ – ಬರಮಾಡಿಕೊಂಡು, ಕಾಣಿಸಿಕೊಳ್ಳದೆ – ಅವರನ್ನು ನೋಡದೆ, ಒಳಗೆ–ರಹಸ್ಯಮಂದಿರದಲ್ಲಿಯೇ, ಚಿಂತಾ–ವ್ಯಥೆಯೆಂಬ, ಲತಾಂಗಿಯ – ಯುವತಿಯ (ಲತೆಯಂತಿರುವ ಹೆಂಗಸಿನ) ಕೇಳಿಗೆ-ಕ್ರೀಡೆಗೆ, ಎಡೆಗೊಟ್ಟು-ಆಶ್ರಯವನ್ನು ಕೊಟ್ಟು, ಇರೆ–ಇರಲಾಗಿ, ಲಕ್ಷ್ಮಣಾದಿಗಳ್ – ಲಕ್ಷ್ಮಣನೆ ಮೊದಲಾದವರು, ಕೇಳ್ದು-ಅಗ್ರಜನಾದ ಶ್ರೀ ರಾಮಚಂದ್ರನ ಸ್ಥಿತಿಯನ್ನು ತಿಳಿದು, ಭೀತಿಯಿಂದ-ಭಯದೊಡನೆ, ಅಂತಃಪುರವಂ – ರಹಸ್ಯಮಂದಿರವನ್ನು, ಪೊಕ್ಕರು – ಪ್ರವೇಶಿಸಿದರು, ಆಲಿಂಗಿಸಿದ–ವ್ಯಾಪ್ತಮಾಗಿರುವ, (ತನ್ನನ್ನು ಅನುಸರಿಸಿರುವ) ಜಾಡ್ಯದಿಂದ-ರುಜೆಯಿಂದ, ಹಾದಿತೋರದ ರೀತಿಯಿಂದ, ಜಡಿದ–ತೊಂದರೆ ಪಡಿಸಿದ, (ಬಡಿದ) ಅವಯವದ – ಅಂಗಭಾಗಗಳುಳ್ಳ, ನೀಲ – ನೀಲವರ್ಣದಂತೆ, ಅಂಗನಂ - ದೇಹವುಳ್ಳ ಶ್ರೀ ರಾಮನನ್ನು, ಕಂಡು-ಈಕ್ಷಿಸಿ, ಕಾಲ್ಗೆರಗಿ–ಪಾದಕ್ಕೆ ಬಿದ್ದವನಾಗಿ, ನುಡಿಸಲು – ಮಾತನ್ನಾಡಿಸಲು, ಅಮ್ಮದೆ – ಸಮರ್ಥರಾಗದೆ, ಸುಮ್ಮನೆ–ಆವ ಕಾರ್ಯವನ್ನೂ ಮಾಡದೆ, ಇರುತಿರ್ದ್ದರು-ಇರುತ್ತಿದ್ದರು.

ಅ‖ ವಿ‖ ರಾಜ+ಇಂದ್ರ = ರಾಜೇಂದ್ರ, ಗುಣ ಸಂ. ರಾಮ–ಸಕಲರ ಮನದಲ್ಲಿಯೂ ನಲಿಯತಕ್ಕವನು. ಲಕ್ಷ್ಮಣ–ಸಕಲಗುಣ ಸಂಪನ್ನನು. ಚಿಂತೆಯೆಂಬಲತಾಂಗಿ–ಚಿಂತಾಲತಾಂಗಿ, ಸಂ. ಪೂ. ಕ. ಲತೆಯಂತಿರುವ ಅಂಗವುಳ್ಳವಳು ಲತಾಂಗಿ–ಉ. ಬಹು. ಸ. ಅಂತರ್+ಪುರ=ಅಂತಃಪುರ–ವಿಸರ್ಗ, ಸಂ. ‖೪೮‖

ಟೀ‖ ಕರುಣಾಳುಗಳ – ಕೃಪಾಶಾಲಿಗಳಲ್ಲಿ, ಬಲ್ಲಹಂ – ತಿಳುವಳಿಕೆಯುಳ್ಳವನಾದ ಶ್ರೀರಾಮನು, ಎದ್ದು-ಮೇಲಕ್ಕೆ ಎದ್ದವನಾಗಿ, ಕುಳ್ಳಿರ್ದು–ಕೂತುಕೊಂಡವನಾಗಿ, ಅನುಜರಂ-ಸಹೋದರರನ್ನು, ಮುದ್ದುಗೈದು-ವಿಶ್ವಾಸಿಸಿ, ಆದರಿಸಿ, ಕರೆದು-ಬರಮಾಡಿಕೊಂಡು, ಇಂದು-ಈವಾಗ, (ಈದಿನ) ಇಳೆಯೊಳ್-ಪೃಥ್ವಿಯಲ್ಲಿ, ಎನಗೆ-ತನಗೆ, ಪೊದ್ದಿದ–ಹೊಂದಿದ, (ಲಭಿಸಿದ) ಅಪವಾದಮಂ–ದೂಷಣೆಯನ್ನು, (ನಿಂದೆಯನ್ನು) ನೀವು–ನೀವುಗಳು, ಅರಿದುದಿಲ್ಲ-ತಿಳಿದವರಾಗಿಲ್ಲ, ಅಕಟ–ಆಹಹ, ಸಾಕು–ಬಿಡು, ಇನ್ನು-ಇನ್ನುಮುಂದೆ, ನೆರವಿಗಳೊಳು – ಜನರ ಸಮುದಾಯದಲ್ಲಿ, ಕದ್ದ – ಕಳ್ಳತನವನ್ನು ಮಾಡಿದ, ಕಳ್ಳನವೊಲು–ಚೋರನ ಹಾಗೆ, ನುಡಿಸಿಕೊಳ್ಳಲಾರೆನು–ಆಡಿಸಿಕೊಳ್ಳಲಾರೆನು, (ನಿಂದಿಸಿಕೊಳ್ಳಲಾರೆನು) ಒಡಲಿದ್ದಲ್ಲಿ–ಈ ದೇಹವಿರುವಾಗ, (ಜೀವನಂತನಾಗಿರುವಲ್ಲಿ) ನಿಂದೆಗೆ-ತಿರಸ್ಕಾರಕ್ಕೆ, ದೂಷಣೆಗೆ, ಒಳಗಾಗಿ–ಆಶ್ರಯನಾಗಿ, ತಿದ್ದಿ-ಕ್ರಮಪಡಿಸಿಕೊಳ್ಳಲು, ಅಗದ-ಆಗದಿರತಕ್ಕ, ಈವಿಲಗಕ್ಕೆ-ಈ ಅಧಿಕವಾದ ಕಷ್ಟಕ್ಕೆ, ದೋಷಕ್ಕೆ, ಅಂಜುವೆನು - ಭಯಪಡುವೆನು, ಸೀತೆಯಂ–ಭೂಮಿಜೆಯಾದ ಸೀತಾದೇವಿ

ಮೇಲೆ ಬೆರಳಿಟ್ಟು, ಮೌನದಿಂದನಿಂದು, ಅತ್ಯಾಶ್ಚರ್ಯಯುತನಾಗಿ, ನೆನನೆನದು, ಚಿತ್ತದೊಳ್ ನೊಂದು ಬಿಸುಸುಯ್ದು ಅತ್ಯಧಿಕವಾಗಿ ಧರ್ಮಪತ್ನಿಯಾದ ಜಾನಕಿಯಂ ತಿರಸ್ಕರಿಸಿ, ಕಂದಿ, ಕುಂದಿ, ಭಯಗೊಂಡು ಶೋಕಾರ್ತನಾಗಿ, ಅತ್ಯಂತವಾದ ದುಗುಡದಿಂದ, ಅಂತಃಪುರಕ್ಕೆ, ಪುತ್ತದಲ್ಲಿ ಪ್ರವೇಶಿಸುವ ಫಣಾಧರನಂತೆ ತನ್ನ ಏಕಾಂತಗೃಹಕ್ಕೆ ಪ್ರವೇಶಿಸಿದನು ‖೪೭‖ ಆ ಬಳಿಕ ಶ್ರೀರಾಮಚಂದ್ರನು, ಆನಂದದಿಂದ ಎಂದಿನಂತೆ ಓಲಗಂಗೊಡದೆ ರಾಜ್ಯಾಂಗ ವಿಚಾರವನ್ನು ಮಾಡದೆ, ತನ್ನ ಬಾಗಿಲ ಬಳಿಗೆ ಬಂದ ಸಾಮಂತರಾಜರನ್ನು ಇಷ್ಟಮಿತ್ರರನ್ನು, ಕಾಣಿಸಿಕೊಳ್ಳದೇಲೂ, ಏಕಾಂತಭವನದಲ್ಲಿ ಎಂದರೆ ಶಯ್ಯಾಗೃಹದಲ್ಲಿ, ಚಿಂತಾಲತಾಂಗಿಯ ಕ್ರೀಡೆಗೆ ಅವಕಾಶವನ್ನು ಕೊಟ್ಟವನಾಗಿ, ಇರುತ್ತಿರಲು, ಅನುಜರಾದ ಲಕ್ಷ್ಮಣಾದಿಗಳು ಅಗ್ರಜನ ವಿಚಾರಮಂ ಕೇಳ್ದು, ಭೀತಿಯಿಂದ ಅಂತಃಪುರವಂ ಪೊಕ್ಕು ದಿಕ್ಕುತೋರದೆ ನಿಶ್ಚಲಾವಯವನಾಗಿ ನಿಡಿದುಸುರನ್ನು ಬಿಡುತಿರ್ಪ, ನೀಲಮೇಘಶ್ಯಾಮಲನಾದ ಶ್ರೀರಾಮನಂ ಕಂಡು, ಕಾಲ್ಗೆರಗಿ, ಅಗ್ರಜನಂ ಮಾತನಾಡಿಸಲ್ಕೆ ಯಾರಿಗೂ ಧೈರ್ಯಸಾಲದೆ, ಅಶಕ್ತರಾಗಿ ಸುಮ್ಮನೆ ಇರುತ್ತಿದ್ದರು ‖೪೮‖ ಕರುಣಾಳುಗಳಲ್ಲಿ ಅಗ್ರಗಣ್ಯನು, ರಘು

ಲೋಲು || ಕದ್ದಕಳ್ಳನವೋಲ್ಲುಡಿಸಿಕೊಳಲಾರೆನೊಡ | ಲಿದ್ದಲ್ಲಿನಿಂದೆಗೊಳಗಾಗೆಬದುಕುವನಲ್ಲ ತಿದ್ದಿತೀರದವಿಲಗಕಂಜುವೆನು ಸೀತೆಯುಂಬಿಟ್ಟಲ್ಲದಿರೆನೆಂದನು || ೪೯ || ಇವಳಯೋನಿಜೆರೂಪುಗುಣಶೀಲಸಂಪನ್ನೆ | ಭುವನಪಾವನೆಪುಣ್ಯಚರಿತೆಮಂಗಳ ಮಹೋ| ತ್ಸವೆಪತಿವ್ರತೆಯೆಂಬುದಂಬಲ್ಲೆನಾದೊಡಂನಿಂದೆಗೊಳಗಾದಬಳಿಕ || ಅವನಿಸುತೆಯಂತನಗೆಬಿಡುವುದೇನಿಶ್ಚಯಂ| ರವಿಕುಲದರಾಯರಪಕೀರ್ತಿಯಂತಾಳ್ದಪರೆ | ಕುವರನಾಗಿರ್ದತನ್ನಂತಾತನುಳಿದುದಿಲ್ಲವೆಸತ್ಯಭಾಷೆಗಾಗಿ || ೫೦ || ಕಲಿಯುಗದವಿಪ್ರರಾಚಾರಮುಂಬಿಡುವಂತೆ | ಪಲವುಮಾತೇನಿನ್ನು ಸೀತೆಯಂಬಿಟ್ಟೆನೆನೆ | ಬಲುಗರಮಿದೆತ್ತಣದೊಕಾರುಣ್ಯನಿಧಿಗೆನುತನಡನಡುಗಿ

---

ಯನ್ನು, ಬಿಟ್ಟಲ್ಲದೆ-ತ್ಯಜಸದ ಹೊರ್ತು - ತ್ಯಾಗಮಾಡುವವರೆಗೂ, ಇರೆನು - ಸಜೀವಿಯಾಗಿರಲಾರೆನು, ಎಂದನು-ಎಂಬದಾಗಿ ಹೇಳಿದನು.

ಅ|| ವಿ|| ಮುದ್ದನ್ನು+ಗೈಯ್ದು=ಮುದ್ದುಗೈದು, ಕ್ರಿ. ಸ. ಅಹಿ-ಸರ್ಪಗಳನ್ನು. ಪ-ಪಾಲಿಸನು. ಆದಿಶೇಷ. ವಿಲಗ-ಪಾಪ, ಅಲಗು-ಬಾಣ, ಪೃಥೆ-ಕುಂತಿ, ವೃಥಾ-ವ್ಯರ್ಥ ||೪೯||

ಟೀ|| ಇವಳು - ಈ ಜಾನಕಿಯು, ಅಯೋನಿಜೆ - ಸ್ತ್ರೀಯರ ಗರ್ಭದಲ್ಲಿ ಉತ್ಪನ್ನಳಾದವಳಲ್ಲ, ರೂಪ - ಆಕಾರದಲ್ಲಿಯೂ, ಗುಣ-ಸದ್ಗುಣದಲ್ಲಿಯೂ, ಶೀಲ-ಸದಾಚಾರದಲ್ಲಿಯೂ, ಸಂಪನ್ನೆ-ಸೇರಿದವಳು, (ಸೌಂದರ್ಯಗುಣಾಚಾರಾದಿಗಳಿಂದ ಕೂಡಿದವಳು) ಭುವನ-ಲೋಕದಲ್ಲಿ, ಪಾವನೆ-ಪವಿತ್ರಳು. (ಶ್ರೇಷ್ಠಳು) ಪುಣ್ಯ-ಪುಣ್ಯಕರವಾದ, ಚರಿತೆ-ನಡವಳಿಕೆಯುಳ್ಳವಳು, (ಸತ್ಸಂಪ್ರದಾಯಸ್ಥಳು) ಮಂಗಳ-ಕಲ್ಯಾಣಾದಿಗಳಲ್ಲಿ, ಮಹ-ಅಧಿಕವಾದ, ಉತ್ಸವೆ-ಉತ್ಸಾಹವುಳ್ಳವಳು, (ಹರ್ಷಚಿತ್ತಳು) ಪತಿ-ತನ್ನ ವಲ್ಲಭನಲ್ಲಿಯೇ, ವ್ರತೆ-ನಿಯಮವುಳ್ಳವಳು, ಎಂಬುದಂ-ಎಂಬ ವಿಷಯವನ್ನು, ಬಲ್ಲೆನು-ತಿಳಿದವನಾಗಿರುತ್ತೇನೆ, ಆದೊಡಂ - ಈ ರೀತಿಯಾಗಿದ್ದಾಗ್ಯೂ, ನಿಂದೆಗೆ - ಲೋಕದೂಷಣೆಗೆ, ಒಳಗಾದಬಳಿಕ - ಅಧೀನವಾದ ತರುವಾಯ, ಅವನಿಸುತೆಯಂ-ಭೂಪುತ್ರಿಯಾದ ಸೀತಾದೇವಿಯನ್ನು, ಬಿಡುವುದೇ-ಪರಿತ್ಯಾಗಮಾಡತಕ್ಕದ್ದೇ, ತನಗೆ-ಎನಗೆ, ನಿಶ್ಚಯಂ-ಗೊತ್ತುಮಾಡಿರುವಿಕೆಯು, (ದೃಢಪ್ರತಿಜ್ಞೆಯು) ರವಿಕುಲದ - ಇನವಂಶದ, ರಾಯರು - ದೊರೆಗಳು, ಅಪಕೀರ್ತಿಯಂ - ಅಪಯಶಸ್ಸನ್ನು, ತಾಳ್ದಪರೆ-ಸಹಿಸುತ್ತಾರೆಯೆ, ಕುವರನಾಗಿರ್ದ-ಬಾಲಕನಾಗಿದ್ದ, ತನ್ನಂ-ತನ್ನನ್ನು, ತಾತಂ-ಎನ್ನಯ ಜನಕನು, ಸತ್ಯ-ನಿಜದ, (ತಾನು ಮಾಡಿದ ಪ್ರತಿಜ್ಞೆಯ) ಭಾಷೆಗಾಗಿ - ಪ್ರಮಾಣಕ್ಕಾಗಿ (ತನ್ನ ಪ್ರೀತಿಪಾತ್ರಳಾದ ಕೈಕೇಯಿದೇವಿಗೆ ಮಾತುಕೊಟ್ಟುದಕ್ಕಾಗಿ) ಉಳಿದುದಿಲ್ಲವೆ-ಅರಣ್ಯವಾಸಕ್ಕೆ ಬಿಟ್ಟು ಕಳುಹಲಿಲ್ಲವೆ, (ಕಳುಹಿಸಿ ಕೊಟ್ಟನು.)

ಅ|| ವಿ|| ರವಿಯ + ಕುಲ = ರವಿಕುಲ, ಷ. ತ. ಕುವರ ದ್ಭ. ಕುಮಾರ ತ್ಸ. ಸತ್ಯವಾದಭಾಷೆ - ಸತ್ಯಭಾಷೆ, ಕ. ಸ. || ೫೦ ||

ಟೀ|| ಕಲಿಯುಗದ-ಕಲಿಯೆಂಬ ಯುಗದ, ವಿಪ್ರರು-ದ್ವಿಜರು, ಆಚಾರಮುಂ-ತಮ್ಮ ಜಾತಿಯ ಪದ್ಧತಿಯನ್ನು, (ನಡತೆಯನ್ನು) ಬಿಡುವಂತೆ-ತ್ಯಜಿಸುವಹಾಗೆ, ಸೀತೆಯಂ-ಸೀತಾದೇವಿಯನ್ನು, ಬಿಟ್ಟೆಂ-ತ್ಯಜಿಸಿಬಿಟ್ಟೆನು, (ತ್ಯಾಗಮಾಡಿಬಿಟ್ಟೆನು) ಇನ್ನು-ಇನ್ನುಮುಂದೆ, ಪಲವುಮಾತೇನು - ಅಧಿಕವಾಗಿ ಆಡುವುದರಿಂದ ಫಲವೇನಿರುತ್ತದೆ, ಎನೆ - ಎಂಬದಾಗಿ ಶ್ರೀರಾಮಚಂದ್ರನು ಹೇಳಲಾಗಿ, ಕಾರುಣ್ಯನಿಧಿಗೆ-ದಯಾಸಮುದ್ರನಾದ ಶ್ರೀ ರಾಮಚಂದ್ರನಿಗೆ, ಇದು-ಈ ರೀತಿ ದುರಾಲೋಚನೆಯನ್ನು ಮಾಡುವುದು, ಬಲುಗರಂ-ಬಹಳವಾದ ಹಾಲಾಹಲಕ್ಕೆ ಸದೃಶವಾದ ದುರಭಿಪ್ರಾಯವು, ಎತ್ತಣದೊ-ಎಲ್ಲಿಂದ ಪ್ರಾಪ್ತವಾಯಿತೊ, ಎನುತ-ಎಂಬದಾಗಿ ಹೇಳುತ್ತ, ಭೀತಿಯಿಂದ - ಹೆದರಿಕೆಯಿಂದ, ನಡನಡುಗುತ-ಹೆಚ್ಚಾಗಿ ಕಂಪಿಸುತ್ತ, ಧರೆಯ - ಈ ಭೂವಲಯದಲ್ಲಿರುವ,

---

ಕುಲ ಪುಂಗನನು, ಸೂರ್ಯಕುಲ ಸಾರ್ವಭೌಮನೂ ಆದ ಶ್ರೀರಾಮನು, ಮೆಲ್ಲನೆ ಚೇತರಿಸಿಕೊಂಡೆದ್ದು, ಕೂತುಕೊಂಡು, ತನ್ನ ಪ್ರಿಯ ಸಹೋದರರನ್ನು ಮುದ್ದುಗೈದು, ಹತ್ತಿರಕ್ಕೆ ಬರಮಾಡಿಕೊಂಡು, ಅಯ್ಯಾ ಭ್ರಾತೃವತ್ಸಲರಾದ ಅಣುಗುರೇ! ಭೂಮಿಯಲ್ಲಿ ನನಗೆ ಪ್ರಾಪ್ತವಾದ ಅಪವಾದವನ್ನು ನೀವು ತಿಳಿದವರಾಗಲಿಲ್ಲ. ಅಕಟಕಟ, ಇನ್ನುಮೇಲೆ ಈರೀತಿಯಾಗಿ ಜೀವಿಸಿದ್ದುಸಾಕು. ನೆರದ ಜನಸಮುದಾಯದಲ್ಲಿ ಕದ್ದ ಕಳ್ಳನಂತೆ ಆಡಿಸಿಕೊಳ್ಳಲಾರೆನು. ಇನ್ನು ಭೂಮಿಯಲ್ಲಿ ಜೀವಿಸಿರುವುದರಿಂದ ಫಲವಿಲ್ಲ, ದೋಷಕ್ಕೆ (ನಿಂದೆಗೆ ಒಳಗಾಗಿ) ಒಳಗಾಗಿ ಪುನಹ ಆ ದೋಷವನ್ನು ತಿದ್ದಿಕೊಳ್ಳಲಾರದ ಮಹತ್ತಾದ ವಿಪತ್ತಿಗೆ ಅಳುಕುವೆನು. ನಾನು ಜಾನಕಿಯನ್ನು ಪರಿತ್ಯಾಗಮಾಡಿದಹೊರ್ತು ಭೂಮಿಯಲ್ಲಿ ಪ್ರಾಣವನ್ನು ಧರಿಸಲಾರೆನು ಎಂದು ಬಹುವಾದ ಸಂತಾಪದಿಂದ ಹೇಳಿದನು ||೪೯|| ಈ ಜಾನಕಿಯು, ಅಯೋನಿಜೆಯು ಎಂದರೆ ಸ್ತ್ರೀಯರ ಗರ್ಭದಿಂದುತ್ಪನ್ನಳಾದವಳಲ್ಲ. ಸಕಲಗುಣರೂಪ ಸಂಪನ್ನೆಯು ಸಚ್ಛೀಲಸ್ವಭಾವಾದಿಗಳಿಂದ ಪರಿಶೋಭಿತಳು, ಭುವನ ಪಾವನೆಯು, ಪರಿಶುದ್ಧಾತ್ಮಳು, ಪುಣ್ಯಚರಿತ್ರೆಯುಳ್ಳವಳು, ಮಂಗಳ ಮಹೋತ್ಸವೆಯು, (ಕಲ್ಯಾಣಾದಿ ಶುಭಕಾರ್ಯದಿಗಳಲ್ಲಿ ಅತ್ಯಂತ ಪ್ರೀತಿಯುಳ್ಳವಳು) ಮಹಾ ಪತಿವ್ರತೆಯು

ಭೀತಿಯಿಂದ || ನೆಲೆಗೊಂಡವೇದಮಂಧರೆಯಪಾಷಂಡಿಗ | ಳ್ಸಲೆನಿಂದಿಸಿದೊಡದಂಮಾಣ್ಬರೆದ್ವಿಜರಕಟ | ಕುಲವರ್ಧಿನಿಯನೆಂತುಬಿಡುವೆನೀಪೇಳೆಂದರನುಜಾತರಗ್ರಜಂಗೆ ||೫೧|| ಭಯಶೋಕದಿಂದಗದ್ಗದಿಸೆಕಂಠದೊಳಶ್ರು | ನಯನದೊಳ್ತುಳುಕೆಭರತಂ ಕರೆವಕಪಿಲೆಯಂ | ನಯವಿದರ್ಪೊಡೆದಡವಿಗಟ್ಟುವರೆಪಾವಕನೊಳರಸಿಯಂಪೊಗಿಸಿದಂದು || ಪ್ರಿಯೆನಿನಗೆಪರಿಶುದ್ಧೆಕುಲಕೆ

---

ಪಾಷಂಡಿಗಳ್-ನಾಸ್ತಿಕರು, (ವೇದಾಧ್ಯಯನರಹಿತರು) ನೆಲೆಗೊಂಡ_ವ್ಯಾಪ್ತವಾಗಿರುವ, (ಪ್ರಸರಿಸಿರುವ) ವೇದಮಂ_ವೇದವನ್ನು (ಶ್ರುತಿಯನ್ನು), ಸಲೆ-ಚೆನ್ನಾಗಿ, (ಅಧಿಕವಾಗಿ) ನಿಂದಿಸಿದೊಡೆ_ದೂಷಿಸಿದರೆ, ಅದಂ_ಅದನ್ನು (ಆ ಶ್ರುತಿಯನ್ನು), ದ್ವಿಜರು_ವಿಪ್ರರು, ಮಾಣ್ಬರೆ-ಅಭ್ಯಾಸ ಮಾಡದೆ ಬಿಡುತ್ತಾರೆಯೇ, (ವೇದಬಾಹಿರನು ವೇದವನ್ನು ನಿಂದಿಸಿದರೆ ವೇದಾಭ್ಯಾಸವನ್ನೇ ಬ್ರಾಹ್ಮಣರು ಬಿಡುತ್ತಾರೆಯೇ ಎಂದರೆ ಯಾರೂ ಬಿಡುವುದಿಲ್ಲವೆಂಬ ಭಾವವು) ಅಕಟ-ಅಹಹ, ಕುಲವರ್ಧಿಯಂ-ವಂಶವನ್ನು ವೃದ್ಧಿಗೊಳಿಸ ಜಾನಕಿಯನ್ನು, ನೀಂ-ನೀನಾದರೋ, ಎಂತು_ಅದು ಹೇಗೆ ತಾನೆ, ಬಿಡುವೆ-ಪರಿತ್ಯಾಗಮಾಡುತ್ತಿ? ಎಂದು-ಎಂಬದಾಗಿ, ಅನುಜಾತರು-ಸಹೋದರರು, ಅಗ್ರಜಂಗೆ_ಪೂರ್ವಜಾತನಾದ ಶ್ರೀರಾಮಚಂದ್ರನಿಗೆ, ಪೇಳಿದರು_ಹೇಳಿದವರಾದರು.

ಅ|| ವಿ|| ಅನುಜ-ತಮ್ಮ, ಅಗ್ರಜ-ಅಣ್ಣ, ಕರುಣದ+ನಿಧಿ=ಕಾರುಣ್ಯನಿಧಿ ಷ ತ. ಸತ್+ಆಚಾರ=ಸದಾಚಾರ ರ. ಜ. ಸಂ. ಚತುರ್ವೇದಗಳು-ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವಣವೇದ. ಚತುರ್ಯುಗ_ಕೃತ, ತ್ರೇತ, ದ್ವಾಪರ, ಕಲಿ ||೫೧||

ಟೀ|| ಭಯ_ಭಯವೂ, ಶೋಕ-ವ್ಯಸನವೂ, ಇವುಗಳಿಂದ ಕಂಠದೊಳು-ಕತ್ತಿನಲ್ಲಿ, ಗದ್ಗದಿಸೆ_ಗದ್ಗದ ಸ್ವರವುಂಟಾಗಲು, (ಕತ್ತಿನ ನರಗಳ ಬಿಗುವಿನಿಂದ ಹೊರಡುವ ಧ್ವನಿಯು) ಅಶ್ರು_ಕಣ್ಣೀರು, (ನೇತ್ರೋದಕವು) ನಯನದೋಳ್-ನೇತ್ರಗಳಲ್ಲಿ, ತುಳುಕೆ-ಹೆಚ್ಚಿ ಬರಲಾಗಿ, ಭರತಂ-ಭರತನಾದರೊ, ನಯವಿದರ್_ಸನ್ಮಾರ್ಗ ಪ್ರವರ್ತಕರು, (ನೀತಿಶಾಸ್ತ್ರ ವಿಶಾರದರು) ಕರೆವ_ಕ್ಷೀರವನ್ನು ದೋಹನ ಮಾಡುವ, ಕಪಿಲೆಯಂ_ಕಪಿಲ ಛಾಯೆಯ ಹಸುವನ್ನು, (ಕಪಿಲೆ ರಂಗಿನ ಹಸುವನ್ನು) ಪೊಡೆದು-ಹೊಡೆದು, ಅಡವಿಗೆ-ಅರಣ್ಯಕ್ಕೆ, ಅಟ್ಟುವರೆ-ಹೊಡೆಯುತ್ತಾರೆಯೆ, ಅರಸಿಯಂ-ನಿನ್ನಯ ಪಟ್ಟ ಮಹಿಷಿಯಾದ ಜಾನಕೀ ದೇವಿಯನ್ನು, ಪಾವಕನೊಳು_ಯಜ್ಞೇಶ್ವರನಲ್ಲಿ, (ಅಗ್ನಿಯಲ್ಲಿ) ಪೊಗಿಸಿದ_ಹೊಗಿಸಿದ, (ಪ್ರವೇಶಮಾಡಿಸಿದ) ಅಂದು_ಆ ಕಾಲದಲ್ಲಿ, ಬಯಸಿದೊಡೆ_ಜನಕನಾದ ದಶರಥರಾಯನನ್ನು ಅಪೇಕ್ಷಿಸಲಾಗಿ, ಅಯ್ಯಂ_ಜನಕನು, ಬಂದು_ಬಂದವನಾಗಿ, ನಿನಗೆ_ನಿನಗಾದರೊ, ಪ್ರಿಯೆ_ಪ್ರಾಣಕಾಂತೆಯಾದ ಜಾನಕೀ ದೇವಿಯು, ಕುಲಕೆ-ನಮ್ಮಿಇನ ಕುಲಕ್ಕೆ, (ದಿನಪನ ಕುಲದಲ್ಲಿ) ಪರಿಶುದ್ಧೆ-ಶುಚಿರ್ಭೂತಳು, ಮಂಗಳೆ-ಶುಭಪ್ರದಳು, ಸುತೋದಯಕೆ_ಸುಗನನ್ನು ಪಡೆಯಲಿಕ್ಕೆ, (ಪುತ್ರನನ್ನು ಪಡೆಯಲಿಕ್ಕೆ) ನಿರ್ಮಲೆ_ದೋಷರಹಿತಳಾದವಳು, ತನಗೆ_ಎನಗಾದರೊ, ಗತಿಗೊಡುವ_ಉತ್ತಮವಾದ ಸ್ವರ್ಗ ಪದವಿಯನ್ನು ಕೊಡತಕ್ಕ, ಸೊಸೆಯೆಂದು_ಸ್ನುಷಾ ಎಂಬದಾಗಿ, (ಸೊಸೆಯು ಎಂಬದಾಗಿ) ಸುರಾಸುರ-ದೇವತೆಗಳ ಮತ್ತು ದನುಜರ, ಮುಂದೆ_ಮುಂಗಡೆಯಲ್ಲಿ, (ಎದುರಾಗಿ) ಕಪಿ - ಕೋಡಗಗಳ, ಕಟಕಂ - ಸೇನೆಯು, ಅರಿಯೆ - ತಿಳಿಯುವಂತೆ, ಆಡನೆ - ಆಡಲಿಲ್ಲವೆ? (ತಿಳಿಸಲಿಲ್ಲವೆ.)

---

ಎಂಬಂಶಗಳನ್ನೆಲ್ಲಾ ನಾನು ಚೆನ್ನಾಗಿ ಬಲ್ಲವನಾಗಿರುವೆನು. ಇದು ಈ ರೀತಿಯಾಗಿದ್ದಾಗ್ಯೂ ಲೋಕಾಪವಾದಕ್ಕೆ ಗುರಿಯಾದ ಅನಂತರದಲ್ಲಿ ತನ್ನ ಪ್ರಾಣವನ್ನಾಗಲಿ ಇಲ್ಲವೆ ಭೂಮಿಜೆಯನ್ನಾಗಲಿ ಬಿಡುವುದೇ ನನ್ನ ಮುಖ್ಯ ಕರ್ತವ್ಯವಾಗಿರುತ್ತದೆ. ರವಿಕುಲದ ಸಾರ್ವಭೌಮರು ಅಪಕೀರ್ತಿಯನ್ನು ಹೊಂದುತ್ತಾರೆಯೆ? ಜನಕನು ಕುವರನಾಗಿದ್ದ ನನ್ನನ್ನು ತನ್ನ ಹೆಂಡತಿಯಾದ ಕೈಕೆಗೆ ಕೊಟ್ಟ ಭಾಷೆಗಾಗಿ ಅರಣ್ಯವಾಸಕ್ಕೆ ಬಿಟ್ಟು ಕಳುಹಲಿಲ್ಲವೆ? ಅಂತಹ ಸತ್ಯಸಂಧರ ವಂಶದಲ್ಲಿ ಜನಿಸಿ ಲೋಕಸಿಂದನೆಗೆ ಭಯಗೊಳ್ಳುವುದು ನಮ್ಮ ಆವಶ್ಯಕ ಕರ್ತವ್ಯವಾಗಿರುವುದು || ೫೦ || ಮತ್ತು ಕಲಿಯುಗದಲ್ಲಿ ಭೂಸುರರು ತಮ್ಮ ಸದಾಚಾರಾದಿಗಳನ್ನ ಬಿಡುವಂತೆ ನಾನು ಸಹ ವೈದೇಹಿಯನ್ನು ಪರಿತ್ಯಾಗಮಾಡಿರುವೆನು. ಇನ್ನು ವೃಥಾ ಮಾತಾಡಿ ಚಿಂತಿಸುವುದರಿಂದ ಫಲವಿಲ್ಲ ಎಂಬದಾಗಿ ಶ್ರೀರಾಮನು ಈ ರೀತಿಯಾಗಿ ಹೇಳಲು, ಕರುಣಾನಿಧಿಯಾದ ಶ್ರೀರಾಮಮೂರ್ತಿಗೆ ಈ ರೀತಿ ಹಾಲಾಹಲಕ್ಕೆ ಸದೃಶವಾದ ದುರಾಲೋಚನೆಯು ಪ್ರಾಪ್ತವಾಯಿತೇ ಎಂಬ ಭಯದಿಂದ ನಡನಡುಗುತ ಈ ಪೃಥ್ವಿಯಲ್ಲಿ ಪಾಷಂಡಿಗಳು (ವೇದ ದೂಷಕರು) ಲೋಕದಲ್ಲಿ ಸರ್ವತ್ರ ವ್ಯಾಪ್ತವಾಗಿರುವ ವೇದವನ್ನು ಅಧಿಕವಾಗಿ ದೂಷಣೆಯನ್ನು ಮಾಡಿದರೆ ಆ ವೇದವನ್ನು ಭೂಸುರರು ಪರಿತ್ಯಾಗಮಾಡುತ್ತಾರೆಯೆ? ಹರಹರ, ವಂಶಾಭಿವೃದ್ಧಿಗೆ ಕಾರಣಭೂತಳಾದ ಭೂಪುತ್ರಿಯಾದ ಸೀತಾದೇವಿಯನ್ನು ನೀನು ಹೇಗೆತಾನೆ ಪರಿತ್ಯಾಗಮಾಡುತ್ತಿ? ಎಂದು ಸಹೋದರರಾದ ಲಕ್ಷ್ಮಣಾದಿಗಳು ಅಗ್ರಜನಾದ ಶ್ರೀರಾಮನನ್ನು ಕುರಿತು ಬೆಸಗೊಂಡರು || ೫೧ || ಭಯದಿಂದಲೂ ಮತ್ತು ಶೋಕದಿಂದಲೂ ( ದುಃಖದಿಂದಲೂ ) ಕಂಠದಲ್ಲಿ ನರ

ಮಂಗಳಸುತೋ | ದಯಕೆನಿರ್ಮಲೆತನಗೆಗತಿಗೊಡುವಸೊಸೆಯೆಂದು | ಬಯಸಿದೊಡೆಬಂದಯ್ಯನಾಡನೆಸುರಾಸುರರಮುಂದೆ ಕಪಿಕಟಕನರಿಯೆ ||೫೨|| ಅದನೆಲ್ಲಮಂಮರೆದುಹುಲುಮನುಜರಜಕನಾ | ಡಿದದೂಸರಂನೆನೆದುಕುಲಪತ್ನಿಯಂಬಿಡುವ | ಹದನಾವುದಕಟಗುರುಲಘುವಿನಂತರವನೆಣಿಸದೆಮೂಢರಂತೆ || ಎದೆಗೆಟ್ಟುದೇವಿಯಂದೋಷಿಯೆಂಬರೆಜೀಯ | ಪದುಳವಿಹುದೆಂದು ವಿನಯದೊಳಗ್ರಜಾತನಂ | ಕದುಬಿನುಡಿದಂಭರತನಾತನಂನೋಡುತೊಯ್ಯನೆಭೂಪನಿಂತೆಂದನು || ೫೩ || ತಮ್ಮನೀನಾಡಿದಂತವನಿಸುತೆನೀರಜೆಯಹು | ದುಮ್ಮಳಿಸಬೇಡಸೈರಿಸಲಾರೆನೀದೂಸ | ರಂಮಹಿಯೊಳುಳಿದರೇಪೃಥುಪುರೂರವಹರಿಶ್ಚಂದ್ರಾ

ಅ|| ವಿ|| ಗತಿಯನ್ನು+ಕೊಡುವ=ಗತಿಗೊಡುವ ಕ್ರಿ.ಸ. ಗತಿ+ಕೊಡು=ಗತಿಗೊಡು ಗ.ಕಾರಾದೇಶ. ಸಂ. ಸುತನ+ಉದಯ=ಸುತೋದಯ ಷ ತ. (ಸುತ+ಉದಯ=ಸುತೋದಯ ಗುಣ. ಸಂ.) ಕಪಿಲ-ಕಪಿಲರುಚಿ, ಕಪಿಲೆ ಬಣ್ಣ. ಕಪಿಯ+ಕಟಕ=ಕಪಿಕಟಕ ಷ. ತ. ಸುರರು+ಅಸುರರು=ಸುರಾಸುರರು ದ್ವಿ. ದ್ವಂ. ಸ. |೫೨||

ಟೀ|| ಅದಂ-ಆ ವಿಷಯನನ್ನು, ಎಲ್ಲಮಂ- ಸಕಲವನ್ನು, ಮರೆದು-ಮರೆತುಬಿಟ್ಟು, ಹುಲುಮನುಜ-ತೃಣಪ್ರಾಯನಾದ, (ಕೆಡುಕನಾದ) ರಜಕಂ-ಅಗಸನು, ಆಡಿದ-ನುಡಿದ, ದೂಸರಂ-ನಿಂದೆಯನ್ನು, ನೆನೆದು-ಜ್ಞಾಪಿಸಿಕೊಂಡು, ಕುಲಪತ್ನಿಯಂ-ಧರ್ಮಪತ್ನಿಯಾದ ಜಾನಕೀ ದೇವಿಯನ್ನು, (ಸತ್ಕುಲ ಪ್ರಸೂತಳಾದ ಜಾನಕಿಯನ್ನು) ಬಿಡುವ-ಪರಿತ್ಯಾಗ ಮಾಡುವ, ಹದನು-ಕಾರಣವು, ಆವುದು-ಯಾವುದಾಗಿರುತ್ತದೆ, ಅಕಟ-ಅಹಹ, ಗುರುಲಘುವಿನ-ಉಚ್ಚನೀಚಗಳ, ಅಂತರವಂ-ವ್ಯತ್ಯಸ್ತವನ್ನು, ಎಣಿಸದೆ-ಆಲೋಚಿಸದೆ, ಬರಿದೆ-ಕಾರಣವಿಲ್ಲದೆ, (ನಿರರ್ಥಕವಾಗಿ) ಮೂಢರಂತೆ-ಅಜ್ಞರ ಹಾಗೆ, ಎದೆಗೆಟ್ಟು-ಧೈರ್ಯಗುಂದಿ, ದೇವಿಯಂ-ಲಕ್ಷ್ಮೀಸ್ವರೂಪಳಾದ ಜಾನಕಿಯನ್ನು, ದೋಷಿಯೆಂಬರೆ-ದೋಷವುಳ್ಳವಳು, (ತಪ್ಪಿತವನ್ನು ಮಾಡಿದವಳು) ಎನ್ನುತ್ತಾರೆಯೆ? ಜೀಯಾ-ಎಲೈ ಪ್ರಭುವೇ? ಪದುಳದಿ-ಕುಶಲದಿಂದ, ಇಹುದು-ಇರಬೇಕು, ಎಂದು-ಎಂಬದಾಗಿ, ವಿನಯದೊಳು-ನಮ್ರಾಭಾವದಿಂದ, (ನಮ್ರತೆಯಿಂದ) ಅಗ್ರಜಾತನಂ-ಪೂರ್ವಜನಾದ ಶ್ರೀರಾಮನನ್ನು, ಭರತಂ-ಭರತನೆಂಬುವನು, ಕದುಬಿ-ಹಿಯ್ಯಾಳಿಸಿ, (ತಿರಸ್ಕರಿಸಿ) ನುಡಿದಂ-ನುಡಿದನು, (ಆಡಿದನು) ಭೂಪಂ-ಭೂಪಾಲಕನಾದ ಶ್ರೀರಾಮನು, ಆತನಂ-ಆ ಭರತನನ್ನು, ನೋಡುತ-ಈಕ್ಷಿಸುತ್ತಾ, ಒಯ್ಯನೆ-ನಿಧಾನದಿಂದ, ಇಂತೆಂದನು-ಹೀಗೆಂದು ಹೇಳಿದನು.

ಅ|| ವಿ|| ಇಂತು+ಎಂದಂ=ಇಂತೆಂದಂ ಉ. ಕಾರಲೋಪ ಸಂ. ಕುಲದ+ಪತ್ನಿ=ಕುಲಪತ್ನಿ ಷ. ತ. ಪತ್ನಿ-ಸ್ತ್ರೀಲಿಂಗ, ಪತಿ-ಪುಲ್ಲಿಂಗ. ಎದೆಯಿಂದ+ಕೆಟ್ಟು=ಎದೆಗೆಟ್ಟು ತೃ. ತ. ಅವನು+ಭರತ=ಆ ಭರತ ಗ. ಸ. ||೫೩||

ಟೀ|| ತಮ್ಮ-ಎಲೈಪ್ರೀತಿಪಾತ್ರನಾದ ಅನುಜನೆ, ನೀಂ-ನೀನಾದರೊ, ಆಡಿದಂತೆ-ನುಡಿದಹಾಗೆ, ಅವನಿಸುತೆ-ಭೂಮಿಯ ಸುತೆಯಾದ ಜಾನಕೀ ದೇವಿಯು, ನೀರಜೆ-ದೋಷರಹಿತಳು, ಅಹುದು-ನಿಶ್ಚಯವೆ ಸರಿ, ಎನ್ನಂ-ನನ್ನನ್ನು, ಉಮ್ಮಳಿಸಬೇಡ-ವ್ಯಥೆಪಡಿಸಬೇಡ, ಈ ದೂಸರಂ- ಈ ನಿಂದೆಯನ್ನು, (ಅಪವಾದವನ್ನು) ಸೈರಿಸಲಾರೆನು- ತಡೆಯಲಾರೆನು, (ಅನುಭವಿಸಲಾರೆನು) ಪುರು-ಪುರೂರವನು, ಹರಿಶ್ಚಂದ್ರ-ಹರಿಶ್ಚಂದ್ರನೆ, ಆದಿಗಳ್-ಮೊದಲಾದ, ನರಪತಿಗಳು-ದೊರೆಗಳು, ಮಹಿಯೊಳು-ಈ

ಗಳು ಬಿಗಿದುಕೊಂಡು ಧ್ವನಿ ಹೊರಡಲು, ಕಂಬನಿಗಳು ಕಂಗಳಲ್ಲಿ ತುಂಬಿ ಹರಿಯಲು ಭರತನು ನಯವಿದರು (ನೀತಿಮಾರ್ಗವಂ ಬಲ್ಲವರು) ಹಾಲನ್ನು ಕರೆಯುತ್ತಿರುವ ಕಪಿಲೆಯ ವರ್ಣದ ಗೋವನ್ನು ಹೊಡೆದುಬಿಟ್ಟು ಅರಣ್ಯಕ್ಕೆ ಕಳುಹಲಾಪರೆ? ತಮ್ಮ ಪಟ್ಟಮಹಿಷಿಯಾಗಿರುವ ಜನಕನ ಪುತ್ರಿಯಾದ ಜಾನಕಿಯನ್ನು ಅಗ್ನಿಯಲ್ಲಿ ಪ್ರವೇಶಗೊಳಿಸಿದ ಕಾಲದಲ್ಲಿ, ಜನಕನಾದ ದಶರಥನನ್ನು ಬಯಸಲು ಪಿತನು ಬಂದು ನಿನಗೆ ಪ್ರೀತಿಪಾತ್ರಳಾದ ಜಾನಕಿಯು ನಮ್ಮ ಇನಕುಲದಲ್ಲಿ ಪಾವನೆಯು, ಮಂಗಳ ಸ್ವರೂಪಳು, ಪುತ್ರೋದಯಕ್ಕೆ (ಪುತ್ರೋತ್ಪಾದನೆಗೆ ಯೋಗ್ಯಳು) ತನಗೆ ಉತ್ತಮವಾದ ಗತಿಯನ್ನು ಕೊಡುವ ಸೊಸೆಯು ಎಂಬದಾಗಿ ದೇವತೆಗಳ ಮತ್ತು ರಾಕ್ಷಸರ ಮುಂದೆ ವಾನರ ವಾಹಿನಿಯು ತಿಳಿಯುವಂತೆ ಹೇಳಲಿಲ್ಲವೆ || ೫೨ || ನೀನು ಆ ವಿಸ್ತಾರವಾದ ಬುದ್ಧಿವಾದಂಗಳನ್ನೆಲ್ಲಾ ಮರೆದು ತೃಣಪ್ರಾಯನಾದ ಎಂದರೆ ಅಯೋಗ್ಯನಾದ ರಜಕನು ಆಡಿದ ನಿಂದೆಯನ್ನು ನೆನೆದು ಸದ್ವಂಶೋದ್ಭವಳಾದ ಸೀತಾದೇವಿಯನ್ನು ಪರಿತ್ಯಾಗಮಾಡುವ ಅಭಿಪ್ರಾಯವು ಅದೆಂಥಾದ್ದು? ಅಹಹ ಗುರುಲಘುವಿನ ಅಂತರವನ್ನು (ತಾರತಮ್ಯವನ್ನು) ಯೋಚಿಸದೆ ವ್ಯರ್ಥವಾಗಿ ಅಜ್ಞಾನಿಗಳ ಹಾಗೆ ಧೈರ್ಯಗುಂದಿ ಸೀತಾದೇವಿಯನ್ನು ಅಪರಾಧಿನಿಯೆಂಬದಾಗಿ ಹೇಳುತ್ತಾರೆಯೆ? ಎಲೈ ಸ್ವಾಮಿಯೆ! ತಾವುಗಳಿಬ್ಬರೂ ಕ್ಷೇಮವಾಗಿರಬೇಕೆಂದು ನಮ್ರತೆಯಿಂದ ಅಗ್ರಜನಾದ ಶ್ರೀರಾಮನನ್ನು ಅತಿಯಾಗಿ ಧಿಕ್ಕಾರವನ್ನು ಮಾಡಿ ಮಾತನ್ನಾಡಿದನು. ಅನಂತರದಲ್ಲಿ ಭೂಪಾಲಕನಾದ ಶ್ರೀರಾಮನು ಆ ಭರತನನ್ನು ಕಾಣುತ್ತ ಮೆಲ್ಲಮೆಲ್ಲನೆ ಈ ರೀತಿಯಾಗಿ ಇಂತೆಂದನು || ೫೩ || ಆಗ ಶ್ರೀರಾಮಚಂದ್ರನು ಎಲೈ ಪ್ರಿಯಸಹೋದರನೆ! ಲಾಲಿಸು

ದಿನಂಪತಿಗಳು || ಸುಮ್ಮನಪಕೀರ್ತಿಗೊಳಗಾಗಲೇತಕೆಮಮತೆ | ಯಂಮಹಾಯೋಗಿಬಿಡುವಂತಿವಳನುಳಿವೆನೆನೆ | ಹಂಮ್ಮೈಸಿ ಲಕ್ಷ್ಮಣಂಕಂಪಿಸುತಕಿವಿಮುಚ್ಚುತಗ್ರಜಂಗಿಂತೆಂದನು || ೫೪ || ಕಾಯಸುಖಕೋಸುಗಂಧರ್ಮಕೃತಮಂಬಿಡುವೊ | ಲಾಯತಾಕ್ಷಿಯಭಾವಶುದ್ಧಿಯಂತಿಳಿದಿರ್ದು | ವಾಯದಪವಾದಕಿಂತರಸಿಯಂತೊರೆಯಬೇಕೆಂಬರೇನಿಷ್ಕರುಣದಿ || ಜೀಯತುಂಬಿದಬಸುರ್ಬೆಸಲಾದದೇವಿಯಂ | ಪ್ರೀಯದಿಂದಾರೈದುಸಲಹಬೇಕೆಂದು | ರಘುರಾಯಂಗೆಲಕ್ಷ್ಮಣಂಬಿನ್ನೈಸಿಮೇಲ್ವಾಯ್ದು ಶತ್ರುಘ್ನನಿಂತೆಂದನು || ೫೫ || ಬಿಡುವರೆಂತಿಕ್ಷ್ವಾಕುವಂಶದವರರಸಿಯಂ | ನುಡಿವರೆಂತಿಳೆಯೊಳಾರಾದೊಡಂದೂಸರಂ |

---

ಪೃಥ್ವಿಯಲ್ಲಿ, ಉಳಿದರೆ-ಸ್ಮೃತಿಯನ್ನು ಹೊಂದದೆ ಇನ್ನೂ ಜೀವಿಸಿರುವರೆ? ಸುಮ್ಮನೆ - ಕಾರಣವಿಲ್ಲದೆ, (ವ್ಯರ್ಥವಾಗಿ) ಅಪಕೀರ್ತಿಗೆ-ಕೆಟ್ಟ ಯಶಸ್ಸಿಗೆ, ಒಳಗಾಗುತ್ತಲು – ಒಳಬೀಳುತ್ತ, ಒಳಪಡುತ್ತ, ಏಕೆ-ಏನುಕಾರಣ ಒಳಪಡಬೇಕು, ಮಮತೆಯಂ-(ತನ್ನ ವಸ್ತುವಿನ ಮೇಲಣಾಸೆಯನ್ನು) ಮಹಾಯೋಗಿ-ಶ್ರೇಷ್ಠನಾದ ಯತೀಶ್ವರನು, ಬಿಡುವಂತೆ-ಬಿಡುವಹಾಗೆ, ಇವಳಂ-ಈ ಜಾನಕಿಯನ್ನು, ಉಳಿವೆಂ-ಪರಿತ್ಯಾಗಮಾಡುವೆನು, ಎನೆ-ಎಂದು ಹೇಳಲಾಗಿ, ಲಕ್ಷ್ಮಣಂ-ಲಕ್ಷ್ಮಣಸ್ವಾಮಿಯು, ಹಮ್ಮೈಸಿ-ವ್ಯಸನಾಕ್ರಾಂತನಾಗಿ, ಕಂಪಿಸುತ – ಹೆದರಿಕೆಯಿಂದ ಕಂಪಿಸುತ್ತ, (ಅಲ್ಲಾಡುತ್ತ) ಕಿವಿಮುಚ್ಚುತ – ಕರ್ಣಗಳನ್ನು ಮುಚ್ಚಿಕೊಳ್ಳುತ್ತಾ, ಅಗ್ರಜಂಗೆ–ಪೂರ್ವಜನಾದ ಶ್ರೀರಾಮಚಂದ್ರನಿಗೆ, ಇಂತೆಂದನು, ಈ ರೀತಿಯಾಗಿ ಹೇಳಿದನು.

ಅ|| ವಿ|| ಪಂಚೇಂದ್ರಿಯಗಳಲ್ಲಿ–ಜ್ಞಾನೇಂದ್ರಿಯಗಳು, ಶ್ರೋತ್ರ, ತ್ವಕ್, ಚಕ್ಷು, ರಸನ, ಘ್ರಾಣ, ಕರ್ಮೇಂದ್ರಿಯ ಪಂಚಕ–ವಾಕ್, ಪಾಣಿ-ಪಾದ, ಉಪಸ್ಥ, ಪಾಯು, ಮಾಯಾಪಂಚಕ-ತಮಸ್ಸು, ಮಾಯೆ, ಮೋಹ, ಅವಿದ್ಯೆ, ಅನೃತಾತ್ಮಿಕೆ, ಪಂಚಕೃತ್ಯಗಳು–ಸೃಷ್ಟಿ, ಸ್ಥಿತಿ, ಸಂಹಾರ, ನಿಯಮ, ಅನುಪ್ರವೇಶ ||೫೪||

ಟೀ|| ಕಾಯಸುಖಕೆ-ಶರೀರ ಸೌಖ್ಯದ, ಓಸುಗಂ–ಆದರ ಸಲುವಾಗಿ, ಧರ್ಮಕೃತಮಂ – ಪುಣ್ಯಕೆಲಸವನ್ನು, (ಧರ್ಮಕಾರ್ಯವನ್ನು) ಬಿಡುವೊಲು–ತ್ಯಜಿಸುವಂತೆ, (ತ್ಯಾಗಮಾಡುವಂತೆ) ಆಯತಾಕ್ಷಿಯ – ವಿಶಾಲಾಕ್ಷಿಯಾದ ಭೂಪುತ್ರಿಯ, ಭಾವಶುದ್ಧಿಯಂ – ನಿರ್ಮಲವಾದ ಚಿತ್ತವನ್ನು, (ನಿರ್ಮಲ ಚಿತ್ತವನ್ನು) ತಿಳಿದಿರ್ದುಂ – ಅರಿತಿದ್ದಾಗ್ಯೂ, ಆಯದ – ಸಂಭವಿಸಿದ, ಅಪವಾದ, ಕೆಟ್ಟನುಡಂತಿಗೆ, ಇಂತು – ಈ ರೀತಿಯಾಗಿ, ಅರಸಿಯಂ – ಮಹಾರಾಜ್ಞಿಯನ್ನು, ನಿಷ್ಕರುಣದಿಂ - ದಯಾಹೀನತೆಯಿಂದ, ತೊರೆಯಬೇಕೆಂಬ – ಪರಿತ್ಯಾಗಮಾಡಬೇಕೆನ್ನುವ, ತುಂಬಿದಬಸುರಂ –|ಪೂರ್ಣಗರ್ಭವನ್ನು, ಬೆಸಲಾದ–ಧರಿಸಿರುವ, ದೇವಿಯಂ – ಭೂಪುತ್ರಿಯಾದ ಸೀತಾದೇವಿಯನ್ನು, ಪ್ರಿಯದಿಂದ ಕರುಣದಿಂದ, ಆರೈದು–ಸಲಹಿ ಕಾಪಾಡಿ, ಸಲಹಬೇಕು – ಸಂರಕ್ಷಣೆಯನ್ನು ಮಾಡಬೇಕು, ಎಂದು – ಹೀಗೆಂಬದಾಗಿ, ರಘುರಾಯಂಗೆ – ರಘುರಾಜನಾದ ಶ್ರೀರಾಮಚಂದ್ರನಿಗೆ, ಲಕ್ಷ್ಮಣಂ – ಅನುಜನಾದ ಲಕ್ಷ್ಮಣನು, ಭಿನ್ನೈಸೆ- ವಿಜ್ಞಾಪಿಸಿಕೊಳ್ಳಲಾಗಿ, ಶತ್ರುಘ್ನಂ-ಶತ್ರುನಾಶಕನಾದ ಶತ್ರುಘ್ನನು, ಮೇಲ್ವಾಯ್ದು - ಮೇಲೆಹಾದು, (ಆತುರದಿಂದ ಅತಿಕ್ರಮಿಸಿ) ಜೀಯ–ಎಲೈ ಸ್ವಾಮಿಯೆ! ಎಂದು-ಎಂಬದಾಗಿ, ಇಂತೆಂದನು–ಮುಂದಿನ ರೀತಿಯಾಗಿ ಹೇಳಿದನು ||

ಅ|| ವಿ|| ಕರುಣವಿಲ್ಲದ್ದು–ನಿಷ್ಕರುಣ, ನ. ತ. ಸ. ಆಯದ–ಉಂಟಾಗದ, ಜೀವಕಳೆ–ಜೀವಸ್ಥಾನ, ಕಾಲಪರಿಮಾಣ ಲಾಭ, ಶತ್ರುಘ್ನ - ಶತ್ರುಸಂಹಾರಕನು, ಜಿತ + ಇಂದ್ರಿಯ = ಜಿತೇಂದ್ರಿಯ, ಗುಣ. ಸಂ. ಕಿವಿಯನ್ನುಮುಚ್ಚಿ - ಕಿವಿಮುಚ್ಚಿ, ಕ್ರಿ. ಸ. |೫೫||

ಟೀ|| ಇಕ್ಷ್ವಾಕುವಂಶದವರು - ಇಕ್ಷ್ವಾಕುರಾಜನ ಕುಲದ ರಾಯರು, ಅರಸಿಯಂ – ಪಟ್ಟಮಹಿಷಿಯನ್ನು, (ರಾಜ್ಞಿಯನ್ನು) ಎಂತು–ಹೇಗೆತಾನೆ, ಬಿಡುವರು–ಪರಿತ್ಯಾಗಮಾಡುವರು. ಇಳೆಯೊಳು–ಪೃಥ್ವಿಯಲ್ಲಿ, ಆರಾದೊಡಂ–ಯಾರಾದರೂ, (ಯಾರೇ ಆದರೂ) ದೂಸರಂ–ಅಪನಿಂದನೆಯ ಮಾತನ್ನು, (ನಿಂದನೆಯ ಮಾತನ್ನು) ಎಂತು ಹೇಗೆತಾನೆ, ನುಡಿವರು–ಆಡುತ್ತಾರೆ, ಅನುಲ-ನಿರ್ದೋಷವಾದ, ಸತ್ಕೀರ್ತಿಯಂ–ಒಳ್ಳೆಯ ಯಶಸ್ಸನ್ನು, ಎಂತು–ಹೇಗೆತಾನೆ, ಪಡೆವರು–ಸಂಪಾದಿಸುವರು? ಬುದ್ಧಿ-ತಿ

---

ನಾನು ಅಡಿದಂತೆಯೇ ಭೂಪುತ್ರಿಯಾದ ಜಾನಕೀದೇವಿಯು ಪಾಪರಹಿತಳು ಮತ್ತು ಪರಿಶುದ್ಧಾತ್ಮಳು ಎಂಬುವುದೇನೋ ನಿಜ ನನ್ನನ್ನು ಪುನಹ ದುಃಖಕ್ಕೆ ಗುರಿಮಾಡಬೇಡಿ. ಮತ್ತೆ ಸಂಕಟಪಡಿಸಲಿಕ್ಕೆ ಪ್ರಾರಂಭಿಸಬೇಡಿ. ಈಗ ಬಂದಿರುವ ಲೋಕಾಪವಾದವನ್ನು ನಾನೆಂದಿಗೂ ಸಹಿಸಲಾರೆನು. ಪುರೂರವನು ಹರಿಶ್ಚಂದ್ರಾದಿಗಳು ಮುಂತಾದ ರಾಜಾಧಿರಾಜರು ಭೂಮಿಯಲ್ಲಿ ಶಾಶ್ವತವಾಗಿ ಜೀವಿತರಾಗಿರುತ್ತಾರೆಯೇ! ನಿಷ್ಕಾರಣವಾಗಿ ನಾವು ಏಕೆ ಅಪಖ್ಯಾತಿಗೆ ಗುರಿಯಾಗಬೇಕು? ತನ್ನದೆಂಬುವ ಮನೋಭಿಪ್ರಾಯವು ಹೋಗಿ ಜಿತೇಂದ್ರಿಯನಾದ ಮಹಾ ಯೋಗೀಶ್ವರನು ಐಹಿಕಾದಿ ಸೌಖ್ಯಸಂಪತ್ತನ್ನು ಬಿಡುವ ಕ್ರಮದಿಂದ ಈ ಜಾನಕಿಯನ್ನು ಪರಿತ್ಯಾಗಮಾಡುವೆನು ಎಂಬದಾಗಿ ಹೇಳಲು, ಸುಮಿತ್ರಾದೇವಿಯ ಪುತ್ರನಾದ ಲಕ್ಷ್ಮಣನು, ಚಿಂತಾವ್ಯಾಕುಲ ಹೃದ

ಪಡೆವರೆಂತಮಲಸತ್ಕೀರ್ತಿಯಂಬ.ದ್ಧಿವೇಳ್ವುದಕೊಡೆಯರಿಲ್ಲವಾಗಿ || ಕಡಿವರಂತೇಳ್ಗೆಯಂಪೆಣ್ಣಳಲ್ವೆಂಕಿಯಿಂ | ಸುಡುವರೆಂತ ನ್ಯಕುಲದಬಾಳ್ಕೆಯನಿದಕೆಕಿವಿ | ಗುಡುವರೆಂತೀಗಲೆನ್ನೊಡಹುಟ್ಟಿದವರೆನುತಶತ್ರುಘ್ನನುರಿದೆದ್ದನು || ೫೬ || ಅರಸಕೇಳನುಜರಾ ಡಿದನುಡಿಗೆತಲೆವಾಗಿ | ತರಣಿಕುಲತಿಲಕನೊಯ್ಯನೆದೈನ್ಯಭಾವದಿಂ | ತರಹರಿಸಬಾರದಪವಾದಹೃಚ್ಛೂಲಮಂತನಗೆಜಾನಕಿಯ ನುಳಿದು || ಪೆರೆಯುರ್ಚಿದುರಗನಂತಿರ್ದಪೆಂಸಾಕುನಿನು | ಗೊರೆದೊಡೇನಹುದೆಂದುಬೇಸರೊಳ್ಮನೆಗಳ್ಗೆ | ಭರತಶತ್ರುಘ್ನ

---

ಳುವಳಿಕೆಯನ್ನು, ಪೇಳ್ವುದಕೆ – ಪೇಳತಕ್ಕದ್ದಕ್ಕೆ, ಒಡೆಯರು – ವಿಚಾರಣೆಕರ್ತರು, (ನಾಥರು) ಇಲ್ಲವಾಗಿ – ಇರದೇ ಹೋಗುವ ದಾಗಿ, ಏಳ್ಗೆಯಂ – ಪೇರ್ಮೆಯನ್ನು, (ಹೆಚ್ಚಿಗೆಯನ್ನು) ಎಂತು–ಅದು ಹೇಗೆತಾನೆ, ಕಡಿವರು–ಕತ್ತರಿಸಿ ಹಾಕುವರು, ತುಂಡು ಮಾಡುವರು, ಪೆಣ್–ಹೆಣ್ಣಿನ, (ಅಬಲೆಯ) ಅಳಲ-ಸಂತಾಪವೆಂಬ, (ಬೇಗೆ ಎಂಬ) ಬೆಂಕಿಯಿಂ–ಅಗ್ನಿಯಿಂದ, ಅನ್ಯಯದ– ಕುಲದ, ಬಾಳ್ಕೆಯಂ–ಬದುಕುವಿಕೆಯನ್ನು, ಎಂತು–ಹೇಗೆತಾನೆ, ಸುಡುವರು–ಸುಟ್ಟುಬಿಡುವರು, ಇದಕೆ–ಈ ಬಗೆಯಾದ ವಿಷ ಯಕ್ಕೆ, ಎನ್ನ–ಎನ್ನಯ, ಒಡಹುಟ್ಟಿದವರು–ಅನುಜಾತರು, (ಸಹೋದರರು) ಈಗಲು–ಈ ಗರ್ಭವನ್ನು ಹೊಂದಿರುವ ಕಾಲದಲ್ಲಿ ಯೂ, ಎಂತು–ಹೇಗೆತಾನೆ, ಕಿವಿಗೊಡುವರು–ಹೇಳಿಕೆಯ ಮಾತನ್ನು ಕೇಳತಕ್ಕವರಾದರು, ಎನುತ–ಎಂಬದಾಗಿ ಹೇಳುತ್ತ, ಶತ್ರುಘ್ನ ನು–ಶತ್ರುಹಂತಾರನಾದ ಶತ್ರುಘ್ನನು,ಉರಿದು–ಬೆಂಕಿಯಜ್ವಾಲೆಯಂತೆ ಆಟೋಪವುಳ್ಳವನಾಗಿ,ಎದ್ದನು–ಎದ್ದುನಿಂತುಕೊಂಡನು.

ಅ|| ವಿ|| ಅನಲ–ಅಗ್ನಿ, ಅನಿಲ-ವಾಯು, ಪಾಯು-ಅಸ್ತಿವಾರ, ಪಾನ–ಕುಡಿಯೋಣ, ಅಂತಃಕರಣ ಚತುಷ್ಟಯ–ಮನಸ್ಸು, ಬುದ್ಧಿ, ಅಹಂಕಾರ, ಚಿತ್ತ. ತ್ರಿನಾಡಿ–ಇಡಾ, ಪಿಂಗಲಾ, ಸುಷುಮ್ನಾ. ಪಂಚಕ್ಲೇಶಗಳು–ಅವಿದ್ಯೆ, ಅಸ್ಮಿತ–ರಾಗ, ದ್ವೇಷ, ಅಭಿ ನಿವೇಶ. ಪಂಚಮಹಾಪಾತಕಗಳು–ಬ್ರಹ್ಮಹತ್ಯ, ಸುರಾಪಾನ, ಸ್ವರ್ಣಸ್ತೇಯ, ಗುರುತಲ್ಪ ಗಮನ, ತತ್ಸಂಯೋಗ ||೫೬||

ಟೀ|| ಅರಸ – ಎಲೈ ಜನಮೇಜಯ ಭೂಪಾಲನೆ, ಕೇಳು–ಆಲಿಸು, ಅನುಜರು – ಸಹೋದರರಾದ ಲಕ್ಷ್ಮಣ ಭರತ ಶತ್ರುಘ್ನಾದಿಗಳು, ಆಡಿದ–ಹೇಳಿದ, ನುಡಿಗೆ–ಹೇಳಿಕೆಗಳಿಗೆ, (ವಚನಗಳಿಗೆ) ತರಣಿ–ಸೂರ್ಯನ, ಕುಲ–ವಂಶದಲ್ಲಿ, ತಿಲಕನು–ಶ್ರೇಷ್ಠ ನಾದ ಶ್ರೀ ರಾಮನು, (ಇನಕುಲ ಲಲಾಮನಾದ ಶ್ರೀ ರಾಮನು) ತಲೆವಾಗಿ–ತಲೆಯನ್ನು ಬಾಗಿಸಿಕೊಂಡವನಾಗಿ, ಒಯ್ಯನೆ– ಮೆತ್ತಗೆ, ನಿಧಾನವಾಗಿ, ದೈನ್ಯಭಾವದಿಂ–ಅತಿದೀನತೆಯಿಂದ, ತನಗೆ–ಎನಗಾದರೊ, ತರಹರಿಸಬಾರದ–ಸಹಿಸಲಸಾಧ್ಯವಾದ, ಅಪ ವಾದ–ನಿಂದನೆಯೆಂಬ, ಹೃಚ್ಛೂಲಮಂ–ಮನದ ಶೂಲವನ್ನು, (ಎದೆಯ ಶೂಲವನ್ನು) ಜಾನಕಿಯಂ–ವೈದೇಹಿಯನ್ನು, (ಜನಕನ ಪುತ್ರಿಯನ್ನು) ಉಳಿದು–ಬಿಟ್ಟು, (ಪರಿತ್ಯಾಗಮಾಡಿದರೆ) ಪೆರೆಯುರ್ಚಿದ – ಪರೆಯನ್ನು ಬಿಟ್ಟಿರುವ, ಉರುಗನಂತೆ – ಅಹಿಯೋ ಪಾದಿಯಲ್ಲಿ, ಇರ್ದಪೆಂ–ಇರುತ್ತೇನೆ, ಸಾಕು–ಇದರ ವಿಷಯ ಬೇಕಿಲ್ಲ, ನಿಮಗೆ–ನಿಮ್ಮಗಳಿಗೆ, ಒರೆದೊಡೆ–ಪೇಳಿದರೆ, ಏನಹುದು– ಏನಾದೀತು, ಎಂದು–ಎಂಬದಾಗಿ, ಬೇಸರೊಳ್–ಜಿಗುಪ್ಸೆಯಿಂದ, ಬೇಜಾರಿನಿಂದ, ಮನೆಗಳ್ಗೆ–ಗೃಹಗಳಿಗೆ, ಭರತಶತ್ರುಘ್ನರಂ– ಭರತನನ್ನು ಮತ್ತು ಶತ್ರುಘ್ನನನ್ನು, ಕಳುಹುತ–ಕಳುಹಿಸಿಕೊಡುತ್ತ, ಏಕಾಂತದೊಳ್–ಗುಟ್ಟಾಗಿ, ರಹಸ್ಯವಾಗಿ, ಸೌಮಿತ್ರಿಗೆ– ಸುಮಿತ್ರೆಯ ಮಗನಾದ, ಲಕ್ಷ್ಮಣನಿಗೆ, ಇಂತೆಂದನು–ಹೀಗೆಂದು ಹೇಳಿದನು.

ಅ|| ವಿ|| ಸುಮಿತ್ರೆಯ+ಮಗ=ಸೌಮಿತ್ರಿ. ಏಕ+ಅಂತ=ಏಕಾಂತ. ಸ. ಸಂಧಿ. ಇಂತು + ಎಂದ = ಇಂತೆಂದ. ಉಕಾರ ಲೋಪಸಂಧಿ, ಹೃತ್ + ಶೂಲ = ಹೃಚ್ಛೂಲ, ಛತ್ವಸಂಧಿ. ಜನಕರಾಯನ+ಪುತ್ರಿ=ಜಾನಕಿ, ಇನನಕುಲ-ಇನಕುಲ, ಷ. ತ. ತಿಳಿಕ–ಶ್ರೇಷ್ಠ, ನಾಮ, ತಿಲಕ, ವೃಕ್ಷ ||೫೭||

---

ಯನಾಗಿ, ಭಯದಿಂದ ಗಡಗಡನೆ ನಡುಗುತ್ತಲೂ ಕರ್ಣಗಳು ಮುಚ್ಚಿಕೊಳ್ಳುತ್ತಲೂ, ಅಗ್ರಜನಾದ ಶ್ರೀ ರಾಮಮೂರ್ತಿಗೆ ಈ ಪ್ರಕಾರವಾಗಿ ಹೇಳಿದನು||೫೪||ಆ ಬಳಿಕ ಅನುಜನಾದ ಲಕ್ಷ್ಮಣನು ಅಗ್ರಜನು ಕಂಡು ಎಲೈ ಇನಕುಲಾಂಬುಧಿಶ್ವೇತಭಾನುವೇ? ಕಾಯಕ ಸುಖಕ್ಕೋಸ್ಕರವಾಗಿ ಧರ್ಮಕಾರ್ಯಸಾಧನೆಯನ್ನು ಬಿಟ್ಟುಬಿಡುವ ರೀತಿಯಂತೆ ವಿಶಾಲಾಕ್ಷಿಯಾದ ವೈದೇಹಿಯ ಭಾವಶುದ್ಧಿಯನ್ನು ತಿಳಿದಿದ್ದಾಗ್ಯೂ ಉಂಟಾದ ದುರ್ವಾರ್ತೆಗೆ ಈ ರೀತಿಯಾಗಿ ಕುಲಾಂಗನೆಯನ್ನು (ಪಟ್ಟಮಹಿಷಿಯನ್ನು) ಪರಿತ್ಯಾಗಮಾಳ್ಪ ಯೋಚನೆಯಂ ಗೈವರೆ ತುಂಬಿದ ಗರ್ಭವನ್ನು (ಪೂರ್ಣಗರ್ಭಿಣಿಯನ್ನು) ಹೊಂದಿದ ಜಾನಕಿಯನ್ನು ಅತ್ಯಾದರ ಲಾಲನ ಪಾಲನದಿಂ ಸಲಹಿ ಆತ್ಯಧಿಕವಾದ ವಿಶ್ವಾಸಪೂರಿತರಾಗಿರದೆ ಪರಿತ್ಯಾಗಮಾಡಬೇಕೆಂಬುವ ನಿರ್ದಯಮನವು ಅದು ಹೇಗೆ ಉದ್ಭವಿಸಿದುದೋ ಎಲೈ ಸಕಲಗುಣಜ್ಞನಾದ ಪ್ರಭುವೇ ! ಅತ್ಯಾದರದಿಂದ ಪೋಷಿಸತಕ್ಕದ್ದು ಯುಕ್ತವಾದುದು. ಎಂಬದಾಗಿ ರಘುರಾಮನಿಗೆ ಸೌಮಿತ್ರಿ (ಅತಿಕ್ರಮಿಸಿ) ಈ ರೀತಿಯಾಗಿ ಪೇಳಿದನು || ೫೫ || ಇಕ್ಷ್ವಾಕುವಂಶದರಸು ಪಟ್ಟ ಮಹಿಷಿಯನ್ನು ನಿಷ್ಕಾರಣವಾಗಿ ನಿಷ್ಕರುಣದಿಂದ ಅದು ಹೇಗೆ ಬಿಡುತ್ತಾನೆ ಪೃಥ್ವಿಯಲ್ಲಿ ಯಾರಾದಾಗ್ಯೂ ದೂಷಣೆಯಮಾತನ್ನು ಅದು ಹೇಗೆತಾನೆ ಹೇಳುವರು ? ನಿರ್ದೋಷವಾದ ಸತ್ಕೀರ್ತಿಯನ್ನು ಯಾವ ರೀತಿಯಲ್ಲಿ ಪಡಿಯುವರು ? ತಿಳುವಳಿಕೆಯನ್ನು

ರಂಕಳುಹುತೇಕಾಂತದೋಳ್ಸೌಮಿತ್ರಿಗಿಂತೆಂದನು || ೫೭ || ತಮ್ಮಬಾನೀನಿಂದುವರೆಗೆತಾನೆಂದಮಾ | ತಂಮಿರಿದವನಲ್ಲಕೆಲಬ
ಲವನಾರೈವು | ತಂಮರುಗದಿರುತನ್ನಕೊರಳಿಗಿದೆಖಡ್ಗಮಲ್ಲದೊಡೀಗಜಾನಕಿಯನು || ಉಮ್ಮಳಿಸದೊಯ್ದುಗಂಗೆಯತಡಿಯರ
ಣ್ಯದೊ | ಳ್ಸುಮ್ಮನೆಕಳುಹಿಬಪ್ಪುದವಳೆನ್ನೊಳಾಡಿರ್ಪ್ಪ | ಳೊಮ್ಮೆಕಾನನಕೈದಬೇಕೆಂದುಬಯಕೆಯಿಂದದೆನೆವಂನಿನಗೆಂ
ದನು || ೫೮ || ಎನೆರಾಘವೇಂದ್ರನಿನ್ನಾಜ್ಞೆಯಂಮೀರಲ್ಕೆ | ತನಗೆರೌರವಮಪ್ಪುದೆಂದುದಂಮಾಡಲ್ಕೆ | ಜನನಿಯಂಕೊಂದುಗ್ರಗ
ತಿಯಪ್ಪುದೇಗೈವೆನೆಂದುಕಡುಶೋಕದಿಂದ || ತನುಝೋಂಪಿಸಲ್ಕೆಸೆರೆಬಿಗಿದುಕಂಬನಿಯಿಂದ | ನೆನೆದಳಲ್ದೊರೆಯೊಳಾಳ್ದನುಜ

---

ಟೀ|| ತಮ್ಮ-ಸಹೋದರನಾದ ಲಕ್ಷ್ಮಣನೆ, ಬಾ-ಇಲ್ಲಿ ಬರುವವನಾಗು, ನೀನು-ನೀನಾದರೊ, ಇಂದುವರೆಗೆ-ಈವತ್ತಿನ ಪರಿಯಂತವೂ, ತಾಂ-ಅಣ್ಣನಾದ ನಾನು, ಎಂದ-ಆಡಿದ, (ಅಪ್ಪಣೆಮಾಡಿದ) ಮಾತಂ-ಮಾತನ್ನು, ಮೀರಿದವನು-ಅತಿಕ್ರಮಿಸಿಹೋದವನು, ಅಲ್ಲ-ಆಗಿರುವದಿಲ್ಲ, ಕೆಲಬಲವನು-ಎಡಬಲಪಕ್ಕಗಳನ್ನು, ಆರೈವುತ-ಆದರಣೆಮಾಡುತ್ತ, ಮರುಗುತಂ-ಸಂತಾಪಪಡುತ್ತ, ಇರು-ಇರುವವನಾಗು, ತನ್ನ-ಎನ್ನಯ, ಕೊರಳಿಗೆ-ಕಂಠಕ್ಕೆ, ಖಡ್ಗಂ-ಅಸಿಯು, ಅಲ್ಲದೊಡೆ-ಆಗದೇ ಹೋಗಿರಲು, (ಆಗದೆ) ಈಗ-ಈ ಸಮಯದಲ್ಲಿ, ಜಾನಕಿಯನು-ಜನಕರಾಯನ ಪುತ್ರಿಯನ್ನು, ಉಮ್ಮಳಿಸದೆ-ಚಿಂತೆಪಡದೆ, ದುಃಖಿಸದೆ, ಒಯ್ದು ಪ್ರಯಾಣಮಾಡಿಸಿಕೊಂಡು ಹೋಗಿ, ಗಂಗೆಯತಡಿಯ-ಜಾಹ್ನವಿಯತಟದ, ತೀರದ-ಹತ್ತಿರ ಪ್ರದೇಶದ, ಅರಣ್ಯದೋಳ್-ವನಪ್ರದೇಶದಲ್ಲಿ, ಸುಮ್ಮನೆ-ಯಾವ ವಿಷಯವನ್ನೂ ತಿಳಿಯಪಡಿಸದಂತೆ, ಕಳುಹಿ-ಕಳುಹಿಸಿಕೊಟ್ಟು, ಬಪ್ಪುದು-ಬರತಕ್ಕದ್ದು, ಅವಳು-ಆ ಜಾನಕಿಯು, ಒಮ್ಮೆ-ಒಂದಾವರ್ತಿ, (ಒಂದುಸಲ) ಎನ್ನೊಳು-ಎನ್ನೊಡನೆ, ಕಾನನಕೆ-ವನಕ್ಕೆ, ಕಾಡಿಗೆ, ಐದಬೇಕು-ಹೋಗಬೇಕು, ಎಂದು-ಎಂಬದಾಗಿ, ಬಯಕೆಯಿಂದ-ಅಪೇಕ್ಷೆಯಿಂದ, ಆಡಿರ್ಪಳು-ಆಡಿರುತ್ತಾಳೆ, ಅದೇ-ಆ ಸೀತೆಯು ಆಗ ಆಡಿದಮಾತೆ, ನಿನಗೆ-ಅನುಜನಾದ ನಿನಗೆ, ನೆವಂ-ಕಾರಣವಾಗಿರುತ್ತದೆ, ಎಂದನು-ಎಂಬದಾಗಿ ಹೇಳಿದನು ||

ಅ|| ವಿ|| ತಟ-ತ್ಸ. ದಡ-ದ್ಭ. ಖಡ್ಗ-ತ್ಸ. ಖಡುಗ-ದ್ಭ. ಸೀತ-ನೇಗಲಿನಿಂದಾದ ಗೆರೆ, ಸೀತದಲ್ಲಿ ಸಿಕ್ಕಿದವಳು-ಸೀತೆ. ಗಂಗೆಯ + ತಟ = ಗಂಗಾತಟ, ಷ. ತ. ಅದುವಚನ-ಆಚವನ, ಗ. ಸ. ||೫೭||

ಟೀ|| ಎನೆ-ಈ ರೀತಿಯಾಗಿ ಹೇಳಲು, ರಾಘವೇಂದ್ರ-ಎಲೈ ರಘುಕುಲ ಶ್ರೇಷ್ಠನಾದ ರಾಮಚಂದ್ರನೆ ! ನಿನ್ನಾಜ್ಞೆಯಂ-ನಿನ್ನಾಣತಿಯನ್ನು, ಮೀರಲ್ಕೆ-ಅತಿಕ್ರಮಿಸಿ ನಡಿಯಲಿಕ್ಕೆ, ತನಗೆ-ಎನಗಾದರೊ, ರೌರವಂ-ಅಧೋಗತಿಯು, (ನರಕದಗತಿಯು) ಅಪ್ಪುದು-ಆಗುವುದು, ಎಂದು-ಎಂಬದಾಗಿ, ಅದಂ-ಆ ನಿನ್ನಾಜ್ಞೆಯನ್ನು, ಮಾಡಲ್ಕೆ-ನೆರವೇರಿಸಲು, ಜನನಿಯಂ-ಮಾತೆಯಂ, ಕೊಂದ-ಸಂಹರಿಸಿದ, ಉಗ್ರ-ಅತಿಭಯಂಕರವಾದ, ಗತಿ-ಮಾರ್ಗವು, (ಕ್ರೂರವಾದ ನರಕವು) ಅಪ್ಪುದು-ಲಭಿಸುವುದು, ಆಗುವುದು, ಏಗೈವೆಂ-ಏನುಮಾಡಲಿ, ಎಂದು-ಎಂಬದಾಗಿ, ಕಡು-ಅಧಿಕವಾದ, ಶೋಕದಿಂದ-ವ್ಯಥೆಯಿಂದ, ತನು-ದೇಹವು, ಝೋಂಪಿಸಲ್ಕೆ-ಮೂರ್ಛೆಯುಂಟಾಗಲಾಗಿ, ಸೆರೆಬಿಗಿದು-ದಿಕ್ಕುತೋಚದೆ ಸುಮ್ಮನೆ ನಿಂತು, ಕಂಬನಿಯಿಂದ-ನೇತ್ರೋದಕದಿಂದ,

---

ಹೇಳಲಿಕ್ಕೆ ನಾಥರು ಇಲ್ಲದಿರಲು ವಂಶಾಭಿವೃದ್ಧಿಯನ್ನು ಹೇಗೆ ಕಡಿದು ಬಿಡುವರು, ಸ್ತ್ರೀಯ ದುಃಖವೆಂಬುವ ಅಗ್ನಿಯಿಂದ ಅನ್ವಯದ ಬಾಳ್ಕೆಯನ್ನು ಅದು ಹೇಗೆ ತಾನೆ ದಹಿಸುವರು, ಇಂತಹ ದುರಾಲೋಚನೆಗೆ ಎನ್ನ ಒಡಹುಟ್ಟಿದವರು ತಾನೆ ಹೇಗೆ ಕಿವಿಗೊಡುವರು ಎಂದರೆ ಈ ಗರ್ಭಿಣಿಯನ್ನು ಸಂತಾಪ ಪಡಿಸಲಿಕ್ಕೆ ಯಾರತಾನೆ ನಿನ್ನ ಅಭಿಪ್ರಾಯವನ್ನು ಅಂಗೀಕರಿಸುವರು ಎಂದು ಅತ್ಯುಗ್ರವಾದ ಕೋಪಾವೇಶದಿಂದ ಶತ್ರುಘ್ನನು ಉರಿದೆದ್ದನು. || ೫೬ || ಎಲೈ ಭೂನಾಥನಾದ ಜನಮೇಜಯರಾಯನೇ ಆಲಿಸು, ತನ್ನ ಸಹೋದರರು ನುಡಿದ ಮಾತುಗಳಿಗೆ ತರಣಿಕುಲಸಾರ್ವಭೌಮನಾದ ಶ್ರೀರಾಮಚಂದ್ರನು, ತನ್ನಯ ತಲೆಯಂ ಬಾಗಿಸಿಕೊಂಡು ನಿಧಾನವಾಗಿ ಅತಿ ದೈನ್ಯದ ಭಾವದಿಂದ ಅಪವಾದವೆಂಬ ಹೃಚ್ಛೂಲವನ್ನು (ಅಪಕೀರ್ತಿಯೆಂಬ ಹೃದಯ ಶೂಲವನ್ನು). ನಾನು ಸಹಿಸಲಾರೆನು ಜಾನಕಿಯನ್ನು ಪರಿತ್ಯಾಗಮಾಡಿ ಬಿಟ್ಟರೆ ಪರೆಯುಗಿದ ಸರ್ಪದಹಾಗೆ ಕಳೆಯೇರಿ ಇರುವೆನು. ಸಾಕು ಇನ್ನು ನಿಮ್ಮಗಳಿಗೆ ಹೇಳುವುದರಿಂದ ಫಲವಿಲ್ಲವೆಂದು ಯೋಚಿಸಿ ಬೇಸರದಿಂದ ಭರತ ಶತ್ರುಘ್ನರಂ ಮನೆಗೆ ಕಳುಹುತ ಏಕಾಂತದಲ್ಲಿ ಲಕ್ಷ್ಮಣನೊಡನೆ ಇಂತೆಂದನು || ೫೭ || ಅನುಜನಾದ ಸೌಮಿತ್ರಿಯೇ ಇಲ್ಲಿಬಾ, ನೀನು ಇದುವರೆಗೂ ನಾನು ಹೇಳಿದ ಮಾತಿಗೆ ಪ್ರತ್ಯುತ್ತರವನ್ನಿತ್ತವನಲ್ಲ, ಎನ್ನ ನುಡಿಯಂ ಮೀರಿ ಪೋದವನಲ್ಲ. ಎಡಬಲ ಪಾರ್ಶ್ವಗಳನ್ನು ಈಕ್ಷಿಸದೆ ಇರು, ನನ್ನ ಕತ್ತಿಗೆ ಈ ಅಸಿಯು (ಕತ್ತಿಯು) ತಾಗದಹಾಗೆ ಇರಬೇಕಾದರೆ ಯಾವ ಪ್ರತ್ಯುತ್ತರವನ್ನೂ ಹೇಳದೆ ಈಗ ಜಾನಕಿಯನ್ನು ಬದಲು ಮಾತಾಡದೆ ಕರೆದ ಕೊಂಡುಹೋಗಿ ದೇವಗಂಗಾನದಿಯ ತೀರದಲ್ಲಿನ ಅರಣ್ಯದಲ್ಲಿ ಸುಮ್ಮನೆಬಿಟ್ಟು ಬರುವುದು. ಸೀತೆಯು ಒಂದಾನೊಂದು ಕಾಲದಲ್ಲಿ ಕಾಡಿಗೆಹೋಗಿ ಬರಬೇಕು ಎಂಬದಾಗಿ ಹೇಳಿದಳು ಆ ಮಾತನ್ನೇ ನೀನು ನೆಪಮಾಡಿಕೊಂಡು ಹೋಗಿಬಿಟ್ಟು ಬಾರೆಂದು ಶ್ರೀರಾಮನು ಹೇಳಿದನು ||೫೮|| ಆ ಬಳಿಕ ಸೌಮಿತ್ರಿಯು ಎಲೈ

ನಂಘೂರ್ಮಿಸುತ | ನಿನಗೆದೋಷವೆುತಾನಿರಲ್ಕೆನಡೆಕಳುಹೆಂದನುರಸನೇಂದಯದೊರೆದನೋ || ೫೯ || ಅಣ್ಣಾದೇವನೊಳಿಡಿದವಾತ್ಸಲ್ಯವೆಂಬಬ | ಲ್ಗಣ್ಣಿಯೋಳ್ಕಟ್ಟುವೊಡೆದಲ್ಲೆನಲರಿಯದೆನಿ | ರ್ವಿಣ್ಣಭಾವದೊಳಂದುಲಕ್ಷ್ಮಣಂತುರಗಸಾರಥಿಕೇತನಂಗಳಿಂದ || ಹಣ್ಣಿದವರೂಥನುಂತರಿಸಿಪೊರಗಿರಿಸಿನೆಲ | ವೆಣ್ಣುಮಗಳಿರುತಿರ್ದರಾಜಮಂದಿರಕೈದಿ | ಕಣ್ಣೊಳೀಕ್ಷಿಸದೆತಲೆವಾಗಿದೂರದೊಳೆನಿಂದಾಸೀತೆಗಿಂತೆಂದನು || ೬೦ || ತಾಯೆನೀನೇತಕೆಳಸಿದೆನಿನ್ನನೀಗರಘು | ರಾಯಂತಪೋವನಕೆಕಳುಪಿಬರಹೇಳಿದಂ | ಪ್ರಿಯಮುಳ್ಳೊಡೆರಥಂಪಣ್ಣಿಬಂದಿದೆಯಿಕೊಬಿಜಯಂಗೈವುದೆಂದುನುರುಗಿ|| ಛಾಯೆಗಾಣಿಸಿಸುಮಿತ್ರಾತ್ಮಜಂನುಡಿದಭಿ | ಪ್ರಾಯಮುಂತಿಳಿಯದತಿಸಂಭ್ರಮಾನ್ವಿತೆಯಾದ | ಆಯತಾಂಬಕಿತನ್ನಭೀಷ್ಟಮಂಸಲಿಸುವಂಕಾಂತನೆಂಬುತ್ಸವದೊಳು ||೬೧||

---

ನೆನೆದು-ತೋಿದುಹೋಗಿ, ಅಳಲ್ದೊರೆಯೊಳು-ಸಂತಾಪವೆಂಬ ನದಿಯಲ್ಲಿ, ಆಳ್ದ-ಮುಳುಗಿಹೋಗಿದ್ದ, ಅನುಜನಂ-ಸಹೋದರನಾದ ಲಕ್ಷ್ಮಣನನ್ನು, ಘೂರ್ಮಿಸುತ-ಅಬ್ಬರಿಸುತ್ತ, ತಾಂ-ರಾಮನಾದ ನಾನು, ಇರಲ್ಕೆ-ಇರುವಾಗ್ಯೆ, ನಿನಗೆ-ಅನುಜನಾದ ನಿನಗೆ, ದೋಷವೆು-ಪಾಪವೇ. ನಡೆ-ಹೊರಡು, ಕಳುಹು-ಕಳುಹಿಸಿಕೊಡು, ಎಂದಂ-ಎಂಬದಾಗಿ ಹೇಳಿದನು, ಅರಸಂ-ರಾಜನಾದ ಶ್ರೀರಾಮನು, ಏಂದಯೆದೊರೆದನೊ-ಏನುಕಾರಣದಯಾಶೂನ್ಯನಾದನೋ? ಕಾಣೆಂ-ಕಾಣೆನು ||

ಅ|| ವಿ|| ದಯೆಯನ್ನು+ತೊರೆ=ದಯೆದೊರೆ, ಕ್ರಿ. ಸ. ರಾಘವ + ಇಂದ್ರ = ರಾಘವೇಂದ್ರ, ಗುಣ ಸಂ. ಜನಕರಾಯನ ಮಗಳು ಜಾನಕಿ. ಆಜ್ಞೆ-ತ್ಸ. ಆಣೆ-ದ್ಭ. ಅನುಜ-ತಮ್ಮ. ತನುಜ-ಮಗ. ||೫೯||

ಟೀ|| ಅಂದು-ಶ್ರೀ ರಾಮನು ಹೇಳಿದಾಗ, ಲಕ್ಷ್ಮಣಂ-ಅನುಜನಾದ ಲಕ್ಷ್ಮಣನು, ಅಣ್ಣಾದೇವನೊಳು-ಸ್ವಾಮಿಯಾದ ಪೂರ್ವಜನಲ್ಲಿ, ಇಡಿದ-ವ್ಯಾಪ್ತವಾದ, ವಾತ್ಸಲ್ಯಂ-ಅಕ್ಕರೆಯು, ಎಂಬ-ಎನ್ನುವ, ಬಲ್ಗಣ್ಣಿಯೋಳ್-ಬಲ್ಲಿತ್ತಾದಕಣ್ಣಿಯಿಂದ, ಕಟ್ಟುವಡೆದು-ಬಂಧಿಸಲ್ಪಟ್ಟು, ಅಲ್ಲೆನೆಲರಿಯದೆ-ಆಗಲಾರದೆಂದು ಹೇಳಲಾರದೆ, ನಿರ್ವಿಣ್ಣಭಾವದೊಳ್ - ಚಿಂತಾಕ್ರಾಂತತೆಯಿಂದ, (ವ್ಯಸನದಿಂದ ಕೂಡಿದ ಮನೋಭಿಪ್ರಾಯದಿಂದ) ತುರಗ-ಅಶ್ವವು, ಸಾರಥಿ-ರಥನಡಿಸುವವನು, ಕೇತನಂಗಳಿಂದ-ಪತಾಕೆಯೆ ಮೊದಲಾದವುಗಳಿಂದ, ಹಣ್ಣಿದ-ಬೆರತಿರುವ, (ಕೂಡಿರುವ) ವರೂಥಮಂ-ತೇರನ್ನು, ತರಿಸಿ-ಬರಮಾಡಿಕೊಂಡು, ಪೊರಗೆ-ಹೊರಗಡೆಯಲ್ಲಿ, ಇರಿಸಿ-ಸ್ಥಿರಮಾಡಿಸಿ, ನೆಲವೆಣ್ಣುಮಗಳ್-ಭೂದೇವಿಯ ಮಗಳಾದ ಜಾನಕಿದೇವಿಯು, ಇರುತಿರ್ದ-ಇದ್ದಂಥ, ರಾಜಮಂದಿರಕೆ-ಅರಸಿನಮನೆಗೆ, (ರಾಣಿವಾಸಕ್ಕೆ) ಐದಿ-ಬಂದವನಾಗಿ, ಕಣ್ಣೊಳು-ನೇತ್ರಗಳಿಂದ, ಈಕ್ಷಿಸದೆ-ಅವಲೋಕಿದದೆ, ತಲೆವಾಗಿ-ತಲೆಯನ್ನು ಕೆಳಗೆ ಬೊಗ್ಗಿಸಿಕೊಂಡು, ದೂರದೊಳೆ-ದೂರದಲ್ಲಿಯೇ, ನಿಂದು-ನಿಂತುಕೊಂಡು, ಆ ಸೀತೆಗೆ-ಆ ಸೀತಾದೇವಿಗೆ, ಇಂತೆಂದನು-ಈ ಪ್ರಕಾರವಾಗಿ ಪೇಳಿದನು ||

ಅ|| ವಿ|| ಇಂತು + ಎಂದು = ಇಂತೆಂದು, ಉಕಾರಲೋಪ. ಅನುಜ-ತಮ್ಮ, ತನುಜ-ಮಗ, ಅಧಿ ಮನೋರೋಗ, ವ್ಯಾಧಿ-ದೇಹರೋಗ, ಲಕ್ಷ್ಮಣ-ಸಕಲ ಲಕ್ಷಣಗಳಿಂದ ಕೂಡಿದವನು. ಕಟ್ಟನ್ನು + ಪಡೆದು = ಕಟ್ಟುವಡೆದು, ಕ್ರಿ. ಸ. ಬಲ್ಲಿತ್ತು, ಕಣ್ಣಿ = ಬಲ್ಗಣ್ಣಿ, ವಿ. ಪೂ. ಕ. ರಾಜನ + ಮಂದಿರ = ರಾಜಮಂದಿರ, ಷ. ತ. || ೬೦ ||

ಟೀ|| ತಾಯೆ-ಎಲೌ ಜನನಿಯೆ ! ನೀಂ-ನೀನಾದರೋ, ಏತಕೆ-ಏತಕ್ಕಾಗಿ, ಎಳಸಿದೆ-ತಪೋರಣ್ಯಕ್ಕೆ ಹೋಗಿ ಬರಬೇಕೆಂದು ಆಶೆಪಟ್ಟೆ, ನಿನ್ನಂ - ನಿನ್ನನ್ನು, ಈಗ - ಈ ಸಮಯದಲ್ಲಿ, ರಘುರಾಯಂ-ಶ್ರೀರಾಮಚಂದ್ರನು. ತಪೋವ

---

ರಘುಕುಲೋತ್ತಂಸನೇ ! ನಿನ್ನಾಜ್ಞೆಯನ್ನು ನಾನು ಮೀರಿದ್ದೇ ಆದರೆ ನರಕವೇ ಪ್ರಾಪ್ತವಾಗುವುದು. ಒಂದುವೇಳೆ ನಿನ್ನಾಜ್ಞೆಯಂತೆ ನಡದುಕೊಂಡರೆ ಮಾತೃಹತ್ಯ ದೋಷವು ಪ್ರಾಪ್ತವಾಗುವುದು ಇದಕ್ಕೆ ನಾನೇನುಮಾಡಲಿ ಹಾ ದುರ್ವಿಧಿಯೇ ! ಎಂದು ಕಡುಶೋಕದಿಂದ ಮೂರ್ಛೆ ಹೊಂದಲು ಪುನಹ ಚೇತರಿಸಿ ಕಂಬನಿಯಿಂದ ಮೈತೋದುಹೋಗಿ ದುಃಖವೆಂಬ ನದಿಯಲ್ಲಿ ಬಿದ್ದು ಸಂತಾಪ ಪಡುವ ಅನುಜನಾದ ಲಕ್ಷ್ಮಣನಂ ಕಂಡು ಶ್ರೀರಾಮನು ಗರ್ಜಿಸುತ್ತ ತಾನು ಜೀವಿತನಾಗಿರಲು ನಾಸೇ ಆಕಾರ್ಯಮಾಡೆನ್ನಲು ನಿನಗೆ ದೋಷವೆಲ್ಲಿಪ್ಪುದು ಹೊರಡು ಕಳುಹಿಸಿ ಬಾ ಎಂದನು ಅಹಹ ಶ್ರೀರಾಮನು ಏನು ದಯಾಶೂನ್ಯನೊ ಪೃಥ್ವಿಯಲ್ಲಿ ನಾನರಿಯೆನು ||೫೯|| ಆಬಳಿಕ ಸೌಮಿತ್ರಿಯು ಸ್ವಾಮಿಯೆಂದು ಭಾವಿಸಿರ್ಪ ಅಗ್ರಜನಾದ ಶ್ರೀರಾಮನಲ್ಲಿ ಸಂಪೂರ್ತಿಯಾದ ವಾತ್ಸಲ್ಯವೆಂಬುವ ಬಲವಾದ ಹಗ್ಗದಿಂದ ಬಂಧಿಸಲ್ಪಟ್ಟು ತನ್ನಿಂದಾಗಲಾರದೆಂಬ ಮಾತನ್ನುಹೇಳದೆ (ಪ್ರತ್ಯುತ್ತರವನ್ನು ಹೇಳದೆ) ಸ್ತಬ್ಧಭಾವದಿಂದ ಕುದುರೆ ಸಾರಥಿಗಳಿಂದ ಯುಕ್ತವಾಗಿರುವ ರಥನನ್ನು ಹೊರಗೆ ನಿಲ್ಲಿಸಿ ಭೂಮಿ ಪುತ್ರಿಯಾದ ಸೀತಾದೇವಿಯು ಇರುವ ರಾಜಮಂದಿರಕ್ಕೆ ಬಂದವನಾಗಿ ಕಣ್ಣುಗಳಿಂದೀಕ್ಷಿಸದೆ ತಲೆಯನ್ನು ಬಗ್ಗಿಸಿಕೊಂಡು ದೂರವಾಗಿ ನಿಂತುಕೊಂಡು ಜನನಿಯಾದ ಜಾನಕಿಗೆ ಜಾಗ್ರತೆಯಾಗಿ ಈ ವಿಧದಿಂದ ಪೇಳಿದನು ||೬೦|| ಬಳಿಕ ಸೌಮಿತ್ರಿಯು ಜಾನಕಿಯಂ ನೋಡಿ ಎಲೌ ಜನನಿಯೇ! ಏನ.ಕಾರಣ ಅರಣ್ಯವಾಸಕ್ಕೆ ಹೋಗಬೇಕೆಂಬ ಆಶೆಪಟ್ಟವಳಾದೆ? ನಿನ್ನನ್ನು ಈಗ ಕಳುಹಿಸಿ ಬರುವಂತೆ ಶ್ರೀ

ಅಂಬುಜಾನನೆಬಳಿಕಪಯಣಮುಂನಿಶ್ಚೈಸಿ | ನಂಬಿದರಭೀಷ್ಟಮುಂಸಲಿಸುವಕೃಪಾಳುತಾ | ನೆಂಬುದಂಕಾಣಿಸಿದನಿಂದೆನ್ನಕಾಂತನೆನ
ಗೆಂದುಕೌಸಲೆಗೆಪೇಳ್ದು || ಮುಂಬರಿದೊಡಂಬಡಿಸಿಬಲವಂದುಕಾಲ್ಗೆರಗಿ | ತುಂಬಿದಪರಕೆವೆತ್ತುಕೈಕಯಾದೇವಿಗೆಶಿ | ರಂಬಾಗಿ
ವರಸುಮಿತ್ರೆಗೆನಮಿಸಿಸಖಿಯರಂಸಂತೈಸಿಬೀಳ್ಕೊಂಡಳು || ೬೨ || ಮಿಗೆತಪೋವನದಋಷಿಯರ್ಗೆಮುನಿಪತ್ನಿಯ | ರ್ಗಗರು
ಚಂದನಕುಂಕುಮಾನುಲೇಪನಂಗಳಂ | ಬಗೆಬಗೆಯದಿವ್ಯಾಂಬರಂಗಳಂವಿವಿಧಮಣಿಭೂಷಣಸುವಸ್ತುಗಳನು || ತೆಗೆದುಕಟ್ಟಿಸಿ
ರಥದೊಳಿಂಬಿಟ್ಟುರಾಮನಂ | ಘ್ರುಗಳಚೆಂಬೊನ್ನಪಾವುಗೆಗಳಂತರಿಸಿಕೊಂ | ಡೊಗುಮಿಗೆಯಹರುಷದೊಳಡರ್ದಳಂಗನೆಮಣಿ

---

ನಕೆ-ಋಷ್ಯಾಶ್ರಮಕ್ಕೆ ಕಳುಹಿ, ಬರಹೇಳಿದಂ-ಕಳುಹಿಸಿ ಬಿಟ್ಟು ಬರುವಂತೆ ಅಪ್ಪಣೆಮಾಡಿದನು, ಪ್ರಿಯಂ-ಅರಣ್ಯವಾಸದಲ್ಲಿ, ಪ್ರೀತಿಯು ಉಳ್ಳೊಡೆ-ಇದ್ದದ್ದೇಯಾದರೆ, ರಥಂ-ವರೂಥವು, ಪಣ್ಣಿ- ಹವಣಿಸಿ, (ಸಿದ್ಧಗೊಳಿಸಿ) ಬಂದಿದೆ-ಬಂದಿರುತ್ತದೆ, ಬಿಜಯಂಗೈವುದು-ಪ್ರಯಾಣಮಾಡಬಹುದು, ಎಂದು-ಎಂಬದಾಗಿ, ಮರುಗಿ- ಸಂತಾಪಗೊಂಡು, ಛಾಯೆಗಾಣಿಸಿ-ಶ್ರೀರಾಮಚಂದ್ರನ ಮನೋಭಿಪ್ರಾಯವನ್ನು, ಕೊಂಚಮಟ್ಟಿಗೆ ತೋರ್ಪಡಿಸಿ, ಸುಮಿತ್ರಾತ್ಮಜಂ- ಸುಮಿತ್ರಾದೇವಿಯ ಪುತ್ರನಾದ ಲಕ್ಷ್ಮಣನು, ನುಡಿದ-ಹೇಳಿದ, ಅಭಿಪ್ರಾಯಮಂ-ಇಷ್ಟವನ್ನು, (ಮನೋಭಿಪ್ರಾಯವನ್ನು) ತಿಳಿಯದೆ-ಗ್ರಹಿಸದೆ, ಆಯತಾಂಬಕಿ-ವಿಶಾಲಾಕ್ಷಿಯಾದ ಜಾನಕೀದೇವಿಯು, ಕಾಂತಂ-ತನ್ನ ವಲ್ಲಭನಾದ ಶ್ರೀರಾಮಚಂದ್ರನು, ತನ್ನ-ತನ್ನಯ, ಅಭೀಷ್ಟಮುಂ-ಮನಸ್ಸಿನ ಕೋರಿಕೆಯನ್ನು, ಸಲಿಸುವಂ-ನೆರವೇರಿಸಿಕೊಡುವನು, (ಕೈಗೂಡಿಸಿಕೊಡುವನು) ಎಂಬ-ಎನ್ನುವ, ಉತ್ಸವದೊಳು-ಉತ್ಸಾಹದಲ್ಲಿ, (ಹರ್ಷದಲ್ಲಿ) ಅತಿ-ಹೆಚ್ಚಾದ, ಸಂಭ್ರಮಾನ್ವಿತಳಾದಳು-ವೈಭವದಿಂದ ಕೂಡಿದವಳಾದಳು.

ಅ|| ವಿ|| ಸಂಭ್ರಮದಿಂದ+ಅನ್ವಿತಳು=ಸಂಭ್ರಮಾನ್ವಿತಳು. ತಪದ+ವನ=ತಪೋವನ ಷ. ತ. ಛಾಯೆ-ನೆಳಲು, ಅಭಿಪ್ರಾಯ. ಆಯತವಾದ+ಅಂಬಕ=ಆಯತಾಂಬಕ ವಿ. ಪೂ. ಕ. ಆಯತವಾದ+ಅಂಬಕವುಳ್ಳವಳು=ಆಯತಾಂಬಕಿ ಬಹು.ಸ. ಅಂಬಕ-ಪುಲ್ಲಿಂಗ, ಅಂಬಕಿ-ಸ್ತ್ರೀಲಿಂಗ ||೬೧||

ಟೀ|| ಬಳಿಕ-ಅನಂತರದಲ್ಲಿ, ಅಂಬುಜಾನನೆ- ಅರವಿಂದ ಮುಖಿಯಾದ ಜಾನಕಿಯು, ಪಯಣಮುಂ- ಹೊರಡುವಿಕೆಯನ್ನು, ನಿಶ್ಚೈಸಿ-ಗೊತ್ತುಮಾಡಿಕೊಂಡು, ಎನ್ನ-ನನ್ನಯ, ಕಾಂತಂ-ವಲ್ಲಭನು, ತಾಂ-ಅವನು, ನಂಬಿದರ-ನಂಬಿಕೊಂಡವರ ಅಭೀಷ್ಟಮುಂ-ವಾಂಛೆಯನ್ನು, (ಕೋರಿಕೆಯನ್ನು) ಸಲಿಸುವ-ನೆರವೇರಿಸಿಕೊಡುವ, ಕೃಪಾಳು-ದಯಾಶಾಲಿಯು, ಎಂಬುದಂ-ಎನ್ನುವುದನ್ನು, ಇಂದು-ಈ ಸಮಯದಲ್ಲಿ, ಈಗ, ತನಗೆ-ನನಿಗಾಗಿ, ಕಾಣಿಸಿದಂ-ಕಾಣಿಸುವಂತೆ ಮಾಡಿದನು, ಎಂದು-ಎಂಬದಾಗಿ, ಕೌಸಲೆಗೆ-ಅತ್ತೆಯಾದ ಕೌಸಲ್ಯಾದೇವಿಗೆ, ಪೇಳ್ದು-ಹೇಳಿದವಳಾಗಿ, ಮುಂಬರಿದು-ಮುಂಭಾಗಕ್ಕೆ ಬಂದವಳಾಗಿ, ಒಡಂಬಡಿಸಿ-ಒಪ್ಪುವಂತೆ ಮಾಡಿ, ಬಲವಂದು-ಬಲಗಡೆಗೆ ಬಂದು ಎಂದರೆ ಪ್ರದಕ್ಷಿಣೆಯನ್ನು ಮಾಡಿ, ಕಾಲ್ಗೆರಗಿ - ಚರಣಗಳಿಗೆ ಅಡ್ಡಬಿದ್ದು, ತುಂಬಿದ-ವ್ಯಾಪ್ತವಾದ, ಪೂರ್ಣವಾದ, ಪರಕೆವೆತ್ತು-ಹರಿಕೆಯನ್ನು ಪಡೆದು, (ಆಶೀರ್ವಚನಮಂ ಪೊಂದಿ) ಕೈಕೆಯಾದೇವಿಗೆ-ಕೈಕೇಯಿ ದೇವಿಗೆ, ಶಿರವಂ ಬಾಗಿ-ತಲೆಯನ್ನು ಬಗ್ಗಿಸಿ, (ಎಂದರೆ ನಮಸ್ಕರಿಸಿ) ವರ-ಶ್ರೇಷ್ಠಳಾದ, ಸುಮಿತ್ರೆಗೆ-ಸುಮಿತ್ರಾದೇವಿಗೆ, ನಮಿಸಿ-ಅಡ್ಡಬಿದ್ದು, (ನಮಸ್ಕರಿಸಿ) ಆ ಸಖಿಯರಂ-ಸ್ನೇಹಗಾರ್ತಿಯರನ್ನು, ಸಂತೈಸಿ-ಸಮಾಧಾನಪಡಿಸಿ, ಬೀಳ್ಕೊಂಡಳು-ಅಪ್ಪಣೆಯನ್ನು ಪಡೆದು ಹೊರಟಳು.

ಅ|| ವಿ|| ಅಂಬುಜದಂತೆ+ ಆನನವುಳ್ಳವಳು= ಅಂಬುಜಾನನೆ ಬ. ವ್ರೀ. ಸ. ಪಯಣ-ತದ್ಭವ. ಪ್ರಯಾಣ-ತ್ಸ. ಶಿರದಿಂ+ಬಾಗಿ=ಶಿರಬಾಗಿ ಕ್ರಿ. ಸ. ||೬೨||

---

ರಾಮಮೂರ್ತಿಯ ಅನುಜ್ಞೆಯಾಗಿರ್ಪುದು. ಅರಣ್ಯವಾಸಕ್ಕೆ ಬರಲು ಪ್ರೀತಿಯಿದ್ದಲ್ಲಿ ರಥವು ಸಿದ್ಧವಾಗಿರ್ಪುದು ದಯಮಾಡುವಳಾಗು ಎಂದು ಶ್ರೀರಾಮನ ಮನೋಭಿಪ್ರಾಯವನ್ನು ಕೊಂಚವಾಗಿ ಸೂಚಿಸಲು ಲಕ್ಷ್ಮಣನು ನುಡಿದ ಮಾತಿನ ಅಭಿಪ್ರಾಯವನ್ನು ಆಲೋಚಿಸದೆ ವಿಶಾಲಾಕ್ಷಿಯಾದ ಸೀತಾದೇವಿಯು ಎನ್ನ ಪ್ರಾಣವಲ್ಲಭನು ತನ್ನ ಮನೋಭಿಪ್ರಾಯವನ್ನು ಸಲ್ಲಿಸಿರುವನು ಎಂದು ಭಾವಿಸಿದವಳಾಗಿ ಅತೀವ ಹರ್ಷಿತೆಯಾಗಿ ಪರಮಾದರದಿಂದ ಜಾಗ್ರತೆಗೊಂಡವಳಾದಳು ||೬೧|| ಅನಂತರದಲ್ಲಿ ಅರವಿಂದಾಕ್ಷಿಯಾದ ಜಾನಕಿಯು ಅರಣ್ಯವಾಸವನ್ನು ಕುರಿತು ಪ್ರಯಾಣಮಾಡಲು ಮನೋನಿಶ್ಚಯಮಾಡಿಕೊಂಡು ಎನ್ನ ಪ್ರಾಣಕಾಂತನು ತನ್ನಂ ನಂಬಿದವರ ಅಭೀಷ್ಟವಂ ನೆರವೇರಿಸಬಲ್ಲವನು ಮಹಾ ದಯಾಳುವು ಎಂಬುದನ್ನು ನನಗೀಗ ತಿಳಿಯಪಡಿಸಿದನು ಎಂಬದಾಗಿ ಅತ್ತೆಯಾದ ಕೌಸಲ್ಯಗೆ ಪೇಳ್ದು ಮುಂದಕ್ಕೆ ಬಂದು ಪ್ರದಕ್ಷಿಣೆಮಾಡಿ ನಮಸ್ಕರಿಸಿ ಅತಿಶಯವಾದ ಆಶೀರ್ವಾದಂಗಳಂ ಪೊಂದಿ ಚಿಕ್ಕ ಅತ್ತೆಯಾದ ಕೈಕೇಯಿಗೂ ಮತ್ತು ಸುಮಿತ್ರಾದೇವಿಗೂ ತಲೆಬಾಗಿಸಿಕೊಂಡು ನಮಸ್ಕಾರವನ್ನು ಮಾಡಿ ತನ್ನೊಡನಾಡಿಗಳನ್ನು ಸಂತವಿಸಿ ಹೊರಟವಳಾದಳು || ೬೨ || ಬಳಿಕ ಭೂಮಿಜೆಯಾದ ಜಾನಕಿಯು ತಪೋವನದಲ್ಲಿ ಮುನಿಪತ್ನಿಯರಿಗೆ

ವರೂಥಮಂನಿಜವಿಡೆಂದು || ೬೩ || ಅಗ್ರಜಂತರಿಸಂದುತನ್ನೊಳಾಡಿದಕಜ್ಜ | ದುಗ್ರಮುಂಬನಕೆಪೋದಪೆನೆಂಬದೇವಿಯಸ | ಮಗ್ರಸಂತೋಷಮುಂಕಂಡುಸೌಮಿತ್ರಿಮನದೊಳ್ಮರುಗಿಕಂಬನಿಯನೆ || ನಿಗ್ರಹಿಸಿಕೊಂಡುಸಾರಥಿಗೆಸೂಚನೆಗೈದು | ವ್ಯಗ್ರ ದಿಂದೈದಿಸಿದನಾರಥವನಾಗದೇ | ವಗ್ರಾಮನಿಲಯಲಕ್ಷ್ಮೀಶನುಂಗುಟದೊಳೊಗೆದಮಲಜಾಹ್ನವಿಯತಡಿಗೆ ||೬೪||

ಸಂಧಿ ೧೮ ಕ್ಕೆ ಪದ್ಯ ೯೩೩ ಕ್ಕಂ ಮಂಗಳಮಸ್ತು.

---

ಟೀ|| ಅಂಗನೆ–ವೈದೇಹಿಯು, ತಪೋವನದ–ತಪಸ್ಸುಮಾಡುವ ಅರಣ್ಯದ, ಋಷಿಯರ್ಗೆ–ಮುನಿಗಳಿಗೂ, ಮುನಿಪತ್ನಿಯರ್ಗೆ–ಋಷಿಪತ್ನಿಯರಿಗೂ, ಅಗರು–ಕೃಷ್ಣಾಗರು ಎಂಬ ಧೂಪದ ವಸ್ತುವು, ಚಂದನ–ಶ್ರೀಗಂಧವು, ಕುಂಕುಮ–ಕುಂಕುಮವು (ಕುಂಕುಮಕೇಸರಿಯು), ಅನುಪಲೇಪನಂಗಳಂ–ಶರೀರಕ್ಕೆ ಬಳಿದು ಕೊಳ್ಳುವ ಸುವಾಸನೆಯ ದ್ರವ್ಯಗಳನ್ನು, ಬಗೆಬಗೆಯ–ನಾನಾ ವಿಧಗಳಾದ, ದಿವ್ಯ–ಯೋಗ್ಯಗಳಾದ, ಅಂಬರಂಗಳಂ–ವಸ್ತ್ರಾದಿಗಳನ್ನು, ವಿವಿಧ–ನಾನಾ ವಿಧಗಳಾದ, ಮಣಿಭೂಷಣ–ರತ್ನ ಖಚಿತಗಳಾದ ಆಭರಣಾದಿಗಳನ್ನು, ವಸ್ತುಗಳನು–ಇತರ ವಿಧಗಳಾದ ಪದಾರ್ಥಗಳನ್ನು, ತೆಗೆದು–ತೆಗೆದುಕೊಂಡು, ಕಟ್ಟಿಸಿ–ಬಂದು ಗಂಟಿನಲ್ಲಿ ಕಟ್ಟಿಕೊಂಡು, ರಥದೊಳು–ವರೂಥದಲ್ಲಿ, ಇಂಬಿಟ್ಟು–ಅಣಿಮಾಡಿಕೊಂಡು, ರಾಮನ–ಶ್ರೀರಾಮಚಂದ್ರನ, ಅಂಘ್ರಿಗಳ–ಅಡಿಗಳ, ಚೆಂಬೊನ್ನ–ಚಿನ್ನದವಿಕಾರಮಾದ, ಪಾವುಗೆಗಳಂ–ಪಾದುಕೆಗಳನ್ನು, ತರಿಸಿಕೊಂಡು–ಬರಮಾಡಿಸಿಕೊಂಡು, ಒಗುಮಿಗೆಯ–ಅತ್ಯಧಿಕವಾದ, ಹರ್ಷದೊಳು–ಮುದದಿಂದ, (ಪ್ರೀತಿಯಿಂದ) ಮಣಿವರೂಥಮಂ–ರತ್ನ ಖಚಿತಮಾದ ತೇರನ್ನು, ಅಡರ್ದಳು–ಹತ್ತಿದವಳಾದಳು ||

ಮಣಿಯ+ರಥ=ಮಣಿರಥ ಷ. ತ. ದಿವ್ಯವಾದ+ಅಂಬರ=ದಿವ್ಯಾಂಬರ ವಿ. ಪೂ. ಕ. ಸಂತಸ–ದ್ಭ. ಸಂತೋಷ ತ್ಸ. ಹರ್ಷ ತ್ಸ. ಹರಿಸ ದ್ಭ. ||೬೩||

ಟೀ|| ಆಗ–ಆ ವೇಳೆಯಲ್ಲಿ, ಸೌಮಿತ್ರಿ–ಲಕ್ಷ್ಮಣಸ್ವಾಮಿಯು, ಅಗ್ರಜಂ–ಪೂರ್ವಜನಾದ ಶ್ರೀರಾಮನು, ತರಿಸಂದು–ಶಿರವನ್ನು ಕತ್ತರಿಸೆಂಬದಾಗಿ ನಿಶ್ಚಯಿಸಿ, ತನ್ನೊಳು–ತನ್ನೊಂದಿಗೆ, ಆಡಿದ–ನುಡಿದ, ಕಜ್ಜದುಗ್ರಮಂ–ಕೆಲಸದ ಕ್ರೂರತ್ವವನ್ನು, ಬನಕೆ–ಅರಣ್ಯಕ್ಕೆ, ಪೋದಪೆನೆಂಬ–ಹೋಗುತ್ತೇನೆಂಬುವ, ದೇವಿಯ–ವೈದೇಹಿಯಾದ ಸೀತಾದೇವಿಯ, ಸಮಗ್ರ–ಪೂರ್ಣವಾದ, ಸಂತೋಷಮಂ– ಹರುಷವನ್ನು, ಕಂಡು–ಈಕ್ಷಿಸಿ, ಮನದೊಳ್–ಮನಸ್ಸಿನಲ್ಲಿ, ಮರುಗಿ– ಸಂತಾಪಪಟ್ಟು, ಕಂಬನಿಯನು–ನೇತ್ರೋದಕವನ್ನು, ನಿಗ್ರಹಿಸಿಕೊಂಡು–ಅಡಗಿಸಿಕೊಂಡು, ಸಾರಥಿಗೆ–ರಥವನ್ನು ನಡಿಸುವವನಿಗೆ, ಸೂಚನೆಗೈದು–ಸೂಚನೆಯನ್ನು ಮಾಡಿ, (ಸಂಜ್ಞೆಯನ್ನು ಮಾಡಿ) ದೇವಗ್ರಾಮ–ದೇವಪುರವೇ, ನಿಲಯ–ವಾಸಸ್ಥಾನವಾಗುಳ್ಳ, ಲಕ್ಷ್ಮೀಶನ–ಲಕ್ಷ್ಮೀಪತಿಯಾದ ನಾರಾಯಣನ, ಉಂಗುಟದೊಳ್–ಹಿರಿಬೆರಳಿನಲ್ಲಿ, ಒಗೆದ–ಉತ್ಪನ್ನಮಾದ, ಅಮಲ–ನಿರ್ದೋಷವಾದ ಕೊಳೆಯಿಲ್ಲದ, ಜಾಹ್ನವಿಯ–ಜಹ್ನುಪುತ್ರಿಯಾದ ಗಂಗೆಯ, ತಡಿಗೆ–ತೀರಕ್ಕೆ, (ದಡಕ್ಕೆ) ಆ ರಥಮಂ–ಆ ವರೂಥವನ್ನು, ವ್ಯಗ್ರದಿಂದ–ಅತಿತ್ವರೆಯಿಂದ, ಐದಿಸಿದಂ–ಹೊಂದಿಸಿದನು.

ಅ|| ವಿ|| ಸುಮಿತ್ರೆಯ ಮಗ ಸೌಮಿತ್ರಿ. ಅಗ್ರ–ಪೂರ್ವದಲ್ಲಿ, ಜ–ಹುಟ್ಟಿದವನು ಅಣ್ಣ. ಲಕ್ಷ್ಮಿಯ+ಈಶ=ಲಕ್ಷ್ಮೀಶ ಷ. ತ. ಲಕ್ಷ್ಮೀ+ಈಶ=ಲಕ್ಷ್ಮೀಶ ಸವರ್ಣ ದೀ. ಸಂ. ಜಹ್ನುಋಷಿಯ ಪುತ್ರಿ=ಜಾಹ್ನವಿ. ದೇವತೆಗಳ+ಪುರ=ದೇವಪುರ ಷ.ತ. ಮಲವಿಲ್ಲದ್ದು–ನಿರ್ಮಲ. ಕಣ್ಣಿನ+ಪನಿ=ಕಂಬನಿ ಷ. ತ. ||೬೪||

ಹದಿನೆಂಟನೆಯ ಸಂಧಿ ಸಮಾಪ್ತಮಾದುದು.

---

ಮುನಿಗಳಿಗೂ ಅಗರು ಚಂದನ ಕುಂಕಮಾದಿ ಸುಗಂಧ ದ್ರವ್ಯಗಳನ್ನೂ ನಾನಾ ಬಗೆಗಳಾದ ದಿವ್ಯಾಂಬರಗಳನ್ನೂ ನವರತ್ನಖಚಿತಮಾದ ಆಭರಣಾದಿಗಳನ್ನೂ ಇನ್ನು ಇತರ ಬಗೆಗಳಾದ ಪದಾರ್ಥಗಳನ್ನೂ ತೆಗೆದು ಕಟ್ಟಿಸಿ ಮಣಿಮಯ ವರೂಥದಲ್ಲಿರಿಸಿಕೊಂಡು ಶ್ರೀರಾಮಚಂದ್ರನ ಅಂಘ್ರಿಗಳ ಚಿನ್ನದಿಂದ ನಿರ್ಮಿತವಾದ ಪಾದುಕೆಗಳನ್ನು ತರಿಸಿಕೊಂಡು ಉಕ್ಕಿ ಬರುವ ಅತೀವ ಹರ್ಷದಿಂದ ರಥವನ್ನೇರಿದವಳಾದಳು || ೬೩ || ಆ ಬಳಿಕ ಸುಮಿತ್ರಾತ್ಮಜನಾದ ಲಕ್ಷ್ಮಣನು ಅಗ್ರಜನಾದ ಶ್ರೀರಾಮಚಂದ್ರಮೂರ್ತಿಯು ಶಿರಚ್ಛೇದನವನ್ನು ಮಾಡೆಂದು ತನ್ನಸಂಗಡ ನುಡಿದ ಕ್ರೂರಕೃತ್ಯವನ್ನೂ ಕಾಡಿಗೆ ಹೋಗುವೆನೆಂಬುವ ಭೂಮಿಜೆಯಾದ ಸೀತಾದೇವಿಯ ಸಂಪೂರ್ಣವಾದ ಸಂತೋಷವನ್ನೂ ಕಂಡು ಮನಸ್ಸಿನಲ್ಲಿ ಅತಿಯಾಗಿ ದುಃಖಿಸಿ ಬಾಷ್ಪಾಂಬುವನ್ನು ತಡೆದುಕೊಂಡು ಆಗ ಸಾರಥಿಗೆ ಸೂಚನೆಯನ್ನು ಮಾಡಿ ಅಮರಾವತಿ (ದೇವಪುರವೇ) ಯೇ ವಾಸಸ್ಥಾನವಾಗುಳ್ಳ ಲಕ್ಷ್ಮೀಪತಿಯಾದ ಶ್ರೀಮಹಾವಿಷ್ಣುವಿನ ಉಂಗುಟದಲ್ಲುದ್ಭವಿಸಿದ ನಿರ್ದೋಷವಾದ ಜಾಹ್ನವಿಯ ತೀರಕ್ಕೆ ಜಾಗ್ರತೆಯಿಂದ ಸೇರುವಂತೆ ರಥವನ್ನು ನಡೆಯಿಸಿದನು ||೬೪||

ಹದಿನೆಂಟನೆಯ ಸಂಧಿಯು ಸಂಪೂರ್ಣವಾದುದು.

## ಹತ್ತೊಂಭತ್ತನೆಯ ಸಂಧಿ.

ಸೂಚನೆ || ರಮಣಂ ತೊರೆದನೆಂಬುದಂ ಕೇಳ್ದುಶೋಕದಿಂ | ಭೂಮಿಸುತಡವಿಯೊಳಿರಲ್ಕಂಡು ವಾಲ್ಮೀಕಿಯಾ
ಶ್ರಮಕೆ ಕೊಂಡೊಯ್ಯೆ ಮಿಥಿಳೇಂದ್ರಸುತೆ ತನಯರಂಪಡೆದು ಪದುಳದೊಳಿರ್ದಳು ||

ಅರಸಕೇಳ್ ಸೌಮಿತ್ರಿ ವೈದೇಹಿಯಂ ಕೊಂಡು | ತೆರಳುವ ರಥಾಗ್ರದೋಳ್ಚಲಿಸುವ ಪತಾಕೆರಘು | ವರನಂಗನೆಯ ನುಳಿದನಹಹ ಎಂದಡಿಗಡಿಗೆ ತಲೆಗೊಡಹುವಂತಿರಲ್ಕೆ || ಪರಮುದಾರುಣ ಮಾಯ್ತೆಂದ ಯೋಧ್ಯಾ ಪುರದ | ನೆರವಿಯಜನಂ ಗುಜುಗುಜಿಸಿ ಮನದಿ ಕರಗಿಕಾ | ತರಿಸುತಿರೆ ಪರಿದಂಕಾಣ್ಬಟ್ಟೆ ಗೊಂಡನಿಲ ವೇಗದಿಂದಾ ರಥವನು || ೧ || ಧುರದೊಳಾಂತರ ನಿರಿದು ಮೆರಿಯಲೇರುವ ರಥಂ | ತರಳೆಯಂ ಕಾನನಕೆ ಕಳುಹಲಡರ್ವಂತಾಯ್ತು | ಧರೆಯೊಳಾರ್ತರನೈದೆ

---

ಹತ್ತೊಂಭತ್ತನೆಯ ಸಂಧಿ ಪ್ರಾರಂಭವು.

ಸೂ|| ರಮಣಂ-ವಲ್ಲಭನಾದ ಶ್ರೀ ರಾಮಚಂದ್ರನು, ತೊರೆದಂ-ತನ್ನನ್ನು ಪರಿತ್ಯಾಗ ಮಾಡಿದನು, ಎಂಬುದಂ-ಎನ್ನುವವಿಷಯವನ್ನು, ಕೇಳ್ದು-ತಿಳಿದುಕೊಂಡು, (ಆರ್ಣಿಸಿ) ಶೋಕದಿಂ-ವ್ಯಥೆಯಿಂದ, ಅಡವಿಯೊಳ್-ಅರಣ್ಯದಲ್ಲಿ, ಭೂಮಿಸುತ-ಸುಳಿದಾಡುತ್ತ, ಇರಲ್-ಇರುತ್ತಿರಲಾಗಿ, ವಾಲ್ಮೀಕಿಯು-ವಾಲ್ಮೀಕಿ ಮಹರ್ಷಿಯು, ಕಂಡು-ಈಕ್ಷಿಸಿ, ಆಶ್ರಮಕೆ-ತಮ್ಮ ತಪೋವನಕ್ಕೆ, ಕೊಂಡೊಯ್ಯೆ-ಸಂಗಡ ಕರೆದುಕೊಂಡು ಹೋಗಲಾಗಿ, ಮಿಥಿಳೇಂದ್ರಸುತೆ-ಮಿಥಿಳಾಧಿಪನಾದ ಜನಕರಾಯನ ಪುತ್ರಿಯಾದ ಜಾನಕಿಯು, ತನಯರಂ-ಪುತ್ರರನ್ನು, ಪಡೆದು-ಹೊಂದಿದವಳಾಗಿ, ಪದುಳದೊಳು-ಸೌಖ್ಯದಲ್ಲಿ, ಇದ್ದಳು-ಇರುತ್ತಿದ್ದಳು.

ಅ|| ವಿ|| ವಲ್ಮೀಕ-ಹುತ್ತ, ಅದರಲ್ಲಿ ಹುಟ್ಟಿದವನು-ವಾಲ್ಮೀಕಿ, ಮಿಥಿಲೆಯೆಂಬ + ಪುರ = ಮಿಥಿಲಾಪುರ, ಸಂ. ಪೂ. ಕ. ಸ. ಮಿಥಿಳ + ಇಂದ್ರ = ಮಿಥಿಳೇಂದ್ರ, ಗುಣಸಂಧಿ. ಇಂದ್ರ-ದೇವೇಂದ್ರ, ದೊರೆ. ಕರ-ಕಿರಣ, ಪೊಗೆದಿ, ಆನೆಯ ಸೊಂಡಿಲು. ಅಡವಿ-ತ್ಸ. ಅಟವಿ-ದ್ಭ.

ಟೀ|| ಅರಸ-ರಾಜನಾದ ಜನಮೇಜಯರಾಯನೆ, ಸೌಮಿತ್ರಿ-ಸುಮಿತ್ರಾತ್ಮಜನಾದ ಲಕ್ಷ್ಮಣನು, ವೈದೇಹಿಯಂ-ವಿದೇಹದೇಶದ ರಾಜಕುವರಿಯಾದ ಜಾನಕಿಯನ್ನು, ಕೊಂಡು-ರಥದಲ್ಲಿ ಕೂಡಿಸಿ ಕರೆದುಕೊಂಡು, ತೆರಳುವ-ಹೊರಡುವ, ರಥ-ವರೂಥದ, ಅಗ್ರದೋಳ್-ಕೊನೆಯ ಭಾಗದಲ್ಲಿ, ಚಲಿಸುವ-ಅಲುಗಾಡುತ್ತಿರುವ, ಪತಾಕೆ-ಬಾವುಟವು, ರಘುವರನು-ಶ್ರೀರಾಮಚಂದ್ರನು, ಅಂಗನೆಯನು-ಹೆಂಡತಿಯಾದ ಜಾನಕಿಯನ್ನು, ಉಳಿದನು-ಪರಿತ್ಯಾಗಮಾಡಿದನು, (ಬಿಟ್ಟುಬಿಟ್ಟನು) ಅಹಹ-ಅಕಟಕಟ, ಎನೆ-ಎನ್ನುವರೀತಿಯಿಂದ, ಆಂದು-ಆ ಕಾಲದಲ್ಲಿ, ಅಡಿಗಡಿಗೆ-ಆಗಿಂದಾಗ್ಯೆ, ತಲೆ-ತಲೆಯನ್ನು, (ಶಿರಸ್ಸನ್ನು) ಗೊಡಹುವಂತೆ-ಅಲ್ಲಾಡಿಸುವಹಾಗೆ, (ಕೊಡಹುತ್ತಿರುವಂತೆ) ಇರಲ್ಕೆ-ಇರುತ್ತಿರಲಾಗಿ, ಅಯೋಧ್ಯಾಪುರದ-ಅಯೋಧ್ಯೆಯೆಂಬ ನಗರದ, ನೆರವಿಯ-ಸಮುದಾಯವಾಗಿರುವ, ಜನಂ-ಜನಗಳು, ಮನದಿ-ಮನಸ್ಸಿನಲ್ಲಿ, ಪರಮ-ಅಧಿಕವಾದ, ದಾರುಣಂ-ಕ್ರೂರಕೃತ್ಯವು, ಆಯ್ತು-ಆಗಿರುವುದು ಉಂಟಾಗಿರುತ್ತದೆ, ಎಂದು-ಎಂಬದಾಗಿ ಹೇಳಿ, ಗುಜಗುಜಿಸಿ- ಗುಸುಗುಂಪಲು ಮಾತನ್ನಾಡುತ್ತ, ಕರಗಿ-ವ್ಯಥೆಯಿಂದ ಸವೆದುಹೋಗಿ, ಕಾತರಿಸುತಿರೆ-ಹೆದರಿಕೊಳ್ಳುತ್ತಿರಲು, ಕಾಣ್ಬಟ್ಟೆಗೊಂಡು-ತನ್ನ ಮಾರ್ಗವಿಡಿದು ಹೋಗುತ್ತಿರುವ, ಆ ರಥವನು-ಆ ವರೂಥವನ್ನು, ಅನಿಲ-ಗಾಳಿಗೆ ಸದೃಶವಾದ, ವೇಗದಿಂದ-ಜಾಗ್ರತೆಯಿಂದ, ಪರಿಸಿದಂ-ಹೊಡೆದನು, (ನಡೆಸಿಕೊಂಡು ಹೋದನು) ||

ಅ|| ವಿ|| ವಿದೇಹರಾಜಪುತ್ರಿ = ವೈದೇಹಿ, (ಸೀತೆ) ಅನಿಲ-ವಾಯು, ಅನಲ-ಅಗ್ನಿ. ಸುಮಿತ್ರೆಯ ಮಗ ಸೌಮಿತ್ರಿ, ಕಾಣುವ + ಬಟ್ಟೆ = ಕಾಣ್ಬಟ್ಟೆ, ವಿ. ಪೂ. ಕ. ಅನಿಲನ + ವೇಗ = ಅನಿಲವೇಗ, ಷ. ತ. ಕ್ರೂರ-ತ್ಸ. ಕೂರ-ದ್ಭ. ರಘುವಿನ + ವಂಶ = ರಘುವಂಶ, ಷ. ತ. || ೧ ||

---

ಎಲೈ ಭೂಪಾಲಕನಾದ ಜನಮೇಜಯರಾಯನೇ ಕೇಳು—ಆ ಬಳಿಕ ಸೌಮಿತ್ರಿಯು ವೈದೇಹಿಯನ್ನು ರಥದಲ್ಲಿ ಕರೆದುಕೊಂಡು ಹೋಗುವ ಕಾಲದಲ್ಲಿ ರಥಾಗ್ರದಲ್ಲಿ ಚಲಿಸುವ ಪತಾಕೆಯು, ಶ್ರೀ ರಾಘವನು ತನ್ನ ಪಟ್ಟಮಹಿಷಿಯಾದ ಜಾನಕಿಯನ್ನು ಪರಿತ್ಯಾಗ ಮಾಡಿದನು, ಆಶ್ಚರ್ಯಾಶ್ಚರ್ಯವು ಎಂಬುವಹಾಗೆ ಆಗ ಬಾರಿಬಾರಿಗೂ ಶಿರವನಲ್ಲಾಡಿಸಂತೆ ಇರುತ್ತಿರಲಾಗಿ ಅಯೋಧ್ಯಾಪುರದಲ್ಲಿ ಸಮುದಾಯವಾಗಿ ನೆರದಿರುವ ಜನಸಮೂಹವು ಹೃದಯದಲ್ಲಿ ಮಹಾತಿಶಯನಾದ ಕ್ರೂರಕೃತ್ಯವು ಉಂಟಾಗಿರುವುದು ಎಂಬದಾಗಿ ಗುಜಿಗುಜಿಸಿ ಮಾತನಾಡುತ್ತ ಮನೋವ್ಯಥೆಯಿಂದ ಕೃಶರಾಗಿ ಕಾತರ ಪಡುತ್ತಿರಲು ಕಣ್ಣಿಗೆ ಕಾಣುತ್ತಿರುವ ದಾರಿಯನ್ನು ಅನುಸರಿಸಿ ಹೋಗುತ್ತಿರುವ ಆ ರಥವನ್ನು ವಾಯುವೇಗಕ್ಕೆ ಸದೃಶವಾದ ಜವದಿಂದ ನಡಿಸಿಕೊಂಡುಬಂದನು ||೧|| ಆಗ ಲಕ್ಷ್ಮಣನು ಯುದ್ಧದಲ್ಲಿ ಪ್ರತಿಭಟಿಸಿ ನಿಂತವರನ್ನು ಸಂಹರಿಸಿ ಮೆರೆಯುತ್ತಿರಲು, ಹತ್ತಬೇಕಾದ್ದು ಈ ತೇ

ರಕ್ಷಿಸುವಬುದ್ಧಿ ಕೋಮಲೆಯ ಕೊಲೆಗೆಲಸಕಾಯ್ತು || ಕರುಣವಿಲ್ಲದೆ ಪೊರೆವ ಹರಣಮಂ ಸುಡಲಿನಿ | ಷ್ಠುರದೊಳೀ
ಕೃತ್ಯಕೆಂತೆಸಗುವೆನೊ ರಾಘವೇ | ಶ್ವರನೆಂತಿದಕೆ ಬೆಸಸಿದನೊ ತನಗೆನುತ್ತ ಸೌಮಿತ್ರಿ ಮರುಗುತ ನಡೆದನು || ೨ ||
ಒಕೊಳ್ಳರಲ್ದುದು ಮುಂದೆಮಾರ್ಗಮಂ ದಾಂಟಿದುದು | ಕುಳ್ಳಿರ್ದ ಮೃಗಮೆದ್ದು ಬಲದಕಣ್ಣೆದರೆ ಕಂ | ಡಳ್ಳಿದೆಯೊಳವ
ನಿಸುತೆನೋಡುಲಕ್ಷ್ಮಣದುರ್ನಿಮಿತ್ತಂಗಳಂ ಪಥದೊಳು || ಡಿಳ್ಳಮಾದಪುದೀಗಲೆನ್ನವನಮಿದಕೆಮುಂ | ದೊಳ್ಳಿತಾಗಲಿರಾಮನಾ
ಯುಷ್ಯಕೈಶ್ವರ್ಯ | ಕುಳ್ಳಭುಜಬಲಕಸುರರಂಗೆಲ್ದರಾಘವಂನಮ್ಮಂಸಲಹಲೆಂದಳು || ಅನ್ನೆಗಂಜಾನಕಿಯಕಣ್ಗೆ ತೋರಿತುಮುಂ

---

ಟೀ|| ಧುರದೊಳು–ಕಾಳಗದಲ್ಲಿ, (ಯುದ್ಧದಲ್ಲಿ) ಅಂತರನು–ಪ್ರತಿಭಟಿಸಿ ನಿಂತವರನ್ನು, ಇರಿದು–ಸಂಹರಿಸಿ, ಮೆರೆಯಲು–ಶೋಭಿಸಲಾಗಿ, ಏರುವ–ಆಡರುವಂಥ, ರಥಂ–ವರೂಥವು, ತರಳೆಯಂ–ಬಾಲೆಯನ್ನು, (ಸೀತಾದೇವಿಯನ್ನು) ಕಾನನಕೆ–ಅರಣ್ಯಕ್ಕೆ. ಕಳುಹಲು–ಕಳುಹಿಸಿ ಕೊಡಲು, ಅಡರ್ವಂತೆ–ಹತ್ತುವಹಾಗೆ, ಆಯ್ತು–ಆಗಿರುವುದು, ಧರೆಯೊಳು–ಪೃಥ್ವಿಯಲ್ಲಿ, ಆರ್ತರನು–ತೊಂದರೆ ಪಡುತ್ತಿರುವವರನ್ನು, ರಕ್ಷಿಸುವ–ಸಲಹಲು ವಿನಿಯೋಗಿಸಬೇಕಾದ, ಬುದ್ಧಿ–ತಿಳುವಳಿಕೆಯು, ಕೋಮಲೆಯ–ಸ್ತ್ರೀಯಳಾದ ಜಾನಕಿಯ, ಕೊಲೆ–ಸಂಹರಿಸುವ, ಕೆಲಸಕೆ–ಕೃತ್ಯಕ್ಕೆ, ಆಯ್ತು–ವಿನಿಯೋಗಿಸಬೇಕಾಗಿ ಬಂತು, ಕರುಣಂ–ದಯೆಯು, ಇಲ್ಲದೆ–ಇಲ್ಲದೆಯೇ, ಪೊರೆವ–ಆತ್ಮಸಂರಕ್ಷಣೆ ಮಾಡಿಕೊಳ್ಳುವ, ಹರಣಂ–ಜೀವವು, ಸುಡಲಿ–ಸುಟ್ಟುಹೋಗಲಿ, ನಿಷ್ಠುರದೊಳು-ಆಕ್ಷೇಪಣೆಯಿಂದ, (ಅತಿಕ ಕಠಿಣತೆಯಿಂದ) ಈ ಕೆಲಸಕ್ಕೆ-ಇಂತಹ ಕಾರ್ಯಕ್ಕೆ, (ಸೀತೆಯನ್ನು ಅಡವಿಪಾಲು ಮಾಡುವ ಕಾರ್ಯಕ್ಕೆ) ಎಂತು–ಹೇಗೆತಾನೆ, ಎಸಗುವೆನೊ–ಗೈಯ್ಯುವೆನೊ, ರಾಘವೇಶ್ವರನು–ರಘುಕುಲ ಶ್ರೇಷ್ಠನಾದ ಶ್ರೀರಾಮನು, ಎಂತು–ಅದು ಹೇಗೆತಾನೆ, ಇದಕೆ–ಈ ರೀತಿಯಾದ ಕಾರ್ಯಕ್ಕೆ, ತನಗೆ–ಎನಗೆ, ಬೆಸಸಿದನೋ–ಅಪ್ಪಣೆ ಪಾಲಿಸಿದನೋ, (ಆಜ್ಞಾಪಿಸಿದನೊ) ಎನುತ-ಎಂಬದಾಗಿ ಆಡಿಕೊಳ್ಳುತ್ತ, ಸೌಮಿತ್ರಿ–ಸುಮಿತ್ರೆಯ ಪುತ್ರನಾದ ಲಕ್ಷ್ಮಣನು, ಮರುಗುತ-ಸಂತಾಪ ಪಡುತ್ತ, ನಡೆದನು-ಹೊರಟು ಹೋದನು ||

ಅ|| ವಿ|| ಕೊಲೆ + ಕೆಲಸ = ಕೊಲೆಗೆಲಸ, ಗರಾರ ಆದೇಶ ಸಂಧಿ. ತರುಣ-ಹುಡುಗ, ಕರುಣ–ಕೃಪೆ, ಪ್ರಯಾಣ–ತ್ಸ. ಪಯಣ ದ್ಭ. ಅಗ್ರ-ತುದಿ, ಆಗ್ರಹ–ಕೋಪ, ಅದು + ರಥ = ಆ ರಥ, ಗಮಕ ಸ. ||೨||

ಟೀ|| ಒಳ್ಳು–ವೃದ್ಧ ಜಂಬುಕವು, ಒರಲ್ದುದು–ಅರಚಿಕೊಂಡಿತು, (ಬೊಗಳಿತು) ಮುಂದು–ಮುಂದುಗಡೆ, ಕುಳ್ಳಿರ್ದ-ಕೂತುಕೊಂಡಿದ್ದ, ಮೃಗಂ–ಚಿಗರೆಯು, ಎದ್ದು–ಮೇಲಕ್ಕೆ ಎದ್ದು, ಮಾರ್ಗಮಂ–ಹಾದಿಯನ್ನು, ದಾಟಿದುದು–ಅಡ್ಡಲಾಗಿಹೋಯಿತು, (ಈ ರೀತಿಯಾಗುವುದು ಅಪಶಕುನ) ಬಲದ–ಬಲಗಡೆಯ, ಕಣ್-ಕಣ್ಣು, ಬೆದರೆ-ಅಲುಗಲು, ಅವನಿಸುತೆ–ಭೂಪುತ್ರಿಯಾದ ಸೀತಾದೇವಿಯು, ಕಂಡು–ಈ ಉತ್ಪಾತವನ್ನು ನೋಡಿ, ಅಳ್ಳಿದೆಯೊಳು–ಭಯಗೊಂಡ ಚಿತ್ತದಿಂದ, ಲಕ್ಷ್ಮಣ–ಎಲೈ ಮೈದುನನಾದ ಸೌಮಿತ್ರಿಯೇ ! ಪಥದೊಳು–ಹಾದಿಯಲ್ಲಿ, ದುರ್ನಿಮಿತ್ತಂಗಳಂ- ಕೆಟ್ಟಶಕುನಗಳನ್ನು, ನೋಡು-ಈಕ್ಷಿಸುವವನಾಗು, ಇದಕೆ–ಈ ಕೆಟ್ಟಶಕುನಗಳಾಗುವುದಕ್ಕೆ, ಎನ್ನ–ಎನ್ನಯ, ಮನಂ-ಮನಸ್ಸು, ಈಗಲು-ಶ್ರೀ ರಾಮನನ್ನು ಅಗಲಿ ಬಂದಬಳಿಕ, ಡಿಳ್ಳಂ-ಅಧೈರ್ಯವುಳ್ಳದ್ದು, ಆದಪುದು-ಆಗುತ್ತಿರತ್ತದೆ, ಮುಂದೆ–ಇಲ್ಲಿಂದೀಚೆಗೆ, ರಾಮನ–ಶ್ರೀ ರಾಮಮೂರ್ತಿಯ, ಆಯುಷ್ಯ

---

ರು ಆಗಿರುತ್ತದೆ ಈಗ ಆ ಬಗೆಯಾದ ರಥದಲ್ಲಿ ಈ ಗರ್ಭಿಣಿಯಾದ ಭೂಮಿಜೆಯನ್ನು ಕೂಡಿಸಿ ಕಾಡಿಗೆ ಕರೆದುಕೊಂಡು ಬರುವುದಕ್ಕಾಗಿ ಪರಿಣಮಿಸಿತು! ಅಕಟಾ ವಿಧಿಯೇ ಎನಗೆ ಆಗತಕ್ಕ ಕಾರ್ಯಕ್ಕೆ ಮಾಡುವುದೇನಿರುತ್ತೆ? ಪೃಥ್ವಿಯಲ್ಲಿ ಶ್ರಮಪಡುವವರನ್ನು ಸಂರಕ್ಷಿಸಲು ಉಪಯೋಗಿಸಬೇಕಾದ ತಿಳಿವಳಿಕೆಯು ಕೋಮಲೆಯಾದ ತರುಣಿಯನ್ನು ಕೊಲ್ಲುವ ಕಾರ್ಯಕ್ಕಾಯಿತು, ದಯಾಶೂನ್ಯವಾದ ತನ್ನ ಹೊಟ್ಟೆಯನ್ನು ಹೊರದುಕೊಳ್ಳಲಿಕ್ಕಿರುವ ಪ್ರಾಣವು ಇರುವದಕ್ಕಿಂತಲೂ ನಾಶಹೊಂದುವುದೇ ಯೋಗ್ಯವಾದ್ದು ಎಂದು ನಿಷ್ಠುರದಿಂದ ಈ ಅಬಲೆಯಾದ ಗರ್ಭಿಣಿಸ್ತ್ರೀಯನ್ನು ವನವಾಸಮಾಡಿಸಲು ಕರದೊಯ್ಯುವ ಕಾರ್ಯಕ್ಕೆ ನಾನು ಏನುಮಾಡಲೋ ದಿಕ್ಕುತೋರದಾಗಿರುತ್ತದೆ. ಪೂರ್ಣಚಂದ್ರ ಮುಖಿಯಾದ ಪೂರ್ಣಗರ್ಭಿಣಿಯನ್ನು ಅಡವಿಪಾಲುಮಾಡಿ ಬರುವಂತೆ ಶ್ರೀರಾಘವೇಶ್ವರನು ಎನಗೆ ಹೇಗೆಬರೆದು ನಿಯಮಿಸಿದನೋ ಶಿವಶಿವ ಆತ್ಮಸಾಕ್ಷಿಯಾಗಿ ಆ ಕಾರ್ಯವನ್ನು ನಾನು ಹೇಗೆಮಾಡಲಿ? ಎಂದು ಚಿಂತಿಸುತ್ತ ಸೌಮಿತ್ರಿಯು ಮುಂದರಿದಗು ||೨|| ಸೌಮಿತ್ರಿಯು ವೈದೇಹಿಯೊಡನೆ ಪ್ರಯಾಣಮಾಡುತ್ತಿರುವ ಕಾಲದಲ್ಲಿ ಒಂದು ವೃದ್ಧ ಜಂಬುಕವು ಕೂಗಿತು. ಮುಂದೆ ಎದುರಾಗಿ ಕುಳಿತಿದ್ದ ಜಿಂಕೆಯೆಂಬುವ ಮೃಗ ಎದ್ದು ಮಾರ್ಗಕ್ಕೆ ಅಡ್ಡಲಾಗಿ ಹೋಯಿತು. ಬಲದ ಕಣ್ಣು ಅದರಿತು, ಸೀತಾದೇವಿಯು ಇವೆಲ್ಲವನ್ನೂ ಕಂಡವಳಾಗಿ ಭಯಗೊಂಡ ಮನಸ್ಸಿನಿಂದ ಸೌಮಿತ್ರಿಯೇ ! ಮಾರ್ಗದಲ್ಲಿ ಪರಂಪರೆಯಾಗಿ ಸಂಭವಿಸುತ್ತಿರುವ ಅಪಶಕುನಗಳನ್ನು ನೋಡಿದೆಯಾ! ಈರೀತಿಯಾದ ದುರ್ನಿಮಿತ್ತಗಳಾಗುವದಕ್ಕೆ ಎನ್ನಯ ಚಿತ್ತವು ಈಗ ಧೈರ್ಯಗುಂದಿರುವುದು. ಇನ್ನು ಮುಂದಕ್ಕೆ ಶ್ರೀರಾಮಚಂದ್ರನ ಆಯುಷ್ಯವೃದ್ಧಿಗೂ ಭಾಗ್ಯಸಂಪತ್ತಿ

ದೆ । ಸನ್ನುತರಘೂದ್ವಹನಕೀರ್ತಿಯೆನೆಮೂವಟ್ಟೆ । ಯಂನಡೆದುಮುಕ್ಕಣ್ಣನಂಸಾರ್ದುಮೂಜಗದಪಾಪಮಂಮುರಿದುಮುಕ್ಕಿ ॥ ಮುನ್ನೀರುಮುಂತಾಗಿಮೂದೇವರೊಳಗಾದ । ಮುನ್ನುಳ್ಳಮೂವತ್ತುಮೂಕೋಟಿವಿಬುಧರಂ । ತನ್ನೊಳ್ಮುಳುಗಿದರಣಕಿಪ ಪೆಂಪೊದವಿಪರಿವಬೆಳ್ಪೊನಲ್ದಿವಿಜನದಿಯ ॥ ೪ ॥ ತೆರತೆರದಕಲ್ಲೋಲಮಾಲೆಗಳಲೀಲೆಗಳ । ಬೆರೆಬೆರೆವರಾಜಹಂಸಾಳಿಗಳ ಕೇಳಿಗಳ । ಪರಿಪರಿಯನೀರ್ವನಿಗಳಾಕರದಸೀಕರದನೊರೆಯಬೊಬ್ಬುಳಿಯಸುಳಿಯ ॥ ಮೊರೆಮೊರೆದುಘೂರ್ಮಿಸುವಪರಿವುಗಳ

---

ಕೆ_ಆಯುವಿಗೆ, (ಜೀವಿತಕ್ಕೆ) ಐಶ್ವರ್ಯಕ್ಕೆ-ಸಿರಿಗೆ, (ಐಸಿರಿಗೆ) ಉಳ್ಳ_ಆಗಿರುವ, ಭುಜಬಲಕೆ_ಬಾಹುಶಕ್ತಿಗೆ, ಒಳ್ಳಿತು_ಮೇಲಾದದ್ದು, ಆಗಲಿ_ಆಗುವದಾಗಲಿ, ಅಸುರರಂ-ರಕ್ಕಸರಂ ದಾನವರನ್ನು, ಗೆಲ್ದ-ಗೆದ್ದ, ರಾಘವಂ_ರಘುಶ್ರೇಷ್ಠನಾದ ರಾಮಚಂದ್ರನು, ನಮ್ಮಂ-ನಮ್ಮನ್ನು, ಆಶ್ರಿತರಾದ ನಮ್ಮಗಳನ್ನು, ಸಲಹಲಿ_ಸಂರಕ್ಷಿಸಲಿ, (ಪೊರೆಯಲಿ) ಎಂದಳು_ಎಂಬದಾಗಿ ಹೇಳಿದಳು.

ಅ॥ ವಿ॥ ಒಳ್ಳಿತ್ತು+ನುಡಿ=ಒಳ್ನುಡಿ, ವಿ. ಪೂ. ಕ. ಮೃಗ_ಚಿಗರೆ, ಕಾಡುಮೃಗ, ಪಥ-ಮಾರ್ಗ, ದಿಕ್ಕು. ಭುಜದ+ಬಲ=ಭುಜಬಲ, ಷ. ತ. ಆಯುಷ್ಯ ತ್ಸ. ಆಯಿಸ ದ್ಭ. ಚಿತ್ತ_ಚಿತ್ತಾನಕ್ಷತ್ರ, ಮನಸ್ಸು ॥೩॥

ಟೀ॥ ಅನ್ನೆಗಂ _ ಆವರೆಗೆ, ಮುಂದೆ _ ಎದುರುಗಡೆಯಲ್ಲಿ, ಜಾನಕಿಯ - ಜನಕರಾಯನ ಪುತ್ರಿಯಾದ ಸೀತಾದೇವಿಯ, ಕಣ್ಗೆ_ಕಂಗಳಿಗೆ, ಸನ್ನುತ_ಸ್ತೋತ್ರಾರ್ಹಮಾದ, ರಘೂದ್ವಹನ_ಶ್ರೀ ರಾಮನ, ಕೀರ್ತಿ-ಯಶವು, ಎನೆ_ಎನ್ನುವಹಾಗೆ, ಮೂವಟ್ಟೆಯಂ - ಮೂರು ಮಾರ್ಗಗಳನ್ನು, (ಸ್ವರ್ಗ ಮರ್ತ್ಯ ಪಾತಾಳಗಳೆಂಬ ಮೂರು ಮಾರ್ಗಗಳನ್ನೂ ತೊಳಲಿ) ನಡೆದು_ಹರಿದು ಹೊರಟು, ಮುಕ್ಕಣ್ಣನಂ_ತ್ರ್ಯಂಬಕನಾದ ಈಶ್ವರನನ್ನು, ಸಾರ್ದು - ಈಶ್ವರನ ಜಟೆಯಲ್ಲಿ ಸೇರಿಕೊಂಡು, ಮೂಜಗದ ಸ್ವರ್ಗ ಭೂ ಪಾತಾಳಗಳೆಂಬ ಮೂಲೋಕಗಳಲ್ಲಿರುವವರ ಪಾಪಮಂ - ಅಘವನ್ನು, ಮುರಿದು-ನಾಶಮಾಡಿ, ಮುಕ್ಕಿ-ತೊಂದರೆಪಡಿಸಿ, (ಭಕ್ಷಿಸಿ) ಮುನ್ನೀರ್_ಜಲಧಿಯೆ, ಮುಂತಾಗಿ_ಆದಿಯಾಗಿ, ಮೂದೇವರು_ತ್ರಿಮೂರ್ತಿಗಳಾದ ಬ್ರಹ್ಮ ವಿಷ್ಣು ಮಹೇಶ್ವರರು, ಒಳಗಾದ _ ಅಂತಃ ಅಡಗಿರುವ, (ಒಳಗಡೆ ಕೂಡಿರುವ) ವಳಾಗಿ ಎಂದರೆ ತ್ರಿಮೂರ್ತಿಗಳಿಂದುದ್ಭವಿಸಿದವಳಾಗಿ, ಮುನ್ನುಳ್ಳ_ಪೂರ್ವದಿಂದಿರುತ್ತಿರುವ, ಮೂವತ್ತುಮೂರು - ಮುವತ್ತುಮೂರಾದ, ಕೋಟಿ_ಕೋಟಿಸಂಖ್ಯೆಯುಳ್ಳ, ವಿಬುಧರಂ_ಅಮರರನ್ನ, ತನ್ನೊಳು_ತನ್ನಯ ಹರಿಯೋಣದಲ್ಲಿ, ಮುಳುಗಿದರೆ_ಸ್ನಾನಮಾಡಿದರೆ, ಅಣಕಿಪ - ಉಪಹಾಸಮಾಡುವ, ಪೆಂಪು-ಅಧಿಕ್ಯವನ್ನು, ಒದವಿ-ಧರಿಸಿ, ಹೊಂದಿ, ಪರಿವ-ಪ್ರವಹಿಸುತ್ತಿರುವ, ದಿವಿಜನದಿಯ-ದೇವಗಂಗಾನದಿಯ, ಬೆಳ್ಪೊನಲ್_ಧವಳವರ್ಣದ ಪ್ರವಾಹವು, ತೋರಿತು_ಕಂಡುಬಂದಿತು.

ಅ॥ ವಿ॥ ಮೂರುಜಗತ್ತುಗಳ ಸಮಾಹಾರವು=ಮೂಜಗ, ಸಮಾಹಾರ ದ್ವಿಗು ಸ. ಬಿಳಿದು ಪೂನಲ್=ಬೆಳ್ಪೊನಲ್, ವಿ. ಪೂ. ಕ. ತ್ರಿಲೋಕ_ಸ್ವರ್ಗ, ಮರ್ತ್ಯ, ಪಾತಾಳ. ತ್ರಿಮೂರ್ತಿ_ಬ್ರಹ್ಮ, ವಿಷ್ಣು, ಮಹೇಶ್ವರ. ಆತ್ಮತ್ರಯ - ಜೀವಾತ್ಮ ಪರಮಾತ್ಮ, ಅಂತರಾತ್ಮ. ಶಕ್ತಿತ್ರಯ_ಪ್ರಭು, ಮಂತ್ರ ಉತ್ಸಾಹ. ರೀತಿತ್ರಯ_ಗೌಡೀ, ವೈದರ್ಭೀ. ಪಾಂಚಾಲೀ. ಗುಣತ್ರಯ_ಸತ್ವ, ರಜ, ತಮ ॥೪॥

ಟೀ॥ ತೆರತೆರದ_ಬಗೆಬಗೆಗಳಾದ, ಕಲ್ಲೋಲ_ದೊಡ್ಡ ತೆರೆಗಳ, ಮಾಲೆಗಳ - ಸಮುದಾಯಗಳ, ಲೀಲೆಗಳ_ವೈಭವಗಳ, ಬೆರೆಬೆರೆವ_ಒಂದರೊಡನೆ ಒಂದು ಕಲೆಯುತ್ತಿರುವ, ರಾಜಹಂಸ_ಅರಸಂಚೆಗಳ, ಆವಳಿಯ_ಸಮುದಾಯದ, ಕೇಳಿಗಳ-

---

ಗೂ, ಬಾಹು ಬಲಾತಿಶಯಕ್ಕೂ ಸರ್ವದಾ ಶುಭವಾಗುತ್ತಿರಲಿ, ದೈತ್ಯಾದಿಗಳಂ ಸೋಲಿಸಿದ ಶ್ರೀರಾಮ ಮೂರ್ತಿಯು, ನಮ್ಮಗಳಂ ಅನುವರತವೂ ಸಲಹಲಿ. ಎಂದು ಶ್ರೀರಾಮ ಪಡಿದಾವರೆಯಂ ಮನದೋಳ್ ಧ್ಯಾನಿಸಿದಳು ॥ ೩ ॥ ಆಗ ಅದುವರೆಗೆ ಮುಂದೆ ಜಾನಕಿಯ ಕಂಗಳಿಗೆ ಶ್ಲಾಘ್ಯತಮವಾದ ರಘೂದ್ವಹನ ಕೀರ್ತಿ ಚಂದ್ರಿಕೆಯು ಎಂಬವೋಲ್ ಸ್ವರ್ಗ ಮರ್ತ್ಯ ಪಾತಾಳಗಳೆಂಬ ಮೂರು ಮಾರ್ಗಗಳಲ್ಲೂ ಪ್ರವಹಿಸಿಕೊಂಡು ತ್ರಿಲೋಚನನಾದ ಪರಮೇಶ್ವರನ ಜಟೆಯಲ್ಲಿ ಸೇರಿಕೊಂಡು ಮೂರು ಲೋಕಗಳಲ್ಲೂ ಇರುವ ಜನರ ಪಾಪಗಳಂ ಪರಿಹರಿಸಿ ಪರಿಶುದ್ಧರನ್ನಾಗಿ ಮಾಡಿ, ಸಮುದ್ರವೇ ಆದಿಯಾಗಿ ತ್ರಿಮೂರ್ತಿಗಳಾದ ಎಂದರೆ ಬ್ರಹ್ಮ ವಿಷ್ಣು ಮಹೇಶ್ವರರೇ ಒಳಗಾಗಿರುವವಳಾಗಿ ಎಂದರೆ ಬ್ರಹ್ಮವಿಷ್ಣು ಮಹೇಶ್ವರರಿಂದ ಉದ್ಭವಿಸಿದವಳಾಗಿ, ಅನಾದಿಯಾಗಿರುತ್ತಿರುವ ಮೂವತ್ತುಮೂರುಕೋಟಿ ಸಂಖ್ಯೆಯುಳ್ಳ ದೇವತೆಗಳನ್ನು ತನ್ನ ಪ್ರವಾಹದಲ್ಲಿ ಮುಳುಗಿದರೆ ಅಣಕಿಸುವ ಅಂದವನ್ನು ಒದಗಿ ಪ್ರವಹಿಸುತ್ತಿರುವ, ದೇವಗಂಗಾನದಿಯ ಧವಳವರ್ಣಾಲಂಕೃತವಾದ ಪ್ರವಾಹವು ಸೀತಾಲಕ್ಷ್ಮಣರ ಪರಿಶುದ್ಧವಾದ ಕಂಗಳಿಗೆ ತೋರಿಬಂದು ಮನಸ್ಸಂತೋಷವನ್ನುಂಟುಮಾಡಿತು ॥೪॥ ಆಗ ನಾನಾ ವಿಧಗಳಾದ ತರಂಗಗಳ ಸಮುದಾಯವುಳ್ಳ, ವಿಲಾಸಗಳಿಂದ ಆಗಿಂದಾಗ್ಯೆ ಕಲೆಯುತ್ತಿರುವ (ಬೆರೆಯುತ್ತಿರುವ) ರಾಜಹಂಸಗಳ ಆವಳಿಗಳ ಆಟಗಳುಳ್ಳ, ಪರಿಸರಿಯ ನೀರ್ವನಿಗಳಿಗೆ ಆಸರೆಯಾದ ಸಣ್ಣ ತುಂತರು ಹನಿಗಳುಳ್ಳ, ನೊರೆಗಳ ರಾಶಿಗಳುಳ್ಳ, ಸುಳಿಗಳಿಂದ ಮೊರೆಯುತ್ತಿರು

ಮುರಿವುಗಳ । ತಿರುತಿರುಗಿಸುಳಿವಜಲಜಂತುಗಳಗಂತುಗಳ । ನೆರೆನೆರೆದುಮುನಿಜನಂಸೇವಿಸುವಭಾವಿಸುವಗಂಗೆಗವನಿಜೆ ಬಂದಳು ‖೫‖ ತೆಂಗೆಳೆಕವುಂಗುಪನಸದ್ರಾಕ್ಷೆಜಂಬುನಾ। ರಂಗಜಂಬೀರಖರ್ಜೂರಕಿತ್ತಳೆಮಾತು। ಳಂಗತಿಂತ್ರಿಣಿಚೂತನೆಲ್ಲಿಬಿಲ್ವ ಕಪಿತ್ಥಮೆಂಬನಾನಾತರುಗಳು ‖ ತೊಂಗುವಫಲಾವಳಿಯಭಾರಂಗಳಾವಗಂ। ಪಿಂಗದಿವನಿಳೆಗಿಳುಪಬೇಕೆಂದುಬಾಗಿಬಂ। ದಂಗನೆಯಕಣ್ಗೆಸೆದವಿಕ್ಕೆಲದೊಳಾಜಾಹ್ನವೀನದಿಯತಟಬನದೊಳು ‖೬‖ ಇಳಿದುರಥದಿಂದಮಂದಾಕಿನಿಗೆಪೊಡಮಟ್ಟು । ಬಳಿಕ

---

ವಿನೋದಗಳ, ಪರಿಪರಿಯ-ನಾನಾ ವಿಧಗಳಾದ, ನೀರ್ವನಿಗಳ-ಜಲಬಿಂದುಗಳ, ಆಕರದ-ಗಣಿಯಾದ, (ಆಶ್ರಯವಾದ) ಶೀಕರದ-ನೀರಿನ ಸಣ್ಣ ಹನಿಗಳ, ನೊರೆಯ-ಬುರುಗಿನ, ಬೊಬ್ಬುಳಿಯ - ಮೆದೆಯ, (ಸಮೂಹದ) ಸುಳಿಯ - ಸುತ್ತುವಿಕೆಯ, ಮೊರೆ ಮೊರೆದು-ಆರ್ಭಟಿಸಿ, ಘೂರ್ಮಿಸುವ - ಚಲಿಸುತ್ತಿರುವ, ಪರಿವುಗಳ - ಹರಿಯುವಿಕೆಗಳ, ಮುರಿವುಗಳ - ಎಡ ಬಲಗಡೆ ತಿರಗುವಿಕೆಯುಳ್ಳ, ತಿರುತಿರುಗಿ- ಸುತ್ತಿ ಸುತ್ತಿ, ಸುಳಿವ- ಸಂಚರಿಸುವ, ಜಲಜಂತುಗಳು - ಜಲಚರಗಳ, ನೀರಿನಲ್ಲಿ ಸಂಚರಿಸುವ ಪ್ರಾಣಿಗಳ, ಗಂತುಗಳ-ಮೇಲಕ್ಕೆ ಎಗರುವಿಕೆಗಳುಳ್ಳ, ನೆರೆನೆರೆದು-ಹೆಚ್ಚಾಗಿ ಬಂದು, ಮುನಿಜನಂ-ಋಷಿಗಳ ಗುಂಪು, ಸೇವಿಸುವ-ಸೇವೆಯನ್ನು ಮಾಡುವ, (ಸೇವನೆಯನ್ನು ಮಾಡುವ) ಭಾವಿಸುವ - ಯೋಚಿಸುವ, ತಿಳಿಯುವ, ಗಂಗೆಗೆ-ಜಾಹ್ನವಿಗೆ, ಅವನಿಜೆ-ಭೂಪುತ್ರಿಯಾದ ಜಾನಕಿಯು, ಬಂದಳು-ಬಂದವಳಾದಳು.

ಅ‖ ವಿ‖ ಕಲ್ಲೋಲ - ದೊಡ್ಡತೆರೆ, ಜಲದ ಜಂತು, ಜಲಜಂತು, ಷ. ತ. ಋಷಿ ತ್ಸ. ರಿಸಿ ದ್ಭ. ಭಾವಿಸು - ಭಾವನೆಯನ್ನು ಮಾಡು, ಭವಿಸು-ಹುಟ್ಟು ‖೫‖

ಟೀ‖ ತೆಂಗು-ನಾರಿಕೇಳವೃಕ್ಷಗಳು, ಎಳೆಕವುಂಗು - ಬಲಿಯದ ಅಡಿಕೆಯ ಮರಗಳು, ಪನಸ - ಹಲಸಿನ ವೃಕ್ಷಗಳು, ದ್ರಾಕ್ಷೆ-ದ್ರಾಕ್ಷೆಯ ಬಳ್ಳಿಯು, ಜಂಬು-ನೇರಿಲವೃಕ್ಷವು, ನಾರಂಗ-ಹೆರಳೆಯಗಿಡವು, ಜಂಬೀರ-ನಿಂಬೆಯಗಿಡವು, ಖರ್ಜೂರ-ಖರ್ಜೂರದ ಗಿಡಗಳು, ಕಿತ್ತಳೆ-ಕಿತ್ತಳೆಯವೃಕ್ಷಗಳು, ಮಾತುಳಂಗ-ಮಾದಾಳದ ಗಿಡಗಳು, ತಿಂತ್ರಿಣಿ - ಹುಣಸೇಮರಗಳು, ಚೂತ-ಮಾವಿನಮರಗಳು, ನೆಲ್ಲಿ-ನೆಲ್ಲಿಯಮರಗಳು, ಬಿಲ್ವ-ಬೆಲ್ಲವತ್ತವೃಕ್ಷಗಳು, ಕಪಿತ್ಥ-ಬೇಲದಮರವು, ಎಂಬ-ಎನ್ನುವಂಥ, ನಾನಾ-ವಿಧವಿಧಗಳಾದ, ತರುಗಳು-ವೃಕ್ಷಗಳು, ತೊಂಗುವ - ತುಂಬಿಕೊಂಡಿರುವ, ಫಲಾಳಿಯ - ಹಣ್ಣುಗಳ ಸಮುದಾಯದ, ಭಾರಂಗಳು-ಹೊರೆಗಳು, ಆವಗಂ-ಸರ್ವಕಾಲಗಳಲ್ಲು, ಇಂಗದ-ಒಣಗಿಹೋಗದ, ಇದಂ-ಈ ರೀತಿಯಾದ ಫಲಗಳನ್ನು. ಇಳೆಗೆ-ಭೂಮಿಗೆ, ಇಳುವಬೇಕೆಂದು-ಇಳುಹಬೇಕೆಂಬದಾಗಿ, ಬಾಗಿ-ಬಾಗಿಕೊಂಡು, ಬಂದು-ಬಂದವುಗಳಾಗಿ, ಅಂಗನೆಯ-ಅಬಲೆಯಾದ ಜಾನಕೀದೇವಿಯ, ಕಣ್ಗೆ-ಕಂಗಳಿಗೆ, ಆಜಾಹ್ನವೀ (ನದಿಯ-ಆ ದೇವಗಂಗಾನದಿಯ ಇಕ್ಕೆಲದೊಳು-ಇರ್ಕೆಲದಲ್ಲಿಯೂ) ತಟ-ದಡದಲ್ಲಿರುವ, ಬನದೊಳು-ಕಾಡಿನಲ್ಲಿ, (ವನದಲ್ಲಿ) ಎಸೆದುವು-ಪ್ರಕಾಶಿಸಿದವು.

ಅ‖ ವಿ‖ ಭಗೀರಥನ ಪ್ರಾರ್ಥನೆಯಮೇರಿಗೆ ದೇವಗಂಗೆಯು ಭೂಲೋಕಕ್ಕೆ ಇಳಿದುಬಂದಾಗ ಜಹ್ನುರುಷಿಯ ಪರ್ಣಶಾಲೆಯ ಸುತ್ತಲೂ ಆವರಿಸಿ ತೊಂದರೆಯುಂಟಾಗುವಂತಾಗಲು ಆ ಜಹ್ನುಋಷಿಯು ಕುಪಿತನಾಗಿ ಗಂಗೆಯನ್ನೆಲ್ಲಾ ಪಾನಮಾಡಿ ಬಳಿಕ ಭಗೀರಥನದೀನ ಪ್ರಾರ್ಥನೆಯಿಂದ ಪುನಹ ಕಿವಿಯಲ್ಲಿ ಬಿಟ್ಟನು, ಹೀಗೆ ಜಹ್ನುರುಷಿಯಿಂದುಂಟಾದುದಕ್ಕಾಗಿ ಜಾಹ್ನವಿಯೆಂಬ ಹೆಸರಾಯಿತು. ಜಹ್ನುಋಷಿಯಮಗಳು - ಜಾಹ್ನವಿ, ಭಗೀರಥನಿಂದಾದದ್ದು ಭಾಗೀರಥಿ, ಫಲದ+ಆವಳಿ=ಫಲಾವಳಿ, ಷ. ತ. ‖೬‖

---

ವ, ಅತಿಯಾಗಿ ಧ್ವನಿಮಾಡುತ್ತ ಸಂಚರಿಸುವ, ಅಡ್ಡ ಪ್ರವಾಹಗಳುಳ್ಳ, ಕೆಳಗಡೆಯಿಂದ ಮೇಲಕ್ಕೂ, ಮೇಲುಗಡೆಯಿಂದ ಕೆಳಕ್ಕೂ ಎಡದಿಂದ ಬಲಕ್ಕೂ, ಸಂಚರಿಸುತ್ತಿರುವ ನೀರ್ನಾಯಿ ಮೊಸಳೆ ಮೊದಲಾದ ಪ್ರಾಣಿಗಳುಳ್ಳ, ಮತ್ತು ಅವುಗಳ ಹಾರಾಡುವಿಕೆಯುಳ್ಳ ಗುಂಪುಗುಂಪಾಗಿ ಬಂದು ಸೇವಿಸುತ್ತಿರುವ ಋಷಿಗಳ ಸಮೂಹವುಳ್ಳ (ಎಂದರೆ ಮುನಿಗಳು ಮತ್ತು ಮುನಿಪತ್ನಿಯರು ಬಂದು ಸ್ನಾನ ಸಂಧ್ಯಾವಂದನೆಯೇ ಮೊದಲಾದ ಕರ್ಮಾದಿಗಳನ್ನು ಮಾಡುತ್ತಿರುವರೆಂಬ ಭಾವವು) ನಾನಾ ಬಗೆಗಳಾದ ಜನರಿಂದಲೂ ಸ್ತೋತ್ರಾರ್ಹವಾದ ದೇವಗಂಗಾನದಿಯ ಬಳಿಗೆ ಭೂಪುತ್ರಿಯಾದ ಜಾನಕಿಯು ಬಂದಳು ‖ ೫ ‖ ಆ ಬಳಿಕ ಭೂಕಲ್ಪತರುವು ಎಳೆದಾದ ಅಡಿಕೆಯ ಮರಗಳು, ಪನಸ, ದ್ರಾಕ್ಷೆಯ ಬಳ್ಳಿ, ಜಂಬೂವೃಕ್ಷ, ನಾರಂಗ, ಜಂಬೀರ, ಖರ್ಜೂರ, ಕಿತ್ತಳೆ, ಮಾತುಳಂಗ, ತಿಂತ್ರಿಣಿ, ಹುಣಿಸೆ, ಸಾಕಾರ, ನೆಲ್ಲಿ, ಅಮಟೆ, ಬಿಲ್ವ, ಕಪಿತ್ಥ, ಎನ್ನುವ ನಾನಾ ಬಗೆಗಳಾದ ವೃಕ್ಷ ಲತಾದಿಗಳು, ಜಗಿಯುತ್ತಿರುವ ಫಲಾವಳಿಯ ಭಾರದ ದೆಸೆಯಿಂದ, ನೆಲಕ್ಕೆ ಇಳುಪಬೇಕೆಂದು ಬೊಗ್ಗಿ ಬಂದುದೊ ಎಂಬಂತೆ ಇರುವ ಫಲ ಪುಷ್ಪಾದಿಗಳಿಂದ ಯಾವಕಾಲದಲ್ಲೂ ಕೊರತೆಯಿಲ್ಲದೆ ಗಂಗೆಯ ಉಭಯ ಪಾರ್ಶ್ವಗಳಲ್ಲಿಯೂ ಇರುವ ತಟದ ಅರಣ್ಯ ಪ್ರದೇಶಗಳಲ್ಲಿ ಜಾನಕಿಗೆ ಕಂಗೊಳಿಸುತ್ತಿದ್ದವು ‖ ೬ ‖ ಆಗ ಸೀತಾ ಲಕ್ಷ್ಮಣ

ನಾವಿಕರೊಡನೆನಾವದೊಳ್ಗಂಗೆಯಂ । ಕಳೆದುನಿರ್ಮಲತೀರ್ಥದೊಳ್ಮಿಂದುಸೌಮಿತ್ರಿಮತ್ತೆ ಭೂಜಾತೆಸಹಿತ ॥ ಒಳಗೊಳಗೆ ಮರುಗಿಬಿಸುಸುಯ್ಯುಚಿಂತಿಸುತಮುಂ । ದಳೆದುಗ್ರಮೃಗಪಕ್ಷಿಗಣದಿಂದಘೂರ್ಮಿಸುವ । ಹಳುವಮಂಪೊಕ್ಕನಡಿಯಿಡುವಡಸದಳವೆಂಬಕರ್ಕಶದಮಾರ್ಗದಿಂದ ॥ ೭ ॥ ಶಕುನಿಚೀತ್ಕಾರಘೋಷಣಮಯಂತೃಣಮಯಂ । ವಿಕಿರದುಪಲಾಳಿಕರ್ಕಶಮಯಂ ಶಶಮಯಂ । ಪ್ರಕಟಕಂಟಕಶೀರ್ಣತರುಮಯಂರುರುಮಯಂವಿವಿಧೋಗ್ರಜಂತುಮಯವು ॥ ನಕುಲಮೂಷಕಸರೀಸೃಪಮ

ಟೀ॥ ಜಾನಕಿ–ಸೀತಾದೇವಿಯು, ರಥದಿಂದ – ವರೂಥದಿಂದ, ಇಳಿದು–ಕೆಳಕ್ಕಿಳಿದು, ಮಂದಾಕಿನಿಗೆ – ದೇವಗಂಗೆಗೆ, ಪೊಡಮಟ್ಟು–ಅಡ್ಡಬಿದ್ದು, ನಮಸ್ಕರಿಸಿ, ಬಳಿಕ – ಅನಂತರದಲ್ಲಿ, ನಾವಿಕರ – ದೋಣಿ ತೆಪ್ಪ ಮೊದಲಾದವನ್ನು ನಡೆಸತಕ್ಕವರ, ಒಡನೆ–ಸಂಗಡ, ನಾವದೊಳ್-ದೋಣಿಯಲ್ಲಿ, ಗಂಗೆಯಂ–ಗಂಗಾನದಿಯನ್ನು, ಕಳೆದು–ಅತಿಕ್ರಮಿಸಿ, ನಿರ್ಮಲದ-ಕೊಳೆಯಿಲ್ಲದ ತೀರ್ಥದೊಳು–ಉದಕದಲ್ಲಿ, ಮಿಂದು–ಜಳಕಮಾಗಿ, ಸೌಮಿತ್ರಿ–ಸುಮಿತ್ರೆಯಮಗನಾದ ಲಕ್ಷ್ಮಣನು, ಮತ್ತೆ–ತಿರಿಗಿ, ಭೂಜಾತೆ–ಭೂದೇವಿಯ ಪುತ್ರಿಯಾದ ಜಾನಕಿಯ, ಸಹಿತ–ಸಂಗಡ, ಒಳಗೊಳಗೆ–ಮನದಲ್ಲಿ, ಮರುಗಿ-ಸಂತಾಪಪಟ್ಟು, ಬಿಸುಸುಯ್ದು–ನಿಡಿದುಸುರನ್ನು ಬಿಟ್ಟು, ಚಿಂತಿಸುತ-ಯೋಚಿಸುತ್ತ, (ಆಲೋಚಿಸುತ್ತಾ) ಮುಂದಳೆದು – ಮುಂದಕ್ಕೆ ಪ್ರಯಾಣ ಮಾಡಿ ಬಂದು, ಉಗ್ರ–ಭಯಂಕರಗಳಾದ, ಮೃಗ–ಕಾಡುಮೃಗಗಳ, ಗಣದಿಂದ-ಸಮುದಾಯದಿಂದ, ಘೂರ್ಮಿಸುವ–ಭಯಪಡಿಸುತ್ತಿರುವ, ಹಳುವಮಂ–ಅರಣ್ಯವನ್ನು, ಅಡಿ-ಕಾಲನ್ನು, ಇಡುವೊಡೆ–ಇಡಬೇಕಾದರೆ, ಅಸದಳ–ಅಸಾಧ್ಯವು, ಎಂಬ–ಎನ್ನುವ, ಕರ್ಕಶ–ಅತಿ ಕ್ರೂರವಾದ, ಮಾರ್ಗದಿಂದ–ಹಾದಿಯಿಂದ, ಪೊಕ್ಕನು–ಪ್ರವೇಶಮಾಡಿದನು.

ಅ॥ ವಿ॥ ಪೊಗು – ಧಾತು, ಪೊಕ್ಕನು – ಕ್ರಿಯಾಪದ, ಭೂತರೂಪ, ಪ್ರಥಮಪುರುಷ, ಏಕವಚನ. ಮಲವಿಲ್ಲದ್ದು ನಿರ್ಮಲ, ನಞ್, ತತ್ಪುರುಷ, ಸ. ಬೆಚ್ಚನೆಯ ಸುಯ್, ಬಿಸುಸುಯ್, ವಿ. ಪೂ. ಕ. ಕರ್ಕಶ ತ್ಸ. ಕಕ್ಕಸ. ದ್ಭ. ಉಗ್ರ–ಭಯಂಕರಮಾದ, ಈಶ್ವರ. ॥೭॥

ಟೀ॥ ಅದು – ಆ ಅರಣ್ಯವು, ಶಕುನಿ – ವಿಹಂಗಗಳ, ಚೀತ್ಕಾರ–ಚೀತ್ಕಾರವೆಂಬುವ, ಘೋಷಣ–ಶಬ್ದದ, ಮಯಂ–ವ್ಯಾಪನೆಯಿಂದಲೂ, ತೃಣಮಯಂ–ಹುಲ್ಲುಗಾವಲುಗಳ ಸಮುದಾಯದಿಂದಲೂ, ವಿಕಿರತ್–ಎರಚಿದಂತಿರುವ, ಉಪಲ–ಶಿಲೆಗಳ, ಆಳಿ – ಸಮುದಾಯದಿಂದ, ಕರ್ಕಶ–ಅತಿ ಕಷ್ಟವಾದ, ಮಾರ್ಗದಿಂದ – ಹಾದಿಗಳಿಂದಲೂ, ಮಯಂ - ತುಂಬಿರುವಿಕೆಯಿಂದಲೂ, ಶಶಮಯಂ-ಮೊಲಗಳ ಪ್ರಾಚುರ್ಯಗಳಿಂದಲೂ, ರುರು–ಜಿಂಕೆಗಳ, ಮಯಂ–ತುಂಬಿರೋಣದರಿಂದಲೂ, ಪ್ರಕಟ-ಅಭಿವೃದ್ಧಿಯನ್ನು ಹೊಂದಿದ, ಕಂಟಕ – ಸೂಜಿಯಂತಿರುವ ಮುಳ್ಳುಗಳ, ಶೀರ್ಣ - ಸವೆದುಹೋಗಿರುವ, ತರು – ವೃಕ್ಷಗಳ, ಮಯಂ–ವ್ಯಾಪನೆಯಿಂದಲೂ, ವಿವಿಧ–ಅನೇಕ ಬಗೆಗಳಾದ, ಉಗ್ರ-ಭಯಂಕರಗಳಾದ, ಜಂತು–ಜೀವರಾಶಿಗಳ, ಮಯಂ–ವ್ಯಾಪನೆಯುಳ್ಳದ್ದಾಗಿಯೂ, ನಕುಲ-ಮುಂಗಸಿಗಳ, ಮೂಷಕ–ಆಖುಗಳ, ಇಲಿಗಳ, ಸರೀಸೃಪ–ಹಾವುಗಳ, ಮಯಂ–ತುಂಬಿರೋಣದರಿಂದಲೂ, (ಪ್ರಾಚುರ್ಯದಿಂದಲೂ) ದ್ವಿಪ–ಗಜಗಳ, ಮಯಂ – ತುಂಬಿರುವಿಕೆಯಿಂದಲೂ, ಸಕಲ – ಸಮಸ್ತವಾದ, ಭೂ-ಭೂಮಿಯ, ವಿಷಮ-ಹಳ್ಳತಿಟ್ಟುಗಳ, ಅಂದರೆ ಸಮವಾಗಿಲ್ಲದ, ಸಂಕುಲ–ಸಮುದಾಯಗಳ, ಮಯಂ–ತುಂಬಿಕೊಂಡಿರುವಿಕೆಯಿಂದಲೂ, ಬಿಲ–ಬಿಲಗಳ, ಹುತ್ತಗಳ, ಮಯಂ–ವ್ಯಾಪನೆಯಿಂದಲೂ, ವೃಕ–ತೋಳವು, ಸೂಕರ–ವರಾಹಗಳು ಹಂದಿಗಳು, ವ್ಯಾಘ್ರ-ಹುಲಿಗಳು ಇವುಗಳ, ಚಯ–ಸಮುದಾಯಗಳ, ಮಯಂ-ತುಂಬಿರುವಿಕೆಯಿಂದಲೂ, ಭಯ–ಭೀತಿಯ, ಮಯಂ–ಅಭಿವೃದ್ಧಿಯಿಂದಲೂ ಕೂಡಿಲುವುದು, ತಾನು, ಎನಿಸಿ–ತಾನೆ ಎನ್ನಿಸಿಕೊಂಡು, ಕಾಡು-ಆ ವಿಪಿನವು, ಇದ್ದುದು-ಇರ್ದುದು.

ರೀರ್ವರೂ ರಥದಿಂದ ಕೆಳಕ್ಕಿಳಿದು ಮಂದಾಕಿನಿಗೆ ನಮಸ್ಕಾರವನ್ನು ಮಾಡುತ್ತ ಅನಂತರದಲ್ಲಿ ನಾವಿಕರೊಡನೆ ನಾವೆಯಲ್ಲಿ ಕುಳಿತು ಗಂಗಾನದಿಯನ್ನು ದಾಂಟಿ ಪರಿಶುದ್ಧೋದಕದಲ್ಲಿ ಸ್ನಾನವನ್ನು ಮಾಡಿ ಲಕ್ಷ್ಮಣನು ಮತ್ತು ಭೂದೇವಿಯ ಪುತ್ರಿಯಾದ ಜಾನಕಿಯೊಡನೆ ಮತ್ತೆ ಒಳಗೊಳಗೆ ಸಂತಾಪಪಡುತ್ತ ನಿಡಿದುಸುರನ್ನು ಬಿಟ್ಟು ನಾನಾವಿಧವಾಗಿ ಯೋಚಿಸುತ್ತ ಮುಂದಕ್ಕೆ ಪ್ರಯಾಣಮಾಡಿ ಬಂದು ಮಹಾ ಭಯಂಕರಗಳಾದ ಸಿಂಹ ಹುಲಿ ಕರಡಿ ಗಜ ಇವೇ ಮೊದಲಾದ ಕಾಡುಮೃಗಗಳಿಂದ ಅತ್ಯುಗ್ರವಾಗಿ ಭೋರ್ಗರೆಯುತ್ತಿರ್ಪ ಕಾಡಿನಲ್ಲಿ ಪಾದವನ್ನಿಡಲು ಅಸಾಧ್ಯವು ಎಂಬಂತಿರುವ ಕರ್ಕಶವಾದ ಮಾರ್ಗದಿಂದ ಪ್ರಯಾಣ ಮಾಡಿದರು ॥೭॥ ಆ ಕಾಡು ಶಕುಂತಗಳ ಚೀತ್ಕಾರವೆಂಬುವ ಧ್ವನಿಯಿಂದ ತುಂಬಿದ್ದಾಗಿಯೂ, ಹಸುರಾದ ಹುಲ್ಲಿನಿಂದ ವ್ಯಾಪ್ತವಾದುದಾಗಿಯೂ, ಎಲ್ಲಾ ಕಡೆಗಳಲ್ಲೂ ಚೆಲ್ಲಿದಂತಿರುವ ಉಪಲಗಳ ಸಮೂಹಗಳಿಂದಲೂ, ಮುಳ್ಳುಗಳ ಪ್ರಚುರತೆಯುಳ್ಳದ್ದಾಗಿಯೂ, ಮೊಲಗಳ ಸಮೂಹಗಳಿಂದ ಕೂಡಿದ್ದಾಗಿಯೂ, ಸಾರಂಗ ಜಿಂಕೆ ಮೊದಲಾದವುಗಳ ಪ್ರಾಚುರ್ಯವುಳ್ಳದ್ದಾಗಿಯೂ, ಮುಂಗಸಿ ಇಲಿ ಹೆಗ್ಗಣ ಮೊದಲಾದವುಗಳ ಏಳಿಗೆಯಿಂದಲೂ ಹುಲಿ ಸಿಂಹ ಕರಡಿ ತೋಳ ಮೊದಲಾದ ಉಗ್ರಜಂತುಗಳ ವ್ಯಾಪನೆಯುಳ್ಳ

ಯಂದ್ವಿಪನುಯಂ । ಸಕಲಭೂವಿಷನುಸಂಕುಲನುಯಂಬಿಲನುಯಂ । ವೃಕಸೂಕರವ್ಯಾಘ್ರಚಯಮುಂಭಯಮುಯಂ ತಾನೆನಿಸಿಕಾಡಿರ್ದುದು ॥೮॥ ಇರುಳಂತೆಪಗಲಂತೆನುಖದಂತೆದಿವಿಯಂತೆ । ವರಪಯೋನಿಧಿಯಂತೆಕೈಲಾಸಗಿರಿಯಂತೆ । ನಿರುತ ನುಂಸೋಮಾರ್ಕಶಿಖಿಸಹಸ್ರಾಕ್ಷಹರಿನುತಶಿವಾವಾಸಮಾಗಿ ॥ ಧುರದಂತೆಕೊಳದಂತೆಕಡಲಂತೆನಭದಂತೆ । ಶರಪುಂಡರೀಕವಿ ದ್ರುಮಋಕ್ಷನುಯದೊಳಿಡಿ । ದಿರುತಿರ್ದುದಾಮಹಾಟವಿಜಾನಕಿಯಕಣ್ಗೆಘೋರತರನಾಗಿಮುಂದೆ ॥ ೯ ॥ ಅಟವಿಯಮಹಾ

ಅ॥ ವಿ॥ ವ್ಯಾಘ್ರ ತ್ಸ. ಬಗ್ಗ ದ್ಭ. ಧ್ವನಿ ತ್ಸ. ದನಿ ದ್ಭ. ಶುಕ–ಗಿಣಿ, ಶುಕಮುನಿ, ನಕುಲ–ನಕುಲನೆಂಬುವನು, ಮುಂಗಿಸಿ. ದ್ವಿ–ಎರಡುಸಲ, ಪ–ಪಾನಮಾಡುವುದು (ಆನೆ) ಭೂಮಿಯ+ವಿಷಮ=ಭೂವಿಷಮ, ಷ. ತ. ॥೮॥

ಟೀ॥ ಕಾಡು–ಆ ಅರಣ್ಯವು, ಇರುಳಂತೆ–ನಿಶಿಯಹಾಗೆಯೂ, ಪಗಲಂತೆ–ಪಗಲಿನಹಾಗೆಯೂ, ಮಖದಂತೆ–ಅಧ್ವರದ ಹಾಗೆಯೂ, ದಿವಿಯಂತೆ – ಸುರಲೋಕದಂತೆಯೂ, ವರ–ಉತ್ತಮವಾದ, ಪಯೋನಿಧಿಯಂತೆ–ಕ್ಷೀರಸಮುದ್ರದ ಹಾಗೆಯೂ, ಕೈಲಾಸಗಿರಿಯಂತೆ–ರಜತ ಪರ್ವತದ ಹಾಗೆಯೂ, ನಿರುತಂ – ಸರ್ವಕಾಲದಲ್ಲೂ, ಸೋಮ–ಇಂದುವು, ಅರ್ಕ – ಭಾಸ್ಕರನು, ಶಿಖಿ–ಮಯೂರವು, ಸಹಸ್ರಾಕ್ಷ–ದೇವೇಂದ್ರನು, ಹರಿ – ನಾರಾಯಣನು, ನುತ–ಸ್ತೋತ್ರಾರ್ಹವಾದ, ಶಿವ – ಪರಮೇಶ್ವರನಿಗೆ, ಆವಾಸಂ–ವಾಸಸ್ಥಳವು, ಆಗಿ–ಆಗಿರುವುದಾಗಿಯೂ, ಧುರದಂತೆ–ಕಾಳಗದ ಹಾಗೆಯೂ, ಕೊಳದಂತೆ–ಸರೋವರದ ಹಾಗೆಯೂ, ಕಡಲಂತೆ–ಅಂಬುಧಿಯಂತೆಯೂ, ನಭದಂತೆ–ಅಂತರಿಕ್ಷದಂತೆಯೂ, ಶರ–ಬಾಣಗಳ, ಕೋಲ್ಗಳ, ಪುಂಡರೀಕ–ಬಿಳೀಕಮಲಗಳ, ವಿದ್ರುಮ–ಹವಳದ ಲತೆಗಳ, ಋಕ್ಷ–ಕರಡಿಗಳ, ಮಯದೊಳು–ತುಂಬಿರುವಿಕೆಯಿಂದ, ಇಡಿದು–ಕೂಡಿದ್ದಾಗಿ, ಆಮಹಾಟವಿ–ಆ ಮಹತ್ತಾದ, ಅರಣ್ಯವು, ಮುಂದೆ–ಮುಂಭಾಗದಲ್ಲಿ, ಜಾನಕಿಯ–ಜಾನಕೀದೇವಿಯ, ಕಣ್ಗೆ–ಕಂಗಳಿಗೆ, ಘೋರತರ–ಅತಿ ಭಯಂಕರವಾಗಿ, ಇರುತಿರ್ದುದು–ಇರುತ್ತಿತ್ತು.

ಅ॥ ವಿ॥ ಶಿಖಿ–ನವಿಲು, ಅಗ್ನಿ, ಪುಂಡರೀಕ–ಹುಲಿ, ಕಮಲ. ಮಖ–ಯಜ್ಞ, ಮುಖ–ಮೋರೆ. ಶಂ–ಸುಖವನ್ನು, ಕರ–ಉಂಟುಮಾಡತಕ್ಕವನು, (ಈಶ್ವರ) ಸಹಸ್ರಾಕ್ಷ–ಇಂದ್ರ, ನವಿಲು. ಧುರ–ಯುದ್ಧ, ಧರೆ–ಭೂಮಿ ॥೯॥

ಟೀ॥ ಜನಕಜೆ–ಜನಕರಾಯನ ಪುತ್ರಿಯಾದ ಸೀತಾದೇವಿಯು, ಅಟವಿಯ–ಅರಣ್ಯದ, ಮಹಾ–ಹೆಚ್ಚಾದ, ಘೋರ–ಭೀಕರವಾದ, ಗಹ್ವರಂ–ಗವಿಗಳು, ಮುಂದೆ–ಮುಂದಿನ ಮಾರ್ಗದಲ್ಲಿ, ದುರ್ಘಟಂ–ಸಂಚರಿಸಲು ಸಾಧ್ಯವಲ್ಲದ್ದು, ಆಗೆ–ಉಂಟಾಗುತ್ತಿರಲು, ಸೀತೆ–ಭೂಪುತ್ರಿಯು, ಭೀತಿಯಿಂದ–ಹೆದರಿಕೆಯಿಂದ, ನಡನಡುಗಿ–ನಡುಗಿನಡುಗಿದವಳಾಗಿ, ಸಂಕಟದಿಂದ–ವ್ಯಥೆಯಿಂದ, ರಾಮ–ಶ್ರೀರಾಮಚಂದ್ರನ, ನಾಮಂಗಳಂ–ಪೆಸರುಗಳನ್ನು, ಜಪಿಸುತ–ಧ್ಯಾನಿಸುತ್ತ, ಎಲೆ–ಎಲೈಯ್ಯಾ. ಸೌಮಿತ್ರಿ–ಸುಮಿತ್ರಾತ್ಮಜನಾದ ಲಕ್ಷ್ಮಣನೆ, ಇದು–ಇಲ್ಲಿರುವ, ಕಾನನಂ–ವಿಪಿನವು, ಅರಣ್ಯವು, ಅಟನಕೆ–ತಿರುಗಾಟಕ್ಕೆ, ಅಸದಳಂ – ಅಸಾಧ್ಯವು, ಅಪ್ಪುದು–ಆಗಿರುತ್ತದೆ, ಆಗಿರುವುದು, ಇಲ್ಲಿ–ಈ ಅರಣ್ಯದಲ್ಲಿ, ಪುಣ್ಯ–ಪವಿತ್ರಕರವಾದ, ಆಶ್ರಮಗಳ, (ಋಷ್ಯಾಶ್ರಮಗಳಲ್ಲಿರುವ) ಜಟಿಗಳಂ–ಜಟಾಧರರಾದ ಕಿತ್ತಡಿಗಳನ್ನು, ವಲ್ಕಲವನು–ನಾರುಮಡಿಗಳನ್ನು, ಉಟ್ಟು–ಧರಿಸಿಕೊಂಡಿರುವ, ವಟುಗಳಂ–ಬ್ರಹ್ಮಚರ್ಯನಿಯಮವುಳ್ಳವರನ್ನು, ಶ್ರುತಿ–ಆಗಮಗಳ, ಘೋಷ–ಶಬ್ದದಿಂದ ವ್ಯಾಪ್ತವಾದ, ಹೋಮ–ಯಜ್ಞದ, ಧೂಮಂಗಳಂ–ಹೊಗೆಗಳನ್ನು, (ಧೂಪಗಳನ್ನು) ಎಂದರೆ ದಕ್ಷಿಣಾಗ್ನಿ ಗಾರ್ಹಪತ್ಯ ಆಹವನೀಯವೇ ಮೊದಲಾದ ಅಗ್ನಿಗಳ ಹೊಗೆಗಳನ್ನು, ಕಾಣೆನು–ನೋಡಿದವಳಾಗಲಿಲ್ಲ. ಎಂದು–ಎಂಬದಾಗಿ, ಅಳವಳಿದಳು–ಧೈರ್ಯಗುಂದಿದಳು, (ಭಯಗ್ರಸ್ತಳಾದಳು.)

ದ್ದಾಗಿಯೂ, ಎಲ್ಲೆಲ್ಲಿಯೂ,ದ್ವೀಪಿಗಳ ಸಮೂಹವುಳ್ಳದ್ದಾಗಿಯೂ,ಹಂದಿ,ಶಿವಂಗಿ,ಕಾಡೆಮ್ಮೆ,ಮೊದಲಾದವುಗಳ ನಿಕರಗಳುಳ್ಳದ್ದಾಗಿಯೂ ಭೂಮಿಯೆಲ್ಲವೂ ಹಳ್ಳ ತಿಟ್ಟುಗಳಿಂದ ತುಂಬಿದ್ದಾಗಿಯೂ, ಅತ್ಯಂತ ಭಯಂಕರವಾಗಿದ್ದಿತು|೮॥ ಮತ್ತು ವನಮೃಗ ಗಜಾದಿಗಳಿಂದ ವ್ಯಾಪ್ತವಾದ ಆ ಘೋರಾರಣ್ಯವು ಇರುಳಂತೆಯೂ ಪಗಲಿನಂತೆಯೂ ಮಖದಂತೆಯೂ ಸ್ವರ್ಗದಂತೆಯೂ ಶ್ರೇಷ್ಠತರವಾದ ಕ್ಷೀರಸಮುದ್ರದಂತೆಯೂ, ಕೈಲಾಸಗಿರಿಯಂತೆಯೂ, ಸರ್ವದಾ ಚಂದ್ರನು ಅರ್ಕನು, ಶಿಖಿಯು, ದೇವೇಂದ್ರನು ಹರಿಯು ಇವರುಗಳಿಂದ ಶ್ಲಾಘ್ಯನಾದ ಶಂಕರನಿಗೆ ವಾಸಸ್ಥಾನವುಳ್ಳದ್ದಾಗಿಯೂ, ಧುರದಂತೆಯೂ, ಸರೋವರದಂದೆಯೂ, ಕಡಲಂತೆಯೂ ನಭದಂತೆಯೂ, ನೀರಿನ, ಪುಂಡರೀಕಗಳ, ಹವಳದಲತೆಗಳ, ನಕ್ಷತ್ರಗಳ, ಪ್ರಾಚುರ್ಯದಿಂದಲೂ, ವ್ಯಾಪ್ತಮಾದುದಾಗಿ ಈ ಘೋರಾರಣ್ಯವು ಸೀತಾದೇವಿಯ ನೇತ್ರಗಳಿಗೆ ಅತ್ಯಂತ ಕ್ರೂರತಮವಾದದ್ದಾಗಿ ಕಂಡುಬಂದಿತು ॥ ೯ ॥ ಆ ಗಂಗಾತಟದ ಪ್ರದೇಶದಲ್ಲಿದ್ದ ಕಾಡಿನ ಅತ್ಯಧಿಕವಾದ ಮತ್ತು ಕ್ರೂರವಾದ ಗುಹೆಗಳು ಮುಂದೆಕಾಣುವ ದಾರಿಯಲ್ಲಿ ಪ್ರವೇಶಿಸಲು ಬಹು ಅಸಾಧ್ಯವಾಗಿತ್ತು. ಸೀತಾದೇವಿಯು ಮಹಾ ಭೀತಿಯಿಂದ ನಡನಡುಗಿ ಅತ್ಯಧಿಕವಾದ ಸಂಕಟದಿಂದ ರಾಮನಾಮಂಗಳಂ ಸ್ಮರಿಸುತ್ತ ಎಲೈ ಸೌಮಿತ್ರಿಯೇ! ಈ ಅರಣ್ಯವು ಜನಸಂಚಾರಕ್ಕೆ ಅಸದಳವಾದುದಾಗಿರುವುದು. ಇಂತಹ ಮಹಾ

ಘೋರಗಹ್ವರಂಮುಂದೆದು | ಘಟನಮಾಗೆನಡನಡುಗಿಭೀತಿಯಿಂಸೀತೆಸಂ | ಕಟದಿಂದ ರಾಮನಾಮಂಗಳಂ ಜಪಿಸುತೆಲೆಸೌಮಿತ್ರಿಕಾನನಮಿದು ॥ ಅಟನಕಸದಳಮುನ್ನುದಿಲ್ಲಿಪುಣ್ಯಾಶ್ರಮದ | ಜಟೆಗಳಂವಲ್ಕಲನನುಟ್ಟಮುನಿವಧುಗಳಂ | ವಟುಗಳಂಶ್ರುತಿಘೋಷಹೋಮಧೂಮಂಗಳಂಕಾಣೆನೆಂದಳವಳಿದಳು ॥ ೧೦ ॥ ಎಲ್ಲಿಮುನಿಪೋತ್ತಮರಪಾವನದವನದೆಡೆಗ | ಳೆಲ್ಲಿಸಿದ್ಧಾಶ್ರಮಂಗಳಸ್ಥಳಗ | ಳೆಲ್ಲಿಸುಹವಿಗಳಕಂಪೊಗೆತಳೆದಗ್ನಿ ಹೋತ್ರದಕುಟೀರಂಗಳು ॥ ಎಲ್ಲಿಪರಿಚಿತವಾದವೇದಶಾಸ್ತ್ರಧ್ವನಿಗ | ಳಲ್ಲಿಗೊಯ್ಯದದಾರುಮಿಲ್ಲದಿಹಕಟ್ಟಡವಿ | ಗಿಲ್ಲಿಗೇಕೈತಂದೆತಂದೆಸೌಮಿತ್ರಿಹೇಳೆಂದುಜಾನಕಿಸುಯ್ದಳು ॥ ೧೧ ॥ ಪಾವನಕೆಪಾವ

ಅ॥ ವಿ॥ ಮಹತ್ತಾದ + ವನ=ಮಹಾವನ, ವಿ. ಪೂ. ಕ. ಸಾಧ್ಯವಲ್ಲದ್ದು-ಅಸಾಧ್ಯ, ಸುಮಿತ್ರೆಯಮಗ_ಸೌಮಿತ್ರಿ, ಪುಣ್ಯ+ಆಶ್ರಮ = ಪುಣ್ಯಾಶ್ರಮ, ಸವರ್ಣದೀ. ಸಂ ಜಟಾ-ತ್ಸ. ಜಡೆ-ದ್ಭ. ಅಕ್ಷ-ತ್ಸ. ಅಚ್ಚು-ದ್ಭ. ಋಕ್ಷ-ನಕ್ಷತ್ರ, ಕರಡಿ. ಈಷಣತ್ರಯ-ಅರ್ಥ, ಪುತ್ರ. ದಾರ. ತ್ರಿಧಾತು-ವಾತ, ಪಿತ್ತ, ಶ್ಲೇಷ್ಮ, ಕರ್ಮತ್ರಯ_ಯಜನ,ಅಧ್ಯಯನ, ದಾನ. ತ್ರಿವರ್ಗ-ಧರ್ಮ, ಅರ್ಥ, ಕಾಮ. ತ್ರಿಸ್ಥಲಿ_ಕಾಶಿ, ಪ್ರಯಾಗ, ಗಯಾ. ತ್ರಿವೇಣಿ-ಗಂಗಾ, ಯಮುನಾ. ಸರಸ್ವತಿ ॥೧೦॥

ಟೀ॥ ಎಲ್ಲಿ-ಆವೆಡೆಯಲ್ಲಿ, ಮುನಿಪೋತ್ತಮರ-ಮುನಿಶ್ರೇಷ್ಠರ, ಪಾವನ-ಮಂಗಳಕರಮಾದ, ವನದ_ಕಾಡಿನ, ವಿಪಿನದ, ಎಡೆಗಳು_ಪ್ರದೇಶಗಳು, ಎಲ್ಲಿ_ಯಾವ ಸ್ಥಳದಲ್ಲಿ, ಸಿದ್ಧಾಶ್ರಮಂಗಳ-ಸಿದ್ಧರ ಪರ್ಣಶಾಲೆಗಳ, (ಸಿದ್ಧರ ತಪೋವನಗಳ) ಸ್ಥಳಗಳು-ಎಡೆಗಳು, ಎಲ್ಲಿ_ಯಾವ ಪ್ರದೇಶಗಳಲ್ಲಿ, ಸು_ಒಳ್ಳೆಯದಾದ, ಹವಿಗಳ_ಹವಿಸ್ಸುಗಳ, (ಹೋಮದ್ರವ್ಯಗಳ) ಕಂಪು-ಸುವಾಸನೆಯು, ಒಗೆದ-ಪ್ರಾಪ್ತವಾದ, ಪೊಗೆ-ಧೂಮದಿಂದ, ತಳೆದ-ವ್ಯಾಪ್ತವಾದ, ಅಗ್ನಿಹೋತ್ರದ_ಅಗ್ನಿಹೋತ್ರವೇ ಮೊದಲಾದ ಪ್ರದೇಶಗಳುಳ್ಳ, ಕುಟೀರಂಗಳು-ಎಲೆ ಮನೆಗಳು, ಎಲ್ಲಿ_ಯಾವ ಪ್ರದೇಶದಲ್ಲಿ, ಪರಿಚಿತಂ_ಕುರುಹುಳ್ಳ, (ಅಭ್ಯಾಸವುಳ್ಳ) ವೇದ-ಚತುರ್ವೇದಗಳ, ಶಾಸ್ತ್ರ_ಷಟ್ ಶಾಸ್ತ್ರಗಳ, ಧ್ವನಿಗಳು_ಘೋಷಗಳು, ಅಲ್ಲಿಗೆ-ಆ ಪ್ರದೇಶಕ್ಕೆ, ಒಯ್ಯದೆ_ಕರೆದುಕೊಂಡು ಪ್ರವೇಶಿಸದೆ, ಆದಾರುಮಿಲ್ಲದಿಹ - ಯಾರೂ ಇಲ್ಲದಿರುವ, ಕಟ್ಟಡವಿಗೆ-ಕಡಿದಾದ ಕಾಡಿಗೆ ಎಂದರೆ ಕಗ್ಗಾಡಿಗೆ, ಏಕೆ_ಏನು ಕಾರಣಕ್ಕಾಗಿ, ಇಲ್ಲಿಗೆ_ಈ ಕಡಿದಾದ ಅರಣ್ಯಕ್ಕೆ, ಐತಂದೆ_ಬಂದವನಾಗಿರುತ್ತಿ, ತಂದೆ_ತಂದೆಗೆ ಸಮಾನನಾದವನೇ! ಸೌಮಿತ್ರಿ-ಸುಮಿತ್ರೆಯ ಪುತ್ರನಾದ ಲಕ್ಷ್ಮಣನೆ! ಹೇಳು_ಉಸಿರು, (ಪೇಳುವನಾಗು) ಎಂದು-ಎಂಬದಾಗಿ, ಜಾನಕಿ_ಜನಕರಾಯನ ಪುತ್ರಿಯಾದ ಸೀತಾದೇವಿಯು, ಸುಯ್ದಳು-ನಿಡಿದುಸಿರನ್ನು ಬಿಟ್ಟಳು ॥

ಅ॥ ವಿ॥ ಬೆಚ್ಚನೆಯ+ಸುಯ್ = ಬಿಸುಸುಯ್, ವಿ. ಪೂ. ಕ.ಮುನಿಪ + ಉತ್ತಮ = ಮುನಿಪೋತ್ತಮ, ಗುಣ. ಸಂ. ಸಿದ್ಧರ + ಆಶ್ರಮ = ಸಿದ್ಧಾಶ್ರಮ, ಷ. ತ. ಚತುರ್ವೇದಳು-ಋಗ್, ಯಜು, ಸಾಮ, ಅಥರ್ವಣ. ಷಟ್ ಶಾಸ್ತ್ರಗಳು_ವ್ಯಾಕರಣ, ವೈಶೇಷಿಕ, ಭಾಟ್ಟ, ಜ್ಯೋತಿಷ, ಪೂರ್ವಮೀಮಾಂಸ, ಉತ್ತರಮೀಮಾಂಸ. ॥೧೧॥

ಟೀ॥ ಪಾವನಕೆ_ಪವಿತ್ರಕ್ಕೆ, ಪಾವನಂ_ಪವಿತ್ರಕರವಾದಂಥ. ಮಂಗಳಕೆ_ಮಂಗಳಕರಮಾದ್ದಕ್ಕೆ, ಮಂಗಳಂ_ಅತಿ ಮಂಗಳಕರವಾದ, ಅದು_ಆ ಅರಣ್ಯವು, ಅವನ_ಯಾವನ, (ಯಾರೊಬ್ಬರ) ಚರಿತ್ರಂ-ನಡತೆಯು, (ಚರಿತ್ರೆಯು) ನಾಮಂಗಳು-ನಾಮಗಳು, ಆಗಿರಲ್ಕೆ-ಆಗಿರಲಾಗಿ, ಆ ರಾಘವನೆ-ಆ ರಘುಕುಲ ಶ್ರೇಷ್ಠನಾದ ಶ್ರೀ ರಾಮಚಂದ್ರನೆ, ಜೀವೇಶನು_ಪ್ರಾಣವಲ್ಲಭನು, ಆಗಿರಲ್ಕೆ-ಆಗಿರಲಾಗಿ, ಆತನ_ಆ ರಾಮಮೂರ್ತಿಯ, ಅಘ್ರಿಯನು-ಚರಣವನ್ನು, ಅಗಲ್ದು-ಬಿಟ್ಟು, (ಬೇರೆಯಾಗಿ) ಈಗ-ಈ ಸಮಯದಲ್ಲಿ, ನಾ_ನಾನಾದರೊ, ಬಂದಬಳಿಕ-ಪ್ರಯಾಣಮಾಡಿ ಬಂದ ತರುವಾಯ, ಈವನದೊಳು-ಈ ಕಾಡಿನಲ್ಲಿ, ಇನ್ನು-ಇನ್ನು ಮುಂದಕ್ಕೆ, ಪುಣ್ಯಾಶ್ರಮವು-ಪವಿತ್ರಕರಮಾದ ಋಷ್ಯಾಶ್ರಮವು, ಗೋಚರಿಪುದೆ_ಕಾಣಬಂದೀತೆ, ವನಜದರಳನು-

ಟವಿಯೊಳು ಮಹಾ ಮುನೀಶ್ವರರ ಪಾವನವಾದ ಋಷ್ಯಾಶ್ರಮಗಳು ಒಂದಾದರೂ ಕಾಣಬರಲಿಲ್ಲ. ಜಟಾಚೀರಧರರಾದ ಋಷಿಗಳನ್ನೂ ಅವರ ಧರ್ಮಪತ್ನಿಯರನ್ನೂ ಕಾಣೆನು. ಋಷಿ ವಟುಗಳು ವೇದಾಭ್ಯಾಸ ಮಾಡುತ್ತಿರುವ ಘೋಷವನ್ನು ಸಹ ಕೇಳಲಿಲ್ಲ. ಅಗ್ನಿ ಹೋತ್ರಾದಿಗಳ ಪಾವನಮಾದ ಧೂಮವು ಸಹ ನೋಡಲಿಲ್ಲ. ಎಂಬದಾಗಿ ಅಧೈರ್ಯಪಟ್ಟು ಮಾತನಾಡಿದಳು ॥೧೦॥ ಎಲೈ ಸೌಮಿತ್ರಿಯೇ_ಯಾವಕಡೆ ನೋಡಿದಾಗ್ಯೂ ಮುನಿಪೋತ್ತಮರ ಶ್ರೇಷ್ಠವಾದ ಮತ್ತು ಪಾವನವಾದ ಉದ್ಯಾನವನಗಳಾಗಲೀ, ಯಾವ ಪ್ರದೇಶವಲ್ಲಿ ನೋಡಿದಾಗ್ಯೂ ಸಿದ್ಧಪುರುಷರ ತಪೋವನಗಳಾಗಲೀ, ಎಲ್ಲಿನೋಡಿದಾಗ್ಯೂ ಶ್ರೇಷ್ಠವಾದ ಹವಿಗಳ ಸುವಾಸನೆಯಿಂದೊಡಗೂಡಿದ ಧೂಮವಾಗಲೀ, ಅಗ್ನಿಹೋತ್ರಾದಿಗಳಿರುವ ಎಡೆಗಳಾಗಲೀ, ಎಲ್ಲಿನೋಡಿದರೂ ಸಾಧಿಸುತ್ತಿರುವ ವೇದಶಾಸ್ತ್ರಾದಿಗಳ ಧ್ವನಿಗಳಾಗಲೀ ಕೇಳಿಬರುವದಿಲ್ಲವಲ್ಲಾ !! ನನ್ನನ್ನು ಆ ಶ್ರೇಷ್ಠವಾದ ತಪೋವನಕ್ಕೆ ಕರದೊಯ್ಯದೆ ಉಗ್ರಜಂತುಗಳಿಂದಲೂ, ಕಗ್ಗಾಡುಗಳಿಂದಲೂ, ನಿಬಿಡೀಕೃತಮಾಗಿರುವ ಈ ಮಹಾರಣ್ಯಕ್ಕೆ ಕರದೊಯ್ಯುತ್ತೀ, ಎಲೈ ತಂದೆಗೆ ಸಮಾನನೇ ಹೇಳೈ ಎಂಬದಾಗಿ ನಿಟ್ಟುಸುರು ಬಿಟ್ಟು ಬಹುವಾಗಿ ಚಿಂತಿಸುತ್ತಿದ್ದಳು ॥ ೧೧ ॥ ಆಗ ಜಾನಕಿಯು ಪಾವನಕ್ಕೆ ಅತಿ

ನುಮಂಗಳಕೆಮಂಗಳನು । ದಾವನಚರಿತ್ರನಾಮಂಗಳಾರಾಘವನೆ । ಜೀವೇಶನಾಗಿರಲ್ಕಾತನಂಘ್ರಿಯನಗಲ್ದೀಗನಾಂಬಂದಬಳಿಕ ॥ ಈವನವೊಳಿನ್ನು ಪುಣ್ಯಾಶ್ರಮಂಗೋಚರಿಪು । ದೇವನಜದಂಳನುಳಿದಾರಡಿಗೆಬೊಬ್ಬುಳಿಯ । ಪೂವಿನೊಳ್ಮಧುವುಂಟೆಸೌಮಿತ್ರಿಹೇಳೆಂದುಸೀತೆಪೊದಕುಳಿಗೊಂಡಳು ॥೧೨॥ ನರನಾಥಕೇಳವನಿಸುತೆನುಡಿದಮಾತಿಗು । ತ್ತರವನಾಡದೆಮನದೊಳುರೆನೊಂದು-ರಾಘವೇ । ಶ್ವರನೆಂದಕಷ್ಟಮಂಪೇಳ್ವಪೆನೋಮೇಣು ಸುರದಿರ್ದೆಪೆನೋ ನಿಷ್ಠುರದೊಳು ॥ ತರಣಿಕುಲಸಾರ್ವಭೌಮನ ರಾಣಿಯಂಬನದೊ । ಳಿರಿಸಿಪೋದಪೆನೆಂತೊಮುರಳದಿರ್ದೊಡೆಸಹೋ । ದರನದೇನೆಂದಪನೊಹಾಯೆಂದುಲಕ್ಷ್ಮಣಂಬೆಂದುಬೇಗುದಿಗೊಂಡನು ॥ ೧೩ ॥ ಉಕ್ಕಿದುವುಕಂಬನಿಗಳಧರೋಷ್ಠ್ಮುದರಿತಲ । ಗಿಕ್ಕಿತಿರುಪಿದೊಲಾಯಿತೊಡಲೊಳೆಡೆವರಿಯುದುಸು । ರೊತ್ತುದುರೆಕಂಪಿಸಿದುದನಯನಂಕರಗಿತೆದೆಸ್ಯೆಂಣೆಸಮತೆಗಟ್ಟದು ॥ ಸಿಕ್ಕಿದುವುಕಂಠದೊಳ್ಮಾತುಗಳ್ನೆರೆವಿಡಿದು ॥ ಮಿಕ್ಕ

---

ವಿಕಸಿಸಿದ ಪದ್ಮವನ್ನು, ಉಳಿದ-ತ್ಯಜಿಸಿದ, ಆರಡಿಗೆ-ದುಂಬಿಗೆ, ಬೊಬ್ಬುಳಿಯ-ನೀರಗುರುಳೆಯ, (ಬೊಬ್ಬುಳಿ ಗಿಡದ) ಪೂವಿನೊಳ್-ಕುಸುಮದಲ್ಲಿ, ಮಧು-ಪುಷ್ಪರಸವು, ಉಂಟೆ-ಇದ್ದೀತೆ? ಸೌಮಿತ್ರಿ-ಸುಮಿತ್ರಾದೇವಿಯ ಪುತ್ರನಾದ ಲಕ್ಷ್ಮಣನೆ, ಹೇಳೆಂದು-ಪೇಳೆಂಬದಾಗಿ, ಸೀತೆ-ಜಾನಕಿಯು, ಪೊದಕುಳಿಗೊಂಡಳು-ಹೊದಕುಳಿಗೊಂಡಳು, (ಕಳವಳಗೊಂಡಳು) ॥

ಅ॥ ವಿ। ವನಜದ + ಅರಲ್ = ವನಜದರಲ್, ಷ. ತ. ಅರಲ್-ಹೂ, ಎಲರ್-ಗಾಳಿ, ವನ-ನೀರು, ಕಾಡು॥ಬೊಬ್ಬುಳಿ-ರಾಶಿ, ಬೊಬ್ಬುಳೀಗಿಡ, ಮಂಗಳ-ಮಂಗಳಗ್ರಹ, ಶುಭ. (ಜೀವ + ಈಶ = ಜೀವೇಶ, ಗುಣ ಸಂ.) ಅಂಘ್ರಿ-ಪಾದ, ಕಿರಣ, ಬೇರು ॥ ೧೨ ॥

ಟೀ॥ ನರನಾಥ-ಭೂಪಾಲಕನಾದ ಎಲೈ ಜನಮೇಜಯರಾಯನೇ! ಕೇಳು-ಆಲಿಸು, ಅವನಿಸುತೆ-ಭೂಪುತ್ರಿಯಾದ ಸೀತೆಯು, ನುಡಿದ-ಆಡಿದ, ಮಾತಿಗೆ-ವಚನಕ್ಕೆ, ಉತ್ತರವನು-ಬದಲು ಮಾತನ್ನು, ಆಡದೆ-ನುಡಿಯದೆ, ಮನದೊಳು-ಮನಸ್ಸಿನಲ್ಲಿ, ಉರೆ-ಅತ್ಯಧಿಕವಾಗಿ, ನೊಂದು-ವ್ಯಥೆಪಟ್ಟು, ರಾಘವೇಶ್ವರಂ-ಶ್ರೀರಾಮಮೂರ್ತಿಯು, ಎಂದ-ಆಡಿದ, ಕಷ್ಟಮಂ-ಕಠಿಣೋಕ್ತಿಯನ್ನು, (ತೊಂದರೆಯ ಮಾತನ್ನು) ಪೇಳ್ವಪೆನೊ-ಹೇಳಲೊ, ಮೇಣ್-ಮತ್ತು ಹಾಗಿಲ್ಲದಿದ್ದರೆ, ಉಸುರದೆ-ಹೇಳದೇನೆ, ಇರ್ದಪೆನೊ-ಇರಲೋ, ನಿಷ್ಠುರದೊಳು-ಕಠಿಣತೆಯಿಂದ, ತರಣಿ-ಭಾಸ್ಕರನ, ಕುಲ-ಕುಲಕ್ಕೆ, ಸಾರ್ವಭೌಮನ-ಚಕ್ರೇಶ್ವರನಾದ ಶ್ರೀರಾಮಚಂದ್ರನ, ರಾಣಿಯಂ-ಪಟ್ಟಮಹಿಷಿಯಾದ ಸೀತಾದೇವಿಯನ್ನು, ವನದೊಳು-ಅರಣ್ಯದಲ್ಲಿ, ಇರಿಸಿ-ಇರುವಂತೆಮಾಡಿ, ಎಂತೊ-ಹೇಗೆತಾನೆ, ಪೊದಪೆನೊ-ಹೋಗುವೆನೊ, ಮರಳದೆ-ಹಿಂದಕ್ಕೆಪ್ರಯಾಣಮಾಡದೆ, (ಹಿಂದಿರುಗದೆ) ಇರ್ದೊಡೆ-ಇದ್ದುದೇ ಆದರೆ, ಸಹೋದರನು-ಅಗ್ರಜನಾದ ಶ್ರೀರಾಮಚಂದ್ರನು, ಏನೆಂದಪನೋ-ಏನು ಹೇಳುತ್ತಾನೆಯೊ, ಹಾ-ಕಷ್ಟವು, ಎಂದು-ಎಂಬದಾಗಿ, ಲಕ್ಷ್ಮಣ-ಲಕ್ಷ್ಮಣನು, ಬೆಂದು-ತಾಪಗೊಂಡು, ಬೇಗುದಿಗೊಂಡನು-ಸಂತಾಪ ಪಡುತ್ತಿದ್ದನು ॥

ಅ॥ ವಿ॥ ನರರ + ನಾಥ=ನರನಾಥ, ಷ. ತ. ಅವನಿಯಸುತೆ, ಷ. ತ. ಉರೆ-ಅಧಿಕವಾದ, ಉರ-ಎದೆ, ಉರಗ-ಸರ್ಪ, ರಾಣಿ-ದ್ಭ. ರಾಜ್ಞೀ-ತ್ಸ. ಸರ್ವಭೂಮಿಗೂ+ಒಡೆಯ=ಸಾರ್ವಭೌಮ, ಬೆಚ್ಚನೆಯ+ಕುದಿ=ಬೇಗುದಿ, ವಿ. ಪೂ. ಕ ॥೧೩॥

ಟೀ॥ ಕಂಬನಿಗಳ್-ಅಶ್ರುಧಾರೆಗಳು, ಉಕ್ಕಿದುವು-ಪೆರ್ಚಿದವು, (ಹೆಚ್ಚಾಗಿಸುರಿದವು) ಅಧರೋಷ್ಠ-ಕೆಳಗಣತುಟಿಯು, ಅದರಿತು - ನಡುಗಿತು, ಒಡಲು - ದೇಹವು, ಅಲಗ-ಅಂಬನ್ನು, ಇಕ್ಕಿ - ನಾಟುವಂತೆ ಮಾಡಿ, ತಿರುವಿದವೋಲ್-ತಿರುಗಿ

---

ಪರಿಶುದ್ಧವಾಗಿ ಮಂಗಳಕ್ಕಿಂತಲೂ ಅತಿಯಾದ ಮಂಗಳಪ್ರದನಾದುದು ಯಾರ ಚರಿತ್ರೆಯ ನಾಮಗಳು ಆಗಿರುತ್ತವೆಯೋ, ಅಂತಹ ಶ್ರೀ ರಾಮಚಂದ್ರನ ಪಾದಾರವಿಂದವನ್ನು ಈಗ ನಾನು ಅಗಲಿ ಬಂದಬಳಿಕ ಈ ಕಗ್ಗಾಡಿನಲ್ಲಿ ನನಗೇನಾದರೂ ಪುಣ್ಯಾಶ್ರಮಗಳೇ ಆಗಲೀ ಇಲ್ಲವೆ ಸಿದ್ಧಾಶ್ರಮಗಳೇ ಆಗಲಿ ಕಾಣಲಾದವುವೇ! ವಿಕಸಿತವಾದ ಅರವಿಂದವನ್ನು ತ್ಯಜಿಸಿ ಭ್ರಮರಕ್ಕೆ ಬೊಬ್ಬುಳಿಯ ಪೂವಿನಲ್ಲಿ ಮಕರಂದವು ದೊರಕೀತೆ? ಎಲೈ ತಂದೆ! ಲಕ್ಷ್ಮಣನೇ! ನೀನು ಹೇಳುವನಾಗು ಎಂಬದಾಗಿ ಜಾನಕಿಯು ಅತ್ಯಧಿಕವಾಗಿ ಬೇಗುದಿಗೊಂಡಳು ॥೧೨॥ ಭೂಮಿಶನಾದ ಜನಮೇಜಯರಾಯನೇ ಆಲಿಸು. ಭೂಮಿ ಪುತ್ರಿಯಾದ ಜಾನಕಿಯು ಮೈದುನನೊಡನೆ ನುಡಿದಮಾತಿಗೆ ಪ್ರತ್ಯುತ್ತರವನ್ನು ಆಡದೆ ಮನದಲ್ಲಿಯೇ ಅಧಿಕವಾಗಿ ಬಾಧೆಪಟ್ಟು ರಘುಶ್ರೇಷ್ಠನಾದ ಶ್ರೀರಾಮಚಂದ್ರನು ಆಡಿದ ಅತಿಶ್ರಮೆಯಾದ ಮಾತನ್ನು ಹೇಳಲೀ? ಅಥವಾ ಹೇಳದಿರಲೇ? ಬಹು ಕಾಠಿಣ್ಯದಿಂದ ತರಣಿವಂಶಸಾರ್ವಭೌಮನಾದ ಶ್ರೀರಾಮನ ಧರ್ಮಪತ್ನಿಯಾದ ಜಾನಕಿಯನ್ನು ಈ ಮಹಾರಣ್ಯದಲ್ಲಿ ಬಿಟ್ಟುತಾನೆ ಹೇಗೆಹೋಗಲಿ, ಶಿವಶಿವಾ! ನನ್ನನ್ನು ಈ ಬಗೆಯಾದ ದುಃಖಕ್ಕೆ ಗುರಿಮಾಡಿದೆಯಾ. ಸೀತೆಯನ್ನು ಪರಿತ್ಯಜಿಸಿ ಹೋಗದಿದ್ದರೆ ಅಗ್ರಜನಾದ ರಾಮ ಮೂರ್ತಿಯು ಏನೆನ್ನುತ್ತಾನೆಯೋ ಹಾ! ಕಷ್ಟವು ಎಂಬದಾಗಿ ಸೌಮಿತ್ರಿಯು ಬೆಂದುಬೆಂಡಾಗಿ ನಿಟ್ಟುಸಿರನ್ನು ಬಿಟ್ಟನು ॥೧೩॥ ಆಗ ಸೌಮಿತ್ರಿಗೆ ಕಂಬನಿಗಳುಕ್ಕಿದುವು, ಧಾರಾಳವಾಗಿ ಸುರಿಯಲುಪಕ್ರಮಿಸಿತು. ಅಧರೋಷ್ಠವು ಅಲುಗಿತು, ಅಥವಾ ಕಂಪಿಸಿತು, ದೇಹವು

ಮೀರುವಶೋಕದಿಂದಬೆಂಡಾಗಿಕಡು | ಗಕ್ಕಸದಕೆಲಸವನುಸುರಲರಿಯದವನೊಯ್ಯನವನಿಸುತೆಗಿಂತೆಂದನು||೧೪|| ದೇವಿನಿನಗಿನ್ನೆ ಗಂಪೇಳ್ವುದಿಲ್ಲಪವಾದ | ಮಾವರಿಸೆನಿನ್ನನೊಲ್ಲದೆರಘುಕುಲೋದ್ಭವಂ | ಸೀವರಿಸಿಬಿಟ್ಟುಕಾಂತಾರಕ್ಕೆಕಳುಹಿಬಾಯೆಂದೆನಗೆನೇಮಿ ಸಿದೊಡೆ || ಆವಿಭುವಿನಾಜ್ಞೆಯಂಮೀರಲರಿಯದೆಮೆಲ್ಲ | ನೀವಿಪಿನಕೊಡಗೊಂಡುಬಂದೆನಿನ್ನೊಯ್ಯೊಯ್ಯ | ನಾವಲ್ಲಿಗಾದೊಡಂ ಪೋಗೆಂದುಲಕ್ಷ್ಮಣಂಬಾಷ್ಪಲೋಚನನಾದನು||೧೫||ಬಿರುಗಾಳಿಪೊಡೆಯಲ್ಕೆಕಂಪಿಸಿಫಲಿತಕದಳಿ | ಮುರಿದಿಳೆಗೊರಗುವಂತೆಲಕ್ಷ್ಮ

---

ಸಿದ ರೀತಿಯಿಂದ, ಆಯ್ತು-ಉಂಟಾಯಿತು, ಉಸುರು-ಶ್ವಾಸೋಚ್ಛ್ವಾಸವು, ಎಡವರಿಯದೆ-ಬಿಡಲು ಅವಕಾಶಕೊಡದೆ ಏಕ್ಕ ದು-ಪ್ರವೇಶಿಸಿತು, ಅವಯವಂ-ಶರೀರಭಾಗಗಳು, ಉರೆ-ಅಧಿಕವಾಗಿ. ಕಂಪಿಸಿದುದು-ಅಲ್ಲಾಡಿತು, (ನಡುಗಿತು) ಎದೆಯ-ಹೃದ ಯದ, ಸ್ಥೈರಣೆ-ತಾಳ್ಮೆಯು, (ಸಹಿಸೋಣವು) ಕರಗಿತು-ನಶಿಸಿಹೋಯಿತು, ಸಮತೆ-ಸಮತ್ವವು ಎಂದರೆ ನಿಜಸ್ಥಿತಿಯು, ಕೆಟ್ಟುದು-ಕೆಟ್ಟಿತು, ಸೆರೆ-ಅಡ್ಡಿಯು, (ನರಗಳು) ಪಿಡಿದು-ಗ್ರಹಿಸಿ, (ಹೊಂದಿ) ಕಂಠದೊಳ್-ಕತ್ತಿನಲ್ಲಿ, ಮಾತುಗಳ್-ನುಡಿಗಳು, ಸಿಕ್ಕಿದುವು-ತೊಡಕುಗೊಂಡವು, (ಆಡಲು ಆಗದೇ ಹೋದವು) ಮಿಕ್ಕ-ಉಳಿದು, ಮೀರುವ-ಮೀರಿ ಬರುತ್ತಿರುವ, (ಅತಿಕ್ರಮಿಸುವ) ಶೋಕ ದಿಂದ-ವ್ಯಸನದಿಂದ, ಬೆಂಡಾಗಿ-ಸತ್ವವಿಲ್ಲದ್ದಾಗಿ, ಕಡಗಕ್ಕಸದ-ಅತಿ ಕರ್ಕಶವಾದ, ಕೆಲಸವನು-ಉದ್ಯೋಗವನ್ನು, (ಕಾರ್ಯ ವನ್ನು) ಉಸುರಲು-ಪೇಳಲು, ಅರಿಯದೆ-ತಿಳಿದುಕೊಳ್ಳದೆ, ಅವನು-ಆ ಸೌಮಿತ್ರಿಯು, ಒಯ್ಯನೆ-ನಿಧಾನವಾಗಿ, ಅವನಿಸುತೆಗೆ-ಭೂಪುತ್ರಿಯಾದ ಜಾನಕಿಗೆ, ಇಂತೆಂದನು-ಈ ರೀತಿಯಾಗಿ ಹೇಳಿದನು.

ಅ|| ವಿ|| ಅಧರ+ಓಷ್ಠ=ಅಧರೋಷ್ಠ ಗುಣ. ಸಂ. (ಕಣ್+ಪನಿ=ಕಂಬನಿ ಆದೇಶ ಸಂ) ಸಮತೆ+ಕೆಟ್ಟು=ಸಮತೆ ಗೆಟ್ಟು ಗಕಾರ ಆದೇಶ ಸಂ. ಅಧರ-ತುಟಿ. ರುಧಿರ-ರಕ್ತ. ಕಕ್ಕಸ-ದ್ಭ. ಕರ್ಕಶ-ತ್ಸ. ||೧೪||

ಟೀ|| ದೇವಿ-ಎಲೌ ಜಾನಕೀದೇವಿಯೇ, ನಿನಗೆ-ಲೋಕಮಾತೆಯಾದ ನಿನಗೆ, ಇನ್ನೆಗಂ- ಈ ಪರಿಯಂತವೂ, ಅಪ ವಾದಂ-ಅಪಖ್ಯಾತಿಯಮಾತು, (ನಿಂದನೆಯ ಮಾತು) ಆವರಿಸೆ-ವ್ಯಾಪಿಸುತ್ತಿರಲಾಗಿ, ಪೇಳ್ವುದಿಲ್ಲ-ಪೇಳಿದ್ದಿಲ್ಲ (ಹೇಳಲಿಲ್ಲ) ರಘು-ರಘುಮಹಾರಾಯನ, ಕುಲ-ಗೋತ್ರದಲ್ಲಿ, ಉದ್ಭವಂ-ಜನಿಸಿದವನಾದ ಶ್ರೀರಾಮನು, ಸೀವರಿಸಿ- ಅಸಹ್ಯತೆಯನ್ನು ಪಡೆದು, ಬಿಟ್ಟು-ಪರಿತ್ಯಾಗಮಾಡಿ, ಕಾಂತಾರಕ್ಕೆ-ಕಾಡಿಗೆ, (ವನಪ್ರದೇಶಕ್ಕೆ) ಕಳುಹಿಬಾ-ಕಳುಹಿಸಿ ಬರುವನಾಗು, ಎಂದು-ಎಂಬದಾಗಿ, ಎನಗೆ-ಸಹೋದರನಾದ ನನಗೆ, ನೇಮಿಸಿದೊಡೆ-ಆಜ್ಞಾಪಿಸಲಾಗಿ, ಆ ವಿಭುವಿನ-ಆ ಮಹಾ ಪ್ರಭುವಾದ ಶ್ರೀರಾಮಚಂದ್ರ ಸ್ವಾಮಿಯ, ಆಜ್ಞೆಯಂ-ಅಣತಿಯನ್ನು, (ಶಾಸನವನು) ಮೀರಲು-ಅತಿಕ್ರಮಿಸಿ ನಡಿಯಲು, ಅರಿಯದೆ-ತಿಳಿಯದವನಾಗದೆ, ಮೆಲ್ಲನೆ-ಮೆತ್ತನೆ, (ನಿಧಾನವಾಗಿ) ಈ ವಿಪಿನಕೆ-ಈ ಕಗ್ಗಾಡಿಗೆ, ಒಡಗೊಂಡ-ಜೊತೆಯಲ್ಲಿ ಕರೆದುಕೊಂಡು, ಬಂದೆನು-ಬಂದವ ನಾದೆನು, ಇನ್ನು-ಇಲ್ಲಿಂದ ಮುಂದಕ್ಕೆ, ಒಯ್ಯೊಯ್ಯನೆ-ಮೆತ್ತಮೆತ್ತಗೆ, (ನಿಧಾನವಾಗಿ) ಆವಲ್ಲಿಗಾದೊಡಂ-ಯಾವಕಡೆಗಾದರೂ, ಪೋಗೆಂದು-ಹೊರಟು ಹೋಗೆಂಬದಾಗಿ, ಲಕ್ಷ್ಮಣಂ-ಲಕ್ಷ್ಮಣಸ್ವಾಮಿಯು, ಬಾಷ್ಪ-ಕಣ್ಣೀರಿನಿಂದ ಕೂಡಿದ, ಲೋಚನಂ-ಕಂಗಳುಳ್ಳವನು, ಆದನು-ಉಂಟಾದನು.

ಅ|| ವಿ|| ದೇವಿ-ಸ್ತ್ರೀಲಿಂಗ, ದೇವ-ಪುಲ್ಲಿಂಗ, ಅಜ್ಞಾಪ್ತಿ-ತ್ಸ. ಅಣತಿ-ದ್ಭ. ಬಾಷ್ಪದ+ಲೋಚನವುಳ್ಳವನು=ಬಾಷ್ಪ ಲೋಚನನು ಬಹು.ಸ. ಪಾದವು+ಅರವಿಂದದಂತೆ=ಪಾದಾರವಿಂದ ಉಪ. ಉತ್ತರ. ಕ.ಸ. ಇದು+ವಿಪಿನ=ಈವಿಪಿನ ಗ ಸ.||೧೫

ಟೀ|| ಬಿರುಗಾಳಿ-ಸುಂಟರಗಾಳಿಯು, ಪೊಡೆಯಲ್ಕೆ-ಬೀಸಲಾಗಿ, ಕಂಪಿಸಿ-ಅಲುಗಾಡಿ, (ನಡುಗಿ) ಫಲಿತ-ಫಲಗಳಿಂದ

---

ಅಂಬನ್ನು ಚುಚ್ಚಿ ತಿರುವಿದಂತೆಯಾಯಿತು. ಉಸಿರು ತಡವಿಲ್ಲದಂತೆ ಅತಿ ಜಾಗ್ರತೆಯಾಗಿ ಉಂಟಾಯಿತು. ಪ್ರತ್ಯವಯವವೂ ಗಡಗಡನೆ ನಡುಗಿದುದು. ಮನದ ಸ್ಥೈರಣೆಯು ಕುಗ್ಗಿ ಹೋಯಿತು. ಮನೋವಿಕಾರವುಂಟಾಗಿ ಹೃದಯದಿಂದ ಬರುವ ಮಾತು ಗಳು ಸರಾಗವಾಗಿ ಬರದೆ ಗದ್ಗದ ಸ್ವರವುಂಟಾಯಿತು. ಮಹಾ ಶೋಕದಿಂದ ಬೆಂದು ಬೆಂಡಾಗಿ ಅತಿ ಕಠಿಣವಾದ ಕಾರ್ಯವನ್ನು ಸಾರಲು ದಿಕ್ಕೇ ತೋಚದೆ ಮೆಲ್ಲಗೆ ಸೀತಾದೇವಿಯನ್ನು ಕುರಿತು ಈ ರೀತಿಯಾಗಿ ಹೇಳಿದನು ||೧೪|| ಆಗ ಲಕ್ಷ್ಮಣನು ಜಾನಕಿ ಯನ್ನು ಕುರಿತು, ಎಲಾ ದೇವಿಯೇ! ನಿನಗೆ ಇದುವರೆಗೆ ಅಪವಾದದ ಮಾತು ಉಂಟಾಗುತ್ತಿರಲು, ರಘುಕುಲೋದ್ಭವನಾದ ಶ್ರೀರಾಮಚಂದ್ರನು ಆ ಅಪವಾದವನ್ನು ಕೇಳಿ ವ್ಯಸನಾಕ್ರಾಂತನಾಗಿ, ಭೂಮಿಜೆಯಾದ ಸೀತೆಯನ್ನು ಗಂಗಾತಟದಲ್ಲಿರುವ ಅರಣ್ಯದಲ್ಲಿ ಬಿಟ್ಟು ಬರುವಂತೆ ನನಗೆ ಆಜ್ಞಾಪಿಸಿದನು. ರಘುಕುಲತಿಲಕನ ಪಾದಸೇವಕನಾದ ನಾನು ಆತನ ಅನುಜ್ಞೆ ಯನ್ನು ನೆರವೇರಿಸದಿರಲು ಏನಾದರೂ ತೊಂದರೆ ಬಂದೀತೆಂಬ ಭಯದಿಂದ ಆ ರಘುಶ್ರೇಷ್ಠನ ಅಪ್ಪಣೆಯಂತೆ ಈ ಘೋರಾರ ಣ್ಯಕ್ಕೆ ಕರೆದೊಯ್ದಿರುವೆನು, ಇಲ್ಲಿಂದೀಚೆಗೆ ಮೆಲ್ಲಗೆ ನಡೆದುಕೊಂಡು ಎಲ್ಲಿಗಾದರೂ ಹೋಗೆಂದು ಗದ್ಗದಸ್ವರದಿಂದ ದುಃಖಿ ತನಾಗಿ, ಬಾಷ್ಪವಾರಿಯೊಡನೆ ಹೇಳಿದನು. || ೧೫ || ಬಳಿಕ ಜಾನಕಿಯು ಆ ಕರ್ಕಶಪ್ರಾಯವಾದ ಮಾತನ್ನು ಕೇಳುವುದಕ್ಕೆ

ಣನನಾತುಕಿವಿ | ದೆರೆಗೆಬೀಳದಮುನ್ನಹಮ್ಮೈಸಿಬಿದ್ದಳಂಗನೆಧರೆಗೆನಡನಡುಗುತ || ಮರದಳಂಗೋಪಾಂಗಮಂಬಳಿಕಸೌಮಿ
ತ್ರಿ | ಮರುಗಿತಣ್ಣೀರ್ದಳಿದುಪತ್ರದೋಳ್ಕೊಡೆವಿಡಿದು | ಸೆರಗಿಂದಬೀಸಿರಾಮನಸೇವೆಸಂದುದೆನಗೆಂದುರೋದಿಸಿದನು ||೧೬||
ಒಯ್ಯನರೆಗಳಿಗೆಯೋಳ್ಕಣ್ದೆರೆದುದೈನ್ಯದಿಂ | ಸುಯ್ಯಲರನುರೆಸೂಸೆಸೌಮಿತ್ರಿಯಂನೋಡಿ | ಕೊಯ್ಯಲೊಲ್ಲದೆಕೊರಳನಿಂತು
ತನ್ನಂಬಿಡಲ್ಮಾಡಿದಪರಾಧಮುಂಟೆ || ಕಯ್ಯಾರೆಖಡ್ಗಮಂಕೊಟ್ಟುತನ್ನರಸಿಯಂ | ಹೊಯ್ಯೆಂದುಪೇಳದಡವಿಗೆಕಳುಹಿಬಾಯೆಂ

---

ವ್ಯಾಪ್ತವಾದ, ಕದಳಿ–ಬಾಳೆಯ ಗಿಡವು, ಮುರಿದು–ತುಂಡಾಗಿ, ಇಳೆಗೆ-ಭೂಮಿಗೆ, ಒರಗುವಂತೆ–ಉರುಳಿಕೊಳ್ಳುವ ಹಾಗೆ, ಲಕ್ಷ್ಮಣನ-ಸೌಮಿತ್ರಿಯ, ಮಾತು–ವಚನವು, ಕಿವಿದೆರೆಗೆ-ಕಿವಿಯ ಪರದೆಗೆ, (ಕರ್ಣಗಳಿಗೆ) ಬೀಳದ ಮುನ್ನ-ಬೀಳಲಿಕ್ಕೆ ಮುಂದಾಗಿಯೆ, ಹಮ್ಮೈಸಿ-ಪ್ರಜ್ಞೆತಪ್ಪಿ, ಅಂಗನೆ–ಜಾನಕೀದೇವಿಯು, ನಡನಡುಗುತ-ಗಡಗಡನೆ ನಡುಗುತ್ತ, (ಅಲುಗಾಡುತ್ತ) ಧರೆಗೆ-ಭೂಮಿಗೆ, ಬಿದ್ದಳು-ಉರುಳಿಕೊಂಡಳು, ಅಂಗೋಪಾಂಗಮಂ–ಶರೀರದ ಪ್ರತ್ಯವಯವಗಳನ್ನು, ಮರೆದಳು–ಮರೆತುಹೋದಳು, ಬಳಿಕ–ಅನಂತರದಲ್ಲಿ, ಸೌಮಿತ್ರಿ-ಸುಮಿತ್ರಾತ್ಮಜನಾದ ಲಕ್ಷ್ಮಣಸ್ವಾಮಿಯು, ತಣ್ಣೀರ್-ತಣ್ಣಗಿರುವ ಜಲವನ್ನು, (ಶೈತ್ಯೋದಕವನ್ನು) ತಳಿದು–ಚಿಮುಕಿಸಿ, ಪತ್ರದೋಳ್–ಎಲೆಯಿಂದ, (ಕಮಲಪತ್ರದಿಂದ) ಕೊಡೆ–ಛತ್ರಿಯರೀತಿಯಾಗಿ, ಪಿಡಿದು–ಹಿಡಿದುಕೊಂಡು, ಸೆರಗಿನಿಂದ–ವಸ್ತ್ರದ ಕೊನೆಯಿಂದ, ಬೀಸಿ–ಗಾಳಿಗೆ ಅವಕಾಶಕೊಟ್ಟು, ರಾಮನ–ಶ್ರೀರಾಮಮೂರ್ತಿಯ, ಸೇವೆ–ಈ ಬಗೆಯಾದ ಸೇವಾವೃತ್ತಿಯು, ತನಗೆ–ಅನುಜನಾದ ನನಗೆ, ಸಂದುದೇ-ಪ್ರಾಪ್ತವಾಯಿತೇ? (ಲಭಿಸಿತೆ) ಎಂದು–ಎಂಬದಾಗಿ, ರೋದಿಸಿದನು-ಪ್ರಲಾಪಿಸಿದನು.

ಅ|| ವಿ|| ಬೆಟ್ಟಿತ್ತು+ಗಾಳಿ=ಬಿರುಗಾಳಿ ವಿ. ಪೂ. ಕ. ಕಿವಿಯ+ತೆರೆ=ಕಿವಿದೆರೆ ಷ. ತ. ಅಂಗ+ಉಪಾಂಗ=ಅಂಗೋಪಾಂಗ) ಗುಣ ಸಂ. ಅಂಗ-ದೇಹ, ಅಂಗದೇಶ. ||೧೬||

ಟೀ|| ಅಂಭೋಜನೇತ್ರೆ– ಅರವಿಂದಾಕ್ಷಿಯಾದ ಜಾನಕಿಯು, ಅರಗಳಿಗೆಯೊಳ್–ಅರ್ಧಗಳಿಗೆಯಲ್ಲಿ, ಒಯ್ಯನೆ–ನಿಧಾನವಾಗಿ, ಕಣ್ದೆರದು–ನೇತ್ರಗಳನ್ನು ಬಿಚ್ಚುಕೊಂಡು, ದೈನ್ಯದಿಂ–ದೀನತ್ವದಿಂದ, (ನಮ್ರಾಭಾವದಿಂದ) ಸುಯ್ಯಲರನು–ನಿಡಿದಾದ ನಿಶ್ವಾಸವನ್ನು, ಉರೆ–ಅಧಿಕವಾಗಿ, ಸೂಸೆ–ಬಿಡಲಾಗಿ, ಸೌಮಿತ್ರಿಯಂ–ಸುಮಿತ್ರೆಯ ಮಗನಾದ ಲಕ್ಷ್ಮಣನನ್ನು, ನೋಡಿ-ಕಂಡು, ಕೊರಳಂ-ಕಂಠವನ್ನು, ಕೊಯ್ಯಲೊಲ್ಲದೆ–ಕತ್ತರಿಸಲಾರದೆ, ಇಂತು–ಈ ಪ್ರಕಾರವಾಗಿ, (ಈ ಕಾಡಿಗೆ ಬಿಡುವ ರೀತಿಯಿಂದ) ತನ್ನಂ ಎನ್ನನ್ನು, ಬಿಡಲು-ಪರಿತ್ಯಾಗಮಾಡಲು, ಮಾಡಿದ–ಗೈಯ್ದ, ಅಪರಾಧಂ–ತಪ್ಪು, ಉಂಟೇ–ಇರುತ್ತದೆಯೆ, ಕಯ್ಯಾರೆ–ಹಸ್ತಪೂರ್ತಿಯಾಗಿ, ಖಡ್ಗಮಂ– ಅಸಿಯನ್ನು, ಕೊಟ್ಟು–ಇತ್ತು, ತನ್ನ–ತನ್ನಯ, ಅರಸಿಯಂ–ರಾಜ್ಞಿಯನ್ನು, ಹೊಯ್–ಹೊಡಿಯುವನಾಗು, ಎಂದು–ಎಂಬದಾಗಿ, ಪೇಳದೆ-ಆ ರೀತಿಯಾಗಿ ಹೇಳದೆ, ಅಡವಿಗೆ–ಈ ಅರಣ್ಯಕ್ಕೆ ಕಳುಹಿ–ಕಳುಹಿಸಿಕೊಟ್ಟು, ಬಾ–ಬರುವನಾಗು, ಎಂದನೆ–ಎಂಬದಾಗಿ ಪೇಳಿದನೆ, ಅಯ್ಯಯ್ಯೊ–ಅಕಟಕಟ, ಕಾರುಣ್ಯನಿಧಿಯು–ದಯಾನಿಧಿಯಾದ, (ಕೃಪೆಗೆ ಆವಾಸಸ್ಥಾನನಾದ) ರಾಘವನಂ–ರಘುಶ್ರೇಷ್ಠನಾದ ಶ್ರೀರಾಮನು, ಎಂದನೆ–ಪೇಳಿದನೆ, ಎಂದು–ಈ ರೀತಿಯಾಗಿ ಹೇಳಿ, ಅಳಲ್ದಳು–ಪ್ರಲಾಪಿಸಿದಳು.

ಅ|| ವಿ|| ಅಂಭೋಜದಂತೆ+ ನೇತ್ರಗಳುಳ್ಳವಳು= ಅಂಭೋಜನೇತ್ರೆ ಉ. ಪೂ. ಬಹು. ಸ. ಕಣ್+ತೆರೆ=ಕಣ್ದೆರೆ ದಕಾರ ಆದೇಶ ಸಂ. ಬೆಟ್ಟಿತ್ತು+ಗಾಳಿ=ಬಿರುಗಾಳಿ ವಿ. ಪೂ. ಕ. ಖಡ್ಗ–ತ್ಸ. ಖಡುಗ–ದ್ಭ. ||೧೭||

---

ಮುಂದೆಯೇ ಬಿರುಗಾಳಿಯು ಬೀಸಲು ಕಂಪಿಸಿ, ಫಲಬಿಟ್ಟ ಬಾಳೆಯ ಮರವು ಮುರಿದು ನೆಲಕ್ಕೆ ಉರುಳುವಂತೆ ಲಕ್ಷ್ಮಣನ ವಾಕ್ಯವು ಹೊರಡುವ ಅವಸ್ಥಾವಿಶೇಷವನ್ನು ನೋಡಿ, ಪ್ರಜ್ಞೆಯಿಲ್ಲದೆ ಗಡಗಡನೆ ಕಂಪಿಸುತ್ತ ಧರೆಗೆ ಉರುಳಿದಳು. ಶರೀರದ ಪ್ರತ್ಯವಯವವನ್ನೂ ಮರೆತು ಹೋಗಲು, ಬಳಿಕ ಲಕ್ಷ್ಮಣನು ತಣ್ಣೀರಿನಿಂದ ಸಂಸ್ಕೈಸಿ, ಕಮಲಪತ್ರದಿಂದ ನೆರಳಾಗಿ ಮಾಡಿ, ಬಟ್ಟೆಯ ಸೆರಗಿನಿಂದ ಗಾಳಿ ಬರುವಂತೆ ಬೀಸುತ್ತ, ಶ್ರೀರಾಮಚಂದ್ರನ ಸೇವೆಯು ನನ್ನನ್ನು ಈ ರೀತಿಯಾಗಿಯೂ ಕೆಲಸಕ್ಕೆ ಗುರಿಪಡಿಸಿತೆ! ಹಾ, ಕಷ್ಟವು ಎಂಬದಾಗಿ ಗಟ್ಟಿಯಾಗಿ ರೋದಿಸಿದನು || ೧೬ || ಆಗ ಜಾನಕಿಯು ಮೈದುನನ ಶೈತ್ಯೋಪಚಾರದಿಂದ ಅರ್ಧ ಗಳಿಗೆಯೊಳಗಾಗಿ ಚೇತರಿಸಿಕೊಂಡು, ಕಣ್ಮರಲುಗಳನ್ನು ಬಿಚ್ಚಿ, ಅತಿಯಾದ ದೈನ್ಯದಿಂದ ಬಿಸುಸುಯ್ಯಲರನ್ನು ಬಿಡುತ್ತಾ, ಸೌಮಿತ್ರಿಯಂ ನೋಡಿ, ಎಲೈ ಸೌಮಿತ್ರಿಯೇ! ರಘುಕುಲಶ್ರೇಷ್ಠನು ಎನ್ನಯ ಕೊರಳನ್ನು ಛೇದಿಸೆಂದು ಹೇಳುವುದಕ್ಕೆ ಬದಲಾಗಿ ನನ್ನನ್ನು ಈ ಘೋರಾರಣ್ಯಕ್ಕೆ ಬಿಡುವಂತೆ ನಿನಗೆ ಅಪ್ಪಣೆಯಂ ಇತ್ತನೆ? ನಾನು ಮಾಡಿದ ಅಪರಾಧವೇನು? ತಿಳಿಯದೆ ನನ್ನನ್ನು ನಿಷ್ಕಾರಣವಾಗಿ ನಿಷ್ಕರುಣದಿಂದ ಕೈಗೆ ಖಡ್ಗವನ್ನು ಕೊಟ್ಟು ಶಿರಚ್ಛೇದನಮಾಡೆಂದು ಪೇಳಲಿಕ್ಕೆ ಬದಲಾಗಿ, ಈ ರೀತಿ ನಿನಗೆ ಬೆಸಸಿದನೇ? ಅಯ್ಯೋ ವಿಧಿಯೇ! ಕೃಪಾನಿಧಿಯಾದ ಶ್ರೀರಾಮಚಂದ್ರಸ್ವಾ

ದ|ನಯ್ಯಯ್ಯೊರಾಘವಂಕಾರುಣ್ಯನಿಧಿಯೆಂದಳಲ್ದಳಂಭೋಜನೇತ್ರೆ||೧೭|| ಬಿಟ್ಟನೆರಘುಶ್ರೇಷ್ಠನೆನ್ನನಕಟಕಟತಾ| ಮುಟ್ಟನೆನೆಗಳ್ದಬಾಳ್ಕೆಗೆಸಂಚಕಾರಮಂ| ಕೊಟ್ಟನೆಸುಮಿತ್ರಾತನುಜಕಟ್ಟರಣ್ಯದೊಳೆನ್ನಂ ಕಳುಹಿಬಾಯೆಂದುನಿನಗೆ | ಕೊಟ್ಟನೆನಿರೂಪಮಂತಾನೆನ್ನ ಕಾಣ್ಬಟ್ಟೆ|ಗೆಟ್ಟೆನೆಮನೋವಲ್ಲಭನನಗಲ್ದಡವಿಯೊಳ್|ನೆಟ್ಟನೆಪಿಶಾಚದವೊಲೆಂತಿಹೆನೊಕೆಟ್ಟೆನಲ್ಲಾಯೆಂದೊರಲ್ದಳಬಲೆ||೧೮|| ಎಂದು ಕೌಶಿಕಮುನಿಪನೊಡನೆಮಿಥಿಳಾಪುರಕೆ| ಬಂದುಹರಧನುವಮುರಿದೆನ್ನಂಮದುವೆಯಾದ| ನಂದುಮೊದಲಾಗಿರಮಿಸಿದನೆನ್ನೊಳಾನಗ

---

ಟೀ|| ಸುಮಿತ್ರಾತನುಜ – ಸುಮಿತ್ರಾಪುತ್ರನಾದ ಲಕ್ಷ್ಮಣನೆ, ರಘುಶ್ರೇಷ್ಠಂ – ರಘುವಂಶದಲ್ಲಿ ಲಲಾಮನಾದ ಶ್ರೀರಾಮನು, ಎನ್ನಂ-ಪಟ್ಟದರಸಿಯಾದ ನನ್ನನ್ನು, ಬಿಟ್ಟನೆ–ಪರಿತ್ಯಾಗಮಾಡಿದನೆ, ಅಕಟ, ಅಕಟ–ಅಯ್ಯಯ್ಯೊ, ನೆಗಳ್ದ–ಪ್ರಸಿದ್ಧಮಾದ, ಬಾಳ್ಕೆಗೆ–ಬದುಕುವುದಕ್ಕೆ, (ಜೀವಿಸುವಿಕೆಗೆ) ತಾಂ–ತಾನು, ಮುಟ್ಟನೆ–ಪುನಹ ವರಿಸುವದಿಲ್ಲವೆ, (ನನ್ನೊಡನೆ ಸಂಸಾರ ಮಾಡುವದಿಲ್ಲವೆ) ಸಂಚಕಾರಮಂ-ಮುಂಗಡವನ್ನು, (ಎಂದರೆ ತ್ಯಜಿಸಲು ಒಪ್ಪಿಗೆಯನ್ನು) ಕೊಟ್ಟನೆ–ಕೊಟ್ಟವನಾದನೆ, ಸುಮಿತ್ರಾತನುಜ–ಸುಮಿತ್ರಾದೇವಿಯ ಮಗನಾದ ಲಕ್ಷ್ಮಣನೇ, ಕಟ್ಟರಣ್ಯದೊಳ್–ಈ ಕಡಿದಾದ ಅರಣ್ಯದಲ್ಲಿ, (ಕಗ್ಗಾಡಿನಲ್ಲಿ) ಎನ್ನಂ–ನನ್ನನ್ನು ಕಳುಹಿ ಬಾಯೆಂದು – ಕಳುಹಿಸಿ ಬರುವನಾಗೆಂಬದಾಗಿ, ನಿನಗೆ – ಅನುಜನಾದ ನಿನಗೆ, ನಿರೂಪಮಂ-ಅಜ್ಞೆಯನ್ನು, ಕೊಟ್ಟವನಾದನೆ, ತಾಂ–ನಾನು, (ನಾನಾದರೊ) ಕಾಣ್ಬಟ್ಟೆಗೆಟ್ಟೆನೆ – ಶ್ರೀರಾಮಚಂದ್ರನನ್ನು ಕಾಣುವ ಹಾದಿಯನ್ನು ತಪ್ಪಿದೆನಲ್ಲಾ, ಮನೋವಲ್ಲಭನಂ–ಪತಿಯಾದ ಶ್ರೀ ರಾಮನನ್ನು, ಅಗಲ್ದು–ಬೇರೆಯಾಗಿ, ಅಡವಿಯೊಳ್–ಅರಣ್ಯದಲ್ಲಿ, ನೆಟ್ಟನೆ–ನೇರವಾಗಿ, ಪಿಶಾಚದವೊಲ್–ದೈವದಂತೆ, (ದೆವ್ವದಹಾಗೆ) ಎಂತು–ಯಾವರೀತಿಯಾಗಿ, ಇಹೆನೋ – ಇರಬಲ್ಲೆನೋ, ಕೆಟ್ಟೆನಲ್ಲಾ–ನಷ್ಟಪಟ್ಟೆನಲ್ಲವೆ? ಎಂದು–ಎಂಬದಾಗಿ, ಅಬಲೆ–ಜಾನಕಿಯು, ಒರಲ್ದಳು–ರೋದಿಸಿದಳು.

ಅ|| ವಿ|| ಅಕಟ–ಅವ್ಯಯ. ದೈವ ತ್ಸ. ದೆವ್ವ ದ್ಭ. ಸಿತ–ಬಿಳುಪು. ಸೀತೆ-ರಾಮನ ಹೆಂಡತಿ. ಬಟ್ಟೆ + ಕೆಟ್ಟ = ಬಟ್ಟೆಗೆಟ್ಟ, ಗಕಾರ ಆದೇಶ ಸಂಧಿ. ಸುಮಿತ್ರೆಯ + ತನುಜ = ಸುಮಿತ್ರಾತನುಜ, ಷ. ತ. ||೧೮||

ಟೀ|| ರಾಮಂ - ಶ್ರೀ ರಾಮಚಂದ್ರನು, ಎಂದು–ಯಾವ ಸಮಯದಲ್ಲಿ, ಕುಸಿಕಮುನಿಪನ - ಕೌಶಿಕಮಹರ್ಷಿಯ, (ವಿಶ್ವಾಮಿತ್ರಮಹಾಮುನಿಯ) ಒಡನೆ-ಸಂಗಡ, ಮಿಥಿಲಾಪುರಕೆ-ಮಿಥಿಲಾ ನಗರಕ್ಕೆ, ಬಂದು–ಪ್ರವೇಶಿಸಿ, ಹರಧನುವ–ಈಶ್ವರನ ಧನುಸ್ಸಾದ ಪಿನಾಕವನ್ನು, (ಶೈವಧನುವನ್ನು) ಮುರಿದು-ಎರಡು ತುಂಡುಮಾಡಿ, ಎನ್ನಂ–ಎನ್ನನ್ನು, ಮದುವೆಯಾದಂ–ವಿವಾಹ ಮಾಡಿಕೊಂಡನೊ, ಅಂದುಮೊದಲಾಗಿ–ಆದಿನ ಆದಿಯಾಗಿ, ಎನ್ನೊಳ್–ಎನ್ನ ಸಂಗಡ, (ನನ್ನೊಡನೆ) ರಮಿಸಿದಂ–ಕ್ರೀಡಿಸಿದನು, ಆಂ–ನಾನು, ಅಗಲ್ದೊಡೆ–ಬೇರೆಯಾದರೆ, ತಾಂ–ಆ ಶ್ರೀರಾಮನು, ನವೆದನು–ಕೃಶವಾಗಿ ಹೋದನು, (ಎನ್ನಂ ಅಗಲಿ ಬಡವಾದನು) ಅಲ್ಲದೆ–ಅದು ಹೊರ್ತಾಗಿ, ರಾಮಂ-ಶ್ರೀ ರಾಮನು, ಸೌಖ್ಯಮಂ - ಸ್ವಚ್ಛಂದನಾದಿ ಸುಖವನ್ನು, ಒಂದಿದನೆ–ಪಡೆದನೆ, (ಪಡೆಯಲಿಲ್ಲವೆಂಬ ಭಾವವು) ಎನಗಾಗಿ–ನನ್ನ ನಿಮಿತ್ತವಾಗಿ, ನನಿಗೋಸುಗ, ಕಪಿ–ವಾನರಗಳ, ವೃಂದಮಂ–ವ್ಯೂಹವನ್ನು, (ಸಮುದಾಯವನ್ನು) ನೆರವಿ - ವಿಸ್ತರಿಸಿ, (ಜಾನಕಿಯನ್ನು ಹುಡುಕಲೋಸುಗ ನಾನಾಪ್ರದೇಶಗಳಿಗೂ ಕಳುಹಿಸಿಕೊಟ್ಟು) ಕಡಲಂ-ಜಲಧಿಯನ್ನು, ಕಟ್ಟಿ–ಸಮರ್ಥಿಸಿ, (ಸೇತುವೆಯಿಂದ ಸಮರ್ಥಿಸಿ) ದೈತ್ಯರಂ–ದಾನವರನ್ನು, ಕೊಂದು–ಸಂಹಾರಮಾಡಿ, ಅಗ್ನಿಮುಖದೊಳ್–ಅಗ್ನಿಪ್ರವೇಶವನ್ನು ಮಾಡುವದರ ಮುಖಾಂತರವಾಗಿ, ಎನ್ನಂ–ನನ್ನನ್ನು, ಪರೀಕ್ಷಿಸಿದಂ–ಪರೀಕ್ಷೆಯನ್ನು ಮಾಡಿದನು, (ಪತಿವ್ರತೆಯೆಂಬದಾಗಿ ಪರೀಕ್ಷಿಸಿದನು) ಎನ್ನೊಳ್ - ನನ್ನಲ್ಲಿ, ಅಪರಾಧಮಂ–ತಪ್ಪನ್ನು, ಕಾಣಿಸಿದನೆ–ತೋರಿಸಿ ಕೊಟ್ಟನೆ? [ಇಲ್ಲ. ಆವ ಕಳಂಕವೂ ತೋರಿಬರಲಿಲ್ಲ]

---

ಮಿಯು ಈ ರೀತಿ ಆಜ್ಞಾಪಿಸಿದನೇ? ಎಂದು ಜಾನಕಿಯು ಅತ್ಯಧಿಕವಾಗಿ ರೋದಿಸಿದಳು ||೧೭|| ಎಲೈ ತಂದೆಯೇ! ರಘುಕುಲ ಶ್ರೇಷ್ಠನಾದ ಶ್ರೀರಾಮನು ನನ್ನನ್ನು ಮುಟ್ಟುವದಿಲ್ಲವೇ? ಅಕಟಕಟ, ಪ್ರಸಿದ್ಧವಾದೀ ನನ್ನ ಬಾಳ್ಕೆಗೆ ತಾನು ಇನ್ನು ಅಪೇಕ್ಷಿಸುವದಿಲ್ಲವೇ? ನನ್ನನ್ನು ಕಾಡುಪಾಲುಮಾಡಲಿಕ್ಕಾಗಿ ಸಂಚಕಾರವನ್ನು ತಂದನೇ? ಎಲೈ ಸುಮಿತ್ರಾತ್ಮಜನೇ! ಕಡಿದಾದರಣ್ಯದಲ್ಲಿ ಎನ್ನನ್ನು ಕಳುಹಿ ಬಾ ಎಂಬದಾಗಿ ನಿನಗೆ ನಿರೂಪವನ್ನಿತ್ತನೇ? ನಾನು ಪುನಹ ನನ್ನ ಪ್ರಾಣಕಾಂತನನ್ನು ನೋಡದಂತೆ ಮಾಡಿ ಈ ಅರಣ್ಯಕ್ಕೆ ಅಟ್ಟಿದನೇ? ಎನ್ನ ಪ್ರಾಣವಲ್ಲಭನನ್ನು ಬಿಟ್ಟು ನಾನು ಪಿಶಾಚಿಗಳಂತೆ ಈ ಅರಣ್ಯದಲ್ಲಿ ಹೇಗೆ ತಾನೆ ಜೀವಿಸಿರಲಿ? ಶಿವಶಿವಾ! ಕೆಟ್ಟುಹೋದೆನಲ್ಲಾ ಎಂಬದಾಗಿ ಜಾನಕಿಯು ಅಧಿಕವಾಗಿ ಒರಲ್ದಳು || ೧೮ || ಮತ್ತೆ ಜಾನಕಿಯು ಸೌಮಿತ್ರಿಯನ್ನು ಕುರಿತು—ಮೊದಲು ಶ್ರೀರಾಮಚಂದ್ರನು ಕೌಶಿಕಮುನೀಂದ್ರನ ಸಂಗಡ ಮಿಥಿಲಾಪುರಕ್ಕೆ ಬಂದು ಹರಧನುವನ್ನು ಮುರಿದು ನನ್ನನ್ನು ಪಾಣಿಗ್ರಹಣಮಾಡಿಕೊಂಡು, ಸುಖವಾಗಿರುತ್ತಿರುವಾಗ್ಯೆ, ನಾನು ಎನ್ನ ಪ್ರಾಣವಲ್ಲಭನನ್ನು ಬಿಟ್ಟು ಅಗಲಿರಲು, ನನ್ನನ್ನು ಕಾಣದೆ ಅತಿಯಾಗಿ ಕುಂದಿ, ಕುವಿದು, ಬೆಂಡಾಗಿ, ಅತಿಯಾಗಿ ಪರಿದಾಡಿ, ನನ್ನನ್ನು ಹುಡುಕುವ

ಲ್ಸೈಡೆತಾಂನವೆದನಲ್ಲದೆ || ಬಂದಿದನೆಸೌಖ್ಯಮಂರಾಮನೆನಗಾಗಿಕಪಿ| ವೃಂದಮಂನೆರಪಿಕಡಲಂಕಟ್ಟಿದೈತ್ಯರಂ | ಕೊಂದಗ್ನಿಮು
ಖದೊಳ್ಪರೀಕ್ಷಿಸಿದನೆನ್ನೊಳಪರಾಧಮುಂಕಾಣಿಸಿದನೆ ||೧೯|| ಕಲ್ಮುಳ್ಳಿಡಿದಕಾಡೊಳಂಡೆನ್ನನುಪಚರಿಸಿ | ಪಲ್ಮೊರೆದುಗರ್ಜಿಪವಿ
ರಾಧನಂಮರ್ದಿಸಿದೆ | ಬಲ್ಮೆಯಿನ್ನಾಂಕಳುಹಿದೊಡೆಜನಸ್ಥಾನದಿಂಪೋದೆರಾಘವನಬಳಿಗೆ || ನಲ್ಮೆಯಿಂಮರೆದಪನೆಸೌಮಿತ್ರಿನೀ
ನೆಲ್ಲ | ರೋಲ್ಮೈದುನನೆತನಗೆಕಾನನದೊಳೆನ್ನನಿಲಿ | ಸಲ್ಮನಂಬಂದಪುದೆತಂದೆನಿನಗೆಂದುಕಂಬನಿಮಿಡಿದಳಂಬುಜಾಕ್ಷಿ || ೨೦ ||
ತೊಳಪನಾಸಿಕದನುಣ್ಣದವುಗಳಪೊಳೆವಕಂ | ಗಳತುರಗಿದೆವೆಯನಿಡುಪುರ್ಬುಗಳಪೆರಿನೊಸಲ | ಥಳಥಳಿಪಮುಕುಟದಕಿವಿಯ

ಅ|| ವಿ|| ಕುಶಿಕನವಂಶಜ - ಕೌಶಿಕ. ಹರನ, ಧನು-ಹರಧನು, ಷ. ತ. ಮಿಥಿಳೆಯೆಂಬ + ಪುರ = ಮಿಥಿಳಾಪುರ, ಸಂ. ಪೂ. ಕ. ಅಂದು-ಆಗ, ನಂದು-ಆರಿಹೋಗು, ಮುಖ-ಮೋರೆ, ಮಖ-ಯಜ್ಞ ||೧೯||

ಟೀ|| ರಾಘವಂ - ಶ್ರೀ ರಾಮನು, ಅಂದು - ಅರಣ್ಯವಾಸಮಾಡುವ ಕಾಲದಲ್ಲಿ, ಕಲ್ಲು - ಕಲ್ಲುಗಳಿಂದಲೂ, (ಮರಳು ಕಲ್ಲುಗಳಿಂದಲೂ) ಮುಳ್ಳು-ಕಂಟಕಗಳಿಂದಲೂ, (ಮುಳ್ಳುಗಳಿಂದಲೂ) ಇಡಿದ-ವ್ಯಾಪ್ತವಾದ, ಕಾಡೊಳು-ಕಾನನದಲ್ಲಿ, ಎನ್ನಂ ನನ್ನನ್ನು. ಉಪಚರಿಸಿ-ಆದರಣೆಮಾಡಿ, (ಉಪಚಾರವನ್ನು ಮಾ) ಪಲ್ಮೊರೆದು - ಹಲ್ಲುಗಳನ್ನು ಕಡಿದು, ಗರ್ಜಿಪ-ಅಬ್ಬರಿಸುವ, (ಘರ್ಜನೆಯನ್ನು ಮಾಡುವ) ವಿರಾಧನಂ-ವಿರಾಧನೆಂಬ ದಾನವನನ್ನು, ಮರ್ದಿಸಿದೆ - ಸಂಹಾರಮಾಡಿದವನಾದೆ, ನಾಂ - ನಾನಾದರೊ, ಬಲ್ಮೆಯಿಂ-ಬಲಾತ್ಕಾರದಿಂದ, ನಾಂ-ನಾನು, ಕಳುಹಿದೊಡೆ-ಶ್ರೀ ರಾಮನ ಬಳಿಗೆ ಕಳುಹಿಸಲಾಗಿ, ಜನಸ್ಥಾನದಿಂ-ಪಂಚವಟಿಯಿಂದ, (ಜನಸ್ಥಾನದಿಂದ) ರಾಘವನ-ಶ್ರೀ ರಾಮಚಂದ್ರನ, ಬಳಿಗೆ-ಹತ್ತಿರಕ್ಕೆ, (ಸಮೀಪಕ್ಕೆ) ಪೋದೆ-ಹೊರಟುಹೋದವನಾದೆ, ಸೌಮಿತ್ರಿ-ಸುಮಿತ್ರೆಯಮಗನಾದ ಲಕ್ಷ್ಮಣನೆ, ನಲ್ಮೆಯಂ-ಆ ರೀತಿಯಾದ ಪ್ರೀತಿಯನ್ನು, (ಕೂರ್ಮೆಯನ್ನು) ಮರೆದಪನೆ-ಮರೆವೆನೆ, (ಎಂದರೆ ಆ ಪ್ರೀತಿಯನ್ನು ಎಂದಿಗೂ ಮರೆಯಲಾರೆನು) ನೀಂ-ಈ ರೀತಿಯಾಗಿರುವ ನೀನು, ಎನಗೆ-ನನಿಗೆ, ಎಲ್ಲರೋಲ್-ಭರತಶತ್ರುಘ್ನರಂತೆ, ಮೈದುನನೆ-ಮೈದುನನಾಗಿರುತ್ತೀಯ, (ಎಂದರೆ ಅಲ್ಲ) ತಂದೆ-ಎನ್ನ ಜನಕನಿಗೆ ಸಮನಾದವನೆ ! ಕಾನನದೊಳು - ಈ ವನಸ್ಥಳದಲ್ಲಿ, ನಿಲಿಸಲು - ನಿಲ್ಲುವಂತೆ ಮಾಡಲು, ಮನಂ-ಮನಸ್ಸು, ಬಂದಪುದೇ - ಬರುವುದೇ, ಬಂದೀತೆ, ಎಂದು ಎಂಬದಾಗಿ, ಅಂಬುಜಾಕ್ಷಿ-ಅರವಿಂದಾಕ್ಷಿಯಾದ ಜಾನಕಿಯು, ಕಂಬನಿ-ಬಾಷ್ಪವನ್ನು, ನೇತ್ರೋದಕವನ್ನು, ಮಿಡಿದಳು-ಸುರಿಸಿದಳು.

ಅ|| ವಿ|| ಪಲ್ಲಂ+ಮೊರೆದು=ಪಲ್ಮೊರೆದು, ಕ್ರಿ. ಸ. ಅಂಬುಜದಂತೆ+ಅಕ್ಷಿಯುಳ್ಳವಳು=ಅಂಬುಜಾಕ್ಷಿ, ಉ. ಪೂ. ಬ. ಬಲ್ಮೆ-ಬಲಾತ್ಕಾರ, ನಲ್ಮೆ-ಪ್ರೀತಿ, ಅಂಬು-ನೀರು, ಕಂಬು-ಶಂಖ ||೨೦||

ಟೀ|| ತೊಳಪ-ಶೋಭಿಸುವ, ನಾಸಿಕದ-ನಾಸಿಕವುಳ್ಳವನಾದ, (ಘೋಣವುಳ್ಳವನಾದ) ನುಣ್ಣದವುಗಳ-ನುಣುಪಾಗಿರುವ ಚುಬುಕಗಳುಳ್ಳವನಾದ, ಪೊಳೆವ-ಪ್ರಕಾಶಿಸುವ, ಕಂಗಳ-ನೇತ್ರಗಳುಳ್ಳವನಾದ, ತುರುಗಿದ-ವ್ಯಾಪ್ತವಾದ, (ತುಂಬಿದ) ಎವೆಯ-ಕಣ್ಣುರೆಪ್ಪೆ ಗೂದಲುಗಳುಳ್ಳ, (ಇನ್ನೊಂದು ವಿಧ) ತುರುಗಿದ - ಅಗಲವಾದ, ಎವೆಯ - ಕಣ್ಣುರೆಪ್ಪೆಗಳುಳ್ಳ, ಎಂದರೆ ವಿಶಾಲನೇತ್ರನಾದವನೆಂಬ ಭಾವವು. ನಿಡುಪುರ್ಬುಗಳ-ನೀಳವಾದ ಪುರ್ವುಗಳುಳ್ಳವನಾದ, (ದೊಡ್ಡದಾದ ಹುಬ್ಬುಳ್ಳವನಾದ) ಪೆರ-ವಿಸ್ತಾರವಾದ, (ದೊಡ್ಡದಾದ), ನೊಸಲ-ಫಣೆಯುಳ್ಳವನಾದ, ಥಳಥಳಿಪ-ಅತ್ಯಂತವಾಗಿ ಪ್ರಕಾಶಿಸುವ, ಮುಕುಟದ-ಸಿರಸ್ತ್ರಾಣವುಳ್ಳವನಾದ, (ಸೀಸಕವುಳ್ಳ) ಕಿವಿಯ-ಕರ್ಣಗಳಲ್ಲಿನ, ಮಕರಕುಂಡಲದ-ಮಕರದ ಆಕಾರವಾದ ಬಂಟಿಗಳುಳ್ಳ, (ಹತ್ತ ಕಡಕುಗಳುಳ್ಳ) ಕೋಮಲಿತ-ಮನೋಹರವಾದ, ಚುಬುಕಾಗ್ರದ-ಕೆನ್ನೆಯ ಕೊನೆಭಾಗವುಳ್ಳವನಾದ, ಲಲಿತ-ಮನೋಹರವಾದ, ಅರುಣ-ರಕ್ತವರ್ಣವುಳ್ಳ, ಅಧರ-ತುಟಿಯಪ್ರದೇಶವುಳ್ಳವನಾದ, ಮಿರುಗುವ-ಪ್ರಕಾಶಿಸುವ, ರದನ-ದತಂಗಳ, ಪಜ್ಜೆಗಳ-ಪಜ್ಜೆಗಳುಳ್ಳ, ಸೂಸುವ-ಎರಚುತ್ತಿರುವ, (ಚಲ್ಲುತ್ತಿರುವ) ಎಳೆನಗೆಯ-ಕಿರುನಗೆಯುಳ್ಳ, ಮೋಹನದ-ಮೋಹಿಸತಕ್ಕುದಾದ,

---

ದಕ್ಕಾಗಿ ಆ ವನಪ್ರದೇಶದಲ್ಲಿ ಕಪಿಗಳ ಸೇನೆಯನ್ನು ಸೇರಿಸಿಕೊಂಡು, ತಾನಾಗಿ ಸಮುದ್ರಕ್ಕೆ ಸೇತುವೆಯನ್ನಾಗ ಮಾಡಿಸಿ ನನ್ನನ್ನು ಹುಡುಕಿ, ದುಷ್ಟರಕ್ಕಸರನ್ನು ಸಂಹರಿಸಿ, ಅಗ್ನಿಮುಖದದ್ವಾರಾ ನನ್ನ ಪತಿವ್ರತಾಧರ್ಮವನ್ನು ಪರೀಕ್ಷಿಸಿದನು. ಆಗ್ನೆಯಿಲ್ಲದ ಅಪವಾದವು ಈಗ ನಿಮ್ಮ ರಘುಶ್ರೇಷ್ಠಂಗೆ ಬಂದೊದಗಿತೆ, ಹಾ, ಎಂದು ಕಲ್ಮರಗಳು ಕರಗುವಂತೆ ಪ್ರಲಾಪಿಸಿದಳು || ೧೯ || ನಾವುಗಳು ಹದಿನಾಲ್ಕು ವರ್ಷಂಗಳು ಅರಣ್ಯವಾಸಮಾಡುತ್ತ ಕಗ್ಗಾಡಿನಲ್ಲಿ ಕಲ್ಲು ಮತ್ತು ಮುಳ್ಳುಗಳ ದೆಸೆಯಿಂದ ಕಷ್ಟಪಡುವ ಕಾಲದಲ್ಲಿ ನನ್ನನ್ನು ಬಹುವಾಗಿ ಉಪಚರಿಸಿ, ನನ್ನ ಕಷ್ಟವನ್ನು ಹೋಗಲಾಡಿಸಿದವನಾದೆ. ತನ್ನ ಕೋರೆ ಹಲ್ಲುಗಳನ್ನು ಕಟಕಟನೆ ಕಡಿದು ಮೇಲೆ ನುಗ್ಗಿ ಬರುವ ವಿರಾಧನೆಂಬ ರಕ್ಕಸನನ್ನು ನಾಶಮಾಡಿದೆ. ನಾನು ನಿರ್ಬಂಧಪಡಿಸಿ ಶ್ರೀರಾಮನ ಬಳಿಗೆ ಹೋಗೆನಲು ಪಂಚವಟಿಯಿಂದ ಎನ್ನ ಮಾತನ್ನು ಮೀರಲಾರದೆ ಹೋದವನಾದೆ. ನೀನು ಇತರ

ಮಕರಕುಂಡಲದ ಕೋಮಲಿತಚುಬುಕಾಗ್ರದ ॥ ಲಲಿತಾರುಣಾಧರದಮಿರುಗುವರದನಪಙ್ತಿ । ಗೆಳಸೂಸುವೆಳೆನಗೆಯಮೋಹ ನದಚಲ್ವಿನೊ । ಬ್ಬುಳಿಯೆನಿಪರಾಘವನಸಿರಿಮೊಗವನೆಂತುನೋಡದೆಮಾಣ್ಬೆನಕಟೆಂದಳು ॥ ೨೧ ॥ ರಾಮನಂಭುವನಾಭಿರಾಮ ನಂಗುಣರತ್ನ । ಧಾಮನಂರಘುಕುಲೋದ್ದಾಮನಂರೂಪಜಿತ । ಕಾಮನಂಸತ್ಕೀರ್ತಿಕಾಮನಂಶರಣಜನವಾರ್ಧಿಯಂಮಿಗೆಪೇರ್ಚಿಪ ॥ ಸೋಮನಂ ಸೌಭಾಗ್ಯಸೋಮನಂ ಕುವಲಯ । ಶ್ಯಾಮನಂ ನಿಜತನುಶ್ಯಾಮನಂ ಘನಪುಣ್ಯ । ನಾಮನಂಸಂತತಂನಾ

---

ಚಲ್ವಿನ-ಲಾವಣ್ಯದ, ಒಬ್ಬುಳಿಯು-ಸಮೂಹವು, ಎನಿಪ-ಎನ್ನಿಸಿಕೊಳ್ಳತಕ್ಕ, ರಾಘವನ-ಶ್ರೀರಾಮನ, ಸಿರಿ-ಕಾಂತಿಯಿಂದೊಡಗೂಡಿದ, ಮೊಗವನು-ಆಸ್ಯವನ್ನು, ಎಂತು-ಹೇಗೆತಾನೆ, ನೋಡದೆ-ಕಾಣದೆ, ಮಾಣ್ಬೆನೊ-ಬಿಡುವಳಾಗಲಿ, ಅಕಟ-ಆಹಹ, ಎಂದಳು-ಎಂಬದಾಗಿ ಹೇಳಿದಳು ॥

ಅ॥ ವಿ॥ ನುಣ್ಣಿತ್ತು+ಕದಪು=ನುಣ್ಗದಪು, ವಿ. ಪೂ. ಕ. ಶ್ರೀ-ತ್ಸ. ಸಿರಿ-ದ್ಭ. ಎಳದು+ನಗೆ=ಎಳನಗೆ, ವಿ. ಪೂ. ಕ. ರಾಘವ + ಇಂದ್ರ = ರಾಘವೇಂದ್ರ, ಗುಣ. ಸಂ. ಅರುಣ-ಕೆಂಪು, ಸೂರ್ಯನ ಸಾರಥಿ. ಅಕ್ಷ-ಕಣ್ಣು, ಅಚ್ಛ. ಲಕ್ಷ-ಲಕ್ಷ್ಯ ಸಂಖ್ಯೆ. ಕಿರಿದು + ನಗೆ = ಕಿರುನಗೆ, ವಿ. ಪೂ. ಕ. ॥ ೨೧ ॥

ಟೀ॥ ಭುವನ- ಸಮಸ್ತಲೋಕಗಳಲ್ಲಿಯೂ, ಅಭಿರಾಮನಂ-ಮೋಹನಕರನಾದ, (ಮನೋಹರಯಾದ) ಗುಣ-ಒಳ್ಳೆಯಗುಣಗಳೆಂಬುವ, ರತ್ನ-ನವರತ್ನಗಳಿಗೆ, ಧಾಮನಂ-ಆಶ್ರಯಭೂತನಾದ, ರಘುಕುಲ-ರಘುಮಹಾರಾಯನ ವಂಶದಲ್ಲಿ, ಉದ್ದಾಮನಂ-ಶ್ರೇಷ್ಠನಾದ, ರೂಪ-ಆಕಾರದಿಂದ, (ಸೌಂದರ್ಯದಿಂದ) ಜಿತ-ಗೆದ್ದ, (ಜೈಸಿದ) ಕಾಮನಂ-ಮನಸಿಜನುಳ್ಳವನಾದ, ಸತ್ಕೀರ್ತಿ-ಒಳ್ಳೆಯ ಯಶಸ್ಸನ್ನು, ಕಾಮನಂ-ಕೋರತಕ್ಕವನಾದ, ಶರಣಜನ-ಉಪಾಸಕಜನರೆಂಬ, ವಾರ್ಧಿಯಂ-ಜಲಧಿಯನ್ನು, ಮಿಗೆ-ಅಧಿಕವಾಗಿ, ಪೇರ್ಚಿಪ-ವೃದ್ಧಿಗೊಳಿಸುತ್ತಿರುವ, ಸೋಮನಂ-ಚಂದ್ರಸ್ವರೂಪನಾದ, ಸೌಭಾಗ್ಯ-ಸಕಲೈಶ್ವರ್ಯವೆಂಬ, (ಷೋಡಶಕಲೆಗಳಿಂದ) ಸೋಮನಂ-ಚಂದ್ರಪ್ರಾಯನಾದ, ಕುವಲಯ-ಕನ್ನೈದಿಲೆಯಂತೆ, ಶ್ಯಾಮನಂ-ನೀಲವರ್ಣವುಳ್ಳವನಾದ, ನಿಜ-ತನ್ನಯ, ತನು-ದೇಹದಲ್ಲಿ, ಶ್ಯಾಮನಂ-ಕಪ್ಪುಬಣ್ಣವುಳ್ಳವನಾದ, (ಶ್ಯಾಮ-ಲವರ್ಣವುಳ್ಳವನಾದ) ಘನ-ಶ್ರೇಷ್ಠವಾದ, ಪುಣ್ಯ-ಪವಿತ್ರಕರವಾದ, (ಸುಕೃತಫಲವನ್ನು ಕೊಡುವ) ನಾಮನಂ-ನಾಮಧೇಯವುಳ್ಳವನಾದ, ರಾಮನಂ-ಸರ್ವರ ಮನದಲ್ಲಿಯೂ ರಮಿಸತಕ್ಕವನನ್ನು, (ರಾಮಚಂದ್ರಮೂರ್ತಿಯನ್ನು) ನಾಂ-ನಾನಾದರೊ, ಮನಂ-ಮನಸ್ಸು, ದಣಿಯೆ-ತುಷ್ಟಿಯನ್ನು ಹೊಂದುವಂತೆ, ಸತತಂ-ಯಾವಾಗಲೂ, (ಸರ್ವದಾ) ರಮಿಸದೆ-ಆ ಶ್ರೀರಾಮನಲ್ಲಿ ಕ್ರೀಡಿಸದೆ, (ಸೌಖ್ಯಪಡದೆ) ಎಂತು-ಹೇಗೆತಾನೆ, ಬಾಳ್ವೆಂ-ಜೀವಿಸಲಾಪೆನು, ಎಂದಳು-ಎಂಬದಾಗಿ ಪೇಳಿದಳು ॥

ಅ॥ ವಿ॥ ಭುವನ-ಪ್ರಪಂಚ, ಭವನ-ಮನೆ, ಘನ-ಮೇಘ, ದೊಡ್ಡದು, ಶ್ರೇಷ್ಠವಾದ್ದು. ಧಾಮ-ಮನೆ, ತೇಜ, ಆಶ್ರ

---

ಮೈದುನರಂತೆ ಸಾಮಾನ್ಯನಾದ ಮೈದುನನೇ ! ತಂದೆ ಎಲೈ ಲಕ್ಷ್ಮಣಾ, ನೀನು ನಿರಪರಾಧಿಯಾದ ನನ್ನನ್ನು ನಿಷ್ಕರುಣದಿಂದ ಈ ವನಸ್ಥಳದಲ್ಲಿ ಬಿಡಲು ಚಿತ್ತವು ಒಪ್ಪಿತೇ ಎಂದು ವಿಶಾಲಾಕ್ಷಿಯಾದ ಜಾನಕಿಯು ಕಂಬನಿಯಿಂದ ತೊಯ್ದುಹೋದಳು (ಅತ್ಯಂತವಾಗಿ ರೋದಿಸಿದಳು ॥೨೦॥ ಆಗ ಜಾನಕಿಯು ಹೊಳೆಯುತ್ತಿರುವ ನಾಸಿಕವು, ನುಣುಪಾದ ಕದಪುಗಳು, ಪ್ರಕಾಶಮಾನವಾದ ನೇತ್ರಗಳು, ವ್ಯಾಪ್ತವಾದ ಎವೆ ಇವುಗಳಿಂದ ಕೂಡಿದ ಅಂದವು (ವಿಶಾಲಾಕ್ಷವು) ನಿಡಿದಾದ ಪುರ್ಬುಗಳು, ದೊಡ್ಡ ಮತ್ತು ವಿಶಾಲವಾದ ಫಣೆಯು, ಪ್ರಜ್ವಲಿಸುತ್ತಿರುವ ಮುಕುಟವು, ಮಕರಗಳ ಆಕೃತಿಯುಳ್ಳ ಕರ್ಣಕುಂಡಲಗಳು, ಮನೋಹರವಾದ ಚುಬುಕಾಗ್ರವು, ಕ್ಷ ಅತಿಮನೋಹರವಾದ ದೇಹಕಾಂತಿಯು, ಕೆಂಪಾದ ಬಿಂಬಾಧರವು, ರತ್ನಮಣಿಗಳಂತೆ ಪ್ರಜ್ವಲಿಸುವ ರದನಪಙ್ತಿಗಳು, ಎರಚುತ್ತಿರುವ ಮಂದಹಾಸವು, ಮೋಹಕರವಾದ ಲಾವಣ್ಯವು, ಚಂದ್ರಬಿಂಬಕ್ಕೆಸದೃಶವಾದ ಕಾಂತಿಯುತವಾದ ಆಸ್ಯವೂ ಉಳ್ಳ ಶ್ರೀರಾಮಚಂದ್ರನನ್ನು ನಾನು ಹೇಗೆತಾನೆ ಕಾಣದೆ ಇರಲಿ, ಅಕಟಕಟ ಎಂದು ಬಿಸುಸುಯ್ದಳು ॥ ೨೧ ॥ ಪ್ರಪಂಚಗಳಿಗೆ ಎಂದರೆ ಲೋಕದ ಜನರಲ್ಲಿ ಮನೋಹರವಾದ ಸದ್ಗುಣಗಳೆಂಬ ರತ್ನಮಣಿಗಳಿಗೆ ನಿಕ್ಷೇಪಸ್ಥಾನವಾದ ಶ್ರೇಷ್ಠವಾದ ರಘುವಂಶಕ್ಕೆ ತಿಲಕಪ್ರಾಯನೂ, ಸೌಂದರ್ಯದಿಂದ ಮದನನನ್ನು ಜೈಸಿದವನೂ, ಸದ್ಗುಣಾವಳಿಗಳಿಗೆ ಆಶ್ರಯಭೂತನೂ, ಯಶಸ್ಸನ್ನು ಹಾರೈಸತಕ್ಕವನೂ, ಸೌಮ್ಯನೂ (ಶಾಂತಿಪ್ರಕೃತಿಯುಳ್ಳವನು) ಆಶ್ರಿತಜನರಿಗೆ ಕೃಪಾಜಲಧಿಯೂ, ಭಕ್ತರೆಂಬ ಕ್ಷೀರಸಮುದ್ರವನ್ನು ಹೆಚ್ಚಿಸಲಿಕ್ಕೆ ಚಂದ್ರನೂ, ಕುವಲಯಶ್ಯಾಮನೂ, ತನ್ನ ಶರೀರದಲ್ಲಿನ ಅವಯವಗಳಿಗೆ ಮಧ್ಯಪ್ರಾಯನು, ಶ್ರೇಷ್ಠವಾದ ನಾಮವುಳ್ಳವನೂ, (ಹೆಸರುಳ್ಳವನು) ಪುಣ್ಯಚರಿತನೂ, ಸದಾನಂದಭರಿತನೂ ಆದ ಶ್ರೀರಾಮಚಂದ್ರನನ್ನು ನಾನು ನನ್ನ ಮನಃಪೂರ್ತಿಯಾಗುವಂತೆ ಹೇಗೆ ನೋಡದೆ ಈ ಕಡಿದಾದರಣ್ಯದಲ್ಲಿ ಪ್ರಾಣಬಿಡಲಿ ? ಅಯ್ಯೋ ದುರ್ದೈವವೇ ! ನನ್ನನ್ನು ಈರೀತಿಯಾದ ಅಗಲಿಕೆಗೆ ಗುರಿಮಾಡಿದೆಯಾ ? ಎಂದು ಅತ್ಯಧಿಕವಾಗಿ ಪ್ರಲಾಪಿಸಿದಳು ॥೨೨॥ ಭೂಪತಿಯಾದ ಜನಮೇಜಯರಾಯನೇ

ಮನಂದಣಿಯೆರಮಿಸದೆಬಾಳ್ವೆನೆಂತೆಂದಳು ॥ ೨೨ ॥ ರಾಯಕೇಳಿಂತಿಂತುರಾಘವೇಶ್ವರನರಮ | ಣೀಯಗುಣಮಾಲೆಯಂನೆನೆನೆನ
ದುಹಂಬಲಿಸು | ತಾಯತಾಂಬಕಿಮತ್ತೆಮೈಮರೆವುತೆಚ್ಚರುತಪಾವಗಿದಪಸುಳಿಯೊಲಿರೆ ॥ ತಾಯೆನಿನ್ನಂಬಿಟ್ಟುಪೋಗಲಾರೆನು
ಪೋಗ | ದೀಯವಸ್ಥೆಯೊಳಿರ್ದೊಡಣ್ಣನೇಗೈದಪನೊ| ಹಾಯೆಂದುಲಕ್ಷ್ಮಣಂಶೋಕಗದ್ಗದನಾಗಸೀತೆಮಗುಳಿಂತೆಂದಳು॥೨೩॥
ತಂದೆಲಕ್ಷ್ಮಣನಿನ್ನೊಳೆಂದೊಡಿನ್ನೇನಹುದು | ಹಿಂದಣಜನಸ್ಥಾನದಂದದೊಳ್ಪೋಗುನೀಂ| ಕೊಂದುಕೊಂಬಡೆತನ್ನಬೆಂದೊಡ
ಲೊಳಿದೆಬಸಿರದಂದುಗಂಕಾನನದೊಳು ॥ ಬಂದುದಂಕಾಣ್ಬೆನಾನಿಂದುಕೌಸಲೆಯಡಿಗೆವಂದಿಸಿದೆನಪರಾಧವೊಂದುಮಿಲ್ಲದೆತನ್ನ |

---

ಯ, ಕರಣ, ಪ್ರತಾಪ, ಕಾಂತಿ, (ರಾಘವ + ಈಶ = ರಾಘವೇಶ) ಗುಣ. ಸಂಧಿ (ಗುರು + ಆಜ್ಞೆ = ಗುರ್ವಾಜ್ಞೆ) ಯಣ್ ಸಂಧಿ. ಬಾಳ್_ಬದುಕುವದು. ಬಾಳೆ. ಒಂದು ಜಾತಿಯ ಮೀನು ॥೨೨॥

ಟೀ॥ ರಾಯ_ಎಲೈ ಜನಮೇಜಯರಾಯನೆ ! ಆಲಿಸು-ಕೇಳುವನಾಗು, ಆಯತ-ವಿಶಾಲವಾದ, ಅಂಬಕಿ-ನೇತ್ರಗಳುಳ್ಳವಳಾದ ಜಾನಕಿಯು, ಇಂತಿಂತು_ಈಈ ಪ್ರಕಾರವಾಗಿ, ರಾಘವೇಶ್ವರನ-ಶ್ರೀ ರಾಮಚಂದ್ರಮೂರ್ತಿಯ, ರಮಣೀಯ-ಮನೋಹಾರಿಯಾದ, ಗುಣ_ಸದ್ಗುಣಗಳ, ಮಾಲೆಯಂ_ಸಮುದಾಯಗಳನ್ನು, (ಗುಂಪನ್ನು) ನೆನನೆನದು_ ಸ್ಮರಿಸಿ ಸ್ಮರಿಸಿ, ಹಂಬಲಿಸುತ_ಹಲಿಬುತ್ತ, ಮತ್ತೆ-ಪುನಹ, ಮೈ-ದೇಹವನ್ನು, ಮರೆವುತ_ಜ್ಞಾನತಪ್ಪುತ್ತ, ಎಚ್ಚರುತ_ಎಚ್ಚರಿಕೆಯನ್ನು ಹೊಂದುತ್ತ, ಪಾವು-ಸರ್ಪವು, ಅಗಿದ_ಕಡಿದ, ಪಸುಳೆಯೊಲು_ಹಸುಳೆಯಹಾಗೆ, (ಎಳೆಕೂಸಿನಹಾಗೆ) ಇರೆ_ಇರುತ್ತಿರಲು, ತಾಯೆ-ಎಲೌ ಜನನಿಯೆ, ನಿನ್ನಂ-ತಾಯಿಗೆ ಸಮಾನಳಾದ ನಿನ್ನನ್ನು, ಬಿಟ್ಟು_ಪರಿತ್ಯಜಿಸಿ, ಪೋಗಲಾರೆನು_ಹೋಗಲು ಮನಸ್ಸುಬರುವದಿಲ್ಲ, ಪೋಗದೆ_ಹೊರಟು ಹೋಗದೆ, ಈ ಅವಸ್ಥೆಯೊಳು_ಈ ವಿಧದಲ್ಲಿ, ಇರ್ದೊಡೆ_ಇದ್ದದ್ದೇಯಾದರೆ, ಅಣ್ಣಂ_ಅಗ್ರಜನಾದ ಶ್ರೀ ರಾಮಚಂದ್ರನು, ಏಗೈದಪನೊ_ಏನುಮಾಡುತ್ತಾನೆಯೊ, ಹಾ_ಕಷ್ಟವು, ಎಂದು_ಎಂಬದಾಗಿ, ಲಕ್ಷ್ಮಣಂ_ಸೌಮಿತ್ರಿಯು, ಶೋಕ_ವ್ಯಥೆಯಿಂದ, ಗದ್ಗದನು_ಭಯದಿಂದ ಕೂಡಿದ ಧ್ವನಿಯುಳ್ಳವನು, (ಕುಗ್ಗಿದ ಧ್ವನಿಯುಳ್ಳವನು) ಆಗೆ_ಆಗಲಾಗಿ, ಮಗುಳೆ_ತಿರುಗೂ, (ಮತ್ತೆ) ಸೀತೆ-ಜಾನಕಿಯು, ಇಂತೆಂದಳು_ಈ ರೀತಿಯಾಗಿ ಹೇಳಿದಳು ॥

ಅ॥ ವಿ॥ ರಾಘವ + ಈಶ = ರಾಘವೇಶ, ಗುಣ ಸಂ. ಮಾಲೆ-ಹಾರ, ಪಜ್'ತ. ಇದು + ಅವಸ್ಥೆ = ಈಯವಸ್ಥೆ, ಹಾ_ಅವ್ಯಯಪದ, ಧ್ವನಿ_ತ್ಸ. ದನಿ-ದ್ಭ. ಪಶು_ತ್ಸ. ಹಸು-ದ್ಭ. ॥೨೩॥

ಟೀ॥ ತಂದೆ_ತಂದೆಗೆ ಸಮಾನನಾದ ಲಕ್ಷ್ಮಣನೆ, ನಿನ್ನೊಳ್_ನಿನ್ನೊಂದಿಗೆ, ಎಂದೊಡೆ-ಹೇಳಿದರೆತಾನೆ, ಇನ್ನೇನಹುದು_ಮತ್ತೇನುತಾನೆ ಆದೀತು, ಹಿಂದಣ_ಮೊದಲಿನಲ್ಲಿ, ಜನಸ್ಥಾನದ_ಪಂಚವಟೀ ಕ್ಷೇತ್ರದಲ್ಲಿ, (ಪ್ರಾಪ್ತಮಾದ) ಅಂದದೊಳ್_ವಿಧದಿಂದ, ನೀಂ_ನೀನಾದರೊ, ಪೋಗು_ಹೊರಟುಹೋಗು, ಕೊಂದುಕೊಂಬಡೆ_ಪ್ರಾಣಹತ್ಯ ಮಾಡಿಕೊಳ್ಳೋಣವೆಂದರೆ, ತನ್ನ_ನನ್ನ, ಬೆಂದ_ವ್ಯಥೆಯಿಂದ ತಪಿಸಿದ, ಒಡಲೋಳ್_ದೇಹದಲ್ಲಿ, ಬಸುರ_ಬಸುರಿನ, ಬಂದುಗಂ-ಅಪಹಾಸ್ಯಕರವಾದ ತೊಂದರೆಯು, ಇದೆ_ಇರುತ್ತದೆ, ಕಾನನದೊಳು-ಈ ವನಪ್ರದೇಶದಲ್ಲಿ, ದಂದುದಂ_ಬಂದ ಕ್ರಮುವನ್ನು, (ಪ್ರಾಪ್ತಮಾದಂಥಾದ್ದನ್ನು) ಕಾಣ್ಬೆನು_ಈಕ್ಷಿಸುತ್ತೇನೆ, ಇಂದು_ಈದಿನ, ಕೌಸಲೆಯ_ಕೌಸಲ್ಯಾದೇವಿಯ, ಅಡಿಗೆ_ಚರಣಯುಗಳಕ್ಕೆ, ನಾಂ_ನಾನು, ವಂದಿಸಿದೆಂ_ನಮಸ್ಕಾರ ಮಾಡಿವೆನು, ಎನ್ನ _ನನ್ನ, ಅಪರಾಧಂ_ತಪ್ಪಿತವು, ಒಂದು-ಒಂದಾದರೂ, ಇಲ್ಲದೆ_ಇಲ್ಲದೇನೆ,

---

ಆಲಿಸು, ವಿಶಾಲಾಕ್ಷಿಯಾದ ಭೂಮಿಜೆಯು ಈ ಪ್ರಕಾರವಾಗಿ ಶ್ರೀ ರಾಘವೇಶ್ವರನ ರಮಣೀಯಮಾದ ಗುಣಮಾಲೆಯನ್ನು ನೆನನೆನದು ಹಂಬಲಿಸುತ್ತ ಮತ್ತೆ ಮೈಮರೆತವಳಾಗಿ ಅನಂತರ ಚೇತರಿಸಿಕೊಂಡು ಹಾವು ಕಚ್ಚಿದ ಮಗುವಿನಂದದಿ ಇರಲಾಗಿ ಆಗ ಲಕ್ಷ್ಮಣನು ಎಲೌದೇವಿ! ನಿನ್ನನ್ನು ಈ ವನಸ್ಥಳದಲ್ಲಿ ಬಿಟ್ಟು ಹೋಗಲಾರೆನು. ಹೋಗದೆ ಈ ಯವಸ್ಥೆಯಲ್ಲಿದ್ದರೆ ಅಗ್ರಜನಾದ ಶ್ರೀರಾಮಚಂದ್ರನು ಏನು ಮಾಡುತ್ತಾನೆಯೋ ಕಾಣೆನಲ್ಲಾ! ಹಾ ಹಾ ಎಂದು ಮೂರ್ಛಿತನಾಗಿ ಎಚ್ಚತ್ತು ಅತಿ ದುಃಖದಿಂದ ಗದ್ಗದಕಂಠನಾಗಲು ಜಾನಕಿಯು ಮತ್ತೆ ಲಕ್ಷ್ಮಣನನ್ನು ಕುರಿತು ಶೋಕಾಗ್ನಿಯಿಂದ ತಪ್ತಳಾಗಿ ಮರುಗುತ್ತ ಇಂತೆಂದಳು ॥೨೩॥ ಆಗ ಜಾನಕಿಯು ಲಕ್ಷ್ಮಣನನ್ನು ಕುರಿತು ಎಲೈ ತಂದೆಗೆ ಸಮಾನನಾದ ಸೌಮಿತ್ರಿಯೇ ನಿನ್ನಸಂಗಡ ನಾನು ಯಾವರೀತಿಯಾಗಿ ನೊಂದು ಸಂಕಟಪಟ್ಟರೆ ತಾನೆ ಇನ್ನೇನು ಮಾಡಲಾದೀತು ? ಪೂರ್ವದಲ್ಲಿ ನಾವು ಪಂಚವಟಿಯಲ್ಲಿ ವಾಸಿಸುತ್ತಿರುವಾಗ್ಯೆ ಹೊರಟು ಹೋದಂತೆ ಹೊರಟುಹೋಗು. ಪ್ರಾಣಹತ್ಯ ಮಾಡಿಕೊಳ್ಳೋಣವೆಂದರೆ ಗೃಹಚಾರಕ್ಕೆ ತಕ್ಕಹಾಗೆ ಈ ಬೆಂದೊಡಲಲ್ಲಿ ಈ ಗರ್ಭವು ಬೇರೆ ನಿಂತಿರುವುದು, ಆದ್ದರಿಂದ ಆತ್ಮಹತ್ಯ ಭ್ರೂಣಹತ್ಯಗಳಿಗೆ ಗುರಿಯಾಗಬೇಕಾಗಿರುತ್ತೆ. ನಾನು ಪೂರ್ವಜನ್ಮದಲ್ಲಿ ಮಾಡಿದ ಪಾಪಶೇಷವನ್ನು ಅನುಭವಿಸುತ್ತೇನೆ, ನಿಮ್ಮ ಅಗ್ರಜನ ಅಪ್ಪಣೆಯಂತೆ ತೆರಳುವನಾಗು. ಆದರೆ ನಿರಪರಾಧಿನಿಯಾದ ನನ್ನನ್ನು ನಿನ್ನ ಮಗನಾದ ಶ್ರೀರಾಮಚಂದ್ರನು ನಿಷ್ಕಾರಣನಾಗಿ ಪರಿತ್ಯಾಗಮಾಡಿ ಈ ಅರಣ್ಯಕ್ಕೆ ಗುರಿಮಾ

ಕಂದನೆನ್ನಂತೊರೆದುದಂದೇವಿಗೊರೆವುದೆನುತೆಂದಳಲ್ದಳ್ಮೃಗಾಕ್ಷಿ ||೨೪|| ಏಕೆನಿಂದಿಪೆಪೋಗುಸೌಮಿತ್ರಿಕೋಪಿಸನೆ | ಕಾಕುತ್ಸ್ಥನಿಲ್ಲಿತಳುವಿದೊಡೆನೆರವುಂಟುತನ | ಗೀಕಾಡೊಳುಗ್ರಜಂತುಗಳಲ್ಲಿರಘುನಾಥನೇಕಾಕಿಯಾಗಿರ್ಪನು || ಲೋಕದರಸೇಗೈದೊಡಂತನ್ನಕಿಂಕರ | ರ್ಬೇಕುಬೇಡೆಂದುಪೇಳರೆಭರತಶತ್ರುಘ್ನ| ರೀಕೆಲಸಕೊಪ್ಪಿದರೆಹನುಮಂತನಿರ್ದಪನೆಪೇಳೆಂದಳಲ್ದಳಬಲೆ||೨೫|| ಆರಿರ್ದೊಡೇಗೈವರಿದುತನ್ನಮರುಳಾಟ | ಮಾರಾವಣನತಮ್ಮನೈಸಲೆವಿಭೀಷಣಂ | ಭೀರುಗಳನರಿದಪನೆಸೋದರಂಗುರೆಮುಳಿ

ತನ್ನ-ಆಕೆಯ, ಕಂದಂ-ಪುತ್ರನಾದ ಶ್ರೀರಾಮಚಂದ್ರನು, ಎನ್ನಂ-ನಿರಪರಾಧಿನಿಯಾದ ನನ್ನನ್ನು, ತೊರದುದಂ-ಪರಿತ್ಯಾಗ ಮಾಡಿದುದನ್ನು, ದೇವಿಗೆ-ಮಾತೆಯಾದ ಕೌಸಲ್ಯೆಗೆ, ಒರೆವುದು-ಹೇಳತಕ್ಕದ್ದು, ಎನುತ-ಎಂಬದಾಗಿ ಹೇಳುತ್ತ, ಎಂದು-ಎಂಬದಾಗಿ ಹೇಳಿಕೊಂಡು, ಮೃಗಾಕ್ಷಿ-ಕುರಂಗಾಕ್ಷಿಯಾದ ಜಾನಕೀದೇವಿಯು, ಅಳಲ್ದಳ್-ಸಂತಾಪಗೊಂಡಳು (ರೋದಿಸಿದಳು.)

ಅ|| ವಿ|| ಬಸುರ್-ಹೊಟ್ಟೆ, ಗರ್ಭ. ಪೂರ್ವ-ಹಿಂದೆ, ಪೂರ್ವ ದಿಕ್ಕು. ಮೃಗ-ಜಿಂಕೆ, ಕಾಡುಮೃಗ. ಮೃಗ-(ಜಿಂಕೆ) ಮೃಗದಂತೆ+ಅಕ್ಷಿಯುಳ್ಳವಳು=ಮೃಗಾಕ್ಷಿ ಉಪ ಪೂ. ಬಹು. ತುರಂಗ-ಕುದುರೆ. ಕುರಂಗ-ಜಿಂಕೆ. ಕಂದ-ಮಗು, ಎಳೆಯದು, ಗೆಡ್ಡೆ, ಬೇರು, ಮೇಘ. (ಕಂ-ನೀರನ್ನು, ದ-ಕೊಡುವುದು) ||೨೪||

ಟೀ|| ಸೌಮಿತ್ರಿ-ಸುಮಿತ್ರೆಯ ಮಗನಾದ ಲಕ್ಷ್ಮಣನೆ! ಏಕೆ-ಏನು ಕಾರಣ, ನಿಂದಪೆ-ನಿಂತುಕೊಂಡಿರುತ್ತಿ, ಪೋಗು-ಹೋಗುವನಾಗು, ಇಲ್ಲಿ-ಈ ನನ್ನ ಬಳಿಯಲ್ಲಿ, ತಳುವಿದೊಡೆ-ಕಾಲಕಳೆದುದೇಯಾದರೆ, ಕಾಕುತ್ಸ್ಥಂ-ಕಕುತ್ಸ್ಥರಾಯನ ವಂಶಜನಾದ ಶ್ರೀರಾಮನು, ಕೋಪಿಸನೆ-ಆಗ್ರಹಮಾಡಿಕೊಳ್ಳುವುದಿಲ್ಲವೆ, ಇಲ್ಲಿ-ಈ ವನದಲ್ಲಿಯಾದರೊ, ತನಗೆ-ಅಬಲೆಯಾದ ನನಗೆ, ಈ ಕಾಡೊಳು-ಈ ಮಹಾರಣ್ಯದಲ್ಲಿ, ಉಗ್ರ-ಭಯಂಕರಗಳಾದ, ಜಂತುಗಳು-ಹುಲಿ ಕರಡಿ ಮೊದಲಾದ ಕ್ರೂರಮೃಗಗಳು, ನೆರವು-ಆಶ್ರಯವು, (ಸಹವಾಸವು) ಉಂಟು- ಇರುತ್ತದೆ, ಅಲ್ಲಿ-ಅಯೋಧ್ಯಾನಗರದಲ್ಲಿಯಾದರೊ, ರಘುನಾಥನು-ರಘುಕುಲಶ್ರೇಷ್ಠನಾದ ಶ್ರೀರಾಮಚಂದ್ರನು, ಏಕಾಕಿಯಾಗಿ-ಅಸಹಾಯಕನಾಗಿ, (ಒಬ್ಬನಾಗಿ) ಇರ್ಪನು-ಇರುತ್ತಾನೆ, ಲೋಕದ-ಪ್ರಜೆಗಳ, (ಜನರ) ಅರಸು-ರಾಜನು, ಏಗೈದೊಡಂ-ಏನುಕಾರ್ಯ ಮಾಡಿದಾಗ್ಯೂ ಕೂಡ, ತನ್ನ-ಆ ರಾಜನ, ಕಿಂಕರರ್-ಸೇವಕ ಜನರು, (ಚಾಕರರು) ಬೇಕು-ಈ ಕಾರ್ಯಮಾಡಬೇಕಾದ್ದು, ಬೇಡ-ಈ ಕೆಲಸ ಮಾಡಬಾರದ್ದು, ಎಂದು-ಹೀಗೆಂದು, ಪೇಳರೆ-ಹೇಳಲಾರರೆ, (ಆಡಲಾರರೆ) ಭರತ ಶತ್ರುಘ್ನರ್-ಭರತನು ಮತ್ತು ಶತ್ರುಘ್ನನು ಇವರುಗಳು, ಈ ಕೆಲಸಕ್ಕೆ-ಈ ಕಾರ್ಯಕ್ಕೆ, (ನನ್ನನ್ನು ವನದ ಪಾಲು ಮಾಡಲಿಕ್ಕೆ) ಒಪ್ಪಿದರೆ-ಅನುಮತಿಯನ್ನು ಹೊಂದಿದರೆ, ಹನುಮಂತನು-ಅಂಜನಾಸುತನಾದ ಆಂಜನೇಯನು, ಇರ್ದಪನೆ-ಈ ರೀತಿಯಾದುದನ್ನು ಕಂಡು ಸುಮ್ಮನಿರುತ್ತಾನೆಯೆ, ಪೇಳ್-ಹೇಳುವನಾಗು, ಎಂದು-ಎಂಬದಾಗಿ, ಅಬಲೆ-ಅಬಲೆಯಾದ ಜಾನಕಿಯು, ಅಳಲ್ದಳ್-ರೋದಿಸಿದಳು.

ಅ|| ವಿ|| ಕಕುತ್-ಎತ್ತಿನ ಹಿಳಲಿನಲ್ಲಿ, ಸ್ಥ-ಕೂಡತಕ್ಕವನು (ಕಾಕುತ್ಸ್ಥ) ಇದು+ಕಾಡು=ಈ ಕಾಡು ಗಮಕ ಸ. ಉಗ್ರವಾದ+ಜಂತುಗಳು=ಉಗ್ರ ಜಂತುಗಳು ವಿ. ಪೂ. ಕ. ಕಿಂ-ಹೇಳಿದ ಕಾರ್ಯವನ್ನು, ಕರ-ಮಾಡತಕ್ಕವನು, (ಸೇವಕ) ಅಂಜನೆಯ+ಸುತ=ಅಂಜನಾಸುತ ಷ. ತ. ||೨೫||

ಟೀ|| ಆರು-ಯಾರು ತಾನೆ, ಇರ್ದು-ಇದ್ದುಕೊಂಡು, ಏಗೈವರು-ಏನುತಾನೆ ಮಾಡಲಾಪರು, ಇದು-ಈ ವನವಾಸವು, ತನ್ನ-ನನ್ನಯ, ಮರುಳಾಟಂ-ಅಜ್ಞಾನದಿಂದುಂಟಾದ ವಿಲಾಸವು, ಆ ರಾವಣನ-ಆ ಪ್ರಸಿದ್ಧನಾದ ದಶಕಂಠನ, ತಮ್ಮಂ-ಸ

ಡಿದನು ಎಂಬ ಮಾತನ್ನು ಮಾತ್ರ ಕೌಸಲ್ಯಾದೇವಿಗೆ ನಿರೂಪಿಸಿ ಆಕೆಯಡಿದಾವರೆಗಳಿಗೆ ನಮಸ್ಕರಿಸಿದೆನೆಂದು ಹೇಳೆನುತ ಕುರಂಗಾಕ್ಷಿಯಾದ ಜಾನಕಿಯು ಪ್ರಲಾಪಿಸಿದಳು ||೨೪|| ಎಲೈ ಬಾಲನಾದ ಲಕ್ಷ್ಮಣನೇ! ಇನ್ನು ಏಕೆ ಸಾವಕಾಶಮಾಡುತ್ತ ಇಲ್ಲಿಯೇ ನಿಂತಿರುತ್ತಿ? ಹಾಗೆ ಸಾವಕಾಶಮಾಡಿದ್ದೆಯಾದರೆ ರಘುಕುಲಲಲಾಮನು ಕೋಪಿಸುವದಿಲ್ಲವೆ? ನನಗಾದರೋ ಈ ಮಹದರಣ್ಯದಲ್ಲಿ ಉಗ್ರಜಂತುಗಳಾದ ಹುಲಿ, ಕರಡಿ, ಸಿಂಹಾದಿಗಳು ಸಹವಾಸಕ್ಕಿರುವವು. ಅಯೋಧ್ಯಾನಗರದಲ್ಲಿಯಾದರೊ ಶ್ರೀರಾಮಚಂದ್ರನು ಏಕಾಂಗಿಯಾಗಿರುವನು, ಆತನ ನೆರವಿಗೆ ಜಾಗ್ರತೆಯಿಂದ ಹೊರಡು. ಲೋಕದಲ್ಲಿ ಪ್ರಭುತ್ವಮಾಡತಕ್ಕವನು ಏನು ಕೆಲಸ ಮಾಡಿದಾಗ್ಯೂ ಬೇಕು ಬೇಡೆನ್ನುವರು ಆರುಂಟು (ಈ ಕಾರ್ಯಯುಕ್ತವು, ಈ ಕಾರ್ಯ ಆಯುಕ್ತವು ಎಂಬರು ಅರಿರ್ಪರು) ಭರತ ಶತ್ರುಘ್ನಾದಿಗಳು ಈ ಅಕೃತ್ಯಕ್ಕೆ ಒಳಗಾದರೇ! ಆಂಜನೇಯನು ನನ್ನನ್ನು ಈ ಕಾಡುಪಾಲು ಮಾಡಲು ಒಪ್ಪಿದನೇ! ಹಾ ವಿಧಿಯೇ! ಎಂದು ಶೋಕಿಸುತ್ತಾ ರೋದಿಸಿದಳು ||೨೫|| ಇನ್ನು ಯಾರು ಇದ್ದರೆ ತಾನೇ ಏಗೈವರು? ರಾಕ್ಷಸಾಧಿಪನಾದ ವಿಭೀಷಣನು ಎಂಥಾ ಪುಣ್ಯಶಾಲಿ ಮತ್ತು ದಯಾಳುವು. ಅಂಥವನು ಈ ಕಾರ್ಯಕ್ಕೊಳಗಾದನೆ (ಹೆಂಗಸರು ಅಬಲೆಯರು ಎಂಬುದನ್ನೇನಾದರೂ ತಿಳಿದಿರುವನೆ) ಅಗ್ರಜನಾದ ವಾಲಿಯಲ್ಲಿ ಮಹಾಗ್ರಹಯುತನಾದ ಸುಗ್ರೀವನು ಈ ಕಾರ್ಯಕ್ಕೆ

ದಸುಗ್ರೀವನೆಂಬವನಂಗೆ || ಕಾರುಣ್ಯಮಿರ್ದಪುದೆಮುತ್ತುಳಿದಮಂತ್ರಿಗಳ | ದಾರುಂಟುಪೇಳುವರೆಸೌಮಿತ್ರಿನೀನೊಪ್ಪಿ | ಘೋರಾಟವಿಗೆಕೊಂಡುಬಂದೆಕಳುಪುವೊಡಿನ್ನೊರಲ್ದೊಡೇನಹುದೆಂದಳು || ೨೬ || ಕಡೆಗೆಕರುಣಾಳರಾಘವನಲ್ಲಿತಪ್ಪಿಲ್ಲ | ಕಡು ಪಾತಕಂಗೈದುಪೆಣ್ಣಾಗಿಜನಿಸಿತ | ನ್ನೊಡಲಂಪೊರೆವುದೆನ್ನೊಳಪರಾಧಮುಂಟುಸಾಕಿಲ್ಲಿರಲ್ಬೇಡನೀನು || ನಡೆಪೋಗುನಿಲ್ಲದಿ ನಿನಗೆಮಾರ್ಗದೊಳಾಗ | ಲಡಿಗಡಿಗೆಸುಖಮೆಂದುಸೀತೆಕಂಬನಿಗಳಂ | ಮಿಡಿದಾರ್ತೆಯಾಗಿರಲ್ಸೌಮಿತ್ರಿನುಡಿದನಾವಿಪಿನದಭಿ ಮಾನಿಗಳ್ಗೆ || ೨೭ || ಎಲೆವನಸ್ಥಳಗಳಿರವೃಕ್ಷಂಗಳಿರಮೃಗಂ | ಗಳಿರಕ್ರಿಮಿಕೀಟಂಗಳಿರಪಕ್ಷಿಗಳಿರಲತೆಗಳಿರತೃಣಗುಲ್ಮಂಗಳಿರ

---

ಹೋದರನಾದ ವಿಭೀಷಣನು, ಐಸಲೆ-ಅಲ್ಲವೆ ಎಂದರೆ ಸಾಮಾನ್ಯನೆ, (ಈ ರೀತಿಯಾದ ಕಾರ್ಯಕ್ಕೆ ತಡೆಮಾಡದೆ ಒಪ್ಪಿದನೆ) ಭೀರುಗಳಂ-ಹೆದರಿಕೆಯುಳ್ಳ ಸ್ತ್ರೀಯರನ್ನು, ಅರಿದಪನೆ-ತಿಳಿದುಕೊಂಡಿರುತ್ತಾನೆಯೆ, ಸೋದರಂ-ಅಗ್ರಜನಾದ ವಾಲಿಗೆ, ಉರೆ-ಬಹಳವಾಗಿ, ಮುಳಿದ-ಕೋಪಗೊಂಡ, ಸುಗ್ರೀವಂ-ಸುಗ್ರೀವನು, ಎಂಬ-ಎನ್ನುವ, ಅವಂಗೆ-ಅವನಿಗಾದರೂ, ಕಾರುಣ್ಯಂ-ಕೃಪೆಯು, ಇರ್ದಪುದೆ - ಇರುತ್ತದೆಯೆ, ಮತ್ತೆ - ಇನ್ನೂ, ಉಳಿದ - ಬಾಕಿಯಾದ, ಮಂತ್ರಿಗಳು - ಅಮಾತ್ಯರು, ಆರುಂಟು - ಇನ್ನು ಯಾರಿರುತ್ತಾರೆ, (ಇಂತಹ ಕಾರ್ಯ ಮಾಡಬಾರದೆಂದು ಹೇಳುವರು ಯಾರುಂಟು) ಪೇಳುವರೆ-ಮಾಡಬಹುದು ಮಾಡಬಾರದು, ಎಂದು ಹೇಳಬಲ್ಲರೆ, ನೀಂ-ನೀನಾದರೂ, ಸೌಮಿತ್ರಿ-ಲಕ್ಷ್ಮಣನೆ, ಒಪ್ಪಿ-ಶ್ರೀರಾಮನ ಮಾತಿಗೆ ಅನುಮೋದಿಸಿ, ಘೋರಾಟವಿಗೆ-ಭಯಂಕರವಾದ ಅರಣ್ಯಕ್ಕೆ, ಕಳುಪುವೊಡೆ-ಕಳುಹಿಸಲಾಗಿ, (ಶ್ರೀರಾಮನು ಒಪ್ಪಿ ಕಳುಹಿಸಲು) ಕೊಂಡುಬಂದೆ-ಎನ್ನಂ ಕರೆದುಕೊಂಡು ಬಂದವನಾದೆ, ಇನ್ನು-ಇನ್ನುಮೇಲೆ, ಒರಲ್ದೊಡೆ-ದುಃಖದಿಂದ ಸಂತಾಪಪಟ್ಟರೆ, ಏಂ-ಏನುತಾನೆ, ಅಹುದು-ಆದೀತು, ಎಂದಳು-ಎಂಬದಾಗಿ ಹೇಳಿದಳು ||

ಅ|| ವಿ|| (ಸಹ + ಉದರ = ಸಹೋದರ, ಗುಣ. ಸಂ.) ಭೀರು-ನರಿ, ಹೇಡಿ, ಪುಕ್ಕಿ, ಹೆಂಗಸು. ಭುಜ-ತೋಳು. ಭುಜಂಗ-ಸರ್ಪ, ವಿಟ. ಭೂದಾರ-ಅರಸ, ಹಂದಿ. ಸು-ಒಳ್ಳೆ, ಗ್ರೀವ-ಕಂಠವುಳ್ಳವನು. ||೨೬||

ಟೀ|| ಕಡೆಗೆ - ಕೊನೆಗೆ ಯೋಚಿಸಿದುದೇಯಾದರೆ, ರಾಘವಂ - ಶ್ರೀರಾಮಮೂರ್ತಿಯು, ಕರುಣಾಳು - ಕೃಪಾಳುವಾದವನು, ಅಲ್ಲಿ-ಅ ಶ್ರೀರಾಮಚಂದ್ರನಲ್ಲಿ, ತಪ್ಪಿಲ್ಲ-ಯಾವ ತಪ್ಪಿತವೂ ಕಾಣಲಿಲ್ಲ, ಕಡು-ಅತ್ಯಧಿಕವಾದ, ಪಾತಕಂ - ಕೊಲೆಯನ್ನು, ಗೈದು-ಮಾಡಿದವಳಾಗಿ, ಪೆಣ್ಣಾಗಿ-ಸ್ತ್ರೀತ್ವವನ್ನು ಹೊಂದಿ, ಜನಿಸಿ-ಉದ್ಭವಿಸಿ, ತನ್ನ-ನನ್ನ, ಒಡಲಂ - ದೇಹವನ್ನು, ಪೊರೆವುದು-ಸಲಹಿಕೊಳ್ಳುವುದು, ಎನ್ನೊಳ್-ಅಬಲೆಯಾದ ನನ್ನಲ್ಲಿಯೇ, ಅಪರಾಧಂ-ತಪ್ಪು, ಉಂಟು-ಇರುತ್ತದೆ, ಸಾಕು-ಈ ರೀತಿಯಾದ ಪ್ರಸಕ್ತಿಬಿಡು, ಇಲ್ಲಿ-ಈ ಅರಣ್ಯದಲ್ಲಿ, (ಎನ್ನ ಬಳಿಯಲ್ಲಿ) ಇರಲ್ಬೇಡ-ನಿಲ್ಲಬೇಡ, ನೀನು-ನೀನಾದರೂ, ನಡೆ-ಶ್ರೀರಾಮನ ಬಳಿಗೆ ಹೊರಟುಹೋಗು, ನಿಲ್ಲದಿರು-ನಿಂತುಕೊಳ್ಳಬೇಡ, (ಕಾಲವಿಳಂಬ ಮಾಡಬೇಡ) ಮಾರ್ಗದೊಳ್-ಹಾದಿಯಲ್ಲಿ, ನಿನಗೆ-ನಿನಗಾದರೊ, ಅಡಿಗಡಿಗೆ-ಬಾರಿಬಾರಿಗೂ, ಸುಖಂ-ಸೌಖ್ಯಸಂಪತ್ತು, ಆಗಲಿ-ಉಂಟಾಗಲಿ, ಎಂದು-ಎಂಬದಾಗಿ, ಸೀತೆ-ಭೂಮಿಜೆಯಾದ ಜಾನಕಿಯು, ಕಂಬನಿಗಳಂ-ನೇತ್ರೋದಕಗಳನ್ನು, ಮಿಡಿದು-ಹಾಕುತ್ತ, ಅಥವಾ ಸುರಿಸಿಕೊಂಡು, ಆರ್ತೆಯಾಗಿ-ದುಃಖದಿಂದ ದೀನಳಾಗಿ, ಇರಲ್-ಇರುತ್ತಿರಲು, ಸೌಮಿತ್ರಿ-ಸುಮಿತ್ರಾದೇವಿಯ ಮಗನಾದ ಲಕ್ಷ್ಮಣನು, ಆ ವಿಪಿನದ-ಆ ಅರಣ್ಯದ, ಅಭಿಮಾನಿಗಳ್ಗೆ-ಅಭಿಮಾನದೇವತೆಗಳಿಗೆ, ನುಡಿದನು-ಈ ರೀತಿಯಾಗಿ ಆಡಿದನು ||

ಅ|| ವಿ|| (ಕಣ್+ಪನಿ=ಕಂಬನಿ, ಬ. ಕಾರಾದೇಶಸಂಧಿ.) ಅಡಿ-ಪಾದ, ಮಡಿ - ಒಗೆದ ವಸ್ತ್ರ, ಹಿಡಿ - ಮುಷ್ಟಿ, ಪಿಡಿ-ಹೆಣ್ಣಾನೆ, ಭೀಷಣ-ಭಯಂಕರ, ವಿಭೀಷಣ-ರಾವಣನ ತಮ್ಮ, ಪಣ್-ಹಣ್ಣು, ಪೆಣ್-ಹೆಂಗಸು ||೨೭||

ಟೀ|| ಸೌಮಿತ್ರಿ - ಸುಮಿತ್ರೆಯ ಮಗನಾದ ಲಕ್ಷ್ಮಣನು, ಕೈಮುಗಿದುಕೊಂಡು - ಕೈಯನ್ನು ಜೋಡಿಸಿಕೊಂಡು,

---

ಒಳಗಾದನೆ? ಆತನಿಗಾದರೂ ದಯಬರಲಿಲ್ಲವೆ (ಇಂತಹ ಘೋರಕಾರ್ಯಮಾಡಬಹುದೆಂದು ಒಪ್ಪಿದನೆ) ಮತ್ತು ಇವರೂ ಅಲ್ಲದೆ ಇತರ ಮಹಾ ಮಹಾ ಮಂತ್ರಿ ಸಚಿವಾದಿಗಳು ಈ ಕಾರ್ಯಕ್ಕೆ ಒಪ್ಪಿ ಸುಮ್ಮನಿರುತ್ತಾರೆಯೆ? ಈ ಮಹಾಶಯರ ಅಭಿಮತವನ್ನು ಕೇಳುವುದರಿಂದೇನು ಫಲ? ನೀನೇ ಒಪ್ಪಿ ನನ್ನನ್ನು ಈ ಘೋರಾರಣ್ಯಕ್ಕೆ ಕರೆದುತಂದು ಬಿಟ್ಟಮೇಲೆ ಯಾರನ್ನು ತಾನೆ ಏಕೆ ನಿಂದಿಸಬೇಕು? ನಾನು ಸುಮ್ಮನೆ ಗೋಳಾಡುವುದರಿಂದೇನೂ ಫಲವಿಲ್ಲವೆಂದು ಹೇಳಿದ್ದಲ್ಲದೆ ||೨೬|| ಕಡೆಗೆ ಕರುಣಾಳುವಾದ ಶ್ರೀರಾಘವೇಶ್ವರನಲ್ಲಿ ತಿಲಾಂಶವಾದರೂ ತಪ್ಪಿಲ್ಲ. ಮಹಾ ಪಾತಕವನ್ನು ಗೈಯ್ದು ಪೆಣ್ಣಾಗಿ ಹುಟ್ಟಿ ಎನ್ನ ಹೊಟ್ಟೆಯನ್ನು ಹೊರೆದುಕೊಳ್ಳುವುದೇ ನನ್ನಲ್ಲಿರುವ ಅಪರಾಧವು. ಇನ್ನು ನಾನು ಏಕೆ ಚಿಂತಿಸಲಿ. ನೀವುಗಳು ಈ ಪರಿಯಾಗಿ ಮಾಡಿದ ಸಹಾಯಕ್ಕೆ ಕೃತಜ್ಞಳಾಗಿರುವೆನು. ಈ ಮಹಾರಣ್ಯದಲ್ಲಿರಬೇಡ, ನಡೆ, ಹೊರಡು, ನಿನಗೆ ಮಾರ್ಗದಲ್ಲಿ ಶುಭಪರಂಪರೆಗಳುಂಟಾಗಲಿ, ನೀನಿಡುವ ಹೆಜ್ಜೆ ಹೆಜ್ಜೆಗೂ ಕ್ಷೇಮವಾಗಲಿ ಎಂಬದಾಗಿ ಜಾನಕಿ ಕಂಬನಿಯನ್ನು ಸುರಿಸುತ್ತಾ ಆರ್ತೆಯಾಗಿರಲು ಸೌಮಿತ್ರಿಯು, ಆ ಮಹಾ

ಪಂಚಭೂತಂಗಳಿರದೆಸೆಗಳಿರಕಾವುದು ‖ ಎಲೆಧರ್ಮದೇವತೆಜಗಜ್ಜನನಿಜಾಹ್ನವಿಯೆ । ಸಲಹಿಕೊಂಬುದುತನ್ನಮಾತೆಯಂಜಾನಕಿಯ । ನೆಲೆತಾಯೆಭೂದೇವಿನಿನ್ನಮಗಳಿಹಳೆಂದುಸೌಮಿತ್ರಿಕೈಮುಗಿದನು ‖೨೮‖ ಮಾಳ್ಕೆಯಿನ್ನಾವುದಿಬ್ಬಗೆಯಾಗಿತನ್ನೊಡಲ । ಸೀಳ್ಕೆಡಹಬೇಡವೆಧರಿತ್ರಿಯೊಳ್ನಿಷ್ಠುರದ । ಬಾಳ್ಕೆಯಂಸುಡಲೆನುತದೇವಿಯಂಬಲವಂದುಲಕ್ಷ್ಮಣಂನಮಿಸಿಬಳಿಕ ‖ ಬೀಳ್ಕೊಂ

ಎಲೆ-ಎಲಾ, ವನಸ್ಥಳಂಗಳಿರ-ಅರಣ್ಯಕ್ಕೆ ಅಭಿಮಾನಿಕಾಲಿಗಳಾದ ದೇವಯೋನಿಗಳಿರಾ! ವೃಕ್ಷಂಗಳಿರಾ-ಶ್ರೇಷ್ಠವಾದ ವೃಕ್ಷಜಾತಿಗಳಿರಾ, ಮೃಗಂಗಳಿರಾ-ವನ ಮೃಗಗಳಿರಾ, (ಪಶ್ವಾದಿ ಮೃಗಜಾತಿಗಳಿರ) ಕ್ರಿಮಿಕೀಟಂಗಳಿರಾ-ಹುಳು ಕೀಟಕ ಮೊದಲಾದ ಸಾಧು ಕ್ರೂರ ಜೀವರಾಶಿಗಳಿರಾ, ಪಕ್ಷಿಗಳಿರಾ-ವಿಹಂಗಗಳಿರಾ, ಲತೆಗಳಿರ-ಬಳ್ಳಿಗಳಿರಾ, ತೃಣ-ಗರಿಕೆಯ ಹುಲ್ಲು, ಗುಲ್ಮಂಗಳಿರಾ-ಪೊದೆ ಮೊದಲಾದವುಗಳಿರಾ, ಪಂಚಭೂತಂಗಳಿರ-ಪೃಥ್ವಿ, ಅಪ್ಪು, ತೇಜಸ್ಸು, ವಾಯು, ಆಕಾಶಾದಿಗಳಿರಾ, ದೆಸೆಗಳಿರ-ದಶದಿಕ್ಕುಗಳಿರಾ, ಎಲೆ-ಎಲೌ, ಧರ್ಮದೇವತೆ-ಧರ್ಮಕ್ಕೆ ಅಧಿದೇವತಾಸ್ವರೂಪಳೇ! ಜಗಜ್ಜನನಿ-ಲೋಕಮಾತೆಯಾದ ಪಾರ್ವತಿಯೆ, ಜಾಹ್ನವಿಯೆ-ಜಹ್ನುಋಷಿಯ ಪುತ್ರಿಯಾದ ಗಂಗಾದೇವಿಯೆ, ತನ್ನ-ಎನ್ನಯ, ಮಾತೆಯಂ- ಜನನಿಯಾದ ಜಾನಕಿಯನ್ನು, ಕಾವುದು-ಸುರಕ್ಷಿತವಾಗಿ ರಕ್ಷಿಸತಕ್ಕದು, ಸಲಹಿಕೊಂಬುದು-ಪರಿಪಾಲನೆಯನ್ನು ಮಾಡತಕ್ಕದ್ದು, ಎಲೆ-ಎಲೌ, ತಾಯೆ-ಮಾತೃಸ್ವರೂಪಳಾದ, ಭೂದೇವಿ-ಭೂಮಿದೇವತೆಯೇ, ನಿನ್ನ-ನಿನ್ನಯ, ಮಗಳು-ಪುತ್ರಿಯಾದ ಸೀತಾದೇವಿಯು, ಇಹಳು-ಇಲ್ಲಿರುವಳು' ಜಾನಕಿಯನು-ಜನಕರಾಯನ ಪುತ್ರಿಯನ್ನು, ಕಾವುದು-ಸಲಹುವುದು, ಎಂದು-ಈ ಪ್ರಕಾರವಾಗಿ ಪ್ರಾರ್ಥಿಸಿಕೊಂಡು, ಕೈಮುಗಿದನು-ಕೈಯನ್ನು ಜೋಡಿಸಿದನು, ಎಂದರೆ ನಮಸ್ಕಾರವನ್ನು ಮಾಡಿದನು.

ಅ‖ ವಿ‖ ಕ್ರಿಮಿಯೂ+ಕೀಟವೂ = ಕ್ರಿಮಿಕೀಟಂಗಳ್ ದ್ವಿ. ದ್ವಂ. ಸ. ಜಗತ್+ಜನನಿ = ಜಗಜ್ಜನನಿ ಶ್ಚುತ್ವಸಂಧಿ. ಜಗತ್+ಮಾತೆ=ಜಗನ್ಮಾತೆ ಅನುನಾಸಿಕ ಸಂ. ಪಂಚ ಭೂತಗಳು-ಪೃಥ್ವಿ, ಅಪ್ಪು, ತೇಜ, ವಾಯು, ಆಕಾಶ. ದಶದಿಕ್ಕುಗಳು-ಇಂದ್ರ, ವಹ್ನಿ, ಪಿತೃಪತಿ, ನಿರರುತಿ, ವರುಣ, ಮರುತ್, ಕುಬೇರ, ಈಶಾನ್ಯ, ಮೇಲು, ಕೆಳಸು. ಜನ್ಹುಋಷಿಯ ಮಗಳು ಜಾಹ್ನವಿ. ಪಂಚಪಿತೃ-ಜನಕ, ಉಪನೇತ, ಕನ್ಯಾದಾತ, ಅನ್ನದಾತ, ಭಯತ್ರಾತ. ಪಂಚನದ-ಶತದ್ರು, ವಿಪಾಶ, ಇರಾವತೀ, ಚಂದ್ರಭಾಗ, ವಿತಸ್ತಾ. ಪಂಚಲಕ್ಷಣ-ಪೌರಾಣದ್ದು ಸರ್ಗ, ಪ್ರತಿಸರ್ಗ, ವಂಶ, ಮನ್ವಂತರ, ವಂಶಾನುಚರಿತ ‖೨೮‖

ಟೀ‖ ಆಗ-ಆ ತರುವಾಯ, ಲಕ್ಷ್ಮಣಂ- ಲಕ್ಷ್ಮಣಸ್ವಾಮಿಯು, ಮಾಳ್ಕೆ- ಮಾಡೋಣವು, (ಮಾಡತಕ್ಕ ಕಾರ್ಯವು) ಇನ್ನಾವುದು-ಮತ್ತೆ ಯಾವುದು ತಾನೆ ಇರುತ್ತದೆ, ಇಬ್ಬಗೆಯಾಗಿ-ಎರಡು ಭಾಗವಾಗಿ, ತನ್ನ-ನನ್ನ, ಒಡಲ-ದೇಹವನ್ನು, ಸೀಳಿ-ಬೇರ್ಪಡಿಸಿ, ಕೆಡಹಬೇಡವೆ-ಬೀಳಿಸಬೇಡವೆ. ಧರಿತ್ರಿಯೋಳ್-ಪೃಥ್ವಿಯಲ್ಲಿ, ನಿಷ್ಠುರದ-ಅತಿ ಕಠಿಣವಾದ, ಬಾಳ್ಕೆಯಂ-ಜೀವಿಸೋಣವನ್ನು, ಸುಡಲಿ-ಸುಟ್ಟುಬಿಡಲಿ, ಎನುತ-ಎಂಬದಾಗಿ ಹೇಳುತ್ತ, ದೇವಿಯಂ-ಭೂಮಿಜೆಯಾದ ಜಾನಕಿಯನ್ನು, ಬಲವಂದು-ಪ್ರದಕ್ಷಿಣೆಯನ್ನು ಮಾಡಿ, ನಮಿಸಿ-ನಮಸ್ಕಾರವನ್ನು ಮಾಡಿ, ಬಳಿಕ-ಅನಂತರದಲ್ಲಿ, ಲಕ್ಷ್ಮಣಂ-ಲಕ್ಷ್ಮಣಸ್ವಾಮಿಯು, ಬೀಳ್ಕೊಂಡು-ಆಜ್ಞೆಯನ್ನು ಹೊಂದಿದವನಾಗಿ, ಹಿಂದಹಿಂದಕ್ಕೆ-ಸೀತೆಯ ಕಡೆಗೆ, ಮನಂ-ಮನಸ್ಸು, ನೀಳ್ಕೊಳಿಗೊಳಲ್ಕೆ-ಕಳವಳಪಡುತ್ತಿರಲಾಗಿ, ಎಂದು-ಎಂದಿಗೂ, (ಸರ್ವದಾ) ಅಗಲದ-ಬೇರೆಯಾಗಿರದ, ಅಣ್ಣನ-ಅಗ್ರಜನಾದ ರಾಮಚಂದ್ರನ, ಕಡೆಗೆ-ಬಳಿಗೆ, ನಡೆಯಲ್ಕೆ-ಪ್ರಯಾಣಮಾಡಲಾಗಿ, ಧೂಳ್-ಧೂಳು, (ರಜಸ್ಸು) ಕಾಯದೋಳ್-ದೇಹದಲ್ಲಿ, ಪತ್ತಿ-ಹತ್ತಿಕೊಂ

ರಣ್ಯದ ಅಭಿಮಾನಿ ದೇವತೆಗಳಿಗೆ, ಈ ರೀತಿಯಾಗಿ ಹೇಳಿದನು ‖ ೨೭ ‖ ಎಲೆ ವನಸ್ಥಳಂಗಳಿರಾ, ವೃಕ್ಷಂಗಳಿರಾ, ಪಕ್ಷಿಗಳಿರಾ, ಲತೆಗಳಿರಾ, ತೃಣಗುಲ್ಮಂಗಳಿರಾ, ಪೃಥ್ವಿ, ಅಪ್, ತೇಜ, ವಾಯು, ಆಕಾಶಗಳಿರಾ, ದೆಸೆಗಳಿರಾ, ಎಲೆ ಧರ್ಮದೇವತೆ, ಜಗಜ್ಜನನಿ ಪಾವರ್ತಿಯೇ ಜಾಹ್ನವಿಯೇ ಎನ್ನ ಜನನಿಯಾದ ಜಾನಕಿಯನ್ನು ಪ್ರಾಣದಾನ ಮಾಡಿ ಕಾಪಾಡಿಕೊಂಡು ಬರತಕ್ಕದ್ದು, ಸಲಹಿಕೊಳ್ಳುವದು, ಎಲೆ ಮಾತೆಯೆ ಭೂದೇವಿಯೆ! ನಿನ್ನ ಮಗಳು ಸೀತಾದೇವಿಯು ಇಲ್ಲಿ (ಈ ಅರಣ್ಯ ಪ್ರದೇಶದಲ್ಲಿ) ಇರುತ್ತಾಳೆ, ಪ್ರೀತಿಯಿಂದ ನಿನ್ನ ಮಗಳನ್ನು ಸಲಹಿಕೊಳ್ಳತಕ್ಕದ್ದು, ಈ ರೀತಿಯಾಗಿ ಆಯಾ ದೇವತಾಭಿಮಾನಿಗಳಿಗೆ ಅಭಿವಂದಿಸಿ. ಮನದಲ್ಲಿ ಸಂಕಟಪಟ್ಟು ಅತ್ಯಧಿಕಮಾದ ವ್ಯಾಮೋಹದಿಂದ ಜಾನಕಿಯನ್ನಗಲಿ ಹೋಗಲಾರದೆ, ಚಿಂತಾಸಮುದ್ರದಲ್ಲಿ ಮಗ್ನನಾದನು ‖೨೮‖ ಮತ್ತೆ ಸೌಮಿತ್ರಿಯು ನಾನಾ ಬಗೆಯಾಗಿ ಹಂಬಲಿಸಿಕೊಂಡು ಅತಿ ದುಃಖದಿಂದ ಕಲಕಿದ ಹೃದಯನಾಗಿ ನನಿಗೆ ಮತ್ತೆ ಯಾವುದು ಕಾರ್ಯವಿರುತ್ತದೆಯೋ ಕಾಣೆನು. ಮಾಡಬಾರದ ಅಕಾರ್ಯವೆಲ್ಲ ಮಾಡಿದ್ದಾಯಿತು, ನನ್ನ ದೇಹವನ್ನು ಎರಡು ಪಾಲು ಮಾಡಿ ಕೆಡಹಬೇಡವೆ. ಭೂಮಿಯಲ್ಲಿ ಅತಿಕಾಠಿಣ್ಯದಿಂದ ಮಾತನ್ನಾಡುವವರ ಜೀವಿಸುವಿಕೆಯನ್ನು ಸುಡಬೇಡವೆ! ಎಂದು ಪ್ರಲಾಪಿಸುತ್ತ ಸೀತಾದೇವಿಯನ್ನು ಪ್ರದಕ್ಷಿಣೆಮಾಡಿ ನಮಸ್ಕರಿಸಿ ಅನುಜ್ಞೆಯನ್ನು ಹೊಂದಿ ಹಿಂದಕ್ಕೆ ಎಂದರೆ ಸೀತಾದೇವಿಯ ಕಡೆಗೇ ಮನವು ಎಳೆಯುತ್ತಿರಲು ಅನವರತವೂ ಅಗಲದಿದ್ದ ಶ್ರೀರಾಘವೇಶ್ವರನ ಕಡೆಗೆ ಹೊರಡಲು ಧೂಳು

ಡುನಡೆಯಲ್ಕೆಹಿಂದಹಿಂದಕೆಮುನಂ | ನೀಳ್ಕೊಳಿಗೊಳಲ್ಕೆಂದುಮುಗಲದಣ್ಣನಕಡೆಗೆ | ಧೂಳ್ಕಾಯದೋಳ್ಪ್ರತಿ ಪೊರಳ್ವಸೀತೆಯ ಕಡೆಗೆತೂಗುಯ್ಯಲಿಯೊಲಾದನು || ೨೯ || ನಡೆಗೊಳಲ್ಕಂಡುಬಾಯಾರ್ವಳಂಚೀರ್ವಳಂ | ಕಡಲಿಡುವಕಂಬನಿಯೊಳಾಳ್ವಳಂ ಬೀಳ್ವಳಂ | ಪುಡಿಯೋಳ್ಪೊರಳ್ದು ಬಸವಳಿವಳಂಸುಳಿವಳಂಭರತಾವರಜನಗಲ್ದು || ಅಡಿಗಡಿಗೆತಿರುತಿರುಗಿನೋಡುವಂಬಾಡು ವಂ | ಬಿಡದೆಬಿಸುಸುಯ್ಯುಬೆಂಡಾದಪಂಪೋದಪಂ | ಪೊಡೆಮರಳ್ವಂನಿಲ್ವನಳಲುವಂಬಳಲುವಂಬಟ್ಟೆಯೋಳ್ದಿಟ್ಟಗೆಟ್ಟು ||೩೦|| ತಾಯೆನೆಳಗರುಬಿಚ್ಚುವಂತೊಯ್ಯನೊಯ್ಯನ | ತ್ಯಾಯಾಸದಿಂದಗಲ್ದುಸುರನದಿಯಂದಾಂಟ | ರಾಯಕೇಳ್ದುಖಾರ್ತನಾಗಿಸೌಮಿ

---

ತ್ರ, ಪೊರಳ್ವ–ನೆಲದಲ್ಲಿ ಹೊರಳಾಡುತ್ತಿರುವ, ಸೀತೆಯಕಡೆಗೆ-ಜಾನಕಿಯ ಕಡೆಗೂ, ತೂಗುಯ್ಯಲಿಯೊಲು–ಹಿಂದಕ್ಕೂ ಮುಂದಕ್ಕೂ ತೂಗಾಡುತ್ತಿರುವ ಉಯ್ಯಾಲೆಮಣೆಯಹಾಗೆ, (ಎಂದರೆ ಒಂದಾವರ್ತಿ ಶ್ರೀ ರಾಮನ ಕಡೆಗೂ ಮತ್ತೊಂದಾವರ್ತಿ ಸೀತೆಯ ಕಡೆಗೂ ಮನವುಳ್ಳವನು) ಆದಂ–ಮನಸ್ಸುಳ್ಳವನಾದನು ||

ಅ|| ವಿ|| ತೂಗುವ + ಉಯ್ಯಲಿ = ತೂಗುಯ್ಯಲಿ, ವಿ. ಪೂ. ಕ. ಧೂಳಿನ + ಕಾಯ = ಧೂಳ್ಕಾಯ, ಷ. ತ. ಕ್ರೂರ–ತ್ಸ. ಕೂರ-ದ್ಭ. ಮಾನ್ಯತಾ–ತ್ಸ. ಮನ್ನಣೆ–ದ್ಭ. ||೨೯||

ಟೀ|| ಲಕ್ಷ್ಮಣಂ – ಲಕ್ಷ್ಮಣನು, ನಡೆಗೊಳಲ್ – ಶ್ರೀ ರಾಮನ ಬಳಿಗೆ ಹೋಗುತ್ತಿರಲಾಗಿ, ಕಂಡು – ಈಕ್ಷಿಸಿ, ಬಾಯಾರ್ವಳಂ–ಬಾಯಿ ಒಣಗಿ ಹೋಗುತ್ತಿರುವವಳಾದ, ಚೀರ್ವಳಂ–ವ್ಯಥೆಯಿಂದ ಪ್ರಲಾಪಿಸುವಳಾದ, ಕಡಲಿಡುವ-ಜಲಧಿಯಂತೆ ಪೆರ್ಚುತ್ತಿರುವ, ಕಂಬನಿಯೊಳು–ಶೋಕಬಾಷ್ಪದಿಂದ, ಆಳ್ವಳಂ–ತುಂಬಿರುವವಳಾದ, ಬೀಳ್ವಳಂ-ಕೆಳಕ್ಕೆ ಬೀಳುತ್ತಿರುವ, ಪುಡಿಯೋಳ್–ಧೂಳಿನಲ್ಲಿ, ಪೊರಳ್ದು–ಹೊರಳಾಡಿ, ಬಸವಳಿವಳಂ-ಆಯಾಸಪಡುವವಳಾದ, (ಶ್ರಮಪಡುವವಳಾದ) ಸುಳಿವಳಂ-ಸಂಚಾರ ಮಾಡುವವಳಾದ, (ವ್ಯಥೆಯಿಂದ ದಿಕ್ಕುತೋರದೆ ಅಲ್ಲಿಂದಲ್ಲಿಗೆ ತಿರುಗಾಡುವವಳಾದ) ಆಕೆಯಂ-ಆ ಜಾನಕಿಯನ್ನು, ಭರತ–ಭರತಂಗೆ, ಅವರಜಂ–ಸಹೋದರನಾದ ಲಕ್ಷ್ಮಣಸ್ವಾಮಿಯು, ಅಗಲ್ದು-ಬೇರೆಯಾಗಿ ಅಗಲಿ, ಅಡಿಗಡಿಗೆ-ಆಗಾಗ್ಗೆ ಅಥವಾ ತಾನಿಡುವ ಹೆಜ್ಜೆಬೆಜ್ಜೆಗೂ, ತಿರುಗಿತಿರುಗಿನೋಡುವಂ–ಹಿಂತಿರುಗಿ ಈಕ್ಷಿಸುವವನಾದನು, ಬಾಡುವಂ-ಕಾಂತಿಹೀನನಾದವನು, ಬಿಡದೆ-ತಪ್ಪದೆ, ಬಿಸುಸುಯ್ದು-ಬಿಸಿಯಾದ ಉಸಿರನ್ನು ಬಿಟ್ಟು, ಬೆಂಡಾದಪಂ–ನಿತ್ರಾಣನಾದನು, ಪೋದಪಂ–ರಾಮನಬಳಿಗೆ ಹೋಗುತ್ತಿರುವನು, ಪೊಡೆ-ಉದರದಲ್ಲಿ, ಮರಳ್ವಂ–ಕುದಿಯುತ್ತಿದ್ದನು, ನಿಲ್ವಂ-ಸೀತಾದೇವಿಯ ಕಡೆ ಜ್ಞಾಪಿಸಿಕೊಂಡು ನಿಂತುಕೊಳ್ಳುತ್ತಿರುವವನಾದನು, ಅಳಲುವಂ–ಸಂತಾಪ ಪಡುತ್ತಿರುವನು, ಬಟ್ಟೆಯೋಳ್–ಹಾದಿಯಲ್ಲಿ, ದಿಟ್ಟಗೆಟ್ಟು-ಧೈರ್ಯಗುಂದಿದವನಾಗಿ, ಬಳಲುವಂ-ಆಯಾಸವನ್ನು ಹೊಂದುತ್ತಿದ್ದನು ||

ಅ|| ವಿ|| ಬಳಲು–ಆಯಾಸಪಡು, ತೊಳಲು-ಸಂಚರಿಸು, ಬೆಚ್ಚನೆಯ+ ಸುಯ್ = ಬಿಸುಸುಯ್, ವಿ. ಪೂ. ಕ. ನಿಡಿದು+ಉಸಿರು=ನಿಟ್ಟುಸಿರು, ವಿ. ಪೂ. ಕ. ಶಕ್ತಿಯಿಲ್ಲದ್ದು–ನಿಶ್ಶಕ್ತಿ, ಅಡಿಗೆ+ಅಡಿಗೆ=ಅಡಿಗಡಿಗೆ ಎಕಾರ ಲೋಪ || ೩೦ ||

ಟೀ|| ರಾಯ–ಎಲೈ ಜನಮೇಜಯ ರಾಯನೇ, ಆಲಿಸು–ಕೇಳು, ಸೌಮಿತ್ರಿ–ಲಕ್ಷ್ಮಣ ಸ್ವಾಮಿಯು, ಎಳೆಗರು–ಎಳೆಯದಾದ ಕರುವು, ತಾಯುಂ–ಜನನಿಯನ್ನು, ಬಿಚ್ಚುವಂತೆ– ಬೇರ್ಪಡಿಸುವಹಾಗೆ, ಒಯ್ಯನೊಯ್ಯನೆ – ಮೆತ್ತ ಮೆತ್ತಗೆ, ಅತ್ಯಾಯಾಸದಿಂದ-ಅಧಿಕವಾದ ತೊಂದರೆ ಅಥವಾ ಶ್ರಮೆಯಿಂದ, ಅಗಲ್ದು–ಅಗಲಿಕೆಯನ್ನು ಹೊಂದಿ, ಸುರನದಿಯಂ–ದೇವಗಂಗಾನದಿಯನ್ನು, ದಾಂಟಿ–ಅತಿಕ್ರಮಿಸಿ, ದುಃಖಾರ್ತನಾಗಿ-ವ್ಯಥೆಯಿಂದ ಬಾಧಿಸಲ್ಪಟ್ಟವನಾಗಿ, ಅತ್ತಲ್–ಆಶ್ರೀರಾಮನಕಡೆಗೆ, ಸಾ

---

ಶರೀರದಲ್ಲಿ ತುಂಬಿಕೊಂಡು ನೆಲದಲ್ಲಿ ಹೊರಳಾಡುವ ಜಾನಕಿಯ ಕಡೆಗೆ ತೂಗುಯ್ಯಲೆಯೋಪಾದಿಯಲ್ಲಿ ಸೀತೆಯಕಡೆಗೂ ಶ್ರೀ ರಾಮಚಂದ್ರನ ಕಡೆಗೂ ಮನಸುಳ್ಳವನಾದನು ||೨೯|| ಜಾನಕಿಯ ಅಪ್ಪಣೆಯಂ ಪಡೆದು ಹೋಗುತ್ತಿರಲು ಕಂಡು ಬಾಯಾರಿಕೆಯಿಂದ ಹೊರಳುತ್ತಿರುವವಳಾದ, ದುಃಖದಿಂದ ಪ್ರಲಾಪಿಸುವವಳಾದ, ಅತಿಯಾಗಿ ಕಣ್ಣೀರಿನಿಂದ ಕೂಡಿದವಳಾದ, ವ್ಯಥೆಯಿಂದ ಕೆಳಕ್ಕೆ ಬೀಳುವವಳಾದ, ಶ್ರೀರಾಮಚಂದ್ರನ ಅತ್ಯಧಿಕವಾದ ಸದ್ಗುಣಾದಿಗಳನ್ನು ಸ್ಮರಿಸಿ ದುಃಖಿಸುವವಳಾದ, ಶರೀರದಲ್ಲಿ ಧೂಳಿಯಿಂದ ವ್ಯಾಪ್ತಳಾಗಿ ಹೊರಳಾಡುವವಳಾದ, ಆಯಾಸಪಡುವವಳಾದ, ಜ್ಞಾನಾಜ್ಞಾನದಿಂದ ಅಲ್ಲಿಂದಿಲ್ಲಿಗೆ ಸಂಚರಿಸುವವಳಾದ ಜಾನಕೀದೇವಿಯನ್ನು ಭರತನ ಸಹೋದರನಾದ ಲಕ್ಷ್ಮಣನು ಅಗಲಿ, ಅಡಿಗಡಿಗೆ ವ್ಯಥೆಯಿಂದ ತಿರುಗಿನೋಡುತ್ತ ಪ್ರಯಾಣ ಮಾಡುತ್ತಿರಲು, ಬಾಡಿದ ಮುಖಕಾಂತಿಯುಳ್ಳವನು, ಆಯಾಸದಿಂದ ಬಳಲಿದವನು, ದುಃಖದಿಂದ ನೊಂದವನು, ಮನದಲ್ಲಿ ಕುದಿಯುತ್ತಿರಲು ಅಲ್ಲಲ್ಲೇ ನಿಲ್ಲುತ್ತಲು, ಹೋಗುತ್ತಲೂ, ಕಂಗೆಟ್ಟು ಶಕ್ತಿಗುಂದಿ ಆಯಾಸ ಪಡುತ್ತಿದ್ದನು ||೩೦|| ಎಳೆಗರುವು ತಾಯಿಯನ್ನು ಅಗಲಿ ಹೋಗುವಂತೆ ಮೆಲ್ಲಮೆಲ್ಲನೆ ಅತ್ಯಾಯಾಸದಿಂದ ಜಾನಕಿಯನ್ನು ಅಗಲಿ, ದೇವಗಂಗಾನದಿಯನ್ನು ದಾಟಿಕೊಂಡು ದುಃಖಾರ್ತನಾಗಿ, ಆ ರಾಮಚಂದ್ರನಕಡೆಗೆ ಸಾಗಿಹೋದನು. ಎಲೈ ಜನಮೇಜಯರಾಯನೇ ಕೇಳು, ಈ ಕಡೆಗೆ

ತ್ರಿಸಾಗಿದನತ್ತಲಿವಳಿತ್ತಲು || ಬಾಯಾರಿಕಂಗೆಟ್ಟುಲಕ್ಷ್ಮಣನತಲೆಮುಸುಳೆ | ಲಾಯೆಂದೊರಲ್ದುಭಯಶೋಕದಿಂಬಸವಳಿದು | ಕಾಯಮಂಮರೆದವನಿಗೊರಗಿದಳ್ಮೂಲಮಂಕೊಯ್ದೆಳೆಯಬಳ್ಳಿಯಂತೆ || ೩೧ || ಅರಸಕೇಳಲ್ಲಿರ್ದಪಕ್ಷಿಮೃಗಜಂತುಗೆ | ಳ್ಧರಣಿಸುತೆಯಂಬಳಸಿನಿಂದುಮೈಯುಡಗಿಜೋ| ಲ್ದಿರದೆಕಂಬನಿಗರೆದುನಿಜವೈರಮಂಮರೆದುಪುಲ್ಮೇವುಗಳನೆತೊರೆದು || ಕೊರಗುತಿರ್ದವು ಕೂಡೆವೃಕ್ಷಲತೆಗಳುಬಾಡಿ | ಸೊರಗುತಿರ್ದುವುಶೋಕಭಾರದಿಂಕಲ್ಲುಗ | ಳ್ಕರಗುತಿರ್ದುವುಜಗದೊಳುತ್ತಮರಹಾನಿಯಂ ಕಂಡುಸೈರಿಸುವರುಂಟೆ || ೩೨ || ಮೊರೆಯಲೊಲ್ಲವುತುಂಬಿಕುಣಿಯಲೊಲ್ಲವುನವಿ | ಲ್ಬೆರೆಯಲೊಲ್ಲವುಕೋಕಿನಡೆಯಲೊಲ್ಲವು

ಗಿದಂ–ಮುಂದರಿದನು, ಇತ್ತಲ್–ಈ ಜಾನಕಿಯು ಕಡೆಯಲ್ಲಿ, ಇವಳ್–ಈ ಭೂಮಿಜೆಯಾದ ಸೀತಾದೇವಿಯು, ಬಾಯಾರಿ–ಬಾಯಿಯಲ್ಲಿ ದ್ರವಗುಂದಿ, ಕಂಗೆಟ್ಟು–ಅಂದಗೆಟ್ಟವಳಾಗಿ, ಲಕ್ಷ್ಮಣನ – ಸೌಮಿತ್ರಿಯ, ತಲೆ–ಶಿರವು, ಮುಸುಳಲ್ – ಕಾಣದಿರಲು, ಆಯೆಂದು–ಅಯ್ಯೋ ಎಂಬದಾಗಿ, ಒರಲ್ದು–ಕೀರಿಟ್ಟು, ಭಯಶೋಕದಿಂದ – ಹೆದರಿಕೆಯಿಂದುಂಟಾದ ದುಃಖದಿಂದ, ಅಥವಾ ಭಯದಿಂದಲೂ, ವ್ಯಥೆಯಿಂದಲೂ, ಅಸವಳಿದು – ಪ್ರಜ್ಞೆತಪ್ಪಿ, (ಮೂರ್ಛೆಯನ್ನು ಹೊಂದಿ) ಕಾಯಮಂ – ಶರೀರವನ್ನು, ಮರೆದು–ಮರೆತು ಹೋಗಿ. ಮೂಲಮಂ–ಬುಡವನ್ನು, (ಬೇರನ್ನು) ಕೊಯ್ದು–ಕಡಿದ, ಎಳೆಯ–ಬಲಿಯದ, ಬಳ್ಳಿಯಂತೆ–ಬಳ್ಳಿಯ ರೀತಿಯಿಂದ, (ಲತೆಯೋಪಾದಿಯಲ್ಲಿ) ಅವನಿಗೆ–ಭೂಮಿಗೆ, ಒರಗಿದಳ್–ಉರುಳಿಕೊಂಡಳು ||

ಅ|| ವಿ|| ಎಳೆಯಕರು, ಎಳೆಗರು, ವಿ. ಪೂ. ಕ. ಗಕಾರ ಆದೇಶ. ಸಂಧಿ (ಅತಿ + ಆಯಾಸ = ಅತ್ಯಾಯಾಸ) ಯಣ್‌ಸಂಧಿ. ಭಯವೂ, ಶೋಕವೂ, ಭಯಶೋಕಗಳು ದ್ವಿ. ದ್ವಂ. ಸ. ||೩೧||

ಟೀ|| ಅರಸ–ರಾಜನಾದ ಎಲೈ ಜನಮೇಜಯರಾಯನೆ, ಕೇಳು–ಆಲಿಸುವನಾಗು, ಅಲ್ಲಿ–ಆ ವನದಲ್ಲಿ, ಇರ್ದ–ವಾಸವಾಗಿದ್ದ, ಪಕ್ಷಿ–ವಿಹಂಗಗಳು, ಮೃಗ–ಜಿಂಕೆಗಳು, ಜಂತುಗಳು–ಇತರ ಕಾಡುಮೃಗಗಳು, ಧರಣಿಸುತೆಯಂ–ಭೂಪುತ್ರಿಯಾದ ಜಾನಕಿಯನ್ನು, ಬಳಸಿ–ಆವರಿಸಿಕೊಂಡು, ನಿಂದು–ನಿಂತುಕೊಂಡು, ಮೈಯುಡುಗಿ–ದೇಹವನ್ನು ಕುಗ್ಗಿಸಿಕೊಂಡು, ಜೋಲ್ದು–ಜೋತು ಹೋಗಿ, ಇರದೆ–ಸುಮ್ಮನಿರದೆ, ಕಂಬನಿಗರೆದು–ಶೋಕಬಾಷ್ಪವನ್ನು ಸುರಿಸಿ, ನಿಜ–ತಮ್ಮಲ್ಲಿರುವ ಸ್ವಾಭಾವಿಕವಾದ, ವೈರಮಂ–ಶತ್ರುತ್ವವನ್ನು, ಮರೆದು – ಮರೆತು ಹೋಗಿ, ಪುಲ್ಮೇವುಗಳನೆ – ಹುಲ್ಲು ಮೊದಲಾದ ತಿಂಡಿಗಳನ್ನೆ, ತೊರೆದು – ತ್ಯಜಿಸಿ, ಕೂಡೆ–ಒಡನೆಯೇ, ಕೊರಗುತಿರ್ದವು–ಸಂತಾಪ ಪಡುತ್ತಿದ್ದವು, ವೃಕ್ಷಲತೆಗಳು, ಮರಗಿಡ ಬಳ್ಳಿ ಆದಿಯಾದವುಗಳು, ಬಾಡಿ–ಸಾರಗುಂದಿ ಒಣಗಿ, ಸೊರಗುತಿರ್ದವು – ಸೊಕ್ಕಿಹೋಗುತ್ತಿದ್ದವು, (ದುಃಖದಿಂದ ಆಯಾಸಪಡುತ್ತಿದ್ದವು) ಶೋಕಭಾರದಿಂ – ವ್ಯಸನಾಧಿಕ್ಯದಿಂದ, ಕಲ್ಲುಗಳ್–ಶಿಲೆಗಳು, ಕರಗುತಿರ್ದವು–ಘನರೂಪದಿಂದ ದ್ರವರೂಪಕ್ಕೆ ಬರುತ್ತಿದ್ದವು, ಜಗದೊಳ್–ಪ್ರಪಂಚದಲ್ಲಿ, ಉತ್ತಮರ – ಸತ್ಪುರುಷರ, (ಶ್ರೇಷ್ಠರಾದವರ) ಹಾನಿಯಂ–ಕೇಡುಕನ್ನು, (ಕೊರತೆಯನ್ನು, ಕುಂದನ್ನು) ಕಂಡು – ಈಕ್ಷಿಸಿ, ಸೈರಿಸುವರು – ಶಾಂತಿಹೊಂದಿರತಕ್ಕವರು, (ಸಮಾಧಾನ ಪಡತಕ್ಕವರು) ಉಂಟೆ – ಇರುತ್ತಾರೆಯೆ? (ಎಂದಿಗೂ ಸಹಿಸಿಕೊಂಡಿರಲಾರರು) ||

ಅ|| ವಿ|| ಧರಣಿಯಸುತೆ – ಧರಣಿಸುತೆ, ಷ. ತ. ಪುಲ್. ಪಾಲ್. ಕಾಲ್ ಈ ರೀತಿ ವ್ಯಂಜನಾಂತ ಶಬ್ದಗಳು, ಹಳೆಗನ್ನಡ ರೂಪಗಳು, ವೃಕ್ಷವೂ, ಲತೆಯೂ, ಇವುಗಳು ವೃಕ್ಷಲತೆಗಳು, ದ್ವಿ. ದ್ವ. ಸ. ||೩೨||

ಟೀ|| ಆಗ–ಜಾನಕಿಯು ಮೂರ್ಛೆಹೋದ ಸಮಯದಲ್ಲಿ, ತುಂಬಿ–ದುಂಬಿಗಳು, (ಅಳಿಗಳು) ಮೊರೆಯಲು–ಝೇಂಕಾರವನ್ನು ಮಾಡಲು, ಒಲ್ಲವು–ಆಶಿಸವು, (ಅಪೇಕ್ಷೆಪಡಲಿಲ್ಲ) ನವಿಲ್–ಶಿಖಿಯು, (ಮಯೂರವು) ಕುಣಿಯಲು – ನರ್ತನಮಾಡಲು,

ಜಾನಕಿಯು ಏಕಾಂಗಿಯಾಗಿ, ಕಲ್ಮರಂಗಳು ಕರಗುವಂತೆ ಅತ್ಯಧಿಕವಾದ ದುಃಖದಿಂದ, ಬಾಯಾರಿ ಕಂಗೆಟ್ಟು ಕಂದಿ, ಕುಂದಿ ಲಕ್ಷ್ಮಣನ ತಲೆಯು ಮರೆಯಾಗಲು ನೋಡಿ, ಹಾಯೆಂದು ಒರಲ್ದು, ಭಯಶೋಕದಿಂದ ಮೂರ್ಛಿತಳಾಗಿ, ಶರೀರವನ್ನೇ ಮರೆತು ಮೂಲವನ್ನು ಕತ್ತರಿಸಿದ ಲತೆಯೋಪಾದಿಯಲ್ಲಿ ನೆಲದಲ್ಲಿ ಬಿದ್ದಳು ||೩೧|| ಎಲೈ ಜನಮೇಜಯ ಕ್ಷಿತೀಶನೆ! ಕೇಳು ಆ ವನದಲ್ಲಿದ್ದ ಪಕ್ಷಿ ಮೃಗ ಜಂತು ಜಾಲಂಗಳೆಲ್ಲವೂ ಜಾನಕಿಯನ್ನು ಬಳಸಿಕೊಂಡು ನಿಂತು ಮೈಯನ್ನು ಕುಗ್ಗಿಸಿ, ಜೋತು ಸುಮ್ಮನಿರದೆ ಕಣ್ಣೀರನ್ನು ಸುರಿಸುತ್ತ ತಮಗೆ ಇತರ ಪ್ರಾಣಿಗಳಲ್ಲಿದ್ದ ಜಾತಿವೈರಗಳನ್ನೆಲ್ಲಾ ಮರೆತುಬಿಟ್ಟು, ಆಹಾರಾದಿಗಳನ್ನೆಲ್ಲಾ ತ್ಯಜಿಸಿ, ಜಾನಕಿಯ ಸಂತಾಪವನ್ನು ನೋಡಿ ತಾವೂ ಕೊರಗುತ್ತಿದ್ದವು. ವೃಕ್ಷ ಲತೆ ಮೊದಲಾದುವುಗಳೆಲ್ಲ ಬಾಡಿ ಸೊರಗುತ್ತಿದ್ದವು. ಶೋಕಾತಿಶಯದಿಂದ, ಕಲ್ಲುಗಳೆಲ್ಲ ಕರಗಿ ದ್ರವರೂಪವಾದವು. ಲೋಕದಲ್ಲಿ ಯಾರಾದರೂ ಸರಿಯೆ ಉತ್ತಮರ ಹಾನಿಯನ್ನು ಕಂಡು ಎಂದಿಗೂ ಸಹಿಸಿಕೊಂಡು ಇರುವದಿಲ್ಲ ||೩೨|| ಭೂಪುತ್ರಿಯಾದ ಜಾನಕಿಯನ್ನು ನೋಡಿ ಶೋಕಭಾರದಿಂದ ಭ್ರಮರಗಳು ಮೊರೆಯುವು (ಝೇಂಕರಿಸವು), ನವಿಲುಗಳು ಕುಣಿಯಲು ಅಪೇಕ್ಷಿಸವು, ದಂಪತಿಪಕ್ಷಿಗಳು ಬೆರೆಯಲು

ಹಂಸೆ | ಕರೆಯುಲೊಲ್ಲವುಪಿಕಂನುಡಿಯಲೊಲ್ಲವುಶುಕಂನಲಿಯುಲೊಲ್ಲವುಚಕೋರಿ || ನೆರೆಯುಲೊಲ್ಲವುಹರಿಣಿಯೊಲೆಯುಲೊಲ್ಲವು ಕರಿಣಿ | ಪರೆಯುಲೊಲ್ಲವುಚಮರಿಮೆರೆಯುಲೊಲ್ಲವುಸಿಂಗ | ಮುರರಿಪುಜಾನಕಿಯಶೋಕಂತಮ್ಮದೆಂದಾಕೆಯಂಗಮಂನೋಡಿ ನೋಡಿ ||೩೩|| ಬೀಸಿದುವುಬಾಲದೋಳ್ಚಮರಿಗಳ್ಚಮರಮಂ | ಪಾಸಿದುವುಕರಿಗಳೆಳೆದಳಿರಮೃದುತಲ್ಪಮಂ | ಸೂಸಿದುವುಸಾರಂ ಗಗಳ್ತಮ್ಮಗರಿಗಳಂತೋದುತಂದಂಬುಗಳನು || ಆಸಿರಿಮೊಗಕ್ಕೆಬಿಸಿಲಾಗದಂತಾಗಸದೊ | ಳೋಸರಿಸದಂಚೆಗಳ್ರೆಕ್ಕೆಯನಗಲ್ಚಿ ನೆಳ | ಲಾಸೆಗೈದುವುರಾಘವನರಾಣಿದುಃಖಸಂತಪ್ತೆಯಾಗಿರಲ್ಕೆ || ೩೪ || ಸುರನದಿಯತೆರೆತೆರೆಯನಡನಡುವೆಬಿದ್ದೆದ್ದು | ಬರ

ಒಲ್ಲವು-ಆಶಿಸವು, ಕೋಕಿ-ದಂಪತಿಪಕ್ಷಿಗಳು, ಕೂಡಲೊಲ್ಲವು-ಜೊತೆಯಾಗಲು ಆಶೆಪಡಲಿಲ್ಲ, ಹಂಸೆ-ಅಂಚೆಗಳು, ನಡೆಯಲು-ತಿರುಗಾಡಲು, ಒಲ್ಲವು-ಅಪೇಕ್ಷಿಸಲಿಲ್ಲ, ಪಿಕಂ-ಪರಪುಟ್ಟಗಳು, (ಕೋಗಿಲೆಪಕ್ಷಿಗಳು) ಕರೆಯಲು-ರವಗೈಯ್ಯಲು, ಒಲ್ಲವು - ಆಶೆ ಪಡಲಿಲ್ಲ, ಚಕೋರಿ-ಬೆಳದಿಂಗಳ ಹಕ್ಕಿಗಳು, (ಜೊನ್ನವಕ್ಕಿಗಳು) ನಲಿಯುಲು-ಆನಂದ ಪಡಲು, (ಹರ್ಷಿಸಲು) ಒಲ್ಲವು - ಆಶಿ ಸುವುದಿಲ್ಲ, ಶುಕಂ-ಕೀರಗಳು, ನುಡಿಯಲು-ಮಾತನಾಡಲು, ಒಲ್ಲವು-ಆಶೆಯನ್ನ ಪಡಲಿಲ್ಲ, ಹರಿಣಿ - ಹೆಣ್ಣು ಚಿಗರಿಯು, ನೆರೆ ಯಲು-ಕ್ರೀಡಿಸಲು, ಒಲ್ಲವು-ಅಪೇಕ್ಷಿಸಲಿಲ್ಲ, ಕರಿಣಿ-ಪಿಡಿಯು, (ಹೆಣ್ಣಾನೆಗಜವು) ಒಲೆಯಲು-ಕದಲಲು ಎಂದರೆ ತಿರುಗಾಡಲು, ಒಲ್ಲವು-ಆಶಿಸಲಿಲ್ಲ, ಚಮರಿ-ಚಮರೀಮೃಗಂಗಳು, ಪೊರೆಯಲು-ತಮ್ಮಯ ದೇಹಪೋಷಣೆಯನ್ನು ಮಾಡಿಕೊಳ್ಳಲು, ಒಲ್ಲವು-ಆಶಿಸವು, ಸಿಂಗ-ಮೃಗೇಂದ್ರವು, ಮೆರೆಯಲು-ಹರ್ಷದಿಂದ ಸಂಚಾರಮಾಡಲು, ಒಲ್ಲವು-ಅಪೇಕ್ಷಿಸುವದಿಲ್ಲ, ಆದರೆ-ಅಕಟ, ಆಹಾ, ಜಾನಕಿಯು-ಭೂಮಿಜೆಯಾದ ವೈದೇಹಿಯ, ಶೋಕಂ-ವ್ಯಸನವು, ತಮ್ಮದೆಂದು-ತಮ್ಮ ದುಃಖವೆಂದು, ಆಕೆಯ-ಆ ಜಾನ ಕಿಯು, ಅಂಗಮಂ-ದೇಹವನ್ನು, ನೋಡಿನೋಡಿ-ಈಕ್ಷಿಸುತ್ತ, ಒಲ್ಲವು-ಯಾವ ಕಾರ್ಯ್ಯವನ್ನು ಮಾಡಲಿಕ್ಕೂ ಅಪೇಕ್ಷಿಸಲಿಲ್ಲ ||

ಅ|| ವಿ|| ಅಂಚೆ ದ್ಭ. ಹಂಸ ತ್ಸ. ಕೋಗಿಲೆ ದ್ಭ. ಕೋಕಿಲ ತ್ಸ. ಸಿಂಗ ದ್ಭ. ಸಿಂಹ ತ್ಸ. ಹರಿಣಿ-ಹೆಣ್ಣುಜಿಂಕೆ, ಹರಿಣೀಮೃತ್ತ. ಅಂಗ-ಅಂಗದೇಶ, ದೇಹ ||೩೩||

ಟೀ|| ರಾಘವನ-ರಘುಕುಲೋದ್ಭವನಾದ ಶ್ರೀ ರಾಮನ, ರಾಣಿ-ರಾಜ್ಞಿಯಾದ, (ಪಟ್ಟಮಹಿಷಿಯಾದ) ಜಾನಕಿಯು, ದುಃಖ - ಶೋಕದಿಂದ, ಸಂತಪ್ತೆಯಾಗಿ, ಸುಡಲ್ಪಟ್ಟವಳಾಗಿ, (ಸಂತಾಪಗೊಂಡವಳಾಗಿ) ಇರುತಿರಲ್ಕೆ ಇರಲಾಗಿ, ಚಮರಿ ಗಳ್-ಚಮರೀ ಮೃಗಗಳು, ಬಾಲದೋಳ್ - ತಮ್ಮ ಚಾಮರದಂತಿರುವ ಬಾಲಗಳಿಂದ, ಚಮರಮಂ - ಗಾಳಿಯು ಬರುವಂತೆ ಚಾಮರಗಳನ್ನು, ಬೀಸಿದುವು-ಬೀಸಿದಂಥವಾದುವು, ಕರಿಗಳ್-ಗಜಗಳ್, ಎಳೆದಳಿರ - ಎಳೆಯದಾದ ಚಿಗುರಿನ, ಮೃದು-ಮೆತ್ತ ಗಿರುವ, (ಕೋಮಲವಾದ) ತಲ್ಪಮಂ-ಶಯ್ಯೆಯನ್ನು, ಪಾಸಿದವು-ಹಾಸಿಕೊಟ್ಟವು, ಸಾರಂಗಗಳ್-ನೀರುಹಕ್ಕಿಗಳು, ಸಾರಸ ಪಕ್ಷಿಗಳು, (ಚಾತಕವೇ ಮೊದಲಾದ ಪಕ್ಷಿಗಳ್) ತಮ್ಮ-ತಮ್ಮಯ, ಗರಿಗಳಂ-ರೆಕ್ಕೆಗಳನ್ನು ತೋದು-ತೋಯಿಸಿ, (ನೀರಿನಲ್ಲಿ ನೆನೆಯಿಸಿ) ಅಂಬುಗಳಂ-ಜಲಬಿಂದುಗಳನ್ನು, ತಂದು - ತೆಗೆದುಕೊಂಡು ಬಂದು, ಸೂಸಿದುವು-ಎರಚಿದವು, (ಚಿಮುಕಿಸಿದವು) ಆ ಸಿರಿಮೊಗಕ್ಕೆ-ಆ ಕಾಂತಿಯಿಂದೊಪ್ಪುವ ಮುಖಕ್ಕೆ, ಬಿಸಿಲಾಗದಂತೆ-ಬಿಸಿಲಿನ ಝಳವು ಬೀಳದಹಾಗೆ, ಆಗಸದೋಳ್-ಅಂತ ರಿಕ್ಷದಲ್ಲಿ, ಅಂಚೆಗಳ್-ಹಂಸಪಕ್ಷಿಗಳು, (ಮರಾಳಗಳು) ರೆಕ್ಕೆಯನು-ತಮ್ಮಗರಿಗಳನ್ನು, ಅಗಲ್ಚಿ-ವಿಸ್ತಾರಪಡಿಸಿ, ಓಸರಿಸದೆ-ಕದ ಲದೆ, ನೆಳಲಾಸೆ-ನೆರಳಿನಾಶ್ರಯವನ್ನು, ಗೈದುವು-ಉಂಟುಮಾಡಿದವು, (ಏರ್ಪಡಿಸಿದುವು) ||

ಅ|| ವಿ|| ಅಂಚೆ-ದ್ಭ. ಹಂಸ-ತ್ಸ. ಮೊಗ-ದ್ಭ. ಮುಖ-ತ್ಸ. ಸಿರಿ-ದ್ಭ. ಶ್ರೀ-ತ್ಸ. ಪಕ್ಷಿ-ತ್ಸ. ಪಕ್ಕಿ-ದ್ಭ. ಪಕ್ಷ-ತ್ಸ.

ಇಷ್ಟಪಡವು. ಅಂಚೆಗಳು ಸಂಚಾರ ಮಾಡಲು ಆಶಿಸವು, ಕೋಕಿಲ ಪಕ್ಷಿಗಳು ಪಂಚಮ ಸ್ವರಮಾಡಲು ಅಪೇಕ್ಷಿಸವು, ಚಕ್ರಾಂಗ ಗಳು ಅತ್ಯಂತ ಪ್ರೀತಿಯಿಂದ ಆಟವಾಡವು, ಹರಿಣಿಯು (ಹೆಣ್ಣುಜಿಂಕೆಯು) ಒಂದರೊಡನೊಂದು ಬೆರಿಯಲು ಅಪೇಕ್ಷಿಸವು, ಕರಿ ಣಿಯು ಸಂಚಾರಮಾಡದೆ ಸುಮ್ಮನೆ ನಿಂತವು. ಚಮರೀಮೃಗಗಳು ಆಹಾರಾದಿಗಳನ್ನು ಮುಟ್ಟದೆ ಬೆರಗಾದವು, ಸಿಂಗವು ಸಂತೋಷ ದಿಂದ ನಲಿದಾಡಲು ಆಶಿಸದೆ ಸಂತಾಪಗೊಂಡು ನಿಂತವು, ಶಿವಶಿವ ಜಾನಕಿಯ ಶೋಕವನ್ನು ನೋಡಿ, ತಮ್ಮ ಶೋಕವೆಂದು ಭಾವಿಸಿ ತಮ್ಮೊಳು ತಾವು ಅತ್ಯಧಿಕವಾದ ದುಃಖದಿಂದ ಸೊರಗಿಹೋದವು ||೩೩|| ಆಗ ಸೀತಾದೇವಿಯು ದುಃಖಾರ್ತೆಯಾಗಿ, ಮೂರ್ಛೆಯನ್ನುಹೊಂದಿರಲು, ಚಮರೀ ಮೃಗಗಳು ಬಾಲದಿಂದ ಗಾಳಿಬರುವಂತೆ ತಡೆಯಿಲ್ಲದೆ ಬೀಸುತ್ತಿದ್ದವು. ಆನೆಗಳು ಎಳೆ ಯ ತಳಿರುಗಳನ್ನು ಕೊಯ್ದುಮೃದುವಾದ ಹಾಸಿಗೆಯನ್ನು ಮಾಡಿದವು, ಸಾರಸ ಪಕ್ಷಿ ನವಿಯೂರಾದಿಗಳು ತಮ್ಮಗರಿಗಳನ್ನು ನೀರಿನಲ್ಲಿ ತೋಯಿಸಿ ಜಾನಕಿಯಮೇಲೆ ಚಿಮಿಕಿಸಿದವು, ಆ ಕಾಂತಿಯುಕ್ತವಾದ ಮುಖಕ್ಕೆ ಬಿಸಿಲಾಗದಹಾಗೆ ತಮ್ಮ ರೆಕ್ಕೆಗಳನ್ನು ಅಗಲ ವಾಗಿ ಬಿಚ್ಚಿ ಹಂಸಪಕ್ಷಿಗಳು ಕೊಡೆಯಂತೆ ಆಗಸದಲ್ಲಿ ವಿಸ್ತಾರವಾಗಿ ನಿಂತವು. ತಿರ್ಯಗ್ಜಂತುಗಳು ಕೂಡ ಕೊರಗಿ ಈ ರೀತಿಯಾಗಿ ಉಪಚಾರ ಮಾಡುತ್ತಿದ್ದವು || ೩೪ || ಬಳಿಕ ದೇವಗಂಗಾ ನದಿಯ ಪ್ರತಿ ತರಂಗದಲ್ಲಿಯೂ ಬಿದ್ದು, ಎದ್ದು,

ಲಾರದಿರ್ದೊಡಂಮತ್ತೆಗಂಗೆಯೊಳಲ | ರ್ದರವಿಂದಗಂಧದತಿಭಾರಮಂಪೊರಲಾರದಿರ್ದೊಡಂಧರಣಿಸುತೆಯ || ಪರಿತಾಪಮಂತವಿಸದಿರಬಾರದೆಂದುತರ | ಹರದೊಳೊಯ್ಯೊಯ್ಯನೈತಂದುಬೀಸಿತುಸುಖ | ಸ್ಪರುಶವಾತಂಜನದೊಳುಪಕಾರಿಯಾದವಂತನ್ನನೋವಂನೋಳ್ಪನೆ || ೩೫ || ಪೃಥಿವಿಯಾತ್ಮಜೆಬಳಿಕಚೇತರಿಸಿತನಗಿನ್ನು | ಪಥನಾವುದೆಂದುದೆಸೆದೆಸೆಗಳಂನೋಡಿಸಲೆ | ಶಿಥಿಲವಾದವಯವದಧೂಳಿಡಿದನ್ವಯಃಬಿಡುಮುಡಿಯವಿಕೃತಿಯನೆಣಿಸದೆ || ಮಿಥಿಲೇಂದ್ರವಂಶದೊಳ್ಜನಿಸಿರಘುಕುಲದದಶ | ರಥನೃಪ

---

ಪಕ್ಷ-ದ್ಭ. ಕರವುಳ್ಳದ್ದು-ಕರಿ. ತಟವುಳ್ಳದ್ದು-ತಟನಿ. ಆಸಯ-ದ್ಭ. ಆಶ್ರಯ-ತ್ಸ, (ಎಳೆ + ತಳಿರ್ = ಎಳೆದಳಿರ್) ದಕಾರಾದೇಶ ಸಂಧಿ. ಮೃದುವಾದ + ತಲ್ಪ = ಮೃದುತಲ್ಪ,' ವಿ. ಪೂ. ಕ ||೩೪||

ಟೀ|| ಸುಖಸ್ಪರ್ಶ- ಸೋಕೋಣದರಿಂದ ಹರ್ಷವನ್ನುಂಟುಮಾಡತಕ್ಕ, ವಾತಂ - ವಾಯುವು, ಸುರನದಿಯ-ದೇವಗಂಗಾನದಿಯಲ್ಲಿ ಉಂಟಾಗತಕ್ಕ, ತೆರೆತೆರೆಯ-ಪ್ರತಿಯೊಂದು ವೀಚಿಯ, (ಅಲೆಯ) ನಡನಡುವೆ-ಮಧ್ಯಮಧ್ಯದಲ್ಲಿ, ಬಿದ್ದು-ಕೆಳಕ್ಕೆಬಿದ್ದು, ಎದ್ದು-ಮೇಲಕ್ಕೆ ಎದ್ದು, ಬರಲಾರದೆ-ಬರುವದಕ್ಕೆ ಆಗದೇನೆ, ಇರ್ದೊಡಂ-ಇದ್ದಾಗ್ಯಾದರೂ, ಮತ್ತೆ-ಪುನಹ, ಗಂಗೆಯೊಳು-ಗಂಗಾನದಿಯಲ್ಲಿ, ಅಲರ್ದ-ವಿಕಶಿಸಿದ, ಅರವಿಂದದ-ತಾವರೆಯ ಪುಷ್ಪದ, ಗಂಧದ-ಸುವಾಸನೆಯ, ಅತಿಭಾರಮಂ-ಹೆಚ್ಚಾದ ಹೊರೆಯನ್ನು, (ಭಾರವನ್ನು) ಪೊರಲಾರದೆ- ವಹಿಸಲಾರದೆ, (ಹೊತ್ತುಕೊಳ್ಳಲಾರದೆ) ಇರ್ದೊಡಂ-ಇದ್ದಾಗ್ಯಾದರೂ, ಧರಣಿಸುತೆಯ-ಭೂ ಪುತ್ರಿಯಾದ ಜಾನಕಿಯ, ಪರಿತಾಪಮಂ-ಸಂತಾಪವನ್ನು, ತವಿಸದೆ-ಕಡಮೆ ಮಾಡದೆ, ಇರಬಾರದು-ಇರಕೂಡದು, ಎಂದು-ಎಂಬದಾಗಿ, ತರಹರದೊಳು-ತತ್ತರಿಕೆಯಿಂದ, (ತಹತಹ ಪಡುತ್ತ) ಒಯ್ಯೊಯ್ಯನೆ-ಮೆತ್ತಮೆತ್ತಗೆ, (ನಿಧಾನವಾಗಿ) ಐತಂದು-ಬಂದುದಾಗಿ, ಬೀಸಿತು-ಚಲಿಸಿತು, ಜಗದೊಳ್-ಪ್ರಪಂಚದಲ್ಲಿ, ಉಪಕಾರಿಯಾದವಂ-ಪರೋಪಕಾರ ಬುದ್ಧಿಯುಳ್ಳವನು, ತನ್ನ-ತನ್ನಯ ಎಂದರೆ ತನಗುಂಟಾಗತಕ್ಕ. ನೋವಂ-ತೊಂದರೆಯನ್ನು, (ವೇಧೆಯನ್ನು) ನೋಳ್ಪನೆ-ನೋಡುತ್ತಾನೆಯೆ, (ಪರರಿಗೆ ಉಪಕಾರ ಮಾಡುವ ಬುದ್ಧಿಯುಳ್ಳವರು ತಮ್ಮಗಳಿಗೆ ಇನ್ನೆಷ್ಟೇ ಕಷ್ಟ ಬಂದಾಗ್ಯೂ ಅದನ್ನು ದೂರೀಕರಿಸಿ ಇತರರಿಗೆ ಪ್ರಾಪ್ತವಾದ ಕಷ್ಟವನ್ನು ಹೋಗಲಾಡಿಸುವರು) ||

ಅ|| ವಿ|| ಸುರ+ನದಿ=ಸುರನದಿ, ಷ.ತ. ಅಲರ್-ಪುಷ್ಪ.ಎರಲ್-ಗಾಳಿ.ಅರವಿಂದ-ಕಮಲ,ಮಕರಂದ-ಪುಷ್ಪರಸ||೩೫||

ಟೀ|| ಪೃಥಿವಿಯಾತ್ಮಜೆ-ಭೂದೇವಿಯ;ನಂದನೆಯಾದ ಸೀತಾದೇವಿಯು, ಬಳಿಕ-ಅನಂತರದಲ್ಲಿ, ಚೇತರಿಸಿ-ಮೂರ್ಛೆಯಿಂದ ತಿಳಿದೆದ್ದು, ತನಗೆ-ಎನಗೆ, ಇನ್ನು-ಇನ್ನುಮುಂದೆ, ಪಥಂ-ಮಾರ್ಗವು, ಆವುದು-ಯಾವದಿರುತ್ತದೆ, ಎಂದು-ಎಂಬದಾಗಿ, ದೆಸೆದೆಸೆಗಳಂ-ಪ್ರತಿ ದಿಕ್ಕನ್ನೂ, ನೋಡಿ-ಈಕ್ಷಿಸಿ, ಸಲೆ-ಬಹುವಾಗಿ, ಶಿಥಿಲವಾದ-ಜೀರ್ಣವಾದ, (ಕೃಶವಾದ) ಅವಯವದ-ದೇಹದಮೇಲಿರುವ, ಧೂಳಿಡಿದ-ಧೂಳಿನಿಂದ ವ್ಯಾಪ್ತವಾದ, ಮೈಯ-ದೇಹವನ್ನು, ಬಿಡುಮುಡಿಯ-ಬಿಚ್ಚಿಹೋಗಿರುವ ಕಬರಿಯುಳ್ಳ, ವಿಕೃತಿಯನು-ಅವಯವದ ವಿಕಾರವನ್ನು, ಎಣಿಸದೆ-ಲಕ್ಷ್ಯೀಕರಿಸದೆ, ಮಿಥಿಳೇಂದ್ರ- ಮಿಥಿಲಾದೇಶಕ್ಕೊಡೆಯನಾದ ಜನಕರಾಯನ, ವಂಶದೊಳ್-ವಂಶದಲ್ಲಿ, ಜನಿಸಿ-ಸಂಜನಿಸಿ, (ಉದ್ಭವಿಸಿದವಳಾಗಿ) ರಘುಕುಲದ-ರಘುವಂಶೋತ್ಪನ್ನನಾದ, ದಶರಥನೃಪನ-ದಶರಥರಾಜನ, ಸೊಸೆಯಾಗಿ-ಸ್ನುಷೆಯಾಗಿ, (ಮಗನ ಹೆಂಡತಿಯಾಗಿ) ತನಗೆ-ಇಂಥವಳಾದ ಎನಗೆ, ಕಟ್ಟಡವಿಯೋಳ್-ಕಾರರಣ್ಯದಲ್ಲಿ, (ಭಯಂಕರವಾದ ಕಾಡಿನಲ್ಲಿ) ವ್ಯಥಿಸುವಂತೆ-ಶೋಕಪಡುವಂತೆ, (ದುಃಖ ಪಡುವಂತೆ) ಅಯ್ತು-ಉಂಟಾಗಿರುತ್ತದೆ, ಅಕಟ-ಅಯ್ಯೋ, ವಿಧಿಯು-ನನ್ನ ಹಣೆಯಲ್ಲಿ ಬರೆದು ಬ್ರಹ್ಮಲಿಖಿತವು, ಎಂದು-ಎಂಬದಾಗಿ ಹೇಳಿ, ಕಲ್ಮರಂ-ಕಲ್ಲು ಮತ್ತು ಮರಗಳು, ಕರಗುವಂತೆ-ದ್ರವಿಸುವಹಾಗೆ, ಹಲುಬಿದಳ್-ಹಂಬಲಿಸುವಳಾದಳು ||

---

ಮುಂದಕ್ಕೆಬರಲು ಆಗದಿದ್ದಾಗ್ಯೂ ಗಂಗಾಜಲದಲ್ಲಿ ಬೆಳದು ವಿಕಸಿತವಾದ ಕಮಲಪುಷ್ಪಗಳ ಸುವಾಸನೆಯನ್ನು ಹೊಂದಿ ಅತಿಭಾರವಾಗಿದ್ದಾಗ್ಯೂಕೂಡ ಭೂಪುತ್ರಿಯಾದ ಜಾನಕಿಯ ಪರಿತಾಪವನ್ನು ಕಡಮೆಮಾಡದೆ ಇರಬಾರದೆಂದು ಚಿಂತಿಸಿ, ಅತಿಪ್ರಯಾಸದಿಂದ, ಮೆಲ್ಲನೆ ಐತಂದು ತಂಪಾದ ಗಾಳಿಯು ಚಲಿಸಿತು. ಲೋಕದಲ್ಲಿ ಉಪಕಾರಿಯಾದವನು ತನ್ನ ನೋವನ್ನು ಎಂದಿಗೂ ಲಕ್ಷ್ಯಮಾಡನು ||೩೫|| ಬಳಿಕ ಭೂದೇವಿಯ ಪುತ್ರಿಯಾದ ಸೀತೆಯು ಮೂರ್ಛೆಯಿಂದ ತಿಳಿದೆದ್ದು ತನಗೆ ಇನ್ನುಮುಂದೆ ದಿಕ್ಕೇನು ? ಎಂಬದಾಗಿ ಅಷ್ಟ ದಿಕ್ಕುಗಳನ್ನು ನೋಡಿ ಶಿಥಿಲವಾದ ಅವಯವವೂ ಧೂಳಿನಿಂದ ತುಂಬಿದ ಅವಯವವೂ, ತಲೆಗೂದಲು ಬಿಚ್ಚಿಹೋದುದರಿಂದುಂಟಾದ ಅಂಗವಿಕಾರವೂ, ಇವು ಯಾವುದನ್ನೂ ಲಕ್ಷ್ಯಕ್ಕೆತಾರದೆ ಮಿಥಿಳೇಂದ್ರನ ಕುಲದಲ್ಲಿ ಹುಟ್ಟಿ, ರಘುವಂಶದರಾಯನಾದ ದಶರಥರಾಯನ ಸೊಸೆಯಾಗಿರುವ ನನಗೆ ಕಡಿದಾದರಣ್ಯದಲ್ಲಿ ದುಃಖಿಸುವಹಾಗೆ ಆಯಿತೆ? ಅಕಟಕಟ ಹಾ!ವಿಧಿಯೇ, ಎನ್ನ ಅದೃಷ್ಟವು ಈಪರಿಗೆಳಸಿತೆ ಎಂಬದಾಗಿ ಕಲ್ಮರಂಗಳು ಕರಗುವಂತೆ ಪ್ರಲಾಪಿಸಿದಳು || ೩೬ || ಭೂಮಿಪುತ್ರಿಯಾದ ಜಾನಕಿಯು ತನ್ನ ಈ ದುರವಸ್ಥೆಯನ್ನು ನೋಡಿಕೊಂಡು ಕ್ಷಣಮಾತ್ರದಲ್ಲಿ ಪ್ರಾಣತ್ಯಾಗ ಮಾಡಿಕೊಳ್ಳೋಣವೆಂದರೆ ಉದರದ

ನಸೊಸೆಯಾಗಿತನಗೆಕಟ್ಟಡವಿಯೋ | ಳ್ವ್ಯಥಿಸುವಂತಾಯ್ತುಕಟವಿಧಿಯೆಂದುಹಲುಬಿದಳ್ಕಲ್ಮರಂಕರಗುವಂತೆ || ೩೬ || ಕೇಣ
ಮಂಬಿಟ್ಟಾತ್ಮಘಾತಕದೊಳೀಕ್ಷಣಂ | ಪ್ರಾಣಮಂತೊರೆದಪೆನೆಬಂದಪುದುಗರ್ಭದಿಂ | ಭ್ರೂಣಹತ್ಯಾದೋಷಮೇಗೈವೆನಾರ್ಗೊ
ರೆವೆನೆಂದೊಯ್ಯನೆದ್ದುಬಳಿಕ || ಏಣಾಕ್ಷಿನಡೆದಳಡವಿಯೊಳುಪಲಕಂಟಕ | ಶ್ರೇಣಿಗಳ್ಸೋಂಕಿಮೆಲ್ಲಡಿಗಳಿಂಬಸಿವನವ | ಶೋಣಿ
ತಂನೆಲದೊಳ್ಪೊನಲ್ವರಿಯಲರಸಕೇಳ್ಪೆಣ್ಣೊಡಲ್ವಿಡಿಯಬಹುದೆ || ೩೭ || ಅನ್ನೆಗಂಮಖಕೆಯೂಪವನರಸುತಾಬನಕೆ | ಸನ್ನುತ
ತಪೋಧನಂವಾಲ್ಮೀಕಿಮುನಿವರಂ | ತನ್ನಶಿಷ್ಯರ್ವೆರಸಿನಡೆತಂದು ಕಾಡೊಳೊರ್ವಳೆಪೊಗಲ್ದೆಸೆಗಾಣದೆ || ಬನ್ನದಿಂಬಗೆಗೆ

---

ಅ|| ವಿ|| ಪೃಥಿವಿಯ+ಆತ್ಮ=ಪೃಥಿವಿಯಾತ್ಮ, ಷ ತ. ಆತ್ಮದಲ್ಲಿ+ಜೆ=ಆತ್ಮಜೆ, ಕೃ. ವೃ. ಪಥ-ಮಾರ್ಗ, ಪಂಥ-ಜಾಜು, ಅಂಗ-ದೇಹ, ಮಂಗ-ಕೋತಿ, ಧೂಳಿ-ಧೂಳು, ಮೂಳಿ-ಮೂಗುಹರಕಿ, ವಿಕೃತಿ-ವಿಕಾರ, ಸಂವತ್ಸರ. ದಶ-ಹತ್ತುದಿಕ್ಕುಗಳಲ್ಲಿಯೂ, ರಥ-ತೇರುಳ್ಳವನು. (ವಿ-ಥಿಳ+ಇಂದ್ರ=ವಿ-ಥಿಳೇಂದ್ರ) ಗುಣ ಸಂ. ||೩೬||

ಟೀ|| ಅರಸ-ರಾಜನಾದ ಜನಮೇಜಯ ಕ್ಷಿತೀಶನೆ, ಆಲಿಸು-ಕೇಳುವನಾಗು, ಬಳಿಕ-ಅನಂತರದಲ್ಲಿ, ಏಣಾಕ್ಷಿ-ಹರಿಣಾಕ್ಷಿಯಾದ ಸೀತಾದೇವಿಯು, ಕೇಣಮಂ-ಈ ದುರವಸ್ಥೆಯನ್ನು, ಬಿಟ್ಟು-ತ್ಯಜಿಸಿ, ಆತ್ಮ-ಜೀವಾತ್ಮನನ್ನು, ಘಾತಕದೊಳ್-ಹಿಂಸೆಯನ್ನು ಪಡಿಸೋಣದರಿಂದ, (ಪ್ರಾಣಹಿಂಸೆಯನ್ನು ಮಾಡಿಕೊಳ್ಳೋಣದರಿಂದ) ಈಕ್ಷಣಂ-ಈ ತಕ್ಷಣದಲ್ಲಿಯೇ, ಪ್ರಾಣಮಂ-ಜೀವನಮಂ. ತೊರೆದಪೆನೆ-ಬಿಟ್ಟುಬಿಡೋಣವೆಂದರೆ, (ಕಳೆದುಕೊಳ್ಳೋಣವೆಂದು ಯೋಚಿಸಿದರೆ) ಗರ್ಭದಿಂ-ಬಸುರಿಯಾಗಿರೋಣದರಿಂದ, ಭ್ರೂಣ-ಶಿಶುವನ್ನು, ಹತ್ಯ-ಕೊಂದುದರ, ದೋಷಂ-ಪಾಪವು, ಬಂದಪುದು-ಪ್ರಾಪ್ತವಾಗುತ್ತದೆ, ಎಂದರೆ (ಶಿಶುಹತ್ಯ ಮಾಡಿದಂತಾಗುತ್ತದೆ) ಏಗೈವೆಂ-ಏನುತಾನೆ ಮಾಡಲಿ, ಆರ್ಗೆ-ಯಾರಿಗೆತಾನೆ, ಒರೆವೆಂ-ಪೇಳಲಿ, ಎಂದು-ಎಂಬದಾಗಿ, ಒಯ್ಯನೆ-ಮೆಲ್ಲಗೆ, ಎದ್ದು-ಮೇಲಕ್ಕೆ ಎದ್ದು ನಿಂತುಕೊಂಡು, ಅಡವಿಯೊಳ್- ಅರಣ್ಯದಲ್ಲಿ, ಉಪಲ-ಶಿಲೆಗಳು, ಕಂಟಕ-ಮುಳ್ಳುಗಳು ಇವೇ ಮೊದಲಾದುವುಗಳ, ಶ್ರೇಣಿಗಳ್-ಸಮೂಹಗಳು, ಸೋಂಕಿ-ತಗುಲಿಕೊಂಡು, ಮೆಲ್ಲಡಿಗಳಿಂ-ಮೃದುವಾದ ಚರಣಗಳಿಂದ, ಬಸಿವ-ದ್ರವಿಸುವ, (ಸುರಿಯುವ) ನವ-ಹೊಸದಾದ, ಶೋಣಿತಂ-ರುಧಿರವು, ನೆಲದೊಳ್-ಪೃಥ್ವಿಯಲ್ಲಿ, ಪೊನಲ್-ಪ್ರವಾಹರೂಪವಾಗಿ, ಪರಿಯಲ್-ಪ್ರವಹಿಸುತ್ತಿರಲು, ನಡೆದಳ್-ಮುಂದರಿತು ಹೊರಟಳು, ಪೆಣ್ಣೊಡಲ್-ಹೆಂಗಸಿನ ಆಕಾರವನ್ನು, ಪಿಡಿಯಬಹುದೆ-ಧರಿಸಬಹುವೆ, ಎಂದರೆ (ಹೆಣ್ಣಿನ ಜನ್ಮ ಪಡಿಯುವದರಿಂದ ನಾನಾ ಬಗೆಗಳಾದ ದುಃಖಗಳನ್ನು ಅನುಭವಿಸಬೇಕು) ||

ಅ|| ವಿ|| ಏಣದ ಅಕ್ಷಿಯಂತೆ+ಅಕ್ಷಿಯುಳ್ಳವಳು=ಏಣಾಕ್ಷಿ, ಉಪ. ಪೂ. ಬಹು. ಸ. ಮೆಲ್ಲಿತ್ತು+ಅಡಿ=ಮೆಲ್ಲಡಿ, ವಿ. ಪೂ. ಕ. ತಣ್ಣಿತ್ತು+ನೀರ=ತಣ್ಣೀರು, ನುಣ್ಣಿತ್ತು+ಕದಪು=ನುಣ್ಗದಪು, ಇವು ವಿ. ಪೂ. ಕ. ಸಮಾಸಗಳು. ಕಂಟಕ-ಮುಳ್ಳು, ಕಟಕ-ಸಮೂಹ, ಪೆಣ್ಣಿನ+ಒಡಲ್=ಪೆಣ್ಣೊಡಲ್, ಷ. ತ. ಗರ್ಭ-ಬಸುರು, ಹೊಟ್ಟೆ ||೩೭||

ಟೀ|| ಅನ್ನೆಗಂ-ಆ ಹೊತ್ತಿಗೆ ಸರಿಯಾಗಿ, ಮಖಕೆ - ಯಜ್ಞಕಾರ್ಯಕ್ಕಾಗಿ, ಯೂಪವನು - ಯಜ್ಞಸ್ತಂಭವನ್ನು (ಯಜ್ಞಕಾಲದಲ್ಲಿ ಯಜ್ಞಪಶುವನ್ನು ಕಟ್ಟುವ ಸ್ತಂಭಕ್ಕೆ ಯೂಪವೆಂಬರು) ಅರಸುತ್ತ-ಹುಡುಕುತ್ತ, ಸನ್ನುತ-ಸ್ತೋತ್ರಾರ್ಹನಾದ, ತಪೋಧನಂ-ತಪಸ್ಸೇ ದ್ರವ್ಯವಾಗುಳ್ಳ, ವಾಲ್ಮೀಕಿ-ವಲ್ಮೀಕದಿಂದುದ್ಭವಿಸಿದವನಾದ, ಮುನಿವರಂ-ಋಷಿವರ್ಯನಾದ ವಾಲ್ಮೀಕಿ ಮಹರ್ಷಿಯು, ತನ್ನ-ತನ್ನಯ, ಶಿಷ್ಯರ್ವೆರಸಿ-ಶಿಷ್ಯರಿಂದೊಡಗೂಡಿದವನಾಗಿ, ಬನಕೆ-ವನಕ್ಕೆ, ನಡೆತಂದು-ಆಗಮಿಸಿ, ಪೊಗಲ್-ಹೋಗಲು, ಕಾಡೊಳ್-ಈ ಘೋರಾರಣ್ಯದಲ್ಲಿ, ಓರ್ವಳೆ-ಒಬ್ಬಹೆಂಗಸು ಮಾತ್ರವೆ, ದೆಸೆಗಾಣದೆ-ದಿಕ್ಕುತೋರದೆ, ಬನ್ನದಿಂ-ಭಗ್ನತೆಯಿಂದ, (ತೊಂದರೆಯಿಂದ) ಬಗೆಗೆಟ್ಟು-ಅಂದಗೆಟ್ಟವಳಾಗಿ, ಪಾಡಳಿದು-ಸಹನಸ್ಥಿತಿತಪ್ಪಿ, ಗ್ರೀಷ್ಮ-ಬೇಸಿ

---

ಲ್ಲಿ ಗರ್ಭನಿಂತಿರುವುದರಿಂದ ಭ್ರೂಣಹತ್ಯಾದೋಷಕ್ಕೆ ಗುರಿಯಾಗಬೇಕಾಗುವುದು, (ಶಿಶುಹತ್ಯಾದೋಷ ಪ್ರಾಪ್ತವಾಗುವುದು) ಏನುಮಾಡಲಿ, ಈ ರೀತಿಯಾದ ಅವಸ್ಥಾವಿಶೇಷವನ್ನು ಹೇಗೆ ಸಹಿಸಲಿ, ನನ್ನೀಯವಸ್ಥೆಯನ್ನು ಯಾರಲ್ಲಿ ಹೇಳಿಕೊಳ್ಳಲಿ ಎಂಬದಾಗಿ ಶೋಕದಿಂದ ಕೂಡಿದವಳಾಗಿ ಎದ್ದು ಕುರಂಗಾಕ್ಷಿಯಾದ ಜಾನಕಿಯು ಅರಣ್ಯದಲ್ಲಿ ಕಲ್ಲು ಮುಳ್ಳುಗಳ ಸಮೂಹದಿಂದ ಪಾದಗಳಿಗೆ ನೋವಾಗಿ, ಮೃದುವಾದ ಪಾದಗಳಿಂದ ಸುರಿಯುವ ಬಿಸಿಯಾದ ರುಧಿರವು ಪ್ರವಾಹರೂಪವಾಗಿ ಪ್ರವಹಿಸುತ್ತಿರಲು ಜಾನಕಿಯು ಮುಂದರಿದಳು. ಎಲೈ ಜನಮೇಜಯ ಧರಿತ್ರೀಶನೇ! ಭೂಮಿಯಲ್ಲಿ ಹೆಣ್ಣಾಗಿ ಹುಟ್ಟಬಹುದೇ? ಸ್ತ್ರೀ ಜನ್ಮವು ಮಹಾ ಕಷ್ಟವನ್ನು ಅನುಭವಿಸಬೇಕಲ್ಲವೆ? || ೩೭ || ಆ ವೇಳೆಗೆ ಸರಿಯಾಗಿ ಯಜ್ಞಕ್ಕೆ ಯಜ್ಞ ಪಶುವನ್ನು ಬಂಧಿಸುವದಕ್ಕಾಗಿ ಕಟ್ಟಿಗೆಯನ್ನು ಹುಡುಕಿಕೊಂಡು ಆ ಘೋರಾರಣ್ಯದಲ್ಲಿ ತನ್ನ ಶಿಷ್ಯರೊಂದಿಗೆ ಪಾವನ ಮೂರ್ತಿಯಾದ ವಾಲ್ಮೀಕಿ ಮುನೀಂದ್ರನು ಬರುತ್ತಿರಲು ಇಂತಹ ಹಗಲಿನಲ್ಲಿ ಏಕಾಂಗಿಯಾಗಿ ದೆಸೆಗಾಣದೆ ಪ್ರಲಾಪಿಸುತ್ತಾ ತನ್ನ ಕಡೆಗೆ

ಟ್ಟುಪಾಡಳಿದುಗ್ರೀಷ್ಮಋತು | ವಿನ್ನವೆದಕಾಂತಾರದಧಿದೇವಿತಾನೆನ | ಲ್ಸನ್ನಗದ್ಗದಕಂಠೆಯಾಗಿರೋದಿಸುತಿರ್ದವೈದೇಹಿಯಂ ಕಂಡನು ||೩೮|| ಆರಿವಳಿದೇತಕಿದ್ದಪಳೀವನಾಂತರದೊ | ಳಾರೈವೆನಿದನೆಂದುನಡೆತಂದುಕರುಣದಿಂ | ದಾಋಷಿನುಡಿದನೆಲೆತಾಯೆ ನೀನಾವಳಾಕಂಡಕುರುಪಾಗಿರ್ಪುದು || ಘೋರತರಗಹನಕೋರ್ವಳೆಬಂದೆಯೆಂತಕಟ | ಭೀರುಹೇಳೌಬೆದರಬೇಡವಾಲ್ಮೀಕಿನಾಂ | ಭೂರಿಶೋಕಾರ್ತರಾಗಿರ್ದರಂಕಂಡುಸುಮ್ಮನೆಪೋಪನಲ್ಲೆಂದನು || ೩೯ || ಹರುಷವೊತ್ತರಿಸಿದುದುಶೋಕವಿಮ್ಮಡಿಸಿದುದು | ಬೆರಸಿದುದುಲಜ್ಜೆಭೂಮಿಜೆಗೆಂದುಗದ್ಗದ | ಸ್ವರದಿಂದಸೀತೆತಾಂಲೋಕಾಪವಾದಕಪರಾಧಿಯಲ್ಲದೆತನ್ನನು || ತರಣಿಕುಲಸಂಭ

ಗೆಯು, ಋತುವಿಂ-ರುತುವಿನಿಂದ, (ಬೇಸಿಗೆಯ ಕಾಲದಿಂದ) ನವೆದ-ನಶಿಸಿದ, (ಬಯಲಾದ)(ಕೃಶ) ಕಾಂತಾರದ-ಅರಣ್ಯದ, ಅಧಿದೇವಿ-ಅಭಿಮಾನದೇವತಾಸ್ವರೂಪಳು, ತಾಂ-ತಾನೆ, ಎನಲ್-ಎಂಬುವಂತೆ, ಸನ್ನ-ಕುಗ್ಗಿಹೋಗಿರುವ, ಗದ್ಗದ-ನಡುಗುವಿಕೆಯುಳ್ಳ. ಕಂಠೆಯಾಗಿ-ಕಂಠಸ್ವರಾನ್ವಿತೆಯಾಗಿ, ರೋದಿಸುತ್ತಿದ್ದ-ಪ್ರಲಾಪಮಾಡುತ್ತಿದ್ದ, ವೈದೇಹಿಯಂ - ವಿದೇಹರಾಜಪುತ್ರಿಯಾದ ಜಾನಕಿಯನ್ನು, ಕಂಡನು-ಈಕ್ಷಿಸಿದವನಾದನು.

ಅ|| ವಿ|| ಯೂಪ-ಯಜ್ಞಸ್ತಂಭ. ಸತ್+ನುತ=ಸನ್ನುತ ಅನುನಾಸಿಕ ಸಂಧಿ. ತಪಸ್ಸೇಧನವಾಗುಳ್ಳವರು ಯಾರೋ ಅವರು=ತಪೋಧನರ್ ಬಹು. ಸ. ವಲ್ಮಿಕದಿಂದ ಹುಟ್ಟಿದವನು ವಾಲ್ಮೀಕಿ. ಪಾಡಂ+ಅಳಿದು=ಪಾಡಳಿದು ಕ್ರಿ. ಸ. ಧ್ವನಿ-ತ್ಸ. ದನಿ-ದ್ಭ ||೩೮||

ಟೀ|| ಆಗ-ಆ ಸಮಯದಲ್ಲಿ, ಆ ಋಷಿ-ಆ ವಾಲ್ಮೀಕಿ ಮಹರ್ಷಿಯು, ನೋಡಿ-ಆಕೆಯನ್ನು ಕಂಡು, ಇವಳ್-ಏಕಾಂಗಿಯಾಗಿ ಬರುತಿರ್ಪೀಕೆಯು, ಆರು-ಯಾರಿರಬಹುದು, ಈ ವನಾಂತರದೊಳ್ - ಈ ಮಹಾರಣ್ಯದಲ್ಲಿ, ಇದು ಏಕೆ-ಇದೇತಕ್ಕಾಗಿ, ಇರ್ದಪಳ್-ಇರುವಳು, ಇದಂ-ಈ ಸಂಗತಿಯನ್ನು, ಆರೈವೆಂ ವಿಚಾರಮಾಡಿ ತಿಳಿಯುತ್ತೇನೆ, ಎಂದು-ಎಂಬದಾಗಿ, ನಡೆತಂದು-ಹತ್ತಿರಕ್ಕೆ ಬಂದು, ಕರುಣದಿಂದ- ದಯಾರಸದಿಂದ, ಅವಂ-ಆ ವಾಲ್ಮೀಕಿಮಹರ್ಷಿಯು, ಎಲೆ-ಎಲೌ ತಾಯೆ, (ಮಾತೆಯೆ) ನೀಂ-ನೀನು, ಆವಳ್-ಯಾರ ಕಡೆಯುವಳು, ಆಂ-ನಾನಾದರೊ, ಕಂಡ-ನಿನ್ನನ್ನು ನೋಡಿದ, ಕುರ್ಪು-ಚಿಹ್ನೆಯು, (ಗುರುತು) ಆಗಿರ್ಪುದು-ಆಗಿರುತ್ತದೆ, ಘೋರತರ-ಅತಿ ಭಯಂಕರವಾದ, ಗಹನಕೆ-ಈವನಕ್ಕೆ, (ಕಾಡಿಗೆ) ಓರ್ವಳೆ-ಒಬ್ಬಳಾಗಿಯೇ, ಎಂತು-ಅದುಏನು ಕಾರಣ, (ಹೇಗೆತಾನೆ) ಬಂದೆ-ಬಂದವಳಾದೆ, ಅಕಟ-ಅಯ್ಯೋ, ಭೀರು-ಅಧೈರ್ಯದವಳೇ, ಬೆದರಬೇಡ-ಭಯಪಡಬೇಕಾದ್ದಿಲ್ಲ, ಹೇಳೌ-ಹೇಳುವಳಾಗವ್ವಾ, ಆಂ-ನಾನಾದರೂ, ವಾಲ್ಮೀಕಿ-ವಾಲ್ಮೀಕಿ ಎಂಬೋರ್ವ ಮುನಿಯು, ಭೂರಿ-ಅತ್ಯಧಿಕವಾದ, ಶೋಕಾರ್ತರ್-ವ್ಯಥೆಯಿಂದ ಸಂತಪ್ತರು, ಆಗಿರ್ದರಂ-ಆಗಿರತಕ್ಕವರನ್ನು, ಕಂಡು-ಈಕ್ಷಿಸಿ, ಸುಮ್ಮನೆ-ವಿಚಾರಮಾಡದೇನೆ, ಪೋಪಂ-ಹೋಗುವವನು, ಅಲ್ಲಂ-ಅಲ್ಲವು, ಎಂದನು-ಎಂಬದಾಗಿ ಹೇಳಿದನು.

ಅ|| ವಿ ಶೋಕದಿಂದ+ಆರ್ತರ್= ಶೋಕಾರ್ತರ್ ತೃ. ತ. ಅವನು+ ಋಷಿ= ಆಋಷಿ ಗಮಕ. ಸ. ಭೂರಿ-ಅಧಿಕ. ಕ್ರೂರ-ಕ್ರೂರ ಸ್ವಭಾವವುಳ್ಳವನು. ||೩೯||

ಟೀ|| ಆಗ-ವಾಲ್ಮೀಕಿಮುನಿಯು, ಜಾನಕಿಯನ್ನು ಕುರಿತು ಮಾತನ್ನಾಡಿಸಿದ ವೇಳೆಯಲ್ಲಿ, ಹರುಷಂ-ಮುದವು, ಒತ್ತರಿಸಿದುದು- ವ್ಯಾಪ್ತವಾಯಿತು, (ಆವರಿಸಿಕೊಂಡಿತು) ಶೋಕಂ-ವ್ಯಸನವು, ಇಮ್ಮಡಿಸಿದುದು-ಮತ್ತೆ ಉಂಟಾಯಿತು, ಅಂದು-ವಾಲ್ಮೀಕಿಮಹರ್ಷಿಯೆಂದು ತಿಳಿದಾಗ, ಭೂಮಿಜೆಗೆ-ಭೂದೇವಿಯ ಪುತ್ರಿಯಾದ ಜಾನಕಿಗೆ, ಲಜ್ಜೆ-ಲಜ್ಜೆಯು, (ನಾಚಿಕೆಯಾವರೊ) ಬೆರಸಿದುದು-ಕಲೆಯಿತು, ಸೀತೆ-ಸೀತಾದೇವಿಯು, ಗದ್ಗದ-ಭಯದಿಂದೊಡಗೂಡಿದ. (ತಗ್ಗಿಹೋದ) ಸ್ವರದಿಂದ-

ಅತಿ ಪ್ರಯಾಸದಿಂದ ಬಗೆಗೆಟ್ಟು ಗ್ರೀಷ್ಮಋತುವಿನಿಂದ ನವೆದ ಕಾಂತಾರದ ಅಭಿಮಾನ ದೇವತೆಯೋ, ಎನ್ನುವಂತೆ ಗದ್ಗದ ಸ್ವರಯುತಳಾಗಿ ಬರುವ ಜಾನಕಿಯನ್ನು ಕಂಡನು || ೩೮ || ಆಗ ಆ ವಾಲ್ಮೀಕಿ ಮಹರ್ಷಿಯು, ಭೂಮಿಜೆಯಾದ ಜಾನಕಿಯನ್ನು ನೋಡಿ, ಈ ವನಾಂತರದಲ್ಲಿ ಈಕೆಯು ಏಕಿರುವಳು! ಏಕಾಂಗಿಯಾಗಿ ಪ್ರಲಾಪಿಸುತ್ತ ಗದ್ಗದ ಸ್ವರಯುತಳಾಗಿ ಅಸಹಾಯಕಳಾಗಿ ಬರುತ್ತಿರುವಳು, ನಾನೇ ಆಕೆಯನ್ನು ವಿಚಾರಿಸುವೆನು ಎಂಬದಾಗಿ ನಡೆತಂದು ದಯಾರಸದೊಡನೆ ಆ ಮಹರ್ಷಿಯು ಎಲೆ ತಾಯೆ! ನೀನು ಯಾರು? ಏನು ಕಾರಣ ಒಬ್ಬೊಂಟಿಗಳಾಗಿ ಈ ವನದಲ್ಲಿ ವ್ಯಥೆ ಪಡುತ್ತಿರುವೆ? ನಾನು ಪೂರ್ವದಲ್ಲಿ ಎಲ್ಲಿಯೊ ನಿನ್ನನ್ನು ನೋಡಿದ್ದಂತೆ ಕಾಣಬರುತ್ತೆ. ಘೋರವಾದೀ ಅರಣ್ಯಕ್ಕೆ ಏಕಾಂಗಿಯಾಗಿ ಆದು ಹೇಗೆ ಬಂದೆ. ಅಕಟಕಟ! ಎಲೌ ಭೀರುವೆ! ಭಯಪಡಬೇಡ. ನಾನು ವಾಲ್ಮೀಕಿಯೆಂಬ ಮುನಿಯು. ಅತ್ಯಂತ ಶೋಕಾರ್ತರಾಗಿ ಅನಾಥರಾಗಿದ್ದವರನ್ನು ನೋಡಿ ಸುಮ್ಮನೆ ಹೋಗತಕ್ಕವನಲ್ಲ, ಎಂಬದಾಗಿ ಹೇಳಿದನು. || ೩೯ || ಆಗ ಆ ವಚನವನ್ನು ಕೇಳಿದ ಕೂಡಲೇ ಸೀತಾದೇವಿಗೆ ಹರ್ಷವು ಒತ್ತರಿಸಿದುದು. ಶೋಕವು ಎರಡು ಪಾಲು ಹೆಚ್ಚಾಯಿತು,

ನಂಬಿಟ್ಟನೆಂದೀವನವೊ | ಳಿರಿಸಿಪೋದಂಸುಮಿತ್ರಾತ್ಮಜಂಜೀವಮಂ | ಪರಿಯುವೇಳ್ಪುದೆಗರ್ಭವೊಡಲೊಳಿಹುದೇವೆನೆಂದೆರಗಿ ದಳ್ಮುನಿಪದದೊಳು ||೪೦|| ದೇವಿಬಿಡುಶೋಕಮುಂಪುತ್ರಯುಗಮುಂಪಡೆವೆ | ಭಾವಿಸದಿರಿನ್ನುಸಂದೇಹಮುಂಜನಕಂಗೆ | ನಾವನ್ಯ ರಲ್ಲನಮ್ಮಾಶ್ರಮಕೆಬಂದುನೀಂಸುಖದೊಳಿರ್ದೊಡೆನಿನ್ನನು || ಆವಾವಬಯಕೆಯುಂಟೆಲ್ಲಮುಂಸಲಿಸಿತಾ | ನೋವಿಕೊಂಡಿರ್ಪೆಸಂ ಜದಿರೆಂದುಸಂತೈಸಿ | ರಾವಣಾರಿಯರಾಣಿಯಂನಿಜತಪೋವನಕೆವಾಲ್ಮೀಕಿಕರೆತಂದನು ||೪೧|| ಚಿತ್ರಮಯಮಾಗಿಕಟ್ಟಿತುಪರ್ಣ

---

ಧ್ವನಿಯಿಂದ, (ಸ್ವನದಿಂದ) ತಾಂ-ತಾನಾದರೊ, ಅಪರಾಧಿಯಲ್ಲದ-ನಿರಪರಾಧಿನಿಯಾದ, ತನ್ನಂ-ಎನ್ನನ್ನು, ಲೋಕಾಪವಾದಕೆ-ಜನಗಳ ನಿಂದನೆಗೋಸ್ಕರವಾಗಿ, ತರಣಿ-ಭಾಸ್ಕರನ, ಕುಲ-ವಂಶದಲ್ಲಿ, ಸಂಭವಂ-ಜನಿಸಿದವನಾದ ಶ್ರೀರಾಮನು, ಬಿಟ್ಟನು-ಪರಿತ್ಯಾಗಮಾಡಿದನು, ಎಂದು-ಎಂಬದಾಗಿಯೂ, ಸುಮಿತ್ರಾತ್ಮಜಂ-ಸುಮಿತ್ರಾದೇವಿಯ ಪುತ್ರನಾದ ಲಕ್ಷ್ಮಣನು, ಈ ವನದೊಳ್-ಈ ಘೋರಾರಣ್ಯದಲ್ಲಿ, ಇರಿಸಿ ಹೋದಂ-ಬಿಟ್ಟು ಹೋದನು. (ಇರುವಂತೆ ಮಾಡಿಹೋದನು) ಜೀವಮಂ-ನನ್ನ ಜೀವಾತ್ಮನನ್ನು, ಪರಿಯುವೇಳ್ಪುದೆ-ಕಳೆದುಕೊಳ್ಳೋಣವೆಂದರೆ, ಒಡಲೊಳ್-ಉದರದಲ್ಲಿ, ಗರ್ಭಂ-ಗರ್ಭವು, (ಬಸುರು) ಇಹುದೇ-ಇರುತ್ತದೆಯಲ್ಲಾ, ಏವೆಂ ಎಂದು-ಏನುಮಾಡಲಿ ಎಂಬದಾಗಿ, ಮುನಿ-ವಾಲ್ಮೀಕಿಮಹರ್ಷಿಯ, ಪದದೊಳು-ಚರಣಗಳಲ್ಲಿ, ಎರಗಿದಳು-ನಮಸ್ಕಾರವನ್ನು ಮಾಡಿದಳು.

ಅ|| ವಿ|| ಮುನಿಯ+ಪದ=ಮುನಿಪದ ಷ. ತ. ಹರುಷ-ತ್ಸ. ಹರಿಸ-ದ್ಭ. ಶೋಕ-ವ್ಯಥೆ. ಅಶೋಕ-ಅಶೋಕ ವೃಕ್ಷ. ತರಣಿ-ಸೂರ್ಯನು. ತರುಣಿ-ಹೆಂಗಸು. ಸುಮಿತ್ರಾ+ಆತ್ಮಜ=ಸುಮಿತ್ರಾತ್ಮಜ ಸ. ದೀ. ಸಂ. ಗರ್ಭ-ಬಸುರು, ಹೊಟ್ಟೆ. ಮುದ-ಹರುಷ, ಆಮೋದ-ಸುವಾಸನೆ ||೪೦||

ಟೀ|| ವಾಲ್ಮೀಕಿ-ವಾಲ್ಮೀಕಿ ಮಹರ್ಷಿಯು, ಜಾನಕಿಯುಂ- ಸೀತಾದೇವಿಯನ್ನು ಕುರಿತು, ದೇವಿ-ಎಲೌ ಸೀತಾದೇವಿಯೆ, ಶೋಕಮಂ-ಶ್ರೀರಾಮನು ನಿನ್ನನ್ನು ತ್ಯಜಿಸಿದ್ದಕ್ಕಾದ ವ್ಯಥೆಯನ್ನು, ಬಿಡು-ಬಿಡುವಳಾಗು, ಪುತ್ರ-ಮಕ್ಕಳ, ಯುಗಮನು-ಅವಳಿಯನ್ನು, (ಜೊತೆಯನ್ನು ಅವಳಿ ಮಕ್ಕಳನ್ನು) ಪಡೆವೆ- ಹೊಂದುತ್ತೀಯೆ, ಇನ್ನು-ಇನ್ನು ಮುಂದೆ, ಸಂದೇಹಮಂ-ಅನುಮಾನವನ್ನು, ಭಾವಿಸದೆ-ಆಲೋಚಿಸದೆ, ಇರು-ಇರುವಳಾಗು, ನಾವು-ನಾವಾದರೊ, ಜನಕಂಗೆ-ನಿನ್ನಯ ಪಿತನಾದ ಜನಕಮಹಾರಾಜನಿಗೆ, ಅನ್ಯರು-ಬೇರೆಯಾದವರು, ಅಲ್ಲ-ಆಗಿರುವದಿಲ್ಲ, ನಮ್ಮ-ನಮ್ಮಯ, ಆಶ್ರಮಕೆ-ಋಷ್ಯಾಶ್ರಮಕ್ಕೆ, ನೀಂ-ನೀನು, ಬಂದು- ಬಂದವಳಾಗಿ, ಸುಖದೊಳು- ಸೌಖ್ಯದಿಂದ, ಇರ್ದೊಡೆ- ವಾಸಮಾಡಿಕೊಂಡು ಇದ್ದುದೇ ಆದರೆ, ನಿನಗೆ-ಗರ್ಭಿಣಿಯಾದ ನಿನಗೆ, ಆವಾವ-ಯಾವರೀತಿಯಾದ, ಬಯಕೆ-ಅಪೇಕ್ಷೆಯು, ಉಂಟೊ-ಇರುತ್ತದೆಯೊ, ಎಲ್ಲಮುಂ-ಆ ಬಯಕೆ ಎಲ್ಲವನ್ನೂ, ಸಲಿಸಿ-ನೆರವೇರಿಸಿಕೊಟ್ಟು, ತಾಂ-ನಾನಾದರೊ, ಓವಿಕೊಂಡು-ಸಂರಕ್ಷಣೆಮಾಡಿಕೊಂಡು, ಇರ್ಪೆಂ-ಇರುತ್ತೇನೆ, ಅಂಜದೆ-ಭಯಪಡದೆ, ಇರು-ಇರುವಳಾಗು, ಎಂದು-ಈ ರೀತಿಯಾಗಿ ಹೇಳಿ, ಸಂತೈಸಿ-ಶಾಂತಪಡಿಸಿ, ರಾವಣಾರಿಗೆ-ದಶಕಂಠನಿಗೆ ಹಗೆಯಾದ ಶ್ರೀರಾಮಚಂದ್ರನ, ರಾಣಿಯಂ-ರಾಜ್ಞಿಯಾದ ಸೀತಾದೇವಿಯನ್ನು, ವಾಲ್ಮೀಕಿಯು-ವಾಲ್ಮೀಕಿಮುನೀಂದ್ರನು, ನಿಜ-ತನ್ನಯ, ತಪೋವನಕೆ-ತಪಸ್ಸುಮಾಡುವ ಆರಣ್ಯಕ್ಕೆ, ಕರೆತಂದನು-ಸಂಗಡಲೇ ಕರೆದುಕೊಂಡು ಬಂದವನಾದನು.

---

ವಾಲ್ಮೀಕಿಯನ್ನು ನೋಡಿದ್ದರಿಂದ ಲಜ್ಜೆಯುಂಟಾಯಿತು. ಆಗ ಜಾನಕಿಯು ವಾಲ್ಮೀಕಿಯನ್ನು ಕುರಿತು ಗದ್ಗದ ಧ್ವನಿಯಿಂದ ನಾನು ಅಪರಾಧಿನಿಯಲ್ಲದಿದ್ದರೂ ನಿರ್ದಯನಾಗಿ ಲೋಕಾಪವಾದಕ್ಕೆ ಅಂಜಿ ಇನಕುಲ ಸಾರ್ವಭೌಮನಾದ ಶ್ರೀರಾಮಚಂದ್ರನು ನನ್ನನ್ನು ಪರಿತ್ಯಾಗಮಾಡಿ ಈ ಘೋರಾರಣ್ಯದಲ್ಲಿ ಬಿಟ್ಟು ಬರುವಂತೆ ಅಪ್ಪಣೆಯನ್ನು ಮಾಡಿದ್ದರ ಮೇರೆಗೆ ಸುಮಿತ್ರಾತ್ಮಜನಾದ ಸೌಮಿತ್ರಿಯು ನನ್ನನ್ನು ತಮ್ಮಂತಹ ಮುನಿಪೋತ್ತಮರಿರುವ ಸ್ಥಳಕ್ಕೆ ಕರೆದುಕೊಂಡು ಹೋಗುವ ವ್ಯಾಜಾಂತರದಿಂದ ಈ ಘೋರಾರಣ್ಯಕ್ಕೆ ಕರೆದುಕೊಂಡು ಬಂದು ಬಿಟ್ಟು ಹೋದನು. ನನ್ನ ದುಃಖವನ್ನು ಹೇಗೆ ವಿವರಿಸಲಿ! ಪ್ರಾಣತ್ಯಾಗ ಮಾಡಿಕೊಳ್ಳೋಣವೆಂದರೆ ಗರ್ಭ ಬೇರೆ ನಿಂತಿರುತ್ತದೆ. ಏನು ಮಾಡಲಿ ಎಂಬದಾಗಿ ಅತಿ ದುಃಖದಿಂದ ವಾಲ್ಮೀಕಮುನಿಪನ ಕಾಲ್ಗೆರಗಿದಳು. || ೪೦ || ಬಳಿಕ ವಾಲ್ಮೀಕಿ ಮುನೀಂದ್ರನು ಜಾನಕಿಯನ್ನು ನೋಡಿ, ಎಲೌ ಜಾನಕಿಯೇ, ಇನ್ನು ಸಕಲ ವಿಷಯವೂ ಗೊತ್ತಾಯಿತು ಚಿಂತೆಪಡಬೇಕಾದ ಕೆಲಸವಿಲ್ಲ. ಇನ್ನು ವ್ಯಥೆಯನ್ನು ಬಿಡು, ನಂದನರತ್ನಯುಗ್ಮವನ್ನು ಪಡೆಯುತ್ತಿ, ಇನ್ನು ಸಂದೇಹಪಡಬೇಕಾದುದಿಲ್ಲ. ನಿಮ್ಮ ಜನಕನಾದ ಜನಕಮಹಾರಾಜನಿಗೆ ನಾವು ಬೇರೆಯಾದವರಲ್ಲ. ನಮ್ಮ ಆಶ್ರಮಕ್ಕೆ ಬಂದು ಸೌಖ್ಯವಾಗಿರು, ನಾನು ನಿನ್ನನ್ನು ಸಲಹಿಕೊಂಡಿರುವೆನು. ನೀನು ಅಪೇಕ್ಷಿಸುವ ಬಯಕೆಯನ್ನೆಲ್ಲಾ ಹೋಗಲಾಡಿಸುತ್ತೇನೆ ಭಯಪಡದೆ ಇರು ಎಂಬದಾಗಿ ಸಮಾಧಾನಗೊಳಿಸಿ, ರಾವಣಾರಿಯಾದ ಶ್ರೀರಾಮಚಂದ್ರನ ಧರ್ಮ ಪತ್ನಿಯಾದ ಜಾನಕಿಯನ್ನು ಕರೆದುಕೊಂಡು ತನ್ನಾಶ್ರಮದ ಕಡೆಗೆ ಹೊರಟನು. || ೪೧ || ಆಗ

ಶಾಲೆಶತ | ಪತ್ರಲೋಚನೆಗೆಬಳಿಕಲ್ಲಿಋಷಿಪತ್ನಿಯರ | ಮಿತ್ರಮಂತಳೆದುವಾಲ್ಮೀಕಿಮುನಿಪನಾರೈಕೆಯಿಂಸೀತೆತನ್ನ || ಪುತ್ರೋದಯದಕಾಲಮಂನೋಡುತಿರ್ದಳ್ | ರಿತ್ರಿಯೊಳ್ದೃಢಪತಿವ್ರತೆಯರ್ಗೆನಿರ್ಮಲಚ | ರಿತ್ರಮೆಂತಾದೊಡಂವಿಪರೀತಮಾದವುದೆ ಭೂಪಾಲಕೇಳೆಂದನು ||೪೨|| ಜಾತಿವೈರಂಗಳಿಲ್ಲದಪಕ್ಷಿಮೃಗದಸಂ| ಘಾತದಿಂಋತುಭೇದಮಿಲ್ಲದಲತಾದ್ರುಮ| ವ್ರಾತದಿಂಪಗಲಿರುಳಶಂಕೆಯಿಲ್ಲದಪೂಗೊಳಂಗಳವಿಕಾಸದಿಂದ || ಶೀತೋಷ್ಣದಾಸರಿಲ್ಲದಸುಸ್ಥಳಂಗಳಿಂ | ಪ್ರೀತಿವಿರಹಿತದುಃಖಸುಖದಜಂಜಡಮಿ

---

ಅ|| ವಿ|| ಪುತ್-"ಪುತ್" ಎಂಬ ನರಕದ ದೆಸೆಯಿಂದ ತ್ರ-ತನ್ನ ಕುಲವನ್ನು ಕಾಪಾಡತಕ್ಕವನು, ಪುತ್ರಿ-ಸ್ತ್ರೀಲಿಂಗ, ಯುಗ-ತ್ಸ, ನೊಗ-ದ್ಭ. ಅರಿ-ಶತ್ರು, ಹರಿ-ವಿಷ್ಣು. ರಾಜ್ಞಿ-ತ್ಸ. ರಾಣಿ-ದ್ಭ. ಸುಖ-ತ್ಸ. ಸೊಗ-ದ್ಭ. ||೪೧||

ಟೀ|| ಭೂಪಾಲ-ಭೂಮಿಪತಿಯಾದ ಜನಮೇಜಯರಾಯನೆ, ಕೇಳು-ಆಲಿಸುವನಾಗು, ಶತಪತ್ರ-ಅರವಿಂದದಹಾಗೆ ವಿಶಾಲವಾದ, ಲೋಚನೆ-ಕಣ್ಣುಗಳುಳ್ಳ ಜಾನಕೀದೇವಿಗೆ. ಪರ್ಣಶಾಲೆ-ಎಲೆಮನೆಯು, ಚಿತ್ರಮುಯಂ ಆಗಿ-ಆಶ್ಚರ್ಯದಿಂದ ಕೂಡಿದ್ದಾಗಿ, ಕಟ್ಟಿತು-ಏರ್ಪಡಿಸಿದ್ದಾಯಿತು, ಬಳಿಕ-ಅನಂತರದಲ್ಲಿ, ಅಲ್ಲಿ-ಆ ಋಷ್ಯಾಶ್ರಮದಲ್ಲಿ, ಋಷಿಪತ್ನಿಯರ-ಮುನಿಗಳ ಹೆಂಡತಿಯರ, ಮಿತ್ರತ್ವಮುಂ-ಮೈತ್ರೀಭಾವವನ್ನು, ತಳೆದು-ಪಡೆದುಕೊಂಡವಳಾಗಿ, ವಾಲ್ಮೀಕಿಮುನಿಪನ-ವಾಲ್ಮೀಕಿ ಋಷೀಶ್ವರನ, ಆರೈಕೆಯಿಂ-ಆದರಣೆಯಿಂದಲೂ, ಸೀತೆ-ಜಾನಕಿಯು, ತನ್ನ-ತನ್ನಯ, ಪುತ್ರೋದಯದ-ಪ್ರಸುವಿಸುವ, ಕಾಲಮುಂ-ವೇಳೆಯನ್ನು, (ಹೆರಿಗೆಯ ಸಮಯವನ್ನು) ನೋಡುತಿರ್ದಳ್-ನಿರೀಕ್ಷಿಸುತ್ತಿದ್ದಳು, ಧರಿತ್ರಿಯೊಳ್-ಈ ಭೂಮಂಡಲದಲ್ಲಿ, ದೃಢ-ಚಲವಿಲ್ಲದ, (ಭಕ್ತಿಪುರಸ್ಸರವಾದ) ಪತಿವ್ರತೆಯರಿಗೆ-ಪತಿವ್ರತಾ ಶಿರೋಮಣಿಗಳಿಗೆ, ನಿರ್ಮಲ-ಮಾಲಿನ್ಯವಿಲ್ಲದ, (ಶುಚಿಯಾದ) ಚರಿತ್ರಂ-ನಡವಳಿಕೆಯು, (ಸುಶೀಲವು) ಎಂತಾದೊಡಂ-ಯಾವ ವಿಧದಲ್ಲಿಯೇ ಆದರೂ, ವಿಪರೀತಂ-ಅತಿಯಾದದ್ದು, (ವ್ಯತಿರಿಕ್ತಮಾದುದು) ಆದವುದೆ-ಆದೀತೆ, ಎಂದರೆ :—ನಿಜವಾಗಿಯೂ, ದೃಢಪ್ರತಿಜ್ಞೆಯುಳ್ಳ ಪತಿವ್ರತಾ ಸ್ತ್ರೀಯರಿಗೆ ಎಂದಿಗೂ ಯಾವ ವಿಧದಲ್ಲಿಯೂ ತೊಂದರೆಗಳುಂಟಾಗಲಾರವೆಂಬ ಭಾವವು ||

ಅ|| ವಿ|| ಶತ-ನೂರಾದ, ಪತ್ರ-ಎಸಳುಳ್ಳದ್ದು, ಇಂ-ಇದಂ, ಇಂದೆ, ಹಳ, ಕ. ತೃತೀಯಾ ವಿಭಕ್ತಿ ಪ್ರತ್ಯಯ, ಪುತ್ರ+ಉದಯ=ಪುತ್ರೋದಯ, ಗುಣ ಸಂಧಿ. ಪರ್ಣಗಳ+ಶಾಲೆ=ಪರ್ಣಶಾಲೆ, ಷ. ತ. ಸವತಿ-ದ್ಭ. ಸಪತ್ನಿ-ತ್ಸ. ||೪೨||

ಟೀ|| ಜಾತಿ- ಪ್ರತಿಯೊಂದು ಜೀವರಾಶಿಯೊಳಿರತಕ್ಕ, ವೈರಂಗಳು - ರಾಗದ್ವೇಷಾದಿಗಳು ಎಂದರೆ (ನಾಯಿಗೂ ಬೆಕ್ಕಿಗೂ, ಕಾಗೆಗೂ-ಕೋಗಿಲೆಗೂ, ಗೂಬೆಗೂ-ಕಾಗೆಗೂ, ಆನೆಗೂ-ಸಿಂಹಕ್ಕೂ, ಹಾವಿಗೂ-ನಕುಲಕ್ಕೂ, ಶರಭ ಮೃಗಕ್ಕೂ ಸಿಂಹಕ್ಕೂ ಇವುಗಳಲ್ಲಿ ಒಂದೊಂದಕ್ಕೆ ಜಾತಿವೈರವಿರುತ್ತದೆ) ಇಲ್ಲದ- ಇಲ್ಲದಿರುವ, ಪಕ್ಷಿ - ವಿಹಂಗಗಳ, ಮೃಗ-ಕಾಡು ಮೃಗಾದಿಗಳ, ಸಂಘಾತದಿಂ-ಸಮುದಾಯದಿಂದ, ಋತುಭೇದಂ-ಋತುಧರ್ಮಾದಿಗಳ ವ್ಯತ್ಯಾಸಗಳು ಎಂದರೆ (ವೃಕ್ಷಾದಿಗಳು ಎಲೆಯುದರಿ, ಚಿಗುರಿ, ಹೂವಾಗಿ, ಕಾಯಾಗುವ ಕಾಲಭೇದಂಗಳು) ಇಲ್ಲದ-ಇಲ್ಲದಿರುವ, ಲತಾ-ಬಳ್ಳಿ ಮೊದಲಾದವುಗಳು, ದ್ರುಮ-ವೃಕ್ಷಾದಿಗಳ, ವ್ರಾತದಿಂ-ಸಮುದಾಯದಿಂದ, ಪಗಲು-ಅಹಸ್ಸು, ಇರುಳು-ರಾತ್ರಿಯು, ಇವುಗಳಶಂಕೆ-ಇವುಗಳ ಸಂದೇಹವು, ಇಲ್ಲದ-ಇಲ್ಲದಿರುವ, ಪೂಗೊಳಂಗಳ-ಕಮಲ ಪುಷ್ಪಗಳಿಂದ ಕಂಗೊಳಿಸುವ ಪುಷ್ಕರಿಣಿಗಳ, ವಿಕಾಸದಿಂದ-ವಿಕಸನದಿಂದಲೂ, ಎಂದರೆ ಪ್ರಕಾಶದಿಂದಲೂ, ಸೀತೋಷ್ಣದ-ಛಳಿ ಮತ್ತು ಸೆಕೆ ಇವುಗಳಿಂದುಂಟಾಗತಕ್ಕ, ಆಸರು-ಆಲಸ್ಯವು, ಇಲ್ಲದ-ಇಲ್ಲದೇಯಿರತಕ್ಕ, ಸುಸ್ಥಳಂಗಳಿಂ-ಶ್ರೇಷ್ಠವಾದ ಸ್ಥಳಗಳಿಂದಲೂ, ಪ್ರೀತಿ-ವಿಶ್ವಾಸದಿಂದ, ವಿರಹಿತ-ಬೇರೆಯಾದ, ದುಃಖ ಸುಖದ-ಸುಖದುಃಖಾದಿಗಳ, ಜಂಜಡಂ-ತೊಂದರೆಗಳು, ಇಲ್ಲದ-ಇಲ್ಲದಿರುವ. ಆ ತಪೋವನದೊಳಗೆ-ಆ ಋಷ್ಯಾಶ್ರಮದಲ್ಲಿ,

---

ಅರವಿಂದಾಕ್ಷಿಯಾದ ಸೀತಾದೇವಿಗೆ ಪರ್ಣಶಾಲೆಯು ಚಿತ್ರವಿಚಿತ್ರವಾಗಿ ನಿರ್ಮಿತವಾಯಿತು. ಬಳಿಕ ಜಾನಕಿಯು ಅಲ್ಲಿದ್ದ ಋಷಿಪತ್ನಿಯರ ಮಿತ್ರತ್ವವನ್ನು ಬೆಳಸಿಕೊಂಡು, ವಾಲ್ಮೀಕಿ ಮುನೀಂದ್ರನ ಆದರಣೆಯನ್ನು ಹೊಂದುತ್ತಾ ಹೆರಿಗೆಯ ಕಾಲವನ್ನು ನಿರೀಕ್ಷಿಸುತ್ತಿದ್ದಳು. ಲೋಕದಲ್ಲಿ ದೃಢವಾದ ಪ್ರತಿಜ್ಞೆಯುಳ್ಳವರಿಗೂ, ಪತಿವ್ರತಾ ಸೀಮಂತನಿಯರಿಗೂ, ಸಚ್ಚರಿತ್ರೆಯುಳ್ಳವರಿಗೂ, ಎಂತಹ ಎಡರುಗಳು ಲಭಿಸಿದರೂ ಆ ವಿಘ್ನಗಳು ಮತ್ತು ವ್ಯಥೆಗಳು ಅಶಾಶ್ವತವಾಗುವುವು ಎಂದಿಗೂ ವಿಶೇಷಕಾಲ ಕಷ್ಟಕ್ಕೊಳಪಡಲಾರರು ಎಂಬುದು ಸತ್ಯವಾದುದೆಂದು ಜೈಮಿನಿ ಮುನೀಂದ್ರನು ಭೂಮಿಪತಿಯಾದ ಜನಮೇಜಯರಾಯನಂ ಕುರಿತು ಹೇಳಿದನು || ೪೨ || ಆ ಋಷ್ಯಾಶ್ರಮಗಳಲ್ಲಿ ನಿಜವೈರಗಳನ್ನು ಬೆಳೆಯಿಸುವ ಸಿಂಹಗಜಗಳು, ಗೋವ್ಯಾಘ್ರಗಳು ಕಾಕೋಲೂಕಗಳು, ಹಾವು ಮತ್ತು ಮುಂಗಸಿಗಳು, ಮುಂತಾದ ಮೃಗಜಾತಿ ಪಕ್ಷಿಜಾತಿಗಳು ತಮ್ಮ ನಿಜವೈರಗಳನ್ನು ಬಿಟ್ಟು ಒಂದಕ್ಕೊಂದು ಸ್ನೇಹಭಾವದಿಂದಿದ್ದವು. ಷಡೃತುಗಳು ತಮ್ಮ ಋತುಧರ್ಮಕ್ಕನುಗುಣವಾಗಿ ವ್ಯತ್ಯಾಸವಿಲ್ಲದಂತೆ ನಡಿಸುತ್ತ ತರುಗುಲ್ಮಲತಾದಿಗಳಿಂದ ನಿಬಿಡೀಕೃತವಾಗಿ ಹಗಲಿರುಳುಗಳ ಭೇಧಾಭೇದಗಳು ಗೊತ್ತಿಲ್ಲದೆ ಕಂಗೊಳಿಸುತ್ತಿತ್ತು. ಅರವಿಂದಗಳಿಂದ ವ್ಯಾಪ್ತ

ಕ್ಷಿ | ತಾತಪೋವನದೊಳಗೆಋಷಿವಧುಗಳೊಡಗೂಡಿವೈದೇಹಿಪದುಳಿಸಿದಳು ||೪೩|| ಮುನಿವಟುಗಳೆಡೆಯಾಡಿಪರಿಚರಿಯಮಂಮಾ
ಳ್ಪ | ರಿನಿದಾದವಸ್ತುವಂಋಷಿವಧುಗಳಿತ್ತಪ| ರ್ತಮತಮಗೆಸತ್ಕರಿಸುವರ್ತಾಪಸೋತ್ತಮವಾಲ್ಮೀಕಿಸಾದರದೊಳು|| ದಿನದಿನಕೆ
ಬೇಕಾದಬಯಕೆಯಂಸಲಿಸುವಂ | ಬನದೊಳಿಂತಿರುತಿರ್ದಳವನಿಸುತೆರಾಘವೇಂ | ದ್ರನಚರಣಕಮಲಯುಗಮಂಧ್ಯಾನಿಸುತಮ
ರೆದಳಖಿಳರಾಜ್ಯಶ್ರೀಯನು || ೪೪ || ಅವನಿಜೆಯಗರ್ಭಕ್ಕೆತುಂಬಿದುದುನವಮಾಸ | ದವಧಿಬಳಿಕೊಂದಿರುಳುಶುಭಲಗ್ನದೊಳ್ಪಡೆ

---

ಋಷಿವಧುಗಳ–ಮುನಿಗಳ ಹೆಂಗಸರಿಂದ, ಒಡಗೂಡಿ–ಸಂಗಡ ಅಥವಾ ಸಹವಾಸದಲ್ಲಿ ಬೆರತು, ವೈದೇಹಿ-ವಿದೇಹರಾಜಕುವರಿಯು, ಪದುಳಿಸಿದಳು-ಸೌಖ್ಯವನ್ನು ಹೊಂದಿದ್ದಳು ||

ಅ|| ವಿ|| ರಾಜನ+ಕುವರಿ=ರಾಯಕುವರಿ, ಷ. ತ. ಕುವರಿ-ದ್ಭ. ಕುಮಾರಿ-ತ್ಸ. ಕುಮಾರ-ಪು. ಲಿಂಗ. ಲತೆಯೂ, ದ್ರುಮವೂ ಇವುಗಳು, ಲತಾದ್ರುಮಗಳ್, ದ್ವಿ.ದ್ವಂ.ಸ. ತನ್ನಪತಿಯಲ್ಲಿಯೇ ನಿಯಮವುಳ್ಳವಳು. ಪತಿವ್ರತೆ. ಪೂವಿನ+ಕೊಳ=ಪೂಗೊಳ, ಷ. ತ. ಪೂ+ಕೊಳ=ಪೂಗೊಳ, ಗಕಾರಾದೇಶ ಸಂಧಿ. || ೪೩ ||

ಟೀ|| ಮುನಿ-ಮುನಿಗಳ, ವಟುಗಳ್-ಬ್ರಹ್ಮಚಾರಿಗಳಾದ ಬಾಲಕರು, ಎಡೆಯಾಡಿ–ಹತ್ತಿರದಲ್ಲಿ ಸಂಚಾರಮಾಡಿಕೊಂಡು, ಪರಿಚರಿಯಮಂ–ಉಪಚಾರಗಳನ್ನು, ಮಾಳ್ಪರ್–ಗೈಯ್ಯುತ್ತಿರ್ಪರು, ಋಷಿವಧುಗಳು–ಮುನಿಪತ್ನಿಯರುಗಳು, ಇನಿದಾದ-ಸವಿಯಾದ, ವಸ್ತುವಂ–ಪ್ರಯೋಜನ ಪದಾರ್ಥಗಳನ್ನು, ಇತ್ತಪರ್–ಕೊಡುತ್ತಲಿರುವರು, ತಾಪಸೋತ್ತಮರ್–ಮುನಿವರ್ಯರು, ತಮತಮಗೆ-ತಾವುತಾವಾಗಿಯೆಬಂದು, ಸತ್ಕರಿಸುವರ್–ಸೇವಿಸುವರು,(ಉಪಚಾರವನ್ನುಮಾಡುವರು) ವಾಲ್ಮೀಕಿ–ವಾಲ್ಮೀಕಿಮಹರ್ಷಿಯಾದರೊ, ದಿನದಿನಕೆ-ಪ್ರತಿನಿತ್ಯದಲ್ಲಿಯೂ, ಬೇಕಾದ–ತನಗೆ ಇಷ್ಟವಾದ, ಬಯಕೆಯಂ-ಆಸೆಪಟ್ಟದನ್ನು, ಸಾದರದೊಳು-ವಿಶ್ವಾಸಪೂರ್ವಕಮಾಗಿ, ಸಲಿಸುವಂ-ನೆರವೇರಿಸಿಕೊಡುವನು, ಅವನಿಸುತೆ–ಭೂ ಪುತ್ರಿಯಾದ ಸೀತಾದೇವಿಯು, ಬನದೊಳು–ಆ ತಪೋವನದಲ್ಲಿ, ರಾಘವೇಂದ್ರನ–ರಘುಕುಲಶ್ರೇಷ್ಠನಾದ ಶ್ರೀರಾಮನ, ಚರಣಕಮಲ–ಪಾದಪದ್ಮದ, ಯುಗಮಂ–ಯುಗ್ಮವನ್ನು, (ಅರವಿಂದಕ್ಕೆಸದೃಶವಾದ|ಪಾದಯುಗಳವನ್ನು) ಧ್ಯಾನಿಸುತ-ಸ್ಮರಣೆಮಾಡುತ್ತ, ಇಂತು–ಈ ಪ್ರಕಾರವಾಗಿ, ಇರುತಿರ್ದಳು–ಇರುತ್ತಿದ್ದಳು, ಅಖಿಲ–ಸಕಲವಾದ, ರಾಜ್ಯಶ್ರೀಯನು–ರಾಜ್ಯದ ಐಶ್ವರ್ಯವನ್ನು, ಮರೆದಳು–ಮರೆತುಹೋದಳು, (ರಾಜ್ಯೈಶ್ವರ್ಯಗಳ ಸುಖಕ್ಕಿಂತಲೂ ಹೆಚ್ಚಾದ ಸೌಖ್ಯಸಂಪತ್ತು ಒದಗಿತ್ತೆಂಬ ಭಾವವು) ||

ಅ|| ವಿ|| ಶ್ರೀ-ತ್ಸ. ಸಿರಿ-ದ್ಭ. ಮುನಿಯ+ವಟು=ಮುನಿವಟು, ಷ. ತ. (ತಾಪಸ+ಉತ್ತಮ–ತಾಪಸೋತ್ತಮ, ಗುಣ ಸಂಧಿ) ಆದರದೊಡನೆ ಸಹಿತವಾದದ್ದು, ಸಾದರ, ಸಹ ಪೂ. ಬಹು. ಸ. ||೪೪||

ಟೀ|| ಅವನಿಜೆಯ–ಭೂಪುತ್ರಿಯಾದ ಜಾನಕಿಯ, ಗರ್ಭಕ್ಕೆ–ಹೊಟ್ಟೆಯಲ್ಲಿರುವ ಶಿಶುವಿಗೆ, ನವಮಾಸದ–ಒಂಭತ್ತನೆಯ ತಿಂಗಳಿನ, ಅವಧಿ–ಅಡ್ಡಿಯು, (ವಾಯಿದೆಯ ಕಾಲವು) ತುಂಬಿದುದು–ಮುಗಿಯಿತು ಎಂದರೆ ನವಮಾಸ ಪೂರೈಸಿ ಪ್ರಸವಕಾಲವು ಸಮಿಾಪಿಸಿತು, ಬಳಿಕ-ಅನಂತರದಲ್ಲಿ, ಒಂದಿರುಳು–ಒಂದಾನೊಂದು ನಿಶಿಯಲ್ಲಿ, ಶುಭಲಗ್ನದೋಳ್–ಶುಭಕರವಾದ ಲಗ್ನದಲ್ಲಿ, (ಮಂಗಳದ ಹೋರೆಯಲ್ಲಿ) ವಿದಗ್ಧಾಂಗನೆಯರು–ಹೆರಿಗೆಯ ಅಕ್ಷಣವನ್ನು ಬಲ್ಲಿದರಾದ ಸ್ತ್ರೀಯರು(ಸೂಲಗಿತ್ತಿಯರು) ಸೂತಿಕಾಗೃಹದೊಳು–ಬಾಣಂತಿಯಮನೆಯಲ್ಲಿ, ಉಪಚರಿಸೆ-ಕಾಲಕ್ಕೆಸರಿಯಾಗಿ ಸಲಹಿ ಸಹಾಯವನ್ನುಮಾಡಲಾಗಿ, ಸೀತೆ–ಜಾನಕಿಯು, ಆ

---

ವಾದ ಕಾಸಾರಗಳು ಶೋಭಿಸುತಿರ್ದವು. ಚಳಿಗಾಲದಲ್ಲಿ ಅತಿ ಚಳಿಯೂ ಬೇಸಿಗೆಯಲ್ಲಿ ಅತಿ ಶಕೆಯೂ ಇಲ್ಲದೆ ಹಿತಕರವಾಗಿದ್ದವು. ದವಾಗ್ನಿಯು ಸಮಿಾದ ಸ್ಥಳಂಗಳಲ್ಲಿ ವ್ಯಾಪಿತೋರದು(ತನ್ನ ಹೆಮ್ಮೆಯನ್ನು ತೋರ್ಪಡಿಸನು) ಇಂತಹ ಋಷ್ಯಾಶ್ರಮಗಳನ್ನು ನೋಡಿ ಋಷಿಪತ್ನಿಯರ ಒಡಗೂಡಿಕೊಂಡು ಅತಿ ಸೌಖ್ಯದಿಂದ ಜಾನಕಿಯು ವಾಲ್ಮೀಕಿಯಾಶ್ರಮದಲ್ಲಿದ್ದಳು ||೪೩|| ಆ ಋಷ್ಯಾಶ್ರಮದಲ್ಲ ಮುನಿಗಳ ವಟುಗಳು ಅಲ್ಲಿಗಲ್ಲಿಗೆ ಸಂಚಾರಮಾಡುತ್ತ ಸೀತಾದೇವಿಯ ಸೇವೆಯನ್ನುಮಾಡುತ್ತಿದ್ದರು. ಋಷಿವಧುಗಳು ಇನಿದಾದ ವಸ್ತುಗಳನ್ನು ತಂದು ಆದರದಿಂದ ಕೊಡುತ್ತಿದ್ದರು. ತಾಪಸೋತ್ತಮರು ತಮ್ಮಿಷ್ಟಕ್ಕೆತಾವೆ ಬಂದು ಸತ್ಕರಿಸುತ್ತಿದ್ದರು ವಾಲ್ಮೀಕಿ ಮಹರ್ಷಿಯಾದರೊ ಸಾದರದೊಡನೆ ಬೇಕಾದ ಬಯಕೆಗಳನ್ನು ಸಲ್ಲಿಸುತ್ತಿದ್ದನು. ಸೀತಾದೇವಿಯು ಶ್ರೀ ರಾಮಚಂದ್ರನ ಚರಣಾರವಿಂದವನ್ನು ಧ್ಯಾನಿಸುತ್ತ ವಾಲ್ಮೀಕಮಹರ್ಷಿಯ ಪೋಷಣೆಯಲ್ಲಿದ್ದುಕೊಂಡು ಸಕಲ ವಿಧವಾದ ರಾಜ್ಯದ ಸಂಪತ್ತನ್ನು ಮರೆದು ಸುಖವಾಗಿದ್ದಳು||೪೪|| ಈರೀತಿಯಾಗಿ ಜಾನಕಿಯು ವಾಲ್ಮೀಕಿಯಾಶ್ರಮದಲ್ಲಿ ಸಕಲರಾಜ್ಯಸಂಪತ್ತನ್ನೂ ಮರೆತು ಸೌಖ್ಯವಾಗಿರುತಿರಲು ಜಾನಕಿಯ ಗರ್ಭಕ್ಕೆ ನವಮಾಸವು ಪೂರ್ತಿಯಾಗಿ ತುಂಬಿದ ಕೂಡಲೆ ಒಂದಾನೊಂದು ದಿನ ರಾತ್ರಿಕಾಲದ ಶುಭಕರವಾದ ಹೋರೆಯಲ್ಲಿ ಹೆರಿಗೆಯ ಕೆಲಸವನ್ನು ಮಾಡುವುದರಲ್ಲಿ ಕುಶಲತೆಯುಳ್ಳ ಲಲನೆಯರು ಕಾಲಕ್ಕೆ ಸರಿಯಾಗಿ ಉಪಚರಿಸಲು ಜಾನಕಿಯು ಅವಳಿಮಕ್ಕಳನ್ನು ಹೊಂದಿದಳು (ಹೆತ್ತಳು) ಅತ್ಯಾದರದಿಂದ ಮುನಿ ವಟುಗಳು ಬಂದು

ದ | ಳವಳಿಮಕ್ಕಳನುಪಚರಿಸೆವಿದಗ್ಧಾಂಗನೆಯರಾಸೂತಿಕಾಗೃಹದೊಳು || ತವಕದಿಂದೈತಂದುಮುನಿವಟುಗಳುಸುರಲುತ್ಸ | ವ
ದಿಂದವಾಲ್ಮೀಕಿಋಷಿಬಂದುನೋಡಿಕುಶ | ಲವದಿಂದಸೇಚನಂಗೈದುಕುಶಲವರೆಂದುಪೆಸರಿಟ್ಟನರ್ಭಕರ್ಗೆ || ೪೫ || ದೆಸೆಗಳ್ಪ್ರ
ಸನ್ನತೆಯೊಳೆಸೆದವಾಗಸದೊಳುಡು | ವಿಸರಂಗಳೊಪ್ಪಿದುವುಪೊಸಗಂಪಿಡಿದುಗಾಳಿ | ಪಸರಿಸಿತುತವೆಸುಪ್ರದಕ್ಷಿಣದೊಳುರಿದು
ದಗ್ನಿಜ್ವಾಲೆಕಡಲುಕ್ಕಿತು || ವಸುಧೆನಲಿದುದುತಿಳಿದುಪರಿದವುನದಿಗಳಂದು | ಶಶಿರವಿಗಳುದಯಿಸಿದರೇಕಕಾಲದೊಳೆನೆ | ಲ್ಶಿಶುಗ
ಳಾಶ್ರಮದಮುನಿಗಳಕಣ್ಗೆಕಾಣಿಸಿದರೊಸಗೆಮೂಜಗಕಾಗಲು || ೪೬ || ಬಾಲದೊಡಿಗೆಗಳೆಲ್ಲಮಂತೊಡಿಸಿನೋಡುವಂ |

---

ವಳಿಮಕ್ಕಳಂ-ಯಮಳರಾದಣುಗರನ್ನು, ಪಡೆದಳು-ಹೆತ್ತವಳಾದಳು, ತವಕದಿಂದ-ಆದರಪೂರ್ವಕವಾಗಿ, ಮುನಿವಟುಗಳು-ಮುನಿಗಳ ಮಕ್ಕಳಾದ ಬ್ರಹ್ಮಚರ್ಯನಿಯಮವುಳ್ಳವರು, ಐತಂದು - ವಾಲ್ಮೀಕಿಮುಹರ್ಷಿಯ ಬಳಿಗೆ ಬಂದವರಾಗಿ, ಉಸುರಲ್-ಸೀತೆಯು ಅವಳಿಮಕ್ಕಳಂ ಪೆತ್ತ ಸಂಗತಿಯನ್ನು ತಿಳಿಸಲಾಗಿ, ವಾಲ್ಮೀಕಿಋಷಿ - ವಾಲ್ಮೀಕಿಮುನೀಶ್ವರನು, ಬಂದು-ಬಂದವನಾಗಿ, ನೋಡಿ-ಈಕ್ಷಿಸಿ, (ಈ ಹರ್ಷವನ್ನು ಕಂಡು) ಉತ್ಸವದಿಂದ-ಸಂತೋಷದಿಂದ, ಕುಶ - ದರ್ಭೆಯ ಕೊನೆಯಿಂದಲೂ, ಲವ-ಆಕಳ ಬಾಲದ ಕೂದಲಿನಿಂದಲೂ, ಸೇಚನಂ-ಉದಕ ಸೇಚನೆಯಂ, ಗೈದು - ನೆರವೇರಿಸಿ, ಅರ್ಭಕರ್ಗೆ-ಆ ಬಾಲಕರಿಗೆ, ಕುಶಲವರೆಂದು-ಕುಶಲವರೆಂಬದಾಗಿ. ಪೆಸರಿಟ್ಟನು- ನಾಮಕರಣವಂ ಮಾಡಿದನು.

ಅ|| ವಿ|| ಪೆಸರಂ ಇಟ್ಟಂ-ಪೆಸರಿಟ್ಟಂ, ಕ್ರಿ. ಸ. ಅವನಿಯಲ್ಲಿ + ಜೆ = ಅವನಿಜೆ, ಕ್ಕ. ವೃ. ನವಗಳಾದ ಮಾಸಗಳ ಸಮಾಹಾರ ನವಮಾಸ. ಸಮಾಹಾರದ್ವಿಗು ಸ. ಶುಭವಾದ + ಲಗ್ನ = ಶುಭಲಗ್ನ, ವಿ. ಪೂ. ಕ. ಲಗ್ನ-ಮೇಷಾದಿ ರಾಶಿಗಳು ಮೇಷ, ವೃಷಭ, ಮಿಥುನ, ಕರ್ಕಾಟಕ, ಸಿಂಹ, ಕನ್ಯ ತುಲ, ವೃಶ್ಚಿಕ, ಧನುಸ್ಸು, ಮಕರ, ಕುಂಭ, ಮೀನ ವಿದಗ್ಧರಾದ+ಅಂಗನೆಯರು=ವಿದಗ್ಧಾಂಗನೆಯರು, ವಿ. ಪೂ ಕ. ||೪೫||

ಟೀ|| ಅಂದು-ಜಾನಕಿಯು ಅವಳಿಮಕ್ಕಳಂ ಹೆತ್ತಾಗ, ದೆಸೆಗಳ್-ಅಷ್ಟದಿಕ್ಕುಗಳು, ಪ್ರಸನ್ನತೆಯೊಳು - ಸ್ವಚ್ಛತೆಯಿಂದ, ನೈರ್ಮಲ್ಯದಿಂದ, ಎಸೆದವು-ಶೋಭಿಸಿದವು, ಆಗಸದೊಳು-ಅಂತರಿಕ್ಷದಲ್ಲಿ, ಉಡು - ತಾರೆಗಳ, ವಿಸರಂಗಳು - ಸಮುದಾಯಗಳು, ಒಪ್ಪಿದುವು-ಶೋಭಿಸಿದವು, (ಸರಿಯಾಗಿದ್ದವು) ಪೊಸ - ನವೀನವಾದ, ಹೊಸದಾದ) ಗಂಪು - ಸುವಾಸನೆಯನ್ನು ಇಡಿದು-ಹೊಂದಿ, ಗಾಳಿ-ತಂಗಾಳಿಯು, (ಮಲಯಮಾರುತವು) ಪಸರಿಸಿತು-ಚಲಿಸಿತು, ಅಗ್ನಿ-ಬೆಂಕಿಯ, ಜ್ವಾಲೆ-ಉರಿಯು ತವೆ-ಅಧಿಕವಾಗಿ, ಪ್ರದಕ್ಷಿಣೆಯೊಳು-ಬಲಗಡೆಯಿಂದ, ಉರಿದುದು-ಪ್ರಜ್ವಲಿಸಿತು. ಕಡಲ್-ಅಂಬುಧಿಯು, ಉಕ್ಕಿದುದು-ವೃದ್ಧಿಯಾಯಿತು, ವಸುಧೆ - ಭೂದೇವಿಯು, ನಲಿದಳು - ಹರ್ಷಗೊಂಡವಳಾದಳು, ನದಿಗಳ್ - ನದಿಗಳು, ತಿಳಿದು-ಸ್ವಚ್ಛತೆಯನ್ನು ಹೊಂದಿ, ಪರಿದವು-ಹರಿದವು, ಪ್ರವಹಿಸಿದವು. ಶಶಿರವಿಗಳ್-ದಿನಕರ ಮತ್ತು ರಜನೀಶ್ವರರು, (ಸೂರ್ಯಚಂದ್ರರು) ಏಕಕಾಲದೊಳ್ ಒಂದೇ ಸಮಯದಲ್ಲಿ, ಉದಯಿಸಿದರ್ - ಉದ್ಭವಿಸಿದರು, ಎನಲ್ - ಎಂಬುವಹಾಗೆ, ಮೂಜಗಕೆ-ಸ್ವರ್ಗ, ಮರ್ತ್ಯ, ಪಾತಾಳ ಎಂಬುವ ಮೂರು ಲೋಕಗಳಿಗೂ, ಒಸಗೆ-ಆನಂದವು, (ಹರ್ಷವು) ಆಗಲು-ಉಂಟಾಗಲಾಗಿ, ಶಿಶುಗಳ್ - ಆ ಲವ ಕುಶರೆಂಬ ಬಾಲಕರಿಬ್ಬರು, ಆಶ್ರಮದ-ತಪೋವನದಲ್ಲಿರತಕ್ಕ, ಋಷಿಗಳ-ಮುನೀಂದ್ರರ, ಕಣ್ಗೆ-ನೇತ್ರಗಳಿಗೆ, ಕಾಣಿಸಿದರು-ತೋರಿಬಂದರು (ಪ್ರಕಾಶಿಸಿದರು)

ಅ|| ವಿ|| ತ್ರಿಲೋಕಗಳ ಸಮಾಹಾರವು - ತ್ರಿಲೋಕ, ಸಮಾಹಾರ ದ್ವಿಗು. ಆಗಸ ದ್ಭ. ಆಕಾಶ ತ್ಸ. ಅಗ್ನಿಯ+ಜ್ವಾಲೆ=ಅಗ್ನಿಜ್ವಾಲೆ, ಷ. ತ. ನಲಿದು - ಪ್ರೀತಿಸಿ, ಒಲಿದು - ಒಪ್ಪಿ, ಶಶಿ ತ್ಸ. ಸಸಿ ದ್ಭ. ಶಶಿಯೂ, ರವಿಯೂ, ಇವರು ಶಶಿರವಿಗಳು, ದ್ವಿ. ದ್ವಂ. ಸ. ಋಷಿ ತ್ಸ. ರಿಸಿ ದ್ಭ. ||೪೬||

---

ಸೀತಾದೇವಿಯು ಅವಳಿ ಮಕ್ಕಳನ್ನು ಹೆತ್ತ ಹರ್ಷದ ವಾರ್ತೆಯನ್ನು ವಾಲ್ಮೀಕಿಮುಹರ್ಷಿಗೆ ತಿಳಿಸಲು, ವಾಲ್ಮೀಕಿಯು ಮಹೋತ್ಸಾಹದಿಂದ ಬಂದು ನೋಡಿ ಕುಶದಿಂದಲೂ ಲವದಿಂದಲೂ ಜಲಸೇಚನೆಯನ್ನು ಮಾಡಿದ ಅನಂತರದಲ್ಲಿ ಆ ಬಾಲಕರಿಬ್ಬರಿಗೂ ಕ್ರಮವಾಗಿ ಕುಶಲವರೆಂಬದಾಗಿಯೇ ಹೆಸರನ್ನಿಟ್ಟನು ||೪೫|| ಭೂಪುತ್ರಿಯಾದ ಜಾನಕಿಯು ಪ್ರಸವಿಸಿದ ಕೂಡಲೆ ದಶದಿಕ್ಕುಗಳೂ ನಿರ್ಮಲವಾಗಿ ಶೋಭಿಸಿದುವು ಅಂತರಿಕ್ಷದಲ್ಲಿ ತಾರಕಾನಿವಹವು ಅತ್ಯಧಿಕವಾಗಿ ಕಂಗೊಳಿಸಿತು. ನೂತನವಾದ ಸುವಾಸನೆಯಂ ಪೊಂದಿದ ತಂಗಾಳಿಯು ಸಂಚರಿಸಿದುದು. ಅಗ್ನಿಜ್ವಾಲೆಯು ಪ್ರದಕ್ಷಿಣೆಯಾಗಿ ಉರಿಯುತ್ತಿತ್ತು. ಕಡಲುಗಳು ಅಧಿಕವಾಗಿ ಉಕ್ಕಿದುವು. ಭೂದೇವಿಯು ಮಗಳು ಸುಖವಾಗಿ ಪ್ರಸವಿಸಿದ್ದರಿಂದ ಅತ್ಯಾನಂದ ಭರಿತಳಾದಳು. ನದೀನದಗಳು ಅತಿ ನಿರ್ಮಲೋದಕದಿಂದ ಪ್ರವಹಿಸಿದುವು. ಆ ದಿನದಲ್ಲಿ ಸೂರ್ಯಚಂದ್ರರೀರ್ವರೂ ಏಕಕಾಲದಲ್ಲಿ ಉದ್ಭವಿಸಿದರೋ ಎಂಬಂತೆ ಸ್ವರ್ಗ ಮರ್ತ್ಯ ಪಾತಾಳಗಳೆಂಬ ಮೂರು ಲೋಕಗಳಿಗೂ ಸಂತೋಷ ಉಂಟಾಗಲು ಬಾಲಕರಿಬ್ಬರೂ ಋಷ್ಯಾಶ್ರಮದಲ್ಲಿ ಕಾಂತ್ಯತಿಶ

ಬಾಲಲೀಲೆಗಳನಾಡಿಸಿಮುದ್ದುಮಾಡುವಂ । ಬಾಲಕರ್ಗಿನಿದಾದವಸ್ತುವಂಕೊಡುವಂತನ್ನತೊಡೆಮಡಿಲೊಳಿಟ್ಟು ॥ ಲಾಲಿಸುವ
ನಾವಗಂಜಪತಪಸಮಾಧಿಗಳ । ಕಾಲಮಂಬಗೆಯದೆಮುನೀಶ್ವರಂಕುಶಲವರ । ಮೇಲಣಕ್ಕರೊಳಿರ್ದನಾಶ್ರಮದೊಳುತ್ಸವಂ
ಪೆರ್ಚಿದುದುದಿನದಿನದೊಳು ॥ ೪೭ ॥ ದಶರಥನೃಪಾಲಸುತನರಮನೆಯಬೆಳವಿಗೆಯ । ಶಿಶುಗಳ್ಗೆಕಾಂತಾರವಾಸದೊಳ್ನವೆವ ಕ।
ರ್ಕಶಮಿದೆತ್ತಣದೆಂದುಮಿಥಿಳೇಂದ್ರಸಂಭೂತೆಚಿತ್ತದೋಳ್ಮರುಗದಂತೆ ॥ ವಿಶದಮಾನಸನಾಗಿವಾಲ್ಮೀಕಿಮುನಿವರಂ। ಕುಶಲವರ

---

ಟೀ॥ ಮುನೀಶ್ವರಂ-ಋಷೀಶ್ವರನಾದ ವಾಲ್ಮೀಕಿಯು, ಬಾಲ-ಹಸುಳೆಗಳಾದ ಲವಕುಶರಿಗೆ, ತೊಡಿಗೆಗಳ್ - ತೊಡಿ ಸುವ ವಸ್ತ್ರಾಭರಣಾದಿಗಳ, ಎಲ್ಲಮಂ-ಸಮಸ್ತವನ್ನು, ತೊಡಿಸಿ - ಅಲಂಕಾರಮಾಡಿ. (ಇಟ್ಟವನಾಗಿ) ನೋಡುವಂ - ಅವಲೋ ಕಿಸುವನು, (ಕಾಣುವನು) ಬಾಲ-ಮಕ್ಕಳ, ಲೀಲೆಗಳಂ-ವಿನೋದಗಳನ್ನು, (ಆಟಗಳನ್ನು) ಆಡಿಸಿ-ಆಟವನ್ನಾಡಿಸಿ, (ವಿನೋದ ಪಡಿಸಿ) ಮುದ್ದುಮಾಡುವಂ - ಮುತ್ತುಕೊಡುವನು, ಬಾಲಕರ್ಗೆ-ಆ ಲವಕುಶರಿಗೆ, ಇನಿದಾದ - ಸವಿಯಾದ, (ಮಧುರವಾದ) ವಸ್ತುವಂ-ಪದಾರ್ಥಗಳನ್ನು, ಕೊಡುವಂ-ಈಯುವನು, ಕೊಡುವನು, ತನ್ನ-ತನ್ನಯ, ತೊಡೆ-ಅಂಕದಲ್ಲಿ, ಮಡಿಲೊಳು-ಮಡಿಲಿ ನಲ್ಲಿ, ಇಟ್ಟು-ಇರಿಸಿಕೊಂಡು, ಆವಗಂ - ಸದಾಕಾಲವೂ, ಲಾಲಿಸುವಂ - ಪ್ರೀತಿಸುವನು ಇಲ್ಲವೆ ಸಮಾಧಾನಪಡಿಸುವನು, ಜಪ-ಗಾಯತ್ರಿಯು, (ಅನುಷ್ಠಾನವು) ತಪ-ತಪಸ್ಸು, ಸಮಾಧಿಗಳ - ಇವೇ ಮೊದಲಾದ ಯೋಗಗಳ, ಕಾಲ-ಸರಿಯಾದ ಸಮಯ ವನ್ನು, ಬಗೆಯದೆ - ಲಕ್ಷ್ಯಮಾಡದೆ, ಎಂದರೆ (ಗಾಯತ್ರಿಯು, ಕೃಛ್ರಚಾಂದ್ರಾಯಣವೇ ಮೊದಲಾದ ವ್ರತವು ಇವುಗಳನ್ನು ಅಂಗೀಕರಿಸೋಣವು, ಇವುಗಳನ್ನಾದರೂ ಬಿಟ್ಟು ಮಕ್ಕಳ ಲಾಲನೆ ಪಾಲನೆಯಲ್ಲಿದ್ದನೆಂಬ ಭಾವ) ಕುಶಲವರ - ಲವಕುಶರೆಂಬ ಜಾನಕೀತನುಜರ, ಮೇಲಣ - ಆ ಮಕ್ಕಳಲ್ಲಿರತಕ್ಕ, ಅಕ್ಕರೊಳು - ಆದರದಿಂದ, ಇದ್ದನು - ಇರುತ್ತಿದ್ದನು, ಆಶ್ರಮದೊಳು-ವಾಲ್ಮೀಕಿಮಹರ್ಷಿಯ ತಪೋವನದಲ್ಲಿ, ದಿನದಿನದೊಳು - ಪ್ರತಿನಿತ್ಯದಲ್ಲಿಯೂ, ಉತ್ಸವಂ - ಸಂತೋಷವು, ಉತ್ಸಾಹವು, ಪೆರ್ಚಿದುದು-ಅಭಿವೃದ್ಧಿಯನ್ನು ಹೊಂದಿತು.

ಅ॥ ವಿ॥ ಬಾಲರ+ಲೀಲೆ=ಬಾಲಲೀಲೆ, ಷ. ತ. ಉಡಿಗೆತೊಡಿಗೆ - ವಸ್ತ್ರಾಭರಣ, ಇನಿದುವಸ್ತು - ರುಚಿಯಾದ ಪದಾರ್ಥ ॥ ೪೭ ॥

ಟೀ॥ ದಶರಥನೃಪಾಲ-ಭೂಮಿಪತಿಯಾದ ದಶರಥನೆಂಬ ಮಹಾರಾಯನ, ಸುತನ - ತನುಜನಾದ ಶ್ರೀರಾಮನ, ಅರ ಮನೆಯ-ರಾಜಭವನದ, ಬೆಳವಿಗೆಯ-ಅಭಿವೃದ್ಧಿ ಹೊಂದುವಿಕೆಯ, ಎಂದರೆ ವೃದ್ಧಿಹೊಂದತಕ್ಕವರಾಗಿರಬೇಕಾದ, ಶಿಶುಗಳ್ಗೆ-ಮಕ್ಕಳಾದ ಈ ಕುಶಲವರಿಗೆ, ಕಾಂತಾರ - ಅರಣ್ಯಪ್ರವೇಶದ, ವಾಸದೊಳು - ವಾಸಮಾಡುವಿಕೆಯಿಂದ, ನವೆವ-ನವೆಯುವ ಎಂದರೆ ಸವೆಯುವ, ಕರ್ಕಶಂ-ಕಕ್ಕಸದ ರೀತಿಯು, ಇದು - ಈ ಅರಣ್ಯದ ವಾಸವು, ಎತ್ತಣದು ಎಲ್ಲಿಂದ ಲಭಿಸಿತು, ಎಂದು-ಎಂಬದಾಗಿ, ಮಿಥಿಳೇಂದ್ರ-ಮಿಥಿಳಾಧಿಪನಾದ ಜನಕನಿಂದ, ಸಂಭೂತೆ - ಉದ್ಭವಿಸಿದವಳಾದ ಜಾನಕಿಯು, ಚಿತ್ತದೋಳ್-ಮನಸ್ಸಿನಲ್ಲಿ, ಮರುಗದಂತೆ-ದುಃಖಪಡದಹಾಗೆ, ಮುನಿವರಂ-ಋಷೀಶ್ವರನಾದ, ವಾಲ್ಮೀಕಿ-ವಾಲ್ಮೀಕಿಯು, ವಿವಿಧ-ಅನೇಕ ವಿಧಗಳಾದ, ವೈಭವದಿಂದ-ಆಟ್ಟಹಾಸದಿಂದ, ವಿಶದ-ವಿಸ್ತಾರವಾದ, ನಿರ್ಮಲವಾದ, ಮಾನಸನಾಗಿ-ಹೃದಯವುಳ್ಳವನಾಗಿ, (ನಿರ್ಮಲಚಿತ್ತನಾಗಿ) ಕುಶಲವರಂ-ಕುಶಲವರನ್ನು, ಓವಿದಂ-ಸಲಹಿದನನಾದನು, ರಾಘವ-ರಘುಕುಲೋದ್ಭವನಾದ ಶ್ರೀರಾ ಮನ, ಆತ್ಮಜರ್-ಪುತ್ರರಾದ ಲವಕುಶರು, ಶಶಧರನ-ನಿಶಾಕರನ, ಕಳೆಯ-ತೇಜಸ್ಸಿನ, ತೆರದೊಳು-ವಿಧದಿಂದ, ದಿನದಿನಕೆ-ಪ್ರತಿನಿತ್ಯದಲ್ಲೂ, ವರ್ಧಿಸಿದರು-ವೃದ್ಧಿಹೊಂದುತ್ತಿದ್ದರು.

---

ಯಮಾಗಿ ಶೋಭಿಸಿದರು ॥೪೬॥ ಆಗ ವಾಲ್ಮೀಕಿಯು ಬಾಲರ್ಗೆ ಬೇಕಾದ ಉಡಿಗೆ ತೊಡಿಗೆಗಳನ್ನು ಇಟ್ಟು ಹರ್ಷದಿಂದೀಕ್ಷಿ ಸುವನು. ಬಾಲಕರಿಗೆ ಆಟಪಾಟಾದಿಗಳನ್ನು ಆಡಿಸಿ ಮುದ್ದಾಡುವನು ಮಕ್ಕಳಿಗೆ ಇನಿದಾದವಸ್ತು ಮೊದಲಾದವುಗಳನ್ನು ತಂದು ಕೊಡುವನು. ಮಕ್ಕಳನ್ನೆತ್ತಿಕೊಂಡು ತನ್ನ ತೊಡೆಯಲ್ಲಿರಿಸಿಕೊಂಡು ಅತ್ಯಾನಂದಪಡುವನು. ಅವುಗಳು ಅತ್ತರೆ ಇನಿವಾತಿನಿಂದ ಸಂತೈಸುವನು. ಜಪ, ತಪಾದಿಗಳ ಕಾಲವನ್ನು ಲಕ್ಷ್ಯಮಾಡದೆ ಸೀತಾನಂದನರಾದ ಕುಶಲವರಲ್ಲಿ ಅತ್ಯಧಿಕವಾದ ವ್ಯಾಮೋ ಹವನ್ನಿಟ್ಟುಕೊಂಡು ಇರುತ್ತಿರಲು ಆ ವಾಲ್ಮೀಕಿಯಾಶ್ರಮದಲ್ಲಿ ಪ್ರತಿನಿತ್ಯವೂ ಉತ್ಸವಾದಿಗಳುಂಟಾಗುತ್ತಿದ್ದವು ॥ ೪೭ ॥ ಆ ರಾಜಕುಮಾರರೀರ್ವರೂ ದಶರಥರಾಯನಿಗೆ ಸುತನಾದ ಶ್ರೀರಾಮನ ಅರಮನೆಯ ಬೆಳವಳಿಗೆಯಲ್ಲಿರಬೇಕಾದ ಕುಶಲವ ರಿಗೆ ಋಷ್ಯಾಶ್ರಮದಲ್ಲಿರುವದರಿಂದ ಕೃಶನಾಗತಕ್ಕ ಸ್ಥಿತಿಯು ಎಲ್ಲಿಂದಾದುದು ಎಂದರೆ (ಆ ರಾಜಭವನದಲ್ಲಿದ್ದರೆ ಎಷ್ಟರ ಮಟ್ಟಿನ ಸುಖವನ್ನು ಪಡೆಯುತ್ತಿದ್ದವೊ ಅದಕ್ಕಿಂತಲೂ ಸೌಖ್ಯವಾಗಿತ್ತೆಂಬ ಭಾವವು) ಎಂದು ಮಿಥಿಳೇಂದ್ರನಂದನೆಯಾದ ಜಾನಕಿಯು ಚಿತ್ತದಲ್ಲಿ ವ್ಯಥೆಪಡದಂತೆ ವಾಲ್ಮೀಕಿ ಮುನೀಂದ್ರನು ಬಗೆಬಗೆಯಾದ ವೈಭವದಿಂದ ಸಹೋದರರಾದ ಕುಶಲವರ

ನೋೞಿದಂವಿವಿಧವೈಭವದಿಂದ | ಶಶಿಧರನಕಳೆಯತೆರದೊಳುರಾಘವಾತ್ಮಜರ್ದಿನದಿನಕೆವರ್ಧಿಸಿದರು ‖ ೪೮ ‖ ಚೆಲ್ವೆರಡುರೂಪಾಯ್ತೊ ವಿಮಲತೆಕವಲ್ತುದೋ | ಗೆಲ್ವದೆಸೆಯೆಳಗೊಂಡಡರ್ದುದೊಕೀರ್ತಯಮ | ಡಲ್ವಸುಧೆಯೊೞ್ ದ್ವಿಧಾಕೃತಿಯಾಯ್ತೊ ಸಂತಸದಬೆಳಸಿನಬೆಳೆದಪಸುಗೆಯೊ ‖ ಸಲ್ವಕುಲದೇಳ್ಗೆಯುಸಸಿಯಕೋಡೊಮೋಹನದ | ಬಲ್ವನಲಸವಡಿಯೋಸೊಗಸಿನವಳ್ಳಿಯಫಲವೊ | ಸೊಲ್ವಿಡಲ್ಪೊಸತೆನಲ್ಕುಶಲವರ್ಕುಶಲಂಕಣ್ಗೆಸೆದರಾಶ್ರಮದೊಳು ‖ ೪೯ ‖ ತೊಟ್ಟಲೊಳ್ನಲಿವನೆವಮಿಲ್ಲದೆನಗುವಬಾಯ್ಗೆ | ಬೊಟ್ಟಕ್ಕಿಪೀರ್ವಪಸಿದರೆಚೀರ್ವಮೊಲೆಯುಂಬ | ಪಟ್ಟಿರಿಸೆಪೊರಳ್ವಂಬೆಗಾಲಿಡುವನೊಳೆವಲ್ಲಜೊಲ್ಲೊಗೆ

---

ಅ‖ ವಿ‖ ಶಶವನ್ನು ಧರಿಸಿರುವವನು ಯಾರೋ ಅವನು–ಶಶಧರ ಕೃ. ವೃ. ಮಿಥಿಳ+ಇಂದ್ರ=ಮಿಥಿಳೇಂದ್ರ ಗುಣ.ಸ. ಅರಸಿನ+ಮನೆ=ಅರಮನೆ ಷ. ತ. ಮುನಿ+ಈಶ್ವರ=ಮುನೀಶ್ವರ ಸ. ದೀ. ಸಂ. ವರನಾದ+ಮುನಿ=ಮುನಿವರ ವಿ. ಉ. ಕ. ಸ. ಕುಶನೂ+ಲವನೂ ಇವರು=ಕುಶಲವರ್ ದ್ವಿ. ದ್ವಂ. ಸ. ‖೪೮‖

ಟೀ‖ ಕುಶಲವರ್-ಸಹೋದರರಾದ ಕುಶಲವರು, ಆಶ್ರಮದೊಳು– ವಾಲ್ಮೀಕಿಯಾಶ್ರಮದಲ್ಲಿ, ಚೆಲ್ವು–ಲಾವಣ್ಯವೆಂಬುವುದು, ಎರಡು ರೂಪು–ಎರಡು ವಿಧವಾದ ಆಕೃತಿಯುಳ್ಳದ್ದು, ಆಯ್ತೋ-ಆಗಿರುತ್ತದೆಯೋ, ವಿಮಲ-ನೈರ್ಮಲ್ಯವು, (ಪರಿಶುದ್ಧತೆಯು) ಕವಲ್ತುದೊ–ದ್ವಿವಿಧವಾಗಿ ಬೇರೆಯಾಗಿರುತ್ತದೆಯೊ, ಗೆಲ್ವ–ಜಯವನ್ನು ಹೊಂದುವ, ದೆಸೆ–ವಿಧವು, (ಜಯವೆಂಬುವುದು) ಎಳೆಗೊಂಡು–ಬಳ್ಳಿಯಾಗಿ, ಅಡರ್ದುದೋ–ವ್ಯಾಪಿಸಿರುತ್ತೊ, ಕೀರ್ತಿಯು–ಯಶದ, ಮಡಲ್–ಪ್ರಸರಿಸೋಣವು, ವಸುಧೆಯೊೞ್- ಪೃಥ್ವಿಯಲ್ಲಿ, ದ್ವಿಧಾಕೃತಿಯು–ಎರಡು ವಿಧವಾದ ಆಕಾರವುಳ್ಳದ್ದು, ಆಯ್ತೊ–ಆಗಿರುತ್ತದೆಯೊ, ಸಂತಸದ–ಹರುಷದ, ಬೆಳಸಿನ–ಬೆಳೆಯ, ಬೆಳೆದ–ಪೆರ್ಚಿಗೆಯಾದ, ಪಸುಗೆಯೊ–ವಿಭಾಗವಾಗಿರುತ್ತದೆಯೊ, ಸಲ್ವ–ಅನುಕೂಲವಾಗಿ ನಡೆಯುತಕ್ಕ, (ಕ್ರಮಪರಂಪರೆಯಾಗಿ ನಡೆದು ಬರುವ) ಕುಲದ–ಗೋತ್ರದ, (ವಂಶವೆಂಬುದರ) ಏಳ್ಗೆಯು–ಅಭಿವೃದ್ಧಿಯಲ್ಲಿರುವ, ಸಸಿಯ–ಚಂದ್ರಬಿಂಬದಲ್ಲಿರುವ ಮೊಲದ, ಕೋಡೋ–ಕೊಂಬೋ, ಮೋಹನದ–ಮೋಹಿಸಲು ಯೋಗ್ಯವಾದ, ಬಲ್ವ–ಬಲವಾಗಿ ಬೆಳದಿರುವ, ನಲ-ಕೋರೆದಾಡೆಯನ್ನು ಹೊಂದದಿರುವ, ಸವಡಿಯೊ–ಗೋಡೆಯೋ, (ಸವಡೋ) ಸೊಗಸಿನ-ಸಿಂಗರದ, (ಅಲಂಕಾರದ) ವಳ್ಳಿಯ–ಬಳ್ಳಿಯ, ಫಲವೊ–ಹಣ್ಣಾಗಿರುತ್ತದೆಯೋ. ಸೊಲ್ವಿಡಲ್-ನುಡಿಯಲು, ಪೊಸತು–ನೂತನವಾದದ್ದು, ಎನಲ್–ಎನ್ನುವಂತೆ, ಕಣ್ಗೆ–ನೇತ್ರಗಳಿಗೆ, ಎಸೆದರ್–ಶೋಭಿಸಿದರು.

ಅ‖ ವಿ‖ ಕೃತಿ–ಕಾವ್ಯ. ಆಕೃತಿ-ಆಕಾರ. ಶಶ–ಮೊಲ. ಶಶವನ್ನು ಹೊಂದಿರುವುದು ಶಶಿ. (ಚಂದ್ರ) ವಳ್ಳಿಯ+ಫಲ=ವಳ್ಳಿಫಲ ಷ. ತ. ಕುಲ–ವಂಶ. ನಕುಲ–ಮುಂಗಸಿ, ಸಿಂಗರ–ದ್ಭ. ಶೃಂಗಾರ–ತ್ಸ. ಸೊಬಗ–ದ್ಭ. ಸೌಭಾಗ್ಯ–ತ್ಸ. ‖೪೯‖

ಟೀ‖ ಕುಮಾರಕರ್– ಮಕ್ಕಳಾದ ಲವಕುಶರು, ತೊಟ್ಟಲೊೞ್– ತೊಟ್ಟಲಿನಲ್ಲಿ, ನಲಿವ– ಆನಂದಪಡುವುದಕ್ಕೆ, (ಹರ್ಷಿಸುವುದಕ್ಕೆ) ನೆವಂ–ನೆಪವು, (ಹೇತುವು) ಇಲ್ಲದೆ–ಇಲ್ಲದೇನೆ, ನಗುವ- ಹರ್ಷಿಸುವ, ಬಾಯ್ಗೆ– ಬಾಯಿಯೊಳಗಡೆಗೆ, ಬೆಟ್ಟಕ್ಕಿ–ಬೆರಳನ್ನು ಇಟ್ಟುಕೊಂಡು, ಪೀರ್ವ–ಸವಿನೋಡುವ. ಚೀಪುವ–ಹೀರುತ್ತಿರುವ, ಅಥವಾ (ಬೊಟ್ಟು ಬಿಟ್ಟು) ಪಸಿದರೆ–ಆಹಾರಬೇಕಾದರೆ, (ಹಸಿವೆಯಾದರೆ) ಚೀರ್ವ–ಪ್ರಲಾಪವಮಾಡುವ, (ರೋದನಮಾಡುವ) ಮೊಲೆ–ಮೊಲೆಯನ್ನು, (ಉರೋಜವನ್ನು) ಉಂಬ-ಉಣ್ಣುವ, ಕುಡಿಯುವ (ಹೊಟ್ಟೆಗೆ ಕುಡಿಯುವ) ಪಟ್ಟಿರಿಸೆ–ಹಟಾತ್ತಾಗಿ ಬಾಯೊಳಗಿಟ್ಟರೆ, ಪೊರಳ್ವ-ಇತರಕಡೆಗೆ ತಿರಿಗಿಕೊಳ್ಳುವ, ಅಂಬೆಗಾಲಿಡುವ–ಅಂಬೆಗಾಲನ್ನು ಇಡುತ್ತಿರುವ, (ಅಡ್ಡಗಾಲಿಡುವ) ಮೊಳೆವಲ್ಲ–ಮೂಡುತ್ತಿರುವ ದಂತಗಳುಳ್ಳ, ಜೊಲ್ಲ-ಜೊಲ್ಲಿನ, (ಎಂದರೆ ಲಾಲಾಗ್ರಂಥಿಯಿಂದ ಬರುವದ್ರವದ) ಬಗೆ–ಸ್ರವಿಸುವುದರಿಂದ, ತೊದಳಿಸಿ–ತಡಡು ತಡದು

---

ನ್ನು ಸಂರಕ್ಷಿಸಿದನು, ಶುಕ್ಲಪಕ್ಷದ ಚಂದ್ರನೋಪಾದಿಯಲ್ಲಿ ಆ ಬಾಲಕರೀರ್ವರೂ ಅಭಿವೃದ್ಧಿಯನ್ನು ಹೊಂದುತ್ತಿದ್ದರು ‖೪೮‖ ಈ ಮಕ್ಕಳೀರ್ವರೂ ಬಾಲಚಂದ್ರನಂತೆ ವೃದ್ಧಿ ಹೊಂದುತ್ತ ಲಾವಣ್ಯವೇನಾದರೂ ಎರಡು ಭಾಗವಾಗಿ ಆಗಿರುತ್ತದೆಯೋ, ವಿಮಲತೆಯು ಕವಲುಗೊಂಡು ಕಂಗೊಳಿಸುತ್ತಿರುವುದೊ, ಜಯಲಕ್ಷ್ಮಿಯೇನಾದರೂ ದ್ವಿರೂಪವನ್ನು ಧರಿಸಿರುವಳೊ, ಯಶಃಪ್ರಭಾವವು ಏನಾದರೂ ಪ್ರವಾಹರೂಪವಾಗಿ ಪ್ರಸರಿಸಿರ್ಪುದೊ ಸಂತೋಷದ ಪೈರಿನಬೆಳಸು ಭಾಗವಾಗಿರುವುದೊ, ಸಲುವಳಿಯಾಗಿ ನಡದು ಬರುವ ಕುಲದೇಳ್ಗೆಯೊ, ಚಂದ್ರಬಿಂಬದ ಮಧ್ಯದಲ್ಲಿರುವ ಶಶಮೃಗದ ಕೋಡೋ. ಮೋಹನದ ಮತ್ತು ಬಲವಾಗಿರುವ ಕೋರೆಗಳಿಲ್ಲದ ಸವಡಿಯೋ, ಸೌಂದರ್ಯವೆಂಬ ಲತೆಯಲ್ಲಿ ಬಿಟ್ಟ ಫಲವೊ, ಪೇಳಲು ಅಸಾಧ್ಯವು ಎಂಬಂತೆ ಕಂಗಳಿಗೆ ಕಂಗೊಳಿಸಿದರು ‖೪೯‖ ಈ ಎಳೆ ಮಕ್ಕಳಾದ ಕುಶಲವರು ತೊಟ್ಟಲೊಳು ಮಲಗಿರುವಾಗ್ಯೆ ಯಾರಾದರೂ ಆಡಿಸದಿದ್ದರೂ ತಾವಾಗಿ ಸಂತೋಷಪಡುತ್ತಿರುವ, ತಮ್ಮ ಬಾಯೊಳಗೆ ಬೆರಳಿಟ್ಟುಕೊಂಡು ಪೀರುತ್ತಿರುವ, ಕೊಟ್ಟೆ ಹಸಿದರೆ ರೋದನ ಮಾಡುವ, ಸ್ತನ್ಯವನ್ನು ಪಾನಮಾಡುವ, ಬಲವಂತವಾಗಿ ಮಲಗಿಸಿದರೆ ಹೊರಳುವ, ಅಂಬೆಗಾಲಿನಿಂದ ಸಂಚರಿಸುತ್ತಿರುವ ಇನ್ನು ಈಗತಾನೆ

ತೊದಳಿಸಿನುಡಿವ ‖ ದಟ್ಟಡಿಯಿಡುವನಿಲ್ವಕೊಡುವಬೇಡುವಪರಿವ | ಬಟ್ಟೆಯೊಳೊರಗುವಕಾಡುವಕುಣಿವಲೀಲೆಯಿಂ | ನೆಟ್ಟನೆ ಕುಮಾರಕರ್ತೋರಿದರ್ಜಾನಕಿಗೆವಾಲ್ಮೀಕಿಮುನಿವರಂಗೆ ‖ ೫೦ ‖ ಬಿಡದೆಪಾಲ್ವೆರವುದಂತಣಿದುಯೋರಗೆವಕ್ಕ | ಳೊಡನೆಧೂಳಾಟಮೊದಲಾದಲೀಲೆಗಳಪರಿ | ವಿಡಿಯಿಂದೆಸೆವಕುಮಾರರ್ಗೆಮುನಿಪತಿಚೌಲಕರ್ಮಂಗಳಂಮಾಡಿಸಿ ‖ ತೊಡಗಿಸಿದನಕ್ಷರಾಭ್ಯಾಸಮಂಬಳಿಕನಡೆ | ನುಡಿಯಜಾಣ್ಮೆಯಕಲೆಯರಾಜಲಕ್ಷಣದಚೆ | ಲ್ವಿಡಿದಲಲಿತಾಂಗದಿಂಕುಶಲವರ್ಕುಶಲವರ್ಧನರಾಗಿ ರಂಜಿಸಿದರು ‖೫೧‖ ಶ್ರೀಮಾಧವನಮನೋಹರದಸೌಂದರ್ಯಮಂ | ಕಾಮಜನಕನಕಾಮನೀಯಲಾವಣ್ಯಮಂ | ರಾಮಚಂ

---

(ತೊದಳಿಸಿಕೊಂಡು) ನುಡಿವ-ಮಾತನ್ನಾಡುತ್ತಿರುವ, ದಟ್ಟಡಿಯ-ಹತ್ತಿರ ಹತ್ತಿರವಾಗಿಡುವ ಹೆಜ್ಜೆಯನ್ನು, ಇಡುವ-ಇಡುತ್ತಿರುವ, (ಕಿರಿದಾದ ಹೆಜ್ಜೆಯಿಟ್ಟು ತಿರುಗಾಡುವ) ನಿಲ್ವ-ಅಷ್ಟಕ್ಕೆ ನಿಂತುಕೊಳ್ಳುವ, ಕೊಡುವ- ತಮ್ಮಲ್ಲಿರುವುದನ್ನು ಇತರರಿಗೆ ಕೊಡತಕ್ಕ. ಬೇಡುವ-ತಮಗೆ ಬೇಕಾದ್ದನ್ನು ಅಪೇಕ್ಷಿಸುವ, ಪರಿವ-ಓಡಿಹೋಗುತ್ತಿರುವ, (ಯಾರಾದರೂ ಕರೆದುಕೊಳ್ಳಲಿಕ್ಕೆ ಬಂದರೆ ಓಡಿಹೋಗುತ್ತಿರುವ) ಬಟ್ಟೆಯೊಳು-ದಾರಿಯಲ್ಲಿಯೇ, ಒರಗುವ-ಮಲಗಿಕೊಳ್ಳುವ, ಕಾಡುವ-ಕಾಡಿಸುವ, (ತೊಂದರೆಯನ್ನು ಪಡಿಸುತ್ತಿರುವ) ಕುಣಿವ-ಎಗರಾಡುವ, ಲೀಲೆಯಿಂ-ವೈಭವವನ್ನು, (ಬಾಲಕ್ರೀಡೆಯನ್ನು) ಜಾನಕಿಗೆ-ಸೀತಾದೇವಿಗೂ, ಮುನಿವರ-ಋಷೀಶ್ವರನಾದ, ವಾಲ್ಮೀಕಿಗೆ-ವಾಲ್ಮೀಕಿಗೂ, ತೋರಿದರ್-ತೋರ್ಪಡಿಸಿದರು.

ಅ॥ ವಿ॥ ವರನಾದ+ಮುನಿ=ಮುನಿವರ ವಿ. ಉತ್ತ ಕ ಸ. ದಟ್ಟಿತ್ತಾದ+ಅಡಿ=ದಟ್ಟಡಿ ವಿ. ಪೂ. ಕ. ಸ. ಕುಮಾರ-ತ್ಸ, ಕುವರ-ದ್ಭ. ದನಿ-ದ್ಭ. ಧ್ವನಿ-ತ್ಸ. ಮೊಳೆಯುವ+ಪಲ್=ಮೊಳೆವಲ್ ವಿ. ಪೂ. ಕ. ಸ. ಬಟ್ಟೆ-ವಸ್ತ್ರ, ಮಾರ್ಗ. ‖೫೦‖

ಟೀ॥ ಬಿಡದೆ-ತಪ್ಪದೆ, ಪಾಲ್-ಕ್ಷೀರವನ್ನು, ಎರವುದಂ-ಹಾಕಿದ ಅನಂತರದಲ್ಲಿ,(ಹಾಲುಕುಡಿಸುವುದರಿಂದ) ತಣಿದು-ಸಂತುಷ್ಟರಾಗಿ, ಓರಗೆ-ಓರಗೆಯವರಾದ, (ಸಮಾನವಯಸ್ಕರಾದ) ಮಕ್ಕಳೊಡನೆ-ಬಾಲಕರ ಸಹವಾಸದಲ್ಲಿ, ಧೂಳಾಟವೇ-ಧೂಳಿಯಲ್ಲಿ ಆಡುವುದೇ, (ಎಂದರೆ ಮಣ್ಣಿನಲ್ಲಾಡುವುದೇ) ಮೊದಲಾದ-ಮೊದಲುಗೊಂಡ, ಲೀಲೆಗಳ-ವೈಭವಗಳ, (ಆಟಗಳ) ಪರಿವಿಡಿಯಿಂದೆ-ಕ್ರಮಪ್ರಕಾರದಿಂದ, ಎಸೆವ-ಶೋಭಿಸುವ, ಕುಮಾರರ್ಗೆ-ಮಕ್ಕಳಿಗೆ, ಮುನಿಪತಿ-ಋಷೀಶ್ವರನಾದ ವಾಲ್ಮೀಕಿಯು, ಚೌಲಕರ್ಮಂಗಳಂ-ಜುಟ್ಟು ಬಿಡಿಸೋಣವೇ ಮೊದಲಾದ ಮಂಗಳ ಕಾರ್ಯಗಳನ್ನು, ಮಾಡಿಸಿ-ನೆರವೇರಿಸಿ, ಅಕ್ಷರಾಭ್ಯಾಸಮಂ-ವರ್ಣಾಭ್ಯಾಸಗಳನ್ನು, (ಅಕ್ಷರಗಳ ಬರೆಯುವಿಕೆಯನ್ನು) ತೊಡಗಿಸಿದಂ-ಉಪಕ್ರಮ ಮಾಡಿಸಿದನು, ಬಳಿಕ-ಅನಂತರದಲ್ಲಿ, ನಡೆ-ಸನ್ಮಾರ್ಗವನ್ನು, ನುಡಿ-ಮಾತುಮೊದಲಾದವುಗಳ, ಜಾಣ್ಮೆಯಂ-ಬುದ್ಧಿ ಕುಶಲತೆಯ, ಕಲೆಯ-ಬಗೆಬಗೆ ಬಿಜ್ಜೆಗಳ, ರಾಜ-ಪೃಥ್ವೀಶ್ವರರ, ಚಿಹ್ನೆಗಳ-ಕುರುಹುಗಳ, (ಅರಸಕುರುಹಿನ), ಚೆಲ್ವಿಡಿದ-ಸೊಗಸಿನಿಂದ ವ್ಯಾಪ್ತವಾದ, ಲಲಿತ-ಮನೋಹರವಾದ, ಅಂಗದಿಂ-ದೇಹರಚನೆಯಿಂದ, ಕುಶಲವರ್-ಕುಶನೂ ಮತ್ತು ಲವ ಈ ಇಬ್ಬರು, ಕುಶಲ-ಸೌಖ್ಯದಿಂದ. ವರ್ಧನರಾಗಿ-ಅಭಿವೃದ್ಧಿಯನ್ನು ಪಡೆದವರಾಗಿ, ರಂಜಿಸಿದರು-ಶೋಭಿಸಿದರು ‖

ಅ॥ ವಿ॥ ಪಾಲಂ+ಎರೆದು=ಪಾಲೆರೆದು, ಕ್ರಿ. ಸ. ಓರಗೆಯರಾದ+ಮಕ್ಕಳು=ಓರಗೆ ಮಕ್ಕಳು, ವಿ. ಪೂ. ಕ. ತ್ಸ. ದಾದಿ-ದ್ಭ. ಧಾತ್ರಿ-ತ್ಸ (ಅಕ್ಷರ+ಅಭ್ಯಾಸ=ಅಕ್ಷರಾಭ್ಯಾಸ, ಸ. ದೀ. ಸಂ.) ಚೌಲವೆಂಬ+ಕರ್ಮ=ಚೌಲಕರ್ಮ, ಸಂಭಾವನ ಪೂ. ಕ. ಸ. ರಾಜನ+ಚಿಹ್ನೆ=ರಾಜಚಿಹ್ನೆ, ಷ. ತ. ವೃದ್ಧ-ಮುದುಕ, ವರ್ಧಕಿ-ಬಡಗಿ ‖೫೧‖

ಟೀ॥ ಕುಶಲವರ್-ಅವಳಿ ಮಕ್ಕಳಾದ, ಕುಶಲವರು, ಶ್ರೀ-ಲಾವಣ್ಯಯುತನಾಗ, (ಐಶ್ವರ್ಯಯುತನಾದ) ಮಾಧವನಾ-ರಮಾಪತಿಯಾದ ವಿಷ್ಣುವಿನ, ಮನೋಹರದ-ಮನೋಪಹಾರಿಯಾದ, (ಮನಸ್ಸನ್ನು ಅಪಹರಿಸತಕ್ಕ) ಸೌಂದರ್ಯಮಂ-ಲಾವಣ್ಯ

---

ಅಂಕುರಿಸುವ ರದನ ಪಙ್ತಿಗಳುಳ್ಳ ತೊದಳ ನುಡಿಯಾಡುವ, ಇರುಪ ಹಾಗೆಯೇ ಕೆಳಕ್ಕೆಬೀಳುವ ಯಾವುದಾದರೂ ವಸ್ತುವನ್ನು ಬೇಡುವ ತಾವು ಓಡ್ಯಾಡುವ ಮಾರ್ಗದಲ್ಲಿಯೇ ಬಿದ್ದುಕೊಳ್ಳುವ ಕುಣಿದಾಡುವ ಈ ರೀತಿಯಾಗಿ ನಾನಾ ಬಗೆಗೆಳಾದ ಆಟಪಾಟಗಳಿಂದ ತಮ್ಮಯ ಆನಂದಗಳನ್ನು ಆ ಸೀತೆಗೂ ವಾಲ್ಮೀಕಿ ಮುನಿಪತಿಗೂ ತೋರ್ಪಡಿಸುತ್ತಿದ್ದರು ‖ ೫೦ ‖ ಆ ಕುಶಲವರೀರ್ವರೂ ಕಾಲಕಾಲಕ್ಕೆ ಸರಿಯಾಗಿ ಹಾಲುಹಾಕಿ ಸಾಕುತ್ತಿದ್ದುದರಿಂದ ಬಹುವಾಗಿ ತೃಪ್ತಿಯನ್ನು ಹೊಂದಿ, ತಮ್ಮಯ ಸಮವಯಸ್ಕರಾದ ಅಣುಗರೊಡನೆ ಆಟಪಾಟಾದಿಗಳನ್ನು ಆಡುತ್ತಲೂ, ಬೀದಿಗಳಲ್ಲಿ ಹೋಗಿ ಮಣ್ಣು ಮೊದಲಾದ ಧೂಳಿಯಲ್ಲಿ ಆಡುತ್ತಲೂ, ಆಯಾ ವಯಸ್ಸಿಗೆ ತಕ್ಕ ಆಟಗಳನ್ನು ಆಡುತ್ತಿರುವ ಕುಮಾರರ್ಗೆ ವಾಲ್ಮೀಕಿ ಮುನೀಂದ್ರನು ಶಾಸ್ತ್ರಾನುಸಾರವಾಗಿ ಚೌಲಕರ್ಮಗಳನ್ನು ನೆರವೇರಿಸಿ ಸಕಾಲದಲ್ಲಿಯೇ ಅಕ್ಷರಾಭ್ಯಾಸವನ್ನು ಮಾಡಿಸಿ, ಬಳಿಕ ನಡೆಯಬೇಕಾದ ಜಾಣ್ಮೆಯ ಕಲೆಯ ರಾಜಲಕ್ಷಣದ ಸೌಂದರ್ಯದಿಂದ ಕೂಡಿದ ಕೋಮಲವಾದ ಅವಯವಗಳಿಂದ ಕೂಡಿದ ಕುಶಲವರು ಕುಶಲದಿಂದ ವರ್ಧನರಾಗಿ ಶೋಭಿಸುತ್ತಿದ್ದರು ‖ ೫೧ ‖ ಆ ಯಮಳರಾದಣುಗರು ಐಶ್ವರ್ಯಯುತನು, ರಮಾಲೋಲನು, ಆದ ವಿಷ್ಣುವಿನ

ದ್ರನರಾಮಣೀಯುಕದರೂಪಮಂತಾಳ್ದೊಗೆದಸುಕುಮಾರರ ॥ ಕೋಮಲಾಂಗದ ಸೊಬಗನಭಿವರ್ಣಿಸುವರುಂಟೆ । ಭೂಮಿಯೊ ಳ್ಚೆಲ್ವಿಗೆವಸಂತನಂಮದನನಂ । ಸೋಮನಂಪಡಿಯಿಡಲ್ಪುನರುಕ್ತಮಪ್ಪುದೆನೆಕುಶಲವರ್ಕಣ್ಗೆಸೆದರು ।೫೨॥ ದ್ವಾದಶಾಬ್ದದಮೇಲೆಮುನಿಪಂಕುಮಾರರ್ಗೆ ವೇದೋಕ್ತದಿಂದಲುಪನಯನಂಗಳಂಮಾಡಿ । ಭೂದೇವನಿಕರಕೆವಸಿಷ್ಠನೋಳ್ವರ ಕಾಮಧೇನುವಂಬೇಡಿತಂದು ॥ ಆದರಿಸೆಭೋಜನಸುಗಂಧಾಕ್ಷತೆಗಳಿಂದ । ಲಾದುದತಿವಿಭವದಿಂದುತ್ಸವಂಬಳಿಕತರು । ಣಾದಿತ್ಯಸನ್ನಿಭರ್ಕೊ

ವನ್ನು, (ಚೆಲುವಿಕೆಯನ್ನು) ಕಾಮಜನಕನ-ಮನಸಿಜನ ಪಿತನಾದ ವಿಷ್ಣುವಿನ, ಕಾಮನೀಯ-ಬಯಸತಕ್ಕ, ಲಾವಣ್ಯಮಂ-ಸೌಂದರ್ಯವನ್ನು, (ಠೀವಿಯನ್ನು) ರಾಮಚಂದ್ರನ-ಶ್ರೀರಾಮ ಮೂರ್ತಿಯ, ರಾಮಣೀಯುಕದ-ಮನೋಹರವಾದ, (ಮನಸ್ಸನ್ನಪಹರಿಸತಕ್ಕ) ರೂಪಮಂ-ಆಕಾರವನ್ನು, ತಾಳ್ದು-ಹೊಂದಿದವರಾಗಿ, ಒಗೆದ-ಉದ್ಭವಿಸಿರುವ, (ಅವತರಿಸಿದ) ಸುಕುಮಾರರ-ಸುಪುತ್ರರಾದ ಬಾಲಕರ, ಕೋಮಲಾಂಗದ-ಮನೋಹರವಾದ ದೇಹದ, ಸೊಬಗನು-ಸೌಭಾಗ್ಯವನ್ನು, (ಅಂದವನ್ನು) ಅಭಿವರ್ಣಿಸುವರು-ಅಧಿಕವಾಗಿ ವಿವರಿಸತಕ್ಕವರು, ಉಂಟೇ-ಇರುತ್ತಾರೆಯೇ? (ಇಲ್ಲ ಯಾರೂವರ್ಣನೆಯನ್ನುಮಾಡಲಾರರು) ಭೂಮಿಯೋಳ್-ಪೃಥ್ವಿಯಲ್ಲಿ, ಚೆಲ್ವಿಗೆ-ಸೊಗಸಿಗೆ, ವಸಂತನಂ-ಬಸಂತನನ್ನು, (ವಸಂತನೆಂಬುವನನ್ನು) ಮದನನಂ-ಮನ್ಮಥನನ್ನು, (ಕಂದರ್ಪನನ್ನು) ಸೋಮನಂ-ನಿಶಾಕರನನ್ನು, (ಇಂದುವನ್ನು) ಪಡಿಯಿಡಲ್-ಬದಲಾಗಿಡಲು, ಪುನರುಕ್ತಂ-ಪುನಹ ಹೇಳಿದಂತೆ, ಎಂದರೆ ವರ್ಣಿಸದಂತೆ, ಅಪ್ಪುದು-ಆಗುತ್ತದೆ. ಎನೆ-ಎನ್ನಲು, ಕುಶಲವರು-ಅವಳಿ ಮಕ್ಕಳಾದ ಕುಶಲವು, ಕಣ್ಗೆ-ನೇತ್ರಗಳಿಗೆ, ಎಸೆದರು-ಶೋಭಿಸಿದರು ॥

ಅ॥ ವಿ॥ ಜಾನಕಿಯು ಅವಳಿಮಕ್ಕಳನ್ನು ವಾಲ್ಮೀಕಮುನಿಯಾಶ್ರಮದಲ್ಲಿ ಹೆತ್ತಾಗ, ಆ ಮಕ್ಕಳಿಗೆ ನಾಮಕರಣಾಂಗ್ಯೆಯ್ಯಲು ತಂದೆಯಾದ ಶ್ರೀರಾಮನು ಅಲ್ಲಿಲ್ಲದ್ದರಿಂದ ಮುನಿವರ್ಯನಾದ ವಾಲ್ಮೀಕಿಯೇ ಕುಶನನ್ನು ಲವನನ್ನು ತೆಗೆದುಕೊಂಡು ಮಂತ್ರೋಚ್ಚಾರಣೆಯಿಂದ ಜಲವಂ ಆ ಮಕ್ಕಳ ಮೇಲೆ ಪ್ರೋಕ್ಷಿಸಿ ಆ ಮಕ್ಕಳಿಗೆ ಕುಶನೆಂತಲೂ ಲವನೆಂತಲೂ ಹೆಸರಿಟ್ಟನು. ಶ್ರೀ-ಸಂಪತ್ತು, ಅಭಿವೃದ್ಧಿ, ರಾಜತ್ವ, ಮಹತ್ವ, ಲಾವಣ್ಯ, ಕಾಂತಿ, ಲಕ್ಷ್ಮೀ, ಸುಕೃತ, ಅಲಂಕಾರ, ಜ್ಞಾನಸುಂದರದ ಭಾವ. ಸೌಂದರ್ಯ, ಚಲುವಿನ ಭಾವನಾಮ ಚೆಲ್ವಿಕೆ. ಕೋಮಲದ+ಅಂಗ=ಕೋಮಲಾಂಗ, ವಿ. ಪೂ ಕ. ಸ. ಕುಮಾರ-ತ್ಸ. ಕುವದ್ಭ. ಸೋಮ-ಚಂದ್ರ, ಈಶ್ವರ, ಉಮೆಯೊಡನೆ ಸಹಿತನಾದವಂ-ಸೋಮ, ಸಹ. ಪೂ. ಬಹು. ಸ. ।೫೨॥

ಟೀ॥ ಮುನಿಪಂ - ಮುನೀಶ್ವರನಾದ ವಾಲ್ಮೀಕಿಯು, ಆ ಕುವರರ್ಗೆ - ಆ ಬಾಲಕರಾದ ಕುಶಲವರಿಗೆ, ದ್ವಾದಶ-ಹನ್ನೆರಡನೆಯ, ಅಬ್ದ-ಸಂವತ್ಸರದ, ಮೇಲೆ-ಅನಂತರದಲ್ಲಿ, ವೇದೋಕ್ತದಿಂದಲೇ-ವಿದ್ಯುಕ್ತಪ್ರಕಾರವಾಗಿಯೇ, (ವೇದದಲ್ಲಿ ಹೇಳಿರುವ ಪ್ರಕಾರ) ಉಪನಯನಂಗಳಂ-ಉಪನಯನ ಕರ್ಮಗಳನ್ನು, ಎಂದರೆ ವೇದಾಧ್ಯಯನ ಮಾಡಬಹುದಾದ ಕರ್ಮವನ್ನು, ಮಾಡಿ-ನೆರವೇರಿಸಿದವನಾಗಿ. ವಸಿಷ್ಠನೋಳ್-ವಸಿಷ್ಠಮಹರ್ಷಿಯಲ್ಲಿ, ವರ-ಶ್ರೇಷ್ಠವಾದ, ಕಾಮಧೇನುವಂ-ಕೋರಿದ ವಸ್ತುವನ್ನೀವ ಆಕಳನ್ನು, ಬೇಡಿ-ಯಾಚಿಸಿ, (ಅರ್ಥಿಸಿ) ತಂದು-ತೆಗದುಕೊಂಡು ಬಂದು, ಭೂದೇವ-ಭೂದೇವತೆಗಳಾದ ಬ್ರಾಹ್ಮಣರ, ನಿಕರಕೆ-ಸಮುದಾಯಕ್ಕೆ, ಭೋಜನ-ಆಹಾರಾದಿಗಳಿಂದಲೂ, ಸುಗಂಧ-ಸುವಾಸನೆಯುಳ್ಳ ಗಂಧದಿಂದಲೂ, ಅಕ್ಷತೆಗಳಿಂದ-ಮಂತ್ರಾಕ್ಷತೆಗಳಿಂದಲೂ, ಆದರಿಸೆ-ಉಪಚಾರವನ್ನು ಮಾಡಲಾಗಿ, ಅತಿ-ಹೆಚ್ಚಾದ, ವಿಭವದಿಂದ-ವೈಭವದಿಂದ, ಉತ್ಸವಂ-ಉಪನಯನೋತ್ಸಾಹಮಂಗಳ ಕಾರ್ಯವು. ಆದುದು-ನೆರವೇರಿತು, ಬಳಿಕ-ಅನಂತರದಲ್ಲಿ, ತರುಣ-ಹುಡುಗನಾದ, ಆದಿತ್ಯ-ಭಾಸ್ಕರನಿಗೆ, ಸನ್ನಿಭರು-ಕಾಂತಿಯಲ್ಲಿ ಸಮಾನರಾದ, ಕುಶಲವರು-ಅವಳಿಮಕ್ಕಳಾದ ಕುಶಲವರು (ಎಂ

ಮನೋಹರವಾದ ಸೌಂದರ್ಯವನ್ನೂ, ಅಂಗಜನಿಗೆ ಜನಕನಾದ ವಿಷ್ಣುವಿನ ಮೋಹನಕರವಾದ ಲಾವಣ್ಯವನ್ನೂ, ಶ್ರೀರಾಮಚಂದ್ರಸ್ವಾಮಿಯ ರಾಮಣೀಯುಕವಾದ ಸ್ವರೂಪದ ತೇಜಸ್ಸನ್ನೂ ಹೊಂದಿದವರಾಗಿ ಉದ್ಭವಿಸಿರುವ ಆ ರಾಜಕುಮಾರರ ಕೋಮಲಾಂಗದ ಸೊಬಗನ್ನು ಚಲುವಾಗಿ ಅಭಿವರ್ಣಿಸುವವರು ಯಾರಾದರೂ ಇರುತ್ತಾರೆಯೇ! (ಆ ಬಾಲಕರ ಸ್ವರೂಪಾತಿಶಯಗಳನ್ನು ಯಾರಿಂದಲೂ ಬಣ್ಣಿಸಲುಳವಲ್ಲವೆಂಬ ಭಾವವು) ಪೃಥ್ವಿಯಲ್ಲಿ ಚಲ್ವಿಗೆ ವಸಂತನನ್ನೂ, ಮದನನನ್ನೂ ಸೋಮನನ್ನೂ, ನಿದರ್ಶನವಾಗಿ ಹೇಳುವುದರಿಂದ, ಪುನರುಕ್ತಿ ಆಗುವುದೋ ಎನ್ನುವಂತೆ ಕುಶಲವರೀರ್ವರೂ ಕಂಗೊಳಿಸುತಿದ್ದರು ।೫೨॥ ಆಗ ಮುನೀಂದ್ರನಾದ ವಾಲ್ಮೀಕಿಮಹರ್ಷಿಯು ಹನ್ನೆರಡು ವರ್ಷವಾದ ಕೂಡಲೆ ಆ ಲವಕುಶರೀರ್ವರಿಗೂ ವೇದೋಕ್ತಕ್ರಮ ಪ್ರಕಾರವಾಗಿ ಉಪನಯನಂಗಳಂ ಮಾಡಿಸಿ, ವಸಿಷ್ಠ ಮುನೀಶನಲ್ಲಿಪ್ಪ ಕಾಮಧೇನುವನ್ನು ಪ್ರಾರ್ಥಿಸಿ ತೆಗದುಕೊಂಡು ಬಂದು ಭೂಸುರರ ನಿಕರಕ್ಕೆ ಭೋಜನೋಪಚಾರಂಗಳಿಂದಲೂ, ಸುಪುಷ್ಪಗಳಿಂದಲೂ, ಸುವಾಸನೆಯುಳ್ಳ ಶ್ರೀಗಂಧವೇ ಮೊದಲಾದ ಸಾಮಗ್ರಿಗಳಿಂದಲೂ ಸತ್ಕರಿಸಿ ಅತ್ಯುತ್ಸಾಹದಿಂದ ಉಪನಯನ ಮಹೋತ್ಸವವನ್ನು ನೆರವೇರಿಸಿದನು, ತರುವಾಯ ಬಾಲ

ನಗಿದರ್ಜಾನಕಿಯುಚಿತ್ತಕಾನಂದವಾಗೆ ‖ ೫೩ ‖ ಸರ್ವಕರ್ಮದವಿಧಿಯನಖಿಳನಿಗಮದಕಡೆಯು । ನುರ್ವಶಾಸ್ತ್ರದಬಗೆಯನುಡಿದ
ಧರ್ಮದನೆಲೆಯು । ನುರ್ವೀಶನೀತಿಗಳನಿಷ್ಠೆಯವನ್ನೈದೆಸಾಂಗೋಪಾಂಗವಾಗಿಬರಿಸಿ ‖ ತರ್ವಾಯೊಳಾಕುಮಾರರ್ಗೆಮುನಿನಾ
ಥಂಧ । ನುರ್ವೇದವಂ ಶಿಕ್ಷೆಗೈದುರಾಮಾಯಣವ । ನೀರ್ವರುಂ ಪಾಡುವಂತಿಮಧುರಭಾವದಿಂತ-ದಿವೊದಲ್ಗೆ ‖ ೫೪ ‖
ಸೀತೆನಲಿವಂತೆವಾಲ್ಮೀಕಿಮೆಚ್ಚುವತೆಂದೊ । ಳಾತಪೋವನದಮುನಿಗಣವ್ಮೈದೆಕೊಂಡಾಡ । ಲಾತರುಣರೀರ್ವರುಂಮಧುರ

---

ವದೆ-ಬಾಲಸೂರ್ಯನಿಗೆ ಸಮಾನವಾದ ಕಾಂತಿಯುತರು) ಜಾನಕಿಯು-ಸೀತಾದೇವಿಯ, ಚಿತ್ತಕೆ-ಮನಕೆ, ಆನಂದಂ-ಹರ್ಷವು, (ಸಂತಸವು) ಆಗೆ-ಉಂಟಾಗುವಂತೆ, ತೊಳಗಿದರ್-ಶೋಭಿಸಿದರು, (ಹೊಳೆದರು) ‖

ಅ‖ ವಿ‖ ಮುನಿ-ಮುನಿಗಳನ್ನು, ಪ-ಪಾಲಿಸತಕ್ಕವನು,(ಮುನಿಪ) (ವೇದ+ಉಕ್ತ=ವೇದೋಕ್ತ),ಗ.ಣ ಸಂ.ಅಬ್ದ-ಸಂವತ್ಸರ, ಮೇಘ, ಕಾಮು-ಕೋರಿದವಸ್ತುವನ್ನುಕೊಡತಕ್ಕ, ಧೇನು-ಹಸುವು, ಭೂಮಿಯ+ದೇವಂ=ಭೂದೇವ,ಷ.ತ. ‖೫೩‖

ಟೀ‖ ಬಳಿಕ-ಅನಂತರದಲ್ಲಿ, ಮುನಿಪಂ-ಋಷಿಶ್ರೇಷ್ಠನಾದ ವಾಲ್ಮೀಕಿಯು, ಅಕುವರರ್ಗೆ-ಆ ಸೀತಾ ಪುತ್ರರಿಗೆ, ಸರ್ವ-ಸಕಲವಿಧಗಳಾದ, ಕರ್ಮದ-ಬ್ರಹ್ಮಯಜ್ಞಾದಿಕರ್ಮಗಳ, (ದೇವಋಷಿ ಪಿತೃ ಇವರುಗಳೇ ಮೊದಲಾದ ಕರ್ಮಗಳ) ವಿಧಿಯ-ಮಾಡತಕ್ಕ ನಿಯಮವನ್ನು, ನಿಖಿಳ-ಸಮಸ್ತವಾದ, ನಿಗಮದ-ಶ್ರುತಿಯ, ಕಡೆಯನು-ಕೊನೆಯ ಭಾಗವನ್ನು, ಉರ್ವ-ಶ್ರೇಷ್ಠವಾದ, ಶಾಸ್ತ್ರದ-ಆಗಮದ, ಬಗೆಯ-ರೀತಿಯನ್ನು, ಎಂದರೆ (ಕರ್ಮಬ್ರಹ್ಮ ಪ್ರತಿಪಾದಕ ವಿಷಯವನ್ನು) ಧರ್ಮದ-ಧರ್ಮ ಮಾರ್ಗದ, ನೆಲೆಯನು-ಸ್ಥಿರತ್ವವನ್ನು, (ನೈಜ ಮಾರ್ಗವನ್ನು) ಉರ್ವೀಶ-ಪೃಥ್ವೀಪತಿಗಳ, ನೀತಿಗಳ-ನೀತಿಮಾರ್ಗಗಳ, ನಿಷ್ಠೆಯನು-ನಂಬಿಕೆಯ ಸ್ಥಿತಿಯನ್ನು, ಐದೆ-ಸಂಪೂರ್ಣವಾಗಿ, ಸಾಂಗೋಪಾಂಗವಾಗಿ-ಸಕಲ ಭಾಗಗಳಾದ ಉಪವಿದ್ಯಾಭಾಗಗಳನ್ನೂ ಸಮಗ್ರವಾಗಿ, (ಸಕಲವಿದ್ಯೆಯನ್ನೂ ಮೊದಲಿಂದ ಕೊನೆಯವರೆಗೂ) ನುಡಿದಂ-ಪೇಳಿದನು, ಬರಿಸಿ-ವರ್ಣಗಳನ್ನು ಬರಿಸಿದವನಾಗಿ, ತಿದ್ದಿಸಿ-ಗೊತ್ತಾಗುವವರೆಗೂ ಬರೆಯಿಸಿ, ತರ್ವಾಯದೋಳ್-ಇವುಗಳೆಲ್ಲ ಮುಗಿದನಂತರ, ಮುನಿನಾಥಂ-ಋಷೀಶ್ವರನಾದ ವಾಲ್ಮೀಕಿಯು, ಆಕುಮಾರರ್ಗೆ-ಆ ಸಹೋದರರಾದ ಕುಶಲವರಿಗೆ, ಧನುರ್ವೇದಮಂ-ಚಾಪವಿದ್ಯಾಭ್ಯಾಸಕ್ರಮವನ್ನು, ಶಿಕ್ಷೆಗೈದು-ಉಪದೇಶಿಸಿ, (ಬೋಧಿಸಿ) ರಾಮಾಯಣವನು-ಶ್ರೀ ರಾಮಚಂದ್ರನ ಚರಿತ್ರಾಮೃತವನ್ನು, ಈರ್ವರುಂ-ಆ ಇಬ್ಬರು ಕುಮಾರಕರೂ, ಪಾಡುವಂತೆ-ಗಾನರೂಪವಾಗಿ ಹಾಡುವರೀತಿಯಾಗಿ, ಅತಿ-ಅಧಿಕವಾದ, ಮಧುರಭಾವದಿಂದ-ಇಂಪಾಗುವರೀತಿಯಿಂದ, (ಕರ್ಣಾನಂದವಾಗುವಂತೆ) ತುದಿವೊದಲ್ಗೆ-ಆದಿಯಿಂದ ಅಂತ್ಯದವರೆಗೂ, ಓದಿಸಿದನು-ಕಲಿಸಿಕೊಟ್ಟನು ‖

ಅ‖ ವಿ‖ ಅವರು+ತರುಣರ್ = ಆ ತರುಣರ್, ಗಮಕ ಸ. ಅತಿರುಚಿತರ, ಗುಣವಾಚಕ. ರಾಮ-ಶ್ರೀ ರಾಮನ, ಅಯನ-ಚರಿತ್ರೆಯು, (ಉರ್ವೀ+ಈಶ=ಉರ್ವೀಶ, ಸ.ದೀ.ಸಂ.) ವೇದಗಳು ನಾಲ್ಕು-ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವಣವೇದ, ಷಡಾಗಮಗಳು-ವೇದಾಂತ, ವೈಶೇಷಿಕ, ಭಾಟ್ಟ, ಪ್ರಭಾಕರ, ಪೂರ್ವ ಮೀಮಾಂಸ, ಉತ್ತರ ಮೀಮಾಂಸ. ಷಡಗ್ನಿಗಳು-ಗಾರ್ಹಪತ್ಯ, ಆಹವನೀಯ, ದಕ್ಷಿಣಾಗ್ನಿ, ಸಭ್ಯ, ಅವಸಥ್ಯ, ಔಪಾಸನಾಗ್ನಿ. ಷಡ್ವಿಧಾನ್ನ-ಭಕ್ಷ್ಯ, ಭೋಜ್ಯ, ಲೇಹ್ಯ, ಚೋಷ್ಯ, ಪಿಚ್ಛಿಲ, ಪಾನೀಯ ‖೫೪‖

ಟೀ‖ ಆತರುಣರ್ - ಆ ಬಾಲಕರು, ಈರ್ವರುಂ- ಇಬ್ಬರು ಮಕ್ಕಳೂ, ಸೀತೆ-ಸೀತಾದೇವಿಯು, ನಲಿವಂತೆ-ಹರ್ಷಗೊಳ್ಳುವಂತೆಯೂ, ವಾಲ್ಮೀಕಿ-ವಾಲ್ಮೀಕಿ ಮಹರ್ಷಿಯು, ಮೆಚ್ಚುವ-ಒಪ್ಪಿಕೊಳ್ಳುವ, ತೆರದೊಳ್-ಬಗೆಯಿಂದಲೂ, (ವಿಧದಿಂದಲೂ), ಆತಪೋವನದ-ಆ ತಪಸ್ಸನ್ನುಮಾಡುವ ಅರಣ್ಯದಲ್ಲಿರುವ, ಮುನಿಗಣಂ-ಋಷಿಗಳ ಸಮುದಾಯವು, ಐದೆ-ಅತಿಶಯವಾಗಿ ಕೊಂಡಾಡಲು-ಸ್ತೋತ್ರಮಾಡಲು, ಮಧುರ-ಇಂಪಾದ, ವೀಣೆಗಳ ಮೇಲೆ-ಬೀಣೆಗಳಲ್ಲಿ, ಆಳಾಪದ-ಹಾಡುವಿಕೆಯುಳ್ಳ, (ನುಡಿ

---

ಸೂರ್ಯನಿಗೆ ಸಮಾನ ತೇಜಸ್ಕರಾದ, ಕುಶಲವರೀರ್ವರೂ ಸೀತಾದೇವಿಯ ಚಿತ್ತಕ್ಕೆ ಅತ್ಯಧಿಕವಾದ ಸಂತೋಷ ಉಂಟಾಗುವಂತೆ ತೊಳಗುತ್ತಿದ್ದರು ।೫೩‖ ಆಗ ವಾಲ್ಮೀಕಿ ಮುನೀಂದ್ರನು ಆ ಕುವರರ್ಗೆ ಸಮಸ್ತವಾದ ಕರ್ಮಗಳ ವಿಧಿಯನ್ನೂ ಅವುಗಳನ್ನು ಮಾಡತಕ್ಕ ಕ್ರಮಗಳನ್ನೂ ಸಕಲವಾದ ವೇದಶಾಸ್ತ್ರಾದಿಗಳನ್ನೂ ಅನುಭವಗೊಳಿಸಿ, ಸಮಸ್ತವಾದ ರಾಜನೀತಿಗಳನ್ನು ಬೋಧಿಸಿ, ಧನುರ್ವಿದ್ಯೆಯನ್ನು ಏಕಾಂತವಾಗಿ ಉಪದೇಶಿಸಿ, ಧರ್ಮಶಾಸ್ತ್ರದ ವಿಧಿಯನ್ನು ಸ್ಪಷ್ಟಗೊಳಿಸಿ, ಸಾಂಗೋಪಾಂಗವಾಗಿ ರಾಜವಂಶೀಯರಿಗಿರಬೇಕಾದ ಸಕಲ ವಿದ್ಯಾವಿನಯ, ಗಾಂಭೀರ್ಯ, ಶೌರ್ಯೌದಾರ್ಯಾದಿ ಸದ್ಗುಣಾವಳಿಗಳನ್ನು ಕಲಿಸಿಕೊಟ್ಟು, ಶ್ರೀಮದ್ರಾಮಾಯಣ (ಶ್ರೀರಾಮಚಂದ್ರನ ಚರಿತ್ರೆಯನ್ನು) ವನ್ನು ತಾಳ ಲಯಯುತವಾಗಿ ಕೇಳುವವರಿಗೆ ಆನಂದವಾಗುವಂತೆ ಅತ್ಯಧಿಕವಾದ ಮಧುರಸ್ವರ ಭಾವದಿಂದ, ತುದಿವೊದಲ್ಗೊಂಡು ಓದಿಸಿದನು ‖೫೪‖ ಅನಂತರದಲ್ಲಿ ಆ ಕುಶಲವರಿಬ್ಬರೂ, ಭೂಪುತ್ರಿಯಾದ ಜಾನಕಿಯು ಅತ್ಯಂತವಾಗಿ ಸಂತೋಷ ಪಡುವಂತೆಯೂ, ವಾಲ್ಮೀಕಿ ಮುನೀಂದ್ರನು ಆನಂದಪಟ್ಟು

ವೀಣೆಗಳಮೇಳಾಪದಾಲಾಪಂಗಳ || ಗೀತದೊಳ್ಸಂಕೀರ್ಣಶುದ್ಧಸಾಳಂಗದಿಲ | ಯಾತಿಶಯಮೆನೆಪಾಡುವರ್ದೇವನಗರಿಯ ನಿಕೇತನಶ್ರೀಪತಿಯಚಾರಿತ್ರಮಪ್ಪರಾಮಾಯಣವನನುದಿನದೊಳು ||೫೫||

ಸಂಧಿ ೧೯ ಕ್ಕೆ ಪದ್ಯಗಳು ೧೮೮೩ ಕ್ಕಂ ಮಂಗಳಮಸ್ತು.

---

ಸತಕ್ಕ) ಆಲಾಪಂಗಳಂ-ಬಗೆಬಗೆಯ ರಾಗಾದಿಗಳನ್ನು, ಹಾಡುಗಾರಿಕೆಗಳ ಗೀತದೋಳ್-ಸಂಗೀತರೂಪದಲ್ಲಿ, (ಹಾಡಿಕೆಯಲ್ಲಿ) ಸಂಕೀರ್ಣ-ಕೂಡುವಿಕೆಯುಳ್ಳ, (ಮಿಶ್ರ ಶುದ್ಧಾದಿಗಳ ಕೂಡಿರುವಿಕೆಯುಳ್ಳ) ಸಮ್ಮೇಳನದಿ-ಸರಿಯಾದ ಜಮಾವಣೆಯಿಂದ, ಲಯಾತಿಶಯಂ-ಅಧಿಕವಾದ ಲಯವು, ಎನೆ-ಎಂಬುವ ವಿಧದಿಂದ, ದೇವ ನಗರಿಯ-ದೇವತೆಗಳ ಪುರವಾದ (ದೇವನೂರು) ಅಮರಾವತಿಯೇ, ನಿಕೇತನ-ವಾಸಸ್ಥಳವಾಗುಳ್ಳ, (ಗೃಹವಾಗುಳ್ಳ) ಶ್ರೀಪತಿಯ-ಲಕ್ಷ್ಮೀಪತಿಯಾದ ನಾರಾಯಣನ, ಚಾರಿತ್ರಂ ಅಪ್ಪ-ಚರಿತ್ರಾಮೃತವಾಗಿರುವ, ರಾಮಾಯಣವಂ-ಶ್ರೀಮದ್ರಾಮಾಯಣವನ್ನು, ಅನುದಿನದೊಳು-ಪ್ರತಿನಿತ್ಯದಲ್ಲಿಯೂ, ಪಾಡುವರು-ಗಾನ ರೂಪವಾಗಿ ಹಾಡುತ್ತಿರುವರು.

ಅ|| ವಿ|| ಅವರು+ತರುಣರ್=ಆ ತರುಣರ್ ಗಮಕ ಸ. ಮುನಿಯಗಣ=ಮುನಿಗಣ ಷ. ತ. ಮುನಿ-ಋಷಿ, ಸಿಟ್ಟಾಗು. ಮಧುರವಾದ+ವೀಣೆ=ಮಧುರವೀಣೆ ವಿ. ಪೂ. ಕ. ಸ. ಸಂಕೀರ್ಣ-ಕೂಡಿರುವುದು, ಆಲಾಪ-ರಾಗಾದಿಗಳನ್ನು ಹೇಳುವುದು. ಪ್ರಲಾಪ-ಅಳುವುದು, ಮಧು-ಹೆಂಡ, ಜೇನುತುಪ್ಪ, ಮಧುಮಾಸ ||೫೫||

ಹತ್ತೊಂಭತ್ತನೆಯ ಸಂಧಿ ಸಂಪೂರ್ಣವಾದುದು.

---

ಮೆಚ್ಚುವಂತೆಯೂ, ಆ ಋಷ್ಯಾಶ್ರಮದಲ್ಲಿದ್ದ ಮುನಿಗಳು ಮತ್ತು ಮುನಿವಧುಗಳು, ಹರ್ಷಗೊಂಡು ನಲಿವಂತೆಯೂ, ಮಧುರವಾದ ವೀಣೆ ಮೊದಲಾದವುಗಳನ್ನು ನುಡಿಸುವಿಕೆಯಿಂದಲೂ, ಮುಖಾರೀ, ಕಲ್ಯಾಣೀ, ಮಧ್ಯಮಾವತಿ, ಮೋಹನ, ನಾಟಿ, ನಾಟಕುರಂಜೀ, ಹಂಸಧ್ವನಿ, ಆನಂದಭೈರವಿ ಮೊದಲಾದ ರಾಗಾಲಾಪಗಳಿಂದಲೂ ಹಾಡುತ್ತ, ಸಂಗೀತವಿದ್ಯಾ ಪ್ರವೀಣತೆಯನ್ನು ಹೊಂದಿ, ಅಮರಪುರಿಯೇ ವಾಸಸ್ಥಾನವಾಗುಳ್ಳ, ಶ್ರೀರಮಾಪತಿಯ ಚಾರಿತ್ರೆಯಾಗಿರುವ ಶ್ರೀಮದ್ರಾಮಾಯಣವನ್ನು ಅತಿ ಭಕ್ತಿ ಪುರಸ್ಸರವಾಗಿ ಪ್ರತಿ ದಿನದಲ್ಲಿಯೂ ಹಾಡುತ್ತಿದ್ದರು. ||೫೫||

ಟೀಕಾ ತಾತ್ಪರ್ಯ ಸಹಿತವಾದ ಜೈಮಿನಿಭಾರತದೊಳ್ ಹತ್ತೊಂಭತ್ತನೆಯ ಸಂಧಿಯು ಸಂಪೂರ್ಣವಾದುದು.



## ಇಪ್ಪತ್ತನೆಯ ಸಂಧಿ.

ಸೂಚನೆ॥ ರಘುವರನತುರಗಮೇಧಾಧ್ವರದಕುದುರೆಯನ । ಲಘುಪರಾಕ್ರಮಿಲವಂತರಳತನದಿಂದಕಟ್ಟೆ । ಅಘಟಿತ
ಮೆನಿಸಿತುಶತ್ರುಘ್ನಲಕ್ಷ್ಮಣರತಳತಂತ್ರಕ್ಕೆಬಿಡಿಸಿಕೊಳಲು ॥

ಹಿಮಕರಕುಲೇಂದ್ರ ಕೇಳ್ವಾಲ್ಮೀಕಿ ಮುನಿಪನಾ । ಶ್ರಮದೊಳ್ಸಮಸ್ತಕಲೆಗಳನರಿದುಕಾಕಪ । ಕ್ಷನುನಾಂತು ಜಾನಕಿಯ ಶುಶ್ರೂಷೆಯೊಳ್ಸಂದು ಋಷಿಯ ಚಿತ್ತಕ್ಕೆ ಬಂದು ॥ ಯಮಳರಿರೆ ಕಂಡು ಸಂಪ್ರೀತಿಯಿಂ ತಾಪಸೋ । ತ್ತಮನಿತ್ತ ನಿಷುಚಾಪ ಖಡ್ಗಂಗಳಂ । ರಮಣೀಯ ಕವಚ ಕುಂಡಲ ಕಿರೀಟಂಗಳಂ ತನ್ನಯ ತಪೋಬಲ

---

ಇಪ್ಪತ್ತನೆಯ ಸಂಧಿ ಪ್ರಾರಂಭವು.

ಸೂಚನೆ॥ ಅಲಘು-ಅತಿಶಯದಿಂದ, ಪರಾಕ್ರಮಿ-ಶೌರ್ಯವುಳ್ಳ, ಲವಂ-ಲವನೆಂಬ ಹೆಸರುಳ್ಳ ಸೀತೆಯ ಕಿರೀಮಗನು, ರಘುವರನ-ರಾಮನ, ತುರಗಮೇಧ-ಹಯಮೇಧವೆಂಬ, ಅಧ್ವರದ-ಯಾಗದ, ಕುದುರೆಯನು- ಅಶ್ವವನ್ನು, ತರಳತನದಿಂದ-ಬಾಲಭಾವದಿಂದ, ಕಟ್ಟಲು-ಕಟ್ಟಿಹಾಕಲಾಗಿ, ಶತ್ರುಘ್ನ ಲಕ್ಷ್ಮಣರ-ಶತ್ರುಘ್ನ ಲಕ್ಷ್ಮಣರೆಂಬ ಶ್ರೀರಾಮನ ಅನುಜರ, ತಳತಂತ್ರಕ್ಕೆ-ಪರಾಕ್ರಮಕ್ಕೆ, (ಸೇನೆ) ಅಘಟಿತಂ-ವಶವಾಗದಿರುವುದು, ಎನಿಸಿತು-ಎಂದು ಹೇಳಿಸಿಕೊಂಡಿತು.

ಅ॥ ವಿ॥ ಅಲಘು-ಸ್ವಲ್ಪವಲ್ಲದ್ದು ಎಂದರೆ ಹೆಚ್ಚಾದದ್ದು, ರಘುವರ-ರಘುವಂಶದಲ್ಲಿ ವರ ಸ. ತ. ತರಳತನ-ತರಳನ ಭಾವ (ಭಾವನಾಮದಲ್ಲಿ "ತನ" ಎಂಬ ಪ್ರತ್ಯಯವು ಸೇರಿದೆ.

ಟೀ॥ ಹಿಮಕರಕುಲೇಂದ್ರ-ಜನಮೇಜಯನೆಂಬ ಪ್ರಭುವೆ! ಕೇಳು-ಲಾಲಿಸು, ವಾಲ್ಮೀಕಿ-ವಾಲ್ಮೀಕಿಯೆಂಬ, ಮುನಿಪನ-ತಾಪಸೋತ್ತಮನ, ಆಶ್ರಮದೊಳ್-ತಪೋವನದಲ್ಲಿ, ಸಮಸ್ತ-ಅಶೇಷವಾದ, ಕಲೆಗಳನು-ಬಿಜ್ಜೆಗಳನ್ನು, ಅರಿದು-ಕಲಿತು, ಕಾಕಪಕ್ಷನುನು-ಜುಂಪರು ಕೂದಲನ್ನು, ಆಂತು-ಹೊಂದಿ, ಜಾನಕಿಯ-ವೈದೇಹಿಯ ಶುಶ್ರೂಷೆಯೊಳ್-ಚಾಕರಿಯಲ್ಲಿ, ಸಂದು-ಇದ್ದವನಾಗಿ, ಋಷಿಯ-ವಾಲ್ಮೀಕಿಮುನಿಯ, ಚಿತ್ತಕ್ಕೆ-ಮನಸ್ಸಿಗೆ, ಬಂದು-ಗುಣಶಾಲಿಗಳು ಎಂಬ ಪ್ರೇಮವು ಒದಗಿ. ಯಮಳರು-ಅಣ್ಣ ತಮ್ಮಂದಿರಾದ ಕುಶಲವರು, ಇರೆ-ಇರಲಾಗಿ, ಕಂಡು-ಈಕ್ಷಿಸಿ, ಸಂಪ್ರೀತಿಯಿಂ-ಪ್ರೇಮಾತಿಶಯದಿಂದ, ತಾಪಸೋತ್ತಮನು-ಋಷಿವರ್ಮನಾದ ವಾಲ್ಮೀಕಿಯು, ತನ್ನಯ-ತನ್ನ ಸಂಬಂಧವಾದ, ತಪೋಬಲದೊಳು-ತಪಸ್ಸಿನ ಮಹಿಮೆಯಿಂದ, ಇಷು-ಸರಲ್ಗಳು, ಚಾಪ-ಧನುಸ್ಸ, ಚರ್ಮ-ಚರ್ಮವು, ಖಡ್ಗಂಗಳಂ-ಕತ್ತಿಯೇ ಮೊದಲಾದುವನ್ನು, ರಮಣೀಯ-ಕಾಂತಿಯುಕ್ತಂಗಳಾದ, ಕವಚ-ಅಂಗಿಗಳು, ಕುಂಡಲ-ಕಿವಿಯನ್ನು ಅಲಂಕರಿಸುವ ಕಡಕುಗಳು, ಕಿರೀಟಂಗಳಂ-ಕಿರೀಟಗಳನ್ನು ಇತ್ತನು-ಕೊಟ್ಟವನಾದನು.

ಅ॥ ವಿ॥ ಹಿಮಕರಕುಲ- ಹಿಮ-ತಣ್ಣಗಿರುವ, ಕರ-ಕಿರಣಗಳುಳ್ಳವನು, ಚಂದ್ರನು (ಬ. ಸ) ಹಿಮಕರಕುಲ (ಷ.ತ) ಹಿಮಕರಕುಲದ ಇಂದ್ರ-ಜನಮೇಜಯ (ಷ. ತ) ವಾಲ್ಮೀಕಿಮುನಿಪ- ಮುನಿ-ಋಷಿಗಳನ್ನು, ಪ-ಪಾಲಿಸುವವನು, ಎಂದರೆ ಋಷಿಶ್ರೇಷ್ಠನು (ಕೃ. ವೃ) ವಾಲ್ಮೀಕಿ ಎಂಬ ಮುನಿಪ (ಸಂ. ಪೂ) "ವಲ್ಮೀಕ" ಎಂದರೆ ಹುತ್ತವು. ವಲ್ಮಿಕದಲ್ಲಿ (ಹುತ್ತ

---

ಇಪ್ಪತ್ತನೆಯ ಸಂಧಿಯ ಕಥಾಸಾರವು.

ಅನಂತರದಲ್ಲಿ ಜೈಮಿನಿಋಷಿಯು ಇನಕುಲಲಲಾಮನಾದ ಜನಮೇಜಯಮಹೀಪಾಲನಂ ಕುರಿತು ಕೇಳೈ ಜನಮೇಜಯನೆ, ವಾಲ್ಮೀಕಿಮುನಿಪನ ಆಶ್ರಮದಲ್ಲಿ ಲವಕುಶರು ಅಭಿವೃದ್ಧಿಯಾಗುತ್ತ ತನ್ನ ತಾಯಿಯಾದ ಸೀತೆಯನ್ನೂ ಗುರುವಾದ ವಾಲ್ಮೀಕಿಯನ್ನೂ, ಅಲ್ಲಿರುವ ಋಷಿಮಂಡಲಿಯನ್ನೂ ಮೆಚ್ಚುವಂತೆ ಮಾಡುತ್ತ, ಆ ಮಹರ್ಷಿಯ ಅನುಗ್ರಹಕ್ಕೆ ಪಾತ್ರರಾಗಿ, ಆತನಿಂದ ಸಕಲ ಶಾಸ್ತ್ರಗಳನ್ನೂ ಅಭ್ಯಾಸಮಾಡಿ, ಸಕಲ ಕಲಾಕೋವಿದರೆನ್ನಿಸಿಕೊಂಡರು. ಬಾಣ ವಿದ್ಯೆಯಲ್ಲಿಯೂ, ಧನುಸ್ಸು, ಚರ್ಮ, ಕತ್ತಿ ಮೊದಲಾದ ವೀರ ವಿದ್ಯೆಗಳಲ್ಲಿಯೂ, ಪಂಡಿತರಾದ ಈ ಇಬ್ಬರು ಅವಳಿ ಮಕ್ಕಳನ್ನು ನೋಡಿ ಪರಮ ಸಂತೋಷಪಟ್ಟು, ತನ್ನ ತಪಃ ಪ್ರಭಾವದಿಂದ ಉತ್ತಮವಾದ ಕಿರೀಟ, ಅಂಗಿ, ಕುಂಡಲಗಳು ಮೊದಲಾದುವನ್ನೆಲ್ಲಾ ಇತ್ತು ರಣ ಪಂಡಿತರನ್ನಾಗಿ ಮಾಡಿದನು. ಈ ರೀತಿಯಲ್ಲಿ ವಾಲ್ಮೀಕಿಮುನಿಪುಂಗವನಿಂದ ಎಲ್ಲಾ ವಿದ್ಯೆಗಳಲ್ಲಿಯೂ ನಿಪುಣರೆನ್ನಿಸಿಕೊಂಡು ತಾಯಿಯಾದ ಸೀತಾದೇವಿಯ ಸೇವೆಮಾಡುತ್ತ, ಕಾಲವಂ ಕಳೆಯುತ್ತಿದ್ದರಲ್ಲದೆ ವಾಲ್ಮೀಕಿಯಿಂದ ಬೋಧಿಸಲ್ಪಟ್ಟ ರಾಮಚಂದ್ರನ ಕಥೆಯ ಸಂಕೀರ್ತನೆಯನ್ನು ತಾಳ, ಲಯಗಳಿಗನುಗುಣವಾಗಿ ಸದಾ ಭಜನೆಯಂ ಮಾಡುತ್ತಲಿದ್ದರು ಈ ಮಕ್ಕಳನ್ನು ಕಂಡು ಅಲ್ಲಿದ್ದ ಇತರ ಮುನಿಗಳೆಲ್ಲರೂ ತಮತಮಗೆ ತಿಳಿದ ವೀರ ವಿದ್ಯೆಗಳನ್ನೂ, ಶಾಸ್ತ್ರವಿದ್ಯೆಗಳನ್ನೂ, ಹೇಳಿಕೊಟ್ಟವರಾಗಿ ಅನೇಕ ಮಂತ್ರಾಸ್ತ್ರಗಳನ್ನೆಲ್ಲಾ ಅನುಗ್ರಹಿಸಿದವರಾದರು. ಋಷಿವರ್ಯರ ಆಶೀರ್ವಾದ ಬಲದಿಂದ ಲವಕುಶರು ಹುಣ್ಣಿಮೆಯ

ದೊಳು ‖ ೧ ‖ ಅವರ್ಗಳಿಂತಿರ ಲಯೋಧ್ಯಾಪುರದೊಳಿತ್ತ ರಾ । ಘವ ನಖಿಳಧರಣಿಯಂ ಪಾಲಿಸುತಸೌಖ್ಯಾನು । ಭವ ದೊಳೊಂದಿರಾವಣನ ವಧೆಯೊಳಂದುಬಂದಾ ಬ್ರಹ್ಮಹತಿತನ್ನನು ‖ ಅವಗಡಿಸಲದಕೆನಿಷ್ಕೃತಿಯಾವುದೆಂದು ಸಾರುವ ನಿಗಮ ದರ್ಥಮಂ ತಿಳಿದು ಹಯಮೇಧಮಂ । ತವೆನೆಗಳ್ಚುವನಾಗಿ ನಿಶ್ಚೈಸಿ ಕರೆಸಿದಂ ವರವಸಿಷ್ಠಾದಿಗಳನು ‖ ೨ ‖ ವಾಮ ದೇವಾತ್ರಿಗಾಲವಗುರುವಸಿಷ್ಠವಿ । ಶ್ವಾಮಿತ್ರರಂ ಕರೆಸಿಹಯಮೇಧಲಕ್ಷಣವ । ನಾಮುನಿಗಳಿಂ ಕೇಳ್ದನುಜ್ಞೆಗೊಳಲವರಿ ದಕೆನಿಜಪತ್ನಿವೇಳ್ಪುದೆನಲು ‖ ಹೇಮನಿರ್ಮಿತಮಾದಜಾನಕಿಯನಿರಿಸಿಕೊಂಡೀಮಹಾಯಜ್ಞಮಂ ನಡೆಸುವೆಂತಾನೆಂದು । ರಾ

---

ದಲ್ಲಿ) ಉತ್ಪನ್ನನಾದವನಾದುದರಿಂದ ವಾಲ್ಮೀಕಿ ಎಂಬ ಹೆಸರು ಬಂದಿರುವುದು, ಜಾನಕಿ – ಜನಕರಾಯನ ಕುವರಿಯು, ತಾಪ ಸೋತ್ತಮ (ಗುಣ ಸಂ) ‖೧‖

ಟೀ‖ ಅವರ್ಗಳು–ಕುಶಲವರೆಂಬ ಬಾಲಕರೀರ್ವರು, ಅಂತು–ಆ ತೆರದಿಂದ, ಇರಲು–ಅಭಿವೃದ್ಧಿಯನ್ನೈದುತ್ತಿರಲಾಗಿ, ಅಯೋಧ್ಯಾಪುರದೊಳು – ಅಯೋಧ್ಯಾನಗರದಲ್ಲಿ, ಇತ್ತ–ಈ ಕಡೆ, ರಾಘವನು–ಶ್ರೀರಾಮಮೂರ್ತಿಯು, ಅಖಿಳ–ಸಕಲವಾದ, ಧರಣಿಯಂ–ಇಳಾಮಂಡಲವನ್ನೂ, ಸೌಖ್ಯಾನುಭವದೊಳು–ಸೌಖ್ಯ ಸಮೃದ್ಧಿಯಿಂದ, ಪಾಲಿಸುತ – ಕಾಪಾಡುತ್ತ, ಅಂದು– ರಾವಣನೊಡನೆ ಯುದ್ಧಮಾಡಿದ ಸಮಯದಲ್ಲಿ, ರಾವಣ–ರಾವಣಾಸುರನ, ವಧೆಯೊಳು–ಕೊಂದುಹಾಕುವಿಕೆಯಿಂದ, ಬಂದಿದ– ಉಂಟಾದ, ಆಬ್ರಹ್ಮಹತಿ–ಆ ಬ್ರಹ್ಮಹತ್ಯಾದೋಷವು, ತನ್ನನು – ತನ್ನನ್ನು, ಅವಗಡಿಸಲು – ಹಿಂಸೆಪಡಿಸಲು, ಅದಕೆ–ಅದರ ನಿವಾರಣೆಗೆ, ನಿಷ್ಕೃತಿಯು–ಪರಿಹಾರಕೃತ್ಯವು, ಆವುದು–ಯಾವುದು, ಎಂದು–ಎಂಬತೆರನಾಗಿ, ಸಾರುವ–ಹೇಳತಕ್ಕ, ನಿಗಮದ– ವೇದವಚನದ, ಅರ್ಥಮಂ–ಆಶಯವನ್ನು, ತಿಳಿದು–ತಿಳಿದುಕೊಂಡವನಾಗಿ, ಹಯಮೇಧಮಂ–ಅಶ್ವಮೇಧಯಾಗವನ್ನು, ತವೆ– ಚೆನ್ನಾಗಿ,, ನೆಗಳ್ಚುವನಾಗಿ–ಮಾಡತಕ್ಕವನಾಗಿ, ನಿಶ್ಚೈಸಿ – ನಿಷ್ಕರ್ಷೆಮಾಡಿ, ವರ–ಉತ್ತಮರಾದ, ವಸಿಷ್ಠಾದಿಗಳ–ವಸಿಷ್ಠರೇ ಮೊದಲಾದವರನ್ನು, ಕರೆಸಿದಂ–ತನ್ನ ಬಳಿಗೆ ಬರಮಾಡಿಕೊಂಡವನಾದನು ‖

ಅ‖ ವಿ‖ ಸೌಖ್ಯಾನುಭವ (ಷ. ತ.) ಬ್ರಹ್ಮಹತಿ (ಷ. ತ.) ‖೨‖

ಟೀ‖ ವಾಮದೇವ–ವಾಮದೇವನೆನ್ನುವ, ಅತ್ರಿ–ಅತ್ರಿಯೆಂಬ ಹೆಸರುಳ್ಳ, ಗಾಲವ–ಗಾಲವನೆಂಬ ನಾಮಧೇಯದಿಂದ ಕೂಡಿದ, ಗುರು–ಪುರೋಹಿತನಾದ, ವಸಿಷ್ಠ–ವಸಿಷ್ಠರೆಂದು ಪ್ರಸಿದ್ಧರಾದ, ವಿಶ್ವಾಮಿತ್ರ–ವಿಶ್ವಾಮಿತ್ರನೆಂದು ಕರೆಯಲ್ಪಡತಕ್ಕ ಋಷಿಗಳನ್ನೆಲ್ಲಾ, ಕರೆಸಿ–ಬರುವಂತೆ ಹೇಳಿ, ಹಯಮೇಧ–ಅಶ್ವಮೇಧವೆಂಬ ಕ್ರತುವಿನ, ಲಕ್ಷಣವನು–ವಿಧಾನವನ್ನು, ಆ ಮುನಿ ಗಳಿಂ–ಆ ತಾಪಸರನ್ನು, ಕೇಳ್ದು–ಕೇಳಿದವನಾಗಿ, ಅನುಜ್ಞೆಗೊಳ್ಳಲು–ಅಪ್ಪಣೆಯನ್ನೈದಲು, ಅವರು–ಆ ಮುನಿಗಳು, ಇದಕ್ಕೆ– ಈ ಯಾಗಕ್ಕೆ, ನಿಜಪತ್ನಿ–ಧರ್ಮಪತ್ನಿಯು, ವೇಳ್ಪುದಂ–ಸಮೀಪವರ್ತಿಯಾಗಿರಬೇಕೆಂದು, ಎನಲು–ನುಡಿಯಲು, ಹೇಮ–ಚಿನ್ನ ದಿಂದ, ನಿರ್ಮಿತವಾದ–ಮಾಡಲ್ಪಟ್ಟ, ಜಾನಕಿಯನು–ಸೀತಾದೇವಿಯನ್ನು, ಇರಿಸಿಕೊಂಡು–ಹತ್ತಿರದಲ್ಲಿರುವಂತೆ ಮಾಡಿಕೊಂ ಡವನಾಗಿ, ಈ ಮಹಾಯಜ್ಞಮಂ–ಈ ದೊಡ್ಡಯಾಗವನ್ನು, ತಾನು–ನಾನಾದರೋ, ನಡೆಸುವೆನು–ನೆರವೇರಿಸುತ್ತೇನೆ, ಎಂದು– ಎಂಬುದಾಗಿ, ರಾಮಚಂದ್ರಂ–ಶ್ರೀರಾಮನು, ನಿಖಿಳ – ಸಕಲರಾದ, ಋಷಿಗಳನು – ಮುನಿವರ್ಯರನ್ನು, ಒಡಂಬಡಿಸಿ – ಒಪ್ಪಿಸಿ,

---

ನಂತೆ ದಿನೇದಿನೇ ಅಭಿವೃದ್ಧಿಯಾಗುತಲಿದ್ದರು ‖೧‖ ಇತ್ತ ಅಯೋಧ್ಯಾಪಟ್ಟಣದಲ್ಲಿ ದಶರಥಪುತ್ರನಾದ ಶ್ರೀರಾಮಚಂದ್ರನು ಸಕಲ ಭೂಮಂಡಲವನ್ನೂ ಸುಖದಿಂದ ಪಾಲಿಸುತ್ತ ಸೌಖ್ಯಾನುಭವದಲ್ಲಿದ್ದರೂ ಕೂಡ ಸೀತೆಯ ನಿಮಿತ್ತವಾಗಿ ಬ್ರಹ್ಮಕುಲೋ ತ್ಪನ್ನನಾದ ರಾವಣನನ್ನು ಕೊಂದದ್ದರಿಂದ ಬ್ರಹ್ಮಹತ್ಯಾದೋಷವು ಬಂದೊದಗಿರುವುದೆಂಬ ವ್ಯಾಕುಲವು ಇವನ ಸುಖವನ್ನೆಲ್ಲಾ ಭಸ್ಮವಾಗುವಂತೆ ಮಾಡಿಬಿಡುತ್ತಿತ್ತು. ಹೀಗಿರುವಲ್ಲಿ ಒಂದಾನೊಂದು ದಿನ ತನ್ನಷ್ಟಕ್ಕೆ ತಾನೆ ಆಲೋಚಿಸಿ, ಬ್ರಹ್ಮಹತ್ಯೆಯು ಹೋಗಬೇಕಾದರೆ ಅಶ್ವಮೇಧಯಾಗಕ್ಕಿಂತಲೂ ಮೇಲಾದದ್ದು ಯಾವುದೂ ಇಲ್ಲವೆಂದು ಬಗೆದು ಆ ಮಹಾಯಾಗವನ್ನು ಮಾಡ ಬೇಕೆಂದು ನಿಶ್ಚಯಿಸಿದವನಾಗಿ ‖ ೨ ‖ ಮುನಿವರ್ಯರಾದ ವಾಮದೇವ, ಅತ್ರಿ, ಗಾಲವರನ್ನೂ, ತನ್ನ ಮುಖ್ಯಗುರುವೂ ಪುರೋ ಹಿತನೂ ಆದ ವಸಿಷ್ಠಮಹರ್ಷಿಯನ್ನೂ ಬರಮಾಡಿಕೊಂಡು, ವಿಶ್ವಾಮಿತ್ರರನ್ನೂ ಕರೆಸಿದವನಾಗಿ, ತನ್ನಾಶಯವನ್ನು ಆ ಮುನಿ ಪತಿಗಳೊಂದಿಗೆ ಹೇಳಿ ಈ ಯಾಗವನ್ನು ಮಾಡಬಹುದೆಂದು ಅವರಿಂದ ಅನುಜ್ಞೆಯನ್ನೈದಿದನು. ಆಗ ಅಲ್ಲಿ ನೆರೆದಿದ್ದ ಮುನಿಗ ಳೆಲ್ಲರೂ ಶ್ರೀರಾಮನನ್ನು ಕುರಿತು, ಎಲೈ ಸೂರ್ಯವಂಶಕ್ಕೆ ದೀಪಪ್ರಾಯನಾದ ಕೌಸಲ್ಯಾನಂದನನೇ, ಈ ಮಹಾಯಾಗ ದಿಂದ ಬ್ರಹ್ಮಹತ್ಯಾದೋಷವು ಪರಿಹಾರವಾಗುವುದರಲ್ಲಿ ಲೇಶವೂ ಅನುಮಾನವಿಲ್ಲವು. ಆದರೆ ಈ ಯಾಗಕ್ಕೆ ಪಟ್ಟಮಹಿಷಿಯು ಇರಬೇಕಾದದ್ದು ಅವಶ್ಯಕವೆಂದು ತಿಳಿಸಿದ ಮುನಿಗಳ ನುಡಿಯನ್ನು ಕೇಳಿ, ಭಂಗಾರದಿಂದ ಸೀತಾವಿಗ್ರಹವನ್ನು ಮಾಡಿಸಿ, ಈ ಮಹಾ ಯಾಗವನ್ನು ಮಾಡುವೆನೆಂದು ಅವರಿಂದ ಅನುಜ್ಞೆಯಂ ಪಡೆದವನಾದನು. ಬಳಿಕ ಅಶ್ವಮೇಧಾರ್ಹವಾದ ಒಂದು

ಮಚಂದ್ರಂನಿಖಿಳಋಷಿಗಳನೊಡಂಬಡಿಸಿಶಾಲೆಯಂಮಾಡಿಸಿದನು ||೩|| ಬಳಿಕವೇದೋಕ್ತಪ್ರಕಾರದಿಂದೀಕ್ಷೆಯಂ | ತಳೆದು
ರಘುನಾಥಂತುರಂಗಮುಂಪೂಜಿಗೈ | ದಿಳೆಯೊಳ್ಚರಿಸಲದರಪಣೆಗೆತನ್ನಗ್ಗಳಿಕೆಯಂಬರೆದಪತ್ರಿಕೆಯನು | ಅಳವಡಿಸಿಕೊಡೆ
ಮೂರಕ್ಷೋಹಿಣಿಯಮೂಲ | ಬಲಸಹಿತವೀರಶತ್ರುಘ್ನನಂಕಾವಲ್ಗೆ | ಕಳುಹಿಬಿಡಲಾಹಯಂತಿರುಗುತಿರ್ದುದುಧರೆಯಮೇ
ಲಖಿಳದೆಸೆದೆಸೆಯೊಳು || ೪ || ಬಲ್ಗಯ್ಯನೃಪರಂಜಿತಡೆಯದೆರಘೂದ್ವಹನ | ಸೊಲ್ಗೇಳಿನಮಿಸಲಿಳೆಯೊಳ್ಚರಿಸುತಧ್ವರದ |
ನಲ್ಲುದುರೆಬಂದುವಾಲ್ಮೀಕಿಯನಿಜಾಶ್ರಮದವಿನಿಯೋಗದುಪವನದೊಳು || ಪುಲ್ಗಳಪಸುರ್ಗೆಳಸಿಪೊಕ್ಕೊಡಾತೋಟಗಾ |

ಶಾಲೆಯಂ_ಯಾಗಮಂಟಪವನ್ನು, ಮಾಡಿಸಿದನು_ಸಿದ್ಧಪಡಿಸಿದವನಾದನು ||೩||

ಟೀ|| ಬಳಿಕ-ತರುವಾಯ, ವೇದ-ವೇದವಚನಗಳಲ್ಲಿ, ಉಕ್ತ_ಹೇಳಿರುವ, ಪ್ರಕಾರದಿಂ_ತೆರದಿಂದ, ದೀಕ್ಷೆಯಂ_ತಳೆದು_ದೀಕ್ಷಾಬದ್ಧನಾಗಿ, ರಘುನಾಥಂ_ಶ್ರೀರಾಮನು, ತುರಗಮಂ-ಯಜ್ಞಾಶ್ವವನ್ನು, ಪೂಜಿಗೈದು - ಪೂಜೆಮಾಡಿದವನಾಗಿ, ಇಳೆಯೊಳ್ - ಭೂಮಂಡಲದಲ್ಲಿ, ಸಂಚರಿಸಲು - ತಿರುಗಲು, ಅದರ_ಆ ಕುದುರೆಯ, ಪಣೆಗೆ-ಹಣೆಗೆ, ತನ್ನ-ಸ್ವಕೀಯವಾದ, ಅಗ್ಗಳಿಕೆಯ_ಬಿರುದಾವಳಿಯನ್ನು, ಬರೆದ-ಬರೆದಿರತಕ್ಕ, ಪತ್ರಿಕೆಯನು_ಚಿನ್ನದ ತಗಡನ್ನು, ಅಳವಡಿಸಿ_ಬಿಗಿದು, ಕೂಡೆ-ಒಡನೆಯೇ, ಮೂರು ಅಕ್ಷೋಹಿಣಿಯ_ಇಪ್ಪತ್ತೊಂದು ಸಾವಿರದ ಎಂಟನೂರ ಎಂಭತ್ತು ಹಸ್ತಿಗಳು, ಅರವತ್ತೈದುಸಾವಿರದ ಆರನೂರ ಹತ್ತು ಅಶ್ವಂಗಳು, ಇಪ್ಪತ್ತೊಂದುಸಾವಿರದ ಎಂಟನೂರೆಪ್ಪತ್ತು ತೇರುಗಳು, ಒಂದು ಲಕ್ಷವು ಒಂಭತ್ತುಸಾವಿರದ ಮುನ್ನೂರೈವತ್ತು ಕಾಲಾಳುಗಳು ಇವುಗಳ ಮೂರರಷ್ಟು ಎಂದರೆ ಒಟ್ಟು ಆರು ಲಕ್ಷವೂ ಐವತ್ತಾರುಸಾವಿರದ ನೂರು ಸೇನೆಯನ್ನೊಳಗೊಂಡಿರುವ, ಮೂಲಬಲಸಹಿತ-ಮುಖ್ಯ ಸೈನ್ಯದೊಂದಿಗೆ, ವೀರ - ಪರಾಕ್ರಮಿಯಾದ, ಶತ್ರುಘ್ನನಂ_ಶತ್ರುಘ್ನನೆಂಬ ಸಹೋದರನನ್ನು, ಕಾವಲ್ಗೆ_ಕುದುರೆಯ ರಕ್ಷಣೆಗೆ, ಕಳುಹಿ_ಕಳುಹಿಸಿ, ಬಿಡಲು_ದೇಶದಲ್ಲೆಲ್ಲಾ ತಿರುಗಲು ಯಜ್ಞಾಶ್ವವನ್ನು ಬಿಡಲಾಗಿ, ಆಹಯಂ-ತುರಂಗಮವು, ಧರೆಯಮೇಲೆ-ಇಳಾವಲಯದಲ್ಲಿ, ಅಖಿಳ_ಸಕಲವಾದ, ದೆಸೆದೆಸೆಯೊಳು_ದಿಕ್ಕುಗಳಲ್ಲೆಲ್ಲಾ, ತಿರುಗುತ_ಸಂಚಾರಮಾಡುತ್ತ, ಇರ್ದುದು_ಇತ್ತು.

ಅ|| ವಿ|| ರಘು-ರಘುವಂಶದ, ನಾಥಂ-ಒಡೆಯ (ಷ. ತ.) ಶತ್ರುಘ್ನ=ಶತ್ರು_ವೈರಿಗಳನ್ನು, ಘ್ನ_ಸಂಹರಿಸತಕ್ಕವನು, (ಕೃ. ವೃ.) ||೪||

ಟೀ|| ಬಲ್ಗಯ್ಯನೃಪರು - ಹೆಚ್ಚಾದ ಪರಾಕ್ರಮವುಳ್ಳ ರಾಜಾಧಿರಾಜರು, ಅಂಜಿ_ಹೆದರಿ, ತಡೆಯದೆ - ಅಶ್ವವನ್ನು ನಿರೋಧಿಸದೆ, ರಘೂದ್ವಹನ_ದಾಶರಥಿಯ, ಸೊಲ್_ವೀರನುಡಿಗಳನ್ನು, ಕೇಳಿ-ಆಲಿಸಿ, ನಮಿಸಲು_ವಂದನೆಯಂ ಮಾಡುತ್ತಿರಲು, ಇಳೆಯೊಳು-ಧರಾಮಂಡಲದಲ್ಲಿ, ಚರಿಸುತ_ತಿರುಗುತ್ತ, ಅಧ್ವರದ_ಯಾಗದ, ನಲ್ಲುದುರೆ_ಶ್ರೇಷ್ಠಹಯವು, ಬಂದು_ಐತಂದು, ವಾಲ್ಮೀಕಿಯ_ವಾಲ್ಮೀಕಿ ಎಂಬ ತಾಪಸಸರ್ವ್ಯನ, ನಿಜ_ಸ್ವಕೀಯಮಾದ, ಆಶ್ರಮದ_ಪರ್ಣಶಾಲೆಯ ಹತ್ತಿರ, ವಿನಿಯೋಗದ_ರಚಿಸಲ್ಪಟ್ಟ, ಉಪವನದೊಳು-ಉದ್ಯಾನದಲ್ಲಿ, ಪುಲ್ಗಳ_ಹುಲ್ಲುಗಳ, ಪಸುರ್ಗೆ-ಹಸುರುವರ್ಣಕ್ಕೆ, ಎಳಸಿ-ಆಶಿಸಿ, ಪೊಕ್ಕೊಡೆ-ಪ್ರವೇಶಮಾಡಲಾಗಿ, ಆ ತೋಟದ_ಆ ಆರಾಮದ, ಕಾವಲ್ಗೆ_ಪಾಲನೆಗೋಸ್ಕರ, ತನ್ನೊಡನೆ_ತನ್ನೊಂದಿಗೆ, ಆಡಿಗಳ_ಆಡತಕ್ಕವರ, ಕೂಡೆ_ಒಡನೆ, ಲೀಲೆ_ಸಂತಸವು, ಮಿಗೆ_ಅಧಿಕವಾಗುತ್ತಿರಲು, ವೀರ_ಪರಾಕ್ರಮಿಯಾದ, ಲವಂ-ಲವನು, ಬಿಲ್ಗೊಂಡು_ಧನು

ದೊಡ್ಡ ಯಾಗಶಾಲೆಯನ್ನು ಮಾಡಿಸಿದನು ||೩|| ಅನಂತರ ವೇದೋಕ್ತವಿಧಾನದಿಂದ ಅಶ್ವಮೇಧಯಾಗವಂ ಮಾಡಲು ದೀಕ್ಷಾಬದ್ಧನಾಗಿ, ಯಜ್ಞಾಶ್ವವನ್ನು ಗಂಧಪುಷ್ಪಾಕ್ಷತೆಗಳಿಂದಲಂಕರಿಸಿ, ಭಂಗಾರದ ಒಂದು ತಗಡಿನಲ್ಲಿ ತನ್ನ ಬಿರುದಾವಳಿಯನ್ನೆಲ್ಲಾ ಬರೆದು, ಪೂಜೆಮಾಡಿದ ಕುದುರೆಯ ಹಣೆಯಲ್ಲಿ ಅದನ್ನು ಬಿಗಿದು, ಆ ಉತ್ತಮಾಶ್ವದ ಬೆಂಗಾವಲ್ಗಾಗಿ ಮೂರಕ್ಷೋಹಿಣೀದಳವನ್ನೂ, ವೈರಿಹೃದಯಭೇದಕನೂ ತನ್ನ ತಮ್ಮನೂ ಆದ ಶತ್ರುಘ್ನನನ್ನು ಕಳುಹಿಸಿದನು. ಕಾವಲ್ಗಾರರಿಂದೊಡಗೂಡಿದ ಆ ಅಶ್ವವು ದಿಕ್ಕುದಿಕ್ಕಿನಲ್ಲಿಯೂ, ಹಳ್ಳಿಪಳ್ಳಿಗಳಲ್ಲಿಯೂ, ದೇಶದೇಶಗಳಲ್ಲಿಯೂ, ನುಗ್ಗಿದರೂ ಕೂಡ || ೪ || ಅದನ್ನು ಕಂಡ ರಾಜಾಧಿರಾಜರೆಲ್ಲರೂ ಕುದುರೆಯ ಹಣೆಯಲ್ಲಿ ಚಿನ್ನದ ರೇಖಿನ ಮೇಲೆ ಬರೆದಿರುವ, ಸೂರ್ಯವಂಶಕ್ಕೆ ಲಲಾಮನಾಗಿರತಕ್ಕ, ಶ್ರೀರಾಮನ ಬಿರುದಾವಳಿಯನ್ನು ಕೇಳಿದ ಕೂಡಲೇ ಅದಕ್ಕೆ ನಮಸ್ಕಾರವನ್ನು ಮಾಡಿ, ಹೊರಟುಹೋಗಿ, ಬಹು ಪ್ರಕಾರವಾದ ಕಪ್ಪ ಕಾಣಿಕೆಗಳೊಂದಿಗೆ ಶತ್ರುಘ್ನನನ್ನು ಇದಿರ್ಗೊಂಡು, ಆತನ ಅಡಿದಾವರೆಗಳಿಗೆ ನಮಸ್ಕರಿಸಿ, ತಮ್ಮ ಸಕಲ ಪರಿವಾರದೊಂದಿಗೆ ಅವನನ್ನು ಹಿಂಬಾಲಿಸುತ್ತಿದ್ದರೇ ಹೊರತು ಎದುರಾಳುಗಳಾಗಿ ಯಾರೂ ಬರಲೇ ಇಲ್ಲವು. ಈ ರೀತಿಯಲ್ಲಿ ನಿರುಪಾಧಿಕವಾಗಿ ದೇಶವನ್ನೆಲ್ಲಾ ತಿರುಗುತ್ತಿದ್ದ ಕುದುರೆಯು ಬರುತ್ತಿರುವ ದಾರಿಯಲ್ಲಿ ವಾಲ್ಮೀಕಿಮುನಿಪತಿಯ ಆಶ್ರಮವು ಸಿಕ್ಕಲಾಗಿ, ಕುದುರೆಯು ಆ ಮುನಿಪುಂಗವನ ಉದ್ಯಾನದಲ್ಲಿರುವ ಚಿಗುರುಹುಲ್ಲನ್ನು ತಿನ್ನಲೆಳಸಿ, ಒಳಗೆ ನುಗ್ಗಿ ಅಲ್ಲಿರತಕ್ಕ ಹಸುರು ಹುಲ್ಲನ್ನು ಯಥೇಷ್ಟ

ವಲ್ಲಿ ತನ್ನೊಡನಾಡಿಗಳ ಕೂಡೆಲ್ಲೀಲೆಯೊಳಿರಲಿಕಿಗೆ | ಬಿಲ್ಗೊಂಡುನಡೆತಂದವಂಕಂಡನರ್ಚಿಸಿದವಾಜಿಯಂ ವೀರಲವನು ‖ ೫ ‖ ಎತ್ತಣ ತುರಂಗಮಿದುಪೊಕ್ಕುಪೂದೋಟಮಂ | ಕೊತ್ತಳದುಳಿವುದು ವಾಲ್ಮೀಕಿ ಮುನಿನಾಥನೇ | ಪೊತ್ತುಮಾರೈವುದೆಂದೆನಗೆನೇಮಿಸಿಪೋದನಬ್ಧಿಪಂ ಕರಸಲಾಗಿ ‖ ಮತ್ತೆವರುಣನಲೋಕದಿಂಬಂದು ಮುಳಿದಪನೆ | ನುತ್ತಹಯದೆಡೆಗೆನಡೆತಂದು ನೋಡಲ್ಕದರ | ನೆತ್ತಿಯೋಳ್ಮೆರೆವಪಟ್ಟದಲಿಖಿತಮಂ ಕಂಡುಲವನೋದಿ ಕೊಳುತಿರ್ದನು ‖ ೬ ‖ ಉರ್ವಿಯೊಳ್ಕೌಸಲೆಗೆಕುವರಂರಾಮ | ನೋರ್ವನೇ ವೀರನಾತನಯಜ್ಞತುರಗಮಿದು | ನಿರ್ವಹಿಸಲಾರ್ಪರಾರಾದೊಡಂ ತಡೆಯಲೆಂದಿರ್ದಲೇಖನವನೋಡಿ ‖

---

ಧಾರಿಯಾಗಿ, ನಡೆತಂದು–ಬಂದವನಾಗಿ, ತಾನು–ಸ್ವಂತವಾಗಿ, ಅರ್ಚಿಸಿದ–ಹೂ, ಗಂಧ, ಅಕ್ಷತೆ ಮೊದಲಾದವುಗಳಿಂದ ಪೂಜಿಸಲ್ಪಟ್ಟ, ವಾಜಿಯುಂ–ಹಯವನ್ನು, ಕಂಡನು–ಈಕ್ಷಿಸಿದನನಾದನು ‖

ಅ‖ ವಿ‖ ಬಲ್ಲಯ್ಯ-ಬಲ್ಲಿತ್ತಾದ ಕೈ ಯಾರಿಗೊ ಅವರು ಬಲ್ಲಯ್ಯರು (ಬ. ಸ.) ನಲ್-ಉತ್ತಮ-ವಾದ, ಕುದುರೆ (ವಿ. ಪೂ.) ಬಿಲ್ಗೊಂಡು (ಕ್ರಿ. ಸ.) ‖ ೫ ‖

ಟೀ‖ ಇದು–ಈ ಹಯವು, ಎತ್ತಣ-ಎಲ್ಲಿಂದ ಬಂದ, ತುರಂಗಂ–ಅಶ್ವವು, ಪೂದೋಟಮಂ–ಕುಸುಮಭರಿತಮಾದ ವನವನ್ನು, ಪೊಕ್ಕು–ಸೇರಿ, ಕೊತ್ತಳದು–ತುಳಿದುತುಳಿದು, ಉಳಿವುದು–ಬಿಟ್ಟಬಿಟ್ಟುದೆ, ವಾಲ್ಮೀಕಿಮುನಿನಾಥಂ–ವಾಲ್ಮೀಕಿ ಮಹಾಮುನಿಯು, ಏಪೊತ್ತುಂ–ಯಾವಾಗಲೂ, ಆರೈವುದು–ಸಲಹುತ್ತಿರಬೇಕು, ಎಂದು–ಎಂಬದಾಗಿ, ಎನಗೆ–ನನಿಗಾದರೊ, ನೇಮಿಸಿ–ಅನುಜ್ಞೆಯನ್ನಿತ್ತು, ಅಬ್ಧಿಪಂ–ಜಲಾಧಿದೇವತೆಯಾದ ವರುಣನು, ಕರೆಸಲಾಗಿ–ಬರಬೇಕೆಂದು ವರ್ತಮಾನವನ್ನು ಕೊಟ್ಟದ್ದಕ್ಕೋಸ್ಕರ, ಪೋದನು–ಹೊರಟುಹೋದನು, ಮತ್ತೆ–ಪುನಃ, ವರುಣನಲೋಕದಿಂದ–ವರುಣನು ರಾಜ್ಯಭಾರಮಾಡುವ ಪ್ರದೇಶದಿಂದ, ಬಂದು–ಐತಂದು, ಮುಳಿದಪನು–ಕುದುರೆಯು ತುಳಿದು ತೋಟವು ಹಾಳಾಯಿತೆಂದು ನನ್ನಮೇಲೆ ಸಿಟ್ಟುಮಾಡಿಕೊಳ್ಳುತ್ತಾನೆ, ಎನುತ–ಎಂದು ನುಡಿಯುತ್ತ, ಹಯದ–ಅಶ್ವದ, ಎಡೆಗೆ–ಸಮಿಪಕ್ಕೆ, ನಡೆತಂದು-ಐತಂದು, ನೋಡಲ್ಕೆ–ಈಕ್ಷಿಸಲು, ಅದರ–ಆ ಹಯದ, ನೆತ್ತಿಯೋಳ್-ಫಾಲಪ್ರದೇಶದಲ್ಲಿ, ಮೆರೆವ–ಹೊಳೆಯತಕ್ಕ, ಪಟ್ಟದ–ಚಿನ್ನದ ರೇಖಿನಲ್ಲಿರತಕ್ಕ, ಲಿಖಿತಮಂ–ಲಿಪಿಯನ್ನು, ಕಂಡು–ಈಕ್ಷಿಸಿ, ಲವನು–ಲವನಾದರೊ, ಓದಿಕೊಳುತಿರ್ದನು–ಓದಿಕೊಳ್ಳುತಲಿದವನಾದನು ‖

ಅ‖ ವಿ‖ ಪೂವಿನ ತೋಟ (ಷ. ತ.) | ೬ ‖

ಟೀ‖ ಉರ್ವಿಯೊಳ್-ಪ್ರಪಂಚದಲ್ಲಿ, ಕೌಸಲೆ-ದಶರಥನ ಪತ್ನಿಯು, ಪಡೆದ–ಹೊಂದಿದ, ಕುವರಂ–ಪುತ್ರನಾದ, ರಾಮನು–ಶ್ರೀ ರಾಮಚಂದ್ರನು, ತಾಂ–ತಾನು, ಓರ್ವನೆ–ಒಬ್ಬನು ಮಾತ್ರವೇ, ವೀರನು–ಪರಾಕ್ರಮಿಯು, ಆತನ–ಆ ಮಹಾರಾಜನ, ಇದು–ಈ ಅಶ್ವವು, ಯಜ್ಞತುರಂಗಂ–ಯಾಗದ ಕುದುರೆಯು, ನಿರ್ವಹಿಸಲಾರ್ಪರು–ಇದನ್ನು ಕಟ್ಟಿ ಗೆಲ್ಲತಕ್ಕವರು, ಆರಾದೊಡಂ–ಯಾರೇ ಆದರೂ, ತಡೆಯಲಿ–ಕಟ್ಟಿಹಾಕಲಿ, ಎಂದು–ಎಂಬತೆರನಾಗಿ, ಇರ್ದ–ಇದ್ದಂಥ, ಲೇಖನವನು–ಬರಹವನ್ನು, ನೋಡಿ–ಈಕ್ಷಿಸಿ, ಗರ್ವಮಂ–ಹೆಚ್ಚಿಕೆಯನ್ನು, ಬಿಡಿಸದಿರ್ದೊಡೆ–ತಗ್ಗಿಸದೆ ಬಿಟ್ಟರೆ, ತನ್ನ–ನನ್ನ, ಮಾತೆಯುಂ–ತಾಯಿಯಾದ ಸೀತೆಯನ್ನು, ಸರ್ವಜನಂ–ಎಲ್ಲರೂ, ಬಂಜೆ–ಹೆಸರುವಾಸಿಯಾದ ಮಕ್ಕಳನ್ನು ಹೊಂದಿಲ್ಲವೆಂಬದಾಗಿ, ಎನ್ನದಿರ್ದಪರೆ–ಹೇಳದಿರುವರೆ, ತನಗೆ–ನನಿಗಾದರೊ, ಉರ್ವ–ಭೂಭಾರವನ್ನು ಹೊರತಕ್ಕ, ಇವು ತೋಳ್ಗಳು–ಈ ಬಾಹುಗಳು, ಏತಕೆ–ಇದ್ದೂ ಪ್ರಯೋಜನವೇನು ? ಎಂದು-ಎಂಬದಾಗಿ, ಸಲೆವಾಸಿಯಂ–ಅಂಗಿಯನ್ನು, ತೊಟ್ಟು - ತೊಟ್ಟುಕೊಂಡವನಾಗಿ, ಲವನು–ಲವನಾದರೊ, ಉರಿದು-ಕಿಡಿಕಿಡಿಯಾಗಿ. ಎದ್ದನು–ಮೇಲಕ್ಕೆದ್ದವನಾದನು ‖

---

ವಾಗಿ ತಿನ್ನಲಾರಂಭಿಸಿತು. ಆ ತೋಟದ ಕಾವಲಿಗಾಗಿ ವಾಲ್ಮೀಕಿಮುನಿಯಿಂದಾಜ್ಞಾಪ್ತನಾದ ಲವನು ಧನುರ್ಧಾರಿಯಾಗಿ ತನ್ನೊಡನಾಡಿಗಳೊಂದಿಗೆ ಆಡುತ್ತಲಿರುವಾಗ ಯಜ್ಞಾಶ್ವವು ತಮ್ಮತೋಟದಲ್ಲಿ ಮೇಯುತ್ತಿರುವುದನ್ನುನೋಡಿ ಜಾಗ್ರತೆಯಾಗಿ ಅಲ್ಲಿಗೆ ಬಂದು ‖ ೫ ‖ ಈ ಕುದುರೆ ಯಾವುದು ? ಇಲ್ಲಿಗೆ ಬರಲು ಕಾರಣವೇನು ? ನಮ್ಮ ಗುರುವಾದ ವಾಲ್ಮೀಕಿ ಮಹಾಮುನಿಯನ್ನು ವರುಣನು ತನ್ನ ಲೋಕಕ್ಕೆ ಬರಬೇಕೆಂದು ಹೇಳಿ ಕಳುಹಿಸಿದ್ದರಿಂದ ಅವರು ಅಲ್ಲಿಗೆ ಹೋಗುವಾಗ ಈ ಉದ್ಯಾನವನ್ನು ಯಾವುದೊಂದು ಬಾಧೆಗೂ ಸಿಕ್ಕಿಸದೆ ನಿರುಪಾಧಿಕವಾಗಿ ಯಾವಾಗಲೂ ಕಾದಿರಬೇಕೆಂದು ನನಿಗೆ ಹೇಳಿ ಹೋದರು. ನಾನು ಎಡೆಬಿಡದೆ ಕಾದಿದ್ದರೂ ಕೂಡ ನನಿಗೆ ಅಗೋಚರವಾಗಿ ಈಗ ಯಾವುದೊ ಕುದುರೆಯು ಬಂದು ಈ ಉದ್ಯಾನದಲ್ಲಿ ಮೇಯುತ್ತಾ ಎಲ್ಲೆಲ್ಲಿಯೂ ತುಳಿದು ಹಾಳುಮಾಡುತ್ತಿದೆಯಲ್ಲಾ ! ಇದನ್ನು ನಮ್ಮಗುರುಗಳು ಬಂದುನೋಡಿದರೆ ನನ್ನಮೇಲೆ ಕೋಪಿಸಿಕೊಳ್ಳದಿರುವರೆ ? ಆದ್ದರಿಂದ ಜಾಗ್ರತೆಯಲ್ಲಿ ಇದನ್ನು ಆಚೆಗೆ ಹೊರಡಿಸಬೇಕೆಂದು ಕುದುರೆಯ ಬಳಿಗೆ ಬರಲಾಗಿ ಅದರ ಹಣೆಯಲ್ಲಿ ಒಂದು ಭಂಗಾರದ ತಗಡು ಕಾಣಿಸಿತು ‖ ೬ ‖ ಲವನು ಸ್ವಲ್ಪ ನಿಧಾನಿಸಿ ನೋಡಿ ಆ ತಗಡಿನಲ್ಲಿ ಬರೆದಿರುವುದ

ಗರ್ವಮಂಬಿಡಿಸದಿರ್ದೊಡೆತನ್ನಮಾತೆಯುಂ । ಸರ್ವಜನಮುಂಬಂಜೆಯೆನದಿರ್ದಪರೆತನ । ಗುರ್ವತೋಳ್ಗಳಿವೇತಕೆಂದುಸಲಿವಾಸಿಯಂತೊಟ್ಟುಲವನುರಿದೆದ್ದನು ‖ ೭ ‖ ತೆಗೆದುತ್ತರೀಯಮಂಮುರಿದುಕುದುರೆಯಗಳಕೆ । ಬಿಗಿದುಕದಳೀದ್ರುಮಕೆಕಟ್ಟಲ್ಕೆಮುನಿಸುತ । ಮಿಗೆನಡುಗಿ ಬೇಡಬೇಡರಸುಗಳವಾಜಿಯಂಬಿಡುಬಡಿವರೆಮ್ಮನೆನಲು ‖ ನಗುತಪಾರ್ವರಮಕ್ಕಳಂಜಿದರೆ ಜಾನಕಿಯ । ಮಗನಿದಕೆಬೆದರುವನೆಪೋಗಿನೀವೆಂದುಲವ । ನಗಡುತನದಿಂದಬಿಲ್ಲಿರುವನೇರಿಸಿತೀಡಿಜೇಗೈದುನಿಂದಿರ್ದನು ‖ ೮ ‖ ಕುದುರೆಗಾವಲಸುಭಟರನಿತರೂಳೊದಗಿಬಂದು ಕದಳೀದ್ರುಮಕೆಕಟ್ಟಿರ್ದ ತುರಗಮಂಕಂಡು । ಸದಮಲಬ್ರಹ್ಮಚಾರಿಗಳನಾ

ಅ‖ ವಿ‖ ಬಂಜೆ-(ತ್ಭ)-ವಂಧ್ಯಾ. ತ್ಸ. ಕುಮಾರಂ, ತ್ಸ. ಕುವರಂ (ತ್ಭ) ‖೭‖

ಟೀ‖ ಉತ್ತರೀಯಮಂ-ಮೈಮೇಲಿದ್ದ ವಸ್ತ್ರವನ್ನು, ತೆಗೆದು-ತೆಗೆದುಕೊಂಡು, ಮುರಿದು-ತಿರುಗಿಸಿಕೊಂಡು (ತಿರುಮುರಿಮಾಡಿಕೊಂಡು) ಗಳಕೆ-ಆ ಯಾಗದ ಕುದುರೆಯ ಕಂಠಕ್ಕೆ, ಬಿಗಿದು- ಬಂಧಿಸಿ, ಕದಳೀದ್ರುಮಕೆ - ಬಾಳೆಮರದತುದಿಗೆ, ಕಟ್ಟಲ್ಕೆ-ಕಟ್ಟಬಿಡಲು, ಮುನಿಸುತರು-ಮುನಿ ಕುವರರು, ಮಿಗೆ-ಹೆಚ್ಚಾಗಿ, ನಡುಗಿ-ನಡುಗುತ್ತ, ಬೇಡಬೇಡ-ಕುದುರೆಯನ್ನು ಕಟ್ಟಿಹಾಕುವ ಕೆಲಸವು ನಿನಗೆ ಬೇಡ, ಅರಸುಗಳ-ರಾಜರುಗಳ, ವಾಜಿಯಂ-ಹಯವನ್ನು, ಬಿಡು-ಬಂಧಿಸದಿರು, ಎಮ್ಮನು-ನಮ್ಮನ್ನು, ಬಡಿವರು-ಹೊಡೆಯುತ್ತಾರೆ, ಎನಲು-ಹೀಗೆಂದು ಮುನಿಕುವರರು ತಿಳಿಸಲು, ನಗುತ-ಮುಗುಳ್ನಗೆಯನ್ನು ಬಿದುತ್ತ, ಪಾರ್ವರ-ವಿಪ್ರರ, ಮಕ್ಕಳು-ಸುತರು, ಅಂಜಿದರೆ-ಹೆದರಿಕೊಂಡರೆ, ಇದಕ್ಕೆ-ಇದಕ್ಕೋಸ್ಕರ, ಜಾನಕಿಯ-ಜನಕನ ಕುವರಿಯ, ಮಗನು-ಪುತ್ರನು, (ಲವನು) ಬೆದರುವನೆ-ಹೆದರಿಕೊಂಡಾನೆ, ನೀವು-ನೀವಾದರೊ, ಪೋಗಿ-ನಡೆಯಿರಿ, ಎಂದು-ಎಂಬತೆರನಾಗಿ, ಆ ಮುನಿಕುವರರಿಗೆ ತಿಳಿಸಿ, ಅಗಡುತನದಿಂದ-ಕಾಠಿಣ್ಯಾತಿಶಯದಿಂದ, ಬಿಲ್ದಿರುವನು-ಧನುಸ್ಸಿನ ಹೆದೆಯನ್ನು, ಏರಿಸಿ-ಕಟ್ಟಿ ಸಿದ್ಧಮಾಡಿಕೊಂಡು, ತೀಡಿ-ಎಳೆದು, ಜೇಗೈದು-ಟಂಕಾರಮಂ ಮಾಡಿ, ನಿಂತು - ನಿಂತುಕೊಂಡು, ಇರ್ದನು-ಇದ್ದವನಾದನು ‖ ೮ ‖

ಟೀ‖ ಕುದುರೆಗಾವಲ-ಕುದುರೆಯನ್ನು ಪಾಲಿಸುವ, ಸುಭಟರು-ವೀರರು, ಒದಗಿಬಂದು-ನೆರೆದು, ಕದಳೀದ್ರುಮಕ್ಕೆ-ಬಾಳೆಯ ಸ್ತಂಭಕ್ಕೆ, ಕಟ್ಟಿದ-ಕಟ್ಟಿಹಾಕಿದ, ತುರಗಮಂ-ಅಶ್ವವನ್ನು, ಕಂಡು-ಈಕ್ಷಿಸಿ, ಸತ್-ಉತ್ತಮವಾದ, ಅಮಲ-ನಿರ್ಮಲರಾದ, ಬ್ರಹ್ಮಚಾರಿಗಳಳು-ಮುನಿವಟುಗಳನ್ನು, ಆರ್ಭಟಿಸಿ-ಗಟ್ಟಿಯಾಗಿ ಕೂಗಿ, ವಾಜಿಯನು-ಹಯವನ್ನು, ಏಕೆಬಿಗಿದಿರಿ-ಏತಕ್ಕೆ ಬಂಧಿಸಿದಿರಿ, ಎನಲು-ಎಂದು ನುಡಿಯಲು, ಬೆದರಿ-ಹೆದರಿಕೊಂಡು, ನಾವು-ನಾವಾದರೊ, ಅಲ್ಲ-ಕುದುರೆಯನ್ನು ಕಟ್ಟಲಿಲ್ಲವು, ಇವಂ-ಈ ಲವನು, ಬೇಡಬೇಡ ಎನೆ-ಬೇಡವೆಂದು ಹೇಳಿದರೂಕೂಡ, ಬಂಧಿಸಿದನು-ಕಟ್ಟಿಹಾಕಿರುವನು, ಎಂದು-ಎಂಬತೆರನಾಗಿ, ಲವನಂ-ಲವನೆಂಬ ಬಾಲಕನನ್ನು, ಕರಾಗ್ರದಿಂ-ಬೆಟ್ಟಿನತುದಿಯಿಂದ, ತೋರಿಸಿದರು-ನೋಡಿಸಿದವರಾದರು, ಅಭಟರು-ಆ ವೀರರು, ಈತಂ-ಇವನು, ತರಳನು-ಹುಡುಗನು, ಅರಿಯದೆ-ತಿಳಿವಳಿಕೆಸಾಲದೆ, ಎಸಗಿದನು-ಕುದುರೆಯನ್ನು ಕ

ನ್ನೆಲ್ಲಾ ಆದ್ಯಂತವಾಗಿ ಓದಿಕೊಂಡನು. ಸುವರ್ಣದ ರೇಖಿನಲ್ಲಿ-ಭೂಲೋಕದೊಳಗೆ ಯಾರಾದರೂ ವೀರರಿದ್ದರೆ ಈ ಕುದುರೆಯನ್ನು ಕಟ್ಟಿ ಉಳಿಸಿಕೊಳ್ಳಲೆಂದೂ, ಪ್ರಪಂಚದಲ್ಲೆಲ್ಲಾ ದಶರಥನುಹಾರಾಯನಿಂದ ಕೌಸಲ್ಯಾದೇವಿಯ ಗರ್ಭಾಂಬುಧಿಯಲ್ಲಿ ಜನಿಸಿದ ಶ್ರೀ ರಾಮನೊಬ್ಬನೇ ವೀರಾಗ್ರಣಿಯೆಂದೂ ಬರೆದಿದ್ದುದನ್ನುಕಂಡು, ಅತಿಯಾದ ರೋಷದಿಂದ ಕಿಡಿಕಿಡಿಯಾಗಿ ತನ್ನಲ್ಲಿ ತಾನೆ, ಆಹಾ ! ರಾಮನ ಅಹಂಕಾರವು ಇನ್ನೆಂಥಾದ್ದೊ? ಇವನ ಗರ್ವಭಂಗವಂ ಮಾಡಿ ಖ್ಯಾತಿಯಂ ಪಡೆಯದಿದ್ದರೆ, ನಾನು ನನ್ನ ತಾಯಿಯ ಹೊಟ್ಟೆಯಲ್ಲಿ ಹುಟ್ಟಿ ಫಲವೇನು, ಪ್ರಪಂಚದ ಜನರೆಲ್ಲರೂ ನನ್ನ ತಾಯಿಯಾದ ಸೀತೆಯನ್ನು ಹೆಸರುವಾಸಿಯಾದ ಮಕ್ಕಳನ್ನು ಹೆರಲಿಲ್ಲವೆಂದು ಅಲೆಗಳೆಯದೆ ಬಿಡುತ್ತಾರೆಯೇ? ಆದ್ದರಿಂದ ಸರ್ವಪ್ರಕಾರದಿಂದಲೂ ಈ ರಾಮನ ಗರ್ವಕ್ಕೆ ತಕ್ಕದ್ದನ್ನು ಮಾಡುವದೇ ಸಿದ್ಧವೆಂದು ಬಗೆದು, ವಾಲ್ಮೀಕಿ ಮುನಿಪತಿಯಿಂದ ಅನುಗ್ರಹಿಸಲ್ಪಟ್ಟದ್ದ ಅಂಗಿಯನ್ನು ತೊಟ್ಟು ಧನುರ್ಧಾರಿಯಾಗಿ ‖೭‖ ತಾನು ಹೊದ್ದುಕೊಂಡಿದ್ದ ಪಂಚೆಯನ್ನು ಹುರಿಮಾಡಿ ಕುದುರೆಯ ಕತ್ತಿಗೆಬಿಗಿದು ಹತ್ತಿರದಲ್ಲಿದ್ದ ಬಾಳೆಯ ಕಂಬದ ಬುಡಕ್ಕೆ ಕಟ್ಟಿದವನಾದನು. ಇದನ್ನು ನೋಡಿದ ಲವನೊಂದಿಗೆ ಆಡುತ್ತಿದ್ದ ಮುನಿವಟುಗಳು ಬಡವಾಡಿಯಾದ ಲವನನ್ನು ನೋಡಿ, ಎಲೈ ಲವನೆ! ರಾಜರ ಕುದುರೆಯನ್ನು ಕಟ್ಟುವ ದುರ್ಯೋಚನೆ ನಿನಗೆ ಬೇಡ, ಅರಸರಿಗೆ ಇದು ತಿಳಿದರೆ ನಿನ್ನನ್ನು ಸುಮ್ಮನೆ ಬಿಟ್ಟಾರೆ, ಎಂದು ಗಡಗಡನೆ ನಡುಗುತ್ತ ಹೇಳುತ್ತಿರುವ ಮುನಿ ಕುವರರನ್ನು ಕುರಿತು ಲವನು ಕೇಳಿ ಮುನಿಪುತ್ರರಿರಾ ! ಬ್ರಾಹ್ಮಣರ ಮಕ್ಕಳಾದ ನೀವು ಕುದುರೆಯನ್ನು ಕಟ್ಟಲು ಹೆದರಿದರೆ ಸೀತೆಯ ಮಕ್ಕಳೂ ಬೆದರತಕ್ಕವರೆಂದು ಬಗೆವಿರಾ ! ನಿಮಗೆ ದಿಗಿಲಾದರೆ ನೀವು ಜಾಗ್ರತೆಯಾಗಿ ನಿಮ್ಮನಿಮ್ಮ ಮನೆಗಳನ್ನು ಸೇರಿಕೊಳ್ಳಿರೆಂದು ನುಡಿದು, ಕಾಠಿಣ್ಯಾತಿಶಯದಿಂದ ಹಿಗ್ಗುತ್ತ ಧನುಸ್ಸಿಗೆ ಕಟ್ಟಿದ್ದ ದಾರವನ್ನು ಆಕರ್ಣಾಂತವಾಗಿ ಸೆಳೆದು ನಿಂತವನಾದನು ‖ ೮ ‖ ಬ್ರಾಹ್ಮಣ ವಟುಗಳು

ರ್ಘಟಿಸಿವಾಜಿಯನೇಕೆಬಿಗಿದಿರೆನಲು ‖ ಬೆದರಿನಾವಲ್ಲಿವಂಬೇಡಬೇಡೆನೆಬಂಧಿ | ಸಿದನೆಂದುಲವನಂಕರಾಗ್ರದಿಂತೋರಿಸಿದ |
ರಥಟರೀತಂತರಳಗರಿಯದೆಸಗಿದನೆಂದುಬಿಡಹೇಳಿಗರ್ಜಿಸಿದರು ‖ ೯ ‖ ವಿಕ್ರಮಮಿದೇಕೆಬಿಡೆನಶ್ವಮಂಮೇಣ್ಬಿಡಲು | ಪಕ್ರ
ಮಿಸಿದವರ್ಗಳಕರವನರಿವೆನೆನಲವರ | ತಿಕ್ರಮಿಸಿವಾಜಿಯಂಬಿಡಿಸಲೈತರಲವರಕೈಗಳಂಕೋಪದಿಂದ ‖ ವಕ್ರಮಿಲ್ಲದೆಕೋ
ಲ್ಗಳಿಂದೆಚ್ಚುಕಡಿದೊಡನೆ | ಶಕ್ರನದ್ರಿಯಮೇಲೆಮಳೆಗರೆವೊಲಾಸೈನ್ಯ | ಚಕ್ರಮಂಮುಸುಕಿದಂವೀರಲವನಾಕ್ಷಣದೊಳೇನೆಂ
ಬೆನದ್ಭುತವನು ‖ ೧೦ ‖ ಬಾಲಕನಮೇಲೆಕವಿದುದುಬಳಿಕಮುಳಿದುಹಯಪಾಲಕಬಲಂಕರಿತುರುಗರಥಪದಾತಿಗಳ | ಜಾಲಕ

---

ಟ್ಟಿದ್ದಾನೆ, ಎಂದು–ಹೀಗೆಂದು ತಿಳಿದುಕೊಂಡು, ಬಿಡಹೇಳಿ–ಕುದುರೆಯನ್ನು ಬಿಟ್ಟುಬಿಡು ಎಂದು ನುಡಿದು, ಗರ್ಜಿಸಿದರು–ಆರ್ಭಟವನ್ನು ಮಾಡಿದರು ‖೯‖

ಟೀ‖ ಅಶ್ವಮಂ-ಹಯವನ್ನು, ಬಿಡೆನು–ಬಿಡತಕ್ಕವನಲ್ಲ. ಇದು ವಿಕ್ರಮಂ-ಈ ಶೌರ್ಯವು, ಏಕೆ - ಏನುಸಾರ್ಥಕವು, ಮೇಣ್ - ಅಲ್ಲದೆ, ಬಿಡಲು ಕುದುರೆಯನ್ನು, ಬಿಡಿಸಲು, ಉಪಕ್ರಮಿಸಿದವರ್ಗಳ–ಉದ್ಯುಕ್ತರಾದವರ, ಕರವನು–ಹಸ್ತವನ್ನು, ಅರಿವೆನು – ಛೇದಿಸುವೆನು, ಎನಲು–ಎಂದು ನುಡಿಯಲು, ಅವರು–ಆ ದೂತರು, ಅತಿಕ್ರಮಿಸಿ–ಅವನ ನುಡಿಗಳನ್ನು ಮೀರಿ, ವಾಜಿಯಂ–ಅಶ್ವವನ್ನು, ಬಿಡಿಸಲು–ಬಿಡಿಸುವುದಕ್ಕೋಸ್ಕರ, ಐತರಲು–ಹತ್ತಿರಕ್ಕೆ ಬರಲು, ಅವರ-ಕುದುರೆಯನ್ನು ಬಿಡಿಸಲು ಬಂದವರ, ಕೈಗಳಂ-ಕರಗಳನ್ನು, ಕೋಪದಿಂದ–ಹೆಚ್ಚಾದ ಆಕ್ರೋಶದಿಂದ, ವಕ್ರಂ–ವ್ಯತ್ಯಸ್ತವು, ಅಲ್ಲದೆ–ಆಗದೆ, ಕೋಲ್ಗಳಿಂದ-ಸರಲ್ಗಳಿಂದ, ಎಚ್ಚು - ಹೊಡದು, ಕಡಿದು–ಛೇದಿಸಿ, ಒಡನೆ - ಕೂಡಲೆ, ಶಕ್ರನು – ದೇವೇಂದ್ರನು, ಅದ್ರಿಯಮೇಲೆ–ಪರ್ವತಗಳ ಮೇಲ್ಗಡೆ, ಮಳೆಗರೆವೊಲು - ಮಳೆಯನ್ನು ಸುರಿಸುವತೆರನಾಗಿ, ಆಸೈನ್ಯಚಕ್ರಮಂ–ಆ ಸೇನಾಸಮುದಾಯವನ್ನು, ವೀರಲವನು–ಶೂರನಾದ ಲವನು, ಆಕ್ಷಣದೊಳು–ಆ ಕಾಲದಲ್ಲಿ, ಮುಸುಕಿದಂ–ಕವಿದುಕೊಂಡನು, ಅದ್ಭುತವನು–ಆಶ್ಚರಿಯನ್ನು, ಏನೆಂಬೆನು–ಏನೆಂದು ನುಡಿಯಲಿ ‖೧೦‖

ಟೀ‖ ಬಳಿಕ–ಕುದುರೆಯನ್ನು ಬಿಡಿಸಲು ಬಂದ ಶೂರರ ಕೈಗಳನ್ನೆಲ್ಲಾ ಕತ್ತರಿಸಿ ಹಿಂದಟ್ಟಿದ ನಂತರ, ಹಯಪಾಲಕಬಲಂ-ಕುದುರೆಯ ಕಾವಲಿನ ದಂಡು, ಮುಳಿದು–ಕೋಪಮಾಡಿಕೊಂಡು, ಬಾಲಕನಮೇಲೆ-ಹುಡುಗನಾದ ಲವನೆಂಬ ಸೀತೆಯ ಮಗನ ಮೇಲೆ, ಕರಿ - ಹಸ್ತಿಗಳು, ತುರಗ–ಅಶ್ವಂಗಳು, ರಥ - ಸ್ಯಂದನಗಳು, ಪದಾತಿಗಳು - ಕಾಲಾಳ್ಗಳು, ಮೊದಲಾದವರ, ಬಲಂಕೆ–ಸಮುದಾಯವು, ಮೇಲೆ ಬಂದೊದಗಿದರೂ, ಆವನು–ಆ ಬಾಲಕನು, ಓರ್ವನು-ಒಬ್ಬನು, ಎನ್ನದೆ-ಎಂದು ಹೆದರದೆ, ಬಾಣ–ಕಣೆಗಳಿಂದಲೂ, ಪರಶು–ಕೊಡಲಿಗಳಿಂದಲೂ, ತೋಮರ–ತೋಮರವೆನ್ನುವ ಆಯುಧದಿಂದಲೂ, ಸುರಗಿಗಳೊಳು–ಸುರಗಿ ಎಂಬವುಗಳಿಂದಲೂ, ಕವಿದುದು–ಆವರಿಸಿಕೊಂಡಿತು. ಕಾಲಕೆ–ಪ್ರಳಯ ಸಮಯಕ್ಕೆ, ಅಖಿಲ–ಸಕಲವಾದ, ಪ್ರಾಣಿಗಳನು–ಜೀವರಾಶಿಗಳನ್ನು, ಐದೆ-ಹತ್ತಿರ ಬಂದರೆ, ಸಂಹರಿಪ-ಕೊಂದುಹಾಕುವ, ಶೂಲಧರನು–ತ್ರಿಶೂಲಿಯು, ಎನೆ-ಎಂಬಂತೆ, ಲವಂ–ಲವನು, ಮುನಿಪನು - ವಾಲ್ಮೀಕಿಮುನಿವರನು, ಇತ್ತ-ದಯಪಾಲಿಸಿದ, ಅಕ್ಷಯ – ಕಡಮೆಯಾಗದಿರತಕ್ಕ, ನಿ

---

ಗಡಗಡನೆ ನಡುಗುತ್ತಿರಲು, ಲವನು ಧನುರ್ಧಾರಿಯಾಗಿ ಸ್ವಲ್ಪವಾದರೂ ಹೆದರಿಕೆಯಿಲ್ಲದೆ ಸಿಂಹದಮರಿಯನ್ನು ಹೋಲುತ್ತ ನಿಂತಿರಲು, ಆ ಕಾಲಕ್ಕೆ ಸರಿಯಾಗಿ ಅಲ್ಲಿಗೆ ಕುದುರೆಯ ಕಾವಲ್ಗಾರರು ಬಂದು, ಕದಳೀದ್ರುಮಕ್ಕೆ ಕುದುರೆಯನ್ನು ಬಿಗಿದಿರುವುದನ್ನು ನೋಡಿ ಕೋಪಗೊಂಡು, ಪಕ್ಕದಲ್ಲಿದ್ದ ಮುನಿವಟುಗಳಂ ಕುರಿತು, ಈ ಕುದುರೆಯನ್ನು ನೀವು ಏತಕ್ಕೆ ಕಟ್ಟದಿರೆಂದು ಗದರಿಸಿ ಕೇಳಿದರು. ಬ್ರಾಹ್ಮಣರ ಬಾಲಕರಾದರೊ, ಹೆದರಿಕೆಯು ಮತ್ತಷ್ಟು ಹೆಚ್ಚಲು, ಕೈಕಾಲ್ಗಳಲ್ಲಿ ಶಕ್ತಿಕುಂದಿದವರಾಗಿ ಮಾತನಾಡಲು ಬಾಯಿಬಾರದೆ ಹೋಗಲು, ಕೊನೆಗೆ ಆ ವೀರರನ್ನು ಕುರಿತು ನಾವು ಈ ಕುದುರೆಯನ್ನು ಕಟ್ಟಲಿಲ್ಲವೆಂದೂ, ಬೇಡವೆಂದರೂ ಕೇಳದೆ ಈ ಹುಡುಗನೇ ಕಟ್ಟಿರುವನೆಂದೂ ಲವನನ್ನು ತೋರಿಸಿದರು, ಆಗ ಆ ಯೋಧರು ಲವನನ್ನು ಕಂಡು ಈ ಹುಡುಗನು ತಿಳುವಳಿಕೆಯಿಲ್ಲದೆ ಇದನ್ನು ಕಟ್ಟಿರುವನೆಂದರಿತು, ಕುದುರೆಯನ್ನು ಬಿಟ್ಟುಬಿಡೆಂದು ಗರ್ಜಿಸಿ ನುಡಿದರು ‖ ೯ ‖ ಲವನಾದರೊ ಈ ವೀರರ ನುಡಿಗಳಂ ಕೇಳಿ, ಅವರನ್ನು ಕುರಿತು, ಕುದುರೆಯ ಆಸೆ ನಿಮಗೇತಕ್ಕೆ? ನಿಮ್ಮ ಸಾಹಸವು ಇಲ್ಲಿ ನಡೆಯುವುದಿಲ್ಲ. ಸುಮ್ಮನೆ ಹೊರಟುಹೋಗಿರಿ, ಬಲವಂತದಿಂದ ಕುದುರೆಯನ್ನು ಯಾರಾದರೂ ಬಿಡಿಸಲುಜ್ಜುಗಿಸಿದರೆ ಅವರ ಕೈಗಳನ್ನೇ ಕತ್ತರಿಸಿ ಹಾಕಿಬಿಡುತ್ತೇನೆಂದು ಹೇಳಿದನು. ಕುದುರೆಯ ಕಾವಲ್ಗಾರರಾದರೋ ಅತಿಕ್ರಮಿಸಿ ಅದನ್ನು ಬಿಡಿಸಲುಪಕ್ರಮಿಸಲಾಗಿ, ಲವನು ಅವರ ಕೈಗಳನ್ನೆಲ್ಲಾ ಕಡಿಯುತ್ತಾ, ಪೂರ್ವದಲ್ಲಿ ದೇವೇಂದ್ರನು ಪರ್ವತಗಳ ರೆಕ್ಕೆಗಳನ್ನು ಲಕ್ಷ್ಯವಿಲ್ಲದೆ ವಜ್ರಾಯುಧದಿಂ ಕತ್ತರಿಸುತ್ತಲಿದ್ದುದನ್ನು ಜ್ಞಾಪಿಸುತ್ತ, ನೋಡುವವರಿಗೆ ಆಶ್ಚರ್ಯವನ್ನುಂಟುಮಾಡುತ್ತ ಹಗೆಗಳ ಪಡೆಯನ್ನೆಲ್ಲಾ ಶರವರ್ಷಗಳಿಂದ ತುಂಬಿಸಿದನು ‖೧೦‖ ಆಗ ಶತ್ರುಸೈನ್ಯದವರು, ಈ ಹುಡುಗನು ಸಾಧಾರಣನಂತೆ ಕಾಣುವುದಿಲ್ಲ

ವನೋರ್ವನೆನ್ನದೆಬಾಣಪರಶುತೋಮರಶಕ್ತಿಸುರಗಿಗಳೊಳು ‖ ಕಾಲಕಖಿಳಪ್ರಾಣಿಗಳನೈದೆಸಂಹರಿಪ | ಶೂಲಧರನೆನಲವಂ ಕೊಲುತಿರ್ದನನಿಬರಂ | ಕೋಲಕಡುಮಳೆಗರೆದುಮುನಿಪಸಿತ್ತಕ್ಷಯನಿಷಂಗಮೆಂರದಿರೆಬೆನ್ನೊಳು ‖ ೧೧ ‖ ಸಂಖ್ಯೆಯಿಲ್ಲದೆ ಮೇಲೆಬೀಳ್ವಕೈದುಗಳೆಲ್ಲ | ಮಂಖಂಡಿಸುತೊಡನೆಮುತ್ತಿದರಿಚತುರಂಗ | ಮಂಖಾತಿಯಿಂದಸಂಹರಿಸಿತೊಂದೊಂದ.ರಿಪು ಬಾಣಕೈದಂಬುಗಳನು ‖ ಪುಂಖಾನುಪುಂಖದಿಂದೆಸೆನಬಾಲಕನೆಸುಗೆ | ಯಿಂಖಿಲಪ್ರಾಯಮಾಗಿರ್ದನಿಜಬಲಜಾಲ | ಮಂ ಖರಾಂತಕನನುಜನೀಕ್ಷಿಸಿಕನಲ್ದೇರಿದಂಮಣಿರಥನನು ‖ ೧೨ ‖ ದುರಿತಗಣಮಿದ್ದಪುದೆಗೌತಮಿಯೊಳಾಳ್ದಂಗೆ | ಪರಮಯೋಗಿಗೆಭವದಬಂಧನಂಬಂದಪುದೆ | ಪರಸೈನ್ಯದುರುಬೆರಘುಕುಲಜರ್ಗೆತೋರಿಪುದೆಕೇಳವನಿಪಾಲತಿಲಕ ‖ ತರಳನಾದೊಡೆಲವಂ

---

ಷಂಗ-ಬಾಣದ ಚೀಲವು, ಬೆನ್ನೊಳು-ತನ್ನ ಬೆನ್ನಿನಲ್ಲಿ, ಮೆರದಿರೆ-ಕಾಂತಿಯುಕ್ತವಾಗಿರಲು, ಕೋಲ-ಸರಲ್ಗಳ. ಕಡು-ತಾಳಲಸಾಧ್ಯವಾದ, ಮಳೆಗರೆದು-ಮಳೆಯನ್ನು ಸುರಿಸಿ, ಅನಿಬರಂ-ಸೇನೆಯೆಲ್ಲವನ್ನೂ, ಕೊಲುತಿರ್ದನು-ಕೊಂದು ಹಾಕುತ್ತಲಿದ್ದನು‖೧೧‖

ಟೀ‖ ಸಂಖ್ಯೆಯಿಲ್ಲದೆ-ಅಸಂಖ್ಯಾತವಾಗಿ, ಮೇಲೆ-ತನ್ನಮೇಲೆ ಬೀಳ್ವ-ಬೀಳತಕ್ಕ, ಕೈದುಗಳೆಲ್ಲಮಂ - ಬಾಣಗಳೆಲ್ಲವನ್ನು, ಖಂಡಿಸುತ-ಛೇದಿಸಿಬಿಡುತ್ತ, ಒಡನೆ-ಕೂಡಲೆ, ಮುತ್ತಿದ - ಕವಿದುಕೊಂಡಿರತಕ್ಕ, ಅರಿ - ಹಗೆಗಳ, ಚತುರ್ಬಲಮಂ-ನಾಲ್ಕುತೆರನಾದ ಸೈನ್ಯವನ್ನು, ಖತಿಯಿಂದ - ಸಿಟ್ಟಿನಿಂದ, ಸಂಹರಿಸುತ - ಕೊಂದುಹಾಕುತ್ತ, ಒಂದೊಂದು-ಒಂದೊಂದಾಗಿ, ಬಿಡುವರಿಪುಬಾಣಕೆ-ವೈರಿಗಳ ಸರಲ್ಗಳಿಗೆ, ಐದಂಬುಗಳನು-ಅಯಿದು ಕಣೆಗಳನ್ನು, ಪುಂಖಾನುಪುಂಖದಿಂದ-ಕ್ರಮಕ್ರಮವಾಗಿ, ಎಸೆವ ಪ್ರಯೋಗಮಾಡುವ, ಬಾಲಕನ - ಅಣುಗನ, ಎಸುಗೆಯಿಂ - ಬಾಣದ ಏಟುಗಳಿಂದ, ಖಿಲಪ್ರಾಯಮಾಗಿ - ಹಾಳಾಗಿ ಹೋದಂತೆ, ಇರ್ದ - ಇದ್ದಂಥ, ನಿಜ - ಸ್ವಕೀಯವಾದ, ಬಲ - ದಳದ, ಜಾಲಮಂ - ಸಮುದಾಯವನ್ನು, ಖರಾಂತಕನ-ಶ್ರೀರಾಮನ, ಅನುಜನು-ಸಯೋದರನಾದ ಶತ್ರುಘ್ನನು, ಈಕ್ಷಿಸಿ-ಅವಲೋಕಿಸಿ-ಕನಲ್ದು-ಸಿಟ್ಟಾಗಿ, ಮಣಿರಥನನು-ರತ್ನಖಚಿತವಾದ ತೇರನ್ನು, ಏರಿದಂ-ಹತ್ತಿದವನಾದನು.

ಅ‖ ವಿ‖ ಖರ - ಖರನೆಂಬರಕ್ಕಸನಿಗೆ, ಅಂತಕನು - ಯಮನು, (ಶ್ರೀರಾಮನು) ಏರಿದಂ - "ಏರು" ಎಂಬುದರ ಭೂತಕಾಲ ‖೧೨‖

ಟೀ‖ ಗೌತಮಿಯೊಳು-ಗೌತಮೀನದಿಯ ತೀರ್ಥದಲ್ಲಿ, ಆಳ್ದಂಗೆ-ಸ್ನಾನಮಾಡಿದವನಿಗೆ, ದುರಿತಗಣಂ-ಪಾಪಸಮುದಾಯವು, ಇರ್ದಪುದೆ-ಇರುತ್ತದೆಯೇ, ಪರಮಶ್ರೇಷ್ಠನಾದ, ಯೋಗಿಗೆ-ತಾಪಸೋತ್ತಮನಿಗೆ, ಭವದಬಂಧನಂ-ಹುಟ್ಟುವುದು, ಸಾಯುವುದು, ಕಷ್ಟಸುಖ ಮೊದಲಾದವುಗಳಿಂದ ಕೂಡಿದ ಸಂಸಾರದ ಕಟ್ಟು. ಬಂದಪುದೆ - ಒದಗುತ್ತದೆಯೇ ಪರಸೈನ್ಯದ-ಹಗೆಗಳ ದಳದ, ಉರುಬೆ-ಆಟೋಪವು, ರಘುಕುಲಜರ್ಗೆ-ರಘುವಂಶದಲ್ಲಿ ಉತ್ಪನ್ನರಾದವರಿಗೆ, ತೋರಿಪುದೆ-ಕಂಡೀತೆ, ಅವನಿಪಾಲತಿಲಕ-ಭೂಕಾಂತನಾದ ಜನಮೇಜಯನೆ! ಕೇಳು-ಲಾಿಸು, ಲವಂ-ಲವನಾದರೊ, ತರಳನಾದೊಡೆ-ಬಾಲನಾದಮಾತ್ರಕ್ಕೆ, ಬೆದರುವನೆ-ಹೆದರಿಕೊಂಡಾನೆ, ನಿಮಿಷದೊಳ್-ಕ್ಷಣಮಾತ್ರದಲ್ಲಿ, ಅನಿತು-ಅಷ್ಟು, ಚತುರಂಗಮಂ-ಸೈನ್ಯವನ್ನೆಲ್ಲಾ, ಪರೆಗೆಡಿಸಿದನು-ಸೀಳಿಕೆಡವಿದನು, ಶತ್ರುಘ್ನನು-ಶತ್ರುಘ್ನನೆಂಬುವನು, ಉರವಣಿಸೆ-ಮೇಲ್ಪಾಯಲು, ಎರಗುವ-ಬರತಕ್ಕ, ಸಿಡಿಲಗರ್ಜನೆಗೆ-ಸಿಡಿಲಧ್ವನಿಗೆ, ಮಲೆವ-ಉಬ್ಬಿಬರುವ, ಮರಿಸಿಂಗದಂತೆ-ಸಿಂಹದ ಮರಿಯಹಾಗೆ. ತಡೆದನು-ಅಡ್ಡಗಿಸಿಬಿಟ್ಟನು ‖೧೩‖

ಟೀ‖ ಒತ್ತಿಬಹ-ಮೇಲೆಮೇಲೆ ನುಗ್ಗಿಬರತಕ್ಕ, ಶತ್ರುಘ್ನನ-ಶತ್ರುಘ್ನನೆಂಬುವನ, ಉರುಬೆಗೆ-ಹೊಯಿಲಿಗೆ, ಲವಂ-ಲವನಾದರೊ, ತನ್ನಚಿತ್ತದೊಳ್-ತನ್ನೆದೆಯಲ್ಲಿ, ಮಾಹೇಶಮಂತ್ರಮಂ-ಈಶ್ವರಸಂಬಂಧದ ಬಾಣವನ್ನು, (ಪಾಶುಪತಾಸ್ತ್ರವನು) ಸ್ಮರಿಸುತ್ತ-ಧ್ಯಾನವಂಮಾಡುತ್ತ, ಮತ್ತೆ-ತಿರುಗಿ, ನಿರ್ಭಯನು-ಭಯರಹಿತನಾದವನು, ಆಗಿ-ಆಗಿಬಿಟ್ಟು, ಮಾರಾಂತಡೆ-ಎದುರಾಗಲು, ಆತನು-ಆ ಶತ್ರುಘ್ನನು, ಎಲವೊ-ಎಲಾ, ನೀಂ-ನೀನಾದರೊ, ಪಸುಳೆ-ಬಾಲಕನು, ನಿನಗೆ-ನಿನಗಾದರೊ, ತೆತ್ತಿಗರು-ತಂದೆತಾಯಿಗಳು, ಆದಾರು - ಯಾರಾಗಿರುವರು ? ಅಕಟ-ಆಹಾ, ಸಾಯದಿರ್-ಮರಣವನ್ನು ಹೊಂದಬೇಡ, ಪೋಗು - ಹೊರಡು,

---

ವೆಂದರಿತು, ಆನೆ, ಕುದುರೆ, ರಥ, ಕಾಲಾಳ್ಗಳಿಂದೊಡಗೂಡಿ ಅನೇಕವಾದ ದಿವ್ಯಾಸ್ತ್ರಗಳಿಂದಲೂ, ಕತ್ತಿ, ಈಟಿ ಮೊದಲಾದವುಗಳಿಂದಲೂ ಕೂಡಿದವರಾಗಿ, ಲವನನ್ನು ದಿಕ್ಕುದಿಕ್ಕಿನಲ್ಲಿಯೂ ಸುತ್ತಿಕೊಂಡು ಬಿಟ್ಟರು. ಈ ರೀತಿಯಲ್ಲಿ ಶತೃಸೈನ್ಯವು ನೆರೆದರೂ ಕೂಡ ಲವನು ಸ್ವಲ್ಪವೂ ಹೆದರಂದೆ ವಾಲ್ಮೀಕಿಮುನಿಯು ಅನುಗ್ರಹಿಸಿದ್ದ ಅಕ್ಷಯಬಾಣದಿಂದ ತುಂಬಿದ ಬತ್ತಳಿಕೆಯನ್ನು ಬೆನ್ನಿಗೆ ಕಟ್ಟಿಕೊಂಡು ಸರಲಮಳೆಯಂ ಕರೆಯುತ್ತ, ಪ್ರಳಯಕಾಲದ ರುದ್ರನಂತೆ ಶತ್ರುಬಲವನ್ನು ಯಮಲೋಕಕ್ಕೆ ಕಳುಹಿಸುತ್ತಲೂ ‖ ೧೧ ‖ ತನ್ನಮೇಲೆ ಬರತಕ್ಕ ಬಾಣಗಳನ್ನು ದಾರಿಯಲ್ಲಿಯೇ ಖಂಡಿಸಿ ಹಗೆಗಳು ಒಂದು ಬಾಣವನ್ನು ಬಿಟ್ಟರೆ ಐದು ಕಣೆಗಳಿಂದ ಅದರ ವೇಗವನ್ನು ಅಡಗಿಸುತ್ತಲೂ ವೈರಿಗಳ ಪಡೆಯನ್ನೆಲ್ಲ ನಿರ್ಮೂಲಮಾಡುತ್ತಲೂ ಇರುವುದನ್ನು ರಾಮಾ

ಬೆದರುವನೆನಿಮಿಷದೊಳ್ಪರೆಗಡಿದನನಿತುಚತುರಂಗಮಂ | ಶತ್ರುಘ್ನನುರವಣಿಸೆತಡೆದನೆಂಗುವಸಿಡಿಲಗರ್ಜನೆಗೆ | ಮಲೆವಮರಿಸಿಂಗದಂತೆ ‖ ೧೩ ‖ ಬಿತ್ತಿಬಹಶತ್ರುಘ್ನನುರುಬೆಗೆಲವಂತನ್ನ | ಚಿತ್ತದೊಳ್ಮಾಹೇಶಮಂತ್ರಮಂಸ್ಮರಿಸುತ್ತ | ಮತ್ತೆನಿರ್ಭಯನಾಗಿಮಾರಾಂತಡಾತನೆಲವೇ ಪೊನೀಂಪಸುಳೆನಿನಗೆ ‖ ತೆತ್ತಿಗರದಾರಕಟಸಾಯದಿರ್ಪೋಗೆನುತ | ಹತ್ತುಶರದಿಂದೆಚ್ಚಡವನಬಾಣಂಗಳಂ | ಕತ್ತರಿಸಿಕೂಡೆಭರತಾನುಜನಕಾರ್ಮುಕದಹೆದೆಯನಿಕ್ಕಡಿಗೈದನು ‖೧೪‖ ತರಳನಪರಾಕ್ರಮಕೆಮೆಚ್ಚಿದಂ ಮತ್ತೊಂದು | ತಿರುವನಳವಡಿಸಿದಂಕಾರ್ಮುಕಕೆಶತ್ರುಘ್ನ | ನಿರದೆಕಣೆಮೂರರಿಂಬಾಲಕನಪಣೆಯನೆಚ್ಚಡೆನಗುತಪರಿಮಳಿಸಿದ ‖ ವಿರಹಿಗಳನಂಜಿಸುವಪೂಗೋಲ್ಗಳಾಯ್ತುನಿ | ನ್ನುರುವಣೆಯಬಾಣಂಗಳೆನುತಭರತಾನುಜನ | ತುರಗಸಾರಥಿವರೂಥಧ್ವಜಶರಾಸನಂಗಳನವಂತಡೆಗಡಿದನು ‖೧೫‖ ಕೋಪದಿಂಪೊಸರಥಕಡರ್ದುಶತ್ರುಘ್ನನುರು | ಚಾಪಮಂಕೊಂಡುದಿವ್ಯಾಸ್ತ್ರದಿಂದ

---

ಎನುತ–ಎಂದು ನುಡಿಯುತ್ತ, ಹತ್ತುಶರದಿಂದ–ಹತ್ತು ಕಣೆಗಳಿಂದ, ಎಚ್ಚಡೆ–ಪ್ರಯೋಗವಂ ಮಾಡಲು, ಅವನ–ಆ ಶತ್ರುಘ್ನನ, ಬಾಣಂಗಳಂ–ಕೋಲ್ಗಳನ್ನು, ಕತ್ತರಿಸಿ–ಕಡಿದು ಹಾಕಿ, ಕೂಡೆ–ಒಡನೆಯೇ, ಭರತಾನುಜನ–ಭರತನಿಗೆ ಸಹೋದರನಾದ ಶತ್ರುಘ್ನನ, ಕಾರ್ಮುಕದ–ಬಿಲ್ಲಿನ, ಹೆದೆಯನು–ಹುರಿಯನ್ನು, ಇಕ್ಕಡಿಗೈದನು–ಎರಡು ಭಾಗವಾಗಿ ಕತ್ತರಿಸಿಬಿಟ್ಟನು ‖೧೪‖

ಟೀ‖ ಶತ್ರುಘ್ನನು–ಶತ್ರುಘ್ನನೆಂಬ ರಾಮಾನುಜನು, ತರಳನ–ಹುಡುಗನ, ಪರಾಕ್ರಮಕೆ–ಶೌರ್ಯಕ್ಕೆ, ಮೆಚ್ಚಿದಂ–ಸಮ್ಮತಿಸಿದವನಾದನು, ಮತ್ತೊಂದು ತಿರುವನು–ಬೇರೊಂದು ದಾರವನ್ನು, ಕಾರ್ಮುಕಕ್ಕೆ–ಧನುಸ್ಸಿಗೆ, ಅಳವಡಿಸಿದಂ–ಸೇರಿಸಿದನು, ಇರದೆ–ಸುಮ್ಮನಿರದೆ, ಕಣೆ ಮೂರರಿಂ–ಮೂರು ಸರಲ್ಗಳಿಂದ, ಬಾಲಕನ–ಹಸುಳೆಯಾದ ಲವನ, ಫಣೆಯನು–ಹಣೆಯ ಮೇಲೆ, ಎಚ್ಚಡೆ–ಬಾಣಗಳನ್ನು ಬಿಡಲಾಗಿ, ನಗುತ–ಮುಗುಳ್ನಗೆಯನ್ನೈದುತ್ತ, ನಿನ್ನ–ನಿನ್ನ ಸಂಬಂಧವಾದ, ಉರವಣೆಯ–ಅತಿ ಕಠಿಣವಾದ, ಬಾಣಂಗಳು–ಕಣೆಗಳು, ಪರಿಮಳಿಸಿದ–ಸುವಾಸನೆಯಿಂದ ಕೂಡಿದ, ವಿರಹಿಗಳನು–ಕಾಮಾತುರರನ್ನು, ಅಂಜಿಸುವ–ಹೆದರಿಸತಕ್ಕ, ಪೂಗೋಲ್ಗಳು–ಹೂವಿನ ಬಾಣಗಳು, ಆಯ್ತು–ಆಗಿ ಹೋಯಿತು, ಎನುತ–ಎಂದು ನುಡಿಯುತ್ತ, ಭರತಾನುಜನ–ಭರತನ ತಮ್ಮನಾದ ಶತ್ರುಘ್ನ, ತುರಗ–ಹಯಂಗಳು, ಸಾರಥಿ–ರಥವನ್ನು ನಡೆಯಿಸತಕ್ಕವರು, ವರೂಥ–ರಥವು, ಧ್ವಜ–ಧ್ವಜ ಪಟವು, ಶರಾಸನಂಗಳನು–ಧನುಸ್ಸೆ ಮೊದಲಾದುವನ್ನು, ಆವಂ–ಆ ಲವನೆಂಬ ಬಾಲನು, ತಡೆಗಡಿದನು–ಛಿದ್ರಛಿದ್ರವಾಗಿ ಕತ್ತರಿಸಿದನು,

ಅ‖ ವಿ‖ ಪೂಗೋಲ್ಗಳ್ (ಷ. ತ. ಸ. ವ. ತ್ತು ಕನ್ನಡ ವ್ಯಂಜನಸಂಧಿ) ಶರ–ಬಾಣಗಳಿಗೆ, ಆಸನ–ನೆಲೆಯಾದದ್ದು (ಬ. ಸ.) ‖೧೫‖

ಟೀ‖ ಶತ್ರುಘ್ನಂ – ಭರತಾನುಜನಾದರೊ, ಕೋಪದಿಂ – ಕೋಪಾತಿಶಯದಿಂದ, ಪೊಸರಥಕೆ – ಹೊಸದಾಗಿರುವ

---

ನುಜನಾದ ಶತ್ರುಘ್ನನು ನೋಡಿ ಕೋಪಾವಿಷ್ಟನಾಗಿ, ನವರತ್ನ ಖಚಿತನಾಗಿಯೂ, ಲವನನ್ನು ಹೆದರಿಸಲು ಹೊರಟನು. ಕೇಳೈ ಜನಮೇಜಯ ಮಹೀಪಾಲನೇ! ಗೋದಾವರಿಯ ಸಲಿಲದಲ್ಲಿ ಮಿಂದವನಿಗೆ ಪಾಪಶೇಷವಿರುವುದು ಅಸಂಭವವಾಗಿರುವಂತೆಯೂ ಮಹಾ ಯೋಗಿಷ್ಠನಿಗೆ ಸಂಸಾರ ಕಷ್ಟಗಳು ಬಂದೊದಗುವುದು ಅಸದಳವಲ್ಲವೆ?, ರಘುಕುಲದಲ್ಲಿ ಹುಟ್ಟಿದವರಿಗೆ ಶತ್ರುಬಾಧೆಯು ಹೇಗೆ ಸಂಬಂಧಿಸೀತು? ಲವನು ಹುಡುಗನಾದ ಮಾತ್ರಕ್ಕೆ ವಂಶವು ಸಾಧಾರಣವಾದದ್ದೇ, ಕ್ಷಣ ಮಾತ್ರದಲ್ಲಿ ಶತ್ರುಸೈನ್ಯದ ಹೆಸರನ್ನು ಕೆಡಿಸಿ, ತನ್ನೆದುರಿಗೆ ಕೋಪಾಟೋಪದಿಂದ ಬರುತ್ತಿರುವ ಅಸಹಾಯಶೂರನಾದ ಶತ್ರುಘ್ನನನ್ನು, ಮೇಘಗರ್ಜನೆಗೆ ಕಿವಿಗೊಟ್ಟು ತನ್ನಾರ್ಭಟವನ್ನು ಹೆಚ್ಚಿಸುವ ಸಿಂಹದ ಮರಿಯಂತೆ, ಸಿಂಹನಾದವನ್ನು ಮಾಡಿಕೊಂಡು ಹೋಗಿ ತಡೆದು ‖ ೧೩ ‖ ತನ್ನ ಮನದಲ್ಲಿ ಪಾಶುಪತಾಸ್ತ್ರಕ್ಕಾಗಿ ಶಿವನನ್ನು ಅನೇಕ ಪ್ರಕಾರವಾಗಿ ಸ್ತುತಿಸುತ್ತ ಹೆದರದೆ ನಿಂತಿರುವುದನ್ನು ಶತ್ರುಘ್ನನು ಕಂಡು, ನೀನು ಹುಡುಗನು, ನಿನ್ನನ್ನು ಪಡೆದವರು ಯಾರು? ಅನ್ಯಾಯವಾಗಿ ಸಾವಿಗೆ ಗುರಿಯಾಗಬೇಡ, ತಡ ಮಾಡದೆ ಹೊರಟು ಹೋಗೆಂದು ನುಡಿಯುತ್ತ, ಹತ್ತು ಬಾಣಗಳನ್ನು ತೆಗೆದುಕೊಂಡು ಲವನ ಮೇಲೆ ಬಿಡಲು, ಬಾಲಕನಾದ ಲವನು ಆ ಕಣೆಗಳನ್ನೆಲ್ಲಾ ದಾರಿಯಲ್ಲಿಯೇ ಕಡಿದು, ಶತ್ರುಘ್ನನ ಬಿಲ್ಲನ್ನು ಎರಡು ಭಾಗವಾಗಿ ಕತ್ತರಿಸಿ ಬಿಟ್ಟನು ‖೧೪‖ ಈ ರೀತಿಯಲ್ಲಿ ಶೌರ್ಯಾತಿಶಯವಂ ತೋರಿಸುತ್ತಲಿರುವ ಈ ಬಾಲಕನ ಸಾಹಸಕ್ಕೆ ಶತ್ರುಘ್ನನು ಮೆಚ್ಚಿ, ಮೂರು ಬಾಣಗಳನ್ನು ತೆಗೆದುಕೊಂಡು ಬಾಲಕನ ಮೇಲೆ ಬಿಡಲು, ಲವನು ಅದನ್ನೂ ಖಂಡಿಸಿ, ವೈರಿಯನ್ನು ಕುರಿತು, ವಿರಹವೇದನೆಯನ್ನು ತಾಳುತ್ತಲಿರುವವರಿಗೆ ತಗಲುವ ನಿನ್ನಂಬುಗಳು ನನ್ನನ್ನು ಏನು ಮಾಡಾವು? ಎಂದು ಹಾಸ್ಯಮಾಡುತ್ತ, ಅವನ ಚತುರಂಗ ಬಲವನ್ನು ಕತ್ತರಿಸಿ ಕೆಡವುತ್ತಿರುವುದನ್ನು ಶತ್ರುಘ್ನನು ನೋಡಿ ‖ ೧೫ ‖ ಹೊಸದಾದ ಬೇರೊಂದು ರಥದಲ್ಲಿ ಕುಳಿತು, ದೊಡ್ಡದಾದ ಧನುಸ್ಸಿಗೆ ಉತ್ತಮಾಸ್ತ್ರವೊಂದನ್ನು ಸೇರಿಸಿಕೊಂಡು ಬರುತ್ತಿರುವುದಂ ಕಂಡು ಸಲ್ಪಹೊತ್ತು

ಸುತಬರ | ಲಾಪಥವೊಳೆಣಿಕೆಗೈದಣ್ಣನಂಮಾತೆಯುಂನೆನೆದುಮನದೊಳ್ಮರುಗುತ || ಆಪಸುಳೆಮತ್ತೆ ಕಡುಧೈರ್ಯಮಂತವೆ
ತಾಳ್ದಿ | ನೋಪಮದೊಳೈದುವಪಗೆಯಶರನನೆಡೆಯೊಳ್ಪ್ರ | ತಾಪದಿಂಕತ್ತರಿಸಿಕೆಡಹಲ್ಕೆಬಯಲಾಯ್ತು ಕೂಟಸಾಕ್ಷಿಯ
ಸಿರಿಯೊಲು || ೧೬ || ವಿಸ್ಮಯಾನ್ವಿತನಾದನಂದುಶತ್ರುಘ್ನನಾ | ಕಸ್ಮಿಕದಶಿಶುವಿನಪರಾಕ್ರಮಕೆಬಳಿಕವಿಲ | ಯಸ್ಮ
ರಾಂತಕನಫಣೆಗಣ್ಣಿಂದಪೊರಮಡುವದಳ್ಳುರಿಯತೆರದೊಳೆಸೆವ || ರಶ್ಮಿಗಳನುಗುಳ್ವಮೋಘದಬಾಣಮಂಪೂಡು | ತಸ್ಮದಿಷು
ಘಾತಮಂನೋಡೆನುತೆಸಲ್ಕೆಲವನುಂ | ದಸ್ಮಿತದೊಳಾಸರಳನೆಚ್ಚುಲವನೆಡೆಯೊಳಿಕ್ಕಡಿಗೈದನೇವೇಳ್ವೆನು || ೧೭ || ಅರಸಕೇಳಾ

---

ಮತ್ತೊಂದು ರಥಕ್ಕೆ, ಅಡರ್ದ-ಹತ್ತಿ, ಉರುಚಾಪಮಂ-ದೊಡ್ಡದಾಗಿರುವ ಧನುಸ್ಸನ್ನು, ಕೊಂಡು-ತೆಗೆದುಕೊಂಡು, ದಿವ್ಯಾಸ್ತ್ರದಿಂದ-ಉತ್ತಮವಾದ ದೇವತಾಸ್ತ್ರದಿಂದ, ಎಸುತ-ಬಾಣವನ್ನು ಪ್ರಯೋಗಿಸುತ್ತ, ಬರಲು-ಬರಲಾಗಿ, ಆಪಥದೊಳ್-ಆ ಹಾದಿಯಲ್ಲಿ, ಎಣಿಕೆಗೈದು-ಆಲೋಚಿಸಿ, ಅಣ್ಣನಂ-ತನ್ನಗ್ರಜನಾದ ಕುಶನನ್ನೂ, ಮಾತೆಯುಂ - ತಾಯಿಯಾದ ಸೀತಾದೇವಿಯನ್ನೂ, ನೆನೆದು-ಸ್ಮರಣೆಮಾಡಿಕೊಂಡು, ಮನದೊಳ್-ಹೃದಯದಲ್ಲಿ, ಮರುಗುತ ದುಃಖಪಡುತ್ತ, ಮತ್ತೆ-ಪುನಃ, ಆಪಸುಳೆ-ಆ ಹುಡುಗನು, ತವೆ-ಹೆಚ್ಚಾಗಿ, ಧೈರ್ಯಮಂತಾಳ್ದು - ಧೈರ್ಯವನ್ನವಲಂಬಿಸಿ, ಇನೋಪಮದೊಳು - ರವಿಯಹಾಗೆ, ಐದುವ-ಸಮೀಪಸ್ಥವಾಗುವ, ಪಗೆಯ)ವೈರಿಯಾದ ಶತ್ರುಘ್ನನ, ಶರವನು-ಅಲಗನ್ನು, ಎಡೆಯೊಳ್-ಹತ್ತಿರದಲ್ಲಿಯೇ, ಪ್ರತಾಪದಿಂ-ಶೌರ್ಯದಿಂದ, ಕತ್ತರಿಸಿ-ಕಡಿದುಹಾಕಿ, ಕೆಡಹಲ್ಕೆ-ನೆಲದಮೇಲೆ ಉರುಳಿಸಲು, ಕೂಟಸಾಕ್ಷಿಯ-ಸುಳ್ಳುಸಾಕ್ಷಿಯನ್ನಾಡತಕ್ಕವನ, ಸಿರಿಯೊಲು-ಐಶ್ವರ್ಯದ ಹಾಗೆ, ಬಯಲಾಯ್ತು-ಭಂಗವನ್ನೈದಿತು.

ಅ|| ವಿ|| ದಿವ್ಯಾಸ್ತ್ರ (ಸ. ದೀ) ಇನೋಪಮ (ಗುಣಸಂಧಿ) ||೧೬||

ಟೀ|| ಅಂದು-ಆ ಸಮಯದಲ್ಲಿ, ಶತ್ರುಘ್ನನು-ಶತ್ರುಘ್ನನಾದರೊ, ಆಕಸ್ಮಿಕದ-ಹಟಾತ್ತಾಗಿ ಒದಗಿದ, ಶಿಶುವಿನ-ಹುಡುಗನಾದ ಲವನ, ಪರಾಕ್ರಮಕ್ಕೆ-ಸಾಹಸಕ್ಕೆ, ವಿಸ್ಮಯಾನ್ವಿತನು-ಆಶ್ಚರಿಯಿಂದ ಕೂಡಿದವನು, ಆದನು-ಆಗಿಹೋದನು, ಬಳಿಕ-ಆಮೇಲೆ, ವಿಲಯ-ನಾಶವಾಗತಕ್ಕ ಕಾಲದ, ಸ್ಮರಾಂತಕನ-ಪರಮೇಶ್ವರನ, ಫಣೆಗಣ್ಣಿಂದ-ಫಾಲನೇತ್ರದಿಂದ, ಪೊರಮಡುವ-ಹೊರಡತಕ್ಕ, ದಳ್ಳುರಿಯ-ದೊಡ್ಡ ಉರಿಯ, ತೆರದೊಳು-ಬಗೆಯಿಂದ, ಎಸೆವ-ಹೊಳೆಯುವ, ರಶ್ಮಿಗಳನು-ಕರಗಳನ್ನು, (ಕಿರಣಂಗಳನು), ಉಗುಳ್ವ-ಹೊರಗೆ ಬಿಸುಡುತ್ತಲಿರತಕ್ಕ, ಅಮೋಘ-ಅತಿಶಯವಾದ, ಬಾಣಮಂ-ಅಲಗನ್ನು, ಪೂಡುತ-ಸೇರಿಸುತ್ತ, ಅಸ್ಮತ್-ನಮ್ಮ ಸಂಬಂಧವಾದ, ಇಷುಘಾತಮಂ - ಕಣೆಯ ಏಟನ್ನು, ನೋಡು - ಈಕ್ಷಿಸು, ಎನುತ-ಎಂದು ನುಡಿಯುತ್ತ, ಎಸಲ್ಕೆ-ಪ್ರಯೋಗವಂಮಾಡಲು, ಲವನು-ಲವನಾದರೊ, ಮಂದಸ್ಮಿತದೊಳು-ಮುಗುಳ್ನಗೆಯಿಂದ, ಆ ಸರಳನು-ಆ ಕಣೆಯನ್ನು, ಎಚ್ಚು-ತನ್ನಲಗಿನಿಂದ ಹೊಡೆದು, ಎಡೆಯೊಳ್-ಮಧ್ಯಮಾರ್ಗದಲ್ಲಿಯೆ, ಇಕ್ಕಡಿಗೈದನು-ಎರಡು ತುಂಡಾಗಿ ಭಾಗಿಸಿದನು, ಏವೇಳ್ವೆನು-ಏನೆಂದು ನುಡಿಯಲಿ.

ಅ|| ವಿ|| ಸ್ಮರಾಂತ+ಸ್ಮರ=ಮನ್ಮಥನಿಗೆ, ಅಂತ - ಯಮನಾದವನು (ಷ. ತ. ಮತ್ತು ಸ. ದೀ. ಸಂ) ದಳ್ಳುರಿ (ವಿ. ಪೂ.) ||೧೭||

ಟೀ|| ಅರಸ-ಎಲೈ ಜನಮೇಜಯನೆ, ಕೇಳು-ಲಾಲಿಸು, ಆಶರದೊಳು-ಶತ್ರುಘ್ನನು ಬಿಟ್ಟ ಬಾಣದಲ್ಲಿ, ಅರ್ಧಂ-ಹಿಂದುಗಡೆಯ ಅರ್ಧವು, ಅವನಿಗೆ-ಭೂಮಿಯಮೇಲೆ, ಕೆಡೆದುದು-ಬಿದ್ದುಹೋಯಿತು, ಇರದೆ-ಸುಮ್ಮನಿರದೆ, ಮೇಲ್ವಾಯ್ದು-ಮೇಲೆಮೇಲೆ ಬರುವ, ಅರ್ಧಂ-ಮುಂದುಗಡೆಯ ಮತ್ತರ್ಧವು, ಲವನ-ಲವನೆಂಬ ಪಸುಳೆಯ, ಕಾರ್ಮುಕವನು-ಧನುಸ್ಸನ್ನು, ಅರಿದುಕೊಂಡು-ಕತ್ತರಿಸಿಕೊಂಡು, ಎದೆಯನು - ಮರ್ಮಸ್ಥಳವನ್ನು, ಉಚ್ಚಳಿಸೆ-ಕತ್ತರಿಸಲು, ಪಸುಳೆ - ಲವನೆಂಬ ಹುಡುಗನು,

---

ತ್ತು ತನ್ನ ತಾಯಿಯನ್ನು, ಕುಶನನ್ನೂ ಸ್ಮರಿಸಿಕೊಂಡು, ಅನಂತರ ಮನಸ್ಸಿನಲ್ಲಿ ಕಡುಧೈರ್ಯವಂ ತಂದುಕೊಂಡು, ಸೂರ್ಯತೇಜಸ್ಸನ್ನು ತಿರಸ್ಕರಿಸುತ್ತಲಿರುವ, ಶತ್ರುವಿನ ಬಾಣಕ್ಕೆದುರಾಗಿ, ಅದನ್ನು ನಿರ್ಮೂಲವಮಾಡಿಬಿಟ್ಟನು ||೧೬|| ಇದನ್ನು ಶತ್ರುಘ್ನನು ನೋಡಿ ಪರಮಾಶ್ಚರ್ಯವನ್ನೈದಿ. ಆಹಾ! ಈ ಹುಡುಗನ ಸಾಹಸವು ಬಹು ಅಸಾಧ್ಯವಾದದ್ದು. ಇವನು ಯಾರೋ ಕಾಣೆನು. ಒಳ್ಳೇದು ಇರಲಿ ಎಂದು ತನ್ನ ಮನದಲ್ಲಿ ಅಂದುಕೊಳ್ಳುತ್ತ ಪ್ರಳಯಕಾಲದ ರುದ್ರನ ಫಾಲನೇತ್ರದಂತೆ ಪ್ರಕಾಶಮಾನವಾದ ಒಂದು ಕಣೆಯನ್ನು ಬಿಲ್ಲಿನೊಳಿಟ್ಟು ಲವನಮೇಲೆ ಬಿಟ್ಟನು. ಆ ಕ್ರೂರಶರಲು ಲವನ ಬಳಿಗೆ ಬರುತ್ತಿರಲು ಅದನ್ನೂ ದಾರಿಯಲ್ಲಿಯೇ ಖಂಡಿಸಿ ಮುಗುಳ್ನಗೆಯಿಂದಿರುತಿದ್ದನು ||೧೭|| ಎಲೈ ಜನಮೇಜಯನೇ ಕೇಳು, ಶತ್ರುಘ್ನನ ಕ್ರೂರತರವಾದ ಬಾಣವನ್ನು ದಾರಿಯಲ್ಲಿಯೇ ಲವನು ಖಂಡಿಸಲು, ಅದರ ಅರ್ಧಭಾಗವು ನೆಲದಲ್ಲಿಯೇ ಬಿದ್ದು ಹೋಯಿತು. ಮತ್ತರ್ಧಭಾಗವಾದರೋ ಗಗನಮಾರ್ಗವನ್ನೈದಿ ಲವನ ಮೇಲೆ ನುಗ್ಗಿ, ಅವನ ಎದೆಯನ್ನು ಚುಚ್ಚಲಾಗಿ, ಆ ಬಾಲಕನು ಮೂ

ಶರದೊಳಿರ್ದಮುನಿಗೆಕೆಡೆದು । ದಿರದೆಮೇಲ್ವಾಯ್ದರ್ಧಮಿಾಲವನಕಾರ್ಮುಕನ । ನರಿದುಕೊಂಡೆದೆಯನುಚ್ಚಳಿಸೆ ಮೈಮ
ರದೊರಗಿದಂ ಪಸುಳೆಮೂರ್ಛೆಯಿಂದ ॥ ಹರುಷದಿಂದಾರ್ದುಳಿದುದರಿಬಲಂನಡೆತಂದು । ಕರುಣದಿಂತರಳನಂನೋಡಿರಾಮಾ
ಕೃತಿಯೊ । ಲಿರೆಮೋಹದಿಂತನ್ನ ರಥದಮೇಲಿರಿಸಿಕೊಂಡೈದಿದಂಶತ್ರುಘ್ನನು ॥ ೧೮ ॥ ಕದಳಿಯೊಳ್ಕಟ್ಟಿರ್ದ ಕುದುರೆಯಂಬಿ
ಡಿಸಿನಗರದಕಡೆಗೆಪಡೆವೆರಸಿತಿರುಗಿದಂ ಶತ್ರುಘ್ನನು । ದಧಿಘೋಷದೊಳಿತ್ತಲೋಡಿದರ್ತಾಪಸವಟುಗಳವನಿಸುತೆಯಪೊರೆಗೆ ॥
ಕದನದೊಳ್ನಡೆದವೃತ್ತಾಂತಮಂಪೇಳಲ್ಕೆ । ರುದಿತದಿಂಕೈವೆರಳ್ಗಳನೊತ್ತಿಕೊಳುತೆನಿಜ । ಸದನಮಂಪೊರಮಟ್ಟುಹಲುಬಿ
ದಳ್ಸುತನಗುಣಶೀಲರೂಪುಗಳನೆಣಿಸಿ ॥ ೧೯ ॥ ಒಸರಿದವುಕಂಬನಿಗಳಂಗಲತೆಕಂಪಿಸಿತು । ಪೊಸೆದಳೊಡಲಂಕೂಡೆಕೂಡೆನು

---

ಮೂರ್ಛೆಯಿಂದ-ಸ್ಮೃತಿತಪ್ಪಿದ್ದರಿಂದ, ಮೈಮರೆತು-ತನ್ನದೇಹವನ್ನೆ ಮರೆತು, ಒರಗಿದಂ-ಭೂಮಿಯಮೇಲೆ ಬಿದ್ದನು, ಅರಿಬಲಂ-ವೈರಿಗಳ ಪಡೆಯು, ಹರ್ಷದಿಂದ-ಆನಂದದಿಂದ, ಆರ್ದುಘರ್ಜಿಸಿ, ಉಳಿದುದು-ನಿಂತುಬಿಟ್ಟಿತು, ಶತ್ರುಜ್ಞನು-ಶತ್ರುಘ್ನನಾದರೊ, ನಡೆತಂದು-ಲವನಬಳಿಗೆ ಬಂದು, ಕರುಣದಿಂ-ವಿಶ್ವಾಸದಿಂದ, ತರಳನಂ-ಮಗುವಾದ ಲವನನ್ನು ಕಂಡು, ರಾಮಾಕೃತಿಯವೊಲ್-ರಾಮನ ಆಕಾರದಂತೆಯೇ, ಇರೆ-ಇರಲಾಗಿ, ಮೋಹದಿಂ-ಪ್ರೀತಿಯಿಂದ, ತನ್ನ-ಸ್ವಕೀಯನಾದ, ರಥದಮೇಲೆ-ತೇರಿನಮೇಲೆ, ಇರಿಸಿಕೊಂಡು-ಇರಿಸಿಕೊಂಡವನಾಗಿ, ಐದಿದಂ-ಮುಂದೆ ನಡೆದವನಾದನು. ॥ ೧೮ ॥

ಟೀ॥ ಶತ್ರುಘ್ನನು-ಶತ್ರುಘ್ನನಾದರೋ, ಕದಳಿಯೊಳು - ಬಾಳೆಯಮರದ ಬುಡಕ್ಕೆ, ಕಟ್ಟಿರ್ದ-ಕಟ್ಟಿಹಾಕಿದಂಥ, ಕುದುರೆಯಂ-ತುರುಗವನ್ನು, ಬಿಡಿಸಿ-ಬಿಚ್ಚಿಸಿಬಿಟ್ಟು, ಪಡೆವೆರಸಿ-ದಳದಿಂದಕೂಡಿ, ನಗರದಕಡೆಗೆ-ಪಟ್ಟಣದ ಕಡೆಗೆ, ತಿರುಗಿದಂ-ಹೊರಟವನಾದನು, ಇತ್ತ-ವಾಲ್ಮೀಕಿ ಆಶ್ರಮದ ಭಾಗದಲ್ಲಾದರೊ, ಉದದಿಘೋಷದೊಳು-ಕಡಲರಭಸದಂತೆ, ತಾಪಸವಟುಗಳು-ಋಷಿಕುಮಾರರು, ಅವನಿಸುತೆಪೊರೆಗೆ-ಸೀತೆಯಿದ್ದೆಡೆಗೆ, ಓಡಿದರು-ಓಡಿಹೋದರು, ಕದನದೊಳ್ - ರಣದಲ್ಲಿ, ನಡೆದ-ನಡೆದಂಥ, ವೃತ್ತಾಂತಮಂ-ವರ್ತಮಾನವನ್ನೆಲ್ಲಾ, ಪೇಳಲ್ಕೆ-ಉಸುರಲು, ರುದಿತದಿಂ-ಅಳುವಿಕೆಯಿಂದ, ಕೈವೆರಳ್ಗಳನು-ಕೈಬೆಟ್ಟುಗಳನ್ನು, ಒತ್ತಿಕೊಳುತ-ಹಿಸಿಕಿಕೊಳ್ಳುತ್ತ, ನಿಜಸದನದಿಂ-ತನ್ನಲೆಮನೆಯಿಂದ, ಪೊರಮಟ್ಟು-ಹೊರಟವಳಾಗಿ, ಸುತನ-ಪುತ್ರನ, ಗುಣ-ಸದ್ಗುಣ ಶೌರ್ಯಾದಿಗಳನ್ನು, (ಪರಾಕ್ರಮಾದಿಗಳನ್ನು) ಶೀಲ-ಒಳ್ಳೆಯ ನಡತೆಯನ್ನು, ರೂಪಗಳನು-ಆಕಾರವೇ ಮೊದಲಾದುವನ್ನು, ಎಣಿಸಿ-ಸ್ಮರಣೆಮಾಡಿಕೊಂಡು, ಹಲುಬಿದಳು-ವ್ಯಸನಗೊಂಡಳು ॥ ೧೯ ॥

ಟೀ॥ ಕಂಬನಿಗಳು-ಕಣ್ಣಿನಲ್ಲಿ ನೀರುಗಳು, ಒಸರಿದವು - ಸುರಿದವು, ಅಂಗಲತೆ - ಬಳ್ಳಿಯಂತೆ ಕೋಮಲವಾದ ದೇಹವು, ಕಂಪಿಸಿತು-ನಡುಗಲಾರಂಭಿಸಿತು, ಕೂಡೆ ಕೂಡೆ-ಆಗಾಗ್ಗೆ, ಒಡಲಂ-ಹೊಟ್ಟೆಯನ್ನು, ಪೊಸೆದಳು-ಬಡಿದುಕೊಂಡಳು, ಸುತಮೋಹದಿಂದ-ಪುತ್ರವಾತ್ಸಲ್ಯದಿಂದ, ಬಸವಳಿದು-ಸ್ಮೃತಿತಪ್ಪಿದವಳಾಗಿ, ಕಂದನು-ಮಗುವು, ಎಲ್ಲಿದ್ದಪಂ-ಎಲ್ಲಿರುವನೋ, ಕಾದಿದನೆ-ಯುದ್ಧಮಾಡಿದನೆ, ಪಗೆಯಕೈಗೆ-ಶತ್ರುಗಳ ವಶಕ್ಕೆ, ಒಳಗಾದನೆ-ಸಿಕ್ಕಿಬಿದ್ದನೆ, ಪಸುಳೆಗೆ-ಬಾಲಕನಿಗೆ, ಏನಾಯ್ತೊ-ಯಾವ ಕಷ್ಟ ಒದಗಿತೋ, ಮಗನು-ಕುವರನು, ಎಂತು-ಹೇಗೆ, ನೊಂದನೋ-ತೊಂದರೆಯನ್ನನುಭವಿಸಿದನೋ, ತರಳನು-ಬಾಲನು, ಅಸುವ - ಪ್ರಾಣವನ್ನು, ಇಡಿದು - ಧರಿಸಿ, ಇಹನೊ - ಇದ್ದಾನೆಯೋ, ಬಾಲಕನ - ಪಸುಳೆಯ, ಮುದ್ದುಮೊಗಂ-

---

ಭ್ರಾಕ್ರಾಂತನಾಗಿ ನೆಲದಮೇಲೆ ಬಿದ್ದು ಹೋದನು. ಶತ್ರುಗಳು ಇವನನ್ನು ನೋಡಿದಕೂಡಲೆ ಕೋಲಾಹಲ ಧ್ವನಿಯನ್ನು ಮಾಡುತ್ತಲಿದ್ದರು. ಅಗ ಶತ್ರುಘ್ನನು ಈ ಬಾಲಕನಬಳಿಗೆ ಬಂದು ನೋಡಿ ರಾಮಚಂದ್ರನಂತೆಯೇ ಇರುವ ಮುಖವುಳ್ಳ ಲವನನ್ನು ಪ್ರೀತ್ಯತಿಶಯದಿಂದೆತ್ತಿ. ತನ್ನ ರಥದಮೇಲಿಟ್ಟುಕೊಂಡು ॥೧೮॥ ಬಾಳೆಯಮರಕ್ಕೆ ಬಿಗಿದಿದ್ದ ಯಜ್ಞಾಶ್ವವನ್ನು ಬಿಡಿಸಿಕೊಂಡು ಸೇನಾಸಮೇತನಾಗಿ ಪಟ್ಟಣವಕಡೆಗೆ ಹೊರಟುಹೋಗುತ್ತಲಿದ್ದನು, ಇದನ್ನೆಲ್ಲಾ ನೋಡುತ್ತಲಿದ್ದ ಮುನಿವಟುಗಳು ಸಮುದ್ರದ ಅಲೆಗಳಂತೆ ಕೂಗಿಕೊಳ್ಳುತ್ತ ಜಾಗ್ರತೆಯಾಗಿ ಸೀತೆಯಿದ್ದೆಡೆಗೆ ಬಂದು ನಡೆದ ವರ್ತಮಾನವನ್ನೆಲ್ಲಾ ವಿಸ್ತರಿಸಲು ಜಾನಕಿಯು ಮನಸ್ಸಿನಲ್ಲಿ ಅತಿಯಾಗಿ ನೊಂದುಕೊಂಡು ತನ್ನ ಮಗನಾದ ಲವನ ಗುಣಶೀಲಾದಿಗಳನ್ನೆಲ್ಲಾ ಜ್ಞಾಪಿಸಿಕೊಳ್ಳುತ್ತ, ಅಳುತ್ತಿದ್ದಳು ॥೧೯॥ ಲವನನ್ನು ಶತ್ರುಗಳು ಹಿಡಿದುಕೊಂಡು ಹೋದರೆಂಬ ಸುದ್ದಿಯನ್ನು ಕೇಳಿದಂದಿನಿಂದಲೂ ಲೋಕಮಾತೆಯಾದ ಸೀತಾದೇವಿಯ ಕಣ್ಣುಗಳಿಂದ ನೀರು ಸುರಿದು ಸುರಿದು ದೊಡ್ಡದಾದ ಪ್ರವಾಹವು ಹರಿದು ಹೋಯಿತು. ವ್ಯಸನ ಡುಕವು ಹೆಚ್ಚಿತು ಮಾತನಾಡಲು ಬಾಯಿಯೂ ನಾಲಗೆಯೂ ಸ್ವಾಧೀನವನ್ನು ತಪ್ಪಿಹೋದವು. ಪುತ್ರವಾತ್ಸಲ್ಯದಿಂದ ಆಗಾಗ್ಗೆ ಅಯ್ಯೋ, ವಿಧಿಯೇ, ನನ್ನ ಮಗನಿಗೆ ಇಂಥಾಗತಿ ಬಂದಿತಲ್ಲಾ ! ಶತ್ರುಗಳೊಂದಿಗೆ ಹೋರಾಡಿ ಸೋತುಹೋದನೆ, ಮಗುವಿನ ಪಾಡೇನಾಗಿ ಹೋಯಿತೋ ಕಾಣೆನಲ್ಲಾ ! ಯುದ್ಧದಲ್ಲಿ ಎಷ್ಟು ವ್ಯಥೆಯನ್ನನುಭವಿಸಿದನೊ ತಿಳಿಯದು. ಈಗ ಬದುಕಿದಾನೆಯೋ ಇಲ್ಲವೋ ಗೊತ್ತಾಗಲಿಲ್ಲವಲ್ಲ ! ನನ್ನ ಕಂದನ ಮುದ್ದು ಮೊಗವನ್ನು ನೋಡಿಕೊಂಡು ಕಾಲಹರಣವಂಮಾಡುತ್ತಲಿ

ತನೋಹದಿಂ | ಬಸವಳಿದು ಕಂದನೆಲ್ಲಿರ್ದಪಂಕಾದಿದನೆಪಗೆಯುಕ್ಕೆಗೊಳಗಾದನೆ || ಸಸುಳಿಗೇನಾಯ್ತೊಮಗನೆಂತುನೊಂದನೊತರಳ | ನಸುನಿಡಿದಿಹನೊಬಾಲಕನಮುದ್ದುವೊಗಮೆನ್ನ | ದೆಸೆಗೆಸ್ಸೈರಿಸದೋಜೀವಿಸಿಕೆಟ್ಟೆನೆಂದುಹಲುಬಿದಳಂಬುಜಾಕ್ಷಿ ಮರುಗಿ ||೨೦|| ಅನ್ನೆಗಂಬಂದನಗ್ಗದಸಮಿತ್ಪುಷ್ಪಂಗ | ಳಂನೆತ್ತಿಯೋಳ್ಪೊತ್ತುಕೊಂಡುಕುಶನಳುತಿರ್ಪ | ತನ್ನತಾಯಿಯಂಕಂಡಿದೇನದ್ಭುತಪ್ರಲಾಪಂನಿನಗೆಪೇಳೆನಲ್ಕೆ | ಬನ್ನಮಂಕೇಳ್ಮಗನೆಹಯಮೊಂದುಬರಲದಂ | ನಿನ್ನತಮ್ಮಂಕಟ್ಟಲರಸುಗಳ್ಪಿಡಿದೊಯ್ದು | ರಿನ್ನೇವೆನೆಂದುಜಾನಕಿನುಡಿಯೆರೋಷದಿಂದಾಕುವರನಿಂತೆಂದನು ||೨೧|| ಶೋಕಮೇಕಿದಕೆಹರಣನೊಯ್ದಡಂತಕನ | ಲೋಕಮಂಸುಡುವೆನಲ್ಲಹುದೆಂದೊಡಜಹರಿಪಿ | ನಾಕಿಗಳನುರುಪುವೆಂಮಿಕ್ಕರಸುಗಿರಸುಗಳಪಾಡಾವುದೀಗತನಗೆ || ಆಕವ

---

ಚೆಲುವಾದ ಮೋರೆಯು, ಎನ್ನ-ನನ್ನ ಸಂಬಂಧವಾದ, ದೆಸೆಗೆ_ನಿರ್ಭಾಗ್ಯಕ್ಕೆ. ಸೈರಿಸದೊ_ತಡೆಯದೆ ಹೋಯಿತೋ, ಜೀವಿಸಿ_ಪ್ರಾಣವನ್ನಿಟ್ಟುಕೊಂಡು, ಕೆಟ್ಟೆನು_ಕೆಟ್ಟುಹೋದೆನು. ಎಂದು-ಎಂಬತೆರನಾಗಿ, ಅಂಬುಜಾಕ್ಷಿ-ಪದ್ಮಪತ್ರದಂತೆ ನಯನಂಗಳನ್ನುಳ್ಳ ಜಾನಕಿಯು, ಮರುಗಿ_ಸಂಕಟಪಟ್ಟು, ಹಲುಬಿದಳು-ಕಳವಳದಿಂದ ಕೂಡಿದಳು ||

ಅ|| ವಿ|| ಕಂಬನಿ_ಕಣ್ಣಿನಪನಿ (ಷ. ತ.) ಅಸವಳಿದು (ಕ್ರಿ. ಸ.) ಅಂಬುಜಾಕ್ಷಿ-ಅಂಬುನೀರಿನಲ್ಲಿ ಜ_ಹುಟ್ಟಿದ್ದು (ಕಮಲ ಸ. ತ.) ಅಂಬುಜದಂತೆ ಅಕ್ಷಿಯು ಯಾರಿಗೋ ಅವಳು (ಅಂಬುಜಾಕ್ಷಿ) ||೨೦||

ಟೀ|| ಅನ್ನೆಗಂ-ಅಷ್ಟುಹೊತ್ತಿಗೆ, ಅಗ್ಗದ_ಅಧಿಕವಾದ, ಸಮಿತ್-ಅರಳಿ, ಮುತ್ತುಗಗಳ_ಕಡ್ಡಿಗಳನ್ನು, ಪುಷ್ಪಂಗಳಂ_ಕುಸುಮಂಗಳನ್ನು, ನೆತ್ತಿಯೋಳ್-ತಲೆಯಲ್ಲಿ, ಪೊತ್ತುಕೊಂಡು_ಧರಿಸಿದವನಾಗಿ, ಕುಶನು_ಸೀತೆಯ ದೊಡ್ಡಮಗನು, ಬಂದನು_ಬಂದವನಾದನು, ಅಳುತಿರ್ಪ-ಗೋಳಾಡುತ್ತಿರುವ,ತನ್ನತಾಯಿಯಂ-ತನ್ನಮಾತೆಯನ್ನು, ಕಂಡು_ಈಕ್ಷಿಸಿ, ಅದ್ಭುತಪ್ರಲಾಪನಂ_ಹೆಚ್ಚಾದ ದುಃಖವು, ನಿನಗೆ-ನಿನಗಾದರೊ, ಇದೇನು-ಇದು ಯಾತಕ್ಕೆ, ಎನಲ್ಕೆ-ಎಂದು ಕೇಳಲು, ಮಗನೆ-ಪುತ್ರನೆ, ಬನ್ನಮಂ_ಭಂಗವನ್ನು, ಕೇಳು_ಕೇಳುವವನಾಗು, ಒಂದುಹಯಂ_ಕುದುರೆಯೊಂದು, ಬರಲು_ಐತರಲು, ನಿನ್ನತಮ್ಮಂ- ನಿನ್ನನುಜನು, ಅದಂ_ಆ ಹಯವನ್ನು, ಕಟ್ಟಲು_ಕಟ್ಟಿಹಾಕಲಾಗಿ, ಅರಸುಗಳ್ - ರಾಜರುಗಳು, (ವೈರಿಗಳು) ಪಿಡಿದು_ಲವನನ್ನು ಹಿಡಿದುಕೊಂಡು, ಒಯ್ದರು-ಹೊರಟರು, ಇನ್ನು_ಇನ್ನುಮೇಲೆ, ಏವೆನು-ಏನುಮಾಡಲಿ, ಎಂದು_ಎಂಬದಾಗಿ, ಜಾನಕಿ_ಸೀತಾದೇವಿಯು. ನುಡಿಯೆ-ತಿಳಿಸಲು, ರೋಷದಿಂದ_ಕೋಪದಿಂದ, ಆಕುವರನು_ಆ ಬಾಲನಾದ ಕುಶನು, ಇಂತು_ಮುಂದೆ ಹೇಳುವಂತೆ, ಎಂದನು-ನುಡಿದನು ||

ಅ|| ವಿ|| ಬಗ್ನ (ದ್ಭ) ಭನ್ನ (ತ್ಸ) ಕುವರ (ತ್ಭ) ಕುಮಾರ (ತ್ಸ) ||೨೧||

ಟೀ|| ಇದಕೆ - ಇಷ್ಟುಮಾತ್ರಕ್ಕೇ, ಶೋಕಂ_ವ್ಯಸನವು. ಏಕೆ_ಏತಕ್ಕೆ, ಹರಣವನು - ಜೀವವನ್ನು, ಒಯ್ದಡೆ_ಸೆಳೆದುಕೊಂಡು ಹೋದರೆ, ಅಂತಕನ_ಕಾಲನ, ಲೋಕಮಂ_ಪ್ರಪಂಚವನ್ನು (ಸಂಯಮನೀ ಎಂಬುದನ್ನು) ಸುಡುವೆನಲ್ಲ_ಭಸ್ಮಮಾಡಿ ಬಿಡುತ್ತೇನಲ್ಲವೆ, ಅಹುದು_ಆಗಲಿ, ಅಂದಡೆ_ಎಂದಪಕ್ಷಕ್ಕೆ, ಅಜ-ಸೃಷ್ಟಿಕರ್ತನನ್ನೂ, ಹರಿ-ವಿಷ್ಣುವನ್ನೂ, ಪಿನಾಕಿಗಳನು-ಈಶ್ವರನನ್ನೂ ಸಹ, ಉರುಪುವೆಂ-ಸುಟ್ಟುಬಿಡುವೆನು, ಈಗ_ಈ ರೀತಿಯಲ್ಲಿರುವಾಗ, ತನಗೆ_ನನಗಾದರೊ, ಮಿಕ್ಕ_ಮಿಕ್ಕಂಥ, ಅರಸುಗಿರಸುಗಳ-ರಾಜರುಗಳ, ಪಾಡು_ಗತಿಯು, ಆವುದು-ಏನಾದೀತು, ಆ ಕವಚ_ಆ ಪ್ರಸಿದ್ಧವಾದ ಅಂಗಿಯು, ಖಡ್ಗ_ಅಸಿಯು, ಧನು-ಚಾಪವು, ಶರ_ಕಣೆಗಳು, ಕಿರೀಟಂಗಳಂ_ಕಿರೀಟಗಳೇ ಮೊದಲಾದವನ್ನು, ತಾ_ಕೊಡತಕ್ಕವಳಾಗು,

---

ದ್ದುದ್ದು ಪಾಪಿ ದೈವಕ್ಕೆ ಒಪ್ಪಿಕೆಯಿಲ್ಲವಾಯಿತೆ! ಹಾ ನನ್ನ ಕಂದ, ಇನ್ನೇನುಗತಿ, ಎಂದು ನಾನಾ ಪ್ರಕಾರವಾಗಿ ದುಃಖಿಸುತ್ತಿರುವ ಕಾಲಕ್ಕೆ ||೨೦|| ಕಾಡಿಗೆ ಸಮಿತ್ಪುಷ್ಪಾದಿಗಳಿಗಾಗಿ ಹೋಗಿದ್ದ ತನ್ನ ಜ್ಯೇಷ್ಠ ಕುವರನಾದ ಕುಶನು ಬಂದು ಅಳುತ್ತಿರುವ ತನ್ನ ತಾಯಿಯನ್ನು ಕಂಡು, ಎಲೈ ತಾಯಿಯೆ, ಇಂತಹ ಘೋರ ವ್ಯಸನವು ನಿನಗೆ ಪ್ರಾಪ್ತವಾಗಲು ಕಾರಣವೇನು? ತಡಮಾಡದೆ ಹೇಳೆಂದು ಕೇಳಿದನು, ಆಗ ಶೋಕಸಮುದ್ರದಲ್ಲಿ ಮುಳುಗಿದ್ದ ಸೀತಾದೇವಿಯು, ಸುತನಾದ ಕುಶನೇ ಕೇಳು ನಮ್ಮ ಗುರುಗಳಾದ ವಾಲ್ಮೀಕರ ಉದ್ಯಾನಕ್ಕೆ ಯಾರೊ ಒಬ್ಬರಸನ ಕುದುರೆಯು ಬಂದು ಮೇಯುತ್ತಿರಲು ನಿನ್ನತಮ್ಮನು ಅದನ್ನು ಕಟ್ಟಿಹಾಕಿದನಂತೆ. ರಾಜಭಟರು ನಿನ್ನನುಜನೊಂದಿಗೆ ಹೋರಾಡಿ ಸೋಲಿಸಿ ಅವರ ಜತೆಯಲ್ಲಿಯೇ ಕರೆದುಕೊಂಡು ಹೋಗುತ್ತಲಿರುವರಂತೆ, ಇದಕ್ಕಾಗಿ ವ್ಯಸನ ಪಡುತ್ತೇನೆ. ಮಗನನ್ನು ಕಳೆದುಕೊಂಡ ನನಗೆ ಗತಿ ಏನೆಂದು ಗೋಳಾಡಲಾರಂಭಿಸಿದಳು || ೨೧ || ತಾಯಿಯ ಈತೆರನಾದ ಶೋಕಪ್ರಲಾಪನಂ ಕೇಳಿದೊಡನೆಯೆ ಕುಶನು ರೋಷಭೀಷಣನಾಗಿ, ಮಾತೆಯನ್ನು ನೋಡಿ ಅಮ್ಮಾ, ಇಷ್ಟು ಮಾತ್ರಕ್ಕೆ ನೀನೇಕೆ ವ್ಯಸನ ಪಡಬೇಕು. ಲವನ ಪ್ರಾಣವನ್ನು ಯಮನು ಕೊಂಡುಹೋಗಿದ್ದರೆ ಆಕಾಲನನ್ನು ಅವನ ಪಟ್ಟಣವನ್ನೂ ಬೂದಿಮಾಡಿ ಲವನನ್ನು ಬಿಡಿಸಿಕೊಂಡು ಬರುತ್ತೇನೆ. ಬದುಕಿಯಿದ್ದ ಪಕ್ಷದಲ್ಲಿ ಅವನನ್ನು ಹಿಡಿ

ಚಖಡ್ಗಧನುಶರಕಿರೀಟಂಗಳಂ । ತಾಕೆಳವಳಿಸದಿರೆಂದವನಿಜೆಗೆನುಡಿದೊಡವ । ಳಾಕುಶಂಗೊಳಗೆಣಿಂದಂಗಿಯಂತಂದಳವಡಿಸಿ ಪರಸಿಬೀಳ್ಕೊಟ್ಟಳು ॥ ೨೨ ॥ ರಾಯಕೇಳ್ಕುಶನವಿಕ್ರಮನನಭಿವರ್ಣಿಸಲ । ಜಾಯುಮುಳ್ಳನ್ನೆಗಂತನಗೆತೀರದುಬಳಿಕ ತಾಯಂಘ್ರಿಗೆರಗಿಬೀಳ್ಕೊಂಡುತಾರಕನಪೇರ್ಬಡೆಗೆಗುಹನ್ಯೆದುವಂತೆ ॥ ವಾಯುವೇಗದೊಳೊದಗಿವೀರಭರತಾನುಜನ । ಪಾಯ ದಳಮಂಪೋಗಬೇಡಬೇಡೆನುತಸಲೆ । ಸಾಯಕದಮಳೆಗಳಂಕರೆಯಲ್ಕೆತಿರುಗಿದುದುಮತ್ತೆ ಶತ್ರುಘ್ನಸೇನೆ ॥ ೨೩ ॥ ಪದ್ದೆ ರಗಿದುವುಭಟರಮಂಡೆಗಳಮೇಲುಡಿದು । ಬಿದ್ದವುಚಲಧ್ವಜಪತಾಕೆಗಳ್ಕೂಡೆಧೂ । ಳಿದ್ದುಬಿರುಗಾಳಿಬೀಸಿದುದಕಂ

---

ಕಳವಳಿಸದೆ–ಭ್ರಾಂತಳಾಗವೆ, ಇರು–ಇರತಕ್ಕವಳಾಗು, ಎಂದು–ಎಂಬದಾಗಿ, ಅವನಿಜೆಗೆ - ಸೀತಾದೇವಿಗೆ, ನುಡಿದೊಡೆ - ಹೇಳಲಾಗಿ, ಅವಳು–ಆ ಸೀತಾದೇವಿಯಾದರೊ, ಆ ಕುಶಂಗೆ–ಕುಶನೆಂಬ ತನ್ನ ಹಿರೀಮಗನಿಗೆ, ಒಳಗೆಣಿಂದ - ಆಶ್ರಮದೊಳಗಡೆಯಿಂದ, ಅಂಗಿಯಂ–ಅಂಗಿಯನ್ನು, ತಂದು–ತೆಗೆದುಕೊಂಡುಬಂದು, ಅಳವಡಿಸಿ-ಹಾಕಿ, ಪರಸಿ–ಶುಭವಾಗಲೆಂದು ಹರಸಿದವಳಾಗಿ, ಬೀಳ್ಕೊಟ್ಟಳು–ಮಗನನ್ನು ಯುದ್ಧಕ್ಕೆ ಕಳುಹಿಸಿದಳು ॥೨೨॥

ಟೀ॥ ರಾಯ - ಜನಮೇಜಯಕ್ಷಿತಪನೆ, ಕೇಳು - ಲಾಲಿಸು, ಕುಶನೆಂಬ ಬಾಲಕನ, ವಿಕ್ರಮವನು - ಶೌರ್ಯವನ್ನು, ಅಭಿವರ್ಣಿಸಲು–ವರ್ಣನೆಮಾಡಲು, ಅಜ–ಬ್ರಹ್ಮದೇವನಿಗೆ, ಆಯು–ಜೀವಿತಕಾಲವು, ಉಳ್ಳನ್ನೆಗಂ-ಇರುವ ಪರ್ಯಂತವೂ, ತನಗೆ–ನನಗಾದರೂ, ತೀರದು–ಹೇಳಿ ಪೂರೈಸುವದಸಾಧ್ಯವಾಗಿದೆ, ಬಳಿಕ–ಆಮೇಲೆ, ತಾಯ-ಮಾತೆಯ, ಅಂಘ್ರಿಗೆ-ಕಾಲುಗಳಿಗೆ, ಎರಗಿ-ನಮಸ್ಕಾರಮಾಡಿ, ಬೀಳ್ಕೊಂಡು-ಹೊರಡಲು ಅನುಜ್ಞೆಯಂ ಪಡೆದು, ತಾರಕನ–ತಾರಕಾಸುರನ, ಪೇರ್ಬಡೆಗೆ-ಮಹಾಸೇನೆಗೆ, ಗುಹನು–ಕುಮಾರಸ್ವಾಮಿಯು, ಐದುವಂತೆ–ಹೊರಟುಹೋಗುವತೆರನಾಗಿ, ವಾಯುವೇಗದೊಳು–ಗಾಳಿಯನ್ನು ಮೀರಿಸತಕ್ಕ ಜಾಗ್ರತೆಯಿಂದ, ಒದಗಿ - ಬೆರತವನಾಗಿ, ವೀರ - ಪರಾಕ್ರಮಿಯಾದ, ಭರತಾನುಜನ – ಶತ್ರುಘ್ನನ, ಪಾಯದಳಮಂ ಪದಾತಿಯನ್ನು, ಪೋಗಬೇಡ-ಹೋಗಬೇಡಿರಿ, ಬೇಡ–ಕೂಡದು, ಎನುತ–ಎಂದು ಕೂಗುತ್ತ, ಸಲೆ–ಹೆಚ್ಚಾಗಿ, ಸಾಯಕದ–ಶರಗಳ, ಮಳೆಗಳಂ–ಮಳೆಯನ್ನು, ಕರೆಯಲ್ಕೆ-ಸುರಿಸಲಾಗಿ, ಶತ್ರುಘ್ನಸೇನೆ - ಶತ್ರುಘ್ನನದಳವು, ಮತ್ತೆ–ಪುನಃ, ತಿರುಗಿದುದು ಯುದ್ಧಕ್ಕಾಗಿ ಹಿಂದಕ್ಕೆ ಹೊರಟಿತು ॥೨೩॥

ಟೀ॥ ಭಟರ - ವೀರರ, ಮಂಡೆಗಳಮೇಲೆ - ಶಿರಸ್ಸುಗಳ ಮೇಲ್ಭಾಗದಲ್ಲಿ, ಪದ್ದು–ಹದ್ದುಗಳು, ಎರಗಿದವು - ಕುಳಿತುಕೊಂಡವು, ಚಲತ್–ಅಲ್ಲಾಡುತ್ತಲಿರುವ, ಧ್ವಜಪತಾಕೆಗಳು–ಧ್ವಜಪಟಕ್ಕೆ ಕಟ್ಟಿರತಕ್ಕ ಬಾವುಟಗಳು, ಉಡಿದುಬಿದ್ದವು–ಮುರಿದು ಬಿದ್ದುಬಿಟ್ಟವು, ಕೂಡೆ-ಒಡನೆಯೆ, ಧೂಳು–ರಜವು, ಎದ್ದು–ಮೇಲಕ್ಕೆ ಎದ್ದುಬಿಟ್ಟು, ಬಿರುಗಾಳಿ–ದೊಡ್ಡ ಗಾಳಿಯು, ಬೀಸಿದುದು, ಬೀಸಲು ಆರಂಭವಾಯಿತು ಆನೆ–ಹಸ್ತಿಗಳು, ಕಂಬನಿಗರೆದವು–ಕಣ್ಣೀರನ್ನು ಸುರಿಸಿದುವು, ಕುದುರೆಗಳ್ಗೆ–ಹಯಂಗಳಿಗೆ, ಪೊದ್ದಿತು–ಮುತ್ತಿಕೊಂಡವು, ಉತ್ಪಾತಭಯಕೆ–ಅಶುಭಸೂಚನೆಯ ಹೆದರಿಕೆಗೆ, ಆಬಲಂ–ಶತ್ರುಘ್ನನ ದಳವು, ಗಜಬಜಿಸುತ–ಗಾಬರಿಪಡುತ್ತ, ಇದ್ದರ್ದುದು–ಇದ್ದಿತು, ಈಚೆಯೊಳು–ಈ ಪಾರ್ಶ್ವದಲ್ಲಿ, ಈಕುಶನು–ಈಕುಶನೆಂಬ ಹುಡುಗನು, ಪೋಗದಿರಿ–ಹೋಗಬೇಡಿ, ನಿಲ್ಲಿ–ನಿಂತುಕೊಳ್ಳಿರಿ, ಕದ್ದು–ಕಳ್ಳತನದಿಂದ, ಐದುವರೆ–ತಪ್ಪಿಸಿಕೊಂಡು ಹೋತ್ತಾರೆಯೆ, ತುರಗಸಹಿತ–ಕುದುರೆಯೊಂದಿಗೆ, ಲವನಂ–ಲವ

---

ದುಕೊಂಡು ಹೋಗಿರತಕ್ಕವರು ತ್ರಿಮೂರ್ತಿಗಳಾದರೂ ಕೂಡ ಅವರನ್ನೂ ಸುಟ್ಟು ನಿನ್ನ ಮಗನನ್ನು ಕರೆತಂದು ನಿನ್ನ ಸನ್ನಿಧಿಯಲ್ಲರ್ಪಿಸುವೆನು. ಹೀಗಿರುವಲ್ಲಿ ಯಾರೋ ಕೆಲಸಕ್ಕೆ ಬಾರದ ರಾಜರು ಹಿಡಿದುಕೊಂಡಿದ್ದ ಮಾತ್ರಕ್ಕೆ ನೀನು ಇಷ್ಟು ವ್ಯಸನಪಡಬಹುದೆ ದುಃಖವನ್ನು ಬಿಟ್ಟು ಧೈರ್ಯವನ್ನೂ, ಶಾಂತಿಯನ್ನೂ ಪಡೆ. ವಾಲ್ಮೀಕಿಮಹರ್ಷಿಯು ನನಿಗೆ ಅನುಗ್ರಹಿಸಿರತಕ್ಕ ಬಾಣಗಳು, ಖಡ್ಗ, ಕಿರೀಟ. ಕವಚಾದಿಗಳನ್ನೆಲ್ಲಾ ತಂದುಕೊಡೆನ್ನಲು, ಸೀತೆಯು ಒಳಗಿನಿಂದ ಎಲ್ಲನನ್ನೂ ತಂದು ಅಂಗಿಯನ್ನು ತೊಡಿಸಿ, ಕಿರೀಟವನ್ನಿಟ್ಟು ಖಡ್ಗತೂಣೀರಾದಿಗಳನ್ನು ಕುಶನ ಕೈಯಲ್ಲಿಟ್ಟು, ಯುದ್ಧದಲ್ಲಿ ಜಯಶೀಲನಾಗಿ ಬಾರೆಂದು ಆಶೀರ್ವದಿಸಿ ಕಳುಹಿಸಿದವಳಾದಳು ॥೨೨॥ ಕೇಳೈ ಜನಮೇಜಯ ಮಹೀಪಾಲನೆ, ಈ ರೀತಿಯಾಗಿ ಕುಶನು ತನ್ನ ತಾಯಿಯ ಅಪ್ಪಣೆಯನ್ನು ಪಡೆದವನಾಗಿ ಆಕೆಯ ಅಡಿಗಳಿಗೆರಗಿ, ಬಳಿಕ ಪೂರ್ವದಲ್ಲಿ ತಾರಕಾಸುರನ ಸಂಹಾರಕ್ಕಾಗಿ ಕುಮಾರಸ್ವಾಮಿಯು ಹೊರಟಂತೆ ತಾನೂ ವಾಯುಮಾರ್ಗದಲ್ಲಿ ಹೊರಟು ಶೂರಾಗ್ರಣಿಯಾದ ಶತ್ರುಘ್ನನು ಸೇನಾಸಮೇತನಾಗಿ ಯಜ್ಞಾಶ್ವದೊಂದಿಗೆ ಅಟ್ಟಹಾಸದಿಂದ ಹೋಗುತ್ತಿರುವುದನ್ನು ನೋಡಿ, ಅವರನ್ನು ಕುರಿತು ನಿಲ್ಲಿನಿಲ್ಲಿ, ಕಳ್ಳತನದಿಂದ ಕುದುರೆಯನ್ನು ತೆಗೆದುಕೊಂಡು ಹೋಗಬಹುದೇ? ನೀವು ಪರಾಕ್ರಮಿಗಳಾದರೆ ಬಂದು ನನ್ನನ್ನು ಗೆಲ್ಲಬಹುದು, ಇಲ್ಲವಾದರೆ ಕುದುರೆಯನ್ನೂ ಲವನನ್ನೂ ಬಿಟ್ಟು ಹೊರಡಿ ಎಂದು ಪ್ರಳಯಕಾಲದ ಗುಡುಗಿನಂತೆ ಧ್ವನಿಗೈಯ್ಯುತ್ತಲಿರುವುದನ್ನು ಶತ್ರುಘ್ನನು ಕೇಳಿ ತನ್ನ ಸೈನ್ಯವನ್ನೆಲ್ಲಾ ಪುನಃ ಹಿಂದಕ್ಕೆ ತಿರುಗಿಸಿ ಯುದ್ಧಕ್ಕೆ ಸಿದ್ಧನಾದನು ॥೨೩॥ ಆಗ ಶತ್ರುಘ್ನನ ಸೈನ್ಯದಲ್ಲಿದ್ದ ಶೂರರ ತಲೆಗಳ ಮೇಲೆ ಹದ್ದು

ಬನಿಗರದರಂದಾನೆಕುದುರೆಗಳ್ಗೆ ‖ ಪೊದ್ದಿತುತ್ಪಾತಭಯಕಾಬಲಂಗಜಭಸು । ತಿದ್ದುರ್ದೀಚೆಯೊಳೀಕುಶಂಪ್ರೋಗದಿರಿಸಿಲ್ಲಿ ತದ್ದೈದುವರೆತುರಗಸಹಿತಲವನಂಬಿಟ್ಟುನಡೆಯಿರೀವೆನುತೆಚ್ಚನು ‖ ೨೪ ‖ ಆಬಾಲಕನಬಾಣಘಾತದಿಂದಳವಳಿದು । ದೀಬಲದಮುಂದಿಮುತ್ತೀಗಳಿವನೊರ್ವನಿದ । ಕೋಬಂದನೆಂದೆಸುನಬೆಸೆಗಳ್ಗೆದೆಸೆಗೆಟ್ಟುಸೇನೆಗಜಬಜಿಸೆಕಂಡು ‖ ಶಾಬನ್ಮೃಗವಂಜಿವುದುಗಡಪುಲಿಯನೆನುತಾನು । ಹಾಬಾಹುಶತ್ರುಘ್ನನಾಗನಿಜದಳಪತಿಯ । ನೇಬೇಗಕಳುಹಿದೊಡವಂಸಕಲಸೇನೆಸಹಿತೈದಿದಂಕುಶನಮೇಲೆ ‖ ೨೫ ‖ ಬಳಿಕಶತ್ರುಘ್ನನನಿರೂಪದಿಂತಿರುಗಿದಂ । ದಳಪತಿಸಮಸ್ತಬಲಸಹಿತಾಕುಮಾರನಂ । ಬಳಸಿದುದುತಮುತಮುಗೆವಿವಿಧಾಯುಧಂಗಳಂಝಳಪಿಸುತವಹಿಲದಿಂದ ‖ ಅಳವಿಯೋಳ್ತೀವಾಳ್ಕುದುರೆತೇರಾನೆಗ । ಳ್ಕೊಳು

---

ನೆಂಬ ನನ್ನನುಜನನ್ನು, ಈವು-ನೀವು, ಬಿಟ್ಟುನಡೆಯಿರಿ-ಬಿಟ್ಟು ಹೊರಟುಹೋಗಿ, ಎನುತ-ಎಂದು ನುಡಿಯುತ್ತ, ಎಚ್ಚನು-ಬಾಣಗಳನ್ನು ಪ್ರಯೋಗಮಾಡಿದನು.

ಅ‖ ವಿ‖ ಕಣ್ಣಿನ; ಪನಿ (ಷ. ತ.) ‖೨೪‖

ಟೀ‖ ಆಬಾಲಕನ-ಆ ಕುಶನೆಂಬ ಪಸುಳೆಯ, ಬಾಣಘಾತದಿಂ-ಕಣೆಗಳ ಹೊಯ್ಗೆನಿಂದ, ಈಬಲದ-ಈ ದಂಡಿನ, ಮಂದಿ-ಜನಗಳು, ಅಳವಳಿದುದು - ಶಕ್ತಿಯನ್ನು ಹೋಗಲಾಡಿಸಿಕೊಂಡಿತು, ಮತ್ತೆ-ಪುನಃ, ಈಗಳು - ಈ ಕಾಲದಲ್ಲಿ, ಇವನೊರ್ವನು-ಇವನೊಬ್ಬನು, ಇದಕೊ-ಇದೋ, ಬಂದನು-ಬಂದಿರುವನು, ಎಂದು-ಎಂಬುದಾಗಿ, ಎಸೆವ-ಪ್ರಯೋಗಮಾಡತಕ್ಕ, ಬೆಸೆಗಳ್ಗೆ-ಏಟುಗಳಿಗೆ, ಸೇನೆ-ದಳವು, ದೆಸೆಗೆಟ್ಟು - ದಿಕ್ಕೆಟ್ಟು, ಗಜಬಜಿಸೆ - ಗಾಬರಿಯಿಂದ ಕೂಡಲು, ಶಾಬನ್ಮೃಗಂ - ಹುಲ್ಲೆಮರಿಯು, ಪುಲಿಯನು-ಹುಲಿಯನ್ನು, ಅಂಜಿವುದುಗಡ-ಹೆದರಿಸುತ್ತದೆಯಲ್ಲವೆ, ಎನುತ-ಎಂದು ನುಡಿಯುತ್ತ, ಮಹಾಬಾಹು-ನೀಳವಾದ ಕೈಗಳಿಂದೊಡಗೂಡಿದ, ಶತ್ರುಘ್ನನು-ಶತ್ರುಘ್ನನಾದರೋ, ಆಗ-ಆ ಕಾಲದಲ್ಲಿ, ನಿಜ-ತನ್ನ, ದಳಪತಿಯನೆ- ಸೈನ್ಯದ ಮುಖಂಡನನ್ನೆ, ಬೇಗ-ಜಾಗ್ರತೆಯಾಗಿ, ಕಳುಹಿದೊಡೆ-ಕಳುಹಿಸಲಾಗಿ, ಅವಂ-ಆ ದಳಪತಿಯು, ಸಕಲ-ಅಶೇಷವಾದ, ಸೇನೆ ಸಹಿತ-ದಂಡಿನೊಡನೆ, ಕುಶನಮೇಲೆ-ಕುಶನೆಂಬ ಹುಡುಗನಮೇಲೆ, ಐದಿದಂ-ಯುದ್ಧಕ್ಕಾಗಿ ಹೊರಟವನಾದನು ‖

ಅ‖ ವಿ‖ ಅಳವಳಿದು+ಅಳವಂ=ಅಳಿದು, (ಕ್ರಿ. ಸ.) ‖೨೫‖

ಟೀ‖ ಬಳಿಕ-ಆಮೇಲೆ, ಶತ್ರುಘ್ನನ-ಶತ್ರುಘ್ನನೆಂಬತಕ್ಕವನ, ನಿರೂಪದಿಂ-ಆಜ್ಞೆಯಿಂದ, ದಳಪತಿ-ಸೇನಾನಾಯಕನು, ಸಮಸ್ತ-ಎಲ್ಲ, ಬಲಸಹಿತ-ದಳದೊಂದಿಗೆ, ತಿರುಗಿದಂ-ಯುದ್ಧಕ್ಕಾಗಿ ಹಿಂತಿರುಗಿದನು, ಆದಳವಾದರೊ, ಆಕುಮಾರನಂ-ಆ ಕುಶನನ್ನು, ತಮುತಮುಗೆ-ತಮ್ಮತಮ್ಮಷ್ಟಕ್ಕೆ, ವಿವಿಧ-ನಾನಾತೆರನಾದ, ಆಯುಧಂಗಳಂ-ಶಸ್ತ್ರಂಗಳನ್ನು, ಜಳಪಿಸುತ-ಅಲ್ಲಾಡಿಸುತ್ತ, ವಹಿಲದಿಂದ-ವೇಗದಿಂದ ಸಾಂದ್ರವಾಗಿ, ಬಳಸಿದುದು - ಮುತ್ತಿಕೊಂಡಿತು, ಆಗ - ಆಕಾಲದಲ್ಲಿ, ವೀರಕುಶನು-ಕುಶನೆಂಬ ಪರಾಕ್ರಮಿಯು, ಅಳವಿಯೋಳ್- ಶಕ್ತಿಯಿಂದ, ತೀವಿದ- ತುಂಬಿದ, ಆಳ್-ಆಳುಗಳು, ಕುದುರೆ-ಅಶ್ವಂಗಳು, ತೇರ್-ರಥಗಳು, ಆನೆಗಳ್-ಗಜಗಳು, ಅನಿತುಮಂ-ಇವೆಲ್ಲವನ್ನೂ, ಕೊಳುಗುಳದೊಳ್-ರಣದಲ್ಲಿ, ಸವರಿ-ಕೆಡವಿ ಸೇನಾನಿಯಂ-ದಳಪತಿಯನ್ನು, ಅವನ-ಆತನ, ಸಾರಥಿ-ರಥವನ್ನು ನಡಿಸುವವನನ್ನು, ರಥಾಶ್ವಂ-ತೇರಿಗೆ ಕಟ್ಟಿದ ತುರಗಂಗಳೊಂದಿಗೆ, ವೆರಸಿ ಕೂಡಿ, ಜವನ-ಯಮಧರ್ಮರಾಯನ, ಬಳಲ್ಗೆ-ನಗರಕ್ಕೆ, ಕಳುಹಿದಂ-ಕಳುಹಿಸಿದವನಾದನು. ‖೨೬‖

---

ಗಳು ಕೂತುಕೊಳ್ಳಲಾರಂಭಿಸಿದವು, ಬಾವುಟಗಳೂ ಧ್ವಜಪಠಗಳೂ ಇದ್ದಕ್ಕಿದ್ದಹಾಗೆಯೇ ನೆಲದಮೇಲೆ ಬಿದ್ದು ಹೋಗುತ್ತಲಿದ್ದವು, ಎಲ್ಲೆಲ್ಲಿಯೂ ಬಿರುಗಾಳಿಯುಂಟಾಗಿ ಕೆಂಧೂಳ್ಗಳು ಭೂವ್ಯಾಕಾಶಗಳನ್ನಾವರಿಸಿದವು, ಆನೆಗಳ ಕಣ್ಣುಗಳಿಂದ ನೀರು ಸುರಿದು ದೊಡ್ಡದೊಡ್ಡ ಕಾಲುವೆಗಳಂತಾದವು. ಕುದುರೆಗಳೆಲ್ಲಾ ಭಯಗ್ರಸ್ತವಾದವು ಈ ಅಪಶಕುನಗಳನ್ನು ನೋಡಿ ಸೇನಾಜನವು ಗಾಬರಿಯಿಂದೊಡಗೂಡಿರುವುದನ್ನು ‖೨೪‖ ಶತ್ರುಘ್ನನು ನೋಡಿ ತನ್ನ ಮನಸ್ಸಿನಲ್ಲಿ ಈ ಬಾಲನಿಂದಲೇ ನಮ್ಮ ಸೈನ್ಯವೆಲ್ಲಾ ನಾಶವಾಯಿತು. ಈಗ ಇವನಿಗಿಂತಲೂ ಶೂರನಾದ ಮತ್ತೊರ್ವನು ಬಂದೊದಗಿದನಲ್ಲಾ ಎಂದೆಂದುಕೊಳ್ಳುತ್ತ ಹುಲಿಯನ್ನು ಜಿಂಕೆಯ ಮರಿಯು ಅಡ್ಡಗಿಸಬೇಕೆಂದುಜ್ಜುಗಿಸಿದಂತೆ ತನ್ನನ್ನು ಎದುರಿಸಲು ಬರುತ್ತಲಿರುವ ಕುಶನೊಂದಿಗೆ ಹೋರಾಡಲು ತನ್ನ ಮುಖ್ಯ ಸೇನಾಪತಿಯನ್ನೂ ಸಕಲ ಪರಿವಾರವನ್ನೂ ಕಳುಹಿಸಲು, ಅವರೆಲ್ಲರೂ ತಡಮಾಡದೆ ಬಂದು ಕುಶನನ್ನು ಮುತ್ತಿಕೊಂಡರು ‖೨೫‖ ಆಗ ಶತ್ರುಘ್ನನ ವೀರಭಟರಾದರೊ ಕತ್ತಿಗಳನ್ನು ಝಳಪಿಸುತ್ತಲೂ, ಕೋಲಾಹಲಧ್ವನಿಯಿಂದ ದಿಕ್ಕುದಿಕ್ಕುಗಳನ್ನೂ ವ್ಯಾಪಿಸುತ್ತಲೂ ಇದ್ದವರಾಗಿ ಚತುರಂಗಬಲದೊಡನೆ ಸುತ್ತಿಕೊಂಡಿರುವುದನ್ನು ಕುಶನು ನೋಡಿ ಕ್ರೂರವಾದ ಬಾಣಗಳ ಪ್ರಯೋಗದಿಂದ ಅವರ ಕಾಲ್ಬಲವನ್ನೂ, ಆನೆ ಕುದುರೆ ಮೊದಲಾದವನ್ನೂ ಯಮಪುರಿಗೆ ಕಳುಹಿಸುತ್ತಲಿದ್ದನು ‖೨೬‖ ಶತ್ರುಘ್ನನು ಕಳುಹಿಸಿದ ಮುಖ್ಯಸೇನಾಪತಿಯೂ ಮಿಕ್ಕ ಸೈನ್ಯವೂ ಶತ್ರುವಿನಿಂದ ಹತವಾದ್ದನ್ನು ಆ ದಳಪತಿಯ

ಗುಳದೊಳನಿತುಮಂ ಸನರಿಸೇನಾನಿಯ೦ | ಕಳುಹಿದಂಜವನೊಳಲ್ಲವನಸಾರಥಿರಥಾಶ್ವಂವೆರಸಿವೀರಕುಶನು || ೨೬ || ಆದ ಳಪತಿಯತಮ್ಮನೋರ್ವನಗನೆಂಬವಂ | ಕಾದಿಮಡಿದಣ್ಣನಂಕಾಣುತ್ತ ಖತಿಯಿಂಮಹಾದಂತಿಯಂ ಕುಶನಮೇಲೆಯಂಕುಶ ದಿಂದಿರಿದುನೂಕಿವಂ ಕುಶಲನ || ಜೋದಗಾಳಗದಿಂದಬಳಿಕೆರಡು ಸೀಳಾಗಿ | ಮೇದಿನಿಗೆ ಬೀಳ್ವಂತಿಭವನೆಚ್ಚವನಧನುಚ್ಛೇ ದಮುಂಮಾಡಲಾತಂಪಲಗೆಖಡ್ಗಮುಂಕೊಂಡಿವಂಗಿದಿರಾದನು ||೨೭|| ಕಿತ್ತುಡಾಯುಧದೊಳ್ಬಿದುವನಗನಘನಹಸ್ತಮಂ | ಕತ್ತರಿ ಸೆಲೆಡಗೈಯೊಳೊಂದುಗದೆಯುಂಕೊಂಡು | ಮತ್ತೆಮೇಲ್ವಾಯ್ದಡಾಕರವನುಂಕಡಿಯೆ ಬಾಹುಗಳಿಂದ ಪೊಯ್ವೆನೆಂದು || ಬ ತ್ತಿನಡೆತರಲೆರಡು ತೋಳ್ಗಳಂಕೂರ್ಗಣೆಯೊಳು | ತ್ತರಿಸೆಕಾಲ್ಗಳಿಂದೊದೆದುಕೆಡಪುವಭರದೊ | ಳೊತ್ತರಿಸಲಾಗತೊಡ ಜಾನುಪಾದಂಗಳಂ ಕುಶನೆಚ್ಚುತುಂಡಿಸಿದನು ||೨೮|| ಬಾಹುಯುಗಮೂರುದ್ವಯಂಪೋದಕಾಯದಿಂ | ಸಾಹಸಂಗೈದವಂಮೇ

---

ಟೀ|| ಆದಳಪತಿಯ–ಆ ಸೇನಾನಾಯಕನ, ತಮ್ಮನು-ಸಹೋದರನಾದ, ನಗನೆಂಬವಂ – ನಗನೆಂಬ ಹೆಸರುಳ್ಳ, ಓರ್ವಂ-ಒಬ್ಬನು, ಕಾದಿ–ರಣರಂಗದಲ್ಲಿ ಪರಾಕ್ರಮವನ್ನು ತೋರಿಸಿ, ಮಡಿದ-ಪ್ರಾಣವನ್ನು ಹೋಗಲಾಡಿಸಿಕೊಂಡ, ಅಣ್ಣನಂ–ಅಗ್ರಜನನ್ನು, ಕಾಣುತ-ಈಕ್ಷಿಸುತ್ತ, ಖತಿಯಿಂ–ಕೋಪದಿಂದ, ಮಹಾದಂತಿಯಂ-ದೊಡ್ಡದಾದ ಆನೆಯನ್ನು, ಅಂಕುಶದಿಂದ–ಕೊಡಲಿಯಿಂದ, ಇರಿದು–ತಿವಿದು, ಕುಶನಮೇಲೆ–ಕುಶನೆಂಬ ಹುಡುಗನಮೇಲೆ, ನೂಕಿದಂ–ಬಿಟ್ಟವನಾದವನು, ಕುಶಲದ–ಚಾತುರ್ಯದಿಂದೊಡಗೂಡಿದ, ಜೋಧ-ಭಟರ, ಕಾಳಗದಿಂದ–ಜಗಳದಿಂದ. ಬಳಿಕ–ಆಮೇಲೆ, ಎರಡುಸೀಳಾಗಿ–ಎರಡು ಭಾಗವಾಗಿ, ಮೇದಿನಿಗೆ–ಇಳೆಗೆ, ಬೀಳ್ವಂತೆ-ಬಿದ್ದುಹೋಗುವ ತೆರನಾಗಿ, ಇಭವನು–ಗಜವನ್ನು, ಎಚ್ಚು–ಬಾಣದ ಏಟಿಗೆ ಗುರಿಮಾಡಿ, ಅವನ-ಆ ನಗನ, ಧನು–ಧನುಸ್ಸಿನ, ಛೇದಮುಂಮಾಡಲು–ಛಿದ್ರವಾಗುವಂತೆ ಮಾಡಲಾಗಿ, ಆತಂ–ಆ ನಗನಾದರೋ, ಪಲಗೆ–ಹಲಗೆಯನ್ನು, ಖಡ್ಗಮುಂ–ಕತ್ತಿಯನ್ನು, ಕೊಂಡು-ಧರಿಸಿ, ಇವಂಗೆ–ಈ ಕುಶನಿಗೆ, ಇದಿರಾದನು–ಎದುರಾಗಿ ಹೋದನು ||೨೭||

ಟೀ|| ಕಿತ್ತುಡಾಯುಧದೊಳು–ಹಿರಿದ ಕತ್ತಿ ಎನ್ನುವ ಆಯುಧದಿಂದ, ಐದುವ–ಬರತಕ್ಕ, ನಗನ–ನಗನೆಂಬತಕ್ಕವನು, ಘನಹಸ್ತಮುಂ–ದೊಡ್ಡ ಕೈಯನ್ನು, ಕತ್ತರಿಸಲು–ಕಡಿದು ಬಿಡಲು, ಎಡಗೈಯೊಳು–ಎಡಭಾಗದ ಕರದಲ್ಲಿ, ಒಂದುಗದೆಯನು-ಒಂದಾನೊಂದು ಗದೆಯನ್ನು, ಕೊಂಡು–ತೆಗೆದುಕೊಂಡು, ಮತ್ತೆ–ತಿರುಗಿ, ಮೇಲ್ವಾಯ್ದಡೆ–ಮೇಲೆ ಬಿದ್ದು ಬರಲಾಗಿ, ಆ ಕರವನುಂ-ಆ ಹಸ್ತವನ್ನೂ ಕೂಡ, ಕಡಿಯೆ–ಛೇದಿಸಲು, ಬಾಹುಗಳಿಂದ-ತೋಳುಗಳಿಂದ, ಪೊಯ್ವೆನು–ಹೊಡೆಯುತ್ತೇನೆ, ಎಂದು–ಎಂಬದಾಗಿ, ಒತ್ತಿ–ನುಗ್ಗಿಕೊಂಡು, ನಡೆತರಲು–ಐತರಲಾಗಿ, ಎರಡುತೋಳ್ಗಳಂ–ಭುಜಗಳೆರಡನ್ನೂ, ಕೂರ್ಗಣೆಯೊಳು–ತೀಕ್ಷ್ಣವಾದ ಬಾಣಗಳಿಂದ, ಉತ್ತರಿಸೆ–ಕಡಿದು ಬಿಡಲು, ಕಾಲ್ಗಳಿಂದ–ಅಡಿಗಳಿಂದ, ಒದೆದು–ತಾಡಿಸಿ, ಅಥವ ಒದ್ದುಬಿಟ್ಟು, ಕೆಡಹುವ-ಕೆಡವಿ ಬಿಡತಕ್ಕ, ಭರದೊಳು–ಸಂಭ್ರಮದಿಂದ, ಒತ್ತರಿಸಲು-ಮೇಲ್ವಾಯ್ದು ಬರಲಾಗಿ, ಆಗ–ಆವೇಳೆಯಲ್ಲಿ, ತೊಡೆ-ತೊಡೆಗಳು, ಜಾನು–ಮೊಣಕಾಲ್ಗಳು, ಪಾದಂಗಳಂ–ಅಡಿಗಳನ್ನು, ಎಚ್ಚು–ಬಾಣಗಳಿಂದ ಹೊಡೆದು, ಕುಶನು–ಕುಶನೆಂಬ ಬಾಲಕನು, ತುಂಡಿಸಿದನು–ತುಂಡುತುಂಡಾಗಿ ಮಾಡಿಬಿಟ್ಟನು ||೨೮||

ಟೀ|| ಬಾಹುಯುಗಂ–ಎರಡು ಕರಗಳೂ, ಊರುದ್ವಯಂ-ತೊಡೆಗಳೆರಡೂ, ಪೋದ–ಹಾಳಾದ, ಕಾಯದಿಂ–ದೇಹದಿಂದ, ಅವಂ–ಆ ನಗನಾದರೊ, ಸಾಹಸಂಮಾಡಿ-ಪರಾಕ್ರಮವನ್ನು ತೋರಿಸಿ, ಮೇಲ್ವಾಯ್ದು–ಮೇಲೆಬಿದ್ದು, ಆಕಾಶದಲ್ಲಿ ತೇಲಾಡುತ್ತಲಿರುವ, ಚಂದ್ರಂಗೆ–ಇಂದುವಿಗೆ, ರಾಹುವು–ರಾಹುವೆನ್ನತಕ್ಕ ಮುಂಡವು, ಅಂಘೈಸುವಂತೆ-ಬಂದು ಬಿಡಲು ಬರುವತೆರನಾಗಿ, ಉರವಣಿಸೆ–ಮೇಲ್ವಾಯ್ದುಬರಲು, ಕುಶನು–ಕುಶನಾದರೊ, ಅಳುಕದೆ–ಹೆದರದೆ, ಎಚ್ಚು–ಶರಸಂಧಾನಮಾಡಿ,

---

ತಮ್ಮನಾದ ನಗನೆಂಬುವನು ಕಂಡು ಕಡುರೋಷದಿಂದ ಆ ಬಾಲಕನಮೇಲೆ ದೊಡ್ಡ ಆನೆಯೊಂದನ್ನು ನುಗ್ಗಿಸಿದನು. ಕುಶನಾದರೊ ಅದನ್ನೂ ಅವನ ಧನುಸ್ಸನ್ನೂ ಎರಡು ತುಂಡಾಗಿ ಮಾಡಿ ನೆಲಕ್ಕೆ ಕೆಡಹಿಬಿಟ್ಟನು ಬಳಿಕ ಆ ನಗನು ಕೋಪಾವಿಷ್ಟನಾಗಿ ಹಲಗೆ ಕತ್ತಿಮೊದಲಾದವನ್ನು ಕೈಯ್ಯೊಳ್ಕೊಂಡು ಬಹುಬೇಗನೆ ಕುಶನನ್ನು ಕೊಲ್ಲಲುಜುಜ್ಜುಗಿಸಲಾಗಿ||೨೭|| ಕುಶನು ಸಮೀಪಕ್ಕೆ ಬರುತ್ತಲಿರುವ ನಗನ ಕೈಯನ್ನೆ ಕತ್ತರಿಸಿ ಹಾಕಿದರೂಕೂಡ, ಎಡಗೈಯಲ್ಲಿ ಗದೆಯಂ ಪಿಡಿದು ಹೊಡೆಯಲಾರಂಭಿಸಿದನು, ಕುಶನು ಆ ಕೈಯನ್ನೂ ಛೇದಿಸಲು ಭುಜಗಳಿಂದಪ್ಪಳಿಸಿ ಕೆಡಹುವೆನೆಂದು ಹೊರಟ ನಗನ ತೋಳುಗಳೂ ಕತ್ತರಿಸಲ್ಪಟ್ಟವು ನಗನು ಅದಕ್ಕೂ ಹಿಮ್ಮೆಟ್ಟದೆ ಕಾಲುಗಳಲ್ಲಿ ಒದ್ದು ಕುಶನನ್ನು ಕೆಡಹಬೇಕೆಂದುಜ್ಜುಗಿಸಿದರೆ ಅವನ ಕಾಲುಗಳೂಕೂಡ ತೋಳುಗಳ ಮಾರ್ಗವನ್ನೇ ಅನುಸರಿಸಿದವು, ಬಳಿಕ ತೊಡೆ ಹೆಜ್ಜೆ ಮೊಣಕಾಲುಗಳಿಂದಲೇ ಕುಶನನ್ನು ತೀರಿಸಿಕೊಳಲುಜ್ಜುಗಿಸಿದರೆ ಕುಶನು ಅವುಗಳನ್ನೂ ತುಂಡುತುಂಡಾಗಿ ಖಂಡಿಸಿದನು || ೨೮ || ಕೈಕಾಲು ತೊಡೆ ಮೊಣಕಾಲು ಇವೆಲ್ಲಾ ಹೋದರೂ ಕೂಡ ಉಳಿದ ಭಾಗದಿಂದಲೇ ಕಾದುತ್ತಲಿರುವ ನಗನ ತಲೆಯನ್ನು ಕುಶನು ಕಡಿದುಹಾಕಲು ಆ ತಲೆಯು ಕೆಳಕ್ಕೆ ಬಿದ್ದು ಹೋಗಿ

ಲ್ಯಾಯ್ಬುಚಂದ್ರಂಗೆ | ರಾಹುವಪ್ಪೈಸುವಂತುರುವಣಿಸೆ ಕುಶನಳುಕದೆಚ್ಚ ಸನತಲೆಯ ನರಿಯೆ || ಮಾಹೇಶ್ವರಾಭರಣದೋಳ್ಮೆರೆ
ದುದಾಶಿರಂ|ಕಾಹುರದಕುವರನಧಟಂ ಕಂಡು ಖಾತಿಯಿಂ| ದಾಹವಕೆಬಿಲ್ದುಡಿಕಿತರಳನಂ ಕೆಣಕಿದಂಬಂದು ಕಲಿಶತ್ರುಘ್ನನು |೨೯|| ಕ
ಡುಮುಳಿದುಶತ್ರುಘ್ನನೊಂಭತ್ತು ಬಾಣದಿಂ|ಬಿಡದೆಚ್ಚಡಾಕುಶಂ ಕೋಪದಿಂದನನತೇರ್|ಪುಡಿಯಾಗೆಸಾರಥಿಧಾಶ್ವಗಳ್ ಕೆಡೆಗೆಡೆಯೆ
ಬಿಲ್ಲುಡಿಯೆಪೇರುರದೊಳ್||ನಡುಸರಲ್ಕೀಲಿಸಲ್ಕದರನಂಬುಗಳನೋಡ| ನೊಡನೆಕರೆದೆಗಳಾರಂಪುತ್ತೆವಕ್ಷದೋಳ್| ತೊಡಿಸಿದಂ
ಕುಶನದರಘಾತಿಗೆವರೂಥದಿಂಭರತಾನುಜಂಬಿದ್ದನು||೩೦|| ಗಿರಿತಟದೊಳೊಂದೊಂದರೊಳ್ಪೆಣಗಿ ಸೋಲ್ದಮದ|ಕರಿಧರೆಗುರುಳ್ವಂತೆ
ಪೂರಾಯಘಾಯದಿಂ|ದಿರದಶತ್ರುಘ್ನಂ ಮಹೀತಳಕೆರಥದಿಂದಬೀಳ್ವನಿತರೊಳ್ಪಡೆಯೊಳು||ದೊರೆದೊರೆಗಳೆಲ್ಲರುಂ ಕೈಗೊಂಡು ಕಾದಿ
ಸಂ|ಗರದೊಳ್ಪತಿತರಾದರಾಕುಶನಬಾಣದಿಂ|ಪಿರಿದುಕನ್ಯಾವಿಕ್ರಯಂಗೈದುಜೀವಿಸುವಮಾನವನಪಿತೃಗಳಂತೆ| ೩೧|| ಬಹುದುರಿತ

ಅವನ-ಆ ನಗನೆಂಬುವನ, ತಲೆಯನು-ತಲೆಯನ್ನು, (ಶಿರಸ್ಸನ್ನು) ಅರಿಯೆ-ಕಡಿಯಲು, ಆಶಿರಂ-ಆ ತಲೆಯ ಭಾಗವು, ಮಾಹೇಶ್ವರ-ಈಶ್ವರ ಸಂಬಂಧದ, ಆಭರಣದೋಳ್-ಒಡವೆಗಳಿಂದ, (ರುಂಡದ ಹಾರಗಳಿಂದ) ಮೆರೆದುದು-ಹೊಳೆಯಲಾರಂಭಿಸಿತು, ಕಾಹುರದ-ಶೂರನಾದ, ಕುವರನ-ಬಾಲಕನಾಗಿರತಕ್ಕ ಕುಶನ, ಅಧಟಂ-ಸಾಹಸವನ್ನು, ಕಂಡು-ಈಕ್ಷಿಸಿ, ಕಲಿ-ವೀರನಾದ, ಶತ್ರುಘ್ನನು-ಶತ್ರುಘ್ನನಾದರೊ, ಖಾತಿಯಿಂದ-ಕೋಪದಿಂದ, ಬಿಲ್-ಚಾಪವನ್ನು, ತುಡುಕಿ-ಹಿಡಿದು, ಆಹವಕೆ-ರಣರಂಗಕ್ಕೆ, ಬಂದು-ಐತಂದು, ತರಳನಂ-ಬಾಲಕನಾದ ಕುಶನನ್ನು, ಕೆಣಕಿದಂ-ತೀಟೆಮಾಡಿದವನಾದನು ||೨೯||

ಟೀ|| ಶತ್ರುಘ್ನನು-ಶತ್ರುಘ್ನನಾದರೊ, ಕಡು-ಹೆಚ್ಚಾಗಿ, ಮುಳಿದು-ಸಿಟ್ಟುಮಾಡಿಕೊಂಡು, ಒಂಭತ್ತು ಬಾಣದಿಂದ-ಒಂಭತ್ತಾದ ಸಾಯಕಂಗಳಿಂದ, ಬಿಡದೆ-ಸುಮ್ಮನಿರದೆ, ಎಚ್ಚಡೆ-ಪ್ರಯೋಗಮಾಡಲಾಗಿ, ಆ ಕುಶನು-ಆ ಕುಶನೆಂಬ ಬಾಲಕನು, ಅವನ-ಆ ಶತ್ರುಘ್ನನ, ತೇರ್-ರಥವು, ಪುಡಿಯಾಗೆ-ನುಚ್ಚುನುಚ್ಚಾಗಿ ಆಗಿಹೋಗಲು, ಸಾರಥಿ-ರಥವನ್ನು ನಡೆಯಿಸತಕ್ಕವನೂ, ರಥಾಶ್ವಂಗಳು-ರಥಕ್ಕೆ ಕಟ್ಟಿರತಕ್ಕ ಕುದುರೆಗಳೂ, ಎಡಗೆಡೆಯೆ-ಹತ್ತಿರನಿಲ್ಲದೆ ಹೊರಡಲು,(ಉರುಳಲು)ಬಿಲ್ಲು-ಚಾಪವು, ಉಡಿಯೆ-ಮುರಿದು ಹೋಗಲು, ಪೇರ್-ಅಗಲವಾದ, ಉರದೊಳ್-ಎದೆಯ ಭಾಗದಲ್ಲಿ, ನಿಡುಸರಳ್-ಉದ್ದವಾದ ಅಲಗುಗಳು, ಕೀಲಿಸಲ್ಕೆ-ತಗಲಿಕೊಳ್ಳಲು, ಅದನ್ನು-ಆ ಎದೆಯಲ್ಲಿ ಸಿಕ್ಕಿಕೊಂಡಿರತಕ್ಕ ಕಣೆಗಳನ್ನೂ, ಅಂಬುಗಳನು- ಸರಲ್ಗಳನ್ನು ಸಹ, ಕರೆದನು-ವರ್ಷಿಸಿದನು, ಒಡನೊಡನೆ-ಮತ್ತೆ ಮತ್ತೆ-ಪುನಃ, ಕುಶನು-ಕುಶನೆಂಬಾತನು, ವಕ್ಷದೊಳ್-ಹೃದಯದಲ್ಲಿ, ತೊಡಿಸಿದಂ-ಸೇರಿಸಿದನು, ಅದರ-ಆ ಸರಲ್ಗಳ, ಘಾತಿಗೆ-ಹೊಡೆತಕ್ಕೆ, ಭರತಾನುಜಂ- ಶತ್ರುಘ್ನನು, ವರೂಥದಿಂದ-ತೇರಿನಿಂದ, ಬಿದ್ದನು-ಬಿದ್ದವನಾದನು ||೩೦||

ಟೀ|| ಗಿರಿತಟದೊಳ್-ಪರ್ವತಪ್ರಾಂತದಲ್ಲಿ, ಒಂದೊಂದರೊಳ್- ಒಂದೊಂದು ಗಜದೊಂದಿಗೆ, ಪೆಣಗಿ-ಕಾದಾಡಿ, ಸೋಲ್ದ-ಸೋತುಹೋದ, ಮದಕರಿ-ಮದ್ದಾನೆಯು, ಧರೆಗೆ-ನೆಲದಮೇಲೆ, ಉರುಳ್ವಂತೆ-ಬಿದ್ದುಹೋಗುವಹಾಗೆ, ಪೂರಾಯ-ಹೆಚ್ಚಾದ, ಗಾಯದಿಂದ-ಪೆಟ್ಟಿನಿಂದ, ಶತ್ರುಘ್ನಂ-ಶತ್ರುಘ್ನನು, ಇರದೆ-ಸಾವಕಾಶವಿಲ್ಲದೆ, ರಥದಿಂದ-ತೇರಿನಿಂದ, ಮಹೀತಳಕೆ-ಧರಾ ವಲಯದಲ್ಲಿ, ಬೀಳ್ವನಿತರೊಳ್- ಬಿದ್ದುಹೋಗುವುದರೊಳಗಾಗಿ, ಪಡೆಯೊಳು-ದಳದಲ್ಲಿ ದೊರೆಗಳು-ರಾಜಶ್ರೇಷ್ಠರು, ಎಲ್ಲರೂ-ಸಮಸ್ತರೂ, ಕೈಕೊಂಡು-ಯುದ್ಧಮಾಡಲುಜ್ಜುಗಿಸಿ, ಕಾದಿ-ಹೋರಾಡಿ, ಸಂಗರದೊಳ್-ರಣದಲ್ಲಿ, ಆ ಕುಶನ-ಆ ಕುಶನೆಂಬ ಬಾಲಕನ, ಬಾಣದಿಂ-ಕಣೆಯಿಂದ, ಪಿರಿದು-ಹೆಚ್ಚಾಗಿ, ಕನ್ಯಾವಿಕ್ರಯಂ-ಮಗಳನ್ನು ಮಾರುವಿಕೆಯನ್ನು, ಗೈದು-ಎಸಗಿ, ಜೀವಿಸುವ-ಹೊಟ್ಟೆ ಹೊರೆಯುತಕ್ಕ, ಮಾನವರ-ಜನರ, ಪಿತೃಗಳಂತೆ-ತಂದೆಯರ ತೆರನಾಗಿ, ಪತಿತರು-ನೆಲಕ್ಕೆ ಉರುಳಿದವರು ಮತ್ತು ಕುಲಹೀನರು, ಆದರು-ಆಗಿಹೋದರು ||೩೧||

ಈಶ್ವರನ ಕೊರಳಿನಿಂದ ಬಿದ್ದ ರುಂಡವೊ ಎಂಬಂತೆ ಪ್ರಕಾಶಿಸುತ್ತಲಿತ್ತು ಇದನ್ನೆಲ್ಲಾ ನೋಡುತ್ತಲಿದ್ದ ಶತ್ರುಘ್ನನು ಕಡುರೋಷಮಂ ತಾಳಿ ಧನುರ್ಧಾರಿಯಾಗಿ ತಾನೆ ಕುಶನಿದಿರಾಗಿ || ೨೯ || ಒಂಭತ್ತು ಬಾಣಗಳನ್ನು ತೆಗೆದುಕೊಂಡು ಕುಶನಮೇಲೆ ಬಿಡಲು ಬಾಲಕನು ಅತಿಯಾದ ಕೋಪವಂತಾಳಿ ಶತ್ರುಘ್ನನು ಬಿಟ್ಟ ಬಾಣಗಳನ್ನೆಲ್ಲಾ ಖಂಡಿಸಿ ಅವನ ಚತುರಂಗ ಬಲವನ್ನು ಪುಡಿಪುಡಿಮಾಡಿ ಮೇಲೆಮೇಲೆ ಅನೇಕ ಬಾಣಗಳನ್ನು ಬಿಟ್ಟು ಅವನ ಬಿಲ್ಲನ್ನು ಮುರಿದು ಕ್ರೂರ ಬಾಣಗಳನ್ನು ತೆಗೆದು ಎದೆಯಲ್ಲಿ ಚುಚ್ಚಲಾಗಿ, ಶತ್ರುಘ್ನನು ನೋವನ್ನು ತಡೆಯಲಾರದೆ ಕೆಳಕ್ಕೆ ಬಿದ್ದು ಹೋದನು || ೩೦ || ಬೆಟ್ಟಗಳ ಬುಡದಲ್ಲಿರುವ ಕಾಡಾನೆಗಳು ಒಂದರೊಂದಿಗೆ ಮತ್ತೊಂದು ಕಾದಿ ನೆಲದಮೇಲೆ ಉರುಳುವಂತೆ ಭೂಮಿಯಲ್ಲಿ ಬಿದ್ದುಹೋದ ಶತ್ರುಘ್ನನನ್ನು ಅವನ ಸೇನಾಜನರು ಮತ್ತು ಇತರ ರಾಜರೂ ನೋಡಿ, ಕುಶನೊಂದಿಗೆ ಕಾದಾಡಿ ಕನ್ಯಾವಿಕ್ರಯವನ್ನು ಮಾಡಿ ಮಹಾ ನರಕದಲ್ಲಿ ಬೀಳತಕ್ಕ ಪತಿತನಂತೆ ಎಲ್ಲರೂ ಭೂಮಿಯಲ್ಲಿ ಬಿದ್ದು ಹೋದರು || ೩೧ || ಘೋರ ಪಾಪಗಳೆಲ್ಲವೂ ಸುಕೃತದಿಂದ

ಮಂಧರ್ಮದಿಂದೊರಸುವಂತೆಕ-ಶ|| ನಹಿತರಂತನ್ನಭುಜಬಲದಿಂದಸವರಿದಂ| ಮಹದಾಹವದಮೂರ್ಛೆತಿಳಿದನಿತರೊಳ್ಕಂಡನಣ್ಣ ನಂಬಳಿಕಲವನು || ಸಹಜಾತರೀರ್ವರುಂಕೂಡಿದರ್ಪವನಹುತ | ವಹರಂತೆಮತ್ತೆಹಯಮಂಕಟ್ಟಿಕೊಂಡುವಿ | ಗ್ರಹಕೆನಿಲಲರಸನ ಡಿಗೆದೂತರಂಕಳುಹಿದರ್ಬಲದೊಳುಳಿದಭಟರು||೩೨||ಚರುಪುರೋಡಾಶತಂಡುಲತಿಲವ್ರೀಹಿಘೃತ| ದುರುಹವಿರ್ಧೂಮದಿಂದರುಣ ಲೋಚನನಾಗಿ| ಪರಿಮೇಖಲಾಶೃಂಗಮೃಗಚರ್ಮಧರನಾಗಿನವನೀತಲಿಪ್ತನಾಗಿ|| ಪರಮುನಿಗಳ್ವೆರಸಿಕನಕಜಾನಕಿಸಹಿತ|ಭರತಲ ಕ್ಷ್ಮಣರೊಡನೆಕೃತಯಜ್ಞಶಾಲೆಯೊಳ್| ವರದೀಕ್ಷೆಯಿಂದಕುಳ್ಳಿರ್ದೆಸೆವರಾಮನಂಕಂಡುಚರರಿಂತೆಂದರು ||೩೩|| ಅವಧರಿಸುಜೀಯ ನಿನ್ನಧ್ವರದಚಾರುಹಯ| ಮವನಿಯೊಳವಿಘ್ನದಿಂತಿರುಗಿಬಂದುದುಬಳಿಕ| ಲವನೆಂಬಬಾಲಕಂಕಟ್ಟಿದಂಕಡುಗಿದೊಡೆಬಲವೆಲ್ಲಮಂ

ಟೀ|| ಬಹು-ಹೆಚ್ಚಾದ, ದುರಿತಮಂ-ಪಾತಕವನ್ನು, ಧರ್ಮದಿಂ-ಸತ್ಕಾರ್ಯಗಳಿಂದ, ಒರಸುವಂತೆ-ಹೋಗಲಾಡಿಸುವ ತೆರನಾಗಿ, ಕುಶನು-ಕುಶನೆಂಬುವನು, ಅಹಿತರಂ-ವೈರಿಗಳನ್ನು, ತನ್ನ-ಸ್ವಕೀಯವಾದ, ಭುಜಬಲದಿಂದ-ಬಾಹುಶಕ್ತಿಯಿಂದ, ಸವರಿದಂ-ಸಂಹಾರಮಾಡಿದನು, ಅನಿತರೊಳ್-ಆ ಕಾಲಕ್ಕೆ, ಲವನು-ಲವನೆಂಬ ಬಾಲಕನು, ಮಹತ್-ದೊಡ್ಡದಾದ, ಆಹವದ-ರಣದ, ಮೂರ್ಛೆ-ಸ್ಮರಣೆ ತಪ್ಪಿರುವಿಕೆಯಿಂದ, ತಿಳಿದು-ಎಚ್ಚತ್ತು, ಅಣ್ಣನಂ-ತನ್ನಗ್ರಜನಾದ ಕುಶನನ್ನು, ಕಂಡನು-ಈಕ್ಷಿಸಿದನು, ಬಳಿಕ-ಅನಂತರ, ಸಹಜಾತರು-ಸಹೋದರರಾದ, ಈರ್ವರುಂ-ಲವಕುಶರೆಂಬಿಬ್ಬರೂ, ಪವನ-ಗಾಳಿಯು, ಹುತವಹರಂತೆ-ಮತ್ತು ಬೆಂಕಿಯ ತೆರನಾಗಿ, ಕೂಡಿದರು-ನೆರೆದವರಾದರು, ಮತ್ತೆ-ಪುನಹ, ಹಯಮಂ-ಅಶ್ವವನ್ನು, ಕಟ್ಟಿಕೊಂಡು-ಸೇರಿಸಿಕೊಂಡು, ವಿಗ್ರಹಕೆ-ಕಾಳಗಕ್ಕೆ, ನಿಲ್ಲಲು-ನಿಲ್ಲಲಾಗಿ, ಬಲದೊಳು-ದಳದಲ್ಲಿ, ಉಳಿದ-ಮಿಕ್ಕ, ಭಟರು-ಶೂರರು, ಅರಸನಲ್ಲಿಗೆ-ಶ್ರೀರಾಮಮೂರ್ತಿ ಸನ್ನಿಧಿಗೆ, ದೂತರಂ-ಸೇವಕರನ್ನು, ಕಳುಹಿದರ್-ಕಳುಹಿಸಿಕೊಟ್ಟವರಾದರು.

ಅ|| ವಿ|| ಸಹಜಾತರ್-ಸಹ-ಜೊತೆಯಲ್ಲಿ, ಜಾತರ್-ಹುಟ್ಟಿದವರು, (ಅಣ್ಣ ತಮ್ಮಂದಿರು ಕೃ. ವೃ.) ||೩೨||

ಟೀ|| ಚರು-ಬೆಂದಿರುವ ಅನ್ನ, ಪುರೋಡಾಶ-ಹವಿಸ್ಸಿಗೆ ಅಣಿಯಾಗಿರತಕ್ಕ ವಸ್ತು, ತುಂಡುಲ-ಅಕ್ಕಿಯ ಕಾಳು, ತಿಲ-ಎಳ್ಳು, ವ್ರೀಹಿ-ನೆಲ್ಲು, ಘೃತದ-ತುಪ್ಪ ಮೊದಲಾದವುಗಳಿಂದೊಡಗೂಡಿದ, ಉರು-ಅಧಿಕವಾದ, ಹವಿರ್ಧೂಮದಿಂದ-ಹವಿಸ್ಸಿನ ಸಂಬಂಧವಾದ ಹೊಗೆಯಿಂದ, ಅರುಣ-ಕೆಂಪಗಿರುವ, ಲೋಚನನು-ನಯನಂಗಳಿಂದೊಡಗೂಡಿದವನು, ಆಗಿ-ಆಗಿ ಹೋಗಿ, ಪರಿಮೇಖಲಾ-ಪರಿಮೇಖಲಾ ಎಂಬ ಹೆಸರಿನ ಉಡಿದಾರವು, ಶೃಂಗ-ಹುಲ್ಲೆಯ ಕೊಂಬು, ಮೃಗಚರ್ಮ-ಜಿಂಕೆಯ ಚರ್ಮ, ಮೊದಲಾದುವನ್ನು, ಧರನು-ಅವಲಂಬಿಸಿರತಕ್ಕವನು, ಆಗಿ-ಆಗಿದ್ದು, ನವನೀತ- ಬೆಣ್ಣೆಯಿಂದ, ಲಿಪ್ತನು-ಲೇಪನವನ್ನೈದಿದವನು, ಆಗಿ-ಆಗಿಬಿಟ್ಟು, ಪರಮು-ಶ್ರೇಷ್ಠರಾದ, ಮುನಿಗಳ್ವೆರಸಿ-ತಾಪಸರಿಂದ ಕೂಡಿ, ಕನಕ-ಬಂಗಾರದಿಂದ ಮಾಡಿದ, ಜಾನಕಿಸಹಿತ-ಸೀತೆಯೊಂದಿಗೆ, ಭರತ ಲಕ್ಷ್ಮಣರೊಡನೆ-ಭರತ ಲಕ್ಷ್ಮಣರ ಜತೆಯಲ್ಲಿ, ಕೃತ-ನೆರವೇರಿಸಲ್ಪಟ್ಟಿರತಕ್ಕ, ಯಜ್ಞಶಾಲೆಯೊಳ್-ಯಾಗದ ಮನೆಯಲ್ಲಿ, ವರ - ಉತ್ತಮವಾದ, ದೀಕ್ಷೆಯಿಂದ - ನಿಯಮದಿಂದ, ಕುಳ್ಳಿರ್ದು - ಕುಳಿತುಕೊಂಡು. ಎಸೆವ-ಹೊಳೆಯುತಕ್ಕ, ರಾಮನಂ-ಶ್ರೀರಾಮನನ್ನು, ಕಂಡು-ನೋಡಿ, ಚರರು-ಭಟರು, ಇಂತು-ಮುಂದೆ ಹೇಳುವಂತೆ, ಎಂದರು-ನುಡಿದರು ||೩೩||

ಟೀ|| ಜೀಯ-ಜಯ ಶಬ್ದದಿಂದ ಮೆರೆವ ರಾಮಚಂದ್ರಮೂರ್ತಿಯೆ, ಅವಧರಿಸು-ಆಲಿಸು, ನಿನ್ನ-ನಿನ್ನ ಸಂಬಂಧವಾದ, ಅಧ್ವರದ-ಯಾಗದ, ಚಾರುಹಯ-ಶ್ರೇಷ್ಠವಾದ ತುರುಗವು, ಅವನಿಯೊಳು-ಧರೆಯಲ್ಲಿ, ಅವಿಘ್ನದಿ-ನಿರುಪಾದಿಕಮಾಗಿ, ತಿರುಗಿ-ಸಂಚಾರಮಾಡಿಕೊಂಡು, ಬಂದುದು-ಐತಂದಿತು, ಬಳಿಕ-ಅನಂತರ, ಲವನೆಂಬ ಬಾಲಕಂ-ಹುಡುಗನಾದ ಲವನೆನ್ನತಕ್ಕವನು ಕುದುರೆಯಂ-ನಮ್ಮ ಅಶ್ವವನ್ನು, ಕಟ್ಟಿದಂ-ಕಟ್ಟಿಹಾಕಿದನು, ಕಡುಗಿದೊಡೆ-ಅವನನ್ನು ದಂಡಿಸಲುಜ್ಜುಗಿಸಿದರೆ, ಬಲ

ಪರಿಹಾರವಾಗುವಂತೆ ಶತ್ರುಗಳನ್ನೆಲ್ಲಾ ಕುಶನು ತನ್ನ ಬಾಹುಬಲದಿಂದ ಜಯಿಸಿ, ರಣರಂಗದಲ್ಲಿ ಮೆರೆಯುತ್ತಲಿದ್ದನು. ಅಷ್ಟು ಹೊತ್ತಿಗೆ ಲವನೂ ಎಚ್ಚರಗೊಂಡು ಕುಶನೊಂದಿಗೆ ಸೇರಿದನು. ಬಳಿಕ ಕುಶಲವರಿಬ್ಬರೂ ಗಾಳಿ ಬೆಂಕಿಗಳು ಸೇರಿದಂತಾಗಿ ಕುದುರೆಯನ್ನು ಪುನಃ ಹಿಡಿದುಕೊಂಡು ಯುದ್ಧಕ್ಕನುವಾದರು. ಶತ್ರುಘ್ನನ ಸೈನ್ಯದಲ್ಲಿ ಉಳಿದ ಭಟರು ಜಾಗ್ರತೆಯಾಗಿ ಶ್ರೀರಾಮಚಂದ್ರನ ಸನ್ನಿಧಿಗೆ ಈ ವೃತ್ತಾಂತವನ್ನರುಹಲು ದೂತರನ್ನಟ್ಟಿದರು ||೩೨|| ಆ ದೂತರು ತಡಮಾಡದೆ ಶ್ರೀರಾಮನಿದ್ದೆಡೆಗೆ ಬಂದು ಹೋಮದ್ರವ್ಯದಿಂದಲೂ, ಅಕ್ಕಿ, ತುಪ್ಪ, ಎಳ್ಳು ಮೊದಲಾದವುಗಳಿಂದಲೂ ಕೂಡಿದವನಾಗಿ, ಕೃಷ್ಣಾಜಿನ, ಜಿಂಕೆ ಕೊಂಬು ಮೊದಲಾದವುಗಳನ್ನು ಧರಿಸಿ, ನವನೀತ ಲೇಪನವಂ ಮಾಡಿಕೊಂಡು, ಅನೇಕ ತಾಪಸೋತ್ತಮರಿಂದೊಡಗೂಡಿದವನಾಗಿ, ದೀಕ್ಷಾಬದ್ಧನಾಗಿರುವ ಸ್ವಾಮಿಯನ್ನು ಕಂಡು || ೩೩ || ಓ ಮಹಾನುಭಾವನೆ! ಕೇಳು, ಯಜ್ಞಾಶ್ವವು ಸಕಲ ದೇಶಗಳನ್ನೂ ನಿರುಪಾಧಿಕವಾಗಿ ಸುತ್ತಿಕೊಂಡು ಊರಿಗೆ ಬರುತ್ತಿರುವಾಗ ಲವನೆಂಬ ಬಾಲಕನು ಅದನ್ನು ಕಟ್ಟಿಹಾಕಿದನು. ಶತ್ರುಘ್ನನೇ ಮೊದಲಾದವರೆಲ್ಲಾ ಅದನ್ನು ಬಿಡಿಸಲುಜ್ಜುಗಿಸಿದರೆ ಎಲ್ಲರನ್ನೂ ಆ ಹುಡುಗನು ಸಂಹರಿಸಿದನು. ಶತ್ರುಘ್ನನೇ ಅವನ ಮೇಲೆ

ಕೊಂದನು|ಬನರದೋಳ್ಶತ್ರುಘ್ನನಾತನಂಪಿಡಿತಂದೊ| ಡವನಬಳಿವಿಡಿದೋರ್ವನೈತಂದುನಿನ್ನನುಜ|ನವಘಡಿಸೆಕೆಡೆಯೆಚ್ಚುಬೀಳ್ಚಿದಂ ಪೇಳಲಂಜುವೆನೆಂದುಕೈಮುಗಿದರು||೩೪|| ಕೇಳ-ತಕನಲ್ದಿಲವೊ೯ಶತ್ರುಘ್ನನಂಜಯಿಸು| ವಾಳುಂಟೆಲೋಕದೊಳ್ಪೋಗಿವರ್ಮುಳರೆಂ| ದಾಳವಾಡಲ್ಜೀಯನಿಮ್ಮಡಿಗಳಾಣೆಪುಸಿಯಲ್ಲೆಂದುಮತ್ತೆಚರರು || ಪೇಳಲ್ಕೆಬೆರಗಾಗಿಮರುಗಿಲವಣಾಸುರಂ| ಕಾಳಗದೊಳೀತನಿಂದಳಿದನಾಬಾಲಕರ| ತೋಳಬಲ್ಪೆಂತೊಲಕ್ಷ್ಮಣಸೇನೆಸಹಿತನಡೆಯೆಂದುರಘುಪತಿನುಡಿದನು ||೩೫|| ಬಳಿಕರಾಘವನಂಘ್ರಿಗೆರಗಿಕಳುಹಿಸಿಕೊಂಡು | ತಳತಂತ್ರಸನ್ನಾಹದಿಂಕಾಲಜತುವೆಂಬ | ದಳಪತಿಸಹಿತಸುಮಿತ್ರಾತ್ಮಜಂನಗರಮಂಪೊರಮಟ್ಟುನಡೆವಭರಕೆ || ಇಳೆಸವೆದುದೇಳ್ವಕೆಂಧೂಳ್ಗಳಿಂದಂಬರ | ಸ್ಥಳವ್ಮೈದಲುತ್ಪತಾಕಧ್ವಜಂಗಳ್ದಿ | ಗ್ವಲಯಮಿಂಬಿಲ್ಲಘೋಳಿಡುವವಾದ್ಯ

---

ಮೆಲ್ಲಮಂ-ನಮ್ಮ ದಳನನ್ನೆಲ್ಲಾ, ಕೊಂದನು-ಕೊಂದು ಬಿಟ್ಟನು, ಶತ್ರುಘ್ನನು-ನಿನ್ನನುಜನಾದ ಶತ್ರುಘ್ನನು, ಆತನಂ-ಆ ಲವನನ್ನು, ಪಿಡಿತಂದೊಡೆ-ಹಿಡಿದುಕೊಂಡು ಬಂದರೆ, ಅವನ-ಆ ಲವನೆಂಬ ಬಾಲಕನ, ಬಳಿವಿಡಿದು- ದಾರಿಯನ್ನವಲಂಬಿಸಿ, ಓರ್ವನು-ಮತ್ತೊಬ್ಬನು. ಐತಂದು-ಬಂದವನಾಗಿ, ನಿನ್ನ-ಸ್ವಾಮಿಯ, ಅನುಜನು-ಒಡಹುಟ್ಟಿದವನಾದ ಶತ್ರುಘ್ನನು, ಅವಗಡಿಸೆ-ಎದುರಾಗಲು, ಕೆಡೆ-ಕೆಟ್ಟುಹೋಗುವಂತೆ, ಎಚ್ಚು-ಬಾಣವನ್ನು ಪ್ರಯೋಗಮಾಡಿ, ಬೀಳ್ಚಿದಂ-ಕೆಳಕ್ಕೆ ಉರುಳಿಸಿದನು, ಪೇಳಲು-ಈ ಸುದ್ದಿಯನ್ನು ನಿನ್ನ ಕೂಡೆ ತಿಳಿಸಲು, ಅಂಜುವೆವು-ಹೆದರುತ್ತೇವೆ, ಎಂದು-ಎಂಬತೆರನಾಗಿ ನುಡಿದು, ಕೈಮುಗಿದರು-ನಮಸ್ಕಾರ ಮಾಡಿದರು. ||೩೪||

ಟೀ|| ಕೇಳುತ-ಚರರ ನುಡಿಗಳನ್ನು ಕೇಳಿದ ಕೂಡಲೆ, ಕನಲ್ದು-ಕೋಪಮಂ ತಾಳಿ, ಎಲವೊ-ಎಲೈ ದೂತರೆ, ಲೋಕದೊಳ್-ಭೂಮಂಡಲದಲ್ಲಿ, ಪೋಗಿ-ಯುದ್ಧಕ್ಕೆ ಹೊರಟು, ಶತ್ರುಘ್ನನಂ-ಪರಾಕ್ರಮಿಯಾದ ನನ್ನ ತಮ್ಮನನ್ನು, ಗೆಲ್ವುವ-ಜಯಿಸಬಲ್ಲ, ಆಳು-ವೀರನು, ಉಂಟೆ-ಇದ್ದಾನೆಯೆ, ಇವರು-ಈ ದೂತರು, ಮರುಳರು-ಅವಿವೇಕಿಗಳು, ಎಂದು-ಎಂಬದಾಗಿ, ಆಳವಾಡಲ್-ವೀರ ನುಡಿಗಳಿಂದ ತಿಳಿಸಲು, (ಅಲಗಳೆಯಲ್) ಜೀಯ-ಪ್ರಭುವೆ, ನಮ್ಮ-ಸ್ವಾಮಿಯ, ಅಡಿಗಳ ಆಣೆ-ಪಾದಸಾಕ್ಷಿಯಾಗಿಯೂ, ಪುಸಿಯಲ್ಲ-ಸುಳ್ಳುಮಾತಲ್ಲವು, ಎಂದು-ಎಂಬುದಾಗಿ, ಚರರು-ದೂತರು, ಮತ್ತೆ-ತಿರುಗಿ, ಪೇಳಲ್ಕೆ-ನುಡಿಯಲು, ಬೆರಗಾಗಿ-ಅಚ್ಚರಿಯಿಂದ ಕೂಡಿ, ಮರುಗಿ-ದುಃಖಪಟ್ಟು, ಲವಣಾಸುರಂ-ಲವಣನೆಂಬ ರಕ್ಕಸನು, ಕಾಳಗದೊಳ್-ರಣದಲ್ಲಿ, ಈತನಿಂದ-ಈ ಶತ್ರುಘ್ನನಿಂದಲೆ, ಅಳಿದನು-ಸತ್ತುಹೋದನು, ಆಬಾಲಕರ-ಆಹುಡುಗರ, ತೋಳ್-ಬಾಹುಗಳ, ಬಲ್ಪು-ಸಾಮರ್ಥ್ಯವು, ಎಂತೊ-ಇನ್ನೆಷ್ಟುಸಾತ್ರದ್ದೋ, ಲಕ್ಷ್ಮಣ-ಓ ಲಕ್ಷ್ಮಣನೆ, ಸೇನೆ ಸಹಿತ-ದಳದೊಂದಿಗೆ, ನಡೆ-ಹೊರಡು ಎಂದು-ಎಂಬತೆರನಾಗಿ, ರಘುಪತಿ-ರಾಮಚಂದ್ರನು, ನುಡಿದನು-ಹೇಳಿದವನಾದನು ||೩೫||

ಟೀ|| ಬಳಿಕ-ಅನಂತರದಲ್ಲಿ, ರಾಘವನ-ಶ್ರೀರಾಮನ, ಅಂಘ್ರಿಗೆ-ಪಾದಗಳಿಗೆ, ಎರಗಿ-ನಮಸ್ಕಾರಮಾಡಿ, ಕಳುಹಿಸಿಕೊಂಡು-ಅನುಜ್ಞೆಯನ್ನುಹೊಂದಿ, ತಳತಂತ್ರ-ಬಾಣದ ಏಟುಗಳನ್ನುತಪ್ಪಿಸಿಕೊಳ್ಳುವ ಯುಕ್ತಿಯ, (ಸೇನೆಯ)ಸನ್ನಾಹದಿಂ-ಸಾಹಸದಿಂದ, ಕಾಲಜಿತ್-ಕಾಲಜಿತುವೆಂಬ, ದಳಪತಿಸಹಿತ-ಸೇನಾನಾಯಕನೊಂದಿಗೆ, ಸುಮಿತ್ರಾತ್ಮಜಂ-ಲಕ್ಷ್ಮಣನು, ನಗರಮಂ-ಅಯೋಧ್ಯಾಪಟ್ಟಣದಿಂದ, ಪೊರಮಟ್ಟು-ಹೊರಟವನಾಗಿ, ನಡೆವ-ಹೋಗುತ್ತಲಿರುವ, ಭರಕೆ-ಸಂಭ್ರಮಕ್ಕೆ, ಏಳ್ದು-ಮೇಲಕ್ಕೆದ್ದುಬರುವ, ಕೆಂಧೂಳ್ಗಳಿಂದ-ಕೆಂಪು ಮಣ್ಣಿನಿಂದ, ಅಂಬರಸ್ಥಳಂ-ಅಂತರಿಕ್ಷದೆಡೆಯು, ಐದಲು-ತುಂಬಿಕೊಳ್ಳಲು, ಉತ್-ಮೇಲಕ್ಕೆತ್ತಲ್ಪಟ್ಟರತಕ್ಕ,ಪತಾಕ-ಬಾವುಟಗಳಿಗೆ, ಮತ್ತುಧ್ವಜಂಗಳ್-ಧ್ವಜಪಟಗಳಿಗೆ,ದಿಗ್ವಲಯ-ದಿಕ್ಕುಗಳ ಆವರಣವು,ಇಂಬಿಲ್ಲ-

---

ಕಾದಿ ಆ ಬಾಲಕನನ್ನೂ ಯಜ್ಞಾಶ್ವವನ್ನೂ ಹಿಡಿದುಕೊಂಡು ಬರುತ್ತಿರುವಾಗ ಮತ್ತೊಬ್ಬ ಬಾಲಕನು ಬಂದು, ಉಳಿದ ಸೈನ್ಯವನ್ನೆಲ್ಲಾ ಹಾಳುಮಾಡಿ, ಶತ್ರುಘ್ನನನ್ನೂ ಕೂಡ ಕೆಳಗೆ ಕೆಡವಿಬಿಟ್ಟನು. ಈ ಸುದ್ದಿಯನ್ನು ಹೇಳಲು ಭಯವಾಗುತ್ತದೆ ಎಂದು ಹೇಳಿದರು ||೩೪|| ಚರರು ಹೇಳಿದ ಈ ಮಾತುಗಳನ್ನು ಶ್ರೀರಾಮನು ಕೇಳಿ, ಲೋಕದಲ್ಲಿ ಅಜೇಯನೆಂಬ ಬಿರುದನ್ನು ಪಡೆದಿರುವ ನನ್ನ ತಮ್ಮನನ್ನು ಸೋಲಿಸುವ ವೀರರು ಮತ್ತೆ ಯಾರಿರುವರು? ನಿಮ್ಮ ಮಾತು ಎಂದಿಗೂ ನಿಜವಲ್ಲವೆಂದು ಕೋಪದಿಂದ ಹೇಳಿದ ಶ್ರೀರಾಮನನ್ನು ನೋಡಿ, ಕೈಗಳಂ ಜೋಡಿಸಿಕೊಂಡು, ನಿಮ್ಮ ಪಾದಸಾಕ್ಷಿಯಾಗಿಯೂ ಇದನ್ನು ಅನೃತವೆಂದರಿಯಕೂಡದೆಂದು ದೂತರು ಮತ್ತೆ ಹೇಳಲಾಗಿ, ದಾಶರಥಿಯು ವಿಸ್ಮಯಂಗೊಂಡು ಲಕ್ಷ್ಮಣನನ್ನು ಕುರಿತು, ಲವಣಾಂತಕನಾದ ಶತ್ರುಘ್ನನನ್ನು ಜಯಿಸಿದ ಆ ಬಾಲಕರ ಪೌರುಷವೆಂತುಟೋ ಕಾಣೆನು. ಸೇನಾಸಮೇತನಾಗಿ ಯುದ್ಧಕ್ಕೆ ಹೊರಡೆಂದು ಅಜ್ಞಾಪಿಸಿದನು || ೩೫ || ಶ್ರೀರಾಮಮೂರ್ತಿಯಿಂದಾಜ್ಞಪ್ತನಾದ ಲಕ್ಷ್ಮಣನು ಕಾಲಜಿತುವೆಂಬ ಮುಖ್ಯ ಸೇನಾಪತಿಯಿಂದೊಡಗೂಡಿ, ಅಸ್ತ್ರಶಸ್ತ್ರಗಳಂ ಕೊಂಡು ಚತುರಂಗಬಲಸಹಿತನಾಗಿ ಪಟ್ಟಣದಿಂದ ಹೊರಟನು. ಈ ಅಪರಿಮಿತವಾದ ಸೈನ್ಯವು ಹೊರಡುವ ವೇಗಕ್ಕೆ ಭೂಮಿಯೆಲ್ಲಾ ಸವೆದು, ಕೆಂಧೂಳುಂಟಾಗಿ ಅಂತರಿಕ್ಷದವರೆಗೂ ವ್ಯಾಪಿಸಿಬಿಟ್ಟಿತು. ರಥಕ್ಕೆ ಕಟ್ಟಿದ್ದ

ಧ್ವನಿಗೆಪೊಸತಿದೆಂಬಂತಾಗಲು ‖ ೩೬ ‖ ಪೊಡವಿಯಗಲದಲ್ಕೈದುವಾನೆಗಳಸೇನೆಗಳ | ಕಡುಗಿಮುಂಬರಿವರಥವಾಜಿಗಳತೇಜಿಗಳ | ಬಿಡದೆಗಗನದೊಳಿಡಿದಸತ್ತಿಗೆಯುಮುತ್ತಿಗೆಯಡಾಳಿಸುವಚಾಮರಂಗಳ‖ ನಿಡುಪತಾಕೆಯವಿವಿಧಧಾತುಗಳಕೇತುಗಳ | ಜಡಿವಕೈದುಗಳಪೊಸರೋಚಿಗಳವೀಚಿಗಳ | ಪೊಡೆವತಂಬಟಪಟಹಭೇರಿಗಳಭೂರಿಗಳಪದಪಿಂದಪಡೆನಡೆದುದು‖ ೩೭‖ ಪ್ರಾಣಮಿಲ್ಲದೆಚೇತರಿಸಿಕೊಳಲ್ತನುವಿನೋಳ್ | ತ್ರಾಣವಿಲ್ಲದೆನೊಂದುಘಾಯದಿಂಮರವೆಯಂ | ಕೇಣಗೊಂಡೊರಗಿಶತ್ರುಘ್ನನಳಿದುಳಿದಬಲದೊಡನೆರಾಹುಗ್ರಸ್ತದ | ಏಣಧರನಂತಿರಲ್ಪಡೆಸಹಿತಲಕ್ಷ್ಮಣಂ | ಕ್ಷೋಣಿಪತಿಕೇಳ್ಬಂದುಕಂಡುಸೈಪಿಟ್ಟನು | ಕಾಣಬಹುದೆನುತಕೈವೀ

ಸಾಲದೇ ಹೋಯಿತು, ಘೀಳಿಡುವ-ಘೀ ಎಂದು ಧ್ವನಿಯಂ ಮಾಡತಕ್ಕ, ವಾದ್ಯ-ಭೇರಿ ಮೃದಂಗಾದಿಗಳ, ಧ್ವನಿಗೆ-ನಾದಕ್ಕೆ, ಇದು-ಈ ಕಾರ್ಯವು, ಪೊಸದು-ನೂತನವಾದದ್ದು, ಎಂಬಂತೆ-ಎನ್ನುವತೆರನಾಗಿ, ಆಗಲು-ಆಗಿ ಹೋಗಲು, ಇಳೆ-ಭೂಮಂಡಲವು, ಸವೆದುದು-ಸವೆಯುತ್ತ ಬಂದಿತು ‖

ಅ‖ ವಿ‖ ಸುಮಿತ್ರಾತ್ಮಜರ-ಸುಮಿತ್ರಾ-ಸುಮಿತ್ರಾದೇವಿಯ, ಆತ್ಮಜಂ-ಕುವರನು. (ಲಕ್ಷ್ಮಣನು ಷ. ತ.) ಕೆಂಧೂಳ್ಗಳ್-ಕೆಚ್ಚನೆ+ಧೂಳ್ಗಳ್ (ವಿ. ಪೂ.) ‖೩೬‖

ಟೀ‖ ಪೊಡವಿಯ-ಇಳೆಯ, ಅಗಲದೊಳು-ವಿಶಾಲದಷ್ಟು, ಐದುವ-ಬಂದು ಸೇರುವ, ಆನೆಗಳ-ಹಸ್ತಿಗಳ, ಸೇನೆಗಳ-ದಳಗಳ, ಕಡುಗಿ-ಹೆಚ್ಚಾಗಿ, ಮುಂಬರಿವ-ಮುಂದೆ ಮುಂದೆ ನುಗ್ಗತಕ್ಕ, ರಥರಾಜಿಗಳ-ತೇರುಗಳ ಸಾಲಿನ ಮತ್ತು, ತೇಜಿಗಳ-ಅಶ್ವಂಗಳ, ಬಿಡದೆ-ತಪ್ಪದೆ, ಗಗನದೋಳ್-ಅಂತರಿಕ್ಷದಲ್ಲಿ, ಇಡಿದ-ಸಾಂದ್ರವಾದ, ಸತ್ತಿಗೆಯ-ಕೊಡೆಗಳ, ಮತ್ತು ಮುತ್ತಿಗೆಯ-ಎಲ್ಲೆಲ್ಲಿಯೂ ಕವಿದುಕೊಳುವುದರ, ಡಾಳಿಸುವ-ಅಲ್ಲಾಡಿಸುತ್ತಲಿರುವ, ಚಾಮರಗಳ-ಚಾಮರಂಗಳೆನ್ನುವ ವಸ್ತುಗಳ, ನಿಡು-ನೀಳವಾಗಿರತಕ್ಕ, ಪತಾಕೆಯ-ಬಾವುಟದ, ವಿವಿಧ-ನಾನಾ ಪ್ರಕಾರವಾದ, ಧಾತುಗಳ-ವರ್ಣಸಹಿತಂಗಳಾದ, ಕೇತುಗಳ-ಧ್ವಜಪಟಗಳ, ಜಡಿವ-ಝಳಪಿಸುತ್ತಲಿರತಕ್ಕ, ಕೈದುಗಳ-ಕತ್ತಿಮೊದಲಾದವುಗಳ, ಪೊಸ-ನೂತನವಾದ, ರೋಚಿಗಳ-ಪ್ರಕಾಶಗಳ, ವೀಚಿಗಳ-ಸಮುದಾಯದಿಂದ ಕೂಡಿದ, ಪೊಡೆವ-ಹೊಡೆಯುತ್ತಲಿರತಕ್ಕ, ತಮ್ಮಟ-ತಮಟೆಯೆಂಬ ವಾದ್ಯವು. ಪಟಹಭೇರಿಗಳ-ಪಟಹ ಮತ್ತು ಭೇರಿಯೆಂಬವುಗಳ ನಿನದದ, ಭೂರಿಗಳ-ಹೆಚ್ಚಿಕೆಯ, ಪದಪಿಂದ-ಕಾಂತಿಯಿಂದ, ಪಡೆ-ದಳವು, ನಡೆದುದು-ಮುಂದರಿಯಿತು ‖

ಅ‖ ವಿ‖ ಪೊಡವಿ (ತ್ಭ) ಪೃಥ್ವಿ (ತ್ಸ) ಸತ್ತಿಗೆ (ತ್ಭ) ಛತ್ರಿಕ (ತ್ಸ) ಚಾಮರ (ತ್ಸ) ಚೌರಿ (ತ್ಭ) ‖ ೩೭ ‖

ಟೀ‖ ಘಾಯದಿಂದ-ಕಣೆಗಳ ಏಟುಗಳಿಂದ, ನೊಂದು-ವ್ಯಥೆಯಂತಾಳಿ, ತನುವಿನೊಳು-ದೇಹದಲ್ಲಿ, ಚೇತರಿಸಿಕೊಳಲು-ಸ್ವಲ್ಪಸಲ್ಪವಾಗಿ ಶಕ್ತಿಯು ತಲೆದೋರಲು, ಪ್ರಾಣಂ-ಉಚ್ಛ್ವಾಸ ನಿಶ್ವಾಸಗಳು, ಇಲ್ಲದೆ-ಇರದೆ, ತ್ರಾಣಂ-ಚೈತನ್ಯವು, ಇಲ್ಲದೆ-ಉಂಟಾಗದೆ, ಮರವೆಯಂ-ಮೈಮರೆದು ಬಿದ್ದು ಹೋಗಿದ್ದದ್ದನ್ನು, ಕೇಣಗೊಂಡು-ಹೋಗಲಾಡಿಸಿಕೊಂಡು, ಒರಗಿ-ನೆಲಕ್ಕೆ ಉರುಳಿ, ಅಳಿದು-ಸತ್ತುಹೋಗಿ, ಉಳಿದು-ಮಿಕ್ಕಿದ್ದ, ಬಲದೊಡನೆ-ದಳದೊಂದಿಗೆ, ರಾಹು-ರಾಹುವೆಂಬ ಗ್ರಹದಿಂದ, ಗ್ರಸ್ತ-ಹಿಡಿಯಲ್ಪಟ್ಟ, ಏಣಧರನಂತೆ-ಇಂದುವಿನತೆರನಾಗಿ ಶತ್ರುಘ್ನನು, ಇರಲ್-ಇರತಕ್ಕ ಕಾಲಕ್ಕೆ, ಲಕ್ಷ್ಮಣಂ-ಲಕ್ಷ್ಮಣನು, ಪಡೆಸಹಿತ-ದಳದೊಂದಿಗೆ, ಬಂದು-ಐತಂದು, ಕಂಡು-ತನ್ನನುಜನ ಸ್ಥಿತಿಯನ್ನೀಕ್ಷಿಸಿ, ಸೈಪಿಟ್ಟು-ಶಾಂತವಾದ ನುಡಿಗಳಿಂದ ಮನ್ನಿಸಿ, ಇನ್ನು-ಇನ್ನುಮೇಲೆ, ಕಾಣಬಹುದು-ಶತ್ರುಗಳಮೇಲೆ ಬೀಳಲನುವಾಗಬಹುದು, ಎನುತ-ಎಂದು ನುಡಿಯುತ್ತ. ಕಾಲಜಿತ್-ಕಾಲಜಿತ್ ಎನ್ನುವ ಸಾರಥಿಯೆ, ಮುಖ್ಯ-ಆದಿಯಾದ, ಸೇನಾನಿಗಳನು-ಮುಖ್ಯದಳಪತಿಗಳನ್ನು ಸಂಬೋಧಿಸಿ, ಕೈವೀಸಿದಂ-ಕಾಳಗವನ್ನುಪಕ್ರಮಿಸಲು ಅನುಜ್ಞೆಯನ್ನಿತ್ತನು ‖

ಅ‖ ವಿ‖ ಏಣಧರ-ಏಣ-ಜಿಂಕೆಯನ್ನು, ಧರ-ಧರಿಸಿರುವವನು (ಚಂದ್ರನು) ಕೈವೀಸಿದಂ ಕ್ರಿ. ಸ. ‖೩೮‖

ಧ್ವಜಪತಾಕೆಗಳಾದರೋ ಅಂತರಿಕ್ಷವನ್ನು ಮುಟ್ಟುತ್ತಲಿದ್ದವು. ಭೇರಿ ಮೃದಂಗಾದಿ ವಾದ್ಯಧ್ವನಿಗಳು ದಿಕ್ಕುಗಳ ತುದಿಯನ್ನಾವರಿಸಿದವು ‖ ೩೬ ‖ ಯುದ್ಧಕ್ಕೆ ಬಂದ ಆನೆಗಳು ಭೂಮಂಡಲವನ್ನೆಲ್ಲಾ ತುಂಬಿಕೊಂಡವು. ಕುದುರೆಗಳೂ ರಥಗಳೂ ನಿಲ್ಲಲು ನೆಲೆಯಿಲ್ಲದಷ್ಟು ಸಾಂದ್ರವಾಗಿ ವ್ಯಾಪಿಸಿದವು. ಕಾಲಾಳ್ಗಳು ಕತ್ತಿಗಳನ್ನು ಝಳಪಿಸುತ್ತಲೂ, ಸಿಂಹನಾದವನ್ನು ಮಾಡುತ್ತಲೂ ನಡೆದರು. ಎಲ್ಲಿ ನೋಡಿದರೂ ಛತ್ರ ಚಾಮರಾದಿಗಳು ಕಂಗೊಳಿಸುತಲಿದ್ದವು. ತಮಟೆ, ಭೇರಿ, ಪಟಹ, ನಿಸ್ಸಾಳಾದಿಗಳು ಧ್ವನಿಯನ್ನು ಮಾಡಿಕೊಂಡು ಸೇನಾರ್ಣವದಿಂದ ಕೂಡಿ, ಯುದ್ಧರಂಗವನ್ನು ಸೇರಿ ‖ ೩೭ ‖ ಹಗೆಯಾದ ಕುಶನೊಂದಿಗೆ ಹೋರಾಡಿ ತನ್ನ ಬಲವನ್ನೆಲ್ಲಾ ಕಳೆದುಕೊಂಡು ಪ್ರಾಣಮಾತ್ರದಿಂದಿರುವ ರಾಹುಗ್ರಸ್ತೇಂದುವಂತೆ ಮೆರೆಯುತ್ತಲಿರುವ ತಮ್ಮನಾದ ಶತ್ರುಘ್ನನನ್ನು ನೋಡಿ, ಒಳ್ನುಡಿಗಳಿಂದಾತನನ್ನು ಸತ್ಕರಿಸಿ, ಕಾಲಜಿತುವೇ ಮೊದಲಾದವರನ್ನು ಶತ್ರುಗಳ ಮೇಲೆ ಹೋರಾ

ಸಿದಂ ಕಾಲಜಿತುಮುಖ್ಯಸೇನಾನಿಗಳನು ॥ ೩೮ ॥ ಕಂಡರೀಚೆಯೊಳರಿಬಲವ್ಯೂಹನುಂಬರಲಿ । ಖಂಡಿಸುವೆವೆಂದೊರ್ವರೋ ೞ್ಮಾತಾಡಿ। ಕೊಂಡರದರೊಳ್ತನ್ನಬಿಲ್ಮುರಿದುದಾಹವದೊಳೆಂದುಲವನಗ್ರಜಂಗೆ॥ ಚಂಡಮುನಿಪತಿಮಾಡಿದುಪದೇಶದಿಂದಕೋ। ದಂಡಮಂಪಡೆವೆನೀಕ್ಷಣದೊಳೆಂದೊರೆದುರವಿ । ಮಂಡಲವನೀಕ್ಷಿಸುತತರಣಿಯಂಪ್ರಾರ್ಥಿಸಿದನನನುಪಮಸ್ತುತಿಗಳಿಂದ ॥೩೯॥ ಮಿತ್ರಾಯಸೂರ್ಯಾಯಹಂಸಾಯಪೂಷ್ಣೇಸ । ವಿತ್ರೇಜಗಚ್ಚಕ್ಷುಷೇಚಂಡಘೃಣಯೇಪ । ವಿತ್ರಾಯಪಿಂಗಾಯಪುರುಷಾ ಯಭಾನವೇಜ್ಯೋತಿಷೇಭಾಸ್ಕರಾಯ ॥ ಸತ್ರೈಕರೂಪಾಯವಿಮಲಾಯಸಾಕ್ಷಿಣೇ । ಕ್ಷೇತ್ರಿಣೇಸಹಸ್ರಕಿರಣಾಯರವಯೇ ಮಂದ । ಪಿತ್ರೇದಿವಾಕರಾಯಬ್ರಹ್ಮವಿಷ್ಣುರುದ್ರಾತ್ಮನೇತುಭ್ಯನಮಃ ॥ ೪೦ ॥ ಜಗಕೆನೀನೊಂದುಕಣ್ಣಾಗಿರ್ಪೆಮೇಣೆರಡು ಬಗೆಯಪಥದೊಳ್ನಡೆವೆತಿಳಿಯಲ್ಕೆಮೂರುಮೂ । ರ್ತಿಗಳನೊಳಗೊಂಡಿರ್ಪೆಸಲೆಸಂದನಾಲ್ಕುವೇದಂಗಳೊಡಲಾಗಿತೋರ್ಪೆ ॥

ಟೀ॥ ಈಚೆಯೊಳು-ಈ ಭಾಗದಲ್ಲಾದರೊ, ಕುಶಲವರೆಂಬ ಬಾಲಕರು, ಅರಿಬಲ-ವೈರಿದಳದ, ವ್ಯೂಹನುಂ-ಗುಂಪ ನ್ನು, ಕಂಡರು-ಈಕ್ಷಿಸಿದರು, ಬರಲಿ-ಶತ್ರುಸೈನ್ಯವು ಬಂದೊದಗಲಿ, ಖಂಡಿಸುವೆವು-ಸೀಳಿಬಿಡುತ್ತೇವೆ, ಎಂದು-ಎಂಬತೆರನಾಗಿ, ಓರ್ವರು-ಒಬ್ಬನು, ಓರ್ವರೋಳ್-ಮತ್ತೊಬ್ಬನೊಂದಿಗೆ, ಮಾತಾಡಿಕೊಂಡರ್-ಆಡಿಕೊಳ್ಳುತಲಿದ್ದರು, ಅದರೋಳ್-ಆ ಕಾ ಲಕ್ಕೆ ಸರಿಯಾಗಿ, ಲವನಾದರೂ, ಅಗ್ರಜನಿಗೆ-ತನ್ನ ಅಣ್ಣನಾದ ಕುಶನೆಂಬುವನಿಗೆ, ಆಹವದೊಳು-ರಣದಲ್ಲಿ, ತನ್ನ-ಸ್ವಂತವಾದ, ಬಿಲ್ಲು-ಧನುಸ್ಸು, ಮುರಿದುದು-ಮುರಿದು ಹೋಯಿತು, ಎಂದು-ಎಂಬ ಕಾರಣದಿಂದ, ಚಂಡಮುನಿಪತಿ-ಕಠಿಣ ತಪಸ್ಸನ್ನು ಮಾಡ ತಕ್ಕ ವಾಲ್ಮೀಕಿ ಮುನೀಂದ್ರನ, ಉಪದೇಶದಿಂದ-ಬೋಧನಾಶಕ್ತಿಯಿಂದ, ಈಕ್ಷಣದೊಳು-ಈಗಲೇ, ಕೋದಂಡಮಂ-ಧನು ಸ್ಸನ್ನು, ಪಡೆವೆನು-ಸಂಪಾದಿಸಿ ಕೊಳ್ಳುತ್ತೇನೆ, ಎಂದು-ಎಂಬತೆರನಾಗಿ, ಒರೆದು-ನುಡಿದು,(ರವಿಮಂಡಲವನು-ಇನಬಿಂಬವನ್ನು, ಈಕ್ಷಿಸುತ್ತ-ನಿರುಕಿಸುತ್ತ, ಅನುಪಮ-ಅಸಾಧಾರಣವಾದ, ಸ್ತುತಿಗಳಿಂದ-ಹೊಗಳುವಿಕೆಯಿಂದ, ತರಣಿಯ-ಕಮಲಮಿತ್ರನನ್ನು, ಪ್ರಾರ್ಥಿಸಿದನು-ಕೇಳಿಕೊಳ್ಳಲಾರಂಭಿಸಿದನು ॥

ಅ॥ ವಿ॥ ಸ್ತುತಿ. ತ್ಸ-ತುತಿ (ತ್ಭ). ಚಂಡಮುನಿಪತಿ. ಮುನಿಗಳ ಪತಿ (ಷ. ತ.) ಚಂಡ-ಕ್ರೂರ ತಪಸ್ವಿಯಾದ, ಮುನಿ ಪತಿ-ಋಷಿವರ್ಯನು (ವಿ. ಪೂ.) ॥೩೯॥

ಟೀ॥ ಮಿತ್ರಾಯ-ಚರಾಚರಗಳಿಗೆ ಹಿತಕರನೂ, ಸೂರ್ಯಾಯ-ಜೀವರಾಶಿಗಳು ಮಾಡುವ ಕಾರ್ಯಗಳಿಗೆ ಸಹಾಯ ಕನೂ, ಹಂಸಾಯ-ಅಜ್ಞಾನವನ್ನು ನೀಗಿ ಸುಜ್ಞಾನವನ್ನೀಯುವ ಮತ್ತು ಕತ್ತಲನ್ನು ಕಳೆದು ಹಗಲನ್ನುಂಟುಮಾಡತಕ್ಕವನಾ ಗಿಯೂ, ಪೂಷ್ಣೇ-ಎಲ್ಲಾ ಜೀವಿಗಳಿಗೂ ಶಕ್ತಿಯನ್ನೀಯ ತಕ್ಕವನು, ಪವಿತ್ರೇ-ನಿದ್ರಾವಸ್ಥೆಗೆ ಸಿಕ್ಕಿರತಕ್ಕವರನ್ನು ಎಬ್ಬಿಸಿ ಅವರ ಕಾರ್ಯಕ್ಕೆ ಹೋಗಲು ಸಹಾಯಕನೂ, ಜಗತ್-ಲೋಕಗಳಿಗೆಲ್ಲಾ, ಚಕ್ಷುಷೇ- ನಯನಂಗಳಂತಿರುವನೂ, ಚಂಡಘೃಣಯೆ- ಉಗ್ರವಾದ ಕಿರಣಗಳುಳ್ಳವನೂ, ಪವಿತ್ರಾಯ-ನಿರ್ಮಲನೂ ಮತ್ತು ಅಭಯಪ್ರದನೂ, ಪಿಂಗಾಯ-ಹಳದಿ ಬಣ್ಣದಿಂದಕೂ ಡಿದವನೂ, ಪುರುಷಾಯ-ಪುರುಷನೆಂಬ ಹೆಸರಿನಿಂದ ಹೊಗಳಿಸಿ ಕೊಳ್ಳತಕ್ಕವನೂ, ಭಾನವೆ-ಕ್ರಾಂತರವಾದ ಕಿರಣಗಳನ್ನು ಳ್ಳವನೂ, ಜ್ಯೋತಿಷೆ-ತೇಜೋವಿಶಿಷ್ಟನೂ, ಭಾಸ್ಕರಾಯ-ಪ್ರಕಾಶವನ್ನು ಕೊಡತಕ್ಕವನೂ, ಸತ್ರ-ಯಾಗಾದಿಗಳಿಗೆ, ಏಕ ರೂಪಾಯ-ಮೇಲಾದ ಆಕಾರವುಳ್ಳವನೂ, ವಿಮಲಾಯ-ಅತ್ಯಂತ ಪರಿಶುದ್ಧನೂ, ಸಾಕ್ಷಿಣೆ-ಸಾಕ್ಷಿಭೂತನೂ, ಕ್ಷೇತ್ರಿಣೆ-ಎಲ್ಲೆ

ಡಲನುಜ್ಞೆಯನ್ನಿತ್ತವನಾದನು, ॥ ೩೮ ॥ ಇತ್ತ ಕುಶಲವರಾದರೊ, ವ್ಯೂಹಾಕಾರವಾಗಿ ನಿಂತಿರುವ ವೈರಿಬಲವನ್ನು ನೋಡಿ, ತಮ್ಮಲ್ಲಿ ತಾವೇ ಹಗೆಗಳನ್ನೆಲ್ಲಾ ಧ್ವಂಸ ಮಾಡಬೇಕೆಂದಂದು ಕೊಳ್ಳುತ್ತಲಿದ್ದರು. ಆಗ ಲವನು ತನ್ನಣ್ಣನನ್ನು ಕುರಿತು ಎಲೈ ಅಗ್ರಜನೇ ಇದುವರೆಗೂ ನಾನು ಶತ್ರುಗಳೊಂದಿಗೆ ಹೋರಾಡಿದ್ದರಿಂದ ನನ್ನ ಬಿಲ್ಲು ಮುರಿದು ಹೋಗಿದೆಯಾದಕಾರಣ ನಮ್ಮ ಗುರುಗಳಾದ ವಾಲ್ಮೀಕಿ ಮಹರ್ಷಿಗಳು ಉಪದೇಶ ಮಾಡಿರತಕ್ಕ ಮಹಾ ಮಂತ್ರಗಳಿಂದ ಸೂರ್ಯನನ್ನು ಮೆಚ್ಚಿಸಿ ನೀನು ನೋಡುತ್ತಿರುವಾಗಲೇ ಅಸಾಧಾರಣವಾದ ಧನುಸ್ಸನ್ನು ಪಡೆಯುವೆನೆಂದು ಸೂರ್ಯನನ್ನು ಪ್ರಾರ್ಥಿಸತೊಡಗಿದನದೆಂ ತೆನೆ ॥ ೩೯ ॥ ಎಲೈ ಚೇತನಾ ಚೇತನ ವಸ್ತುಗಳನ್ನು ಪ್ರೀತಿಗೊಳಿಸತಕ್ಕ ಮಹಾನುಭಾವನೇ! ಸಕಲ ಜೀವರಾಶಿಗಳೂ ತಮ್ಮ ತಮ್ಮ ಕಾರ್ಯಗಳಲ್ಲಿ ಪ್ರವರ್ತಿಸಲು ಸಹಾಯಕನಾದ ಸ್ವಾಮಿಯೇ! ಕತ್ತಲನ್ನೂ, ಭಕ್ತರ ಪಾಪಗಳನ್ನೂ ನೀಗಿ ಕಾಪಾಡತಕ್ಕ ದ್ದರಲ್ಲಿ ಸದಾ ನಿರತನಾಗಿರುವ ಪರಮಾತ್ಮನೆ! ಎಲ್ಲಾ ವಸ್ತುಗಳಿಗೂ ಚೈತನ್ಯವನ್ನಿತ್ತು, ತೀಕ್ಷ್ಣ ಕಿರಣಗಳಿಂದ ಕೂಡಿ, ಪರಿಶು ದ್ಧನಾಗಿಯೂ, ಪಿಂಗಳ ವರ್ಣದಿಂದಲೂ ಕೂಡಿ, ತೇಜೋರೂಪನಾಗಿ ಪ್ರಕಾಶಮಾನನಾಗಿರುವ ಪರಮ ಪುರುಷನೆ, ಯಜ್ಞ ಯಾಗಾದಿಗಳಿಗೆ ಮುಖ್ಯನೂ ಪವಿತ್ರಾಂತರಂಗನೂ ಆಗಿ, ಸಾಕ್ಷಿಭೂತನೂ, ಎಲ್ಲೆಡೆಗಳಲ್ಲಿಯೂ ನೆಲಸಿದವನೂ, ಸಹಸ್ರಪ್ರ ಕಾರವಾದ ಕಿರಣಗಳಿಂದ ಕೂಡಿದವನೂ ಆಗಿ ದೇವತೆಗಳಿಂದಲೂ ರಾಕ್ಷಸರಿಂದಲೂ ಹೊಗಳಿಸಿ ಕೊಳ್ಳುತ್ತಾ ಶನೀಶ್ವರನಿಗೆ

ಅಗಲದೈದಂಗದೋಳ್ಕಾಣಿಸುವೆಪರಿಪರಿಯೊ | ಳೊಗೆದಾರುಋತುಗಳೊಳ್ವರ್ತಿಸವೆಸಂತತಂ | ಗಗನಕೇಳಶ್ವಮಂಕೊಂಡೇಳ್ವೆ ದೇವಬಿಲ್ಗೊಟ್ಟುಳುಹಬೇಕೆಂದನು ‖ ೪೧ ‖ ಪತ್ತುದೆಸೆಯಂಬೆಳಗಿಸುವೆಪನ್ನೆರಡುರಾಶಿ | ಗೊತ್ತಾಸೆಯಾಗಿರ್ಪೆಶತಪತ್ರಮಿತ್ರ ನಹೆ | ಮತ್ತೆಸಾಸಿರಕಿರಣದಿಂದೆಸೆವೆಲಕ್ಷಯೋಜನದಳತೆಯೊಳ್ತೊಳಗುವೆ‖ ಬಿತ್ತರದನಂತದೊಳ್ಸಂಚರಿಪದೇವನೀ | ನುತ್ತಮ

ಲ್ಲಿಯೂ ನೆಲೆಯಾಗಿರತಕ್ಕವನೂ, ಸಹಸ್ರಕಿರಣಾಯ - ಒಂದುಸಾವಿರ ಕಿರಣಗಳಿಂದೊಡಗೂಡಿದವನೂ, ಗವಯೆ - ದೇವತೆಗ ಳಿಂದಲೂ ರಾಕ್ಷಸರಿಂದಲೂ ಪೂಜೆಯಂ ಪಡೆಯುವನೂ, ಮಂದ - ಶನೀಶ್ವರನಿಗೆ, ಪಿತ್ರೆ-ಜನಕನೂ, ದಿವಾಕರಾಯ - ಹಗಲ ನ್ನುಂಟುಮಾಡುವನೂ, ಬ್ರಹ್ಮವಿಷ್ಣುರುದ್ರಾತ್ಮನೆ-ಬ್ರಹ್ಮ, ವಿಷ್ಣು, ಮಹೇಶ್ವರರೆಂಬ ಮೂರು ರೂಪಕ್ಕೂ ಕಾರಣನೂ ಆಗಿರ ತಕ್ಕ, ತುಭ್ಯಂ-ಸೂರ್ಯನಾದ ನಿನಿಗೆ, ನಮಃ-ವಂದನೆಗಳು ‖

ಅ‖ ವಿ‖ ಜಗಚ್ಚಕ್ಷುಷೆ-ಜಗತಃ ಚಕ್ಷುः (ಷ. ತ) ಚಂಡಘೃಣಯೆ (ಬ. ಸ.) ಪವಿತ್ರಾಯ-ಪವಿಯಿಂದ, ತ್ರ (ಕೃ. ವೃ.) ದಿವಾಕರಾಯ (ಕೃ. ವೃ.) ರುದ್ರಾತ್ಮ (ಬ. ಸ.) ‖೪೦‖.

ಟೀ‖ ನೀನು-ಸೂರ್ಯನಾಮಕನಾದ ನೀನು, ಜಗಕೆ-ಲೋಕಕ್ಕೆ, ಒಂದುಕಣ್ಣಾಗಿ - ಒಂದು ನೇತ್ರನಾಗಿ, ಇರ್ಪೆ-ಇರು ತ್ತೀಯೆ, ಮೇಣ್-ಅಲ್ಲದೆ, ಎರಡುಬಗೆಯ-ಎರಡುತೆರನಾದ, ಪಥದೊಳು-ಮಾರ್ಗದಲ್ಲಿ, ನಡೆವೆ-ನಡೆಯತಕ್ಕವನಾಗಿದ್ದಿ, ದಕ್ಷಿಣಾ ಯನದಲ್ಲಿಯೂ ಉತ್ತರಾಯಣದಲ್ಲಿಯೂ ಬೇರೆಬೇರೆ ವಿಧವಾಗಿ ತಿರುಗುತ್ತೀಯೆ, ತಿಳಿಯಲ್ಕೆ - ರಹಸ್ಯಗಳನ್ನರಿತರೆ, ಮೂರು ಮೂರ್ತಿಗಳನು-ತ್ರಿಮೂರ್ತಿಗಳನ್ನು, ಒಳಕೊಂಡು-ವಶಪಡಿಸಿಕೊಂಡು, ಇರ್ಪೆ - ಇರುತ್ತೀಯೆ, ಸಲೆ - ಚನ್ನಾಗಿ, ಸಂದ-ಸೇರಿ ದಿರುವ, ನಾಲ್ಕುವೇದಂಗಳು-ಋಗ್ವೇದಾದಿಯಾಗಿರತಕ್ಕ ನಾಲ್ಕು ವೇದಗಳು, ಒಡಲಾಗಿ-ಅವಯವವಾಗಿ, ತೋರ್ಪೆ-ತೋರು ತ್ತೀಯೆ, ಅಗಲದೆ-ಬಿಟ್ಟುಬಿಡದೆ, ಐದಂಗದೊಳ್-ಐದು ಅವಯವಗಳಿಂದ, ಕಾಣಿಸುವೆ-ತೋರುತ್ತೀಯೆ, ಪರಿಪರಿಯೊಳು-ತೆರ ತೆರನಾಗಿ, ಬಗೆದ-ಉಂಟಾದ, ಆರುಋತುಗಳೊಳ್ - ಷಡೃತುಗಳಿಂದ, ವರ್ತಿಸುವೆ - ಪ್ರವೇಶಮಾಡಿರತಕ್ಕವನಾಗಿರುತ್ತೀಯೆ, ಸಂತತಂ-ಅನವರತವೂ, ಗಗನಕೆ - ಆಕಾಶಕ್ಕೆ, ಏಳಶ್ವಮಂ - ಏಳುತುರಗಗಳನ್ನು, 'ಸಪ್ತ' ನಾಮಕನಾದ ಅಶ್ವವೊಂದನ್ನು, ಕೊಂಡು-ತೇರಿಗೆಬಿಗಿದು, ಏಳ್ವೆ-ಸಂಚರಿಸುತ್ತಿ, ದೇವ-ಪ್ರಭುವೇ, ಬಿಲ್ಲ-ಚಾಪವನ್ನು, ಕೊಟ್ಟು-ದಯಪಾಲಿಸಿ, ಉಳುಹಬೇಕು- ಕಾಪಾಡಬೇಕು, ಎಂದನು-ಎಂಬದಾಗಿ ಹೇಳಿದನು ‖

ಅ‖ ವಿ‖ ನಾಲ್ಕುವೇದಗಳು-ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವಣವೇದ ಎಂಬವು, ಅಂಗಗಳು-ಶಿಕ್ಷಾ ವ್ಯಾಕರಣ, ಛಂದಸ್ಸು, ನಿರುಕ್ತ, ಜ್ಯೋತಿಷ, ಕಲ್ಪವೆಂಬಿವು, ಆರುಋತುಗಳ್-ವಸಂತ, ಗ್ರೀಷ್ಮ, ವರ್ಷ, ಶರತ್, ಹೇಮಂತ, ಶಿಶಿರಋತುಗಳೆಂಬಿವು, ಬಿಲ್ಗೊಟ್ಟು-ಬಿಲ್ಲಂ, ಕೊಟ್ಟು (ಕ್ರಿ. ಸ.) ‖೪೧‖

ಟೀ‖ ಲವನ-ಲವನೆಂಬ ಬಾಲಕನು, ದಿನಮಣಿಯ - ಹಗಲಿಗೆ ರತ್ನಪ್ರಾಯನಾದ ಸೂರ್ಯನನ್ನು ಕುರಿತು, ಪತ್ತು ದೆಸೆಯಂ-ಹತ್ತು ದಿಕ್ಕುಗಳನ್ನು, ಎಂದರೆ ಇಂದ್ರಾದಿ ಅಷ್ಟದಿಕ್ಕುಗಳನ್ನೂ, ಪಾತಾಳ ಮತ್ತು ಸ್ವರ್ಗಲೋಕಗಳನ್ನೂ, ಬೆಳಗಿ ಸುವೆ-ಕಾಂತಿಯಿಂದ ತುಂಬಿಸುತ್ತಿ, ಪನ್ನೆರಡುರಾಶಿಗೆ-ಮೇಷಾದಿಯಾದ ಹನ್ನೆರಡು ರಾಶಿಗಳಿಗೆ, ಒತ್ತಾಸೆಯಾಗಿ-ಸಹಾಯಕನಾಗಿ, ಇರ್ಪೆ-ಇರುತ್ತೀಯೆ, ಶತಪತ್ರ-ಕಮಲಗಳಿಗೆ, ಮಿತ್ರನು - ಸ್ನೇಹಿತನು, ಅಹೆ - ಆಗಿರುತ್ತೀಯೆ, ಮತ್ತೆ - ಅಲ್ಲದೆ, ಸಾಸಿರಕಿರಣ ದಿಂದ-ಸಹಸ್ರರಶ್ಮಿಗಳಿಂದ, ಎಸೆವೆ-ಹೊಳೆಯುತ್ತಿದ್ದಿ, ಲಕ್ಷಯೋಜನದ-ಲಕ್ಷಗಾವುದದ, ಅಳತೆಯೊಳ್-ವೈಶಾಲ್ಯದಲ್ಲಿ, ತೊಳ ಗುವೆ-ಕಾಂತಿಯುಕ್ತನಾಗಿರುತ್ತಿ, ಬಿತ್ತರದ-ಬಹು ದೊಡ್ಡದಾಗಿರತಕ್ಕ, ಅನಂತದೊಳ್ - ಅಂತರಿಕ್ಷಮಾರ್ಗದಲ್ಲಿ, ಸಂಚರಿಪೆ- ಸಂಚಾರವಂಮಾಡುವನಾಗುತ್ತಿ, ದೇವ-ಪ್ರಭುವಾದ ಸೂರ್ಯನೆ, ನಿನ್ನ-ನಿನ್ನ ಸಂಬಂಧವಾದ, ಉತ್ತಮ-ಮೇಲೆನಿಸಿರತಕ್ಕ, ಗುಣಾ ವಳಿಯನು-ಒಳ್ಳೆ ಗುಣಗಳ ರಾಶಿಯನ್ನು, ಎಣಿಸಲು-ಲೆಕ್ಕಮಾಡಬೇಕಾದರೆ, ಎನ್ನ-ನನಗಾದರೋ, ಅಳವೆ-ಸಾಧ್ಯವಾದೀತೆ, ಬಿಲ್ಲ-

ತಂಪೆಂಬೂ, ಬೆಳಕನ್ನುಂಟುಮಾಡತಕ್ಕವನೂ ಆಗಿರತಕ್ಕ, ತ್ರಿಮೂರ್ತಿಸ್ವರೂಪನಾದ ಪಾವನಮೂರ್ತಿಯೇ ನಿನಗೆ ನಮಸ್ಕಾ ರವು ‖೪೦‖ ಪ್ರಪಂಚಕ್ಕೆಲ್ಲಾ ಕಣ್ಣಾಗಿಯೂ ಉತ್ತರಾಯಣ ದಕ್ಷಿಣಾಯನ ಗತಿಗಳುಳ್ಳವನಾಗಿಯೂ, ತ್ರಿಮೂರ್ತಿಸ್ವರೂಪ ನಾಗಿಯೂ, ಋಗ್ವೇದ ಮೊದಲಾದ ನಾಲ್ಕು ವೇದಂಗಳೆಂಬವಯವಗಳಿಂದ ಮೆರೆಯುತ್ತಲೂ, ಶಿಕ್ಷಾದಿವೇದಾಂಗಗಳಿಗೆ ಗೋಚರ ನಾಗಿಯೂ, ಆರು ಋತುಗಳಲ್ಲಿಯೂ ಅನುವರ್ತಿಸುವನಾಗಿಯೂ, ಆಕಾಶಕ್ಕೆ ಸಪ್ತನಾಮಕವಾದ ಕುದುರೆಯನ್ನು ಹೂಡಿ ಸಂಚರಿಸುವನಾಗಿಯೂ ಇರುವ ಪಾವನ ಮೂರ್ತಿಯಾದ ಮಹಾನುಭಾವನೇ ‖ ೪೧ ‖ ಹತ್ತು ದಿಕ್ಕುಗಳನ್ನೂ ನಿನ್ನ ಕಾಂತಿ ಯಿಂದ ತುಂಬಿ, ಮೇಷಾದಿ ಹನ್ನೆರಡು ರಾಶಿಗಳ್ಗಧಿಪನಾಗಿ, ಕಮಲಗಳಿಗೆ ಸಖನೂ, ಸಹಸ್ರ ಕಿರಣನೂ ಆಗಿ, ಲಕ್ಷಯೋಜನದ ವಿಸ್ತಾರದಲ್ಲಿ ಸಂಚರಿಸುತ್ತಾ ಪ್ರಕಾಶವಾಗಿರತಕ್ಕ ಸೂರ್ಯನೇ, ಅಸದೃಶವಾದ ನಿನ್ನ ಸದ್ಗುಣಗಳನ್ನು ಬಣ್ಣಿಸಲು ನಾನು ಶಕ್ತ,

ಗುಣಾವಳಿಯುನೆಣಿಸಲೆನ್ನ | ಳವೆಬಿಲ್ಲಿತ್ತುಳುಹಬೇಕೆಂದುದಿನಮಣಿಯನಾಲವಂನುತಿಸಿದಂಭಕ್ತಿಯಿಂದ ॥ ೪೨ ॥ ಅವನೀಶ ಕೇಳ್ಬಳಿಕಲವನವಿಮಲಸ್ತುತಿಗೆರವಿಮೆಚ್ಚಿಕೊಟ್ಟನಾತನಕೈಗೆದಿವ್ಯಚಾ | ಪವನದಂಕೊಂಡಗ್ರಜಂಗೆತೋರಿಸಿಮುನಿಪವಾಲ್ಮೀಕಿ ಬಾಳುಗೆನುತ ॥ ಪವಣನಾರೈದುಬಿಲ್ದಿರುವನೊದರಿಸಿದನು | ತ್ಸವದಿಂದಕುಶನುಗ್ರಕೋದಂಡಮುಂಪಿಡಿದ | ರವರೀರ್ವರುಂಮತ್ತೆ ಪವನಪಾವಕರಂತೆಪೊಕ್ಕರರಿಬಲವನೆಸುತ ॥ ೪೩ ॥ ನೂರಾಳಿಗೊಂದುಹಯಮಿರುತಿರ್ಪುದಾಹಯಂ | ನೂರಕಿರುತಿಹುದು ಮೇಣೊಂದುರಥಮಾರಥಂ | ನೂರಕಿಭವೊಂದಿರ್ಪುದಿಂತಿಭಸಹಸ್ರಮಿರೆಭ್ರಮಿಯೆಂದೆನಿಸಿಕೊಂಬುದು ॥ ಮಾರಿಯೋಜನದಳತೆ

---

ಚಾಪವನ್ನು, ಇತ್ತು-ದಯಪಾಲಿಸಿ, ಉಳುಹಬೇಕು - ಕಾಪಾಡಬೇಕು, ಎಂದು-ಎಂಬತೆರನಾಗಿ, ಆಲವಂ-ಕುಶನ ತಮ್ಮನಾದ ಲವನು, ದಿನಮಣಿಯನು-ರವಿಯನ್ನು, ಭಕ್ತಿಯಿಂದ-ಭಕ್ತಿಪುರಸ್ಸರವಾಗಿ, ನುತಿಸಿದಂ-ಹೊಗಳಿ ಮೆಚ್ಚುವಂತೆ ಮಾಡಿದನು॥

ಅ॥ ವಿ॥ ಪತ್ತುದೆಸೆಗಳು-ಇಂದ್ರ, ಅಗ್ನಿ, ಯಮ, ನೈರುತ್ಯ, ವರುಣ, ವಾಯುವ್ಯ, ಕುಬೇರ, ಈಶಾನ. ಪನ್ನೆರಡು ರಾಶಿಗಳು-ಮೇಷ, ವೃಷಭ, ಮಿಥುನ, ಕರ್ಕಾಟಕ, ಸಿಂಹ, ಕನ್ಯ, ತುಲ, ವೃಶ್ಚಿಕ, ಧನುಸ್ಸು, ಮಕರ, ಕುಂಭ, ಮೀನ ಎಂಬವು. ಬಿತ್ತರದ (ತ್ಭ). ವಿಸ್ತಾರದ (ತ್ಸ). ವಿಷ್ಣುವನ್ನು ಮೆಚ್ಚಿಸಲು ಅನೇಕ ದಿವ್ಯಾಲಂಕಾರಗಳನ್ನು ಮಾಡಬೇಕು. ಅಭಿಷೇಕಾದಿಗಳಿಂದ ಈಶ್ವರನು ತೃಪ್ತನಾಗಿ ಸಕಲ ಇಷ್ಟಸಿದ್ಧಿಗಳನ್ನೀಯುವನು. ಭಕ್ತಿಯಿಂದ ಅನೇಕವಾಗಿ ನಮಸ್ಕಾರಗಳನ್ನರ್ಪಿಸಿದರೆ ಸೂರ್ಯನು ತೃಪ್ತನಾಗುವನಾದ್ದರಿಂದ ಲವನು ಅನೇಕ ಪ್ರಕಾರವಾದ ಸ್ತೋತ್ರಗಳನ್ನು ಮಾಡಿ ನಮಸ್ಕಾರಾದಿಗಳಿಂದ ಸಂತೋಷಪಡಿಸಿದನೆಂದು ಭಾವವು ॥೪೨॥

ಟೀ॥ ಅವನೀಶ - ಭೂಕಾಂತನಾದ ಜನಮೇಜಯನೇ, ಕೇಳು-ಲಾಲಿಸು, ಬಳಿಕ - ಈ ಪ್ರಕಾರವಾಗಿ ಸೂರ್ಯನನ್ನು ಲವನು ನಮಸ್ಕಾರಾದಿಗಳಿಂದ ಮೆಚ್ಚುವಂತೆ ಮಾಡಿದ ತರುವಾಯ, ರವಿ-ದಿನಮಣಿಯಾದರೊ, ಅವನ-ಆ ಲವನೆಂಬ ಬಾಲಕನ, ವಿಮಲಸ್ತುತಿಗೆ-ಶ್ಲಾಘ್ಯವಾದ ಸ್ತೋತ್ರಗಳಿಗೆ, ಮೆಚ್ಚಿ-ಒಪ್ಪಿದವನಾಗಿ, ಆತನಕೈಗೆ-ಆ ಬಾಲಕನ ಕರತಳದಲ್ಲಿ, ದಿವ್ಯಚಾಪವನು-ಉತ್ತಮವಾದ ಧನುಸ್ಸನ್ನು, ಕೊಟ್ಟನು-ಅನುಗ್ರಹಿಸಿದವನಾದನು, ಲವನಾದರೊ, ಅದಂ-ಸೂರ್ಯನಿಂದ ಲಭಿಸಿದ ಧನುಸ್ಸನ್ನು, ಕೊಂಡು-ಕೈಕೊಂಡವನಾಗಿ, ಅಗ್ರಜಂಗೆ-ಕುಶನೆಂಬ ತನ್ನ ಅಣ್ಣನಿಗೆ, ತೋರಿಸಿ-ತೋರಿಸಿದವನಾಗಿ, ಮುನಿಪ-ತಾಪಸವರ್ಯನಾದ, ವಾಲ್ಮೀಕಿ-ವಾಲ್ಮೀಕಿಮಹರ್ಷಿಯು, ಬಾಳುಗೆ-ಅನುಗ್ರಹಮಾಡಿದ್ದು,(ಜಯಿಸಲಿ) ಎನುತ-ಎಂದು ನುಡಿಯುತ್ತ, ಪವಣನು-ಆತನ ಸದ್ಗುಣವನ್ನು, ಆರೈದು-ಅನೇಕವಿಧವಾಗಿ ಹೊಗಳಿ, ಬಿಲ್ದಿರುವನು-ಧನುಸ್ಸಿಗೆ ಕಟ್ಟಿರುವ ಧಾರವನ್ನು, ಒದರಿಸಿದನು-ಎಳೆದು ಶಬ್ದಮಾಡಿದನು, ಕುಶನು-ಕುಶನಾದರೊ, ಉತ್ಸವದಿಂದ-ಸೂರ್ಯನು ಧನುಸ್ಸನ್ನು ಕೊಟ್ಟ ಆನಂದದಿಂದ, ಉಗ್ರಕೋದಂಡಮುಂ-ಬಹು ದೊಡ್ಡದಾದ ಆ ಬಿಲ್ಲನ್ನು, ಪಿಡಿದನು-ಹಿಡಿದವನಾದನು, ಅವರೀರ್ವರು-ಆ ಇಬ್ಬರೂ, ಮತ್ತೆ-ತಿರುಗಿ, ಪವನಪಾವಕರಂತೆ-ಗಾಳಿ ಬೆಂಕಿಗಳ ಹಾಗೆ, ಎಸುತ - ಕಣೆಗಳನ್ನು ವೈರಿಗಳ ಮೇಲೆ ಬಿಡುತ್ತ, ಅರಿಬಲವನು - ಹಗೆಗಳ ಪಡೆಯನ್ನು, ಪೊಕ್ಕರು-ಹೋಗಿ ಸೇರಿದವರಾದರು ॥

ಅ॥ ವಿ॥ ಸ್ತುತಿ (ತ್ಸ). ತುತಿ (ತ್ಭ). ವಿಮಲ-ವಿ-ಬಿಡಲ್ಪಟ್ಟ, ಮಲ-ಕೊಳೆಯುಳ್ಳದ್ದು, ಉತ್ಸವ (ತ್ಸ). ಉಕ್ಕೆವ, (ತ್ಭ) ಎಸುತ-ಇಸು ಎಂಬ ಧಾತುವಿನ ವರ್ತಮಾನ ಕೃದಂತ ॥೪೩॥

ಟೀ॥ ನೂರಾಳಿಗೆ-ನೂರುಜನ ಪರಾಕ್ರಮಿಗಳಾದ ಸೇನಾಜನರಿಗೆ, ಒಂದುಹಯಂ-ಒಂದು ತುರಗವು, ಇರುತಿರ್ಪುದು-ಇರುತ್ತಲಿರುವುದು, ಆಹಯಂನೂರ್ಕೆ - ಅಂಥಾ ನೂರು ಅಶ್ವಂಗಳಿಗೆ, ಒಂದುರಥಂ-ಒಂದು ರಥವು, ಇರುತಿಹುದು - ಇರುತ್ತಲಿರುವುದು, ಮೇಣ್-ಅಲ್ಲದೆ, ಆರಥನೂರಕೆ - ಅಂಥಾ ನೂರು ರಥಗಳಿಗೆ, ಒಂದುಇಭಂ-ಒಂದು ಆನೆಯು, ಇರ್ಪುದು - ಇರು

---

ನಲ್ಲವು. ಆದಕಾರಣ ಓ ಶರಣಾಗತ ರಕ್ಷನೂ ದೀನಬಂಧುವೂ, ಆದ ಮಹಾನುಭಾವನೇ, ಎಲೈ ಸ್ವಾಮಿಯೇ, ಧನುಸ್ಸನ್ನು ದಯಪಾಲಿಸಿ ನನ್ನನ್ನು ಕಾಪಾಡಬೇಕೆಂದು ನಾನಾ ಪ್ರಕಾರವಾಗಿ ಸ್ತುತಿಸುತ್ತಾ ಅನೇಕವಾದ ನಮಸ್ಕಾರಗಳಿಂದ ಸೂರ್ಯನನ್ನು ಮೆಚ್ಚಿಸಿದನು ॥ ೪೨ ॥ ಕೇಳೈ ಜನಮೇಜಯಧರಾವಲ್ಲಭನೆ, ಲವನು ಭಕ್ತಿಯಿಂದ ಮಾಡಿದ ಈ ಬಗೆಯಾದ ಸ್ತೋತ್ರಕ್ಕೆ ಸೂರ್ಯನು ಮೆಚ್ಚಿ ಅತ್ಯುತ್ತಮವಾದ ಬಿಲ್ಲೊಂದನ್ನು ಆ ಬಾಲಕನ ಕೈಯಲಿಟ್ಟನು. ಸೂರ್ಯದತ್ತಮಾದ ಚಾಪವನ್ನು ತನ್ನಣ್ಣನಾದ ಕುಶನಿಗೆ ತೋರಿಸಿ, ಅನಂತರ ಇಬ್ಬರೂ ಸಂತಸಂಗೊಂಡವರಾಗಿ, ತಮ್ಮ ಗುರುಗಳಾದ ವಾಲ್ಮೀಕಿ ಮಹಾಮುನಿಗಳಿಗೆ ಮನಸ್ಸಿನಲ್ಲಿಯೆ ನಮಸ್ಕಾರಗಳನ್ನರ್ಪಿಸಿ, ತಮ್ಮ ತಮ್ಮ ಧನುಸ್ಸುಗಳನ್ನು ನೇವರಿಸಿಕೊಂಡು, ವಾಯ್ವಗ್ನಿಗಳನ್ನು ಪೋಲುತ್ತ, ಶತ್ರುಗಳ ಮೇಲೆ ಬಾಣಗಳನ್ನು ಬಿಡಲಾರಂಭಿಸಿದರು ॥೪೩॥ ಇವರ ಬಾಣದ ಏಟುಗಳ ಮುಂದೆ ಲಕ್ಷ್ಮಣನ ಭ್ರಮಿನಾಮಕವಾದ ಸೇನಾರ್ಣವವೂ ಕೂಡ ನಿಲ್ಲಲಾರದೆ ಹೋದ್ದರಿಂದ ಆತೆರನಾದ ಸೈನ್ಯವನ್ನೆಲ್ಲಾ ನಿಮಿಷಮಾತ್ರದಲ್ಲಿ ಯಮಲೋಕದ ದಾರಿ

ಯೊಳ್ ಭ್ರಮಿಗಳೀರೈದು | ನೂರಿಟ್ಟಣಿಸಿನಡೆದುಬಂದೊಡಾಸೇನೆಯುಂ | ತಾರುತಟ್ಟಾಗಿಕೆಡಹಿದರೊಂದು ನಿಮಿಷದೊಳ್ಕು ಶಲವಂದೇವೇಳ್ವೆನು ‖ ೪೪ ‖ ಹೊಣೆಹೊಕ್ಕೆಸುತಬಾಲಕರ್ಯಿದೆಲಕ್ಷ್ಮಣಂ | ಕಾಣುತಿದಿರಾದಂಕುಶಂಗಖಿಳವಾಹಿನೀ | ಶ್ರೇಣಿ ಸಹಿತುರು-ಬಿದಂಕಾಲಜಿತುವಾ ಲವನಮೇಲೆಬಡಬಾಗ್ನಿಯೆಡೆಗೆ ‖ ಮಾಣದೆಂಗುವಕಡಲಜಲದಂತೆಕವಿದುದುಕೃ | ಪಾಣತೋಮ ರಪರಶುಕುಂತಮುದ್ಗರಚಕ್ರ|ಬಾಣಶಕ್ತಿಗಳಘೋರಪ್ರಹಾರಂಗಳಿಂದಾಸಕಲಸೇನೆಮುಳಿದು‖೪೫‖ ಏಸುಭಟರಂಬುಗಳನೆಸುವರ್ಯೆಸಂಬುಗಳ | ನಾಸುಭಟರಂಗದೊಳ್ಕಾಣಿಸಿದನಾಬಲದೊ | ಳೇಸುಕೈದುಗಳೊಳೊದಗಿದವ್ಯೆಸುಕೈದುಗಳನೆಲ್ಲಮಂತತೆಗಡಿದನು ‖ ಏಸಾನೆಕುದುರೆಗಳ್ಕವಿಯಲ್ಕೆಸಂಸೀಳ್ದ | ನೇಸುತೇರುರವಣಿಸಲ್ಕೆಸರಥಟಂಮುರಿದ | ನೇಸುಮುಂದಿಗಳುರುಬಿತ್ಯೆಸನುಂ ಕೊಂದನಿನ್ನೇನುಸಾಹಸಿಯೊಲವನು ‖ ೪೬ ‖ ಜಾನಕಿಯಸುತನಬಾಣಾವಳಿಯುಹಾವಳಿಯು | ನೇನೆಂಬೆನಹಿತರಂಕವರಿದವುಸವರಿ

---

ತ್ತದೆ, ಇಂತು-ಈವೇರಿಗೆ, ಇಭಸಹಸ್ರಂ-ನೂರು ಗಜಗಳು, ಇರೆ-ಇರಲಾಗಿ, ಭ್ರಮಿ-ಎಂದು-ಭ್ರಮಿ ಎಂಬ ತೆರನಾಗಿ, ಎನಿಸಿಕೊಂಬುದು-ಎಂದು ಹೇಳಿಸಿಕೊಳ್ಳುತ್ತದೆ, ಮೀರಿ-ಅತಿಕ್ರಮಿಸಿ, ಯೋಜನದ-ನಾಲ್ಕು ಹರಿದಾರಿಗಳ, ಅಳತೆಯೊಳ್-ವೈಶಾಲ್ಯದಲ್ಲಿ, ಈರೈದುನೂರುಭ್ರಮಿಗಳು-ಸಾವಿರ ಭ್ರಮಿಗಳೆಂಬವು, ಇಟ್ಟಣಿಸಿ-ಸಾಂದ್ರವಾಗಿ, ನಡೆದುಬಂದೊಡೆ-ಐತರಲು, ಕುಶಲವರು-ಕುಶಲವರೆಂಬ ಅಣ್ಣತಮ್ಮಂದಿರು, ಆಸೇನೆಯುಂ-ಅಂತಹ ಅಪರಿಮಿತವಾದ ದಳವನ್ನು, ಒಂದುನಿಮಿಷದೊಳ್-ಕ್ಷಣಮಾತ್ರದೊಳಗಾಗಿ, ತಾರುತಟ್ಟಾಗಿ-ತಲೆ ಕೆಳಗೂ ಕಾಲು ಮೇಲೂ ಆಗುವತೆರನಾಗಿ, ಕೆಡಹಿದರು-ಉರುಳಿಸಿಟ್ಟರು, ಅದ-ಅವರ ಸಾಹಸವನ್ನು, ಏವೇಳ್ವೆನು-ಏನೆಂದು ಬಣ್ಣಿಸಲಿ ‖ ೪೪ ‖

ಟೀ‖ ಬಾಲಕರು-ಕುಶ ಲವರು, ಹೊಣೆಹೊಕ್ಕು-ಶತ್ರುಸೇನೆಯೊಳಕ್ಕೆ ಜಾಗ್ರತೆಯಿಂದ ಸೇರಿ, ಎಸುತ-ಬಾಣಗಳನ್ನು ಬಿಡುತ್ತ, ಇರೆ-ಇರಲು, ಲಕ್ಷ್ಮಣಂ-ಲಕ್ಷ್ಮಣನಾದರೊ, ಕಾಣುತ-ಆ ಬಾಲಕನನ್ನು ನೋಡುತ್ತ, ಕುಶಂಗೆ-ಕುಶನೆಂಬ ಹುಡುಗನಿಗೆ, ಇದಿರಾದಂ-ಎದುರಾಗಿ ಬಂದು ಸೇರಿದನು, ಕಾಲಜಿತುವ್ರ-ಕಾಲಜಿತುವೆಂಬ ದಳಪತಿಯು, ಅಖಿಲ-ಸಮಸ್ತವಾದ, ವಾಹಿನೀ-ದಳದ, ಶ್ರೇಣಿಸಹಿತ-ಪಜ್ಞ್ತಯೊಂದಿಗೆ, ಲವನಮೇಲೆ-ಲವನೆಂಬ ಬಾಲಕನ ಮೇಲೆ, ಉರುಬಿದಂ-ರೋಷದಿಂದ ನುಗ್ಗಿದನು, ಬಡಬಾಗ್ನಿಯೆಡೆಗೆ-ಬಡಬಾಗ್ನಿಯ ಸಮೀಪಕ್ಕೆ, ಮಾಣದೆ-ತಪ್ಪದೆ, ಎರಗುವ-ಬಂದು ಸೇರುವ, ಕಡಲಜಲದಂತೆ-ಅಬ್ಧಿಯ ಉದಕದ ತೆರನಾಗಿ, ಕೃಪಾಣ-ಖಡ್ಗವು, ತೋಮರ-ತೋಮರವೆನ್ನುವ ಆಯುಧವು, ಪರಶು-ಕೊಡಲಿಯು, ಕುಂತ-ಕುಂತಾಯುಧವು, ಮುದ್ಗರ-ಮುದ್ಗರವೆನ್ನುವುದು, ಚಕ್ರ-ಚಕ್ರಗಳು, ಬಾಣ-ಕಣೆಗಳು, ಶಕ್ತಿಗಳ-ಶಕ್ತಿ ಎಂಬಾಯುಧಗಳ, ಘೋರ-ಅತಿ ಕಠಿಣವಾದ, ಪ್ರಹಾರಗಳಿಂದ-ಏಟುಗಳಿಂದ, ಮುಳಿದು-ಕೋಪಮಾಡಿಕೊಂಡು, ಸಕಲಸೇನೆ-ದಳವೆಲ್ಲವೂ, ಕವಿದುದು-ಮುತ್ತಿಕೊಂಡಿತು ‖೪೫‖

ಟೀ‖ ಲವನು-ಲವನೆಂಬ ಬಾಲಕನು, ಏಸುಭಟರು-ಎಷ್ಟುಜನ ವೀರರು, ಅಂಬುಗಳನು-ಕಣೆಗಳನ್ನು, ಎಸುವರು-ಎರಚುತ್ತಲಿದ್ದರೊ, ಐಸಂಬುಗಳನು-ಅಷ್ಟು ಕಣೆಗಳನ್ನೂ. ಆ ಸುಭಟರ-ಆ ವೀರಾಗ್ರೇಸರರ, ಅಂಗದೊಳ್-ಅವಯವದಲ್ಲಿ, ಕಾಣಿಸಿದನು-ನಾಟಿಸಿಬಿಟ್ಟನು, ಆ ಬಲದೊಳು-ಆ ದಳದಲ್ಲಿ, ಏಸುಕೈದುಗಳೊಳು-ಎಷ್ಟುವಿಧವಾದ ಆಯುಧಗಳಲ್ಲಿ, ಒದಗಿದವೊ-ಬಂದು ಸೇರಿದವೊ, ಎಲ್ಲಮಂ-ಸಕಲವಾದ. ಐಸುಕೈದುಗಳನು-ಆ ಆಯುಧಗಳಷ್ಟನ್ನೂ, ತತೆಗಡಿದನು-ಭಿನ್ನಾಭಿನ್ನ ಮಾಡಿದನು, ಆನೆಕುದುರೆಗಳ್-ಹಸ್ತ್ಯಶ್ವಂಗಳು, ಏಸು-ಎಷ್ಟುವಿಧವಾಗಿ, ಕವಿಯಲು-ಅವರಿಸಿಕೊಂಡಾಗ್ಯೂ ಕೂಡ, ಐಸು-ಅಷ್ಟೊಂದು ದಳವನ್ನೂ, ಸೀಳ್ದನು-ಸೀಳಿ ಕೆಡವಿ ಬಿಟ್ಟನು, ತೇರು-ರಥಗಳು, ಏಸು-ಎಷ್ಟು, ಉರವಣಿಸಲು-ಮೇಲ್ಬಾಯ್ದುಬಂದರೊ, ಐಸರ-ಅಷ್ಟೊಂದರ,ಅಧಟಂ-ಶಕ್ತಿಯನ್ನು, ಮುರಿದನು-ಕುಂದುವಂತೆ ಮಾಡಿದನು, ಮುಂದಿಗಳು-ಕಾಲ್ಬಲವು, ಏಸು-ಎಷ್ಟು, ಉರುಬಿತೊ-ದಟ್ಟವಾಗಿ ಬಂದಿತೊ, ಐಸನೂ-ಎಲ್ಲವನ್ನೂ, ಕೊಂದನು-ಹೆಸರಿಲ್ಲದಂತೆ ಮಾಡಿಬಿಟ್ಟನು, ಇನ್ನೇನು-ಇನ್ನೆಂತಹ, ಸಾಹಸಿಯೊ-ಶಕ್ತಿಯಿಂದ ಕೂಡಿದವನೊ, (ಎಂದರೆ ಅವನ ಸಾಹಸವು ಹೇಳಲಶಕ್ಯವಾದದ್ದೆಂಬ ಆಶಯವು) ‖೪೬‖

---

ಯನ್ನೇ ಹಿಡಿದು ಹೋಗುವಂತೆ ಮಾಡಿಬಿಟ್ಟರು. ಇದನ್ನು ನೋಡಿದ ಲಕ್ಷ್ಮಣಾದಿಗಳು ಅಸಹಾಯಶೂರರಾದ ಆ ಬಾಲಕರ ಪರಾಕ್ರಮಕ್ಕೆ ಮೆಚ್ಚಿ ‖ ೪೪ ‖ ಕುಶನಮೇಲೆ ಸೇನಾಸಹಿತರಾಗಿ ನುಗ್ಗಿದರು. ಕಾಲಜಿತುವೂ ಕೂಡ ಖಡ್ಗಚಾಪಾದಿಗಳಿಂದ ಕೂಡಿದ ಸಕಲ ಬಲದೊಡನೆ ಲವನನ್ನು ಸುತ್ತಿಕೊಂಡನು. ‖ ೪೫ ‖ ಬಡಬಾಗ್ನಿಯ ಬಳಿಗೆ ಸಮುದ್ರೋದಕವು ನುಗ್ಗಿಬರುವಂತೆ ತನ್ನ ಬಳಿಗೆ ಬರುತ್ತಲಿರುವ ಸೇನಾ ಜಲಧಿಯನ್ನು ಲವನು ನೋಡಿ, ತನ್ನಮೇಲೆ ಶತ್ರುಗಳು ಎಷ್ಟು ಬಾಣಗಳನ್ನು ಬಿಡುವರೊ ಅಷ್ಟನ್ನೂ ಅವರೆದೆಗಳಲ್ಲಿ ಚುಚ್ಚುತ್ತ, ಶತ್ರುಬಾಣಗಳನ್ನೆಲ್ಲಾ ದಾರಿಯಲ್ಲಿಯೇ ಕಡಿದುಹಾಕಿ, ತನ್ನೆದುರಿಗೆ ಬಂದ ಆನೆ ಕುದುರೆ ಕಾಲಾಳ್ಗಳನ್ನೆಲ್ಲಾ ಕೊಂದುಹಾಕಿ ಬಿಟ್ಟನು ‖ ೪೬ ‖ ಈ ಲವನು ಬಿಟ್ಟ ಬಾಣಗಳು ಶತ್ರುಸೈನ್ಯದಮೇ

ದವು | ಬಾನೆಡೆಯೊಳಿಟ್ಟಣಿಸಿಹಾರಿದವುತೂರಿದವುಕೊಂದುವರಿವವುಪರಿದವು || ಆನೆಕುದುರೆಗಳನುರೆಸೀಳಿದವುತೂಳಿದವು | ನಾ
ನಾಪ್ರಕಾರದಿಂಕೆಡಹಿದವುಕೊಡಹಿದವು | ಸೇನೆಯೊಡಲ್ಗಳಂಹೆಚ್ಚಿದವು ಕೊಚ್ಚಿದವುತಲೆಗಳಂ ತಕ್ಷಣದೊಳು || ೪೭ || ಭೂರಿ
ಬಾಣದೊಳಹಿತಸೇನೆಗಳ್ಮುಳಿದುಚ| ತ್ವಾರಿಂಶದನುಪಮಭ್ರಮಿಗಳಂತಡೆಗಡಿದು| ವೀರಲವನಲ್ಲಿಕುಶನಂಕಾಣದೆಡಬಲದೊಳರಸೆರು
ಧಿರಾಕ್ಷನೆಂಬ| ಶೂರಾಸುರಂಲವಣದಾನವನಮಾತುಲಂ| ಶ್ರೀರಾಮಚರಣಶರಣಾಗತಂಸೀತಾಕು| ಮಾರಕನಕರದಕೋದಂಡಮಂ
ತುಡುಕಿದಂಮೇಲ್ವಾಯ್ದುರೋಷದಿಂದ || ೪೮ || ಕರದಬಿಲ್ಲಂಕಿತ್ತುಕೊಂಡೋಡುವಸುರನಂ | ಭರದಿಂದಬೆಂಬತ್ತಿಪೋಗದಿ

---

ಟೀ|| ಲವನ ಬಾಣಗಳಾದರೊ, ಅಹಿತರಂ-ಹಗೆಗಳನ್ನು, ಕವರಿದವು-ಮುತ್ತಿಕೊಂಡು ಬಿಟ್ಟವು, ಸವರಿದವು-ಕತ್ತರಿಸಿಹಾಕಿದವು, ಬಾನೆಡೆಯೊಳು-ಅಂತರಿಕ್ಷಮಾರ್ಗದಲ್ಲಿ, ಇಟ್ಟಣಿಸಿ-ಸಾಂದ್ರವಾಗಿ, ಹಾರಿದವು-ಹೊರಟವು, ತೂರಿದವು-ನುಗ್ಗಿ ಹೊರಟವು, ಕೊಂದವು-ಕೊಂದುಬಿಟ್ಟವು, ಅರಿದವು-ಸೀಳಿಹಾಕಿದವು, ಪರಿದವು-ಸುತ್ತಿಕೊಂಡು ಬಿಟ್ಟವು, ಆನೆಕುದುರೆಗಳನು-ಗಜತುರಂಗಗಳನ್ನು, ಉರೆ-ಹೆಚ್ಚಾಗಿ, ಸೀಳಿದವು-ಛಿದ್ರಛಿದ್ರವಾಗಿ ಮಾಡಿಬಿಟ್ಟವು, ತೂಳಿದವು-ನೂಕಿಬಿಟ್ಟವು, ನಾನಾಪ್ರಕಾರದಿಂ-ಅನೇಕ ಬಗೆಯಾಗಿ, ಕೆಡಹಿದವು-ಭೂಮಿಗೆ ಉರುಳಿಸಿದವು, ಕೊಡಹಿದವು-ಒದರಿದವು, ಸೇನೆಯೊಳು-ದಳದಲ್ಲಿ, ಒಡಲ್ಗಳಂ-ಅವಯವಗಳನ್ನು, ಹೆಚ್ಚಿದವು-ಸಣ್ಣಸಣ್ಣದಾಗಿ ಭಾಗಮಾಡಿದವು, ತಕ್ಷಣದೊಳು-ಸಾವಕಾಶವಿಲ್ಲದೆ, ತಲೆಗಳಂ-ಶಿರಸ್ಸುಗಳನ್ನು, ಕೊಚ್ಚಿದವು-ಕತ್ತರಿಸಿ ಬಿಟ್ಟವು, ಜಾನಕಿಯ-ಸೀತಾದೇವಿಯ, ಸುತನ-ಕುವರನಾದ ಲವನ, ಬಾಣಾವಳಿಯ-ಶರರಾಶಿಗಳ, ಹಾವಳಿಯನು-ಹೊಯಿಲನ್ನು, ಏನೆಂಬೆನು-ಏನೆಂದು ವರ್ಣಿಸಲಿ ||

ಅ|| ವಿ|| ಆವನ ಬಾಣದ ಏಟನ್ನು ತಡಿಯಲಾರದೆ ವೈರಿಬಲವು ಬಹುಮಟ್ಟಿಗೆ ನಾಶವನ್ನೈದಿತೆಂದು ಭಾವವು ||೪೭||

ಟೀ|| ಭೂರಿಬಾಣದೊಳ್-ಹೆಚ್ಚಾದ ಕಣೆಗಳಿಂದ, ಅಹಿತಸೇನೆಯೊಳ್-ವೈರಿಗಳ ಪಡೆಯಲ್ಲಿ, ಮುಳಿದು-ಕೋಪಮಾಡಿಕೊಂಡು, ಚತ್ವಾರಿಂಶತ್-ನಲವತ್ತಾದ, ಅನುಪಮ-ಅಸಾಧಾರಣವಾದ, ಭ್ರಮಿಗಳಂ-ಒಂದು ಸಾವಿರ ಹಸ್ತಿಗಳು, ರಥಗಳ ಒಂದು ಲಕ್ಷವೂ, ಒಂದು ಕೋಟಿ ಹಯಗಳೂ, ನೂರುಕೋಟಿ ಕಾಲ್ಬಲವೂ, ಇವುಗಳೆಲ್ಲವೂ ಸೇರಿ ನೂರಒಂದಕೋಟಿ ಒಂದು ಲಕ್ಷದ ಒಂದು ಸಹಸ್ರ ಸಖ್ಯೆಯಿಂದ ಕೂಡಿದ್ದ ಭ್ರಮಿ ಎಂಬ ಹೆಸರುಳ್ಳಂಥಾದ್ದರ ನಲವತ್ತರಷ್ಟು ಸೈನ್ಯವನ್ನು, ವೀರ-ಪರಾಕ್ರಮಿಯಾದ, ಲವನು-ಲವನೆಂಬಾತನು, ತಡೆಗಡಿದು-ಕತ್ತರಿಸಿಹಾಕಿ, ಅಲ್ಲಿ-ಆ ದಳದನಡುವೆ, ಕುಶನಂ-ತಮ್ಮಣ್ಣನನ್ನು, ಕಾಣದೆ-ನೋಡದೆ, ಎಡಬಲದೊಳು-ಉಭಯ ಪಾರ್ಶ್ವಗಳಲ್ಲಿಯೂ, ಅರಸೆ-ಹುಡುಕಾಡುತ್ತಿಲಾಗಿ, ಲವಣ-ಲವಣಾಸುರನೆಂಬ, ದಾನವನ-ರಕ್ಕಸನ, ಮಾತುಲಂ-ಸೋದರದ ಮಾವನಾಗಿರತಕ್ಕ, ಶ್ರೀರಾಮ-ರಾಮಮೂರ್ತಿಯ, ಚರಣ-ಪಾದಗಳಲ್ಲಿ, ಶರಣಾಗತಂ-ಮರೆಹೊಕ್ಕಿರತಕ್ಕ, ರುಧಿರಾಕ್ಷನೆಂಬ-ರುಧಿರಾಕ್ಷನೆಂಬ ನಾಮಧೇಯವುಳ್ಳ, ಶೂರ-ಸಾಹಸಿಯಾದ, ಅಸುರಂ-ನಿಶಿಚರನು, ಸೀತಾಕುಮಾರಕನ-ಸೀತಾದೇವಿಯ ಮಗನಾದ ಲವನೆಂಬ ಬಾಲಕನ, ಕರ-ಹಸ್ತವನ್ನಲಂಕರಿಸಿದ್ದ, ಕೋದಂಡಮಂ-ಧನುಸ್ಸನ್ನು, ಮೇಲ್ವಾಯ್ದು-ಆ ಲವನ ಮೇಲೆ ನುಗ್ಗಿ, ರೋಷದಿಂದ-ಕೋಪಾತಿಶಯದಿಂದ, ತುಡಿಕಿದಂ-ಸೆಳದುಕೊಂಡವನಾದನು ||

ಅ|| ವಿ|| ತಡೆಗಡಿ (ಕ. ವ್ಯ. ಸಂಧಿ) ಸೀತಾಕುಮಾರಕನ (ಷ. ತ.) ಶ್ರೀರಾಮಚರಣಶರಣಾಗತಂ-ಶ್ರೀ-ಸಂಪತ್ಕರನಾದ, ರಾಮ-ರಾಮಚಂದ್ರನು, (ವಿ ಪೂ.) ಶ್ರೀರಾಮನ ಚರಣ, (ಷ. ತ.) ಶ್ರೀರಾಮಚರಣದಲ್ಲಿ ಶರಣಾಗತಂ (ಸ. ತ.) ಮೇಲ್ವಾಯ್ದು (ಕ್ರಿ. ಸ.) ||೪೮||

ಟೀ|| ಕರದ-ಲವನ ಕೈಯಲ್ಲಿದ್ದ, ಬಿಲ್ಲಂ-ಚಾಪವನ್ನು, ಕಿತ್ತುಕೊಂಡು-ಸೆಳೆದು ಕೊಂಡು, ಓಡುವ-ಓಡತಕ್ಕ, ಅಸುರನಂ - ರುಧಿರಾಕ್ಷಸನನ್ನು, ಬರದಿಂದ - ಅತಿಬೇಗನೆ, ಬೆಂಬತ್ತಿ - ಹಿಂಬಾಲಿಸಿ, ಪೋಗದಿರ್ ಪೋಗದಿರ್ - ಮುಂದೆ ನಡೆಯಬೇಡ ನಡೆಯಬೇಡ, ತಿರುಗಿ-ಹಿಂತಿರುಗಿ ಬಾ, ಎನುತ-ಎಂಬದಾಗಿ ನುಡಿಯುತ್ತ, ವಾಲ್ಮಿಕಿಮುನಿಪನು-ವಾಲ್ಮೀಕಿ ಮಹರ್ಷಿಯು, ಇತ್ತ-ಅನುಗ್ರಹವಂ ಮಾಡಿದ್ದ, ಅಗ್ನಿಮಂತ್ರ-ಅಗ್ನಿದೇವತೋಪಾಸಕಮಾದ ಮಂತ್ರಗಳಿಂದ, ಧ್ಯಾನಮಂಮಾಡಲು

---

ಲೆನುಗ್ಗಿ ಅನೇಕರನ್ನು ಕೊಂದದ್ದಲ್ಲದೆ ಕೆಲವರ ತಲೆಗಳೇ ಕತ್ತರಿಸಿ ಬಿದ್ದುಹೋದವು, ಕೈ ಕಾಲ್ಗಳೇ ಬೇರೆಬೇರೆಯಾಗಿ ಬಿಟ್ಟವು, ಶತ್ರುಸೈನ್ಯವೆಲ್ಲಾ ತುಂಡು ತುಂಡಾಗಿ ನೆಲದಮೇಲೆ ಬಿದ್ದುಬಿಟ್ಟತು ||೪೭|| ಈರೀತಿಯಲ್ಲಿ ಪರಾಕ್ರಮಿಯಾದ ಲವನು ಅರಿಬಲವನ್ನೆಲ್ಲಾ ಧ್ವಂಸಮಾಡಿದ ಬಳಿಕ ತನ್ನಗ್ರಜನನ್ನು ಕಾಣದೆ ಅಲ್ಲಲ್ಲಿ ಹುಡುಕುತ್ತಲಿರುವಾಗ, ಲವಣಾಸುರನ ಸೋದರ ಮಾವನೂ, ಶ್ರೀ ರಾಮನ ಪರಮ ಭಕ್ತನೂ, ವಿರಾಗ್ರೇಸರನೂ ಆದ ರುಧಿರಾಕ್ಷನೆಂಬ ರಕ್ಕಸನೋರ್ವನು ಬಂದು ಕೊಪಾತಿಶಯದಿಂದ ಲವನ ಕೈಯಲ್ಲಿದ್ದ ಬಿಲ್ಲನ್ನು ಕಿತ್ತುಕೊಂಡು ಓಡಲಾರಂಭಿಸಿದನು || ೪೮ || ಲವನಾದರೋ ಆ ರಕ್ಕಸನ ಬೆಂಬತ್ತಿ ನಡೆದು ಅಗ್ನಿಮಂತ್ರ ಧ್ಯಾನದಿಂದೊಂದು ಚಕ್ರವನ್ನು ಸಂಪಾದಿಸಿ ಕೊಂಡು ಆಕಾಶಮಾರ್ಗದಲ್ಲಿ ಹೋಗುತ್ತಲಿದ್ದ ರುಧಿರಾಕ್ಷ

ಪೊರ್ೞೀಗದಿ । ತಿರುಗೆನುತವಾಲ್ಮೀಕಿಮುನಿಪವಿತ್ತಗ್ನಿ ಮಂತ್ರಧ್ಯಾನಮುಂಮಾಡಲು ॥ ದೊರೆಕೊಂಡುದೊಂದು ಚಕ್ರಂಬಳಿಕ ಲವನದಂ । ಧರಿಸಿಚಕ್ರಾಯುಧಂತಾನೆನಲ್ಕಂಗೊಳಿಸು । ತುರವಣಿಸಿರುಧಿರಾಕ್ಷನಂಗಗನದೋಳ್ಪಿಡಿಯೆಕಂಡವನಪಡೆಕವಿದು ॥೪೯॥ ಮತ್ತುರುಬಿದನಿತುಬಲಮಂಕರದಚಕ್ರದಿಂ । ಕತ್ತರಿದರಿದು ರಾಕ್ಷಸೇಂದ್ರನಂಬಿಡದೆಲವ । ನೊತ್ತಾಯಮುಂಮಾಡುತಿರೆಕಂಡುದಶರಥನೃಪತಿಯಮಂತ್ರಿಯತನುಜರು ॥ ಹತ್ತುಮಂದಿಪ್ರಸಿದ್ಧಪ್ರಧಾನಿಗಳಾಗ । ಹತ್ತುಹತ್ತಂಬುಗಳ ನೋರ್ೞೋರ್ವರೆಚ್ಚುಕಡೆ । ಹತ್ತುಹತ್ತಾಗೆ ಬಾಲಕನಪಾರುಂ ಬಳಿಯನಾಕ್ಷಣಂ ಖಂಡಿಸಿದರು ॥೫೦॥ ಕರದ ಚಕ್ರಂಪೋಗೆ ಪರಿಘಮುಂಕೊಂಡುಲವ । ನುರುನಣಿಸಿಹೊಯ್ದನಿಬರಂಕೆಡುಪೆನುತ್ತೆ ಬಂ । ದುರುಗದಾದಂಡಮುಂಕೊಂಡುರುಧಿರಾಕ್ಷನೀ

---

ಭಕ್ತಿಯಿಂದ ಸ್ತುತಿಸಲು, ಬಂದು ಚಕ್ರಂ-ಬಂದಾನೊಂದು ಚಕ್ರಾಯುಧವು, ದೊರಕೊಂಡುದು-ಲಭಿಸಿತು, ಬಳಿಕ-ಅನಂತರ, ಲವನು-ಲವನೆಂಬ ಬಾಲಕನು, ಅದಂ-ಆ ಚಕ್ರವನ್ನು, ಧರಿಸಿ-ತೆಗೆದುಕೊಂಡು, ತಾನು-ತಾನೇ, ಚಕ್ರಾಯುಧಂ-ಚಕ್ರಪಾಣಿಯು, ಎನಲ್-ಎಂಬ ತೆರನಾಗಿ, ಕಂಗೊಳಿಸುತ-ಥಳಥಳನೆ ಹೊಳೆಯುತ್ತ, ಉರವಣಿಸಿ-ಮೇಲ್ವಾಯ್ದು ಹೋಗಿ, ಗಗನದೋಳ್-ಅಂತರಿಕ್ಷಪ್ರದೇಶದಲ್ಲಿ, ರುಧಿರಾಕ್ಷನಂ-ರುಧಿರಾಕ್ಷನೆಂಬ ರಕ್ಕಸನನ್ನು, ಪಿಡಿಯೆ-ಹಿಡಿದುಕೊಳ್ಳಲಾಗಿ, ಅವನ ಪಡೆ-ಆ ರಕ್ಕಸನ ದಳವು, ಕಂಡು-ಲವನನ್ನು ನೋಡಿ, ಕವಿದುದು-ಅವನನ್ನು ಮುತ್ತಿಕೊಂಡು ಬಿಟ್ಟಿತು. ॥೪೯॥

ಟೀ॥ ಲವನೆಂಬ ಬಾಲಕನು, ಕರದ-ತನ್ನ ಕೈಯಲ್ಲಿರತಕ್ಕ, ಚಕ್ರದಿಂ-ಚಕ್ರಾಯುಧದಿಂದ, ಅನಿತು ಬಲಮುಂ-ಅಷ್ಟೊಂದು ಪಡೆಯನ್ನೂ, ಮತ್ತೆ-ತಿರುಗಿ, ಕತ್ತ-ಕೊರಳನ್ನೂ, ಅರಿವರಿದು-ಕಡಿದು ಕಡಿದು, ಉರುಬಿದಂ-ಹಿಡುವ ಹಾಗೆ ಮಾಡಿದನು, ರಾಕ್ಷಸೇಂದ್ರನಂ-ರುಧಿರಾಕ್ಷನನ್ನು, ಬಿಡದೆ-ಬಿಟ್ಟುಬಿಡದೆ, ಒತ್ತಾಯಮುಂ-ಸಾಮರ್ಥ್ಯವನ್ನು, ಮಾಡುತಿರೆ-ತೋರಿಸುತ್ತಿರಲಾಗಿ, ದಶರಥನೃಪತಿಯ-ದಶರಥಮಹಾರಾಯನ, ಮಂತ್ರಿಯ-ಸಚಿವನ, ತನುಜರು-ಕುವರರಾದ ಹತ್ತು ಜನಗಳು, ಪ್ರಸಿದ್ಧ-ಗಣ್ಯರಾದ. ಪ್ರಧಾನಿಗಳು-ಅಮಾತ್ಯರು, ಆಗ-ಆ ಸಮಯದಲ್ಲಿ, ಓರ್ೞೋರ್ವರು-ಒಬ್ಬೊಬ್ಬರು, ಹತ್ತುಹತ್ತಂಬುಗಳನು-ಹತ್ತುಹತ್ತು ಕಣೆಗಳನ್ನು, ಎಚ್ಚು-ಹೊಡೆದು, ಕಡೆ-ತ ದಿಯಲ್ಲಿ, ಹತ್ತು ಹತ್ತಾಗೆ-ನೂರಂತೆ ಆಗುತ್ತಿರಲಾಗಿ, ಬಾಲಕನ-ಹಸುಳೆಯಾದ ಲವನ, ಪಾರುಂಬಳಿಯನು-ಸಾಹಸವನ್ನು ಮತ್ತು ಅವನ ಚಕ್ರಾಯುಧವನ್ನು ಸಹ, ಆ ಕ್ಷಣಂ-ಬಡನೆಯೆ, ಖಂಡಿಸಿದರು-ಪುಡಿಪುಡಿಯಾಗಿ ಮಾಡಿಬಿಟ್ಟರು.

ಅ॥ ವಿ॥ ರಾಕ್ಷಸೇಂದ್ರ-(ಗುಣಸಂಧಿ) ಪಾರುಂಬಳಿ-ಪಾರುವದು ಬಳಿ, (ವಿ. ಪೂ.) ॥೫೦॥

ಟೀ॥ ಲವನು-ಲವನೆಂಬ ಹುಡುಗನು, ಕರದ-ತನ್ನ ಕೈಯಲ್ಲಿದ್ದ, ಚಕ್ರಂ-ಚಕ್ರಾಯುಧವು, ಪೋಗೆ-ವೈರಿಗಳಿಂದ ನಾಶವಾಗಲು, ಪರಿಘಮುಂ-ಪರಿಘಾಯುಧವನ್ನು, (ಲಾಳಮುಂಡಗೆ ಎಂಬುದನ್ನು) ಕೊಂಡು-ಸ್ವೀಕರಿಸಿ, ಉರವಣಿಸಿ-ಅವರ ಮೇಲೆ ಬಿದ್ದು, ಅನಿಬರಂ-ಅಷ್ಟು ಜನರನ್ನು, ಹೊಯ್ದು-ಹೊಡೆದು, ಕೆಡಹೆ-ನೆಲದ ಮೇಲೆ ಉರುಳಿಸಿ ಬಿಡಲಾಗಿ, ರುಧಿರಾಕ್ಷನು-ರುಧಿರಾಕ್ಷನೆಂಬ ರಕ್ಕಸನು, ಮತ್ತೆ-ತಿರುಗಿ, ಬಂದು-ಐತಂದು, ಉರು-ದೊಡ್ಡದಾದ, ಗದಾಯುಧಮಂ-ಗದಾಯುಧವನ್ನು, ಕೊಂಡು-ತೆಗೆದುಕೊಂಡು, ಈತನ-ಈ ಹುಡುಗನ, ಫಣೆಯನು-ಹಣೆಯ ಭಾಗವನ್ನು, ಅಪ್ಪಳಿಸಲು-ತಾಡಿಸಲು, ಬಾಲಕಂ-ಲವನು, ಇರದೆ-ಸುಮ್ಮನಿರದೆ, ಮೂರ್ಛಿತನಾಗಿ-ಮೈಮರೆತು, ಕೂಡೆ-ಬಡನೆಯೇ, ಚೇತರಿಸಿಕೊಂಡು-ಜ್ಞಾನವನ್ನು ತಂದುಕೊಂಡು, ಎದ್ದು-ಮೇಲಕ್ಕೆದ್ದು, ಆ ಮಹಾಸುರನ-ಆ ದೊಡ್ಡ ರಾಕ್ಷಸನ, ಶಿರವನು-ತಲೆಯನ್ನು, ಕುಂತದೊಳು-ಕುಂತಾಯುಧದಿಂದ, ಅರಿದು-ತಾಡಿಸಿ, ಧುರದೊಳು-ರಣರಂಗದಲ್ಲಿ, ಆದಿತ್ಯನು-ರವಿಯು, ಇತ್ತ-ಅನುಗ್ರಹಮಾಡಿದ್ದ, ನಿಜ-ತನ್ನ, ಚಾಪಮುಂ-ಧನುಸ್ಸನ್ನು, ಕೊಂಡಂ-ಕೈಗೆ ತೆಗೆದುಕೊಂಡನು. ॥೫೧॥

---

ನನ್ನು ಹಿಡಿದುಕೊಂಡನು. ಆಗ ಅವನ ಸೈನ್ಯದವರು ಲವನ ಮೇಲೆ ಬೀಳಲು ಅವರನ್ನೆಲ್ಲಾ ಯಮಲೋಕಕ್ಕೆ ಕಳುಹಿಸಿದನು॥೪೯ ರುಧಿರಾಕ್ಷನನ್ನು ಆಚೆ ಈಚೆಗೆ ಬಿಡದೆ ರೋಷೋನ್ಮತ್ತನಾಗಿ ನಿಂತಿರುವ ಲವನನ್ನು ನೋಡಿ ದಶರಥನ ಮುಖ್ಯ ಮಂತ್ರಿಗಳ ಕುಮಾರರಾದ ಹತ್ತು ಮಂದಿಯೂ ಒಟ್ಟಾಗಿ ಲವನ ಕೈಯ್ಯಲ್ಲಿದ್ದ ಚಕ್ರಾಯುಧದ ಮೇಲೆ ಹತ್ತು ಹತ್ತು ಬಾಣಗಳನ್ನು ಬಿಟ್ಟು ಅದನ್ನು ಪುಡಿಪುಡಿ ಮಾಡಿದರು ॥೫೦॥ ಕೈಯ್ಯಲ್ಲಿದ್ದ ಚಕ್ರಾಯುಧವು ಹೋದರೂ ಲವನು ಹಿಂದೆಗೆಯದೆ ಪರಿಘವನ್ನು ತೆಗೆದುಕೊಂಡು ಶತ್ರು ಸೈನ್ಯವನ್ನು ನುಚ್ಚು ನುಚ್ಚಾಗುವಂತೆ ಬಡಿದು ಕೆಡಹುತ್ತಿರುವಾಗ, ರುಧಿರಾಕ್ಷನು ತೋಂಗದೆಯೊಂದನ್ನು ತೆಗೆದುಕೊಂಡು ಲವನ ಹಣೆಯ ಮೇಲೆ ಹೊಡೆಯಲು ಆ ಪೆಟ್ಟಿನಿಂದ ಲವನು ಮೂರ್ಛಾಕ್ರಾಂತನಾಗಿ ಮತ್ತೆ ಚೇತರಿಸಿಕೊಂಡು, ಕುಂತಾಯುಧದಿಂದ ರಾಕ್ಷಸನ ನೆತ್ತಿಯ ಮೇಲೆ ಬಡಿದು ತನಗೆ ಸೂರ್ಯನಿಂದ ಲಭಿಸಿದ್ದ ಧನುಸ್ಸನ್ನು ಪುನಃ ಎತ್ತಿಕೊಂಡು ॥೫೧॥ ರುಧಿರಾಕ್ಷನನ್ನು ನೆಲಕ್ಕೆ ಕೆಡವಿ ತಿರುಗಿ ಸೈನ್ಯವನ್ನೆಲ್ಲಾ ಸಂಹರಿಸಲಾರಂಭಿಸಿ, ಆ ವೀರರ ಕಿರೀಟ ಕವಚಾದಿ

ತನಸಣೆಯುನಪ್ಪಳಿಸಲು ‖ ಇವದೆನೂರ್ಜಿತನಾಗಿಬಾಲಕಂಕೂಡೆಚೇತರಿಸಿಕೊಂಡೆಸ್ಸ | ಕುಂತದೊಳಾಮಹಾಸುರನ | ಶಿರವ ನರಿದಾದಿತ್ಯನಿತ್ತನಿಜಚಾಪಮಂ ತೆಗೆದುಕೊಂಡಂ ಧುರದೊಳು ‖ ೫೧ ‖ ಬಿಡದೆರುಧಿರಾಕ್ಷರಾಕ್ಷಸನಂರಣಾಗ್ರದೋ | ಳ್ಕೆಡಹಿ ನಿಜಚಾಪಚಾಪಲಹಸ್ತನಾಗಿಲವ | ನಡಸಿದರಿಚತುರಚತುರಂಗಮಂಸಂಹರಿಸತೊಡಗಿದಂಮತ್ತೆಮುಳಿದು ‖ ತೊಡವುಗಳ ಕಾಯಕಾಯತಮಾದಜೋಡುಗಳ್ಕಡಿಯೆ | ಕುಣಪಕ್ಕೆಪಕ್ಕೆಗಳಾಗೆಪಟುಭಟ | ರ್ಪೊಡೆಗೆಡೆದರಾಗರಾಗದೊಳಮರನಾರಿಯ ರ್ತಕ್ಕೈಸಲಂಬರದೊಳು ‖೫೨‖ ಪಡೆಮಡಿವುತಿರ್ದುದುಲವಾಸ್ತ್ರದಿಂದಿತ್ತಕುಶ | ನೊಡನೆಸೌಮಿತ್ರಿಗಾದುದುಯುದ್ಧಮಾಗ ಕಿವಿ | ಗಡೆಗೆತೆಗೆದೆಚಾನ್ಕೈದಂಬುಗಳಸಿದಿರಾಗಿಭೂಮಿಜೆಯಸುತನಮೇಲೆ ‖ ಕಡುಗಿಖಾತಿಯೊಳೀತನೊಂದುಸರಳಂಪೂಡಿ | ಬಿಡಲೂರ್ಮಿಳಾವಲ್ಲಭನತೇರೆರಡುಘಳಿಗೆ | ಬಿಡದೆತಿರುಗಿತುಭವಣಿಗೊಂಡುರಥವಾಜಿಗಳ್ಪೊಡೆಗೆಡೆದವೇನೆಂಬೆನು ‖ ೫೩ ‖ ಮೆ

ಟೀ‖ ರುಧಿರಾಕ್ಷರಾಕ್ಷಸನಂ–ರುಧಿರಾಕ್ಷನೆನ್ನುವ ರಕ್ಕಸನನ್ನು, ಬಿಡದೆ–ಬಿಟ್ಟುಬಿಡದೆ, ರಣಾಗ್ರದೋಳ್–ರಣರಂಗದಲ್ಲಿ, ಕೆಡಹಿ–ಆತನನ್ನು ನೆಲಕ್ಕೆ ಉರುಳಿಸಿ ಬಿಟ್ಟು, ನಿಜ–ಸ್ವಕೀಯವಾದ, ಚಾಪ–ಧನುಸ್ಸಿನಿಂದ, ಚಾಪಲ–ಸ್ಥಿರವಿಲ್ಲದ, ಹಸ್ತನು–ಕೈಯುಳ್ಳವನಾಗಿರತಕ್ಕ, ಲವನು– ಲವನೆಂಬ ಪಸುಳೆಯು, ಅಡಿಸಿದ– ತಿರುಗಿಸಿದ, ಅರಿ–ಹಗೆಗಳ, ಚತುರ– ಚಾತುರ್ಯದಿಂದ ಕೂಡಿದ, ಚತುರಂಗಮಂ–ಹಸ್ತ್ಯಶ್ವರಥ ಪದಾತಿಗಳನ್ನು, ಮತ್ತೆ–ಪುನಃ, ಮುಳಿದು–ಕೋಪಗೊಂಡು, ಸಂಹರಿಸ ತೊಡಗಿದಂ–ಕೊಂದು ಹಾಕಲುಜ್ಜುಗಿಸಿದನು, ಪಟುಭಟರು– ವೀರಾಗ್ರಣಿಗಳು, ತೊಡವುಗಳ–ಆಭರಣಗಳ, ಕಾಯಕೆ–ದೇಹಕ್ಕೆ, ಆಯತಮಾದ–ವಿಶಾಲತೆಯನ್ನೈದಿದ, ಜೋಡುಗಳು–ಕೈ ಕಾಲು ಮೈ ಮೊದಲಾದುವುಗಳ ಪೋಷಣೆಗಾಗಿ ಹಾಕಿಕೊಂಡಿರತಕ್ಕ ಅಂಗಿ ಮೊದಲಾದುವುಗಳು, ಕಡಿಯೆ–ಛಿದ್ರಛಿದ್ರವಾಗಿ, ಕುಣಪಕೆ–ಶವಕ್ಕೆ, ಪಕ್ಕೆಗಳು–ಉಭಯ ಪಾರ್ಶ್ವಗಳು,(ಆಸರೆ) ಆಗೆ–ಆಗಿಬಿಡಲು, ಆಗ–ಆ ಕಾಲದಲ್ಲಿ, ಅಮರನಾರಿಯರು–ಸುರಾಂಗನೆಯರು, ರಾಗದೊಳು–ಪ್ರೇಮಾತಿಶಯದಿಂದ, ಅಂಬರದೊಳು–ಅಂತರಿಕ್ಷಪ್ರದೇಶದಲ್ಲಿ, ತಕ್ಕೈಸಲು–ಮರ್ಯಾದೆ ಮಾಡುವ ತೆರದಿಂದ, ಪೊಡೆಗೆಡೆದರು–ನೆಲಕ್ಕೆ ಬಿದ್ದುಹೋದರು ‖

ಅ‖ ವಿ‖ ರಣಾಗ್ರ (ಸ. ದೀ.) ನಿಜಚಾಪ-ಚಾಪಲ ಹಸ್ತನು, ನಿಜ–ತನ್ನದಾದ, ಚಾಪ–ಧನುಸ್ಸು (ವಿ. ಪೂ) ಚಾಪಲವಾದ ಹಸ್ತ (ವಿ. ಪೂ) ನಿಜಚಾಪದಿಂದ ಚಾಪಲಹಸ್ತನು (ಬ.ಸ.) ಪಕ್ಕೆಗಳು (ತ್ಭ) ಪಕ್ಷಗಳು (ತ್ಸ) ಪಟು ಭಟರು (ವಿ.ಪೂ) ಪೊಡೆಗೆಡೆದರು (ಕ್ರಿ. ಸ) ಅಮರನಾರಿಯರ್ (ಷ. ತ) ‖೫೨‖

ಟೀ‖ ಲವಾಸ್ತ್ರದಿಂದ-ಲವನು ಬಿಡುತ್ತಲಿದ್ದ ಕಣೆಗಳಿಂದ, ಪಡೆ-ದಳವು, ಮಡಿವುತಿರ್ದುದು–ಸತ್ತು ಹೋಗುತ್ತಲಿತ್ತು, ಇತ್ತ–ಈ ಕಡೆಯಲ್ಲಿ, ಸೌಮಿತ್ರಿಗೆ–ಲಕ್ಷ್ಮಣನಿಗೆ, ಕುಶನೊಡನೆ–ಕುಶನಕೂಡ, ಯುದ್ಧಂ–ರಣವು, ಆದುದು–ಉಂಟಾಯಿತು, ಆಗ-ಆ ಸಮಯದಲ್ಲಿ, ಭೂಮಿಜೆಯ–ಸೀತಾದೇವಿಯ, ಸುತನಮೇಲೆ–ಕುವರನಾದ ಕುಶನಮೇಲೆ, ಕವಿಗಡೆಗೆ–ಆಕರ್ಣಾಂತವಾಗಿ, ಸೆಳೆದು–ಎಳೆದುಕೊಂಡು, ಐದಂಬುಗಳನು–ಐದು ಕಣೆಗಳನ್ನು, ಎಚ್ಚನು–ಪ್ರಯೋಗವಂ ಮಾಡಿದನು, ಈತನು–ಈ ಕುಶನಾದರೊ, ಖತಿಯೊಳು-ಕೋಪದಿಂದ, ಕಡುಗಿ–ರೇಗಿ, ಒಂದು ಸರಲಂ–ಒಂದು ಕಣೆಯನ್ನು, ಪೂಣಿ–ಅಣಿಮಾಡಿಕೊಂಡು, ಬಿಡಲು–ಪ್ರಯೋಗಿಸಲಾಗಿ, ಊರ್ಮಿಳಾವಲ್ಲಭನ–ಲಕ್ಷ್ಮಣಸ್ವಾಮಿಯ, ತೇರು–ಸ್ಯಂದನವು, ಬಿಡದೆ–ತಪ್ಪದೆ, ಎರಡು ಘಳಿಗೆ–ಎರಡು ಗಳಿಗೆಯ ಪರ್ಯಂತವೂ, ತಿರುಗಿತು-ಸುತ್ತುತ್ತಲಿತ್ತು, ರಥವಾಜಿಗಳು–ತೇರಿಗೆ ಕಟ್ಟಿದ್ದ ಕುದುರೆಗಳಾದರೊ, ಬವಣೆಗೊಂಡು–ಬಳಲಿ, (ಸುತ್ತಿ) ಪೊಡೆಗೆಡೆದವು–ಬೆಚ್ಚರಪಟ್ಟುಕೊಂಡು ಹೋದವು, ಏನೆಂಬೆನು–ಏನೆಂದು ಹೇಳಲಿ ‖೫೩‖

ಟೀ‖ ಬಾಲಕನ–ಹುಡುಗನಾದ ಕುಶನೆಂಬುವನ, ವಿಕ್ರಮಕ್ಕೆ - ಸಾಹಸಕ್ಕೆ, ಲಕ್ಷ್ಮಣಂ– ಸುಮಿತ್ರೆಯಕುವರನು, ಮೆಚ್ಚಿದಂ– ಬಹುವಾಗಿ ಹೊಗಳಿದನು, ಪೆಚ್ಚಿದ– ಅಧಿಕವಾದ, ಅತಿರೋಷದಿಂದ - ಕೋಪಾತಿಶಯದಿಂದ, ಮತ್ತೊಂದು

ಗಳನ್ನೂ ಆಭರಣಾದಿಗಳನ್ನೂ ಖಂಡಿಸಿದನು, ಲವನ ಇರ್ಕಡೆಗಳಲ್ಲಿಯೂ ಹೆಣದ ರಾಶಿಯು ಪರ್ವತೋಪಮಾನವಾಗಿ ಬಿದ್ದು ಹೋಯಿತು. ‖೫೨‖ ಲವನು ಈ ರೀತಿಯಲ್ಲಿ ಅರಿಬಲವನ್ನು ನಿರ್ಮೂಲಮಾಡುತ್ತಿರುವಾಗ ಅತ್ತ ಕುಶನಿಗೂ ಲಕ್ಷ್ಮಣನಿಗೂ ಕಾಳಗವುಂಟಾಗಿ ಲಕ್ಷ್ಮಣನು ಐದು ಬಾಣಗಳನ್ನು ತೆಗೆದುಕೊಂಡು ಒಂದೇಬಾರಿ ಕೋಪಾತಿಶಯದಿಂದ ಕುಶನ ಮೇಲೆ ಬಿಡಲಾಗಿ ಜಾನಕಿಯ ಸುತನು ಕೋಪಗೊಂಡು ಒಂದು ಕಣೆಯನ್ನು ಅಂಬಿನಲ್ಲಿ ಸೇರಿಸಿ ಬಲವಾಗಿ ಬಿಡಲಾಗಿ ಸೌಮಿತ್ರಿಯು ಸರಳ್ಗಳೈದೂ ನುಚ್ಚುನುಚ್ಚಾಗಿ ಕೆಳಗೆ ಬಿದ್ದು ಹೋದವಲ್ಲದೆ ಆತನ ರಥವು ಆ ಬಾಣದ ರಭಸವನ್ನು ತಡೆಯಲಾರದೆ ಅಂತರಿಕ್ಷಕ್ಕೆ ಹಾರಿ ಅಲ್ಲಿಯೇ ಎರಡು ಗಳಿಗೆಯವರೆಗೂ ಗಿರ್ರನೆ ಸುತ್ತುತ್ತಲಿತ್ತು ‖ ೫೩ ‖ ಅನಂತರ ಆ ರಥವೂ ಕುದುರೆಯೂ ನೆಲಕ್ಕೆ ಬಿದ್ದು ಚೂರುಚೂರಾಗಿ ಒಡೆದು ಹೋಯಿತು. ಬಾಲಕನಾದ ಕುಶನ ಈ ತೆರನಾದ ಸಾಹಸಕ್ಕೆ ಲಕ್ಷ್ಮಣನು ಸಂತುಷ್ಟನಾಗಿ ಪುನಃ ಹೊಸ ರಥವನ್ನೇರಿ ಹೆಚ್ಚಾದ ರೋಷದಿಂದ ಕೂಡಿ ಎರಡು ಕೋಲ್ಗಳಿಂದ ಕುಶನ ಕಿರೀಟವನ್ನೂ ಮೂರು ಸರಳ್ಗಳಿಂದ

ಚ್ಚಿದಂಬಾಲಕನವಿಕ್ರಮಕೆಲಕ್ಷ್ಮಣಂ | ಪೆಚ್ಚಿದತಿರೋಷದಿಂಮತ್ತೊಂದುರಥಕಡ | ರ್ದೆಚ್ಚನೆರಡಂಬಿನಿಂದೀತನಕಿರೀಟಮುಂಕವಚಮುಂಮೂರಿಂದ. || ಕೊಚ್ಚಿಕೆಡಹಿದನಾಗಜಾನಕಿಯಸೂನುಪೆರೆ | ಯುರ್ಚಿದಹಿಪತಿಯಂತೆಶೌರ್ಯವಿಮ್ಮಡಿಸಿನಗು | ತುಚ್ಚರಿಸಿದಂವಿನಯಪೂರ್ವಕದೊಳರಸಕೇಳಾರಾಘವಾನುಜಂಗೆ || ೫೪ || ಧುರದೊಳ್ಕಿರೀಟಕವಚದಪೊರೆಯಿದೇಕೆಂದು ಪರಿಹರಿಸಿದುಪಕಾರ ಕಪಕಾರಮಂಮಾಡೆ | ನುರುಸೈನ್ಯಭಾರಮಂ ನಿನಗೆಬಿಡಿಸುವೆನೀಗ ನೋಡಾದೊಡೆನುತ ಕುಶನು || ವರವಹ್ನಿಸೂಕ್ತದೊಳಥರ್ವಣಮಂತ್ರದಪುನಶ್ಚರಣೆಯಿಂದನಲಾಸ್ತ್ರಮಂಪೂಡಿತೆಗೆದಿಸ | ಲ್ಕುರಿದುದುಚತುರ್ಬಲಮಕಾಲದೋಳ್ಪುರಹರಂಪಣೆಗಣ್ದೆರೆದನೆನಲ್ಕೆ || ೫೫ || ಬಲಮೆಲ್ಲಮುಂಸುಡುವಪಾವಕಜ್ವಾಲೆಯಂ | ಕಲಿಲಕ್ಷ್ಮಣಂಕಂಡು

---

ರಥಕೆ-ಹೊಸದಾದ ಒಂದು ತೇರನ್ನು, ಅಡರ್ದು-ಹತ್ತಿದವನಾಗಿ, ಈತನ-ಈ ಕುಶನ, ಕಿರೀಟಮುಂ-ಶಿರೋಭೂಷಣವಾದ ಕಿರೀಟವನ್ನು, ಎರಡಂಬಿನಿಂದ - ಕೋಲ್ಗಳೆರಡರಿಂದಲೂ, ಕವಚಮುಂ - ತೊಟ್ಟಿದ್ದ ಅಂಗಿಯನ್ನು, ಮೂರರಿಂದ - ಮೂರಂಬುಗಳಿಂದಲೂ, ಕೊಚ್ಚಿಕೆಡಹಿದನು-ಕಡಿದು ನೆಲಕ್ಕೆ ಉರುಳಿಸಿದನು, ಜಾನಕಿಯಸೂನು-ಸೀತಾದೇವಿಯ ತನುಜನಾದ ಕುಶನೆಂಬ ಬಾಲಕನಾದರೊ, ಆಗ - ಆ ವೇಳೆಯಲ್ಲಿ, ಪೆರೆಯಂ-ಮೇಲಿನ ಚರ್ಮವನ್ನು ಎಂದರೆ ಪರೆಯನ್ನು, ಉರ್ಚಿದ - ಬಿಟ್ಟುಬಿಟ್ಟ, ಅಹಿಯಂತೆ-ಹಾವಿನೋಪಾದಿಯಲ್ಲಿ, ಶೌರ್ಯವು-ಸಾಮರ್ಥ್ಯವು, ಇಮ್ಮಡಿಸಿ-ಎರಡುಪಾಲು ಹೆಚ್ಚಿ, ನಗುತ-ಮುಗುಳ್ನಗೆಯನ್ನೈದುತ್ತ, ವಿನಯಪೂರ್ವಕದೊಳು-ನಮ್ರಭಾವಪುರಸ್ಸರವಾಗಿ, ಆರಾಘವಾನುಜಂಗೆ-ಲಕ್ಷ್ಮಣನಿಗೆ, ಉಚ್ಚರಿಸಿದಂ-ಹೇಳಿದವನಾದನು, ಅರಸ-ಜನಮೇಜಯ ಮಹೀವಲ್ಲಭನೆ, ಕೇಳು-ಮುಂದೆ ನಡೆದ ಕಥೆಯನ್ನಾಲಿಸು.

ಅ|| ವಿ|| ವಹ್ನಿಸೂಕ್ತ (ಷ. ತ.) ಅನಲಾಸ್ತ್ರ (ಸ. ದೀ.) ಪಣೆಗಣ್ (ಷ. ತ.) ಮತ್ತು ಕ. ವ್ಯಂಜನ ಸಂಧಿ) ||೫೪||

ಟೀ|| ಕಿರೀಟದಪೊರೆ-ಕಿರೀಟದ ಭಾರವು, ಧುರದೊಳು - ಯುದ್ಧಮಾಡುವ ಕಾಲದಲ್ಲಿ, ಇದೇಕೆ - ಏತಕ್ಕಿರಬೇಕು, ಎಂದು - ಎಂಬತೆರನಾಗಿ, ಪರಿಹರಿಸಿದ - ನೀಗಿದ, ಉಪಕಾರಕೆ - ಒಳ್ಳೆಯ ಕೆಲಸಕ್ಕೆ, ಅಪಕಾರಮಂಮಾಡೆನು - ಕೆಟ್ಟದ್ದನ್ನು ಮಾಡತಕ್ಕವನಲ್ಲವು, ನಿನಗೆ - ನಿನಗಾದರೊ, ಉರು-ಅಧಿಕವಾದ, ಸೈನ್ಯಭಾರಮಂ-ಸೇನೆಯ ಹೊರೆಯನ್ನು, ಈಗ-ಈ ವೇಳೆಯಲ್ಲಿ, ಬಿಡಿಸುವೆನು-ತಪ್ಪುವಂತೆ ಮಾಡುತ್ತೇನೆ, ನೋಡು-ಈಕ್ಷಿಸು, ಎನುತ-ಎಂದು ನುಡಿಯುತ್ತ, ಕುಶನು-ಕುಶನೆಂಬ ಬಾಲಕನು, ವರ-ಮೇಲಾದ, ವಹ್ನಿಸೂಕ್ತದೋಳ್ - ಅಗ್ನಿದೇವತಾಸ್ತೋತ್ರದಲ್ಲಿರತಕ್ಕ, ಅಥರ್ವಮಂತ್ರದ-ಅಥರ್ವಣ ವೇದದಲ್ಲಿ ಬರುವ ಮಂತ್ರಗಳ, ಪುನಶ್ಚರಣೆಯಿಂದ-ಜಪಮಾಡುವುದರಿಂದ, ಅನಲಾಸ್ತ್ರಮಂಪೂಡಿ-ಆಗ್ನೇಯಾಸ್ತ್ರವನ್ನು ಜೋಡಿಸಿ, ತೆಗೆದು-ಸರಿಪಡಿಸಿಕೊಂಡು, ಎಸಲ್ಕೆ-ಬಿಡಲಾಗಿ, ಅಕಾಲದೊಳ್-ಅವೇಳೆಯಲ್ಲಿ, ಪುರಹರಂ - ತ್ರಿಪುರಾಂತಕನಾದ ಪರಮೇಶ್ವರನು, ಪಣೆಗಣ್ಣ - ಫಾಲನೇತ್ರವನ್ನು, ತೆರೆದನು-ತೆಗೆದುಬಿಟ್ಟನು, ಎನಲ್ಕೆ - ಎಂಬತೆರನಾಗಿ, ಚತುರ್ಬಲಂ-ನಾಲ್ಕು ತೆರನಾದ ಸೈನ್ಯವು, ಉರಿದುದು-ಭಸ್ಮವಾಯಿತು.

ಅ|| ವಿ|| ಅನಲಾಸ್ತ್ರ (ಸ. ದೀ.) ||೫೫||

ಟೀ|| ಬಲವೆಲ್ಲಮುಂ-ಸಕಲ ಸೈನ್ಯವನ್ನೂ, ಸುಡುವ - ಸುಟ್ಟುಬಿಡತಕ್ಕ, ಪಾವಕ-ಯಜ್ಞಪುರುಷನ, ಜ್ವಾಲೆಯಂ-ತಾಪವನ್ನು, ಕಲಿ-ಶೂರಾಗ್ರಣಿಯಾದ, ಲಕ್ಷ್ಮಣಂ-ಸುಮಿತ್ರಾನಂದನನು. ಕಂಡು ಈಕ್ಷಿಸಿ, ಅದಂ-ಕುಶನು ಬಿಟ್ಟ ಅನಲಾಸ್ತ್ರವನ್ನು, ವರ.ಣಾಸ್ತ್ರದಿಂದ-ವರುಣಮಂತ್ರಪ್ರಯೋಗದಿಂದ, ನಿಲಿಸಲ್ಕೆ-ತಗ್ಗಿಸಿಬಿಡಲಾಗಿ, ಬಾಲಕಂ-ಕುಶನು, ಮತ್ತೆ-ಪುನಃ, ನಸುನಗುತ-ಮುಗುಳ್ನಗೆಯನ್ನೈದುತ್ತ, ವಾಯುವ್ಯಮಾರ್ಗಣವನು-ವಾಯುವ್ಯಾಸ್ತ್ರವನ್ನು, ಎಸಲು-ಪ್ರಯೋಗಮಾಡಲು, ಕುಲ

---

ಅವನು ತೊಟ್ಟಿದ್ದ ಅಂಗಿಯನ್ನೂ ಹೊಡೆದುಕೆಡವಿದನು. ಕುಶನಾದರೊ ಪರೆಯನ್ನು ಬಿಟ್ಟ ಹಾವಿನಂತೆ ರೋಷೋನ್ಮತ್ತನಾಗಿ ಮೊದಲಿದ್ದ ಶೌರ್ಯಕ್ಕಿಮ್ಮಡಿಯಾಗಿ ಲಕ್ಷ್ಮಣನನ್ನು ಕುರಿತು ||೫೪|| ರಣರಂಗದಲ್ಲಿ ಕಿರೀಟ ಕವಚಾದಿಗಳಿದ್ದರೆ ತೊಡಕೆಂದು ನೀನು ಅವುಗಳನ್ನು ನೆಲಕ್ಕೆ ಕೆಡವಿದ್ದಕ್ಕೆ ನನಗೆ ಬಹು ಸಂತೋಷವಾಗಿದೆ. ಇದಕ್ಕಾಗಿ ನಾನು ಮತ್ತೇನು ಉಪಕಾರ ಮಾಡದಿದ್ದರೂ ನಿನಗೆ ಅಪರಿಮಿತವಾದ ಸೇನಾಭಾರವನ್ನು ತಪ್ಪಿಸುವುದೇ ಪ್ರತ್ಯುಪಕಾರವೆಂದು ಭಾವಿಸಿರುವೆನು ಎಂದು ನುಡಿಯುತ್ತಾ ಅಥರ್ವಣವೇದದಲ್ಲಿರುವ ಅಗ್ನಿದೇವತೋಪಾಸನಾ ಮಂತ್ರ ಪುನಶ್ಚರಣೆಯಿಂದ ಆಗ್ನೇಯಾಸ್ತ್ರಮಂ ಪಡೆದು ಅಕಾಲದಲ್ಲಿ ಪರಮೇಶ್ವರನು ತನ್ನ ಫಾಲನೇತ್ರವನ್ನು ತೆರೆದನೊ ಎಂಬಂತೆ ಮೆರೆಯುತ್ತ ಹಗೆಗಳ ಪಡೆಯನ್ನು ಕ್ಷಣಮಾತ್ರದಲ್ಲಿ ಸುಟ್ಟು ಬೂದಿಮಾಡುತ್ತಿರುವುದನ್ನು ಲಕ್ಷ್ಮಣನು ನೋಡಿ ||೫೫|| ವರುಣಾಸ್ತ್ರದಿಂದ ಅದನ್ನು ಶಮನಮಾಡಲುಜ್ಜುಗಿಸಿದರೆ ಕುಶನು ವಾಯವ್ಯಾಸ್ತ್ರವನ್ನು ಬಿಟ್ಟನು. ಇದರಿಂದ ಸಪ್ತಕುಲಾಚಲಗಳನ್ನೂ ಕೂಡ ಬುಡಸಹಿತ ನೆಲದಮೇಲೆ ಉರುಳಿಸುವ ಭಯಂಕರವಾದ ಬಿರುಗಾಳಿಯುಂಟಾಗಿ ಸೈನ್ಯವನ್ನೆಲ್ಲಾ ನೆಲಕ್ಕೆ ಉರುಳಿಸಿದ್ದಲ್ಲದೆ ಲಕ್ಷ್ಮಣನೂ ಕೂಡ ಆ ಮಹಾವಾಯುವಿನ ಹೊಯ್ಲಿಗೆ ತಡೆಯ

ವರುಣಾಸ್ತ್ರದಿಂದದಂ | ನಿಲಿಸಲ್ಕೆಬಾಲಕಂಮತ್ತೆನಸುನಗುತವಾಯುವ್ಯಮಾರ್ಗಣವನೆಸಲು || ಕುಲಶೈಲಮಂಕಿತ್ತುಬಿಸುಡು ಸುಡುವಂದದಿಗಾಳಿ | ಸಲೆಬಡಿದುಪಡೆಗಳಂಕೆಡಹುತಿರೆನಡೆತಂದು | ಸೆಳೆವುಗೊಂಡೂರ್ಮಿಳಾಕಾಂತನಂಪೆರಗಿಕ್ಕೆಕಾಲಜಿತುವಿದಿರಾದನು || ೫೬ || ಭುಜಬಲಕೆಪಾಡಲ್ಲತರಳನೆಂದುಳುಹಿದರೆ | ವಿಜಯನಾದಪೆಬೇಡಹೋಗೆಲವೊಕಾರುಣ್ಯ | ರುಜುವಲ್ಲತಾನೆನುತಕಾಲಜಿತುವೆಚ್ಚಡಾತನಬಾಣಮುಂಖಂಡಿಸಿ || ಅಜಗಳಸ್ತನದಂತೆಸೆವನಿನ್ನಪೌರುಷಂ | ನಿಜವಾದೊಡಾಂಸೈರಿಸುವೆನಲ್ಲದಿರ್ದೊಡಾ | ರಜದಿಂದವುಸಿವೇಳ್ದನಾಲಿಗೆಯನರಿವೆನೆಂದಾಕುಶಂಕೋಲ್ಗರೆದನು || ೫೭ || ಎಸುಗೆಯೆಂತುಟೋಕುಶನಕಣೆರ

---

ಶೈಲಮುಂ-ಸಪ್ತಕುಲಪರ್ವತಗಳನ್ನೂ ಕೂಡ, ಕಿತ್ತುಬಿಸುಡುವ-ಕಿತ್ತು ಬಿಸಾಡತಕ್ಕ, ಅಂದದಿ-ಬಗೆಯಿಂದ, ಗಾಳಿ-ಪವನನು, ಸಲೆ-ಚೆನ್ನಾಗಿ, ಬಡಿದು-ತಾಡಿಸಿ, ಪಡೆಗಳಂ-ದಳವನ್ನೆಲ್ಲಾ, ಕೆಡುಹುತ-ನೆಲದ ಮೇಲೆ ಉರುಳಿಸುತ್ತ, ಇರೆ - ಇರಲಾಗಿ, ನಡೆತಂದು-ಐತಂದು, ಸೆಳವುಗೊಂಡು-ವೇಗವು ಹೆಚ್ಚಿ, ಊರ್ಮಿಳಾಕಾಂತನಂ-ಸೌಮಿತ್ರಿಯನ್ನು, ಪೆರಗೆ-ಹೊರಗಡೆಯಲ್ಲಿ, ಇಕ್ಕೆ-ಇಡಲಾಗಿ, ಕಾಲಜಿತುವು-ಕಾಲಜಿತುವೆನ್ನುವ ಮುಖ್ಯಸೇನಾಪತಿಯು, ಇದಿರಾದನು-ಯುದ್ಧಕ್ಕೆ ನಿಂತವನಾದನು ||೫೬||

ಟೀ|| ತರಳನು-ಈ ಹುಡುಗನು, ಭುಜಬಲಕೆ-ನನಗಿರುವ ತೋಳ್ಬಲಕ್ಕೆ, ಪಾಡಲ್ಲ-ಎದುರು ನಿಲ್ಲಲಾರನು, ಎಂದು-ಎಂದು ಬಗೆದು, ಉಳುಹಿದರೆ-ಪ್ರಾಣದೊರಸೆ ಬಿಟ್ಟಲ್ಲಿ, ವಿಜಯನು-ಜಯದಿಂದ ಕೂಡಿದವನು, ಆದಪೆ-ಆಗುತ್ತೀಯೆ, ಎಲವೊ-ಎಲಾ ಹುಡುಗನೆ, ಬೇಡ-ಕಾಳಗಕ್ಕುಜ್ಜುಗಿಸುವ ಯೋಚನೆಯನ್ನು ಮಾಡಬೇಡ, ಹೋಗು-ಹಿಂದಿರುಗು, ಕಾರುಣ್ಯ-ಕೃಪೆಯು, ರುಜುವಲ್ಲ-ಸರಿಯಾದಮಾರ್ಗವಾಗಿಲ್ಲ, ಎನುತ-ಎಂದು ನುಡಿಯುತ್ತ, ಕಾಲಜಿತ್ - ಕಾಲಜಿತುವೆಂಬ ಚಮೂಪನು, ಪೆಚ್ಚಡೆ-ಬಾಣವನ್ನು ಹಾಕಲು, ಕುಶಂ-ಕುಶನೆಂಬ ಬಾಲಕನು, ಆತನ-ಅವನ, ಬಾಣಮುಂ-ಸರಲನ್ನು, ಖಂಡಿಸಿ-ತುಂಡು ತುಂಡಾಗಿ ಮಾಡಿ, ಅಜ-ಮೇಕೆಯ, ಗಳ-ಕೊರಳಲ್ಲಿರುವ, ಸ್ತನದಂತೆ-ಮೊಲೆಗಳ ತೆರನಾಗಿ, ಎಸೆವ-ಹೊಳೆಯತಕ್ಕ, ನಿನ್ನಪೌರುಷಂ-ನಿನ್ನ ಪರಾಕ್ರಮವು, ನಿಜವಾದೊಡೆ-ಸುಳ್ಳಲ್ಲವಾದರೆ, ಸೈರಿಸುವೆನು-ಸುದಾರಿಸಿಕ್ಕೊಳ್ಳುತ್ತೇನೆ, ಅಲ್ಲದಿರ್ದೊಡೆ-ಅಸತ್ಯವಾದೊಡೆ, ಆರಜದಿಂದ - ರಜೋಗುಣದಿಂದ, ಅಥವಾ ಗುಳಿಕನ ಬಗೆಯಿಂದ, ಅಥವಾ ಹೆಚ್ಚಾದ ಬುದ್ಧಿಯಿಂದಲೂ, ವಿಶ್ವಾಸದಿಂದಲೂ ಪುಸಿವೇಳ್ದ-ಸುಳ್ಳುಮಾತನ್ನಾಡಿದ, ನಿನ್ನ-ನಿನ್ನ ಸಂಬಂಧವಾದ, ನಾಲಿಗೆಯನು-ನಾಲಿಗೆಯನ್ನೆ, ಅರಿವೆನು-ಕತ್ತರಿಸಿ ಬಿಸುತ್ತೇನೆ, ಎಂದು-ಎಂಬ ತೆರನಾಗಿ, ಕೋಲ್ಗರೆದನು-ಅಂಬುಗಳನ್ನೆಸೆದನು ||

ಅ|| ವಿ|| ಆರಜದಿಂದ+ಆರ=ಅಂಗಾರಕ ಗ್ರಹದಿಂದ, ಜ-ಹುಟ್ಟಿದವನು (ಬುಧನು), ಆರ ಮುಂದಗ್ರಹದಿಂದ, ಜ-ಉತ್ಪತ್ತಿಯಾದದ್ದು (ಗುಳಿಕ ಗ್ರಹವು), ಇದು ಯಾರಜಾತಕದಲ್ಲಿರುವುದೊ ಅವರಿಗೆ ಕೆಡಕಾಗುತ್ತದೆ, ಆರಜ-ಪ್ರೇಮ, ಅಜಗಳಸ್ತನ-ಅಜದಗಳ (ಷ. ತ.) ಅಜಗಳದಸ್ತನ (ಷ. ತ.) ಅಜ-ಬ್ರಹ್ಮ, ಮತ್ತು ಮೇಕೆ ||೫೭||

ಟೀ|| ಎಸುಗೆ-ಶರಸಂಧಾನದ ಬಗೆಯು, ಎಂತುಟೋ-ಎಂದಲ್ಲಿ, ಆರ್ದು - ಆರ್ಭಟಮಾಡಿಕೊಂಡು, ಗರ್ಜಿಸುವ-ಗರ್ಜನೆಯಂ ಮಾಡತಕ್ಕ, ನಾಲಿಗೆಯನು - ನಾಲಿಗೆಯನ್ನು, ಅರಿದುದು-ಛೇದಿಸಿತು, ಬಳಿಕ-ಅನಂತರ, ಮೌನದಿಂ - ಮೂಕಭಾವದಿಂದ, ಮುಸಗಿ-ಕಾಠಿಣ್ಯವಂತಾಳಿ, ರೋಷದೊಳ್-ಕೋಪದಿಂದ, ಉಬ್ಬಿ-ಮೆರೆದು, ಕಾಲಜಿತು-ಕಾಲಜಿತುವೆನ್ನುವ ಸೇನಾನಾಯಕನು, ಎಚ್ಚಡೆ - ಶರಗಳಂ ಬಿಡಲಾಗಿ, ಜಾನಕಿಯಸೂನು - ಕುಶನೆಂಬುವ ವೈದೇಹಿಯ ಕುವರನು, ನಗುತ-

---

ಲಾರದೆ ಕೆಳಗೆ ಬಿದ್ದು ಹೋಗಲು ||೫೬|| ಕಾಲಜಿತುವೆಂಬ ಲಕ್ಷ್ಮಣನ ದಳಪತಿಯು ಕುಶನನ್ನು ಕುರಿತು ಎಲೈ ಬಾಲಕನೆ ! ನನ್ನ ಬಾಹುಬಲದ ಮುಂದೆ ನೀನು ನಿಲ್ಲಲಾರೆ ನೀನಾದರೊ ಇನ್ನೂ ಹುಡುಗನು, ಬಾಲಕನೆಂದು ನಿನ್ನನ್ನು ನಾನು ಸುಮ್ಮನೆ ಬಿಡಲಾಗುವುದಿಲ್ಲವಾದ್ದರಿಂದ ಹಿಂದಿರುಗು ಇಲ್ಲದೆ ನನ್ನ ಬಾಣಕ್ಕೆ ಸಿಕ್ಕಿದರೆ ನೀನೆಂದಿಗೂ ಉಳಿಯಲಾರೆ ಎಂದು ನುಡಿದು ಅವನ ಮೇಲೆ ಕೂರ್ಗಣೆಯೊಂದನ್ನು ಬಿಡಲು ಕುಶನು ಅವನ ಬಾಣಗಳನ್ನು ಖಂಡಿಸಿ ಕಾಲಜಿತುವನ್ನು ಕುರಿತು ಎಲೈ ವೀರನೇ ನಿನ್ನ ಪೌರುಷವು ಮೇಕೆಯ ಕತ್ತಿನಮೇಲಿರುವ ಮೊಲೆಗಳಂತೆ ನಿರರ್ಥಕವಾದದ್ದಾದರೆ ನಾನು ತಡದುಕೊಳ್ಳಬಲ್ಲೆನು. ಇಲ್ಲದೆ ಹೋದರೆ ಸುಳ್ಳುಬೊಗಳನ್ನು ಬೊಗಳಿದ ನಿನ್ನ ನಾಲಿಗೆಯನ್ನು ಸೀಳದೆ ಬಿಟ್ಟೇನೆ ಎಂದು ನುಡಿಯುತ್ತಾ ಬಾಣಗಳನ್ನು ಬಿಡಲಾರಂಭಿಸಿದನು ||೫೭|| ಆ ಸರಲ್ಗಳಾದರೂ ಯುದ್ಧರಂಗದಲ್ಲಿ ಮೆರೆಯುತ್ತ ಸಿಂಹನಾದವನ್ನು ಮಾಡುತ್ತಲಿರುವ ಸೇನಾನಿಗಳ ನಾಲಿಗೆಯನ್ನೇ ಸೀಳಲಾರಂಭಿಸಿತು. ಇದನ್ನು ಕಂಡ ಕಾಲಜಿತುವಿನ ಕೋಪವು ಮೊದಲಿಗಿಂತಲೂ ಎರಡು ಪಾಲಿನಷ್ಟು ಹೆಚ್ಚಿ ಶರಸಂಧಾನವನ್ನು ಮಾಡುತ್ತಿರಲು ಕುಶನು ಮುಗುಳ್ನಗೆಯನ್ನೆಸೆದು ಕ್ರೂರವಾದ ಬಾಣಗಳನ್ನು ಬಿಡುತ್ತಾ ಬರಲು ಅವು ವೈರಿಗಳ ಕೈಕಾಲು ತಲೆ ಮೊದಲಾದವನ್ನೇ ಕತ್ತರಿಸಲಾರಂಭಿಸಿದವು. ಇದನ್ನು ಕಂಡ ಲಕ್ಷ್ಮಣನು ಮಹಾ ಕೋಪಾವಿಷ್ಟನಾಗಿ ಮೂರು ಲೋಕಗಳೂ ಮುಚ್ಚಿಕೊಳ್ಳುವಂತೆ ಸರಲ್ಮಳೆಯಂ ಕರೆದನು ||೫೮|| ಕುಶನಾದರೊ ಸೌಮಿತ್ರಿಯು ಬಿಟ್ಟ ಅಸ್ತ್ರಗಳ

ಣದೊಳಾರ್ದು | ಗರ್ಜಿಸುವನಾಲಿಗೆಯನರಿದುದುಬಳಿಕ ಮೌನದಿಂ | ಮಸಗಿರೋಷದೊಳುಬ್ಬಿ ಕಾಲಜಿಹ್ವೆಜ್ವಾಲಾಜಾನಕಿಯಸೂನುನಗುತ || ನಿಶಿತಾಸ್ತ್ರದಿಂದಕೈಕಾಲ್ತಲೆಗಳಂ ಕೂಡೆ | ಕುಸುರಿದರಿಯಲ್ಕಂಡು ಖತಿಯಿಂದಲಕ್ಷ್ಮಣಂ | ಮುಸುಕಿದಂ ಕೋಲ್ಗಳಂ ಬಾಲಕನಮೇಲೆ ಮೂಲೋಕದಾಲೋಕಮಡಗೆ || ೫೮ || ವೀರಲಕ್ಷ್ಮಣನೆಸೆವಕೂರಂಬನೆಲ್ಲಮುಂ | ವಾರುವಂನಾಲ್ಕನುಂತೇರಂ ಸುಕೇತುವಂ | ನಾರಿಯಂಚಾಪತೂಣೀರಂಗಳಂಕೆಲದಚಾರರಂ ಸಾರಥಿಯನು || ಚಾರುಕವಚವನೆಚ್ಚುಧಾರುಣಿಗೆಕೆಡಹಲ್ಕೆ | ತೋರಗದೆಗೊಂಡೂರ್ಮಿಳಾರಮಣನೈತರ | ಲ್ಧೀರನಹಸೀತಾಕುಮಾರಕಂ ಸಾಯಕದಸಾರದಿಂಪುಡಿಗೈದನು || ೫೯ || ಚರ್ಮಖಡ್ಗಂಗಳಿಂ ವಿವಿಧಾಯುಧಂಗಳಿಂ | ದೂರ್ಮಿಳಾಕಾಂತನೊದಗಿದೊಡನಿತನೆಲ್ಲಮುಂ | ನಿರ್ಮಲಾಸ್ತ್ರಂಗಳಿಂ ಕತ್ತರಿಸಿವಾಲ್ಮೀಕಿಮುನಿವರಂತನಗೆ ಕೊಟ್ಟ || ಮರ್ಮಭೇದಗಳಾದ ವೈದಂಬುಗಳನೆಸ | ಲ್ಸ್ವರ್ಮಣಿಧರಾತಳಕೆನಭದಿಂ

ಮುಗುಳ್ಪಗೆಯನ್ನೈದುತ್ತ, ನಿಶಿತಾಸ್ತ್ರದಿಂದ_ಕ್ರೂರ ಬಾಣಗಳಿಂದ, ಕೈ-ಹಸ್ತಗಳನ್ನು, ಕಾಲ್-ಅಡಿಗಳನ್ನು, ತಲೆಗಳಂ_ಶಿರಸ್ಸುಗಳನ್ನು, ಕುಸುರಿದು-ತುಂಡುತುಂಡಾಗಿ, ಅರಿಯಲ್-ಭೇದಿಸಲು, ಲಕ್ಷ್ಮಣಂ-ಸೌಮಿತ್ರಿಯು, ಕಂಡು_ಇದನ್ನು ನೋಡಿದವನಾಗಿ, ಮೂರುಲೋಕದ_ಸ್ವರ್ಗ ಮರ್ತ್ಯ ಪಾತಾಳಗಳ, ಆಲೋಕಂ-ಪ್ರಕಾಶವೂ, ಅಡಗೆ_ಹೋಗುವಹಾಗೆ, ಬಾಲಕನ ಮೇಲೆ_ಕುಶನೆಂಬ ತನ್ನ ವೈರಿಯಮೇಲೆ, ಕೋಲ್ಗಳಂ_ಕಣೆಗಳನ್ನು, ಮುಸುಕಿದಂ_ತುಂಬಿಸಿದನು ||೫೮||

ಟೀ|| ವೀರ_ಪರಾಕ್ರಮಿಯಾದ, ಲಕ್ಷ್ಮಣನು_ಸೌಮಿತ್ರಿಯು, ಎಸೆವ - ಪ್ರಯೋಗಮಾಡತಕ್ಕ, ಎಲ್ಲಮುಂ_ಸಮಸ್ತವಾದ, ಕೂರಂಬಂ_ಕ್ರೂರವಾದ ಸರಲ್ಗಳನ್ನು, ನಾಲ್ಕನುಂ_ನಾಲ್ಕಾದ, ವಾರುವಂ_ತುರಂಗಗಳನ್ನೂ, ತೇರಂ_ಸ್ಯಂದನವನ್ನು, ಸುಕೇತುವಂ_ಧ್ವಜಪಟವನ್ನು, ನಾರಿಯಂ_ಬಿಲ್ಲಿಗೆ ಕಟ್ಟಿರುವ ಹುರಿಯನ್ನು, ಚಾಪತೂಣೀರಂಗಳಂ-ಧನುರ್ಬಾಣಂಗಳನ್ನು, ಕೆಲದ_ಇರ್ಕಡೆಗಳಲ್ಲಿರತಕ್ಕ, ಚಾರರಂ_ಸೇವಕಜನರನ್ನು, ಸಾರಥಿಯನು - ರಥವನ್ನು ನಡೆಯಿಸತಕ್ಕವನನ್ನು, ಚಾರು_ಕಾಂತಿಯುಕ್ತವಾದ, ಕವಚವನು_ಅಂಗಿಯನ್ನು, ಎಚ್ಚು_ಹೊಡೆದು, ಧಾರುಣಿಗೆ_ಭೂಮಿಯಮೇಲೆ, ಕೆಡಹಲ್ಕೆ - ಉರುಳಿಸಲು, ತೋರ-ದಪ್ಪನಾದ, ಗದೆ_ಗದಾಯುಧವನ್ನು, ಕೊಂಡು-ತೆಗೆದುಕೊಂಡು, ಊರ್ಮಿಳಾರಮಣನು_ಸುಮಿತ್ರಾತ್ಮಜನು, ಐತರಲ್_ಬಂದು ಸೇರಿಯಲು, ಧೀರನು_ಧೈರ್ಯವಂತನು, ಅಹ_ಆಗಿರತಕ್ಕ, ಸೀತಾಕುಮಾರಕಂ_ವೈದೇಹಿಯ ಕುಮಾರನಾದ ಕುಶನು, ಸಾಯಕದಸಾರದಿಂ_ಕೋಲ್ಗಳ ಶಕ್ತಿಯಿಂದ, ಪುಡಿಗೈದನು_ಪುಡಿಪುಡಿಯಾಗಿ ಮಾಡಿಬಿಟ್ಟನು ||

ಅ|| ವಿ|| ಕೂರಂಬು (ವಿ.ಪೂ.) ನಾರಿ_ಧನುಸ್ಸಿಗೆ ಕಟ್ಟಿರುವ ಹಗ್ಗ ಮತ್ತು ಹೆಂಗಸು. ಪುಡಿಯಂಗೈದಂ-(ಕ್ರಿ. ಸ. ೫೫೯||

ಟೀ|| ಊರ್ಮಿಳಾಕಾಂತನು-ಊರ್ಮಿಳೆಯ ಗಂಡನಾದಲಕ್ಷ್ಮಣನು, ಚರ್ಮ_ಚರ್ಮವು, (ಗುರಾಣಿ) ಖಡ್ಗಂಗಳಿಂ_ಕತ್ತಿ ಮೊದಲಾದುವುಗಳಿಂದಲೂ, ವಿವಿಧ_ತಂಡತಂಡವಾದ, ಆಯುಧಂಗಳಿಂದ_ಕತ್ತಿ, ಈಟಿ ಮುಂತಾದುವುಗಳಿಂದ, ಒದಗಿದೊಡೆ-ರಣರಂಗದಲ್ಲಿ ಬಂದು ನಿಲ್ಲಲು, ಕುಶನು-ಕುಶನೆಂಬ ಬಾಲಕನು, ಅನಿತೆಲ್ಲಮುಂ_ಲಕ್ಷ್ಮಣನು ಸಿದ್ಧಮಾಡಿಕೊಂಡಿದ್ದ ಖಡ್ಗಾದಿಗಳನ್ನು, ನಿರ್ಮಲಾಸ್ತ್ರಂಗಳಿಂ_ಮಂತ್ರಾಸ್ತ್ರ ಪ್ರಯೋಗದಿಂದ, ಕತ್ತರಿಸಿ_ಕಡಿದುಹಾಕಿ, ತನಗೆ_ತನಗಾಗಿ, ವಾಲ್ಮೀಕಿಮುನಿವರಂ_ವಾಲ್ಮೀಕಿ ಮಹರ್ಷಿಯು, ಇತ್ತ_ಅನುಗ್ರಹಿಸಿದ, ಮರ್ಮಭೇದಿಗಳು_ಎದೆಯನ್ನು ಚುಚ್ಚತಕ್ಕವುಗಳು, ಅದ_ಅವಂಥ, ಐದಂಬುಗಳನು_ಐದು ಕಣೆಗಳನ್ನು, ಎಸಲ್_ಪ್ರಯೋಗಮಾಡಲು, ನಭದಿಂದ-ಅಂತರಿಕ್ಷ ಪ್ರದೇಶದಿಂದ, ಸ್ವರ್ಮಣಿ_ಗಗನಕ್ಕೆ ರತ್ನಪ್ರಾಯನಾದ ರವಿಯು, ಧರಾತಳಕೆ-ಭೂಮಂಡಲಕ್ಕೆ, ಉರುಳ್ವಂತೆ_ಉರಳಿಕೊಂಡು ಬೀಳುವತೆರನಾಗಿ, ಪೇರ್_ಹೆಚ್ಚಾಗಿ, ಮರವೆಗೊಂಡು-ಸ್ಮರಣೆಯನ್ನು ಕಳೆದುಕೊಂಡವನಾಗಿ, ಬೀಳ್ವ- ನೆಲದಮೇಲೆ ಬೀಳತಕ್ಕ, ಅನಿತರೊಳ್_ಕಾಲಕ್ಕೆಸರಿಯಾಗಿ, ತ್ರೋಳ್ಗೊಯ್ದು_ಭುಜಗಳನ್ನಪ್ಪಳಿಸುತ್ತ, ಆರ್ದು_ಚೀರಿ, ಬೊಬ್ಬಿರಿದನು_ಸಿಂಹ ಗರ್ಜನೆಯನ್ನು ಮಾಡಿದವನಾದನು || ೬೦ ||

ನ್ನೆಲ್ಲಾ ಖಂಡಿಸಿದ್ದಲ್ಲದೆ ಅವನ ತೇರು, ಕುದುರೆಗಳು, ಕೆಲಬಲದ ಚಾರರು, ರಥವನ್ನು ನಡೆಯಿಸುವವನು ಆ ಲಕ್ಷ್ಮಣನ ಅಂಗಿ ಮೊದಲಾದವನ್ನೆಲ್ಲಾ ಬಾಣದಿಂದ ನೆಲಕ್ಕೆ ಕೆಡವಿ ಬಿಟ್ಟನು. ಆಗ ಸೌಮಿತ್ರಿಯು ಅತಿಯಾಗಿ ಕೋಪವಂತಾಳಿ ದೊಡ್ಡದಾದ ಒಂದು ಗದೆಯನ್ನು ತೆಗೆದುಕೊಂಡು ಕುಶನನ್ನು ಹೊಡೆಯಬೇಕೆಂದು ಬರಲು ಸೀತಾಕುಮಾರನು ತನ್ನ ಬಾಣಗಳ ಶಕ್ತಿಯಿಂದ ಆ ಗದಾದಂಡವನ್ನು ಕೂಡ ತುಂಡುತುಂಡಾಗಿ ಮಾಡಿದನು || ೫೯ || ಬಳಿಕ ಲಕ್ಷ್ಮಣನು ಚರ್ಮ, ಕತ್ತಿ, ವಿಧವಿಧವಾದ ಅಸ್ತ್ರ ಶಸ್ತ್ರಗಳು ಮೊದಲಾದವನ್ನು ತೆಗೆದುಕೊಂಡು ಕುಶನಮೇಲೆ ಬೀಳಲು ಆ ಬಾಲಕನು ವಾಲ್ಮೀಕಿ ಮಹಾಮುನಿಗಳು ತನಗೆ ಅನುಗ್ರಹಿಸಿದ್ದ ಅತ್ಯಂತ ಕಠಿಣವಾದ ಐದು ಬಾಣಗಳನ್ನು ಲಕ್ಷ್ಮಣನಮೇಲೆ ಬಹು ರೋಷದಿಂದ ಬಿಟ್ಟುಬಿಟ್ಟನು. ಆ ಕೂರಂಬುಗಳಾದರೊ ಲಕ್ಷ್ಮಣನ ಕೈಯಲ್ಲಿದ್ದ ಅಸ್ತ್ರ ಶಸ್ತ್ರಗಳನ್ನೆಲ್ಲಾ ಹಾಳುಮಾಡಿ ಸೂರ್ಯನು ಆಕಾಶದಿಂದ ಭೂಮಿಗೆ ಬೀಳುವಂತೆ

ದುರುಳ್ವಂತೆ | ಪೇರ್ಮರವೆಗೊಂಡುಬೀಳ್ವನಿತರೊಳೊತ್ತೊಳ್ವಯ್ದು ಕುಶನಾರ್ದುಬೊಬ್ಬಿರಿದನು ॥ ೬೦ ॥ ಆಘೋರತರದಸಂಗ್ರಾಮದೊಳ್ತಾನೆಚ್ಚ | ಮೋಘಮಾಗಿರ್ದಮುನಿಕೊಟ್ಟದಿವ್ಯಾಸ್ತ್ರದಮ | ಹಾಘಾತಿಯಿಂದಕಡುನೊಂದುಮೂರ್ಛಿತನಾಗಿ ಬಿದ್ದುಭೂತಳದಮೇಲೆ ॥ ರಾಘವಾನುಜನಿರೆಕುಶಂಬಳಿಕನಿಜಹಸ್ತ | ಲಾಘವದೊಳಲ್ಲಿರ್ದರಂಸದೆದುಲವನಂಬ | ಲೌಘವೊತ್ತಾಯದಿಂಮುತ್ತಿಕೊಂಡಿರ್ದಕೋಲಾಹಲವನಾಲಿಸಿದನು ॥ ೬೧ ॥ ಶರಚಾಪಚರ್ಮಖಡ್ಗಂಗಳಂಕೊಂಡುಕುಶ | ನಿರದೆಲವನಿದ್ದೆಡೆಗೆಚಿಗಿದನಲ್ಲಿಂಖಗೇ | ಶ್ವರನಂತೆರಗಿದನವೇವೇಳ್ಪೆನಳಿದುಳಿದರಿಪುವಾಹಿನಿಭ್ರಮಿಗಳು ॥ ಪರಿದುದೆಣ್ದೆಸೆಗಳ್ಗೆ ಸೀತಾಕುಮಾರಕ | ತಿರುಗಿದರ್ತುರಗಮಿಹಬನಕಾಗಿದೇವಪುರ | ದರಸಲಕ್ಷ್ಮೀಶರಾಘವನಲ್ಲಿಗೈದಿದದೂತರತಿವೇಗದಿಂದ ॥ ೬೨ ॥

ಸಂಧಿ ೦ಕ್ಕೆ ಪದ್ಯ ೧೦೫೦ಕ್ಕಂ ಮಂಗಳಮಸ್ತು.

---

ಟೀ॥ ಆ ಘೋರತರದ- ಅತ್ಯಂತ ಕಠಿಣವಾದ, ಸಂಗ್ರಾಮದೊಳ್ – ಕಾಳಗದಲ್ಲಿ, ತಾನು – ಕುಶನೆಂಬ ಹುಡುಗನು, ಎಚ್ಚ-ಬಿಟ್ಟಂಥ, ಅಮೋಘಂ-ಅಸದಳವಾದದ್ದು, ಆಗಿರ್ದ-ಆಗಿರತಕ್ಕ, ಮುನಿ-ವಾಲ್ಮೀಕಿಯು, ಇತ್ತ-ದಯೆಪಾಲಿಸಿದ್ದ, ದಿವ್ಯಾಸ್ತ್ರದ-ಉತ್ತಮಾಸ್ತ್ರಗಳ, ಮಹಾಘಾತಿಯಿಂದ-ಹೆಚ್ಚಾದ ಹೊಡತದಿಂದ, ಕಡು-ಬಹಳವಾಗಿ, ನೊಂದು-ಏಟುಗಳನ್ನನುಭವಿಸಿ, ಮೂರ್ಛಿತನಾಗಿ-ಮೂರ್ಛಾಕ್ರಾಂತನಾಗಿ, ರಾಘವಾನುಜನು - ಸೌಮಿತ್ರಿಯು, ಭೂತಳದಮೇಲೆ-ಧರಾಮಂಡಲಮೇಲ್ಗಡೆಯಲ್ಲಿ, ಬಿದ್ದು-ಬಿದ್ದುಹೋಗಿ, ಇರಲು-ಇರಲಾಗಿ, ಬಳಿಕ-ತರುವಾಯ, ನಿಜ-ಸ್ವಕೀಯವಾದ, ಹಸ್ತಲಾಘವದೊಳು-ಕರಚಾತುರ್ಯದಿಂದ, ಅಲ್ಲಿರ್ದರಂ-ಅಲ್ಲಿ ನೆರೆದಿದ್ದ ದಳಪತಿಗಳೆಲ್ಲರನ್ನೂ, ಸದೆದು-ಹೊಡೆದು, ಬಲೌಘಂ-ಶತ್ರುಸೈನ್ಯವು, ಒತ್ತಾಯದಿಂ-ಬಂದಾಗಿ ಸೇರಿ, ಲವನಂ-ಲವನನ್ನು, ಮುತ್ತಿಕೊಂಡಿರ್ದ-ಆವರಿಸಿದ್ದಂಥ, ಕೋಲಾಹಲವನು-ಪದಾತಿಗಳ ಕೂಗನ್ನು, ಆಲಿಸಿದನು-ಕೇಳಿದನಾದನು ॥

ಅ॥ ವಿ॥ ದಿವ್ಯಾಸ್ತ್ರ-(ಸ. ದೀ.) ॥ ೬೧ ॥

ಟೀ॥ ಕುಶನು-ಕುಶನಾದರೊ, ಶರ-ಕಣೆಗಳನ್ನೂ, ಚಾಪ-ಧನುಸ್ಸನ್ನು, ಖಡ್ಗಂಗಳಂ - ಕತ್ತಿಮೊದಲಾದವನ್ನು, ಕೊಂಡು-ತೆಗೆದು ಕೊಂಡವನಾಗಿ, ಅಲ್ಲಿಂ-ಆ ಎಡೆಯಿಂದ, ಖಗೇಶ್ವರನಂತೆ-ಗರುತ್ಮಂತನ ತೆರದಿಂದ, ಚಿಗಿದನು-ಮೇಲಕ್ಕೆ ನೆಗೆದನು. ಎರಗಿದನು-ಶತ್ರುಗಳ ಬಳಿಯಲ್ಲಿ ಯುದ್ಧಕ್ಕೆ ಅನುವಾದನು, ಅದನು-ಆ ಬಗೆಯನ್ನು, ಏವೇಳ್ವೆನು-ಏನೆಂದು ಬಣ್ಣಿಸಲಿ, ಅಳಿದು-ಕಳೆದು ಹೋಗಿ, ಉಳಿದ-ಮಿಕ್ಕ, ರಿಪುವಾಹಿನೀ-ಹಗೆಗಳ ಬಲದ, ಭ್ರಮಿಗಳು-ಭ್ರಮಿ ಎಂಬ ಲೆಕ್ಕದ ಸೈನ್ಯವು, ಎಣ್ದೆಸೆಗಳ್ಗೆ-ಅಷ್ಟ ದಿಕ್ಕುಗಳಿಗೂ, ಪರಿದುದು-ನಡೆಯಿತು, ಸೀತಾಕುಮಾರಕರು-ವೈದೇಹಿಯ ಕುಮರರಾದ ಕುಶಲವರು, ತುರಗಂ-ಅಶ್ವವು, ಇಹ-ಇರತಕ್ಕ, ಬನಕಾಗಿ-ವನವನ್ನು ಕುರಿತು, ತಿರುಗಿದರು-ಹೊರಟರು ದೇವಪುರದ-ದೇವಪುರವೆನ್ನುವ ಊರಿನ. ಅರಸ-ರಾಜನಾದ, ಲಕ್ಷ್ಮೀಶ-ಲಕ್ಷ್ಮೀಕಾಂತನಾದ, ರಾಘವನಲ್ಲಿಗೆ-ಶ್ರೀ ರಾಮನಿದ್ದೆಡೆಗೆ, ಅತಿವೇಗದಿಂದ-ಬಹು ಜಾಗ್ರತೆಯಿಂದ, ದೂತರು-ಸೇವಕರು, ಐದಿದರು-ಹೋಗಿ ನೆರದರು ॥

ಅ॥ ವಿ॥ ಖಗೇಶ್ವರ-(ಗುಣ ಸಂಧಿ), ಖ-ಅಂತರಿಕ್ಷದಲ್ಲಿ, ಗ-ಗಮಿಸುವದು (ಪಕ್ಷಿ. ಕೃ. ವೃ.) ಖಗ-ಹಕ್ಕಿಗಳ, ಈಶ್ವರಂ. ಒಡೆಯನು ಎಂದಿರೆ ಗರುಡನು (ಷ. ತ.) ॥ ೬೨ ॥

ಟೀಕಾತಾತ್ಪರ್ಯ ಸಹಿತವಾದ ಜೈಮಿನಿ ಭಾರತದೊಳು ಇಪ್ಪತ್ತನೆಯ ಸಂಧಿಯು ಸಮಾಪ್ತವಾದುದು.

---

ಅವನನ್ನು ಕೆಳಗೆ ಉರುಳಿಸಿ ಬಿಟ್ಟಿತು. ಕೂಡಲೆ ಲಕ್ಷ್ಮಣನು ಮೂರ್ಛಾಕ್ರಾಂತನಾದನು. ಕುಶನಾದರೊ ತನ್ನ ತೋಳುಗಳನ್ನಪ್ಪಳಿಸುತ್ತ ಸಿಂಹನಾದವನ್ನು ಮಾಡಲಾರಂಭಿಸಿದನು ॥೬೦॥ ವಾಲ್ಮೀಕಿಮುನಿಪನು ಕೊಟ್ಟ ಅಸಾಧಾರಣವಾದ ಬಾಣಗಳಿಂದ ಲಕ್ಷ್ಮಣನನ್ನು ಮೂರ್ಛೆಗೊಳಿಸಿದ ಬಳಿಕ ಮಿಕ್ಕ ಸೈನ್ಯವನ್ನೆಲ್ಲಾ ಕ್ಷಣಮಾತ್ರದಲ್ಲಿ ಸಂಹರಿಸಿ ಪ್ರಳಯಕಾಲದ ರುದ್ರನಂತೆ ಕಂಗೊಳಿಸುತ್ತಲಿದ್ದನು. ಆ ವೇಳೆಗೆ ವೈರಿಬಲವು ಲವನನ್ನು ಮುತ್ತಿಕೊಂಡಿರುವ ಕೋಲಾಹಲಧ್ವನಿಯು ಕೇಳಿಬರಲು ॥ ೬೧ ॥ ಕುಶನು ಧನುರ್ಬಾಣಗಳನ್ನೂ, ಕತ್ತಿ ಈಟಿ ಮೊದಲಾದವನ್ನೂ ತೆಗೆದುಕೊಂಡು ಗರುಡನ ಗಮನವನ್ನೂ ಅಲೆಗಳೆವಂತೆ ಜಾಗ್ರತೆಯಾಗಿ ಹಾರಿ ಲವನಿದ್ದೆಡೆಯನ್ನು ಸೇರಿ ಮಿಕ್ಕ ಸೇನೆಯನ್ನೆಲ್ಲಾ ಸಂಹರಿಸಿ ಬಿಟ್ಟನು. ಅನಂತರ ಕುಶಲವರಿಬ್ಬರೂ ಕುದುರೆಯಿದ್ದೆಡೆಗೆ ಹೋದರು. ಕಳೆದುಳಿದ ದೂತರು ಈ ಸುದ್ದಿಯನ್ನು ಶ್ರೀ ರಾಮಚಂದ್ರನಿಗೆ ತಿಳಿಸಬೇಕೆಂದು ಬಹು ಜಾಗ್ರತೆಯಿಂದ ಹೊರಟು ಹೋದರು.

ಎಂಬಲ್ಲಿಗೆ ಟೀಕಾತಾತ್ಪರ್ಯಸಹಿತವಾದ ಜೈಮಿನಿ ಭಾರತದೊಳು ಇಪ್ಪತ್ತನೆಯ ಸಂಧಿಯು
ಕಥಾಸಾರವು ಸಮಾಪ್ತವಾದುದು.

## ಇಪ್ಪತ್ತೊಂದನೆಯ ಸಂಧಿ.

ಸೂಚನೆ|| ತನಯರೋಳ್ಕಾದಿಮೂರ್ಛಿತನಾದರಾಮನಂ | ಮುನಿಮೌಳಿವಾಲ್ಮೀಕಿಬಂದುಸಂತೈಸಲ್ಕೆ | ವಿನು
ತಾಶ್ವಮೇಧಮಂಪೂರೈಸಿಸೀತೆಸಹಿತವನಿಯಂಪಾಲಿಸಿದನು ||

ಅರಸಕೇಳ್ಜಾಹ್ನವಿಯ ತೀರದೊಳ್ದೀಕ್ಷೆಗೊಂಡಿರುತಿರ್ದ | ರಾಘವಂ ಚಿತ್ತದನುತಾಪದಿಂ ಭರತನಂ ಕರೆದು | ಶತ್ರುಘ್ನನೇಗೈದನೆಂಬುದ ನುಸುರ್ವರಾರುಮೆನಗೆ || ತರಳರಂ ಪಿಡಿದಪನೊ ಕೊಂದಪನೊ ಲಕ್ಷ್ಮಣಂ | ಧುರದೊಳ್ಬಳಲ್ದಪನೊ ಗೆಲ್ದಪನೊ ಸೋಲ್ದಪನೊ | ತುರಗಮಂ ಬಿಡಿಸಿ ತಂದಪನೊ ತಾನರಿಯೆ ನೆಂದಸುರಾರಿ ಚಿಂತಿಸಿದನು || ೧ ||
ಕನಸಿನೋಳೊಲ್ದಿಲ್ಲಾರ್ಗೆಯುಂ ಲಕ್ಷ್ಮಣಂ | ವನಚಾರಿ ಬಾಲಕರ ಪಾಡಾವುದೀಗ ಮುಳಿ | ದನುವರದೊಳ್

---

ಇಪ್ಪತ್ತೊಂದನೆಯ ಸಂಧಿ ಪ್ರಾರಂಭವು.

ಟೀ|| ತನಯರೋಳ್-ತನ್ನ ಕುವರರೊಂದಿಗೆ, ಕಾದಿ-ಹೋರಾಡಿ, ಮೂರ್ಛಿತನಾದ-ಸ್ಮೃತಿ ತಪ್ಪಿಹೋದ, ರಾಮನಂ-ಶ್ರೀರಾಮ ಮೂರ್ತಿಯನ್ನು, ಮುನಿಮೌಳಿ-ತಾಪಸವರ್ಯನಾದ, ವಾಲ್ಮೀಕಿ-ವಾಲ್ಮೀಕಿಮಹರ್ಷಿಯು, ಬಂದು-ರಣರಂಗದಲ್ಲಿ ಪ್ರಜ್ಞೆತಪ್ಪಿ ಬಿದ್ದಿರತಕ್ಕ ರಾಮನೆಡೆಗೆ ಸೇರಿ, ಸಂತೈಸಲ್ಕೆ-ಶಾಂತವಾದ ನುಡಿಗಳನ್ನಾಡಲು, (ಕೌಸಲ್ಯಾಸುತನು ಜ್ಞಾನವನ್ನು ತಂದುಕೊಂಡು) ವಿನುತ-ಹೆಸರುವಾಸಿಯಾದ, (ಶ್ಲಾಘ್ಯವಾದ) ಅಶ್ವಮೇಧಮಂ-ಅಶ್ವಮೇಧಯಾಗವನ್ನು, ಪೂರೈಸಿ-ಸಾಂಗವಾಗಿ ನೆರವೇರಿಸಿ, ಅವನಿಯಂ-ಭೂಮಂಡಲವನ್ನೆಲ್ಲಾ, ಸೀತೆ ಸಹಿತ-ಜಾನಕಿಯ ಸಮೇತನಾಗಿ, ಪಾಲಿಸಿದನು-ಕಾಪಾಡುತ್ತಲಿದ್ದವನಾದನು.

ಅ|| ವಿ|| ಮುನಿಮೌಳಿ-ಮುನಿಗಳಲ್ಲಿ ಮೌಳಿ (ಸ. ತ) ವಾಲ್ಮೀಕಿ-ವಲ್ಮೀಕ=ಹುತ್ತ, ವಾಲ್ಮೀಕಿ-ಹುತ್ತದಲ್ಲಿ ಹುಟ್ಟಿದವನು.

ಟೀ|| ಅರಸ-ಎಲೈ ಜನಮೇಜಯ ಕ್ಷಿತಿಪನೆ, ಕೇಳು-ಲಾಲಿಸು, ಜಾಹ್ನವಿಯ- ಸುರನದಿಯ, ತೀರದೊಳ್-ತಟಯೊಳಗೆ, ದೀಕ್ಷೆಗೊಂಡು-ದೀಕ್ಷಾ ಬದ್ಧನಾಗಿ, ಇರುತಿರ್ದ-ಇದ್ದಂಥಾ, ರಾಘವಂ-ರಘುಶ್ರೇಷ್ಠನಾದ ದಾಶರಥಿಯು, ಚಿತ್ತದ-ಹೃದಯದ, ಅನುತಾಪದಿಂ-ಸಂಕಟದಿಂದ, ಭರತನಂ-ಕೈಕೇಯಿಯ ಸುತನಾದ ತನ್ನನುಜನನ್ನು, ಕರೆದು-ತನ್ನ ಸಮೀಪಕ್ಕೆ ಬರಹೇಳಿದವನಾಗಿ, ಶತ್ರುಘ್ನನು-ಶತ್ರುಘ್ನನೆಂಬ ತಮ್ಮನು, ಏಗೈದನು-ಯಾವ ಕಾರ್ಯವನ್ನೆಸಗಿದನು, ಎಂಬುದಂ-ಎಂಬತೆರನನ್ನು, ಎನಗೆ-ನನಗೆ, ಉಸುರ್ವರು-ಹೇಳತಕ್ಕವರು, ಆರು-ಯಾರಿದಾರೆ, ಲಕ್ಷ್ಮಣಂ-ಲಕ್ಷ್ಮಣನಾದರೊ, ತರಳರಂ-ಮಕ್ಕಳಾದ ವೈರಿಗಳನ್ನು, ಪಿಡಿದಪನೊ-ಹಿಡಿಯುತ್ತಾನೋ, ಕೊಂದಪನೊ- ಪ್ರಾಣವನ್ನೇ ಕಳೆಯುವನೊ, ಧುರದೊಳ್- ಕಾಳಗದಲ್ಲಿ, ಬಳಲ್ದಪನೊ-ಆಯಸಂ ಗೊಳ್ಳುವನೋ, ಗೆಲ್ದಪನೊ-ಜಯಶೀಲನಾಗುತ್ತಾನೊ, ಸೋಲ್ದಪನೊ-ಪರಾಭವವನ್ನೈದುವನೋ, ತುರಗಮಂ-ಹಯವನ್ನು, ಬಿಡಿಸಿ-ಬಿಡುಗಡೆಮಾಡಿ, ತಂದಪನೊ-ಇಲ್ಲಿಗೆ ತೆಗೆದುಕೊಂಡು ಬರುತ್ತಾನೊ, ತಾಂ-ನಾನಾದರೊ, ಅರಿಯೆನು-ತಿಳಿದುಕೊಳ್ಳಲಾರೆ, ಎಂದು-ಎಂಬತೆರನಾಗಿ, ಅಸುರಾರಿ-ಶ್ರೀರಾಮನು, ಚಿಂತಿಸಿದನು-ದುಃಖವನ್ನುಹೊಂದಿದವನಾದನು||೧

---

ಇಪ್ಪತ್ತೊಂದನೆಯ ಸಂಧಿಯ ಕಥಾಸಾರವು.

ಕೇಳೈ ಜನಮೇಜಯಮಹೀವಲ್ಲಭನೇ, ಕುಶಲವರ ಶರವರ್ಷದಿಂದ ಲಕ್ಷ್ಮಣನು ಮೂರ್ಛಾಕ್ರಾಂತನಾಗಲು, ಸೈನ್ಯದಲ್ಲಿ ಉಳಿದ ಸುಭಟರು ಈ ಸುದ್ದಿಯನ್ನು ಶ್ರೀರಾಮಚಂದ್ರನಿಗೆ ತಿಳಿಸಿ ಬರುವಂತೆ ದೂತರನ್ನಟ್ಟಿದರು, ಆ ದೂತರು ತಡಮಾಡದೆ ಅಯೋಧ್ಯಾನಗರಕ್ಕೆ ಹೋಗಿ ಸೇರುವರಾದರು. ಆಗಲಾದರೋ ಶ್ರೀರಾಮಚಂದ್ರನು ಗಂಗಾನದಿಯ ದಡದಲ್ಲಿ ಮಾಡಿದ್ದ ಯಾಗಶಾಲೆಯೊಳಗೆ ದೀಕ್ಷಿತನಾಗಿ ಕುಳಿತು, ಮಹಾ ವ್ಯಸನಾಕ್ರಾಂತನಾಗಿ, ದುಃಖವನ್ನು ತಡೆಯಲಾರದೆ, ತನ್ನನುಜಾತನಾದ ಭರತನನ್ನು ಬರಬೇಕೆಂದು ಹೇಳಿ ಕಳುಹಿಸಿದನು. ಭರತನಾದರೊ ಶ್ರೀರಾಮಚಂದ್ರನು ಹೇಳಿಕಳುಹಿಸಿದ ಸುದ್ದಿಯನ್ನು ಕೇಳಿದೊಡನೆಯೇ ಅತಿ ಜಾಗ್ರತೆಯಿಂದ ಹೊರಟು ರಾಮನಿದ್ದೆಡೆಗೆ ಬಂದು, ಆತನನ್ನು ಎದುರ್ಗೊಂಡನು. ಆಗ ಸೂರ್ಯಕುಲಕ್ಕೆ ತಿಲಕಪ್ರಾಯನಾದ ದಾಶರಥಿಯು ಕೇಕಯಾತ್ಮಜನನ್ನು ಕುರಿತು, ಕೇಳೈ ಭರತನೇ, ಯಜ್ಞಾಶ್ವದ ಜೊತೆಯಲ್ಲಿ ಹೋದ ಶತ್ರುಘ್ನನ ವರ್ತಮಾನವೇ ತಿಳಿಯಲಿಲ್ಲವು. ಆ ಬಾಲಕರೊಂದಿಗೆ ಹೋರಾಡಿ ಗೆದ್ದನೋ, ಸೋತು ಹೋದನೊ, ಜೀವದೊರಸೆಯಿಂದಿರುವನೊ, ಅಥವಾ ಇಲ್ಲವೋ, ಯಾವುದೊಂದೂ ತಿಳಿಯದು ಶತ್ರುಘ್ನನು ಮೂರ್ಛೆ ಹೊಂದಿದಾನೊ ನಾನು ಕಳುಹಿಸಿದ ಲಕ್ಷ್ಮಣನು ಆ ಬಾಲಕರನ್ನು ಗೆದ್ದನೊ, ಅಥವಾ ತಾನೇ ಪರಾಜಯವನ್ನೈದಿದನೊ, ಕುದುರೆಯನ್ನು ಬಿಡಿಸಿ

ನರ್ರಂಘಾತಿಸದೆ ಸಮ್ಮೋಹನಾಸ್ತ್ರದೊಳ್ಮರವೆಗೊಳಿಸಿ ‖ ತನಗೆತಂದೊಪ್ಪಿಸುವ ತೆರದೊಳತಿಬಲಚರರ | ನನುಜನಡೆಗಟ್ಟೆಂದು ರಾಘವಂಭರತನೊಡ | ನೆನೆಲವಂ ದೂತರಂ ಕಳುಹಲವರರಿದು ಬಂದವನಿಪತಿಗಿಂತೆಂದರು ‖ ೨ ‖ ದೇವಬಿಡು ದೀಕ್ಷೆಯಂ ಕಾದುನಡೆಕುಶನೊಳ್ಮ | ಹಾವೀರನಾತನಾಲವಗಿಂತಬಲ್ಲಿದಂ | ಜೀವ ಸಂದೇಹಮಾಗಿರ್ಪುದೈ ಶತ್ರುಘ್ನ ಲಕ್ಷ್ಮಣರ್ಗಖಿಳ ಸೇನೆ ‖ ಭಾವಿಸೆತವಾಕೃತಿಯಬಾಲಕರದೆಸೆಯಿಂದ | ಗೋವರ್ಧನಂಗೆಮೊಲೆಗೊಟ್ಟಪೂತನಿಯೊಲಾ | ಯ್ತೇವೇಳ್ವೆವೆಂದು ದೂತರ್ನುಡಿಯೆ ರಾಘವಂಕೇಳಿ ಮೂರ್ಛಿತನಾದನು ‖ ೩ ‖ ಬಳಿಕ ಶೈತ್ಯೋಪಚಾರಂಗಳಿಂ ಭರತನಿನ | ಕುಲಸಾರ್ವಭೌಮ

ಅ‖ ವಿ‖ ಜಾಹ್ನವಿ–ಜಹ್ನು ಋಷಿಯ ಮಗಳು, ದೀಕ್ಷೆಗೊಂಡು-ದೀಕ್ಷೆಯಂ ಕೊಂಡು (ಕ್ರಿ. ಸ) ಅಸುರಾರಿ–ರಕ್ಕಸರ ವೈರಿಯು, (ಷ. ತ. ಮತ್ತು ಸ. ದೀ. ಸಂಧಿ) ‖೧‖

ಟೀ‖ ಕನಸಿನೊಳ್-ಅರನಿದ್ರೆಯಲ್ಲಿಯೂ ಕೂಡ, ಆರ್ಗೆಯುಂ-ಯಾರೊಬ್ಬರಿಗೂ, ಲಕ್ಷ್ಮಣಂ-ಲಕ್ಷ್ಮಣನಾದರೊ, ಸೋಲ್ಪುದು – ಪರಾಜಯವನ್ನನುಭವಿಸಿದ್ದ, ಇಲ್ಲ-ಕಾಣಲಿಲ್ಲವು, ವನಚಾರಿ-ಅರಣ್ಯದಲ್ಲಿ ಅಲೆಯುವ, ಬಾಲಕರ–ಹುಡುಗರ, ಪಾಡು–ತೆರನು, ಆವುದು-ಯಾವುದಾಗಿದೆ, ಅನುವರದೊಳ್–ಕದನದಲ್ಲಿ, ಮುಳಿದು–ಸಿಟ್ಟುಮಾಡಿಕೊಂಡು, ಇರ್ವರಂ–ಆ ಇಬ್ಬರು ಬಾಲಕರನ್ನೂ, ಈಗ-ಈಗಲಾದರೊ, ಘಾತಿಸದೆ–ಪ್ರಾಣವನ್ನು ತೆಗೆಯದೆ, ಸಮ್ಮೋಹನಾಸ್ತ್ರದೊಳ್–ಸ್ಮೃತಿತಪ್ಪಿಸತಕ್ಕ ಅಸ್ತ್ರವೊಂದರಿಂದ, ಮರವೆಗೊಳಿಸಿ-ಮೂರ್ಛೆ ಹೋಗುವಂತೆಮಾಡಿ, ತನಗೆ–ನನ್ನಲ್ಲಿಗೆ, ತಂದು–ಕರೆತಂದು, ಒಪ್ಪಿಸುವ-ಬಿಡುವ, ತೆರದೊಳು–ಬಗೆಯಿಂದ, ಅತಿಬಲ-ಬಹು ಬಲಿಷ್ಠರಾದ, ಚರರನು–ಸೇವಕರನ್ನು, ಅನುಜನ-ತಮ್ಮನಾದ ಸೌಮಿತ್ರಿಯ, ಎಡೆಗೆ-ಸಮೀಪಕ್ಕೆ, ಅಟ್ಟು-ಕಳುಹು, ಎಂದು-ಎಂಬತೆರನಾಗಿ, ರಾಘವಂ–ಶ್ರೀರಾಮನು, ಭರತನೊಡನೆ–ಕೈಕೇಯಿಯ ಕುವರನೊಂದಿಗೆ, ಎನಲು–ನುಡಿಯಲು, ಅವಂ–ಆ ಭರತನಾದರೊ, ದೂತರಂ–ಸೇವಕರನ್ನು, ಕಳುಹಲು–ಅಟ್ಟಲಾಗಿ, ಅವರು–ಆಸೇವಕರು, ಅರಿದು–ರಣರಂಗದಲ್ಲಿ ನಡೆದಿರತಕ್ಕ ಸುದ್ದಿಯನ್ನೆಲ್ಲಾ ತಿಳಿದವರಾಗಿ, ಬಂದು-ಪುನಃ ಪಟ್ಟಣಕ್ಕೆ ಬಂದು, ಅವನಿಪತಿಗೆ–ಶ್ರೀರಾಮನೊಡನೆ, ಇಂತು–ಮುಂದೆ ಹೇಳುವಂತೆ, ಎಂದರು–ನುಡಿದವರಾದರು.

ಅ‖ ವಿ‖ ವನಚಾರಿ (ಕೃ. ವೃ) ಮರವೆಗೊಳಿಸಿ (ಕ್ರಿ. ಸ.) ‖೨‖

ಟೀ‖ ದೇವ ಎಲೈ ಸ್ವಾಮಿಯೆ, ದೀಕ್ಷೆಯಂ- ಯಜ್ಞದೀಕ್ಷೆಯನ್ನು, ಬಿಡು–ತ್ಯಜಿಸುವನಾಗು, ಕುಶನೊಳ್–ಕುಶನ ಕೂಡ, ಕಾದು–ಹೋರಾಡು, ನಡೆ–ನಡಿ, ಆತನು–ಆ ಕುಶನೆಂಬ ಹುಡುಗನು, ಮಹಾ ವೀರನು–ಬಹು ಶಕ್ತನು, ಆ ಲವಗಿಂತ–ಆ ಲವನೆಂಬ ಅಣುಗನಿಗಿಂತಲೂ, ಬಲ್ಲಿದಂ-ಸಮರ್ಥನು, ಶತ್ರುಘ್ನ-ಶತ್ರುಘ್ನನು, ಲಕ್ಷ್ಮಣ-ಲಕ್ಷ್ಮಣನೆಂಬಾತನು ಇವರಿಗೆ, ಜೀವ–ಹರಣವು, ಸಂದೇಹಂ–ಅನುಮಾನವಾಗಿ, ಆಗಿರ್ಪುದು-ಆಗಿಹೋಗಿರುವುದು, ಭಾವಿಸೆ–ಆಲೋಚಿಸಿ ನೋಡಿದರೆ, ತವ–ನಿನ್ನ, ಆಕೃತಿಯ-ಆಕಾರವಂ ತಾಳ್ದ, ಬಾಲಕರ–ಪಸುಳೆಗಳ, ದೆಸೆಯಿಂದ–ಕಾರಣದಿಂದ, ಗೋವರ್ಧನಂಗೆ–ಗೋವರ್ಧನಗಿರಿಯನ್ನು ಮೇಲಕ್ಕೆತ್ತಿ ಹಿಡಿದ ಕೃಷ್ಣಮೂರ್ತಿಗೆ, ಮೊಲೆಗೊಟ್ಟ–ವಿಷದ ಸ್ತನವನ್ನುಣಿಸಿದ, ಪೂತನಿಯೊಲು–ಪೂತನಿಯೆಂಬ ರಾಕ್ಷಸಸ್ತ್ರೀಯ ತೆರನಾಗಿ, ಅಖಿಳಸೇನೆ–ದಳವೆಲ್ಲವೂ, ಆಯ್ತು–ಹಾಳಾಯಿತು, ಏವೇಳ್ವೆವು–ಏನೆಂದು ನುಡಿಯಬೇಕು, ಎಂದು-ಎಂಬತೆರನಾಗಿ, ದೂತರು–ಸೇವಕರು, ನುಡಿಯೆ–ಆಡಲಾಗಿ, ರಾಘವಂ-ರಘುಕುಲಜನು, ಕೇಳಿ-ಚಾರರ ವಾಕ್ಯನ್ನಾಲಿಸಿ, ಮೂರ್ಛಿತನಾದನು-ಮೈಮರೆತು ಕೆಳಗೆ ಬಿದ್ದುಹೋದವನಾದನು ‖೩‖

ಕೊಂಡು ಬರುವನೋ ಅಥವಾ ಇಲ್ಲವೇ ಇಲ್ಲವೊ, ಇವರ ವರ್ತಮಾನವನ್ನೇ ಹೇಳುವರಿಲ್ಲದಂತಾಯಿತಲ್ಲಾ! ಏನು ಮಾಡಲಿ! ನನ್ನ ದುಃಖವೆಂಬ ಬೆಂಕಿಯು ಉರಿಯು ಪರಿಹಾರವಾಗತಕ್ಕ ಬಗೆ ಹೇಗೆ? ‖ ೧ ‖ ಲಕ್ಷ್ಮಣನಾದರೊ, ಸ್ವಪ್ನದಲ್ಲಿಯೂ ಕೂಡ ಇತರರಿಗೆ ಸೋಲತಕ್ಕವನಲ್ಲವು ಹೀಗಿರುವಲ್ಲಿ ಕಾಡು ಮೇಡುಗಳೊಳಗೆ ಅಲೆದು ಜೀವಿಸುವ ಆ ಬಾಲಕರಿಗೆ ಸೋತು ಹೋಗುವನೆ? ಆ ಇಬ್ಬರು ಬಾಲಕರನ್ನೂ ಸಮ್ಮೋಹನಾಸ್ತ್ರ ಪ್ರಯೋಗದಿಂದ ಜೀವಸಹಿತವಾಗಿ ಇಲ್ಲಿಗೆ ಕರೆದುಕೊಂಡು ಬರಬೇಕೆಂದು ಲಕ್ಷ್ಮಣನೆಡೆಗೆ ಚರರನ್ನು ಅಟ್ಟೆಂದು ನುಡಿದನು. ಆಗಲಾ ಭರತನು ಜಾಗ್ರತೆಯಾಗಿ ಸೌಮಿತ್ರಿಯ ಬಳಿಗೆ ಹೋಗಿ ರಾಮನ ಶಾಸನವನ್ನರುಹಬೇಕೆಂದು ಹೇಳಿ ಕಳುಹಿಸಿದವನಾದನು ಆ ದೂತರಾದರೊ ವಾಯುವೇಗದಿಂದ ರಣರಂಗವನ್ನು ಸೇರುತ್ತಿರುವಾಗ ಎದುರಿಗೆ ಬರುತ್ತಲಿದ್ದ ಚಾರರ ನುಡಿಗಳನ್ನಾಲಿಸಿಯೂ, ತಾವೂ ಪ್ರತ್ಯಕ್ಷವಾಗಿ ರಣರಂಗದ ಸುದ್ದಿಯನ್ನು ಕಂಡವರಾಗಿಯೂ ತಡಮಾಡದೆ ಶ್ರೀರಾಮನೆಡೆಗೆ ಬಂದು ‖೨‖ ಎಲೈ ಮಹಾನುಭಾವನೆ, ಯಜ್ಞದೀಕ್ಷೆಯನ್ನು ಬಿಟ್ಟು ಬಿಡು, ನೀನೇ ಯುದ್ಧ ಸನ್ನದ್ಧನಾಗಿ ಹೊರಡು, ಲವನಿಗಿಂತಲೂ ಪರಾಕ್ರಮಿಯಾದ ಕುಶನೆಂಬ ಬಾಲಕನ ಶರವರ್ಷಕ್ಕೆ ನಿನ್ನನುಜರಾದ ಲಕ್ಷ್ಮಣ ಶತ್ರುಘ್ನರೂ, ಅಶೇಷವಾದ ಪರಿವಾರವೂ ಸಹ ಮೂರ್ಛಾಕ್ರಾಂತವಾಗಿ ಬಿದ್ದು ಯಮದ್ವಾರವನ್ನು ನೋಡುವಂತಿರುವುದು,

ನಂಸಂತೈಸುತಿರೆಮೂರ್ಛೆ | ತಿಳಿದೆದ್ದುಲಕ್ಷ್ಮಣನದಾವೆಡೆಯೊಳೆನ್ನಸೊಲ್ಲಸಲಿಸುವನದಾವೆಡೆಯೊಳು || ಹಳುವದೊಳ್ತನಗಾಗಿ ನನೆದನುಜನಾವೆಡೆಯೊ | ಳಳಿದನೇಸೌಮಿತ್ರಿಹಾತಮ್ಮಹಾಯೆನುತ | ಹಳವಳಿಸಿಬಿಸುಸುಯ್ದಳಲ್ದುಮರುಗಿದನಂದುರಾಘವಂ ಶೋಕದಿಂದ || ೪ || ಜಾನಕಿಯನಂದುಪೊರಮಡಿಸಿದನ್ಯಾಯದಿಂ | ಭಾನುಕುಲಸಂಭವಂಗಾದವಿಂತೀತೆರದ | ಹಾನಿಗಳ್ಸೌಮಿತ್ರಿಶತ್ರುಘ್ನರಂಜಯಿಸುವಗ್ಗಳೆಯರಾರ್ಜಗದೊಳು || ಕಾನನದಮುನಿಸುತರ್ಗಧಟೆತ್ತಣದುರಾಮ | ಸೂನುಗಳ್ತಪ್ಪದಾಕೃತಿಗಳಂನೋಡಲನು | ಮಾನಮೇಕೆಂದುಮೊರೆಯಿಟ್ಟುದೆಲ್ಲಾಜನಂರಾಘವಂಕೇಳುವಂತೆ || ೫ || ಸೀತಾವದನಚಿಹ್ನಮೆನ್ನಂಗದಾ

ಟೀ|| ಭರತನು-ಕೈಕೇಯಿಯ ಸುತನಾದರೊ, ಬಳಿಕ_ರಾಮನು ಮೂರ್ಛಾಕ್ರಾಂತನಾಗಲು, ಶೈತ್ಯೋಪಚಾರಂಗಳಿಂದ_ನೆತ್ತಿ, ಎನೆ, ನೊಸಲಾದವನನ್ನು ನೀರಿನಿಂದ ತಟ್ಟಿ ಆದರಿಸುವುದರಿಂದ, ಇನಕುಲಸಾರ್ವಭೌಮನಂ_ಶ್ರೀರಾಮ ಮೂರ್ತಿಯನ್ನು, ಸಂತೈಸುತ- ಶಾಂತಗೊಳಿಸುತ್ತ, ಇರೆ-ಇರಲಾಗಿ, ರಾಘವಂ- ರಾಮನು, ಮೂರ್ಛೆ ತಿಳಿದು- ಮೂರ್ಛೆಯಿಂದೆದ್ದು, ಎಚ್ಚೆತ್ತು-ಚೇತರಿಸಿಕೊಂಡು, ಅದಾವೆಡೆಯೋಳ್_ಮತ್ತೆಲ್ಲಿ, ಎನ್ನ-ನನ್ನದಾದ, ಸೊಲ್_ನುಡಿಯನ್ನು, ಸಲಿಸುವನು-ನೆರವೇರಿಸುವನು, ಅದಾವೆಡೆಯೋಳ್_ಇನ್ನು ಯಾವ ಸ್ಥಳದಲ್ಲಿ, ಹಳುವದೋಳ್_ಅರಣ್ಯದೊಳಗೆ, ತನಗಾಗಿ-ನನ್ನ ಸಲುವಾಗಿ, ನನದ-ಬಡವಾದ, ಅನುಜನು_ಸಹೋದರನು, ಆವೆಡೆಯೊಳು_ಎಲ್ಲಿ, ಅಳಿದನೆ-ಪ್ರಾಣವನ್ನು ಹೋಗಲಾಡಿಸಿಕೊಂಡನೆ, ಹಾ ಸೌಮಿತ್ರಿ-ಅಯ್ಯೋ ಲಕ್ಷ್ಮಣಾ! ತಮ್ಮನೆ_ಸಹೋದರನೆ, ಹಾ_ಅಯ್ಯೋ! ಎನುತ-ಎಂದು ಗೋಳಾಡುತ್ತ, ಹಳವಳಿಸಿ_ಭ್ರಮೆಗೊಂಡವನಾಗಿ, ಬಿಸುಸುಯ್ದು-ದೀರ್ಘಶ್ವಾಸಂಗಳಂ ಬಿಡುತ್ತ, ಅಳಲ್ದು-ಗೋಳಾಡಿ, ಅಂದು_ಆ ಕಾಲದಲ್ಲಿ, ಶೋಕದಿಂದ_ವ್ಯಸನದಿಂದ, ಮರುಗಿದನು_ದುಃಖಮಂ ತಾಳ್ದನು.

ಅ|| ವಿ|| ಶೈತ್ಯೋಪಚಾರ (ಗು. ಸಂ) ಇನಕುಲ ಸಾರ್ವಭೌಮ-ಇನನ ಕುಲದ ಸಾರ್ವಭೌಮ (ಷ. ತ) ||೪||

ಟೀ|| ಎಲ್ಲಾ ಜನಂ_ಅಯೋಧ್ಯಾಪಟ್ಟಣದ ಸಕಲ ಪ್ರಜೆಗಳೂ, ರಾಘವಂ_ ಶ್ರೀರಾಮನು, ಕೇಳುವಂತೆ_ಕೇಳುವ ಹಾಗೆಯೇ, ತಮ್ಮ-ತಮ್ಮಲ್ಲಿ, ಅಂದು-ಆ ಕಾಲದಲ್ಲಿ, ಜಾನಕಿಯನು_ವೈದೇಹಿಯನ್ನು, ಪೊರಮಡಿಸಿದ_ಊರನ್ನು ಬಿಡಿಸಿ ಕಾಡಿಗೆ ಕಳುಹಿಸಿದ, ಅನ್ಯಾಯದಿಂ-ಕೆಡಕುಮಾರ್ಗದಿಂದ, ಇಂತು_ಈ ತೆರನಾಗಿ, ಭಾನುಕುಲಸಂಭವಂಗೆ-ಶ್ರೀರಾಮದೇವರಿಗೆ, ಹಾನಿಗಳು_ಅಶುಭಗಳು, ಆದವು-ಪ್ರಾಪ್ತವಾದವು, ಸೌಮಿತ್ರಿ ಶತ್ರುಘ್ನರಂ_ಲಕ್ಷ್ಮಣ ಶತ್ರುಘ್ನರನ್ನು, ಜಯಿಸುವ_ಸೋಲಿಸುವ, ಅಗ್ಗಳೆಯರು_ವೀರರು, ಜಗದೊಳು_ಲೋಕದಲ್ಲಿ, ಆರು-ಯಾರು, ಕಾನನದ _ ಕಾಡಿನಲ್ಲಲೆದಾಡತಕ್ಕ, ಮುನಿಸುತರ್ಗೆ-ತಾಪಸರ ಬಾಲಕರಿಗೆ, ಅಧಟು-ಶೌರ್ಯವು, ಎತ್ತಣದು_ಎಲ್ಲಿ ಬಂದೀತು, ಆಕೃತಿಗಳಂ_ಆ ಬಾಲಕರ ಮುಖ, ಶರೀರ ಇವುಗಳ ಲಕ್ಷಣವನ್ನು, ನೋಡಲು-ಈಕ್ಷಿಸಲಾಗಿ, ತಪ್ಪದೆ-ಸ್ವಲ್ಪವಾದರೂ ಭೇದವು ಕಾಣಿಸದೆ, ರಾಮಸೂನುಗಳು-ಶ್ರೀರಾಮನ ಕುವರರು, ಅನುಮಾನಂ_ಸಂದೇಹವು, ಏಕೆ_ಏನು ಪ್ರಯೋಜನ, ಎಂದು_ಎಂಬತೆರನಾಗಿ, ಮೊರೆಯಿಟ್ಟುದು_ಒಬ್ಬರಲ್ಲೊಬ್ಬರು ಎಂದುಕೊಳ್ಳುತ್ತಲಿದ್ದರು.

ಅ|| ವಿ|| ಭಾನುಕುಲಸಂಭವಂ ಭಾನು_ಸೂರ್ಯನ, ಕುಲ_ಸಂತತಿ (ಷ. ತ.) ಭಾನುಕುಲದಲ್ಲಿ ಸಂಭವಂ (ಸ. ತ.) ಅಗ್ಗಳೆ ತ್ಭ. ಅರ್ಗಳ ತ್ಸ. ||೫||

ಇದನ್ನು ನೋಡಿದರೆ ಗೋವರ್ಧನೋದ್ಧಾರಕನಾದ ಕೃಷ್ಣಸ್ವಾಮಿಗೆ ಸ್ತನ್ಯವನ್ನು ಕೊಡುತ್ತಲಿದ್ದ ಪೂತನಿಯನ್ನು ನಿನ್ನಾಕೃತಿಯ ಬಾಲಕರ ಕೃತ್ಯದಿಂದ ಮರಿಸಿ ಕೊಳ್ಳುವಂತಾಗುತ್ತಲಿರುವುದೆಂದು ನುಡಿದ ಚಾರರ ಮಾತುಗಳನ್ನು ಕೇಳಿದ ಶ್ರೀರಾಮಮೂರ್ತಿಯು ಮೈಮರೆತು ಕೆಳಕ್ಕೆ ಬಿದ್ದು ಬಿಟ್ಟನು |೩|| ಆಗ ಭರತಾದಿಗಳೆಲ್ಲರೂ ಸ್ಮರಣೆತಪ್ಪಿ ನೆಲದಮೇಲೆ ಬಿದ್ದುಹೋದ ರಾಮನಿಗೆ ಶೈತ್ಯೋಪಚಾರಗಳನ್ನು ಮಾಡಲಾಗಿ ದೊರೆಯು ಕೂಡಲೆ ಎಚ್ಚರಗೊಂಡು, ಹಾ! ಅನುಜನಾದ ಲಕ್ಷ್ಮಣನು ನನಗಾಗಿ ಎಷ್ಟು ಕಷ್ಟಪಟ್ಟನೋ! ಸತ್ತು ಎಲ್ಲಿ ಬಿದ್ದು ಹೋಗಿರುವನೋ! ಅಯ್ಯೋ ತಮ್ಮನೆ! ನಿನಗೆ ಇಂಥಾ ದುರ್ಗತಿಯು ಬಂದೊದಗಿತೆ ಹಾ! ಹಾ! ಎಂದು ಕಡು ದುಃಖದಿಂದ ಗೋಳಾಡುತ್ತಲಿದ್ದನು||೪|| ಆಗ ಅಯೋಧ್ಯಾನಗರವಾಸಿಗಳಾದರೋ ಶ್ರೀರಾಮನು ನಿರಪರಾಧಿನಿಯೂ ನಿರ್ದೋಷಿಯೂ ಆದಜಾನಕಿಯನ್ನು ನಿಷ್ಕರುಣಾಂತರಂಗನಾಗಿಕಾಡಿಗೆ ಅಟ್ಟಿದ್ದರಿಂದಲೇ ಈಗ ಸೂರ್ಯವಂಶದಲ್ಲಿ ಹುಟ್ಟಿದವರಿಗೆ ಇಂತಹ ಕಷ್ಟಪರಂಪರೆಗಳು ತಲೆದೋರುತ್ತಲಿರುವುವು, ಹಾಗಿಲ್ಲವಾದರೆ ಯಾರಿಂದಲೂ ಜಯಿಸಲಶಕ್ಯರಾದ ಲಕ್ಷ್ಮಣಶತ್ರುಘ್ನರು ವನಚಾರಿಗಳಾದ ಬಾಲಕರಿಗೆ ಸೋಲ್ವುದುಂಟೆ ಆ ಬಾಲಕರೀರ್ವರ ಮುಖಗಳಲ್ಲಿಯೂ ಸೀತಾರಾಮರ ಚಿಹ್ನೆಗಳು ಕಂಗೊಳಿಸುತಲಿವೆ. ಆದಕಾರಣ ಅವರಿಬ್ಬರೂ ರಾಮನ ಮಕ್ಕಳೇ ಹೊರತು ಅನ್ಯರಾದವರು ಎಂದಿಗೂ ಅಲ್ಲವು, ಎಂದು ಶ್ರೀರಾಮನಿಗೆದುರಾಗಿಯೇ ಹೇಳುತ್ತಲಿದ್ದರು ||೫|| ಈ ಜನಗಳ ಮಾತು ಕಿವಿಗೆ ಬಿದ್ದಮೇಲೆ ರಾಮಚಂದ್ರನ ದುಃಖವು ಮತ್ತಷ್ಟು ಹೆಚ್ಚಾ

ಕಾರ | ಮಾತಾಪಸಾರ್ಭಕರೊಳಿರ್ದಪುದುಗಡ ಪಡೆದ | ಮಾತೆಯೆಲ್ಲಿರ್ದಪಳೊ ಕುದುರೆಯಂಕಟ್ಟುವಘಟೆತ್ತಣ | ದಿವ ಗೆಂಬುದ || ದೂತರಂಕರೆಕೇಳ್ವೆವಿನ್ನೊಮ್ಮೆಶಿಶುಗಳಂ | ಘಾತಿಸದೆದಯೆಗೈದುತಾನೇರ್ವಡದನೋಮೇ | ಣಾತರಳರತಿ ಬಲರೊಸೌಮಿತ್ರಿಬಿದ್ದನೇಕೆಂದುರಘುಪತಿಸುಯ್ದನು || ೬ || ಇಂತಿಂತಳಲ್ದಾಗಬಿಸುಸುಯ್ದೊಡನೆರಾಘ | ವಂತನ್ನಸೋದರರ ಗುಣಗಳಂನೆನೆನೆನೆದು | ಚಿಂತಿಸುತಿರಲ್ಮತ್ತೆ ಕುಶನಶರಘಾತಿಯಿಂದುರೆನೊಂದುಭೀತಿಗೊಂಡು || ಸಂತಪ್ತರಾಗಿಪರಿತಂದುಲಕ್ಷ್ಮ ಣನೊಡಲೊ | ಳಂತರಿಸಲರಿಯದಸುವಡಗೆಮಡಿದುದುಸೈನ್ಯ | ಮೆಂತಿಹನೊಶತ್ರುಘ್ನನೇಕೆದೀಕ್ಷೆಯಿಂದೆದ್ದುಚರರೈದೆಮೊರೆ ಯಿಟ್ಟರು || ೭ || ಮೊರೆವೇಳ್ವದೂತರಂಗರ್ಜಿಸುತರಾಘವಂ | ಗೆರಗಿಕೈಮುಗಿದುಭಯವಿಹ್ವಲರ್ಚಾರರಿವ | ರರಿದಪರಿಸೌ

---

ಟೀ|| ರಘುಪತಿ-ಶ್ರೀರಾಮನು, ಸೀತಾ-ಜಾನಕಿಯ, ವದನ- ಮೋರೆಯ, ಚಿಹ್ನಂ- ಗುರುತೂ, ಎನ್ನ-ನನ್ನ ಸಂಬಂಧವಾದ, ಅಂಗದ-ಅವಯವದ, ಆಕಾರಂ-ಆಕೃತಿಯೂ, ಆ ತಾಪಸಾರ್ಭಕರೊಳು-ಆ ಮುನಿಕುವರರಲ್ಲಿ, ಇರ್ದಪುದುಗಡ-ತೋರುತ್ತಲಿವೆಯಲ್ಲಾ, ಪಡೆದ-ಇವರನ್ನು ಹೆತ್ತ, ಮಾತೆ- ಜನನಿಯು, ಎಲ್ಲಿ-ಯಾವೆಡೆಯಲ್ಲಿ, ಇರ್ದಪಳೊ- ಇದ್ದಾಳೆಯೊ, ಇವರ್ಗೆ-ಈ ಪಸುಳೆಗಳಿಗೆ, ಕುದುರೆಯಂ- ಯಜ್ಞಾಶ್ವವನ್ನು, ಕಟ್ಟುವ-ಬಿಗಿಯತಕ್ಕ, ಅಘಟು-ಸಾಹಸವು, ಎತ್ತಣದು-ಎಲ್ಲಿ ಬಂತು, ಎಂಬುದ-ಎಂಬ ತೆರನನ್ನು, ದೂತರಂ-ಸೇವಕರನ್ನು, ಕರೆದು-ಬರಮಾಡಿ, ಇನ್ನೊಮ್ಮೆ-ಪುನಃ ಒಂದಾವರ್ತಿ, ಕೇಳ್ವೆವು-ಕೇಳುತ್ತೇವೆ, ಶಿಶುಗಳಂ-ಮಕ್ಕಳನ್ನು, ಘಾತಿಸದೆ-ಕೊಲ್ಲಲು ಮನಬಾರದೆ, ದಯೆಗೈದು-ಕನಿಕರದಿಂದ, ತಾನು-ಆ ಲಕ್ಷ್ಮಣನು, ಏರ್ವಡದಗಾಯ-ಬಿದ್ದುಬಿಟ್ಟನೊ, ಆ ತರಳರು-ಆ ಹುಡುಗರು, ಅತಿಬಲರೊ- ಮಾನುಸಕವುಳ್ಳವರಾಗಿದಾರೆಯೊ, ಸೌಮಿತ್ರಿ-ಲಕ್ಷ್ಮಣನು, ಏಕೆ-ಯಾವ ಕಾರಣದಿಂದ, ಬಿದ್ದನು-ಬಿದ್ದುಹೋದನು, ಎಂದು-ಎಂಬತೆರನಾಗಿ, ಸುಯ್ದನು-ಸಂಕಟದಿಂದ ಉಸುರನ್ನು ಬಿಡುತ್ತಿದ್ದನು.

ಅ|| ವಿ|| "ಗಡ" ಇದು ಆಶ್ಚರ್ಯದಲ್ಲಿಯೂ, ವ್ಯಸನದಲ್ಲಿಯೂ ಬರತಕ್ಕ ಅವ್ಯಯವಾಗಿರುವುದು ||೬||

ಟೀ|| ರಾಘವಂ-ಶ್ರೀರಾಮನು, ಇಂತಿಂತು-ಈ ಪರಿಯಾಗಿ, ಅಳಲ್ದು-ಗೋಳಾಡಿ, ಬಿಸುಸುಯ್ದು-ನಿಟ್ಟುಸುರ್ಗಳಂ ಬಿಡುತ್ತ, ತನ್ನ-ತನ್ನವರಾದ, ಸೋದರರ-ಒಡಹುಟ್ಟಿದ ಲಕ್ಷ್ಮಣ ಶತ್ರುಘ್ನರ, ಗುಣಗಳಂ-ಒಳ್ಳೆ ನಡತೆಗಳನ್ನು, ನೆನೆನೆನೆದು-ಹೆಚ್ಚಾಗಿ ಧ್ಯಾನಿಸಿ, ಚಿಂತಿಸುತ-ದುಃಖಪಡುತ್ತ, ಇರಲ್-ಇರಲಾಗಿ, ಕುಶನ-ಕುಶನೆಂಬ ಬಾಲಕನ, ಶರಘಾತಿಯಿಂದ-ಸರಲ್ಗಳ ಹೊಡೆತದಿಂದ, ಮತ್ತೆ-ಪುನಃ, ಉರೆ-ಹೆಚ್ಚಾಗಿ, ನೋವುಗೊಂಡು-ವ್ಯಥೆಯಂ ತಾಳಿ, ಸಂತಪ್ತರಾಗಿ-ಖೇದಿಸುತ್ತಾ, ಪರಿತಂದು-ತಡಮಾಡದೆ ಬಂದು, ಚರರು-ಸೇವಕರು, ಲಕ್ಷ್ಮಣನ-ಸುಮಿತ್ರಾತ್ಮಜನ, ಒಡಲು-ಅವಯವಂಗಳು, ಅಂತರಿಸಲು-ಉಳಿಯಬೇಕಾದರೆ, ಅರಿದು-ಅಶಕ್ಯವು, ಅಸು-ಹರಣವು, ಅಡಗೆ-ಕುಗ್ಗಿ ಹೋಗುವಂತೆ, ಸೈನ್ಯಂ-ದಂಡು, ಮಡಿದುದು-ಸತ್ತು ಹೋಯಿತು, ಶತ್ರುಘ್ನನು-ಶತ್ರುಘ್ನನಾದರೊ, ಎಂತು-ಹೇಗೆ, ಇಹನೊ-ಇರುವನೊ, ಇದು-ಈ, ದೀಕ್ಷೆ-ಯಜ್ಞದೀಕ್ಷೆಯು, ಏಕೆ-ಏನು ಪ್ರಯೋಜನ, ಎಂದು-ಎಂಬತೆರನಾಗಿ, ಮೊರೆಯಿಟ್ಟರು-ನಡೆದಿದ್ದ ಸಮಾಚಾರವನ್ನು ಕಡು ದುಃಖದಿಂದ ತಿಳಿಸಿದವರಾದರು.

ಅ|| ವಿ|| ನೆನೆನೆನೆದು-ಆಧಿಕ್ಯಾರ್ಥದಲ್ಲಿ ದ್ವಿರುಕ್ತಿ ಬಂದಿದೆ ||೭||

ಟೀ|| ಮೊರವೇಳ್ವ-ತಮ್ಮ ಸಂಕಟಗಳನ್ನು ತೋರ್ಪಡಿಸುವ, ದೂತರಂ-ಸೇವಕರನ್ನು, ಗರ್ಜಿಸುತ-ತಿರಸ್ಕರಿಸುತ್ತ, ರಾಘವಂಗೆ- ರಘುಕುಲೋತ್ಪನ್ನನಾದ ಶ್ರೀರಾಮನಿಗೆ, ಭರತಂ - ಕೈಕೇಯಿಯ ಕುವರನು, ಎರಗಿ - ನಮಸ್ಕಾರಮಂ ಗೈದು,

---

ಯಿತು. ಆಗ ತನ್ನಲ್ಲಿ ತಾನೆ, ಆಹಾ! ಜಾನಕಿಯ ಮುಖಚಿಹ್ನೆಯೂ, ನನ್ನ ಶರೀರದ ಲಕ್ಷಣಗಳೂ ಆ ಋಷಿಕುವರರಲ್ಲಿರುವುದಷ್ಟೆ! ಆ ಮಕ್ಕಳನ್ನು ಹೆತ್ತ ತಾಯಿಯು ಎಲ್ಲಿರುವಳೊ ಕಾಣೆನು. ಇವರಿಗೆ ಕುದುರೆಯನ್ನು ಕಟ್ಟಿ ನಮ್ಮೊಂದಿಗೆ ಕಾದುವಷ್ಟು ಸಾಹಸವು ಹೇಗುಂಟಾಯಿತು? ಈ ಮಾತು ನಿಜವೊ ಸುಳ್ಳೊ ಇನ್ನೊಂದುಬಾರಿ ಕೇಳಿ ನೋಡಬೇಕು. ಆ ಮಕ್ಕಳನ್ನು ಲಕ್ಷ್ಮಣ ಶತ್ರುಘ್ನರು ನೋಡಿ ಕನಿಕರಪಟ್ಟು ಕೊಲ್ಲಲು ಮನವೊಪ್ಪದೆ ತಾವೇ ಮೂರ್ಛೆಗೊಂಡರೊ ಅಥವಾ ಅವರ ಸಾಹಸವೇ ಅಸಾಧಾರಣವಾಗಿದೆಯೋ. ಲಕ್ಷ್ಮಣನು ಏತಕ್ಕೆ ನೆಲಕ್ಕೆ ಬಿದ್ದು ಹೋದನೊ ಕಾಣೆನಲ್ಲಾ! ಎಂದು ವ್ಯಸನಪಡುತ್ತಾ || ೬ || ಬಾರಿ ಬಾರಿಗೂ ಲಕ್ಷ್ಮಣ ಶತ್ರುಘ್ನರ ಗುಣಾವಳಿಯನ್ನು ನೆನೆನೆನೆದು ಹಂಬಲಿಸುತ್ತಲಿರುವ ಕಾಲಕ್ಕೆ ಸರಿಯಾಗಿ, ಕುಶಕುಮಾರನ ಬಾಣದೇಟುಗಳನ್ನು ತಡಿಯಲಾರದೆ ಮತ್ತೆ ಹಲವು ದೂತರು ಓಡಿ ಬಂದು, ರಾಮಚಂದ್ರನನ್ನು ಕುರಿತು, ಎಲೈ ಪರಮ ಪಾವನ ಮೂರುತಿಯೇ, ಲಕ್ಷ್ಮಣನಿಗೆ ಪ್ರಾಣವಾಯುವು ನಿಂತು ಹೋಗುವಕಾಲ ಒದಗಿರುವುದು, ಸೈನ್ಯವೆಲ್ಲಾ ಯಮಪುರಿಯನ್ನು ಸೇರಿತು. ಶತ್ರುಘ್ನನಗತಿ ಏನಾಯಿತೋ ನಮಗೆ ಗೊತ್ತಿಲ್ಲವು. ಆದ್ದರಿಂದ ಇನ್ನು ನೀನು ಯಜ್ಞದೀಕ್ಷಿತನಾಗಿದ್ದರೆ ಪ್ರಯೋಜನವೇನೆಂದು ಮೊರೆ ಇಡುತ್ತಾ ವಿಜ್ಞಾಪಿಸಿಕೊಂಡವರಾದರು. || ೭ || ಆಗ ಕೈಕೇಯಿಯ ಸುತನಾದ ಭರತನು ಈರೀ

ಮಿತ್ರಿಶತ್ರುಘ್ನರಾಹವಶ್ರಮದಿಂದತನುಮನವನು ‖ ಮರೆದರಲ್ಲದೆಮರಣಮೆತ್ತಣದುಸಾಕಿನ್ನು | ಬರಿದೆಕಂಪಿಸಬೇಡನಾಂಪೋಗಿ ಬಾಲಕರ | ಮರುಕಮಂಬಿಡಿಸಿಃಹೆನಶ್ವಮುಂಕಳುಹೆನ್ನನೆಂದುಭರತಂನುಡಿದನು ‖ ೮ ‖ ಬಳಿಕಜಾಂಬವಸುಷೇಣಾಂಗದರ್ಹನುಮಂತ | ನಳನೀಲಕುಮುದಶತಬಲಿಗವಯರೆಂಬಕಪಿ | ಗಳಪಡೆಯುನೆಲ್ಲಮಂಬಲದೊಳುಳಿದಖಿಳಚತುರಂಗಮುಂಕೂಡಿಕೊಟ್ಟು ‖ ಕಳುಹಲಿನಕುಲಸಾರ್ವಭೌಮನಂಬೀಳ್ಕೊಂಡು | ತಳೆದುಸುರನದಿಯತೀರದೊಳಾಂಜನೇಯನಂ | ಕೊಳಗುಳದ ವೃತ್ತಾಂತಮುಂಕಂಡುಬಂದೊರೆವುದೆಂದುಭರತಂಪೇಳ್ದನು ‖ ೯ ‖ ಧಿಂಕಿಟ್ಟನಲ್ಲಿಂದಕಲಿಹನುಮನಾರಣದೊ | ಳಂಕಿತದಕು

---

ಕೈಮುಗಿದು ಕೈಗಳನ್ನು ಜೋಡಿಸಿಕೊಂಡು, ಇವರು - ಈ, ಚಾರರು - ಸೇವಕರು, ಭಯವಿಹ್ವಲರು - ಭಯಗ್ರಸ್ತರಾದವರು, ಆಗಿದಾರೆ, ಅರಿದಪರೆ-ನಿಜಸ್ಥಿತಿಯನ್ನು ತಿಳಿದಿರುವರೆ, ಸೌಮಿತ್ರಿಶತ್ರುಘ್ನರು-ಲಕ್ಷ್ಮಣಶತ್ರುಘ್ನರಾದರೆ, ಆಹವಶ್ರಮದಿಂದ-ಕಾಳಗದಲ್ಲುಂಟಾದ ಕಷ್ಟದಿಂದ, ತನುಮನವನು-ದೇಹವನ್ನೂ ಮನಸ್ಸನ್ನೂ ಸಹ, ಮರೆದರು-ಮರತುಹೋಗಿದಾರೆ, ಅಲ್ಲದೆ-ಹಾಗಿಲ್ಲದಿದ್ದರೆ, ಮರಣಂ-ಸಾವು, ಎತ್ತಣದು-ಎಲ್ಲಿಂದಬಂತು, ಸಾಕು-ಅವರ ನುಡಿಗಳನ್ನು ನಿಜವೆಂದರಿಯಬೇಡ, ಬರಿದೆ-ಅನ್ಯಾಯವಾಗಿ, ಕಂಪಿಸಬೇಡ-ಹೆದರಬೇಡ, ನಾಂ-ನಾನೇ, ಪೋಗಿ-ಯುದ್ಧಕ್ಕೆ ಹೊರಟು, ಬಾಲಕರ-ಹಸುಳೆಗಳ, ಮರುಕಮಂ-ಯುದ್ಧದ ಅಹಂಕಾರವನ್ನು, ಬಿಡಿಸಿ-ತಪ್ಪಿಸಿ, ಅಶ್ವಮಂ-ಹಯವನ್ನು, ತಹೆನು-ಹಿಂದಿರುಗಿಸಿಕೊಂಡು ಬರುತ್ತೇನೆ, ಎನ್ನನು-ನನ್ನನ್ನು, ಕಳುಹು-ಕಳುಹಿಸಿಕೊಡುವನಾಗು, ಎಂದು-ಎಂಬಪರಿಯಿಂದ, ನುಡಿವನು-ಶ್ರೀರಾಮಮೂರ್ತಿಯೊಂದಿಗೆ ವಿಜ್ಞಾಪಿಸಿಕೊಂಡನು.

ಅ‖ ವಿ‖ ಕೈಮುಗಿದು (ಕ್ರಿ. ಸ.) ‖೮‖

ಟೀ‖ ಬಳಿಕ-ಆಮೇಲೆ, ಜಾಂಬವ-ಜಾಂಬವನೆಂಬ ಕರಡಿಗಳ ಅಧಿಪತಿಯು, ಸುಷೇಣ-ಸುಷೇಣನೆಂಬ ಕಪಿಸೈನ್ಯದ ವೈದ್ಯನು, ಅಂಗದರು-ಕಿಷ್ಕಿಂಧಾನಗರದ ಯುವರಾಜನಾದ ಅಂಗದನು ಇವರೇ ಮೊದಲಾದವರು, ಹನುಮಂತ-ಆಂಜನೇಯನು, ನಳ-ನಳನು, ನೀಲ-ನೀಲನೆಂಬಾತನು, ಕುಮುದ-ಕುಮುದನು, ಶತಬಲಿ-ಶತಬಲಿ ಎಂಬ ಹೆಸರಿನಿಂದ ಕೂಡಿದವನು, ಗವಯನು-ಗವಯನೆಂಬುವನು, ಇವರೇ ಮೊದಲಾದ, ಕಪಿಗಳಪಡೆಯನು-ವಾನರದಳವನ್ನು, ಎಲ್ಲಮಂ-ಸಮಸ್ತವನ್ನೂ, ಬಲದೊಳು-ಪದಾತಿಗಳಲ್ಲಿ, ಉಳಿದಿದ್ದ-ಮಿಕ್ಕಿದ್ದ, ಅಖಿಳ-ಅಶೇಷವಾದ, ಚತುರಂಗಮಂ - ನಾಲ್ಕು ತೆರನಾದ ಪಡೆಯನ್ನು, ಕೂಡಿಕೊಟ್ಟು-ಒಂದುಮಾಡಿ, ಕಳುಹಲು-ಕಳುಹಿಸಲಾಗಿ, ಭರತಂ-ಕೈಕೇಯಿಯಸುತನು, ಇನಕುಲಸಾರ್ವಭೌಮನಂ - ಶ್ರೀರಾಮಮೂರ್ತಿಯನ್ನು, ಬೀಳ್ಕೊಂಡು - ಕೇಳಿಕೊಂಡು, ತಳರ್ದು - ನಡೆದವನಾಗಿ, ಸುರನದಿಯ ದೇವಗಂಗೆಯ, ತೀರದೊಳ್-ಪ್ರಾಂತದಲ್ಲಿ, ಕೊಳುಗುಳದ-ರಣದ, ವೃತ್ತಾಂತಮಂ-ಸುದ್ದಿಯನ್ನು, ಕಂಡುಬಂದು-ನೋಡಿಕೊಂಡು ಬಂದು ಒರೆವುದು-ಹೇಳತಕ್ಕದ್ದು, ಎಂದು - ಎಂಬತೆರನಾಗಿ, ಆಂಜನೇಯನಂ - ಅಂಜನಾದೇವಿಯ ಮಗನಾದ ಮಾರುತಿಯನ್ನು ಕುರಿತು, ಪೇಳ್ದನು-ಉಸುರಿದವನಾದನು.

ಅ‖ ವಿ‖ ಇನಕುಲಸಾರ್ವಭೌಮನಂ-ಇನನಕುಲ (ಷ. ತ.) ಇನಕುಲದ ಸಾರ್ವಭೌಮ (ಷ. ತ.) ಇನ-ಸೂರ್ಯನ, ಕುಲ-ವಂಶ, ಇನಕುಲ-ರವಿವಂಶದ, ಸಾರ್ವಭೌಮ-ಚಕ್ರವರ್ತಿ (ರಾಮನು) ‖೯‖

ಟೀ‖ ಅಲ್ಲಿಂದ-ಸುರನದಿಯ ತಟದಿಂದ, ಕಲಿ-ವೀರಾಗ್ರೇಸರನಾದ, ಹನುಮನು - ವಾಯುಸುತನು, ಧಿಂಕಿಟ್ಟನು-ಎಗರಿದನು, ಆರಣದೊಳು-ಆ ಕಾಳಗದಲ್ಲಿ, ಅಂಕಿತದ - ಗುರ್ತಾಗಿರಚಿಸಿರತಕ್ಕ, ಕುಶನ - ಕುಶನೆಂಬ ಬಾಲಕನ, ಬಾಣಗಳಿಂ-

---

ತಿಯಲ್ಲಿ ಶ್ರೀರಾಮಚಂದ್ರ ನೆದುರಿಗೆ ದೀನರಾಗಿ ಹೇಳುತ್ತಲಿರುವ ಚರರನ್ನೆಲ್ಲಾ ಗದರಿಸಿ, ಕೌಸಲ್ಯಾತ್ಮಜನಾದ ರಾಮಚಂದ್ರನ ಪಾದಕಮಲಗಳಲ್ಲಿ ತನ್ನ ತಲೆಯನ್ನಿಟ್ಟು, ಮುಕುಳಿತಕರ ಸಂಪುಟನಾಗಿ, ಎಲೈ ಅಣ್ಣನೆ, ಭಯಗ್ರಸ್ತರಾದ ಈ ದೂತರ ಮಾತುಗಳನ್ನು ಕೇಳಿ ನೀನು ವ್ಯಸನಗ್ರಸ್ತನಾಗುವುದು ಯುಕ್ತವಲ್ಲವು. ಇನ್ನು ನೀನು ದುಃಖವನ್ನು ಬಿಟ್ಟು ಸಮಾಧಾನವನ್ನು ತಂದುಕೊ. ನಾನು ಹೋಗಿ ಬಾಲಕರೀರ್ವರ ಸೊಕ್ಕನ್ನಡಗಿಸಿ ಕುದುರೆಯನ್ನು ಬಿಡಿಸಿಕೊಂಡು ಬರುವೆನು. ದಯಮಾಡಿ ನನಗೆ ಅನುಜ್ಞೆಯಂ ದಯೆಗೈಯೆಂದು ಬೇಡಿಕೊಂಡನು ‖೮‖ ಶ್ರೀರಾಮಚಂದ್ರನಾದರೊ ಅನುಜನ ನುಡಿಗಳಿಂದ ತನ್ನಯ ಮನಸ್ಸಿನ ವ್ಯಥೆಯನ್ನು ಸಮಾಧಾನಕ್ಕೆ ತಂದುಕೊಂಡವನಾಗಿ, ಜಾಂಬವಂತ, ಸುಷೇಣ, ಅಂಗದ, ಆಂಜನೇಯ, ನಳ. ನೀಲ, ಕುಮುದ, ಶತಬಲಿ, ಗವಯರೇ ಮೊದಲಾದ ಕಪಿಸೈನ್ಯವನ್ನೂ, ಅಯೋಧ್ಯಾನಗರದಲ್ಲಿ ಮಿಕ್ಕಿದ್ದ ಪಡೆಯನ್ನೂ ಜೊತೆಮಾಡಿ ಭರತನೊಂದಿಗೆ ಕಳುಹಿಸಿದವನಾದನು. ಶ್ರೀರಾಮದೇವರಿಂದಾಜ್ಞಪ್ತನಾದ ಭರತನು, ಅಣ್ಣನಾದ ರಾಮನಿಗೆ ಪ್ರದಕ್ಷಿಣ ನಮಸ್ಕಾರಗಳಂ ಮಾಡಿ, ಸೈನ್ಯದಿಂದೊಡಗೂಡಿ ಹೊರಟವನಾದನು. ಆಗಲಾಭರತನು ಅಂಜನಾಸುತನನ್ನು ಕುರಿತು, ಯುದ್ಧದ ವೃತ್ತಾಂತವನ್ನೆಲ್ಲಾ ತಿಳಿದುಬಂದರುಹೆನಲು ‖೯‖ ಮಾರುತಿಯು ಕೂಡಲೆ ಅಲ್ಲಿಂದ ಹಾರಿ ಯುದ್ಧರಂಗವನ್ನು ಸೇರಿ, ಕುಶನ

ಶನಬಾಣಂಗಳಿಂಮಡಿದಬಲ | ಸಂಕುಲನನಿಕ್ಷ್ವಾಕುನಂದನಂನಿನ್ನ ಸುತೆಸೀತೆಯುಂಬಿಟ್ಟನೆಂದು || ಕೊಂಕದಿರುಸೈರಿಸುವುದೆಂದೈದೆ ಭೂದೇವಿ | ಯುಂಕೋಪನುಂಮಾಣಿಸಲ್ಬೇಡಿಕೊಂಬತೆರ | ದಿಂಕೆಡೆದುಮೈಮರೆದುಮಲಗಿರ್ದಸೌಮಿತ್ರಿಶತ್ರುಘ್ನರಂ ಕಂಡನು ||೧೦|| ಕಂಡುಕಪಿವೀರನವರೀರ್ವರಂತೆಗೆದೆತ್ತಿ | ಕೊಂಡುಭರತನಪೊರೆಗೆಬರಲವಂಬಳಿಕಮಣಿ | ಮಂಡಿತವರೂಥದೊಳವರ್ಗಳಂಪಟ್ಟಿರಿಸಿಹಯಮುಂಕದಳ್ಗೆಕಟ್ಟಿ || ಚಂಡಶರಚಾಪಪಾಣಿಗಳಾಗಿತೊಳಗುವು | ದ್ದಂಡಕುಶಲವರೀರ್ವರಿರ್ಪುದಂಕೇಳ್ದು ಕೋ | ದಂಡಮುಂಜೇಗೈದುಪಡೆವೆರೆಸಿನೂಕಿದಂಮುಳಿದುಬಾಲಕರಮೇಲೆ || ೧೧ || ಅಣ್ಣಾತಮ್ಮಂದಿರೀರ್ವರುಮರಿಚತುರ್ಬಲಂ | ಪಣ್ಣಿಬರೆಕಂಡುಬಿಲ್ಗೊಂಡೆದ್ದುಕೋಪದಿಂ | ದಣ್ಣಕಲ್ಲಾಡಿದರ್ಪಟುಭಟರತಲೆಗಳಂಬಾಣಪ್ರಯೋಗದಿಂದ || ಬಣ್ಣಿಸಲ್ಕ

---

ಸರಲ್ಗಳಿಂದ, ಮಡಿದ-ಮರಣವನ್ನು ಹೊಂದಿದ, ಬಲಸಂಕುಲನನು-ಸೇನಾಗಡಣವನ್ನು, ನಿನ್ನ-ನಿನ್ನ ಸಂಬಂಧವಾದ, ಸುತೆ-ಕುವರಿಯಾದ, ಸೀತೆಯುಂ-ಜಾನಕಿಯನ್ನ, ಇಕ್ಷ್ವಾಕುನಂದನಂ-ಕೌಸಲ್ಯೆಯಮಗನು, ಬಿಟ್ಟನು-ತೊರೆದನು, ಎಂದು-ಎಂಬ ತೆರನಾಗಿ, ಕೊಂಕದೆ - ದೋಷಾರೋಪಣೆಯನ್ನೆಸಗದೆ, ಇರು - ಇರುವಳಾಗು, ಸೈರಿಸುವುದು - ಶಾಂತತೆಯನ್ನು ತಾಳಬೇಕು, ಎಂದು-ಎಂಬದಾಗಿ, ಕೋಪನುಂ - ಸಿಟ್ಟನ್ನು, ಮಾಣಿಸಲು-ಕಡಮೆಮಾಡಲು, ಭೂದೇವಿಯುಂ-ಭೂಮಿಯೆಂಬ ಹೆಂಗಸನ್ನು, ಬೇಡಿಕೊಂಬ-ಕೇಳಿಕೊಳ್ಳತಕ್ಕ, ತೆರದಿಂ-ಬಗೆಯಿಂದ, ಕೆಡೆದು-ಭೂಮಿಯಮೇಲೆ ಹೊರಳಿಕೊಂಡು, ಮೈಮರೆದು - ಸ್ಮೃತಿ ತಪ್ಪಿ, ಮಲಗಿರ್ದ-ಪವಡಿಸಿದ್ದ, ಸೌಮಿತ್ರಿ ಶತ್ರುಘ್ನರಂ-ಸುಮಿತ್ರೆಯ ಮಕ್ಕಳೀರ್ವರನ್ನು, ಕಂಡನು-ಈಕ್ಷಿಸಿದವನಾದನು.

ಅ|| ವಿ|| ಇಕ್ಷ್ವಾಕುನಂದನಂ - ಇಕ್ಷ್ವಾಕುವಂಶದಲ್ಲಿ ಹುಟ್ಟಿದ, ನಂದನಂ-ಕುವರನು, (ಶ್ರೀರಾಮನು, ಮೈಯನ್ನು ಮರೆತು (ಕ್ರಿ. ಸ.) ಸೌಮಿತ್ರಿ-ಸುಮಿತ್ರೆಯಮಗನು ||೧೦||

ಟೀ|| ಅವರೀರ್ವರಂ - ಆ ಲಕ್ಷ್ಮಣಶತ್ರುಘ್ನರಿಬ್ಬರನ್ನು, ಕಪಿವರನು - ಭರತನಿಂದಾಜ್ಞಪ್ತನಾದ ಆಂಜನೇಯನು, ಕಂಡು-ನಿರುಕಿಸಿ, ತೆಗೆದು-ಕರೆದುಕೊಂಡು, ಭರತನಪೊರೆಗೆ - ಕೈಕೇಯಿಯಸುತನ ಹತ್ತಿರಕ್ಕೆ, ತರಲು-ಎತ್ತಿಕೊಂಡು ಬಂದು ಬಿಡಲು, ಅವಂ-ಆ ಭರತನು. ಅವರ್ಗಳಂ-ಸುಮಿತ್ರಾತ್ಮಜರಾದ ತನ್ನ ಅಣ್ಣಂದಿರೀರ್ವರನ್ನು, ಕಂಡು-ಈಕ್ಷಿಸಿ, ಬಳಿಕ-ಅನಂತರ, ಮಣಿಮಂಡಿತವರೂಥದೊಳು-ನವರತ್ನಖಚಿತಮಾದ ತೇರಿನಲ್ಲಿ, ಪಟ್ಟು-ಅತಿ ಪ್ರೇಮದಿಂದ, ಇರಿಸಿ-ಮಲಗಿಸಿದವನಾಗಿ, ಕದಳ್ಗೆ-ಬಾಳೆಯಮರಕ್ಕೆ, ಹಯಮಂ - ಯಾಗದ ಅಶ್ವವನ್ನು, ಕಟ್ಟಿ - ಬಿಗಿದು, ಚಂಡ-ಉಗ್ರವಾದ, ಶರ-ಕಣೆಗಳು, ಚಾಪ-ಧನುಸ್ಸು ಇವನ್ನು, ಪಾಣಿಗಳು-ಕರತಳದಲ್ಲಿ ಧರಿಸಿದವರು, ಆಗಿ-ಆಗಿಬಿಟ್ಟು, ತೊಳಗುವ - ರಾರಾಜಿಸುತ್ತಲಿರುವ, ಉದ್ದಂಡ - ಸಮರ್ಥರಾದ, ಕುಶಲವರು - ಕುಶಲವರೆನ್ನುವ, ಈರ್ವರು - ಇಬ್ಬರು ಬಾಲಕರು, ಇರ್ಪುದಂ - ಇರತಕ್ಕದ್ದನ್ನು, ಕೇಳ್ದು - ಕೇಳಿದವನಾಗಿ, ಕೋದಂಡಮುಂ-ಧನುಸ್ಸನ್ನು, ಜೇಗೈದು-ಟಂಕಾರ ಧ್ವನಿಯಾಗುವಂತೆಮಾಡಿ, ಪಡೆವೆರಸಿ-ದಳದಿಂದ ಕೂಡಿ, ಬಾಲಕರ ಮೇಲೆ-ಕುಶಲವರಿರುವ ಕಡೆಗೆ, ಮುಳಿದು-ಸಿಟ್ಟನಿಂದ, ನೂಕಿದಂ-ಹೊರಡಿಸಿದನು.

ಅ|| ವಿ|| ಮಣಿಯಿಂದಮಂಡಿತವರೂಥಂ-ಮಣಿಮಂಡಿತವರೂಥಂ (ತೃ. ತ.) ಚಂಡಶರಚಾಪಪಾಣಿಗಳು, ಶರವೂ+ಚಾಪವೂ=ಶರಚಾಪಗಳು (ದ್ವಿ. ಯೋಗ. ದ್ವಂದ್ವ.) ಚಂಡವಾದ ಶರಚಾಪಗಳು (ವಿ. ಪೂ.) ಚಂಡ ಶರಚಾಪಗಳು. ಪಾಣಿಯಲ್ಲಿ ಯಾರಿಗೊ ಅವರು (ಬ. ಸ.) ||೧೧||

ಟೀ|| ಅರಿಚತುರ್ಬಲಂ - ಹಗೆಗಳ ಚತುರಂಗಬಲವು, ಪಣ್ಣಿಬರೆ - ಯುದ್ಧಕಾಂಕ್ಷಿಗಳಾಗಿ ಬರುತ್ತಿರುವುದನ್ನು, ಈರ್ವರುಂ-ಇಬ್ಬರಾದ, ಅಣ್ಣಾತಮ್ಮಂದಿರು - ಕುಶಲವರು, ಕಂಡು-ಈಕ್ಷಿಸಿ, ಬಿಲ್ಗೊಂಡು - ಧನುರ್ಧಾರಿಗಳಾಗಿ, ಕೋಪದಿಂ-

---

ಶರಘಾತದಿಂದ ಸೈನ್ಯವೆಲ್ಲಾ ಭೂಮಿಯಲ್ಲಿ ಬಿದ್ದು ಹೋಗಿರುವುದನ್ನೂ, ಲಕ್ಷ್ಮಣ ಶತ್ರುಘ್ನರೂ ಮೂರ್ಛೆಗೊಂಡು ನೆಲದಲ್ಲಿ ಮಲಗಿರುವದನ್ನೂ ಕಂಡವನಾದನು. ಇದನ್ನು ನೋಡಿದರೆ ಪೂರ್ವದಲ್ಲಿ ಶ್ರೀರಾಮಚಂದ್ರನು ಸೀತೆಯನ್ನು ನಿಷ್ಕಾರಣವಾಗಿ ಕಾಡಿಗೆ ಅಟ್ಟಿದ್ದರಿಂದ, ಅವರ ತಾಯಿಯಾದ ಭೂದೇವಿಗೆ ಬಂದಿರುವ ಕೋಪಾತಿಶಯವನ್ನು ಶಮನ ಮಾಡಲು, ಈಗ ಸೇನಾಜನಗಳೂ, ಸುಮಿತ್ರಾತ್ಮಜರೂ ಸಹ ಧರಣಿ ಎಂಬ ನಾರಿಗೆ ನಮಸ್ಕಾರವನ್ನು ಮಾಡುತ್ತಲಿರುವರೊ ಎಂಬಂತೆ ತೋರುತ್ತಲಿದ್ದಿತು ||೧೦|| ಆಂಜನೇಯನು ಮೂರ್ಛಾಕ್ರಾಂತರಾಗಿದ್ದ ಲಕ್ಷ್ಮಣ ಶತ್ರುಘ್ನರೀರ್ವರನ್ನೂ ಎತ್ತಿಕೊಂಡು ಬಂದು ಭರತನಿಗೆ ಒಪ್ಪಿಸಲಾಗಿ, ಭರತನು ಅವರೀರ್ವರನ್ನೂ ರತ್ನಖಚಿತವಾದ ತೇರಿನಲ್ಲಿ ಮಲಗಿಸಿದವನಾಗಿ, ಯಜ್ಞಾಶ್ವವನ್ನು ಬಾಳೆಯ ಮರಕ್ಕೆ ಬಿಗಿದು, ಧನುರ್ಧಾರಿಗಳಾಗಿ ನಿಂತಿರತಕ್ಕ ಕುಶಲವರೆಂಬಿಬ್ಬರು ಬಾಲಕರ ಕಡೆಗೆ ತನ್ನ ಸೈನ್ಯವನ್ನೆಲ್ಲಾ ಹೊರಡಿಸಿ ತಾನೂ ಧನುಷ್ಟಂಕಾರವಂ ಮಾಡುತ್ತ ಹೊರಟವನಾದನು ||೧೧|| ಮುಂದರಿತು ಬರುತ್ತಲಿರುವ ಭರತನ ಸೇನಾ ಸಮುದ್ರವನ್ನು ಕುಶಲವರು ಕಂಡು ಕಡುಮುಳಿದು, ಮೇಲಕ್ಕೆದ್ದು ಧನುಸ್ಸುಗಳನ್ನು ಸರಿಮಾಡಿಕೊಂಡು, ಶರವರ್ಷ

ವಣೆಯೋಜನದಗಲಮೆಲ್ಲಿಯುಂ | ಕಣ್ಣೆವೆಯಲುಗುವನಿತರೊಳ್ಸರಳಮಯಮಾಗೆ | ಚಿಣ್ಣರಂಗದಮೇಲೆಮೆಚ್ಚಿ ಪೂಮಳೆ |
ಗಳಂಕರೆದರಮರರ್ಪೊಗಳುತ || ೧೨ || ಚಾಪಟಂಕಾರಂಜಗತ್ರಯದೊಳೆಲ್ಲಿಯುಂ | ವ್ಯಾಪಿಸಲ್ಕಿವುಡಾದವಷ್ಟದಿಗ್ದಂತಿಗಳ |
ಳ್ಭೂಪಯೋಧಿಗಳೊಡವೆರಸಿದುವುಕುಲಾದ್ರಿಗಳ್ ಜರಿದವಹಿಕಂಪಿಸಿದನು || ತಾಪದಿಂಪೊಡೆಮರಳ್ದಂ ಕೂರ್ಮನೀರವಿಯ |
ರೂಪಡಗಿತೆಸುವಬಾಣಾಂಧಕಾರದೊಳಂದು | ದೀಪವಿಲ್ಲದಮನೆಯೊಲಾದುದುರಣಾಂಕಣಂ ಕಾದುವರದೆಂತೊಭಟರು ||೧೩||
ಕೋಲ್ಗರೆಯಲಾನೆಗಳಸುಂಡಿಲ್ಗಳುಂಹಯದ | ಕಾಲ್ಗಳುಂರಾವುತರಜೋಧರಶಿರಂಗಳುಂ | ಮೆಲ್ಗೈಯ್ಯರಥಿಕರಧನುರ್ದಂ
ಡಮುಂಕೈದುವಿಡಿದಪಾಣಿಗಳುಮಿಳೆಗೆ | ಸಾಲ್ಗೊಂಡುರುಳ್ದುವೊದಗಿದಕದಪಿಗಳಂಗದೋ | ಳ್ಕೋಲ್ಗಳಂಬಲಿದಂತೆನಾಂಟಿದವು

ಕ್ರೋಧದಿಂದ, ಎದ್ದು-ಮೇಲಕ್ಕೆದ್ದವರಾಗಿ, ಬಾಣಪ್ರಯೋಗದಿಂ – ಬಾಣಗಳನ್ನು ಬಿಡುವುದರಿಂದ, ಪಟುಭಟರ ತಲೆಗಳಂ-ಯೋಧಾಗ್ರೇಸರರ ಶಿರಸ್ಸುಗಳನ್ನು, ಅಣ್ಣೆಕಲ್ಲಾಡಿದರು-ಕವಣೆ ಕಲ್ಲನ್ನು ಎಸೆಯುವಂತೆ ಎಲ್ಲೆಲ್ಲಿಯೂ ತುಂಬಿಸಿ ಬಿಟ್ಟರು, ಬಣ್ಣಿಸಲು-ಹೊಗಳಬೇಕಾದರೆ, ಪವಣೆ-ಸಾಧ್ಯವಾದೀತೆ, (ಎಂದಿಗೂ ಸಾಧ್ಯವಾದದ್ದಲ್ಲವು) ಕಣ್ಣೆವೆ-ಕಣ್ಣರೆಪ್ಪೆಯನ್ನು, ಅಲಗುವ-ಮುಚ್ಚಿ ತೆರೆಯುವ, ಅನಿತರೊಳ್-ಕಾಲದೊಳಗಾಗಿ, ಯೋಜನದ ಅಗಲಂ ಎಲ್ಲಿಯೂ-ಸುತ್ತು ಒಂದು ಗಾವುದದ ಸ್ಥಳದಲ್ಲೆಲ್ಲಿಯೂ, ಸರಳಮಯಂ-ಬಾಣಗಳಿಂದ ತುಂಬಿದ್ದು, ಆಗೆ-ಆಗಿ ಹೋಗಲು, ಅಮರರು-ಸುರರು, ಪೊಗಳುತ-ಶ್ಲಾಘಿಸುತ್ತ, ಮೆಚ್ಚಿ-ಕುಶಲವರ ಸಾಹಸವನ್ನು ಕೊಂಡಾಡಿ, ಚಿಣ್ಣರಂಗದಮೇಲೆ-ಲವಕುಶರ ಮೈಮೇಲೆ, ಪೂಮಳೆಗಳಂ-ಶರವರ್ಷವನ್ನು, ಕರೆದರು-ಎರಚಿದವರಾದರು ||

ಅ|| ವಿ|| ಬಣ್ಣಿಸು (ತ್ಭ)-ವರ್ಣಿಸು (ತ್ಸ) || ೧೨ ||

ಟೀ|| ಜಗತ್ರಯದೊಳು-ಸ್ವರ್ಗ ಮರ್ತ್ಯ ಪಾತಾಳಗಳಲ್ಲಿ, ಎಲ್ಲಿಯುಂ-ಎಲ್ಲೆಡೆಗಳಲ್ಲಿಯೂ, ಚಾಪಟಂಕಾರಂ-ಧನುಷ್ಟಂಕಾರವು, ವ್ಯಾಪಿಸಲ್-ಕವಿಯಲಾಗಿ, ಅಷ್ಟದಿಗ್ದಂತಿಗಳ್-ಭೂಮಿಯನ್ನು ಎಂಟು ಮೂಲೆಗಳಲ್ಲಿಯೂ ಹೊತ್ತಿರುವ ಆನೆಗಳು, ಕಿವುಡಾದವು-ಕಿವಿಕೇಳದಂತಾಗಿ ಹೋದವು, ಭೂಪಯೋಧಿಗಳು-ಭೂಮಿಯೂ ಕಡಲೂ ಸಹ, ಒಡವೆರಸಿದವು-ಒಂದು ಗೂಡಿದವು, ಕುಲಾದ್ರಿಗಳು-ಸಪ್ತಕುಲಪರ್ವತಗಳು, ಜರಿದವು-ಕದಲಿ ಹೋದವು, ಅಹಿ-ಸರ್ಪರಾಜನಾದರೊ, ಕಂಪಿಸಿದನು-ನಡುಕವಂ ತಾಳಿದನು, ಕೂರ್ಮನು-ತಾಂಬೇಲಿಯು, ತಾಪದಿಂ-ಸಂಕಟದಿಂದ, ಪೊಡೆಮರಳ್ದಂ-ದೇಹವನ್ನು ಬಾರಿಬಾರಿಗೂ ಉರುಳಿಸಿದನು, ಈರವಿಯರೂಪು-ಇನಮಂಡಲದ ಆಕೃತಿಯು, ಬಾಣಾಂಧಕಾರದೊಳು – ಶರವರ್ಷಗಳಿಂದುಂಟಾದ ಕತ್ತಲೆಯಲ್ಲಿ, ಅಡಗಿತು-ಕಾಣದಂತೆ ಆಗಿಹೋಯಿತು, ಅಂದು-ಆಗ, ರಣಾಂಕಣಂ-ರಣರಂಗವು, ದೀಪವಿಲ್ಲದ-ದೀಪವಿಲ್ಲದೆ ಇರುವ, ಮನೆಯೊಲು-ಮಂದಿರದಂತೆ, ಆದುದು-ಆಗಿಹೋಯಿತು, ಭಟರು-ಯೋಧಾಗ್ರಣಿಗಳು, ಆದೆಂತೊ-ಯಾವಪರಿಯಿಂದಲೊ, ಕಾದುವರು-ಹೋರಾಡುವರು, ಎಂದರೆ (ಯುದ್ಧಮಾಡಲಾರದೆ ಹೋದರೆಂದು ಆಶಯವು) ||೧೩||

ಟೀ|| ಕೋಲ್ಗರೆಯಲು-ಕುಶಲವರು ಬಾಣಗಳನ್ನು ಬಿಡಲು, ಆನೆಗಳ-ಹಸ್ತಿಗಳ, ಸುಂಡಿಲ್ಗಳುಂ-ಸೊಂಡಿಲಗಳೂ, ಹಯದ- ಕುದುರೆಗಳ, ಕಾಲ್ಗಳುಂ – ಪಾದಗಳೂ, ರಾಹುತರ – ಕುದುರೆಯನ್ನು ನಡಿಸತಕ್ಕವರ, ಜೋಧರ – ಆನೆಗಳನ್ನು ಹೊರಡಿಸಿಕೊಂಡು ಹೋಗುವರ, ಶಿರಂಗಳುಂ-ಶಿರಸ್ಸುಗಳು, ಮೇಲ್ಗಯ್ಯ-ಶೂರಾಗ್ರಣಿಗಳಾದ, ರಥಿಕರ-ರಥಿಕ ಶ್ರೇಷ್ಠರ, ಧನುರ್ದಂಡಮುಂ-ಚಾಪದ ಕಟ್ಟಿಗೆಯೂ, ಕೈದುವಿಡಿದ-ಕತ್ತಿ ಮೊದಲಾದವನ್ನು ಹಿಡಿದಿದ್ದ, ಪಾಣಿಗಳುಂ-ಹಸ್ತಗಳೂ, ಸಾ

ಮಂ ಕರೆದು, ಶೂರಾಗ್ರಣಿಗಳ ತಲೆಗಳನ್ನೆಲ್ಲಾ ಚಂಡಾಡಿದವರಾದರು, ರೆಪ್ಪೆಬಡಿಯುವಷ್ಟು ಹೊತ್ತಿಗೆ ಶತ್ರುಸೈನ್ಯದಲ್ಲಿ ಒಂದು ಗಾವುದ ವಿಸ್ತೀರ್ಣ ದೊಳಗಾಗಿ ಸ್ವಲ್ಪವಾದರೂ ಎಡೆಯಿಲ್ಲದಂತೆ ಬಾಣಗಳಿಂದ ತುಂಬಿಸಿ ಬಿಟ್ಟದನ್ನು ದೇವತೆಗಳು ನೋಡಿ ಕುಶಲವರು ಅಸಾಧಾರಣವಾದ ಸಾಹಸಿಗಳೆಂದು ಹೊಗಳುತ್ತ, ರಣರಂಗದಲ್ಲಿ ಅವರ ಮೇಲೆ ಹೂವಿನ ಮಳೆಯನ್ನೂ ಸುರಿಸಿದವರಾದರು || ೧೨ || ಈ ಕುಶಲವರ ಧನುಷ್ಟಂಕಾರ ಧ್ವನಿಯಾದರೊ ತ್ರಿಲೋಕಗಳಲ್ಲಿಯೂ ವ್ಯಾಪಿಸಿದ್ದರಿಂದ, ಅಷ್ಟದಿಗ್ಗಜಗಳ ಕಿವಿಗಳು ಕೇಳಿಸದಂತಾದವು. ಶರವರ್ಷದಿಂದ ಭೂವ್ಯಾಕಾಶಗಳು ಏಕಾಕಾರವಾಗಿ ಕಾಣಿಸುತ್ತಲಿದ್ದವು. ಸಪ್ತಕುಲಪರ್ವತಗಳೆಲ್ಲಾ ಅಲ್ಲಾಡಿ ಹೋದವು, ಸರ್ಪರಾಜನಾದ ಆದಿಶೇಷನು ಗಡಗಡನೆ ನಡುಗಲಾರಂಭಿಸಿದನು, ಕೂರ್ಮನು ಹೊರಳಾಡಲುಜ್ಜುಗಿಸಿದನು. ಯುದ್ಧಭೂಮಿಯೆಲ್ಲಾ ದೀಪವಿಲ್ಲದಿರುವ ಮನೆಯಂತೆ ತೋರುತ್ತಲಿದ್ದಿತು, ಅರಿಬಲದವರಿಗೆ ಏನೂತೋರದೆ ಸ್ತಬ್ಧರಾಗಿ ನಿಂತುಬಿಟ್ಟರು ||೧೩|| ಕುಶಲವರು ಬಿಟ್ಟ ಬಾಣದ ಹೊಡೆತದಿಂದ ವೈರಿಬಲದಲ್ಲಿದ್ದ ಆನೆಗಳ ಸೊಂಡಿಲ್ಗಳೇ ಕತ್ತರಿಸಿ ಹೋದವು. ಕುದುರೆಗಳ ಕಾಲುಗಳು ಮುರಿದವು. ರಾವುತರು ಮಾವುತರು ಇವರ ತಲೆಗಳು ಚಂಡಾಡಲ್ಪಟ್ಟವು. ರಥಗಳು ನುಚ್ಚು ನುಚ್ಚಾದವು. ಕಪಿಗಳು ರಕ್ಕಸರು ಮೊದಲಾದವರ ಮೈಯಲ್ಲಿ ಕೂರಲುಗುಗಳು ಸಿಕ್ಕಿಕೊಂಡು ರಕ್ತದ ಕಾ

ಪರಬಲಂ । ಸೋಲ್ಲು ನುಲ್ಲದೆಕ-ಶಲವರಮುಂದೆಗೆಲ್ವಭಟರಂಕಾಣೆನಾಹವದೊಳು ॥ ೧೪ ॥ ಸೇನೆಯಂನಿಮಿಷದೊಳ್ತಡೆಗಡಿಯೆಕಂಡುಪವ । ಮಾನಜಂನಡೆತಂದುಬಾಲಕರವಿಗ್ರಹಂ । ಭಾನುಕುಲತಿಲಕನಾಕೃಯೊಲಿಪೆನೋಡೆಂದುಭರತಂಗೆತೋರಿಸಲ್ಕೆ ॥ ಸಾನುರಾಗದೊಳತುಳಚಾಪನುಂಪಿಡಿದುರಾ । ಮಾನುಜಂಕುಶನಸಂಮುಖಕ್ಕೈದಿನುಡಿಸಿದಂ । ಸೂನುಗಳಮೊಗಮುಂನಿರೀಕ್ಷಿಸಿಘನಸ್ನೇಹದಿಂದಪುಳಕಂಪೊಣ್ಮಲು ॥ ೧೫ ॥ ವತ್ಸನೀನಾರವಂನಿನಗೀತನೇನಹಂ । ಮತ್ಸಹೋದರರನುರೆಘಾತಿಸಿದಿರೆಮ್ಮಯಮ । ಹತ್ಸೈನ್ಯಮುಂಕೊಂದಿರಿನ್ನಾದೊಡಂಕುದುರೆಯುಂಬಿಟ್ಟುಪೋಗಿಬರಿದೆ ॥ ಮತ್ಸರಿಸಬೇಡನಿಮ್ಮಂಪಡೆದತಾಯಬ

---

ಲ್ಗೊಂಡು-ಪಜ್ತಿಯಾಗಿ, ಇಳೆಗೆ-ಭೂಮಿಗೆ, ಉರುಳ್ದವು-ಉರುಳಿಕೊಂಡವು, ಒದಗಿದ-ಸಮೀಪಸ್ಥರಾದ, ಕಪಿಗಳ-ಕೋತಿಗಳ, ಅಂಗದೋಳ್-ದೇಹದಲ್ಲಿ, ಕೀಲ್ಗಳಂ-ಮೊಳೆಗಳನ್ನು, ಬಲಿದಂತೆ-ಬಲವಾಗಿ ಹೊಡೆದಂತೆ, ನಾಂಟಿದವು-ಚುಚ್ಚಿ ಕೊಂಡು ಬಿಟ್ಟವು, ಪರಬಲಂ-ಅರಿಗಳ ಪಡೆಯು, ಸೋಲ್ಲುಂ-ಸೋತು ಹೋಗುವುದು, ಅಲ್ಲದೆ-ಅದರವಿನಾ, ಆಹವದೊಳು-ಕಾಳಗದಲ್ಲಿ, ಗೆಲ್ವ-ಜಯಶೀಲರಾಗುವ, ಭಟರಂ-ಯೋಧರನ್ನು, ಕಶಲವರ ಮುಂದೆ-ಕುಶಲವರನ್ನು ಎದುರಿಸುವಂತೆ, ಕಾಣೆನು-ಯಾರನ್ನೂ ನೋಡಲೇ ಇಲ್ಲವು ॥ ೧೪ ॥

ಟೀ॥ ಕುಶಲವರೆಂಬಬಾಲಕರು, ನಿಮಿಷದೋಳ್ - ಕ್ಷಣಮಾತ್ರದಲ್ಲಿ, ಸೇನೆಯಂ-ಪಡೆಯನ್ನೆಲ್ಲಾ, ತಡೆಗಡಿಯೆ-ಅಡ್ಡಗಿಸಿ ಶಿಕ್ಷಿಸುತ್ತಿರಲಾಗಿ, ಪವಮಾನಜಂ-ವಾಯುಸುತನಾದ ಆಂಜನೇಯನು, ಕಂಡು-ಈಕ್ಷಿಸಿ, ನಡೆತಂದು-ಭರತನಿದ್ದೆಡೆಯನ್ನು ಸೇರಿ, ಇನಕುಲತಿಲಕನ-ಶ್ರೀರಾಮದೇವರ, ಆಕೃತಿಯೊಲು-ಆಕಾರದ ಹಾಗೆ, ಬಾಲಕರ-ಕುಶಲವರ, ವಿಗ್ರಹಂ-ದೇಹವು, ಇರೆ-ಇರಲಾಗಿ, ಭರತಂಗೆ-ಕೈಕೆಯಿಯ ಕುವರನಿಗೆ, ನೋಡೆಂದು-ಇವರ ದೇಹದ ಸೊಬಗನ್ನು ಈಕ್ಷಿಸು ಎಂಬುದಾಗಿ, ತೋರಿಸಲ್ಕೆ-ನೋಡಿಸಲು, ರಾಮಾನುಜಂ-ರಾಮನ ತಮ್ಮನಾದ ಭರತನಾದರೊ, ಅತುಲ-ಅಸದೃಶನಾದ, ಚಾಪಮಂ-ಧನುಸ್ಸನ್ನು, ಪಿಡಿದು-ಹಿಡಿದು ಕೊಂಡವನಾಗಿ, ಸಾನುರಾಗದೊಳು-ಪ್ರೇಮಾತಿಶಯದಿಂದ, ಕುಶನ-ಕುಶನೆಂಬ ಬಾಲಕನ, ಸಮ್ಮುಖಕೆ-ಎದುರಿಗೆ, ಐದಿ-ಹೋಗಿಸೇರಿ, ಸೂನುಗಳ-ಕುವರರ, ಮೊಗಮುಂ-ಮುಖಪದ್ಮವನ್ನು, ನಿರೀಕ್ಷಿಸಿ-ಚೆನ್ನಾಗಿ ನೋಡಿದವನಾಗಿ, ಘನಸ್ನೇಹದಿಂ-ಹೆಚ್ಚಾದ ವಿಶ್ವಾಸದಿಂದ, ಪುಳಕಂ-ಕೂದಲುಗಳೆಲ್ಲಾ ಮೇಲಕ್ಕೆದ್ದವುಗಳು, ಪೊಣ್ಮಲು-ಆಗಿಬಿಡಲಾಗಿ, ನುಡಿಸಿದಂ-ಮುಂದೆ ಹೇಳುವಂತೆ ಕೇಳುವನು ॥

ಅ॥ ವಿ॥ ವಿಗ್ರಹಂ-ಶರೀರ, ಕಾಳಗ, ಆಕೃತಿ, ಭಾನುಕುಲತಿಲಕ-ಭಾನುವಿನ ಕುಲ (ಷ. ತ.) ಭಾನುಕುಲದಲ್ಲಿ ತಿಲಕಂ (ಸ. ತ) ಮೊಗಂ-ತ್ಭ-ಮುಖಂ ತ್ಸ. ॥ ೧೫ ॥

ಟೀ॥ ಭರತಂ-ಭರತನು, ವತ್ಸ-ಎಲೈ ಹುಡುಗನೆ, ನೀನು-ನೀನಾದರೊ, ಆರವಂ-ಯಾರ ಪರವಾಗಿ ನಮ್ಮೊಂದಿಗೆ ಹೋರಾಡುತಲಿದ್ದಿ, ಈತನು-ಈ ಹುಡುಗನು, ನಿನಿಗೆ ಏನಹಂ-ಯಾವ ಸಂಬಂಧಿಯು, ಮತ್-ನನ್ನ, ಸಹೋದರರನು-ಅಣ್ಣತಮ್ಮಂದಿರನ್ನು, ಉರೆ-ಹೆಚ್ಚಾಗಿ, ಘಾತಿಸಿದಿರಿ-ಹಿಂಸೆಪಡಿಸಿ ಪೆಟ್ಟುಗಳಿಂದಶ್ರಮಪಡಿಸಿದ್ದೀರಿ, ಎಮ್ಮಯ-ನನ್ನದಾದ, ಮಹತ್ಸೈನ್ಯಮುಂ-ದೊಡ್ಡಪಡೆಯನ್ನು, ಕೊಂದಿರಿ-ಕೊಂದುಹಾಕಿ ಬಿಟ್ಟಿರಿ, ಕುದುರೆಯುಂ-ಯಾಗದ ಅಶ್ವವನ್ನು, ಬಿಟ್ಟು-ಬಿಟ್ಟವರಾಗಿ, ಇನ್ನಾದೊಡಂ-ಇನ್ನುಮೇಲಾದರೂ, ಪೋಗಿ-ಹೊರಡಿರಿ, ಬರಿದೆ-ನಿಷ್ಕಾರಣವಾಗಿ, ಮತ್ಸರಿಸಬೇಡ-ದ್ವೇಷವನ್ನು ಬಲಪಡಿಸಬೇಡ, ನಿಮ್ಮಂಪಡೆದ-ನಿಮ್ಮನ್ನು ಹೆತ್ತ, ತಾಯಿ-ಮಾತೆಯ, ಬಳಿಗೆ-ಸನ್ನಿಧಿಗೆ, ಐದಿ-ಹೋಗಿಸೇರಿ, ಉತ್ಸವದೊಳು-ಆ

---

ಲುವೆಗಳುಂಟಾದವು. ಎಲೈ ಜನಮೇಜಯನೆ, ಕುಶಾಸ್ತ್ರಗಳಿಗೆದುರಾದವರಿಗೆ ಮರಣ ಮೂರ್ಛೆಗಳು ತಪ್ಪುವದೇ ಇಲ್ಲವು ॥ ೧೪ ॥ ಈ ರೀತಿಯಲ್ಲಿ ಕ್ಷಣಮಾತ್ರ ದೊಳಗಾಗಿ ಸೇನೆಯ ಹೆಸರನ್ನು ಕೆಡಿಸಿ ನಿಂತಿರುವ ಬಾಲಕರನ್ನು ಆಂಜನೇಯನು ನೋಡಿ, ಭರತನ ಬಳಿಗೆ ಬಂದು, ಎಲೈ ಕೇಕಯಾತ್ಮಜನೆ, ಈ ಬಾಲಕರ ದೇಹದ ಸೌಂದರ್ಯವನ್ನು ನೋಡು, ಇವರ ದೇಹ ಕಾಂತಿಗೂ ಸೂರ್ಯ ವಂಶಕ್ಕೆ ತಿಲಕಪ್ರಾಯನಾದ ರಾಮಚಂದ್ರನ ಶರೀರದ ಸೌಂದರ್ಯಕ್ಕೂ ವ್ಯತ್ಯಾಸವೇ ಇರುವಂತೆ ತೋರುವುದಿಲ್ಲವಲ್ಲಾ ! ಎಂದು ನಡಿದನು, ಆಗ ಭರತನು ಪ್ರೀತ್ಯತಿಶಯವುಳ್ಳವನಾಗಿ, ಧನುರ್ಬಾಣಗಳಂ ಕೈಯೋಳ್ಕೊಂಡು, ಕುಶಕುಮಾರನಿದ್ದೆಡೆಗೆ ಬಂದು ಆ ಬಾಲಕರೀರ್ವರ ಮುಖವನ್ನು ನೋಡಿದೊಡನೆಯೆ ಹೆಚ್ಚಾದ ಸಂತೋಷದಿಂದ ರೋಮಾಂಚವುಳ್ಳವನಾಗಿ ಕುಶನನ್ನ ಕುರಿತು ॥ ೧೫ ॥ ಎಲೈ ಬಾಲಕನೇ, ನೀನು ಯಾರಪಕ್ಷವನ್ನು ವಹಿಸಿ ಈಗ ನಮ್ಮೊಡನೆ ಯುದ್ಧಮಾಡುತ್ತಲಿರುವೆ ಈ ಹುಡುಗನು ನಿನಗೇನಾಗಬೇಕು. ನೀವು ನನ್ನ ಸಹೋದರರಾದ ಲಕ್ಷ್ಮಣ ಶತ್ರುಘ್ನರಿಗೆ ಬಹುತೊಂದರೆಯನ್ನುಂಟುಮಾಡಿ, ನನ್ನ ಸೈನ್ಯವನ್ನೆಲ್ಲಾ ಹಾಳುಮಾಡಿ ಬಿಟ್ಟಿರುವಿರಿ. ಇನ್ನಾದರೂ ದ್ವೇಷವನ್ನು ಬಿಟ್ಟು, ಕುದುರೆಯ ತಂಟೆಗೆ ಬಾರದೆ ಹೊರಟು ಹೋಗಿ ನಿಮ್ಮ ತಾಯಿಯ ಬಳಿಯಲ್ಲಿ ಸುಖವಾಗಿ ಬಾಳಿ ಎಂದು ನುಡಿದನು. ಭರತನ ಈ ತೆರನಾದ ಮಾತುಗಳನ್ನು

ೀಗು | ತ್ಸವದೊಳೈದಿಸುಖಮಿಹುದೆಂದುಭರತನೆನ | ಲುತ್ಸುಕದೊಳಾಕುಶಂನಸುನಗುತನುಡಿದನಿಂತಾರಾಘವಾನುಜಂಗೆ ||೧೬||
ಕಟ್ಟಿದತುರಂಗಮುಂಬಿಡುವುದಿಲ್ಲೀತನೊಡ | ಹುಟ್ಟಿದಂತನಗೆವಾಲ್ಮೀಕಿಮುನಿವರನವ | ರ್ನೆಟ್ಟನೆರಣಾಗ್ರದೊಳ್ನಿನ್ನನುಂನಿನ್ನನುಜ
ರಂತೆಘಾತಿಸಿದಬಳಿಕ || ಮುಟ್ಟಿದುತ್ಸವದಿಂದತಾಯುಬಳಿಗೈದಿಪೊಡ | ಮಟ್ಟಲ್ಲಿಸುಖದೊಳಿರ್ದಪೆವೆಂದುಕಣೆಗಳಂ | ತೊಟ್ಟುತಾ
ನೀಗಕುಶನರಿಮುಕೊಳ್ಳೆನುತೆಚ್ಚನಾಭರತನಂಧುರದೊಳು || ೧೭ || ಭರತನಂಗಣಿಸದೆಸುತಿರೆಕಂಡುಮುತ್ತೆಕರಿ | ತುರಗರಥಪಾಯ
ದಳಮುತ್ತಿದುದು ಕೂಡೆವಾ | ನರಸಿಂಗಳೀಕಮುಸುಕರಡಿಗಳಬಲವೈದೆಮುತ್ತಿದುದುಬಳಿಕಕುಶನು || ಕರೆದುಕದುರೆಯಬಳಿಗೆ
ತಮ್ಮನಂಕಳುಹಿಬಿ| ಲ್ಲಿರುವಿಂದುರುಳ್ಚಿದಂ ಕಣೆಗಳಂವೈರಿಮೋ | ಹರದತಲೆವಣಿಗಳಂಪಗೆಗಳೆದವಣಿಗಳಂಕಣೆಗಳಿಂತತ್ಕ್ಷಣದೊ

---

ನಂದಾತಿಶಯದಿಂದ, ಸುಖಂ_ಸೌಖ್ಯವಾಗಿ, ಇಹುದು_ಬಾಳಿರಿ, ಎಂದು-ಎಂಬತೆರನಾಗಿ, ಎನಲು_ಎಂದು ನುಡಿಯಲು, ಕುಶನು_ ಕುಶನೆಂಬ ಬಾಲಕನಾದರೊ, ನಸುನಗುತ_ಮಂದಸ್ಮಿತನಾಗಿ, ರಾಘವಾನುಜಂಗೆ_ರಘುಕುಲಜನಾದ ಶ್ರೀರಾಮನ ತಮ್ಮನಾದ ಭರತನನ್ನು ಕುರಿತು, ಇಂತು_ಮುಂದೆ ಹೇಳುವಂತೆ, ನುಡಿದನು_ಉತ್ತರವನ್ನಿತ್ತನು ||೧೬||

ಟೀ|| ಕುಶನು_ಕುಶನೆಂಬ ಬಾಲಕನಾದರೊ, ಕಟ್ಟಿದ_ಬಿಗಿದಿರತಕ್ಕ, ತುರಂಗಮುಂ - ಹಯವನ್ನು, ಬಿಡುವುದಿಲ್ಲ_ ಬಿಟ್ಟುಕೊಡುವುದಿಲ್ಲವು, ಈತನು_ನನ್ನೊಂದಿಗಿರುವ ಇವನು, ತನಗೆ_ನನಗೆ, ಒಡಹುಟ್ಟಿದಂ-ಸಹೋದರನಾಗಬೇಕು, ವಾಲ್ಮೀಕಿ ಮುನಿವರನವರು_ತಾಪಸೋತ್ತಮರಾದ ವಾಲ್ಮೀಕರ ಕಡೆಯವರಾಗಿದೇವೆ, ರಣಾಗ್ರದೊಳ್-ಯುದ್ಧಭೂಮಿಯಲ್ಲಿ, ನಿನ್ನನುಂ_ ನಿನ್ನನ್ನೂ, ನೆಟ್ಟನೆ-ಯಾವ ಬಾಧೆಗೂ ಸಿಕ್ಕದೆ, ನಿನ್ನನುಜರಂತೆ_ನಿನ್ನ ಒಡಹುಟ್ಟಿದವರನ್ನು ಮಾಡಿದಂತೆ, ಘಾತಿಸಿದ ಬಳಿಕ_ ಸಂಹರಿಸಿದ ತರುವಾಯ, ಮುಟ್ಟಿದ_ಪ್ರಾಪ್ತವಾದ, ಉತ್ಸವದಿಂದ-ಆನಂದದಿಂದ, ತಾಯ-ಮಾತೆಯ, ಬಳಿಗೆ_ಹತ್ತಿರಕ್ಕೆ, ಐದಿ_ಹೋಗಿ ಸೇರಿ, ಪೊಡಮಟ್ಟು_ನಮಸ್ಕಾರವಂ ಮಾಡಿ, ಅಲ್ಲಿ_ನಮ್ಮ ತಾಯಿಯ ಸನ್ನಿಧಿಯಲ್ಲಿ, ಇರ್ದಪೆವು-ಸುಖದಿಂದಿರು ತ್ತೇವೆ, ಎಂದು_ಎಂಬತೆರನಾಗಿ, ಕಣೆಗಳ_ಸರಲ್ಗಳನ್ನು, ತೊಟ್ಟು-ಜೋಡಿಸಿದವನಾಗಿ, ತಾನು_ನಾನಾದರೂ, ಕುಶನು_ಕುಶನೆಂಬ ಬಾಲಕನು, ಈಗ_ಈಗಲಾದರೊ, ಅರಿದುಕೊ_ತಿಳುವಳಿಕೆಯನ್ನು ತಂದು ಕೊಳ್ಳುವನಾಗು, ಎನುತ_ಎಂದು ನುಡಿಯುತ್ತ, ಧುರದೊಳು_ಕಾಳಗದಲ್ಲಿ, ಆ ಭರತನಂ_ರಾಮಾನುಜನನ್ನು, ಎಚ್ಚನು_ಬಾಣಗಳಿಂದ ಹೊಡೆದವನಾದನು ||೧೭||

ಟೀ|| ಭರತನಂ_ಕೇಕಯಾತ್ಮಜನನ್ನೂ, ಗಣಿಸದೆ_ಲಕ್ಷ್ಯಮಾಡದೆ, ಎಸುತಿರೆ_ಶರಸಂಧಾನನಂ ಮಾಡುತ್ತಿರಲಾಗಿ, ಮತ್ತೆ_ತಿರುಗಿ, ಕಂಡು-ನೋಡಿ, ಕರಿ_ಹಸ್ತಿಗಳು, ತುರಗ_ಅಶ್ವಂಗಳು, ರಥ_ತೇರುಗಳು, ಪಾಯದಳ_ಪದಾತಿಗಳೂ ಸಹ, ಮುತ್ತಿದುವು_ಆವರಿಸಿಕೊಂಡಿತು, ವಾನರ_ ಕೋಡಗಂಗಳು, ಸಿಂಗಳೀಕ_ ಸಿಂಗಳೀಕವೆಂಬ ಕಪಿಗಳ ಭೇದದವರು, ಮುಸು ಕರಡಿಗಳ_ಋಕ್ಷಗಣವು ಇವುಗಳ, ಬಲಂ_ದಳವು, ಕೂಡೆ_ತಕ್ಷಣವೇ, ಸಲೆ_ಸಂಪೂರ್ಣವಾಗಿ, ಮುತ್ತಿದುದು-ಆವರಿಸಿಕೊಂ ಡಿತು, ಬಳಿಕ_ಅನಂತರ, ಕುಶನು_ಕುಶನಾದರೊ, ತಮ್ಮನಂ ಕರೆದು_ಅನುಜನಾದ ಲವನನ್ನು ಸಮೀಪಕ್ಕೆ ಬರಮಾಡಿಕೊಂಡು, ಲವನನ್ನು ಕುದುರೆಯ ಬಳಿಗೆ_ಯಜ್ಞಾಶ್ವವನ್ನು ಬಿಗಿದಿದ್ದ ಬಾಳೆಯಮರದ ಹತ್ತಿರಕ್ಕೆ, ಕಳುಹಿ_ಕಾವಲಿಗಾಗಿ ಕಳುಹಿಸಿ ಬಿಟ್ಟು, ಬಿಲ್ಲಿರುವಿಂದ_ಧನುಷ್ಟಂಕಾರದಿಂದ, ಕಣೆಗಳಂ_ಸರಲ್ಗಳನ್ನು, ವೈರಿ-ಹಗೆಗಳ, ಮೋಹರದ_ಸಮೂಹದ, ತಲೆ_ತಲೆಗಳಲ್ಲಿರತಕ್ಕ, ಮಣಿಗಳಂ_ರನ್ನಂಗಳನ್ನೂ, ಪಗೆಗಳ_ವೈರಿಗಳ, ಎದೆ_ಧೈರ್ಯವೆನ್ನುವ, ಮಣಿಗಳಂ - ಮಾಣಿಕ್ಯಗಳನ್ನೂ, ತಕ್ಷಣದೊಳು_ತಡ ಮಾಡದೆ, ಕಣೆಗಳಿಂ-ಕೋಲ್ಗಳನ್ನು ಬಿಡುವುದರಿಂದ, ಉರುಳ್ಚಿದಂ_ನೆಲಕ್ಕೆ ಬೀಳುವಂತೆ ಮಾಡಿದನು ||೧೮||

---

ಕೇಳಿದ ಕುಶನು ಮಂದಹಾಸದಿಂದ ಕೂಡಿ, ಭರತನನ್ನು ಕುರಿತು ||೧೬|| ಕೇಳೈ ರಾಜೇಂದ್ರನೆ, ನಾನು ಕಟ್ಟಿ ಹಾಕಿದ ಕುದುರೆ ಯನ್ನು ಬಿಟ್ಟು ಕೊಡುವುದೆಂಬುದನ್ನು ಕನಸಿನಲ್ಲಿಯೂ ಮರೆತುಬಿಡು. ಇವನು ನನಗೆ ತಮ್ಮನಾಗಬೇಕು. ನಾವುಗಳು ವಾಲ್ಮೀಕಿ ಮಹರ್ಷಿಯ ಕಡೆಯವರು. ಈಗ ರಣರಂಗದಲ್ಲಿ ನಿನ್ನನ್ನೂ ನಿನ್ನ ಸಹೋದರರಂತೆ ನೆಲಕ್ಕೆ ಕೆಡವಿದಮೇಲೆ ಸಂತೋ ಷದಿಂದ ನಮ್ಮ ಮಾತೆಯ ಸನ್ನಿಧಿಗೆಹೋಗಿ ನಮಸ್ಕಾರಾದಿಗಳಿಂದ ಆಕೆಯನ್ನು ಸತ್ಕರಿಸಿ, ಸುಖವಾಗಿರುತ್ತೇವೆಂದು ನುಡಿ ಯುತ್ತಾ, ನನ್ನ ಬಾಣದ ಅಂದವನ್ನಾದರೂ ನೋಡೆಂದು ಹೇಳಿ, ಭರತನಮೇಲೆ ಅನೇಕ ಬಾಣಗಳನ್ನು ಬಿಡಲಾರಂಭಿಸಿ ದನು || ೧೭ || ಭರತನು ಎಲ್ಲೆಲ್ಲಿಯೂ ಬಾಣಗಳು ಕವಿಯುತ್ತಲಿರುವುದನ್ನು ಆತನ ಸೈನಿಕರೂ ನೋಡಿ ಚತುರಂಗಬಲ ಸಮೇತರಾಗಿ ಕಪಿಗಳು, ಸಿಂಗಳೀಕಗಳು, ಕರಡಿಗಳು ಮೊದಲಾದ ಬಗೆಬಗೆಯ ಕಪಿಸೇನೆಯಿಂದೊಡಗೂಡಿ, ಬಾಲಕರೀರ್ವ ರನ್ನೂ ಸುತ್ತಿಕೊಂಡರು. ಆಗ ಕುಶನು ತನ್ನ ತಮ್ಮನನ್ನು ಕುದುರೆಯ ಕಾವಲ್ಗಿರಿಸಿದವನಾಗಿ, ಬಿಲ್ಲನ್ನು ತಿರುಗಿಸುತ್ತಾ ಹೊರಟು, ಶತ್ರುಗಳ ತಲೆಯನ್ನು ಕಡಿಯುತ್ತಲೂ, ಅವರ ಎದೆಯಲ್ಲಿ ಚುಚ್ಚುತ್ತಲೂ ಅನೇಕರನ್ನು ನೆಲಕ್ಕೆ ಕೆಡವಿ ಬಿಟ್ಟದ್ದೂ ಅಲ್ಲದೆ || ೧೮ || ಕೈಕೇಯಿಯ ಸುತನ ಮೇಲೆ ಇಪ್ಪೈದು ಅಂಬುಗಳನ್ನೂ, ನಳನ ಮೇಲೆ ಎಂಟು ಕಣೆಗಳನ್ನೂ, ಹನು

ಳು ||೧೮|| ಹತ್ತು ಭರತನಮೇಲೆನಳನಮೇಲೆಂಟು ಮೂ | ವತ್ತು ಹನುಮನಮೇಲೆಜಾಂಬವನಮೇಲನಾ | ಲ್ವತ್ತಂಗದನಮೇಲೆ
ತೊಂಭತ್ತು ನೀಲಕುಮುದರಮೇಲೆನೂರುನೂರು || ಉತ್ತುಂಗಗವಯಶತಬಲಿಸುಷೇಣರಮೇಲೆ | ಹತ್ತುಹತ್ತಂಬೊಡಲ್ಗೊಗಲೆ
ಚ್ಚನನಿಬರಂ | ಮತ್ತೆಘಾತಿಸಿಕೂಡೆರಾಮಾನುಜನಮೇಲೆ ಕೂರ್ಗಣೆಗಳಂಕರೆದನು || ೧೯ || ಎಲ್ಲಿಕುಶನಂಬುಸೋಂಕಿದವಲ್ಲಿ
ಮೂರ್ಛೆಮೃತಿ | ಯಲ್ಲದುಳಿವಿಲ್ಲಪಡೆಯೆಲ್ಲಮುಂತಲ್ಲಣಿಸಿ | ಚೆಲ್ಲಿದುವುದೆಸೆದೆಸೆಗೆಬಲ್ಲಿದಕಪೀಶ್ವರರ್ಕೈಗೆಟ್ಟುಮೈಮರೆದರು || ನಿಲ್ಲ
ದೋಡಿತುದೊಡ್ಡೆಘಲ್ಲಣೆಯನಾತುನಿಂ | ದಲ್ಲಿಸಾರಥಿಕುದುರೆಗಳ್ಮಡಿದುತೇರ್ಮುರಿದು | ಬಿಲ್ಲುಡಿದುಭರತನಂಗೋಪಾಂಗದಲ್ಲಿನಾಂ
ಟಿದುವುಪೊಸಮಸೆಗಣೆಗಳು || ೨೦ || ಜಗದೊಳ್ಕುಶಾಸ್ತ್ರಪ್ರಕರಕ್ಕೆಮೈಗೊಟ್ಟವಂ | ಮಿಗೆಪತಿತನಾಗದಿರ್ದಪನೆಪೇಳೆಂಬಿನಂ |

---

ಟೀ|| ಭರತನಮೇಲೆ-ಭರತ ಕುಮಾರನಿಗೆ ತಗಲುವಂತೆ, ಹತ್ತು-ಹತ್ತು ಕಣೆಗಳನ್ನೂ, ನಳನಮೇಲೆ-ನಳನೆಂಬಾತನ ಮೇಲೆ, ಎಂಟು-ಎಂಟು ಸರಲ್ಗಳನ್ನೂ, ಹನುಮನಮೇಲೆ-ಅಂಜನಾಸುತನನ್ನು ಕುರಿತು, ಮೂವತ್ತು-ಮೂವತ್ತು ಅಲಗುಗಳನ್ನೂ, ಜಾಂಬವನ ಮೇಲೆ-ಜಾಂಬವಂತನೆಂಬ ಯಕ್ಷಾಧಿಪನಿಗೆ ನಾಟುವಂತೆ, ನಲವತ್ತು-ನಲವತ್ತು ಅಂಬುಗಳನ್ನೂ, ಅಂಗದನಮೇಲೆ-ಕಿಷ್ಕಿಂಧಾನಗರದ ಯುವರಾಜನಮೇಲೆ, ತೊಂಭತ್ತು-ತೊಂಭತ್ತು ಸರಲ್ಗಳನ್ನೂ, ನೀಲಕುಮುದರಮೇಲೆ-ನೀಲ ಮತ್ತು ಕುಮುದ ಇವರನ್ನು ಕುರಿತ್ತು, ನೂರು ನೂರು-ನೂರು ಪ್ರಕಾರಂಗಳಾದ ಶರಗಳನ್ನೂ, ಉತ್ತುಂಗ-ಉನ್ನತ ಪರಾಕ್ರಮಿಗಳಾದ, ಗವಯ-ಗವಯನೆಂಬ, ಶತಬಲಿ-ಶತಬಲಿ ಎಂಬ ಹೆಸರುಳ್ಳ, ಸುಷೇಣರಮೇಲೆ-ಸುಷೇಣನೆಂದು ಪ್ರಖ್ಯಾತನಾದ ಕಪಿಗಳ ಮೇಲೆ-ಮೇಲ್ಗಡೆ ತಗಲುವಂತೆ, ಹತ್ತು ಹತ್ತಂಬು-ಹತ್ತರ ಪ್ರಕಾರವಾದ ಕಣೆಗಳನ್ನೂ, ಒಡಲ್-ದೇಹವನ್ನು, ಒಗಲು-ಹೊಗುವಂತೆ, ಎಚ್ಚನು-ಹೊಡೆದವನದನು, ಮತ್ತೆ-ಪುನಃ, ಅನಿಬರಂ- ಅಷ್ಟು ಜನಗಳನ್ನೂ, ಘಾತಿಸಿ-ಸಂಹರಿಸಿದವನಾಗಿ, ರಾಮಾನುಜನಮೇಲೆ-ಕೇಕಯಾತ್ಮಜನೂ ರಾಮಚಂದ್ರನ ತಮ್ಮನೂ ಆದ ಭರತನನ್ನು ಸೇರುವಂತೆ, ಕೂಡೆ-ತಡಮಾಡದೆ, ಕೂರ್ಗಣೆಗಳಂ-ತೀಕ್ಷ್ಣ ಶರಂಗಳನ್ನು, ಕರೆದನು-ಪ್ರಯೋಗಿಸಿದವನಾದನು.

ಅ|| ವಿ|| ಕೂರ್ಗಣೆ-ಕೂರಿತ್ತು+ಕಣೆ (ವಿ. ಪೂ.) ಕ್ಯಾರ-ನಿಶಿತಗಳು ||೧೯||

ಟೀ|| ಕುಶನ-ಕುಶನೆಂಬ ಬಾಲಕನ, ಅಂಬು-ಕಣೆಯು, ಎಲ್ಲಿ-ಯಾವೆಡೆಯಲ್ಲಿ, ಸೋಂಕಿದವು-ಮುಟ್ಟಿದವೊ, ಅಲ್ಲಿ-ಆ ಎಡೆಯಲ್ಲಿ, ಮೂರ್ಛೆ-ಸ್ಮೃತಿ ತಪ್ಪುವುದು, ಮೃತಿಯು-ಸಾವು, ಅಲ್ಲದೆ-ಉಂಟಾಗದೆ, ಉಳಿವು-ಜೀವವನ್ನಿಟ್ಟುಕೊಂಡಿರುವುದು, ಇಲ್ಲ-ಇಲ್ಲವು, ಪಡೆಯೆಲ್ಲಮುಂ-ಅಶೇಷವಾದ ಸೇನೆಯೂ, ತಲ್ಲಣಿಸಿ-ಮನನೊಂದು, ದೆಸೆದೆಸೆಗೆ-ದಿಕ್ಕಾಪಾಲಾಗಿ, ಚೆಲ್ಲಿತು-ಹೊರಟು ಹೋಯಿತು, ಬಲ್ಲಿದ-ಸಾಹಸಿಗಳಾದ, ಕಪೀಶ್ವರರ್-ವಾನರ ಶ್ರೇಷ್ಠರು, ಕೈಗೆಟ್ಟು-ಶಕ್ತಿ ಕುಂದಿದವರಾಗಿ, ಮೈಮರೆದರು-ಮೂರ್ಛಾಕ್ರಾಂತರಾಗಿ ಬಿದ್ದು ಬಿಟ್ಟರು, ದೊಡ್ಡೆ-ಸೇನಾಜಲಧಿ, ಘಲ್ಲಣೆಯನು-ಕಾಳಗವನ್ನು, ಆಂತು-ತಾಳಿ, ನಿಲ್ಲದೆ-ನಿಂತುಕೊಳ್ಳಲಾರದೆ, ಓಡಿತು-ಓಡಿಹೋಯಿತು, ನಿಂದಲ್ಲಿ-ನಿಂತಹಾಗೆಯೇ, ಸಾರಥಿ-ರಥವನ್ನು ನಡೆಸುವನೂ, ಕುದುರೆಗಳು-ಹಯಗಳೂ, ಮಡಿದು-ಮರಣವನ್ನುಹೊಂದಿ, ತೇರ್-ರಥವು, ಮುರಿದು-ಚೂರ ಚೂರಾಗಿ, ಬಿಲ್ಲು-ಚಾಪವು, ಉಡಿದು-ಛಿದ್ರಛಿದ್ರವಾಗಿ, ಪೊಸ-ನವೀನವಾದ, ಮಸೆ-ಸಾಣೆಹಿಡಿಸಿ ಹರಿತಮಾಡಿದ, ಕಣೆಗಳು-ಕೋಲ್ಗಳು, ಭರತನ-ಕೈಕೇಯಿಯ ಮಗನ ಅಂಗೋಪಾಂಗದಲ್ಲಿ-ಪ್ರತಿಯೊಂದು ಅವಯವದಲ್ಲಿಯೂ, ನಾಂಟಿದವು-ಚುಚ್ಚಿಕೊಂಡವು. ||೨೦||

ಟೀ|| ಕುಶ-ಕುಶನೆಂಬ ಬಾಲಕನ, ಅಸ್ತ್ರ-ಮಂತ್ರಪೂರ್ವಕವಾದ ಸರಲ್ಗಳ, ಪ್ರಕರಕೆ-ಸಮುದಾಯಕ್ಕೆ, ಮೈಗೊ

---

ಮಂತ, ಜಾಂಬುವಂತ, ಅಂಗದ, ನೀಲ, ಕುಮುದ, ಗವಯ, ಶತಬಲಿ, ಸುಷೇಣಾದಿ ವೀರರಮೇಲೆ ಕ್ರಮವಾಗಿ ಮೂರು, ನಲವತ್ತು, ತೊಂಭತ್ತು, ನೂರು ನೂರು, ಹತ್ತು ಹತ್ತು ಕೋಲ್ಗಳಂ ಬಿಟ್ಟು ನೋಯಿಸಿದ್ದಲ್ಲದೆ, ಪುನಃ ಭರತನಮೇಲೆ ಕೂರಲಗುಗಳನ್ನು ಬಿಟ್ಟನು. || ೧೯ || ಕುಶನ ಬಾಣಗಳು ಯಾರಿಗೆ ತಾಕಿದರೂ ಕೂಡ ಅವರಿಗೆ ಮರಣವಾಗಲೀ ಮೂರ್ಛೆಯಾಗಲೀ ತಪ್ಪುತ್ತಲೇ ಇರಲಿಲ್ಲವು ಸೈನ್ಯವೆಲ್ಲಾ ತಲ್ಲಣಗೊಳ್ಳುತ್ತಾ ದಿಕ್ಕಾಪಾಲಾಗಿ ಹೋಯಿತು. ಬಲಶಾಲಿಗಳಾದ ವಾನರಾಧಿಪರೆಲ್ಲಾ ಶಕ್ತಿಕುಂದಿದವರಾಗಿ ಸ್ಮೃತಿತಪ್ಪಿ ಹೋದರು. ಸೇನಾನಾಯಕರೆಲ್ಲಾ ಪಲಾಯನವಂ ಮಾಡಿದರು. ಸಾರಥಿಗಳೂ ಕುದುರೆಗಳೂ ನಿಂತಿದ್ದ ಕಡೆಯಲ್ಲಿಯೇ ಸತ್ತು ಬಿದ್ದು ಹೋದರು. ರಥಗಳೆಲ್ಲಾ ಪುಡಿಪುಡಿಯಾಯಿತು. ಭರತನ ಕೈಯ್ಯಲ್ಲಿದ್ದ ಧನಸ್ಸು ನುಚ್ಚುನುಚ್ಚಾಯಿತು, ಕೂರಲಗುಗಳು ಅವನ ಸರ್ವಾಂಗದಲ್ಲಿಯೂ ಚುಚ್ಚಿಕೊಂಡವು. || ೨೦ || ಕುಶನ ಬಾಣದ ಹೊಡೆತಕ್ಕೆ ಸಿಕ್ಕಿ ಯಾರೂ ತಪ್ಪಿಸಿಕೊಳ್ಳುವದಸಾಧ್ಯವೆಂಬ ನಾಣ್ನುಡಿಗನುಗುಣವಾಗಿ ಭರತನು ಮೈಮರೆತು ಕೂಡಲೆ ನೆಲದಲ್ಲಿ ಬಿದ್ದು ಹೋದನು. ಇದನ್ನು ಕಂಡ ಆಂಜನೇಯನು ಹತ್ತಿರದಲ್ಲಿರುವ ದೊಡ್ಡದೊಡ್ಡ ಬೆಟ್ಟಗಳನ್ನು ತಂದು ಕುಶನ ಮೇಲೆ ಉರುಳಿಸಿದರೂ ಕೂಡ ಕುಶ ಕುಮಾರನು ಅವನ್ನೆಲ್ಲಾ ಅಣುಮಾತ್ರವೆಂದು ಬಗೆದು, ಅನೇಕ ಬಾಣಗಳಿಂದ ಅವನನ್ನು

ವಿಗತಚೇತನನಾಗಿಭರತಂಮಹೀತಳಕೆಬಿದ್ದುಮೂರ್ಛೆಯೊಳಿರಲ್ಕೆ ‖ ವಿಗಡಹನುಮಂಕಂಡುಕಿತ್ತುಪೇರ್ಬೆಟ್ಟಮಂ । ನೆಗಪಿತಂ ದರ್ಭಕನಮೇಲಿಡಲ್ಕಣುವೆಂದು । ಬಗೆಯದೆವಿಭಾಡಿಸಿದನಾತನಂಕಣೆಯೆಚ್ಚುನಗುತಜಾನಕಿಯಸೂನು ‖ ೨೧ ‖ ಕಡೆಯ ಮಾತೇನಖಿಳಸೇನೆಯುಂಭರತನಂ । ಕೆಡಹಿಕುಶನಲ್ಲಿಂದತುರಗಮಿದ್ದೆಡೆಗೆಬಂ । ದೊಡಹುಟ್ಟಿದಂವೆರಸಿನಿಲ್ಕಿನಿಂದೂತರೀತೆರನಂ ರಘೂದ್ವಹಂಗೆ ‖ ಕಡ-ವೇಗದಿಂಪೋಗಿಬಿನ್ನೈಸೆಕೇಳ್ದಳ । ಲ್ಕಿಡಿದಪರಿತಾಪದಿಂದುರೆನೊಂದುವಿಸ್ಮಯಂ । ಬಡುತೆದ್ದು ಸುಗ್ರೀವವರವಿಭೀಷಣರೆಡಬಲದೊಳೈದೆಪೊರಮಟ್ಟನು ‖ ೨೨ ‖ ಬಂದಂರಥಾರೂಢನಾಗಿರಣರಂಗದೊಳ್ । ನಿಂದುಮೈಮರೆ ದೊರಗಿದನ-ಜರಂಮಡಿದಬಲ । ವೃಂದಮಂಕ-ದ-ರೆಯಂಕಟ್ಟಿಕೊಂಡಿದಿರಾಗಿಬಿಲ್ವಿಡಿದುಕಾಳಗಕ್ಕೆ ‖ ನಿಂದಿರ್ದಯಮಳರಂಕಂ

---

ಟ್ಟನಂ-ಬಳಗಾದವನು, ಮಿಗೆ-ಚನ್ನಾಗಿ, ಪತಿತನು-ಬಿದ್ದುಹೋಗುವನು, ಆಗದೆ-ಆಗಿಬಿಡದೆ, ಇರ್ದಪನೇ-ಇರುತ್ತಾನೆಯೇ, ಪೇಳು-ಉಸುರು, ಎಂಬಿನಿಂ-ಎನ್ನುವ ಬಗೆಯಿಂದ, ವಿಗತ-ನಷ್ಟವಾದ, ಚೇತನನು-ಶಕ್ತಿಯಿಂದೊಡಗೂಡಿದವನು, ಆಗಿ-ಆಗಿ ಬಿಟ್ಟು, ಭರತಂ-ಭರತನೆಂಬ ರಾಮನ ತಮ್ಮನು, ಮಹೀತಳಕೆ-ನೆಲದಮೆಲೆ, ಬಿದ್ದು-ಬಿದ್ದವನಾಗಿ, ಮೂರ್ಛೆಯೊಳು-ಮೂರ್ಛಾ ಕ್ರಾಂತನಾಗಿ, ಇರಲ್ಕೆ-ಇರಲಾಗಿ, ವಿಗಡಹನುಮಂ-ಅಕಟ ವಿಕಟನಾದ ಮಾರುತಿಯು, ಕಂಡು-ಭರತನು ಮರೆತು ಬಿದ್ದದ್ದನ್ನು ನೋಡಿ, ಪೇರ್ಬೆಟ್ಟಮಂ-ದೊಡ್ಡಪರ್ವತವೊಂದನ್ನು, ಕಿತ್ತು-ಕದಲಿಸಿ, ನೆಗಪಿ-ತಲೆಯಮೇಲಿಟ್ಟುಕೊಂಡು, ತಂದು-ತೆಗದು ಕೊಂಡು ಬಂದು, ಅರ್ಭಕನಮೇಲಿ-ಹುಡುಗನಾದ ಕುಶನಮೇಕೆ, ಇಡಲ್ಕೆ-ಇಡಲಾಗಿ, ಜಾನಕಿಯಸೂನು-ಸೀತಾಪುತ್ರನಾದ ಕುಶನು, ಅಣುವೆಂದು-ಅತ್ಯಲ್ಪವೆಂದು, ಬಗೆಯದೆ-ಲೆಕ್ಕಿಸದೆ, ಕಣೆಕೋಲ್ಗಳನ್ನು, ಎಚ್ಚು-ಬಿಟ್ಟು, ಆತನಂ-ಪರ್ವತವನ್ನು ಕಿತ್ತುತಂದಿರತಕ್ಕ ಮಾರುತಿಯನ್ನು, ವಿಭಾಡಿಸಿದನು-ಕಣೆಗಳನ್ನು ಉಪಯೋಗಿಸಿ ನೋಯಿಸಿದನು ‖೨೧‖

ಟೀ‖ ಕಡೆಯಮಾತು-ಹೆಚ್ಚುಮಾತುಗಳು, ಏಂ-ಏನುಪ್ರಯೋಜನ, ಕುಶನು, ಅಖಿಳಸೇನೆಯುಂ-ಪಡೆಯೆಲ್ಲವನ್ನೂ, ಭರತನಂ-ಭರತನನ್ನೂಸಹ, ಕೆಡಹಿ-ಉರುಳಿಸಿ, ತುರಗಂ - ಯಾಗದ ಕುದುರೆಯು, ಇರ್ದ-ಇದ್ದಂಥ, ಎಡೆಗೆ-ಹತ್ತಿರಕ್ಕೆ, ಅಲ್ಲಿಂದ-ಆ ರಣಾಂಗಣದಿಂದ, ಬಂದು-ಹೊರಟು, ಒಡಹುಟ್ಟಿದಂವೆರಸಿ-ಅನುಜನಾದ ಲವನೊಂದಿಗೆ ಸೇರಿ, ನಿಲ್ಕಿನಿಂ-ನಿಂತಿ ಲಾಗಿ, ಈ ತೆರನಂ-ಈ ಬಗೆಯನ್ನು, ದೂತರು-ಶ್ರೀರಾಮನ ಸೇವಕರು, ಅತಿವೇಗದಿಂದ-ಬಹು ಜಾಗ್ರತೆಯಿಂದ, ಪೋಗಿ-ಹೋ ದವರಾಗಿ, ರಘೂದ್ವಹಂಗೆ-ಶ್ರೀರಾಮ ಮೂರ್ತಿಗೆ, ಬಿನ್ನೈಸೆ-ಅರಿಕೆ ಮಾಡಿಕೊಳ್ಳಲು, ಕೇಳ್ದು-ಚಾರರ ನುಡಿಗನ್ನಾಲಿಸಿ, ಅಳ ಲ್ಕಿಡಿದ-ವ್ಯಸನಾಕ್ರಾಂತವಾದ, ಪರಿತಾಪದಿಂದ-ಸಂಕಟದಿಂದ, ಉರೆ-ಹೆಚ್ಚಾಗಿ, ನೊಂದು-ಸಂಕಟಪಟ್ಟು, ವಿಸ್ಮಯಂಬಡುತ-ಆಶ್ಚರಿ ಗೊಳ್ಳುತ್ತ, ಎದ್ದು-ಎದ್ದವನಾಗಿ, ಸುಗ್ರೀವ-ಕಿಷ್ಕಿಂಧಾಧಿಪನೂ, ವರ-ಶ್ರೇಷ್ಠನಾದ, ವಿಭೀಷಣನು-ಲಂಕಾನಾಯ ಕನೂ ಸಹ, ಎಡಬಲದೊಳು-ಇರ್ಕಡೆಯಲ್ಲಿಯೂ, ಐದೆ-ಬಂದೊದಗಿರಲು, ಪೊರಮಟ್ಟನು-ಹೊರಟವನಾದನು ‖೨೨‖

ಟೀ‖ ರಘುನಂದನಂ - ರಘುಕುಲಜನಾದ ಶ್ರೀರಾಮಚಂದ್ರನು, ರಥಾರೂಢನಾಗಿ - ತೇರನ್ನಲಂಕರಿದವನಾಗಿ, ಬಂದಂ-ಬಂದು ಸೇರಿದನು, ರಣರಂಗದೊಳ್-ಯುದ್ಧಭೂಮಿಯಲ್ಲಿ, ನಿಂದು-ನಿಂತವನಾಗಿ, ಮೈಮರೆದು-ಜ್ಞಾನವಿಲ್ಲದೆ, ಒರ ಗಿದ-ಬಿದ್ದುಹೋಗಿರತಕ್ಕ, ಅನುಜರಂ-ಸುಮಿತ್ರೆ ಕೈಕೇಯಿಯ ಕುವರರನ್ನೂ, ಮಡಿದ-ಮರಣವನ್ನೈದಿದ, ಬಲವೃಂದಮಂ-ಸೇಯ ಮತ್ತುಜಲಧಿಯನ್ನೂ, ಕುದುರೆಯಂ-ಯಜ್ಞದ ಅಶ್ವವನ್ನು, ಕಟ್ಟಿಕೊಂಡು-ಬಿಗದವರಾಗಿ, ಕಾಳಗಕೆ-ಜಗಳಕ್ಕೆ, ನಿಂದಿರುವ-ಎದುರಾಳುಗಳಾಗಿ ನೆಲಸಿರುವ, ಯಮಳರಂ-ಅವಳಿ ಮಕ್ಕಳಾದ ಬಾಲಕರನ್ನೂ, ಕಂಡು-ಈಕ್ಷಿಸಿ, ಬೆರಗಾಗಿ-ಭ್ರಾಂತಿಯಿಂದೊಡ ಗೂಡಿ, ತಾನೆ-ಶ್ರೀರಾಮನೇ, ವಿನಯದಿಂ-ಒಳ್ನುಡಿಗಳಿಂದ ಕೂಡಿದ, ಘನ-ಮುಗಿಲಧ್ವನಿಗೆ ಸಮನಾದ, ಗಂಭೀರವಾಕ್ಯದಿಂದ-ಗಾಂ

---

ಹೊಡೆದು ಬಿಟ್ಟನು‖೨೧‖ಹೆಚ್ಚಾಗಿ ಇನ್ನು ಹೇಳುವುದರಿಂದೇನು ಸಾರ್ಥಕವಿರುವುದು. ಕುಶನು ಭರತನನ್ನೂ ಅವನ ಸೇನೆಯುಂಬ ಕಡಲನ್ನೂ ನೆಲಹತ್ತಿ ಬೀಳುವಂತೆ ಮಾಡಿ ತರುವಾಯ ತಮ್ಮನಿದ್ದೆಡೆಗೆ ಬಂದು ನಿಂತವನಾದನು. ಅತ್ತ ಭರತನು ಮೂರ್ಛಾಕ್ರಾಂತನಾಗಿ ಬಿದ್ದುಹೋದನಾದಕಾರಣ ಉಳಿದಿದ್ದ ಭಟರು ಈ ಸುದ್ದಿಯನ್ನು ಚಾರ ಮೂಲಕವಾಗಿ ಶ್ರೀರಾಮನಿಗೆ ಜಾಗ್ರತೆಯಲ್ಲಿ ಹೇಳಿ ಕಳುಹಿಸಿದವರಾದರು. ಅನುಜರೆಲ್ಲರೂ ಮೂರ್ಛಾಕ್ರಾಂತರಾಗಿ ಬಿದ್ದಿರುವರೆಂಬ ಸುದ್ದಿಯು ರಾಘವೇಂದ್ರನ ಕಿವಿಗೆ ಬಿದ್ದೊಡನೆಯೆ ಶೂಲ ಮಿರಿದಂತಾಗಿ ಕಡುದುಃಖದಿಂದ ಕೂಡಿ ತನ್ನ ಮನದಲ್ಲಿ ಅತ್ಯಾಶ್ಚರ್ಯದಿಂದ ಕೂಡಿದವನಾಗಿ ಸುಗ್ರೀವ ವಿಭೀಷಣರೊಂದಿಗೆ ‖ ೨೨ ‖ ರಥಾರೂಢನಾಗಿ ಯುದ್ಧಭೂಮಿಗೆ ಬಂದು ಸೇರಿ ಅಲ್ಲಿ ತನ್ನ ತಮ್ಮಂದಿರೆಲ್ಲಾ ಮೂರ್ಛಾಕ್ರಾಂತರಾಗಿ ಬಿದ್ದುಹೋಗಿರುವದನ್ನೂ, ಸೈನ್ಯವೆಲ್ಲಾ ಕಾಲನ ಪಟ್ಟಣಕ್ಕೆ ಹೋಗಿರುವದನ್ನೂ, ಬಾಲಕರೀರ್ವರು ಕುದುರೆಯನ್ನು ಕಟ್ಟಿಕೊಂಡು ಯುದ್ಧಾಭಿಲಾಷಿಗಳಾಗಿ ಧನುರ್ಬಾಣಗಳನ್ನು ಕೈಯಲ್ಲಿ ಹಿಡಿದು ನಿಂತುಕೊಂಡಿರುವದನ್ನೂ ನೋಡಿ ಆಶ್ಚರಿಗೊಂಡು ಶೌರ್ಯಾದಾರ್ಯಗಾಂಭೀರ್ಯಾದಿ ಗುಣಗಳಿಂದ ಕೂಡಿದ ಒಳ್ನುಡಿಗಳಿಂದ ಕುಶಲವರನ್ನು ಕುರಿತು ‖ ೨೩ ‖ ಎಲ್ಲೆ

ಡುಬೆರಗಾಗಿರಘು । ನಂದನಂವಿನಯದಿಂತಾನೆಬೆಸಗೊಂಡನಿಂ । ತೆಂದುಘನಗಂಭೀರವಾಕ್ಯದಿಂ । ದತಿಮನೋಹರನಾದ ಸುಸ್ವರದೊಳು ॥ ೨೩ ॥ ಎಲೆಪಸುಳೆಗಳಿರನಿಮಗೀಧನುರ್ವೇದಮಂ । ಕಲಿಸಿದನನಾವನಾವುದುನಿವಾಸಸ್ಥಳಂ । ಸಲಹಿದವನಾವನಾವಂತಂದೆತಾಯಾನಳಶ್ವಮಂಕಟ್ಟುವಿನಿತು ॥ ಛಲಮಿದೇತಕೆನಮ್ಮಸೇನೆಯುಂಜಯಿಸುವೀ । ಬಲಮೇತರಿಂದಾದುದೆಂದುನಯದಿಂದರಘು । ಕುಲಲಲಾಮಂಕೇಳ್ದೊಡಾಕುಶಂನಸುನಗುತಮಾರುತ್ತರಂಗೊಟ್ಟನು ॥ ೨೪॥ ರಾಜೇಂದ್ರನೀನೆಮ್ಮೊಳಾಹವಕೆಬಿಲ್ಗೊಂಡು । ವಾಜಿಯುಂಬಿಡಿಸಿಕೊಳಲೊಲ್ಲದೊಡೆಮರುಳಪ್ರ । ಯೋಜಕದಮಾತಿದೇತಕೆನಿರುಪಮಕ್ಷಾತ್ರಪೌರುಷವನುಳಿದುಬರಿದೆ ॥ ಸೋಜಿಗದೊಳೆಮ್ಮಜನನಸ್ಥಿತಿಗಳಂಕೇಳ್ದೊ । ಡೀಜಗಂಮೆಚ್ಚದೆಚ್ಚಾಡಿನೋಡೆನುತಕುಶ । ನಾಜಲಜಮಿತ್ರ

ಧೀರ್ಘವ ಮಾತುಗಳಿಂದ, ಮನೋಹರವಾದ-ಮನರಂಜಿಸತಕ್ಕ, ಸುಸ್ವರದೊಳು-ಮೇಲಾದ ಶಬ್ದ ಗೌರವದಿಂದ, ಇಂತೆಂದು-ಮುಂದೆ ಹೇಳುವ ತೆರನಾಗಿ, ಬೆಸಗೊಂಡನು-ಪ್ರಶ್ನೆಯಂಗೈದನು ॥೨೩॥

ಟೀ॥ ರಘುಕುಲಲಲಾಮ-ರಘುಕುಲ ಶ್ರೇಷ್ಠನಾದ ರಾಮನು ಬಾಲಕರಂ ಕುರಿತು, ಎಲೆಪಸುಳೆಗಳಿರ-ಎಲೈ ಬಾಲಕರೆ, ಆವಂ-ಯಾವನು, ನಿಮಗೆ ನಿಮ್ಮಿಬ್ಬರಿಗೂ, ಈ ಧನುರ್ವೇದಮಂ-ಯುದ್ಧಮಾಡುವ ಈ ಪಾಂಡಿತ್ಯವನ್ನು, ಕಲಿಸಿದವಂ-ಅಭ್ಯಾಸಮಾಡಿಸಿದನು, ಆವುದು-ಯಾವುದು, ನಿವಾಸಸ್ಥಳಂ-ವಾಸಸ್ಥಾನ ವಾಗಿರುವುದು, ಆವನು-ಯಾರು, ಸಲಹಿದವಂ-ಸಾಕಿದವನು, ತಂದೆ-ನಿಮ್ಮ ಪಿತನು, ಆವಂ-ಯಾರು, ಆವಳು-ಯಾರು, ತಾಯಿ-ನಿಮ್ಮನ್ನು ಹಡದವಳು, ಅಶ್ವಮಂ-ಯಜ್ಞಾಶ್ವವನ್ನು, ಕಟ್ಟುವ-ಬಂಧಿಸುವ, ಇನಿತುಛಲಂ-ಇಷ್ಟೊಂದು ಹಟವು, ಏಕೆ-ಏನುಪ್ರಯೋಜನವು, ಏತರಿಂದ-ಯಾವಕಾರಣದಿಂದ, ನಮ್ಮಸೇನೆಯುಂ-ನಮ್ಮ ದಂಡನ್ನು, ಜಯಿಸುವ-ಗೆಲ್ಲತಕ್ಕ, ಈಬಲಂ-ಈ ಸಾಮರ್ಥ್ಯವು, ಆದುದು-ಸಿದ್ಧಿಸಿತು, ಎಂದು-ಎಂಬತೆರನಾಗಿ, ನಯದಿಂದ-ನಮ್ರಭಾವದಿಂದ, ಕೇಳ್ದಡೆ-ಕೇಳಲಾಗಿ, ಆ ಕುಶನು-ಆ ಕುಶನೆಂಬ ಪಸುಳೆಯು, ನಸುನಗುತ-ಹುಸಿನಗೆಯಂ ತಾಳುತ್ತ, ಮಾರುತ್ತರಂಗೊಟ್ಟನು-ಶ್ರೀರಾಮನೆಂದ ಮಾತಿಗೆ ಬದಲಾಗಿ ಹೇಳತೊಡಗಿದನು ॥

ಅ॥ ವಿ॥ ರಘುಕುಲಲಲಾಮಂ-ರಘುವಿನಕುಲ (ಷ. ತ.) ರಘುಕುಲದ ಲಲಾಮಂ (ಷ. ತ.) ॥೨೪॥

ಟೀ॥ ಕುಶನು-ಕುಶನೆಂಬ ಕುಮಾರನು, ಆಜಲಜಮಿತ್ರಕುಲತಿಲಕನಂ-ಶ್ರೀ ರಾಮ ಮೂರ್ತಿಯನ್ನು, ಬಗೆಯದೆ-ಲಕ್ಷ್ಯವೇ ಮಾಡದೆ, ರಾಜೇಂಧ್ರ-ರಾಜಾಗ್ರಣಿಯಾದ ದಾಶರಥಿಯೆ, ಎಮ್ಮೊಳು-ನಮ್ಮೊಂದಿಗೆ, ಆಹವಕೆ-ಕಾಳಗ ಮಾಡಲು, ಬಿಲ್ಗೊಂಡು-ಧನುರ್ಧಾರಿಯಾಗಿ, ವಾಜಿಯಂ-ಹಯವನ್ನು, ಬಿಡಿಸಿಕೊಳ್ಳಲು-ತೆಗೆದುಕೊಳ್ಳತಕ್ಕದ್ದು, ಒಲ್ಲದೊಡೆ-ನಿನಗೆ ಇಷ್ಟವಿಲ್ಲದಿದ್ದರೆ, ಇದು-ಈ, ಮರುಳು-ಅವಿವೇಕದಿಂದ ಕೂಡಿದ, ಅಪ್ರಯೋಜಕದ ಮಾತು-ಕೆಲಸಕ್ಕೆ ಬಾರದ ನುಡಿಯು, ಏಕೆ-ಏತಕ್ಕೆ, ನಿರುಪಮ-ಅಸಾಧಾರಣವಾದ, ಕ್ಷಾತ್ರ-ಕ್ಷತ್ರಿಯರಿಗೆ ಒಪ್ಪತಕ್ಕ, ಪೌರುಷವನು-ಧೀರತನವನ್ನು, ಉಳಿದು-ಬಿಟ್ಟುಬಿಟ್ಟು, ಸೋಜಿಗದೊಳು-ಆಶ್ಚರಿಯಿಂದ, ಎಮ್ಮ-ನಮ್ಮ ಸಂಬಂಧವಾದ, ಜನನಸ್ಥಿತಿಗಳಂ-ಆದ್ಯಂತಗಳನ್ನು, ಬರಿದೆ-ಉಪಯೋಗವಿಲ್ಲದೆ, ಕೇಳ್ದಡೆ-ಪ್ರಶ್ನೆಗೈದರೆ, ಈಜಗಂ-ಈ ಲೋಕವು, ಮೆಚ್ಚದು-ಒಪ್ಪುವುದಿಲ್ಲವು, ಎಚ್ಚಾಡಿ-ಬಾಣಪ್ರಯೋಗದಿಂದ ನಮ್ಮೊಂದಿಗೆ ಕಾದಿ, ನೋಡು-ಪರೀಕ್ಷಿಸು, ಎನುತ-ಎಂದು ಹೇಳುತ್ತ, ನುಡಿದೊಡೆ-ಪೇಳಲಾಗಿ, ಆತನು-ಆ ಶ್ರೀರಾಮನು, ಇಂತು-ಮುಂದೆ ಹೇಳುವಂತೆ, ಎಂದನು-ನುಡಿದವನಾದನು ॥

ಅ॥ ವಿ॥ ರಾಜೇಂದ್ರ (ಗು. ಸಂ.) ಬಿಲ್ಗೊಂಡು (ಕ್ರಿ. ಸ) ಆ ಜಲಜಮಿತ್ರಕುಲತಿಲಕನು- ಜಲ-ನೀರಿನಲ್ಲಿ, ಜ-ಹುಟ್ಟಿದ್ದು (ಕಮಲ) ಜಲಜ-ತಾವರೆಯ, ಮಿತ್ರ-ಸ್ನೇಹಿತನು, (ಷ. ತ ) ಜಲಜಮಿತ್ರನ-ಸೂರ್ಯನ, ಕುಲಂ-ಸಂತತಿಯು. (ಷ. ತ.) ಜಲಜಮಿತ್ರನ ಕುಲದಲ್ಲಿ ತಿಲಕನು (ಸ. ತ.) ॥೨೫॥

ಬಾಲಕರೆ, ನಿಮಗೆ ಈ ಧನುರ್ವಿದ್ಯೆಯನ್ನು ಯಾರು ಉಪದೇಶಮಾಡಿದರು ? ನಿಮ್ಮ ವಾಸಸ್ಥಳವು ಯಾವುದು ? ನಿಮ್ಮರಕ್ಷಕರು ಯಾರು ? ನಿಮ್ಮ ತಂದೆ ತಾಯಿಗಳು ಯಾರು ? ನಮ್ಮ ಕುದುರೆಯನ್ನು ಬಿಗಿಯುವಷ್ಟು ಸಾಮರ್ಥ್ಯವು ನಿಮಗೆಲ್ಲಿಬಂತು? ನಮ್ಮ ಮೇಲೆ ಇಷ್ಟು ದ್ವೇಷವು ನಿಮಗೇತಕ್ಕೆ ? ಇಂಥಾ ಶಕ್ತಿಯನ್ನು ನೀವು ಪಡೆದ ತೆರನಾವುದು ? ಎಂದು ಕೇಳಲಾಗಿ, ಕಿರುನಗೆಯಿಂದ ಕೂಡಿದ ಕುಶನು ॥ ೨೪ ॥ ಶ್ರೀರಾಮನನ್ನು ಕುರಿತು, ಎಲೈ ರಾಜಾಗ್ರಣಿಯೇ, ನೀನು ಧನುರ್ಧಾರಿಯಾಗಿ, ನಮ್ಮ ಮೇಲೆ ಯುದ್ಧಕ್ಕೆ ಬಂದು ಕುದುರೆಯನ್ನು ಬಿಡಿಸಿಕೊಳ್ಳಲಾರದೆ ಕ್ಷತ್ರಿಯನಾಗಿರತಕ್ಕ ಪೌರುಷವನ್ನು ತೋರದು ಕೆಲಸಕ್ಕೆ ಬಾರದ ನಯವಿನಯದಿಂದ ನಮ್ಮ ಜನನ ಸ್ಥಿತಿಗಳನ್ನು ಕೇಳುತ್ತಲಿರುವುದು ಶೂರನ ಲಕ್ಷಣವೇ? ನೀನು ಈ ರೀತಿಮಾಡಿದರೆ ಯಾರುತಾನೆ ಮೆಚ್ಚುವರು. ಪರಾಕ್ರಮಿಯಾದರೆ ನನ್ನೊಂದಿಗೆ ಕಾದು, ಇಲ್ಲವಾದರೆ ಹೊರಟು ನಡೆ ಎಂದು ಅಲಕ್ಷ್ಯವಾಗಿ ಮಾತನಾಡಲು, ಆಗ ರಾಮಚಂದ್ರನು ಬಾಲಕರನ್ನು ಕುರಿತು, ॥ ೨೫ ॥ ಎಲೈ ಪಸುಳೆಗಳೆ ನೀವಾದರೂ ಕೇವಲ ಚಿಕ್ಕವ

ಕುಲತಿಲಕನಂಬಗೆಯುದೆನುಡಿದೊಡಾತನಿಂತೆಂವನು ||೨೫|| ಶಿಶುಗಳಾಗಿಹನಿಮ್ಮೊಳೆನಗೆಕಾಳಗವೆಪರ | ವಶರಾಗಿಬಿದ್ದನುಜರಂ ಕಂಡುಖತಿಯೊಳಾಂ | ವಿಶಿಖಮುಂತೊಡುವೆನೆಂದೊಡೆಮನವೊಡಂಬಡದುನಿಮ್ಮ || ಜನನಸ್ಥಿತಿಗಳವಿಶದವಿಸ್ತರವನೊರೆದೊಡೆ ನೋಡಿಕೊಂಬೆನೆನೆ | ಕುಶನೆಂದನಿಂತುಲೋಕಾನಂದಕರಮಾದ | ನಿಶಿತವಾಕ್ಯಂಗಳಂಜನಮೇಜಯಕ್ಷಿತಿಪಕೇಳಾರಘೂದ್ವಹಂಗೆ || ೨೬ || ಈತಪೋವನದೊಳೆಮ್ಮಿರ್ವರನವಳಿಯಾಗಿ | ಸೀತೆಯೋರ್ವಳೆಪಡೆದಳನುದಿನದೊಳಾರೈದು | ಜಾತೋಪನಯನಾದಿಕರ್ಮಂಗಳಂಮಾಡಿನಿಗಮಾಗಮಸ್ಮೃತಿಗಳ || ವ್ರಾತಮಂಬರಸಿಕಾರ್ಮುಕವೇದಮಂಕಲಿಸಿ | ನೀತಿಗಳನರುಪಿರಾಮಾಯಣವನೋದಿಸಿಮ | ಹಾತಿಬಲರೆನಿಸಿದಂವಾಲ್ಮೀಕಿಮುನಿಪನೆಂದೊರೆದುಮುಗುಳಿಂತೆಂದನು || ೨೭ || ರಾಮುಚಾರಿತ್ರಪಠ

ಟೀ|| ಶಿಶುಗಳಾಗಿ-ಮಕ್ಕಳಾಗಿ, ಇಹ-ಇರುವ, ನಿಮ್ಮೊಳು – ನಿಮ್ಮೊಂದಿಗೆ, ಎನಗೆ – ನನಿಗೆ, ಕಾಳಗವೆ – ಜಗಳವು ಸಮನಾದೀತೆ, ಪರವಶರಾಗಿ – ಜ್ಞಾನವಿಲ್ಲದೆ, ಬಿದ್ದ – ಬಿದ್ದುಹೋಗಿರುವ, ಅನುಜರಂ – ಸಹಜಾತರನ್ನು, ಕಂಡು–ಈಕ್ಷಿಸಿ, ಆಂ-ನಾನಾದರೊ, ಖತಿಯೊಳು-ಕೋಪದಿಂದ, ವಿಶಾಖಮುಂ-ಕೋಲ್ಗಳನ್ನು, ತೊಡುವೆನು-ಕೈಕೊಳ್ಳುವೆನು, ಎಂದೊಡೆ–ಎಂದು ಯೋಚಿಸಿದರೆ, ಮನಂ–ನನ್ನ ಮನಸ್ಸು, ಒಡಂಬಡದು–ಅವಕಾಶವನ್ನು ಕೊಡುವುದಿಲ್ಲ, ನಿಮ್ಮ-ನಿಮ್ಮ ಸಂಬಂಧವಾದ, ಜನನಸ್ಥಿತಿಗಳ–ಹುಟ್ಟಿ ಬೆಳದದ್ದರ, ವಿಶದವಿಸ್ತರವನು–ನಿಜಸ್ಥಿತಿಯನ್ನು, ಒರೆದೊಡೆ–ತಿಳಿಸಿದಪಕ್ಷದಲ್ಲಿ, ನೋಡಿಕೊಂಬೆನು–ಅನಂತರ ಯೋಚಿಸುತ್ತೇನೆ, ಎನೆ - ಎಂದು ಹೇಳಲಾಗಿ, ಜನಮೇಜಯಕ್ಷಿತಿಪ – ಜನಮೇಜಯ ಮಹೀಕಾಂತನೆ, ಕೇಳು ಆಲಿಸು, ರಘೂದ್ವಹಂಗೆ – ಕೌಸಲ್ಯಾನಂದನನ್ನು ಕುರಿತು ಕುಶನು, ಲೋಕ – ಪ್ರಪಂಚಕ್ಕೆ, ಆನಂದಕರಮಾದ – ಸಂತಸವನ್ನುಂಟುಮಾಡುವ, ನಿಶಿತ-ಅತಿ ತೀಕ್ಷ್ಣಂಗಳಾದ, ವಾಕ್ಯಂಗಳಂ–ನುಡಿಗಳನ್ನು, ಇಂತು–ಮುಂದೆ ಹೇಳುವಂತೆ, ಎಂದನು–ಹೇಳುವನಾದನು. ||೨೬||

ಟೀ|| ಈತಪೋವನದೊಳು – ಈ ಮುನಿಗಳ ಆಶ್ರಮದಲ್ಲಿ, ಸೀತೆಯೋರ್ವಳೆ – ಸೀತೆಯೊಬ್ಬಳೆ, ಎಮ್ಮಿರ್ವರನು–ನಮ್ಮಿಬ್ಬರನ್ನೂ, ಅವಳಿಯಾಗಿ–ಜೋಡಿಯಾಗಿಯೇ, ಒಂದೇ ಕಾಲದಲ್ಲಿ) ಪಡದವಳು–ಹಡದವಳಾದಳು, ವಾಲ್ಮೀಕಿಮುನಿಪನು–ತಪೋನಿಧಿಯಾದ ವಾಲ್ಮೀಕಿಯು, ಅನುದಿನದೊಳು – ಸದಾಕಾಲದಲ್ಲಿಯೂ, ಆರೈದು–ಕಾಪಾಡಿದವನಾಗಿ, ಜಾತ-ಜಾತಕರ್ಮವೆನ್ನುವೆ, ಉಪನಯನ–ಬ್ರಹ್ಮೋಪದೇಶವೆಂದು ಹೆಸರಂ ಪಡೆದದ್ದೆ, ಆದಿ–ಮೊದಲಾದ, ಕರ್ಮಂಗಳಂ–ಕಾರ್ಯಗಳನ್ನು, ಮಾಡಿ–ಎಸಗಿ, ನಿಗಮ – ವೇದಗಳಲ್ಲಿಯೂ, ಆಗಮ - ಶಾಸ್ತ್ರಗಳಲ್ಲಿಯೂ, ಸ್ಮೃತಿಗಳ – ಮನು, ಪರಾಶರಾದಿಗಳ ಸಿದ್ಧಾಂತಗಳ, ವ್ರಾತಮಂ – ಸಮೂಹವನ್ನು, ಬರಿಸಿ - ಓದುವುದಕ್ಕೂ ಬರೆಯುವುದಕ್ಕೂ ಬರುವಂತೆ ಅಭ್ಯಾಸಮಾಡಿಸಿ, ಕಾರ್ಮುಕವೇದಮಂ–ಧನುಶ್ಶಾಸ್ತ್ರವನ್ನು, ಕಲಿಸಿ-ಶಿಕ್ಷಿಸಿ, ನೀತಿಗಳನು-ರಾಜರಿಗೆ ಇರಬೇಕಾದ ನ್ಯಾಯವಿಧಿಗಳನ್ನೂ, ಅರುಪಿ–ಬೋಧಿಸಿ, ರಾಮಾಯಣವನು – ಶ್ರೀರಾಮನ ಕಥೆಯನ್ನೆಲ್ಲಾ, ಓದಿಸಿ-ಓದಲು ಹೇಳಿಕೊಟ್ಟು, ನಮ್ಮನ್ನು, ಮಹಾಬಲರು - ಬಹು ಪರಾಕ್ರಮದಿಂದ ಕೂಡಿದವರು, ಎಂದು–ಎಂಬುದಾಗಿ, ಎನಿಸಿದಂ–ಹೇಳುವಂತೆ ಮಾಡಿದನು, ಎಂದು–ಎಂಬತೆರನಾಗಿ, ಒರೆದು–ಉತ್ತವನ್ನಿತ್ತು, ಮುಗುಳೆ–ತಿರಿಗಿ, ಇಂತು–ಮುಂದೆ ಹೇಳುವಂತೆ, ಎಂದನು–ನುಡಿದವನಾದನು.

ಅ|| ವಿ|| ಜಾತೋಪನಯನ (ಗು. ಸ.) ನಿಗಮಾಗಮ (ಸ. ದೀ.) ರಾಮಾಯಣದಲ್ಲಿ ಕರ್ಮಕಾಂಡ, ಬ್ರಹ್ಮಕಾಂಡವೆಂಬುದಾಗಿ ಎರಡು ಭಾಗವಿದೆ, ಈ ಗ್ರಂಥವು ವೇದರಹಸ್ಯಗರ್ಭಿತವಾಗಿರುವುದು, ೨೪ ಸಾವಿರ ಗ್ರಂಥವನ್ನು ಛಂದಸ್ಸು, ಲಯ ಮೊದಲಾದವುಗಳಿಗನುಗುಣವಾಗಿರುವಂತೆ ಕುಶಲವರಿಗೆ ವಾಲ್ಮೀಕಿ ಮಹಾಮುನಿಯು ಬೋಧಿಸಿರುವನು ||೨೭||

ಯುಸ್ಸಿನವರು. ನಿಮ್ಮೊಂದಿಗೆ ಕಾಳಗವು ನನಗೆ ಸಮವಲ್ಲವು, ಇಲ್ಲಿ ನಿಮ್ಮಿಂದ ಮೂರ್ಛಿತರಾಗಿ ಬಿದ್ದಿರುವ ನನ್ನನುಜರನ್ನು ನೋಡಿದರೆ ಮಹಾವ್ಯಸನವೂ ಕೋಪವೂ ಉಂಟಾಗಿ ನಿಮ್ಮ ಮೇಲೆ ಯುದ್ಧಮಾಡಬೇಕೆಂದೆಣಿಸಿದರೆ ನನ್ನ ಮನವು ಒಪ್ಪುವುದಿಲ್ಲ, ಹೀಗಾಗಲು ಕಾರಣವೇನೋ ತಿಳಿಯದು. ನಿಮ್ಮ ಜನನ ವಿಸ್ತಾರವನ್ನೆಲ್ಲಾ ವಿಶದವಾಗಿ ಹೇಳಿದರೆ ಅನಂತರ ಯೋಚಿಸುತ್ತೇನೆಂದು ನುಡಿದನು. ಶ್ರೀರಾಮದೇವರ ಈ ತೆರನಾದ ನುಡಿಗಳನ್ನಾಲಿಸಿ ಕುಶಕುಮಾರನಾದರೋ, || ೨೬ || ಎಲೈ ರಾಮಚಂದ್ರನೆ ಕೇಳು. ಈ ತಪೋವನದಲ್ಲಿ ವಾಲ್ಮೀಕಿ ಮಹಾಮುನಿಗಳ ಆಶ್ರಮವೊಂದಿರುವುದು, ಅಲ್ಲಿ ಸೀತೆ ಎಂಬಾಕೆ ಇರುವಳು, ಆಕೆಯು ನಮ್ಮೀರ್ವರನ್ನೂ ಅವಳಿಯಾಗಿ ಹೆತ್ತಳು, ಅಂದಿನಿಂದಲೂ ವಾಲ್ಮೀಕಿ ಮುನಿಯು ನಮ್ಮನ್ನು ಕಾಪಾಡುತ್ತ ಜಾತಕರ್ಮ, ನಾಮಕರಣ, ಉಪನಯನಾದಿಗಳನ್ನೆಲ್ಲಾ ಯಥಾವಿಧಿಯಾಗಿ ರಚಿಸಿ, ನಮಗೆ ಸಕಲ ವೇದಶಾಸ್ತ್ರ ಪುರಾಣಗಳನ್ನೂ ಧನುರ್ವಿದ್ಯೆಯನ್ನೂ ಬೋಧಿಸಿ, ರಾಜನೀತಿಯೇ ಮೊದಲಾದ ಅನೇಕ ನೀತಿಗಳನ್ನೂ ಕಲಿಸಿದ್ದಲ್ಲದೆ, ರಾಮಾಯಣವನ್ನೆಲ್ಲಾ ಸಾಂಗವಾಗಿ ಓದಲು ಕಲಿಸಿದನು ||೨೭|| ಶ್ರೀರಾಮಚಂದ್ರ ಮೂರ್ತಿಯ ನಾಮಸಂಕೀರ್ತನೆಯನ್ನು ಎಡೆಬಿಡದೆ ಮಾಡುತ್ತಿರು

ಸಾಭ್ಯಾಸಯೋಗದಿಂ | ಕ್ಷೇಮಂಸುಪುಷ್ಟಿನಿಶ್ಚಲಮತಿನಿರಾಲಸ್ಯ | ಮೀಮಹಾಸೈನ್ಯಮಂಗೆಲ್ವಘಟಿತಮಾಗಾದುದೆಂದುಕುಶ
ನುಸುರೆಕೇಳ್ದು | ಪ್ರೇಮದಿಂತನ್ನಸುತರೆಂದರಿದುಸೀತೆಯೆಂ | ಬೀಮಾತುಕಿವಿದಾಗಿದೊಡೆಬಿದ್ದುಮೂರ್ಛೆವೆತ್ತಾ ಮಹೀಶಂಕೂಡೆ
ಚೇತನಂಬಡೆದುಸುಗ್ರೀವನೊಡನಿಂತೆಂದನು ||೨೮|| ಕಪಿರಾಜಕೇಳ್ದೈಕುಮಾರಕರನುಡಿಗಳಂ| ನಿಪುಣರಿವರಾವಪುರುಷಂಗೆಸಂಭವಿ
ಸಿದ | ರ್ವಿಪಿನಚಾರಿಗಳನಿನ್ನೊಮ್ಮೆನೀಂಬೆಸಗೊಳೆನೆನಸುನಗುತಸುಗ್ರೀವನು || ತಪನಕುಲಜಾತರ್ಪುರಾಣಪುರುಷೋತ್ತ
ಮನ | ವಿಮಲಸಂತತಿಗಳೀವರೀಕ್ಷಿಪೊಡೆದೇವನಿ | ನ್ನುಪರೂಪಮಾಗಿರ್ಪುದಲ್ಲದೊಡಿವರ್ಗಿನಿತುಸತ್ವಮೆತ್ತಣದೆಂದನು | ೨೯ ||
ಸುಗ್ರೀವರಾಘವರ್ಮಾತಾಡುವನಿತರೊಳ್ | ನಿಗ್ರಹಿಸಿಕೊಂಡಿರ್ದಕುದುರೆಯಂಬಿಡುವಡ | ಭ್ಯಗ್ರಮುಳ್ಳವನಾಗಿನೀಲನೈತರೆ

---

ಟೀ|| ಕುಶನು-ಕುಶನೆಂಬ ಬಾಲಕನು, ರಾಮುನನ್ನು ಕುರಿತು, ರಾಮ-ಶ್ರೀ ರಾಮದೇವರ, ಚಾರಿತ್ರ-ಚರಿತ್ರೆಯನ್ನು, ಪಠನ - ಹೇಳುವುದರ, (ಪಾರಾಯಣಮಾಡುವುದರ) ಅಭ್ಯಾಸ - ಕಲಿಯುವುದರ, ಯೋಗದಿಂ - ಸಂಬಂಧದಿಂದ, ಕ್ಷೇಮಂ-ಮೇಲ್ಮೆಯು, ಸುಪುಷ್ಟಿ-ಶರೀರದಾರ್ಢ್ಯವು, ನಿಶ್ಚಲ-ಚಂಚಲವಿಲ್ಲದ, ಮತಿ-ಅರಿವು, ನಿರಾಲಸ್ಯ-ಸೋಮಾರಿತನವಿಲ್ಲದಿರುವುದು, ಈ ಮಹಾಸೈನ್ಯಮುಂ-ಈ ದೊಡ್ಡ ಪಡೆಯನ್ನು, ಗೆಲ್ವ-ಸೋಲಿಸತಕ್ಕ, ಅಘಟಿತ-ಶಕ್ತಿಯು, ತಮಗೆ-ನಮಗಾದರೊ, ಆದುದು, ಉಂಟಾಯಿತು, ಎಂದು-ಎಂಬತೆರನಾಗಿ, ಉಸುರೆ-ಪೇಳಲು, ಕೇಳ್ದು-ಈ ನುಡಿಗಳನ್ನಾಲಿಸಿ, ಪ್ರೇಮದಿಂ-ಪ್ರೀತ್ಯತಿಶಯದಿಂದ, ತನ್ನಸುತರು-ತನ್ನ ಕುವರರು, ಎಂದು-ಎಂಬದಾಗಿ, ಅರಿದು-ತಿಳಿದು ಸೀತೆಯೆಂಬ-ಸೀತೆಯೆನ್ನತಕ್ಕ, ಈಮಾತು-ಈ ನುಡಿಯು, ಕವಿತಾಗಿದೊಡೆ - ಕಿವಿಗೆ ಬಿದ್ದಕೂಡಲೆ, ಬಿದ್ದು - ನೆಲದಮೇಲೆ ಉರುಳಿ, ಮೂರ್ಛೆವೆತ್ತು - ಮೂರ್ಛಾಕ್ರಾಂತನಾಗಿ, ಕೂಡೆ-ಒಡನೆಯೇ, ಆಮಹೀಶಂ-ಆ ರಾಜೇಂದ್ರನು, ಚೇತನಂಬಡೆದು-ಶಕ್ತಿಯನ್ನು ತಾಳಿ, ಸುಗ್ರೀವನಂ-ಸುಗ್ರೀವನನ್ನು ಕುರಿತು, ಒಡನೆ-ಕೂಡಲೆ, ಇಂತು-ಮುಂದೆ ಹೇಳುವಂತೆ, ಎಂದನು-ನುಡಿದವನಾದನು ||೨೮||

ಟೀ|| ಕಪಿರಾಜ-ಕಪೀಂದ್ರನಾದ ಸುಗ್ರೀವನೆ, ಕುಮಾರಕರ-ಮಕ್ಕಳ, ನುಡಿಗಳಂ-ವಚನಗಳನ್ನು, ಕೇಳ್ದೈ-ಲಾಲಿಸಿದೆಯಾ, ಇವರು-ಈ ಬಾಲಕರಾದರೊ, ನಿಪುಣರು-ಮಹಾ ಚಮತ್ಕಾರಿಗಳು, ಆವಪುರುಷಂಗೆ - ಯಾವ ಮಹಾನುಭಾವನಿಗೆ, ಸಂಭವಿಸಿದರ್-ಜನಿಸಿದರು, ನೀಂ-ನೀನು, ಇನ್ನೊಮ್ಮೆ-ಮತ್ತೊಂದಾವರ್ತಿ, ವಿಪಿನಚಾರಿಗಳನು-ಕಾಡಿನಲ್ಲಿ ತಿರುಗುವ ಈ ಹುಡುಗರನ್ನು, ಬೆಸಗೊಳು - ಪ್ರಶ್ನೆಮಾಡು, ಎನೆ - ನುಡಿಯಲು, ಸುಗ್ರೀವನು - ಸುಗ್ರೀವನೆಂಬಾತನು, ನಸುನಗುತ - ಮಂದಹಾಸವನ್ನೈದುತ್ತ, ತಪನ - ರವಿಯ, ಕುಲ - ಸಂತತಿಯಲ್ಲಿ, ಜಾತರು - ಉತ್ಪನ್ನರಾದವರು, ಪುರಾಣಪುರುಷೋತ್ತಮನ-ಪುರಾಣಪ್ರಸಿದ್ಧನಾದ ಶ್ರೀಮನ್ನಾರಾಯಣನ, ವಿಪುಲ-ದೊಡ್ಡದಾದ, ಸಂತತಿಗಳು-ಗೋತ್ರಜರು, ದೇವ - ಎಲೈ ಶ್ರೀರಾಮನೆ, ಇವರ-ಈ ಪಸುಳೆಗಳನ್ನು, ಈಕ್ಷಿಪೊಡೆ-ನೋಡಿದಲ್ಲಿ, ನಿನ್ನ-ನಿನ್ನ ಸಂಬಂಧವಾದ, ಉಪರೂಪಂ-ಪ್ರತಿಬಿಂಬವೇ, ಆಗಿರ್ಪುದು-ಆಗಿದೆ, ಅಲ್ಲದೊಡೆ-ಹಾಗಿಲ್ಲದ ಪಕ್ಷಕ್ಕೆ, ಅವರ್ಗೆ-ಆ ಹುಡುಗರಿಗೆ, ಇನಿತುಸತ್ವಂ-ಇಷ್ಟು ಶಕ್ತಿಯು, ಎತ್ತಣದು-ಎಲ್ಲಿ ಪ್ರಾಪ್ತವಾಗುತ್ತದೆ, ಎಂದನು-ಎಂದು ನುಡಿದನು.

ಅ|| ವಿ|| ತಪನ+ಕುಲ=ಜಾತರ್, ತಪನ-ರವಿಯ, ಕುಲ-ಸಂತತಿ (ಷ.ತ.) ತಪನ+ಕುಲದಲ್ಲಿ=ಜಾತರ್ (ಸ ತ.) ||೨೯||

ಟೀ|| ಸುಗ್ರೀವರಾಘವರು-ಕಿಷ್ಕಿಂಧಾಧಿಪನೂ, ಶ್ರೀರಾಮನೂ, ಮಾತಾಡುವನಿತರೊಳ್ - ಮಾತನಾಡುತ್ತಿರುವುದರೊಳಗಾಗಿ, ನೀಲನು - ನೀಲನೆಂಬ ಕಪಿವೀರನು, ನಿಗ್ರಹಿಸಿಕೊಂಡು-ಅಡ್ಡಿಮಾಡಿ, ಇರ್ದ - ಇದ್ದಂಥ, ಕುದುರೆಯುಂ-ಹಯ

---

ವುದರಿಂದ ನಮಗೆ ಆರೋಗ್ಯ, ಚಟುವಟಿಕೆ, ಈ ನಿನ್ನ ಮಹಾ ಸೈನ್ಯವನ್ನು ನಿರ್ಮೂಲಮಾಡುವ ಸಾಹಸವೂ ಉಂಟಾಯಿತೆಂದು ನುಡಿದನು. ಕುಶನ ವೀರವಾದಗಳನ್ನಾಲಿಸಿದ ಶ್ರೀರಾಮನು ಮನದಲ್ಲಿ ಈ ಬಾಲಕರೀರ್ವರೂ ತನ್ನ ಮಕ್ಕಳೆಂದರಿತು, ಸಂತೋಷವುಳ್ಳವನಾಗಿ, ಸೀತೆ ಎಂಬ ಮಾತು ಕಿವಿಗೆ ಬಿದ್ದೊಡನೆಯೇ ಶೂಲ ಹಾಕಿದಂತಾಗಿ, ಮೂರ್ಛೆಯನ್ನೈದಿ ಮತ್ತೆ ಚೇತರಿಸಿಕೊಂಡವನಾಗಿ, ತನ್ನ ಬಳಿಯಲ್ಲಿದ್ದ ಕಪಿರಾಜನಾದ ಸುಗ್ರೀವನನ್ನು ಕುರಿತು, || ೨೮ || ಎಲೈ ವಾನರಾಧಿಪನೆ ಈ ಬಾಲಕರಾಡಿದ ಮಾತುಗಳನ್ನು ಕೇಳಿದೆಯಾ! ಕಾಡಿನಲ್ಲಿ ಅಲೆದಾಡುವರಾಗಿಯೂ, ಬಹು ಚತುರರಾಗಿಯೂ ಇರುವ ಈ ಬಾಲಕರು ಯಾವನಿಂದುತ್ಪನ್ನರಾಗಿರುವರೊ ನೀನು ಅವರನ್ನು ಇನ್ನೊಂದು ಬಾರಿ ಕೇಳೆನಲು, ಸುಗ್ರೀವನು ನಸುನಗುತ್ತ ಎಲೈ ಸ್ವಾಮಿಯೆ, ಸೂರ್ಯಕುಲದಲ್ಲಿ ಹುಟ್ಟಿ ವೇದವೇದಾಂಗಗಳಲ್ಲಿಯೂ, ಪುರಾಣಗಳಲ್ಲಿಯೂ ಪ್ರಸಿದ್ಧನಾದ ನಿನ್ನ ಮಕ್ಕಳೇ ಹೊರತು ಬೇರೆಯಾದವರು ಎಂದಿಗೂ ಅಲ್ಲವು, ಇವರು ನಿನ್ನ ಪ್ರತಿರೂಪದವರಲ್ಲದೆ ಸಾಧಾರಣವಾದ ವನಚಾರಿಗಳೇ ಆಗಿದ್ದರೆ ಈ ನಮ್ಮ ಮಹಾ ಸೈನ್ಯವನ್ನು ಗೆಲ್ಲತಕ್ಕ ಸಾಮರ್ಥ್ಯವೆಲ್ಲಿ ಬಂದೀತು. ನಿನ್ನ ಮಕ್ಕಳೆನ್ನುವುದರಲ್ಲಿ ಏನೂ ಅಡ್ಡಿಯೇ ಇಲ್ಲವೆಂದು ನುಡಿದನು || ೨೯ || ರಾಮಸುಗ್ರೀವರು ಈ ತೆರನಾಗಿ ಪರಸ್ಪರ ಸಂಭಾಷಿಸುತ್ತಲಿರುವಾಗ, ನೀಲನೆಂಬ ಕಪಿಸೇ

ಕುಶಂಕೋಪದಿಂದಾಕಪಿಗಳ ‖ ಅಗ್ರಣಿಯನೆಚ್ಚು ಕೆಡಪಿದೊಡವನರುಧಿರದಿಂದುಗ್ರರೂಪದೊಳೆದ್ದುದಾನೀಲಕೋಟಿಗ | ಳ್ವಿಗ್ರಹಕೆಕಡುಮುಳಿದುಮರಗೊಂಬೆಬೆಟ್ಟಕಲ್ಗುಂಡುಗೊಂಡೆಲ್ಲೆಡೆಯೊಳು ‖ ೩೦ ‖ ನೀಲವಾನರಸೈನ್ಯದೊತ್ತಾಯಮಂಕಂಡು | ಮೇಲೆಸೆವರವಿಯನಾರಾಧಿಸಿಕುಶಂಮಹಾ | ಸ್ಥೂಲಕಾಯದಕಪಿಗಳಂಗೆಲಲ್ಕೊಂದುವರೆಯೋಜನದಳತೆಯಗಲದ | ಕೋಲಗಾಯದನೆತ್ತರೊಸರಲೀಯದವೊಲಾ | ಬಾಲಕಂತೊಡುವಡಳವಡುವತೆರನಾದರಿಪು | ಜಾಲಕಸದಳವೆನಿಸಿಪೂಡಲಕ್ಷಯವಾದ ಬಾಣಂಗಳಂಪಡೆದನು ‖ ೩೧ ‖ ಆಮಹಾಬಾಣಂಗಳಂಪೂಡಿತೆಗದೆಚ್ಚು | ಭೀಮವಿಕ್ರಮಕುಶಂಕೆಡಹಿದನಹಿತಕಪಿ | ಸ್ತೋಮಮಂಬಳಿಕುರುಳ್ಚಿದನೀಲನಂಸುಗ್ರೀವಮುಖ್ಯರಾದ ‖ ಕಾಮರೂಪದಸಕಲವಾನರಚಮೂಪರಂ | ಭೂಮಿಯೊಳ್ಮೂರ್ಛೆಗೊಂ

---

ವನ್ನು, ಬಿಡುವಡೆ-ಬಿಡಿಸುವುದಕ್ಕೆ, ಅಭ್ಯಗ್ರಮುಳ್ಳವನಾಗಿ - ಹತ್ತಿರ ಹತ್ತಿರಕ್ಕೆ, ಐತರೆ-ಬಗಲಾಗಿ, ಕುಶನು, ಕೋಪದಿಂದ-ಕ್ರೋಧದಿಂದ, ಆಕಪಿಗಳ ಅಗ್ರಣಿಯನು-ಆ ವಾನರಶ್ರೇಷ್ಠನನ್ನು, ಎಚ್ಚು-ಬಾಣಗಳನ್ನು ಬಿಟ್ಟು, ಕೆಡವಿದೊಡೆ-ನೆಲಕ್ಕೆ ಬೀಳುವಂತೆ ಮಾಡಲು, ಅವನ-ಆ ನೀಲನೆಂಬ ಕಪಿಯ, ರುಧಿರದಿಂದ-ನೆತ್ತರಿನಿಂದ, ಉಗ್ರ-ಭಯಂಕರವಾದ, ರೂಪದೊಳು-ಆಕಾರದಿಂದ, ನೀಲಕೋಟಿಗಳು-ಒಂದು ಕೋಟಿಜನ ನೀಲರು, ವಿಗ್ರಹಕ್ಕೆ-ಕಾಳಗಕ್ಕೆ, ಕಡು-ಹೆಚ್ಚಾಗಿ, ಮುಳಿದು-ಕೋಪವಂ ತಾಳಿ, ಮರ-ತರುಗಳು, ಕೊಂಬೆ - ಶಾಖೆಗಳು, ಬೆಟ್ಟ-ಗಿರಿಗಳು, ಕಲ್ಲು - ಬಂಡೆಗಳು, ಗುಂಡು-ದೊಡ್ಡ ಗುಂಡುಗಳು, ಮೊದಲಾದವನ್ನೆಲ್ಲಾ, ಕೊಂಡು-ಸ್ವೀಕರಿಸಿ, ಎಲ್ಲೆಡೆಯೊಳು-ದಿಕ್ಕುದಿಕ್ಕಿನಲ್ಲಿಯೂ, ಎದ್ದುದು-ಎದ್ದು ನಿಂತಿತು. ‖೩೦‖

ಟೀ‖ ಕುಶಂ-ಕುಶನೆಂಬ ಬಾಲಕನು, ನೀಲವಾನರಸೈನ್ಯದ - ನೀಲನೆಂಬ ಕಪಿಯ ಪಡೆಯ, ಒತ್ತಾಯಮಂ-ನುಗ್ಗಿ ಬರುವುದನ್ನು, ಕಂಡು-ಈಕ್ಷಿಸಿ, ಮೇಲೆ-ಆಗಸದಲ್ಲಿ, ಎಸೆವ-ಹೊಳೆಯುವ, ರವಿಯನು-ಇನನನ್ನು, ಆರಾಧಿಸಿ-ಮನಸ್ಸಿನಲ್ಲಿಯೇ ಪೂಜೆಯಂ ಗೈದು, ಮಹಾಸ್ಥೂಲ - ಬಹು ದೊಡ್ಡ, ಕಾಯದ-ದೇಹವುಳ್ಳ, ಕಪಿಗಳಂ-ಕೋಡಗಗಳನ್ನು, ಗೆಲಲ್ - ಗೆಲ್ಲುವುದಕ್ಕೆ, ಒಂದುವರೆಯೋಜನದ - ಒಂದುವರೆ ಗಾವುದದ ಎಂದರೆ ಹದಿನೆಂಟು ಮೈಲಿಗಳ, ಅಳತೆಯ - ಪರಿಮಿತಿಯ, ಅಗಲದ-ವಿಶಾಲದಲ್ಲಿಯೂ, ಕೋಲಗಾಯದ - ಶರಗಳ ಘಾತದಿಂದೊಗೆವ, ನೆತ್ತರ-ರಕ್ತವನ್ನು, ಒಸರಲೀಯದವೊಲ್ - ಬೀಳದಂತೆ, ಬಾಲಕಂ-ಕುಶಕುಮಾರನು, ತೊಡುವಡೆ-ಬಾಣಗಳನ್ನು ಬಿಡಲು, ಅಳವಡುವ - ಆಗತಕ್ಕ, ತೆರನಾದ - ಬಗೆಯಾಗಿರುವ, ರಿಪುಜಾಲಕೆ-ವೈರಿಗಳ ಸಮುದಾಯಕ್ಕೆ, ಅಸದಳಂ-ಅಸಾಧ್ಯವು, ಎನಿಸಿ-ಎಂಬಂತೆ, ಪೂಡಲು-ಶರಸಂಧಾನವಂ ಮಾಡಲು, ಅಕ್ಷಯವಾದ-ಅಂತ್ಯವಾಗದಿರತಕ್ಕ, ಬಾಣಗಳಂ-ಕಣೆಗಳನ್ನು, ಪಡೆದನು-ಸಂಪಾದಿಸಿದನು ‖೩೧‖

ಟೀ‖ ಭೀಮ-ಹೆಚ್ಚಾದ ಭಯವನ್ನು ಹುಟ್ಟಿಸುವ, ವಿಕ್ರಮ - ಸಾಮರ್ಥ್ಯವುಳ್ಳ, ಕುಶನು-ಕುಶನೆಂಬ ಬಾಲಕನು, ಆಮಹಾಬಾಣಂಗಳಂ - ಶ್ರೇಷ್ಠವಾದ ಆ ಸರಲ್ಗಳನ್ನು, ಪೂಡಿ - ಜೋಡಿಸಿ, ತೆಗೆದು - ಆಕರ್ಣಾಂತವಾಗಿ ಸೆಳೆದು, ಎಚ್ಚು-ಬಿಟ್ಟವನಾಗಿ, ಅಹಿತ - ವೈರಿಗಳಾದ, ಕಪಿಸ್ತೋಮಮಂ - ಕೋತಿಗಳ ಪಡೆಯನ್ನು, ಕೆಡಹಿದನು - ನೆಲವನ್ನು ಕಚ್ಚುವಂತೆ ಮಾಡಿದನು. ಆನೀಲನಂ-ಅಗ್ನಿರೂಪನಾದ ನೀಲನನ್ನು, ಸುಗ್ರೀವ - ಸುಗ್ರೀವನೆಂಬ ಕಪಿರಾಜನೇ, ಮುಖ್ಯರಾದ-ಮೊದಲಾಗಿವುಳ್ಳ, ಕಾಮರೂಪದ-ಬೇಕಾದ ರೂಪವಂ ತಾಳಬಲ್ಲ, ಸಕಲ-ಎಲ್ಲಾ, ವಾನರಚಮೂಪರಂ-ಕಪಿಸೇನಾಗ್ರಣಿಗಳನ್ನೂ, ಭೂಮಿ

---

ನಾನಾಯಕನು ಕುಶಲವರು ಕಟ್ಟಿಕೊಂಡಿದ್ದ ಕುದುರೆಯನ್ನು ಬಿಡಿಸಿಕೊಂಡು ಬರುವೆನೆಂದು ಆ ಬಾಲಕರ ಬಳಿಗೆ ನುಗ್ಗಿ ಬಂದನು. ಆ ಹುಡುಗರು ಸಮೀಪಸ್ಥನಾಗುತ್ತಿರುವ ನೀಲನನ್ನು ಕಂಡು, ಕಡುಮುಳಿದು ಎಚ್ಚರಗೊಂಡವರಾಗಿ, ಅವರಲ್ಲಿ ಕುಶನು ಬಾಣಪ್ರಯೋಗದಿಂದ ನೀಲನನ್ನು ನೆಲಕ್ಕೆ ಕೆಡವಿಬಿಟ್ಟನು. ಅವನ ಮೈಯಿಂದ ರಕ್ತವು ಪ್ರವಾಹ ರೂಪವಾಗಿ ಹರಿಯಲಾರಂಭಿಸಿತು. ನೀಲನು ಈ ತೆರನಾದ ದುರವಸ್ಥೆಯಂ ಪಡೆದ ಕಾಲಕ್ಕೆ ಕೆಳಗೆ ಒಸರುತ್ತಲಿರುವ ಅವನ ರಕ್ತದಿಂದ ಕೋಟಿ ಜನ ಘೋರಾಕಾರರಾದ ನೀಲರು ಹುಟ್ಟಿ, ಕಲ್ಲು, ಗುಂಡು, ಬೆಟ್ಟ, ಗುಡ್ಡ, ಮರ, ರೆಂಬೆ ಮೊದಲಾದವನ್ನು ಕೈಗಳಲ್ಲಿ ಹಿಡಿದುಕೊಂಡು ಕುಶನಮೇಲೆ ಯುದ್ಧಕ್ಕೆ ನಿಂತವರಾದರು. ‖೩೦‖ ಈ ತೆರನಾಗಿ ನೀಲರೆಂಬ ಕಪಿನಾಯಕರು ಒತ್ತಾಗಿ ತನ್ನನ್ನು ಮುಸುಕುತ್ತಲಿರುವುದನ್ನು ಕುಶಕುಮಾರನು ನೋಡಿ, ಅಂತರಿಕ್ಷದಲ್ಲಿ ದಿವ್ಯ ತೇಜೋವಿರಾಜಮಾನನಾಗಿ, ಭಕ್ತರ ಇಷ್ಟಸಿದ್ಧಿಗಳನ್ನೀಡೇರಿಸುವನೆಂಬುದರಲ್ಲಿ ಬದ್ಧಕಂಕಣನಾಗಿರುವ ದಿನಮಣಿಯನ್ನು ನಮಸ್ಕಾರಾದಿಗಳಿಂದ ತೃಪ್ತಿಗೊಳಿಸಿ, ಜಗಜ್ಜ್ಯೋತಿಯಾದ ಸೂರ್ಯನಿಂದ ಈ ಕ್ರೂರನಾದ ನೀಲನ ರಕ್ತವು ತಾನು ನಿಂತಿರುವ ಸ್ಥಳದ ಸುತ್ತಲೂ ಒಂದುವರೆ ಗಾವುದದಲ್ಲಿ ಎಲ್ಲಿಯೂ ಬೀಳದಂತಿರಲೆಂಬವರನ್ನೂ ಪಡೆದವನಾದನು. ‖೩೧‖ ನೀಲನ ರಕ್ತವು ಒಂದೂವರೆ ಗಾವುದದಾಚೆಯ ಕಡೆಯಲ್ಲಿ ಬೀಳುತ್ತಲಿದ್ದದ್ದರಿಂದ ಕೋಟಿಸಂಖ್ಯೆಯ ನೀಲರೂ ಕೂಡ ಈ ಕುಶನ ಸಮೀಪದಲ್ಲಿಯೇ ಇರಲಾರದವರಾದರು, ಕುಶನಾದರೊ ದಿನಕರನಿಂದ ಅಕ್ಷಯಬಾಣಂಗಳಂ ಪಡೆದವನಾಗಿ ಆ ದಿವ್ಯವಾದ ಸರಲ್ಗಳಂ ಪೂಡಿ ನೀಲರ ಸೈನ್ಯದಮೇಲೆ ಬಿಟ್ಟಹಾಗೆಲ್ಲಾ ಮತ್ತೆಮತ್ತೆ

ಹೊರಗಿಸಿವಿಭೀಷಣನ | ಸಾಮರ್ಥ್ಯಮಂನಿಲಿಸಿಮತ್ತವನಬಲಮಂಪೊರಳ್ಚಿದಂಸಂಗರದೊಳು ||೩೨|| ನರವಾಜಿದಂತಿಮುಸುಕ ರಡಿಸಿಂಗಳಿಕವಾ| ನರದಾನವರೊಳಿಡಿದಸೇನೆಯೋಳ್ನೋಡಲೋ | ರ್ವರುಮಿಲ್ಲದೆಲ್ಲರುಂಬಿದ್ದುತಾನೋರ್ವನಿರ್ಪುದಂಕಂಡುಖಾತಿ ಗೊಂಡು || ಸರಳನರ್ಭಕರಮೇಲೆಚ್ಚಂರ | ಘೂದ್ವಹಂಧರೆಯೊಳೀಕ್ಷತ್ರಿಯರಮನವಾಸಿಗಳದೆಂತೊ | ತರಹರಿಸಬಾರದಿಹರಾಮ ಬಾಣಂಗಳೈದಿದವುಕಾಲಾಗ್ನಿಯಂತೆ || ೩೩ || ಬಚ್ಚಪೊಗದರಾಮಬಾಣಂಗಳಂನಡುವೆ | ನುಚ್ಚುನೂರಾಗೆಕತ್ತರಿಸಿರಘುನಾಥ ನಂ | ಮುಚ್ಚಿದರ್ಕಣೆಗಳಿಂಮತ್ತೆಕಾಕುತ್ಸ್ಥಂಕೆರಳ್ದುಕುಶಲವರಮೇಲೆ || ಎಚ್ಚಡಾಕೋಲ್ಗಳಂಬಾಲಕರ್ಮಧ್ಯದೊಳ್ಕೊಚ್ಚಿ

ಯೊಳ್-ನೆಲದಲ್ಲಿ, ಮೂರ್ಛೆಗೊಂಡು - ಮೂರ್ಛೆಬೀಳುವಂತೆ, ಒರಗಿಸಿ - ಮಲಗಿಸಿಬಿಟ್ಟು, ವಿಭೀಷಣನ - ವಿಭೀಷಣನೆಂಬ ಲಂಕಾಧಿಪನ, ಸಾಮರ್ಥ್ಯಮಂ-ಸಾಹಸವನ್ನು, ನಿಲಿಸಿ-ನಿಂತುಹೋಗುವಂತೆಮಾಡಿ, ಮತ್ತೆ-ತಿರುಗಿ, ಸಂಗರದೊಳ್-ರಣರಂಗ ದಲ್ಲಿ, ಅವನ-ಆ ಲಂಕಾಧಿಪನ, ಬಲಮಂ-ಸೈನ್ಯವನ್ನು, ಪೊರಳ್ಚಿದಂ-ಹೊರಳುವಂತೆ ಮಾಡಿದನು ||೩೨||

ಟೀ|| ನರ-ಜನರು, ವಾಜಿ-ಅಶ್ವಗಳು, ದಂತಿ-ಹಸ್ತಿಗಳು, ಮುಸುಕರಡಿ - ಋಕ್ಷಂಗಳಸಮುದಾಯವು, ಸಿಂಗಳಿಕ-ಸಿಂಗಳಿಕವೆಂಬ ಕಪಿಗಳ ಭೇದದವರು, ವಾನರ - ಮಿಕ್ಕ ಕೋತಿಗಳು, ದಾನವರೊಳು - ರಕ್ಕಸರಲ್ಲಿ, ಇಡಿದ - ನೆರೆದಿದ್ದ, ಸೇನೆಯೊಳು - ಪಡೆಯಲ್ಲಿ, ನೋಡಲು - ನೋಡಲಾಗಿ, ಓರ್ವರುಂಇಲ್ಲದೆ - ಯಾರೊಬ್ಬರೂ ಉಳಿಯದೆ, ಎಲ್ಲರುಂ - ಸಕಲರೂ, ಬಿದ್ದು-ನೆಲಹತ್ತಿದವರಾಗಿ, ತಾನೋರ್ವನು-ತಾನೊಬ್ಬನು ಮಾತ್ರವೇ, ಇರ್ಪುದಂ-ಇರತಕ್ಕದನ್ನು, ಕಂಡು-ನೋಡಿ, ಖಾತಿಗೊಂಡು-ಸಿಟ್ಟಿದ್ದವನಾಗಿ, ರಘೂದ್ವಹಂ-ಶ್ರೀರಾಮನು, ಅರ್ಭಕರಮೇಲೆ - ಹುಡುಗರನ್ನು ಕುರಿತು, ಸರಳನು - ಅಲಗನ್ನು, ಎಚ್ಚಂ-ಪ್ರಯೋಗಮಾಡಿದನು, ಈಕ್ಷಾತ್ರಿಯರ-ಈ ಕ್ಷತ್ರಿಯ ಕುಲದಲ್ಲಿ ಹುಟ್ಟಿದವರ, ಮನವಾಸಿಗಳ್-ಮನೋವ್ಯಾಪಾರಗಳು, ಧರೆಯೊಳ್-ಭೂವಲಯದಲ್ಲಿ, ಅದೆಂತೊ-ಇನ್ನು ಎಂಥಾದ್ದೊ, ತರಹರಿಸಬಾರದೆ-ಸಹಿಸಲಾಗದೆ, ಇಹ-ಇರತಕ್ಕ, ರಾಮ ಬಾಣಂಗಳು-ಶ್ರೀರಾಮನು ಬಿಟ್ಟ ಕಣೆಗಳು, ಕಾಲಾಗ್ನಿಯಂತೆ-ಪ್ರಳಯಾನಲನೋಪಾದಿಯಲ್ಲಿ, ಐದಿದವು-ಬಂದು ಸೇರಿದವು. ||೩೩||

ಟೀ|| ಕುಶನು, ಬಚ್ಚಪೋಗದ - ಅಸಾಧಾರಣವಾದ, ರಾಮಬಾಣಂಗಳಂ - ಶ್ರೀರಾಮನ ಕಣೆಗಳನ್ನು, ನಡುವೆ-ಮಧ್ಯಭಾಗದಲ್ಲಿಯೇ, ನುಚ್ಚುನೂರಾಗೆ - ಛಿನ್ನಾಛಿನ್ನವಾಗಿ, ಕತ್ತರಿಸಿ - ಕಡಿದು, ಕಣೆಗಳಿಂ - ಕೋಲ್ಗಳಿಂದ, ರಘುನಾಥನಂ-ಶ್ರೀರಾಮನನ್ನು, ಮುಚ್ಚಿದರು-ಕವಿದುಬಿಟ್ಟರು, ಕಾಕುತ್ಸ್ಥಂ-ದಾಶರಥಿಯಾದರೊ, ಕೆರಳ್ದು-ಸಿಟ್ಟುಮಾಡಿಕೊಂಡು, ಮತ್ತೆ-ತಿರುಗಿ, ಕುಶಲವರಮೇಲೆ-ಕುಶಲವರೆಂಬ ಹುಡುಗರಮೇಲೆ, ಎಚ್ಚಡೆ-ಪ್ರಯೋಗಿಸಲು, ಆಕೋಲ್ಗಳಂ-ಆ ಕಣೆಗಳನ್ನು, ಬಾಲಕರು-ಕುಶಲವರು, ಮಧ್ಯದೋಳ್-ನಡುದಾರಿಯಲ್ಲಿಯೇ, ಕೊಚ್ಚಿ-ಕತ್ತರಿಸಿ, ರಾವಣರಿಪುವಿನ-ರಾಕ್ಷಸಾಂತಕನ, ಅಂಗಮಂ-ಅವಯವವನ್ನು, ನೋಯಿಸಿದರು - ಗಾಯಮಾಡಿದವರಾದರು, ತಂದೆಮಕ್ಕಳಿಗೆ - ರಾಮ ಮತ್ತು ಕುಶಲವರೆನ್ನವರಿಗೆ, ಅಚ್ಚರಿಯ - ಆಶ್ಚರ್ಯಕರವಾದ, ಕಾಳಗಂ - ಜಗಳವು, ಸುರರು-ಅಮರರೆಲ್ಲಾ, ಬೆರಗಾಗಲು-ಅಚ್ಚರಿಪಡುವಂತೆ, ನಡೆದುದು-

ವರಾದರು. ಇದರಿಂದ ದಾಶರಥಿಯ ಕೋಪವು ಮೂರ್ಮಡಿಯಾಯಿತು. ಮತ್ತೆ ಕುಶಲವರ ಮೇಲೆ ಅನೇಕ ಕಣೆಗಳನ್ನು ತನ್ನ ಶಕ್ತಿಯಿಂದೆಲ್ಲಾ ಎಸೆಯಲಾಗಿ ಲವಕುಶರು ಆ ಬಾಣಗಳನ್ನೂ ಕೂಡ ಮೊದಲಿನಂತೆಯೇ ಖಂಡಿಸಿ, ಅನೇಕವಾದ ದಿವ್ಯಾಸ್ತ್ರಗಳಿಂದ ಶ್ರೀರಾಮನ ಮರ್ಮಸ್ಥಳವನ್ನು ಚುಚ್ಚಿದರು, ತಂದೆ ಮಕ್ಕಳು ಮಾಡುತ್ತಲಿರುವ ಘೋರವಾದ ಯುದ್ಧವನ್ನು ನೋಡಿ ನೀಲಕೋಟಿಗಳೊದಗುತ್ತಲಿರುವುದನ್ನು ನೋಡಿ, ಕೋಪಾತಿಶಯದಿಂದ ಅನೇಕ ದಿವ್ಯ ಬಾಣಗಳನ್ನು ಬಿಡಲಾಗಿ ಈ ಕೋಲ್ಗಳ ಹೊಡೆತಕ್ಕೆ ಎದುರಾಗಲು ಶಕ್ತಿಯಿಲ್ಲದೆ ನೀಲರ ಸೈನ್ಯವೆಲ್ಲವೂ ನಿರ್ನಾಮವಾಯಿತು. ಆ ಬಳಿಕ ತನ್ನಮೇಲೆ ಯುದ್ಧಕ್ಕೆ ಬಂದೊದಗಿದ ಸುಗ್ರೀವಾದಿ ಕಾಮರೂಪದ ಕಪಿನಾಯಕರನ್ನೆಲ್ಲಾ ಬಾಣದಿಂದ ಬಡಿದು ಮೂರ್ಛಾಕ್ರಾಂತರನ್ನಾಗಿ ಮಾಡಿದನು, ತನ್ನ ಮೇಲೆ ಹೋರಾಡಲು ಹೆಮ್ಮೆಯಿಂದ ಬಂದ ವಿಭೀಷಣನ ಕೊಬ್ಬನ್ನಡಗಿಸಿ ಅವನ ರಾಕ್ಷಸಸೈನ್ಯವನ್ನೆಲ್ಲಾ ನೆಲಕ್ಕೆ ಉರುಳಿಸಿಬಿಟ್ಟನು || ೩೨ || ಹಸ್ತ್ಯಶ್ವರಥಪದಾತಿಗಳೂ, ಕರಡಿ, ಸಿಂಗಳೀಕ ಮೊದಲಾದ ಕಪಿಗಳು, ರಾಕ್ಷಸರ ಸಮುದಾಯವು ಇವುಗಳಲ್ಲಿ ಒಬ್ಬರಾದರೂ ಉಳಿಯದೆ ತಾನೊಬ್ಬನುಮಾತ್ರವೇ ಉಳಿದಿರುವುದನ್ನು ರಘುಕುಲಜನಾದ ಶ್ರೀರಾಮಚಂದ್ರನು ನೋಡಿ ಕೋಪದಿಂದ ಕಿಡಿಕಿಡಿಯಾಗಿ ಆ ಪಸುಳೆಗಳ ಮೇಲೆ ಬಾಣಪ್ರಯೋಗವಂ ಮಾಡಿದವನಾದನು ಕೇಳೈ ಜನಮೇಜಯನೆ, ಪ್ರಪಂಚದಲ್ಲಿ ಕ್ಷತ್ರಿಯರ ಮನಸ್ಸು ಎಷ್ಟು ಕಠಿಣವಾಗಿರುವುದು ನೋಡಿದೆಯಾ? ಮುಂದೆ ನಡೆದ ಕಥಾ ವಿಸ್ತಾರವನ್ನು ಕೇಳು, ||೩೩|| ಆ ಬಳಿಕ ಶ್ರೀರಾಮನು ಈ ತೆರನಾಗಿ ಬಾಣಗಳನ್ನು ಬಿಡುತ್ತಿರಲಾಗಿ, ಅವು ಪ್ರಳಯಕಾಲದಲ್ಲಿ ಹುಟ್ಟಿ ಪ್ರಪಂಚವನ್ನೆಲ್ಲಾ ಸುಟ್ಟು ಬೂದಿ ಮಾಡುವ ಕಾಲಾಗ್ನಿಯನ್ನೂ ಕೂಡ ನಿರಾಕರಿಸುತ್ತ ಬರುತ್ತಲಿರುವುದನ್ನು ಕುಶನು ನೋಡಿ ಮಧ್ಯಮಾರ್ಗದಲ್ಲಿಯೇ ಅವನ್ನು ಛಿನ್ನಾಛಿನ್ನವಾಗಿ ಮಾಡಿ ಬಿಟ್ಟು, ಶರವರ್ಷಂಗಳನ್ನು ರಾಮಚಂದ್ರನ ಮೇಲೆ, ಕರೆದ

ರಾವಣರಿಪುವಿನಂಗಮಂನೋಯಿಸಿಸ | ರಚ್ಚರಿಯಕಾಳಗಂತಂದೆನುಕ್ಕಳಿಗೆನಡೆದುದುಸುರರ್ಬೆರಗಾಗಲು || ೩೪ || ಕಕ್ಕಸದೊಳಂದುರಾವಣಕುಂಭಕರ್ಣಾದಿ | ರಕ್ಕಸರತಲೆಗಳನರಿದುತಿರುಗಿಬಹಕಣೆಗ | ಳಿಕ್ಕಡಿಗಳಾಗಿಬಿದ್ದವುಧರೆಗೆಕೂಡೆಬಾಲಕರೆಸುಗೆತನ್ನೆಸುಗೆಗೆ || ಮಿಕ್ಕುಬರೆಬೆರಗಾಗೆರಾಘವಂಸುಮ್ಮನಿರೆ | ಪೊಕ್ಕವಂಬುಗಳೊಡಲೊಳಾತ್ಮಜರಮೇಲೆತನ| ಗಕ್ಕರುಂಟಿಲ್ಲೆಂಬುದಂನೋಳ್ಪೆವೆಂಬವೊಲ್ಭೂಪಕೇಳ್ಕೌತುಕವನು || ೩೫ || ಪಲ್ಲವಿತವನಚೂತತರುಬೇಸಗೆಯಝಳಕೆ | ನಿಲ್ಲದಸವಳಿದುಜೋಲ್ವಂತೆಕೋಮಲಕಾಯ | ದೆಲ್ಲೆಡೆಯೊಳುಂನಾಂಟಿದಂಬುಗಳರುಧಿರಪ್ರವಾಹದಿಂದುರೆಬಳಲ್ದು || ಮೆಲ್ಲನೆವರೂಥದೊಳ್ಸಾರಥಿವೆರಸಿಧರಾ| ವಲ್ಲಭಂಮೈಮರೆದುಪವಡಿಸಿದನನಿಮಿಷ| ರ್ಚೆಲ್ಲಿದರ್ಪೂಮಳೆಗಳಂಮೊಳಗಿದವುದೇವದುಂದುಭಿಗಳಂಬರದೊಳು || ೩೬ ||

ಉಂಟಾಯಿತು.

ಅ|| ವಿ|| ಕಾಕುತ್ಸ್ಥಂ-ಕಕುತ್-ಎತ್ತು, ಕಕುತ್-ಎತ್ತಿನಮೇಲೆ, ಕೂಡುವನು-ಕುಕುತ್ಸ್ಥನು, ಕಕುತ್ಸ್ಥನ ವಂಶದಲ್ಲಿ ಹುಟ್ಟಿದವನು-ಕಾಕುತ್ಸ್ಥನು || ೩೪ ||

ಟೀ|| ಅಂದು-ರಾಮರಾವಣರ ಯುದ್ಧದಲ್ಲಿ, ರಾವಣ-ದಶಕಂಠನು, ಕುಂಭಕರ್ಣ-ಕುಂಭಕರ್ಣನೆಂಬ ಅವನ ಅನುಜನು, ಆದಿ-ಮೊದಲಾಗಿರತಕ್ಕ, ರಕ್ಕಸರ-ನಿಶಿಚರರ, ತಲೆಗಳನು-ಶಿರಗಳನ್ನು, ಅರಿದು-ಕತ್ತರಿಸಿ, ತಿರುಗಿಬಹ-ಹಿಂದಕ್ಕೆ ಬಂದು ಸೇರತಕ್ಕ, ಕಣೆಗಳು-ಕೋಲ್ಗಳು, ಧರೆಗೆ-ಭೂಮಿಯಮೇಲೆ, ಇಕ್ಕಡಿಗಳಾಗಿ-ಎರಡು ತುಂಡುಗಳಾಗಿ, ಬಿದ್ದವು-ಬಿದ್ದುಬಿಟ್ಟವು, ಬಾಲಕರ-ಕುಶಲವರ, ಎಸುಗೆ-ಶರವರ್ಷವಾದರೊ, ಕೂಡೆ-ಜಡನೆಯೇ, ತನ್ನೆಸುಗೆಗೆ-ತಾನು ಬಿಡುವ ಅಲುಗಗಳ ಸಮೂಹಕ್ಕಿಂತಲೂ, ಮಿಕ್ಕುಬರೆ-ಹೆಚ್ಚಾಗಿ ಬರುತ್ತಿರಲು, ರಾಘವಂ-ಶ್ರೀರಾಮನು, ಬೆರಗಾಗಿ-ಆಶ್ಚರ್ಯ ಮತ್ತು ಭ್ರಾಂತಿಯನ್ನೈದಿ, ಸುಮ್ಮನಿರೆ-ಶರಸಂಧಾನವಂ ಮಾಡಲು ತೋಚದೆ ಸ್ತಂಭೀಭೂತನಾಗಿರಲು, ತನಗೆ-ರಾಮಚಂದ್ರನಿಗೆ, ಆತ್ಮಜರಮೇಲೆ-ಮಕ್ಕಳ ವಿಷಯದಲ್ಲಿ, ಅಕ್ಕರು-ವಿಶ್ವಾಸವು, ಉಂಟು-ಇದೆ, ಅಥವಾ, ಇಲ್ಲ-ಇಲ್ಲವು, ಎಂಬುದಂ-ಎಂಬತೆರನನ್ನು, ನೋಳ್ಪೆವು-ಪರೀಕ್ಷಿಸುವೆವು, ಎಂಬವೊಲ್-ಎಂಬಂತೆ, ಅಂಬುಗಳು-ಕುಶನು ಬಿಟ್ಟ ಕಣೆಗಳು, ಒಡಲೊಳ್-ರಾಮನ ದೇಹದಲ್ಲಿ, ಪೊಕ್ಕವು-ಹೋಗಿ ನಾಟಿದವು, ಭೂಪ-ಜನಮೇಜಯನೇ, ಕೌತುಕವನು-ಈ ಪರಮಾಶ್ಚರ್ಯವನ್ನು, ಕೇಳು-ಲಾಲಿಸು ||

ಅ|| ವಿ|| ಕರ್ಕಶ (ತ್ಸ) ಕಕ್ಕಸ (ತ್ಸ), ರಕ್ಕಸ (ತ್ಭ) ರಾಕ್ಷಸ (ತ್ಸ) || ೩೫||

ಟೀ|| ಪಲ್ಲವಿತ-ಚಿಗುರಿನಿಂದ ತುಂಬಿದ, ನವ-ನೂತನವಾದ ಚೂತತರು-ಮಾವಿನ ಮರವು, ಬೇಸಿಗೆಯ-ವೈಶಾಖದ, ಝಳಕೆ-ತೀಕ್ಷ್ಣತೆಗೆ, ನಿಲ್ಲದೆ-ನಿಲ್ಲುವದಕ್ಕಾಗದೆ, ಅಸವಳಿದು-ಬಲವು ಕಡಮೆಯಾಗಿ, ಜೋಲ್ವಂತೆ-ಬಗ್ಗಿ ಹೋಗುವ ತೆರನಾಗಿ, ಕೋಮಲ-ಬಹು ಮೆತ್ತಗಿರುವ, ಕಾಯದ-ಶರೀರದ, ಎಲ್ಲೆಡೆಯೊಳುಂ-ಎಲ್ಲಾ ಭಾಗದಲ್ಲಿಯೂ, ನಾಂಟಿದ-ಸಿಕ್ಕಿಕೊಂಡ, ಅಂಬುಗಳ-ಕಣೆಗಳಿಂದುಂಟಾದ, ರುಧಿರಪ್ರವಾಹದಿಂದ-ರಕ್ತವೆಂಬ ಹೊಳೆಯಿಂದ, ಉರೆ - ಅತಿಶಯವಾಗಿ, ಬಳಲ್ದು - ಆಯಸಂಗೊಂಡು, ವರೂಥದೊಳ್-ತೇರಿನೊಳಗೆ. ಸೂತನಿಂವೆರಸಿ-ಸಾರಥಿಯಿಂದೊಡಗೂಡಿ, ಮೆಲ್ಲನೆ-ನಿಧಾನವಾಗಿ, ಧರಾವಲ್ಲಭಂ-ಭೂಕಾಂತನಾದ ಶ್ರೀರಾಮನು, ಮೈಮರೆದು-ಸ್ಮೃತಿತಪ್ಪಿ, ಮಲಗಿದನು-ಮಲಗಿ ಬಿಟ್ಟನು, ಅನಿಮಿಷರು-ಸುರರೆಲ್ಲಾ, ಪೂಮಳೆಗಳಂ-ಪುಷ್ಪವೃಷ್ಟಿಗಳನ್ನು, ಚೆಲ್ಲಿದರು-ಕರೆದರು, ದೇವದುಂದುಭಿಗಳು-ಸುರರ ನಗಾರಿಗಳು, ಅಂಬರದೊಳು-ಆಗಸದಲ್ಲಿ, ಮೊಳಗಿದವು-ಶಬ್ದಮಾಡಲ್ಪಟ್ಟವು ||೩೬||

ಅಂತರಿಕ್ಷದಲ್ಲಿ ದೇವತೆಗಳೆಲ್ಲಾ ಬೆರಗಾದರು||೩೪|| ಪೂರ್ವದಲ್ಲಿ ರಾವಣ ಕುಂಭಕರ್ಣರೆಂಬ ಲೋಕಕಂಟಕರಾದ ರಕ್ಕಸರನ್ನು ನಾಶಮಾಡಲು ಬಿಟ್ಟ ಅಮೋಘವಾದ ಬಾಣಗಳನ್ನೇ ಶ್ರೀ ರಾಮನು ಈಗ ಲವಕುಶರಮೇಲೆ ಬಿಡಲು, ಬಾಲಕರೀರ್ವರು ಅದನ್ನೂ ಕೂಡ ದಾರಿಯಲ್ಲಿಯೆ ಎರಡು ತುಂಡಾಗಿ ಮಾಡಿ ನೆಲಕ್ಕೆ ಕೆಡವಿ, ಪುನಃ ಅನೇಕ ಬಾಣಗಳನ್ನು ರಾಮನಮೇಲೆ ಬಿಟ್ಟವರಾದರು ತನ್ನ ಸರಲ್ಗಳೆಲ್ಲಾ ಭಗ್ನವಾಗಿ ಈ ಬಾಲಕರು ಬಿಡುವ ಬಾಣಗಳು ಬಂದು ತನ್ನಮೇಲೆ ಬೀಳುತ್ತಿರುವುದನ್ನುರಾಘವನು ಕಂಡು ಅಚ್ಚರಿಗೊಂಡು ಬೆರಗಾಗಿ ನಿಂತುಬಿಟ್ಟನು, ಆ ಬಾಲಕರು ಬಿಟ್ಟ ದಿವ್ಯ ಬಾಣಗಳಾದರೂ ರಾಮಚಂದ್ರನ ಶರೀರದಲ್ಲೆಲ್ಲಾ ಘಾಯಮಾಡಿದವು. ರಕ್ತದ ಕಾಲುವೆಯು ಹರಿಯಲಾರಂಭಿಸಿತು ||೩೫|| ಎಳೆದಳಿರ್ಗಳಿಂ ವಿರಾಜಿಸುವ ಮಾವಿನ ಮರವು ಬಿಸಲಿನ ತಾಪದಿಂದ ತನ್ನ ಕಾಂತಿಯನ್ನು ಹೋಗಲಾಡಿಸಿಕೊಳ್ಳುವಂತೆ ಮಾವಿನ ಚಿಗುರಿಗಿಂತಲೂ ಅತಿ ಕೋಮಲವಾದ ಶ್ರೀ ರಾಮನ ಅವಯವಗಳಲ್ಲೆಲ್ಲಾ ಉಂಟಾದ ಕೋಲ್ಗಳ ಗಾಯದ ತಾಪದಿಂದ ಕಾಂತಿಹೀನನಾಗಿ, ಆಯಸಗೊಂಡು, ಸ್ಮೃತಿತಪ್ಪಿ, ತನ್ನ ರಥದಲ್ಲಿ ಮಲಗಿಕೊಂಡವನಾದನು. ಸುರಲೋಕದಲ್ಲಿದ್ದ ದೇವತೆಗಳು ಇದನ್ನು ಕಂಡು ಕೌಸಲ್ಯಾಸುತನಾದ ಶ್ರೀರಾಮಚಂದ್ರನ ಮೇಲೆ ಪುಷ್ಪವೃಷ್ಟಿಯನ್ನು ಸುರಿಸಿದರು. ಆಗಸದಲ್ಲಿ ದೇವದುಂದುಭಿಗಳು ಮೊಳಗಿದವು ||೩೬|| ಈರೀತಿಯಲ್ಲಿ ಶ್ರೀರಾಮಚಂ

ಆಕುಮಾರರ್ಬಳಿಕಶರಹತಿಗೆಮೈಮುರಿದ | ಕಾಕುತ್ಸ್ಥನಲ್ಲಿಗೈತಂದುರಾಜೇಂದ್ರನಶು | ಭಾಕಾರಮಂನೋಡಿಸಿರಿಮೊಗದಮ
ಣಿಕುಂಡಲಂಗಳಂಕಂಬುಗಳದ || ಏಕಾವಳಿಯಹಾರಮಂತೆಗೆದುಕೊಂಡೂರ್ಮಿ | ಳಾಕಾಂತಭರತಶತ್ರುಘ್ನರವಿಭೂಷಣಾ | ನೀ
ಕಮಂಕಳೆದೊಂದುವಸನದೋಳ್ಕಟ್ಟಿಕುಶನೊಡನೆಲವನಿಂತೆಂದನು || ೩೭ || ಅಗ್ರಭವಕೇಳಿವರೊಳೊಂದುರಥಮಂಪತ್ತಿ | ವಿ
ಗ್ರಹದೊಳೆಚ್ಚರಾಗಿರ್ದವೀರರ್ಕಳಕ | ಚಗ್ರಹಣಮಂಮಾಡಿಕೊಂಡುಬಹೆನೆನುತಲಕ್ಷ್ಮಣನಪೊಂದೇರ್ಗಡರ್ದು || ವ್ಯಗ್ರದಿಂಲ
ವನೈತರಲ್ಕುಶನಶರಹತಿಯ | ನಿಗ್ರಹಕ್ಕೊಳಗಾಗಿಮೂರ್ಛೆಯಿಲ್ಲದೆಕಪಿಗ | ಳಗ್ರಣಿಗಳುಳಿದಿರ್ದರೀರ್ವರದರೋಳ್ಜಾಂಬವ
ನೊಳೆಂದನಾಹನುಮನು || ೩೮ || ಕಂಡಿರೇಜಾಂಬವರೆರಾಮಾದಿವೀರರಂ | ದಿಂಡುಗೆಡಪಿದಬಳಿಕರಣದೊಳುಸುರಿರ್ದರಂ |

---

ಟೀ|| ಬಳಿಕ ರಾಮಚಂದ್ರನು ಈತೆರನಾಗಿ ಮೂರ್ಛಾಕ್ರಾಂತನಾದಮೇಲೆ, ಆಕುಮಾರರ್-ಆ ಲವಕುಶರು, ಶರಹತಿಗೆ-ಕೋಲ್ಗಳ ಹೊಡತಕ್ಕೆ, ಮೈಮುರಿದ-ಸ್ಮೃತಿತಪ್ಪಿದ, ಕಾಕುತ್ಸ್ಥನಲ್ಲಿಗೆ-ಶ್ರೀರಾಮನಿದ್ದೆಡೆಗೆ, ಐತಂದು-ಬಂದುಸೇರಿ ರಾಜೇಂದ್ರನ-ಶ್ರೀರಾಮದೇವರ, ಶ.ಭ-ಮಂಗಳಕರವಾದ, ಆಕಾರಮಂ-ಬಗೆಯನ್ನು, ನೋಡಿ-ಈಕ್ಷಿಸಿ, ಸಿರಿ-ಸಂಪದ್ಯುಕ್ತವಾದ, ಮೊಗದ-ಮುಖದ, ಮಣಿ-ರತ್ನಖಚಿತವಾದ, ಕುಂಡಲಂಗಳಂ-ಕರ್ಣಾಭರಣಗಳನ್ನು, ಕಂಬುಗಳದ-ಬಲಮುರಿಯ ಶಂಖದಂತಿರುವ ಕತ್ತನ್ನಾವರಿಸಿರತಕ್ಕ, ಏಕಾವಳಿಯ ಹಾರಮಂ-ಎಕ್ಕಸರವನ್ನು, ತೆಗೆದುಕೊಂಡು-ಸ್ವೀಕರಿಸಿದವರಾಗಿ, ಊರ್ಮಿಳಾಕಾಂತನ-ಊರ್ಮಿಳೆಯ ಗಂಡನಾದ ಲಕ್ಷ್ಮಣನ, ಭರತಶತ್ರುಘ್ನರ-ಭರತಶತ್ರುಘ್ನರು ಹಾಕಿಕೊಂಡಿದ್ದ, ವಿಭೂಷಣಾನೀಕಮಂ-ಎಲ್ಲಾ ಒಡವೆಗಳನ್ನೂ, ಕಳೆದು-ಸೆಳೆದುಕೊಂಡು, ಲವನು-ಲವನೆಂಬ ಬಾಲಕನು, ಒಂದು ವಸನದೋಳ್-ಒಂದು ಬಟ್ಟೆಯಲ್ಲಿ, ಕಟ್ಟಿ-ಕಟ್ಟಿದವನಾಗಿ, ಕುಶನೊಡನೆ-ತನ್ನಗ್ರಜನಾದ ಕುಶಕುಮಾರನನ್ನು ಸಂಬೋಧಿಸಿ, ಇಂತು-ಮುಂದೆ ಹೇಳುವಂತೆ, ಎಂದನು-ನುಡಿದವನಾದನು ||೩೭||

ಟೀ|| ಅಗ್ರಭವ-ಅಗ್ರಜನೆ, ಕೇಳು-ಲಾಲಿಸು, ಇವರೊಳು-ಈ ಸೇನಾಧಿಪತಿಗಳೊಳಗೆ, ಒಂದು ರಥಮಂ-ಒಬ್ಬನ ತೇರನ್ನು, ಪತ್ತಿ-ಹತ್ತಿಕೊಂಡು ಪೋಗಿ, ವಿಗ್ರಹದೊಳು-ರಣದಲ್ಲಿ, ಎಚ್ಚರಾರ್ದ-ಮೈಮುರಿಯದಿರತಕ್ಕ, ವೀರರ್ಕಳ-ಪರಾಕ್ರಮಿಗಳ, ಕಚಗ್ರಹಣಮಂಮಾಡಿಕೊಂಡು-ಜುಟ್ಟು ಹಿಡಿದು ಸೆಳೆದುಕೊಂಡು, ಬಹೆನು-ಬರುತ್ತೇನೆ, ಎನುತ-ಹೀಗೆಂದು ನುಡಿಯುತ್ತ, ಲಕ್ಷ್ಮಣನ-ಸೌಮಿತ್ರಿಯ, ಪೊಂದೇರ್ಗೆ-ಸುವರ್ಣವಿಕಾರವಾದ ರಥಕ್ಕೆ, ಅಡರ್ದು-ಏರಿ, ಕುಶನು-ಕುಶನೆಂಬ ಬಾಲಕನು, ವ್ಯಗ್ರದಿಂ-ಕಡು ಧೈರ್ಯದಿಂದ, ಐತರಲ್-ಬರಲಾಗಿ, ಕುಶನ-ಕುಶಕುಮಾರನ, ಶರಹತಿಯ-ಸರಲ್ಗಳ ಹೊಡೆತದ, ನಿಗ್ರಹಕೆ-ಪಟುಗಳಿಗೆ, ಒಳಗಾಗಿ-ಸಿಕ್ಕಿಹೋಗಿ, ಮೂರ್ಛೆಯಿಲ್ಲದೆ-ಮೈಮುರಿಯದೆ, ಈರ್ವರು-ಇಬ್ಬರಾದ, ಕಪಿಗಳ ಅಗ್ರಣಿಗಳು-ಕಪಿಸೇನಾ ನಾಯಕರು, ಉಳಿದಿರ್ದರು-ನಿಂತಿದ್ದರು, ಅವರೋಳ್-ಅವರೊಳಗೆ ಒಬ್ಬನಾದ ಆಂಜನೇಯನು, ಜಾಂಬವನೊಡನೆ-ಕರಡಿಗಳ ರಾಜನೊಂದಿಗೆ, ಎಂದನು-ಮುಂದೆ ಹೇಳುವಂತೆ ಹೇಳುವನು ||

ಅ|| ವಿ|| ಅಗ್ರಭವ-ಅಗ್ರ-ಮೊದಲಲ್ಲಿ, ಭವ-ಹುಟ್ಟಿದವನು, (ಅಣ್ಣ) ಬ್ರಹ್ಮನು (ಕೃ. ವೃ) ಪೊಂದೇರ್ (ವ್ಯಂಜನ ಸಂಧಿ ಮತ್ತು ಷ. ತ.) ||೩೮||

ಟೀ|| ಜಾಂಬವರೆ-ಋಕ್ಷಪತಿಗಳಾದ ಜಾಂಬವಂತರೆ, ಕಂಡೀರೆ - ಈಕ್ಷಿಸುತ್ತಲಿರುವಿರಾ ? ರಾಮ - ಶ್ರೀ ರಾಮಮೂರ್ತಿಯೆ, ಆದಿ-ಮೊದಲಾದ, ವೀರರಂ-ಶೂರಾಗ್ರಣಿಗಳನ್ನು, ದಿಂಡುಕೆಡಪಿದಬಳಿಕ-ನೆಲಹತ್ತಿ ಬೀಳುವಂತೆ ಮಾಡಿದನಂತರ, ರಣದೋಳ್-ಕಾಳಗದಲ್ಲಿ, ಉಸಿರು-ಜೀವವನ್ನು, ಇರ್ದರಂ - ಇಟ್ಟುಕೊಂಡಿರತಕ್ಕವರನ್ನು, ಮುಂಡೆವಿಡಿದು- ಜುಟ್ಟು

---

ದ್ರನು ಮೂರ್ಛಾಕ್ರಾಂತನಾಗಿ ಬಿದ್ದುಹೋಗಿರುವುದನ್ನು ಕುಶಲವರು ನೋಡಿ, ಜಾಗ್ರತೆಯಲ್ಲಿ ಅಲ್ಲಿಗೆ ಬಂದು, ರಾಜಾಗ್ರಣಿಯಾದ ದಾಶರಥಿಯ ಕಾಂತಿಯುಕ್ತವಾದ ಮೋರೆಯನ್ನೂ ಬಲಮುರಿ ಶಂಖವನ್ನು ತಿರಸ್ಕರಿಸುವ ಶ್ರೇಷ್ಠವಾದ ಕಂಠವನ್ನೂ ನೋಡಿ ಆತನ ಕರ್ಣಕುಂಡಲವನ್ನೂ, ಕಂಠೀಹಾರವನ್ನೂ ಕಳಚಿಕೊಂಡವರಾಗಿ, ಲಕ್ಷ್ಮಣ ಶತ್ರುಘ್ನ ಭರತಾದಿಗಳಿದ್ದೆಡೆಗೆ ಬಂದು, ಅವರು ಧರಿಸಿದ್ದ ಅಮೂಲ್ಯವಾದ ದಿವ್ಯಾಭರಣಂಗಳನ್ನು ಸುಲಿದುಕೊಂಡು ಎಲ್ಲವನ್ನೂ ಒಂದು ವಸ್ತ್ರದಲ್ಲಿ ಕಟ್ಟಿದವರಾದರು || ೩೭ || ಆಗ ಲವನೆಂಬ ಬಾಲಕನು ತನ್ನಣ್ಣನನ್ನು ಕುರಿತು ಎಲೈ ಅಗ್ರಜನೆ, ಈ ಶೂರರದೊಂದು ತೇರನಡರ್ದು ನಾನೀಗ ಪೋಗಿ ಈ ಸಮರಾಂಗಣದಲ್ಲಿ ಎಚ್ಚರವಾಗಿರುವ ಶೂರರ ಜುಟ್ಟನ್ನು ಹಿಡಿದು ಎಳೆದುಕೊಂಡು ಬರುವೆನೆಂದು ಹೇಳಿ ಅಣ್ಣನ ಆಜ್ಞೆಯನ್ನು ಕೈಕೊಂಡು ಸ್ವರ್ಣಖಚಿತವಾಗಿ ಸೂರ್ಯತೇಜೋವಿರಾಜಮಾನವಾಗಿರತಕ್ಕ ಸೌಮಿತ್ರಿಯ ಉತ್ತಮ ರಥದಮೇಲೆ ಕುಳಿತು ಯುದ್ಧಭೂಮಿಯನ್ನೆಲ್ಲಾ ಈಕ್ಷಿಸುತ್ತಾ ಬರುತ್ತಲಿರುವುದನ್ನು ಮೂರ್ಛೆಯಿಲ್ಲದೆ ಎಚ್ಚರವಾಗಿದ್ದ ಕಪಿವೀರರಾದ ಹನುಮ ಜಾಂಬವರು ಕಂಡವರಾದರು || ೩೮ || ಆಗ ಮಾರುತಿಯು ಋಕ್ಷಪತಿಯಾದ ಜಾಂಬವಂತನನ್ನು ನೋಡಿ ಎಲೈ

ಮಂಡೆವಿಡಿದೆಳದೊಯ್ವೆನೆಂದುಸೀತಾಸುತಂಬಂದಪಂನಾವಿವನೊಳು || ದಂಡಿಗಾರೆವುನಮ್ಮನೀಬಾಲಕಂಪಿಡಿದು || ಕೊಂಡುಪೋಗೆ ಜಾನಕಿಯಪೊರೆಗೆದೇವಿಕೃಪೆ | ಯಿಂಡಿಂಗರಿಗರೆಂದುಪಾಲಿಸಲಿಮೇಣುಳಿಯಲೆಂದನಾಹನುಮಂತನು || ೪೯ || ಕೆಡದಿರ್ದರೆಲ್ಲರಂನೋಡಿರಣರಂಗದೋಳ್ | ಮ್ಮಿಡಿಕಿಮಾತಾಡುವಿವರಂಕಂಡುಲೀಲೆಯಿಂ | ಪಿಡಿದುಲವನೆಳತಂದುಕೌತುಕದಕಪಿಗಳೆಂದಣ್ಣಂಗೆತೋರಿಸಲ್ಕೆ || ಕಡುಮೆಚ್ಚಿತಮ್ಮನಂಕುಶನಪ್ಪಿದಂಬಳಿಕ | ಪಡೆದತಾಯಂಕಾಣಲಾಪ್ಲವಗಪತಿಗಳಂ | ಬಿಡದನಿಬರಾಭರಣಮನಿತುಮಂಕೊಂಡೀರ್ವರುಂಬಂದರಾಶ್ರಮಕ್ಕೆ ||೫೦|| ಏನಾದಪರೊತನಯರೆಂದ.ಚಿಂತಿಸುತಿರ್ಪ | ಜಾನಕಿಗೆ ರಾಮಾದಿಗಳ ಭೂಷಣಂಗಳಂ | ಕಾನನದಬೇಂಟೆಯೊಳ್ಸಿಕ್ಕಿಸೀಕರಿಗೊಂಬ ಮೃಗಪೋತಕಂಗಳಂತೆ || ಮೌನದಿಂಮ್ಮೆಯ್ಯು

ಹಿಡಿದು, ಎಳದೊಯ್ವೆನು-ಸೆಳೆದುಕೊಂಡು ಬರುತ್ತೇನೆ, ಎಂದು-ಎಂಬತೆರನಾಗಿ, ಸೀತಾಸುತಂ-ಸೀತಾದೇವಿಯ ಚಿಕ್ಕ ಮಗನಾದ ಲವನೆಂಬ ಬಾಲಕನು, ಬಂದಪಂ- ಐತರುತಲಿರುವನು, ಇವನೊಳ್- ಈ ಪಸುಳೆಯೊಂದಿಗೆ, ನಾವ್- ನಾವಾದರೊ, ದಂಡಿಗಾರೆವು-ಯುದ್ಧಮಾಡಿ ಗೆಲ್ಲಲಾರೆವು, ಈ ಬಾಲಕಂ-ಈ ಲವನು, ಜಾನಕಿಯ ಪೊರೆಗೆ-ಸೀತಾದೇವಿಯ ಸನ್ನಿಧಿಗೆ, ಎಮ್ಮನು-ನಮ್ಮನ್ನು, ಪಿಡಿದುಕೊಂಡು-ಸೆಳೆದುಕೊಂಡು, ಹೋಗಲಿ-ನಡೆಯಲಿ, ದೇವಿ-ಜಾನಕಿಯು, ಡಿಂಗರಿಗರೆಂದು-ತನ್ನನ್ನು ಮರೆಹೊಕ್ಕ ಸೇವಕರೆಂಬದಾಗಿ, ಕೃಪೆಯಿಂ-ಕರುಣಾಕಟಾಕ್ಷದಿಂದಿ, ಪಾಲಿಸಲಿ-ಕಾಪಾಡಲಿ, ಮೇಣ್-ಅಥವಾ, ಉಳಿಯಲಿ-ತ್ಯಜಿಸಲಿ, ಎಂದು-ಎಂಬದಾಗಿ, ಆ ಹನುಮನು-ಆ ಮಾರುತಿಯು, ಎಂದನು-ನುಡಿದವನಾದನು ||೪೯||

ಟೀ|| ಲವನು-ಲವಕುಮಾರನು, ರಣರಂಗದೋಳ್-ಕಾಳಗವು ನಡೆದ ಪ್ರದೇಶದಲ್ಲಿ, ಕೆಡೆದಿರ್ದ-ನೆಲಕ್ಕೆ ಉರುಳಿದ್ದ, ಎಲ್ಲರಂ-ಸಮಸ್ತ ಜನರನ್ನು, ನೋಡಿ-ಈಕ್ಷಿಸಿದವನಾಗಿ, ಮಿಡುಕಿ-ಸಂಕಟಪಟ್ಟುಕೊಂಡು, ಮಾತಾಡುವ-ಒಬ್ಬರೊಂದಿಗೆ ಒಬ್ಬರು ಎಂದುಕೊಳ್ಳುತ್ತಲಿರುವ, ಇವರಂ- ಈ ಅಂಜನಾಸುತ ಋಕ್ಷಪತಿಗಳನ್ನು, ಕಂಡು-ಈಕ್ಷಿಸಿ, ಪಿಡಿದು-ಆ ಈರ್ವರ ಜುಟ್ಟನ್ನೂ ಹಿಡಿದುಕೊಂಡು, ಲೀಲೆಯಿಂ-ಸಂಭ್ರಮಾತಿಶಯದಿಂದ, ಎಳತಂದು- ಸೆಳೆದುಕೊಂಡು ಬಂದು, ಕೌತುಕದ-ಅಚ್ಚರಿಯನ್ನುಂಟುಮಾಡುವ, ಕಪಿಗಳೆಂದು-ಕೋಡಗಂಗಳೆಂಬುದಾಗಿ, ಅಣ್ಣಂಗೆ-ತನ್ನಗ್ರಜನಾದ ಕುಶನಿಗೆ, ತೋರಿಸಲ್ಕೆ-ಕಾಣಿಸಲು, ಕುಶನು-ಕುಶನೆಂಬ ಬಾಲಕನು, ಕಡುಮೆಚ್ಚಿ-ಅತ್ಯಾನಂದದಿಂದ ಕೂಡಿ, ತಮ್ಮನಂ-ತನ್ನ ಅನುಜಾತನನ್ನು, ಅಪ್ಪಿದಂ-ತಬ್ಬಿಕೊಂಡವನಾದನು, ಬಳಿಕ-ಅನಂತರ, ಪಡೆದ-ತಮ್ಮನ್ನು ಹಡದ, ತಾಯಂ-ಮಾತೆಯಾದ ಜಾನಕಿಯನ್ನು, ಕಾಣಲು-ನೋಡಬೇಕೆಂದು, ಆ ಪ್ಲವಗ ಪತಿಗಳಂ-ಆ ವೀರರಾದ ಕೋಡಗಂಗಳೆರಡನ್ನೂ, ಬಿಡದೆ-ಬಿಟ್ಟುಬಿಡದೆ, ಅನಿಬರ-ಅಷ್ಟು ಜನರ, ಆಭರಣಮನಿತನಿತುಮಂ-ಎಲ್ಲಾ ಒಡವೆಗಳನ್ನೂ, ಕೊಂಡು-ಸ್ವೀಕರಿಸಿ, ಈರ್ವರುಂ-ಅವರಿಬ್ಬರೂ, ಆಶ್ರಮಕೆ-ತಮ್ಮ ತಾಯಿಯಿರುವ ಎಲೆ ಮನೆಗೆ, ಬಂದರು-ಬಂದವರಾದರು.

ಅ|| ವಿ|| ಪ್ಲವಗ=ಪ್ಲವ-ಜಾಗ್ರತೆಯಾಗಿ, (ಕುಪ್ಪಳಿಸಿ) ಗ-ಗಮಿಸತಕ್ಕವರು. ||೫೦||

ಟೀ|| ಸೂನುಗಳ್- ಲವಕುಶರೆಂಬೀರ್ವರು ಅಣ್ಣ ತಮ್ಮಂದಿರು, ರಾಮಾದಿಗಳ್- ಶ್ರೀರಾಮನೆ ಮೊದಲಾದವರ, ಭೂಷಣಂಗಳಂ- ದಿವ್ಯಾಭರಣಗಳನ್ನೂ, ಮತ್ತು, ಕಾನನದ-ಕಾಡಿನ, ಬೇಂಟೆಯೊಳ್- ಕೊಳ್ಳೆಯಲ್ಲಿ, ಸಿಕ್ಕಿ-ಸಿಕ್ಕಿಹೋಗಿ, ಸೀಕರಿಗೊಂಬ-ಸಂಕಟ ಪಡುತ್ತಲಿರುವ, ಮೃಗಪೋತಕಂಗಳಂತೆ-ಜಿಂಕೆ ಮೊದಲಾದವುಗಳ ಮರಿಗಳ ತೆರನಾಗಿ, ಮೈಯುಡುಗಿ-

ಜಾಂಬವಂತನೆ! ಜಾನಕಿಯ ಮಕ್ಕಳು ರಾಮಾದಿ ಸಕಲ ವೀರರನ್ನೂ ಗೆದ್ದ ಬಳಿಕ ರಣರಂಗದಲ್ಲಿ ಎಚ್ಚರವಾಗಿರತಕ್ಕವರ ಮಂಡೆಯನ್ನು ಹಿಡಿದು ಸೆಳೆದುಕೊಂಡು ಬರಬೇಕೆಂದು ಮಾತನಾಡಿಕೊಂಡು ಈಗ ಲವನು ಬರುತ್ತಲಿರುವುದನ್ನು ನೋಡಿದೆಯಾ? ಅವರ ಸಾಹಸವನ್ನು ಎಷ್ಟೆಂದು ಹೇಳಬೇಕು, ಆ ಬಾಲಕರನ್ನು ಸೋಲಿಸುವುದು ನಮಗೆ ಅಸಾಧ್ಯವಾದ್ದರಿಂದ ನಾವಿಬ್ಬರು ಸುಮ್ಮನಿರಬೇಕು, ಈ ಬಾಲಕನು ಬಂದು ನಮ್ಮ ಜುಟ್ಟನ್ನು ಹಿಡಿದು ಸೆಳದೊಯ್ದು ಅವನ ಮಾತೆಯಾದ ಜಾನಕಿಯ ಬಳಿಯಲ್ಲಿ ಕೆಡಹಲಿ, ಆಕೆಯು ನಮ್ಮನ್ನು ನೋಡಿ ಸಲಹಲಿ ಅಥವಾ ಬಿಟ್ಟುಬಿಡಲಿ, ನಾವಾದರೊ ಈಗ ಯಾವದೊಂದು ಮಾತೂ ಆಡದೆ ಸುಮ್ಮನಿರಬೇಕೆಂದು ಮಾತನಾಡಿಕೊಳ್ಳುತ್ತಲಿದ್ದರು ||೪೯|| ಲವನಾದರೊ ಎಚ್ಚರವಾಗಿ ಮಾತನಾಡುತ್ತಲಿರುವ ಈ ವಾನರ ನಾಯಕರನ್ನು ಕಂಡು ಅಲ್ಲಿಗೆ ಬಂದು ಅವರೀರ್ವರ ಜುಟ್ಟನ್ನೂ ಹಿಡಿದು ಎಳೆದುಕೊಂಡು ಬಂದು ತನ್ನಗ್ರಜನಾದ ಕುಶನಿಗೆ ತೋರಿಸಿದನು. ಲವನ ಸಾಹಸಕ್ಕೆ ವೆಚ್ಚಿ ಕುಶನು ಅವನನ್ನು ಸಂತೋಷದಿಂದ ಆಲಂಗಿಸಿಕೊಂಡು, ತಮ್ಮ ತಾಯಿಯ ಬಳಿಗೆ ಹೋಗಬೇಕೆಂದು ಬಗೆದು ವಸ್ತ್ರದಲ್ಲಿ ಕಟ್ಟಿದ್ದ ದಿವ್ಯಾಭರಣಗಳನ್ನೂ, ಈ ಕಪಿನಾಯಕರನ್ನೂ, ಕೂಡಿಕೊಂಡು ಜಾಗ್ರತೆಯಲ್ಲಿ ತಮ್ಮಾಶ್ರಮಕ್ಕೆ ಬಂದವರಾದರು. || ೫೦ || ಯುದ್ಧಕ್ಕಾಗಿ ಹೋದ ಮಕ್ಕಳು ಏನಾಗಿ ಹೋದರೊ ಕಾಣೆನಲ್ಲಾ ಎಂದು ಕಡು ದುಃಖದಿಂದ ಕಂದಿ ನಂದಿ ಬಾಯಾರಿ ಬಸವಳಿದಿದ್ದ ಜಾನಕಿಯು ತನ್ನಪುತ್ರರು ಜಯಶೀಲರಾಗಿ ಬಂದದ್ದನ್ನು ನೋಡಿ ತನಗೊದ

ಮುಗಿನೊಂದಿಳೆತಟಕೆಬಿದ್ದ | ವಾನರಶ್ರೇಷ್ಠರಂ ತಂದಿತ್ತು ಚರಣದೊ | ಳ್ಮನುಗಳ್ಪೊಡವಡಲ್ಕಾಸೀತೆನಡನಡುಗಿನಂದನರ್ಗಿಂ ತೆಂದಳು ||೪೧|| ಆರುಮರಿಯದವೊಲೀಕಾನನದೊಳಿರ್ದೆನಾಂ | ಧಾರುಣೀಶರಭೂಷಣಂಗಳೇತಕೆನಮಗೆ | ವೀರಕಪಿವರರಿವರ್ಜಗದೊಳಭಿಮಾನಿಗಳ್ಭಂಗಮೇಕಿಂತಿವರ್ಗೆ || ಘೋರಕರ್ಮಂಗಳಂ ಮಾಡಿದಿರಿಮಕ್ಕಳಿರ | ದಾರಿದಪ್ಪಿದಿರಿನ್ನು ವಾಲ್ಮೀಕಿ ಮುನಿವರಂ | ಬಾರದಿಂದೀಗಳೆರಣದೊಳಿವರನಿರಿಸಿಬಹುದೆಂದಳವನಿಜೆಲವಂಗೆ || ೪೨ || ವೈದೇಹಿನುಡಿದುದಂ ಕೈಕೊಂಡುಲವನವರ | ನೊಯ್ದುರಣಮಧ್ಯದೊಳ್ಮಗುಳಿರಿಸಿಬಂದನಿದ | ನೈದೆನಾರದನಿಂದಕೇಳ್ದುವಾಲ್ಮೀಕಿಮುನಿಪಾತಾಳಲೋಕದಿಂದ ||

ಶಕ್ತಿಕುಂದಿ, ನೊಂದು-ಕಷ್ಟಗಳನ್ನನುಭವಿಸಿ, ಮೌನದಿಂ-ಸುಮ್ಮನೆ, (ಯಾವ ಮಾತೂ ಆಡದೆ) ಇಳೆತಟಕೆ-ನೆಲದ ಮೇಲೆ, ಬಿದ್ದ-ಬಿದ್ದಿದಂಥ, ವಾನರಶ್ರೇಷ್ಠರಂ-ಉತ್ತಮ ಕಪಿಗಳಾದ ಮಾರುತಿ ಜಾಂಬವಂತರೆಂಬೀರ್ವರನ್ನು, ತಂದು-ಸೆಳೆದುಕೊಂಡು ಬಂದು, ತನಯರು-ತನ್ನ ಕುವರರು, ವಿನಾದಪರೊ-ಯಾವಗತಿಯನ್ನೈದುವರೊ, ಎಂದು-ಎಂಬದಾಗಿ, ಚಿಂತಿಸುತ-ದುಃಖ ಪಡುತ್ತ, ಇರ್ದ-ಇದ್ದಂಥ, ಜಾನಕಿಗೆ-ವೈದೇಹಿಗೆ, ಇತ್ತು-ಒಪ್ಪಿಸಿದವರಾಗಿ, ಚರಣದೊಳ್-ಕಾಲುಗಳಲ್ಲಿ, ಪೊಡಮಡಲ್ಕೆ-ವಂದನೆಯನ್ನರ್ಪಿಸಲು, ಆ ಸೀತೆ-ಆ ಜನಕರಾಜನ ಕುವರಿಯು, ನಡನಡುಗಿ-ಹೆಚ್ಚಾಗಿ ಕಂಪಿಸುತ್ತ, ನಂದನರ್ಗೆ-ತನ್ನ ಮಕ್ಕಳನ್ನು ಕುರಿತು, ಇಂತು-ಮುಂದೆ ಹೇಳುವಂತೆ, ಎಂದಳು-ಹೇಳತೊಡಗಿದಳು.

ಅ|| ವಿ|| ನಡನಡುಗಿ-ಆಧಿಕ್ಯದಲ್ಲಿ ದ್ವಿರುಕ್ತಿಯು ಬಂದಿರುವುದು. ||೪೧||

ಟೀ|| ಆರುಂ-ಯಾರೊಬ್ಬರೂ, ಅರಿಯದವೊಲ್-ತಿಳಿಯದಂತೆ, ಈ ಕಾನನದೊಳ್-ಈ ಕಾಡಿನೊಳಗೆ, ಆಂ-ನಾನಾದರೊ, ಇರ್ದೆನು-ಸೇರಿಕೊಂಡಿದ್ದೆನು, ಧಾರುಣೀಶರ-ರಾಜರ, ಭೂಷಣಂಗಳು-ಆಭರಣಂಗಳು, ನಮಗೆ-ನಮಗಾದರೆ, ಏತಕೆ-ಏನು ಪ್ರಯೋಜನ, ಇವರು-ನೀವು ಹಿಡಿದಿರತಕ್ಕ ಈ ಇಬ್ಬರೂ, ವೀರ-ಪರಾಕ್ರಮಿಗಳಾದ, ಕಪಿವರರು-ವಾನರೋತ್ತಮರು, ಜಗದೊಳಗೆ-ಲೋಕದಲ್ಲಿ, ಅಭಿಮಾನಿಗಳು-ಮನ್ನಣೆಗೆ ಪಾತ್ರರಾದವರು, ಇಂತು-ಈ ಪರಿಯಲ್ಲಿ, ಇವರ್ಗೆ-ಈ ವಾನರಾಗ್ರಣಿಗಳಿಗೆ, ಭಂಗಂ-ಅಮರ್ಯಾದೆಯನ್ನು, ಏತಕೆ - ಏತಕ್ಕಾಗಿ ಮಾಡಿದಿರಿ, ಮಕ್ಕಳಿರಾ-ಎಲೈ ಕುವರರೆ, ಘೋರ ಕರ್ಮಂಗಳಂ-ಅತಿ ಕಠಿಣವಾದ ಕಾರ್ಯಗಳನ್ನು, ಮಾಡಿದಿರಿ-ಎಸಗಿದವರಾದಿರಿ, ದಾರಿತಪ್ಪಿದಿರಿ-ದುರ್ಮಾರ್ಗವನ್ನವಲಂಬಿಸಿದಿರಿ, ವಾಲ್ಮೀಕಿಮುನಿವರಂ-ವಾಲ್ಮೀಕಿ ಮಹಾಮುನಿಯು, ಇನ್ನು-ಇನ್ನು ಮೇಲೆ, ಈಗಳೆ-ಕೂಡಲೆ, ಬಾರದೆ ಇರನ-ಬರದೆ ತಪ್ಪುವುದಿಲ್ಲ, ಎಂದರೆ ಜಾಗ್ರತೆಯಲ್ಲಿಯೆ ಬರುತ್ತಾನೆ, ಈಗಳೆ-ಇದೇ ಕಾಲದಲ್ಲಿಯೇ, ಇವರನು-ಈ ವಾನರಶ್ರೇಷ್ಠರೀರ್ವರನ್ನೂ, ರಣದೊಳ್-ರಣಾಂಗಣದಲ್ಲಿ, ಇರಿಸಿ ಬಹುದು-ಇರಿಸಿ ಬರಬೇಕು, ಎಂದು-ಎಂಬತೆರನಾಗಿ, ಲವಂಗೆ-ಲವನೆಂಬ ತನ್ನ ಕಿರೀಮಗನೊಂದಿಗೆ, ಅವನಿಜೆ-ಭೂದೇವಿಯ ಮಗಳಾದ ಸೀತಾದೇವಿಯು, ಎಂದಳು-ಎಂದು ನುಡಿದವಳಾದಳು ||೪೨||

ಟೀ|| ವೈದೇಹಿ-ಜಾನಕಿಯು, ನುಡಿದುದಂ - ಅಪ್ಪಣೆ ಮಾಡಿದ್ದನ್ನು, ಲವನು-ಲವಕುಮಾರನು, ಕೈಕೊಂಡು-ಒಪ್ಪಿದವನಾಗಿ, ಅವರನು-ಕಪಿವರ್ಯರಾದ ಜಾಂಬವ ಹನುಮಂತರೆಂಬೀರ್ವರನ್ನೂ, ಒಯ್ದು-ಸೆಳದುಕೊಂಡು ಹೋಗಿ, ಮಗುಳೆ-ತಿರುಗಿ, ರಣಮಧ್ಯದೊಳ್-ಯುದ್ಧ ಭೂಮಿಯಲ್ಲಿಯೇ, ಇರಿಸಿ ಬಂದನು-ಇಟ್ಟು ಪುನಃ ಆಶ್ರಮಕ್ಕೆ ಬಂದು ಸೇರಿದನು, ವಾಲ್ಮೀಕಿ ಮುನಿ-ವಾಲ್ಮೀಕಿ ಎಂಬ ತಾಪಸೋತ್ತಮನು, ನಾರದನಿಂದ- ನಾರದ ಋಷಿಯಿಂದ, ಇದನು-ರಾಮ ಮತ್ತು ಕುಶಲವ

---

ಗಿದ್ದ ಸಂಕಟವನ್ನೆಲ್ಲಾ ನೀಗಿಕೊಂಡವಳಾದಳು, ಕುಶಲವರಾದರೊ ತಮ್ಮ ತಾಯಿ ಇದ್ದೆಡೆಗೆ ಬಂದ ಕೂಡಲೆ ತಾವು ತಂದಿದ್ದ ಸರ್ವಾಭರಣಗಳನ್ನೂ ಕಪಿನಾಯಕರನ್ನೂ ಜಾನಕಿಗೊಪ್ಪಿಸಿ ಆಕೆಯ ಪಾದಾರವಿಂದಗಳಿಗೆ ನಮಸ್ಕಾರವನ್ನರ್ಪಿಸಿದರು, ವೈದೇಹಿಯು ಯುದ್ಧದಲ್ಲಿ ಮೈಮರೆತಿದ್ದ ಕಪಿನಾಯಕರನ್ನು ಈ ಬಾಲಕರು ಸೆಳೆದುಕೊಂಡು ಬಂದಿರುವುದನ್ನೂ, ರಾಜಾಗ್ರಣಿಗಳ ಆಭರಣಂಗಳನ್ನೆಲ್ಲಾ ಸೂರೆಮಾಡಿಕೊಂಡು ತಂದಿರುವುದನ್ನೂ ಕಂಡು, ಗಡಗಡನೆ ನಡುಗುತ್ತ ||೪೧|| ಆ ಬಾಲಕರನ್ನು ಕುರಿತು, ಎಲೈ ನನ್ನ ಮುದ್ದು ಕೂಸುಗಳೆ! ಮೋಹದರಗಿಣಿಗಳೆ, ಈ ಅರಣ್ಯದಲ್ಲಿ ಯಾರೊಬ್ಬರೂ ಕಾಣದಂತೆ ನಾನು ವಾಸವಾಗಿದ್ದೆನಲ್ಲಾ ರಾಜರ ಆಭರಣಂಗಳು ವನವಾಸಿಗಳಾದ ನಮಗೇತಕ್ಕೆ? ಕಪಿಶ್ರೇಷ್ಠರು ಮರ್ಯಾದಾರ್ಹರು ಇಂಥವರಿಗೆ ಈ ತೆರನಾದ ದುರ್ದಶೆಯೊದಗುವಂತೆ ಮಾಡಿ ಬಿಟ್ಟಿರಲ್ಲಾ ! ನೀವು ಬಹಳ ಕಠಿಣವಾದ ಕೆಲಸಗಳನ್ನು ಮಾಡಿಕೊಂಡು ಬಂದು ಬಿಟ್ಟಿರಿ ಸನ್ಮಾರ್ಗವನ್ನು ಮೀರಿದಿರಿ. ನಮ್ಮ ಗುರುಗಳಾದ ವಾಲ್ಮೀಕಿ ಮುನಿಗಳು ಬರುವ ಸಮಯವಾಯಿತು, ಅವರು ಇದನ್ನು ನೋಡಿದರೆ ಕೋಪಿಸಿಕೊಳ್ಳದಿರಲಾರರು. ಆದ್ದರಿಂದ ಎಲೈ ಲವನೆ, ನೀನು ಈಗಲೆ ತಡಮಾಡದೆ ಈ ಕಪಿಗಳನ್ನು ಕರೆದುಕೊಂಡು ಹೋಗಿ ರಣರಂಗದಲ್ಲಿ ಬಿಟ್ಟುಬಾರೆಂದು ನುಡಿದಳು ||೪೨|| ಲವನಾದರೊ ತನ್ನ ಜನನಿಯ ನುಡಿಗಳನ್ನು ಶಿರಸಾವಹಿಸಿದವನಾಗಿ ಆ ಕಪಿಗಳನ್ನು ಎತ್ತಿಕೊಂಡು ಜಾಗ್ರತೆಯಲ್ಲಿ ರಣರಂಗದಲ್ಲಿಟ್ಟು ಬಂದವನಾದನು, ತ್ರಿಲೋಕಸಂಚಾರಿಯಾದ ನಾರ

ವೈದೇಹಿಲಾಶ್ರಮದ್ವಾರದೊಳ್ಕಂಡುಮೇ | ಲ್ವಾದುಕ್ಕುವಾನಂದರಸದಿಂದವಂದನಂ | ಗೈದಳವನಿಜೆಮಣಿದರೆಲ್ಲ
ರಂಜಾನಕಿಯಸುತರೆರಗಿದರ್ಪದದೊಳು ‖ ೪೩ ‖ ಶರವೇದಮೂರ್ತಿಗಳತೆರದಿಂದರಾಜಿಸುವ | ತರಳರಂಮಣಿದೆತ್ತಿಮಕ್ಕಳಿರ
ನಿಮಗೇಘು | ವರನಸೇನೆಯೊಳಾಯ್ತು ಗಡಕಲಹಮೇಕೆತೊಡಗಿತು ತೋಟನಿಮ್ಮಕೂಡೆ ‖ ಧುರಕೆಬಂದೆಚ್ಚಾಡಿಬಿದ್ದರಾ
ರಾರ್ಮೈರಿಯೊ | ಳರಿಗಳಂಬಿನಘಾಯ ಮಿಲ್ಲದೆತ್ತಣಬಲೋ | ತ್ಕರದೇಳ್ಗೆಪೇಳ್ವುದೆನೆ ವಾಲ್ಮೀಕಿಮುನಿಪುಂಗವಂಗೆ ಕುಶನಿಂ
ತೆಂದನು ‖ ೪೪ ‖ ತಂದೆನೀನಿರಲೆಮಗೆಸುಕ್ಷೇಮಕರಮಪ್ಪು | ದೆಂದೆಂದುನಿಜಮಿದೇಂನಿಮ್ಮಡಿಗಳುಪದೇಶ | ದಿಂದರಿಗಳಂ

ರಕಾಳಗದ ಸುದ್ದಿಯನ್ನು, ಕೇಳ್ದು-ಕೇಳಿದವನಾಗಿ, ಪಾತಾಳಲೋಕದಿಂದ-ಭೂಲೋಕದ ತಳಗಡೆಯ ಲೋಕದಿಂದ, ಬಿದ-ಬರಲಾಗಿ, ಆಶ್ರಮದ್ವಾರದೋಳ್-ತನ್ನ ಎಲೆ ಮನೆಯ ಬಾಗಿಲಲ್ಲಿ, ವೈದೇಹಿಲು-ಪ್ರತ್ಯಕ್ಷನಾಗಲು, ಕಂಡು-ಇದನ್ನು ನೋಡಿ, ಅವನಿಜೆ-ಭೂ ಪುತ್ರಿಯು, ಮೇಲ್ವಾಯ್ದು-ಮೇಲೆ ಮೇಲೆ ಹೆಚ್ಚು ಹೆಚ್ಚಾಗಿ, ಉಕ್ಕುವ-ಮಿತಿಮೀರುವ, ಆನಂದ ರಸದಿಂದ-ಹರ್ಷ ರಸದಿಂದ ಕೂಡಿದವಳಾಗಿ, ವಂದನಂಗೈದಳು-ನಮಸ್ಕಾರಗಳನ್ನರ್ಪಿಸಿದವಳಾದಳು, ಎಲ್ಲರುಂ-ಅಲ್ಲಿ ನೆರದಿದ್ದ ಅಶೇಷರೂ, ಮಣಿದರು-ವಂದನೆಗಳನ್ನರ್ಪಿಸಿದರು, ಜಾನಕಿಯ ಸುತರು-ಸೀತಾದೇವಿಯ ತನುಜಾತರಾದ ಕುಶಲವರೂ, ಪದದೊಳು-ವಾಲ್ಮೀಕಿ ಮಹರ್ಷಿಯ ಪಾದ ಕಮಲಗಳಲ್ಲಿ, ಎರಗಿದರು-ಅಡ್ಡಬಿದ್ದವರಾದರು ‖೪೩‖

ಟೀ‖ (ವಾಲ್ಮೀಕಿಯು ಕುಶಲವರನ್ನು ಕೇಳುವನು) ಶರವೇದ-ಧನುಶ್ಶಾಸ್ತ್ರದ, ಮೂರ್ತಿಗಳ-ಅಧಿದೇವತೆಗಳ ಆಕಾರದ, ತೆರದಿಂದ-ಬಗೆಯಿಂದ, ರಂಜಿಸುವ-ಹೊಳೆಹೊಳೆವ, ತರಳರಂ-ಮಕ್ಕಳನ್ನು, ಮಣಿದು-ಬಾಗಿ, ಎತ್ತಿ-ಹತ್ತಿರಕ್ಕೆ ಸೆಳೆದು ಕೊಂಡು, ಮಕ್ಕಳಿರ-ಎಲೈ ಬಾಲಕರೆ, ರಘುವರನ-ಶ್ರೀ ರಾಮದೇವರ, ಸೇನೆಯೊಳು-ದಂಡಿನಲ್ಲಿ, ನಿಮಗೆ-ನಿಮ್ಮಿಬ್ಬರಿಗೂ, ಕಲಹಂ-ಯುದ್ಧವು, ಆಯ್ತುಗಡ-ಉಂಟಾಯಿತಷ್ಟೆ, ನಿಮ್ಮ ಕೂಡ-ನಿಮ್ಮೊಂದಿಗೆ, ತೋಟ-ಕದನವು, ಏಕೆ-ಯಾವ ಕಾರಣದಿಂದ, ತೊಡಗಿತು-ಪ್ರಾಪ್ತವಾಯಿತು, ಆರಾರು-ಯಾರು ಯಾರು, ಧುರಕೆ-ಯುದ್ಧಕ್ಕಾಗಿ, ಬಂದು-ನೆರೆದು, ಬಿದ್ದರು-ಬಿದ್ದು ಹೋದರು, ಅಂಬಿನ-ಸರಲ್ಗಳ, ಘಾಯಂ-ಹುಣ್ಣು, ನಿಮಗೆ-ನಿಮಗಾದರೊ, ಇಲ್ಲದೆ-ಬದಗದಿರಲು, ಎತ್ತಣ-ಯಾವ ತರದ, ಬಲೋತ್ಕರದ-ಸತ್ವಾತಿಶಯದ, ಏಳ್ಗೆ-ಮೇಲ್ಮೆಯು, ಪೇಳ್ವುದು - ಹೇಳಬೇಕು, ಎನೆ-ಹೀಗೆಂದು ವಾಲ್ಮೀಕಿಯು ಕೇಳಲು, ಕುಶನು-ಕುಶನೆಂಬ ಬಾಲಕನು, ವಾಲ್ಮೀಕಿ ಮುನಿಪುಂಗವಂಗೆ-ಹುತ್ತದ ಮಗನಾದ ವಾಲ್ಮೀಕಿಋಷೀಶ್ವರನಿಗೆ, ಇಂತು-ಮುಂದೆ ಹೇಳುವಂತೆ, ಎಂದನು-ನುಡಿದನು.

ಅ‖ ವಿ‖ ಪುಂಗವ, ಎಂಬ ಶಬ್ದವು ಶ್ರೇಷ್ಠವಾಚಕವಲ್ಲಿ ಪ್ರಯೋಗಿಸಲ್ಪಟ್ಟಿರುವುದು. ಇದರಂತೆಯೇ 'ಮಣಿ' 'ವರ' ಎಂಬ ಪದಗಳನ್ನೂ ಪ್ರಯೋಗಿಸುವುದುಂಟು ‖೪೪‖

ಟೀ‖ ಕುಶನು ವಾಲ್ಮೀಕಿಯನ್ನು ಕುರಿತು, ತಂದೆ-ಜನಕನು, ನೀನು-ನೀನೆ, ಇರಲ್-ಇರಲಾಗಿ, ಎಮಗೆ-ನಮಗಾದರೋ, ಎಂದೆಂದು-ಅನವರತವೂ, ಸುಕ್ಷೇಮಕರಂ-ಕ್ಷೇಮಸಹಿತವಾದದ್ದು, ಅಪ್ಪುದು-ಆಗುತ್ತದೆ, ಇದು-ಈ ನನ್ನ ನುಡಿಯು, ನಿಜಂ-ಯಥಾರ್ಥವು, ಏಂ-ಇನ್ನು ಹೇಳತಕ್ಕದ್ದೇನೂ ಇಲ್ಲವು, ನಿಮ್ಮ-ನಿಮ್ಮ ಸಂಬಂಧವಾದ, ಅಡಿಗಳ್-ಪಾದಗಳ (ಅಭಿಮಾನದಿಂ

ದ ಮಹಾಮುನಿಯು ಈ ಸುದ್ದಿಯನ್ನು ಪಾತಾಳಲೋಕದಲ್ಲಿದ್ದ ವಾಲ್ಮೀಕಿಮಹರ್ಷಿಗೆ ಬಂದು ಹೇಳಲಾಗಿ ಆ ತಪೋನಿಧಿಯು ಜಾಗ್ರತೆಯಲ್ಲಿ ಹೊರಟು ಭೂಲೋಕವನ್ನು ಸೇರಿ ತನ್ನಾಶ್ರಮದೆಡೆಗೆ ಬಂದವನಾದನು, ಜನಕರಾಯನ ಕುವರಿಯೂ ಶ್ರೀರಾಮಚಂದ್ರನ ಪಟ್ಟದರಸಿಯೂ ಆದ ಸೀತಾದೇವಿಯು ಆಶ್ರಮದ್ವಾರಕ್ಕೆ ಬಂದ ವಾಲ್ಮೀಕಿಮುನಿಗಳಿಗೆ ಸಂತೋಷದಿಂದ ನಮಸ್ಕಾರವನ್ನು ಮಾಡಿದಳು, ಆಶ್ರಮವಾಸಿಗಳೆಲ್ಲ ಮಹರ್ಷಿಯ ಪಾದಾರವಿಂದಗಳಲ್ಲಿ ವಂದನೆಗಳನ್ನರ್ಪಿಸಿದರು, ಲವಕುಶರೆಂಬ ಸೀತಾದೇವಿಯ ಕುವರರೂ ಕೂಡ ತಾಪಸವರ್ಯನ ಪಾದಗಳಿಗೆ ಅಡ್ಡಬಿದ್ದವರಾದರು ‖೪೩‖ ಆಗ ವಾಲ್ಮೀಕಿಮಹಾಮುನಿಯು, ಧನುರ್ವೇದವೇ ಮೂರ್ತೀಭವಿಸಿ ತನ್ನೆದುರಿಗೆ ಬಂದು ನಿಂತಿರುವುದೋ ಎಂಬಂತೆ ರಾರಾಜಿಸುತ್ತಲಿರುವ ಬಾಲಕರೀರ್ವರನ್ನೂ ತನ್ನಲ್ಲಿಗೆ ಕರೆದುಕೊಂಡು, ತೊಡೆಯಮೇಲೆ ಕೂಡಿಸಿಕೊಂಡವನಾಗಿ, ಬಾಲಕರ ಮುದ್ದುಮೊಗವನ್ನು ನೋಡಿ ನೋಡಿ ಹಿಗ್ಗುತ್ತ, ಅವರೀರ್ವರನ್ನೂ ಕುರಿತು, ಎಲೈ ಬಾಲಕರೆ, ನಿಮಗೂ ಶ್ರೀರಾಮಚಂದ್ರನ ಮಹಾ ಸೈನ್ಯಕ್ಕೂ ಯುದ್ಧವು ಏತಕ್ಕೆ ಒದಗಿತು? ನಿಮ್ಮೊಡನೆ ಹೋರಾಡಲು ಬಂದವರು ಯಾರು ಯಾರು? ಅವರನ್ನೆಲ್ಲಾ ನೀವು ಜಯಿಸಿದತೆರನಾವುದು? ನಿಮ್ಮ ಮೇಲೆ ಬಂದೊದಗಿದ ಸೇನಾಜಲಧಿ ಪರಿಮಿತಿಯೆಷ್ಟು? ನಿಮಗೆ ಆ ಮಹಾಸೈನ್ಯವನ್ನೂ ಆ ಅಸಹಾಯಶೂರರಾದ ರಾಜಾಧಿರಾಜರನ್ನೂ ಜಯಿಸತಕ್ಕ ಸಾಮರ್ಥ್ಯವು ಹೇಗುಂಟಾಯಿತು? ಇದನ್ನೆಲ್ಲಾ ವಿಸ್ತಾರವಾಗಿ ಹೇಳಿರೆಂದು ಕೇಳಲು ಕುಶನು ‖ ೪೪ ‖ ಗುರುಗಳಾದ ವಾಲ್ಮೀಕಿ ಮಹರ್ಷಿಗಳ ಪಾದಕ್ಕೆರಗಿ, ಎಲೈ ಮಹಾನುಭಾವನಾದ ತಂದೆಯೇ, ನಿನ್ನ ದಯೆಯು ನಮ್ಮಲ್ಲಿ ಅತಿಯಾಗಿರುವಾಗ

ಗೆಲ್ದೆವೀಸಿಮ್ಮ ಪುಣ್ಯಾಶ್ರಮದೊಳಾಯ್ತು ಭೂತಹಿಂಸೆ ‖ ಬಂದುದೊಂದಶ್ವಮದನೀ ಲವಂ ಕಟ್ಟಿದಂ । ಮುಂದಿಕವಿದುದು ಮೇಲೆಶತ್ರುಘ್ನನುರುಬಿದಂ । ಸಂಧಿಸಿದೆನಾಂಬಳಿಕ ಸೌಮಿತ್ರಿಭರತರಾಮಾದಿಗಳ್ನಡೆತಂದರು ‖ ೪೫ ‖ ಕಡೆಯಮಾತೇನಿನ್ನು ದೊರೆದೊರೆಗಳೆಲ್ಲರಂ । ಪಡೆಯೊಳ್ನಿಶಾಟಕಪಿನರಚಾತುರಂಗಮಂ । ಕೆಡಹಿದೆವೆನಲ್ಕುಶನನುಡಿಗೆಸ್ಯೈವೆರಗಾಗಿವಾಲ್ಮೀಕಿಮುನಿ ಮನದೊಳು ‖ ಕಡುನೊಂದನಕಟಕಟತಪ್ಪಾದುದೆನುತನಡ । ನಡುಗುತಿಹಸೀತೆಯಂಸಂತೈಸಿವಹಿಲದಿಂ । ನಡೆತಂದನೊಡ ನಿರ್ದತಾಪಸವಿತತಿಸಹಿತಸಂಗ್ರಾಮಭೂಮಿಗಾಗಿ ‖ ೪೬ ‖ ಶರಧಿಯಂಕಟ್ಟುವಂದಾರಾಘವೇಶ್ವರಂ । ಧರೆಯೊಳಿಟ್ಟಣಿಸಿರ್ದ ಬೆಟ್ಟಂಗಳೆಲ್ಲಮಂತರಿಸಿದಂ । ಭೂಮಿಗಾಧಾರವಿಲ್ಲದೆಪೋಪುದೆಂದವನತನುಜಾತರು‖ ಗಿರಿಗಳಂಪ್ರತಿಯಾಗಿತಂದಿಳೆಯಮೇಲಿನ್ನು ।

---

ಮೊಗೆದ) ಉಪದೇಶದಿಂದ- ಸದ್ಬೋಧನೆಯಿಂದ, ಅರಿಗಳ_ಹಗೆಗಳನ್ನೆಲ್ಲಾ, ಗೆಲ್ದೆವು-ಸೋಲಿಸಿ ಬಿಟ್ಟೆವು, ಈ ಪುಣ್ಯಾಶ್ರಮದೊಳು-ಈ ಸಿದ್ಧಾಶ್ರಮದಲ್ಲಿ, ಭೂತಹಿಂಸೆ-ಜೀವವಧೆಯು, ಆಯ್ತು-ಉಂಟಾಯಿತು, ಒಂದಶ್ವಂ_ತುರಗವೊಂದು, ಬಂದುದು_ಐತಂದಿತು, ಈ ಲವಂ-ಈ ಲವಕುಮಾರರು, ಅದಂ-ಆಹಯವನ್ನು, ಕಟ್ಟಿದಂ_ ಕಟ್ಟಿಹಾಕಿದನು, ಮುಂದಿ_ಪರಸೈನ್ಯವೆಲ್ಲಾ, ಕವಿದುದು_ಸುತ್ತಿಕೊಂಡಿತು, ಮೇಲೆ-ಅದೂ ಅಲ್ಲದೆ, ಶತ್ರುಘ್ನನು-ಶತ್ರುಘ್ನನೆಂಬಾತನು, ಉರುಬಿದಂ_ಲವನನ್ನು ಪ್ರಜ್ಞೆತಪ್ಪುವಂತೆ ಮಾಡಿದನು, ಆಂ_ನಾನು, ಸಂಧಿಸಿದೆನು_ಅಲ್ಲಿಗೆ ಹೋದೆನು, ಬಳಿಕ_ಆ ಮೇಲೆ, ಸೌಮಿತ್ರಿ_ಸುಮಿತ್ರಾತ್ಮಜನಾದ ಲಕ್ಷ್ಮಣನೂ, ಭರತ-ಕೈಕೇಯಿಯ ಮಗನೂ, ರಾಮ_ಕೌಸಲ್ಯಾಸುತನೆ, ಆದಿಗಳ್_ರಾಕ್ಷಸರು, ಸುಗ್ರೀವ, ಹನುಮಂತ, ಜಾಂಬವಂತ ಇವರೇ ಮೊದಲಾದವರೆಲ್ಲಾ, ನಡೆತಂದರು_ಬಂದು ಸೇರಿದರು. ‖೪೫‖

ಟೀ‖ ಇನ್ನು-ತರುವಾಯ, ಕಡೆಯಮಾತೇಂ_ಹೆಚ್ಚುಮಾತುಗಳಿಂದೇನು? ದೊರೆದೊರೆಗಳೆಲ್ಲರಂ_ಸಮಸ್ತರಾದ ಚಕ್ರವರ್ತಿಗಳನ್ನೂ, ಪಡೆಯೊಳ್_ದಂಡಿನಲ್ಲಿದ್ದ, ನಿಶಾಟ_ರಕ್ಕಸರು, ಕಪಿ-ಕೋಡಗಂಗಳು, ನರ_ಮಾನವರು, ಚಾತುರಂಗಮಂ_ಹಸ್ತ್ಯಶ್ವಾದಿಗಳನ್ನೂ, ಕೆಡಹಿದೆವು-ನೆಲವನ್ನು ಕಚ್ಚುವಂತೆ ಮಾಡಿಬಿಟ್ಟೆವು, ಎನಲ್-ಹೀಗೆಂದು ಪೇಳಲು, ವಾಲ್ಮೀಕಿಮುನಿ-ವಾಲ್ಮೀಕಿಮಹರ್ಷಿಯು, ಕುಶನ-ಕುಶನೆಂಬ ಬಾಲಕನ, ನುಡಿಗೆ_ವಚನಗಳಿಗೆ, ಸೈವೆರಗಾಗಿ_ಆಚ್ಚರಿಗೊಂಡು, ಮನದೊಳು_ತನ್ನ ಮನಸ್ಸಿನಲ್ಲಿ, ಕಡು_ಹೆಚ್ಚಾಗಿ, ನೊಂದನು_ಸಂಕಟಪಟ್ಟನು, ತಪ್ಪು-ದೋಷವು, ಆದುದು_ಆಗಿಹೋಯಿತು, ಎನುತ_ಎಂದು ಹೇಳುತ್ತ, ನಡನಡುಗುತ_ಹೆಚ್ಚಾಗಿ ಕಂಪಿಸುತ್ತ, ಇಹ_ಇರುವ, ಸೀತೆಯಂ-ಜಾನಕಿಯನ್ನು, ಸಂತೈಸಿ-ಶಾಂತತೆಯನ್ನು ಹೊಂದುವಂತೆ ಮಾಡಿ, ಇರ್ದ_ ತನ್ನ ಸಂಗಡಲೇ ಇದ್ದ, ತಾಪಸವಿಸರ ಸಹಿತ_ ತಪೋಸಿಧಿಗಳ ಸಮುದಾಯದೊಂದಿಗೆ, ಒಡನೆ_ತಡಮಾಡದೆ, ವಹಿಲದಿಂದ_ಅತ್ಯಾತುರದಿಂದ, ಸಂಗ್ರಾಮಭೂಮಿಗಾಗಿ_ ರಣಾಂಗಣಕ್ಕೆಂದು, ನಡೆತಂದನು_ಹೊರಟು ಬಂದವನಾದನು.

ಅ‖ ವಿ‖ ದೊರೆದೊರೆ-(ಷ. ತ) ನಿಶಾಟ=ನಿಶಿ_ರಾತ್ರಿಯಲ್ಲಿ, ಆಟ-ತಿರುಗಾಡುವರು (ಕೃ. ವೃ) ‖೪೬‖

ಟೀ‖ ಶರಧಿಯಂ-ಕಡಲನ್ನು, ಕಟ್ಟುವಂದು_ಬಂಧಿಸುವ ವೇಳೆಯಲ್ಲಿ, ಧರೆಯೊಳು_ಭೂಮಿಯ ಮೇಲೆ, ಇಟ್ಟಣಿಸಿದ್ದ_ಒಟ್ಟು ಕೂಡಿಸಿದ್ದ, ಎಲ್ಲಮಂ ಬೆಟ್ಟಂಗಳ-ಸಮಸ್ತಪರ್ವತಗಳನ್ನೂ, ರಾಘವೇಶ್ವರಂ-ಕೌಸಲ್ಯಾನಂದನನು, ತರಿಸಿದಂ_ತರಿಸಿ

---

ಇಂತಹ ಸಾಹಸ ಕಾರ್ಯವನ್ನು ಮಾಡುವುದು ನಮಗೇನು ಕಷ್ಟವು, ಸ್ವಾಮಿಯಾದ ನೀನು ಬೋಧಿಸಿದ ಧನುರ್ವೇದದ ಬಲದಿಂದ ಸಕಲ ಶೂರರನ್ನೂ, ಮಹಾ ಸೈನ್ಯವನ್ನೂ ನಿರ್ಮೂಲಮಾಡಿದೆವು, ಈ ನಮ್ಮ ಪಾವನವಾದ ಆಶ್ರಮದಲ್ಲಿ ಭೂತಹಿಂಸೆ ಒದಗಿತು, ಇಲ್ಲಿಗೆ ಬಂದು ಕುದುರೆಯು ಬರಲಾಗಿ ಈ ಲವನು ಅದನ್ನು ಕಟ್ಟಿಹಾಕಿದನು, ಅದನ್ನು ಬಿಡಿಸಿಕೊಳ್ಳಲು ಅನೇಕ ಜನರು ಮುತ್ತಿಕೊಂಡರು. ಲವನು ಅವರನ್ನೆಲ್ಲಾ ಧ್ವಂಸಮಾಡಿದನು, ಅನಂತರ ಶತ್ರುಘ್ನನು ಬಂದನು, ಲವನು ಆತನೊಂದಿಗೆ ಕಾದಿ ಮೂರ್ಛಾಕ್ರಾಂತನಾದ ಸಮಯಕ್ಕೆ ನಾನು ಒದಗಿಕೊಂಡೆನು, ಲಕ್ಷ್ಮಣ, ಭರತ, ರಾಮಾದಿಗಳೆಲ್ಲಾ ಬಂದು ಸೇರಿದರು. ‖೪೫‖ ಎಲೈ ಮಹಾನುಭಾವನೆ ಇನ್ನು ಹೆಚ್ಚಾಗಿ ಹೇಳುವುದರಿಂದೇನು ಸಾರ್ಥಕವು, ಯುದ್ಧಕ್ಕೆ ಬಂದ ರಾಮಲಕ್ಷ್ಮಣ ಭರತ ಶತ್ರುಘ್ನರನ್ನೂ, ಸುಗ್ರೀವ, ಜಾಂಬವ, ಹನುಮಂತ, ನಳ ನೀಲಾದಿಗಳನ್ನೂ, ವಿಭೀಷಣನೆ ಮೊದಲಾದ ರಕ್ಕಸರನ್ನೂ ನಿರ್ಮೂಲ ಮಾಡಿ ಬಂದೆವೆಂದು ಹೇಳಿ, ಆ ಮಹರ್ಷಿಯ ಪಾದಾರವಿಂದಗಳಿಗಾನತನಾದನು, ಸೀತೆಯು ಇದನ್ನೆಲ್ಲಾ ಕೇಳುತ್ತ, ಅಕಟಕಟಾ ಮಹರ್ಷಿಯು ಆಶ್ರಮದಲ್ಲಿಲ್ಲದಿರುವಾಗ ಈ ಬಾಲಕರು ಇಂತಹ ಘೋರ ಕೃತ್ಯವನ್ನು ನಡೆಸಿದರಲ್ಲಾ? ತಾಪಸೋತ್ತಮನಿಗೆ ಕೋಪಬಂದಿತೆಂದರೆ ನಮ್ಮಗತಿ ಏನೆಂದು ಮನದಲ್ಲಿಯೇ ಕುದಿಯುತ್ತಲಿರುವ ಸೀತಾದೇವಿಯ ಭಾವವನ್ನು ಮಹರ್ಷಿಯು ಮುಖಚಿಹ್ನೆಯಿಂದರಿತು, ವೈದೇಹಿಯನ್ನು ಸಂತೈಸಿದವನಾಗಿ, ತಡಮಾಡದೆ ರಣರಂಗಕ್ಕೆ ಬಂದು ಸೇರಿದನು. ‖೪೬‖

ಪರಪಿದರೊಪೇಳೆನಲ್ಪೊಡೆಗೆಡೆದುಬಿದ್ದಿರ್ದ | ಕರಿಘಟೆಗಳಟ್ಟೆಗಳ್ಕಾಣಿಸಿದವಾರಣದೊಳಾತಪೋನಿಧಿಯಕಣ್ಗೆ ||೪೭|| ಧಟ್ಟುಗೆಡಹಿದವಾಜಿವಾರಣವರೂಥದಿಂ | ದಿಟ್ಟಣಿಸಿಬಿದ್ದರಾಕ್ಷಸಮನುಜಕಪಿಗಳಿಂ | ದಟ್ಟನಗಲಕೆಚೆಲ್ಲಿರುವಛತ್ರಚಾಮರಪತಾಕೆಗಳ ಮೆದೆಗಳಿಂದ || ಒಟ್ಟೊಟ್ಟಲಾಗಿಸೂಸಿದಪಲವುಕೈದುಗಳ | ಬೆಟ್ಟಂಗಳಿಂಮಿದುಳ್ನೆಣವಸೆ ಕರುಳ್ಗಳಿಂ | ಕಟ್ಟುಗ್ರಮಾದ ರಣರಂಗದೊಳ್ವಾಲ್ಮಿಕಿಮುನಿರಾಮನಂಕಂಡನು || ೪೮ || ಅಂದುಪುರುಹೂತವೈರಿಯಸರ್ಪಶರದಿಂದ | ಬೊಂದಿದಸಮಸ್ತಬಲಸಹಿತಬಿದ್ದೆಚ್ಚರಳಿ | ದಂದದಿಂನಸುಮುಸುಳ್ದಾನನದನಿಶಿಯತಾವರೆಯೊಲಾಗಿಹಕಣ್ಗಳ || ಕಂದಿದವಯವದಕಾಂತಿಗಳಕರ

---

ದವನಾದನು, ಭೂಮಿಗೆ-ಭೂಮಂಡಲಕ್ಕೆ. ಆಧಾರಂ_ಆಶ್ರಯವು, ಇಲ್ಲದೆ_ಒದಗದೆ, ಪೋಪುದು_ಹೋಗುತ್ತದೆ, ಎಂದು_ಎಂಬತೆರನಾಗಿ, ಗಿರಿಗಳಂ-ಪೂರ್ವದಲ್ಲಿ ಶ್ರೀ ರಾಮನು ಒಟ್ಟಗೆ ಸೇರಿಸಿದ್ದ ಬೆಟ್ಟಗಳನ್ನೆಲ್ಲಾ, ತಂದು_ತೆಗೆದುಕೊಂಡುಬಂದು, ಇನ್ನು-ಇನ್ನುಮುಂದೆ, ಇಳೆಯಮೇಲೆ-ಭೂಮಂಡಲದ ಮೇಲ್ಗಡೆಯಲ್ಲೆಲ್ಲಾ, ಪರಪಿದಪರೊ-ಎರಚಾಡುತ್ತಲಿರುವರೊ, ಪೇಳು_ನುಡಿ, ಎನಲ್_ಎಂಬತೆರನಾಗಿ, ಪೊಡೆಗೆಡೆದು_ಪ್ರಾಣವನ್ನು ಹೋಗಲಾಡಿಸಿಕೊಂಡು. ಬಿದ್ದಿರ್ದ_ನೆಲದಮೇಲೆ ಒರಗಿದ್ದಂಥ, ಕರಿಘಟೆಗಳ_ಹಸ್ತಿಸಮುದಾಯದ, ಅಟ್ಟೆಗಳು_ಶರೀರಗಳು, ಆರಣದೊಳು-ಆ ಸಮರಾಂಗಣದಲ್ಲಿ, ಈ ತಪೋನಿಯ-ವಾಲ್ಮೀಕಿ ಮಹಾಮುನಿಯ, ಕಣ್ಗೆ-ನಯನಂಗಳಿಗೆ, ಕಾಣಿಸಿದವು-ತಲೆದೋರಿದವು ||

ಅ|| ವಿ|| ಶರಧಿ-ಶರ_ನೀರನ್ನು, ಧಿ-ಧರಿಸಿರುವುದು, (ಕೃ. ವೃ.) ರಾಘವೇಶ್ವರಂ_(ಗು. ಸಂ.) ತನುಜಾತರು_ತನುವಿನಲ್ಲಿ ಜಾತರು (ಕೃ. ವೃ.) ತಪೋನಿಧಿ_ತಪಸ್ಸನ್ನೆ ನಿಕ್ಷೇಪವಾಗಿ ಉಳ್ಳವನು (ಬ. ಸ.) ||೪೭||

ಟೀ|| ವಾಲ್ಮೀಕಿಮುನಿ-ವಾಲ್ಮೀಕಿ ಮಹರ್ಷಿಯು, ರಣರಂಗದೊಳ್_ಸಮರದೆಡೆಯಲ್ಲಿ, ಧಟ್ಟುಕೆಡಹಿದ_ಶಕ್ತಿಗುಂದಿಹೋದ, ವಾಜಿ_ಹಯಗಳು, ವಾರಣ_ಗಜಗಳು, ವರೂಥದಿಂದ_ತೇರಿನಿಂದ, ಇಟ್ಟಣಿಸಿ_ಸಾಂದ್ರವಾಗಿ, ಬಿದ್ದ-ಬಿದ್ದುಹೋಗಿರತಕ್ಕ, ರಾಕ್ಷಸ-ರಕ್ಕಸರು, ಮನುಜ_ಮಾನವರು, ಕಪಿಗಳಿಂ_ಕೋಡಗಂಗಳೆ ಮೊದಲಾದವುಗಳಿಂದ ತುಂಬಿದ, ಧಟ್ಟನ-ರಣರಂಗದ, ಅಗಲಕೆ_ವಿಶಾಲತೆಗೂ, ಚೆಲ್ಲಿರುವ-ಎರಚಾಡಿರತಕ್ಕ, ಛತ್ರ-ಬೆಳ್ಗೊಡೆಗಳು, ಚಾಮರ_ಚಾಮರಂಗಳು, ಪತಾಕೆಗಳ_ಬಾವುಟಗಳ, ಮೆದೆಗಳಿಂದ_ರಾಶಿಗಳಿಂದ, ಒಟ್ಟೊಟ್ಟಲಾಗಿ-ಗುಂಪುಗುಂಪಾಗಿ, ಸೂಸಿದ_ಚೆಲ್ಲಾಡಿರುವ, ಪಲವುಕೈದುಗಳ_ಅನೇಕವಾದ ಆಯುಧಗಳು, ಬೆಟ್ಟಂಗಳಿಂ-ಪರ್ವತ ಗುಟ್ಟ ಇವುಗಳಿಂದ, ಮಿದುಳು_ಕೊಬ್ಬು, ನೆಣ_ಮಾಂಸ ಮೊದಲಾದುವು, ವಸೆ_ಮಾಂಸದ ಸ್ವಾರಸ್ಯವು, ಕರುಳ್ಗಳಿಂ - ನರಗಳಿಂದ, ಕಟ್ಟುಗ್ರಮಾದ _ ಅತಿಘೋರವಾಗಿರುವ, ರಣರಂಗದೊಳ್_ಸಮರಾಂಗಣದೊಳಗೆ, ರಾಮನಂ_ಶ್ರೀ ರಾಮನನ್ನು, ಕಂಡನು-ನೋಡಿದನು ||೪೮||

ಟೀ|| ಮುನಿ_ವಾಲ್ಮೀಕಿಯು, ಅಂದು_ಪೂರ್ವದಲ್ಲಿ ರಾವಣಾಸುರನ ನಗರದೊಳಗೆ ಒದಗಿದ ಕಾಳಗದಲ್ಲಿ, ಪುರುಹೂತವೈರಿಯ_ಇಂದ್ರಜಿತುವಿನ, ಸರ್ಪಶರದಿಂದಲಿ_ಸರ್ಪಬಾಣದಿಂದ, ಒಂದಿದ_ಉಂಟಾದ, ಸಮಸ್ತಬಲಸಹಿತ_ಅಶೇಷವಾದ ಸೈನ್ಯದೊಂದಿಗೆ, ಬಿದ್ದು-ಬಿದ್ದುಹೋಗಿ, ಎಚ್ಚರಳಿದ_ಮೈಮರೆತ, ಅಂದದಿಂ_ಬಗೆಯಿಂದ, ನಸು-ಸ್ವಲ್ಪವಾಗಿ, ಮುಸುಳ್ದ_ಮಂಕಾದ, ಆನನದ_ಮೋರೆಯ, ನಿಶಿಯ_ರಾತ್ರಿಯಲ್ಲಿರತಕ್ಕ, ತಾವರೆಯೊಲು_ಪುಂಡರೀಕದಂತೆ, ಆಗಿಹ-ಆಗಿರತಕ್ಕ, ಕಣ್ಗಳ_ನಯನಂಗಳ, ಕಂದಿದ_ಕಳೆಗುಂದಿರತಕ್ಕ, ಅವಯವದ_ಶರೀರಭಾಗಗಳ, ಕಾಂತಿಗಳ-ಪ್ರಕಾಶದ, ಕರಪಂಕರುಹದಿಂದ_ತಾವರೆಯಂತಿ

---

ಎಲೈ ರಾಜೇಂದ್ರನಾದ ಜನಮೇಜಯರಾಯನೆ ಕೇಳು—ವಾಲ್ಮೀಕಿ ಮಹಾಮುನಿಯು ಯುದ್ಧರಂಗಕ್ಕೆ ಬಂದು ನೋಡಿದಾಗ ಪೂರ್ವದಲ್ಲಿ ರಾಮದೇವರು ರಕ್ಕಸ ರಾಜನಾದ ರಾವಣನನ್ನು ಕೊಂದು ಸೀತೆಯನ್ನು ಬಿಡಿಸಿಕೊಂಡು ಬರಲೋಸುಗ ಸಮುದ್ರಕ್ಕೆ ಸೇತುವೆಯನ್ನು ಕಟ್ಟಬೇಕೆಂದು ಒಟ್ಟುಗೂಡಿಸಿಟ್ಟದ್ದ ಬೆಟ್ಟಗಳನ್ನೆಲ್ಲಾ ಈಗ ಆ ಮಹಾನುಭಾವನ ಕುವರರಾದ ಕುಶಲವರು ಭೂಮಿಗೆ ಆಧಾರವಿಲ್ಲದೆ ಹೋದೀತೆಂದು ಬಗೆದು ನೆಲದಮೇಲೆ ಹರಡಿ ಬಿಟ್ಟಿರುವರೊ ಎಂಬಂತೆ ಕರಿಘಟೆಗಳ ತಲೆಗಳು ಕಂಗೊಳಿಸುತ್ತಲಿರುವುದನ್ನು ಕಂಡವನಾದನು || ೪೭ || ಮತ್ತೆ ಸ್ವಲ್ಪ ಮುಂದಕ್ಕೆ ಹೋಗಿ ನೋಡಲು, ಕುದುರೆಗಳೆಲ್ಲಾ ಸತ್ತು ಬಿದ್ದು ಹೋಗಿದ್ದವು. ರಥಗಳೆಲ್ಲಾ ಪುಡಿ ಪುಡಿಯಾಗಿ ನೆಲದಮೇಲೆ ತುಂಬಿದ್ದವು. ಛತ್ರ ಚಾಮರಗಳೆಲ್ಲಾ ಮುರಿದು ಬೆಟ್ಟಗಳಂತೆ ಬಿದ್ದು ಹೋಗಿದ್ದವು. ಎಲ್ಲೆಲ್ಲಿ ನೋಡಿದರೂ ರಾಕ್ಷಸರು, ಕಪಿಗಳು, ಮಾನವರು ಇವರ ಹೆಣಗಳ ರಾಸಿಗಳೇ ಕಾಣಿಸುತ್ತಲಿದ್ದವು. ರಕ್ತದ ಪ್ರವಾಹವು ಹರಿಯುತ್ತಲಿತ್ತು. ನರಗಳು, ಮೂಳೆಗಳು, ಚರ್ಮ ಇವೇ ತುಂಬಿ ಹೋಗಿದ್ದವು. ಆಯುಧಗಳ ರಾಶಿಯು ಆಗಸದ ಕೊನೆಯನ್ನು ಮುಟ್ಟಲೆಳಸುವುದೋ ಎಂಬಂತೆ ತೋರುತಲಿತ್ತು. ಘೋರಾಕಾರವಾಗಿರುವ ಈ ರಣರಂಗದ ಮಧ್ಯದಲ್ಲಿ || ೪೮ || ಶ್ರೀ ರಾಮನು ಮೂರ್ಛೆಗೊಂಡು ಮಲಗಿರುವುದು ವಾಲ್ಮೀಕಿಯ ಕಣ್ಣಿಗೆ ಕಾಣಿಸಿತು. ತಾಪಸೋತ್ತಮನು ಹತ್ತಿರಕ್ಕೆ ಬಂದು ನೋಡಿದನು. ಆಗ ಶ್ರೀ

ಪಂಕರುಹ | ದಿಂದಕೆಲಕೋಸರಿಸಿಬಿದ್ದಬಿಲ್ಲಂಬುಗಳ | ನೊಂದಘಾಯದನೆತ್ತರೊಂತೆಗಳ ರಾಮನಂಕಂಡು ಮುನಿಬೆರಗಾದನು || ೪೯ || ಈಕ್ಷಿಸಿ ಕಮಂಡಲೋದಕದಿಂದಮುನಿವರಂ | ಪ್ರೋಕ್ಷಿಸಿದೊಡುರಗತಲ್ಪದೊಳುಪ್ಪವಡಿಸುವ | ಬ್ಜಾಕ್ಷನೇತಪ್ಪದೆಂಬಂತೆಕಣ್ದೆರೆದುವಾಲ್ಮೀಕಿಮುನಿಗಭಿನಮಿಸಲು || ಸ ಕ್ಷಾಜ್ಜಗನ್ನಾಥಸರ್ವಕಾರಣರಕ್ಷ | ರಾಕ್ಷಸಾಂತಕಭಕ್ತವತ್ಸಲಕೃಪಾಳುನಿರ | ಪೇಕ್ಷರಾಘವರಾಮಚಿತ್ತಾವಧಾನಮೆಂ ದಾಮುನಿಪೊಗಳುತಿರ್ದನು || ೫೦ || ಬಳಿಕರಾಘವನಸಿರಿಮುಡಿಗೆನಭದಿಂದಪೂ | ಮಳೆಗರೆದುದುತ್ಸವದೊಳಮರದುಂದುಭಿಗಳ.ರೆ | ವೊಳಗಿದವು ಋಷಿಮಂತ್ರಪೂತ ಜಲದಿಂದ ಭರ

---

ರುವ ಹಸ್ತಪ್ರದೇಶದಿಂದ, ಕೆಲದಲಿ-ಪಕ್ಕದಲ್ಲಿ, ಓಸರಿಸಿ-ಓರೆಯಾಗಿ, ಬಿದ್ದ-ಉರುಳಿಕೊಂಡಿರತಕ್ಕ, ಬಿಲ್ಲಂಬುಗಳ-ಧನುರ್ಭಾಣಗಳ, ನೊಂದ-ಏಟಿನಿಂದ ವ್ಯಥೆಯನ್ನೈದಿದ, ಘಾಯದ-ಹುಣ್ಣಿನ, ನೆತ್ತರ-ರಕ್ತದ, ಒರತೆಗಳ-ಪ್ರವಾಹವೇ ಮೊದಲಾದವುಗಳಿಂದ ಕೂಡಿದ, ರಾಮನಂ-ಶ್ರೀರಾಮ ದೇವರನ್ನು, ಕಂಡು-ನೋಡಿದವನಾಗಿ, ಬೆರಗಾದನು-ಅಚ್ಚರಿಯಂ ತಾಳಿದವನಾದನು ||

ಅ|| ವಿ|| ಕರಪಂಕರುಹ-ಪಂಕ-ಕೆಸರಿನಲ್ಲಿ, ರುಹ-ಹುಟ್ಟಿದ್ದು (ಕೃ. ವೃ,) ಪಂಕರುಹದಂತೆ ಕರ-ಕರಪಂಕರುಹ, (ಉಪಮಾನೋತ್ತರಪದ ಕ) ||೪೯||

ಟೀ|| ಮುನಿವರಂ-ತಪೋನಿಧಿಯಾದ ವಾಲ್ಮೀಕಿಯು, ಈಕ್ಷಿಸಿ-ರಣರಂಗದಲ್ಲಿ ರಥದೊಳಗೆ ಮೂರ್ಛೆಬಿದ್ದಿರುವ ರಾಮನನ್ನು ಕಂಡು, ಕಮಂಡಲ-ತನ್ನ ಕರತಳದಲ್ಲಿರುವ ಪಾತ್ರೆಯ, ಉದಕದಿಂದ-ನೀರಿನಿಂದ, ಪ್ರೋಕ್ಷಿಸಿದೊಡೆ-ತುಂತುರುಗಳಾಗಿ ಬೀಳುವಂತೆ ಸುರಿಯಲು, ಉರಗತಲ್ಪದೊಳು-ಸರ್ಪವೆನ್ನುವ ಶಯ್ಯೆಯಿಂದ, ಉಪ್ಪವಡಿಸುವ-ಮೇಲಕ್ಕೇಳತಕ್ಕ, ಅಬ್ಜಾಕ್ಷನೆ-ಕಮಲನಯನನಾದ ಶ್ರೀಮನ್ನಾರಾಯಣ ಮೂರ್ತಿಯೇ, ತಪ್ಪದು-ನಿಶ್ಚಯವು, ಎಂಬಂತೆ-ಎಂಬ ತೆರನಾಗಿ, ಕಣ್ದೆರದು-ವಿಕಸಿತವಾದ ನಯನಂಗಳಿಂದ ಕೂಡಿ, ವಾಲ್ಮೀಕಿಮುನಿಗೆ-ವಾಲ್ಮೀಕಿ ಮಹರ್ಷಿಗೆ, ಅಭಿನಮಿಸಲು- ನಮಸ್ಕಾರಗಳನ್ನರ್ಪಿಸಲು, ಆಗ-ವಾಲ್ಮೀಕಿಯು, ಜಗನ್ನಾಥ-ಲೋಕಕ್ಕೆಲ್ಲಾ ಒಡೆಯನೆ, ಸರ್ವ-ಸಮಸ್ತಕ್ಕೂ, ಕಾರಣ-ಮೂಲನಾದ ಮಹಾನುಭಾವನೇ, ರಕ್ಷ-ಲೋಕ ರಕ್ಷಕನೆ, ರಾಕ್ಷಸ-ನಿಶಿಚರರಿಗೆಲ್ಲಾ, ಅಂತಕ-ಯಮಸ್ವರೂಪನೆ, ಭಕ್ತ-ನಿನ್ನ ಭಜಕರಲ್ಲಿ, ವತ್ಸಲ-ಪ್ರೀತಿಯನ್ನಿಟ್ಟಿರತಕ್ಕವನೆ, ಕೃಪಾಳು-ಕರುಣಾರಸಭರಿತನೆ, ನಿರಪೇಕ್ಷ-ಅಸಹಾಯನಾದ ಸ್ವಾಮಿಯೆ, ರಾಘವ-ಲೋಕಕಂಟಕರನ್ನೆಲ್ಲಾ ನಾಶಮಾಡಲು ರಘುಕುಲದಲ್ಲಿ ಜನಿಸಿರತಕ್ಕ ಪ್ರಭುವೇ, ರಾಮ-ಸಚ್ಚಿದಾನಂದ ಮೂರುತಿಯೆ, ಚಿತ್ತ-ಏಕಚಿತ್ತ ಮನೋಭಾವವುಳ್ಳವನಾಗಿ, ಅವಧಾನಂ-ನನ್ನ ಬಿನ್ನಪವನ್ನಾಲಿಸು, ಎಂದು-ಎಂಬ ತೆರನಾಗಿ, ಸಾಕ್ಷಾತ್-ಶ್ರೀ ರಾಮಚಂದ್ರನೆದುರಿನಲ್ಲಿಯೇ, ಪೊಗಳುತ್ತ-ಸ್ತುತಿಸುತ್ತ, ಇರ್ದನು-ಇದ್ದವನಾದನು ||

ಅ|| ವಿ|| ಕಮಂಡಲೋದಕ (ಷ. ತ.) ಅಬ್ಜಾಕ್ಷ-ಅಪ್-ನೀರಿನಲ್ಲಿ, ಜ-ಹುಟ್ಟಿದ್ದು ಸ. ದೀ. ಸಂ. ಅಬ್ಜದಂತೆ ಅಕ್ಷಿಯು ಯಾರಿಗೊ ಅವನು (ಬ. ಸ.) ||೫೦||

ಟೀ|| ಬಳಿಕ-ತರುವಾಯ, ರಾಘವನ - ಶ್ರೀ ರಾಮದೇವರ, ಸಿರಿ-ಐಶ್ವರ್ಯದಿಂದ ಕೂಡಿದ, ಮುಡಿಗೆ - ತುರುಬಿನ

---

ರಾಮಚಂದ್ರನ ಮುಖವಾದರೋ ಪೂರ್ವದಲ್ಲಿ ಇಂದ್ರಜಿತುವಿನೊಂದಿಗೆ ಕಾದುವಾಗ ಅವನು ಬಿಟ್ಟ ಸರ್ಪಾಸ್ತ್ರದಿಂದ ಮೂರ್ಛೆಗೊಂಡಕಾಲದಲ್ಲಿ ಆಗಿದ್ದ ಮುಖದಂತೆ ಈಗಲೂ ರಾಘವನ ಮುಖದ ಕಾಂತಿಯು ಕುಗ್ಗಿ ಹೋಗಿತ್ತು. ಆ ಮಹಾನುಭಾವನ ಕಣ್ಗಳಾದರೊ ರಾತ್ರಿಯಲ್ಲಿ ಕಮಲ ಪುಷ್ಪಗಳ ಕಾಂತಿಯನ್ನು ಹೋಲುತ್ತಲಿದ್ದವು. ಎಳೆಯ ಬಾಳೆಯ ಸುಳಿಯು ಬೆಂಕಿಯ ಶಾಖಕ್ಕೆ ತಗಲಿ ಕಾಂತಿ ಹೀನವಾಗುವಂತೆ ಶರಘಾತಕ್ಕೆ ಸಿಕ್ಕಿದ ಈ ರಾಜನ ಅವಯವಗಳೆಲ್ಲಾ ವಿಕಾರವಾಗಿ ಹೋಗಿದ್ದವು, ಕೈಯಲ್ಲಿ ಹಿಡಿದಿದ್ದ ಧನುರ್ಬಾಣಗಳು ಅಲ್ಲಿಯೇ ಬಿದ್ದು ಹೋಗಿದ್ದವು. ಅಲಗುಗಳ ಹುಯ್ಲಿಗೆ ಸಿಕ್ಕಿದ ರಾಮಚಂದ್ರನ ಮೈಯಿಂದ ರಕ್ತವು ಜೌಗು ನೀರಿನಂತೆ ಜಿನುಗಿ ಬರುತ್ತ ದೊಡ್ಡ ಪ್ರವಾಹ ರೂಪವಾಗಿ ಹರಿಯುತ್ತಲಿತ್ತು. ಈ ತೆರನಾಗಿ ಸ್ಮೃತಿತಪ್ಪಿ ಬಿದ್ದುಹೋಗಿರುವ ರಾಮನನ್ನು ವಾಲ್ಮೀಕಿಯು ನೋಡಿ || ೪೯ || ಭ್ರಾಂತನಾಗಿ, ಕೈಯಲ್ಲಿದ್ದ ಕಮಂಡಲೋದಕದಿಂದ ಶ್ರೀ ರಾಮಚಂದ್ರನ ಮೈಮೇಲೆ ಪ್ರೋಕ್ಷಿಸಲಾಗಿ ಶ್ರೀಹರಿಯು ಶೇಷತಲ್ಪದಿಂದ ಮೇಲಕ್ಕೇಳುವನೋ ಎಂಬಂತೆ ಜ್ಞಾನವನ್ನು ತಂದುಕೊಂಡು ಮೇಲಕ್ಕೆದ್ದು, ಎದುರಿಗೆ ನಿಂತಿರುವ ವಾಲ್ಮೀಕಿ ಮಹಾಮುನಿಯ ಚರಣಾರವಿಂದಗಳಿಗೆ ನಮಸ್ಕಾರವಂ ಮಾಡಿದನು. ಜ್ಞಾನೋದಯವನ್ನು ಪಡೆದು ಚೇತರಿಸಿಕೊಂಡು ತನಗೆ ವಂದನೆಯಂಗೈಯುವ ರಾಮಚಂದ್ರನನ್ನು ವಾಲ್ಮೀಕಿಮುನಿಯು ನೋಡಿ, ದಾಶರಥಿಯ ಎದುರಿಗೆ ನಿಂತವನಾಗಿ, ಕೌಸಲ್ಯಾ ಸುತನನ್ನು ಕುರಿತು, ಓ ಜಗತ್ಪತೀ! ಕರುಣಾಸಾಂದ್ರಾ, ದಯಾಳೊ, ದೀನಬಂಧೊ, ಆಪದ್ಬಾಂಧವಾ, ಅನಾಥ ರಕ್ಷಕಾ, ಸರ್ವಲೋಕ ಶರಣ್ಯಾ, ರಾಕ್ಷಸಾಂತಕಾ, ಭಕ್ತರಕ್ಷಕಾ, ಕಮಲನಾಭಾ, ರಾಜೀವಾಕ್ಷಾ! ಪಾಹಿ ಎಂದು ನಾನಾ ಪ್ರಕಾರವಾಗಿ ಹೊಗಳಲಾರಂಭಿಸಿದನು || ೫೦ || ೨

ತಾದಿಗಳ್‌ಜೀವಿಸಿದರು ‖ ತಳಿದರನಿಮಿಷರಮೃತಮಂಬಿದ್ದಪಡೆಯಮೇಲ್ | ಉಳಿಯದೆಸಮಸ್ತಸೈನಿಕಮೆದ್ದುದಾಗಪೊರೆ | ಗಳೆದಫಣಿಕುಲದಂತೆನಲಿದುದುಚತುರ್ಬಲಂಪೇಳಲೇನಚ್ಚರಿಯನು ‖ ೫೧ ‖ ಬರಿಸಿದಂನೆನೆದುಸುರಧೇನುವಂವಾಲ್ಮೀಕಿ | ಪರಮಸಂಪ್ರೀತಿಯಿಂಬೇಡಿದಪದಾರ್ಥಮಂ | ತರಿಸಿದಂದುಗ್ಧಾಭಿಷೇಕಮಂಮಾಡಿಸಿದನಾರಾಘವೇಶ್ವರಂಗೆ ‖ ಭರತಾದಿಗಳ್ವೆರಸಿಕುಳ್ಳಿರ್ದಬಳಿಕಪತಿಕರಿಸಿಕಾಕುತ್‌ಸ್ಥನಂಕೊಂಡಾಡಿನೇಮದಿಂ | ಕರೆಸಿಕುಶಲವರಂಪದಾಬ್ಜದೋಳ್ಕೆಡೆಹಿಮುನಿವರನೊಯ್ಯನಿಂತೆಂದನು ‖ ೫೨ ‖ ರಾಜೇಂದ್ರಕೋಪಮಂಮಾಡದಿರ್ನಿನ್ನಂಕೃಪಾಜಲಧಿಯೆಂದುಮೊರೆಯೊಕ್ಕರಂಕಾವ

ಮೇಲೆ, ನಭದಿಂದಂ – ಅಂತರಿಕ್ಷದಿಂದ, ಪೂಮಳೆ – ಹೂವಿನ ಮಳೆಯು, ಕರೆದುದು – ಸುರಿಯಿತು, ಅಮರದುಂದುಭಿಗಳು-ದೇವ ದುಂದುಭಿಗಳು, ಉತ್ಸವದೊಳು – ಸಂತೋಷಾತಿಶಯದಿಂದ, ಉರೆ–ಅಧಿಕವಾಗಿ, ಮೊಳಗಿದವು – ದನಿಗೈಯ್ಯಲ್ಪಟ್ಟವು, ಭರತ–ಕೈಕೇಯಿಯ ಕುವರನೆ, ಆದಿ-ಮೊದಲಾದ ಸಮಸ್ತರೂ, ಋಷಿ-ವಾಲ್ಮೀಕಿ ಮಹಾಮುನಿಯ, ಮಂತ್ರ–ವೇದಮಂತ್ರಗಳಿಂದ, ಪೂತ-ಪಾವನವಾದ, ಜಲದಿಂದ – ಉದಕದಿಂದ, ಜೀವಿಸಿದರು – ಪುನಃ ಪ್ರಾಣವಾಯುವನ್ನೈದಿದವರಾದರು, ಬಿದ್ದಪಡೆಯಮೇಲೆ–ಸೇನೆಯಮೇಲೆ ಉರುಳಿಕೊಂಡಿದ್ದ ರಾಮ ಸೈನ್ಯದಮೇಲೆ, ಅನಿಮಿಷರು – ಸುರರು, ಅಮೃತಬಿಂದು – ಅಮೃತದ ಬೊಟ್ಟುಗಳನ್ನು, ತಳದರು–ಎರಚಿದರು, ಸಮಸ್ತಸೈನಿಕಂ – ಅಶೇಷವಾದ ಪರಿವಾರವೂ, ಎದ್ದುದು – ಮೇಲಕ್ಕೆದ್ದುಬಿಟ್ಟಿತು, ಆಗ-ಆ ಕಾಲದಲ್ಲಿ, ಚತುರ್ಬಲಂ – ಚತುರಂಗ ಬಲವೂ ಕೂಡ, ಪೊರೆ – ಮೇಲಿನ ಚರ್ಮವನ್ನು, ಕಳೆದ – ಹೋಗಲಾಡಿಸಿದ, ಫಣಿಕುಲದಂತೆ–ಹಾವುಗಳ ಸಮೂಹದ ತೆರನಾಗಿ, ನಲಿದುದು–ಆನಂದ ಪಡುತ್ತಲಿತ್ತು, ಅಚ್ಚರಿಯನು-ಸೋಜಿಗವನ್ನು, ಏನು ಪೇಳಲಿ-ಏನೆಂದು ನುಡಿಯಲಿ ‖೫೧‖

ಟೀ‖ ವಾಲ್ಮೀಕಿ-ವಾಲ್ಮೀಕಿಋಷಿವರ್ಯನು, ಸುರಧೇನುವಂ – ಸ್ವರ್ಗಲೋಕದ ಹಸುವನ್ನು, ಪರಮಸಂಪ್ರೀತಿಯಿಂ–ಹೆಚ್ಚಾದ ಪ್ರೇಮದಿಂದ, ನೆನೆದು–ಧ್ಯಾನಮಾಡಿದವನಾಗಿ, ಬರಿಸಿದಂ–ರಣರಂಗದಲ್ಲಿ ಸಿದ್ಧವಾಗುವಂತೆ ಮಾಡಿದನು. ಬೇಡಿದ-ಕೋರಿದಂಥ, ಪದಾರ್ಥಮಂ–ವುರುಳ್ಗಳೆಲ್ಲವನ್ನೂ, ತರಿಸಿದಂ–ತಂದು ಕೊಡಬೇಕೆಂದು ಹೇಳಿ ಸಂಪಾದಿಸಿದವನಾದನು, ದುಗ್ಧಾಭಿಷೇಕಮಂ – ಹಾಲಿನ ಮಜ್ಜನವನ್ನು, ಆರಾಘವೇಶ್ವರಂಗೆ - ಆ ಶ್ರೀರಾಮದೇವರಿಗೆ, ಮಾಡಿಸಿದನು – ಎಸಗಿದನು, ಭರತಾದಿಗಳ್ವೆರಸಿ – ಭರತ ಲಕ್ಷ್ಮಣ ಶತ್ರುಘ್ನರೇ ಮೊದಲಾದವರಿಂದ ಸೇರಿ, ಕುಳ್ಳಿರ್ದಬಳಿಕ – ಕುಳಿತುಕೊಂಡನಂತರ, ಮುನಿವರನು–ತಾಪಸೋತ್ತಮನು, ಕಾಕುತ್ಸ್ಥನಂ - ಶ್ರೀ ರಾಮದೇವರನ್ನು, ಪತಿಕರಿಸಿ – ಸಂಬೋಧಿಸಿ, ಕೊಂಡಾಡಿ–ಅನೇಕ ಪ್ರಕಾರವಾಗಿ ಹೊಗಳಿ, ನೇಮದಿಂ–ಶ್ರೀ ರಾಮನ ಆಜ್ಞಾನುಸಾರವಾಗಿ, ಕುಶಲವರಂ–ಕುಶಲವರೆಂಬ ಬಾಲಕರೀರ್ವರನ್ನು, ಕರೆಸಿ-ಬರಮಾಡಿಕೊಂಡವನಾಗಿ, ಅವರಿಬ್ಬರನ್ನು, ಪದಾಬ್ಜದೋಳ್ – ರಾಮನ ಅಡಿದಾವರೆಗಳ ಮೇಲೆ, ಕೆಡಹಿ – ಬೀಳುವಂತೆಮಾಡಿ, ಇಂತು–ಮುಂದೆ ಹೇಳುವ ತೆರನಾಗಿ, ಒಯ್ಯನೆ-ನಿಧಾನವಾಗಿ, ಎಂದನು–ನುಡಿದವನಾದನು.

ಅ‖ ವಿ‖ ದುಗ್ಧಾಭಿಷೇಕಂ (ಸ. ದೀ.) ರಾಘವೇಶ್ವರಂ (ಗ. ಸ.) ಪದಾಬ್ಜ (ಸ. ದೀ.) ‖೫೨‖

ಟೀ‖ (ಶ್ರೀ ರಾಮಚಂದ್ರನೊಂದಿಗೆ ವಾಲ್ಮೀಕಿಮುನಿಯು ಹೇಳತೊಡಗಿದನು), ರಾಜೇಂದ್ರ – ದೊರೆಗಳಲ್ಲಿ

ಶ್ರೇಷ್ಠರಂಗೊಂಡ ಶ್ರೀ ರಾಮಚಂದ್ರನನ್ನು ವಾಲ್ಮೀಕಿ ಮುನಿಯು ಈ ತೆರನಾಗಿ ಸ್ತೋತ್ರವಂ ಗೈಯುತ್ತಲಿರುವಾಗ, ದೇವತೆಗಳು ಅಂತರಿಕ್ಷದಿಂದ ರಘುನಾಥನ ಮುಡಿ ಗಂಟಿನ ಮೇಲೆ ಪುಷ್ಪವೃಷ್ಟಿಯನ್ನು ಸುರಿಸಿದರು. ದೇವದುಂದುಭಿಗಳು ಆಗಸದಲ್ಲಿ ಮೊಳಗಿದವು. ಋಷಿಯು ತನ್ನ ಕರತಳದಲ್ಲಿರುವ ಕಮಂಡಲೋದಕದಿಂದ ಭರತ ಲಕ್ಷ್ಮಣ ಶತ್ರುಘ್ನರೇ ಮೊದಲಾದವರ ಮೇಲೆ ಸೇಚನೆಯಂ ಗೈಯಲಾಗಿ ಎಲ್ಲರೂ ಮೂರ್ಛೆಯಿಂದೆಚ್ಚೆತ್ತರು. ಮೃತಿಯನ್ನೈದಿದ ಸೇನಾಸಮುದಾಯವೆಲ್ಲಾ ದೇವತೆಗಳು ಎರಚಿದ ಅಮೃತ ಬಿಂದುಗಳಿಂದ ಪೊರೆಯನ್ನು ಕಳೆದ ನಾಗರ ಹಾವುಗಳ ತೆರನಾಗಿ ಥಿಗ್ಗನೆದ್ದವರಾದರು. ಯುದ್ಧರಂಗದಲ್ಲೆಲ್ಲಾ ಕೋಲಾಹಲ ಧ್ವನಿಯು ತುಂಬಿಕೊಂಡಿತು. ಇಂತಹ ಅಚ್ಚರಿಯನ್ನುದೇವತೆಗಳು ಎವೆಯಿಕ್ಕದೆ ಬೆರಗಾಗಿ ನೋಡುತ್ತಲಿದ್ದರು. ‖ ೫೧ ‖ ಆಗ ಪರಮರ್ಷಿಯಾದ ವಾಲ್ಮೀಕಿಯು ಕಾಮಧೇನುವನ್ನು ಸ್ಮರಣೆ ಮಾಡಿಕೊಂಡ ಮಾತ್ರಕ್ಕೇ ಸುರಧೇನು ಪ್ರತ್ಯಕ್ಷವಾಗಿ ಬಂದು ನಿಂತಿತು. ತನಗೆ ಬೇಕಾದ ಪದಾರ್ಥಗಳನ್ನೆಲ್ಲಾ ಆ ಹಸುವು ತಂದೊದಗಿಸಿತು. ಅನಂತರ ರಘುಕುಲಲಲಾಮನಾದ ಕೌಸಲ್ಯಾಸುತನಿಗೆ ಕ್ಷೀರಾಭಿಷೇಕವನ್ನು ಮಾಡಿಸಿದನು. ಬಳಿಕ ಭರತ ಲಕ್ಷ್ಮಣ ಶತ್ರುಘ್ನಾದಿಗಳಿಂದೊಡಗೂಡಿ ಸುಖಾಸೀನನಾಗಿ ಕುಳಿತುಕೊಂಡಿರುವ ರಾಮಚಂದ್ರಮೂರ್ತಿಯನ್ನು ನಾನಾ ಪ್ರಕಾರವಾಗಿ ಸ್ತುತಿಸುತ್ತ, ಆ ಮಹಾನುಭಾವನ ಅಪ್ಪಣೆಯಿಂದ ಆಶ್ರಮದಲ್ಲಿದ್ದ ಕುಶಲವರನ್ನು ಕರೆಸಿ, ರಘುವರನ ಅಡಿದಾವರೆಗಳಿಗಾನತರನ್ನಾಗಿ ಮಾಡಿ, ದಾಶರಥಿಯನ್ನು ಕುರಿತು, ‖ ೫೨ ‖ ಎಲೈ ರಾಜವರ್ಯನಾದ ರಾಘವನೆ ! ಕೋಪವನ್ನು ಬಿಟ್ಟು ಸಮಾಧಾನವನ್ನು ಪಡೆ, ನೀನು

ನೆಂ । ದೀಜಗಂಬಣ್ಣಿಪುದುನಿನ್ನತನುಸಂಭವರ್ಜಾನಕಿಯುಮಕ್ಕಳಿವರು ॥ ಓಜೆದಪ್ಪಿದರಾಶ್ರಮದೊಳಿದ್ದುದಿಲ್ಲಮಖ । ಯಾಜನಕೆವರುಣಂಕರೆಸಲಾಗಿಪೋದೆನೀ । ವ್ಯಾಜಮುಂತಾನರಿಯೆನಪರಾಧಮೆನಿತುಳ್ಳೊಡಂಸೈರಿಸುವುದೆಂದನು ॥೫೩॥ ಜಾತಂ ವಿನೀತನಾಗಲಿಧೂರ್ತನಾಗಿರಲಿ । ತಾತಂಗೆವಿರಹಿತವಮಾಡದೀಬಾಲಕರ । ತೀತಮಂಕ್ಷಮಿಸೆಂದುವಾಲ್ಮೀಕಿನುಡಿಯೆರಾಘವ ನೂರ್ಮಿಳಾಪತಿಯನು ॥ ಸೀತೆಸುತರಂಪಡೆದಳೆಂತೆನೆತವಾಜ್ಞೆಯಿಂ । ಶ್ವೇತನದಿಯಂದಾಂಟಿಪೂರ್ಣಗರ್ಭಿಣಿಯಾದ । ಭೂತನುಜೆಯಂಕಾನನದೊಳಿರಿಸಿಬಂದೆನಲ್ಲದೆಮುಂದರಿಯೆನೆಂದನು ॥ ೫೪ ॥ ಇಂತೆಂದುಲಕ್ಷ್ಮಣಂನುಡಿಯೆವಾಲ್ಮೀಕಿಸಮ । ನಂತರದೊಳೇಕಾಕಿಯಾಗಿಜಾನಕಿವಿರಹ । ಸಂತಾಪದಿಂದಡವಿಯೊಳೊತ್ತಳಲುತಿರ್ದುದಂಕಂಡುತನ್ನಾಶ್ರಮಕ್ಕೆ । ಸಂತೈಸಿಕೂಡೆ

ಶ್ರೇಷ್ಠನಾದ ರಾಮನೆ, ಕೋಪಮುಂ-ಕ್ರೋಧವನ್ನು, ಮಾಡದಿರ್-ಎಸಗಲಾಗದು, ನಿನ್ನಂ-ನಿನ್ನನ್ನಾದರೊ, ಈಜಗಂ-ಈ ಭುವನವು, ಕೃಪಾಜಲಧಿಯೆಂದು-ಕರುಣಾಸಾಗರನೆಂದು, ಮರೆಯೊಕ್ಕರಂ-ಶರಣಾಗತರನ್ನು, ಕಾವನು-ಕಾಪಾಡತಕ್ಕವನು, ಎಂದು-ಎಂಬ ತೆರನಾಗಿಯೂ, ಬಣ್ಣಿಪುದು-ಸ್ತುತಿಸುತ್ತಲಿರುವುದು, ಇವರು-ಈ ಹುಡುಗರಿಬ್ಬರೂ, ನಿನ್ನ-ನಿನ್ನ ಸಂಬಂಧವಾದ, ತನು-ಶರೀರದಿಂದ, ಸಂಭವರ್-ಉತ್ಪನ್ನರಾದವರು, ಜಾನಕಿಯ-ಜನಕರಾಯನ ಕುವರಿಯ, ಮಕ್ಕಳು-ಪುತ್ರರು, ಓಜೆ-ಸನ್ಮಾರ್ಗವನ್ನು, ತಪ್ಪಿದರು-ಮೀರಿ ನಡೆದರು, ವರುಣನು-ಜಲಾಧಿಪನಾದ ವರುಣದೇವನು, ಮಖಯಾಜನಕೆ-ಯಾಗದ ಪೌರೋಹಿತ್ಯಕ್ಕೆ, ಕರೆಸಲಾಗಿ-ಹೇಳಿ ಕಳುಹಿಸಲಾಗಿ, ಆಂ-ನಾನಾದರೊ, ಪೋದೆನು - ಹೊರಟು ಹೋದೆನು, ಆಶ್ರಮದೊಳು-ಪರ್ಣಶಾಲೆಯಲ್ಲಿ, ಇದ್ದುದಿಲ್ಲ - ಇರಲಿಲ್ಲವು, ತಾಂ - ನಾನಾದರೊ, ಈವ್ಯಾಜಮುಂ-ಈ ಯುದ್ಧ ಸಮಾಚಾರವನ್ನು, ಅರಿಯೆನು - ಕಾಣಲಿಲ್ಲವು, ಎನಿತು-ಎಷ್ಟು, ಅಪರಾಧಂ-ದೋಷವು, ಉಳ್ಳೊಡಂ-ಇದ್ದರೂ ಕೂಡ, ಸೈರಿಸುವುದು - ತಡೆಯಬೇಕು, ಎಂದನು - ಎಂದು ನುಡಿದವನಾದನು ॥೫೩॥

ಟೀ॥ ವಾಲ್ಮೀಕಿ - ವಾಲ್ಮೀಕಿಮಹರ್ಷಿಯು, ರಾಮನನ್ನು ಕುರಿತು, ಜಾತಂ - ಮಗನು, ವಿನೀತನಾಗಲಿ - ಹೇಳಿದ ಮಾತನ್ನು ಕೇಳುವನಾಗಲೀ, ಧೂರ್ತನಾಗಲಿ-ಕಠಿಣನೇ ಆಗಲಿ, ತಾತಂಗೆ-ಜನಕನಿಗೆ, ವಿರಹಿತವ-ಕೆಡುಕನ್ನು, ಮಾಡಿದ-ಎಸಗಿದ, ಈಬಾಲಕರ-ಈ ಕುವರರ, ಅತೀತಮಂ - ಮಿತಿಮೀರಿ ಮಾಡಿದ ಅಪರಾಧವನ್ನು, ಕ್ಷಮಿಸು-ಮನಸ್ಸಿಗೆ ತಂದುಕೊಳ್ಳದೆ ಬಿಟ್ಟುಬಿಡುವನಾಗು, ಎಂದು-ಎಂಬತೆರನಾಗಿ, ನುಡಿಯೆ-ತಿಳಿಸಲು, ರಾಘವನು-ಶ್ರೀ ರಾಮನು, ಊರ್ಮಿಳಾಪತಿಯನು-ಊರ್ಮಿಳೆಯ ಗಂಡನಾದ ಸೌಮಿತ್ರಿಯನ್ನು ಕುರಿತು, ಸೀತೆ-ಜಾನಕಿಯು, ಎಂತು-ಹೇಗೆ, ಸುತರಂ-ಕುವರರನ್ನು, ಪಡೆದಳು - ಹಡೆದಳು, ಎನೆ-ಎಂದು ಪ್ರಶ್ನೆಮಾಡಲಾಗಿ, ಪೂರ್ಣಗರ್ಭಿಣಿಯಾದ-ಒಂಭತ್ತು ತಿಂಗಳು ತುಂಬಿ ಹೆರಲು ಸಿದ್ಧಳಾಗಿದ್ದ, ಭೂತನುಜೆಯಂ-ಭೂದೇವಿಯ ಮಗಳನ್ನು, ತವ-ನಿನ್ನ, ಆಜ್ಞೆಯಿಂದ-ಅಪ್ಪಣೆಯಿಂದ, ಶ್ವೇತನದಿಯಂ-ಬೆಳ್ದೊರೆಯನ್ನು, ದಾಂಟಿ-ದಾಂಟಿದವನಾಗಿ, ಕಾನನದೊಳು-ಕಾಡಿನಲ್ಲಿ, ಇರಿಸಿಬಂದೆನು-ಬಿಟ್ಟು ನಾನು ಹಿಂದಿರುಗಿ ಊರಿಗೆ ಬಂದೆನು, ಅಲ್ಲದೆ-ಇದುವಿನಹ, ಮುಂದೆ-ಮುಂದೆ ನಡೆದದ್ದನ್ನು. ಅರಿಯೆನು-ಕಾಣಲಿಲ್ಲವು, ಎಂದನು-ಎಂಬದಾಗಿ ಹೇಳಿದನು. ॥೫೪॥

ಟೀ॥ ಲಕ್ಷ್ಮಣಂ - ಊರ್ಮಿಳಾಕಾಂತನು, ಇಂತೆಂದು - ಈ ಪ್ರಕಾರವಾಗಿ, ನುಡಿಯೆ - ತಿಳಿಸಲಾಗಿ, ಸಮನಂತರದೊಳ್-ಮುಂದೆ ನಡೆದ ವರ್ತಮಾನವನ್ನೆಲ್ಲಾ, ವಾಲ್ಮೀಕಿ-ವಾಲ್ಮೀಕಿ ಮಹಾಮುನಿಯು, ರಾಮನನ್ನು ಕುರಿತು, ಜಾನಕಿ-ಸೀತಾದೇವಿಯಾದರೊ, ವಿರಹಸಂತಾಪದಿಂದ - ಶ್ರೀರಾಮದೇವರನ್ನು ಬಿಟ್ಟುಬಂದ ಕಡುಸಂಕಟದಿಂದ, ಏಕಾಂಗಿಯಾಗಿ-ಒಬ್ಬೊಂಟಿಗಳಾಗಿ, ಅಡವಿಯೋಳ್ - ಅರಣ್ಯದಲ್ಲಿ, ತೊಳಲುತ - ತಿರುಗಾಡುತ್ತ, ಇರ್ದುದಂ - ಇದ್ದಬಗೆಯನ್ನು, ಕಂಡು - ಈಕ್ಷಿಸಿ, ಸಂತೈಸಿ-ಶಾಂತವಾದ ಮಾತುಗಳಿಂದ ದುಃಖವನ್ನು ಕಡಮೆಯಾಗುವಂತೆ ಮಾಡಿ, ತನ್ನ-ವಾಲ್ಮೀಕಿಯ, ಆಶ್ರಮಕೆ-ಎಲೆಮನೆಗೆ

ಕರುಣಾಸಾಂದ್ರನೆಂದೂ, ಶರಣಾಗತ ರಕ್ಷಕನೆಂದೂ, ಲೋಕವೆಲ್ಲಾ ಕೊಂಡಾಡುತ್ತಲಿರುವುದು. ಈ ಈರ್ವರು ಬಾಲಕರೂ ನಿನ್ನರಸಿಯಾದ ವೈದೇಹಿಯ ಗರ್ಭಾಂಬುಧಿಯಲ್ಲಿ ನಿನ್ನಿಂದ ಜನಿಸಿದವರೇ ಹೊರತು ಬೇರೆಯಲ್ಲವು. ಇವರು ಮಾರ್ಗತಪ್ಪಿ ಮಾಡಿರುವ ಈ ಘೋರಕೃತ್ಯ ಸಂಬಂಧದ ಅಪರಾಧವನ್ನು ಕ್ಷಮಿಸು, ವರುಣನು ನಡೆಯಿಸಿದ ಯಜ್ಞಕ್ಕೆ ನನ್ನನ್ನು ಕರೆದನಾದಕಾರಣ ನಾನು ವರುಣ ಲೋಕಕ್ಕೆ ಹೋಗಿದ್ದೆನು, ನಾನಿಲ್ಲದಿರುವ ಕಾಲದಲ್ಲಿ ಬಾಲಕರಾದ ಇವರಿಬ್ಬರೂ ತಿಳಿವಳಿಕೆ ಸಾಲದೆ ಈ ಕಾರ್ಯವನ್ನು ನಡೆಯಿಸಿದರು. ಆದ್ದರಿಂದ ನನ್ನನ್ನೂ, ॥ ೫೩ ॥ ಸನ್ಮಾರ್ಗದಿಂದಲಾಗಲೀ ದುರ್ಮಾರ್ಗದ ಕೊಬ್ಬಿನಿಂದಲಾಗಲೀ, ತಂದೆಯಾದ ನಿನಿಗೆರಡು ಬಗೆದಿರುವ ಈ ಪಸುಳೆಗಳನ್ನು ಕ್ಷಮಿಸಿ ರಕ್ಷಿಸೆಂದು ಪ್ರಾರ್ಥಿಸಿದನು. ವಾಲ್ಮೀಕಿಯು ನಾನಾ ಪ್ರಕಾರವಾಗಿ ರಾಮಚಂದ್ರನನ್ನು ಸ್ತುತಿಸುತ್ತಿರಲಾಗಿ, ರಾಘವನು ತನ್ನನುಜನಾದ ಲಕ್ಷ್ಮಣನನ್ನು ಕುರಿತು, ಎಲೈ ಸೌಮಿತ್ರಿಯೆ, ನಾನು ಕಾಡಿಗೆ ಕಳುಹಿಸಿದ ಸೀತೆಯು ಪುತ್ರರಂ ಪಡೆದುದೆಂತು? ಇದನ್ನು ವಿಸ್ತಾರವಾಗಿ ತಿಳಿಸೆನ್ನಲು

ಕೊಂಡೊಯ್ದುದಂಬಳಿಕಲ್ಲಿ । ಸಂತತಿಗಳಾದುದಂತಾನವರ್ಗಿಲ್ಲಿಪರಿ । ಯಂತರಂಮಾಡಿಸಿದಕೃತ್ಯಂಗಳೆಲ್ಲಮಂಪೇಳ್ದಂರಘೂದ್ವಹಂಗೆ ॥ ೫೫ ॥ ಬಳಿಕವಾಲ್ಮೀಕಿನಿಜಶಿಷ್ಯರಂಸದನಕ್ಕೆ । ಕಳುಹಿತರಿಸಿದನಮಲವಲ್ಲಕಿಗಳಂ ತನ್ನ । ಬಳಿಯೊಳಭ್ಯಾಸಮಂಮಾಡಿಸಿದರಾಮಚಾರಿತ್ರಮಂತುದಿಮೊದಲ್ಗೆ ॥ ಲಲಿತಸಾಳಂಗಸಾವೇರಿಗುಜ್ಜರಿಗೌಳ । ಪಳಮಂಜರಿಗಳೆಂಬವಿವಿಧರಾಗಂಗಳಿಂ । ಬಳಸಿಪಾಡಿಸಿದನೆರಡನೆಯತುಂಬುರನಾರದರತೆರದಿಕುಶಲವರನು ॥ ೫೬ ॥ ವೀಣೆಯಂಕೈಗಿತ್ತು ಬಾಲಕರವದನದೋಳ್ । ವಾಣಿತಾಂನೆಲಸಿದಳೊಗಾನದೇವತೆಯಕೈ । ಗಾಣಿಕೆಯೊಪೋಹಸದತನಿರಸವೊಸೊಗಯಿಸುವಕರ್ಣಾಮೃತವೊಪೇ

ಕೂಡಿಕೊಂಡು-ಜೊತೆಯಲ್ಲಿ ಕರೆದು ಕೊಂಡು, ಒಯ್ದುದಂ-ಬಂದು ಸೇರಿದ್ದನ್ನೂ, ಅಲ್ಲಿ-ತನ್ನ ಪರ್ಣಶಾಲೆಯಲ್ಲಿ, ಬಳಿಕ-ತರುವಾಯ, ಸಂತತಿಗಳು-ಮಕ್ಕಳು, ಆದುದಂ ಆದ ಬಗೆಯನ್ನೂ, ಅವರ್ಗೆ-ಆ ಬಾಲಕರಿಗೆ, ಇಲ್ಲಿ ಪರ್ಯಂತ-ಇದುವರೆಗೂ, ಮಾಡಿಸಿದ-ನೆರವೇರಿಸಿರತಕ್ಕ, ಕೃತ್ಯಂಗಳೆಲ್ಲಮಂ-ಸಮಸ್ತ ಕಾರ್ಯಗಳನ್ನೂ, ರಘೂದ್ವಹಂಗೆ-ಶ್ರೀ ರಾಮಮೂರುಗಿಗೆ, ಪೇಳ್ದಂ-ವಿಸ್ತರಿಸಿದವನಾದನು ॥

ಅ॥ ವಿ॥ ರಘೂದ್ವಹಂ-ರಘುವಂಶದಲ್ಲಿ ಶ್ರೇಷ್ಠನು ॥೫೫॥

ಟೀ॥ ವಾಲ್ಮೀಕಿ-ವಾಲ್ಮೀಕಿ ಮಹರ್ಷಿಯು, ಬಳಿಕ-ಆಮೇಲೆ, ನಿಜಶಿಷ್ಯರಂ-ಕುಶಲವರೆಂಬ ತನ್ನ ಶಿಷ್ಯರೀರ್ವರನ್ನೂ, ಸದನಕ್ಕೆ-ಎಲೆಮನೆಗೆ, ಕಳುಹಿಸಿ-ಹೋಗುವಂತೆ ಮಾಡಿ, ಅಮಲ-ಪವಿತ್ರಂಗಳಾದ, ವಲ್ಲಕಿಗಳಂ-ವೀಣೆಗಳನ್ನು, ತರಿಸಿದನು-ತರುವಂತೆ ಮಾಡಿದನು, ತನ್ನಬಳಿಯೋಳ್-ತನ್ನ ಹತ್ತಿರದಲ್ಲಿ, ಅಭ್ಯಾಸಮುಂಮಾಡಿಸಿದ-ಶಿಕ್ಷೆಗೈದ, ರಾಮಚಾರಿತ್ರಮಂ-ಶ್ರೀರಾಮ ಚಂದ್ರನ ಕಥಾಮೃತವನ್ನು, ತುದಿಮೊದಲ್ಗೆ-ಆದ್ಯಂತವಾಗಿ, ಲಲಿತ-ಮನೋಹರವಾದ, ಸಾಳಂಗ, ಸಾವೇರಿ, ಗುಜ್ಜರಿ, ಗೌಳ, ಪಳಮಂಜರಿಗಳು, ಎಂಬ-ಎನ್ನತಕ್ಕ, ವಿವಿಧ-ನಾನಾಪ್ರಕಾರವಾದ, ರಾಗಂಗಳಿಂ-ರಾಗ ಭೇದಗಳಿಂದ, ಬಳಸಿ-ಸ್ತೋತ್ರಮಾಡಿ, ಕುಶಲವರನು-ಕುಶಲವರೆಂಬ ಬಾಲಕರನ್ನು,ಎರಡನೆಯ-ಎರಡನೆಯವರಾದ, ತುಂಬುರು ನಾರದರ-ತುಂಬರು ಮತ್ತು ನಾರದರ, ತೆರದಿ-ಬಗೆಯಿಂದ, ಪಾಡಿಸಿದನು-ರಾಮ ಚರಿತ್ರೆಯನ್ನು ಹಾಡುವಂತೆ ಮಾಡಿದನು ॥

ಅ॥ ವಿ॥ ರಾಗಭೇದಗಳು-ಸಾರಂಗ, ಸಾವೇರಿ, ಗುಜ್ಜರಿ, ಗೌಳ, ಗಂಡುಕ್ರಿಯ, ದೇಶಾಕ್ಷರಿ, ಮಲಹರಿ, ಶಂಕರಾಭರಣ, ಕಲ್ಯಾಣಿ, ಆರಭಿ, ಮಧ್ಯಮಾವತಿ, ಆನಂದ ಭೈರವಿ, ಸುರಟಿ, ಪುನ್ನಾಗವರಾಳಿ, ಯರಕುಲ ಕಾಂಬೋಧಿ, ನಾಟಿ, ಶ್ರೀರಾಗ, ನವರೋಜು, ರೇಗುಪ್ತಿ, ನೀಲಾಂಬರಿ, ದರ್ಬಾ, ಕೇದಾರ ಗೌಳ, ಥೋಡಿ ಮೊದಲಾದ ಮೂವತ್ತೆರಡು ರಾಗಗಳು ॥ ೫೬ ॥

ಟೀ॥ ಕೈಗೆ-ಲವಕುಶರ ಕರತಳದಲ್ಲಿ, ವಿಣೇಯ - ವೀಣೆಯನ್ನು, ಇತ್ತು-ಕೊಟ್ಟವನಾಗಿ, ಬಾಲಕರ-ಮಸುಳೆಗಳ, ವದನದೊಳ್-ಮೋರೆಯಲ್ಲಿ, ವಾಣಿ-ಶಾರದೆಯು, ತಾಂ-ತಾನೇ, ನೆಲಸಿದಳೊ-ಸೇರಿಬಿಟ್ಟದಾಳೆಯೊ, ಗಾನದೇವತೆಯ-ಹಾಡುಗಾ

ಲು ಲಕ್ಷ್ಮಣನು ಎಲೈ ಅಗ್ರಜಾತನೆ ಕೇಳು, ನಿನ್ನ ಶಾಸನವಂ ಶಿರದೊಳಿಟ್ಟು ಜಾನಕಿಯನ್ನು ಗಂಗಾನದಿಯ ಆಚೆಯ ದಡದಲ್ಲಿರುವ ಘೋರಕಾಂತರಕ್ಕೆ ಬಿಟ್ಟು ನಾನು ಹಿಂದಿರುಗಿ ಊರಿಗೆ ಬಂದೆನು, ಮುಂದೆ ನಡೆದ ಸಮಾಚಾರವು ನನಿಗೆ ತಿಳಿಯದು ಎಂದು ನುಡಿದನು, ಆ ಬಳಿಕ ವಾಲ್ಮೀಕಿಯು ರಾಘವೇಶ್ವರನನ್ನು ಕುರಿತು ಎಲೈ ದಾಶರಥಿಯೆ, ಮುಂದೆ ನಡೆದ ಸುದ್ದಿಯನ್ನು ತಿಳಿಸುವೆನು, ಸಾವಧಾನ ಚಿತ್ತನಾಗಿ ಕೇಳು, ॥ ೫೪ ॥ ಸೌಮಿತ್ರಿಯು ಜಾನಕಿಯನ್ನು ಅಡವಿಯಲ್ಲಿ ಬಿಟ್ಟು ಹೊರಟುಹೋದ ಅನಂತರ ಸೀತೆಯು ಏಕಾಕಿನಿಯಾಗಿ, ದುಷ್ಟ ಮೃಗಗಳ ಭಯದಿಂದಲೂ, ಪತಿಯಾದ ನಿನ್ನ ವಿರಹದಿಂದಲೂ ಸಂಕಟ ಪಡುತ್ತ, ದಿಕ್ಕು ತೋಚದೆ ಹುಚ್ಚುಹಿಡಿದಂತೆ ಅಲೆಯುತ್ತಿರುವುದನ್ನು ನಾನು ಕಂಡು ನಾನಾಪ್ರಕಾರವಾಗಿ ಸಂತೈಸಿ, ನನ್ನೆಲೆಮನೆಗೆ ಕರದುಯ್ದು ಮಗಳಂತೆ ಸಾಕುತ್ತಲಿದ್ದೆನು, ನವಮಾಸವು ತುಂಬಿದ ಬಳಿಕ ವೈದೇಹಿಯ ಗರ್ಭದಲ್ಲಿ ನಿನ್ನೆದುರಿಗೆ ಕಂಗೊಳಿಸುತಲಿರುವ ಈ ಯಮಳರು ಉದ್ಭವಿಸಿದರು, ಹುಟ್ಟಿದಂದಿನಿಂದ ಇದುವರೆಗೂ ಈ ಬಾಲಕರನ್ನೂ, ನಿನ್ನ ಸತೀಶಿರೋಮಣಿಯಾದ ಜಾನಕಿಯನ್ನೂ ಸಲಹಿದೆದನು, ಈ ಬಾಲಕರಿಗೆ ಜಾತೋಪನಯನಾದಿ ಸಂಸ್ಕಾರಂಗಳನ್ನೆಲ್ಲಾ ಯಥಾವಿಧಿಯಾಗಿ ನೆರವೇರಿಸಿ ಸಕಲಕಲಾಕೋವಿದರನ್ನಾಗಿಯೂ, ರಣಪಂಡಿತರನ್ನಾಗಿಯೂ ಮಾಡಿರುವೆನು ॥ ೫೫ ॥ ಎಂದರುಹಿ, ತನ್ನ ಶಿಷ್ಯರನ್ನು ಪರ್ಣಶಾಲೆಗೆ ಕಳುಹಿ, ಉತ್ತಮವಾದ ವೀಣೆಗಳನ್ನು ತದಂಗಗಳಾದ ಮೃದಂಗ, ತಾಳಾದಿಗಳನ್ನೆಲ್ಲಾ ತರಿಸಿ ಎಲ್ಲಾ ರಾಗಗಳಿಂದಲೂ, ಮಟ್ಟುಗಳಿಂದಲೂ ರಾಮಾಯಣದ ಕಥೆಯನ್ನು ಆದ್ಯಂತವಾಗಿ ಶ್ರೀ ರಾಮಚಂದ್ರನೆದುರಿಗೆ ಹೇಳಿಸಿದನು. ತುಂಬುರು ನಾರದರ ಗಾನವನ್ನೂ ಕೂಡಾ ಸಿರಾಕರಿಸಿ ಗಾನಮಾಡುತ್ತಿರುವ ಈ ಬಾಲಕರಾದರೊ ॥ ೫೬ ॥ ಸರಸ್ವತಿಯು ತನ್ನ ಕರತಳದಲ್ಲಿದ್ದ ವಿಪಂಚಿಯನ್ನು ಈ ಹುಡುಗರ ಕೈಯಲ್ಲಿಟ್ಟು

ಳಿನೆ ‖ ಜಾಣೂಣ್ಮೆಜೋಕೆಯಿಂ ಚರರೀತಿತಾಳ ಪ್ರ | ಮಾಲಕಂಪಿತಮೂರ್ಛೆಸ್ವರ ಪಾಡುಬೆಡಗು ಬಿ | ನ್ನಾಣಲಯಮಾಹತ ಪ್ರತ್ಯಾಹತವ್ಯಾಪ್ತಿಗಳನರಿದು ಪಾಡ್ದರವರು ‖ ೫೭ ‖ ಸ್ಥಾಯಿಸಂಚಾರಿಗಳ ಸರಿಗಮಪಧನಿಯಸ್ವರ | ದಾಯತದಶುದ್ಧಸಂಕೀರ್ಣಸಾಳಗದ ಪೂ | ರಾಯತಸುತಾನಂಗಳಂ ತಾರಮಧ್ಯಮಂದರದಿಂದ ಸೊಗಸುಗೊಳಿಸಿ ‖ ಗೇಯರಸಮೊಸರೆಪಾಡಿವರವರ್ಿನುತ ರಾ | ಮಾಯಣದಸುಶ್ಲೋಕಮಾಲೆಯಂಕೇಳ್ದ ರಘು | ರಾಯನುರೆಮೆಚ್ಚಿಕೊಂಡಾಗಿನಸುನಗೆಯಿಂದಸೌಮಿತ್ರಿಗಿಂತೆಂದನು‖೫೮‖ಭಾವಿಸೆಲೆಸೌಮಿತ್ರಿಬಾಲಕರಸುಲಲಿತವ|ಚೋವಿಲಾಸಂಗಳಿಂಸ್ವರದಿಂದರೂಪಿಂದ|ಲಾವಣ್ಯದಿಂದಗತಿಯಿಂದಚೇಷ್ಟೆಗಳಿಂದಸೀತೆಯಂನೆನೆಯಿಸುವದು ‖ ದೇವಿಯನಗಲ್ದವಿರಹಾಗ್ನಿ ಸುತದರ್ಶನದ | ಜೀವನದೊಳುರೆನಂದಿತಾದುದಿನಕುಲ

---

ರಿಕೆ ಎಂಬ ದೇವತೆಯು, ಕೈಗಾಣಿಕೆಯೊ–ಹಸ್ತಾಲಂಕಾರವಾದ ಕಪ್ಪವೊ, ಮೋಹನದ–ಭ್ರಾಂತಿಯನ್ನುಂಟುಮಾಡುವ, ತನಿರಸವೊ–ನೂತನವಾದ ರಸವೊ, ಸೊಗಯಿಸುವ–ಆನಂದವಾಗಿ ತೋರುವ, ಕರ್ಣಾಮೃತವೊ–ಶ್ರೋತ್ರೇಂದ್ರಿಯದ ಸುಧೆಯಂತಿರತಕ್ಕ ನುಡಿಯೊ, ಸೇಳು–ಹೇಳು, ಎನೆ–ಎಂಬತೆರನಾಗಿ, ಜಾಣ್–ತಿಳಿವಳಿಕೆಯು, ಉಣ್ಮೆ–ಆವಿರ್ಭವಿಸಲು, ಜೋಕೆ–ಚಟವಟಿಕೆಯು, ಇಂಚರ–ಇಂಪಾದ ಧ್ವನಿಯು, ರೀತಿ–ಮಾರ್ಗವು, (ಮಟ್ಟು) ತಾಳ–ಕಾಲಕ್ರಿಯೆಯು, (ಲಯವು) ಪ್ರಮಾಣಕ್ಲುಪ್ತತೆಯು–ಕಂಪಿತ–ಚಲಿಸುವಿಕೆಯು, ಮೂರ್ಛೆ–ಹಾಡಿಕೆಯ ಆನಂದವು, ಸ್ವರ–ಏಳು ಬಗೆಯಾದ ಸ್ವರಭೇದಂಗಳು, ಪಾಡು–ಹಾಡುಗಾರಿಕೆಯ, ಬೆಡಗು–ಬುದ್ಧಿವಂತಿಕೆಯು, ಬಿನ್ನಾಣ–ಅಹಂಭಾವದ, ಲಯವು–ತಾಳವು, ಆಹತಪ್ರತ್ಯಾಹತ–ಹಾಡುಗಾರಿಕೆಯ ಏರಿಳಿತಗಳು, ವ್ಯಾಪ್ತಿಗಳನು–ಅವರಿಸುವಿಕೆಯನ್ನು, ಅರಿದು–ತಿಳಿದುಕೊಂಡವರಾಗಿ, ಪಾಡಿದರು–ಗಾನಮಾಡಿದರು ‖

ಅ‖ ವಿ‖ ಸಪ್ತಸ್ವರಗಳು–ನಿಷಾದ, ಋಷಭ, ಗಾಂಧಾರ, ಷಡ್ಜ, ಮಧ್ಯಮ, ಧೈವತ, ಪಂಚಮ ಎಂಬಿವು, ಕೈಗಾಣಿಕೆ–(ವ್ಯಂಜನ ಸಂಧಿ) ಕರ್ಣಾಮೃತ (ಸ. ದೀ.) ‖೫೭‖

ಟೀ‖ ಸ್ಥಾಯಿ–ರಾಗಸ್ವರ ಮೊದಲಾದವುಗಳ ಇರುವಿಕೆಯ, ಸಂಚಾರಿಗಳ – ತಿರುಗುವುದರ, ಸರಿಗಮಪದನಿಯ ಸ, ರಿ, ಗ, ಮ, ಪ, ಧ, ನಿ, ಎಂಬ ಸ್ವರದ–ಸಪ್ತ ಸ್ವರಗಳ, ಆಯತದ–ವಿಶಾಲತೆಯ, ಶುದ್ಧ–ಒಂದರೊಂದಿಗೆ ಮತ್ತೊಂದು ಕಲೆಯದಿರತಕ್ಕ, ಸಂಕೀರ್ಣ–ಒಂದಕ್ಕೊಂದು ಮಿಶ್ರವಾಗಿರತಕ್ಕ, ಸಾಳಗದ–ಸ್ವಾರಸ್ಯದ, ಪೂರಾಯತ–ಸಂಪೂರ್ಣವಾಗಿರುವ, ತಾನಂಗಳಂ–ಸ್ಥಳಗಳನ್ನು, ತಾರ–ಹೆಚ್ಚುಶಬ್ದವು, ಮಧ್ಯ–ಅದಕ್ಕಿಂತಲೂ ಸ್ವಲ್ಪಕಡಮೆ, ಮಂದರದಿಂದ–ಇನ್ನು ಕಡಿಮೆಯಾದ ಧ್ವನಿ ವಿಶೇಷದಿಂದ, ಸೊಗಸುಗೊಳಿಸಿ–ಕಿವಿಗಿಂಪಾಗುವಂತೆಮಾಡಿ, ಗೇಯ–ಹಾಡಿಕೆಗೆ ಅರ್ಹವಾದ, ರಸಂ–ಶೃಂಗಾರರಸವೇ ಮೊದಲಾದವು, ಒಸರೆ–ಕಾಣಬರುವಂತೆ, ಅವರ್–ಆ ಬಾಲಕರೀರ್ವರೂ, ವಿನುತ–ಶ್ರೇಷ್ಠತಮವಾದ, ರಾಮಾಯಣದ–ರಾಮಚರಿತ್ರೆಯ, ಸುಶ್ಲೋಕಮಾಲೆಯಂ–ಉತ್ತಮವಾದ ಪದ್ಯಗಳ ಸಮೂಹವನ್ನು ಪಾಡಿದರು–ಗಾನವಂ ಮಾಡಿದರು, ರಘುರಾಯನು–ಶ್ರೀ ರಾಮಚಂದ್ರನಾದರೊ, ಉರೆ–ಹೆಚ್ಚಾಗಿ, ಮೆಚ್ಚಿ–ಸಂತಸಂಗೊಂಡು, ಕೊಂಡಾಡಿ– ಹೊಗಳಿ, ಸೌಮಿತ್ರಿಗೆ–ಲಕ್ಷ್ಮಣನೊಂದಿಗೆ, ನಸುನಗೆಯಿಂದ–ಮಂದಹಾಸದಿಂದ, ಇಂತು–ಮುಂದೆ ಹೇಳುವಂತೆ, ಎಂದನು–ನುಡಿದವನಾದನು ‖೫೮‖

ಟೀ‖ ಎಲೆಸೌಮಿತ್ರಿ– ಅಯ್ಯಾ ಲಕ್ಷ್ಮಣ, ಭಾವಿಸೆ–ಆಲೋಚನೆಯಂ ಮಾಡಿನೋಡಿದರೆ, ಬಾಲಕರ–ಪಸುಳೆಗಳ, ಸುಲಲಿತ–ಬಹು ಮನೋಹರವಾದ, ವಚನ–ನುಡಿಗಳ, ವಿಲಾಸಂಗಳಿಂ–ಬೆಡಗಿನಿಂದ, ಸ್ವರದಿಂದ–ಅವರ ದನಿಯಿಂದ, ರೂಪಿಂದ–ಆಕಾರದಿಂದ, ಲಾವಣ್ಯದಿಂದ–ಹೆಚ್ಚಾದ ಕಾಂತಿಯಿಂದ, ಗತಿಯಿಂದ–ನಡಿಗೆಯಿಂದ, ಚೇಷ್ಟೆಗಳಿಂದ–ಅಂಗಗಳನ್ನು ವಿಕಾರಮಾಡುವಿಕೆಯಿಂದ, ಸೀತೆಯಂ–ಜಾನಕಿಯನ್ನು, ನೆನೆಯಿಸುವುದು–ಸ್ಮೃತಿಪಥಕ್ಕೆ ತರುವುದು, ದೇವಿಯನು – ವೈದೇಹಿಯನ್ನು, ಅಗಲ್ದ–ಬಿಟ್ಟುಬಿಟ್ಟ, ವಿರಹಾಗ್ನಿ–ಅಗಲಿಕೆ ಎಂಬ ಅಗ್ನಿಯು, ಸುತದರ್ಶನದ–ಪುತ್ರರನ್ನು ಕಂಡ, ಜೀವನದೊಳ್–ನೀರಿನಲ್ಲಿ ಮ

---

ತಾನು ಅವರ ಮುಖದಲ್ಲಿ ನೆಲಸಿರುವಳೋ ಎಂಬಂತೆಯೂ, ಗಾನಾಭಿಮಾನ ದೇವತೆಯು ಕೈಗಾಣಿಕೆ ಎಂಬ ಬಗೆಯಿಂದಲೂ ಮೋಹಗೊಳಿಸುವ ಇಂಚರದ ರಾಶಿಯೋ ಎಂಬ ವಿಧಾನವಾಗಿಯೂ ರಾರಾಜಿಸುತ್ತ, ತಾಳ, ಪ್ರಮಾಣ, ಜೋಕೆ, ಸೊಬಗು ಮೊದಲಾದ್ದರಲ್ಲಿ ತಮ್ಮ ಜಾಣತನವನ್ನು ಕಾಣಿಸುತ್ತ, ‖ ೫೭ ‖ ಸ್ಥಾಯಿಭಾವ ವಿಲಾಸಗಳಿಂದಲೂ, ಸ ರಿ ಗ ಮ ಪ ಧ ನಿ " ಎಂಬೇಳು ತೆರನಾದ ಸ್ವರ ವಿಶೇಷದಿಂದಲೂ, ತಾರ ಮಧ್ಯ ಮಂದರಗಳಿಂದಲೂ ರಾಮಾಯಣವನ್ನೆಲ್ಲಾ ಸಾಂಗವಾಗಿ ಗಾನರೂಪದಿಂದ ಹಾಡಿದವರಾದರು. ಇವರ ಗಾನದಿಂದ ಸೇನಾಂಗಣದಲ್ಲಿದ್ದ ಸಕಲರೂ, ಆಗಸದಮಾರ್ಗದಲ್ಲಿ ನೋಡುತ್ತಲಿದ್ದ ಸುರವಿಸರವೂ ಅಚ್ಚರಿಯಿಂದ ಕೂಡಿರಲು ; ರಾಮಚಂದ್ರನು ಈ ಬಾಲಕರ ಗಾನವನ್ನು ಕೇಳಿ ಸಂತೋಷದ ಕಡಲಲ್ಲಿ ಮುಳುಗಿ, ಲಕ್ಷ್ಮಣನನ್ನು ಕುರಿತು, ‖ ೫೮ ‖ ಎಲೈ ಸೌಮಿತ್ರಿಯೇ ! ಈ ತರಳರ ವಾಕ್ಪಟುತ್ವವೂ, ಮಾತುಗಳ ಬೆಡಗೂ, ರೂಪಲಾವಣ್ಯಂಗಳೂ, ಗಾನದ ಇಂಪೂ ನನ್ನ ಮನವನ್ನು ಭ್ರಾಂತಿಗೊಳಿಸುತ್ತಲಿರುವುದು. ಈ ಹುಡುಗರ ಅಂಗಾಂಗಗಳನ್ನೂ

ದೇಳ್ಗೆ | ಭೂವಲಯದೊಳ್ತನ್ನಬಾಣಮುಂಬಂಜೆಗೈದಪರೆಪೋರಬಿಗರೆಂದನು ||೫೯|| ರಾಯನಾಡಿದನುಡಿಗೆನಸುನಗುತಲಕ್ಷ್ಮಣಂ| ಜೀಯನಿನ್ನಂಬುಗಳುಮೋಘಮಾದಪುವೆಪರ | ಸಾಯಕದೊಳೀತಗಳ್ನಿನ್ನಸುತರದರಿಂದನೆಲೆಗೊಂಡುದಾತ್ಮಶಕ್ತಿ || ಈಯುಮ ಳರಂಪರಿಗ್ರಹಿಸೆಂದೊಡಾಕೌಸ | ಲೇಯನತಿಧನ್ಯರಾವೆಂದುವಾಲ್ಮೀಕಿಯಂ | ಪ್ರಿಯೋಕ್ತಿಯಿಂದಕೊಂಡಾಡಿಸುಕುಮಾರರಂ ಕರೆದಾಗಳಿಂತೆಂದನು || ೬೦ || ಆರತನುಜಾತರೆಲೆಮಕ್ಕಳಿರನಿಮಗಿನಿತು | ವೀರತ್ವಮೆತ್ತಣದುಪೇಳ್ವುದೆಂದಾತ್ಮಜರ | ನಾರಾ ಘವಂಕೇಳ್ದೊಡವರಾವುಜಾನಕಿಯಗರ್ಭಸಂಭವರೆಮ್ಮನು || ಆರೈದುವಾಲ್ಮೀಕಿಮುನಿಸಲಹಿಸಕಲವಿ | ದ್ಯಾರಾಜಿಯ

ತ್ತು ಬಾಳ್ವಿಕೆಯಲ್ಲಿ, ಇನಕುಲದ-ಭಾನುವಂಶದ, ಏಳ್ಗೆ-ಮೇಲ್ಮೆಯು, ಉರೆ-ಹೆಚ್ಚಾಗಿ, ನಂದಿತಾದುದು-ಶಮನವನ್ನೈದಿತು, [ಕಾಡಿಗೆ ಕಳುಹಿಸಿದ ಮೇಲೆ ಜಾನಕಿಗೆ ಮಕ್ಕಳು ಹುಟ್ಟಿದರೆಂದು ನಮ್ಮ ವಂಶಕ್ಕೆ ಅಪಯಶಸ್ಸು ಪ್ರಾಪ್ತವಾಯಿತು] ಪೋರಬಿಗರು-ಅನ್ಯರಾದವರು, ತನ್ನ-ತನ್ನ ಸಂಬಂಧದ, ಬಾಣಮುಂ - ಸರಲನ್ನು, ಭೂಮಂಡಲದೊಳ್-ಧರಾವಲಯದಲ್ಲಿ ಬಂಜೆಗೈದ ಪರೆ-ಕೆಟ್ಟು ಹೋಗುವಂತೆ ಮುರಿದಾರೆ, [ಎಂದಿಗೂ ಆಗುವುದಿಲ್ಲ] ಎಂದನು-ಎಂಬದಾಗಿ ಹೇಳಿದನು ||೫೯||

ಟೀ|| ಲಕ್ಷ್ಮಣಂ-ಸೌಮಿತ್ರಿಯಾದರೊ, ರಾಮನು-ಶ್ರೀ ರಾಮದೇವರು, ಆಡಿದ-ಹೇಳಿದಂಥ, ನುಡಿಗೆ-ವಾಕ್ಯಗಳಿಗೆ, ನಸುನಗುತ-ಮಂದಹಾಸಮಂ ತಾಳುತ್ತ, ಜೀಯ - ಅಜೀಯನಾದ ಸ್ವಾಮಿಯೇ, ನಿನ್ನ-ನಿನ್ನ ಸಂಬಂಧವಾದ, ಅಂಬುಗಳು-ಕಣೆಗಳು, ಪರಸಾಯಕದೊಳು-ಇತರರ ಅಲಗಿನಿಂದ, ಮೋಘಂ-ನಾಶವಾಗತಕ್ಕದ್ದು, ಅದಪುದೆ-ಆದೀತೆ, ಈತಗಳ್-ಈ ಹುಡುಗರು, ನಿನ್ನ-ನಿನ್ನವರಾದ, ಸುತರು-ಮಕ್ಕಳಾಗಿದಾರೆ, ಆದರಿಂದ-ಆ ಕಾರಣದಿಂದಲೇ, ಆತ್ಮಶಕ್ತಿ-ನಿನ್ನ ಸಾಹಸವು, ನೆಲೆಗೊಂಡುದು-ಇವರಲ್ಲಿ ಸೇರಿಕೊಂಡಿತು, ಈಯುಮಳರಂ-ಈ ಬಾಲಕರೀರ್ವರನ್ನೂ, ಪರಿಗ್ರಹಿಸು-ನಿನ್ನಬಳಿಗೆ ಕರೆದುಕೊಳ್ಳುವನಾಗು, ಎಂದೊಡೆ-ಎಂದು ನುಡಿಯಲು, ಆಕೌಸಲೇಯನು - ಕೌಸಲ್ಯೆಯ ಕುವರನು, ವಾಲ್ಮೀಕಿಯಂ - ವಾಲ್ಮೀಕಿಮಹರ್ಷಿಯನ್ನು ಕುರಿತು, ಆವು-ನಾವಾದರೊ, ಅತಿಧನ್ಯರು-ಬಹು ಕೃತಕೃತ್ಯರು, ಎಂದು - ಎಂಬತೆರನಾಗಿ, ಪ್ರಿಯೋಕ್ತಿಯಿಂದ - ಒಳ್ನುಡಿಗಳಿಂದ, ಕೊಂಡಾಡಿ-ಹೊಗಳಿ, ಸುಕುಮಾರರಂ-ಕೋಮಲಗಾತ್ರರಾದ ಆ ಇಬ್ಬರನ್ನೂ, ಕರೆದು-ಸಮೀಪಸ್ಥರನ್ನಾಗಿ ಮಾಡಿಕೊಂಡು, ಆಗಳ್-ಆ ಕಾಲದಲ್ಲಿ, ಇಂತು-ಮುಂದೆ ಹೇಳುವಂತೆ, ಎಂದನು-ನುಡಿದವನಾದನು ||೬೦||

ಟೀ|| ಆರಾಘವಂ - ಶ್ರೀ ರಾಮಚಂದ್ರನು, ಎಲೆಮಕ್ಕಳಿರಾ - ಎಲೈ ಬಾಲಕರೆ, ಆರ-ಯಾವ ಮನುಷ್ಯರ, ತನುಜಾತರು-ಸುತರಾಗಿದ್ದೀರಿ, ಇನಿತು-ಇಷ್ಟೊಂದು, ವೀರತ್ವಂ - ಶೌರ್ಯವು, ನಿಮಗೆ - ನಿಮಗಾದರೊ, ಎತ್ತಣದು-ಎಲ್ಲಿ ಒದಗಿತು, ಪೇಳ್ವುದು-ಹೇಳಬೇಕು, ಎಂದು-ಎಂಬತೆರನಾಗಿ, ಆತ್ಮಜರನು-ತನ್ನ ಕುವರರನ್ನು, ಕೇಳ್ದೊಡೆ-ಪ್ರಶ್ನೆಯಂಗೈಯ್ಯಲು, ಅವರು-ಆ ಬಾಲಕರಾದರೊ, ಆವು-ನಾವಿಬ್ಬರೂ, ಜಾನಕಿಯ-ವೈದೇಹಿಯ, ಗರ್ಭಸಂಭವರು-ಮಕ್ಕಳಾಗಿದೇವೆ, ವಾಲ್ಮೀಕಿಮುನಿ-ವಾಲ್ಮೀಕಿಮಹರ್ಷಿಯು, ಎಮ್ಮನು-ನಮ್ಮನ್ನು, ಆರೈದು-ಕಾಪಾಡಿ. ಸಲಹಿ-ಸಾಕಿ, ಸಕಲ-ಅಶೇಷವಾದ, ವಿದ್ಯಾರಾಜಿಯಂ-ವಿದ್ಯೆಗಳ ಶ್ರೇಣಿಯನ್ನೂ, ಕಲಿಸಿದಂ-ಶಿಕ್ಷಿಸಿದನು, ದೇವ-ಪ್ರಭುವೆ, ನಿನ್ನ-ನಿನ್ನ ಸಂಬಂಧವಾದ, ಪದವಾರಿಜಕೆ-ಅಡಿದಾವರೆಗಳಿಗೆ, ದ್ರೋಹಮಂ-ಅಪರಾಧವನ್ನು, ಮಾಡಿದೆವು-ಎಸಗಿದ್ದೇವೆ, ಸೈರಿಸುವುದು-ತಡಿಯಬೇಕು, ಎಂದು-ಎಂಬತೆರನಾಗಿ, ಪದದೊಳು-ಶ್ರೀರಾಮನ ಕಾಲುಗಳಲ್ಲಿ, ಎರಗಿದರು-ಅಡ್ಡಬಿದ್ದವರಾದರು ||೬೧||

ಇವರ ಬಾಲ ಚೇಷ್ಟೆಗಳನ್ನೂ ನೋಡಿದರೆ ಜಾನಕಿಯ ಸ್ಮರಣೆಯುಂಟಾಗುತ್ತಲಿರುವುದು. ಸೀತಾದೇವಿಯನ್ನಗಲಿದ ವಿರಹಾಗ್ನಿಯೊಂದಿಗೆ ಪತಿಯ ಸಮೀಪದಲ್ಲಿ ಇಲ್ಲದಿರುವಾಗ ಜಾನಕಿಯು ಪುತ್ರರಂ ಪಡೆದಳೆಂಬ ಮತ್ತೊಂದು ಬೆಂಕಿಯು ಜೋಡಿಯಾಗಿ ತಾಪವಿಮ್ಮಡಿಯಾಯಿತು. ಇವರು ಇತರರಾದರೆ ನನ್ನ ಬಾಣಗಳನ್ನು ಕತ್ತರಿಸುವ ಸಾಮರ್ಥ್ಯವೆಲ್ಲಿ ಬಂದೀತೆಂದನು ||೫೯|| ಆಗ ಸುಮಿತ್ರಾಪುತ್ರನು ಅಣ್ಣನನ್ನ ಕುರಿತು, ಮುಗುಳ್ನಗೆಯಿಂದೊಡಗೂಡಿ, ಈ ಬಾಲಕರಲ್ಲಿ ನಿನ್ನ ಶಕ್ತಿಯು ನೆಲೆಗೊಂಡಿರುವುದರಿಂದಲೇ ನಿನ್ನ ಕ್ರೂರವಾದ ಬಾಣಗಳು ಅವರೆದುರಿಗೆ ನಿಲ್ಲದೆ ಹೋದವು. ಇವರು ನಿನ್ನ ಮಕ್ಕಳೇ ಹೊರತು ಬೇರೆಯವರೆಂದು ಎಂದೆಂದಿಗೂ ಯೋಚನೆಯನ್ನು ಮಾಡದೆ ಈ ತರಳರನ್ನು ಪರಿಗ್ರಹಿಸೆನಲು, ರಾಘವನು ವಾಲ್ಮೀಕಿಮುನಿಯನ್ನು ಬಾರಿಬಾರಿಗೂ ಕೊಂಡಾಡುತ್ತ, ಆ ಪಸುಳೆಗಳಂ ತನ್ನ ಪಕ್ಕದೊಳಿರಿಸಿಕೊಂಡು, ||೬೦|| ಎಲೈ ಬಾಲಕರೇ! ನೀವು ಯಾರ ಸುತರು? ನಿಮಗಿಂತಹ ಅಸಾಧಾರಣವಾದ ಸಾಮರ್ಥ್ಯವು ದೊರೆತುದೆಂತು? ಎಂಬದಾಗಿ ಪ್ರಶ್ನೆಯಂ ಮಾಡಿದನು. ಆಗ ಆ ಬಾಲಕರು, ಎಲೈ ರಾಜರ ರಾಜನೆ ಕೇಳು, ನಾವಾದರೊ ಸೀತೆಯ ತನುಜಾತರು, ನಮ್ಮನ್ನು ಹುಟ್ಟಿದಂದಿನಿಂದಲೂ ಈ ವಾಲ್ಮೀಕಿಮುನಿಗಳು ಸಾಕಿ ಸಕಲ ವಿದ್ಯಾಪಾರಂಗತರನ್ನಾಗಿ ಮಾಡಿದರು. ರಾಮಕಥಾಸಂಕೀರ್ತನೆಯನ್ನು ಕಲಿಸಿದರು, ಎಲೈ ಮಹಾನುಭಾವನೆ, ನಿನ್ನಡಿದಾವರೆಗಳಿಗೆ ನಮ್ಮಿಂದಾದ ದ್ರೋಹವನ್ನು ಕ್ಷಮಿಸಿ ಕಾಪಾಡಬೇಕೆಂದು ರಾಮಚಂದ್ರನ ಪಾದಸರ

## ಇಪ್ಪತ್ತೊಂದನೆಯ ಸಂಧಿ.

ಕಲಿಸಿದಂದೇವನಿನ್ನಪದ | ವಾರಿಜಕೆಬ್ರೋಹಮಂಮಾಡಿದೆವುಸೈರಿಸುವುದೆಂದೆರಗಿದರ್ಪದದೊಳು || ೬೧ || ತನಯರಂತೆಗೆದೊಡನೆಮುಂಡಾಡಿಬಿಗಿಯಪ್ಪಿ | ಘನತರಸ್ನೇಹದಿಂಶಿರವನಾಘ್ರಾಣಿಸಿವ | ದನನನೊಡನೊಡನೆಚುಂಬಿಸಿನುತ್ತೆಮತ್ತೆವಾಲ್ಮೀಕಿಯುಂಮಿಗೆಪೊಗಳುತ || ಅನುಜರಿಂದೊಡಗೂಡಿರಘುವರಂಸಂತೋಷ | ವನಧಿಯೊಳ್ಮುಳುಗಿದಂಸುಕುಮಾರರಂಕಂಡು ಕೊನರಿತುಸಮಸ್ತಪರಿವಾರಮುತ್ಸವದಿಂದಮೊಳಗಿದವುವಾದ್ಯಂಗಳು || ೬೨ || ಬಳಿಕವಾಲ್ಮೀಕಿಯುಂಸಂತೈಸಿಸೀತೆಭೂತಳವರಿಯೆಪರಿಶುದ್ಧೆಲೋಕಾಪವಾದಕ್ಕೆ | ಕಳೆದೆನೆಂತಾದೊಡಂಪುತ್ರರಂಪಡೆದಳಿನ್ನರವರಿಸದೆನ್ನಬಳಿಗೆ || ಕಳುಹೆಂದು ಬೀಳ್ಕೊಂಡುಸುತಸಹೋದರರೊಡನೆ | ದಳಸಹಿತಹಯುವರಂವೆರಸಿನಿಜಪುರಕೆಬಂ | ದುಳಿದಿರ್ದಯಜ್ಞಮಂನಡೆಸಿದಂಮೂಜಗಂಪೊಗಳಲ್ಕೆರಘುನಾಥನು || ೬೩ || ಇತ್ತನಿಜತನುಜರಂಕಳುಹಿವಾಲ್ಮೀಕಿಮುನಿ | ಪೋತ್ತಮಂಬರಲಾಶ್ರಮದ್ವಾರದೋ

ಟೀ|| ರಘುವರಂ - ರಘುವಂಶದಲ್ಲಿ ಶ್ರೇಷ್ಠನಾದ ರಾಮಚಂದ್ರನು, ತನಯರಂ - ಮಕ್ಕಳನ್ನು, ತೆಗೆದು - ಕರೆದುಕೊಂಡು, ಒಡನೆ - ಕೂಡಲೆ, ಮುಂಡಾಡಿ - ತಲೆಯನ್ನು ಮೂಸಿ, ಬಿಗಿಯಪ್ಪಿ - ಗಾಢಾಲಿಂಗನವಂ ಮಾಡಿಕೊಂಡು, ಘನತರ - ಬಹು ಹೆಚ್ಚಾದ, ಸ್ನೇಹದಿಂದ - ಬಹು ವಿಶ್ವಾಸದಿಂದ, ಶಿರವನು - ತಲೆಯನ್ನು, ಆಘ್ರಾಣಿಸಿ - ಮೂಸಿ, ಒಡನೆ-ಬಾರಿಬಾರಿಗೂ, ವದನವನು-ಮುಖವನ್ನು, ಚುಂಬಿಸಿ-ಆಸ್ವಾದಿಸಿದವನಾಗಿ, ವಾಲ್ಮೀಕಿಯಂ-ಮುನಿಪತಿಯನ್ನು, ಮಿಗೆ-ಅಧಿಕವಾಗಿ, ಮತ್ತೆಮತ್ತೆ - ಪುನಃ ಪುನಃ, ಪೊಗಳುತ್ತ - ಹೊಗಳುತ್ತ, ಅನುಜರಿಂದ - ಭರತ ಲಕ್ಷ್ಮಣ ಶತ್ರುಘ್ನರೆಂಬ, ಅನುಜಾತರಿಂದ, ಒಡಗೂಡಿ - ಬೆರೆತವನಾಗಿ, ಸುಕುಮಾರರಂ - ಕೋಮಲಗಾತ್ರರಾಗಿ ಮೆರೆಯುವ ಕುಶಲರನ್ನು, ಕೊಂಡು-ಹೊಂದಿ, ಸಂತೋಷನನಧಿಯೊಳ್-ಹರ್ಷಸಾಗರದೊಳಗೆ, ಮುಳಿಗಿದಂ-ಮಗ್ನನಾಗಿ ಹೋದನು, ಸಮಸ್ತಪರಿವಾರ-ಸಕಲ ಜನರೂ, ಉತ್ಸವದಿಂದ - ಸಂತೋಷಾತಿಶಯದಿಂದ, ಕೊನರಿತು-ತಲೆಯೊರುತ್ತಲಿತ್ತು, ವಾದ್ಯಂಗಳು-ದುಂದುಭಿ ಮೊದಲಾದವೆಲ್ಲಾ, ಮೊಳಗಿವು-ಶಬ್ದಮಾಡಲ್ಪಟ್ಟವು. ||೬೨||

ಟೀ|| ಬಳಿಕ-ಅನಂತರ, ರಘುನಾಥನು-ಶ್ರೀರಾಮನು, ವಾಲ್ಮೀಕಿಯಂ-ವಾಲ್ಮೀಕಿಮುನಿಪನನ್ನು, ಸಂತೈಸಿ-ಶಾಂತವಾದ ಮಾತುಗಳನ್ನಾಡಿ, ಭೂತಳವು-ಪ್ರಪಂಚದ ಜನವೆಲ್ಲರೂ, ಅರಿಯೆ-ತಿಳಿದುಕೊಂಡಿರುವಂತೆ, ಸೀತೆ-ಜಾನಕಿಯು, ಪರಿಶುದ್ಧೆ-ಪವಿತ್ರಳಾದವಳು, ಲೋಕಾಪವಾದಕ್ಕೆ - ಲೋಕದುರ್ಜನಕ್ಕೋಸ್ಕರಲೆ, ಕಳೆದನು-ಬಿಟ್ಟುಬಿಟ್ಟೆನು. ಎಂತಾದೊಡಂ-ಯಾವತೆರನಾದರೂ, ಪುತ್ರರಂ-ಮಕ್ಕಳನ್ನು, ಪಡೆದಳು-ಹಡದವಳಾದಳು, ಅರವರಿಸದೆ-ನಾನು ಬಿಟ್ಟದ್ದನ್ನು ಮನಸ್ಸಿನಲ್ಲಿಡದೆ, ಇನ್ನು-ಇನ್ನುಮೇಲೆ, ಎನ್ನಬಳಿಗೆ-ನನ್ನ ಸಮೀಪಕ್ಕೆ, ಕಳುಹು-ಕಳುಹಿಸತಕ್ಕವನಾಗು, ಎಂದು-ಎಂಬತೆರನಾಗಿ, ಬೀಳ್ಕೊಂಡು-ಒಡಂಬಡಿಸಿ, ಸುತಸಹೋದರರೊಡನೆ - ಕುಶಲವರೆಂಬ ತನುಜರಿಂದಲೂ, ಭರತ, ಲಕ್ಷ್ಮಣ, ಶತ್ರುಘ್ನರೆನ್ನುವ ತಮ್ಮಂದಿರಿಂದಲೂ ಕೂಡಿದವನಾಗಿ, ದಳಸಹಿತ - ಪರಿವಾರದೊಂದಿಗೂ, ಹಯುವರಂವೆರಸಿ - ಉತ್ತಮಾಶ್ವದಿಂದಲೂ ಬೆರತು, ನಿಜ-ನಿಜಸ್ವಕೀಯವಾದ, ಪುರಕೆ - ಅಯೋಧ್ಯಾನಗರಕ್ಕೆ, ಬಂದು - ಐತಂದು, ಉಳಿದಿರ್ದ-ಮಿಕ್ಕಿದ್ದ, ಯಜ್ಞಮಂ - ಯಾಗವನ್ನೂ, ಮೂಜಗಂ-ಸ್ವರ್ಗಮರ್ತ್ಯ ಪಾತಾಳಂಗಳೂ, ಪೊಗಳಲ್ಕೆ-ಸ್ತುತಿಸುವಂತೆ, ನಡೆಸಿದಂ-ನೆರವೇರಿಸಿದವನಾದನು. ||೬೩||

ಟೀ|| ಇತ್ತ-ಈಕಡೆಯಲ್ಲಾದರೊ, ವಾಲ್ಮೀಕಿಮುನಿಪೋತ್ತಮಂ-ವಾಲ್ಮೀಕಿಮಹರ್ಷಿಯು, ನಿಜತನುಜರಂ - ತನ್ನ

---

ಸೀರುಹಂಗಳಿಗಾನತನಾದರು. ||೬೧|| ಕುಶಲವರು ರಾಮನ ಪಾದಗಳಿಗಾನತ ರಾದೊಡನೆ ಆ ಬಾಲಕರನ್ನು ರಾಘವನು ತನ್ನ ಬಳಿಗೆ ಕರೆದುಕೊಂಡು ಅವರನ್ನು ಮುದ್ದಾಡಿ, ಮುದ್ದುಗೈದು ಬಾರಿಬಾರಿಗೂ ವಾಲ್ಮೀಕಿ ಮುನಿಪತಿಯನ್ನು ಪೊಗಳುತ್ತಾ, ಪುತ್ರಸಂದರ್ಶನದಿಂದೊಗೆದ ಆನಂದದಿಂ ಅತಿಯಾಗಿ ಹಿಗ್ಗುತ್ತಲಿದ್ದನು, ಯುದ್ಧರಂಗದಲ್ಲಿ ನೆರೆದಿದ್ದ ಪರಿವಾರವೆಲ್ಲವೂ ಸಂತೋಷದಿಂದ ಕೂಡಿದವರಾದರು. ಈ ಶುಭೋದಯಕ್ಕಾಗಿ ರಣರಂಗದಲ್ಲಿ ಭೇರಿಮೃದಂಗಾದಿ ವಾದ್ಯಗಳು ಮೊಳಗಿದವು || ೬೨ || ಆಗ ಶ್ರೀರಾಮಚಂದ್ರನು ವಾಲ್ಮೀಕಿ ಮುನಿಯನ್ನು ಸಮಾಧಾನ ಗೊಳಿಸಿ ಆ ಮಹರ್ಷಿಯನ್ನು ಕುರಿತು, ಎಲೈ ತಾಪಸೋತ್ತಮರೆ, ಜಾನಕಿಯು ಪವಿತ್ರಳೆಂಬುದು ಲೋಕಪ್ರಸಿದ್ಧವಾದರೂ ಕೂಡ ಲೋಕನಿಂದೆಗಾಗಿ ವೈದೇಹಿಯನ್ನು ಕಾಡಿಗಟ್ಟಿದೆನು. ಪುತ್ರವತಿಯಾಗಿ ನಿನ್ನನುಗ್ರಹದಿಂದ ಕ್ಷೇಮವಾಗಿರುವ ಧರಣಿಜೆಗೆ ನಾನು ಕಾಡಿಗೆ ಕಳುಸಿದೆನೆಂಬ ದ್ವೇಷವಿದ್ದರೂ ಬಿಟ್ಟು ಬಿಡುವಂತೆ ಹೇಳಿ ನನ್ನ ಬಳಿಗೆ ಕಳುಹಿಸೆಂದು ವಾಲ್ಮೀಕಿಯನ್ನು ಒಡಂಬಡಿಸಿ ತನ್ನ ಮಕ್ಕಳಾದ ಕುಶಲವರಿಂದಲೂ, ಲಕ್ಷ್ಮಣ ಶತ್ರುಘ್ನ ಭರತರೆಂಬನುಜರಿಂದಲೂ, ಉತ್ತಮಾಶ್ವದಿಂದಲೂ, ಸುಗ್ರೀವ ವಿಭೀಷಣಾದಿಗಳಿಂದಲೂ ಒಡಗೂಡಿ, ಸಕಲ ಸೇನಾಸಮೇತನಾಗಿ ಪಟ್ಟಣವಂ ಸೇರಿ ಮೂರು ಲೋಕವೂ ಮೆಚ್ಚುವಂತೆ ಯಜ್ಞವನ್ನು ಸಾಂಗವಾಗಿ ನೆರವೇರಿಸಿದವನಾದನು. ||೬೩|| ಇತ್ತ ಜಾನಕಿಯಾದರೊ, ಲವ ಕುಶರನ್ನು ಬಿಟ್ಟು ಏಕಾಕಿನಿಯಾಗಿ ಬಂದ

ಳ್ಕಂಡು । ಚಿತ್ತದೋಳ್ಮರುಗುತೇನಾದರೆಲೆತಾತಕುಶಲವರೊಡಲ್ವಿಡಿವೆನೆಂತೊ ॥ ಪೆತ್ತಂದುಮೊದಲಾಗಿಪತಿವಿರಹಮುಂಮರೆದು । ಪೊತ್ತಿರ್ದೆನೀದೇಹಮಂತನ್ನಸುತರನಾ । ರ್ಗಿತ್ತುನೀನ್ಬೈತಂದೆಹೇಳೆಂದುಜಾನಕಿಬಿದ್ದಳಂಘ್ರಿಗಳ್ಗೆ ॥ ೬೪ ॥ ಮಣಿದೆತ್ತಿಸೀತೆಯಂಸಂತೈಸಿಮಗಳೆನಿ । ನ್ನಣುಗರಂತಮ್ಮತಾತಂಕೂಡೆಕೊಂಡೊಯ್ದು । ನೆಣಿಕೆಬೇಡಿದಕಿನ್ನುನಿನ್ನನುಂಕಾಂತನಲ್ಲಿಗೆಕಳುಹಿಬಪ್ಪೆನೆಂದು ॥ ಗುಣದಿಂದೊಡಂಬಡಿಸಿವಾಲ್ಮೀಕಿಮುನಿವರಂ । ಮಣಿರಥವನೇರಿಸಿಸಮಸ್ತವೈಭವದಿಂದ । ಧರಣಿಜೆಯತಂದಯೋಧ್ಯಾಪುರದೊಳಿರಿಸಿ ರಘುನಾಥನಂಕಾಣಿಸಿದನು ॥ ೬೫ ॥ ಮೇಲೆಜಾನಕಿಸಹಿತ ರಾಘವಂಸಾಮ್ರಾಜ್ಯ । ಲೋಲನಾಗಿರ್ದನೆಲೆ ಜನಮೇಜಯಕ್ಷಿತಿ । ಪಾಲಕೇಳ್ದೈ ಕುಶಲವರೊಡನೆರಾಮುಂಗೆ ಬಂದಕದನದಕಥೆಯನು । ಮೂಲೋ

---

ಕುವರರನ್ನು, ಕಳುಹಿಬರಲು–ಕಳುಹಿಸಿಬರಲಾಗಿ, ಸೀತೆಯು, ಆಶ್ರಮದ್ವಾರದೊಳ್–ಪರ್ಣಶಾಲೆಯ ಎದುರಿನಲ್ಲಿ, ಕಂಡು–ನೋಡಿ ಚಿತ್ತದೊಳ್ – ಮನದಲ್ಲಿಯೇ, ಮರುಗುತ – ಸಂಕಟಪಡುತ್ತ, ಎಲೆತಾತ–ಎಲೈ ಜನಕನೆ, ಕುಶಲವರು – ಕುಶಲವರೆಂಬ ನನ್ನ ಮಕ್ಕಳು, ಏನಾದರು–ಯಾವ ಗತಿಯನ್ನೈದಿದರು, ಎಂತು–ಯಾವತೆರದಿಂದ, ಒಡಲ್ವಿಡಿವೆನು–ಈ ಜೀವವನ್ನುಳಿಸಿಕೊಂಡಿರಲಿ, ಪೆತ್ತಂದುಮೊದಲಾಗಿ – ಹೆತ್ತದ್ದು ಮೊದಲ್ಗೊಂಡು, ಪತಿವಿರಹಮುಂ – ನನ್ನ ಕಾಂತನ ವಿಯೋಗವನ್ನು, ಮರೆದು–ಜ್ಞಾಪಕಕ್ಕೆ ತಾರದೆ, ಈದೇಹಮಂ–ಈ ನನ್ನ ಅವಯವವನ್ನು, ಪೊತ್ತಿರ್ದೆನು–ಧರಿಸಿದ್ದೆನು, ತಂದೆ–ಎಲೈ ಪಿತನೆ, ನನ್ನಸುತರನು–ನನ್ನ ಕುವರರನ್ನು, ಆರ್ಗೆ–ಯಾರಿಗೆ, ಇತ್ತು–ಕೊಟ್ಟುಬಿಟ್ಟು, ಐತಂದೆ–ಬಂದಿರುವಿ, ಹೇಳು–ನುಡಿ, ಎಂದು–ಎಂಬತೆರನಾಗಿ, ದುಃಖಿಸುತ್ತಾ, ಜಾನಕಿ–ವೈದೇಹಿಯು ಅಂಘ್ರಿಗಳ್ಗೆ–ವಾಲ್ಮೀಕಿಯ ಪಾದಾರವಿಂದಗಳಲ್ಲಿ, ಬಿದ್ದಳು–ವಂದನೆಯಂ ಮಾಡಿದಳು ॥೬೪॥

ಟೀ॥ ವಾಲ್ಮೀಕಿಮುನಿವರಂ–ವಾಲ್ಮೀಕಿಮಹರ್ಷಿಯು, ಸೀತೆಯಂ–ತನ್ನ ಪಾದಗಳ ಮೇಲೆ ಬಿದ್ದು ದುಃಖಿಸುವ ಜಾನಕಿಯನ್ನು, ಮಣಿದು–ಕೆಳಗೆಬಾಗಿ, ಎತ್ತಿ–ಎಬ್ಬಿಸಿದವನಾಗಿ, ಸಂತೈಸಿ–ಸಮುದಾಯಿಸಿ, ಮಗಳೇ–ಅಮ್ಮಾ ಜಾನಕಿ, ನಿನ್ನ–ನಿನ್ನಯ, ಅಣುಗರಂ–ಸುತರನ್ನು, ತಮ್ಮತಾತಂ–ಆ ಬಾಲಕರ ತಂದೆಯಾದ ರಾಮನು, ಕೂಡಿಕೊಂಡು–ಜೊತೆಯಲ್ಲಿ ಕರೆದುಕೊಂಡು, ಒಯ್ದನು–ಅಯೋಧ್ಯೆಗೆ ಹೊರಟುಹೋದನು, ಇದಕೆ–ರಾಮನು ಕುಶಲವರನ್ನು ಕರೆದೊಯ್ದನೆಂದು, ಎಣಿಕೆಬೇಡ–ವ್ಯಸನಪಡಲಾಗದು, ನಿನ್ನನೂ–ನಿನ್ನನ್ನೂ ಕೂಡ, ಇತಃಪರ–ಇನ್ನು ಮುಂದೆ, ಕಾಂತನಲ್ಲಿಗೆ–ಕೌಸಲ್ಯಾಸುತನೆಡೆಗೆ, ಕಳುಹಿಬಪ್ಪೆನು–ಬಿಟ್ಟುಬರುತ್ತೇನೆ, ಎಂದು–ಎಂಬತೆರನಾಗಿ, ಗುಣದಿಂದ–ಕುಶಲವರು ಇನ್ನೂ ರಾಮಸನ್ನಿಧಿಯಲ್ಲಿರಬೇಕೆಂಬ ಹಿತೋಕ್ತಿಗಳಿಂದ, ಒಡಂಬಡಿಸಿ–ಒಪ್ಪುವಂತೆ ಮಾಡಿ, ಧರಣಿಜೆಯ–ಭೂಮಿಸುತೆಯಾದ ಜಾನಕಿಯನ್ನು, ಮಣಿರಥವನು–ರತ್ನಖಚಿತವಾದ ರಥವನ್ನು ಹತ್ತುವಂತೆ ಮಾಡಿ, ಸಮಸ್ತ–ಸಕಲವಾದ, ವೈಭವದಿಂದ–ಅಟ್ಟಹಾಸದಿಂದ, ತಂದು–ಬರಮಾಡಿಕೊಂಡು, ಅಯೋಧ್ಯಾಪುರದೋಳ್–ಅಯೋಧ್ಯಾನಗರದಲ್ಲಿ, ಇರಿಸಿ–ರಾಮಚಂದ್ರನ ಸನ್ನಿಧಿಗೆ ಬಿಟ್ಟು, ರಘುನಾಥನಂ–ರಾಮನನ್ನು, ಕಾಣಿಸಿದನು–ನೋಡುವಂತೆ ಮಾಡಿದನು. ॥೬೫॥

ಟೀ॥ ಎಲೆ ಜನಮೇಜಯಕ್ಷಿತಿಪಾಲ–ಎಲೈ ಜನಮೇಜಯ ಮಹಾಭೂಕಾಂತನೆ, ರಾಘವಂ–ಶ್ರೀ ರಾಮನು, ಮೇಲೆ–ಮಕ್ಕಳು ತನ್ನೊಡನೆ ಬಂದು ಸೇರಿದನಂತರ, ಜಾನಕಿಸಹಿತ – ವೈದೇಹಿಯೊಂದಿಗೆ, ಸಾಮ್ರಾಜ್ಯಲೋಲನು – ರಾಜ್ಯಪದವಿಯನ್ನನುಭವಿಸುವುದರಲ್ಲಿ ಆಸಕ್ತನಾಗಿ, ಇರ್ದನು–ಇದ್ದವನಾದನು, ರಾಮುಂಗೆ–ಶ್ರೀ ರಾಮದೇವರಿಗೆ, ಕುಶಲವರೊಡನೆ–ಕುಶಲವರೆಂಬ ತನ್ನ ಮಕ್ಕಳೊಂದಿಗೆ, ಬಂದ–ಒದಗಿದ, ಕದನಕಥೆಯನು–ಕಾಳಗದ ವೃತ್ತಾಂತವನ್ನೆಲ್ಲಾ, ಕೇಳ್ದೈ – ಆಲಿಸಿದೆಯಾ,

---

ಮುನಿಪುಂಗವನನ್ನು ಕಂಡು ಕಡುದುಃಖದಿಂದ ಎಲೈ ತಂದೆಯೇ, ಲವಕುಶರು ಏನಾದರು. ಅವರನ್ನು ಎಲ್ಲಿ ಬಿಟ್ಟುಬಂದೆ? ಅಯ್ಯೋ! ಇದುವರೆಗೂ ಈ ಮಕ್ಕಳ ಮುದ್ದು ಮೊಗವನ್ನು ನೋಡುತ್ತಲಿದ್ದೆನಾಗಿ ಪತಿವಿರಹವನ್ನೂ ಮರೆತುಬಿಟ್ಟಿದ್ದೆನು, ಈಗ ನನ್ನರಗಿಣಿಗಳನ್ನೇನು ಮಾಡಿದೆ? ಯಾರಿಗೆ ಕೊಟ್ಟು ಬಂದೆ, ಹೇಳೆಂದು ಬಿಸುಸುಯ್ಯುತ್ತ ಮುನಿಪತಿಯ ಪದಾರವಿಂದಗಳಿಗೆರಗಿದಳು. ॥೬೪॥ ಈ ರೀತಿಯಲ್ಲಿ ದುಃಖದಿಂದ ದೀನಳಾಗಿ ಮೊರೆಯಿಡುತ್ತ ಕಾಲ್ಗಳ ಮೇಲೆ ಬಿದ್ದಿರುವ ಭೂದೇವಿಯ ಮಗಳನ್ನು ಮೇಲೆಕ್ಕೆಬ್ಬಿಸಿ, ಅಮ್ಮಾ, ಜಾನಕೀ, ನೀನು ವ್ಯಸನಪಡಬೇಡ. ನಿನ್ನ ಮಕ್ಕಳಾದ ಕುಶಲವರನ್ನು ಅವರ ತಂದೆಯೂ ನಿನ್ನ ಪತಿಯೂ ಆದ ರಾಮಚಂದ್ರನು ಅಯೋಧ್ಯಾಪಟ್ಟಣಕ್ಕೆ ಕರೆದುಕೊಂಡು ಹೋದನು, ನಿನ್ನನ್ನೂ ನಿನ್ನ ಕಾಂತನೆಡೆಯಲ್ಲಿ ಬಿಟ್ಟು ಬರುವೆನು, ಇನ್ನು ಮೇಲೆ ನೀನು ನಿನ್ನರಸನೊಂದಿಗೂ ಪುತ್ರರೊಂದಿಗೂ ಸುಖವಾಗಿ ಬಾಳೆಂದು ಸಮಾಧಾನೋಕ್ತಿಗಳಿಂದ ಒಪ್ಪಿಸಿ, ರತ್ನಖಚಿತವಾದ ತೇರಿನೊಳಗೆ ಸೀತಾದೇವಿಯನ್ನು ಕೂಡಿಸಿಕೊಂಡು ಸಕಲ ವೈಭವದೊಡನೆ ಅಯೋಧ್ಯೆಗೆ ಬಂದು ರಾಮಚಂದ್ರನಿದ್ದೆಡೆಗೆ ಜಾನಕಿಯನ್ನು ಕರೆದುಕೊಂಡು ಹೋಗಿ, ॥ ೬೫ ॥ ಆತನ ಸನ್ನಿಧಿಯಲ್ಲಿ ಒಪ್ಪಿಸಿದವನಾದನು. ಆ ಬಳಿಕ ಶ್ರೀರಾಮನು ತನ್ನ ಪತ್ನೀ ಪುತ್ರಾದಿಗಳಿಂದಲೂ, ಲಕ್ಷ್ಮಣನೇ ಮೊದಲಾದ ಅನುಜರಿಂದಲೂ ಕೂಡಿ ಸುಖ ಸಾಮ್ರಾಜ್ಯವನ್ನನುಭವಿಸುತ್ತಲಿದ್ದನು. ಎಲೈ ಜನಮೇಜಯರಾಯನೆ ಶ್ರೀರಾಮಾಶ್ವಮೇಧದ ಕಥೆಯನ್ನು ಕೇಳಿದೆಯಾ? ರಾಮ ಕುಶರೆಂಬ

# ಇಪ್ಪತ್ತೊಂದನೆಯ ಸಂಧಿ.

ಕಕಿಮುಪುಣ್ಯಮತಿರಮ್ಯಮಾಗಿರ್ಪ | ದಾಲಿಸಗಾಯುರಾರೋಗ್ಯಮೈಶ್ವರ್ಯಂವಿ | ಶಾಲಮತಿಸತ್ಕೀರ್ತಿವಿಮಲಸಂತತಿಸುಗತಿ ಮೊರೆಕೊಂಬುದಿಹಪರದೊಳು || ೬೬ || ಅರಸನೀಂಬೆಸಗೊಳಲ್ಪೇಳ್ದೆನಾಂಕುಶರಾಘ | ವರಯುದ್ಧಮಂಕರ್ಣಫಲುಗುಣರಕಾಳಗವ | ನೊರೆಯಲೇಕಿನ್ನುಕೇಳ್ದರಿವೆಯೇಬಭ್ರುವಾನಪಾರ್ಥರಾಹವನನು || ವಿರಚಿಸುವೆನೊಲಿದಾಲಿಸೆಂದುಜೈಮಿನಿಮುನೀ | ಶ್ವರನಿಂದುಕುಲತಿಲಕಜನಮೇಜಯಂಗೆವಿ | ಸ್ತರಿಸಿದಂದೇವಪುರನಿಲಯಲಕ್ಷ್ಮೀಶನಂಚಿತ್ತದೊಳ್ಧ್ಯಾನಿಸುತಿರೆ ||೬೭||

ಸಂಧಿ ೨೧ ಕ್ಕೆ ಪದ್ಯ ೧೧೧೭ ಕ್ಕಂ ಮಂಗಳಮಸ್ತು.

---

ಮೂಲೋಕಕ್ಕೆ-ಸ್ವರ್ಗ, ಮರ್ತ್ಯ, ಪಾತಾಳಗಳಲ್ಲಿಯೂ, ಇದು-ಈ ಕಥೆಯು, ಪುಣ್ಯಂ-ಪುಣ್ಯದಾಯಕವಾದದ್ದು, ಆರೋಗ್ಯಂ-ಬಾಧೆ ಇಲ್ಲದಿರುವುದು, ಐಶ್ವರ್ಯಂ - ಐಸಿರಿಯನ್ನೊದಗಿಸುವುದು, ವಿಶಾಲ-ಹೆಚ್ಚಾದ, ಮತಿ-ತಿಳಿವಳಿಕೆ. ಸತ್ಕೀರ್ತಿ - ಯಶಸ್ಸು, ವಿಮಲ - ಪವಿತ್ರವಾದ, ಸಂತತಿ - ಪುತ್ರೋತ್ಪತ್ತಿಯು, ಸುಗತಿ-ಮೋಕ್ಷವು, ಇಹಪರದೊಳು-ಈ ಲೋಕ ಪರಲೋಕಗಳಲ್ಲಿನ ಸುಖಪರಂಪರೆಯೂ, ದೊರಕೊಂಬುದು-ಸಿದ್ಧಿಸುವುದು. ||೬೬||

ಟೀ|| ಅರಸ - ಎಲೈ ಜನಮೇಜಯನೆ, ನೀಂ - ನೀನಾಗಿ, ಬೆಸಗೊಳಲ್ - ಕೇಳಿದೆಯಾದಕಾರಣ, ಕುಶರಾಘವರ-ಕುಶ ಮತ್ತು ಶ್ರೀ ರಾಮನೆಂಬ ತಂದೆ ಮಕ್ಕಳಿಗಾದ, ಯುದ್ಧಮಂ - ಕಾಳಗದ ಸುದ್ಧಿಯನ್ನು, ಆಂ-ನಾನು, ಪೇಳ್ದೆನು-ಅರುಹಿದೆನು, ಇನ್ನು-ಇವನ್ನು ಕೇಳಿದ ಬಳಿಕ, ಕರ್ಣಫಲುಗುಣರ - ರವಿಸುತ ಇಂದ್ರಸೂನುಗಳ, ಕಾಳಗವನು - ಕದನದ ಸಮಾಚಾರವನ್ನು, ಒರೆಯಲೇತಕೆ-ಹೇಳುವುದರಿಂದೇನು ಪ್ರಯೋಜನ, ಕೇಳ್ದು ಅರಿವೆಯ್ಯೆ-ನೀನು ಕೇಳಿಯೇ ಇದ್ದೀಯಷ್ಟೆ, ಬಭ್ರುವಾಹನ ಪಾರ್ಥರ-ಬಭ್ರುವಾಹನ ಅರ್ಜುನ ಎಂಬ ತಂದೆಮಕ್ಕಳ, ಆಹವವನು-ಕಾಳಗವನ್ನು, ವಿರಚಿಸುವೆನು-ತಿಳಿಸುತ್ತೇನೆ, ಒಲಿದು-ಅಕ್ಕರೆಯಿಂದ, ಆಲಿಸು-ಕೇಳುವನಾಗು, ಎಂದು - ಎಂಬತೆರನಾಗಿ, ಇಂದುಕುಲತಿಲಕ - ಚಂದ್ರವಂಶಕ್ಕೆ ತಿಲಕಪ್ರಾಯನಾಗಿರತಕ್ಕ, ಜನಮೇಜಯರಾಯಂಗೆ-ಜನಮೇಜಯಕ್ಷಿಪತಿಗೆ, ಜೈಮಿನಿಮುನೀಶ್ವರನು - ಜೈಮಿನಿ ಮಹರ್ಷಿಯು, ದೇವಪುರ - ದೇವನಗರಿಯನ್ನೆ, ನಿಲಯ-ಆವಾಸವಾಗಿ ಉಳ್ಳ, ಲಕ್ಷ್ಮೀಶನಂ - ರಮಾಪತಿಯನ್ನು, ಚಿತ್ತದೋಳ್-ತನ್ನೆದೆಯುಲ್ಲಿ, ಧ್ಯಾನಿಸುತ-ಸ್ಮರಿಸುತ್ತ, ಇರೆ-ಇದ್ದವನಾಗಿ, ವಿಸ್ತರಿಸಿದಂ-ತಿಳಿಸಿದನು. ||೬೭||

ಟೀಕಾ ತಾತ್ಪರ್ಯಸಹಿತವಾದ ಜೈಮಿನಿ ಭಾರತದೊಳು ಇಪ್ಪತ್ತೊಂದನೆಯ ಸಂಧಿಯು ಸಮಾಪ್ತವಾದುದು.

---

ತಂದೆ ಮಕ್ಕಳಿಗಾದ ಯುದ್ಧವು ಎಂತಹ ಅಸಾಧಾರಣವಾದದ್ದು, ಎಲೈ ರಾಜೇಂದ್ರನೆ, ರಾಮಚರಿತ್ರೆಯನ್ನು ಯಾರು ಭಕ್ತಿಪುರಸ್ಸರವಾಗಿ ಕೇಳುವರೊ ಅಂಥವರಿಗೆ ಅತ್ಯುತ್ತಮವಾದ ಪುಣ್ಯವು ಲಭಿಸುವುದು, ಆಯುರಾರೋಗ್ಯ ಭಾಗ್ಯಗಳಿಂದಲೂ, ಸತ್ಕೀರ್ತಿ ಸುಬುದ್ಧಿ, ಮೊದಲಾದವುಗಳಿಂದಲೂ ಕೂಡಿ ಪುತ್ರರತ್ನಗಳಂ ಪಡೆದು ಎಣೆಯಿಲ್ಲದ ಸುಖವನ್ನನುಭವಿಸುವ ರೆಂಬುದರಲ್ಲಿ ಲೇಶವೂ ಅನುಮಾನವಿಲ್ಲವು. ಐಹಿಕಾಮುಷ್ಮಿಕ ಸುಖಗಳಿಗೆ ಭಾಗಿಗಳಾಗುವರು. || ೬೬ || ಕೇಳೈ ಜನಮೇಜಯನೆ, ರಾಮಚಂದ್ರನಿಗೂ ಕುಶಕುಮಾರನಿಗೂ ಉಂಟಾದ ಯುದ್ಧಸಮಾಚಾರವನ್ನು ನೀನು ಕೇಳಿದ್ದರಿಂದ ನಾನು ನಿನಗೆ ತಿಳುಹಿಸಿದೆನು. ಕರ್ಣಾರ್ಜುನರ ಕಾಳಗವನ್ನು ನೀನು ಕೇಳಿರುವಿಯಾದಕಾರಣ ಇನ್ನು ಈಗ ಪೇಳಬೇಕಾದ್ದಿಲ್ಲವು. ಆದುದರಿಂದ ಈಗ ನಾನು ಅರ್ಜುನನಿಗೂ ಬಭ್ರುವಾನನಿಗೂ ಉಂಟಾದ ಕದನದ ಬಗೆಯನ್ನು ಚಿತ್ತರಿಸುವೆನು, ಸಾವಧಾನ ಚಿತ್ತದಿಂದ ಕೇಳೆಂದು ತನ್ನ ಮನದಲ್ಲಿ ದೇವಪುರನಿವಾಸಿಯಾದ ಲಕ್ಷ್ಮೀಕಾಂತನನ್ನು ಧ್ಯಾನಿಸುತ್ತ ಜೈಮಿನಿಮಹರ್ಷಿಯು ಜನಮೇಜಯರಾಯನಿಗೆ ಹೇಳಲುಜ್ಜುಗಿಸಿದನು. ||೬೭||

ಟೀಕಾ ತಾತ್ಪರ್ಯ ಸಹಿತವಾದ ಜೈಮಿನಿ ಭಾರತದಲ್ಲಿ ಇಪ್ಪತ್ತೊಂದನೆಯ ಸಂಧಿಯು ಸಮಾಪ್ತವಾದುದು.



## ಇಪ್ಪತ್ತೆರಡನೆಯ ಸಂಧಿ.

ಸೂಚನೆ || ಸತ್ವದಿಂದೊದಗಿದರ್ತಮತಮಗೆ ರಣಸಾಹ | ಸತ್ವದಿಂ ಪ್ರದ್ಯುಮ್ನ ಮೊದಲಾದ ಪಟುಭಟ | ರ್ಸ ತ್ವರದೊಳೆಚ್ಚಾಡಿದ ರ್ಬಭ್ರುವಾಹನ ಧನಂಜಯರ್ಸಂಗರದೊಳು ||

ಆರಸಕೇಳರ್ಜುಂಬೈದು ನೂಕಿದಬಳಿಕ | ತರಿಸಿದಸುವಸ್ತುಗಳ ನಧ್ವರದ ತುರಗಮಂ | ತಿರುಗಿ ನಿಜನಗರಿಗೆ ಕಳು ಹಿಬಭ್ರುವಾಹನಂ ಸಮುರಕನುವಾಗಿ ನಿಲ್ಲಲು || ಧರಣಿಮುಂಡಲಮಂ ಚತುರ್ಬಲಂ ಗಿರ್ವಾಣ | ಸರಣಿಮುಂಡಲಮಂಧ್ವಜ ಛತ್ರಚಾಮರಂ | ತರಣಿಮುಂಡಲ ಮುಂಚಮೂಪದ ಹತೋದ್ಧೂತ ರೇಣುವ್ರಜಂ ಮುಸುಕಲು || ೧ || ಅರ್ಬುದಗಜಂ ಪತ್ತುಕೋಟಿ ಸುವರೂಥ ವೆರಡರ್ಬುದ ತುರಂಗಮಂ ಕೂಡಿದಪದಾತಿ ಮೂ | ರರ್ಬುದಂ ಜೋಡಿಸಿದುದಾಹವ ಘೌರ್ಯ ಘ ರ್ಸು ಬುದ್ಧಿ ಮೊದಲಾದ ಸುಭಟರು || ಸರ್ವಸನ್ನಾಹದಿಂ ದೊತ್ತಿಸಿ ತೆತ್ತಣ | ಚತುರ್ಬಲಮೊಕ ಮುಲಜನ ಸೃಷ್ಟಿ

---

ಶ್ರೀರಸ್ತು.

ಇಪ್ಪತ್ತೆರಡನೆಯ ಸಂಧಿ.

ಸೂ|| ಪ್ರದ್ಯುಮ್ನಮೊದಲಾದ-ಪ್ರದ್ಯುಮ್ನನೇ ಆದಿಯಾದ, ಪಟು-ಶೂರರಾದ, ಭಟರು-ಯೋಧರು, ರಣ-ಕಾಳಗದ, ಸಾಹಸತ್ವದಿಂ-ಸಾಮರ್ಥ್ಯದಿಂದ, ತಮತಮಗೆ-ತಮ್ಮತಮ್ಮೊಳಗೆ, ಸಂಗರದೊಳು-ರಣದಲ್ಲಿ, ಒದಗಿದರು-ನೆರೆದರು, ಸತ್ವರ ದೊಳು-ಬೇಗನೆ, ಬಭ್ರುವಾಹನ ಧನಂಜಯರು-ಬಭ್ರುವಾಹನ ಮತ್ತು ಪಾರ್ಥರೂ ಸಹ, ಎಚ್ಚಾಡಿದರು-ಕಾಳಗಮಾಡಿದರು ||

ಟೀ|| ಅರಸ-ಎಲೈ ಜನಮೇಜಯ ಮಹೀಪಾಲನೆ,ಕೇಳು-ಲಾಲಿಸು, ಅರ್ಜುನಂ-ಪಾರ್ಥನು, ಬೈದು-ಕ್ರೂರವಾದನುಡಿ ಗಳನ್ನಾಡಿ, ನೂಕಿದಬಳಿಕ-ತರುಮಿದ ಮೇಲೆ, ತರಿಸಿದ-ತರಿಸಿಕೊಂಡಿದ್ದ, ಸುವಸ್ತುಗಳನು-ಶ್ರೇಷ್ಠತಮವಾದ ಪದಾರ್ಥಗಳ ನ್ನೂ, (ರತ್ನಾಭರಣಾದಿಗಳನ್ನೂ) ಅಧ್ವರದ-ಯಾಗದ, ತುರಗಮಂ-ಹಯವನ್ನೂ, ಬಭ್ರುವಾಹನನು-ಬಭ್ರುವಾಹನನಾದರೊ, ನಿಜ-ಸ್ವಕೀಯವಾದ, ನಗರಿಗೆ-ಪಟ್ಟಣಕ್ಕೆ, ತಿರುಗಿ-ಪುನಃ, ಕಳುಹಿ-ಕಳುಹಿಸಿ ಬಿಟ್ಟು, ಸಮರಕೆ - ಕಾಳಗಕ್ಕೆ, ಅನುವಾಗಿ-ನೇರ್ಪಟ್ಟು, ನಿಲಲು-ನಿಂತುಕೊಳ್ಳಲು, ಚತುರ್ಬಲಂ-ನಾಲ್ಕು ತೆರನಾದ ಸೈನ್ಯವು, ಧರಣಿಮಂಡಲಂ-ಇಳಾಮಂಡಲವನ್ನು, ಧ್ವಜ-ಧ್ವಜಪಟಗಳು, ಛತ್ರ-ಸತ್ತಿಗೆಯು, ಚಾಮರ-ಚೌರಿಯು, ಗೀರ್ವಾಣ-ಸುರರ, ಸರಣಿ-ದಾರಿಯ, ಮಂಡಲಮಂ-ಸ್ಥಾನ ವನ್ನು, ಚಮೂ-ದಳದ, ಪದ-ಪಾದಗಳ, ಹತ-ತುಳಿಯುವಿಕೆಯಿಂದ, ಉದ್ಧೂತ-ಮೇಲಕ್ಕೇಳುವ, ರೇಣುರಜಂ-ರಜಸ್ಸಮುದಾ ಯವು, ಮುಸುಕಲು-ಕವಿದುಕೊಳ್ಳಲಾಗಿ || ೧ ||

ಟೀ|| ಗಜಂ-ಹಸ್ತಿಗಳಾದರೊ, ಅರ್ಬುದ-ಅರ್ಬುದ ಸಂಖ್ಯೆಯುಳ್ಳದ್ದು, ಸು-ಶ್ರೇಷ್ಠವಾದ, ವರೂಥಂ-ರಥಗಳಾದ ರೊ,ಪತ್ತುಕೋಟಿ-ಹತ್ತುನೂರುಲಕ್ಷವುಳ್ಳದ್ದು,ತುರಂಗಮಂ-ಹಯಗಳು,ಎರಡುಅರ್ಬುದ-ಎರಡು ಅರ್ಬುದವುಳ್ಳದ್ದು,ಕೂಡಿದ-ನೆರೆದ,ಪದಾತಿ-ಕಾಲ್ಬಲವು,ಮೂರರ್ಬುದಂ-ಮೂರನೂರುಕೋಟಿ ಸಂಖ್ಯೆಯಿಂದ,ಜೋಡಿಸಿದುದು-ಒಂದುಗೂಡಿತು,ಆಹವಶೌ

---

ಇಪ್ಪತ್ತೆರಡನೆಯ ಸಂಧಿ ಕಥಾ ಪ್ರಾರಂಭವು.

ಕೇಳೈ ಜನಮೇಜಯ ಧರಾವಲ್ಲಭನೆ, ತನ್ನ ಮಾತೆಯಾದ ಚಿತ್ರಾಂಗದೆಯ ನೀತಿ ವಾಕ್ಯಗಳನ್ನು ಶಿರಸಾವಹಿಸಿ ತಾನು ಕಟ್ಟಿದ್ದ ಕುದುರೆಯನ್ನು ಅರ್ಜುನನಿಗೆ ಒಪ್ಪಿಸಿ ಬಿಡಲು ನಿಶ್ಚೈಸಿದವನಾಗಿ, ಅನೇಕವಾದ ದಿವ್ಯಾಭರಣಗಳಿಂದಲೂ, ಗಂಧ ಪುಷ್ಪ ತಾಂಬೂಲಗಳಿಂದಲೂ, ನಾರೀಮಣಿಗಳಿಂದಲೂ ಕೂಡಿದವರಾಗಿ ಅರ್ಜುನನೆಡೆಗೆ ಬಂದು ತಿಳಿಯದೆ ಕುದುರೆಯನ್ನು ಕಟ್ಟಿದ ನನ್ನ ತಪ್ಪನ್ನು ಕ್ಷಮಿಸಿ ಈ ಅಶ್ವವನ್ನು, ಮತ್ತು ನಾನು ತಂದಿರುವ ಸಕಲ ಸಾಮಗ್ರಿಗ ಳನ್ನೂ ಕೈಕೊಂಡು ಮನ್ನಿಸೆಂದು ಎಷ್ಟು ಕೇಳಿಕೊಂಡರೂ ಅರ್ಜುನನು ಒಡಂಬಡದೆ ರೋಷೋನ್ಮತ್ತನಾಗಿದ್ದನು. ಸಮೀಪದಲ್ಲಿದ್ದ ಹಂಸಧ್ವಜಾದಿಗಳೆಲ್ಲರೂ ಹೇಳಿದರೂ ಕೇಳದೆ ಬಭ್ರುವಾಹನನಂ ಕುರಿತು, ಎಲೈ ಹೇಡಿಯೆ, ನೀನು ನನ್ನ ಮಗನೆಂದಿಗೂ ಅಲ್ಲವು. ಸುಭದ್ರೆಯ ಗರ್ಭದಲ್ಲಿ ನನ್ನಿಂದ ಜನಿಸಿದ ಅಭಿಮನ್ಯುವೊಬ್ಬನೇ ನನ್ನ ಮಗನು. ಪರಾಕ್ರಮಿ ಯಾದ ನನ್ನ ಹೊಟ್ಟೆಯಲ್ಲಿ ಹೇಡಿಯಾದ ನಿನ್ನಂಥವನು ಎಂದೆಂದಿಗೂ ಹುಟ್ಟುವುದೇ ಇಲ್ಲವು, ಛಿ, ನಡೆ, ಎಂದು ಗದರಿಸಲು ಬಭ್ರುವಾಹನನು ರೋಷೋನ್ಮತ್ತನಾಗಿ, ಕುದುರೆಯನ್ನೂ ತಾನು ತಂದಿದ್ದ ಉತ್ತಮವಾದ ಸಾಮಗ್ರಿಗಳನ್ನೂ ಪಟ್ಟಣಕ್ಕೆ ಕಳು ಹಿಸಿ, ತಾನು ಅರ್ಜುನನಮೇಲೆ ಯುದ್ಧಕ್ಕೆ ನಿಂತವನಾದನು. ಅವನ ಸೈನ್ಯವಾದರೊ ಭೂಮಂಡಲವನ್ನೂ ಛತ್ರ, ಚಾಮರ, ಧ್ವಜಪತಾಕೆಗಳು ನಭೋಮಂಡಲವನ್ನೂ ಆವರಿಸಿದವು, ಸೇನಾಂಘ್ರಿಪದದಿಂದೊಗೆದ ಧೂಳು ಭೂಮ್ಯಾಕಾಶಂಗಳ ಮಧ್ಯೆ ನೆಲೆ ಯೇಯಿಲ್ಲವೊ ಎಂಬಂತೆ ಮಾಡಿಬಿಟ್ಟಿತು. || ೧ || ಆಗ ಒಂದರ್ಬುದ ಆನೆಗಳೂ, ಹತ್ತು ಕೋಟಿ ತೇರುಗಳೂ, ಎರಡರ್ಬು

ಯೊಳದೃಷ್ಟಮೆನೆ | ಪರ್ಬಿದುದು ನೆಲದಗಲ್ಕೆ ಬಭ್ರುವಾಹನಂ ತರಿಸಿದಂ ಮಣಿರಥವನು || ೨ || ಚಿತ್ರಶೋಭಿತಮಾದ ಮಣಿಮಯವರೂಥಮಂ || ಚಿತ್ರಾಂಗದೆಯ ತನೂಭವನಡರ್ದಂ ಕೂಡೆ | ಚಿತ್ರಮಾದುದು ಸಮರಮೆರಡು ಘಟ್ಟಿನ ಚೂಣಿ ಸಂದಣಿಸಿತುರವಣೆಯೊಳು || ಮಿತ್ರಮಂಡಲವ ನೊಡವೈದುವತಿ ಭರದಿಂದ || ಮಿತ್ರಭಟರಂತಾಗಿದರ್ಕಡುಗಲಿಗಳಾಗ | ಮಿತ್ರಭಾವ ದಿನೇಹದಿಂ ಮರುಗದೆ ಮಾಣದಂಭೋರುಹಂಗಳೆನಲು ||೩|| ತೇರವಂಗಡದ ಜರ್ಝರಾರವಂ ಗಜದಘಂ | ಟಾರವಂ ಹಯದ ಹೇಷಾರವಂ ನಡೆವ ಸೇನಾರವಂ | ವಾದ್ಯದ ಮಹಾರವಂ ಬಹಳ ಕಹಳಾರವಂ ಸಂಗಡಿಸಿದ || ಜ್ಯಾರವಂ ಭಟರ ಬಾಹಾರವಂ ದಳದ ಬಂ | ಭಾರವಂ ರಣಕಿಲಿಕಿಲಾರವಂ ಪಟಹಢ | ಕ್ಕಾರವಂ ಪುದಿದ ನಾನಾರವಂ ಕಿವಿಗತಿ ಕಠೋರಮಂ ತೀವಿತಂದು || ೪ || ಸಿಂಧಸೀಗುರಿ

---

ರ್ಧರ್-ರಣಪಂಡಿತರಾದ, ಸುಬುದ್ಧಿ-ಸುಬುದ್ಧಿಯೆಂಬುವನೇ, ಮೊದಲಾದ-ಆದಿಯಾಗಿರತಕ್ಕ, ಭಟರು-ವೀರರು, ಸರ್ವ-ಸಕಲನಾದ, ಸನ್ನಾಹದಿಂದ-ಕಾರ್ಯಗಳಿಂದ, ಬಿತ್ತರಿಸಿ-ಒಟ್ಟುಸೇರಿಸಿ, ತತ್ತಣ-ಅಲ್ಲಿಯ ಸಂಬಂಧವಾದ. ಚತುರ್ಬಲಂ-ನಾಲ್ಕುತೆರನಾದ ಸೇನೆಯು, ಕಮಲಜನ-ಚತುರ್ಮುಖನ, ಸೃಷ್ಟಿಯೊಳು-ಸೃಷ್ಟಿವರ್ಗದಲ್ಲಿ, ಅದೃಷ್ಟಂ-ಎಲ್ಲಿಯೂ ಕಾಣಲೇ ಇಲ್ಲವು, ಎನೆ-ಎಂಬತೆರನಾಗಿ, ನೆಲದ-ಭೂಮಂಡಲದ, ಅಗಲ್ಕೆ-ವಿಶಾಲಕ್ಕೂ, ಪರ್ಬಿದುದು- ಆವರಿಸಿಕೊಂಡಿತು, ಆ ಬಭ್ರುವಾಹನನು-ಆ ಅರ್ಜುನಿಯು. ಮಣಿರಥವನು-ರತ್ನಖಚಿತವಾದ ರಥವನ್ನು, ತರಿಸಿದಂ-ತನ್ನ ಸಮೀಪವನ್ನೈದುವಂತೆ ಮಾಡಿಕೊಂಡನು ||೨||

ಟೀ|| ಚಿತ್ರ-ಅಲಂಕಾರಗಳಿಂದ, ಶೋಭಿತಮಾದ-ಪ್ರಕಾಶಿಸಲ್ಪಟ್ಟ, ಮಣಿಮಯ-ರತ್ನವಿಕಾರವಾದ, ವರೂಥಮಂ-ರಥವನ್ನು, ಚಿತ್ರಾಂಗದೆಯ-ಚಿತ್ರಾಂಗದೆಯೆಂಬ ಸ್ತ್ರೀಯ, ತನೂಭವಂ-ಕುವರನಾದ ಬಭ್ರುವಾಹನನು, ಅಡರ್ದಂ-ಹತ್ತಿದವನಾದನು, ಸಮರಂ-ರಣವು, ಕೂಡೆ-ಒಡನೆಯೇ, ಚಿತ್ರಂ-ಆಶ್ಚರ್ಯವುಂಟಾಗುವಂತೆ, ಆದುದು-ಆಯಿತು, ಉರವಣೆಯೊಳು-ಮೇಲ್ಬಾಯ್ವುದೋ ಎಂಬಂತೆ, ಎರಡುಘಟ್ಟಿನಚೂಣಿ-ಉಭಯ ಪಾರ್ಶ್ವದ ವೀರರಗುಂಪೂ, ಸಂದಣಿಸಿತು-ಒಟ್ಟುಗೂಡಿತು, ಆಗ-ಆತೆರನಾಗಿ ಇರ್ಕಡೆಯವರೂ ಒಟ್ಟಾದಾಗ, ಕಡುಕಲಿಗಳು-ವೀರಾಗ್ರಣಿಗಳು, ಮಿತ್ರಭಾವವ-ಸ್ನೇಹಸಂಬಂಧದ ಮತ್ತು ರವಿಯೆಂಬ ಆಶಯದ, ನೇಹದಿಂ-ಅಕ್ಕರೆಯಿಂದ, ಮರುಗದೆ-ವ್ಯಥೆಪಡದೆ, ಮಾಣದ-ಬಾಡದೆ ಇರತಕ್ಕ, ಅಂಭೋರುಹಂಗಳು-ತಾವರೆ ಹೂಗಳು, ಎನಲು-ಎಂಬತೆರನಾಗಿ, ಮಿತ್ರಮಂಡಲವನು-ರವಿಯ ಮಂಡಲವನ್ನೂ, ಮತ್ತು ಸ್ನೇಹಿತರ ಗುಂಪನ್ನೂ, ಒಡೆದು-ಬೇರ್ಪಡಿಸಿಕೊಂಡು, ಐದುವ-ಹೊರಹೊರಡತಕ್ಕ, ಅತಿಭರದಿಂದ-ಬಹಳ ಸಂಭ್ರಮದಿಂದ, ಮಿತ್ರರಂ-ಸ್ನೇಹಿತರಾಗಿರತಕ್ಕವರನ್ನು, ತಾಗಿದರು-ಎದುರಿಸಿದವರಾದರು ||

ಅ|| ವಿ|| ತನೂಭವಂ-ತನು-ಶರೀರದಲ್ಲಿ, ಭವಂ-ಹುಟ್ಟಿದವನು (ಸ. ತ.) ||೩||

ಟೀ|| ಅಂಗಡದ-ಎರಡುಕಡೆಯ, ತೇರ-ಸ್ಯಂದನಂಗಳ, ಜರ್ಝರಾರವಂ-ಜರಜರಧ್ವನಿಯು, ಗಜದ-ಹಸ್ತಿಗಳ ಕೊರಳ್ಳಲ್ಲಿ ಬಿಗಿದಿರತಕ್ಕ, ಘಂಟಾರವಂ-ಘಂಟೆಗಳ ಶಬ್ದವು, ಹಯದ-ಅಶ್ವಂಗಳ, ಹೇಷಾರವಂ-ಕೆನೆಯುವಿಕೆಯು, ನಡೆವ-ಕಾಳಗಕ್ಕೆ ಬರುವ, ಸೇನಾ-ಪದಾತಿಯ, ರವಂ-ಗದ್ದಲವು, ವಾದ್ಯದ-ಭೇರಿಮೃದಂಗಾದಿಗಳ, ಮಹಾರವಂ-ದೊಡ್ಡಶಬ್ದವು, ಬಹಳ-ತಂಡತಂಡವಾದ, ಕಹಳೆ-ತುತ್ತೂರಿ ಮೊದಲಾದ್ದರ, ರವಂ-ನಿನದವೂ, ಸಂಗಡಿಸಿದ-ಒಟ್ಟುಗೂಡಿದ, ಜ್ಯಾರವಂ-ನಾರೀ ನಿನದವು, ಭಟರ-ಯೋಧರ, ಬಾಹಾರವಂ-ಭುಜಮೂಲಗಳನ್ನು ಅಪ್ಪಳಿಸುವುದರ ಧ್ವನಿಯು, ದಳದ-ಪಡೆಯ, ಬಂಭಾರವಂ-ಶಂಖಧ್ವನಿಯು, ಪಟಹ-ಪಟಹವೆನ್ನುವ, ಢಕ್ಕ-ಮದ್ದಳೆಯೆನ್ನುವ ವಾದ್ಯಗಳ, ರವಂ-ಶಬ್ದವೂ, ಪುದಿದ-ವ್ಯಾಪಿಸಿಕೊಂಡ, ನಾನಾರವಂ-ತರತೆರನಾದ ಶಬ್ದ ಭೇದಗಳು, ಅಂದು-ಆ ಕಾಲದಲ್ಲಿ, ಕಠೋರಮಂ-ಕ್ರೌರ್ಯವನ್ನು, ತೀವಿತು-ತುಂಬಿತು ||೪||

---

ದ ಕುದುರೆಗಳೂ, ಸುಬುದ್ಧಿಯೇ ಮೊದಲಾದವರಿಂದ ಕೂಡಿದ ಮೂರರ್ಬುದ ಕಾಲಾಳುಗಳೂ, ಬ್ರಹ್ಮಸೃಷ್ಟಿಯಲ್ಲೆಲ್ಲಾ ಅತ್ಯಾಶ್ಚರ್ಯಕರವಾಗಿದೆಯೊ ಎಂಬಂತೆ ಭೂಮಂಡಲವನ್ನೆಲ್ಲಾ ಆವರಿಸಿಕೊಂಡಿತು. ||೨|| ಬಭ್ರುವಾಹನನು ರತ್ನಖಚಿತವಾಗಿಯೂ, ಚಿತ್ರವಿಚಿತ್ರವಾಗಿಯೂ ಇರುವ ದಿವ್ಯ ರಥವನ್ನೇರಿ ಹೊರಟವನಾದನು. ಎರಡು ಕಡೆಯ ವೀರರೂ ಮಹಾರೋಷದಿಂದ ಕಾದಾಡಲಾರಂಭಿಸಿದರು. ಸೂರ್ಯನೆಂಬ ಅಭಿಪ್ರಾಯದಿಂದ ವ್ಯಸನಮಂ ತಾಳದಿರುವ ಪದ್ಮಾಕರಂಗಳಂತೆ ಮಿತ್ರರಂತಿರುವ ವೀರಾಗ್ರಣಿಗಳನ್ನು ಹೊಡೆದೋಡಿಸಬೇಕೆಂದು ಎಲ್ಲೆಲ್ಲಿಯೂ ನೆರೆದವರಾದರು. || ೩ || ಈ ರೀತಿಯಲ್ಲಿ ಬಭ್ರುವಾಹನನ ಸೈನ್ಯವು ಬಂದೊದಗುತ್ತಲಿರುವಾಗ ಉಭಯ ಪಾರ್ಶ್ವದ ರಥಪಙ್ತಿಗಳಿಂದೊಗೆದ ಝುರ್ ಝುರ್ ಎಂಬ ಶಬ್ದವೂ, ಆನೆಗಳ ಕೊರಳಿಗೆಕಟ್ಟಿರುವ ಗಂಟೆಗಳ ಧ್ವನಿಯೂ, ಕುದುರೆಗಳು ಕೆನೆಯುವ ನಿನದವೂ ಪದಾತಿಗಳ ಕಾಲುಗಳಿಂದೊಗೆವ ಸಪ್ಪಳವೂ, ವಾದ್ಯಗಳ ದೊಡ್ಡಸ್ವನಂಗಳು, ಅನೇಕವಾದ ತುತ್ತೂರಿ ಮೊದಲಾದವುಗಳ ಶಬ್ದವೂ, ಮದ್ದಳೆ ಮೊದಲಾದವುಗಳ ಧ್ವನಿಯೂ ಏಕಕಾಲದಲ್ಲಿ ನೆರೆದು ಕಿವಿಗೆ ಕಠೋರನಾಯಿತು, ||೪|| ಅನೇಕ ನಿಶಾನಿಗಳು, ಛತ್ರಚಾಮರ ಪತಾಕೆಗಳು ಮೊದಲಾದವೆಲ್ಲಾ ಒಟ್ಟಾಗಿ ಸೇರಿ

ಛತ್ರಚಾಮರಪತಾಕೆಗ | ಳ್ಸಂದಣಿಸಿಗಗನಮಂಮುಸುಕಲ್ಕೆತವೆಮೂಡಿ | ದಂಧಕಾರಂಗಳಂಕೆಡಿಸಿದುವುರತ್ನಾಭರಣಕಾಂತಿಗ ಳ್ಭೂಪರ || ಕೆಂಧೂಳಡರ್ದುನಭಮುಂಮುಸುಕಿತಾಗಸುರ | ಸಿಂಧುಪ್ರವಾಹಮುತ್ತುಂಗಶೋಣಾಚಲದ | ಬಂಧುರತಟಪ್ರದೇಶದೊಳೊಪ್ಪುವಜ್ಜ್ರದನಿಧಿಯೆಂಬತೆರನಾಗಲು || ೫ || ಚೂಣಿಯೋಳ್ಬೆರಸಿಪೊಯ್ದಾಡಿದರ್ತಮತಮಗೆ | ಬಾಣತೋಮರಪರಶು ಚಕ್ರಮುಸಿಮುದ್ಗರಕೃ | ಪಾಣಡೊಂಕಣೆಕುಂತಸುರಗಿಶಲ್ಯಹಶಕ್ತಿಮೊದಲಾದಕೈದುಗಳೊಳು || ಕೇಣಮಿಲ್ಲದೆಚಾರಿಚಳಕ ಚಾಳೆಯಚತುಷ್ಪಾಣಿಲಾಘವಪಂಥಪಾಡುಗಳನರಿದುಬಿ | ನ್ನಾಣದಿಂಘಾಯಗಾಣಿಸಿದರತಿಬಲರಲ್ಲಿನಾನಾಪ್ರಹಾರದಿಂದ || ೬ || ತೂಳಿಸಿದರಾನೆಯಂಜೋಧರುರುವಣಿಸಿದುವ್ವಾಳಿಸಿದರುಬ್ಬೆದ್ದುರಾವುತರ್ತೇಜಿಯಂ | ಕೇಳಿಸಿದರಾಹವದನಾಟ್ಯಮಂರಂಗ

ಟೀ|| ಸಿಂಧ–ಗುರ್ತಿಗಾಗಿ ಇರತಕ್ಕ ಬಾವುಟಗಳು, ಸೀಗುರಿ–ಸಣ್ಣ ಚಾಮರವು, ಛತ್ರ–ಕೊಡೆಯು, ಚಾಮರ–ಚಾಮರವು, ಪತಾಕೆಗಳ್–ಬಾವುಟಗಳು, ಸಂದಣಿಸಿ – ಒಟ್ಟುಗೂಡಿ, ಗಗನಮಂ–ಅಂತರಿಕ್ಷವನ್ನು, ಮುಸುಕಲ್ಕೆ – ಕವಿದುಕೊಳ್ಳಲು, ತವೆ–ಚೆನ್ನಾಗಿ, ಮೂಡಿದ – ಉದ್ಭವಿಸಿದ, ಅಂಧಕಾರಂಗಳಂ–ಕತ್ತಲೆಗಳನ್ನು, ಭೂಪರ–ರಾಜರ, ರತ್ನಾಭರಣ–ರತ್ನಖಚಿತವಾದ ಕೊಂಡಿಗೆಗಳ, ಕಾಂತಿಗಳು ಪ್ರಕಾಶಂಗಳು, ಕೆಡಸಿದವು–ಕಳೆದುಬಿಟ್ಟವು, ಆಗ–ಆ ಕಾಲದಲ್ಲಿ, ಸುರಸಿಂಧು–ದೇವಗಂಗೆಯ, ಪ್ರವಾಹಂ–ಹರಿಯುವಿಕೆಯು, ಉತ್ತುಂಗ–ಬಹಳ ಎತ್ತರವಾದ, ಶೋಣಾಚಲದ–ಕೆಂಗಲ್ಲಿನಿಂದ ಕೂಡಿದ ಬೆಟ್ಟದಲ್ಲಿ, ಬಂಧುರ–ಸೇರಿರುವ ತಟಪ್ರದೇಶದೊಳ್–ದಡದಲ್ಲಿ, ಒಪ್ಪುವ–ಪ್ರಕಾಶಿಸುವ, ವಜ್ರದ–ವಜ್ರಮಯವಾದ, ನಿಧಿ–ನಿಕ್ಷೇಪವು, ಎಂಬ–ಎನ್ನತಕ್ಕ–ತೆರನಾಗಲು–ಬಗೆಯಾಗುವಂತೆ, ಕೆಂಧೂಳು–ಕೆಂಪಾದ ರಜಸ್ಸು, ಅಡರ್ದು–ವ್ಯಾಪಿಸಿಕೊಂಡು, ನಭಮಂ–ಅಂತರಿಕ್ಷವನ್ನು, ಮುಸುಕಿತು–ಕವಿದುಕೊಂಡಿತು. ||೫||

ಟೀ|| ತಮತಮಗೆ–ಒಬ್ಬರಕೂಡ ಒಬ್ಬರು, ಬೆರಸಿ–ಸೇರಿಕೊಂಡು, ಬಾಣ–ಕಣೆಗಳಿಂದಲೂ, ತೋಮರ–ತೋಮರವೆನ್ನುವುದರಿಂದಲೂ, ಪರಶು–ಕೊಡಲಿಯಿಂದಲೂ, ಚಕ್ರ–ಚಕ್ರಾಯುಧದಿಂದಲೂ, ಅಸಿ–ಕತ್ತಿಯಿಂದಲೂ, ಮುದ್ಗರ–ಮುದ್ಗರವು, ಕೃಪಾಣ–ಖಡ್ಗವು, ಡೊಂಕಣಿ–ಡೊಂಕಣಿ ಎಂಬುವದೂ, ಕುಂತ–ಕುಂತವೂ, ಸುರಗಿ–ಸುರಗಿಯೂ, ಶಲ್ಯಹ–ಶಲ್ಯವೆನ್ನುವದೂ, ಶಕ್ತಿ–ಶಕ್ತಿ ಎನ್ನತಕ್ಕದ್ದೂ, ಮೊದಲಾದ–ಆದಿಯಾದ, ಕೈದುಗಳೊಳು–ಶಸ್ತ್ರಗಳಿಂದ, ಚೂಣಿಯೊಳು–ರಣರಂಗದಲ್ಲಿ, ಪೊಯ್ದಾಡಿದರು–ಹೊಡೆದಾಡಲುಜ್ಜುಗಿಸಿದರು, ಕೇಣಂ–ಕೆಟ್ಟದ್ದು, ಇಲ್ಲದೆ–ಆಗದೆ, (ಕೃತ್ರಿಮವಿಲ್ಲದಂತೆ) ಚಾರಿ–ಕಷ್ಟವಿಲ್ಲದೆಯೂ, ಚಳಕ–ವೇಗವಾಗಿಯೂ, ಚಾಳೆಯ–ಸತ್ಸ್ವಭಾವದಿಂದ ಕೂಡಿಯೂ, ಚತುಷ್ಪಾಣಿ – ಚಾತುರ್ಯದಿಂದ ಕೂಡಿದ ಕೈಯ್ಗಳ, ಲಾಘವಂ–ಲಘುವಾಗಿರುವುದು, ಪಂಥಪಾಡುಗಳನು–ಪಟ್ಟು ಮೊದಲಾದವನ್ನು, ಅರಿದು–ಗೋಚರಮಾಡಿಕೊಂಡು, ಬಿನ್ನಾಣದಿಂದ – ಚಮತ್ಕೃತಿಯಿಂದ, ಘಾಯ–ಹುಣ್ಣನ್ನು, ಅತಿಬಲರು–ಬಹು ಪರಾಕ್ರಮಿಗಳಾದವರು, ನಾನಾ – ವಿಧವಿಧವಾದ, ಪ್ರಹಾರದಿಂದ–ಏಟುಗಳಿಂದ, ಕಾಣಿಸಿದರು–ಗೋಚರಪಡಿಸಿದವರಾದರು. ||೬||

ಟೀ|| ಆನೆಯಂ–ಹಸ್ತಿಸಮುದಾಯವನ್ನು, ಜೋಧರು–ಆನೆಗಳನ್ನು ನಡೆಯಿಸತಕ್ಕವರು, ತೂಳಿಸಿದರು–ನುಗ್ಗಿಸಿಬಿಟ್ಟರು, ತೇಜಿಗಳಂ–ಅಶ್ವಂಗಳನ್ನು, ರಾವುತರು–ಕುದುರೆಗಳನ್ನು ನಡೆಯಿಸುವರು, ಉಬ್ಬೆದ್ದು–ಹಯಗಳ ಮೇಲೆ ಪಟ್ಟುಹಾಕಿ, ಉರವಣಿಸಿ–ರೋಷವುಂಟಾಗುವಂತೆ ಮಾಡಿ, ದುವ್ವಾಳಿಸಿದರು–ಓಡಿಸಿದರು, ರಂಗದೋಳ್–ರಣಭೂಮಿಯೆಂಬ ಒಡ್ಡೋಲಗದಲ್ಲಿ, ಚಟುಲ–ಚಪಲಚಿತ್ತರಾದ, ಪಟು–ವೀರರಾದ, ಭಟರು–ಯೋಧರು, ರಥಿಕರು–ರಥವನ್ನು ಹತ್ತಿಕೊಂಡು ಹೋರಾಡುವರು, ಆಹವದ–ಸಮರವೆನ್ನತಕ್ಕ, ನಾಟ್ಯವಂ – ಕುಣಿಯುವ ಧ್ವನಿಯನ್ನು, ಕೇಳಿಸಿದರು – ಕೇಳುವಹಾಗೆ ಮಾಡಿದರು. ಕಾಲವರು – ಪದಾತಿಗರು, ಆಳ್ತನದ–ಶೌರ್ಯದ, ಪಂಥಮಂ–ಜೂಜನ್ನು, ಏಳಿಸಿದರು–ಭಗ್ನವಾಗುವಂತೆ ಮಾಡಿದರು. ಪೊಯ್ದಾಡಿ–ಹೋರಾಡಿ, ಅಹಿತರಂ–ವೈರಿಗಳನ್ನು, ಬೀಳಿಸಿದರು–ನೆಲ ಕಚ್ಚುವಂತೆ ಮಾಡಿಬಿಟ್ಟರು. ಕೈದುಗಳ–ಶಸ್ತ್ರಗಳ, ಹೋರಟೆಯ – ಹೊಡೆಯುವುದರ

ಅಂತರಿಕ್ಷ ಮಾರ್ಗವನ್ನು ಕವಿದುಕೊಳ್ಳುವುದರಿಂದ ಹುಟ್ಟುವ ಕತ್ತಲೆಯ ರಾಶಿಯನ್ನು ರಾಜರ ರತ್ನಾಭರಣ ಪ್ರಭೆಗಳು ಹೋಗಲಾಡಿಸುತ್ತಲಿರುವಂತೆಯೂ, ದೇವಗಂಗಾನದಿಯ ಪ್ರವಾಹವು ಅತ್ಯುನ್ನತವಾದ ಕೆಂಗಲ್ಲಿನಿಂದ ಕೂಡಿದ ಬೆಟ್ಟದ ತೀರದಲ್ಲಿರುವ ವಜ್ರದ ನಿಧಿಯೋ ಎಂಬಂತೆಯೂ ಎಲ್ಲೆಲ್ಲಿಯೂ ಕೆಂಧೂಳು ತುಂಬಿಕೊಂಡಿತು. ||೫|| ಎರಡು ಕಡೆಯ ವೀರರೂ ಬಾಣಗಳು, ತೋಮರಂಗಳು, ಪರಶು, ಚಕ್ರ, ಖಡ್ಗ, ಕುಂತ, ಸುರಗಿ, ಶಲ್ಯಹ, ಶಕ್ತಿ, ಮೊದಲಾದ ವಿವಿಧಾಯುಧಂಗಳಂ ಕೈಕೊಂಡು ಚಮತ್ಕಾರದಿಂದಲೂ, ವೇಗದಿಂದಲೂ, ಶಪಥ ಮೊದಲಾದವುಗಳಿಂದಲೂ, ನಾನಾ ಪ್ರಕಾರವಾಗಿ ಯುದ್ಧಮಾಡುತ್ತಲಿದ್ದ ||೬|| ಕಾಲದಲ್ಲಿ ಮಾವಟಿಗರು ಆನೆಗಳನ್ನು ಶತ್ರುಸೈನ್ಯದಮೇಲೆ ನುಗ್ಗಿಸಿದರು, ಕುದುರೆಯ ಸವಾರರು ಸೈನ್ಯದಮೇಲೆ ಕುದುರೆಗಳನ್ನು ದವಡಾಯಿಸಿದರು. ವೀರಭಟರು ವೀರಾವೇಶದಿಂದ ಕುಣಿಯಲಾರಂಭಿಸಿದರು. ಪರಾಕ್ರಮದ ಪಂಥಪಾಡುಗಳನ್ನು ನುಡಿ

ದೋಳ್ಪಟುಲಪಟುಭಟರಥಿಕರು ‖ ಸಳಿಸಿದರಾಳ್ತನದಪಂಥಮಂಕಾಲವ । ಬಿಗೀಳಿಸಿದರಹಿತರಂಪೊಯ್ದಾಡೀಲೆಯಂಸಿವಾಳಿಸಿದರಾಳ್ದಂಗಕ್ಕೈದುಗಳಹೋರಟೆಯಖಿಣಿಕಟಿಲರಭಸದಿಂದ ‖ ೭ ‖ ಕಾರ್ಮುಗಿಲಸಿಡಿಲರವದಂದದಮಾಗಿರೆಕರದ । ಕಾರ್ಮುಕ ಧ್ವನಿಮಿಂಚಿನಂತೆಪೊಳೆಪೊಳೆವ । ಪೊಂದೇರ್ಮೆರೆಯೆಶರವರ್ಷಮಂಕರೆವುತರ್ಜುನನಸಮ್ಮುಖಕೆಬಂದ-ನಿಂದು ‖ ಮಾರ್ಮಲೆಯಬಾರದಯ್ಯನೊಳೆಂದುಕಂಡುನಾಂ । ಕೂರ್ಮೆಯಿಂದೆರಗಿದೊಡೆಜರಿದಲಾರಣದೊಳಿ । ನ್ನಾರ್ಮೊಗನಾದೊಡಂಜೈಸದೊಡೆನಿನ್ನ ಸುತನಲ್ಲೆನುತಪಾರ್ಥಿತೆಗೆದೆಚ್ಚನು ‖ ೮ ‖ ಪಾರ್ಥಿವರಪಂಥಮಲ್ಲೆಂದುಪೇಳಲ್ಕೆವುರು । ಪಾರ್ಥಮಂಮಾಳ್ಪೆಲಾನಿನ್ನಪೌರುಷನನಪ । ಕೀರ್ತಿಗಂಜುವನಲ್ಲಪಿತನಂಪಚಾರಿಸುವೆಮತ್ತೆಕಾಳಗಕೆಬಂದು ‖ ಧೂರ್ತನಹೆನೀನೆನುತನಸುನಗೆಯೊಳಿದಿರಾಗಿ

---

ಖಿಣಿ-ಖಿಣಿ ಎನ್ನುವ, ಕಟಿಲ-ಕಟಕಟ ಎನ್ನತಕ್ಕ, ರಭಸದಿಂ-ಶಬ್ದದಿಂದ, ಆಳ್ದಂಗೆ-ಒಡೆಯನಿಗೆ, ತಲೆಯಂ-ಶೀರ್ಷವನ್ನು, ನಿವಾಳಿಸಿದರು-ಇತ್ತವರಾದರು ‖೭‖

ಟೀ‖ ಕಾರ್ಮುಗಿಲ-ಮಳೆಗಾಲದಲ್ಲಿರುವ ನೀಲಮೇಘದಿಂ ದೊಗೆವ, ಸಿಡಿಲ-ಸಿಡಿಲಿನ, ರವದ-ಗರ್ಜನೆಯ, ಅಂದವಾಗಿ-ಬಗೆಯಾಗಿ, ಕರದ-ಕೈಯ ಪ್ರದೇಶವನ್ನವಲಂಬಿಸಿದ, ಕಾರ್ಮುಕ-ಧನುಸ್ಸಿನ, ಧ್ವನಿ-ಶಬ್ದವು, ಇರೆ, ಇರಲಾಗಿ, ಮಿಂಚಿನಂತೆ-ವಿದ್ಯುತ್ತಿನ ತೆರನಾಗಿ, ಪೊಳೆವ-ಪ್ರಕಾಶಿಸುವ, ಪೊಂದೇರ್-ಚಿನ್ನದ ರಥವು, ಮೆರೆಯೆ-ಕಾಂತಿಯುಕ್ತವಾಗಿರಲು, ಶರವರ್ಷಮಂ-ಬಾಣಗಳ ಮಳೆಯನ್ನು, ಕರೆವುತ-ಸುರಿಸುತ್ತ, ಅರ್ಜುನನ-ಪಾರ್ಥನ, ಸಮ್ಮುಖಕೆ-ಎದುರಿಗೆ, ಅಥವಾ ಮುಂದುಗಡೆಯಲ್ಲಿ, ಬಂದು-ನೆರೆದು, ನಿಂದು-ನಿಂತವನಾಗಿ, ಅಯ್ಯನೊಳು-ಜನಕನೊಂದಿಗೆ, ಮಾರ್ಮಲೆಯಬಾರದು-ಗರ್ವದಿಂದ ಎದುರಾಗಬಾರದು,ಎಂದು-ಎಂಬತೆರನಾಗಿ, ಕಂಡು-ನೋಡಿ, ಕೂರ್ಮೆಯಿಂದ-ಅಕ್ಕರೆಯಿಂದ, ನಾಂ-ನಾನು, ಎರಗಿದೊಡೆ-ವಂದಿಸಲು, ಜರದಲಾ-ದೂಷಿಸಿಬಿಟ್ಟೆಯಲ್ಲವೇ, ಇನ್ನು-ಇನ್ನುಮೇಲೆ, ಆರು-ಯಾರು, ಮೊಗದೊಡಂ-ಕಾಳಗವಾಡಲು ಬಂದರೂ, (ಆರ್ಮೊಗದೊಡಂ-ಷಣ್ಮುಖನಾದರೂ) ಕೂಡ, ಜೈಸದೊಡೆ-ಅವರನ್ನು ಸೋಲಿಸದಿದ್ದರೆ, ನಿನ್ನಮಗನು-ನಿನಗೆ ಜನಿಸಿದವನು, ಅಲ್ಲ-ಅಲ್ಲವು, ಎನುತ - ಎಂದು ನುಡಿಯುತ್ತ, ಪಾರ್ಥಿ - ಅರ್ಜುನಿಯು, ತೆಗೆದು - ಧನುಸ್ಸನ್ನು ಸರಿಪಡಿಸಿಕೊಂಡು, ಎಚ್ಚನು - ಕಣೆಗಳನ್ನು ಬಿಟ್ಟವನಾದನು ‖೮‖

ಟೀ‖ ಅನುಸಾಲ್ವನು-ಅನುಸಾಲ್ವನೆಂಬ ರಕ್ಕಸನು, ಪಾರ್ಥಿವರ - ಅರಸುಗಳ, ಪಂಥಂ-ಪ್ರಮಾಣವು, ಅಲ್ಲ-ಹಯವನ್ನು ಬಂಧಿಸಿ ಕಾಳಗಮಾಡದೆ ಹೋದರೆ ಆಗಲಾರದೆಂದು, ಪೇಳಲ್ಕೆ-ಹೇಳಲು, ನಿನ್ನ-ನಿನ್ನ ಸಂಬಂಧವಾದ, ಪೌರುಷವನು-ಸಾಮರ್ಥ್ಯವನ್ನು, ಪುರುಷಾರ್ಥಮಂ-ಬೇಕಾದದ್ದನ್ನಾಗಿ, ಮಾಳ್ಪೆಲಾ-ಎಸಗುವಿಯಲ್ಲವೇ, (ಸ್ವೇಚ್ಛೆಯಾಗಿ ಹರಟುತ್ತೀಯಲ್ಲವೇ) ಅಪಕೀರ್ತಿಗೆ-ದುಷ್ಕೀರ್ತಿಗೆ, ಅಂಜುವನು-ಹೆದರತಕ್ಕವನು, ಅಲ್ಲ-ಅಲ್ಲವು, ಮತ್ತೆ-ಪುನಹ, ಕಾಳಗಕೆ-ರಣಕ್ಕೆ, ಬಂದು-ನೆರೆದು, ಪಿತನಂ-ತಂದೆಯಾದ ಅರ್ಜುನನ್ನು, ಪಚಾರಿಸುವೆ - ಎದುರಾಳಾಗುತ್ತಿ, ನೀನು - ನೀನಾದರೊ, ಧೂರ್ತನು-ನೀಚನು, ಆಹೆ-ಆಗಿದ್ದಿ, ಎನುತ-ಎಂದು ನುಡಿಯುತ್ತ, ನಸುನಗೆಯೊಳು-ಹುಸಿನಗುವಿನಿಂದ, ಪಾರ್ಥನಕುಮಾರನಂ-ಅರ್ಜುನಿಯನ್ನು, ಇದಿರಾಗಿ-ಎದುರುಗೊಂಡು, ಒಂಭತ್ತು-ಒಂಭತ್ತಾದ, ಕಾರ್ತಸ್ವರ - ಸುವರ್ಣದ, ಅಂಕಿತ, ಗುಗುತಿನಿಂದ ಕೂಡಿದ, ಸುಪುಂಖದಿಂದ-ಮೇಲಲಿಗಿನ ಪ್ರದೇಶಗಳಿಂದ, ಎಸೆವ - ಹೊಳೆಯುತಕ್ಕ, ಬಾಣಂಗಳಿಂದ - ಕಣೆಗಳಿಂದ, ಘಾತಿಸಿದನು - ಹೊಡೆದವನಾದನು.

---

ಯುತ್ತಲೂ ಶತ್ರುಗಳ ತಲೆಯನ್ನು ಆಕ್ಷೆಕಲ್ಲಾಡಿ ತಮ್ಮ ಒಡೆಯನಿಗೆ ನಿವಾಳಿಸುತ್ತಲೂ ಇದ್ದವರಾದರು. ‖೭‖ ಆಗ ಬಭ್ರುವಾಹನನು ಸಿಡಿಲ ಗರ್ಜನೆಯಂತೆ ಶಬ್ದವಂ ಮಾಡುವ ಧನುಸ್ಸನ್ನು ಕರದೊಳ್ಪಿಡಿದು ಮಿಂಚಿನಂತೆ, ಹೊಳೆ ಹೊಳೆವ ಚಿನ್ನದ ತೇರಿನೊಳಗೆ ಕುಳಿತುಕೊಂಡವನಾಗಿ ಅರ್ಜುನನ ಬಳಿಗೆ ಬಂದು ಆತನಿಗೆದುರಾಗಿ ನಿಂತು ಎಲೈ ತಂದೆಯಾದ ಅರ್ಜುನನೆ, ನಿನ್ನೊಂದಿಗೆ ಅಹಂಕಾರದಿಂದ ಕಾದುವದು ಧರ್ಮವಲ್ಲವೆಂದು ಬಗೆದು ಕಟ್ಟಿದ್ದ ಕುದುರೆಯನ್ನು ಮರ್ಯಾದೆಯಿಂದ ನಿನಗೆ ತಂದೊಪ್ಪಿಸಿದರೆ ನನ್ನನ್ನು ತಿರಸ್ಕರಿಸಿ ತಳ್ಳಿದೆಯಾದಕಾರಣ ಇನ್ನು ನಿನ್ನೊಡನೆ ಯುದ್ಧಮಾಡಿ ನಿನ್ನ ತಲೆಯನ್ನು ಚೆಂಡಾಡದೆ ಬಿಡುವುದಿಲ್ಲವು. ಈ ನನ್ನ ಶಪಥವನ್ನು ಷಣ್ಮುಖನೂ ಕೂಡ ಹಿಂತಿರುಗಿಸಲಾರರು. ನನ್ನ ಸಾಹಸವನ್ನು ನೋಡು. ಇದಕ್ಕೆ ತಪ್ಪಿದರೆ ನಿನ್ನ ಮಗನೇ ಅಲ್ಲವೆಂದು ಕ್ರೂರಶಪಥವನ್ನು ಮಾಡಿಕೊಂಡು ಬಾಣಗಳನ್ನು ಬಿಡಲುಜ್ಜುಗಿಸಿದನು. ‖೮‖ ಈ ರೀತಿಯಲ್ಲಿ ಕ್ರೂರ ಪ್ರತಿಜ್ಞೆಯನ್ನು ಮಾಡಿ ಯುದ್ಧಕ್ಕೆ ನಿಂತ ಬಭ್ರುವಾಹನನ್ನು ಕುರಿತು, ಅನುಸಾಲ್ವನು ಎಲೈ ಪಾರ್ಥಿಯೆ, ಕಟ್ಟಿದ ಕುದುರೆಯನ್ನು ಪುನಃ ಬಿಡುವುದು ವೀರಕ್ಷತ್ರಿಯನ ಧರ್ಮವಲ್ಲವೆಂದು ಹೇಳಿದರೆ ತಂದೆಗೆದುರಾಗಿ ಯುದ್ಧಕ್ಕೆ ನಿಂತೆಯಾ? ನೀನು ಅಪಕೀರ್ತಿಗೂ ಕೂಡ ಅಂಜುವನಂತೆ ಕಾಣುವುದಿಲ್ಲ, ಒಳ್ಳೇದು ಇರಲಿ, ಎಂದು ಮಂದಹಾಸದಿಂದ ಕೂಡಿದವನಾಗಿ ಸುವರ್ಣ ಖಚಿತವಾದ ಒಂಭತ್ತು ಬಾಣಗಳನ್ನು ಬಿಲ್ಲಿಗೆ ಜೋಡಿಸಿ ಬಭ್ರುವಾಹನನ ಮೇಲೆ ಬಿಡಲು ‖೯‖ ಪಾರ್ಥಜನು ಎಲೈ ಅನುಸಾಲ್ವನೆ, ನಿನ್ನ ಸಾ

ಪಾರ್ಥನಕುಮಾರನಂಘಾತಿಸಿದನೊಂಭತ್ತು | ಕಾರ್ತಸ್ವರಾಂಕಿತಸುಪುಂಖದಿಂದೆಸೆವಬಾಣಂಗಳಿಂದನುಸಾಲ್ವನು ‖ ೯ ‖ ಕೈತವಕದೆಸುಗೆಯೋ ನಿನ್ನ ಸಾಹಸಮಿನಿತೊ | ಮೈತಲೆಗಲಸಿಬಂದುದಾಹವಕೆಪೊಸತೆನುತ | ಕೈತವಕದಿಂದೆಚ್ಚನನುಸಾಲ್ವನಂ ನೂರುಬಾಣದಿಂ ಪಾರ್ಥಸೂನು ‖ ಐತರಲವಂಮಧ್ಯಮಾರ್ಗದೊಳ್ತಡೆಗಡಿದು | ದೈತೇಯರಾಜಂಕನಲ್ದಾಗಬರಸಿಡಿಲ | ಹೊಯಿತೆಗಿಂಮಡಿಯಾದಕಣೆಗಳಂಕವಿಸಿದಂಬಭ್ರುವಾಹನನಮೇಲೆ‖೧೦‖ ಉಬ್ಬಿದುದುಮೈರೋಷದಿಂದಗಂಟಿಕ್ಕಿದುವು|ಪುಬ್ಬುಗಳ್ಬಭ್ರುವಾಹಂಗೆತೆಗೆದೆಸುತ | ಬೊಬ್ಬಿರಿದನನುಸಾಲ್ವನಂಮುಸುಕಿದವುಕೋಟಿಸಂಖ್ಯೆಯಪೊಗರ್ಗಣೆಗಳು ‖ ಅಬ್ಬರಿಸಿದೈತ್ಯನದಕಿಂಮಡಿಸಿಕೋಲ್ಗರೆದ | ನೊಬ್ಬಬ್ಬರಂಜಯಿಸುವಾತುರದೊಳೆಚ್ಚಾಡ | ಲಿಬ್ಬರಂಗದೊಳಿಡಿದವಂಬುಗಳ್ಪರಿದುವರುಣಾಂಬುಗಳ್ಸಂಗರದೊಳು ‖ ೧೧ ‖ ಬಾಣದೋಳ್ಬಿಣಿತೆಯೋಳ್ಬಿಲ್ಲಾರತನದಬಿಂ | ನಾಣದೊಳ್ಬಿಂಕದೊಳ್ಕಾಳಿಕೆಯೊಳುರುತರ | ತ್ರಾಣ

ಅ‖ ವಿ‖ ಪುರುಷಾರ್ಥ-ಪೌರುಷ ಮತ್ತು ಧರ್ಮ, ಅರ್ಥ, ಕಾಮ, ಮೋಕ್ಷಂಗಳು ‖೯‖

ಟೀ‖ ಪಾರ್ಥಸೂನು-ಅರ್ಜುನನ ಮಗನಾದ ಬಭ್ರುವಾಹನನು, ಕೈತವಕದ-ಕೈಕರಣದ, ಎಸುಗೆಯೊ-ಶರಸಂಧಾನವೊ, ನಿನ್ನ-ನಿನ್ನ ಸಂಬಂಧವಾದ, ಸಾಹಸಂ-ಶೌರ್ಯವು, ಇನಿತೊ-ಇಷ್ಟುಮಾತ್ರವೊ, ಮೈ-ದೇಹದ ಭಾಗವು, ತಲೆ-ಶೀರ್ಷವು, ಕಲಸಿ-ಬೆರತು, ಆಹವಕೆ-ರಣಕ್ಕೆ, ಬಂದುದು-ಬಂದಂಥಾದ್ದು, ಪೊಸದು-ನವೀನವಾದದ್ದು, ಎನುತ-ಎಂದು ನುಡಿಯುತ್ತ, ಕೈತವಕದಿಂ-ಕೈ ಬಲದಿಂದ, ಅನುಸಾಲ್ವನಂ-ಸಾಲ್ವಾನುಜನನ್ನು, ನೂರುಬಾಣದಿಂ-ನೂರುಕಣೆಗಳಿಂದ, ಎಚ್ಚನು-ಹೊಡೆದನಾದನು, ಮಧ್ಯಮಾರ್ಗದೋಳ್-ಮಧ್ಯಪ್ರದೇಶದಲ್ಲಿ, ಐತರಲು-ಬರಲಾಗಿ, ದೈತೇಯರಾಜಂ-ಸಾಲ್ವಾನುಜನು, ಕನಲ್ದು-ಸಿಟ್ಟು ಮಾಡಿಕೊಂಡು, ಅವಂ-ಆ ಕಣೆಗಳನ್ನು, ತಡೆಗಡಿದು-ಛೇದಿಸಿ, ಆಗ-ಆ ಕಾಲದಲ್ಲಿ, ಬರಸಿಡಿಲ-ಪ್ರಳಯಕಾಲದ ಸಿಡಿಲಿನ, ಹೊಯ್ಲಿಗೆ-ಪೆಟ್ಟಿಗೆ, ಇಮ್ಮಡಿಯಾದ-ಎರಡುಪಾಲು ಹೆಚ್ಚಾದ, ಕಣೆಗಳಂ-ಅಲಗುಗಳನ್ನು, ಬಭ್ರುವಾಹನನಮೇಲೆ-ಬಭ್ರುವಾಹನಿಗೆದುರಾಗಿ, ಕವಿಸಿದಂ-ವ್ಯಾಪಿಸುವಂತೆ ಮಾಡಿದನು ‖

ಅ‖ ವಿ‖ ದೈತೇಯರಾಜಂ-ದೈತೇಯ-ರಕ್ಕಸರ, ರಾಜಂ-ದೊರೆಯು, (ಅನುಸಾಲ್ವನು) ‖ ೧೦ ‖

ಟೀ‖ ಬಭ್ರುವಾಹಂಗೆ-ಪಾರ್ಥಿಗೆ, ಮೈ-ಅವನ ದೇಹವು, ರೋಷದಿಂದ-ಆಗ್ರಹದಿಂದ, ಉಬ್ಬಿದುದು-ಅಧಿಕವಾಯಿತು, ಪುರ್ಬುಗಳ್-ಕಣ್ಣು ಹುಬ್ಬುಗಳು, ಗಂಟಿಕ್ಕಿದವು - ವಕ್ರವಾದವು. ತೆಗೆತೆಗದು-ಸೆಳೆಸೆಳೆದು, ಎಸುತ-ಬಾಣಗಳನ್ನು ಬಿಡುತ್ತ, ಬೊಬ್ಬಿರಿದನು-ಸಿಂಹನಾದವನ್ನು ಮಾಡಿದನು, ಕೋಟಿಸಂಖ್ಯೆಯ-ಕೋಟಿಸಂಖ್ಯಾಕವಾದ, ಪೊಗರ್ಗಣೆಗಳು-ಪ್ರಕಾಶಮಾನವಾದ ಅಲಗುಗಳು,ಅನುಸಾಲ್ವನಂ-ಸಾಲ್ವಾನುಜನನ್ನು,ಮುಸುಕಿದವು-ಕವಿದುಕೊಂಡವು.ದೈತ್ಯನು-ಅನುಸಾಲ್ವನಾದರೊ, ಅಬ್ಬರಿಸಿ-ಗರ್ಜಿಸುತ್ತ, ಅದಕೆ-ಆ ಕಣೆಗಳಿಗೆ. ಇಮ್ಮಡಿಯಾಗಿ-ಎರಡರಷ್ಟು ಹೆಚ್ಚಾಗಿ, ಕೋಲ್-ಸರಲ್ಗಳನ್ನು, ಕರೆದನು-ಸುರಿಯುವಂತೆ ಮಾಡಿದನು, ಒಬ್ಬೊಬ್ಬರಂ-ಒಬ್ಬರು ಮತ್ತೊಬ್ಬರನ್ನು, ಜೈಯಿಸುವ-ಗೆಲ್ಲತಕ್ಕ, ಆತುರದೊಳ್- ವೇಗದಿಂದ, ಎಚ್ಚಾಡಲು-ಕಾದಾಡಲಾಗಿ, ಇಬ್ಬರ-ಬಭ್ರುವಾಹನ ಸಾಲ್ವಾನುಜರ, ಅಂಗದೋಳ್-ದೇಹದಲ್ಲಿ, ಅಂಬುಗಳು-ಕಣೆಗಳು, ಇಡಿದವು-ತುಂಬಿಕೊಂಡವು, ಸಂಗರದೊಳು-ಬಭ್ರುವಾಹನ ಸಾಲ್ವಾನುಜರಿಗೊದಗಿದ ಕಾಳಗದಲ್ಲಿ, ಅರುಣಾಂಬುಗಳು-ರಕ್ತಧಾರೆಗಳು, ಪರಿದವು-ಪ್ರವಾಹರೂಪವಾಗಿ ಹರಿಯಲಾರಂಭಿಸಿದವು ‖

ಅ‖ ವಿ‖ ಅರುಣಾಂಬು-ಅರುಣ-ಕೆಂಪಾದ, ಅಂಬು-ನೀರು (ರಕ್ತ.ಸ. ದೀ. ಸಂಧಿ. ಮತ್ತು ವಿ ಪೂ. ಕ. ಸ.)‖೧೧‖

ಟೀ‖ ಬಭ್ರುವಾಹಾನುಸಾಲ್ವರು-ಬಭ್ರುವಾಹನ ಸಾಲ್ವಾನುಜರು, ಬಾಣದೋಳ್ - ಶರಸಂಧಾನದಲ್ಲಿಯೂ, ಬಿಣಿತೆಯೋಳ್-ಗೌರವದಲ್ಲಿಯೂ, ಬಿಲ್ಲಾರತನದ-ಧನುರ್ಬಾಣಗಳ ವಿದ್ಯೆದಲ್ಲಿ ಶೌರ್ಯವುಳ್ಳ, ಬಿನ್ನಾಣದೋಳ್-ಠೀವಿಯಲ್ಲಿಯೂ,

ಹಸವೂ ಕೈ ಚಮತ್ಕಾರವೂ ಇಷ್ಟೇನೇ, ಒಳ್ಳೇದು ಎಂದು ನುಡಿಯುತ್ತಾ ನೂರುಕೋಲ್ಗಳಿಂದ ಅನುಸಾಲ್ವನನ್ನು ಮುಸುಕಿದನು. ಸಾಲ್ವಾನುಜನಾದರೊ ತನ್ನಮೇಲೆ ಬರುತ್ತಲಿರುವ ಕೂರ್ಗಣೆಗಳನ್ನು ಮಧ್ಯಮಾರ್ಗದಲ್ಲಿಯೇ ಕತ್ತರಿಸಿ ಪ್ರಳಯಕಾಲದ ಮೇಘಗರ್ಜನೆಯಂತೆ ಕ್ರೂರವಾದ ಬಾಣಗಳ ಮಳೆಯಿಂದ ಬಭ್ರುವಾಹನನನ್ನು ನೆನೆಯಿಸಿದನು ‖೧೦‖ ಇದರಿಂದ ಪಾರ್ಥಜನ ಮೈಯೊಳಗೆ ರೋಷದ ಸೂಚನೆಗಳು ತೋರಿಬಂದವು ಕಣ್ಣುಬ್ಬುಗಳು ವಕ್ರಗತಿಯನ್ನು ಹೊಂದಿದವು ಸಿಂಹಗರ್ಜನೆಯನ್ನು ಮಾಡುತ್ತಾ ಕೋಟಿ ಪ್ರಕಾರವಾದ ದಿವ್ಯ ಬಾಣಗಳನ್ನು ಅನುಸಾಲ್ವನಮೇಲೆಸೆಯಲು ಸಾಲ್ವಾನುಜನೂ ಕೂಡ ಅದಕ್ಕಿಂತಲೂ ಎರಡರಷ್ಟು ಬಾಣಗಳಿಂದ ಅವನನ್ನು ತುಂಬಿಸಿದನು ಇಬ್ಬರ ದೇಹದಲ್ಲಿಯೂ ಬಾಣಗಳು ನಾಟಿಕೊಂಡು ರಕ್ತವು ಪ್ರವಾಹಾಕಾರವಾಗಿ ಹರಿಯಲಾರಂಭಿಸಿತು ‖ ೧೧ ‖ ಬಾಣಪ್ರಯೋಗದಲ್ಲಿಯೂ ಧನುರ್ವಿದ್ಯೆಯಲ್ಲಿಯೂ ಬೆಡಗಿನಲ್ಲಿಯೂ ವಿದ್ಯಾಚಾತುರ್ಯದೊಳಗೂ, ಸಾಹಸದಲ್ಲಿಯೂ, ಜಯದಲ್ಲಿಯೂ, ಕೈಚಾಗ್ರತೆಯಲ್ಲಿಯೂ, ಶಪಥನಾ

ದೋ॑ಜಯದೋಳ್ಚಮತ್ಕೃತಿಯೊಳಧಟನೋಳ್ವೀರರೋಳ್ಭಾರಣೆಯೊಳು ॥ ಪಾಣಿಲಾಘವದೊಳ್ಪರಾಕ್ರಮದಪಂಥದೋ । ಳ್ವಾಣೆನವರೀರ್ವರ್ಗೆಸಮವಾದಕಲಿಗಳಂ । ಕ್ಷೋಣಿಯೊಳೆನಲ್ಬಭ್ರುವಾಹಾನುಸಾಲ್ವರೆಚ್ಚಾಡಿದರ್ಸಂಗರದೊಳು ॥ ೧೨ ॥ ಕಾಳಗಂಸನುವಾಗಿಬರೆಕೆರಳ್ದನುಸಾಲ್ವ । ನೇಳಂಬಿನಿಂಪಾರ್ಥಸುತನಬತ್ತಳಿಕೆಯಂ । ಕೋಲೆಂಟರಿಂದೆಟೆಕ್ಕೆಯುವನೀರೇ ಳುಮಾರ್ಗಣದಿಂದಕಾರ್ಮುಕವನಂ ॥ ಬೀಳಲಿಕ್ಕಡಿಯಾಗಿಕತ್ತರಿಸಿಕವಚಮಂ । ಸೀಳಿದಂಕೈಯೊಡನೆಸಾವಿರಸರಳ್ಗಳಿಂ । ಪೂಳಿದಂತುರಗಸಾರಥಿನರೂಥಂಗಳಂಶಿಲೀಮುಖವ್ರಾತದಿಂದ ॥ ೧೩ ॥ ಕ್ಷಣದೊಳಾಗಲೆಬಭ್ರುವಾಹನಂಮತ್ತೊಂದು । ಮ ಣಿವರೂಥನನಡರ್ದೆಸುತಿರ್ದನಿತ್ತಲುರು । ವಣಿಸುವನ.ಸಾಲ್ವಂವಿರಥನಾಗಿಕೊಂಡನುರುಗದೆಯನೀಪಾರ್ಥಸುತನ ॥ ರಣಚ

---

ಬಿಂಕಮೋಳ್-ಗರ್ವದಲ್ಲಿಯೂ, ತಾಳಿಕೆಯೊಳು-ಅರ್ಹತೆಯಲ್ಲಿಯೂ, ಉರುತಂ-ಬಹು ಹೆಚ್ಚಾದ, ತ್ರಾಣದೋಳ್-ತಕ್ತಿಯ ಲ್ಲಿಯೂ, ಜಯದೋಳ್-ಜಯಲಾಭವಂ ಪಡೆಯುವುದರಲ್ಲಿಯೂ, ಚಮತ್ಕೃತಿಯೋಳ್-ಚಾತುರ್ಯದಲ್ಲಿಯೂ, ಅಧಟನೊಳ್-ಪರಾಕ್ರಮದಲ್ಲಿಯೂ, ವೀರದೊಳ್-ಧೀರತನದಲ್ಲಿಯೂ, ಭಾರಣೆಯೊಳು- ಪರಾಕ್ರಮದಲ್ಲಿಯೂ, ಪಾಣಿ-ಕರಗಳ, ಲಾಘವ ದೊಳು-ವೇಗದಲ್ಲಿಯೂ, ಪರಾಕ್ರಮದ-ಧೀರತೆಯ, ಪಂಥಮೊಳ್-ಶಪಥದಲ್ಲಿಯೂ, ಅವರು-ಆ, ಈರ್ವರ್ಗೆ-ಅನುಸಾಲ್ವ ಬಭ್ರು ವಾಹನರೆಂಬಿಬ್ಬರಿಗೆ, ಸಮವಾದ-ಹೋಲಿಕೆಯಾಗತಕ್ಕ, ಕಲಿಗಳಂ-ಶೂರರನ್ನು, ಕ್ಷೋಣಿಯೋಳ್-ಧರಾವಲಯದಲ್ಲಿ, ಕಾಣೆನು-ನೋಡಲೇ ಇಲ್ಲವು, ಎನಲ್-ಎಂಬತೆರನಾಗಿ, ಸಂಗರದೊಳು-ರಣದಲ್ಲಿ, ಎಚ್ಚಾಡಿದರು-ಹೋರಾಡುತ್ತಲಿದ್ದರು ॥

ಅ॥ ವಿ॥ ಪಾಣಿಲಾಘವ-ಪಾಣಿಯಲಾಘವ (ಷ. ತ.) ॥೧೨॥

ಟೀ॥ ಕಾಳಗಂ - ಸಮರವು, ಸಮವಾಗಿ-ಒಂದೇ ತೆರನಾಗಿ, ಬರೆ- ಬರಲಾಗಿ, ಅನುಸಾಲ್ವನು - ಸಾಲ್ವನ ತಮ್ಮ ನಾದರೊ, ಕೆರಳ್ದು - ಕೋಪಿಸಿಕೊಂಡು, ಪಾರ್ಥಸುತನ-ಅರ್ಜುನಿಯ, ಬತ್ತಳಿಕೆಯಂ-ಬಾಣಗಳನ್ನಿಡುವ ಚೀಲವನ್ನು, ಏಳಂ ಬಿನಿಂ-ಏಳು ಕಣೆಗಳಿಂದಲೂ, ಟೆಕ್ಕೆಯುವನು-ಅವನ ಧ್ವಜವನ್ನು, ಕೋಲೆಂಟರಿಂದ-ಎಂಟು ಸರಲ್ಗಳಿಂದಲೂ, ಕಾರ್ಮುಕ ವನು-ಧನುಸ್ಸನ್ನು, ಈರೇಳುಮಾರ್ಗಣದಿಂದ-ಎರಡೇಳರಷ್ಟು ಕೋಲ್ಗಳಿಂದಲೂ, ಬೀಳಲು-ಭೂಮಿಯಮೇಲೆ ಬಿದ್ದುಹೋಗು ವಂತೆ, ಇಕ್ಕಡಿಯಾಗಿ-ಎರಡುಭಾಗವಾಗಿ, ಕತ್ತರಿಸಿ-ಕಡಿದುಹಾಕಿ, ಕೈಯೊಡನೆ-ಕೈಸಮೇತವಾದ, ಕವಚಮಂ-ಅಂಗಿಯನ್ನು, ಸಾವಿರಸರಲ್ಗಳಿಂ-ಸಹಸ್ರಬಾಣಂಗಳಿಂದಲೂ, ಸೀಳಿದಂ-ಛೇದಿಸಿಬಿಟ್ಟನು, ತುರಗ-ಹಯಂಗಳನ್ನೂ, ಸಾರಥಿ-ತೇರನ್ನು ನಡೆಯಿ ಸತಕ್ಕವರನ್ನೂ, ವರೂಥಂಗಳ - ತೇರುಗಳನ್ನೂ, ಶಿಲೀಮುಖವ್ರಾತದಿಂದ - ಸರಲ್ಗಳ ರಾಶಿಯಿಂದ, ಪೂಳಿದಂ - ತುಂಬಿದವ ನಾದನು. ॥ ೧೩ ॥

ಟೀ॥ ಆಗಲೆ-ಕೂಡಲೆ, ಕ್ಷಣದೊಳು-ಒಂದು ಕ್ಷಣಮಾತ್ರದಲ್ಲಿ, ಬಭ್ರುವಾಹನನು-ಪಾರ್ಥಿಯು, ಮತ್ತೊಂದು-ಬೇರೊಂದಾದ, ಮಣಿರಥನನು-ರತ್ನಖಚಿತವಾದ ತೇರನ್ನು, ಅಡರ್ದು-ಹತ್ತಿದವನಾಗಿ, ಎಸುತ-ಬಾಣಪ್ರಯೋಗವನ್ನು ಮಾಡುತ್ತ, ಇರ್ದನು-ಇದ್ದವನಾದನು, ಇತ್ತಲು-ಈ ಭಾಗದಲ್ಲಿ, ಉರವಣಿಸುವ-ಮೇಲ್ಬಾಯ್ದು ಬರತಕ್ಕ, ಅನುಸಾಲ್ವನು-ಸಾಲ್ವಾನುಜನಾದರೊ, ವಿರಥನಾಗಿ-ರಥವಿಲ್ಲದವನಾಗಿ, ಉರು-ಬಹುದೊಡ್ಡ, ಗಧೆಯನು-ಗದಾದಂಡವನ್ನು, ಕೊಂಡನು-ತೆಗೆದುಕೊಂಡವನಾದನು, ಆಗ-ಆ ಕಾಲದಲ್ಲಿ, ಈಪಾರ್ಥಸುತನ-ಈ ಅರ್ಜುನಿಯ, ರಣಚಮತ್ಕಾರಂ-ಯುದ್ಧಚಾತುರ್ಯವು, ಎಂತುಟೊ-ಇನ್ನೆಷ್ಟುಮಾತ್ರದ್ದೊ, ತನ್ನಮೇಲಕೆ-ತನಗೆ ಪ್ರತಿಭಟಿಸಿ, ಇಟ್ಟಣಿಸಿಬಹ-ಸಾಂದ್ರವಾಗಿ ಬರತಕ್ಕ, ದಾನವನನು-ಅನುಸಾಲ್ವನೆಂಬ ರಕ್ಕಸನನ್ನು, ಎಚ್ಚಡೆ-ಬಾಣದಿಂದ ಹೊಡೆಯಲು, ಉಚ್ಚಳಿಸಿ-ಸೀಳಿಕೊಂಡು, ಕೂರ್ಗಣೆಗಳು-ಮೊನೆಯಾದ ಸರಲ್ಗಳು, ಅಡಗಿದವು-ಶರೀರದೊಳಗೆ ಚುಚ್ಚಿಕೊಂಡವು, ಅಸುರೇಂದ್ರನು-ರಕ್ಕಸರಾಯನಾದ ಸಾಲ್ವಾನುಜನಾದರೊ, ಅಸವಳಿದು-ಮೈಮರೆತು, ಇಳೆ-

---

ವುದರಲ್ಲಿಯೂ ಇವರಿಬ್ಬರಿಗೆ ಸರಿಯಾದವರು ಈ ಭೂಮಂಡಲದಲ್ಲಿ ಇಲ್ಲವೋ ಎಂಬಂತೆ ಹೊಡೆದಾಡುತ್ತಲಿರುವಾಗ ಅನುಸಾಲ್ವನು ರೋಷಭೀಷಣನಾಗಿ ॥೧೨॥ ಏಳು ಬಾಣಂಗಳಿಂದ ಪಾರ್ಥಸುತನ ಬತ್ತಳಿಕೆಯನ್ನೂ ಎಂಟು ಸರಲ್ಗಳಿಂದ ಅವನ ಧ್ವಜ ಪಟವನ್ನೂ, ಹದಿನಾಲ್ಕು ಕೋಲ್ಗಳಿಂದ ಆತನ ಧನುಸ್ಸನ್ನೂ, ಎರಡು ಭಾಗವಾಗಿ ಕತ್ತರಿಸಿಬಿಟ್ಟನು ಕೈಸಹಿತವಾದ ಕವಚವನ್ನು ಒಂದು ಸಹಸ್ರ ಕೂರ್ಗಣೆಗಳಿಂದ ಸೀಳಿಹಾಕಿದ್ದೂ ಅಲ್ಲದೆ ಅನೇಕವಾದ ದಿವ್ಯಾಸ್ತ್ರಂಗಳಿಂದ ಅರ್ಜುನಿಯ ಚತುರಂಗಬಲವನ್ನೂ ಹೊಡೆಯುತ್ತಲಿದ್ದನು ॥ ೧೩ ॥ ಬಭ್ರುವಾಹನನಾದರೊ ಒಂದು ಕ್ಷಣಮಾತ್ರದೊಳಗಾಗಿ ಬೇರೊಂದು ದಿವ್ಯರಥವನ್ನೇರಿ ಬಾಣಪ್ರಯೋಗವನ್ನು ಮಾಡುತ್ತಲಿದ್ದನು, ಈ ಕಡೆಯಲ್ಲಿ ಸಾಲ್ವಾನುಜನು ರಥದಿಂದ ಬಿಡಲ್ಪಟ್ಟವನಾಗಿ ತೋರಗದೆಯಂ ಕೈಕೊಂಡು ಈ ಬಭ್ರುವಾಹನನ ಯುದ್ಧ ಚಾತುರ್ಯವು ಇನ್ನೆಂಥಾದ್ದೊ ನೋಡಬೇಕೆಂದು ಬರಲಾಗಿ, ಪಾರ್ಥಜನು ಕೂರ್ಗಣೆಗಳಿಂದವನನ್ನು ಹೊಡೆಯಲು ಅನುಸಾಲ್ವನು ಮೂರ್ಛಾಕ್ರಾಂತನಾಗಿ ನೆಲಕ್ಕೆ ಉರುಳಿದನು ॥ ೧೪ ॥ ಸಾಲ್ವಾನುಜನು ಈ

ಮತ್ಕಾರಮೆಂತು-ಟೊತನ್ನ ಮೇಲಕಿ | ಟ್ಟಣಿಸಿಬಹದಾನವನನೆಚ್ಚ ಡುಚ್ಚಳಿಸಿಕೂ | ಗಣೆಗಳಡಗಿದುವಿಳೆಯೊಳಸುರೇಂದ್ರನ ಸವಳಿದುವಸುಧೆಯುಂಪಸೆಗೈದನು || ೧೪ || ಅನುಸಾಲ್ವನಳವಳಿಯೆಚಾಪಮುಂಜೇಗೈದು | ದನುಜಾರಿತನಯನಿದಿರಾಗಿನಿಲ್ಲೆಲವೊ ತ | ನ್ನನೆಮೊದಲೆವಂದಿಸದೆಪಾರ್ಥನಂಕಂಡುಕೆಡಿಸಿದೆರಾಜಕಾರಿಯವನು || ತನುವನುರೆನೋಯಿಸೆಂಮೈದುನನಲಾ ಸರಸ | ಕನುವರದೊಳೆಚ್ಚಾಡಿನೋಡುವೆವುಕಂಗೆಡದಿ | ರೆನುತನಾಲ್ಕೈದುಬಾಣಂಗಳಂಬೀರಿದಂಬಭ್ರುವಾಹನನಮೇಲೆ ||೧೫|| ಸರಸಭಾವದೊಳೆಭಾವಿಸೆಭಾವನವರಿಗಿದು | ವಿರಸವಾಗದೆಮಾಣದೀಗಸಂಗ್ರಾಮದೊಳ್ | ಸ್ಸರಸಕಾರ್ಮುಕಮಿಲ್ಲ ಸರಸಸಿಂಜಿನಿಯಿಲ್ಲ ಸರಸಬಾಣಂಗಳಿಲ್ಲ || ಸರಸಯುವತಿಯಕಟಾಕ್ಷದನೆಂಮುಗೆಗಳಿಲ್ಲ | ಪರುಷಮಾಗದೆನೋಡುರಣವೆನುತಪತ್ತುಸಾ | ವಿರಕೋಲ್ಗಳಂಮುಸುಕಿಹರಿತನಯನಂದಿಟಕನಂಗನೆನಿಸಿದನರ್ಜುನಿ || ೧೬ || ಮುಸುಕಿದಸರಳ್ಗಳಂಕುಸರಿದರಿದಂಕೂಡೆ | ದೆ

ಯೊಳು-ಭೂಮಿಯಮೇಲೆ, ಬಿದ್ದು-ಬಿದ್ದವನಾಗಿ, ವಸುಧೆಯಂ - ನೆಲವನ್ನು, ಪಸೆಗೈದನು - ಹೊಕ್ಕನನಾದನು. (ಮಲಗುವ ಜಗುಲಿ ಮಾಡಿಕೊಂಡನು) ||೧೪||

ಟೀ|| ಅನುಸಾಲ್ವನು-ಸಾಲ್ವನ ತಮ್ಮನು, ಅಳವಳಿಯೆ-ಪ್ರಜ್ಞೆತಪ್ಪಿ ಕೆಳಗೆ ಬೀಳಲು, ದನುಜಾರಿತನಯನು ಮದನನು, ಚಾಪಮಂ-ಧನುಸ್ಸನ್ನು, ಜೇಗೈದು-ಟಂಕಾರಮಾಡಿ, ಎಲೆವೊ-ಎಲೈ, ಇದಿರಾಗಿ-ನನಿಗೆ ಪ್ರತಿಭಟಿಸಿದವನಾಗಿ, ನಿಲ್ಲು-ನಿಲ್ಲತಕ್ಕವನಾಗು, ಮೊದಲು-ಆದಿಯಲ್ಲಿ, ತನ್ನನೆ-ನನ್ನನ್ನೇ, ವಂದಿಸದೆ - ಮರೆಹೊಗದೆ, ಪಾರ್ಥನಂ-ಫಲ್ಗುಣನನ್ನು, ಕಂಡು - ನೋಡಿ, ರಾಜಕಾರಿಯವನು - ಅರಸುಗಳ ಮನ್ನಣೆಯನ್ನು, ಕೆಡಿಸಿದೆ - ನಾಶಮಾಡಿಬಿಟ್ಟೆ, ಉರೆ-ಅಧಿಕವಾಗಿ, ತನುವನು - ದೇಹವನ್ನು, ನೋಯಿಸೆಂ-ಬಾಧೆಗೊಳಿಸುವುದಿಲ್ಲ, ಅನುವರದೊಳು-ಕಾಳಗದಲ್ಲಿ, ಮೈದುನನೊಳು-ಭಾವಮೈದುನನಾದ ನಿನ್ನ ಕೂಡೆ, ಸರಸಕೆ-ಪ್ರೀತಿಗೋಸ್ಕರ, ಎಚ್ಚಾಡಿ-ಬಾಣಗಳನ್ನು ಪ್ರಯೋಗಿಸಿ, ನೋಡುವೆವು - ನೋಡುತ್ತೇವೆ, ಕಂಗೆಡದೆ - ಎದೆಗುಂದದೆ, ಇರು-ಇರತಕ್ಕವನಾಗು, ಎನುತಲಿ-ಎಂದು ನುಡಿಯುತ್ತ, ಬಭ್ರುವಾಹನನಮೇಲೆ-ಅರ್ಜುನನ ಮಗನಮೇಲೆ, ನಾಲ್ಕೈದು ಬಾಣಂಗಳಂ-ನಾಲ್ಕೈದು ಕಣೆಗಳನ್ನು, ಬೀರಿದಂ-ಎಸೆದನು.

ಅ|| ವಿ|| ಜೇಗೈದು (ಕ್ರಿ. ಸ.) ದನುಜಾರಿತನಯಂ-ದನುಜರು-ರಾಕ್ಷಸರು (ಕೃ. ವೃ.) ದನುಜರ-ರಾಕ್ಷಸರ, ಅರಿ-ಶತ್ರುವು (ಷ. ತ.) ದನುಜಾರಿ-ಶ್ರೀ ಕೃಷ್ಣಸ್ವಾಮಿಯ, ತನಯಂ-ಮಗನು (ಮನ್ಮಥನು, (ಷ. ತ.) ||೧೫||

ಟೀ|| ಅರ್ಜುನಿ-ಪಾರ್ಥನ ಕುವರನಾದ ಬಭ್ರುವಾಹನನು, ಸರಸಭಾವದೊಳೆ - ಪ್ರೀತಿಪುರಸ್ಸರವಾಗಿಯೆ, ಭಾವಿಸೆ-ಆಲೋಚನೆ ಮಾಡಿ ನೋಡಿದರೆ, ಭಾವನವರಿಗೆ-ಭಾವನಾದ ನಿನಗೆ, ವಿರಸವು-ಪ್ರೀತಿಯಿಲ್ಲದಿರತಕ್ಕದ್ದು, ಆಗದೆ - ಆಗಿಬಿಡದೆ ಮಾಣದು-ಇರತಕ್ಕದ್ದೇ ಇಲ್ಲವು, ಈಗ-ಈಗಲಾದರೊ, ಸಂಗ್ರಾಮದೊಳ್ - ಕಾಳಗದಲ್ಲಿ, ಸರಸ-ಸರಳಮಾದ, ಕಾರ್ಮುಕಂ-ಧನುಸ್ಸು, ಇಲ್ಲ-ಇಲ್ಲವು, ಸರಸ-ರಸಭರಿತಮಾದ, ಸಿಂಜಿನಿ-ಬಿಲ್ಲಿನ ದಾರವು, ಇಲ್ಲ-ಇಲ್ಲವು. ಸರಸ-ಸಾನುರಾಗವಾದ, ಬಾಣಂಗಳು-ಕೋಲ್ಗಳು, ಇಲ್ಲ-ಇಲ್ಲವು, ಸರಸ - ಅಲಂಕಾರಮಾಡಿಕೊಂಡಿರುವ, ಯುವತಿಯ-ಪ್ರಾಯದ ಹುಡಗಿಯ, ಕಟಾಕ್ಷದ-ಕಡೆಗಣ್ಣಿನ, ನೆಮ್ಮುಗೆಗಳು-ದೃಷ್ಟಿಗಳು, ಇಲ್ಲ-ಇಲ್ಲವು, ರಣವು-ಕಾಳಗವಾದರೊ, ಪರುಷಂ-ಬಹಳ ಕಠಿನವಾದದ್ದು, ಆಗದೆ-ಆಗುವುದಿಲ್ಲವೆ, ನೋಡು-ಈಕ್ಷಿಸು, ಎನುತ-ಎಂದು ನುಡಿಯುತ್ತ, ಪತ್ತುಸಾವಿರಕೋಲ್ಗಳಂ - ಹತ್ತು ಸಹಸ್ರ ಸರಳ್ಗಳನ್ನು, ಮುಸುಗಿ-ಕವಿದು, ದಿಟಕೆ-ನಿಶ್ಚಯವಾಗಿಯೂ, ಹರಿತನಯನಂ - ಮನ್ಮಥನನ್ನು, ಅನಂಗನು - ದೇಹಶೂನ್ಯನು, ಎನಿಸಿದನು-ಎನ್ನುವದಕ್ಕೆ ಸರಿಯಾಗಿ ಮಾಡಿದನು.

ಅ|| ವಿ|| "ರಸ" ಎಂಬುದಕ್ಕೆ ಹಿಂದುಗಡೆಯಲ್ಲಿ ಸ, ವಿ ಎಂಬ ಉಪಸರ್ಗಗಳು ಸೇರಿ ಪದದ ಅರ್ಥವನ್ನು ಬೇರೆಯಾಗಿ ಮಾಡಿರುವುದು ||೧೬||

ಟೀ|| ಬಿಸರುಹಾಕ್ಷನ - ಕೃಷ್ಣಸ್ವಾಮಿಯ, ತನಯನು - ಕುವರನಾದ ಮನ್ಮಥನು, ಮುಸುಕಿದ-ಬಭ್ರುವಾಹನನ್ನು

ಪರಿ ಮೂರ್ಛಿತನಾಗಿ ಬಿದ್ದುಹೋದದ್ದನ್ನು ಪ್ರದ್ಯುಮ್ನನು ಕಂಡು, ಧನುಷ್ಟಂಕಾರವಂ ಮಾಡುತ್ತ, ಎಲಾ ಅರ್ಜುನೀ, ಮೊದಲೇ ನೀನು ನನಿಗೆ ಶರಣಾಗತನಾಗದೆ ಅರ್ಜುನನಿಗೆ ಮರೆಹೊಕ್ಕು ರಾಜಕಾರ್ಯವನ್ನು ಕೆಡಿಸಿಬಿಟ್ಟೆ, ನೀನು ಭಾವಮೈದುನನಾದಕಾರಣ ನಾನು ಹೆಚ್ಚಾಗಿ ನಿನ್ನನ್ನು ನೋಯಿಸುವುದಿಲ್ಲ. ಸರಸವಾದ ಕಾಳಗವನ್ನು ಮಾಡುವೆನೆಂದು ನಾಲ್ಕೈದು ಬಾಣಗಳಿಂದ ಬಭ್ರುವಾಹನನನ್ನು ಹೊಡೆದನು. || ೧೫ || ಆಗ ಬಭ್ರುವಾಹನನು ಪ್ರದ್ಯುಮ್ನನನ್ನು ಕುರಿತು, ಸಾನುರಾಗದಿಂದ ಯೋಚಿಸಿ ನೋಡಿದರೆ ಭಾವಂದಿರಾದ ನಿಮಿಗೆ ತಕ್ಕ ಸರಸ ಬಾಣಗಳೂ, ಸರಸವಾದ ಬಿಲ್ಲೂ, ಸರಸವಾದ ದಾರವೂ, ಕಾಂತಾ ಕಟಾಕ್ಷದ ಕುಡಿನೋಟಗಳೂ ನನ್ನಿಲ್ಲಿಲ್ಲದಿರುವುದರಿಂದ ಈ ಯುದ್ಧವು ಕಠಿಣವೇ ಆಗುತ್ತದೆ ಎಂದು ನುಡಿಯುತ್ತಾ ಅಸಂಖ್ಯಾತನಾದ ಕೋಲ್ಗಳಿಂದ ಮುಚ್ಚಿ ಮನ್ಮಥನನ್ನು ಅನಂಗನೆಂಬ ನಾಮಧೇಯವನ್ನು ಸಾರ್ಥಕವಾಗುವಂತೆ ಮಾಡಿಬಿಟ್ಟನು||೧೬|| ಆಗ

ಸೆಗಳೇನಾದುವಾಗಸಮೆತ್ತಲಡಗಿದುದು । ವಸುಮತಿಯದೆಲ್ಲಿಹುದುಶಶಿರವಿಗಳೆಡೆಯಾಟದೆಸಕಂಗಳಾವೆಡೆಯೊಳು ॥ ಅಸುರರೋಳ್ನಿರ್ಜರಪ್ರಸರದೋಳ್ಮನುಜರೋಳ್ ಪೆಸರುಳ್ಳವರಸಮರದೆಸುಗೆಯೊಳ್ಕಾಣೆನಿದು । ಪೊಸತೆಂಬತೆರನಾಗೆವಿಶಿಖಮಂಕೆದರಿದಂಬಿಸರುಹಾಕ್ಷನತನಯನು ॥ ೧೭ ॥ ಕರ್ಕಶದೊಳೆಸೆವಕೃಷ್ಣಾತ್ಮಜನಬಾಣಸಂ । ಪರ್ಕದಿಂದಾದಕತ್ತಲೆಯಂಕೆಡಿಸಿದವನು । ರರ್ಕಳಹುದೆನೆಸವ್ಯಸಾಚಿಸುತನುಜನಪೊಸಮಸೆಯವಿಶಿಖಪ್ರಭೆಗಳು ॥ ಅರ್ಕರಶ್ಮಿಗಳಂಧಕಾರಂಗಳಡಿಗಡಿಗೆ । ತರ್ಕಮಂಮಾಳ್ಪಂತೆಕಂಗೊಳಿಸಲಾಗವೀರರ್ಕಳೆಚ್ಚಾಡಿದರ್ಬಭ್ರುವಾಹನರುಕ್ಮಿಣೀಸುತರ್ಸಂಗರದೊಳು ॥ ೧೮ ॥ ಅಚ್ಚರಿಯನಿನ್ನುಜನಮೇಜಯನರೇಂದ್ರಕೇಳ್ । ಅಚ್ಯುತನಸುತನಬಾಣಂಗಳಂನಡುವೆಮುರಿ । ದೆಚ್ಚನಾತನಮಣಿವರೂಥಛತ್ರವನಂಬಿನಂಬುಧಿಯವೀಚಿಯಿಂದ ॥ ಮುಚ್ಚಿದಂಕೂಡೆಸ್ಮರನಂಗದೋಳ್ಕಣೆಗಳಂ । ಕೊಚ್ಚಿದಂಕೆಲಬಲದೊಳಿಡಿದರಿಪುಸೇನೆಯಂ । ಪ

---

ತುಂಬಿರತಕ್ಕ, ಸರಲ್ಗಳಂ-ಕಣೆಗಳನ್ನು, ಕೂಡೆ-ತಕ್ಷಣವೇ, ಕುಸುರಿ-ಚದರಿಸಿ, ತರಿದಂ-ಸೀಳಿಹಾಕಿದವನಾದನು, ದೆಸೆಗಳು-ದಿಕ್ಕುಗಳು, ಏನಾದವು - ಯಾವ ಗತಿಯನ್ನೈದಿದವು, ಎತ್ತಲುಂ-ಎಲ್ಲಾ ಕಡೆಯಲ್ಲಿಯೂ, ಆಗಸಂ - ಅಂತರಿಕ್ಷವು, ಅಡಗಿದುದು-ಔತುಕೊಂಡಿತು, ವಸುಮತಿಯು-ಇಳೆಯು, ಅದೆಲ್ಲಿ-ಅದಾವೆಡೆಯಲ್ಲಿ, ಇಹುದು-ಇದೆ, ಶಶಿರವಿಗಳ - ಇಂದು ರವಿಗಳ, ಎಡೆಯಾಟದ-ತಿರುಗಾಟದ, ಎಸಕಂಗಳು-ಕಾಂತಿಗಳು, ಆವೆಡೆಯೊಳು-ಯಾವ ಪ್ರದೇಶದಲ್ಲಿ, ಇಹುದು - ಇರುವುದು, ಅಸುರರೊಳ್-ರಕ್ಕಸರಲ್ಲಿಯೂ, ನಿರ್ಜರಪ್ರಸರದೊಳ್-ಸುರರವಿಂಡಿನಲ್ಲಿಯೂ, ಮನುಜರೊಳ್ - ಮಾನವರಲ್ಲಿಯೂ, ಪೆಸರುಳ್ಳವರ - ಪ್ರಸಿದ್ಧರಾಗಿರತಕ್ಕವರ, ಸಮರದ-ರಣಸಂಬಂಧವಾದ, ಎಸುಗೆಯೊಳು-ಬಾಣಗಳನ್ನು ಬಿಡುವಿಕೆಯಲ್ಲಿ, ಕಾಣೆನು - ನೋಡಲೇ ಇಲ್ಲವು, ಇದು - ಈಗಿನ ಶರಸಂಧಾನವು, ಪೊಸತು-ನವೀನವಾದದ್ದು, ಎಂಬ - ಎನ್ನತಕ್ಕ, ತೆರನು-ಬಗೆಯು, ಆಗೆ - ಆಗುವಂತೆ, ವಿಶಿಖನುಂ-ಬಾಣವನ್ನು, ಕೆದರಿದಂ-ತುಂಬಿಸಿದವನಾದನು.

ಅ॥ ವಿ॥ ಬಿಸರುಹಾಕ್ಷ+ಬಿಸರುಹ = ತಾವರೆಯಂತೆ, ಅಕ್ಷ - ಕಣ್ಣುಗಳನ್ನುಳ್ಳವನು (ಕೃಷ್ಣನು, ಸ. ದೀ. ಮತ್ತು ಬ. ಸ.) ॥೧೭॥

ಟೀ॥ ಕರ್ಕಶದೊಳು-ಬಹಳ ಕ್ರೂರವಾಗಿ, ಎಸೆವ-ಶರಪ್ರಯೋಗಮಂ ಮಾಡತಕ್ಕ, ಕೃಷ್ಣಾತ್ಮಜನ-ಕೃಷ್ಣನ ಮಗನಾದ ಮನ್ಮಥನ, ಬಾಣ-ಸರಲ್ಗಳ, ಸಂಪರ್ಕದಿಂದ - ಸೋಕುವುದರ ದೆಸೆಯಿಂದ, ಆದ-ಒಗೆದ, ಕತ್ತಲೆಯಂ - ಅಂಧಕಾರವನ್ನು, ಸವ್ಯಸಾಚಿಯ-ಪಾರ್ಥನ, ತನುಜನ-ಕುವರನಾದ ಬಭ್ರುವಾಹನನ, ಪೊಸಮಸೆಯ - ಹೊಸದಾಗಿ ಸಾಣೆಯಿಟ್ಟಿರತಕ್ಕ, ವಿಶಿಖ-ಸರಲ್ಗಳ, ಪ್ರಭೆಗಳು-ಪ್ರಕಾಶಗಳಾದರೊ, ಅಮರರ್ಕಳು-ದೇವತಾ ಸಮುದಾಯವೆಲ್ಲಾ, ಅಹುದೆನೆ-ಮೆಚ್ಚುವತೆರನಾಗಿ, ಕೆಡಿಸಿದವು-ನಾಶಮಾಡಿದವು, ಅರ್ಕರಶ್ಮಿಗಳು-ರವಿಯ ಕರಂಗಳು, ಅಂಧಕಾರಂಗಳಂ-ಕತ್ತಲೆಯ ಸಮುದಾಯವನ್ನು, ಅಡಿಗಡಿಗೆ-ಆಗಾಗ್ಗೆ, ಅಥವಾ ಬಾರಿಬಾರಿಗೂ, ತರ್ಕಮಂ-ಹೆಚ್ಚಾಗಿ ವ್ಯಾಪಿಸುವುದು ತಗ್ಗಿಸುವುದು ಇವನ್ನು, ಮಾಳ್ಪಂತೆ-ಮಾಡುವತೆರನಾಗಿ, ಕಂಗೊಳಿಸಲು-ಹೊಳೆಯಲಾಗಿ, ಆಗ-ಆ ಕಾಲದಲ್ಲಿ, ವೀರರ್ಕಳು-ಪರಾಕ್ರಮಿಗಳಾದ, ಬಭ್ರುವಾಹನ ರುಕ್ಮಿಣೀಸುತರು-ಅರ್ಜುನಿ ಮತ್ತು ಮದನರು, ಸಂಗರದೊಳು-ರಣರಂಗದಲ್ಲಿ, ಎಚ್ಚಾಡಿದರು-ಬಾಣಗಳಿಂದ ಕಾದಿದವರಾದರು.

ಅ॥ ವಿ॥ ಕೃಷ್ಣಾತ್ಮಜ - ಆತ್ಮ - ತನ್ನಲ್ಲಿ, ಜ-ಹುಟ್ಟಿದವನು, (ಮಗನು) ಕೃಷ್ಣನ ಆತ್ಮಜ (ಮನ್ಮಥನು) ಅರ್ಕ-ಸೂರ್ಯ ಮತ್ತು ಎಕ್ಕದಗಿಡ ।೧೮॥

ಟೀ॥ ಜನಮೇಜಯನರೇಂದ್ರ-ಜನಮೇಜಯನೆಂಬ ಮಾನವಾಧಿಪನೆ, ಇನ್ನು-ಮುಂದೆ ಆದ, ಅಚ್ಚರಿಯನು - ಆಶ್ಚ

---

ಮನ್ಮಥನು ತನ್ನನ್ನು ಆವರಿಸಿಕೊಂಡು ಬರುವ ಬಾಣಗಳನ್ನೆಲ್ಲಾ ದಿಕ್ಕಾಪಾಲಾಗಿ ಚದರಿಸಿ, ಭೂವ್ಯೋಮಾಕಾಶಂಗಳೇ ಕಾಣದಂತೆಯೂ, ಸೂರ್ಯಚಂದ್ರರು ದೃಷ್ಟಿಪಥಕ್ಕೆ ತೋರದ ಹಾಗೂ, ಸ್ವರ್ಗಮರ್ತ್ಯ ಪಾತಾಳಂಗಳಲ್ಲಿಯೂ, ದೈತ್ಯದಾನವ ಮಾನವರೊಳಗೂ ಮತ್ತೆ ಯಾರೂ ಇವರಿಗೆ ಸರಿಯೇ ಅಲ್ಲವೆಂಬಂತೆಯೂ, ಇದು ಎಂದೂ ಕಾಣದ ವಿಚಿತ್ರವಾದ ಕಾಳಗವೆಂಬ ಪರಿಯಿಂದಲೂ ತೋರಿಬರುವಂತೆ ಕೃಷ್ಣಸುತನಾದ ಮದನನು ಕೂರ್ಗಣೆಗಳನ್ನು ಅರ್ಜುನಿಯ ಮೇಲೆ ಚೆಲ್ಲಾಡುತ್ತಲಿದ್ದನು ॥೧೭॥ ಸೂರ್ಯರಶ್ಮಿಗಳು ಅಂಧಕಾರವನ್ನು ನೀಗುವಂತೆ, ಮನ್ಮಥನು ಬಿಟ್ಟ ಕ್ರೂರವಾದ ಬಾಣಗಳಿಂದುಂಟಾದ ಕತ್ತಲೆಯನ್ನು ಕೋಟಿಸೂರ್ಯ ತೇಜೋವಿರಾಜಮಾನವಾದ ಬಭ್ರುವಾಹನನ ಕೂರ್ಗಣೆಗಳಿಂದೊಗೆವ ಕಾಂತಿಯು ಹೋಗಲಾಡಿಸುತ್ತಲಿರುವಂತೆ ಬಭ್ರುವಾಹನ ಕೃಷ್ಣನಂದನರು ಕಾಳಗವಂ ಮಾಡುತ್ತಲಿದ್ದರು ॥೧೮॥ ಎಲೈ ಜನಮೇಜಯ ಧರಾವಲ್ಲಭನೆ, ಮುಂದೆ ನಡೆದ ಆಶ್ಚರ್ಯವನ್ನು ಕೇಳು, ಬಭ್ರುವಾಹನನು ಈ ತೆರನಾದ ಕ್ರೂರವಾದ ಬಾಣಗಳು ಮನ್ಮಥನ ಕಡೆಯಿಂದ ಬರತಕ್ಕ ನಿಶಿತಾಸ್ತ್ರಂಗಳನ್ನೆಲ್ಲಾ ನಡುದಾರಿಯಲ್ಲಿಯೇ ಖಂಡಿಸುತ್ತ, ರತ್ನಖಚಿತವಾದ ಆನನ ತೇರನ್ನೂ, ಛತ್ರಚಾಮರಾದಿಗಳನ್ನೂ, ಬಾಣಗಳ ಕಡಲಿನ

ಚ್ಚಿದಂಕೊಂದನಗಣಿತಬಲನನಾಬಭ್ರುವಾಹನಂಕೊಳುಗುಳದೊಳು ‖ ೧೯ ‖ ಕಂಡುರಿಕನಲ್ದಾತನೆಸುವೆಸುವಕೋಲ್ಗಳಂ । ಖಂ
ಡಿಸುತಮಿಡುಕದಂತವನತೇರೊಡನೊಡನೆ । ಚಂಚಶರಜಾಲಮಂಸೈಗರೆವುತುಚ್ಚಳಿಸಿಮತ್ತೆರಿಪುಬಲದಮೇಲೆ ‖ ಹಿಂಡುಗಣೆ
ಯಂಕವಿಸಿಮಂದಿಯಂಕೊಲ್ಲುತಿರ್ದ। ನಂಡಲೆದುಮೂಜಗವನೈದೆಕುಸುಮಾಸ್ತ್ರದಿಂ। ದಿಂಡುರುಳ್ಕುವಶಂಬರಾರಿಗಿದಿರಾರೆನಲ್ಪುಂಡ
ರೀಕಾಕ್ಷಸೂನು ‖ ೨೦ ‖ ಕಡಿಯೆರಾವುತರತಲೆನೆಲಕುದುರೆಕುದುರೆಗ । ಳ್ಮಡಿಯೆಜೋಧರ್ಕೆಡೆಯಲಾನೆಗಳ್ನೆಗಳ್ತರಣ । ಡೆಡೆ
ಯೋಳ್ಪೊರಳೆಶಿರಂಪರಿಯಲ್ಕೆಸಾರಥಿಯುರಥಿಯುತನುಸೀಳ್ಗಳಾಗೆ ‖ ಕಡುಪಾಂತಕಾಲಾಳ್ಗಳೊಡಲಳಿಯೆಲಳಿಯೆಲಳಿಯೆದ್ದು । ವಡೆ

ರ್ಯವನ್ನು, ಕೇಳು-ಕೇಳತಕ್ಕವನಾಗು, ಬಭ್ರುವಾಹನನು, ಅಚ್ಯುತನಸುತನ-ಮನ್ಮಥನ, ಬಾಣಂಗಳಂ-ಕಣೆಗಳನ್ನು, ನಡುವೆ-ಮಧ್ಯಮಾರ್ಗದಲ್ಲಿಯೆ, ಮುರಿಯೆ-ಛೇದಿಸಿಬಿಡಲು, ಆತನ-ಆ ಮದನನ, ಮಣಿ-ರತ್ನಖಚಿತವಾದ, ವರೂಥ-ತೇರಿಗೆ ಅಲಂಕರಿಸತಕ್ಕ, ಛತ್ರವನು-ಕೊಡೆಯನ್ನು, ಅಂಬಿನ-ಕಣೆಗಳೆಂಬ, ಅಂಬುಧಿಯ-ಕಡಲಿನ, ವೀಚಿಯಿಂದ-ಅಲೆಗಳಿಂದ, ಎಚ್ಚನು-ಬಡಿದವನಾದನು, ಮುಚ್ಚಿದಂ-ಎಲ್ಲೆಲ್ಲಿಯೂ ಕವಿದುಕೊಂಡನು, ಸ್ಮರನ-ಮನ್ಮಥನ, ಅಂಗದೊಳ್-ಅವಯವದಲ್ಲಿ, ಕೂಡೆ-ಒಡನೆಯೇ, ಕಣೆಗಳಂ-ಅಲಗುಗಳನ್ನು, ಮುಚ್ಚಿದಂ-ವ್ಯಾಪಿಸುವಂತೆ ಮಾಡಿದನು, ಕೆಲಬಲದೊಳು-ಉಭಯ ಪಾರ್ಶ್ವದಲ್ಲಿಯೂ, ಇಡಿದ-ತುಂಬಿಕೊಂಡಿದ್ದ, ಸೇನೆಯಂ-ದಳವನ್ನೆಲ್ಲಾ, ಕೊಚ್ಚಿದಂ-ಕತ್ತರಿಸಿಹಾಕಿದನು, ಪಚ್ಚಿದಂ-ಅನೇಕರನ್ನು ತುಂಡುತುಂಡಾಗಿಮಾಡಿದನು, ಅಗಣಿತ-ಅಸಂಖ್ಯಾತವಾದ, ಬಲವನು-ಪಡೆಯನ್ನೆಲ್ಲಾ, ಕೊಳುಗುಳದೊಳು-ರಣದಲ್ಲಿ, ಕೊಂದನು-ಸಾಯುವಂತೆ ಮಾಡಿಬಿಟ್ಟನು‖

ಅ‖ ವಿ‖ ಅಚ್ಚರಿತ್ವ-ಆಶ್ಚರ್ಯತ್ವ, ಮಣಿವರೂಥಛತ್ರ-ಮಣಿವರೂಥ (ವಿ.ಪೂ.) ಮಣಿವರೂಥದ ಛತ್ರ (ಷ.ತ.)‖೧೯‖

ಟೀ‖ ಪುಂಡರೀಕಾಕ್ಷಸೂನು-ಮನ್ಮಥನು, ಕಂಡು-ಬಭ್ರುವಾಹನನ ಬಾಣಪ್ರಯೋಗದ ತೆರನನ್ನು ನೋಡಿ, ಉರಿ-ಹೆಚ್ಚಾಗಿ, ಕನಲ್ದು-ಕೋಪಮಾಡಿಕೊಂಡು, ಆತನು-ಆ ಅರ್ಜುನಿಯು, ಎಸುವೆಸುವ-ಎಡೆಗುಡದೆ ಬಿಡತಕ್ಕ, ಕೋಲ್ಗಳಂ-ಕಣೆಗಳೆಲ್ಲವನ್ನೂ, ಖಂಡಿಸುತ-ತುಂಡು ತುಂಡು ಮಾಡುತ್ತ, ಮಿಡುಕದಂತೆ-ನಿಶ್ಚಲನಾಗಿ, ಅವನ-ಪಾರ್ಥಿಯ, ತೆರ-ತೇರನ್ನು, ಒಡನೊಡನೆ-ಸಂಗಡ ಸಂಗಡಲೆ, ಚಂಡ-ಉಗ್ರವಾದ, ಶರ-ಕೋಲ್ಗಳ, ಜಾಲಮಂ - ಸಮುದಾಯವನ್ನು, ಸೈಗರೆವುತ-ಚೆಲ್ಲುತ್ತ, ಉಚ್ಚಳಿಸಿ - ಎದುರಾಗಿ, ರಿಪು-ಹಗೆಗಳ, ಬಲದಮೇಲೆ - ಪಡೆಯ ಮೇಲೆ, ಹಿಂಡುಗಣೆಯಂ-ಬಾಣ ಪರಂಪರೆಯನ್ನು, ಕವಿಸಿ-ತುಂಬಿಸಿ, ಮೂಜಗವನು-ಸ್ವರ್ಗ ಮರ್ತ್ಯ ಪಾತಾಳಗಳನ್ನು, ಅಂಡಲೆದು-ಹಿಂಸೆ ಪಡಿಸಿ, ಐದು-ಐದಾದ, ಕುಸುಮಾಸ್ತ್ರದಿಂದ-ಪುಷ್ಪಬಾಣಗಳಿಂದ, ದಿಂಡುರುಳ್ಚುವ - ದಿಂಡು ಕೆಡಹತಕ್ಕ, ಶಂಬರಾರಿಗೆ - ಶಂಬರಾ ಸುರನ ಹಗೆಯಾದ ಮದನನಿಗೆ, ಇದಿರು-ಪ್ರತಿಯಾಗಿ ನಿಲ್ಲತಕ್ಕವರು, ಆರು-ಯಾರಿರುವರು, ಎನಲ್ - ಎಂಬ ತೆರನಾಗಿ, ಮಂದಿಯಂ-ದಳವನ್ನೆಲ್ಲಾ, ಕೊಲುತಿರ್ದನು-ಸಂಹಾರ ಮಾಡುತಲಿದ್ದನು ‖

ಅ‖ ವಿ‖ ಪುಂಡರೀಕಾಕ್ಷ-ಪುಂಡರೀಕ-ತಾವರೆಯಂತೆ ವಿಶಾಲವಾದ, ಅಕ್ಷ-ನೇತ್ರಗಳುಳ್ಳ ಕೃಷ್ಣನ, ಸೂನು-ಕುಮಾರನು (ಮಾರನು), ಪುಂಡರೀಕಾಕ್ಷ (ಸ. ದೀ.) ಪುಂಡರೀಕ=ಕಮಲ ಮತ್ತು ಹುಲಿ, ಬಲ=ಸೈನ್ಯ ಮತ್ತು ಶಕ್ತಿ. ಚಂಡಶರ ಜಾಲ ಚಂಡವಾದಶರ (ವಿ. ಪೂ.) ಚಂಡಶರಗಳಜಾಲ (ಷ. ತ.) ಕುಸುಮಾಸ್ತ್ರ ಮತ್ತು ಶಂಬರಾರಿ (ಸ. ದೀ.) ‖ ೨೦ ‖

ಟೀ‖ ಕಡಿಯೆ-ಭೇದಿಸಲಾಗಿ, ರಾವುತರ - ಕುದುರೆಯನ್ನು ನಡೆಯಿಸತಕ್ಕವರ, ತಲೆ-ಶಿರಸ್ಸು, ನೆಲಕೆ-ಭೂಮಿಯ ಮೇಲೆ, ಉದುರೆ-ಬಿದ್ದುಹೋಗಲು, ಕುದುರೆಗಳು-ಹಯಂಗಳು, ಮಡಿಯೆ-ಮರಣವನ್ನೈದಲು, ಜೋಧರು-ಆನೆಗಳನ್ನು ನಡೆಯಿಸುವರು, ಕೆಡೆಯಲು-ಕೆಳಗೆಬಿದ್ದುಬಿಡಲು, ನೆಗಳ್ದ-ಪ್ರಾಪ್ತವಾದ, ರಣದ-ಕಾಳಗದ, ಎಡೆಯೊಳ್-ಸಮೀಪದಲ್ಲಿ, ಪೊರಳೆ-ಹೊರಳಾಡಲಾಗಿ, ಶಿರಂ-ಶಿರಸ್ಸುಗಳು, ಪರಿಯಲ್ಕೆ-ಹಾರಾಡುತ್ತಿರಲು, ಸಾರಥಿಯ-ರಥವನ್ನು ನಡೆಸತಕ್ಕವನ, ರಥಿಯ-ರಥವನ್ನಲಂಕರಿಸಿ

ಅಲೆಗಳಿಂದ ಮುಚ್ಚಿಸಿ ಮದನನ ಮೈಯಲ್ಲೆಲ್ಲಾ ಅಲಗುಗಳು ಚುಚ್ಚಿಕೊಳ್ಳುವಂತೆ ಮಾಡಿದ್ದಲ್ಲದೆ, ಎಡಬಲದಲ್ಲಿದ್ದ ಶತ್ರುಸೈನ್ಯವನ್ನೆಲ್ಲಾ ತುಂಡು ತುಂಡಾಗಿ ಕತ್ತರಿಸಿ ಕೆಡಹುತ್ತಲೂ. ಅಸಂಖ್ಯಾತವಾದ ಪರಬಲವನ್ನೆಲ್ಲಾ ಪಚ್ಚಡಿಪಚ್ಚಡಿ ಯಾಗುವಂತೆ ಕಡಿಕಡಿದು ವೈರಿಗಳ ಪಡೆಯನ್ನು ನಿರ್ನಾಮ ಮಾಡುತ್ತಲೂ ಇದ್ದನು, ‖ ೧೯ ‖ ಬಭ್ರುವಾಹನನ ಈ ಬಗೆಯಾದ ಬಾಣವರ್ಷವನ್ನು, ಕೃಷ್ಣಸುತನು ಸ್ವಲ್ಪವೂ ಲಕ್ಷ್ಯಮಾಡದೆ ರೋಷಾವೇಶವುಳ್ಳವನಾಗಿ ಪಾರ್ಥಜನ ಕೋಲ್ಗಳಂ ಕತ್ತರಿಸುತ್ತಲೂ, ಅವನ ತೇರುಗಳನ್ನು ಎಡಬಿಡದೆ ಹೊಡೆಯುತ್ತಲೂ, ಶತ್ರುಸೈನ್ಯದಮೇಲೆ ಬಾಣವರ್ಷಂಗಳನ್ನು ಕರೆದು ಸಕಲರನ್ನೂ ಸಂಹರಿಸುತ್ತಾ ತ್ರಿಲೋಕಗಳನ್ನೂ ಕುಸುಮಾಸ್ತ್ರದಿಂದ ಬಾಧಿಸುವ ಮನ್ಮಥನೋ ಎಂಬಂತೆ ಬಾಣಗಳನ್ನು ಬಿಡುತ್ತಲಿದ್ದನು. ‖೨೦‖ ಪ್ರದ್ಯುಮ್ನನ ಈ ರೀತಿಯಾದ ಬಾಣಗಳಿಂದ ಅನೇಕ ರಥಿಕರ, ಮಾವಟಿಗರ, ಮತ್ತು ರಾವುತರ ಮುಂಡಗಳು ನೆಲಕ್ಕೆ ಉರುಳಿದವು. ಅನೇಕವಾದ ಆನೆ ಕುದುರೆಗಳು ಸತ್ತು ಬಿದ್ದವು. ತೇರುಗಳೆಲ್ಲಾ ನುಚ್ಚುನುಚ್ಚಾದವು. ಕ್ರೂರವಾಗಿ ಹೋರಾಡುತ

ಯಿನುರೆಕೊಂದವುಶರಧಿಭವನಭವನಪೊಗ | ರಿಡಿದಂಬಗಳ್ಪ್ರಳಯಶತಕೋಟಿಕೋಟಿಯುಂಪೋಲ್ದುದಾಸಂಗರದೊಳು || ೨೧ || ಧರಣಿತಳದಂತೆನವಖಂಡಮಯುಮಾಗೆಯುಮ | ಪುರದಂತೆಬಹುನರಕಪಾಲಮಯಮಾಗೆಸಾ | ಗರದಂತೆಭೂರಿಜೀವನಭಂಗಮ ಯಮಾಗೆಸಂಸಾರಚಕ್ರದಂತೆ || ಭರಿತಪಾತಕಭಂಗಮಯಮಾಗೆಕೈಲಾಸ | ಗಿರಿಯಂತೆಶಿವಗಣವಿಲಾಸಮಯಮಾಗೆವಿ | ಸ್ತರ ದನೈಮಿಶದಂತೆಪ್ರಾವೃತವಿರಕ್ತಮಯಮಾಗೆರಣಮೆಸೆದಿರ್ದುದು || ೨೨ || ಪೆಣಮಯಂಮಿರಿಮೆದೆಗೆಡೆದಿರ್ದವಾಜಿವಾ | ರ

---

ಮವನನ, ತನು-ದೇಹವು, ಸೀಳ್ಗಳಾಗೆ-ತುಂಡುತುಂಡುಗಳಾಗಲು, ಕಡುಪ-ಕೌರ್ಯವನ್ನು, ಆಂತ-ಹೊಂದಿದ, ಕಾಲಾಳ್ಗಳ-ಪದಾತಿಗಳ, ಒಡಲು-ದೇಹವು, ಅಳಿಯೆ-ಹಾಳಾಗಲು, ಅಳಿ-ಅವರ ತಲೆಗಳೇ, ಎದ್ದು-ಮೇಲಕ್ಕೆದ್ದು, ಪಡೆಯನು-ದಳವನ್ನು, ಉರೆ-ಅಧಿಕವಾಗಿ, ಕೊಂದವು-ಕೊಂದುಹಾಕಿದವು, ಶರಧಿಭವನಭವನ-ಮನ್ಮಥನ ಪೊಗರ-ಪ್ರಕಾಶವನ್ನು, ಇಡಿದ-ತುಂಬಿರುವ, ಅಂಬುಗಳ್-ಕಣೆಗಳು, ಪ್ರಳಯ-ಪ್ರಪಂಚವೆಲ್ಲಾ ನಾಶವನ್ನೈದುವ ಸಮಯದ, ಶತಕೋಟಿ-ದಂಭೋಳಿಯ ಎಂದರೆ ವಜ್ರಾಯುಧದ, ಕೋಟಿಯುಂ-ನೂರು ಲಕ್ಷವನ್ನು, ಸಂಗರದೊಳು-ರಣದಲ್ಲಿ, ಪೋಲ್ದುದ-ಹೋಲಿಕೆಯನ್ನೈದಿತು ||

ಅ|| ವಿ|| ಶರಧಿಭವನಭವನು-ಶರಸೀರನು, ಧಿ-ಧರಿಸಿರುವುದು (ಸಮುದ್ರ), ಶರಧಿ- ಸಮುದ್ರವನ್ನೆ, ಭವನ-ಆವಾಸವಾಗಿವುಳ್ಳ ನಾರಾಯಣನಿಂದ, ಭವನು-ಉತ್ಪನ್ನನಾದ ಮನ್ಮಥನು ||೨೧||

ಟೀ|| ರಣಂ-ರಣರಂಗವು, ಧರಣಿತಳದಂತೆ-ಭೂಮಂಡಲದಹಾಗೆ, ನವಖಂಡ-ಭರತಖಂಡವೇ ಆದಿಯಾದ ಒಂಭತ್ತು ಒಳಭಾಗಗಳಿಂದೊಡಗೂಡಿದ, ನವ-ನೂತನವಾದ, ಖಂಡ-ಮಾಂಸಖಂಡಗಳಿಂದ, ಮಯಂ-ನಿಬಿಡವಾದದ್ದು, ಆಗೆ-ಆಗಲು. ಯಮಪುರದಂತೆ-ಕಾಲನ ಪಟ್ಟಣವಾದ ಸಂಯಮಿನೀ ನಗರಿಯಂತೆ, ಬಹು-ಹೆಚ್ಚಾದ. ನರಕ-ನರಕಗಳ, ಪಾಲ-ಕಾಪಾಡತಕ್ಕವರ, (ಯಮಪುರವು) ನರ-ಮಾನವರ, ಕಪಾಲ-ರುಂಡಗಳಿಂದ, ಮಯ-ಕೂಡಿಕೊಂಡಿರುವುದು (ಯುದ್ಧಭೂಮಿಯು), ಆಗೆ-ಆಗಲು, ಸಾಗರದಂತೆ-ಕಡಲಿನೋಪಾದಿಯಲ್ಲಿ, ಭೂರಿ-ಹೆಚ್ಚಾಗಿ, ಜೀವನ-ಉದಕದ, ಭಂಗ - ಅಲೆಗಳ, ಭೂರಿ-ಹೆಚ್ಚಾಗಿ, ಜೀವನ-ಪ್ರಾಣಗಳನ್ನು ಉಳಿಸಿಕೊಳ್ಳುವುದರ, ಭಂಗ-ವಿಘ್ನದ, ಮಯಂ-ಪ್ರಾಚುರ್ಯವುಳ್ಳದ್ದು, ಆಗೆ-ಆಗಲು, ಸಂಸಾರ ಚಕ್ರದಂತೆ-ಹುಟ್ಟುವದು ಸಾಯುವುದು ಮೊದಲಾದ ವ್ಯಥೆಗಳಿಂದ ನಿಬಿಡವಾದ ಚಕ್ರದಂತಿರುವ ಸಂಸಾರದ ತೆರನಾಗಿ, ಭರಿತ-ತುಂಬಿರತಕ್ಕ, ಪಾತಕ-ದುರಿತಂಗಳ,ಭಂಗ-ಅಮರ್ಯ್ಯಾದೆಯಿಂದ, (ಇದು ಸಂಸಾರದ ಪರವಾಗಿ) ಭರಿತ-ಸಾಂದ್ರವಾದ,ಪಾತಕ-ಬೀಳುವಿಕೆಯ ದೆಸೆಯಿಂದ, ಭಂಗ-ಕೈಕಾಲು ಮುರಿದುಬಿದ್ದವರ ಸಮುದಾಯದಿಂದ, ಮಯಂ-ಕೂಡಿದ್ದು, ಆಗೆ-ಆಗಲು, (ರಣರಂಗವು) ವಿಸ್ತರದ-ವಿಶಾಲವಾದ, ನೈಮಿಶದಂತೆ-ನೈಮಿಶಾರಣ್ಯದ ತೆರನಾಗಿ, ಪ್ರಾವೃತ-ಸುತ್ತಿಕೊಂಡಿರತಕ್ಕ, ವಿರಕ್ತಮಯಂ-ವೈರಾಗ್ಯಬುದ್ಧಿಯುಳ್ಳ ಜನರಿಂದ ಕೂಡಿದ್ದು (ನೈಮಿಶಾರಣ್ಯವು) ಪ್ರಾವೃತ-ಎಲ್ಲೆಲ್ಲಿಯೂ ಸುತ್ತಿಕೊಂಡಿರುವ, ವಿರಕ್ತ-ಹೆಚ್ಚಾದ ರಕ್ತದಿಂದ, ಮಯಂ-ತುಂಬಿದಂಥಾದ್ದು, ಆಗೆ-ಆಗಲು, (ರಣರಂಗವು) ಎಸೆದಿರ್ದುದು-ಕಾಂತಿಯುಕ್ತವಾಗಿತ್ತು ||

ಅ|| ವಿ|| ನವಖಂಡಗಳು-ಜಂಬು, ಪ್ಲಕ್ಷ, ಕುಶ, ಕ್ರೌಂಡ, ಶಾಕ, ಶಾಲ್ಮಲಿ, ಪುಷ್ಕರ ||೨೨||

ಟೀ|| ಅಂದು- ಮನ್ಮಥಾರ್ಜುನಿಗಳ ಕಾಳಗದಲ್ಲಿ, ರಣರಂಗದೋಳ್ - ಯುದ್ಧಭೂಮಿ ಯೊಳಗೆ, ಪೆಣಮಯಂ-

---

ಲಿದ್ದ ಪದಾತಿಗಳ ಶರೀರವೆಲ್ಲಾ ಛಿನ್ನಾಭಿನ್ನವಾಗಿ ಹೋಯಿತು, ಆಗ ಕೆಳಗೆ ಬಿದ್ದ ಚತುರಂಗಬಲದ ತಲೆಗಳು ಮೇಲಕ್ಕೆದ್ದು ಪ್ರದ್ಯುಮ್ನನಮೇಲೆ ಕಾದುತ್ತಲೂ ತಲೆಗಳನ್ನು ಪುನಃ ನೆಲಕ್ಕೆ ಉರುಳಿಸಿದರೆ ಮುಂಡಗಳು ಹೋರಾಡುತ್ತ ಇರಲಾಗಿ ಪಾಲ್ಗಡಲವಾಸಿಯಾದ ಶ್ರಿಮನ್ನಾರಾಯಣ ಮೂರ್ತಿಯ ಅವತಾರವನ್ನುಳ್ಳ ಕೃಷ್ಣಸ್ವಾಮಿಯ ಕುವರನಾದ ಮೀನಕೇತನನು ಪ್ರಳಯಕಾಲದ ವಜ್ರಾಯುಧದ ಪೆಟ್ಟುಗಳನ್ನೂ ಕೂಡ ನಿರಾಕರಿಸುವ ನಿಶಿತಾಸ್ತ್ರಂಗಳನ್ನು ಬಿಡುತ್ತಾ ಘೋರಯುದ್ಧವುಂಗೈಯುತಲಿದ್ದನು ||೨೧|| ಆಗ ರಣರಂಗವಾದರೋ. ಹೊಸದಾದ ಅನೇಕ ಮಾಂಸಖಂಡಗಳಿಂದ ಕೂಡಿ ಜಂಬುಪ್ಲಕ್ಷಾದಿನವ ಖಂಡಗಭರಿತವಾದ ಭೂಮಂಡಲವನ್ನೂ ತಂಡೋಪತಂಡಗಳಾದ ನರಗಳು, ತಲೆಬುರುಡೆಗಳೇ ಮೊದಲಾದವುಗಳಿಂದ ಕೂಡಿ ಕುಂಭೀಪಾಕ್ಯಾದಿ ನರಕ ಸಹಿತವಾದ ಯಮನ ರಾಜಧಾನಿಯಾಗಿರುವ ಸಂಯಮಿನೀ ಪಟ್ಟಣವನ್ನೂ, ಬದುಕುವುದೇ ದುರ್ಲಭವಾದ್ದರಿಂದ ಹೆಚ್ಚಾದ ನೀರಿನಿಂದೊಡಗೂಡಿರುವ ಮಹಾ ಸಾಗರವನ್ನು, ಕೈಕಾಲು ಮುರಿದುಕೊಂಡು ನೆಲಹತ್ತಿ ಬಿದ್ದುಹೋಗಿರೋಣದರಿಂದ ಅನೇಕ ಪಾಪಗಳಿಗೆ ಆಕರವಾದ ಸಂಸಾರ ಚಕ್ರವನ್ನೂ. ನರಿಗಳನೇಕಗಳು ಮಾಂಸದ ಆಸೆಗಾಗಿ ಬಂದು ರಣರಂಗದಲ್ಲಿ ತುಂಬಿಕೊಂಡಿರೋಣದರಿಂದ ಶಿವನಿಂದ ಕೂಡಿರತಕ್ಕ ಕೈಲಾಸವನ್ನೂ, ಸಮರಾಂಗಣದ ಎಲ್ಲೆಡೆಗಳಲ್ಲಿಯೂ ರಕ್ತಮಾಂಸಗಳೇ ತುಂಬಿ ತುಳುಕಾಡುತ್ತಲಿರುವುದರಿಂದ ವಿರಕ್ತರಾದ ಮಹಾಮುನಿಗಳ ಸಮುದಾಯದಿಂದ ಆಶ್ರಿತವಾದ ನೈಮಿಶಾರಣ್ಯವನ್ನೂ ಹೋಲುತ್ತಿರುವಂತೆ ತೋರಿಬರುತ್ತಲಿತ್ತು || ೨೨ || ರಣಭೂಮಿಯೊಳಗೆ ಎಲ್ಲಿ ನೋಡಿದರೂ ಹೆಣಗಳೇ ತುಂಬಿ

ಣಮುಂಬಿಡದೆಕುಣಿದಾಡುವಟ್ಟೆಗಳರಿಂ | ಖಣಮುಯಂನಿಡುಗರುಳ್ಖಂಡಮಿದುಳಡಗುಸುಂಠಿಗೆಮಜ್ಜೆಮಾಂಸಂಗಳ || ನೆಣ ಮಯಂಪರಿನನೆತ್ತರಬಸೆಯಜಗಿಯುದಾ | ರುಣಮುಯುಂಯಕ್ಷರಾಕ್ಷಸಭೂತಭೇತಾಳ | ಗಣಮುಯುಂಸಲೆಭಯಂಕರಮಾದು ದಂದುರಣರಂಗದೋಳ್ಪ್ರದ್ಯುಮ್ನನ || ೨೩ || ಅರಿದಸುಂಡಿಲಕಹಳೆವಿಡಿದೂದಿದವುಕೆಲವು | ಕರಿಯುರದನಂಗಳ್ಗೆತಲೆಯೋಡ ಸೂರೆಗಟ್ಟಿ | ನರದಜಂತ್ರಂಪೂಡಿದಂಡಿಗೆವಿಡಿದುಪಾಡಿದವುಕೆಲವುತುರಗಂಗಳ || ಖುರಮಂಪಿಡಿದುತಾಳವಿಕ್ಕಿದವುಕೆಲವುಕುಂ | ಜರಶಿರದಮುರಜಂಗಳಂಬಾರಿಸಿದವುಕೆಲ | ವಿರದೆಕುಣಿದಾಡಿದವುಮರುಳ್ಗಳಾರಣರಂಗದೋಳ್ನಾಟ್ಯರಚನೆಮೆರೆಯೆ || ೨೪ || ಹರಿಸುತಂತನ್ನಮೋಹರವನಿಂತೈದೆಸಂ | ಹರಿಸುತಂತಕನೊಲಿರೆಕಾಣುತವರೂಥಮಂ | ಹರಿಸುತಂದಾಬಭ್ರುವಾಹನಂಬಾತಿಯಂ

ಕನಗಳಿಂದ ನಿಬಿಡವಾದದ್ದು, ವಿರಾರಿ–ಅಧಿಕವಾಗಿ, ನೆದೆಗೆಡೆದಿರ್ದ–ರಾಶಿಯ ಹಾಗೆ ಬಿದ್ದುಹೋಗಿದ್ದ, ವಾಜಿ–ಹಯಗಳಿಂದಲೂ, ವಾರಣ–ಹಸ್ತಿಗಳ, ಮಯಂ–ಸಮುದಾಯವುಳ್ಳದ್ದು, ಬಿಡದೆ–ತಪ್ಪದೆ. ಕುಣಿದಾಡುವ–ನಾಟ್ಯವಂ ಮಾಡುವ, ವಟ್ಟೆಗಳ–ತಲೆಗಳ, ರಿಂಖಣಮಯಂ–ಎಗರುವ ಸ್ವಭಾವದಿಂದ ಕೂಡಿದ್ದ, ನಿಡು–ನೀಳವಾಗಿರತಕ್ಕ, ಕರುಳ್ಖಂಡ–ಮಾಂಸ, ಚರ್ಮ ಮೊದಲಾದ ಭಾಗಗಳ, ಮಿದುಳ–ಕೊಬ್ಬಿನೊಳಗೆ, ಅಡಗು–ಅದ್ದಿ ತೆಗೆದ, ಸುಂಟಿಗೆ–ಕೊರಲ್ಗಳು, ಮಜ್ಜೆ–ಕೊಬ್ಬು, ಮಾಂಸಗಳ್–ಮಾಂಸವೇ ಮೊದಲಾದವುಗಳ, ನೆಣ–ಮಾಂಸವನ್ನಾವರಿಸತಕ್ಕ ಮೇದೋಭಾಗದ, ಮಯಂ – ಪ್ರಾಚುರ್ಯವುಳ್ಳದ್ದು, ಪರಿದ – ಹರಿಯತಕ್ಕ, ನೆತ್ತರ–ರಕ್ತದ, ಬಸೆಯು–ಸಣ್ಣ ನರಗಳ ಮತ್ತು ಸುರಿಯುವಿಕೆಯಿಂದ, ಬಿಗಿಯ – ಭದ್ರವಾಗಿರತಕ್ಕ, ದಾರುಣ – ಕಠಿನವಾದ ಭೂಮಿಯ, ಮಯಂ–ಸಮೂಹವುಳ್ಳದ್ದು, ಯಕ್ಷ–ಯಕ್ಷರು, ರಾಕ್ಷಸ–ರಕ್ಕಸರು, ಭೂತ–ಪ್ರಮಥಾದಿಗಳು, ವೇತಾಳ–ಭೇತಾಳಗಳು ಮೊದಲಾದವುಗಳ, ಗಣಮಯಂ–ಸಮುದಾಯದಿಂದೊಡಗೂಡಿದ್ದು, ಸಲೆ–ಹೆಚ್ಚಾಗಿ, ಭಯಂಕರಂ–ಭಯದಿಂದ ಕೂಡಿರತಕ್ಕದ್ದು, ಆದುದು–ಆಯಿತು ||೨೩||

ಟೀ|| ಅರಿದ–ಭೇದಿಸಲ್ಪಟ್ಟು ನೆಲಕ್ಕೆ ಬಿದ್ದ, ಸುಂಡಿಲ–ಸೊಂಡಿಲೆನ್ನುವ, ಕಹಳೆ–ಕಾಳೆಯನ್ನು, ಪಿಡಿದು – ಹಿಡಿದುಕೊಂಡು, ಕೆಲವು–ಕೆಲವು ಪಿಶಾಚಗಳು, ಊದಿದವು–ಧ್ವನಿಯಂ ಗೈದವು, ಕೆಲವು – ಮತ್ತೆ ಹಲವು ಸಂಖ್ಯೆಯ ಮರುಳ್ಗಣವು, ಕರಿಯ–ಆನೆಯ, ರದನಂಗಳ್ಗೆ–ಹಲ್ಲುಗಳಿಗೆ, ತಲೆಯೋಡ–ಕಪಾಲಗಳನ್ನು, ಸೋರೆಗಟ್ಟಿ–ಸೋರೆಯ ಕಾಯಿಯಂತೆ ಬಂಧಿಸಿ, ನರದ–ನರಗಳ, ಜಂತ್ರಂ–ತಂತಿಗಳೆಂಬ ಸಣ್ಣ ನರಗಳನ್ನು, ಪೂಡಿ–ಸೇರಿಸಿ, ದಂಡಿಗೆವಿಡಿದು–ವೀಣೆಯನ್ನಾಗಿ ಮಾಡಿಕೊಂಡು ಕೈಯಲ್ಲಿ ಹಿಡಿದು, ಪಾಡಿದವು–ಗಾನಮಾಡಿದವು, ಕೆಲವು–ಇನ್ನೂ ಹಲವು ಪಿಶಾಚಿಗಳು, ತುರಗಂಗಳ–ಹಯಂಗಳ, ಖುರಮಂ–ಕಾಲುಗುರ್ಗಳನ್ನು, (ಕಾಲ್ಗೊರಸನ್ನು) ಪಿಡಿದು–ಹಿಡಿದುಕೊಂಡು, ತಾಳಂ–ತಾಳವನ್ನು, ಇಕ್ಕಿದವು–ಹಾಕಿದವು. ಕೆಲವು–ಮತ್ತೆ ಕೆಲವು, ಕುಂಜರ–ಗಜಗಳ, ಶಿರದ–ಶಿರಸ್ಸಿನ, ಮುರಜಂಗಳಂ–ಮದ್ದಳೆಗಳನ್ನು. ಬಾರಿಸಿದವು–ಬಾರಿಸಿದಂಥವುಗಳಾದವು, ಕೆಲವು ಮರುಳ್ಗಳು–ಬೇರೆ ಕೆಲವು ಭೂತಗಳು, ಆರಣರಂಗದೋಳ್–ಆ ಕಾಳಗದ ಭೂಮಿಯೊಳಗೆ, ನಾಟ್ಯ–ನರ್ತನದ, ರಚನೆ–ಬಗೆಯು, ಮೆರೆಯೆ–ಪ್ರಕಾಶಿಸುವಂತೆ, ಕುಣಿದಾಡಿದವು–ನಾಟ್ಯವಾಡಿದವು ||೨೪||

ಟೀ|| ಹರಿಸುತಂ–ಮನ್ಮಥನಾದರೊ, ತನ್ನ–ಸ್ವಕೀಯವಾದ, ಮೋಹರವನು – ದಳವನ್ನು, ಇಂತು – ಈ ತೆರನಾಗಿ, ಸಂಹರಿಸುತ–ನಾಶಪಡಿಸುತ್ತ, ಐದೆ–ಸಮೀಪವನ್ನೈದಲು, ಅಂತಕನೊಲು–ಯಮಧರ್ಮರಾಯನಂತೆ, ಇರೆ–ಇರಲಾಗಿ, ಅಂದು–

ತುಳುಕಾಡುತ್ತಲಿದ್ದ, ಆನೆ ಕುದರೆಗಳ ರಾಶಿರಾಶಿಯಾಗಿ ಬಿದ್ದಿರುವ ಶರೀರಗಳಾದರೊ ಪೇರ್ಬೆಟ್ಟಗಳನ್ನು ಹೋಲುತ್ತಲಿದ್ದವು. ಮುಂಡಗಳೆಲ್ಲವೂ ಈ ಕಡೆಯಿಂದ ಆ ಕಡೆಗೂ ಆ ಕಡೆಯಿಂದ ಈ ಕಡೆಗೂ ಪಿಶಾಚಿಗಳಂತೆ ಯುದ್ಧಭೂಮಿಯಲ್ಲೆಲ್ಲಾ ಓಡಾಡುತ್ತಲಿದ್ದವು. ರಕ್ತಮಾಂಸ ಮೇದಸ್ಸು ಮೊದಲಾದವು ಎಲ್ಲೆಲ್ಲಿಯೂ ತುಂಬಿ ಯಕ್ಷರಾಕ್ಷಸ ಭೂತ ಭೇತಾಳಾದಿ ಮರುದ್ಗಣವೆಲ್ಲಾ ಕಹಳೆಯಂ ಪಿಡಿದು ಊದುತ್ತಲಿರುವಂತೆ ಪ್ರದ್ಯುಮ್ನನ ಯುದ್ಧಭೂಮಿಯು ಕ್ರೂರತರಮಾಗಿ ಕಂಗೊಳಿಸುತ್ತಲಿದ್ದಿತು ||೨೩|| ಆಗ ಆ ಸಮರಾಂಗಣದಲ್ಲಿ ಕತ್ತರಿಸಿ ಬಿದ್ದಿರುವ ಆನೆಗಳ ಸುಂಡಿಲ್ಗಳನ್ನು ಮರುಳ್ಗಣದಲ್ಲನೇಕಗಳು ಕೈಕೊಂಡು ತುತ್ತೂರಿಯಂತೆ ಊದುತ್ತಲೂ, ಆನೆಗಳ ಕೋರೆ ಹಲ್ಲುಗಳಿಗೆ ತಲೆಬುರುಡೆ ಎಂಬ ಸೋರೆಕಾಯಿಯನ್ನು ತಗಲಿಸಿ ಅದನ್ನು ನರವೆಂಬ ದಾರದಿಂದ ಕಟ್ಟಿ, ವೀಣೆಯನ್ನಾಗಿ ಮಾಡಿಕೊಂಡು ಹಾಡುತ್ತಲೂ, ಇನ್ನು ಅನೇಕಂಗಳಾದ ಭೂತಭೇತಾಳಂಗಳು ಕುದುರೆಗಳ ಗೊರಸುಗಳಂ ಪಿಡಿದು ತಾಳಹಾಕುತ್ತಲೂ, ಮತ್ತೆ ಕೆಲವು ಆನೆಗಳ ತಲೆಗಳೆಂಬ ಮೃದಂಗವನ್ನು ಬಾರಿಸುತ್ತಲೂ, ಇನ್ನೂ ಹಲವು, ಈ ವಾದ್ಯಗಳಿಗನುಗುಣವಾಗಿ ನಾಟ್ಯವನ್ನು ಮಾಡುತ್ತಲೂ ಇದ್ದವು. || ೨೪ || ಈ ತೆರನಾದ ಸಮರಾಂಗಣದಲ್ಲಿ ಪ್ರದ್ಯುಮ್ನನು ಕಲ್ಪಾಂತಭೈರವನಂತೆ ಕಂಗೊಳಿಸುತ್ತಲಿರುವಾಗ ಬಭ್ರುವಾಹನನಾದರೊ, ಮಹಾ ರೋಷವಂ ತಾಳಿ ಮತ್ತೊಂದು ಮಣಿರಥವನ್ನಲಂಕರಿಸಿದವನಾಗಿ, ಬಾಣಗಳ ಮಳೆಯನ್ನು ಕರೆಯುತ್ತಾ, ಶತ್ರುಸೈನ್ಯದ ಮೇಲೆ ನುಗ್ಗಿ, ವೀರ ರಣೇ

ಕೈಕೊಂಡು ಕಣೆಗರೆವುತ ‖ ಪರದಳವನೊಳವೊಕ್ಕು ಸುಭಟರಂ ಸದೆದು ಸೊ | ಪ್ಪರದಳವಳಿಸಲಾಗಿ ಭೀತಿಯಿಂ ದೆಸೆದೆಸೆಗೆ | ಪರದ
ಳನಡಿಸಿದರ್ ಪಲಾಯನನನತಿಬಲರ್ ಪಾರ್ಥನಪತಾಕಿನಿಯೊಳು ‖ ೨೫ ‖ ಕೆಡದ ಕರಿಗಳ ಬೆಟ್ಟವಳಿಯ ಗುಂಡುಗಳೊಳಗೆ | ಮಡಿದ
ಕುದುರೆಗಳ ಪೊಡೆಗಲ್ಲ ಪೊರಳಿಗಳೊಳಗೆ | ಕಡಿದ ಕೈಕಾಲ ನರರಟ್ಟೆಗಳ ತುಂಡುಗಳ ಮರಮಟ್ಟೆಗಳನೆಳೆವುತ ‖ ಒಡೆದ ತಲೆಯೋಡು
ದೋಣಿಗಳಿಂದ ತಡಿಗೈವು | ತಿಡಿದ ನೆಣವಸೆ ಮಿದುಳ್ಗಳ ಕರ್ದಮಂಗಳಿಂ | ಬಿಡದೆ ರುಧಿರಪ್ರವಾಹಂ ಪರಿಯೆ ಸವರಿದಂ ಪಾರ್ಥಜಂ ಪರ
ಬಲವನು ‖ ೨೬ ‖ ಶಕ್ರತನಯನ ಸಂಭವಂ ಬಳಿಕ ರೋಷದಿಂ | ಚಕ್ರಾಯುಧನ ಸುತನ ಸೂತನಂ ಕುದುರೆಯಂ | ನಕ್ರಧ್ವಜನ
ನತುಲಚಾಪಮಂ ಕತ್ತರಿಸಿ ವಿರಥನಂ ಮಾಡುತಿರಲು ‖ ವಿಕ್ರಮದೊಳಾಗ ಮತ್ತೊಂದು ಮಣಿರಥದಿಂದು | ಪಕ್ರಮಿಸಿದಂ ಕಾಳಗಕೆ
ಕೃಷ್ಣನಂದನನ | ತಿಕ್ರಮಿಸಿ ಮಗುಳಾ ವರವರೂಥಮಂ ತಡೆಗಡಿದನಾ ಪಾರ್ಥಿ ಕೊಳುಗುಳದೊಳು ‖ ೨೭ ‖ ಪೊಸರಥವನಳವಡಿಸಿ ತಂದು

---

ಆ ಕಾಲದಲ್ಲಿ, ಹರಿಸುತ–ಅನ್ವೇಷಣೆಯಂ ಮಾಡುತ್ತ, ವರೂಥಮಂ–ರಥವನ್ನು, ಕಾಣುತ–ನೋಡುತ್ತ, ಆ ಬಭ್ರುವಾಹನಂ–ಆ ಅರ್ಜುನಿಯು, ಖಾತಿಯಂ–ಕೋಪವನ್ನು, ಕೈಕೊಂಡು–ತಾಳಿ, ಕಣೆ–ಸರಲ್ಗಳನ್ನು, ಕರೆವುತ್ತ–ಸುರಿಸುತ, ಪರದಳವನು–ಹಗೆಗಳ ಪಡೆಯನ್ನು, ಒಳಹೊಕ್ಕು–ಸೇರಿ, ಸುಭಟರಂ – ವೀರಾಗ್ರಣಿಗಳನ್ನೆಲ್ಲಾ, ಸದೆದು–ಕೊಂದುಹಾಕಿ, ಸೊಪ್ಪರ – ಬಲವನ್ನು ಹೋಗಲಾಡಿಸಿಕೊಂಡಿರತಕ್ಕ, ದಳವ–ದಂಡನ್ನು, ಅಳಿಸಲಾಗಿ–ಧ್ವಂಸಮಾಡಲು, ಭೀತಿಯಿಂದ–ಹೆದರಿಕೆಯಿಂದ, ಪಾರ್ಥನ–ಫಲ್ಗುಣನ, ಪತಾಕಿನಿಯೊಳು–ದಳದಲ್ಲಿ, ಅತಿಬಲರು–ಮಾನುಸಕಮುಳ್ಳವರು, ಪರದು–ಅಗಲುವಂತೆ ನಾಡಿ, ದೆಸೆದೆಸೆಗೆ–ನಾನಾ ದಿಕ್ಕುಗಳಿಗೂ, ಪಲಾಯನವನು–ಓಡಿಹೋಗತಕ್ಕದ್ದನ್ನು, ಅಡಿಸಿದವರಾದರು ‖೨೫‖

ಟೀ‖ ಪಾರ್ಥಜಂ–ಅರ್ಜುನಿಯು| ಕೆಡೆದ–ನೆಲಕ್ಕೆ ಉರುಳಿರತಕ್ಕ, ಕರಿಗಳ–ಹಸ್ತಿಗಳೆನ್ನುವ, ಬೆಟ್ಟವಳಿಯ–ಬೆಟ್ಟಗಳ ಹತ್ತಿರವಿರುವ, ಗುಂಡುಗಳೊಳಗೆ–ಗುಂಡುಗಳ ಸಮುದಾಯದಲ್ಲಿ, ಮಡಿದ–ಮರಣವನ್ನೈದಿದ, ಕುದುರೆಗಳ–ಅಶ್ವಂಗಳ, ಪೊಡೆ–ಉದರ ಭಾಗವೆನ್ನತಕ್ಕ, ಕಲ್ಲ–ಸಣ್ಣಸಣ್ಣ ಕಲ್ಲುಗಳ, ಪೊರಳಿಗಳೊಳಗೆ–ಸಮುದಾಯದಲ್ಲಿ, ಕಡಿದ–ಛೇದಿಸಿರುವ, ಕೈಕಾಲ–ಕೈಮತ್ತು ಕಾಲುಗಳ, ನರರ–ಮಾನವರ, ಅಟ್ಟೆಗಳು–ತಲೆ ಕೈಕಾಲುಗಳನನ್ನು ಬಿಟ್ಟ ಮಿಕ್ಕ ಭಾಗಗಳು, ತುಂಡುಗಳು–ತುಂಡುಗಳೆನ್ನುವ, ಮರ–ತರುಗಳನ್ನು, ಮಟ್ಟೆಗಳನು–ಗರಿಗಳೇ ಮೊದಲಾದವನ್ನೂ, ಎಳೆವುತ–ಸೆಳೆಯುತ್ತ, ಒಡೆದ–ಛೇದಿಸಲ್ಪಟ್ಟ, ತಲೆಯೋಡು–ತಲೆಯ ಹೋಳುಗಳೆನ್ನತಕ್ಕ, ದೋಣಿಗಳಿಂದ–ದೋಣಿಗಳ ಮೂಲಕವಾಗಿ, ತಡಿಗೈವುತ–ದಡವನ್ನು ಸೇರುತ್ತ, ಇಡಿದ–ತುಂಬಿರುವ, ನೆಣ–ಪಿತ್ತಸಾರವು, ವಸೆ–ಮೇದಸ್ಸಿನ ಸಾರಾಂಶವು, ಮಿದುಳ್–ಮೇದೋಭಾಗವು, ಇವುಗಳ, ಕರ್ದಮಂಗಳಿಂ–ಬುರುಡೆಗಳಿಂದ, ಬಿಡದೆ–ತಪ್ಪದೆ, ರುಧಿರ–ರಕ್ತದ, ಪ್ರವಾಹಂ–ಕಾಲುವೆಯು, ಪರಿಯೆ–ಹರಿಯುವ ತೆರನಾಗಿ, ಪರಬಲವನು–ಹಗೆಗಳ ಪಡೆಯನ್ನೆಲ್ಲಾ, ಸವರಿದಂ–ನಿರ್ನಾಮಮಾಡಿದನು ‖೨೬‖

ಟೀ‖ ಬಳಿಕ–ಅನಂತರ, ಶಕ್ರ–ದೇವೇಂದ್ರನ, ತನಯನ – ಕುವರನಾದ ಪಾರ್ಥನ, ಸಂಭವಂ – ಮಗನಾದ ಬಭ್ರುವಾಹನನು, ರೋಷದಿಂ–ಕೋಪದಿಂದ, ಚಕ್ರ–ಚಕ್ರವೆಂಬ, ಆಯುಧನ–ಆಯುಧವುಳ್ಳ ಕೃಷ್ಣಸ್ವಾಮಿಯ, ಸುತನ–ಕುವರನಾದ ಮನ್ಮಥನ, ಸೂತನಂ–ರಥವನ್ನು ನಡೆಯಿಸತಕ್ಕವನನ್ನು, ಕುದುರೆಯಂ–ಹಯವನ್ನೂ, ನಕ್ರಧ್ವಜನ–ಮೀನಕೇತನನ, ಅತುಲ–ಅಸದೃಶವಾದ, ಚಾಪಮಂ–ಧನುಸ್ಸನ್ನೂ, ಕತ್ತರಿಸಿ–ಕಡಿದು, ವಿರಥನಂ – ತೇರಿಲ್ಲವನನ್ನಾಗಿ, ಮಾಡುತ – ಎಸಗುತ್ತ, ಇರಲು–ಇರುವ ಕಾಲದಲ್ಲಿ, ಕೃಷ್ಣನಂದನನು–ಕೃಷ್ಣನ ಸುತನು, ಆಗ – ಆ ವೇಳೆಯೊಳಗೆ, ಮತ್ತೊಂದು – ಬೇರೊಂದಾದ, ಮಣಿರಥದಿಂದ–ರತ್ನಮಯವಾದ ತೇರಿನ ಮೂಲಕ, ವಿಕ್ರಮದೊಳು–ಸಾಹಸಾತಿಶಯದಿಂದ, ಕಾಳಗಕೆ–ರಣಕ್ಕೆ, ಉಪಕ್ರಮಿಸಿದಂ–ಮೊದಲು ಮಾಡಿದನು, ಮಗುಳೆ–ಪುನಃ, ಆ ಪಾರ್ಥಿ–ಆ ಅರ್ಜುನಿಯು, ಅತಿಕ್ರಮಿಸಿ–ಮಿತಿಮೀರಿದವನಾಗಿ, ಕೊಳುಗುಳದೊಳು–ಯುದ್ಧದಲ್ಲಿ, ಆ ವರೂಥಮಂ–ಆ ರಥವನ್ನು, ತಡೆಗಡಿದನು–ಛೇದಿಸಿದನು. ‖೨೭‖

---

ಕರನ್ನು ನಿರ್ಮೂಲನಮಾಡುತ್ತಲಿರುವಾಗ ಶೂರಾಗ್ರಣಿಗಳನೇಕರು ದಿಕ್ಕು ದಿಕ್ಕುಗಳನ್ನೂ ಹಿಡಿದು ಪಲಾಯನ ಮಾಡಿದರು‖೨೫‖ ಆನೆಗಳು ಬೆಟ್ಟಗಳ ಹಾಗೆ ಬಿದ್ದು ಹೋಗುವಂತೆಯೂ, ಕುದುರೆಗಳು ರಾಶಿರಾಶಿಯಾಗಿ ಕೆಳಗೆ ಉರುಳುವಂತೆಯೂ ಮಾಡಿಬಿಟ್ಟನು, ಅನೇಕರ ಕೈಕಾಲು ತಲೆ ಇವುಗಳನ್ನೆಲ್ಲಾ ಚೂರುಚೂರಾಗುವಂತೆ ವಿಭಾಗಿಸಿದನು, ಈ ಬಭ್ರುವಾಹನನ ಕ್ರೂರವಾದ ಬಾಣಗಳಿಂದ ಪರಬಲದಲ್ಲಿ ಎಲ್ಲಿನೋಡಿದರೂ ರಕ್ತಪ್ರವಾಹಗಳು ಹರಿಯುತ್ತಲಿದ್ದವು ‖ ೨೬ ‖ ಅನಂತರದಲ್ಲಿ ಬಭ್ರುವಾಹನನು ಮೀನಾಂಕನೃಪನನ್ನೂ ಅವನ ತೇರನ್ನೂ ಕುದುರೆಯನ್ನೂ ಸಹ ಕತ್ತರಿಸಿ ಕೆಡಹುತ್ತಿರಲು ಈ ಪೆಟ್ಟುಗಳಿಗೆ ಕೃಷ್ಣಸುತನು ಸ್ವಲ್ಪವೂ ಹೆದರದೆ ಬೇರೊಂದು ಮಣಿರಥವನ್ನೇರಿ ಸಮರ ಸನ್ನದ್ಧನಾಗುವುದರೊಳಗಾಗಿ ಪಾರ್ಥಜನು ಅದನ್ನೂ ನುಚ್ಚು ನುಚ್ಚಾಗಿ ಮಾಡುತ್ತಲೂ, ಪ್ರದ್ಯುಮ್ನನು ಪುನಃ ರಥವನ್ನು ನೇರ್ಪಡಿಸಿಕೊಂಡು ಕಾಳಗಕ್ಕನು

ಸೂನುಬಂ । ದೆಸೆವನಾತೇರನೊಡನೊಡನೆಪಾರ್ಥನಸುತಂ । ಕುಸುರಿದರಿದಂಧುರದೊಳಿಂತುಬಯಲಾದುದುವರೂಥಮೆಪ್ಪತ್ತುಬಳಿಕ ॥ ಅಸವಳಿದನಾಬಭ್ರುವಾಹನನಬಾಣದಿಂ । ದಸುರಾರಿನಂದನಂಕೂಡೆಸಂತೈಸಿಕೊಂಡ । ಸಮಬಲದೊಳ್ಪಳಂಚಿದನಾಗಳೀರ್ವರ್ಗೆಮಸೆದುದಂಕಂಖತಿಯೊಳು ॥ ೨೮ ॥ ಎದ್ದುನಭದೊಳ್ಪಳಂಚುವರೊಮ್ಮೆಭೂತಳದೊ । ಳಿದ್ದುಹೆಣಗುವರೊಮ್ಮೆಬಳಸಿಮಂಡಲದಿಂದ । ಹೊದ್ದಿಹೋರುವರೊಮ್ಮೆತಗುಳ್ಮಗುಳಾಗಿತಾಗುವರೊಮ್ಮೆಸರಿಬರಿಯನು । ತಿದ್ದಿತುಡುಕುವರೊಮ್ಮೆಬಾಣಾಂಬುಧಿಯತೆರೆಯೊ । ಳದ್ದಿಪೊಣರುವರೊಮ್ಮೆಮೂರ್ಛೆಯಿಂಮೈಮರೆದು । ಬಿದ್ದುಚೇತರಿಸಿಕಾದುವರೊಮ್ಮೆಕೃಷ್ಣಪಾರ್ಥರತನಯರಾಹವದೊಳು ॥ ೨೯ ॥ ಧೃತಚಾಪಚಾಪಲರ್ಶಸ್ತ್ರಾಸ್ತ್ರನಿಪುಣರು । ನ್ನತಸತ್ವಸತ್ವರರ್ದುಸ್ಸಹರಜೇಯರು ।

ಟೀ। ಹರಿಸೂನು-ಕೃಷ್ಣನ ಕುವರನಾದ ಮನ್ಮಥನಾದರೊ, ಪೊಸರಥವನು-ನೂತನವಾದ ರಥವನ್ನು, ಅಳವಡಿಸಿ-ನೇರ್ಪಡಿಸಿಕೊಂಡು, ತಂದು-ತೆಗೆದುಕೊಂಡುಬಂದು ರಣರಂಗವನ್ನುಹೊಕ್ಕು, ಎಸೆವನು-ಕಾಂತಿಯುಕ್ತನಾಗಿರುವನು, ಪಾರ್ಥನಸುತಂ-ಅರ್ಜುನನ ಕುವರನಾದರೊ, ಒಡನೊಡನೆ ಸಂಗಡ ಸಂಗಡಲೆ, ಆತೇರನು-ಆ ರಥವನ್ನು, ಕುಸುರಿ-ಭಿನ್ನಾಭಿನ್ನವಾಗಿ, ತರಿದಂ-ಕಡಿದುಹಾಕಿದನು, ಧುರದೊಳು-ರಣದಲ್ಲಿ, ಇಂತು-ಈ ಮೇರೆಗೆ, ಎಪ್ಪತ್ತು-ಎಪ್ಪತ್ತು ಸಂಖ್ಯೆಯ, ವರೂಥಂ-ತೇರುಗಳು, ಬಯಲಾದುದು-ಹಾಳಾಯಿತು, ಬಳಿಕ-ಆಮೇಲೆ, ಆ ಬಭ್ರುವಾಹನನ ಬಾಣದಿಂದ-ಆ ಅರ್ಜುನಿಯ ಕೋಲ್ಗಳಿಂದ, ಅಸುರಾರಿನಂದನಂ-ಮನ್ಮಥನು, ಅಸವಳಿದನು-ಪ್ರಜ್ಞೆತಪ್ಪಿ ಕೆಳಗೆ ಬಿದ್ದುಹೋದನು, ಕೂಡೆ-ಒಡನೆಯೆ, ಸಂತೈಸಿಕೊಂಡು-ಎಚ್ಚೆತ್ತವನಾಗಿ, ಅಸಮಬಲನೊಳ್-ಎಣೆಯಿಲ್ಲದ ಪರಾಕ್ರಮವುಳ್ಳ ಪಾರ್ಥಿಯೊಂದಿಗೆ, ಪಳಂಚಿದನು-ಎದುರಾದನು, ಆಗಳು-ಆಗ, ಈರ್ವರ್ಗೆ-ಇವರಿಬ್ಬರಿಗೂ, ಖತಿಯೊಳು-ಕೋಪದಿಂದ, ಅಂಕಂ - ಕಾಳಗದ ಗುರ್ತು, ಮಸದುದು - ಅಂಕುರಿಸುತಲಿದ್ದಿತು ॥ ೨೮ ॥

ಟೀ॥ ಕೃಷ್ಣಪಾರ್ಥರತನುಜರು-ಶ್ರೀ ಕೃಷ್ಣಾರ್ಜುನರ ಸುತರಾದ ಮನ್ಮಥ ಬಭ್ರುವಾಹನರು, ಎದ್ದು-ಆಕಾಶದವರೆಗೂ ಹಾರಿ, ಒಮ್ಮೆ-ಒಂದಾವರ್ತಿ, ನಭದೊಳು-ಆಗಸದಲ್ಲಿಯೆ, ಪಳಂಚುವರು-ಕಾದುವರು, ಒಮ್ಮೆ-ಒಂದು ಕಾಲದಲ್ಲಿ, ಭೂತಳದೊಳು-ಭೂಮಂಡಲದಲ್ಲಿ, ಇದ್ದು-ಇರುವರಾಗಿ, ಹೆಣಗುವರು-ಜಗಳವಾಡುವರು, ಮಂಡಲದಿಂದ-ಚಕ್ರದ ತೆರನಾಗಿ, ಬಳಸಿ-ಆವರಿಸಿದವರಾಗಿ, ಒಮ್ಮೆ-ಒಂದುಬಾರಿ, ಹೊದ್ದಿ-ಪ್ರತಿಭಟಿಸಿ, ಹೋರುವರು-ಯುದ್ಧಮಾಡುವರು, ತಗುಳ್ಮಗುಳಾಗಿ-ವಕ್ರ ವಕ್ರವಾಗಿ, ಒಮ್ಮೆ-ಒಂದು ಸಲ, ತಾಗುವರು-ಕಾಳಗಕ್ಕೆ ಅನುವಾಗುವರು, ಸರಿಬರಿಯನು-ಸರಿಸರಿಯಾಗಿರುವುದನ್ನು, ತಿದ್ದಿ-ನೇವರಿಸಿಕೊಂಡು, ಒಮ್ಮೆ-ಒಂದುಬಾರಿ, ತುಡುಕುವರು-ತಗಲುವರು, ಬಾಣ-ಕಣೆಗಳೆಂಬ, ಅಂಬುಧಿಯ-ಸಮುದ್ರದ, ತೆರೆಯೊಳು-ಅಲೆಗಳೊಳಗೆ, ಅದ್ದಿ-ಅದ್ದಿದವರಾಗಿ, ಒಮ್ಮೆ-ಒಂದುಬಾರಿ, ಪೊಣರುವರು-ಜಗಳ ಮಾಡುವರು, ಮೂರ್ಛೆಯಂ-ಮೂರ್ಛೆಯಿಂದ, ಮೈಮರೆದು-ಜ್ಞಾನಶೂನ್ಯರಾಗಿ, ಬಿದ್ದು-ಬಿದ್ದುಹೋಗಿ, ಒಮ್ಮೆ-ಒಂದಾವರ್ತಿ, ಚೇತರಿಸಿ-ಪ್ರಜ್ಞೆಯನ್ನು ಪಡೆದು, ಆಹವದೊಳು-ಕಾಳಗದಲ್ಲಿ, ಕಾದುವರು-ಯುದ್ಧಮಾಡುವರು ॥

ಅ॥ ವಿ॥ ಬಾಣಾಂಬುಧಿ-ಬಾಣ-ಕಣೆಗಳ, ಅಂಬುಧಿ-ಸಮುದ್ರವು ॥೨೯॥

ಟೀ॥ ಧೃತ-ಧರಿಸಲ್ಪಟ್ಟ, ಚಾಪ-ಧನುಸ್ಸಿನ, ಚಾಪಲರು-ಚಪಲದಿಂದ ಕೂಡಿರತಕ್ಕವರು, ಶಸ್ತ್ರ-ಕತ್ತಿ ಮೊದಲಾದವುಗಳಲ್ಲಿಯೂ, ಅಸ್ತ್ರ-ಆಗ್ನೇಯಾದಿಗಳಲ್ಲಿಯೂ, ನಿಪುಣರು-ಪಂಡಿತರಾಗಿರುವ, ಉನ್ನತ-ಅಧಿಕವಾದ, ಸತ್ವ-ಸಾಮರ್ಥ್ಯದ, ಸತ್ವರರ್-ರಣಚಾತುರ್ಯದಿಂದೊಡಗೂಡಿರತಕ್ಕ, ದುಸ್ಸಹರು - ತಡೆಯಲಸಾಧ್ಯವಾದವರೂ, ಅಜೇಯರು-ಗೆಲ್ಲಲಸಮರ್ಥರೂ,

ವಾಗುತ್ತ ಇದ್ದವನಾದನು. ಮನ್ಮಥನು ಸಿದ್ಧವಾದ ಹಾಗೆಲ್ಲಾ ಪಾರ್ಥಿಯು ನಾಶಮಾಡುತ್ತಲೇ ಇದ್ದನು, ॥೨೭॥ ಹೀಗಿರುವಲ್ಲಿ ಮೀನಕೇತನನು ಹೊಸ ರಥವೊಂದನ್ನು ನೇರ್ಪಡಿಸಿಕೊಂಡು ಯುದ್ಧಕ್ಕೆ ಬರಲು ಬಭ್ರುವಾಹನನು ಅದನ್ನೂ ಕೂಡ ಕಡಿದು ಹಾಕಲಾಗಿ ಬೇರೊಂದು ರಥವನ್ನಲಂಕರಿಸಿ ಯುದ್ಧಕ್ಕೆ ಬಂದನು. ಮನ್ಮಥನು ಬಂದ ಬಂದ ಹಾಗೆಲ್ಲಾ ಅರ್ಜುನಿಯು ಅವನ ರಥಗಳನ್ನೇ ಮುರಿದು ಕೆಡಹುತ್ತಾ ಇದ್ದನು. ಹೀಗೆ ಎಪ್ಪತ್ತು ರಥಗಳು ಹಾಳಾದವು, ಆಗ ಬಭ್ರುವಾಹನನ ಬಾಣದ ಪೆಟ್ಟುಗಳು ಅಧಿಕವಾಗಲು ಮನ್ಮಥನು ಮೂರ್ಛಿತನಾಗಿ ಪುನಃ ಎಚ್ಚತ್ತು ಪಾರ್ಥಜನಿಗೆ ಎದುರಾದನು ॥ ೨೮ ॥ ಬಭ್ರುವಾಹನ ಮನ್ಮಥರೀರ್ವರೂ ಎದುರಾಳ್ಗಳಾಗಿ ನಿಂತು ಕಾದುತ್ತಲೂ, ಪುಟನೆಗೆದು ಮೇಲೆ ಹಾರಿಹೋಗಿ ಅಂತರಿಕ್ಷದಲ್ಲಿ ಹೋರಾಡುತ್ತಲೂ, ಮತ್ತೆ ಕೆಳಗೆ ದೊಪ್ಪನೆ ಉರುಳಿ ಮೂರ್ಛಿತರಾಗಿ ಚೇತರಿಸಿಕೊಂಡು ಯುದ್ಧಕ್ಕೆ ತಗಲುತ್ತಲೂ, ತಾರುಮಾರಾಗಿಯೂ ಸರಿಸಮನಾಗಿಯೂ ಹೋರಾಡುತ್ತಲೂ, ಬಾಣ ವರ್ಷಂಗಳಿಂದ ಒಬ್ಬರನ್ನೊಬ್ಬರು ಜರಿಯುತ್ತಲೂ ಘೋರತರವಾದ ಯುದ್ಧವಂ ಮಾಡುತ್ತಲಿದ್ದವರಾಗಿ, ॥ ೨೯ ॥ ಧನುರ್ಧಾರಿಗಳಾಗಿಯೂ

ಪ್ರತಿಸಮರಸಮರ್ಥಸಾಹಸಿಗಳೀರ್ವರುಂಗಗನಗಮನದವೀರರು । ಧೃತಿಮಾನಮಾನಸಕುಪಿತಮುಖಕರ್ಕಶ । ವಿತತರಣ ತರಣರತಿಚಂಡಭುಜಬಲಯುತ । ಕೃತಕಾರ್ಷ್ಣಿಕಾರ್ಷ್ಣಿಗಳ್ಕಡುಪಿಂದಕಾದಿದರ್ಬೇಸರದೆಸಂಗರದೊಳು ॥ ೩೦ ॥ ಏಳುವ ಬೀಳುವಮೂದಲೆಯನುಡಿಗಳಂ । ಪೇಳುವಕೇಳುವನಾಂಟಿದಶರಂಗಳಂ । ಕೀಳುವತಾಳುವಘಾಯಮುಂವಿಕ್ರಮಾಗ್ನಿಗೆ ಪಗೆಯೊಡಲಹವಿಯನು ॥ ಬೇಳುವಬಾಳುವವೀರಸಿರಿಯಂತಳೆದು । ಸೀಳುವತೂಳುವಕಣೆಯಿಂದರುಣಜಲದೊ । ಳಾಳುವ ಪೂಳುವಕೋಲ್ಗಳಿಂದಹಿತರಂಪ್ರದ್ಯುಮ್ನಪಾರ್ಥಸುತರು ॥ ೩೧ ॥ ಇಂತೋರ್ವರೋರ್ವರ್ಗೆಸೋಲದೆಸುಪರ್ಣಹನು । ಮಂತರಕದನದಂತೆಧರೆಯೊಳ್ಪೊಣರ್ದುಮೇ । ಣಂತರಿಕ್ಷವನಡರ್ದುಪೆಣಗಿದರ್ಬಳಿಕರೌಕ್ಮಿಣೇಯನಚಾಪದ ॥ ತಂತುವಂ

---

ಅಪ್ರತಿ-ಎದುರಿಲ್ಲದ, ಸಮರ-ಕಾಳಗದಲ್ಲಿ, ಸಮರ್ಥರು-ಸರಿಸಮನಾದ ತೇರಿನಿಂದೊಡಗೂಡಿದರೂ, ಸಾಹಸಿಗಳ್-ಪರಾಕ್ರಮಿಗಳೂ, ಆದ-ಆಗಿರುವ, ಈರ್ವರು-ಮನ್ಮಥ ಬಭ್ರುವಾಹನರು, ಗಗನ-ಆಕಾರದೊಳಗೆ, ಗಮನ-ತಿರುಗುವ, ವೀರರು-ಪರಾಕ್ರಮಿಗಳಾಗಿರತಕ್ಕ, ಧೃತಿ-ಧೀರತೆಯೂ, ಮಾನ-ಮನ್ನಣೆಯೂವುಳ್ಳ, ಕುಪಿತ-ರೋಷದಿಂದಕೂಡಿದ, ಮುಖರು-ಮುಖವುಳ್ಳ, ಕರ್ಕಶರು-ಕ್ರೂರರಾದ, ವಿತತ-ದೊಡ್ಡದಾದ, ರಣ-ಕಾಳಗವನ್ನು, ತರಣರ್-ಅತಿಕ್ರಮಿಸಬಲ್ಲ, ಚಂಡ-ತೀಕ್ಷ್ಣವಾದ, ಭುಜಬಲ-ಬಾಹು ಪರಾಕ್ರಮದಿಂದ, ಯುತರ್-ಕೂಡಿರುವ, ಕೃತ-ಮಾಡಲ್ಪಟ್ಟ, ಕಾರ್ಷ್ಣಿ-ಕೃಷ್ಣ ಸುತನು, ಕಾರ್ಷ್ಣಿಗಳ್-ಅರ್ಜುನಿಯೆನ್ನುವರಾದ, ಪ್ರದ್ಯುಮ್ನಬಭ್ರುವಾಹನರು-ಮನ್ಮಥ ಪಾರ್ಥಿಗಳು, ಬೇಸರದೆ-ಸ್ವಲ್ಪವಾದರೂ ಬೇಜಾರಿಲ್ಲದೆ, ಕಡುಪಿಂದ-ಕ್ರೂರಭಾವದಿಂದ, ಸಂಗರದೊಳು-ಯುದ್ಧದಲ್ಲಿ, ಕಾದಿದರ್-ಹೋರಾಡಿದವರಾದರು ॥

ಅ॥ ವಿ॥ ಶಸ್ತ್ರಾಸ್ತ್ರ-(ಸ. ದೀ.) ॥ ೩೦ ॥

ಟೀ॥ ಪ್ರದ್ಯುಮ್ನ ಪಾರ್ಥಸುತರು-ಮನ್ಮಥ ಬಭ್ರುವಾಹನರು, ಏಳುವರ್-ಮೇಲಕ್ಕೆ ಏಳುವರು, ಬೀಳುವರ್-ಪುನಃ ಕೆಳಗೆ ಬಿದ್ದುಹೋಗುವರು, ಮೂದಲೆಯ-ವೀರಾವೇಶದ, ನುಡಿಗಳಂ-ವಚನಗಳನ್ನು, ಪೇಳುವರು-ಹೇಳುತ್ತಾರೆ, ಕೇಳುವರ್-ಒಬ್ಬರೊಬ್ಬರು ಸಂಭಾಷಿಸುವರು, ನಾಂಟಿದ-ಶರೀರದಲ್ಲಿ ಚುಚ್ಚಿಕೊಂಡಿರುವ, ಶರಂಗಳಂ-ಅಲಗುಗಳನ್ನು, ಕೀಳುವರ್-ಕಿತ್ತುಹಾಕುವರು, ಘಾಯಮಂ-ಹಣ್ಣನ್ನು, ತಾಳುವರ್-ಹೊಂದುವರು, ವಿಕ್ರಮ-ಪರಾಕ್ರಮವೆನ್ನತಕ್ಕ, ಅಗ್ನಿಗೆ-ಬೆಂಕಿಗೆ, ಪಗೆಯ-ವೈರಿಯ, ಒಡಲ-ದೇಹದ, ಹವಿಯನು-ಹವಿಸ್ಸನ್ನು ಬೇಳುವರ್-ಹೋಮಮಾಡುವರು, ವೀರಸಿರಿಯಂ-ವೀರಾ-ಪರಾಕ್ರಮದಿಂದ ಕೂಡಿದ, ಸಿರಿಯ-ಸಂಪತ್ತನ್ನು. ತಳೆದು-ಹೊಂದಿ, ಬಾಳುವರ್-ಜೀವಿಸುವರು, ಸೀಳುವರ್-ಸೀಳಿಹಾಕುವರು, ಕಣೆಯಿಂದ-ಬಾಣದಿಂದ, ತೂಳುವರ್-ಸೂರೆಗೊಂಬರು, ಅರುಣಜಲದೊಳು-ರಕ್ತದಲ್ಲಿ, ಆಳುವರು-ಮುಳುಗಿ ಹೋಗುವರು, ಕೋಲ್ಗಳಿಂದ-ಬಾಣಗಳಿಂದ, ಅಹಿತರಂ-ವೈರಿಗಳನ್ನು, ಪೂಳುವರ್-ಹೊಡೆಯುವರು ॥೩೧॥

ಟೀ॥ ಸುಪರ್ಣಹನುಮಂತರ-ಗರುಡ ಆಂಜನೇಯರ. ಕದನದಂತೆ-ಯುದ್ಧದ ತೆರನಾಗಿ, ಇಂತು-ಈ ತೆರನಾಗಿ, ಓರ್ವರು-ಒಬ್ಬರು, ಓರ್ವರ್ಗೆ-ಮತ್ತೊಬ್ಬರಿಗೆ, ಸೋಲದೆ-ಪರಾಜಯವನ್ನು ಹೊಂದದೆ, ಧರೆಯೋಳ್-ರಣರಂಗದಲ್ಲಿ, (ಭೂಮಿಯಮೇಲೆ) ಪೊಣರ್ದು-ಕಾದಿ, ಮೇಣ್-ಮತ್ತೆ, ಅಂತರಿಕ್ಷವನು-ಆಗಸವನ್ನು, ಅಡರ್ದು-ಏರಿ, ಉರೆ-ಹೆಚ್ಚಾಗಿ, ಪೆಣಗಿದರ್-ಕಾದಾಡಿದರು, ಬಳಿಕ-ಅನಂತರ, ಬಭ್ರುವಾಹನನು, ರೌಕ್ಮಿಣೇಯನ-ರುಕ್ಮಿಣೀ ಸುತನಾದ ಮದನನ, ಚಾಪದ-ಧನುಸ್ಸಿನ, ತಂತುವಂ-ದಾರವನ್ನು, ಕತ್ತರಿಸಿ-ಕಡಿದುಹಾಕಲಾಗಿ, ಗದೆಯಂ-ಗದಾದಂಡವನ್ನು, ತೆಗೆದು-ಕೈಕೊಂಡು, ಅರ್ಜುನಿಯಮೇಲೆ-ಬಭ್ರುವಾಹನನಮೇಲೆ,ಇಡಲ್ಕೆ-ಹಾಕಲು,ಅವನು-ಆ ಅರ್ಜುನಿಯು, ಅದಂ-ಆ ಗದೆಯನ್ನು,ನಡುವೆ-ಮಧ್ಯದಲ್ಲಿಯೆ,ಕಡಿಗೈಯಲು-

---

ಶಸ್ತ್ರಾಸ್ತ್ರಸುಕಲಾಕೋವಿದರೂ, ಮಹಾ ಸತ್ವಸಂಪನ್ನರೂ, ಜಯಿಸಲತಕ್ಕರೂ, ಅಪ್ರತಿಹತಪರಾಕ್ರಮದಿಂದ ರಾರಾಜಿಸತಕ್ಕವರೂ, ಆಕಾಶ ಮಾರ್ಗದಲ್ಲಿಯೇ ನಿಂತು ಯುದ್ಧಮಾಡತಕ್ಕವರೂ, ಕ್ರೂರತರವಾದ ಮುಖಗಳುಳ್ಳವರೂ ಆಗಿ ಸ್ವಲ್ಪವಾದರೂ ಬೇಸರವಿಲ್ಲದೆ ಮಹಾ ರೋಷದಿಂದ ಯುದ್ಧವಂ ಮಾಡುತ್ತ, ॥ ೩೦ ॥ ಇದ್ದಕ್ಕಿದ್ದ ಹಾಗೆಯೇ ಥಟ್ಟನೆ ಮೇಲಕ್ಕೆ ನೆಗೆದು ಅಂತರಿಕ್ಷವನ್ನು ಸೇರಿ ಪುನಃ ಅಲ್ಲಿಂದ ಕೆಳಗೆ ಬಿದ್ದು ಒಬ್ಬರನ್ನೊಬ್ಬರು ರೋಷಾವೇಷದಿಂದ ಹೀಯಾಳಿಸುತ್ತಾ, ಬಾಣ ವರ್ಷದಿಂದ ತಮ್ಮ ತಮ್ಮೊಳಗೆ ನಾಟಿಕೊಂಡಿರತಕ್ಕ ಕೂರ್ಗಣೆಗಳನ್ನು ಕಿತ್ತು ಬಿಸುಡುತ್ತಲೂ, ಘಾಯವನ್ನು ಸಹಿಸಿಕೊಂಡು ಪರಾಕ್ರಮವೆನ್ನುವ ಬೆಂಕಿಗೆ ಶತ್ರುಗಳ ಶರೀರವೆನ್ನತಕ್ಕ ಹವಿಸ್ಸಿನಿಂದ ತೃಪ್ತಿಗೊಳಿಸುತ್ತ, ಶತ್ರುಗಳನ್ನು ಬಾಣ ಸಮುದಾಯದಿಂದ ಸವರುತ್ತಲಿದ್ದರು ॥ ೩೧ ॥ ಒಬ್ಬರು ಮತ್ತೊಬ್ಬರಿಗೆ ಸೋಲದೆ ಈ ತೆರನಾಗಿ ಘೋರ ಯುದ್ಧವಂಗೈದು ಗರುಡ ಹನುಮಂತರ ಕಾಳಗವನ್ನೂ ಕೂಡ ಅಲಗಳೆಯುತ್ತ ನೆಲದಮೇಲೂ ಆಗಸದಲ್ಲಿಯೂ ಸಹ ಬಹು ಪರಾಕ್ರಮದಿಂದ ಕಾದಾಡುತ್ತಲಿದ್ದವರಾದರು, ಬಳಿಕ ಬಭ್ರುವಾಹನನು ರುಕ್ಮಿಣೀ ಸುತನ ಧನುಸ್ಸಿನ ದಾರವನ್ನು ಕತ್ತರಿಸಲಾಗಿ

ಕತ್ತರಿಸಲರ್ಜುನಿಯುಮೇಲೆಗದೆ | ಯಂತೆಗದಿಡಲ್ಕವನದಂನಡುವೆಕಡಿಗಯ್ಯ | ಲೆಂತೊದಗಿದನೊಮತ್ತೆಚಲ್ವಿಡಿದುಹರಿಸೂನು ಪಾರ್ಥಿಯಂತೆಗೆದೆಚ್ಚನು ||೩೨|| ಪೊಡವಿಕಧಿನಾಥಕೇಳ್ಬಳಿಕೀರ್ವರುಂಗಗನ | ಕಡರಿನಿಜಸತ್ವದಿಂದನ್ಯೋನ್ಯಮಾರ್ದೆಸ | ಲ್ಸಿಡಿಲರಭಸದೊಳಂಬುಗಳ್ತಾಗಲುಭಯವೀರರ್ಕ್ರೋಶಮಾತ್ರಕಾಗಿ || ಸಿಡಿದಂತರಿಕ್ಷದಿಂಧಾರುಣೀತಳಕೆಪೊಡೆ | ಗೆಡೆದರಾಕ್ಷಣದೋಳ್ಪುರಂದರನವಜ್ರದಿಂ| ಕಡಿವಡೆದುಮೇದಿನಿಗೆಬೀಳ್ವಕುಲಗಿರಿಗಳಂತೊಬ್ಬೊಬ್ಬರೊಂದುಕಡೆಗೆ ||೩೩|| ಸಾಹಸಮದೆಂತೊಭೂತಳಕೆಬೀಳುತಬಭ್ರು | ವಾಹನಂತರಹರಿಸುತೆಚ್ಚರಿಕೆಗುಂದದೆಮ | ಹಾಹವಕೆಬೇರೊಂದುಮಣಿವರೂಥವನಡರ್ದಾಗತನ್ನಭಿಮುಖದೊಳು || ಆಹರಿಕುಮಾರನಂಕಾಣದೆಧನಂಜಯನ | ಮೋಹರಂವನ್ಯೆದಿದಂಪಸಿದಪೆರ್ಬುಲಿಮೃಗಸ | ಮೂಹಮುಂಪೊಗುವಂತೆಕಾಡಾನೆಕದಳಿಗಳತರುಗಳಂತುಡುಕುವಂತೆ || ೩೪ || ಕವಿದರಾಂತರ್ನಿಂದರುರುಬಿದರ್ತ್ತರುಬಿದ | ರ್ತ್ತಿವಿದರೆಚ್ಚರ್ಬ್ರೊಯ್ದು

ಕತ್ತರಿಸಿ ಬಿಡಲು,ಎಂತು_ಹೇಗೆ, ಒದಗಿದನೊ-ಅನುವಾದನೊ,ಮತ್ತೆ_ಪುನಃ, ಹರಿಸೂನು-ಕೃಷ್ಣಸುತನಾದ ಪ್ರದ್ಯುಮ್ನನು,ಬಿಲ್ವಿಡಿದು_ಧನುರ್ಧಾರಿಯಾಗಿ, ತೆಗೆದು-ಆಕರ್ಣಾಂತವಾಗಿಸೆಳೆದು, ಪಾರ್ಥಿಯಂ_ಅರ್ಜುನಿಯನ್ನು,ಎಚ್ಚನು_ಹೊಡದವನಾದನು||೩೨||

ಟೀ|| ಪೊಡವಿಗೆ_ಭೂಮಂಡಲಕ್ಕೆ, ಅಧಿನಾಥ_ಒಡೆಯನಾದ ಜನಮೇಜಯನೆ, ಕೇಳ್-ಲಾಲಿಸು, ಬಳಿಕ - ಆಮೇಲೆ, ಈರ್ವರುಂ - ಮನ್ಮಥಾರ್ಜುನಿಗಳಿಬ್ಬರೂ, ಗಗನಕೆ - ಅಂತರಿಕ್ಷಕ್ಕೆ, ಅಡರಿ_ಏರಿದವರಾಗಿ, ನಿಜಸತ್ವದಿಂದ - ಸ್ವಕೀಯವಾದ ಸಾಮರ್ಥ್ಯದಿಂದ, ಅನ್ಯೋನ್ಯಂ_ಪರಸ್ಪರವಾಗಿ, ಆರ್ದು-ಹೋರಾಡಿ, ಎಸಲ್-ಬಾಣಪ್ರಯೋಗವನ್ನು ಮಾಡಲು, ಅಂಬುಗಳು_ಕೋಲ್ಗಳಾದರೊ, ಸಿಡಿಲರಭಸದೊಳು-ಸಿಡಿಲಿನ ವೇಗದಂತೆ, ತಾಗಲು-ತಗಲಿಕೊಳ್ಳಲಾಗಿ, ಉಭಯವೀರರ್ - ಶೂರರಿಬ್ಬರೂ, ಕ್ರೋಶಮಾತ್ರಕಾಗಿ_ಹರದಾರಿಯ ದೂರದಲ್ಲಿ, ಅಂತರಿಕ್ಷದಿಂ-ಆಗಸದಿಂದ, ಧಾರುಣೀತಳಕೆ - ಭೂಮಂಡಲಕ್ಕೆ, ಸಿಡಿದು_ಹಾರಿ, ಪುರಂದರನ_ದೇವೇಂದ್ರನ, ವಜ್ರದಿಂ - ವಜ್ರಾಯುಧದಿಂದ, ಕಡಿವಡೆದು - ತುಂಡುತುಂಡಾಗಿ, ಮೇದಿನಿಗೆ-ಭೂಮಿಯ ಮೇಲೆ, ಬೀಳ್ವ-ಬೀಳತಕ್ಕ, ಕುಲಗಿರಿಗಳಂತೆ_ಸಪ್ತಕುಲಪರ್ವತಗಳ ತೆರದಿಂದ, ಒಬ್ಬೊಬ್ಬರು - ಪ್ರತ್ಯೇಕವಾಗಿ, ಒಂದುಕಡೆಗೆ_ಒಂದೊಂದು ಪ್ರದೇಶಕ್ಕೆ, ಪೊಡೆಗೆಡೆದರು_ಬಿದ್ದು ಹೋದವರಾದರು.

ಅ|| ವಿ|| ಪೊಡವಿ (ತ್ಭ) ಪೃಥ್ವಿ (ತ್ಸ) ಕುಲಗಿರಿಗಳು - ಹಿಮವತ್ಪರ್ವತ, ನಿಷಧ, ವಿಂಧ್ಯ, ಮಾಲ್ಯವಂತ, ಪಾರಿಯಾತ್ರಕ, ಗಂಧಮಾದನ, ಚಿತ್ರಕೂಟಪರ್ವತ ||೩೩||

ಟೀ|| ಸಾಹಸಂ_ಸಾಮರ್ಥ್ಯವು, ಅದೆಂತೊ_ಇನ್ನು ಎಂಥಾದ್ದೊ. ಬಭ್ರುವಾಹನಂ - ಅರ್ಜುನಿಯು, ಭೂತಳಕೆ-ನೆಲದಮೇಲೆ, ಬೀಳುತ-ಬಿದ್ದುಹೋಗುತ್ತ, ಎಚ್ಚರಿಕೆಗುಂದದೆ_ಮೈಮರೆಯದವನಾಗಿ, ಮಹಾಹವಕೆ_ದೊಡ್ಡಯುದ್ಧಕ್ಕೆ, ತರಹರಿಸುತ_ಆತುರಪಡುತ್ತ, ಬೇರೊಂದು_ಮತ್ತೊಂದು, ಮಣಿವರೂಥವನು_ರತ್ನಖಚಿತವಾದ ತೇರನ್ನು, ಅಡರ್ದು_ಏರಿ, ಆಗ_ಆ ಕಾಲದಲ್ಲಿ, ತನ್ನಭಿಮುಖದೊಳು_ತನಗಿದಿರಾಗಿ, ಆಹರಿಕುಮಾರನಂಕಾಣದೆ - ಆ ಮನ್ಮಥನನ್ನು ನೋಡದೆ, ಪಸಿದು_ಹಸಿವಿನಿಂದ ಕೂಡಿದ, ಪೆರ್ಬುಲಿ-ದೊಡ್ಡ ಹುಲಿಯು, ಮೃಗಸಮೂಹಮುಂ_ಜಿಂಕೆ ಮೊದಲಾದ ಮೃಗರಾಶಿಯನ್ನು, ಪೊಗುವಂತೆ_ಹೋಗಿ ಸೇರುವಂತೆಯೂ, ಕಾಡಾನೆ_ಕಾಡಿನಲ್ಲಿ ತಿರುಗುವ ಗಜಗಳು, ಕದಳಿಗಳತರುಗಳಂ_ಬಾಳೆಯ ಮರಗಳನ್ನು,ತುಡುಕುವಂತೆ_ಧ್ವಂಸಮಾಡುವಂತೆಯೂ, ಧನಂಜಯನ_ಪಾರ್ಥನ, ಮೋಹರವನು-ಸೇನೆಯಕಡಲನ್ನು, ಐದಿದಂ_ಹೋಗಿ ಸೇರಿದನು.

ಅ|| ವಿ|| ಮಹಾಹವ (ಸ. ದೀ.) ಮಣಿವರೂಥ (ವಿ. ಪೂ.) ಪೊಗುವಂತೆ "ಪುಗು" ಧಾತುವಿನಿಂದುಂಟಾದ ತದ್ಧಿತಾಂತಾನ್ವಯವು, ಪೇರ್ಬುಲಿ+ಪಿರಿದು=ಪುಲಿ (ವಿ. ಪೂ ) ||೩೪||

ಪ್ರದ್ಯುಮ್ನನು ತೋರಗದೆಯೊಂದನ್ನು ಕೈಕೊಂಡು ಬಭ್ರುವಾಹನನ್ನು ಹೊಡೆಯಲು ಅವನು ಆ ಗದಾದಂಡವನ್ನು ಕೂಡ ಎರಡು ಭಾಗವಾಗಿ ಕತ್ತರಿಸಿಬಿಟ್ಟನು. ಪ್ರದ್ಯುಮ್ನನಾದರೊ ಪುನಃ ಧನುಸ್ಸಿಗೆ ಬಾಣವನ್ನು ಹೂಡಿ ಅರ್ಜುನಿಯ ಮೇಲೆ ಶರವರ್ಷವನ್ನು ಕರೆದವನಾದನು ||೩೨|| ಕೇಳೈ ಜನಮೇಜಯ ಧರಾವಲ್ಲಭನೆ, ಅನಂತರದಲ್ಲಿ ಬಭ್ರುವಾಹನ ಮನ್ಮಥರೀರ್ವರೂ ಅಂತರಿಕ್ಷಮಾರ್ಗವನ್ನು ಸೇರಿ ಘೋರಯುದ್ಧಮಂಗೈದು ಸಿಡಿಲಿನ ವೇಗವನ್ನೂ ಕೂಡ ನಿರಾಕರಿಸತಕ್ಕ ನಿಶಿತಾಸ್ತ್ರಂಗಳನ್ನು ಪ್ರಯೋಗಿಸುತ್ತಾ, ದೇವೇಂದ್ರನ ವಜ್ರಾಯುಧದ ಪೆಟ್ಟಿನಿಂದ ಭೂಮಿಗೆ ಬಂದು ಬೀಳುವ ಕುಲಾಚಲಂಗಳೋ ಎಂಬಂತೆ ಆಗಸದಿಂದ ಭೂತಳಕ್ಕೆ ಪುನಃ ಒಬ್ಬೊಬ್ಬರು ಒಂದೊಂದು ಕಡೆಗೆ ಬಿದ್ದುಬಿಡುತ್ತಲಿದ್ದರು ||೩೩|| ಹೀಗೆ ಬಿದ್ದು ಹೋದರೂ ಕೂಡ ಸ್ವಲ್ಪವಾದರೂ ಆಯಸಂದಾಳದೆ ಸುವರ್ಣಚಿತವಾಗಿಯೂ, ರತ್ನವಿಚಿತ್ರವಾಗಿಯೂ ಇರುವ ತೇರನ್ನೇರಿ, ಹಸಿವಿನಿಂದ ಕೂಡಿದ ಹುಲಿಯು ಮೃಗಸಮೂಹವನ್ನು ಹೋಗುವಂತೆಯೂ, ಕಾಡಾನೆಗಳು ಬಾಳೆಯ ಮರಗಳನ್ನು ಕೆಡಹಲು ನುಗ್ಗುವತೆರನಾಗಿಯೂ ಬಭ್ರುವಾಹನನು ಅರ್ಜುನನ ಸೇನಾಸಾಗರನನ್ನು ಸೇರಿದವನಾದನು || ೩೪ || ಈ ಬಭ್ರುವಾಹನನ್ನು ಅರ್ಜುನನ ಸೈನ್ಯದ ವೀರರು

ನಿಂತ್ತುದಲ್ಕಿತ್ತುದ | ರ್ವಿವಿಧಾಯುಧಂಗಳಂಬೀರಿದರ್ಮೀರಿದರ್ವಿಗ್ರಹಾವೇಶದಿಂದ| ತವೆತಾಗಿದರ್ತಡದರಡರಿದರ್ತೊಡರಿದ| ರ್ತವ
ಕದಿಂತಮತಮಗೆಕಾದಿದರ್ಬೊಡೆದಿದ| ರ್ಬವರದೊಳ್ಪಾರ್ಥಿಯಂ ಬಳಸಿದರ್ಸೆಳಸಿದರ್ನರನಸೇನೆಯಸುಭಟರು ||೩೫|| ಒತ್ತರಿಸಿಫಲುಗು
ಣನಸೂನುವಂಭಾನುವಂ | ಮುತ್ತಿದುದುಚಾತುರಂಗಾಳಿಯಿಂಧೂಳಿಯಿಂ | ಚಿತ್ತರದಮಣಿಪುರಸ್ವಾಮಿಯಂ ಭೂಮಿಯಂಸಲೆ
ಮುಸುಕಿತಾಕ್ಷಣದೊಳು || ಮೊತ್ತದಶರಾವಳಿಯಸೋನೆಯಿಂಸೇನೆಯಿಂ | ಮತ್ತೆಚಿತ್ರಾಂಗದೆಯಜಾತನಂಧಾತನಂ |
ಹತ್ತಿಹರಿದುದುಬಲಮಶೇಷಮುಂಘೋಷಮುಂಘೋರತರಸಂಗರದೊಳು ||೩೬|| ರಿಪುಬಲದಮುತ್ತಿಗೆಯಕೋಲಾಹಲಂಗಳಂ
ವಿಪುಳಶಸ್ತ್ರಾಸ್ತ್ರಪ್ರಯೋಗಂಗಳುರುಬೆಯಂ | ಸಪದಿಪ್ರಹಾರದಾಯುಧಸಮೂಹಂಗಳಂ ಕಂಡುಫಲುಗುಣನಸೂನು || ಕುಪಿತ
ಬದ್ಧಭ್ರುಕುಟಿಮುಖನಾಗಿವಹಿಲದಿಂ | ದ್ವಿಪಹಯವರೂಥಪತ್ತಿಗಳೆನಿತುಕವಿದವನಿ | ತಪರಿಮಿತಬಾಣಮಂಸುರಿದನರಿದಂ

---

ಟೀ|| ನರನ-ಅರ್ಜುನನ, ಸೇನೆಯ-ದಂಡಿನಲ್ಲಿರತಕ್ಕ, ಸುಭಟರು-ವೀರಾಗ್ರಣಿಗಳು, ಕವಿದರು-ಮುತ್ತಿಕೊಂಡರು, ಆಂತರ್-ತಾಳಿದವರಾದರು, ನಿಂದರು-ನಿಂತುಬಿಟ್ಟರು, ತುರುಬಿದರು - ಒತ್ತಾಗಿ ಸೇರಿದರು, ತರುಬಿದರ್ - ಓಡಿಸಿದರು, ತಿವಿದರು-ಚುಚ್ಚಿದರು, ಪೊಯ್ದರ್-ಹೊಡೆದವರಾದರು, ಒತ್ತಿದರ್-ಒತ್ತಾಗಿ ಸೇರಿದರು, ಮುತ್ತಿದರ್-ಸುತ್ತಲೂ ಸೇರಿಕೊಂಡರು, ವಿವಿಧಾಯುಧಂಗಳಂ - ನಾನಾಪ್ರಕಾರವಾದ, ಶಸ್ತ್ರಂಗಳನ್ನು, ಬೀರಿದರ್-ಎಸೆದರು, ವಿಗ್ರಹ-ಯುದ್ಧಸಂಬಂಧವಾದ, ಆವೇಶದಿಂದ-ರೋಷದಿಂದ, ಮೀರಿದರು-ಅಧಿಕರಾದರು, ತವೆ-ಅತಿಶಯವಾಗಿ, ತಾಗಿದರ್ - ಹೋರಾಡಿದರು, ತಡದರ್ - ಅಡ್ಡಗಿಸಿದರು, ಅಡರಿದರ್-ಮುತ್ತಿಕೊಂಡರು, ತವಕದಿಂ-ಆತುರದಿಂದ, ತೊಡರಿದರ್-ಸೇರಿದವರಾದರು, ತಮತಮಗೆ-ಪರಸ್ಪರವಾಗಿ, ಕಾದಿದರು-ಯುದ್ಧಮಾಡಿದರು, ಬವರದೊಳ್-ಯುದ್ಧದಲ್ಲಿ, ಮೋದಿದರ್-ಆಸಕ್ತಿಯುಳ್ಳವರಾದರು, ಪಾರ್ಥಿಯಂ-ಅರ್ಜುನಿಯನ್ನು, ಬಳಸಿದರ್-ಮುತ್ತಿಕೊಂಡರು, ಸೆಳಸಿದರ್-ಯುದ್ಧಕ್ಕೆ ಕರೆದವರಾದರು. ||೩೫||

ಟೀ|| ಫಲುಗುಣನ-ಪಾರ್ಥನ, ಸೂನುವಂ-ಮಗನಾದ ಬಭ್ರುವಾಹನನನ್ನೂ, ಭಾನುವಂ - ಸೂರ್ಯನನ್ನೂ, ಚಾತುರಂಗಾಳಿಯಿಂ-ಚತುರಂಗಬಲ ಸಮುದಾಯದಿಂದಲೂ, ಧೂಳಿಯಿಂ-ಧೂಳಿನಿಂದಲೂ, ಒತ್ತರಿಸಿ-ಒಟ್ಟುಗೂಡಿಸಿ, ಮುತ್ತಿದುದು-ಕವಿದುಕೊಂಡಿತು, ಚಿತ್ತರದ-ಚಿತ್ರವಿಚಿತ್ರವಾದ, ಮಣಿಪುರ-ಮಣಿಪುರಕ್ಕೆ, ಸ್ವಾಮಿಯಂ-ಒಡೆಯನಾದ ಪಾರ್ಥಜನನ್ನು, ಭೂಮಿಯಂ-ಇಳೆಯನ್ನು, ಸಲೆ-ಚೆನ್ನಾಗಿ, ಮುಸುಕಿತು-ಆವರಿಸಿಕೊಂಡಿತು, ಮೊತ್ತದ-ಅಧಿಕವಾದ, ಶರಾವಳಿಯ-ಬಾಣಸಮುದಾಯದ,ಸೋನೆಯಿಂ-ಸೇನೆಯಿಂದಲೂ,ಮತ್ತೆ-ಪುನಃ,ಚಿತ್ರಾಂಗದೆಯ-ಚಿತ್ರಾಂಗದೆಎಂಬ ಅರ್ಜುನನ ಹೆಂಡತಿಯ,ಜಾತನಂ-ಮಗನಾದ ಬಭ್ರುವಾಹನನನ್ನೂ,ಧಾತನಂ-ಧೀರನನ್ನೂ,ಅಶೇಷಮಂ-ಸಮಸ್ತವಾದ,ಬಲಂ-ಸೈನ್ಯವನ್ನೂ. ಘೋಷಮುಂ-ಧ್ವನಿಯನ್ನೂ, ಘೋರತರ-ಅತ್ಯಂತ ಭಯಂಕರವಾದ, ಸಂಗರದೊಳು-ಯುದ್ಧದಲ್ಲಿ, ಹತ್ತಿಹರಿದುದು-ಬಹು ಹೆಚ್ಚಾಗುವಂತೆ ಮಾಡಿತು ||೩೬||

ಟೀ|| ರಿಪುಬಲದ-ಶತ್ರುಗಳ ಪಡೆಯ, ಮುತ್ತಿಗೆಯ-ಕವಿದುಕೊಳ್ಳುವುದರ, ಕೋಲಾಹಲಂಗಳಂ - ಕೋಲಾಹಲ ಧ್ವನಿಗಳನ್ನೂ, ವಿಪುಳ-ಹೆಚ್ಚಾದ, ಶಸ್ತ್ರ-ಕತ್ತಿ, ಈಟಿ ಮೊದಲಾದವುಗಳ, ಅಸ್ತ್ರ-ಆಗ್ನೇಯಾದಿಗಳ, ಪ್ರಯೋಗಂಗಳ-ಬಿಡುವುದರ, ಉರುಬೆಯಂ-ವೇಗವನ್ನೂ, ಸಪದಿ-ಸೇನೆಯ, ಪ್ರಹಾರದ-ಹೊಡೆಯುವುದರ, ಆಯುಧ ಸಮೂಹಂಗಳಂ-ಆಯುಧಗಳ ಸಮುದಾಯವನ್ನೂ, ಫಲುಗುಣನ-ಅರ್ಜುನನ, ಸೂನು-ಮಗನಾದ ಬಭ್ರುವಾಹನನು, ಕಂಡು-ನೋಡಿ, ಕುಪಿತ-ಕೋಪದಿಂದ, ಬದ್ಧ-ಕೂಡಿದ, ಭ್ರುಕುಟಿ-ಕಣ್ಣುಬ್ಬುಗಳುಳ್ಳ, ಮುಖನಾಗಿ-ಮೋರೆಯುಳ್ಳವನಾಗಿ, ವಹಿಲದಿಂ - ಬೇಗನೆ, ದ್ವಿಪ - ಆನೆಗಳು, ಹಯ-ಕುದುರೆಗಳು, ವರೂಥ-ತೇರುಗಳು, ಪತ್ತಿಗಳು-ಪದಾತಿಗಳು, ಎನಿತು-ಎಷ್ಟು, ಕವಿದವು-ಸುತ್ತಿಕೊಂಡವೊ, ಅನಿತು-ಅಷ್ಟನ್ನು, ಅಪರಿಮಿತಬಾಣಮಂ-ಅಸಂಖ್ಯಾತವಾದ ಬಾಣಗಳನ್ನು, ಸುರಿದಂ-ಸುರಿಸಿದನು, ಅರಿದನು-ಸೀಳಿಹಾಕಿದನು, ಅಂತಕ

---

ನೋಡಿ ರೋಷಾವೇಶದಿಂದ ಎಲ್ಲೆಲ್ಲಿಯೂ ಮುತ್ತಿಕೊಂಡು, ತಿವಿದು, ಬಡಿದು, ಬಾಣಗಳಿಂದ ನೋಯಿಸಿ, ಆಯುಧಗಳಿಂದ ಹೊಡೆದು ಮುಂದೆ ಹೋಗದಂತೆ ಅಡ್ಡಗಿಸಿ ತೆರತೆರನಾಗಿ ಹಿಂಸಿಸುತ್ತಲಿದ್ದವರಾದರು||೩೫|| ಅರ್ಜುನನ ಚತುರಂಗಬಲವೂ ಬಭ್ರುವಾಹನನನ್ನು ಮುಸುಕಿದ ಹೆಚ್ಚಾದ ರಭಸದಿಂದುಂಟಾದ ಧೂಳು ಸೂರ್ಯಮಂಡಲವನ್ನು ವ್ಯಾಪಿಸಿಕೊಂಡಿತು. ಮಣಿಪುರಕ್ಕೊಡೆಯನಾದ ಪಾರ್ಥಜನನ್ನು ಶರವರ್ಷದಿಂದ ತುಂಬಿಸಿದ್ದಲ್ಲದೆ ಪಾರ್ಥನ ಸಕಲ ಸೇನೆಯೂ ಅರ್ಜುನಿಯನ್ನು ಎಡೆಬಿಡದೆ ಕವಿದುಕೊಂಡಿತು ||೩೬|| ಈ ಬಗೆಯಾಗಿ ಅರ್ಜುನನ ಸೈನ್ಯದ ಸುಭಟರು ತನ್ನನ್ನು ಕವಿದುಕೊಂಡು ಕಲಕಲ ಧ್ವನಿಯನ್ನು ಮಾಡುತ್ತಲಿರುವುದನ್ನೂ ಅನೇಕ ಅಸ್ತ್ರಶಸ್ತ್ರಂಗಳನ್ನು ಪ್ರಯೋಗಿಸುವುದನ್ನೂ, ಆಯುಧ ಸಮೂಹದಿಂದ ಹೊಡೆಹೊಡೆದು ಚೀರುತ್ತಲಿರುವುದನ್ನೂ ಪಾರ್ಥಜನು ನೋಡಿ ಕೋಪಾವೇಶದಿಂದ ಕಣ್ಣುಬ್ಬುಗಳನ್ನು ಗಂಟಿಕ್ಕಿದವನಾಗಿ ತನ್ನನ್ನು ಆನೆ ಕುದುರೆ ರಥಗಳು ಎಷ್ಟು ಬಂದು ಕವಿದರೂ ಕೂಡ ದಿವ್ಯಾಸ್ತ್ರಂಗಳನೇಕಂಗಳಿಂದ ವೈರಿಗಳ ಚತುರಂಗಬಲವನ್ನೂ ಕತ್ತರಿಸಿ ಯಮನ ಸಂಯಮನೀಪುರಿಯ ಸಂಪತ್ತನ್ನು ಹೆಚ್ಚಿ

ಪೊರೆದನಂತಕಪುರದಸಿರಿಯನು || ೩೭ || ಅರಸಕೇಳಾಶ್ಚರ್ಯಮಂಬಳಿಕಪಾರ್ಥಜನ | ಶರವರ್ಷದೊಳ್ನೆನೆಯದವರಿಲ್ಲಪಾಂಡವನ | ಪರಿವಾರದೊಳ್ಕರಿತುರಗರಥದಪಾಳೆಯದೊಳಿರ್ದಜನಜಂಗುಳಿಯೊಳು || ಅರರೆಬಿಲ್ಲಾಣ್ಮರತನದೇಳ್ಗೆಯೆಂತುಟೊಜಗ | ದ್ಭರಿತನಾಗಿಹವಿಷ್ಣುಮಾಯಾಪ್ರಭಾವದಂ | ತಿರೆಬಭ್ರುವಾಹನನಬಾಣಂಗಳೆಲ್ಲರಂಮುಸುಕಿಮೋಹಿಸುತಿರ್ದವು || ೩೮ || ರಂಭಾದಿಗಳಕುಚಕುಂಕುಮದೊಳಾಳ್ದಿಹಾ | ಜಂಭಾರಿಯಂಕದೊಳ್ಮಡಿದವೀರಾಂಗಪರಿ | ರಂಭಾತಿಶಯದಸಂಮರ್ದನದೊಳಾಕ್ಷಣಂಪರಿದುಸೂಸುವತೆರದೊಳು || ಕುಂಭಿಕುಂಭದಸುಮುಕ್ತಾಫಲಂಗಳ್ಶಾತ | ಕುಂಭಚಿತ್ರಿತಮಾರ್ಗಣದರುಚಿಗಳೊಡನೆರಣ | ಕುಂಭಿನಿಗೆಬೀಳುತಿರ್ದವುಬಭ್ರುವಾಹನನತೀವ್ರತರದೆಸುಗೆಯಿಂದ || ೩೯ || ಮುರಿದವಗಣಿತರಥದರಾಜಿಗಳ್ತೇ

---

ಪುರದ-ಯಮಪಟ್ಟಣದ, ಸಿರಿಯನು-ಸಂಪತ್ತನ್ನು, ಪೊರೆದಂ-ಪಾಲಿಸಿದನು || ೩೭ ||

ಟೀ|| ಅರಸ-ಎಲೈ ಜನಮೇಜಯನೆ, ಕೇಳು-ಲಾಲಿಸು, ಬಳಿಕ-ಅನಂತರ, ಪಾರ್ಥಜನ-ಬಭ್ರುವಾಹನನ, ಶರವರ್ಷದೊಳ್-ಬಾಣಗಳ ಮಳೆಯಲ್ಲಿ, ನೆನೆಯದವರಿಲ್ಲ-ನೆನೆದು ಹೋಗದಿರುವರೇ ಇಲ್ಲವು, ಪಾಂಡವನ-ಪಾಂಡುತನಯನಾದ ಅರ್ಜುನನ, ಪರಿವಾರದೊಳ್-ಸೇನೆಯಲ್ಲಿ, ಕರಿ-ಆನೆಗಳಿಂದಲೂ, ತುರಗ-ಕುದುರೆಗಳಿಂದಲೂ, ರಥ-ತೇರುಗಳಿಂದಲೂ ಕೂಡಿದ, ಪಾಳಯದೊಳು-ಸೇನಾನಿವಾಸದೆಡೆಯಲ್ಲಿ, ಇರ್ದ-ಇದ್ದಂಥ, ಜನಜಂಗುಳಿಯೊಳು-ಜನಗಳ ಸಮುದಾಯದಲ್ಲಿ, ಅರರೆ-ಆಶ್ಚರ್ಯ ಆಶ್ಚರ್ಯವು, ಬಿಲ್ಲಾಣ್ಮರತನದ-ಧನುಸ್ಸಿನ ಸಾಹಸದ, ಏಳ್ಗೆ-ಅಭಿವೃದ್ಧಿಯು, ಎಂತುಟೊ-ಇನ್ನೆಂಥಾದ್ದೊ, ಜಗತ್-ಲೋಕಗಳನ್ನೆಲ್ಲಾ, ಭರಿತನಾಗಿ-ತುಂಬಿದವನಾಗಿ, ಇಹ-ಇರತಕ್ಕ, ವಿಷ್ಣು-ಶ್ರೀ ಮಹಾವಿಷ್ಣುವಿನ, ಮಾಯಾ-ಮಾಯೆಯಿಂದ ಕೂಡಿದ, ಪ್ರಭಾವದಂತೆ-ಮಹಿಮೆಯ ಹಾಗೆ, ಇರೆ-ಇರಲು, ಬಭ್ರುವಾಹನನ-ಪಾರ್ಥಜನ, ಬಾಣಂಗಳು- ಅಲಗುಗಳು, ಎಲ್ಲರಂ-ಸಕಲರನ್ನೂ, ಮುಸುಕಿ-ಮುತ್ತಿಕೊಂಡು, ಮೋಹಿಸುತಿರ್ದವು-ಮೂರ್ಛೆಗೊಳಿಸುತ್ತಲಿದ್ದವು ||

ಅ|| ವಿ|| ಪಾರ್ಥಜ-ಪಾರ್ಥ-ಅರ್ಜುನನಿಂದ, ಜ-ಹುಟ್ಟಿದವನು (ಬಭ್ರುವಾಹನನು)||೩೮||

ಟೀ|| ರಂಭಾದಿಗಳ-ರಂಭೆಯೇ ಮೊದಲಾದ ಅಪ್ಸರ ಸ್ತ್ರೀಯರ, ಕುಚ-ಸ್ತನಗಳ, ಕುಂಕುಮದೊಳ್-ಕುಂಕುಮದಲ್ಲಿ, ಆಳ್ದಿಹ-ಮುಳುಗಿರತಕ್ಕ, ಆಜಂಭಾರಿಯ-ಆ ದೇವೇಂದ್ರನ, ಅಂಕದೊಳ್-ತೊಡೆಯಮೇಲೆ, ಮಡಿದ-ಸತ್ತುಹೋದ, ವೀರ-ಶೂರರ, ಅಂಗ-ಅವಯವಂಗಳ, ಪರಿರಂಭಾತಿಶಯದ-ಕ್ರೀಡಾತಿಶಯದ, ಸಂಮರ್ದನದೊಳು-ಒತ್ತುವಿಕೆಯಿಂದ, ಆಕ್ಷಣಂ-ಆಗಲೆ, ಪರಿದು-ಕಿತ್ತುಹೋಗಿ, ಸೂಸುವ-ಎರಚಾಡುವ, ತೆರದೊಳು-ರೀತಿಯಿಂದ, ಕುಂಭಿ-ಆನೆಗಳ, ಕುಂಭದ-ಕುಂಭಸ್ಥಳವಲ್ಲಿರುವ, ಸು-ಒಳ್ಳೆ, ಮುಕ್ತಾಫಲಂಗಳ್-ಆಣಿಮುತ್ತುಗಳು, ಶಾತಕುಂಭ-ಸುವರ್ಣದಿಂದ, ಚಿತ್ರಿತ-ಕೆತ್ತಲ್ಪಟ್ಟ (ಚಿತ್ರಿಸಲ್ಪಟ್ಟ) ಮಾರ್ಗಣದ-ಬಾಣದ, ರುಚಿಗಳೊಡನೆ-ಕಾಂತಿಗಳೊಂದಿಗೆ, ಬಭ್ರುವಾಹನನ-ಅರ್ಜುನಿಯ, ತೀವ್ರತರ-ಬಹುವೇಗವಾದ, ಎಸುಗೆಯಿಂದ-ಬಾಣಪ್ರಯೋಗದಿಂದ, ರಣ-ಯುದ್ಧವೆನ್ನುವ, (ಭೂಮಿಗೆ) ಕುಂಭಿನಿಗೆ-ಕುಂಭಿನಿ ಎನ್ನುವ ನರಕಕ್ಕೆ, ಬೀಳುತ-ಬಿದ್ದುಹೋಗುತ್ತ, ಇರ್ದವು-ಇದ್ದವುಗಳಾದವು ||೩೯||

ಟೀ|| ಅಗಣಿತ-ಅಸಂಖ್ಯಾತವಾದ, ರಥದ-ತೇರುಗಳ, ರಾಜಿಗಳ್-ಸಮುದಾಯಗಳು, ಮುರಿದವು- ಪುಡಿಪುಡಿಯಾದವು, ತೇಜಿಗಳ್-ಕುದುರೆಗಳು, ಅಸುವಂ-ಪ್ರಾಣವನ್ನು, ತೊರೆದವು-ಬಿಟ್ಟುಬಿಟ್ಟವು, ಆನೆಗಳ್-ಗಜಗಳಾದರೊ, ಮಡಿದವು-ಸತ್ತುಹೋದವು, ಸೇನೆಗಳ್-ಪದಾತಿಗಳ ಸಮೂಹವು, ಕುರಿದರಿಯೊಲಾಯ್ತು-ನಿರ್ನಾಮವಾಯಿತು, ಅಖಿಳ-ಸಕಲರಾದ, ವೀರರೊಳು-ಶೂರರಲ್ಲಿಯೂ, ಧೀರರೊಳ್-ಧೈರ್ಯಶಾಲಿಗಳಲ್ಲಿಯೂ, ಪಾರ್ಥನಂದನನ-ಬಭ್ರುವಾಹನನ, ಮುಂದೆ-ಎದುರಿನಲ್ಲಿ, ಇ

---

ಸುವುದರಲ್ಲಿ ಬದ್ಧಾದರನಾಗಿ ಪ್ರಳಯಕಾಲದ ರುದ್ರನನ್ನು ಹೋಲುತ್ತಾ ಪರಬಲವನ್ನೆಲ್ಲಾ ನಿರ್ನಾಮಮಾಡುತ್ತಲಿದ್ದನು ||೩೭|| ಎಲೈ ಜನಮೇಜಯಮಹೀವಲ್ಲಭನೇ ಮುಂದೆ ನಡೆದ ಪರಮಾಶ್ಚರ್ಯವನ್ನು ಹೇಳುತ್ತೇನೆ ಕೇಳುವನಾಗು. ಆ ಬಳಿಕ ಅರ್ಜುನನ ಕುಮಾರನಾದ ಬಭ್ರುವಾಹನನ ಶರವರ್ಷದಿಂದ ಪಾರ್ಥನ ಪರಿವಾರದಲ್ಲಿ ರಕ್ತದೊಳಗೆ ನೆನೆಯದೆ ತಪ್ಪಿಸಿಕೊಂಡು ಬದುಕಿದವರನ್ನೇ ಕಾಣಲಿಲ್ಲವು. ಅರಿಗಳ ಪಡೆಯಲ್ಲಿ ಹಸ್ತಿಗಳೂ, ಅಶ್ವಂಗಳೂ, ರಥಪದಾತಿಗಳೂ ಸಹ ಹೆಸರಿಲ್ಲದೆ ಹೋಗಿಬಿಡುತ್ತಲಿದ್ದವು. ಎಲೈ ಜನಮೇಜಯಮಹೀವಲ್ಲಭನೇ ಬಭ್ರುವಾಹನನ ಬಾಣಪ್ರಯೋಗದ ಮಹಿಮೆಯನ್ನು ಕೇಳಿದೆಯಾ ಆಹಾ ಅವನ ಸಾಹಸವು ಅಸದಳವಾದುದೇ ಸರಿ. ಜಗನ್ನಾಯಕನಾದ ಶ್ರೀ ಮಹಾವಿಷ್ಣುವಿನ ಮಾಯಾಪ್ರಪಂಚವೋ ಎಂಬಂತೆ ಶತ್ರುಸೈನ್ಯವನ್ನೆಲ್ಲಾ ಬಾಣಗಳ ಮಳೆಯಿಂ ಕರೆದು ಮೂರ್ಛಾಕ್ರಾಂತರನ್ನಾಗಿ ಮಾಡುತ್ತಲಿದ್ದನು || ೩೮ || ಆಗ ಪಾರ್ಥನ ಸೇನೆಯ ಸುಭಟರಾದರೊ ರಂಭಾದ್ಯಪ್ಸರಾಂಗನೆಯರ ಕುಚಕುಂಕುಮದಿಂದ ಲೇಪಿಸಲ್ಪಟ್ಟ ದೇವೇಂದ್ರನ ಸಾಹಸಕ್ಕೆದುರಾದವರು ಅವನ ಪೆಟ್ಟುಗಳನ್ನು ತಾಳಲಾರದೆ ಕುಂಭಿನಿ ಎಂಬ ನಗರಕ್ಕೆ ಬಿದ್ದುಹೋಗುವ ತೆರನಾಗಿ ಬಭ್ರುವಾಹನನ ಸುವರ್ಣಮಯವಾದ ನಿಶಿತಶಾಸ್ತ್ರಪ್ರಯೋಗದ

ಜಿಗ | ಳ್ತೊರೆದವಸುವಂಮುಡಿದವಾನೆಗಳ್ಸೇನೆಗ | ಳ್ಕುರಿದರಿಯೊಲಾಯ್ತು ಖಿಳವೀರರೋಳ್ಧೀರರೊಳ್ಪಾರ್ಥನಂದನನಮುಂದೆ | ಇರಿದುಮೆರೆಯಲ್ಕಾಣೆನೋರ್ವರಂಸರ್ವರಂ | ನೆರೆಗೆಲ್ದನತುಳಮಾರ್ಗಣದಿಂದ್ರಣದಿಂದ | ಹೆರೆದೆಗೆದು ಕಂಡಕಡೆಗೋಡಿದ ರ್ನೋಡಿದರ್ಜೀವದುಳಿವಂಸುಭಟರು ‖ ೪೦ ‖ ತಾಗಿದಂದುಗಗೊಂಡನನುಸಾಲ್ವನುಂಜೈಸಿ | ಬೀಗಿದಂಕರ್ಣಜಂಹಂಸಧ್ವಜಂ ಕೆಣಕಿ | ನೀಗಿದಂಮಾನವಂಯೌವನಾಶ್ವಂತಡೆದುಸೋಲ್ದಂಸುವೇಗನಾಂತು ‖ ಸಾಗಿದಂಧುರದಿಂದಸಿತಕೇತುಸೆಣಸಿತಲೆ | ದೂಗಿದಂಪರಿಭವಕ್ಕನಿರುದ್ಧನಿರದಿಳೆಗೆ | ಬಾಗಿದಂಮೈಮರೆದುಕೃತವರ್ಮಸಾತ್ಯಕಿಗಳಿದಿರಾಗಿದೆಸೆಗೆಟ್ಟರು ‖ ೪೧ ‖ ಏನೆಂಬೆನಾ ರಣವಸಂತದೊಳ್ನೆರೆದಜಯ | ಮಾನಿನಿವಿಮುಖಮಾದವಿರಹದಿಂತವಿಸುವಭ | ಟಾನೀಕಮುಂಬೆದರಿಸದೆಮಾಣದೆಂಬಿನಿಂಪಾರ್ಥಿಯಶಿಳೀಮುಖಾಳಿ ‖ ದಾನಮಾತಂಗಘಟೆಗೆರಗಿದವುಸ್ಯಂದನವಿ | ತಾನಮುಂಡೋರುಗಳೆದುವುಗರಿಯಗಾಳಿಯಿಂ | ಬಾ

---

ರಿದು–ಕಾದಾಡಿ, ಮೆರೆಯಲ್-ಪ್ರಕಾಶಿಸಲು, ಓರ್ವರಂ–ಒಬ್ಬರನ್ನೂ, ಕಾಣೆನು–ನೋಡಲಿಲ್ಲವು, ಸರ್ವರಂ – ಸಕಲರನ್ನೂ, ಅತುಳ-ಹೆಚ್ಚಾದ, ಮಾರ್ಗಣದಿಂದ-ಬಾಣದಿಂದಲೂ, ನೆರೆ–ಚನ್ನಾಗಿ, ಗೆಲ್ದನು–ಸೋಲಿಸಿದನು, ಹೆರೆ–ಪರೆಯನ್ನು, ತೆಗೆದು-ಬಿಟ್ಟಂತೆ, ರಣದಿಂದ–ಯುದ್ಧರಂಗದಿಂದ, ಕಂಡಕಡೆಗೆ–ಸ್ವೇಚ್ಛೆಯಾಗಿ, ಓಡಿದರ್–ಓಡಿಹೋದರು ಸುಭಟರು-ಯೋಧಾಗ್ರಣಿಗಳು, ಜೀವದ–ಪ್ರಾಣದ, ಉಳಿವಂ-ರಕ್ಷಿಸಿಕೊಳ್ಳುವಿಕೆಯನ್ನು, ನೋಡಿದರ್–ನೋಡಿದವರಾದರು ‖

ಅ‖ ವಿ‖ ನಂದನ-ಮಗ, ನಂದನವೆಂಬ ತೋಟ ಮತ್ತು ನಂದನವೆನ್ನುವ ಸಂವತ್ಸರ ‖೪೦‖

ಟೀ‖ ಅನುಸಾಲ್ವನುಂ-ಸಾಲ್ವಾನುಜನನು, ತಾಗಿ-ಯುದ್ಧಕ್ಕೆ ತಗಲಿ, ದಂದುಗಗೊಂಡನು-ದುಃಖಗೊಂಡವನಾದನು, ಕರ್ಣಜಂ–ವೃಷಕೇತುವು, ಜೈಸಿ-ಗೆದ್ದವನಾಗಿ, ಬೀಗಿದಂ–ಸಂತಸಂಗೊಂಡನು, ಹಂಸಧ್ವಜ-ಹಂಸಧ್ವಜರಾಯನು, ಕೆಣಕಿ-ರೇಗಿಸಿ, ಮಾನವಂ–ಮರ್ಯಾದೆಯನ್ನು, ನೀಗಿದಂ-ಕಳೆದುಕೊಂಡವನಾದನು, ಯೌವನಾಶ್ವಂ–ಭದ್ರಾವತಿಯ ರಾಜನು, ತಡೆದು-ಅಡ್ಡಗಿಸಿ, ಸೋಲ್ದಂ-ಸೋತುಬಿಟ್ಟನು, ಸುವೇಗನು–ಭದ್ರಾವತಿಯ ಯುವರಾಜನು, ಆಂತು–ಯುದ್ಧಮಾಡಲುಜ್ಜುಗಿಸಿ, ಧುರದಿಂದ-ರಣರಂಗದಿಂದ, ಸಾಗಿದಂ–ಹಿಂತಿರುಗಿದನು, ಅಸಿತಕೇತು-ನೀಲಧ್ವಜನು, ಸೆಣಸಿ-ಯುದ್ಧಕ್ಕೆ ಅನುವಾಗಿ, ಪರಿಭವಕ್ಕೆ-ಸೋತುದಕ್ಕಾಗಿ, ತಲೆದೂಗಿದಂ–ಮೆಚ್ಚಿಕೊಂಡನು, ಅನಿರುದ್ಧನು–ಅನಿರುದ್ಧನಾದರೊ, ಇರದೆ–ಸುಮ್ಮನಿರದೆ, ಇಳೆಗೆ–ಭೂಮಿಯ ಮೇಲೆ, ಬಾಗಿದಂ–ಬಗ್ಗಿದವನಾದನು, ಕೃತವರ್ಮಸಾತ್ಯಕಿಗಳು–ಕೃತವರ್ಮನೂ, ಸಾತ್ಯಕಿಯೂ ಸಹ, ಇದಿರಾಗಿ–ಬಭ್ರುವಾಹನನಮೇಲೆ ಯುದ್ಧಕ್ಕೆ ನಿಂತು, ಮೈಮರಿದು–ಪ್ರಜ್ಞೆತಪ್ಪಿದವರಾಗಿ, ದೆಸೆಗೆಟ್ಟರು–ದಿಕ್ಕಾಪಾಲಾದರು ‖೪೧‖

ಟೀ‖ ಆರಣವಸಂತದೋಳ್–ಆ ಯುದ್ಧವೆನ್ನತಕ್ಕ ಚೈತ್ರ ವೈಶಾಖಗಳ ತಿಂಗಳುಗಳಲ್ಲಿ, ರಕ್ತವೆನ್ನುವ ವಸಂತದ ಆಟದೊಳಗೆ, ಅಥವ ವಸಂತ ಋತುವಿನ ಸಂಭ್ರಮಾತಿಶಯದಲ್ಲಿ, ನೆರೆದ–ಸೇರಿದ್ದ, ಜಯಮಾನಿನಿ–ಜಯವೆನ್ನು ನಾರೀಮಣಿಯು, ವಿಮುಖಮಾದ-ಅಗಲಿದ, ವಿರಹದಿಂ–ವಿರಹವೇದನೆಯಿಂದ, ತವಿಸುವ-ಕ್ಲೇಶಪಡುತ್ತಲಿರತಕ್ಕ, ಭಟಾನೀಕಮುಂ–ಸೇನಾಸಮೂಹವನ್ನು, ಬೆದರಿಸದೆ-ಭಯಪಡಿಸದೆ, ಮಾಣದು–ಬಿಡುವುದೇ ಇಲ್ಲವು, ಎಂಬಿನಿಂ–ಎನ್ನುವ ಪರಿಯಿಂದ, ದಾನಮಾತಂಗ

---

ಪೆಟ್ಟುಗಳಿಗೆ ಸಿಕ್ಕಿದ ಆನೆಗಳ ಕುಂಭಸ್ಥಳದಲ್ಲಿರುವ ಆಣಿಮುತ್ತುಗಳು ಯುದ್ಧವೆಂಬ ಕುಂಭಿನೀನಾಮಕವಾದ ಮಹಾನರಕಕ್ಕೆ ಬಿದ್ದುಹೋಗುತ್ತಲಿದ್ದವು ‖ ೩೯ ‖ ಅಸಂಖ್ಯಾತವಾದ ರಥಸಜ್ಜುಗಳೆಲ್ಲವೂ ಮುರಿದು ಚೂರುಚೂರಾಗಿ ನೆಲದಮೇಲೆ ಬಿದ್ದುಹೋದವು. ಕುದುರೆಗಳೆಲ್ಲವೂ ತಮ್ಮ ಹರಣವನ್ನು ಹೋಗಲಾಡಿಸಿಕೊಂಡವು. ಆನೆಗಳಾದರೊ ಯಮಪುರಿಯನ್ನು ಸೇರಿದವು. ಕಾಲ್ಬಲವೆಲ್ಲವೂ ಹಾಳಾಗಿಹೋಯಿತು. ಅರ್ಜುನನ ಸುತನಾದ ಬಭ್ರುವಾಹನನೆದುರಿಗೆ ಹೋರಾಡಿ ಗೆಲ್ಲತಕ್ಕರಾರನ್ನೂ ಪಾರ್ಥನ ಬಲದಲ್ಲಿ ಕಾಣಲೇ ಇಲ್ಲವು. ಅನೇಕ ದಿವ್ಯಾಸ್ತ್ರಂಗಳನ್ನು ಪ್ರಯೋಗಿಸಿ ಪರಬಲವನ್ನೆ ಗೆದ್ದನು. ಶತ್ರುಸೈನ್ಯದ ವೀರರನೇಕರು ದಿಕ್ಕಾಪಾಲಾಗಿ ಚದರಿ ಚದರಿ ಓಡಿಹೋದರು‖೪೦‖ಅನುಸಾಲ್ವನು ಬಭ್ರುವಾಹನನಿಗೆದುರಾಗಿ ಜೀವಸಹಿತ ಹಿಂದಿರುಗುವದೇ ಕಷ್ಟವಾಯಿತು. ವೃಷಕೇತುವು ಸೋತನು. ಹಂಸಧ್ವಜನು ಅರ್ಜುನಿಯೊಂದಿಗೆ ಕಾದಲುಜ್ಜುಗಿಸಿ ಮಾನಭಂಗವಂ ಮಾಡಿಕೊಂಡನು. ಯೌವನಾಶ್ವನು ಪಾರ್ಥಜನನ್ನಡ್ಡಗಿಸಿ ಪರಾಜಯವನ್ನು ಹೊಂದಿದನು. ಸುವೇಗನು ಕಾಳಗಕ್ಕೆ ಹೊರಟು ಹಿಂದಿರುಗಿದನು, ನೀಲಧ್ವಜನೂ ಕೂಡ ಸೋತುಹೋಗಿ ಪಾರ್ಥಜನ ಸಾಹಸವನ್ನು ಕೊಂಡಾಡಿದನು. ಅನಿರುದ್ಧನು ನಾಚಿಕೆಯಿಂದ ತಲೆಯನ್ನು ನೆಲದಕಡೆಗೆ ನೋಡುವಂತೆ ಮಾಡಿಬಿಟ್ಟನು. ಕೃತವರ್ಮ ಸಾತ್ಯಕಿಗಳು ಸ್ಮೃತಿತಪ್ಪಿ ದಿಕ್ಕಾಪಾಲಾಗಿ ಹೋದರು ‖೪೧‖ ಯುದ್ಧವೆನ್ನುವ ವಸಂತಋತುವಿನೊಂದಿಗೆ ಸೇರಿದ ವಿಜಯವೆಂಬ ನಾರಿಯು ಹಿಂದಾಗಿ ಅಪಜಯವನ್ನು ಹೊಂದಿದ ಶತ್ರುಗಳ ಪಡೆಯನ್ನು ಅರ್ಜುನಿಯ ಬಾಣಪರಂಪರೆಯು ಬೆದರಿಸದೆ ಬಿಡುವುದಿಲ್ಲ ವೆಂಬುದನ್ನು ತೋರಿಸುತ್ತಲಿದೆಯೋ ಎಂಬಂತೆ ಗಜಘಟೆಗಳು ಎರಗಿದವು. ರಥಸಮುದಾಯವೆಲ್ಲಾ ಹಾಳಾಯಿತು. ಬಾಣಗಳಿಗೆ ಕಟ್ಟಿದ ರೆಕ್ಕೆಗಳಿಂದುಂಟಾದ ಗಾಳಿಯು ನಭೋಮಾರ್ಗವ

ನೆಡೆಗೆತೀಡಿದವುಶತಪತ್ರದಳದಮೇಲ್ವೆದಿವಿಸಟಂಬರಿದವು ‖ ೪೨ ‖ ಜೋದರಾವುತರಧಿಕರಳಿದಾನೆಕುದುರೆತೇರ್ | ದ್ರೋದು ವೆಣ್ದೆಸೆಗೆತಮ್ಮಿಚ್ಛೆಯಿಂಪಟ್ಟಣದ | ಬೀದಿಗರ್ಕೂಡಿದರ್ಲಾಯದೋಳ್ಸೂರೆಗೊಂಡರ್ಭೂಷಣಾದಿಗಳನು ‖ ಕಾದುವಕಲಿಗಳಿಲ್ಲ ಪಡೆಯೊಳ್ಪಲಾಯನವ | ನಾದರಿಸಿದರ್ಭಟರ್ಪ್ರದ್ಯುಮ್ನಮೊದಲಾದ | ರಾದಿಯೊಳ್ಬಿದ್ದುತವೆಮೋಹಿತರಾದರಾಬಭ್ರುವಾಹನನ ಕೋಲ್ಗಳಿಂದ ‖ ೪೩ ‖ ಪಡೆಪಡೆವುಗೆಟ್ಟುದೆಸೆದೆಸೆಗೋಡುತಿರ್ಪುದಂ | ತಡೆತಡೆದುಕಡುಗಲಿಗಳೆಡೆಗೆಡವುತಿರ್ಪುದಂ | ಹೊಡೆ ಹೊಡೆದುಪುರಕಾನೆಕುದುರೆಯಂಕೂಡಿಕೊಳುತಿರ್ಪುದಂದೊರೆದೊರೆಗಳು ‖ ನಿಡುನಿಡುಸರಳ್ನಾಂಟಿಮೂರ್ಛೆವಡೆದಿರ್ಪುದಂ | ನಡನಡುಗುತತಿಬಲರ್ಕೈಮರೆವುತಿರ್ಪುದಂ | ಬಿಡಬಿಡದೆಫಲುಗುಣಂನೋಡಿಖತಿಯಿಂದಘುಡಿಘುಡಿಸಿಕಿಡಿಕಿಡಿಯಾದನು ‖ ೪೪ ‖ ಗಾಂಡೀವಮಂತುಡುಕಿಟಂಕಾರಮಂಬುಜಭ | ವಾಂಡಮಂತುಂಬದಿರದೆಂಬಿನಿಂಜೇಗೈದು | ತಾಂಡವದೆಮೃಡನಸಾರೂಪ್ಯ

ಘಟೆಗೆ–ಮದೋನ್ಮತ್ತವಾದ ದ್ವಿಪಂಗಳಿಗೆ, ಎರಗಿದವು–ಹೋಗಿ ಸೇರಿದವು, ಅಂದು–ಆ ಕಾಲದಲ್ಲಿ, ಸ್ಯಂದನಪಿತಾನಮಂ–ರಥಗಳ ಸಮುದಾಯವನ್ನು, ಕಿರುಗಳೆದವು–ನಿರ್ಮೂಲಮಾಡಿಬಿಟ್ಟವು, ಬಾನೆಡೆಗೆ–ಅಂತರಿಕ್ಷಮಾರ್ಗಕ್ಕೆ, ಗರಿಯು–ಪಕ್ಷಂಗಳ, ಗಾಳಿಯಂ–ವಾಯುವನ್ನು, ತೀವಿದವು – ತುಂಬಿಕೊಳ್ಳುವಂತೆ ಮಾಡಿಬಿಟ್ಟವು, ಮೇಲೆ – ದೇವಲೋಕದಲ್ಲಿರುವ ಸುರನದಿಯ ಮೇಲ್ಗಡೆ, ಐದಿ–ಹೋಗಿ ಸೇರಿ, ಶತಪತ್ರ–ಕಮಲಗಳ, ದಳ–ರೇಕುಗಳ, ವಿಸಟಂ–ಭ್ರಾಂತಿಯನ್ನು, ಅರಿದವು–ಛೇದಿಸಿದವು, ಏನೆಂಬೆನು–ಏನೆಂದು ಬಣ್ಣಿಸಲಿ. ‖೪೨‖

ಟೀ‖ ಬಭ್ರುವಾಹನನ–ಬಭ್ರುವಾಹನನೆಂಬ ಅರ್ಜುನನ ಮಗನ, ಕೋಲ್ಗಳಿಂದ–ಸರಲ್ಗಳಿಂದ, ಜೋಧರಾವುತರಧಿಕರು–ಮಾವಟಿಗರು, ಕುದುರೆಯ ಸವಾರರು, ಮತ್ತು ರಥವನ್ನು ನಡೆಸತಕ್ಕವರು, ಆಳಿದು–ಹಾಳಾಗಿ, ಆನೆಕುದುರೆತೇರ್–ಹಸ್ತ್ಯಶ್ವ ರಥಂಗಳು, ತಮ್ಮಿಚ್ಛೆಯಿಂ–ತಮ್ಮ ಮನಸ್ಸು ಬಂದಂತೆ, ಎಣ್ದೆಸೆಗೆ–ಅಷ್ಟದಿಕ್ಕುಗಳಿಗೂ, ಪೋದವು–ಹೊರಟು ಹೋದವು, ಪಟ್ಟಣದ–ಪುರದ, ಬೀದಿಗರು–ದಾರಿಹೋಕರು, ಲಾಯದೋಳ್–ನಿರ್ಬಂಧದಲ್ಲಿ, ಕೂಡಿದರ್–ನೆರೆದವರಾದರು, ಭೂಷಣಾದಿಗಳನು–ಆಭರಣಗಳೇ ಮೊದಲಾದವನ್ನು, ಸೂರೆಗೊಂಡರ್–ಲೂಟಮಾಡಿದರು, ಪಡೆಯೋಳ್–ದಳದಲ್ಲಿ, ಕಾದುವ–ಯುದ್ಧಮಾಡುವ, ಕಲಿಗಳು–ವೀರರು, ಇಲ್ಲ–ಇಲ್ಲವು, ಭಟರು–ಯೋಧರು, ಪಲಾಯನವನು – ಓಡಿಹೋಗುವಿಕೆಯನ್ನು, ಆದರಿಸಿದರು – ಪಡೆದವರಾದರು, ಆದಿಯೋಳ್–ಮೊದಲಲ್ಲಿಯೆ, ಪ್ರದ್ಯುಮ್ನ ಮೊದಲಾದವರು – ಪ್ರದ್ಯುಮ್ನನನ್ನು ಮೊದಲು ಮಾಡಿಕೊಂಡು, ಅಶೇಷರೂ, ಮೋಹಿತರಾದರು–ಸ್ಮರಣೆತಪ್ಪಿ ಬಿದ್ದುಬಿಟ್ಟರು. ‖೪೩‖

ಟೀ‖ ಫಲುಗುಣಂ – ಪಾರ್ಥನಾದರೊ, ಪಡೆ – ದಳವೆಲ್ಲವೂ, ಪಡವುಗೆಟ್ಟು – ನಿರಾಧಾರವಾಗಿ, ದೆಸೆದೆಸೆಗೆ–ನಾನಾ ದಿಕ್ಕುಗಳಿಗೂ, ಓಡುತ–ಓಡಿಹೋಗುತ್ತ, ಇರ್ಪುದಂ–ಇಂತಕ್ಕದ್ದನ್ನೂ, ತಡತಡದು – ಅಡ್ಡಗಿಸಿ ಅಡ್ಡಗಿಸಿ, ಕಡು – ಹೆಚ್ಚಾದ, ಕಲಿಗಳು – ಸಾಹಸವುಳ್ಳವರು, ಎಡೆಗೆಡೆವುತ – ಬೀಳಕೆಡುಹುತ್ತ, ಇರ್ಪುದಂ – ಇಂತಕ್ಕದ್ದನ್ನು, ಹೊಡಹೊಡೆದು – ಹೆಚ್ಚಾಗಿ ಹೊಡೆದು, ಗಜಾಶ್ವಮಂ – ಹಸ್ತ್ಯಶ್ವಂಗಳನ್ನು, ಪುರಕೆ–ತಮ್ಮ ರಾಜಧಾನಿಯಾದ ಮಣಿಪುರಕ್ಕೆ, ಕೂಡಿಕೊಳುತ–ಸೇರುವಂತೆ ಮಾಡುತ್ತ, ಇರ್ಪುದಂ–ಇಂತಕ್ಕದ್ದನ್ನು, ದೊರೆದೊರೆಗಳು–ರಾಜಾಧಿರಾಜರು, ನಿಡುನಿಡು–ಬಹಳ ನೀಳವಾಗಿರತಕ್ಕ, ಸರಲ್–ಅಲಗುಗಳನ್ನು, ನಾಂಟಿ–ತಗಲಿಕೊಂಡು, ಮೂರ್ಛೆವಡೆದು – ಸ್ಮರಣೆಯನ್ನು ಕಳೆದುಕೊಂಡು, ಇರ್ಪುದಂ – ಇಂತಕ್ಕದ್ದನ್ನು, ಅತಿಬಲರು–ಮಹಾಸತ್ವ ಮುಳ್ಳವರು, ನಡನಡುಗುತ–ಬಹುವಾಗಿ ನಡುಗುತ್ತ, ಕೈಮರೆವುತ–ಶರಸಂಧಾನದ ಬಗೆಯನ್ನು ಮರೆತು ಬಿಟ್ಟು, ಇರ್ಪುದಂ–ಇಂತಕ್ಕದ್ದನ್ನು, ಬಿಡಬಿಡದೆ–ಸ್ವಲ್ಪವೂ ವಿರಾಮವಿಲ್ಲದೆ, ನೋಡಿ–ಈಕ್ಷಿಸಿದವನಾಗಿ, ಖತಿಯಿಂದ–ಕ್ರೋಧದಿಂದ ಘುಡಿಘುಡಿಸಿ–ಹೆಚ್ಚಾಗಿ ರೇಗಿಕೊಂಡು, ಕಿಡಿಕಿಡಿಯಾದನು–ಬೆಂಕಿಯ ಕೆಂಡದಂತೆ ರೌದ್ರಾಕಾರನಾಗಿ ಹೋದನು. ‖೪೪‖

ನ್ನಡರಿತು ‖೪೨‖ ಮಾವಟಿಗರು ರಾಹುತರು ರಥಿಕಶ್ರೇಷ್ಠರು ಮೊದಲಾದವರು ಹೆಸರೇ ಇಲ್ಲದಂತಾದರು, ಆನೆ ಕುದುರೆ ರಥಂಗಳು ದಿಕ್ಕುದಿಕ್ಕುಗಳಿಗೂ ತಮ್ಮ ಇಷ್ಟಬಂದೆಡೆಗೆ ಹೊರಟುಹೋದವು, ಪರಬಲದವರ ದಾರಿಗರೂ ಕೂಡ ಬಂಧನವನ್ನು ಪಡೆದವರಾದರು, ಅನೇಕ ದಿವ್ಯಾಭರಣಂಗಳೆಲ್ಲಾ ಶತ್ರುಗಳ ಪಾಲಾದವು, ವೀರಾಗ್ರಣಿಗಳಾದರೊ ಎದುರು ನಿಲ್ಲಲಾರದೆ ಹೋಗಿ ಪ್ರದ್ಯುಮ್ನ ಮೊದಲಾದ ಅಶೇಷರೂ ಮೂರ್ಛಾಕ್ರಾಂತರಾಗಿ ಬಿದ್ದುಹೋದರು ‖೪೩‖ ಸೈನ್ಯವೆಲ್ಲಾ ದಿಕ್ಕಾಪಾಲಾಗಿ ಚದರಿ ಹೋಗಿರುವುದನ್ನು ಪಾರ್ಥಜನ ಸೈನಿಕರು ತನ್ನವರನ್ನು ಅಡ್ಡಗಿಸಿ ಆಚೆ ಈಚೆಗೆ ಬಿಡದಿರುವುದನ್ನೂ, ಆನೆ ಕುದುರೆ ಮೊದಲಾದವನ್ನೆಲ್ಲಾ ಹೊಡೆದೋಡಿಸುತ್ತಲಿರುವುದನ್ನೂ, ರಾಜಾಗ್ರಣಿಗಳೆಲ್ಲಾ ತಮ್ಮ ಮೈಯೊಳಗೆ ಕೂರಂಬುಗಳು ತಗಲಿ ಸ್ಮೃತಿತಪ್ಪಿರುವುದನ್ನೂ, ಅತಿಬಲರೆಲ್ಲರೂ ಗಡಗಡನೆ ನಡನಡುಗಿ ಸ್ತಬ್ಧರಾಗಿರುವುದನ್ನೂ ಪಾರ್ಥನು ನೋಡಿ ರೋಷಾತಿಶಯದಿಂದ ಕಿಡಿಕಿಡಿಯಾಗಿ ಪ್ರಳಯಕಾಲದ ಮೇಘದಂತೆ ಘುಡಘುಡಧ್ವನಿಯಂ ಮಾಡುತ್ತ ‖೪೪‖ ತನ್ನ ಗಾಂಡೀವವನ್ನು ಕೈಕೊಂಡು ಧನುರ್ಧಾರಿ

ಮುಂಕೈಗೊಂಡುರೋಷತಾಮ್ರಾಕ್ಷನಾಗಿ ॥ ಪಾಂಡವಂಮಣಿರಥದೊಳೆಸೆವನಡುವಗಲಮಾ | ರ್ತಾಂಡನಂತುಜ್ವಲಿಸುತ್ತೈದಿದಂ
ಕಾಳಗಕೆ | ಕಾಂಡವದಹನದಂದುತನ್ನಮೇಲಮರಪತಿಮುಳಿದುಕದನಕೆಬಪ್ಪಂತೆಲು ॥ ೪೫ ॥ ಅನರಂಕೋಪಮಂತಾಳ್ದುನಿಜ
ಚಾಪದಿಂ | ಜ್ಯಾನಾದಮಂಮಾಡೆಹಂಸಧ್ವಜಂಕೂಡೆ | ಸೇನೆಸಹಿತುರಬಿದಂಪಾರ್ಥಿಯಂತರುಬಿದಂಕೂರ್ಗಣೆಗಳಂಕರೆವುತ ॥
ಬಾನೆಡಯೊಳೆತ್ತಲುಂದೆಸೆದೆಸೆಯಸುತ್ತಲು | ಅನೂನಶರಜಾಲಮಯಮಾಗಿರ್ದುದಾಸಮಯ | ಕೇನೆಂಬೆನಚ್ಚರಿಯಕಾಳ
ಗದಹೊಸಗತಿಯನತಿಭಯಂಕರಮಾಗಲು ॥ ೪೬ ॥ ಬಳಿಕಹಂಸಧ್ವಜಂಗಾಬಭ್ರುವಾಹನಂ | ಗಳವಿಯೊಳ್ಕಾಳಗಂಪೂಣ್ದು

ಟೀ॥ ಗಾಂಡೀವಮಂ–ಧನುಸ್ಸನ್ನು, ತುಡುಕಿ–ಸ್ವೀಕರಿಸಿ, ಟಂಕಾರಂ–ಧನುಸ್ಸಿನ ಶಬ್ದವು, ಅಂಬುಜಭವಾಂಡಮಂ–ಬ್ರಹ್ಮಾಂಡ ಮಂಡಲವನ್ನು. ತುಂಬದೆ–ತುಂಬಿಕೊಳ್ಳದೆ, ಇರದು–ಇರುವುದಿಲ್ಲ, ಎಂಬಿನಿಂ–ಎಂಬ ಬಗೆಯಿಂದ, ಜೇಗೈದು–ಧನುಷ್ಟಂಕಾರವಂಮಾಡಿ, ತಾಂಡವದಲ್ಲಿ-ಯುದ್ಧಸಂತೋಷದ ನರ್ತನದಲ್ಲಿ, ಮೃಡನ–ಈಶ್ವರನ, ಸಾರೂಪ್ಯಮಂ-ಏಕರೂಪವನ್ನೆ, ಕೈಕೊಂಡು–ಪಡೆದವನಾಗಿ, ರೋಷ-ಕೋಪದಿಂದ ಕೂಡಿದ, ತಾಮ್ರ-ಕೆಂಪಾದ, ಅಕ್ಷನಾಗಿ-ಕಣ್ಣುಗಳಿಂದೊಡಗೂಡಿ, ಮಣಿರಥದೊಳು–ರತ್ನಖಚಿತವಾದ ತೇರಿನೊಳಗೆ, ಎಸೆವ–ಹೊಳೆಯತಕ್ಕ, ಪಾಂಡವಂ–ಪಾರ್ಥನು, ನಡುವಗಲ–ಮಧ್ಯಾಹ್ನದಲ್ಲಿರತಕ್ಕ, ಮಾರ್ತಾಂಡನಂತೆ–ರವಿಯೋಪಾದಿಯಲ್ಲಿ, ಉಜ್ವಲಿಸುತ-ಪ್ರಕಾಶಿಸುತ್ತ, ಕಾಂಡವದ–ಕಾಂಡವವೆನ್ನುವ ಕಾಡಿನ, ದಹನದ–ಸುಡುವಿಕೆಯ, ಅಂದು–ಆ ಕಾಲದೊಳಗೆ, ಅಮರಪತಿ–ತ್ರಿದಶೇಂದ್ರನು, ಮುಳಿದು–ಕೋಪಮಾಡಿಕೊಂಡು, ತನ್ನಮೇಲೆ–ನನ್ನೊಂದಿಗೆ, ಕದನಕೆ–ಕಾಳಗಕ್ಕೆ, ಬಪ್ಪೊಲು–ಬರುವ ತೆರನಾಗಿ, ಐದಿದಂ–ಬಂದವನಾದನು.

ಅ॥ ವಿ॥ ಅಂಬುಜಭವಾಂಡ–ಅಂಬು–ನೀರಿನಲ್ಲಿ–ಜ ಹುಟ್ಟಿದ್ದು (ಕಮಲ, ಸ. ತ.) ಅಂಬುಜ–ತಾವರೆಯೊಳಗೆ–ಭವ–ಉತ್ಪನ್ನನಾದವನು (ಬ್ರಹ್ಮದೇವನು, ಸ. ತ.) ಅಂಭುಜಭವನ ಅಂಡ (ಷ. ತ.) ನಡುವಗಲ್–ಪಗಲನಡು (ಅವ್ಯಯಿಾ ಭಾವ ಸಮಾಸ.) ॥೪೫॥

ಟೀ॥ ಅನರಂ – ಆಪಾರ್ಥನಾದರೊ, ಕೋಪಮಂ – ಆ ಕ್ರೋಶವನ್ನು, ತಾಳ್ದು–ಹೊಂದಿದವನಾಗಿ, ನಿಜ–ತನ್ನ, ಚಾಪದಿಂ–ಧನುಸ್ಸಿನಿಂದ, ಜೇನಾದಮಂ-ಝೇಂಕಾರ ಶಬ್ದವನ್ನು, ಮಾಡಲು–ಎಸಗಲಾಗಿ, ಕೂಡೆ-ಒಡನೆಯೆ, ಹಂಸಧ್ವಜಂ–ಹಂಸಧ್ವಜರಾಯನು, ಪಾರ್ಥಿಯಂ–ಅರ್ಜುನನ ಕುವರನ ಮೇಲೆ, ಉರುಬಿದಂ–ಎದುರಿಸಿ ನುಗ್ಗಿದನು, ಕೂರ್ಗಣೆಗಳಂ–ಕ್ರೂರವಾದ ಅಲಗುಗಳನ್ನು, ಕರೆವುತ–ವರ್ಷಿಸುತ್ತ, ತರುಬಿದಂ–ಹಿಂದೆ ಬೀಳುವಂತೆ ಮಾಡಿದನು, ಬಾನೆಡೆಯೊಳು–ಅಂತರಿಕ್ಷ ಪ್ರದೇಶದಲ್ಲಿ, ಎತ್ತಲುಂ–ಎಲ್ಲೆಡೆಯಲ್ಲಿಯೂ, ದೆಸೆದೆಸೆಯ–ನಾನಾ ದಿಕ್ಕುಗಳ, ಸುತ್ತಲುಂ – ಎಲ್ಲಾ ಪ್ರದೇಶದಲ್ಲಿಯೂ, ಅನೂನ–ಹೆಚ್ಚಾದ, ಶರಜಾಲಮಯಮಾಗಿ–ಬಾಣಗಳ ಸಮುದಾಯವುಳ್ಳದ್ದಾಗಿ, ಇರ್ದುದು-ಇತ್ತು, ಆ ಸಮಯಕೆ–ಆ ಕಾಲದಲ್ಲಿ, ಅತಿಭಯಂಕರಮಾಗಲು–ಹೆಚ್ಚಾದ ಹೆದರಿಕೆಯುಂಟಾಗಲು, ಅಚ್ಚರಿಯ–ಆಶ್ಚರ್ಯಯುಕ್ತವಾದ, ಕಾಳಗದ–ರಣದ, ಹೊಸಗತಿಯನು–ಹೊಸಮಾರ್ಗವನ್ನು, ಏನೆಂಬೆನು–ಏನೆಂದು ವರ್ಣಿಸಲಿ (ವರ್ಣಿಸಲಸಾಧ್ಯ). ॥೪೬॥

ಟೀ॥ ಬಳಿಕ–ಆಮೇಲೆ, ಹಂಸಧ್ವಜಂಗೆ–ಹಂಸಧ್ವಜರಾಯನಿಗೂ ಬಭ್ರುವಾಹನಂಗೆ – ಬಭ್ರುವಾಹನನಿಗೂ, ಅಳವಿಯೊಳ್–ಸಾಹಸದಿಂದ, ಕಾಳಗಂ–ರಣವು, ಕಠೋರಂಎನೆ–ಅತಿ ಕ್ರೂರವಾಗಿ, ದಳಕೆ–ದಂಡಿಗೆ, ದಳಂ–ಪಡೆಯೂ, ಅಗ್ಗಳಿಕೆಗೆ–ಶ್ರೇಷ್ಠತೆಗೆ, ಅಗ್ಗಳಿಗೆ-ಶ್ರೇಷ್ಠತ್ವವೂ, ಧೃತಿಗೆ–ಧೀರತೆಗೆ, ಧೃತಿ–ಧೀರತೆಯೂ, ಕೊಲೆಗೆ–ಸಂಹಾರಕ್ಕೆ, ಕೊಲೆ–ಸಂಹಾರವೂ, ಕೋಲ್ಗೆ-ಸರಲ್ಗಳಿಗೆ, ಕೋಲ್–ಅಲಗುಗಳೂ, ಮುಳಿಸಿಂಗೆ – ಕೋಪಕಾರ್ಯಕ್ಕೆ, ಮುಳಿಸು–ಕೋಪವೂ, ಘಾಯಕೆ–ಹುಣ್ಣಿಗೆ, ಘಾಯ–ಘಾಯವು, ಅಧಟಿಗೆ–ಸಾಹಸಕ್ಕೆ, ಅಧಟು–ಶಕ್ತಿಯು, ಅಳವಡಿಕೆಗೆ–ಸ್ಮೃತಿತಪ್ಪುವುದಕ್ಕೆ, ಅಳವಡಿಕೆ–ಸ್ಮೃತಿ ತಪ್ಪಿಸುವುದೂ, ಸಮನಾಗಿ–ಜೋಡಿಯಾಗಿ, ಆಗುತ–ಆಗುತ್ತ, ಇರಲು–ಇರಲಾಗಿ, ದೇವಪುರ–ವೈಕುಂಠವೇ, ನಿಲಯ–ವಾಸಸ್ಥಾನವಾ

ಯಾಗಿ ಬ್ರಹ್ಮಾಂಡಮಂಡಲವನ್ನೆಲ್ಲಾ ವ್ಯಾಪಿಸುವ ಠಂಕಾರಮಂ ಮಾಡಿ, ಕಾಲನನ್ನು ಹೋಲುತ್ತಾ, ಕೋಪದಿಂದ ಕೂಡಿ ಬೆಂಕಿಯ ಕೆಂಡಗಳಂತೆ ಉರಿಯುತ್ತಲಿರುವ ಕಣ್ಣುಳ್ಳವನಾಗಿ, ಮಧ್ಯಾಹ್ನಕಾಲದ ಸೂರ್ಯನಂತೆ ರೌದ್ರಾಕಾರದಿಂ ಕೂಡಿ, ನವರತ್ನಖಚಿತಮಾದ ತೇರನ್ನೇರಿದವನಾಗಿ ಖಾಂಡವವನ ದಹನಕಾಲದಲ್ಲಿ ತನ್ನಮೇಲೆ ದೇವೇಂದ್ರನು ಎದುರಿಸಿ ಬರುವಂತೆ ತಾನೂ ತನ್ನ ಮಗನಾದ ಬಭ್ರುವಾಹನನ ಮೇಲೆ ಯುದ್ಧಕ್ಕೆ ಹೊರಟವನಾದನು ॥ ೪೫ ॥ ಅರ್ಜುನನು ಈ ರೀತಿಯಾಗಿ ಕೋಪಾವೇಶದಿಂದ ಧನುಷ್ಟಂಕಾರಮಂ ಮಾಡಿಕೊಂಡು ಯುದ್ಧಕ್ಕೆ ಹೊರಡಲು ಹಂಸಧ್ವಜನೂ ಕೂಡ ಶರವರ್ಷವಂ ಸುರಿಸುತ್ತಾ ಭೂಮ್ಯಾಕಾಶಗಳ ಮಧ್ಯದಲ್ಲಿ ಎಲ್ಲಿಯೂ ಬಿಡುವೇ ಯಿಲ್ಲದಂತೆ ಮಾಡಿಬಿಟ್ಟನು, ಇದನ್ನು ನೋಡಿದರೆ ಯಾರಿಗೂ ಎದೆಯು ಬಿಚ್ಚದೆ ಇರುವುದೇ ಇಲ್ಲವು ॥೪೬॥ ಎಲೈ ಜನಮೇಜಯ ಮಹೀಪಾಲನೆ! ಕೇಳು, ಈ ರೀತಿಯಲ್ಲಿ ಅರ್ಜುನನೂ ಹಂಸಧ್ವಜರಾಯ

ದುಕಠೋರಮೆನೆ । ದಳಕೆದಳವುಗ್ಗಳಿಕೆಗಗ್ಗಳಿಕೆಧೃತಿಗೆಧೃತಿಕೊಲೆಗೆಕೊಲೆಕೋಲ್ಗೆಕೋಲು ॥ ಮುಳಿಸಿಂಗೆಮುಳಿಸುಘಾಯಕೆ ಘಾಯಮುಧಟಿಗಧ । ಟಳವಡಿಕೆಗಳವಡಿಕೆಸಮನಾಗೆದೇವಪುರ । ನಿಲಯಲಕ್ಷ್ಮೀವರನಮೈದುನಂತಲೆದೂಗೆಮೆಚ್ಚಿಸುರರುಲಿಯೆ ಮೇಲೆ ॥೪೭॥

ಸಂಧಿ ೨೨ ಕ್ಕೆ ಪದ್ಯ ೧೧೪೬ ಕ್ಕೆ ಮಂಗಳಮಸ್ತು.

---

ಗಿವುಳ್ಳ, ಲಕ್ಷ್ಮೀವರನ-ಲಕ್ಷ್ಮೀಕಾಂತನಾದ ಕೃಷ್ಣಸ್ವಾಮಿಯ, ಮೈದುನಂ-ಭಾವಮೈದುನನಾದ ಪಾರ್ಥನು, ತಲೆದೂಗೆ-ಮೆಚ್ಚುವಂತೆಯೂ, ಸುರರು-ದೇವತೆಗಳೆಲ್ಲರೂ, ಮೆಚ್ಚಿ-ಹೊಗಳಿ, ಮೇಲೆ-ಅಂತರಿಕ್ಷದಲ್ಲಿ, ಉಲಿಯೆ-ಧ್ವನಿಗೈಯುತ್ತಿರಲು, ಕಠೋರಂ-ಬಹು ಕಠಿಣವು, ಎನೆ-ಎಂಬಂತೆ, ಪೂಣ್ಬುದು-ಉಂಟಾಯಿತು, (ಹೂಡಲ್ಪಟ್ಟಿತು) ॥೪೭॥

ಜೈಮಿನಿಭಾರತದೊಳು ಇಪ್ಪತ್ತೆರಡನೆಯ ಸಂಧಿಯು ಸಮಾಪ್ತವು.

---

ನೂ ಯುದ್ಧಾರ್ಥಿಗಳಾಗಿ ಬರುತ್ತಲಿರುವುದನ್ನು ಬಭ್ರುವಾಹನನು ಕಂಡು ಹಂಸಧ್ವಜನಿಗೆ ಇದಿರಾಗಿ ಪರಸ್ಪರ ಧೈರ್ಯದಿಂದಲೂ, ಶೌರ್ಯದಿಂದಲೂ, ಕಾಠಿಣ್ಯದಿಂದಲೂ, ಹೋರಾಡುತ್ತಲಿದ್ದರು. ಇದರಿಂದ ಅನೇಕರಿಗೆ ಘಾಯಗಳಾದವು, ಪೆಟ್ಟುಗಳು ಬಲವಾದವು, ಇವರಲ್ಲಿ ಯಾರೂ ಕಡಮೆಯಿಲ್ಲದೆ ದೇವಪುರನಿವಾಸಿಯಾದ ಶ್ರೀಯಃಪತಿಯು ಮೆಚ್ಚುವಂತೆಯೂ, ಆಕಾಶಮಾರ್ಗದಲ್ಲಿ ಸುರಗಣವು ಕೊಂಡಾಡುವಂತೆಯೂ, ಘೋರಯುದ್ಧವಂ ಗೈಯುತ್ತಲಿದ್ದರೆಂಬಲ್ಲಿಗೆ ॥೪೭॥

ಟೀಕಾತಾತ್ಪರ್ಯಸಹಿತವಾದ ಜೈಮಿನಿ ಭಾರತದೊಳು ಇಪ್ಪತ್ತೆರಡನೆಯ ಸಂಧಿಯು ಸಮಾಪ್ತವಾದುದು.





# ಇಪ್ಪತ್ತಮೂರನೆಯ ಸಂಧಿ.

ಸೂಚನೆ॥ ಆಹವಸಮರ್ಥಕರ್ಣಜನಂಕೆಡಹಿಬಭ್ರು | ವಾಹನಂಸುರನದಿಯಶಾಪದಿಂದರಿಯಲ್ಕೆ | ರಾಹುತುಡಿ
ಕಿದಮೃತಕರಬಿಂಬದಂತಿರುತಿರ್ದುದರ್ಜುನನತಲೆರಣದೊಳು ||

ಜನಪಕೇಳರ್ಜುನನಸೈನ್ಯದೊಳ್ಬಭ್ರುವಾ | ಹನನಖಿಳವೀರರಂಕೆಡಹಿಹಂಸಧ್ವಜನೊ | ಡನೆರಣದೊಳೆಚ್ಚಾಡಿ ಸ್ಯಂದನಸಹಸ್ರಮುಂತಡೆಗಡಿದವನಪಡೆಯೊಳು || ತನಿಗಲಿಗಳಾರುಸಾವಿರಮುಂಪೊರಳ್ಚಿವಾ | ಹಿನಿಯನೈದಕ್ಷೋಹಿಣಿಯನೊಕ್ಕಲಿಕ್ಕಿಮೇ | ದಿನಿಗವಂಮೈಮರೆದುಬೀಳ್ವಂತೆಸಿಕ್ಕಿದಂಕಾಯದೊಳ್ಸಾಯಕವನು ‖ ೧ ‖ ಅಸದಳದೊಳವನಸುತರೀರ್ವರುಂ ಮಡಿವಬಳಿ | ಕಸುರಾರಿತನ್ನೊಳಾಡಿದಬಲ್ಕೆಯುಂನೆನೆದು | ದೆಸೆಗೆಟ್ಟುಬಿದ್ದಿರಕಟೆಂದುಹಂಸಧ್ವಜಂಗರ್ಜುನಂಮರುಗುತಿರಲು ||

---

## ಇಪ್ಪತ್ತಮೂರನೆಯ ಸಂಧಿ.

ಸೂಚನೆ॥ ಬಭ್ರುವಾಹನಂ-ಪಾರ್ಥಜನು, ಆಹವ-ಕಾಳಗದಲ್ಲಿ, ಸಮರ್ಥ-ವೀರನಾದ, ಕರ್ಣಜನಂ-ಕರ್ಣಸುತನನ್ನು, ಕೆಡಹಿ-ನೆಲಕ್ಕೆ ಉರುಳಿಸಿ, ಸುರನದಿಯ-ದೇವಗಂಗೆಯ, ಶಾಪದಿಂದ-ಅನಿಷ್ಟವುಂಟಾಗಲೆಂದು ನುಡಿದದ್ದರಿಂದ, ಅರಿಯಲ್ಕೆ-ಪಾರ್ಥನ ಶಿರಸ್ಸನ್ನು ಕಡಿದು ಹಾಕಲು, ರಾಹು-ರಾಹುವೆನ್ನತಕ್ಕ ಗ್ರಹವು, ತುಡುಕಿದ-ಹಿಡಿದ, ಅಮೃತಕರಬಿಂಬದಂತೆ-ಹಿಮಾಂಶುವಿನ ಮಂಡಲದ ತೆರನಾಗಿ, ರಣದೊಳು-ಕಾಳಗದ ಭೂಮಿಯೊಳಗೆ, ಅರ್ಜುನನ-ಫಲ್ಗುಣನ, ತಲೆ-ಶಿರಸ್ಸು, ಇರ್ದುದು-ಪ್ರಕಾಶಿಸುತ್ತಲಿತ್ತು.

ಅ॥ ವಿ॥ ಕರ್ಣಜ=ಕರ್ಣ-ರವಿಕುಮಾರನಿಂದ, ಜ-ಹುಟ್ಟಿದವನು (ಕೃ. ವೃ.) ಸುರನದಿ (ಷ. ತ) ಅಮೃತಕರಬಿಂಬದಂತೆ-ಅಮೃತಸಂಬಂಧದ, ಕರ-ಕಿರಣವುಳ್ಳವನು ಯಾರೊ ಅವನು (ಬ. ಸ) ಅಮೃತಕರನ, ಬಿಂಬ-ಅಮೃತಕರಬಿಂಬ (ಷ.ತ)

ಟೀ॥ ಜನಪ-ಎಲೈ ಜನಮೇಜಯ ಮಹೀವಲ್ಲಭನೆ, ಕೇಳು-ಲಾಲಿಸು, ಬಭ್ರುವಾಹನನು-ಪಾರ್ಥನಂದನನು, ಅರ್ಜುನನ-ಫಲ್ಗುಣನ, ಸೈನ್ಯದೊಳ್-ದಳದೊಳಗೆ, ಅಖಿಳ-ಸಕಲರಾದ, ವೀರರಂ-ಪರಾಕ್ರಮಿಗಳನ್ನು, ಕೆಡಹಿ-ನೆಲಕ್ಕೆ ಬೀಳಿಸಿ, ರಣದೊಳು-ಯುದ್ಧದೊಳಗೆ, ಹಂಸಧ್ವಜನೊಡನೆ-ಹಂಸಧ್ವಜನೊಂದಿಗೆ, ಎಚ್ಚಾಡಿ-ಹೋರಾಡಿ, ಸ್ಯಂದನ ಸಹಸ್ರಮುಂ-ಒಂದು ಸಹಸ್ರ ತೇರುಗಳನ್ನು, ತಡೆಗಡಿದು-ಚೂರುಚೂರಾಗಿ ಮಾಡಿ, ಅವನ-ಆ ಹಂಸಧ್ವಜನೆಂಬ ರಾಯನ, ಪಡೆಯೊಳು-ದಳದಲ್ಲಿ, ತನಿ-ಹೊಸದಾದ, ಕಲಿಗಳು-ವೀರರಾದ, ಆರು ಸಾವಿರಮುಂ-ಆರು ಸಹಸ್ರ ಮುಖ್ಯವೀರರನ್ನು, ಪೊರಳ್ಚಿ-ಉರುಳಿಸಿದವನಾಗಿ, ಐದಕ್ಷೋಹಿಣಿಯನು-ಐದಕ್ಷೋಹಿಣಿ ಸಂಖ್ಯೆಯ, ವಾಹಿನಿಯನು-ದಳವನ್ನು, ಒಕ್ಕಲಿಕ್ಕಿ ಕಡಿದು ಹಾಕಿ, ಮೈಮರೆದು-ಸ್ಮರಣೆ ತಪ್ಪಿ, ಮೂರ್ಛಿತನಾಗಿ-ಮೂರ್ಛಾಕ್ರಾಂತನಾಗಿ, ಅವಂ-ಆ ಹಂಸಧ್ವಜನು, ಮೇದಿನಿಗೆ-ಭೂಮಿಯಮೇಲೆ, ಬೀಳ್ವಂತೆ-ಬಿದ್ದು ಹೋಗುವ ತೆರನಾಗಿ, ಸಾಯಕವನು-ಅಲಗನ್ನು, ಕಾಯದೊಳ್-ದೇಹದಲ್ಲಿ, ಸಿಕ್ಕಿದಂ-ತಗಲಿಸಿದನು. ||೧||

ಟೀ॥ ಅರ್ಜುನನು-ಪಾರ್ಥನಾದರೊ, ಅಸುರಾರಿ-ರಾಕ್ಷಸಾಂತಕನಾದ ಕೃಷ್ಣಮೂರ್ತಿಯು, ತನ್ನೊಳು-ತನ್ನೊಂದಿಗೆ, ಆಡಿದ-ನುಡಿದ, ಬಲ್ಮೆಯು-ಪ್ರದ್ಯುಮ್ನ ಮತ್ತು ಅನಿರುದ್ಧ ಇವರ ಸಾಹಸವನ್ನು, ನೆನೆದು-ಸ್ಮರಣೆಮಾಡಿ, ಅಸದಳದೊಳು-ಶಕ್ತಿ ಸಾಲದೆ, ಅವನ- ಆ ಕೃಷ್ಣಮೂರ್ತಿಯ, ಸುತರು - ಕುವರರಾದ, ಈರ್ವರು- ಮನ್ಮಥ ಅನಿರುದ್ಧರೆನ್ನತಕ್ಕವರೂ, ಮಡಿದ-ಮರಣ ಹೊಂದಿದ, ಬಳಿಕ-ತರುವಾಯ, ದೆಸೆಗೆಟ್ಟು-ದಿಕ್ಕಾಪಾಲಾಗಿ, ಬಿದ್ದರು-ಬಿದ್ದು ಬಿಟ್ಟರು, ಅಕಟ-ಆಹಾ, ಎಂದು-ಎಂಬತೆರನಾಗಿ, ಹಂಸಧ್ವಜಂಗೆ-ಹಂಸಧ್ವಜನಿಗಾಗಿ, ಮರುಗುತ-ವ್ಯಸನ ಪಡುತ್ತ, ಇರಲು-ಇರಲಾಗಿ, ಅಸಮ-ಅಸದೃಶವಾದ

---

## ಇಪ್ಪತ್ತಮೂರನೆಯ ಸಂಧಿಯ ಕಥಾಪ್ರಾರಂಭವು.

ತಾತ್ಪರ್ಯ—ಕೇಳೈ ಜನಮೇಜಯಮಹೀಪಾಲನೆ! ಬಭ್ರುವಾಹನನು ಪಾರ್ಥನ ಸೇನಾಸಾಗರದಲ್ಲಿ ಅನೇಕರನ್ನು ಯಮಲೋಕಕ್ಕೆ ಕಳುಹಿಸಿ ತನಗಿದಿರಾದ ಹಂಸಧ್ವಜರಾಯನೊಂದಿಗೆ ಸಾಹಸದಲ್ಲಿಯೂ, ಧೈರ್ಯದಲ್ಲಿಯೂ, ಪೌರುಷ ಮೊದಲಾದವುಗಳಲ್ಲಿಯೂ ಲೇಶವೂ ಕಡಿಮೆಯಿಲ್ಲದೆ ಸರಿಸಮನಾಗಿ ಕಾದಾಡುತ್ತ ಆ ಮರಾಳಧ್ವಜನ ಚತುರಂಗಬಲದಲ್ಲಿ ಸಾವಿರ ತೇರುಗಳನ್ನು ನುಚ್ಚು ನುಚ್ಚಾಗಿ ಮಾಡಿ ವೀರಾಗ್ರೇಸರಾದ ಆರುಸಾವಿರ ಮಂದಿಯನ್ನೂ, ಐದು ಅಕ್ಷೋಹಿಣೀ ಸೈನ್ಯವನ್ನೂ ಧ್ವಂಸಮಾಡಿ ಹಂಸಧ್ವಜನ ಮೈಯ್ಯಲ್ಲೆಲ್ಲಾ ಬಾಣಗಳಿಂದ ಘಾಯಮಂಗೈದು ಮೂರ್ಛಾಕ್ರಾಂತನನ್ನಾಗಿ ಮಾಡಿದನು||೧|| ಈ ಯುದ್ಧದಲ್ಲಿ ಹಂಸಧ್ವಜನ ಇಬ್ಬರು ಮಕ್ಕಳು ಸತ್ತುಹೋಗಲು ಹಂಸಧ್ವಜನು ಬಭ್ರುವಾಹನನೊಂದಿಗೆ ಘೋರ ಯುದ್ಧಮಂಗೈಯುತ್ತಲಿದ್ದನು. ಕೃಷ್ಣನ ಮಾತು ನಿಜವೆಂದು ಅರ್ಜುನನು ಬಾರಿಬಾರಿಗೂ ಚಿಂತಿಸುತ್ತ ಹಂಸಧ್ವಜನೊಂದಿಗೆ ಹೇಳುತ್ತಿರುವ

ಮುಸುಕಿದಂಪಡೆಸಹಿತ ಬಂದಪಾರ್ಥಿಯರಥನ | ನಸಮಭುಜಬಲಸುವೇಗಂ ಬಳಿಕಸಂಗರಂ | ಪೊಸತಾದುದೀರ್ವರ್ಗೆ ಕೊಂದನರ್ಜುನಿಮತ್ತೆವೀರರಿರ್ಛಾಸಿರವನು ‖ ೩ ‖ ಸಾಹಸದೊಳೀರ್ವರುಂ ಸರಿಯೆನೆಸುವೇಗಂಮ | ಹಾಹವದೊಳೆಚ್ಚಾಡಿ ವಿರಥನಾಗಿಯೆ ಬಭ್ರು | ವಾಹನನಬಾಣದಿಂದುರೆನೊಂದು ಬಿದ್ದನನಿಗೆಬಳಿಕ ಪಾರ್ಥಿನರನ ‖ ಮೋಹರವನೈದಿದಂ ಪ್ರಳಯ ಭೈರವನಕೋ | ಲಾಹಲಮಿದೆಂಬಂತೆ ಕೊಂದನೆಲ್ಲಾ ಬಲವ | ದೇಹದೊಳೆಸೆವಜೀವಪರರೊಲುಳಿದಿರ್ದರೀರ್ವರೇ ಪಾರ್ಥಕರ್ಣ ಸುತರು ‖೪‖ ರಣದೊಳಿಂತಿವರೀರ್ವರತ್ತಮುಂನೊಂದುಕಾ | ರಣಕೆಗುರುಶಾಪಮುಂಕೊಡಲದಂಬಿಡಿಸಿಫಲು | ಗುಣನಮಲತೀರ್ಥಯಾತ್ರಾಪ್ರಸಂಗದೊಳಂದುತಾಂಪರಿಗ್ರಹಿಸಿನೆರೆದ ‖ ಫಣಿರಾಜನಂದನೆಯುಲೂಪಿಪಾತಾಳದಿಂ | ಮಣಿಪುರಕೆಬಂದುಮೂ

---

ಭುಜಬಲ - ಸಾಹಸವುಳ್ಳ, ಸುವೇಗಂ - ಸುವೇಗನೆನ್ನತಕ್ಕವನು, ಪಡೆಸಹಿತ - ಸೇನಾಸಮೇತವಾಗಿ, ಬಂದು - ಐತಂದು, ಪಾರ್ಥಿಯ-ಅರ್ಜುನಿಯ, ರಥನನು-ಸ್ಯಂದನವನ್ನು, ಮುಸುಕಿದಂ-ಕವಿದುಕೊಂಡನು, ಬಳಿಕ- ತರುವಾಯ, ಈರ್ವರ್ಗೆ-ಬಭ್ರುವಾಹನ ಸುವೇಗರಿಗೆ, ಸಂಗರಂ-ಕಾಳಗವು, ಪೊಸತು-ಹೊಸದಾದ್ದು, ಆದುದು-ಆಗಿಬಿಟ್ಟಿತು, ಮತ್ತೆ-ತಿರುಗಿ, ವೀರರ-ಶೂರಾಗ್ರಣಿಗಳ, ಇರ್ಛಾಸಿರವನು - ಎರಡು ಸಹಸ್ರ ಸಂಖ್ಯೆಯನ್ನು, ಅರ್ಜುನಿ-ಪಾರ್ಥನಂದನನು, ಕೊಂದನು-ಸಂಹರಿಸಿದವನಾದನು ‖

ಅ‖ ವಿ‖ ಅಸುರಾರಿ-(ಸ. ದೀ.) ಬಲ್ಮೆ-ಬಲ್ಲಿದರ ಭಾವ (ಭಾವನಾಮ) ದೆಸೆಗೆಟ್ಟು (ಕ್ರಿ. ಸ.) ಹಂಸಧ್ವಜಂ-ಹಂಸವು ಧ್ವಜವು ಯಾರಿಗೊ ಆವನು (ಬ. ಸ.) ಅಸಮಭುಜಬಲಸುವೇಗಂ - ಸಮವಲ್ಲದ್ದು ಅಸಮ (ನಞ್ ತತ್ಪುರುಷ). ಭುಜದ + ಬಲ = ಭುಜಬಲ, (ಷ. ತ.) ಅಸಮವಾದ ಭುಜಬಲಂ (ವಿ. ಪೂ.) ಅಸಮಭುಜಬಲಸಹಿತನಾದ ಸುವೇಗಂ (ವಿ. ಪೂ) ಇರ್ಛಾಸಿರವನು (ದ್ವಿಗು ಸ.) ‖ ೩ ‖

ಟೀ‖ ಈರ್ವರುಂ-ಬಭ್ರುವಾಹನ ಸುವೇಗರು, ಸಾಹಸದೊಳ್-ಪರಾಕ್ರಮದಲ್ಲಿ, ಸರಿಯೆನೆ - ಒಂದೇ ಎಂಬಂತೆ, ಮಹಾ- ದೊಡ್ಡದಾದ, ಆಹವದೊಳು-ಕಾಳಗದಲ್ಲಿ, ಎಚ್ಚಾಡಿ-ಹೋರಾಡಿದವರಾಗಿ, ವಿರಥನಾಗಿಯೇ-ತೇರಿನಿಂದ ಬಿಡಲ್ಪಟ್ಟವನಾಗಿಯೆ, ಬಭ್ರುವಾಹನನ-ಪಾರ್ಥಜನ, ಬಾಣದಿಂದ-ಕಣೆಗಳಿಂದ, ಉರೆ-ಹೆಚ್ಚಾಗಿ, ನೊಂದು-ಸಂಕಟಪಟ್ಟು, ಅವನಿಗೆ-ಭೂಮಿಯಮೇಲೆ, ಬಿದ್ದನು-ಬಿದ್ದುಹೋದನು, ಪಾರ್ಥಿ-ಅರ್ಜುನಿಯಾದರೊ, ಬಳಿಕ-ಆಮೇಲೆ, ನರನ-ಫಲ್ಗುಣನ, ಮೋಹರವನು-ದಳವನ್ನು, ಐದಿದಂ-ಹೋಗಿ ಸೇರಿದನು, ಇದು-ಈ ಶಬ್ದವು, ಪ್ರಳಯ ಭೈರವನ-ಕಲ್ಪಾಂತ ಹರನ, ಕೋಲಾಹಲಂ-ಕೋಲಾಹಲ ಧ್ವನಿಯು, ಎಂಬಂತೆ-ಎಂಬತೆರನಾಗಿ, ಎಲ್ಲಾಬಲವನು-ಸಮಸ್ತ ಪರಿವಾರವನ್ನೂ, ಕೊಂದನು-ಸಂಹಾರ ಮಾಡಿದನು, ಪಾರ್ಥಕರ್ಣಸುತರು-ಅರ್ಜುನ ಮತ್ತು ವೃಷಧ್ವಜರೆನ್ನುವ, ಈರ್ವರೆ-ಇಬ್ಬರು ಮಾತ್ರವೇ, ಜೀವಪರರೊಲು-ಜೀವಾತ್ಮ ಪರಮಾತ್ಮರೊ ಎಂಬಂತೆ, ಉಳಿದರು-ಮಿಕ್ಕವರಾದರು ‖

ಅ‖ ವಿ‖ ಮಹಾಹವ-(ಸ. ದೀ.) ಪಾರ್ಥಕರ್ಣಸುತರು (ದ್ವಂದ್ವ ಸಮಾಸ) ‖ ೪ ‖

ಟೀ‖ ಇಂತು-ಈ ಪ್ರಕಾರವಾಗಿ, ಇವರು-ಈ ಪಾರ್ಥ ಕರ್ಣಜರು, ರಣದೊಳು - ಯುದ್ಧಭೂಮಿಯೊಳಗೆ, ಇರುತಿರಲು-ಇರಲಾಗಿ, ಅತ್ತ-ಬಭ್ರುವಾಹನನ ಊರಿನೊಳಗೆ, ಮುನ್ನ-ಪೂರ್ವಕಾಲದಲ್ಲಿ, ಒಂದು ಕಾರಣಕೆ-ಒಂದು ನಿಮಿತ್ತವಾಗಿ, ಗುರು-ಧರ್ಮತನಯನು, ಶಾಪ-ಗಂಡನೊಂದಿಗಿರುವ ಪಾಂಚಾಲಿಯನ್ನು ನೋಡತಕ್ಕವರು ತೀರ್ಥಯಾತ್ರೆಯನ್ನು ಮಾಡಿಕೊಂಡು ಭೂಮಂಡಲವನ್ನೆಲ್ಲಾ ಸುತ್ತಬೇಕೆನ್ನುವ ನಿಯಮವನ್ನು, ಮುಂಕೊಡಲು-ಮುಂದೆಕೊಡಲು,ಫಲುಗುಣನು-ಪಾರ್ಥನು,

---

ಕಾಲಕ್ಕೆ ಸರಿಯಾಗಿ ಸುವೇಗನೆಂಬ ಅಸಹಾಯಶೂರನು ಸೇನಾಸಮೇತನಾಗಿ ಬಂದು ಬಭ್ರುವಾಹನನನ್ನು ಎಲ್ಲೆಲ್ಲಿಯೂ ಮುತ್ತಿಕೊಳ್ಳಲು ಅರ್ಜುನಿಯು ಸುವೇಗನ ಬಲದಲ್ಲಿ ಎರಡು ಸಹಸ್ರಶೂರಜನರನ್ನು ಕೊಂದು ‖೩‖ ಅತಿ ರೋಷದಿಂದ ಸುವೇಗನೊಂದಿಗೆ ಘೋರ ಯುದ್ಧವಂ ಗೈಯುತ್ತಲಿದ್ದನು ಸುವೇಗನೂ ಕೂಡ ಬಹು ಪರಾಕ್ರಮದಿಂದ ಹೋರಾಡಿ ಕೊನೆಗೆ ಪಾರ್ಥಜನ ಬಾಣದ ಪೆಟ್ಟುಗಳನ್ನು ತಡಿಯಲಾರದೆ ಮೂರ್ಛೆದಳೆದು ಅವನಿತಳಕ್ಕೊರಗಿದನು. ಬಭ್ರುವಾಹನನಾದರೊ ಸುವೇಗನನ್ನು ನೆಲಕ್ಕೆ ಕೆಡಹಿ ಅರ್ಜುನನ ಸೈನ್ಯದಮೇಲೆ ನುಗ್ಗಿ ಕಲ್ಪಾಂತ ಭೈರವನಂತೆ ಕಡುಕೋಪವಂತಾಳಿ ಶತ್ರುಗಳ ಪಡೆಯನ್ನೆಲ್ಲಾ ನಿರ್ಮೂಲ ಮಾಡಿದನು. ಕಡೆಗೆ ಅರ್ಜುನನ ಸೈನ್ಯದಲ್ಲಿ ಪಾರ್ಥ ಕರ್ಣತನುಜರೆಂಬೀರ್ವರು ಮಾತ್ರ ಜೀವಾತ್ಮ ಪರಮಾತ್ಮರಂತೆ ಉಳಿದವರಾದರು ‖೪‖ ಪೂರ್ವದಲ್ಲಿ ಧರ್ಮತನಯನು ದ್ರೌಪದಿಯೊಂದಿಗೆ ಕೂಡಿರುವ ವೇಳೆಯೊಳಗೆ ತನ್ನ ಅಣ್ಣತಮ್ಮಂದಿರು ಯಾರು ನೋಡಿದರೂ ಭೂಪ್ರದಕ್ಷಿಣೆ ಮಾಡಬೇಕೆಂದು ಮಾಡಿದ್ದ ಶಾಸನದಂತೆ ಅರ್ಜುನನು ಯುಧಿಷ್ಠಿರ ದ್ರೌಪದಿಯರು ಒಂದುಗೂಡಿದ ವೇಳೆಯೊಳಗೆ ನೋಡಿದನಾದ್ದರಿಂದ ಧರ್ಮಪುತ್ರನ ಅಪ್ಪಣೆಯಂತೆ ಭೂಪ್ರದಕ್ಷಿಣೆಯಂ ಮಾಡುತ್ತಲಿರುವಾಗ ತಾನು

ರ್ಛಿತನಾಗಿಸಮುಂಧಿ | ರಣಿಯೊಳಿಪವೊರೆಗಳಂತರಿಸಿಮಂತ್ರೌಷಧಿಗಳಿಂದಪಾಲಿಸುತಿರ್ದಳು ||೪|| ನೃಪಕೇಳುಲೂಪಿಚಿತ್ರಾಂಗ ದೆಗೆಪೇಳ್ದಸುರ | ರಿಪುಸುತಂತನಯುರಂವೆರಸಿಬಳಿಕಪಾರ್ಥಜನ | ವಿಪುಲಾಸ್ತ್ರದಿಂದಮೂರ್ಛಿತರಾಗಿರಣದೊಳಿರಲೀರ್ವರಂತರಿಸಿ ಕೊಂಡ. || ಅಪಗತಶ್ರಮರಪ್ಪತೆರದಿಂದಮಂದಿರದೊ | ಳುಪಚರಿಸಿಮಣಿಮಂತ್ರಮೂಲಿಕಾತತಿಗಳಿಂ | ತಪಿಸಿದಂತಾರೈವುತಿರ್ದ ಳರ್ಜುನನಿತ್ತ ವೃಷಕೇತುಗಿಂತೆಂದನು ||೫|| ಮಗನೆಮಡಿದುದಂಸೈನ್ಯಮನುಸಾಲ್ವಮುಖರಾದ | ವಿಗಡರೇರ್ವಡೆದಸೈಗೆಡೆದರಿಳೆ ಯೊಳ್ ನಮ್ಮ | ನಗರಿಗನಿರುದ್ಧಪ್ರದ್ಯುಮ್ನರಂಕೊಂಡೊಯ್ದರಹಿತರಿವನಂಜಯಿಸುವ || ಬಗೆಗಾಣೆನಾದೊಡಂನಿಲ್ಲಿನಿಲ್ಲಿಕಾ |

---

ಅದಂ–ಆ ಬಂಧನವನ್ನು, ಬಿಡಿಸಿ–ಹೋಗಲಾಡಿಸಿಕೊಂಡು, ಅಂದು–ಆ ಕಾಲದಲ್ಲಿ, ಅಮಲ–ಪವಿತ್ರವಾದ, ತೀರ್ಥಯಾತ್ರಾಪ್ರ ಸಂಗದೊಳು–ತೀರ್ಥಯಾತ್ರೆಯನ್ನು ಮಾಡುವುವರಲ್ಲಿ, ತಾಂ–ತಾನಾದರೊ, ಪರಿಗ್ರಹಿಸಿ–ಸ್ವೀಕರಿಸಿ, ನೆರೆದ–ಸೇರಿದ, ಫಣಿ ರಾಜ–ನಾಗರಾಜನ, ನಂದನೆ–ಕುವರಿಯಾದ, ಉಲೂಪಿಯುಂ–ಉಲೂಪಿ ಎನ್ನತಕ್ಕವಳನ್ನು, ಪಾತಾಳಲೋಕದಿಂ–ನಾಗಲೋಕ ದಿಂದ, ಮಣಿಪುರಕೆ–ಬಭ್ರುವಾಹನನ ನಗರಿಗೆ, ಬಂದು–ಐತಂದು, ಸಮರಧಾರುಣಿಯೊಳ್–ರಣರಂಗದಲ್ಲ, ಮೂರ್ಛಿತರಾಗಿ– ಸ್ಮೃತಿತಪ್ಪಿದವರಾಗಿ, ಇಹ–ಇರತಕ್ಕ, ದೊರೆಗಳಂ–ಅರಸುಗಳನ್ನು, ತರಿಸಿ–ನಗರಿಗೆ ಬರುವಂತೆ ಮಾಡಿ, ಮಂತ್ರೌಷಧಿಗಳಿಂದ– ಮಂತ್ರಮೂಲಿಕಾದಿಗಳ ಚಿಕಿತ್ಸೆಗಳನ್ನು ಮಾಡುತ್ತಾ, ಪಾಲಿಸುತಿರ್ದಳು–ಅವರನ್ನು ಸಲಹುತ್ತಿದ್ದಳು ||

ಅ|| ವಿ|| ತೀರ್ಥಯಾತ್ರಾಪ್ರಸಂಗ–ತೀರ್ಥದ–ಯಾತ್ರೆ (ಷ. ತ.) ತೀರ್ಥಯಾತ್ರೆಯ ಪ್ರಸಂಗ (ಷ. ತ.) ಮಂತ್ರೌ ಷಧಿ (ವೃದ್ಧಿಸಂಧಿ.) || ೪ ||

ಟೀ|| ನೃಪ–ಎಲೈ ರಾಜಶ್ರೇಷ್ಠನಾದ ಜನಮೇಜಯನೆ, ಕೇಳು–ಲಾಲಿಸು, ಉಲೂಪಿ–ಉಲೂಪಿಯು, ಚಿತ್ರಾಂಗ ದೆಗೆ–ಪಾರ್ಥನ ಹೆಂಡತಿಗೆ, ಪೇಳ್ದ–ಗಂಗೆಯ ಶಾಪವನ್ನು ಅರುಹಿ, ಅಸುರರಿಪು–ರಾಕ್ಷಸಾಂತಕನ, ಸುತಂ–ಕುವರನಾದ ಮನ್ಮ ಥನು, ತನಯುಂವೆರಸಿ–ತನ್ನ ಕುವರನಾದ ಅನಿರುದ್ಧನಿಂದೊಡಗೂಡಿ, ಬಳಿಕ–ತರುವಾಯ, ಪಾರ್ಥಜನ–ಅರ್ಜುನಿಯ, ವಿಪುಲಾ ಸ್ತ್ರದಿಂದ–ವಿಶಾಲವಾದ ಬಾಣಪರಂಪರೆಯಿಂದ, ಮೂರ್ಛಿತರಾಗಿ–ಸ್ಮೃತಿತಪ್ಪಿಹೋಗಿ, ರಣದೊಳ್–ಸಮರಾಂಗಣದಲ್ಲಿ, ಇರಲು– ಇರಲಾಗಿ, ಈರ್ವರಂ–ಅವರಿಬ್ಬರನ್ನೂ, ತರಿಸಿಕೊಂಡು–ತನ್ನಬಳಿಗೆ ಬರಮಾಡಿಕೊಂಡು, ಅಪಗತ–ಕಳೆದುಹೋದ, ಶ್ರಮರು– ಸಂಕಟವುಳ್ಳವರು, ಅಪ್ಪ–ಆಗತಕ್ಕ, ತೆರದಿಂದ–ಬಗೆಯಿಂದ. ಮಂದಿರದೊಳು–ಮನೆಯೊಳಗೆ, ಉಪಚರಿಸಿ–ಸತ್ಕಾರವಂಮಾಡಿ, ಮಣಿ–ಕಾರೋಬ ಮೊದಲಾದವುಗಳ, ಮಂತ್ರ–ಮಂತ್ರಗಳ, ಮೂಲಿಕಾ–ಗಿಡಗಳ ಎಲೆಬೇರು ಮೊದಲಾದವುಗಳ, ತತಿಗಳಿಂ– ಸಮುದಾಯುಗಳಿಂದ, ತಪಿಸದಂತೆ–ಸಂಕಟ ಪೊದಗದತೆರನಾಗಿ, ಆರೈವುತ–ಉಪಚಾರವಂ ಗೈಯ್ಯುತ್ತ, ಇದ್ದಳು ಇದ್ದವಳಾ ದಳು, ಇತ್ತ–ರಣರಂಗದಲ್ಲಾದರೊ, ಅರ್ಜುನನು–ಪಾರ್ಥನು, ವೃಷಕೇತುಗೆ–ಕರ್ಣಸುತನನ್ನು ಕುರಿತು, ಇಂತು–ಮುಂದೆಹೇ ಳುವ ತೆರನಾಗಿ, ಎಂದನು–ಹೇಳಿದವನಾದನು ||

ಅ|| ವಿ|| ಮಣಿಮಂತ್ರಮೂಲಿಕಾತತಿಗಳಿಂ–ಮಣಿಯು ಮಂತ್ರವು ಮೂಲಿಕೆಯು ಮಣಿಮಂತ್ರ ಮೂಲಿಕೆಗಳು (ಬ. ದ್ವಂ. ಸ.) ಮಣಿಮಂತ್ರ ಮೂಲಿಕೆಗಳ ತತಿಗಳು (ಷ. ತ.) ವೃಷಕೇತು–ವೃಷ – ಎತ್ತನ್ನೆ, ಕೇತು – ಧ್ವಜಪಟದಲ್ಲಿ ಉಳ್ಳ (ಬ. ಸ.) || ೫ ||

ಟೀ|| ಮಗನೆ–ಎಲೈ ಕುವರನಾದ ಕರ್ಣಪುತ್ರನೆ, ಸೈನ್ಯಂ–ದಳವೆಲ್ಲಾ, ಮಡಿದುದು–ಹಾಳಾಯಿತು, ಅನುಸಾಲ್ವ– ಸಾಲ್ವಾನುಜನೆ, ಮುಖರಾದ–ಮೊದಲಾಗಿರತಕ್ಕ, ವಿಗಡರು–ಅಸಹಾಯುಶೂರರೆಲ್ಲಾ, ಏರ್ವಡದು–ಬಭ್ರುವಾಹನನೊಂದಿಗೆ ಹೋ ರಾಡಿ–ಗಾಯಪಟ್ಟು, ಇಳೆಯೊಳ್–ಭೂಮಿಯಮೇಲೆ, ಸೈಗೆಡದರು–ಬಿದ್ದುಬಿಟ್ಟರು, ಅಹಿತರು–ವೈರಿಗಳು, ಅನಿರುದ್ಧ ಪ್ರದ್ಯುಮ್ನರ–

---

ಪರಿಸಿದ್ಧ ಉಲೂಪಿ ಎಂಬ ನಾಗಕನ್ನಿಕೆಯು ಪಾತಾಳಲೋಕದಿಂದ ಮಣಿಪುರಕ್ಕೆ ಜಾಗ್ರತೆಯಾಗಿ ಬಂದು ಅರ್ಜುನನ ಸೈನ್ಯ ದಲ್ಲಿ ಸತ್ತುಬಿದ್ದ ವೀರರನ್ನೆಲ್ಲಾ ಪಟ್ಟಣಕ್ಕೆ ಕರೆಯಿಸಿಕೊಂಡು, ಮಂತ್ರೌಷಧಾದಿಗಳಿಂದ ಅವರ ಪ್ರಾಣವನ್ನು ಕಾಪಾಡುತ್ತಲಿ ದ್ದಳು ||೪|| ಎಲೈ ಜನಮೇಜಯನೆ ಕೇಳು ಉಲೂಪಿಯು ಚಿತ್ರಾಂಗದೆಯೊಂದಿಗೆ ಗಂಗೆಯಿಂದ ಅರ್ಜುನನಿಗೆ ಶಾಪವು ಬಂ ದಿರುವುದನ್ನೂ, ಇನ್ನೂ ಇತರ ಸಂಗತಿಗಳನ್ನೂ ತಿಳಿಸಿದವಳಾಗಿ ಯುದ್ಧದಲ್ಲಿ ಮೂರ್ಛೆಗೊಂಡು ಬಿದ್ದು ಹೋಗಿದ್ದ ಪ್ರದ್ಯು ಮ್ನಾನಿರುದ್ಧರನ್ನು ಕರೆಯಿಸಿಕೊಂಡು ದಿವ್ಯೌಷಧಿಗಳಿಂದಲೂ ಅನೇಕ ಮಂತ್ರಾದಿಗಳಿಂದಲೂ ಉಪಚರಿಸುತ್ತಿದ್ದ ಳು ಅತ್ತ ರಣರಂಗದಲ್ಲಿ ಅರ್ಜುನನು ವೃಷಧ್ವಜನನ್ನು ಕುರಿತು || ೫ || ಎಲೈ ಪುತ್ರನೆ ನಮ್ಮ ಸೈನ್ಯವೆಲ್ಲಾ ಹಾಳಾಯಿತು ಅನು ಸಾಲ್ವಾದಿ ವೀರರೆಲ್ಲಾ ಯುದ್ಧಕ್ಕೆ ಹೋಗಿ ಸೋತು ಮೂರ್ಛೆಗೊಂಡರು. ಪರರಾಜರು ಪ್ರದ್ಯುಮ್ನಾನಿರುದ್ಧರನ್ನು ಮಣಿಪು ರಕ್ಕೆ ಸೆರೆಹಿಡಿದುಕೊಂಡು ಹೋಗಿಬಿಟ್ಟರು ಈ ಬಭ್ರುವಾಹನನನ್ನು ಗೆಲ್ಲುವುದು ಅಸಾಧ್ಯವೆಂದು ತೋರುತ್ತಲಿರುವುದು ಆದರೂ

ಳಗಕೆನೀನಿರದೆಹಸ್ತಿನಪುರಿಗೆಪೋಗಿಪೇಳ್ ಅಗಧರಯುಧಿಷ್ಠಿರರ್ಗೀಸ್ಥಿತಿಯನೆಂಬಿನಿಂತೋರಿತುತ್ಪಾತಂಗಳು ||೬|| ಪದ್ದುಕುಳ್ಳಿರ್ದುದ ರ್ಜುನನಮುಕುಟಾಗ್ರದೊಳ್ | ಡರ್ಪುಗೂಡಿಕ್ಕಿದವುರಥದೊಳ್ಕಪೋತಂಗ | ಳಿರ್ದುದುತನುಚ್ಛಾಯೆತಲೆಯಿಲ್ಲದಿನಿತುಮಂಕಂಡುಬೆ ರಗಾಗಿನರನು | ಪೊದ್ದದಿಂದಪಜಯಂತನಗಿನ್ನುಧರ್ಮಜಂ | ನಿರ್ದೈವನಹನಲಾಶಿವಮಹಾದೇವಮುರ | ಮರ್ದನಂತುರಗಮೇಧ ವನೆಂತುಮಾಡಿಸುವಕರ್ಣಸುತಹೇಳೆಂದನು ||೭|| ವಾಜಿಸಹಿತಾಂಪೋಗಿಸಕಲಪರಿಕರದಿಂದ|ತೇಜದಿಂದೊಪ್ಪುವಗ್ನಿಗಳಿಂದಭೂಸು ರಸ | ಮಾಜದಿಂದಖಿಳಋತ್ವಿಕ್ಕುಗಳಬಹುವಿಧದಮಂತ್ರಘೋಷಂಗಳಿಂದ || ರಾಜಿಸುವನುತಯಜ್ಞಶಾಲೆಯೊಳ್ಭೂವರಂ |

---

ಅನಿರುದ್ಧ ಮನ್ಮಥರನ್ನು ತಮ್ಮನಗರಿಗೆ-ತಮ್ಮ ರಾಜಧಾನಿಗೆ, ಕೊಂಡೊಯ್ದರು-ಸಾಗಿಸಿಕೊಂಡು ಹೋದರು, ಇವನಂ-ಈ ಬಭ್ರುವಾಹನನನ್ನು, ಜಯಿಸುವ-ಸೋಲಿಸತಕ್ಕ, ಬಗೆ-ತೆರನನ್ನು, ಕಾಣೆನು-ಕಂಡಿಲ್ಲವು, ಆದೊಡಂ-ಹೇಗಿದ್ದರೂ, ಆಂ-ನಾನಾ ದರೊ, ಕಾಳಗಕೆ-ಯುದ್ಧಮಾಡುವದಕ್ಕೋಸ್ಕರ, ಇಲ್ಲಿ-ಈ ಎಡೆಯಲ್ಲಿಯೆ, ನಿಲ್ವೆನು-ಇರುವೆನು, ನೀನು-ನೀನಾದರೊ, ಇರದೆ-ತಡಮಾಡದೆ, ಹಸ್ತಿನಾಪುರಿಗೆ-ಹಸ್ತಿನಾವತಿ ಪಟ್ಟಣಕ್ಕೆ, ಪೋಗಿ-ಹೋಗಿಸೇರಿ, ಅಗಧರಯುಧಿಷ್ಠಿರರ್ಗೆ-ಕೃಷ್ಣನಿಗೂ ಧರ್ಮ ಪುತ್ರನಿಗೂ ಕೂಡ, ಈ ಸ್ಥಿತಿಯನು-ಇಲ್ಲಿನ ಸಮಾಚಾರವನ್ನು, ಪೇಳು-ಹೇಳುವನಾಗು, ಎಂಬಿನಿಂ-ಎನ್ನುವದರೊಳಗೆ, ಉತ್ಪಾತಂಗಳು-ಅಶುಭಗಳು, ತೋರಿತು-ತಲೆದೋರಿದವು || ೬ ||

ಟೀ|| ಪದ್ದು-ಹದ್ದುಗಳು, ಅರ್ಜುನನ-ಪಾರ್ಥನ, ಮುಕುಟಾಗ್ರದೊಳ್-ಕಿರೀಟದ ತುದಿಯಲ್ಲಿ, ಕುಳ್ಳಿರ್ದುದು-ಕುಳಿತು ಕೊಂಡಿತು, ರಥದೊಳು-ತೇರಿನಲ್ಲಿ, ಕಪೋತಂಗಳು-ಪಾರಿವಾಳಗಳು, ಅಡರ್ದು-ಏರಿ, ಗೂಡಿಕ್ಕಿದವು-ಗೂಡುಮಾಡಿ ಕೊಂಡವು, ತಲೆಯಿಲ್ಲದೆ-ತಲೆಯಿಂದ ಬಿಡಲ್ಪಟ್ಟ, ತನು-ಶರೀರದ, ಛಾಯೆ- ನೆರಳು, ಇರ್ದುದು- ಇದ್ದಿತು, ಇನಿತು-ಈಬಗೆ ಯಾದ, ಎಲ್ಲಮುಂ-ಸಕಲವನ್ನೂ, ನರನು-ಫಲ್ಗುಣನು, ಕಂಡು-ನೋಡಿ, ಬೆರಗಾಗಿ-ಭ್ರಾಂತಿಯಿಂದ ಕೂಡಿ, ಅಪಜಯಂ-ಪರಾ ಭವವು, ತನಗೆ-ನನಿಗಾದರೊ, ಪೊದ್ದದೆ-ಪ್ರಾಪ್ತವಾಗದೆ, ಇರದು-ಇರುವುದಿಲ್ಲವು, ಇನ್ನು-ಇನ್ನುಮೇಲೆ, ಧರ್ಮಜಂ-ಧರ್ಮಸು ತನು, ನಿರ್ದೈವನು-ದೈವಬಲದಿಂದ ರಹಿತನಾದವನು, ಅಹನು-ಆಗುತ್ತಾನೆ, ಅಲಾ-ಅಲ್ಲವೆ, ಶಿವ-ಈಶ್ವರನೆ, ಮುರಮರ್ದನಂ-ಮುರಾಂತಕನಾದ ಕೃಷ್ಣಮೂರ್ತಿಯು, ಎಂತು-ಯಾವತೆರನಾಗಿ, ತುರಗಮೇಧವನು-ಹಯಮೇಧವನ್ನು, ಮಾಡಿಸುವ-ನಡೆಯಿ ಸುವನೊ, ಕರ್ಣಸುತ-ಎಲೈ ಕರ್ಣನ ಸುತನಾದ ವೃಷಧ್ವಜನೆ, ಹೇಳು-ಹೇಳತಕ್ಕವನಾಗು, ಎಂದನು-ಎಂದು ನುಡಿದನು ||

ಅ|| ವಿ|| ಮುಕುಟಾಗ್ರ-ಮುಕುಟದ ಆಗ್ರ (ಷ. ತ.) ಮುಕುಟಾಗ್ರ (ಸ. ದೀ.) || ೭ ||

ಟೀ|| ವಾಜಿಸಹಿತ-ಯಜ್ಞಾಶ್ವದೊಂದಿಗೆ, ಆಂ-ನಾನು, ಪೋಗಿ-ಸೇರಿದವನಾಗಿ, ಸಕಲ-ಎಲ್ಲಾ ಬಗೆಯಾದ, ಪರಿಕ ರದಿಂದ-ಸೋಪಸ್ಕರಗಳಿಂದ, ತೇಜದಿಂ-ಕಾಂತಿಯಿಂದ, ಒಪ್ಪುವ-ಪ್ರಕಾಶಿಸುವ, ಅಗ್ನಿಗಳಿಂದ-ತ್ರೇತಾಗ್ನಿಗಳಿಂದ, ಭೂಸುರ-ವಿಪ್ರರ, ಸಮಾಜದಿಂದ-ಸಮುದಾಯದಿಂದ, ಅಖಿಲ-ಸಕಲರಾದ, ಋತ್ವಿಕ್ಕುಗಳ-ಋತ್ವಿಗ್ಜನರ, ಬಹುವಿಧ-ತಂಡತಂಡವಾದ, ಮಂತ್ರಘೋಷಂಗಳಿಂದ-ಚತುರ್ವೇದ ಮಂತ್ರನಿನದಂಗಳಿಂದ, ರಾಜಿಸುವ-ಕಾಂತಿಯುಕ್ತವಾಗಿರುವ, ನುತ-ಸ್ತೋತ್ರಾರ್ಹ ವಾದ, ಯಜ್ಞಶಾಲೆಯೊಳ್-ಯಾಗಮಂಟಪದಲ್ಲಿ, ಯಾಜಮಾನ್ಯದೋಳ್-ಯಜಮಾನಿಕೆಯಿಂದ, ಭೂವರಂ-ಭೂಕಾಂತನಾದ ಯುಧಿಷ್ಠಿರನು, ಎಸೆವ-ಹೊಳೆಯುವ, ಸಿರಿಯುಂ-ಭಾಗ್ಯವನ್ನೂ, ವೃಕೋದರ-ವಾಯುಸುತನು, ಸರೋಜಾಂಬಕ-ಕೃಷ್ಣಮೂ ರ್ತಿಯು, ಆದಿ-ಮೊದಲಾದ, ಬಾಂಧವರೊಳು-ನೆಂಟರುಗಳ ಸಮೂಹದಿಂದ, ಆವೃತನಾಗಿ-ಸುತ್ತುಗಟ್ಟಲ್ಪಟ್ಟವನಾಗಿ, ಇರಲ್-ಇರತಕ್ಕದ್ದನ್ನು, ಕಾಣೆನು-ನೋಡುವುದಿಲ್ಲವಲ್ಲಾ, ಅಕಟ-ಅಯ್ಯೋ, ಎಂದು-ಎಂಬುದಾಗಿ ಹೇಳಿದನು ||

ಅ|| ವಿ|| ಭೂಸುರ-ಭೂಮಿಯ ಸುರ (ಷ. ತ.) ಮಂತ್ರಘೋಷ-ಮಂತ್ರಗಳ ಘೋಷ (ಷ. ತ.) ಭೂವರಂ-ಭೂ

---

ನಾನಿಲ್ಲಿನಿಂತು ಬಭ್ರುವಾಹನನೊಂದಿಗೆ ಹೋರಾಡುವೆನು ನೀನು ತಡಮಾಡದೆ ಹಸ್ತಿನಾವತಿಗೆ ಹೋಗಿ ಈ ಸುದ್ದಿಯನ್ನು ಧರ್ಮಪುತ್ರನಿಗೂ ಕೃಷ್ಣನಿಗೂ ತಿಳಿಸೆಂದು ಹೇಳುತ್ತಿರುವಷ್ಟು ಕಾಲಕ್ಕೆ ಸರಿಯಾಗಿ || ೬ || ಅನೇಕ ಅಪಶಕುನಗಳು ತೋರ ಲಾರಂಭಿಸಿದವು ಅರ್ಜುನನ ಕಿರೀಟದ ಕೊನೆಯಲ್ಲಿ ಹದ್ದು ಬಂದು ಕುಳಿತುಕೊಂಡಿತು, ಅವನ ತೇರಿನೊಳಗೆ ಪಾರಿವಾಳಗಳು ಗೂಡನ್ನು ಮಾಡಿದವು ತನ್ನ ತಲೆಯು ಮಾತ್ರಕಾಣದೆ ಉಳಿದ ಭಾಗವು ಪ್ರತಿ ಛಾಯೆಯಲ್ಲಿ ಕಂಡುಬರುತ್ತಲಿತ್ತು ಅರ್ಜುನನು ಇದನ್ನೆಲ್ಲಾ ನೋಡಿ ಆಹಾ ನನಿಗೆ ಅಪಜಯವು ನಿಶ್ಚಯವು ಧರ್ಮರಾಯನು ದೈವಬಲವನ್ನು ಕಳೆದುಕೊಂಡನು ಇನ್ನು ಯುಧಿ ಷ್ಠಿರನು ಅಶ್ವಮೇಧ ಯಾಗವನ್ನು ಮಾಡುವ ಬಗೆಯಾವುದು ? ||೭|| ಅಯ್ಯೋ ದೇವರೆ ನಾನು ಯಜ್ಞಾಶ್ವದೊಂದಿಗೆ ಹಸ್ತಿನಾ ವತಿಯನ್ನು ಸೇರಿ ಅನೇಕ ವಿಧವಾದ ಸೋಪಸ್ಕರಗಳಿಂದಲೂ ತ್ರೇತಾಗ್ನಿಗಳಿಂದಲೂ ಬ್ರಾಹ್ಮಣ ಸಮುದಾಯದಿಂದಲೂ ಋತ್ವಿ ಜರ ವೇದಘೋಷದಿಂದಲೂ ಅಣ್ಣ ತಮ್ಮಂದಿರಿಂದೊಡಗೂಡಿ ಪ್ರಕಾಶಿಸುವ ಯುಧಿಷ್ಠಿರನನ್ನು ನೋಡಿ ಸಂತೋಷಪಡುವ ಮಹಾ

ಯಾಜಮಾನ್ಯದೊಳಿಸೆವಸಿರಿಯಂವೃಕೋದರಸ | ರೋಜಾಂಬಕಾದಿಬಾಂಧವರೊಳಾವ್ರತನಾಗಿರಲ್ಕಾಹೆನಕಟೆಂದನು || ೮ || ಪೇಳಲೇನಹುದಿನ್ನು ಬಭ್ರುವಾಹನನೊಡನೆ | ಕಾಳಗಂಗೊಡುವೆನಾಂ ಕುಲಕೆಮುಗನೀನೋರ್ವ | ಬಾಳುವೆಗೆಡಿಸಬೇಡಗಜಪುರಕೆಪೋಗಿಮುರಹರಧರ್ಮನಂದನರ್ಗೆ || ಕಾಳಾದರಾಜಕಾರ್ಯಸ್ಥಿತಿಯನೆಚ್ಚರಿಸು | ಕೇಳೆನ್ನಮಾತನೆಂದರ್ಜುನಂನುಡಿಯಲ್ಕೆ | ತಾಳದವೃಷಧ್ವಜಂಕೋಪದಿಂಪಾರ್ಥಂಗೆಕೈಮುಗಿವುತಿಂತೆಂದನು ||೯|| ಬಳ್ಳಿತಿದುತಾತನಿನ್ನಂಬಿಟ್ಟುನಾಂಪೋಗ | ಲುಳ್ಳವನೆಗಜನಗರಿಗಕಟರಣದೊಳ್ಜೀವ | ಗಳ್ಳನಾದೊಡೆಮುತ್ತಿತಾಮಹಂಬೀಳದಿರ್ದಪನೆಗಗನಾಗ್ರದಿಂದ || ಹೊಳ್ಳಿದೆಯಹೊಂಬಿಗರೊಳೆಂಬುದೀ

ಮಿಯುಲ್ಲಿವರ (ಸ. ತ ) ಸಿರಿ (ತ್ಭ)-ಶ್ರೀ (ತ್ಸ), ವೃಕೋದರ (ಗು. ಸ.) ವೃಕ-ತೋಳದ, ಉದರಂ-ಹೊಟ್ಟೆಯಹಾಗೆ ಹೊಟ್ಟೆಯುಳ್ಳವನು, (ಭೀಮಸೇನನು) ಬ. ಸ. ಸರೋಜಾಂಬಕ-ಸರ-ಸರೋವರದಲ್ಲಿ, ಜ-ಹುಟ್ಟಿದ್ದು ಕಮಲ, (ಸ. ತ.) ಸರೋಜ-ತಾವರೆಹೂವಿನಂತೆ, ಅಂಬಕ-ನೇತ್ರವುಳ್ಳವನು ಯಾರೊ ಅವನು (ಕೃಷ್ಣನು. ಬ. ಸ.) ಯಜಮಾನ-ಯಜಮಾನನ ಸಂಬಂಧನಾದದ್ದು ಯಾಜಮಾನ್ಯ (ಒಡೆತನ) ಅಕಟ-ದುಃಖ ಮತ್ತು ಆಶ್ಚರ್ಯಗಳಲ್ಲಿ ಪ್ರಯೋಗಿಸ ಬಹುದಾದ ಅವ್ಯಯ || ೮ ||

ಟೀ|| ಇನ್ನು-ಇನ್ನುಮೇಲೆ, ಪೇಳಲು - ಹೇಳಬೇಕಾದರೆ, ಏನಹುದು-ಏನುತಾನೆ ಸಾಧ್ಯವು, ನಾಂ-ನಾನಾದರೊ, ಬಭ್ರುವಾಹನನೊಡನೆ-ಪಾರ್ಥನಕೂಡ, ಕಾಳಗಂಗೊಡುವೆ-ಯುದ್ಧಕ್ಕೆ ನಿಲ್ಲುತ್ತೇನೆ, ನೀನು-ನೀನಾದರೊ, ಓರ್ವ-ಒಬ್ಬನು ಮಾತ್ರವೇ, ಕುಲಕೆ-ನಮ್ಮ ವಂಶಕ್ಕೆಲ್ಲಾ, ಮಗ-ಸುಕುಮಾರನಾಗಿರುವೆ, ಬಾಳುವೆಗೆಡಿಸಬೇಡ-ವಂಶಕ್ಕೆ ಹಾನಿಯನ್ನು ತರಬೇಡ, ಗಜಪುರಿಗೆ-ಹಸ್ತಿನಾವತಿ ಪಟ್ಟಣಕ್ಕೆ, ಪೋಗಿ-ಹೋಗಿ ಸೇರಿ, ಕಾಳಾದ-ನಷ್ಟವಾಗಿರುವ, ರಾಜಕಾರ್ಯಸ್ಥಿತಿಯನು-ರಾಜಕಾರ್ಯದ ತೆರನನ್ನು, ಮುರಹರಧರ್ಮನಂದನರ್ಗೆ-ಮುರಾಂತಕನಾದ ಕೃಷ್ಣಸ್ವಾಮಿಗೂ ಧರ್ಮಪುತ್ರನಿಗೂ ಸಹ, ಎಚ್ಚರಿಸು-ತಿಳಿಸುವನಾಗು, ಎನ್ನ-ನನ್ನ, ಮಾತನು-ನುಡಿಗಳನ್ನು ಕೇಳು-ಲಾಲಿಸು, ಎಂದು-ಎಂಬತೆರನಾಗಿ, ಅರ್ಜುನನು-ಪಾರ್ಥನು, ನುಡಿಯಲ್ಕೆ-ತಿಳಿಸಲಾಗಿ, ತಾಳದ-ಈ ಮಾತುಗಳನ್ನು ಕೇಳಲು ಇಷ್ಟವಿಲ್ಲದ, ವೃಷಧ್ವಜಂ-ಕರ್ಣ ಸುತನು, ಕೋಪದಿಂ-ಕ್ರೋಧದಿಂದ, ಪಾರ್ಥನಿಗೆ-ಫಲ್ಗುಣನಿಗೆ, ಕೈಮುಗಿವುತ - ನಮಸ್ಕಾರವಂ ಮಾಡುತ್ತ, ಇಂತು- ಮುಂದೆ ಹೇಳುವಂತೆ, ಎಂದನು-ನುಡಿದವನಾದನು ||

ಅ|| ವಿ|| ಕಾಳಗಂಗೊಡೆ-(ಕ. ವ್ಯಂಜನಸಂಧಿ) || ೯ ||

ಟೀ|| ತಾತ-ಎಲೈ ತಂದೆಯಾದ ಅರ್ಜುನನೆ, ಇದು-ಈ ನಿನ್ನ ಮಾತುಗಳು, ಬಳ್ಳಿತು-ಬಹು ಚೆನ್ನಾಗಿದೆ, ನಾಂ-ನಾನಾದರೊ, ನಿನ್ನ-ನಿನ್ನನ್ನು, ಬಿಟ್ಟು-ರಣರಂಗದಲ್ಲಿ ಬಿಟ್ಟು, ಗಜನಗರಿಗೆ-ಹಸ್ತಿನಾಪುರಕ್ಕೆ, ಪೋಗಲುಳ್ಳವನೆ-ಹೋದೇನೆ, ಅಕಟ-ಆಹಾ, ರಣದೊಳ್-ಯುದ್ಧರಂಗದಲ್ಲಿ, ಜೀವಗಳ್ಳನು-ಪ್ರಾಣ ಉಳಿದರೆ ಸಾಕೆಂದು ತಪ್ಪಿಸಿಕೊಳ್ಳುವನು, ಆದೊಡೆ-ಆದಲ್ಲಿ, ಮುತ್ತಿತಾಮಹಂ-ನನ್ನ ತಂದೆಯಾದ ಕರ್ಣನ ಜನಕನಾದ ಸೂರ್ಯನು, ಗಗನಾಗ್ರದಿಂದ-ಅಂತರಿಕ್ಷದ ಕೊನೆಯಿಂದ, ಬೀಳದೆ-ಬಿದ್ದು ಹೋಗದೆ, ಇರ್ದಪನೆ-ಇರುತ್ತಾನೆಯೆ, ಹೊಳ್ಳಿದೆಯ-ಹೇಡಿಗಳಾದ, ಹೊಂಬಿಗರೊಳು-ಇತರ ಜನಗಳಲ್ಲಿ, ಈನುಡಿಯನು-ಇಂತಹಮಾತುಗಳನ್ನು, ಎಂಬುದು - ನುಡಿಯಬೇಕು, ನೀನು-ನೀನಾದರೊ, ಇಂತು-ಈ ಬಗೆಯಾಗಿ, ತಳ್ಳಂಕದಿಂದ-ಹೆದರುವಿಕೆಯಿಂದ, ಎಣಿಕೆಗೊಳ್ಳಲುವಿಕೆ-ಪಿತಕ್ಕೆ ಯೋಚನೆ ಮಾಡಬೇಕಾಗಿದೆ, ಈಗ-ಈಗಲಾದರೊ, ಇವನ-ಈ ಪಾರ್ಥಿಯ, ಬಿಂಕವನು-ಗರ್ವವನ್ನು, ಮುರಿವೆನು-ಹೋಗಲಾಡಿಸಿ ಬಿಡುತ್ತೇನೆ, ಎನ್ನಂ-ನನ್ನನ್ನು, ಕಳುಹಿನೋಡು-ಕಳುಹಿಸಿ ನೋಡು, ಎಂದನು-ಎಂಬುದಾಗಿ ಹೇಳಿದನು ||

ಅ|| ವಿ|| ಗಗನಾಗ್ರ (ಸ. ದೀ.) ಜೀವಗಳ್ಳ (ವ್ಯಂಜನ ಸಂಧಿ.) || ೧೦ ||

ಪುಣ್ಯವು ನನಗೆಲ್ಲಿಯದು ? ||೮|| ಎಲೈ ರವಿಸುತನ ತನುಜನಾದ ವೃಷಧ್ವಜನೆ ಇನ್ನು ಹೆಚ್ಚಾಗಿ ವ್ಯಥೆಪಡುವುದರಿಂದೇನ ಸಾರ್ಥಕವು ನಾನು ಬಭ್ರುವಾಹನನೊಂದಿಗೆ ಹೋರಾಡುವೆನು ನಿಮ್ಮ ವಂಶಕ್ಕೆ ನೀನೊಬ್ಬನೆ ಮಗನು ವಂಶನಷ್ಟವಾಗುವಂತೆ ಮಾಡಬೇಡ ನೀನು ಸ್ವಲ್ಪವೂ ತಡಮಾಡದೆ ಹಸ್ತಿನಾವತಿಯನ್ನು ಸೇರಿ ಮುರಾಸುರನನ್ನು ಕೊಂದ ಶ್ರೀ ಕೃಷ್ಣಸ್ವಾಮಿಗೂ ಧರ್ಮಾತ್ಮನಾದ ಧರ್ಮತನಯನಿಗೂ ರಾಜಕಾರ್ಯವು ಕೆಟ್ಟಿರುವ ಸುದ್ದಿಯನ್ನು ತಿಳಿಸು ನನ್ನ ಮಾತಿಗೆ ಪ್ರತಿ ಹೇಳದೆ ಜಾಗ್ರತೆಯಾಗಿ ಹೊರಡೆಂದು ಹೇಳಿದ ಪಾರ್ಥನ ನುಡಿಗಳನ್ನಾಲಿಸಿ ವೃಷಕೇತುವು ಅರ್ಜುನನನ್ನು ಕುರಿತು ||೯|| ಎಲೈ ತಂದೆಯೇ ಬಹಳ ಚೆನ್ನಾಯಿತು ಈ ರಣರಂಗದಲ್ಲಿ ನಿನ್ನನ್ನು ಬಿಟ್ಟು ನಾನು ಹಸ್ತಿನಾವತಿಗೆ ಹೋದೇನೆ ? ಯುದ್ಧದಲ್ಲಿ ನಾನು ಹಿಮ್ಮೆಟ್ಟಿದರೆ ನಮ್ಮ ತಾತನಾದ ಸೂರ್ಯನು ಅಂತರಿಕ್ಷದಿಂದ ಕೆಳಗೆ ಬಿದ್ದು ಹೋಗದಿರುವನೆ ಈ ನಿನ್ನ ಮಾತುಗಳು ಹೇಡಿಗಳಾದ ಪರರಿಗೆ ಸಲ್ಲತಕ್ಕದ್ದು ಈ ಬಭ್ರುವಾಹನನೊಡನೆ ಕಾದಲು ನೀನು ಇಷ್ಟು ಯೋಚಿಸಬೇಕೆ ? ಅವನ ಗರ್ವವನ್ನೆಲ್ಲಾ ಭಂಗಪಡಿಸುವೆನು.

ನುಡಿಗಳಂ | ತಳ್ಳಂಕದಿಂದನೀನಾಹವದೊಳಿಂತೆಣಿಕೆ | ಗೊಳ್ಳಲೇಕಿವನಬಿಂಕವನೀಗಮುರಿವೆನೆನ್ನಂಕಳುಹಿನೋಡೆಂದನು ||೧೦||
ತಂದೆಗೋಸುಗಮಾಳ್ಪವವಸರಕೆಗೋನಿಮಿ | ತ್ತಂದೇವವಿಪ್ರಾರ್ಥಕಸುದೊರೆದೊಡಾತಂಗೆ | ಸಂದೇಹಮಿಲ್ಲದಾದಪುದುಗಡ
ಕೈವಲ್ಯಮಾಗಳಾನೆಂತುರಣಕೆ|| ಹಿಂದುಗಳದಪೆನೇಕಪತ್ನಿಯಾಗಿಹಸತಿಯ| ಮುಂದೆಕೈದುವೆನೆಂತುಭಾನುಸಂಭವನಸುತ | ನೆಂದೆ
ನಿಸಿಕೊಂಬೆನೆಂತನೃತಮುಂನುಡಿವನಲ್ಲಾಹವಕೆಕಳುಹೆಂದನು||೧೧||ಮಂದಿಸಹಿತೀಬಭ್ರುವಾಹನಂಬರಲಿನಾ|ನಿಂದುರಣದೊಳ್ನಿನ್ನ
ಕಣ್ಗಳ್ಗೆಹಬ್ಬಮಂ | ತಂದಲ್ಲದಿರೆನೆಂದುವೃಷಕೇತುಬಲ್ಪಿಂಧನಂಜಯುಂಗೆಂಗಿಬಳಿಕ || ಪೊಂದೇರ್ಗಡರ್ದುನಿಜಚಾಪಮಂತುಡುಕಿ
ನರ | ನಂದನನಸಮ್ಮುಖಕೆನಡೆತಂದುನುಡಿದನೆಲೆ | ಮಂದಮತಿಪಾರ್ಥಸುತನಪಡೆನಿಲ್ಕರ್ಣಜಂತಾನೆನುತತೆಗೆದೆಚ್ಚನು || ೧೨ ||
ಲೇಸನಾಡಿದೆಕರ್ಣಸುತನಾದೊಡೊಳ್ಳಿತೈ | ವಾಸಿಯುಳ್ಳವನಪ್ಪೆಫಲುಗುಣಂಕೊಂದನ | ಲ್ಲಾಸಮರದೊಳ್ನಿನ್ನತಾತನಂತನಗೆನೀ

ಟೀ|| ತಂದೆಗೋಸುಗ_ಜನಕನ ಸಲುವಾಗಿ, ಮಾಳ್ಪ - ಮಾಡತಕ್ಕ, ಅವಸರಕೆ_ಕಾಲಕ್ಕೆ, ಗೋನಿಮಿತ್ತಂ - ಹಸುಗಳ ಸಂರಕ್ಷಣೆಯ ಸಲುವಾಗಿ, ದೇವ-ಸುರರ, ವಿಪ್ರ - ಭೂಸುರರ, ಅರ್ಥಕೆ - ಸಲುವಾಗಿ, ಅಸು_ಜೀವವನ್ನು, ತೊರದೊಡೆ ಬಿಟ್ಟಹಾಗಾದರೆ, ಆತಂಗೆ - ಅಂಥವನಿಗೆ, ಸಂದೇಹಂಇಲ್ಲದೆ - ಯಾವುದೊಂದು ಅನುಮಾನವಿಲ್ಲದೆ, ಕೈವಲ್ಯಂ - ಮೋಕ್ಷವು, ಆದಪುದುಗಡ - ಉಂಟಾಗುವುದಲ್ಲವೆ, ಈಗಳು - ಈಗಲಾದರೂ, ಆಂ_ನಾನು, ಎಂತು - ಯಾವತೆರನಾಗಿ, ರಣಕೆ_ಕಾಳಗಕ್ಕೆ, ಹಿಂದುಗಳೆದಪೆನೇ_ಹಿಂದೆ ಬಿದ್ದುಬಿಡುವೆನೇ, ಏಕಪತ್ನಿಯಾಗಿ_ಪತಿವ್ರತೆಯಾಗಿ, ಇಹ-ಇರತಕ್ಕ, ಸತಿಯಮುುಂದಕೆ_ಪತಿಭಕ್ತಿಯುಳ್ಳ ನನ್ನ ಹೆಂಡತಿಯ ಎದುರಿಗೆ, ಎಂತು-ಯಾವ ಬಗೆಯಾಗಿ, ಐದುವೆನು_ಹೋಗಿಸೇರಲಿ, ಎಂತು_ಹೇಗೆ, ಭಾನುಸಂಭವನ ಸುತನು_ಕರ್ಣಪುತ್ರ, ಎಂದು_ಎಂಬುದಾಗಿ, ಎನಿಸಿಕೊಂಬೆನು - ಹೇಳಿಸಿಕೊಳ್ಳತಕ್ಕವನಾದೇನು, ಅನೃತಮುಂ - ಮಿಥ್ಯವಾದ ಮಾತುಗಳನ್ನು, ನುಡಿವನು_ಹೇಳತಕ್ಕವನು, ಅಲ್ಲ-ಅಲ್ಲವು, ಆಹವಕೆ-ಕಾಳಗಕ್ಕೆ, ಕಳುಹು-ಕಳುಹಿಸಿಕೊಡು, ಎಂದನು-ಎಂದು ನುಡಿದನು. ||೧೧||

ಟೀ|| ಈ ಬಭ್ರುವಾಹನಂ_ಈ ಪಾರ್ಥನಂದನನು, ಮಂದಿಸಹಿತ-ಸೇನಾಸಮೇತನಾಗಿ, ಬರಲಿ-ಯುದ್ಧಕ್ಕೆ ಬಂದೊಡಗಲಿ, ನಾನು-ನಾನಾದರೂ, ಇಂದು_ಈ ಹೊತ್ತು, ರಣದೊಳ್ - ಯುದ್ಧರಂಗದಲ್ಲಿ, ನಿನ್ನ ಸಂಬಂಧವಾದ, ಕಂಗಳ್ಗೆ - ನಯನಂಗಳಿಗೆ, ಹಬ್ಬಮುಂ_ಆನಂದವನ್ನು, ತಂದಲ್ಲದೆ_ಉಂಟುಮಾಡಿದ ಹೊರತು, ಇರೆನು - ಬಿಡುವುದಿಲ್ಲವು, ಎಂದು_ಎಂಬತೆರನಾಗಿ, ವೃಷಕೇತು_ವೃಷಧ್ವಜನು, ಬಲ್ಪಿಂ_ಬಲವಂತದಿಂದ, ಧನಂಜಯುಂಗೆ-ಫಲ್ಗುಣನಿಗೆ, ಎರಗಿ_ವಂದನೆಯುಂಮಾಡಿ, ಬಳಿಕ-ಅನಂತರ, ಪೊಂದೇರ್ಗೆ-ಸುವರ್ಣಮಯವಾದ ತೇರಿಗೆ, ಅಡರ್ದು_ಏರಿದವನಾಗಿ, ನಿಜ - ಸ್ವಕೀಯವಾದ, ಚಾಪಮುಂ - ಧನುಸ್ಸನ್ನು, ತುಡಿಕಿ_ನೇವರಿಸಿಕೊಂಡು, ನರನಂದನನ_ಪಾರ್ಥಜನ, ಸಮ್ಮುಖಿಗೆ - ಮುಂದುಗಡೆಯಲ್ಲಿ, ನಡೆತಂದು - ಬಂದುಸೇರಿ, ನುಡಿದನು_ಹೇಳಿದವನಾದನು, ಎಲೆ ಮಂದಮತಿ-ಎಲೈ ಮೂಢನೆ, ಪಾರ್ಥಸುತನು_ಪಾರ್ಥನ ಕುವರನು, ಆಹಡೆ-ಆಗಿದ್ದ ಪಕ್ಷದಲ್ಲಿ, ನಿಲ್_ನನ್ನೊಂದಿಗೆ ಹೋರಾಡಲು ನಿಲ್ಲು, ತಾನು_ನಾನಾದರೊ, ಕರ್ಣಜಂ_ಕರ್ಣಸುತನು, ಎನುತೆ_ಎಂದು ನುಡಿಯುತ್ತ-ತೆಗೆದು_ಕೋಲ್ಗಳಂ ಕೈಕೊಂಡು, ಎಚ್ಚನು_ಹೊಡೆದವನಾದನು. ||೧೨||

ಟೀ|| ಲೇಸನು-ಒಳ್ಳೆಯ ಮಾತುಗಳನ್ನು, ಆಡಿದೆ - ನುಡಿದವನಾದೆ, ಕರ್ಣಸುತನು - ಕರ್ಣನ ಮಗನು, ಆದೊಡೆ-ಆದಲ್ಲಿ, ಒಳ್ಳಿತೈ-ಬಹು ಒಳ್ಳೆಯದಾಯಿತು, ವಾಸಿಯುಳ್ಳವನು_ಗುಣಶಾಲಿಯಾದವನು, ಅಪ್ಪೆ-ಆಗಿರುವಿ, ನಿನ್ನತಾತನಂ-ನಿನ್ನ ತಂದೆ

ನನಿಗೆ ಯುದ್ಧಮಾಡಲ ಅಪ್ಪಣೆಯನ್ನು ಕೊಡು ||೧೦|| ತಂದೆಗೋಸ್ಕರಲೂ ದೇವಬ್ರಾಹ್ಮಣರನ್ನೂ ಗೋವುಗಳನ್ನೂ ಕಾಪಾಡುವುದಕ್ಕೂ ಯಾರು ತಮ್ಮ ಅಸುವನ್ನೀಯುವರೊ ಅಂಥವರಿಗೆ ಶಾಶ್ವತವಾದ ಕೈವಲ್ಯವು ಲಭಿಸುವುದರಲ್ಲಿ ಲೇಶವೂ ಅನುಮಾನವಿಲ್ಲವು ಆದುದರಿಂದ ನಾನು ಈಗ ಯುದ್ಧಕ್ಕೆ ಹಿಂದಾಳಾಗಿ ನನ್ನ ಸತಿಯ ಎದುರಿಗೆ ಹೇಗೆ ನಿಲ್ಲಲಿ? ನನ್ನನ್ನು ಕರ್ಣನ ಮಗನೆಂದು ಯಾರುತಾನೆ ಕರೆದಾರು? ತಾತನಾದ ನಿನ್ನೊಂದಿಗೆ ನಾನೆಂದಿಗೂ ಸುಳ್ಳನ್ನು ಹೇಳತಕ್ಕವನಲ್ಲವು ಅನುಮಾನಪಡದೆ ನನ್ನನ್ನು ಯುದ್ಧಕ್ಕೆ ಕಳುಹು ||೧೧|| ಈ ಬಭ್ರುವಾಹನನು ತನ್ನ ಸಕಲ ಬಲದಿಂದಲೂ ಬಂದು ನನ್ನಮೇಲೆ ಬೀಳಲಿ ನೀನು ನೋಡುತ್ತಲಿರುವಾಗಲೇ ಅವನ ಸಕಲ ಪರಿವಾರವನ್ನೂ ನಿರ್ಮೂಲಮಾಡಿಬಿಡುವೆನೆಂದು ನುಡಿದು, ಬೇಡವೆಂದರೂ ಕೇಳದೆ ಬಲವಂತದಿಂದ ಅರ್ಜುನನ ಪದಾರವಿಂದಗಳಿಗಾನತನಾಗಿ, ಪಾರ್ಥನ ಅಪ್ಪಣೆಯಿಂದ ದಿವ್ಯರಥಾರೂಢನಾಗಿ ಧನುಷ್ಟಂಕಾರಮುಂ ಮಾಡುತ್ತಾ ಬಭ್ರುವಾಹನನ ಸಮೀಪವನ್ನೈದಿ ಎಲೈ ಮೂಢಾತ್ಮನಾದ ಪಾರ್ಥಜನೆ, ನಿನಗೆ ಪಾರ್ಥಜನೆಂಬ ಹೆಸರು ಸಾರ್ಥಕವಾಗಬೇಕಾದರೆ ನನ್ನೆದುರಿಗೆ ನಿಂತು ನನ್ನೊಂದಿಗೆ ಹೋರಾಡು ನಾನು ಕರ್ಣಸುತನು ಎಂದು ನುಡಿದ ವೃಷಧ್ವಜನ ಮಾತುಗಳನ್ನು ಬಭ್ರುವಾಹನನು ಕೇಳಿ ||೧೨|| ಎಲೈ ವೃಷಕೇತುವೇ ನೀನು ಕರ್ಣಸಂಭವನಾದರೆ ಬಹಳ ಮೇಲಾಯಿತು ಒಳ್ಳೆ ಸುಗುಣ

ಸಿದಿರಪ್ಪುದುಚಿತಮೆನುತ || ಸೂಸಿದಂ ಕಣೆಗಳಂ ಬಭ್ರುವಾಹನನದಂ | ನೇಸರಣುಗನಸುತಂ ಬರಿಕೈದು ಪಾರ್ಥಿಯಂ | ಗಾಸಿ ಮಾಡಿದನಂಬುಗಳ ಮಳೆಯೊಳವನೀತನಂ ಮುಸುಕಿದಂ ಶರದೊಳು ||೧೩|| ಎಸುವರೆಚ್ಚಂಬುಗಳನೆಡೆಯೊಳಿಕ್ಕಡಿಗೈವ | ರೆಸುವ ರೋರ್ವರ್ವರಂ ಗಾಯಗಾಣಿಸಿ ಕೆರ | ಳ್ದೆಸುವರಶ್ವಧ್ವಜವರೂಥಸಾರಥಿಗಳಂ ತರಿದಿಳೆಗುರುಳ್ಚಿ ಕೂಡೆ || ಎಸುವರೊವ್ಮೊಮ್ಮೆ ಮೈಮರೆದು ಚೇತರಿಸಿಕೊಂ | ಡೆಸುವರಾಗ್ನೇಯಾದಿದಿವ್ಯಾಸ್ತ್ರನಿಕರದಿಂ | ದೆಸುವರಿಂತವರವರ ಸರಿಯ ಬಾಣಂಗಳಂ ಕರ್ಣಸುತಪಾರ್ಥಸುತರು || ೧೪ || ಅಂದಾದ ಕರ್ಣಾರ್ಜುನರ ಕಾಳಗವನವರ | ನಂದನರ್ ನಿರ್ಕೈಸುತಿರ್ದರೆನೆ ಶಸ್ತ್ರಾಸ್ತ್ರ | ದಿಂ

ಯಾದ ಕರ್ಣನನ್ನು, ಸಮರದೊಳ್-ಯುದ್ಧದಲ್ಲಿ, ಫಲುಗುಣಂ-ಅರ್ಜುನನು, ಕೊಂದನಲ್ಲಾ-ಕೊಂದು ಹಾಕಿದನಲ್ಲವೇ, ನೀನು-ನೀನಾದರೊ, ತನಿಗೆ-ನನಿಗೆ, ಇದಿರಿಪ್ಪುದು-ಎದುರಾಳಾಗಿ ನಿಲ್ಲತಕ್ಕದ್ದು, ಉಚಿತಂ – ನ್ಯಾಯವೇಸರಿ, ಎನುತ-ಎಂದು ನುಡಿಯುತ್ತ, ಬಭ್ರುವಾಹನನು-ಪಾರ್ಥಸುತನು, ಕಣೆಗಳಂ-ಸರಲ್ಗಳನ್ನು, ಸೂಸಿದಂ-ಎರಚಿದನು, ನೇಸರ್-ಸೂರ್ಯನ, ಅಣುಗನ-ಕುವರನಾದ ಕರ್ಣನ, ಸುತಂ-ತನುಜನಾದ ವೃಷಕೇತುವು, ಅದಂ-ಬಭ್ರುವಾಹನನ ಕಣೆಗಳನ್ನು, ಬರಿಕೈದು-ನಿರ್ನಾಮವಾಗುವಂತೆ ಮಾಡಿ, ಅಂಬುಗಳ-ಸರಳ್ಗಳ, ಮಳೆಯೊಳ್ – ಮಳೆಯಿಂದ, ಪಾರ್ಥಿಯಂ-ಫಲ್ಗುಣ ತನಯನನ್ನು, ಗಾಸಿಮಾಡಿದನು-ಹಿಂಸೆಮಾಡಿಸಿದವನಾದನು, ಅವನು-ಆ ಪಾರ್ಥನಂದನನೂ, ಕೂಡ, ಈತನಂ – ಈ ವೃಷಕೇತುವನ್ನು, ಶರದೊಳ್ – ಸರಲ್ಗಳಿಂದ, ಮುಸುಕಿದಂ-ಕವಿದುಬಿಟ್ಟವನಾದನು. ||೧೩||

ಟೀ|| ಎಸುವರು - ಬಭ್ರುವಾಹನ ವೃಷಧ್ವಜರೀರ್ವರೂ ಪರಸ್ಪರ ಬಾಣಗಳನ್ನೂ ಬಿಡುವರು, ಎಚ್ಚ - ತಾವು ಬಿಟ್ಟ, ಅಂಬುಗಳನು - ಕಣೆಗಳನ್ನು, ಎಡೆಯೊಳ್ - ಹತ್ತಿರದಲ್ಲಿಯೆ, ಇಕ್ಕಡಿಗೈವರು – ಎರಡಾಗಿ ಕತ್ತರಿಸುವರು, ಓರ್ವರಂ-ಒಬ್ಬರು ಇನ್ನೊಬ್ಬನನ್ನು, ಗಾಯಗಾಣಿಸಿ-ಗಾಯವಾಗುವಂತೆ ಮಾಡಿ, ಕೆರಳ್ದು-ಕೋಪಮಾಡಿಕೊಂಡು, ಎಸುವರು-ಬಾಣಗಳನ್ನು ಬಿಡುವರು, ಅಶ್ವ – ಕುದುರೆಗಳು, ಧ್ವಜ – ಧ್ವಜಪಟಗಳು, ವರೂಥ – ತೇರುಗಳು, ಸಾರಥಿಗಳಂ – ತೇರುಗಳನ್ನು ನಡೆಯಿಸತಕ್ಕವರನ್ನು, ತರಿದು – ಛೇದಿಸಿ, ಇಳೆಗೆ - ನೆಲದಮೇಲೆ, ಉರುಳ್ಚಿ-ಕೆಡವಿ, ಕೂಡೆ – ಒಡನೆಯೇ, ಎಸುವರು – ಬಾಣಗಳನ್ನು ಬಿಡುವರು, ಒವ್ಮೊಮ್ಮೆ-ಒಂದೊಂದುಬಾರಿ, ಮೈಮರೆದು - ಮೂರ್ಛೆಬಿದ್ದು, ಚೇತರಿಸಿಕೊಂಡು - ಪುನಃ ಎಚ್ಚತ್ತು, ಆಗ್ನೇಯಾದಿ-ಅಗ್ನಿಯೇ ಮೊದಲಾದದ್ದರ, ಅಸ್ತ್ರಗಳ-ಸರಲ್ಗಳ, ನಿಕರದಿಂದ-ಸಮುದಾಯದಿಂದ, ಎಸುವರು-ಪ್ರಯೋಗಿಸುತ್ತಲಿರುವರು, ಕರ್ಣಸುತಪಾರ್ಥಸುತರು-ಕರ್ಣನಂದನ ಬಭ್ರುವಾಹನರು, ಇಂತು – ಈ ತೆರನಾಗಿ, ಅವರವರ – ತಮ್ಮ ತಮ್ಮ, ಸರಿಯ-ಸಮನಾಗಿರತಕ್ಕ, ಬಾಣಗಳನು-ಕಣೆಗಳನ್ನು, ಎಸುವರು-ಪ್ರಯೋಗಿಸುವರು. ||೧೪||

ಟೀ|| ಅಂದು-ಪೂರ್ವದಲ್ಲಿ, ಆದ-ನಡೆದಂಥ, ಕರ್ಣಾರ್ಜುನರ-ಸೂರ್ಯಸುತ ಪಾಂಡುನಂದರ, ಕಾಳಗವನು – ಯುದ್ಧವನ್ನು, ಅವರ-ಆ ಸೂರ್ಯ ಮತ್ತು ಪಾಂಡುಪುತ್ರರ, ನಂದನರು-ಕುವರರು, (ವೃಷಧ್ವಜ ಬಭ್ರುವಾಹನರು) ನಿರ್ಕೈಸುತ – ನೆರವೇರಿಸುತ್ತ, ಇರ್ದರು-ಇದ್ದವರಾದರು, ಎನೆ-ಎಂಬಂತೆ, ಶಸ್ತ್ರಾಸ್ತ್ರದಿಂದ-ಕತ್ತಿ ಮೊದಲಾದ ಶಸ್ತ್ರಂಗಳು ಮತ್ತು ಆಗ್ನೇಯಾದಿ ಅಸ್ತ್ರಂಗಳ ಸಮುದಾಯದಿಂದ, ಶರ-ಸರಲ್ಗಳ, ಸಂಧಾನ – ಸೇರಿಸುವುದರ, ಸತ್ವ-ಶಕ್ತಿಯು, ಸಾಹಸ - ಶೌರ್ಯವು, ಲಕ್ಷ್ಯ-ಗುರುತು, ಲಳಿ-ಕೈಚಳಕವು, ಲಾಘವಂಗಳಿಂ-ಚಾತುರ್ಯದಿಂದಲೂ, ಮುಂದುವರಿವ-ಎದುರುಬಿದ್ದು ಬರತಕ್ಕ, ಅಗ್ಗಳಿಕೆ-ಬಿರುದಾವಳಿಯು, ಮುಳಿಸು-ಕೋಪವು, ಮೂದಲೆ-ಎಬ್ಬಿಸುವುದು, ಮೋಡಿ-ಶಾಂತಗುಣರಾಹಿತ್ಯವು, ಹಟ-ಪಟ್ಟುಹಿಡಿಯುವುದು,

ಗಳಿಂದ ಶೋಭಿಸುವನಾಗಿರುವ ಯುದ್ಧದಲ್ಲಿ ಅರ್ಜುನನು ನಿಮ್ಮ ತಂದೆಯಾದ ಕರ್ಣನನ್ನು ಕೊಂದುಹಾಕಿದವನಲ್ಲವೆ? ಅರ್ಜುನನ ಮಗನಾದ ನನಿಗೆ ಕರ್ಣಸುತನಾದ ನೀನು ಎದುರಾಳಾಗುವುದು ಯೋಗ್ಯವೇ ಸರಿಯೆಂದು ನುಡಿಯುತ್ತ ಅನೇಕ ಬಾಣಗಳನ್ನು ಪ್ರಯೋಗಿಸಿದನು ವೃಷಧ್ವಜನಾದರೊ ಬಭ್ರುವಾಹನನ ಬಾಣಗಳನ್ನೆಲ್ಲಾ ಕಡಿದುಹಾಕಿ ಅನೇಕ ದಿವ್ಯ ಬಾಣಗಳಿಂದ ಕರ್ಣಸುತನನ್ನು ನೋಯಿಸಲು ಅವನು ಶರವರ್ಷದಿಂದ ಅರ್ಜುನನ ಮಗನನ್ನು ನೆನೆಯಿಸಿದನು ||೧೩|| ವೃಷಕೇತು ಬಭ್ರುವಾಹನರೀರ್ವರೂ ಪರಸ್ಪರ ಬಾಣಗಳನ್ನು ಬಿಡುತ್ತಲೂ ಒಬ್ಬರು ಬಿಟ್ಟ ಸರಲನ್ನು ಇನ್ನೊಬ್ಬರು ಖಂಡಿಸುತ್ತಲೂ ಇಬ್ಬರೂ ತಮ್ಮ ತಮ್ಮ ಶರೀರದಲ್ಲಿ ಗಾಯಗಳು ಕಾಣುವಂತೆ ಮಾಡುತ್ತಲೂ ಒಬ್ಬರು ಮತ್ತೊಬ್ಬರ ಚತುರಂಗಬಲವನ್ನೂ ಖಂಡಿಸಿ ಸ್ಮೃತಿತಪ್ಪಿ ಕೆಳಗೆ ಬಿದ್ದು ಪುನಃ ಮೇಲಕ್ಕೇಳುತ್ತಲೂ ಆಗ್ನೇಯಾದಿ ದಿವ್ಯಾಸ್ತ್ರಗಳಿಂದ ಈರ್ವರೂ ಪರಸ್ಪರ ಸಮಸಮವಾಗಿ ಹೋರಾಡುತ್ತಲೂ ||೧೪|| ಪೂರ್ವದಲ್ಲಿ ಕರ್ಣಾರ್ಜುನರಿಗಾದ ಘೋರಯುದ್ಧವನ್ನು ಈಗ ಅವರ ಮಕ್ಕಳುಗಳು ಜ್ಞಾಪಿಸುತ್ತಲಿರುವರೆಂಬಂತೆ ತೋರುತ್ತ ಅಸ್ತ್ರ ಶಸ್ತ್ರಗಳಿಂದಲೂ ಬಾಣಪರಂಪರೆಯಿಂದಲೂ ಶಕ್ತಿ, ಸಾಹಸ, ಕೌರ್ಯ ಕೈ ಚಾತುರ್ಯಾದಿಗಳಿಂದಲೂ ಕೋಪ, ಹಠ, ಧೈರ್ಯಾದಿಗಳಲ್ಲಿಯೂ, ಒಬ್ಬರು ಮತ್ತೊಬ್ಬರಿಗೆ ಹಿಮ್ಮೆಟ್ಟದೆ ಕಾಳಗದಲ್ಲಿ ತಮ್ಮ ತಮ್ಮ ಸಾಹಸದಿಂದ ಮೆರೆಯುತ್ತಲಿ

ದಶರಸಂಧಾನಸತ್ವಸಾಹಸಲಕ್ಷ್ಯಲಳಿಲಾಘವಂಗಳಿಂದ ‖ ಮುಂದುವರಿವಗ್ಗಳಿಕೆಮುಳಿಸುಮೂದಲೆಮೋಡಿ । ಬಂದಿಭಾರಣೆ ಬಿಂಕಬೆಸೆಚಮತ್ಕಾರಂಗ । ಳಿಂದಸಮುನಾಗೆಕೈದೋರಿದಂವೃಷಕೇತುಬಭ್ರುವಾಹನನಮೇಲೆ ‖ ೧೫ ‖ ಬಳಿಕಖಿಳದಿವ್ಯಾಸ್ತ್ರದಿಂದವೃಷಕೇತುವೆ । ಗ್ಗಳಿಸೆವಾಡಬವೈಷ್ಣವದೊಳದಂಪರಿಹರಿಸಿ । ಕೊಳುತರ್ಜುನಾತ್ಮಜಂಕೆರಳ್ದವನನೆಚ್ಚಡುಚ್ಚಳಿಸಿತಚ್ಛೋಣಿತವನು ‖ ತೊಳೆಯಲಿಳಿದುವುಭೋಗವತಿಯಜಲಕಂಬುಗ । ಳ್ಮುಳಿದುಕರ್ಣಜನೆಸಲ್ಕಾತನಂಸುತ್ತಿಸಿತು । ಸುಳಿಗಾಳಿಯಂದದಿಂಕಣೆಗಳರೆಗಳಿಗೆಪರ್ಯಂತರಂಸಂಗರದೊಳು ‖ ೧೬ ‖ ಮತ್ತೆಹೊಡಕರಿಸಿಪಾರ್ಥನಸೂನುರೋಷಾಗ್ನಿ । ಪೊತ್ತಿ

---

ಬಂದಿ–ಸೇನೆಯನ್ನು ಬಿಡುವುದು, ಭಾರಣೆ–ಪರಾಕ್ರಮವು, ಬಲ-ಶಕ್ತಿಯು, ಬಿಂಕ–ಅಹಂಕಾರವು, (ಗರ್ವವು) ಬೆಸೆ–ತಳೆದೋರುವ, ಚಮತ್ಕಾರಂಗಳಿಂದ–ಚತುರತನದಿಂದ, ಸಮಂ–ಸದೃಶವಾದದ್ದು, ಆಗೆ–ಆಗಲಾಗಿ, ವೃಷಕೇತು–ವೃಷಧ್ವಜನು, ಬಭ್ರುವಾಹನನಮೇಲೆ–ಬಭ್ರುವಾಹನನ್ನು ಕುರಿತು, ಕೈದೋರಿದಂ–ತನ್ನ ಕೈ ಚಾತುರ್ಯವನ್ನು ತೋರಿಸಲುಜ್ಜುಗಿಸಿದವನಾದನು ||೧೫||

ಟೀ|| ವೃಷಕೇತು–ವೃಷಧ್ವಜನು, ಬಳಿಕ–ಅನಂತರ, ಅಖಿಳ – ಸಕಲವಾದ, ದಿವ್ಯಾಸ್ತ್ರದಿಂದ – ದೇವತಾಸಂಬಂಧವಾದ ಅಸ್ತ್ರಂಗಳಿಂದ, ವೆಗ್ಗಳಿಸೆ–ಘೋರಯುದ್ಧವಂ ಗೈಯ್ಯುತ್ತಿರಲು, ಅರ್ಜುನಾತ್ಮಜಂ–ಅರ್ಜುನನ ಕುವರನಾದ ಬಭ್ರುವಾಹನನು, ಕೆರಳ್ದು–ಕೋಪೋದ್ದೀಪಿತನಾಗಿ, ವಾಡಬ–ಆಗ್ನೇಯಾಸ್ತ್ರದಿಂದಲೂ, ವೈಷ್ಣವದೊಳು–ವೈಷ್ಣವಾಸ್ತ್ರದಿಂದಲೂ, ಅದಂ–ಅವನ ದಿವ್ಯಬಾಣವನ್ನು, ಪರಿಹರಿಸಿಕೊಳುತ–ಹೋಗಲಾಡಿಸಿಕೊಳ್ಳತಕ್ಕವನಾಗಿ, ಅವನನು – ಆ ವೃಷಧ್ವಜನನ್ನು, ಎಚ್ಚಲು–ಬಾಣಪ್ರಯೋಗದಿಂದ ನೋಯಿಸಲು, ಉಚ್ಚಳಿಸಿ–ಸೀಳಿದವನಾಗಿ, ತಚ್ಛೋಣಿತವನು–ಆ ರಕ್ತವನ್ನು, ತೊಳೆಯಲು–ತೊಳೆಯುವುದಕ್ಕೆ, ಅಂಬುಗಳು – ಕಣೆಗಳು, ಭೋಗವತಿಯ – ಪಾತಾಳದ, ಜಲಕೆ–ಉದಕಕ್ಕೆ, ಇಳಿದವು – ಪ್ರವೇಶಮಂ ಮಾಡಿದವು ತರುವಾಯ, ಕರ್ಣಜನು–ಕರ್ಣಾತ್ಮಜನು, ಮುಳಿದು–ಸಿಟ್ಟುಗೊಂಡು, ಎಸಲ್ಕೆ–ಬಾಣಗಳನ್ನು ಬಿಡಲು, ಕಣೆಗಳು – ಕರ್ಣಸುತನು ಬಿಟ್ಟ ಅಲಗುಗಳಾದರೊ, ಸಂಗರದೊಳು–ರಣದಲ್ಲಿ, ಸುಳಿಗಾಳಿಯಂದದಿ – ಸುಂಟರಗಾಳಿಯ ತೆರನಾಗಿ, ಅರಗಳಿಗೆಪರ್ಯಂತಂ–ಅರ್ಧಗಳಿಗೆಯವರೆಗೂ, ಆತನಂ–ಆ ಪಾರ್ಥಜನನ್ನು, ಸುತ್ತಿಸಿತು–ಎಲ್ಲೆಲ್ಲಿಯೂ ತಿರುಗಿಸಿಬಿಟ್ಟಿತು.

ಅ|| ವಿ|| ಅರ್ಜುನಾತ್ಮಜಂ–ಆತ್ಮಜಂ–ಆತ್ಮ–ತನ್ನಲ್ಲಿ, ಜ–ಹುಟ್ಟಿದವನು (ಸ. ತ.) ಅರ್ಜುನನ–ಅರ್ಜುನನ, ಆತ್ಮಜಂ–ಕುವರನು–ಬಭ್ರುವಾಹನನು) ||೧೬||

ಟೀ|| ಮತ್ತೆ–ಪುನಃ, ಪಾರ್ಥನಸೂನು–ಪಾರ್ಥನಂದನನು, ಹೊಡಕರಿಸಿ–ಹೂಂಕರಿಸುತ್ತಾ, ರೋಷಾಗ್ನಿ–ಕ್ರೋಧಾಗ್ನಿಯು, ಪೊತ್ತಿ–ಹೊತ್ತಿಕೊಂಡು, ಕಿಡಿ–ಬೆಂಕಿಯ ಕೆಂಡಗಳನ್ನು, ಕೆದರಿ–ಚದರಿಸಿ, ದಿವ್ಯಾಸ್ತ್ರಮಂ–ದೇವತಾಯೋಗ್ಯವಾದ ಸರಲನ್ನು, ಪೂಡಿ–ಜೋಡಿಸಿ, ತೆಗೆವುತ್ತ–ಸೆಳೆದುಕೊಳ್ಳುತ್ತ, ಎಲವೋ – ಎಲೈ, ಕರ್ಣಸುತ–ಕರ್ಣಾತ್ಮಜನೆ, ನಾಂ – ನಾನು, ಪೊಣರ್ದ–ಕಾಳಗ ಮಾಡಿದ, ಅತಿಬಲರೊಳು–ಮಾನುಷಕವುಳ್ಳವರಲ್ಲಿ, ಬಿಲ್ಲಾಳು–ಧನುರ್ವಿದ್ಯಾಪ್ರವೀಣನು, ನೀನೆ–ನೀನೊಬ್ಬನು ಮಾತ್ರನೇ. ಅಪ್ಪೆ–ಆಗಿರುತ್ತಿ, ಚಿತ್ತಚಂಚಲಂ – ಮನಸ್ಸಿನ ಚಪಲತೆಯು, ಇಲ್ಲದೆ–ಉಂಟಾಗದೆ, (ಸ್ಥಿರಚಿತ್ತನಾಗಿ) ಈಕ್ಷಿಸು–ನೋಡು, ಎನುತ–ಎಂದು ನುಡಿಯುತ್ತ, ಎದೆಗೆ–ಎದೆಯ ಭಾಗಕ್ಕೆ, ಎಚ್ಚಡೆ–ಕಣೆಯನ್ನು ಜೋಡಿಸಲು, ಶಿರಮಂ–ಶಿರಸ್ಸನ್ನು, ಎತ್ತಿ–ಮೇಲ್ಗಡೆಗೆ ಎತ್ತಿ, ಕೂಡಿ–ಕೂಡಿಕೊಂಡು, ಪಿಡಿದು – ಹಿಡಿದವನಾಗಿ, ಆಗಸಕ್ಕೆ – ಅಂತರಿಕ್ಷಕ್ಕೆ, ಚಿಗಿದು–ಹಾರಿ, ಅತ್ತ–ಆ ಪಾರ್ಶ್ವದಲ್ಲಿ, ಕೊಂಡೊಯ್ದು–ಸಾಗಿಸಿಕೊಂಡು ಹೋಗಿ. ವೃಷಧ್ವಜನನ್ನು, ನಭದೊಳು–ಆಗಸದಲ್ಲಿ, ದೆಸೆದೆಸೆಗಳಂ–ನಾನಾ ದಿಕ್ಕುಗಳನ್ನೂ, ತಿರಿಗಿಸಿತು ತಿರುಗುವಂತೆ ಮಾಡಿಬಿಟ್ಟಿತು.

---

ದ್ದರು. ||೧೫|| ಹೀಗಿರುವಲ್ಲಿ ಕರ್ಣಸುತನು ಅನೇಕ ಮಂತ್ರಾಸ್ತ್ರಗಳನ್ನು ಪಾರ್ಥಜನ ಮೇಲೆ ಬಿಡಲು ಬಭ್ರುವಾಹನನು ಅವುಗಳನ್ನೆಲ್ಲಾ ಆಗ್ನೇಯಾಸ್ತ್ರ ವೈಷ್ಣವಾಸ್ತ್ರಾದಿಗಳಿಂದ ಧ್ವಂಸಮಾಡಿ ಅನೇಕ ಬಾಣಗಳನ್ನು ವೃಷಕೇತುವಿನ ಮೇಲೆ ಬಿಟ್ಟನು, ಪಾರ್ಥಜನು ಬಿಟ್ಟ ಕಣೆಗಳು ಕರ್ಣಸುತನ ಬಳಿಗೆ ಹೋಗುವುದಕ್ಕೆ ಮೊದಲೇ ಅವುಗಳನ್ನು ಮಧ್ಯಮಾರ್ಗದಲ್ಲಿಯೇ ಇಕ್ಕಡಿಯಾಗಿ ಕತ್ತರಿಸಲಾಗಿ ಪಾರ್ಥಜನು ತನ್ನ ಸರಲ್ಗಳಿಂದ ವೃಷಕೇತುವಿನ ಮೈಯಿಂದಲೂ, ಅವನ ಸೈನ್ಯದ ಜನರ ದೇಹದಿಂದಲೂ ರಕ್ತವನ್ನು ಸುರಿಯುವಂತೆ ಮಾಡಲು ಆ ರಕ್ತವು ಭೂಮಿಯನ್ನು ಭೇದಿಸಿಕೊಂಡು ಪಾತಾಳಲೋಕದಲ್ಲಿರುವ ನೀರಿನ ಜತೆಗೆ ಹೋಗಿ ಸೇರುತ್ತಲಿತ್ತು ಆಗ ಕರ್ಣಜನು ಕಟ್ಟುಗ್ರಕೋಪದಿಂದ ಕೂರಲಗುಗಳನ್ನು ಅರ್ಜುನಿಯಮೇಲೆಸೆಯಲು ಆ ಅಲಗುಗಳು ಹೋಗಿ ಪಾರ್ಥಜನನ್ನು ನಭೋಮಂಡಲದಲ್ಲಿ ಅರ್ಧಗಳಿಗೆಯವರೆಗೂ ಚಕ್ರಾಕಾರವಾಗಿ ತಿರುಗಿಸಿ ನೆಲಕ್ಕೆ ಕೆಡವಿತು. ||೧೬|| ಇದರಿಂದ ಬಭ್ರುವಾಹನನಿಗೆ ಕೋಪಾಗ್ನಿಯು ಹೆಚ್ಚುತ್ತ, ಮುಖದಿಂದ ಕೆಂಡಗಳನ್ನು ಸುರಿಸುತ್ತಲಿರುವಂತೆ ರೋಷಭೀಷಣನಾಗಿ ಹೂಂಕರಿಸುತ್ತಾ ಅನೇಕ ದಿವ್ಯ ಬಾಣಗಳನ್ನು ಬಿಲ್ಲಿನೊಳಗೆ ತಗಲಿಸಿ ವೃಷಕೇತುವನ್ನು ಕುರಿತು ಎಲೈ ಕರ್ಣಾ

ಕಿಡಿಗೆದರಿದಿವ್ಯಾಸ್ತ್ರಮಂಪೂಡಿತೆಗೆ । ವುತ್ತಲವೊಕರ್ಣಸುತನೀನೆಬಿಲ್ಲಾಳಪ್ಪೆನಾಂಪೊಣರ್ದತಿಬಲರೊಳು ॥ ಚಿತ್ತಚಂಚಲ ಮಿಲ್ಲದೀಕ್ಷಿಸೆನುತೆಚ್ಚೊತ್ತಡೆದೆ । ಗೆತ್ತಿಶಿರಮಂಕೂಡಿಪಿಡಿದಾಗಸಕ್ಕೆಚಿಗಿ । ದತ್ತಕೊಂಡೊಯ್ದುವೃಷಕೇತುವಂತಿರುಗಿಸಿತು ದೆಸೆದೆಸೆಗಳಂನಭದೊಳು ॥ ೧೭ ॥ ಭಾನುಸುತಸೂನುವಂನಭಕೆತ್ತಿಕೊಂಡೊಯ್ದು । ನಾನಾದೆಸೆಗೆತಿರುಗಿಸಿತುಮುಹೂರ್ತ ತ್ರಿತಯ । ಮೀನೆಲಕೆಕೆಡುಹದೆಮಹಾಶರಂಕೆಳಗೆಬಿಲ್ವಿಡಿದುಸನ್ನದ್ಧನಾಗಿ ॥ ಈನರನುಮಾಬಭ್ರುವಾಹನನು‌ಮೊಡನೈದೆ । ಬಾನೆಡೆಯೊಳಾತನಪಿತಾಮಹಂಗಭಿನಮಿಸಿ । ಕಾನನಸರಿತ್ಸಾಗರಂಗಳೊಳ್ಬೀಳದಿಳಿದಂಮಣಿಪುರದಮಹಿಯೊಳು ॥ ೧೮ ॥ ಮೊಗಮೆತ್ತಿಫಲುಗುಣಂನೋಡುತಿರೆಕರ್ಣಜಂ । ಗಗನದಿಂಬಿದ್ದಿಳೆಗೆಪೊಡೆಚಂಡಿನಂತೆಪುಟ । ನೆಗೆದೆದ್ದುರೋಷದಿಂಘುಡಿಘುಡಿಸಿ ಪಾರ್ಥಸುತನಂಪಚಾರಿಸಿಕನಲ್ದು ॥ ತೆಗೆದೆಸಲ್ಬಾಣಂಗಳಶ್ವಸಾರಥಿಪತಾ । ಕೆಗಳಿಂದಮರ್ದರಥಸಹಿತಚಿತ್ರಾಂಗದೆಯ । ಮಗನಂನಭಸ್ಥಳಕೆಕೊಂಡಡರ್ದುವುನಾಕಪರಿಯಂತಮಾಕ್ಷಣದೊಳು ॥ ೧೯ ॥ ನಭದೊಳತ್ಯುಗ್ರದಿಂತಪಿಸುವದಿವಾಕರ । ಪ್ರ

---

ಅ॥ ವಿ॥ ರೋಷಾಗ್ನಿ ದಿವ್ಯಾಸ್ತ್ರ (ಸ. ದೀ. ಸಂಧಿಗಳು) ॥೧೭॥

ಟೀ॥ ಮಹಾಶರಂ-ದೊಡ್ಡದಾದ ಬಾಣವು, ಮುಹೂರ್ತತ್ರಿತಯಂ-ಒಂಭತ್ತು ಗಳಿಗೆಯ ಪರ್ಯಂತರವೂ, ಭಾನುಸುತ ಸೂನುವಂ-ವೃಷಧ್ವಜನನ್ನು, ನಭಕ್ಕೆ-ಅಂತರಿಕ್ಷಕ್ಕೆ, ಎತ್ತಿಕೊಂಡೊಯ್ದು-ಎತ್ತಿಕೊಂಡು ಹೋಗಿ, ಈನೆಲಕೆ-ಈ ಭೂಮಿಯ ಮೇಲೆ, ಕೆಡಹದೆ-ಉರುಳಿಸಿಬಿಡದೆ, ತಿರುಗಿಸಿತು - ಸುತ್ತುವಂತೆ ಮಾಡಿತು, ಕೆಳಗೆ-ಕೆಳಭಾಗದಲ್ಲಿ, ಬಿಲ್ವಿಡಿದು - ಧನುರ್ಧಾರಿಯಾಗಿ, ಸನ್ನದ್ಧನಾಗಿ-ನೋರ್ಪಟ್ಟು, ಈನರನುಂ-ಈ ಪಾರ್ಥನೂ, ಆಬಭ್ರುವಾಹನಂ-ಆ ಪಾರ್ಥಸುತನೂ, ಒಡನೆ-ಕೂಡಲೆ, ಐದೆ-ಮುಂದರಿದು ಬರಲಾಗಿ, ಬಾನೆಡೆಯೊಳು - ಅಂತರಿಕ್ಷ ಪ್ರದೇಶದಲ್ಲಿ, ಆತನ - ಆ ಕರ್ಣಾತ್ಮಜನ, ಪಿತಾಮಹಂಗೆ-ತಾತನಾದ ರವಿಗೆ, ಅಭಿನಮಿಸಿ - ನಮಸ್ಕಾರಮಂ ಮಾಡಿ, ಕಾನನಸರಿತ್ಸಾಗರಂಗಳೊಳ್ - ಕಾನನ - ಅರಣ್ಯವು, ಸರಿತ್-ನದಿಗಳು, ಸಾಗರಂಗಳೊಳ್-ಸಮುದ್ರವೇ ಮೊದಲಾದವುಗಳಲ್ಲಿ, ಬೀಳದೆ-ಬಿದ್ದುಹೋಗದೆ, ಮಣಿಪುರದ - ಮಣಿಪುರವೆನ್ನುವ ಬಭ್ರುವಾಹನನ ರಾಜಧಾನಿಯ, ಮಹಿಯೊಳು-ಭೂಮಿಯಲ್ಲಿ, ಇಳಿದಂ-ಇಳಿದವನಾದನು.

ಅ॥ ವಿ॥ ಭಾನುಸುತಸೂನು-ಭಾನುವಿನ ಸುತ (ಷ. ತ.) ಭಾನುಸುತಸೂನು (ಷ. ತ.) ಮಹಾಶರಂ (ವಿ. ಪೂ. ಕ.) ಬಿಲ್ಲಂಪಿಡಿದು-ಬಿಲ್ವಿಡಿದು (ಕ್ರಿ. ಸ.) ॥೧೮॥

ಟೀ॥ ಫಲುಗುಣಂ-ಪಾರ್ಥನು, ಮೊಗವೆತ್ತಿ-ಮುಖವನ್ನು ಮೇಲುಮಾಡಿಕೊಂಡು, ನೋಡುತಿರೆ - ನೋಡುತ್ತಿರಲಾಗಿ, ಕರ್ಣಜಂ-ವೃಷಧ್ವಜನು, ಗಗನದಿಂದ-ಆಗಸದಿಂದ, ಇಳೆಗೆ-ಭೂಮಿಗೆ, ಬಿದ್ದು-ಬಿದ್ದವನಾಗಿ, ಪೊಡೆಚಂಡಿನಂತೆ-ಹೊಡೆಯುತ್ತಲಿರುವ ಚಂಡಿನತೆರನಾಗಿ, ಪುಟನೆಗೆದು-ಮೇಲಕ್ಕೆ ಎಗರಿ, ಎದ್ದು - ಎದ್ದವನಾಗಿ, ರೋಷದಿಂ - ಕ್ರೋಧದಿಂದ, ಘುಡಘುಡಿಸಿ-ಘುರಕಾಯಿಸುತ್ತಾ, ಪಾರ್ಥಸುತನಂ - ಅರ್ಜುನಿಯನ್ನು, ಪಚಾರಿಸಿ-ಹೀಯಾಳಿಸಿ, ಕನಲ್ದು-ಕೋಪಮಾಡಿಕೊಂಡು, ತೆಗೆದು-ಬಾಣಗಳಂ ಕೈಕೊಂಡು, ಎಸಲ್-ಬಿಡಲು, ಬಾಣಂಗಳು-ಕಣೆಗಳು, ಅಶ್ವಸಾರಥಿಪತಾಕೆಗಳಿಂದ - ಅಶ್ವ - ಹಯಗಳಿಂದಲೂ, ಸಾರಥಿ-ತೇರನ್ನು ನಡೆಯಿಸುವರಿಂದಲೂ, ಪತಾಕೆಗಳಿಂದ-ಬಾವುಟಗಳಿಂದಲೂ, ಅಮರ್ದ-ಕೂಡಿದ, ರಥಸಹಿತ-ತೇರಿನೊಂದಿಗಿರತಕ್ಕ, ಚಿತ್ರಾಂಗದೆಯಸುತನಂ-ಚಿತ್ರಾಂಗದೆಯ ಕುವರನನ್ನು, ನಭಸ್ಥಳಕೆ-ಆಗಸಕ್ಕೆ, ನಾಕಪರ್ಯಂತಂ-ಸ್ವರ್ಗಲೋಕದವರೆಗೂ, ಕೊಂಡು-ತೆಗೆದುಕೊಂಡು, ಅಕ್ಷಣದೊಳು-ಕೂಡಲೆ, ಅಡರ್ದವು-ಹತ್ತಿದವುಗಳಾದವು. ॥೧೯॥

ಟೀ॥ ಪೂರ್ವದೊಳು-ಪೂರ್ವಕಾಲದಲ್ಲಿ, ಅಡರ್ದ - ಆಗಸದವರೆಗೂ ಹೋಗಿದ್ದ, ಸಂಪಾತಿ - ಸಂಪಾತಿಯೆನ್ನುವ ಹದ್ದುಗಳ ರಾಜನು, ಗರಿ-ರೆಕ್ಕೆಗಳು, ಸೀದು-ಬೆಂದುಹೋಗಿ ಇಳೆಗೆ - ಭೂಮಿಯಮೇಲೆ, ಬೀಳುವಂತೆ - ಬೀಳುವತೆರನಾಗಿ, ಪಾರ್ಥಿ-ಅರ್ಜುನನ ಕುವರನು, ರಭಸದಿಂ-ಬಹು ಜಾಗ್ರತೆಯಿಂದ, ನಭದೊಳು-ಆಗಸದಲ್ಲಿರುವ, ಅತ್ಯುಗ್ರ-ಬಹು ಕಠಿಣವಾ

---

ತ್ಮಜನೆ ನನ್ನೊಂದಿಗೆ ಹೋರಾಡಿದ ಅನೇಕರಲ್ಲಿ ನಿನ್ನಷ್ಟು ಶೂರರಾರನ್ನೂ ನೋಡಲಿಲ್ಲವು ಸ್ಥಿರಚಿತ್ತನಾಗಿ ನೋಡೆಂದು ನುಡಿದು ಬಾಣಗಳನ್ನು ಬಿಟ್ಟುಬಿಟ್ಟನು, ಆ ಕೂರಲುಗುಗಳಾದರೊ ವೃಷಕೇತುವನ್ನು ಆಕಾಶಕ್ಕೆ ಎತ್ತಿಕೊಂಡುಹೋಗಿ ನಾನಾ ದಿಕ್ಕುಗಳಿಗೂ ಅವನನ್ನು ಸುತ್ತಿಸಿ ॥ ೧೭ ॥ ಮೂರು ಮುಹೂರ್ತಪರ್ಯಂತ ಆಕಾಶದಲ್ಲಿಯೆ ಸುತ್ತಿಸುತ್ತ ಕೊನೆಗೆ ಕಾಡುಮೇಡುಗಳಲ್ಲೆಲ್ಲಿಯೂ ಕೆಡವದೆ ಮಣಿಪುರದ ಬಳಿಯಣ ಪ್ರದೇಶದಲ್ಲಿಯೇ ತಂದು ಕೆಡವಿತು. ॥ ೧೮ ॥ ಪಾರ್ಥನು ನೋಡುತ್ತಲಿರುವಾಗಲೆ ಕರ್ಣನ ಸುತನಾದ ವೃಷಧ್ವಜನು ಮೇಲಿನಿಂದ ಕೆಳಗೆ ಬಿದ್ದು ಪುಟ ಏಳುವ ಚಂಡಿನಂತೆ ಪುನಃ ಮೇಲಕ್ಕೆ ಹಾರಿ ಕಾಲಮೇಘದಂತೆ ಘುಡಘುಡಿಸುತ್ತಾ ಅತಿ ರೋಷಮಂ ತಾಳಿ ಮಹಾ ಬಾಣಂಗಳನ್ನು ಬಿಡಲು ಅವು ಚತುರಂಗಬಲ ಸಮೇತನಾದ ಪಾರ್ಥಜನನ್ನು ಸ್ವರ್ಗಲೋಕದವರೆಗೂ ಎತ್ತಿಕೊಂಡು ಹೋಗಿ ॥೧೯॥ ಬಿಡಲು ಅಲ್ಲಿ ಮಹಾ ಕ್ರೂರವಾದ ಸೂರ್ಯರಶ್ಮಿಗೊಳಗಾದ

ಭೆಯಿಂದುರಿಯೆರಥಂಬಿದ್ದನುರ್ವಿಗೆಪಾರ್ಥ | ರಭಸದಿಂಪೂರ್ವದೊಳಡರ್ದಸಂಪಾತಿಗರಿಸೀದಿಳೆಗೆಬೀಳುವಂತೆ || ತ್ರಿಭುವನಕೆಪೊಸತಾಗೆಕರ್ಣಜಂಮುತ್ತೆರಿಪು | ಸುಭಟನಂಮೂರುಬಾಣದೊಳೆಚ್ಚುದಿವಸವ | ಲ್ಲಭನಮುಂಡಲದಲ್ಲಿಗೈದಿಸಿಪಚಾರಿಸಿಜರೆದುಕೂಡೆಬೊಬ್ಬಿರಿದನು || ೨೦ || ಬೊಬ್ಬಿರಿವಕರ್ಣಜನದನಿಗೇಳ್ದುರೋಷದಿಂ | ದೆಬ್ಬಿಸಿಗಗನದೋಳ್ತನ್ನರಥಮಂಬಿಟ್ಟು | ಹೆಬ್ಬೆಟ್ಟದಂತಿವನಮಸ್ತಕದಮೇಲೆಬೀಳಲ್ಕಿವಂಕನಲ್ದುಕೂಡೆ || ಉಬ್ಬಿಪುಟನೆಗೆದೆದ್ದುಸಾಯಕದೊಳೆಚ್ಚವನ | ನೆಬ್ಬಿಸಿದನಾಗಸಕೆಮುತ್ತೆಭೀಭತ್ಸುಕಂ | ಡೊಬ್ಬೆರಳನಲ್ಲಾಡಿಪೊಗಳಲ್ಕೆವೃಷಕೇತುಫಲುಗುಣಂಗಿಂತೆಂದನು || ೨೧ || ತಾತನೋಡಂದುರಣದೋಳ್ತೇರಗಾಲಿವಸು | ಧಾತಳದೊಳಾಳ್ದೊಡಾಯತಮಾಗಿಸಿಲ್ಕಿನಿಂ | ಘಾತಿಸದಿರೆಂದುನಿನ್ನೊಡನೆನಮ್ಮಯ್ಯನಾಡಿದವೊ

---

ದ, ದಿವಾಕರ-ರವಿಯ, ಪ್ರಭೆಯಿಂದ_ಜ್ಯೋತಿಯಿಂದ, ರಥಂ-ತನ್ನ ತೇರೆಲ್ಲಾ, ಉರಿಯೆ_ಬೆಂದುಹೋಗಲು, ಉರ್ವಿಗೆ-ಭೂಮಿಯಮೇಲೆ, ಬಿದ್ದನು-ಬಿದ್ದುಬಿಟ್ಟನು, ಕರ್ಣಜಂ_ಕರ್ಣನಂದನನು, ತ್ರಿಭುವನಕೆ_ಸ್ವರ್ಗ ಮರ್ತ್ಯ ಪಾತಾಳಗಳಿಗೂ, ಪೊಸತಾಗೆ_ಹೊಸದಾಗಿ ಕಾಣುವಂತೆ, ಮತ್ತೆ-ಪುನಃ, ರಿಪು-ವೈರಿಯಾದ, ಸುಭಟನಂ-ವೀರಾಗ್ರಣಿಯಾದ ಪಾರ್ಥಜನನ್ನು, ಮೂರುಬಾಣದೊಳು_ಕಣೆಗಳ ಮೂರರಿಂದ, ಎಚ್ಚು-ಹೊಡೆದವನಾಗಿ, ದಿನಸ_ಹಗಲಿಗೆ, ವಲ್ಲಭನ_ಒಡೆಯನಾದ ಸೂರ್ಯನ, ಮುಂಡಲದಲ್ಲಿಗೆ-ನುಂಡಲದ ಬಳಿಗೆ, ಪಚಾರಿಸಿ_ಸೆಳೆದುಕೊಂಡು ಹೋಗಿ, ಜರೆದು-ತಿರಸ್ಕರಿಸಿ, ಕೂಡೆ_ಬಡನೆಯೇ, ಬೊಬ್ಬಿರಿದನು_ಗರ್ಜಿಸಿದವನಾದನು ||

ಅ|| ವಿ|| ಸಂಪಾತಿಯಕಥೆ-ಪೂರ್ವದಲ್ಲಿ ಸಂಪಾತಿ, ಜಟಾಯು ಎಂಬೀರ್ವರು ಗೃಧ್ರರಾಜರಾದ ಅಣ್ಣತಮ್ಮಂದಿರು ಸೂರ್ಯಮುಂಡಲದವರೆಗೂ ಯಾರು ಹಾರಿಹೋಗುವರೊ ಅವರೇ ಸಮರ್ಥರೆಂದು ಕ್ರೂರಶಪಥವಂ ಮಾಡಿಕೊಂಡು ಅಂತರಿಕ್ಷದಲ್ಲಿ ಬಹು ದೂರದವರೆಗೂ ಹಾರಿ ಸೂರ್ಯಮುಂಡಲದ ಹತ್ತಿರಹತ್ತಿರಕ್ಕೆ ಹೋಗುತ್ತಾ ಸೂರ್ಯನ ತಾಪವನ್ನು ತಡೆಯಲಾರದೆ ರೆಕ್ಕೆಯು ಬೆಂದು ಇಬ್ಬರೂ ಕೆಳಗೆಬಿದ್ದು ಹೋದರು. ಶ್ರೀರಾಮನ ಪತ್ನಿಯೂ ಮಹಾ ಪತಿವ್ರತೆಯೂ ಆದ ಜಾನಕಿಯನ್ನು ಹುಡುಕುವುದರಲ್ಲಿ ಸಹಾಯಕರಾಗಿ ಇವರೀರ್ವರೂ ರಾಮಚಂದ್ರನ ಅನುಗ್ರಹದಿಂದ ಮುಕ್ತರಾದರು || ೨೦ ||

ಟೀ|| ಬೊಬ್ಬಿರವ-ಹೆಚ್ಚಾಗಿ ಗರ್ಜಿಸುತ್ತಲಿರುವ, ಕರ್ಣಜನ-ಕರ್ಣಸುತನ, ದನಿ_ಶಬ್ದವನ್ನು, ಕೇಳ್ದು_ಕೇಳಿದವನಾಗಿ, ರೋಷದಿಂದ_ಕೋಪಾತಿಶಯದಿಂದ, ಅಬ್ಬರಿಸಿ-ಆರ್ಭಟಿಸಿ, ತನ್ನ_ತನ್ನದಾದ, ರಥಮುಂ-ಸ್ಯಂದನವನ್ನು ಗಗನದೋಳ್-ಆಗಸದಲ್ಲಿಯೇ, ಬಿಟ್ಟು_ಬಿಟ್ಟು, ಇವನ_ಈ ವೃಷಧ್ವಜನ, ಮಸ್ತಕದಮೇಲೆ-ಶಿರಸ್ಸಿನ ಮೇಲ್ಗಡೆ, ಹೆಬ್ಬೆಟ್ಟದಂತೆ_ದೊಡ್ಡ ಬೆಟ್ಟದತೆರನಾಗಿ, ಬೀಳಲ್ಕೆ-ಬಿದ್ದುಬಿಡಲು, ಇವಂ-ಈ ವೃಷಧ್ವಜನು, ಕನಲ್ದು-ಕೋಪಮಾಡಿದವನಾಗಿ, ಕೂಡೆ_ಬಡೆಯನೆ, ಉಬ್ಬಿ-ಅಧಿಕನಾಗಿ, ಪುಟನೆಗೆದು_ಮೇಲಕ್ಕೆ ಹಾರಿ, ಎದ್ದು-ಎದ್ದವನಾಗಿ, ಸಾಯಕದೊಳು-ಕಣೆಗಳಿಂದ, ಎಚ್ಚು_ಹೊಡೆದು, ಆಗಸಕೆ-ಅಂತರಿಕ್ಷ ಮಾರ್ಗಕ್ಕೆ, ಅವನನು_ಆ ಪಾರ್ಥಜನನ್ನು, ಎಬ್ಬಿಸಿದನು_ಎಬ್ಬಿಸಿದವನಾದನು, ಭೀಭತ್ಸು-ಫಲುಗುಣನು, ಮತ್ತೆ-ಪುನಃ, ಕಂಡು_ನೋಡಿದವನಾಗಿ, ಒಬ್ಬೆರಳನು-ಒಂದು ಬೆಟ್ಟನ್ನು, ಅಲ್ಲಾಡಿಸಿ-ಅಲ್ಲಾಡಿಸಿ, ಪೊಗಳಲ್ಕೆ-ಹೊಗಳಲಾಗಿ, ಫಲುಗುಣಂಗೆ-ಪಾರ್ಥನನ್ನು ಕುರಿತು, ವೃಷಕೇತು-ವೃಷಧ್ವಜನು, ಇಂತು_ಮುಂದೆ ಹೇಳುವಂತೆ, ಎಂದನು_ನುಡಿದವನಾದನು ||

ಅ|| ವಿ|| ದನಿ (ತ್ಭ) ಧ್ವನಿ (ತ್ಸ) ದನಿಯಂ + ಕೇಳ್ದು = ದನಿಗೇಳ್ದು, (ಕ್ರಿ. ಸ.) ಹೆಬ್ಬೆಟ್ಟ - ಹಿರಿದು + ಬೆಟ್ಟ, (ವಿ. ಪೂ.) || ೨೧ ||

ಟೀ|| ತಾತ - ಜನಕನೆ, ನೋಡು_ಈ ಕದನವನ್ನೀಕ್ಷಿಸು, ಅಂದು – ಪೂರ್ವದಲ್ಲಿ, ರಣದೊಳು - ಯುದ್ಧದಲ್ಲಿ, ತೇರ

---

ಬಭ್ರುವಾಹನನ ದಿವ್ಯ ರಥವು ಭಸ್ಮವಾಗಿ ನೆಲಕ್ಕೆ ಬಿದ್ದು ಹೋಯಿತು, ಕೂಡಲೆ ಪೂರ್ವದಲ್ಲಿ ಗರಿಗಳನ್ನು ಕಳೆದುಕೊಂಡ ಸಂಪಾತಿಯು ಸೂರ್ಯಮುಂಡಲದಿಂದ ಭೂಮುಂಡಲಕ್ಕೆ ಬಿದ್ದಂತೆ ವಿರಥನಾದ ಅರ್ಜುನಾತ್ಮಜನೂ ಮಹಾ ರಭಸದಿಂದ ಕೆಳಕ್ಕೆ ಬಿದ್ದುಬಿಟ್ಟನು ಆಗ ವೃಷಕೇತುವು ಬಭ್ರುವಾಹನನ ಮೇಲೆ ಮತ್ತೆ ಮೂರು ದಿವ್ಯ ಬಾಣಗಳನ್ನು ಬಿಡಲು ಅವು ಪಾರ್ಥಜನನ್ನು ಸೂರ್ಯಮುಂಡಲದವರೆಗೂ ಪುನಃ ಎತ್ತಿಕೊಂಡು ಹೊದುದನ್ನು ವೃಷಧ್ವಜನು ನೋಡಿ ಬಭ್ರುವಾಹನನ್ನು ಹೀಯಾಳಿಸುತ್ತಾ ಸಿಂಹನಾದವನ್ನು ಮಾಡಲಾರಂಭಿಸಿದನು ||೨೦|| ಅಂತರಿಕ್ಷಮಾರ್ಗದಲ್ಲಿದ್ದ ಪಾರ್ಥಜನಾದರೊ ವೃಷಕೇತುವಿನ ಆರ್ಭಟವನ್ನು ಕೇಳಿ ಮಹಾ ಕೋಪದಿಂದ ಗರ್ಜಿಸುತ್ತಾ ತನ್ನ ರಥವನ್ನು ಅಲ್ಲಿಯೇ ಬಿಟ್ಟು ದೊಡ್ಡ ಬೆಟ್ಟದಂತೆ ವೃಷಧ್ವಜನ ತಲೆಯಮೇಲೆ ಬಂದು ಬೀಳಲು ಕರ್ಣಜನು ಮಹಾ ರೋಷದಿಂದ ಮೇಲಕ್ಕೆಹಾರಿ ಬಭ್ರುವಾಹನನಮೇಲೆ ಮತ್ತೆ ಕೂರ್ಗಣೆಗಳನ್ನು ಬಿಟ್ಟು ಅವನನ್ನು ಅಂತರಿಕ್ಷಕ್ಕೆ ಹಾರಿಸಿ ಬಿಟ್ಟನು ಇದನ್ನೆಲ್ಲಾ ಅರ್ಜುನನು ನೋಡುತ್ತಾ ಸಬ್ಧನಾಗಿ ನಿಂತಿರಲು ವೃಷಧ್ವಜನು ಪಾರ್ಥನನ್ನು ಕುರಿತು || ೨೧ || ಎಲೈ ತಂದೆಯಾದ ಅರ್ಜುನನೆ ಪೂರ್ವದಲ್ಲಿ ನಮ್ಮ ತಂದೆಯಾದ ಕರ್ಣನೊಂದಿಗೆ ಯುದ್ಧಮಾ

ಲಾಡದೆಸುಮ್ಮನೆ ‖ ಈತನೆನ್ನಸ್ತ್ರದಿಂಗಾಸಿಯಾದಪನೆಂದು । ಮಾತಾಡುವನಿತರೊಳ್ಮತ್ತೆವನಮೇಲೆಬಂ । ದಾತಬೀಳ ಲ್ಕೊಂದರೀರ್ವರುಂಚೇತರಿಸಿಕೊಂಡುಧುರಕನುವಾದರು ‖ ೨೨ ‖ ಮಣಿವರೂಥಾರೂಢರಾಗಿಬಳಿಕೀರ್ವರುಂ । ರಣರಂಗ ದೊಳ್ಕಡುಗಿಕಾದಿದರ್ಕಾಯದೊಳ್ಕಣೆಗಳಿಡಿಯಲ್ಖಂಡಮುಂಕಚ್ಚಿಪಾರಲರುಣಾಂಬುಗಳ್ಕೂಡಿವರಿಯೆ ‖ ಪೊಣರ್ವರಂಬರಕ ಡರ್ದೊಮ್ಮೆಮೇದಿನಿಗಿಳಿದು । ಪೆಣಗುವರ್ಮತ್ತೊಮ್ಮೆನಭದೊಳಿರ್ದೋರ್ವರ್ಧ । ರಣೀತಳದೊಳಗೆಯೋರ್ವನಾಗಸದೊಳೋ ರ್ವನಿರೆಸರಿಸಮದೊಳಾಕಲಿಗಳು ‖ ೨೩ ‖ ಭೂಪಕೇಳಿಂತೈದುದಿನಮೈದೆಕಾದಿದ । ಚಾಪವಿದ್ಯಾಪ್ರವೀಣರ್ಬಳಿಕಪಾರ್ಥ ಜಂ । ಭಾಪುರೇವೃಷಕೇತುನೀನೆಪಟುಭಟನಪ್ಪೆಲೋಕದೊಳ್ನಾಕೆದೆಯೊಳು ‖ ಶ್ರೀಪತಿಧ್ಯಾನಮುಂಮಾಡೆನುತತಗೆದೆಸ ।

---

ಗಾಲಿ-ರಥಚಕ್ರವು, ವಸುಧಾತಳದೊಳು-ಭೂಪ್ರದೇಶದಲ್ಲಿ, ಆಳ್ದೊಡೆ-ಇಳಿದುಬಿಡಲು, (ಕಚ್ಚಿಕೊಳ್ಳಲು) ಅಯುತವಾಗಿ-ನೇರ್ಪ ಡಿಸಿಕೊಂಡು, ನಿಲ್ವೆ-ಯುದ್ಧಕ್ಕೆ ನಿಲ್ಲುತ್ತೇನೆ, ನೀಂ-ನೀನು, ಘಾತಿಸದೆ-ಬಡಿಯದೆ, ಇರು-ಇರುವನಾಗು, ಎಂದು-ಎಂಬ ತೆರ ನಾಗಿ, ನಿನ್ನೊಡನೆ-ನಿನ್ನೊಂದಿಗೆ, ನಮ್ಮಯ್ಯನು-ನಮ್ಮ ತಂದೆಯಾದ ಕರ್ಣನು, ಆಡಿದವೊಲು-ನುಡಿದ ಬಗೆಯಿಂದ, ಈತನು-ಈ ಪಾರ್ಥಜನು, ಸುಮ್ಮನೆ-ವೃಥಾ, ಎನ್ನ-ನನ್ನ, ಅಸ್ತ್ರದಿಂದ-ಬಾಣದಿಂದ, ಗಾಸಿಯಾದಪನು-ಹೊಡೆಯಲ್ಪಡುವನು, ಎಂದು-ಎಂಬದಾಗಿ, ಮಾತಾಡುವನಿತರೊಳ್-ಮಾತಾಡುವಷ್ಟರೊಳಗೆ, ಮತ್ತೆ-ತಿರುಗಿ, ಇವನಮೇಲೆ-ವೃಷಧ್ವಜನಮೇಲೆ-ಬಂದು ಬೀಳಲು-ಬಿದ್ದುಹೋಗಲು, ಈರ್ವರುಂ-ಅವರಿಬ್ಬರೂ, ನೊಂದರು-ವ್ಯಥೆಯನ್ನು ಅನುಭವಿಸಿದವರಾದರು, ಚೇತರಿಸಿಕೊಂಡು-ಸುಧಾರಿಸಿಕೊಂಡವರಾಗಿ, ಧುರಕೆ-ಕಾಳಗಕ್ಕೆ, ಅನುವಾದರು-ತೊಡಗಿದರು ‖ ೨೨ ‖

ಟೀ‖ ಈರ್ವರುಂ-ವೃಷಕೇತು ಬಭ್ರುವಾಹನರೀರ್ವರೂ, ಆರೂಢರಾಗಿ-ಏರಿದವರಾಗಿ, ರಣರಂಗದೊಳ್-ಸಮರಾಂಗಣದಲ್ಲಿ, ಕಡುಗಿ-ಬಹು ಹೆಚ್ಚಾಗಿ, ಕಾದಿದರ್-ಯುದ್ಧಮಾಡಿದವರಾದರು, ಕಣೆಗಳು-ಸರಲ್ಗಳು, ಕಾಯದೊಳು-ದೇಹದಲ್ಲಿ, ಇಡಿಯಲ್-ತುಂಬಿಕೊಳ್ಳಲು, ಖಂಡಮುಂ-ಮಾಂಸದ ಮುದ್ದೆಗಳನ್ನು, ಕಚ್ಚಿ-ಹೋಗಿ ಸೇರಿ, ಪಾರಿದ-ಸುರಿಯುತ್ತಿರುವ, ಅರುಣಾಂಬುಗಳ್-ರಕ್ತವೆನ್ನುವ ಕೆಂಪುನೀರು, ಕೂಡಿ-ಒಟ್ಟಾಗಿ, ಪರಿಯೆ-ಹರಿಯಲು, ಅಂಬರಕೆ-ಅಂತರಿಕ್ಷಕ್ಕೆ, ಒಮ್ಮೆ-ಒಂದು ಬಾರಿ, ಅಡರ್ದು-ಏರಿ, ಪೊಣರ್ವರು-ಕಾಳಗ ಮಾಡುವರು, ಮೇದಿನಿಗೆ-ಭೂಮಿಗೆ, ಇಳಿದು-ಇಳಿದವರಾಗಿ, ಪೆಣಗುವರ್-ಕಾದಾಡುವರು, ನಭದೊಳು-ಆಗಸದಲ್ಲಿ, ಮತ್ತೊಮ್ಮೆ-ಇನ್ನೊಂದಬಾರಿ, ಇರ್ದು-ಇದ್ದವರಾಗಿ, ಒರ್ವಂ-ಒಬ್ಬನು, ಧರಣೀತಳದೊಳಗೆಯೆ-ಭೂಪ್ರದೇಶದಲ್ಲಿಯೆ, ಓರ್ವನು-ಒಬ್ಬನು, ಆಗಸದೊಳು-ಅಂತರಿಕ್ಷದಲ್ಲಿ, ಓರ್ವನು-ಒಬ್ಬನೂಸಹ, ಇರೆ-ಇರಲಾಗಿ, ಆಕಲಿಗಳು-ವೀರಾಗ್ರಣಿಗಳಾದ ಆ ಕರ್ಣಾರ್ಜುನರ ಮಕ್ಕಳು, ಕಾದಿದರು-ಹೋರಾಡಿದರು ‖

ಅ‖ ವಿ‖ ಮಣಿವರೂಥಾರೂಢರಾಗಿ-ಮಣಿಖಚಿತವಾದ ವರೂಥ (ವಿ. ಪೂ) ಮಣಿವರೂಥವನ್ನು ಆರೂಢರು (ದ್ವಿ. ತ.) ಅರುಣಾಂಬು-ಅರುಣ-ಕೆಂಪಾದ, ಅಂಬು-ನೀರು, (ವಿ. ಪೂ. ಮತ್ತು ಸ. ದೀ.) ‖ ೨೩ ‖

ಟೀ‖ ಭೂಪ-ಧರಾಧೀಶನಾದ ಜನಮೇಜಯನೆ, ಕೇಳು-ಲಾಲಿಸು, ಚಾಪವಿದ್ಯಾಪ್ರವೀಣರ್ = ಚಾಪ - ಧನುಸ್ಸಿನಸಂಬಂಧವಾದ, ವಿದ್ಯಾ-ವಿದ್ಯೆಯಲ್ಲಿ, ಪ್ರವೀಣರ್-ನಿಪುಣರಾದ ವೃಷಕೇತು ಬಭ್ರುವಾಹನರು, ಇಂತು-ಈ ಪರಿಯಾಗಿ, ಐದು

---

ಡುವಾಗ ಅವನ ರಥಚಕ್ರಗಳು ಭೂಮಿಯಲ್ಲಿ ಸಿಕ್ಕಿಕೊಂಡು ಯುದ್ಧಕ್ಕೆ ತೊಡಕಾದ್ದರಿಂದ ನನ್ನ ರಥವು ಸರಿಯಾಗುವ ವರೆಗೂ ಯುದ್ಧವನ್ನು ನಿಲ್ಲಿಸೆಂದು ನಮ್ಮ ತಂದೆಯು ನಿನ್ನೊಡನೆ ಹೇಳಿದಂತೆ ಈಗ ಈ ಬಭ್ರುವಾಹನನು ಸೋತುಹೋದರೂ ಸೋತೆನೆಂದು ಹೇಳದೆ ಅನ್ಯಾಯವಾಗಿ ಪ್ರಾಣಗಳನ್ನು ಕಳೆದುಕೊಂಡು ಬಿಡುವನಲ್ಲಾ ಎಂದು ಮಾತನಾಡುವಷ್ಟರಲ್ಲಿಯೇ ಪಾರ್ಥಜನು ಮೇಲಿನಿಂದ ವೃಷಕೇತುವಿನಮೇಲೆ ದೊಪ್ಪನೆ ಬೀಳಲು, ಇಬ್ಬರಿಗೂ ಬಹಳವಾಗಿ ವ್ಯಥೆ ಯುಂಟಾಯಿತು. ಕೊನೆಗೆ ಈರ್ವರೂ ಚೇತರಿಸಿಕೊಂಡು, ‖ ೨೨ ‖ ಪೊಸದೇರ್ಗಳ ನಡರ್ದು, ಯುದ್ಧ ಮಾಡಲುಜ್ಜುಗಿಸಿದರು, ಕ್ರೂರವಾದ ಬಾಣಗಳಿಂದ ಒಬ್ಬರನ್ನೊಬ್ಬರು ನೋಯಿಸಿ ರಕ್ತಪ್ರವಾಹಗಳು ಹರಿಯುವಂತೆ ಮಾಡುತ್ತಲೂ, ಇಬ್ಬರೂ ಮೇಲಕ್ಕೆಹಾರಿ ಕಾದಾಡಿ ಪುನಃ ಕೆಳಕ್ಕಿಳಿದು ಕಾಳಗವಮಾಡಿ ತಮ್ಮ ಸರ್ವಶಕ್ತಿಯನ್ನೂ ತೋರ್ಪಡಿಸುತ್ತಲೂ, ಒಬ್ಬನು ನೆಲದಮೇಲೂ ಒಬ್ಬನು ಆಗಸದೊಳಗೂ ನಿಂತು ಹೋರಾಡುತ್ತಲೂ, ಸಮಸಮನಾಗಿ ಕಾದಾಡುತ್ತಲಿದ್ದರು, ‖ ೨೩ ‖ ಕೇಳೈ ಜನಮೇಜಯ ಧರಣೀಂದ್ರನೆ ! ಈ ರೀತಿಯಾಗಿ ವೃಷಕೇತು ಬಭ್ರುವಾಹನನು ಐದು ದಿನಗಳವರೆಗೂ ತಮ್ಮತಮ್ಮ ಶಕ್ತಿ ಸಾಹಸಗಳನ್ನು ತೋರಿಸುತ್ತ ಯುದ್ಧಮಾಡಿದವರಾದರು. ಆಗ ಬಭ್ರುವಾಹನನು ಕರ್ಣಸುತನನ್ನು ಕುರಿತು, ಶಹಬಾಸ್, ವೃಷಕೇತುವೇ ಶಹಬಾಸ್, ನಾನು ನೋಡಿದ ಸಾಹಸಿಗಳಲ್ಲೆಲ್ಲಾ ನೀನೆ ವೀರನು. ನಿನಗೆ ಇನ್ನು ಯುದ್ಧವು ಸಾಕು, ಮನಸ್ಸಿನಲ್ಲಿ ಶ್ರಿಯಃಪತಿಯನ್ನು ಧ್ಯಾನಮಾಡು

ಲ್ಕೋಪದಿಂದಾಕಣೆಯನಿವನರಿವನಿತರೊಳ್ | ತಾಪದಿಂಕವಲಂಬನೆಚ್ಚುಕತ್ತರಿಸಿದಂಕರ್ಣಜನಕಂಧರವನು ‖ ೨೪ ‖ ಕಡಿದುಕವಲಂಬುಗಿಯೆಕರ್ಣಜನತಲೆನಭಕೆ | ಪಿಡಿದುಕಂತುಕದಂತೆಬಂದುಬಿದ್ದುದುಪಾರ್ಥ | ನಡಿಗೆನಾರಾಯಣಮುಕುಂದ ಮಾಧವಯೆನುತಮುಂಡವತಿವೇಗದಿಂದ ‖ ನಡೆದುರಣದೊಳ್ಮಣಿಪುರೇಂದ್ರನಂಪೊಯ್ದಿಳೆಗೆ | ಕೆಡಹಿಪಡೆಯೆಲ್ಲಮಂಸದೆದುರುಳ್ದುದನರಂ | ಪಿಡಿದೆರಡುಕೈಗಳಿಂದಾಶಿರವನೆತ್ತಿಕೊಂಡೀಕ್ಷಿಸುತಳಲ್ದನಂದು ‖ ೨೫ ‖ ಬಿಟ್ಟಕಂಗಳಬಿಗಿದಪುರ್ಬುಗಳಗೆರೆನೊಸಲ | ಬೊಟ್ಟುಸೂಸಿದಕುರುಳ್ಥಳಥಳಿಪಕುಂಡಲಂ | ಪುಟ್ಟದುಪ್ಪುಳ್ಮೀಸೆಪೊಳೆವಲ್ಲುನಗೆಮೊಗಂಕಳಕಳಿಸೆಕಳೆಪಿಂದ | ಕಟ್ಟುಗ್ರಮಾಗಿರ್ದತನಿವೀರರಸದೊಂದು | ಗಟ್ಟಯೆನೆತೋರ್ಪಕರ್ಣಜನತಲೆಯಂನರಂ | ನಿಟ್ಟಸುತಪಣೆಯೊಳ್

---

ದಿನಂ-ಐದುದಿನಗಳವರೆಗೂ, ಐದೆ-ಚನ್ನಾಗಿ, ಕಾದಿದರ್-ಹೋರಾಡಿದರು, ಪಾರ್ಥಜಂ-ಪಾರ್ಥಸುತನು, ಬಳಿಕ-ಅನಂತರ, ಲೋಕದೋಳ್-ಪ್ರಪಂಚದಲ್ಲಿ, ಎದೆಯೊಳು-ಧೈರ್ಯದಲ್ಲಿ, ಪಟುಭಟನು-ವೀರಾಗ್ರಣಿಯು, ನೀನೆ-ನೀನೊಬ್ಬನೆ, ಅಪ್ಪೆ-ಆಗಿರುತ್ತೀಯೆ, ಭಾಪುರೆ-ಶಹಬಾಸ್, ಸಾಕು-ನಿನ್ನ ಸಾಹಸವು ಇಲ್ಲಿಗೆ ಸಾಕು, ಶ್ರೀಪತಿಯ-ಲಕ್ಷ್ಮೀರಮಣನಾದ ಕೃಷ್ಣನ, ಧ್ಯಾನಮಂ-ನಾಮ ಸಂಕೀರ್ತನೆಯನ್ನು, ಮಾಡು-ಮಾಡತಕ್ಕವನಾಗು, ಎನುತ-ಎಂದು ನುಡಿಯುತ್ತ, ತೆಗೆದು-ಕಣೆಗಳನ್ನು ಬಿಲ್ಲಿಗೆ ಸೇರಿಸಿ, ಎನಲ್-ಪ್ರಯೋಗವಂ ಮಾಡಲು, ಇವನು-ಈ ವೃಷಧ್ವಜನು, ಆಕಣೆಯನು-ಆ ಸರಲನ್ನು, ಕೋಪದಿಂ-ಕ್ರೌರ್ಯದಿಂದ, ಅರಿವ-ಕಡಿದು ಹಾಕುವ, ಅನಿತರೊಳು-ಕಾಲದೊಳಗೆ, ಕರ್ಣಜನ-ವೃಷಧ್ವಜನ, ಕಂಧರವನು-ಕೊರಳನ್ನು, ಕವಲಂಬಂ-ಅರ್ಧಚಂದ್ರಾಕೃತಿಯಾದ ಸರಲನ್ನು, ಎಚ್ಚು-ಹೊಡೆದು, ಕತ್ತರಿಸಿದಂ-ಕಡಿದು ಬಿಟ್ಟನು ‖

ಅ‖ ವಿ‖ ಚಾಪವಿದ್ಯಾಪ್ರವೀಣರ್ - ಚಾಪದವಿದ್ಯೆ (ಷ. ತ.) ಚಾಪವಿದ್ಯೆಯಲ್ಲಿ ಪ್ರವೀಣರ್ (ಸ. ತ.) ‖೨೪‖

ಟೀ‖ ಕವಲಂಬು- ಅರ್ಧಚಂದ್ರಾಕೃತಿಯಾದ ಬಾಣವು, ಕಡಿದು-ವೃಷಧ್ವಜನ ತಲೆಯನ್ನು ಛೇದಿಸಿ ಉಗಿಯೆ-ಕೆಳಗೆ ಉರುಳಿಸಲು, ಕರ್ಣಜನ-ಕರ್ಣಸುತನ, ತಲೆ-ಉತ್ತಮಾಂಗವು, ನಭಕೆ-ಆಗಸಕ್ಕೆ, ಪಿಡಿದು-ಹಾರಿ, ಕಂತುಕದಂದೆ-ಚಂಡಿನೋಪಾದಿಯಲ್ಲಿ, ಪಾರ್ಥನ-ಫಲುಗುಣನ, ಅಡಿಗೆ-ಪಾದಾರವಿಂದವೆಡೆಗೆ, ಬಂದು-ಐತಂದು, ನಾರಾಯಣ-ಪಾಣ್ಡಲನ್ನು ಮನೆಯಾಗುಳ್ಳವನೆ, ಮುಕುಂದ-ಮೋಕ್ಷದಾಯಕನೆ, ಮಾಧವ-ಶ್ರಿಯಃಪತಿಯೇ, ಎನುತ-ಎಂದು ನುಡಿಯುತ್ತ, ಬಿದ್ದು ಬಿಟ್ಟಿತು, ರಣದೊಳ್-ಸಮರಾಂಗಣದಲ್ಲಿ, ಅತಿವೇಗದಿಂದ-ಬಹು ಜಾಗ್ರತೆಯಿಂದ, ಮುಂಡವು-ದೇಹವು, ನಡೆದು - ನಡೆದುಕೊಂಡು ಹೋಗಿ, ಮಣಿಪುರೇಂದ್ರನಂ-ಪಾಥಜನನ್ನು, ಪೊಯ್ದು-ಹೊಡೆದು, ಇಳೆಗೆ-ಭೂಮಿಗೆ, ಕೆಡಹಿ-ಕೆಡವಿಬಿಟ್ಟು, ಪಡೆಯೆಲ್ಲಮಂ-ಸಕಲ ಸೈನ್ಯವನ್ನೂ, ಸದೆದು-ಬಡಿದು, ಉರುಳ್ದುದು-ಬಿದ್ದುಹೋಯಿತು, ನರಂ-ಪಾರ್ಥನಾದರೊ, ಅಂದು-ಆಕಾಲದಲ್ಲಿ, ಆಶಿರವನು-ವೃಷಧ್ವಜನ ಶಿರಸ್ಸನ್ನು, ಎರಡುಕೈಗಳಿಂದ-ಎರಡು ಕೈಗಳಿಂದಲೂ, ಎತ್ತಿಕೊಂಡು-ಎತ್ತಿಕೊಂಡವನಾಗಿ, ಈಕ್ಷಿಸುತ-ನೋಡುತ್ತ, ಅಳಲ್ದನು-ವ್ಯಥೆಗೊಂಡವನಾದನು, (ಗೋಳಾಡಿದನು) ‖೨೫‖

ಟೀ‖ ಬಿಟ್ಟ-ರೆಪ್ಪೆ ಬಡೆಯುವುದನ್ನು ನಿಲ್ಲಿಸಿರುವ, ಕಂಗಳ-ನಯನಂಗಳನ್ನುಳ್ಳ, ಬಿಗಿದ-ಗಂಟುಗಂಟಾಗಿ ವಕ್ರಗತಿಯನ್ನೈದಿದ, ಪುರ್ಬುಗಳ-ಹುಬ್ಬುಗಳಿಂದ ಕೂಡಿದ, ಪೆರೆನೊಸಲ-ವಿಶಾಲವಾದ ಹಣೆಯನ್ನುಂಟಾಗಿರುವ, ಬೊಟ್ಟು-ಹಣೆಗೆ ಅಲಂಕಾರವಾದ ತಿಲಕವುಳ್ಳ, ಸೂಸಿದ-ಚದರಿ ಹೋಗಿರುವ, ಕುರುಳ-ಕೇಶಪಾಶಗಳುಳ್ಳ, ಥಳಥಳಿಪ-ಮಿರುಮಿರುಗುವ, ಕುಂಡಲಂ-ಕರ್ಣಾಭರಣಗಳುಳ್ಳ, ಪುಟ್ಟದ-ಉಂಟಾಗಿರುವ, ಉಪ್ಪುಳ್ಮೀಸೆ-ತಿರಿತಿರಿಯಾದ ಮೀಸೆಗಳಿಂದ ಅನ್ವಿತವಾದ, ಪೊಳೆವ-ಕಾಂತಿಯುಕ್ತವಾದ, ಪಲ್ಲು-ದಂತಗಳಿಂದಕೂಡಿದ, ನಗೆಮೊಗಂ-ಹಸನ್ಮುಖವನ್ನುಂಟಾಗಿರತಕ್ಕ, ಕಳೆಗಳಿಂದ-ಪ್ರಕಾಶಾತಿಶಯ

---

ವನಾಗು, ಎಂದು ನುಡಿಯುತ್ತಾ ದಿವ್ಯಬಾಣವನ್ನು ಬಿಡಲು, ವೃಷಕೇತುವು ದಾರಿಯಲ್ಲಿಯೇ ಅದನ್ನು ಕತ್ತರಿಸಿ ಕೆಡಹುವದರೊಳಗಾಗಿ, ಬಭ್ರುವಾಹನನು ಅರ್ಧಚಂದ್ರಾಕಾರವಾದ ಬಾಣವೊಂದನ್ನು ಕರ್ಣಸುತನಮೇಲೆ ಬಿಡಲು ಆ ಕೂರಲಗು ಹೋಗಿ ಕರ್ಣಜನ ಕಂಠವನ್ನು ಕತ್ತರಿಸಿ ಬಿಟ್ಟಿತು ‖ ೨೪ ‖ ಬಭ್ರುವಾಹನನ ಕೂರ್ಗಣೆಯಿಂದರಿಯಲ್ಪಟ್ಟ ವೃಷಕೇತುವಿನ ಕೊರಳಾದರೊ ಚಂಡಿನಂತೆ ಆಕಾಶಕ್ಕೆ ಹಾರಿಹೋಗಿ, ಲಕ್ಷ್ಮೀರಮಣನಾದ ಭಗವಂತನೆ! ಮುಕ್ತಿದಾಯಕನೆ! ನಾರಾಯಣಮೂರ್ತಿಯೆ! ಮಹಾನುಭಾವನೆ! ಎಂದು ನುಡಿಯುತ್ತಾ ಅತಿವೇಗದಿಂದ ಅರ್ಜುನನ ಪಾದಾರವಿಂದದೆಡೆಯಲ್ಲಿ ಬಂದುಬಿದ್ದಿತು. ಆ ವೃಷಧ್ವಜನ ಮುಂಡವಾದರೊ, ಜಾಗ್ರತೆಯಾಗಿ ಹೊರಟು ಬಭ್ರುವಾಹನನ್ನು ನೆಲಕ್ಕೆ ಕೆಡಹಿ ಅವನ ಸೈನ್ಯವನ್ನೆಲ್ಲಾ ಹಾಳುಮಾಡಿ ಕೆಳಗೆ ಬಿದ್ದುಹೋಯಿತು. ಬಳಿಕ ಪಾರ್ಥನು ತನ್ನಬಳಿಗೆ ಬಂದುಬಿದ್ದ ವೃಷಕೇತುವಿನ ತಲೆಯನ್ನು ಎರಡುಕೈಗಳಿಂದಲೂ ಹಿಡಿದುಕೊಂಡು ನೋಡಿನೋಡಿ ‖೨೫‖ ಬಹಳವಾಗಿ ಗೋಳಾಡಲಾರಂಭಿಸಿದನು. ಆ ವೃಷಕೇತುವಿನ ತಲೆಯಾದರೊ

ಟ್ಟುಪೊಸೆದುಚುಂಬಿಸಿಕಂಬನಿಯೊಳಾಳ್ದನು ‖ ೨೬ ‖ ಮಗನೆನೀನೆಂತುಮಡಿದೈಕೃಷ್ಣರಾಯಂಗೆ । ಸೊಗಸಾದುದೇನಿನ್ನಳಿವುಧರ್ಮತನಯಂಗೆ । ಮೊಗದೋರ್ವಸುತರುಂಟೆನೀನಿಲ್ಲದೇನೆಂದಳಲ್ವಳ್ವೈಕುಂತಿಮರುಗಿ ‖ ಪಗೆಯೆಂದುಕೊಂದೆವಗ್ರಜನನಮಗಾತನಿಂ । ಮಿಗಿಲೆಂದುಕಂಡಿಹೆವೆಲೈನಿನ್ನನೈವರ್ಗೆ । ಸುಗತಿಗೊಡುವಾತ್ಮಭವರಿರ್ದಪರೆಪೇಳೆಂದುಹಳವಳಿಸಿದಂಪಾರ್ಥನು ‖ ೨೭ ‖ ಸಾಲದೆಮಹಾಹವದೊಳಭಿಮನ್ಯುಮಡಿದಳ । ಲ್ಬಾಲಕಂನೀನಿರ್ದೊಡೇನಕಟಕಣ್ಣಮುಂ । ದಾಲಿಸ್ವೈತನ್ನಮಾತಂನುಡಿಸಲಾಗದೇನೋಡೆನ್ನನಾದರದೊಳು ‖ ಪಾಲಿಸೈತುರಗಮಂಮುಂದಿಯಂನಡೆಸಿನ್ನು । ಮೇಲಣುದ್ಯೋಗವಾವುದುಕಂದನಿನ್ನಗುಣ । ಶೀಲಮಂಮುಂದಿಯಂನಡೆಸಿನ್ನು । ಭೂಪನೋಳ್ಬಣ್ಣಿಪನ್ಯಕೋದರಂಗೇನೆಂಬೆನುಸುರೆಂದನು ‖ ೨೮ ‖ ಮೂಗಿಲ್ಲವಾನನಂಲಿಂಗವಿಲ್ಲದಪೀತ । ನಾಗಿರದೆಸಾಂಡನರಸಿರಿಯಿನ್ನುನೀನಿಲ್ಲ । ದಾಗಸಿನ್ನಧಟಂದಮಾನನಾಶ್ವಾನುಸಾಲ್ವ

---

ದಿಂದ, ಕಳವಳಿಸೆ-ಘಳಘಳಿಸಲಾಗಿ, ಕಟ್ಟುಗ್ರಂ-ಬಹು ಕಠಿಣವಾದದ್ದು, ಆಗಿರ್ದ-ಆಗಿದ್ದಂಥ, ತನಿ-ಹೊಸದಾದ, ವೀರರಸದ-ಶೌರ್ಯಾತಿಶಯದ ರಸವುಳ್ಳ, ಬಂದು-ಬಂದಾದ, ಗಟ್ಟಿ-ಗಟ್ಟಿಯಾದ ವಸ್ತುವು, ಎನೆ-ಎಂಬ ತೆರನಾಗಿ, ತೋರ್ಪ-ಕಾಣುತ್ತಲಿರುವ, ಕರ್ಣಜನ-ಕರ್ಣನಂದನನ, ತಲೆಯಂ-ರುಂಡವನ್ನು, ನರಂ-ಪಾರ್ಥನು, ಸಿಟ್ಟಿಸುತ-ದೃಷ್ಟಿಸಿ ನೋಡುತ್ತ, ಪಣೆಯಂ-ತನ್ನ ಹಣೆಯನ್ನು, ಪಣೆಯೊಳು - ವೃಷಕೇತುವಿನ ಫಾಲದೆಡೆಯಲ್ಲಿ, ಇಟ್ಟು - ಇರಿಸಿಕೊಂಡು, ಪೊಸೆದು- ಉಜ್ಜಿಕೊಂಡು, ಚುಂಬಿಸಿ-ಮುಖಚುಂಬನವಂಮಾಡಿ, ಕಂಬನಿಯೊಳು-ಕಣ್ಣೀರಿನಿಂದ, ಆಳ್ದನು-ಮಗ್ನನಾದನು ‖೨೬‖

ಟೀ‖ (ಅರ್ಜುನನು ರುಂಡವನ್ನು ನೋಡಿ ವ್ಯಥೆಪಡುವನು)—ಮಗನೆ-ಎಲೈ ಪುತ್ರನಾದ ವೃಷಧ್ವಜನೆ, ನೀನು-ನೀನಾದರೊ, ಎಂತು-ಹೇಗೆ, ಮಡಿದೈ-ಪ್ರಾಣಗಳನ್ನು ಕಳೆದುಕೊಂಡೆಯಯ್ಯಾ, ಕೃಷ್ಣರಾಯರಿಗೆ-ಕೃಷ್ಣ ಮೂರ್ತಿಗೆ, ನಿನ್ನ-ನಿನ್ನ ಸಂಬಂಧವಾದ, ಅಳಿವು-ಮರಣವು, ಸೊಗಸಾದುದೆ-ವಿಶ್ವಾಸವನ್ನುಂಟುಮಾಡಿದೆಯೆ, ಧರ್ಮತನಯಂಗೆ-ಧರ್ಮ ಪುತ್ರನಿಗೆ, ಮೊಗದೋರ್ವ-ಮುಖವನ್ನು ತೋರಿಸಬಲ್ಲ, ಸುತರು-ಕುವರರು, ಉಂಟೆ-ಇರುವರೆ, ನೀನು-ನೀನಾದರೊ, ಇಲ್ಲದೆ-ಇಲ್ಲವಾದರೆ, ಕುಂತಿ-ಕುಂತೀ ದೇವಿಯು, ಮರುಗಿ-ಸಂಕಟಪಟ್ಟು, ಅಳಲ್ವಳ್ವೈ-ದುಃಖ ಪಡುವಳೈಯ್ಯ, ಅಗ್ರಜನ-ನಮ್ಮಣ್ಣನೂ ನಿಮ್ಮ ತಂದೆಯೂ ಆದ ರವಿಸುತನನ್ನು, ಪಗೆ-ವೈರಿಯು, ಎಂದು-ಎಂಬತೆರನಾಗಿ, ಬಗೆದು ಕೊಂದೆವು-ಸಂಹಾರವನ್ನು ಮಾಡಿದೆವು, ನಮಿಗೆ-ನಮಿಗಾದರೊ, ಆತನಂ-ಆ ರವಿಕುವರನಿಗಿಂತಲೂ, ಮಿಗಿಲ್-ಹೆಚ್ಚಾದವನು, ಎಂದು-ಎಂಬುದಾಗಿ, ಕಂಡಿಹೆವೆಲೈ-ನಿನ್ನನ್ನು ನೋಡಿಕೊಂಡಿರುವೆವಲ್ಲಾ, ಐವರ್ಗೆ-ಒಡನಾಡಿಗಳಾಗಿರತಕ್ಕ ನಮ್ಮ ಐದು ಮಂದಿಗೂ, ಸುಗತಿ-ಮೋಕ್ಷವನ್ನು, ಕೊಡುವ-ಕೊಡತಕ್ಕ, ಆತ್ಮಭವರು-ಮಕ್ಕಳು, ಇರ್ದಪರೆ-ಇದ್ದಾರೆಯೆ, ಪೇಳ್-ಹೇಳು, ಎಂದು-ಎಂಬುದಾಗಿ, ಪಾರ್ಥನು-ಫಲ್ಗುಣನು, ಹಳವಳಿಸಿದಂ-ವ್ಯಸನಾಕ್ರಾಂತನಾದನು ‖

ಅ‖ ವಿ‖ ಮೊಗ (ತ್ಭ.) ಮುಖ (ತ್ಸ.) ಮೊಗಮಂ ತೋರ್ವ - (ಮೊಗದೋರ್ವ, ಕ್ರಿ. ಸ. ಮತ್ತು ವ್ಯಂಜನ ಸಂಧಿ). ‖ ೨೭ ‖

ಟೀ‖ ಮಹಾಹವದೊಳು-ಘೋರತರವಾದ ಯುದ್ಧದಲ್ಲಿ, ಅಭಿಮನ್ಯು-ಸುಭದ್ರೆಯಲ್ಲಿ ನನ್ನಿಂದ ಉಂಟಾದ ಕುವರನು ಮಡಿದ-ಮರಣವನ್ನೈದಿದ, ಅಳಲ್-ಸಂಕಟವು, ಸಾಲದೆ-ಸಾಕಾಗದೆ, ಬಾಲಕಂ-ವಸುಳೆಯಾದ, ನೀನು-ನೀನೂಕೂಡ, ಕಣ್ಣಮುಂದೆ-ನನ್ನ ಕಣ್ಣೆದುರಿಗೆ, ಇರ್ದೊಡೆ-ಇದ್ದಪಕ್ಷದಲ್ಲಿ, ಏನು-ಕೊರತೆ ಏನಾಗುತ್ತದೆ, (ಯಾವದೊಂದು ಕೊರತೆಯೂ ಉಂಟಾಗುವುದಿಲ್ಲವು). ಅಕಟ-ಆಹಾ, ತನ್ನ-ನನ್ನದಾದ, ಮಾತಂ-ನುಡಿಯನ್ನು, ಆಲಿಸೈ-ಕೇಳುವನಾಗೈ, ನುಡಿಸಲು-ವ್ಯಥೆಪಡುತ್ತಲಿರುವ ನನ್ನ ಸಂಕಟ ಪರಿಹಾರವಾಗಿ ಸಂತಸಮಂ ಬೀರುವ ನುಡಿಗಳನ್ನಾಡಲು, ಆಗದೇಂ-ಆಗುವದಿಲ್ಲವೇನಯ್ಯ, ಆದರದೊಳು-ಪ್ರೀತ್ಯತಿಶಯದಿಂದ, ಎನ್ನನು-ನನ್ನನ್ನು, ನೋಡು-ನೋಡುವನಾಗು. ತುರಗಮಂ-ಹಯವನ್ನು, ಪಾಲಿಸೈ-ಕಾಪಾಡುವನಾಗು, ಮುಂದಿಯಂ-ಕಾಲ್ಬಲವನ್ನು, ನಡೆಸು-ಮುಂದಕ್ಕೆ ಹೋಗುವಂತೆ ಮಾಡು, ಇನ್ನು-ತರುವಾಯ, ಮೇಲಣ-ಮುಂದಾಗಬೇಕಾದ,

---

ತೆರೆಯಲ್ಪಟ್ಟ ಕಂಗಳಿಂದಲೂ, ವಕ್ರವಾದ ಕಣ್ಣುಬ್ಬುಗಳಿಂದಲೂ, ವಿಶಾಲವಾದ ಹಣೆಯೊಳಗೆ ಮೆರೆಯುವ ತಿಲಕವು ಕೆದರಿಹೋಗಿರುವಿಕೆಯಿಂದಲೂ, ಚದರಿಹೋದ ಕೂದಲುಗಳಿಂದಲೂ, ಹೊಳೆಹೊಳೆವ ಕರ್ಣಕುಂಡಲಗಳಿಂದಲೂ, ತಿರುಮುರಿಯಾದ ಮೀಸೆಗಳಿಂದಲೂ, ಮಂದಹಾಸದಿಂದ ಕೂಡಿದ ಮುಖಪದ್ಮದೊಳಗೆ ವೀರರಸವೆಲ್ಲಾ ತುಂಬಿ ಗಟ್ಟಿಯಾಸಿ, ನೆಲಸಿದೆಯೋ ಎಂಬಂತೆ ಕಾಣುತ್ತಲಿತ್ತು. ಪಾರ್ಥನು ಈತೆರನಾಗಿ ಹೊಳೆಯುತ್ತಲಿರುವ ವೃಷಕೇತುವಿನ ಹಣೆಯೊಳಗೆ ತನ್ನ ಹಣೆಯುನ್ನಿಟ್ಟುಕೊಂಡು ಮುದ್ದಾಡಿ ಕಣ್ಣುಗಳಲ್ಲಿ ನೀರನ್ನು ಸುರಿಸುತ್ತಾ ಅಯ್ಯೋ ಮಗನೆ, ನೀನು ಹೇಗೆ ಸತ್ತುಹೋದೆ, ನೀನು ಸತ್ತುಹೋದದ್ದು ಕೃಷ್ಣಸ್ವಾಮಿಗೆ ಮೇಲಾಯಿತೆ? ಧರ್ಮತನಯನಿಗೆ ನಿನ್ನ ವಿನಹಾ ಮುಖವನ್ನು ಹೇಗೆ ತೋರಿಸಲಿ ! ಕುಂತೀದೇವಿಯು

ರಸಖ್ಯಮಾದುದೆಮಗೆ ‖ ಯಾಗಮಹುದರಸಂಗೆನಿನ್ನಿಂದನೀಂಪದ್ದು | ಕಾಗೆಗೊಡಲಂಕೊಟ್ಟುರಣದೊಳೆನ್ನಂಬಿಟ್ಟು | ಪೋಗಲಪ್ಪುದೆತಂದೆವೃಷಕೇತುಪೇಳೆಂದುಮರುಗಿದಂಸವ್ಯಸಾಚಿ ‖ ೨೯ ‖ ಈಪರಿಯೊಳಾವೃಷಧ್ವಜನತಲೆವಿಡಿದವನ | ರೂಪುಗುಣಶೀಲಮಂನೆನೆನೆನೆದುಶೋಕಪ್ರ | ಲಾಪದಿಂನರನಳುತ್ತಿರಲಿತ್ತಕರ್ಣಸುತನಟ್ಟೆಬಂದಪ್ಪಳಿಸಲು ‖ ಧೂಪಿಸಿಧರೆಗೆಬಿದೊಂಡನೆಮೂರ್ಛೆತಿಳಿದೆದ್ದು | ಚಾಪದಕೊನೆಗೆ ಮೊಗವನಿಟ್ಟೊರೆಯಾಗಿನಿಂ | ದಾಪಾರ್ಥನಂನೋಡಿ ನಸುನಗುತಚಿತ್ರಾಂಗ

---

ಉದ್ಯೋಗಂ_ಕಾರ್ಯವು, ಅವುದು_ಯಾವುದಿರುವುದು, ಕಂದ_ಎಲೆ ಪಸುಳೆ! ನಿನ್ನ_ನಿನ್ನ ಸಂಬಂಧವಾದ, ಗುಣ_ಒಳ್ಳೆಯಗುಣಗಳು, ಶೀಲಮಂ_ಸದಾಚಾರಗಳು ಇವನ್ನು, ಭೂಪನೊಳ್_ರಾಜೇಂದ್ರನಾದ ಧರ್ಮತನಯನೊಂದಿಗೆ, ಬಣ್ಣಿಪ_ವರ್ಣನೆಯಂ ಮಾಡುವ, ವೃಕೋದರಂಗೆ_ವಾಯು ಸುತನಿಗೆ, ಏನೆಂಬೆನು- ಏನೆಂದು ನುಡಿಯಲಿ, ಉಸಿರು – ಹೇಳುವನಾಗು, ಎಂದನು-ಎಂಬದಾಗಿ ಹೇಳಿದನು.

ಅ‖ ವಿ‖ ಮಹಾಹವ (ವಿ.ಪೂ ವ.ತ್ರ.ಸ.ದೀ) ಬಣ್ಣಿಪ (ತ್ಭ) ವರ್ಣಿಪ (ತ್ಸ) ಉದ್ಯೋಗಂ (ತ್ಸ) ಉಜ್ಜುಗಂ (ತ್ಭ) ಭೂ-ಭೂಮಿಯನ್ನು, ಪ-ಕಾಪಾಡುವನು (ಕೃ. ವ್ಯ) ‖೨೮‖

ಟೀ‖ ಇನ್ನು-ಇನ್ನುಮುಂದೆ, ನೀನು-ನೀನಾದರೊ, ಇಲ್ಲದಾಗ-ಇಲ್ಲದೆ ಹೋಗೋಣದರಿಂದ, ಪಾಂಡವರ-ಧರ್ಮಾದಿಗಳ, ಸಿರಿ-ಐಶ್ವರ್ಯವು, ಮೂಗಿಲ್ಲದ_ಮೂಗನ್ನುಂಟಾಗದೆ ಇರತಕ್ಕ, ಆನನಂ-ಮೂತಿಯು, ಲಿಂಗಂ-ಪೂಜೆ ಮಾಡಲು ಯೋಗ್ಯವಾದ ಲಿಂಗವು, ಇಲ್ಲದ-ಇಲ್ಲದಿರುವ, ಪೀಠಂ-ಪೀಠವು, ಆಗಿ-ಆದದ್ದಾಗಿ, ಇರದೆ-ಇರುವುದಿಲ್ಲವೆ, ಎಮಗೆ-ನಮ್ಮಗಳಿಗೆ, ಯೌವನಾಶ್ವಾನುಸಾಲ್ವರ=ಯೌವನಾಶ್ವ-ಯೌವನಾಶ್ವನೆಂಬ ಭದ್ರಾವತೀರಾಜನ, ಅನುಸಾಲ್ವರ-ಸಾಲ್ವಾನುಜರ, ಸಖ್ಯಂ-ಸ್ನೇಹವು, (ಮೈತ್ರಿಯು) ನಿನ್ನ_ನಿನ್ನ ಸಂಬಂಧವಾದ, ಅಘಟಂದ-ಸಾಹಸದಿಂದ, ಆಯಿತು-ಉಂಟಾಯಿತು, ನಿನ್ನಿಂದ_ನಿನ್ನಿಂದಲೆ, ಅರಸಂಗೆ_ಯುಧಿಷ್ಠಿರನಿಗೆ, ಯಾಗಂ-ಯಜ್ಞವು, ಅಹುದು_ ನೆರವೇರುವುದು, ನೀಂ_ನೀನಾದರೆ, ರಣದೊಳು-ಯುದ್ಧರಂಗದಲ್ಲಿ, ಎನ್ನನು_ನನ್ನನ್ನು, ಬಿಟ್ಟು-ಬಿಟ್ಟು ಬಿಟ್ಟು, ಪದ್ದು_ಹದ್ದುಗಳಿಗೂ, ಕಾಗೆಗೆ_ವಾಯಸಂಗಳಿಗೂ, ಒಡಲಂ_ನಿನ್ನ ದೇಹವನ್ನು, ಕೊಟ್ಟು-ಇತ್ತವನಾಗಿ, ಪೋಗಲು-ಹೊರಡಲುಜ್ಜುಗಿಸಿದರೆ, ಅಪ್ಪುದೆ-ಧರ್ಮತನಯನ ಯಾಗವು ಸಾಂಗವಾದೀತೆ, ತಂದೆ_ವೃಷಧ್ವಜನೆ, ಪೇಳ್_ಹೇಳುವನಾಗು, ಎಂದು_ಎಂಬದಾಗಿ, ಸವ್ಯಸಾಚಿ-ಪಾರ್ಥನು, ಮರುಗಿದಂ_ವ್ಯಸನಗೊಂಡನು.

ಅ‖ ವಿ‖ ಸಿರಿ (ತ್ಭ) ಶ್ರೀ (ತ್ಸ) ಸಿರಿ+ಇನ್ನು=ಸಿರಿಯಿನ್ನು (ಯಕಾರಾಗಮ ಸಂಧಿ) ಯೌವನಾಶ್ವ+ಅನುಸಾಲ್ವರ=ಯೌವನಾಶ್ವಾನುಸಾಲ್ವರ (ಸ. ದೀ) ‖೨೯‖

ಟೀ‖ ನರನು_ಫಲುಗಣನು, ಈ ಪರಿಯೊಳು_ಈ ತೆರನಾಗಿ, ಆ ವೃಷಧ್ವಜನ-ಆ ಕರ್ಣನಂದನನ, ತಲೆವಿಡಿದು-ರುಂಡಮಂ ಪಿಡಿದು, ಅವನ-ಆ ರವಿಸುತನ, ರೂಪ-ಆಕಾರವನ್ನೂ, ಗುಣ_ಪರಾಕ್ರಮ, ದಾತೃತ್ವ-ಔದಾರ್ಯ ಮೊದಲಾದ ಸದ್ಗುಣಂಗಳನ್ನೂ, ಶೀಲಮಂ_ಸದಾಚಾರವನ್ನೂ, ನೆನೆನೆನೆದು-ಹೆಚ್ಚಾಗಿ ಸ್ಮರಿಸಿ ಸ್ಮರಿಸಿ, ಶೋಕ_ವ್ಯಸನದ, ಪ್ರಲಾಪದಿಂ-ಸಂಕಟದಿಂದ, ಅಳುತಿರಲು_ರೋದನಮಂ ಗೈಯ್ಯುತ್ತಿರಲು, ಇತ್ತ_ಈಕಡೆಯಲ್ಲಿ, ಕರ್ಣಸುತನ-ವೃಷಧ್ವಜನ, ಅಟ್ಟೆ-ದೇಹವು, (ಮುಂಡಭಾಗವು)

---

ದುಃಖವನ್ನು ಶಮನ ಮಾಡತಕ್ಕವರಾರು? ನಿಮ್ಮ ತಂದೆಯಾದ ಕರ್ಣನನ್ನು ಶತ್ರುವೆಂದು ಕೊಂದುಬಿಟ್ಟೆವಾದರೂ ನಿನ್ನನ್ನು ಎಲ್ಲರಿಗಿಂತಲೂ ಪ್ರೀತಿಯಾಗಿ ನೋಡುತ್ತಿದ್ದೆವಲ್ಲಾ! ನಿನ್ನಿಂದ ನಮ್ಮೆಲ್ಲರಿಗೂ ಸದ್ಗತಿಯುಂಟಾಗುತ್ತಿದ್ದಿತಲ್ಲಾ ‖ ೨೭ ‖ ಪದ್ಮವ್ಯೂಹದ ದೊಡ್ಡ ಕಾಳಗದಲ್ಲಿ ಮೃತನಾದ ಅಭಿಮನ್ಯುವಿನ ಮಹಾ ದುಃಖವನ್ನು ಮರಿಯದೆ ವ್ಯಸನಗೊಂಡಿರುವಾಗ ಪಸುಳೆಯಾದ ನಿನ್ನ ಳವೊಂದು ಬಂದೊದಗಿತೆ! ಎಲೈ ಕಂದ, ವೃಷಕೇತುವೇ! ನನ್ನ ಮುಂದೆ ನಲಿನಲಿದು ಅಕ್ಕರೆಯಿಂದ ಒಂದು ಮಾತನ್ನಾದರೂ ಆಡಿಸಿ ನನ್ನನ್ನು ಸಂತೋಷಪಡಿಸು, ಯಜ್ಞಾಶ್ವವನ್ನು ರಕ್ಷಿಸೈ, ಸೇನೆಯನ್ನು ಮುಂದಕ್ಕೆ ನಡೆಯಿಸು, ನೀನಿಲ್ಲದಿದ್ದರೆ ಅಶ್ವಮೇಧಯಾಗವೆಂತು ನಡೆದೀತು! ಅಯ್ಯೋ ಬಾಲನೆ, ಯಾವಾಗಲೂ ನಿನ್ನ ಗುಣಶೀಲಾದಿಗಳನ್ನು ಧರ್ಮಪುತ್ರನೊಂದಿಗೆ ಹೇಳುತ್ತಲಿರುವ ಭೀಮಸೇನನೊಡನೆ ಏನೆಂದು ಹೇಳಲಿ! ‖೨೮‖ ಮೂಗಿಲ್ಲದ ಶಿರದಂತೆಯೂ, ಶಿವಲಿಂಗವಿಲ್ಲದ ಪೀಠದಂತೆಯೂ ನೀನಿಲ್ಲದ ಯುಧಿಷ್ಠಿರನ ಸಂಪತ್ತು ಎಂದಿಗೂ ಶೋಭಿಸುವುದಿಲ್ಲವು. ಅಯ್ಯೋ ಕರ್ಣನಂದನಾ! ನಿನ್ನ ಶಕ್ತಿಯಿಂದಲೇ ನಮಗೆ ಮಹಾ ಪರಾಕ್ರಮಿಗಳಾದ ಯೌವನಾಶ್ವಾದಿಗಳ ಸ್ನೇಹವುಂಟಾಯಿತು, ನೀನಿದ್ದರೆ ಧರ್ಮಪುತ್ರನ ಯಜ್ಞವು ಸಾಂಗವಾಗಿ ನಡೆಯುವುದು, ನಿನ್ನ ದೇಹವನ್ನು ಹದ್ದು ಕಾಗೆಗಳಿಗೊಪ್ಪಿಸಿ ನನ್ನೊಬ್ಬನನ್ನೇ ಯುದ್ಧರಂಗದಲ್ಲಿ ಬಿಟ್ಟು ನೀನು ಹೊರಟು ಹೋಗುವುದು ನ್ಯಾಯವೇ! ಅಪ್ಪ, ವೃಷಕೇತುವೆ! ಏನುಮಾಡಲಿ, ಎಂದು ನಾನಾಪ್ರಕಾರವಾಗಿ ಕರ್ಣಸಂಭವನ ಗುಣಾವಳಿಯನ್ನು ನೆನೆನೆನೆದು ಗೋಳಾಡುತ್ತಲಿದ್ದನು ‖೨೯‖ ಅರ್ಜುನನು ಈ ರೀತಿಯಲ್ಲಿ ದುಃಖಿಸುತ್ತಲಿರುವಾಗ ಕರ್ಣತನುಜನ ಮುಂಡವು ಹೋಗಿ

ಮೆಯುತನುಜನಿಂತೆಂದನು ‖ ೩೦ ‖ ಎಲೆಪಾರ್ಥವೈಶ್ಯಸಂಭವರಾವಹೆವುನಿಮ್ಮ | ಬಲಸಮಾಜದೊಳಂಬುಗಳಪಸರಮಂ ಬಿಟ್ಟು | ಗೆಲುವಿನಗ್ಗದಲಾಭಮಂಪಡೆದೆವಭಟರಶಿರಂಗಳಂಕೊಂಡೆವೆರಸಿ ‖ ಕಲಿಗಳೈತಂದುಜೀವಕೆಸಂಚಕಾರಮಂ | ಸಲೆ ಬೇಡಿದೊಡೆಕೊಟ್ಟೆವಿಚ್ಛೆಯುಳ್ಳಡೆನಿನ್ನ | ತಲೆಯುಬೆಲೆಗಿದೆಸಾಹಸದ್ರವ್ಯಮೆನ್ನೊಳೆಂದರ್ಜುನಿಪಚಾರಿಸಿದನು ‖ ೩೧ ‖ ಇವ ರೊಳೇನಹುದಿನ್ನುವೀರನೀಕರ್ಣಸುತ | ನಿವನತಲೆಯಂಸಮರ್ಪಿಸುಮಹಾದೇವಂಗೆ | ತವೆರುಂಡಮಾಲೆಯೋಳ್ಪೂಜ್ಯಮಾಗಿ ಹುದೀಶ್ವರಂಪ್ರೀತಿಯುಹುದುನಿನಗೆ ‖ ಶಿವನಂದುಪಾಶುಪತಬಾಣಮಂಕೊಟ್ಟುದಿ | ಲ್ಲವೆನಿಜಸ್ವಾಮಿಯುಂಮರೆದಪರೆಸಾಕಿದ

---

ಬಂದು–ಐತಂದು, ಅಪ್ಪಳಿಸಲು–ತಾಡಿಸಲಾಗಿ, ಧೂಪಿಸಿ–ಜ್ಞಾನವಿಹೀನನಾಗಿ, ಧರೆಗೆ-ಭೂಮಿಯಮೇಲೆ, ಬಿದ್ದು-ಬಿದ್ದುಹೋಗಿ, ಬಡನೆ–ಕೂಡಲೆ, ಮೂರ್ಛೆ ತಿಳಿದು–ಜ್ಞಾನವನ್ನು ತಂದುಕೊಂಡು, ಎದ್ದು-ಮೇಲಕ್ಕೆದ್ದವನಾಗಿ, ಮೊಗವನು-ತನ್ನ ಮೋರೆ ಯನ್ನು, ಚಾಪದ ಕೊನೆಗೆ-ಧನಸ್ಸಿನ ತುದಿಗೆ, ಇಟ್ಟು-ಇಟ್ಟುಕೊಂಡು, ಓರೆಯಾಗಿ-ಒಂದು ಪಕ್ಕಕ್ಕೆ, ನಿಂದ–ನಿಂತಿರತಕ್ಕ, ಆ ಪಾರ್ಥನಂ–ಆ ಫಲ್ಗುಣನನ್ನು, ಚಿತ್ರಾಂಗದೆಯ ತನುಜನು–ಬಭ್ರುವಾಹನನು, ನೋಡಿ–ಈಕ್ಷಿಸಿ, ನಸುನಗುತ–ಮಂದಸ್ಮಿತನಾಗಿ, ಇಂತು–ಮುಂದೆ ಹೇಳುವಂತೆ, ಎಂದನು–ನುಡಿದವನಾದನು.

ಅ‖ ವಿ‖ ನೆನೆನೆನೆದು (ಅಧಿಕ್ಯಾರ್ಥದಲ್ಲಿ ದ್ವಿರುಕ್ತಿ), ಶೋಕಪ್ರಲಾಪ (ಷ. ತ) ಮೊಗ (ತ್ಭ) ಮುಖ (ತ್ಸ) ‖೩೦‖

ಟೀ‖ ಎಲೆ ಪಾರ್ಥ-ಎಲೈ ಫಲುಗುಣನೆ, ಆವು–ನಾವಾದರೊ, ವೈಶ್ಯ ಸಂಭವರು-ವೈಶ್ಯನಿಂದುತ್ಪನ್ನರಾದವರು, ಆಹೆ ವು-ಆಗಿದ್ದೇವೆ, ನಿಮ್ಮ-ನಿಮ್ಮ ಸಂಬಂಧವಾದ, ಬಲ–ದಳದ, ಸಮಾಜದೊಳು–ಸಮುದಾಯದಲ್ಲಿ, ಅಂಬುಗಳ–ಕಣೆಗಳ, ಪಸ ರಮಂ–ಸಮೂಹವನ್ನು, ಬಿಟ್ಟು–ತ್ಯಜಿಸಿ, ಗೆಲುವಿನ-ಜಯ ಸಂಬಂಧದ, ಅಗ್ಗದ–ಅಧಿಕವಾದ, ಲಾಭಮಂ–ಉಪಯೋಗವನ್ನು, ಪಡೆವೆವು-ಸಂಪಾದಿಸಿದೆವು, ಅಧಟರ–ವೀರಾಗ್ರಣಿಗಳ, ಶಿರಗಳಂ-ಶಿರಸ್ಸನ್ನು, ಅರಸಿ-ಹುಡುಕಿದವರಾಗಿ, ಕೊಂಡೆವು-ತೆಗೆದುಕೊಂ ಡೆವು, ಕಲಿಗಳು-ವೀರರು, ಐತಂದು–ಬಂದು, ಜೀವಕೆ–ಹರಣಕ್ಕೆ, ಸಂಚಕಾರಮಂ–ಮೊದಲೇ ಕೊಡುವ ಕಾಣಿಕೆಯ ದ್ರವ್ಯವನ್ನು, ಸಲೆ-ಚೆನ್ನಾಗಿ, ಬೇಡಿದೊಡೆ–ಕೇಳಿಕೊಳ್ಳಲು, ಕೊಟ್ಟೆವು–ಕೊಟ್ಟು ಬಿಟ್ಟೆವು, ಇಚ್ಛೆಯು-ಇಷ್ಟಾರ್ಥವು, ಉಳ್ಳೊಡೆ–ಇದ್ದಹಾಗಾ ದರೆ, ನಿನ್ನ–ನಿನ್ನ ಸಂಬಂಧದ, ತಲೆಯು–ಶಿರಸ್ಸಿನ, ಬೆಲೆಗೆ–ಕಾಣಿಕೆಗೆ, ಇದೆ-ಈಸರಲೊಂದೆ, ಎನ್ನೊಳು-ನನ್ನಲ್ಲಿ, ಸಾಹಸದ್ರವ್ಯಂ- ಬಹು ಕಷ್ಟದಿಂದಾರ್ಜಿಸಿರತಕ್ಕ ಹಣವು, ಎಂದು–ಎಂಬತೆರನಾಗಿ, ಅರ್ಜುನಿ–ಪಾರ್ಥಜನು, ಪಚಾರಿಸಿದನು-ಅಲಗಳೆದನು. ‖೩೧‖

ಟೀ‖ ಇನ್ನು–ಇನ್ನು ಮುಂದೆ, ಇವರೊಳು– ಈ ಸೇನಾಜನರಿಂದ, ಏನಹುದು–ಏನು ಪ್ರಯೋಜನವು ಆದೀತು, ಈ ಕರ್ಣಸುತನು-ವೃಷಧ್ವಜನು, ವೀರನು–ಶೂರಾಗ್ರಣಿಯು, ಇವನ–ಈ ಕರ್ಣಸಂಭವನ, ತಲೆಯ–ಶಿರಸ್ಸನ್ನು, ಮಹಾದೇವ ರಿಗೆ-ಹರನಿಗೆ, ಸಮರ್ಪಿಸು– ಅರ್ಪಣೆಯನ್ನು ಮಾಡು, ರುಂಡಮಾಲೆಯೋಳ್–ತಲೆಬುರುಡೆಗಳ ಹಾರದಲ್ಲಿ, ತವೆ–ಹೆಚ್ಚಾಗಿ, ಪೂಜ್ಯಂ–ಪೂಜಾರ್ಹವಾದದ್ದಾಗಿ, ಇಹುದು–ಇದೆ, ಈಶ್ವರ–ಹರನಿಗೆ, ಪ್ರೀತಿಯು–ಪ್ರೇಮವುಳ್ಳದ್ದು, ಅಹುದು–ಆಗಿದೆ, ಅಂದು– ಪೂರ್ವದಲ್ಲಿ, ನಿನಗೆ–ನಿನಗಾದರೆ, ಶಿವನು-ಪರಮೇಶ್ವರನು, ಪಾಶುಪತ ಬಾಣಮಂ–ಪಾಶುಪತವೆನ್ನತಕ್ಕ ಅಸ್ತ್ರವನ್ನು, ಕೊಟ್ಟುದಿ ಲ್ಲವೆ–ಕೊಡಲಿಲ್ಲವೆ, ನಿಜ– ಸ್ವಕೀಯವಾದ, ಸ್ವಾಮಿಯಂ - ಒಡೆಯನನ್ನು, ಮರೆದಪರೆ– ಮರೆತು ಹೋಗಬಹುವೆ, ಸಾಕು–ಈ ವೃಷಕೇತುವಿನ ತಲೆಯಿಂದೇನು ಸಾರ್ಥಕವು, ಇದರ– ಈ ಶಿರಸ್ಸಿನ, ಭವಣಿ– ಕಷ್ಟದ ಸ್ಥಿತಿಯು, ನಿನಗೆ – ನಿನಗಾದರೊ, ಏತಕೆ–ಪ್ರಯೋಜನವೇನು, ಕಾದುವೆಯಾ–ಕಾಳಗಂ ಗೈವೆಯಾ, ಅಥವಾ, ತುರುಗಮಂ–ಹಯವನ್ನು, ಬಿಟ್ಟು-ಬಿಟ್ಟವನಾಗಿ,

---

ಬಭ್ರುವಾಹನನನ್ನು ಹೊಡೆಯಲು ಅವನು ಆ ಪೆಟ್ಟನ್ನು ತಡೆಯಲಾರದೆ ಮೂರ್ಛಾಕ್ರಾಂತನಾಗಿ ನೆಲಕ್ಕೆ ಬಿದ್ದು ಪುನಃ ಎಚ್ಚತ್ತು ಧನುಸ್ಸಿನ ಕೊನೆಗೆ ತನ್ನ ಮುಖವನ್ನಿಟ್ಟು, ಓರೆಯಾಗಿನಿಂತ ಅರ್ಜುನನನ್ನು ನೋಡಿ ಮಂದಸ್ಮಿತನಾಗಿ, ‖೩೦‖ ಎಲೆ ಧನಂಜಯನೆ, ನಾವು ವೈಶ್ಯಬೀಜೋತ್ಪನ್ನರು, ನಿಮ್ಮ ಸೇನೆಯಮೇಲೆ ಬಾಣವರ್ಷವಂ ಕರೆದು ನಿಮ್ಮನ್ನೆಲ್ಲಾ ಸೋಲಿಸಿ, ಹೆಚ್ಚಾದ ಲಾಭವನ್ನು ಪಡೆದು, ನಿಮ್ಮ ಕಡೆಯ ವೀರಾಗ್ರಣಿಗಳನ್ನೆಲ್ಲಾ ಯಮನ ಬಾಯಿಗೆ ತುತ್ತಾಗಿ ಮಾಡಿದೆವು. ಅನೇಕ ವೀರರು ನಮ್ಮೆದುರಿಗೆ ನಿಲ್ಲದೆ ಹೊರಟು ಹೋದರು. ನಿನಿಗೆ ಬೇಕಾದರೆ ನಿನ್ನ ತಲೆಯ ಬೆಲೆಯನ್ನು ಕೊಟ್ಟು ತೆಗೆದುಕೊಳ್ಳುವ ಪರಾಕ್ರಮವೆಂಬ ಹಣವು ನಮ್ಮಲ್ಲಿ ತುಂಬಿ ತುಳುಕಾಡುತ್ತಲಿರುವುದೆಂದು ಅಲಗಳೆಯುತ್ತ ‖೩೧‖ ಎಲೈ ಅರ್ಜುನನೆ. ಇವರಿಂದ ನಿನಿಗೇನು ಪ್ರಯೋಜನ, ಈ ಕರ್ಣಸಂಭವನು ಮಹಾ ವೀರನು. ಇವನ ತಲೆಯನ್ನು ಪೂರ್ವದಲ್ಲಿ ನಿನಿಗೆ ಪಾಶುಪತಾಸ್ತ್ರವನ್ನಿತ್ತ ಪರಮೇ ಶ್ವರನಿಗೆ ಕೊಟ್ಟುಬಿಡು, ಈ ತಲೆಯು ಶಿವನ ರುಂಡಮಾಲೆಗೆ ಸೇರುವುದರಿಂದ ಪವಿತ್ರವಾಗುವುದು. ಎಲೈ ಪಾರ್ಥನೆ! ನಿಷ್ಪ್ರ ಯೋಜನವಾದ ಇವನ ತಲೆಯನ್ನು ನೋಡಿ ನೋಡಿ ಏತಕ್ಕೆ ಮರುಗುವಿ? ಇದರ ಪಾಡನ್ನು ಬಿಟ್ಟುಬಿಡು, ಸುಮ್ಮನೆ ಏತಕ್ಕೆ ಕಾಲವನ್ನು ಕಳೆಯುವಿ? ನನ್ನೊಂದಿಗೆ ಕಾದಲಪೇಕ್ಷೆಯಿದ್ದರೆ ಕಾದು, ಇಲ್ಲವಾದರೆ ಕುದುರೆಯ ಗೊಡವೆಯನ್ನು

ರ | ಭವಣಿಯೇತಕೆಕಾದುವೆಯೊತುರಗನುಂಬಿಟ್ಟುಪೋದಪೆಯೊಪೇಳೆಂದನು ||೩೨|| ನೋಡಿದಂತಿರುಗಿಕಣ್ಣಾಲಿಗಳ್ಕೆಂಪಡರೆ | ಮಾಡಿದಂಕೋಪಮಂಧೈರ್ಯದಿಂದಳಲನೀ | ಡಾಡಿದಂಕರ್ಣಜನಶಿರವನಲ್ಲಿರಿಸಿದಂಕೊಂಡನುರುಕಾರ್ಮುಕವನು || ತೀಡಿದಂ ಜೇಗೈದುತಿರುವಿನೊಳ್ಬಾಣಮಂ | ಪೂಡಿದಂತೆಗೆದೆಚ್ಚುರುಧಿರಪ್ರವಾಹಮಂ | ತೋಡಿದಂಬಭ್ರುವಾಹನನಸರ್ವಾಂಗದೋಳ್ ಕಲಿಪಾರ್ಥನಾಕ್ಷಣದೊಳು ||೩೩|| ಮೈಸಿರಿಯಳಲ್ಗಳಿವುಲೇಸಾಯ್ತುಪಗೆಯುಮಗ | ನೈಸಲೇಕರ್ಣಜಂಸಾಕಿದೇತಕೆ ಬರಿದೆ | ವೈಸಿಕದಬಾಣಪ್ರಯೋಗಂಗಳಿಂದ್ರಕೀಲದೊಳುಮಾಕಾಂತನಿಂದ || ಕೈಸಾರ್ದಸಾಯಕವನುಗಿಯೆನುತಪಾರ್ಥನಂ | ಪೈಸರಿಸದೆಚ್ಚನೀಬಭ್ರುವಾಹನನಕ್ಕೆ | ಗೈಸದುನಭೋವಲಯಮೆನೆಕವಿದಂಬುಗಳ್ದೇವತತಿಬೆರಗಾಗಲು ||೩೪|| ಮತ್ತವುಮಸು

---

ಪೋದಪೆಯಾ–ಹೊರಡುವಿಯೊ, ಪೇಳು–ಹೇಳತಕ್ಕವನಾಗು, ಎಂದನು–ಎಂಬದಾಗಿ ಪ್ರಶ್ನೆಗೈದನು. ||೩೨||

ಟೀ|| ಕಲಿ – ವೀರರ ಮಣಿಯಾದ, ಪಾರ್ಥನು – ಅರ್ಜುನನು, ತಿರುಗಿನೋಡಿದನು – ಹಿಂದಿರುಗಿದನು, ಕಣ್ಣಾಲಿಗಳು–ಕಣ್ಣಿನ ಗುಡ್ಡುಗಳು, ಕೆಂಪಡರೆ–ಕೆಂಪಾಗುವಂತೆ, ಕೋಪಮುಂಮಾಡಿದನು–ಆಕ್ರೋಶವನ್ನೈದಿದವನಾದನು, ಅಳಲನು–ದುಃಖವನ್ನು, ಧೈರ್ಯದಿಂ–ಧೀರತನದಿಂದ, ಈಡಾಡಿದಂ–ಬಿಟ್ಟು ನಿಂತವನಾದನು, ಅಲ್ಲಿ–ಭೂಮಿಯ ಮೇಲೆಯೇ, ಕರ್ಣಜನ–ಕರ್ಣಸುತನ, ಶಿರವನು–ರುಂಡವನ್ನು, ಇರಿಸಿದಂ–ಇಟ್ಟವನಾದನು, ಉರು–ದೊಡ್ಡದಾದ, ಕಾರ್ಮುಕವನು–ಗಾಂಡೀವವೆನ್ನುವ ಬಿಲ್ಲನ್ನು, ಕೊಂಡನು–ಬಾಣವನ್ನು ಜೋಡಿಸಲು ತೆಗೆದುಕೊಂಡನು, ಜೇಗೈದು – ಝೇಂಕರಿಸಿ. ತೀಡಿದಂ – ಶಬ್ದವಾಗುವಂತೆ ಮಾಡಿಬಿಟ್ಟನು, ತಿರುವಿನೋಳ್–ಧನುಸ್ಸಿನ ಹುರಿಯಲ್ಲಿ, ಬಾಣಮಂ – ಕಣೆಯನ್ನು, ಪೂಡಿದಂ–ಸೇರಿಸಿದನು, ತೆಗೆದು–ತೆಗೆದುಕೊಂಡು, ಎಚ್ಚು–ಹೊಡೆದು, ಬಭ್ರುವಾಹನನ – ಪಾರ್ಥಜನ, ಸರ್ವಾಂಗದೋಳ್ – ದೇಹದಲ್ಲೆಲ್ಲಾ, ರುಧಿರಪ್ರವಾಹಮಂ–ರಕ್ತದ ಹೊಳೆಯನ್ನು, ಆಕ್ಷಣದೊಳು–ಸಾವಕಾಶವಿಲ್ಲದಂತೆ, ತೋಡಿದಂ–ಉಂಟುಮಾಡಿದವನಾದನು. ||೩೩||

ಟೀ|| ಮೈಸಿರಿಯು–ಶರೀರದ ಸೊಗಸಿನ, ಅಳಲ್ – ಸಂಕಟವನ್ನು, ಅಳಿವು – ಹೋಗಲಾಡಿಸುವುದು, ಲೇಸಾಯ್ತು–ಮೇಲಾಯಿತು, ಕರ್ಣಜಂ – ಕರ್ಣನಂದನನು, ಪಗೆಯು–ವೈರಿಯು, ಮಗನು – ಕುವರನು, ಐಸಲೆ–ಅಲ್ಲವೆ, ಇದು – ಈ ಸಂಕಟವು, ಬರಿದೆ–ಸುಮ್ಮನೆ, ಏತಕೆ–ಏನು ಪ್ರಯೋಜನವು, ಸಾಕು – ಇದುವರಿಗೆ ಗೋಳಾಡಿದ್ದೆ ಸಾಕು, ವೈಸಿಕದ · ಕಪಟವಾದ, ಬಾಣಪ್ರಯೋಗಂಗಳು–ಕಣೆಗಳನ್ನು ಬಿಡತಕ್ಕದ್ದು, ಸಾಕು – ಸಾಕಾಗಿದೆ, ಇಂದ್ರಕೀಲದೋಳ್ – ಇಂದ್ರಕೀಲವೆನ್ನುವ ಬೆಟ್ಟದಲ್ಲಿ, ಉಮಾಕಾಂತನಿಂದ – ಗಿರಿಜಾರಮಣನಿಂದ, ಕೈಸಾರ್ದ–ಲಭಿಸಿದ, ಸಾಯಕವನು – ಕಣೆಯನ್ನು, ಉಗಿ–ಬಿಡುವನಾಗು, ಎನುತ–ಎಂದು ನುಡಿಯುತ್ತ, ಪಾರ್ಥನಂ–ಫಲುಗುಣನನ್ನು, ಪೈಸರಿಸದೆ–ಲೆಕ್ಕಿಸದೆ, ಎಚ್ಚನು – ಕಣೆಗಳನ್ನು ಬಿಟ್ಟವನಾದನು, ದೇವತತಿ – ಸುರಸಮುದಾಯವೂ ಕೂಡಾ, ಈ ಬಭ್ರುವಾಹನನಕ್ಕೆಗೆ – ಈ ಪಾರ್ಥಜನ ಪ್ರಯೋಗಕ್ಕೆ, ಬೆರಗಾಗಲು – ಅಚ್ಚರಿಗೊಳ್ಳಲು, ನಭೋವಲಯಂ–ಆಗಸವು, ಕೈಗೈಸದು–ಪಡಯಲಸಾಧ್ಯವು, ಎನೆ–ಎಂಬಂತೆ, ಅಂಬುಗಳು–ಕಣೆಗಳು, ಕವಿದವು–ಆವರಿಸಿಕೊಂಡವು. ||೩೪||

ಟೀ|| ನರನು–ಪಾರ್ಥನಾದರೊ, ಅವು–ಆ ಕಣೆಗಳು, ಮತ್ತೆ–ತಿರುಗಿ, ಮಸುಳ್ವಂತೆ – ಹಾಳಾಗುವಂತೆ, ಅರ್ದು–ಕೂಗಿ, ತೆಗೆದು–ಸರಲ್ಗಳನ್ನು ತೆಗೆದುಕೊಂಡು, ಎಸಲ್–ಪ್ರಯೋಗಮಾಡಲು, ಸರಲ್ಗಳು – ಕೋಲ್ಗಳು, ಒಂದೊಂದು – ಬೇರೆ ಬೇರೆ, ಅಯುತ – ಈರೈದು ಸಾವಿರ, ನಿಯುತಮಂ – ಇಪ್ಪತ್ತು ಸಹಸ್ರ ಸಂಖ್ಯಾಕವಾದ ಕಣೆಗಳನ್ನು, ಪೆತ್ತವು – ಹಡದವು, ನಭಸ್ಥಳಕೆ–ಅಂತರಿಕ್ಷ ಮಾರ್ಗಕ್ಕೆ, ರಿಪುಸೇನೆಯಂ–ವೈರಿಸೇನೆಯುಗ್ನು, ಪೊತ್ತವು–ಹೊತ್ತುಕೊಂಡು ಹೋದವು, ತಾರೆಗಳನು–

---

ಬಿಟ್ಟು ನಡೆಯೆಂದು ನುಡಿದ ಬಭ್ರುವಾಹನನ ಮಾತುಗಳನ್ನು ಕೇಳಿದ ಅರ್ಜುನನು, ತನ್ನ ಕುವರನ ಕಡೆಗೆ ತಿರುಗಿ ನೋಡಿ ||೩೨|| ಕಣ್ಣುಗಳನ್ನು ಕೆಂಡದಂತೆ ಮಾಡಿಕೊಂಡು, ಕಡುಧೈರ್ಯಮಂ ತಾಳಿ ದುಃಖನನ್ನು ದೂರ ಓಡಿಸಿ, ಕರ್ಣಸುತನ ಶಿರವನ್ನು ಕೆಳಗಿರಿಸಿ, ಬಿಲ್ಲಿನ ಧಾರವನ್ನು ಝೇಂಕರಿಸಿ, ಅದರೊಳಗೆ ಕೂರ್ಗಣೆಗಳನ್ನು ತಗಲಿಸಿ ಬಭ್ರುವಾಹನನ ಅಂಗಾಂಗಗಳಿಗೂ ಬಿಟ್ಟು, ರಕ್ತದ ಕಾಲುವೆಯನ್ನು ಹರಿಸಿಬಿಟ್ಟನು. ||೩೩|| ಆಗ ಬಭ್ರುವಾಹನನು ಅರ್ಜುನನನ್ನು ನೋಡಿ, ಎಲೈ ಪಾರ್ಥನೆ, ವೃಷಕೇತುವಿಗಾಗಿ ಅತ್ತದ್ದೂ ಸಾಕು, ಅವನು ಎಷ್ಟಾದರೂ ನಿನ್ನ ಹಗೆಯ ಮಗನಲ್ಲವೆ, ಈ ಕಪಟವಾದ ಶರವರ್ಷದಿಂದೇನು ಸಾರ್ಥಕವು? ಪೂರ್ವದಲ್ಲಿ ಇಂದ್ರಕೀಲಪರ್ವತದಲ್ಲಿ ಪರಮೇಶ್ವರನನ್ನು ಕುರಿತು ತಪಸ್ಸುಮಾಡಿದ್ದರಿಂದ ಲಬ್ಧವಾದ ಪಾಶುಪತಾಸ್ತ್ರವನ್ನು ಬಿಟ್ಟು ನೋಡೆಂದು ನುಡಿಯುತ್ತಾ ಅಂತರಿಕ್ಷದಲ್ಲಿ ದೇವತೆಗಳೆಲ್ಲ ಭ್ರಾಂತರಾಗಿ ನೋಡುತ್ತಲಿರುವಂತೆ ಅರ್ಜುನನ ಮೇಲೆ ಬಾಣಗಳ ಮಳೆಯನ್ನು ಸುರಿಸಿದನು. ||೩೪|| ಅರ್ಜುನನಾದರೊ ಅನೇಕ ಬಾಣಗಳನ್ನು ಬಿಟ್ಟು ಬಭ್ರುವಾಹನನ ಕಣೆಗಳನ್ನೆಲ್ಲಾ ಧ್ವಂಸಮಾಡುತ್ತಲಿದ್ದನು, ಪಾರ್ಥನು ಬಿಟ್ಟ ಒಂದೊಂದು ಬಾಣವೂ ಹತ್ತು ಸಾವಿರ

ಕ್ಕಂತೆನರನಾದುರ್ಗತೆಗೆದೆಸ | ಲ್ಲೆತ್ತುವುಸರ್ಗ್ಗಳೊಂದೊಂದಯುತನಿಯುತಮಂ | ಪ್ರೊತ್ತುವುನಭಸ್ಥಳಕೆಕೊಂಡುರಿಪುಸೇನೆಯಂ ತಾರೆಗಳನುದುರಿಸಿದವು || ಕಿತ್ತುವುಕುಲಾದ್ರಿಗಳನಾಗಸದಬಟ್ಟೆಯಂ | ಕಿತ್ತುವುದಿಗಂತಮಂತುಂಬಿದವುಬಾಣಂಗ | ಳಿತ್ತುವು ಜಗತ್ರಯಕೆಕಂಪಮಂಪಿಂತೆಂದುಮಿಲ್ಲಿದುವಿಚಿತ್ರಮೆನಲು || ೩೫ || ಕೊರೆದವಂಗೋಪಾಂಗಮಂಪಾರ್ಥನಂಬುಗಳ್ತೆರದ ಜಾಳಾಂದ್ರದಂತಾಯ್ತುಗಿದಬಟ್ಟೆಗಳ್ಕ | ರೆದಪೇರ್ಮಳೆಯಿಂದನನೆದಜಾಜಿನಗಿರಿಯೊಳಿಳಿವಕೆಂಬೊನಲ್ಗಳ || ತೆಂದಲೆಸೆದವುರಕ್ತ ಧಾರೆಗಳ್ಕಾಯದೊಳ್ಮ | ರೆದನೊಡಲಂನಿಮಿಷಕೊಡನೆತರಹರಿಸಿದಂ| ಜರೆದನರ್ಜುನನಂರಣಾಗ್ರದೊಳ್ಮೂದಲಿಸಿಬಭ್ರುವಾಹಂ ಕನಲ್ದು || ೩೬ || ಕರ್ಣಭೀಷ್ಮದ್ರೋಣರಂಗೆಲ್ದುಕೊಟ್ಟಂಸು | ಪರ್ಣಧ್ವಜಂನಿನಗೆಕರುಣದಿಂಕಾದಿದನ | ಪರ್ಣಾಧವಂನಿ

---

ನಕ್ಷತ್ರಗಳನ್ನೆಲ್ಲಾ, ಉದುರಿಸಿದವು - ಕೆಳಗೆ ಕೆಡವಿಬಿಟ್ಟವು, ಕುಲಾದ್ರಿಗಳನು - ಸಪ್ತಕುಲಪರ್ವತಗಳನ್ನೂ, ಕಿತ್ತವು - ಕಿತ್ತು ಹಾಕಿದವು, ಆಗಸದ-ಅಂತರಿಕ್ಷದ, ಬಟ್ಟೆಯಂ-ದಾರಿಯನ್ನು, ಕಿತ್ತವು-ಆವರಿಸಿದವು, ದಿಗಂತಮಂ-ದಿಕ್ತಟವನ್ನು, ತುಂಬಿದವು-ತುಂಬಿಬಿಟ್ಟವು, ಬಾಣಂಗಳ್-ಕಣೆಗಳಾದರೊ, ಪಿಂತೆ-ಹಿಂದಾದದ್ದು, ಎಂದುಂ-ಯಾವಾಗ್ಯೂ, ಇಲ್ಲ-ಇಲ್ಲವು, ವಿಚಿತ್ರಂ-ಆಶ್ಚರಿಯು, ಎನಲ್-ಎಂಬಂತೆ, ಜಗತ್ರಯಕೆ-ಸ್ವರ್ಗಮರ್ತ್ಯ ಪಾತಾಳಗಳೆಂಬ ಮೂರು ಲೋಕಗಳಿಗೂ, ಕಂಪಮಂ-ನಡುಗುವಿಕೆಯನ್ನು, ಇತ್ತವು-ಕೊಟ್ಟವು.

ಅ|| ವಿ|| ರಿಪುಗಳಸೇನೆ (ರಿಪುಸೇನೆ, ಷ. ತ.) ಕುಲ + ಅದ್ರಿ = ಕುಲಾದ್ರಿ (ಸ. ದೀ.) ಆಗಸ (ತ್ಭ) ಆಕಾಶ (ತ್ಸ) ಬಟ್ಟೆ (ತ್ಭ) ವರ್ತ್ಮ (ತ್ಸ) ದಿಗಂತ (ವ್ಯಂ. ಸಂಧಿ, ಷ. ತ.) ||೩೫||

ಟೀ|| ಪಾರ್ಥನ-ಫಲುಗುಣನ, ಅಂಬುಗಳ್ - ಕಣೆಗಳು, ಅಂಗೋಪಾಂಗಮಂ - ಸರ್ವಾಂಗಗಳನ್ನೂ, ಕೊರೆದವು-ರಂಧ್ರಗಳಾಗುವಂತೆ ಮಾಡಿಬಿಟ್ಟವು, ಉಗಿದ-ಚದರಿಹೋದ, ಬಟ್ಟೆಗಳು-ಉಡಿಗೆಗಳು, ತೆರೆದ-ಬಿಚ್ಚಿಹೋದ, ಜಾಳಾಂದ್ರದಂತೆ-ಬೆಳಕಂಡಿಗಳಿಂದ ಕೂಡಿರುವಂತೆ, ಆಯ್ತು-ಆಗಿಬಿಟ್ಟಿತು, ರಕ್ತಧಾರೆಗಳು-ರಕ್ತಪ್ರವಾಹಂಗಳು, ಕಾಯದೊಳ್ - ದೇಹದಲ್ಲಿ, ಜಾಜಿನಗಿರಿಯೊಳು - ಕೆಂಗಲ್ಲುಗಳ ಬೆಟ್ಟದಿಂದ, ಇಳಿವ-ಕೆಳಕ್ಕೆ ಹರಿದುಬರತಕ್ಕ, ಕೆಂಬೊನಲ್ಗಳ - ಕೆಂಪುನೀರಿನ ನದಿಗಳ, ತೆರದಲಿ-ಬಗೆಯಿಂದ, ಎಸೆದವು-ಹೊಳೆಹೊಳೆದವು, ಒಡಲಂ-ದೇಹವನ್ನು, ಮರೆದನು-ಮರೆತುಬಿಟ್ಟನು, ಒಡನೆ-ಕ್ಷಣಮಾತ್ರದಲ್ಲಿ, ನಿಮಿಷಕೆ-ಒಂದು ನಿಮಿಷದೊಳಗಾಗಿ, ತರಹರಿಸಿದಂ - ಪ್ರಜ್ಞೆಯನ್ನು ತಂದುಕೊಂಡನು, ಬಭ್ರುವಾಹನನು - ಅರ್ಜುನಿಯು, ರಣಾಗ್ರದೊಳ್ - ಸಮರಾಂಗಣದಲ್ಲಿ, ಕನಲ್ದು - ಸಿಟ್ಟೆದ್ದು, ಅರ್ಜುನನಂ-ಪಾರ್ಥನನ್ನು, ಮೂದಲಿಸಿ - ಅವಮಾನವಾಗುವಂತೆ, ಜರೆದಂ-ನಿಂದೆಯ ನುಡಿಗಳನ್ನಾಡಿದನು.

ಅ|| ವಿ|| ಪಿರಿದು+ಮಳೆ=ಪೇರ್ಮಳೆ (ವಿ. ಪೂ.) ಕೆಚ್ಚನೆ+ಪೊನಲ್ = (ಕೆಂಬೊನಲ್, ವಿ. ಪೂ.) ರಕ್ತದ+ಧಾರೆಗಳ್ = (ರಕ್ತಧಾರೆಗಳ್, ಷ. ತ.) ರಣಾಗ್ರ (ಸ. ದೀ.) ||೩೬||

ಟೀ|| ನಿನಗೆ-ನಿನಗಾದರೊ, ಕರ್ಣಭೀಷ್ಮದ್ರೋಣರಂ - ಕರ್ಣರವಿಸುತರನ್ನೂ, ಭೀಷ್ಮ - ಗಂಗಾಪುತ್ರನನ್ನೂ, ದ್ರೋಣರಂ-ದ್ರೋಣಾಚಾರ್ಯನನ್ನೂ ಸಹ, ಸುಪರ್ಣಧ್ವಜಂ-ಕೃಷ್ಣಸ್ವಾಮಿಯು, ಗೆಲ್ದುಕೊಟ್ಟಂ-ಜಯವಾಗುವಂತೆ ಮಾಡಿಕೊಟ್ಟನು, ಅಪರ್ಣಾಧವಂ-ಅಪರ್ಣಾ-ಗಿರಿಜೆಯ, ಧವಂ-ಪತಿಯಾದ ಹರನು, ಕರುಣದಿಂದ-ದಯೆಯಿಂದ, ಕಾದಿದನು-ಯುದ್ಧಮಾಡಿದನು, ಮೇದಿನಿಯೊಳು - ಲೋಕದಲ್ಲಿ, ಅರಿಯದವರು - ತಿಳಿವಳಿಕೆ ಸಾಲದಿರುವರು, ನಿನ್ನೊಳು-ನಿನಿಗೆ, ಅಗ್ಗಳಿಕೆ-

---

ಇಪ್ಪತ್ತು ಸಾವಿರ ಬಾಣಗಳಾಗಿ ಪರಿಣಮಿಸಿ, ಅರಿಬಲನನ್ನೆಲ್ಲಾ ಆಗಸಕ್ಕೆ ಎತ್ತಿಕೊಂಡು ಹೋದವು. ಆಕಾಶದಲ್ಲಿದ್ದ ನಕ್ಷತ್ರಗಳು ಈ ಸರಲ್ಗಳ ಮಹಾ ವೇಗವನ್ನು ತಾಳಲಾರದೆ ಭೂಮಿಯ ಮೇಲೆ ಬಿದ್ದು ಹೋದವು, ಕುಲಾಚಲಗಳೆಲ್ಲಾ ಬುಡಸಹಿತ ಕಿತ್ತು ಹೋದವು, ಅಂತರಿಕ್ಷದಲ್ಲಿ ದಿಕ್ಕುಗಳ ಕೊನೆಗಳು ಕಾಣದಂತೆ ಎಲ್ಲೆಲ್ಲಿಯೂ ಕವಿದುಕೊಂಡವು ಇಂತಹ ಬಾಣಗಳ ಹೊಡೆತವನ್ನು ಎಂದೆಂದಿಗೂ ನೋಡಿರಲಿಲ್ಲವೆಂದು ಎಲ್ಲರೂ ಪರಮಾಶ್ಚರ್ಯಭರಿತರಾದರು. ಮೂರು ಲೋಕಗಳೂ ಗಡಗಡನೆ ನಡುಗಲಾರಂಭಿಸಿದವು. ||೩೫|| ಈ ಮಹಾ ಬಾಣಗಳು ಬಭ್ರುವಾಹನನ ಮೈಮೇಲೆ ಬಿದ್ದು ಅವನ ಅಂಗಾಂಗಗಳಲ್ಲಿಯೂ ರಂಧ್ರಗಳನ್ನು ಮಾಡಿಬಿಟ್ಟವು. ಮೈಮೇಲಿದ್ದ ಬಟ್ಟೆಗಳಲ್ಲೆಲ್ಲಾ ಬೆಳಕಂಡಿಗಳಂತೆ ರಂಧ್ರಗಳುಂಟಾದವು. ಕೆಂಗಲ್ಲಳಿಂದ ಕೂಡಿದ ಬೆಟ್ಟಗಳ ಮೇಲೆ ಮಳೆಯು ಬಿದ್ದರೆ ಮೇಲಿನಿಂದ ನೀರು ಕೆಂಪಗೆ ಹರಿದು ಬರುತ್ತಲಿರುವಂತೆ ಅರ್ಜುನನ ಬಾಣವರ್ಷದಿಂದ ಬಭ್ರುವಾಹನನ ಅವಯವಗಳಲ್ಲೆಲ್ಲಾ ರಂಧ್ರಗಳುಂಟಾಗಿ ಅವುಗಳಿಂದ ರಕ್ತವು ನೆಲಕ್ಕೆ ಹರಿದು ಹರಿದು ದೊಡ್ಡ ದೊಡ್ಡ ಪ್ರವಾಹಗಳಾದವು, ಇದರಿಂದ ಪಾರ್ಥಜನು ಮೈಮರೆತು ನೆಲದ ಮೇಲೆ ಬಿದ್ದು ಪುನಃ ಎಚ್ಚೆತ್ತು, ಮಹಾ ರೋಷದಿಂದ ಧನಂಜಯನನ್ನು ಕುರಿತು, ||೩೬|| ಎಲೈ ಪಾರ್ಥನೆ, ನೀನು ಕರ್ಣ, ಭೀಷ್ಮ, ದ್ರೋಣರನ್ನು ಗೆಲ್ಲುವ ಕಾಲದಲ್ಲಿ ಕೃಷ್ಣಸ್ವಾಮಿಯು ಸಹಾಯ

ನ್ನೊಳಗ್ಗಳಿಕೆಪಿರಿದೆಂದುಮೇದಿನಿಯೊಳರಿಯದವರು || ವರ್ಣಿಸುವರೆಂದುಬೆರೆತಿಹೆತನ್ನಸಮರಮಂ | ನಿರ್ಕೈಸಿದೊಡೆವೀರನಹುದೆಂದುಬಾಣಮಯ | ದರ್ಣವಮಿದೆತ್ತಣಿಂಮೇರೆದಪ್ಪಿದುದೆನಲ್ಬಭ್ರುವಾಹನನೆಚ್ಚನು || ೩೭ || ಕೆತ್ತಿದವುದಿಕ್ತಟದಭಿತ್ತಿಗಳನದ್ರಿಗಳ | ನೆತ್ತಿದವುಧರೆಯನುಚ್ಚಳಿಸಿಕೂರ್ಮನಬೆನ್ನ | ನೊತ್ತಿದವುಕಲಕಿದವುಸಾಗರವನಾದಿತ್ಯಮಂಡಲವನಂಡಲಿದವು || ಮುತ್ತಿದವುಬಾಂದಳವನೆಲ್ಲಮಂಕೆಲಕೆಲವು | ಪತ್ತಿದವುಪರಿದವಿಳಿದುವುಸಕಲಲೋಕಕ್ಕೆ | ಬಿತ್ತಿದವುಭೀತಿಯಂಬಭ್ರುವಾಹನನಶರಜಾಲಮದನೇವೇಳ್ವೆನು || ೩೮ || ಹಾರಿಸಿತುರಥಮಂತುರಗಮಂರುಧಿರಮಂ | ಕಾರಸಿತುಸಾರಥಿಯಜೀವಮಂಸುರಲೋಕ | ಕೇರಿಸಿತು ಛತ್ರಚಾಮರ ಪತಾಕಾಳಿಯಂಕೆಂಗರಿಯಗಾಳಿಯಿಂದ || ತೂರಿಸಿತು ಟೆಕ್ಕೆಯದ ಮೇರೆಹನುಮಂತನಂ | ಚೀರಿಸಿತುಪಾರ್ಥನಶರೀರದೊಳ್ಬಟ್ಟೆಯಂ | ತೋರಿಸಿತುಬಭ್ರುವಾಹನನಶರಸಂಕುಲಂಫಲುಗುಣಂಕಂಪಿ

---

ಆಧಿಕ್ಯವು, ಪಿರಿದು – ಹೆಚ್ಚಾದದ್ದು, ಎಂದು – ಎಂಬದಾಗಿ, ವರ್ಣಿಸುವರು – ಹೊಗಳುತ್ತಾರೆ, ಎಂದು–ಎಂಬತೆರದಿಂದ, ಬೆರೆತು–ಅಹಂಕಾರವಂ ತಾಳಿ, ಇಹೆ–ಇರುತ್ತೀಯೆ, ತನ್ನ–ನನ್ನ ಸಂಬಂಧವಾದ, ಸಮರಮಂ–ಕಾಳಗವನ್ನು, ನಿರ್ಕೈಸಿದೊಡೆ–ಗೋಚರಪಡಿಸಿಕೊಂಡರೆ, (ಎದುರಾಳಾಗಿ ನಿಂತರೆ) ವೀರನು–ಶೂರನಾದವನು, ಅಹುದು–ಆಗಬಹುದು, ಎಂದು–ಎಂಬದಾಗಿ, ಬಾಣಮಯದ – ಕಣೆಗಳ ಸಮುದಾಯದಿಂದ ಕೂಡಿದ, ಇದು ಅರ್ಣವಂ–ಈ ಕಡಲು, ಎತ್ತಣಿಂ–ಯಾವಕಡೆಯಿಂದ, ಮೇರೆ ತಪ್ಪಿದುದು–ಮಿತಿಮೀರಿತು, ಎನಲ್ – ಎಂಬತೆರನಾಗಿ, ಬಭ್ರುವಾಹನನು – ಪಾರ್ಥಜನು, ಎಚ್ಚನು – ಬಾಣಪ್ರಯೋಗವನ್ನು ಮಾಡಿದವನಾದನು.

ಅ|| ವಿ|| ಸುಪರ್ಣಧ್ವಜಂ – ಸುಪರ್ಣ – ಗರುತ್ಮಂತನನ್ನೆ, ಧ್ವಜನು – ಧ್ವಜಪಟದಲ್ಲಿ ಉಳ್ಳವನು ಯಾರೊ ಅವನು (ಸುಪರ್ಣಧ್ವಜಂ, ಬ. ಸ.) ವರ್ಣಿಸು (ತ್ಸ) ಬಣ್ಣಿಸು (ತ್ಭ) ||೩೭||

ಟೀ|| ಬಭ್ರುವಾಹನನ – ಅರ್ಜುನಿಯ, ಶರ–ಬಾಣಗಳ, ಜಾಲಂ–ಸಮುದಾಯವು, ದಿಕ್ತಟದ – ದಿಗಂತವೆನ್ನುವ, ಭಿತ್ತಿಗಳನು–ಕುಡ್ಯಂಗಳನ್ನು, ಕೆತ್ತಿದವು–ಪ್ರವೇಶಮಾಡಿದವು, ಅದ್ರಿಗಳನು–ಪರ್ವತಂಗಳನ್ನು, ಎತ್ತಿದವು–ಮೇಲಕ್ಕೆ ಮಿಾಟಿದವು, ಧರೆಯನು–ಭೂಮಂಡಲವನ್ನು, ಉಚ್ಚಳಿಸಿ-ಮೇಲೆಕ್ಕೆಬ್ಬಿಸಿ, ಕೂರ್ಮನ–ಆಮೆಯ, ಬೆನ್ನನು–ಬೆನ್ನಿನ ಭಾಗವನ್ನು, ಒತ್ತಿದವು–ಅನುಕಿ ಬಿಟ್ಟವು, ಸಾಗರವನು–ಕಡಲನ್ನು, ಕಲಕಿದವು–ಕದಡಿದವು. ಆದಿತ್ಯಮಂಡಲವನು–ರವಿಮಂಡಲವನ್ನು, ಅಂಡಲಿದವು–ಬಾಧೆಯುಂಟಾಗುವಂತೆ ಮಾಡಿದವು, ಬಾಂದಳವನು–ಅಂತರಿಕ್ಷಪ್ರದೇಶವನ್ನು, ಎಲ್ಲಮಂ–ಸಮಸ್ತವನ್ನೂ, ಮುತ್ತಿದವು–ಕವಿದುಕೊಂಡವು. ಕೆಲಕೆಲವು–ಹಲವುಹಲವು, ಪತ್ತಿದವು–ಮೇಲಕ್ಕೆ ಹತ್ತಿದವು, ಪರಿದವು–ಹರಿಯಲಾರಂಭಿಸಿದವು, ಇಳಿದವು–ಕೆಳಗೆ ಇಳಿದವು, ಸಕಲ–ಸಮಸ್ತವಾದ, ಜನಕೆ–ಜನಗಳಿಗೂ, ಭೀತಿಯಂ–ಹೆದರಿಕೆಯನ್ನು, ಬಿತ್ತಿದವು–ಕಾಣಿಸಿದವು, ಅದನು–ಆ ಕಣೆಗಳ ಕಾರ್ಯವನ್ನು, ಏವೇಳ್ವೆನು–ಏನೆಂದು ಬಣ್ಣಿಸಲಿ. ||೩೮||

ಟೀ|| ಬಭ್ರುವಾಹನನ–ಪಾರ್ಥಜನ, ಶರ–ಬಾಣಗಳ, ಸಂಕುಲಂ–ಸಮುದಾಯವು, ಫಲುಗುಣಂ–ಪಾರ್ಥನನ್ನೂ, ಕಂಪಿಸಲ್ಕೆ–ನಡನಡುಗುತ್ತಿರುವಂತೆ, ರಥಮಂ–ಅವನ ರಥವನ್ನೂ, ತುರಂಗಮಂ–ಹಯವನ್ನೂ, ರುಧಿರಮಂ–ನೆತ್ತರನ್ನೂ, ಹಾರಿಸಿತು–ಹಾರುವಂತೆ ಮಾಡಿತು, ಮತ್ತು ರುಧಿರಮಂ–ನೆತ್ತರನ್ನು, ಕಾರಿಸಿತು–ಉಗುಳಿಸಿ ಬಿಟ್ಟಿತು, ಸಾರಥಿಯ–ರಥವನ್ನು ನಡೆಯಿಸತಕ್ಕವನ, ಜೀವವನು – ಪ್ರಾಣವನ್ನು, ಸುರಲೋಕಕೆ – ದೇವಲೋಕಕ್ಕೆ, ಏರಿಸಿತು – ಹತ್ತುವಂತೆ ಮಾಡಿತು, ಛತ್ರ ಸತ್ತಿಗೆಯು – ಚಾಮರ ಚೌರಿಯು, ಪತಾಕೆ- ಬಾವುಟಗಳು ಇವುಗಳು, ಆಳಿಯಂ–ಸಮುದಾಯವನ್ನು, ಕೆಂಗರಿಯ–ಕೆಂಪಾದ

---

ಮಾಡಿದನು, ಈಶ್ವರನಾದರೊ ಪ್ರೀತಿಪುರಸ್ಸರವಾಗಿ ನಿನ್ನೊಂದಿಗೆ ಹೋರಾಡಿದನು. ನಿನ್ನನ್ನು ಶೂರನೆಂದು ತಿಳಿಯದವರು ಹೇಳಬೇಕೇ ಹೊರತು ನಾನೆಂದಿಗೂ ನಂಬಲಾರೆ, ಇಂಥಾ ಹೇಡಿಯಾದ ನೀನು ನನ್ನ ಕೂಡೆ ಯುದ್ಧಕ್ಕೆ ಏತಕ್ಕೆ ಬಂದೆ? ಹಾಗೆ ನೀನು ಶೂರನಾಗಿದ್ದರೆ ನನ್ನೊಂದಿಗೆ ಸರಿಸಮನಾಗಿ ಕಾದೆಂದು ಜರೆಯುತ್ತ ದಿವ್ಯಬಾಣಗಳನ್ನು ಬಿಟ್ಟನು. ಆ ಸರಲ್ಗಳಾದರೋ ಮೇರೆ ತಪ್ಪಿ ನುಗ್ಗಿ ಬರುತ್ತಲಿರುವ ದೊಡ್ಡ ಸಮುದ್ರದಂತೆ ಕಂಗೊಳಿಸುತ್ತ, ಎಲ್ಲೆಲ್ಲಿಯೂ ತುಂಬಿಕೊಂಡು,||೩೭||ದಿಗಂತಗಳೆಂಬ ಗೋಡೆಗಳನ್ನು ಹೋಗಿ ಸೇರಿ, ಅಲ್ಲಿಂದ ಕೆಳಗಿಳಿದು ಭೂಮಿಯನ್ನು ಸೀಳಿಕೊಂಡು ಪಾತಾಳ ಲೋಕದಲ್ಲಿರುವ ಕೂರ್ಮನ ಬೆನ್ನನ್ನು ಚನ್ನಾಗಿ ಅದುಮಿ, ಬಳಿಕ ಮಹಾರ್ಣವನನ್ನೆಲ್ಲಾ ಚನ್ನಾಗಿ ಕಲಕಿ, ಅಲ್ಲಿಂದ ಸೂರ್ಯಮಂಡಲಕ್ಕೆ ಹಾರಿ ರವಿಯನ್ನು ಹಿಂಸಿಸಿ, ಅನಂತರ ಆಕಾಶವಲ್ಲೆಲ್ಲಾ ವ್ಯಾಪಿಸಿ ಎಲ್ಲರ ಎದೆಯೂ ಗಡಗಡನೆ ನಡುಗುತ್ತಲಿರುವಂತೆ ಮಾಡಿಬಿಟ್ಟವು ||೩೮|| ಇದೂ ಅಲ್ಲದೆ ಅರ್ಜುನನ ರಥವನ್ನು ಮೇಲಕ್ಕೆ ಹಾರಿಸಿದವು. ಆ ರಥಕ್ಕೆ ಕಟ್ಟಿದ್ದ ಕುದುರೆಗಳಿಂದ ರಕ್ತದ ಕಾಲುವೆಗಳುಂಟಾಗುವಂತೆ ಮಾಡಿ, ಸಾರಥಿಯ ಪ್ರಾಣವು ಯಮಲೋಕದ ಮಾರ್ಗವನ್ನು ಹಿಡಿಯುನಂತೆ ಮಾಡಿಬಿಟ್ಟವು. ಛತ್ರ, ಚಾಮರ, ಬಾವುಟಾದಿಗಳನ್ನೆಲ್ಲಾ ಶರ

ಸಕ್ತೈ ‖ ೩೯ ‖ ಮತ್ತೆ ಸಂಗರದೊಳನ್ಯೋನ್ಯಮವರೀರ್ವರ್ಗೆ । ಚಿತ್ತದೊಳ್ಮುಸುಕಿತುಃಘನಕ್ಷಾತ್ರತಾಮಸಂ । ಪೊತ್ತಿತತಿರೋಷಾಗ್ನಿ ಬಳಿಕೋರ್ವರೋರ್ವರಂಜೈಸುವಭಿಲಾಷೆಯಿಂದ ‖ ತೆತ್ತಿಸಿದಕಣೆಗಳಿಂಮೈಗಳೈವೊಗದೊಲಿರೆ । ನೆತ್ತರೊರತೆಗಳಿಂದತನುಗಳುರೆಪೂತಮು । ಳ್ಮುತ್ತುಗದೊಲಿರೆತಂದೆಮಕ್ಕಳೆಲ್ಲಾಡಿದರ್ನಿಚ್ಚಟದೊಳಚ್ಚರಿಯೆನೆ ‖ ೪೦ ‖ ಜನಪಕೇಳ್ಜಾಹ್ನವಿಯಶಾಪದಿಂಬಳಿಕಪಾ । ರ್ಥನಸತ್ವಮೆಳದಾಗಿಬರೆಕಂಡುಬಭ್ರುವಾ । ಹನನೆಂದನೆಲೆಧನಂಜಯತನ್ನಜನನಿಚಿತ್ರಾಂಗದೆ ಪತಿವ್ರತೆಕಣಾ ‖ ಅನಿಮಿತ್ತಮಾತೆಯಂಪಳಿದಕಾರಣದಿಂದ । ನಿನಗೆಕೈಗುಂದುತಿದೆಸಾಕಿನ್ನುಕೃಷ್ಣನಂ । ನೆನೆಮರುಳೆ

---

ಗರಿಗಳ, ಘಾಳಿಯಿಂದ-ಪವಮಾನನಿಂದ, ತೂಳಿಸಿತು – ನೂಕಿಕೊಂಡು ಹೊರಟಿತು, ಟೆಕ್ಕೆಯದಮೇಲೆ - ಧ್ವಜಪಟದಲ್ಲಿರತಕ್ಕ, ಹನುಮಂತನ-ವಾಯುಸೂನುವನ್ನು, ಚೀರಿಸಿತು-ಕೂಗಿಕೊಳ್ಳುವಂತೆ ಮಾಡಿಬಿಟ್ಟಿತು, ಪಾರ್ಥನ-ಫಲುಗುಣನ, ಶರೀರದೊಳು-ದೇಹದಲ್ಲಿ, ಬಟ್ಟೆಯಂ-ರಂಧ್ರಗಳನ್ನು, ತೋರಿಸಿತು-ಉಂಟುಮಾಡಿತು.

ಅ‖ ವಿ‖ ಕೆಂಗರಿ-ಕೆಚ್ಚನೆಗರಿ, (ವಿ. ಪೂ.) ‖೩೯‖

ಟೀ‖ ಅವರೀರ್ವರ್ಗೆ-ಆ ಅರ್ಜುನ ಬಭ್ರುವಾಹನರಿಗೆ, ಸಂಗರದೊಳ್-ಕಾಳಗದಲ್ಲಿ, ಮತ್ತೆ-ಪುನಃ, ಅನ್ಯೋನ್ಯಂ-ಒಬ್ಬೊಬ್ಬರಿಗೆ, ಘನ-ಅಧಿಕವಾದ, ಕ್ಷಾತ್ರ-ಕ್ಷತ್ರಿಯ ಸಂಬಂಧವಾದ, ತಾಮಸಂ-ರೋಷವು, ಮುಸುಕಿತು-ಉಂಟಾಯಿತು, ಅತಿರೋಷಾಗ್ನಿ-ಬಹು ಹೆಚ್ಚಾದ ಕೋಪವೆಂಬ ಬೆಂಕಿಯು, ಪೊತ್ತಿತು-ವ್ಯಾಪಿಸಿಬಿಟ್ಟಿತು, ಬಳಿಕ-ಅನಂತರ, ಓರ್ವರು-ಒಬ್ಬರು, ಓರ್ವರಂ-ಬೇರೊಬ್ಬರನ್ನು, ಜಯಿಸುವ-ಸೋಲಿಸತಕ್ಕ, ಅಭಿಲಾಷೆಯಿಂದ - ಆಸಕ್ತಿಯಿಂದ, ತೆತ್ತಿಸಿದ - ನಾಟಿರತಕ್ಕ, ಕಣೆಗಳಿಂ-ಸರಲ್ಗಳಿಂದ, ಮೈಗಳು-ಅವಯವಗಳು, ಐವೊಗದೊಲು-ಪಂಚಮುಖಂಗಳ ತೆರನಾಗಿ, ಇರೆ-ಇರಲು, ನೆತ್ತರ-ರಕ್ತದ, ಒರತೆಗಳಿಂದ-ಸುರಿಯೋಣದರಿಂದ, ತನುಗಳು-ಇಬ್ಬರ ಅವಯವಗಳು, ಉರೆ-ಅತ್ಯಧಿಕವಾಗಿ, ಪೂತ-ಪುಷ್ಪಂಗಳಿಂದ ತುಂಬಿದ, ಮುಳ್ಮುತ್ತುಗದೊಲು-ಮುಳ್ಳುಗಳಿಂದೊಡಗೂಡಿದ ಮುತ್ತುಗದ ಗಿಡದಂತೆ, ಇರೆ-ಇರಲು, ತಂದೆಮಕ್ಕಳು-ಅರ್ಜುನ ಪಾರ್ಥಜರು, ನಿಚ್ಚಟದೊಳು - ಕ್ರೌರ್ಯಾತಿಶಯದಿಂದ, ಅಚ್ಚರಿಯೆನೆ - ಪರಮಾಶ್ಚರ್ಯವು ತೋರುವಂತೆ, ಎಚ್ಚಾಡಿದರ್- ಬಾಣಗಳಿಂದ ಒಬ್ಬರನ್ನೊಬ್ಬರು ನೋಯಿಸುತ್ತಲಿದ್ದರು.

ಅ‖ ವಿ‖ ರೋಷಾಗ್ನಿ (ಸ. ದೀ.) ಐವೊಗಂ+ಐದಾದ=ಮುಖಂ (ದ್ವಿಗು ಸ.) ಅಚ್ಚರಿ (ತ್ಭ) ಆಶ್ಚರ್ಯ (ತ್ಸ) ‖೪೦‖

ಟೀ‖ ಜನಪ-ಎಲೈ ಜನಮೇಜಯ ನರೇಂದ್ರನೆ, ಕೇಳು-ಲಾಲಿಸು, ಆಜಾಹ್ನವಿಯ-ಆ ದೇವಗಂಗೆಯ, ಶಾಪದಿಂ-ದುರುಕ್ತಿಗಳಿಂದ, ಪಾರ್ಥನ – ಫಲುಗುಣನ, ಸತ್ವಂ – ಶಕ್ತಿಯು, ಎಳದಾಗಿ – ಕಡಮೆಯಾಗಿ, ಬರೆ – ಬರುವುದಕ್ಕೆ ಆರಂಭಿಸಲು, ಕಂಡು-ನೋಡಿ, ಬಭ್ರುವಾಹನನು-ಪಾರ್ಥಸೂನುವು, ಎಂದನು-ಮುಂದೆ ಹೇಳುವಂತೆ ಹೇಳಲಾರಂಭಿಸಿದನು, ಎಲೆಧನಂಜಯ-ಎಲೈ ಪಾರ್ಥನೆ, ತನ್ನ-ನನ್ನ, ಮಾತೆ-ಜನನಿಯಾದ ಚಿತ್ರಾಂಗದೆಯು, ಪತಿವ್ರತೆಕಣಾ-ಪತಿಭಕ್ತಿಯಿಂದ ಮೆರೆಯತಕ್ಕವಳಲ್ಲವೆ, ಮಾತೆಯಂ-ತಾಯಿಯನ್ನು, ಅನಿಮಿತ್ತ-ಯಾವ ಕಾರಣವೂ ಇಲ್ಲದೆ, ಪಳಿದ-ನಿಂದಿಸಿದ, ಕಾರಣದಿಂ-ಕಾರಣಕ್ಕೋಸ್ಕರಲೆ, ನಿನಗೆ-ನಿನ್ನದಾದ, ಕೈ-ಕರವು, ಕುಂದುತಿದೆ – ಬಲಹೀನವಾಗುತ್ತಲಿರುವುದು, ಸಾಕು-ನಿನ್ನ ಸಾಹಸವು ಸಾಕು, ಇನ್ನು-ಇನ್ನುಮೇಲೆ, ಕೃಷ್ಣನಂ-ರುಕ್ಮಿಣಿಯ ಪತಿಯನ್ನು, ನೆನೆ-ಧ್ಯಾನಮಾಡು, ಮರುಳೆ – ಮೂಢಾತ್ಮನೆ, ಮುರಹರನ-ಮುರಾಂತಕನ, ಸಾರಥ್ಯಂ-ರಥವನ್ನು ನಡೆಯಿಸುವಿಕೆಯು, ಇಲ್ಲದೆ-ಬಿಟ್ಟು, ಆರಂ-ಯಾರನ್ನು ತಾನೆ, ಗೆಲ್ದೆ-ಜಯಿಸಿದೆ, ಹೇಳು-ನುಡಿ, ಎಂದನು-ಎಂದು ನುಡಿದನು. ‖೪೧‖

---

ಚಾಲದ ಮಹಾವೇಗದಿಂದುಂಟಾದ ಕೆಂಧೂಳಿಡಿದ ಸುಳಿಗಾಳಿಯು ತಳ್ಳಿಕೊಂಡು ಹೋಗಿ ಅರ್ಜುನನ ಧ್ವಜಪಟದಲ್ಲಿರುವ ಆಂಜನೇಯನನ್ನು ಕಿರೋ ಎಂದು ಕೂಗುವಂತೆಯೂ, ಪಾರ್ಥನನ್ನು, ಗಡಗಡನೆ ನಡುಗುವಂತೆಯೂ ಮಾಡಿದವು ‖೩೯‖ ಬಳಿಕ ಅರ್ಜುನ ಬಭ್ರುವಾಹನರೀರ್ವರೂ ಹೆಚ್ಚಾದ ರೋಷವುಳ್ಳವರಾಗಿ, ಕೋಪಾಗ್ನಿಯಿಂದ ಬೆಂದು, ಒಬ್ಬರು ಮತ್ತೊಬ್ಬರನ್ನು ಗೆಲ್ಲುವ ಅಭಿಲಾಷೆಯಿಂದ ಒಬ್ಬರಮೇಲೊಬ್ಬರು ಬಾಣಗಳನ್ನು ಬಿಡುತ್ತಾ, ಹೂಗಳಿಂದ ಕೂಡಿದ ಮುತ್ತುಗದ ಮರಗಳಂತಿರುವ ಮೈಯ್ಯುಳ್ಳವರಾಗಿ ಎಲ್ಲರೂ ಮೆಚ್ಚುವಂತೆ ಘೋರಯುದ್ಧವಂ ಗೈಯ್ಯುತ್ತಲಿದ್ದರು ‖೪೦‖ ಕೇಳೈ ಭೂಮಿಪಾಲನಾದ ಜನಮೇಜಯ ಮಹೀನಾಥನೆ, ಈ ರೀತಿಯಲ್ಲಿ ಘೋರ ಯುದ್ಧವಂ ಗೈಯುತ್ತಲಿರುವಾಗ ಪಾರ್ಥನ ಬಲವೆಲ್ಲಾ ಗಂಗಾದೇವಿಯ ಶಾಪದಿಂದ ಕಡಮೆಯಾಗುತ್ತಾ ಬಂದಿತು. ಆಗ ಬಭ್ರುವಾಹನನು ಪಾರ್ಥನನ್ನು ಕುರಿತು, ಎಲೈ ಅರ್ಜುನನೆ, ಪತಿವ್ರತೆಯಾದ ನಮ್ಮ ತಾಯಿಯನ್ನು ನೀನು ಅನ್ಯಾಯವಾಗಿ ದೂಷಿಸಿದ್ದರಿಂದ ಈಗ ನಿನ್ನ ಶಕ್ತಿಯು ಕಡಮೆಯಾಗುತ್ತಲಿರುವುದು. ಎಲೈ ಮೂಢನೆ, ಕೃಷ್ಣನನ್ನು ಸ್ಮರಿಸುವನಾಗು, ಮುರಾಂತಕನಾದ ಕೃಷ್ಣಸ್ವಾಮಿಯ ಸಾರಥ್ಯವಿಲ್ಲದೆ ನೀನು ಯಾರನ್ನು ತಾನೆ ಜಯಿಸಿರು

ಮುರಹರನಸಾರಥ್ಯಮಿಲ್ಲದಾರಂಗೆಲ್ವೆಹೇಳೆಂದನು ॥ ೪೧ ॥ ಕ್ಷೋಣಿಗೋಸುಗಕೊಂದೆನೀನಂದುಕರ್ಣನಂ । ಮೇಣವನತನಯನನೆಳಲ್ಕೆ ಸೇರದೆಮನದ । ಕೇಣದಿಂದೆನ್ನ ಕೈಯಿಂದಕೊಲಿಸಿದೆಸಾಕುಹಗೆಹರಿದುದಿನ್ನುನಿನಗೆ ॥ ಪ್ರಾಣಮಂಕಾಯ್ದುಬಿಡುವೆಂಪೋಗುಬಿಲ್ಗಳೊಳ್ । ತ್ರಾಣಮುಳ್ಳಡೆನಿಂದುಚಿತ್ತದೊಳ್ನೆನೆಚಕ್ರ । ಪಾಣಿಯಂಬಲಮಪ್ಪುದೆಂದುಜರೆದಂಬಭ್ರುವಾಹನಂಫಲುಗುಣನನು ॥ ೪೨ ॥ ಹೊಣೆಹೊಕ್ಕಿಂದುತಾಂಪಗೆವನಂಗೆಲ್ದೊಡಂ । ಮಾಣದೆರಣಾಗ್ರದೊಳ್ಮಡಿದೊಡಂಕ್ಷತ್ರಿಯ । ಗೂಣೆಯುಮೆಕರ್ಣನಂಕೊಂದೊಡೇನವನಸುತನಳಿದೊಡೇ ಸಾಹವದೊಳು ॥ ಕ್ಷೀಣಬಲನೇ ತಾನಕಟನೀಂಸಮರ್ಥನೇ । ಕಾಣಬಹುದೆನುತಭೀಮಾನುಜಂಕೋಪದಿಂ । ಚಾಪಂಗಳಂಮಗನಮೇಲೆಕರೆಯಲ್ಕವಂಪರಿಗಡಿವುತಿಂತೆಂದನು ॥ ೪೩ ॥ ಪ್ರೀತಿಯಿಂದ್ರೋಣನಿತ್ತಂಬುಗಳ್ಮನ್ಮಥಾ । ರಾತಿಮುಖ್ಯಾಮರಕೊಟ್ಟಬಾಣಂಗಳ । ಜ್ಞಾನಮಾದವುನಿನಗೆಮರುಳೆನಿನ್ನೊಡನಾಡಿ

ಟೀ॥ ಅಂದು-ಪೂರ್ವದಲ್ಲಿ ನಿಮಿಗೂ ಕೌರವರಿಗೂ ಹಸ್ತಿನಾ ಪಟ್ಟಣದ ಒಡೆತನಕ್ಕೆ ಯುದ್ಧವು ಪ್ರಾರಂಭವಾದ ಕಾಲದಲ್ಲಿ, ಕ್ಷೋಣಿಗೋಸುಗ-ರಾಜ್ಯದ ನಿಮಿತ್ತವಾಗಿಯೆ, ನೀನು-ನೀನಾದರೊ, ಕರ್ಣನಂ-ರವಿಸೂನುವನ್ನು, ಕೊಂದೆ-ಸಂಹರಿಸಿದೆ, ಅಥವಾ ಕೊಂದುಹಾಕಿದೆ, ಮೇಣ್-ಅದೂ ಅಲ್ಲದೆ, ನೆಳಲ್ಗೆ-ಕರಿಸೋಕ್ತಿಗಳಿಗೆ, ಸೇರದೆ-ಸಿಕ್ಕಿ ಬಿಡದೆ, ಮನದ-ಹೃದಯದ, ಕೇಣದಿಂ-ದುಷ್ಟತನದಿಂದ, ಎನ್ನಕೈಯಿಂದ-ನನ್ನ ಕಯ್ಯಾರ, ಅವನ-ಆ ಸೂರ್ಯ ತನುಜನನ್ನು, ಕೊಲ್ಲಿಸಿದೆ-ಕೊಂದು ಹಾಕಿಸಿ ಬಿಟ್ಟೆ, ಹಗೆ-ವೈರವು, ಹರಿದುದು-ನಿಂತುಹೋಯಿತು, ಇನ್ನು-ಇನ್ನು ಮುಂದೆ, ಸಾಕು-ಹಗೆತನವನ್ನು ಬಿಟ್ಟು ಯುದ್ಧವನ್ನು ನಿಲ್ಲಿಸು, ಪ್ರಾಣಮಂ-ಹರಣವನ್ನು, ನಿನಿಗೆ-ನಿನ್ನ ವಿಷಯದಲ್ಲಿ, ಕಾಯ್ದು-ಕಾಪಾಡಿ, ಬಿಡುವೆಂ-ಬಿಟ್ಟು ಬಿಡುತ್ತೇನೆ, ಪೋಗು-ಈ ಯಜ್ಞಾಶ್ವದ ಗೊಡವೆಯನ್ನುಬಿಟ್ಟುನಡೆ, ಬಿಲ್ಗಳೊಳ್-ನಿನ್ನ ಅಂಬುಗಳಲ್ಲಿ, ತ್ರಾಣಂ-ಸಾಮರ್ಥ್ಯವು, ಉಳ್ಳೊಡೆ-ಇದ್ದ ಹಾಗಾದರೆ, ನಿಂದು-ನನಿಗೆದುರಾಗಿ, ಚಕ್ರಪಾಣಿಯಂ-ಕೃಷ್ಣಸ್ವಾಮಿಯನ್ನು, ಚಿತ್ತದೋಳ್-ಮನದಲ್ಲಿ, ನೆನೆ-ಧ್ಯಾನಿಸುವನಾಗು, (ಭಜಿಸು) ಬಲಂ-ಸಾಹಸವು, ಅಪ್ಪುದು-ಒದಗುವುದು, ಎಂದು-ಎಂಬದಾಗಿ, ಬಭ್ರುವಾಹನಂ-ಪಾರ್ಥಜನು, ಫಲುಗುಣನಂ-ಧನಂಜಯನನ್ನು, ಜರೆದಂ-ಹೀಯಾಳಿಸಿದನು. ॥ ೪೨ ॥

ಟೀ॥ ಹೊಣೆ-ಬೇಗನೆ ಮತ್ತು ಸೇನಾಜಲಧಿಯನ್ನು, ಹೊಕ್ಕು-ನುಗ್ಗಿ, ತಾಂ-ಅರ್ಜುನನಾದರೊ, ಇಂದು-ಈ ಕಾಲದಲ್ಲಿ, ಪಗೆವನಂ-ಹಗೆಯನ್ನು, ಗೆಲ್ದೊಡಂ-ಗೆದ್ದರೂ, ಮಾಣದೆ-ಸಾಧ್ಯಕ್ಕೆ ಬಾರದೆ, ರಣಾಗ್ರದೋಳ್ - ಸಮರಾಂಗಣದಲ್ಲಿ, ಮಡಿದೊಡೆ-ಸತ್ತುಹೋದರೂ,ಕ್ಷತ್ರಿಯರ್ಗೆ-ದ್ವಿತೀಯ ವರ್ಣಾಶ್ರಮಾವಲಂಬಿಗಳಿಗೆ,ಊಣಯುಮೆ-ಕೊರತೆಯುಂಟೆ,ಕರ್ಣನಂ-ಭಾನುಸುತನನ್ನು, ಕೊಂದಡೆ-ಸಂಹರಿಸಿದರೆ, ಏನು-ಬಾಧಕವೇನಿರುವುದು, ಅವನ-ಆ ಕರ್ಣನ, ಸುತನು-ಮಗನಾದ ವೃಷಧ್ವಜನು, ಅಳಿದೊಡೆ-ಸತ್ತುಹೋದರೆ, ಏನು-ಪ್ರಮಾದವೇನು, ತಾನು-ನಾನಾದರೊ, ಆಹವದೊಳು-ರಣಾಂಗಣದಲ್ಲಿ, ಕ್ಷೀಣ-ನಷ್ಟವಾದ, ಬಲನೆ-ಸಾಹಸದಿಂದ ಕೂಡಿರತಕ್ಕವನೆ, ಅಕಟ-ಆಹಾ, ನೀಂ-ನೀನು, ಸಮರ್ಥನೆ-ಬಲಶಾಲಿಯೆ, ಕಾಣಬಹುದು-ಆಗಬಹುದು, ಎನುತ-ಎಂದು ನುಡಿಯುತ್ತ, ಭೀಮಾನುಜಂ-ಪಾರ್ಥನು, ಮಗನಮೇಲೆ - ಕುವರನಾದ ಬಭ್ರುವಾಹನನನ್ನು ಕುರಿತು, ಬಾಣಗಳಂ-ಕಣೆಗಳನ್ನು, ಕರೆಯಲ್ಕೆ-ವರ್ಷಿಸಲು, ಅವಂ-ಆ ಪಾರ್ಥಜನು, ಪರಿಗಡಿಯಲ್ಕೆ-ಕತ್ತರಿಸಿ ಹಾಕುತ್ತ, ಇಂತು-ಮುಂದೆ ಹೇಳುವಂತೆ, ಎಂದನು-ನುಡಿದವನಾದನು ॥ ೪೩ ॥

ಟೀ॥ ದ್ರೋಣನು-ದ್ರೋಣಾಚಾರ್ಯನು, ಪ್ರೀತಿಯಿಂ-ಅಕ್ಕರೆಯಿಂದ, ಇತ್ತ-ಕೊಟ್ಟ ಅಥವಾ ಅನುಗ್ರಹಿಸಿದ, ಅಂ

ವಿ ॥ ೪೧ ॥ ಪೂರ್ವದಲ್ಲಿ ನೀನು ಹಸ್ತಿನಾವತಿಯ ರಾಜ್ಯಭಾರಕ್ಕಾಗಿ ಕರ್ಣನನ್ನು ಕೊಂದು ಹಾಕಿದೆ, ಈಗ ಅವನ ಮಗನಾದ ವೃಷಕೇತುವನ್ನು ನನ್ನ ಕೈಯಿಂದ ಕೊಂದು ಹಾಕಿಸಿಬಿಟ್ಟೆ, ಆ ಕರ್ಣನ ವಂಶದವರು ಈಗ ಯಾರೂ ಇಲ್ಲದ್ದರಿಂದ ನಿನ್ನ ಇಷ್ಟಾರ್ಥವು ಈಡೇರಿದಂತಾಯಿತು. ಈಗ ನಿನಿಗೆ ಪ್ರಾಣದ ಮೇಲೆ ಆಶೆಯಿದ್ದರೆ ಯುದ್ಧದ ಗೊಡವೆಯನ್ನು ಬಿಟ್ಟು ನಡೆ, ಇಲ್ಲವಾದರೆ ಕೃಷ್ಣಸ್ಮರಣೆಯನ್ನು ಮಾಡಿ ಬಲವನ್ನು ಪಡೆದು ನನಿಗೆದುರಾಳಾಗಿ ನಿಲ್ಲೆಂಬುದಾಗಿ ಅರ್ಜುನನನ್ನು ಅಲೆಗಳೆದನು॥೪೨॥ ಬಭ್ರುವಾಹನನ ಈ ತೆರನಾದ ನುಡಿಗಳನ್ನಾಲಿಸುತ್ತಲಿದ್ದ ಪಾರ್ಥನಾದರೊ, ರೋಷಭೀಷಣನಾಗಿ ಬಭ್ರುವಾಹನನನ್ನು ಕುರಿತು, ಯುದ್ಧದಲ್ಲಿ ವೀರಾವೇಶದಿಂದನುಗ್ಗಿ ಶತ್ರುವನ್ನು ಗೆಲ್ಲಲೀ ಅಥವಾ ಅಲ್ಲಿಯೇ ಸತ್ತುಹೋಗಲೀ ಅದರಿಂದ ಬಾಧಕವೇನುಂಟಾಗುವುದು ? ಕರ್ಣನನ್ನು ಕೊಂದರೂ ಮತ್ತು ಅವನ ಮಗನು ಸ್ವರ್ಗಲೋಕವನ್ನು ಸೇರಿದರೂ ಯಾವ ಕೊರತೆಯುಂಟಾದೀತು ? ಅಯ್ಯೋ ! ನಾನು ಕೈಲಾಗದ ಹೇಡಿಯೆ ! ಒಳ್ಳೇದು ಇರಲಿ, ನನ್ನ ಸಾಹಸವನ್ನಾದರೂ ಸ್ವಲ್ಪ ನೋಡೆಂದು ತನ್ನ ಕುವರನಮೇಲೆ ಶರವರ್ಷವನ್ನು ಕರೆಯಲು, ಪಾರ್ಥಜನು ಅವುಗಳನ್ನೆಲ್ಲಾ ನಡುದಾರಿಯಲ್ಲಿಯೇ ಹೆಸರಿಲ್ಲದಂತೆ ಮಾಡಿ, ಭೀಮಾನುಜನನ್ನು ಕುರಿತು ॥೪೩॥ ಎಲೈ ಮಂದ ಬುದ್ಧಿಯುಳ್ಳವನೆ, ನೀನು ನಿನ್ನ ಸಖನಾದ ಶ್ರೀ ಕೃಷ್ಣಸ್ವಾಮಿಯನ್ನು ಮರೆತು

ಕೃಷ್ಣನಂಮರೆಯಾಗಿ | ಏತಕಾಹವಮಿನ್ನು ಸಾಕೆನಲ್ಫಲುಗುಣಂ | ಖಾತಿಯಿಂಮಗುಳೆಸಲ್ಕಾಬಭ್ರುವಾಹನಂ | ಘಾತಿಸಿದನಡಿಗಡಿಗೆಪಾರ್ಥನಂಜಾಹ್ನವಿಯಶಾಪದಿಂಕೈಗೆಡಲ್ಕೆ || ೪೪ || ಸುರನದಿಯಶಾಪದಿಂಮೋಹಿಸಿನರಂಮುಳಿದು | ಧುರದೊಳಾವಂಬನೆಸುವನವನೆಲ್ಲಮಂ | ಪರಿಗಡಿದುಕೋಪದಿಂಪೂಡಿದಂಬಭ್ರುವಾಹಂತನ್ನಕಾರ್ಮುಕದೊಳು || ನಿರುಪಮಜ್ವಾಲಾಮುಖದಕಾಮರೂಪದುರು | ತರವಡಬಶಿಖಿಯಿಂದರ್ಧಚಂದ್ರಾಕೃತಿಯ | ಶರವನುತ್ಕೀರ್ಣಸ್ಫುಲಿಂಗಪ್ರಕರವನುಗ್ರಪ್ರಭಾಭೀಕರವನು || ೪೫ || ಅರ್ಕಾದಿಸರ್ವಗ್ರಹಂಗಳಿಂದ್ರಾದಿದೇ | ವರ್ಕಳಾಂಗಿರಸಾದಿಮುನಿಗಳೆಲ್ಲರ್ಮರುಗಿ | ದರ್ಕರೆದವರುಣಾಂಬುವಂಮೇಘನುದುರಿತುಲ್ಕಾಪಾತಮಿಳೆನಡುಗಿತು || ಶರ್ಕರಾವರ್ತಂಪ್ರವರ್ತಿಸಿತುಪಾರ್ಥಜಂ | ಕರ್ಕಶದಬಾಣ

---

ಬುಗಳ್-ಸರಲ್ಗಳು, ಮನ್ಮಥಾರಾತಿ-ಮನ್ಮಥ-ಪ್ರದ್ಯುಮ್ನನನ್ನು, ಅರಾತಿ-ಕೊಂದ ಪರಮೇಶ್ವರನೇ, ಮುಖ್ಯ- ಆದಿಯಾದ, ಅಮರರು-ಸುರರು, ಕೊಟ್ಟ-ದಯಪಾಲಿಸಿದ, ಬಾಣಂಗಳು-ಕೋಲ್ಗಳು, ನಿನಿಗೆ-ನಿನಿಗಾದರೊ, ಅಜ್ಞಾತಂ-ಮರೆತುಹೋದದ್ದು, ಅವವು-ಆಗಿಹೋದವು, ಮಗುಳೆ-ಎಲೈ ಮೂಢನೆ, ನಿನ್ನಬಿಡಸಾಡಿ-ನಿನ್ನ ಜತೆಗಾರನಾದ, ಕೃಷ್ಣನಂ-ಕೃಷ್ಣಸ್ವಾಮಿಯನ್ನು, ಮರೆಯಾಗಿ-ಮರೆತು ಹೋದಕಾರಣದಿಂದ, ಆಹವಂ-ಕಾಳಗವು, ಏತಕೆ-ಪ್ರಯೋಜನವೇನು, ಇನ್ನುಸಾಕು - ಯುದ್ಧದ ಗೊಡವೆಯು ಇನ್ನುಬೇಡ, ಎನಲ್-ಎಂದು ನುಡಿಯಲು, ಫಲುಗುಣಂ-ಪಾರ್ಥನು, ಮಗುಳೆ-ಪುನಃ, ಖಾತಿಯಿಂ-ಕೋಪಾತಿಶಯದಿಂದ, ಎಸಲ್ಕೆ-ಬಾಣಗಳನ್ನು ಬಿಡಲು, ಜಾಹ್ನವಿಯ-ದೇವ ನದಿಯ, ಶಾಪದಿಂದ-ಕೆಟ್ಟ ವರದಿಂದ, ಅಡಿಗಡಿಗೆ-ಬಾರಿಬಾರಿಗೂ, ಪಾರ್ಥಂ-ಫಲುಗುಣನು, ಕೈಗೆಡಲ್ಕೆ-ಶಕ್ತಿ ವಿಹೀನನಾಗುವಂತೆ, ಬಭ್ರುವಾಹನಂ-ಪಾರ್ಥಜನು, ಘಾತಿಸಿದನು-ಹೊಡೆದು ಗಾಯಮಾಡುತ್ತಲಿದ್ದನು || ೪೪ ||

ಟೀ|| ನರಂ-ಪಾರ್ಥನು, ಸುರನದಿಯ-ದೇವ ಗಂಗೆಯ, ಶಾಪದಿಂ-ದುಷ್ಟ ನುಡಿಗಳಿಂದ, ಮೋಹಿಸಿ-ಅಸ್ತ್ರಗಳನ್ನೆಲ್ಲಾ ಮರೆತು, ಮುಳಿದು-ಸಿಟ್ಟುಗೊಂಡು, ಧುರದೊಳ್-ರಣರಂಗದೊಳಗೆ, ಆವ-ಯಾವ ತೆರನಾದ, ಅಂಬನು-ಕಣೆಯನ್ನು, ಎಸೆವನು-ಪ್ರಯೋಗಿಸುವನೋ, ಅದನೆಲ್ಲಮಂ-ಆ ಸಕಲವನ್ನೂ, ಬಭ್ರುವಾಹನನು - ಪಾರ್ಥಜನು, ಕೋಪದಿಂದ-ರೋಷದಿಂದ, ಪರಿಗಡಿದು-ಛೇದಿಸಿದವನಾಗಿ, ತನ್ನ-ತನ್ನ ಸಂಬಂಧವಾದ, ಕಾರ್ಮುಕದೊಳು-ಧನುಸ್ಸಿನಲ್ಲಿ,ಉತ್ಕೀರ್ಣ-ಎರಚಾಡುತ್ತಲಿರತಕ್ಕ, ಸ್ಫುಲಿಂಗ-ಬೆಂಕಿಯ ಕೆಂಡಗಳ, ಕರ-ಸಮುದಾಯದಿಂದ ಕೂಡಿದ, ಉಗ್ರ-ಕಠಿಣವಾದ, ಪ್ರಭಾ-ತೇಜಸ್ಸಿನ, ಭೀಕರವನು-ಹೆದರಿಕೆಯನ್ನು, ನಿರುಪಮ-ಅಸದೃಶವಾದ, ಜ್ವಾಲಾ-ಉರಿಯಿಂದೊಡಗೂಡಿದ, ಮುಖದ-ಮೋರೆಯುಳ್ಳ, ಕಾಮರೂಪದ-ಸ್ವೇಚ್ಛಾರೂಪವುಳ್ಳ, ಉರುತರ-ಬಹು ಹೆಚ್ಚಾದ, ವಡಬಶಿಖಿಯಿಂದದ-ಬಡಬಾಗ್ನಿಯೋಪಾದಿಯಲ್ಲಿರತಕ್ಕ, ಅರ್ಧಚಂದ್ರಾಕೃತಿಯ-ಅರ್ಧಚಂದ್ರನನ್ನು ಹೋಲತಕ್ಕ, ಶರವನು-ಕಣೆಯನ್ನು, ಪೂಡಿದಂ-ಜೋಡಿಸಿದವನಾದನು || ೪೫ ||

ಟೀ|| ಅರ್ಕ-ರವಿಯೇ, ಆದಿ-ಮೊದಲಾಗಿ ಉಳ್ಳ, ಸರ್ವ-ಸಮಸ್ತವಾದ, ಗ್ರಹಂಗಳು-ಗ್ರಹಗಳ ಸಮೂಹವೂ, ಇಂದ್ರಾದಿ-ಅಮರಾಧಿಪನೇ ಮೊದಲಾದ, ದೇವರ್ಕಳು-ಸುರರೂ, ಆಂಗೀರಸ-ಬೃಹಸ್ಪತಿಯೇ, ಆದಿ-ಮೊದಲಾದ, ಎಲ್ಲರ್-ಸಮಸ್ತರಾದ, ಮುನಿಗಳು-ಋಷಿವರ್ಯರೂ, ಮರುಗಿದರ್-ವ್ಯಸನಾಕ್ರಾಂತರಾದರು, ಮೇಘಂ-ಮೋಡವು, ಅರುಣಾಂಬುವಂ-ರಕ್ತದ ಉದಕವನ್ನು, ಕರೆದವು-ವರ್ಷಿಸಿದವು, ಉಲ್ಕಾಪಾತಂ-ಉಲ್ಕಾಪಾತವು, ಉದುರಿತು-ಮೇಲಿನಿಂದ ಕೆಳಗೆ ಬಿದ್ದಿತು, ಇಳೆ-ಭೂಮಿಯೆಲ್ಲಾ, ನಡುಗಿತು-ನಡುಗಲಾರಂಭಿಸಿತು. ಶರ್ಕರಾವರ್ತಂ-ಮರಳುಮಿಶ್ರವಾದ ಸುಳಿಗಾಳಿಯು, ಪ್ರವರ್ತಿಸಿತು-ಬೀಸಲು

---

ಹೋದೆಯಾದ ಕಾರಣ ಭೀಷ್ಮದ್ರೋಣಾದಿಗಳು ನಿನಿಗೆ ಅನುಗ್ರಹಿಸಿದ್ದ ದಿವ್ಯ ಬಾಣಗಳ ಪ್ರಯೋಗವನ್ನೇ ಮರೆತುಬಟ್ಟೆ ಇನ್ನು ಯುದ್ಧದ ಗೊಡವೆ ನಿನಿಗೇಕೆ? ಅನ್ಯಾಯವಾಗಿ ಏತಕ್ಕೆ ಪೇಚಾಡುತ್ತಿ? ಸುಮ್ಮನಿರೆನ್ನಲು, ಅರ್ಜುನನು ಅತಿಯಾದ ಕೋಪಮಂ ತಾಳಿ ಅನೇಕ ಕೋಲ್ಗಳನು, ಬಭ್ರುವಾಹನನಮೇಲೆಸೆದರೂ ಕೂಡ ಗಂಗಾದೇವಿಯ ಶಾಪದ ಮಹಿಮೆಯು ಕ್ರಮೇಣ ಅರ್ಜುನನ ಬಲವನ್ನು ಕುಗ್ಗಿಸುತ್ತಬಂದು || ೪೪ || ಶಸ್ತ್ರಾಸ್ತ್ರಪ್ರಯೋಗವೇ ಮರೆತು ಹೋಯಿತು. ಹೀಗಾದರೂ ಪಾರ್ಥನು ಕಣೆಗಳನ್ನು ಬಿಡುತ್ತಲೇ ಇದ್ದನು. ಬಭ್ರುವಾಹನನಾದರೊ, ಧನಂಜಯನು ಬಿಟ್ಟಅಂಬುಗಳನ್ನೆಲ್ಲಾ ನಡುದಾರಿಯಲ್ಲೇ ಕತ್ತರಿಸಿ ಕೋಪಾವಿಷ್ಟನಾಗಿ, ಬೆಂಕಿಯ ತನಿಕೆಂಡಗಳನ್ನು ಕಾರುತ್ತಲೂ, ಅಗ್ನಿಯಂತೆ ಹೊಳೆಯುತ್ತಲೂ, ಬಡಬಾಗ್ನಿಯಂತೆ ಅತಿಭಯವನ್ನುಂಟುಮಾಡುತ್ತಲೂ ಇರುವ, ಅರ್ಧಚಂದ್ರಾಕೃತಿಯಿಂದ ಕೂರಲ ಗೊಂದನ್ನು ಸೆಳೆದುಕೊಂಡು ಬಿಲ್ಲಿಗೆ ಪೋಣಿಸಿ, ಧನಂಜಯನಮೇಲೆ ಬಿಟ್ಟುಬಿಟ್ಟನು || ೪೫ || ಸೂರ್ಯಾದಿ ಸಕಲ ಗ್ರಹಗಳೂ, ಇಂದ್ರನೇ ಮೊದಲಾದ ದೇವತೆಗಳೂ ಆಂಗಿರಸಾದಿ ತಾಪಸವರ್ಯರೂ ಈ ಘೋರ ಕೃತ್ಯವನ್ನು ನೋಡಿ ಬಹಳವಾಗಿ ವ್ಯಸನಪಟ್ಟರು ಮೇಘಗಳಲ್ಲಿ ಮಳೆಯ ನೀರಿಗೆ ಬದಲಾಗಿ ರಕ್ತಬಿಂದುಗಳು ಬೀಳಲಾರಂಭಿಸಿದವು, ಆಕಾಶದಿಂದ ಉಲ್ಕಾಪಾತಂಗಳು ಕೆಳಗುದುರಿದವು, ಭೂಮಿಯಾದರೊ ಗಡಗಡನೆ

ಮಂತೆಗೆದೆಸಲ್ಕಿಡಿಗಳಪೊ | ಗರ್ಕವಿಯೆದೆಸೆದೆಸೆಗೆಭುಗಿಭುಗಿಸುವಜ್ವಾಲೆಮೇಲ್ವಾಯ್ದು ಬರುತಿರ್ದುದು | ೪೬ || ಅತ್ಯುಗ್ರಸಾಯಕಂಬರೆಪಾರ್ಥನಿದಿರಾಗಿ | ಪ್ರತ್ಯಸ್ತ್ರದಿಂದೆಸಲದಂಕೊಳ್ಳದೈತರ | ಲ್ಸತ್ಯಭಾಮಾಕಾಂತನಂಚಿಂತಿಪನಿತರೋಳ್ತೀವ್ರದಿಂಕೊರಳನರಿಯೆ || ಅತ್ಯಧಿಕಕುಂಡಲದತಲೆಚಿಗಿದುನಭದೊಳಾ | ದಿತ್ಯಮಂಡಲಮಿಳೆಗುರುಳ್ವಂತೆಮುನಿಗಣ | ಸ್ತುತ್ಯಕೇಶವಕೃಷ್ಣಯೆನುತಬಿದ್ದುದುಕರ್ಣಸುತನಶಿರದೆಡೆಗೆಪೋಗಿ ||೪೭|| ಕಲಿವೃಷಧ್ವಜನಶಿರದೊಡನೆಕೂಡಿತುನರನ | ತಲೆಕರ್ಣಜನಕಬಂಧವ ನಪ್ಪಿಕೊಂಡುದಾ | ಫಲುಗುಣನಮುಂಡ ಮಿದನೆಲ್ಲರುಂಕಂಡು ಮರುಗಿದರಾಗ ಕರುಣದಿಂದ || ನಲವಿಂದ ಬೊಬ್ಬಿರಿದುದಾಬಭ್ರುವಾಹನನ | ಬಲವೈದೆಮೊಳಗಿದವುವಾದ್ಯಂಗಳಾಹವದಿ | ಗೆಲುವಿಂದಪುರಕೆತಿರುಗಿದನವಂನಂದಿಸಂ

---

ಜ್ಞಗಿಸಿತು, ಪಾರ್ಥಜಂ-ಬಭ್ರುವಾಹನನು, ಕರ್ಕಶದ-ಬಹು ಕಠಿಣವಾದ, ಬಾಣಮಂ-ಅಲಗನ್ನು, ತೆಗೆದು-ತೆಗೆದುಕೊಂಡು, ಎಸಲ್ ಪ್ರಯೋಗವಂ ಮಾಡಲು, ಕಿಡಿಗಳ-ಅಗ್ನಿಕಣಗಳ, ಪೊದರು-ಗುಂಪು, ಕವಿಯೆ-ಮುತ್ತಿಕೊಳ್ಳಲು, ದೆಸೆದೆಸೆಗೆ-ನಾನಾದಿಕ್ಕುಗಳಿಗೂ, ಭುಗಿಭುಗಿಸುವ-ಭುಗ್ ಭುಗ್ ಎಂದು ದನಿಯುಂಟೈವ, ಜ್ವಾಲೆ-ಜ್ವಾಲಾಸಮುದಾಯವು ಮೇಲ್ವಾಯ್ದು-ಮೇಲೆ ಮೇಲೆ ನುಗ್ಗಿ, ಬರುತ-ಐತರುತ್ತ, ಇರ್ದುದು-ಇತ್ತು ||೪೬||

ಟೀ|| ಅತ್ಯುಗ್ರ-ಬಹು ಕಠಿಣವಾದ, ಸಾಯಕಂ-ಸರಲು, ಇದಿರಾಗಿ-ಮುಂದುಗಡೆಯಲ್ಲಿ, ಬರೆ-ಐತರಲು, ಪಾರ್ಥನು-ಫಲುಗುಣನು, ಪ್ರತ್ಯಸ್ತ್ರದಿಂದ-ಅದಕ್ಕೆ ವೈರಿಯಾದ ಬಾಣದಿಂದ, ಎಸಲ್-ಬಿಡಿಯಲು, ಅದಂ-ಪಾರ್ಥನು ಬಿಟ್ಟ ಕಣೆಯನ್ನು, ಕೊಳ್ಳದೆ-ಲೆಕ್ಕಿಸದೆ, ಐತರಲ್-ಬರಲು, ಸತ್ಯಭಾಮಾಕಾಂತನಂ=ಸತ್ಯಭಾಮಾ-ಸತ್ಯಭಾಮಾದೇವಿಗೆ, ಕಾಂತನಂ-ಒಡೆಯನಾದ ಕೃಷ್ಣಸ್ವಾಮಿಯನ್ನು, ಚಿಂತಿಪ- ಭಜಿಸುವ, ಅನಿತರೋಳ್- ಅಷ್ಟರೊಳಗಾಗಿ, ಕೊರಳನು-ಕಂಠವನ್ನು, ತೀವ್ರದಿಂ-ಬಹು ಬೇಗನೆ, ಅರಿಯೆ-ಛೇದಿಸಲು, ಅತ್ಯಧಿಕ-ಬಹು ಶ್ರೇಷ್ಠವಾದ, ಕುಂಡಲದ-ಕರ್ಣಾಭರಣದಿಂದೊಡಗೂಡಿದ, ತಲೆ-ಖಂಡವು, ಚಿಗಿದು-ಮೇಲಕ್ಕೆ ಎಗರಿ, ನಭದೊಳು- ಆಗಸದಿಂದ, ಆದಿತ್ಯಮಂಡಲಂ- ರವಿ ಮಂಡಲವು, ಇಳೆಗೆ-ನೆಲದ ಮೇಲೆ, ಉರುಳ್ವಂತೆ-ಬಿದ್ದು ಹೋಗುವ ತೆರನಾಗಿ, ಮುನಿಗಣ - ತಾಪಸೋತ್ತಮರ ಸಮುದಾಯದಿಂದ, ಸ್ತುತ್ಯ-ಹೊಗಳಿಸಿಕೊಳ್ಳತಕ್ಕ, ಕೇಶವ-ಕೃಷ್ಣಮೂರುತೀ, ಎನುತ-ಎಂದು ನುಡಿಯುತ್ತ, ಕರ್ಣಸುತನ-ವೃಷಧ್ವಜನ, ಶಿರದೆಡೆಗೆ-ಶಿರಸ್ಸಿನ ಬಳಿಗೆ, ಪೋಗಿ-ಹೋಗಿ, ಬಿದ್ದುದು-ಬಿದ್ದು ಬಿಟ್ಟಿತು.

ಅ|| ವಿ|| ಅತ್ಯುಗ್ರ (ಯಣ್ಸಂಧಿ) ಪ್ರತ್ಯಸ್ತ್ರ (ಯಣ್ಸಂಧಿ) ಅರಿ-ಕತ್ತರಿಸು (ಧಾತ್ವರ್ಥವು) ಅರಿ-ವೈರಿ (ನಾಮಪದದ ಅರ್ಥವು) ಅತ್ಯಧಿಕ (ಯಣ್ಸಂಧಿ) ಮುನಿಗಣಸ್ತುತ್ಯ= ಮುನಿ-ತಾಪಸರ, ಗಣ-ಸಮುದಾಯ (ಷ.ತ) ಮುನಿಗಣದಿಂದ ಸ್ತುತ್ಯ (ತೃ. ತ) ||೪೭||

ಟೀ|| ನರನ- ಪಾರ್ಥನ, ತಲೆ- ರುಂಡವು, ಕಲಿ- ವೀರನಾದ, ವೃಷಧ್ವಜನ- ಕರ್ಣಸುತನ, ಶಿರದೊಡನೆ- ಶಿರಸ್ಸಿನೊಂದಿಗೆ, ಕೂಡಿತು-ಕೂಡಿಕೊಂಡಿತು, ಫಲುಗುಣನ-ಸವ್ಯಸಾಚಿಯ, ಮುಂಡಂ-ದೇಹದ ಭಾಗವು, ಕರ್ಣಜನ-ಕರ್ಣಸುತನ, ಕಬಂಧವನು-ಮುಂಡವನ್ನು, ಅಪ್ಪಿಕೊಂಡುದು-ತಬ್ಬಿಕೊಂಡಿತು, ಆಗ-ಆ ಕಾಲದಲ್ಲಿ, ಎಲ್ಲರುಂ-ಸಕಲರೂ, ಇದನು-ಈ ಬಗೆಯನ್ನು, ಕಂಡು-ನೋಡಿ, ಕರುಣದಿಂದ-ಕೃಪೆಯಿಂದ, ಮರುಗಿದರ್-ಸಂಕಟಪಟ್ಟರು, ಆ ಬಭ್ರುವಾಹನನ-ಆ ಪಾರ್ಥಜನ, ಬಲಂ-ಸೇನೆಯು, ನಲವಿಂದ-ಅಕ್ಕರೆಯಿಂದ, ಬೊಬ್ಬಿರಿದುದು-ಆರ್ಭಟವನ್ನು ಮಾಡಿತು, (ಕೋಲಾಹಲಧ್ವನಿಯನ್ನು ಮಾಡಿತು)

---

ನಡುಗಿ ಬಿಟ್ಟಿತು, ಮರಳಿಂದ ಮಿಶ್ರವಾದ ಸುಂಟರಗಾಳಿಯು ಬೀಸಲಾರಂಭಿಸಿತು, ಪಾರ್ಥಜನ ಕೂರ್ಗಣೆಯಿಂದೊಗೆದ ಜ್ವಾಲೆಯಾದರೊ ದಿಕ್ಕುಗಳನ್ನೆಲ್ಲಾ ಬೂದಿಮಾಡಿಕೊಂಡು ಬರುತ್ತಲಿತ್ತು ||೪೬|| ಅರ್ಜುನನು ಇದನ್ನು ಕೂಡ ಧ್ವಂಸಮಾಡಲು ಪ್ರತ್ಯಸ್ತ್ರಗಳನ್ನು ಬಿಟ್ಟನು. ಇವನ ಬಾಣಗಳು ಪಾರ್ಥಜನ ಕಣೆಗಳ ವೇಗವನ್ನು ತಡೆಯಲಾರದೆ ಹೋದುದರಿಂದ ಕೊನೆಗೆ ಪಾರ್ಥನಂದನನ ಕೂರಂಬು ಧನಂಜಯನ ಕೊರಳನ್ನು ಕತ್ತರಿಸಿಬಿಟ್ಟಿತು. ಕರ್ಣಕುಂಡಲಂಗಳಿಂದ ದೇದೀಪ್ಯಮಾನವಾಗಿಯೂ, ವೀರರಸ ಭರಿತಮಾಗಿಯೂ ಇರುವ ಮುಖದಿಂದ ವಿರಾಜಿಸತಕ್ಕ ಆ ತಲೆಯಾದರೊ, ಎಲೈ ಮಹಾನುಭಾವನಾದ ಕೃಷ್ಣಮೂರುತೀ! ಋಷಿಗಳಿಂದ ಸ್ತುತಿಸಿಕೊಳ್ಳತಕ್ಕ ಸಚ್ಚಿದಾನಂದ ಸ್ವರೂಪನೆ! ಕೇಶವಾ! ನಾರಾಯಣಾ! ಓ ಸ್ವಾಮಿ! ಎಂದು ಎಂದುಕೊಂಡು ವೃಷಕೇತುವಿನ ತಲೆ ಇದ್ದೆಡೆಗೆ ಬಂದು ಬಿದ್ದಿತು, ||೪೭|| ಕೂಡಲೆ ಅರ್ಜುನನ ತಲೆಯೂ ವೃಷಧ್ವಜನ ಶಿರಸ್ಸೂ ಒಂದನ್ನೊಂದು ಬೆರತುಕೊಂಡವು. ಪಾರ್ಥನ ಮುಂಡವು ಕರ್ಣ ಸುತನ ಮುಂಡವನ್ನು ಗಾಢಾಲಿಂಗನ ಮಾಡಿಕೊಂಡಿತು, ಇದನ್ನು ನೋಡಿದವರ ಮನವು ಕರಗಿ ಬಹುವಾಗಿ ವ್ಯಥೆಗೊಳ್ಳುತ್ತಲಿದ್ದಿತು ಅತ್ತ ಬಭ್ರುವಾಹನನ ಸೈನ್ಯದಲ್ಲುಂಟಾದ ಜಯಜಯಧ್ವನಿಯೂ ದುಂದುಭಿ ಮೊದಲಾದವುಗಳಿಂದೊಗೆದ ವಾದ್ಯಘೋಷವೂ, ಅಂತರಿಕ್ಷವನ್ನೆಲ್ಲಾ ವ್ಯಾಪಿಸಿ ದಿಕ್ಕುಗಳ ಕೊನೆಗಳೆಂಬ ಗೋಡೆಗಳನ್ನೂ ಕೂಡ ಮುಂದಮುಂದಕ್ಕೆ ನೂಕುತ್ತಲಿರುವುದೋ ಎಂಬಂತೆ ತೋರಿ ಬರುತ್ತಲಿದ್ದಿತು. ಸ್ತುತಿಪಾಠಕರಿಂದ ಹೊಗಳಿಸಿ

ಸಂದೋಹದಪೊಗಳ್ಕೆಯಿಂದ ‖ ೪೮ ‖ ತ್ರಿಜಗಂಮರುಗುವಂತೆಕಾರ್ತಿಕೈಕಾದಶೀ । ಕುಜವಾರದುತ್ತರಾನಕ್ಷತ್ರದಂದುವಾ । ರಿಜ
ಮಿತ್ರನಸ್ತಮಯಸಮಯದೊಳ್ಕೃಷ್ಣಯೆನುತರ್ಜುನನತಲೆಬೀಳಲು ‖ ವಿಜಯೋತ್ಸವದೊಳೈದಿದಂಬಭ್ರುವಾಹನಂ ।
ನಿಜಪುರಕೆಗುಡಿತೋರಣದೊಳೆಸೆಯೆಬಣ್ಣಿಸ । ಲ್ಪ್ರಜೆಗಳಂಗನೆಯರಾರತಿಪುಷ್ಪದಧಿಲಾಜೆದೂರ್ವೆಯೊಳಿದಿರ್ಗೊಳಲ್ಕೆ ‖ ೪೯ ‖
ಮಿಗೆಜಯೋತ್ಸವದಿಂದಪೌರಜನದೊಸಗೆಯಿಂ । ಬಗೆಬಗೆಯಸಿಂಗರದಪೆಣ್ಗಳಸೊಡರ್ಗಳಿಂ । ನಗರಪ್ರವೇಶಮಂಮಾಡಿದಂ
ಬಭ್ರುವಾಹನನಿತ್ತಲರಮನೆಯೊಳು ‖ ಸೊಗಸಿಂದುಲೂಪಿಸಹಿತಿರುತಿರ್ದಚಿತ್ರಾಂಗ । ದೆಗೆಬಂದುಸುದತಿಯರ್ದೇವಿನೀನೆಂ

---

ವಾದ್ಯಂಗಳು-ಭೇರಿ ಮೃದಂಗಾದಿಗಳು, ಐದೆ-ಚೆನ್ನಾಗಿ, ಮೊಳಗಿದವು-ದನಿಗೈಯ್ಯಲ್ಪಟ್ಟವು. ಅವಂ-ಪಾರ್ಥಸುತನು, ಆಹವದ ಕಾಳಗದ, ಗೆಲುವಿಂದ-ಗೆದ್ದಸಂತಸದಿಂದ, ವಂದಿ-ಹೊಗಳತಕ್ಕವರ, ಸಂದೋಹದ-ಸಮುದಾಯದ, ಪೊಗಳ್ಕೆಯಿಂದ-ಹೊಗಳುವಿಕೆಯಿಂದ, ಪುರಕೆ-ತನ್ನ ರಾಜಧಾನಿಯಾದ ಮಣಿಪುರಕ್ಕೆ, ತಿರುಗಿದಂ-ಹಿಂತಿರುಗಿದನು ‖೪೮‖

ಟೀ‖ ತ್ರಿಜಗಂ-ಸ್ವರ್ಗ ಮರ್ತ್ಯ ಪಾತಾಳದಲ್ಲಿರುವ ಸಕಲರೂ, ಮರುಗುವಂತೆ-ಸಂಕಟಪಡುವತೆರನಾಗಿ, ಕಾರ್ತಿಕ-ಕಾರ್ತಿಕವೆಂಬ ತಿಂಗಳಿನಲ್ಲಿ ಬರುವ, ಏಕಾದಶಿ-ಏಕಾದಶಿ ಎನ್ನುವ ತಿಥಿಯು, ಕುಜವಾರದ- ಮಂಗಳವಾರದ, ಉತ್ತರಾ ನಕ್ಷತ್ರದ-ಉತ್ತರಾ ಎನ್ನತಕ್ಕ ನಕ್ಷತ್ರದಿಂದನ್ವಿತವಾದ, ಅಂದು-ಆ ಕಾಲದಲ್ಲಿ, ವಾರಿಜಮಿತ್ರನ-ರವಿಯ, ಅಸ್ತಮಯ-ಮುಳಗತಕ್ಕ, ಸಮಯದೊಳ್-ವೇಳೆಯೊಳಗೆ, ಅರ್ಜುನನ-ಪಾರ್ಥನ, ತಲೆ-ಶಿರಸ್ಸು, ಕೃಷ್ಣ-ಕೃಷ್ಣಸ್ವಾಮಿಯೆ, ಎನುತ-ಎಂದು ನುಡಿಯುತ್ತ, ಬೀಳಲು-ಬಿದ್ದುಹೋಗಲು. ಬಭ್ರುವಾಹನನು-ಪಾರ್ಥಸುತನು, ಗುಡಿ-ಕಲ್ಯಾಣಮಂಟಪಂಗಳು, ತೋರಣದೊಳು-ಮಂಗಳಕರವಾದ ತೋರಣಗಳು ಇವುಗಳಿಂದ ಕೂಡಿ, ಎಸೆಯೆ-ಥಳಥಳಿಸಲು, ಪ್ರಜೆಗಳು-ನಗರವಾಸಿಗಳೆಲ್ಲರೂ, ಬಣ್ಣಿಸಲ್-ಹೊಗಳುತ್ತಿರಲು, ಅಂಗನೆಯರು-ಸ್ತ್ರೀಯರು, ಆರತಿ-ರಕ್ಷಾನಿಮಿತ್ತವಾದ ಕೆಂಪು ನೀರು, ಪುಷ್ಪ-ಹೂ, ದಧಿ-ಮೊಸರು, ಲಾಜೆ-ಭತ್ತದ ಅರಳು, ದೂರ್ವೆಯೊಳು-ಗರಿಕೆಯ ಹುಲ್ಲೇ ಮೊದಲಾದವುಗಳಿಂದ ಕೂಡಿ, ಇದಿರ್ಗೊಳಲ್ಕೆ-ಎದುರಾಗಿ ಬಂದು ಸೇರಲು, ನಿಜ-ಸ್ವಕೀಯವಾದ, ಪುರಕೆ-ರಾಜಧಾನಿಯಾದ ಮಣಿಪುರಿಗೆ, ವಿಜಯೋತ್ಸವದೊಳು-ತಾನು ಗೆದ್ದ ಸಂಭ್ರಮಾತಿಶಯದಿಂದ, ಐದಿದಂ-ಹೋಗಿ ಸೇರಿದನು.

ಅ‖ ವಿ‖ ತ್ರಿ-ಮೂರಾದ, ಜಗಂ-ಲೋಕವು (ದ್ವಿಗು. ಸ) ಕಾರ್ತಿಕೈಕಾದಶಿ (ವೃ. ಸಂಧಿ) ವಾರಿಜಮಿತ್ರನು-ವಾರಿ-ನೀರಿನಲ್ಲಿ, ಜ-ಹುಟ್ಟಿದ್ದು (ಕೃ. ವೃ) ವಾರಿಜ-ಕಮಲಗಳ, ಮಿತ್ರನು-ಸ್ನೇಹಿತನು (ಸೂರ್ಯನು ಷ. ತ) ವಿಜಯ+ಉತ್ಸವ= ವಿಜಯೋತ್ಸವ (ಗುಣಸಂಧಿ) ಬಣ್ಣಿಸಲ್ (ತ್ಭ) ವರ್ಣಿಸಲ್-(ತ್ಸ) ‖೪೯‖

ಟೀ‖ ಮಿಗೆ-ಅತ್ಯಧಿಕವಾದ, ಜಯೋತ್ಸವದಿಂದ-ಜಯಜಯ ಎಂದು ಕೂಗುವ ಆನಂದಸೂಚಕ ಧ್ವನಿಯಿಂದಲೂ, ಪೌರಜನದ-ನಗರ ವಾಸಿಗಳ, ಒಸಗೆಯಿಂ-ಶುಭಾಲಾಪಂಗಳಿಂದಲೂ, (ಮರ್ಯಾದಾವಸ್ತು ಸಹಿತವಾದ ಧ್ವನಿಗಳಿಂದಲೂ) ಬಗೆಬಗೆಯ-ತಂಡೋಪತಂಡವಾದ, ಸಿಂಗರ-ಅಲಂಕಾರಯುಕ್ತರಾದ, ಪೆಣ್ಗಳ-ನಾರಿಯರು ತಂದಿರುವ ಸೊಡರ್ಗಳಿಂ-ದೀಪ ಸಹಿತವಾದ ಆರತಿಗಳಿಂದಲೂ, ಬಭ್ರುವಾಹನನು-ಪಾರ್ಥಜನು, ನಗರ ಪ್ರವೇಶಮಂ-ಪಟ್ಟಣ ಪ್ರವೇಶವನ್ನು, ಮಾಡಿದಂ-ಗೈದನು, ಇತ್ತಲು-ಈ ಎಡೆಯಲ್ಲಿ, ಅರಮನೆಯೊಳು-ರಾಜಭವನದೊಳಗೆ, ಉಲೂಪಿಸಹಿತ-ಉಲೂಪಿಯೊಂದಿಗೆ, ಸೊಗಸಿಂದ-ಶೃಂಗಾರದಿಂದ, ಇರುತಿರ್ದ-ಇರುತ್ತಲಿರುವ, ಚಿತ್ರಾಂಗದೆಗೆ-ಚಿತ್ರಾಂಗದೆ ಎನ್ನುವ ಪಾರ್ಥನರಸಿಯ ಬಳಿಗೆ, ಸುದತಿಯರು-ನಾರಿಯರು,

---

ಕೊಳ್ಳುತ್ತಲಿರುವ ಪಾರ್ಥಜನು ಜಯಲಕ್ಷ್ಮಿಯನ್ನು ವರಿಸಿ, ಸಂತೋಷಾತಿಶಯವುಳ್ಳವನಾಗಿ, ಸಂಭ್ರಮದಿಂದ ಮೆರೆಯುತ್ತಾ ಪಟ್ಟಣದ ಕಡೆಗೆ ಹಿಂದಿರುಗಿದವನಾದನು ‖೪೮‖ ಪಾರ್ಥನು ಕಾರ್ತಿಕಮಾಸದ ಏಕಾದಶಿ ಮಂಗಳವಾರ ಉತ್ತರಾ ನಕ್ಷತ್ರದಲ್ಲಿ ಸೂರ್ಯಾಸ್ತಮಯದ ವೇಳೆಗೆ ಸರಿಯಾಗಿ ಕೃಷ್ಣಸ್ವಾಮಿಯನ್ನು ಧ್ಯಾನಮಾಡುತ್ತ, ಕತ್ತರಿಸಲ್ಪಟ್ಟ ತಲೆಯುಳ್ಳವನಾಗಿ ನೆಲದ ಮೇಲೆ ಬಿದ್ದು ಬಿಟ್ಟದ್ದನ್ನು ನೋಡಿ ತ್ರಿಲೋಕಂಗಳು ದುಃಖಸಾಗರದಲ್ಲಿ ಮುಳುಗಿ ಪಾರಗಾಣದೆ ಹೋದವು. ಪಾರ್ಥಜನು ಜಯ ಘೋಷದಿಂದ ತನ್ನ ಪಟ್ಟಣಕ್ಕೆ ಹಿಂದಿರುಗಲು, ಊರಬಾಗಿಲನ್ನೂ ರಾಜಬೀದಿಯನ್ನೂ ಅರಮನೆಯ ಮುಂಭಾಗವನ್ನೂ ಇನ್ನು ಇತರ ಸ್ಥಳಗಳನ್ನೂ ತೋರಣಗಳು, ಚಪ್ಪರಗಳು ಮೊದಲಾದವುಗಳಿಂದಲಂಕರಿಸಿದರು. ನಾರಿಯರು ತಮ್ಮ ಕರಪಲ್ಲವಂಗಳಲ್ಲಿ ಗಂಧ ಪುಷ್ಪ ದೂರ್ವಾಕ್ಷತಾದಿಗಳಿಂದಲೂ, ಆರತಿಗಳಿಂದಲೂ ಕೂಡಿ ಜಯೋತ್ಸವದಿಂದ ಮೆರೆಯುತ್ತ ರಾಜಧಾನಿಗೆ ಬರುತ್ತಲಿರುವ ರಾಯನಿಗೆದುರಾದರು. ‖೪೯‖ ಈ ರೀತಿಯಲ್ಲಿ ಆತ್ಯುತ್ಸವದಿಂದ ಬರುತ್ತಲಿರುವುದನ್ನು ನೋಡಿದ ನಾರಿಯರನೇಕರು ತಡಮಾಡದೆ ಅಂತಃಪುರದಲ್ಲಿದ್ದ ಬಭ್ರುವಾಹನನ ಮಾತೆಯಾದ ಚಿತ್ರಾಂಗದೆಯನ್ನು ಕುರಿತು, ಅಮ್ಮಾ ಚಿತ್ರಾಂಗದೆ! ನಿನ್ನ ಭಾಗ್ಯಕ್ಕೆ ಎಣೆಯೇ ಇಲ್ಲವು! ಪರಾಕ್ರಮಿಯಾದ ಅರ್ಜುನನನ್ನು ನಿನ್ನ ಮಗನು ಕೊಂದು ಜಯೋತ್ಸವದಿಂದ ಬರುತ್ತಲಿರುವನು.

ನೋಂತು | ಮಗನಂಪಡೆದೆಯೋನರನಂಕೊಂದುಬರ್ಪನಾರತಿಗಳಂತರಿಸೆಂದರು ||೫೦|| ಮಾನಿನಿಯರಿಂತಾಗಚಿತ್ರಾಂಗದೆಗೆ ನಿನ್ನ | ಸೂನುಕಲಿಪಾರ್ಥನಂಸಮರದೊಳ್ಕೊಂದುಸು | ಮ್ಮಾನದಿಂದೈತಪ್ಪನೆಂದುಪೊಗಳಲ್ಕೇಳಿಹಂಮ್ಮೈಸಿಬಿದ್ದಿಳೆಯೊಳು || ಹಾನಾಥಕೆಟ್ಟೆನಕಟೆಂದುಕಂಬನಿಯೊಳಾ | ಳ್ದಾನಾರಿದುಃಖಾರ್ತೆಯಾಗಲಂತಃಪುರದ | ಮೀನಾಕ್ಷಿಯರ್ ಕೂಡೆರೋದಿಸಲ್ಪೆಚ್ಚಿತು ವಿಷಾದರಾವಮರಮನೆಯೊಳು || ೫೧ || ರಾಜಾಲಯದ್ವಾರದೊಳ್ತೇರನಿಳಿದುನೀ | ರಾಜನಾದಿಗಳಿಂದಿದಿರ್ಗೊಂಬಸಂಭ್ರಮದ | ರಾಜವದನೆಯರೊಡನೆಚಿತ್ರಾಂಗದೆಯುಶೋಕದಿಂದಲಾರ್ತೆಯಳಾಗಿರೆ || ಈಜಯೋತ್ಸವದೊಳಿಂತೀವಿಷಾದಧ್ವನಿವ |

---

ಬಂದು-ಐತಂದು, ದೇವಿ-ಎಲಾ ಮಾತೆಯಾದ ಚಿತ್ರಾಂಗದೆಯೇ, ನೀಂ – ನೀನಾದರೊ, ಏಂ-ಯಾವ ಉತ್ತಮೋತ್ತಮವಾದ ವ್ರತವನ್ನು, ನೋಂತು-ನೆರವೇರಿಸಿ, ಮಗನಂ-ಕುವರನಾದ ಬಭ್ರುವಾಹನನ್ನು, ಪಡೆದೆಯೊ-ಹೆತ್ತೆಯೊ, ನರನಂ-ಪಾರ್ಥನನ್ನು, ಕೊಂದು-ಕೊಂದುಹಾಕಿ, ಬರ್ಪನು-ಐತರುತಲಿರುವನು, ಆರತಿಗಳನು-ವಿಜಯಕ್ಕಾಗಿ ಸಂತೋಷಸೂಚಕವಾದ ಆರತಿಗಳನ್ನು, ತರಸು-ತರಬೇಕೆಂದು ಹೇಳುವಳಾಗು, ಎಂದರು-ಎಂದು ನುಡಿದರು.

ಅ|| ವಿ|| ಜಯೋತ್ಸವ (ಗುಣಸಂಧಿ) ಸುದತಿಯರ್-ಸು-ಒಳ್ಳೆಯದಾದ, ದತಿಯರ್ – ದಂತಗಳುಳ್ಳವರು ಯಾರೊ ಅವರು (ಬ. ಸ.) ||೫೦||

ಟೀ|| ಆಗ – ಪಾರ್ಥಜನು ಅರ್ಜುನನನ್ನು ಗೆದ್ದು ವಿಜಯೋತ್ಸವದಿಂದ ಪುರಪ್ರವೇಶಮಂ ಮಾಡುತ್ತಲಿರುವಾಗ, ಚಿತ್ರಾಂಗದೆಗೆ-ಚಿತ್ರಾಂಗದೆಯನ್ನು ನೋಡಿ, ಮಾನಿನಿಯರು-ಸ್ತ್ರೀಯರು, ನಿಜ-ನಿನ್ನ, ಸೂನು-ಕುವರನಾದ ಬಭ್ರುವಾಹನನು, ಸಮರದೊಳ್-ರಣದಲ್ಲಿ, ಕಲಿಪಾರ್ಥನಂ-ಶೂರನಾದ ಅರ್ಜುನನ್ನು, ಕೊಂದು-ಕೊಂದುಹಾಕಿ, ಸುಮ್ಮಾನದಿಂದ-ಆನಂದದಿಂದ, ಐತಪ್ಪನು-ಬರುತ್ತಾನೆ, ಎಂದು-ಎಂಬತೆರನಾಗಿ, ಪೊಗಳಲ್-ನುತಿಸಲು, ಕೇಳಿ-ಈ ವಾರ್ತೆಯನ್ನಾಲಿಸಿ, ಹಮ್ಮೈಸಿ-ಮೈಮರೆತು, ಇಳೆಯೊಳು-ಭೂಮಿಯಮೇಲೆ, ಬಿದ್ದು-ಬಿದ್ದುಹೋಗಿ, ಹಾ-ಅಯ್ಯೋ, ನಾಥ-ಒಡೆಯನೆ, ಅಕಟ-ಆಹಾ, ಕೆಟ್ಟೆನು-ಭ್ರಷ್ಟಳಾದೆನು, ಎಂದು – ಎಂಬುದಾಗಿ, ಕಂಬನಿಯೊಳು – ನೇತ್ರೋದಕದಿಂದ, ಆಳ್ದ – ಮಗ್ನಳಾದ, ಆನಾರಿ-ಆ ಚಿತ್ರಾಂಗದೆಯೆಂಬ ಅರ್ಜುನನ ಹೆಂಡತಿಯು, ದುಃಖ-ವ್ಯಸನದಿಂದ, ಆರ್ತೆಯು-ಖಿನ್ನಳಾದವಳು, ಆಗಲು-ಆಗಲಾಗಿ, ಅಂತಃಪುರದ-ರಾಣಿವಾಸದ, ಮೀನಾಕ್ಷಿಯರು-ನಾರಿಯರು, ಕೂಡೆ-ಒಡನೆಯೆ, ರೋದಿಸಲ್-ಗೋಳಾಡಲುದ್ಯುಕ್ತರಾಗಲು, ವಿಷಾದಂ-ದುಃಖವು, ಅರಮನೆಯೊಳು-ರಾಜಭವನದೊಳಗೆ, ಹೆಚ್ಚಿತು-ಬಹಳವಾಯಿತು.

ಅ|| ವಿ|| ಕಂಬನಿ-ಕಣ್ಣಿನ ಪನಿ (ಷ. ತ.) ದುಃಖಾರ್ತೆ (ಸ. ದೀ.) ಮೀನಾಕ್ಷಿಯರು-ಮೀನ-ಮೀನಿನಹಾಗೆ ಚಪಲ ನೇತ್ರದಿಂದೊಡಗೂಡಿದವರು, (ಬ. ಸ.) ||೫೧||

ಟೀ|| ರಾಜಾಲಯ-ರಾಜಮಂದಿರದ, ದ್ವಾರದೊಳ್-ಬಾಗಿಲಬಳಿಯೊಳಗೆ, ತೇರನು-ಸ್ಯಂದನವನ್ನು, ಇಳಿದು-ಇಳಿದುಬಿಟ್ಟು, ನೀರಾಜನಾದಿಗಳಿಂದ-ಆರತಿಯೇ ಮೊದಲಾದವುಗಳಿಂದ, ಇದಿರ್ಗೊಂಬ-ಎದುರಾಗಿ ಬರುವ, ಸಂಭ್ರಮದ-ಆನಂದದಿಂದೊಡಗೂಡಿದ, ರಾಜವದನೆಯರು-ಅರಸುಗುವರಿಯರ, ಒಡನೆ-ಜೊತೆಯಲ್ಲಿ, ಚಿತ್ರಾಂಗದೆಯು-ಚಿತ್ರಾಂಗದೆ ಎಂಬ ನಾರಿಯು, ಶೋಕದಿಂದ-ವ್ಯಸನದಿಂದ, ಆರ್ತೆಯಳಾಗಿ-ಖಿನ್ನಳಾಗಿ, ಇರೆ-ಇರಲು, ಈ ಜಯೋತ್ಸವದೊಳು-ಈ ವಿಜಯಸಂಭ್ರಮದೊಳಗೆ, ವಧೂಜನಕೆ-ನಾರೀಮಣಿಗಳಿಗೆ, ವಿಷಾದಧ್ವನಿ – ದುಃಖಮಯವಾದ ರೋದನಧ್ವನಿಯು, ಇಂತು – ಈ ಪ್ರಕಾರವಾಗಿ, ಏಕೆ-ಏತಕ್ಕುಂಟಾಯಿತು, ಎಂದು-ಎಂಬುದಾಗಿ, ಎನುತ-ಎಂದು ನುಡಿಯುತ್ತ, ಅಂತಃಪುರವನು-ನಾರಿಯರು ತುಂಬಿರುವೆಡೆಯನ್ನು, ಪೊಕ್ಕನು-ಪ್ರವೇಶಮಾಡಿದನು, ಸುತನು-ಚಿತ್ರಾಂಗದೆಯಮಗನಾದರೊ, ಆಜನನಿಯ-ತನ್ನಮಾತೆಯ, ಇರವಂ-ಸ್ಥಿತಿಯನ್ನು, ಕಂಡು-ಈಕ್ಷಿಸಿ, ಬೆರಗಾಗಿ-ಅಚ್ಚರಿಗೊಂಡು, ಇಂತು-ಮುಂದೆ ಹೇಳುವಂತೆ, ಎಂದನು-ನುಡಿದವನಾದನು.

---

ಇಂತಹ ಮಗನು ನಿನಗೆ ಉಂಟಾಗಲು ಪೂರ್ವಾರ್ಜಿತಪುಣ್ಯವೇ ಹೊರತು ಮತ್ತೆ ಬೇರೆಯಿಲ್ಲವು. ಆದ್ದರಿಂದ ಆರತಿಗಳನ್ನು ಮಾಡಿಕೊಂಡು ಜಯಶೀಲನಾಗಿ ಬರುತ್ತಿರುವ ನಿನ್ನ ಮಗನನ್ನು ಎದುರ್ಗೊಳ್ಳುವಳಾಗೆಂದರು. ||೫೦|| ಈ ತೆರನಾದ ಸುದ್ದಿಯು ಚಿತ್ರಾಂಗದೆಯ ಕಿವಿಯ ಬಳಿಗೆ ಹೋದಮಾತ್ರಕ್ಕೆ ಕಾಸಿದ ಕಬ್ಬಿಣದ ಸಲಾಕಿಯನ್ನು ಕಿವಿಯೊಳಗಿಟ್ಟಂತಾಗಲು, ಮೈಮರೆತು ಧೊಪ್ಪನೆ ಕೆಳಗೆ ಬಿದ್ದುಹೋಗಿ, ಅಯ್ಯೋ ನಾಥ, ಕೆಟ್ಟೆನಲ್ಲಾ ! ಮುಂದೇನುಗತಿಯೆಂದು ಗೋಳಾಡಲಾರಂಭಿಸಿದಳು. ಅಲ್ಲಿದ್ದ ನಾರಿಯರೆಲ್ಲರೂ ಚಿತ್ರಾಂಗದೆಯ ದುಃಖವನ್ನು ನೋಡಿ ತಾವೂ ಶೋಕಸಮುದ್ರದಲ್ಲಿ ಮಗ್ನರಾದರು. ಅರಮನೆಯ ಒಳಗೆಲ್ಲಾ ಎಲ್ಲಿ ನೋಡಿದರೂ ವ್ಯಸನಮಯವಾಯಿತು. ||೫೧|| ಇಂತಹ ರಾಜಭವನವನ್ನು ಬಭ್ರುವಾಹನನು ಪ್ರವೇಶಮಾಡಿ, ಆರತಿ ಅಕ್ಷತಾದಿಗಳಿಂದ ಸಂತೋಷಪಡಬೇಕಾದ ಕಾಲದಲ್ಲಿ ನಾರಿಯರೆಲ್ಲರೂ ಚಿತ್ರಾಂಗದೆಯೊಂದಿಗೆ ದುಃಖಿಸುತ್ತಲಿರುವುದನ್ನು ಕಂಡು

ಧೂಜನಕಿದೇಕೆನುತಪೊಕ್ಕನಂತಃಪುರವ | ನಾಜನನಿಯುಂಗದಿರವಂಕಂಡುಬೆರಗಾಗಿಪಾರ್ಥಸುತನಿಂತೆಂದನು ||೫೨|| ಅಪಜಯಂ ತನಗಾದುದಿಲ್ಲಸಂಗ್ರಾಮದೋ | ಳ್ವಿಪರೀತಮೇತಕಿಂತಾನಂದಕಾಲದೊ | ಳ್ಕುಪಿತಮುಖನಾಗಿತನ್ನಂಜರೆದೊಡರ್ಜುನನ ಶಿರವನರಿದೆಂಘುಂದೊಳು || ರಿಪುಭಯಂಕರಕರ್ಣತನಯಂಗೆಸಂಗರದೊ | ಳುಪಹತಿಯನಿತ್ತೆಂಪ್ರಯಾಸದಿಂದಿದಕೆನೀಂ | ತಪಿಸ ಲೇಕೆಂದುಕಣ್ಣೀರ್ದೊಡೆದುಮಾತೆಯಂಸಂತೈಸಲಿಂತೆಂದಳು || ೫೩ || ಲೇಸಮಾಡಿದೆಮಗನೆಪಗೆಯಾದನೇನರಂವಾಸಿಬಂದುದೆ ನಿನಗೆಮತ್ಕಾಂತನಳಿದನೇ| ವಾಸವನಸೂನುಮೃತನಾದನೇಧರ್ಮಾನುಜಂಪ್ರಾಣವಂತೊರೆದನೇ || ವಾಸುದೇವನಸಖಂಮಡಿದನೇ ನಿನ್ನಂದ| ದಾಸುರಪರಾಕ್ರಮದೊಳಾತ್ಮಪಿತೃಘಾತಿಯಂ| ಹೇಸದೆಸಗಿದರುಂಟೆಸುಡಲಿಸುತರೇಕೆಂದಳಳ್ಲಳಾಚಿತ್ರಾಂಗದೆ ||೫೪|| ಈಕಂಠಸೂತ್ರಮಿಾಕರ್ಣತಾಟಂಕಮಿಾ | ಶ್ರೀಕರಂನಿಜಜನನಿಗೇಕೆಂದುಬಿಡಿಸಿದ್ಯೆ | ಸಾಕಿನ್ನುಮಗಮೊಮ್ಮರಳಿದುದಂಕೇ

ಅ|| ವಿ|| ರಾಜಾಲಯ (ಸ. ದಿ.) ಜಯೋತ್ಸವ (ಗು. ಸಂ.) ಧ್ವನಿ (ತ್ಸ) ದನಿ (ದ್ಭ) ಪಾರ್ಥಸುತನು (ಷ ತ.) ||೫೨||

ಟೀ|| ಸಂಗ್ರಾಮದೊಳ್-ಕಾಳಗದಲ್ಲಿ, ತನಗೆ-ನಿನ್ನ ಮಗನಾದ ನನಿಗೆ, ಅಪಜಯಂ-ಪರಾಭವವು, ಆದುದಿಲ್ಲ-ಆಗಿಲ್ಲವು. ಇಂತು-ಈ ಪರಿಯಾದ, ವಿಪರೀತಂ-ಸಂಕಟವು, ಆನಂದಕಾಲದೊಳ್-ಸಂತೋಷಪಡಬೇಕಾದ ವೇಳೆಯೊಳಗೆ, ಏತಕೆ-ಯಾವ ಕಾರಣದಿಂದುಂಟಾಗಿರುವುದು, ತನ್ನಂ-ನನ್ನನ್ನು, ಜರೆದೊಡೆ-ಹೀಯಾಳಿಸಲಾಗಿ, ಕುಪಿತ-ಕೋಪಗ್ರಸ್ತವಾದ, ಮುಖದೊಳ್-ಮೋರೆಯಿಂದ ಕೂಡಿ, ಅರ್ಜುನನ-ಪಾರ್ಥನ, ಶಿರವನು-ತಲೆಯನ್ನು, ಅರಿದೆಂ-ಕತ್ತರಿಸಿ ಹಾಕಿದೆನು, ಸಂಗರದೊಳ್-ರಣರಂಗದಲ್ಲಿ, ರಿಪುಭಯಂಕರಕರ್ಣತನಯಂಗೆ - ರಿಪು-ವೈರಿಗಳಿಗೆ, ಭಯಂಕರ-ಹೆದರಿಕೆಯನ್ನುಂಟುಮಾಡುವ, ಕರ್ಣತನಯಂಗೆ-ಕರ್ಣಸುತನಿಗೆ, ಪ್ರಯಾಸದಿಂದ-ಕಷ್ಟದಿಂದ, ಉಪಹತಿಯನು-ಬಾಧೆಯನ್ನು, ಇತ್ತೆಂ-ಉಂಟುಮಾಡಿದೆನು, ನೀಂ-ನೀನಾದರೊ, ಅದಕೆ-ಹಾಗೆ ಮಾಡಿದ್ದಕ್ಕೆ, ತಪಿಸಲು - ಸಂಕಟಪಡುವುದು, ಏಕೆ-ಏನು ಪ್ರಯೋಜನ, ಎಂದು - ಎಂಬದಾಗಿ, ಕಣ್ಣೀರ್ - ನೇತ್ರೋದಕವನ್ನೆಲ್ಲಾ, ತೊಡೆದು - ಒರಸಿಬಿಟ್ಟು, ಮಾತೆಯಂ - ಜನನಿಯಾದ ಚಿತ್ರಾಂಗದೆಯನ್ನು, ಸಂತೈಸಲು - ಶಾಂತವಾದ ನುಡಿಗಳಿಂದ ದುಃಖವನ್ನು ಕಡಮೆಮಾಡಲು, ಇಂತು - ಹೀಗೆ, ಚಿತ್ರಾಂಗದೆಯು, ಎಂದಳು - ನುಡಿಯಲಾರಂಭಿಸಿದಳು. ||೫೩||

ಟೀ|| ಮಗನೆ-ಎಲೈ ಕುವರನೆ, ಲೇಸ-ಮೇಲಾದ ಕಾರ್ಯವನ್ನೆ, ಮಾಡಿದೆ-ಎಸಗಿದೆ, ನರಂ-ಪಾರ್ಥನು, ಪಗೆಯಾದನೆ-ವೈರಿಯಾಗಿ ಬಿಟ್ಟನೆ, ನಿನಗೆ - ನಿನಿಗಾದರೊ, ವಾಸಿ - ಕೀರ್ತಿಯು, ಬಂದುದೆ - ಒದಗಿತೆ, ಮತ್ಕಾಂತನು - ನನ್ನ ರಮಣನು, ಅಳಿದನೆ-ಸತ್ತುಬಿಟ್ಟನೆ, ವಾಸವನ-ಶಚೀಪತಿಯ, ಸೂನು - ಕುವರನು, ಮೃತನಾದನೆ - ಯಮಲೋಕಕ್ಕೆ ಹೋಗಿ ಸೇರಿದನೆ, ಧರ್ಮಾನುಜಂ-ಧರ್ಮರಾಯನ ಸಹೋದರನು, ಪ್ರಾಣಮಂ-ಹರಣವನ್ನು, ತೊರೆದನೆ-ಹೋಗಲಾಡಿಸಿಕೊಂಡನೆ, ವಾಸುದೇವನ-ವಸುದೇವನ ಮಗನಾದ ಕೃಷ್ಣಪರಮಾತ್ಮನ, ಸಖಂ-ಸ್ನೇಹಿತನಾದ ಪಾರ್ಥನು, ಮಡಿದನೆ-ಮರಣವನ್ನೈದಿದನೆ, ಅಸುರ-ರಕ್ಕಸರಂತಹ, ಪರಾಕ್ರಮದೊಳು-ಶೌರ್ಯದಿಂದ, ನಿನ್ನಂದದ-ನಿನ್ನನ್ನು ಹೋಲುವ, ಪಿತೃಘಾತಿಯಂ-ಪಿತೃಹತ್ಯವನ್ನು, ಹೇಸದೆ-ಕಳಂಕವಿಲ್ಲದೆ, ಎಸಗಿದರು-ಮಾಡಿರತಕ್ಕವರು, ಉಂಟೆ-ಇದ್ದಾರೆಯೆ, ಸುತರು-ಕುವರರು, ಏಕೆ-ಇದ್ದು ಫಲವೇನು, ಸುಡಲಿ-ಭಸ್ಮವಾಗಲಿ, ಎಂದು-ಎಂಬುದಾಗಿ, ಆಚಿತ್ರಾಂಗದೆ-ಬಭ್ರುವಾಹನನ ತಾಯಿಯು, ಅಳಲ್ಗಳು-ದುಃಖಪಟ್ಟಳು. ||೫೪||

ಟೀ|| ನಿಜ - ನಿನ್ನ, ಜನನಿಗೆ - ಮಾತೆಗೆ, ಈಕಂಠಸೂತ್ರಂ - ಈ ತಾಳಿಯು, (ಮಾಂಗಲ್ಯವು), ಈ ಕರ್ಣತಾಟಂ

ಇದೇನು ? ಈ ವಿಜಯೋತ್ಸವದಲ್ಲಿ ಇವರಿಗೆ ಈ ಮಹಾವ್ಯಸನಕ್ಕೆ ಕಾರಣವೇನು ? ಒಳ್ಳೇದು, ಹೋಗಿ ವಿಚಾರಿಸುವೆನೆಂದು ತನ್ನ ತಾಯಿಯ ಬಳಿಯನ್ನು ಸೇರಿ, ||೫೨|| ಎಲೌ ತಾಯಿಯೆ, ನಾನು ಯುದ್ಧದಲ್ಲಿ ಸೋತು ಹೋದವನೆಂದು ತಿಳಿಯಬೇಡ ನನ್ನನ್ನು ಜರೆದು ನನ್ನ ತಾಯಿಯಾದ ನಿನ್ನನ್ನೂ ಕೂಡ ಪತಿವ್ರತೆಯಲ್ಲವೆಂದು ಹೀಯಾಳಿಸಿದ ಅರ್ಜುನನ ತಲೆಯನ್ನು ಚೆಂಡಾಡಿ ಬಂದೆನು. ಮತ್ತು ರಣಪಂಡಿತನೂ ಅಸಹಾಯಶೂರನೂ ಆದ ಕರ್ಣಸುತನನ್ನು ಯಮನ ಬಾಯಿಗೆ ತುತ್ತಾಗುವಂತೆ ಮಾಡಿರುವೆನು, ಇಂತಹ ಪರಾಕ್ರಮಿಯಾದ ನನ್ನನ್ನು ಕರುಣೆಯಿಂದ ನೋಡಿ ನಿನ್ನ ದುಃಖವನ್ನು ಹೋಗಲಾಡಿಸೆಂದು ನುಡಿದು ಚಿತ್ರಾಂಗದೆಯ ಕಣ್ಣುಗಳಿಂದ ಹೊರಡುತ್ತಲಿರುವ ಕಂಬನಿಗಳನ್ನು ಒರಸಿದನು. ಆಗ ಚಿತ್ರಾಂಗದೆಯು ಮಗನನ್ನು ನೋಡಿ||೫೩|| ಅಯ್ಯೋ ಮಗನೆ, ನೀನು ಒಳ್ಳೆಯ ಕೆಲಸವನ್ನು ಮಾಡಿದೆ. ನಿಮ್ಮ ತಂದೆಯು ನಿನಿಗೆ ಶತ್ರುವಾದನೆ ? ಈಗ ನಿನಿಗೆ ಸಂತೋಷವಾಯಿತೆ, ನನ್ನ ಪತಿಯು ಪರಲೋಕಯಾತ್ರೆಯಂ ಮಾಡಿದನೆ? ಇಂದ್ರನ ಮಗನೂ, ಯುಧಿಷ್ಠಿರನ ತಮ್ಮನೂ, ಕೃಷ್ಣಸ್ವಾಮಿಯ ಪರಮಾಪ್ತನೂ ಆದ ನನ್ನ ಗಂಡನನ್ನು ರಾಕ್ಷಸ ಕೃತ್ಯದಿಂದ ಪಿತೃಹತ್ಯಕ್ಕೂ ಹೇಸದೆ ಕೊಂದು ಬಿಟ್ಟೆಯಲ್ಲ. ಲೋಕದಲ್ಲಿ ನಿನ್ನಂತಹ ಮಕ್ಕಳನ್ನು ಪಡೆಯುವದಕ್ಕಿಂತಲೂ ನಾನು ಬಂಜೆಯಾಗಿದ್ದರೆ ಬಲು ಚೆನ್ನಾಗಿತ್ತು. ||೫೪|| ನನ್ನ ಕತ್ತಿನಲ್ಲಿರುವ ಮಾಂಗಲ್ಯವೂ, ಕಿವಿ

ಳ್ದಿಂತುಸೈರಿಪಳೊಕುಂತಿದೇವಿ । ಭೂಕಾಂತನೇಗೈದಪನೊಧರ್ಮರಾಜನವಿ । ವೇಕದಿಂಬಾಳುಗೆಡಿಸಿದೆಯೆಂದುತನಯನಂ । ಶೋಕದಿಂಮಿಗೆಬೈದಳಳ್ಳ್ವಚಿತ್ರಾಂಗದೆಗುಲೂಪಿಬಳಿಕಿಂತೆಂದಳು ‖ ೫೫ ‖ ದೇವಿನಿಲ್ಲಿನ್ನುಮರ್ಜುನನಮೃತಿಸಂಶಯಂ । ಭಾವಿಸುವಡೊಂದು ಕುರುಪುಂಟದಂತನ್ನಕೇ । ಳೀವನದೊಳಂದುಪಾರ್ಥಂತನಗೆತೋರಿದಂದಾಡಿಮದ್ರುಮಮೈದನು ‖ ಆವದಿನಕೊಣಗುಮೀತರುಗಳಾದಿನಕೆನ್ನ । ಜೀವಕಳಿವಹುದೆಂದುತಾನದಂನೋಡಿಬಹೆ । ನೀವಿಷಾದಂಬೇಡಸೈರಿಸೆನೆಕಳುಹಿದಳುಲೂಪಿಯಂ ಚಿತ್ರಾಂಗದೆ ‖೫೬‖ ಕ್ರೀಡಾವನಕೆಪೋಗಿನಿಮಿಷದೊಳಹೀಂದ್ರಸುತೆ । ನೋಡಿ ಬಂದಲ್ಲಿಯದವಾಗ್ನಿಯಿಂದಾಪಂಚ । ದಾಡಿಮದ್ರುಮಮೊಣಗಿತರ್ಜುನನಮೃತಿದಿಟಂನಡೆಪೋಪೆನಲ್ಲಿಗೆಂದು ‖ ಪೀಡಿಸುವಶೋಕದಿಂಚಿತ್ರಾಂಗದೆಗೆನುಡಿಯೆ । ಕೂಡೆಪೊರ

ಕಂ-ಕಿವಿಯುವಾಲೆಯು, ಈ ಶ್ರೀಕರಂ-ಸೌಮಂಗಲ್ಯವು, ಏಕೆ-ಏತಕ್ಕಿರಬೇಕು, ಎಂದು-ಎಂಬುದಾಗಿ, ಬಿಡಿಸಿದೈ-ಹೋಗಲಾಡಿಸಿದೆಯಯ್ಯಾ, ಸಾಕು-ಯುದ್ಧದಲ್ಲಿ ಗೆದ್ದುಬಂದೆನೆಂದು ಸಂತೋಷಿಸುತ್ತಾ ಪಿತೃಹತ್ಯಕ್ಕೆ ಗುರಿಯಾಗಿರುವ ನಿನ್ನಮಾತಸ್ನು ನಿಲ್ಲಿಸು, ಮಗನೊನ್ನುಗರು-ಅರ್ಜುನ ವೃಷಕೇತುಗಳು, ಅಳಿದುದಂ-ಮರಣವನ್ನೈದಿದ್ದನ್ನು, ಕೇಳಿ-ಆಲಿಸಿ, ಕುಂತಿ - ಕುಂತೀದೆವಿಯು, ಎಂತು-ಹೇಗೆ, ಸೈರಿಪಳೊ-ತಡೆದುಕೊಳ್ಳುವಳೊ, ಭೂಕಾಂತನು-ರಾಜೇಂದ್ರನಾದ, ಧರ್ಮರಾಜನು-ಧರ್ಮತನಯನು, ಏಗೈದಪನೊ-ಏನುಮಾಡುತ್ತಾನೊ, ಅವಿವೇಕದಿಂ-ಮೂಢಬುದ್ಧಿಯಿಂದ, ಬಾಳುಗೆಡಿಸಿದೆ-ಅಶುಭವನ್ನುಂಟುಮಾಡಿದೆ, ಎಂದು-ಎಂಬತೆರನಾಗಿ, ತನಯನಂ-ಕುವರನನ್ನು, ಮಿಗೆ-ಬಹುವಾಗಿ, ಬೈದು-ನಿಂದಿಸಿ, ಅಳಲ್ವ-ಸಂಕಟಪಡುತ್ತಲಿರುವ, ಚಿತ್ರಾಂಗದೆಗೆ-ಚಿತ್ರಾಂಗದೆಯನ್ನುಕುರಿತು, ಉಲೂಪಿ-ಉಲೂಪಿಯು, ಇಂತು-ಮುಂದೆ ಹೇಳುವಂತೆ, ಎಂದಳು-ನುಡಿದವಳಾದಳು‖೫೫‖

ಟೀ‖ ದೇವಿ-ಅಮ್ಮಾ ಚಿತ್ರಾಂಗದೇ ! ನಿಲ್-ವ್ಯಸನವನ್ನು ಸಹಿಸಿಕೊ, ಅರ್ಜುನನ-ಪಾರ್ಥನ, ಮೃತಿ-ಮರಣವು, ಇನ್ನುಂ-ಇನ್ನೂ, ಸಂಶಯಂ-ಅನುಮಾನವಾಗಿದೆ, ಭಾವಿಸುವಡೆ-ಯೋಚಿಸಿ ನಿಜಸ್ಥಿತಿಯನ್ನರಿಯಲು, ಒಂದುಕುರುಹು-ಒಂದು ಗುರುತು, ಉಂಟು-ಇರುವುದು, ಪಾರ್ಥಂ-ಅರ್ಜುನನು, ಅಂದು-ಪೂರ್ವದಲ್ಲಿ, ಕೇಳೀವನದೊಳು-ಕ್ರೀಡಾವನದಲ್ಲಿ, ತನಗೆ-ನನಗೆ, ಆಗುರುತು-ಆ ಗುರುತನ್ನೂ, ಐದನು-ಐದಾದ, ದಾಡಿಮದ್ರುಮವನು-ದಾಳಿಂಬೆ ಮರಗಳನ್ನು, ಈ ತರುಗಳು-ಈ ದಾಡಿಮೀವೃಕ್ಷಂಗಳು, ಆವದಿನಕೆ-ಯಾವ ಕಾಲಕ್ಕೆ, ಒಣಗುಂ-ಒಣಗಿ ಬಿಡುವುವೊ, ಆದಿನಕೆ-ಆ ವೇಳೆಗೆ, ಎನ್ನ-ನನ್ನದಾದ, ಜೀವಕೆ-ಹರಣಕ್ಕೆ, ಅಳಿವು-ಭಂಗವು, ಅಹುದು-ಆಗುವುದು, ಎಂದು-ಎಂಬದಾಗಿ, ತೋರಿದಂ-ತೋರಿಸಿದನು, ತಾನು-ನಾನಾದರೊ, ಆದನು-ಆ ಮರಗಳನ್ನು, ನೋಡಿಬಹೆನು-ನೋಡಿ ಬರುತ್ತೇನೆ, ಈ ವಿಷಾದಂ-ಈ ಮಹಾ ವ್ಯಸನವು, ಬೇಡ-ಕೂಡದು, ಸೈರಿಸು-ಶಾಂತಳಾಗು, ಎನೆ-ಎಂದು ನುಡಿಯಲು, ಚಿತ್ರಾಂಗದೆ-ಬಭ್ರುವಾಹನನ ಜನನಿಯು, ಉಲೂಪಿಯಂ- ಉಲೂಪಿಯನ್ನು, ಕಳುಹಿದಳು-ಕಳುಹಿಸಿ ಕೊಟ್ಟವಳಾದಳು ‖ ೫೬ ‖

ಟೀ‖ ನಿಮಿಷದೊಳ್-ಸ್ವಲ್ಪ ಕಾಲದಲ್ಲಿಯೇ, ಅಹೀಂದ್ರಸುತೆ-ಉಲೂಪಿಯು, ಕ್ರೀಡಾವನಕೆ-ವಿಹಾರಕ್ಕೆ ಅನುಕೂಲವಾದ ಕೇಳೀವನಕ್ಕೆ, ಪೋಗಿ-ಹೋಗಿ, ನೋಡಿಬಂದು-ನೋಡಿ ಬಂದವಳಾಗಿ, ಅಲ್ಲಿಯ-ಅಲ್ಲಿರುವ, ಪಂಚ-ಐದಾದ, ದಾಡಿಮದ್ರುಮಂ-ದಾಡಿಮೀ ವೃಕ್ಷಂಗಳು, ದವಾಗ್ನಿಯಿಂದ-ಕಾಳ್ಗಿಚ್ಚಿನಿಂದ, ಒಣಗಿತು-ಒಣಗಿ ಹೋಯಿತು, ಅರ್ಜುನನ-ಪಾರ್ಥ

ಯಲ್ಲಿರುವ ವಾಲೆಯೂ ಈ ಮುತ್ತೈದೆ ತನವೂ ನನಿಗಿರುವುದು ನಿನಗೆ ಸಹಿಸದೆ ಹೋಯಿತೆ? ಅರ್ಜುನ ವೃಷಕೇತುಗಳು ಅಳಿದ ಸುದ್ದಿಯನ್ನು ಕೇಳಿದರೆ ಕುಂತಿಯೂ, ಯುಧಿಷ್ಠಿರಾದಿಗಳೂ ಪ್ರಾಣವನ್ನಿಟ್ಟುಕೊಂಡಿರುವರೇ? ಪಾಂಡವರ ವಂಶವೃಕ್ಷದ ಬೇರನ್ನು ಕಡಿಯಲು ಕುಠಾರ ಪ್ರಾಯನಾದ ನೀನಿದ್ದರೆ ಫಲವೇನೆಂದು ಮಗನನ್ನು ದೂಷಿಸುತ್ತಲಿರುವ ಚಿತ್ರಾಂಗದೆಯನ್ನು ನೋಡಿ, ಉಲೂಪಿಯು ಇಂತೆಂದಳು ‖೫೫‖ ಅಮ್ಮಾ ಚಿತ್ರಾಂಗದೆ ! ಸ್ವಲ್ಪತಾಳು, ಅರ್ಜುನನು ಸತ್ತುಹೋದನೆಂದು ನಿಶ್ಚಯಿಸಲು ಇನ್ನು ಸ್ವಲ್ಪ ಅನುಮಾನವಾಗಿರುವುದು. ಅರ್ಜುನು ಮರಣವನ್ನೈದಿದನೆ, ಅಥವಾ ಇಲ್ಲವೆ ಎಂಬುದನ್ನು ನಿರ್ಣಯಿಸಲು ತಕ್ಕದ್ದಾಗಿರುವ ಕಾರಣವೊಂದುಂಟು, ಪೂರ್ವದಲ್ಲಿ ಧನಂಜಯನು ನನ್ನೊಂದಿಗೆ ಕೇಳೀವನದಲ್ಲಿ ಸರಸಸಲ್ಲಾಪಂಗಳಿಂದ ವಿಹರಿಸುತ್ತಲಿರುವಾಗ ಐದು ದಾಳಿಂಬ ವೃಕ್ಷಂಗಳನ್ನು ತೋರಿಸಿ, ಈ ಐದು ಮರಗಳೂ ಯಾವಾಗ ಒಣಗುವವೊ ಆಗ ನನಿಗೆ ಸಾವುಂಟಾಯಿತೆಂದು ತಿಳಿಯಬೇಕೆಂದು ನನ್ನೊಂದಿಗೆ ಹೇಳಿದ್ದನು, ಈಗ ಆ ದಾಡಿಮ ವೃಕ್ಷಂಗಳನ್ನು ನೋಡಿಕೊಂಡು ಬಂದಲ್ಲದೆ ಅರ್ಜುನನ ಮರಣವು ನಿಶ್ಚಯವೆಂದು ಸರ್ವಥಾ ನಂಬಬೇಡವೆಂದೂ, ನಾನು ಹೋಗಿ ಆ ಮರಗಳೇನಾಗಿರುವವೊ ನೋಡಿಕೊಂಡು ಬರುವೆನೆಂದೂ, ಅದುವರೆಗೂ ನೀನು ವ್ಯಸನಪಡದೆ ಸಾವಧಾನಚಿತ್ತದಿಂದಿರೆಂದೂ ನುಡಿದಳು, ಚಿತ್ರಾಂಗದೆಯಾದರೊ ಉಲೂಪಿಯ ಮಾತಿನಿಂದ ಸ್ವಲ್ಪ ಸಮಾಧಾನಮಂ ಪಡೆದು ಜಾಗ್ರತೆಯಲ್ಲಿ ತಿಳಿದುಕೊಂಡು ಬರುವಂತೆ ಉಲೂಪಿಯನ್ನು ಕೂಡಲೆ ಕಳುಹಿಸಿದಳು ‖೫೬‖ ಚಿತ್ರಾಂಗದೆಯ ಮಾತಿನಿಂದ ಹೊರಟ ಉಲೂಪಿಯು ತಡಮಾಡದೆ ಕೇಳೀವನಕ್ಕೆ ಬಂದುನೋಡಲು ಅಲ್ಲಿ

ಮಟ್ಟಿಲ್ಲರುಂರಣಕೆನಡೆತಂದು | ಜೋಡಾಗಿಬಿದ್ದಿರ್ದರರ್ಕಸುತಪಾರ್ಥರಂಕಂಡಲ್ಲಿಕೆಡೆದಳಲ್ದರು || ೫೭ || ಶೀತೋಷ್ಣರುಚಿಗಳಂಗಗನಗತಿಯಂಬಿಟ್ಟು | ಭೂತಲದಮೇಲೆರವಿಶಶಿಗಳೆಸೆವಂತೆಪುರು | ಹೂತಸುತಕರ್ಣಜರತಲೆಗಳೊಪ್ಪಿರೆಕಂಡುಲೂಪಿಚಿತ್ರಾಂಗದೆಯರು || ಕಾತರಿಸಿಕರಗಿಕಂಬನಿಯೊಳಾಳ್ದಾಗಶೋ | ಕಾತಿಶಯದಿಂದಪಾರ್ಥನಪಾದದೊಳ್ಪೊರ | ಳ್ದಾತನಗುಣಂಗಳಂಸಾಲ್ಗೊಳಿಸಿಬಣ್ಣಿಸಿಪ್ರೊರಳ್ದುಗೋಳಿಡುತಿರ್ದರು ||೫೮|| ನಿನ್ನಂಗಸಂಗಮನಗಲ್ದಾಯ್ತುಪಲಕಾಲ | ಮಿನ್ನೊಮ್ಮೆನೆರೆಯಲಾಗವೆಕಾಂತನಂಜಗದೊ | ಉನ್ನಿಸಲ್ಕಿನಗೆಪಡಿಯುಹರುಂಟೆರೂಪುಗುಣವಿಕ್ರಮಪ್ರೌಢಿಗಳೊಳು || ಭಿನ್ನಿಸದೆಕೆಚ್ಚೆದೆಯಸತಿಯರಾವಸುವಿಡಿದೆ | ವಿನ್ನೆಗಂಕೇಳ್ದಿಂತುಸ್ವೈರಿಪರೊಕಾಂತನೋ | ಳ್ನನ್ನಿಯುಳ್ಳರಸಿಯದ್ರೌಪದಿಸುಭದ್ರೆಯರದೆಂತುಳಿವರ

ನ, ಮೃತಿ-ಸಾವು, ದಿಟಂ-ನಿಶ್ಚಯವು, ಅಲ್ಲಿಗೆ-ಫಲುಗುಣನು ಸತ್ತುಬಿದ್ದುಹೋಗಿರುವ ಸ್ಥಳಕ್ಕೆ, ನಡೆ-ಪ್ರಯಾಣಮಾಡು, ಪೋಪೆವು-ಹೋಗೋಣ, ಎಂದು-ಎಂಬತೆರದಿಂದ ನುಡಿದು, ಪೀಡಿಸುವ-ಸಂಕಟವನ್ನು ಬಲಪಡಿಸುವ, ಶೋಕದಿಂದ-ವ್ಯಸನದಿಂದ, ಚಿತ್ರಾಂಗದೆಗೆ-ಚಿತ್ರಾಂಗದೆಯೊಂದಿಗೆ, ನುಡಿಯೆ-ಪೇಳಲು, ಎಲ್ಲರುಂ-ಅಶೇಷರೂ, ಕೂಡೆ-ಒಡನೆಯೇ, ಪೊರಮಟ್ಟು-ಹೊರಟವರಾಗಿ, ರಣಕೆ-ಸಮರಾಂಗಣಕ್ಕೆ, ನಡೆತಂದು-ಐತಂದು, ಜೋಡಾಗಿ-ಬಂದರೊಂದಿಗೊಂದು, ಬಿದ್ದಿದ್ದ-ಬಿದ್ದು ಹೋಗಿದ್ದ, ಕರ್ಣಸುತಪಾರ್ಥರಂ-ಕರ್ಣಸುತ-ವೃಷಧ್ವಜನು, ಪಾರ್ಥರಂ-ಧನಂಜಯನೂ ಇವರನ್ನು, ಕಂಡು-ಈಕ್ಷಿಸಿ, ಅಲ್ಲಿ-ಆ ಎಡೆಯಲ್ಲಿ, ಕೆಡೆದು-ಬಿದ್ದುಹೋಗಿ, ಅಳಲ್ದರು-ವ್ಯಸನಪಟ್ಟವರಾದರು ||

ಅ|| ವಿ|| ಅಹೀಂದ್ರಸುತೆ-ಅಹಿ-ಹಾವುಗಳ, ಇಂದ್ರ, (ಷ. ತ.) ಅಹೀಂದ್ರಸುತೆ (ಷ. ತ.) ದವಾಗ್ನಿ (ಸ. ದೀ.) ದಾಡಿಮ (ತ್ಸ) ದಾಳಿಂಬ (ತ್ಭ) || ೫೭ ||

ಟೀ|| ಶೀತ-ತನುವಾದ, ಉಷ್ಣ-ಶಾಕವಾದ, ರುಚಿಗಳಂ-ಕಿರಣಗಳನ್ನು, ಗಗನಗತಿಯಂ - ಆಕಾಶಮಾರ್ಗವನ್ನು, ಬಿಟ್ಟು-ತ್ಯಜಿಸಿ, ಭೂತಳದಮೇಲೆ-ಭೂಮಂಡಲದ ಮೇಲ್ಗಡೆ, ರವಿಶಶಿಗಳು-ಚಂದ್ರ ಸೂರ್ಯರು, ಎಸೆವಂತೆ-ಹೊಳೆಯುವ ತೆರನಾಗಿ, ಪುರುಹೂತಸುತ-ಪುರುಹೂತ-ಶಚೀಪತಿಯ, ಸುತ-ಕುಮರನ, ಕರ್ಣಜನ-ವೃಷಧ್ವಜ ಇವರ, ತಲೆಗಳು-ಶಿರಸ್ಸುಗಳು, ಒಪ್ಪಿರೆ-ಹೋಲಿಕೆಯಾಗಿರಲು, ಉಲೂಪಿ ಚಿತ್ರಾಂಗದೆಯರು-ಸರ್ಪರಾಜನ ಸುತೆಯೂ, ಚಿತ್ರಾಂಗದೆಯೂ ಸಹ, ಕಾತರಿಸಿ-ಹೆದರಿಕೊಂಡು, ಕರಗಿ-ನೀರಿನಂತಾಗಿ, ಕಂಬನಿಯೊಳು-ನೀರ್ವನಿಯಿಂದ, ಆಳ್ದು-ಮಗ್ನರಾಗಿ, ಶೋಕಾತಿಶಯದಿಂದ-ಅಧಿಕವಾದ ವ್ಯಸನದಿಂದ, ಪಾರ್ಥನ-ಧನಂಜಯನ, ಪಾದದೊಳ್-ಅಡಿಯಲ್ಲಿ, ಪೊರಳ್ದು-ಹೊರಳಿ, ಆತನ-ಆ ಫಲುಗುಣನ, ಗುಣಂಗಳಂ-ಸನ್ಮಾರ್ಗಂಗಳನ್ನು, ಸಾಲ್ಗೊಳಿಸಿ-ಕ್ರಮತಪ್ಪದಂತೆ, ಬಣ್ಣಿಸಿ-ವರ್ಣಿಸಿ, ಪ್ರೊರಳ್ದು-ಹೊರಳಾಡಿ, ಗೋಳಿಡುತ-ದುಃಖಪಡುತ್ತ, ಇರ್ದರು-ಇದ್ದವರಾದರು ||೫೮||

ಟೀ|| ಕಾಂತ-ಪ್ರಾಣಪದಕವಾದ ಪಾರ್ಥನೆ,ನಿನ್ನ-ನಿನ್ನದಾದ, ಅಂಗಸಂಗಮನನು-ಶರೀರಸೌಖ್ಯವನ್ನು, ಪಲಕಾಲಂ-ಅನೇಕ ದಿನಗಳವರೆಗೂ, ಅಗಲ್ದು-ಬಿಟ್ಟು, ಆಯ್ತು-ಆಗಿ ಹೋಯಿತೆ, ಇನ್ನೊಮ್ಮೆ-ಇನ್ನೊಂದಾವರ್ತಿ, ನೆರೆಯಲು-ಸೇರಲು, ಆಗದೆ-ಆಗುವುದಿಲ್ಲವೇ, ಜಗದೊಳು-ಪ್ರಪಂಚದಲ್ಲಿ, ಕಾಂತನಂ-ರಮಣನನ್ನು, ಉನ್ನಿಸಲು - ಯೋಚಿಸಿದರೆ, ನಿನಿಗೆಪಡಿಯುಹರು-ನಿನ್ನನ್ನು ಹೋಲುವವರು, ಉಂಟೆ-ಇರುವರೆ, ಆವು-ನಾವಾದರೊ, ಕೆಚ್ಚೆದೆಯ-ಕಠಿಣವಾದ ಮನಸ್ಸುಳ್ಳ, ಸತಿಯರು-ಸ್ತ್ರೀಯರಾಗಿದೇವೆ, ಒಡೆಯದೆ-ನಮ್ಮ ಅಂಗಾಂಗಳೆಲ್ಲಾ ಛಿನ್ನಾಛಿನ್ನವಾಗಬಾರದೆ, ಅಸುವ-ಹರಣವನ್ನು, ಇನ್ನೆಗಂ-ಇದುವರೆಗೂ, ಇಡಿದೆವು-ಇಟ್ಟುಕೊಂಡಿರುವೆವು, ಕಾಂತನೊಳ್-ರಮಣನಾದ ನಿನ್ನಲ್ಲಿ, ನನ್ನಿಯುಳ್ಳ-ಪ್ರೇಮವನ್ನುಂಟಾಗಿರುವ, ಅರ

ಕಾಡ್ಗಿಚ್ಚಿನ ಹೊಯ್ಲಿಗೆ ಸಿಕ್ಕಿ ದಾಳಿಂಬೆಯ ಮರಗಳೈದೂ ಸೀದು ಹೋಗಿದ್ದುದನ್ನು ಕಂಡು ಕಡು ದುಃಖಿತಳಾಗಿ, ಜಾಗ್ರತೆಯಿಂದ ಚಿತ್ರಾಂಗದೆಯಿದ್ದೆಡೆಯನ್ನು ಸೇರಿ, ಎಲೌ ಚಿತ್ರಾಂಗದೆ! ದಾಡಿಮ ವೃಕ್ಷಂಗಳೈದೂ ಸುಟ್ಟು ಹೋಗಿವೆಯಾದ್ದರಿಂದ ಅರ್ಜುನನ ಸಾವು ನಿಜವೆಂಬುದರಲ್ಲಿ ಲೇಶವೂ ಅನುಮಾನವೇ ಇಲ್ಲವೆಂದು ಚಿತ್ರಾಂಗದೆಯೊಂದಿಗೆ ಹೇಳಲು, ಎಲ್ಲರೂ ದುಃಖದಕಡಲಲ್ಲಿ ಮುಳುಗಿ, ಯುದ್ಧರಂಗಕ್ಕೆ ಬಂದು, ಅರ್ಜುನ ವೃಷಕೇತುಗಳ ತಲೆಗಳೂ, ಶರೀರವೂ ಬೇರೆ ಬೇರೆಯಾಗಿರುವುದನ್ನು ನೋಡಿ, ಮಹಾ ದುಃಖದಿಂದಕೂಡಿ ಗೋಳಾಡಲಾರಂಭಿಸಿದರು || ೫೭ || ತಣ್ಣಗಿರನಾದ ಚಂದ್ರನೂ, ತೀಕ್ಷ್ಣ ಕಿರಣಗಳಿಂದಕೂಡಿದ ಸೂರ್ಯನೂ, ಆಗಸದಿಂದ ಭೂಮಿಯಮೇಲೆ ಬಂದು ಬಿದ್ದಿರುವರೊ ಎಂಬಂತೆಸೆವ ಪಾರ್ಥ ಕರ್ಣಸಂಭವರ ತಲೆಗಳನ್ನು ನೋಡಿ, ಬಹಳವಾಗಿ ಅತ್ತು ಅತ್ತು ಪಾರ್ಥನ ಕಾಲ್ಗಳಮೇಲೆ ಬಿದ್ದು ಹೊರಳಿ ಎದ್ದು, ಪುನಃ ಬಿದ್ದು, ಬಿಕ್ಕಳಿಸಿ, ಬಿಸುಸುಯ್ದು ಸವ್ಯಸಾಚಿಯ ಸದ್ಗುಣ ಪರಂಪರೆಯನ್ನು ಧ್ಯಾನಮಾಡುತ್ತಾ, || ೫೮ || ಅಯ್ಯೋ ಮನೋರಂಜಕನಾದ ಅರ್ಜುನನೆ, ನಾವು ನಿನ್ನೊಂದಿಗೆ ಬೆರತು ನಿನ್ನಂಗ ಸಂಗದಿಂದ ಆನಂದ ಪಟ್ಟು ಬಹುಕಾಲವಾಯಿತಲ್ಲಾ! ಪುನಃ ನಿನ್ನೊಡನೆ ಕೂಡುವ ಭಾಗ್ಯವನ್ನು

ಕಟೆಂದರು ||೫೯|| ಅಡಿಯೊಳ್ಪೊರಳ್ದುಕಾಯವನಪ್ಪಿಕೈಗಳಂ | ಪಿಡಿದುರಸ್ಥಳಕೆತೆಗದೊಂದಿಸಿಕೊರಳ್ಗೆ ಕಡಿ| ವಡೆದತಲೆಯಂಕೂಡಿ ನೋಡಿಮುಂಡಾಡಿಪಣೆಗಿಟ್ಟುಮೊಗಮಂಚುಂಬಿಸಿ || ಒಡನೊಡನೆಪಾರ್ಥನಚರಿತ್ರಮಂಸಾಲ್ಗೊಳಿಸಿ | ನುಡಿನುಡಿಗಳಲ್ದುಕೆಲದೊಳ್ಕೆಡೆದಕರ್ಣಜಂ | ಗೊಡಲುರಿಯೊಳಕಟಸುತಹಾಯೆಂದುಮರುಗಿದರುಲೂಪಿಚಿತ್ರಾಂಗದೆಯರು || ೬೦ || ಬಳಿಕಚಿತ್ರಾಂಗದೆಕುಮಾರನಂನೋಡಿಕೊಲೆ | ಗೆಳಸಿದೈಜನಕಂಗೆಜನನಿಯರ್ನಾವೀರ್ವ | ರುಳಿಯಲೇಕಿನ್ನಕಟವೈಧವ್ಯಮಂತಾಳಬಲ್ಲೆವೆಮಹೀತಳದೊಳು || ಸೆಳೆದುಪೊಡೆಖಡ್ಗದಿಂದೆಮ್ಮಶಿರಂಗಳಂ | ಬಳಿಕೈದೆಭಾರ್ಗವಂಕೊಂದುದಿಲ್ಲವೆತಾಯ | ನಳುಕದಿ

ಸಿಯರು_ರಾಣಿಯರಾದ ಪಾಂಚಾಲಿಸುಭದ್ರೆಯರು, ಕೇಳ್ದು_ನೀನು ಪ್ರಾಣವಂ ಬಿಟ್ಟರುವ ವಾರ್ತೆಯನ್ನಾಲಿಸಿ, ಎಂತು_ಯಾವ ಬಗೆಯಾಗಿ, ಸೈರಿಪರೊ_ತಡೆದುಕೊಳ್ಳುವರೊ, ಎಂತು_ಯಾವತೆರನಾಗಿ, ಉಳಿವರೊ_ಜೀವವನ್ನಿಟ್ಟುಕೊಂಡಿರುವರೊ, ಅಕಟ_ಆಹಾ! ಎಂದರು_ಎಂದು ಗೋಳಾಡಿದರು.

ಅ|| ವಿ|| ನಿನ್ನಂ + ನಿನ್ನ = ಅಂಗ (ಅಕಾರಲೋಪಸಂಧಿ) ಕೆಚ್ಚೆದೆಯರು_ಕೆಚ್ಚಿನೆ ಎದೆಯು ಯಾರಿಗೊ ಅವರು (ಬ. ಸ.) ಅಸುವಿಡಿದು_ಅಸುವಂಪಿಡಿದು (ಕ್ರಿ. ಸ.) ||೫೯||

ಟೀ|| ಅಡಿಯೊಳ್-ಕಾಲಬಳಿಯಲ್ಲಿ, ಪೊರಳ್ದು-ಬಿದ್ದು ಹೊರಳಾಡಿ, ಕಾಯವನು ದೇಹವನ್ನು, ಅಪ್ಪಿ-ತಬ್ಬಿಕೊಂಡು, ಕೈಗಳಂ_ಕರಗಳನ್ನು, ಪಿಡಿದು_ಹಿಡಿದುಕೊಂಡು, ತೆಗೆದು_ಮೇಲಕ್ಕೆ ತೆಗೆದುಕೊಂಡು, ಎತ್ತಿ_ಎತ್ತಿದವರಾಗಿ, ಕುಚಮಂಡಲಕೆ-ಸ್ತನಗಳ ಹತ್ತಿರಕ್ಕೆ, ಒಂದಿಸಿ_ಕೂಡಿಸಿ, ಕಡಿವಡೆದ – ಕತ್ತರಿಸಿ ಹಾಕಿದ್ದ, ತಲೆಯಂ – ರುಂಡವನ್ನು, ಕೊರಳ್ಗೆ-ಕಂಠದೆಡೆಗೆ, ಕೂಡಿಸಿ_ಜೋಡಿಸಿದವರಾಗಿ, ನೋಡಿ-ಈಕ್ಷಿಸಿ, ಮುಂಡಾಡಿ – ಮುದ್ದುಗೈದು, ಮೊಗಮಂ - ತಮ್ಮ ಮೋರೆಯನ್ನು, ಪಣೆಗೆ_ಹಣೆಯ ಬಳಿಗೆ, ಇಟ್ಟು_ಇಟ್ಟವರಾಗಿ, ಚುಂಬಿಸಿ_ಚುಂಬನವಂ ಮಾಡಿ, ಪಾರ್ಥನ_ಫಲುಗುಣನ, ಚರಿತ್ರಮಂ_ಚರಿತ್ರೆಯನ್ನು, ಒಡನೊಡನೆ_ಬಾರಿಬಾರಿಗೂ, ಸಾಲ್ಗೊಳಿಸಿ_ಕ್ರಮವಾಗಿ ಹೇಳುತ್ತಾ, ನುಡಿನುಡಿಗೆ, ಮಾತುಮಾತಿಗೂ, ಅಳಲ್ದು - ಗೋಳಾಡಿ, ಕೆಲದೊಳ್_ಪಕ್ಕದಲ್ಲಿ, ಕೆಡದ_ಬಿದ್ದುಹೋದ, ಕರ್ಣಜಂಗೆ_ಕರ್ಣಸುತನಿಗೆ, ಒಡಲ-ದೇಹದ, ಉರಿಯೊಳ್_ಹೊಯ್ಲಿನಿಂದ, ಅಕಟ_ಅಯ್ಯೋ, ಹಾ_ಆಹಾ, ಎಂದು_ಎಂಬತೆರನಾಗಿ, ಉಲೂಪಿಚಿತ್ರಾಂಗದೆಯರು_ಉಲೂಪಿಯೂ ಚಿತ್ರಾಂಗದೆಯೂ ಸಹ, ಮರುಗಿದರು_ವ್ಯಸನಪಟ್ಟವರಾದರು ||೬೦||

ಟೀ|| ಬಳಿಕ_ಅನಂತರ, ಚಿತ್ರಾಂಗದೆ-ಚಿತ್ರಾಂಗದೆಯು, ಕುಮಾರನಂ_ಸುತನನ್ನು, ನೋಡಿ_ಈಕ್ಷಿಸಿ, ಜನಕಂಗೆ_ಪಿತನಿಗೆ, ಕೊಲೆಗೆ-ಕೊಂದು ಹಾಕುವುದಕ್ಕೆ, ಎಳಸಿದೈ-ಬಯಸಿದವನಾದೆಯಲ್ಲಾ, ನಾವೀರ್ವರುು_ನಾವಿಬ್ಬರೂ, ಜನನಿಯರು_ನಿನ್ನ ಮಾತೆಯರು, ಉಳಿಯಲು-ಜೀವಿಸಿರಲು, ಏಕೆ - ಪ್ರಯೋಜನವೇನಿದೆ, ಅಕಟ – ಅಯ್ಯೋ ದೇವರೆ, ಮಹೀತಳದೊಳು_ಧರಾವಲಯದಲ್ಲಿ, ವೈಧವ್ಯಮಂ_ಗಂಡನನ್ನು ಕಳೆದುಕೊಂಡು ವ್ಯಥೆಪಡುವುದನ್ನು, ತಾಳಲು_ತಡೆಯಲು, ಬಲ್ಲೆವೆ_ಶಕ್ತರಾದೇವೆಯೆ, ಅಲ್ಲ_ಎಂದಿಗೂ ತಡಿಯಲಾರೆವು, ಸೆಳೆದು_ಒರೆಯೊಳಗಿರುವ ಕತ್ತಿಯನ್ನು ಹೊರಗೆಳೆದು, ಖಡ್ಗದಿಂ-ಕತ್ತಿಯಿಂದ, ನಮ್ಮ_ನಮ್ಮ ಸಂಬಂಧವಾದ, ಈಶಿರಂಗಳಂ – ಈ ತಲೆಗಳನ್ನು, ಪೊಡೆ – ಹೊಡೆದುಹಾಕು, ಭಾರ್ಗವಂ - ಭೃಗುಋಷಿಯ ಮಗನು, ಐದೆ_ಚೆನ್ನಾಗಿ, ತಾಯನು_ತನ್ನ ಮಾತೆಯಾದ ರೇಣುಕೆಯನ್ನು, ಕೊಂದುದುಇಲ್ಲವೆ_ಕೊಂದುಹಾಕಲಿಲ್ಲವೆ, ಅಳುಕದಿರ್_ಹೆದರ

ನಾವು ಪಡೆಯಲಿಲ್ಲವಲ್ಲಾ ! ಯೋಚಿಸಿ ನೋಡಿದರೆ ಗುಣದಲ್ಲಿಯೂ ಶೀಲದಲ್ಲಿಯೂ ಶೌರ್ಯೌದಾರ್ಯಾದಿಗಳಲ್ಲಿಯೂ ಚಾತುರ್ಯ ಧೈರ್ಯಾದಿಗಳೊಳಗೂ ನಿನ್ನನ್ನು ಮೀರಿಸಿದವರು ಮತ್ತೆ ಯಾರಿರುವರು ? ಅಯ್ಯೋ ದೇವರೇ ! ನಮ್ಮ ಕಲ್ಲಿನಂತಹ ಎದೆಯು ಒಡೆದು ಹೋಗಬಾರದೆ? ನಮ್ಮ ಹರಣವನ್ನು ಯಮದೂತರು ಬಂದು ಇನ್ನೂ ಏತಕ್ಕೆ ಸೆಳೆದೊಯ್ಯದೆ ಸುಮ್ಮನೆ ಬಿಟ್ಟಿರುವರೊ ಕಾಣೆವಲ್ಲಾ, ದ್ರೌಪದಿ ಸುಭದ್ರೆಯರು ನಿನ್ನಳಿವನ್ನು ಕೇಳಿ ಎಂತು ಸೈರಿಸುವರೊ ಕಾಣೆವು || ೫೯ || ಅಯ್ಯೋ ಎಂದು ಹೊರಳಾಡುತ್ತಾ ಅವನ ಶರೀರದ ಮೇಲೆ ತಮ್ಮ ಮೈಗಳನ್ನೊತ್ತುತಲೂ ಆತನ ಕರಪಲ್ಲವಂಗಳನ್ನು ತಮ್ಮ ಕುಚಕುಂಭಗಳ ಮೇಲಿರಿಸಿಕೊಂಡು ಪಾರ್ಥನ ತಲೆ ಮತ್ತು ಮುಂಡಗಳನ್ನು ಸೇರಿಸಿ ಆತನ ಮುಖಕ್ಕೆ ಮುತ್ತಿಟ್ಟು ಅಧರ ಚುಂಬನವನ್ನು ಮಾಡುತ್ತಲೂ, ಬಾರಿಬಾರಿಗೂ ಅರ್ಜುನನ ಗುಣಾವಳಿಯನ್ನು ನುತಿಸಿ ದುಃಖಿಸುತ್ತ ವೃಷಕೇತುವಿನ ಮುಖವನ್ನು ನೋಡಿ ಅಯ್ಯೋ, ಕಂದಾ! ನಿನ್ನ ಮರಣವನ್ನು ನೋಡುವ ನಮ್ಮ ಕಣ್ಣುಗಳೇತಕಿರಬೇಕೆಂದು ಗೋಳಾಡುತ್ತಲಿದ್ದರು || ೬೦ || ಈ ರೀತಿಯಲ್ಲಿ ಅರ್ಜುನನ ಗುಣಾವಳಿಯನ್ನು ನಾನಾ ಪ್ರಕಾರವಾಗಿ ಬಣ್ಣಿಸಿ ವ್ಯಸನಪಡುತ್ತ ಚಿತ್ರಾಂಗದೆಯು ಪಕ್ಕದಲ್ಲಿ ನಿಂತ ಮಗನನ್ನು ನೋಡಿ ಎಲೈ ಬಭ್ರುವಾಹನಾ! ತಂದೆಯನ್ನು ಕೊಂದುಹಾಕಿ ನಿನ್ನ ಮನಸ್ಸಿಗೆ ಸಂತೋಷವನ್ನುಂಟುಮಾಡಿಕೊಂಡೆಯಲ್ಲ, ಅರ್ಜುನನು ಸತ್ತನಂತರ ವೈಧವ್ಯವನ್ನನುಭವಿಸಲಾರದೆ ಹಂಬಲಿಸುತ್ತಲಿರುವ ನಿನ್ನ ಮಾತೆಯರಾದ ನಮ್ಮಿರ್ವರನ್ನೂ ಖಡ್ಗದಿಂದ ಹೊಡೆದು

ಪಿತೃಮಾತೃದಾಯಾದವಧೆನಿನಗೆಸಫಲಮಾದಪುದೆಂದಳು ||೬೧|| ತಾಯಮಾತಂಕೇಳ್ದುಶೋಕಕಲುಷಿತನಾಗಿ | ಪ್ರೀಯದಿಂ ಪೋಗಿಕಂಡೊಡೆತನುಜನಲ್ಲೆಂದುನೋಯನುಡಿದಾಹವಂ|ಬೇಕೆಂದೊಡೀತನಂಕೊಂದೆನಾಂಪಂಥಮೆಂದು || ದಾಯತಪ್ಪಿದಬಳಿಕ ಪೇಳ್ದೊಡೇನಹುದಿನ್ನು | ಹೇಯಮಾದುದುತನ್ನಬಾಳ್ಕೆಪಿತೃವಧೆಯೊಳೀ | ಕಾಯಮುಂಬಿಡುವೆನೀಗಳೆನೋಳ್ಪುದೆಂದವಂಕಿಚ್ಚ ಪೊಗಲನುವಾದನು ||೬೨|| ತಂದೆಯಂಕೊಂದುಳಿದನೆಂದುಲೋಕದಜನಂ| ನಿಂದಿಸದೆಬಿಡರಿದಕೆನಿಷ್ಕೃತಿಗಳಂಕಾಣೆ | ನೊಂದು ಮಂತ್ರಧ್ಯಾನಜಪತೀರ್ಥಯಾಗಯೋಗಂಗಳಿಂಕಳೆದುಕೊಳಲು | ಸಂದಿಗ್ಧಮಾಗಿರ್ದಪಾತಕಂಪೋಪುದುಮು | ಕುಂದಸ್ಮರಣೆ

---

ಬೇಡ, ಬಳಿಕ – ನಮ್ಮ ತಲೆಯನ್ನೂ ಛೇದಿಸಿದನಂತರ, ಪಿತೃಮಾತೃದಾಯಾದರವಧೆ – ಪಿತೃ-ಜನಕನು, ಮಾತೃ-ಜನನಿಯು, ದಾಯಾದ-ಜ್ಞಾತಿಗಳು ಇವರ, ವಧೆ-ಕೊಲೆಯು, ನಿನೆ-ಚೆನ್ನಾಗಿ, ಸಫಲಂ – ಪ್ರಯೋಜನಕಾರಿಯು, ಆದಪುದು-ಆಗುತ್ತದೆ, ಎಂದಳು-ಎಂಬದಾಗಿ ಹೇಳಿದಳು. ||೬೧||

ಟೀ|| ಅವನು – ಆ ಬಭ್ರುವಾಹನನು, ತಾಯ – ತಮ್ಮ ಮಾತೆಯಾದ ಚಿತ್ರಾಂಗದೆಯ, ಮಾತಂ – ನುಡಿಯನ್ನು, ಕೇಳ್ದು-ಆಲಿಸಿ, ಶೋಕ-ದುಃಖದಿಂದ, ಕಲುಷಿತನು-ಕಲ್ಮಷಸಹಿತನು, ಆಗಿ-ಆಗಿಬಿಟ್ಟು, ಪ್ರೀಯದಿಂ-ಪ್ರೀತಿಯಿಂದ, ಪೋಗಿ-ತಂದೆಯ ಬಳಿಗೆ ಹೋಗಿ, ಕಂಡಡೆ-ಈಕ್ಷಿಸಲು, ತನುಜನು-ಕುವರನು, ಅಲ್ಲ-ಅಲ್ಲವು, ಎಂದು-ಎಂಬುದಾಗಿ, ನೋಯ-ವ್ಯಸನಕರವಾದ ಮಾತನ್ನು, ನುಡಿದು-ಹೇಳಿ, ಆಹವಂ-ಕಾಳಗವು, ಬೇಕು-ಆಗಬೇಕು, ಎಂದೊಡೆ-ಎಂದು ನುಡಿಯಲು, ಪಂಥಂ-ಶಪಥವು, ಎಂದು-ಎಂಬುದಾಗಿ, ಆಂ-ನಾನು, ಈತನಂ-ಇವನನ್ನು, (ಪಾರ್ಥನನ್ನು) ಕೊಂದೆನು-ಕೊಂದುಬಿಟ್ಟೆನು, ದಾಯ-ಕಾರ್ಯದ ಬಗೆಯು, ತಪ್ಪಿದಬಳಿಕ-ಕೆಟ್ಟಮೇಲೆ, ಇನ್ನು-ಮುಂದೆ, ಪೇಳ್ದಡೆ – ಮಾತನಾಡಿ, ಏಂ – ಪ್ರಯೋಜನವೇನಿರುವುದು, ತನ್ನ – ನನ್ನದಾದ, ಬಾಳ್ಕೆ-ಬದುಕುವಿಕೆಯು, ಪಿತೃವಧೆಯೊಳು-ತಂದೆಯನ್ನು ಕೊಲ್ಲುವ ಕಾರ್ಯದಲ್ಲಿ, ಹೇಯಂ-ಪ್ರಯೋಜನರಹಿತವಾದದ್ದು, ಆಯ್ತು-ಆಗಿಹೋಯಿತು, ಈಕಾಯಮಂ-ಈ ನನ್ನ ದೇಹವನ್ನು, ಈಗಲೆ-ನಿನ್ನ ಕಣ್ಣೆದುರಿನಲ್ಲಿಯೆ, ಬಿಡುವೆನು-ಬಿಟ್ಟುಬಿಡುತ್ತೇನೆ, ನೋಳ್ಪುದು-ನೋಡಬೇಕು, ಎಂದು-ಎಂಬತೆರನಾಗಿ ನುಡಿಯುತ್ತಾ, ಕಿಚ್ಚಿನೊಳು-ಅಗ್ನಿಯೊಳಗೆ, ಪುಗಲು-ಬೀಳಲು, ಅನುವಾದನು-ಸಿದ್ಧನಾದನು. ||೬೨||

ಟೀ|| ಲೋಕದ – ಪ್ರಪಂಚದಲ್ಲಿರತಕ್ಕ, ಜನಂ-ಜನರೆಲ್ಲರೂ, (ನನ್ನನ್ನು) ತಂದೆಯಂ-ಪಿತನನ್ನು, ಕೊಂದುಳಿದನು-ಕೊಂದುಬದುಕಿದನು, ಎಂದು-ಎಂಬುದಾಗಿ, ನಿಂದಿಸದೆ-ದೂಷಿಸದೆ, ಬಿಡದು-ಬಿಡುವುದೇ ಇಲ್ಲವು, ಅದಕೆ-ತಂದೆಯನ್ನು ಕೊಂದ ಪಾತಕಕ್ಕೆ, ನಿಷ್ಕೃತಿಗಳಂ-ಪ್ರತೀಕಾರವನ್ನು, ಕಾಣೆನು-ನೋಡಲಿಲ್ಲವು. ಒಂದು-ಒಂದಾದ, ಮಂತ್ರ – ಮಂತ್ರದ, ಧ್ಯಾನ-ಭಜನೆಯ, ಜಪ-ಮಂತ್ರಗಳನ್ನು ಬಾರಿಬಾರಿಗೂ ಹೇಳುವುದರ, ತೀರ್ಥಯಾತ್ರೆ – ಪುಣ್ಯತೀರ್ಥಾದಿಗಳಿಗೆ ಹೋಗೋಣದರಿಂದಲೂ, ಯಾಗ-ಯಜ್ಞಾದಿಗಳಿಂದಲೂ, ಯೋಗಂಗಳಿಂದ – ಪರಮಾತ್ಮನಲ್ಲಿಯೇ ಏಕರೀತಿಯಾದ ಪ್ರೇಮವನಿಟ್ಟುಕೊಂಡಿರುವುದರಿಂದಲೂ, ಮುಕುಂದ-ಮೋಕ್ಷದಾಯಕನಾದ ಕೃಷ್ಣಪರಮಾತ್ಮನ, ಸ್ಮರಣೆಯಿಂದ-ಧ್ಯಾನದಿಂದಲೂ, ಕಳೆದುಕೊಳಲು-ನೀಗಿಕೊಂಡು ಪವಿತ್ರನಾಗಲು, ಸಂದಿಗ್ಧಂ – ಅನುಮಾನದಿಂದ ಕೂಡಿದ, ಪಾತಕಂ-ದುರಿತವು, ಪೋಪುದು-ಕಳೆದು ಹೋಗುವುದು, ಅರ್ಜುನಂ – ಫಲುಗುಣನಾದರೊ, ವೈಷ್ಣವಂ – ವಿಷ್ಣುಭಕ್ತನಾದವನು, ಕೃಷ್ಣಂಗೆ – ಕೃಷ್ಣಸ್ವಾಮಿಗೆ, ಬಂಧು-

---

ಕೊಂದುಬಿಡು, ಪೂರ್ವದಲ್ಲಿ ಭೃಗುರುಷಿಯ ಮಗನಾದ ಪರಶುರಾಮನು ತಮ್ಮ ಮಾತೆಯಾದ ರೇಣುಕೆಯನ್ನು ತಂದೆಯ ಆಜ್ಞಾನುಸಾರವಾಗಿ ಕೊಂದುಹಾಕಿದಂತೆ ನೀನೂ ನಮ್ಮ ತಲೆಗಳನ್ನು ಕಡಿದು ಹಾಕುವುದರಲ್ಲಿ ಬಾಧಕವೇನೂ ಉಂಟಾಗುವುದಿಲ್ಲವು. ಅಲ್ಲಿಗೆ ತಾಯಿತಂದೆಗಳನ್ನೂ ಬಂಧುಬಳಗದವರನ್ನೂ ದಾಯಾದರನ್ನೂ ಸಂಹರಿಸುವುದರ ಮೂಲಕ ನಿನ್ನಿಷ್ಟಾರ್ಥವು ಸಿದ್ಧಿಸುವುದು ||೬೧|| ಎಂದು ಹೇಳಿದ ಚಿತ್ರಾಂಗದೆಯ ನುಡಿಗಳನ್ನಾಲಿಸಿ ಪಾರ್ಥಜನು ಮಹಾ ವ್ಯಸನದಿಂದ ಕೂಡಿ ತನ್ನ ತಾಯಿಯನ್ನು ಕುರಿತು ಮಾತೆಯೇ ನಾನು ವಿಶ್ವಾಸದಿಂದ ಜನಕನಲ್ಲಿಗೆ ಹೋಗಿ ಎದುರ್ಗೊಂಡರೆ ನನ್ನನ್ನು ಆತನು ಬಹುವಾಗಿ ದೂಷಿಸಿದ್ದಲ್ಲದೆ ತನ್ನ ಸುತನಲ್ಲವೆಂದೂ, ಹೇಡಿಯೆಂದೂ ನಿಂದಿಸಿ, ಬಯ್ದು ಆಚೆಗೆ ನೂಕಿ ಯುದ್ಧದಲ್ಲಿ ಗೆದ್ದರೆ ನೀನು ಮಗನೆಂದೂ, ಇಲ್ಲವಾದರೆ ಸುತನಲ್ಲವೆಂದೂ ಜರೆದನಾಗಿ ನನಗೆ ಕೋಪವು ಉಕ್ಕಿಬಂದು ನಾನು ಈ ಕೃತ್ಯವನ್ನು ಮಾಡಿದೆನು. ಕೆಲಸವು ಮಿಂಚಿಹೋಗಿ ಮಹಾ ಪಾತಕಕ್ಕೆ ಗುರಿಯಾದೆನು. ಇನ್ನು ಮಾತನಾಡಿ ಫಲವೇನು ಈ ನನ್ನ ಪಾಪಮಯವಾದ ದೇಹವನ್ನು ಈಗಲೆ ಅಗ್ನಿಗೆ ಆಹುತಿಕೊಡುವೆನೆಂದು ಬೆಂಕಿಗೆ ಬೀಳಲನುವಾದನು ||೬೨|| ಪುನಃ ತಾಯಿಯನ್ನು ನೋಡಿ ಅಮ್ಮಾ! ಈ ನನ್ನ ಪಾಪವಾದರೊ ಯಾವ ತೀರ್ಥಯಾತ್ರೆಗಳಿಂದಲೂ ಪರಿಹಾರವಾಗದು, ಜನರೆಲ್ಲರೂ ನನ್ನನ್ನು ಪಿತೃಘಾತಕನೆಂದು ಹೀಯಾಳಿಸುವರು, ಅಚ್ಯುತನ ಸ್ಮರಣೆಯಿಂದ ಪಾಪವು ಪರಿಹಾರವಾದೀತೆಂದು ಬಗೆದರೆ ಅವನು ಅರ್ಜುನನಿಗೆ ಪರಮಾಪ್ತನಾದ್ದರಿಂದ ಫಲುಗುಣನ

ಯಿಂದಲರ್ಜುನಂವೈಷ್ಣವಂ | ಬಂಧುಸಖಕೃಷ್ಣಂಗೆನಾಚದೆಂತಿರ್ದಪೆಂಪೊಗುವೆನಗ್ನಿಯೊಳೆಂದನು || ೬೩ || ಅನಲಪ್ರವೇಶಮಂ ನಿಶ್ಚಯಿಸಿಬಭ್ರುವಾ | ಹನನಗರುಚಂದನಕಾಷ್ಠಂಗಳಂತರಿಸು | ವನಿತರೋಳ್ಕಂಡುಚಿತ್ರಾಂಗದೆಕನಲ್ದುಸುತನಂಬೈದುಫಲು ಗುಣಂಗೆ || ವನಜನಾಭಂಮಿತ್ರನಿನ್ನೆಗಂಮನದೊಳರಿ | ದನುಪರಮಕೃಪಾಳುತಾನಿಲ್ಲಿಗೈದದೆನ್ಮಾಣ್ಪ | ಪನೆಸೈರಿಸನ್ನೆಗಂನರನ ಜೀವಕ್ಕೆಪೊಣೆದೇವಪುರಲಕ್ಷ್ಮೀಶನು ||೬೪||

ಸಂಧಿ ೨೩ ಕ್ಕೆ ಪದ್ಯ ೧೨೨೮ ಕ್ಕಂ ಮಂಗಳಮಸ್ತು.

---

ನೆಂಟನು, (ಭಾವಮೈದುನನಾಗಬೇಕು) ಸಖ-ಸ್ನೇಹಿತನು, ನಾಚದೆ-ತಂದೆಯನ್ನು ಕೊಂದು ಸ್ವಲ್ಪವೂ ಅವಮಾನವಿಲ್ಲದೆ, ಎಂತು-ಯಾವ ತೆರನಾಗಿ, ಇರ್ದಪೆಂ-ಇರಲಿ, ಅಗ್ನಿಯೋಳ್-ಬೆಂಕಿಯೊಳಗೆ, ಪೊಗುವೆ-ಬಿದ್ದು ಪ್ರಾಣವನ್ನು ಕಳೆದುಕೊಳ್ಳು ವೆನು, ಎಂದನು-ಎಂಬುದಾಗಿ ಹೇಳಿದನು ||೬೩||

ಟೀ|| ಬಭ್ರುವಾಹನನು-ಪಾರ್ಥಜನು. ಅನಲ ಪ್ರವೇಶಮಂ-ಬೆಂಕಿಯಲ್ಲಿ ಬಿದ್ದು ಸಾಯಬೇಕೆನ್ನುವುದನ್ನೇ ನಿಶ್ಚೈಸಿ ದವನಾಗಿ, ಅಗರು-ಕರೀಗಂಧದಚಕ್ಕೆ, ಚಂದನ-ಶ್ರೀಗಂಧದಚಕ್ಕೆ, ಮೊದಲಾದ, ಕಾಷ್ಠಂಗಳಂ-ಕಟ್ಟಿಗೆಗಳನ್ನು, ತರಿಸುವ-ಜೋತೆಗೋಳಿಸುವ, ಅನಿತರೋಳ್-ಕಾಲದಲ್ಲಿ, ಚಿತ್ರಾಂಗದೆ-ಬಭ್ರುವಾಹನನ ತಾಯಿಯು, ಕಂಡು-ಇದನ್ನೆಲ್ಲಾ ನೋಡಿ, ಕನಲ್ದು-ಸಿಟ್ಟುಗೊಂಡು, ಸುತನಂ-ಕುವರನನ್ನು, ಬೈದು-ದುರುಕ್ತಿಗಳನ್ನಾಡಿ, ವನಜನಾಭಂ-ಕೃಷ್ಣಸ್ವಾಮಿಯಾದರೊ, ಫಲುಗುಣಂಗೆ-ಪಾರ್ಥನಿಗೆ, ಮಿತ್ರನು-ಸಖನು, ಮನದೊಳು-ಮನಸ್ಸಿನಲ್ಲಿ, ಇನ್ನೆಗಂ-ಈ ವೇಳೆಗೆ, ಅರಿದನು-ಗೋಚರಮಾಡಿಕೊಂಡಿರುವನು, ಪರಮ-ಅಧಿಕವಾದ, ಕೃಪಾಳು-ದಯಾಸಾಂದ್ರನು, ತಾನು-ಆ ಕೃಷ್ಣಸ್ವಾಮಿಯು, ಇಲ್ಲಿಗೆ-ಅರ್ಜುನನು ಪ್ರಾಣ ಬಿಟ್ಟಿರುವ ಈ ಎಡೆಗೆ, ಐದದೆ-ಬಂದೊದಗದೆ, ಮಾಣ್ದಪನೆ-ಇದ್ದಾನೆ, ಅನ್ನೆಗಂ-ಆ ಸ್ವಾಮಿಯು ಬರುವವರೆಗೂ, ಸೈರಿಸು-ತಡೆದುಕೊ, ನರನ-ಪಾರ್ಥನ, ಜೀವಕ್ಕೆ-ಹರಣಕ್ಕೆ, ದೇವಪುರ ಲಕ್ಷ್ಮೀಶನು-ದೇವಪುರನಿವಾಸಿಯಾದ ಕೃಷ್ಣಸ್ವಾಮಿಯು, ಹೊಣೆ-ರಕ್ಷಿಸುವ ನಾಗಿರುವನು.

ಅ|| ವಿ|| ಅನಲಪ್ರವೇಶ (ಷ. ತ) ಅನಲ-ಬೆಂಕಿ, ಅನಿಲ-ಗಾಳಿ, ವನಜನಾಭಂ=ವನ-ನೀರಿನಲ್ಲಿ, ಜ-ಹುಟ್ಟಿದ್ದು, ಕಮಲ (ಸ. ತ) ವನಜ - ಕಮಲವನ್ನು, ನಾಭನು - ಹೊಕ್ಕಳಾಗಿರುವನನು ಯಾರೊ ಅವನು (ಬ. ಸ) ಮಿತ್ರ-ಸೂರ್ಯ, ಸ್ನೇಹಿತ, ಲಕ್ಷ್ಮೀಶನು-ಲಕ್ಷ್ಮೀ+ಈಶ (ಸ. ದೀ) ||೬೪||

ಇಪ್ಪತ್ತಮೂರನೆಯ ಸಂಧಿಯು ಸಮಾಪ್ತಮಾದುದು.

---

ವೈರಿಗೆ ಎಂದೆಂದಿಗೂ ಮೇಲ್ಮೆಯನ್ನೆಸಗಲಾರನಾಗಿ, ಅಗ್ನಿಪ್ರವೇಶವೇ ಲೇಸೆಂದು ನುಡಿದು ಯಜ್ಞೇಶ್ವರನಲ್ಲಿಗೆ ಸೇರಿಕೊಳ್ಳ ಲುಜ್ಜುಗಿಸಿ ||೬೩|| ಸಿರಿಕಂಡ, ಕೃಷ್ಣಾಗರು ಮೊದಲಾದವುಗಳ ಕಾಷ್ಠಂಗಳನ್ನು ತರಿಸುವುದರೊಳಗಾಗಿ ಚಿತ್ರಾಂಗದೆಯು ಕೋಪದಿಂದ ಸುತನನ್ನು ನೋಡಿ ಅರ್ಜುನನಿಗೆ ಕೃಷ್ಣನು ಪರಮಾಪ್ತನು, ದಯಾಸಮುದ್ರನು, ಭಕ್ತವತ್ಸಲನು ಆ ಮಹಾನು ಭಾವನು ಇಲ್ಲಿಗೆ ಬರುವವರೆಗೂ ಅಗ್ನಿಪ್ರವೇಶವನ್ನು ಮಾಡಬೇಡ ಅರ್ಜುನನ ಪ್ರಾಣಕ್ಕೆ ಕೃಷ್ಣಮೂರುತಿಯೆ ಹೊಣೆಯಾಗಿರು ವನು. ಆದ್ದರಿಂದ ಸೈರಿಸುವನಾಗೆಂದು ನುಡಿದಳು. ಉಲೂಪಿ ಚಿತ್ರಾಂಗದೆಯರೂ ಬಭ್ರುವಾಹನಾದಿಗಳೂ ರಣರಂಗದಲ್ಲಿ ಶ್ರೀಪತಿಯನ್ನು ಧ್ಯಾನಿಸುತ್ತಲಿದ್ದರೆಂಬಲ್ಲಿಗೆ,

ಟೀಕಾತಾತ್ಪರ್ಯಸಹಿತಮಾದ ಜೈಮಿನಿಭಾರತದೊಳು ಇಪ್ಪತ್ತಮೂರನೆಯ ಸಂಧಿಯ ಕಥಾಸಾರವು ಸಮಾಪ್ತಮಾದುದು. ||೬೪||



## ಇಪ್ಪತ್ತನಾಲ್ಕನೆಯ ಸಂಧಿ.

ಸೂಚನೆ|| ಪತ್ನಿಯುರದೆಸೆಯಿಂದಮುಡಿದಿರ್ದಪಾರ್ಥಂಪ್ರ | ಯತ್ನದಿಂನಿಜಸುತಂತಂದಸಂಜೀವಕದ | ರತ್ನದಿಂ
ಕೃಷ್ಣಪ್ರಸಾದದಿಂಜೀವಿಸಿದನುರ್ವಿಗಾಶ್ಚರ್ಯಮೆನಲು ||

ರಾಯಕೇಳಲ್ಲಿಗಸುರಾಂತಕಂಬಂದು ಕೌಂ | ತೇಯನಂನೋಡದಿರನನ್ನೆಗಂ ಸೈರಿಪುದು | ಪಾಯ ಮುಳ್ಳೊಡೆ ನರನಜೀವಮುಂಪಡೆವುದಿಂತಗ್ನಿಪ್ರವೇಶದಿಂದ || ಸಾಯಲೇನಹುದುದೆಂದಳಲ್ದುಸುತನಂಬಯ್ದು | ಬಾಯಾರಿಚೀರಿಚಿತ್ರಾಂಗದೆ ಹಲುಬಲೊಂದು | ಪಾಯಮುಂಕಂಡುನುಡಿದಳ್ಪನ್ನಗೇಂದ್ರಸಂಭವೆಬಭ್ರುವಾಹನಂಗೆ || ೧ || ಮಗನೆಮುಡಿದರ್ಜುನಂಮುಗುಳೇ

---

ಇಪ್ಪತ್ತನಾಲ್ಕನೆಯ ಸಂಧಿ ಪ್ರಾರಂಭವು.

ಟೀ|| ಸೂಚನೆ—ಕೃಷ್ಣಪ್ರಸಾದದಿಂ ಕೃಷ್ಣ-ಶ್ರೀ ಕೃಷ್ಣಪರಮಾತ್ಮನ, ಪ್ರಸಾದದಿಂ-ದಯೆಯಿಂದ, (ಅನುಗ್ರಹ ಬಲದಿಂದ) ಪತ್ನಿಯುರದೆಸೆಯಿಂದ-ತನ್ನರಸಿಯರಾದ ಉಲೂಪಿ ಚಿತ್ರಾಂಗದೆಯರಿಂದ, ನಿಜಸುತಂ-ತನ್ನ ಕುವರನಾದ ಬಭ್ರುವಾಹನನು, ಪ್ರಯತ್ನದಿಂದ-ಸಾಹಸಾತಿಶಯದಿಂದ, ತಂದ-ತೆಗೆದುಕೊಂಡು ಬಂದ, ಸಂಜೀವಕದ-ಜೀವವನ್ನು, ಕೊಡಬಲ್ಲ ರತ್ನದಿಂ-ಮಣಿಯಿಂದ, ಉರ್ವಿಗೆ-ಭೂಮಂಡಲಕ್ಕೆ, ಅಚ್ಚರಿಯೆನಲ್-ಆಶ್ಚರ್ಯವೋ ಎಂಬಂತೆ, ಮುಡಿದಿರ್ದ-ಮರಣವನ್ನೈದಿದ್ದ, ಪಾರ್ಥಂ-ಧನಂಜಯನು, ಜೀವಿಸಿದನು-ಪುನಃ ಪ್ರಾಣವನ್ನೈದಿದನು.

ಅ|| ವಿ|| ಕೃಷ್ಣಪ್ರಸಾದ (ಷ. ತ) ಉರ್ವಿಗಾಶ್ಚರ್ಯ (ಏಕಾರಲೋಪ), ಆಶ್ಚರ್ಯ (ತ್ಸ) ಅಚ್ಚರಿ (ತ್ಭ).

ಟೀ|| ರಾಯ-ಎಲೈ ಜನಮೇಜಯ ಮಹೀವಲ್ಲಭನೆ, ಕೇಳು-ಲಾಲಿಸು, ಅಸುರಾಂತಕಂ-ಕೃಷ್ಣಸ್ವಾಮಿಯು, ಅಲ್ಲಿಗೆ-ಬಭ್ರುವಾಹನನ ರಾಜಧಾನಿಯಾದ ಮಣಿಪುರದ ಬಳಿಯಣ ಸಮರಾಂಗಣಕ್ಕೆ, ಬಂದು-ಬಂದವನಾಗಿ, ಕೌಂತೇಯನಂ-ಕುಂತೀಪುತ್ರನಾದ ಪಾರ್ಥನನ್ನು, ನೋಡದೆ ಇರನು-ನೋಡದೆ ಇರುವುದಿಲ್ಲವು, ಅನ್ನೆಗಂ-ಅದುವರೆಗೂ, ಸೈರಿಸುವುದು-ತಡೆದುಕೊಳ್ಳಬೇಕು, ಉಪಾಯಂ ಉಳ್ಳೊಡೆ-ಯಾವುದಾದರೂ ಯುಕ್ತಿ ಇದ್ದಹಾಗಾದರೆ, ನರನ-ಫಲುಗುಣನ, ಜೀವಮುಂ-ಹರಣವನ್ನು, ಪಡೆವುದು-ಹೊಂದಬಹುದು, ಅಗ್ನಿಪ್ರವೇಶದಿಂದ-ಬೆಂಕಿಯಲ್ಲಿ ಬಿದ್ದು ಹೋಗೋಣದರಿಂದ, ಇಂತು-ಈತೆರನಾಗಿ, ಸಾಯಲು-ಪ್ರಾಣಗಳನ್ನು ಬಿಟ್ಟುಬಿಟ್ಟರೆ, ಏನಹುದು-ಯಾವ ಪ್ರಯೋಜನವಾಗುವುದು, ಎಂದು-ಎಂಬತೆರನಾಗಿ, ಚಿತ್ರಾಂಗದೆಯು, ಸುತನಂ-ಕುವರನನ್ನು, ಬೈದು-ದೂಷಿಸಿ, ಬಾಯಾರಿ-ಬಾಯೆಲ್ಲಾ ಒಣಗಿಹೋಗಿ, ಚೀರಿ-ಕೂಗಿಕೊಂಡು, ಹಲುಬಲು-ಸಂಕಟಪಡಲು, ಪನ್ನಗೇಂದ್ರ-ಸರ್ಪಾಧಿಪನ, ಸುತೆ-ಕುವರಿಯಾದ ಉಲೂಪಿಯು, ಬಂದು-ಬಂದಾದ, ಉಪಾಯಮುಂ-ಚಮತ್ಕಾರವನ್ನು, ಕಂಡು-ಊಹಿಸಿ, ಬಭ್ರುವಾಹಂಗೆ-ಪಾರ್ಥಜನೊಡನೆ, ನುಡಿದಳ್-ಹೇಳಿದವಳಾದಳು.

ಅ|| ವಿ|| ಅಸುರಾಂತಕ (ಸ. ದೀ) ಅಗ್ನಿ (ತ್ಸ) ಅಗ್ಗಿ (ತ್ಭ) ಪನ್ನಗೇಂದ್ರ ಸಂಭವೆ- ಪನ್ನಗ-ಪತ್-ಕಾಲ್ಗಳಿಂದ, ನಗ-ನಡಿಯದಿರುವುದು (ಕೃ ವೃ) ಪನ್ನಗ-ಸರ್ಪಗಳ, ಇಂದ್ರ-ಒಡೆಯ, (ಷ. ತ) ಪನ್ನಗೇಂದ್ರನಿಂದ ಸಂಭವೆ (ತೃ ತ)||೧||

ಟೀ|| ಮಗನೆ-ಕುವರನೆ, ಮುಡಿದ-ಪ್ರಾಣ ಬಿಟ್ಟ, ಅರ್ಜುನನು-ಪಾರ್ಥನು, ಮುಗುಳ್-ಮತ್ತೆ, ಏಳ್ವ-ಮೇಲಕ್ಕೆ ಏಳತಕ್ಕ, ತೆರನಂ-ಬಗೆಯನ್ನು, ನಾನು-ನಾನಾದರೂ, ಈಗ-ಈ ಸಂದರ್ಭದಲ್ಲಿ, ನಿನಗೆ-ನಿನ್ನೊಡನೆ, ಪೇಳ್ವೆ-ಹೇಳುತ್ತೇನೆ, ಖಗರಾ

---

ಇಪ್ಪತ್ತನಾಲ್ಕನೆಯ ಸಂಧಿಯ ಕಥಾಸಂಗ್ರಹವು.

ಎಲೈ ಜನಮೇಜಯರಾಯನೆ ಕೇಳು, ಆ ಬಳಿಕ ಚಿತ್ರಾಂಗದೆಯು ಅಗ್ನಿಪ್ರವೇಶವಂ ಮಾಡಬೇಕೆಂದಿದ್ದ ಬಭ್ರುವಾಹನನ್ನು ಕುರಿತು, ಎಲೈ ಕುವರನೆ, ಕೃಷ್ಣಸ್ವಾಮಿಯು ಅರ್ಜುನನಿಗೆ ಪರಮ ಮಿತ್ರನಾದ್ದರಿಂದ ಪಾರ್ಥನು ಮಡಿದ ಸುದ್ದಿಯನ್ನು ಕೇಳಿ ಇಲ್ಲಿಗೆ ಬಾರದಿರನು. ಕೃಷ್ಣಪ್ರಸಾದದಿಂದ ಫಲುಗುಣನ ಪ್ರಾಣವು ಉಳಿಯಬಹುದು, ನೀನು ದುಷ್ಕಾರ್ಯಮಂಗೈದು ಈಗ ಅಗ್ನಿಯ ಬಾಯಿಗೆ ತುತ್ತಾದ ಮಾತ್ರಕ್ಕೆ ಯಾವ ಮಹಾಕಾರ್ಯಮಂ ಗೈದಂತಾಗುವುದು? ಎಂದು ನಾನಾ ಪ್ರಕಾರವಾಗಿ ದೂಷಿಸಿ, ಒಣಗಿದ ಬಾಯುಳ್ಳವಳಾಗಿ, ದುಃಖಾಗ್ನಿಯಿಂದ ಬೆಂದು ಬೆಂಡಾಗುತ್ತಲಿದ್ದಳು. ಈ ರೀತಿಯಲ್ಲಿ ಬಭ್ರುವಾಹನನ ಜನನಿಯು ಶೋಕದಿಂದ ಭಗ್ನ ಮನಸ್ಕಳಾಗಿರುವಾಗ ಸರ್ಪರಾಜನ ಕುವರಿಯಾದ ಉಲೂಪಿಯು ಅರ್ಜುನನ ಹರಣವಂ ಮತ್ತೆ ಪಡಿಯಬಹುದಾದ ಯುಕ್ತಿಯೊಂದನ್ನು ಕಂಡುಕೊಂಡು ಪಾರ್ಥಜನನ್ನು ಕುರಿತು ||೧|| ಎಲೈ ಅರ್ಜುನಿಯೆ, ಸತ್ತುಹೋಗಿರುವ ನಿಮ್ಮ ತಂದೆಯು ಮತ್ತೆ ಬದುಕಲು ಸಹಾಯವಾದ ಉಪಾಯವೊಂದನ್ನು ನಿನಗೆ ತಿಳಿಸುವೆನು. ಪಾತಾಳಲೋಕದಲ್ಲಿರುವ ಸರ್ಪಗಳನ್ನು ಗರುಡನು ಕಚ್ಚಿ ಕೊಂದು ಹಾಕಿದರೆ ಅವುಗಳ ಪ್ರಾಣನನ್ನು ಪುನಃ ಪಡೆಯಲನುಕೂಲನಾಗಿ

ಳ್ವತೆರನಂನಿ | ನಗೆಪೇಳ್ವೆನಾನೀಗಪಾತಾಳಲೋಕದೋಳ್ | ಖಗರಾಜನೊರಸಿದಹಿನಿಕರದ ಸುಮುರಳ್ವಂತೆಫಣಿವರಂಬೇಡಿಕೊಳಲು || ಅಗಜಾರಮಣನಿತ್ತ ಸಂಜೀವಕದ ಮಣಿಯು | ರಗಪತಿಯೊಳಿಹುದದಂಸತ್ವದಿಂತರಬಲ್ಲ | ವಿಗಡರಂಕಾಣೆನೀಮೂಜಗದೊಳೆನೆ ಬಭ್ರುವಾಹನಂ ಖತಿಗೊಂಡನು ||೨|| ಸಂಜೀವಕದ ಮಣಿಯನೀಗತಾರದೊಡೆತ | ನ್ನಂಜನನಿಪೆತ್ತಳೇತಕೆಮತ್ತೆ ಮಡಿದಿಹಧ | ನಂಜಯನಪ್ರಾಣಮುಂಪಡೆವೆನಿದನೀಯದೊಡೆಫಣಿಲೋಕಮುಂಸುಡುವೆನು|| ಕಂಜಜಕಪರ್ದಿಗಳ್ ತೊಡಕಿದೊಡೊ

---

ಜನು–ಖಗ–ಪಕ್ಷಿಗಳಿಗೆ, ರಾಜನು–ಅರಸಾದ ಗರುತ್ಮಂತನು, ಒರಿಸದ–ಸಂಹಾರಮಾಡಿದ, ಅಹಿ–ಹಾವುಗಳ, ನಿಕರದ–ಸಮುದಾಯದ, ಅಸು–ಜೀವವು, ಮರಳ್ವಂತೆ–ಮತ್ತೆ ಪ್ರಾಪ್ತವಾಗುವತೆರನಾಗಿ, ಫಣಿವರಂ–ಸರ್ಪಶ್ರೇಷ್ಠನಾದ ವಾಸುಕಿಯು, ಬೇಡಿಕೊಳಲು–ಈಶ್ವರನನ್ನು ಆರಾಧಿಸಲು, ಅಗಜಾರಮಣಂ–ಪರಮೇಶ್ವರನು, ಇತ್ತ–ದಯಪಾಲಿಸಿದ, ಸಂಜೀವಕದ ಮಣಿಯು–ಸಂಜೀವಕವೆಂಬ ಜೀವರತ್ನವು, ಪಾತಾಳಲೋಕದೊಳು–ನಾಗಲೋಕದೊಳಗೆ, ಉರಗಪತಿಯೊಳು–ಹಾವುಗಳ ರಾಜನಾದ ವಾಸುಕಿಯಹತ್ತಿರ, ಇಹುದು–ಇರುವುದು, ಈ ಮೂಜಗದೊಳು–ಈ ತ್ರಿಭುವನಂಗಳಲ್ಲಿಯೂ, ಸತ್ವದಿಂ–ಶಕ್ತ್ಯತಿಶಯದಿಂದ, ಅದಂ–ಆ ಜೀವಮಣಿಯನ್ನು, ತರಬಲ್ಲ–ಸಾಧಿಸಿಕೊಂಡು ಬರತಕ್ಕ, ವಿಗಡರಂ–ಪರಾಕ್ರಮಿಗಳನ್ನು, ಕಾಣೆನು–ನೋಡಲೇ ಇಲ್ಲವು, ಎನೆ–ಎಂದು ಉಲೂಪಿಯು ನುಡಿಯಲು, ಬಭ್ರುವಾಹನಂ–ಪಾರ್ಥಜನು, ಖತಿಗೊಂಡನು–ಮಹದಾಕ್ರೋಶದಿಂದ ಕೂಡಿದನು.

ಅ|| ವಿ|| ಖಗರಾಜ–ಖ–ಆಕಾಶದಲ್ಲಿ, ಗ–ಗಮಿಸುವುದು, (ಸ. ತ.) ಖಗ–ಹಕ್ಕಿಗಳ, ರಾಜ–ಒಡೆಯ, (ಗರುಡನು, ಷ. ತ.) ಕರ–ಕೈ, ಸೊಂಡಿಲು, ಕಿರಣ, ನಿಕರ–ಸಮೂಹ, ಫಣಿವರಂ (ಸ. ತ.) ಅಗಜಾರಮಣಂ (ಷ. ತ.) ಉರಗಪತಿಯೊಳು–ಉರ–ಎದೆಯಿಂದ, ಗ–ಗಮಿಸುವುದು, (ತೃ. ತ.) ಉರಗ–ಸರ್ಪಗಳ, ಪತಿ–ಒಡೆಯ, (ಷ.ತ.) ಮೂಜಗಂ (ದ್ವಿ.ಸ,) ||೨||

ಟೀ|| ಈಗ–ಈಗಲಾದರೊ, ಸಂಜೀವಕದ ಮಣಿಯನು–ಜೀವ ರತ್ನವನ್ನು, ತಾರದೊಡೆ–ತೆಗೆದುಕೊಂಡು ಬಾರದಿದ್ದರೆ, ಜನನಿ–ಮಾತೆಯು, ತನ್ನ–ಸಂಜೀವಕ ರತ್ನವನ್ನುತರಲಾರದೆ ಹೇಡಿಯಾದ ನನ್ನನ್ನು, ಏತಕೆ–ಯಾವಪ್ರಯೋಜನಕ್ಕಾಗಿ, ಪೆತ್ತಳು–ಹಡದಳು, ಮಡಿದಿಹ–ಸತ್ತುಹೋಗಿರತಕ್ಕ, ಧನಂಜಯನ–ಪಾರ್ಥನ, ಪ್ರಾಣಮುಂ–ಹರಣವನ್ನು, ಮತ್ತೆ–ತಿರುಗಿ, ಪಡೆವೆನು–ಹೊಂದುವೆನು, ಈಯದೊಡೆ–ಜೀವರತ್ನವನ್ನು ಕೊಡದಿದ್ದರೆ, ಫಣಿಲೋಕಮುಂ–ನಾಗಲೋಕವನ್ನೆ, ಸುಡುವೆನು–ಸುಟ್ಟು ಬೂದಿಮಾಡುವೆನು, ಕಂಜಜ–ಕಮಲೋದ್ಭವನಾಗಲಿ. ಕಪರ್ದಿಗಳ್–ಶಿವನೇ ಆಗಲಿ, ತೊಡಕಿದರೆ–ಪ್ರತಿಭಟಿಸಿ ನಿಂತರೆ, ಒರಲ್ವವೆಂ–ನೆಲವನ್ನು ಕಚ್ಚುವಂತೆ ಕೆಡವಿಬಿಡುತ್ತೇದೆ, ಸೆಣಸಿದೊಡೆ–ಯುದ್ಧಕ್ಕೆ ಕಾಲ್ಕೆರದು ಬಂದರೆ, ಅಖಿಳ–ಸಮಸ್ತರಾದ, ದಿಕ್ಪಾಲರಂ–ದಿಕ್ಪತಿಗಳನ್ನೂ ಕೂಡ, ಭಂಜಿಸುವೆನು–ಭಗ್ನರನ್ನಾಗಿ ಮಾಡುವೆನು, ಸಂಜಾತನು – ಅರ್ಜುನನ ಹೊಟ್ಟೆಯಲ್ಲಿ ಹುಟ್ಟಿದ್ದಕ್ಕೆ, ಸಫಲಂ–ಪ್ರಯೋಜನಕರವಾದದ್ದು, ಆಯ್ತು–ಆಗಿಬಿಟ್ಟಿತು, ಎನುತ–ಎಂದು ನುಡಿಯುತ್ತ, ಬಭ್ರುವಾಹನಂ–ಪಾರ್ಥಜನು, ಅಂದು–ಆಗ, ಉಬ್ಬಿದಂ–ಹೆಚ್ಚಾದ ಸಂತೋಷವನ್ನೈದಿದನು ||

ಅ|| ವಿ|| ಫಣಿಲೋಕ–ಫಣವುಳ್ಳದ್ದು ಫಣಿ, ಫಣಿಗಳಲೋಕ (ಷ. ತ) ಕಂಜಜ–ಕಂಜ–ಕಂ–ನೀರಿನಲ್ಲಿ, ಜ–ಹುಟ್ಟಿದ್ದು, (ಕಮಲ, ಸ. ತ.) ಕಂಜ–ಕಮಲದಲ್ಲಿ, ಜ–ಹುಟ್ಟಿದವನು, ಬ್ರಹ್ಮನು, (ಸ. ತ.) ಸಫಲಂ–ಫಲದಿಂದ ಸಹಿತವಾದದ್ದು (ಸಹಪೂರ್ವಪದ ಬ. ಸ.) || ೩ ||

---

ರಲೆಂದು ನಾಗೇಂದ್ರನಾದ ಆದಿಶೇಷನು ಪಾರ್ವತೀಪ್ರಿಯ–ನಂ ಕೇಳಿಕೊಳ್ಳಲಾಗಿ ಗಿರಿಜಾ ವಲ್ಲಭನಾದ ಹರನು ತನ್ನಲ್ಲಿದ್ದ ಸಂಜೀವಕ ರತ್ನವನ್ನು ಆದಿಶೇಷನಿಗೆ ಸಂತೋಷದಿಂದ ಕೊಟ್ಟನು, ಸರ್ಪರಾಜನಾದರೊ ಜೀವರತ್ನವು ಸಿಕ್ಕಿದ್ದಕ್ಕಾಗಿ ಅತ್ಯಾನಂದಮುಂತಾಳಿ, ಪಾತಾಳಲೋಕಕ್ಕೆ ಬಂದು, ಗರುತ್ಮಂತನ ಬಾಧೆಯೇ ಇಲ್ಲದೆ ಸುಖವಾಗಿ ರಾಜ್ಯಭಾರಮುಂ ಗೈಯುತ್ತಲಿರುವನು, ಈಗ ಆ ಅಸಾಧಾರಣವಾದ ಮಣಿಯು ಫಣಿಪತಿಯಾದ ಆದಿಶೇಷನಲ್ಲಿರುವುದು, ಆ ನಾಗಾಧಿಪನನ್ನು ಗೆದ್ದು ಜೀವರತ್ನವನ್ನು ಸಾಧಿಸಿಕೊಂಡು ಬರತಕ್ಕ ಶೂರಾಗ್ರೇಸರರು ಈ ಮೂರು ಲೋಕದೊಳಗೇ ಇಲ್ಲವೆಂದು ನುಡಿದಳು. || ೨ || ಉಲೂಪಿಯು ಈ ತೆರನಾಗಿ ಹೇಳಿದ ನುಡಿಗಳನ್ನು ಬಭ್ರುವಾಹನನು ಕೇಳಿ, ಕೋಪಾಗ್ನಿಯಿಂದ ಬೆಂದು ತನಿಗೆಂಡಂಗಳಂ ಕಾರುತ್ತ, ಎಲೈ ಜನನಿಯಾದ ಉಲೂಪಿಯೆ, ನಾನು ಹೋಗಿ ಸಂಜೀವಕ ರತ್ನವನ್ನು ತಾರದಿದ್ದರೆ ನನ್ನನ್ನು ಚಿತ್ರಾಂಗದೆಯ ಮಗನೆಂದು ಕರೆಯಬೇಡ, ಈಗಲೆ ಹೋಗಿ ಮೊದಲು ಜೀವಮಣಿಯನ್ನು ತಂದು ಫಲುಗುಣನ ಹರಣವನ್ನು ಹಿಂದಿರುಗಿಸುವೆನು, ಸರ್ಪರಾಜನು ದಿವ್ಯರತ್ನವನ್ನು ಕೊಡಲು ತಿರಸ್ಕರಿಸಿದರೆ ಪಾತಾಳಲೋಕವನ್ನೆಲ್ಲಾ ಯಜ್ಞೇಶ್ವರನಿಗೆ ಆಹುತಿಯಾಗಿ ಮಾಡುವೆನು, ಇಂದ್ರಾದಿ ಅಷ್ಟದಿಕ್ಪತಿಗಳಾಗಲೀ, ಹರನಾಗಲಿ, ಕಮಲೋದ್ಭವನಾಗಲೀ ಯಾರು ಎದುರಾಳಾದರೂ ಅವರನ್ನು ನಿರ್ಮೂಲ ಮಾಡಿಬಿಡುವೆನು, ಈಗ ನಾನು ಅರ್ಜುನನ ಹೊಟ್ಟೆಯಲ್ಲಿ ಹುಟ್ಟಿದ್ದಕ್ಕೆ ಸಾರ್ಥಕವಾಗುವುದು, ಅನುಮಾನವಿಲ್ಲದೆ ಜೀವರತ್ನವನ್ನು ತಂ

ರಳ್ಳುವೆಂ | ಭಂಜಿಸುವೆನಖಿಳದಿಕ್ಪಾಲರಂ ಸೆಣಸಿದೊಡೆ | ಸಂಜಾತನಾದುದಕೆಸಫಲವಾಯಿತೆನುತುಬ್ಬಿ ದಂಬಭ್ರುವಾಹನಂದು॥೩॥ ಮರುಳಾಟಮೇಕೆನಿನ್ನಧಟುಕೊಳ್ಳದುಮಗನೆ | ಗರಳಮಯದುರಿಯೊಳೆವೆಸೀವುದು ಕಣಾನೋಡ | ಉರಗಪತಿಶೇಷರಾಜನ ಕೋಶವೆಡೆಯೊಳಿಹಸಂಜೀವಕದಮಣಿಯನು || ತರಬಲ್ಲನಾವವಂಗುಳಿಕವಾಸುಕಿತಕ್ಷ | ಕರಶಂಖಪದ್ಮಕರ್ಕೋಟಕಾದಿಗಳ ಭೀ | ಕರವಿಷೋತ್ಕರದಿಂದಕಾವುಬಲಿದಿಹುದೆನಲುಲೂಪಿಗವನಿಂತೆಂದನು ||೪|| ಆಮಹಾಹಿಗಳ ವಿಷಕಳುಕುವೆನೆತನ್ನಮಾ | ತಾಮಹಂಹರಿಗೆಹಾಸಿಗೆಯಾದವಂಮೇಲೆ | ಭೂಮಿಯಂಪೊತ್ತವಂಶೇಷರಾಜಂಘಾಸಿಯಹನೆಂಬಭಯಮಲ್ಲದೆ || ಆಮಣಿಯನೀಯ

ಟೀ|| ಮಗನೆ-ಕುವರನಾದ ಪಾರ್ಥಜನೆ, ಮರುಳಾಟಂ-ಹುಚ್ಚುತನವು, (ಅವಿವೇಕವು) ಏಕೆ-ಏನುಪ್ರಯೋಜನ, ನಿನ್ನ-ನಿನ್ನದಾದ, ಅಧಟು-ಸಾಮರ್ಥ್ಯವು, ಕೊಳ್ಳದು-ಪಾತಾಳಲೋಕದಲ್ಲಿ ಪ್ರಯೋಜನಕ್ಕೆ ಬರಲಾರದು, ನೋಡಲು-ನೋಡಿದಮಾತ್ರದಿಂದಲೆ, ಎವೆ-ಕಣ್ಣುರೆಪ್ಪೆಗಳೆಲ್ಲಾ, ಗರಳಮಯದ-ವಿಷದಿಂದ ಕೂಡಿದ, ಉರಿಯೊಳು-ಜ್ವಾಲೆಯಿಂದ ಸೀವುದುಕಣಾ-ಸೀದುಹೋಗುತ್ತದಲ್ಲವೆ, ಆವವಂ-ಯಾವಪರಾಕ್ರಮಿತಾನೆ, ಉರಗಪತಿ-ಸರ್ಪಾಧೀಶನಾದ, ಶೇಷರಾಜನ-ಆದಿಶೇಷನ, ಕೋಶದ-ಖಜಾನೆಯ, (ಬೊಕ್ಕಸದ) ಎಡೆಯೊಳು-ಸ್ಥಾನದಲ್ಲಿ, ಇಹ-ಇರತಕ್ಕ, ಸಂಜೀವಕದಮಣಿಯನು- ಜೀವರತ್ನವನ್ನು, ತರಬಲ್ಲನು-ತರಲು ಶಕ್ತನಾದಾನು, ಗುಳಿಕ-ಗುಳಿಕನೆಂಬ, ವಾಸುಕಿ-ವಾಸುಕಿ ಎನ್ನತಕ್ಕ, ತಕ್ಷಕ-ತಕ್ಷಕನೆಂಬ ಹೆಸರುಳ್ಳ, ಶಂಖ-ಶಂಖನೆನ್ನುವ, ಪದ್ಮ-ಪದ್ಮನೆನ್ನುವ, ಕರ್ಕೋಟಕರ-ಕರ್ಕೋಟಕನ, ಆದಿಗಳ-ಮೊದಲಾದವರ, ಭೀಕರ-ಅತಿಭಯಂಕರವಾದ, ವಿಷೋತ್ಕರದಿಂದ-ಹೆಚ್ಚಾದ ವಿಷದಿಂದ, ಕಾಹು-ಕಾವಲು, ಬಲಿದು-ಬಲವಾಗಿ, ಇಹುದು-ಇರುವುದು, ಎನಲು-ಎಂದು ನುಡಿಯಲು, ಅವನು-ಆ ಪಾರ್ಥಜನು, ಉಲೂಪಿಗೆ-ಉಲೂಪಿಯೊಂದಿಗೆ, ಇಂತು-ಮುಂದೆ ಹೇಳುವಂತೆ, ಎಂದನು-ನುಡಿದನು ||

ಅ|| ವಿ|| ವಿಷೋತ್ಕರ - ವಿಷ + ಉತ್ಕರ, (ಗುಣ ಸಂಧಿ) ಕಾಹು - "ಕಾ" ಎಂಬ ಧಾತುವಿನಿಂದುಂಟಾದ ಭಾವನಾಮ || ೪ ||

ಟೀ|| ತಾಯೆ-ಮಾತೆಯಾದ ಉಲೂಪಿಯೆ, ಆ ಮಹಾಹಿಗಳ-ಆ ದೊಡ್ಡ ಹಾವುಗಳ, ವಿಷಕೆ-ನಂಜಿಗೆ, ಅಳುಕುವೆನೆ-ಹೆದರುತ್ತೇನೆಯೇ, ತನ್ನ-ನನ್ನ, ಮಾತಾಮಹಂ-ತಾಯಿಗೆ ಜನಕನಾಗಿರುವ ಆದಿಶೇಷನೆಂಬ ಸರ್ಪರಾಜನು, ಹರಿಗೆ-ವೈಕುಂಠನಿವಾಸಿಯಾದ ಕೃಷ್ಣಸ್ವಾಮಿಗೆ, ಹಾಸಿಗೆಯು-ಹಾಸಿಗೆಯೋಪಾದಿಯಲ್ಲಿ, ಆದವಂ-ಆಗಿದ್ದಾನೆ, ಮೇಲೆ-ಇದೂ ಅಲ್ಲದೆ, ಭೂಮಿಯಂ-ಭೂಮಂಡಲವನ್ನು, ಪೊತ್ತವಂ-ಹೊತ್ತಿರತಕ್ಕವನು, ಆದ-ಆಗಿರುವ, ಶೇಷರಾಜಂ-ಹಾವುಗಳೊಡೆಯನು, ಘಾಸಿಯಹನು-ಆಯಸಂ ಗೊಳ್ಳುವನು, ಎಂಬ-ಎನ್ನತಕ್ಕ, ಭಯಂ-ಹೆದರಿಕೆಯು, ಅಲ್ಲದೆ-ಉಂಟಾಗಿದೆಯೆ ಹೊರತು, ಆಮಣಿಯನು-ಆ ಮಾಣಿಕ್ಯವನ್ನು, ಈಯದೊಡೆ-ಕೊಡದಿದ್ದರೆ, ಸಾಮರ್ಥ್ಯದಿಂದ-ಪರಾಕ್ರಮದಿಂದ, ಸಪ್ತ-ಏಳಾದ, ಪಾತಾಳಮಂ-ಪಾತಾಳಲೋಕಂಗಳನ್ನೂ, ಭೇದಿಸಿಕೊಂಡು-ಸೀಳಿಕೊಂಡು, ಬಂದು-ಬಂದವನಾಗಿ, ಸುತ್ರಾಮಸುತನಂ-ಪಾರ್ಥನನ್ನು, ಬದುಕಿಸದೆ-ಪ್ರಾಣವುಂಟಾಗುವಂತೆ ಮಾಡದೆ, ಮಾಣ್ದಪೆನೆ-ಇರುತ್ತೇನೆಯೆ, ಹೇಳು-ಉಸಿರು, ಎಂದೊಡೆ-ಎಂಬದಾಗಿ ಬಭ್ರುವಾಹನನು ಹೇಳಲು, ಇಂತು-ಮುಂದೆ ಹೇಳುವಂತೆ, ಎಂದಳು-ನುಡಿಯಲಾರಂಭಿಸಿದಳು ||

ಅ|| ವಿ|| ಮಹಾಹಿ-ಮಹ+ಅಹಿ (ಸ. ದೀ.) ಸುತ್ರಾಮ-ದೇವೇಂದ್ರನ, ಸುತ-ಕುವರನು, (ಷ. ತ.) || ೫ ||

ದು ಪಾರ್ಥನ ಪ್ರಾಣವನ್ನುಳಿಸುವೆ॥೩॥ನೆಂದು ಅತ್ಯುತ್ಸಾಹದಿಂದ ಕೂಡಿರುವ ಬಭ್ರುವಾಹನನನ್ನು ನೋಡಿ ಉಲೂಪಿಯು ಎಲೈ ಕುವರನೆ, ನಿನಿಗೇನು ಭ್ರಾಂತಿಯೋ ಕಾಣೆನು, ಸರ್ಪರಾಜನೆದುರಿಗೆ ನಿಲ್ಲಲು ನಿನಿಗೆ ಸಾಧ್ಯವೆ? ಅಲ್ಲಿಗೆ ಹೋದರೆ ವಿಷಮಯವಾದ ಉರಿಯನ್ನು ತಪ್ಪಿಸಿಕೊಂಡು ಬರಲು ನಿನ್ನಿಂದಾಗುವುದೆ? ಸರ್ಪರಾಜನಾದರೊ, ಆ ಮಣಿಯನ್ನು ತನ್ನ ಭಂಡಾರದೊಳಗಿರಿಸಿ, ಅತಿಯಾದ ವಿಷದಿಂದ ಕೂಡಿರುವ ಭಯಂಕರಾಕಾರರಾದ ಗುಳಿಕ, ವಾಸುಕಿ, ತಕ್ಷಕ, ಶಂಖ, ಪದ್ಮ, ಕರ್ಕೋಟಾದಿಗಳನ್ನು ಕಾವಲಿರಿಸಿರುವನು. ಅವರೆಲ್ಲರೂ ಬಹು ಜತನದಿಂದ ಕಾವಲಿರುವ ॥೪॥ ರೆಂಬದಾಗಿ ಹೇಳುತ್ತಲಿರುವ ಉಲೂಪಿಯನ್ನು ಕುರಿತು ಎಲೌ ತಾಯೆ ನೀನು ಹೇಳಿದ ಶಂಖ, ತಕ್ಷತ, ಗುಳಿಕಾದಿಗಳ ಘೋರವಿಷಕ್ಕೆ ನಾನೆಂದಿಗೂ ಹೆದರುವುದಿಲ್ಲವು, ನಿಮ್ಮ ತಂದೆಯಾದ ನಾಗೇಂದ್ರನು ಶ್ರೀಮನ್ನಾರಾಯಣನಿಗೆ ಹಾಸಿಗೆಯಾಗಿಯೂ ನನಿಗೆ ತಾತನಾಗಿಯೂ ಇರುವುದರಿಂದ ತೊಂದರೆಪಡಿಸುವುದು ಧರ್ಮವಿರುದ್ಧವೆಂಬ ಭಯವೇ ಅಲ್ಲದೆ ಮತ್ತೇನೂ ಇಲ್ಲವು, ಸರ್ಪರಾಜನು ಮಣಿಯನ್ನು ಕೊಡಲು ಹಿಂದೆಗೆದದ್ದೇ ಆದರೆ ಸಪ್ತಪಾತಾಳಂಗಳನ್ನು ಭೇದಿಸಿಕೊಂಡು ಜೀವರತ್ನವನ್ನು ತಂದು ಪಾರ್ಥನ ಪ್ರಾಣವನ್ನುಳಿಸದೆ ಬಿಡತಕ್ಕವನೇ ಅಲ್ಲವೆಂಬುದಾಗಿ ಹೇಳಿದನು ||೫|| ಆಗ ಉಲೂಪಿಯು ಎಲೈ ಅರ್ಜುನಿಯೇ ಕೇಳು, ಆ ನಾಗಲೋಕದಲ್ಲಿ ಒಂದು ಹೆಡೆ ಮೊದಲ್ಗೊಂಡು ಒಂಬತ್ತು ನೂರು ಹೆಡೆಗಳನ್ನುಳ್ಳ ಹೆಚ್ಚಾದ ಹಾವುಗಳು ತುಂಬಿವೆ. ಇವುಗಳೆಲ್ಲವೂ ಸಹಸ್ರ ಮುಖವುಳ್ಳ ಆದಿಶೇಷನನ್ನು ಸೇವಿಸುತ್ತಲಿರುವ

**ದೊಡೆಸಪ್ತ**ಪಾತಳಮಂ | ಸಾಮರ್ಥ್ಯದಿಂದಭೇದಿಸಿಕೊಂಡುಬಂದುಸು | ತ್ರಾಮಸುತನಂಬದುಕಿಸದೆಮಾಣ್ದಪೆನೆತಾಯೆಃಹೇಳೆಂದೊಡಿಂತೆಂದಳು ||೫|| ಒಂದುಮೊದಲೊಂಭತ್ತುನೂರುಕಡೆಯಾದಪೆಡೆ | ಯಿಂದೆಸೆವನಾಗಂಗಳತಿವಿಷೋಲ್ಬಣದ-ರಗ | ವೃಂದ ಮೋಲೈಸುವುದುಸಾವಿರಮೊಗದಶೇಷರಾಜಂಪಾತಾಳದ || ಮಂದಿರದೊಳೊಮ್ಮೊಮ್ಮೆಗರುಡನಲ್ಲಿಗೆಬಂದು | ಕೊಂದಹಿಗಳಂ ಬದುಕಿಪಡೆತೋರಿಸುವರಲ್ಲ | ದೆಂದುಂತೆಗೆಯರಾಮಣಿಯನೆಂದುಲೂಪಿನುಡಿಯಲ್ಕಾತನಿಂತೆಂದನು ||೬|| ಲೇಸನಾಡಿದೆತಾಯೆ ಪಾತಾಳದಲ್ಲಿಹನು | ಹಾಸರ್ಪಸಂಕುಲವನೆಲ್ಲಮಂಕೊಂದಳಿದ | ವಾಸವನಸುತನಂಮಡಿದವೀರವೃಷಕೇತುವಂಬಿದ್ದಸೈನಿಕವನು|| ಆಸುಮಣಿಯಂಕೊಂಡುಬಂದೆಬ್ಬಿಸಿದಬಳಿಕ | ಮಿಾಸಲಾಗಿರ್ದಸಂಜೀವಕಮನೀವೆಂಗ | ತಾಸುವಾಗಿರ್ದಫಣಿಗಳ್ಗೆಂದು ಪಾರ್ಥಜಂನುಡಿದೊಡವಳಿಂತೆಂದಳು ||೭|| ತನಯಕೇಳನ್ಯರೊಳ್ಕೊಂಬಕಜ್ಜದಮಾಳ್ಕೆ | ವಿನಯದಿಂದೆಸೆಗಿದೊಡೆಸಲೆಸುಗುಣ

ಟೀ|| ಒಂದು-ಒಂದೆಂಬ ಸಂಖ್ಯೆಯು, ಮೊದಲು-ಮೊದಲ್ಗೊಂಡು, ಒಂಭತ್ತು-ಒಂಭತ್ತೆನ್ನುವ, ನೂರು-ನೂರೆಂಬ ಸಂಖ್ಯೆಯು, ಕಡೆಯಾದ-ಕೊನೆಯಾಗಿರುವ, ಪೆಡೆಯಿಂದ-ಹೆಡೆಗಳಿಂದ, ಎಸೆವ-ಥಳಥಳಿಸುವ ನಾಗಂಗಳು-ಹಾವುಗಳು, ಅತಿ-ಬಹು ಹೆಚ್ಚಾದ, ವಿಷೋಲ್ಬಣದ-ಕ್ರೂರವಾದ ನಂಜಿನಿಂದ ಕೂಡಿದ, ಉರಗವೃಂದಂ-ಹಾವುಗಳ ಸಮುದಾಯವು, ಸಾವಿರ ಮೊಗದ-ಸಹಸ್ರ ಮುಖಗಳಿಂದ ಕೂಡಿದ, ಶೇಷರಾಜನಂ-ಆದಿಶೇಷನೆಂಬ ಸರ್ಪಗಳ ದೊರೆಯನ್ನು, ಓಲೈಸುವುದು-ಸೇವೆಯಂ ಗೈಯ್ಯುತ್ತಲಿರುವುದು, ಪಾತಾಳದ-ಪಾತಾಳಲೋಕದಲ್ಲಿಃತಕ್ಕ, ಮಂದಿರದೊಳು-ಗೇಹದೊಳಗೆ, ಒಮ್ಮೊಮ್ಮೆ-ಒಂದೊಂದು ಬಾರಿ, ಗರುಡನು-ಗರುತ್ಮಂತನು, ಅಲ್ಲಿಗೆ-ಆ ನಾಗಲೋಕಕ್ಕೆ, ಬಂದು - ಐತಂದು, ಕೊಂದ - ಕೊಂದುಹಾಕಿದ, ಅಹಿಗಳಂ-ಹಾವುಗಳನ್ನು, ಬದುಕಿಪಡೆ-ಜೀವವನ್ನುಂಟುಮಾಡುವುದಕ್ಕಾಗಿ, ಆಮಣಿಯನು-ಆ ಜೀವರತ್ನವನ್ನು, ತೋರಿಸುವರು-ತೋರಿಸುತ್ತಾರೆ, ಅಲ್ಲದೆ-ಆ ಕಾಲವನ್ನು ಬಿಟ್ಟರೆ, ಎಂದುಂ-ಯಾವಾಗಲೂ, ಆಮಣಿಯನು-ಆ ಜೀವರತ್ನವನ್ನು, ತೆಗೆಯರು-ತೆಗೆಯುವುದೇ ಇಲ್ಲವು, ಎಂದು-ಎಂಬತೆರನಾಗಿ, ಉಲೂಪಿಯು-ನಾಗಕನ್ನಿಕೆಯು, ನುಡಿಯಲ್ಕೆ-ಹೇಳಲಾಗಿ, ಆತನು-ಆ ಅರ್ಜುನಿಯು, ಇಂತು-ಮುಂದೆ ಹೇಳುವಂತೆ, ಎಂದನು-ನುಡಿದನು.

ಅ|| ವಿ|| ವಿಷೋಲ್ಬಣ + ವಿಷ = ಉಲ್ಬಣ (ಗು. ಸಂ.) ಮೊಗ (ತ್ಭ.) ಮುಖ (ತ್ಸ.) ||೬||

ಟೀ|| ತಾಯೆ-ಎಲೌ ಜನನಿಯೆ. ಲೇಸನಾಡಿದೆ-ಬಹು ಚೆನ್ನಾಗಿ ಹೇಳಿದೆ, ಪಾತಾಳದಲ್ಲಿ - ಪಾತಾಳಲೋಕದೊಳಗೆ, ಇಹ-ನೆಲಸಿರತಕ್ಕ, ಎಲ್ಲಮಂ-ಸಕಲವಾದ, ಮಹಾಸರ್ಪಸಂಕುಲವನು - ದೊಡ್ಡ ಹಾವುಗಳ ಸಮುದಾಯವನ್ನು, ಕೊಂದು-ಪ್ರಾಣವನ್ನು ಹೋಗಲಾಡಿಸಿಕೊಳ್ಳುವಂತೆ ಮಾಡಿ, ಅಳಿದ-ಪ್ರಾಣಗಳನ್ನು ನೀಗಿಕೊಂಡಿರತಕ್ಕ, ವಾಸವನ-ಇಂದ್ರನ, ಸುತನಂ-ಕುವರನಾದ ಪಾರ್ಥನನ್ನೂ, ಮಡಿದ-ಸತ್ತು ಹೋಗಿರುವ, ವೀರ - ಪರಾಕ್ರಮಿಯಾದ, ವೃಷಕೇತುವಂ - ವೃಷಧ್ವಜನನ್ನೂ, ಬಿದ್ದ-ನೆಲವನ್ನು ಕಚ್ಚಿರತಕ್ಕ, ಸೈನಿಕವನು-ದಳವನ್ನು ಸಹ, ಆಸುಮಣಿಯಂ-ಆ ಜೀವರತ್ನವನ್ನು, ಕೊಂಡುಬಂದು - ತೆಗೆದುಕೊಂಡು ಬಂದು, ಎಬ್ಬಿಸಿದಬಳಿಕ - ಬದುಕಿಸಿದ್ದಾದ ನಂತರ, ಮಿಾಸಲಾಗಿ - ಸತ್ತವರನ್ನು ಪುನಃ ಬದುಕಿಸಲೋಸುಗವೇ, ಇರ್ದ-ಇರತಕ್ಕ, ಸಂಜೀವಕವನು - ಸಂಜೀವಕವೆನ್ನುವ ರತ್ನವನ್ನು, ಗತಾಸುವಾಗಿ-ಪ್ರಾಣಗಳನ್ನು ನೀಗಿಕೊಂಡು, ಇರ್ದ-ಇದ್ದಂಥ, ಫಣಿಗಳ್ಗೆ-ಹಾವುಗಳಿಗೆ, ಈವೆ-ಕೊಟ್ಟುಬಿಡುತ್ತೇನೆ, ಎಂದು-ಎಂಬತೆರನಾಗಿ, ಪಾರ್ಥಜಂ-ಫಲುಗುಣನು, ನುಡಿದೊಡೆ-ಪೇಳಲಾಗಿ, ಅವಳು-ಆ ಉಲೂಪಿ ಎಂಬ ನಾಗಕನ್ನಿಕೆಯು, ಇಂತು-ಮುಂದೆ ಹೇಳುವಂತೆ, ಎಂದಳು-ಹೇಳಿದಳು. ||೭||

ಟೀ|| ತನಯ-ಕುವರನೆ, ಕೇಳು-ಲಾಲಿಸು, ಅನ್ಯರೊಳ್-ಇತರರಲ್ಲಿರುವುದನ್ನು, ಕೊಂಬ - ಪಡೆಯಬೇಕಾಗಿರುವ, ಕಜ್ಜದ-ಕಾರ್ಯದ, ಮಾಳ್ಕೆ-ಎಸಗುವಿಕೆಯು, ವಿನಯದಿಂದ-ನಮ್ರಭಾವದಿಂದ, ಎಸಗಿದೊಡೆ-ಮಾಡಿದ ಹಾಗಾದರೆ, ಸಲೆ-ಚನ್ನಾಗಿ,

ವು ಅಲ್ಲಿಗೆ ಯಾವಾಗಲಾದರೂ ವೈನತೇಯನು ಬಂದು ಸರ್ಪಗಳನ್ನು ಕೊಂದು ಹೋದಾಗ ಮಾತ್ರ ಆ ಮಣಿಯನ್ನು ತೋರಿಸುವರು, ಉಳಿದ ವೇಳೆಗಳಲ್ಲಿ ಅದನ್ನು ಈಜೆಗೆ ತೆರೆಯುವುದೇ ಇಲ್ಲವೆಂದು ನುಡಿಯುತ್ತಲಿರುವುದನ್ನು ಕೇಳಿ ಬಭ್ರುವಾಹನನು ತನ್ನ ಜನನಿಯಾದ ಉಲೂಪಿಯನ್ನು ಸಂಬೋಧಿಸಿ ||೬|| ಎಲೌ ಮಾತೆಯೇ, ಬಲು ಚನ್ನಾಗಿ ಹೇಳಿದೆ, ಪಾತಾಳಲೋಕದಲ್ಲಿರುವ ಅಶೇಷವಾದ ಸರ್ಪಗಳನ್ನೂ ಸಂಹರಿಸಿ ಸಂಜೀವಕ ಮಣಿಯನ್ನು ತಂದು, ಸತ್ತು ಬಿದ್ದಿರುವ ಅರ್ಜುನ ವೃಷಕೇತುಗಳನ್ನೂ ಈ ಅಪಾರವಾದ ಸೈನ್ಯವನ್ನೂ ಬದುಕಿಸಿದ ನಂತರ ಪಾತಾಳದಲ್ಲಿ ನನ್ನಿಂದ ಸತ್ತು ಬಿದ್ದ ಉರುಗಂಗಳ ಜೀವದಾನಕ್ಕಾಗಿ ಆ ದಿವ್ಯ ಮಣಿಯನ್ನು ಮತ್ತೆ ಆದಿಶೇಷನಿಗೆ ಕೊಟ್ಟು ಕಳುಹಿಸುವೆನು. ಇದರಲ್ಲಿ ಲೇಶವೂ ಅನುಮಾನವಿಲ್ಲವೆಂದು ನುಡಿದನು ||೭|| ಪಾರ್ಥಜನ ಈ ಪರಿಯಾದ ಶಪಥವನ್ನಾಲಿಸಿದ ನಂತರ ಉಲೂಪಿಯು ಪುತ್ತೆ ಅರ್ಜುನಾತ್ಮಜನನ್ನು ಕುರಿತು ಎಲೈ ಬಾಲಕನೆ, ಪರರ ಒಡವೆಯು ನಮ್ಮ ಕೈಗೆ ಬರಬೇಕಾದರೆ ಸವಿನುಡಿಯೇ ಸಾಧ್ಯವು. ನೀನು ಈ ಪರಿ ದುಡುಕಿದರೆ ಉಭಯರಿಗೂ ಬಹಳ

ಸಾದಪುದು| ಮೊನೆಯುಮೇಲಪ್ಪುದಾಯಾಸಮುಮಪ್ಪುದದರಿಂದನೀನತಿಕ್ರಮಿಸಬೇಡ|ತನಗುಂಟೊಳವುಪುಂಡರೀಕನೆಂಬಹಿಯೋರ್ವ| ನನುಕೂಲನೆಮ್ಮತಂದೆಗೆಮಂತ್ರಿತಾನೀಗ| ನೆನದೊಡಿಲ್ಲಿಗೆಬಪ್ಪನಾತನಂಕಳುಹಿತರಿಸುವೆನೆಂದಳಾಮಣಿಯನು ||೮|| ಇಂತೆಂದುಲೂಪಿಬಳಿಕಂಪುಂಡರೀಕನಂ | ಚಿಂತಿಸುವಿನಿಂಬಂದಿದೇಕೆಬರಿಸಿದೆಯೆನಲ | ನಂತನಲ್ಲಿಗೆಪೋಗಿನಿನ್ನತನುಜೆಯಕರ್ಣತಾಟಂಕದುಳಿವಗಳೆದ || ಕುಂತೀಕುಮಾರಕಂತನ್ನರಮಣಂಬದುಕು | ವಂತಮೃತಸಂಜೀವಕದಮಣಿಯನೀವುದೆಂದಂತರಿಸದಖಿವೃತ್ತಾಂತಮುಂಪೇಳ್ದಿದಂಕೊಂಡುಬಾನಡೆಯೆಂದಳು ||೯|| ಅಪುಂಡರೀಕಫಣಿಬಳಿಕದುಃಖಿತೆಯಾದು | ಲೂಪಿಯಂಸೈಪಿಟ್ಟಸಂ

---

ಸುಗುಣಂ-ಒಳ್ಳೇ ಗುಣದಿಂದಕೂಡಿದ್ದು, ಆದಪುದು_ಆಗುತ್ತದೆ, ಮೊನೆಯಮೇಲಿ-ಕಠಿಣೋಕ್ತಿಗಳನ್ನಾಡಿದ ಬಳಿಕ, ಆಯಾಸಂ-ಕಷ್ಟವು, ಅಪ್ಪುದು-ಆಗುತ್ತದೆ, (ಅದರಿಂದ) ಅಂತರದಿಂದ_ಮೃದುನುಡಿಗೂ ಕ್ರೂರವಚನಕ್ಕೂ ಈ ತೆರನಾದ ಭೇದವಿರುವುದರಿಂದ, ನೀನು_ನೀನಾದರೊ, ಅತಿಕ್ರಮಿಸಬೇಡ-ಮಿತಿಯನ್ನು ಮೀರಬೇಡ, ಪುಂಡರೀಕನೆಂಬ_ಪುಂಡರೀಕನೆಂಬ ಹೆಸರುಳ್ಳ, ಅಹಿಯೊರ್ವನು_ಒಂದು ಹಾವು, ತನಗೆ_ನನಗಾದರೊ, ಒಳವು-ಬೇಕಾದವನು, ಉಂಟು_ಆಗಿದಾನೆ, ಎಮ್ಮತಂದೆಗೆ - ನಮ್ಮ ತಂದೆಯಾವ ಆದಿಶೇಷನಿಗೆ, ಅನುಕೂಲನು-ಬೇಕಾದವನಾಗಿದಾನೆ, ಮಂತ್ರಿ_ಅವನಿಗೆ ಮುಖ್ಯಾಮಾತ್ಯನು, ತಾನು_ನಾನಾದರೊ,ಈಗ-ಈ ಕಾಲದಲ್ಲಿ, ನೆನೆದೊಡೆ_ಧ್ಯಾನಮಂ ಗೈದರೆ, ಇಲ್ಲಿಗೆ_ಈ ಎಡೆಗೆ, ಬಪ್ಪನು-ಬರುವನು, ಆತನಂ_ಆ ಪುಂಡರೀಕನನ್ನು, ಕಳುಹಿ-ಹೋಗುವಂತೆ ಒಪ್ಪಿಸಿ, ಆಮಣಿಯನು_ಆ ರತ್ನವನ್ನು, ತರಿಸುವೆನು - ತರಿಸುತ್ತೇನೆ, ಎಂದಳು - ಎಂಬದಾಗಿ ಉಲೂಪಿಯು ಬಭ್ರುವಾಹನನೊಂದಿಗೆ ಹೇಳಿದಳು.

ಅ|| ವಿ|| ಕಜ್ಜ (ತ್ಭ) ಕಾರ್ಯ (ತ್ಸ) ಬಪ್ಪನು "ಬರು" ಎಂಬ ಧಾತುವಿನ ಭೂತಕಾಲ, ಪುಂಡರೀಕ_ಹುಲಿ, ಪುಂಡರೀಕನೆಂಬ ಹೆಸರುಳ್ಳ ಸರ್ಪಶ್ರೇಷ್ಠನು, ಬೆಳ್ದಾವರೆ ಮತ್ತು ಕೆಂದಾವರೆ, ನೆನೆ - ಸ್ಮರಿಸುವುದು ಮತ್ತು ಒದ್ದೆಯಾಗುವುದು, (ಕ್ರಿಯಾರ್ಥಂಗಳು) |೮||

ಟೀ|| ಉಲೂಪಿ_ಉಲೂಪಿಯಾದರೊ, ಇಂತು_ಈ ತೆರನಾಗಿ, ಎಂದು_ಹೇಳಿ, ಅಪುಂಡರೀಕನಂ - ಆ ಪುಂಡರೀಕನೆಂಬ ಹಾವನ್ನು, ಸ್ಮರಿಸುವಿನಿಂ-ಚಿಂತಿಸಿದ ಮಾತ್ರಕ್ಕೇ, ಬಂದು_ತನ್ನ ಬಳಿಗೆ ಬಂದವನಾಗಿ, ಇದೇಕೆ_ಯಾವ ಪ್ರಯೋಜನಕ್ಕಾಗಿ, ಬರಿಸಿದೆ_ನನ್ನನ್ನು ಬರಮಾಡಿದೆ, ಎನಲು_ಎಂದು ಪುಂಡರೀಕನು ಪ್ರಶ್ನೆಯಂ ಗೆಯ್ಯಲು, ಅನಂತನಲ್ಲಿಗೆ-ಸರ್ಪರಾಜನಬಳಿಗೆ, ಪೋಗಿ_ಹೋದವನಾಗಿ, ನಿನ್ನ-ನಿನ್ನವಳಾದ, ತನುಜೆಯ - ಕುವರಿಯ, ಕರ್ಣತಾಟಂಕದ - ಕರ್ಣಾಭರಣದ, ಉಳಿವ_ಸ್ಥಿರತ್ವವನ್ನು, ಕಳೆದ-ನೀಗಿದ, ಕುಂತೀಕುಮಾರಕಂ_ಕುಂತೀದೇವಿಯ ಸುತನು, ತನ್ನ - ಉಲೂಪಿಯೆಂಬ ನಿನ್ನ ಕುವರಿಯ, ರಮಣಂ_ಕಾಂತನೂ ಆದ ಪಾರ್ಥನು, ಬದುಕುವಂತೆ-ಪ್ರಾಣಗಳನ್ನು ಪಡೆಯುವ ತೆರನಾಗಿ, ಮೃತ - ಸತ್ತು ಬಿದ್ದವರನ್ನು, ಸಂಜೀವಕದ_ಬದುಕುವಂತೆ ಮಾಡುವ, ಮಣಿಯನು-ಜೀವರತ್ನವನ್ನು, ಈವುದು-ಕೊಡಬೇಕು, ಎಂದು_ಎಂಬುದಾಗಿ, ಅಂತರಿಸದೆ-ಸ್ವಲ್ಪವಾದರೂ ಉಳಿಸದೆ, ಅಖಿಳ-ಸಕಲವಾದ, ವೃತ್ತಾಂತಮಂ_ವರ್ತಮಾನವನ್ನೂ, ಪೇಳ್ದು-ಹೇಳಿದವನಾಗಿ, ಅದಂ_ಆ ರತ್ನವನ್ನು, ಕೊಂಡುಬಾ_ತೆಗೆದುಕೊಂಡು ಬರುವನಾಗು, ನಡೆ_ಹೊರಡು, ಎಂದಳು_ಎಂಬದಾಗಿ ಹೇಳಿದಳು.

ಅ|| ವಿ|| ಕುಂತೀಕುಮಾರಕಂ (ಷ. ತ.) ||೯||

ಟೀ|| ಬಳಿಕ - ಉಲೂಪಿಯು ಈ ತೆರನಾಗಿ ಹೇಳಿದ ಮೇಲೆ, ಅಪುಂಡರೀಕಮಣಿ - ಆ ಸರ್ಪಶ್ರೇಷ್ಠನಾದ ಪುಂಡ

---

ಕಷ್ಟವಾಗುವುದಾದ್ದರಿಂದ ನೀನು ಸರ್ವಥಾ ಈ ದುಡುಕುಬುದ್ಧಿಯನ್ನು ಬಿಟ್ಟುಬಿಡು, ಆತುರವಂಪಡಲಾಗದು, ಸರ್ಪರಾಜನ ಮಂತ್ರಿಯಾದ ಪುಂಡರೀಕನೆಂಬವನು ನನಗೆ ಕೇವಲ ಆಪ್ತನಾಗಿದಾನೆ. ನಾನು ನೆನೆದರೆ ಅವನು ಇಲ್ಲಿಗೆ ಬರುವನು, ಆತನ ಮೂಲಕ ಸಂಜೀವಕ ಮಣಿಯು ಇಲ್ಲಿಗೆ ಬರುವಂತೆ ಮಾಡುವೆನು, ಸ್ವಲ್ಪ ಸುದಾರಿಸೆಂದು ನುಡಿದು,||೮|| ತನ್ನ ಮನದಲ್ಲಿ ಆ ಪುಂಡರೀಕನನ್ನು ಧ್ಯಾನಿಸಿದ ಮಾತ್ರಕ್ಕೇ ಆತನು ಬಂದು ಉಲೂಪಿಯ ಎದುರಿಗೆ ನಿಂತವನಾಗಿ, ನಾಗೇಂದ್ರನ ಕುವರಿಯನ್ನು ಕುರಿತು, ಎಲೌ ತಾಯೇ ನನ್ನನ್ನು ಬರಮಾಡಿಕೊಂಡ ಕಾರಣವೇನು? ಎಂಬುದಾಗಿ ಕೇಳಿದವನಾದನು. ಉಲೂಪಿಯಾದರೊ ಆ ಪುಂಡರೀಕನನ್ನು ನೋಡಿ, ಎಲೈ ಸರ್ಪವರ್ಯನೆ, ಕುಂತಿದೇವಿಯ ಮಗನಾದ ಅರ್ಜುನನ ಮರಣವು ನನ್ನ ಕರ್ಣಾಭರಣ ಮಾಂಗಲ್ಯಗಳನ್ನು ಹೋಗಲಾಡಿಸಿರುವುದೆಂದೂ, ಆ ಪಾರ್ಥನ ಪ್ರಾಣಗಳನ್ನು ಮತ್ತೆ ಪಡೆಯಲು ಸಂಜೀವಕ ಮಣಿಯು ಬೇಕೆಂದೂ ನಾನು ಕೇಳಿದೆನೆಂಬುದಾಗಿ ನಿನ್ನ ಒಡೆಯನೂ ನಮ್ಮ ತಂದೆಯೂ ಆದ ಆದಿಶೇಷನಿಗೆ ಇಲ್ಲಿಯ ಸಂಗತಿಯನ್ನೆಲ್ಲಾ ತಿಳಿಸಿ ತಡಮಾಡದೆ ಜೀವರತ್ನವನ್ನು ತೆಗೆದುಕೊಂಡು ಬಾರೆಂದು ನುಡಿದು ಬಹುವಾಗಿ ದುಃಖಿಸುತ್ತಲಿದ್ದಳು. ||೯|| ಪುಂಡರೀಕನಾದರೊ ಉಲೂಪಿಯ ಕಡುದುಃಖಮಂ ನೋಡಿ ತಾನೂ ಸಂಕಟಪಟ್ಟು ಆಕೆಯನ್ನು ಸಮಾಧಾನಪಡಿಸಿ ಆ ಉಲೂಪಿ

ಜೀವಕದಮಣಿಗೆ | ಪೋಪೆನಾನಹಿಪತಿಯ ಸಮಯಮಂ ಕಾಣ್ಬುದರಿದಲ್ಲಿತಳುವಾಗದಿರದು || ಈ ಪಾರ್ಥನಂಗಕಳಿವಾಗದಿರದನ್ನೆಗಂ | ರೂಪುಗೆಡದಂತೆ ಕಚ್ಚುವೆನೀಗಮದ್ವಿಷಂ | ವ್ಯಾಪಿಸಲೊಡಲ್ಕಳಲದೆನೆ ಬಭ್ರುವಾಹನಂಕೇಳ್ದುಮತ್ತಿಂತೆಂದನು||೧೦|| ಎಲೆಪುಂಡರೀಕ ಕೇಳೀಕರ್ಣಸಂಭವಂ | ಕಲಿಚೆಲ್ವನತಿಬಲಂ ಶುಚಿಸುಗುಣಿಕೋವಿದಂ | ಕುಲವಿವರ್ಧನನೀತನಂಗಮಂ ಕೆಡದಂತೆಮೊದಲೆನೀಂಕಚ್ಚಿ ಬಳಿಕ || ಫಲುಗುಣನ ದೇಹಮಂಕಚ್ಚೆನಲೊಡರ್ಚಿಫಣಿ | ತಿಲಕನವರೀರ್ವರಶರೀರಂಗಳಂ ಕಚ್ಚಿ ಸಲೆ ಸಂತವಿಟ್ಟುನಂಬಿಗೆಕೊಟ್ಟು ಬೀಳ್ಕೊಂಡು ಪಾತಾಳಕೈತಂದನು ||೧೧|| ಅತಳದಾಶ್ಚರ್ಯಮಂ ವಿತಳದವಿಚಿತ್ರಮಂ | ಸುತಳದಸುರುಚಿಯಂ ಮಹಾತಳದ ಮಣಿಮಯೋ | ನ್ನತಿಯಂತಳಾ ತಳದ ತಾಣದತಿಶಯಮಂ ರಸಾತಳದರಂಜಿತವನು || ಪ್ರತಿದಿನದೊ

ರೀಕನು, ದುಃಖಿತೆಯಾದ–ದುಃಖದಿಂದ ಕೂಡಿರತಕ್ಕ, ಉಲೂಪಿಯಂ–ಉಲೂಪಿಯೆಂಬ ನಾಗಕನ್ನಿಕೆಯನ್ನು, ಸೈಪಿಟ್ಟು–ಶಾಂತೋಕ್ತಿಗಳಿಂದ ದುಃಖವನ್ನು ಮರೆಯುವಂತೆ ಮಾಡಿ, ಆಂ–ನಾನಾದರೊ, ಸಂಜೀವಕದಮಣಿಗೆ–ಜೀವರತ್ನದ ಸಲುವಾಗಿ, ಪೋಪೆನು–ಹೋಟು ಹೋಗುತ್ತೇನೆ, ಅಹಿಪತಿಯ–ಸರ್ಪರಾಜನ, ಸಮಯಮಂಕಾಣ್ಬುದು–ಭೇಟಿಯಾಗುವ ಕಾಲವನ್ನು ನಿರೀಕ್ಷಿಸುವುದು, ಅರಿದು–ಅಸಾಧ್ಯವು, ಅಲ್ಲಿ–ಆದಿಶೇಷನ ಸಮಯ ನಿರೀಕ್ಷಣೆಯಲ್ಲಿ, ತಳುವಾಗದೆ–ತಡವಾಗದೆ, ಇರದು–ಇರುವುದಿಲ್ಲವು, ಈಪಾರ್ಥನ–ಈ ಧನಂಜಯನ, ಅಂಗಕೆ–ಅವಯವಕ್ಕೆ, ಅಳಿವು–ತೊಂದರೆಯು, ಆಗದೆಇರದು–ಆಗದೆ ಇರುವುದಿಲ್ಲವು, ಅನ್ನೆಗಂ–ಆ ಕಾಲದವರೆಗೂ, ರೂಪು–ಕಾಂತಿಯು, ಕೆಡದಂತೆ–ಕುಂದದತೆರನಾಗಿ, ಕಚ್ಚುವೆನು–ಕಚ್ಚಿ ಬಿಡುತ್ತೇನೆ, ಈಗ–ಈಗಲಾದರೊ, ಮದ್ವಿಷಂ–ನನ್ನನಂಜು, ವ್ಯಾಪಿಸಲು–ಆವರಿಸುವುದರಿಂದ, ಒಡಲ್–ದೇಹವು, ಕಳಲದು–ಕೆಟ್ಟುಹೋಗುದಿಲ್ಲವು, ಎನೆ–ಎಂದು ನುಡಿಯಲು, ಬಭ್ರುವಾಹನಂ–ಪಾರ್ಥಜನು, ಕೇಳ್ದು–ಕೇಳಿದವನಾಗಿ, ಮತ್ತೆ–ತಿರುಗಿ, ಇಂತು–ಮುಂದೆ ಹೇಳುವಂತೆ, ಎಂದನು–ನುಡಿದವನಾದನು. ||೧೦||

ಟೀ|| ಎಲೆಪುಂಡರೀಕ–ಎಲೈ ಪುಂಡರೀಕನೆಂಬ ಸರ್ಪಶ್ರೇಷ್ಠನೆ, ಕೇಳು–ಲಾಲಿಸು, ಈಕರ್ಣಸಂಭವಂ–ಈ ಕರ್ಣಸುತನಾದರೊ, ಕಲಿ–ಶೂರನು, ಚೆಲ್ವನು–ರೂಪಲಾವಣ್ಯಾತಿಶಯದಿಂದ ಮೆರೆಯತಕ್ಕವನು, ಅತಿಬಲಂ–ಬಹು ಬಲಿಷ್ಠನು, ಶುಚಿ–ಪವಿತ್ರನಾದವನು, ಸುಗುಣಿ–ಒಳ್ಳೆಗುಣಗಳಿಂದೊಡಗೂಡಿರತಕ್ಕವನು, ಕೋವಿದಂ–ಒಳ್ಳೆಯದು ಕೆಟ್ಟದ್ದೆಂಬ ವಿವೇಚನೆಯನ್ನರಿತವನು, ಕುಲ–ನಮ್ಮಚಂದ್ರವಂಶವನ್ನೆಲ್ಲಾ, ವಿವರ್ಧನಂ–ಮೇಲ್ಮೆಯಿಂದ ಮೆರೆಯುತ್ತಿರುವಂತೆ ಮಾಡುವವನು, ನೀಂ–ನೀನಾದರೊ, ಈತನ–ಈ ತೆರನಾದ ಗುಣಾವಳಿಯಿಂದೊಡಗೂಡಿದವನ, ಅಂಗಮಂ–ದೇಹವನ್ನು, ಕೆಡದಂತೆ–ಕೆಟ್ಟುಹೋಗದ ತೆರನಾಗಿ, ಮೊದಲೆ–ಪ್ರಾರಂಭದಲ್ಲಿಯೆ, ಕಚ್ಚಿ–ಕಚ್ಚಿದವನಾಗಿ, ಬಳಿಕ–ತರುವಾಯ, ಫಲುಗುಣನ–ಪಾರ್ಥನ, ದೇಹಮಂ–ಅವಯವವನ್ನು, ಕಚ್ಚು–ಕಚ್ಚುಬಿಡು, ಎಂದು–ಎಂದು ನುಡಿಯಲು, ಫಣಿಕುಲತಿಲಕನು - ಸರ್ಪಶ್ರೇಷ್ಠನಾದ ಪುಂಡರೀಕನು, ಒಡರ್ಚಿ–ಹಾಗೆಯೆ ಆಗಲೆಂದು ಒಪ್ಪಿ, ಅವರೀರ್ವರ–ಪಾರ್ಥ ಕರ್ಣಸುತರ, ಶರೀರಂಗಳಂ–ಅವಯವಗಳನ್ನೂ, ಕಚ್ಚಿ–ಕಡಿದು, ಸಲೆ–ಚನ್ನಾಗಿ, ಸಂತವಿಟ್ಟು–ಸಮಾಧಾನವನ್ನು ಹೇಳಿ, ನಂಬಿಕೆಗೊಟ್ಟು–ನೆಚ್ಚಿಕೊಂಡಿರುವಂತೆ ಹೇಳಿ, ಬೀಳ್ಕೊಂಡು–ಅವರ ಅನುಜ್ಞೆಯಂ ಪಡೆದವನಾಗಿ, ಪಾತಾಳಕೆ–ನಾಗಲೋಕಕ್ಕೆ, ಐತಂದನು–ಬಂದವನಾದನು ||೧೧||

ಟೀ|| ಅತಳದ – ಅತಳವೆನ್ನತಕ್ಕ ಲೋಕದ, ಆಶ್ಚರ್ಯಮಂ - ಅಚ್ಚರಿಯನ್ನೂ, ವಿತಳದ – ವಿತಳವೆನ್ನುವುದರ, ವಿಚಿತ್ರಮಂ–ವೈಚಿತ್ರ್ಯವನ್ನು, ಸುತಳದ–ಸುತಳವೆನ್ನುವುದರ, ಸುರುಚಿಯಂ – ಪ್ರಭೆಯನ್ನೂ, ಮಹಾತಳದ - ಮಹಾತಳವೆಂಬ ಪ್ರಪಂಚದ, ಮಣಿಮಯ–ರತ್ನವಿಕಾರವಾದ, ಉನ್ನತಿಯಂ–ಹೆಚ್ಚಿಕೆಯನ್ನೂ, ತಳಾತಳದ–ತಳಾತಳವೆನ್ನುವುದರ, ತಾಣದ–ಪ್ರ

ಯನ್ನು ಕುರಿತು, ನಾನಾದರೊ ಜೀವರತ್ನವನ್ನು ತರಲು ಹೋಗುವೆನು, ಆದಿಶೇಷನೊಂದಿಗೆ ಮಾತನಾಡಲು ತಕ್ಕ ಕಾಲವು ಒದಗುವುದೇ ಕಷ್ಟವು. ಸಮಯ ನಿರೀಕ್ಷಣೆಯಂ ಮಾಡಬೇಕಾಗ ಬಹುದು, ನಾನು ಹಿಂದಿರುಗಿ ಬರುವವರೆಗೂ ಈ ಪಾರ್ಥನ ಮೈಯಲ್ಲಿ ಕಾಂತಿಯು ಕುಂದದಂತೆ ಕಚ್ಚಿಹೋಗುವೆನು. ಇಲ್ಲವಾದರೆ ಶರೀರಕ್ಕೆ ಹಾನಿ ಬಂದೀತೆಂದು ನುಡಿದನು. ಆಗ ಬಭ್ರುವಾಹನನು ಈ ಮಾತನ್ನು ಕೇಳಿ. ||೧೦|| ಎಲೈ ಪುಂಡರೀಕನೆ, ಇಲ್ಲಿ ಬಿದ್ದುಇರುವ ಕರ್ಣನಂದನನಾದರೊ ಬಹು ಸುಂದರನು, ವೀರನು, ಸುಗುಣಸಾಂದ್ರನು, ಪವಿತ್ರನು, ಸಕಲಶಾಸ್ತ್ರಜ್ಞನು, ವಂಶಕ್ಕೆ ಹೆಸರನ್ನು ತರತಕ್ಕವನು, ಆದಕಾರಣ ಈತನ ದೇಹವು ಕೆಡದಂತೆ ನೀನು ಮೊದಲು ಕಚ್ಚಿ ಅನಂತರ ಕಿರೀಟಿಯ ಅಂಗವನ್ನು ಕಚ್ಚೆಂದು ನುಡಿಯಲು ಪುಂಡರೀಕನು ಆ ಪಾರ್ಥಜನ ಇಷ್ಟಾರ್ಥದಂತೆ ವೃಷಕೇತು ಧನಂಜಯರ ಅವಯವಂಗಳಂ ಕಚ್ಚಿದವನಾಗಿ, ಶಾಂತೋಕ್ತಿಗಳಿಂದ ಅವನನ್ನು ಸಂತೈಸಿ, ಜಾಗ್ರತೆಯಲ್ಲಿಯೇ ಸಂಜೀವಕ ಮಣಿಯನ್ನು ತರುವೆನೆಂಬ ನಂಬಿಕೆಯನ್ನಿತ್ತು ಅವರ ಅನುಜ್ಞೆಯಂ ಪಡೆದು ಹಿಂದಿರುಗಿದವನಾಗಿ || ೧೧ || ಅತಳಲೋಕದಚ್ಚರಿಯನ್ನೂ, ವಿತಳದಲ್ಲಿ ನಡೆಯುತ್ತಲಿರುವ ವೈಚಿತ್ರ್ಯಂಗಳನ್ನೂ, ಸುತಳವೆಂಬ ಪ್ರಪಂಚದ

ಳರಿದರಿವುತಾ ಪುಂಡರೀಕಫಣಿ | ಪತಿನೋಡಿನೋಡಿ ವಿಸ್ಮಿತನಾಗುತ್ತೈದಿದಂ | ವಿತತರತ್ನ ಪ್ರಭಾಶೋಭಿತದ ಪಾತಾಳಲೋಕದ ಹಿಪತಿಯುಪೊರೆಗೆ ||೧೨|| ಫಲಿತಕಾಂಚನವೃಕ್ಷಲತೆಗಳಬನಂಗಳಿಂ | ಜ್ವಲಿತನವರತ್ನಸೌಧಂಗಳಪುರಂಗಳಿಂ | ಕಲಿತಪೀಯೂಷದೀರ್ಘಿಕೆಗಳಿಂಕನಕಾರವಿಂದದಕೊಳಂಗಳಿಂದ || ಲಲಿತಲಾವಣ್ಯದುರಗಾಂಗನೆಯರಿಂಸಮಾ | ಕಲಿತಮಾಗಿಹಭೋಗವತಿಯನದಿಯಿಂದನಿ | ಶ್ಚಲಿತಸುಖನಿಲಯಮೆನಿಸಿರ್ದಪಾತಾಳಕ್ಕೆಪುಂಡರೀಕಂ ಬಂದನು || ೧೩ || ನವರತ್ನಮಯದಗೋಪುರದಕಾಂತಿಯುದಿವ್ಯ | ಭವನದಿಂನಾಗವಧುಗಳನೃತ್ಯಗೀತದು | ತ್ಸವದಿಂದಪುಣ್ಯಗಂಧೋತ್ಕರದಪದ್ಮವನಪುಷ್ಪವಾಟಿಕೆಗಳಿಂದ || ವಿವಿಧೋಪಚಾರಕೃತಪೂಜೆಗಳನಾನಾವಿ | ಭವದಿಂದೆಸೆವಮಹಾಹಾಟಕೇಶ್ವರನೆಂಬ | ಶಿವಲಿಂಗಮಿರೆಭೋಗವತಿಯ

---

ದೇಶದ, ಅತಿಶಯಮಂ-ಹೆಚ್ಚಿಕೆಯನ್ನೂ, ರಸಾತಳದ-ರಸಾತಳವೆಂಬ ಲೋಕದ, ರಂಜಿತವನು-ಕಾಂತಿಯನ್ನೂ, ಪ್ರತಿದಿನದೊಳು-ನಿತ್ಯವೂ, ಅರಿದರಿವುತ-ತಿಳಿದುತಿಳಿದುಕೊಳ್ಳುತ್ತಾ, ಆಪುಂಡರೀಕಫಣಿಪತಿ-ಆ ಪುಂಡರೀಕನೆಂಬ ಸರ್ಪಶ್ರೇಷ್ಠನು, ನೋಡಿನೋಡಿ-ಚನ್ನಾಗಿ ನಿರುಕಿಸಿ, ವಿಸ್ಮಿತನು-ಆಚ್ಚರಿಯಿಂದ ಕೂಡಿದವನು, ಆಗುತ-ಆಗಿ, ವಿತತ - ಹೆಚ್ಚಾದ, ರತ್ನ-ಮಣಿಗಳ, ಪ್ರಭಾ-ಕಾಂತಿಯಿಂದ, ಶೋಭಿತದ-ಪ್ರಕಾಶಿಸುತ್ತಲಿರುವ, ಪಾತಾಳಲೋಕದ-ಪಾತಾಳಲೋಕದಲ್ಲಿರತಕ್ಕ, ಅಹಿಪತಿಯ-ಸರ್ಪರಾಜನ, ಎಡೆಗೆ-ಹತ್ತಿರಕ್ಕೆ, ಐದಿದಂ-ಹೋಗಿ ಸೇರಿದನು ||೧೨||

ಟೀ|| ಫಲಿತ-ಫಲಭರಿತವಾದ, ಕಾಂಚನವೃಕ್ಷ-ಚಿನ್ನದ ತರುಗಳ, ಲತೆಗಳ-ಬಳ್ಳಿಗಳ, ಬನಂಗಳಿಂದ-ಉದ್ಯಾನಂಗಳಿಂದ, ಜ್ವಲಿತ-ಪ್ರಕಾಶಿಸುತ್ತಲಿರತಕ್ಕ, ನವರತ್ನ-ವಜ್ರವೈಡೂರ್ಯಾದಿಗಳಿಂದ ಕೆತ್ತಿದ, ಸೌಧಂಗಳ-ಮಹಡಿಗಳಿಂದೊಡಗೂಡಿದ, ಪುರಂಗಳಿಂ-ನಗರಗಳಿಂದ, ಕಲಿತ-ಕೂಡಿರತಕ್ಕ, ಪಿಯೂಷ-ಸುಧಾರಸದ, ದೀರ್ಘಿಕೆಗಳಿಂ-ಕೊಳಗಳಿಂದಲೂ, ಕನಕ-ಸುವರ್ಣಮಯವಾದ, ಅರವಿಂದದ-ತಾವರೆಗಳ ಸಮೂಹದಿಂದ ಕೂಡಿದ, ಕೊಳಂಗಳಿಂದ-ಕಾಸಾರಂಗಳಿಂದಲೂ, ಲಲಿತ-ಕೋಮಲೆಯರೂ, ಲಾವಣ್ಯ-ಸೊಬಗಿನಿಂದ ಕೂಡಿದವರೂ ಆದ, ಉರಗಾಂಗನೆಯರಿಂ-ನಾಗಕನ್ನಿಕೆಯರಿಂದ, ಸಮಾಕಲಿತಂ-ಸೇರಿದ್ದು, ಆಗಿಹ-ಆಗಿರತಕ್ಕ, ಭೋಗವತಿಯು-ಭೋಗವತಿಯನ್ನುವ, ನದಿಯಿಂದ-ನದಿಯಮೂಲಕವಾಗಿ, ನಿಶ್ಚಲಿತ-ಚಲಿಸದಿರುವ, (ಶಾಶ್ವಿತವಾದ) ಸುಖನಿಲಯಂ-ಸುಖಪರಂಪರೆಯಿಂದ ಕೂಡಿದ್ದು, ಎನಿಸಿರ್ದ-ಎನ್ನಿಸಿಕೊಂಡಿರತಕ್ಕ, ಪಾತಾಳಕ್ಕೆ-ಪಾತಾಳವೆನ್ನುವ ಲೋಕಕ್ಕೆ, ಪುಂಡರೀಕಂ-ಪುಂಡರೀಕನೆಂಬ ಸರ್ಪಶ್ರೇಷ್ಠನು, ಬಂದಂ-ಐತಂದನು ||

ಅ|| ವಿ|| ಬನ (ತ್ಭ) ವನ (ತ್ಸ) ಕನಕಾರವೆಂದ (ಸ. ದೀ.) ||೧೩||

ಟೀ|| ನವರತ್ನಮಯದ-ವಜ್ರವೈಡೂರ್ಯಾದಿ ಒಂಭತ್ತು ರತ್ನಗಳಿಂದ ಕೂಡಿದ, ಗೋಪುರದ-ಗೋಪುರಂಗಳ, ಕಾಂತಿಯ-ಪ್ರಕಾಶಂಗಳ, ದಿವ್ಯ-ಮನೋಹರವಾದ, ಭವನದಿಂ-ಮಂದಿರದಿಂದಲೂ, ನಾಗವಧುಗಳ-ಸರ್ಪಕನ್ನೆಯರ, ನೃಪ-ಕುಣಿಯುವಿಕೆಯು, ಗೀತದ-ಸಂಗೀತ ಮೊದಲಾದವುಗಳ, ಉತ್ಸವದಿಂದ-ವೈಭವದಿಂದಲೂ, ಪುಣ್ಯಗಂಧ-ಸುಕೃತಾಸ್ಪದವಾದ ಪರಿಮಳದ, ಉತ್ಕರದ-ಆಧಿಕ್ಯದಿಂದ ಕೂಡಿದ, ಪದ್ಮವನ-ಕಮಲಂಗಳಿಂದ ತುಂಬಿರುವ ಆರಾಮಂಗಳಿಂದಲೂ, ಪುಷ್ಪವಾಟಿಕೆಗಳಿಂದ, ಕುಸುಮಬನಂಗಳಿಂದಲೂ, ವಿವಿಧ-ತಂಡತಂಡವಾದ, ಉಪಚಾಪ-ಉಪಚಾರಾನೇಕಗಳಿಂದ, ಕೃತ-ರಚಿಸಲ್ಪಟ್ಟಿರುವ, ಪೂಜೆಗಳ-ಸಪರ್ಯೆಗಳ, ನಾನಾ-ವಿಧವಿಧವಾದ, ವಿಭವದಿಂದ-ಸಂಭ್ರಮಾತಿಶಯದಿಂದ, ಎಸೆವ-ಹೊಳೆಯುವ, ಮಹಾಹಾಟಕೇಶ್ವರನೆಂಬ-ಹಾಟಕೇಶ್ವರನೆಂಬ ನಾಮಧೇಯದಿಂದನ್ವಿತಮಾದ, ಶಿವಲಿಂಗಂ-ಹರಲಿಂಗವು, ಭೋಗವತಿಯ ತೀರದೊಳು-ಭೋಗವತೀ ನದಿಯ ದಡದೊಳಗೆ, ಇರೆ-ನೆಲಸಿರಲಾಗಿ, ಪುಂಡರೀಕಂ-ಪುಂಡರೀಕನೆಂಬ ಸರ್ಪಶ್ರೇಷ್ಠನು, ಕಂಡು-ನಿರುಕಿಸಿ,

---

ಕಾಂತ್ಯತಿಶಯವನ್ನೂ, ಮಹಾತಳಲೋಕದ ರತ್ನವೈಭವಂಗಳನ್ನೂ, ತಳಾತಳದ ಸ್ಥಾನದ ಮಹಿಮೆಯನ್ನೂ, ರಸಾತಳದ ತೇಜಸ್ಸನ್ನೂ ನೋಡಿ ಆಚ್ಚರಿಗೊಂಡವನಾಗಿ, ಅತ್ಯಧಿಕವಾದ ರತ್ನಕಾಂತಿಯಿಂ ದೇದೀಪ್ಯಮಾನವಾದ ಪಾತಾಳಲೋಕವಂ ಪೊಕ್ಕನು || ೧೨ || ಆ ಪಾತಾಳಲೋಕವಾದರೊ ಫಲಭರಿತಂಗಳಾದ ಸುವರ್ಣ ತರುಗಳು, ಬಳ್ಳಿಗಳು ಮೊದಲಾದವುಗಳಿಂದ ಕೂಡಿಯೂ, ಪ್ರಕಾಶಂಗಳಾದ ವಜ್ರ ವೈಡೂರ್ಯಾದಿಗಳಿಂ ಮೆರೆಯುವ ಮಹಡಿಯ ಮನೆಗಳಿಂದ ತುಂಬಿಯೂ, ಅಮೃತಪೂರಿತಂಗಳಾದ ಹೊಂಡಗಳಿಗೂ ಚಿನ್ನದ ಕಮಲಗಳಿಂದೊಡಗೂಡಿರುವ ಸರೋವರಗಳಿಗೂ ಆಕರವಾಗಿಯೂ, ಬಹು ಸುಕುಮಾರಿಯರಾದ ನಾಗಕನ್ನಿಕೆಯರ ವೈಭವದಿಂದೊಪ್ಪುತ್ತಲೂ, ಭೋಗವತಿ ಎಂಬ ನದಿಗೆ ಆಸರೆಯಾಗಿಯೂ ಇತ್ತು. || ೧೩ || ಆ ಭೋಗವತೀ ನದಿಯ ತಡಿಯಲ್ಲಿ ರತ್ನಖಚಿತಂಗಳಾದ ಗೋಪುರಗಳಿಂದೊಡಗೂಡಿದ ಆಲಯ ವೊಂದರಲ್ಲಿ ನಾಗವಧುಗಳ ನೃತ್ತಗೀತಾದಿ ವೈಭವಗಳಿಂದಲೂ, ಸುವಾಸನೆಯಂ ಬೀರುವ ತಾವರೆ ಹೂಗಳು, ಕುಸುಮೋದ್ಯಾನಂಗಳು ಇವುಗಳಿಂದ ಕೂಡಿಕೊಂಡು, ಬಗೆಬಗೆಯಾದ ಪೂಜೆಗಳಂ ಕೈಕೊಳ್ಳುತ್ತಾ ಮೆರೆಯುತ್ತಲಿರುವ ಹಾಟಕೇಶ್ವರನೆಂಬ ಶಿವಲಿಂಗವು ಇರಲು ಪುಂಡರೀಕನು

ತಟದೋಳ್ಕಂಡುಪುಂಡರೀಕಂಮಣಿದನು ‖ ೧೪ ‖ ದಿವ್ಯಭವನದೊಳನೇಕಾಸುರಸುರಾದಿನಿಖಿ | ಳವ್ಯಾಳವೃತನಾಗಿವರ ಫಣಾಮಣಿಸಹ | ಸ್ರವ್ಯೂಹದರ್ಚಿಯಿಂದುರುಕಾಯಕಾಂತಿಯಿಂದೇದೀಪ್ಯಮಾನನಾಗಿ ‖ ಅವ್ಯಾಕುಲದೊಳಚ್ಯುತಧ್ಯಾನ ದಿಂದಕ | ರ್ತವ್ಯದಿಂದವನಿಯಂತಾಳ್ದನರ್ಘ್ಯೋತ್ತಮ | ದ್ರವ್ಯಕಧಿಪತಿಯಾಗಿರಂಜಿಸುವಶೇಷನೋಲಗಕುರಗನೈತಂದನು ‖ ೧೫ ‖ ಪುಂಡರೀಕಂಸಮಯಮರಿದುರಗರಾಜನಂ | ಕಂಡೆರಗಿನುಡಿದನವಧರಿಸೆಲೆಫಣೀಂದ್ರಭೂ | ಮಂಡಲದರಾಯರೊಳ್ಪಾಂಡು ಸುತಕೌರವರ್ಗಾದುದಾಹವಮದರೊಳು ‖ ದಿಂಡುದರಿದಹಿತರಂಭೀಷ್ಮನಂಕೊಂದನಾ | ಖಂಡಲಾತ್ಮಜನದಂಪಾತಕಕೆನೃಪ

---

ಮಣಿದನು-ಪ್ರಣಾಮನಂಗೈದನು ‖ ೧೪ ‖

ಟೀ‖ ದಿವ್ಯ-ದೇವತೆಗಳಿಗೆ ಒಪ್ಪಿಕೆಯಾದ, ಭವನದೊಳು-ಮಂದಿರದಲ್ಲಿ, ಅನೇಕ-ಬಹು ಜನಗಳಿಂದ, ಅಸುರ-ರಕ್ಕಸರು, ಸುರ-ಬೃಂದಾರಕೋತ್ತಮರು, ಆದಿ-ಮೊದಲಾದವರಿಂದಲೂ, ನಿಖಿಳ-ಸಕಲರಾದ, ವ್ಯಾಳ-ಹಾವುಗಳಿಂದಲೂ, ವೃತನಾಗಿ-ಸುತ್ತುಗಟ್ಟಲ್ಪಟ್ಟವನಾಗಿ, ವರ-ಶ್ರೇಷ್ಠವಾದ, ಫಣಾ-ಹಣೆಗಳಲ್ಲಿರತಕ್ಕ, (ಹೆಡೆಗಳೊಳಗಿರುವ) ಮಣಿಸಹಸ್ರವ್ಯೂಹದ-ಸಾವಿರ ರತ್ನ ಸಮುದಾಯದ, ಅರ್ಚಿಯಿಂ-ತೇಜಸ್ಸಿನಿಂದ ಕೂಡಿದ, ಉರು-ಅಧಿಕವಾದ, ಕಾಯ-ದೇಹದ, ಕಾಂತಿಯಿಂ-ಪ್ರಕಾಶದಿಂದ, ದೇದೀಪ್ಯಮಾನನಾಗಿ-ಪ್ರಕಾಶದಿಂದ ಕೂಡಿ, ಅವ್ಯಾಕುಲದೊಳು-ಸ್ಥಿರಚಿತ್ತದಿಂದ, ಅಚ್ಯುತ-ನಾರಾಯಣನ, ಧ್ಯಾನದಿಂದ-ನೆನಪಿನಿಂದ, ಕರ್ತವ್ಯದಿಂದ-ಮಾಡಬೇಕಾದ ಕೆಲಸದಿಂದ, ಅವನಿಯಂ-ಭೂಮಂಡಲವನ್ನು, ತಾಳ್ದು-ಹೊಂದಿ, ಅನರ್ಘ್ಯ-ಅಪರೂಪವಾದ, ಉತ್ತಮ-ಮೇಲ್ಮೆಯನ್ನೈದಿದ, ದ್ರವ್ಯಕೆ-ಹಣದ ರಾಶಿಗೆ, ಅಧಿಪತಿಯಾಗಿ-ಒಡೆಯನಾಗಿ, ರಂಜಿಸುವ-ಹೊಳೆಹೊಳೆವ, ಶೇಷನ-ಸರ್ಪರಾಜನ, ಓಲಗಕೆ-ಸಭಾಭವನಕ್ಕೆ, ಉರಗನು-ಪುಂಡರೀಕನು, ಐತಂದನು-ಬಂದವನಾದನು ‖ ೧೫ ‖

ಟೀ‖ ಪುಂಡರೀಕಂ-ಪುಂಡರೀಕನೆಂಬ ಸರ್ಪವರ್ಯನು, ಸಮಯಂ - ದೊರೆಯೊಂದಿಗೆ ಮಾತನಾಡಲನುಕೂಲವಾದ ಕಾಲವನ್ನು, ಅರಿದು-ತಿಳಿದವನಾಗಿ, ಉರಗರಾಜನಂ-ಸರ್ಪಾಧೀಶನನ್ನು, ಕಂಡು-ಈಕ್ಷಿಸಿ, ಎರಗಿ-ಆ ಆದಿಶೇಷನಿಗೆ ವಂದನೆಯಂಗೈದು, ಎಲೆ ಫಣೀಂದ್ರ-ಹಾವುಗಳ ರಾಜನಾದ ಆದಿಶೇಷನೆ, ಅವಧರಿಸು-ನನ್ನ ವಿಜ್ಞಾಪನೆಯನ್ನಾಲಿಸು, ಭೂಮಂಡಲದ-ಪ್ರಪಂಚದ, ರಾಯರೊಳು-ಅರಸರಲ್ಲಿ, ಪಾಂಡುಸುತಕೌರವರ್ಗೆ-ಪಂಚಪಾಂಡವರಾದ ಧರ್ಮಾದಿಗಳಿಗೂ ದುರ್ಯೋಧನಾದಿ ಕೌರವರಿಗೂ ಸಹ, ಆಹವಂ-ಕಾಳಗವು, ಆದುದು-ಉಂಟಾಯಿತು, ಅದರೊಳು-ಆ ಹವದೊಳಗೆ, ಆಖಂಡಲಾತ್ಮಜನು-ಫಲುಗುಣನು, ಅಹಿತರಂ-ವೈರಿಗಳನ್ನು, ದಿಂಡುದರಿದು-ಶರೀರವನ್ನು ಸೀಳಿ, ಭೀಷ್ಮನಂ-ಭೀಷ್ಮನೆಂಬ ಗಂಗಾಪುತ್ರನನ್ನು, ಕೊಂದನು-ಕೊಂದು ಹಾಕಿದವನಾದನು, ನೃಪತಿ-ಯುಧಿಷ್ಠಿರನಾದರೊ, ಅವರ-ಕೌರವಾದಿಗಳನ್ನೂ, ಭೀಷ್ಮನೇ ಮೊದಲಾದವರನ್ನೂ, ಕೊಂದ-ಸಂಹರಿಸಿದ, ಪಾತಕಕೆ-ಕೊಲೆಯಪಾಪವೆಲ್ಲಾ ಹೋಗುವುದಕ್ಕಾಗಿ, ಕ್ರತುವನು-ಅಶ್ವಮೇಧವೆನ್ನುವ ಮಹಾ ಯಾಗವೊಂದನ್ನು, ಅಚ್ಯುತನ-ಕೃಷ್ಣಸ್ವಾಮಿಯ,ಆಜ್ಞೆಯಿಂ-ಅನುಜ್ಞೆಯನ್ನು ಕೊಟ್ಟದ್ದರಿಂದ, ಕೈಕೊಂಡನು-ಪ್ರಯತ್ನ ಮಾಡಿದನು, ಅರ್ಜುನಂಗೆ-ಪಾರ್ಥನಿಗಾದರೊ, ಗಂಗಾಶಾಪಂ-ಭೀಷ್ಮನನ್ನು ಅರ್ಜುನನು ಕೊಂದನಾದ್ದರಿಂದ ಅವನ ತಾಯಿಯಾದ ದೇವಗಂಗೆಯು ಅರ್ಜುನನು ಕುವರನಾದ ಪಾರ್ಥಿಯಿಂದ ಹತನಾಗಲೆಂಬ ಶಾಪವು, ಆದುದು-ಉಂಟಾಯಿತು, ಎಂದನು-ಎಂಬುದಾಗಿ ಹೇಳಿದನು.

---

ನೋಡಿ ಸಾಷ್ಟಾಂಗದಂಡಪ್ರಣಾಮಮಂ ಆಲಿಂಗಕ್ಕೆ ಅರ್ಪಿಸಿ ಅಲ್ಲಿಂದ ಮುಂದೆ ಹೊರಟು ಆದಿಶೇಷನ ಅರಮನೆಯಂ ಪ್ರವೇಶಿಸಿದನು ‖ ೧೪ ‖ ಆ ರಾಜಮಂದಿರದಲ್ಲಿ ಅನೇಕ ಸುರಾಸುರರಿಂದಲೂ ಸರ್ಪಾನೇಕಗಳಿಂದಲೂ ಕೂಡಿಕೊಂಡು ಸಹಸ್ರ ಹೆಡೆಗಳಲ್ಲಿಯೂ ಇರುವ ಸಾವಿರಾರು ರತ್ನಗಳ ಕಾಂತ್ಯತಿಶಯದಿಂದ ಮೆರೆಯುತ್ತ ಅಪರಿಮಿತವಾದ ಐಸಿರಿಯಿಂದೊಡಗೂಡಿದವನಾಗಿ ಸಭಾಮಂಟಪವನ್ನಲಂಕರಿಸಿರುವ ಸರ್ಪರಾಜನ ‖ ೧೫ ‖ ಸಮಯವರಿತು ಆ ರಾಜನಿಗೆ ಅಡ್ಡಬಿದ್ದು ಎಲೈ ಫಣಿನಾಯಕನೇ! ಕೇಳು, ಭೂಲೋಕದಲ್ಲಿ ಕೌರವರಿಗೂ ಪಾಂಡವರಿಗೂ ಯುದ್ಧವು ನಡೆದು ಅದರಲ್ಲಿ ಪಾಂಡುತನಯರಿಂದ ಧಾರ್ತರಾಷ್ಟ್ರರೆಲ್ಲಾ ಹತರಾದರು ಆ ಕದನದಲ್ಲಿಯೇ ಗಂಗಾಪುತ್ರನಾದ ಭೀಷ್ಮನನ್ನು ಪಾಂಡುಸುತನಾದ ಅರ್ಜುನನು ಕೊಂದುಹಾಕಿದನು ಕೌರವರ ವಂಶವೇ ಇಲ್ಲದಂತಾಯಿತು ಕುರುಪಾಂಡವರಿಗೆ ವಿದ್ಯಾಗುರುಗಳಾದ ಭೀಷ್ಮ ದ್ರೋಣಾದಿಗಳೂ ಕೂಡ ಹತರಾದರು ಆ ಬಳಿಕ ಪಾಂಡವರೇ ಹಸ್ತಿನಾವತಿಗೆ ಚಕ್ರವರ್ತಿಗಳಾದರು. ಹೀಗಿರುವಲ್ಲಿ ಪಾಂಡುಸುತನಾದ ಯುಧಿಷ್ಠಿರನು ತನಗುಂಟಾದ ಸುಖಸಾಮ್ರಾಜ್ಯಕ್ಕೆ ಹಿಗ್ಗಿ ಸುಮ್ಮನಿರದೆ ಯುದ್ಧದಲ್ಲಿ ದಾಯಾದರನ್ನೂ, ಗುರುಗಳನ್ನೂ ಕೊಂದ ಪಾಪಪರಿಹಾರಕ್ಕಾಗಿ ಕೃಷ್ಣಪ್ರೇರಣೆಯಿಂದ ಅಶ್ವಮೇಧಯಾಗವಂ ಮಾಡಲುಜ್ಜುಗಿಸಿ ಕುದುರೆಯ ಹಿಂದೆ ಅರ್ಜುನನನ್ನೂ ಅದರ ಬೆಂಗಾವಲ್ಗೆ ಕಳುಹಿದನು ಪಾರ್ಥನಾದರೂ ಅನೇಕ ರಾಜಾಧಿರಾಜರನ್ನೆಲ್ಲಾ ಜಯಿಸಿ ಅವರಿಂದ ಕಪ್ಪಕಾಣಿಕೆಗಳನ್ನೂ ತೆಗೆದುಕೊಳ್ಳುತ್ತಾ ಅಶ್ವರಕ್ಷಣೆಯಂ ಮಾಡುತ್ತಾ ದೇಶಗಳನ್ನು ಸುತ್ತುತ್ತಿದ್ದನು ಗಂಗಾದೇವಿಯು ತನ್ನ ಮಗನಾದ ಭೀಷ್ಮನನ್ನು ಅರ್ಜುನನು ಯುದ್ಧದಲ್ಲಿ ಕೊಂದನೆಂಬ ಸುದ್ದಿಯಂ ಕೇಳಿ

ತ್ಕೈ । ಕೊಂಡನಚ್ಯುತನಾಜ್ಞೆಯಿಂ ಕ್ರತುವನಾಯ್ತು ಗಂಗಾಶಾಪಮರ್ಜುನಂಗೆ ॥ ೧೬ ॥ ಆಜಾಹ್ನವಿಯ ಶಾಪದಿಂ ಬಭ್ರುವಾಹನಂ । ವಾಜಿಸಹಿತೈದಿದ ಧನಂಜಯನ ತಲೆಯುಮಂ । ಹಾಜಿಯೊಳ್ತರಿಯೆ ಪತಿಶೋಕಮಂ ತಾಳಲಾರದೆ ನಿನ್ನ ಮಗಳುಲೂಪಿ ॥ ತೇಜದಿಂದೆಸೆವ ಸಂಜೀವಕದ ಮಣಿಯಂ ಪ್ರ । ಯೋಜನಕೆ ತಹುದೆಂದು ಕಳುಹಿದೊಡೆ ಬಂದೆನಾ । ವ್ಯಾಜದಿಂದಿದೆ ನೋಡೆನುತ ಕೊಟ್ಟನವಳ ಕುರುಹಂ ಫಣಿಗಣೇಶ್ವರಂಗೆ ॥ ೧೭ ॥ ಆ ಪುಂಡರೀಕನಿಂತೆಂದುರಗರಾಜಂಗು । ಲೂಪಿ ಕಳುಹಿದ ಕರ್ಣಕಂಠಭೂಷಣದಸ್ವ । ರೂಪಮುಂ ಮುಂದಿರಿಸಿ ನಿನ್ನ ನಿಜಜಾಮಾತನರ್ಜುನಂ ಸುಜನನಿಳೆಗೆ ॥ ಶ್ರೀಪತಿಯ ಸಖನಿಂದ್ರಸೂನು ಧರ್ಮಾನುಜಂ ।

ಅ॥ ವಿ॥ ಫಣೀಂದ್ರ (ಸ. ದಿ.) ದಿಂಡುದರಿದು (ವ್ಯಂಜನಸಂಧಿ) ಆಖಂಡಲಾತ್ಮಜನು ಆತ್ಮಜ=ಆತ್ಮ-ತನ್ನಲ್ಲಿ, ಜ-ಹುಟ್ಟಿದವನು (ಸ. ತ) ಆಖಂಡಲ-ದೇವೇಂದ್ರನ, ಆತ್ಮಜ-ಮಗನು (ಅರ್ಜುನನು ಷ. ತ.) ॥೧೬॥

ಟೀ॥ ವಾಜಿಸಹಿತ-ಅಶ್ವಸಮೇತನಾಗಿ, ಐದಿದ-ಕುದುರೆಯ ಬೆಂಗಾವಲಿನ ಸಲುವಾಗಿ ಬಂದ, ಧನಂಜಯನ-ಫಲುಗುಣನ, ತಲೆಯುಂ-ಉತ್ತಮಾಂಗವನ್ನು, ಬಭ್ರುವಾಹನಂ-ಪಾರ್ಥಸುತನು, ಮಹಾಜಿಯೊಳ್-ದೊಡ್ಡ ಯುದ್ಧದಲ್ಲಿ, ಆ ಜಾಹ್ನವಿಯ-ಆಸುರನದಿಯು, ಶಾಪದಿಂದ-ಕೊಟ್ಟವರದಿಂದ, ತರಿಯೆ-ಛೇದಿಸಲು, ನಿನ್ನ ಮಗಳು-ನಿನ್ನ ಸುತೆಯಾದ ಉಲೂಪಿಯಾದರೊ ಪತಿಶೋಕಮಂ-ಗಂಡನು ಸತ್ತ ದುಃಖವನ್ನು, ತಾಳಲಾರದೆ-ಸಹಿಸಲಶಕ್ತಳಾಗಿ, ತೇಜದಿಂದ-ಹೆಚ್ಚಾದ ಕಾಂತಿಯಿಂದ, ಎಸೆವ-ಹೊಳೆಯುವ, ಸಂಜೀವಕದ ಮಣಿಯನು-ಜೀವರತ್ನವನ್ನು, ಪ್ರಯೋಜನಕೆ- ಪಾರ್ಥನನ್ನು ಜೀವಸಹಿತನಾಗುವಂತೆ ಮಾಡಲು, ತಹುದು-ತರಬೇಕು, ಎಂದು-ಎಂಬುದಾಗಿ, ಕಳುಹಿದೊಡೆ-ಕಳುಹಿಸಲಾಗಿ, ಈ ವ್ಯಾಜದಿಂದ-ಈ ನಿಮಿತ್ತದಿಂದ, ಇದೆ-ಇಗೊ, ನೋಡು-ಈಕ್ಷಿಸು, ಎನುತ-ಎಂದು ನುಡಿಯುತ್ತ, ಫಣಿಗಣೇಶ್ವರಂಗೆ-ಆದಿಶೇಷನಿಗೆ, ಅವಳ-ಆತನ ಕುವರಿಯ, ಸಂಬಂಧದ, ಕುರುಹಂ-ಲಾಂಛನವನ್ನು, (ಗುರುತನ್ನು) ಇತ್ತನು-ಕೊಟ್ಟವನಾದನು.

ಅ॥ ವಿ॥ ಫಣಿಗಣೇಶ್ವರಂಗೆ ಫಣಿ-ಹಾವುಗಳ, ಗಣ-ಗುಂಪು (ಷ. ತ.) ಫಣಿಗಣದ ಈಶ್ವರ (ಷ. ತ.) ಗಣೇಶ್ವರ ಗು. ಸಂ.) ॥೧೭॥

ಟೀ॥ ಆ ಪುಂಡರೀಕನು-ಆ ಪುಂಡರೀಕನೆಂಬ ಸರ್ಪಶ್ರೇಷ್ಠನು, ಇಂತು-ಈ ಪರಿಯಾಗಿ, ಎಂದು-ನುಡಿದು, ಉಲೂಪಿ-ಉಲೂಪಿಯೆಂಬ ಆದಿಶೇಷನ ಕುವರಿಯು, ಕಳುಹಿದ-ಕಳುಹಿಸಿಕೊಟ್ಟ, ಕರ್ಣ-ಕಿವಿಗಳಲ್ಲಿಟ್ಟುಕೊಳ್ಳುವ, ಕಂಠ-ಕತ್ತಿಗೆ ಹಾಕಿಕೊಳ್ಳುವ, ಭೂಷಣದ-ಒಡವೆಗಳ, ಸ್ವರೂಪಮುಂ-ಆಕೃತಿಯನ್ನು, ಉರಗರಾಜಂಗೆ- ಸರ್ಪರಾಜನಿಗೆ, ಮುಂದೆ-ಎದುರಾಗಿ, ಇರಿಸಿ-ಇಟ್ಟವನಾಗಿ, ನಿನ್ನ-ನಿನ್ನವನಾದ, ನಿಜ-ಸ್ವಕೀಯನಾದ, ಜಾಮಾತನು-ಅಳಿಯನಾದ ಪಾರ್ಥನು, ಇಳೆಗೆ-ಭೂಮಂಡಲದಲ್ಲೆಲ್ಲಾ, ಸುಜನನು-ಮೇಲಾದವನು, ಶ್ರೀಪತಿಯ-ಲಕ್ಷ್ಮೀಕಾಂತನಾದ ಕೃಷ್ಣಮೂರುತಿಯ, ಸಖನು-ಸ್ನೇಹಿತನು, ಇಂದ್ರಸೂನು-ಇಂದ್ರನ ಕುವರನು, ಧರ್ಮಾನುಜಂ-ಯುಧಿಷ್ಠಿರನ ಸಹಜಾತನು, ಭೂಪಾಲರೊಳ್-ಅರಸುಗಳ ಸಮುದಾಯದಲ್ಲೆಲ್ಲಾ, ಪೆಸರ್ವಡೆದವಂ-ಪ್ರಸಿದ್ಧನಾದವನು, ಜೀವಿಸೆ-ಪ್ರಾಣಗಳನ್ನು ತಾಳಿದ್ದರೆ, ಪರೋಪಕಾರಂ-ಇತರರಿಗೆ ನೆರವಾಗತಕ್ಕವನು, ನಿನಿಗೆ-ನಿನಿಗಾದರೊ, ಪೊಲ್ಲಂ-ಬೇರೆಯಾದವನಲ್ಲವು, ಆದರಿಂದ-ಆ ನಿಮಿತ್ತದಿಂದ, ಮಣಿಯನು-ಜೀವರತ್ನವನ್ನು, ಈವುದು-ಕೊಡುವುದರಲ್ಲಿ ಬಾಧಕವೇನೂ ಇಲ್ಲವು, ಎಂದನು-ಎಂದು ನುಡಿದನು.

ಅ॥ ವಿ॥ ಧರ್ಮಾನುಜಂ (ಸ. ದೀ.) ಪರೋಪಕಾರ-ಪರ+ಉಪಕಾರ (ಗು. ಸಂ.) ॥೧೮॥

ಬಹುವಾಗಿ ದುಃಖಿಸಿ ನನ್ನ ಮಗನನ್ನು ಕೊಂದ ಕಿರೀಟಿಯ ತಲೆಯನ್ನು ಅವನ ಸುತನು ಛೇದಿಸಿಬಿಡಲೆಂಬದಾಗಿ ಶಾಪವಂ ಕೊಟ್ಟಳು ಪಾರ್ಥನಾದರೊ ನಾನಾದೇಶಗಳಂ ಸುತ್ತಿಸುತ್ತಿ ಕೊನೆಗೆ ತನ್ನ ಮಗನಾದ ಬಭ್ರುವಾಹನನ ರಾಜಧಾನಿಯ ಬಳಿಗೆ ಬಂದನು ಅಲ್ಲಿ ಪಾರ್ಥ ಪಾರ್ಥಾನುಜರಿಗೇನೇ ಘೋರ ಯುದ್ಧವಾಯಿತು ॥೧೬॥ ಗಂಗಾಂಬಿಕೆಯ ಕ್ರೂರವಾದ ಶಾಪದ ಬಲದಿಂದ ಬಭ್ರುವಾಹನನು ಅರ್ಜುನನ ತಲೆಯನ್ನು ಕತ್ತರಿಸಿ ಹಾಕಿದನು ಈ ಧನಂಜಯನ ಮರಣವೇ ನಿನ್ನ ಕುವರಿಯೂ ಅರ್ಜುನನ ಕಾಂತೆಯೂ ಆದ ಉಲೂಪಿಯನ್ನು ಅಪಾರವಾದ ಶೋಕ ಸಾಗರದಲ್ಲಿ ಮುಳುಗಿಸಿರುವುದು ಕಿರೀಟಿಯು ಜೀವವನ್ನು ಮತ್ತೆ ಪಡೆದ. ಶೋಕಸಾಗರವಂ ಬಿಟ್ಟು ಸಂತೋಷದ ಕಡಲನ್ನೈದಬೇಕೆಂಬಿಚ್ಛೆಯಿಂದ ನಿನ್ನ ತನುಜೆಯಾದ ಉಲೂಪಿಯು ನಿನ್ನಲ್ಲಿರುವ ಸಂಜೀವಕ ಮಣಿಯನ್ನು ತೆಗೆದುಕೊಂಡು ಬಾರೆಂದು ನನ್ನನ್ನು ಕಳುಹಿಸಿರುವಳು ನನ್ನ ಮಾತು ಸಟೆಯೆಂದೆಣಿಸಕೂಡದೆಂದು ನುಡಿದು ಉಲೂಪಿಯು ಕೊಟ್ಟದ್ದ ಕುರುಹುಗಳನ್ನು (ಆಭರಣಂಗಳನ್ನು) ಸರ್ಪರಾಜನ ಕೈಯ್ಯಲ್ಲಿ ಕೊಟ್ಟು ॥೧೭॥ ಎಲೈ ನಾಗೇಂದ್ರನೆ ಅರ್ಜುನನು ನಿನಗೆ ಅಳಿಯನಾಗಬೇಕು ಲೋಕದಲ್ಲೆಲ್ಲಾ ಮೇಲಾದವನು ಲಕ್ಷ್ಮೀಕಾಂತನಾದ ಕೃಷ್ಣನಿಗೆ ಪರಮ ಮಿತ್ರನು ದೇವೇಂದ್ರನ ಮಗನು ಧರ್ಮಾತ್ಮನಾದ ಧರ್ಮರಾಯನ ತಮ್ಮನು ರಾಜಾಗ್ರಣಿಯು ಅರ್ಜುನನನ್ನು ಬದುಕಿಸುವುದ

ಭೂಪಾಲರೋಳ್ಪೆಸರ್ವಡೆದವಂಜೀವಿಸೆಪ | ರೋಪಕಾರಂಪೊಲ್ಲನುಲ್ಲನಿನಗದರಿಂದಕೊಡುವುದುಮಣಿಯನೆಂದನು ‖ ೧೮ ‖
ಶೇಷರಾಜಂಬಳಿಕತನ್ನತನುಜೆಯಕರ್ಣ | ಭೂಷಣವನಾಕಂಠಸೂತ್ರಮುಂಕಂಡುಸಂ | ತೋಷವರ್ಜಿತನಾಗಿಪೊರೆಯೊಳಿಹ
ತಕ್ಷಕಾದ್ಯಹಿಪತಿಗಳಂನೋಡುತ ‖ ದೋಷಮೇನಿದಕೆಮಣಿಯಂಕೊಡುವೆನೈಸಲೆವಿ | ಶೇಷಫಲಮಹುದಾರ್ಜಿಸಿದವಸ್ತು
ಲೋಗರಭಿ | ಲಾಷೆಗಾದೊಡೆಪಾರ್ಥನುತ್ತಮಂವೈಷ್ಣವಂಜಾಮಾತನೆಮಗೆಂದನು ‖ ೧೯ ‖ ಕೇಳಿದುಮ್ಮಾನದಿಂತಮ
ತಮಗೆನಿಖಿಳಸ | ರ್ಪಾಳಿಚಿಂತಿಸೆಬಳಿಕಧೃತರಾಷ್ಟ್ರನೆಂಬದು | ರ್ವ್ಯಾಳಪತಿನುಡಿದನೆಲೆನಾಗೇಂದ್ರತಮ್ಮವಸರಕ್ಕೆಬಹು
ದದನನ್ಯರ ‖ ವೇಳೆಗಿತ್ತೊಡೆತಿರುಗಿಬಂದಪುದೆಮಾನವ | ಖೂಳಕೃತಘ್ನರುಪಕಾರಮುಂಬಲ್ಲರೆವೃ | ಥಾಲೋಚನೆಗ
ಳೇತಕಿದಕೆಮಣಿಯಂಕೊಡದಿರೆನಲಾಫಣಿಪನಿಂತೆಂದನು ‖ ೨೦ ‖ ನಾಡೊಳೂರೊಳ್ಮನೆಯೊಳೋರೋರ್ವರುಂಜಿಪರ | ಪೀಡೆ

---

ಟೀ‖ ಶೇಷರಾಜಂ - ನಾಗಾಧಿಪನಾದ ಆದಿಶೇಷನಾದರೊ, ಬಳಿಕ_ಪುಂಡರೀಕನು ತನ್ನೆದುರಿಗೆ ಉಲೂಪಿಯ ಒಡವೆಗಳನ್ನಿರಿಸಿ ಜೀವರತ್ನವನ್ನು ಅರ್ಜುನನ ಪ್ರಾಣದಾನಕ್ಕಾಗಿ ಕೊಡಬೇಕೆಂದು ಕೇಳಿದ ನಂತರ, ತನ್ನನುಜೆಯು - ತನ್ನ ಕುವರಿಯ, ಕರ್ಣಭೂಷಣವನು-ಕರ್ಣಾಭರಣವನ್ನೂ, ಕಂಠಸೂತ್ರಮುಂ-ಮಾಂಗಲ್ಯದೊಂದಿಗಿರುವ ಒಡವೆಯನ್ನೂ, ಕಂಡು_ನಿರುಕಿಸಿ, ಸಂತೋಷವರ್ಜಿತನಾಗಿ-ಕಡುದುಃಖದಿಂದ ಕೂಡಿ, ಪೊರೆಯೊಳು-ಪಕ್ಕದಲ್ಲಿ, ಇಹ_ಇಂತಕ್ಕ, ತಕ್ಷಕ_ತಕ್ಷಕನೇ, ಆದಿ-ಮೊದಲಾಗಿರುವ, ಅಹಿಪತಿಗಳಂ_ಸರ್ಪವರ್ಯರನ್ನು, ನೋಡುತ-ಈಕ್ಷಿಸುತ್ತ, ಮಣಿಯಂ-ಸಂಜೀವಕ ಮಣಿಯನ್ನು, ಕೊಡುವೆನು-ಅರ್ಜುನನಿಗಾಗಿ ಕೊಡುತ್ತೇನೆ, ಇದಕೆ_ಈ ವಿಷಯದಲ್ಲಿ, ದೋಷಂ_ಬಾಧಕವು, ಏನು_ಏನುತಾನೆ, ಇಹುದು_ಇರುವುದು, ಆರ್ಜಿಸಿದ_ಗಳಿಸಿದ, ವಸ್ತು-ವಸ್ತುವಾದರೊ, ಲೋಗರ_ಪ್ರಪಂಚದ ಪ್ರಜೆಗಳ, ಅಭಿಲಾಷೆಗೆ_ಕೋರಿಕೆಗೆ, ಆದೊಡೆ-ಆದಪಕ್ಷದಲ್ಲಿ, ಐಸಲೆ_ಇನ್ನೂ, ವಿಶೇಷ_ಹೆಚ್ಚಾದ, ಫಲಂ-ಪ್ರಯೋಜನವು, ಅಹುದು_ಆಗುತ್ತದೆ, ಪಾರ್ಥನು-ಫಲುಗುಣನಾದರೊ, ಉತ್ತಮಂ-ಬಹು ಒಳ್ಳೆಯವನು, ವೈಷ್ಣವಂ-ಕೃಷ್ಣನ ಭಕ್ತನು ಮತ್ತು ಸ್ನೇಹಿತನು, ಎಮಗೆ-ನನಗಾದರೊ, ಜಾಮಾತನು-ಅಳಿಯನಾಗಬೇಕು, ಎಂದನು_ಎಂಬುದಾಗಿ ನುಡಿದನು ‖೧೯‖

ಟೀ‖ ಕೇಳಿ-ಆದಿಶೇಷನು ಸಂಜೀವಕ ಮಣಿಯನ್ನು ಕೊಡುತ್ತೇನೆಂದು ಹೇಳಿದ್ದನ್ನು ಕೇಳಿದವರಾಗಿ, ಅಖಿಳ_ಸಕಲರಾದ, ಸರ್ಪಾಳಿ_ಸರ್ಪಗಳ ಸಮುದಾಯವು, ತಮತಮಗೆ_ತಮ್ಮತಮ್ಮಷ್ಟರಲ್ಲಿ, ದುಮ್ಮಾನದಿಂ_ಮಣಿಯನ್ನು ಕೊಡುವನೆಂಬ ದುಃಖದಿಂದ, ಚಿಂತಿಸೆ_ಆಲೋಚನೆಯಂ ಗೈಯ್ಯುತ್ತಲಿರಲಾಗಿ, ಬಳಿಕ_ಆಮೇಲೆ, ಧೃತರಾಷ್ಟ್ರನೆಂಬ_ಧೃತರಾಷ್ಟ್ರನೆಂಬ ಹೆಸರುಳ್ಳ, ದುರ್ವ್ಯಾಳಪತಿ-ದುರ್ಮಾರ್ಗಿಯಾದ ಸರ್ಪರಾಜನು, ನುಡಿದನು_ಮುಂದೆ ಹೇಳುವಂತೆ ಹೇಳಿದನು, ಎಲೆನಾಗೇಂದ್ರ-ಎಲೈ ಪನ್ನಗಾಧೀಶ್ವರನೆ, ನಮ್ಮ-ನಿಮ್ಮ, ಅವಸರಕೆ-ವೇಳೆಗೆ, ಬಹುದು-ಬರತಕ್ಕದ್ದಾಗಿದೆ, ಅದ-ಅಂತಹ ಮಣಿಯನ್ನು, ಅನ್ಯರ, ಹೆರವರ, ವೇಳೆಗೆ_ಕಾಲಕ್ಕೆ, ಇತ್ತೊಡೆ-ಕೊಟ್ಟಹಾಗಾದರೆ, ತಿರುಗಿ_ಮತ್ತೆ, ಬಂದಪುದೆ_ಬಂದೀತೆ, ಮಾನವರು - ನರರಾದರೊ, ಖೂಳರು_ಬಹು ದುಷ್ಟರು, ಕೃತಘ್ನರು - ಉಪಕಾರಸ್ಮರಣೆಯಿಲ್ಲದವರು, ಉಪಕಾರಮುಂ - ನೀನು ಮಾಡಿದ್ದು ಒಳ್ಳೆಯದ್ದೆಂದು, ಬಲ್ಲರೆ_ತಿಳಿದುಕೊಳ್ಳುವರೆ, (ತಿಳಿಯುವುದಿಲ್ಲವು) ವೃಥಾ_ನಿಷ್ಪ್ರಯೋಜನವಾದ, ಆಲೋಚನೆಗಳು_ಯೋಚಿಸೋಣವು, ಏತಕೆ-ಏನು ಸಾರ್ಥಕವು, ಇದಕೆ_ಈ ಕಾರ್ಯಕ್ಕಾಗಿ, ಮಣಿಯಂ - ಜೀವರತ್ನವನ್ನು, ಕೊಡದೆ_ಕೊಟ್ಟುಬಿಡದೆ, ಇರು - ಇರುವನಾಗು, ಎನೆ_ಎಂದು ಧೃತರಾಷ್ಟ್ರನೆಂಬ ಸರ್ಪಶ್ರೇಷ್ಠನು ಹೇಳಲು, ಇಂತು_ಮುಂದೆ ಹೇಳುವಂತೆ ಎಂದನು-ನುಡಿದನು ‖೨೦‖

---

ರಿಂದ ಪರೋಪಕಾರವೂ ಮಾಡಿದ ಫಲವು ನಿನಿಗುಂಟಾಗುವುದಾದ್ದರಿಂದ ಸಂಜೀವಕ ಮಣಿಯನ್ನು ಕೊಡೆಂದು ಹೇಳಿದನು‖೧೮‖ ಸರ್ಪರಾಜನಾದರೊ ಪುಂಡರೀಕನ ಈ ಪರಿಯಾದ ನುಡಿಗಳನ್ನಾಲಿಸಿ ತನ್ನ ಕುವರಿಯ ಕಂಠಸೂತ್ರ ಕರ್ಣಾಭರಣಂಗಳನ್ನು ನೋಡಿ ಕಡುದುಃಖಿತನಾಗಿ ಪಕ್ಕದಲ್ಲಿರುವ ತಕ್ಷಕಾದಿ ಸಕಲ ಸರ್ಪಗಳನ್ನು ಕುರಿತು ಎಲೈ ಉರಗಮುನಿಗಳಿರಾ ! ಈ ಅರ್ಜುನನು ವಿಷ್ಣುಭಕ್ತನೂ ಸದ್ಗುಣಿಯೂ ಮತ್ತು ನನ್ನ ಅಳಿಯನೂ ಆಗಿದಾನೆ. ಆತನಿಗೆ ಈ ಜೀವಮಣಿಯನ್ನಿತ್ತು ಪರೋಪಕಾರದ ಫಲಕ್ಕೆ ಭಾಗಿಯಾಗುವೆನು ಈ ವಿಷಯದಲ್ಲಿ ನಿಮ್ಮ ಅಭಿಮತವೇನಿರುವುದೆಂದು ಕೇಳಿದನು ‖೧೯‖ ನಾಗೇಂದ್ರನ ಈ ತೆರನಾದ ನುಡಿಗಳನ್ನಾಲಿಸಿದ ಸರ್ಪಾಳಿಯು ಸಂಜೀವಕದ ಮಣಿಯನ್ನು ಕೊಡಲು ಇಷ್ಟವಿಲ್ಲದೆ ತಮ್ಮ ತಮ್ಮಲ್ಲಿಯೇ ಚಿಂತಿಸುತ್ತಲಿರುವಾಗ ಧೃತರಾಷ್ಟ್ರನೆಂಬ ದುಷ್ಟನಾಗವು ಉರಗೇಂದ್ರನನ್ನು ನೋಡಿ ಎಲೈ ಪ್ರಭುವೇ ಈ ಮಣಿಯು ನಮ್ಮ ಆಪತ್ಕಾಲಕ್ಕೆ ಸಹಾಯವಾಗಿದೆ ಇದನ್ನು ಇತರರಿಗೆ ಕೊಟ್ಟಬಳಿಕ ಹಿಂದಿರುಗುವುದು ಅಸಾಧ್ಯವು ಅದೂ ಅಲ್ಲದೆ ಮಾನವರಿಗೆ ಕೊಟ್ಟರಂತೂ ಪುನಃ ನಿನ್ನ ಕೈಸೇರುವುದೆಂಬುದನ್ನು ಎಂದಿಗೂ ಎಣಿಸಬೇಡ ಅವರಲ್ಲಿ ಕೃತಜ್ಞತೆಯೆಂಬುದು ಸ್ವಪ್ನಪ್ರಾಯವು ಮಣಿಯನ್ನು ಕೊಡಕೂಡದೆಂದು ನುಡಿದನು ‖೨೦‖ ಆಗ ಆದಿಶೇಷನು ಆ ಸರ್ಪಾಧೀಶನನ್ನು ನೋಡಿ ಶಿವಶಿವ ಊರು ಪ್ರತಿಯೊಂದು ದೇಶ

ನಳುಕದೆವಕ್ರಗತಿಯಿಂದನಡೆವಕಡು | ಗೇಡಿಗರ್ನಿನ್ನಂತೆಶಿವಶಿವಾಪ್ರಾಣಿಗಳ್ದುಃಖಾರ್ತರಾಗಿಬಂದು || ಬೇಡಿದರೆತನಗುಳ್ಳ ವಸ್ತುವಂಕೊಡದೆಕೆಡೆ | ನೋಡುವವನಧಿಕನೆದಧೀಚಿಶಿಬಿಗಳಮಾಳ್ಕೆ | ಖೋಡಿಯಾದುದೆಮಣಿಯನೀವೆಂಕಿರೀಟಿಗೆನೆಧೃತ ರಾಷ್ಟ್ರನಿಂತೆಂದನು || ೨೧ || ಹೇಳಿದಂತಿರದುಪುರುಷಾರ್ಥಮಂನೋಡಿದೊಡೆಕಾಳಹುದುನಾಗಲೋಕದಬಾಳ್ಕೆಮಿಱಿಪಾ | ತಾಳಕೆಮತಂಗಋಷಿಶಾಪದಿಂಬಾರನ್ಕೆಸಲೆಗರುಡನಿಳೆಯಮೇಲೆ || ತಾಳಬಲ್ಲನೆನಮ್ಮರತ್ನಮಂಕಂಡುನರ | ರಾಳಿಕೆಗಳಲ್ಪ ಕಾಲಂಗಳಿಂದುಳಿದೊಡಂ | ನಾಳೆಪಾಂಡವನಳಿಯದಿರ್ದಪನೆಮಣಿಯಂಕೊಡದಿರೆನಲ್ಕಿಂತೆಂದನು || ೨೨ || ಕಷ್ಟದಿಂದಾವು

---

ಟೀ|| ನಿನ್ನಂತೆ–ನೀನಿರುವ ಹಾಗೆ, ಪರಪೀಡೆಗೆ–ಇತರರಿಗೆ ಸಂಕಟವನ್ನುಂಟುಮಾಡಲು, ಅಳುಕದೆ–ಹೆದರದೆ, ವಕ್ರ ಗತಿಯಿಂದ–ಕೆಟ್ಟನಡತೆಯಿಂದ, ನಡೆವ-ವರ್ತಿಸುವ, ಕಡು–ಹೆಚ್ಚಾದ, ಕೇಡಿಗರ್-ದುಷ್ಟಾತ್ಮರು, ನಾಡೊಳು–ದೇಶದೊಳಗೂ, ಊರೊಳು–ಊರಿನಲ್ಲಿಯೂ, ಮನೆಯೊಳ್ – ಗೇಹದಲ್ಲೂ, ಓರೋರ್ವರು–ಒಬ್ಬೊಬ್ಬರು, ಉಂಟೆ-ಇದ್ದಾರೆಯೆ, ಶಿವಶಿವಾ– ಈಶ್ವರ ಈಶ್ವರಾ, ಪ್ರಾಣಿಗಳು–ಜೀವರಾಶಿಗಳಲ್ಲಿ ಯಾರಾದರೂ, ದುಃಖಾರ್ತರು–ಸಂಕಟದಿಂದ ದೀನರಾಗಿ, ಬಂದು–ನನ್ನಲ್ಲಿಗೆ ಬಂದು, ಬೇಡಿದರೆ–ಕೇಳಿಕೊಂಡರೆ, ತನಿಗೆ–ಅವನಿಗೆ, ಉಳ್ಳ–ಇರತಕ್ಕ, ವಸ್ತುವಂ-ಪುರುಳನ್ನು, ಕೊಡದೆ–ಕೊಟ್ಟುಬಿಡದೆ, ಕಡೆ– ಕೆಟ್ಟು ಹೋಗುತ್ತಿದ್ದರೂ, ನೋಡುವನು – ನೋಡಿ ಸುಮ್ಮನಿರುವನು, ಅಧಿಕನೆ – ಬಲು ದೊಡ್ಡವನೆಂದು ಹೇಳಲಾಗುವುದೆ, ದಧೀಚಿ–ವೃತ್ರಾಸುರನನ್ನು ದೇವೇಂದ್ರನು ಜಯಿಸಲೋಸುಗ ತನ್ನ ಬೆನ್ನು ಮೂಳೆಗಳನ್ನು ಅಮರಾಧಿಪನಿಗಿತ್ತ ಧೀಚಿಯೆಂಬ ಮುನಿಯು, ಶಿಬಿಗಳ–ಡೇಗೆ ಪರಿವಾರಗಳ ರೂಪಮಂ ತಾಳಿ ಬಂದ ಇಂದ್ರಾಗ್ನಿಗಳು, ಪರಿಕಿಸಲು, ನಿಂತುಕೊಂಡಿರುವಾಗ ಪರೋಪಕಾರದಲ್ಲಿ ಹಿಂದೆಗೆಯದ ಶಿಬಿಯೆಂಬ ಚಕ್ರವರ್ತಿಯು ಇವರ, ಮಾಳ್ಕೆ–ಕಾರ್ಯವು, ಖೋಡಿಯಾದುದೆ – ಹೀನವಾಯಿತೆ, ಕಿರೀಟಿಗೆ-ಪಾರ್ಥನಿಗೋಸ್ಕರ, ಮಣಿಯನು–ಜೀವರತ್ನವನ್ನು, ಈವೆಂ–ಕೊಡುವೆನು, ಎನೆ-ಎಂದು ಸರ್ಪರಾಜನು ನುಡಿಯಲು, ಇಂತು–ಮುಂದೆ ಹೇಳುವಂತೆ, ಎಂದನು–ನುಡಿದನು. ||೨೧||

ಟೀ|| ಪುರುಷಾರ್ಥಮಂ–ಪರಪುರುಷರಿಗಾಗುವ ಒಳ್ಳಿತನ್ನು, ನೋಡಿದೊಡೆ-ಯೋಚಿಸಿದರೆ, ಹೇಳಿದಂತೆ – ನಿನ್ನ ಆಶಯದಹಾಗೆ, ಇರದು – ಇರತಕ್ಕದ್ದಲ್ಲವು, ನಾಗಲೋಕದ–ಪಾತಾಳದ, ಬಾಳ್ಕೆ-ಜೀವನವು, ಕಾಳಹುದು – ಕೆಡುವುದು, ಮತಂಗ ಋಷಿಯು–ಮತಂಗನೆಂಬ ಮುನಿಯ, ಶಾಪದಿಂದ – ಶಾಪದ ನಿಮಿತ್ತವಾಗಿ, ಮಿಱಿ–ಮೀರಿತಪ್ಪಿ, ಗರುಡನು – ಗರುತ್ಮಂತನು, ಸಲೆ–ಚನ್ನಾಗಿ, ಪಾತಳಕೆ–ನಾಗಲೋಕಕ್ಕೆ, ಇಳೆಯಮೇಲೆ–ಭೂಮಂಡಲದ ಮೇಲ್ಗಡೆ, ಬಾರನ್ಕೆ-ಬರದಿರುವನೆ, ನಮ್ಮರತ್ನಮಂ– ನಮ್ಮಲ್ಲಿರುವ ಜೀವಮಣಿಯನ್ನು, ಕಂಡು–ಈಕ್ಷಿಸಿ, ತಾಳಬಲ್ಲನೆ–ತಡೆದಾನೆ, ನರರ–ಮಾನವರ, ಆಳಿಕೆಗಳು–ಜೀವಿಸುವ ಅವಧಿಯಾದರೊ, ಅಲ್ಪಕಾಲಂಗಳ್–ಸ್ವಲ್ಪಕಾಲ ಮಾತ್ರವೇ, ಇಂದು-ಈ ಹೊತ್ತು, ಪಾಂಡವನು–ಪಾರ್ಥನು, ಉಳಿದೊಡಂ–ಜೀವವನ್ನು ಪಡೆದರೂ, ನಾಳೆ-ಕೆಲವುಕಾಲದ ಮೇಲೆ, ಅಳಿಯದಿರ್ದಪನೆ–ಪ್ರಾಣವನ್ನು ಹೋಗಲಾಡಿಸಿ ಕೊಳ್ಳುವುದಿಲ್ಲವೆ, ಮಣಿಯಂ–ರತ್ನವನ್ನು, ಕೊಡದೆ ಇರು–ಕೊಡಬೇಡ, ಎನಲ್–ಹೀಗೆಂದು ನುಡಿಯಲು, ಇಂತು–ಮುಂದೆ ಹೇಳುವಂತೆ, ಎಂದನು– ಸರ್ಪರಾಜನು ಹೇಳತೊಡಗಿದನು ||೨೨|

ಟೀ|| ಮಣಿಯಂ ಸಂಜೀವಕವನ್ನು, ಆವು-ನಾವಾದರೊ, ಕಷ್ಟದಿಂ–ಪ್ರಯಾಸದಿಂದ, ಕೊಡದೆ–ಕೊಟ್ಟು ಬಿಡದೆ, ಮಾಣ್ಪಡೆ–ಇದ್ದಮಾತ್ರದಿಂದಲೆ, ಏಂ-ಪ್ರಮಾದವೇನಾದೀತು, ಪಾರ್ಥನ–ಫಲುಗುಣನ, ಜೀವಂ–ಹರಣವು, ನಷ್ಟಂ-ಕಳದುಹೋ

---

ಗಳಲ್ಲಿಯೂ ನಿನ್ನಂತಹ ಕೆಡಕರು ಇದ್ದಾರೆಯೇ! ಪ್ರತಿಯೊಂದು ಮನೆಯಲ್ಲಿಯೂ ನಿನ್ನಂಥವರು ಇರಬಹುದು ಇತರರಿಗೆ ಕಷ್ಟ ಉಂಟಾದರೆ ಅವರು ಪಡುವ ತೊಂದರೆಯನ್ನು ನೋಡಿ ಸ್ವಲ್ಪವೂ ಕನಿಕರ ಪಡದವರು ಲೋಕದಲ್ಲಿ ಇರುವರಲ್ಲಾ! ಅಂತಹ ನೀಚರನ್ನು ಉತ್ತಮರೆಂದು ಯಾರುತಾನೆ ಹೇಳಿಯಾರು? ಪೂರ್ವದಲ್ಲಿ ಶಿಬಿ, ದಧೀಚಿ ಮೊದಲಾದವರು ತಮ್ಮ ಶರಣಾಗತರ ಮೇಲ್ಮೆಗಾಗಿ ತಮ್ಮ ಪ್ರಾಣಗಳನ್ನೆ ದಾನಮಾಡಿ ಶಾಶ್ವತವಾದ ಯಶಸ್ಸನ್ನು ಪಡೆದು ಧನ್ಯರಾಗಲಿಲ್ಲವೇ? ನಾನಾದರೊ ಈಗ ಕಷ್ಟಕ್ಕೆ ಸಿಕ್ಕಿರುವ ಫಲುಗುಣನ ಸಹಾಯಕ್ಕಾಗಿ ಈ ಮಣಿಯನ್ನು ಕೊಡುವುದೇ ಸಿದ್ಧವೆಂದು ನುಡಿಯಲು || ೨೧ || ಧೃತರಾಷ್ಟ್ರನು ನಾಗರಾಜೇಂದ್ರನನ್ನು ಕುರಿತು, ಎಲೈ ಪ್ರಭುವೇ, ನೀನು ಹೇಳಿದಂತೆ ಆಗಲಾರದು, ಈ ಮಣಿಯನ್ನು ನೀನು ಕೊಟ್ಟ ಮೇಲೆ ಪಾತಾಳ ಲೋಕದ ಬಾಳೇ ಕೆಟ್ಟು ಹೋದಂತಾಗುವುದು ಗರುಡನು ಈ ರತ್ನವನ್ನು ನೋಡಿದರೆ ಪುನಃ ನಮಗೆ ದಕ್ಕಿಸುವನೆ? ಮನುಷ್ಯರ ಆಯುಸ್ಸಾದರೊ ಅತ್ಯಲ್ಪಕಾಲವು, ಈ ದಿವ್ಯಮಣಿಯ ಬಲದಿಂದ ಅರ್ಜುನನಿಗೆ ಪ್ರಾಣವು ಬಂದರೂ ಪುನಃ ಮರಣವನ್ನೈದದಿರುವನೆ? ಅಲ್ಪಪ್ರಯೋಜನಕ್ಕಾಗಿ ಈ ದಿವ್ಯಮಣಿಯನ್ನಿತ್ತು ನಮ್ಮನ್ನು ಹಾಳುಮಾಡಬೇಡವೆಂದು ನಿರೋಧಿಸಿದನು || ೨೨ || ಆದಿಶೇಷನು ಧೃತರಾಷ್ಟ್ರಾದಿಗಳನ್ನು ನೋಡಿ, ನಾವು ಈ ರತ್ನವನ್ನು ಕೊಡದ ಮಾತ್ರಕ್ಕೇ ಅರ್ಜುನನ

ಮಣಿಯಂ ಕೊಡದೆಮಾಣ್ದಡೇಂ | ನಷ್ಟನಾದಪುದೆಪಾರ್ಥಜೀವನಸುರಾರಿ | ಯಿಷ್ಟನಲ್ಲವೆಪಾಂಡವಪ್ರಾಣನಾಗಿರ್ಪನಂತಲ್ಲದಾನತರ್ಗೆ || ಸ್ಪಷ್ಟದಿಂ ಕೃಷ್ಣಕಾರುಣ್ಯಸಂಜೀವನಂ | ದೃಷ್ಟನಾಗಿರಲಿದರಹಂಗಿದೇತಕೆನೀನ | ನಿಷ್ಟನಾಗದಿರಿನ್ನುಮಿಗಿಸಿಕೊಂಬೆವುಲೇಸನೆಂದೊಡನಿಂತೆಂದನು || ೨೩ || ಉರಗೇಂದ್ರನೀನಾಡಿದವೊಲೆಂತುಮರ್ಜುನಂ | ಮುರಹರನಕರುಣದಿಂ ಸಪ್ರಾಣನಪ್ಪನಿದ | ಕುರುತರದಸಂಜೀವಕದಮಣಿಯನಿತ್ತುನಮ್ಮೆಲ್ಲರಂ ಕೆಡಿಸಬೇಡ || ಗರುಡದೇವನಹಾವಳಿಗೆಬಯಕೆಯಾಗಿರಲಿ | ತಿರುಗಿಕಳುಹಿಸುಪುಂಡರೀಕನಂ ತವಸುತೆಯ | ಪೊರೆಗೆಂದುಧೃತರಾಷ್ಟ್ರನೆನಲೊಪ್ಪಿನಿಖಿಳಸರ್ಪಾಳಿ ಗರ್ಜಿಸುತಿರ್ದುದು || ೨೪ || ಭೂಪಾಲಕೇಳ್ದೊರೆಗಳೊಲಿದೀವಕಜ್ಜಂಸ | ಮೀಪದದುರಾತ್ಮರಿಂ ಕೆಡದೆಮಾಣ್ದಪುದೆಪೇಳ್ | ಆಪನ್ನಗೇಶ್ವರಂ ಧೃತರಾಷ್ಟ್ರನೆಂದಮಾತಿನಮೇಲೆಖಿನ್ನನಾಗಿ || ಆಪುಂಡರೀಕನಂ ಕರೆದುಕೊಡಲೀಯರ್ಪ | ರೋಪಕಾರಕೆಮಣಿಯನೀಫಣಿಗಳಿಂ

ಗುವುದು, ಆದಪುದೆ-ಆದೀತೆ, ಅಸುರಾರಿ-ರಾಕ್ಷಸಾಂತಕನಾದ ಕೃಷ್ಣಮೂರ್ತಿಯು, ಇಷ್ಟನು-ಪಾರ್ಥನಿಗೆ ಬೇಕಾದವನು, ಅಲ್ಲವೆ-ಆಗಿಲ್ಲವೆ, ಪಾಂಡವ-ಪಾಂಡುಸುತನಾದ ಧನಂಜಯನಿಗೆ, ಪ್ರಾಣವು-ಪಂಚಪ್ರಾಣವೇ, ಆಗಿರ್ಪನು-ಆಗಿದ್ದಾನೆ, ಅಂತಲ್ಲದೆ-ಇಷ್ಟುಮಾತ್ರವಲ್ಲದೆ, ಕೃಷ್ಣನ-ಕೃಷ್ಣಸ್ವಾಮಿಯ, ಕಾರುಣ್ಯ-ಕೃಪೆಯೆಂಬ, ಸಂಜೀವಿನಿ-ಜೀವರತ್ನವು, ಸ್ಪಷ್ಟದಿಂ-ಪ್ರಸಿದ್ಧವಾಗಿ, ಆನತರ್ಗೆ-ಕೃಷ್ಣನನ್ನೆ ನಂಬಿರುವವರಿಗೆ, ಸಂದೃಷ್ಟವಾಗಿ-ಪ್ರತ್ಯಕ್ಷವಾಗಿ, ಇರಲ್-ಇರುವ ಕಾಲದಲ್ಲಿ, ಇದರ-ಈ ರತ್ನದ, ಹಂಗು-ದಾಕ್ಷಿಣ್ಯವು, ಇದೇತಕೆ-ಪ್ರಯೋಜನವೇನು, ಮಿಗಿಸಿಕೊಂಬೆವು-ಕೊಡಬೇಕಾದುದಿಲ್ಲವು, ನೀನು-ನೀನಾದರೊ, ಅನಿಷ್ಟನು-ಅಡ್ಡಿಯಾದವನು, ಆಗದಿರು-ಆಗಬೇಡ, ಇನ್ನು-ಇನ್ನುಮುಂದೆ, ಲೇಸನು-ಉತ್ತಮವಾದುದನ್ನು, ಹೇಳು-ನುಡಿ, ಎಂದೊಡೆ-ಎಂದಹೇಳಲು, ಅವನು-ಆ ಧೃತರಾಷ್ಟ್ರನು, ಇಂತು-ಮುಂದೆ ಹೇಳುವಂತೆ, ಎಂದನು-ನುಡಿದವನಾದನು ||೨೩||

ಟೀ|| ಉರಗೇಂದ್ರ-ಎಲೈ ನಾಗಪತಿಯೇ, ಅರ್ಜುನನು-ಪಾರ್ಥನು, ನೀನು-ನೀನಾದರೊ, ಆಡಿದವೊಲ್-ಆಡಿದಂತೆ, ಎಂತುಂ-ಯಾವಪರಿಯಿಂದಲಾದರೂ, ಮುರಹರನ-ಮುರಧ್ವಂಸಿಯ, ಕರುಣದಿಂ-ದಯೆಯಿಂದ, ಸಪ್ರಾಣನು-ಜೀವಸಹಿತನಾದವನು, ಅಪ್ಪನು-ಆಗುವನು, ಇದಕೆ-ಈ ನಿಮಿತ್ತವಾಗಿ, ಉರುತರದ-ಬಹು ಅಮೂಲ್ಯವಾದ, ಮಣಿಯಂ-ರತ್ನವನ್ನು, ಇತ್ತು-ಕೊಟ್ಟು, ನಮ್ಮೆಲ್ಲರಂ-ನಿನ್ನನ್ನೆ ನಂಬಿರುವರನ್ನೆಲ್ಲಾ, ಕೆಡಿಸಬೇಡ-ಕೆಟ್ಟುಹೋಗುವಂತೆ ಮಾಡಬೇಡ, ಗರುಡದೇವನ-ಗರುತ್ಮಂತನ, ಹಾವಳಿಗೆ-ಬಾಧೆಗೆ, ಬಯಕೆಯಾಗಿ-ಆಶಿಸಿ, ಇರಲಿ-ರತ್ನವು ನಮ್ಮಲ್ಲಿಯೇ ಇರಲಿ, ತವ-ನಿನ್ನ, ಸುತೆಯ-ಕುವರಿಯಾದ ಉಲೂಪಿಯ, ಪೊರೆಗೆ-ಹತ್ತಿರಕ್ಕೆ, ಪುಂಡರೀಕನನ್ನು-ಪುಂಡರೀಕನೆಂಬುವನನ್ನು, ತಿರುಗಿ-ಮತ್ತೆ, ಕಳುಹು-ಕಳುಹಿಸತಕ್ಕವನಾಗು, ಎಂದು-ಎಂಬತೆರನಾಗಿ, ಧೃತರಾಷ್ಟ್ರನು-ಧೃತರಾಷ್ಟ್ರನೆಂಬ ಸರ್ಪವು, ಎನಲ್-ನುಡಿಯಲು, ನಿಖಿಳ-ಅಶೇಷವಾದ, ಸರ್ಪಾಳಿ-ಹಾವುಗಳ ಗುಂಪೂ, ಒಪ್ಪಿ-ಒಡಂಬಟ್ಟು, ಗರ್ಜಿಸುತ-ಆರ್ಭಟವಂ ಗೈಯುತ್ತ, ಇರ್ದುದು-ಇದ್ದಿತು ||೨೪||

ಟೀ|| ಭೂಪಾಲ-ಧರೇಂದ್ರನಾದ ಜನಮೇಜಯನೆ, ಕೇಳು-ಲಾಲಿಸು, ದೊರೆಗಳು-ಅರಸರು, ಒಲಿದು-ಪ್ರೀತಿಸಿ, ಈವ-ಕೊಡತಕ್ಕ, ಕಜ್ಜಂ-ಕಾರ್ಯವು, ಸಮೀಪದ-ಅರಸುಗಳ ಹತ್ತಿರವಿರುವ, ದುರಾತ್ಮರಿಂದ-ಕುಜನರಿಂದ, ಕೆಡದೆ-ಕೆಟ್ಟುಹೋಗದೆ, ಮಾಣ್ದಪುದೆ-ಬಿಟ್ಟೀತೆ, ಪೇಳು-ಹೇಳು, ಆ ಪನ್ನಗೇಶ್ವರಂ-ಆ ಸರ್ಪರಾಜನಾದರೊ, ಧೃತರಾಷ್ಟ್ರನು-ಧೃತರಾಷ್ಟ್ರನೆಂಬ, ಸರ್ಪವು, ಎಂದು-ನುಡಿದ, ಮಾತಿಗೆ-ಮಾತುಗಳನ್ನಾಲಿಸಿದ ನಂತರ, ಖಿನ್ನನಾಗಿ-ಖೇದದಿಂದ ಕೂಡಿ, ಆ ಪುಂಡರೀಕನಂ ಕರೆದು-ಪುಂಡರೀಕನೆಂಬ ಸರ್ಪ ಶ್ರೇಷ್ಠನನ್ನು ತನ್ನ ಹತ್ತಿರಕ್ಕೆ ಬರಮಾಡಿಕೊಂಡು, ಈ ಫಣಿಗಳು-ಇಲ್ಲಿರುವ ಹಾವುಗಳು, ಪರೋಪಕಾರಕೆ-ಇತರರ ಮೇಲ್ಮೆಗೆ, ಮಣಿಯನು-ಜೀವರತ್ನವನ್ನು, ಕೊಡಲೀಯರು-ಕೊಡುವುದಕ್ಕೆ ಒಪ್ಪುವುದಿಲ್ಲವು, ಎಂದು-ಎಂ

---

ಪ್ರಾಣವು ಹೋಗುವುದೆಂದು ತಿಳಿದಿರುವಿರಾ? ಆ ಅರ್ಜುನನಿಗೆ ಕೃಷ್ಣನು ಬಂಧುವೂ ಸಖನೂ ಆಗಿರುವನು ಕೃಷ್ಣನೆಂಬ ದಿವ್ಯ ಮಣಿಯುಮುಂದೆ ನಮ್ಮ ಸಂಜೀವಕ ರತ್ನವು ಎದುರಾಗುವುದೆ? ನಿಮ್ಮ ಇಷ್ಟ ಬಂದಂತಾಗಲಿ. ಸಂಜೀವಕ ಮಣಿಯು ನಿಮಗೇ ಇರಲೆಂದು ನುಡಿದನು ||೨೩|| ಆಗ ಅಲ್ಲಿ ನೆರದಿದ್ದ ಸರ್ಪಾಳಿಯೆಲ್ಲಾ ಓ ನಾಗೇಂದ್ರಾ! ನಮ್ಮೊಡೆಯಾ! ಕೃಷ್ಣಪ್ರಸಾದಕ್ಕೆ ಪಾತ್ರನಾದ ಅರ್ಜುನನ ಜೀವವು ಉಳಿಯದಿರದು. ಇದಕ್ಕಾಗಿ ಸಂಜೀವಕ ಮಣಿಯನ್ನಿತ್ತು ನಮ್ಮೆಲ್ಲರನ್ನೂ ಗರುಡನ ಬಾಯಿಗೆ ತುತ್ತಾಗುವಂತೆ ಮಾಡಬೇಡ, ಪುಂಡರೀಕನನ್ನು ನಿನ್ನ ಕುವರಿಯ ಬಳಿಗೆ ಹೋಗುವಂತೆ ಹೇಳಿಬಿಡೆಂದು ಧೃತರಾಷ್ಟ್ರನೇ ಮೊದಲಾದ ಸರ್ಪರೂ ನುಡಿದರು. || ೨೪ || ಎಲೈ ರಾಜೇಂದ್ರನಾದ ಜನಮೇಜಯನೆ ಕೇಳು, ಪ್ರಭುಗಳ ಬಳಿಯಲ್ಲಿ ದುರ್ಮಂತ್ರಿಗಳು ಸೇರುವುದರಿಂದಾಗುವ ವ್ಯತಿರಿಕ್ತ ಸ್ವಭಾವಂಗಳನ್ನು ನೋಡಿದಿರಾ? ಸಂಜೀವಕ ಮಣಿಯನ್ನು ಅರ್ಜುನನಿಗೆ ಕೊಡುವುದರಲ್ಲಿ ಅತ್ಯಾದರವುಳ್ಳ ಆದಿಶೇಷನು ಧೃತರಾಷ್ಟ್ರಾದಿ ಸರ್ಪಗಳ ಮಾತಿನಪ್ರಕಾರ ಪುಂಡರೀಕನನ್ನು ಕರೆದು, ಎಲೈ ಸರ್ಪಶ್ರೇಷ್ಠನಾದ ಪುಂಡರೀಕನೆ, ಅನ್ಯರ ಸಹಾಯಕ್ಕೆ ಈ ಮಣಿಯನ್ನು ಕೊಡುವುದಿಲ್ಲವೆಂದು ಹಾವುಗಳೆಲ್ಲವೂ ಬಲಾತ್ಕರಿಸಿದ್ದರಿಂದ ಯತ್ನವಿಲ್ಲದೆ

ತೆಂದು | ಲೂಪಿಗರುಪೆಂದುಕಳುಹಿದೊಡವಂನರನಳಿದರಣಭೂಮಿಗೈತಂದನು || ೨೫ || ಚಂದನದತೈಲದಿಂದುರಿವಬೊಂಬಾಳಂಗ | ಳಿಂದಕರ್‍ಪುರದಸೊಡರುಗಳಿಂದಮಣಿದೀಪ | ದಿಂದಿರುಳ್ಕಂಗೊಳಿಸುತಿರೆಬಭ್ರುವಾಹನಂಮಂದಿಸಹಿತಾರಣದೊಳು || ನಿಂದಿರಲುಲೂಪಿಚಿತ್ರಾಂಗದೆಯರಮರೇಂದ್ರನಂದನನಬಳಿಯಸಂಜೀವಕದರತ್ನಮಂ | ದಂದಶೂಕೇಶ್ವರಂಕೊಡುವನೆಂಬಾಶೆಯಿಂಪಂಬಲಿಸುತಿರುತಿರ್ದರು || ೨೬ || ಅನ್ನೆಗಂಪುಂಡರೀಕಂಬಂದುಲೂಪಿಯೊ | ಳ್ಪನ್ನಗೇಂದ್ರಂಸುಧಾಮಣಿಯಂಕೊಡದೆ ತಿರುಗಿ | ತನ್ನಕಳುಹಿದವೃತ್ತಾಂತವನುಸಿರಲದಂಚಿತ್ರಾಂಗದೆಸೂಚಿಸೆ || ಇನ್ನುವೈಧವ್ಯದಿಂದೊಡಲಂಪೊರೆಯೆನೆಂದು | ನ

---

ಬತೆರನಾಗಿ, ಉಲೂಪಿಗೆ_ಉಲೂಪಿಯೊಂದಿಗೆ, ಅರಪು_ಹೇಳು, ಎಂದು-ಎಂಬುದಾಗಿ, ಕಳುಹಿದೊಡೆ_ಕಳುಹಿಸಿದ್ದರಿಂದ, ಅವಂ_ಆ ಪುಂಡರೀಕನಾದವರೊ, ನರನು_ಪಾರ್ಥನು, ಅಳಿದ_ಸತ್ತುಬಿದ್ದುಹೋಗಿದ್ದ, ರಣಭೂಮಿಗೆ_ಸಮರಾಂಗಣಕ್ಕೆ, ಐತಂದನು-ಬಂದವನಾದನು ||

ಅ|| ವಿ|| ಕಜ್ಜಂ (ತ್ಭ) ಕಾರ್ಯ್ಯಂ (ತ್ಸ) ಪನ್ನಗೇಶ್ವರಂ-(ಗು. ಸಂ. ಮತ್ತು ಷ. ತ.) ||೨೫||

ಟೀ|| ಚಂದನದ_ಸಿರಿಕಂಡದ, ತೈಲದಿಂ-ಎಣ್ಣೆಯ ಸಹಾಯದಿಂದ, ಉರಿವ_ಪ್ರಜ್ವಲಿಸುತ್ತಲಿರುವ, ಬೊಂಬಾಳಂಗಳಿಂದ-ಇಲಾಲು ಕಡ್ಡಿಗಳಿಂದಲೂ, (ದೀವಟಿಗೆಗಳು) ಕರ್ಪೂರದ_ಕರ್ಪೂರಮಯವಾದ, ಸೊಡರುಗಳಿಂದ_ದೀಪದ ಕಂಬಗಳಲ್ಲಿರತಕ್ಕ ದೀಪಗಳ ಕಾಂತಿಯಿಂದಲೂ. ಮಣಿದೀಪದಿಂದ-ರತ್ನಗಳಲ್ಲಿ ಪ್ರತಿಬಿಂಬವನ್ನುಂಟುಮಾಡುವ ದೀಪಗಳಿಂದಲೂ, ಇರುಳ್_ನಿಶಾಸಮಯವು, ಕಂಗೊಳಿಸುತ_ಕಾಂತಿಯನ್ನೈದುತ್ತ, ಇರೆ-ಇರಲಾಗಿ, ಬಭ್ರುವಾಹನಂ-ಪಾರ್ಥಜನಾದರೊ, ಮಂದಿಸಹಿತ_ತನ್ನ ಪ್ರಜೆಗಳಿಂದ ಕೂಡಿಯೂ, ಉಲೂಪಿಚಿತ್ರಾಂಗದೆಯರು-ಉಲೂಪಿ ಮತ್ತು ಚಿತ್ರಾಂಗದೆಯೆಂಬ ಅರ್ಜುನನ ರಾಣಿಯರು, ಅಮರೇಂದ್ರನಂದನನ_ಪಾರ್ಥನ, ಬಳಿಯ-ಪಕ್ಕದಲ್ಲಿ, ಆ ರಣದೊಳ್-ಆ ಸಮರಾಂಗಣದಲ್ಲಿ, ನಿಂದಿರಲು_ನಿಂತುಕೊಂಡಿರಲಾಗಿ. ದಂದಶೂಕೇಶ್ವರಂ-ಸರ್ಪರಾಜನು, ಸಂಜೀವಕರತ್ನಮಂ-ಸಂಜೀವಕ ಮಣಿಯನ್ನು, ಕೊಡುವನು_ಈಯುವನು, ಎಂಬ-ಎನ್ನತಕ್ಕ, ಆಶೆಯಿಂ-ಕುತೂಹಲದಿಂದ. ಪಂಬಲಿಸುತ_ಕಳವಳ ಪಡುತ್ತ, ಇರುತಿರ್ದರು-ಇದ್ದವರಾದರು ||

ಅ|| ವಿ|| ಅಮರೇಂದ್ರನಂದನ_ಅಮರ-ದೇವತೆಗಳ, ಇಂದ್ರ-ಒಡೆಯ, (ಶಚೀಪತಿಯು, ಗುಣಸಂಧಿ ಮತ್ತು ಷ.ತ.) ಅಮರೇಂದ್ರನ ನಂದನ (ಷ. ತ.) ನಂದನ_ಮಗ, ಒಂದು ಸಂವತ್ಸರ, ನಂದನವೆಂಬ ತೋಟ, ದಂದಶೂಕ-ಸರ್ಪಗಳ, ಈಶ್ವರಂ ಒಡೆಯ. (ಷ. ತ.) (ಗುಣ ಸಂಧಿ) || ೨೬ ||

ಟೀ|| ಪುಂಡರೀಕನು_ಪುಂಡರೀಕನೆಂಬ ಸರ್ಪಶ್ರೇಷ್ಠನು, ಅನ್ನೆಗಂ_ಬಭ್ರುವಾಹನ, ಉಲೂಪಿ, ಚಿತ್ರಾಂಗದೆಯರು ಕಳವಳಿಸುತ್ತಲಿರುವ ಕಾಲಕ್ಕೆ, ಬಂದು_ಅವರ ಬಳಿಯನ್ನೈದಿ, ಉಲೂಪಿಯೊಳ್-ಉಲೂಪಿಯೊಂದಿಗೆ, ಸುಧಾಮಣಿಯಂ_ಜೀವರತ್ನವನ್ನು, ಪನ್ನಗೇಂದ್ರಂ-ಸರ್ಪರಾಜನು, ಕೊಡದೆ_ಈಯದೆ, ತಿರುಗಿ-ಮತ್ತೆ, ತನ್ನಂ_ಪುಂಡರೀಕನನ್ನು, ಕಳುಹಿದ_ಕಳುಹಿಸಿಕೊಟ್ಟ, ವೃತ್ತಾಂತಮಂ_ವರ್ತಮಾನವನ್ನು, ಉಸಿರಲು-ಗೋಚರಮಾಡಲು, ಚಿತ್ರಾಂಗದೆಗೆ_ಚಿತ್ರಾಂಗದೆಯೆಂಬಾಕೆಗೆ, ಅದಂ-ಆ ಸುದ್ದಿಯನ್ನು, ಸೂಚಿಸೆ_ಅರುಹಲು, ಇನ್ನು-ಅರ್ಜುನನ್ನು ಕಳೆದುಕೊಂಡಮೇಲೆ, ವೈಧವ್ಯದಿಂದ_ಅನುಂಗಳಕರವಾದ ಬಾಳ್ವಿಕೆಯಿಂದ, ಒಡಲಂ-ನನ್ನ ದೇಹವನ್ನು, ಪೊರೆಯೆನು-ಕಾಪಾಡಿಕೊಳ್ಳಲಾರೆನು, ಎಂದು_ಎಂಬತೆರನಾಗಿ ನುಡಿದು, ಅಗ್ನಿಪ್ರವೇಶಮಂ_ಬೆಂಕಿಯಲ್ಲಿ ಬಿದ್ದು ಸಾಯುವುದನ್ನು, ನನ್ನಿಯಿಂ-ಅಕ್ಕರೆಯಿಂದ, ನಿಶ್ಚೈಪಳಂ_ನಿಶ್ಚಯಮಾಡಿರತಕ್ಕವಳನ್ನು, ನೋಡಿ_ಈಕ್ಷಿಸಿ, ಆ ಬಭ್ರುವಾಹನಂ_ಆ ಪಾರ್ಥಜನು. ನಿಜ_ತನ್ನ, ಮಾತೆಗೆ_ಜನನಿಯಾದ ಚಿತ್ರಾಂಗದೆಯೊಂದಿಗೆ, ಇಂತು-ಮುಂದೆ ಹೇಳುವಂತೆ, ಕೋಪದಿಂ-ಸಿಟ್ಟಿನಿಂದ, ಎಂದನು-ನುಡಿದನು ||

---

ಕೊಡಲಿಲ್ಲವೆಂದು ನೀನು ಹೋಗಿ ಉಲೂಪಿಗೆ ತಿಳಿಸೆಂದು ಬಹು ವ್ಯಸನದಿಂದ ಹೇಳಿದನು ಈ ಮಾತನ್ನು ಕೇಳಿ ನಿರಾಶನಾದ ಪುಂಡರೀಕನು ರಣಭೂಮಿಗೆ ತಡಮಾಡದೆ ಬಂದುಸೇರಿದನು. ||೨೫|| ಆಗ ರಣಭೂಮಿಯಲ್ಲಾದರೊ ಗಂಧದೆಣ್ಣೆಯನ್ನುಹಾಕಿದ ದೀವಟಿಗೆಗಳನ್ನೂ, ಕರ್ಪೂರದ ದೀಪಗಳನ್ನೂ ಹಚ್ಚಿಕೊಂಡು ಬಭ್ರುವಾಹನಾದಿಯಾಗಿ ಸರ್ವರೂ ನಿಂತಿದ್ದರು. ಉಲೂಪಿ ಚಿತ್ರಾಂಗದೆಯರು ಅರ್ಜುನನ ಶವದಬಳಿಯಲ್ಲಿದ್ದು ಸರ್ಪರಾಜನು ಕೊಡುವ ಸಂಜೀವಕಮಣಿಯನ್ನು ಪುಂಡರೀಕನು ಯಾವಾಗ ತಂದಾನು, ಪಾರ್ಥನ ಉಳಿವನ್ನು ಎಂದಿಗೆ ಕಂಡೇವೆಂಬುದಾಗಿ ಕಳವಳಿಸುತ್ತಲಿದ್ದರು. || ೨೬ || ಈಪರಿಯಲ್ಲಿ ಸಮರಾಂಗಣದಲ್ಲಿ ನೆರೆದಿದ್ದವರೆಲ್ಲರೂ ಪುಂಡರೀಕನನ್ನೆ ಎದುರು ನೋಡುತ್ತಿರುವ ಕಾಲಕ್ಕೆ ಸರಿಯಾಗಿ ಸರ್ಪಶ್ರೇಷ್ಠನಾದ ಪುಂಡರೀಕನು ಬಂದು ಉಲೂಪಿಯನ್ನು ಕುರಿತು ಆದಿಶೇಷನು ಹೇಳಿದ ಸುದ್ದಿಯನ್ನೆಲ್ಲಾ ಸವಿಸ್ತಾರವಾಗಿ ತಿಳಿಸಿದನು. ಉಲೂಪಿಯಾದರೊ ನಡೆದ ವಾರ್ತೆಯನ್ನೆಲ್ಲಾ ಚಿತ್ರಾಂಗದೆಯೊಂದಿಗೆ ಹೇಳಲು, ಆಗ ಚಿತ್ರಾಂಗದೆಯು ಅಯ್ಯೋ ದೇವರೇ, ಇನ್ನು ಈ ವೈಧವ್ಯ

ನ್ನಿಯಿಂದಗ್ನಿಪ್ರವೇಶನುಂಸಿಕ್ಕೈಪ | ಳಂನೋಡಿಕೋಪದಿಂದಾಬಭ್ರುವಾಹನಂನಿಜಮಾತೆಗಿಂತೆಂದನು ‖ ೨೭ ‖ ಚಕ್ರಿಸೇವಕ ನೀಕಿರೀಟಿಧರ್ಮಾನುಜಂ | ಶಕ್ರಸುತನೆನ್ನತಾತಂಮೇಲೆತುರಗಮೇ | ಧಕ್ರತುವಿಗೋಸುಗಂಮಡಿದಿರಲ್ಬೇಡಿದೊಡೆಮಣಿಯಂ ಕೊಡದೆಶೇಷನು ‖ ವಕ್ರಮಾದರೆವಾಸುಕಿಪ್ರಮುಖಭೋಗಿಗಳ | ತಿಕ್ರಮಿಸಿತದ್ರತ್ನಮುಂಕೊಂಡುಬಹೆನೆನ್ನ | ವಿಕ್ರಮುವ ನೀಗನೋಡೆನುತೆದ್ದುಕರೆಸಿದಂಪಾರ್ಥಿನಿಜಸೈನಿಕವನು ‖ ೨೮ ‖ ಫಣಿಕುಲವನಾಕ್ರಮಿಸಿಕೊಂಡುಬಹೆನಾಮಹಾ | ಮಣಿ ಯನಲ್ಲಹುದೆಂದೊಡಜಹರಿಪಿನಾಕಿಗಳ | ಫಣೆಯಕ್ಕರಗಳಂತೊಡವೆನೊರಸುವೆನಷ್ಟದಿಕ್ಪಾಲರಾಯುಗಳನು ‖ ಎಣಿಕೆಬೇಡಿದ ಕಿನ್ನವೀರವೃಷಕೇತುಫಲು | ಗುಣರದೇಹಂಗಳತಿಜತನವೆಂದಾಪ್ತರ್ಗೆ | ರಣದಸುಯಿಧಾನಮುಂಪೇಳ್ದುನಿಜಬಲಸಹಿತ

---

ಅ‖ ವಿ‖ ಅಗ್ನಿಪ್ರವೇಶ=ಅಗ್ನಿಯಲ್ಲಿ ಪ್ರವೇಶ (ಸ. ತ) ಅಗ್ನಿ (ತ್ಸ) ಅಗ್ಗಿ (ತ್ಭ) ನಿಜ–ಸ್ವಕೀಯವಾದ, ಯುಧಾರ್ಥದ ಸ–ಡಿ ‖೨೭‖

ಟೀ‖ ಈ ಕಿರೀಟಿ–ಈ ಪಾರ್ಥನಾದರೊ, ಚಕ್ರಿಸೇವಕಂ–ಕೃಷ್ಣನ ಭಕ್ತನು, ಧರ್ಮಾನುಜಂ–ಯುಧಿಷ್ಠಿರನ ಜಡಹುಟ್ಟಿದವನು, ಶಕ್ರಸುತನು–ಇಂದ್ರನ ಕುವರನು, ಮೇಲೆ–ಇದೂ ಅಲ್ಲದೆ, ಎನ್ನ–ನನಿಗೆ, ತಾತಂ–ಜನಕನು, ತುರಗಮೇಧ–ಹಯಮೇಧವೆನ್ನುವ, ಕ್ರತುವಿಗೋಸುಗಂ–ಯಾಗದ ಸಲುವಾಗಿ, ಮಡಿದಿರಲ್–ಮರಣವನ್ನೈದಿದ್ದರೆ, ಬೇಡಿದೊಡೆ–ನಾವು ಕೇಳಿಕೊಂಡರೂ ಕೊಡ, ಶೇಷನು–ಸರ್ಪಾಧೀಶನು, ಮಣಿಯಂ–ಜೀವರತ್ನವನ್ನು, ಕೊಡದೆ–ಈಯದೆ, ವಕ್ರಮಾದರೆ–ವಕ್ರಗತಿಯನ್ನವಲಂಬಿಸಿದರೆ, ವಾಸುಕಿ–ಆದಿಶೇಷನೆ, ಪ್ರಮುಖ–ಆದಿಯಾಗಿರತಕ್ಕ, ಭೋಗಿಗಳ–ಹಾವುಗಳನ್ನು, ಅತಿಕ್ರಮಿಸಿ–ಗಣನೆಯೇ ಮಾಡದೆ, ತದ್ರತ್ನಮುಂ–ಆ ಸಂಜೀವಕಮಣಿಯನ್ನು, ಕೊಂಡು ಬಹೆನು–ತರುತ್ತೇನೆ, ಈಗ–ಈ ಕಾಲದಲ್ಲಿ, ಎನ್ನ–ನನ್ನ, ವಿಕ್ರಮುವನು–ಸಾಹಸವನ್ನು, ನೋಡು–ಈಕ್ಷಿಸು, ಎನುತ–ಎಂದು ನುಡಿಯುತ್ತ, ಪಾರ್ಥಿ–ಫಲುಗುಣಪುತ್ರನು, ಎದ್ದು–ಮೇಲಕ್ಕೆದ್ದವನಾಗಿ, ನಿಜ–ಸ್ವಕೀಯಮಾದ, ಸೈನಿಕವನು–ದಳವನ್ನು, ಕರೆಸಿದಂ–ಸಿದ್ಧಮಾಡಿದನು ‖೨೮‖

ಟೀ‖ ಫಣಿಕುಲವನು–ಹಾವುಗಳ ಸಂತತಿಯನ್ನೆಲ್ಲಾ, ಆಕ್ರಮಿಸಿಕೊಂಡು–ಪಿಡಿದವನಾಗಿ, ಬಹೆನು–ಇಲ್ಲಿಗೆ ಬಂದು ಸೇರುವೆನು, ಆ ಮಹಾಮಣಿಯನು–ಅತ್ಯುತ್ತಮವಾದ ಆ ರತ್ನವನ್ನು ಕೊಡಲು, ಅಲ್ಲ–ಅಹುದು, ಎಂದೊಡೆ–ಕೊಟ್ಟು ಬಿಡಲು ವಕ್ರಮಾರ್ಗವನ್ನವಲಂಬಿಸಿದರೆ, ಅಜ–ಕಮಲಾಸನನು, ಹರಿ–ನಾರಾಯಣಮೂರ್ತಿಯು, ಪಿನಾಕಿಗಳ–ಬ್ರಹ್ಮದೇವನೆ ಮೊದಲಾದವರ, ಫಣೆಯ–ಹಣೆಯಲ್ಲಿರತಕ್ಕ, ಅಕ್ಕರಂಗಳಂ–ಲಿಪಿಗಳನ್ನು, ತೊಡೆವೆನು–ಒರಸಿಬಿಡುತ್ತೇನೆ, ಅಷ್ಟದಿಕ್ಪಾಲಕರ–ಇಂದ್ರಾದಿಗಳ, ಆಯುಗಳನು–ಜೀವಿತಕಾಲವನ್ನು, ಒರಸುವೆನು–ಕೆಡಿಸಿ ಬಿಡುತ್ತೇನೆ, ಇನ್ನು–ಇನ್ನು ಮುಂದೆ, ಇದಕೆ–ಈ ಜೀವರತ್ನದ ಸಲುವಾಗಿ, ಎಣಿಕೆಬೇಡ–ಆಲೋಚನೆಯನ್ನು ಮಾಡಬೇಕಾದ್ದಿಲ್ಲವು, ವೀರ–ಪರಾಕ್ರಮಿಗಳಾದ, ವೃಷಕೇತು ಫಲುಗುಣರ–ಕರ್ಣಸಂಭವ ಇಂದ್ರನಂದನರ, ದೇಹಂಗಳು–ದೇಹಗಳಾದರೊ, ಅತಿ ಜತನವು–ಬಹು ಜಾಗರೂಕತೆಯಿಂದ ನೋಡಿಕೊಂಡಿರಬೇಕು, ಎಂದು–ಎಂಬೀಪರಿಯಿಂದ, ಆಪ್ತರ್ಗೆ–ಮುಖ್ಯರಾದವರಿಗೆ, ರಣದ–ಕಾಳಗದ, ಸುಯಿಧಾನಮುಂ–ತೆರನನ್ನು, ಪೇಳ್ದು–ಉಸುರಿ, ನಿಜ–ತನ್ನ, ಬಲಸಹಿತ–ಸೇನಾಸಮೇತನಾಗಿ, ಪಾರ್ಥಸುತನು–ಅರ್ಜುನಿಯು, ಅನುವಾದನು–ಸನ್ನದ್ಧನಾಗಿ ನಿಂತನು.

---

ದಿಂದ ಪ್ರಪಂಚದಲ್ಲಿ ಬಾಳ್ವುದೇತಕ್ಕೆ, ಇದಕ್ಕಿಂತಲೂ ಪ್ರಾಣಗಳನ್ನು ಹೋಗಲಾಡಿಸಿಕೊಳ್ಳುವುದೇ ಲೇಸೆಂದು ನುಡಿಯುತ್ತಾ ಅಗ್ನಿಪ್ರವೇಶಕ್ಕೆ ಉದ್ಯುಕ್ತಳಾಗಿರುವುದನ್ನು ಬಭ್ರುವಾಹನನು ಕಂಡು, ತನ್ನ ಜನನಿಯಂ ಕುರಿತು, ‖೨೭‖ ಎಲೌ ತಾಯಿಯೆ, ಈ ಪಾರ್ಥನಾದರೊ ವಿಷ್ಣುರೂಪನಾದ ಕೃಷ್ಣಸ್ವಾಮಿಯ ಪರಮ ಭಕ್ತನು, ಧರ್ಮಾತ್ಮನಾದ ಧರ್ಮರಾಯನ ತಮ್ಮನು ದೇವೋತ್ತಮನಾದ ದೇವೇಂದ್ರನ ಕುವರನು, ಇದೂ ಅಲ್ಲದೆ ನನ್ನ ತಂದೆಯು, ಅಶ್ವಮೇಧಯಾಗದ ಕುದುರೆಯ ಸಲುವಾಗಿ ಪ್ರಾಣವನ್ನು ಬಿಟ್ಟಿರುವನು, ಇಂಥಾಕಾಲದಲ್ಲಿ ನಾವು ಸಂಜೀವಕದ ಮಣಿಯನ್ನು ಕೊಡೆಂದು ಕೇಳಿದರೆ ದುರ್ಮಂತ್ರಿಗಳ ಪ್ರೇರಣೆಗೆ ಬದ್ಧನಾಗಿ ಕೊಡದೆ ವಕ್ರಮಾರ್ಗವನ್ನವಲಂಬಿಸಿರುವನು. ಒಳ್ಳೇದು ಇರಲಿ, ಆ ಸರ್ಪಕುಲವನ್ನೆಲ್ಲಾ ಚನ್ನಾಗಿ ತೊಡೆದು, ವಾಸುಕಿಯನ್ನು ಸೋಲಿಸಿ ಸುಧಾಮಣಿಯನ್ನು ತಂದೊಪ್ಪಿಸುವೆನು, ಸಾವಧಾನಚಿತ್ತವುಳ್ಳವಳಾಗಿ ಅಗ್ನಿಪ್ರವೇಶದ ಹಂಬಲನ್ನು ತೊರೆದು ನನ್ನ ಪರಾಕ್ರಮದ ತೆರನನ್ನು ಯೋಚಿಸುತ್ತಿರೆಂದು ಸಂತೈಸಿದವನಾಗಿ, ತನ್ನ ಸಕಲಪರಿವಾರದಿಂದೊಡಗೂಡಿ ‖೨೮‖ ಮತ್ತೆ ನಿಜಜನನಿಯಂ ನೋಡಿ, ಎಲೈ ತಾಯಿಯೇ ನನಗೆ ಅನುಜ್ಞೆಯಂ ದಯಪಾಲಿಸು, ಸರ್ಪಕುಲವನ್ನೆಲ್ಲಾ ಹಿಡಿದುಕೊಂಡು ಸಂಜೀವಕ ಮಣಿಯನ್ನು ತೆಗೆದುಕೊಂಡು ಬರುವೆನು, ಇದಕ್ಕಾಗಿ ತ್ರಿಮೂರ್ತಿಗಳೂ, ಅಷ್ಟದಿಕ್ಪತಿಗಳೂ ಅಡ್ಡ ಬಂದರೂ ಅವರ ಹಣೆಯ ಬರಹವನ್ನೆಲ್ಲಾ ಅಳಿಸಿಬಿಡುವೆನು, ಯೋಚನೆಯನ್ನು ಬಿಡು ನನಗೆ ಅಪ್ಪಣೆಯನ್ನು ಕೊಡೆಂದು

ಪಾರ್ಥಸುತನನುವಾದನು ॥ ೨೯ ॥ ಏರಿಸಿಮಹಾಧನುವನಿಶಿತಬಾಣವನೆಚ್ಚು | ಡೋರುಗಳದವನಿಯಂ ಸಪ್ತಪಾತಾಳಕ್ಕೆ |
ತೋರಿಸಿದನೊಂದುಪೇರ್ಬಟ್ಟೆಯಂ ನಡದನರ್ಜುನಿತನ್ನ ಸೇನೆಸಹಿತ ॥ ಮೀರಿದಶರಾವಳಿಯಘಾತಿಯಂತವೆತಾಳ | ಲಾರದೆಸಕಲ
ಭೋಗಿತತಿಬಂದನಂತಂಗೆ | ದೂರಲ್ಕೆಧೃತರಾಷ್ಟ್ರನಂಬೈದುಫಣಿಗಳಂಕಾಳಗಕೆಬೀಳ್ಕೊಟ್ಟನು ॥ ೩೦ ॥ ನಾಗರಥವಾಜಿಗಳ
ಕಾಲಾಳಕೈದುಗಳ | ನಾಗದಳವೈದುಯೋಜನದಗಲದಿಂದನಾ | ನಾಗತಿಯೊಳೈತಂದುದರ್ಜುನಿಯಸೈನಿಕದಮೇಲೆಸನ್ನಾ
ಹದಿಂದ ॥ ತಾಗಿದುದುಸರ್ಪಾಳಿತಮತಮಗೆವಾಶಿಮುಂ | ತಾಗಿವದನದವಿಷಜ್ವಾಲೆಗಳ್ದಾವರಿಸಿ | ತಾಗಿರೀಶನಕ್ಷಿಯಿಂಪೊರ
ಮಡುವಧಳ್ಳುರಿಯಧಾಳಿಯೆನೆಪರಬಲದೊಳು ॥೩೧॥ ಗುಳಿಕತಕ್ಷಕಶಂಖಕರ್ಕೋಟಕಾದಿಫಣಿ | ಗಳತಂಡದಿಂದಧೃತರಾಷ್ಟ್ರ

ಅ॥ ವಿ॥ ಅಕ್ಕರ (ತ್ಭ) ಅಕ್ಷರ (ತ್ಸ) ಅಷ್ಟದಿಕ್ಪಾಲರು - ಇಂದ್ರ, ಅಗ್ನಿ, ಯಮ, ನಿರುತಿ, ವರುಣ, ವಾಯು, ಕುಬೇರ, ಈಶಾನರೆಂಬುವರು ॥೨೯॥

ಟೀ॥ ಅರ್ಜುನಿ_ಪಾರ್ಥಜನು, ಮಹಾಧನುವಂ- ಶ್ರೇಷ್ಠವಾದ ಚಾಪವೊಂದನ್ನು, ಏರಿಸಿ-ದಾರದಿಂದನೇರ್ಪಡಿಸಿ, ನಿಶಿತ-ತೀಕ್ಷ್ಣವಾದ, ಬಾಣವನು-ಕಣೆಯನ್ನು, ಎಚ್ಚಡೆ-ಬಿಡಲು, ಅವನಿಯಂ_ಭೂಮಂಡಲವನ್ನು, ಓರುಗಳೆದು-ಒಂದುಪಾರ್ಶ್ವಕ್ಕೆನೂಕಿ, ಒಂದು-ಒಂದಾದ, ಪೇರ್ಬಟ್ಟೆಯನು_ಹೆದ್ದಾರಿಯನ್ನು, ಸಪ್ತ ಪಾತಾಳಕ್ಕೆ-ಏಳುಲೋಕಗಳ ವರೆಗೂ ಹೋಗಿರುವಂತೆ, ತೋರಿಸಿದನು-ಕಾಣಿಸಿದನು, ತನ್ನ-ಸ್ವಕೀಯವಾದ, ಸೇನೆಸಹಿತ_ಸೇನಾ ಸಮೇತನಾಗಿ, ನಡೆದನು_ಹೊರಟನು, ಸಕಲ-ಅಶೇಷವಾದ, ಭೋಗಿ-ಹಾವುಗಳ, ತತಿ_ಸಮುದಾಯವೂ, ಮೀರಿದ-ಹೆಚ್ಚಾದ, ಶರಾವಳಿಯ_ಬಾಣಪರಂಪರೆಯ, ಘಾತಿಯಂ_ಹೊಡೆತವನ್ನು, ತವೆ_ಪೂರ್ಣವಾಗಿ, ತಾಳಲಾರದೆ_ತಡೆಯಲು ಶಕ್ತಿಯಿಲ್ಲದೆ, ಅನಂತಂಗೆ-ಸರ್ಪರಾಜನ ಹತ್ತಿರಕ್ಕೆ, ಬಂದು-ಐತಂದು, ದೂರಲ್ಕೆ-ಚಾಡಿಯನ್ನು ಹೇಳಲಾಗಿ, ಧೃತರಾಷ್ಟ್ರನಂ_ಜೀವರತ್ನವನ್ನು ಕೊಡುವಾಗ ಅಡ್ಡಗಿಸಿದ ಧೃತರಾಷ್ಟ್ರನೆಂಬ ಸರ್ಪವನ್ನು, ಬೈದು-ದೂಷಿಸಿ, ಫಣಿಗಳಂ_ಹಾವುಗಳನ್ನೆಲ್ಲಾ, ಬೀಳ್ಕೊಟ್ಟನು_ಯುದ್ಧಕ್ಕಾಗಿ ಕಳುಹಿಸಿದನು.

ಅ॥ ವಿ॥ ಸಪ್ತ ಪಾತಾಳಗಳು-ಅತಳ, ವಿತಳ, ಸುತಳ, ತಳಾತಳ, ರಸಾತಳ, ಮಹಾತಳ, ಪಾತಾಳಂಗಳು. ಪೇರ್ಬಟ್ಟೆ-ಪಿರಿದು+ಬಟ್ಟೆ (ವಿ. ಪೂ) ಬಟ್ಟೆ (ತ್ಭ) ವರ್ತ್ಮ (ತ್ಸ) ॥೩೦॥

ಟೀ॥ ಅರ್ಜುನಿಯ- ಪಾರ್ಥಜನ, ಸೈನಿಕದ ಮೇಲೆ_ದಳದಮೇಲ್ಗಡೆ, ನಾಗ_ಗಜಗಳು, ರಥ_ತೇರುಗಳು, ವಾಜಿ_ಹಯಂಗಳು, ಕಾಲಾಳ-ಪದಾತಿಗಳು, ಕೈದುಗಳ-ಆಯುಧಂಗಳೇ ಮೊದಲಾದುವು, ಇವುಗಳಿಂದೊಡಗೂಡಿದ, ನಾಗದಳಂ_ಹಾವುಗಳ ಸೈನ್ಯವು, ಐದು ಯೋಜನದ ಅಗಲದಿಂದ_ಐದು ಗಾವುದಗಳ ಪರಿಮಿತಿಯಿಂದ, ನಾನಾಗತಿಯೊಳು_ಬಗೆಬಗೆಯಾದ ತೆರನಾಗಿ, ಸನ್ನಾಹದಿಂದ_ಅತಿ ಪ್ರಯಾಸದಿಂದ, ಐತಂದುದು_ಬಂದು ಸೇರಿತು, ಸರ್ಪಾಳಿ_ಸರ್ಪಗಳ ಸಮುದಾಯವು, ತಮತಮಗೆ-ತಮ್ಮತಮ್ಮಷ್ಟಕ್ಕೆ, ವಾಸಿ-ಶ್ರೇಷ್ಠವಾದ ಹಾವುಗಳೆ, (ಕೀರ್ತಿ) ಮುಂದಾಗಿ-ಆದಿಯಾಗಿ, ವದನದ_ಮೋರೆಯಿಂದಬರುವ, ವಿಷಜ್ವಾಲೆಗಳು_ನಂಜಿನ ಸಂಬಂಧವಾದ ಉರಿಗಳು, ಆ ಗಿರೀಶನ_ಆ ಪರಮೇಶ್ವರನ, ಅಕ್ಷಿಯಿಂ_ಹಣೆಗಣ್ಣಿನಿಂದ, ಪೊರಮಡುವ-ಈಚೆಗೆ ಹೊರಟು ಬರುವ, ದಳ್ಳುರಿಯ_ದೊಡ್ಡ ಜ್ವಾಲೆಯ, ಧಾಳಿಯು_ಆವರಣವು, ಎನೆ_ಎಂಬಂತೆ, ಪರಬಲದೊಳು_ಹಗೆಗಳ ಪಡೆಯಲ್ಲಿ, ಡಾವರಿಸಿತು_ಆಕ್ರಮಿಸಿಕೊಂಡಿತು. ॥೩೧॥

ಟೀ॥ ಗುಳಿಕ_ಗುಳಿಕನೆಂಬ, ತಕ್ಷಕ- ತಕ್ಷಕನೆಂಬ ಹೆಸರುಳ್ಳ, ಶಂಖ- ಶಂಖನೆನ್ನತಕ್ಕ, ಕರ್ಕೋಟಕ- ಕರ್ಕೋ

ನುಡಿದು ಚಿತ್ರಾಂಗದೆಯ ಅನುಜ್ಞೆಯಂ ಪಡೆದವನಾಗಿ ಅರ್ಜುನ ವೃಷಕೇತುಗಳ ಶರೀರವನ್ನು ಜತನದಿಂದ ನೋಡಿಕೊಂಡಿರುವಂತೆ ನಿಜ ಜನನಿಯರಿಗೂ, ತನ್ನ ಆಪ್ತರಿಗೂ ಹೇಳಿ, ಸಕಲ ಪರಿವಾರದೊಂದಿಗೆ ತಾನು ಪಾತಾಳಲೋಕಕ್ಕೆ ॥೨೯॥ ಹೊರಡುವುದಕ್ಕೋಸ್ಕರ ತನ್ನ ಧನುಸ್ಸಿಗೆ ಕೂರಲಗನ್ನು ಸೇರಿಸಿ ಆಕರ್ಣಾಂತವಾಗಿ ಸೆಳೆದು ಭೂಮಿಯಮೇಲೆ ಬಿಡಲು ಆ ಮಹಾಬಾಣದ ವೇಗವಾದರೂ ಭೂಮಿಯಿಂದ ಪಾತಾಳದವರೆಗೂ ಭೇದಿಸಿ ಒಂದು ಹೆದ್ದಾರಿಯನ್ನು ಮಾಡಿಬಿಟ್ಟಿತು. ಬಳಿಕ ಅರ್ಜುನಿಯೂ ಮತ್ತು ಅವನ ಸಕಲ ಪರಿವಾರವೂ ನಾಗಲೋಕವನ್ನು ಸೇರಿತು. ಬಭ್ರುವಾಹನನಾದರೋ ತೀಕ್ಷ್ಣವಾದ ಬಾಣಗಳನ್ನು ಸರ್ಪಗಳಮೇಲೆ ಬಿಡುವುದಕ್ಕಾರಂಭಿಸಲು ಸರ್ಪಾಳಿಗಳೆಲ್ಲಾ ತಡಮಾಡದೆ ತಮ್ಮ ರಾಜನಾದ ಆದಿಶೇಷನಲ್ಲಿಗೆ ಹೋಗಿ ಮರೆ ಇಟ್ಟಿತು. ಆಗ ವಾಸುಕಿಯು ಈ ಸುದ್ದಿಯನ್ನು ಕೇಳಿ ಧೃತರಾಷ್ಟ್ರನನ್ನು ಬೈದು ತನ್ನ ಸರ್ಪ ಸೈನ್ಯವನ್ನೆಲ್ಲಾ ಬಭ್ರುವಾಹನನ ಮೇಲೆ ಯುದ್ಧಕ್ಕೆ ಕಳುಹಿಸಿದನು. ॥೩೦॥ ಆ ಆದಿಶೇಷನ ಚತುರಂಗ ಬಲವಾದರೊ, ಐದು ಗಾವುದದಗಲದವರೆಗೂ ಎಲ್ಲೆಲ್ಲಿಯೂ ಸುತ್ತಿಕೊಂಡು ಪರಮೇಶ್ವರನ ಫಾಲನೇತ್ರದಿಂದ ಹೊರಡುವ ಜ್ವಾಲೆಯನ್ನೂ ಕೂಡ ನಿರಾಕರಿಸುತ್ತಲಿರುವ ವಿಷಜ್ವಾಲೆಯನ್ನು ಬಭ್ರುವಾಹನನ ಸೈನ್ಯದಮೇಲೆ ಕಾರುತ್ತಾ ಎಲ್ಲೆಲ್ಲಿಯೂ ಸುತ್ತಿಕೊಂಡಿತು. ॥೩೧॥ ಆಗ ಗುಳಿಕ, ತಕ್ಷಕ,

ನುರುವಣಿಸಿಪರ | ಬಲದೊಳಿಪ್ಪತ್ತೊಂದುಸಾವಿರಭಟಾಳಿಯಂ ಕೆಡಹಲರ್ಜುನಿಕನಲ್ದು ॥ ಪೊಳೆವಕೂರ್ಗಣೆಗಳಂಕರೆಯಲ್ಕೆ ಪನ್ನಗಾ | ವಳಿಯತಲೆಗಳ್ಪರಿದುಬೀಳುತಿರ್ದುವುನುಹಾ | ಪ್ರಳಯದೊಳ್ಗಗನದಿಂದಿಳೆಗುದುರ್ವುಡುನಿಕರದಂತೆಪೆಡೆವಣಿಗ ಳೊಡನೆ॥೩೨॥ದರ್ವೀಕರಾವಳಿಯನರೆಗಡಿಯಲವುಮತ್ತೆ|ಸರ್ಪದಳಮಂವಿಷಜ್ವಾಲೆಯೊಳುರುಪಲದಕೆ|ನಿರ್ವಾಹಮಂಕಂಡುಸಾರಂಗ ಶಿಖಿನಕುಲಗೃಧ್ರಂಗಳಾಗಿಸೀಳ್ವ ॥ ಉರ್ವಮಂತ್ರಾಸ್ತ್ರಂಗಳಂತಿರುವಿನೊಳ್ಪೂಡಿ | ಗೀರ್ವಾಣಪತಿಸುತನಸೂನುಕಾಲದಕಡೆಯ | ಶರ್ವನಂತಿರೆಕೋಪಮಂತಾಳ್ದುತೆಗೆದೆಚ್ಚನೇವೇಳ್ವೆನದ್ಭುತವನು ॥ ೩೩ ॥ ಇಟ್ಟಣಿಸಿಪದ್ದುಸಾರಂಗಮುಂಗಿಲಿನವಿಲ | ಘಟ್ಟ ರಗಸೇನೆಯಂಘಾತಿಸಿಪೊರಳ್ಚಿದುದು | ಬಿಟ್ಟನರ್ಜುನಿಮತ್ತೆಮಧುಕರವತಕ್ಷಕಂಗಳಮೇಲೆಜೇನ್ಗರೆವೊಲು ॥ ತೊಟ್ಟುತೆಗೆದೆಚ್ಚಂ

---

ಟಕನೆಂಬುವರೇ, ಆದಿ-ಮೊದಲಾಗಿರುವ, ಫಣಿಗಳತಂಡದಿಂ-ಸರ್ಪಗಳ ಸಮುದಾಯದಿಂದ, ಧೃತರಾಷ್ಟ್ರನು-ಧೃತರಾಷ್ಟ್ರನೆಂಬ ಚಮೂಪನು, ಉರುವಣಿಸಿ-ಮುಂದರಿತು, ಪರಬಲದೊಳು - ವೈರಿಗಳ ಪಡೆಯಲ್ಲಿ, ಇಪ್ಪತ್ತೊಂದುಸಾವಿರಭಟಾಳಿಯಂ - ಇಪ್ಪತ್ತೊಂದು ಸಹಸ್ರ ಸೈನ್ಯವನ್ನು, ಕೆಡಹಲು - ಉರುಳಿಸಿಬಿಡಲು, ಅರ್ಜುನಿ-ಪಾರ್ಥಜನು, ಕನಲ್ದು - ಸಿಟ್ಟುಮಾಡಿಕೊಂಡು, ಪೊಳೆವ-ಥಳಥಳಿಸುವ, ಕೂರ್ಗಣೆಗಳಂ-ಕ್ರೂರವಾದ ಬಾಣಗಳನ್ನು, ಕರೆಯಲ್ಕೆ-ಪ್ರಯೋಗಿಸಲಾಗಿ, ಪನ್ನಗಾವಳಿಯ-ಹಾವುಗಳ ಗುಂಪಿನ, ತಲೆಗಳ್-ರುಂಡಗಳೇ, ಪರಿದು-ಛೇದಿಸಲ್ಪಟ್ಟು, ಗಗನದಿಂದ-ಅಂತರಿಕ್ಷದಿಂದ, ಇಳೆಗೆ-ಭೂಮಿಗೆ, ಮಹಾಪ್ರಳಯದೊಳ್-ಲೋಕಸಂಹಾರದ ವೇಳೆಯೊಳಗೆ, ಉದುರ್ವ-ಬಿದ್ದುಹೋಗುವ, ಉಡುನಿಕರದಂತೆ-ತಾರಾಮಂಡಲದ ತೆರನಾಗಿ, ಪೆಡೆ-ಹೆಡೆಗಳಲ್ಲಿರತಕ್ಕ, ಮಣಿಗಳ್-ರನ್ನಂಗಳು, ಒಡನೆ-ಕೂಡಲೆ, ಬೀಳುತಿರ್ದುದು-ಬಿದ್ದು ಹೋಗುತ್ತಲಿದ್ದಿತು ॥೩೨॥

ಟೀ॥ ದರ್ವೀಕರ-ಹಾವುಗಳ, ಆವಳಿಯನು-ಗುಂಪನ್ನು, ಅರೆಗಡಿಯಲು-ಅರ್ಧಭಾಗವಾಗುವಂತೆ ಛೇದಿಸಲು, ಅವು-ಆ ನಾಗಂಗಳು, ಮತ್ತೆ-ತಿರುಗಿ, ಸರ್ಪದಳಮಂ-ಉರಗದಳವನ್ನು, ವಿಷಜ್ವಾಲೆಯೊಳು-ನಂಜಿನ ಸಂಬಂಧವಾದ ಉರಿಯಿಂದ, ಉರುಪಲು-ಸುಡುವಂತೆ ಮಾಡಲು, ಅದಕೆ-ಆ ಹಾವುಗಳಿಗೆ, ನಿರ್ವಾಹಮಂ-ಜಯಿಸಬಹುದಾದ ಯುಕ್ತಿಯೊಂದನ್ನು, ಕಂಡು-ಹುಡುಕಿ,ಗೀರ್ವಾಣಪತಿಸುತಸೂನು-ಪಾರ್ಥಜನು, ಸಾರಂಗ-ಜೇನು ನೊಣ,ಶಿಖಿ-ಮಯೂರವು,ನಕುಲ-ಮುಂಗಸಿಯು, ಗೃಧ್ರಂಗಳಾಗಿ-ಹದ್ದುಗಳೇ ಮೊದಲಾದವು ಹುಟ್ಟಿ, ಸೀಳ್ವ-ಛೇದಿಸುತ್ತಲಿರತಕ್ಕ, ಉರ್ವ-ಅಧಿಕವಾದ, ಮಂತ್ರಾಸ್ತ್ರಂಗಳಂ-ಮಂತ್ರಪೂರ್ವಕವಾದ ಸರಲ್ಗಳನ್ನೂ, ತಿರುವಿನೊಳ್-ಧನುಸ್ಸಿನ ದಾರದಲ್ಲಿ, ಪೂಡಿ-ಪೋಣಿಸಿ, ಕೋಪಮಂ-ಆಗ್ರಹವನ್ನು, ತಾಳ್ದು-ಹೊಂದಿ, ಕಾಲದ-ಪ್ರಪಂಚದ ವಿನಾಶಕಾಲದ, ಕಡೆಯ-ಅಂತ್ಯದಲ್ಲಿರತಕ್ಕ, ಶರ್ವನಂತೆ-ಪರಮೇಶ್ವರನಂತೆ, ಇರೆ-ಇರಲಾಗಿ, ತೆಗೆದು-ಆಕರ್ಣಾಂತವಾಗಿ ಸೆಳೆದು, ಎಚ್ಚನು-ಹೊಡೆದನು, ಅದ್ಭುತವನು-ಅಚ್ಚರಿಯನ್ನು, ಏವೇಳ್ವೆನು-ಏನೆಂದು ನುಡಿಯಲಿ.

ಅ॥ ವಿ॥ ಮಂತ್ರಾಸ್ತ್ರ (ಸ. ದೀ) ಗೀರ್ವಾಣಪತಿಸುತಸೂನು-ಗೀರ್ವಾಣ - ಸುರರ, ಪತಿ-ಒಡೆಯನು, (ಷ. ತ.) ಗೀರ್ವಾಣಪತಿ-ದೇವೇಂದ್ರನ, ಸುತ-ಕುವರನು, (ಪಾರ್ಥನು) (ಷ. ತ.) ಗೀರ್ವಾಣಪತಿಸುತ-ಅರ್ಜುನನ, ಸೂನು-ಕುವರನು, (ಬಭ್ರುವಾಹನಂ) (ಷ. ತ.) ॥೩೩॥

ಟೀ॥ ಉರಗ-ಹಾವುಗಳ, ಸೇನೆಯಂ-ದಂಡನ್ನು, ಪದ್ದುಸಾರಂಗಮುಂಗಿಲಿನವಿಲಘಟ್ಟ-ಪದ್ದು-ಹದ್ದುಗಳು ಅಥವ ಗೃಧ್ರಂಗಳು, ಸಾರಂಗ-ಜೇನು ನೊಣಗಳು, ಮುಂಗಿಲಿ-ಮುಂಗುಸಿಯು, ನವಿಲ-ಮಯೂರಗಳು ಮೊದಲಾದುವುಗಳ, ಘಟ್ಟ-ಗುಂಪು, ಇಟ್ಟಣಿಸಿ-ಸಾಂದ್ರವಾಗಿ ಸೇರಿ, ಘಾತಿಸಿ-ಬಡಿದು, ಪೊರಳ್ಚಿದುದು-ನೆಲಕ್ಕೆ ಕೆಡವಿತು, ಅರ್ಜುನಿ-ಪಾರ್ಥಜನಾದರೊ,

---

ಶಂಖ, ಪದ್ಮ, ಕರ್ಕೋಟಕ ಮೊದಲಾದ ಸೇನಾನಿಗಳಿಂದ ಕೂಡಿದ ಧೃತರಾಷ್ಟ್ರನು ಶತ್ರುಸೈನ್ಯದ ಮೇಲೆ ನುಗ್ಗಿ ಇಪ್ಪತ್ತೊಂದು ಸಹಸ್ರ ಸೈನ್ಯವನ್ನು ನಿರ್ಮೂಲಮಾಡಿದನು, ಇದರಿಂದ ಬಭ್ರುವಾಹನನಿಗೆ ಮಹಾ ರೋಷವುಂಟಾಗಿ ತನ್ನ ನಿಶಿತ ಬಾಣಂಗಳಿಂದ ಸರ್ಪಗಳ ತಲೆಗಳನ್ನು ಕತ್ತರಿಸುತ್ತ ಬರಲು, ಆ ಶಿರಸ್ಸುಗಳೂ ಅವುಗಳಲ್ಲಿರುವ ಮಣಿಗಳೂ ಸಹ ಪ್ರಳಯಕಾಲದಲ್ಲಿ ಅಂತರಿಕ್ಷದಿಂದ ಭೂಮಿಗೆ ಬೀಳುವ ತಾರೆಗಳ ಸಮೂಹವೊ ಎಂಬಂತೆ ಭ್ರಾಂತಿಗೈಯ್ಯುತ್ತ ನೆಲದಮೇಲೆ ಬಿದ್ದು ಹೋಗುತ್ತಲಿದ್ದವು. ॥ ೩೨ ॥ ಇದನ್ನು ಕಂಡ ಸರ್ಪಸೇನಾಪತಿಗಳು ತಮ್ಮ ಸರ್ವಬಲವನ್ನೂ ಕೂಡ ಒಂದೇಬಾರಿ ಅರ್ಜುನಿಯ ಮೇಲೆ ನುಗ್ಗಿಸಿದರು. ಘೋರತರವಾಗಿ ತಮ್ಮನ್ನು ಆವರಿಸುತ್ತಿರುವ ಪರಬಲವನ್ನು ನೋಡಿ ಬಭ್ರುವಾಹನನು ಅವುಗಳ ಬಾಧೆಯನ್ನು ಪರಿಹರಿಸಿಕೊಳ್ಳಲು ತನ್ನ ಧನುಸ್ಸಿನಲ್ಲಿ ಜೇನು ಹುಳಗಳು, ನೊಣ, ಮುಂಗಸಿ, ಹದ್ದು ಮೊದಲಾದವುಗಳ ಸಮೂಹವೆಲ್ಲಾ ಉತ್ಪತ್ತಿಯಾಗಿ ಪರಬಲವನ್ನು ಕವಿಯತಕ್ಕ ಬಾಣಗಳನ್ನು ಸೇರಿಸಿ ಕಾಲರುದ್ರನಂತೆ ಕೋಪಮಂ ತಾಳಿ, ಬಲವಾಗಿ ಬಿಟ್ಟು ಬಿಟ್ಟನು. ॥ ೩೩ ॥ ಇದರಿಂದ ಹದ್ದುಗಳೂ, ನವಿಲ್ಗಳೂ, ಮುಂಗಸಿ ಜೇನು ಹುಳ ಮೊದಲಾದವೆಲ್ಲಾ ಹುಟ್ಟಿ ಅರಿಬಲವನ್ನು ಹೊಕ್ಕು ಸರ್ಪಸೈನ್ಯವನ್ನು ಕಚ್ಚಿ ಕೆಡಹುತ್ತಲಿರುವಾಗ ಬಭ್ರುವಾಹನನು ಜೇನುತುಪ್ಪದ ಮಳೆಯಂ ಕರೆಯುವ ಬಾಣಗ

ದೆಚ್ಚಂಪಿಪೀಲಿಕಾಸ್ತ್ರವನೊಡನೆ । ಕಚ್ಚುರುವೆಮುತ್ತಿದವುಫಣಿಗಳಂಕಚ್ಚಿದವು । ನಿಟ್ಟಿಸುವಕಂಗಳಂತಿಂದವುನೆಣಂಗಳಂಕೊರೆದು
ಪೊಡಲಸ್ಥಿಗಳನು ॥ ೩೪ ॥ ಪೋಟೆಗೊಂಬುಗಳಪಳೆಮರದಂತೆತಿರುಳಿಲ್ಲ । ದೋಟೆಗಳತಿಂತ್ರಿಣೀಫಲದಂತೆಗುಳಿಕಕರ್ಕೋಟ
ಕಾದಿಗಳೊಡಲ್ಪೊಳ್ಳಾದ । ವಿರುಹೆಗಳಮುತ್ತಿಗೆಗೆಕಂಗೆಟ್ಟವು ॥ ತೋಟಿಯಂತಂದಧೃತರಾಷ್ಟ್ರನವರೂಥಮಂ । ಘೋಟಕವ
ನಿಷುಕಾರ್ಮುಕಂಗಳಂಖಂಡಿಸಿಕಿ । ರೀಟಿಸುತನುರುಬಿದೊಡೆಮುರಿವೊಡೆದುರಗಸೇನೆಶೇಷನಿದ್ದೆಡೆಗೋಡಿತು ॥ ೩೫ ॥ ಕೆಟ್ಟೋಡಿ
ಬಂದಹಿಗಳರ್ಜುನಿಗೆರತ್ನಮಂ । ಕೊಟ್ಟುಳುಹಬೇಕೆಂದುನಾಗರಾಜಂಗೆಮೊರೆ । ಯಿಟ್ಟೊಡಾತಂಕನಲ್ದೇಕೆತಡೆದಿರಿಮೊದ
ಲ್ಮಂತ್ರಜ್ಞರಿಳೆಯನರರು ॥ ಕಟ್ಟುಗ್ರಮಾಗಿರ್ದನಿಮ್ಮವಿಷಕಂಜರಿಂ । ನಟ್ಟಸುಡದಿರನೀಗಪಾರ್ಥಿಪಾತಾಳಮಂ । ನೆಟ್ಟನೆಸಮ

ಮತ್ತೆ-ತಿರುಗಿ, ತಕ್ಷಕಂಗಳಮೇಲೆ-ಹಾವುಗಳ ಮೇಲೆ, ಜೇಣ - ಜೇನುತುಪ್ಪವನ್ನು, ಕರೆವೊಲು - ಸುರಿಸುತ್ತಿರುವಂತೆ, ಮಧು ಶರವ-ಜೇನನ್ನು ಒಸರುವ ಕಣೆಯನ್ನು, ಬಿಟ್ಟನು-ಪ್ರಯೋಗಮಾಡಿದನು, ಒಡನೆ-ಮತ್ತೆ, ಪಿಪೀಲಿಕಾಸ್ತ್ರವನು-ಇರುವೆ ಮೊದಲಾದುವೆಲ್ಲಾ ಉತ್ಪತ್ತಿಯಾಗತಕ್ಕ ಸರಲನ್ನು, ತೊಟ್ಟು-ಜೋಡಿಸಿ, ಎಚ್ಚಂ-ಪ್ರಯೋಗಿಸಿದನು, ಕಚ್ಚುರುವೆ-ಕ್ರೂರವಾದ ಇರುವೆಗಳು, ಮುತ್ತಿದವು-ಸುತ್ತಿಕೊಂಡವು, ಫಣಿಗಳಂ-ಸರ್ಪಾಳಿಯನ್ನು, ಕಚ್ಚಿದವು – ಕಚ್ಚಿಹಾಕಿದವು, ನಿಟ್ಟಿಸುವ – ನೋಡುತ್ತಲಿರುವ, ಕಂಗಳಂ-ನಯನಂಗಳನ್ನು, ತಿಂದವು-ತಿಂದು ಹಾಕಿದವು, ನೆಣಂಗಳಂ-ಮೇದೋಭಾಗವನ್ನೆಲ್ಲಾ, ತಿಂದವು – ತಿಂದುಬಿಟ್ಟವು, ಒಡಲ-ದೇಹದಲ್ಲಿರುವ, ಅಸ್ಥಿಗಳನು-ಮೂಳೆಗಳನ್ನು, ಕೊರೆದವು-ರಂಧ್ರಗಳಾಗುವಂತೆ ಮಾಡಿದವು. ॥೩೪॥

ಟೀ॥ ಪೋಟೆ-ಟೊಳ್ಳಾದ, (ಬುರುಡೆಯಾದ) ಕೊಂಬುಗಳ-ಶಾಖೆಗಳುಳ್ಳ, ಪಳೆಮರದಂತೆ-ಮುದಿಯಾದ ತುರುವಿನ ತೆರನಾಗಿ, ತಿರುಳು-ಸಾರವಾದ ಭಾಗವು, (ಖಂಡವು) ಇಲ್ಲದ-ಇಲ್ಲದಿರತಕ್ಕ, ಓಟೆಗಳ – ಬಿತ್ತಗಳಿಂದ ಕೂಡಿದ, ತಿಂತ್ರಿಣೀಫಲದಂತೆ – ಹುಣಿಸೆಹಣ್ಣಿನ ಹಾಗೆ, ಗುಳಿಕ-ಗುಳಿಕನು, ಕರ್ಕೋಟಕನು, ಆದಿ-ಮೊದಲಾದ ವಿಷಸರ್ಪಗಳ, ಒಡಲ್ – ದೇಹವು, ಪೊಳ್ಳಾದವು-ಬುರುಡೆಯಾಯಿತು, ಇರುಹೆಗಳ-ಚೀಮೆಗಳ, ಮುತ್ತಿಗೆಗೆ-ಕವಿಯುವಿಕೆಗೆ, ಕಂಗೆಟ್ಟವು-ಭ್ರಾಂತಿಯಿಂದ ಕೂಡಿದವು, ತೋಟಿಯಂತಂದ-ಪ್ರತಿಭಟಿಸಿ ಬಂದ, ಧೃತರಾಷ್ಟ್ರನ-ಧೃತರಾಷ್ಟ್ರನೆಂಬ ಸರ್ಪದ, ವರೂಥಮಂ-ತೇರನ್ನು, ಘೋಟಕವನು-ಅಶ್ವವನ್ನು, ಇಷು-ಸರಲ್ಗಳನ್ನು, ಕಾರ್ಮುಕಂಗಳಂ-ಧನುಸ್ಸುಗಳನ್ನು. ಕಿರೀಟಿಸುತನು-ಪಾರ್ಥಜನು, ಖಂಡಿಸಿ-ಛೇದಿಸಿ, ಉರುಬಿದೊಡೆ-ಓಡಿಸಿ ಬಿಡಲು, ಉರಗಸೇನೆ-ಹಾವುಗಳಪಡೆಯು, ಮುರಿವಡೆದು-ಭಗ್ನವಾಗಿ, ಶೇಷನು-ಫಣಿರಾಜನು, ಇದ್ದೆಡೆಗೆ-ಇದ್ದ ಸ್ಥಳಕ್ಕೆ, ಓಡಿತು-ಓಡಿಹೋಯಿತು. ॥೩೫॥

ಟೀ॥ ಕೆಟ್ಟು-ಪರಾಜಿತರಾಗಿ, ಓಡಿಬಂದ – ಓಡಿಬಂದಂಥ, ಅಹಿಗಳು-ಹಾವುಗಳು, ರತ್ನಮಂ – ಸಂಜೀವಕಮಣಿಯನ್ನು, ಅರ್ಜುನಿ-ಪಾರ್ಥಜನಿಗೆ, ಕೊಟ್ಟು-ಇತ್ತು, ಉಳುಹಬೇಕು – ನಮ್ಮನ್ನು ಪಾಲಿಸಬೇಕು, ಎಂದು – ಎಂಬತೆರನಾಗಿ, ನಾಗರಾಜಂಗೆ-ಫಣೀಂದ್ರನಿಗೆ, ಮೊರೆಯಿಟ್ಟೊಡೆ-ಹೇಳಿಕೊಳ್ಳಲು, ಆತಂ-ಆ ಆದಿಶೇಷನು, ಕನಲ್ದು-ಕೋಪಮಾಡಿಕೊಂಡು, ಮಂತ್ರಜ್ಞರು-ಮುಂದಾಗುವದನ್ನು ಬಲ್ಲ ನೀವಾದರೊ, ಮೊದಲು-ಪ್ರಾರಂಭದಲ್ಲಿ, ಏಕೆ – ಏತಕ್ಕೋಸ್ಕರ, ತಡೆದಿರಿ-ಅಡ್ಡಗಿಸಿದಿರಿ, ಕಟ್ಟುಗ್ರಂ-ಬಹು ತೀಕ್ಷ್ಣವಾದ, ನಿಮ್ಮವಿಷಕೆ-ನಿಮ್ಮ ನಂಜಗೆ, ಇಳೆಯನರರು-ಭೂಲೋಕವಾಸಿಗಳಾದ ಮಾನವರು, ಅಂಜರು-ಹೆದರುವುದಿಲ್ಲವು, ಇನ್ನು-ಇನ್ನುಮುಂದೆ, ಈಗ-ಈಗಲಾದರೊ, ಪಾರ್ಥಿ-ಅರ್ಜುನಿಯು, ಪಾತಾಳಮಂ-ಪಾತಾಳಲೋಕವನ್ನೆಲ್ಲಾ, ಅಟ್ಟಿ-ತರುಮಿಕೊಂಡು ಬಂದು, ಸುಡದೆಇರನು-ಸುಟ್ಟುಬಿಡದೆ ಸುಮ್ಮನಾಗುವುದಿಲ್ಲವು, ಕೃಶರು – ಹೇಡಿಗಳು,

ಳನ್ನು ಸರ್ಪಾಳಿಯ ಮೇಲೆ ಬಿಟ್ಟು ಕಚ್ಚುರುವೆಗಳು ಹುಟ್ಟುವ ಶರಗಳನ್ನು ಪ್ರಯೋಗಿಸಲು ಎಲ್ಲೆಲ್ಲಿಯೂ ಇರುವೆಗಳು ತುಂಬಿಕೊಂಡು ಆ ಹಾವುಗಳ ಕಣ್ಣು ಬಾಯಿ ಮೊದಲಾದ ಸರ್ವಾಂಗವನ್ನೂ ಕಚ್ಚಿ ಮೇದಸ್ಸನ್ನೆಲ್ಲಾ ತಿಂದು ಮೂಳೆಗಳಲ್ಲಿ ರಂಧ್ರಗಳನ್ನು ಮಾಡಿಬಿಟ್ಟವು ॥೩೪॥ ಇದರಿಂದ ಸರ್ಪಸಮುದಾಯವೆಲ್ಲಾ ಟೊಳ್ಳಾದ ರೆಂಬೆಗಳಿಂದ ಕೂಡಿದ ಹಳೆ ಮರದಂತೆಯೂ, ಸಾರವಾದ ಭಾಗವನ್ನು ಹೋಗಲಾಡಿಸಿಕೊಂಡ ಹುಣಸೆಯ ಬೀಜದಂತೆಯೂ ಬೆಂಡಾಗಿ ಹೋದವು. ಅರ್ಜುನಿಯ ಬಾಣದ ಕೊಯ್ಲಿಗೆ ಸಿಕ್ಕಿದ ಧೃತರಾಷ್ಟ್ರನೂ ಅವನ ರಥವೂ ಮುರಿದು ಬೀಳಲು ಉಳಿದ ಸರ್ಪಗಳೆಲ್ಲವೂ ತಮ್ಮ ರಾಜನಿದ್ದೆಡೆಗೆ ತಡಮಾಡದೆ ಓಡಿಹೋಗಿ॥೩೫॥ಸರ್ಪೇಂದ್ರನನ್ನು ಕುರಿತು, ಎಲೈ ನಾಗರಾಜನೆ, ಬಭ್ರುವಾಹನನಿಗೆ ಸುಧಾಮಣಿಯನ್ನು ಕೊಟ್ಟು ಮೊದಲು ಇಲ್ಲಿಂದ ಕಳುಹಿದಲ್ಲದೆ ನಮ್ಮ ಹರಣಂಗಳು ಉಳಿಯುವುದಿಲ್ಲವೆಂದು ಮೊರೆಯಿಡಲಾಗಿ ಆದಿಶೇಷನು ಆ ಸರ್ಪಗಳನ್ನು ನೋಡಿ, ಎಲೈ ಉರಗವರ್ಯರೆ, ನಾನು ಮೊದಲೆ ಜೀವಮಣಿಯನ್ನು ಕೊಡಬೇಕೆಂದಿರಲು ನೀವೆಲ್ಲಾ ತಡೆದಿರಲ್ಲವೆ? ಮಾನವರು ನಿಮ್ಮ ನಂಜಿಗೆ ಹೆದರತಕ್ಕವರೆಂದು ತಿಳಿದು ಈ ಕಾರ್ಯವನ್ನು ಮಾಡಿದಿರಲ್ಲವೆ? ಪಾತಾಳ ಲೋಕವನ್ನು ಸುಟ್ಟು ಬೂದಿಮಾಡಿದಲ್ಲದೆ ಅರ್ಜುನಿಯು ಎಂದಿಗೂ ಸುಮ್ಮನಾಗಲಾರನು. ಕೈಲಾಗದವರು ತಮ್ಮಲ್ಲಿರುವ ಸರ್ವಸ್ವವನ್ನೂ ಬಲಿಷ್ಠರಿಗೆ ಒಪ್ಪಿಸದಿದ್ದರೆ

ರ್ಘರ್ಗೆ ತನುಧನವನೊಪ್ಪಿಸದೊಡುಳಿವರೇ ಕೃಶರೆಂದನು ‖ ೩೬ ‖ ಸಾಕದಂತಿರಲಿನ್ನು ಪಾರ್ಥಿಯ ಶರಾಗ್ನಿಯಿಂ । ಕಾಕೋದರಾಳಿ ಬೇಯದ ಮುನ್ನ ಮರ್ಜುನಿಗೆ । ಬೇಕಾದ ವಸ್ತುವಂ ಕೊಟ್ಟೆಮ್ಮನುಳುಹೆಂದು ಫಣಿಕುಲಂ ಬಾಯಬಿಡಲು ‖ ಲೋಕದೊಳ್ದಾನ ಧರ್ಮೋಪಕಾರಂಗಳ್ಗೆ । ತಾ ಕೊಡದೆ ಮಾಜಿಕೊಂಡಿರ್ದ ಲೋಭಿಯ ಧನಂ । ಕಾಕಭಾಜನಮಪ್ಪುದಡವಿಯೊಳ್ಬಿದ್ದ ಪೆಣದಂತೆಂದನುರಗೇಂದ್ರನು ‖ ೩೭ ‖ ಧರಣಿಧರನಮ್ಮ ದುರ್ನೀತಿಯಂ ನೋಡದಿ । ರ್ಮುರಹರನಪ್ರೀತಿಯಪ್ಪಂತೆ ಕೊಡು ರತ್ನಮಂ । ನರನಸುತಂಗರ್ಜುನಂ ಬದುಕಲೆಂದಹಿಗಳಾಶೇಷನಂ ಬೇಡಿಕೊಳಲು ‖ ಹರಿಯ ಕಾರುಣ್ಯ ಸಂಜೀವನಂ ಪಾಂಡವ । ರ್ಗಿರಲದೇಗೈಯ್ಯುದಾವಿ

---

ಸಮರ್ಥರ್ಗೆ-ಶೂರಾಗ್ರಣಿಗಳಿಗೆ, ನೆಟ್ಟನೆ-ನೇರವಾಗಿ, ತನುಧನವನು-ಶರೀರ ಮತ್ತು ಹಣವನ್ನು, ಒಪ್ಪಿಸದೊಡೆ-ಕೊಡದೇ ಹೋದರೆ, ಉಳಿವರೆ-ಪ್ರಾಣಸಹಿತವಾಗಿರಲು ಆದೀತೆ (ಆಗುವುದಿಲ್ಲವು) ‖

ಅ‖ ವಿ‖ ಕೆಟ್ಟೋಡಿ (ಉಕಾರಲೋಪ) ನಾಗರಾಜ (ಷ. ತ.) ‖೩೬‖

ಟೀ‖ ಸಾಕು-ನಿಮ್ಮ ಸಾಹಸ ಕೃತ್ಯವು ಸಾಕು, ಅದು-ನಮ್ಮ ಪರಾಕ್ರಮವು, ಅಂತು-ಹಾಗೆ, ಇರಲಿ-ಇದ್ದುಕೊಳ್ಳಲಿ, ಕಾಕೋದರಾಳಿ-ಹಾವುಗಳ ಸಮುದಾಯವೆಲ್ಲಾ, ಪಾರ್ಥಿಯ-ಫಲುಗುಣನ ಸುತನ, ಶರಾಗ್ನಿಯಿಂ-ಕಣೆಗಳೆಂಬ ಬೆಂಕಿಯಿಂದ, ಬೇಯದ-ಸುಟ್ಟುಹೋಗದ, ಮುನ್ನ-ಮೊದಲೆ, ಅರ್ಜುನಿಗೆ-ಪಾರ್ಥಜನಿಗೆ, ಬೇಕಾದ-ಇಷ್ಟವಾಗಿರತಕ್ಕ, ವಸ್ತುವಂ-ಪುರುಳ್ಗಳನ್ನು, ಕೊಟ್ಟು-ಕೊಟ್ಟವನಾಗಿ, ಎಮ್ಮಂ-ನಮ್ಮನ್ನು, ಉಳುಹು-ಪಾಲಿಸು, ಎಂದು-ಎಂಬುದಾಗಿ, ಫಣಿಕುಲಂ-ಸರ್ಪಸಮುದಾಯವೆಲ್ಲಾ, ಬಾಯಿಬಿಡಲು-ಕಂಠೋಕ್ತವಾಗಿ ಹೇಳಲು, ಉರಗೇಂದ್ರನು-ಸರ್ಪರಾಜನಾದರೊ, ಲೋಕದೊಳ್-ಪ್ರಪಂಚದೊಳಗೆ, ತಾ-ಯಾರು, ದಾನಧರ್ಮೋಪಕಾರಂಗಳ್ಗೆ-ದಾನ-ದಾನಮಾಡುವುದು, ಧರ್ಮ-ಉಚಿತವಾಗಿ ಕೊಡುವುದು, ಪರೋಪಕಾರಂಗಳ್ಗೆ-ಇತರರಿಗೆ ಅನುಕೂಲವನ್ನುಂಟುಮಾಡುವುದು ಮೊದಲಾದವುಗಳಿಗೆ, ಕೊಡದೆ-ಕೊಟ್ಟುಬಿಡದೆ, ಮಾಜಿಕೊಂಡು-ಮರೆಮಾಚಿಕೊಂಡು, ಇರ್ದ-ಇದ್ದಂಥ, ಲೋಭಿಯ ಧನಂ-ಕೃಪಣನ ಸಿರಿಯು, ಅಡವಿಯೊಳ್-ಕಾಡಿನೊಳಗೆ, ಬಿದ್ದ-ಬಿದ್ದುಹೋದ, ಪೆಣನಂತೆ-ಶವದಹಾಗೆ, ಕಾಕಭಾಜನಂ-ಕಾಗಿಗೆ ಸೇರುವುದು, ಅಪ್ಪುದು-ಆಗುತ್ತದೆ (ನನಿಗೆ ಸಾರ್ಥಕವಾಗುವುದಿಲ್ಲವು), ಎಂದನು-ಎಂಬುದಾಗಿ ನುಡಿದನು ‖

ಅ। ವಿ‖ ಶರಾಗ್ನಿ, (ಸ. ದೀ.) ಉರಗೇಂದ್ರ, (ಗುಣಸಂಧಿ) ‖ ೩೭ ‖

ಟೀ‖ ಧರಣಿಧರ-ಭೂಭಾರವನ್ನು ತಾಳಿರುವ ಆದಿಶೇಷನೆ, ನಮ್ಮ ದುರ್ನೀತಿಯಂ-ನಮ್ಮ ಕೆಟ್ಟ ನಡವಳಿಕೆಯನ್ನು, ನೋಡದಿರ್-ಗಣನೆಗೆ ತಾಬೇಡ, ನರನಸುತಗೆ-ಬಭ್ರುವಾಹನನಿಗೆ, ಮುರಹರಪ್ರೀತಿಯು-ಕೃಷ್ಣಾರ್ಪಣವು, ಅಪ್ಪಂತೆ ಆಗುವ ತೆರನಾಗಿ, ರತ್ನವಂ - ಸಂಜೀವಕ ಮಣಿಯನ್ನು, ಕೊಡು - ಕೊಟ್ಟುಬಿಡು, ಅರ್ಜುನನು - ಪಾರ್ಥನಾದರೆ, ಬದುಕಲಿ- ಪ್ರಾಣಗಳನ್ನು ಪಡೆಯುವನಾಗಲಿ, ಎಂದು-ಎಂಬತೆರನಾಗಿ, ಅಹಿಗಳು-ಸರ್ಪಗಳೆಲ್ಲಾ, ಬೇಡಿಕೊಳಲು-ಸರ್ಪರಾಜನನ್ನು ಕೋಳಿಕೊಳ್ಳಲಾಗಿ, ಪಾಂಡವರ್ಗೆ-ಪಾಂಡುಸುತರಾದ ಧರ್ಮಾದಿಗಳಿಗೆ, ಹರಿಯ-ಕೃಷ್ಣಮೂರುತಿಯ, ಕಾರುಣ್ಯ-ಕೃಪೆಯೆಂಬ ಸಂಜೀವನಂ-ಸುಧಾರಸ ಪೂರಿತಮಾದ ರತ್ನವು, ಇರೆ - ಇರಲಾಗಿ, ಅದು-ಆ ಕಷ್ಟವು, ಏಗೈವುದು - ಏನುತಾನೆ ಮಾಡುತ್ತದೆ, ಆವು-ನಾವು, ಇತ್ತ-ಕೊಟ್ಟಂಥಾ, ಮಣಿ-ಮಾಣಿಕ್ಯವಾದರೊ, ದುಗ್ಧಸಾಗರಕೆ-ಪಾಲ್ಗಡಲಿಗೆ, ಅಜಕ್ಷೀರಂ-ಮೇಕೆಯ ಹಾಲನ್ನು ಬೆರಸಿದ-ಸೇರಿಸಿದ, ಉಪಕಾರಂ-ಅನುಕೂಲವು, ಅಹುದು-ಆಗುತ್ತದೆ, ಎಂದು-ಎಂಬತೆರನಾಗಿ, ಮತ್ತೆ-ತಿರುಗಿ, ಇಂತೆಂದನು-ಈತೆರ

---

ಅವರು ಸುಮ್ಮನೆ ಬಿಡದಿರುವುದು ಸಹಜವಾಗಿಯೇ ಇರುವುದು, ನಿಮ್ಮ ದುರ್ನಡತೆಗೆ ತಕ್ಕ ಫಲವನ್ನು ಅನುಭವಿಸಿರೆಂದು ನುಡಿದನು ‖ ೩೬ ‖ ಈರೀತಿಯಲ್ಲಿ ತಿರಸ್ಕರಿಸುತ್ತಲಿರುವ ಆದಿಶೇಷನನ್ನು ಕುರಿತು ಸರ್ಪಗಳೆಲ್ಲವೂ ಎಲೈ ರಾಜಶ್ರೇಷ್ಠನೆ, ನಾವು ಹಿಂದೆಮಾಡಿದ ದುಷ್ಕೃತ್ಯವನ್ನು ಮನಸ್ಸಿಗೆ ತಂದುಕೊಳ್ಳದೆ ಅರ್ಜುನಿಯು ಪಾತಾಳಲೋಕವನ್ನು ಸುಡುವುದಕ್ಕೆ ಮೊದಲೇ ಸಂಜೀವಕ ರತ್ನವನ್ನೂ ಇನ್ನೂ ಆತನಿಗೆ ಬೇಕಾದ ಸಕಲ ವಸ್ತುಗಳನ್ನೂ ಕೊಟ್ಟು ನಮ್ಮನ್ನು ಕಾಯಬೇಕೆಂದು ದೀನರಾಗಿ ಬೇಡಿಕೊಂಡರು, ಆಗ ಸರ್ಪರಾಜನು ಉರಗಂಗಳೇ ಕೇಳಿ, ಲೋಕದಲ್ಲಿ ಕಷ್ಟ ಪಡತಕ್ಕವರನ್ನು ನೋಡಿ ತಮ್ಮಲ್ಲಿರುವುದನ್ನು ಕೊಟ್ಟು ಪರೋಪಕಾರದ ಪುಣ್ಯವಂ ಪಡೆಯಲು ಯಾರು ಒಪ್ಪರೊ ಅವರ ಗತಿಯೆಲ್ಲಾ ಹೀಗೆಯೇ ಎಂದು ನುಡಿಯಲು, ‖೩೭‖ ಸರ್ಪಾಳಿಯು ಫಣೀಶ್ವರನನ್ನು ಕುರಿತು, ಎಲೈ ಸ್ವಾಮಿಯೆ, ನಮ್ಮ ಕೆಟ್ಟ ಕೃತ್ಯವನ್ನು ಈಗ ನೀನು ಮನದಲ್ಲೆಣಿಸಕೂಡದು, ಅರ್ಜುನನ ಜೀವವಂ ಪಡೆಯಲು ಬಭ್ರುವಾಹನನಿಗೆ ಸಂಜೀವಕ ಮಣಿಯನ್ನು ಕೃಷ್ಣಾರ್ಪಣವಾಗಿ ಕೊಟ್ಟುಬಿಟ್ಟು ನಮ್ಮನ್ನು ಕಾಪಾಡಬೇಕೆಂದು ಮತ್ತೆ ಕೇಳಿಕೊಂಡರು. ಆಗ ಸರ್ಪರಾಜನು, ಎಲೈ ಉರಗಗಳೆ, ಕೃಷ್ಣಸ್ವಾಮಿಯ ಕರುಣಾಕಟಾಕ್ಷವೆಂಬ ದಿವ್ಯೌಷಧವು ಪಾಂಡವರಿಗೆ ಸಿಕ್ಕಿರುವಾಗ ನಾವು ಕೊಡುವ ಸಂಜೀವಕದ ರತ್ನವು ಯಾವ ಸಹಾಯವನ್ನು ತಾನೆಮಾ

ತ್ನಮಣಿದುಗ್ಧಸಾ | ಗರಕಜಕ್ಷೀರಮಂಬೆರಸಿದುಪಕಾರಮುಹುದೆಂದುಮುತ್ತಿಂತೆಂದನು || ೩೮ || ...ಯನುಂಕಲ್ಪತರುಕಾಮಧೇನುಚಿಂ | ತಾಮಣಿಯನುಂ ಬಯಸಲೇಕಕಟಯಾದವಶಿ | ಖಾಮಣಿಯನುನ್ನತದಭಕ್ತಿಯಿಂದರಿವರ್ಗೆಸಾಕದಂತಿರಲಿನೀವು || ಆ ಮಣಿಯದಾನಮಂತಡೆದಪಾಪಂಹರಿಯ | ರಾಮಣೀಯಕಮೂರ್ತಿದರುಶನದೊಳಲ್ಲದದು | ತಾಮಣಿಯದಂಜದಿರಗರುಡಂಮುಳಿವನಲ್ಲಬನ್ನಿಪೋದಪೆವೆಂದನು ||೩೯|| ಇಂತೆಂದಖಿಳಪನ್ನಗಾವಳಿಯನೊಡಗೊಂಡ | ನಂತರದೊಳಾಮಹಾಮಣಿವೆರಸಿಪೊರಮಟ್ಟ | ನಂತನುರುಕುಂಡಲದ್ವಿತಯಮಂಶತಶಲಾಕೆಯೊಸೆವಸತ್ತಿಗೆಯನು || ಸಂತಸದೊಳರ್ಜುನಿಗೆಕೊಟ್ಟುಕಂಡಾ

---

ನಾಗಿ ಹೇಳಿದನು ||

ಅ|| ವಿ|| ಧರಣಿಧರ-ಧರಣಿ-ಭೂಮಿಯನ್ನು, ಧರ-ಹೊತ್ತಿರುವನು (ದ್ವಿ. ತ.) ||೩೮||

ಟೀ|| ಯಾದವ ಶಿಖಾಮಣಿಯನು-ಯದು ವಂಶಕ್ಕೆಕಿರೀಟ ಪ್ರಾಯನಾದ ಕೃಷ್ಣಪರಮಾತ್ಮನನ್ನು, ಉನ್ನತದ-ಹೆಚ್ಚಾದ, ಭಕ್ತಿಯಿಂದ-ಅಕ್ಕರೆಯಿಂದ, ಅರಿವರ್ಗೆ-ತಿಳಿಯತಕ್ಕವರಿಗೆ, ಈ ಮಣಿಯನುಂ-ಈ ಜೀವರತ್ನವನ್ನೂ, ಕಲ್ಪತರು-ಕಲ್ಪವೃಕ್ಷ, ಕಾಮಧೇನುವಂ-ಕಾಮಧೇನುಗಳೆನ್ನತಕ್ಕ, ಚಿಂತಾಮಣಿಯನು-ಚಿಂತಾಮಣಿ ರತ್ನವನ್ನು ಸಹ, ಬಯಸಲು-ಆಶಿಸತಕ್ಕದ್ದು, ಏಕೆ-ಏನು ಪ್ರಯೋಜನ, ಅಕಟ-ಅಯ್ಯೋ, ಸಾಕು-ಆ ಭಕ್ತರ ನುಡಿಯು ಸಾಕು, ಅಂತು-ಹಾಗೆ, ಇರಲಿ-ಇದುಹೋಗಲಿ, ನೀವು-ನೀವಾದರೊ, ಆ ಮಣಿಯ-ಆ ರತ್ನದ, ದಾನಂ-ಕೊಡುವಿಕೆಯನ್ನು, ತಡದ-ಅಡ್ಡಿಮಾಡಿರತಕ್ಕ, ಪಾಪಂ-ದುರಿತವು, ಹರಿಯ-ಕೃಷ್ಣಸ್ವಾಮಿಯ, ರಾಮಣೀಯಕದ-ಸುಂದರವಾದ, ಮೂರ್ತಿ-ಆಕಾರದ, ದರ್ಶನದೊಳು- ನೋಡುವಿಕೆಯನ್ನು, ಅಲ್ಲದೆ-ಬಿಟ್ಟರೆ, ಅದು-ಆ ದೋಷವು, ತಾನು-ಅದು, ಮಣಿಯದು-ನಿವಾರಣೆಯಾಗುವುದಿಲ್ಲವು, ಗರುಡಂ-ಗರುತ್ಮಂತನ ಮುಳಿವನು-ಕೋಪಮಾಡಿಕೊಳ್ಳುವನು, ಅಲ್ಲ-ಅಲ್ಲವು, ಅಂಜದಿರಿ-ಹೆದರಬೇಡಿ, ಬನ್ನಿ-ನನ್ನನ್ನು ಹಿಂಬಾಲಿಸಿ, ಎಂದನು-ಎಂಬದಾಗಿ ಹೇಳಿದನು || ೩೯ ||

ಟೀ|| ಇಂತು-ಈ ಪ್ರಕಾರವಾಗಿ, ಎಂದು-ನುಡಿದು, ಅಖಿಳ - ಅಶೇಷವಾದ, ಪನ್ನಗಾವಳಿಯನು - ಹಾವುಗಳ ಪಡೆಯನ್ನೂ, ಒಡಗೊಂಡು-ಜೊತೆಮಾಡಿಕೊಂಡು, ಅನಂತರದೊಳು-ತರುವಾಯ, ಆ ಮಹಾಮಣಿವೆರಸಿ-ಆ ಶ್ರೇಷ್ಠವಾದ ರತ್ನದಿಂದ ಕೂಡಿ, ಅನಂತನು-ಸರ್ಪರಾಜನು, ಪೊರಮಟ್ಟು-ಹೊರಟವನಾಗಿ, ಉರು-ಶ್ರೇಷ್ಠವಾದ, ಕುಂಡಲದ್ವಿತಮಯಂ-ಕಡಕುಗಳೆರಡನ್ನೂ, ಶತಶಲಾಕೆಯೊಳು-ನೂರು ಕಡ್ಡಿಯನ್ನು ಹಾಕಿದ, ಸತ್ತಿಗೆಯನ್ನು-ಕೊಡೆಯನ್ನು, ಅರ್ಜುನಿಗೆ-ಪಾರ್ಥಜನಿಗೆ, ಸಂತಸದೊಳು-ಆನಂದದಿಂದ, ಕೊಟ್ಟು-ಇತ್ತವನಾಗಿ, ಆತನಂ-ಆ ಪಾರ್ಥಜನನ್ನು, ಕಂಡು-ದರ್ಶನವಂ ತೆಗೆದುಕೊಂಡು ಸಂತೈಸಿ-ಶಾಂತ ವಚನಗಳಿಂದ ಒಪ್ಪಿಸಿ, ಅಂತರಿಸದೆ-ತಡಮಾಡದೆ, ಫಲುಗುಣಂ-ಪಾರ್ಥನು, ಮಡಿದಿಹ-ಸತ್ತು ಬಿದ್ದಿರತಕ್ಕ, ರಣಭೂಮಿಗೆ-ಸಮರಾಂಗಣಕ್ಕೆ, ಪಾತಾಳ-ಪಾತಾಳಲೋಕದಲ್ಲಿರತಕ್ಕ, ಸುವಸ್ತುಸಹಿತ-ಉತ್ತಮವಾದ ಪದಾರ್ಥಗಳೊಂದಿಗೆ, ಸಂಭ್ರಮದೊಳು-ಆನಂದದಿಂದ, ಐದಿದಂ-ಇದಿರಾಗಿ ಹೋಗಿ ಸೇರಿದನು ||

ಅ|| ವಿ|| ಪನ್ನಗಾವಳಿ-ಪನ್ನಗ-ಪತ್-ಕಾಲ್ಗಳಿಂದ, ನ-ನಡೆಯದಿರುವುದು (ತೃ. ತ.) ಪನ್ನಗ-ಹಾವುಗಳ, ಆವಳಿ-ಗುಂಪು (ಷ. ತ.) ಮಹಾಮಣಿವೆರಸಿ-ಮಹಾಮಣಿ-(ವಿ. ಪೂ.) ಮಹಾಮಣಿಯಿಂದ ವೆರಸಿ (ತೃ. ತ,) ಸತ್ತಿಗೆ (ತ್ಭ). ಛತ್ರಿಕಾ (ತ್ಸ) ವರುಣಾವನಿ (ಸ. ದೀ.) ||೪೦||

---

ಡಲಾದೀತು ? ಪಾಲ್ಗಡಲಿಗೆ ಅಜಕ್ಷೀರವನ್ನು ಬೆರಸಿದಂತಾಗುವುದೇ ಹೊರತು ಮತ್ತೆ ಬೇರೆ ಇಲ್ಲವು || ೩೮ || ಯದುಕುಲತಿಲಕನಾದ ಕೃಷ್ಣನೆಂಬ ಶಿಖಾಮಣಿಯಮುಂದೆ ಕಲ್ಪವೃಕ್ಷ ಕಾಮಧೇನುಗಳು ಕೂಡ ಎದುರಿಸಲಸಾಧ್ಯವಾಗಿರುವಾಗ ನಮ್ಮಮಣಿಯು ಯಾವ ಕೆಲಸಕ್ಕೆ ಬಂದೀತು ? ಅದು ಹಾಗಿರಲಿ, ನಾನು ಸುಧಾಮಣಿಯನ್ನು ಅರ್ಜುನನಿಗಾಗಿ ಪುಂಡರೀಕನೊಂದಿಗೆ ಕಳುಹಬೇಕೆಂದಿರುವಾಗ ನೀವುಗಳೆಲ್ಲಾ ತಡದಿರುವಿರಾದ ಕಾರಣದಿಂದೊಗೆದ ಮಹಾ ಪಾಪವು ನಿಮಿಗೆಲ್ಲಾ ಕೃಷ್ಣಸಂದರ್ಶನದಿಂದ ಪರಿಹಾರವಾಗಬೇಕೇಹೊರತು ಮತ್ತೆ ಬೇರೆ ಉಪಾಯಾಂತರವನ್ನು ಹುಡುಕಲಾಗದು, ನಿಮಿಗೆ ಗರುತ್ಮಂತನ ಭಯವೇನೂ ಇಲ್ಲ. ನೀವೆಲ್ಲರೂ ಹೊರಡಿರಿ, ಬಭ್ರುವಾಹನನೊಂದಿಗೆ ಸಮಾಧಾನ ಮಾಡಿಕೊಂಡು ಭೂಲೋಕಕ್ಕೆ ಪಾರ್ಥಿಯ ಹಿಂದೆಯೇ ಹೋಗಿ ಕೃಷ್ಣಸಂದರ್ಶನದಿಂದ ಪವಿತ್ರರಾಗಿರೆಂದು ನುಡಿಯಲು ಸಕಲರೂ ಸಂತೋಷದಿಂದ ಒಪ್ಪಿದವರಾದರು. || ೩೯ || ಆಗ ಫಣೀಂದ್ರನಾದ ವಾಸುಕಿಯು ಅಖಿಳ ಸರ್ಪಾಳಿಯಿಂದೊಡಗೂಡಿ ಸುಧಾಮಣಿಯ ಸಮೇತನಾಗಿ ಬಭ್ರುವಾಹನನಿದ್ದೆಡೆಗೆ ಬಂದು, ಅಮೌಲ್ಯವಾದ ಕರ್ಣಕುಂಡಲಗಳೆರಡನ್ನು, ನೂರುಕಡ್ಡಿಗಳು ಹಾಕಿದ್ದ ಕೊಡೆಯೊಂದನ್ನೂ ಪಾರ್ಥಿಗೆ ಒಪ್ಪಿಸಿ ಸಂಭ್ರಮಾತಿಶಯದಿಂದ ಕೂಡಿದವನಾಗಿ ಸರ್ಪಸಮೂಹದೊಂದಿಗೆ ಬಭ್ರುವಾಹನನ ಜೊತೆಯಲ್ಲಿ ಭೂಲೋಕಕ್ಕೆ ಹೋಗುತ್ತಲಿರುವು

ತನಂ | ಸಂತೈಸಿಪಾತಾಳದುತ್ತಮಸುವಸ್ತುಸಹಿತಂತರಿಸಧೈದಿದಂ| ಫಲುಗುಣಂಮಡಿದಿಹರಣಾವನಿಗೆಸಂಭ್ರಮದೊಳು ||೪೦|| ಸುಮ್ಮಾನದಿಂದಶೇಷಂಪ್ರೋಗುತಿರೆಕಂಡು | ದುಮ್ಮಾನದಿಂದಧೃತರಾಷ್ಟ್ರನುನಿಜಾಲಯದೊ | ಳುಮ್ಮಳಿಸಿಮಣಿವಿಜಯಮರ್ಜುನಿಗೆಪಾರ್ಥಂಗೆಜೀವಂಯುಧಿಷ್ಠಿರಂಗೆ || ತಮ್ಮನಭ್ಯುದಯಂಮಹಾಧ್ವರಕೆತುರಂಗಮಿನಿ | ತೊಮ್ಮೆಸಂಜನಿಸುತಿರ್ದಪುದಕಟಬಹುವಿಘ್ನ | ಮಂಮಾಡಿದೆಂತಪ್ಪಿತೀಗತಾನೇಗೈವೆನೆಂದುಚಿಂತಿಸುತಿರ್ದನು ||೪೧|| ಅನ್ನೆಗಂದುರ್ಬುದ್ಧಿದುಸ್ಸ್ವಭಾವರ್ಕಳೆಂ | ಬುನ್ನತದಪೆಸರುಳ್ಳಮಕ್ಕಳುಂಟೀರ್ವರಾ | ಪನ್ನಗಂಗವರಾತನಂಸಂತವಿಟ್ಟುನೀಂಬಹುದುಫಣಿರಾಜನೊಡನೆ|| ಮುನ್ನಮೆರಣಕೆಪೋಗಿಪಾರ್ಥನತಲೆಯನಾವು | ಗನ್ನದಿಂಕೊಂಡೊಯ್ಯೆವೆಮ್ಮಚೇಷ್ಟೆಗಳಿಂದ | ಭಿನ್ನಮಾಗದೆನರನಬಾಳ್ಕೆಬಾರದುನರಕಮಂಜಬೇಡಿದಕೆಂದರು ||೪೨|| ಅರಸಕೇಳ್ದುರ್ಬುದ್ಧಿದುಸ್ಸ್ವಭಾವರ್ಮೊದಲೆ | ಧರಗೆಬಂದರ್ಜುನನತಲೆಯನಪಹರಿಸಿಕೊಂ | ಡಿರದೆ

---

ಟೀ|| ಶೇಷಂ-ಸರ್ಪರಾಜನು, ಸುಮ್ಮಾನದಿಂದ-ಸಂತೋಷದಿಂದ, ಪೋಗುತಿರೆ-ಹೋಗುತ್ತಿರಲಾಗಿ, ಧೃತರಾಷ್ಟ್ರನು-ಧೃತರಾಷ್ಟ್ರನೆಂಬ ಹಾವು, ಕಂಡು-ಈಕ್ಷಿಸಿ, ದುಮ್ಮಾನದಿಂದ-ದುರ್ಜಡತೆಯಿಂದ, ನಿಜ-ಸ್ವಕೀಯವಾದ, ಆಲಯದೊಳು-ಮಂದಿರದಲ್ಲಿ, ಉಮ್ಮಳಿಸಿ- ವ್ಯಸನದಿಂದ ಕೂಡಿ, ಅರ್ಜುನಿಗೆ- ಪಾರ್ಥಜನಿಗೆ, ಮಣಿವಿಜಯಂ- ರತ್ನವು ದೊರಿಯೋಣವು, ಪಾರ್ಥಂಗೆ-ಧನಂಜಯನಿಗೆ, ಜೀವಂ-ಜೀವದ ಉಳಿಯುವಿಕೆಯು, ಯುಧಿಷ್ಠಿರಂಗೆ-ಧರ್ಮಪುತ್ರನಿಗೆ, ತಮ್ಮನ-ಅನುಜಾತನ, ಅಭ್ಯುದಯಂ-ಏಳಿಗೆಯು, ಮಹಾಧ್ವರಕೆ-ದೊಡ್ಡದಾದ ಅಶ್ವಮೇಧ ಯಾಗಕ್ಕೆ, ತುರಗಂ-ಹಯವು, ಇನಿತು-ಇಷ್ಟೂ, ಒಮ್ಮೆ-ಒಟ್ಟಿಗೆ, ಸಂಜನಿಸುತಿರ್ದಪುದು-ಲಭ್ಯವಾಗುವುದು, ಅಕಟ-ಅಹಾ, ಬಹುವಿಘ್ನಮಂ-ಅನೇಕ ತೊಂದರೆಗಳನ್ನು, ಮಾಡಿದೆಂ-ಉಂಟು ಮಾಡಿದ್ದೆನು, ತಪ್ಪಿತು-ಎಲ್ಲವೂ ಪರಿಹಾರವಾಯಿತು, ತಾನು-ನಾನಾದರೋ, ಈಗ-ಈ ಸಂದರ್ಭದಲ್ಲಿ, ಏಗೈವೆನು-ಮಾಡಬೇಕಾದ್ದೇನು, ಎಂದು-ಎಂಬತೆರನಾಗಿ, ಚಿಂತಿಸುತ-ದುಃಖಿಸುತ್ತ, ಇರ್ದನು-ಇದ್ದವನಾದನು.

ಅ|| ವಿ|| ನಿಜಾಲಯ ಮತ್ತು ಮಹಾಧ್ವರ (ಸ. ದೀ. ಸಂಧಿ ಮತ್ತು ವಿ. ಪೂ.) ಏಗೈವೆನು - ಏನಂಗೈವೆನು (ಕ್ರಿ. ಸ). ||೪೧||

ಟೀ|| ಅನ್ನೆಗಂ-ಧೃತರಾಷ್ಟ್ರನು ಈ ತೆರನಾಗಿ ಚಿಂತಿಸುತ್ತಿರುವ ಕಾಲಕ್ಕೆ ಸರಿಯಾಗಿ, ದುರ್ಬುದ್ಧಿ-ದುರ್ಬುದ್ಧಿ ಎಂಬ ಪೆಸರಿನ, ಧುಸ್ಸ್ವಭಾವರ್ಕಳು-ದುಸ್ಸ್ವಭಾವನೆನ್ನುವ, ಉನ್ನತ-ಪ್ರಖ್ಯಾತವಾದ, ಪೆಸರುಳ್ಳ-ಹೆಸರಿನಿಂದ ಕೂಡಿದ, ಈರ್ವರು ಮಕ್ಕಳು-ಸುತರಿಬ್ಬರು, ಆ ಪನ್ನಗಂಗೆ-ಆ ಧೃತರಾಷ್ಟ್ರನಿಗೆ, ಉಂಟು-ಇದ್ದಾರೆ, ಅವರು-ಆ ಪುತ್ರರು, ಆತನಂ-ಧೃತರಾಷ್ಟ್ರನನ್ನು, ಸಂತವಿಟ್ಟು- ಸಮಾಧಾನಮಾಡಿ, ನೀಂ-ನೀನಾದರೊ, ಫಣಿರಾಜನೊಡನೆ- ಸರ್ಪಶ್ರೇಷ್ಠನಾದ ಆದಿಶೇಷನೊಂದಿಗೆ, ಬಹುದು-ಬರಬೇಕು, ಆವು-ನಾವಾದರೆ, ಮುನ್ನ-ಪ್ರಾರಂಭದಲ್ಲಿಯೆ, ರಣಕೆ-ಯುದ್ಧರಂಗಕ್ಕೆ, ಪೋಗಿ-ಹೋದವರಾಗಿ, ಗನ್ನದಿಂ-ಕೃತ್ರಿಮದಿಂದ, ಪಾರ್ಥನ-ಫಲುಗುಣನ, ತಲೆಯಂ-ಶಿರವನ್ನು, ಕೊಂಡೊಯ್ವೆವು-ತೆಗೆದುಕೊಂಡು ಹೋಗುವೆವು, ನರನ-ಪಾರ್ಥನ, ಬಾಳ್ಕೆ-ಬದುಕುವಿಕೆಯು, ಎಮ್ಮ ಚೇಷ್ಟೆಗಳಿಂದ - ನಮ್ಮ ದುರ್ಜಡತೆಗಳಿಂದ, ಭಿನ್ನವಾಗದೆ- ವ್ಯತ್ಯಸ್ತವಾಗದೆ, ಬಾರದು-ಇರುವುದಿಲ್ಲವು, ಇದಕೆ-ಈ ಕೆಲಸಕ್ಕಾಗಿ, ಅಂಜಬೇಡ-ಹೆದರಬೇಡ, ಎಂದರು-ಎಂಬದಾಗಿ ಹೇಳಿದರು. ||೪೨||

ಟೀ|| ಅರಸ-ಎಲೈ ಜನಮೇಜಯನರೇಂದ್ರನೆ, ಕೇಳು-ಲಾಲಿಸು, ಮೊದಲೆ-ಪಾರ್ಥಜ ಮೊದಲಾದವರಿಗಿಂತಲೂ ಮುಂಚೆಯೇ, ದುರ್ಬುದ್ಧಿ ದುಸ್ಸ್ವಭಾವರು - ದುರ್ಬುದ್ಧಿ ದುಸ್ಸ್ವಭಾವರೆಂಬ ಧೃತರಾಷ್ಟ್ರನ ಸುತರು, ಧರೆಗೆ- ಭೂಮಿಯ

---

ದನ್ನು ಧೃತರಾಷ್ಟ್ರನು ನೋಡಿ ||೪೦|| ಅಯ್ಯೋ ಬಭ್ರುವಾಹನನಿಗೆ ಸುಧಾಮಣಿಯು ಸಿಕ್ಕಬಾರದೆಂದೂ, ಅರ್ಜುನನ ಪ್ರಾಣವು ಉಳಿಯಬಾರದೆಂದೂ, ಧರ್ಮತನಯನಿಗೆ ತಮ್ಮನ ಜೀವವನ್ನು ಮತ್ತೆ ಪಡೆದ ಸಂತೋಷವೂ, ಅಶ್ವಮೇಧಯಾಗದ ಫಲದಿಂದೊಗೆವ ಅತ್ಯಾನಂದವೂ ಉಂಟಾಗಬಾರದೆಂದು ನಾನು ಮಾಡಿದ ಮಹಾ ಪ್ರಯತ್ನಂಗಳೆಲ್ಲಾ ವಿಫಲವಾದವಲ್ಲಾ! ಮುಂದೇನು ಮಾಡಲೆಂದು ತನ್ನ ಮನೆಯಲ್ಲಿಯೇ ಬಹುವಾಗಿ ಚಿಂತಿಸುತ್ತಲಿದ್ದನು ||೪೧|| ಧೃತರಾಷ್ಟ್ರನು ಈಪರಿ ಶೋಕಿಸುತ್ತಲಿರುವಾಗ ಅವನ ಕುವರರಾದ ದುರ್ಬುದ್ಧಿ ದುಸ್ಸ್ವಭಾವರೆಂಬ ಸಾರ್ಥಕನಾಮದಿಂ ಮೆರೆವ ಕುವರರೀರ್ವರೂ ನೋಡಿ, ತಮ್ಮ ತಂದೆಯಾದ ಧೃತರಾಷ್ಟ್ರನನ್ನು ಸಂತೈಸಿ, ಎಲೈ ಜನಕನೆ! ನೀನೂ ಫಣಿರಾಜನೊಂದಿಗೆ ಅರ್ಜುನನ ಸಮರಾಂಗಣಕ್ಕೆ ಹೊರಡು, ನೀವೆಲ್ಲರೂ ಅಲ್ಲಿಗೆ ಬಂದು ಸೇರುವುದಕ್ಕೆ ಮೊದಲೇ ನಾವೀರ್ವರೂ ಅಲ್ಲಿಗೆ ಹೋಗಿ ಕೃತ್ರಿಮದಿಂದ ಅರ್ಜುನನ ತಲೆಯನ್ನು ಅಪಹರಿಸಿಕೊಂಡು ಹೋಗುವೆವು. ಹೀಗೆ ಮಾಡಿದರೆ ಅರ್ಜುನನ ಪ್ರಾಣವು ಹೇಗೆತಾನೆ ಉಳಿಯುವುದು? ಇದರಿಂದ ಯಾವ ಪಾತಕವುತಾನೆ ಉಂಟಾದೀತು ಎಂದು ನುಡಿದರು ||೪೨|| ರಾಜೇಂದ್ರನಾದ ಜನಮೇಜಯನೆ! ಕೇಳು, ತಂದೆಯಾದ ಧೃತರಾಷ್ಟ್ರನ ಅನುಜ್ಞೆಯಂ ಪಡೆದ ದುರ್ಬುದ್ಧಿ ದುಸ್ಸ್ವಭಾವರು ಅತಿ ವೇಗದಿಂದ ರಣಭೂಮಿಯನ್ನು ಸೇರಿ ಅರ್ಜುನನ ತಲೆಯನ್ನು ಕದ್ದು

ಬಕದಾಲ್ಭ್ಯನಮಹಾಘೋರನಿರ್ಜರಾರಣ್ಯದೊಳ್ಬಿಸುಡಲಿತ್ತ ॥ ಹರುಷದಿಂಶೇಷನಂಮುಂದಿಕ್ಕಿಕೊಂಡುಮಣಿ । ವೆರಸಿರಣ ಮಂಡಲಕೆಕಲಿಬಭ್ರುವಾಹನಂ । ಬರಲಾಸಮಯದೊಳಾದುದುಬಹಳಕಳಕಳಂಕಾಣದೆನರನಶಿರವನು ।೪೩॥ ಕಾಂತೆಯರೊಡನೆ ತನ್ನಜನನಿಯರ್ಕುಂಡಲದ । ಕಾಂತಿಯಿಂದಾರಣಾಗ್ರದೊಳೆಸೆವುತಿರ್ದನಿಜ । ಕಾಂತನಶಿರವಲ್ಲಿಕಾಣದೇನಾದುದಾರೊಯ್ದರೆಲ್ಲಿರ್ಪ ದೆಂದು ॥ ಪ್ರಾಂತದೆಣ್ದೆಸೆಗಳಂನೋಡಿಹಂಬ್ಲೈಸಿವಿ । ಭ್ರಾಂತಿಯಿಂದರಸಿಹಾಹಾಯೆಂಬರಭಸಮಾ । ಶಾಂತಮಂತೀವಲಾಸಮಯಕಹಿಪತಿಸಹಿತಬಭ್ರುವಾಹಂಬಂದನು ।।೪೪॥ ಆಕ್ಕರೊಳುಲೂಪಿಚಿತ್ರಾಂಗದೆಯರನ್ನೆಗಂ । ಕಕ್ಕಸದರಣದೊಳರ್ಜುನನ ಕಾಲ್ದೆಸೆಯೊಳೆವೆ । ಯಿಕ್ಕದೆರಮಣನತಲೆಗಳಂನೋಡುತಿರ್ದವರಾಗಪಾರ್ಥಿಬರಲು ॥ ಇಕ್ಕೆಯೊಳ್ಶಿರವಿಲ್ಲದಿರೆಬೆದರಿಮೈಮರೆದು ಮಿಕ್ಕಸತಿಯರನೆರವಿಗಜಬಜಿಸೆಕಂಡಿಳೆಯೊ । ಳೊಕ್ಕನೊಡಲಂಬಭ್ರುವಾಹನಂಮೃತಕಲ್ಪನಾಗಿಪಲವೇಣಿಕೆಯಿಂದ ॥ ೪೫ ॥

---

ಮೇಳ್ಗಡೆಗೆ, ಬಂದು-ಬಂದವರಾಗಿ, ಅರ್ಜುನನ-ಫಲುಗುಣನ, ತಲೆಯನು- ಶಿರವನ್ನು, ಅಪಹರಿಸಿಕೊಂಡು- ಕಳವು ಮಾಡಿಕೊಂಡು, ಇರದೆ-ಸುಮ್ಮನಿರದೆ, ಬಕದಾಲ್ಭ್ಯನ-ಬಕದಾಲ್ಭ್ಯನೆಂಬ ಮಹರ್ಷಿಯು, ಮಹಾಘೋರ-ಬಹು ಭಯಂಕರವಾದ, ನಿರ್ಜನ-ಜನಗಳಿಲ್ಲದ, ಅರಣ್ಯದೊಳು-ವನದಲ್ಲಿ, ಬಿಸುಡಲು-ಬಿಸಾಟುಬಿಡಲು, ಇತ್ತ-ಈ ಭಾಗದಲ್ಲಿ, ಕಲಿ-ವೀರನಾದ, ಬಭ್ರುವಾಹನನು-ಪಾರ್ಥಸುತನು, ಶೇಷನಂ-ಸರ್ಪರಾಜನನ್ನು, ಮುಂದರಿಸಿಕೊಂಡು-ಮುಂದುಮಾಡಿಕೊಂಡು, ಮಣಿವೆರಸಿ-ಸಂಜೀವಕರತ್ನದಿಂದೊಡಗೂಡಿ, ಹರುಷದಿಂದ-ಆನಂದದಿಂದ, ರಣಮಂಡಲಕೆ-ಸಮರಾಂಗಣಕ್ಕೆ, ಬರಲು-ಬರಲಾಗಿ, ಆ ಸಮಯದೋಳ್-ಆ ವೇಳೆಯಲ್ಲಿ, ನರನ-ಫಲುಗುಣನ, ಶಿರವನು-ತಲೆಯನ್ನು, ಕಾಣದೆ-ನೋಡದೆ, ಬಹಳ-ಅಧಿಕವಾದ, ಕಳಕಳಂ-ಕಳಕಳ ರವವು, ಆದುದು-ಉಂಟಾಯಿತು ||೪೩||

ಟೀ|| ಕಾಂತೆಯರೊಡನೆ- ತನ್ನರಸಿಯರೊಂದಿಗೆ, ತನ್ನ-ಸ್ವಕೀಯರಾದ, ಜನನಿಯರು-ಮಾತೆಯರಾದ ಉಲೂಪಿ ಚಿತ್ರಾಂಗದೆಯರು, ಆ ರಣಾಗ್ರದೊಳು-ಆ ಸಮರಾಂಗಣದಲ್ಲಿ, ಕುಂಡಲದ-ಕರ್ಣಾಭರಣಂಗಳ, ಕಾಂತಿಯಿಂದ-ಹೊಳಪಿನಿಂದ, ಎಸೆವುತ-ಥಳಥಳಿಸುತ್ತ, ಇರ್ದ-ಇದ್ದಂಥ, ನಿಜ-ಸ್ವಕೀಯನಾದ, ಕಾಂತನ-ರಮಣನ, ಶಿರವನು-ತಲೆಯನ್ನು, ಅಲ್ಲಿ-ಆ ಎಡೆಯಲ್ಲಿ, ಕಾಣದೆ-ನೋಡದೆ, ಏನಾದುದು-ಏನಾಯಿತು, ಆರು-ಯಾರು, ಒಯ್ದರು-ತೆಗೆದುಕೊಂಡು ಹೋದರು, ಎಲ್ಲಿರ್ಪುದು-ಎಲ್ಲಿದೆ, ಎಂದು-ಎಂಬತೆರನಾಗಿ, ಪ್ರಾಂತದ- ಹತ್ತಿರದಲ್ಲಿರುವ, ಎಣ್ದೆಸೆಗಳಂ-ಅಷ್ಟದಿಕ್ಕುಗಳನ್ನು, ನೋಡಿ-ಈಕ್ಷಿಸಿದವರಾಗಿ, ಹಮ್ಮೈಸಿ-ವ್ಯಸನಗೊಂಡು, ವಿಭ್ರಾಂತಿಯಿಂದ- ಕಳವಳದಿಂದ, ಅರಸಿ-ಎಲ್ಲೆಲ್ಲಿಯೂ ಹುಡುಕಿ, ಹಾಹಾಯೆಂಬ-ಅಯ್ಯೋ ಎನ್ನುವ, ರಭಸಂ-ಕೂಗು, ಆಶಾಂತಮಂ-ದಿಕ್ತಟವನ್ನು, ತೀವಲು-ತುಂಬಿಕೊಳ್ಳಲು, ಆ ಸಮಯಕೆ-ಆ ಕಾಲಕ್ಕೆ, ಬಭ್ರುವಾಹಂ-ಪಾರ್ಥಜನು, ಅಹಿಪತಿಸಹಿತ-ಸರ್ಪರಾಜನೊಂದಿಗೆ, ಬಂದನು-ಬಂದು ಸೇರಿದವನಾದನು ||೪೪||

ಟೀ|| ಅನ್ನೆಗಂ-ಬಭ್ರುವಾಹನನು ನಾಗಲೋಕದಿಂದ ಹಿಂದಿರುಗಿ ಬರುವವರೆಗೂ, ಉಲೂಪಿ ಚಿತ್ರಾಂಗದೆಯರು-ಉಲೂಪಿ ಚಿತ್ರಾಂಗದೆ ಎಂಬ ಅವನ ತಾಯಿಯರು, ಕಕ್ಕಸದ- ಕಠಿಣವಾದ, ರಣದೊಳು- ಸಮರಾಂಗಣದಲ್ಲಿ, ಅರ್ಜುನನ-ಪಾರ್ಥನ, ಕಾಲ್ದೆಸೆಯೊಳು-ಕಾಲುಗಳ ಕಡೆಯಲ್ಲಿ, ಆಕ್ಕರೊಳು-ವಿಶ್ವಾಸದಿಂದ, ಎವೆಯಿಕ್ಕದೆ-ರೆಪ್ಪೆಹೊಡೆಯದೆ, ರಮಣನ-ಪತಿಯ, ತಲೆತನುಗಳಂ-ತಲೆ ಮತ್ತು ಶರೀರವನ್ನು, ನೋಡುತ-ನಿರುಕಿಸುತ್ತ, ಇರ್ದವರು-ಇದ್ದಂಥವರು, ಆಗ-ಆ ಕಾಲದಲ್ಲಿ ಪಾರ್ಥಿ-ಅರ್ಜುನಿಯು, ಬರಲು-ಐತರಲು, ಶಿರಂ-ರುಂಡವು, ಇಕ್ಕೆಯೊಳ್- ಪಕ್ಕದಲ್ಲಿ, ಇಲ್ಲದಿರೆ-ಇಲ್ಲದಿರಲು, ಬೆದರಿ-ಹೆದರಿಕೊಂಡು, ಮೈಮರೆದು-ಜ್ಞಾನವನ್ನುನೀಗಿಕೊಂಡವರಾಗಿ, ಮಿಕ್ಕ-ಮಿಕ್ಕಿರುವ, ಸತಿಯರ-ನಾರಿಯರ, ನೆರವಿ-ಗುಂಪು, ಗಜಬಜಿಸೆ-ಶಬ್ದಮಾಡುತ್ತಿರಲು, ಬಭ್ರುವಾಹನಂ-ಪಾರ್ಥಜನು, ಕಂಡು-ನಿರುಕಿಸಿ, ಪಲವೇಣಿಕೆಯಿಂದ-ಹೆಚ್ಚಾದ ಯೋಚನೆಯಿಂದ, ಒಡಲ

---

ಕದಾಲ್ಭ್ಯ ಮುನಿಯು ಆಶ್ರಮವಿರುವ ನಿರ್ಜನ ಪ್ರದೇಶವಾದ ಘೋರಾರಣ್ಯಕ್ಕೆ ಬಿಸುಟರು. ಅತ್ತ ನಾಗೇಂದ್ರನೂ ಬಭ್ರುವಾಹನನೂ ಅಪರಿಮಿತವಾದ ಪಡೆಯ ಕಡಲೂ ಜಾಗ್ರತೆಯಿಂದ ರಣಭೂಮಿಗೆ ಬಂದು ನೋಡುವಲ್ಲಿ ಅರ್ಜುನನ ತಲೆಯೇ ಕಾಣಲಿಲ್ಲ, ಆಗ ಅಲ್ಲಿ ನೆರದಿದ್ದವರೆಲ್ಲರೂ ಕಳಕಳಾರವಮಂ ಗೈಯ್ಯಲಾರಂಭಿಸಿದರು. ‖ ೪೩ ‖ ಪ್ರಕಾಶಮಾನವಾದ ಕರ್ಣ ಕುಂಡಲಂಗಳಿಂದ ಮೆರೆವ ಅರ್ಜುನನ ತಲೆಯನ್ನು ಮತ್ತು ದೇಹವನ್ನು ಕಾಯುತಿದ್ದ ಉಲೂಪಿ ಚಿತ್ರಾಂಗದೆಯರು ಅರ್ಜುನನ ತಲೆಯು ಅಕಸ್ಮಾತ್ತಾಗಿ ಮಾಯವಾಗಿರುವುದನ್ನು ಕಂಡು ಬಹಳವಾಗಿ ಗೋಳಿಡಲುಜ್ಜುಗಿಸಿದರು. ಇವರ ರೋಧನಧ್ವನಿಯು ಎಂಟು ದಿಕ್ಕುಗಳನ್ನು ಮುಟ್ಟಿತು. ‖೪೪‖ ಈ ಕಾಲಕ್ಕೆ ಬಭ್ರುವಾಹನ, ಶೇಷರಾಜನೇ ಮೊದಲಾದವರೆಲ್ಲಾ ಬಂದು ಸೇರಿದರು ಆದುವರೆಗೂ ಇದ್ದ ತಲೆಯು ಈಗ ಮಾಯವಾಗಿರುವುದನ್ನು ಉಲೂಪಿ ಚಿತ್ರಾಂಗದೆಯರು ನೋಡಿ ಗೋಳಾಡಿ ಬಹು ಭಯದಿಂದ ನಡುಗುತ್ತಲಿರುವುದನ್ನು ಬಭ್ರುವಾಹನನು ನೋಡಿ ಭಗ್ನಮನಸ್ಕನಾಗಿ ದಿಕ್ಕು ತೋಚದೆ ನಿಂತುಕೊಂಡನು. ‖ ೪೫ ‖

ಇಂತಾಗುತಿರಲಿತ್ತಲತ್ತಲಿಭನಗರದೊಳ್ | ಕುಂತಿಪಾರ್ಥಂಬೀಳ್ವದಿನದಿರುಳ್ಕಂಡಳ್ | ತ್ಯಂತಭೀಕರದಕನಸಂಪೇಳ್ದಳಸುರಾರಿಧರ್ಮಜ ವೃಕೋದರರ್ಗೆ || ಅಂತಕನದೆಸೆಗಾಗಿರಾಸಭಪನೇರಿಪೋ | ಪಂತೈಲವಾಪಿಗತನಾಗಿದಾಸಣದಪೂ | ವಂತೊಡಂತಾಳ್ದುಗೋಮಯ ವಿಲಿಪ್ತಾಂಗನಾಗಿರ್ದಪಂವಿಜಯನೆಂದು || ೪೬ || ಬೆಂದಪುದುಪಡೆದೆನ್ನೊಡಲ್ಸುಭದ್ರೆಯಕಂಗ | ಳಿಂದೊಸರ್ದಪುದುಕಂಬನಿ ಕೃಷ್ಣನಿನ್ನಸಖ | ನಿಂದುಜೀವಂತನಾಗಿರ್ಪುದರಿದೆಂದುಪೃಥೆಹಂಬಲಿಸಿಮರುಗುತಿರಲು || ಇಂದಿರಾವಲ್ಲಭಂಗರುಡನಂನೆನೆಯಲ್ಕೆ |

ದೇಹವನ್ನು, ಮೃತಕಲ್ಪನಾಗಿ - ಪ್ರಾಣಗಳಿಂದ ಬಿಡಲ್ಪಟ್ಟಂತೆ ಮಾಡಿಕೊಂಡು, ಇಳೆಯೊಳ್ - ಧರಾಮಂಡಲದಲ್ಲಿ, ಪೊಕ್ಕನು- ಪ್ರವೇಶಮಾಡಿದನು, (ಹೆಚ್ಚಾದ ವ್ಯಸನದಿಂದ ಕೂಡಿದನೆಂದು ಭಾವವು.)

ಅ|| ವಿ|| ಕಕ್ಕಸ (ತ್ಭ) ಕರ್ಕಶ (ತ್ಸ) ಎನೆಯಿಕ್ಕದೆ ||ಕ್ರಿ. ಸ.) ||೪೫||

ಟೀ|| ಇತ್ತ-ಬಭ್ರುವಾಹನನಿರುವ ಭಾಗದಲ್ಲಿ, ಇಂತು-ಈ ತೆರನಾಗಿ, ಆಗುತಿರಲು-ಆಗುತ್ತಿರಲಾಗಿ, ಅತ್ತ - ಆಕಡೆ, ಇಭನಗರದೊಳ್-ಹಸ್ತಿನಾವತಿಯಲ್ಲಿ, ಕುಂತಿ-ಕುಂತಿದೇವಿಯಾದರೊ, ಪಾರ್ಥಂ-ಫಲುಗುಣನು, ಬೀಳ್ದ-ಬಿದ್ದ, ದಿನದೊಳ್-ದಿವಸದ, ಇರುಳ್-ನಿಶಿಯಲ್ಲಿ, ಅತ್ಯಂತ-ಬಹು ದೊಡ್ಡ, ಭೀಕರ-ಹೆದರಿಕೆಯನ್ನುಂಟುಮಾಡುವ, ಕನಸಂ-ಕನಸನ್ನು, ಕಂಡಳು-ತಿಳಿದಳು, ವಿಜಯನು-ಪಾರ್ಥನು, ರಾಸಭವನು-ಕತ್ತೆಯನ್ನು, ಏರಿ-ಏರಿಕೊಂಡು, ಅಂತಕನ-ಯಮಧರ್ಮರಾಯನ ದಿಕ್ಕನ್ನು ಕುರಿತು. ಪೋಪಂ-ಹೋಗುವನು, ತೈಲ-ಎಣ್ಣೆಯು ತುಂಬಿರುವ, ವಾಪಿ-ಬಾವಿಯನ್ನು, ಗತನಾಗಿ-ಹೋಗಿ ಸೇರಿದವನಾಗಿ, ದಾಸಣದಪೂವಂ-ಕೆಂಪು ದಾಸವಾಳವನ್ನು, ತೊಡಂ - ಆಭರಣವನ್ನಾಗಿ, ತಾಳ್ದು - ಹೊಂದಿ, ಗೋಮಯ - ಸಗಣಿಯಿಂದ, ವಿಲಿಪ್ತ-ಬಳಿದುಕೊಂಡಿರುವ, ಅಂಗನಾಗಿ-ಅವಯವವುಳ್ಳವನಾಗಿ, ಇರ್ದಪಂ-ಇರುತ್ತಾನೆ, ಎಂದು-ಎಂಬುದಾಗಿ, ಅಸುರಾರಿ ಧರ್ಮಜವೃಕೋದರರ್ಗೆ - ಅಸುರಾರಿ-ಕೃಷ್ಣಸ್ವಾಮಿಯು, ಧರ್ಮಜ - ಯುಧಿಷ್ಠಿರನು, ವೃಕೋದರರ್ಗೆ - ವಾಯುಸುತನು ಇವರಿಗೆ, ಪೇಳ್ದಳು-ಹೇಳಿದವಳಾದಳು. ||೪೬||

ಟೀ|| ಕೃಷ್ಣ-ಎಲೈ ಕೃಷ್ಣಸ್ವಾಮಿಯೆ, ಪಡೆದ-ಹೆತ್ತ, ಎನ್ನ-ನನ್ನ, ಒಡಲ್-ದೇಹವು, (ಹೊಟ್ಟೆ) ಬೆಂದಪುದು-ಸುಟ್ಟು ಹೋಗುತ್ತಲಿರುವುದು, ಕಂಬನಿ-ಕಣ್ಣೀರಾದರೊ, ಸುಭದ್ರೆಯ - ಸುಭದ್ರೆಯೆಂಬ ನಿನ್ನ ತಂಗಿಯ, ಕಂಗಳಿಂದ-ನಯನಂಗಳಿಂದ, ಒಸರ್ದಪುದು-ಸುರಿಯುತ್ತಲಿರುವುದು, ಇಂದು-ಈ ಹೊತ್ತು, ನಿನ್ನ ಸಖನು-ನಿನ್ನ ಮಿತ್ರನು, ಜೀವಂತನಾಗಿರ್ಪುದು-ಪ್ರಾಣಗಳಿಂದ ಸಹಿತನಾಗಿರುವುದು, ಅರಿದು-ಅಸಾಧ್ಯವು, ಎಂದು-ಎಂಬತೆರನಾಗಿ, ಪೃಥೆ-ಕುಂತೀದೇವಿಯು, ಹಂಬಲಿಸಿ-ಗೋಳಾಡಿ, ಮರುಗುತಿರಲು-ದುಃಖಿಸುತ್ತಿರಲಾಗಿ, ಇಂದಿರಾವಲ್ಲಭಂ-ಲಕ್ಷ್ಮೀಕಾಂತನಾದ ಕೃಷ್ಣಮೂರ್ತಿಯು, ಗರುಡನಂ-ಗರುತ್ಮಂತನನ್ನು, ನೆನೆಯಲ್ಕೆ-ಸ್ಮರಣೆಯಂ ಮಾಡಲಾಗಿ, ಆತಂ - ಆ ವೈನತೇಯನು, ಬಂದನು-ಬಂದು ಸೇರಿದನು, ಬಳಿಕ-ಆ ಮೇಲೆ, ಅನಿಲನಂದನ-ವಾಯುಸುತನು, ಯಶೋದೆ-ಯಶೋದೆಯು, ಕುಂತಿಗಳ್ವೆರಸಿ-ಕುಂತಿದೇವಿಯೇ ಮೊದಲಾದವರಿಂದ ಕೂಡಿ, ಅವನ-ಆ ಖಗರಾಜನ, ಬೆನ್ನ-ಬೆನ್ನನ್ನು, ಅಡರ್ದು - ಹತ್ತಿದವರಾಗಿ, ಮಣಿಪುರಕೆ-ಅರ್ಜುನಿಯ ರಾಜಧಾನಿಯ ಹತ್ತಿರಕ್ಕೆ. ನಡೆತಂದರು-ಬಂದು ಸೇರಿದರು.

ಅ|| ವಿ|| ಕಂಬನಿ (ಷ. ತ.) ||೪೭||

ಪಾರ್ಥಿಯೇ ಮೊದಲಾದವರೆಲ್ಲಾ ಅರ್ಜುನನ ತಲೆಯನ್ನು ಕಾಣದೆ ಚಿಂತಾಕ್ರಾಂತರಾಗಿದ್ದವರಾದರು. ಇವರು ಈ ಪರಿ ಶೋಕಿಸುತ್ತಲಿರುವಾಗ ಅತ್ತ ಹಸ್ತಿನಾವತಿಯಲ್ಲಿ ಕುಂತೀದೇವಿಯಾದರೊ, ತಾನು ಮಲಗಿರುವಾಗ ಅರ್ಜುನನ ತಲೆಯು ನೆಲಕ್ಕೆ ಬಿದ್ದ ರಾತ್ರಿಯೇ ಭಯಂಕರವಾದ ಸ್ವಪ್ನವನ್ನು ಕಂಡು ಧಿಗ್ಗನೆದ್ದು ಬಂದು ಕೃಷ್ಣಯುಧಿಷ್ಠಿರರನ್ನು, ವೃಕೋದರನನ್ನೂ ಕುರಿತು, ಅಯ್ಯೋ! ದೇವರೆ! ಏನುಮಾಡಲಿ! ಈ ದಿನ ನನ್ನ ಕನಸಿನಲ್ಲಿ ಅರ್ಜುನನ್ನು ಕಂಡೆನು? ಅವನು ಮೈಗೆ ಸಗಣಿಯನ್ನು ಬಳಿದುಕೊಂಡು ಕೆಂಪು ದಾಸುವಾಳದ ಹೂಗಳಿಂದ ಅಲಂಕೃತನಾಗಿ, ಕತ್ತೆಯ ಮೇಲೇರಿ ದಕ್ಷಿಣದಿಕ್ಕಿಗೆ ಹೊರಟು ಎಣ್ಣೆಯಿಂದ ತುಂಬಿದ ಬಾವಿಯ ಬಳಿ ಇದ್ದಂತೆ ಕಾಣಿಸಿತು. ||೪೬|| ಅಯ್ಯೋ ಕೃಷ್ಣಸ್ವಾಮಿಯೆ! ಅರ್ಜುನನನ್ನು ಹೆತ್ತ ನನ್ನ ಹೊಟ್ಟೆಯು ಸುಟ್ಟು ಹೋಗುತ್ತಲಿದೆ. ನಿನ್ನ ತಂಗಿಯೂ, ಅರ್ಜುನ ನರಸಿಯೂ ಆದ ಸುಭದ್ರೆಯ ಕಣ್ಣಳಿಂದ ಶೋಕಬಾಷ್ಪವು ಸುರಿಯುತ್ತಲಿರುವುದು, ಎಲೈ ಮಹಾನುಭಾವನಾದ ಅಸುರಾರಿಯೇ! ನಿರ್ನಿಮಿತ್ತವಾಗಿ ಇಂದು ಈ ತೆರನಾದ ಅಪಶಕುನಂಗಳುಂಟಾಗುತ್ತಲಿರುವುದರಿಂದ ನಿನ್ನ ಸಖನಾದ ಕಿರೀಟಿಯು ಪ್ರಾಣಗಳನ್ನಿರಿಸಿಕೊಂಡಿರುವನೆಂಬ ನಂಬಿಕೆಗೆ ಅನುಮಾನವುಂಟಾಗಿರುವುದೆಂದು ನುಡಿಯುತ್ತಾ ನಾನಾ ಪ್ರಕಾರವಾಗಿ ಹಂಬಲಿಸುತ್ತಲಿದ್ದಳು. ಆಗ ಕೃಷ್ಣಪರಮಾತ್ಮನು ತನ್ನ ವಾಹನವಾದ ಗರುಡನನ್ನು ನೆನೆಯಲು ಕೂಡಲೆ ಗರುತ್ಮಂತನು ಬಂದು ಸಿದ್ಧನಾದನು. ಕೃಷ್ಣಸ್ವಾಮಿಯು ಭೀಮಸೇನನೂ, ಕುಂತಿದೇವಿ

ಬಂದನಾತಂಬಳಿಕವನಸಬೆನ್ನಡರ್ದನಿಲ | ನಂದನಯಶೋದೆದೇವಕಿಕುಂತಿಗಳ್ವೆರಸಿಮಣಿಪುರಕೆನಡೆತಂದರು ‖೪೭‖ ವಿಸ್ತರದರಾಜ ಭವನದಮಾಟಕೂಟದಯು | ತಸ್ತಂಭದಿಂದೆಸೆವಸಭೆಯುನವರತ್ನದಗ | ಭಸ್ತಿಗಳಕೋಟೆವಲಯದಮಣಿಪುರದಪೊರಗೆಕಾದಿ ಮಡಿದಿರ್ದರಣದ ‖ ಹಸ್ತಿಹಯನರವೃಂದಮಂಸುತ್ತಲುರಿವದೀ | ಪಸ್ತೋಮಮಂಬಿದ್ದಪಾರ್ಥನಂನೆರೆದಿಹಸ | ಮಸ್ತಸತಿಯರ ನಭ್ರದಿಂಶೌರಿಭೀಮಂಗೆತೋರಿಮಗುಳಿಂತೆಂದನು ‖ ೪೮ ‖ ಭೀಮನೋಡಿಲ್ಲಿಪಾರ್ಥನದೇಹಮಿದೆವದನ | ತಾಮರಸಮಂಕಾಣೆ ನಡಗಿದುದೊಬಳಸಿರ್ದ | ಭಾಮಿನಿಯರಾನನಶಶಾಂಕಮಂಡಲದಿಂದೆನಲ್ಕೆಹರಿಗನಿಲಸೂನು ‖ ಶ್ರೀಮನೋಹರನಿನ್ನಮೂರ್ತಿರವಿ ಮೂಡೆ | ಸುತ್ರಾಮಸುತನಾಸ್ಯಾಬ್ಜಮಪ್ರಕಾಶಿತಮಹುದೆ | ಭೂಮಿಯೊಳ್ಪೇಳೆನೆಮುರಾರಿಪಕ್ಷೀಂದ್ರನಿಂದಿಳಿದನಾರಣದೆ

ಟೀ‖ ವಿಸ್ತರದ – ವಿಶಾಲವಾದ, ರಾಜಭವನದ – ಅರಮನೆಯ, ಮಾಟಕೂಟದ – ನಾಜೂಕಾಗಿ ರಚಿಸಿಂತಕ್ಕ ಶಿಖರ ದಿಂದ ಕೂಡಿದ, ಅಯುತಸ್ತಂಭದಿಂ–ಹತ್ತು ಸಾವಿರ ಕಂಭಗಳಿಂದ, ಎಸೆವ–ಹೊಳೆಯುವ, ಸಭೆಯ–ಸಭಾಮಂಟಪದ, ನವ ರತ್ನದ-ಒಂಭತ್ತು ತೆರನಾದ ರತ್ನಗಳ, ಗಭಸ್ತಿಗಳ–ಅಂಶುಗಳಿಂದ ಕೂಡಿದ, ಕೋಟೆವಲಯದ-ಸುತ್ತುಗಟ್ಟಲ್ಪಟ್ಟ ಕೋಟೆಯು ನ್ನುಳ್ಳ, ಮಣಿಪುರದ–ಅರ್ಜುನಿಯ ರಾಜಧಾನಿಯ, ಪೊರಗೆ-ಹೊರಭಾಗದಲ್ಲಿ, ಕಾದಿ–ಹೋರಾಡಿ, ಮಡಿದಿರ್ದ-ಸತ್ತು ಹೋಗಿದ್ದ, ರಣ–ರಣರಂಗದಲ್ಲಿರುವ, ಹಸ್ತಿ–ಗಜಗಳ, ಹಯ–ಅಶ್ವಗಳ, ನರ–ಮಾನವರ, ವೃಂದಮಂ–ಸಮುದಾಯವನ್ನು, ಸುತ್ತಲು–ಎಲ್ಲಾ ಕಡೆಯಲ್ಲಿಯೂ, ಉರಿವ-ಉರಿಯುತ್ತಲಿರುವ, ದೀಪಸ್ತೋಮಮಂ-ದೀಪಗಳ ಸಮುದಾಯವನ್ನು, ಬಿದ್ದ–ನೆಲದಮೇಲೆ ಬಿದ್ದು ಹೋಗಿರುವ, ಪಾರ್ಥನಂ – ಫಲುಗುಣನನ್ನು, ನೆರದಿಹ–ಸೇರಿರುವ, ಸಮಸ್ತ – ಸಕಲರಾದ, ಸತಿಯರನು – ಸ್ತ್ರೀಯರನ್ನೂ, ಶೌರಿ–ಕೃಷ್ಣಮೂರುತಿಯು, ಅಭ್ರದಿಂ–ಆಗಸದಿಂದಲೇ, ಭೀಮಂಗೆ-ವೃಕೋದರನಿಗೆ, ತೋರಿ–ತೋರಿಸಿದವನಾಗಿ, ಮಗುಳೆ–ತಿರುಗಿ, ಇಂತು–ಮುಂದೆ ಹೇಳುವಂತೆ, ಎಂದನು–ನುಡಿದನು. ‖೪೮‖

ಟೀ‖ ಭೀಮ–ವೃಕೋದರನೆ, ಪಾರ್ಥನ – ಪೃಥೆಯ ತನುಜಾತನ, ದೇಹಂ – ದೇಹವು, ಇಲ್ಲಿ–ಈ ಎಡೆಯಲ್ಲಿ, ಇದೆ, ಇರುವುದು, ನೋಡುವನಾಗು, ವದನತಾಮರಸಮಂ–ಮುಖಪದ್ಮವನ್ನು, ಕಾಣೆನು–ನೋಡಲಿಲ್ಲವು, ಬಳಸಿರ್ದ–ಸುತ್ತಲೂ ನೆರೆದಿದ್ದ, ಭಾಮಿನಿಯರ–ನಾರಿಯರ, ಆನನ–ಮೋರೆಯೆಂಬ, ಶಶಾಂಕ–ಚಂದ್ರನ, ಮಂಡಲದಿಂದ-ಬಿಂಬದ ದೆಸೆಯಿಂದ, ಅಡಗಿದುದೊ-ಅದೃಶ್ಯವಾಗಿದೆಯೊ, ಎನಲ್ಕೆ-ಎಂಬಂತೆ, ಅನಿಲಸೂನು-ವಾಯುಸುತನು, ಶ್ರೀಮನೋಹರ – ಲಕ್ಷ್ಮೀದೇವಿಯ ಚಿತ್ತ ವೃತ್ತಿಯನ್ನು ವಶಮಾಡಿಕೊಂಡಿರುವನೆ, ನಿನ್ನ–ನಿನ್ನದಾದ, ಮೂರ್ತಿ–ಆಕಾರವೆನ್ನುವ, ರವಿ–ಭಾನುವು, ಮೂಡೆ–ಉದಯಿಸಲು, ಭೂಮಿಯೊಳ್–ಧರೆಯಲ್ಲಿ, ಸುತ್ರಾಮಸುತನ–ಪಾರ್ಥನ, ಆಸ್ಯಾಬ್ಜಂ–ಮುಖತಾವರೆಯು, ಅಪ್ರಕಾಶಿತಂ–ಕಾಂತಿಹೀನವಾದದ್ದು, ಅಹುದೆ-ಆದೀತೆ, ಪೇಳು–ಹೇಳು, ಎಂದು-ಎಂಬತೆರನಾಗಿ, ಎನೆ–ನುಡಿಯಲು, ಮುರಾರಿ–ಕೃಷ್ಣಸ್ವಾಮಿಯು, ಪಕ್ಷೀಂದ್ರನಿಂದ–ವೈನತೇಯನ ಬೆನ್ನಿನಿಂದ, ಆರಣದೆಡೆಯೊಳು–ಆ ಸಮರಾಂಗಣದ ಭಾಗದೊಳಗೆ, ಇಳಿದನು–ಇಳಿದವನಾದನು.

ಅ‖ ವಿ‖ ವದನತಾಮರಸಂ – ತಾಮರಸದಂತಿರ್ಪವದನಂ– ವದನತಾಮರಸಂ, (ಉ. ಉ. ಪದ. ಕ. ಸ.) ಆನನ ಶಶಾಂಕಮಂಡಲ–ಆನನವೆಂಬ ಶಶಾಂಕ, (ಸಂ.ಪೂ.) ಆನನಶಶಾಂಕದ ಮಂಡಲ (ಷ. ತ.) ಅನಿಲಸೂನು (ಷ. ತ.) ಶ್ರೀಮನೋಹರ–ಶ್ರೀ ಲಕ್ಷ್ಮೀಯ, ಮನ ಮನಸ್ಸು, (ಷ. ತ.) ಶ್ರೀ ಮನವನ್ನು ಹರ (ದ್ವಿ. ತ.) ಮೂರ್ತಿರವಿ (ಸಂ. ಪೂ.) ಆಸ್ಯಾಬ್ಜ

ಯಶೋದೆಯರನ್ನೂ ಸಂಗಡ ಕರೆದುಕೊಂಡು ಗರುಡಾರೂಢನಾಗಿ ಮಣಿಪುರದ ‖ ೪೭ ‖ ಬಳಿಗೆ ಬರುತ್ತಲಿರುವಾಗ, ಅತಿ ವಿಸ್ತಾರವಾದ ಅರಮನೆಯ ಮೇಲ್ಭಾಗದಲ್ಲಿರುವ ಶಿಖರಗಳಿಂದಲೂ, ಹತ್ತು ಸಾವಿರ ಕಂಭಗಳನ್ನೊಳಕೊಂಡು ನೋಟಕರಿಗೆ ಆನಂದವನ್ನುಂಟುಮಾಡುವ ಸಭಾಮಂಟಪದಿಂದಲೂ, ಸುತ್ತಲೂ ಗುಂಡಾಗಿ ಆವರಿಸುವ ನವರತ್ನಗಳಿಂ ಕೆತ್ತಲ್ಪಟ್ಟ ಕೋಟೆಯಿಂದಲೂ ಅಲಂಕಾರವಾಗಿರುವ ಬಭ್ರುವಾಹನನ ರಾಜಧಾನಿಯನ್ನೂ, ಊರ ಹೊರಗಿರುವ ರಣರಂಗದಲ್ಲಿ ಚತುರಂಗ ಬಲವೂ ಅರ್ಜುನನೂ ಸಹ ಸತ್ತು ಬಿದ್ದಿರುವುದನ್ನೂ, ದೀಪಗಳನ್ನು ಉರುಸಿಕೊಂಡು ಅನೇಕಮಂದಿ ಕಾದಿರುವುದನ್ನೂ ಕೃಷ್ಣಸ್ವಾಮಿಯು ಅಂತರಿಕ್ಷಮಾರ್ಗದಲ್ಲಿಯೇ ಕಂಡು ಭೀಮಸೇನನಿಗೆ ಎಲ್ಲವನ್ನೂ ತೋರಿಸಿದವನಾದನು. ‖ ೪೮ ‖ ಎಲೈ ವಾಯು ಸೂನುವೇ? ನೋಡು, ಇಗೋ ಇಲ್ಲಿಯೇ ಅರ್ಜುನನ ಶರೀರವು ಬಿದ್ದು ಹೋಗಿರುವುದು, ಮುಖಕಮಲವು ಮಾತ್ರ ಕಾಣದು, ಫಲುಗುಣನ ಸುತ್ತಲೂ ನೆರೆದಿರುವ ಅವನ ಸತಿಯರ ಮತ್ತು ಇತರ ಸ್ತ್ರೀಯರ ಮುಖಚಂದ್ರನಲ್ಲಿ, ಅವನ ಮೋರೆಯೂ ಅಡಗಿದೆಯೊ ಏನೋ ಕಾಣೆನಲ್ಲಾ ಎಂದು ನುಡಿದನು. ಆಗ ಭೀಮನು, ಓ ಕೃಷ್ಣಪರಮಾತ್ಮಾ, ಲಕ್ಷ್ಮೀಮನೋಲ್ಲಾಸ ಕಾರಿಯೇ, ಪ್ರಪಂಚದಲ್ಲಿ ನಿನ್ನ ಮೂರ್ತಿಯೆಂಬ ಸೂರ್ಯನು ಉದಯಿಸಿದರೆ ಅಡಗಿರುವ ಇಂದ್ರನಂದನನಾದ ಕಿರೀಟಿಯ ಮುಖ ಪದ್ಮವು ಪ್ರಕಾಶವನ್ನೈದುವುದರಲ್ಲಿ ಅನುಮಾನವೇನಿರುವುದೆಂದು ನುಡಿಯಲು, ಮುರಾಂತಕನಾದ ಸ್ವಾಮಿಯು ಅಲ್ಲಿಯೇ

ಡೆಯೊಳು ‖ ೪೯ ‖ ಲಲಿತರತ್ನಪ್ರದೀಪಂಗಳಿಂಬಳಸಿರ್ದ | ಲಲನೆಯರಭೂಷಣದಕಾಂತಿಯಿಂಕರ್ಪುರದ | ಮಲಯಜದತೈಲದ ಸೊಡರ್ಗಳಿಂನಡುವಿರುಳ್ಪಗಲಂತೆಕಾಣಿಸುತಿರೆ ‖ ಕಲಿಭೀಮದೇವಕಿಯಶೋದೆ ಪೃಥೆಯರ್ವೆರಸಿ | ನೆಲಕೆಳಿದುಪಾರ್ಥನಶರೀರ ಮಂಕಂಡಾಗ | ಜಲಜಾಂಬಕಂಮರುಗುತಾವನಿಂದಾದುದೈತಂದೆಮೃತಿನಿನಗೆಂದನು ‖ ೫೦ ‖ ಬಂದೆನೇಳೈಪಾರ್ಥಕೃಷ್ಣನಾಂ ಕುಂತಿಗಭಿ | ನಂದಿಸೈಮಾತೆಯಲ್ಲವೆನಿನಗೆನೀನಳಿಯ | ನೆಂದುಪರಸುವರೆಲೈ ದೇವಕಿಯಶೋದೆಯ ಭಾವಿಸೆಯದೇಕಿವರ ನು ‖ ಎಂದಿನಂತಗ್ರಜನವೀಕ್ಷಿಸೈಭೀಮನಂ | ತಂದೆಹೇಳಿಂತುಮಾತಾಡದಿರ್ದಪರೆನೀ | ಮುಂದೆನೃಪಯಜ್ಞಮಂನಡೆಸುವವರಾ

---

ಅಬ್ಜ-ಅಪ್-ನೀರಿನಲ್ಲಿ, ಜ-ಹುಟ್ಟಿದ್ದು (ಕೃ. ವೃ.) ಅಬ್ಜದಂತಿರುವ ಆಸ್ಯಂ-ಆಸ್ಯಾಬ್ಜಂ, (ಉ ಉ. ಕ.) ಮುರಾರಿ ಮತ್ತು ಪಕ್ಷೀಂದ್ರ (ಇವೆರಡು ಸ. ದೀ. ಸಂಧಿಗಳು) |೪೯‖

ಟೀ‖ ಲಲಿತ-ಹೊಳೆಯುತ್ತಲಿರುವ, ರತ್ನ-ನವರತ್ನಖಚಿತವಾದ, ಪ್ರದೀಪಂಗಳಿಂ-ಹೆಚ್ಚಾದ ದೀಪಪಜ್'ಗಳಿಂದ, ಬಳಸಿರ್ದ-ಆವರಿಸಿಕೊಂಡಿದ್ದ, ಲಲನೆಯರ-ನಾರಿಯರ, ಭೂಷಣದ-ತೊಡಿಗೆಗಳ, ಕಾಂತಿಯಿಂ-ಹೊಳಪಿನಿಂದಲೂ, ಕರ್ಪುರದ-ಕರ್ಪೂರವೂ, ಮಲಯಜದ-ಸಿರಿಕಂಡವ ಇವುಗಳ, ತೈಲದ-ಎಣ್ಣೆಯಿಂದ ಕೂಡಿದ, ಸೊಡರ್ಗಳಿಂ-ದೀಪದ ಕಂಭಗಳಿಂದಲೂ, ನಡುವಿರುಳ್-ಮಧ್ಯನಿಶಿಯು, ಪಗಲಂತೆ-ಹಗಲಿನರೀತಿಯಾಗಿ, ಕಾಣಿಸುತಿರೆ-ತೋರುತ್ತಿರಲಾಗಿ, ಕಲಿ-ವೀರನಾದ, ಭೀಮ-ವೃಕೋದರನು, ದೇವಕಿ-ದೇವಕಿ ಎಂಬ, ಯಶೋದೆ-ಯಶೋದೆಯೆಂಬ ಹೆಸರುಳ್ಳ ಕೃಷ್ಣನ ತಾಯಿಯರು, ಪೃಥೆ-ಧರ್ಮಾದಿಗಳ ಜನನಿಯಾದ ಕುಂತೀದೇವಿಯು ಇವರಿಂದ, ವೆರಸಿ-ಕೂಡಿ, ನೆಲಕೆ-ಭೂಮಿಗೆ, ಇಳಿದು-ಇಳಿದವನಾಗಿ, ಪಾರ್ಥನ-ಕಿರೀಟಿಯ, ಶರೀರಮಂ-ದೇಹವನ್ನು, ಜಲಜಾಂಬಕಂ-ಕಮಲಾಕ್ಷನಾದ ಕೃಷ್ಣಸ್ವಾಮಿಯು, ಮರುಗುತ-ದುಃಖಪಡುತ್ತ, ಆಗ-ಆಕಾಲದಲ್ಲಿ, (ಪಾರ್ಥನನ್ನು ಸಂಬೋಧಿಸಿ) ತಂದೆ-ಫಲುಗುಣಾ, ಆವನಿಂದ-ಯಾರದೆಸೆಯಿಂದ, ಮೃತಿ-ಸಾವು, ಆದುದೈ-ಒದಗಿತೈಯ್ಯಾ, ಎಂದನು-ಎಂಬುದಾಗಿ ಹೇಳಿದನು ‖ ೫೦ ‖

ಟೀ‖ ಪಾರ್ಥ-ಎಲೈ ಫಲುಗುಣನೆ, ಆಂ-ನಾನಾದರೊ, ಕೃಷ್ಣನು-ಕೃಷ್ಣನೆಂಬ ನಿನ್ನ ಸಖನು, ಬಂದೆನು-ಬಂದಿರುವೆನು, ಏಳೈ-ಏಳುವನಾಗಪ್ಪ, ಕುಂತಿಗೆ-ಕುಂತೀದೇವಿಗೆ, ಅಭಿನಂದಿಸೈ-ಎರಗುವನಾಗು, ನಿನಗೆ-ನಿನಿಗಾದರೊ, ಮಾತೆಯು-ಜನನಿಯು, ಅಲ್ಲವೆ-ಆಗಿಲ್ಲವೆ, ಅಳಿಯನು-ಜಾಮಾತೃವು, (ಮಗಳ ಗಂಡನು) ಎಂದು-ಎಂಬದಾಗಿ, (ನಿನಿಗೆ) ದೇವಕಿ ಯಶೋದೆಯರ್-ದೇವಕಿದೇವಿ ಮತ್ತು ಯಶೋದೆಯರು, ಪರಸುವರೆಲೈ-ಆಶೀರ್ವದಿಸುವರೈಯ್ಯ, ಅದೇಕೆ-ಏನುಕಾರಣ, ಇವರನು-ದೇವಕಿ ಯಶೋದೆಯರೆಂಬ ನಿನ್ನತ್ತೆಯರನ್ನೂ ಮತ್ತು ಕುಂತಿ ಎನ್ನುವ ನಿನ್ನ ಜನನಿಯನ್ನೂ ಸಹ, ಭಾವಿಸೆಯ-ಮನ್ನಣೆಯಂ ಮಾಡುವುದಿಲ್ಲವೆ, ಅಗ್ರಜನನು-ಅಣ್ಣನಾದ ವೃಕೋದರನನ್ನು, ಎಂದಿನಂತೆ-ಮುನ್ನಿನಂತೆಯೇ, ಈಕ್ಷಿಸೈ-ನೋಡತಕ್ಕವನಾಗೈಯ್ಯ, ನೀಂ-ನೀನಾದರೊ, ಇಂತು-ಈಪರಿ, ಮಾತಾಡದೆ-ಮೂಕಭಾವವನ್ನುಧರಿಸಿ, ಇರ್ದಪರೆ-ಇರಬಹುದೆ, ಮುಂದೆ-ಇನ್ನಾದರೊ, ನೃಪ-ಧರ್ಮಸುತನು ಯೋಚಿಸಿರುವ, ಯಜ್ಞಮಂ-ಕ್ರತುವನ್ನು, ನಡೆಸುವರು-ನಡೆಯಿಸತಕ್ಕವರು, ಆರು-ಯಾರಿದಾರೆ, ಎನುತ-ಎಂದು ಹಂಬಲಿಸುತ್ತ, ಹರಿ-ಕೃಷ್ಣಸ್ವಾಮಿಯು, ನುಡಿದನು-ಉಸುರಿದನು ‖೫೧‖

---

ಪಕ್ಷಿರಾಜನ ಹೆಗಲಿನಿಂದ ಕೆಳಗಿಳಿದವನಾದನು |೪೯‖ ಆ ಸ್ಥಳವಾದರೊ, ರತ್ನಖಚಿತವಾದ ಸ್ತಂಭಗಳೊಳಗೆ ಪ್ರಕಾಶಿಸುವ ಅನೇಕ ದೀಪಗಳಿಂದಲೂ, ಅಲ್ಲಿ ನೆರೆದಿರುವ ಸ್ತ್ರೀಯರು ಇಟ್ಟುಕೊಂಡಿರತಕ್ಕ ಒಡವೆಗಳ ಚೆಂದದಿಂದಲೂ, ಕರ್ಪೂರ, ಗಂಧ ದೆಣ್ಣೆ ಇವುಗಳನ್ನು ಹಾಕಿ ಉರಿಸುತ್ತಲಿರುವ ದೀಪಂಗಳಿಂದಲೂ ಆ ರಾತ್ರಿಯು ಹಗಲಿನಂತೆಯೇ ಕಾಣಿಸುತ್ತಿತ್ತು. ಆಗ ಕೃಷ್ಣಸ್ವಾಮಿಯು ಭೀಮನನ್ನೂ, ದೇವಕಿ ಯಶೋದೆಯರನ್ನೂ, ಕುಂತಿದೇವಿಯನ್ನೂ ಸಹ ಕೆಳಕ್ಕೆ ಇಳಿಸಿಕೊಂಡು ಎಲ್ಲರನ್ನೂ ಕರೆದುಕೊಂಡು ಬಂದು, ಸತ್ತುಬಿದ್ದಿರುವ ಅರ್ಜುನನ್ನು ಎಲ್ಲರಿಗೂ ತೋರಿಸಿದನು, ‖ ೫೦ ‖ ಶ್ರೀ ಕೃಷ್ಣಸ್ವಾಮಿಯು ಸತ್ತು ಬಿದ್ದಿರುವ ಪಾರ್ಥನನ್ನು ನೋಡಿ, ಅಯ್ಯೋ ಕಂದನೆ, ನಿನ್ನ ಮರಣಕ್ಕೆ ಕಾರಣರಾದವರು ಯಾರ, ಇಗೋ ಕೃಷ್ಣನಾದ ನಾನು ಬಂದಿದೇನೆ. ಇನ್ನಾದರೂ ಮೇಲಕ್ಕೇಳು, ನಿನ್ನ ತಾಯಿಯಾದ ಕುಂತೀದೇವಿಯು ಬಂದಿರುವಳು. ಆಕೆಗೆ ನಮಸ್ಕಾರಮಾಡದೆ ಹೀಗೆ ಬಿದ್ದಿರಬಹುದೆ? ನಿಮ್ಮತ್ತೆಯರಾದ ದೇವಕಿ ಯಶೋದೆಯರೂ ನಿನ್ನೆದುರಿಗೇ ನಿಂತಿರುವರು. ನೀನು ಅವರೀರ್ವರಿಗೆ ವಂದಿಸಿದರೆ ಅಳಿಯನೆಂಬ ವಾತ್ಸಲ್ಯದಿಂದ ನಿನಿಗೆ ಆಶೀರ್ವಾದಂಗಳಂ ಪೇಳದಿರುವರೆ? ಇಗೋ ನಿಮ್ಮಣ್ಣನಾದ ಭೀಮಸೇನನು ಇಲ್ಲಿಯೆ ನಿಂತಿರುವನು. ಮೊದಲಿನಂತೆಯೇ ಅವನನ್ನು ಕಾಣದೆ, ಕಡೆಗಣ್ಣಿನಿಂದ ನೋಡಬಹುದೆ? ಏತಕ್ಕೆ ಈಪರಿ ಮೂಕ ಭಾವಮಂ ತಾಳಿರುವಿ? ನೀನೇ ಹೀಗಾದರೆ ಯುಧಿಷ್ಠಿರನು ಮಾಡಬೇಕೆಂದಿರುವ ಅಶ್ವಮೇಧಯಾಗವು ಪೂರೈಸುವ ತೆರನಾವುದು? ‖ ೫೧ ‖ ಎಂಬುದಾಗ ಮನುಷ್ಯರಂತೆಯೇ ತಾನೂ ಸಂಕಟ ಪಟ್ಟನು. ಮಗನಿಗೆ ಉಂಟಾಗಿರುವ ದುರವಸ್ಥೆಯನ್ನು

ರೆನುತಕಳವಳಿಸಿ ಹರಿನುಡಿದನು ‖ ೫೧ ‖ ಮರುಗಿದಂ ಮೈದುನಂಗಸುರಾರಿಮಾನವರ | ತೆರದಿಂದದೇವಕಿಯಶೋದೆಯರ್ವೆರಸಿ ಮೈ | ಮರೆದಳಾಕುಂತಿ ನಿಜತನಯನಿರವಂ ಕಂಡುಶೋಕದಿಂದಾಕ್ಷಣದೊಳು ‖ ಕರೆದವಶ್ರುಗಳಾವೃಕೋದರನಕಂಗಳೊಳ್ | ತ್ತುರುಗಿತವ ನೊಡಲೊಳ್ಸಹೋದರನ ಮರಣದೋಳ್ | ಪೊರಗೆಸಿರ್ದಪನೀತನೆಂದು ಮನದೋಳ್ಮರುಗಿ ಕಲಿಭೀಮನಿಂತೆಂದ ನು ‖ ೫೨ ‖ ದೇವರವಿಗಂಧಕಾರನೆಮಾರ್ಗಮರ್ಜುನಂ | ಜೀವಿಸದೆಮಾಣ್ದಪನೆಮರುಗಲೇಕೀಕ್ಷಿಸುಕೃ | ಪಾವಲೋಕನದಿಂದ ಕರ್ಣಜಂಬಿದ್ದಿಹಂನೋಡೀಗಪಾರ್ಥನೊಡನೆ ‖ ಭೂವಲಯದೋಳ್ತಮ್ಮತುರಗಮಂಕಟ್ಟಕೊಂ | ಡೀವೀರರೀರ್ವರಂಕೆಡಹಿದಪ ರಾಕ್ರಮಿಯ | ದಾವನೋಕಾಣ್ಬೆ ನೈಸಲೆಬರಲಿಕದನಕೆಂದನಿಲಜಂಗರ್ಜಿಸಿದನು ‖ ೫೩ ‖ ಈಪರಿಯೊಳನಿಲಜಂಕೃಷ್ಣನೊಳ್ಮಾ

---

ಟೀ॥ ಮೈದುನಂಗೆ_ಭಾವಮೈದುನನಾದ ಪಾರ್ಥನ ಸಲುವಾಗಿ, ಮಾನವರ ತೆರದಿಂದ_ಮನುಷ್ಯರ ಹಾಗೆ, ಅಸುರಾರಿ_ಕೃಷ್ಣಸ್ವಾಮಿಯು, ಮರುಗಿದನು_ದುಃಖಪಟ್ಟನು, ಆ ಕುಂತಿ-ಆ ಕುಂತೀದೇವಿಯಾದರೊ, ತನಯನ - ಕುವರನಾದ ಫಲುಗುಣನ, ಇರವಂ-ಇರುವಿಕೆಯನ್ನು, ಕಂಡು_ಈಕ್ಷಿಸಿ, ದೇವಕಿಯಶೋದೆಯರ್ವೆರೆಸಿ .. ದೇವಕಿ ಯಶೋದೆಯರಿಂದೊಡಗೂಡಿ. ಶೋಕದಿಂದ-ದುಃಖಾತಿಶಯದಿಂದ, ಮೈಮರೆದಳ್-ಮೂರ್ಛೆಯನ್ನೈದಿದಳು, ಆ ವೃಕೋದರನ-ಆ ವಾಯುಸುತನ, ಕಂಗಳೊಳ್_ನಯನಂಗಳಲ್ಲಿ, ಅಶ್ರುಗಳು_ನೀರ್ವನಿಗಳು, ಆಕ್ಷಣದೊಳು_ಕೂಡಲೆ, ಕರೆದವು_ಸುರಿದವು, ಒಡಲೊಳ್-ಹೊಟ್ಟೆಯೊಳಗೆ, ಸಹೋದರನ_ಅನುಜನಾದ ಪಾರ್ಥನ, ಮರಣದೊಳ್_ಸಾವಿನ ಮೂಲಕವಾಗಿ, ತುರುಗಿತು_ಹೆಚ್ಚಾದ ವ್ಯಸನವು ಪ್ರಾಪ್ತವಾಯಿತು, ಪೊರಗೆನೆ-ಹೊರಗೆ ಮಾತ್ರವೆ, ಈತನು_ಈ ಪಾರ್ಥನು, ಇರ್ದಪನು_ಇರುತ್ತಾನೆ, ಎಂದು-ಎಂಬ ತೆರನಾಗಿ ತಿಳಿದು, ಮನದೊಳ್-ಚಿತ್ತದಲ್ಲಿ, ಕಲಿ_ವೀರನಾದ, ಭೀಮನು_ವೃಕೋದರನು, ಮರುಗಿ_ವ್ಯಸನವಂ ಪಡೆದು, ಇಂತು_ಮುಂದೆ ಹೇಳುವ ತೆರನಾಗಿ, ಎಂದನು-ನುಡಿದನು. ‖ ೫೨ ‖

ಟೀ॥ ದೇವ_ಎಲೈ ಪ್ರಭುವೆ, ರವಿಗೆ_ಭಾನುವಿಗಾದರೊ. ಅಂಧಕಾರಂ-ಕತ್ತಲೆಯೆ. ಮಾರ್ಗಂ-ಹಾದಿಯು, ಅರ್ಜುನನು_ಪಾರ್ಥನು, ಜೀವಿಸದೆ ಮಾಣ್ದಪನೆ-ಪುನಃ ಪ್ರಾಣವನ್ನು ತಂದುಕೊಳ್ಳದಿದ್ದಾನೆ, ಮರುಗಲು-ವ್ಯಸನವನ್ನೈವುದು. ಏಕೆ_ಯಾವ ಪ್ರಯೋಜನವು, ಕೃಪಾವಲೋಕನದಿಂದ_ದಯಾದ್ರ್ರದೃಷ್ಟಿಯಿಂದ, ಈಕ್ಷಿಸು-ನಿರುಕಿಸು, ಕರ್ಣಜಂ-ಕರ್ಣಸಂಭವನೂಕೂಡ, ಬಿದ್ದಿಹಂ_ಬಿದ್ದುಹೋಗಿದ್ದಾನೆ, ಈಗ-ಅರ್ಜುನನು ಸತ್ತವ್ಯಸನದ ಜತೆಯಲ್ಲಿ, ನೋಡು_ಕರುಣೆಯಿಂದ ಅವಲೋಕಿಸು, ಪಾರ್ಥನೊಡನೆ_ಫಲುಗುಣನೊಂದಿಗೆ (ಹೋರಾಡಿ), ಭೂವಲಯದೊಳ್_ಇಳೆಯೊಳಗೆ, ತಮ್ಮ-ನಮ್ಮದಾಗಿರುವ, ತುರಗಮಂ-ಹಯವನ್ನು, ಕಟ್ಟಕೊಂಡು - ನಿರ್ಬಂಧದಲ್ಲಿರಿಸಿಕೊಂಡು, ಇವರೀರ್ವರಂ_ಈ ಇಬ್ಬರನ್ನೂ, ಕೆಡಹಿದ-ಕೆಡವಿಬಿಟ್ಟ, ಪರಾಕ್ರಮಿಯು-ವೀರಾಗ್ರಣಿಯು, ಆದಾವನೊ_ಅದುಯಾರೊ, ಕಾಣ್ಬೆನು_ನೋಡಿಕೊಳ್ಳುತ್ತೇನೆ, ಸಲೆ-ಚೆನ್ನಾಗಿ, ಕದನಕೆ-ಕಾಳಗಕ್ಕೆ, ಬರಲಿ_ಬಂದು ಸೇರಲಿ, ಎಂದು-ಎಂಬ ತೆರನಾಗಿ, ಅನಿಲಜಂ-ಪಾರ್ಥಜನು, ಗರ್ಜಿಸಿದನು - ಸಿಂಹನಾದವನ್ನು ಮಾಡಿದನು ‖ ೫೩ ‖

ಟೀ॥ ಅನಿಲಜರಿ_ವಾಯುಸುತನಾದ ವೃಕೋದರನು, ಕೃಷ್ಣನೊಳ್ - ಕೃಷ್ಣಸ್ವಾಮಿಯೊಂದಿಗೆ, ಈಪರಿಯೋಳ್_ಈ ತೆರನಾಗಿ, ಮಾತಾಡುವ-ನುಡಿಯುತ್ತಲಿರುವ, ಆ ಪಥದೋಳ್-ಆ ಮಾರ್ಗದಲ್ಲಿ, ಅನಿರುದ್ಧ-ಅನಿರುದ್ಧನು, ಸಾತ್ಯಕಿ_ಸಾತ್ಯಕಿಯು, ಪ್ರದ್ಯುಮ್ನರು_ಕೃಷ್ಣಸುತರು, ಆ ಪುರದ-ಆ ಮಣಿಪುರವೆಂಬ ಬಭ್ರುವಾಹನನ ರಾಜಧಾನಿಯ, ಒಳಗೆ_ಒಳಭಾಗದಲ್ಲಿ, ಉಲೂಪಿಯುಸಿವಾಸದೊಳ್_ಉಲೂಪಿಯ ಮಂದಿರದೊಳಗೆ,ಚೇತರಿಸಿಕೊಂಡು_ಜ್ಞಾನವಂತಂದುಕೊಂಡು,ಫಲುಗುಣನು_ಪಾರ್ಥನು, ಶಾಪಹತನಾಗಿ_ಗಂಗೆಯ ಶಾಪದಿಂದ ಪ್ರಾಣಗಳನ್ನು ಹೋಗಲಾಡಿಸಿಕೊಂಡವರಾಗಿ, ಇರ್ವ-ಬಿದ್ದುಹೋಗಿದ್ದ

---

ಕುಂತೀದೇವಿಯು ನೋಡಿ ಮೂರ್ಛೆಹೋಗಿ ನೆಲದಮೇಲೆ ಬಿದ್ದುಬಿಟ್ಟಳು. ದೇವಕಿ ಯಶೋದೆಯರೂ ಕೂಡ ತಮ್ಮಳಿಯನ ಸಾವನ್ನು ಕಂಡು ಕುಂತಿಯನ್ನೇ ಹಿಂಬಾಲಿಸಿದವನಾದರು. ಭೀಮಸೇನನ ಕಣ್ಣಿಂದ ಶೋಕಬಾಷ್ಪವು ಸುರಿಯುತ್ತಲಿತ್ತು ಅವನ ಹೊಟ್ಟೆಯಲ್ಲಿ ಶೋಕಾಗ್ನಿಯು ತುಂಬಿತು. ಅವರ ಬಾಧೆಯನ್ನು ತಾಳಲಾರದೆ ಭೀಮನು ‖ ೫೨ ‖ ಕೃಷ್ಣಸ್ವಾಮಿಯನ್ನು ಕುರಿತು, ಎಲೈ ಮಹಾನುಭಾವನೆ, ಸೂರ್ಯನಿಗೆ ಕತ್ತಲೆಯೆ ? ದಾರಿಯಿಲ್ಲವೆ ? ನೀನು ಕರುಣಾಕಟಾಕ್ಷದಿಂದ ನೋಡಿದರೆ ಅರ್ಜುನನಿಗೆ ಸಾವು ಸಿದ್ಧವಾದೀತೆ ? ಈ ಪಾರ್ಥನ ಬಳಿಯಲ್ಲಿಯೇ ವೃಷಕೇತುವೂ ಸತ್ತು ಬಿದ್ದಿರುವುದನ್ನು ನೋಡಿದೆಯಾ ? ಆಹಾ ! ಲೋಕದಲ್ಲೆಲ್ಲಾ ವೀರಾಗ್ರೇಸರರೆಂದು ಹೆಸರು ಪಡೆದ ಇವರೀರ್ವರನ್ನೂ ಯುದ್ಧದಲ್ಲಿ ನೆಲಕ್ಕುರಿಳಿಸಿ ನಮ್ಮ ಯಜ್ಞಾಶ್ವವನ್ನು ಕಟ್ಟರುವ ಶೂರನು ಯಾರೋ ಕಾಣೆನಲ್ಲಾ ? ಒಳ್ಳೇದು ಆ ವೀರಾಗ್ರಣಿಯು ಈಗ ನನ್ನೆದುರಿಗೆ ಬಂದುನಿಂತು ಯುದ್ಧಮಾಡಿ ಪ್ರಾಣದೊಂಸೆ ಹೋಗಲೆಂದು ಗಟ್ಟಿಯಾಗಿ ಕೂಗಿದನು. ‖ ೫೩ ‖ ಈರೀತಿಯಾಗಿ ಕೃಷ್ಣವೃಕೋದರರು ಮಾ

ತಾಪ | ವಾಪಥದೊಳನಿರುದ್ಧಸಾತ್ಯಕಿಪ್ರದ್ಯುಮ್ನ | ರಾಪುರದನುಧ್ಯದೊಳುಲೂಪಿಯುಸಿವಾಸದೊಳ್ಕೇತರಿಸಿಕೊಂಡು ಕೂಡೆ | ಶಾಪಹತನಾಗಿಫಲುಗುಣನಿರ್ದರಣಕೆಬಂ | ದೀಪಂಕಜಾಕ್ಷಮಾರುತಿಗಳಂಕಂಡುಬಳಿ | ಕಾಪಾರ್ಥನಂದನಂಗೆಚ್ಚರಿಸಿಕಾಣಿಸಿದ ರಚ್ಯುತವೃಕೋದರರನು || ೫೪ || ಜನಪಕೇಳ್ಫಲುಗುಣನಕೃತ್ಯಮಂಬಭ್ರುವಾ | ಹನನವೃತ್ತಾಂತಮಂಪವನಜಮುರಾರಿಗಳಿ | ಗನಿರುದ್ಧಸಾತ್ಯಕಿಪ್ರದ್ಯುಮ್ನರರುಪಿಬಳಿಕಾತನಂಕಾಣಿಸಲ್ಕೆ || ಅನುಜಂಗೆಮುನಿದವಂಪಗೆಯಾಗದಿರ್ದಪನೆ| ಜನಕನಂಕೊಂದವಂ ಪಾಪಿಯಲ್ಲವೆತನ್ನ | ನನುವರಿಸದಪ್ಪಳಿಸುಗದೆಯೊಳೆಂದೆರಗಿದಂಪಾರ್ಥಿಭೀಮನಪದದೊಳು || ೫೫ || ಶಿಕ್ಷೆರಕ್ಷೆಗೆಕರ್ತೃವೈಷ್ಣವ ದ್ರೋಹಿಗ | ಳ್ಗೆಕ್ಷಮಂಸೀನವರಿನರ್ಜುನಂಭಾಗವತ | ಪಕ್ಷಕಗ್ರೇಸರಂತನಗೆಪಿತನಾತನಂಕೊಂದಕತದಿಂದಕೊಲೆಗೆ || ದಕ್ಷ

ರಣಕೆ - ಸಮರಾಂಗಣಕ್ಕೆ, ಕೂಡೆ - ತಡಮಾಡದೆ, ಬಂದು - ಬಂದವರಾಗಿ, ಪಂಕಜಾಕ್ಷಮಾರುತಿಗಳಂ - ಪಂಕಜಾಕ್ಷ-ಕೃಷ್ಣಸ್ವಾಮಿಯು, ಮಾರುತಿಗಳಂ-ವಾಯುನಂದನನು ಇವರೀರ್ವರನ್ನೂ, ಕಂಡು-ಈಕ್ಷಿಸಿ, ಬಳಿಕ-ಅನಂತರ, ಆಪಾರ್ಥನಂದನಂಗೆ-ಆ ಪಾರ್ಥಸುತನಿಗೆ, ಎಚ್ಚರಿಸಿ-ಶ್ರುತಪಡಿಸಿದವರಾಗಿ, ಅಚ್ಯುತವೃಕೋದರರನು-ಅಚ್ಯುತ-ಕೃಷ್ಣಸ್ವಾಮಿಯು, ವೃಕೋದರರನು-ಭೀಮಸೇನನು ಇವರಿಬ್ಬರನ್ನೂ, ಕಾಣಿಸಿದರು-ನೋಡುವಂತೆ ಮಾಡಿದರು ||೫೪||

ಟೀ|| ಜನಪ - ಎಲೈ ಜನಮೇಜಯ ನರನಾಥನೆ, ಕೇಳು-ಲಾಲಿಸು, ಅನಿರುದ್ಧ ಸಾತ್ಯಕಿ ಪ್ರದ್ಯುಮ್ನರು - ಅನಿರುದ್ಧ ಸಾತ್ಯಕಿ ಪ್ರದ್ಯುಮ್ನರೆಂಬ ಮೂವರು, ಫಲುಗುಣನ-ಪಾರ್ಥಸುತನ, ಕೃತ್ಯಮಂ - ಕಾರ್ಯವನ್ನೂ, (ನಮ್ರಭಾವದಿಂದ ಬಂದು ಕಾಲ್ಗೆರಗಿದ ಪಾರ್ಥಜನನ್ನು ತಿರಸ್ಕರಿಸಿದ್ದನ್ನೂ) ಬಭ್ರುವಾಹನನ-ಪಾರ್ಥಸುತನ, ವೃತ್ತಾಂತಮಂ-ವರ್ತಮಾನವನ್ನೂ, ಅರುಪಿ-ತಿಳಿಸಿದವರಾಗಿ, ಬಳಿಕ-ಆಮೇಲೆ, ಆತನಂ-ಆ ಪಾರ್ಥನಂದನನನ್ನು, ಕಾಣಿಸಲ್ಕೆ - ದರ್ಶನವಂ ಮಾಡಿಸಲು, ಪಾರ್ಥಿ - ಅರ್ಜುನಾತ್ಮಜನಾದರೊ, (ಭೀಮನನ್ನು ಕುರಿತು) ಅನುಜಂಗೆ-ನಿನ್ನ ಸಹೋದರನಾದ ಪಾರ್ಥನಿಗೆ, ಮುನಿದಪಂ-ಸಿಟ್ಟುಮಾಡಿಕೊಂಡವನು, ಪಗೆಯು-ವೈರಿಯು, ಆಗದೆ - ಆಗಿಹೋಗದೆ, ಇರ್ದಪನೆ - ಇರುತ್ತಾನೆಯೇ, ಜನಕನಂ - ಪಿತನನ್ನು, ಕೊಂದವಂ-ಕೊಂದು ಹಾಕಿದವನು. ಪಾಪಿಯಲ್ಲವೆ-ಪಾಪಿಷ್ಠನಲ್ಲವೆ, ತನ್ನನ್ನು-ದುಷ್ಕಾರ್ಯಮಂ ಗೈದ ನನ್ನನ್ನು, ಅನುವರಿಸದೆ-ಸಲಹದೆ, ಗದೆಯೊಳು-ಗದೆಯಿಂದ, ಅಪ್ಪಳಿಸು-ತಾಡಿಸುವನಾಗು, ಎಂದು-ಎಂಬತೆರನಾಗಿ, ಭೀಮನಪದದೊಳು - ವೃಕೋದರನ ಕಾಲುಗಳ ಮೇಲೆ, ಎರಗಿದಂ-ಆನತನಾದನು || ೫೫ ||

ಟೀ|| ಪಕ್ಷಿವಾಹನ-ಗರುಡಾರೂಢನಾದ ಕೃಷ್ಣಸ್ವಾಮಿಯೆ, ನೀನು-ನೀನಾದರೊ, ಶಿಕ್ಷೆರಕ್ಷೆಗೆ-ಶಿಕ್ಷೆ-ದಂಡನೆ ಮಾಡುವುದಕ್ಕೂ, ರಕ್ಷೆಗೆ - ಸಲಹುವದಕ್ಕೂ, ಕರ್ತೃ - ಒಡೆಯನಾಗಿರುವಿ, ವೈಷ್ಣವದ್ರೋಹಿಗಳ್ಗೆ - ನಿನ್ನ ಶರಣಾಗತರನ್ನು ಹಗೆ ಮಾಡತಕ್ಕವರನ್ನು, ಅಕ್ಷಮಂ-ಸೈರಿಸತಕ್ಕವನೇ ಅಲ್ಲವು, ಅದರಿನಿಂ-ಆದಕಾರಣದಿಂದ, ಅರ್ಜುನನು - ಪಾರ್ಥನು, ಭಾಗವತಪಕ್ಷಕೆ-ಭಗವದ್ಭಕ್ತರಪಾರ್ಶ್ವದೊಳಗೆ, ಅಗ್ರೇಸರಂ-ಮೊದಲನೆಯವನು, ತನಗೆ-ನನಗಾದರೊ, ಪಿತನು-ಜನಕನು, ಆತನಂ-ಅಂತಹ ಫಲುಗುಣನನ್ನು, ಕೊಂದ - ಸಂಹಾರಮಾಡಿದ, ಕತದಿಂದ ಕಾರಣದಿಂದ, ಆಂ - ನಾನಾದರೊ, ಕೊಲೆಗೆ-ಕೊಂದು ಹಾಕಿದ ಮಹಾ ಪಾತಕಕ್ಕೆ, ದಕ್ಷನು-ಸಾಹಸ ಉಳ್ಳವನು, ಮೀರಿದೊಡೆ-ನಿಯಮಿತ ಕಾರ್ಯವನ್ನು ಮೀರಿ ನಡೆದುದಕ್ಕೆ, ತತ್ಕ್ಷಣದೊಳು-ಒಡನೆಯೇ, ರಾಹುವಿನ-ರಾಹುವೆಂಬರಾಕ್ಷಸನ, ಕಂಠಮಂ-ಕೊರಳನ್ನು, ಅರಿದಂತೆ-ಛೇದಿಸಿದತೆರನಾಗಿ, ತನ್ನ-ನನ್ನದಾದ,

ತನಾಡುತ್ತಿರುವಾಗ್ಗೆ ಉಲೂಪಿಯು ಸೆರೆಯಲ್ಲಿದ್ದ ಅನಿರುದ್ಧ ಸಾತ್ಯಕಿ, ಪ್ರದ್ಯುಮ್ನರು ಕೇಳಿ ಶಾಪಹತನಾಗಿ ಅರ್ಜುನನು ಮಡಿದು ಬಿದ್ದಿರುವ ರಣಭೂಮಿಗೆ ಬಂದು ಕೃಷ್ಣನನ್ನೂ ಭೀಮಸೇನನನ್ನೂ ನೋಡಿದವರಾಗಿ, ಬಭ್ರುವಾಹನನಿಗೆ ಈ ಸುದ್ದಿಯನ್ನು ತಿಳಿಸಿ ಕೃಷ್ಣವೃಕೋದರರ ದರ್ಶನಾರ್ಥಿಗಳಾಗಿ ಬಂದವರಾದರು || ೫೪ || ಎಲೈ ರಾಜೇಂದ್ರನಾದ ಜನಮೇಜಯನೆ, ಆ ಬಳಿಕ ನಡೆದ ಸಂಗತಿಯನ್ನರುಹುವೆನು ಕೇಳು, ಅನಿರುದ್ಧ ಸಾತ್ಯಕಿ ಪ್ರದ್ಯುಮ್ನರು ಕೃಷ್ಣಸ್ವಾಮಿಯನ್ನೂ, ಭೀಮಸೇನನನ್ನೂ ನೋಡಿ ಅರ್ಜುನನು ಬಭ್ರುವಾಹನನನ್ನು ತಿರಸ್ಕರಿಸಿದ ವೃತ್ತಾಂತವನ್ನೂ, ಇವಕ್ಕಾಗಿ ಪಾರ್ಥಜನು ನಡೆಸಿದ ಕಾರ್ಯವನ್ನೂ ಸವಿಸ್ತಾರವಾಗಿ ತಿಳಿಸಿ ಅನಂತರ ಅರ್ಜುನಿಯನ್ನು ಕೃಷ್ಣವಾಯು ನಂದನರ ಸಂದರ್ಶನಕ್ಕಾಗಿ ಕಳುಹಿದರು. ಆಗ ಪಾರ್ಥನಂದನನು ಭೀಮಸೇನನ ಕಾಲ್ಗಳಮೇಲೆ ಬಿದ್ದು ಎಲೈ ತಾತನೆ, ನಿನ್ನ ಸಹೋದರನಾದ ಅರ್ಜುನನನ್ನು ಕೊಂದ ನಾನು ನಿನಿಗೆ ಶತ್ರುವೇಸರಿ, ಪಿತೃವಧೆಯಂಗೈದ ನನಿಗಿಂತಲೂ ಪಾಪಿಗಳು ಮತ್ತೆಯಾರಿರುವರು? ಆದ್ದರಿಂದ ಇಗೋ ನಿನ್ನ ಕಾಲ್ಗಳ ಮೇಲಿಟ್ಟಿರುವ ನನ್ನ ತಲೆಯನ್ನು ನಿನ್ನ ಗದೆಯಿಂದ ಹೊಡೆದು ಕೆಡಹೆಂದು ನುಡಿದನು. || ೫೫ || ಆ ಬಳಿಕ ಪಾರ್ಥಜನು ಭೀಮಸೇನನ ಬಳಿಯಲ್ಲಿರುವ ಕೃಷ್ಣಸ್ವಾಮಿಯಂ ಕಂಡು, ಎಲೈ ದುಷ್ಟನಿಗ್ರಹ ಶಿಷ್ಟಪರಿಪಾಲಕನಾದ ಭಗವಂತನೆ, ವಿಷ್ಣುಭಕ್ತರನ್ನು ತಿರಸ್ಕರಿಸಿದವರನ್ನು ನಿರ್ಮೂಲ ಮಾಡುವುದರಲ್ಲಿ ಬದ್ಧಕಂಕಣನಾದ ಜಗನ್ನಾಯಕನೆ, ಎಲೈ ಮಹಾ

ನಾಂವಿಮಾರಿವೊಡೆರಾಹುವಿನಕಂಠವುಂ । ತತ್‌ಕ್ಷಣದೊಳರಿದಂತೆಕತ್ತರಿಸುಚಕ್ರದಿಂ । ಪಕ್ಷಿವಾಹನತನ್ನ ಕೊರಳನೆಂದಾಪಾರ್ಥಿ ಕೆಡೆದನಚ್ಯುತನಡಿಯೊಳು ॥೫೬॥ ಇಂತಾಗಲನಿಲಸುತಕೃಷ್ಣರಮನಂಮರುಗು । ವಂತಳಲ್ದೊಡನೆದೇವಕಿಯಂಯಶೋದೆಯಂ। ಕುಂತಿಯಂಕಂಡುಕಡುಶೋಕದಿಂದವರವರಚರಣಂಗಳೊಳ್ಪೊರಳ್ದು ॥ ಎಂತುಟದಕ್ಕೈಯ್ಯನಂಕೊಂದೆನಾಂನಿಮಗೆಮೊ। ಮ್ಮಗಂ ತನ್ನನೇಕೆಪರಸುವಿರಕಟಪಾರ್ಥಸೀ । ಮಂತಿಯರಿರ್ವರುಲೂಪಿಚಿತ್ರಾಂಗದೆಯರಿವರನೀಕ್ಷಿಪುದೆಂದನು ॥ ೫೭ ॥ ಅನಿತರೊಳು ಲೂಪಿಚಿತ್ರಾಂಗದೆಯರರ್ಜುನನ । ಜನನಿಯಂಕೃಷ್ಣಮಾತೆಯರಂನಿರೀಕ್ಷಿಸಿನ । ರನಪೆಂಡಿರಾವೆಂದುಪೇಳ್ದವರಚರಣಂಗಳೊಳ್ಪೊರಳ್ದಳಲಿಕೂಡೆ ॥ ವನಜಾಂಬಕಿಯರೊರಲಿಬಳಿಕನಿಬರೆಲ್ಲರುಂ । ಘನಶೋಕದಿಂದಹಾಹಾರವಂಗಯ್ಯೆನಿಜ । ತನುಜನಂಗ

---

ಕೊರಳ್-ಕತ್ತನ್ನು, ಚಕ್ರದಿಂ-ಚಕ್ರಾಯುಧದಿಂದ, ಕತ್ತರಿಸು-ಎರಡು ಭಾಗವಾಗಿ ಮಾಡು, ಎಂದು-ಎಂಬತೆರನಾಗಿ, ಅಚ್ಯುತನ-ಕೃಷ್ಣಮೂರುತಿಯ, ಅಡಿಯೊಳು-ಕಾಲ್ಗಳಮೇಲೆ, ಕೆಡೆದನು-ಬಿದ್ದವನಾದನು ॥೫೬॥

ಟೀ॥ ಇಂತು-ಈ ಪರಿಯಾಗಿ, ಆಗೆ-ಆಗಲು, ಅನಿಲಸುತ-ವಾಯುನಂದನನು, ಕೃಷ್ಣರ-ಕೃಷ್ಣಸ್ವಾಮಿಯು ಇವರ, ಮನಂ-ಮನಸ್ಸು, ಮರುಗುವಂತೆ-ದುಃಖಾಕ್ರಾಂತವಾಗುವ ತೆರನಾಗಿ, ಅಳಲು - ಗೋಳಾಡಿ, ದೇವಕಿಯಂ - ದೇವಕಿಯೆಂಬ ಯಶೋದೆಯಂ - ಯಶೋದೆ ಎಂದು ಪ್ರಸಿದ್ಧಳಾದ, ಕುಂತಿಯಂ - ಕುಂತಿಯೆಂಬ ನಾಮಧೇಯದಿಂದ ಕೂಡಿದ ಈ ಮೂವರನ್ನು, ಒಡನೆ-ಕೂಡಲೆ, ಕಂಡು-ಈಕ್ಷಿಸಿ, ಅವರವರಚರಣಂಗಳೊಳ್ - ಪ್ರತಿಯೊಬ್ಬರ ಕಾಲ್ಗಳಮೇಲೂ, ಕಡು - ಬಹುವಾದ ಶೋಕದಿಂದ-ವ್ಯಸನದಿಂದ ಕೂಡಿದವನಾಗಿ, ಪೊರಳ್ದು-ಹೊರಳಾಡಿ, ನಾಂ-ನಾನಾದರೊ, ನಿಮಗೆಮೊಮ್ಮಗಂ-ನಿಮ್ಮ ಮಗನಾದ ಅರ್ಜುನನ ಸುತನು, ಅಯ್ಯನಂ-ಜನಕನನ್ನು, ಕೊಂದೆನು-ಕೊಲೆಗೆಳಸಿದವನಾದೆನು, ಇದಕೆ-ಈ ಪಾತಕಕ್ಕೆ, ಎಂತುಟು-ಏನು, ಏಕೆ-ಯಾವ ಸತ್ಕಾರ್ಯವಂ ಮಾಡಿದವನೆಂದು, ತನ್ನನು-ನನ್ನನ್ನು, ಪರಸುವಿರಿ-ಆಶೀರ್ವದಿಸುತ್ತೀರಿ, ಪಾರ್ಥಸೀಮಂತಿನಿಯರು-ಫಲುಗುಣನ ಹೆಂಡತಿಯರಾದ, ಉಲೂಪಿಚಿತ್ರಾಂಗದೆಯರು - ಉಲೂಪಿ ಮತ್ತು ಚಿತ್ರಾಂಗದೆ ಎನ್ನತಕ್ಕ ಸ್ತ್ರೀಯರು, ಇರ್ದಪರು-ಇದ್ದಾರೆ, ಇವರನು-ಇವರೀರ್ವರನ್ನೂ, ಈಕ್ಷಿಸುವುದು-ನೋಡಬೇಕು, ಎಂದನು-ಎಂಬದಾಗಿ ನುಡಿದನು.

ಅ॥ ವಿ॥ ಅನಿಲಸುತಕೃಷ್ಣರು-ಅನಿಲಸುತ (ಷ.ತ.) ಅನಿಲಸುತನೂ ಕೃಷ್ಣನೂ-ಅನಿಲಸುತಕೃಷ್ಣರು (ದ್ವಿ,ಯೋಗದ್ವಂ. ಸ.) ಕಡುಶೋಕ-ವಿ. ಪೂ. ಕ. ಅನಿಲ-ಗಾಳಿ, ಅನಲ-ಬೆಂಕಿ. ॥ ೫೭ ॥

ಟೀ॥ ಉಲೂಪಿಚಿತ್ರಾಂಗದೆಯರು-ಉಲೂಪಿಚಿತ್ರಾಂಗದೆಯೆನ್ನುವ ಸ್ತ್ರೀಯರೀರ್ವರೂ, ಅನಿತರೊಳ್-ಅಷ್ಟರೊಳಗಾಗಿ, ಅರ್ಜುನನ-ಪಾರ್ಥನ, ಜನನಿಯಂ-ಮಾತೆಯಾದ ಕುಂತಿಯನ್ನೂ, ಕೃಷ್ಣನ-ಕೃಷ್ಣಸ್ವಾಮಿಯ, ಮಾತೆಯರಂ-ಜನನಿಯರಾದ ದೇವಕಿ ಯಶೋದೆಯರನ್ನೂ ಸಹ, ನಿರೀಕ್ಷಿಸಿ-ನೋಡಿದವರಾಗಿ, ಆವು-ನಾವಾದರೊ, ನರನ-ಪಾರ್ಥನ, ಪೆಂಡಿರು-ಹೆಂಡಿರ್ಗಳು, ಎಂದು-ಎಂಬತೆರನಾಗಿ, ಪೇಳ್ದು-ಹೇಳಿದವರಾಗಿ, ಅವರ-ಕುಂತಿ, ದೇವಕಿ ಯಶೋದೆಯರ, ಚರಣಂಗಳೊಳ್-ಅಡಿದಾವರೆಗಳ ಮೇಲೆ, ಪೊರಳ್ದು-ಹೊರಳಾಡುತ್ತಾ, ಅಳಲಿ-ಗೋಳಾಡಿ. ವನಜಾಂಬಕಿಯರು-ಕಮಲನೇತ್ರೆಯರು, ಕೂಡೆ-ಅವರೊಂದಿಗೆ, ಒರಲಿ-ಹೇಳುತ್ತಿರಲಾಗಿ, ಬಳಿಕ-ಅನಂತರ, ಅನಿಬರೆಲ್ಲರುಂ - ಅಷ್ಟುಜನರೂ, ಘನಶೋಕದಿಂದ-ಹೆಚ್ಚಾದ ಸಂಕಟದಿಂದ. ಹಾಹಾರವಂ ಗೈಯಲು - ಹಾಹಾ ಕಾರವನ್ನೆಸಗಲು, ಕುಂತಿಯು - ಪೃಥೆಯಾದರೊ, ನಿಜತನುಜನ - ತನ್ನ

---

ನುಭಾವನೆ, ನಿನ್ನ ಭಕ್ತಾಗ್ರೇಸರನಾದ ಅರ್ಜುನನು ನನ್ನ ತಂದೆಯಾದರೂ ಅವನ ಮರಣಕ್ಕೆ ಕಾರಣ ಭೂತನಾದ ನಾನು ಇಗೋ ನನ್ನ ತಲೆಯನ್ನು ನಿನಗೆ ಸಮರ್ಪಿಸಿರುವೆನು, ಎಲೈ ಗರುಡವಾಹನನಾದ ಮಹಾಪ್ರಭೊ ! ಪೂರ್ವದಲ್ಲಿ ನೀನು ನಿನ್ನ ಚಕ್ರಾಯುಧದಿಂದ ಮೋಸಕೃತ್ಯಮಂಗೈದ ರಾಹುವಿನ ತಲೆಯಂ ಕಡಿದಂತೆ ಈಗಲೂ ಕೂಡ ನಿನ್ನ ಭಕ್ತನನ್ನೂ ನನ್ನ ತಂದೆಯನ್ನೂ ಕೊಂದ ಪಾಪಿಯಾದ ನನ್ನ ತಲೆಯಮೇಲೂ ಚಕ್ರಾಯುಧವನ್ನು ಬಿಟ್ಟುಬಿಡೆಂದು ಲಕ್ಷ್ಮೀಕಾಂತನಾದ ಕೃಷ್ಣನ ಪಾದಾರವಿಂದಗಳಿಗಾನತನಾದನು ॥೫೬॥ ಈ ರೀತಿಯಲ್ಲಿ ಕೃಷ್ಣನಿಗೂ ಭೀಮಸೇನನಿಗೂ ನಮಸ್ಕಾರಮಂ ಮಾಡಿ, ಸಮೀಪದಲ್ಲಿರುವ ದೇವಕಿಯಶೋದೆ ಕುಂತಿಯರಿಗೆ ಅಡ್ಡಬಿದ್ದು, ಇಗೊ ನಾನು ನಿಮಗೆ ಮೊಮ್ಮಗನಾಗಬೇಕು, ಅರ್ಜುನನು ಮಗನು, ತಿಳುವಳಿಕೆ ಇಲ್ಲದೆ ದುಷ್ಕಾರ್ಯವನ್ನು ಮಾಡಿದೆನು ಇಂಥಾ ಪಾಪಿಯಾದ ನನಿಗೆ ನೀವೇತಕ್ಕೆ ಆಶೀರ್ವಾದವಂ ಮಾಡುವಿರಿ ಇಗೊ ನಮ್ಮ ತಾಯಿಯರಾದ ಉಲೂಪಿಚಿತ್ರಾಂಗದೆಯರೂ ಇಲ್ಲಿಯೇ ನಿಂತಿರುವರೆಂದು ತೋರಿಸಿದನು॥೫೭॥ಅಷ್ಟುಹೊತ್ತಿಗೆ ಉಲೂಪಿಚಿತ್ರಾಂಗದೆಯರೂ ಕೂಡ ಅಲ್ಲಿಗೆ ಬಂದು ಕುಂತೀದೇವಿಗೂ, ದೇವಕಿಯಶೋದೆಯರಿಗೂ ನಮಸ್ಕಾರಮಾಡಿ ನಾವಿಬ್ಬರೂ ಅರ್ಜುನನ ಹೆಂಡತಿಯರೆಂದು ಹೇಳಿಕೊಂಡು ಬಹುವಾಗಿ ಶೋಕಬಾಷ್ಪವಂ ಸುರಿಸುತ್ತ ಅವರ ಕಾಲ್ಗಳಮೇಲೆ ಬಿದ್ದುಬಿದ್ದು ಅಳುತ್ತಲಿದ್ದರು. ದೇವಕಿಯಶೋದೆಯರ ದುಃಖಕ್ಕೆ ಪಾರವೇ ಇಲ್ಲದಿರುವಾಗ ಕುಂತೀದೇವಿಯು ವ್ಯಸನಮಂ ತಾಳಲಾರದೆ ಮೂರ್ಛಾ

ದಮೇಲೆಬಿದ್ದುದುಃಖಿತೆಯಾಗಿಕುಂತಿಹರಿಗಿಂತೆಂದಳು ||೫೮|| ಕಂಡೆಲ್ಯೆಕೃಷ್ಣಫಲುಗುಣನಿರವನಿನ್ನುಭೂ | ಮಂಡಲದೊಳೆನಗೆ ಸುತರಿರ್ದಪರೆನೀನಾರ | ಬಂಡಿಯಂಪೊಡೆದಪ್ಪೆತ್ರೈಲೋಕ್ಯವೀರನೆಂದೆನಿಸಿಕೊಂಬುವರದಾರು || ಖಂಡಪರಶುವಿನುತ್ತಮಾಂಗಮಂಪೊಯ್ದುಕೋ | ದಂಡಮಂಪಿಡಿವರಾರನುಜಾಗ್ರಜರನಡುವೆ | ಚಂಡತೇಜದೊಳೆಸೆವರುಂಟೆಧರ್ಮಜನಾರನಪ್ಪುವಂಪೇಳೆಂದಳು || ೫೯ || ಈತನಂತಿರಲಿತ್ತನೋಡೆಲೆಮುಕುಂದವೃಷ | ಕೇತುಮಡಿದಿರ್ದಪಂಸೈರಿಸುವೆನೆಂತಿವನ | ತಾತನಂಕಂಡುಹಿಗ್ಗುವೆನಾರುಮರಿಯದಂತಾತ್ಮಜಸ್ನೇಹದಿಂದ || ಆತನಂಕೊಂದನೀಪಾರ್ಥನಂದಾನೋರ್ವ | ನೇತರಳನೇಳ್ಗೆ

ಕುವರನಾದ ಫಲುಗುಣನ, ಅಂಗದ ಮೇಲೆ_ದೇಹದಮೇಲ್ಗಡೆ, ಬಿದ್ದು_ಹೊರಳಿಕೊಂಡು, ದುಃಖಿತೆಯಾಗಿ_ದುಃಖದಿಂದ ಕೂಡಿ, ಹರಿಗೆ_ಮುರಹರನೊಂದಿಗೆ, ಇಂತು-ಮುಂದೆ ಹೇಳುವಂತೆ, ಎಂದಳು_ನುಡಿದಳು.

ಅ|| ವಿ|| ವನಜಾಂಬಕಿಯರು=ವನಜ-ವನ_ನೀರಿನಲ್ಲಿ, ಜ_ಹುಟ್ಟಿದ್ದು (ಕೃ.ವೃ.) ವನಜದಂತೆ ಅಂಬಕವು ಯಾರಿಗೊ ಅವರು (ಬ. ಸ.) ಘನಶೋಕ (ವಿ. ಪೂ) ||೫೮||

ಟೀ|| ಕೃಷ್ಣ- ಎಲೈ ಮುರಹರನೆ, ಫಲುಗುಣನ - ಕಿರೀಟಿಯ, ಇರವಂ- ಬಗೆಯನ್ನು, ಕಂಡೆಲ್ಯೆ - ಈಕ್ಷಿಸಿದೆಯಾ? ಭೂಮಂಡಲದೊಳ್- ಭೂಲೋಕದಲ್ಲಿ, ಇನ್ನು_ಇನ್ನು ಮುಂದೆ, ಎನಗೆ-ನನಿಗಾದರೊ, ಸುತರು_ಕುವರರು, ಇರ್ದಪರೆ_ಇದ್ದಾರೆಯೆ, ನೀನು_ನೀನಾದರೊ, ಆರಬಂಡಿಯಂ_ಯಾರ ತೇರನ್ನು, ಪೊಡೆದಪ್ಪೆ-ಹೊಡೆಯುವನಾಗುತ್ತಿ, ತ್ರೈಲೋಕ್ಯವೀರನು_ ಮೂರುಲೋಕಗಳಲ್ಲಿಯೂ ಹೆಸರಾದವನು, ಎಂದು_ಎಂಬತೆರನಾಗಿ, ಎನಿಸಿಕೊಂಬವರು_ ಹೇಳಿಸಿಕೊಳ್ಳತಕ್ಕವರು, ಅದಾರು_ ಮತ್ತೆ ಯಾರಿದ್ದಾರೆ, ಖಂಡಪರಶುವಿನ-ಈಶ್ವರನ, ಉತ್ತಮಾಂಗವಂ-ತಲೆಯನ್ನು, ಪೊಯ್ದು_ತಾಡಿಸಿ, ಕೋದಂಡಮಂ_ ಧನುಸ್ಸನ್ನು, ಪಿಡಿವರು-ಹಿಡಿಯತಕ್ಕವರು, ಆರು_ಯಾರಿದಾರೆ, ಅನುಜ_ತಮ್ಮಂದಿರು, ಅಗ್ರಜ_ಹಿರಿಯರಾದವರು (ಅಣ್ಣಂದಿರು) ಇವರ, ನಡುವೆ-ಮಧ್ಯಭಾಗದೊಳಗೆ, ಚಂಡತೇಜದೊಳು_ಅತಿಯಾದ ಕಾಂತಿಯಿಂದ, ಎಸೆವರು_ಹೊಳೆಯತಕ್ಕವರು, ಉಂಟೆ- ಇದಾರೆಯೆ, ಧರ್ಮಜಂ_ಧರ್ಮರಾಯನು, ಆರನು_ಮತ್ತೆ ಯಾರನ್ನು, ಅಪ್ಪುವಂ-ತಬ್ಬಿಕೊಳ್ಳುವನು, ಪೇಳು_ಹೇಳುವನಾಗು, ಎಂದಳು-ಎಂಬುದಾಗಿ ಹೇಳಿದಳು ||೫೯||

ಟೀ|| ಎಲೆ ಮುಕುಂದ_ಎಲೈ ಮೋಕ್ಷದಾಯಕನಾದ ಕೃಷ್ಣ ಪರಮಾತ್ಮನೆ, ಈತನು_ಈ ಪಾರ್ಥನಾದರೊ, ಇಂತು_ ಹೀಗೆ, ಇರಲಿ_ಇರತಕ್ಕವನಾಗಲಿ, ಇತ್ತ_ಈ ಭಾಗದಲ್ಲಿ, ನೋಡು_ನೋಡತಕ್ಕವನಾಗು, ವೃಷಕೇತು_ ವೃಷಧ್ವಜನಾದರೊ, ಮಡಿದು ಇರ್ದಪಂ-ಸತ್ತು ಹೋಗಿದ್ದಾನೆ, ಎಂತು_ಯಾವ ಪರಿಯಿಂದ. ಸೈರಿಸುವೆನು-ತಡೆದುಕೊಂಡಿರಲಿ, ಇವನ-ಈ ಕರ್ಣ ಸಂಭವನ, ತಾತನಂ_ಪಿತನನ್ನು, ಕಂಡು-ಈಕ್ಷಿಸಿ, ಆತ್ಮಜಸ್ನೇಹದಿಂದ-ಪುತ್ರವಾತ್ಸಲ್ಯದಿಂದ, ಆರುಂ_ಯಾರೊಬ್ಬರೂ ಕೂಡ, ಅರಿಯದಂತೆ-ಗೋಚರಮಾಡಿಕೊಳ್ಳದ ಹಾಗೆ, ಹಿಗ್ಗುವೆನು_ಸಂತಸಪಡ್ಮುವೆನು, ಅಂದು_ಮೊದಲೆ, ಈ ಪಾರ್ಥನು_ಈ ಫಲು ಗುಣನು, ಆತನಂ_ಆ ರವಿಸುತನನ್ನು, ಕೊಂದನು_ಕೊಂದು ಹಾಕಿದನು, ಆಂ_ನಾನಾದರೊ, ಇನ್ನೆಗಂ-ಇದುವರೆಗೂ, ಓರ್ವನ_ ಒಬ್ಬನಾದ, ತರಳನ-ಬಾಲಕನ, ಏಳ್ಗೆಯಿಂ-ಪುರೋವೃದ್ಧಿಯಿಂದ, ಮರೆದು ಇರ್ದೆನು_ಮರತು ಹೋಗಿ ಬಿಟ್ಟಿದ್ದೆನು, ಎನಗೆ_ ನನಿಗಾದರೊ, ಇಂದು_ಈ ಹೊತ್ತಿಗೆ, ಕರ್ಣಜನೊಳು-ವೃಷಧ್ವಜನೊಂದಿಗೆ, ಸಂತತಿ_ವಶಂವು, ಬೀತುದು_ಕಳೆದು ಹೋಯಿತು, ಎಂದು_ಎಂಬ ತೆರನಾಗಿ, ಕುಂತಿ-ಕುಂತೀದೇವಿಯು, ಮರುಗಿ_ವ್ಯಸನಾಕ್ರಾಂತಳಾಗಿ, ಅಳಲ್ದಳು_ಗೋಳಾಡಿದಳು. ||೬೦||

ಕ್ರಾಂತಳಾಗಿ ಬಿದ್ದು ಹೋದಳು. ಎಲ್ಲೆಡೆಗಳಲ್ಲಿಯೂ ವ್ಯಸನ ವೆಂಬುದೇ ತುಂಬಿ ತುಳುಕಾಡುತ್ತಲಿತ್ತು. ಹೀಗಿರುವಲ್ಲಿ ಮೂರ್ಛಿತಳೆದಿದ್ದ ಪೃಥೆಯು ಸ್ವಲ್ಪ ಚೇತರಿಸಿಕೊಂಡು ||೫೮|| ಕೃಷ್ಣಸ್ವಾಮಿಯನ್ನು ಕುರಿತು. ಅಯ್ಯೋ! ಕೃಷ್ಣ ಮೂರುತೀ! ಅರ್ಜುನನಿಗೆ ಸಂಭವಿಸಿದ ಅಪಮೃತ್ಯುವನ್ನು ನೋಡಿದೆಯಾ? ಅರ್ಜುನನ ಗತಿಯು ಹೀಗಾದಮೇಲೆ ನನಗೆ ಇನ್ನು ಮಕ್ಕಳಿರುವರೆಂದು ಹೇಗೆ ತಿಳಿಯಲಿ? ಮುಂದೆ ನೀನು ಯಾರ ರಥವನ್ನು ಹೊಡೆಯುವಿ? ತ್ರಿಲೋಕಂಗಳಲ್ಲಿಯೂ ಶೂರನೆಂದೆನಿಸಿದ್ದ ಅರ್ಜುನನ ಹೆಸರುವಾಸಿಯು ಮುಂದೆ ಮತ್ಯಾರಿಗುಂಟಾಗುವುದು? ಈಶ್ವರನ ತಲೆಯಮೇಲೆ ಗಾಯಮಾಡಿತಂದ ಧನುಸ್ಸನ್ನು ಅರ್ಜುನನು ಸತ್ತಬಳಿಕ ಮತ್ತೆ ಯಾರು ಹಿಡಿಯ ಬಲ್ಲರು? ಅಣ್ಣತಮ್ಮಂದಿರ ಮಧ್ಯೆ ಅರ್ಜುನನು ಸತ್ತ ಬಳಿಕ ಪ್ರಕಾಶವೆಲ್ಲಿ ಬಂದೀತು? ಇನ್ನು ಮುಂದೆ ಧರ್ಮರಾಯನು ಯಾರನ್ನು ಸಂತೋಷದಿಂದ ಆಲಿಂಗಿಸಿಕೊಳ್ಳುವನು? ||೫೯|| ಅಯ್ಯೋ ದೇವರೆ ಇವನೂ ಹೀಗಿರಲಿ, ಎಲೈ ಕೃಷ್ಣನೆ ಇಲ್ಲಿ ನೋಡು, ಈ ಅರ್ಜುನನ ಪಕ್ಕದಲ್ಲಿಯೇ ವೃಷಧ್ವಜನೂ ಕೂಡ ಸತ್ತು ಬಿದ್ದಿರುವನು. ಇನ್ನು ನಾನು ಬದುಕುವಬಗೆ ಹೇಗೆ? ಕರ್ಣನು ಸತ್ತರೂ ಕೂಡ ಈ ಹಸುಳೆಯನ್ನು ನೋಡಿ ಕರ್ಣನ ಶೋಕವನ್ನೂ ಮರೆತು ಈ ಬಾಲಕನನ್ನು ಮುದ್ದುಗೈಯ್ಯುತ್ತಿದ್ದೆನಲ್ಲಾ! ಇವನ ಗತಿಯೂ ಹೀಗಾಯಿತೆ? ಅಯ್ಯೊ ಕರ್ಣನ ವಂಶವು ನನ್ನ ಕಣ್ಣುಮುಂ

ಯಿಂಮರೆದಿರ್ದೆನಿನ್ನೆಗಂ | ಬೀತುದೆನಗಿಂದುಸಂತತಿಕರ್ಣಜನೊಳೆಂದಳಲ್ದಳಾಕುಂತಿಮುರುಗಿ ॥ ೬೦ ॥ ಆಸಮಯಕ್ಕೈತಂದು ಕಂಡನಹಿಪತಿಪೀತ | ವಾಸನಂಪೊಡಮಟ್ಟನಡಿದಾವರೆಗೆನುಡಿದ | ನೀಸಕಲಲೋಕವಂಪೊರೆವನಿನಗೀನರನಜೀವಮುಂಪಡೆವುದರಿದೆ ॥ ಬೇಸರೇತಕೆದೇವಧರ್ಮಜನಕುಲಮುದ್ದು | ದೋಸರಿಸದುದ್ಧರಿಸುನಿನ್ನಡಿಂಗರಿಗರ್ಗೆ | ಲೇಸಲ್ಲದಘನಶೋಕಭಯತಾಪದುಃಖಂಗಳಿರ್ದಪವೆಪೇಳೆಂದನು ॥೬೧॥ ತಾತನಸುವಂಪಡೆಯಲೀಬಭ್ರುವಾಹನಂ | ಪಾತಾಳಕ್ಕೈದಿಜೀವದರತ್ನಮಂಬೇಡಿ| ಘಾತಿಸಿದನಹಿಗಳಂತಾನದಂಪರಿಹರಿಸಿನಿನ್ನನೀಕ್ಷಿಸುವೆನೆಂದು ॥ ಭೂತಳಕೆಬಂದೆನಿದೆಮಣಿತನ್ನಕೈಯೊಳೀ | ಶ್ವೇತವಾಹನನತಲೆಯಂತರಿಸುಜಗದೊಳ | ಜ್ಞಾತವಾವುದುನಿನಗೆಸರ್ವಗತನಪ್ಪೆನೀನೆಂದುಫಣಿಪತಿನುಡಿದನು ॥೬೨॥ ಶೇಷನಿಂತೆಂದೊಡಾಲಿಸಿ

ಟೀ॥ ಆ ಸಮಯಕೆ–ಕುಂತಿಯು ದುಃಖದಿಂದ ಕೃಷ್ಣಸ್ವಾಮಿಯೊಂದಿಗೆ ಮೊರೆಯಿಡುತ್ತಿರುವಾಗ, ಅಹಿಪತಿ–ಸರ್ಪೇಂದ್ರನು, ಐತಂದು–ಬಂದವನಾಗಿ, ಪೀತವಾಸನಂ–ಪೀತಾಂಬರಧಾರಿಯಾದ ಸ್ವಾಮಿಯನ್ನು, ಕಂಡನು–ಈಕ್ಷಿಸಿದನು, ಅಡಿದಾವರೆಗೆ–ಆತನ ಪಾದಾರವಿಂದಗಳಲ್ಲಿ, ಪೊಡಮಟ್ಟನು–ಎರಗಿದನು, ದೇವ–ಎಲೈ ಪ್ರಭುವೆ, ಈ ನರನ–ಮಾನವನಾದ ಈ ಫಲುಗುಣನ, ಜೀವಮಂ–ಹರಣವನ್ನು, ಪಡೆವುದು–ಹೊಂದತಕ್ಕದ್ದು, ಈ ಸಕಲ ಲೋಕವಂ–ಸಮಸ್ತ ಪ್ರಪಂಚಗಳನ್ನೂ, ಪೊರೆವ–ಸಲಹತಕ್ಕ, ನಿನಗೆ–ನಿನಗಾದರೊ, ಅರಿದೆ–ಕಷ್ಟವೆ, ಬೇಸರ–ಆಲಸ್ಯವು, ಏತಕೆ–ಏಕೆ ಮಾಡುತ್ತಲಿದ್ದಿ, ಧರ್ಮಜ–ಯುಧಿಷ್ಠಿರನ, ಕುಲಂ–ಸಂತತಿಯು, ಅದ್ದುದು–ಹಾಳಾಯಿತು, ಓಸರಿಸದೆ–ನಿರಾದರಣೆಯಂ ತೋರದೆ, ಉದ್ಧರಿಸು–ಪರಿಪಾಲಿಸು, ನಿನ್ನ–ನಿನ್ನವರಾದ, ಡಿಂಗರಿಗರ್ಗೆ–ದಾಸರಿಗೆ, ಲೇಸಲ್ಲದೆ–ಮೇಲಾದೀತೇ ಹೊರತು, ಅಘ–ಪಾತಕವು, ಶೋಕ–ವ್ಯಸನವು, ಭಯ–ಹೆದರಿಕೆಯು, ತಾಪ–ಸಂಕಟವು, ದುಃಖಂಗಳು–ಸಂಕಟಗಳು, ಇರ್ದಪವೆ–ಇರುತ್ತವೆಯೆ, ಪೇಳು–ಉಸಿರು, ಎಂದನು–ಎಂಬದಾಗಿ ಹೇಳಿದನು ॥೬೧॥

ಟೀ॥ ತಾತನ–ಜನಕನಾದ ಪಾರ್ಥನ, ಅಸುವಂ–ಹರಣವನ್ನು, ಪಡೆಯಲು–ಹೊಂದುವುದಕ್ಕಾಗಿ, ಈ ಬಭ್ರುವಾಹನಂ–ಈ ಅರ್ಜುನಿಯು, ಪಾತಾಳಕೆ–ನಾಗಲೋಕಕ್ಕೆ, ಐದಿ–ಹೊಕ್ಕು, ಜೀವದರತ್ನಮಂ–ಜೀವರತ್ನವನ್ನು, ಬೇಡಿ–ಆಶಿಸಿದವನಾಗಿ, ಅಹಿಗಳಂ–ಹಾವುಗಳನ್ನು, ಘಾತಿಸಿದನು–ಕೊಂದು ಹಾಕಿದನು, ತಾನು–ನಾನಾದರೊ, ಅದಂ–ಆ ಜಗಳವನ್ನು, ಪರಿಹರಿಸಿ–ಸಮಾಧಾನಮಾಡಿ, ನಿನ್ನನ್ನು–ನಿನ್ನನ್ನೂ, ಈಕ್ಷಿಸುವೆನು–ದರ್ಶನವನ್ನು ತೆಗೆದುಕೊಳ್ಳುವೆನು, ಎಂದು–ಎಂಬತೆರನಾಗಿ, ಭೂತಳಕೆ–ಇಳಾವಲಯಕ್ಕೆ, ಬಂದೆನು–ಬಂದು ಸೇರಿದೆನು, ಮಣಿ–ಜೀವರತ್ನವು, ತನ್ನ ಕೈಯೊಳು–ನನ್ನ ಬಳಿಯಲ್ಲಿ, ಇದೆ–ಇರುವುದು, ಈ ಶ್ವೇತವಾಹನನ–ಈ ಧನಂಜಯನ, ತಲೆಯನು–ಶಿರಸ್ಸನ್ನು, ತರಿಸು–ತರುವಂತೆ ಹೇಳು, ಜಗದೊಳು–ಲೋಕದಲ್ಲಿ, ನಿನಗೆ–ನಿನಗಾದರೊ, ಅಜ್ಞಾತಂ–ತಿಳಿಯದಿರುವುದು, ಆವುದು–ಯಾವುದುತಾನೆ ಇದೆ, ನೀನು–ನೀನಾದರೊ, ಸರ್ವಗತನು–ಎಲ್ಲೆಲ್ಲಿಯೂ ನೆಲಸಿರತಕ್ಕವನು, ಅಪ್ಪೆ–ಆಗಿರುವಿ, ಎಂದು–ಎಂಬತೆರನಾಗಿ, ಫಣಿಪತಿ–ಸರ್ಪರಾಜನು, ನುಡಿದನು–ಹೇಳಿದವನಾದನು. ॥೬೨॥

ಟೀ॥ ಇಂತು–ಈ ತೆರನಾಗಿ, ಶೇಷನು–ಆದಿಶೇಷನು, ಎಂದೊಡೆ–ನುಡಿಯಲು, ಕೃಷ್ಣನು – ಕೃಷ್ಣಮೂರುತಿಯು, ಆಲಿಸಿ–ಕೇಳಿದವನಾಗಿ, ಅಬಲೆಯರ– ಹೆಂಗಸರ, ಘೋಷಮಂ–ಕಳಕಳ ಧ್ವನಿಯನ್ನು, ನಿಲ್ಲಿಸಿ–ನಿಲ್ಲಿಸಿದವನಾಗಿ, ಎಲ್ಲರುಂ–ಸರ್ವರೂ, ಈ ಭಾಷೆಯುಂ–ಈ ಶಪಥವನ್ನು, ಕೇಳ್ವುದು–ಲಾಲಿಸುವುದು, ಎಂದು–ಎಂಬುದಾಗಿ, ಇನ್ನೆಗಂ–ಇಷ್ಟು ಕಾಲವೂ

ದೆಯೇ ನಷ್ಟವಾದದ್ದನ್ನೂ ನೋಡಬೇಕಾಗಿ ಬಂದಿತಲ್ಲಾ! ಎಂದು ಗೋಳಾಡುತ್ತಿರುವ ಕಾಲಕ್ಕೆ ಸರಿಯಾಗಿ ॥ ೬೦ ॥ ಸರ್ಪರಾಜನಾದ ಆದಿಶೇಷನು ಬಂದು, ಪೀತಾಂಬರಧಾರಿಯಾಗಿರುವ ಕೃಷ್ಣಪರಮಾತ್ಮನ ಪಾದಕಮಲಗಳಿಗೆ ತನ್ನ ವಂದನೆಗಳ ಸ್ಸರ್ಶಿಸಿ, ಆ ಮಹಾನುಭಾವನಂ ಕುರಿತು, ಎಲೈ ಜಗತ್ಪತಿಯಾದ ಸ್ವಾಮಿಯೆ, ತ್ರೈಲೋಕ್ಯರಕ್ಷಣ ತತ್ಪರನೆ, ಅರ್ಜುನನ ಪ್ರಾಣವನ್ನುಳಿಸುವುದು ನಿನಗೇನು ಕಷ್ಟ? ಹದಿನಾಲ್ಕು ಲೋಕಗಳಲ್ಲಿರುವವರನ್ನೆಲ್ಲಾ ಕಾಯುವ ಪರಮ ಪಾವನನಲ್ಲವೆ? ಈ ಅರ್ಜುನನ ವಿಷಯದಲ್ಲಿ ನಿನಗೇತಕ್ಕೆ ಆಲಸ್ಯವು? ಕರುಣಾಕಟಾಕ್ಷದಿಂದ ನೋಡಿ ನಿನ್ನ ಭಕ್ತನನ್ನುಳಿಸಿ ಧರ್ಮರಾಯನ ವಂಶೋದ್ಧಾರವಂ ಮಾಡಬೇಕು. ನಿನ್ನ ಭಕ್ತರಿಗೆ ಭಯ ಶೋಕ ಮರಣಗಳು ಬಂದೊದಗುವುದುಂಟೆ ॥ ೬೧ ॥ ಈ ಪಾರ್ಥಜನಾದರೊ ತಮ್ಮ ಜನಕನಾದ ಅರ್ಜುನನ ಪ್ರಾಣಗಳನ್ನು ಮತ್ತೆ ಪಡೆಯಬೇಕೆಂದು ಪಾತಾಳಲೋಕಕ್ಕೆ ಬಂದು ಸಂಜೀವಕ ಮಣಿಯನ್ನು ಕೇಳಿದನು. ಸರ್ಪಗಳು ಆ ದಿವ್ಯ ಮಣಿಯನ್ನು ಕೊಡಲು ಒಪ್ಪದೆ ಹೋದುದರಿಂದ ಅವುಗಳನ್ನೆಲ್ಲಾ ಯುದ್ಧದಲ್ಲಿ ಕೊಂದನು. ನಾನು ನಿನ್ನ ದರ್ಶನದಲ್ಲಿ ಆಸಕ್ತನಾಗಿ ಬಭ್ರುವಾಹನನನ್ನು ಸಂತೈಸಿ, ಸಂಜೀಕವ ರತ್ನಮಂ ಕೈಕೊಂಡು ಸರ್ಪಾಳಿಯಿಂದೊಡಗೂಡಿ ಬಂದಿರುವೆನು. ಇಗೋ ನನ್ನಲ್ಲಿ ಸಂಜೀವಕಮಣಿ ಇರುವುದು ಸರ್ವಾಂತರ್ಯಾಮಿಯಾದ ನೀನು ಕಾಣದ ಸ್ಥಳವಾವುದಿರುವುದು? ಅರ್ಜುನನ ತಲೆಯು ಎಲ್ಲಿರುವುದೊ ನೋಡಿ ತರಿಸುವನಾಗೆಂದು ಹೇಳಿದನು. ॥ ೬೨ ॥ ಫಣಿಪತಿಯು ಈ ರೀತಿಯಾಗಿ ನುಡಿಯಲು, ಕೃಷ್ಣನು ಇದೆಲ್ಲವನ್ನು ಕೇಳಿ, ಸ್ತ್ರೀಯರ ರೋದನ ಧ್ವನಿಯನ್ನು ನಿಲ್ಲಿಸಿ,

ಕೃಷ್ಣನಬಲೆಯರ | ಘೋಷಮಂನಿಲಿಸಿನೀವೆಲ್ಲರುಂಕೇಳ್ವುದೀ | ಭಾಷೆಯಂಬ್ರಹ್ಮಚರ್ಯದೊಳಿಂದ್ರಿಯಂಗಳಂತಾನಿನ್ನೆಗಂ ಧರೆಯೊಳು || ಪೋಷಿಸಿದೆನಾದೊಡಾಪುಣ್ಯದಿಂಕುಂಡಲವಿ | ಭೂಷಿತದಪಾರ್ಥನಶಿರಂಬರಲಿಕದ್ರೊಯ್ದು | ದೋಷಿಗಳ್ಹತ್ನಾಜ್ಞೆಯಿಂದಹತರಾಗಲರಿದಿಹುದುಸಾರಿದೆನೆಂದನು ||೬೩|| ಜನಪಕೇಳಾಶ್ಚರ್ಯಮಂಬಳಿಕಕೃಷಣನಿಂ | ತೆನೆದುಸ್ಸ್ವಭಾವದುರ್ಬುದ್ಧಿಗಳನಂದುಪಾ | ರ್ಥನತಲೆಯನಾಕ್ಷಣಕೆತಂದುದುಸುದರ್ಶನಂಮಣಿಪುರದರಣಭೂಮಿಗೆ || ಜನಮೈದೆಕೊಂಡಾಡಿತುರಗಪತಿಹರುಷದಿಂ | ವಿನುತಸಂಜೀವಕದಮಣಿಯನಿತ್ತಂಮುಕುಂ | ದನಕೈಯೊಳಾಗಹರಿನೋಡಿದಂಕೃಪೆಯಿಂದಕರ್ಣಸುತಫಲ್ಗುಣರನು ||೬೪|| ತದನಂತರದೊಳಂಬುರುಹಲೋಚನಂತಾನೆ | ಮೊದಲಿನಜಸುತನತನುತಲೆಗಳಂಕೂಡಿ | ಜೀವದಮಣಿಯನೆದೆಯಮೇಲಿರಿಸಿಬಳಿಕರ್ಜುನನಕಾಯಕೆಶಿರವನೊಂದಿಸಿ || ಹೃದಯದೆಡೆಗಾದಿವ್ಯರತ್ನಮಂಸಂಗಡಿಸಿ | ಬದುಕುಲಿವರೀಶನಾಜ್ಞೆಯೊಳೆಂದುಪರಸಿಕರು |

---

ತಾನು-ನಾನು, ಬ್ರಹ್ಮಚರ್ಯದೊಳು-ಬ್ರಹ್ಮಚರ್ಯಾಶ್ರಮದಲ್ಲಿ, ಇಂದ್ರಿಯಂಗಳಂ-ಪಂಚೇಂದ್ರಿಯಗಳ ವ್ಯಾಪಾರವನ್ನೂ, ಪೋಷಿಸಿದೆನಾದೊಡೆ-ಸಲಹಿದವನಾಗಿದ್ದರೆ, ಆಪುಣ್ಯದಿಂ-ಆ ಸುಕೃತದಿಂದ, ಕುಂಡಲವಿಭೂಷಿತ-ಕುಂಡಲಾಲಂಕೃತವಾದ, ಪಾರ್ಥನ-ಫಲುಗುಣನ, ಶಿರಂ-ಶಿರಸ್ಸು, ಬರಲಿ-ಬಂದೊದಗಲಿ, ಕದ್ದೊಯ್ದು-ಕಳವುಮಾಡಿರುವ, ದೋಷಿಗಳು-ಪಾಪಿಗಳು, ಹತರಾಗಲಿ-ಮರಣವನ್ನೈದಲಿ, ಅರಿದಿಹುದು-ತಿಳಿದಿರಬೇಕು, ಸಾರಿದೆನು-ಕೂಗಿ ಹೇಳಿರುವೆನು, ಎಂದನು-ಎಂಬುದಾಗಿ ಹೇಳಿದನು ||೬೩||

ಟೀ|| ಜನಪ-ಎಲೈ ಜನಮೇಜಯನೆ, ಆಶ್ಚರ್ಯಮಂ-ಅಚ್ಚರಿಯನ್ನು, ಕೇಳು-ಲಾಲಿಸು, ಬಳಿಕ-ಅನಂತರ, ಕೃಷ್ಣನು-ಕೃಷ್ಣಸ್ವಾಮಿಯು, ಇಂತು- ಈ ತೆರನಾಗಿ, ಎನೆ-ನುಡಿಯಲು, ದುಸ್ವಭಾವ ದುರ್ಬುದ್ಧಿಗಳನ- ದುಸ್ಸ್ವಭಾವ ದುರ್ಬುದ್ಧಿ ಎಂಬೀರ್ವರನ್ನೂ, ಅರಿದು-ಕತ್ತರಿಸಿ, ಸುದರ್ಶನಂ- ಸುದರ್ಶನವೆಂಬ ಚಕ್ರವು, ಪಾರ್ಥನ - ಫಲುಗುಣನ, ತಲೆಯಂ-ಶಿರಸ್ಸನ್ನು, ಆಕ್ಷಣದೊಳು-ಕೂಡಲೆ, ಮಣಿಪುರದ ರಣಭೂಮಿಗೆ-ಮಣಿಪುರದ ಬಳಿಯಲ್ಲಿರುವ ಯುದ್ಧರಂಗಕ್ಕೆ, ತಂದುದು-ತೆಗೆದುಕೊಂಡು ಬಂದಿತು, ಜನಂ-ಜನರೆಲ್ಲರೂ, ಐದೆ-ಬಹುವಾಗಿ, ಕೊಂಡಾಡಿತು-ಹೊಗಳಿದರು, ವಿನುತ-ಅಮೌಲ್ಯವಾದ, ಸಂಜೀವಕದ ಮಣಿಯನು-ಸಂಜೀವಕ ರತ್ನವನ್ನು, ಮುಕುಂದನಕೈಯೊಳು-ಮುಕ್ತಿದಾಯಕನಾದ ಕೃಷನಕೈಗೆ, ಉರಗಪತಿ-ಸರ್ಪರಾಜನು, ಇತ್ತನು-ಕೊಟ್ಟವನಾದನು, ಹರಿ-ಕೃಷ್ಣನು, ಆಗ-ಆ ಕಾಲದಲ್ಲಿ, ಕರ್ಣಸುತಫಲುಗುಣರನು - ವೃಷಧ್ವಜ ಪಾರ್ಥರನ್ನು, ಕೃಪೆಯಿಂದ-ಕರುಣದಿಂದ, ನೋಡಿದಂ-ನಿರುಕಿಸಿದನು ||೬೪||

ಟೀ|| ತದನಂತರದೊಳು-ಸಂಜೀವಕ ರತ್ನವನ್ನು ಆದಿಶೇಷನು ಕೃಷ್ಣನ ಕೈಯಲ್ಲಿ ಕೊಟ್ಟ ಬಳಿಕ, ಅಂಬುರುಹಲೋಚನಂ-ಕೃಷ್ಣಸ್ವಾಮಿಯು, ತಾನೇಮೊದಲು-ಪ್ರಾರಂಭದಲ್ಲಿ, ಇನಜನ-ಸೂರ್ಯಸುತನ, ಸುತನ-ಕುವರನಾದ ವೃಷಧ್ವಜನ, ತನುತಲೆಗಳಂ-ಶರೀರ ಮತ್ತು ತಲೆಗಳನ್ನು ಸಹ, ಕೂಡಿ-ಜೋಡಿಸಿ, ಜೀವದ ಮಣಿಯನು-ಸಂಜೀವಕ ರತ್ನವನ್ನು, ಎದೆಯಮೇಲಿರಿಸಿ-ಎದೆಯ ಮೇಲ್ಗಡೆಯಿಟ್ಟ, ಬಳಿಕ-ಅನಂತರ, ಅರ್ಜುನನ ಕಾಯಕೆ-ಪಾರ್ಥನ ದೇಹಕ್ಕೆ, ಶಿರವಂ-ರುಂಡನ್ನು, ಬಂದಿಸಿ-ಕೂಡಿಸಿದವನಾಗಿ, ಆದಿವ್ಯರತ್ನಮಂ-ಶ್ರೇಷ್ಠವಾದ ಆ ಮಣಿಯನ್ನು, ಹೃದಯದೆಡೆಗೆ-ಎದೆಯ ಭಾಗಕ್ಕೆ, ಸಂಗಡಿಸಿ-ಸೇರಿಸಿದವನಾಗಿ, ಈಶನಾಜ್ಞೆಯೊಳು-ಪರಮೇಶ್ವರಾನುಗ್ರಹದಿಂದ, ಇವರು-ಈ ಕರ್ಣಸುತ ಪಾರ್ಥರು, ಬದುಕಲಿ-ಜೀವವನ್ನು ತಂದುಕೊಳ್ಳಲಿ, ಎಂದು-ಎಂಬುವ ಬಗೆಯಿಂದ, ಪರಸಿ-ಹರಸಿ, ಅವರನು-ಆ ಈರ್ವರನ್ನು, ಕರುಣದೊಳು-ಕೃಪೆಯಿಂದ, ಈಕ್ಷಿಸಿದೊಡೆ-ದೃಷ್ಟಿಸಲು, ಅಕ್ಷಣದೊಳು-ಕೂಡಲೆ, ಅಭವಪ್ರಸಾದದಿಂದ-ಶೈವಾನುಗ್ರಹದಿಂದ, ಜೀವಿಸಿದರು-ಪ್ರಾಣಗಳಂ ಪಡೆದರು,

---

ಅಲ್ಲಿ ನೆರೆದಿದ್ದವರನ್ನೆಲ್ಲಾ ಸಂಬೋಧಿಸಿ, ನಾನು ಇದುವರೆಗೂ ಬ್ರಹ್ಮಚರ್ಯ ವ್ರತದಲ್ಲಿ ಜಿತೇಂದ್ರಿಯನಾಗಿದ್ದದ್ದೇ ನಿಜವಾದರೆ ಸೂರ್ಯ ತೇಜೋವಿರಾಜಮಾನವಾದ ಕರ್ಣಕುಂಡಲಂಗಳಿಂ ಕೂಡಿರತಕ್ಕ ಮಾಯೆಯಾಗಿರುವ ಅರ್ಜುನನ ತಲೆಯು ಬಂದು ನನ್ನೆದುರಿಗೆ ಬೀಳಲಿ, ಮತ್ತು ಈ ದುಷ್ಕಾರ್ಯಮಂಗೈದ ದ್ರೋಹಿಗಳು ಈಗಲೆ ಸತ್ತುಹೋಗಲೆಂದು ನುಡಿದು ತನ್ನ ಚಕ್ರವನ್ನು ಬಿಟ್ಟುಬಿಟ್ಟನು || ೬೩ || ಆ ಸುದರ್ಶನನೆಂಬ ಚಕ್ರವು ಕೂಡಲೆ ಹೋಗಿ ದುರ್ಬುದ್ಧಿ ದುಸ್ಸ್ವಭಾವರೆಂಬೀರ್ವರನ್ನು ಯಮಲೋಕಕ್ಕೆ ಕಳುಹಿ ಅರ್ಜುನನ ತಲೆಯನ್ನು ತಂದು ಕೃಷ್ಣನ ಸನ್ನಿಧಿಯಲ್ಲಿ ಒಪ್ಪಿಸಿತು. ಅಲ್ಲಿದ್ದ ಜನರೆಲ್ಲರೂ ಬಹು ಹೊಗಳಲಾರಂಭಿಸಿದರು. ಆದಿಶೇಷನಾದರೊ ಅತ್ಯಾನಂದದಿಂದ ತನ್ನ ಕೈಯಲ್ಲಿದ್ದ ಸಂಜೀವಕದ ರತ್ನವನ್ನು ಕೊಟ್ಟನು ಆದಿಶೇಷನು ಕೊಟ್ಟ ಜೀವಮಣಿಯನ್ನು ಕೃಷ್ಣನು ಕೈಕೊಂಡು ಕರುಣಾಕಟಾಕ್ಷದಿಂದ ಕೂಡಿದವನಾಗಿ || ೬೪ || ಮೊದಲು ವೃಷಕೇತುವಿನ ಮುಂಡರುಂಡಗಳನೊಂದು ಮಾಡಿ ಜೀವರತ್ನವನ್ನು ಎದೆಯಮೇಲಿಟ್ಟನು. ಅನಂತರದಲ್ಲಿ ಅರ್ಜುನನ ತಲೆಯನ್ನು ಅವನ ದೇಹದ ಭಾಗಕ್ಕೆ ಕೂಡಿಸಿ ಹೃದಯದಮೇಲೆ ಸಂಜೀವಕ ಮಣಿಯನ್ನಿರಿಸಿದನು. ಅನಂತರದಲ್ಲಿ ಕೃಷ್ಣಸ್ವಾಮಿಯು ಅವರೀರ್ವರ ಶರೀರಂಗಳನ್ನೂ ಕರುಣಾರ್ದ್ರದೃಷ್ಟಿಯಿಂದೀಕ್ಷಿಸಿ, ಎಲೈ ಕರ್ಣಸುತ ಇಂದ್ರಸೂನುಗಳಿರಾ, ಈಶ್ವ

ಣದೊಳವರನೀಕ್ಷಿಸಿದೊಡಭವಪ್ರಸಾದದಿಂಜೀವಿಸಿದರಾಕ್ಷಣದೊಳು ‖ ೬೫ ‖ ಲೀಲೆಯೊಳಜಾಂಡಕೋಟಿಗಳಳಿವವಾದಪು
ವು । ಪಾಲಿಸಿದೊಡಿರ್ದಪುವುಗಡಪರಮಪುರುಷನಕೃ । ಪಾವಲೋಕನದೋಳೇಳ್ವುದರಿದೆಮಡಿದರ್ಜುನಾದಿಗಳೆಂದುಧರೆಪೊಗಳಲು‖
ಆಲಿಗಳರಳ್ದವಸುಪಸರಿಸಿತೊಡಲೊಳೆಸೆದು । ದಾಲಲಿತಮುಖಕಾಂತಿಪೊಗರೇರಿತವಯವಂ । ಮೇಲೆವ್ಯೆಮುರಿದರೊಯ್ಯನೆಪಾ
ರ್ಥಕರ್ಣಸುತರಸುರಾರಿಯುಂಜಪಿಸುತ ‖೬೬‖ ಇಡಿದಕತ್ತಲೆಯುಂಜಗುಳ್ದವಾರಿಜದಂತೆ । ಬಿಡದೆಮುಸುಕಿದಮೇಘಮುಂಕಳದರವಿ
ಯಂತೆ । ತುಡುಕಿರ್ದರಾಹುತೊಲಗಿದಚಂದ್ರನಂತೆಕರ್ಣಜಪಾರ್ಥರಾಸ್ಯಂಗಳು ‖ ಕಡುಚೆಲ್ವಕಾಂತಿಕಲೆಗಳನಾಂತನಾಗಪಾ ।

---

ಅ॥ ವಿ॥ ಅಂಬುರುಹಲೋಚನಂ-ಅಂಬುರುಹ_ಅಂಬು_ನೀರಿನಲ್ಲಿ, ರುಹ_ಹುಟ್ಟಿದ್ದು (ಕೃ. ವೃ.) ಅಂಬುರುಹದಂತೆ ಲೋಚನವು ಯಾರಿಗೊ ಅವನು (ಬ. ಸ.) ದಿವ್ಯರತ್ನ (ವಿ. ಪೂ.) ರತ್ನ (ತ್ಸ), ರನ್ನ (ತ್ಭ) ಆಜ್ಞೆ (ತ್ಸ) ಆಣೆ (ತ್ಭ) ‖೬೫‖

ಟೀ॥ ಅಜಾಂಡಕೋಟಿಗಳು – ಕೋಟಿಬ್ರಹ್ಮಾಂಡಗಳು, ಲೀಲೆಯೊಳು – ಲೀಲಾಮಾತ್ರದಿಂದಲೆ, ಅಳಿವುವು-ಹಾಳಾಗತಕ್ಕವುಗಳು, ಆವಪವು-ಆಗಿಬಿಡುತ್ತವೆ. ಪಾಲಿಸಿದೊಡೆ_ಕಾಪಾಡಿದರೆ, ಇರ್ದಪವುಗಡ-ಇರುತ್ತವಲ್ಲವೆ. ಮಡಿದ-ಸತ್ತುಹೋಗಿರತಕ್ಕ, ಅರ್ಜುನಾದಿಗಳು_ಪಾರ್ಥನೇ ಮೊದಲಾದವರು, ಪರಮಪುರುಷನ_ಪರಮಪಾವನನಾದ ಕೃಷ್ಣಮೂರ್ತಿಯ, ಕೃಪಾವಲೋಕನದೊಳು_ಕರುಣಾಕಟಾಕ್ಷದಿಂದ, ಏಳ್ವುದು_ಮೇಲಕ್ಕೇಳತಕ್ಕದ್ದು, ಅರಿದೆ-ಅಸಾಧ್ಯವಾದದ್ದೆ, ಎಂದು_ಎಂಬತೆರನಾಗಿ, ಧರೆ_ಇಳಾವಲಯವು, ಪೊಗಳಲು-ಹೊಗಳುತ್ತಿರಲಾಗಿ, ಆಲಿಗಳು_ನಯನಂಗಳು, ಅರಳ್ದವು-ವಿಕಸಿತವಾದವು, ಅಸು_ಹರಣವು, ಒಡಲೊಳು_ದೇಹದಲ್ಲಿ, ಪಸರಿಸಿತು_ಆವಿರ್ಭವಿಸಿತು, ಲಲಿತ_ರಮಣೀಯವಾದ, ಮುಖಕಾಂತಿ_ಮುಖಸೌಂದರ್ಯವು, ಎಸೆದುದು-ಹೊಳೆಯಲಾರಂಭಿಸಿತು, ಅವಯವಂ-ದೇಹದಲ್ಲೆಲ್ಲಾ, ಪೊಗರ್-ಕಳೆಯು, ಏರಿತು-ಅಧಿಕವಾಯಿತು, ಮೇಲೆ_ತರುವಾಯ, ಮೈಮುರಿದರು_ಶರೀರವನ್ನು ಮುರಿದುಕೊಂಡವರಾದರು, ಪಾರ್ಥಕರ್ಣಸುತರು_ಅರ್ಜುನ ವೃಷಕೇತುಗಳು, ಅಸುರಾರಿಯುಂ-ರಾಕ್ಷಸಾಂತಕನಾದ ಕೃಷ್ಣಪರಮಾತ್ಮನನ್ನು, ಜಪಿಸುತ-ಧ್ಯಾನಮಂ ಮಾಡುತ್ತ, ಒಯ್ಯನೆ_ನಿಧಾನವಾಗಿ, ಎದ್ದರು-ಮೇಲಕ್ಕೆದ್ದವರಾದರು ‖ ೬೬ ‖

ಟೀ॥ ಇಡಿದ_ಸಾಂದ್ರವಾದ, ಕತ್ತಲೆಯುಂ_ತಮೋರಾಶಿಯನ್ನು, (ಅಂಧಕಾರವನ್ನು) ಜಗುಳ್ದ-ನೀಗಿದ, ವಾರಿಜದಂತೆ_ತಾವರೆಹೂವಿನ ಹಾಗೂ, ಬಿಡದೆ-ತಪ್ಪದೆ, ಮುಸುಕಿದ-ಕವಿದುಕೊಂಡಿದ್ದ, ಮೇಘಮಂ-ಮೋಡವನ್ನು, ಕಳೆದ_ಹೋಗಲಾಡಿಸಿದ, ರವಿಯಂತೆ-ಭಾನುವಿನಂತೆಯೂ, ತುಡುಕಿರ್ದ_ಆಹಾರವಾಗಿ ಮಾಡಿಕೊಂಡಿದ್ದ, ರಾಹು_ರಾಹುವೆಂಬ ಗ್ರಹವು, ತೊಲಗಿದ_ಹೊರಟುಹೋದ, ಚಂದ್ರನಂತೆ-ಇಂದುಮಂಡಲದ ಪರಿಯಿಂದಲೂ, ಕರ್ಣಜಪಾರ್ಥರ_ ಕರ್ಣನಂದನ ಇಂದ್ರಸೂನುಗಳ, ಆಸ್ಯಂಗಳು_ಮೋರೆಗಳು, ಕಡು_ಹೆಚ್ಚಾದ, ಚೆಲ್ವ-ಸೊಗಸಿನಿಂದೊಡಗೂಡಿದ, ಕಾಂತಿ_ಪ್ರಕಾಶದ, ಕಲೆಗಳನು_ಹೊಳಪನ್ನು. ಆಂತವು-ಹೊಂದಿದವು, ಮುಂದೆ-ಮುಂಭಾಗದಲ್ಲಿ, ಪಾಲ್ಗಡಲ_ಹಾಲಿನ ಸಮುದ್ರದ, ಒಡೆಯನಂ_ಪ್ರಭುವನ್ನು, ಕಂಡು_ಈಕ್ಷಿಸಿ, ಪದಕಮಲದೊಳ್-ಪಾದಾರವಿಂದಗಳಲ್ಲಿ, ಪೊಡಮಡಲ್-ಎರಗಲು, ಅವರ್ಗಳಂ – ಅವರೀರ್ವರನ್ನು, ತೆಗೆದು-ಹತ್ತಿರಕ್ಕೆ ಕರೆದುಕೊಂಡು, ಅಪ್ಪಿ_ತಬ್ಬಿಕೊಂಡು, ಚುಂಬಿಸುತ_ಚುಂಬನೆಯಂ ಗೈಯುತ್ತ, ಕೃಪೆಯೊಳು-ಕರುಣೆಯಿಂದ, ಮೈ-

---

ರಾನುಗ್ರಹದಿಂದ ನೀವೀರ್ವರೂ ಬದುಕಿರೆಂದು ಆಶೀರ್ವದಿಸಿದ ಕೂಡಲೇ ಅರ್ಜುನ ವೃಷಕೇತುಗಳಿಬ್ಬರೂ ಜೀವವಂ ಪಡೆದರು ‖ ೬೫ ‖ ಜನರೆಲ್ಲರೂ ಪರಮ ಸಂತೋಷ ಭರಿತಾಂತರಂಗರಾಗಿ, ಅಹಾ! ಈ ಪರಮ ಮೂರುತಿಯು ಕರುಣದಿಂದೀಕ್ಷಿಸಿದರೆ ಅಖಿಲಾಂಡ ಕೋಟಿ ಬ್ರಹ್ಮಾಂಡವೂ ಸಂತೋಷದಿಂದ ನಲಿದಾಡುತ್ತಲಿರುವುದು. ಈ ಕೃಪಾನಿಧಿಯಾದ ಸ್ವಾಮಿಯ ದಯೆಯು ಕಡಮೆಯಾದರೆ ಕ್ಷಣಮಾತ್ರದಲ್ಲಿ ಲೋಕವೇ ಮುಳಗಿ ಹೋಗುವುದು. ಹೀಗಿರುವಲ್ಲಿ ಅರ್ಜುನನ ಪ್ರಾಣವು ಉಳಿಯುವಂತೆ ಮಾಡುವುದು ಈ ಜಗನ್ನಾಯಕನಿಗೇನು ಕಷ್ಟವೆಂದು ಕೊಂಡಾಡುತ್ತಲಿರುವಾಗ ವೃಷಕೇತು ಅರ್ಜುನರ ಮುಕುಳಿತಂಗಳಾಗಿದ್ದ ಕಂಗಳು ವಿಕಸಿತಂಗಳಾದವು. ಚೈತನ್ಯವುಂಟಾಯಿತು, ಮುಖದಲ್ಲಿ ಕಳೆಯೇರಿತು. ದೇಹದಲ್ಲೆಲ್ಲಾ ರೋಮಾಂಚವುಂಟಾಯಿತು. ಮೆತ್ತಗೆ ಮೈ ಮುರಿಯಲಾರಂಭಿಸಿದರು. ‖೬೬‖ ಕತ್ತಲೆಯನ್ನು ನೀಗಿದ ತಾವರೆಯಂತೆಯೂ, ಎಲ್ಲೆಲ್ಲಿಯೂ ಕವಿದಿರುವ ಮೇಘವನ್ನು ಹೋಗಲಾಡಿಸಿದ ಸೂರ್ಯನತೆರನಾಗಿಯೂ, ರಾಹುವಿನ ಬಾಧೆಯನ್ನು ಪರಿಹರಿಸಿಕೊಂಡ ಚಂದ್ರಮಂಡಲವನ್ನು ಹೋಲುತ್ತಲೂ ಇರುವ ಅರ್ಜುನ ವೃಷಕೇತುಗಳ ಮುಖಗಳು ಅತಿಶ್ರೇಷ್ಠವಾದ ಕಳೆಯನ್ನು ಹೊಂದಿ ಕಂಗೊಳಿಸುವದಕ್ಕಾರಂಭಿದವು. ಆಗ ಅವರೀರ್ವರೂ ಮೇಲಕ್ಕೆದ್ದು ನಿಲ್ಲಲಾಗಿ ಮುಂದೆ ಕೃಷ್ಣಸ್ವಾಮಿಯು ನಿಂತಿರುವುದನ್ನು ನೋಡಿದವರಾಗಿ ಆ ಮಹಾನುಭಾವನ ಪಾದಾರವಿಂದಗಳಲ್ಲಿ ತಮ್ಮ ಶಿರಸ್ಸುಗಳನ್ನಿಟ್ಟು ನಿಲ್ಲಲು, ಕೃಪಾಸಾಗರನಾದ ಕೃಷ್ಣಮೂರ್ತಿಯು ತನಿಗೆ ನಮಸ್ಕಾರಂಗಳಂ ಮಾಡಿದ ಅರ್ಜುನ ವೃಷಕೇತುಗಳೀರ್ವರನ್ನೂ ಸಂತೋಷದಿಂದ ಅಪ್ಪಿಕೊಂಡು

ಲ್ಗಡಲೊಡೆಯನಂ ಮುಂದೆ ಕಂಡು ಪದಕಮಲದೊಳ್ಪೊಡಮಡಲವರ್ಗಳಂ | ತೆಗೆದಪ್ಪಿ ಚುಂಬಿಸುತವ್ವೆಡಡವಿದಂ ಕೃಪೆಯೊಳು ||೬೭|| ದುಂದುಭಿಗಳಭ್ರದೊಳ್ಮೊಳಗಿದುವು ಸೂಸಿದುವು | ಮಂದಾರದರಳು ಹರಿನರಕರ್ಣಜರಮೇಲೆ | ಬಂದಪ್ಪಿದಂ ಬಳಿಕವರ್ಗಳಂ ಭೀಮನಾಲಿಂಗಿಸಿದಳಾಗ ಕುಂತಿ || ವಂದಿಸಲ್ಪರಸಿದರ್ದೇವಕಿಯಶೋದೆಯರ್ | ಮುಂದಿರ್ದ ಶೇಷನಂ ಕಾಣಿಸಲ್ಪೊಡಮಟ್ಟರ್ | ಅಂದವರ್ಮುದದಿಂದ ಹರಿ ಪಾಂಚಜನ್ಯಮಂ ಪಿಡಿದನುರುಘೋಷಮಾಗೆ || ೬೮ || ಪದುಳಿಸಿದರನಿರುದ್ಧ ಸಾತ್ಯಕಿ ಪ್ರದ್ಯುಮ್ನ | ಗದಸಾಂಬ ಕೃತವರ್ಮ ಶಠನಿಶಠಪ್ರಮುಖರಾ | ಯದುವೀರರನುಸಾಲ್ವಯೌವನಾಶ್ವಾಸಿತಧ್ವಜಹಂಸಕೇತುಗಳ್ಗೆ || ಮುದವೇರಿತಸುರಾರಿಯಂ ಕಂಡು ತಮತಮಗೆ | ಪದಕೆರಗಿ ಬಿನ್ನೈಸಿದರ್ಬಭ್ರುವಾಹನನ | ಕದನದಾಯಾಸಮಂ ನಗರದೊಳುಲೂಪಿಚಿತ್ರಾಂಗದೆಯರೆಸಗಿದುದನು || ೬೯ || ಹರಿ ಬಳಿಕ ನಿಜಾಹ್ನವಿಯುತಾಪದಿಂದಾದುದೀ | ಪರಿಭವಂ ನಿನಗೆಂದು ಪಾರ್ಥನಂ ತಿಳುಪಿದಂ | ತರಿಸಿ ಕಾಣಿಕೆಗೊಟ್ಟು

---

ದೇಹವನ್ನು, ತಡವಿದಂ-ಸವರಿದನು ||೬೭||

ಟೀ|| ದುಂದುಭಿಗಳು - ಸುರರ ನಗಾರಿಗಳು, ಅಭ್ರದೊಳು - ಅಂತರಿಕ್ಷದಲ್ಲಿ, ಮೊಳಗಿದವು - ದನಿಗೈಯಲ್ಪಟ್ಟವು, ಮಂದಾರದ ಅರಳು - ಕಲ್ಪತರುವಿನ ಕುಸುಮಂಗಳು, ಹರಿನರಕರ್ಣಜರಮೇಲೆ - ಹರಿ-ಕೃಷ್ಣನು, ನರ-ಪಾರ್ಥನು, ಕರ್ಣಜರ ಮೇಲೆ-ವೃಷಧ್ವಜನು ಇವರ ಮೇಲೆ, ಸೂಸಿದವು-ಚೆಲ್ಲಲ್ಪಟ್ಟವು, ಬಳಿಕ-ಆಮೇಲೆ, ಭೀಮನು-ಭೀಮಸೇನನು, ಬಂದು-ಬಂದವನಾಗಿ, ಅವರ್ಗಳಂ-ಅವರನ್ನೆಲ್ಲಾ, ಅಪ್ಪಿದನು-ತಬ್ಬಿಕೊಂಡನು, ಕುಂತಿಯು-ಕುಂತಿದೇವಿಯು, ಆಲಂಗಿಸಿದಳು-ತಬ್ಬಿಕೊಂಡಳು, ಆಗ-ಆ ವೇಳೆಯೊಳಗೆ, ಅರ್ಜುನವೃಷಕೇತುಗಳು - ಪಾರ್ಥಕರ್ಣಸುತರು, ವಂದಿಸಲು-ನಮಸ್ಕಾರಮಂ ಮಾಡಲು, ದೇವಕಿಯಶೋದೆಯರು-ದೇವಕಿ ಮತ್ತು ಯಶೋದೆಯೆನ್ನುವ ಕೃಷ್ಣನ ತಾಯಿಯರು, ಪರಸಿದರು-ಆಶೀರ್ವಾದಮಂಗೈದರು, ಮುಂದೆ-ಮುಂಭಾಗದಲ್ಲಿ, ಇರ್ದ-ಇದ್ದಂಥ, ಶೇಷನಂ-ಹಾವುಗಳ ಒಡೆಯನನ್ನು, ಕಾಣಿಸಲು-ನೋಡಿಸಲಾಗಿ, ಅಂದು-ಆಗ, ಅವರ್-ಅವರೀರ್ವರೂ, ಮುದದಿಂದ-ಅಕ್ಕರೆಯಿಂದ, ಪೊಡಮಟ್ಟರು-ಎರಗಿದರು, ಹರಿ-ಕೃಷ್ಣಸ್ವಾಮಿಯಾದರೊ, ಉರು-ಅಧಿಕವಾದ, ಘೋಷಮಾಗೆ-ದನಿಯುಂಟಾಗುವಂತೆ, ಪಾಂಚಜನ್ಯಮಂ-ತನ್ನ ಶಂಖವನ್ನು, ಪಿಡಿದನು-ಹಿಡಿದು ಊದಿದನು ||೬೮||

ಟೀ|| ಅನಿರುದ್ಧ-ಮನ್ಮಥನ ಸುತನೂ, ಸಾತ್ಯಕಿ-ಸತ್ಯಕನೆಂಬವನ ತನುಜನೂ, ಕೃತವರ್ಮ-ಕೃತವರ್ಮ ನಾಮಧೇಯವುಳ್ಳ ಯದುಕುಲ ಸೇನಾನಾಯಕನೂ, ಗದ-ಗದನೂ, ಸಾಂಬ-ಸಾಂಬನೆಂಬವನೂ, ಶಠ-ಶಠನು, ನಿಶಠ-ನಿಶಠನೆಂಬುವನೆ, ಪ್ರಮುಖ-ಮೊದಲಾದ, ಯದುವೀರರು-ಯದುಶ್ರೇಷ್ಠರೆಲ್ಲಾ, ಪದುಳಿಸಿದರು-ಕ್ಷೇಮವನ್ನೈದಿದರು, ಅನುಸಾಲ್ವ-ಸಾಲ್ವಾನುಜನು, ಯೌವನಾಶ್ವ-ಯೌವನಾಶ್ವನೂ, ಅಸಿತಧ್ವಜ - ಮಾಹಿಷ್ಮತೀಪಟ್ಟಣದರಸು, ಹಂಸಕೇತುಗಳ್ಗೆ - ಹಂಸಧ್ವಜನೆ ಮೊದಲಾದ ರಾಜಾಧಿರಾಜರಿಗೆಲ್ಲಾ, ಮುದವು-ಆನಂದವು, ಏರಿತು-ಅಧಿಕವಾಯಿತು. ಅಸುರಾರಿಯಂ-ರಾಕ್ಷಸಾಂತಕನನ್ನು, ಕಂಡು-ಈಕ್ಷಿಸಿ, ತಮತಮಗೆ-ತಮ್ಮತಮ್ಮಷ್ಟಕ್ಕೆ, ಪದಕೆ-ಕಾಲ್ಗಳಿಗೆ, ಎರಗಿ-ವಂದಿಸಿ, ಬಭ್ರುವಾಹನನ-ಪಾರ್ಥಜನ, ಕದನದ-ರಣದ, ಆಯಾಸಮಂ-ಕಷ್ಟನನ್ನೂ, ಉಲೂಪಿಚಿತ್ರಾಂಗದೆಯರು-ಉಲೂಪಿ ಚಿತ್ರಾಂಗದೆ ಎಂಬ ಪಾರ್ಥನರಸಿಯರು, ನಗರದೊಳು-ಪಟ್ಟಣದಲ್ಲಿ, ಎಸಗಿದುದನು-ರಚಿಸಿದ ಕಜ್ಜಂಗಳನ್ನೂ, ಬಿನ್ನೈಸಿದರು-ಅರಿಕೆಮಾಡಿದವರಾದರು ||೬೯||

ಟೀ|| ಬಳಿಕ-ಅನಂತರದಲ್ಲಿ, ಹರಿ - ಕೃಷ್ಣಸ್ವಾಮಿಯು, ನಿನಗೆ - ನಿನಿಗಾದರೊ, ಈಪರಿಭವಂ - ಈ ಸೋಲುವಿಕೆ

---

ಮೈಯ್ಯನ್ನು ಸವರಿ ಮುಖಗಳನ್ನು ಆನಂದದಿಂದ ಚುಂಬಿಸಿ ಚುಂಬಿಸಿ ತೃಪ್ತನಾಗದಿರುವಾಗ ||೬೭|| ಆಕಾಶದಲ್ಲಿ ದುಂದುಭಿಗಳ ನಿನದವುಂಟಾಯಿತು. ಕೃಷ್ಣಾರ್ಜುನನರ ಮೇಲೂ, ಕರ್ಣಸುತನ ಮೇಲೂ ಅಂತರಿಕ್ಷದಿಂದ ಹೂವಿನ ಮಳೆಯು ಸುರಿಯಲಾರಂಭಿಸಿತು. ಭೀಮಸೇನನು ಜಾಗ್ರತೆಯಲ್ಲಿ ಬಂದು ಅವರನ್ನು ಆಲಿಂಗಿಸಿಕೊಂಡನು, ಕುಂತಿದೇವಿಯಾದರೊ ತಡಮಾಡದೆ ಬಂದು ಕರ್ಣಸುತನನ್ನು ತನ್ನ ಕುವರನನ್ನೂ ತಬ್ಬಿಕೊಂಡಳು. ಬಳಿಕ ಪಾರ್ಥ ವೃಷಕೇತುಗಳೀರ್ವರೂ ಹತ್ತಿರದಲ್ಲಿದ್ದ ದೇವಕಿಯಶೋದೆಯರಿಗೆ ನಮಸ್ಕಾರವಂಮಾಡಿದರು. ಅವರೂ ಕೂಡ ಕರ್ಣನಂದನ ಮತ್ತು ಅರ್ಜುನರನ್ನು ಆಶೀರ್ವಚನಂಗಳಿಂದ ಮನ್ನಿಸಿದರು. ಸರ್ಪರಾಜನಾದ ಶೇಷನನ್ನು ತೋರಿಸಲು ಇಬ್ಬರೂ ಸಂತೋಷದಿಂದ ವಂದನೆಗಳಂ ಸಮರ್ಪಿಸಿದರು, ಕೃಷ್ಣಸ್ವಾಮಿಯಾದರೊ ತನ್ನ ಸಂತೋಷಕ್ಕೆ ಮಿತಿಯೇ ಇಲ್ಲದೆ ಮೂರು ಲೋಕಗಳಿಗೆ ಕೇಳಿಸುವಂತೆ ಬಲು ಗಟ್ಟಿಯಾಗಿ ಪಾಂಚಜನ್ಯವೆನ್ನುವ ತನ್ನ ಶಂಖವನ್ನೂದಿದನು ||೬೮|| ಅನಿರುದ್ಧ, ಸಾತ್ಯಕಿ, ಪ್ರದ್ಯುಮ್ನ, ಶಠ, ನಿಶಠ ಮೊದಲಾದ ಯದು ಶ್ರೇಷ್ಠರೆಲ್ಲಾ ಸಂತೋಷದಿಂದ ಕೂಡಿದವರಾದರು. ಯೌವನಾಶ್ವ, ನೀಲಧ್ವಜ, ಹಂಸಧ್ವಜ, ಮೊದಲಾದವರ ಸಂತೋಷಕ್ಕೆ ಮಿತಿಯಿಲ್ಲದೆ ಹೋಯಿತು, ಎಲ್ಲರೂ ಬಂದು ಕೃಷ್ಣಮೂರುತಿಯ ಅಡಿದಾವರೆಗಳಿಗೆ ವಂದನೆಗಳನ್ನರ್ಪಿಸಿ, ಬಭ್ರುವಾಹನನ ವೃತ್ತಾಂತವನ್ನೂ ಉಲೂಪಿ ಚಿತ್ರಾಂಗದೆಯರ ಶೋಕ ಮತ್ತು ಸಾಹಸಾದಿಗಳನ್ನೂ ಸ್ವಾಮಿಯಲ್ಲಿ ಅರಿಕೆ ಮಾಡಿದವರಾದರು || ೬೯ || ಶ್ರೀ ಕೃಷ್ಣ

ಲೂಪಿಚಿತ್ರಾಂಗದೆಯರಸುರಾರಿಯಂಕಂಡರು ‖ ನೆರೆದುದುಭಯರಸೇನೆಬಳಿಕಪರಿತೋಷದಿಂ | ಮೊಳೆದುದುತ್ಸವದಿಂದನಿಖಿಳ ವಾದ್ಯಪ್ರತತಿ| ಪರೆದುದುಸಮಸ್ತಸಂತಾಪಂಗಳೆಲ್ಲರ್ಗೆಕೃಷ್ಣಸಂದರ್ಶನದೊಳು ‖೭೦‖ ಪಾರ್ಥಜಂಬಳಿಕನಿಬರೆಲ್ಲರಂವಿನಯದಿಂ ಪ್ರಾರ್ಥಿಸಿದೊಡಲ್ಲಿಂದಮಣಿಪುರಕೆಬರಲಾಗಿ | ತೀರ್ಥಸ್ವರೂಪನಹಕೃಷ್ಣನಂಶೇಷನಂಮಂಡಲಾಧೀಶರೆನಿಪ ‖ ಪಾರ್ಥಿವರನಳಿದೆದ್ದವಿಜಯನಂಕಂಡತಿಕೃ | ತಾರ್ಥರಾದಪೆವೆಂಬಹರುಷದಿಂತಮತಮಗೆ | ಸಾರ್ಥವೈಭವದಿಂದಲಂಕರಿಸಿನಗರಮುಂನಿಖಿಳಜನಮಿದಿರ್ಗೊಂಡುದು ‖ ೭೧ ‖ ತಳಿತಗುಡಿಗಳಚೆಲ್ವಿನತೋರಣದ | ಕಳಶಕನ್ನಡಿವಿಡಿದಕನ್ನೆಯರಮನ್ನೆಯರ | ದಳದಪದಪಿನಮೊರೆವಭೇರಿಗಳಮೃದುಮೃದಂಗಧ್ವನಿಗಳ ‖ ತೊಳಗಿಬೆಳಗುವಲೋಚನಾಂತೆಯರ | ಕಾಂ

---

ಯು, ಜಾಹ್ನವಿಯಶಾಪದಿಂದ-ಸುರನದಿಯ ಕೆಟ್ಟ ನುಡಿಗಳಿಂದ, ಆದುದು-ಉಂಟಾಯಿತು, ಎಂದು-ಎಂಬತೆರನಾಗಿ, ಪಾರ್ಥನಂ-ಫಲುಗುಣನನ್ನು ಕುರಿತು, ತಿಳುಪಿದಂ - ಗೋಚರಪಡಿಸಿದನು, ಉಲೂಪಿಚಿತ್ರಾಂಗದೆಯರು - ಉಲೂಪಿ ಚಿತ್ರಾಂಗದೆಯರಾದರೊ, ತರಿಸಿ-ಶ್ರೇಷ್ಠವಾದ ವಸ್ತ್ರಗಳು, ಒಡವೆಗಳು ಮೊದಲಾದವನ್ನೆಲ್ಲಾ ತರಹೇಳಿದವರಾಗಿ, ಕಾಣಿಕೆಗೊಟ್ಟು-ಕಪ್ಪವನ್ನು ಸಮರ್ಪಿಸಿ, ಅಸುರಾರಿಯಂ-ಕೃಷ್ಣಸ್ವಾಮಿಯನ್ನು, ಕಂಡರು-ದರ್ಶನವಂ ತೆಗೆದುಕೊಂಡರು, ಉಭಯರಸೇನೆ-ಈರ್ವರದಂಡೂ, ಬಳಿಕ-ಅನಂತರ, ಪರಿತೋಷದಿಂದ-ಆನಂದದಿಂದ, ನೆರೆದುದು-ಕೂಡಿತು, ನಿಖಿಳ-ಸಕಲವಾದ, ವಾದ್ಯಪ್ರತತಿ-ವಾದ್ಯಸಮುದಾಯವೂ, ಉತ್ಸವದಿಂದ-ಅತಿ ಸಂತಸದಿಂದ, ಮೊಳದುದು-ಎಸಗಲ್ಪಟ್ಟಿತು, ಕೃಷ್ಣಸಂದರ್ಶನದೊಳು-ಕೃಷ್ಣಮೂರ್ತಿಯ ದರ್ಶನ ಮಾತ್ರದಿಂದ, ಸಮಸ್ತ-ಅಶೇಷವಾದ,ಸಂತಾಪಂಗಳು-ಸಂಕಟಗಳು, ಎಲ್ಲರ್ಗೆ-ಸರ್ವರಿಗೂ,ಪರೆದದು-ಕಳೆದುಹೋಯಿತು‖೭೦‖

ಟೀ‖ ಬಳಿಕ-ಈ ಪರಿಯಿಂದ ಸಕಲರೂ ಸಂತೋಷದಿಂದ ಕೂಡಿರುವಾಗ, ಎಲ್ಲರಂ-ಸಕಲರನ್ನೂ, ಪಾರ್ಥಜಂ-ಫಲುಗುಣನ ಸೂನುವು, ವಿನಯದಿಂ-ನಮ್ರಭಾವದಿಂದ, ಪ್ರಾರ್ಥಿಸಿದೊಡೆ-ಕೇಳಿಕೊಳ್ಳಲಾಗಿ, ಅಲ್ಲಿಂದ-ಯುದ್ಧರಂಗದಿಂದ, ಮಣಿಪುರಕೆ-ರಾಜಧಾನಿಯಾದ ಮಣಿಪುರಕ್ಕೆ, ಬರಲಾಗಿ-ಬಂದುಸೇರೆಯಲು, ತೀರ್ಥಸ್ವರೂಪನು-ಪವಿತ್ರತಮನು, ಅಹ - ಆಗಿರತಕ್ಕ ಕೃಷ್ಣಸ್ವಾಮಿಯನ್ನೂ, ಶೇಷನಂ-ಅನಂತನನ್ನೂ, ಮಂಡಲಾಧೀಶರು-ಚಕ್ರವರ್ತಿಗಳು, ಎನಿಪ-ಎಂದು ಹೇಳಿಸಿಕೊಳ್ಳತಕ್ಕ, ಪಾರ್ಥಿವರನು-ಅರಸುಗಳನ್ನೂ, ಅಳಿದು-ಪ್ರಾಣವನ್ನು ಹೋಗಲಾಡಿಸಿಕೊಂಡು, ಎದ್ದ-ಪುನಃ ಮೇಲಕ್ಕೆದ್ದ, ವಿಜಯನಂ-ಫಲುಗುಣನನ್ನೂ,ಕಂಡು-ಈಕ್ಷಿಸಿ, ಅತಿಕೃತಾರ್ಥರು-ಬಹು ಕೃತಕೃತ್ಯರು, ಆದಪೆವು-ಆಗುವೆವು, ಎಂಬ-ಎನ್ನತಕ್ಕ,ಹರುಷದಿಂ-ಆನಂದದಿಂದ, ತಮತಮಗೆ-ತಮ್ಮತಮ್ಮಷ್ಟಕ್ಕೆ, ನಿಖಿಳಜನಂ-ಸಕಲ ಪ್ರಜೆಗಳೂ, ಸಾರ್ಥವೈಭವದಿಂದ - ಅಧಿಕ ಸಂತೋಷದಿಂದ, ನಗರಮುಂ-ಪಟ್ಟಣವನ್ನೆಲ್ಲಾ, ಅಲಂಕರಿಸಿ-ಅಂದವಾಗಿ ಮಾಡಿ, ಇದಿರ್ಗೊಂಡುದು-ಎದುರುಗೊಂಡರು. ‖೭೧‖

ಟೀ‖ ಪೊಳಲ್-ಮಣಿಪುರದ ರಾಜಧಾನಿಯಾದರೊ, ತಳಿತ-ಎಳೆಚಿಗುರಿನಿಂದನ್ವಿತವಾದ, ಗುಡಿಗಳ-ಚಪ್ಪರಗಳನ್ನುಳ್ಳ, ಚೆಲ್ವಿನ - ಅಲಂಕಾರಯುಕ್ತವಾದ, ಓರಣದ - ಸಾಲಾಗಿರತಕ್ಕ, ತೋರಣದ - ತೋರಣಗಳುಳ್ಳ, ಕಳಶಕನ್ನಡಿವಿಡಿದ - ಕಳಶ ಕನ್ನಡಿಯನ್ನು ಹಿಡಿದು ಇರುವ, ಕನ್ನೆಯರ-ಬಾಲಕಿಯರ, ಮನ್ನೆಯರ ಮರ್ಯಾದೆಗೆ ಪಾತ್ರರಾದ ಸ್ತ್ರೀಯರ, ದಳದಪದಪಿನ-

---

ಸ್ವಾಮಿಯಾದರೊ ತನಿಗೆ ನಮಸ್ಕಾರವಂ ಮಾಡುವ ಸಕಲರನ್ನೂ ಮನ್ನಿಸಿ ಅರ್ಜುನನನ್ನು ಕುರಿತು, ಎಲೈ ಪಾರ್ಥ, ಗಂಗೆಯು ನಿನಿಗೆ ಕೊಟ್ಟ ಶಾಪವೇ ನಿನಿಗೆ ಪರಾಭವವಾಗಲು ಕಾರಣವಲ್ಲದೆ ಮತ್ತೆ ಬೇರೆ ಇಲ್ಲವೆಂದು ಸಮಾಧಾನಮಾಡಿದನು, ಉಲೂಪಿ ಚಿತ್ರಾಂಗದೆಯರು ಕೃಷ್ಣನ ಪಾದಾರವಿಂದಗಳಿಗೆ ಕಪ್ಪಕಾಣಿಕೆಗಳನ್ನರ್ಪಿಸಿದರು. ಅರ್ಜುನ ಬಭ್ರುವಾಹನರ ಸೇನೆಯೆಲ್ಲಾ ಒಂದುಗೂಡಿತು, ಕೃಷ್ಣ ಸಂದರ್ಶನ ಮಾತ್ರದಿಂದಲೇ ಅಲ್ಲಿ ನೆರೆದಿದ್ದ ಸಕಲರ ವ್ಯಸನವೂ ಮಾಯವಾಗಿ ಹೋಯಿತು. ಭೇರೀ ಮೃದಂಗಾದಿಗಳ ಶಬ್ದವು ದಿಕ್ಕುಗಳ ಕೊನೆಯನ್ನು ವ್ಯಾಪಿಸಿತು. ಎಲ್ಲರ ಮುಖದಲ್ಲಿಯೂ ಸಂತೋಷವೆಂಬ ಲಕ್ಷ್ಮೀದೇವಿಯು ನಲಿಯಲಾರಂಭಿಸಿದಳು ‖೭೦‖ ಹೀಗಿರುವಾಗ ಬಭ್ರುವಾಹನನು ಕೃಷ್ಣ, ಭೀಮಸೇನ, ಕುಂತಿ, ದೇವಕಿ ಯಶೋದೆಯರನ್ನೂ ಚೈತನ್ಯವಂ ಪಡೆದ ತನ್ನ ತಂದೆಯಾದ ಅರ್ಜುನನನ್ನೂ ಕರ್ಣಾತ್ಮಜನಾದ ವೃಷಧ್ವಜನನ್ನೂ ಪ್ರದ್ಯುಮ್ನಾದಿ ಯದುಶ್ರೇಷ್ಠರನ್ನೂ, ಹಂಸಧ್ವಜನೆ ಮೊದಲಾದ ರಾಜಾಗ್ರಣಿಗಳನ್ನೂ ಸರ್ಪಾಧೀಶನಾದ ಆದಿಶೇಷನೆ ಮೊದಲಾದ ಸಕಲರನ್ನೂ ತನ್ನ ಪಟ್ಟಣಕ್ಕೆ ಬಿಜಮಾಡಿಸಿ ಅತಿಥಿ ಸತ್ಕಾರವನ್ನು ಸ್ವೀಕರಿಸಬೇಕೆಂದು ಸವಿನಯದಿಂದ ಬೇಡಿಕೊಳ್ಳಲು ಎಲ್ಲರೂ ಅದಕ್ಕೆ ಒಪ್ಪಿ ಬಭ್ರುವಾಹನನ ಹಿಂದೆ ಮಣಿಪುರದ ಊರಿನೊಳಕ್ಕೆ ಹೊರಟವರಾದರು ಇದನ್ನು ನೋಡುತ್ತಲಿದ್ದ ಪುರವಾಸಿಗಳಾದರೊ ಅತಿ ಜಾಗ್ರತೆಯಾಗಿ ಕೃಷ್ಣ, ಆದಿಶೇಷ, ಅರ್ಜುನ ಮೊದಲಾದವರನ್ನು ನೋಡಿ ಕೃತಾರ್ಥರಾಗಬೇಕೆಂಬ ಸಂತೋಷವುಳ್ಳವರಾಗಿ ಊರನ್ನೆಲ್ಲಾ ಸಿಂಗರಿಸಿ, ಕೃಷ್ಣಾದಿಗಳನ್ನು ಎದುರ್ಗೊಂಡರು ‖೭೧‖ ಆಗ ಆ ಮಣಿಪುರದ ಎಲ್ಲೆಡೆಗಳಲ್ಲೂ ಚಿಗುರಾದ ಮಾವಿನೆಲೆಗಳ ತೋರಣಗಳು ಕಂಗೊಳಿಸುತ್ತಲಿದ್ದವು. ಕಳಶಕನ್ನಡಿಗಳಂ ಪಿಡಿದ ನಾರೀಮಣಿಗಳು ಎಲ್ಲೆಲ್ಲಿಯೂ ತುಂಬಿದ್ದರು. ಸೈನ್ಯದಲ್ಲೆಲ್ಲಾ ಭೇರಿ

ತೆಯರಳಿಲುಲಳಯನರ್ತನದಕೋಪುಗಳರೂಪುಗಳ| ತಳಿವಸೇಸೆಯುಪೂಗಳೊತ್ತುಗಳಮುತ್ತುಗಳವಿಭವದಿಂಪೊಳಲಿಸೆದುದು ||೭೨||
ಈ ಸಂಭ್ರಮದೊಳೆಸೆವ ನಗರದೊಳ್ನಡೆತಂದು | ವಾಸುದೇವಾದಿಗಳ್ಬಭ್ರುವಾಹನಸದನ | ದಾಸಭೆಗೆವಿವಿಧೋಪಚಾರವಿಭವಂ
ಗಳಂಕೈಕೊಳುತಬಂದುಪೊಗಲು || ಆಸವ್ಯಸಾಚಿಗೆ ನಿಜಾತ್ಮಜಂತನ್ನಸಿಂ | ಹಾಸನವನಿತ್ತಖಿಳರಾಜ್ಯಮಂಕೊಟ್ಟುಲ | ಜ್ಜಾ
ಸಮನ್ವಿತನಾಗಿ ಸುಮ್ಮನಿರಲರ್ಜುನಂಮಾತಾಡದಿರುತಿರ್ದನು || ೭೩ || ರಾಯ ಕೇಳರ್ಜುನಂಖಿನ್ನನಾಗಿರೆಕಂಡು | ವಾಯುಸುತ
ಶೇಷಾದಿಗಳ್ನುಡಿದರೆಲ್ಲಿಯುಂ | ಜೇಯನಹಧರೆಯೊಳಿಂದಾತ್ಮಜನದೆಸೆಯಿಂದನಿನಗಪಜಯಂಬಂದುದು || ನೋಯಲೇತಕೆಬರಿ
ದೆಮನ್ನಿಸುಕುಮಾರನಂ | ಪ್ರಿಯಮಾಗದೆ ಮಗನಮೇಲಿನ್ನುಮಕಟಕಟ | ಪಾಯಮಿದುಸುರನದಿಯಶಾಪದಿಂದಾಯ್ತುಳಿದೆ

---

ಸೇನಾನಿವಹದ, ಮೊರೆವ_ಶಬ್ದಮಾಡುತ್ತಿತುವ, ಭೇರಿಗಳ-ಭೇರೀ ಎಂಬ ವಾದ್ಯವಿಶೇಷದ, ಭೂರಿಗಳ-ಹೆಚ್ಚಾದ, ಮೃದು-ಮನೋರಂಜಕವಾದ, ಮೃದಂಗಧ್ವನಿಗಳ-ಮದ್ದಲೆಯಸ್ವನಂಗಳ, ತೊಳಗಿಬೆಳಗುವ-ಹೆಚ್ಚಾಗಿ ಪ್ರಕಾಶಿಸತಕ್ಕ, ಲೋಚನೆ-ನಯನಂಗಳ, ಅಂತೆಯರ_ತುದಿಯುಳ್ಳ, ಕಾಂತೆಯರ_ರಮಣೀಮಣಿಗಳ, ಉಳಿಲುಳಿಯ-ಆನಂದವುಂಟಾಗುವಂತೆ ಹಿಂದೂಮುಂದೂತಿರುಗಾಡುವ, ನರ್ತನದ-ಕುಣಿತದ, ಕೋಪುಗಳ-ಚಿತ್ರಕತ್ತಿದಹಾಗೆ ತೋರುವ, ರೂಪುಗಳ-ಆಕೃತಿಯಿಂದೊಡಗೂಡಿದನರಿಂದ, ತಳಿವ-ಎರಚುವ, ಸೇಸೆಯ_ಮಂತ್ರಾಕ್ಷತೆಯ, ಪೂಗಳ-ಪುಷ್ಪಂಗಳ, ಒತ್ತುಗಳ_ಗುಚ್ಛಂಗಳ, ಮುತ್ತುಗಳ-ಮುತ್ತುಗಳು ಮೊದಲಾದವುಗಳ ಸಮೂಹದ, ವಿಭವದಿಂದ-ಸಂಭ್ರಮಾತಿಶಯದಿಂದ, ಎಸೆದುದು-ಹೊಳೆಯಲಾರಂಭಿಸಿತು ||೭೨||

ಟೀ|| ಈಸಂಭ್ರಮದೊಳು-ಈ ಬಗೆಯಾದ ಆನಂದದಿಂದ, ಎಸೆವ-ಹೊಳೆಯುವ, ನಗರದೊಳ್-ಪಟ್ಟಣದಲ್ಲಿ, ವಾಸುದೇವಾದಿಗಳು-ಕೃಷ್ಣಸ್ವಾಮಿಯೇ ಮೊದಲಾದ ಸರ್ವರೂ, ನಡೆತಂದು-ಐತಂದು, ಬಭ್ರುವಾಹನನ-ಪಾರ್ಥಜನ, ಸದನ_ರಾಜಭವನದ, ಸಭೆಗೆ-ಸಭಾಮಂಟಪಕ್ಕೆ, ವಿವಿಧ-ತಂಡತಂಡವಾದ, ಉಪಚಾರವಿಭವಂಗಳಂ-ರಾಜಮನ್ನಣೆಗಳನ್ನು, ಕೈಕೊಳುತ-ಸ್ವೀಕರಿಸುತ್ತ, ಬಂದುಪೊಗಲು-ಬಂದು ಸೇರಲು, ಆಸವ್ಯಸಾಚಿಗೆ-ಆ ಧನಂಜಯನಿಗೆ, ನಿಜ-ತನ್ನ, ಆತ್ಮಜಂ-ಕುವರನು,ತನ್ನ-ಸ್ವಕೀಯವಾದ, ಸಿಂಹಾಸನವಂ-ಸಿಂಹಪೀಠವನ್ನು, ಇತ್ತು-ಕೊಟ್ಟವನಾಗಿ, ಅಖಿಳ-ಅಶೇಷವಾದ, ರಾಜ್ಯಮಂ-ದೇಶಗಳನ್ನು, ಕೊಟ್ಟು-ಅರ್ಪಣೆಯಂಗೈದು, ಲಜ್ಜಾಸಮನ್ವಿತನಾಗಿ_ನಾಚಿಗೆಗೆ ಪಾತ್ರನಾಗಿ, ಸುಮ್ಮನೆ-ಸ್ತಬ್ಧನಾಗಿ, ಇರಲು-ಇದ್ದಕಾಲದಲ್ಲಿ, ಅರ್ಜುನಂ-ಪಾರ್ಥನೂ ಕೂಡ, ಮಾತಾಡದೆ-ಮೂಕಭಾವದಿಂದ, ಇರುತಿರ್ದನು-ಇದ್ದವನಾದನು ||೭೩||

ಟೀ|| ರಾಯ_ಎಲೈ ಜನಮೇಜಯನೆ, ಕೇಳು-ಲಾಲಿಸು ವಾಯುಸುತ-ವೃಕೋದರನು, ಶೇಷ-ಸರ್ಪರಾಜನು, ಆದಿಗಳು_ಇವರೇ ಮೊದಲಾದವರೆಲ್ಲಾ, ಅರ್ಜುನನು-ಧನಂಜಯನು, ಖಿನ್ನನಾಗಿರೆ-ಚಿಂತಾಕ್ರಾಂತನಾಗಿರುವುದನ್ನು, ಕಂಡು-ಈಕ್ಷಿಸಿದವರಾಗಿ, (ಪಾರ್ಥನನ್ನು ಕುರಿತು) ಧರೆಯೊಳು-ಪ್ರಪಂಚದಲ್ಲಿ, ಎಲ್ಲಿಯುಂ-ಎಲ್ಲಾ ಸ್ಥಳಗಳಲ್ಲಿಯೂ, ಅಜೇಯನು-ಜಯಿಸಲಸಾಧ್ಯನು, ಅಹ-ಆಗಿದ್ದ, ಆತ್ಮಜನದೆಸೆಯಿಂದ-ತನುಜನಾದ ಬಭ್ರುವಾಹನನ ಮೂಲಕವಾಗಿ, ನಿನಿಗೆ_ನಿನಿಗಾದರೊ, ಇಂದು-ಈ ಹೊತ್ತು, ಅಪಜಯಂ-ಸೋಲುವಿಕೆಯು, ಆಯ್ತು-ಆಯಿತು, ಬರಿದೆ_ವ್ಯರ್ಥವಾಗಿ, ನೋಯಲು-ಸಂಕಟಪಡುವುದು, ಏತಕೆ-ಏನುಪ್ರಯೋಜನ, ಕುಮಾರನಂ-ಸುತನನ್ನು, ಮನ್ನಿಸು_ಉಪಚರಿಸು, ಮಗನಮೇಲೆ-ಸುತನಮೇಲೆ, ಇನ್ನು-ಇದುವರೆಗೂ ಪ್ರಿಯಂ-ಪ್ರೇಮವು, ಆಗದೆ-ಆಗಲಿಲ್ಲವೆ, ಅಕಟಕಟ-ಅಯ್ಯಯ್ಯೊ, ಸುರನದಿಯ-ದೇವಗಂಗೆಯ, ಶಾಪದಿಂದ_ದುರ್ವಚನಂಗಳಿಂದ, ಇದುಅಪಾಯಂ-ಈ ಪರಾಭವವು, ಆದುದು-ಆಯಿತು, ಕೃಷ್ಣ-ಶ್ರೀಕೃಷ್ಣಮೂರುತಿಯ, ಪ್ರಸಾದದಿಂದ_ಕರುಣಾಕಟಾಕ್ಷದಿಂದ, ಉಳಿದೆ_ಜೀವವನ್ನುಪಡೆದೆ ಎಂಬದಾಗಿ, ನುಡಿದರು_ತಿಳಿಸಿದವನಾದರು ||

---

ಮೃದಂಗಾದಿಗಳ ವಾದನಗಳುಂಟಾದವು. ಕಮಲನೇತ್ರೆಯರಾದ ಸ್ತ್ರೀಯರೆಲ್ಲಾ ಕೃಷ್ಣಸ್ವಾಮಿಯ ದರ್ಶನಾಸಕ್ತರಾಗಿ ಬಂದು ನೆರೆದಿದ್ದರು. ಬಲುಚೆಲ್ವೆಯರಾದ ನರ್ತಕಿಯರು ರಂಭಾದ್ಯಪ್ಸರ ಸ್ತ್ರೀಯರನ್ನು ಮೀರಿ ನಾಟ್ಯವನ್ನಾಡಲಾರಂಭಿಸಿದರು. ಮುತ್ತಿನಗೊಂಚಲುಗಳೂ, ಹೂಗಳ ಪರಿಮಳವೂ ನೋಟಕರ ಮನವಂ ರಂಜಿಸುವಂತೆ ಅಲಂಕರಿಸಲ್ಪಟ್ಟದ್ದಿತು ||೭೨|| ಇಷ್ಟುಚೆನ್ನಾಗಿ ಸಿಂಗರಿಸಿರುವ ಪಟ್ಟಣಕ್ಕೆ ಕೃಷ್ಣಸ್ವಾಮಿಯೇ ಮೊದಲಾದ ಸರ್ವರೂ ಸಂತೋಷದಿಂದ ಪ್ರವೇಶಮಾಡಿ ನೋಟಕರ ಮನವಂ ರಂಜಿಸುತ್ತ ಬಭ್ರುವಾಹನನ ಸಭಾಭವನವಂ ಪ್ರವೇಶಿಸಿದರು. ಎಲ್ಲರೂ ಉಚಿತಾಸನಂಗಳಲ್ಲಿ ಕುಳಿತವರಾದರು. ಪಾರ್ಥಜನಾದರೊ ತನ್ನತಂದೆಯಾದ ಅರ್ಜುನನನ್ನು ತನ್ನಸಿಂಹಾಸನದಮೇಲೆ ಕೂರಿಸಿ ನಾಚಿಕೆಯಿಂದ ತಲೆಯಂಬಾಗಿಸಿ ನಿಂತುಕೊಂಡನು, ಧನಂಜಯನು ಯಾವಮಾತನ್ನೂ ಆಡದೆ ಮೂಕಭಾವವನ್ನವಲಂಬಿಸಿದ್ದನು.||೭೩|| ರಾಜೇಂದ್ರನಾದ ಜನಮೇಜಯನೆ, ಮುಂದಿನ ಕಥೆಯನ್ನು ಕೇಳುವನಾಗು, ಕಿರೀಟಿಯು ಈರೀತಿಯಾಗಿ ಮೂಗನಂತೆ ಕುಳಿತು ಸೋತುಹೋದ ಅವಮಾನದಿಂದ ಖಿನ್ನನಾಗಿರುವುದನ್ನು ಭೀಮಸೇನ ಸರ್ಪೇಂದ್ರಾದಿಗಳು ನೋಡಿ, ಸವ್ಯಸಾಚಿಯಂ ಕುರಿತು, ಎಲೈ ಧನಂಜಯನೆ, ಲೋಕದಲ್ಲಿ ಯಾರೊ

ಕೃಷ್ಣಪ್ರಸಾದದಿಂದ ‖ ೭೪ ‖ ಅರಸಿಯರುಲೂಪಿಚಿತ್ರಾಂಗದೆಯರಿವರನಾ | ದರಿಸದೆನಿಜಾತ್ಮಜಂಬಭ್ರುವಾಹನನಿವನ | ಸಿರಿಯನಂಗೀಕರಿಸದೀತನಂಮನ್ನಿಸದೆಫಲುಗುಣನಿದೇಕೆಬರಿದೆ ‖ ಮರುಳಾದನಕಟನೀಂಪೇಳಲಿಲ್ಲವೆಚಕ್ರ | ಧರನಿನ್ನಮೈದುನಂಗೆಂದುಪವನಜಫಣೀ | ಶ್ವರಹಂಸಕೇತುದೇವಕಿಕುಂತಿವರಯಶೋದಾದಿಗಳ್ಪೇಳ್ದರೆಂದು ‖ ೭೫ ‖ ಲಜ್ಜಿಸಿದನಾಬಭ್ರುವಾಹನಂಬಳಿಕತ | ನ್ನುಜ್ಜುಗವನೆಲ್ಲರುಂಕೇಳ್ವುದೀರಾಜ್ಯಮಂ | ಮಜ್ಜನಕನಂಘ್ರಿಗೊಪ್ಪಿಸಿನಿಜಶರೀರನುಂಕೆಡಹಿತುಹಿನಾಚಲದೊಳು ‖

ಅ‖ ವಿ‖ ರಾಯ (ತ್ಭ) ರಾಜ (ತ್ಸ) ಆತ್ಮಜ (ಷ. ತ.) ಶೇಷಾದಿ (ಸ. ದೀ.) ‖೭೪‖

ಟೀ‖ ಪವನಜ-ವಾಯುಸುತನಾದ ವೃಕೋದರನು, ಫಣೀಶ್ವರ–ಸರ್ಪರಾಜನು, ಹಂಸಕೇತ-ಹಂಸಧ್ವಜರಾಯನು, ದೇವಕಿ-ದೇವಕಿಯೆಂಬ ಕೃಷ್ಣನ ಜನನಿಯು, ಕುಂತಿ-ಕುಂತಿ ಎನ್ನುವ ಅರ್ಜುನನ ಮಾತೆಯು, ವರ-ಉತ್ತಮಳಾದ, ಯಶೋದಾದಿಗಳ್–ಯಶೋದೆಯೇ ಮೊದಲಾದವರೆಲ್ಲಾ, ಎಲೆಚಕ್ರಧರ–ಸುದರ್ಶನವೆಂಬ ಚಕ್ರವನ್ನು ಧರಿಸಿರುವ ಸ್ವಾಮಿಯೆ, ಉಲೂಪಿಚಿತ್ರಾಂಗದೆಯರು–ಉಲೂಪಿ ಚಿತ್ರಾಂಗದೆ ಎನ್ನತಕ್ಕವರು, ಅರಸಿಯರು–ರಾಣಿಯರಾಗಿದ್ದಾರೆ, ಇವರು-ಇವರೀರ್ವರನ್ನೂ, ಆದರಿಸದೆ-ಉಪಚಾರದಿಂದ ಕಾಣದೆ, ಬಭ್ರುವಾಹನನು-ಬಭ್ರುವಾಹನನು, ನಿಜ–ತನ್ನ, ಆತ್ಮಜಂ-ಕುವರನು, ಇವನ–ಈ ಸುತನಾದ ಪಾರ್ಥಜನ, ಸಿರಿಯನು–ಸಂಪತ್ತನ್ನು, ಅಂಗೀಕರಿಸದೆ–ಸ್ವೀಕಾರ ಮಾಡದೆ, ಈತನಂ–ಇವನನ್ನು, ಮನ್ನಿಸದೆ–ಉಪಚರಿಸದೆ, ಫಲುಗುಣಂ–ಪಾರ್ಥನು,ಬರಿದೆ-ಅನ್ಯಾಯವಾಗಿ, ಇದೇಕೆಮರುಳಾದನು–ಏತಕ್ಕೆ ಹುಚ್ಚನಂತೆ ಕಾಣುವನು, ಅಕಟ–ಅಯ್ಯೋ, ನೀಂ-ನೀನಾದರೋ, ನಿನ್ನಮೈದುನಂಗೆ–ನಿನ್ನ ಭಾವಮೈದುನನಾದ ಧನಂಜಯನಿಗೆ, ಪೇಳಲಿಲ್ಲವೆ–ದಾರಾಪುತ್ರರನ್ನು ಮನ್ನಿಸೆಂದು ಉಪದೇಶನಂ ಮಾಡಲಿಲ್ಲವೇ, ಪೇಳ್-ಹೇಳು, ಎಂದರು–ಎಂಬುದಾಗಿ ನುಡಿದರು ‖

ಅ‖ ವಿ‖ ನಿಜಾತ್ಮಜಂ, ಫಣೀಶ್ವರಂ (ಸ. ದೀ. ಸಂ.) ಸಿರಿ (ತ್ಭ), ಶ್ರೀ (ತ್ಸ) ‖೭೫‖

ಟೀ‖ ಬಳಿಕ–ಅನಂತರ, ಆ ಬಭ್ರುವಾಹನನು–ಆ ಪಾರ್ಥಸುತನು, ಲಜ್ಜಿಸಿದನು – ನಾಚಿಕೆಯನ್ನೈದಿದನು, ತನ್ನ–ನನ್ನದಾದ, ಉಜ್ಜುಗವನು-ಕಾರ್ಯವನ್ನು, ಎಲ್ಲರುಂ–ಅಶೇಷರೂ, ಕೇಳ್ವುದು, ಮಜ್ಜನಕನ–ನನ್ನ ತಂದೆಯ, ಅಘ್ರಿಗೆ–ಪಾದಾರವಿಂದಗಳಿಗೆ, ಈ ರಾಜ್ಯಮಂಒಪ್ಪಿಸಿ–ನಾಡನ್ನು ಒಪ್ಪಿಸಿಬಿಟ್ಟು, ತುಹಿನಾಚಲದೊಳು–ಹಿಮಾಲಯ ಪರ್ವತದೊಳು, ನಿಜಶರೀರವನು–ನನ್ನ ಶರೀರವನ್ನು, ಕೆಡಹಿ–ಉರುಳಿಸಿ, ಸಜ್ಜನರ – ಒಳ್ಳೆ ಮಾರ್ಗವನ್ನನುಸರಿಸಿದವರ, ಗತಿ–ಸದ್ಗತಿಯನ್ನು, ಪಡೆವೆನು–ಹೊಂದುವೆನು, ಗುರುಧರ್ಮಕೃತ್-ಹೆಚ್ಚಾದ ಧರ್ಮಕ್ಕೆ ಪಾತ್ರನು ಮತ್ತು, ಗುರು-ನನಿಗೆ ಗುರುವೂ, ಧರ್ಮಕೃತ್ – ಧರ್ಮಿಷ್ಠನೂ, ಜನಾರ್ದನಭಕ್ತನು–ಕೃಷ್ಣಸ್ವಾಮಿಯ ಪರಮಭಕ್ತಾಗ್ರೇಸರನೂ, (ಆದ) ಈತನಂ–ಈ ಧನಂಜಯನನ್ನು, ಘಾತಿಸಿದ–ಸಂಹರಿಸಿದ, ಕಜ್ಜದಿಂದ–ಕಾರ್ಯದಿಂದ, ಒದವಿದ–ಪ್ರಾಪ್ತಮಾದ, ಮಹಾಪಾತಕಂ–ಘೋರದುರಿತವು, ಪೋಗದು–ನಿವಾರಣೆಯಾಗುವುದಿಲ್ಲವು, ಎನೆ-ಎಂದು ಬಭ್ರುವಾಹನನು ಹೇಳಲು, ಭೀಮನು–ವಾಯು ಸೂನುವು, ಇಂತು–ಮುಂದೆ ಹೇಳುವಂತೆ, ಎಂದನ––ನುಡಿದನು ‖

ಅ‖ ವಿ‖ ಉಜ್ಜುಗ (ತ್ಭ) ಉದ್ಯೋಗ (ತ್ಸ) ತುಹಿನಾಚಲ-ಅಚಲ–ಚಲಿಸದಿರುವುದು (ನಞ್ ತತ್ಪುರುಷ) ತಹಿನದ ಅಚಲ (ಷ. ತ.) ತುಹಿನಾಚಲ (ಸ. ದೀ.) ಕಜ್ಜ (ತ್ಭ) ಕಾರ್ಯ (ತ್ಸ) ‖೭೬‖

---

ಬ್ಬರಿಗೂ ಸೋಲದಿದ್ದ ನಿನಿಗೆ ಈಗ ನಿನ್ನ ಮಗನಿಂದ ಪರಾಭವ ಉಂಟಾಯಿತು ಇದಕ್ಕಾಗಿ ನೀನು ವ್ಯಸನಪಡುವುದೇತಕ್ಕೆ ? ಲಜ್ಜಾಸಮನ್ವಿತನಾಗಿ ತಲೆಯಂಬಾಗಿಸಿರುವ ನಿನ್ನಮಗನನ್ನು ಮನ್ನಿಸು. ನಿನ್ನಕುವರನಮೇಲೆ ನಿನಿಗೆ ಇನ್ನೂ ಹಿತವಾಗಲಿಲ್ಲವಲ್ಲಾ? ಈ ಪರಾಜಯವು ನಿನಿಗೆ ಗಂಗೆಯ ಶಾಪದಿಂದ ಒದಗಿತೇಹೊರತು ನಿನ್ನನ್ನು ಹೇಡಿ ಎಂದು ಯಾರೂ ಹೆಳಲಾರರು. ಕೃಷ್ಣಾನುಗ್ರಹದಿಂದ ನಿನ್ನ ಪ್ರಾಣವು ಉಳಿಯಿ ‖೭೪‖ ತೆಂದು ನಾನಾಪ್ರಕಾರವಾಗಿ ಹೇಳಿದರೂ ಕೂಡ ಅರ್ಜುನನು ಒಂದು ಮಾತನ್ನೂ ಆಡದಿರುವುದನ್ನು ನೋಡಿ, ಭೀಮಾದಿಗಳೆಲ್ಲಾ ಕೃಷ್ಣಸ್ವಾಮಿಯಂಕುರಿತು, ಎಲೈ ಜಗನ್ನಾಯಕನಾದ ಮಹಾನುಭಾವನೆ, ರಾಣಿಯರಾದ ಉಲೂಪಿ ಚಿತ್ರಾಂಗದೆಯರನ್ನೂ, ಸುತನಾದ ಬಭ್ರುವಾಹನನನ್ನೂ ನಾವೆಲ್ಲರೂ ಹೇಳಿದರೂಕೂಡ ಅರ್ಜುನನು ಕ್ಷಮಿಸದೆ ಹುಚ್ಚನಂತೆ ತಲೆಯಂಬಾಗಿಸಿರುವನಲ್ಲಾ ? ನಿನ್ನ ಭಾವಮೈದುನನಿಗೆ ನೀನಾದರೂ ಹೇಳಬಾರದೇ ಎಂದು ಕೇಳಿಕೊಂಡರು‖೭೫‖ ಇದನ್ನೆಲ್ಲಾ ನೋಡುತ್ತಲಿದ್ದ ಬಭ್ರುವಾಹನನಿಗೆ ಮತ್ತಷ್ಟು ನಾಚಿಕೆಯು ಹೆಚ್ಚಿತು ಆಗ ಅಲ್ಲಿ ನೆರದಿದ್ದ ಕೃಷ್ಣಾದಿ ಸಕಲರನ್ನೂ ಕುರಿತು ಇಗೋ ನಾನು ಒಂದು ಪ್ರತಿಜ್ಞೆಯಂ ಮಾಡಿಕೊಂಡಿರುವೆನು, ಶ್ರೀ ಕೃಷ್ಣಪರಮಾತ್ಮನ ಭಕ್ತಾಗ್ರೇಸರನಾಗಿಯೂ ನನ್ನ ತಂದೆಯಾಗಿಯೂ ಇರುವ ಅರ್ಜುನನನ್ನು ಕೊಂದ ಮಹಾಪಾತಕವು ಪರಿಹಾರವಾಗಬೇಕಾದರೆ ಯಾವ ಉಪಾಯವೂ ಇಲ್ಲವು. ಇಂತಹ ನನ್ನ ಜನ್ಮವನ್ನಿಟ್ಟುಕೊಂಡು ಜೀವಿಸಲಾರೆನು, ಈ ನನ್ನ ರಾಜ್ಯಕೋಶಾದಿಗಳನ್ನೆಲ್ಲಾ ನನ್ನ ತಂದೆ

ಸಜ್ಜನರಗತಿನಡೆವೆನಲ್ಲದೊಡೆಗುರುಧರ್ಮ | ಕೃಜ್ಜನಾರ್ದನಭಕ್ತನೀತನಂಘಾತಿಸಿದ | ಕಜ್ಜದಿಂದೊದವಿದಮಹಾಪಾತಕಂಪ್ರೋಗ
ದೆನೆಭೀಮನಿಂತೆಂದನು ||೭೬|| ತಪ್ಪನಾಡಿದೆಮಗನೆಕೃಷ್ಣನಿರುತಿರೆಮುಂದೆ | ಬಪ್ಪುದೇಪಾತಕಂಗುರುಪಿತಾಮಹಮುಖ್ಯ |
ರಪ್ಪವರನೆಲ್ಲರಂಕೊಂದೆಮಗೆನಿಂದುದೇದೋಷಲೇಶಂಗಳೀಗ || ಒಪ್ಪುವಾದಿತ್ಯನಂಕಂಡಬಳಿಕಿರ್ದಪುದೆ | ತಪ್ಪಿನತಮುಮರುಳೆ
ಹರಿಯನಾಶ್ರೈಸಿದರ | ನಪ್ಪುವುದೆಕಲಿತಾಪದುಃಖಭಯಶೋಕನರಕಾದಿಪೀಡೆಗಳೆಂದನು ||೭೭|| ಸಲೆನಿಷ್ಕೃತಿಗಳಿಲ್ಲದೈದು
ಪಾಪಂಗಳಂ | ಕಲಿಯುಗದಮಾನವರಬಹಳದುರಿತಂಗಳಂ | ತೊಲಗಿಸಿಭವಾಂಬುಧಿಯನುತ್ತರಿಪಹರಿಯನಾಮಂಗಳಾವನ
ಜಿಹ್ವೆಗೆ || ನೆಲೆಗೊಂಬುದಾತನಂಕಂಡಮಂಶುಚಿನಿನಗೆ | ಜಲರುಹಾಕ್ಷಂಕಣ್ಣಮುಂದಿರಲ್ಪಾತಕವೆ | ಪಲವೇಣಿಕೆಬೇಡಪಾಲಿಸು

ಟೀ|| ಮಗನೆ-ಎಲೈ ಕುವರನೆ, ತಪ್ಪನಾಡಿದೆ-ಅವಿವೇಕವಾಗಿ ಮಾತನಾಡಿದೆ, ಮುಂದೆ-ನಮಗೆದುರಾಗಿ, ಕೃಷ್ಣನು-ಕೃಷ್ಣಸ್ವಾಮಿಯು, ಇರುತಿರೆ-ಇರುವಕಾಲದಲ್ಲಿ, ಪಾತಕಂ-ದುರಿತವು, ಬಪ್ಪುದೆ-ಉಂಟಾದೀತೆ, ಗುರು-ದ್ರೋಣಾಚಾರ್ಯನು, ಪಿತಾಮಹ-ಭೀಷ್ಮಾಚಾರ್ಯನು, ಮುಖ್ಯರು-ಆದಿಯಾದವರು, ಅಪ್ಪ-ಆಗಿರತಕ್ಕ, ಅವರನೆಲ್ಲರಂ-ಸಕಲರನ್ನೂ, ಕೊಂದ-ಕೊಲೆ ಮಾಡಿದ, ಎಮಗೆ-ನಮಿಗಾದರೊ, ದೋಷಲೇಶಂಗಳು-ಅಲ್ಪವಾದ ಪಾತಕವಾದರೂ, ನಿಂದುದೆ-ಎದುರಾಯಿತೆ, ಒಪ್ಪುವ-ಪ್ರಕಾಶದಿಂದ ಕೂಡಿದ, ಆದಿತ್ಯನಂ-ರವಿಯನ್ನು, ಕಂಡಬಳಿಕ-ನೋಡಿದಮೇಲೆ, ತಪ್ಪಿನತಮಂ-ದುರಿತಾಂಧಕಾರವು, ಇರ್ದಪುದೆ-ಇದ್ದೀತೆ, ಮರುಳೆ-ತಿಳಿವಳಿಕೆ ಸಾಲದವನೆ, ಹರಿಯನು-ಕೃಷ್ಣಸ್ವಾಮಿಯನ್ನು, ಆಶ್ರಯಿಸಿದವರನು - ನಂಬಿದವರನ್ನು, ಕಲಿ-ಕಲಿಕಾಲದ, ತಾಪ-ಸಂಕಟ, ದುಃಖ-ಚಿಂತೆಯೂ, ಭಯ-ಹೆದರಿಕೆ, ಶೋಕ-ವ್ಯಥೆಯು, ನರಕ-ನರಕಗಳು, ಆದಿ-ಮೊದಲಾದ, ಪೀಡೆಗಳು-ಸಂಕಟಗಳು, ಅಪ್ಪುವುದೆ-ಒದಗೀತೆ, ಎಂದನು-ಎಂಬುದಾಗಿ ಹೇಳಿದನು. ||೭೭||

ಟೀ|| ಮಗನೆ-ಎಲೈ ಕುವರನೆ, ಸಲೆ-ಚೆನ್ನಾಗಿ, ನಿಷ್ಕೃತಿಗಳು-ನಿವಾರಣೆಯ ಉಪಾಯಗಳೂ, (ಪ್ರಾಯಶ್ಚಿತ್ತಗಳು) ಇಲ್ಲದ-ಇಲ್ಲದೆ ಇರತಕ್ಕ, ಐದುಪಾಪಂಗಳಂ-ಪಂಚಮಹಾಪಾತಕಂಗಳನ್ನು, ಕಲಿಯುಗದ - ಕಲಿಕಾಲದ, ಮಾನವರ - ಮನುಷ್ಯರ, ಬಹಳ-ಹೆಚ್ಚಾದ, ದುರಿತಂಗಳಂ-ಪಾಪಗಳನ್ನು, ತೊಲಗಿಸಿ-ನೀಗಿ, ಭವಾಂಬುಧಿಯನು-ಸಂಸಾರಸಾಗರವನ್ನು, ಉತ್ತರಿಪ-ದಾಟಲು ಸಹಾಯಮಾಡುವ, ಹರಿಯನಾಮಂಗಳು-ನಾರಾಯಣನ ಪೆಸರುಗಳು, ಆವನ - ಯಾವ ಮಾನವನ, ಜಿಹ್ವೆಗೆ-ನಾಲಿಗೆಯೊಳಗೆ, ನೆಲಗೊಂಬುದು-ನಿಲ್ಲುವುದೊ, ಆತನಂ-ಅಂತಹ ಮನುಜನನ್ನು, ಕಂಡವಂ-ನಿರುಕಿಸಿದವನು, ಶುಚಿ-ಪವಿತ್ರನಾಗುತ್ತಾನೆ, ಜಲರುಹಾಕ್ಷಂ-ಕಮಲಲೋಚನನಾದ ನಾರಾಯಣನೆ, ಕಣ್ಣಮುಂದೆಇರಲು - ನಿನ್ನ ಕಣ್ಗಳಿಗೆದುರಾಗಿ ನಿಂತಿರುವಾಗ, ಪಾತಕವೆ-ಪಾಪವುಂಟಾಗುತ್ತದೆಯೆ, ಪಲವು-ನಾನಾ ಬಗೆಯಾದ, ಎಣಿಕೆ-ಆಲೋಚನೆಗಳು, ಬೇಡ-ಕೂಡದು, ನೃಪನ-ಧರ್ಮತನಯನ, ತುರಗಮಂ-ಅಶ್ವವನ್ನು, ಪಾಲಿಸು-ಕಾಪಾಡು, ಸುಖಿಯಾಗು-ಸೌಖ್ಯದಿಂದಬಾಳು, ಎಂದನು-ಎಂದುನುಡಿದನು||

ಅ|| ವಿ|| ಪಂಚಮಹಾಪಾತಕಂಗಳು - ಸ್ವರ್ಣಸ್ತೇಯ, ಸುರಾಪಾನ, ಗುರುತಲ್ಪಗಮನ, ಬ್ರಹ್ಮಹತ್ಯ, ಮತ್ತು ಇವರ ಸಹವಾಸ. ||೭೮||

---

ಯಾದ ಅರ್ಜುನನ ಪದಾರವಿಂದಗಳಿಗೊಪ್ಪಿಸಿ ನಾನು ಹಿಮಗಿರಿಯ ಮೇಲಿನ ಕೋಡುಗಲ್ಲನ್ನೇರಿ ಅಲ್ಲಿಂದ ಕೆಳಗೆ ಬಿದ್ದು ನನ್ನ ಪ್ರಾಣಗಳನ್ನು ಕಳೆದುಕೊಂಡು ಬಿಡುತ್ತೇನೆಂದು ನುಡಿದನು ||೭೬|| ಬಭ್ರುವಾಹನನ ಈ ತೆರನಾದ ಕ್ರೂರ ಶಪಥವಂ ಕೇಳಿದ ಭೀಮಸೇನನು ಪಾರ್ಥಜನನ್ನು ಕುರಿತು, ಎಲೈ ಬಾಲನೆ, ನೀನೇತಕ್ಕೆ ಇಂತಹ ಪಂಥವನ್ನೆಸಗುವೈ? ಕೃಷ್ಣಸ್ವಾಮಿಯೇ ಮುಂದೆ ನಿಂತಿರುವ ಕಾಲದಲ್ಲಿ ನಿನಗೆ ಪಾಪವೆಲ್ಲಿ ಬಂದೀತು? ಭೀಷ್ಮಾದಿಗಳನ್ನೂ, ಕೌರವಾದಿಗಳನ್ನೂ, ಕೊಂದ ಬ್ರಹ್ಮಹತ್ಯ, ಗುರುಹತ್ಯ, ಗೋತ್ರಹತ್ಯಗಳೂ ಕೂಡ ಈ ಮಹಾನುಭಾವನ ಸಂದರ್ಶದಿಂದ ನಮಗೆ ಅಂಟದಿರುವಾಗ ನೀನೇತಕ್ಕೆ ವ್ಯಥೆಪಡುವಿ? ದುರಿತಾಂಧಕಾರವು ಕೃಷ್ಣನೆಂಬ ಸೂರ್ಯನೆದುರಿಗೆ ಎಂದಿಗೂ ನಿಲ್ಲಲಾರದು ಕೃಷ್ಣಪರಮಾತ್ಮನನ್ನು ನಂಬಿದವರಿಗೆ ವ್ಯಸನವೂ, ಹೆದರಿಕೆಯೂ. ಪಾಪವೂ, ಕುಂಭೀಪಾಕಾದಿ ಮಹಾ ನರಕಂಗಳೂ ಉಂಟಾಗುವುದೇ ಇಲ್ಲವು||೭೭|| ಯಾರು ಶ್ರೀ ಕೃಷ್ಣನಾಮ ಸಂಕೀರ್ತನದಿಂದ ಸದಾ ಸಂತೋಷಚಿತ್ತದಿಂದಿರುವರೋ ಅಂತಹ ಜನರನ್ನು ನೋಡಿದಮಾತ್ರದಿಂದಲೇ ಪ್ರಾಯಶ್ಚಿತ್ತವೇ ಇಲ್ಲದ ಪಂಚಮಹಾಪಾತಕಂಗಳೂಕೂಡ ಮಾಯವಾಗುವುವು. ಕಲಿಯುಗದ ಮಾನವರು ಮಾಡುವ ಘೋರ ದುರಿತಂಗಳೂ ಕೂಡ ಕೃಷ್ಣಭಕ್ತರ ದರ್ಶನಮಾತ್ರದಿಂದ ಪಂಚಮಹಾಪಾತಕಂಗಳಂ ಮಾಡಿದವರ ದೋಷಗಳ ದಾರಿಯನ್ನೆ ಹಿಡಿಯುವವಲ್ಲದೆ ಸಂಸಾರಾರ್ಣವದಿಂದ ಈಚೆಗೆ ಸೆಳೆದುಹಾಕಿ ಸದ್ಗತಿಯನ್ನುಂಟುಮಾಡುವುದು. ಎಲೈ ಮಗನೆ, ಕೃಷ್ಣಸ್ವಾಮಿಯೆ ನಿನ್ನ ಕಣ್ಣೆದುರಿನಲ್ಲಿ ಬಂದು ನಿಂತುಕೊಂಡಿರುವಾಗ ನಿನಿಗೆ ಪಾಪವೆಲ್ಲಿ ಬಂದೀತು? ಇನ್ನು ನಿನ್ನ ಈ ತೆರನಾದ ಹುಚ್ಚುತನವನ್ನು ಬಿಟ್ಟು ಧರ್ಮರಾಯನ ಯಜ್ಞಾಶ್ವರಕ್ಷಣೆಗೆ ನಮ್ಮೊಂದಿಗೆ ಬಂದು ಸುಖವಾಗಿರೆಂದು ನುಡಿದನು||೭೮||ವಾಯುಸೂನುವಾದ ಭೀಮಸೇನನು ಆಡಿದ ಈ ಮಾತುಗಳನ್ನು ಕೇಳಿದ

ನೃಪನತುರಗಮುಂಮಗನೆಸುಖಿಯಾಗೆಂದನು ||೭೮|| ಇಂತೆಂದ-ಭೀಮನಾಡಿದೊಡನಿಬರೆಲ್ಲರುಂ | ಸಂತೋಷಮಂತಾಳ್ದರ್ಜುನಂ ತನಯನಂ | ಸಂತೈಸಿಕುಳ್ಳಿರ್ದನಸುರಾರಿಪವನಜರ್ವೆರಸಿಸಿಂಹಾಸನದೊಳು || ಕುಂತಿನಿಜಪುತ್ರಪೌತ್ರರವಿಭವಕುಬ್ಬಿದಳ | ನಂತರದೊಳಾಮಣಿಪುರದೊಳುತ್ಸವವಾದು | ನಂತನಂಸತ್ಕರಿಸಿಕಳುಹಿದಪಾತಾಳಕಖಿಳಸರ್ಪಾಳಿಸಹಿತ ||೭೯|| ಸತ್ಯಭಾಮಾಕಾಂತಭೀಮನರಮನ್ಮಥಾ | ದಿತ್ಯಭವಸುತಕುಂತಿದೇವಕಿಯಶೋದೆಯರ | ನತ್ಯಂತಹರುಷದೊಳುಲೂಪಿಚಿತ್ರಾಂಗದೆಯರಾದರಿಸಿನೃಪಗೃಹದೊಳು || ನಿತ್ಯಕೃತ್ಯದವಿವಿಧಭೋಗವಿಭವಂಗಳಿಂ | ನೃತ್ಯಗೀತಂಗಳವಿಲಾಸಗೋಷ್ಠಿಗಳಿಂದ | ಪ್ರತ್ಯೇಕಮೆಲ್ಲರುಂಸಂತುಷ್ಟರಾಗಿರ್ದರೈದುದಿನಮಾಪುರದೊಳು ||೮೦|| ದಿವಸವೈದರಮೇಲೆಚಿಂತಿಪಂಗಜಪುರದೊ | ಳವನೀಶನೆಂದಲ್ಲಿಕೂಡಿದಸುವಸ್ತುಗಳ | ನಿವಹಮುಂಕುಂತಿಚಿತ್ರಾಂಗದೆಫಣೀಂದ್ರಸುತೆದೇವಕಿಯಶೋದೆಯರನು || ಪವನಜನೊಡನೆಹಸ್ತಿ

---

ಟೀ|| ಭೀಮನು_ವೃಕೋದರನು, ಇಂತೆಂದು_ಈ ತೆರನಾಗಿ, ಆಡಿದೊಡೆ_ನುಡಿಯಲು, ಅನಿಬರೆಲ್ಲರುಂ – ಅಲ್ಲಿ ನೆರೆದಿದ್ದ ಸಕಲರೂ, ಸಂತೋಷಮಂತಾಳ್ದರು_ಸಂತಸಂಗೊಂಡರು. ಅರ್ಜುನಂ-ಪಾರ್ಥನು, ತನಯನಂ_ಕುವರನನ್ನು, ಸಂತೈಸಿ_ಶಾಂತೋಕ್ತಿಗಳಿಂದ ಮನ್ನಿಸಿ, ಅಸುರಾರಿಪವನಜರ್ವೆರಸಿ_ಕೃಷ್ಣ ವೃಕೋದರರಿಂದೊಡಗೂಡಿ, ಸಿಂಹಾಸನದೊಳು – ಸಿಂಹಾಸನದ ಮೇಲೆ, ಕುಳ್ಳಿರ್ದನು_ಕುಳಿತುಕೊಂಡವನಾದನು, ಕುಂತಿ_ಕುಂತಿದೇವಿಯು, ನಿಜ-ಸ್ವಕೀಯರಾದ, ಪುತ್ರಪೌತ್ರರ ವಿಭವಕೆ_ಮಕ್ಕಳು ಮೊಮ್ಮಕ್ಕಳು ಇವರ ಐಸಿರಿಗೆ, ಉಬ್ಬಿದಳು_ಆನಂದವನ್ನೈದಿದಳು, ಅನಂತರದೊಳು_ತರುವಾಯ, ಮಣಿಪುರದೊಳು_ಬಭ್ರುವಾಹನನ ರಾಜಧಾನಿಯಲ್ಲಿ, ಉತ್ಸವಂ_ಉತ್ಸವವು, (ಮೆರವಣಿಗೆಯು) ಆದುದು-ಆಯಿತು, ಅಖಿಳ – ಸಮಸ್ತವಾದ, ಸರ್ಪಾಳಿಸಹಿತ_ಹಾವುಗಳಿಂದ ಕೂಡಿದ, ಅನಂತನಂ-ಸರ್ಪರಾಜನನ್ನು, ಸತ್ಕರಿಸಿ_ಮನ್ನಿಸಿ, ಪಾತಾಳಕೆಕಳುಹಿದನು_ನಾಗಲೋಕಕ್ಕೆ ಕಳುಹಿಸಿಕೊಟ್ಟನು ||೭೯||

ಟೀ|| ಉಲೂಪಿಚಿತ್ರಾಂಗದೆಯರು – ಉಲೂಪಿ ಚಿತ್ರಾಂಗದೆಯರೆಂಬ ಅರ್ಜುನನರಸಿಯರು, ಸತ್ಯಭಾಮಾಕಾಂತ_ಕೃಷ್ಣಸ್ವಾಮಿಯು, ಭೀಮ-ವೃಕೋದರನು, ನರ-ಪಾರ್ಥನು, ಮನ್ಮಥ-ಪ್ರದ್ಯುಮ್ನನು, ಆದಿತ್ಯಭವಸುತ_ಸೂರ್ಯನ ಮೊಮ್ಮಗನಾದ ವೃಷಧ್ವಜನು, ಕುಂತಿ_ಕುಂತೀದೇವಿಯು, ದೇವಕಿಯಶೋದೆಯರ_ದೇವಕಿ ಯಶೋದೆಯೇ ಮೊದಲಾದವರನ್ನು, ಅತ್ಯಂತಹರ್ಷದೊಳು-ಬಹಳ ಆನಂದದಿಂದ, ಆದರಿಸಿ-ಮನ್ನಿಸಿದವರಾಗಿ, ನೃಪಗೃಹದೊಳು-ರಾಜಭವನದೊಳಗೆ, ನಿತ್ಯಕೃತ್ಯದ_ನಿತ್ಯವೂ ಅನುವರ್ತಿಸಬೇಕಾದ, ವಿವಿಧ_ತಂಡತಂಡವಾದ, ಭೋಗ_ಸುಖಪರಂಪರೆಗಳ, ವಿಭವಂಗಳಿಂದ_ಐಸಿರಿಯಿಂದ, ನೃತ್ಯ-ನರ್ತನವು, ಗೀತಂಗಳ_ಗಾನವೇ ಮೊದಲಾದವುಗಳ, ವಿಲಾಸಗೋಷ್ಠಿಗಳಿಂದ_ಲೀಲಾಸಮುದಾಯಂಗಳಿಂದ, ಪ್ರತ್ಯೇಕಂ-ಪ್ರತಿಯೊಬ್ಬರೂ, ಸಂತುಷ್ಟರಾಗಿ-ಸಂತಸಂಗೊಂಡು, ಐದುದಿನಂ_ಐದು ದಿವಸಗಳು, ಆಪುರದೊಳು_ಆ ನಗರದಲ್ಲಿ, ಇರ್ದರು_ಇದ್ದವರಾದರು||೮೦||

ಟೀ|| ದಿವಸಂ_ದಿನಗಳು, ಐದರಮೇಲೆ – ಐದಾದ ತರುವಾಯ, ಅವನೀಶನು – ಯುಧಿಷ್ಠಿರನು, ಗಜಪುರದೊಳು_ಇಭನಗರದಲ್ಲಿ, ಚಿಂತಿಪಂ_ಯೋಚನೆಗೈವನೆಂಬದಾಗಿ, ಅಲ್ಲಿ_ಆ ಮಣಿಪುರದಲ್ಲಿ, ಕೂಡಿದ_ಸಂಗ್ರಹಿಸಿದ್ದ, ಸುವಸ್ತುಗಳ-ಒಳ್ಳೆಯ ಪದಾರ್ಥಗಳ, ನಿವಹಮಂ – ಸಮುದಾಯವನ್ನು, ಕುಂತಿ_ಕುಂತಿದೇವಿಯು, ಚಿತ್ರಾಂಗದೆ – ಚಿತ್ರಾಂಗದೆಯು, ಫಣೀಂದ್ರಸುತೆ – ಸರ್ಪರಾಜನ ಕುವರಿಯು, ದೇವಕಿಯಶೋದೆಯರನು – ದೇವಕಿ ಯಶೋದೆಯೇ ಮೊದಲಾದವರನ್ನು, ಹಸ್ತಿನಾವತಿ

---

ಕೂಡಲೆ ಅಲ್ಲಿದ್ದವರೆಲ್ಲಾ ಬಹಳವಾಗಿ ಸಂತೋಷವನ್ನು ಹೊಂದಿದರು. ಅರ್ಜುನನಾದರೊ ಸಂತೋಷದಿಂದ ಮಗನನ್ನು ಸಂತೈಸಿ ಶ್ರೀಕೃಷ್ಣ ಮತ್ತು ಅಗ್ರಜನಾದ ಭೀಮಸೇನರೊಂದಿಗೆ ಬಭ್ರುವಾಹನನ ಸಿಂಹಾಸನದಲ್ಲಿ ಕುಳಿತುಕೊಂಡಿದ್ದನು ಕುಂತಿದೇವಿಯು ಮಗನಾದ ಅರ್ಜುನನನ್ನು, ಮೊಮ್ಮಗನಾದ ಬಭ್ರುವಾಹನನನ್ನು ನೋಡಿನೋಡಿ ಸಂತೋಷಪಡುತ್ತಿದ್ದಳು ಆ ಮಣಿಪುರದಲ್ಲೆಲ್ಲಾ ಅತಿಸಂಭ್ರಮದಿಂದ ಉತ್ಸವವುಂಟಾಯಿತು. ಅನಂತರದಲ್ಲಿ ಸರ್ಪಾಳಿಯಿಂದೊಡಗೂಡಿದ ಆದಿಶೇಷನನ್ನು ಬಹಳವಾಗಿ ಉಪಚರಿಸಿ ನಾಗಲೋಕಕ್ಕೆ ಕಳುಹಿಸಿದರು ||೭೯|| ಕೃಷ್ಣಮೂರುತಿಯನ್ನೂ, ಭೀಮಾರ್ಜುನರನ್ನೂ, ಕರ್ಣಸುತನನ್ನೂ, ಮನ್ಮಥನೇ ಮೊದಲಾದ ಯದುಶ್ರೇಷ್ಠರನ್ನೂ, ಹಂಸಧ್ವಜಾದಿಗಳನ್ನೂ ಕುಂತಿ, ದೇವಕಿ ಯಶೋದೆಯರನ್ನೂ. ಸಕಲ ಪರಿವಾರವನ್ನೂ ಉಲೂಪಿ ಚಿತ್ರಾಂಗದೆಯರು ಬಹಳವಾಗಿ ಉಪಚರಿಸುತ್ತ ಅವರನ್ನು ಸತ್ಕರಿಸುತ್ತಲಿದ್ದರು. ಇವರ ಆತಿಥ್ಯವಂ ಪಡೆದ ಸರ್ವರೂ ಸಂತೋಷದಿಂದ ಐದುದಿನಗಳವರೆಗೂ ಅಲ್ಲಿಯೇ ಸುಖವಾಗಿ ಕಾಲವಂ ಕಳೆಯುತ್ತಲಿದ್ದರು. ||೮೦|| ಆಗ ಕೃಷ್ಣಸ್ವಾಮಿಯು ಉಲೂಪಿ ಚಿತ್ರಾಂಗದೆಯರನ್ನು ಕುರಿತು, ನಿಮ್ಮ ಸತ್ಕಾರದಿಂದ ಸರ್ವರೂ ಸಂತುಷ್ಟರಾಗಿರುವರು, ಇನ್ನು ಬಹುಕಾಲ ನಿಂತರೆ ಯುಧಿಷ್ಠಿರನು ಹಸ್ತಿನಾವತಿಯಲ್ಲಿ ಚಿಂತಿಸಲಾರಂಭಿಸುವನು, ಎಲ್ಲರೂ ಹೊರಡಲೆಂದು ನುಡಿದು ಭೀಮಸೇನನೊಂದಿಗೆ ತನ್ನ ತಾಯಿಯರಾದ ದೇವಕಿ ಯಶೋದೆಯರನ್ನೂ, ಪೃಥೆಯನ್ನೂ ಉಲೂಪಿ ಚಿತ್ರಾಂಗದೆಯರನ್ನೂ ಸಹ ಕಳುಹಿಸಿದವನಾಗಿ, ಅರ್ಜುನ,

ನಾವತಿಗೆಕಳುಹಿಪಾ | ರ್ಥಿವಪಾರ್ಥಿಪಾರ್ಥರಂಸಲೆಕೂಡಿಕೊಂಡು | ದಾನವಮರ್ದನಂತಾನೆಕುದುರೆಯಂಬಿಡಿಸಿಲಕ್ಷ್ಣೆಗೆನಡೆದ ನದರಪಿಂತೆ ‖ ೪೧ ‖ ಸಂಜೀವಕದಮಣಿಯ-ಫಣಿಪತಿಯಕೃಷ್ಣನಧ | ನಂಜಯನಪುಣ್ಯಪ್ರಸಂಗದಿಂದಪಮೃತ್ಯು | ನಂಜುದುಷ್ಕೃತಿಶತ್ರುಪೀಡೆಗಳ್ಪೊದ್ದವೆಂಬೀಮಹಾಮಹಿಮೆಯಿಂದ ‖ ರಂಜಿಪೀಕಥೆಕೇಳ್ದೊಡಾಯುರಾರೋಗ್ಯಮತಿ | ಮಂಜುಳಸುಕೀರ್ತಿಸುಖಸಂಪತ್ಕಳತ್ರಸುತ | ಸಂಜಾತಹರಿಭಕ್ತಿಸಮನಿಪುದುದೇವಪುರಲಕ್ಷ್ಮೀಶನಾಜ್ಞೆಯಿಂದ ‖ ೪೨ ‖

ಸಂಧಿ ೨೪ಕ್ಕೆ ಪದ್ಯ ೧೩೧೦ಕ್ಕಂ ಮಂಗಳಮಸ್ತು.

---

ಗೆ-ಇಭನಗರಿಗೆ, ಪವನಜನೊಡನೆ-ಭೀಮಸೇನನೊಂದಿಗೆ, ಕಳುಹಿ-ಕಳುಹಿಸಿಕೊಟ್ಟು, ದಾನವಮರ್ದನಂ-ರಾಕ್ಷಸಾಂತಕನಾದ ಕೃಷ್ಣಮೂರ್ತಿಯು, ತಾನೆ-ತಾನಾಗಿಯೆ, ಪಾರ್ಥಿವ-ಹಂಸಧ್ವಜ ಯೌವನಾಶ್ವಾದಿಗಳು, ಪಾರ್ಥಿ-ಅರ್ಜುನಿಯು, ಪಾರ್ಥರಂ-ಫಲುಗುಣನೆ ಆದಿಯಾಗಿರತಕ್ಕರನ್ನು, ಸಲೆ-ಚೆನ್ನಾಗಿ, ಕೂಡಿಕೊಂಡು-ಜೊತೆಮಾಡಿಕೊಂಡು, ಕುದುರೆಯಂಬಿಡಿಸಿ-ಯಜ್ಞಾಶ್ವದ ಬಂಧನವಂ ತಪ್ಪಿಸಿ, ಅದರಪಿಂತೆ-ಅದರ ಬೆಂಗಾವಲ್ಗೆ, ನಡೆದನು-ಹೊರಟವನಾದನು ‖ ೪೧ ‖

ಟೀ‖ ಸಂಜೀವಕದಮಣಿಯ-ಸಂಜೀವಕವೆಂಬ ರತ್ನದ, ಫಣಿಪತಿಯ-ಸರ್ಪರಾಜನ, ಕೃಷ್ಣನ-ಕೃಷ್ಣಸ್ವಾಮಿಯ, ಧನಂಜಯನ-ಪಾರ್ಥನ, ಪುಣ್ಯಪ್ರಸಂಗದಿಂದ-ಪುಣ್ಯದಾಯಕವಾದ ಸತ್ಕಥೆಯಿಂದ, ಅಪಮೃತ್ಯು-ಅಕಾಲ ಮರಣವು, ನಂಜು-ವಿಷವು, ಶತ್ರುಪೀಡೆಗಳು-ವೈರಿಗಳಿಂದಾಗುವ ತೊಂದರೆಯು, ಪೊದ್ದವು-ಪ್ರಾಪ್ತವಾಗಲಾರವು, ಎಂಬ-ಎನ್ನತಕ್ಕ, ಈ ಮಹಾಮಹಿಮೆಯಿಂದ-ಅತ್ಯಧಿಕವಾದ ಈ ಮಾಹಾತ್ಮ್ಯೆಯ ದೆಸೆಯಿಂದ, ರಂಜಿಪ-ಸಂತಸಮಂಗ್ಯೆವ, ಈ ಕಥೆ-ಈ ಕಥೆಯನ್ನು, ಕೇಳ್ದಡೆ-ಕೇಳಿದ ಹಾಗಾದರೆ, ಆಯು-ಜೀವಿತ ಕಾಲವು, ಆರೋಗ್ಯಂ-ಶರೀರ ದಾರ್ಢ್ಯವು, ಅತಿಮಂಜುಳ-ಬಹು ಹೆಚ್ಚಾದ, ಕೀರ್ತಿ-ಸತ್ಕೀರ್ತಿಯು, ಸುಖ-ಸೌಖ್ಯವು, ಸಂಪತ್-ಐಸಿರಿಯು, ಕಳತ್ರ-ಸತಿಯು, ಸುತ-ಕುವರನು, ಸಂಜಾತ-ಸಿದ್ಧಿಸಿದ, ಹರಿಭಕ್ತಿ-ನಾರಾಯಣನಲ್ಲಿ ಭಕ್ತಿರಸವು, ದೇವಪುರಲಕ್ಷ್ಮೀಶನ-ದೇವಪುರವಾಸಿಯಾದ ಶ್ರಿಯಃಪತಿಯ ಕರುಣಾಕಟಾಕ್ಷದಿಂದ, ಸಮನಿಪುದು-ಬಂದು ಸೇರುವುದು ‖ ೪೨ ‖

ಇಂತು ಟೀಕಾ ತಾತ್ಪರ್ಯ ಸಹಿತವಾದ ಜೈಮಿನಿ ಭಾರತದೊಳು
ಇಪ್ಪತ್ತನಾಲ್ಕನೆಯ ಸಂಧಿಯು ಸಮಾಪ್ತವು.

---

ಬಭ್ರುವಾಹನ, ವೃಷಕೇತುಗಳನ್ನೂ ಹಂಸಧ್ವಜನನ್ನೂ ಕರೆದುಕೊಂಡು ಕುದುರೆಯ ಬೆಂಗಾವಲ್ಗೆ ಅರ್ಜುನನ ಜೊತೆಯಲ್ಲಿ ತಾನೂ ಹೊರಟವನಾದನು ‖ ೪೧ ‖ ಸಂಜೀವಕವೆಂಬ ಮಹಾಮಣಿಯನ್ನೂ, ಸರ್ಪರಾಜನಾದ ಆದಿಶೇಷನನ್ನೂ. ಕೃಷ್ಣಸ್ವಾಮಿಯನ್ನೂ. ವಿಷ್ಣುಭಕ್ತಾಗ್ರೇಸರನಾದ ಅರ್ಜುನನ್ನೂ ಸ್ತೋತ್ರಮಾಡುವುದರಿಂದುಂಟಾಗುವ ಮಹಾಪುಣ್ಯವು ಅಪಮೃತ್ಯು ಪರಿಹಾರವನ್ನೂ, ವಿಷ, ದುಷ್ಕಾರ್ಯ, ಪರಾಜಯವೇ ಮೊದಲಾದ ಸರ್ವಾನಿಷ್ಟಂಗಳನ್ನೂ ಹೋಗಲಾಡಿಸಿ ಶಾಶ್ವತಸುಖವನ್ನೀಯುವುದು. ಇವುಗಳೆಲ್ಲವನ್ನೂ ಒಳಗೊಂಡಿರುವ ಈ ಮಹಾ ಶ್ರೇಷ್ಠವಾದ ಕಥೆಯನ್ನು ಭಕ್ತಿಪುರಸ್ಸರವಾಗಿ ಯಾರು ಕೇಳುವರೊ ಅಂಥವರಿಗೆ ಲಕ್ಷ್ಮೀರಮಣನಾದ ಶ್ರೀ ಕೃಷ್ಣ ಪರಮಾತ್ಮನು ಆಯುರಾರೋಗ್ಯಗಳನ್ನೂ, ಸತ್ಕೀರ್ತಿಯನ್ನೂ, ಪುತ್ರಮಿತ್ರ ಕಳತ್ರಾದಿ ಸಕಲೈಶ್ವರ್ಯಂಗಳನ್ನೂ, ಶಾಶ್ವತವಾದ ವಿಷ್ಣುಭಕ್ತಿಯನ್ನೂ ಸಹ ಕೊಟ್ಟು, ಪರಮಶ್ರೇಷ್ಠವಾದುದೆನಿಸಿಕೊಂಡಿರುವ ಸದ್ಗತಿಯನ್ನಿತ್ತು ಸಲಹುವನು ‖ ೪೨ ‖

ಇಂತು ಟೀಕಾತಾತ್ಪರ್ಯಸಹಿತ ಜೈಮಿನಿಭಾರತದೊಳು ಇಪ್ಪತ್ತನಾಲ್ಕನೆಯ ಸಂಧಿಯು ಸಮಾಪ್ತವಾದುದು.
(ಎರಡನೆಯ ಭಾಗವು ಸಂಪೂರ್ಣಂ).



## ಇಪ್ಪತ್ತೈದನೆಯ ಸಂಧಿ.

ಸೂ || ಊರ್ಜಿತಪ್ರಬಲರಿಪುವೀರರಂಗೆಲ್ದುಕೃ | ಷ್ಣಾರ್ಜುನರನಾಹವದೊಳೊಟ್ಟೈಸಿಭುಜವಿಕ್ರ | ಮಾರ್ಜಿತ ವಿಜಯದೊಡನೆತಾಮ್ರಧ್ವಜಂತುರಗಮಂತಂದೆಗೊಪ್ಪಿಸಿದನು ||

ಎಲೆಮುನಿಪಸದಮಲಂಮೊದಲಿಪಾಲ್ಗಡಲದಕೆ | ಮಲಯಾನಿಲಂತೀಡೆಬೆಳ್ದಿಂಗಳ್ಗಂಪೂಡೆ | ಲಲಿತಸುಮನೋವಾಸಿತಂಕೂಡೆಮೇಲೆಮೇಲಿನಿದಾಗಿತೋರುವಂತೆ || ಸಲೆಸೊಗಸುನಿನ್ನನುಡಿಸರಸಮಚ್ಚರಿಪುಣ್ಯ | ನಿಲಯಮೆನೆಕೃಷ್ಣಚರಿತಾಮೃತವನೀಕಿವಿಗ | ಳೊಲಿದೀಂಟಿದಣಿದಪವೆ ಮುಂಗತೆಯನುಸಿರೆಂದು ಬೆಸಗೊಂಡನವನೀಶನು || ೧ || ಕೈಮುಗಿವುತಾದರ

---

ಇಪ್ಪತ್ತೈದನೆಯ ಸಂಧಿ.

ಸೂಚನೆ || ತಾಮ್ರಧ್ವಜಂ–ರಕ್ತಛಾಯೆಯ ಧ್ವಜಪಟವುಳ್ಳ ಮಯೂರಧ್ವಜನ ಕುವರನು, ಊರ್ಜಿತಪ್ರಬಲರಿಪುವೀರರಂ–ಊರ್ಜಿತ–ಶಾಶ್ವತವಾದ, ಪ್ರಬಲ–ಹೆಚ್ಚಾದ, ರಿಪು–ಹಗೆಗಳಲ್ಲಿ, ವೀರರಂ–ಶೂರರಾದ ಹಂಸಧ್ವಜ ನೀಲಧ್ವಜಾದಿಗಳನ್ನೂ, ಆಹವದೊಳು–ಕಾಳಗದಲ್ಲಿ, ಗೆಲ್ದು–ಗೆದ್ದವನಾಗಿ, ಕೃಷ್ಣಾರ್ಜುನರನು-ನರನಾರಾಯಣರನ್ನು, ಒಟ್ಟೈಸಿ-ಭೂಮಿಯ ಮೇಲೆ ಬಿದ್ದುಹೋಗುವಂತೆ ಮಾಡಿ, ತುರಗಮಂ - ಅಶ್ವವನ್ನು, ಭುಜವಿಕ್ರಮಾರ್ಜಿತವಿಜಯದೊಡನೆ - ಭುಜ–ಬಾಹುಗಳ, ವಿಕ್ರಮ–ಪರಾಕ್ರಮದಿಂದ, ಆರ್ಜಿತ–ಆರ್ಜನೆಯಂ ಮಾಡಿದ, ವಿಜಯದೊಡನೆ–ಜಯಲಕ್ಷ್ಮಿಯ ಸಹಿತ, ತಂದೆಗೆ–ಜನಕನಿಗೆ, ಒಪ್ಪಿಸಿದನು–ಅರ್ಪಣೆಯಂ ಮಾಡಿದನು ||

ಅ|| ವಿ|| ಊರ್ಜಿತಪ್ರಬಲರಿಪು–ಪ್ರಬಲನಾದ ರಿಪು (ವಿ. ಪೂ.) ಊರ್ಜಿತರಾದ ಪ್ರಬಲರಿಪು (ವಿ. ಪೂ ) ಊರ್ಜಿತ ಪ್ರಬಲರಿಪುಗಳಲ್ಲಿ ವೀರರು (ಸ. ತ.) ಕೃಷ್ಣಾರ್ಜುನರು (ಸ. ದೀ.) ಭುಜವಿಕ್ರಮಾರ್ಜಿತವಿಜಯದೊಡನೆ–ಬುಜಗಳ ವಿಕ್ರಮ (ಷ. ತ.) ಭುಜವಿಕ್ರಮದಿಂದ ಆರ್ಜಿತ (ತೃ. ತ.) ಭುಜವಿಕ್ರಮಾರ್ಜಿತ ವಿಜಯ (ವಿ. ಪೂ.) ತಾಮ್ರಧ್ವಜಂ–ತಾಮ್ರವರ್ಣದ ಧ್ವಜವು ಯಾರಿಗೊ ಆವನು (ಬ. ಸ.) ತಾಮ್ರಧ್ವಜಂ ತುರಗಮಂ ಒಪ್ಪಿಸಿದನು, (ಸಕರ್ಮಕ ಕರ್ತರಿವಾಕ್ಯವು.)

ಟೀ|| ಎಲೆಮುನಿಪ–ಎಲೈ ಜೈಮಿನಿ ಋಷೀಂದ್ರನೇ, ಪಾಲ್ಗಡಲು–ಕ್ಷೀರಸಮುದ್ರವು, ಮೊದಲೆ-ಆದಿಯಲ್ಲಿಯೆ, ಸದಮಲಂ–ಬಹು ಪವಿತ್ರವಾದದ್ದು, ಮಲಯಾನಿಲಂ-ಮಲಯಗಿರಿಯಲ್ಲಿ ಹುಟ್ಟುವ ಮಂದಮಾರುತವು, ಅದಕೆ–ಆ ಕ್ಷೀರಸಾಗರಕ್ಕೆ, ತೀಡೆ–ಬೀಸಿದಹಾಗಾದರೆ, ಬೆಳ್ದಿಂಗಳಂ–ಚಂದ್ರಿಕೆಯನ್ನು, ಪೂಡೆ-ಜೋಡಿಸಲು, ಲಲಿತ–ಮನೋಹರವಾದ, ಸುಮನೋವಾಸಿತಂ–ಹೂಗಳ ಸುರಭಿಯು, ಕೂಡೆ-ಜೋಡಣೆಯಾದರೆ, ಮೇಲೆಮೇಲೆ–ಮೇಲೆ ಹೇಳಿದವು ಜೊತೆಯಾದಹಾಗೆಲ್ಲಾ, ಇನಿದಾಗಿ–ಇಂಪಾಗಿ, ತೋರುವಂತೆ-ಕಾಣಬರುವ ಬಗೆಯಿಂದ, ನಿನ್ನನುಡಿ–ನಿನ್ನವಾಕ್ಯ, ಸಲೆ-ಚೆನ್ನಾಗಿ, ಸೊಗಸು–ಮನರಂಜಿಸುವುದು, ಸರಸಂ-ರಸಭರಿತವಾದದ್ದು, ಅಚ್ಚರಿ-ಆಶ್ಚರ್ಯವನ್ನುಂಟುಮಾಡುವುದು, ಪುಣ್ಯನಿಲಯಂ–ಪುಣ್ಯಕ್ಕೆ ಸ್ಥಾನಭೂತವಾದದ್ದು, ಎನೆ–ಎಂದು ನುಡಿಯಲು, ಈ ಕಿವಿಗಳು–ಈ ನನ್ನ ಶ್ರೋತ್ರಂಗಳು, ಕೃಷ್ಣಚರಿತಾಮೃತವನು-ಅಮೃತಕ್ಕೆ ಸದೃಶವಾದ ಕೃಷ್ಣ ಚಾರಿತ್ರವನ್ನು, ಒಲಿದು-ಅಕ್ಕರೆಯಿಂದ, ಈಂಟಿ-ಪಾನಮಾಡಿ, (ನೀನು ಹೇಳಿದ ಕಥೆಗಳನ್ನೆಲ್ಲಾ ಕೇಳಿದವನಾಗಿ) ದಣಿದಪವೆ–ತೃಪ್ತಿಗೊಂಡಾವೆ, ಮುಂಗಥೆಯನು-ಮುಂದೆ ನಡೆದ ಕಥಾಮೃತವನ್ನೂ, ಉಸಿರು–ಈಂಟಲು ಅವಕಾಶವನ್ನು ಕೊಡು (ಹೇಳುವನಾಗು) ಎಂದು–ಎಂಬತೆರನಾಗಿ, ಅವನೀಶನು–ಭೂಕಾಂತನಾದ ಜನಮೇಜಯನು, ಬೆಸಗೊಂಡನು–ಕೇಳಿಕೊಂಡನು ||

ಅ| ವಿ|| ಅಮಲ-ಕಶ್ಮಲವಿಲ್ಲದ್ದು (ನಙ್ ತತ್ಪುರುಷ) ಪಾಲ್ಗಡಲು-(ವ್ಯಂ. ಸಂಧಿ ಮತ್ತು ಷ. ತ. ಸ.) ಮಲಯಾನಿಲಂ (ಸ. ದೀ.) ಅನಿಲ–ಗಾಳಿ, ಅನಲ–ಬೆಂಕಿ, ಬೆಳ್ಳಿಂಗಳ್ (ವ್ಯಂ. ಸಂಧಿ) ಅಚ್ಚರಿ (ತ್ಭ) ಆಶ್ಚರ್ಯ (ತ್ಸ) ಪುಣ್ಯನಿಲಯಂ–ಚ. ತ. ಮುಂಗಥೆ–ಮುಂದಿನ ಕಥೆ (ಷ. ತ.) ಅವನೀಶ (ಸ. ದೀ.) || ೧ ||

---

ಇಪ್ಪತ್ತೈದನೆಯ ಸಂಧಿಯ ಕಥಾಸಾರಾಂಶವು.

ಆ ಬಳಿಕ ಪೊಡವಿಪನಾದ ಜನಮೇಜಯನು ಜೈಮಿನಿ ಮುನಿವರ್ಯನನ್ನು ಕುರಿತು, ಎಲೈ ತಾಪಸೋತ್ತಮನಾದ ಜೈಮುನಿ ಮುನೀಂದ್ರನೆ, ಬಹು ಪವಿತ್ರವಾದ ಕ್ಷೀರಸಮುದ್ರದ ಜತೆಗೆ ಮಂದಮಾರುತವೂ, ಹಿಮಕಿರಣಂಗಳೂ, ಹೂಗಳ ಸುವಾಸನೆಯೂ ಬಂದೊದಗಲು ಮನವಂ ಹೇಗೆ ರಂಜಿಸುವುದೋ ಅದೇರೀತಿಯಾಗಿಯೇ ನೀನು ಸರಸವಾದ ಪದಸರಣಿಯಿಂದ ಪೇಳುತ್ತಲಿರುವ ಪುಣ್ಯಪ್ರದವಾದ ಕೃಷ್ಣಚರಿತ್ರೆಯನ್ನು ಎಷ್ಟು ಕೇಳಿದರೂ ನನ್ನ ಕಿವಿಗಳಿಗೆ ತೃಪ್ತಿಯೇ ಉಂಟಾಗದಿರುವುದು. ಆದಕಾರಣ ಮುಂದೆನಡದ ಕಥೆಯನ್ನೂ ಸವಿಸ್ತಾರವಾಗಿ ಪೇಳಿ ಕರ್ಣಾನಂದವನ್ನುಂಟುಮಾಡಬೇಕೆಂದು || ೧ ||

ದೊಳವನಿಪಂಬೆಸಗೊಳ | ಜೈಮಿನಿಮುನೀಶ್ವರಂಪೇಳ್ದನೆಲೆನೃಪತಿಕೇಳ್ಕೆ | ಮುಂದಣಾಶ್ಚರ್ಯಮಂಭೀಮಸೇನನಂಗಜಪುರಕೆ ಕಳುಹಿಬಳಿಕ || ಹೈಮಾಂಬರಂಸಕಲದಳಸಹಿತಮೈದುನನ | ಮೈಮೆಚ್ಚಿಕೆಗೆಮುಖತುರಂಗದೊಡನೈದಿದಂ | ವೈಮಾನಿಕ ಪ್ರತತಿಬೆರಗಾಗೆಕಲಿಬಭ್ರುವಾಹನಂಕೂಡೆಬರಲು || ೨ || ತುರಗಂನಡೆದುದುಮಣಿಪುರದಿಂಶರದ್ದಿನದೊ | ಳರಸಂಚೆಸಂಚರಿಸ ತೊಡಗಿದವುನದಿಗಳು | ಬ್ಬರಮಡಗಿತಿಳಿದುಪರಿದವುಬೆಳತುದಾಗಸಂಮೆರೆದುವುಡುರಾಜಿಕೂಡೆ || ತರಣಿಶಶಿಗಳಕಿರಣಮೈದೆ ನಿರ್ಮಲವಾದು | ವರವಿಂದದಲರನರಸಿದವಳಿಗಳೆಣ್ದೆಸೆಯ | ತರುಣಿಯರಗುರುಕುಚದಮೇಲುದಂಸೆಳದಂತೆಗಿರಿನಿಕರಮೆಸೆದಿ ರ್ದುದು || ೩ || ಪುಳಿನಜಘನಂಮತ್ಸ್ಯಲೋಚನಂಹಂಸಗತಿ | ಸುಳಿನಾಭಿಕೋಕಸ್ತನಂಪಂಕಜಾನನಂ || ಸೆಳೆನಡುಸುಕಂಬು

ಟೀ|| ಆದರದೊಳು-ಅಕ್ಕರೆಯಿಂದ, ಅವನಿಪಂ-ಭೂಕಾಂತನಾದ ಜನಮೇಜಯನು, ಕೈಮುಗಿವುತ- ಕರತಳದಿಂದ ವಂದನೆಯನ್ನರ್ಪಿಸುತ್ತ, ಬೆಸಗೊಳಲ್-ಕೇಳಿಕೊಳ್ಳಲಾಗಿ, ಜೈಮಿನಿಮುನೀಶ್ವರಂ- ಜೈಮಿನಿಮಹರ್ಷಿಯು, ಪೇಳ್ದನು-ಹೇಳ ತೊಡಗಿದನು, ಎಲೈ ನೃಪತಿ-ಎಲೈ ರಾಜವರ್ಯನೆ, ಮುಂದಿನ-ಮುಂದೆ ನಡೆದ, ಆಶ್ಚರ್ಯಮಂ-ಆಶ್ಚರ್ಯಕೃತ್ಯವನ್ನು, ಕೇಳ್ಕೆ- ಕೇಳುವನಾಗಯ್ಯ, ಗಜಪುರಕೆ-ಇಭನಗರಿಗೆ, ಭೀಮಸೇನನಂ-ವೃಕೋದರನನ್ನು, ಕಳುಹಿ-ಕಳುಹಿಸಿಬಿಟ್ಟು, ಬಳಿಕ-ಅನಂತರ, ವೈಮಾನಸಿಕ ಪ್ರತತಿ-ಸುರರ ಸಮೂಹವು, ಬೆರಗಾಗೆ- ಅಚ್ಚರಿಯಿಂದಕೂಡುವತೆರನಾಗಿ, ಸಕಲ-ಅಶೇಷವಾದ. ದಳಸಹಿತ- ಸೇನಾಸಮೇತನಾಗಿ, ಕಲಿ-ವೀರನಾದ, ಬಭ್ರುವಾಹನಂ-ಪಾರ್ಥಜನು, ಕೂಡೆ-ಜೊತೆಯಲ್ಲಿಯೇ, ಬರಲು-ಬರಲಾಗಿ, ಮಖ ತುರಂಗದೊಡನೆ-ಯಾಗದ ಕುದುರೆಯೊಂದಿಗೆ, ಮೈದುನನ-ತಂಗಿಯ ಗಂಡನಾದ ಧನಂಜಯನ, ಮೈಗಾವಲ್ಗೆ-ಅಂಗರಕ್ಷಣೆ ಗಾಗಿ, ಐದಿದಂ-ಹೊರಟವನಾದನು ||೨||

ಟೀ|| ಮಣಿಪುರದಿಂದ-ಮಣಿಪುರವೆನ್ನುವ ಬಭ್ರುವಾಹನನ ರಾಜಧಾನಿಯ ದೆಸೆಯಿಂದ, ಶರದ್ದಿನದೊಳು-ಶರತ್ಕಾಲ ದಲ್ಲಿ, ತುರಗಂ- ಯಾಗದ ಅಶ್ವವು, ನಡೆದುದು-ಮುಂದೆ ಹೊರಟಿತು, ಅರಸಂಚೆ-ಹಂಸಗಳು, ಸಂಚರಿಸತೊಡಗಿದವು-ಎಲ್ಲೆಲ್ಲಿಯೂ ತಿರುಗಾಡಲುಜ್ಜುಗಿಸಿದವು, ನದಿಗಳ-ನದಿಗಳ ಸಮೂಹದ, ಉಬ್ಬರಂ-ತುಂಬಿ ಮೆರೆಯುವಿಕೆಯು, ಅಡಗಿ-ಕುಗ್ಗಿ, ತಿಳಿದು- ನಿರ್ಮಲವಾಗಿ, ಪರಿದವು-ಹರಿಯುತ್ತಲಿದ್ದವು, ಆಗಸಂ-ನಭೋಮಂಡಲವು, ಬೆಳತುದು-ಸ್ವಚ್ಛವಾಯಿತು, ಉಡುರಾಜಿ-ತಾರಾ ನಿವಹವು, ಕೂಡೆ-ತಕ್ಷಣವೇ, ಮೆರೆದವು- ಕಂಗೊಳಿಸುತ್ತಲಿದ್ದವು, ತರಣಿ ಶಶಿಗಳ-ಭಾನು ಹಿಮಕರರ, ಕಿರಣಂ-ಕರಂಗಳು, ಐದೆ-ಚನ್ನಾಗಿ, ನಿರ್ಮಲವಾದವು-ಶುದ್ಧವಾಗಿದ್ದವು, ಅಳಿಗಳು-ದುಂಬಿಗಳು, ಅರವಿಂದದ-ತಾವರೆಯ, ಅಲರನು-ಹೂವನ್ನು, ಅರಸಿದವು-ಹುಡುಕಿದವು, ಎಣ್ದೆಸೆಯ-ಅಷ್ಟದಿಕ್ಕುಗಳೆನ್ನತಕ್ಕ, ತರುಣಿಯರ-ನಾರಿಯರ, ಗುರು-ದಪ್ಪನಾದ, ಕುಚದ-ಮೊಲೆಗಳ ಮೇಲಿರುವ, ಮೇಲುದಂ-ಮೇಲ್ಗಡೆಯ ವಸ್ತ್ರವನ್ನು, (ಸೆರಗನ್ನು) ಸೆಳೆದಂತೆ-ಎಳೆದ ತೆರನಾಗಿ, ಗಿರಿನಿಕರಂ-ಪರ್ವತಗಳ ಸಮು ದಾಯವು, ಎಸೆದಿರ್ದುದು-ಹೊಳೆಯುತ್ತಲಿತ್ತು.

ಅ|| ವಿ|| ಅರಸಂಚೆ (ಕ,ಶ್ವ) ರಾಜಹಂಸ (ತ್ಸ) ತರಣಿ-ಸೂರ್ಯನು, ತರುಣಿ-ಹೆಂಗಸು, ತರಣಿಯೂ+ಶಶಿಯೂ=ತರಣಿ ಶಶಿಗಳು (ದ್ವಿ. ಯೊ. ದ್ವಂದ್ವ) ||೩||

ಟೀ|| ಪುಳಿನ-ಸೈಕತಂಗಳೆನ್ನುವ, ಜಘನಂ-ಹಿಂಭಾಗಗಳುಳ್ಳ, ಮತ್ಸ್ಯ-ಮೀನುಗಳೆನ್ನುವ, ಲೋಚನಂ-ನಯನಂಗ

ಮುಕುಳಿತಕರಸಂಪುಟನಾಗಿ ಸವಿನಯದಿಂದ ಕೇಳಿಕೊಳ್ಳುತ್ತಲಿರುವ ಜನಮೇಜಯರಾಯನಂ ನೋಡಿ, ಕೇಳೈ ಮಹೀವಲ್ಲ
ಭನೆ, ಮುಂದೆ ನಡೆದ ಅತ್ಯಾಶ್ಚರ್ಯಗಳನ್ನೆಲ್ಲಾ ಹೇಳುವೆನು, ಸಾವಧಾನಚಿತ್ತನಾಗಿ ಕೇಳು, ಈ ರೀತಿಯಾಗಿ ಮಣಿಪುರದಲ್ಲಿ ಐದಾರು
ದಿನಗಳವರೆಗೂ ಸಂತೋಷವಾಗಿ ಕಾಲಹರಣೆಯಂ ಮಾಡಿದಮೇಲೆ ಕೃಷ್ಣಸ್ವಾಮಿಯು ವೃಕೋದರನೊಂದಿಗೆ ಕುಂತೀದೇವಿ,
ದೇವಕಿ ಯಶೋದೆಯರು, ಉಲೂಪಿ ಚಿತ್ರಾಂಗದೆಯರು ಇವರನ್ನೆಲ್ಲಾ ಹಸ್ತಿನಾವತಿಗೆ ಕಳುಹಿಸಿ, ಬಭ್ರುವಾಹನಾದಿಗಳನ್ನು
ತನ್ನ ಸಂಗಡ ಬರಮಾಡಿಕೊಂಡವನಾಗಿ, ಯಾಜ್ಞಾಶ್ವವನ್ನು ಮುಂದೆ ಬಿಟ್ಟುಕೊಂಡು ಅಪರಿಮಿತವಾದ ಸೇನಾಜಲಧಿಯಿಂದೊಡ
ಗೂಡಿದ ಅರ್ಜುನನ ಬೆಂಗಾವಲ್ಗಾಗಿ ತಾನೆ ಹೊರಟವನಾದನು, ಇದನ್ನು ನೋಡಿ ಅಂತರಿಕ್ಷಮಾರ್ಗದಲ್ಲಿದ್ದ ದೇವತೆಗಳೆಲ್ಲಾ ಅತ್ಯಾ
ಶ್ಚರ್ಯದಿಂದ ಕೂಡಿದರು || ೨ || ಕೃಷ್ಣಾರ್ಜುನರು ಯಜ್ಞಾಶ್ವದೊಂದಿಗೆ ಈಪರಿ ಹೊರಡುವಾಗ ಶರತ್ಕಾಲವಾಗಿದ್ದುದ್ದರಿಂದ ಎಲ್ಲೆ
ಲ್ಲಿಯೂ ರಾಜಹಂಸಗಳ ಸಂಚಾರವೂ ನೋಟಕರ ಮನಸ್ಸಿಗೆ ಅತ್ಯಾನಂದವನ್ನುಂಟುಮಾಡುತ್ತಲಿತ್ತು. ನದಿಗಳಲ್ಲೆಲ್ಲಾ ನೀರು
ಕಡಮೆಯಾಗಿಯೂ ತಿಳಿಯಾಗಿಯೂ ಇತ್ತು. ಆಕಾಶವು ಬೆಳ್ಳಗಾಗಿತ್ತು. ನಕ್ಷತ್ರಗಳೂ ಸೂರ್ಯಚಂದ್ರರೂ ಚೆನ್ನಾಗಿ ಪ್ರಕಾಶಿಸು
ತ್ತಲಿದ್ದರು. ಕಮಲ ಪುಷ್ಪಗಳೆಲ್ಲಾ ಅರಳಿ ಬೀರುತ್ತಲಿದ್ದ ಸುವಾಸನೆಯಂ ಹೀರಲು ಭೃಂಗಾಳಿಯು ಹಾರಾಡುತ್ತಲಿತ್ತು. ಅಷ್ಟ
ದಿಕ್ಕನ್ಯೆಯರ ಪೀನರ ಸ್ತನಂಗಳಂ ಮುಚ್ಚಿದ್ದ ಕುಪ್ಪಸಂಗಳಂ ಬಿಚ್ಚಿದಂತೆ ಪರ್ವತಗಳ ಸಮುದಾಯವು ತೋರುತ್ತಲಿದ್ದಿತು||೩||

ಕಂಠಂತರಂಗತ್ರಿವಳಿಶೈವಾಲರೋಮಾವಳಿ ‖ ಲಲಿತಪ್ರವಾಹಲಾವಣ್ಯಲಹರಿಗಳೆಸೆಯೆ | ತೊಳತೊಳಗಿಬೆಳಗುವನದೀವಧುಗಳೂಳ್ಳಿತಂ | ತಿಳಿದುನಿಜಕಾಂತನಾಗಿಹಸಿಂಧುರಾಜನಂನೆರೆಯದಿರರೆಂಬೊಲಾಯ್ತು ‖ ೪ ‖ ಕರೆಕರೆದತನ್ನುಮಳೆವನಿಗಳಿಂ ಶಶಿಕಾಂತ | ದೊರತೆಪೊನಲುರೆವೆಗ್ಗಳಿಸೆನಾಚಿಬೆಳ್ಪಾದ | ತೆರದಿಂಮುಗಿಲ್ಗಳಿರೆಬೆಳ್ದಿಂಗಳೊಪ್ಪಿದುದುಬೆಳಸುಗಳಪಣ್ತೆನೆಗಳ ‖ ವಿರುಪಹೊಂಬಣ್ಣದಹರಿದ್ರಲೇಪನದಿಂದ | ಮೆರೆವಮೈಸಿರಿಯಮಾಂಗಲ್ಯದಿಂಭೂದೇವಿ | ನೆರೆಶೋಭಿಸುವಶರತ್ಕಾಲದೊಳ್ತಿ

ಂದ ಕೂಡಿದ, ಹಂಸ-ಹಂಸಪಕ್ಷಿಗಳಂತೆ, ಗತಿ_ನಡಿಗೆಯುನ್ನು ಪಡೆದಿರತಕ್ಕ, ಸುಳಿ_ಸುಳಿಯೆಂಬ, ನಾಭಿ-ಹೊಕ್ಕಳಿನಿಂದಲೂ, ಕೋಕ-ಜಕ್ಕವಕ್ಕಿಗಳೆನ್ನುವ, ಸ್ತನಂ-ಕುಚಗಳಿಂದಲೂ, ಪಂಕಜ_ತಾವರೆಗಳೆನ್ನುವ, ಆನನಂ_ವದನವು, ಸೆಳೆ-ಸೆಳೆಯುವುದೆಂಬ, ನಡು_ಸೊಂಟದಿಂದಲೂ, ಸು_ಮೇಲಾದ, ಕಂಬುಕಂಠಂ_ಶಂಖದಂತಿರುವ ಕತ್ತಿನಿಂದಲೂ ಕೂಡಿದ, ತರಂಗ_ಅಲೆಗಳೆನ್ನುವ, ತ್ರಿವಳಿ_ಮೂರು ತಿರಿಗಳುಳ್ಳ, ಶೈವಾಲ-ಪಾಚಿ ಎನ್ನುವ, ರೋಮಾವಳಿ-ರೋಮಪಜ್ತಿಯಿಂದ ಕೂಡಿದ, ಲಲಿತ_ಸುಮನೋಹರವಾದ, ಪ್ರವಾಹ-ನೀರಿನ ಪ್ರವಾಹದ, ಲಾವಣ್ಯ-ಪ್ರಕಾಶದ, ಲಹರಿ-ಸಮುದಾಯವು, ಎಸೆಯೆ_ಕಾಂತಿಯುಕ್ತವಾಗಿರಲು, ತೊಳತೊಳಗಿ_ಬಹಳ ಹೆಚ್ಚಾಗಿ, ಬೆಳಗುವ-ಕಾಂತಿಯುನ್ನೀವ, ನದೀವಧುಗಳು_ನದಿಗಳೆಂಬ ನಾರಿಯರು, ಒಳ್ಳಿತಂ_ಮೇಲಾಗಿ, ತಿಳಿದು_ಗೋಚರಮಾಡಿಕೊಂಡು, (ಸ್ವಚ್ಛವಾಗಿ) ನಿಜ_ತಮ್ಮ, ಕಾಂತನು_ರಮಣನು, ಆಗಿ_ಆಗಿಹ ಇರತಕ್ಕ, ಸಿಂಧುರಾಜನಂ_ಸಮುದ್ರಗಳ ಅರಸನ್ನು, ನೆರೆಯದೆ_ಸೇರದೆ, ಇರರು_ಇರತಕ್ಕವರಲ್ಲ, ಎಂಬೊಲು_ಎಂಬತೆರನಾಗಿ, ಆಯ್ತು_ಆಗಿಬಿಟ್ಟಿತು, ಈ ಪದ್ಯದಲ್ಲಿ ನದಿಯು ಸ್ತ್ರೀಯಂತೆ ಇರುವುದಾಗಿ ಹೋಲಿಸಿದೆ.

ಅ‖ ವಿ‖ ಸಿಂಧುರಾಜ (ಷ. ತ) ಮಣಿ- ಶ್ರೇಷ್ಠವಾಚಕ, ಮಣಿಪುರವೆಂಬ ಊರು, ನಮುಸ್ಕರಿಸು, ಹಂಸ-ರವಿ, ಸನ್ಯಾಸಿ, ಹಕ್ಕಿ, ಮಂತ್ರ. ನೆರೆ-ಸೇರುವುದು (ಕ್ರಿ) ನೆರೆ_ಪಕ್ಕದ ಮನೆಗಳು (ನಾಮ) ಪಂಕಜ=ಪಂಕ_ಕೆಸರಿನಲ್ಲಿ, ಜ_ಹುಟ್ಟಿದ್ದು (ಕೃ. ಪ್ರ) ತೊಳತೊಳಗಿ (ಆಧಿಕ್ಯದಲ್ಲಿ ದ್ವಿರುಕ್ತಿ) ‖೪‖

ಟೀ‖ ಕರೆಕರೆದ-ಹೆಚ್ಚಾಗಿ ಸುರಿಸಿದ, ಮಳೆವನಿಗಳಿಂ_ಮಳೆಯ ಬಿಂದುಗಳಿಂದ, ಶಶಿಕಾಂತದ_ಚಂದ್ರಕಾಂತಶಿಲೆಯ, ಒರತೆ ಪೊನಲ್_ಒರತೆಯ ನೀರು, ಉರೆ_ಹೆಚ್ಚಾಗಿ, ವೆಗ್ಗಳಿಸೆ_ಹರಿಯಲು, ಮುಗಿಲ್ಗಳು_ಮೋಡಗಳೆಲ್ಲವೂ, ನಾಚಿ_ನಾಚಿಕೆಯಿಂದ ಕೂಡಿ, ಬೆಳ್ಪಾದತೆರದಿಂದ_ಬಿಳಿದಾದ ಬಗೆಯಿಂದ, ಇರೆ-ಇರುವಂತೆ, ಬೆಳ್ದಿಂಗಳು_ಚಂದ್ರಿಕೆಯು, ಒಪ್ಪಿದುದು_ಚನ್ನಾಗಿ ಕಾಣಿಸುತ್ತಲಿತ್ತು, ಬೆಳಸುಗಳ_ಬೆಳೆಗಳ, ಪಣ್ತೆನೆಗಳ_ಹಣ್ಣಾದ ತೆನೆಗಳಿಂದ ಕೂಡಿದ, ವಿರುಪ_ಥಳಥಳಿಸುವ, ಹೊಂಬಣ್ಣದ-ಚಿನ್ನದ ವರ್ಣವೆನ್ನುವ, ಹರಿದ್ರ_ಅರಿಶಿನವನ್ನು, ಲೇಪನದಿಂದ- ಬಳಿದುಕೊಂಡಿರುವುದರಿಂದ, ಮೆರೆವ- ಕಾಂತಿವಿಶಿಷ್ಟವಾದ, ಮೈಸಿರಿಯ-ಶರೀರದ ಸೊಬಗಿನ, ಮಾಂಗಲ್ಯದಿಂ_ಶುಭದಿಂದ, ಭೂದೇವಿ_ಭೂಮಿಯೆಂಬ ದೇವತೆಯು, ನೆರೆ_ಅಂದವಾಗಿ, ಶೋಭಿಸುವ_ಹೊಳೆಯುವ, ಶರತ್ಕಾಲದೊಳ್-ಶರದೃತುವಿನ ಸಮಯದಲ್ಲಿ, ಧರೆಯಮೇಲೆ_ಭೂಮಂಡಲದಲ್ಲಿ, ಅಧ್ವರಹಯಂ-ಯಾಗದ ಕುದುರೆಯು, ತಿರುಗಿತು_ತಿರುಗಲುಜ್ಜುಗಿಸಿತು.

ದಪ್ಪವಾದ ತೊಡೆಗಳನ್ನೂ, ಮೀನಿನಂತಿರುವ ನಯನಂಗಳನ್ನೂ, ಹಂಸಪಕ್ಷಿಯ ಗಮನವನ್ನು ನಿರಾಕರಿಸುವ ನಡಿಗೆಯನ್ನೂ, ತ್ರಿವಳಿಗಳಿಂದೊಡಗೂಡಿರುವ ಹೊಕ್ಕಳನ್ನೂ, ಜಕ್ಕವಕ್ಕಿಗಳಂತೆ ಬೆಳ್ಳಗಿರುವ ಕುಚಗಳನ್ನೂ, ಕಮಲದಂತಿರುವ ಮೋರೆಯನ್ನೂ, ತೆಳ್ಳಡುವನ್ನೂ, ಶಂಖದಂತಿರುವ ಕತ್ತನ್ನೂ, ಅಲೆಗಳಂತಿರುವ ತ್ರಿವಳಿಗಳನ್ನೂ, ಪಾಚಿಯಹಾಗಿರುವ ರೋಮಪಜ್ತಿಯನ್ನೂ ಪಡೆದ ಸುಂದರೀಮಣಿಯು ನಿಜಕಾಂತನೊಂದಿಗೆ ಕೂಡಲಿಚ್ಛಿಸಿ ಹೋಗುತ್ತಲಿರುವಂತೆಯೇ ಮರಳ್ದಿಣ್ಣೆಗಳಿಂದಲೂ, ಮೀನುಗಳಿಂದಲೂ, ಹಂಸಪಕ್ಷಿಗಳಿಂದಲೂ, ಸುಳಿಗಳಿಂದಲೂ, ಚಕ್ರವಾಕಂಗಳಿಂದಲೂ, ಬೆಳ್ದಾವರೆಗಳಿಂದಲೂ, ಸೆಳವಿನಿಂದಲೂ, ಶಂಖಗಳಿಂದಲೂ, ಅಲೆಗಳು, ಪಾಚಿ ಇವುಗಳಿಂದಲೂ ಕೂಡಿದ ನದಿಗಳೂ ಕೂಡ ಸುಂದರಾಂಗನೆಯರನ್ನು ಹೋಲುತಾ, ತಾವೂ ತಮ್ಮ ಪ್ರಾಣಕಾಂತನಾದ ಸಮುದ್ರರಾಜನಿರುವೆಡೆಗೆ ಹೋಗುತ್ತಲಿವೆಯೋ ಎಂಬಂತೆ ನೋಟಕರ ಮನಸ್ಸಿಗೆ ಭ್ರಾಂತಿಗೆಯ್ಯುತ್ತಲಿದ್ದವು. ‖ ೪ ‖ ಮಳೆಯ ಹನಿಗಳಿಂದ ಭೂಮಿಯನ್ನು ತುಂಬಿಸಿದರೂ ಈಗ ಒಂದು ನದಿಯೂ ದೊಡ್ಡದಾಗಿ ಹರಿಯದಿರುವುದನ್ನೂ, ಚಂದ್ರಕಾಂತ ಶಿಲೆಯಿಂದ ಹೊರಡುವ ಪ್ರವಾಹಗಳು ಮನೋಹರವಾಗಿರುವುದನ್ನೂ, ಮೇಘಗಳು ನೋಡಿ ನಾಚಿಕೆಯಿಂದ ದುಃಖಿಸಿ ಬೆಳ್ಳಗಾದವೋ ಎಂಬಂತೆ ಆಕಾಶದಲ್ಲೆಲ್ಲಾ ಬಿಳಿಯ ಮೋಡಗಳೇ ಕಾಣಿಸುತ್ತಲಿದ್ದವು ಬೆಳ್ದಿಂಗಳಾದರೂ ಎಲ್ಲೆಲ್ಲಿಯೂ ಅಂದವಾಗಿ ಕಾಣಿಸುತ್ತಲಿದ್ದಿತು. ಭೂಮಿಯ ಮೇಲೆಲ್ಲಾ ಪೈರುಪಚ್ಚೆಗಳು ಮಾಗಿ ಚಿನ್ನದ ಬಣ್ಣದಿಂದ ಹೊಳೆಯುತ್ತಲಿರುವುದನ್ನು ನೋಡಿದರೆ ಭೂದೇವಿಯು ಅರಿಶಿನವನ್ನು ಬಳಿದುಕೊಂಡು ಮಂಗಳಕರವಾದ ಕಾಂತಿಯಿಂದ ಕೂಡಿರುವಳೋ ಎಂಬಂತೆ ತೋರಿ ಬರುತ್ತಲಿತ್ತು. ಇಂತಹ ಸುಮನೋಹರವಾದ ಆಶ್ವಯುಜ, ಕಾರ್ತಿಕ ಮಾಸಗಳಿಂದ ಕೂಡಿದ ಶರತ್ಸಮಯದಲ್ಲಿ ಯಜ್ಞಾಶ್ವವು ಮಣಿಪುರವನ್ನು ಬಿಟ್ಟು ಮುಂದೆ ನಡೆಯಿತು. ‖೫‖

ಉಗಿತಧ್ವರಹಯಂ ಧರೆಯಮೇಲೆ ‖ ೫ ‖ ವಿಟನಂತೆಕಾಂತಾರಸರಸದ್ವಿಲಾಸಪರಿ । ಯಟಣದಿಂದೊಪ್ಪಿದುದುಸುಕವೀಂದ್ರನಂತೆಸಂಘಟಿತಚಾತುರ್ಯಪದರಚನೆಯಿಂ ವಿವಿಧವಿಷಯಂಗಳೊಳ್ಕಾಣಿಸಿದುದು ‖ ಭಟನಂತೆಸಮ್ಯಗ್ವಿರಾಜಿತದಭೂಮಿಭೃ । ತ್ಕಟಕಂಗಳಲ್ಲಿಸಂಚರಿಸಿದುದುಪಾಂಡವನ । ಪಟುತರಮಹಾಧ್ವರತುರಂಗಮುಂಬೆಂಬಿಡದೆ ಬಹನೃಪಸೇನೆಸಹಿತ ‖ ೬ ‖ ಪೋದುದಧ್ವರವಾಜಿರತ್ನಪುರವೆಂಬಪುಟ ‖ ಭೇದನದಪತಿಮಯೂರಧ್ವಜನರಾಷ್ಟ್ರಕವ । ನಾದಿಯೊಳ್ತುರಗಮೇಧಂಗಳೇಳಂಮಾಡಿನರ್ಮ

ಅ‖ ವಿ‖ ಪಣ್ಣೆನೆ (ವ್ಯ. ಸ. ಮತ್ತು ವಿ. ಪೂ. ಕ.) ಕರ–ಕೈ, ಕಿರಣ, ಸೊಂಡಿಲು, ಕರೆಕರೆದ (ಅಧಿಕ್ಯದಲ್ಲಿ ದ್ವಿರುಕ್ತಿ) ಹೊಂಬಣ್ಣ–ಹೊನ್ನಿನ ಬಣ್ಣ (ಷ. ತ.) ‖ ೫ ‖

ಟೀ‖ ಪಾಂಡವನ–ಪಾಂಡು ಸುತನಾದ ಫಲುಗುಣನ, ಪಟುತರ–ಬಹುಶಕ್ತಿಯುಳ್ಳ, ಮಹಾಧ್ವರ–ದೊಡ್ಡ ಯಜ್ಞದ, ತುರಗನುಂ–ಕುದುರೆಯನ್ನು, ಬೆಂಬಿಡದೆ–ಹಿಂಬಾಲಿಸಿ, ಬಹ–ಬರತಕ್ಕ, ನೃಪಸೇನೆಸಹಿತ–ರಾಜಬಲದೊಂದಿಗೆ, ವಿಟನಂತೆ–ಕಾಮುಕನಹಾಗೆ, ಕಾಂತಾ–ಸುಂದರಿಯರಾದ ನಾರಿಯರ, ರಸ–ಶೃಂಗಾರರಸವೇ ಮೊದಲಾದ ನವರಸಗಳಿಂದ, ರಸ–ವಿಶ್ವಾಸಹಿತನಾದ, ಲಸತ್–ಹೊಳೆಹೊಳೆವ, ವಿಲಾಸ–ಸುಂದರವಾದ, ಪರಿಯಟಣದಿಂ–ಸುತ್ತುವಿಕೆಯಿಂದ (ಯಜ್ಞಾಶ್ವದಪರವಾದದ್ದು), ಕಾಂತಾರ–ಅರಣ್ಯಗಳೊಳಗೆ, ಲಸತ್–ಬಹಳ್ಳವಾಗಿ ಹೊಳೆಯುವ, ವಿಲಾಸ–ಕ್ರಿಡಾದಿಗಳಲ್ಲಿ, ಪರಿಯಟಣದಿಂ–ತಿರುಗುವಿಕೆಯಿಂದ, ಒಪ್ಪಿದುದು–ನೋಡುವುದಕ್ಕೆ ಅಲಂಕಾರವಾಗಿತ್ತು, (ಕಾಂತಾ–ನಾರಿಯರ, ರವ–ಸಂಗೀತದ, ರಸ–ಮಧುರವಾದ, ಸದ್ವಿಲಾಸ–ಮನ್ಮಥವಿಕಾರವನ್ನುಂಟುಮಾಡುವುದರಲ್ಲಿ, ಪರ್ಯಟನದಿಂದ–ಸುತ್ತುವಿಕೆಯಿಂದ, ಎಂದು ಪಾಠಾಂತರವು) ಸಂಘಟಿತ–ಸೇರಲ್ಪಟ್ಟ, ಚಾತುರ್ಯ–ಚತುರತೆಯಿಂದ ಕೂಡಿದ, ಪದ–ಕಾಲುಗಳನ್ನು, ರಚನೆಯಿಂ–ಇಡೋಣದರಿಂದ, (ಅಶ್ವಪರವಾದ ಅರ್ಥವು) ಸಂಘಟಿತ–ಜೋಡಿಸಲ್ಪಟ್ಟ, ಚಾತುರ್ಯ–ಯುಕ್ತಿಯುಕ್ತವಾದ, ಪದ–ಪಾದಗಳು ಅಥವ ಅಲ್ಲಲ್ಲಿ ನಿಲ್ಲಿಸಬಹುದಾದ ಸ್ಥಳಗಳನ್ನು, ರಚನೆಯಿಂ–ಗೊತ್ತಾಗಿ ಇಡುವುದರಿಂದ, (ಕವಿಯಪರವಾಗಿ) ವಿವಿಧ–ಬೇರೆಬೇರೆಯಾದ, ವಿಷಯಂಗಳೊಳ್–ನಾಡುಗಳಲ್ಲಿಯೂ, ಅಭಿಪ್ರಾಯಗಳಲ್ಲಿಯೂ, (ಕಾಮುಕ ವಸ್ತುಗಳಲ್ಲಿಯೂ) ಸುಕವೀಂದ್ರರಂತೆ – ಯೋಗ್ಯರಾದ ಕವಿಗಳ ತೆರನಾಗಿ, ಕಾಣಿಸಿದುದು–ನೋಟಕರಿಗೆ ಕಾಣಿಸುತ್ತಲಿತ್ತು, ಸಮ್ಯಕ್–ಮೇಲಾಗಿ, ವಿರಾಜಿತ–ಹೊಳೆಹೊಳೆವ, ಭೂಮಿಭೃತ್–ಅರಸುಗಳ, ಕಟಕಂಗಳಲ್ಲಿ–ದಳದೊಂದಿಗೆ, ಭೂಮಿಭೃತ್–ಗಿರಿಗಳ, ಕಟಕಂಗಳಲ್ಲಿ–ಸಾನುಪ್ರದೇಶಗಳಲ್ಲಿ, ಭಟನಂತೆ–ವೀರನನ್ನು ಹೋಲುತ್ತಾ, ಸಂಚರಿಸಿದುದು–ಸುತ್ತುತ್ತಲಿತ್ತು ‖

ಅ‖ ವಿ‖ ಸುಕವೀಂದ್ರ–ಕವಿಗಳ ಇಂದ್ರ (ಷ. ತ. ಮತ್ತು ಸ. ದೀ.) ಸು–ಒಳ್ಳೆ, ಕವೀಂದ್ರ–ಕವಿಗಳಲ್ಲಿ ಮೇಲಾದವನು (ವಿ. ಪೂ.) ಕವಿ–ಸೀರ್ವಕ್ಕಿ, ಕವಿತ್ವಮಾಡುವನು, ಶುಕ್ರನು, ಆವರಿಸುವುದು, ಪಟುತರ ಮಹಾಧ್ವರ ತುರಂಗಮುಂ–ಮಹತ್ತಾದ + ಅಧ್ವರ = ಮಹಾಧ್ವರ (ವಿ. ಪೂ.) ಮಹಾಧ್ವರದ ತುರಂಗಮುಂ (ಷ. ತ.) ಪಟುತರವಾದ ಮಹಾಧ್ವರ ತುರಂಗಂ–(ವಿ. ಪೂ.) ‖ ೬ ‖

ಟೀ‖ ರತ್ನಪುರವೆಂಬ–ರತ್ನಪುರವೆಂಬ ಹೆಸರುಳ್ಳ, ಪುಟಭೇದನದ–ಪಟ್ಟಣದ, ಪತಿ–ಅರಸಾದ, ಮಯೂರಧ್ವಜನ–ನವಿಲನ್ನು ಧ್ವಜದಲ್ಲಿವುಳ್ಳ ರಾಯನ, ರಾಷ್ಟ್ರಕೆ–ನಾಡಿಗೆ, ಅಧ್ವರವಾಜಿ–ಯಾಗದ ಕುದುರೆಯು, ಪೋದುದು–ಹೋಯಿತು, ಅವನು–ಆ ಮಯೂರಧ್ವಜನಾದರೊ, ಆದಿಯೋಳ್ – ಮೊದಲೆ, ಏಳು – ಏಳಾದ, ತುರಗಮೇಧಂಗಳಂ – ಅಶ್ವಮೇಧಯಾಗಗಳನ್ನು, ಮಾಡಿ–ರಚಿಸಿ, ನರ್ಮದಾಟಕೆಬಂದು–ನರ್ಮದಾನದಿಯ ತೀರವನ್ನು ಸೇರಿ, ಎಂಟನೆಯ–ಎಂಟನೆಯದಾದ, ಅಧ್ವರಕೆ–ಯಾಗವಂ ಮಾಡಲು, ಸಾದರದೊಳ್–ಆಸಕ್ತಿಯಿಂದ, ದೀಕ್ಷಿತನಾಗಿ–ದೀಕ್ಷಾಬದ್ಧನಾಗಿ, ಹಯಮುಂ–ಅಶ್ವವನ್ನು, ಮೇದಿ

ಕಾಮುಕನು ಕಾಂತೆಯೊಂದಿಗೆ ಬೆರೆಯುವೆನೆಂಬುತ್ಸುಕದಿಂದಲೂ, ನಾನಾವಿಷಯಂಗಳಂ ಸಂಗ್ರಹಿಸಿ ಉತ್ತಮವಾದ ಪದಸರಣಿಯಿಂ ಮೆರೆವ ಕವಿತ್ವವನ್ನು ಮಾಡಶಕ್ಯ ಕವಶ್ರೇಷ್ಠನಂತೆ, ದೇಶದೇಶಂಗಳಂ ತಿರುತಿರುಗಿ ತನ್ನ ಪದಚಮತ್ಕಾರಮಂ ತೋರಿಸುತ್ತಲೂ ರಾಜಾಧಿರಾಜರ ಮಧ್ಯದಲ್ಲೆಲ್ಲಾ ನುಗ್ಗುವ ಭಟನಹಾಗೆ ತಾನೂ ಅನೇಕ ವೀರಾಗ್ರಣಿಗಳ ನಡುವೆ ಕಂಗೊಳಿಸುತ್ತಲೂ ಇರುವ ಧರ್ಮರಾಯನ ಯಾಗದ ತುರಂಗಮವು ಅರ್ಜುನಾದಿ ವೀರಾಗ್ರಣಿಗಳಿಂದಲೂ, ಪರಮ ಪಾವನನಾದ ಕೃಷ್ಣಸ್ವಾಮಿಯಿಂದಲೂ ಕೂಡಿ ದೇಶದೇಶಗಳಲ್ಲೆಲ್ಲಾ ಸುತ್ತಿಸುತ್ತಿ ಹೋಗುತ್ತ ‖ ೬ ‖ ರತ್ನಪುರವೆಂಬ ನಗರವನ್ನು ಸೇರಿತು. ಆರಾಜ್ಯಕ್ಕೆ ಮಯೂರಧ್ವಜನೆಂಬುವನು ಅರಸಾಗಿದ್ದನು. ಆ ಮಹಾರಾಜನಾದರೊ ಮೊದಲು ಏಳಶ್ವಮೇಧಂಗಳಂ ಮಾಡಿ ಮತ್ತೊಂದು ಯಾಗವಂ ನೆರವೇರಿಸ ಬೇಕೆಂದುಜ್ಜುಗಿಸಿ ನರ್ಮದಾ ನದಿಯ ತೀರಕ್ಕೆ ಬಂದು, ದೀಕ್ಷಾಬದ್ಧನಾಗಿ, ತನ್ನ ಕುವರನಾದ ತಾಮ್ರಧ್ವಜನ ಬೆಂಗಾವಲಿನಿಂದ ಯಜ್ಞಾಶ್ವವನ್ನು ದೇಶಾಟನೆಗಾಗಿ ಕಳುಹಿದನು. ತಂದೆಯ ಅಪ್ಪಣೆಯ ಪ್ರಕಾರ ಯಾಗದ ಕುದು

ದಾತಟಿಕೆಬಂದು ॥ ಸಾದರದೊಳಿಂಟಿನೆಯುಮುಖಕೆದೀಕ್ಷಿತನಾಗಿ । ಮೇದಿನಿಯಮೇಲೆಹಯಮಂಬಿಡಲ್ಕಿದಿರಾಗಿ । ಬೀದಿಯೊಳ್ಬರುತಿರ್ದುದಾನೃಪನಸೂನುತಾಮ್ರಧ್ವಜನಕಾಪಿನಿಂದ ॥೭॥ ಕ್ಷೋಣೀಶೇಂದ್ರಕೇಳೀತುರಗಮಾಕುದುರೆಯಂ । ಕಾಣುತ್ತ ಧ್ವನಿಗೈದುಪರಿತಂದುಮೊಗನನಾ । ಘ್ರಾಣಿಸಿಮಿಳಿಚಿನಕಿವಿಗಳನೊಡನೆಪೆರೆತೆಗೆದುಮುಂಗಾಲ್ಗಳಿಂದಡರ್ದು ॥ ಮೇಣೊಂದನೊಂದೊದೆದುಹಿಂದಣಖುರಂಗಳಿಂ । ಮಾಣದಡಿಗಡಿಗೆಗಂಧದತೀಟೆಗಳತೀಡಿಮಾಣಿಕ್ಯಮುಕ್ತಾಳಿಗಳಭೂಷಣಂಗಳಂಪರಿದಿಕ್ಕಿಬಿಡುಗೊಂಡವು ॥೮॥ ಭಾರಣೆಯಬಲದೊಡನೆಕುದುರೆಗಾವಲೊಳಿರ್ದ । ವೀರತಾಮ್ರಧ್ವಜನಮಂತ್ರಿನಕುಲಧ್ವಜಂ । ದೂರದೊಳ್ಕಂಡನೀತೆರನಂವಿಚಾರಿಸಿದನೆತ್ತಣತುರಂಗವೆಂದು ॥ ಚಾರರಂಕಳುಹಿತರಿಸಿದನದರಮಸ್ತಕದೊ । ಳಾರಾಜಿಸುವಕನಕಪಟ್ಟಲಿಖಿತವನೋದಿ । ಭೂರಮಣಧರ್ಮಜನಬಿರುದುಗಳವಿಸ್ತರವನೊಡೆಯಂಗೆಕೇಳಿಸಿದನು ॥ ೯ ॥ ಕೇಳುತಕನಲ್ದುತಾಮ್ರಧ್ವಜಂ

---

ಸಿಯ-ಇಳೆಯ, ಮೇಲೆ-ಸಂಚರಿಸಿಕೊಂಡು ಬರಲು, ಬಿಡಲ್ಕೆ-ಬಿಡುವುದಕ್ಕಾಗಿ, ಆ ನೃಪನಸೂನು-ಆ ಮಯೂರಧ್ವಜನ-ಕುವರನಾದ, ತಾಮ್ರಧ್ವಜನ-ತಾಮ್ರಧ್ವಜನೆಂಬ ಹೆಸರಿನಿಂದ ಕೂಡಿದವನ, ಕಾಪಿನಿಂದ-ರಕ್ಷಣೆಯಿಂದ, ಆ ಹಯಂ-ಆ ಅಶ್ವವು, ಇದಿರಾಗಿ-ಅರ್ಜುನನಿಗೆದುರಿನಲ್ಲಿ, ಬರುತಿರ್ದುದು-ಬರುತ್ತಲಿದ್ದಿತು. ॥ ೭ ॥

ಟೀ॥ ಕ್ಷೋಣೀಶೇಂದ್ರ-ಭೂಕಾಂತನಾದ ಜನಮೇಜಯನೆ, ಕೇಳು-ಲಾಲಿಸು, ಈತುರಂಗಂ-ಫಲುಗುಣನ ಯಜ್ಞಾಶ್ವವು, ಆ ಕುದುರೆಯಂ-ತಾಮ್ರಧ್ವಜನ ಬೆಂಗಾವಲಿನಿಂದೆ ಬರುವ ವಾಜಿಯನ್ನು, ಕಾಣುತ-ಈಕ್ಷಿಸಿದ ಕೂಡಲೆ, ಧ್ವನಿಗೈದು-ಕೆನೆಯುತ್ತಾ, ಪರಿತಂದು-ಓಡಿಬಂದು, ಮೊಗನನು-ಮೋರೆಯನ್ನು, ಅಘ್ರಾಣಿಸಿ-ಮೂಸಿನೋಡಿ, ಒಡನೆ-ತತ್ಕ್ಷಣವೇ, ಕಿವಿಗಳನು-ಶ್ರೋತ್ರಂಗಳನ್ನು. ಮಿಳಿರ್ಚಿ-ಮೇಲಕ್ಕೆಬ್ಬಿಸಿ, ಪೆರೆತೆಗೆದು-ಉಬ್ಬಿ, ಮುಂಗಾಲ್ಗಳಿಂದ-ಮುಂದಿನ ಕಾಲುಗಳ ಕಡೆಯ ಮೂಲಕ, ಅಡರ್ದು-ಒಂದು ಮತ್ತೊಂದರ ಮೇಲೆ ಏರುತ್ತಾ, ಮೇಣ್-ಅಲ್ಲದೆ, ಒಂದನು-ಒಂದು ಹಯವನ್ನು, ಒಂದು-ಮತ್ತೊಂದು, ಹಿಂದಣಖುರಂಗಳಿಂದ-ಹಿಂಗಾಲ್ಗಳ ಖುರಪುಟಂಗಳಿಂದ, ಒದೆದು-ಝಾಡಿಸಿ, ಗಂಧದ-ಪರಿಮಳದ, ತೀಟೆಗಳ-ಸುವಾಸನೆಯನ್ನು, ಅಡಿಗಡಿಗೆ-ಬಾರಿಬಾರಿಗೂ, ತೀಡಿ-ಗೈದು, ಮಾಣಿಕ್ಯ-ಮಾಣಿಕ್ಯವಿಶಿಷ್ಟವಾದ, ಮುಕ್ತಾವಳಿಗಳ-ಮುತ್ತಿನ ಗುಚ್ಛಂಗಳ, ಭೂಷಣಂಗಳಂ-ಆಭರಣಗಳನ್ನೆಲ್ಲಾ, ಪರಿದಿಕ್ಕಿ-ಕಿತ್ತುಬಿಸುಟು, ಬಿಡುಗೊಂಡವು-ಸ್ವೇಚ್ಛೆಯಾಗಿದ್ದವು. ॥ ೮ ॥

ಟೀ॥ ಭಾರಣೆಯ-ಪರಾಕ್ರಮಾತಿಶಯದಿಂದ ಕೂಡಿದ, ಬಲದೊಡನೆ - ದಳಸಹಿತವಾಗಿ, ಕುದುರೆಗಾವಲೊಳು-ಯಜ್ಞಾಶ್ವದ ಕಕ್ಷಣೆಯಲ್ಲಿ, ಇರ್ದ-ಇದ್ದಂಥಾ, ವೀರ-ಶೂರನಾದ, ತಾಮ್ರಧ್ವಜನ-ತಾಮ್ರಧ್ವಜನೆಂಬಾತನ, ಮಂತ್ರಿ-ಅಮಾತ್ಯನಾದ, ನಕುಲಧ್ವಜಂ-ನಕುಲಧ್ವಜನೆಂಬಾತನು, ದೂರದೊಳ್ - ದೂರದಲ್ಲಿರುವಾಗಲೆ, ಈತೆರನಂ - ಕುದುರೆಗಳ ಕಾಳಗವನ್ನು, ಕಂಡನು-ನಿರುಕಿಸಿದನು, ಎತ್ತಣ-ಎಲ್ಲಿಂದ ಬಂದಿರತಕ್ಕ, ತುರಗಂ-ಹಯವು, ಎಂದು-ಎಂಬ ತೆರನಾಗಿ, ವಿಚಾರಿಸಿದನು-ವಿಚಾರ ಮಾಡಿದನು, ಅದರ ಮಸ್ತಕದೊಳು-ಆ ಅಶ್ವದ ತಲೆಯಮೇಲೆ, ಆ ರಾಜಿಸುವ-ಹೊಳೆಯುತ್ತಲಿರುವ, ಕನಕ-ಭಂಗಾರದ, ಪಟ್ಟ-ತಗಡಿನಲ್ಲಿರುವ, ಲಿಖಿತವನು-ಬರವಣಿಗೆಯನ್ನು, (ಬಿರುದಾವಳಿಯನ್ನು) ಚಾರರಂ - ಸೇವಕಜನರನ್ನು, ಕಳುಹಿ-ಕಳುಹಿಸಿ, ತರಿಸಿದನು-ತರಿಸಿದವನಾದನು, ಭೂರಮಣ-ಪೃಥ್ವೀಶ್ವರನಾದ, ಧರ್ಮಜನ-ಧರ್ಮಸುತನ, ಬಿರುದುಗಳ-ಬಿರುದಾವಳಿಯ, ವಿಸ್ತರವನು-ವಿಶಾಲತೆಯನ್ನು, ಓದಿ-ತಾನು ಓದಿಕೊಂಡು, ಒಡೆಯಂಗೆ-ತನ್ನ ಯಜಮಾನನಾದ ತಾಮ್ರಧ್ವಜನಿಗೆ, ಕೇಳಿಸಿದನು-ಶ್ರುತಪಡಿಸಿದನು ॥ ೯ ॥

---

ರೆಯನ್ನು ಮುಂದುಮಾಡಿಕೊಂಡು ತಾಮ್ರಧ್ವಜನು ಅಪಾರವಾದ ಸೇನಾರ್ಣವದಿಂದ ಕೂಡಿ ಬರುತ್ತಲಿದ್ದನು. ॥ ೭ ॥ ಭೂಕಾಂತನಾದ ಜನಮೇಜಯನೆ ಕೇಳು, ತಾಮ್ರಧ್ವಜನ ಜತೆಯಲ್ಲಿ ಬರುತ್ತಲಿರುವ ಯಜ್ಞಾಶ್ವವನ್ನು ಅರ್ಜುನನ ಬೆಂಗಾವಲಿನಿಂದೈತರುತಿರ್ಪ ಯುಧಿಷ್ಠಿರನ ತುರಂಗಮವು ಕಂಡು ಕೆನೆಯುತ್ತಾ ಹತ್ತಿರಕ್ಕೆ ಓಡಿಬಂದು ಅದರ ಮುಖವನ್ನು ಮೂಸಿನೋಡಿ, ಕಿವಿಗಳನ್ನು ಮೇಲಕ್ಕೆ ಮಾಡಿಕೊಂಡು, ಮುಂಗಾಲುಗಳನ್ನು ಆ ಕುದುರೆಯ ಮೇಲೆ ಹಾಕಲಾಗಿ, ತಾಮ್ರಧ್ವಜನ ಕುದುರೆಯೂ ಸುಮ್ಮನಿರದೆ ಪಾರ್ಥನ ತುರಂಗವನ್ನು ತನ್ನ ಹಿಂಗಾಲ್ಗಳಿಂದ ಒದೆಯಲಾರಂಭಿಸಿದ್ದಲ್ಲದೆ ಪರಸ್ಪರ ಅವುಗಳ ಮೈಮೇಲಿದ್ದ ಮುತ್ತಿನ ಸರವೇ ಮೊದಲಾದ ಹಾರಗಳನ್ನೂ ಕೂಡ ಕಿತ್ತು ಹಾಕಿಬಿಟ್ಟವು. ॥ ೮ ॥ ಇವೆರಡು ಕುದುರೆಗಳೂ ಈಪರಿ ಕಾದಾಡುತ್ತಲಿರುವುದನ್ನು ದೂರದಲ್ಲಿದ್ದ ನಕುಲಧ್ವಜನೆಂಬ ತಾಮ್ರಕೇತುವಿನ ಸಚಿವೇಂದ್ರನು ಕಂಡು, ಈ ಕುದುರೆಯ ವೃತ್ತಾಂತವನ್ನೆಲ್ಲಾ ಚಾರರಿಂದು ತಿಳಿದು, ಆ ಹಯದ ಹಣೆಯಲ್ಲಿ ಬಿಗಿದಿದ್ದ, ಚಾರರು ತಂದುಕೊಟ್ಟ ಕನಕ ಪಟ್ಟದಲ್ಲಿರುವ ಯುಧಿಷ್ಠಿರ ನರೇಂದ್ರನ ಬಿರುದಾವಳಿಯನ್ನೆಲ್ಲಾ ಓದಿಕೊಂಡು, ತನ್ನೊಡೆಯನಾದ ತಾಮ್ರಧ್ವಜನಿಗೆ ಸಾಂಗವಾಗಿ ತಿಳಿಸಿದನು ॥ ೯ ॥ ತನ್ನ ಮಂತ್ರಿಯು ಹೇಳಿದ ಯುಧಿಷ್ಠಿರನ ಪ್ರತಾಪದ ನುಡಿಗಳನ್ನು ತಾಮ್ರಧ್ವಜನು ಕೇಳಿ, ಕೋಪಾಟೋಪದಿಂದೊಡಗೂಡಿ,

ಕಟ್ಟಿದಂ | ತೋಳಬಲ್ಪಿಂದಪಾರ್ಥನತುರಗಮಂಬಳಿಕ | ಮೇಳೈಸಿನಿಲಿಸಿದಂನಿಜಬಲದಫೌಜುಗಳನರ್ಧಚಂದ್ರಾಕೃತಿಯೊಳು ||
ಏಳಧ್ವರಂಪಿಂತೆಕೃಷ್ಣವರ್ಜಿತಮಾಯ್ತು | ಪೇಳಲೇನಿದುಕೃಷ್ಣಸಂಯುಕ್ತಮಾದಪುದು | ಕಾಳಗಂಕೃಷ್ಣನೋಳ್ದೊರ
ಕೊಂಬುದೀಗಳೆಂದುಬ್ಬೇರಿದಂಮುದದೊಳು || ೧೦ || ತಂದೆಯಮಹಾಧ್ವರಕೆಕೃಷ್ಣನೊಡಗೂಡುವಂ | ಮುಂದೆಪಾಂಡವ
ವೀರರೊಳ್ತನಗೆಕಾಳಗಂ | ಬಂದಪುದುಲೇಸಾದುದೆಂದುತಾಮ್ರಧ್ವಜಂನಕುಲಧ್ವಜನೊಳಾಡಲು || ಮಂದಪೌರುಷದಲ್ಪ
ಭಾಗ್ಯಮತಿಕೃಶಮಾದ | ಮಂದಿಕುದುರೆಯಮೇದಿನೀಶ್ವರರ್ಕಾಳಗಕೆ | ನಿಂದಪರೆನಿನ್ನೊಳಿದುಪುಸಿಯೆನುತಮತ್ತವಂ
ನಸುನಗೆಯೊಳಿಂತೆಂದನು || ೧೧ || ಛಪ್ಪನ್ನದೇಶದೊಳ್ನಿನಗೆಮಲತಿದಿರಾಗಿ | ಬಪ್ಪಭೂಮಿಪರಿಲ್ಲನಿಮ್ಮಯ್ಯನರಮನೆಯೊ |
ಳೊಪ್ಪಂಬಡೆದನರ್ತಕೀಜನದನಿತ್ಯಪುಷ್ಪಾಂಜಲಿಯಸಂಗ್ರಹಕ್ಕೆ || ತಪ್ಪದೆಂದುಂತೆರುವಕಟ್ಟಳೆಯಮುತ್ತುಗಳ | ಕಪ್ಪಮಂ

ಟೀ|| ತಾಮ್ರಧ್ವಜನು-ಮಯೂರಧ್ವಜನ ಪುತ್ರನು, ಕೇಳುತ-ಈ ಮಾತನ್ನು ಕೇಳಿದ ಕೂಡಲೆ, ಕನಲ್ದು - ಆಗ್ರಹಗೊಂಡು, ಪಾರ್ಥನ - ಫಲುಗುಣನ, ತುರಗಮಂ - ಹಯವನ್ನು, ತೋಳಬಲ್ಪಿಂದ - ಬಾಹುಪರಾಕ್ರಮದಿಂದ, ಕಟ್ಟಿದಂ-ಕಟ್ಟಿದವನಾದನು, ಬಳಿಕ-ಆಮೇಲೆ, ನಿಜಬಲದ-ತನ್ನ ದಳದ, ಫೌಜುಗಳನು-ಚತುರಂಗಬಲವನ್ನೂ, ಮೇಳೈಸಿ-ಒಟ್ಟು ಗೂಡಿಸಿ, ಅರ್ಧಚಂದ್ರಾಕೃತಿಯೊಳು - ಅರ್ಧಚಂದ್ರನ ಆಕಾರದಂತೆ, ನಿಲಿಸಿದಂ - ನಿಲ್ಲಿಸಿದವನಾದನು, ಏಳಧ್ವರಂ-ಸಪ್ತಾಶ್ವಮೇಧಂಗಳು, ಪಿಂತೆ-ಪೂರ್ವದಲ್ಲಿ, ಕೃಷ್ಣವರ್ಜಿತಂ-ಕೃಷ್ಣನಿಂದ ಬಿಡಲ್ಪಟ್ಟದ್ದು, ಆಯ್ತು - ಆಗಿಬಿಟ್ಟಿತು, ಇದು - ಈ ಯಾಗವಾದರೊ, ಕೃಷ್ಣಸಂಯುಕ್ತಂ-ಕೃಷ್ಣನಿಂದೊಡಗೂಡಿದ್ದು, ಆದಪುದು - ಆಗುತ್ತದೆ, ಪೇಳಲೇನು - ಇನ್ನು ಹೇಳತಕ್ಕದ್ದೇನಿರುವುದು, ಈಗ-ಈಗಲಾದರೊ, ಕೃಷ್ಣನೊಳ್ - ಕೃಷ್ಣನೊಂದಿಗೆ, ಕಾಳಗಂ - ರಣವು, ದೊರಕೊಂಬುದು - ಉಂಟಾಗುವುದು, ಎಂದು-ಎಂಬತೆರನಾಗಿ, ಮುದದೊಳ್-ಆನಂದದಿಂದ, ಉಬ್ಬೇರಿದಂ-ಉಬ್ಬಿ ಮೆರೆಯಲುಜ್ಜುಗಿಸಿದನು. ||೧೦||

ಟೀ|| ತಾಮ್ರಧ್ವಜಂ-ತಾಮ್ರಧ್ವಜನೆಂಬುವನು, ಮುಂದೆ - ಇನ್ನುಮುಂದೆ, ತಂದೆಯ - ಜನಕನಾದ ಮಯೂರಧ್ವಜನು ಮಾಡತಕ್ಕ, ಮಹಾಧ್ವರಕೆ-ದೊಡ್ಡ ಯಾಗಕ್ಕೆ, ಕೃಷ್ಣನು - ಕೃಷ್ಣಸ್ವಾಮಿಯು, ಒಡಗೂಡುವಂ - ಸೇರುತ್ತಾನೆ, ತನಿಗೆ-ನನಿಗಾದರೊ, ಪಾಂಡವವೀರರೊಳ್ - ಅರ್ಜುನನ ಬಲದೊಂದಿಗೆ, ಕಾಳಗಂ - ಸಮರವು, ಬಂದಪುದು-ಒದಗುವುದು, ಲೇಸಾದುದು-ಮೇಲಾಯಿತು, ಎಂದು-ಎಂಬತೆರನಾಗಿ, ನಕುಲಧ್ವಜನೊಳು - ನಕುಲಧ್ವಜನೊಂದಿಗೆ, ಆಡಲು-ನುಡಿಯಲು, ಮಂದಪೌರುಷದ - ಬಲಹೀನವಾದ, ಅಲ್ಪಭಾಗ್ಯಂ - ಭಾಗ್ಯರಹಿತವು, ಅತಿಕೃಶಮಾದ - ಬಹು ಕಡಿಮೆಯಾದ, ಮಂದಿ-ಪ್ರಜೆಗಳು, ಕುದುರೆಯು - ಅಶ್ವಗಳಿಂದ ಕೂಡಿದ, ಮೇದಿನೀಶರ್ - ಅರಸುಗಳು, ನಿನ್ನೊಳು - ನಿನ್ನಕೂಡ, ಕಾಳಗಕೆ-ಯುದ್ಧಮಾಡುವುದಕ್ಕೆ, ನಿಂದಪರೆ - ಎದುರಾಗುತ್ತಾರೆಯೇ, ಇದು-ಪಾಂಡವರ ಸೇನೆಯು ನಿನಿಗೆದುರಾಗುವುದು, ಪುಸಿ - ಅಸತ್ಯತವು, ಎನುತ - ಎಂಬ ತೆರನಾಗಿ, ನಸುನಗೆಯೊಳು - ಮಂದಹಾಸದಿಂದ, ಅವಂ-ಆ ತಾಮ್ರಧ್ವಜನ ಮಂತ್ರಿಯು, ಇಂತು-ಈ ತೆರನಾಗಿ, ಎಂದನು-ನುಡಿದನು. ||೧೧||

ಟೀ|| ನಿನಿಗೆ-ನಿನಿಗಾದರೊ, ಮಲತು-ವ್ಯತಿರಿಕ್ತವಾಗಿ, ಇದಿರಾಗಿ-ಎದುರುಬಿದ್ದು, ಬಪ್ಪ-ಬರತಕ್ಕ, ಭೂಮಿಪರು-ಅರಸುಗಳು, ಛಪ್ಪನ್ನದೇಶದೊಳು-ಐವತ್ತಾರು ನಾಡುಗಳೊಳಗೂ, ಇಲ್ಲ-ಇಲ್ಲವು, ನಿಮ್ಮಯ್ಯನ-ನಿಮ್ಮ ತಂದೆಯ, ಅರಮನೆಯೊಳು-ರಾಜಭವನದೊಳಗೆ, ಒಪ್ಪಂಬಡೆದ-ಗೊತ್ತಾಗಿರುವ, ನರ್ತಕೀಜನ-ನಾಟ್ಯಗಾತಿಯರು, ನಿತ್ಯ-ಅನವರತವೂ, ಪುಷ್ಪಾಂಜಲಿಯ - ಮುತ್ತುಗಳಿಂದ ತುಂಬಿದ ಬೊಗಸೆಯ, ಸಂಗ್ರಹಕೆ - ಸೇರುವಿಕೆಗೆ, ತಪ್ಪದು - ತಪ್ಪತಕ್ಕದ್ದಲ್ಲವು, ಎಂದುಂ - ಸದಾ

ಅವನ ಯಾಗದ ಹಯವನ್ನು ತಂದು ಬಿಗಿದು, ತನ್ನ ಸಕಲ ಪರಿವಾರವನ್ನು ಅರ್ಧಚಂದ್ರಾಕಾರದಿಂದ ನಿಲ್ಲಿಸಿ. ಹಿಂದೆ ನಡೆದ ಅಶ್ವಮೇಧಂಗಳೇಳೂ ಕೃಷ್ಣನಿಲ್ಲದೆಯೆ ನಡೆದಿರುವವು. ನಮ್ಮತಂದೆಯು ಮಾಡಲುಜ್ಜುಗಿಸುತ್ತಲಿರುವ ಈ ಯಾಗವಾದರೊ ಕೃಷ್ಣಸಮೇತವಾಗಿ ನಡೆಯುವುದೆಂಬತ್ಯುತ್ಸವದಿಂ ಕೂಡಿ, ||೧೦|| ನಕುಲಧ್ವಜನನ್ನು ಕುರಿತು, ಎಲೈ ಮಂತ್ರಿವರ್ಯನೆ, ಪೂರ್ವದಲ್ಲಿ ನಡೆದ ಯಜ್ಞಗಳಿಗಿಂತಲೂ ಈಗ ನಮ್ಮ ತಂದೆಯು ಮಾಡುವ ಯಾಗಕ್ಕೆ ಕೃಷ್ಣನೂ ಬಂದೊದಗುವನು. ಪಾಂಡವರೊಡನೆ ಯುದ್ಧಮಾಡಬೇಕಾಗುವುದು, ಒಳ್ಳೇದು, ಆಗಲಿ, ಎಂದು ನುಡಿದನು, ತಾಮ್ರಧ್ವಜನ ಈ ತೆರನಾದ ನುಡಿಗಳನ್ನು ಕೇಳಿದನಕುಲಧ್ವಜನು, ಮುಗುಳ್ನಗೆಯಿಂದ ಕೂಡಿ, ಎಲೈ ಪ್ರಭುವೆ, ಮಂದಭಾಗ್ಯರೂ, ಅಬಲರಾದ ಸೈನಿಕರಿಂದ ಕೂಡಿದವರೂ ಆದ ಪಾಂಡವರು ವೀರನಾದ ನಿನ್ನೊಂದಿಗೆ ನಿಂತು ಹೋರಾಡುವುದೆಂದರೇನು? ಇದು ಅಸಂಭವವು. ||೧೧|| ಐವತ್ತಾರು ದೇಶಗಳಲ್ಲಿರುವ ರಾಜರಲ್ಲಿ ಯಾರುತಾನೆ ನಿನಿಗೆದುರಾಗಿ ನಿಂತು ಬಾಳಿಯಾರು? ನಿಮ್ಮ ತಂದೆಯಾದ ಮಯೂರಧ್ವಜನ ರಾಜಭವನದಲ್ಲಿ ನಾಟ್ಯವಾಡತಕ್ಕ ನಟಿಯರ ಪುಷ್ಪಾಂಜಲಿಗಾಗಿ ಬಭ್ರುವಾಹನನು ಮುತ್ತಿನ ರಾಶಿಗಳ ಕಪ್ಪವನ್ನರ್ಪಿಸಲು ಸೇನಾಸಮೇತನಾಗಿ

ಕೊಂಡುಬಂದನೋ ಬಭ್ರುವಾಹನಂ | ಸಪ್ಪುಳಿದು ಪೊಸತೆತ್ತಣದು ಸೈನ್ಯಮೆನೆ ತಾಮ್ರಕೇತು ಮಗುಳಿಂತೆಂದನು |೧೨|| ಧಾತ್ರಿಯೊಳ್ವೀರರಿಲ್ಲಿನ್ನದಿರ್ನಾರದಂ | ರಾತ್ರಿಯೊಳ್ಬಂದೆನ್ನೊಳಾಡಿದಂ ಧರೆಗೆ ತಿ | ಕ್ಷಾತ್ರಪೌರುಷದಿಂದ ವರ್ತಿಪರ್ಬಭ್ರುವಾಹನನ ಕರ್ಣತನಯರೆಂದು || ಗೋತ್ರಾರಿಪುತ್ರದಾನವಸೂದನರ್ಮನುಜ | ಮಾತ್ರರಲ್ಲಿವರು ನರನಾರಾಯಣರ್ಕಮಲ | ನೇತ್ರಸಮರನಿರುದ್ಧಸಾತ್ಯಕಿಪ್ರದ್ಯುಮ್ನಭೋಜಾದಿಯದುಗಳೆಂದು || ೧೩ || ಉದ್ಧತಪರಾಕ್ರಮಿಗಳನಿಬರಿಂದಿವರೊಡನೆ | ಯುದ್ಧಮಾದಪುದೆಮಗೆ ನಮ್ಮಖಿಳಸೇನೆಸ | ನ್ನದ್ಧಮಾಗಿರಲರ್ಧಚಂದ್ರಾಕೃತಿಯೊಳೆಂದು ತಾಮ್ರಧ್ವಜಂ ಮಂತ್ರಿಗೆ || ಬುದ್ಧಿಗಲಿಸಿದನಿತ್ತ ಪಾಂಡವನಬಲದೊಳ್ಪ್ರ | ಸಿದ್ಧಭಟರನುಸಾಲ್ವಕರ್ಣಸುತಸಾಂಬಾನಿ | ರುದ್ಧಕೃತವರ್ಮಾದಿಗಳ್ಮಸಗಿತಶ್ವಮಂ ಬಿಡಿಸಿ

---

ಕಾಲದಲ್ಲಿಯೂ, ತೆರುವ – ಕೊಡಬೇಕಾಗಿರುವ, ಕಟ್ಟಳೆಯ – ನಿಷ್ಕರ್ಷೆಯಾಗಿರತಕ್ಕ, ಮುತ್ತುಗಳಕಪ್ಪಮಂ – ಮುತ್ತುಗಳ ಕಾಣಿಕೆಗಳನ್ನು, ಬಭ್ರುವಾಹನಂ – ಪಾರ್ಥಜನು, ಕೊಂಡುಬಂದನೊ – ತೆಗೆದುಕೊಂಡುಬಂದಿರುವನೊ, ಇದು ಸಪ್ಪುಳು– ಈ ದನಿಯು, ಸೈನ್ಯಂ–ದಳವೂ, ಪೊಸದು–ಹೊಸದಾಗಿದೆ, ಎತ್ತಣದು – ಎಲ್ಲಿಂದ ಬಂದಿರುವುದು, ಎನೆ–ಎಂದು ನುಡಿಯಲು, ಮಗುಳೆ–ತಿರುಗಿ, ತಾಮ್ರಕೇತು–ತಾಮ್ರಧ್ವಜನು, ಇಂತು–ಮುಂದೆ ಹೇಳುವಂತೆ, ಎಂದನು–ನುಡಿದನು.

ಅ|| ವಿ|| ಭೂಮಿಪ–ಭೂಮಿ–ಭೂಮಿಯನ್ನು, ಪ–ರಕ್ಷಿಸುವರು (ದ್ವಿ. ತ.) ||೧೨||

ಟೀ|| ಧಾತ್ರಿಯೊಳ್ – ಭೂಮಿಯಲ್ಲಿ, ವೀರರು – ಪರಾಕ್ರಮಿಗಳು, ಇಲ್ಲ – ಇಲ್ಲವು, ಎನ್ನದೆ – ಎಂದು ನುಡಿಯದೆ, ಇರು – ಇರುವನಾಗು, ರಾತ್ರಿಯೊಳ್ – ನಿನ್ನೆಯರಾತ್ರಿ, ನಾರದಂ–ಜ್ಞಾನಪ್ರದನಾದ ನಾರದ ಮಹಾಮುನಿಯು, ಬಂದು–ನಾನಿದ್ದೆಡೆಗೆ ಬಂದವನಾಗಿ, ಬಭ್ರುವಾಹನಕರ್ಣತನಯರು – ಬಭ್ರುವಾಹನ – ಮುಂಗಸಿಯನ್ನು ಧ್ವಜಪಟದಲ್ಲಿ ಉಳ್ಳ ಅರ್ಜುನನ ಮಗನೂ, ಕರ್ಣತನಯರು – ಕರ್ಣಸುತನೂ ಸಹ, ಧರೆಗೆ – ಭೂಮಂಡಲದಲ್ಲಿ, ಅತಿಕ್ಷಾತ್ರಪೌರುಷದಿಂದ – ಬಹು ಹೆಚ್ಚಾದ ಶೌರ್ಯವುಳ್ಳವರಾಗಿ, ವರ್ತಿಪರು – ಇದ್ದಾರೆ, ಎಂದು – ಎಂಬುದಾಗಿಯೂ, ಗೋತ್ರಾರಿಪುತ್ರ – ಫಲುಗುಣನೂ, ದಾನವಸೂದನರ್ – ಕೃಷ್ಣನೂ ಸಹ, ಮನುಜಮಾತ್ರರಲ್ಲ – ಎಲ್ಲರಂತೆ ಮನುಷ್ಯರಲ್ಲವು, ಇವರು – ಇವರಿಬ್ಬರೂ, ನರನಾರಾಯಣರು – ಮನುಷ್ಯರ ರೂಪನಂ ಧರಿಸುವ ದೇವರುಗಳು, ಅನಿರುದ್ಧ – ಅನಿರುದ್ಧನೆಂಬಾತನು, ಸಾತ್ಯಕಿ – ಸತ್ಯಕನ ಮಗನೂ, ಪ್ರದ್ಯುಮ್ನ – ಪ್ರದ್ಯುಮ್ನನೆಂಬವನೂ, ಭೋಜ – ಭೋಜನೂ, ಆದಿ – ಮೊದಲಾಗಿರತಕ್ಕ, ಯದುಗಳು – ಯದುವಂಶೀಯರಾದರೊ, ಕಮಲನೇತ್ರಸಮರು – ಕಮಲಾಕ್ಷನಾದ ಶ್ರೀಮನ್ನಾರಾಯಣ ಮೂರ್ತಿಗೆ ಸದೃಶರಾಗಿರುವರು, ಎಂದು – ಎಂಬತೆರನಾಗಿ, ಆಡಿದಂ–ನುಡಿದನು.

ಅ|| ವಿ|| ಗೋತ್ರಾರಿಪುತ್ರ – ಗೋತ್ರ – ಪರ್ವತಗಳ, ಅರಿ–ಹಗೆಯು (ಇಂದ್ರನು, ಷ. ತ) ಗೋತ್ರಾರಿಯ ಪುತ್ರ (ಷ. ತ.) ಇಂದ್ರನ ಮಗನು (ಅರ್ಜುನನು) ದಾನವಸೂದನ–ದಾನವ – ರಾಕ್ಷಸರನ್ನು, ಸೂದನ – ಕೊಂದು ಹಾಕಿದವನು (ದ್ವಿ. ತ.) ಕಮಲನೇತ್ರ–ಕಮಲದಂತೆ ನೇತ್ರವು ಯಾರಿಗೊ ಅವನು (ಬ. ಸ.) ||೧೩||

ಟೀ|| ತಾಮ್ರಧ್ವಜಂ–ತಾಮ್ರಧ್ವಜನೆಂಬ ಮಯೂರಧ್ವಜನ ಸುತನು, ಮಂತ್ರಿಗೆ–ತನ್ನ ಮಂತ್ರಿಯಾದ ನಕುಲಧ್ವಜನೊಂದಿಗೆ, ಎಮಗೆ–ನಮಿಗಾದರೊ, ಉದ್ಧತ–ಕಠಿಣವಾದ, ಪರಾಕ್ರಮಿಗಳು–ವೀರರಾದ, ಅನಿಬರೊಡನೆ–ಅನಿರುದ್ಧಾದಿ ಸಕಲರೊಂದಿಗೂ, ಯುದ್ಧಂ–ರಣವು, ಆದಪುದು–ಆಗುತ್ತದೆ, ನಮ್ಮ–ನಮ್ಮದಾದ, ಅಖಿಳಸೇನೆ–ಸೈನ್ಯವೆಲ್ಲಾ, ಅರ್ಧಚಂದ್ರಾಕೃತಿಯೊಳು–ಅರ್ಧಚಂದ್ರನ ತೆರನಾಗಿ, ಸನ್ನದ್ಧಮಾಗಿ–ಅನುವಾಗಿ, ಇರಲಿ–ಇರತಕ್ಕದ್ದಾಗಲಿ, ಎಂದು–ಎಂಬತೆರನಾಗಿ, ಬುದ್ಧಿಗಲಿಸಿದನು–ಹೇಳಿದವನಾದನು, ಇತ್ತ–ಈ ಭಾಗದಲ್ಲಿ, ಪಾಂಡವನಬಲದೊಳ್–ಧನಂಜಯನ ದಂಡಿನಲ್ಲಾದರೊ, ಪ್ರಸಿದ್ಧ–ಹೆಸರಿಗೆ ಬಂದಿರು

---

ಬರುತ್ತಲಿರುವನೆ ಹೊರತು ಮತ್ತೆ ಬೇರೆ ಇಲ್ಲವೆಂದುತ್ತರವನ್ನಿತ್ತನು. ||೧೨|| ಆಗ ತಾಮ್ರಧ್ವಜನು ಸಚಿವನನ್ನು ನೋಡಿ, ಎಲೈ ನಕುಲಧ್ವಜನೆ, ಲೋಕದಲ್ಲಿ ಶೂರರಿಲ್ಲವೆಂದು ಎಂದಿಗೂ ತಿಳಿಯಬೇಡ, ನಿನ್ನೆ ನಾನು ಮಲಗಿರುವಾಗ ರಾತ್ರಿಯಲ್ಲಿ ನಾರದಮಹರ್ಷಿಯು ಸ್ವಪ್ನದಲ್ಲಿ ಬಂದು, ಲೋಕದಲ್ಲಿ ವೀರಾಗ್ರೇಸರರೊಳಗೆ ಹೆಸರುವಾಸಿಯಾದ ವೃಷಕೇತು ಬಭ್ರುವಾಹನ ರೆಂಬೀರ್ವರು ಭೂಲೋಕದಲ್ಲೆಲ್ಲಾ ಸಂಚರಿಸುತ್ತಿರುವ ಹಾಗೂ ಪೂರ್ವದಲ್ಲಿ ಶ್ರೀ ಮಹಾವಿಷ್ಣುವು ನರನಾರಾಯಣಾವತಾರವಂ ತಾಳಿದ್ದವನು ಈಗ ಕೃಷ್ಣಾರ್ಜುನರೆಂಬ ನಾಮಧೇಯದಿಂದ ಭೂಸಂಚಾರವಂ ಗೈಯ್ಯುತ್ತಲಿರುವರೆಂದೂ, ಅನಿರುದ್ಧ, ಸಾತ್ಯಕಿ, ಪ್ರದ್ಯುಮ್ನ, ಭೋಜ, ಮೊದಲಾದ ಯದುವೀರರೆಲ್ಲಾ ಪದ್ಮಪತ್ರೇಕ್ಷಣನಾದ ಪಾವನಮೂರ್ತಿಗೆ ಸಮನಾದವರೆಂದೂ ಹೇಳಿ ಹೊರಟುಹೋದನು||೧೩||ಈಗಲಾದರೊ, ಇಂತಹ ಅಸಹಾಯಶೂರರೊಂದಿಗೆ ನಾನು ಕಾಳಗವಂ ಮಾಡಬೇಕಾಗಿರುವುದರಿಂದ ನಮ್ಮ ಸೈನ್ಯವೆಲ್ಲಾ ಅರ್ಧಚಂದ್ರಾಕೃತಿಯಾಗಿ ನಿಂತಿರುವಂತೆ ಕಟ್ಟುಮಾಡಿದೆನು ಎಂದನು. ಅತ್ತ ಪಾಂಡವನ ಬಲದಲ್ಲಿರತಕ್ಕ ರಾಜಾಧಿರಾಜರು ಪಾರ್ಥನ

ಕೊಂಬುಜ್ಜುಗದೊಳು ॥ ೧೪ ॥ ಕುದುರೆಯಂಕಟ್ಟಿಪಡೆಸಹಿತತಾಮ್ರಧ್ವಜಂಕದನಕಿದಿರಾಗಲಸುರಾಂತಕಂ ಕಂಡುತೋ | ರಿದನರ್ಜುನಂಗಿವಂ ಬರ್ಹಿಧ್ವಜನತನುಜನನಸೂಯಕಂಧೀರನು ॥ ಉದಿತಕಾಮಂ ಸತ್ಯವಾದಿಶುಚಿ ವೈಷ್ಣವಂ | ಸದರಮಲ್ಲಿವನೊಡನೆ ಕಾಳಗಂನರ್ಮದಾ | ನದಿಯತೀರದೊಳಿವನತಂದೆದೀಕ್ಷಿತನಾಗಿಹಂ ಗೆಲ್ವುದರಿದೆಂದನು ॥ ೧೫ ॥ ಎಂದಖಿಳಸೇನೆಯಂ ಗೃಧ್ರದಾಕಾರಕ್ಕೆ | ತಂದುನಿಲಿಸಿ ದನಸುರಮರ್ದನಂಮೇಣದರ | ಮುಂದೆಸೆಯ ಕೊರಳೊಳನುಸಾಲ್ವನಂಕಂಗಳೊಳ್ನೀಲಹಂಸಧ್ವಜರನು | ಕಂದರ್ಪಕಾನಿರುದ್ಧರನುಭಯಪಕ್ಷದೆಡೆ | ಗಂದದಿಂದಡಿಗಳ್ಗೆಭೋಜಸಾತ್ಯಕಿಗಳಂ | ಹಿಂದಣಗರಿಗೆಮೇಘನಾದನಂಕಲಿಯೌವನಾಶ್ವನಂಜೋಡಿಸಿದನು ॥ ೧೬ ॥ ವ್ಯೂಹಚಂಚುಸ್ಥಾನಕಿರಿಸಿದಂಕಲಿಬಭ್ರು| ವಾಹನವೃಷಧ್ವಜರ

---

ವ, ಭಟರು–ವೀರರಾದ, ಅನುಸಾಲ್ವ–ಸಾಲ್ವಾನು-ಜನೂ, ಕರ್ಣಸುತ–ವೃಷಧ್ವಜನೂ, ಸಾಂಬ-ಸಾಂಬನು, ಅನಿರುದ್ಧ–ಅನಿರುದ್ಧನೆಂಬಾತನು, ಕೃತವರ್ಮಾದಿಗಳು–ಕೃತವರ್ಮನೇ ಮೊದಲಾದವರು, ಅಶ್ವಮಂ–ಯಜ್ಞಾಶ್ವವನ್ನು, ಬಿಡಿಸಿಕೊಂಬ–ಬಿಡಿಸಿಕೊಳ್ಳಬೇಕೆನ್ನತಕ್ಕ, ಉಜ್ಜುಗದೊಳು–ಕಾರ್ಯದಲ್ಲಿ, ಮಸಗಿತು–ಯತ್ನವಂ ಮಾಡಿದರು ॥೧೪॥

ಟೀ॥ ತಾಮ್ರಧ್ವಜನು-ತಾಮ್ರಧ್ವಜನೆಂಬಾತನು, ಕುದುರೆಯಂ–ಪಾರ್ಥನ ತುರಂಗವನ್ನು, ಕಟ್ಟಿ–ಕಟ್ಟಿಹಾಕಿ, ಕದನಕೆ–ಕಾಳಗಕ್ಕೆ, ಪಡೆಸಹಿತ–ಸೇನಾಸಮೇತನಾಗಿ, ಇದಿರಾಗಲು-ಎದುರು ಬೀಳಲು, ಅಸುರಾಂತಕಂ–ರಾಕ್ಷಸರ ವೈರಿಯಾದ ಕೃಷ್ಣಮೂರುತಿಯು, ಕಂಡು-ಈಕ್ಷಿಸಿ, ಅರ್ಜುನಂಗೆ–ಪಾರ್ಥನಿಗೆ, ತೋರಿದಂ–ಕಾಣಿಸಿದನು, ಇವಂ–ಈಗ ಎದುರಾಗಿರತಕ್ಕವನು, ಬರ್ಹಿಧ್ವಜನ ತನುಜನು-ನವಿಲಧ್ವಜವುಳ್ಳ ರತ್ನಪುರಿ ರಾಜನ ಮಗನು, ಅನಸೂಯಕಂ–ಹೊಟ್ಟೆಕಿಚ್ಚಿಲ್ಲದವನು, ಧೀರನು-ಪರಾಕ್ರಮಿಯು, ಉದಿತಕಾಮಂ–ಇಷ್ಟಾರ್ಥದಿಂದ ಕೂಡಿದವನು, ಸತ್ಯವಾದಿ–ಯಥಾರ್ಥವನ್ನು ನುಡಿಯತಕ್ಕವನು, ಶುಚಿ-ಪವಿತ್ರನು, ವೈಷ್ಣವಂ–ವಿಷ್ಣುವಿನಲ್ಲಿ ಸಂಪೂರ್ಣವಾದ ಭಕ್ತಿಯುಳ್ಳವನು, ಕಾಳಗಂ–ಯುದ್ಧಮಾಡುವಿಕೆಯು, ಇವನೊಡನೆ-ಈ ತಾಮ್ರಧ್ವಜನೊಂದಿಗೆ, ಸದರಂಅಲ್ಲ–ಸುಲಭವಾಗಿ ಆಗತಕ್ಕದ್ದಲ್ಲವು, ಇವನತಂದೆ-ಇವನ ಜನಕನು, ನರ್ಮದಾನದಿಯತೀರದೊಳ್–ನರ್ಮದಾನದಿಯ ಪ್ರಾಂತದಲ್ಲಿ, ದೀಕ್ಷಿತನಾಗಿ–ದೀಕ್ಷಾಬದ್ಧನಾಗಿ, ಇಹಂ-ಇದ್ದಾನೆ, ಗೆಲ್ವುದು–ಅವನನ್ನು ಸೋಲಿಸುವುದು, ಅರಿದು–ಸಾಧ್ಯವಲ್ಲವು, ಎಂದನು–ಎಂಬುದಾಗಿ ಹೇಳಿದನು. ॥೧೫॥

ಟೀ॥ ಕೃಷ್ಣನು. ಎಂದು–ಈ ತೆರನಾಗಿ ನುಡಿದು, ಗೃಧ್ರದಾಕಾರಕ್ಕೆ–ಹದ್ದಿನ ಆಕೃತಿಗೆ, ಅಖಿಳಸೇನೆಯಂ–ತನ್ನ ಬಲವನ್ನೆಲ್ಲಾ, ತಂದು–ತೆಗೆದುಕೊಂಡು ಬಂದು, ನಿಲಿಸಿದನು-ನಿಲ್ಲುವಂತೆ ಮಾಡಿದನು, ಅನುಸಾಲ್ವನಂ–ಸಾಲ್ವನ ತಮ್ಮನನ್ನು, ಮುಂದೆಸೆಯಕೊರಳೊಳು-ಮುಂಭಾಗದ ಕಂಠಸ್ಥಾನದಲ್ಲಿಯೂ, ನೀಲಹಂಸಧ್ವಜರನು–ನೀಲಕೇತು ಹಂಸಕೇತುಗಳೆಂಬೀರ್ವರನ್ನೂ, ಕಂಗಳೊಳು–ನೇತ್ರಗಳೆಡೆಯಲ್ಲಿಯೂ, ಉಭಯಪಕ್ಷದೆಡೆಗೆ–ಇರ್ಕಡೆಗಳಲ್ಲಿರುವ ರೆಕ್ಕೆಗಳ ಭಾಗಕ್ಕೆ, ಕಂದರ್ಪಕಾನಿರುದ್ಧರನು–ಮನ್ಮಥ ಮತ್ತು ಅನಿರುದ್ಧರೆಂಬುವರನ್ನೂ, ಅಂದದಿಂದ–ಚನ್ನಾಗಿ ಕಾಣುವ ಬಗೆಯಿಂದ, ಅಡಿಗಳ್ಗೆ–ಕಾಲ್ಗಳ ಕಡೆಗೆ, ಭೋಜಸಾತ್ಯಕಿಗಳಂ–ಕೃತವರ್ಮ ಸಾತ್ಯಕಿಗಳೆಂಬಿಬ್ಬರನ್ನೂ, ಮೇಘನಾದನಂ–ಮೇಘನಾದ ನೆಂಬಾತನನ್ನು, ಕಲಿ–ವೀರನಾದ, ಯೌವನಾಶ್ವನಂ-ಭದ್ರಾವತೀ ರಾಜನನ್ನೂ ಸಹ, ಹಿಂದಣ ಗರಿಗಳಿಗೆ–ಬಾಲದಕಡೆ ರಕ್ಕೆಗಳ ಸ್ಥಾನಕ್ಕೂ, ಜೋಡಿಸಿದನು-ನಿಲ್ಲುವಂತೆ ಮಾಡಿದನು. ॥ ೧೬ ॥

---

ಕುದುರೆಯನ್ನು ತಾಮ್ರಧ್ವಜನು ಕಟ್ಟಿಹಾಕಿದನೆಂದು ತಿಳಿದವರಾದರು. ಅವರಲ್ಲಿ ಅನಿರುದ್ಧ, ಸಾತ್ಯಕಿ, ಪ್ರದ್ಯುಮ್ನನೆ ಮೊದಲಾದವರೆಲ್ಲಾ ತಾಮ್ರಧ್ವಜನೊಂದಿಗೆ ಕಾಳಗಂಗೊಡಲುಜ್ಜುಗಿಸುತ್ತಲಿದ್ದರು ॥೧೪॥ ಆಗ ಕೃಷ್ಣಸ್ವಾಮಿಯು, ಅರ್ಜುನನ ಕುದುರೆಯಂ ಕಟ್ಟಿಹಾಗಿ ಸೈನ್ಯವನ್ನು ಅರ್ಧಚಂದ್ರಾಕಾರವಾಗಿ ನಿಲ್ಲಿಸಿಕೊಂಡು ನಿಂತಿರುವವದನ್ನು ನೋಡಿ, ಪಾರ್ಥನನ್ನು ಕುರಿತು, ಎಲೈ ಕಿರೀಟಿಯೆ, ಈಗ ಕುದುರೆಯಂ ಕಟ್ಟಿಕೊಂಡಿರುವನು ತಾಮ್ರಧ್ವಜನೆಂಬ ಹೆಸರಿನಿಂದ ಪ್ರಸಿದ್ಧನಾಗಿರುವನು, ಇವನು ತಂದೆ ಮಯೂರಧ್ವಜನುನೆಂಬ ರಾಜೇಂದ್ರನು. ಅಸೂಯೆ ಇಲ್ಲದೆಯೂ, ಧೈರ್ಯಶಾಲಿಯಾಗಿಯೂ, ಕೃತಾರ್ಥನೂ, ಸತ್ಯೈಕ ಪರಾಯಣನೂ, ಮಹಾ ಪರಿಶುದ್ಧನೂ, ವಿಷ್ಣುಭಕ್ತನೂ, ಅತಿ ಬಲಶಾಲಿಯೂ ಆಗಿರುವನು. ಇವನನ್ನು ಜಯಿಸುವುದು ಸುಲಭಸಾಧ್ಯವೆಂದರಿಯಬೇಡ. ಇವನ ತಂದೆಯಾದ ಮಯೂರಧ್ವಜನು ನರ್ಮದಾನದಿಯ ದಡದಲ್ಲಿ ಯಾಗದೀಕ್ಷಿತನಾಗಿ ಕುಳಿತಿರುವನು, ಇಂತಹ ವೀರನೊಂದಿಗೆ ಈಗ ನೀನು ಯುದ್ಧಮಾಡಬೇಕೆಂದು ನುಡಿದು ಸೈನ್ಯವನ್ನೆಲ್ಲಾ ಹದ್ದಿನಾಕಾರವಾಗಿ ನಿಲ್ಲಿಸಿದನು. ಅಗ್ರಭಾಗಕಾರವಾದ ಪಡೆಯ ಕತ್ತಿನ ಭಾಗದಲ್ಲಿ ಅನು-ಸಾಲ್ವನನ್ನು ನಿಲ್ಲಿಸಿದನು ಎರಡು ಕಣ್ಣುಗಳ ಕಡೆಯಲ್ಲಿಯೂ ನೀಲಧ್ವಜ ಹಂಸಧ್ವಜರು ನಿಂತುಕೊಂಡವರಾದರು. ರೆಕ್ಕೆಗಳೆರ್ಕಡೆಗೂ ಪ್ರದ್ಯುಮ್ನಾನಿರುದ್ಧರೂ, ಕಾಲುಗಳ ಬಳಿ ಭೋಜನೂ ಸಾತ್ಯಕಿಯೂಸಹ ನಿಂತರು. ಹಿಂಭಾಗದ ಗರಿಗಳ ಕಡೆಗೆ ಮೇಘವರ್ಣನನ್ನೂ ಯೌವನಾಶ್ವನನ್ನೂ ನಿಲ್ಲುವಂತೆ ಆಜ್ಞಾಪಿಸಿದನು॥೧೬॥

ನುಳಿವ ಭಟರಂಗ್ರಘ್ರ | ದೇಹದವಯವದೆಡೆಗೆನೆಲಿಗೊಳಿಸಿ ಬಳಿಕದರಹೃದಯಳೊಳ್ಫಲುಗುಣನನು || ವಾಹಿನಿಸಹಿತಸಿಲಿಸಿದಾರುಕನೆಸಗೆಂಥಾ | ರೋಹಣಂಗೈದುಮುರಮಥನಂಪಿಡಿದನಾಸು | ಹಾಹವಕೆವರ ಪಾಂಚಜನ್ಯಮಂ ಘೋರರವದಿಂದ ಹಿತರೆದೆಗಳೊಡೆಯೆ |೧೭|| ಪಾಂಚಜನ್ಯಧ್ವನಿಗೆಬೆದರದುಬ್ಬೇರಿರೋ | ಮಾಂಚನದೊಳಾಗತಾಮ್ರಧ್ವಜಂಶ್ರೀವತ್ಸ | ಲಾಂಛನಂಗಿದಿರಾಗಿನುಡಿದನೆಲಿದೇವ ಕಟ್ಟಿದೆನರ್ಜುನನ ಹಯನನು || ವಾಂಛೆಯುಳ್ಳೊಡೆಬಿಡಿಸುಪಾಲಿಸು ಕಿರೀಟಿಯಂ | ನೀಂಚಕ್ರಮಂತುಡುಕುಶಾರ್ಙ್ಗಮಂಪಿಡಿರಣಕೆ | ನಾಂಚಲಿಸೆನಿದೆಯೆನ್ನವಾಜಿಯುಂತಡೆಸತ್ವಮುಳ್ಳೊಡೆನುತಾರ್ದೆಚ್ಚನು |೧೮|| ಹರಿಗೆಕೂರ್ಗಣೆ ಮೂರ ದಾರುಕಂಗೈದುಂರಥ | ಹರಿಗಳ್ಗೆನಾಲ್ಕುಸಿತವಾಹನಂಗಿಪ್ಪತ್ತು ವರಭೋಜಪತಿಗೆಂಟುಕಿನಿಸುತಂಗೊಂಭತ್ತು ಹಂಸಧ್ವಜಂ

ಟೀ|| ಕಲಿ-ವೀರರಾದ, ಬಭ್ರುವಾಹನ ವೃಷಧ್ವಜರನು-ಬಭ್ರುವಾಹನ ಕರ್ಣತನುಜರನ್ನು, ವ್ಯೂಹ-ಹದ್ದಿನಾಕಾರದ, ಚಂಚುಸ್ಥಾನಕೆ-ಕೊಕ್ಕಿನೆಡೆಗೂ, ಗೃಧ್ರ-ಹದ್ದಿನ, ಅವಯವದ-ಶರೀರದ, ಎಡೆಗೆ-ಸ್ಥಾನಕ್ಕೆ, ಉಳಿದ-ಮಿಕ್ಕಿರುವ, ಭಟರಂ-ವೀರರನ್ನೂ, ನೆಲಿಗೊಳಿಸಿ-ನಿಲ್ಲುವಹಾಗೆಮಾಡಿ, ಬಳಿಕ-ಆಮೇಲೆ, ಫಲುಗುಣನನು-ಕಿರೀಟಿಯನ್ನು, ಅದರ-ಆ ಗೃಧ್ರಾಕೃತಿಯ, ಹೃದಯದೊಳು-ಎದೆಯ ಭಾಗದಲ್ಲಿ, ವಾಹಿನಿಸಹಿತ-ಸೇನಾಸಮೇತವಾಗಿ, ನಿಲಿಸಿ-ನಿಲ್ಲಿಸಿದವನಾಗಿ, ದಾರುಕನು-ದಾರುಕನೆಂಬುವನು, ಎಸಗೆ-ಸಾರಥಿಯಾಗಿರಲು, ಮುರಮಥನನು-ಕೃಷ್ಣನು, ರಥಾರೋಹಣಂಗೈದು-ರಥವನ್ನೇರಿದವನಾಗಿ, ಅಹಿತರ-ವೈರಿಗಳ, ಎದೆಗಳು-ಮರ್ಮಸ್ಥಳಗಳೆಲ್ಲಾ. ಒಡೆಯೆ-ಬಿಚ್ಚಿ ಹೋಗುವಹಾಗೆ, ಮಹಾಹವಕೆ-ದೊಡ್ಡಯುದ್ಧಕ್ಕಾಗಿ, ಘೋರರವದಿಂದ-ಬಹುಗಟ್ಟಿಯಾಗಿ ಶಬ್ದವು ಹುಟ್ಟುವಂತೆ, ಪಾಂಚಜನ್ಯಮಂ-ಪಾಂಚಜನ್ಯವೆಂಬ ಶಂಖವನ್ನು, ಪಿಡಿದನು-ಊದಿದವನಾದನು || ೧೭ ||

ಟೀ|| ಆಗ-ಕೃಷ್ಣಸ್ವಾಮಿಯು ಪಾಂಚಜನ್ಯವನ್ನು ಹಿಡಿದಾಗ, ತಾಮ್ರಧ್ವಜನು-ತಾಮ್ರಧ್ವಜನೆಂಬಾತನು, ಪಾಂಚಜನ್ಯಧ್ವನಿಗೆ-ಪಾಂಚಜನ್ಯದ ಮಹಾಶಬ್ದಕ್ಕೆ, ಬೆದರದೆ-ಹೆದರಿಕೊಳ್ಳದೆ, ಉಬ್ಬೇರಿದವನಾಗಿ-ಹೆಚ್ಚಾಗಿ ಉಬ್ಬಿ, ರೋಮಾಂಚನದೊಳು-ಮೈಕೂದಲುಗಳೆಲ್ಲಾ ಎದ್ದುನಿಲ್ಲುವುದರಿಂದ, ಶ್ರೀವತ್ಸಲಾಂಛನಂಗೆ-ಶ್ರೀಕೃಷ್ಣಸ್ವಾಮಿಗೆ, ಇದಿರಾಗಿ-ಪ್ರತಿಭಟಿಸಿ, ನುಡಿದನು-ಮುಂದೆ ಹೇಳುವಂತೆ ಪೇಳ್ದನು, ಎಲಿದೇವ-ಎಲೈ ಪ್ರಭುವೆ, ಅರ್ಜುನನ-ಕಿರೀಟಿಯ, ಹಯವನು-ಅಶ್ವವನ್ನು, ಕಟ್ಟಿದೆನು-ಕಟ್ಟಿಹಾಕಿರುವೆನು, ವಾಂಛೆಯುಳ್ಳೊಡೆ-ಇಷ್ಟವಿದ್ದರೆ, ಬಿಡಿಸು-ಬಿಡುಗಡೆಮಾಡು, ಕಿರೀಟಿಯಂ - ಫಲುಗುಣನನ್ನು, ಪಾಲಿಸು-ಕಾಪಾಡು, ನೀಂ-ನೀನಾದರೊ, ಚಕ್ರಮಂ-ಚಕ್ರಾಯುಧವನ್ನು, ತುಡುಕು-ಹಿಡಿಯುವನಾಗು, ಶಾರ್ಙ್ಗವನು-ನಿನ್ನ ಬಿಲ್ಲನ್ನು, ಪಿಡಿ-ಹಿಡಿಯುತಕ್ಕವನಾಗು, ನಾಂ-ನಾನಾದರೊ, ರಣಕೆ-ಕಾಳಗಕ್ಕೆ, ಚಲಿಸೆನು-ಸ್ಥಿರವಾಗಿ ನಿಲ್ಲುವೆನು, ಇದೆ-ಇಲ್ಲಿರತಕ್ಕ, ಎನ್ನ-ನನ್ನದಾದ, ವಾಜಿಯುಂ-ಯಾಗದ ಕುದುರೆಯನ್ನು, ಸತ್ವಮುಳ್ಳೊಡೆ-ಶಕ್ತಿಯಿದ್ದ ಪಕ್ಷದಲ್ಲಿ, ತಡೆ-ಅಡ್ಡಗಿಸು, ಎನುತ-ಎಂದು ನುಡಿಯುತ್ತ, ಆರ್ದು-ಗರ್ಜಿಸಿ, ಎಚ್ಚನು-ಕಣೆಗಳನ್ನು ಬಿಡಲುಜ್ಜುಗಿಸಿದನು ||

ಅ| ವಿ|| ಶ್ರೀವತ್ಸಲಾಂಛನಂಗೆ-ಶ್ರೀವತ್ಸವೆಂಬ ಮಚ್ಚೆಯುಳ್ಳವನು ಯಾರೊ ಅವನಿಗೆ (ಬ. ಸ.) || ೧೮ ||

ಟೀ|| ಕೂರ್ಗಣೆಮೂರು-ತೀಕ್ಷ್ಣವಾದ ಮೂರು ಸರಳ್ಗಳನ್ನು, ಹರಿಗೆ-ಕೃಷ್ಣಸ್ವಾಮಿಯ ಮೇಲೂ, ಐದು-ಐದು ಕಣೆಗಳನ್ನು, ದಾರುಕಂಗೆ-ಕೃಷ್ಣನ ಸಾರಥಿಗೂ, ನಾಲ್ಕು-ನಾಲ್ಕು ಕೋಲ್ಗಳನ್ನು, ರಥಹರಿಗಳ್ಗೆ-ಅಶ್ವರಥಂಗಳಿಗೂ, ಇಪ್ಪತ್ತು-ಇಪ್ಪತ್ತು ಸರಳ್ಗಳನ್ನು, ಸಿತವಾಹನಂಗೆ- ಬೆಳ್ಗುದುರೆಗಳಿಂದ ಕೂಡಿದ ತೇರನ್ನು ಅಲಂಕರಿಸುವ ಧನಂಜಯನಮೇಲೂ, ಎಂಟು-ಎಂಟು ಅಂಬುಗಳನ್ನು, ವರ-ಉತ್ತಮನಾದ, ಭೋಜಪತಿಗೆ-ಕೃತವರ್ಮನಮೇಲೂ, ಒಂಭತ್ತು-ಒಂಭತ್ತು ಕೋಲ್ಗಳನ್ನು,

ಕೊಕ್ಕಿನ ಬಳಿಯಲ್ಲಿ ವೃಷಕೇತು ಬಭ್ರುವಾಹನರೂ, ಮಿಕ್ಕ ಸೈನ್ಯವೆಲ್ಲಾ ಆ ಗೃಧ್ರಾಕೃತಿಯ ನಡುವೆಯೂ ನಿಲ್ಲುವಂತೆ ಮಾಡಿ ಅದರ ಹೃದಯ ಪಕಡೆ ಅರ್ಜುನನ್ನ ನೇಮಿಸಿ, ಅವನ ಬಳಿಯಲ್ಲಿ ಅಪರಿಮಿತವಾದ ಸೈನ್ಯವನ್ನಿಟ್ಟನು, ಅನಂತರ ಕೃಷ್ಣಮೂರುತಿಯಾದರೊ ದಾರುಕನು ಸಿದ್ಧಮಾಡಿದ ತನ್ನ ದಿವ್ಯರಥದಲ್ಲಿ ಕುಳಿತು, ವೈರಿಗಳ ಎದೆಗಳೆಲ್ಲಾ ತಲ್ಲಣಿಸುವಂತೆಯೂ. ಎಲ್ಲಾ ಲೋಕಗಳೂ ಗಡಗಡನೆ ನಡಗುವಂತೆಯೂ, ಬಹು ಗಟ್ಟಿಯಾಗಿ ಪಾಂಚಜನ್ಯವನ್ನೂದಿದನು, || ೧೭ || ಆಗ ತಾಮ್ರಧ್ವಜನು ಕೃಷ್ಣನ್ನೂ ಪೂರೈಸಿದ ಪಾಂಚಜನ್ಯಧ್ವನಿಗೆ ಸ್ವಲ್ಪವೂ ಬೆದರದೆ ಯುದ್ಧಾಸಕ್ತಿಯಿಂದ ಮೆರೆಯುತ್ತಾ ಕೃಷ್ಣಸ್ವಾಮಿಯಂ ಕುರಿತು, ಎಲೈ ಸ್ವಾಮಿಯೆ, ಇಗೊ ಅರ್ಜುನನ ಕುದುರೆಯನ್ನು ಕಟ್ಟಿ ಹಾಕಿದ್ದೇನೆ. ನಿನಿಗೆ ಬೇಕಾದರೆ ಈ ಹಯವನ್ನು ಬಿಡಿಸಿ ಅರ್ಜುನನ ಪ್ರಾಣಗಳನ್ನುಳಿಸು, ನಿನ್ನ ಚಕ್ರವನ್ನೂ ಧನುಸ್ಸನ್ನೂ ಅಣಿಮಾಡಿಕೊ, ಇಗೋ ನಾನು ಯುದ್ಧಕ್ಕೆ ನಿಂತೇ ಇರುವೆನು ನಿನಿಗೆ ಪರಾಕ್ರಮ ವಿದ್ದರೆ ಕುದುರೆಯನ್ನು ಅಡ್ಡಗಿಸೆಂದು ನುಡಿಯುತ್ತಾ, || ೧೮ || ಮೂರು ಬಾಣಗಳನ್ನು ಕೃಷ್ಣನಮೇಲೆ ಬಿಟ್ಟನು. ಆ ಸ್ವಾಮಿಯ ಸಾರಥಿಯನ್ನು ಐದು ಕಣೆಗಳಿಂದಲೂ, ರಥವನ್ನು ನಾಲ್ಕಂಬುಗಳಿಂದಲೂ ಹೊಡೆದನು. ಅರ್ಜುನ, ಭೋಜ, ಹಂಸಧ್ವಜರನ್ನು ಕ್ರಮವಾಗಿ ಇಪ್ಪತ್ತು, ಎಂಟು, ಇಪ್ಪತ್ತು ಕೋಲ್ಗಳಿಂದ ಗಾಯಮಾಡಿದ ಬಳಿಕ ಸಾತ್ಯಕಿಯು

ಗೆಪ್ಪತ್ತು || ತರಣಿತನಯಜಬಭ್ರುವಾಹನನುಸಾಲ್ವಕ | ಸ್ಮರಯೌವನಾಶ್ವಾನಿರುದ್ಧನೀಲಧ್ವಜ | ರ್ಗೆರಡೆರಡುಮೇಘನಾದಂ ಗೇಳುಕೋಲ್ಗಳಂ ಕರೆದವಂಬೊಬ್ಬಿರಿದನು ||೧೯|| ಅಚ್ಯುತಂಬೆರಗಾದನಾತನಪರಾಕ್ರಮಕೆ | ಮೆಚ್ಚಿದಂಫಲುಗುಣಂಮಿಕ್ಕಳಿದ ಪಟುಭಟ | ರ್ಮೆಚ್ಚಿದರ್ಮಸಗಿವೀರಾವೇಶದಿಂದರ್ತಮತಮಗೆಬಳಿಕನಿರುದ್ಧನು || ಎಚ್ಚನೆಲವೆಲವೊತಾಮ್ರಧ್ವಜವಿಚಾರಿಸದೆ | ಕೆಚ್ಚೆದೆಯೊಳಿದಿರಾದಮುರಹರನಮೊಮ್ಮಗಂ | ಬೆಚ್ಚುವಡೆಬಿಡುಹಯವನಲ್ಲದೊಡೆನೋಡೆನ್ನಬಾಣಜಾತವನೆಂದನು || ೨೦ || ಬಾಣಜಾತವನೀಗನೋಡಲಿದ್ದಪುದೆನೀಂ | ಬಾಣಜಾತೆಯರಮಣನಂತುಮಲ್ಲದೆಪುಷ್ಪ | ಬಾಣಜಾತಂಮೇಲಿಬಾಣನುಳಿಹಿದನಂದು ಕದನದೋಳ್ತನ್ನಮಗಳ || ಪ್ರಾಣೇಶನೆಂಬುದಕೆಕೈಗಾಯ್ವುದಲ್ಲೆಮ್ಮ | ಬಾಣಂಗಳೀಕ್ಷಿಸೆಂದಾರ್ದುತಾಮ್ರಧ್ವಜಂ | ಬಾ

ಶನಿಸುತಂಗೆ-ಸಾತ್ಯಕಿಯ ಮೇಲೂ, ಎಪ್ಪತ್ತು-ಎಪ್ಪತ್ತು ಕಣೆಗಳನ್ನು, ಹಂಸಧ್ವಜನಿಗೆ-ಹಂಸಧ್ವಜನಮೇಲೂ, ಎರಡೆರಡು-ಎರಡರಂತೆ, ತರಣಿ ತನಯಜ-ವೃಷಧ್ವಜನು, ಬಭ್ರುವಾಹನ-ಪಾರ್ಥಸುತನು, ಅನುಸಾಲ್ವಕ-ಸಾಲ್ವಾನುಜನು, ಸ್ಮರ-ಕಂದರ್ಪನು, ಯೌವನಾಶ್ವ-ಯೌವನಾಶ್ವನೆಂಬಾತನು, ಅನಿರುದ್ಧ-ಅನಿರುದ್ಧನು, ನೀಲಧ್ವಜರ್ಗೆ-ನೀಲಧ್ವಜನೇ ಮೊದಲಾದವರ ಮೇಲೂ, ಏಳು ಕೋಲ್ಗಳಂ-ಕಣೆಗಳ ಏಳನ್ನು, ಮೇಘನಾದಂಗೆ-ಮೇಘನಾದನೆಂಬಾತನಮೇಲೂ, ಅವಂ-ಆ ತಾಮ್ರಧ್ವಜನು, ಕರೆದು-ವರ್ಷಿಸಿ, ಬೊಬ್ಬಿರಿದನು-ಗರ್ಜಿಸಿದನು.

ಅ|| ವಿ|| ಕೂರ್ಗಣೆ-ಕೂರಿತ್ತು ಕಣೆ, (ವಿ. ಪೂ) ||೧೯||

ಟೀ|| ಆತನ-ಮಯೂರಧ್ವಜನ ಮಗನ, ಪರಾಕ್ರಮಕೆ- ಸಾಹಸಕ್ಕೆ, ಅಚ್ಯುತಂ- ಕೃಷ್ಣಮೂರ್ತಿಯು, ಬೆರಗಾದನು-ಭ್ರಾಂತಿಯನ್ನೈದಿದನು, ಫಲುಗುಣಂ-ಪಾರ್ಥನು, ಮೆಚ್ಚಿದಂ-ಹೊಗಳಿದನು, ಮಿಕ್ಕ-ಉಳಿದಿರುವ, ಪಟುಭಟರು-ವೀರಾಗ್ರಣಿಗಳು, ಮಸಗಿ-ಆಗ್ರಹದಿಂದ ಕೂಡಿ, ವೀರಾವೇಶದಿಂದ-ಸಾಹಸದ ಹೆಚ್ಚಿಗೆಯಿಂದ, ತಮತಮಗೆ-ತಮ್ಮ ತಮ್ಮಷ್ಟಕ್ಕೆ, ಪೆಚ್ಚಿದರು-ಉಬ್ಬಿದರು, ಬಳಿಕ-ಆ ಮೇಲೆ, ಅನಿರುದ್ಧನು-ಪ್ರದ್ಯುಮ್ನನ ಕುವರನು, ಎಚ್ಚನು-ಕೋಲ್ಗಳನ್ನು ಎಸೆದನು, ಎಲವೆಲವೊ-ಓ ತಾಮ್ರಧ್ವಜಾ! ವಿಚಾರಿಸದೆ- ಪರಿಶೀಲನೆಯಂ ಮಾಡದೆ, ಕೆಚ್ಚೆದೆಯೊಳು-ಹೆಮ್ಮೆಯಿಂದ, ಇದಿರಾದೆ-ಪ್ರತಿಭಟಿಸಿ ನಿಂತಿರುವಿ, ನಾನಾದರೊ, ಮುರಹರನ-ಶ್ರೀಕೃಷ್ಣಸ್ವಾಮಿಯ, ಮೊಮ್ಮಗಂ-ಮಗನ ಸುತನಾಗಬೇಕು, ಬೆಚ್ಚುವಡೆ-ಹೆದರುವ ಹಾಗಿದ್ದರೆ, ಹಯವನು-ಯಜ್ಞಾಶ್ವವನ್ನು, ಬಿಡು-ಬಿಟ್ಟು ಹೊರಡು, ಅಲ್ಲದೊಡೆ-ಹಾಗಿಲ್ಲವಾದರೆ, ಎನ್ನ-ನನ್ನ ಸಂಬಂಧವಾದ, ಬಾಣ ಜಾಣತನವನು-ಬಾಣದ ಚಾತುರ್ಯವನ್ನು, ನೋಡು-ಈಕ್ಷಿಸು, ಎಂದನು-ಎಂಬುದಾಗಿ ನುಡಿದನು. ||೨೦||

ಟೀ|| ಈಗ-ಈಗಲಾದರೊ, ಬಾಣಜಾತವನು- ಬಾಣಗಳ ಸಮುದಾಯವನ್ನು, ನೋಡಲು- ನಿರುಕಿಸಿದರೆ, ಇದ್ದಪುದೆ-ಇರುತ್ತದೆಯೆ, ನೀಂ-ನೀನಾದರೊ, ಬಾಣಜಾತೆಯ-ಬಾಣಾಸುರನ ಕುವರಿಯ, ರಮಣನು-ಪತಿಯು, (ನೀನು ರಾಕ್ಷಸ ಸ್ತ್ರೀ ಸಂಪರ್ಕದಿಂದ ಬಾಳುವುದರಿಂದ ನಿನಗೆ ಯುಕ್ತಾಯುಕ್ತವು ಹೇಗೆ ತಾನೆ ತಿಳಿಯುವುದು) ಅಂತುಂ ಅಲ್ಲದೆ-ಅದಲ್ಲದೆ, ಪುಷ್ಪಬಾಣಜಾತಂ-ಕುಸುಮಶರನ ತನುಜಾತನು, ಮೇಲೆ-ಇದೂ ಅಲ್ಲದೆ, ಕದನದೊಳ್-ರಣದಲ್ಲಿ, ಬಾಣಂ-ಬಾಣಾಸುರನು, ಅಂದು-ಪೂರ್ವದಲ್ಲಿ, ಉಳಿಹಿದನು-ಪ್ರಾಣದಿಂದ ಬಿಟ್ಟು ಬಿಟ್ಟನು, ತನ್ನ-ತನಗೆ ಸಂಬಂಧವಾದ, ಮಗಳ-ಕುವರಿಯ, ಪ್ರಾಣೇಶನು-ರಮಣನು, ಎಂಬುವುದಕೆ- ಎನ್ನುವುದಕ್ಕೋಸುಗ, ಕೈಗಾಯ್ವುದು- ಪಾಲಿಸಿದ್ದು, ಅಲ್ಲ-ಅಲ್ಲವು, ಎಮ್ಮ-ನಮ್ಮದಾದ, ಬಾಣಂಗಳಂ-ಕೋಲ್ಗಳನ್ನು, ಈಕ್ಷಿಸು-ನಿರುಕಿಸು, ಎಂದು-ಎಂಬತೆರನಾಗಿ, ತಾಮ್ರಧ್ವಜನು, ಆರ್ದು-ಕೂಗಿ, ಬಾಣಾಯುತಂಗ

ಮೇಲೆ ಒಂಭತ್ತಂಬುಗಳನ್ನು ಬಿಟ್ಟನು. ಎರಡೆರಡು ಶಿಲೀಮುಖಿಗಳನ್ನು ಬಭ್ರುವಾಹನ, ವೃಷಕೇತು, ಯೌವನಾಶ್ವ, ಅನಿರುದ್ಧ, ಪ್ರದ್ಯುಮ್ನ, ನೀಲಧ್ವಜರಮೇಲೆ ಬಿಟ್ಟು ನೋಯಿಸಿ ಗಟ್ಟಿಯಾಗಿ ಸಿಂಹನಾದವಂ ಮಾಡುತ್ತಲಿರುವುದನ್ನು || ೧೯ || ಕೃಷ್ಣಮೂರುತಿಯು ನೋಡಿ, ದಿಗ್ಭ್ರಮೆಯಾಗಿ ನಿಂತು ಬಿಟ್ಟನು, ಅರ್ಜುನನು ಅವನ ಸಾಹಸವನ್ನು ಕೊಂಡಾಡಿದನು. ಮಿಕ್ಕ ಸೈನಿಕರೆಲ್ಲಾ ರೋಷಭೀಷಣರಾಗಿ ನಿಂತರು. ಆಗ ಪ್ರದ್ಯುಮ್ನಸುತನಾದ ಅನಿರುದ್ಧನು ತಾಮ್ರಧ್ವಜನನ್ನು ಕುರಿತು, ಎಲೈ ತಾಮ್ರಕೇತುವೆ, ನಾನು ಯಾರೆಂಬ ವಿಚಾರರಹಿತನಾಗಿ ಎದುರಿಸುತ್ತಲಿರುವಿಯಾ? ನಾನು ಶ್ರೀ ಕೃಷ್ಣಸ್ವಾಮಿಯ ಮೊಮ್ಮಗನು. ನನ್ನ ಹೆಸರು ಅನಿರುದ್ಧನು. ನಿನಗೆ ನನ್ನೊಡನೆ ಕಾಳಗಂಗೊಡುವಧಟಿದ್ದರೆ ಯುದ್ಧಕ್ಕೆ ನಿಲ್ಲು, ಇಲ್ಲವಾದರೆ ಕುದುರೆಯನ್ನೊಪ್ಪಿಸಿ ನಡೆ, ನನ್ನ ಬಾಣವರ್ಷಕ್ಕೆ ಸಿಕ್ಕಿ ಸರಳಬೇಡವೆಂದು ನುಡಿದನು. || ೨೦ || ಇದನ್ನು ಕೇಳಿದ, ತಾಮ್ರಧ್ವಜನಾದರೊ, ಎಲೈ ಅನಿರುದ್ಧನೆ, ನೀನು ಬಾಣಜಾತೆಯಾದ ಉಷೆಯ ಗಂಡನೆಂಬುದನ್ನು ನಾನು ಮೊದಲೆ ಬಲ್ಲೆನು, ನಿನ್ನನ್ನು ಬಾಣಾಸುರನು ಮಗಳ ಗಂಡನೆಂಬ ವಾತ್ಸಲ್ಯದಿಂದ ಬಿಟ್ಟು ಬಿಡಲಿಲ್ಲವೆ, ಆಗ ಪ್ರಾಣವಂ ಕಾಪಾಡಿಕೊಂಡು ಬಂದ ನೀನು ಈಗ ನನ್ನ ಬಾಣದ ಜಾಣತನವನ್ನಾದರೂ ಸ್ವಲ್ಪ ನೋಡೆಂದು ಗರ್ಜಿಸುತ್ತಾ ಹತ್ತು ಸಹಸ್ರ ಕೂರಲಗುಗಳನ್ನು ಅನಿರುದ್ಧನಮೇಲೆ ಬಿಡಲು ಅವನು ಆ ಕಣೆಗಳ

ಣಯುತಂಗಳಂಸುರಿಯಲ್ಕೆಮಧ್ಯದೊಳ್ತರಿದೀತನಿಂತೆಂದನು ‖ ೨೧ ‖ ಸಂಗರಕೆಸಾಹಸವೊಮಾತುಗಳೊಪೂರ್ವಪ್ರ | ಸಂಗಮೇತಕೆಮರುಳೆತರಹರಿಸಿಕೊಳ್ಳೆನುತ | ಸಂಗಡಿಸಿದವನರಥದಚ್ಚುನೊಗಗಾಲಿಟೆಕ್ಕೆಯಕುದುರೆಸಾರಥಿಗಳ ‖ ಅಂಗಿಬಿಲ್ಬತ್ತಳಿಕೆಸೀಸಕಂಗಳಜಂಜ | ಡಂಗಳಿಲ್ಲೆನಿಸಿಕೆಲಬಲದರಕ್ಷೆಯಚಾತು | ರಂಗಮಂಸವರಿರಿಪುಮೋಹರವಪೊಕ್ಕನನಿರುದ್ಧನದನೇವೇಳ್ವೆನು ‖೨೨‖ ರಣದೊಳನಿರುದ್ಧನಾಟೋಪದಿಂಚಾಪದಿಂ | ಕಣೆಗಳಂತೆಗೆದೆಸಲ್ಕರಿಗಳಂಹರಿಗಳಂ | ಮಣಿಮಯರಥಂಗಳಂಕಾಲಾಳಮೇಲಾಳಸಂದಣಿಯಮಂದಿಗಳನು‖ ಹಣಿದವಾಡಿದನಹಿತಬಲದೊಳಗೆನೆಲದೊಳಗೆ| ಪೆಣನಮೆದೆಗೆಡೆಯಲಕ್ಷೋಹಿಣಿಯವಾಹಿನಿಯ | ಗಣನೆಮೂರಳಿದುದೊಂದೇಕ್ಷಣಕೆವೀಕ್ಷಣಕೆನೆರೆಭಯಂಕರಮಾಗಲು ‖ ೨೩ ‖ ಬತ್ತಿಬಹರಥಿಕರಂವ್ಯಥಿತರಂಮಾಡಿದವು | ಮುತ್ತುವತುರಂಗಮದತುಂಗಮದದಂತಿಗಳ | ಮೊತ್ತಮಂಪೋಳಾಗಿಸೀಳಾಗಿಕೆಡಹಿದುವುಕೊಡಹಿದುವುವಾ

ಳಂ-ಹತ್ತು ಸಾವಿರ ಕಣೆಗಳನ್ನು, ಸುರಿಯಲ್ಕೆ-ಚೆಲ್ಲಲು, ಈತನು-ಈ ಪ್ರದ್ಯುಮ್ನ ಸುತನು, ಮಧ್ಯದೊಳ್-ನಡುದಾರಿಯಲ್ಲಿಯೆ, ತರಿದು-ಛೇದಿಸಿ, ಇಂತು-ಮುಂದೆ ಹೇಳುವಂತೆ ಎಂದನು-ನುಡಿದನು.

ಅ‖ ವಿ‖ ಪ್ರಾಣೇಶ (ಗು. ಸ.) ತರಿದು-ತರಿ ಧಾತುವಿನ ಭೂತಕೃದಂತ. ‖೨೧‖

ಟೀ‖ ಸಂಗರಕೆ- ಕಾಳಗವನ್ನೆಸಗುವುದಕ್ಕೆ, ಸಾಹಸವೊ- ಪರಾಕ್ರಮವಿರಬೇಕೋ, ಅಥವಾ ಮಾತುಗಳೊ- ಬರಿಯ ಮಾತುಗಳೇನೂ ಪ್ರಾಧಾನ್ಯವಲ್ಲವು, ಮರುಳೆ-ಅವಿವೇಕಿಯಾದ ತಾಮ್ರಧ್ವಜನೆ, ಪೂರ್ವ ಪ್ರಸಂಗಂ-ಹಿಂದೆ ಕಳೆದುಹೋದ ಸುದ್ದಿಯೆಲ್ಲಾ, ಏತಕೆ-ಏನು ಪ್ರಯೋಜನ, ತರಹರಿಸಿಕೊಳ್-ಈ ನನ್ನ ಬಾಣದ ಹೊಯ್ಲನ್ನು ತಪ್ಪಿಸಿಕೊ, ಎನುತ-ಎಂದು ನುಡಿಯುತ್ತ, ಸಂಗಡಿಸಿದ-ಒಟ್ಟುಗೂಡಿದ, ಅವನ-ಆ ತಾಮ್ರಧ್ವಜನ, ರಥದ ಅಚ್ಚು-ತೇರಿನ ಅಚ್ಚುಮರವು, ಗಾಲಿ-ಪಾರುಂಬಳೆಗಳು, ಟೆಕ್ಕೆಯು-ಪತಾಕೆಯು, ಕುದುರೆ-ಹಯಗಳು, ಸಾರಥಿಗಳ-ರಥವನ್ನು ನಡೆಯಿಸುವವರನ್ನು, ಅಂಗಿ-ಮೈಗುಪ್ಪಸಗಳು, ಬಿಲ್-ಕಾರ್ಮುಕಂಗಳು, ಬತ್ತಳಿಕೆ-ಬಾಣಗಳನ್ನು ಹಾಕತಕ್ಕ ಚೀಲಗಳು, ಸೀಸಕಂಗಳ-ಕತ್ತಿನ ಪಟ್ಟಿಗಳ (ಟೊಪ್ಪಿಗೆ) ಜಂಜಡಂಗಳು, ಇಲ್ಲ-ಇಲ್ಲವು, ಎನಿಸಿ-ಎಂಬುದಾಗಿ, ಕೆಲಬಲದ-ಪಕ್ಕದ, ರಕ್ಷೆಯ-ಕಾವಲಿನ, ಚಾತುರಂಗಮಂ-ಚತುರಂಗ ಬಲವನ್ನು, ಸವರಿ-ನಿರ್ಮೂಲಮಾಡಿ, ರಿಪು ಮೋಹರವನು-ಅರಿಗಳ ಬಲವನ್ನು, ಅನಿರುದ್ಧನು-ಪ್ರದ್ಯುಮ್ನ ಸುತನು, ಪೊಕ್ಕನು-ಪ್ರವೇಶವಂ ಮಾಡಿದನು, ಅದನು-ಆ ಬಗೆಯನ್ನು, ಏವೇಳ್ವೆನು-ಏನೆಂದು ಬಣ್ಣಿಸಲಿ ‖೨೨‖

ಟೀ‖ ಅನಿರುದ್ಧನು- ಪ್ರದ್ಯುಮ್ನನ ಮಗನು, ಆಟೋಪದಿಂ-ಸತ್ವಾತಿಶಯದಿಂದ, ಚಾಪದಿಂ-ಧನುಸ್ಸಿನಿಂದ, ರಣದೊಳ್-ಕಾಳಗದಲ್ಲಿ, ಕಣೆಗಳಂ-ಕೋಲ್ಗಳನ್ನು, ತೆಗೆದು ಎಸಲ್-ಸೆಳೆದು ಬಿಡಲು, ಕರಿಗಳಂ-ಗಜಗಳನ್ನೂ, ಹರಿಗಳಂ-ಅಶ್ವಗಳನ್ನೂ, ಮಣಿಮಯ-ರತ್ನಖಚಿತಂಗಳಾದ, ರಥಂಗಳಂ-ತೇರ್ಗಳನ್ನೂ, ಕಾಲಾಳ-ಪದಾತಿಗಳನ್ನೂ, ಮೇಲಾಳ-ಅಂಗರಕ್ಷಕರ, ಸಂದಣಿಯ-ಸಮುದಾಯದ, ಮಂದಿಗಳನು-ಲೋಗರನ್ನೂ, ಅಹಿತ-ಹಗೆಗಳ, ಬಲದೊಳಗೆ-ದಂಡಿನಲ್ಲಿ, ಹಣಿದವಾಡಿದನು-ಎರಚಾಡಿ ಬಿಟ್ಟನು, ಪೆಣನಮೆದೆ-ಹೆಣಗಳ ರಾಶಿಯು, ನೆಲದೊಳಗೆ-ಇಳೆಯ ಮೇಲೆ, ಕೆಡೆಯಲು-ಒಟ್ಟಾಗಿ ಸೇರಲು, ಅಕ್ಷೋಹಿಣಿಯ ವಾಹಿನಿಯ, ಗಣನೆ-ಅಕ್ಷೋಹಿಣಿ ಸಂಖ್ಯೆಯ ಲೆಕ್ಕವು, ಮೂರು-ಮೂರರಷ್ಟು, ಒಂದೇ ಕ್ಷಣಕೆ-ಕ್ಷಣಮಾತ್ರದೊಳಗೆ, ವೀಕ್ಷಣಕೆ-ನೋಟಕ್ಕೆ, ಭಯಂಕರ- ಹೆದರಿಕೆಯುನ್ನುಂಟುಮಾಡುವುದು, ಆಗುತಿರಲು- ಆಗುತ್ತಿರಲಾಗಿ, ನೆರೆ-ಹೆಚ್ಚಾಗಿ, ಅಳಿದುದು-ನಾಶವನ್ನೈದಿತು. ‖೨೩‖

ಟೀ‖ ಅನಿರುದ್ಧನ-ಪ್ರದ್ಯುಮ್ನನ ಮಗನ, ಅಸ್ತ್ರಂಗಳು-ಕಣೆಗಳಾದರೊ, ಬತ್ತಿ ಬಹ-ಮೇಲ್ವಾಯ್ದು ಬರತಕ್ಕ, ರಥಿಕರಂ-ರಥದಲ್ಲಿ ಕುಳಿತು ಹೋರಾಡುವರನ್ನೆಲ್ಲಾ, ವ್ಯಥಿತರಂ ಮಾಡಿದವು-ತೊಂದರೆಗೆಸಿಕ್ಕಿ ನರಳುವಂತೆ ಮಾಡಿ ಬಿಟ್ಟವು ಮುತ್ತುವ-

ನ್ನೆಲ್ಲಾ ನಡುದಾರಿಯಲ್ಲಿಯೆ ಇಕ್ಕಡಿಯಾಗಿ ಮಾಡಿದನು. ‖ ೨೧ ‖ ಅನಂತರ ತಾಮ್ರಕೇತುವನ್ನು ಕುರಿತು, ಎಲೈ ತಾಮ್ರಧ್ವಜನೆ, ಯುದ್ಧದಲ್ಲಿ ಪರಾಕ್ರಮವನ್ನು ತೋರಿಸಬೇಕೊ, ಇಂತಹ ಹರಟೆಯ ಮಾತುಗಳಿಂದ ಕಾಲಹರಣ ಮಾಡುವುದು ಸರಿಯೊ? ಪೂರ್ವ ಪ್ರಸಂಗವು ಈಗ ಏತಕ್ಕೆ ನನ್ನ ಬಾಣದ ಏಟಿಗೆ ಸುದಾರಿಸಿಕೊಳ್ಳುವ ಉಪಾಯವನ್ನು ಹುಡುಕೆಂದು ನುಡಿಯುತ್ತಾ ಕೂರಲುಗುಗಳನ್ನು ಬಿಡಲು ತಾಮ್ರಧ್ವಜನ ತೇರೂ, ಅಚ್ಚುಗಳೂ, ಧ್ವಜಗಳೂ, ಬಾಣದ ಚೀಲವೂ ಸಹ ನುಚ್ಚುನುಚ್ಚಾಗಿ ಹೋದವು. ಅನಂತರ ಅನಿರುದ್ಧನು ಶತ್ರು ಸೈನ್ಯದ ಮೇಲೆ ನುಗ್ಗಿ ‖೨೨‖ ನಿಶಿತಾಸ್ತ್ರಂಗಳಂ ಬಿಟ್ಟು ಚತುರಂಗ ಬಲವನ್ನೂ ಧ್ವಂಸಮಾಡಿದನು. ಒಂದು ಕ್ಷಣಮಾತ್ರದಲ್ಲಿ ಮೂರಕ್ಷೋಹಿಣೀ ಸೈನ್ಯವೂ ಯಮಲೋಕವನ್ನೈದುವಂತೆ ಮಾಡಿಬಿಟ್ಟನು. ಹೆಣದ ರಾಶಿಯಾದರೊ ಪರ್ವತಗಳಂತೆ ಬಿದ್ದು ನೋಡುವವರ ಮನಸ್ಸನ್ನು ತಲ್ಲಣಂಗೊಳಿಸುತ್ತಲಿದ್ದವು. ‖೨೩‖ ಅಲ್ಲದೆ ಇವನು ಬಿಡುವ ಬಾಣಗಳ ಹೊಡತಕ್ಕೆ ಸಿಕ್ಕಿದ ರಥಿಕರೆಲ್ಲಾ ನೊಂದು ಹಿಂದಾದರು. ಮದಾತಿಶಯದಿಂದ ಮೆರೆಯುವ

ಹಕರನು ‖ ಮತ್ತೆ ಭಟರಂಗಮುಂಭಂಗಮುಂಬಡಿಸಿದವು | ಕತ್ತರಿಸಿತಲೆಗಳಂಕೊಲೆಗಳಂಕೊಂದುಬಿಸಿ | ನೆತ್ತರಂಪರಪಿದವು ನೆಲಪಿದವುಮುರುಳ್ಪಡೆಯನನಿರುದ್ಧನಸ್ತ್ರಂಗಳು ‖೨೪‖ ಪೊಸರಥದೊಳೈದಿದಂಮತ್ತೆ ತಾಮ್ರಧ್ವಜಂ | ಮುಸುಕಿತಗಣಿತಚಾತುರಂಗ ಮನಿರುದ್ಧನಂ | ಮುಸಗಿತುತಮಸ್ತೋಮಮಾದಿತ್ಯಮಂಡಲದಘಸಣಿಯಿಲ್ಲೆನೆನಭದೊಳು ‖ ವಸುಧೆಯದುರಿತುಮೇರುಶೈಲ ಮಲ್ಲಾಡಿದುದು | ಬಸವಳಿದನಹಿಕೂರ್ಮನೆದೆಗೆಟ್ಟುನಡುಗಿದವು | ದೆಸೆಯಾನೆಕಡಲುಕ್ಕಿತಾಹವಂಘೋರಮಾದುದುರೋಮ ಹರ್ಷಣದೊಳು ‖೨೫‖ ಕೋಪದಿಂಪ್ರಳಯಾಗ್ನಿಯಂದದಶರಂಗಳಂ |ಚಾಪದಿಂತೆಗೆದೆಸುತ್ತನಿರುದ್ಧನಮಿತಪ್ರ| ತಾಪದಿಂದುಜ್ಜ್ವಲಿಸುತಿರ್ದಂವಿಧೂಮಪಾವಕನಂತೆಪರಬಲದೊಳು‖ ಶ್ರೀಪತಿಯಪೌತ್ರನೆಂದಿನ್ನೆಗಂತಾಳ್ದೊಡಾ| ಟೋಪಮೇನಿನಗೆನುತತಾಮ್ರ

---

ಮೇಲೆ ನುಗ್ಗಿ ಬರತಕ್ಕ, ತುರಂಗಮುದ-ಅಶ್ವಂಗಳ, ತುಂಗ-ಎತ್ತರವಾಗಿರುವ, ಮದದಂತಿಗಳ-ಮತ್ತಗಜಗಳ, ಮೊತ್ತಮುಂ-ಸಮುದಾಯವನ್ನು, ಪೋಳಾಗಿ-ಬಪ್ಪುಗಳಾಗುವಂತೆ, ಸೀಳಾಗಿ-ಭೇದಿಸಿ, ಕೆಡಹಿದವು-ಕೆಡವಿಬಿಟ್ಟವು, ವಾಹಕರನು-ರಥವನ್ನು ನಡೆಯಿಸತಕ್ಕವರನ್ನು, ಕೆಡಹಿದವು-ನೆಲದಮೇಲಕ್ಕೆ ಉರುಳಿಸಿ ಬಿಟ್ಟವು, ಭಟರ-ವೀರಾದವರ, ಅಂಗಮುಂ-ಶರೀರಭಾಗಗಳನ್ನು, ಮತ್ತೆ-ತಿರುಗಿ, ಭಂಗಮುಂಬಡಿಸಿದವು-ಭಗ್ನವಾಗಿ ಮಾಡಿಬಿಟ್ಟವು, ತಲೆಗಳಂ - ಉತ್ತಮಾಂಗಗಳನ್ನು, ಕತ್ತರಿಸಿ - ಕಡಿದು, ಕೊಂದು-ಕೊಂದು ಹಾಕಿ, ನೆತ್ತರಂ-ರಕ್ತವು ಮತ್ತು ಕೊಲೆಗಳಂ - ತೊಂದರೆಗಳನ್ನೂ, ಪರಪಿದವು - ಪಸರಿಸುವಂತೆ ಮಾಡಿಬಿಟ್ಟವು, ಮುರುಳ್-ಪುನಃ, ಪಡೆಯನು-ದಳವನ್ನು, ಪರಪಿದವು-ನೆಲಸಮನಾಗಿರುವಂತೆ ಮಾಡಿದವು ‖೨೪‖

ಟೀ‖ ತಾಮ್ರಧ್ವಜಂ-ತಾಮ್ರಧ್ವಜನಾದರೊ, ಮತ್ತೆ-ತಿರುಗಿ, ಪೊಸರಥದೊಳು-ಹೊಸತೇರಿನಲ್ಲಿ, ಐದಿದನು-ಬಂದು ಸಿದ್ಧನಾದನು, ಅನಿರುದ್ಧನಂ-ಅನಿರುದ್ಧನೆಂಬ ಪ್ರದ್ಯುಮ್ನನ ಸುತನನ್ನು, ಅಗಣಿತಚಾತುರಂಗಂ-ಅಸಂಖ್ಯಾತವಾದ ಚತುರಂಗ ಬಲವು, ಮುಸುಕಿತು-ಕವಿದುಕೊಂಡಿತು, ತಮಸ್ತೋಮಂ - ಕಳ್ತಲೆಯರಾಶಿಯಾದರೊ, ಆದಿತ್ಯಮಂಡಲದ - ರವಿಮಂಡಲದ, ಘಸಣಿ-ತಿರುಗುವಿಕೆಯು, ಇಲ್ಲೆನೆ-ಇಲ್ಲವೋ ಎಂಬತೆರನಾಗಿ, ನಭದೊಳ್-ಆಕಾಶದಲ್ಲೆಲ್ಲಾ, ಮುಸಗಿತು - ಕವಿದುಕೊಂಡಿತು, ವಸುಧೆ-ಧರಾವಲಯವೆಲ್ಲಾ, ಅದರಿತು-ನಡುಗಲಾರಂಭಿಸಿತು, ಮೇರುಶೈಲಂ-ಮೇರುವೆಂಬ ಗಿರಿಯು, ಅಲ್ಲಾಡಿದುದು-ಅಲುಗಾಡಲುಜ್ಜುಗಿಸಿತು, ಅಹಿ - ಸರ್ಪರಾಜನ ಕೂಡ, ಬಸವಳಿದನು - ನಿಟ್ಟುಸಿರುಬಿಟ್ಟನು, ಕೂರ್ಮನು - ಭೂಭಾರವನ್ನು ಧರಿಸಿರತಕ್ಕ ಹಂದಿಯು, ಎದೆಗೆಟ್ಟು-ಧೈರ್ಯಕುಂದಿದವನಾಗಿ. ಬಸವಳಿದನು-ಆಯಸಂಗೊಂಡನು, ದೆಸೆಯಾನೆ-ಅಷ್ಟದಿಗ್ಗಜಗಳೆಲ್ಲಾ, ನಡುಗಿದವು-ನಡುಗಲಾರಂಭಿಸಿದವು, ಕಡಲು-ಅಬ್ಧಿಯೂ ಕೂಡ, ಉಕ್ಕಿತು - ಮಿತಿಮೀರಿತು, ಆಹವಂ - ಕಾಳಗವಾದರೊ, ರೋಮಹರ್ಷದೊಳು-ರೋಮಾಂಚದಿಂದ, ಘೋರಂ-ಭಯಂಕರವಾದದ್ದಾಗಿ, ಆದುದು-ಪರಿಣಮಿಸಿತು ‖೨೫‖

ಟೀ‖ ಅನಿರುದ್ಧನು - ಅನಿರುದ್ಧನೆಂಬ ಕೃಷ್ಣನ ಮೊಮ್ಮಗನು, ಪ್ರಳಯಾಗ್ನಿಯಂದದ - ಲೋಕ ಸಂಹಾರ ಕಾಲದಲ್ಲಿ ಹುಟ್ಟುವ ಬಡಬಾಗ್ನಿಯ ತೆರನಾದ, ಶರಂಗಳಂ-ಕಣೆಗಳನ್ನು, ಕೋಪದಿಂ-ಅತ್ಯಾಗ್ರಹದಿಂದ ಕೂಡಿ, ಎಸುತ-ಬಾಣಗಳನ್ನು ಬಿಡುತ್ತ ಪರಬಲದೊಳು-ಹಗೆಗಳ ಪಡೆಯಲ್ಲಿ, ಅಮಿತಪ್ರತಾಪದಿಂದ - ಅಸದೃಶವಾದ ಸಾಹಸದಿಂದ, ವಿಧೂಮಪಾವಕನಂತೆ-ಧೂಮರಹಿತನಾದ ಯಜ್ಞೇಶ್ವರನಂತೆ,ಉಜ್ಜ್ವಲಿಸುತ-ಕಾಂತಿಯುಕ್ತನಾಗಿ,ಇರ್ದಂ-ಇದ್ದವನಾದನು, ಶ್ರೀಪತಿಯ-ಲಕ್ಷ್ಮೀಕಾಂತನಾದ ನಾರಾಯಣನ, (ಕೃಷ್ಣನ) ಪೌತ್ರನು-ಮಗನಕುವರನು, ಎಂದು-ಎಂಬ ಕನಿಕರದಿಂದ, ಇನ್ನೆಗಂ-ಇಷ್ಟು ಹೊತ್ತಿನವರೆಗೂ, ತಾಳ್ದೊಡೆ-ತಡೆದುಕೊಂಡಿದ್ದರೆ, ಆಟೋಪಮೆ-ಶೌರ್ಯ ಉಂಟಾಯಿತೆ, ಎನುತ-ಎಂದು ನುಡಿಯುತ್ತ, ತಾಮ್ರಧ್ವಜನು - ಮರಾಳಧ್ವಜನ ಮಗನು, ಕನಲ್ದು-ಕೋಪಾತಿಶಯದಿಂದ ಕೂಡಿ, ಅಂಬರತುಂಬುವಂತೆ-ಅಂತರಿಕ್ಷವೆಲ್ಲಾ ಕವಿಯುವಂತೆ, ಆ ಪುಷ್ಪಬಾಣತನುಜನ ಮೇಲೆ-ಅನಿರುದ್ಧನ ಮೇಲೆ, ಕಣೆ-ಸರಲ್ಗಳನ್ನು, ಕರೆದನು-ಬಿಟ್ಟುಬಿಟ್ಟನು ‖೨೬‖

---

ಹಸ್ತಿಗಳೂ ತಮ್ಮ ಬಿಂಕವನ್ನು ನೀಗಿಕೊಂಡವು. ಕುದುರೆಗಳೆಲ್ಲಾ ತುಂಡುತುಂಡಾಗಿ ಸೀಳಿ ಬಿದ್ದುಹೋದವು. ಯೋಧಾಗ್ರೇಸರರಲ್ಲಿ ಕೆಲವರ ಅಂಗಾಂಗಗಳಲ್ಲಿಯೂ ಬಾಣಗಳು ನಾಟಿದವು, ಮತ್ತೆ ಕೆಲವರ ತಲೆಗಳನ್ನೇ ಕತ್ತರಿಸಿಕೊಂಡು ಹೋದವು. ‖ ೨೪ ‖ ಆ ಬಳಿಕ ತಾಮ್ರಧ್ವಜನು ಮತ್ತೊಂದು ರಥವನ್ನೇರಿ ಬಂದು ಅನಿರುದ್ಧನನ್ನು ಎದುರಿಸಿ, ಕೂರ್ಗಣೆಗಳನ್ನು ಕಟ್ಟುಗ್ರಕೋಪದಿಂದ ಬಿಡುತ್ತಲಿದ್ದನು. ಇವನ ಬಾಣಪರಂಪರೆಯು ಆಕಾಶದಲ್ಲೆಲ್ಲಾ ವ್ಯಾಪಿಸಿ ಸೂರ್ಯಮಂಡಲವನ್ನು ಮಾಯವಾಗುವಂತೆ ಮಾಡಿಬಿಟ್ಟಿತು. ಭೂಮಿಯನ್ನು ಗಡಗಡನೆ ನಡುಗುವಂತೆಯೂ, ದಿಗ್ಗಜಗಳನ್ನು ಬೆದರಿಸಿಬಿದ್ದು ಹೋಗುವಂತೆಯೂ ಮಾಡಿಬಿಟ್ಟಿತು. ‖ ೨೫ ‖ ಅನಂತರ ಅವರೀರ್ವರೂ ಕೋಪಾಟೋಪದಿಂದ ಘೋರ ಯುದ್ಧವಂ ಗೈಯುತ್ತಲಿರುವಾಗ ಅನಿರುದ್ಧನು ಹೊಗೆಯಿಲ್ಲದ ಯಜ್ಞೇಶ್ವರನಂತೆ ಕಂಗೊಳಿಸುತ್ತಲಿದ್ದನು. ಆಗ ತಾಮ್ರಧ್ವಜನು ಅನಿರುದ್ಧನನ್ನು ಕುರಿತು, ಎಲೈ ಪ್ರದ್ಯುಮ್ನ ಸುತನೆ, ಕೃಷ್ಣನ ಕುವರನ ಮಗನೆಂದು ಗೌರವದಿಂದ ನಾನು

ಧ್ವಜಂಕನ | ಲ್ಪಾಪುಷ್ಪಬಾಣತನುಜನಮೇಲೆಕಣೆಗರೆದನಂಬರಂತುಂಬುವಂದೆ ||೨೬|| ಪರ್ಬಿದವುತಾಮ್ರಧ್ವಜನಕಣೆಗ | ಳರ್ಬು ದಂಗಳಸಂಖ್ಯೆಯಿಂದೊಡನೊಡನೆನರನ | ಪೆರ್ಬಡೆಯಮೇಲೆಕವಿದವುನೊಂದನನಿರುದ್ಧನೇರ್ವಡೆದುಮೂರ್ಛೆಯಿಂದ || ಸರ್ವ ದಳಮುಂತಗುಳ್ದುಬೇಸಗೆಯುಬಿರುವ|ಲರ್ಬೀಸಿರಜಮುಂತೆರಳ್ಚುವಂತಾಗವೀ | ರರ್ಬಿಂಕದಿಂದಾಂತುನಿಂದರನುಸಾಲ್ವಕಪ್ರದ್ಯುಮ್ನ ಸಾತ್ಯಕಿಗಳು || ೨೭ || ಹಂಸಕೇತುವನೆಚ್ಚುಕೃತವರ್ಮಸಾತ್ಯಕಿ[illegible]ಳಂಸದೆದುಬಭ್ರುವಾಹನಯೌವನಾಶ್ವರ್ಗೆ | ಹಿಂಸೆಯಂ ಕೈಗೈದುನೀಲಧ್ವಜಾನುಸಾಲ್ವಾದಿಭಟರಂಘಾತಿಸಿ || ಕಂಸಾರಿಸುತನಂಪಚಾರಿಸಿವಿಜಯಮುರ | ಧ್ವಂಸಿಗಳಮೇಲೆನಡೆತರೆ ಕಂಡುಕರ್ಣತನ | ಯುಂಸರಿಸಕೆದಿರಾಗಿಕತ್ತರಿಸಿಕೆಡಹಿದಂತಾಮ್ರಧ್ವಜನರಥವನು ||೨೮|| ತೇರುಡಿಯೆಮತ್ತೊಂದುತೇರನಳವ ಡಿಸಲಾ | ತೇರನೆಸಲೊಡನೆಪೊಸತೇರೊಳವನೈದಲಾ | ತೇರನಂಕತ್ತರಿಸತೇರ್ಸೈಸೆದಿಂತುನೂರುತೇರಂಖಂಡಿಸಿ || ಸೇರಿಸೇರಿದ

---

ಟೀ|| ತೆಗೆದು–ಆಕರ್ಣಾಂತವಾಗಿ ಸೆಳೆದು, ಎಸಲು–ಪ್ರಯೋಗಮಾಡಲು, ತಾಮ್ರಧ್ವಜನ ಕಣೆಗಳು-ತಾಮ್ರಧ್ವಜನ ಕೋಲ್ಗಳು, ಒಡನೊಡನೆ–ಪರಂಪರೆಯಾಗಿ, ಅರ್ಬುದಂಗಳ ಸಂಖ್ಯೆಯಿಂದ–ಕೋಟಿಪ್ರಕಾರವಾದ ಗಣನೆಯಿಂದ, ಪರ್ಬಿದವು-ಆಕ್ರಮಿಸಿದವು, ನರನ–ಪಾರ್ಥನ, ಪೆರ್ಬಡೆಯಮೇಲೆ–ಅಪಾರವಾದ ದಳದಮೇಲೆಲ್ಲಾ, ಕವಿದುವು-ಆವರಿಸಿದವು, ಅನಿರುದ್ಧನು–ಪ್ರದ್ಯುಮ್ನಸುತನಾದರೊ, ಮೂರ್ಛೆಯಿಂದ–ಜ್ಞಾನಹೀನನಾಗಿ, ಏರ್ವಡದು-ಗಾಯದಿಂದ ಬಿದ್ದುಹೋಗಿ, ನೊಂದನು–ವ್ಯಥೆಯನ್ನನುಭವಿಸಿದನು, ಬೇಸಿಗೆಯ-ಗ್ರೀಷ್ಮಕಾಲದ, ಬಿರುವೆಲರ್-ಬಿರುಗಾಳಿಯು, ಸರ್ವದಳಮುಂ–ಸೇನೆಯಮೇಲೆಲ್ಲಾ, ಬೀಸಿ-ಬೀಸಿಕೊಂಡು, ರಜಮುಂ–ಧೂಳನ್ನೆಲ್ಲಾ, ಕೆರಳ್ಚುವಂತೆ-ವ್ಯಾಪಿಸುಸುವಹಾಗೆ, ತುಗಳ್ದುದು–ಶರವರ್ಷವು ಸುರಿಯಿತು, ಆಗ–ಆಕಾಲದಲ್ಲಿ, ವೀರರು-ಪರಾಕ್ರಮಿಗಳಾದ, ಅನುಸಾಲ್ವಕ- ಸಾಲ್ವಾನುಜನೂ, ಪ್ರದ್ಯುಮ್ನ- ಕೃಷ್ಣಸುತನೂ, ಅನಿರುದ್ಧ-ಕೃಷ್ಣನ ಮೊಮ್ಮಗನೂ, ಸಾತ್ಯಕಿಗಳು–ಸತ್ಯಕನ ಕುವರನೆ ಮೊದಲಾದವರೆಲ್ಲಾ, ಬಿಂಕದಿಂ-ಕೋಪೋದ್ದೀಪಿತರಾಗಿ, ಆಂತು-ಯುದ್ಧಕ್ಕೆ ಎದುರಿಸಿ, ನಿಂದರು–ನಿಂತವರಾದರು. ||೨೭||

ಟೀ|| (ತಾಮ್ರಧ್ವಜನು), ಹಂಸಕೇತುವನು–ಹಂಸಧ್ವಜನನ್ನು, ಎಚ್ಚು–ಬಾಣಗಳಿಂದ ಘಾತಿಸಿ, ಕೃತವರ್ಮಸಾತ್ಯಕಿಗಳನು–ಕೃತವರ್ಮ ಮತ್ತು ಸತ್ಯಕನ ಮಗನನ್ನು, ಸದೆದು–ಹೊಡೆದು, ಬಭ್ರುವಾಹನ ಯೌವನಾಶ್ವರ್ಗೆ–ಪಾರ್ಥಜ ಯೌವನಾಶ್ವರಿಗೆ, ಹಿಂಸೆಯಂಗೈದು–ತೊಂದರೆಯನ್ನುಂಟುಮಾಡಿ, ನೀಲಧ್ವಜ–ನೀಲಧ್ವಜನು. ಅನುಸಾಲ್ವ-ಸಾಲ್ವಾನುಜನೇ, ಆದಿ–ಮೊದಲಾದ, ಭಟರಂ-ವೀರರನ್ನೆಲ್ಲ. ಘಾತಿಸಿ-ತಾಡಿಸಿದವನಾಗಿ, ಕಂಸಾರಿಮಗನಂ-ಕಂಸಾಸುರನ ಹಗೆಯಾದ ಕೃಷ್ಣನ ಕುವರನನ್ನು, ಪಚಾರಿಸಿ–ಹೀಯಾಳಿಸಿ, ವಿಜಯ ಮುರಧ್ವಂಸಿಗಳಮೇಲೆ-ಪಾರ್ಥ ಕೃಷ್ಣರಮೇಲೆ, ನಡೆತರೆ–ಬರಲಾಗಿ, ಕರ್ಣತನಯಂ–ಕರ್ಣಸೂನುವು, ಕಂಡು–ಈಕ್ಷಿಸಿ, ಸರಿಸಕೆ-ಮಯೂರಧ್ವಜನ ಬಳಿಗೆ, ಇದಿರಾಗಿ–ಪ್ರತಿಭಟಿಸಿ, ತಾಮ್ರಧ್ವಜನ ರಥವನು-ತಾಮ್ರಧ್ವಜನ ತೇರನ್ನು, ಕತ್ತರಿಸಿ-ಕೆಡಹಿದಂ–ಕಡಿದು ಬಿಸುಟನು. ||೨೮||

ಟೀ|| ತೇರು–ಸ್ಯಂದನವು, ಉಡಿಯೆ-ಮುರಿದು ಹೋಗಲು, ಮತ್ತೊಂದುತೇರನು–ಬೇರೊಂದು ರಥವನ್ನು, ಅಳವಡಿಸಲು-ಏರ್ಪಡಿಸಿಕೊಳ್ಳಲು, ಆ ತೇರನ್ನೂ-ಅದನ್ನೂ ಕೂಡ, ಎಸಲು–ಬಾಣದಿಂದ ಹೊಡೆದು ಕೆಡಹಲು, ಅವನು-ಆ ಮಯೂರಧ್ವಜನ ಸುತನು, ಒಡನೆ–ತಡಮಾಡದೆ, ಪೊಸತೇರೊಳು-ಹೊಸತೇರಿನಲ್ಲಿ ಕುಳಿತು, ಐದಲು–ಬಂದು ಸೇರಲು, ಆ ತೇರನಂ–ಆರಥವನ್ನೂ ಕೂಡ, ಕತ್ತರಿಸೆ–ಪುಡಿಪುಡಿಮಾಡಲು, ತೇರ್ಸೈಸದ-ಅಷ್ಟೊಂದು ರಥಗಳನ್ನೂ, ಅಂತಿಂತು-ಲೆಕ್ಕಿಸಿನೋಡಿದರೆ, ನೂರತೇರಂ

---

ಸುಮ್ಮನಿದ್ದಷ್ಟೂ ನಿನಗೆ ಅಹಂಕಾರವು ಹೆಚ್ಚಾಗುತ್ತಲಿದೆಯಲ್ಲಾ, ಒಳ್ಳೇದು ಇರಲಿ ಎಂದು ನುಡಿದು ನಿಶಿತಾಸ್ತ್ರಂಗಳನ್ನು ಅನಿರುದ್ಧನ ಮೇಲೆಸೆಯಲು, ||೨೬|| ಅವುಗಳು ಬಂದು ಅನಿರುದ್ಧನನ್ನು ಅವನ ಅರ್ಬುದ ಸಂಖ್ಯಾಕವಾದ ಸೈನ್ಯವನ್ನೂ ಕವಿದುಕೊಂಡದ್ದರಿಂದ ಅನಿರುದ್ಧನು ಮೂರ್ಛಾಕ್ರಾಂತನಾಗಿ ಬಿದ್ದುಬಿಟ್ಟನು. ಉಳಿದ ಸೈನ್ಯವೆಲ್ಲಾ ಬಿಸಿಲಿನ ಝಳಕ್ಕೆ ಸಿಕ್ಕಿದವರಂತೆ ತಲ್ಲಣಂಗೊಂಡವರಾದರು. ಅನಿರುದ್ಧಾದಿಗಳೆಲ್ಲಾ ಈ ತೆರನಾಗಿ ಬಿದ್ದು ಹೋಗಿರುವುದನ್ನು ಅನುಸಾಲ್ವ, ಪ್ರದ್ಯುಮ್ನ, ಸಾತ್ಯಕಿಯೇ ಮೊದಲಾದವರು ನೋಡಿ, ಯುದ್ಧಕ್ಕೆ ನಿಂತವರಾದರು. || ೨೭ || ತಾಮ್ರಧ್ವಜನಾದರೊ, ತನ್ನನ್ನು ಎದುರಿಸಿ ಬಂದ ಹಂಸಧ್ವಜ, ಕೃತವರ್ಮ, ಬಭ್ರುವಾಹನ, ಯೌವನಾಶ್ವ, ನೀಲಧ್ವಜಾದಿ ವೀರಾಗ್ರಣಿಗಳನ್ನೆಲ್ಲಾ ಘಾತಿಸಿ, ಪ್ರದ್ಯುಮ್ನನನ್ನು ಹೀಯಾಳಿಸುತ್ತ, ಕೃಷ್ಣಾರ್ಜುನರನ್ನು ಹೊಡೆಯಬೇಕೆಂದು ಬರುತ್ತಲಿರುವುದನ್ನು ಕರ್ಣನಂದನನಾದ ವೃಷಧ್ವಜನು ನೋಡಿ ತಾಮ್ರಧ್ವಜನನ್ನು ಎದುರಿಸಿ ಅವನ ರಥವನ್ನೆಲ್ಲಾ ನುಚ್ಚುನುಚ್ಚಾಗಿ ಮಾಡಿದನು. || ೨೮ || ತಾಮ್ರಧ್ವಜನು ತನ್ನ ರಥವು ಹೋಯಿತೆಂದು ಹಿಂದೆಗೆಯದೆ ಬೇರೊಂದು ರಥವನ್ನೇರಿ ಬರಲು ವೃಷಕೇತುವು ಅದನ್ನೂ ಪುಡಿಮಾಡಿದನು. ಪುನಃ ಮತ್ತೊಂದು ರಥವನ್ನೇರಿ ಬಂದರೂ ಕೂಡ ವೃಷಧ್ವಜನ ಹೊಯ್ಲಿನಿಂದ ಅದೂ ಪುಡಿಪುಡಿಯಾಯಿತು. ಎಷ್ಟು ಸಲ ತಾಮ್ರ

ಸೇನೆಯಂ ಸವರಿಕರ್ಣಜಂ | ಸೇರಿ ಬರೆತಾಮ್ರಧ್ವಜಂ ಕನಲ್ದವನಿಯಂ | ಸೇರಿಬಾಣತ್ರಯದೊಳಾತನಂ ಘಾತಿಸಿರಥಾರೋಹಣಂಗೈದನು ||೨೯|| ಅನಿರುದ್ಧನಂಗೆಲ್ದು ವೃಷಕೇತುವಂಕೆಡಹ | ಲನುಸಾಲ್ವನಿದಿರಾಗಲಾತನಪರಾಕ್ರಮುನ | ನನುವರದೊಳುರೆ ಮುರಿದು ಕೃತವರ್ಮಸಾತ್ಯಕಿ ಪ್ರದ್ಯುಮ್ನರಂ ಸೋಲಿಸಿ || ಅನುಪಮಬಲಂ ಬಭ್ರುವಾಹನಂ ಕಾದಲವ | ನನುವನೊಪ್ಪಂಗೆಡಿಸಿಹಂಸಧ್ವಜನಜಯವ | ನನುಕರಿಸಿಯೌವ್ವನಾಶ್ವಾಸಿತಧ್ವಜರಂತಗುಳ್ದವಂಬೊಬ್ಬಿರಿದನು || ೩೦ || ಬಲದೊಳಗೆಮಿಡುಕುಳ್ಳವೀರರೋಳ್ಧೀರರೋ | ಳ್ಕಲಿತನದೊಳಿದಿರಾಗಿ ನಿಲ್ವರಂಗೆಲ್ವರಂ | ಸಲೆಪಲಾಯನಕೆಮೈಗೊಡುವರಂಬಿಡುವರಂ ವಾಹನಾಯುಧತತಿಯನು || ಫಲುಗುಣಂಕಾಣುತತ್ಯುಗ್ರದಿಂ ವ್ಯಗ್ರದಿಂ | ಸೆಳದುಕೋದಂಡಮುಂತೀಡಿದಂಪೂಡಿದಂ | ಪೊಳೆವಕೆಂಗರಿಯನಿಡುಕೋಲ್ಗಳಂಸಾಲ್ಗಳಂ ಕಟ್ಟಿದಂಗಗನಪಥಕೆ || ೩೧ || ಲೇಸಾದುದೈಪಾರ್ಥ ಕೃಷ್ಣನಸಹಾಯದಿಂ | ದೀಸುದಿನಮಾಹವ

---

ಖಂಡಿಸಿ-ಶತಸಂಖ್ಯಾಕನಾದ ರಥಗಳನ್ನು ಛೇದಿಸಿ, ಸೇರಿಸೇರಿದ-ಮೇಲೆಮೇಲೆ ಬಂದ, ಸೇನೆಯಂ-ದಳವನ್ನೆಲ್ಲಾ, ಸವರಿ-ನಿರ್ಮೂಲನಮಾಡಿ, ಕರ್ಣಜಂಸೇರಿಬರೆ-ಕರ್ಣಸುತನು ನುಗ್ಗಿ ಬರಲಾಗಿ, ತಾಮ್ರಧ್ವಜಂ-ತಾಮ್ರಧ್ವಜನಾದರೊ, ಕನಲ್ದು-ಆಗ್ರಹಗೊಂಡು, ಅವನಿಯಂಸೇರಿ-ಭೂಬಾಗವನ್ನು ಹೊಂದಿ, ಆತನಂ-ಆ ವೃಷಧ್ವಜನನ್ನು, ಬಾಣತ್ರಯದೊಳು-ಸರಲ್ಗಳ ಮೂರರಿಂದ, ಘಾತಿಸಿ-ತಾಡಿಸಿದವನಾಗಿ, ರಥಾರೋಹಣಂಗೈದನು-ತೇರನ್ನಲಂಕರಿಸಿವನಾದನು ||೨೯||

ಟೀ|| ಅವಂ-ಆ ತಾಮ್ರಧ್ವಜನು, ಅನಿರುದ್ಧನಂ-ಅನಿರುದ್ಧನನ್ನು, ಗೆಲ್ದು-ಸೋಲಿಸಿ, ವೃಷಕೇತುವಂ- ಕರ್ಣಸುತನನ್ನು, ಕೆಡಹಲು-ನೆಲಕ್ಕೆ ಉರುಳಿಸಲು, ಅನುಸಾಲ್ವನು- ಸಾಲ್ವಾನುಜನು, ಇದಿರಾಗಲು-ಪ್ರತಿಭಟಿಸಿ ಬರಲಾಗಿ, ಅನುವರದೊಳು-ಕಾಳಗದಲ್ಲಿ, ಆತನ-ಅವನ, ಪರಾಕ್ರಮುವನು-ಶೌರ್ಯವನ್ನು, ಉರೆ-ಹೆಚ್ಚಾಗಿ, ಮುರಿದು-ಭಂಗಿಸಿ, ಕೃತವರ್ಮ ಸಾತ್ಯಕಿ ಪ್ರದ್ಯುಮ್ನರನು-ಕೃತವರ್ಮ ಸಾತ್ಯಕಿ ಪ್ರದ್ಯುಮ್ನನೆ ಮೊದಲಾದವರನ್ನೆಲ್ಲಾ, ಸೋಲಿಸಿ-ಸೋತುಹೋಗುವಂತೆಮಾಡಿ, ಅನುಪಮ-ಅಸದೃಶವಾದ, ಬಲಂ-ಶೌರ್ಯವುಳ್ಳ, ಬಭ್ರುವಾಹನಂ-ಪಾರ್ಥಜನು, ಕಾದಲು-ಕಾಳಗಮಾಡಲು, ಅವನ-ಆ ಅರ್ಜುನಿಯ, ಅನುವನು-ಬಗೆಯನ್ನು, ಒಪ್ಪಂಗೆಡಿಸಿ-ಮುರಿದುಬಿಟ್ಟು, ಹಂಸಧ್ವಜನ-ಹಂಸಕೇತುವಿನ, ಜಯವನು-ಸೋಲಿಸುವಿಕೆಯನ್ನು, ಅನುಕರಿಸಿ-ತಾಳಿ, ಯೌವನಾಶ್ವ-ಯೌವನಾಶ್ವನು, ಆಸಿತಧ್ವಜ-ನೀಲಧ್ವಜನು ಇವರನ್ನು, ತಗುಳ್ದು-ಘಾತಿಸಿ, ಬೊಬ್ಬಿರಿದನು-ಸಿಂಹನಾದವನ್ನು ಮಾಡಿದನು ||೩೦||

ಟೀ|| ಬಲದೊಳಗೆ-ದಳದಲ್ಲಿ, ಮಿಡುಕುಳ್ಳ-ಶೌರ್ಯವನ್ನುಂಟಾಗಿರುವ, ವೀರರೋಳ್- ಸಾಹಸಿಗಳಲ್ಲಿಯೂ, ಧೀರರೊಳ್-ಧೈರ್ಯಶಾಲಿಗಳಲ್ಲಿಯೂ, ಕಲಿತನದಿಂದ-ಪೌರುಷದಿಂದ, ಇದಿರಾಗಿ-ಪ್ರತಿಭಟಿಸಿ, ನಿಲ್ವರಂ-ನಿಲ್ಲತಕ್ಕವರನ್ನೂ, ಗೆಲ್ವರಂ-ಜಯಶೀಲರಾಗತಕ್ಕವರನ್ನೂ, ಸಲೆ-ಚೆನ್ನಾಗಿ, ಪಲಾಯನಕೆ-ಓಡಿಹೋಗುವದಕ್ಕೆ, ಮೈಗೊಡುವರಂ-ಉಜ್ಜುಗಿಸುವರನ್ನೂ, ವಾಹನಾಯುಧತತಿಯನು-ವಾಹನ-ಅಶ್ವಂಗಳು, ಆಯುಧ-ಕತ್ತಿ. ಈಟಿ ಮೊದಲಾದವು ಇವುಗಳ, ತತಿಯನು-ಸಮುದಾಯವನ್ನು, ಬಿಡುವರಂ-ಬಿಟ್ಟು ಓಡುವರನ್ನೂ, ಫಲುಗುಣಂ-ಪಾರ್ಥನು, ಕಾಣುತ-ನಿರುಕಿಸುತ್ತಲೆ, ಕೋದಂಡಮುಂ-ಧನುಸ್ಸನ್ನು, ಅತ್ಯುಗ್ರದಿಂ-ಬಹು ಕೋಪದಿಂದಕೂಡಿ, ವ್ಯಗ್ರದಿಂ-ಜಾಗರೂಕತೆಯಿಂದ, ಸೆಳೆದು-ಎಳದವನಾಗಿ, ತೀಡಿದಂ-ಟಂಕಾರಂಗೈದನು, ಪೊಳೆವ-ಪ್ರಕಾಶಿಸತಕ್ಕ, ಕೆಂಗರಿಯ-ಕೆಂಪಾದ ರೆಕ್ಕೆಗಳಿಂದೊಡಗೂಡಿದ, ನಿಡುಕೋಲ್ಗಳಂ-ನೀಳವಾದ ಸರಲ್ಗಳನ್ನು, ಪೂಡಿದಂ-ಸೇರಿಸಿದನು. ಗಗನಪಥಕೆ-ಆಕಾಶಮಾರ್ಗಕ್ಕೆ, ಸಾಲ್ಗಳಂ-ಶವಗಳ ಶ್ರೇಣಿಯನ್ನು, ಕಟ್ಟಿದಂ- ಬಂಧಿಸಿದನು ||೩೧||

ಟೀ|| ಪಾರ್ಥ-ಎಲೈ ಫಲುಗುಣನೆ, ಲೇಸಾದುದೈ-ಬಹಳ ಉತ್ತಮವಾಯಿತು, ಆಹವದೊಳ್-ಕಾಳಗದಲ್ಲಿ, ಈ

---

ಧ್ವಜನು ಬಂದರೂ ವೃಷಕೇತುವು ಅಷ್ಟುಸಲವೂ ಅವನ ರಥವನ್ನು ಕತ್ತರಿಸುತ್ತಾ ಬಂದನು. ಹೀಗೆಯೇ ನೂರು ತೇರುಗಳೂ ಕರ್ಣಸೂನುವಿನ ಕಾಟದಿಂದ ಮುರಿದುಹೋದವು ಸೈನ್ಯವೆಲ್ಲಾ ನಾಶವಾಗುತ್ತ ಬಂದಿತು: ಆಬಳಿಕ ತಾಮ್ರಧ್ವಜನು ಅತಿ ರೋಷದಿಂದ ವೃಷಧ್ವಜನನ್ನು ಮೂರಂಬುಗಳಿಂದ ನೋಯಿಸಿ ಬೇರೊಂದು ತೇರನ್ನೇರಿ. || ೨೯ || ಹಂಸಧ್ವಜ, ಯೌವನಾಶ್ವ, ನೀಲಧ್ವಜರೇ ಮೊದಲಾದ ಸಕಲ ವೀರರನ್ನೂ ಘಾತಿಸಿ ಪರಬಲವು ಎದೆನಡುಗಿ ಬೀಳುವಂತೆ ಗಟ್ಟಿಯಾಗಿ ಸಿಂಹನಾದವನ್ನು ಮಾಡುತ್ತಲಿದ್ದನು. || ೩೦ || ಇವನ ಸಿಂಹಗರ್ಜನೆಯಿಂದಲೇ ಅನೇಕ ವೀರರು ಪಲಾಯನ ಮಾಡಲುಜ್ಜುಗಿಸಿದರು. ಮತ್ತೆ ಕೆಲವರು ತಾಮ್ರಧ್ವಜನನ್ನಿದಿರಿಸಿ ಸೋತುಹೋದರು. ಇನ್ನೂ ಹಲವರು ತಮ್ಮ ತಮ್ಮ ಕೈಯಲ್ಲಿರುವ ಆಯುಧಗಳನ್ನು ಅಲ್ಲಿಯೇಬಿಟ್ಟು ಚದರಿ ಹೋಗುತ್ತಲಿದ್ದರು ಇದನ್ನೆಲ್ಲಾ ಪಾರ್ಥನು ನೋಡಿ ಕೆಂಗೆಂಡಂಗಳನ್ನುಗುಳುತ್ತ ತನ್ನ ಅಂಬನ್ನು ಸೆಳೆದು ಬಾಣಗಳನ್ನು ಪೋಣಿಸಿ ಬಿಡುವೇ ಇಲ್ಲದಂತೆ ತಾಮ್ರಧ್ವಜನನ್ನೂ ಅವನ ಪರಿವಾರವನ್ನೂ ತುಂಬಿಸಿದನು, ಅವನು ಬಿಟ್ಟ ಕೂರಲುಗುಗಳು ಭೂಲೋಕದಿಂದ ಆಕಾಶಕ್ಕೆ ಮಾಡಿರುವ ಏಣಿಗಳೋ ಎಂಬಂತೆ ಕಂಗೊಳಿಸುತ್ತಲಿದ್ದವು, || ೩೧ || ಆಗ ತಾ

ದೊಳೆಲ್ಲರಂಗೆಲ್ದೆಬಿಡು | ವಾಶಿಯಂತನ್ನೊಡನೆಗೋತ್ರಹತ್ಯಾದೋಷಮಂ ಕಳೆದುಕೊಂಬಮುಖಕೆ | ಏನುಹರಿಗಳ್ಬೇಕುನಿನಗೈಸ
ನೀವೆತಾ | ನೀಸರೋಜಾಕ್ಷನಿರಲೇತಕೆಲೆಮರುಳೆಧನ | ದಾಸೆಯಿಂಧರ್ಮವಂಮಾಣ್ಪನಂತಾದೆಹೋಗೆನುತವಂತೆಗದೆಚ್ಚನು ||೩೨||
ಎಲವೊತಾಮ್ರಧ್ವಜಸುವಿತ್ತದಿಂ ಧರ್ಮಮಂ | ನಿಲಿಸಬೇಕಲ್ಲದೆ ನಿರರ್ಥಕದೊಳಾದಪುದೆ | ಜಲಜಾಕ್ಷನಂಬರಿದೆಸಾಕ್ಷಾತ್ಕರಿ
ಸಬಹುದೆವಿಧಿವಿಧಾನದೊಳಲ್ಲದೆ || ಪಲವುಮುಖದಿಂದಪರಿಪೂರ್ಣನಾಗಿಹ ಹರಿಯ | ನೆಲೆಯನೀನೆಂತರಿವೆಮೂಢಫಡಹೋಗೆನು |
ತಫಲುಗುಣಂತೆಗೆವೆಚ್ಚನಾತನ ವರೂಥಹಯ ಸಾರಥಿಗಳೆಡೆಗಡಿದನು ||೩೩|| ಆ ರಥಂಮುರಿಯೆ ಪೊಸರಥನನವನೇರಿಬರ | ಲಾ

ಸದಿನಂ-ಇಷ್ಟುದಿನ ಪರ್ಯಂತವೂ, ಕೃಷ್ಣನಸಹಾಯದಿಂದ - ಕೃಷ್ಣಪರಮಾತ್ಮನ ಆಸರೆಯಿಂದ, ಎಲ್ಲರಂ - ಅಶೇಷರನ್ನೂ, ಗೆಲ್ದೆ-ಸೋಲಿಸಿದೆ, ವಾಶಿಯಂ - ಹಿಂದಿನಂತೆ ಈಗ ಜಯವಾಗುತ್ತದೆಂಬುದನ್ನು, ತನ್ನೊಡನೆ - ನನ್ನೊಂದಿಗೆ ಯುದ್ಧಮಾಡುವಾಗ, ಬಿಡು-ಬಿಟ್ಟುಬಿಡು, ಗೋತ್ರಹತ್ಯಾದೋಷಮಂ-ದಾಯಾದರನ್ನು ಕೊಂದ ದುರಿತಂಗಳನ್ನೆಲ್ಲಾ, ಕಳೆದುಕೊಂಬ-ನೀಗಿಕೊಳ್ಳತಕ್ಕ, ಮುಖಕೆ-ಯಾಗಕ್ಕೆ, ಹರಿಗಳ್-ಅಶ್ವಂಗಳಾದರೊ, ಏಸು-ಎಷ್ಟು, ಬೇಕು-ಆಗಬೇಕೆಂದಿಚ್ಛಿಸುವಿಯೊ, ಐಸನು-ಅಷ್ಟನ್ನೂ, ನಿನಿಗೆ-ನಿನಿಗಾದರೊ, ಆಂ-ನಾನು, ಈವೆನು-ಕೊಡತಕ್ಕವನಾಗುತ್ತೇನೆ, ಎಲೆಮರುಳೆ-ಭ್ರಾಂತಿಯನ್ನೈದಿರತಕ್ಕ ಕಿರೀಟಿಯೆ, ಈ ಸರೋಜಾಕ್ಷನು-ಪದ್ಮನೇತ್ರನಾದ ಈ ಕೃಷ್ಣಪರಮಾತ್ಮನು, ಇರಲು-ಇರತಕ್ಕ ಕಾಲದಲ್ಲಿ, ಏತಕೆ - ಹಯಮೇಧವನ್ನು ಏತಕ್ಕೆ ಮಾಡಬೇಕಾಗಿದೆ, ಧನದ-ಹಣದ. ಆಶೆಯಿಂ-ಅಭಿಲಾಷೆಯಿಂದ, ಧರ್ಮಮಂಮಾಡಿದಂತೆ-ಧರ್ಮಕಾರ್ಯವಂ ನೆರವೇರಿಸಿದಂತೆ, ಆದೆ-ಆಗಿರುತ್ತಿ, ಹೋಗು-ಹೊರಟುಹೋಗು, ಎನುತ-ಎಂದು ನುಡಿಯುತ್ತ, ಆಮಯೂರಧ್ವಜನ ಕುವರನು, ತೆಗೆದುಎಚ್ಚನು-ಕಣೆಗಳನ್ನು ಬಿಟ್ಟವನಾದನು ||

ಅ|| ವಿ|| ಸರೋಜಾಕ್ಷ-ಸರ-ನೀರಿನಲ್ಲಿ, ಜ-ಹುಟ್ಟಿದ್ದು (ಕಮಲ, ಸ. ತ.) ಸರೋಜದಂತೆ ಅಕ್ಷಿಯು ಯಾರಿಗೊ ಅವನು (ಬ. ಸ) ಹರಿ-ಕೃಷ್ಣನು, ಕುದುರೆ, ಕಪ್ಪೆ, ಕೋತಿ, ಇಂದ್ರ, ಅಶ್ವತ್ಥವೃಕ್ಷ, ಮೊದಲಾದವು, ಮುಖ-ಯಜ್ಞ. ಮುಖ-ಮೋರೆ, || ೩೨ ||

ಟೀ|| ಫಲುಗುಣಂ-ಪಾರ್ಥನಾದರೊ, ಎಲವೊತಾಮ್ರಧ್ವಜ-ಓ ತಾಮ್ರಧ್ವಜನೆ, ಧರ್ಮಮಂ-ಸತ್ಕಾರ್ಯವನ್ನು, ಸುವಿತ್ತದಿಂ-ಉತ್ತಮವಾದ ಹಣದಿಂದ, ನಿಲಿಸಬೇಕು-ಸ್ಥಿರಪಡಿಸಬೇಕು, ಅಲ್ಲದೆ- ಅದನ್ನು ಬಿಟ್ಟು, ನಿರರ್ಥಕದೊಳ್-ನಿಷ್ಪ್ರಯೋಜನವಾಗಿ, ಆದಪುದೆ-ಆದೀತೆ, ವಿಧಿವಿಧಾನದೊಳ್-ಶಾಸ್ತ್ರಸಮ್ಮತವಾದ ಮಾರ್ಗವನ್ನು, ಅಲ್ಲದೆ-ಬಿಟ್ಟು, ಜಲಜಾಕ್ಷನಂ-ಕಮಲನೇತ್ರನಾದ ಕೃಷ್ಣಸ್ವಾಮಿಯನ್ನು, ಬರಿದೆ-ವೃಥಾ, ಸಾಕ್ಷಾತ್ಕರಿಸಬಹುದೆ-ಬೇಟಿಯನ್ನು ಮಾಡಿಕೊಳ್ಳಲುಜ್ಜುಗಿಸಬಹುದೆ, ನೀನು-ನೀನಾದರೊ, ಪಲವು-ಬಹುವಾದ, ಮುಖದಿಂದ-ಯಾಗಂಗಳಿಂದ, ಪರಿಪೂರ್ಣನಾಗಿಹ-ತುಂಬಿರತಕ್ಕ. ಹರಿಯ-ಕೃಷ್ಣಸ್ವಾಮಿಯ, ನೆಲೆಯನು-ರೀತಿಯನ್ನು, ಎಂತು-ಯಾವಪರಿಯಿಂದ, ಅರಿವೆ-ಗೋಚರಪಡಿಸಿಕೊಳ್ಳುತ್ತಿ, ಮೂಢ-ಮಂದಬುದ್ಧಿಯುಳ್ಳವನೆ, ಫಡ-ಛಿ, ಛಿ, ಹೋಗು-ಹೊರಡುವನಾಗು, ಎಂದು-ಎಂದು ನುಡಿಯುತ್ತ, ತೆಗೆದು-ಆಕರ್ಣಾಂತವಾಗಿ ಸೆಳೆದು, ಎಚ್ಚನು-ಪ್ರಯೋಗಿಸಿದನು, ಆತನ-ಆ ಮಯೂರಧ್ವಜನ ಮಗನ, ವರೂಥ-ರಥವು, ಹಯ-ಅಶ್ವವು. ಸಾರಥಿಗಳ-ರಥವನ್ನು ನಡೆಯಿಸುವರನ್ನು, ಎಡೆಗಡಿದನು-ಛೇದಿಸಿದನು ||೩೩||

ಟೀ|| ಆರಥಂ-ಆ ಸ್ಯಂದನವು, ಮುರಿಯೆ-ಮುರಿದುಬೀಳಲು, ಪೊಸರಥವನು-ನೂತನವಾದ ಬೇರೊಂದು ರಥವನ್ನು,

ಮ್ರಧ್ವಜನು ಕಿರೀಟಿಯನ್ನು ನೋಡಿ ಎಲೈ ಅರ್ಜುನನೆ, ನಿನ್ನ ಕಾರ್ಯದ ತೆರನನ್ನು ಏನೆಂದು ಬಣ್ಣಿಸಲಿ, ನನಿಗಾದರೊ ಕೃಷ್ಣಪ್ರಸಾದದಿಂದ ಯೌವನಾಶ್ವದಿಗಳನ್ನೆಲ್ಲಾ ಗೆದ್ದ ಸಂತೋಷವು ತುಂಬಿರುವುದು, ನೀನೇತಕ್ಕೆ ನನಿಗೆದುರಾಗಿ ಬಂದು ಪರಾಜಯಮಂ ಪಡಿಯಬೇಕೆಂದಿರುವೆ? ಗೋತ್ರವಧೆಯನ್ನು ಕಳೆದುಕೊಳ್ಳಬೇಕಾದರೆ ನಿನಿಗೆಷ್ಟು ಕುದುರೆಗಳು ಬೇಕಾದರೂ ಕೊಡುವೆನು. ಕಮಲನೇತ್ರನೇ ನಿನಿಗೆ ಸಹಾಯಕನಾಗಿರುವಾಗ ಅಶ್ವಮೇಧ ಯಾಗಕ್ಕೆ ಬಯಸಿದ ನಿನ್ನ ಹುಚ್ಚುತನವು ದ್ರವ್ಯಾಕಾಂಕ್ಷೆಯೇ ಅಲ್ಲದೆ ಮತ್ತೇನಿರುವುದು? ಎಂದು ನುಡಿಯುತ್ತಾ ಅವನಮೇಲೆ ಬಾಣದ ಮಳೆಯನ್ನು ಸುರಿಸಿದನು. || ೩೨ ||
ಅರ್ಜುನನಾದರೊ ತಾಮ್ರಧ್ವಜನು ಬಿಟ್ಟ ಕಣೆಗಳಂ ಖಂಡೀಸಿದವನಾಗಿ, ತಾಮ್ರಧ್ವಜನನ್ನು ಸಂಬೋಧಿಸಿ, ಎಲೈ ತಾಮ್ರಕೇತುವೆ, ಸದ್ದ್ರವ್ಯವೇ ಧರ್ಮಕ್ಕೆ ಕಾರಣವಲ್ಲವೆ, ಹಣವಿಲ್ಲದೆ ಧರ್ಮವು ಬರುವ ಬಗೆಯು ಹೇಗೆ? ಕಮಲಾಕ್ಷನಾದ ಕೃಷ್ಣಸ್ವಾಮಿಯನ್ನು ಶಾಸ್ತ್ರೋಕ್ತವಾದ ರೀತಿಯಿಂದ ಪೂಜಿಸದೆ ಮತ್ತಾವತೆರನಾಗಿ ಸತ್ಕರಿಸಲಾಗುವುದು? ಅನೇಕಂಗಳಾದ ಯಜ್ಞಯಾಗಾದಿಗಳಿಂ ಸಂತುಷ್ಟನಾದ ಕೃಷ್ಣಮೂರುತಿಯ ಸ್ಥಿತಿಯು ನಿನಿಗೆ ಹೇಗೆ ಗೊತ್ತಾಗುವುದು? ಛೀ, ಛೀ, ಇಲ್ಲಿ ನಿಲ್ಲದೆ ಮುಂದೆನಡೆ ಎಂದು ಧಿಕ್ಕರಿಸುತ್ತಾ ಆ ತಾಮ್ರಕೇತುವಿನ ಕುದುರೆ ಸಾರಥಿ ತೇರುಗಳನೆಲ್ಲಾ ಹೊಡೆದು ಕೆಡಹಿದನು || ೩೩ || ತಾಮ್ರ

ರಥಂಪುಡಿಯಾಗೆನರನೆಸಲ್ಪಳಿಕಾಮ | ಹಾರಥಂಮತ್ತೊಂದುರಥದೊಳುರುವಣಿಸಲದನರ್ಜುನಂತಡೆಗಡಿದನು || ಆರಣದೊಳಿಂತಿವನಸ್ಯಂದನಸಹಸ್ರಮಂಬಾರಿಬಾರಿಗೆಕತ್ತರಿಸಿಕೆಡಹಿಫಲುಗುಣಂ | ಪೂರೈಸಿದಂದೇವತ್ತಮಂಕೊಂದನಿಕ್ಕೆಲದಜಾತುರ್ಬಲವನು ||೩೪|| ಅರ್ಜುನನಸಾಹಸಕೆಮೆಚ್ಚಿತಾಮ್ರಧ್ವಜಂ | ಗರ್ಜಿಸಿಕನಲ್ದಮಮತಾನದೇಂಪೌರುಷವಿ | ವರ್ಜಿತನೆಘಡಯೆನುತತೆಗೆದೆಸಲ್ಪರಸಿಡಿಲ್ಪೊಡದುಗಿರಿಜರಿವಂತಿರೆ || ನಿರ್ಜರೇಂದ್ರನಸೂನುಪೊನಲಿಡಲ್ಬಿಸಿಯನೆ | ತ್ತರ್ಜೋಂಪಿಸುತಮೈಮರೆದುಬಿದ್ದನಿಳೆಯೊಳ್ಪು| ನರ್ಜನ್ಮಮೆನೆಕೂಡೆಚೇತರಿಸಿನರನೆಚ್ಚುಕಡಿದನಾತನಧನುವನು ||೩೫|| ಬಿಲ್ಮುರಿಯೆಮತ್ತೊಂದುಬಿಲ್ಗೊಂಡು

ಅವನು–ಆ ಮಯೂರಧ್ವಜನ ತನುಜನು, ಏರಿ–ಹತ್ತಿದವನಾಗಿ, ಬರಲು-ಕಾಳಗಕ್ಕೆ ಅನುವಾಗಲು, ಆರಥಂ–ಆ ತೇರೂ ಕೂಡ, ಪುಡಿಯಾಗೆ–ನುಚ್ಚುನುಚ್ಚಾಗಲು, ನರನು–ಕಿರೀಟಿಯಾದರೊ, ಎಸಲ್–ಮತ್ತೆ ಶರವರ್ಷವಂ ಕರೆಯಲು, ಬಳಿಕ–ಅನಂತರ, ಆ ಮಹಾರಥವು–ಆ ದೊಡ್ಡತೇರು ಮುರಿದು ಬೀಳಲು, ಮತ್ತೊಂದುರಥದೊಳ್–ಬೇರೊಂದು ತೇರಿನಲ್ಲಿ, ಉರವಣಿಸಲು–ಎದುರಾಗಿ ಬರಲು, ಅರ್ಜುನನು–ಫಲುಗುಣನು, ಅದನು–ಆ ಮಹಾರಥವನ್ನೂ ಕೂಡ, ತಡೆಗಡಿದನು–ಪುಡಿಪುಡಿಮಾಡಿದನು, ಫಲುಗುಣಂ–ಪಾರ್ಥನಾದರೊ, ಇಂತು–ಈ ತೆರನಾಗಿ, ಆರಣದೊಳು – ಆ ಕಾಳಗದಲ್ಲಿ, ಬಾರಿಬಾರಿಗೆ – ಪ್ರತಿಕ್ಷಣಕ್ಕೂ, ಇವನಸ್ಯಂದನಸಹಸ್ರಮಂಕತ್ತರಿಸಿ–ಈ ತಾಮ್ರಧ್ವಜನ ಸಾವಿರಾರು ರಥಗಳನ್ನು ಧ್ವಂಸಮಾಡಿ, ಇಕ್ಕೆಲದ – ಎರಡು ಕಡೆಯೂ ಇರುವ, ಜಾತುರಂಗಮಂ–ಆನೆ, ಕುದುರೆ, ತೇರು ಕಾಲಾಳ್ಗಳನ್ನು; ಕೊಂದನು – ಕೊಂದು ಹಾಕಿದನು, ದೇವದತ್ತಮಂ – ದೇವದತ್ತವೆಂಬ ತನ್ನ ಶಂಖವನ್ನು, ಪೂರೈಸಿದಂ-ಹಿಡಿದನು ||೩೪||

ಟೀ|| ಅರ್ಜುನನ–ಫಲುಗುಣನು ತೋರಿಸಿದ, ಸಾಹಸಕೆ–ಶಕ್ತಿಗೆ, ತಾಮ್ರಧ್ವಜಂ–ತಾಮ್ರಧ್ವಜನಾದರೊ, ಮೆಚ್ಚಿ ಸಂತೋಷವನ್ನೈದಿ, ಕನಲ್ದು–ಆಗ್ರಹಗೊಂಡು, ಆರ್ಭಟಿಸಿ-ಗರ್ಜನೆಯಂ ಮಾಡಿ, ಅಮಮ – ಅಯ್ಯಯ್ಯೊ, ತಾನು – ನಾನಾದರೊ, ಅದೇಂಪೌರುಷವಿವರ್ಜಿತನೆ – ಪರಾಕ್ರಮದಲ್ಲಿ ಕಡಮೆಯಾಗಿದ್ದೇನೆಯೇ, ಘಡ–ಛೆ, ಹೋಗು–ನಡೆ, ಎನುತ–ಎಂದು ನುಡಿಯುತ್ತ, ತೆಗೆದು–ಕಿವಿವರೆಗೂ ಸೆಳೆದು, ಎಸಲ್–ಬಾಣಗಳಂ ಬಿಡಲು, ಬರಸಿಡಿಲು–ಪ್ರಳಯಕಾಲದಲ್ಲುಂಟಾಗುವ ಸಿಡಿಲು, ಪೊಡೆದು-ಬಿದ್ದು, ಗಿರಿ–ಪರ್ವತವು, ಜರಿವಂತೆ – ಹಿಂದಕ್ಕೆ ಹೊರಟು ಹೋಗುವ ತೆರನಾಗಿಯೂ ಮತ್ತು ಗಿರಿನದಿಗಳುಂಟಾಗುವಂತೆಯೂ, ಇರೆ-ಇರಲಾಗಿ, ನಿರ್ಜರೇಂದ್ರಸೂನು-ಪಾರ್ಥನಾದರೊ, ಬಿಸಿಯ – ಬೆಚ್ಚಗಿರುವ, ನೆತ್ತರ್ – ರಕ್ತವು, ಪೊನಲಿಡೆ–ಕಾಲುವೆಯಂತಾಗಲು, ಜೋಂಪಿಸುತ–ಕಂಪಿಸುತ್ತ, ಮೈಮರೆತು–ಸ್ಮೃತಿತಪ್ಪಿದವನಾಗಿ, ಇಳೆಯೊಳ್–ಭೂಮಿಯಮೇಲೆ, ಬಿದ್ದನು-ಬಿದ್ದುಬಿಟ್ಟನು, ಕೂಡೆ-ಒಡನೆಯೆ, ಪುನರ್ಜನ್ಮಂಎನೆ–ತಿರುಗಿ ತಮ್ಮ ತಾಯಿಯ ಹೊಟ್ಟೆಯಲ್ಲಿ ಹುಟ್ಟಿದಂತೆ, ನರನು–ಫಲುಗುಣನು, ಚೇತರಿಸಿ-ಸ್ಮರಣೆಯನ್ನೈದಿ, ಎಚ್ಚು–ಶರವರ್ಷವಂ ಕರೆದು, ಆತನ–ಆ ಮಯೂರಧ್ವಜನ ಮಗನ, ಧನುವನು–ಕಾರ್ಮುಕವನ್ನು, ಕಡಿದನು–ತುಂಡಾಗುವಂತೆ ಮಾಡಿಬಿಟ್ಟನು.

ಅ|| ವಿ|| ನಿರ್ಜರೇಂದ್ರನಸೂನು-ನಿರ್ಜರ-ಜರ–ಮುಪ್ಪನ್ನು, ನ–ಹೊಂದದವರು, (ಬ.ಸ)ನಿರ್ಜರ-ದೇವತೆಗಳ, ಇಂದ್ರ–ಒಡೆಯ(ದೇವೇಂದ್ರನು,ಷ.ತ.)ನಿರ್ಜರೇಂದ್ರನ, ಸೂನು–ಕುವರನು,(ಷ.ತ.) ಮೈಮರೆದು-ಮೈಯನ್ನುಮರೆದು (ಕ್ರಿ.ಸ.)||೩೫||

ಟೀ|| ತಾಮ್ರಧ್ವಜಂ – ತಾಮ್ರಧ್ವಜನಾದರೊ, ಬಿಲ್ಮುರಿಯೆ – ತನ್ನ ಚಾಪವನ್ನು ಅರ್ಜುನನು ಕಡಿದು ಹಾಕಲು,

ಧ್ವಜನು ಮತ್ತೊಂದು ರಥವನ್ನೇರಿ ಬರಲು ಫಲುಗುಣನು ಅದನ್ನೂ ನುಚ್ಚು ನುಚ್ಚು ಮಾಡಿದನು. ಪುನಃ ತಾಮ್ರಧ್ವಜನು ಮತ್ತೊಂದು ರಥದಲ್ಲಿ ಕುಳಿತು ಬಂದರೆ ಆ ತೇರೂ ಧನಂಜಯನ ಬಾಣದಿಂದ ಮುರಿದು ಹೋಯಿತು. ಹೀಗೆಯೇ ಐಂಡು ಸಹಸ್ರ ರಥಂಗಳು ಪುಡಿಯಾದವು ಆ ಮೇಲೆ ಅರ್ಜುನನು ತನ್ನ ದೇವದತ್ತವೆಂಬ ಶಂಖವನ್ನು ಗಟ್ಟಿಯಾಗಿ ಊದಿದನು ||೩೪|| ಈ ಧ್ವನಿಯು ತಾಮ್ರಧ್ವಜನಿಗೆ ಕೇಳಿಸಿದೊಡನೆಯೇ ಫಲುಗುಣನ ಸಾಹಸವಂ ಕೊಂಡಾಡಿದ ಬಳಿಕ ಅತಿಯಾದ ರೋಷಾವೇಶದಿಂದ ಕೂಡಿ, ಆಹಾ! ನಾನೇನು ಅರ್ಜುನನಿಗೆ ಕಡಿಮೆಯೇ. ಒಳ್ಳೇದು, ಇರಲೆಂದು ತನ್ನ ಮನದಲ್ಲಿಯೇ ಎಂದುಕೊಂಡು, ತನ್ನ ಬಲವನ್ನೆಲ್ಲಾ ಉಪಯೋಗಿಸಿ ಅರ್ಜುನನ ಮೇಲೆ ಬಾಣವನ್ನು ಬಿಟ್ಟುಬಿಟ್ಟನು, ಈ ಏಟು ಹೋಗಿ ಫಲುಗುಣನ ದೇಹಕ್ಕೆ ಬೀಳಲು, ಪರ್ವತಗಳ ಝರಿಗಳಿಂದ ಹೊರಡುವ ಜಲಧಾರೆಗಳಂತೆ ಪಾರ್ಥನ ಮೈಯಿಂದ ಹೊರಟ ಬಿಸಿನೆತ್ತರು ಪ್ರವಾಹರೂಪವಾಗಿ ಹರಿಯಲಾರಂಭಿಸಿತು. ಈ ಸರಲ್ಗಳ ಹೊಡೆತವನ್ನು ತಡಿಯಲಾರದೆ ಮೂರ್ಛೆ ಬಿದ್ದು ಪುನಃ ಎಚ್ಚೆತ್ತು ನಿಶಿತಾಸ್ತ್ರಂಗಳಿಂದ ತಾಮ್ರಧ್ವಜನ ಧನುಸ್ಸನ್ನು ಇಭಾಗವಾಗಿ ಭಾಗಿಸಿದನು ||೩೫|| ಆಗ ತಾಮ್ರಧ್ವಜನು ಹೊಸದಾದ ಬಿಲ್ಲಂ ಕೊಂಡು, ತನ್ನ ಹಲ್ಲುಗಳನ್ನು ಕಟಕಟನೆ ಕಡಿಯುತ್ತಾ ಬಾಣವೊಂದನ್ನು ಧನುಸ್ಸಿನಲ್ಲಿ ಹೂಡಿ ಆಕರ್ಣಾಂತವಾಗಿ ಸೆಳೆದು ಬಿಡಲು ಇದರ ಮಹಾ ರಭಸಕ್ಕೆ ಧನಂಜಯನ ತೇರು ಐದು ಗಾವುದದ ಆಚೆಗೆ ಹೋಗಿ ನಿಂತು ಬಿಟ್ಟಿತು, ಅನಂತರ ಕಿರೀಟಿಯು ಸ್ವಲ್ಪ ಚೇತರಿಸಿಕೊಂಡು

ಕೋಪದಿಂ | ಪಲ್ಮೊರೆವುತೊಡನೆತಾಮ್ರಧ್ವಜಂಗೆತೆದಾರ್ದೆ | ಸಲ್ಮಹಿಯೊಳರ್ಜುನನತೇರೊಂದುಯೋಜನಂಪೋಗೆತರ
ಹರಿಸಿಕೊಳುತ|| ನಿಲ್ಮೊರೆದೋರೆನುತಫಲುಗುಣಂಬೊಬ್ಬಿರಿದೆ| ಸಲ್ಮುಗಿಲಬಟ್ಟೆಯನಡರ್ದುದಾತನರಥಂ | ಬಲ್ಮೆಗೆಮುರಧ್ವಂಸಿ
ಮೆಚ್ಚಿತಲೆದೂಗಿದಂಭೂಪಕೇಳದ್ಭುತವನು ||೩೬|| ಎಡಬಲದಮಂಡಲದಭೇದದಿಂಖೇದದಿಂ | ದಡಿಗಡಿಗೆಸೆವಪರಾಕ್ರಮದಿಂ
ದಕ್ರಮದಿಂದ| ತೊಡುವಬಿಡುವಂಬಿನತರಂಗದಿಂರಂಗದಿಂತೊಲಗದಗ್ಗಳಿಕೆಯಿಂದ|| ದೃಢಚಾಪಘೋಷಭೀಕರದಿಂದಕರದಿಂದ |
ಜಡತೆಪೊದ್ದದಸಾಹಸತ್ವದಿಂ | ಕಡುಗಿತಾಮ್ರಧ್ವಜವಿಜಯರಾಗಜಯರಾಗರೆಚ್ಚಾಡಿದರ್ಧುರದೊಳು || ೩೭ || ಧಾತ್ರೀಶಕೇಳ್ಕೌ
ತುಕವನೇಳುದಿನಮಹೋ | ರಾತ್ರಿಯೊಳ್ಬಿಡದೆಕಾದಿದರವರ್ಪಂಕರುಹ | ನೇತ್ರಂಸಮೀಪದೊಳ್ನೋಡುತಿರೆತಾಮ್ರಧ್ವಜಾ
ರ್ಜುನಸಬ್ಬಳಿಕದರೊಳು || ಗೋತ್ರಾರಿಸುತನವಂಮತ್ತೆಜೋಡಿಸಿತಂದ | ಮಾತ್ರದೊಳ್ಸಾವಿರರಥಂಗಳಂಕಡಿದತಿ | ಕ್ಷಾತ್ರದಿಂ

---

ಮತ್ತೊಂದುಬಿಲ್-ಇನ್ನೊಂದು ಧನುಸ್ಸನ್ನು, ಕೊಂಡು-ಹೊಂದಿ, ಕೋಪದಿಂ-ಆಗ್ರಹದಿಂದ, ಪಲ್ಮೊರೆವುತ - ಹಲ್ಲುಗಳನ್ನು ಕಟಕಟನೆ ಕಡಿಯುತ್ತಾ, ಒಡನೆ-ಕೂಡಲೆ, ತೆಗೆದು-ಸರಲಂ ಸೆಳೆದುಕೊಂಡು, ಆರ್ದು-ಗರ್ಜಿಸಿ, ಎಸಲ್-ಬಿಟ್ಟುಬಿಡಲು, ಅರ್ಜುನನ-ಧನಂಜಯನ, ತೇರು-ರಥವಾದರೊ, ಮಹಿಯೊಳ್-ಭೂಮಿಯ ಮೇಲೆ, ಒಂದುಯೋಜನಂಪೋಗೆ-ಒಂದು ಗಾವುದ ದೂರ ಹೋಗಲು, ಫಲುಗುಣಂ-ಪಾರ್ಥನು, ತರಹರಿಸಿಕೊಳ್ಳುತ-ವಿಶ್ರಮಿಸಿಕೊಳ್ಳುತ್ತಾ, ನಿಲ್ಲು-ನಿಲ್ಲತಕ್ಕವನಾಗು, ಮೋರೆದೋರು-ಮುಖವನ್ನು ತೋರಿಸುವನಾಗು, ಎನುತ-ಎಂದು ನುಡಿಯುತ್ತಾ, ಬೊಬ್ಬಿರಿದು-ಗರ್ಜಿಸಿ, ಎಸಲ್-ಶರಗಳಂ ಪ್ರಯೋಗಿಸಲು, ಆತನ-ಆ ತಾಮ್ರಧ್ವಜನ, ರಥಂ-ಸ್ಯಂದನವು, ಮುಗಿಲ್ಬಟ್ಟೆಯನು-ಅಂತರಿಕ್ಷಮಾರ್ಗವನ್ನು, ಅಡರ್ದುದು-ವ್ಯಾಪಿಸಿತು, ಮುರಧ್ವಂಸಿ-ಮುರಾಂತಕನಾದ ಕೃಷ್ಣಮೂರುತಿಯು, ಬಲ್ಮೆಗೆ-ಫಲುಗುಣರ ಸಾಹಸಕ್ಕೆ, ಮೆಚ್ಚಿ-ಒಪ್ಪಿದವನಾಗಿ, ತಲೆದೂಗಿದಂ-ಸಂತೋಷದಿಂದ ತಲೆಯನ್ನು ಅಲ್ಲಾಡಿಸಿದನು, ಭೂಪ-ಓ ಜನಮೇಜಯ ಮಹಿಪನೆ, ಅದ್ಭುತವನು-ಆಶ್ಚರಿಯನ್ನು, ಕೇಳು-ಇನ್ನೂ ಕೇಳುವನಾಗು ||೩೬||

ಟೀ|| ವಿಜಯತಾಮ್ರಧ್ವಜರ್ - ಪಾರ್ಥತಾಮ್ರಧ್ವಜರು, ಜಯರಾಗರ್-ಒಬ್ಬರನ್ನೊಬ್ಬರು ಗೆಲ್ಲಬೇಕೆಂಬ ಆಸಕ್ತಿಯುಳ್ಳವರಾಗಿ, ಎಡಬಲದ-ಇಕ್ಕೆಲದಲ್ಲಿಯೂ ಇರುವ, ಮಂಡಲದ - ಸೇನಾನಿವಹದ, ಭೇದದಿಂ - ಅಗಲಿಸುವಿಕೆಯಿಂದಲೂ, ಖೇದದಿಂ-ಯುದ್ಧಾಯಾಸದಿಂದಲೂ, ಧುರದೊಳ್-ಕಾಳಗದಲ್ಲಿ, ಅಡಿಗಡಿಗೆ - ಬಾರಿಬಾರಿಗೂ, ಎಸೆವ - ಬಿಡತಕ್ಕ, ಪರಾಕ್ರಮದಿಂದ-ಸಾಹಸದಿಂದ, ಕ್ರಮದಿಂದ-ಬಗೆಯಿಂದ, ತೊಡುವ - ಜೋಡಿಸುವ, ಬಿಡುವ-ಬಾಣಗಳನ್ನು ಬಿಡತಕ್ಕ, ಅಂಬಿನತರಂಗದಿಂ-ಕಣೆಗಳ ಸಮುದಾಯದಿಂದ, ತೊಲಗದ-ಹೋಗದಿರುವ, ಅಗ್ಗಳಿಕೆಯಿಂದ-ಬಿರುದಾವಳಿಯಿಂದ, ದೃಢ-ಬಹು ಬಲವಾದ, ಚಾಪ-ಬಿಲ್ಲಿನಹೆದೆಯ,ಭೀಕರದಿಂದ-ಭಯವನ್ನುಂಟುಮಾಡುವಬಗೆಯಿಂದ, ಜಡತೆಪೊದ್ದದ-ಜಾಗರೂಕತೆಯಿಂದಕೂಡಿದ, ಸಾಹಸತ್ವದಿಂ-ಶಕ್ತಿಯಿಂದ, ಸತ್ವದಿಂ-ತ್ರಾಣದಿಂದ, ಕಡುಗಿ - ಕಠಿಣವಾಗಿ, ಎಚ್ಚಾಡಿದರ್ - ಒಬ್ಬರಮೇಲೊಬ್ಬರು ಬಾಣಗಳಂ ಬಿಡಲುಜ್ಜುಗಿಸಿದರು. ||೩೭||

ಟೀ|| ಧಾತ್ರೀಶ-ಪೊಡವಿಪತಿಯಾದ ಜನಮೇಜಯನೆ, ಕೌತುಕವನು-ಆಶ್ಚರಿಯನ್ನು, ಕೇಳು-ಲಾಲಿಸು, ಅವರ್-ಆ ಅರ್ಜುನ ತಾಮ್ರಧ್ವಜರೀರ್ವರೂ, ಏಳುದಿನಂ-ಏಳುದಿಗಳ ವರೆಗೂ, ಅಹೋರಾತ್ರಿಯೊಳ್-ಇರುಳಲ್ಲಿಯೂ ನಿಶಿಯಲ್ಲಿಯೂ, ಬಿಡದೆ-ತಪ್ಪದೆ, ಕಾದಿದರ್-ಹೋರಾಡಿದರು, ಬಳಿಕ-ಅನಂತರ, ತಾಮ್ರಧ್ವಜಾರ್ಜುನರು-ಮಯೂರಧ್ವಜನ ಮಗನೂ ಇಂದ್ರಸೂನುವೂ ಸಹ, ಸಮೀಪದೊಳ್ - ತಮಗೆ ಹತ್ತಿರದಲ್ಲಿಯೇ, ಪಂಕರುಹಲೋಚನಂ - ಕೃಷ್ಣಸ್ವಾಮಿಯು, ನೋಡುತಿರೆ-ಈಕ್ಷಿಸುತ್ತಿರಲು, ಗೋತ್ರಾರಿಸುತನು-ಇಂದ್ರಸೂನುವಾದ, ಅವಂ-ಆ ಫಲುಗುಣನು, ಅದರೊಳ್-ಆ ಕಾಳಗದಲ್ಲಿ, ಮತ್ತೆ-ತಿರುಗಿ, ಜೋಡಿಸಿ-ನೇರ್ಪಡಿಸಿಕೊಂಡು, ತಂದಮಾತ್ರದೊಳ್-ತೆಗೆದುಕೊಂಡುಬಂದಮಾತ್ರದಿಂದಲೇ, ಅತಿಕ್ಷಾತ್ರದಿಂ-ಬಹಳ

---

ರೋಷಾಕ್ರಾಂತನಾಗಿ, ಎಲೈ ತಾಮ್ರಧ್ವಜ, ನಿಲ್ಲು ನಿಲ್ಲು, ನಿನ್ನ ಮುಖವನ್ನು ತೋರಿಸೆಂದು ಗರ್ಜಿಸಿ ನುಡಿಯುತ್ತಾ, ಕೂರ್ಗಣೆಗಳನ್ನೆಸೆಯಲು, ಆ ಅಂಬುಗಳು ತಾಮ್ರಧ್ವಜನ ರಥವನ್ನು, ಆಕಾಶಮಾರ್ಗಕ್ಕೆ ಎತ್ತಿಕೊಂಡು ಹೋಗಿಬಿಟ್ಟಿತು. ಮುರಾಂತಕನಾದ ಕೃಷ್ಣಸ್ವಾಮಿಯು ಇವರೀರ್ವರ ಸಾಹಸವನ್ನು ನೋಡಿ ತಲೆದೂಗುತ್ತಲಿದ್ದನು. || ೩೬ || ಎಲೈ ಜನಮೇಜಯರಾಯನೆ ಕೇಳು, ತಾಮ್ರಧ್ವಜಾರ್ಜುನ ರೀರ್ವರೂ ಒಬ್ಬರನ್ನೊಬ್ಬರು ಸೋಲಿಸಬೇಕೆಂಬ ಆಶೆಯಿಂದ ಧೈರ್ಯದಲ್ಲಿಯೂ, ಶೌರ್ಯದಲ್ಲಿಯೂ, ಬಾಣಪ್ರಯೋಗದಲ್ಲಿಯೂ, ಯಾರೊಬ್ಬರೂ ಹಿಂತೆಗೆಯದಿರುತಲಿದ್ದರು. || ೩೭ || ಎಲೈ ಜನಮೇಜಯನೆ, ಈ ಆಶ್ಚರ್ಯವನ್ನು ಕೇಳು, ಅರ್ಜುನ ತಾಮ್ರಕೇತುಗಳು ಏಳು ದಿನಗಳ ವರೆಗೂ ಹಗಲಲ್ಲಿಯೂ ರಾತ್ರಿಯೊಳಗೂ ಎಡೆಬಿಡದೆ ಕೃಷ್ಣನೆದುರಿನಲ್ಲಿಯೇ ಕಾದಾಡುತ್ತಲಿದ್ದರು. ಹೀಗಿರುವಲ್ಲಿ ತಾಮ್ರಧ್ವಜನು ರಥಾರೂಢನಾಗಿ ಮುಂದರಿದು ಬರಲು

ಕೆಡಹಿದಂಪಡೆಯೊಳಕ್ಷೋಹಿಣಿಗಳಿನ್ನೂರನಾಹವದೊಳು ॥ ೩೮ ॥ ಆತಾಮ್ರಕೇತುಪಾಂಡವಸೇನೆಯೊಳ್ಪ್ರಯುತ । ಚಾತುರಂಗನುನ್ಯದೆಸಂಹರಿಸಿಪಾರ್ಥನಂಘಾತಿಸಿದನಡಿಗಡಿಗೆ । ಪಳವಿಗೆಯಹನುಮನಂಹಲುಗಿರಿಸಿಹರಿಯನೆಚ್ಚು ॥ ಸೂತವಾಜಿಗಳನೊಡನೊಡನೆಜವಗೆಡಿಸಿವಿ । ಖ್ಯಾತಚಾಪದನಾರಿಯಂಕಡಿದುಕಲಿಕರ್ಣ । ಜಾತಾನುಸಾಲ್ವಸಾತ್ಯಕಿಬಭ್ರುವಾಹನಾದಿಗಳನುರೆನೋಯಿಸಿದನು ॥ ೩೯ ॥ ತೆತ್ತಿಸಿದವುಭಯವೀರರಮೈಯೊಳಂಬುಗ । ಳ್ನೆತ್ತರಭ್ರಕೆಚಿಮ್ಮಿಮಳೆವನಿಗಳಂತೆಹರಿ । ಯುತ್ತಮಾಂಗದಮೇಲೆಸೂಸಿದವುವಾಯುವಶದಿಂದಕೇಳದ್ಭುತವನು ॥ ಮತ್ತೆಫಲುಗುಣನವನಧನುವನಿಕ್ಕಡಿಯಾಗಿ । ಕತ್ತರಿಸೆಖತಿಯೊಳೈತಂದುಪಾರ್ಥನರಥವ । ನೆತ್ತಿಕೊಂಡಾಗಸಕೆಪುಟನೆಗದುಧರೆಯೊಳಪ್ಪಳಿಸಿದಂತಾಮ್ರಕೇತು ॥ ೪೦ ॥ ನಭಕೆವಿಜಯನರಥವ

ಸಾಹಸದಿಂದ, ಸಾವಿರರಥಂಗಳಂ-ಒಂದು ಸಹಸ್ರ ರಥಗಳನ್ನು, ಕಡಿದು-ನುಚ್ಚುನುಚ್ಚುಮಾಡಿ, ಆಹವದೊಳ್-ಯುದ್ಧದಲ್ಲಿ, ಪಡೆಯೊಳು-ದಂಡಿನಲ್ಲಿರುವ, ಅಕ್ಷೋಹಿಣಿಯ ಇನ್ನೂರನು-ಇನ್ನೂರು ಅಕ್ಷೋಹಿಣೀ ಸಂಖ್ಯಾತಮಾದ ಬಲವನ್ನು, ಕೆಡಹಿದಂ-ನೆಲಕ್ಕೆ ಉರುಳಿಸಿ ಬಿಟ್ಟನು ॥ ೩೮ ॥

ಟೀ॥ ಆತಾಮ್ರಕೇತು-ಆ ಮಯೂರಧ್ವಜನ ಸುತನು, ಪಾಂಡವಸೇನೆಯೊಳ್-ಪಾರ್ಥನದಳದಲ್ಲಿ, ಐದೆ-ಚನ್ನಾಗಿ, ಪ್ರಯುತಂಚಾತುರಂಗಮನು-ಆನೆ, ಕುದುರೆ, ರಥ, ಕಾಲ್ಬಲದ ಹತ್ತು ಲಕ್ಷವನ್ನು, ಸಂಹರಿಸಿ-ನಿರ್ಮೂಲಮಾಡಿ, ಪಾರ್ಥನಂ-ಫಲುಗುಣನನ್ನು, ಅಡಿಗಡಿಗೆ-ಸಲಸಲಕ್ಕೂ, ಘಾತಿಸಿದನು-ನೋವಾಗುವಂತೆ ಮಾಡಿದನು, ಪಳವಿಗೆಯ-ಪತಾಕೆಯನ್ನಲಂಕರಿಸಿರತಕ್ಕ, ಹನುಮನಂ-ವಾಯುನಂದನನನ್ನು, ಹಲುಗಿರಿಸಿ-ಪಲ್ಗಿರಿದು ಕಿರುಚುವತೆರನಾಗಿಯೂ, ಹರಿಯನು-ಶ್ರೀಕೃಷ್ಣನನ್ನೂ ಸಹ, ಎಚ್ಚು-ಬಾಣದ ಪೆಟ್ಟಿನಿಂದ ನೋಯಿಸಿ, ಒಡನೊಡನೆ-ತಡಮಾಡದೆಯೇ, ಸೂತವಾಜಿಗಳನು-ರಥವನ್ನು ನಡೆಯಿಸುವವನನ್ನೂ ಮತ್ತು ಅಶ್ವಂಗಳನ್ನೂ, ಜವಗೆಡಿಸಿ-ಜಾಗ್ರತೆಯನ್ನು ಕಳೆದು, ವಿಖ್ಯಾತ-ಹೆಸರುವಾಸಿಯಾದ, ಚಾಪದ-ಧನುಸ್ಸಿನ, ನಾರಿಯಂ-ಹುರಿಯನ್ನು, ಕಡಿದು-ತುಂಡುಮಾಡಿ, ಕಲಿ-ವೀರನಾದ, ಕರ್ಣಜಾತ-ವೃಷಧ್ವಜನೂ, ಅನುಸಾಲ್ವ-ಸಾಲ್ವಾನುಜನೂ, ಸಾತ್ಯಕಿ-ಸಾತ್ಯಕಿಯೂ, ಬಭ್ರುವಾಹನ-ಪಾರ್ಥಜನೂ, ಆದಿ-ಮೊದಲಾದವರನ್ನೆಲ್ಲಾ, ಉರೆ-ಅಧಿಕವಾಗಿ, ನೋಯಿಸಿದನು-ಹಿಂಸೆಯುಂಟಾಗುವಂತೆ ಮಾಡಿದನು ॥

ಅ॥ ವಿ॥ ನಾರಿ-ಹೆಂಗಸು, ಮತ್ತು ಧನುಸ್ಸಿಗೆ ಕಟ್ಟುವದಾರ ॥೩೯॥

ಟೀ॥ ಅಂಬುಗಳು-ಸರಲ್ಗಳು, ಉಭಯವೀರರ-ಇರ್ಕಡೆಗಳಲ್ಲಿಯೂ ಇರುವ ಶೂರರ, ಮೈಯೊಳು-ಅವಯವಂಗಳಲ್ಲಿ, (ಅರ್ಜುನ ತಾಮ್ರಧ್ವಜರ) ತೆತ್ತಿಸಿದವು-ಕವಿದುಕೊಂಡವು, ಅಭ್ರಕೆ-ಅಂತರಿಕ್ಷಮಾರ್ಗಕ್ಕೆ, ನೆತ್ತರ್-ಇವರೀರ್ವರ ಶರೀರದಿಂದ ಹೊರಟ ರಕ್ತವು, ಚಿಮ್ಮಿ-ಹಾರಿಹೋಗಿ, ಹರಿಯ-ಕೃಷ್ಣಸ್ವಾಮಿಯ, ಉತ್ತಮಾಂಗದಮೇಲೆ-ತಲೆಯ ಮೇಲ್ಭಾಗದಲ್ಲಿ, ವಾಯುವಶದಿಂದ-ಗಾಳಿಯ ಶಕ್ತಿಯಿಂದ, ಮಳೆವನಿಗಳಂತೆ-ವರ್ಷಧಾರೆಗಳ ಹಾಗೆ, ಸೂಸಿದವು-ಚೆಲ್ಲಲ್ಪಟ್ಟವು, ಅದ್ಭುತವನು-ಅಚ್ಚರಿಯನ್ನು, ಕೇಳು-ಕೇಳುವನಾಗು, ಅವನ-ಆ ಮಯೂರಧ್ವಜನ ಕುವರನ, ಧನುವನು - ಚಾಪವನ್ನು, ಫಲುಗುಣನು-ಪಾರ್ಥನು, ಇಕ್ಕಡಿಯಾಗಿ - ಎರಡುಭಾಗವಾಗುವಂತೆ, ಕತ್ತರಿಸೆ - ಕಡಿದುಬಿಡಲು, ಖತಿಯೊಳು - ಮಹಾ ರೋಷದಿಂದ, ತಾಮ್ರಕೇಶು - ತಾಮ್ರಧ್ವಜನು, ಐತಂದು - ಬಂದವನಾಗಿ, ಪಾರ್ಥನ - ಕಿರೀಟಿಯ, ರಥವನು-ತೇರನ್ನು, ಎತ್ತಿ-ಸೆಳೆದುಕೊಂಡು, ಆಗಸಕೆ - ಅಂತರಿಕ್ಷಕ್ಕೆ, ಪುಟನೆಗೆದು - ಹಾರಿಹೋಗಿ, ಧರೆಯೊಳ್ - ಭೂಮಿಯಮೇಲೆ, ಅಪ್ಪಳಿಸಿದಂ - ಹೊಡೆದು ಕೆಡವಿದನು ॥ ೪೦ ॥

ಟೀ॥ ವಿಜಯನ-ಧನಂಜಯನ, ರಥವನು-ತೇರನ್ನು, ನಭಕೆ-ಅಂತರಿಕ್ಷಮಾರ್ಗಕ್ಕೆ, ಈಡಾಡಿ-ಚಿಮ್ಮಿ, ಅದಂ-ಅವ

ಅರ್ಜುನನು ಅವನ ಸಾವಿರ ರಥಂಗಳನ್ನು ಪುಡಿಪುಡಿಮಾಡಿ ಆ ತಾಮ್ರಕೇತುವಿನ ಕಡೆಯ ಇನ್ನೂರು ಅಕ್ಷೋಹಿಣೀ ಸೈನ್ಯವನ್ನು ಕ್ಷಣಮಾತ್ರದಲ್ಲಿ ನಿರ್ಮೂಲಮಾಡಿದನು ॥೩೮॥ ಇದನ್ನು ತಾಮ್ರಧ್ವಜನು ನೋಡಿ ಕೋಪಾವಿಷ್ಟನಾಗಿ ಪಾರ್ಥನ ದಳದಮೇಲೆ ಬಿದ್ದು ಹತ್ತು ಲಕ್ಷ ಸೈನ್ಯವನ್ನು ಕೊಂದು, ಅರ್ಜುನನನ್ನು ಬಾರಿಬಾರಿಗೂ ನೋಯಿಸುತ್ತಾ ಅವನ ಬಿಲ್ಲಿನ ದಾರವನ್ನು ತುಂಡುಮಾಡಿ ವೃಷಕೇತು, ಅನುಸಾಲ್ವ, ಸಾತ್ಯಕಿ ಮೊದಲಾದವರನ್ನೆಲ್ಲಾ ಬಹಳವಾಗಿ ನೋಯಿಸಿದನು ॥ ೩೯ ॥ ಆಗ ಶೂರಾಗ್ರಜಿಗಳಾದ ಅರ್ಜುನ ತಾಮ್ರಕೇತುಗಳ ಮೈಯಿಂದ ಹೊರಡುವ ಬಿಸಿ ನೆತ್ತರು ಆಗಸಕ್ಕೆ ಹಾರಿಹೋಗಿ ವಾಯುಶಕ್ತಿಯಿಂದ ತುಂತುರುಹನಿಗಳಂತೆ ಕೃಷ್ಣನ ತಲೆಯಮೇಲೆ ಬಂದು ಬೀಳುತ್ತಲಿತ್ತು, ಹೀಗಿರುವಾಗ ಅರ್ಜುನನು ಕೋಪದಿಂದ ತಾಮ್ರಧ್ವಜನ ಶಿಲೀಮುಖಂಗಳನ್ನೆಲ್ಲಾ ಕತ್ತರಿಸಿಹಾಕಲು, ಆ ತಾಮ್ರಕೇತುವು ರೋಷಭೀಷಣನಾಗಿ ಧನಂಜಯನಿದ್ದೆಡೆಗೆ ಬಂದು ರಥಸಹಿತ ಅರ್ಜುನನನ್ನು ಆಕಾಶಮಾರ್ಗಕ್ಕೆ ಎತ್ತಿಕೊಂಡು ಹೋಗಿ ಅಲ್ಲಿಂದ ನೆಲದಮೇಲಕ್ಕೆ ದೊಪ್ಪನೆ ಕೆಡವಿಬಿಟ್ಟನು ॥ ೪೦ ॥ ಮೇಲ್ನ

........................................................................................................................ ರಭಸದಿಂದಿಳೆಗಪ್ಪಳಿಸುವಿನಿಂಪರಿತಂದು | ಶುಭಕರಕರಾಗ್ರದಿಂಪಿಡಿದಾವರೂಥಮಂಸ್ವಸ್ಥಾನಮಾಗಿಸಿಲಿ ಸೀಡಾಡಿಬಳಿಕದಂ | ರಭಸದಿಂದಿಳೆಗಪ್ಪಳಿಸುವಿನಿಂಪರಿತಂದು | ಶುಭಕರಕರಾಗ್ರದಿಂಪಿಡಿದಾವರೂಥಮಂಸ್ವಸ್ಥಾನಮಾಗಿಸಿಲಿ ಸಿ || ಅಭಯಮಂಪಾರ್ಥಂಗೆಮಾಡಿದಂಮುರಹರಂ | ತ್ರಿಭುವನದೊಳಚ್ಯುತನಭಕ್ತರ್ಗೆಬಪ್ಪುದೆಪ | ರಿಭವಮೆಂದನಿಮಿಷರ್ಕೊಂಡಾಡೆಬಲಮೆರಡಕಾಶ್ಚರ್ಯಮಾಗೆಕೂಡೆ || ೪೧ || ಭೂರಮಣಕೇಳ್ಬಳಿಕನಸುನಗುತನುಡಿದನಸು | ರಾರಾತಿಪಾಂಡವಂಗಳುಕದಿರಧರ್ಮಮಂ | ದೀರಣಮೊಳೀತನಂಗೆಲ್ವೊಡಾವೀರ್ವರುಂಸಾಹಸಂಗೈದಲ್ಲದೆ || ತೀರದೆಸೆನೀನೊಂದುಕಡೆಯೊಳಾನೆಸುವೆನೀವೀರನಂಮತ್ತೊಂದುದೆಸೆಯೊಳೆಂದರುಪಿನರ | ನಾರಾಯಣರ್ಕರೆದರಂಬುಗಳನೋರೋರ್ವರೊಂದೊಂದುಮುಖದೊಳಿರ್ದು || ೪೨ || ಪಾಂಡವನುಕುಂದರೊಂದೇಬಾರಿಮುಳಿದುವರ | ಗಾಂಡೀವಶಾರ್ಙ್ಗಚಾಪಂಗಳಂಕೊಂಡಬ್ಜ | ಜಾಂಡಕಧಿಕಕ್ಷೋಭಮಾಗೆ

---

ರಥವನ್ನು, ಬಳಿಕ–ಅನಂತರ, ಇಳೆಗೆ–ನೆಲಕ್ಕೆ, ಅಪ್ಪಳಿಸುವಿನಿಂ–ಹೊಡೆಯಲುಜ್ಜುಗಿಸಿದಾಗ, ಮುರಹರಂ-ಕೃಷ್ಣಮೂರುತಿಯು, ಪರಿತಂದು–ಜಾಗ್ರತೆಯಾಗಿ ಬಂದು, ಆ ವರೂಥಮಂ–ಅವನ ತೇರನ್ನು, ಶುಭಕರಕರಾಗ್ರದಿಂ–ಮಂಗಳಕರವಾದ ತನ್ನ ಕೈಗಳಿಂದ, ಪಿಡಿದು–ಹಿಡಿದುಕೊಂಡವನಾಗಿ, ಸ್ವಸ್ಥಾನಮಾಗಿನಿಲಿಸಿ-ಸ್ಥಿರಗೊಳಿಸಿ, ಅನಿಮಿಷರ್–ಸುರರೆಲ್ಲರೂ, ತ್ರಿಭುವನದೊಳ್–ಸ್ವರ್ಗ, ಮರ್ತ್ಯ, ಪಾತಾಳಗಳಲ್ಲಿ, ಅಚ್ಯುತನಭಕ್ತರ್ಗೆ–ವಿಷ್ಣುಭಕ್ತರಾದವರಿಗೆ, ಪರಿಭವಂ-ಅಪಜಯವು, ಬರ್ಪುದೆ-ಬಂದೊದಗುವುದೆ, ಎಂದು–ಎಂಬತೆರನಾಗಿ, ಕೊಂಡಾಡೆ–ಹೊಗಳುತ್ತಿರಲು, ಬಲಮೆರಡಕೆ-ಇರ್ಕಡೆಯದಳಕ್ಕೂ, ಕೂಡೆ–ಒಡನೆಯೇ, ಆಶ್ಚರ್ಯಂ–ಅಚ್ಚರಿಯು, ಆಗೆ–ಉಂಟಾಗಲು, ಪಾರ್ಥಂಗೆ–ಧನಂಜಯನಿಗೆ, ಅಭಯಮಂ–ಧೈರ್ಯವನ್ನು, ಮಾಡಿದಂ–ಉಂಟಾಗುವಂತೆ ಎಸಗಿದನು. || ೪೧ ||

ಟೀ|| ಭೂರಮಣ–ಭೂಕಾಂತನಾದ ಜನಮೇಜಯನೆ, ಕೇಳು-ಲಾಲಿಸು, ಬಳಿಕ–ಆಮೇಲೆ, ಅಸುರಾರಾತಿ–ರಾಕ್ಷಸಾಂತಕನಾದ ಕೃಷ್ಣಮೂರುತಿಯು, ನಸುನಗುತ–ಮುಗುಳ್ನಗೆಯಿಂದ ಕೂಡಿ, ಪಾಂಡವಂಗೆ– ಪಾರ್ಥನೊಂದಿಗೆ, ನುಡಿದನು–ಮುಂದೆ ಹೇಳುವಂತೆ ತಿಳಿಸುವನು, ಅಧರ್ಮಂ–ಧರ್ಮವಿರುದ್ಧವಾದದ್ದು, ಎಂದು–ಎಂಬತೆರನಾಗಿ, ಅಳುಕದೆ–ಹೆದರಿಕೆಯಂತಾಳದೆ, ಇರು–ಇರುವನಾಗು, ಈತನಂ–ಈ ವೀರನನ್ನು, ಈರಣದೊಳ್-ಈ ಕಾಳಗದೊಳಗೆ, ಗೆಲ್ವೊಡೆ–ಸೋಲಿಸಬೇಕಾದರೆ, ಸಾಹಸಂಗೈದಲ್ಲದೆ–ಪೌರುಷವಂ ತೋರಿಸಿದಲ್ಲದೆ, ತೀರದು–ಆಗುವುದಿಲ್ಲವು, ಒಂದುಕಡೆಯೊಳ್-ಒಂದು ಭಾಗದಲ್ಲಿ, ನೀನು–ನೀನೆನಿಂತು, ಎಸೆ–ಕೋಲ್ಗಳಿಂದ ಹೊಡೆಯುವವನಾಗು, ಮತ್ತೊಂದುದೆಸೆಯೊಳ್–ಇನ್ನೊಂದು ಭಾಗದಲ್ಲಿ, ಈ ವೀರನಂ–ಈ ಪರಾಕ್ರಮಿಯನ್ನು, ಆಂ–ನಾನೇ, ಎಸುವೆಂ–ಶರಗಳಿಂದ ಕವಿಯುವೆನು, ಎಂದು–ಎಂಬ ತೆರನಾಗಿ, ಅರುಪಿ–ಗೋಚರಪಡಿಸಿ, ನರನಾರಾಯಣರು–ಪಾರ್ಥ ಮುರಹರರು, ಒಂದೊಂದು ಮುಖದೊಳು–ಒಂದೊಂದು ಭಾಗದಲ್ಲಿ, ಓರೋರ್ವರು–ಪ್ರತಿಯೊಬ್ಬರೂ, ಇರ್ದು–ಇದ್ದುಕೊಂಡು, ಅಂಬುಗಳನು–ಕೋಲ್ಗಳನ್ನು, ಕರೆದರು–ಚೆಲ್ಲಿದರು ||

ಅ|| ವಿ|| ಪೂರ್ವದಲ್ಲಿ ಶ್ರೀಮಹಾವಿಷ್ಣುವು ಸಹಸ್ರ ಕವಚನನೆಂಬ ನಿಶಿಚರನನ್ನು ನಿರ್ಮೂಲ ಮಾಡಲು ನರ ಮತ್ತು ನಾರಾಯಣ ಎಂಬೆರಡು ರೂಪಂಗಳಂ ತಾಳಿದ್ದನು, ದ್ವಾಪರ ಯುಗದಲ್ಲಿ ಆಗಿನ ಅವತಾರದ ನಾರಾಯಣನೇ ಕೃಷ್ಣನಾಗಿ ಹುಟ್ಟಿರುವನೆಂದೂ ನರನೇ ಅರ್ಜುನನಾಗಿ ಅವತರಿಸಿರುವಂತೆಯೂ ಪ್ರತೀತಿಯುಂಟು, ಅಸುರಾರಾತಿ–ಅಸುರ-ರಕ್ಕಸರನ್ನು, ಅರಾತಿ–ಕೊಂದವನು (ಕೃಷ್ಣನು) ನರನೂ ನಾರಾಯಣನೂ (ನರನಾರಾಯಣರ್, ದ್ವಿ. ಯೋಗದ್ವಂದ್ವ) ||೪೨||

ಟೀ|| ಪಾಂಡವ ಮುಕುಂದರ್–ಪಾರ್ಥ ಮುರಹರರೀರ್ವರೂ, ಒಂದೇಬಾರಿ ಮುಳಿದು–ಒಂದೇಕಾಲದಲ್ಲಿಯೇ ಕಟ್ಟುಗ್ರಕೋಪಂ ತಾಳಿ, ವರ–ಉತ್ತಮೋತ್ತಮಂಗಳಾದ, ಗಾಂಡೀವ - ಗಾಂಡೀವವೆನ್ನುವ, ಶಾರ್ಙ್ಗ–ಶಾರ್ಙ್ಗನಾಮಕವಾದ, ಚಾಪಮಂ–ಬಿಲ್ಲುಗಳನ್ನು, ಕೊಂಡು–ಅರ್ಜುನ ಕೃಷ್ಣರು ಧರಿಸಿದವರಾಗಿ, ತೆಗೆದು–ಆಕರ್ಣಾಂತವಾಗಿ ಎಳೆದು, ತಾಮ್ರಧ್ವಜನ

---

ಡೆಯಿಂದ, ಕೆಳಕ್ಕೆ ಬರುತ್ತಲಿರುವ ಅರ್ಜುನನ ರಥವನ್ನು ಕೃಷ್ಣಸ್ವಾಮಿಯು ನೋಡಿದ ಕೂಡಲೆ ಮಂಗಳ ಕರಂಗಳಾದ ತನ್ನ ಕರಪಲ್ಲವಂಗಳಿಂದವನ ರಥಮಂ ಪಿಡಿದು ಸರಿಯಾಗಿ ಭೂಮಿಯಮೇಲೆ ನಿಲ್ಲಿಸಿದನು, ಆಗ ದೇವತೆಗಳೆಲ್ಲಾ ಕೃಷ್ಣನನ್ನು ನಂಬಿದವರಿಗೆಂದಿಗೂ ಕೇಡುಂಟಾಗಲಾರದೆಂದು ಕೊಂಡಾಡುತ್ತಲಿದ್ದರು, ಅನುಸಾಲ್ವಾದಿ ಮಹಾವೀರರೆಲ್ಲಾ ಪರಮಾಶ್ಚರ್ಯದಿಂದ ಭ್ರಾಂತರಾದರು ||೪೧|| ರಾಜೇಂದ್ರನಾದ ಜನಮೇಜಯನೇ ಕೇಳು, ಆಬಳಿಕ ರಾಕ್ಷಸಾಂತಕನಾದ ಕೃಷ್ಣಸ್ವಾಮಿಯು ಅರ್ಜುನನ್ನು ಕುರಿತು, ಎಲೈ ಫಲುಗುಣನೆ, ನೀನು ಹೆದರಬೇಡ, ಇವನು ಬಹು ಶೂರನು ಇಂತವನನ್ನುಗೆಲ್ಲಬೇಕಾದರೆ ನೀನೊಬ್ಬನೇ ಸಾಲದು. ನೀನೊಂದು ಕಡೆ ನಿಲ್ಲು, ಬೇರೊಂದುಕಡೆ ನಾನು ನಿಲ್ಲುವೆನು, ಇಬ್ಬರೂ ಏಕಕಾಲದಲ್ಲಿ ಇವನನ್ನು ಬಾಣವರ್ಷದಿಂದ ತುಂಬಿಸಬೇಕೆಂದು ಅಂದುಕೊಂಡು, ಕೃಷ್ಣಾರ್ಜುನರೀರ್ವರೂ ತಾಮ್ರಧ್ವಜನಮೇಲೆ ಸರಲ್ಮಳೆಯಂ ಕರೆ||೪೨|| ಯುತ್ತಲಿದ್ದರು ಕೃಷ್ಣನು ತನ್ನ ಶಾರ್ಙ್ಗನಾಮಕವಾದ ಧನುಸ್ಸನ್ನೂ, ಅರ್ಜುನನು ಗಾಂಡೀವವನ್ನೂ ಪಿಡಿದು ರೋಷಾವೇಶದಿಂದ ತಾಮ್ರಧ್ವಜನ

ತಾಮ್ರಧ್ವಜನಮೇಲೆತೆಗೆದೆಸುತಿರಲ್ಕೆ ॥ ಕಾಂಡವಿಲ್ಲದೆಕವಿದುಪಂಬುಗಳಡರ್ದ್ದುವಾ । ರ್ತಾಂಡಮಂಡಲಮಾಗಶಿಖಿಕೇತುನಂದನಂ । ತಾಂಡಿಬಿಕಮರ್ದನಕಿರೀಟಿಗಳನಡಿಗಡಿಗೆಘಾತಿಸಿದನಾಹವದೊಳು ॥ ೪೩ ॥ ಮೀರಿದಪರಾಕ್ರಮದೊಳಕ್ಷಿಗಳರಳ್ದುವು । ಬ್ಬೇರಿಪುಳಕೋತ್ಸವದೊಳಾತಾಮ್ರಕೇತುಕೈ । ದೋರಿಬೊಬ್ಬಿರಿದುನಸುನಗುತಕೃಷ್ಣನೊಳೆಂದನೆಲೆದೇವತನ್ನಕೂಡೆ ॥ ಬೇರೆ ನೀಂಬಿಲ್ವಿಡಿದುಕಾದಿಕೌಂತೇಯನಂ । ಗಾರುಮಾಡದಿರರ್ಜುನಂಗೆಸಾರಥಿಯಾಗು । ಸಾರಿದೆಂಸಾಕೆಂದುತೆಗೆದೆಚ್ಚಡಚ್ಯುತಂ ಮೆಚ್ಚಿನೊಳೊಡಂಬಟ್ಟನು ॥ ೪೪ ॥ ಹರಿಬಳಿಕತನ್ನರಥಮಂಬಿಟ್ಟುಫಲುಗುಣನ । ವರವರೂಥಾಗ್ರದೋಳ್ಚಮ್ಮಟಿಗೆವಾಘೆಯಂ । ಧರಿಸಿತುರಗಂಗಳಂಚಪ್ಪರಿಸಲೆಡಬಲಕೆವಾಯುವೇಗದೊಳಡರ್ದು ॥ ಮುರಿದುಮಂಡಲಭೇದಚಳಬಳಿಕೆಚದುರೋಜೆ

---

ಮೇಲೆ-ಮಯೂರಧ್ವಜನ ಸುತನಮೇಲೆ, ಅಬ್ಜಜಾಂಡಕೆ – ಬ್ರಹ್ಮಾಂಡಕ್ಕೆ, ಅಧಿಕ-ಹೆಚ್ಚಾದ, ಕ್ಷೋಭಂ-ಹಿಂಸೆಯು, ಆಗ-ಆಗುವಂತೆ, ಎಸುತಿರೆ-ಸುರಿಸುತ್ತಿರಲು, ಮಾರ್ತಾಂಡಮಂಡಲ – ಭಾನುಮಂಡಲವು, ಕಾಂಡವಿಲ್ಲದೆ-ಬಿಡುವೇ ಇಲ್ಲದ ಹಾಗೆ, ಅಡರ್ದು-ವ್ಯಾಪಿಸಿ, ಕವಿದವು-ಹರಡಿದವು, ಶಿಖಿಕೇತುನಂದನಂ – ತಾಮ್ರಧ್ವಜನಾದರೋ, ಆಗ-ಆ ಕಾಲದಲ್ಲಿ, ಆಹವದೊಳ್-ಕಾಳಗದಲ್ಲಿ, ತಾಂ-ತಾನು, ಅಡಿಗಡಿಗೆ – ಬಾರಿಬಾರಿಗೂ, ಡಿಬಿಕಮರ್ದನ ಕಿರೀಟಿಗಳನು – ಕೃಷ್ಣಾರ್ಜುನರೀರ್ವರನ್ನೂ, ಘಾತಿಸಿದನು-ತಾಡಿಸಿದನು.

ಅ॥ ವಿ॥ ಶಿಖಿಕೇತುನಂದನಂ – ಶಿಖಿ-ನವಿಲನ್ನೆ, ಕೇತು-ಧ್ವಜಪಟದಲ್ಲುಳ್ಳವನು (ಬ. ಸ.) ಶಿಖಿಕೇತು – ಮಯೂರಧ್ವಜನ, ನಂದನಂ – ಕುವರನು (ಷ. ತ.) ಶಿಖಿ – ನವಿಲು, ಬೆಂಕಿ, ಕೋಳಿ, ಬ್ರಾಹ್ಮಣ. ನಂದನ – ಮಗ, ನಂದನವೆಂಬವನ, ಒಂದು ಸಂವತ್ಸರದ ಹೆಸರು. ಡಿಬಕ – ಡಿಬಿಕನೆಂಬ ರಾಕ್ಷಸನು, ಅಬ್ಜಜಾಂಡ-ಅಪ್-ನೀರಿನಲ್ಲಿ, ಜ-ಹುಟ್ಟಿದ್ದು, (ಸ. ತ.) ಅಬ್ಜಜ-ಬ್ರಹ್ಮದೇವನ, ಅಂಡ-ಮಂಡಲವು (ಷ. ತ.) ॥೪೩॥

ಟೀ॥ ಮೀರಿದ-ಅತ್ಯಧಿಕವಾದ, ಪರಾಕ್ರಮದೊಳ್ – ಸತ್ವಾತಿಶಯದಿಂದ, ಅಕ್ಷಿಗಳ್ – ನಯನಂಗಳು, ಅರಳ್ದವು-ದೊಡ್ಡವಾದವು, ಆತಾಮ್ರಕೇತು-ಆ ಮಯೂರಧ್ವಜನ ಕುವರನು, ಪುಳಕೋತ್ಸವದೊಳ್ – ಕೂದಲುಗಳೆಲ್ಲಾ ಮೇಲಕ್ಕೆದ್ದು ನಿಲ್ಲುವಿಕೆಯಿಂದ, ಉಬ್ಬೇರಿ-ಅತ್ಯಧಿಕನಾಗಿ, ಕೈದೋರಿ-ತನ್ನ ಶಕ್ತಿಯನ್ನೆಲ್ಲಾ ತೋರ್ಪಡಿಸಿ, ಬೊಬ್ಬಿರಿದು-ಸಿಂಹನಾದವಂ ಮಾಡಿ, ಕೃಷ್ಣನೊಳ್-ಶ್ರೀ ಕೃಷ್ಣಮೂರುತಿಯೊಂದಿಗೆ, ನಸುನಗುತ-ಮುಗುಳ್ನಗೆಯನ್ನೈದುತ್ತಾ, ಎಂದನು-ಮುಂದೆ ಹೇಳುವಂತೆ ನುಡಿಯುವವನು, ಎಲೆದೇವ-ಓ ಸ್ವಾಮಿಯಾದ ಕೃಷ್ಣನೆ, ನೀಂ-ನೀನಾದರೊ, ತನ್ನಕೂಡೆ-ನನ್ನೊಂದಿಗೆ, ಬಿಲ್ವಿಡಿದುಕಾದಿ-ಧನುಸ್ಸನ್ನು ಹಿಡಿದು ಹೋರಾಡಿ, ಕೌಂತೇಯನಂ-ಕುಂತೀಸುತನಾದ ಪಾರ್ಥನನ್ನು, ಗಾರುಮಾಡದೆ-ಆಯಾಸ ಪಡಿಸದೆ, ಇರು-ಇರುವವನಾಗು, ಅರ್ಜುನಂಗೆ-ಕಿರೀಟಿಗೆ, ಸಾರಥಿಯು-ರಥವನ್ನು ನಡೆಯಿಸತಕ್ಕವನು, ಆಗು-ಆಗಿಬಿಡು, ಸಾರಿದೆಂ-ಪೇಳಿರುವೆನು, ಸಾಕು-ನಿನ್ನ ಯುದ್ಧವನ್ನು ನಿಲ್ಲಿಸು, ಎಂದು-ಎಂಬತೆರನಾಗಿ ಪೇಳಿ, ತೆಗೆದು – ಕಿವಿಯವರೆಗೂ ಸೆಳೆದು, ಎಚ್ಚಡೆ – ಎಸೆಯಲು, ಮೆಚ್ಚಿನೊಳು-ಒಪ್ಪುವಿಕೆಯಿಂದ, ಅಚ್ಯುತನು-ಕೃಷ್ಣಸ್ವಾಮಿಯು, ಒಡಂಬಟ್ಟನು-ಅನುಮೋದಿಸಿದನು ॥೪೪॥

ಟೀ॥ ಬಳಿಕ-ಆಮೇಲೆ, ಹರಿ-ಕೃಷ್ಣಸ್ವಾಮಿಯು, ತನ್ನರಥಮಂಬಿಟ್ಟು-ತನ್ನ ತೇರನ್ನಿಳಿದು, ಫಲುಗುಣನ-ಧನಂಜಯನ, ವರ-ಉತ್ತಮವಾದ, ವರೂಥಾಗ್ರದೋಳ್-ತೇರಿನತುದಿಯೊಳಗೆ, ಚಮ್ಮಟಿಕೆವಾಘೆಯಂ ಕುದುರೆಯನ್ನು ಬಿಗಿದ ದಾರವನ್ನೂ ಬೆತ್ತವನ್ನೂ (ಕೋರಡವನ್ನೂ) ಸಹ, ಧರಿಸಿ-ಹಿಡಿದು, ತುರಗಂಗಳಂ-ವಾಜಿಗಳನ್ನು, ಚಪ್ಪರಿಸಲು-ತಟ್ಟಿದ್ದರಿಂದ, ಎಡಬಲಕೆ-ಉಭಯಪಾರ್ಶ್ವಗಳಿಗೂ, ವಾಯುವೇಗದೊಳ್-ಗಾಳಿಗಿಂತಲೂ ಜಾಗ್ರತೆಯಾಗಿ, ಅಡರ್ದು-ನಡೆದು, ಮುರಿದು-ತಾಮ್ರ

---

ಮೇಲೆ ಕೋಲ್ಗಳಂ ಬಿಡುತ್ತಲಿರುವುದನ್ನು ನೋಡಿ ತಾಮ್ರಕೇತುವು, ಕುಣಿದಾಡುತ್ತಾ, ಅವರೀರ್ವರನ್ನು ಸ್ವಲ್ಪವೂ ಲೆಕ್ಕಿಸದೆ ಕೋಪಾತಿಶಯದಿಂದ ಕೂಡಿ ಶರಪರಂಪರೆಯಿಂದವರನ್ನು ತುಂಬಿಸುತ್ತಲಿದ್ದನು ॥೪೩॥ ಆಗ ತಾಮ್ರಕೇತುವು ಕಣ್ಣುಗಳನ್ನಗಲಿಸಿಕೊಂಡವನಾಗಿ, ಶೌರ್ಯಾತಿಶಯದಿಂದ ಉಬ್ಬುತ್ತಾ, ಅತ್ಯಂತ ಸಂತೋಷದಿಂದ ರೋಮಾಂಚವುಳ್ಳವನಾಗಿ, ವೈರಿಗಳೆದೆಗಳೊಡೆದು ಹೋಗುವಂತೆ ಸಿಂಹನಾದವಂ ಗೈಯುತ್ತಾ, ಕೃಷ್ಣಸ್ವಾಮಿಯನ್ನು ಕುರಿತು, ಓ ಕೃಷ್ಣಮೂರುತೀ; ನನ್ನೊಂದಿಗೆ ನೀನೇ ಬೇರೆಯಾದ ಯುದ್ಧವನ್ನು ಮಾಡಿದರೆ ಅರ್ಜುನನಿಗೆ ಬಾಧೆಯು ಹೆಚ್ಚಾಗುವುದಾದ್ದರಿಂದ ನೀನು ಹಾಗೆ ಮಾಡದೆ ಪಾರ್ಥಸಾರಥಿಯಾಗಿ ಕಿರೀಟಿಯ ಹರಣಂಗಳನ್ನುಳಿಯಿಸಲು ಸಹಾಯಮಾಡೆಂದು ನುಡಿಯುತ್ತಾ, ಶರಗಳಂ ಬಿಡಲಾರಂಭಿಸಿದನು, ಮುರಾಂತಕನಾದರೊ ತಾಮ್ರಧ್ವಜನ ವೀರ ನುಡಿಗಳನ್ನೂ, ಬಾಣ ಚಾತುರ್ಯವನ್ನೂ ಈಕ್ಷಿಸಿ ಬಹಳವಾಗಿ ಮೆಚ್ಚಿದವನಾಗಿ, ॥೪೪॥ ತನ್ನ ತೇರಿನಿಂದಿಳಿದು, ಪಾರ್ಥನ ರಥದ ಮುಂದುಗಡೆಯಲ್ಲಿ ಕುಳಿತು, ಕುದುರೆಯ ಲಗಾಮನ್ನು ಒಂದು ಕೈಯಲ್ಲಿಯೂ, ಚಾಟಿಯನ್ನು ಮತ್ತೊಂದು ಹಸ್ತದೊಳಗೂ ಹಿಡಿದವನಾಗಿ, ಕುದುರೆಗಳನ್ನು ತಟ್ಟಲು ಆ ತುರಂಗಗಳು ಯುದ್ಧಭೂಮಿ

ಪೆಂಸಿರಣ | ರಂಗದೋಳ್ಕಾರಮಿಂಚಿನತೆಂದೊ | ಉರವಣಿಸಿದುವುಕೂಡೆಶಕ್ರಸುತನೆಚ್ಚನಡಿಗಡಿಗೆತಾಮ್ರಧ್ವಜನನು || ೪೫ ||
ಹರಿನಂದನನದಿವ್ಯಹರಿಮಯವರೂಥಮಂ | ಹರಿವೇಗದಿಂದೆಸೆವಹರಿಚತುಷ್ಟಯವನುಂ | ಹರಿಯನುಂಪಳವಿಗೆಯಹರಿಯನುಂ
ಪಾರ್ಥನಲಹರಿಯನುಂಧಾತುಗೆಡಿಸಿ || ಹರಿಬದಕಲಿಗಳಂಪ್ರಹರಿಸಿತಾಮ್ರಧ್ವಜಂ | ಹರಿನಾದಮಂಮಾಡಿಹರಿದಾಡುತಿರೆಕೂಡೆ |
ಹರಿಣಾಂಕಕುಲಜಂವಿಹರಿಸಿದಂಬಾಣದಿಂಹರಿಕಿರಣಮಡಗುವಂತೆ || ೪೬ || ಮತ್ತೆಮುರಹರನನೀರೈದುಕೂರ್ಗಣೆಯೊಳರ |
ವತ್ತುಮಾರ್ಗಣದಿಂದಸುರಪಸುತನಂಘಾತಿ | ಸುತ್ತವಂಬೊಬ್ಬಿರಿಯೆನರನವನರೋಮರೋಮಂಗಳಂಭೇದಿಸುವೊಲು || ತೆತ್ತಿ
ಸಿದನಂಬುಗಳನವನುಮತ್ತೆ ಸುತಿರ್ದ | ನಿತ್ತಂಡದಾಹವಂಸಮಮಾಗಿಬರೆವಿಜಯ | ನೊತ್ತಾಯದಿಂದವನಕುದುರೆಸಾರಥಿರಥವ
ನೆಚ್ಚುಹುಡಿಹುಡಿಗೈದನು || ೪೭ || ಚೂರ್ಣಮಾದೊಡೆರಥಂತಾಮ್ರಧ್ವಜಂರೋಪ | ಪೂರ್ಣಮುಖನಾಗಿಕಲಿಪಾರ್ಥನಸಮಿ

---

ಧ್ವಜನು ಬಿಡತಕ್ಕ ಸರಳ್ಗಳಂತುಂಡಿಸಿ, ಮಂಡಲ-ಎಡಬಲ ಸುತ್ತುಗಳ, ಭೇದ-ಭೇದದ, ಚಲ – ತಿರುಗುವ, ಬಳಕೆ-ಬಳಕೆಯಿಂದಲೂ, ಚದುರ-ಚಾತುರ್ಯಯುಕ್ತವಾದ, ಬಿಜೆವೆಂಸಿ–ಸಾಹಸದಿಂದೊಡಗೂಡಿ, ಕಾರಮಿಂಚಿನತೆರದೊಳು-ವರ್ಷಾಕಾಲದ ಮಿಂಚಿನಂತೆ, ರಣರಂಗದೋಳ್–ಸಮರಾಂಗಣದಲ್ಲಿ, ಉರವಣಿಸಿದವು-ಅತ್ಯಧಿಕವಾದವು, ಕೂಡೆ–ಬಡನೆಯೇ, ತಾಮ್ರಧ್ವಜನನು–ಮಯೂರಧ್ವಜನ ಕುವರನನ್ನು ಅಡಿಗಡಿಗೆ–ಬಾರಿಬಾರಿಗೂ, ಶಕ್ರಸುತನು–ಇಂದ್ರಸೂನುವು, ಎಚ್ಚನು-ಸರಲ್ಗಳಂಘಾತಿಸಿದನು||೪೫||

ಟೀ|| ತಾಮ್ರಧ್ವಜಂ–ತಾಮ್ರಧ್ವಜನಾದರೊ, ಹರಿನಂದನನ-ಅಮರೇಂದ್ರನಪುತ್ರನ, ದಿವ್ಯ–ಮನೋಹರಂಗಳಾದ, ಹರಿಮಯ–ಹೊಂಬಣ್ಣದ, ವರೂಥಮಂ–ತೇರನ್ನು, ಹರಿವೇಗದಿಂದ–ಗಾಳಿಗಿಂತಲೂ ಹೆಚ್ಚಾದ ಜಾಗ್ರತೆಯಿಂದ, ಎಸೆವ–ಹೊಳೆಯತಕ್ಕ, ಹರಿಚತುಷ್ಟಯವನುಂ–ಅಶ್ವಗಳನಾಲ್ಕನ್ನು, ಹರಿಯನುಂ–ಕೃಷ್ಣಸ್ವಾಮಿಯನ್ನು, ಪಳವಿಗೆಯ–ಪತಾಕೆಯಲ್ಲಿರುವ, ಹರಿಯನುಂ–ಹನುಮಂತನನ್ನೂ, ಪಾರ್ಥನ-ಧನಂಜಯನ, ಲಹರಿಯನು–ಶರಸಮುದಾಯವನ್ನೂ, ಧಾತುಗೆಡಿಸಿ-ದುರ್ಬಲವಾಗುವಂತೆ ಮಾಡಿ, ಹರಿಬದ–ಸಮರಸನ್ನದ್ಧರಾದ, ಕಲಿಗಳಂ–ವೀರರನ್ನು, ಪ್ರಹರಿಸಿ, ಹರಿನಾದಮುಂಮಾಡಿ-ಸಿಂಹಘೋಷಮಂಗೈದು, ಹರಿದಾಡುತಿರೆ–ಓಡಾಡುತ್ತಿರಲು, ಹರಿಣಾಂಕಕುಲಜಂ-ಪಾರ್ಥನು, ಕೂಡೆ–ಬಡನೆಯೇ, ಹರಿಕಿರಣಂ-ಭಾನುಕರಂಗಳೆಲ್ಲ, ಅಡಗುವಂತೆ–ಮರೆಯಾಗುವತೆರನಾಗಿ, ಬಾಣದಿಂ–ಸರಲ್ಗಳಿಂದ, ವಿಹರಿಸಿದಂ–ಹೊಡೆಯುತ್ತಾ ತಿರುಗುತ್ತಲಿದ್ದನು.

ಅ|| ವಿ|| ಹರಿಣಾಂಕಕುಲಜಂ–ಹರಿಣ–ಜಿಂಕೆಯು, ಅಂಕ – ಗುರುತುಳ್ಳವನು, (ಇಂದುವು), (ಬ. ಸ.) ಹರಿಣಾಂಕ–ಚಂದ್ರನ, ಕುಲಂ–ವಂಶ (ಚಂದ್ರವಂಶ, ಷ. ತ.) ಹರಿಣಾಂಕಕುಲದಲ್ಲಿ, ಜಂ–ಹುಟ್ಟಿದವನು (ಸ. ತ.) ||೪೬||

ಟೀ|| ಅವಂ–ಆ ಮಯೂರಧ್ವಜನ ಮಗನು, ಮುರಹರನಂ-ಮುರಾಂತಕನನ್ನು, ಈರೈದುಕೂರ್ಗಣೆಯೊಳು–ಕ್ರೂರವಾದ ಹತ್ತು ಸರಲ್ಗಳಿಂದಲೂ, ಅರವತ್ತುಮಾರ್ಗಣದಿಂದ–ಅರವತ್ತು ಕಣೆಗಳಿಂದ, ಸುರಪಸುತನಂ–ಪಾರ್ಥನನ್ನೂ, ಮತ್ತೆ-ತಿರುಗಿ, ಘಾತಿಸುತ್ತ–ತಾಡಿಸುತ್ತ, ಬೊಬ್ಬಿರಿಯೆ–ಸಿಂಹದಂತೆ ಗರ್ಜಿಸಲು, ಅವನ-ಆ ತಾಮ್ರಧ್ವಜನ, ರೋಮರೋಮಂಗಳಂ–ರೋಮಗಳಲ್ಲಿ ಪಡಿಯೊಂದನ್ನೂ, ಭೇದಿಸುವೊಲ್ – ವಿಭಾಗಿಸುವಂತೆ, ನರನು – ಕಿರೀಟಿಯು, ಅಂಬುಗಳನು – ಕಣೆಗಳನ್ನು, ತೆತ್ತಿಸಿದನು–ಎಲ್ಲೆಲ್ಲಿಯೂ ಮುತ್ತುವಂತೆ ಮಾಡಿದನು, ಮತ್ತೆ–ತಿರುಗಿ, ಅವನು-ಆ ತಾಮ್ರಧ್ವಜನೂ ಕೂಡ, ಎಸುತಿರ್ದನು-ಸರಲ್ಗಳಂ ಬಿಡುತ್ತಲಿದ್ದನು, ಇತ್ತಂಡದ – ಇರ್ಕಡೆಯ, ಆಹವಂ – ಕಾಳಗವೂ, ಸಮಮಾಗಿ-ಜೋಡಿಯಾಗಿ, ಬರೆ - ಬರಲು, ಒತ್ತಾಯದಿಂದ–ವೇಗದಿಂದ, ಅವನ–ಆ ತಾಮ್ರಧ್ವಜನ, ಕುದುರೆ ಸಾರಥಿ ರಥನನು–ಅಶ್ವ ಸಾರಥಿ ತೇರ್ಗಳನ್ನು, ವಿಜಯನು–ಧನಂಜಯನು, ಎಚ್ಚು-ಹೊಡೆದು, ಹುಡಿಹುಡಿಗೈದನು–ನುಚ್ಚುನುಚ್ಚಾಗುವಂತೆ ಮಾಡಿಬಿಟ್ಟನು. ||೪೭||

---

ಯಲ್ಲೆಲ್ಲಾ ಬಹು ವೇಗದಿಂದ ನಡೆಯುತ್ತಲಿರುವಾಗ ಅರ್ಜುನನು ಅನೇಕ ದಿವ್ಯ ಬಾಣಗಳಿಂದ ತಾಮ್ರಧ್ವಜನನ್ನು ತುಂಬಿಬಿಟ್ಟನು ||೪೫|| ಫಲುಗುಣನ ಈ ತೆರನಾದ ಬಾಣಪರಂಪರೆಯನ್ನು, ವಾಯುವೇಗದಿಂದ ನಡೆಯುವ ಅವನ ರಥವನ್ನೂ ಕುದುರೆಗಳನ್ನೂ, ಕೃಷ್ಣನನ್ನೂ, ಧ್ವಜಪಟದಲ್ಲಿರುವ ಹನುಮಂತನನ್ನೂ ತಾಮ್ರಧ್ವಜನು ಬಹಳವಾಗಿ ನೋಯಿಸಿ, ಯುದ್ಧಾಸಕ್ತರಾದ ವೀರಾಗ್ರಣಿಗಳ ಸೊಕ್ಕನ್ನು ಮುರಿದು, ಸಿಂಹನಾದವಂಮಾಡುತ್ತಾ ರಣರಂಗದಲ್ಲಿ ಓಡಾಡುತ್ತಿರಲು, ಪಾರ್ಥನು ಪುನಃ ಶರಜಾಲದಿಂದ ಅವನನ್ನು ತುಂಬಿಸಿದನು ಇವನ ಬಾಣಪರಂಪರೆಯು ಆಕಾಶದಲ್ಲಿರುವ ಸೂರ್ಯಕಿರಣಗಳನ್ನೂ ಕೂಡ ಮುಚ್ಚಿಬಿಟ್ಟಿತು ||೪೬|| ಆಗ ತಾಮ್ರಧ್ವಜನು ಕೋಪಗೊಂಡು ಹತ್ತು ಬಾಣಗಳಿಂದ ಕೃಷ್ಣನನ್ನೂ, ಅರವತ್ತು ಕೂರಲಗುಗಳಿಂದ ಅರ್ಜುನನನ್ನೂ ಹೊಡೆದು ಆರ್ಭಟವಂ ಮಾಡುತ್ತಿರಲು, ಅವನ ರೋಮರೋಮಗಳಲ್ಲೆಲ್ಲಾಹೋಗಿ ನಾಟಕೊಳ್ಳುವಂತೆ ಪಾರ್ಥನು ಸರಲ್ಮಳೆಯನ್ನು ಸುರಿಸಿದನು, ಈ ರೀತಿಯಲ್ಲಿ ಇಬ್ಬರೂ ಸಮಸಮನಾಗಿ ಹೋರಾಡುತ್ತಲಿರುವಾಗ ಅರ್ಜುನನು ತಾಮ್ರಕೇತುವಿನ ಅಶ್ವ ಸಾರಥಿ ರಥಂಗಳನ್ನೆಲ್ಲಾ ಬಾಣಗಳಿಂದ ನುಚ್ಚುನುಚ್ಚಾಗಿ ಮಾಡಿದನು ||೪೭|| ತನ್ನ ರಥವು ಮುರಿದು ಬಿದ್ದುದರಿಂದ ತಾಮ್ರ

ನೆಚ್ಚುಹುಡಿಹುಡಿಗೈದನು || ಚೂರ್ಣಮಾದೊಡೆರಥಂ ತಾಮ್ರಧ್ವಜಂ ರೋಷ | ಪೂರ್ಣಮುಖನಾಗಿ ಕಲಿಪಾರ್ಥನಸಮೀಪಮಂ | ತೂರ್ಣದಿಂದೈದಿಪೊಯ್ವುನಿತರೊಳ್ಚರಣಾಗ್ರದಿಂದಮುರಹರನೊದೆಯಲು || ಜೀರ್ಣತರುಮುರಿದುಬೀಳ್ವಂತಿಳೆಗೆ ಬಿದ್ದೊಡನೆ | ಕೀರ್ಣಪ್ರತಾಪದಿಂದೆದ್ದುಮತ್ತೊಂದುವಿ | ಸ್ತೀರ್ಣಮಾಗಿರ್ದಮದಕುಂಜರಕಡರ್ದುಶರಪಂಜರವನೊದವಿಸಿದನು || ೪೮ || ಬೀದಿವರಿಸಿದನಾತನಾನೆಯಂಬಭ್ರುವಾಹಾದಿವೀರರಮೇಲೆಕಣೆಗಳಂಕರೆದನಿದಿ | ರಾದಭಟರೆಲ್ಲರುಂಮೂರ್ಛೆಮೃತಿಯಂತಳೆದರರ್ಜುನಂಮೈಮರೆದನು || ಕಾದುವವರಿಲ್ಲಪಾಂಡವಬಲದೊಳಾಗಮಧು | ಸೂದನಂಬೆರಗಾಗಿಕಡುಕೋಪದಿಂದತಾ | ನೇದಿವ್ಯಚಕ್ರಮುಂತುಡುಕಿನಡೆದಂಧುರಕೆಮೂಜಗಂತಲ್ಲಣಿಸಲು || ೪೯ || ಉರಗೇಂದ್ರಕಮಠದಿಕ್ಕರಿಗಳುಂಗಿರಿಗಳುಂ | ಶರಧಿಯುಂದೆಸೆಗಳುಂಧರಣಿಯುಂತರಣಿಯುಂ | ಪಿರಿದುಕಂಪಿಸಲಾತ್ರಿವಿಕ್ರಮಂಚಕ್ರಮುಂಕೊಂಡುಕಾಳಗಕೆಬರಲು ||

ಟೀ|| ರಥಂ-ಸ್ಯಂದನವು, ಚೂರ್ಣಂಆದೊಡೆ-ಮುರಿದು ಹೋಗಲಾಗಿ, ತಾಮ್ರಧ್ವಜನು-ಮಯೂರಧ್ವಜನ ಮಗನು, ರೋಷ-ಕೋಪದಿಂದ, ಪೂರ್ಣ-ಕೂಡಿದ, ಮುಖನಾಗಿ-ಮುಖವುಳ್ಳವನಾಗಿ, ತೂರ್ಣದಿಂ-ಜಾಗ್ರತೆಯಾಗಿ, ಕಲಿ-ವೀರನಾದ, ಪಾರ್ಥನ-ಫಲುಗುಣನ, ಸಮೀಪಮಂ-ಹತ್ತಿರವನ್ನು, ಐದಿ-ಹೊಕ್ಕು, ಪೊಯ್ವುನಿತರೊಳ್-ಹೊಡೆಯುವದರೊಳಗಾಗಿ, ಮುರಹರನು-ಮುರಧ್ವಂಸಿಯು, ಚರಣಾಗ್ರದಿಂದ-ಕಾಲಕೊನೆಯಿಂದ, ಒದೆಯಲು-ಒದ್ದು ಬಿಡಲು, ಜೀರ್ಣ-ಮುದಿಯಾದ, ತರು-ಮರವು, ಮುರಿದು ಬೀಳ್ವಂತೆ-ಮುರಿದು ಬಿದ್ದು ಹೋಗುವ ತೆರನಾಗಿ, ಇಳೆಗೆ-ಭೂಮಿಯ ಮೇಲೆ, ಬಿದ್ದು-ಬಿದ್ದುಹೋಗಿ, ಒಡನೆ-ಸಂಗಡಲೆ, ಕೀರ್ಣ ಪ್ರತಾಪದಿಂದ-ಒದಗಿದ ಸಾಹಸದಿಂದ, ಎದ್ದು-ಎದ್ದವನಾಗಿ, ವಿಸ್ತೀರ್ಣಮಾಗಿರ್ದ-ಬಲವಾಗಿದ್ದ, ಮತ್ತೊಂದು ಕುಂಜರಕೆ-ಬೇರೊಂದು ಮತ್ತ ಹಸ್ತಿಗೆ, ಅಡರ್ದು-ಹತ್ತಿ, ಶರ-ಕಣೆಗಳ, ಪಂಜರವನು-ಸಮುದಾಯವನ್ನು, ಒದವಿಸಿದನು-ಹರಡಿದನು. ||೪೮||

ಟೀ|| ಆತನು-ಆ ತಾಮ್ರಧ್ವಜನಾದರೊ, ಆನೆಯಂ-ಹಸ್ತಿಯನ್ನು, ಬೀದಿವರಿಸಿದನು- ಎಲ್ಲೆಲ್ಲಿಯೂ ತಿರುಗಾಡುವಂತೆ ಮಾಡಿದನು. ಕಣೆಗಳಂ-ಸರಳ್ಳನ್ನು, ಬಭ್ರುವಾಹಾದಿ ವೀರರ ಮೇಲೆ-ಪಾರ್ಥಜನೇ ಆದಿಯಾದ ಸಾಹಸಿಗಳ ಮೇಲೆ, ಕರೆದನು-ವರ್ಷಿಸಿದನು, ಇದಿರಾದ-ಎದುರಿಗೆ ಬಂದ, ಭಟರೆಲ್ಲರುಂ-ವೀರರೆಲ್ಲಾ, ಮೂರ್ಛೆ-ಸ್ಮರಣೆ ತಪ್ಪುವಿಕೆಯನ್ನೂ, ಮೃತಿಯಂ-ಸಾವನ್ನೂ, ತಳೆದರು-ಅನುಭವಿಸಿದರು, ಅರ್ಜುನನು-ಪಾರ್ಥನು, ಮೈಮರೆದನು-ಜ್ಞಾನವಿಹೀನನಾದನು, ಪಾಂಡವನ-ಕಿರೀಟಿಯ, ಬಲದೊಳಗೆ-ದಂಡಿನಲ್ಲಿ, ಕಾದುವವರು-ಹೋರಾಡತಕ್ಕವರೇ, ಇಲ್ಲ-ಇಲ್ಲವು, ಮಧುಸೂದನಂ-ಮಧುವೆಂಬ ರಕ್ಕಸನನ್ನು ಕೊಂದ ಕೃಷ್ಣಮೂರುತಿಯು, ಬೆರಗಾಗಿ-ಅಚ್ಚರಿಗೊಂಡು, ದಿವ್ಯ-ಮನೋಹರವಾದ, ಚಕ್ರಮುಂ-ಚಕ್ರಾಯುಧವನ್ನು, ತುಡಿಕಿ-ಪಿಡಿದವನಾಗಿ, ಮೂಜಗಂ-ತ್ರಿಲೋಕಂಗಳೂ, ತಲ್ಲಣಿಸಲು-ಭ್ರಾಂತಿಯನ್ನೈದುವಂತೆ, ಕಡು ಕೋಪದಿಂದ-ಕಟ್ಟುಗ್ರದಿಂದ, ತಾನೆ-ತಾನಾಗಿಯೆ, ಧುರಕೆ-ರಣಕ್ಕೆ, ನಡೆದಂ-ಹೊರಟವನಾದನು. ||೪೯||

ಟೀ|| ಉರಗೇಂದ್ರ-ಸರ್ಪರಾಜನು, ಕಮಠ-ಕೂರ್ಮನೂ, ದಿಕ್ಕರಿಗಳುಂ-ಎಂಟು ದಿಕ್ಕುಗಳಲ್ಲಿಯೂ ಭೂಭಾರವನ್ನು ಧರಿಸುವ ಆನೆಗಳು, ಗಿರಿಗಳುಂ-ದುರ್ಗಗಳೂ, ಶರಧಿಯುಂ-ಸಾಗರವೂ, ದೆಸೆಗಳುಂ-ದಿಕ್ಕುಗಳೂ, ಧರಣಿಯುಂ-ಇಳೆಯೂ, ತರಣಿಯುಂ-ರವಿಯೂ, ಪಿರಿದು-ಅತಿಶಯವಾಗಿ, ಕಂಪಿಸಲು-ಅಲ್ಲಾಡಲು, ಆತ್ರಿವಿಕ್ರಮಂ-ಮುರಹರನು, ಚಕ್ರಮುಂ ಕೊಂಡು-ಚಕ್ರಾಯುಧವನ್ನು ಹಿಡಿದುಕೊಂಡು, ಕಾಳಗಕೆ-ಹೋರಾಡಲು, ಬರಲು-ಬರುತ್ತಿರಲಾಗಿ, ಅರುಣಧ್ವಜಂ-ತಾಮ್ರಧ್ವಜನು, ಕಂಡು-ಈಕ್ಷಿಸಿ, ಚಾಪದಿಂ-ಧನುಸ್ಸಿನಿಂದ, ಸರಲಮಳೆಯಂ-ಬಾಣವರ್ಷವನ್ನು, ಕೋಪದಿಂ-ಆಗ್ರಹದಿಂದ, ಕರೆವುತ-ವರ್ಷಿಸುತ್ತ, ಅಂತಕ ಪುರದೊಳು-ಯಮಪುರದೊಳಗೆ, ಸಿಂಗರಂ ಮೆರೆಯಲು-ಅಂದವು ತೋರುವಂತೆ, ಸಂಗರಂ-ಕಾಳಗವು,

ಧ್ವಜನು ಮುಖದಲ್ಲಿ ಕೋಪಾಗ್ನಿಯಂ ತುಂಬಿಕೊಂಡು, ಧನಂಜಯನ ಬಳಿಗೆ ಬಂದು, ಅವನನ್ನು ಹೊಡೆದು ಕೆಡಹಬೇಕೆಂದು ಜ್ಞಗಿಸುತ್ತಲಿರುವಾಗ ಕೃಷ್ಣನು ನೋಡಿ ಅವನನ್ನು ತನ್ನ ಕಾಲುಗಳಿಂದ ಬಲವಾಗಿ ಒದ್ದು ಬಿಟ್ಟನು, ಇದರಿಂದ ತಾಮ್ರಧ್ವಜನು ಬಹುವಾಗಿ ನೊಂದು ಮುದಿಮರವು ನೆಲಕ್ಕೆ ಉರುಳಿ ಬೀಳುವಂತೆ ಧೊಪ್ಪನೆ ಬಿದ್ದು ಮತ್ತೆ ಚೇತರಿಸಿಕೊಂಡು, ಮದಗಜವೊಂದನ್ನೇರಿ ಅನೇಕ ಸರಲ್ಗಳನ್ನು ಅರ್ಜುನನಮೇಲೆ ಬಿಟ್ಟನು ||೪೮|| ಪಾರ್ಥಸುತನೇ ಮೊದಲಾದವರ ಮೇಲೆಲ್ಲಾ ಆನೆಯಂ ನುಗ್ಗಿಸುತ್ತಾ ಹೊರಡಲು ಅನೇಕ ವೀರರೆಲ್ಲಾ ಮರಣವನ್ನೂ ಮೂರ್ಛೆಯನ್ನೂ ಹೊಂದುವಂತಾದರು ಅರ್ಜುನನೂ ಕೂಡ ಸ್ಮರಣೆಯಿಲ್ಲದೆ ಬಿದ್ದುಹೋದನು. ತಾಮ್ರಧ್ವಜನಮೇಲೆ ಎದುರಾಗಿ ನಿಲ್ಲುವರೇ ಇಲ್ಲದಹಾಗಾಯಿತು ಆಗ ಕೃಷ್ಣಸ್ವಾಮಿಯು ಕೋಪಾವಿಷ್ಟನಾಗಿ ತನ್ನ ಚಕ್ರವಂ ಪಿಡಿದು ಸ್ವರ್ಗ ಮರ್ತ್ಯ ಪಾತಾಳಂಗಳೆಂಬ ತ್ರಿಲೋಕಂಗಳೂ ತಲ್ಲಣಿಸುವಂತೆ ತಾನೇ ಯುದ್ಧಕ್ಕೆ ಹೊರಟವನಾದನು ||೪೯|| ಆಗ ಸರ್ಪರಾಜನೂ, ಕೂರ್ಮನೂ, ಅಷ್ಟದಿಗ್ಗಜಗಳೂ, ಸಮುದ್ರವೂ, ಚಂದ್ರ ಸೂರ್ಯರೂ ಸಹ ಕೃಷ್ಣನ ಚಕ್ರಾಯುಧ ವೇಗವಂ ನೋಡಿ ಹೆಚ್ಚಾಗಿ ನಡುಗುತ್ತಿರಲು, ತಾಮ್ರಧ್ವಜನು ಕೋಪಾಟೋಪದಿಂದ ಮೆರೆಯುತ್ತಾ

ಅರುಣಧ್ವಜಂ ಕಂಡು ಕೋಪದಿಂ ಚಾಪದಿಂ । ಸರಳಮಳೆಯಂ ಕರೆವುತುರುಬಿದಂ ತುರುಬಿದಂ । ಹರಿಯನದ್ಭುತವಾಗೆ ಸಂಗರಂ ಸಿಂಗರಂ ಮೆರೆಯಲಂತಕಪುರದೊಳು ॥೫೦॥ ಕಟ್ಟುಗ್ರಕೋಪದಿಂದೈತಪ್ಪ ದಾನವಘ । ರಟ್ಟನಂ ತಡೆದು ತಾಮ್ರಧ್ವಜಂ ಕಾಳಗಂ । ಗೊಟ್ಟನಳವಿಗೆ ಸೇರಿ ತಾತನ ಚತುರ್ಬಲಂ ಸರ್ವಸನ್ನಾಹದಿಂದ ॥ ಇಟ್ಟಣಿಸಿತಾಹವಂ ಬಳಿಕ ಮುರವೈರಿ ತಿರು । ಪಿಟ್ಟ ಚಕ್ರದ ಪಲವು ಧಾರೆಗಳ ಸೋಂಕಿನಿಂ । ದಟ್ಟುಕೆಡೆದಂದು ಪಗೆಯ ಪಡೆಯೊಳಕ್ಷೋಹಿಣಿಯ ಶತಕಮೊಂದೇ ಕ್ಷಣದೊಳು ॥ ೫೧ ॥ ಪಡೆಮಡಿಯೆ ರೋಷದಿಂದಾ ಗ ತಾಮ್ರಧ್ವಜಂ । ನುಡಿದನಸುರಾಂತಕನೊಳೆಲೆ ದೇವ ಸೈನ್ಯಮಂ । ತಡೆಗಡಿದೊಡೇನಹುದು ಹಿಂದೆ ಪಾರ್ಥಂಗಾಗಿ ನಿನ್ನ ಪುಣ್ಯವನಿತ್ತೆಲಾ ॥ ಕೊಡದಿರು ಧನಂಜಯಂಗಾಗಿ ತನಗೀಗ ನಿ । ನ್ನೊಡಲನಿದು ನಿಶ್ಚಯಂ ನಿನ್ನಂ ಕಿರೀಟಿಯಂ । ಪಿಡಿದು ತಾತನ ಮುಖವನಾಗಿಪೆಂ । ನೋಡೆಂದು ಹರಿಯಂ ಪಚಾರಿಸಿದನು ॥ ೫೨ ॥ ಧರಣೀಂದ್ರ ಕೇಳ್ ಚಕ್ರಪಾಣಿಯಾಗಿರ್ದ ಮುರ । ಹರನಂ

---

ಅದ್ಭುತಂ-ಅಚ್ಚರಿಯನ್ನುಂಟುಮಾಡುವುದು, ಆಗೆ-ಆಗಲು, ಹರಿಯನು-ಶ್ರೀಕೃಷ್ಣಸ್ವಾಮಿಯನ್ನು, ಉರುಬಿದಂ-ನೂಕುವಹಾಗೆ ಮಾಡಿದನು, ತುರುಬಿದಂ-ಯುದ್ಧದ ಗೊಡವೆಯನ್ನು ಬಿಟ್ಟು ಹಿಂದಕ್ಕೆ ಹೊರಡುವಂತೆ ಮಾಡಿಬಿಟ್ಟನು ॥೫೦॥

ಟೀ॥ ತಾಮ್ರಧ್ವಜಂ-ತಾಮ್ರಧ್ವಜನಾದರೊ, ಕಟ್ಟುಗ್ರಕೋಪದಿಂದ-ಅತ್ಯಧಿಕವಾದ ಆಕ್ರೋಶದಿಂದ, ಐತಪ್ಪ-ಬರತಕ್ಕ, ದಾನವಘರಟ್ಟನಂ-ರಾಕ್ಷಸಾಂತಕನಾದ ಶ್ರೀ ಕೃಷ್ಣನನ್ನು, ತಡೆದು-ಅಡ್ಡಗಿಸಿ, ಕಾಳಗಂಗೊಟ್ಟನು-ಹೋರಾಡಿದನು, ಆ ಹವಂ-ಕಾಳಗವಾದರೊ, ಸರ್ವಸನ್ನಾಹದಿಂದ-ಸಕಲ ಸಡಗರದಿಂದಲೂ, (ಚತುರಂಗಬಲದೊಂದಿಗೆ) ಇಟ್ಟಣಿಸಿತು-ಮೆರೆಯಿತು, ಬಳಿಕ-ಆ ಮೇಲೆ, ಮುರವೈರಿ-ಮುರಾಂತಕನಾದ ಸ್ವಾಮಿಯು, ತಿರುಪಿ-ತಿರುಗಿಸುತ್ತಾ, ಇಟ್ಟ-ಎಸೆದ, ಚಕ್ರದ-ಚಕ್ರಾಯುಧದ, ಪಲವು-ಅಗಣಿತಂಗಳಾದ, ಧಾರೆಗಳ-ಸುರಿಯುವದರ, ಸೋಂಕಿನಿಂ-ಮುಟ್ಟುವಿಕೆಯಿಂದ, ಪಗೆಯಪಡೆಯೊಳು-ವೈರಿ ಬಲದೊಳಗೆ, ಒಂದೇ ಕ್ಷಣದೊಳು-ನಿಮಿಷಮಾತ್ರದೊಳಗೆ, ಅಕ್ಷೋಹಿಣಿಯ ಶತಕಂ-ನೂರಕ್ಷೋಹಿಣೀ ಸಂಖ್ಯೆಯ ದಂಡು, ಧಟ್ಟುಕೆಡದುದು-ಶಕ್ತಿ ಕುಂದಿಹೋಯಿತು ॥೫೧॥

ಟೀ॥ ತಾಮ್ರಧ್ವಜಂ- ತಾಮ್ರಧ್ವಜನೆಂಬ ಮಯೂರಧ್ವಜನ ಸುತನು, ಪಡೆಮಡಿಯೆ-ತನ್ನ ಕಡೆಯ ಚತುರಂಗ ಬಲವೂ ನಾಶವಾದದ್ದನ್ನು ಕಂಡು, ಅಸುರಾಂತಕನೊಳು-ರಾಕ್ಷಸ ಸಂಹಾರಕನಾದ ಕೃಷ್ಣಮೂರ್ತಿಯೊಂದಿಗೆ, ನುಡಿದನು-ಹೇಳುವನಾದನು, ಎಲೆ ದೇವ-ಎಲೈ ಕೃಷ್ಣನೆ, ಸೈನ್ಯಮಂ-ನನ್ನ ಬಲವನ್ನೆಲ್ಲಾ, ತಡೆಗಡಿಯೆ-ಧ್ವಂಸಮಾಡಿದ ಮಾತ್ರಕ್ಕೇ, ಏನಹದು-ಏನು ಆದಂತಾಗುವುದು, ಪಾರ್ಥಂಗಾಗಿ-ಫಲುಗುಣನ ಸಲುವಾಗಿ, ನಿನ್ನ ಪುಣ್ಯವನು-ನಿನ್ನ ಒಳ್ಳೆಯ ಫಲಗಳನ್ನೆಲ್ಲಾ, ಹಿಂದೆ-ಪೂರ್ವಕಾಲದೊಳಗೆ, ಇತ್ತೆಲಾ-ಕೊಟ್ಟಿರುವಿಯಲ್ಲವೇ, ಧನಂಜಯಂಗಾಗಿ- ಕಿರೀಟಿಗೋಸುಗ, ಈಗ-ಈಗಲಾದರೊ, ತನಗೆ-ನನಗಾದರೊ, ಒಡಲನು-ನಿನ್ನ ಶರೀರವನ್ನೆ, ಕೊಡದಿರು-ಕೊಡಬೇಡ, ಇದು ನಿಶ್ಚಯಂ-ಈ ಮಾತು ಹುಸಿಯಲ್ಲವು, ನಿನ್ನ-ನಿನ್ನನ್ನೂ, ಮತ್ತು ಕಿರೀಟಿಯಂ-ಫಲುಗುಣನನ್ನೂ ಸಹ, ಪಿಡಿದು-ಹಿಡಿದುಕೊಂಡು ಹೋಗಿ, ತಾತನ ಮುಖವನು ಆಗಿಪೆಂ-ನಮ್ಮ ತಂದೆಯಾದ ಮಯೂರಧ್ವಜನು ಮಾಡುವ ಯಜ್ಞವನ್ನು ನೆರವೇರಿಸುತ್ತೇನೆ, ನೋಡು-ನೋಡುವನಾಗು, ಎಂದು-ಎಂಬತೆರನಾಗಿ, ಹರಿಯಂ-ಶ್ರೀ ಕೃಷ್ಣಸ್ವಾಮಿಯನ್ನು, ಪಚಾರಿಸಿದನು-ತಿರಸ್ಕರಿಸಿದವನಾದನು. ॥೫೨॥

ಟೀ॥ ಧರಣೀಂದ್ರ- ಭೂಕಾಂತನಾದ ಜನಮೇಜಯನೆ, ಕೇಳು- ಲಾಲಿಸು, ರಣಾಗ್ರದೊಳ್- ಸಮರಾಂಗಣದಲ್ಲಿ, ಚಕ್ರಪಾಣಿಯಾಗಿರ್ದ-ಚಕ್ರಾಯುಧವಂ ಪಿಡಿದಿರುವ, ಮುರಹರನಂ-ಮುರಾಂತಕನನ್ನು, ಮೇಲ್ವಾಯ್ದು-ಎದುರಿಸಿ ಹೋಗಿ, ತುಡಿಕಿ-ಸ್ಪರ್ಶವಂ ಮಾಡಿ, ಎರಡು ಕೈಗಳಂ-ಮುರಹರನ ಕರಗಳೆರಡನ್ನೂ, ಕರವೊಂದರಿಂದ-ತನ್ನ ಒಂದು ಕೈಯಿಂದಲೂ,

---

ಯಮುನ ಸಂಯಮಿನೀ ಪಟ್ಟಣವನ್ನಲಂಕರಿಸುವುದರಲ್ಲಿ ಬದ್ಧಾದರನಾಗಿ ಅನೇಕ ದಿವ್ಯಾಸ್ತ್ರಂಗಳಂ ಬಿಟ್ಟು ಕೃಷ್ಣಮೂರುತಿಯು ಯುದ್ಧರಂಗದಿಂದ ತಾನೇ ಓಡಿ ಹೋಗುವಂತೆ ಮಾಡಿಬಿಟ್ಟನು ॥ ೫೦ ॥ ಕೃಷ್ಣಮೂರ್ತಿಯಾದರೊ ಅತ್ಯಾತುರದಿಂದ ತನ್ನ ಚಕ್ರಾಯುಧವನ್ನು ಬಿಡಲುಜ್ಜುಗಿಸಿದಾಗ ತಾಮ್ರಧ್ವಜನೂ ಕೂಡ ತನ್ನ ಚತುರಂಗಬಲಸಮೇತನಾಗಿ ಯುದ್ಧಕ್ಕೆ ನಿಂತನು. ಚಕ್ರಾಯುಧದ ಹೊಡೆತವು ಬಲವಾಗಲು ಕ್ಷಣಮಾತ್ರದಲ್ಲಿ ತಾಮ್ರಧ್ವಜನ ನೂರಕ್ಷೋಹಿಣಿ ಸೈನ್ಯವು ಯಮಲೋಕದ ದಾರಿಯನ್ನು ಹಿಡಿಯಿತು॥೫೧॥ಇದರಿಂದ ತಾಮ್ರಧ್ವಜನ ಕೋಪಕ್ಕೆ ಮಿತಿಯೇ ಇಲ್ಲವಾಯಿತು. ಆಗ ತಾಮ್ರಕೇತುವು ಕೃಷ್ಣಮೂರುತಿಯಂ ಕುರಿತು ಎಲೈ ಸ್ವಾಮಿಯೆ, ಸೈನ್ಯವನ್ನು ಕೊಂದಮಾತ್ರಕ್ಕೇ ಏನಾಯಿತು ಪೂರ್ವದಲ್ಲಿ ಅರ್ಜುನನ ಸಲುವಾಗಿ ನಿನ್ನ ಪುಣ್ಯವನ್ನೆಲ್ಲಾ ಧಾರೆಯೆರೆದಂತೆ ಈಗಲೂ ಅವನಿಗಾಗಿಯೇ ನಿನ್ನ ಪ್ರಾಣವನ್ನು ನನಿಗೇತಕ್ಕೊಪ್ಪಿಸಲೆಳಸುವಿ ನಿನ್ನನ್ನೂ ಅರ್ಜುನನನ್ನೂ ಹಿಡಿದುಕೊಂಡು ಹೋಗಿ ನಮ್ಮ ತಂತೆಯಾದ ಮಯೂರಧ್ವಜನ ಮುಂದಿಟ್ಟು ಅವನ ಅಶ್ವಮೇಧಯಾಗವಂ ಮಾಡಿಸುವೆನು, ನನ್ನ ಶಕ್ತಿಯನ್ನಾದರೂ ನೋಡೆಂದು ನುಡಿಯುತ್ತಾ ಕೃಷ್ಣನನ್ನು ಬಹಳವಾಗಿ ತಿರಸ್ಕರಿಸಿದನು. ॥೫೨॥ ಭೂಕಾಂತನಾದ

ರಣಾಗ್ರದೊಳ್ಮೆಲ್ವಾಯ್ದುತುಡುಕಿನಿಜ | ಕರವೊಂದರಿಂದೆರಡುಕೈಗಳಂಮತ್ತೊಂದುಹಸ್ತದಿಂಪದಯುಗವನು || ಹಿರಿದುಸತ್ವ ದೊಳೊತ್ತಿಪಿಡಿದೊಂದುಗೂಡಿಹರಿ | ಚರಣಮಂನೊಸಲೆಡೆಯೊಳಿಟ್ಟುತಾಮ್ರಧ್ವಜಂ | ಪರಿದನರ್ಜುನನಿದ್ದಬಳಿಗಾಗಿಸಾಹಸಕೆ ಮೂಜಗಂಬೆರಗಾಗಲು ||೫೩|| ಹಿಡಿಗಯ್ಯೊಳಿರ್ದಸುರರಿಪುಪಾರ್ಥನಂಕರೆದು | ತೊಡುಮಹಾಸ್ತ್ರವನೆಂದುನೇಮಿಸಲ್ಫಲುಗುಣಂ | ಫಡಯೆನುತಬಾಣಮಂಗಾಂಡೀವದೊಳ್ಪೂಡುವನ್ನೆಗಂಭರದೊಳೊದಗಿ || ತಡೆಗಾಲೊಳಾತನಂಕೆಡಹಿಭುಜಯುಗ್ಮಮಂ | ತೊಡರಿಕೊಂಡಪ್ಪಳಿಸಿನರಕೃಷ್ಣರೀರ್ವರಂ | ಮಿಡುಕಲೀಯದೆಬಿಗಿದುತಾಮ್ರಧ್ವಜಂಧರೆಗೆಬಿದ್ದನಗಧರನೊದೆಯಲು || ೫೪ || ಉದ್ದಂಡಭುಜಬಲದೊಳೋರ್ವರೋರ್ವರನೊತ್ತಿ | ಬಿದ್ದರಿಳೆಗಾಮೂವರುಂನೊಂದುಮೂರ್ಛೆಗೊಂ| ಡಿದ್ದರದರೊಳ್ಪಾರ್ಥಶೌರಿಗ

---

ಪದಯುಗವನು-ಕೃಷ್ಣಸ್ವಾಮಿಯ ಕಾಲ್ಗಳೆರಡನ್ನೂ, ಮತ್ತೊಂದುಹಸ್ತದಿಂ-ಬೇರೊಂದು ಕರದಿಂದಲೂ, ಹಿರಿದು ಸತ್ವದೊಳ್-ಅತ್ಯಧಿಕವಾದ ಶಕ್ತಿಯಿಂದ, ಒತ್ತಿಪಿಡಿದು-ಭದ್ರವಾಗಿ ಹಿಡಿದುಕೊಂಡು, ಒಂದುಗೂಡಿ-ಒಟ್ಟುಸೇರಿಸಿ, ಹರಿಚರಣಮಂ-ಕೃಷ್ಣನ ಕಾಲ್ಗಳನ್ನು, ನೊಸಲೆಡೆಯೋಳ್-ಹಣೆಯ ಹತ್ತಿರ, ಇಟ್ಟು-ಇಟ್ಟವನಾಗಿ, ಮೂಜಗಂ-ಮೂರು ಲೋಕದವರೆಲ್ಲ, ಸಾಹಸಕೆ-ತನ್ನ ಪರಾಕ್ರಮಕ್ಕೆ, ಬೆರಗಾಗಲು-ಅಚ್ಚರಿಯನ್ನೈದುವಂತೆ, ಅರ್ಜುನನು-ಫಲುಗುಣನು, ಇದ್ದ-ಇದ್ದಂಥ, ಬಳಿಗಾಗಿ-ಸ್ಥಳಕ್ಕೆ, ತಾಮ್ರಧ್ವಜಂ-ತಾಮ್ರಧ್ವಜನು, ಐದಿದಂ-ಹೊರಟವನಾದನು. || ೫೩ ||

ಟೀ|| ಹಿಡಿಗೈಯೊಳು-ತಾಮ್ರಧ್ವಜನ ಕೈಯಲ್ಲಿ, ಇರ್ದ-ಸಿಕ್ಕಿಕೊಂಡಿದ್ದ, ಅಸುರರಿಪು-ರಾಕ್ಷಸಾಂತಕನು, ಪಾರ್ಥನಂ-ಫಲುಗುಣನನ್ನು, ಕರೆದು-ಸಂಬೋಧಿಸಿ, ಮಹಾಸ್ತ್ರವನು-ದಿವ್ಯ ಬಾಣವನ್ನು, ತೊಡು - ಹೊಡೆ, ಎಂದು - ಎಂಬ ತೆರನಾಗಿ, ನೇಮಿಸಲು-ಆಜ್ಞೆಯಂ ಮಾಡಲು, ಫಲುಗುಣಂ-ಪಾರ್ಥನಾದರೊ, ಫಡ-ಛಿ, ಛೀ, ಎನುತ-ಎಂದು ಹೇಳುತ್ತ, ಗಾಂಡೀವದೊಳ್-ಧನುಸ್ಸಿನಲ್ಲಿ, ಬಾಣಮಂ-ಕಣೆಯನ್ನು, ಪೂಡುವ-ಸೇರಿಸುವ, ಅನ್ನೆಗಂ-ಒಳಗಾಗಿ, ಭರದೊಳ್-ತಡಮಾಡದೆ, ಒದಗಿ-ಪಾರ್ಥನಿದ್ದ ಕಡೆಗೆ ಹೋಗಿ, ಆತನಂ-ಕಿರೀಟಿಯನ್ನು, ತಡೆಗಾಲೊಳು-ಅಡ್ಡಕಾಲಿನಿಂದ, ಕೆಡಹಿ ಉರುಳಿಸಿ, ಭುಜಯುಗ್ಮಮಂ-ತೋಳ್ಗಳೆರಡನ್ನೂ, ತೊಡರಿಕೊಂಡು-ಒಂದು ಕೂಡಿಸಿ, ಅಪ್ಪರಿಸಿ-ಗಟ್ಟಿಯಾಗಿ ಅದುಮಿ, ನರಕೃಷ್ಣರೀರ್ವರಂ-ಕಿರೀಟಿಯೂ ಮುರಹರನೂ ಸಹ, ಮಿಡುಕಲೀಯದೆ-ಅಲ್ಲಾಡದಂತೆ, ಬಿಗಿದು-ಗಟ್ಟಿಯಾಗಿ ಹಿಡಿದು ಕೊಂಡಿರುವಾದ, ನಗಧರನು-ಗೋವರ್ಧನ ಗಿರಿಯನ್ನು ಎತ್ತಿದ ಕೃಷ್ಣನು, ಒದೆಯಲು - ಪಾದತಾಡನಮಂ ಗೈಯಲು, ತಾಮ್ರಧ್ವಜಂ-ತಾಮ್ರಧ್ವಜನಾದರೊ, ಧರೆಗೆ-ಭೂಮಿಯಮೇಲೆ ಬಿದ್ದಂ-ಬಿದ್ದುಬಿಟ್ಟನು. || ೫೪ ||

ಟೀ|| ಉದ್ದಂಡ ಭುಜಬಲದೊಳು-ಸತ್ವಾತಿಶಯದಿಂದ, ಓರ್ವರು-ಒಬ್ಬರು, ಓರ್ವರಂ-ಮತ್ತೊಬ್ಬರನ್ನು, ಒತ್ತಿ-ಮುಷ್ಟಿಯಿಂದ ಅದುಮಿ, ಆಮೂವರುಂ-ಕೃಷ್ಣಾರ್ಜುನ ತಾಮ್ರಧ್ವಜರು, ಇಳೆಗೆ ಬಿದ್ದರು-ಭೂಮಿಯಮೇಲೆಬಿದ್ದು ಹೋದರು, ಅದರೋಳ್-ಆ ಮೂರು ಮಂದಿಯಲ್ಲಿ, ಪಾರ್ಥಶೌರಿಗಳ್-ಕಿರೀಟಿಯೂ ಕೃಷ್ಣಸ್ವಾಮಿಯೂ ಸಹ, ನೊಂದು-ಸಂಕಟಪಟ್ಟು, ಮೂರ್ಛೆಗೊಂಡಿದ್ದರು-ಎಚ್ಚರವೇ ಇಲ್ಲದೆ ಬಿದ್ದುಹೋಗಿದ್ದರು, ತಾಮ್ರಧ್ವಜಂ-ತಾಮ್ರಧ್ವಜನಾದರೊ, ಬಳಿಕ-ಅನಂತರ, ಸತ್ವದಿಂದ-ಶಕ್ತ್ಯತಿಶಯದಿಂದ, ಎದ್ದು-ಎದ್ದವನಾಗಿ, ಅಲ್ಲಿ-ಆ ರಣಭೂಮಿಯೊಳಗೆಲ್ಲಾ, ನೋಡಿದನು-ನಿರೀಕ್ಷಿಸಿದನು, ತನ್ನೊಡನೆ-ತನ್ನ ಜತೆಯಲ್ಲಿ, ಕಾಳಗಕೆ ಹೊದ್ದುವ-ಕೆಣಕಿಕೊಂಡು ಬರತಕ್ಕ, ಅಧಟರ್-ವೀರರಾದ, ಆರನುಂ-ಯಾರೊಬ್ಬರನ್ನೂ, ಕಾಣದೆ-ಕಾಣದೆ ಹೋದ್ದಕ್ಕಾಗಿ, ಎಲ್ಲರಂ-ಅಶೇಷರನ್ನೂ, ಗೆದ್ದು-ಸೋಲಿಸಿದವನಾಗಿ, ಎರಡುಕುದುರೆಯಂ-ತನ್ನ ಮತ್ತು ಅರ್ಜುನನ ಯಜ್ಞಾಶ್ವಂಗಳನ್ನು, ಕೊಂಡು-ಜೊತೆಮಾಡಿಕೊಂಡು, ನಿಜನಗರಿಗೆ-ತನ್ನ ಪಟ್ಟಣವಾದ ರತ್ನಪುರಿಗೆ, ಉಳಿದಪಡೆಸಹಿತ-ಮಿಕ್ಕ ದಂಡಿನೊಂದಿಗೆ, ಐತಂದನು-ಬಂದು ಸೇರಿದನು || ೫೫ ||

---

ಜನಮೇಜಯನೆ ಕೇಳು, ಈರೀತಿಯಲ್ಲಿ ಕೃಷ್ಣನನ್ನು ಜರಿಯುತ್ತಾ ಅಲ್ಲಿಗೆ ಓಡಿಬಂದು ತನ್ನ ಒಂದು ಕೈಯಿಂದ ಅವನ ಕರಗಳೆರಡನ್ನೂ, ಮತ್ತೊಂದು ಹಸ್ತದಿಂದ ಅವನ ಎರಡು ಕಾಲುಗಳನ್ನೂ ಹಿಡಿದು ತಲೆಯಮೇಲೆ ಸೇರಿಸಿ, ಭದ್ರವಾಗಿ ಅಮುಕಿ ಅಲ್ಲಿಂದ ಅರ್ಜುನನಿದ್ದೆಡೆಗೆ ಓಡಿಬರಲು ಈ ತಾಮ್ರಧ್ವಜನ ಸಾಹಸವನ್ನು ನೋಡಿ ಮೂರು ಲೋಕವೂ ಬೆರಗಾಯಿತು || ೫೩ || ತಾಮ್ರಧ್ವಜನಿಂದ ಬಂಧಿಸಲ್ಪಟ್ಟಿದ್ದ ಕೃಷ್ಣನು ಎಲೈ ಅರ್ಜುನನೆ, ಜಾಗ್ರತೆಯಾಗಿ ಧನುಸ್ಸಿಗೆ ಬಾಣವಂ ಹೂಡಿ ತಾಮ್ರಧ್ವಜನನ್ನು ಹೊಡೆಯೆಂದು ಕೂಗಿದನು. ಈ ಸುದ್ದಿ ಫಲುಗುಣನಿಗೆ ಕೇಳಿಸಿದಕೂಡಲೆ ಕೋಪದಿಂದ ಧನುರ್ಬಾಣಗಳನ್ನು ನೇವರಿಸುವದರೊಳಗಾಗಿ ಪಾರ್ಥನೆಡೆಗೆ ತಾಮ್ರಧ್ವಜನು ಓಡಿಬಂದು ಅವನ ಕಾಲಿನೊಳಗೆ ತನ್ನ ಪಾದವನ್ನು ಸೇರಿಸಿ ನೆಲಕ್ಕೆ ಕೆಡಹಿ ಅವನ ಕೈಕಾಲುಗಳನ್ನು ಕಟ್ಟಿ ಕೃಷ್ಣನೊಂದಿಗೆ ಸೇರಿಸಿದನು ಆಗ ಕೃಷ್ಣಸ್ವಾಮಿಯು ತಾಮ್ರಧ್ವಜನನ್ನು ಬಲವಾಗಿ ಒದೆಯಲು ತಾಮ್ರಕೇತುವು ನೆಲದಮೇಲೆ ಉರುಳಿಕೊಂಡು ಮೂರ್ಛೆಹೋಗಿ ಮತ್ತೆ ಚೇತರಿಸಿಕೊಂಡವನಾಗಿ || ೫೪ || ಮೇಲಕ್ಕೆದ್ದನು.

ಕ್ಷೀಕತಾಮ್ರಧ್ವಜಂಸತ್ವದಿಂದ ‖ ಎದ್ದುನೋಡಿದನಲ್ಲಿತನ್ನೊಡನೆಕಾಳಗಕೆ | ಹೊದ್ದುವಭಟರನಾರನುಂಕಾಣದಲ್ಲರಂ | ಗೆದ್ದೆರಡುಕುದುರೆಯುಂಕೊಂಡುಳಿದಪಡೆಸಹಿತನಿಜನಗರಿಗೈತಂದನು ‖ ೫೫ ‖ ಪಟ್ಟಣದಪೊರವಳೆಯದೊಳ್ಚಿತ್ರಮಯಮಾಗಿ | ಕಟ್ಟಿದಧ್ವರಮುಂಟಪದನಡುವೆದೀಕ್ಷೆಯುಂ | ನೆಟ್ಟನೆಪರಿಗ್ರಹಿಸಿಭೂಸುರರವೆರಸಿಕುಳ್ಳಿರ್ದಪಿತನೆಡೆಗೆಬಂದು ‖ ಮುಟ್ಟಿಚರಣಂಗಳಂ ಸಾಷ್ಟಾಂಗದಿಂದಪ್ರೊಡ | ಮಟ್ಟುತಾಮ್ರಧ್ವಜಂಕೈಮುಗಿದುತರಿಸಿಮುಂ | ದಿಟ್ಟನೆರಡಶ್ವಂಗಳಂಬಳಿಕಶಿಖಿಕೇತನಂದನಂಗಿಂತೆಂದನು ‖ ೫೬ ‖ ವತ್ಸರಂತುಂಬದೇತಕೆತಿರುಗಿತೀಹಯಂ | ವತ್ಸಹೇಳಿದರೊಡನೆಮತ್ತೊಂದುವಾಜಿಬಲ | ವತ್ಸಮರಮುಖದಿಂದಜಯಿಸಿತಂದಿರ್ದಪುದಿದೆತ್ತಣದುನಿನಗಿಳೆಯೊಳು ‖ ಮತ್ಸರದಕದನಮಿಂದಾವಭೂಪನೊಳಾಯ್ತು | ಮತ್ಸಮೀಪಕೆಬಂದಹದನಾವುದೆಂದುಶ್ರೀ | ಮತ್ಸಭಾಮಧ್ಯದೊಳ್ನಸುನಗುತತನಯನಂಬೆಸಗೊಂಡನು ‖ ೫೭ ‖ ಚಿತ್ತೈಸುತಾತನೃಪವರಯುಧಿಷ್ಠಿರನಮಖ | ದತ್ತವಿತುರಂಗಮಿದುರಕ್ಷೆಗರ್ಜುನಕೃಷ್ಣ | ರಿತ್ತಂಡಮುಂಪಡೆವೆರಸಿಬಂದೊಡಾನದಂ ಕಟ್ಟಿದರೆತನಗವರೊಳು ‖ ತತ್ತುದಾಹವೆಂದುನಿಜಸುತಂಬಿನ್ನೈಸೆ | ಮತ್ತೆ ಸಂಶಯದಿಂದಭೂಪಾಲಕಂತನ್ನ | ಹತ್ತಿರಿಹನಿಜಮಂತ್ರಿನಕುಲಕೇತುವನೀಕ್ಷಿಸಲ್ಕಾತನಿಂತೆಂದನು ‖ ೫೮ ‖ ಜೀಯಪುಸಿಯಲ್ಲಪಾಂಡವರಾಯನಶ್ವಮುಂ | ಕಾಯಬಂದಿಹಬಭ್ರುವಾಹನಾದಿಗಳನೊ | ತ್ತಾಯದಿಂದೆ

ಟೀ|| ತಾಮ್ರಧ್ವಜಂ-ತಾಮ್ರಧ್ವಜನಾದರೊ, ಪಟ್ಟಣದ-ನಗರದ, ಪೊರವಳಯದೊಳ್-ಹೊರಗಡೆಯಲ್ಲಿ, ಚಿತ್ರಮಯಮಾಗಿ-ಬಹಳ ಅಂದವಾಗಿ, ಕಟ್ಟಿದ-ನಿರ್ಮಿಸಿದ್ದ, ಅಧ್ವರಮುಂಟಪದನಡುವೆ-ಯಾಗಶಾಲೆಯ ಮಧ್ಯಭಾಗದೊಳಗೆ. ನೆಟ್ಟನೆ-ನೇರವಾಗಿ, ದೀಕ್ಷೆಯಂ-ದೀಕ್ಷೆಯನ್ನು, ಪರಿಗ್ರಹಿಸಿ-ಸ್ವೀಕರಿಸಿದವನಾಗಿ, ಭೂಸುರರ್ವೆರಸಿ-ವಿಪ್ರವರ್ಯರೊಂದಿಗೆ, ಕುಳ್ಳಿರ್ದ-ಕುಳಿತುಕೊಂಡಿರತಕ್ಕ, ಪಿತನೆಡೆಗೆ-ತಂದೆಯ ಸಮೀಪಕ್ಕೆ, ಬಂದು-ಬಂದವನಾಗಿ, ಚರಣಂಗಳಂಮುಟ್ಟಿ - ಅಡಿದಾವರೆಗಳಂ ಮುಟ್ಟಿದವನಾಗಿ, ಸಾಷ್ಟಾಂಗದಿಂ ಪೊಡಮಟ್ಟು-ದಂಡಪ್ರಮಾಣವನ್ನರ್ಪಿಸಿ, ಕೈಮುಗಿದು ಕರಗಳಂ ಒಟ್ಟುಸೇರಿಸಿಕೊಂಡು, ಎರಡಶ್ವಗಳ-ಹಯಂಗಳೆರಡನ್ನೂ, ತರಿಸಿ-ಬರಮಾಡಿ, ಮುಂದೆ-ಮಯೂರಧ್ವಜನಿಗಿದಿರಾಗಿ, ಇಟ್ಟನು-ನಿಲ್ಲುವಂತೆ ಮಾಡಿದನು, ಬಳಿಕ-ಹೀಗಾದಮೇಲೆ, ನಂದನಂಗೆ-ತನ್ನ ಕುಮಾರನಾದ ತಾಮ್ರಧ್ವಜನೊಂದಿಗೆ, ಶಿಖಿಕೇತು-ಮಯೂರಧ್ವಜನು, ಇಂತು-ಮುಂದೆ ಹೇಳುವಂತೆ, ಎಂದನು-ನುಡಿದನು ‖ ೫೬ ‖

ಟೀ|| ವತ್ಸ-ಕುವರನಾದ ತಾಮ್ರಕೇತುವೇ, ಈ ಹಯಂ-ಈ ನಮ್ಮ ಯಜ್ಞಾಶ್ವವು, ವತ್ಸರಂತುಂಬದೆ-ವರ್ಷ ಮುಗಿಯುವುದಕ್ಕೆ ಮೊದಲೆ, ಏತಕೆ-ಯಾವಕಾರಣದಿಂದ, ತಿರುಗಿತು-ಹಿಂದಕ್ಕೆ ಬಂದು ಬಿಟ್ಟಿತು, ಹೇಳು-ಹೇಳುವನಾಗು, ಬಲವತ್-ವೀರಾಗ್ರೇಸರರ, ಸಮರಮುಖದಿಂದ-ಯುದ್ಧದ ಕತದಿಂದ, ಜಯಿಸಿ-ಸೋಲಿಸಿ, ತಂದಿರ್ದುದು-ತೆಗೆದುಕೊಂಡು ಬಂದಿರತಕ್ಕ, ಇದರೊಡನೆ-ನಮ್ಮ ಕುದುರೆಯೊಂದಿಗಿರುವ, ಮತ್ತೊಂದುಹಯ-ಬೇರೊಂದು ವಾಜಿಯು, ಇದು-ಈ ಹಯವು, ಎತ್ತಣದು-ಎಲ್ಲಿ ದೊರೆಯಿತು, ಇಂದ.-ಈಗ ನಿನಗೆ-ನಿನಿಗಾದರೊ, ಮತ್ಸರದ ಕದನಂ-ದ್ವೇಷದಿಂದ ಕೂಡಿದ ಜಗಳವು, ಇಳೆಯೊಳ್-ಭೂಮಂಡಲದಲ್ಲಿ, ಆವಭೂಪನೊಳ್-ಯಾವರಾಜನೊಂದಿಗೆ, ಆಯ್ತು-ಸಿದ್ಧಿಸಿತು, ಮತ್ಸಮೀಪಕೆ-ನನ್ನ ಹತ್ತಿರಕ್ಕೆ, ಬಂದ-ಬಂದಂಥ, ಹದನು-ಕಾರಣವು, ಆವುದು-ಯಾವದಾಗಿದೆ, ಎಂದು-ಎಂಬ ತೆರನಾಗಿ, ಶಿಖಿಕೇತು-ಮಯೂರಧ್ವಜನು, ಶ್ರೀಮತ್-ಐಶ್ವರ್ಯಯುಕ್ತವಾದ, ಸಭಾಮಧ್ಯದೊಳ್-ಒಡ್ಡೋಲಗದ ನಡುವೆ, ನಸುನಗುತ-ಮುಗುಳ್ನಗೆಯನ್ನೈದುತ್ತ, ತನಯನಂ-ತನ್ನ ಕುವರನನ್ನು, ಬೆಸಗೊಂಡನು-ಕೇಳಿದವನಾದನು ‖ ೫೭ ‖

ಟೀ|| ತಾತ-ಎಲೈ ಪಿತನೆ, ಚಿತ್ತೈಸು-ಸಾವಧಾನಚಿತ್ತನಾಗಿ ಕೇಳು, ಇದು-ನಿನ್ನೆದುರಿಗಿರುವ ಅಶ್ವವು, ನೃಪವರ-

ಕೃಷ್ಣಾರ್ಜುನರು ಎಚ್ಚರಿಕೆಯೇ ಇಲ್ಲದೆ ಬಿದ್ದುಹೋದರು ಆ ಬಳಿಕ ತಾಮ್ರಧ್ವಜನು ತನ್ನಮೇಲೆ ಯುದ್ಧಕ್ಕೆ ನಿಲ್ಲುವರಾರನ್ನೂ ಕಾಣದೆ ಎರಡಶ್ವಂಗಳ ಸಹಿತನಾಗಿ ಉಳಿದ ಪರಿವಾರ ಸಹಿತ ರತ್ನಪುರಿಯಕಡೆಗೆ ಸಂಭ್ರಮದಿಂದ ನಡೆದು ‖ ೫೫ ‖ ಊರ ಬಳಿಗೆ ಬಂದು ಹೊರಭಾಗದಲ್ಲಿ ಅಲಂಕಾರವಾಗಿ ಕಟ್ಟಿದ್ದ ಯಜ್ಞಮಂಟಪದಲ್ಲಿ ದೀಕ್ಷಾಬದ್ಧನಾಗಿ ಋತ್ವಿಕ್ಪುರೋಹಿತಾದಿ ಭೂಸುರೋತ್ತಮರಿಂದೊಡಗೂಡಿರುವ ತನ್ನ ತಂದೆಯ ಬಳಿಗೆಬಂದು ದೀರ್ಘದಂಡಪ್ರಣಾಮಂಗಳನ್ನರ್ಪಿಸಿ, ತನ್ನ ಕರಪಲ್ಲವಂಗಳಂ ಜೋಡಿಸಿ ಎದುರಿಗೆನಿಂತು ತಾನು ತಂದಿರುವ ಅಶ್ವಗಳೆರಡನ್ನೂ ಮಯೂರಧ್ವಜನ ಮುಂದಿರಿಸಿ ಸ್ತಬ್ಧನಾಗಿ ನಿಂತನು|| ೫೬ ||
ಆಗ ಮಯೂರಧ್ವಜನು ತನ್ನ ಕುವರನಾದ ತಾಮ್ರಕೇತುವನ್ನು ಕುರಿತು ಎಲೈ ಸುತನೆ, ಯಜ್ಞಾಶ್ವದ ಬೆಂಗಾವಲ್ಗೆ ಹೋದವನು ವರ್ಷ ತುಂಬುವುದಕ್ಕೆಮೊದಲೆ ಕುದುರೆಯೊಂದಿಗೆ ಹಿಂದಿರುಗಿ ಬಂದಿರುವದಕ್ಕೆ ಕಾರಣವೇನು ? ನೀನು ತಂದಿರುವ ಮತ್ತೊಂದು ಕುದುರೆಯಾವದು, ಯಾವ ರಾಜನೊಂದಿಗ ನಿನಿಗ ಯುದ್ಧವು ಒದಗಿತು. ನೀನು ಬಂದ ಕಾರಣವೇನೆಂದು ಕೇಳಲು ‖ ೫೭ ‖
ತಾಮ್ರಧ್ವಜನು ತನ್ನ ತಂದೆಯನ್ನು ಕುರಿತು ಎಲೈ ಜನಕನೆ ಕೇಳು ಲೋಕದಲ್ಲಿರುವ ದೊರೆಗಳಲ್ಲಿ ಹೆಸರುವಾಸಿಯಾದ ಧರ್ಮ

ಲ್ಲರಂಸದೆಬಡಿದುರುಳ್ಚಿಬಳಿಕ್ಕೈದೆಕೃಷ್ಣಾರ್ಜುನರನು ‖ ಸಾಯದಂತೆಡಗೆಡಹಿಪಿಡಿದುಬಿಟ್ಟೊಡನೆಕೌಂ | ತೇಯನಮಹಾಧ್ವರದ ವಾಜಿಯಂಕೊಂಡುತಾ | ನೋಯದೈತಂದನೆನೆಮರುಗುತಮಯೂರಧ್ವಜಂಮಂತ್ರಿಗಿಂತೆಂದನು ‖ ೫೯ ‖ ಅಕಟಕೆಡಿಸಿದನಲಾ ಕಾರ್ಯಮಂನಮಗಿದೇ | ತಕೆಯಜ್ಞಮಿನ್ನುನಮಗೀಮಗಂಪಗೆಯಾದ | ಸ್ವಕರಸ್ಥನಾದಹರಿಯಂಬಿಟ್ಟುಕಟ್ಟಿದಂಗರ್ಧಭಾಕೃತಿಹರಿ ಯನು ‖ ವಿಕಳಮತಿಯಾಗಿರ್ದನೀತನೇವೇಳ್ವೆನು | ತ್ಸುಕದಿಂದಲೊಡಗೂಡಿಮುಂಚದೋಳ್ಪ್ರಾಣನಾ | ಯಕನಿರಲ್ಕೆಂದೊರ

---

ರಾಜೇಂದ್ರನಾದ, ಯುಧಿಷ್ಠಿರ–ಧರ್ಮಪುತ್ರನು ಮಾಡಬೇಕೆಂದಿರುವ, ಮಖ – ಅಶ್ವಮೇಧಯಾಗದ, ತುರಂಗಂ – ಹಯವು, ಅರ್ಜುನಕೃಷ್ಣರು – ಕೃಷ್ಣಾರ್ಜುನರೆಂಬೀರ್ವರೂ, ಇತ್ತಂಡಮುಂ – ಇದರ ಇಕ್ಕೆಲಗಳಲ್ಲಿಯೂ, ಪಡೆವೆರಸಿ – ಚತುರಂಗ ಬಲದೊಂದಿಗೆ, ಆಕುದುರೆಯಪಾಲನೆಗೆ–ಆ ಅಶ್ವರಕ್ಷಣಗೆ, ಬಂದೊಡೆ–ಬಂದು ನೆರೆದದ್ದರಿಂದ, ಅದಂ–ಆ ಹಯವನ್ನು, ಅಂ–ನಾನು, ಕಟ್ಟಿದರೆ–ಬಿಗಿದದ್ದರಿಂದ; ಅವರೊಳು–ಅವರಿಬ್ಬರೊಡನೆ, ತನಿಗೆ–ನನಿಗಾದರೊ, ಆಹವಂತತ್ತುದು–ಕಾಳಗವಾಯಿತು, ಎಂದು – ಎಂಬತೆರನಾಗಿ, ನಿಜಸುತಂ – ತನ್ನ ಕುವರನು, ಬಿನ್ನೈಸೆ – ಅರಿಕೆಮಾಡಿಕೊಳ್ಳಲು, ಭೂಪಾಲಕಂ–ಮಯೂರಧ್ವಜ ನಾದರೊ, ಸಂಶಯದಿಂದ–ಅನುಮಾನದಿಂದ, ತನ್ನಹತ್ತಿರಿಹ–ತನಗೆ ಸಮೀಪದಲ್ಲಿ ನಿಂತಿರತಕ್ಕ, ನಿಜಮಂತ್ರಿ–ಅಮಾತ್ಯನಾದ, ನಕುಲಕೇತುವನು – ನಕುಲಧ್ವಜನನ್ನು, ಮತ್ತೆ–ತಿರುಗಿ, ಈಕ್ಷಿಸಲ್ಕೆ – ನಿರುಕಿಸಲು, ಆತನು–ಆ ಸಚಿವನು, ಇಂತು – ಮುಂದೆ ಹೇಳುವಂತೆ, ಎಂದನು–ನುಡಿದನು. ‖೫೮‖

ಟೀ‖ ಜೀಯ–ಪ್ರಭುವಾದ ಮಯೂರಧ್ವಜನೆ, ಪುಸಿಯಲ್ಲ–ತಾಮ್ರಧ್ವಜನ ಮಾತು ಸುಳ್ಳೆಂದು ಯೋಚಿಸಕೂಡದು, ಪಾಂಡವರಾಯನ – ಯುಧಿಷ್ಠಿರನ, ಅಶ್ವಮುಂ – ಹಯವನ್ನು, ಕಾಯಬಂದಿಹ – ಸಂರಕ್ಷಿಸಲು ಬಂದಿರತಕ್ಕ, ಬಭ್ರುವಾಹ ನಾದಿಗಳನು–ಪಾರ್ಥಜನೆ ಮೊದಲಾದ ವೀರರನ್ನೂ, ಎಲ್ಲರಂ–ಅವರ ಸಕಲ ಪರಿವಾರವನ್ನೂ, ಬಿತ್ತಾಯದಿಂದ–ಶೌರ್ಯಾತಿಶಯ ದಿಂದ, ಸದೆಬಡಿದು–ದಂಡಿಸಿ, ಉರುಳ್ಚಿ–ಕೆಳಗೆ ಬೀಳುವಂತೆ ಮಾಡಿ, ಬಳಿಕ–ಅನಂತರ, ಕೃಷ್ಣಾರ್ಜುನರನು–ಮುರಹರ ಇಂದ್ರ ಸೂನುಗಳನ್ನು, ಐದೆ–ಚನ್ನಾಗಿ, ಸಾಯದಂತೆ – ಪ್ರಾಣಗಳನ್ನು ಹೋಗಲಾಡಿಸಿಕೊಳ್ಳದಂತೆ, ಎಡೆಗೆಡಹಿ – ಭೂಮಿಯ ಮೇಲೆ ಬೀಳುವಂತೆ ಮಾಡಿ, ಪಿಡಿದು–ಅವರೀರ್ವರನ್ನೂ ಹಿಡಿದುಕೊಂಡು, ಬಿಟ್ಟು–ಪುನಃ ಅವರನ್ನು ಬಿಟ್ಟುಬಿಟ್ಟು, ಕೌಂತೇಯನ–ಧರ್ಮರಾಯನ, ಮಹಾಧ್ವರವಾಜಿಯಂ–ಶ್ರೇಷ್ಠವಾದ ಯಜ್ಞಾಶ್ವವನ್ನು, ಕೊಂಡು–ಪಿಡಿದವನಾಗಿ, ನೋಯದೆ–ನಿರಾಯಾಸ ವಾಗಿ. ತಾ – ನಿನ್ನ ಕುವರನಾದ ತಾಮ್ರಕೇತುವು, ಐತಂದನು – ಬಂದುಬಿಟ್ಟನು, ಎನೆ – ಎಂದು ನಕುಲಧ್ವಜನು ತಿಳಿಸಲು, ಮಯೂರಧ್ವಜನು–ರತ್ನಪುರಿಯ ರಾಜನು, ಮರುಗುತ–ವ್ಯಸನಾಕ್ರಾಂತನಾಗಿ, ಇಂತು–ಮುಂದೆ ಹೇಳುವಂತೆ, ಮಂತ್ರಿಗೆ–ತನ್ನ ಮುಖ್ಯ ಸಚಿವನಿಗೆ, ಎಂದನು–ಹೇಳಿದನು. ‖೫೯‖

ಟೀ‖ ಅಕಟ–ಅಯ್ಯೊ, ಕಾರ್ಯಮುಂಕೆಡಿಸಿದನಲಾ – ಕೆಲಸವು ಕೆಟ್ಟು ಹೋಗುವಂತೆ ಮಾಡಿಬಿಟ್ಟನಲ್ಲವೇ, ನಮಗೆ–ನಮಿಗಾದರೊ, ಯಜ್ಞಂ–ಅಶ್ವಮೇಧಯಾಗವು, ಏತಕೆ–ಏನು ಪ್ರಯೋಜನವು, ಪಗೆಯಾದ–ವೈರಿಯಾದ, ಮಗಂ–ಕುವರನು, ಸ್ವಕರಸ್ಥನಾದ – ಕೈಗೆ ಸಿಕ್ಕಿದ್ದ, ಹರಿಯಂ – ಕೃಷ್ಣಮೂರುತಿಯನ್ನು, ಬಿಟ್ಟು – ಬಿಟ್ಟವನಾಗಿ, ಗರ್ಧಭಾಕೃತಿ – ಕತ್ತೆಯನ್ನು

---

ರಾಯನು ಬಿಟ್ಟಿರುವ ಯಜ್ಞಾಶ್ವವೇ ಇದು, ಇದರ ಬೆಂಗಾವಲ್ಗೆ ಕೃಷ್ಣಾರ್ಜುನಾದಿಗಳೆಲ್ಲಾ ಬಂದಿರುವರು ನಾನು ಆ ಕುದುರೆ ಯನ್ನು ಕಟ್ಟಿ ಹಾಕಿದ್ದರಿಂದ ನನಿಗೆ ಅವರೊಂದಿಗೆ ಘೋರಯುದ್ಧವುಂಟಾಗಿ ಅವರನ್ನು ಸೋಲಿಸಿ ಕುದುರೆಯನ್ನು ತಂದು ನಿನಿ ಗೊಪ್ಪಿಸಿರುವೆನೆಂದು ನುಡಿದನು ಈ ಮಾತನ್ನು ಕೇಳಿದ ಮಯೂರಧ್ವಜನು ಅನುಮಾನದಿಂದ ಪಕ್ಕದಲ್ಲಿದ್ದ ನಕುಲಧ್ವಜನನ್ನು ಪ್ರಶ್ನಿಸಲು, ಆಗ ಆ ಮಂತ್ರಿಯು ರಾಜನನ್ನು ನೋಡಿ ‖ ೫೮ ‖ ಎಲೈ ಅರಸೇ, ತಾಮ್ರಧ್ವಜನ ಮಾತು ಹುಸಿಯಲ್ಲವು ಯುಧಿ ಷ್ಠಿರನ ಯಜ್ಞಾಶ್ವದಿಂದೊಡಗೂಡಿದ ಅರ್ಜುನನೂ ಅವನ ಬೆಂಗಾವಲಿಗಾಗಿ ಶ್ರೀ ಕೃಷ್ಣನೂ ಬಭ್ರುವಾಹನ ಹಂಸಧ್ವಜ ನೀಲ ಧ್ವಜಾದಿ ರಾಜಾಧಿರಾಜರೂ ತಾಮ್ರಧ್ವಜನನ್ನು ಎದುರಿಸಿದರು, ಪಾರ್ಥಜನೆ ಮೊದಲಾದವರನ್ನೆಲ್ಲಾ ನೆಲಕ್ಕೆ ಕೆಡಹಿ ಕೃಷ್ಣಾರ್ಜುನ ರನ್ನೂಬಹಳವಾಗಿ ಘಾತಿಸಿ ಅವರೀರ್ವರ ಕೈಕಾಲುಗಳನ್ನೂಕಟ್ಟಿಹಾಕಿ ಕುದುರೆಯನ್ನುಹಿಡಿತಂದು ಪ್ರಭುವಾದ ನಿನ್ನಸನ್ನಿಧಿಯಲ್ಲಿ ಅರ್ಪಣೆಯಂ ಮಾಡಿರುವನು ಎಂದನು. ಈ ಮಾತನ್ನುಕೇಳಿದ ಕೂಡಲೆ ಮಯೂರಧ್ವಜನು ಬಹಳವಾಗಿ ವ್ಯಸನಗೊಂಡು ಸಚಿವೇಂ ದ್ರನಂ ಕುರಿತು‖೫೯‖ ಅಯ್ಯೋ ಮಂತ್ರಿಯೇ ಈ ತಾಮ್ರಧ್ವಜನು ಕೆಲಸವನ್ನು ಕೆಡಿಸಿಬಿಟ್ಟನಲ್ಲಾ, ಇನ್ನು ಯಜ್ಞವೇತಕ್ಕೆ? ಕೈಗೆ

ಗಿದಧಮಾಂಗನೆಯವೊಲೆಂದವನಿಪಂಬಿಸುಸುಯ್ದನು॥೬೦॥ಮತ್ತೆಸುತನಂನೋಡಿಬೈದನೆಲವೆಲವೊಪೋ|ಗತ್ತನಿನ್ನಂಮಾಳ್ಪುದೇನ
ಮಲತುಲಸಿಯಂ| ಪೊತ್ತಿಪಿಡಿದಬ್ಜಮಂಮಾಣ್ದುಪರಿಮಳದಕುಸುಮದತೊಡವಗಟ್ಟುವಂತೆ॥ಉತ್ತಮವಿದೆಂದುಕೃಷ್ಣಾರ್ಜುನರ
ಬಿಟ್ಟುತಂ|ದಿತ್ತೆತುರಗಂಗಳಂಸಾಕಿನ್ನುಯಜ್ಞಮವ|ರೆತ್ತಲಿರ್ದಪರೆಂಬುದಂಪೇಳ್ದೊಡುಳುಹಿದವನೆಂದುಭೂಪತಿಸುಯ್ದನು॥೬೧॥
ಕಡೆಯಾದುದಧ್ವರಕೆಸಾಕಿನ್ನುತುರಗಮಂ| ಪೊಡೆಯೆತ್ತಲಾದೊಡಂಮುರಮಥನಪಾರ್ಥರಾ | ವೆಡೆತನಗದಂತೋರವೇಳ್ಪುದೆಂದಾ
ಮಯೂರಧ್ವಜಂಮರುಗಿಮರುಗಿ ॥ ಬಿಡದೆನಿಜತನಯನಂಬೈದುಗರ್ಜಿಸಿತನ್ನ | ಮಡದಿಸಹಿತಿರುತಿರ್ದನಾದಿನಂದೇವಪುರ |

---

ಹೋಲುವ, ಹರಿಯನ್ನು – ಅಶ್ವವನ್ನು, ಕಟ್ಟಿದಂ – ಕಟ್ಟಿಹಾಕಿದನು, ಈತನು–ಈ ನನ್ನ ಸುತನು, ಮಂಚದೊಳ್‌-ಮಂಚದ ಮೇಲೆ, ಪ್ರಾಣನಾಯಕಂ – ಗಂಡನು, ಉತ್ಸುಕದಿಂದ – ಅತ್ಯಾಸಕ್ತಿಯಿಂದ, ಒಡಗೂಡಿ - ನೆರೆದು, ಇರಲ್ - ಇರಲಾಗಿ, ಮರೆದು – ಮರೆತುಬಿಟ್ಟು, ಒರಗಿದ - ನಿದ್ರಿಸುವ, ಅಧಮಾಂಗನೆಯ, ಓಲ್ – ದುಷ್ಟಸ್ತ್ರೀಯ ಹಾಗೆ, ವಿಕಳಮತಿಯಾಗಿ–ವಿವೇಕಶೂನ್ಯನಾಗಿ, ಇರ್ದನು - ಇದ್ದವನಾದನು, ಏವೇಳ್ವೆನು-ಏನೆಂದು ನುಡಿಯಲಿ, ಎಂದು - ಎಂಬತೆರನಾಗಿ ಹೇಳುತ್ತಾ, ಅವನಿಪಂ – ಭೂಕಾಂತನಾದ ಮಯೂರಧ್ವಜನು, ಬಿಸುಸುಯ್ದನು – ಬಹಳವಾಗಿ ವ್ಯಸನವನ್ನೈದಿದನು. ॥೬೦॥

ಟೀ॥ ಸುತನಂ - ಕುವರನನ್ನು, ಮತ್ತೆ – ತಿರುಗಿ, ಬೈಯ್ದನು – ದೂಷಿಸಿದನು, ಎಲವೆಲವೊ - ಎಲೈ ತಾಮ್ರಧ್ವಜನೆ, ಅತ್ತಪೋಗು – ಆಚೆಗೆ ನಡೆ ನಡೆ, ನಿನ್ನಂ – ಕೈಗೆಸಿಕ್ಕಿದ್ದ ಕೃಷ್ಣಮೂರುತಿಯನ್ನು ಬಿಟ್ಟು ಬಂದಿರುವ ನಿನ್ನನ್ನು, ಮಾಡುವದೇನು – ಏನುತಾನೆ ಮಾಡಲಾದೀತು, ಅಮಲ - ಪವಿತ್ರವಾದ, ತುಲಸಿಯಂ – ತುಲಸಿಯನ್ನು, ಒತ್ತಿಪಿಡಿದ–ಒತ್ತಿ ಹಿಡಿದುಕೊಂಡಿರತಕ್ಕ, ಅಬ್ಜಮಂ – ತಾವರೆಯನ್ನು, ಮಾಣ್ದು - ತ್ಯಜಿಸಿ, ಪರಿಮಳದ - ಸುವಾಸನೆಯನ್ನು ಕೊಡುವ, ಕುಸುಮದ – ಪುಷ್ಪದ, ತೊಡವ - ಮಾಲಿಕೆಯನ್ನು, ಕಟ್ಟುವಂತೆ – ಕಟ್ಟುವತೆರನಾಗಿ, ಕೃಷ್ಣಾರ್ಜುನರ - ಶ್ರೀ ಕೃಷ್ಣ ಧನಂಜಯರನು, ಬಿಟ್ಟು - ಉಳಿದು, ಇದು - ಈ ಆಶ್ವವು, ಉತ್ತಮವು – ಮೇಲಾದದ್ದು, ಎಂದು - ಎಂಬತೆರನಾಗಿ ಯೋಚಿಸಿ, ತುರಗಂಗಳಂ - ವಾಜಿಗಳೆರಡನ್ನೂ, ತಂದಿತ್ತೆ - ತಂದುಕೊಟ್ಟಿರುವಿ, ಯಜ್ಞಂ – ಅಶ್ವಮೇಧಯಾಗವು, ಇನ್ನುಸಾಕು–ಇಷ್ಟೇ ಸಾಕಾಗಿದೆ, ಅವರು – ಆ ಕೃಷ್ಣಪಾರ್ಥರು, ಎತ್ತಲ್ - ಯಾವೆಡೆಯಲ್ಲಿ, ಇರ್ದಪರು - ಇದ್ದಾರೆ, ಎಂಬುದಂ–ಎನ್ನುವುದನ್ನು, ಪೇಳ್ದೊಡೆ - ತಿಳಿಸಿದರೆ, ಉಳುಹಿದವನು – ಬದುಕಿಸಿದವನಾಗುತ್ತೀಯೆ, ಎಂದು – ಎಂಬುದಾಗಿ, ಭೂಪತಿ - ಭೂಕಾಂತನಾದ ಮಯೂರಧ್ವಜನು, ಸುಯ್ದನು - ನಿಟ್ಟುಸುರು ಬಿಟ್ಟವನಾದನು. ॥೬೧॥

ಟೀ॥ ಅಧ್ವರಕೆ–ಯಜ್ಞಕ್ಕೆ, ಕಡೆ–ಅಂತ್ಯವು, ಆದುದು-ಆಗಿಬಿಟ್ಟಿತು, ಸಾಕು–ಯಜ್ಞದ ಪ್ರಯತ್ನವು ಇನ್ನು ಬೇಡ, ಎತ್ತಲಾದೊಡಂ–ಎಲ್ಲಿಗೆ ಬೇಕಾದರೂ, ತುರಗಂ-ಅಶ್ವವನ್ನು, ಪೊಡೆ - ಅಟ್ಟಿಬಿಡು, ಆವೆಡೆ – ಯಾವ ಸ್ಥಳದಲ್ಲಿ, ಮುರಮಥನ ಪಾರ್ಥರು–ಕೃಷ್ಣ ಫಲುಗುಣರು ಇದ್ದಾರೊ, ಅದಂ-ಆ ಎಡೆಯನ್ನು, ತನಗೆ–ನನಗೆ, ತೋರವೇಳ್ಪುದು-ಕಾಣಿಸಬೇಕು, ಎಂದು–ಎಂಬತೆರನಾಗಿ, ಮಯೂರಧ್ವಜಂ-ರತ್ನಪುರಿಯ ರಾಜನು, ಮರುಗಿಮರುಗಿ–ಅತಿಯಾಗಿ ದುಃಖಿಸಿ, ನಿಜತನಯನಂ–ತನ್ನ ತನುಜನನ್ನು, ಬಿಡದೆ–ಬಹುವಾಗಿ, ಬೈದು–ದೂಷಿಸಿ, ಗರ್ಜಿಸಿ – ಗದರಿಸಿ, ಮಡದಿಸಹಿತ – ತನ್ನ ಸತಿಯೊಂದಿಗೆ, ಆದಿನಂ – ಅಂದು, ದೇವಪುರಲಕ್ಷ್ಮೀಶನಂ – ದೇವಪುರ ನಿವಾಸಿಯೂ ಲಕ್ಷ್ಮೀಕಾಂತನೂ ಆದ ಕೃಷ್ಣಪರಮಾತ್ಮನನ್ನು, ಕಣ್ದಣಿರ - ಕಣ್ಣುಗಳಿಗೆ

---

ಸಿಕ್ಕಿದ್ದ ಪರಮ ಪಾವನಮೂರ್ತಿಯನ್ನು ಬಿಟ್ಟು ಕತ್ತೆಯನ್ನು ಹೋಲುವ ಈ ಅಶ್ವವನ್ನೇತಕ್ಕೆ ತರಬೇಕು ಇದರಿಂದೇನು ಸಾರ್ಥಕವಾದೀತು ? ಇವನು ಮಾಡಿದ ಕಾರ್ಯವಾದರೊ ಕಾಮಾಸಕ್ತನಾದ ಪತಿಯು ಹಾಸಿಗೆಯ ಮೇಲೆ ಎದುರು ನೋಡುತ್ತಲಿದ್ದರೂ ಮೈಮೇಲೆ ಜ್ಞಾನವೇ ಇಲ್ಲದೆ ನಿದ್ರಿಸುವ ಅಧಮಸ್ತ್ರೀಯ ಕೃತ್ಯವನ್ನು ಹೋಲುತ್ತಲಿರುವುದಲ್ಲಾ ! ಎಂಬುದಾಗಿ ನಿಟ್ಟುಸಿರು ಬಿಟ್ಟು ನುಡಿಯುತ್ತಾ ॥೬೦॥ ತನ್ನ ಕುವರನಾದ ತಾಮ್ರಕೇತುವನ್ನು ನೋಡಿ, ಎಲಾ ನೀಚ ಅಧಮಾಧಮ ನನ್ನೆದುರಿಗೇತಕ್ಕೆ ನಿಲ್ಲುವಿ ಕೈಗೆ ಸಿಕ್ಕಿದ್ದ ಸ್ವಾಮಿಯನ್ನು ಅಲ್ಲಿಯೇ ಬಿಟ್ಟುಬಂದ ನಿನ್ನನ್ನು ಏನುಮಾಡಬೇಕು ? ಪರಿಮಳಯುಕ್ತವಾದ ತುಲಸಿ ಮತ್ತು ತಾವರೆಗಳ ಅಂದದಿಂ ಶೋಭಿಸುವ ಕೃಷ್ಣಾರ್ಜುನರನ್ನು ಅಲ್ಲಿಯೇ ಬಿಟ್ಟು ಎರಡು ಕುದುರೆಗಳನ್ನು ತಂದಿರುವಿ ಅಶ್ವಮೇಧ ಯಾಗವು ಸಾಕು ಈಗ ಕೃಷ್ಣಾರ್ಜುನರೆಲ್ಲಿರುವರೊ ಆ ಸ್ಥಳವನ್ನು ತೋರಿಸಿದರೆ ನನ್ನನ್ನು ಬದುಕಿಸಿದ ಹಾಗಾದೀತು॥೬೧॥ ಈ ಎರಡು ಕುದುರೆಗಳನ್ನು ಆಚೆಗೆ ಹೊಡೆ, ಯಜ್ಞದ ಗೊಡವೆಯು ಇನ್ನು ಬೇಡ, ಕೃಷ್ಣಾರ್ಜುನರಿರುವ ಸ್ಥಳವನ್ನು ನನಗೆ ಮೊದಲು ತೋರಿಸು ಅವರೀರ್ವರನ್ನು ನೋಡಿದಲ್ಲದೆ ನನ್ನ ಮನವು ನಿಲ್ಲಲಾರದೆಂದು ಬಹುವಾಗಿ ದುಃಖಿಸಿ ತನ್ನ

ದೊಡೆಯಲಕ್ಷ್ಮೀಶನಂಕಣ್ಣಾರಕಾಣಬೇಕೆಂಬಕಡುತವಕದಿಂದ ||೬೨||

ಸಂಧಿ ೨೫ಕ್ಕೆ ಪದ್ಯ ೧೩೬೨ಕ್ಕಂ ಮಂಗಳಮಸ್ತು.

---

ಆನಂದವಾಗುವಂತೆ, ಕಾಣಬೇಕು-ಈಕ್ಷಿಸಬೇಕು, ಎಂಬ-ಎನ್ನತಕ್ಕ, ಕಡುತವಕದಿಂದ-ಹೆಚ್ಚಾದ ಆಸಕ್ತಿಯಿಂದ, ಇರುತಿರ್ದನು-ಇದ್ದವನಾದನು. ||೬೨||

ಟೀಕಾತಾತ್ಪರ್ಯ ಸಹಿತವಾದ ಜೈಮಿನಿ ಭಾರತದೊಳು ಇಪ್ಪತ್ತೈದನೆಯ ಸಂಧಿಯು

ಸಮಾಪ್ತವಾದುದು.

---

ಕುವರನನ್ನು ಬಾರಿಬಾರಿಗೂ ಬೈದು ಗದರಿಸುತ್ತಾ, ತನ್ನ ಹೆಂಡತಿ ಸಮೇತನಾಗಿ ಶ್ರೀ ಲಕ್ಷ್ಮೀಕಾಂತನಾದ ಕೃಷ್ಣಮೂರುತಿಯನ್ನೂ ಯುಧಿಷ್ಠಿರನ ಅನುಜನಾದ ಅರ್ಜುನನನ್ನೂ ನೋಡಬೇಕೆಂಬ ಹೆಚ್ಚಾದ ಆಸಕ್ತಿಯಿಂದ ಕೂಡಿ ಆ ದಿನವೆಲ್ಲಾ ಕೃಷ್ಣಸ್ಮರಣೆಯಲ್ಲಿಯೇ ಕಾಲವಂ ಕಳೆಯುತ್ತಲಿದ್ದನೆಂಬಲ್ಲಿಗೆ ||೬೨||

ಟೀಕಾತಾತ್ಪರ್ಯ ಸಹಿತವಾದ ಜೈಮಿನಿ ಭಾರತದೊಳು ಇಪ್ಪತ್ತೈದನೆಯ ಸಂಧಿಯು

ಸಮಾಪ್ತವಾದುದು.



## ಇಪ್ಪತ್ತಾರನೆಯ ಸಂಧಿ.

ಸೂಚನೆ॥ ದ್ವಿಜನಾಗಿಬಂದುಬೇಡಲ್ಮಯೂರಧ್ವಜಂ । ನಿಜಶರೀರದೊಳರ್ಧಮಂಕೊಯ್ದು ಕೊಟ್ಟುಪಂಕಜಪತ್ರ
ನೇತ್ರನಂಮೆಚ್ಚಿಸಿ । ಹಯದ್ವಯವನಿತ್ತುಮಖವಂಮಾಣ್ದನ ॥

ಭೂರಮಣಕೇಳ್ಕೃಷ್ಣಕಾಂಕ್ಷಿಯಾಗಿರ್ದಂಮ । ಯೂರಧ್ವಜಕ್ಷಿತೀಶ್ವರನಿತ್ತಲತ್ತರಣ । ಧಾರುಣಿಯೊಳಸುರಾರಿ
ಗೆಚ್ಚರಿಕೆತಲೆದೋರಿತರ್ಜುನಂಗರಿವಾದುದು ॥ ವೀರಭಟರೆಲ್ಲರ್ಗೆಮೂರ್ಛೆತಿಳಿದುದುಬಳಿಕ । ವಾರಿಜಾಕ್ಷಂಸಕಲಸೇನೆಯಂ
ಸಂತೈಸಿ । ಚೋರಬುದ್ಧಿಯೊಳೊಂದುಪಾಯಮಂಕಂಡಾಧನಂಜಯಂಗಿಂತೆಂದನು ॥ ೧ ॥ ನೋಡಿದ್ಯೆಕುಂತೀಕುಮಾರತಾಮ್ರ

---

ಇಪ್ಪತ್ತಾರನೆಯ ಸಂಧಿ.

ಸೂಚನೆ॥ ದ್ವಿಜನಾಗಿ-ಬ್ರಾಹ್ಮಣ ವೇಷಧಾರಿಯಾಗಿ, ಬಂದು-ಐತಂದು, ಬೇಡಲ್-ಯಾಚಿಸಲಾಗಿ, (ಕೃಷ್ಣನು) ಮಯೂರಧ್ವಜಂ-ಮಯೂರಧ್ವಜನಾದರೊ, ನಿಜಶರೀರದೊಳು-ತನ್ನ ದೇಹದಲ್ಲಿ, ಅರ್ಧಮಂ-ಅರ್ಧ ಭಾಗವನ್ನು, ಕೊಯ್ದು-ಕೊಯ್ದುಹಾಕಿ, ಕೊಟ್ಟು-ಶ್ರೀ ಕೃಷ್ಣಮೂರುತಿಗೆ ಅರ್ಪಿಸಿ, ಪಂಕಜಪತ್ರನೇತ್ರನಂ-ಕಮಲಾಕ್ಷನಾದ ಕೃಷ್ಣ ಸ್ವಾಮಿಯನ್ನು, ಮೆಚ್ಚಿಸಿ-ತೃಪ್ತಿಯುಂಟಾಗುವಂತೆ ಮಾಡಿ, ಹಯದ್ವಯವನು-ಅಶ್ವಂಗಳೆರಡನ್ನೂ, ಇತ್ತು-ಕೊಟ್ಟು, ಮಖಮಂ-ಯಾಗವನ್ನು, ಮಾಣ್ದನು-ಪೂರೈಸಿದನು.

ಟೀ॥ ಭೂರಮಣ-ಭೂಕಾಂತನಾದ ಜನಮೇಜಯನೆ, ಕೇಳು-ಲಾಲಿಸು, ಇತ್ತಲ್-ರತ್ನಪುರಿಯಲ್ಲಿ, ಮಯೂರಧ್ವಜಕ್ಷಿತೀಶ್ವರಂ-ಪೃಥ್ವೀಪತಿಯಾದ ಮಯೂರಧ್ವಜರಾಯನು, ಕೃಷ್ಣಕಾಂಕ್ಷೆಯಾಗಿ- ಕೃಷ್ಣನನ್ನು ನೋಡಬೇಕೆಂಬ ಹೆಚ್ಚಾದ ಆಸಕ್ತಿಯಿಂದ ಕೂಡಿದವನಾಗಿ, ಇರ್ದಂ-ಇದ್ದವನಾದನು, ಅತ್ತ-ಆಕಡೆ, ರಣಧಾರುಣಿಯೋಳ್-ಸಮರಾಂಗಣದಲ್ಲಿ, ಅಸುರಾರಿಗೆ-ರಾಕ್ಷಸಾಂತಕನಾದ ಕೃಷ್ಣಮೂರುತಿಗೆ, ಎಚ್ಚರಿಕೆ ತಲೆದೋರಿತು-ಜ್ಞಾನವು ಚನ್ನಾಗಿ ಬದಗಿತು, ಅರ್ಜುನಂಗೆ-ಪಾರ್ಥನಿಗೂ ಕೂಡ, ಅರಿವು-ಎಚ್ಚರವು, ಆದುದು-ಆಯಿತು, ಎಲ್ಲರ್ಗೆ-ಸಕಲರಾದ, ವೀರಭಟರಿಗೂ-ಶೂರಾಗ್ರಣಿಗಳಿಗೂ, ಮೂರ್ಛೆ ತಿಳಿದುದು- ಜ್ಞಾನೋದಯವಾಯಿತು, ಬಳಿಕ-ಅನಂತರ, ವಾರಿಜಾಕ್ಷಂ- ಕಮಲದಂತೆ ಕಣ್ಣುಗಳುಳ್ಳ ಕೃಷ್ಣಸ್ವಾಮಿಯು, ಸಕಲ ಸೇನೆಯಂ-ಅಶೇಷವಾದ ದಳವನ್ನೂ, ಸಂತೈಸಿ-ಸಮಾಧಾನಗೊಳಿಸಿ, ಚೋರಬುದ್ಧಿಯೊಳು-ಕಳ್ಳದಾರಿಯಿಂದ, (ತನ್ನ ಭಕ್ತನಾದ ಮಯೂರಧ್ವಜನನ್ನು ರೂಪಾಂತರದಿಂದ ಕಂಡು ಅವನಿಂದ ಕುದುರೆಯನ್ನು ತರಬೇಕೆಂದು ಯೋಚಿಸಿ), ಉಪಾಯಮಂ-ಆ ತೆರನಾದ ಯುಕ್ತಿಯೊಂದನ್ನು, ಕಂಡು-ತಿಳಿದು, ಆ ಧನಂಜಯಂಗೆ-ಆ ಪಾರ್ಥನೊಂದಿಗೆ, ಇಂತು-ಮುಂದೆ ಹೇಳುವಂತೆ, ಎಂದನು-ನುಡಿದನು. ॥೧॥

ಟೀ॥ ತಾಮ್ರಧ್ವಜಂ-ತಾಮ್ರಕೇತುವು, ಮಾಡಿದ-ಎಸಗಿದ, ವಿಘಾತಿಯಂ- ಹೊಡೆತವನ್ನು, ಕುಂತೀ ಕುಮಾರ-ಕುಂತೀ ಸುತನಾದ ಫಲುಗುಣನೆ, ನೋಡಿದ್ಯೆ-ನೋಡಿದೆಯಾ, ನಮ್ಮೆಲ್ಲರಂ-ನಮ್ಮಲ್ಲಿ ಸಕಲರನ್ನೂ, ಧುರದೊಳು-ಕಾಳಗದಲ್ಲಿ, ಈ

---

ಇಪ್ಪತ್ತಾರನೆಯ ಸಂಧಿಯ ಕಥಾಸಾರವು.

ಅನಂತರದಲ್ಲಿ ವೈಶಂಪಾಯನಮುನೀಶ್ವರನು, ಜನಮೇಜಯಕ್ಷಿತಿಪನನ್ನು ಕುರಿತು ಇಂತೆಂದನು. ಕೇಳೈ ಧರಾವಲ್ಲಭನೆ ಕೃಷ್ಣಾರ್ಜುನರನ್ನು ಮೂರ್ಛೆಗೊಳಿಸಿ ಅವರ ಸೈನ್ಯವನ್ನೆಲ್ಲಾ ನೆಲಕ್ಕೆ ಕೆಡಹಿ ಯಾಗದ ತುರಂಗಮಂಗಳನ್ನು ಹಿಡಿದು ತಂದಿರುವೆನೆಂದು ತಿಳಿಸಿದ ತಾಮ್ರಧ್ವಜನ ಮಾತುಗಳನ್ನು ರಾಜೇಂದ್ರನಾದ ಮಯೂರಧ್ವಜನು ಕೇಳಿದೊಡನೆಯೇ ಮಗನ ದುಷ್ಕೃತ್ಯಕ್ಕೆ ಹೆಚ್ಚಾದ ದುಗುಡಮಂ ತಾಳಿ, ಸುತನನ್ನು ನಾನಾ ಪ್ರಕಾರವಾಗಿ ನಿಂದಿಸಿ ಬೆಳಗಾದ ಕೂಡಲೆ ತಾನು ರಣರಂಗದಲ್ಲಿ ಮೂರ್ಛೆಗೊಂಡಿರತಕ್ಕ ಕೃಷ್ಣಪರಮಾತ್ಮನನ್ನು ನೋಡಲು ಹೊರಡಬೇಕೆಂದು ಮನಸ್ಸನ್ನು ಸ್ಥಿರಮಾಡಿಕೊಂಡು ತನ್ನ ಪಟ್ಟಮಹಿಷಿಯಾದ ಕುಮುಧ್ವತಿಯೊಂದಿಗೆ ಕೂಡಿ ಆ ದಿನವೆಲ್ಲಾ ಸ್ವಾಮಿಯನ್ನು ನೋಡಬೇಕೆಂಬುದರಲ್ಲಿಯೇ ಆಸಕ್ತನಾಗಿ ಬೆಳಗಾಗುವುದನ್ನೇ ಎದುರು ನೋಡುತ್ತಲಿದ್ದನು. ಅತ್ತ ಸಮರಾಂಗಣದಲ್ಲಿಯಾದರೊ ಪ್ರಜ್ಞೆಯೇ ಇಲ್ಲದೆ ಬಿದ್ದುಹೋಗಿದ್ದ ಕೃಷ್ಣಮೂರುತಿಗೆ ಎಚ್ಚರಿಕೆಯಾಯಿತು. ಅನಂತರ ಅರ್ಜುನನೂ ಆ ಬಳಿಕ ನರನಾರಾಯಣರ ಅಶೇಷವಾದ ಪರಿವಾರವೂ ಜ್ಞಾನೋದಯವನ್ನೈದಿತು. ಆಗ ಕೃಷ್ಣಮೂರುತಿಯು ಮೂರ್ಛೆಯಿಂದೆಚ್ಚೆತ್ತು ಸಕಲರನ್ನೂ ಸಂತೈಸಿದ ಬಳಿಕ ಪಾರ್ಥನನ್ನು ಕುರಿತು ॥ ೧ ॥
ಅಯ್ಯಾ ಫಲುಗುಣಾ! ತಾಮ್ರಧ್ವಜನ ಸಾಹಸವನ್ನು ನೋಡಿದೆಯಾ! ನಮ್ಮನ್ನೂ ಅಸಾಧಾರಣರಾದ ನೀಲಧ್ವಜಾದಿಗಳನ್ನೂ

ಧ್ವಜಂ | ಮಾಡಿದವಿಘಾತಿಯಂನಮ್ಮೆಲ್ಲರಂಧುರದೊ | ಳಿದಿರಿದುರುಳ್ಚಿಹಯಮುಂಕೊಂಡುರತ್ನಪುರಿಗೈದಿದಂಪಿತನಬಳಿಗೆ | ಆಡಲೇನಹುದಿನ್ನುಸೇನೆಮೆಲ್ಲನೆಪಿಂತೆ | ಬೀಡಾಗಿನಡೆತರಲಿಮುಂದೆಪೋದಪೆನೆನ್ನ | ಕೂಡೆಬಾನಿನಗೊಂದುಪಾಯಮುಂತೋರಿಸುವೆನೆಂದನಸುರಾರಿನಗುತ ॥ ೨ ॥ ಆಹರಿಯನುಡಿಗೇಳ್ದುಫಲುಗುಣಂಸೇನಾಸ | ಮೂಹಮಂಪಿಂದುಳುಪಿರತ್ನನಗರಿಗೆಪಕ್ಷಿ | ವಾಹನನಕೂಡೆನಡೆತಂದನವರೀರ್ವರುಂ ಮಾತಾಡಿಕೊಂಡುಬಳಿಕ ॥ ರಾಹುಗಾಣಿಸದಂತೆ ವಿಪ್ರವೇಷವನಾಂತು | ದೇಹಿಕರತೆರದಿಂದ ವೃದ್ಧನಾದಂಶೌರಿ | ಮೋಹದಿಂತನಗೆಕೈಗೊಡುವಬಾಲಕ ಶಿಷ್ಯನಾದನಮರೇಂದ್ರಸೂನು ॥ ೩ ॥ ಬಟ್ಟೆವಿಡಿದವರೀರ್ವರುಂಮಯೂರಧ್ವಜನ | ಪಟ್ಟಣಕೆನಡೆತಂದರನ್ನೆಗಂದೆಸೆದೆಸೆಯೊಳಿ | ಟ್ಟಣಿಸಿ ಲೋಕಮಂ ಕಂಗೆಡಿಸುವಂಧಕಾರಂಗಳಂನಿಲಲೀಯದೆ ॥

---

ಡಿರಿದು–ಪ್ರತಿಭಟಿಸಿ ಸೋಲಿಸಿದವನಾಗಿ, ಉರುಳ್ಚಿ-ನೆಲಕ್ಕೆ ಕೆಡವಿ, ಹಯಮುಂ-ಯಜ್ಞಾಶ್ವವನ್ನು, ಕೊಂಡು–ತೆಗೆದುಕೊಂಡು, ಪಿತನ–ಜನಕನ, ಬಳಿಗೆ–ಸಮೀಪಕ್ಕಾಗಿ, ರತ್ನಪುರಿಗೆ-ರತ್ನಪುರಿ ಎಂಬ ರಾಜಧಾನಿಗೆ, ಐದಿದಂ–ಹೋಗಿ ಸೇರಿರುವನು, ಇನ್ನು–ಇನ್ನು ಮುಂದೆ, ಆಡಲು–ಹೆಚ್ಚಾಗಿ ಮಾತನಾಡಿ, ಏನಹುದು–ಏನು ಸಾರ್ಥಕವಾದೀತು, ಸೇನೆ–ಪರಿವಾರವೆಲ್ಲಾ, ಮೆಲ್ಲನೆ–ನಿಧಾನವಾಗಿ, ಪಿಂದೆ–ಹಿಂದುಗಡೆಯಲ್ಲಿ, ಬೀಡಾಗಿ–ಒಮ್ಮುಖವಾಗಿ, ನಡೆತರಲಿ–ಬರುತ್ತಿರಲಿ, (ನಾನು) ಮುಂದೆ-ಮೊದಲೆ, ಪೋದಪೆನು–ಹೋಗುತ್ತೇನೆ, ನೀನು-ನೀನಾದರೊ, ಎನ್ನಕೂಡೆ-ನನ್ನ ಜತೆಯಲ್ಲಿ, ಬಾ–ಬರುವನಾಗು, ನಿನಿಗೆ–ನಿನಿಗಾದರೊ, ಒಂದುಪಾಯಮುಂ–ಒಂದು ಚಮತ್ಕಾರವನ್ನು, ತೋರಿಸುವೆನು- ತೋರ್ಪಡಿಸುತ್ತೇನೆ, ಎಂದು–ಎಂಬ ತೆರನಾಗಿ, ನಗುತ–ಮುಗುಳ್ನಗೆಯನ್ನೈದುತ್ತ, ಅಸುರಾರಿ–ಕೃಷ್ಣಸ್ವಾಮಿಯು, ಎಂದನು–ನುಡಿದವನಾದನು. ॥ ೨ ॥

ಟೀ॥ ಫಲುಗುಣಂ–ಪಾರ್ಥನು, ಆಹರಿಯ–ಕೃಷ್ಣಸ್ವಾಮಿಯ, ನುಡಿ-ಮಾತನ್ನು. ಕೇಳ್ದು–ಲಾಲಿಸಿ, ಪಿಂದೆ–ಹಿಂದುಗಡೆಯೇ, ಸೇನಾಸಮೂಹಂ–ಸೈನ್ಯವನ್ನೆಲ್ಲಾ, ಉಳಿಪಿ–ಬಿಟ್ಟು, ರತ್ನನಗರಿಗೆ–ರತ್ನಪುರಿಯೆಂಬ ಮಯೂರಧ್ವಜನ ರಾಜಧಾನಿಗೆ, ಪಕ್ಷಿವಾಹನನಕೂಡೆ–ಗರುಡಾರೂಢನಾದ ಕೃಷ್ಣನ ಜೊತೆಯಲ್ಲಿ, ನಡೆತಂದನು–ಬಂದು ಸೇರಿದನು, ಬಳಿಕ–ಅನಂತರ, ಅವರೀರ್ವರೂ–ಪಾರ್ಥಕೃಷ್ಣರು, ರಾಹುಕಾಣಿಸದಂತೆ–ನಿಜರೂಪವು ತಲೆದೋರದಹಾಗೆ, ವಿಪ್ರವೇಷವನು–ಬ್ರಾಹ್ಮಣನ ಆಕಾರವನ್ನು, ಅಂತು-ಪಡೆದು, ಶೌರಿ-ಕೃಷ್ಣಸ್ವಾಮಿಯು, ದೇಹಿಕರ ತೆರದಿಂದ-ನರಲೀಲೆಯಿಂದ, ವೃದ್ಧನು–ಮುದುಕನು, ಅದಂ–ಆಗಿಹೋದನು, ತನಗೆ–ವಿಪ್ರವೇಷಧಾರಿಯಾದ ಸ್ವಾಮಿಗೆ, ಅಮರೇಂದ್ರಸೂನು–ಪಾರ್ಥನು, ಮೋಹದಿಂ-ಅಕ್ಕರೆಯಿಂದ, ಕೈಗೊಡುವ–ಕರಲಾಘವವನ್ನು ಕೊಡುವ, ಬಾಲಕಶಿಷ್ಯನು–ಪ್ರಿಯಶಿಷ್ಯನು, ಆದನು–ಆಗಿಬಿಟ್ಟನು. ॥ ೩ ॥

ಟೀ॥ ಮಯೂರಧ್ವಜನ ಪಟ್ಟಣಕೆ–ಮಯೂರಧ್ವಜನ ರಾಜಧಾನಿಯಾದ ರತ್ನಪುರಿಗೆ, ಬಟ್ಟೆವಿಡಿದು-ದಾರಿಯನ್ನು ಹಿಡಿದವನಾಗಿ, ಅವರೀರ್ವರುಂ–ಕೃಷ್ಣಾರ್ಜುನರಿಬ್ಬರೂ, ನಡೆತಂದರು–ಬಂದವರಾದರು, ದೆಸೆದೆಸೆಯೊಳು–ಎಲ್ಲಾ ದಿಕ್ಕುಗಳಲ್ಲಿಯೂ, ಅನ್ನೆಗಂ–ಆವರೆಗೂ, ಇಟ್ಟಣಿಸಿ–ತುಂಬಿಕೊಂಡು, ಲೋಕಮಂ–ಪ್ರಜೆಗಳನ್ನು, ಕಂಗೆಡಿಸುವ – ಕಣ್ಣುಕಾಣದಂತೆ ಮಾಡತಕ್ಕ, ಅಂಧಕಾರಂಗಳಂ–ತಮೋರಾಶಿಯನ್ನು, ನಿಲಲೀಯದೆ–ನಿಲ್ಲಗೊಡಿಸದೆ, ಅಟ್ಟಿ–ಓಡಿಹೋಗುವಂತೆ ಮಾಡಿ, ಹರಿಹರಿದ–ಓಡಾಡಿ ಓಡಾಡಿ, ಉರೆ–ಹೆಚ್ಚಾಗಿ, ಬಳಲ್ದು–ಆಯಸಂಗೊಂಡು, ಕಾಹುಂದಿ– ವ್ಯಸನದಿಂದ, ಕಂಗೆಟ್ಟು – ಕೃಶವಾಗಿ,

---

ನಮ್ಮ ಸಕಲ ಪರಿವಾರವನ್ನೂ ಮೂರ್ಛೆಯೆಂಬೊಂದೇ ಹುರಿಯಿಂದ ಚನ್ನಾಗಿಬಿಗಿದು ಯುಧಿಷ್ಠಿರನ ಯಜ್ಞಾಶ್ವವನ್ನು ಅಪಹರಿಸಿಕೊಂಡುಹೋಗಿ ತನ್ನ ತಂದೆಯಬಳಿ ಸೇರಿರುವನಲ್ಲಾ ! ಆಹಾ, ಅವನ ಸಾಹಸವು ಇನ್ನೆಷ್ಟು ಅಸಾಧಾರಣವಾದದ್ದೊ ! ಕಾರ್ಯವು ಮೀರಿದ್ದರಿಂದ ಇನ್ನು ಯೋಚಿಸಿ ಫಲವೇನಿರುವುದು ? ಎಲೈ ಅರ್ಜುನನೆ ಈಗ ನಾನೊಂದು ಯುಕ್ತಿಯನ್ನು ಹುಡುಕುತ್ತೇನೆ ಸುಮ್ಮನಿರು ನಮ್ಮ ಸಕಲಬಲವೂ ನಿಧಾನವಾಗಿ ರತ್ನಪುರಿಯಬಳಿಗೆ ಬಂದುಕೊಳ್ಳಲಿ ನಾನು ಈಗಲೇ ಅಲ್ಲಿಗೆ ಹೋಗುವೆನು, ನೀನೂ ನನ್ನೊಂದಿಗೆ ಬಾ ಎಂದು ಮಂದಹಾಸದಿಂದ ನುಡಿದನು ॥ ೨ ॥ ಧನಂಜಯನಾದರೊ ಕೃಷ್ಣಮೂರುತಿಯ ಅನುಜ್ಞೆಯಂ ಶಿರಸಾವಹಿಸಿ ತನ್ನ ಪರಿವಾರವನ್ನೆಲ್ಲಾ ಹಿಂದೆಯೇ ಬಿಟ್ಟು ಮುಂಹರನನ್ನು ಹಿಂಬಾಲಿಸಿದನು ಸ್ವಲ್ಪ ಹೊತ್ತಿನೊಳಗಾಗಿ ನರನಾರಾಯಣರೀರ್ವರೂ ರತ್ನಪುರಿಯ ಹತ್ತಿರಕ್ಕೆ ಬಂದರು ಆಗ ಕೃಷ್ಣನು ಅರ್ಜುನನನ್ನು ನೋಡಿ ಅಯ್ಯಾ ಅರ್ಜುನಾ ! ನಾವಿಬ್ಬರೂ ಇಲ್ಲಿ ರೂಪಾಂತರವನ್ನ ಮಾಡಿಕೊಂಡು ಅನಂತರ ಪಟ್ಟಣವನ್ನು ಪ್ರವೇಶಮಾಡೋಣ, ನಾನು ಒಬ್ಬ ಮುದುಕ ಬ್ರಾಹ್ಮಣನಾಗುತ್ತೇನೆ ನೀನು ನನಿಗೆ ಶಿಷ್ಯನಾಗು ಎಂದು ಬೋಧಿಸಿದನು. ಆಗ ಕೃಷ್ಣನು ವೃದ್ಧ ಬ್ರಾಹ್ಮಣನೂ ಅರ್ಜುನನು ಅವನ ಶಿಷ್ಯನೂ ಆಗಿ ಇವರೀರ್ವರೂ ರತ್ನಪುರಿಯೊಳಕ್ಕೆ ಪ್ರವೇಶಮಾಡಿದರು ॥ ೩ ॥ ಈ ರೀತಿಯಲ್ಲಿ ಕೃಷ್ಣಾರ್ಜುನರು ಮಯೂರಧ್ವಜನ ರಾಜಧಾನಿಯಂ ಸೇರುವ ಕಾಲಕ್ಕೆ ಸರಿಯಾಗಿ ಸೂರ್ಯನು ಪಶ್ಚಿಮ ಸಮುದ್ರದಲ್ಲಿ ಮುಳುಗಿದನು ಆಗ ಸೂರ್ಯಮಂಡಲವಾದರೊ ಗಾಢಾಂಧಕಾರದ ಹೊಯ್ಲನ್ನು ತಾಳಲಾರದೆ ಓಡಿಓಡಿ ಬಳಲಿ, ಕಂಗೆಟ್ಟು ಹೋಗಿದೆಯೊ ಎಂಬಂತೆ

ಕಟ್ಟೆಹರಿಹರಿದುರೆಬೆಳಲ್ಕುಕಾಹುರದಿಕಂ । ಗೆಟ್ಟುಕಳೆಗುಂದಿಮೆಲ್ಲನೆನಭೋಮಾರ್ಗಮಂ । ಬಿಟ್ಟುಪಶ್ಚಿಮಗಿರಿಯತಪ್ಪಲಂಸಾರ್ದನೆನೆರವಿಪಡುಗಡಲೊಳೆಸದನು ‖೪‖ ಮೆಲ್ಲಮೆಲ್ಲನೆತರಣಿಮುಳುಗಿದಂಪಡುಗಡಲೊ । ಳಲ್ಲಿಗಲ್ಲಿಗೆಮೂಡಿದುವುಸಂಜೆದಾರಕಿಗ । ಳೆಲ್ಲೆಲ್ಲಿಯುಂತಮಂತುಂಬಿದುದುತುಂಬಿಗಳೊಡನೆಮುಗಿದುವಂಬುಜಾಳಿ ‖ ನಲ್ಲನಲ್ಲರನೇಹಗಲಹದೋಳ್ಮುನಿದುರತಿ। ಗೊಲ್ಲದೊಲ್ಲದಕಾಂತೆಯರಮನಂತರಹರಿಸಿ । ನಿಲ್ಲನಿಲ್ಲದವೊಲಂಗಜನುರುಬತೊಡಗಿದಂಮರುಗಿದವುಕೋಕಂಗಳು ‖೫‖ ಹೊತ್ತುಹೊತ್ತಿಗೆ ಮತ್ತೆಮತ್ತೆಬಲ್ವತ್ತರದೊ । ಳೊತ್ತಿಡಿದುಸುತ್ತಲೆತ್ತೆತ್ತಲುಂಕತ್ತವೋ। ಲ್ಮುತ್ತಿಮುಸುಕಿತ್ತುಕಗ್ಗತ್ತಧರಿತ್ರಿಯಂಮುಳ್ಳುಮೊನೆಕೊಳ್ಳದಂತೆ ‖ ಚಿತ್ತಜಂಕತ್ತಿಯಂಕಿತ್ತುಕೊಂಡೆತ್ತಿಹೊ । ಯ್ಯುತ್ತಬರಲುತ್ತುಂಗವೃತ್ತಕುಚೆಯರ್ತಮಗೆತೆತ್ತಿರ್ದತೆತ್ತಿಗರನೊತ್ತಿಗರಸುತ್ತಿರ್ದರಾಗಲನುರಾಗದಿಂದ ‖ ೬ ‖ ಆರಜನಿಯೋಳ್ಬಳಿಕರತ್ನಪುರಮಂಪೊಕ್ಕು । ನೀರಜದಳೇಕ್ಷಣಂಕೇರಿಕೇರಿಗಳೊ

---

ಕಳೆಗುಂದಿ–ಕಾಂತಿಯನ್ನು ಹೋಗಲಾಡಿಸಿಕೊಂಡು, ನಭೋಮಾಗಮಂ – ಆಕಾಶದ ದಾರಿಯನ್ನು, ಮೆಲ್ಲನೆ – ನಿಧಾನವಾಗಿ, ಬಿಟ್ಟು–ತ್ಯಜಿಸಿ, ಪಶ್ಚಿಮಗಿರಿಯ ತಪ್ಪಲಂ–ಪಶ್ಚಿಮಾದ್ರಿಯನ್ನು, ಸಾರ್ದನು–ಹೊಕ್ಕನು, ಎನೆ-ಎಂಬಂತೆ, ರವಿ–ದಿನಮಣಿಯು, ಪಡುಗಡಲೊಳು–ಪಶ್ಚಿಮ ಸಮುದ್ರದೊಳಗೆ, ಎಸೆದನು–ಕಾಂತಿಯಿಂದ ಮೆರೆಯುತ್ತಲಿದ್ದನು ‖ ೪ ‖

ಟೀ‖ ಮೆಲ್ಲಮೆಲ್ಲನೆ-ಮೆತ್ತಮೆತ್ತಗೆ ಅಥವಾ ನಿಧಾನವಾಗಿ, ಪಡುಕಡಲೊಳ್-ಪಶ್ಚಿಮದ ಕಡೆಯಲ್ಲಿರುವ ಅಬ್ಧಿಯೊಳಗೆ, ತರಣಿ–ರವಿಯು, ಮುಳುಗಿದಂ–ಮುಳುಗಿಕೊಂಡನು, ಸಂಜೆದಾರಕಿಗಳು–ಸಂಧ್ಯಾಕಾಲವನ್ನು ತೋರಿಸುವ ಉಡುಗಣವು, ಅಲ್ಲಿಗಲ್ಲಿಗೆ–ಆಕಾಶದ ಎಲ್ಲಾ ಭಾಗದಲ್ಲೂ, ಮೂಡಿದವು–ಉಂಟಾದವು, ತಮಂ–ಅಂಧಕಾರವು, ಎಲ್ಲೆಲ್ಲಿಯುಂ–ಎಲ್ಲಾ ಸ್ಥಳಗಳಲ್ಲಿಯೂ, ತುಂಬಿದುದು– ಆವರಿಸಿಕೊಂಡಿತು, ತುಂಬಿಗಳೊಡನೆ–ಭೃಂಗಾಳಿಯೊಂದಿಗೆ, ಅಂಬುಜಾಳಿ–ತಾವರೆಗಳ ಸಮುದಾಯವು, ಮುಗಿದವು–ಮುಚ್ಚಿಕೊಂಡವು, ರತಿಗೆ–ಕ್ರೀಡಾಸುಖಕ್ಕೆ, ಒಲ್ಲದೊಲ್ಲದ–ಆಶಿಸದಿರುವ, ಕಾಂತೆಯರ–ಸ್ತ್ರೀಯರ, ಮನಂ–ಮನಸ್ಸು, ನಲ್ಲರ–ಪ್ರೀತಿಪಾತ್ರರ ಮತ್ತು ಕಾಮುಕರ, ನೇಹಗಲಹದೊಳ್–ಪ್ರೇಮಾಸ್ಪದವಾದ ಜಗಳದಿಂದ, ಮುನಿದು–ಕೋಪಗೊಂಡು, ತರಹರಿಸಿ–ಮನ್ಮಥಪೀಡೆಯನ್ನು ತಾಳಲಾರದೆ ಭ್ರಾಂತಿಗೊಂಡು, ನಿಲ್ಲನಿಲ್ಲದವೊಲ್–ನಿಂತಿರುವುದಕ್ಕೂ ಕೂಡ ಶಕ್ತಿಯಿಲ್ಲದಂತೆ, ಅಂಗಜನು–ಮೀನಕೇತನನು, ಉರುಬ–ಹೆಚ್ಚಾದ ಶಕ್ತಿಯನ್ನು, ತೊಡಗಿದಂ–ತೋರಿದನು, ಕೋಕಂಗಳು–ಚಕ್ರವಾಕಗಳು, ಮರುಗಿದುವು-ಕೊರಗಿದವು ‖೫‖

ಟೀ‖ ಮತ್ತೆಮತ್ತೆ–ಪುನಃ ಪುನಃ, ಹೊತ್ತುಹೊತ್ತಿಗೆ–ಆಯಾಯ ಸಮಯಕ್ಕೆ, ಬಲ್ವತ್ತರದೊಳ್–ಬಲವಾಗಿ ಒತ್ತುವುದರಿಂದ, (ಸೇರುವುದರಿಂದ) ಒತ್ತಿಡಿದು–ಸಾಂದ್ರವಗಿ ನೆರೆದು, ಎತ್ತೆತ್ತಲುಂ–ಎಲ್ಲಾ ಕಡೆಯೂ, ಸುತ್ತಲು–ನಾನಾಬಾಗದೊಳಗೂ, ಕೆತ್ತವೊಲ್–ನೆರೆದಿರುವಂತೆ, ಮುಳ್ಳುಮೊನೆ–ಮುಳ್ಳಿನ ತುದಿಯು, ಕೊಳ್ಳದಂತೆ–ಇಡಲಾಗದಹಾಗೆ, ತಮಂ–ಅಂಧಕಾರವು, ಮುತ್ತಿಮುಸುಕಿತ್ತು–ಎಲ್ಲೆಲ್ಲಿಯೂ ವ್ಯಾಪಿಸಿತ್ತು. ಚಿತ್ತಜಂ–ಮದನನು, ಕತ್ತಿಯಂ ಕಿತ್ತುಕೊಂಡು–ಕತ್ತಿಯನ್ನು ಹೊರಗೆಸೆಳೆಮಕೊಂಡು, ಎತ್ತಿ–ಮೇಲ್ಗಡೆಗೆ ಎತ್ತಿ, ಹೊಯ್ಯುತ್ತ ಬರಲು–ಘಾತಿಸುತ್ತ ಬರಲಾಗಿ, ಉತ್ತುಂಗ–ದೊಡ್ಡದಾಗಿರುವ, ವೃತ್ತ–ಗುಂಡಾದ, ಕುಚೆಯರ್–ಸ್ತನಗಳುಳ್ಳಸ್ತ್ರೀಯರು, ತಮಗೆ–ತಮಗಾಗಿ, ತೆತ್ತಿರ್ದ–ಸಹಾಯಕರಾಗಿದ್ದ, ತೆತ್ತಿಗರನು–ಕಾಮುಕರನ್ನು, ಒತ್ತಿಗೆ–ರತಿಸುಖವನ್ನನುಭವಿಸುವಿಕೆಯಿಂದ ಕಾಮಬಾಧಾ ಪರಿಹಾರವಂಗೈವ ಸಹಾಯಕ್ಕೆ, ಆಗಲು–ನೆರವಾಗುವುದುಕ್ಕೋಸ್ಕರ, ಅನುರಾಗದಿಂದ–ವಿಶ್ವಾಸದಿಂದ, ಆರಸುತಿರ್ದರು–ಕಾಮುಕರ ಬರುವಿಕೆಯನ್ನೇ ನೋಡುತ್ತಲಿದ್ದರು ‖

ಅ‖ ವಿ‖ ಕಗ್ಗತ್ತಲೆ–ಕರಿದು+ಕತ್ತಲೆ (ವಿ.ಪೂ.) ಚಿತ್ತಜಂ–ಚಿತ್ತ–ಮನದಲ್ಲಿ, ಜ–ಹುಟ್ಟಿದವನು (ಸ. ತ.)ಉತ್ತುಂಗವೃತ್ತಕುಚೆಯರ್–ವೃತ್ತಂಗಳಾದ ಕುಚಂಗಳ್-(ವಿ.ಪೂ.) ಉತ್ತುಂಗಗಳಾದ ವೃತ್ತಕುಚಗಳು ಯಾರಿಗೋ ಅವರು (ಬ.ಸ.)‖೬‖

ಟೀ‖ ಬಳಿಕ–ಆಮೇಲೆ, ನೀರಜ ದಳೇಕ್ಷಣಂ – ಕಮಲ ನೇತ್ರನಾದ ಶ್ರೀ ಕೃಷ್ಣಸ್ವಾಮಿಯು, ರತ್ನಪುರಮಂ–ಮಯೂರಧ್ವಜನ ರಾಜಧಾನಿಯನ್ನು, ಆರಜನಿಯೊಳ್–ಆದೇಸಿಶಿಯಲ್ಲಿಯೇ, ಪೊಕ್ಕು– ಹೋಗಿಸೇರಿ, ಸಮೀರಜನ–ವಾಯುನಂದನನ, ತಮ್ಮನಂ–ಅನುಜನಾದ ಪಾರ್ಥನನ್ನು, ಕೂಡಿಕೊಂಡು–ಜೊತೆಮಾಡಿಕೊಂಡು, ಊರಜನಂ–ಪಟ್ಟಣವಾಸಿಗಳೆಲ್ಲರೂ,

---

ಕಾಂತಿವಿಹೀನವಾಗಿದ್ದಿತು ಕತ್ತಲೆಯಾದರೂ ದಿಕ್ತಟಗಳವರೆಗೂ ವ್ಯಾಪಿಸಿತ್ತು‖೪‖ ಅಷ್ಟುಹೊತ್ತಿಗೆ ಸೂರ್ಯಾಸ್ತಮಾನವೂ ಚನ್ನಾಗಿಯೇ ಆಯಿತು ಎಲ್ಲೆಲ್ಲಿಯೂ ನಕ್ಷತ್ರಗಳು ಮಿಣುಗುಟ್ಟುತ್ತಲಿದ್ದವು ತುಂಬಿಗಳ ಬಳಗವು ತಾವರೆಗಳೊಳಗೆ ಮರೆಯಾದವು ಸ್ತ್ರೀಪುರುಷರು ವಿರಹವೇದನೆಯನ್ನು ತಾಳಲಾರದೆ ಸಂಕಟಪಡುತ್ತಲಿದ್ದರು ಚಕ್ರವಾಕ ಪಕ್ಷಿಗಳ ವ್ಯಸನವು ಮಿತಿಮೀರಿತು ‖೫‖ ಆಗ ಕಾಮಾತಿಶಯದಿಂದ ವ್ಯಥೆಯಂ ತಾಳಲಾರದ ಹಲವುಮಂದಿ ಸ್ತ್ರೀಯರು ಕಾಮುಕರೊಂದಿಗೆ ಕೂಡಿ ಮಾರನ ಆಟೋಪವನ್ನು ತಗ್ಗಿಸಿಕೊಳ್ಳಬೇಕೆಂಬಿಚ್ಛೆಯಿಂದ ಅಲ್ಲಲ್ಲಿ ತಿರುಗಾಡುತ್ತಲಿದ್ದರು ‖ ೬ ‖ ಆಗ ಕೃಷ್ಣಸ್ವಾಮಿಯು ಅರ್ಜುನನನ್ನು ಜೊತೆ

ಳ್ಸ | ವಿೀಜನತಮ್ಮನಂಕೂಡಿಕೊಂಡ್ಯೆತರುತಕಂಡನತಿನಿದ್ರೆಯಿಂದ ‖ ಊರಜನಮೆಲ್ಲರುಂಮರೆದೊರಗಲ್ಲಲ್ಲಿ | ಮಾರಜಭ್ರಮೆ-ಯಿಂದಪೊರಮಟ್ಟುಸಂಚರಿಪ|ಚಾರುಜಲರುಹವದನೆಯರಬೇಟದಾಟದಪಲವುಬಗೆಯಚೇಷ್ಟೆಗಳನು ‖೭‖ ಆಭರಣಮಲುಗಿದೊಡೆಕಣ್ಗದಿರ್ಸೂಸಿದೊಡೆ | ಶೋಭಿಸುವತನುಗಂಧಮುಣ್ಮಿದೊಡೆಜನದನಿ | ದ್ರಾಭಂಗಮಾಗಿಕಂಡಪರೆಂಬಭೀತಿಯಿಂದೈತಪ್ಪಕಾಮಿನಿಯನು ‖ ಸಾಭಿಲಾಷೆಯೊಳೋರ್ವವಿಟನಿದಿರ್ವಂದ-ಮು | ತ್ತೇಭಗಾಮಿನಿಭೃಂಗನೀಲಕುಂತಳೆಪನ್ನ | ಗಾಭಸುಂದವೇಣಿಬೆದರಬೇಡೆನುತತಕ್ಕೈಸಿದನದೇಂಪ್ರೌಢನೋ ‖೮‖ ತೋರಮುತ್ತಿನಹಾರಮಂತೊಟ್ಟುಚಂದ್ರಮುಖಿ | ಕಾರಗತ್ತಲೆಯೊಳಡಿಯಿಡಲಂಜಿಪಣೆಗೆ | ಕಸ್ತೂರಿಯಂಕಣ್ಗೆಕಾಡಿಗೆಯಂಕೊರಳ್ಗೆಹರಿನೀಲಮಣಿಭೂಷಣವನು ‖ ಸೇರಿಸಲ್ಕದುನ್ಯೆಜಮಾಗೆ

---

ಮರೆದು-ಎಚ್ಚರಿಕೆಯೇ ಇಲ್ಲದೆ, ಒರಗಲು-ಬಿದ್ದುಹೋಗಲಾಗಿ, ಮಾರಜಭ್ರಮೆಯಿಂದ-ವಿಷಯಾಸಕ್ತಿಯಿಂದ, ಪೊರಮಟ್ಟು-ಹೊರಗೆ ಬಂದು, ಅಲ್ಲಲ್ಲಿ-ಎಲ್ಲಾಸ್ಥಳಗಳಲ್ಲೂ, ಸಂಚರಿಪ-ಓಡಾಡುತ್ತಲಿರುವ, ಚಾರು-ಸುದರಿಯರಾದ, ಜಲರುಹನಯನೆಯರ-ಕಮಲಾಕ್ಷಿಯರ, ಬೇಟದಾಟದ-ವಿಹಾರದ, ಪಲವುಬಗೆಯ-ತಂಡತಂಡಂಗಳಾದ, ಚೇಷ್ಟೆಗಳನು-ವಿಕಾರಂಗಳನ್ನು. (ನಡವಳಿಯನ್ನು) ಕೇರಿಕೇರಿಗಳೊಳ್-ಎಲ್ಲಾ ಬೀದಿಗಳಲ್ಲಿಯೂ, ಕಂಡನು-ನಿರುಕಿಸಿದನು.

ಅ‖ ವಿ‖ ಜಲಜದಳೇಕ್ಷಣಂ - ಜಲ - ನೀರಿನಲ್ಲಿ, ಜ-ಹುಟ್ಟಿದ್ದು (ಸ. ತ.) ಜಲಜದಳ (ಷ. ತ.) ಜಲಜದಳದಂತೆ ಈಕ್ಷಣವು ಯಾರಿಗೊ ಅವನು (ಬ. ಸ.) ಜಲರುಹವದನೆಯರು - ಜಲ - ನೀರಿನಲ್ಲಿ, ರುಹ - ಹುಟ್ಟಿದ್ದು (ಸ. ತ.) ಜಲರುಹ-ಕಮಲದಂತೆ, ವದನೆಯರು - ಮುಖವುಳ್ಳವರು (ಬ. ಸ.) ‖೭‖

ಟೀ‖ ಆಭರಣಂ-ತೊಡವುಗಳು, ಅಲುಗಿದೊಡೆ - ಅಲ್ಲಾಡುತ್ತಿರಲು, ಕಣ್ಗದಿರ್ - ನಯನಂಗಳ ಕಳೆಯು, ಸೂಸಿದೊಡೆ-ಹರಡಲಾಗಿ, ಶೋಭಿಸುವ-ಕಾಂತಿಯುಕ್ತಮಾದ, ತನಿಗಂಧಂ-ಒಳ್ಳೆಯ ಪರಿಮಳವು, ಉಣ್ಮಿದೊಡೆ-ಒದಗಲು, ಜನರ-ಪಟ್ಟಣವಾಸಿಗಳಿಗೆಲ್ಲಾ, ನಿದ್ರಾಭಂಗಂಆಗಿ - ನಿದ್ರೆಯೇಯಿಲ್ಲದೆ ಹೋಗಿ, ಕಂಡಪರು-ನೋಡಿಬಿಡುತ್ತಾರೆ, ಎಂಬ-ಎನ್ನತಕ್ಕ, ಭೀತಿಯಿಂದ-ಹೆದರಿಕೆಯಿಂದ, ಐತಪ್ಪ-ಬರುತ್ತಲಿರುವಂಥ, ಕಾಮಿನಿಯನು-ಮನ್ಮಥಾವಸ್ಥೆಯಿಂದ ಪೀಡಿತಳಾದ ನಾರಿಯನ್ನು, ಸಾಭಿಲಾಷೆಯೊಳು-ವಿಶ್ವಾಸಪೂರ್ವಕವಾಗಿ, ಓರ್ವವಿಟನು-ಒಬ್ಬಾನೊಬ್ಬ ಕಾಮುಕನು, ಇದಿರ್ವಂದು-ಅಭಿಮುಖನಾಗಿ, (ಆ ಹೆಂಗಸನ್ನು ಕುರಿತು) ಮತ್ತೇಭಗಾಮಿನಿ-ಮದ್ದಾನೆಯ ಹಾಗೆ ನಿಧಾನವಾದ ನಡಿಗೆಯುಳ್ಳವಳೆ, ಭೃಂಗನೀಲಕುಂತಳೆ-ಭೃಂಗ-ಜೇನುಂಡೆಗಳತೆರನಾಗಿ, ನೀಲ-ಕಪ್ಪಾದ, ಕುಂತಳೆ-ಕೇಶಪಾಶಗಳಿಂದನ್ವಿತಳಾದವಳೆ, ಪನ್ನಗಾಭವೇಣಿ-ಪನ್ನಗ-ಸರ್ಪದ, ಆಭ-ಕಾಂತಿಯಿಂದ ಹೋಲಿಕೆಯಾಗುವ, ವೇಣಿ-ಜಡೆಯಿಂದ ಕೂಡಿರತಕ್ಕವಳೆ, ಬೆದರಬೇಡ-ದಿಗಿಲು ಬೀಳಬೇಡ, ಎನುತ-ಎಂದು ನುಡಿಯುತ್ತಾ, ತಕ್ಕೈಸಿದನು-ಉಪಚಾರೋಕ್ತಿಗಳಿಂದ ಮನ್ನಿಸಿದನು, ಅದೇಂಪ್ರೌಢನೊ-ಇನ್ನೆಂತಹ ರಸಿಕನೋ ಎಂದರೆ! ಆ ಕಾಮುಕನು-ಕಾಮಿನಿಯನ್ನು ಬಹು ಸುಂದರಳೆಂದು ವರ್ಣಿಸಿದನೆಂದು ಭಾವವು ಮತ್ತೇಭಗಾಮನಿ-ಮತ್ತ-ಮದಿಸಿರತಕ್ಕ, ಇಭ-ಆನೆ.

ಅ‖ ವಿ‖ ಮತ್ತ ಇಭದಂತೆ ಗಮನವುಳ್ಳವಳು ಯಾರೊ ಅವಳು (ಬ. ಸ) ಭೃಂಗಕುಂತಳೆ-ನೀಲವಾದ ಕುಂತಳ (ವಿ. ಪೂ.) ಭೃಂಗದಂತಿರುವ ನೀಲಕುಂತಳವು ಯಾರಿಗೊ ಅವಳು-ಭೃಂಗನೀಲಕುಂತಳೆ (ಬ. ಸ) ‖೮‖

ಟೀ‖ ಚಂದ್ರಮುಖಿ - ಇಂದುವದನೆಯಾದೋರ್ವಳು, ತೋರ-ಗಾತ್ರವಾದ, ಮುತ್ತಿನಹಾರಮಂ - ಮುತ್ತಿನ ಸರವನ್ನು, ತೊಟ್ಟು-ಹಾಕಿಕೊಂಡು, ಕಾರಗತ್ತಲೆಯೊಳು-ಕಗ್ಗತ್ತಲೆಯೊಳಗೆ, ಅಡಿಯಿಡಲು-ಹೆಜ್ಜೆಗಳನ್ನೂರಲು, ಅಂಜಿ-ಹೆದರಿ, ಕಸ್ತೂರಿಯಂ-ಕತ್ತುರಿಯನ್ನು, ಫಣೆಗೆ-ಹಣೆಗೂ, ಕಾಡಿಗೆಯಂ-ಕಪ್ಪನ್ನು, ಕಣ್ಗೆ-ನಯನಂಗಳಿಗೂ, ಹರಿನೀಲ ಭೂಷಣವನು,

---

ಮಾಡಿಕೊಂಡು ಊರಿನ ಬೀದಿಗಳಲ್ಲೆಲ್ಲಾ ತಿರುಗುತ್ತಾ ಆನೇಕ ಸುಂದರಿಯರು ಮನ್ಮಥಪಾಶಕ್ಕೆ ಸಿಕ್ಕಿ ಹುಚ್ಚು ಹಿಡಿದು ಅಲೆಯುತ್ತಲಿರುವುದನ್ನೂ ಅವರ ನಾನಾ ತೆರನಾದ ಕಾಮಚೇಷ್ಟೆಗಳನ್ನೂ ನೋಡುತ್ತಾ ಹೊರಟನು ‖೭‖ ಇದನ್ನೆಲ್ಲಾ ನೋಡುತ್ತಾ ಹೊರಟು ಹೋಗುತ್ತಿರುವಾಗ ಒಬ್ಬಾನೊಬ್ಬ ಕಾಮುಕಳು ತನ್ನ ಒಡವೆಗಳು ಅಲ್ಲಾಡುವುದರಿಂದಲೂ ನಯನಂಗಳ ಅಂದದಿಂದಲೂ ಸುವಾಸನೆಯಾದ ಗಂಧದ ಲೇಪನದಿಂದಲೂ, ಹೊರಗಿನವರೆಲ್ಲಿ ಎಚ್ಚರಗೊಂಡಾರೊ ಎಂಬ ಭೀತಿಯಿಂದ ಬರುತ್ತಲಿರುವಾಗ ವಿಟನೋರ್ವನು ಬಂದು ಅವಳ ಮಂದಗಮನ, ಸೊಗಸಾದ ತಲೆಯ ಕೂದಲು ಕಾಳಸರ್ಪಕ್ಕೆ ಸಮನಾದ ಅವಳ ಜಡೆ ಇವನ್ನೆಲ್ಲಾ ನೋಡಿ ಅವಳ ಸೌಂದರ್ಯವನ್ನು ಬಣ್ಣಿಸಿ ಬಣ್ಣಿಸಿ ಮನದಣಿಯುವಂತೆ ಗಾಢಾಲಿಂಗನವಂ ಮಾಡಿಕೊಳ್ಳುತ್ತಲಿರುವುದನ್ನು ಕಂಡರು ‖೮, ಅಲ್ಲಿಂದ ಮುಂದೆ ಸ್ವಲ್ಪದೂರ ಹೋಗಿ ನೋಡಲು ಒಬ್ಬಾನೊಬ್ಬ ಚಂದ್ರವದನೆಯು ಕಂಠದಲ್ಲಿ ಮುತ್ತಿನ ಹಾರವನ್ನು ಹಾಕಿಕೊಂಡು ಹಣೆಗೆ ಕಸ್ತೂರಿಯ ತಿಲಕವನ್ನು ಧರಿಸಿಕೊಂಡವಳಾಗಿ ಇಂದ್ರನೀಲಮಣಿಯ ಹಾರವನ್ನು ಧರಿಸಿ, ತಲೆಯ ಜುಟ್ಟನ್ನು ಗಂಟು ಹಾಕಿಕೊಂಡು ಕತ್ತಲೆಂಬ ಭಯದಿಂದಲೂ ನಲ್ಲನೊಂದಿಗೆ ಬೆರೆಯಬೇಕೆಂಬತ್ಯಾ

ಬೆಂಗಾಗಿಬಳಿಕ | ಕೋರೆದುರುಬಂತೆಗೆದುಜಡೆಗಟ್ಟಿಪೊರಮಟ್ಟು | ಕೇರಿಗೊಂಡೈದಿದಳ್ಸಂಕೇತಭವನದೊಳ್ಕಾದಿರ್ದಕಾಂತನೆಡೆಗೆ ||೯|| ಸಂಚುವಸತೀಜನದೊಳಂಗಭವಕೇಳೀಪ್ರ | ಪಂಚುವವನೋಳ್ಸಮನಿಸಿದಬಳಿಕಮನದೊಳ್ಪ|ಳಂಚುವಬೆದರ್ಕೆಯಂಬಿಟ್ಟುನಿಜಭವನಮಂಪೊರಮಟ್ಟುಕತ್ತಲೆಯೊಳು || ಮಿಂಚುವವಿಭೂಷಣಕೆಮುಸುಕಿಟ್ಟುಸುಳಿವರ್ಗೆಹೊಂ | ಚುವಚಮತ್ಕೃತಿಯನಳವಡಿಸಿನೆನಹಿಂಗೆ | ಮುಂಚುವಪದನ್ಯಾಸಮಂಕಲಿತುನಡೆವಜಾರೆಯರಚದುರೆಸೆದಿರ್ದುದು || ೧೦ || ಕಿಕ್ಕಿರಿದಡರ್ದುರವನಿಂಬುಗೊಂಡುರೆಬೆಳೆದ | ಕಕ್ಕಸದಬಟ್ಟಬಲ್ಮೊಲೆಗಳೋಪನಕೈಗೆ | ವೆಕ್ಕಸಂನೋಳ್ಪರ್ಗೆಕಣ್ಣಿಸುರ್ಪುದುಗಿದೊಡೆಮದನಂಗೆಮಾನಹಾನಿ | ಸೊಕ್ಕುಲೇಸಾಗದಂದೊಪ್ಪಿಡಿಯೊಳಡಗಿನೋಟಕ್ಕೆಕಾಣಿಸದೆಕಾಮರೂಪನೊಳಗೊಂಡು | ತಕ್ಕಬಡತನದೊಳಿರ್ದುದುಸಣ್ಣಸೆಳೆನಡುನಿಶಿಯೊಳೈದಿಬಹಜಾರೆಯ || ೧೧ || ನಿಟಿಲಮಂನೇವರಿಸುತಂಗಲಿಯುತುದಿಯಿಂದ | ತುಟಿವಿ

---

ಇಂದ್ರನೀಲದ ಸರವನ್ನು, ಕೊರಳ್ಗೆ–ಕಂಠಕ್ಕೂ ಸೇರಿಸಲ್ಕೆ–ಸಿಂಕರಿಸಿಕೊಳ್ಳಲು, ಅದು–ಅದರ ಕಾಂತಿಯು, ನೈಜಂ–ಸ್ವಭಾವಸಿದ್ಧನಾದದ್ದು, ಆಗೆ–ಆಗಲು, ಬೆಂಗಾಗಿ–ಆಶ್ಚರ್ಯವನ್ನು ಹೊಂದಿ, ಬಳಿಕ–ಅನಂತರ, ಓರೆತುರುಬಂ – ವಕ್ರವಾಗಿ ಮಾಡಿಕೊಂಡಿದ್ದ ತುರುಬನ್ನು, ತೆಗೆದು–ಕೆದರಿ, ಜಡೆಗಟ್ಟಿ–ಜಡೆಯಂತೆ ಮಾಡಿಕೊಂಡು, ಸಂಕೇತಭವನದೊಳ್–ನಿಷ್ಕರ್ಷೆಮಾಡಿಕೊಂಡಿದ್ದ ಸ್ಥಳದೊಳಗೆ, ಕಾದಿರ್ದ–ಕಾದುಕೊಂಡಿದ್ದ, ಕಾಂತನೆಡೆಗೆ–ಕಾಮುಕನ ಹತ್ತಿರಕ್ಕೆ, ಕೇರಿಗೊಂಡು–ದಾರಿ ಹಿಡಿದು ಹೊರಟವಳಾಗಿ, ಏದಿದಳು–ಹೋಗಿ ಸೇರಿದಳು.

ಅ|| ವಿ|| ಚಂದ್ರಮುಖಿ – ಚಂದ್ರನಂತೆ ಮುಖವು ಯಾರಿಗೊ ಅವಳು (ಬ. ಸ.) ಕಾರಗತ್ತಲೆ – ಕಪ್ಪಾದ ಕತ್ತಲೆ (ವಿ. ಪೂ.) ||೯||

ಟೀ|| ಸಂಚುವ – ಹೊಂಚುಕಾಯತಕ್ಕ, ಸತೀಜನದೊಳ್ – ಹೆಂಗಸರೊಳಗೆ, ಅಂಗಭವ–ಮದನನ, ಕೇಳಿ–ಕ್ರೀಡೆಯನ್ನು, ಪ್ರಪಂಚುವವನೊಳ್–ಜರುಗಿಸುವವನಲ್ಲಿ, ಸಮನಿಸಿದ–ಉಂಟಾದ, ಬಳಿಕ–ಅನಂತರ, ಮನದೊಳ್–ಮನಸ್ಸಿನಲ್ಲಿ, ಪಳಂಚುವ–ಹುಟ್ಟತಕ್ಕ, ಬೆದರ್ಕೆಯಂಬಿಟ್ಟು–ಹೆದರಿಕೆಯನ್ನು ನೀಗಿ, ನಿಜ – ಸ್ವಕೀಯಮಾದ, ಭವನಮಂ – ಮಂದಿರವನ್ನು, ಪೊರಮಟ್ಟು–ಬಿಟ್ಟುನಡೆದು, ಮಿಂಚುವ–ಕಾಂತಿಯುಕ್ತಮಾಗಿರುವ, ವಿಭೂಷಣಕೆ–ಒಡವೆಗೆ, ಕತ್ತಲೆಯೊಳ್–ಕತ್ತಲೆಯಲ್ಲಿ, ಮುಸುಕಿಟ್ಟು–ವಸ್ತ್ರದಿಂದಾಚ್ಛಾದಿಸಿ, ಹೊಂಚುವ–ತಕ್ಕ ಕಾಲದಲ್ಲಿ ಉಂಟಾಗುವ, ಚಮತ್ಕೃತಿಯನು–ಚಮತ್ಕಾರವನ್ನು, ಸುಳಿವರ್ಗೆ–ದಾರಿಗರಿಗೆ, ಅಳವಡಿಸಿ–ನೇರ್ಪಡಿಸಿ, ನೆನಹಿಂಗೆ–ಇಚ್ಛೆಗಳಿಗೆ, ಮುಂಚುವ–ಮುಂದುಬಿದ್ದು ಬರತಕ್ಕ, ಪದನ್ಯಾಸಮಂ–ನಡಿಗೆಯ ಅಂದವನ್ನು, ಕಲಿತುನಡೆವ–ಕಲಿತುಕೊಂಡು ನಡೆಯುತಕ್ಕ, ಜಾರೆಯರ – ಕಾಮುಕ ಸ್ತ್ರೀಯರ, ಚದುರು–ಚಮತ್ಕಾರವು, ಎಸೆದಿರ್ದುದು–ಕಾಂತಿಯುಕ್ತಮಾಗಿತ್ತು. ||೧೦||

ಟೀ|| ನಿಶಿಯೊಳು – ರಾತ್ರಿಕಾಲದೊಳಗೆ, ಐದಿ – ಕಾಮುಕನು ಎದುರು ನೋಡುತ್ತಿರುವ ಸ್ಥಳವನ್ನು ಸೇರಿ, ಬಹ–ಹಿಂದಿರುಗಿ ಬರತಕ್ಕ, ಜಾರೆಯ–ಕಾಮುಕಳ, ಸಣ್ಣ–ಕೃಶನಾದ, ಸೆಳೆನಡು–ತೆಳ್ಳಡುವು, ಕಿಕ್ಕಿರಿದು–ಒಟ್ಟಿಗೂಡಿ, ಅಡರ್ದು–ವ್ಯಾಪಿಸಿ, ಉರವನು–ಎದೆಯ ಭಾಗವನ್ನೆಲ್ಲಾ, ಇಂಬುಗೊಂಡು – ಮುತ್ತಿಕೊಂಡು, ಉರೆ–ಅಧಿಕವಾಗಿ, ಬೆಳೆದ–ದೊಡ್ಡದಾಗಿರುವ, ಕಕ್ಕಸದ–ಕಠಿಣವಾದ, ಬಟ್ಟ–ದುಂಡಾಗಿರತಕ್ಕ, ಬಲ್ಮೊಲೆಗಳು – ಪೀವರ ಕುಚಂಗಳು, ಓಪನಕೈಗೆ – ಕಾಂತನ ಕೈಹಿಡಿತಕ್ಕೆ, ವೆಕ್ಕಸಂ–ಆಗದಿರುವುದು, ನೋಳ್ಪರ್ಗೆ–ನೋಟಕರಿಗೆ, ಕಣ್ಣಿಸುರು–ನೇತ್ರಗಳ ನೋಟದಿಂದೊಗೆವ ದೋಷವು, ಪುದುಗಿದೊಡೆ–ಉಂಟಾದರೆ, ಮದನಂಗೆ–ಮಾರನಿಗೆ, ಮಾನಹಾನಿ–ಮರ್ಯಾದೆ ತಪ್ಪುವದು, ಸೊಕ್ಕು–ದೃಷ್ಟಿಸಂಬಂಧದ ತೊಂದರೆಯು, ಮನ್ಮಥಾವಸ್ಥೆಯ ಆಯಾಸವು, ಲೇಸು–ಮೇಲಾದದ್ದು, ಆಗದು–ಆಗುವುದಿಲ್ಲ, ಎಂದು–ಎಂಬತೆರನಾಗಿ, ಒಪ್ಪುಳಿಯೊಳು–ಒಂದು ಹಿಡಿಯಲ್ಲಿಯೇ, ಅಡಗಿ–ಅಣಗಿಹೋಗಿ, ನೋಟಕ್ಕೆಕಾಣಿಸದೆ–ದೃಷ್ಟಿಪಥಕ್ಕೆ ಸಿಕ್ಕದೆ, ಕಾಮನ–ಮನ್ಮಥನ, ರೂಪನು – ಆಕಾರವನ್ನು, ಒಳಗೊಂಡು–ತಾಳಿ, ತಕ್ಕ – ಯೋಗ್ಯವಾದ, ಬಡತನದೊಳು – ಬಡವಾಗಿರುವದರ ಭಾವದಿಂದ, ಇರ್ದುದು – ತೋರಿ ಬರುತ್ತಲಿತ್ತು. ||೧೧||

---

ತುರದಿಂದಲೂ ಸಂಕೇತಸ್ಥಾನಕ್ಕೆ ಹೋಗುತ್ತಲಿರುವುದನ್ನು ನೋಡಿದರು ||೯|| ಆ ಬಳಿಕ ಇವರು ಮತ್ತೆ ಸ್ವಲ್ಪದೂರ ಹೊರಡಲು ಅಲ್ಲಿ ಒಬ್ಬಾನೊಬ್ಬ ಜಾರಿಣಿಯು ತನ್ನ ಮನೆಯಲ್ಲಿ ಯಾರೂ ಕಾಣದಂತೆ ಹೊರಟು ತನ್ನ ಸೌಂದರ್ಯವು ಮತ್ತೆ ಯಾರಿಗೂ ಗೋಚರವಾಗಬಾರದೆಂದು ಮೈಯನ್ನೆಲ್ಲಾ ವಸ್ತ್ರದಿಂದಾಚ್ಛಾದಿಸಿಕೊಂಡು ಕಾಮುಕನಿರುವೆಡೆಗೆ ಹೋಗುತ್ತಲಿರುವುದನ್ನು ನೋಡಿದರು ||೧೦|| ಇನ್ನೂ ಮುಂದೆ ಹೋಗಲು ಕಠಿಣವಾದ ಕುಚಮಂಡಲದಿಂದೊಪ್ಪುತ್ತಲೂ ಸುಂದರಿಯಾಗಿಯೂ ಇರುವ ಮತ್ತೋರ್ವಳು ಕಾಮುಕನೊಂದಿಗೆ ರತಿಸುಖವನ್ನೈದಿ ಹಿಂದಿರುಗಿ ಬರುತ್ತಲಿರುವುದನ್ನೂ || ೧೧ || ನೋಡಿದರು ಕಾಮುಕ

ಡಿದುನೋಡುತ್ತ ಮಣಿಮಣಿದುವೃತ್ತಕುಚ | ತಟಮಂನಿರೀಕ್ಷಿಸುತಕರ್ಣಪತ್ರವನಮರ್ಚ್ಚುತಹಾರಮಂಸರಿವೃತ || ಕಟಿಗೆನೆರಿಯಂ ಸೇರಿಸುತನಿಮಿರ್ದಕ್ಷತಕೆ | ವಿಟನನುರೆಬೈವೃತ್ತ ತಿರುಗಿನಿಜಮುಂದಿರಕೆ | ಕುಟಿಲಕುಂತಳದಜಾರೆಯರೈದಿಬರುತಿರ್ದರಲ್ಲಲ್ಲಿ ಕತ್ತಲೆಯೊಳು ||೧೨|| ಕತ್ತಲೆಯೊಳಸುರಾರಿಫಲುಗುಣರ್ಜಾರೆಯರ | ವೃತ್ತಾಂತಮಂನೋಡುತೈತರಲ್ಕನಿತರೋ | ಳ್ಪೊತ್ತದಿಹ ಜಕ್ಕವಕ್ಕಿಗಳವಿರಹದವೆಂಕಿಪೊಗೆಪೊಗೆದುಮೇದಿನಿಯೊಳು || ಸುತ್ತಸುತ್ತಲುಮಂಧಕಾರಮಾಗಿಸುತಿರ | ಲ್ಚಿತ್ತಜಂತಂಬೆಲರೊಳೂದಿದೊಡೆಪ್ರಜ್ವಲಿಸಿ | ಮತ್ತುರಿವಕಿಚ್ಚಿನೇಳಿಗೆಯಂತೆಮೂಡಿದಂಚಂದ್ರನಿಂದ್ರನದೆಸೆಯೊಳು || ೧೩ || ಮರುಗಿದವು ಕೋಕಕೋಕನದಂಗಳಾಗಬಾ | ಯ್ದೆರದವುಚಕೋರಕಕುಮುದರಾಜಿಗ | ಳು ತ್ತರುಗಿದತಮಿಸ್ರಮಾಲೋಕಲೋಕಸ್ಥಿತಿಗೆ

ಟೀ|| ಕುಟಿಲ - ಚದರಿ ಹೋಗಿರುವ, ಕುಂತಳ - ಕೇಶಂಗಳಿಂದ ಕೂಡಿದ, ಜಾರೆಯರು - ಕಾಮುಕಿಯರು, ಐದಿ-ವಿಟನಿರುವ ಕೇಳಿ ಗೃಹಕ್ಕೆ ಹೋಗಿ, (ಹಿಂದಕ್ಕೆ ಬರುವಾಗ) ಕತ್ತಲೆಯೊಳು-ಅಂಧಕಾರದಲ್ಲಿ, ಅಲ್ಲಲ್ಲಿ-ಆಯಾಯ ಸ್ಥಳಗಳಲ್ಲಿ, ಅಂಗುಲಿಯ-ಕೈಬೆರಳಿನ, ತುದಿಯಿಂದ - ಕಡೆಯಿಂದ, ನಿಟಲಮಂ - ಹಣೆಯ ಭಾಗವನ್ನು, ನೇವರಿಸುತ-ನೇರ್ಪಡಿಸಿಕೊಳ್ಳುತ್ತಲೂ, ತುಟಿವಿಡಿದು-ತುಟಿಯ ಮೇಲೆ ಕೈಯಿಟ್ಟುಕೊಂಡು, ನೋಡುತ್ತ-ಈಕ್ಷಿಸುತ್ತ, ವೃತ್ತ-ದುಂಡಗಿರುವ, ಕುಚತಟಮಂ-ಸ್ತನಪ್ರದೇಶಗಳನ್ನು, ಮಣಿಮಣಿದು-ಬಾಗಿಬಾಗಿ, ನಿರೀಕ್ಷಿಸುತ-ನೋಡುತ್ತ, ಕರ್ಣಪತ್ರವನು-ತಾಟಂಕವನ್ನು, ಅಮರ್ಚುತ-ಸರಿಯಾಗಿರುವಂತೆ ಮಾಡಿಕೊಳ್ಳುತ್ತ, ಹಾರಮಂ-ಕತ್ತಿನ ಪದಕವನ್ನು, ಸರಿವೃತ-ಸರಿಪಡಿಸಿಕೊಳ್ಳುತ್ತ, ನೆರಿಗೆಯಂ-ಸೀರೆಯ ಸೆರಗನ್ನು, ಕಟಿಗೆ ಟೊಂಕಕ್ಕೆ, ಸೇರಿಸುತ-ಸಿಕ್ಕಿಹಾಕಿಕೊಳ್ಳುತ್ತ, ನಿಮಿರ್ದ-ಉಂಟಾದ, ಕ್ಷತಕೆ-ಹಲ್ಲು ಉಗುರುಗಳ ಗಾಯಕ್ಕೆ, ಉರೆ-ಅಧಿಕವಾಗಿ, ವಿಟನಂ - ಕಾಮುಕನನ್ನು, ಬೈವೃತ - ಜರಿಯುತ್ತ, (ನಿಂದಿಸುತ್ತ) ತಿರುಗಿ - ಹಿಂದಿರುಗಿದವರಾಗಿ, ನಿಜ ಮಂದಿರಕ್ಕೆ-ತಮ್ಮ ತಮ್ಮ ಮನೆಗಳಿಗೆ, ಬರುತಿರ್ದರು-ಬರುತ್ತಲಿದ್ದವರಾದರು ||೧೨||

ಟೀ|| ಅಸುರಾರಿಫಲುಗುಣರ್ - ನರನಾರಾಯಣರು, ಜಾರೆಯರ - ಕಾಮುಕ ಸ್ತ್ರೀಯರ, ವೃತ್ತಾಂತಮಂ - ಸುದ್ದಿಯನ್ನು, ಕತ್ತಲೆಯೊಳ್-ಕತ್ತಲೆಯಲ್ಲಿ, ನೋಡುತ-ನಿರುಕಿಸುತ್ತ, ಐತರಲ್ಕೆ-ಬರಲಾಗಿ, ಪೊತ್ತದೆ-ಸಹಿಸಲಸದಳಮಾಗಿ, ಅಥವಾ ಉರಿಯದೇ, ಇಹ-ಇರತಕ್ಕ, ಜಕ್ಕವಕ್ಕಿಗಳ-ಚಕ್ರವಾಕಂಗಳ, ವಿರಹದವೆಂಕಿ-ವಿರಹಾಗ್ನಿಯು, ಅನಿತರೊಳ್-ಅಷ್ಟರೊಳಗಾಗಿ, ಪೊಗೆಪೊಗೆದು-ಹೊಗೆಯಾಡಲುಜ್ಜುಗಿಸಿ, ಮೇದಿನಿಯೊಳ್ - ಧರೆಯೊಳಗೆ, ಸುತ್ತಸುತ್ತಲುಂ - ನಾನಾ ಕಡೆಯಲ್ಲಿಯೂ, ಅಂಧಕಾರಮಾಗಿ-ಕತ್ತಲೆಯಾಗಿ, ಇರುತಿರಲ್-ಇರಲಾಗಿ, ತಂಬೆಲರೊಳು - ತಂಗಾಳಿಯಿಂದ, ಚಿತ್ತಜಂ-ಮದನನು, ಊದಿದೊಡೆ-ಬೀಸಲಾಗಿ, ಪ್ರಜ್ವಲಿಸಿ - ವಿರಹತಾಪದಿಂದೊಗೆದ ಬೆಂಕಿಯಿಂದ ದೊಡ್ಡದಾದ ಉರಿಯು ಹುಟ್ಟಿ, ಮತ್ತೆ - ತಿರುಗಿ, ಉರಿವ-ಉರಿಯುತ್ತಲಿರುವ, ಕಿಚ್ಚಿನ - ಅಗ್ನಿಯ, ಏಳಿಗೆಯಂತೆ - ಹೆಚ್ಚಿಗೆಯ ಹಾಗೆ, ಇಂದ್ರನದೆಸೆಯೊಳು - ಮೂಡಲ ದಿಕ್ಕಿನೊಳಗೆ, ಚಂದ್ರನು-ಇಂದುವು, ಮೂಡಿದಂ-ಉದಯಿಸಿದನು.

ಅ|| ವಿ|| ಜಕ್ಕವಕ್ಕಿ (ತ್ಭ) ಚಕ್ರವಾಕಪಕ್ಷಿ (ತ್ಸ) ತಂಬೆಲರ್-ತಣ್ಣಿತ್ತು ಎಲರ್ (ವಿ. ಪೂ.) ||೧೩||

ಟೀ|| ಕೋಕ-ಜಕ್ಕವಕ್ಕಿಗಳು, ಕೋಕನದಂಗಳು-ಕಮಲಗಳೂ ಸಹ, ಆಗ - ಆ ಕಾಲದಲ್ಲಿ, ಮರುಗಿದವು - ವಿರಹ ವೇದನೆಯನ್ನೈದಿದವು ಮತ್ತು ಮಗ್ಗಾದವು, ಚಕೋರ - ಚಕೋರಪಕ್ಷಿಗಳು, ಕೋರಕಕುಮುದ - ಮೊಗ್ಗಾದ ಕರೀಕಮಲಗಳೂ, ಇವುಗಳ, ರಾಜಿಗಳು-ಶ್ರೇಣಿಗಳು, ಬಾಯ್ತೆರದವು-ಹಿಮಾಂಶುವನ್ನೀಂಟಲು ಬಾಯನ್ನು ಬಿಟ್ಟವು, ಮತ್ತು ವಿಕಸಿತಂಗಳಾದವು, ಆಲೋಕ-ಕಾಂತಿಯುಕ್ತವಾದ ಲೋಕಸ್ಥಿತಿಗೆ, ಪ್ರಪಂಚದ ಇರುವಿಕೆಗೆ, ದೆಸೆದೆಸೆಯೊಳು-ನಾನಾ ದಿಕ್ಕುಗಳೊಳಗೂ

ಗೆ ಸೇರಿ ಹಿಂದಿರುಗಿ ಬರುವ ನಾರಿಯರಾದರೊ, ಹಣೆಯಲ್ಲಿನ ಕುಂಕುಮವು ಚದರಿ ಹೋಗಿರುವದನ್ನು ನೇವರಿಸಿಕೊಂಡು ತುಟಿಯನ್ನು ಕೈಯಿಂದ ಮುಟ್ಟಿಮುಟ್ಟಿ ನೋಡಿಕೊಳ್ಳುತ್ತ, ಸೂಡಾದ ತನ್ನ ಕುಚಯುಗ್ಮಂಗಳನ್ನು ಸೆರಗಿನಿಂದ ಮುಚ್ಚಿಕೊಡು ಕಿವಿಯಲ್ಲಿರುವ ಓಲೆಯನ್ನು ಸರಿಪಡಿಸಿಕೊಳ್ಳುತ್ತ ಜಾರಿಹೋಗಿರುವ ನೆರಿಗೆಗಳನ್ನು ಟೊಂಕದಲ್ಲಿ ಸೇರಿಸಿಕೊಂಡು ವಿಟನಿಂದಾದ ಗಾಯಗಳನ್ನ ತಾಳಲಾರದೆ ಅವನನ್ನು ದೂಷಿಸುತ್ತಲಿರುವುದನ್ನು ಕೃಷ್ಣಾರ್ಜುನರು ನೋಡುತ್ತಾ ||೧೨|| ಮುಂದರಿದು ಬರುವ ಕಾಲಕ್ಕೆ ಸರಿಯಾಗಿ ಚಕ್ರವಾಕಪಕ್ಷಿಗಳ ಹೊಗೆಯಾಡುತ್ತಲಿರುವ ವಿರಹಾಗ್ನಿಯು ಮನ್ಮಥನಿಂದ ಬೀಸಲ್ಪಟ್ಟ ತಂಗಾಳಿಯ ಸಹಾಯದಿಂದ ದೊಡ್ಡ ಜ್ವಾಲೆಯಾಗಿ ಪರಿಣಮಿಸಿತೊ ಎಂಬಂತೆ ಪೂರ್ವದಿಕ್ಕಿನಲ್ಲಿ ಚಂದ್ರನ ಕಾಂತಿಯು ಕಂಗೊಳಿಸಲಾರಂಭಿಸಿತು ||೧೩|| ಚಂದ್ರನ ಈ ಪರಿಯಾದ ಏಳಿಗೆಯಾದರೊ ಜಕ್ಕವಕ್ಕಿಗಳಿಗೆ ವಿರಹವನ್ನು ಹೆಚ್ಚಿಸಿತು ತಾವರೆಗಳನ್ನು ಮುಗ್ಗಾಗುವಂತೆ ಮಾಡಿತು ಚಕೋರಪಕ್ಷಿಗಳು ಚಂದ್ರಕಿರಣಗಳನ್ನು ಪಾನಮಾಡಲು ಬಾಯಿಯನ್ನಗಲಿಸುವಂತೆ ಮಾಡಿ ತಲ್ಲದೆ ಕನ್ನೈದಿಲೆಗಳು ಅರಳಲು ಅವಕಾಶವನ್ನುಂಟುಮಾಡಿತು ಕತ್ತಲನ್ನು ದೂರಮಾಡಿತು ಸಮುದ್ರದ ಸಂತೋಷವನ್ನು ಹೆಚ್ಚಿ

ತೊಲಗಿದವುದೆಸೆದೆಸೆಯೊಳು ‖ ಮೊರೆದುದ-ಸಮುದ್ರಮುದ್ರವದಪೆಚ್ಚ್ಹಗೆಯಿಂದ । ಲೊರತುಡುಕಾಂತಕಾಂತಿಪ್ರತತಿ ಕುಸುಮಶರ । ನುರುಬಿದನಗಲ್ದರಂಚಾಪಚಾಪಲಹಸ್ತನಾಗಿಚಂದ್ರೋದಯದೊಳು ‖ ೧೪ ‖ ಪ್ರಾಚೀನಿತಂಬಿನಿಯಮುಖ ಬಿಂಬದೆಳೆನಗೆಯ । ರೋಚಿಗಳೊಪೆಚ್ಚುಗೆಯೊಳುಬ್ಬೆದ್ದಪಾಲ್ಗಡಲ । ವೀಚಿಗಳೊಮನ್ಮಥನಕೀರ್ತಿಯಮರೀಚಿಗಳೊನಿಜ ಕಾಂತನಂಕಾಣುತ ‖ ನಾಚಿಬಿಳ್ಪೇರಿದಳೋರಾತ್ರಿವಧುಚಲ್ಲಿದನೊ । ಭೂಚಕ್ರಕಂಗಜಂಬೇಳುವೆಯಬೂದಿಯಂ । ವಾಚಿ ಸುವಡರಿದೆನಲ್ಪಸರಿಸಿತುಚಂದ್ರಕಿರಣಂಗಳೆಲ್ಲಾದೆಸೆಯೊಳು ‖೧೫‖ ತವೆಶಾಂತನಮೃತರೂಪಂಶೈತ್ಯವರ್ಧನಂ। ಭುವನಪ್ರಕಾಶಂ ಜನಾವಲೋಕಪ್ರಿಯಂ । ಧವಳತನುವೃತ್ತಂನಿರಂತರಂವಿಷ್ಣುಪದಸೇವಕಂಕೃಷ್ಣಾಂಕನು ‖ ದಿವಿಜತೋಷಿತನಾದರಾಜನ

---

ತುರುಗಿದ - ತುಂಬಿಕೊಂಡಿದ್ದ, ತಮಸ್ರಂ - ಕಗ್ಗತ್ತಲೆಯು, ತೊಲಗಿದವು - ಹೊರಟುಹೋಯಿತು, ಉದ್ರವದ - ಮೇಲಕ್ಕೇರಿ ಬರುವ, ಪೆಚ್ಚುಗೆಯಿಂದಲೆ - ಅಭಿವೃದ್ಧಿಯಿಂದಲೆ, ಸಮುದ್ರಂ - ಕಡಲು, ಮೊರೆದುದು - ಧ್ವನಿಯಂ ಮಾಡಿತು, ಉಡು- ತಾರೆಗಳ, ಕಾಂತ - ಅಂದವಾದ, ಕಾಂತಿಪ್ರತತಿ - ಕಳೆಯ ಸಮುದಾಯವು, ಬರತುದು - ಕಡಿಮೆಯಾಯಿತು, ಕುಸುಮ ಶರನು - ಹೂಗಳ ಸರಲಿಂದ ಕೂಡಿದ ಮೀನಕೇತನನು, ಚಾಪ - ಧನುಸ್ಸಿನಿಂದ, ಚಾಪಲ - ಅಲುಗಾಡುತ್ತಿರುವ, ಹಸ್ತನಾಗಿ - ಕರಗಳಿಂದ ಕೂಡಿ, ಚಂದ್ರೋದಯದೊಳು - ಚಂದ್ರನು ಉದಯಿಸಿದಾಗ, ಅಗಲ್ದರಂ - ವಿರಹವೇದನೆಯನ್ನನು ಭವಿಸುವರನ್ನು, ಉರುಬಿದನು - ಮೇಲ್ವಾಯ್ದು ಶಿಕ್ಷಿಸಿದನು ‖೧೪‖

ಟೀ‖ ಪ್ರಾಚೀನತಂಬಿನಿಯ - ಮೂಡಣದಿಕ್ಕೆಂಬ ನಾರೀಮಣಿಯ, ಮುಖಬಿಂಬದ - ಚಂದ್ರನಂತೆ ಹೊಳೆಯುವ ಮೋರೆಯ, ಎಳನಗೆಯ-ಮಂದಹಾಸದ, ರೋಜಿಗಳೊ-ಕಿರಣಂಗಳೊ, ಪೆಚ್ಚುಗೆಯೊಳು-ಅಧಿಕವಾಗುವಿಕೆಯಿಂದ, ಉಬ್ಬೆದ್ದ ಮೇಲಕ್ಕೆ ಉಕ್ಕಿದ, ಪಾಲ್ಗಡಲ-ಹಾಲಿನ ಸಮುದ್ರದ, ವೀಚಿಗಳೊ-ತರಂಗಗಳೊ, ಮನ್ಮಥನ - ಮದನನ, ಕೀರ್ತಿಯ - ಒಳ್ಳೆ ಹೆಸರಿನ, ಮರೀಚಿಗಳೊ-ಅಂಶುಗಳೊ, ರಾತ್ರಿವಧು-ರಾತ್ರಿಯೆಂಬ ಸ್ತ್ರೀಯು, ನಿಜ-ತನ್ನ, ಕಾಂತನಂ-ಪತಿಯನ್ನು, ಕಾಣುತ- ನೋಡುವುದರಿಂದ, ನಾಚಿ - ನಾಚಿಕೆಯನ್ನೈದಿ, ಬಿಳ್ಪೇರಿದಳೊ - ಬೆಳ್ಳಗಾದಳೊ, ಭೂಚಕ್ರಕೆ-ಇಳಾವಲಯಕ್ಕೆ, ಅಂಗಜಂ- ಮದನನು, ಬೇಳವೆಯಬೂದಿಯಂ-ಮಂಕುಬೂದಿಯನ್ನು, ಚೆಲ್ಲಿದನೊ-ಎರಚಿದನೊ,ವಾಚಿಸುವೊಡೆ-ನುಡಿಯುವುದಕ್ಕೆ, ಅರಿದು- ಅಸದಳವು, ಎನಲ್ - ಎಂಬತೆರನಾಗಿ, ದೆಸೆದೆಸೆಯೊಳು - ಎಲ್ಲಾ ದಿಕ್ಕುಗಳೊಳಗೂ, ಚಂದ್ರಕಿರಣಂಗಳು - ಹಿಮಾಂಶುಗಳು, ಪಸರಿಸಿತು-ಹರಡಿಕೊಂಡಿತು ‖೧೫‖

ಟೀ‖ (ಈ ಪದ್ಯದಲ್ಲಿ ಚಂದ್ರನಿಗೂ ರಾಜನಿಗೂ ಹೋಲಿಕೆಯನ್ನು ಕೊಟ್ಟದೆ), ತವೆ - ಚನ್ನಾಗಿ, ಶಾಂತನು - ತಣ್ಣಗಿರುವನು, ಅಮೃತರೂಪಂ-ಅಮೃತದಿಂದ ಪರಿಪೂರ್ಣನಾದವನು, ಶೈತ್ಯವರ್ಧನಂ-ತಂಪನ್ನು ಹೆಚ್ಚಿಸುವನು, ಜನ-ಲೋಗರ, ಅವಲೋಕ-ದೃಷ್ಟಿಗೆ, ಪ್ರಿಯಂ-ಹಿತವನ್ನುಂಟುಮಾಡುವನು, ಧವಳ-ಬೆಳ್ಳಗಿರುವ, ತನುವೃತ್ತಂ-ವರ್ತುಳಾಕಾರವಾದ ಶರೀರ ವುಳ್ಳವನು ನಿರಂತರಂ - ಯಾವಾಗಲೂ, ವಿಷ್ಣುಪದಸೇವಕಂ - ಆಕಾಶದಲ್ಲಿ ಸಂಚರಿಸತಕ್ಕವನು, ಕೃಷ್ಣ - ಕಪ್ಪಾದ, ಅಂಕಂ ಗುರುತುಳ್ಳವನು, ದಿವಿಜ-ಸುರರಿಗೆಲ್ಲಾ, ತೋಷಿತನು-ಸಂತಸವನ್ನೀಯುವನು, (ಇದು ಚಂದ್ರನ ಪರವಾದ ಅರ್ಥವು) ತವೆ- ಪೂರ್ಣವಾಗಿ, ಶಾಂತನು-ಸಮಾಧಾನವಾದ ಮನಸ್ಸುಳ್ಳವನು, ಅಮೃತರೂಪಂ-ಪ್ರಜಾಹಿತೈಷಿಯು, ಶೈತ್ಯವರ್ಧನಂ-ಶೈತ್ಯ-ತನ್ನ ಪ್ರಜೆಗಳಿಗೆಲ್ಲಾ ಸಮಾಧಾನವನ್ನು. ವರ್ಧನಂ-ಹೆಚ್ಚಿಸುವನು, ಭುವನ-ಲೋಕದಲ್ಲೆಲ್ಲಾ, ಪ್ರಕಾಶಂ-ಹೆಸರುವಾಸಿಯಾದವನು, ಜನ-ತನ್ನ ನಾಡಿನ ನಿವಾಸಿಗಳನ್ನು, ಅವಲೋಕ-ನೋಡಿಕೊಳ್ಳುವುದರಲ್ಲಿ, ಪ್ರಿಯಂ-ಅನುರಾಗವುಳ್ಳವನು, ಧವಳ-ಬೆಳ್ಳಗಿರುವ ಅಥವಾ ಸ್ವಚ್ಛವಾದ, ತನುವೃತ್ತಂ-ದೇಹ ಮತ್ತು ನಡವಳಿಕೆಯಿಂದೊಡಗೂಡಿರತಕ್ಕವನು, ನಿರಂತರಂ-ಸದಾ, ವಿಷ್ಣು-ಹರಿಯ

---

ಸಿತು ನಕ್ಷತ್ರರಾಶಿಯ ಕಾಂತಿಯು ಚಂದ್ರಿಕೆಯ ವೇಧೆಯನ್ನು ತಡೆಯದೆ ಮಾಯವಾಯಿತು ಮನ್ಮಥಾವಸ್ಥೆಯನ್ನು ತಾಳಲಾರದೆ ಜನರು ಬೀದಿಬೀದಿಯಲ್ಲಿಯೂ ತಿರುಗಾಡುವಂತಾಯಿತು ‖೧೪‖ ಇಂತಹ ಬಾಲಚಂದ್ರನು ಅಭಿವೃದ್ಧಿಯಾದಾಗ ನೋಟಕರಿಗಾದರೊ, ಪೂರ್ವದಿಕ್ಕೆಂಬ ನಾರೀಮಣಿಯ ಹಣೆಯಲ್ಲಿರುವ ಕಾಂತಿಯೋ ಎಂಬಂತೆಯೂ ಕ್ಷೀರಸಮುದ್ರವು ಉಕ್ಕಿದ್ದರಿಂದ ಮೇಲಕ್ಕೆ ಬಂದ ಅಲೆಗಳ ಸಮುದಾಯವೊ ಎಂಬ ಪರಿಯಿಂದಲೂ ಮನ್ಮಥನ ಕೀರ್ತ್ಯತಿಶಯದಿಂದುಂಟಾದ ಕಿರಣಗಳೊ ಎನ್ನುವ ಹಾಗೂ ನಿಶಾನಾರಿಯು ತನ್ನ ಪತಿಯನ್ನು ಕಾಣದ ಮನೋವ್ಯಥೆಯಿಂದ ಬಿಳುಪನ್ನೈದಿದಳೊ ಎಂಬ ಬಗೆಯಾಗಿಯೂ ಮನ್ಮಥನೇ ಲೋಕಕ್ಕೆಲ್ಲಾ ಮಂಕುಬೂದಿಯನ್ನು ಎರಚಿಬಿಟ್ಟದಾನೆಯೊ ಎಂಬುದಾಗಿಯೂ ಭ್ರಾಂತಿಗೈಯುತ್ತಲಿದ್ದನಲ್ಲದೆ ‖೧೫‖ ಅಗ್ರಹಾರಹಿತನೂ, ಲೋಕಹಿತೈಷಿಯೂ, ಪ್ರಜೆಗಳ ಮೇಲ್ಮೆಯನ್ನುಂಟುಮಾಡುವವನೂ ಲೋಕಪ್ರಸಿದ್ಧನೂ, ಪರಿಶುದ್ಧಾಂತರಂಗನೂ ತುಲಸೀಮಾಲಾಲಂಕೃತನೂ, ವಿಷ್ಣುಭಕ್ತನೂ ಯಾಗಾದಿಗಳಿಂದ ದೇವತೆಗಳನ್ನು ಆನಂದಗೊಳಿಸುವನೂ ಆದ

ಭ್ಯುದಯದೊಳ್ | ಕುವಲಯಶ್ರೀವಿರಾಜಿತಮಪ್ಪುದೇಂಕೌತು | ಕವೆಜಾರಚೋರರ್ಕಳಡಗದಿರ್ದಪರೆಪೇಳೆನಲಿಂದುಮೆರೆದ ನಂದು ‖ ೧೬ ‖ ಚಂದ್ರನುದಯಂಗೈಯ್ಯೆದೆಸೆದೆಸೆಗಳೆಲ್ಲಮುಂ | ಚಂದ್ರಿಕೆಗಳಿಂದಬೆಳಬೆಳಗಿಬೆಳ್ಳಿಯೊಲಾಗೆ | ಚಂದ್ರಕಾಂತಂಗಳಿಂದೈದೆನಿರ್ಮಿಸಿದನವಸೌಧಸೌಧಾಗ್ರಂಗಳ ‖ ಚಂದ್ರಶಾಲೆಗಳೊಳಗೆರತಿಕಲಾಪ್ರೌಢಿಯಿಂ | ಚಂದ್ರವದನೆಯರಂತರಂಗದೊಳ್ಪುದಿದನವ | ಚಂದ್ರಿಕೆಯನಲ್ರಂಜಿಸಿರೆರಮಿಸುತಿಹಪುರುಷರಾಪುರದೊಳೆಸೆದಿರ್ದರು ‖ ೧೭ ‖ ಕುಚಮಂಡಲದಮೇಲೆ ಚಾರುನಯನದನಡುವೆ | ಕಚದೆಡೆಯೊಳಿಹಕೃಷ್ಣವೈಭವಂತನ್ನಬಗೆ | ಗುಚಿತಮಪ್ಪುದುನಿನ್ನೆದೆಯೊಳಿರ್ಪಕೃಷ್ಣಭಾವಂತನಗೆವಿರಹಿತವನು ‖ ರಚಿಸದಿರದೆಂದೋರ್ವನಿನೆಯಳಂತಿಳುಪಲ್ಕೆ| ವಿಚಲಮಪ್ಪುದೆಕೃಷ್ಣಹೃದಯಮೆಂದವಳೊದರೆ | ವಚನದೋ

---

ಪದ-ಚರಣಂಗಳ, ಸೇವಕಂ-ಚಾರಕನು; ಕೃಷ್ಣ-ತುಲಸೀಮಾಲೆಯೇ, ಅಂಕಂ-ಗುರುತಾಗಿ ಉಳ್ಳವನು, ದಿವಿಜತೋಷಿತನು-ಅಷ್ಟದಿಕ್ಪಾಲಕರೇ ಮೊದಲಾದ ದೇವಗಡಣಕ್ಕೆಲ್ಲಾ, ತೋಷಿತನು-ಸಂತೋಷವನ್ನೀಯುವನು, (ಯಾಗಾದಿಗಳಲ್ಲಿ ಹವಿಸ್ಸನ್ನು ಕೊಟ್ಟು ಆನಂದಪಡಿಸುವವನು) ಆದ-ಆಗಿರತಕ್ಕ, ರಾಜನ-ಅರಸಿನ, (ಇದು ರಾಜನಪರವಾದ ಅರ್ಥವು) ಅಭ್ಯುದಯಯೊಳು-ಏಳಿಗೆಯಲ್ಲಿ, ಕುವಲಯ ಶ್ರೀ ವಿರಾಜಿತಂ-ಕುವಲಯ-ಕರೀಕಮಲಗಳ, ಶ್ರೀ-ಕಳೆಯಿಂದ, ವಿರಾಜಿತಂ-ಹೊಳೆಯತಕ್ಕದ್ದು, ಅಪ್ಪುದು-ಆಗುವದು, (ಚಂದ್ರೋದಯ ಕಾಲದಲ್ಲಿ) ಕುವಲಯ-ಇಳಾಮಂಡಲದ, ಶ್ರೀ-ಐಸಿರಿಯಿಂದ, ವಿರಾಜಿತಂ-ಹೊಳೆಯುವುದು, ಅಪ್ಪುದು-ಆಗುತ್ತದೆ, ಏಂಕೌತುಕವೇ - ಏನಚ್ಚರಿಯು, ಜಾರಚೋರರ್ಕಳು-ವಿಟರು ಮತ್ತು ಕಳ್ಳರು, ಅಡಗದೆ-ಔತುಕೊಳ್ಳದೆ, ಇರ್ದಪರೆ-ಇದ್ದಾರೆ, ಪೇಳು-ಹೇಳು, ಎನಲ್-ಎಂಬಂತೆ, ಅಂದು-ಆ ನಿಶಿಯಲ್ಲಿ, ಇಂದು-ಹಿಮಕರನು, ಮೆರೆದನು-ಕಾಂತಿಯುಕ್ತನಾದನು ‖೧೬‖

ಟೀ‖ ಚಂದ್ರನು-ಇಂದುವು, ಉದಯಂಗೈಯೆ-ಹುಟ್ಟಲಾಗಿ, ಚಂದ್ರಿಕೆಗಳಿಂದ- ಶೀತಾಂಶುಗಳಿಂದ, ದೆಸೆದೆಸೆಗಳೆಲ್ಲಮುಂ-ನಾನಾ ದಿಕ್ಕುಗಳನ್ನೂ, ಬೆಳಬೆಳಗಿ-ಚನ್ನಾಗಿ ಹೊಳೆಯುವಂತೆ ಮಾಡಿ, ಬೆಳ್ಳಿಯೋಲ್-ಬೆಳ್ಳಿಯಂತೆ, ಆಗೆ-ಆಗಲು, ಐದೆ-ಚನ್ನಾಗಿ, ಚಂದ್ರಕಾಂತಗಳಿಂದ-ಚಂದ್ರಕಾಂತದ ಕಲ್ಲುಗಳಿಂದ, ನಿರ್ಮಿಸಿದ-ರಚಿಸಿದ, ನವ-ನೂತನಂಗಳಾದ, ಸೌಧಾಗ್ರಂಗಳ-ಮಹಡಿಯ ಕೊನೆಗಳು, ಚಂದ್ರಶಾಲೆಗಳ-ಮೇಲ್ಗಡೆಯಲ್ಲಿರುವ ಮನೆಗಳ, ವಳಗೆ-ಒಳಭಾಗದಲ್ಲಿ, ಚಂದ್ರವದನೆಯರ-ಇಂದುಮುಖಿಯರ, ಅಂತರಂಗದೊಳ್-ಹೃದಯದಲ್ಲಿ, ರತಿಕಲಾಪ್ರೌಢಿಯಿಂದ-ರತಿಚಮತ್ಕಾರದಿಂದ, ಪುದಿದ-ಪ್ರಾಪ್ತವಾದ, ನವ-ನೂತನವಾದ, ಚಂದ್ರಿಕೆ-ಬೆಳದಿಂಗಳು, ಎನಲ್-ಎಂಬತೆ, ರಂಜಿಸಿರೆ-ಹೊಳೆಯುತ್ತಿರಲು, ಆಪುರದೊಳು-ಆ ಮಯೂರಧ್ವಜನ ಪಟ್ಟಣದೊಳಗೆ, ರಮಿಸುತಿಹ-ಕೇಳೀ ಸುಖವನ್ನೈದುವ, ಪುರುಷರು-ಮಾನವರು, ಎಸೆದಿರ್ದರು-ಕಾಂತಿವಿಶಿಷ್ಟರಾಗಿದ್ದರು ‖೧೭‖

ಟೀ‖ ಕುಚಮಂಡಲದಮೇಲೆ-ದುಂಡಿಗಿರುವತಕ್ಕ ಎದೆಗಂಟುಗಳ ಮೇಲೆ (ಮೊಲೆಗಳ) ಚಾರು-ಸೊಗಸಾದ, ನಯನದ-ನೇತ್ರಂಗಳ, ನಡುವೆ-ಮಧ್ಯಭಾಗದೊಳಗೆ, ಕಚದ-ಕೇಶಪಾಶಂಗಳ, ಎಡೆಯೊಳು-ಸ್ಥಾನದಲ್ಲಿ, ಇಹ-ಇರತಕ್ಕ, ಕೃಷ್ಣವೈಭವಂ-ಕಪ್ಪುವರ್ಣದ, ಅಥವ ಕೃಷ್ಣಮೂರುತಿಯ, ವೈಭವಂ-ಆಧಿಕ್ಯವು, ಉಚಿತಂ-ಅರ್ಹತೆಯನ್ನೈದಿದ್ದು, ಅಪ್ಪುದು-ಆಗುತ್ತದೆ, ನಿನ್ನೆದೆಯೊಳು-ನಿನ್ನ ಎದೆಯಭಾಗದಲ್ಲಿ, ಇರ್ಪ-ಇರತಕ್ಕ, ಕೃಷ್ಣಭಾವಂ-ಕಪ್ಪು ಮತ್ತು ಹೋಲಿಕೆಯು, ತನಗೆ-ನನಿಗಾದರೊ, ವಿರಹಿತವನು-ವಿರಹವೇದನೆಯನ್ನು, ರಚಿಸದೆ-ಎಸಗದೆ, ಇರದು-ಇರುವುದಲ್ಲವು, ಎಂದು-ಎಂಬ ತೆರನಾಗಿ, ಓರ್ವನು-ಒಬ್ಬಾನೊಬ್ಬ ಕಾಮುಕನು, ಇನೆಯಳಂ-ತನ್ನ ಸಖಿಯೊಂದಿಗೆ, ತಿಳುಪಲ್ಕೆ-ಅರುಹಲು, ಅವಳು-ಆ ಕಾಮುಕಳು, ಕೃಷ್ಣಹೃದಯಂ-ಕಪ್ಪುವರ್ಣವು, ಶ್ರೀ ಕೃಷ್ಣನಲ್ಲಿ ಆಸಕ್ತಿಯು ಮತ್ತು ದೋಷದಿಂದ ಕೂಡಿರುವ ಮನಸ್ಸು, ವಿಚಲಂ-ಶಾಶ್ವತವಾಗಿರುವುದು, ಅಪ್ಪುದೆ-ಆದೀತೆ, ಎಂದು-ಎಂಬತೆರನಾಗಿ, ಒದರೆ-ನುಡಿಯಲು, ವಚನ-ನುಡಿಗಳ, ದೋಷಕೆ-ನಿಂದೆಗೆ, ಹೆಂಗಸರ ಅಲಂಕಾರಕ್ಕೆ ಕಾರಣಂಗಳಾದ ಸ್ತನಗಳು, ತಲೆಯುಕೂದಲು, ಕಣ್ಣಿನನೋಟ ಇವನ್ನು ದೂಷಣೆ ಮಾಡಿದಂಥ ಪಾತಕ ಪರಿಹಾರದ ಸಲುವಾಗಿ, ಕಾಲ್ಗೆ-ಅವಳ ಚರಣಂಗಳಿಗೆ, ಎರಗಿ-ನಮಸ್ಕಾರನಮಾಡಿ, ಅವಳ ಕಾಲುಗಳ ಸಮೀಪವನ್ನೈ

---

ಅರಸನಂತೆ ತಾನೂಕೂಡ ಕಾಂತಿಯಿಂದಲೂ ಅಮೃತದಿಂದಲೂ ಕೂಡಿ ಲೋಕವನ್ನೆಲ್ಲಾ ತನ್ನ ಬೆಳಕಿನಿಂದ ಆನಂದಗೊಳಿಸುತ್ತ ಬೆಳ್ಪನ್ನು ಹೊಂದಿ ಆಗಸದಲ್ಲಿ ಮೆರೆಯುತ್ತ ಮೃಗಾಂಕನೂ ಸುರರಿಗೆಲ್ಲಾ ಸಂತಸವನ್ನೀಯುವನೂ ಆಗಿ ಹೆಚ್ಚಾದ ಕಾಂತಿಯಿಂ ದೊಡಗೂಡಿದನು, ಇದರಿಂದ ಜಾರಚೋರರಿಗೆ ಬಹು ತೊಂದರೆಯಾಯಿತು ‖೧೬‖ ಚಂದ್ರೋದಯವಾದುದರಿಂದ ನಾಲ್ಕುದಿಕ್ಕುಗಳೂ ಬೆಳ್ಳಿಯಂತೆ ಬೆಳ್ಳಗೆ ಕಂಗೊಳಿಸಲಾರಂಭಿಸಿದವು ಆಗ ಚಂದ್ರಮಂಡಲದ ಕಾಂತಿಯನ್ನೂ ಕೂಡ ನಿರಾಕರಿಸುವ ಇಂದುವದನೆಯರು ಚಂದ್ರಕಾಂತ ಶಿಲೆಗಳಿಂದ ಕಟ್ಟಿರುವ ಉಪ್ಪರಿಗೆಗಳೊಳಗೆ ಯಥೇಚ್ಛವಾಗಿ ವಿಹರಿಸುತ್ತಲಿದ್ದರು. ‖ ೧೭ ‖ ಆಗ ಒಬ್ಬಾನೊಬ್ಬ ವಿಟನು ಕಾಮುಕಳ ಕಣ್ಣುಗಳು, ಕೂದಲು, ಸ್ತನಗಳು ಇವುಗಳನ್ನು ಬಣ್ಣಿಸಿ ಬಣ್ಣಿಸಿ ಪ್ರಿಯಳಿಗೆ ಹಿತ

ಷಕೆಬೇಡಿಕೊಂಬವೋಲ್ಕಾಲ್ಗೆರಗಿಸಂತೈಸಿದಂಪ್ರಿಯಳನು ‖ ೧೮ ‖ ಅಚ್ಚಬೆಳ್ದಿಂಗಳೊಳ್ಮತ್ತೊರ್ವನಿನೆಯಳಂ | ನಿಚ್ಚಟದೊಳುಳಿವಂತೆನೀವಿಯುಂಬರಸೆಳದು | ಹೆಚ್ಚಳಿಸಿಪ್ರಿಯೆನಿನ್ನಸರ್ವಾಂಗಮಂನೋಡಿಕೃಷ್ಣಾವಲೋಕನವನು ‖ ಮೆಚ್ಚಿದಣಿಯದವೊಲಿರ್ದಪುದೆನ್ನಕಂಗಳೆಂ | ದುಚ್ಚರಿಸಲೆಲೆಮರುಳೆತಪ್ಪನಾಡಿದೆದೃಷ್ಟಿ | ಗೊಚ್ಚತಂಗೊಂಡುರಂಜಿಪಕೃಷ್ಣರೂಪಮಿರಲನ್ಯಮಿನ್ನೇಕೆಂದಳು ‖ ೧೯ ‖ ಅಂಗಜಶ್ರಮದಿಂಬೆಮರ್ದಕಾಮಿನಿತನ್ನ | ತುಂಗಕುಚತಟದಕತ್ತುರಿಯೊಳ್ಪುದಿದಪ್ರಿಯ | ನಂಗಮಂಕಂಡಿದೇತಕೆಕೃಷ್ಣರೂಪಾದೆನೀನೆಂದುಬೆಸಗೊಳಲ್ಕೆ ‖ ಅಂಗನೆತಿಳಿಯದೆಪೊತ್ತಿರ್ದನಂದುಕೃ | ಷ್ಣಂಗಿರಿಯನೊಂದನೆರಡದ್ರಿಗಳನೀಗಳಾಂ | ಹಿಂಗದಾಂತಿಹೆನೆನಗೆಕೃಷ್ಣಭಾವಂಬಪ್ಪುದಚ್ಚರಿಯೆಪೇಳೆಂದನು ‖ ೨೦ ‖ ಕತ್ತಲೆಯನಡಸಿಪಿಡಿದವರುಂ

---

ದಿ, ಪ್ರಿಯಳನು-ಸಖಿಯನ್ನು, ಬೇಡಿಕೊಂಬುವೋಲ್-ಕ್ಷಮಾಪಣೆಯನ್ನು ಕೇಳಿಕೊಳ್ಳುವನೊ ಎಂಬಂತೆ, ಸಂತೈಸಿದಂ-ಮನ್ನಿಸಿದನು, ಅಂದಕೆ ಆನಳ ಮನವು ದಣಿಯುವಂತೆ ರತಿಸುಖವನ್ನಿತ್ತನು ‖ ೧೮ ‖

ಟೀ‖ (ಒಬ್ಬಾನೊಬ್ಬ ವಿಟನು ದಿಗಂಬರಳಾದ ಕಾಮುಕಿಯೋರ್ವಳೊಂದಿಗೆ ರಮಿಸುತ್ತಲಿದ್ದನೆಂಬುದನ್ನು ಈ ಪದ್ಯದಲ್ಲಿ ವರ್ಣಿಸಿದೆ) ಮತ್ತೊರ್ವನು-ಅನ್ಯನಾದ, ಒಬ್ಬ ಕಾಮುಕನು, ಅಚ್ಚ-ಪರಿಶುದ್ಧವಾದ ಬೆಳ್ದಿಂಗಳೊಳ್-ಚಂದ್ರಿಕೆಯಲ್ಲಿ, ಇನೆಯಳಂ-ಸಖಿಯನ್ನು, ನಿಚ್ಚಟದೊಳು-ಬರಿಯ ಮೈಯಲ್ಲಿ, ಉಳಿವಂತೆ-ಇರುವತೆರನಾಗಿ, ನೀವಿಯಂ-ಸೀರೆಯ ಗಂಟನ್ನು, ಬರಸೆಳದು-ಬಿಚ್ಚಿಹೋಗುವಂತೆ ಸಡಲಿಸಿಬಿಟ್ಟು, ಹೆಚ್ಚಳಿಸಿ-ಆನಂದದಿಂದ ಕೂಡಿ, ಪ್ರಿಯೆ-ಎಲೆ ನಾಯಕಿಯೆ, ನಿನ್ನ-ನಿನ್ನಸಂಬಂಧವಾದ, ಸರ್ವಾಂಗಮಂನೋಡಿ-ಶರೀರವನ್ನೆಲ್ಲಾ ಈಕ್ಷಿಸಿ, ಕೃಷ್ಣಾವಲೋಕನವನು-ಪ್ರಾಯಸಮರ್ಥತೆಯನ್ನು, ಕೃಷ್ಣನನ್ನು ನೋಡುವುದನ್ನು, ಮೆಚ್ಚಿ - ಆನಂದವನ್ನುಹೊಂದಿ, ದಣಿಯದವೊಲ್- ಸಂತೋಷವನ್ನೈದದಿರುವಂತೆ, ಎನ್ನ-ನನ್ನದಾದ, ಕಂಗಳು-ನಯನಂಗಳು, ಇರ್ದಪುದು-ಇರುತ್ತದೆ, ಎಂದು-ಎಂಬತೆರನಾಗಿ, ಉಚ್ಚರಿಸಲು-ನುಡಿಯಲು, ಎಲೆಮರುಳೆ-ಎಲೈ ವಿವೇಕಹೀನನೆ, ತಪ್ಪನಾಡಿದೆ-ತಪ್ಪಾಗಿ ಮಾತನಾಡುತ್ತಿರವಿ, ದೃಷ್ಟಿಗೆ-ನೋಟಕ್ಕೆ, ಬಚ್ಚತಂಗೊಂಡು-ಅರ್ಹವಾಗಿದ್ದುಕೊಂಡು, ರಂಜಿಸುವ-ಹೊಳೆಯುವ, ಕೃಷ್ಣರೂಪಂ-ಶ್ರೀ ಕೃಷ್ಣಮೂರುತಿಯ ಆಕೃತಿಯ, ಮತ್ತು ನಗ್ನತೆಯು, ನನಿಗೆ-ನನಿಗಾದರೊ, ಇರಲು-ಉಂಟಾಗಿರಲು, ಅನ್ಯಂ-ಬೇರೆಯಾದದ್ದು, ಇನ್ನೇಕೆ-ಇನ್ನೇನು ಪ್ರಯೋಜನವು, ಎಂದಳು-ಎಂದು ನುಡಿದಳು ‖೧೯‖

ಟೀ‖ (ಒಬ್ಬಾನೊಬ್ಬ ನಾಯಕನು ತನ್ನ ಕರತಳದಿಂದ ಕಾಮುಕಿಯಾದೋರ್ವಳ ಸ್ತನಂಗಳಂ ಪಿಡಿದು ರಮಿಸುತ್ತಲಿದ್ದನೆಂಬುದನ್ನು ಈ ಪದ್ಯದಲ್ಲಿ ವಿವರಿಸಿದೆ) ಅಂಗಜಶ್ರಮದಿಂದ-ಮನ್ಮಥಾವಸ್ಥೆಯಿಂದ, ಬೆಮರ್ದ-ಮೈಯಲ್ಲೆಲ್ಲಾ ಬೆವರು ನೀರಿನಿಂದ ಕೂಡಿರತಕ್ಕ, ಕಾಮಿನಿ-ಸ್ತ್ರೀಯು, ತನ್ನ-ತನ್ನದಾದ, ತುಂಗ-ದೊಡ್ಡದಾಗಿರುವ, ಕುಚತಟದ-ಸ್ತನಮಂಡಲವನ್ನಾವರಿಸಿರುವ, ಕತ್ತುರಿಯೊಳ್-ಕಸ್ತೂರಿಯೊಳಗೆ, ಪುದಿದಿರ್ದ-ವ್ಯಾಪಿಸಿದ್ದ, ಪ್ರಿಯನ-ವಿಟನ, ಅಂಗಮಂ-ಶರೀರವನ್ನು, ಕಂಡು-ಈಕ್ಷಿಸಿ, ನೀನು-ನೀನಾದರೊ, ಇದೇತಕೆ-ಯಾವ ಕಾರಣದಿಂದ, ಕೃಷ್ಣರೂಪುಆದೆ-ಕಪ್ಪಾಗಿಹೋದೆ, ಎಂದು-ಎಂಬತೆರನಾಗಿ, ಬೆಸಗೊಳಲ್ಕೆ-ಪ್ರಶ್ನೆಯಂ ಗೈಯಲು, ಅಂಗನೆ-ಎಲೆ ನಾರಿಯೇ, ತಿಳಿಯದಾದೆ-ಇದು ನಿನಿಗೆ ತಿಳಿಯದೆ ಹೋಯಿತೆ, ಕೃಷ್ಣನು-ಶ್ರೀ ಕೃಷ್ಣಮೂರುತಿಯು, ಅಂದು-ಪೂರ್ವದಲ್ಲಿ, ಒಂದು-ಒಂದಾದ, ಗಿರಿಯನು-ಗೋವರ್ಧನವೆಂಬ ಪರ್ವತವನ್ನು, ಪೊತ್ತಿರ್ದನು-ಹೊತ್ತುಕೊಂಡಿದ್ದನು, ಆಂ-ನಾನಾದರೊ, ಹಿಂಗದೆ-ಹಿಮ್ಮೆಟ್ಟದೆ, ಈಗಳ್-ಈಗ, ಎರಡದ್ರಿಗಳನು-ಎರಡು ಬೆಟ್ಟಗಳನ್ನು, ಅಂತು-ಧರಿಸಿ, ಇಹೆನು-ಇದ್ದೇನೆ, ಎನಗೆ-ಈ ರೀತಿಯಲ್ಲಿ ಬೆಟ್ಟಗಳೆರಡನ್ನು ಹೊತ್ತಿರುವ ನನಿಗೆ, ಕೃಷ್ಣಭಾವಂ-ಕೃಷ್ಣರೂಪವು, ಬಪ್ಪುದು-ಉಂಟಾಗುವುದು, ಅಚ್ಚರಿಯೆ-ಆಶ್ಚರ್ಯವೇ, ಪೇಳು-ಹೇಳುವಳಾಗು, ಎಂದನು-ಎಂದು ನುಡಿದನು ‖೨೦‖

ಟೀ‖ ಈ ಪದ್ಯದಲ್ಲಿ ವಿಟನೋರ್ವನು ಕಾಮುಕಳೊಂದಿಗೆ ಬೆರತು, ಕೂದಲಿನಿಂದುಂಟಾದ ಕತ್ತಲೊಳಗೆ ನಾಯಕಿಯು ಮುಡಿದಿರುವ ಮಲ್ಲಿಗೇ ಮಗ್ಗುಗಳೆನ್ನುವ ನಕ್ಷತ್ರಂಗಳನು, ಎರಚಾಡಿ, ಕಾಮುಕಳ ಸ್ತನಯುಗ್ಮಂಗಳೆಂಬೆರಡು

---

ವಾಗುನಂತೆ ಮಾಡಿ ರತಿಸುಖವನ್ನೈದುತ್ತಲಿದ್ದನು. ‖ ೧೮ ‖ ಮತ್ತೊರ್ವನು ನಗ್ನಳಾಗಿರುವಳೊರ್ವಳನ್ನು ವರ್ಣಿಸುತ್ತ ಕಾಮಬಾಧೆಯನ್ನು ಪರಿಹಾರಮಾಡಿಕೊಳ್ಳುತ್ತಲಿದ್ದನು.‖೧೯‖ಬೇರೊಬ್ಬ ವಿಟನು ಕಾಮುಕಳೊಂದಿಗೆ ಬೆರತಿರುವಾಗ ಆವಾಗ ಅವಳು ಆ ಕಾಮುಕನನ್ನು ಕುರಿತು, ನಿನ್ನಂಗವೆಲ್ಲಾ ಏಕೆ ಕಪ್ಪಾಯಿತೆಂದು ಕೇಳಿದಳು. ಆಗ ರಸಿಕನು ಎಲೈ ನಾರಿಯೇ ಪೂರ್ವದಲ್ಲಿ ಕೃಷ್ಣನು ಒಂದು ಬೆಟ್ಟವನ್ನು ಎತ್ತಿದ್ದರಿಂದಲೇ ಕಪ್ಪಾಗಿ ಹೋದನು. ಈಗ ನಾನು ಎರಡು ಬೆಟ್ಟಗಳನ್ನು ಹಿಡಿದಿರುವಾಗ ನನ್ನಮೈ ಕಪ್ಪಾಗುವುದೊಂದು ಅಚ್ಚರಿಯೇ ಎಂದು ನುಡಿಯುತ್ತ ಸಂತೋಷದಿಂದ ರತಿಸುಖವನ್ನೈದುತ್ತಲಿದ್ದನು‖೨೦‖ ಹೀಗಿರುವಲ್ಲಿ ಒಂದು ಗಿಳಿಯು ನಾಯಕಿಯೋರ್ವಳನ್ನು ಕುರಿತು ಕತ್ತಲನ್ನು ಒಂದಾಗಿ ಸೇರಿಸಿ ಹಿಡಿದವರೂ ನಕ್ಷತ್ರಗಳ ಸಮೂಹವನ್ನು ಹೊಡೆದು ಕೆಡಹಿದವರೂ, ಗುಂಡಾಗಿರುವ ಚಂದ್ರನನ್ನು ಚುಂಬಿಸಿದವರೂ ಮಾರಯುದ್ಧಮಂ ಗೈದವರೂ ಉಂಟೆ

ಟೆತಾರೆಗಳ | ಮೊತ್ತಮಂಪೊಯ್ದುಕೆಡಪಿದರುಂಟೆಬೆಟ್ಟಗಳ | ನೊತ್ತಿಕರದಿಂದಕದಪಿದರುಂಟೆಗಗನಮಂತೆಕ್ಕೆಗೊಂದಿಸಿದರುಂಟೆ|| ವೃತ್ತದಿಂದೆಸೆವಶಶಿಯುಂಚುಂಬಿಸಿದರುಂಟೆ | ಚಿತ್ತಜಾಹವದಭಟರಂಘವಣೆಪೊಸತೆಂದು | ಹತ್ತಿರಿಹಪಂಜರದರಾಜಕೀರಂಪೇಳ್ದು ದೋರ್ವನಾಯಿಕೆಯಕೂಡೆ || ೨೧ || ಹರಶರಪ್ರಥಮಾವತಾರಲೋಚನೆಮಹೇ | ಶ್ವರಚಾಪತುಂಗವಕ್ಷೋಜಾತೆಹಿಮಕರಾ | ಭರಣಮೌರ್ವೀವೇಣಿತಾನಿರ್ದುಮನ್ಯಳಂಮದನಬಾಣಾಕ್ಷಿಯೆಂದು || ಸ್ಮರಕಾರ್ಮುಕಭ್ರೂಲತಾಶೋಭಿಯೆಂದುಶಂ | ಬರಮ

---

ಬೆಟ್ಟಗಳನ್ನು ತನ್ನೆರಡು ಕೈಗಳಿಂದ ಚನ್ನಾಗಿ ಅಮುಕಿ, ಆಕಾಶಕ್ಕೆ ಸಮನಾದ ಅವಳ ತೆಳ್ಳಡುವಿನಾಸರೆಯುಂಪಡೆದು, ಚಂದ್ರನಂತೆ ಥಳಥಳಿಸುತ್ತಲಿರುವ ಮುಖವುಳ್ಳ ಅವಳ ಅಧರಾಮೃತವನ್ನೀಂಟುತ್ತ ಮನ್ಮಥ ಯುದ್ಧವನ್ನು ಮಾಡುತ್ತಲಿದ್ದನು. ಈರ್ವರೂ ಅತ್ಯಾಸಕ್ತಿಯಿಂದ ರಮಿಸುತ್ತಲಿದ್ದರೆಂಬ ದನ್ನು ಸೂಚಿಸುವುದು.) ಕತ್ತಲೆಯನು-ತಮವನ್ನು, ಅಡಸಿ-ಒಟ್ಟುಗೂಡಿಸಿ, ಪಿಡಿದವರು-ಹಿಡಿದಿರತಕ್ಕವರು, ಉಂಟೆ-ಇದ್ದಾರೆಯೆ, ತಾರೆಗಳ-ನಕ್ಷತ್ರಂಗಳ, ಮೊತ್ತಮಂ-ಸಮುದಾಯವನ್ನು, ಪೊಯ್ದು-ತಾಡಿಸಿ, ಕೆಡಪಿದರು-ನೆಲಕ್ಕೆ ಉರುಳಿಸಿದವರು, ಉಂಟೆ-ಇದ್ದಾರೆಯೆ, ಕರದಿಂದ-ಹಸ್ತಪ್ರದೇಶದಿಂದ, ಬೆಟ್ಟಗಳನು-ಗಿರಿಗಳನ್ನು, ಒತ್ತಿ-ಹಿಸುಕಿ, (ಅದುಮಿ) ಕದಪಿದರು-ಸಂಕೋಚವನ್ನೈದುವಂತೆ ಮಾಡಿದವರು, ಉಂಟೆ-ಇದ್ದಾರೆಯೆ, ತೆಕ್ಕೆಗೆ-ಆಶ್ರಯದ ಸಲುವಾಗಿ, ಗಗನಮಂ-ಅಂತರಿಕ್ಷವನ್ನು, ಒಂದಿಸಿದರು-ಪಡೆಯುವಂತೆ ಮಾಡಿದರು, ಉಂಟೆ-ಇರುವರೆ, ವೃತ್ತದಿಂದ-ಗುಂಡಾಗಿ, ಎಸೆವ-ಹೊಳೆಯುತ್ತಲಿರುವ, ಶಶಿಯಂ-ಇಂದುವನ್ನು, ಚುಂಬಿಸಿದರು-ಈಂಟಿದವರು, ಉಂಟೆ-ಇದ್ದಾರೆಯೆ, ಚಿತ್ತಜ-ಮಾರನ, ಆಹವದ-ಕಾಳಗದ, ಭಟರ-ವೀರರ, ಅಂಘವಣೆ-ಬಗೆಯು, ಪೊಸತು-ನವೀನವಾದದ್ದು, ಎಂದು-ಎಂಬ ತೆರನಾಗಿ, ಹತ್ತಿರಿಹ-ಸಮೀಪದಲ್ಲಿರತಕ್ಕ, ಪಂಜರದ-ಪಂಜರವನ್ನು ಆಸರೆಯಾಗುಳ್ಳ, ರಾಜಕೀರಂ-ಅರಗಿಣಿಯು, ಓರ್ವ-ಒಬ್ಬಳಾದ ನಾಯಕಿಯ ಕೂಡೆ-ಕಾಮುಕಳೊಂದಿಗೆ, ಪೇಳ್ದುದು-ನುಡಿಯಿತು. ||೨೧||

ಟೀ|| ಹರ-ಪರಮೇಶ್ವರನ, ಶರ-ಸರಲಾದ ಮಹಾ ವಿಷ್ಣುವಿನ, ಪ್ರಥಮಾವತಾರ-ಮೊದಲನೆಯದಾದ ಮತ್ಸ್ಯಾವತಾರದ ಹಾಗೆ, ಲೋಚನೆ-ನೇತ್ರಗಳುಳ್ಳವಳೂ, ಮಹೇಶ್ವರ-ಹರನ, ಚಾಪ-ಧನುಸ್ಸಿನಂತೆ, ತುಂಗ-ಎತ್ತರವಾದ, ವಕ್ಷೋಜಾತೆ-ಕುಚಗಳಂ ಪಡೆದಿರುವಳೂ, ಹಿಮಕರ-ಇಂದುವನ್ನೆ, ಆಭರಣ-ತೊಡಿಗೆಯಾಗಿವುಳ್ಳ ಹರನ, ಮೌರ್ವೀ-ಸಿಂಜಿನಿಯಂತಿರುವ ಹಾವಿನ ತೆರನಾಗಿ, ವೇಣೀ-ಜಡೆಯುಳ್ಳವಳೂ, ಮದನ-ಕಂದರ್ಪನ, ಬಾಣ-ಸರಲಾದ ಕಮಲದಹಾಗೆ, ಅಕ್ಷಿ-ನಯನಂಗಳನ್ನುಳ್ಳವಳು, ಎಂದು-ಎಂಬತೆರನಾಗಿ, ಸ್ಮರ-ಮದನನ, ಕಾರ್ಮುಕ-ಧನುಸ್ಸಿನಂತಿರುವ, ಭ್ರೂಲತಾ-ಬಳ್ಳಿಯೋಪಾದಿಯಲ್ಲಿರುವ ಕಣ್ಣುಬ್ಬುಗಳ ದೆಸೆಯಿಂದ, ಶೋಭಿ-ಹೊಳೆಯುತ್ತಿರುವವಳೂ, ಎಂದು-ಎಂಬತೆರನಾಗಿ, ಶಂಬರ-ಶಂಬರನೆಂಬ ರಕ್ಕಸನನ್ನು, ಮಥನ-ಸಂಹಾರಮಾಡಿದ ಕಂದರ್ಪನ, ಶಿಂಜಿನಿ-ದಾರವಾಗಿರತಕ್ಕ ಭೃಂಗಾಳಿಗಳ ತೆರದಿಂದ, ಲೋಲ-ಚಪಲತೆಯನ್ನೈದಿದ, ಕುಂತಳೆ-ಕೇಶಪಾಶಗಳಿಂದ ಕೂಡಿರತಕ್ಕವಳು, ಎಂದು-ಎಂಬಂತೆಯೂ, ನಾನು-ನಾನೆ, ಇರ್ದುಂ-ಇದ್ದೂ ಕೂಡ, ನೀನು-ನೀನಾದರೊ, ಅನ್ಯಳಂ-ಬೇರೊಬ್ಬಳನ್ನು, ಕರದೆಗಡ-ಬರುವಂತೆ ಹೇಳಿದೆಯಲ್ಲವೆ, ಎಂದು-ಎಂಬತೆರನಾಗಿ, ಓರ್ವಳು-ಒಬ್ಬಾನೊಬ್ಬ ಹೆಂಗಸು, ಓಪನಂ-ತನ್ನ ಕಾಂತನೊಂದಿಗೆ, ಸವತಿ ಮತ್ಸರಕೆ-ತನ್ನ ಪ್ರಿಯನು ಮತ್ತೊಬ್ಬಳಲ್ಲಿ ಅನುರಕ್ತನಾಗಿರುವನೆಂಬ ದ್ವೇಷಕ್ಕಾಗಿ, ಕೋಪಿಸಿದಳು-ಕೋಪಮಾಡಿಕೊಂಡಳು.

ಅ|| ವಿ|| ಹರಶರಪ್ರಥಮಾವತಾರಲೋಚನೆ-ಹರನಶರ (ಷ.ತ) ಪ್ರಥಮ-ಮೊದಲನೆಯದಾದ, ಅವತಾರ-ರೂಪವು (ಮತ್ಸ್ಯಾವತಾರವು, ವಿ. ಪೂ) ಹರಶರನ ಪ್ರಥಮಾವತಾರ (ಷ.ತ) ಹರಶರಪ್ರಥಮಾವತಾರದಂತೆ ಲೋಚನವುಳ್ಳವಳು (ಬ.ಸ) ಮಹೇಶ್ವರ ಚಾಪತುಂಗವಕ್ಷೋಜಾತೆ=ಮಹತ್-ಶ್ರೇಷ್ಠನಾದ, ಈಶ್ವರ (ವಿ. ಪೂ) ಮಹೇಶ್ವರನ ಚಾಪ (ಷ. ತ) (ಮೇರುಗಿರಿಯು). ವಕ್ಷೋಜಾತ (ಸ. ತ) ತುಂಗ-ದೊಡ್ಡದಾದ, ವಕ್ಷೋಜಾತಗಳು (ವಿ ಪೂ; ಮಹೇಶ್ವರ ಚಾಪದಂತೆ ತುಂಗವಕ್ಷೋಜಾತಂಗಳನ್ನುಳ್ಳವಳು (ಬ. ಸ) ಹಿಮಕರಾಭರಣಮೌರ್ವೀವೇಣಿ=ಹಿಮ-ತಣ್ಣಗಿರುವ, ಕರ-ಕಿರಣಂಗಳನ್ನುಳ್ಳವನು (ಬ. ಸ) ಚಂದ್ರನು, ಹಿಮಕರ-ಇಂದುವನ್ನೆ, ಆಭರಣ-ಒಡವೆಯಾಗಿ ಉಳ್ಳವನು (ಈಶ್ವರನು, ಬ. ಸ) ಹಿಮಕರಾಭರಣನ ಮೌರ್ವಿ-(ಷ. ತ) ಸರ್ಪರಾಜನು, ಹಿಮಕರಾಭರಣನ ಮೌರ್ವಿಯಂತೆ ವೇಣಿಯುಳ್ಳವಳು (ಬ. ಸ) ಮದನಬಾಣಾಕ್ಷಿ-ಮದನನ ಬಾಣ (ಷ. ತ) ಮದನನ ಬಾಣದಂತೆ ಅಕ್ಷಿಯು ಯಾರಿಗೊ ಅವಳು (ಬ. ಸ) ಸ್ಮರಕಾರ್ಮುಕ ಭ್ರೂಲತಾಶೋಭಿ-ಸ್ಮರನ ಕಾರ್ಮುಕ

---

ಎಂದು ಕೇಳಿತು || ೨೧ || ಇದೇ ಕಾಲದಲ್ಲಿಯೆ ಒಬ್ಬ ನಾಯಕಿಯು ತನ್ನ ರಮಣನನ್ನು ಕುರಿತು, ಮೀನಾಕ್ಷಿಯೂ, ತುಂಗಕುಚಗಳಿಂದ ವಿರಾಜಿಸುವಳೂ, ನಾಗವೇಣಿಯೂ, ಕಪ್ಪಾದ ಕೇಶಪಾಶಂಗಳಿಂ ವಿರಾಜಿಸುವಳೂ, ಕಾಮನ ಬಿಲ್ಲಿನಂತಿರುವ ಕಣ್ಣುಬ್ಬುಗಳುಳ್ಳವಳೂ, ಆಗಿ ನಿನಗೆ ಬೇಕಾದವಳಾಗಿದ್ದರೂ ಕೂಡ ನೀನು ಮತ್ತೋರ್ವಳಲ್ಲಿ ಅನುರಾಗವನ್ನು ತೋರಿಸುವುದು

ಘನಸಿಂಜಿನೀಲೋಲಕುಂತಳೆಯೆಂದು | ಕರೆದೆಗಡನೀನೆಂದುಸವತಿನುತ್ಸರಕೋರ್ವಳೋಪನಂಕೋಪಿಸಿದಳು ॥೨೨॥ ಆವನಂ ಕಳೆಯಿಂದುರಿಯನಪ್ಪಿಬಾಳ್ದವಂ | ಪಾವಗಿದುಬದುಕಿದನನಾವನಂಮೃಡನಯನ | ಪಾವಕಜ್ವಾಲೆಯಿಂದುರೆಬೆಂದುಜೀವಿಸುವನಾವನಂತ್ರಿಭುವನದೊಳು ॥ ಈವಾಯುವೀಚಂದ್ರನೀಪುಷ್ಪಬಾಣನೀ | ಮೂವರುಂವಿರಹಿಗಳಕೊಲೆಗೆಳುಳಿದರಕಟತಾ ॥ ನೇಗೈವೆನೆಂದೋಪನಗಲ್ದಕಾಮಿನಿಯೋರ್ವಳಾಗಚಿಂತಿಸುತಿರ್ದಳು ॥ ೨೩ ॥ ವಂಚನೆಯೊಳಿಂತಿರುಳ್ಪುರಜನದನಾನಾ | ಪ್ರಪಂಚಮುಂನೋಡುತಸುರಾರಿಫಲುಗುಣ | ರ್ಸಂಚರಿಸುತಿರ್ದರಾಪಟ್ಟಣದೊಳನ್ನೆಗಂಕಾಂತರಾಲಿಂಗನದೊಳು ॥ ಪೊಂಚಿರ್ದಕಾಮಿನಿಯರೆದೆದಿಗಿಲೆನಲ್ಕೂಗಿ | ತುಂಚದೋಳ್ಕೋಳಿಗಳ್ಕೂಟಕೆಣೆವಕ್ಕಿಗ | ಳ್ಮುಂಚಿದುವುತಾವರೆಗೆತುಂಬಿವಿಂಡೆರಗಿದವುಮುರುಗಿದವುನೈದಿಲೆಗಳು ॥೨೪॥ ಬಳಿಕದಿನದಿನಕೊಂದುಪರಿಯಾಗಿದೋಷಮುಂ | ತಳೆದುಸಲೆಪೆಚ್ಚಿದಕರಂಗಳಿಂಸಿರಿಯಿರ್ದ | ನಿಳಯಂಗಳಂ ಬಾಧಿಸುವರಾಜನೈಶ್ವರ್ಯಮಿರ್ದಪುದೆಪೇಳೆನಲ್ಕೆ ॥ ತೊಲಗಿದವುಬೆಳ್ದಿಂಗಳಾದಿತ್ಯನೋಳ್ನೆರೆಯ | ಲೆಳಸಿಕುಂಕುಮದಿಂದಪೂರ್ವದಿ

---

(ಷ. ತ.) ಲತೆಯಂತಿರುವ ಭ್ರೂ (ಭ್ರೂಲತಾ,ಉ.ಉತ್ತ,ರ.ಕ)ಸ್ಮರಕಾರ್ಮುಕದಂತಿರುವ ಭ್ರೂಲತಾ (ವಿ ಪೂ )ಸ್ಮರನಕಾರ್ಮುಕ ಭ್ರೂಲತೆಯಿಂದ ಶೋಭಿ (ತೃ.ತ.) ಶಂಭರಮಥನನ ಶಿಂಜೀನೀ ಲೋಲಿಕುಂತಳೆ–ಶಂಬರ ಮಥನ (ದ್ವಿ.ತ) ಶಂಬರ ಮಥನನಶಿಂಜಿನೀ(ಷ.ತ.)ಭೃಂಗಗಳು)ಲೋಲವಾದ ಕುಂತಳ (ವಿ.ಪೂ.)ಶಂಬರ ಮಥನಶಿಂಜಿನಿಯಂತೆಲೋಲಕುಂತಳವುಳ್ಳವಳು(ಬ.ಸ.)॥

ಟೀ॥ ಉರಿಯನು–ಅಗ್ನಿಜ್ವಾಲೆಯನ್ನು, ಕೆಳೆಯಿಂದ–ಸ್ನೇಹಭಾವದಿಂದ, ಅಪ್ಪಿ–ತಬ್ಬಿಕೊಂಡು, ಬಾಳ್ದವಂ–ಜೀವಿಸಿರತಕ್ಕವನು, ಆವನಂ–ಯಾರಿರುವರು, ಪಾವು–ಹಾವು, ಕಚ್ಚಿ–ಕಚ್ಚಲಾಗಿ, ಬದುಕಿದವನು–ಪ್ರಾಣವನ್ನಿಟ್ಟುಕೊಂಡಿರುವನು, ಆವನಂ–ಯಾರಿದಾರೆ, ಮೃಡ–ಪಾರ್ವತೀಪತಿಯ. ನಯನ–ಹಣೆಗಣ್ಣಿನಲ್ಲಿರುವ, ಪಾವಕ–ಬೆಂಕಿಯ, ಜ್ವಾಲೆಯಿಂ–ಹೊಯ್ಲಿನಿಂದ, ಉರೆ–ಹೆಚ್ಚಾಗಿ,ಬೆಂದು–ಸುಟ್ಟುಕೋಗಿ, ಜೀವಿಸುವನು–ಪ್ರಾಣದೊರಸೆ ಬದುಕಿರತಕ್ಕವನು, ತ್ರಿಭುವನದೊಳು–ಮೂರು ಲೋಕಗಳೊಳಗೆ, ಆವನಂ–ಯಾವನಿರುವನು, ಈವಾಯುವು–ಈ ಗಾಳಿಯೂ, ಈಚಂದ್ರನು–ಈ ಹಿಮಾಂಶುವೂ, ಈಪುಷ್ಪಬಾಣನು–ಈ ಮದನನು, ಈಮೂವರುಂ–ಈ ಮೂರು ಜನರೂ, ವಿರಹಿಗಳ–ವಿರಹಾವಸ್ಥೆಯಿಂದಿರುವ ಜನರನ್ನು, ಕೊಲೆಗೆ–ಕೊಲ್ಲಬೇಕೆಂಬುದಾಗಿ, ಮಿಕ್ಕಿರುವರು, ಅಕಟ–ಅಯ್ಯೋ, ತಾನು–ನಾನಾದರೊ, ಏಗೈವೆನು–ಏನುಮಾಡಲಾದೀತ, ಎಂದು–ಎಂಬತೆರನಾಗಿ, ಓಪನು–ಕಾಂತನು, ಅಗಲ್ದ–ಬಿಟ್ಟ, ಕಾಮಿನಿ–ಸ್ತ್ರೀಯು, ಓರ್ವಳು–ಒಬ್ಬಳು, ಆಗ–ಆ ಕಾಲದೊಳಗೆ, ಚಿಂತಿಸುತ–ಆಲೋಚಿಸುತ್ತ, ಇರ್ದಳು–ಇದ್ದವಳಾದಳು ॥೨೩॥

ಟೀ॥ ಅಸುರಾರಿಫಲುಗುಣರು– ನರನಾರಾಯಣರು, ವಂಚನೆಯೊಳು–ಯಾರಿಗೂ ಕಾಣದಂತೆ, ಪುರಜನರ–ನಗರವಾಸಿಗಳ, ನಾನಾಪ್ರಪಂಚಮುಂ–ತೆರತೆರನಾದ ವೃತ್ತಾಂತಗಳನ್ನು, ನೋಡುತ–ನಿರುಕಿಸುತ್ತ, ಆಪಟ್ಟಣದೊಳು–ಆ ರತ್ನಪುರಿಯೊಳಗೆ, ಸಂಚರಿಸುತಿರ್ದರು–ಓಡಾಡುತ್ತಲಿದ್ದವರಾದರು, ಕಾಂತರ–ಕಾಮುಕರ, ಆಲಿಂಗನದೊಳು – ತಬ್ಬಿಕೊಳ್ಳುವಿಕೆಯಿಂದ, ಪೊಂಚಿರ್ದ–ಹೊಂಚುತ್ತಲಿದ್ದ, ಕಾಮಿನಿಯರ–ನಾರಿಯರ, ಎದೆ–ಎದೆಯು, ದಿಗಿಲೆನೆ–ಬೆದರುವಹಾಗೆ, ಅನ್ನೆಗಂ–ಆ ಕಾಲಕ್ಕೆ, ಕೋಳಿಗಳು–ತಾಮ್ರಚೂಡಂಗಳು, ಉಂಚದೊಳು–ಬಲು ಗಟ್ಟಿಯಾಗಿ, ಕೂಗಿದವು–ಕೂಗಿಕೊಂಡವು, ಎಣೆವಕ್ಕಿಗಳ್–ಚಕ್ರವಕ್ಕಿಗಳು, ಕೂಟಕೆ–ಒಂದುಗೂಡುವಕ್ಕಾಗಿ, ಮುಂಚಿದವು–ಮುಂದಾದವು, ತುಂಬಿವಿಂಡು–ಭೃಂಗಾಳಿಯು, ತಾವರೆಗೆ–ಪದ್ಮಾಕರಂಗಳಿಗೆ, ಎರಗಿದವು–ಹೊಕ್ಕವು, ನೈದಿಲೆಗಳು–ಕಪ್ಪುಕಮಲಗಳು, ಮುರುಗಿದವು–ಕಾಂತಿಹೀನವಾದುವು ॥೨೪॥

ಟೀ॥ ಬಳಿಕ–ತರುವಾಯ, ದಿನದಿನಕೆ–ಪ್ರತಿಯೊಂದು ದಿನಕ್ಕೂ, ಒಂದುಪರಿಯಾಗಿ–ಒಂದು ಬಗೆಯಾಗಿ, ದೋಷಮುಂ–ದೂರನ್ನು, ತಳೆದು–ಹೊಂದಿ, ಸಲೆ–ಪೂರ್ಣವಾಗಿ, ಪೆಚ್ಚಿದ–ಅಧಿಕವಾದ, ಕರಂಗಳಿಂದ–ಅಂಶುಗಳಿಂದಲೂ, ಕೈಗಳಿಂದಲೂ, ಸಿರಿ–ಐಶ್ವರ್ಯವು ಮತ್ತು ಧನಲಕ್ಷ್ಮಿಯು, ಇರ್ದ–ನೆಲೆಯಾಗಿದ್ದ, ನಿಳಯಂಗಳಂ–ಮಂದಿರಗಳನ್ನು, (ತಾವರೆ ಹೂಗಳ

---

ಯುಕ್ತವೇ ಎಂದು ಕೇಳುತ್ತಲಿದ್ದಳು. ॥ ೨೨ ॥ ಒಬ್ಬಾನೊಬ್ಬ ಹೆಂಗಸು ಕಾಂತನನ್ನಗಲಿ ಚಂದ್ರಿಕೆಯ ಚಂದದಿಂದಲೂ, ತಂಗಾಳಿಯ ಅಂದದಿಂದಲೂ, ಮನ್ಮಥ ಬಾಣದ ಪೆಟ್ಟನಿಂದಲೂ ವಿರಹಾತಿಶಯದಿಂದ ಮರುಗುತ್ತಲಿದ್ದಳು ॥ ೨೩ ॥ ಈ ರೀತಿಯಾದ ರತಿ ಪ್ರೌಢಿಯಿಂದಿರುವ ರಾತ್ರಿಯ ಅಂದವನ್ನು ಕೃಷ್ಣಾರ್ಜುನರು ಯಾರೊಬ್ಬರಿಗೂ ಗೋಚರವಾಗದಂತೆ ಪರೀಕ್ಷಿಸುತ್ತ ಬರುತ್ತಲಿರುವಾಗ ಕಾಂತರೊಂದಿಗೆ ಬೆರೆತಿರುವ ಕಾಮುಕಿಯರ ಎದೆಯು ತಲ್ಲಣಿಸುವಂತೆ ಕೋಳಿಯು ಕೂಗಿತು. ರಾತ್ರಿಯಲ್ಲಿ ಬೇರೆಯಾಗಿದ್ದ ಚಕ್ರವಾಕಗಳು ಒಂದುಗೂಡಲಾರಂಭಿಸಿದವು ತಾವರೆಗಳ ಮೇಲೆಲ್ಲಾ ತುಂಬಿಗಳು ಬಂದು ಕುಳಿತುಕೊಳ್ಳಲಾರಂಭಿಸಿದವು, ಕನ್ನೈದಿಲೆಗಳು ಮೊಗ್ಗಾದವು, ॥೨೪॥ ಅನಂತರ ದಿನಂಪ್ರತಿಯಲ್ಲಿಯೂ ತಪ್ಪುಗಳನ್ನು ಮಿತಿಮೀರಿ ಮಾಡುವ ರಾಜನ ಐಸಿರಿಯು ಅಸ್ಥಿರವಾಗುವಂತೆ ಬೆಳದಿಂಗಳು ಕಣ್ಣುಗಳಿಗೆ ಅಗೋಚರವಾಯಿತು. ಪೂರ್ವದಿಕ್ಕೆಂಬ ನಾರಿಯು

ಗ್ವನಿತೆಮುಂ | ಗಳನುಜ್ಜನಂಗೈದಳೆಂಬಂತೆರಂಜಿಸಿತುಮೂಡದೆಸೆಕೆಂಪಡರ್ದು || ೨೫ || ಗಾಲಿಯೊಂದೇರಥಕೆಜೋಡಾಗಿಪೂಡುವರೆ | ಸಾಲದೇಳೇಹಯಂನಡೆಸುವರೆಸಾರಥಿ | ಕಾಲಿಲ್ಲಲೋಕಯಾತ್ರೆಯನೊಲ್ಲೆನೆಂದೊಡಾಗದೆತನಗೆತಿರುಗಲೇಕೆ || ಕಾಲಗತಿಯಂಮೀರಬಾರದಿಂತೆಂಬುದಂ | ಮೂಲೋಕಕೆಚ್ಚರಿಸುವಂತೆಪೂರ್ವಾಚಲದ | ಮೇಲೆಮೂಡಿದನೆಂದಿನವೊಲಬ್ಜಬಾಂಧವಂನಯನಾಂಧವಂದಡಗಲು || ೨೬ || ಜನನಾಥಕೇಳ್ಮಯೂರಧ್ವಜಮಹೀಶ್ವರಂ | ದಿನನಾಥನುದಯದೊಳ್ವಿಮಲಸಂಧ್ಯಾವಿಧಿಯು|ನನುಕರಿಸಿಕೃಷ್ಣನಿದ್ದೆಡೆಗೆತಾಂಪೋಗಿಕಂಡಪೆನೆಂಬಕಾರಿಯವನು || ಮನದೊಳಗೆನಿಶ್ಚೈಸಿಪೊರಮಡುವನಾಗಿನಿಜ | ತನುಜನಂಕರೆಸಿಮಂತ್ರಿಗಳೆಲ್ಲರಂಬರಿಸಿ | ವಿನುತಭೂಸುರನೃಪಾಲಸ್ತೋಮದೊಡಗೂಡಿಕುಳ್ಳಿರ್ದನೋಲಗದೊಳು || ೨೭ || ಅನ್ನೆಗಂಪ್ರ

---

ನ್ನ) ಬಾಧಿಸುವ-ಹಿಂಸಿಸುವ, ತೊಂದರೆಯನ್ನೆಸಗುವ, ರಾಜನ- ಇಂದುವಿನ ಮತ್ತು ಅರಸನ, ಐಶ್ವರ್ಯಂ - ಸಿರಿಯು, ಇರ್ದಪುದೆ-ಇರುತ್ತದೆಯೆ, ಹೇಳು-ಉಸಿರು, ಎನಲ್ಕೆ-ಎಂಬಂತೆ, ಬೆಳ್ದಿಂಗಳ್-ಚಂದ್ರಿಕೆಯು, ತೊಲಗಿದವು-ಹೊರಟು ಹೋದವು, ಪೂರ್ವದಿಗ್ವನಿತೆ-ಮೂಡಣದಿಕ್ಕೆಂಬ ನಾರೀಮಣಿಯು, ಆದಿತ್ಯನೊಳ್-ದ್ಯುಮಣಿಯೊಂದಿಗೆ, ನೆರೆಯಲು-ಸೇರಬೇಕೆಂದು, ಎಳಸಿ-ಇಚ್ಛಿಸಿ, ಕುಂಕುಮದಿಂದ-ಕುಂಕುಮದಿಂದಲೇ, ಮಂಗಳವ-ಜ್ಜನಂಗೈದಳು-ಮಂಗಳಸ್ನಾನವನ್ನು ಮಾಡಿಸಿದಳು, ಎಂಬಂತೆ-ಎಂಬತೆರನಾಗಿ, ಮೂಡದೆಸೆ-ಪೂರ್ವದಿಕ್ಕು, ಕೆಂಪಡರ್ದು-ಕೆಂಪಿನಿಂದ ಕೂಡಿ, ರಂಜಿಸಿತು-ಕಾಂತಿಯುಕ್ತವಾಯಿತು || ೨೫ ||

ಟೀ|| ರಥಕೆ-ರಥಕ್ಕೆ, ಗಾಲಿಯೊಂದೇ-ಒಂದುಚಕ್ರವನ್ನೆ, ಜೋಡಾಗಿ-ಒಂದಾಗುವಹಾಗೆ, ಪೂಡುವರೆ-ಕಟ್ಟಬೇಕಾದರೆ, ಏಳೇಹಯಂ-ಸಪ್ತಾಶ್ವಂಗಳೇ, ಸಾಲದು-ಸಾಕಾಗುವದಿಲ್ಲವು, ನಡಸುವರೆ- ರಥವನ್ನು ನಡೆಸಬೇಕಾದರೆ, ಸಾರಥಿಗೆ-ರಥವನ್ನು ನಡೆಯಿಸುವನಿಗೆ, ಕಾಲಿಲ್ಲ-ಕಾಲುಗಳಿಲ್ಲವು, ಲೋಕಯಾತ್ರೆಯನು-ಲೋಕದಲ್ಲೆಲ್ಲಾ ಸುತ್ತಾಡುವುದನ್ನು, ಒಲ್ಲೆನು-ಬೇಡವು ತನಿಗೆ-ನನಿಗಾದರೊ, ತಿರುಗಲು-ಅಲೆದಾಡುವುದು, ಏಕೆ-ಏನುಪ್ರಯೋಜನ, ಎಂದೊಡೆ-ಎಂದಹಾಗಾದರೆ, ಆಗದೆ-ಆಗಲಾರದೆ, ಕಾಲಗತಿಯಂ-ಸಮಯಕ್ಕೆ ತಕ್ಕಂತೆ ನಡೆಯುವಿಕೆಯನ್ನು, ಮೀರಬಾರದು-ಅತಿಕ್ರಮಿಸಲಾಗುವದಿಲ್ಲವು, ಇಂತು-ಈ ಪರಿಯಿಂದ, ಎಂಬುದಂ-ಎನ್ನತಕ್ಕದ್ದನ್ನು, ಮೂಲೋಕಕೆ-ತ್ರಿಲೋಕಂಗಳಿಗೂ, ಎಚ್ಚರಿಸುವಂತೆ-ಸ್ಫೂರ್ತಿಗೆ ತರಲು, ಎಂದಿನವೋಲು-ಯಾವಾಗಿನಂತೆಯೇ, ಅಂದು-ಆ ದಿವಸವೂ ಕೂಡ, ನಯನಾಂಧಂ-ಕಣ್ಣುಗಳಿಗೆ ಉಂಟಾಗುವ ಕತ್ತಲೆಯು, ಅಡಗಲು-ತೊಲಗುವಹಾಗೆ, ಅಬ್ಜಬಾಂಧನಂ-ಕಮಲಗಳಿಗೆ ಸ್ನೇಹಿತನಾದ ಸೂರ್ಯನು, ಪೂರ್ವಾಚಲದಮೇಲೆ-ಪೂರ್ವದಿಕ್ಕಿನಲ್ಲಿರತಕ್ಕ ಪರ್ವತದಮೇಲೆ, ಮೂಡಿದನು-ಉದಯಿಸಿದನು ||೨೬||

ಟೀ|| ಜನನಾಥ-ನರೇಂದ್ರನಾದ ಜನಮೇಜಯನೆ, ಕೇಳು- ಲಾಲಿಸು, ದಿನನಾಥನ-ರವಿಯ, ಉದಯದೊಳ್-ಹುಟ್ಟುವಕಾಲದೊಳಗೆ, ಮಯೂರಧ್ವಜನು, ವಿಮಲ-ಪವಿತ್ರವಾದ, ಸಂಧ್ಯಾವಿಧಿಯನು-ಸಂಧ್ಯಾನುಷ್ಠಾನವನ್ನು, ಅನುಕರಿಸಿ-ರಚಿಸಿ, ತಾಂ-ತಾನಾದರೊ, ಕೃಷ್ಣನಿದ್ದೆಡೆಗೆ-ಕೃಷ್ಣಸ್ವಾಮಿಯಿರುವ ಸ್ಥಳಕ್ಕೆ, ಪೋಗಿ - ಹೊಕ್ಕು, ಕಂಡಪೆನು - ದರ್ಶನವನ್ನು ತೆಗೆದುಕೊಳ್ಳುವೆನು, ಎಂಬ-ಎನ್ನತಕ್ಕ, ಕಾರಿಯವನು-ಕಜ್ಜವನ್ನು, ಮನದೊಳಗೆ-ಹೃದಯದಲ್ಲಿ, ನಿಶ್ಚೈಸಿ-ನಿಷ್ಕರ್ಷಿಸಿಕೊಂಡು, ಪೊರಮಡುವನಾಗಿ-ಹೋಗಲುಜ್ಜುಗಿಸಿ ನಿಜ-ಸ್ವಕೀಯನಾದ, ತನುಜನಂ - ಕುವರನನ್ನು, ಕರೆಸಿ-ಬರುವಂತೆ ಹೇಳಿ, ಮಂತ್ರಿಗಳೆಲ್ಲರಂ-ಸರ್ವ ಸಚಿವರನ್ನು, ಬರಿಸಿ-ಕರೆಕಳುಹಿ, ಓಲಗದೊಳು-ಸಭಾಮಂಟಪದಲ್ಲಿ, ವಿನುತ-ಹೆಸರುವಾಸಿಯಾದ, ಭೂಸುರ-ವಿಪ್ರವರ್ಯರ, ನೃಪಾಲ-ಅರಸುಗಳ, ಸ್ತೋಮದಿಂದ-ಗುಂಪಿನಿಂದ, ಒಡಗೂಡಿ-ನೆರೆದು, ಕುಳ್ಳಿರ್ದನು-ಕೂತುಕೊಂಡಿದ್ದನು || ೨೭ ||

ಟೀ|| ಅನ್ನೆಗಂ-ಆವೇಳೆಗೆ ಸರಿಯಾಗಿ, ಪನ್ನಗಾರಿಧ್ವಜಂ-ಶ್ರೀ ಕೃಷ್ಣಮೂರುತಿಯು, ನಿಜ-ತನ್ನ, ಶಿಷ್ಯ-ಶಿಷ್ಯ

---

ಸೂರ್ಯನೊಂದಿಗೆ ಸೇರಬೇಕೆಂದು ಮಂಗಳಸ್ನಾನವಂನಾಡಿ, ಕುಂಕುಮದಿಂದಲಂಕೃತಳಾಗಿರುವಳೊ ಎಂಬಂತೆ ಪೂರ್ವದಿಕ್ಕು ಕೆಂಪಾಗಿ ಕಂಗೊಳಿಸಲಾರಂಭಿಸಿತು || ೨೫ || ಅಷ್ಟುಹೊತ್ತಿಗೆ ಸರಿಯಾಗಿ ಸೂರ್ಯನು ಎಲ್ಲೆಲ್ಲಿಯೂ ತುಂಬಿತುಳುಕಾಡುತ್ತಲಿದ್ದ ಕತ್ತಲೆಯನ್ನು ಹೋಗಲಾಡಿಸಬೇಕೆಂಬುದಾಗಿ ಪೂರ್ವಾಚಲದಮೇಲೆ ಉದಯಿಸಿದನು || ೨೬ || ಎಲೈ ಭೂಕಾಂತನಾದ ಜನಮೇಜಯನೇ ಕೇಳು, ಕೃಷ್ಣಾರ್ಜುನರು ರಾತ್ರಿಯನ್ನೆಲ್ಲಾ ಈಪರಿಯಾಗಿ ಕಳೆದದ್ದನ್ನು ಕೇಳಿದೆಯಷ್ಟೆ. ಇನ್ನು ಮುಂದಿನ ಕಥೆಯನ್ನರುಹುವೆನು ಕೇಳು, ಅತ್ತ ಮಯೂರಧ್ವಜ ಮಹಾರಾಜನಾದರೊ ಸೂರ್ಯೋದಯಕ್ಕೆಸರಿಯಾಗಿ ಎದ್ದು ಸಂಧ್ಯಾವಸ್ಥದನಾದಿ ನಿತ್ಯಕರ್ಮಂಗಳನ್ನು ಸಾಂಗವಾಗಿ ನೆರವೇರಿಸಿ, ಕೃಷ್ಣಮೂರುತಿಯ ಸಂದರ್ಶನಕ್ಕಾಗಿ ಹೊರಡಲು ಮನಸ್ಸನ್ನು ಸಿದ್ಧಯಿಸಿಕೊಂಡು, ತನ್ನ ಕುವರನಾದ ತಾಮ್ರಧ್ವಜನನ್ನೂ ಮಂತ್ರಿಯೇ ಮೊದಲಾದವರನ್ನೂ, ಸಕಲರಾದ ಭೂಸುರೋತ್ತಮರನ್ನೂ ಕರೆಸಿ, ಸಭೆಯಲ್ಲಿ ಕುಳಿತಿರುವಾಗ ||೨೭|| ಬ್ರಾಹ್ಮಣವೇಷಧಾರಿಯಾದ ಕೃಷ್ಣನು ಶಿಷ್ಯವೃತ್ತಿಯಿಂದಿರುವ ಅರ್ಜುನ

ಧ್ವಜವಿಪ್ರಾಕಾರಮಂತಳಿದ | ಪನ್ನಗಾರಿಧ್ವಜಂನಿಜಶಿಷ್ಯಪಾರ್ಥನಂ | ತನ್ನೊಡನೆಕೂಡಿಕೊಂಡೊಯ್ಯನೊಯ್ಯನೆ ಹಯದ್ವಯದಿಂದ ಪತ್ನಿಸಹಿತ || ರನ್ನದೊಡವುಗಳಕತ್ತುರಿತಿಲಕದನೊಸಲ | ಮನ್ನೆಯರಗಡಣದಿಂದ್ವಿಜನಿಕರದಿಂದಸಂ | ಪನ್ನದೀಕ್ಷೆಯೊಳೆಸೆವಭೂಪನಲ್ಲಿಗೆಬರಿದುಸ್ವಸ್ತ್ಯಸ್ತುನಿನಗೆಂದನು ||೨೮|| ಮತ್ತೆಲೆಮಹೀಪಾಲಶಾರ್ದೂಲನಿನಗಾಗ | ಲುತ್ತರೋತ್ತರಮೆಂದುತನಗೆನೀಂಬೇಡಿದುದ | ನಿತ್ತಪೆಮಹಾದಾನಿಯೆಂದುಶಿಷ್ಯಂವೆರಸಿಬಂದೆನಾನೀಗನಿನ್ನ || ಉತ್ತಮಾಧ್ವರಶಾಲೆಗೆಂಬದ್ವಿಜನಂ ಕಂಡು | ಚಿತ್ತದೋಳ್ಬೆದರಿನೃಪನಿದಿರೆದ್ದುಪದಕೆರಗಿ | ದತ್ತಾರ್ಘ್ಯಪಾದ್ಯಾಸನಂಗಳಿಂದುಪಚರಿಸಿಕುಳ್ಳಿರಿಸುತಿಂತೆಂದನು ||೨೯|| ಎಂದುಪರಿಯಂತಂದ್ವಿಜರ್ಗವಜ್ಞೆಯನೆಸಗ | ರಂದುಪರಿಯಂತನ್ವೈಸಲೆನರರಬಾಳ್ಕೆನೀಂ | ಬಂದುಪರಸಿದೊಡಾದುದಿಂದುತ್ತರೋತ್ತರಂತನಗೆನಿಶ್ಚಯಮಿಳೆಯೊಳು | ಸಂಧಿಸದಜನದವಂದನೆಗೆಮೊದಲೇಸ್ವಸ್ತಿ | ಯೆಂದೊಡಾಭೂಸುರಂ ಪ್ರಿಯದೊಳಾ

---

ವೃತ್ತಿಯಿಂದಿರುವ, ಪಾರ್ಥನಂ-ಫಲುಗುಣನನ್ನು, ತನ್ನೊಡನೆಕೂಡಿಕೊಂಡು- ತನ್ನೊಂದಿಗೆ ಸೇರಿಸಿಕೊಂಡು, ಒಯ್ಯನೊಯ್ಯನೆ-ನಿಧಾನವಾಗಿ, ಹಯದ್ವಯದಿಂದ-ಎರಡು ಯಜ್ಞಾಶ್ವಂಗಳಿಂದಲೂ, ಪತ್ನಿಸಹಿತ-ತನ್ನ ಭಾರ್ಯೆಯೊಂದಿಗೆ, ರನ್ನದೊಡವುಗಳ-ರತ್ನಖಚಿತವಾದ ಒಡವೆಗಳ, ಕತ್ತುರಿಯತಿಲಕದ-ಕಸ್ತೂರಿಯಿಂದ ಬರೆದ ತಿಲಕವುಳ್ಳ, ನೊಸಲ-ಹಣೆಯಿಂದ ಕೂಡಿದ, ಮನ್ನೆಯರ-ಹೊಗಳ ಭಟ್ಟರ ಮತ್ತು ಚಾಮರವನ್ನು ಹಾಕುವ, ಗಡಣದಿಂ-ಕೂಗಿನಿಂದ, ದ್ವಿಜ-ಭೂಸುರರ, ನಿಕರದಿಂದ-ಸಮುದಾಯದಿಂದಲೂ, ಸಂಪನ್ನ-ಸಹಿತವಾದ, ದೀಕ್ಷೆಯೊಳು-ಯಾಗದಕಟ್ಟಳೆಯಲ್ಲಿ, ಎಸೆವ-ಹೊಳೆಹೊಳೆವ, ಭೂಪನಲ್ಲಿಗೆ-ಮಯೂರಧ್ವಜನೆಂಬ ಅರಸನ ಹತ್ತಿರಕ್ಕೆ, ಬಂದು-ಬಂದವನಾಗಿ, ನಿನಗೆ-ನಿನಿಗಾದರೊ, ಸ್ವಸ್ತ್ಯಸ್ತು-ಮಂಗಳವುಂಟಾಗಲಿ, ಎಂದನ -ಎಂದು ನುಡಿದನು || ೨೮ ||

ಟೀ|| ಮತ್ತೆ-ತಿರುಗಿ, ಎಲೆಮಹೀಪಾಲಶಾರ್ದೂಲ - ರಾಜಾಗ್ರಣಿಯಾದ ಮಯೂರಧ್ವಜನೆ, ನಿನಿಗೆ-ನಿನಿಗಾದರೊ, ಉತ್ತರೋತ್ತರಂ - ಹೆಚ್ಚಾದ ಅಭಿವೃದ್ಧಿಯು, ಆಗಲಿ - ಉಂಟಾಗಲಿ, ಎಂದು - ಎಂಬುದಾಗಿಯೂ, ನೀಂ - ನೀನಾದರೊ, ತನಿಗೆ-ನನಿಗಾಗಿ, ಬೇಡಿದುದ-ಬಯಸಿದ್ದನ್ನು, ಇತ್ತಪೆ-ದಾನಮಾಡುತ್ತಿ, ಮಹಾದಾನಿ-ಬಹಳ ದಾನಪರನು, ಎಂದು-ಎಂಬುದಾಗಿ, ಆಂ-ನಾನು, ಶಿಷ್ಯಂವೆರಸಿ-ಶಿಷ್ಯನಿಂದೊಡಗೂಡಿ, ನಿನ್ನ-ನಿನ್ನದಾದ, ಉತ್ತಮ-ಮೇಲಾದ, ಅಧ್ವರಶಾಲೆಗೆ-ಯಾಗಮಂಟಪಕ್ಕೆ, ಈಗ-ಈಗಲಾದರೊ, ಬಂದೆನು-ಬಂದಿದೇನೆ, ಎಂಬ-ಎಂದು ನುಡಿಯುವ, ದ್ವಿಜನಂ-ವಿಪ್ರನನ್ನು, ಕಂಡು-ಈಕ್ಷಿಸಿ, ನೃಪನು-ರಾಜನಾದ ಮಯೂರಧ್ವಜನು, ಚಿತ್ತದೋಳ್-ಹೃದಯದಲ್ಲಿ, ಬೆದರಿ-ಹೆದರಿಕೊಂಡು, ಇದಿರೆದ್ದು-ತನ್ನ ಆಸನದಿಂದ ಮೇಲಕ್ಕೆದ್ದವನಾಗಿ, ಪದಕೆ-ಅಡಿಗಳಿಗೆ, ಎರಗಿ-ವಂದಿಸಿ, ದತ್ತ-ಈಯಲ್ಪಟ್ಟ, ಅರ್ಘ್ಯಪಾದ್ಯಾಸನಂಗಳಿಂದ-ಕೈಕಾಲುಗಳಿಗೆ ನೀರು, ಕೂತುಕೊಳ್ಳಲು ಮಣೆ ಮೊದಲಾದ ಉಪಚಾರಂಗಳಿಂದ, ಉಪಚರಿಸಿ-ಮರ್ಯಾದೆಮಾಡಿ, ಕುಳ್ಳಿರಿಸುತ-ಕೂತುಕೊಳ್ಳುವಂತೆ ಹೇಳುತ್ತಾ, ಇಂತು-ಮುಂದೆ ಹೇಳುವಂತೆ, ಎಂದನು-ನುಡಿದನು ||

ಅ|| ವಿ|| ಮಹೀಪಾಲ-ಮಹಿಯನ್ನುಪಾಲ (ದ್ವಿ. ತ.) ಮಹೀಪಾಲರಲ್ಲಿ ಶಾರ್ದೂಲ (ಸ. ತ) ||೨೯||

ಟೀ|| ದ್ವಿಜರ್ಗೆ-ವಿಪ್ರರಿಗೆ, ಎಂದು ಪರ್ಯಂತಂ-ಎಲ್ಲಿಯತನಕ, ಅವಜ್ಞೆಯನು-ಅವಮಾನವನ್ನು, ಎಸಗರು-ಮಾಡುವುದಿಲ್ಲವೊ, ಅಂದುಪರ್ಯಂತಂ-ಅಲ್ಲಿಯತನಕ, ನರರ-ಮಾನವರ, ಬಾಳ್ಕೆ-ಜೀವಿಸುವಿಕೆಯು, ಐಸಲೆ- ಅಷ್ಟುಮಾತ್ರದ್ದಾಗಿರುವುದು, ನೀಂ-ನೀನಾದರೊ, ಬಂದು-ಇಲ್ಲಿಗೆ ಬಿಜಮಾಡಿ, ಪರಸಿದೊಡೆ-ಹರಸಲಾಗಿ, ಇಂದು-ಈ ಹೊತ್ತು, ತನಗೆ-ನನಿಗಾದರೊ, ಉತ್ತರೋತ್ತರಂ-ಏಳಿಗೆಯು, ಆದುದು-ಆದಹಾಗೆಯೇ ಸರಿ, ನಿಶ್ಚಯಂ-ಯಥಾರ್ಥವು, ಇಳೆಯೊಳ್-ಲೋಕದಲ್ಲಿ, ಸಂಧಿಸದ-ಎಸಗದಿರುವ, ಜನದ-ನರರ, ವಂದನೆಗೆ-ಎರಗುವಿಕೆಗೆ, ಮೊದಲೆ-ಪೂರ್ವಭಾವಿಯಾಗಿಯೆ, ಭೂಸುರಂ-ವಿಪ್ರನು, ಸ್ವಸ್ತಿ-ಮಂಗಳವು, ಎಂದೊಡೆ-ಎಂದು ನುಡಿದರೆ, ಆಭೂಸುರಂ-ಅಂತಹ ವಿಪ್ರನು, ಪ್ರಿಯದೊಳು-ಪ್ರೇಮದಿಂದಲೇ, ಆಪ್ರಾಣಿಯಂ-

---

ನೊಂದಿಗೆ ದೀಕ್ಷಾಬದ್ಧನಾಗಿ, ಯಜ್ಞಾಶ್ವಗಳಿಂದಲೂ ಪತ್ನೀಪುತ್ರಾದಿಗಳಿಂದಲೂ ಕೂಡಿಕೊಂಡಿರುವ ರಾಯನಬಳಿಗೆ ಬಂದು ಸೇರಿ ಎಲೈ ರಾಜೇಂದ್ರನೆ, ನಿನಗೆ "ಸ್ವಸ್ತ್ಯಸ್ತು" ಎಂದು ನುಡಿದು ||೨೮|| ಮತ್ತೆ ರಾಜನನ್ನು ಕುರಿತು ನಿನಿಗೆ ಮೇಲ್ಮೆಯುಂಟಾಗಲೆಂದು ಹರಸಿದಬಳಿಕ ರಾಯನನ್ನು ಕುರಿತು, ಎಲೈ ದೊರೆಯೇ, ನೀನು ದಾನಶೀಲನೆಂದು ತಿಳಿದು ಶಿಷ್ಯನೊಂದಿಗೆ ನಿನ್ನಲ್ಲಿಗೆ ಬಂದಿರುವೆನೆಂದು ಹೇಳಿದನು. ಈ ಮಾತನ್ನು ಕೇಳಿದ ಮಯೂರಧ್ವಜನು ಮನಸ್ಸಿನಲ್ಲಿ ಹೆದರಿ ಆ ವೃದ್ಧ ಬ್ರಾಹ್ಮಣನಬಳಿಗೆ ಬಂದು, ಆತನ ಪಾದಗಳಿಗೆ ಅಡ್ಡಬಿದ್ದು, ಅರ್ಘ್ಯಪಾದ್ಯಾದಿಗಳಿಂದ ಅವನನ್ನು ಸತ್ಕರಿಸಿ, ಸುಖಾಸನದಲ್ಲಿ ಕುಳ್ಳಿರಿಸಿದ ಬಳಿಕ ಮಯೂರಧ್ವಜನು ಆ ಭೂಸುರಾಗ್ರಣಿಯನ್ನು ಕುರಿತು || ೨೯ || ಎಲೈ ಭೂಸುರೋತ್ತಮನೆ, ಲೋಕದಲ್ಲಿ ಎಲ್ಲಿಯವರೆಗೂ ಪ್ರಜೆಗಳಿಗೆ ಯಾವ ವಿಧವಾದ ಬಾಧೆಯೂ ಇಲ್ಲದಂತೆ ನೋಡಿಕೊಳ್ಳುವನೊ ಅದುವರಿಗೆಮಾತ್ರ ಮನುಷ್ಯನ ಬಾಳು

ಪ್ರಾಣಿಯಂ | ಕೊಂದಲ್ಲದೆಬೇರೆತಾಪಮೇತಕೆವಿಪ್ರಪೇಳೆಂದೊಡಿಂತೆಂದನು||೩೦|| ಪರಸಲಾಗದುನಮಸ್ಕಾರಕ್ಕೆಮುನ್ನಭೂ| ಸುರರನ್ಯರಂತನ್ನಸಂಕಟನಿಮಿತ್ತದಿಂ | ದರಸಂಗೆಬಿನ್ನಪಂಗೈವೆನಾಶೀರ್ವಾದಮಂಮೊದಲೆಮಾಡದಿಹನೆ || ಧರಣಿಪತಿವಂದ್ಯನಲ್ಲವೆ ದೋಷಮೇನಿದಕೆ| ಪಿರಿದಾರ್ತನಾಗಿನಿನ್ನೆಡೆಗೆನಾಂಬಂದೆನ | ಧ್ವರಶಾಲೆಗೆಂದುಕಪಟದ್ವಿಜನುಡಿಯಲ್ಕೆನರನಾಥನಿಂತೆಂದನು ||೩೧|| ದ್ವಿಜತಿಲಕನೀನನುಗ್ರಹಿಸೆನಗೆಧನ್ಯನಾಂ | ನಿಜಶಿಷ್ಯನಂಕೂಡಿಕೊಂಡುಮಖಮಂಟಪಕೆ | ಬಿಜಯಮಾಡಿದಕಜ್ಜಮಾವುದೇತರೊಳಾಶೆನಿನಗಾರ್ತಮೇನಿದರೊಳು || ತ್ಯಜಿಸಬೇಡೊಂದನುಂಪೇಳ್ವೊಡಾನೀವೆನಾ | ರಜಮಿಲ್ಲದೆಲ್ಲಮಂವಾಚಿಸೆಂದಾಶಿಖಿ | ಧ್ವಜನಾಡಲಾವಿಪ್ರನಿಂತೆಂದುತನ್ನವೃತ್ತಾಂತಮಂವಿವರಿಸಿದನು ||೩೨|| ಉರ್ವೀಂದ್ರಕೇಳಾದೊಡಾಂಧರ್ಮಪುರದೋಳ್ಪೆ | ಸ

ಅವನನ್ನು, ಕೊಂದನು - ಕೊಲೆಮಾಡಿದವನು, ಅಲ್ಲದೆ_ಆದಾನೆ ಹೊರತು, ಬೇರೆ_ಅನ್ಯಪ್ರಕಾರವಾದ, ಶಾಪಂ _ ನಿಂದಾವಚನವು, ಏತಕೆ_ಏನು ಸಾರ್ಥಕವು, ವಿಪ್ರ_ಭೂಸುರೋತ್ತಮನೆ, ಪೇಳ್-ಹೇಳುವನಾಗು, ಎಂದೊಡೆ_ಎಂದು ನುಡಿಯಲು, ಇಂತ_ಮುಂದೆ ಹೇಳುವಂತೆ, ಎಂದನು-ಕೃಷ್ಣನು ಹೇಳಲುಜ್ಜುಗಿಸಿದನು ||೩೦||

ಟೀ|| ಭೂಸುರರು-ವಿಪ್ರೋತ್ತಮರು, ನಮಸ್ಕಾರಕ್ಕೆಮುನ್ನ - ನಮಸ್ಕಾರಮಾಡುವುದಕ್ಕೆ ಪೂರ್ವಭಾವಿಯಾಗಿಯೇ, ಅನ್ಯರಂ_ಬ್ರಾಹ್ಮಣೇತರರಾದ ಮೂರು ವರ್ಣದವರನ್ನು, ಪರಸಲಾಗದು_ಆಶೀರ್ವಾದವಂಗೈಯಲಾಗದು, ಅರಸಂಗೆ - ರಾಜನಿಗೆ, ತನ್ನ_ನನ್ನ ಸಂಬಂಧವಾದ, ಸಂಕಟನಿಮಿತ್ತದಿಂದ - ವ್ಯಥೆಯುಸಲುವಾಗಿ, ಬಿನ್ನಪವಂಗೈವನು - ಅರಿಕೆಯನ್ನು ಮಾಡಿಕೊಳ್ಳವನು, ಮೊದಲೆ_ಪ್ರಾರಂಭದಲ್ಲಿಯೆ, ಆಶೀರ್ವಾದಮಂ-ಹರಕೆಯನ್ನು, ಮಾಡದಿಹನೆ_ಹೇಳದಿರುವನೆ, ಧರಣಿಪತಿ_ರಾಜನಾದರೊ, ವಂದ್ಯನು_ಸಕಲರಿಂದಲೂ ನಮಸ್ಕಾರವನ್ನುಮಾಡಿಸಿಕೊಳ್ಳತಕ್ಕವನು, ಅಲ್ಲವೆ_ಆಗಿಲ್ಲವೆ, ಇದಕೆ-ಹೀಗೆ ಮಾಡಿದ್ದಕ್ಕೆ, ದೋಷಮೇಂ_ಬಾಧಕವೇನಿಧೆ, ನಾಂ _ ನಾನಾದರೊ, ಪಿರಿದು-ಅಧಿಕವಾದ, ಆರ್ತನಾಗಿ - ದೈನ್ಯಭಾವವನ್ನೈದಿ, ಅಧ್ವರಶಾಲೆಗೆ_ಯಜ್ಞವನ್ನು ಮಾಡುವ ಸ್ಥಳಕ್ಕೆ, ನಿನ್ನೆಡೆಗೆ_ನಿನ್ನ ಸಮೀಪಕ್ಕೆ, ಬಂದೆನು-ಬಂದು ಇದ್ದೇನೆ, ಎಂದು_ಎಂಬತೆರನಾಗಿ, ಕಪಟದ್ವಿಜಂ_ಮೋಸದಿಂದ ಬ್ರಾಹ್ಮಣನಾಗಿರುವ ಕೃಷ್ಣಸ್ವಾಮಿಯು, ನುಡಿಯಲ್ಕೆ-ತಿಳುಹಿಸಲು, ನರನಾಥನು_ಮಯೂರಧ್ವಜನೆಂಬ ಮಾನವೇಂದ್ರನು, ಇಂತು-ಮುಂದೆ ಹೇಳುವರೀತಿಯಾಗಿ, ನುಡಿದನು- ಹೇಳಲುಜ್ಜುಗಿಸಿದನು ||೩೧||

ಟೀ|| ದ್ವಿಜತಿಲಕ-ಎಲೈ ಭೂಸುರೋತ್ತಮನೆ, ನೀಂ-ನೀನಾದರೊ, ಎನಗೆ_ನನ್ನ ವಿಷಯದಲ್ಲಿ, ಅನುಗ್ರಹಿಸೆ_ಆಶೀರ್ವಾದವನುಂ ಗೈದಲ್ಲಿ, ಆಂ - ನಾನಾದರೊ, ಧನ್ಯನು - ಕೃತಕೃತ್ಯನೇ ಸರಿ, ಮಖಮಂಟಪಕೆ - ಯಾಗಶಾಲೆಗೆ, ನಿಜ_ನಿನ್ನ, ಶಿಷ್ಯನಂಕೊಂಡು-ಶಿಷ್ಯನನ್ನು ಕರೆದುಕೊಂಡು, ಬಿಜಮಾಡಿದ - ಐತಂದಿರತಕ್ಕ, ಕಜ್ಜಂ_ಕಾರ್ಯವು, ಆವುದು - ಯಾವುದಾಗಿದೆ, ನಿನಿಗೆ_ನಿನಿಗಾವದೊ, ಏತರೊಳು_ಯಾವ ವಸ್ತುವಿನಲ್ಲಿ, ಆಶೆ-ಅಭಿಲಾಷೆಯಿರುವುದು, ಆರ್ತ-ತೊಂದರೆಯು, ಏನು_ಏನಾಗಿಧೆ, ಒಂದನುಂ_ಒಂದನ್ನೂ ಕೂಡ, ಇದರೊಳು_ನೀನು ನುಡಿದ ವಿಷಯಂಗಳಲ್ಲಿ, ತ್ಯಜಿಸಬೇಡ-ಬಿಡಕೂಡದು,ಪೇಳ್ವೊಡೆ_ತಿಳಿಸಿದಹಾಗಾದರೆ, ಆರಜಮಂ-ಸ್ವಲ್ಪವೂ ಕೂಡ, ತಪ್ಪದೆ-ಕಳೆಯದೆ, ನಿನಿಗೆ_ನಿನಿಗಾದರೊ, ಎಲ್ಲಮಂ_ನಿನ್ನ ಇಷ್ಟಾರ್ಥಂಗಳೆಲ್ಲವನ್ನೂ, ಈವೆನು_ಸಲ್ಲಿಸುವೆನು, ವಾಚಿಸು _ ನುಡಿಯುವನಾಗು, ಎಂದು - ಎಂಬದಾಗಿ, ಶಿಖಿಧ್ವಜನು_ಮಯೂರಧ್ವಜನು, ಆಡಲು_ನುಡಿಯಲು, ಆವಿಪ್ರನು_ಆ ಭೂಸುರೋತ್ತಮನು, ಇಂತೆಂದು _ ಈ ಪ್ರಕಾರವಾಗಿ, ತನ್ನ ವೃತ್ತಾಂತಮಂ - ತನ್ನ ವರ್ತಮಾನವನ್ನೆಲ್ಲಾ, ವಿವರಿಸಿದನು_ವಿಸ್ತಾರವಾಗಿ ಹೇಳಲಾರಂಭಿಸಿದವನಾದನು ||೩೨||

ಟೀ|| ಉರ್ವೀಂದ್ರ_ಪೊಡವಿಪತಿಯಾದ ಶಿಖಿಕೇತುವೆ, ಕೇಳು_ಲಾಲಿಸು, ಆಂ_ನಾನಾದರೊ, ಧರ್ಮಪುರದೊಳು_ಧರ್ಮಪುರಿ ಎಂಬ ಒಂದಾನೊಂದು ನಗರಿಯಲ್ಲಿ, (ಯುಧಿಷ್ಠಿರ ನೃಪಾಲನ ಪಟ್ಟಣದೊಳಗೆ) ಪೆಸರ್ವಡೆದಿಹ - ಪ್ರಖ್ಯಾತನಾಗಿರತಕ್ಕ,

ಸ್ಥಿರವಾಗಿರುವುದು. ನೀನು ಬಂದು ಹೇಸಿದ್ದರಿಂದ ನನಿಗೆ ಒಳ್ಳೆತೇ ಸರಿ, ಆದರೆ ನಮಸ್ಕಾರಮಾಡುವುದಕ್ಕೆ ಮೊದಲೇ ಆಶೀ
ರ್ವದಿಸತಕ್ಕದ್ದು ದೊಡ್ಡ ಶಾಪದಂತೆ ಪರಿಣಮಿಸುವುದಿಲ್ಲವೇ, ಎಂದು ಕೇಳಲು ||೩೦|| ಆ ಕಪಟಬ್ರಾಹ್ಮಣನು ಮಯೂರ
ಧ್ವಜನನ್ನು ಕುರಿತು, ಎಲೈ ರಾಜನೆ ನಮಸ್ಕಾರಕ್ಕೆ ಮುಂಚೆ ಕ್ಷತ್ರಿಯರಿಗೂ ವೈಶ್ಯ ಶೂದ್ರರಿಗೂ ಆಶೀರ್ವಾದವನ್ನು ಮಾಡ
ಬಾರದು, ನನ್ನ ಸಂಕಟವನ್ನು ನಿನ್ನ ಕೂಡ ಹೇಳಿಕೊಳ್ಳುವಾಗ ನಾನು ಈ ರೀತಿ ಆಶೀರ್ವಚನವನ್ನು ಹೇಳುವುದು ತಪ್ಪೆಂದೆಣಿಸ
ಬೇಡ, ನನ್ನ ಕಷ್ಟವು ನಿನ್ನಿಂದ ಪರಿಹಾರವಾಗಬೇಕೆಂದು ಬಗೆದು ಈ ನಿನ್ನ ಯಾಗಶಾಲೆಗೆ ಬಂದಿರುವೆನೆಂದು ನುಡಿದನು ||೩೧||
ಈ ರೀತಿಯಲ್ಲಿ ಹೇಳಿದ ಕಪಟ ಬ್ರಾಹ್ಮಣನ ಮಾತುಗಳನ್ನು ಕೇಳಿ ಮಯೂರಧ್ವಜನು, ಎಲೈ ವಿಪ್ರವರ್ಯನೆ! ನನ್ನ ಯಾಗಮಂಟ
ಪಕ್ಕೆ ಶಿಷ್ಯನಿಂದೊಡಗೂಡಿ ನೀನು ಬಂದಿರತಕ್ಕ ಕಾರ್ಯವನ್ನೂ, ನಿನಿಗುಂಟಾಗಿರತಕ್ಕ ಕಷ್ಟವನ್ನೂ ಮರೆಮಾಚದೆ ನನ್ನೊಂ
ದಿಗೆ ಹೇಳು. ನಾನು ನಿನ್ನ ಇಷ್ಟಾರ್ಥವನ್ನೀಡೇರಿಸುವೆನೆಂದು ನುಡಿದನು. ||೩೨|| ಈ ಮಾತನ್ನು ದ್ವಿಜವರ್ಯನು ಕೇಳಿ ರಾಯ

ನಸಿದಿಹೆಂ ಕೃಷ್ಣಶರ್ಮನೆಂದೆನಗೆಸುತ| ನೋರ್ವನುಂಟಾತನವಿವಾಹಕ್ಕೆತವಪುರೋಹಿತಸತ್ಯಶೀಲನಲ್ಲಿ ‖ ಓರ್ವಕನ್ನಿಕೆಮದುವೆಗಿಹಳೆಂದೊಡಲ್ಲಿಗ | ಕ್ಕರ್ವೆರಸಿಮಗನೊಡಂಗೊಂಡುಬರುತಿರ್ದೆಂಪ್ರೊ| ದರ್ವರಿದಡವಿಯಪಥದೊಳಿಲ್ಪಿಡಿದುದೊಂದುಕೇಸರಿತನ್ನನಂದನನನು ‖೩೩‖ ಆಸಿಂಗಮತಿಭರದೊಳೆರಗಲಾಭೀತಿಗೆನ್ನ | ಕೇಸರಿಸ್ಮರಣೆಯಂಬಿಡದೆನಾನಕಟಹಾ| ಹಾಸೂನುಹಾಯೆಂದುಹಂಬಲಿಸಲದುತನ್ನಘೋರನಖದಂಷ್ಟ್ರದಿಂದ ‖ ಗಾಸಿಮಾಡದೆಪುತ್ರನಂಪಿಡಿದುಕೊಂಡಟ್ಟ | ಹಾಸದಿಂಮಾನವರತೆರದಿಂದನುಡಿದುದೆಲೆ | ಭೂಸುರೋತ್ತಮತನ್ನಮಾತನಾಲಿಸುಬರಿದೆಹಲುಬಲೇನಪ್ಪುದೆಂದು ‖ ೩೪ ‖ ಮಕ್ಕಳಿಲ್ಲದವರ್ಗೆಲೋಕಮಿ

---

ಕೃಷ್ಣಶರ್ಮನು–ಕೃಷ್ಣನೆಂಬ ನಾಮಧೇಯವುಳ್ಳವನು, ನನಗೆ–ನನಿಗಾದರೊ, ಎಂದು-ಅನವರತವೂ, ಓರ್ವನು–ಒಬ್ಬನಾದ, ಸುತನು–ಕುವರನೂ, (ಯುಧಿಷ್ಠಿರನು ಮಾಡಬೇಕೆಂದಿರುವ ಯಾಗದೊಳಗೆ ಕರ್ಮಫಲವೆಂಬ ಹೆಸರುಳ್ಳ ಕುವರನು) ಉಂಟು–ಇದ್ದಾನೆ, ಆತನ–ಆ ನನ್ನ ಸುತನ, ವಿವಾಹಕ್ಕೆ–ಕಲ್ಯಾಣದ ಸಲುವಾಗಿ, (ಅದರ ಅತ್ಯಧಿಕವಾದ ಫಲಪ್ರಾಪ್ತಿಯನ್ನು ಪಡೆಯಲೋಸುಗವಾಗಿ) ಪುರೋಹಿತ-ಹವ್ಯಕವ್ಯಾದಿಗಳನ್ನು ಮಾಡಿಸುವ, ಮತ್ತು (ನನ್ನೆದುರಿಗಿರುವ ಭಕ್ತಾಗ್ರೇಸರನಾದ) ಸತ್ಯಶೀಲನಲ್ಲಿ–ಸತ್ಯಶೀಲನೆಂಬ ವಿಪ್ರನ ಬಳಿಯಲ್ಲಿ ಸನ್ಮಾರ್ಗಪ್ರವರ್ತಕನಾದ ನಿನ್ನಲ್ಲಿ, ಮದುವೆಗೆ–ಲಗ್ನಕ್ಕಾಗಿ, (ನಾವು ಕರೆದುಕೊಂಡು ಹೋಗುವದಕ್ಕೋಸ್ಕರ) ಓರ್ವ–ಒಬ್ಬಾನೊಬ್ಬ, ಕನ್ನಿಕೆ–ಹುಡುಗಿಯು, (ಯಾಗದ ಕುದುರೆಯೆಂಬೊಂದು ಕನ್ಯಾಮಣಿಯು) ಇಹಳು–ಇವಾಳೆ, ಎಂದೊಡೆ–ಎಂದು ನುಡಿಯಲು, ಅಕ್ಕರ್ವೆರಸಿ - ವಿಶ್ವಾಸದಿಂದ ಕೂಡಿ, ಮಗನ - ಕರ್ಮಸಂಬಂಧವಾದ ಫಲಪ್ರಾಪ್ತಿಗಾಗಿ, ಸುತನನ್ನು, ಒಡಗೊಂಡು - ಜೊತೆಮಾಡಿಕೊಂಡು, ಬರುತಿರ್ದೆಂ - ಬರುತ್ತಲಿದ್ದೆನು, ಅಡವಿಯಪಥದೊಳು–ಅರಣ್ಯದ ಮಾರ್ಗದಲ್ಲಿ, ಪೊದರ್ವರಿದ–ಹೊದರುಗಳಲ್ಲಿ ಸೇರಿಕೊಂಡಿದ್ದ, ಒಂದುಕೇಸರಿ–ಒಂದಾನೊಂದು ಸಿಂಗವು, (ನಿನ್ನ ಕುವರನು) ನನ್ನನಂದನನು–ಸಕಲ ದುರಿತಂಗಳನ್ನೂ, ದೂರಮಾಡಿ–ಶಾಶ್ವತಸುಖಾವಾಸಮಾದ ಕರ್ಮಫಲ ರೂಪಮಾದ ನನ್ನ ತನುಜನನ್ನು, (ಯಾಗದ ಕುದುರೆಯನ್ನು– ಪಿಡಿದುದು–ಹಿಡಿದುಕೊಂಡಿತು.

ಅ‖ ವಿ‖ ನಂದನ- ಮಗ, ಉದ್ಯಾನ, ಸಂವತ್ಸರ, ಒಬ್ಬಾನೊಬ್ಬ ರಕ್ಕಸನು ‖೩೩‖

ಟೀ‖ ಅತಿಭರದೊಳು–ಬಹಳ ಜಾಗ್ರತೆಯಿಂದ, ಆಸಿಂಗಂ - ಆ ಕೇಸರಿಯು, ಎರಗಲು–ಎದುರಾಗಲು, ಆಭೀತಿಗೆ–ಅದರ ಹೆದರಿಕೆ ಗೋಸುಗ, ನಾಂ - ನಾನಾದರೊ, ಬಿಡದೆ–ತಪ್ಪದೆ, ನೃಕೇಸರಿಸ್ಮರಣೆಯಂ - ನರಸಿಂಹಮೂರುತಿಯ ನೆನಪನ್ನು, ಅಕಟ–ಆ, ಹಾಹಾಸೂನು–ಅಯ್ಯೋಮಗನೆ, ಎಂದು–ಎಂಬತೆರನಾಗಿ, ಹಂಬಲಿಸಲು-ಅಳುತ್ತಿರಲಾಗಿ, ಅದು - ಆ ಕೇಸರಿಯು, ಪುತ್ರನಂ–ಕುವರನನ್ನು, (ಯಾಗದ ಫಲವನ್ನು) ಘೋರ-ಭಯಂಕರವಾದ, ನಖ - ಉಗುರುಗಳಿಂದಲೂ, ದಂಷ್ಟ್ರಗಳಿಂದ–ಹಲ್ಲುಗಳಿಂದಲೂ, (ಶರಗಳಿಂದಲೂ) ಅದು–ಆ ಕೇಸರಿಯು, (ತಾಮ್ರಧ್ವಜನೆಂಬ ನಿನ್ನ ಕುವರನು) ಗಾಸಿಮಾಡದೆ - ಪ್ರಾಣವನ್ನು ತೆಗದುಬಿಡದೆ, ಪಿಡಿದುಕೊಂಡು–ಹಿಡಿದದ್ದಾಗಿ, ಮಾನವರತೆರದಿಂದ-ನರಲೀಲೆಯಿಂದ, ಅಟ್ಟಹಾಸದಿಂ–ಬಹು ಗರ್ಜನೆಯಿಂದ, ಎಲೆಭೂಸುರೋತ್ತಮ - ಅಯ್ಯಾ ವಿಪ್ರೋತ್ತಮನೆ, ತನ್ನಮಾತನು - ನನ್ನ ನುಡಿಗಳನ್ನು, ಆಲಿಸು-ಗಮನವಿಟ್ಟು ಕೇಳು, ಬರಿದೆ - ವ್ಯರ್ಥವಾಗಿ, ಹಲುಬಲು - ಸಂಕಟಪಟ್ಟರೆ, ಏನಪ್ಪುದು - ಏನು ಸಾರ್ಥಕವಾದೀತು, ಎಂದು - ಎಂಬತೆರನಾಗಿ, ನುಡಿದುದು - ಮಾತನಾಡಿತು.

ಅ‖ ವಿ‖ ಸಿಂಗ (ತ್ಭ) ಸಿಂಹ (ತ್ಸ). ‖೩೪‖

ಟೀ‖ ಮಕ್ಕಳಿಲ್ಲದವರ್ಗೆ - ಅಪುತ್ರವಂತರಿಗೆ, ಲೋಕಂ–ಸದ್ಗತಿಯು, ಇಲ್ಲೆಂಬುದು–ಉಂಟಾಗುವುದಿಲ್ಲವೆನ್ನತಕ್ಕದ್ದು,

---

ನನ್ನು ಕುರಿತು, ಎಲೈ ಮಯೂರಧ್ವಜ ಮಹಾರಾಯನೆ, ನನ್ನ ವೃತ್ತಾಂತವನ್ನು ಹೇಳುವೆನು ಕೇಳು ಧರ್ಮಪುರವೆಂಬುದೊಂದು ಪಟ್ಟಣವುಂಟು, ಆ ನಗರಿಯೊಳಗೆ ವಾಸಮಾಡಿಕೊಂಡಿರತಕ್ಕವನು ನಾನು, ನನ್ನನ್ನು ಕೃಷ್ಣನೆಂಬ ಹೆಸರಿನಿಂದ ಕರೆಯುವರು. ನನಿಗೆ ಒಬ್ಬ ಮಗನಿರುವನು, ನಿಮ್ಮ ಪುರೋಹಿತನಾದ ಸತ್ಯಶೀಲನಿಗೆ ಒಂದು ಕನ್ಯಾರತ್ನವುಂಟೆಂದು ಆ ಹುಡುಗಿಯನ್ನು ನನ್ನ ಮಗನಿಗೆ ಮದುವೆಮಾಡಿಕೊಳ್ಳಬೇಕೆಂದು ಆಲೋಚಿಸಿ ನಿಮ್ಮೂರಿಗೆ ಮಗನೊಂದಿಗೆ ಬರುತ್ತಲಿರುವಾಗ ಮಧ್ಯಮಾರ್ಗದಲ್ಲಿ ಸಿಕ್ಕಿದ ಒಂದು ಅರಣ್ಯದ ಪೊದರೊಳಗೆ ಹೊಕ್ಕುಕೊಂಡಿದ್ದ ಸಿಂಹದ ದೃಷ್ಟಿಪಥಕ್ಕೆ ನಾವು ಸಿಕ್ಕಿದೆವು. ಕೂಡಲೇ ಆ ಕೇಸರಿಯು ಬಂದು ನನ್ನ ಕಂದನನ್ನು ಹಿಡಿದುಕೊಂಡಿತು. ‖೩೩‖ ಇದನ್ನು ನೋಡಿದ ಕೂಡಲೆ ನಾನು ಅತ್ಯಂತ ಭಯಮಂತಾಳಿ ಮನದಲ್ಲಿ ನರಸಿಂಹ ಮೂರ್ತಿಯನ್ನು ಸ್ಮರಿಸಿಕೊಳ್ಳುತ್ತ, ಅಯ್ಯೊ ಮಗನೆ! ಹಾ ನನ್ನ ಕಂದಾ! ಎಲೈ ಬಾಲನೆ! ಇನ್ನೇನು ಗತಿ! ಅಯ್ಯೊ ನಿನ್ನನ್ನು ಕಾಪಾಡಿತಕ್ಕವನು ಯಾರಿರುವರೆಂದು ನಾನಾ ಪ್ರಕಾರವಾಗಿ ಹಂಬಲಿಸುತ್ತಲಿರುವಾಗ, ಆ ಮೃಗೇಂದ್ರನಾದರೊ ನನ್ನನ್ನು ಕಂಡು, ಎಲೈ ಬ್ರಾಹ್ಮಣನೆ ವೃಥಾ ಏತಕ್ಕೆ ಪೇಚಾಡುತ್ತೀಯೆ ‖ ೩೪ ‖ "ಅಪುತ್ರಸ್ಯ ಗತಿ

ಲ್ಲೆಂಬುದೇ | ನಕ್ಕಜವೆನಿಖಿಳನಿಗಮಾರ್ಥಮಿದುತನಗೀಗ | ಸಿಕ್ಕಿದನಲಾನಿನ್ನತನುಸಂಭವಂಬಿಡಿಸಿಕೊಳಲಾರ್ಪರಾರುಬರಿದೆ ||
ಕಕ್ಕುಲಿತೆಬೇಡನಡೆಶಿಷ್ಯನಂಕರಕೊಂಡು | ಮಿಕ್ಕಸುತರುಳ್ಳೊಡಾರೈವುದೆನೆಮಗನಮೇ | ಲಕ್ಕರಾವರಿಸಿಕಡುಶೋಕದಿಂದು
ಗ್ರಕೇಸರಿಗೆತಾನಿಂತೆಂದನು || ೩೫ || ಅತಿವೃದ್ಧನಲ್ಪದಿನಮಿರ್ಪನಂಪುತ್ರವ | ರ್ಜಿತನಿನ್ನುತಾನಿರ್ದುಮಾಳ್ಪುದೇನೆನ್ನನಾ | ಹು
ತಿಗೊಂಡುತನಗೆಗತಿಕೊಡುವಸುತನಂಬಿಡುವುದೆಂದುನಾಂಬೇಡಿಕೊಳಲು || ಮೃತಿಯುಬಯಸುವದುಃಖಿಗಾವಕಂಟಕವಿಲ್ಲ |
ಹತವಹುದುಸುಖದಿಂದಬಾಳ್ವಂಗೆಕಾಲಕ | ಲ್ಪಿತದಿಂದದೊರಕಿದನಿವಂನಿನ್ನನೊಲ್ಲೆನಾಂಪ್ಪೋಗೆಂದುಹರಿನುಡಿದುದು||೩೬||ಅನು

---

ಅಕ್ಕಜವೆನಿಂ-ಆಶ್ಚರ್ಯವಾಗಿ ತೋರುತ್ತದೆಯೆ, ಇದು-ಈ ನುಡಿಯು, ನಿಖಿಳ-ಅಶೇಷವಾದ, ನಿಗಮಾರ್ಥಂ-ವೇದಗಳಲ್ಲಿ ಸುಪ್ರ ಸಿದ್ಧವಾಗಿರುವುದು, ಈಗ-ಈಗಲಾದರೂ, ನಿನ್ನತನುಸಂಭವಂ-ನಿನ್ನ ಕುವರನು, ತನಗೆ-ನನಿಗೆ, ಸಿಕ್ಕಿದನಲಾ - ಸಿಕ್ಕಿಹೋದ ನಲ್ಲವೆ, ಆರು-ಯಾರುತಾನೆ, ಬಿಡಿಸಿಕೊಳ್ಳಲು-ನನ್ನಿಂದ ಬಿಡುಗಡೆ ಮಾಡಿಸಿಕೊಳ್ಳುವುದಕ್ಕೆ, ಅರ್ಹರು-ಸಮರ್ಥರಾದಾರು, ಬರಿದೆ-ವ್ಯರ್ಥವಾಗಿ, ಕಕ್ಕುಲಿತೆಬೇಡ-ಮಗನ ಹಂಬಲಿನಲ್ಲಿರಬೇಡ, ಶಿಷ್ಯನಂಕರಕೊಂಡು-ಶಿಷ್ಯಸಮೇತನಾಗಿ, ನಡೆ-ಹೊರಡು ವನಾಗು, ಮಿಕ್ಕ-ಇತರರಾದ, ತನಯರು-ಕುವರರು, ಉಳ್ಳೊಡೆ-ಇದ್ದಹಾಗಾದರೆ, ಆರೈವುದು-ಸಲಹಿಕೊಳ್ಳತಕ್ಕದ್ದು, ಎನೆ-ಎಂದು ನುಡಿಯಲು, ಅಕ್ಕರೆ-ವಿಶ್ವಾಸವು, ಮಗನಮೇಲೆ-ಕುವರನ ವಿಷಯದಲ್ಲಿ, ಅವರಿಸಿ-ಅಧಿಕವಾಗಿ, ನಾನು-ನಾನಾದರೊ, ಉಗ್ರಕೇಸರಿಗೆ-ಭಯಂಕರವಾದ ಸಿಂಹದೊಂದಿಗೆ, ಕಡುಶೋಕದಿಂದ-ದುಃಖಾತಿಶಯದಿಂದ ಕೂಡಿದವನಾಗಿ, ಇಂತು-ಮುಂದೆ ಹೇಳುವ ತೆರನಾಗಿ, ಎಂದೆನು-ನುಡಿದೆನು ||೩೫||

ಟೀ|| ತಾನು-ನಾನಾದರೊ, ಅತಿವೃದ್ಧಂ-ಬಹಳ ವಯಸ್ಸಾದವನು, ಅಲ್ಪದಿನಂ-ಸ್ವಲ್ಪಕಾಲಮಾತ್ರವೇ, ಇರ್ಪನಂ-ಜೀವಿಸತಕ್ಕವನು, ಪುತ್ರವರ್ಜಿತನು-ಸುತನಿಂದ ಕೂಡದವನು, ಇನ್ನುಮುಂದೆ, ಇದ್ದು-ಬದುಕಿ, ಮಾಳ್ಪುದುಏಂ-ಏನು ಪುರು ಷಾರ್ಥವಾದೀತು, ಎನ್ನ-ನನ್ನನ್ನು, ಆಹುತಿಗೊಂಡು-ನಿನ್ನ ಆಹಾರಕ್ಕೆ ಅಣಿಮಾಡಿಕೊಂಡು, ತನಿಗೆ- ನನಿಗೆ, ಗತಿಕೊಡುವ-ಸದ್ಗತಿಯನ್ನುಂಟುಮಾಡತಕ್ಕ, ಸುತನಂ-ಕುವರನನ್ನು, ಬಿಡುವುದು-ಬಿಟ್ಟುಕಾಪಾಡಬೇಕು, ಎಂದು-ಎಂಬ ತೆರನಾಗಿ, ನಾಂ-ನಾನು, ಬೇಡಿಕೊಳಲು-ಕೇಳಿಕೊಳ್ಳಲಾಗಿ, ಮೃತಿಯ-ಸಾವನ್ನು, ಬಯಸುವ-ಕೋರುವ, ದುಃಖಿಗೆ-ಪರಿತಾಪದಿಂದ ಕೂಡಿದವ ನಿಗೆ, ಆವಕಂಟಕಂ-ಯಾವ ಕೊರತೆಯೂ, ಇಲ್ಲ-ಒದಗುವುದಿಲ್ಲ, ಸುಖದಿಂದ-ಸೌಖ್ಯವಾಗಿ, ಬಾಳ್ವಂಗೆ-ಜೀವಿಸತಕ್ಕವನಿಗೆ, ಹತವು-ಆಪತ್ತು, ಅಹದು-ಸಿದ್ಧಿಸುವುದು, ಇವಂ-ಈ ಬಾಲನು, ಕಾಲಕಲ್ಪಿತದಿಂದ-ಕಾಲವಶದಿಂದ, ದೊರಕಿದನು-ಲಭಿಸಿದನು, ಆಂ-ನಾನಾದರೊ, ನಿನ್ನನು-ನಿನ್ನನ್ನು, ಒಲ್ಲೆನು-ಒಪ್ಪುವುದಿಲ್ಲವು, ಪೋಗು-ಹೊರಡು, ಎಂದು-ಎಂಬ ತೆರನಾಗಿ, ಹರಿ-ಸಿಂಹವು, ನುಡಿದುದು-ಉತ್ತರ ಕೊಟ್ಟಿತು ||೩೬||

ಟೀ|| ಅನುಡಿಗೆ-ಸಿಂಹವು ಹೇಳಿದ ಕಠಿಣೋಕ್ತಿಗೆ, ನಡುಗಿ-ನಡುಗುತ್ತಾ, ಆಂ-ನಾನಾದರೊ, ತನಯನಮೇಲಣಆಸೆ

---

ನಾಸ್ತಿ" ಎಂದರೆ ಪುತ್ರಹೀನನಿಗೆ ಸದ್ಗತಿ ಇಲ್ಲವೆಂಬುದನು, ಸಕಲ ಶಾಸ್ತ್ರಂಗಳೂ ಸಾರುತ್ತಲಿರುವುವಷ್ಟೆ. ಈಗಲಾದರೊ ನಿನ್ನ ಮಗನು ನನ್ನಕೈಗೆ ಸಿಕ್ಕಿದನು. ಇವನನ್ನು ಬಿಡಿಸಿಕೊಳ್ಳಲು ಯಾರುತಾನೆ ಸಮರ್ಥರಾಗಿರುವರು? ನೀನು ವೃಥಾ ಏತಕ್ಕೆ ಸಂಕಟ ಪಡುತ್ತಲಿರುವಿ. ನಿನ್ನ ಶಿಷ್ಯನೊಂದಿಗೆ ಹೊರಟುಹೋಗು. ಮಿಕ್ಕ ಮಕ್ಕಳಿದ್ದರೆ ಅವರನ್ನು ನೋಡು ವುದರಿಂದುಂಟಾಗುವ ಆನಂದದಿಂದ ಈ ನಿನ್ನ ಮಗನ ಸಂಬಂಧವಾದ ಶೋಕವಂ ಪರಿಹರಿಸಿ ಕೊಳ್ಳೆಂದು ನುಡಿಯಿತು ||೩೫|| ಅದನ್ನು ಕೇಳಿದ ಕೂಡಲೆ ನನ್ನ ದುಃಖ ವಿಮ್ಮಡಿಸಿತು. ಆಗ ನಾನು ಆ ಮೃಗಾಧಿಪನನ್ನು ನೋಡಿ, ಎಲೈ ಸಿಂಹರಾಜಾ! ನಾನಾದರೊ ಬಹಳ ಮುದುಕನು, ಸ್ವಲ್ಪಕಾಲವೇ ಜೀವಿಸತಕ್ಕವನು, ನನಿಗೆ ಇವನೊರ್ವನೇ ಸುತನು. ಇವನನ್ನು ಬಿಟ್ಟರೆ ನನಿಗೆ ಗತಿಯೇ ಇಲ್ಲವು. ಏಕಪುತ್ರನಾದ ಇವನೂ ಕೂಡ ನಿನ್ನ ಬಾಯಿಗೆ ತುತ್ತಾದ ಬಳಿಕ ನಾಬಿದ್ದು ಫಲವೇನಿರುವುದು? ಅಯ್ಯೋ ಮೃಗೇಂದ್ರಾ! ಈ ನನ್ನ ಕುವರನನ್ನು ಬಿಟ್ಟು ಅವನಿಗೆ ಬದಲಾಗಿ ನನ್ನನ್ನು ನಿನ್ನ ಆಹಾರವಾಗಿ ಮಾಡಿಕೊ. ಇದ ರಿಂದ ನಿನಗೆ ಆಹಾರವೂ ನನಿಗೆ ಸದ್ಗತಿಯೂ ಉಂಟಾಗಿ ನನ್ನ ಸಂಕಟವು ಪರಿಹಾರವಾಗುವುದು. ಇಷ್ಟುಮಾತ್ರ ಉಪಕಾರ ವನ್ನು ಮಾಡಿ ನನ್ನನ್ನು ಕಾಪಾಡೆಂದು ಕೇಳಿಕೊಂಡೆನು. ನನ್ನ ನುಡಿಗಳನ್ನಾಲಿಸಿದ ಆ ಸಿಂಗವಾದರೊ, ಎಲೈ ವೃದ್ಧಬ್ರಾಹ್ಮ ಣನೆ, ನಿನ್ನ ದೇಹವೆಲ್ಲಾ ಗಳಿತವಾಗಿರೋಣದರಿಂದ ಮರಣಕ್ಕೆ ಸಿದ್ಧನಾಗಿರುವಿ, ಇಂತಹ ನಿನ್ನನ್ನು ತಿಂದರೆ ನನಿಗೇನು ತೃಪ್ತಿ ಯಾದೀತು? ಕಾಲಯೋಗದಿಂದ ನನಿಗೆ ದೊರೆತಿರತಕ್ಕ ಬಾಲನಾದ ಮತ್ತು ಕೋಮಲಾಂಗನಾದ ನಿನ್ನ ಮಗನನ್ನು ತಿಂದು ಸಂತೋಷಪಡುವೆನಲ್ಲದೆ ನಿನ್ನನ್ನುನಾನೆಂದಿಗೂ ಬಯಸಲಾರೆ. ನಿನ್ನಇಷ್ಟಾರ್ಥವು ವಿಫಲವೆಂದು ತಿಳಿದು ಹೊರಟುಹೋಗೆಂದು ನುಡಿಯಿತು. || ೩೬ || ಇದನ್ನು ಕೇಳಿದ ಕೂಡಲೆ ನನ್ನ ಮೈಯಲ್ಲಿ ರೋಮಾಂಚವುಂಟಾಗಿ, ಅಯ್ಯೋ ಸಿಂಹರಾಜ, ನನಿಗಿನ್ನೇ

ತಿಗೆನಡುಗಿತನಯನಮೇಲಣಾಶೆಯಿಂ | ದಾನೆಂದೆನಾಸಿಂಹಕೆಲೆಮೃಗಾಧಿಪತನ್ನ | ಸೂನುವಂಕಾವರಿಲ್ಲವೆ ಧರೆಯೊಳುಗ್ರತಪ ದಾನಧರ್ಮಂಗಳಿಂದ || ಏನುಪಾಯಂಗೈಯ್ವೆನೆಂದುಮರುಗಲ್ಕೆಪಂ | ಚಾನನಂಬಳಿಕತನಗೊಂದಾಶೆಯಂಕೊಟ್ಟು | ಭೂನಾಥನಿನ್ನೆಡೆಗೆಕಳುಹಿದೊಡೆಬಂದೆನೆನಲವನೀಶನಿಂತೆದನು ||೩೭|| ವಿಪ್ರೇಂದ್ರಕೇಳೆನ್ನರಾಷ್ಟ್ರದೋಳಿನ್ನರಸಿಂ| ಹಪ್ರವರ್ತಕಮಲ್ಲದೆ ಲ್ಲಿಯುಂಕ್ಷುದ್ರಸಿಂ| ಹಪ್ರಸಂಗವನರಿಯೆನಿನ್ನೆಗಂನಿನ್ನಸುತನಂಪಿಡಿದಸಿಂಹಮುಂಟೆ || ಅಪ್ರಸಿದ್ಧಪ್ರೋಕ್ತಮದುಸಿಂಹಕೆನ್ನಿಂದ | ಹಪ್ರಯೋಜನಮದೇಂಮಾಜದಂಜದೆತನಗೆ | ಕ್ಷಿಪ್ರದಿಂಪೇಳೆಂದುಭೂವರಂಬೆಸಗೊಂಡೊಡಾಪಾರ್ವನಿಂತೆಂದನು || ೩೮ || ಎನ್ನೊಳಾಸಿಂಹವಾಡಿದನುಡಿಯನೀಗಳಾಂ | ನಿನ್ನೊಳೆಂಬುದುನೀತಿಯಾದಪುದೆಸುತಹೀನ | ಮಿನ್ನೇಸುದಾರುಣವೊಪೇಳಬೇಕಾ

---

ಯಿಂದ-ಪುತ್ರವಾತ್ಸಲ್ಯದಿಂದ, ಆಸಿಂಹಕೆ-ಆ ಕೇಸರಿಯನ್ನು ಕುರಿತು, ಎಂದೆನು-ಮುಂದೆ ಹೇಳುವಂತೆ ನುಡಿದೆನು, ಎಲೆಮೃಗಾಧಿಪ-ಎಲೈ ಮೃಗೇಂದ್ರನೆ, ತನ್ನ ಸೂನುವಂ-ನನ್ನ ಕುವರನನ್ನು, ಕಾವರು-ಕಾಪಾಡತಕ್ಕವರು, ಧರೆಯೊಳು-ಭೂಮಂಡಲದಲ್ಲಿ, ಇಲ್ಲವೆ - ರಹಿತರಾಗಿವಾರೆಯೆ, ಉಗ್ರ - ಅಸಾಧ್ಯವಾದ, ತಪ - ಉಪವಾಸಗಳಿಂದಲೂ, ದಾನ - ಕೃಷ್ಣಾರ್ಪಣವಾಗಿ ಕೊಡ್ಯವಿಕೆಯಿಂದಲೂ, (ದಾನಮಾಡುವುದರಿಂದಲೂ) ಧರ್ಮಂಗಳಿಂ-ಧರ್ಮ ಕಾರ್ಯಗಳಿಂದಲೂ ಏನುಉಪಾಯಂ-ಯಾವ ಸನ್ನಾಹವನ್ನು, ಗೈವೆನು-ಎಸಗಲಿ, ಎಂದು-ಎಂಬತೆರನಾಗಿ, ಮರುಗಲ್ಕೆ-ಸಂಕಟಪಡಲು, ಬಳಿಕ-ಅನಂತರ, ತನಿಗೆ-ನನಿಗಾದರೋ, ಒಂದುಆಸೆಯುಂ - ಒಂದಾನೊಂದು ಕೌತುಕವನ್ನು, ಕೊಟ್ಟು - ಉಂಟುಮಾಡಿ, ನಿನ್ನೆಡೆಗೆ - ನಿನ್ನ ಸಮೀಪಕ್ಕೆ, ಕಳುಹಿದೊಡೆ-ಕಳುಹಿಸಿ ಕೊಡಲಾಗಿ, ಭೂನಾಥ-ರಾಜಾಗ್ರಣಿಯಾದ ಶಿಖಿಕೇತುವೆ, ಬಂದೆನು-ಬಂದಿರುವೆನು, ಎನಲು-ಎಂದು ವಿಪ್ರವೇಷಧಾರಿಯಾದ ಕೃಷ್ಣನು ಮಯೂರಧ್ವಜನೊಂದಿಗೆ ನುಡಿಯಲು, ಅವನೀಶನು-ಭೂನಾಥನಾದ ಮಯೂರಧ್ವಜನು, ಇಂತು-ಮುಂದೆ ಹೇಳುವಂತೆ, ಎಂದನು-ನುಡಿದನು ||೩೭||

ಟೀ|| ವಿಪ್ರೇಂದ್ರ-ಎಲೈ ಭೂಸುರೋತ್ತಮನೆ, ಕೇಳು-ಲಾಲಿಸು, ಎನ್ನರಾಷ್ಟ್ರದೊಳ್-ನನ್ನ ನಾಡಿನಲ್ಲಿ, ಇನ್ನೆಗಂ-ಇದುವರೆಗೂ, ನಾರಸಿಂಹದಪ್ರರ್ತಕಂ-ವೈಷ್ಣವಪೂಜೆಯ ಪ್ರಸಕ್ತಿಯೆ, ಅಲ್ಲದೆ-ಹೊರತು, ಕ್ಷುದ್ರಸಿಂಹಪ್ರಸಂಗವನು-ನೀಚವಾದ ಸಿಂಹದ ಪ್ರಸಕ್ತಿಯನ್ನೆ, ಅರಿಯೆನು-ತಿಳಿದಿರಲಿಲ್ಲವು, ನಿನ್ನಸುತನಂ-ನಿನ್ನ ಕುವರನನ್ನು, ಪಿಡಿದ-ಹಿಡಿದುಕೊಂಡಿರತಕ್ಕ, ಸಿಂಹಂ-ಕೇಸರಿಯು, ಉಂಟೆ-ಇದೆಯೆ, ಇದು-ಈ ನಿನ್ನನುಡಿಯು, ಅಪ್ರಸಿದ್ಧ-ಕಪಟರೂಪವಾಗಿರತಕ್ಕ, ಪ್ರೋಕ್ತಂ-ಹೇಳಿಕೆಯು, ಎನ್ನಿಂದ-ನನ್ನ ದೆಸೆಯಿಂದ, ಸಿಂಹಕೆ-ಹರಿಗೆ, ಆಹ-ಉಂಟಾಗಬೇಕಾಗಿರುವ, ಪ್ರಯೋಜನಂ-ಇಷ್ಟಾರ್ಥವು, ಅದೇಂ-ಅದು ಯಾವುದು, ಮಾಜದೆ-ಮರಮಾಚದೆಯೂ, ಅಂಜದೆ-ಹೆದರಿಕೊಳ್ಳದೆಯೂ, ಕ್ಷಿಪ್ರದಿಂ-ತಡಮಾಡದೆ, ಪೇಳು-ಹೇಳುವನಾಗು, ಎಂದು-ಎಂಬತೆರನಾಗಿ, ಭೂವರಂ-ರಾಜಶ್ರೇಷ್ಠನಾದ ಶಿಖಿಕೇತುವು, ಬೆಸಗೊಂಡೊಡೆ-ಕೇಳಿಕೊಳ್ಳಲು, ಆಪಾರ್ವನು-ಆ ಕಪಟ ವಿಪ್ರನು, ಇಂತು-ಮುಂದೆ ಹೇಳುವಂತೆ, ಎಂದನು-ನುಡಿದನು ||೩೮||

ಟೀ|| ಆಸಿಂಹಂ-ಆ ಕೇಸರಿಯು, ಎನ್ನೊಳು-ನನ್ನೊಂದಿಗೆ, ಆಡಿದ-ತಿಳಿಸಿದ, ನುಡಿಯನು-ವಚನವನ್ನು, ಆಂ-ನಾನಾದರೊ, ಈಗಳ್-ಈ ಕಾಲದಲ್ಲಿ, ನಿನ್ನೊಳು-ನಿನ್ನೊಂದಿಗೆ, ಎಂಬುದು-ಹೇಳುವುದು, ನೀತಿಯಾದಪುದೆ-ಸರಿಯಾಗಿ ತೋರುತ್ತದೆಯೇ, ಸುತಹೀನಂ-ಪುತ್ರವಿಹೀನತೆಯು, ಇನ್ನೇಸುದಾರುಣವೊ-ಇನ್ನೆಷ್ಟು ಕಷ್ಟವೊ, ಪೇಳಬೇಕಾಗಿಹುವು-ನುಡಿಯಬೇಕಾಗಿರ

---

ನುಗತಿ ! ಪುತ್ರವಾತ್ಸಲ್ಯವಾದರೊ ನನ್ನನ್ನು ಹಿಂದಿರುಗಲೀಸದಿರುವುದಲ್ಲಾ ! ಓ ಮೃಗೇಂದ್ರಾ ! ನನ್ನ ಮಗನು ಬದುಕಬೇಕಾದರೆ ನಾನೇನನ್ನು ಮಾಡಬೇಕು. ಯಾವದಾನ ಧರ್ಮಂಗಳಿಂದ ನನ್ನ ಪುತ್ರನ ಜೀವವು ಉಳಿದೀತು ? ಲೋಕದಲ್ಲಿ ನನ್ನ ಸುತನನ್ನು ಬದುಕಿಸಿ ಕೊಡಬಲ್ಲ ಪುಣ್ಯಾತ್ಮರಾರೂ ಇಲ್ಲವೇ ! ಎಂದು ದುಃಖಿಸುತ್ತಲಿರುವಾಗ ಆ ಸಿಂಹವು ಒಂದಾನೊಂದು ಮಾತಿನಿಂದ ನನ್ನನ್ನು ಸಂತೈಸಿ ನಿನ್ನ ಬಳಿಗೆ ಕಳುಹಿಸಿತು. ಎಲೈ ಮಯೂರಧ್ವಜ ಕ್ಷಿತಿಪನೇ, ಸಿಂಹದ ಮಾತಿನಂತೆ ಇಲ್ಲಿಗೆ ಬಂದಿರುವೆನೆಂದು ನುಡಿದನು || ೩೭ || ಇದನ್ನು ಕೇಳಿದ ಮಯೂರಧ್ವಜನು ದ್ವಿಜವರ್ಯನಂ ಕುರಿತು, ಭೂಸುರಾಗ್ರಣಿಯೆ, ನನ್ನ ರಾಷ್ಟ್ರದಲ್ಲಿರುವವರೆಲ್ಲರೂ ದಿವಾರಾತ್ರಿಯಲ್ಲಿಯೂ ನರಸಿಂಹಸ್ವಾಮಿಯ ಸ್ಮರಣೆಯಲ್ಲಿ ಕಾಲಹರಣವಂ ಮಾಡುತ್ತಲಿರುವರೇ ಹೊರತು ಇಂತಹ ಸಿಂಹದ ಬಾಧೆಯನ್ನೀಡಾಗಿರುವೆವೆಂದು ಇದುವರೆಗೆ ಯಾರೂ ಹೇಳಲಿಲ್ಲವು. ನಿನ್ನೊಬ್ಬನ ಬಾಯಿಯಿಂದ ಮಾತ್ರ ಈಗ ಕೇಳುತ್ತಲಿರುವೆನು, ಇದನ್ನು ನಾನು ನಂಬುವುದಿಲ್ಲವು. ಒಂದುವೇಳೆ ಸಿಂಹಬಾಧೆಯು ನಿನಿಗುಂಟಾಗಿದ್ದ ಪಕ್ಷದಲ್ಲಿ ಸ್ವಲ್ಪವೂ ಮರೆಮಾಚದೆಯೂ ಹೆದರದೆಯೂ ಆ ಸಿಂಗ ಹೇಳಿದ ಮಾತನ್ನು ನನ್ನೊಂದಿಗೆ ತಡಮಾಡದೆ ನುಡಿಯುವನಾಗು, ನಿನ್ನ ಇಷ್ಟಾರ್ಥವನ್ನೀಡೇರಿಸಿ ನಿನ್ನ ಮಗನ ಪ್ರಾಣವನ್ನುಳುಹಿಸಿ ನಿನಿಗೆ ಆನಂದವುಂಟಾಗುವಂತೆ ಮಾಡುವೆನೆಂದು ನುಡಿದನು || ೩೮ || ಆಗ ಆ ಕಪಟ ದ್ವಿಜನು ಮಯೂರಧ್ವಜ ಮಹಾರಾಯನನ್ನು ಕುರಿತು, ಎಲೈ ಧರಾವಲ್ಲಭನೆ, ಸಿಂಹವು

ಗಿಹುದುನೃಪಕೇಳದರಮಾತನು॥ಮುನ್ನಮುದಿಗೊಡುತಪದಿಂದೊಣಗಿತಿದನೊಲ್ಲೆ|ಮನ್ನಿಸುವೆನಾರ್ಪೊಡೀವುದುಯಜ್ಞದಿಂದಸಂ| ಪನ್ನಫಲತೃಪ್ತನಾಗಿಹಮಯೂರಧ್ವಜನಮೈಯೊಳರ್ಧವನೆಂದುದು ॥ ೩೯ ॥ ಈಮಗನಮೇಲೆನಿನಗಾಶೆಯುಳ್ಳೊಡೆಬಿಡುವೆ | ನಾಮಯೂರಧ್ವಜನದೇಹಾರ್ಧಮಂಕೊಂಡು | ಬಾಮಹೀಪಾಲನಲ್ಲಿಗೆಪೋಗುಕೊಲ್ಲೆನಾನನ್ನೆಗಂನಡೆಯೆನಲ್ಕೆ | ಭೂಮಿಶ ನಿತ್ತಪನೆತನ್ನತನುಭಾಗಮಂ | ಭ್ರಾಮಕಮಿದೆಂದುಜರೆದಾಂತಿರಸ್ಕರಿಸೆಮ | ತ್ತೀಮಾತನಾಡಿದುದುತನ್ನೊಳಾಕೇಸರಿನರೇಂದ್ರ ಕೇಳ್ಕೌತುಕವನು ॥೪೦॥ ಎಲೆಮರುಳೆವಿಪ್ರಪರಪುರುಷಾರ್ಥಕೆಳಸುವಂ| ನೆಲದಮೇಲಣಬಾಳ್ಕೆಯಂನಿಜಶರೀರಮಂ | ನೆರೆಯೆದುಂ ನೋಡುವನೆಕವಚಮಂಕರ್ಣಂದಧೀಚಿತನ್ನಸ್ಥಿಗಳನು ॥ ಒಲಿದಿತ್ತುಕೀರ್ತಿಯಂತಳೆದುದಿಲ್ಲವೆನಿನ್ನ | ಕುಲನುಳಿಯಬೇಕೆಂದು

---

ತಕ್ಕದ್ದು, ನೃಪ–ಎಲೈ ಮಯೂರಧ್ವಜರಾಯನೆ, ಅದರಮಾತನು–ಆ ಸಿಂಹದ ನುಡಿಯನ್ನು, ಕೇಳು–ಲಾಲಿಸು, ಮುನ್ನ–ಪ್ರಾರಂಭ ದಲ್ಲಿಯೆ, ಮುದಿಗೊಡು – ವೃದ್ಧಾಪ್ಯದಿಂದ ಕೃಶವಾದ ದೇಹವು, ಇದೂ ಅಲ್ಲದೆ, ತಪದಿಂದ - ತಪಸ್ಸು ಮಾಡುವ ಕಾರ್ಯದಿಂದ, ಒಣಗಿತು–ಬತ್ತಿಹೋಯಿತು, ಇದನು – ನಿಷ್ಪ್ರಯೋಜನವಾದ ಇಂತಹ ಶರೀರವನ್ನು, ಒಲ್ಲೆ - ಕೋರುವನಲ್ಲ, ಆರ್ಪೊಡೆ-ನಿನ್ನ ಕೈಯ್ಯಲ್ಲಾದರೆ, ಯಜ್ಞದಿಂದ–ಯಾಗಾದಿಗಳಿಂದ, ಸಂಪನ್ನ-ಕೂಡಿರತಕ್ಕ, ಫಲ-ಪುಣ್ಯಕಾರ್ಯಗಳ ಪ್ರಯೋಜನದಿಂದ, ತೃಪ್ತ ನಾಗಿಹ–ತೃಪ್ತಿಯನ್ನೈದಿರುವ, ಮಯೂರಧ್ವಜನ–ಮಯೂರಧ್ವಜನೆಂಬ ರಾಯನ, ಮೈಯೊಳು–ದೇಹದಲ್ಲಿ, ಅರ್ಧವನು-ಅರ್ಧ ಭಾಗವನ್ನು, ಈವುದು – ಕೊಡುವಂತೆ ಆಗಬೇಕು, (ಈ ರೀತಿ ಮಾಡುವುದಾದರೆ) ಮನ್ನಿಸುವೆನು - ನಿನ್ನ ಮಗನ ಜೀವವನ್ನು ಉಳಿಸುವೆನು, ಎಂದುದು–ಎಂಬುದಾಗಿ ಸಿಹಂವು ನನ್ನೊಂದಿಗೆ ನುಡಿಯಿತು. ॥೩೯॥

ಟೀ॥ ನಿನಿಗೆ-ನಿನಿಗಾದರೊ, ಈಮಗನಮೇಲೆ–ನಾನು ಹಿಡಿದುಕೊಂಡಿರುವ ನಿನ್ನ ತನುಜನ ಮೇಲೆ, ಆಶೆ-ವಿಶ್ವಾಸವು, ಉಳ್ಳೊಡೆ – ಉಂಟಾಗಿದ್ದರೆ, ಆಮಯೂರಧ್ವಜನದೇಹಾರ್ಧಮಂ – ಆ ಶಿಖಿಕೇತುವಿನ ಶರೀರದೊಳಗೆ ಅರ್ಧಭಾಗವನ್ನು, ಕೊಂಡುಬಾ–ಸಂಪಾದಿಸಿಕೊಂಡು ಬರುವನಾಗು, ಮಹೀಪಾಲನಲ್ಲಿಗೆ–ಭೂಕಾಂತನಾದ ಮಯೂರಧ್ವಜನ ಸಮಿಪಕ್ಕೆ, ಪೋಗು– ಹೊರಡುವನಾಗು, ಅನ್ನೆಗಂ–ನೀನು ಹಿಂದಿರುಗಿ ಬರುವತನಕ, ಆಂ–ನಾನು, ಕೊಲ್ಲೆನು-ನಿನ್ನ ಸುತನ ಜೀವವನ್ನು ತೆಗೆಯುವು ದಿಲ್ಲ, ನಡೆ- ಹೊರಟುಹೋಗು, ಎನಲ್ಕೆ–ಎಂದು ನುಡಿಯಲು, ಭೂಮಿಶನು–ಅರಸನಾದ ಮಯೂರಧ್ವಜನು, ತನ್ನ ತನುಭಾಗಮಂ– ತನ್ನ ದೇಹದ ಅರ್ಧವನ್ನು, ಇತ್ತಪನೆ – ಕೊಡುವನೆ, ಇದು–ಈ ನಿನ್ನ ನುಡಿಯು, ಭ್ರಾಮಕಂ–ಸುಳ್ಳು, (ನಂಬತಕ್ಕದ್ದಲ್ಲವು) ಎಂದು–ಎಂಬತೆರನಾಗಿ, ಆಂ–ನಾನಾದರೊ, ಜರಿದು–ದೂಷಿಸಿ, ತಿರಸ್ಕರಿಸೆ–ತಿರಸ್ಕಾರವಂ ಮಾಡಲು, ಮತ್ತೆ–ತಿರುಗಿ, ಆಕೇಸರಿ– ಆ ಸಿಂಗವಾದರೊ, ತನ್ನೊಳು–ನನ್ನೊಂದಿಗೆ, ಈಮಾತನು–ಈ ನುಡಿಯನ್ನು, ಆಡಿದುದು–ಹೇಳಿತು, ನರೇಂದ್ರ–ಮಯೂರಧ್ವಜ ನೆಂಬ ಮಾನವಾಧೀಶನೆ, ಕೌತುಕವನು–ಆಶ್ಚರಿಯನ್ನು, ಕೇಳು–ಲಾಲಿಸುವವನಾಗು. ॥೪೦॥

ಟೀ॥ ಎಲೆ-ಎಲೈ, ಮರುಳೆ – ವಿವೇಕಶೂನ್ಯನಾದ, ವಿಪ್ರವರ - ಭೂಸುರೋತ್ತಮನೆ, ಪುರುಷಾರ್ಥಕೆ-ಚತುರ್ವಿಧ ಫಲಗಳಲ್ಲಿ ಕಡೆಯದಾದ ಮುಕ್ತಿಸಾಧನೆಗೆ, ಎಳಸುವಂ-ಅಪೇಕ್ಷೆಪಡತಕ್ಕವನು, ನೆಲದಮೇಲಣಬಾಳ್ಕೆಯಂ-ಭೂಮಂಡಲದಲ್ಲಿ ಪ್ರಾಣವನ್ನಿಟ್ಟುಕೊಂಡಿರಬೇಕೆಂಬ ಆಸೆಯನ್ನೂ, ನಿಜ–ಸ್ವಕೀಯಮಾದ, ಶರೀರಮಂ-ದೇಹವನ್ನೂ, ನೆಲೆಯೆಂದು ಶಾಶ್ವತವಾದು ದೆಂದು, ನೋಡುವನೆ–ಎಣಿಸಿಯಾನೆ, ಕವಚಮಂ-ಶರೀರಕ್ಕೆ ಹಾಕಿಕೊಂಡಿದ್ದ ಅಂಗಿಯನ್ನು, ಕರ್ಣಂ - ರವಿಸುತನೂ, ತನ್ನ- ಸ್ವಕೀಯವಾದ, ಅಸ್ಥಿಗಳನು-ಮೂಳೆಗಳನ್ನು, ದಧೀಚಿ–ದಧೀಚಿಯೆಂಬ ಮುನೀಂದ್ರನೂ, ಒಲಿದು–ಅಕ್ಕರೆಯಿಂದ, ಇತ್ತು–

---

ನನ್ನೊಂದಿಗೆ ನುಡಿದ ಮಾತನ್ನು ನಿನ್ನ ಕೂಡ ಹೇಳುವುದು ಯುಕ್ತವಾಗಿಲ್ಲವು. ಲೋಕದಲ್ಲಿ ಪುತ್ರಶೋಕವೆಂಬುದು ಬಹು ಕೆಟ್ಟದ್ದು. ಇದನ್ನು ಸಹಿಸಲಾರದೆ ನಿನ್ನೊಂದಿಗೆ ಆ ಸಿಂಹದ ಮಾತನ್ನು ಹೇಳುವೆನು ಕೇಳು ಎಲೈ ರಾಜೇಂದ್ರನೆ, ಆ ಸಿಂಹವಾ ದರೊ, ನಾನು ಮುದುಕನೆಂದೂ, ನನ್ನ ಶರೀರವೆಲ್ಲಾ ತಪಸ್ಸಿನಿಂದ ಬತ್ತಿಹೋಗಿರುವುದೆಂದೂ ನಿರಾಕರಿಸಿದ್ದಲ್ಲದೆ ಯಾಗದೀಕ್ಷಿತ ನಾಗಿಯೂ, ಧೃಡಕಾಯನಾಗಿಯೂ ಇರುವ ಮಯೂರಧ್ವಜನ ದೇಹದಲ್ಲಿ ಅರ್ಧ ಭಾಗವನ್ನು ಕೊಟ್ಟರೆ ನನ್ನ ಮಗನನ್ನು ಬಿಟ್ಟು ಬಿಡುವಂತೆಯೂ ಅದುವರೆಗೂ ನನ್ನ ಸುತನ ಜೀವವನ್ನುಳಿಸುವಂತೆಯೂ ಹೇಳಿತು. ॥೩೯॥ ಇದನ್ನು ಕೇಳಿದ ನಾನು ಎಲೈ ಸಿಂಹವೇ ಪುತ್ರವಾತ್ಸಲ್ಯದಿಂದ ಮಯೂರಧ್ವಜನಲ್ಲಿಗೆ ಹೋಗಿ ಅವನ ದೇಹಾರ್ಧವನ್ನು ಯಾಚಿಸುವುದು ಧರ್ಮವೆ! ಒಂದು ವೇಳೆ ಕೇಳಿದರೆ ಕೊಟ್ಟಾನೆ? ಇದು ಅಸಂಭವವೆಂದು ನುಡಿದೆನು. ಆಗ ಆ ಕೇಸರಿಯು ನನ್ನನ್ನು ಕುರಿತು ಹೇಳಿದ ಆಶ್ಚರ್ಯವಾದ ಮಾತನ್ನು ಕೇಳು ॥೪೦॥ ಅಯ್ಯಾ ಬ್ರಾಹ್ಮಣೋತ್ತಮನೆ! ನೀನು ಹುಚ್ಚನಾಗಿರುವಿ, ಲೋಕದಲ್ಲಿ ಭೂಸುರರಿಗೆ ಸಂತೋಷವನ್ನೂ ಪರೋಪಕಾರವನ್ನೂ ಮಾಡಲೆಳಸುವವನು ತನ್ನ ದೇಹದ ಮೇಲಣ ಮಮತೆಯನ್ನು ತ್ಯಜಿಸುವನು. ಪೂರ್ವದಲ್ಲಿ ಕರ್ಣನು ತನ್ನ ಮೈಮೇಲಿದ್ದ ಅಂಗಿಯನ್ನೂ, ದಧೀಚಿಯು ತನ್ನ ದೇಹದೊಳಗಣ ಮೂಳೆಗಳನ್ನೂ ದಾನಮಾಡಿ ಶಾಶ್ವತವಾದ ಕೀರ್ತಿ

ಪೋಗಿನೀಬೇಡಿದೊಡೆ । ಸಲೆಕರುಣದಿಂದಾನೃಪಂಕಾಯಮುಂಕೊಯ್ದುಕೊಡದಿರಂಪೋಗೆಂದುದು ॥ ೪೧ ॥ ಸುತ್ಯಾಗಿಶುಚಿ
ಶೂರನುಪಕಾರಿಕಮಲಾಕ್ಷ । ಭೃತ್ಯನನಸೂಯಂಕೃಪಾವನಧಿಭುವನಜನ । ಸ್ತುತ್ಯಂಮಯೂರಧ್ವಜಂತನ್ನಜೀವನವನಾದೊಡಂ
ಬೇಡಿದರ್ಗೆ ॥ ಅತ್ಯಂತಹರುಷದಿಂದಿತ್ತುಸತ್ಕೀರ್ತಿಯನ । ನಿತ್ಯಸಂಸಾರದೊಳ್ಪಡೆದಲ್ಲದಿರ್ದಪನೆ । ಸತ್ಯಮಿದುಪೋಗೆಂದು
ಸಿಂಹಮೆನ್ನಂಕಳುಹಿದೊಡೆನಿನ್ನೆಡೆಗೆಬಂದೆನು ॥ ೪೨ ॥ ರಾಯನಾಂಮೂಢನಲ್ಲವೆಸಕಲವೈಭವ । ಶ್ರೀಯುಕ್ತಮಾಗಿರ್ದನಿನ್ನ
ಘನಸೌಂದರ್ಯ । ಕಾಯಮಂಕೊಟ್ಟುತನ್ನಾತ್ಮಜಂಬದುಕಬೇಕೆಂದುಸಿಂಹದಮಾತಿಗೆ । ವಾಯದಿಂಬಂದೆನಿಲ್ಲಿಗೆಸಾಕದಂತಿರಲು ।
ಪಾಯಕೊಳಗಾಗಿರ್ದತನ್ನಸುತನುಳಿವುದಕು । ಪಾಯಮುಂಕಾಣೆನೆಂದಾಕಪಟಭೂಸುರಂಸುಯ್ದುಮತ್ತಿಂತೆಂದನು ॥ ೪೩ ॥

---

ದಾನವಂಗೈದು, ಕೀರ್ತಿಯಂತಳೆದುದಿಲ್ಲವೆ–ಯಶಸ್ಸಿಗೆ ಭಾಗಿಗಳಾಗಲಿಲ್ಲವೆ, ನಿನ್ನ–ನಿನ್ನದಾದ, ಕುಲಂ–ಸಂತತಿಯು, ಉಳಿಯ ಬೇಕೆಂದು–ಸಿಲ್ಲಿಸಿಕೊಡಬೇಕೆಂಬದಾಗಿ, ನೀನು–ನೀನೆ, ಪೋಗಿ–ಹೋದವನಾಗಿ, ಬೇಡಿದೊಡೆ–ಯಾಚಿಸಿದರೆ, ಸಲೆ–ಹೆಚ್ಚಾದ, ಕರುಣದಿಂದ–ದಯೆಯಿಂದ, ಆನೃಪಂ–ಆ ಮಯೂರಧ್ವಜನು, ಕಾಯಮಂ–ದೇಹವನ್ನು, ಕೊಯ್ದು–ಸೀಳಿ, ಕೊಡದಿರಂ–ದಾನ ಮಾಡದೆ ಇಂತಕ್ಕವನಲ್ಲ, ಪೋಗು–ಹೊರಡು, ಎಂದುದು–ಎಂಬುದಾಗಿ ಸಿಂಹವು ಹೇಳಿತು. ॥೪೧॥

ಟೀ॥ ಸುತ್ಯಾಗಿ–ದಾನಶೀಲನು, ಶುಚಿ–ಪವಿತ್ರನಾದವನು, ಶೂರನು–ಸಮರ್ಥನಾದವನು, ಉಪಕಾರಿ–ಒತ್ತಾಸೆಯಂ ಗೈಯ್ಯುವವನು, ಕಮಲಾಕ್ಷಭೃತ್ಯನು – ಪದ್ಮೇಕ್ಷಣನಾದ ನಾರಾಯಣನನ್ನು ಭಜಿಸತಕ್ಕವನು, ಅನಸೂಯಂ–ಹೊಟ್ಟೆಕಿಚ್ಚಿಲ್ಲ ದವನೂ, ಕೃಪಾವನಧಿ – ಕರುಣಾಸಿಂಧುವು, ಭುವನ– ಲೋಕದಲ್ಲಿರುವ, ಜನ – ಪ್ರಜೆಗಳಿಂದ, ಸ್ತುತ್ಯಂ – ಹೊಗಳಿಸಿಕೊಳ್ಳ ತಕ್ಕವನು, (ಆಗಿರತಕ್ಕ) ಮಯೂರಧ್ವಜಂ–ಮಯೂರಧ್ವಜನೆಂಬರಸು, ಬೇಡಿದವರ್ಗೆ–ಕೋರತಕ್ಕವರಿಗೆ, ಅತ್ಯಂತಹರ್ಷದಿಂದ– ಅತಿಶಯವಾದ ಆನಂದದಿಂದ, ತನ್ನ ಜೀವಿತವನಾದೊಡಂ–ತನ್ನ ಹರಣವನ್ನಾದಾಗ್ಯೂ ಕೂಡ, ಇತ್ತು–ದಾನಮಾಡಿ, ಸತ್ಕೀರ್ತಿ ಯನ್ನೂ, ಅನಿತ್ಯ–ಶಾಶ್ವತವಿಲ್ಲದಿರುವ, ಸಂಸಾರದೊಳ್–ಸಂಸಾರದಲ್ಲಿ, ಪಡೆದಲ್ಲದೆ–ತಾಳದೆ, ಇರ್ದಪನೆ–ಇರುತ್ತಾನೆಯೆ, ಇದು– ಈ ನನ್ನ ನುಡಿಯು, ಸತ್ಯ–ಯಥಾರ್ಥವು, ಪೋಗು – ಆ ಮಯೂರಧ್ವಜನ ಹತ್ತಿರಕ್ಕೆ ಹೋಗಿಸೇರು, ಎಂದು–ಎಂಬತೆರನಾಗಿ ಹೇಳಿ, ಎನ್ನಂ–ನನ್ನನ್ನು, ಸಿಂಹಂ–ಕೇಸರಿಯಾದರೊ, ನಿನ್ನೆಡೆಗೆ–ನಿನ್ನ ಹತ್ತಿರಕ್ಕೆ, ಕಳುಹಿದೊಡೆ–ಕಳುಹಿಸಿದ್ದರಿಂದ, ಬಂದೆನು– ಬಂದಿರುವೆನೆಂದು ಕಪಟವಿಪ್ರನು ಹೇಳಿದನು. ॥೪೨॥

ಟೀ॥ ರಾಯ–ಎಲೈ ದೊರೆಯೆ, ಸಕಲ–ಅಶೇಷವಾದ, ವೈಭವ – ಅಟ್ಟಹಾಸದಿಂದ ಕೂಡಿರುವ ಶ್ರೀ – ಐಸಿರಿಯಿಂದ, ಯುಕ್ತಮಾಗಿ–ಒಂದುಗೂಡಿ, ಇರ್ದ–ಇರತಕ್ಕ. ನಿನ್ನ–ನಿನ್ನದಾದ, ಘನ–ದೊಡ್ಡದಾದ, ಸೌಂದರ್ಯ–ಚೆನ್ನಾಗಿರುವ, ಕಾಯಮಂ– ದೇಹವನ್ನು, ಕೊಟ್ಟು–ದಾನಮಾಡಿ, ತನ್ನ–ನನ್ನ, ಆತ್ಮಜಂ–ಕುವರನು, ಬದುಕಬೇಕು–ಪ್ರಾಣವನ್ನು ಹೋಗಲಾಡಿಸಿಕೊಳ್ಳದಿರ ಬೇಕು, ಎಂಬ–ಎನ್ನತಕ್ಕ, ಸಿಂಹದಮಾತಿಗೆ – ಕೇಸರಿಯ ನುಡಿಗಳಿಗೆ, ವಾಯದಿಂ – ಸರಿಯಾಗಿ, ಇಲ್ಲಿಗೆ–ಈ ಎಡೆಗೆ, ಬಂದೆನು– ಬಂದಿರುತ್ತೇನೆ, ನಾಂ–ಈ ರೀತಿಯಲ್ಲಿ ಆಸೆಯಿಟ್ಟುಕೊಂಡು ಬಂದಿರತಕ್ಕ ನಾನು, ಮೂಢನಲ್ಲವೆ–ಮಂದಬುದ್ಧಿಯುಳ್ಳವನಲ್ಲವೆ, ಅದುಸಾಕು–ಸಿಂಹದ ಮಾತು ಅಂತಿರಲಿ, ಅಪಾಯಕೊಳಗೆ–ಕೊಂದರೆಗೆ, ಒಳಗಾಗಿದ್ದ–ಆಸ್ಪದನಾಗಿರತಕ್ಕ, ತನ್ನಸುತನು–ನನ್ನ ಕುವ ರನು, ಉಳಿವುದಕೆ–ಜೀವಿಸುವುದಕ್ಕೆ, ಉಪಾಯಮುಂ – ಚಮತ್ಕಾರವನ್ನು, ಕಾಣೆನು – ತಿಳಿವುದಿಲ್ಲವು, ಎಂದು–ಎಂಬತೆರನಾಗಿ, ಆಕಪಟಭೂಸುರಂ–ಆ ವಂಚಕನಾದ ವಿಪ್ರನು, ಸುಯ್ದು – ದೀರ್ಘವಾಗಿ ಶ್ವಾಸವನ್ನು ಬಿಡುತ್ತಾ, ಮತ್ತೆ–ತಿರುಗಿ, ಇಂತು– ಮುಂದೆ ಹೇಳುವಂತೆ, ಎಂದನು–ನುಡಿದನು. ॥೪೩॥

---

ಯನ್ನೈದಿದ್ದನ್ನು ಕೇಳಿಲ್ಲವೆ? ವಂಶೋದ್ಧಾರವಂ ಮಾಡುವ ಸುತನನ್ನು ಬದುಕಿಸಿಕೊಡೆಂದು ನೀನು ಹೋಗಿ ಕೇಳಿದರೆ ಕರು ಣಾರ್ದ್ರಹೃದಯನಾದ ಆ ರಾಯನು ಎಂದಿಗೂ ಹಿಂಜರಿಯಲಾರನು. ಅವನ ದೇಹವನ್ನು ಕೊಯ್ದು ಕೊಡುತ್ತಾನೆ ಯೋಚನೆ ಮಾಡಬೇಡ ॥೪೧॥ ಆ ಮಹಾರಾಯನಾದರೊ ದಾನಶೀಲನು. ಪರಮ ಪವಿತ್ರನು. ವೀರಾಗ್ರಣಿಯು, ಪರೋಪಕಾರದಲ್ಲಿ ಆಸ ಕ್ತನು ಅನವರತವೂ ವಿಷ್ಣುಪೂಜಾನಿರತನು ಪರರನ್ನು ನೋಡಿ ಕರುಬುವ ಗುಣವೇ ಅವನಲ್ಲಿಲ್ಲವು. ದಯಾನಿಧಿ ಎಂದು ಅವ ನನ್ನು ಎಲ್ಲರೂ ಕೊಂಡಾಡುವರು. ಅಶಾಶ್ವತವಾದ ಈ ಸಂಸಾರದಲ್ಲಿ ಆಶೆಯನ್ನು ಬಿಟ್ಟು ನಿನ್ನ ಇಷ್ಟಾರ್ಥವನ್ನೀಡೇರಿಸುವುದ ರಲ್ಲಿ ಏನೂ ಸಂದೇಹವಿಲ್ಲವೆಂದು ನುಡಿದು ನನ್ನನ್ನು ನಿನ್ನ ಬಳಿಗೆ ಕಳುಹಿಸಿದ್ದರಿಂದ ॥೪೨॥ ಅಷ್ಟೈಶ್ವರ್ಯಂಗಳನ್ನನುಭವಿಸುತ್ತ ಸಂತುಷ್ಟಾಂತರಂಗನಾಗಿ ವಿಷ್ಣುಭಕ್ತನಾಗಿರುವ ನಿನ್ನ ದೇಹಾರ್ಧವನ್ನು ಯಾಚಿಸಲು ಬಂದಿರುವ ನಾನು ಮೂಢಾತ್ಮನಲ್ಲವೆ? ಆ ಸಿಂಗದವಚನವದಂತಿರಲಿ. ಅಯ್ಯೋ! ಮಯೂರಧ್ವಜನೆ! ನನ್ನ ಕಂದನು ಬದುಕುವ ಬಗೆ ಹೇಗೆಂದು ಬಹುವಾಗಿ ದುಃ ಖಿಸಿ ॥೪೩॥ ಮತ್ತೆ ರಾಯನಂ ಕುರಿತು, ಎಲೈ ನರೇಂದ್ರನೇ! ಪೂರ್ವದಲ್ಲಿ ಬಾಲವಟು ಓರ್ವನು ಮರಣವನ್ನೈದಲು ಆ ಹಸುಳೆಯ

ಭೂಸುರಂಬ್ರಹ್ಮಚರ್ಯದೊಳಿರ್ದಪುತ್ರಂಗ | ತಾಸುವಾದೊಡೆರಾಮಚಂದ್ರಂಗೆಮೊರೆಯಿಟ್ಟ | ಸುತನಜೀವಮಂಬರಿಸನೇಪೌರುಷ
ದೊಳಾರಾಘವೇಶ್ವರಂಗೆ || ಸಾಸಟಿಯಲಾನೀನುಮದರಿನೆನ್ನಾತ್ಮಜಂ | ಕೇಸರಿಯಬಾಯತುತ್ತಾದನೀದುಃಖದಾ | ಯಾಸ
ಮಂನಿನಗೊರೆದೆನೀನುಳುಹುಮಾಣೆಂದುಕಪಟದ್ವಿಜಂನುಡಿದನು || ೪೪ || ಕೇಳ್ದನವನೀಶ್ವರಂಪ್ರಚ್ಛನ್ನಭೂಸುರಂ | ಪೇಳ್ದವೃ
ತ್ತಾಂತಮಂಕೀರ್ತಿನಿಲುವುದುನರರ | ಬಾಳ್ದಿಟಮಿದಲ್ಲೆಂದುನಿಶ್ಚೈಸಿವಿಪ್ರನಂಕರೆದುನಿನಗೀತನುವನು || ಸೀಳ್ದುಕೊಟ್ಟಪೆ
ನೆಂದಭಯವಿತ್ತುಬಳಿಕತಾ | ನಾಳ್ದಿಳೆಯನಾತ್ಮಜಂಗೊಪ್ಪಿಸಲುಹರುಷಮಂ | ತಾಳ್ದನಿಬರೆಲ್ಲರಂಮಂಟಪದೊಳಿಹುದೆಂದುಕು

ಟೀ|| ಬ್ರಹ್ಮಚರ್ಯದೊಳು–ಉಪನಯನವಾದ ನಂತರ ಉಂಟಾಗುವ ಆಶ್ರಮದೊಳಗೆ, ಇರ್ದ–ಇದ್ದಂಥ, ಪುತ್ರಂ–ಕುವರನು, ಗತಾಸುವಾದೊಡೆ–ಸತ್ತುಹೋಗಲಾಗಿ, ಭೂಸುರಂ–ಅವನ ತಂದೆಯಾದ ವಿಪ್ರನೋರ್ವನು, ರಾಮಚಂದ್ರಂಗೆ ಮೊರೆಯಿಟ್ಟೊಡೆ–ಶ್ರೀರಾಮಮೂರ್ತಿಗೆ ಶರಣಾಗತನಾಗಲು, ಆ ಸುತನ–ಆ ವಿಪ್ರವಟುವಿನ, ಜೀವಮಂ–ಹರಣವನ್ನು, ಬರಿಸನೆ–ಬರಮಾಡಲಿಲ್ಲವೆ, ನೀನುಂ–ನೀನೂ ಕೂಡ, ಪೌರುಷದೊಳು–ಸಾಮರ್ಥ್ಯದಲ್ಲಿ, ಆ ರಾಘವೇಶ್ವರಂಗೆ–ಶ್ರೀರಾಮನಿಗೆ, ಸಾಸಟಿಯಲಾ–ಹೋಲತಕ್ಕವನಲ್ಲವೆ, ಎನ್ನ–ನನ್ನ, ಆತ್ಮಜಂ–ಕುವರನು, ಕೇಸರಿಯ–ಸಿಂಗದ, ಬಾಯ–ಬಾಯಿಗೆ, ತುತ್ತಾದನು–ಆಹಾರವಾಗಿರುವನು, ಅದರಿಂ–ಅದಕಾರಣ, ನಿನಗೆ–ನಿನ್ನ ಕೂಡ, ಈ ದುಃಖದ–ಈ ಸಂಕಟದ, ಆಯಾಸಮಂ–ತೊಂದರೆಯನ್ನು, ಒರೆದೆನು–ನುಡಿದಿರುವೆನು, ನೀನು–ನೀನಾದರೊ, ಉಳುಹು–ನನ್ನ ಕುವರನನ್ನು ಸಿಂಹದಿಂದ ಬಿಡುಗಡೆಮಾಡಿ ಕಾಪಾಡು, ಮಾಣು–ಅಥವಾ ಉಪೇಕ್ಷೆಯಿಂದ ಬಿಟ್ಟುಬಿಡು, ಎಂದು–ಎಂಬತೆರನಾಗಿ, ಕಪಟದ್ವಿಜಂ–ಕೃತ್ರಿಮ ವೇಷಧಾರಿಯಾದ ಕೃಷ್ಣಸ್ವಾಮಿಯು, ನುಡಿದನು–ವಿವರಿಸಿದನು, "ತ್ರೇತಾಯುಗದಲ್ಲಿ ಶ್ರೀರಾಮಚಂದ್ರನು ರಾಜ್ಯಪರಿಪಾಲನೆಯಂ ಗೈಯುತ್ತಲಿರುವಾಗ ನಾಲ್ಕು ವರ್ಣಾಶ್ರಮದವರೂ ತಮ್ಮ ತಮ್ಮ ವರ್ಣಾಶ್ರಮದಲ್ಲಿ ಲೇಶವಾದರೂ ಲೋಪವಿಲ್ಲದೆ ಇದ್ದದ್ದರಿಂದ ಆತನ ರಾಜ್ಯಭಾಗದಲ್ಲಿ ಸಕಲ ಪ್ರಜೆಗಳೂ ಸುಖವಾಗಿದ್ದರು. ಹೀಗಿರುವಲ್ಲಿ ಶೂದ್ರನಾದ ಶಂಬೂಕನೆಂಬುವನು ಘೋರ ತಪವಂ ಗೈಯ್ಯಲಾರಂಭಿಸಿದನು. ಜಾತಿಧರ್ಮವನ್ನು ಮೀರಿ ಇವನು ತಪಸ್ಸನ್ನು ಮಾಡಲಾರಂಭಿಸಿದ್ದರಿಂದ ರಾಮರಾಜ್ಯದಲ್ಲಿ ಒಬ್ಬಾನೊಬ್ಬ ಬ್ರಾಹ್ಮಣ ವಟುವಿನ ಪ್ರಾಣವು ಯಮನ ಪಾಲಾಯಿತು. ಆ ಬಾಲಕನ ತಂದೆಯು ಗೋಳಾಡುತ್ತ ಸತ್ತುಬಿದ್ದ ಮಗನ ಶರೀರವನ್ನು ತಂದು ರಾಮನ ಪಾದಸನ್ನಿಧಿಯಲ್ಲಿ ಹಾಕಿ" "ಎಲೈ ಮಹಾಪ್ರಭುವೆ, ನಿನ್ನ ರಾಜ್ಯಭಾರದಲ್ಲಿ ಏನೋ ಅಧರ್ಮ ಕಾರ್ಯವು ನಡೆಯುತ್ತಲಿರುವುದರಿಂದ ನನ್ನ ಮಗನು ಸತ್ತುಹೋದನು ದಯೆ ಇಟ್ಟು ಕಾಪಾಡೆಂದು" ಹಲುಬಿದನು, ರಾಮಮೂರ್ತಿಯು ದಿವ್ಯಜ್ಞಾನದಿಂದ ನೋಡಿ ಇದು ಶೂದ್ರನ ತಪಸ್ಸಿನ ಫಲವೆಂದರಿತು ತನ್ನ ಬಾಣದಿಂದ ಅವನನ್ನು ಕೊಂದು ಬ್ರಾಹ್ಮಣ ವಟು ಪ್ರಾಣವನ್ನುಳಿಹಿದನು. ಪೂರ್ವದಲ್ಲಿ ರಾಮನು ಬ್ರಾಹ್ಮಣವಟುವನ್ನು ಸಲಹಿ ಅವನ ತಂದೆಗೆ ಆತ್ಯಾನಂದವನ್ನುಂಟುಮಾಡಿದಂತೆ ಸಿಂಹದ ಬಾಯಿಗೆ ತುತ್ತಾಗಲನುವಾಗಿರತಕ್ಕ ನನ್ನ ಹಸುಳೆಯ ಪ್ರಾಣವನ್ನು ಧರ್ಮಶೀಲನಾದ ನೀನು ಕಾಪಾಡಬೇಕೆಂದು ಕಪಟ ವಿಪ್ರನಾದ ಕೃಷ್ಣಮೂರುತಿಯು ಮಯೂರಧ್ವಜನೊಂದಿಗೆ ನುಡಿದನು. ||೪೪||

ಟೀ|| ಪ್ರಚ್ಛನ್ನ–ಗೂಢವಾಗಿರುವ, ಭೂಸುರಂ–ವಿಪ್ರವೇಷಧಾರಿಯು, ಪೇಳ್ದ–ನುಡಿದ, ವೃತ್ತಾಂತಮಂ–ವರ್ತಮಾನವನ್ನು, ಅವನೀಶ್ವರಂ–ಭೂಕಾಂತನಾದ ಮಯೂರಧ್ವಜನು, ಕೇಳ್ದನು–ಕೇಳಿದವನಾದನು, ಕೀರ್ತಿ–ಒಳ್ಳೆ ಹೆಸರಾದರೊ, ನಿಲವುದು–ಸ್ಥಿರಪಡುವುದು, ಇದು ನರರಬಾಳ್–ಈ ಮನುಷ್ಯರ ಜೀವನವು, ದಿಟಂ ಅಲ್ಲ–ಅಶಾಶ್ವತನಾದದ್ದು, ಎಂದು–ಎಂಬತೆರನಾಗಿ, ನಿಶ್ಚೈಸಿ–ನಿಷ್ಕರ್ಷಿಸಿಕೊಂಡು, ವಿಪ್ರನಂ–ಪಾರ್ವನನ್ನು, ಕರೆದು–ಸಂಬೋಧಿಸಿ, ಈ ತನುವನು–ಈ ದೇಹವನ್ನು, ನಿನಿಗೆ–ನಿನಿಗಾದರೊ, ಸೀಳ್ದುಕೊಟ್ಟಪೆನು–ವಿಭಾಗಿಸಿಕೊಡುವೆನು, ಎಂದು–ಎಂಬ ತೆರನಾಗಿ, ಅಭಯಮಂ–ಧೈರ್ಯವನ್ನು, ಇತ್ತು–ಹೇಳಿದವನಾಗಿ, ಬಳಿಕ–ಆಮೇಲೆ, ತಾನು–ತಾನಾದರೊ, ಆತ್ಮಜಂಗೆ–ತನ್ನ ಕುವರನಾದ ತಾಮ್ರಕೇತುವಿಗೆ, ಆಳ್ದ–ಧೊರೆತನಮಾಡುತ್ತಿದ್ದ

ತಂದೆಯು ಹೋಗಿ ಶ್ರೀರಾಮಮೂರ್ತಿಯ ಪಾದಾರವಿಂದವನ್ನು ಮರೆಹೊಗಲು ಕರುಣಾಸಾಂದ್ರನಾದ ರಾಮಚಂದ್ರನು ಶಂಬೂಕನೆಂಬ ಶೂದ್ರಮುನಿಯನ್ನು ಕೊಂದು, ಆ ಬಾಲನನ್ನು ಬದುಕಿಸಿದ್ದನ್ನು ಕೇಳಿಲ್ಲವೆ? ಪುತ್ರಹೀನನಾದ ನಾನಾದರೊ, ಶ್ರೀರಾಮನಿಗೆ ಸಕಲ ವಿಧದಲ್ಲಿಯೂ ಹೋಲಿಕೆಯಾಗಿರತಕ್ಕ ನಿನ್ನಬಳಿಗೆ ಬಂದು ನಿನ್ನ ಮರೆಹೊಕ್ಕಿರುವೆನು ನನ್ನ ಮಗನನ್ನು ಬದುಕಿಸಿ ನನ್ನನ್ನು ಕಾಪಾಡಿದರೂ ಸರಿಯೆ, ಇಲ್ಲವಾದರೂ ಸರಿಯೆ ನಿನ್ನನ್ನೇ ಮರೆಹೊಕ್ಕಿರುವೆನೆಂದು ನುಡಿದನು||೪೪|| ಕಪಟ ಬ್ರಾಹ್ಮಣನು ಹೇಳಿದ ಈನುಡಿಗಳನ್ನೆಲ್ಲಾ ಕೇಳುತ್ತಲಿದ್ದ ಮಯೂರಧ್ವಜನಾದರೊ ಮನುಷ್ಯನ ಜೀವನವು ಅನಿತ್ಯವೆಂದೂ, ಶಾಶ್ವತವಾದ ಕೀರ್ತಿಯನ್ನು ಸಂಪಾದಿಸಲು ಇದೇ ಸಮಯವೆಂದೂ ನಿಶ್ಚೈಸಿದವನಾಗಿ ಆ ದ್ವಿಜವರ್ಯನನ್ನುಹತ್ತಿರಕ್ಕೆಕರೆದು, ಎಲೈ ಭೂಸುರೋತ್ತಮನೆ, ನನ್ನ ಶರೀರವನ್ನು ಕೊಯ್ದುಕೊಟ್ಟು ನಿನ್ನ ಮಗನ ಪ್ರಾಣವನ್ನುಳಿಸಿಕೊಡುವೆನು, ನೀನು ಮನದಲ್ಲಿ ಸಂಕಟಪಡಬೇಡ

ಳ್ಳಿರಿಸಿಪೊರಮಟ್ಟನು ||೪೫|| ತರಿಸಿಗಂಗಾತೋಯಮಂಮಜ್ಜನಂಗೈದು | ಪರಮಸಾಲಗ್ರಾಮತೀರ್ಥಮಂಕೈಕೊಂಡು | ತರುಣ ತುಲಸಿಯಮಾಲೆಯಂಕಂಧರದೊಳಾಂತುಯಾಗಮಂಟಪಕೆಬಂದು || ನೆರೆದಭೂಸುರಸಭೆಗೆಸಾಷ್ಟಾಂಗದಿಂದೆರಗಿ | ಕರಯು ಗಳಮಂ ಮುಗಿದುನಿಂದ.ಬಿನ್ನೈಸಿದಂ | ಧರಣೀಶ್ವರಾಗ್ರಣಿಮಯೂರಧ್ವಜಂಜಗದಧೀಶಕೇಳ್ಕೌತುಕವನು || ೪೬ || ಈವ.ಹಾ ಸ್ಥಾನದೊಳ್ನೆರೆದಖಿಳಭೂಸುರ | ಸ್ತೋಮಂನಿರೀಕ್ಷಿಸುವುದೆಂದುಬಲಿಯಧ್ವರಕೆ | ವಾಮನಂಬಂದಂತೆತನ್ನಮಖಕೀದ್ವಿಜಂ ತಾನೆಬಿಜಯಂಗೈದನು || ಶ್ರೀಮಾಧವಸ್ವರೂಪದೊಳದರಿನೀಗತ | ನ್ನೀಮೈಯೊಳರ್ಧಮಂಕೊಯಿದುಕೊಟ್ಟಪೆನತಿ | ಪ್ರೇಮದಿಂದೀತಂಗೆಬದುಕಲೀತನಸುತಂಪೊಸತಾಗಲಿಳೆಗೆಂದನು ||೪೭|| ಭೂನಾಥನೆಂದಮಾತಂಕೇಳ್ದುಸಕಲಪ್ರ | ಧಾನಿಗಳು

---

ಇಳೆಯನು–ಧರಾವಲಯವನ್ನು, ಒಪ್ಪಿಸಲು–ಕೊಡುವುದಕ್ಕಾಗಿ, ಹರುಷಮಂ–ಆನಂದವನ್ನು, ತಾಳ್ದು–ಹೊಂದಿ, ಅಸಿಬರೆಲ್ಲರಂ–ಅಲ್ಲಿ ನೆರೆದಿದ್ದಸಕಲ ಜನರನ್ನೂ, ಮಂಟಪದೊಳು–ಯಜ್ಞಶಾಲೆಯೊಳಗೆ, ಇಹುದು–ಇರಬೇಕು, ಎಂದು–ಎಂಬದಾಗಿ ಹೇಳಿ, ಕುಳ್ಳಿರಿಸಿ–ಅವರನ್ನೆಲ್ಲಾ ಉಪಚಾರದಿಂದ ಉಚಿತಾಸನಂಗಳಲ್ಲಿ ಕೂತುಕೊಳ್ಳುವಂತೆ ಮಾಡಿ, ಪೊರಮಟ್ಟನು–ಹೊರಟವನಾದನು ||೪೫||

ಟೀ|| ಧರಣೀಶ್ವರಾಗ್ರಣಿ ಪೊಡವಿಪರಲ್ಲಿ ಉತ್ತಮೋತ್ತಮನಾದ, ಮಯೂರಧ್ವಜಂ–ಮಯೂರಧ್ವಜನೆಂಬ ಮಹಾರಾಯನು, ಗಂಗಾತೋಯಮಂ–ಸುರನದಿಯ ತೀರ್ಥವನ್ನು, ತರಿಸಿ–ತರಿಸಿಕೊಂಡು, ಮಜ್ಜನಂಗೈದು–ಸ್ನಾನವಂ ಮಾಡಿ, ಸಾಲಗ್ರಾಮತೀರ್ಥಮಂ–ಸಾಲಗ್ರಾಮದ ಉದಕವನ್ನು, (ತೀರ್ಥವನ್ನು) ಕೈಕೊಂಡು–ಸ್ವೀಕರಿಸಿ, ಕಂಧರದೊಳು–ಕಂಠದಲ್ಲಿ, ತರುಣ–ನೂತನವಾದ, ತುಲಸೀಮಾಲೆಯಂ–ತುಲಸಿಯ ಮಾಲಿಕೆಯನ್ನು, ಆಂತು–ಹಾಕಿಕೊಂಡು, ಯಾಗ ಮಂಟಪಕ್ಕೆ–ಯಾಗಶಾಲೆಗೆ, ಬಂದು ನೆರೆದ–ಒಟ್ಟಾಗಿ ಸೇರಿರುವ, ಭೂಸುರ ಸಭೆಗೆ–ವಿಪ್ರಸಮುದಾಯಕ್ಕೆ, ಸಾಷ್ಟಾಂಗದಿಂದ–ಎದೆಯೇ ಮೊದಲಾದ ಎಂಟು ಅವಯವಗಳಿಂದಲೂ, ಎರಗಿ–ನಮಸ್ಕಾರಮಾಡಿ, ಕರಯುಗಳಮಂ–ಎರಡು ಹಸ್ತಗಳನ್ನು, ಮುಗಿದು–ಒಂದುಗೂಡಿಸಿ, ನಿಂದು–ನಿಂತವನಾಗಿ ಬಿನ್ನೈಸಿದಂ–ಅರಿಕೆಮಾಡಿಕೊಂಡನು, ಜನಾಧೀಶ–ನರೇಂದ್ರನಾದ ಜನಮೇಜಯನೆ, ಕೇಳು–ಲಾಲಿಸು.

ಅ|| ವಿ|| ಜನಾಧೀಶ (ಸ. ದೀ) ಅಷ್ಟಾಂಗಗಳು–ಎದೆ, ತಲೆ, ಕಣ್ಣು, ಮನಸ್ಸು, ಕೈ, ಕಾಲು, ಕಿವಿ, ಭಕ್ತಿ ಎಂಬ ಎಂಟು. ಕಂಧರ–ಕತ್ತು. ||೪೬||

ಟೀ|| ಈ ಮಹಾಸ್ಥಾನದೊಳ್– ಅಸಾಧಾರಣವಾದ ಈ ಯಾಗಶಾಲೆಯೊಳಗೆ, ನೆರೆದ–ಸೇರಿರತಕ್ಕ, ಅಖಿಳ–ಅಶೇಷವಾದ. ಭೂಸುರಸ್ತೋಮಂ–ವಿಪ್ರಮಂಡಲಿಯು, ನಿರೀಕ್ಷಿಸುವುದು– ಈಕ್ಷಿಸುತ್ತಿರಬೇಕು, ಬಲಿಯು–ಬಲಿಚಕ್ರವರ್ತಿಯು ಮಾಡುತ್ತಲಿದ್ದ, ಅಧ್ವರಕೆ–ಯಾಗಕ್ಕೆ, ಅಂದು–ಪೂರ್ವದಲ್ಲಿ, ವಾಮನಂ–ವಾಮನಮೂರ್ತಿಯಾದ ಶ್ರೀಮನ್ನಾರಾಯಣನು, ಬಂದಂತೆ–ಬಂದ ಪರಿಯಾಗಿ, ತನ್ನ ಮಖಕೆ–ನನ್ನ ಯಾಗಕ್ಕೂ ಕೂಡ, ಶ್ರೀ ಮಾಧವಸ್ವರೂಪದೊಳು– ಶ್ರೀಮನ್ನಾರಾಯಣನ ರೂಪದಂತೆಯೇ, ಈ ದ್ವಿಜಂ–ಈ ವಿಪ್ರನು, ತಾನೇ–ಅವನೆ, ಬಿಜಯಂಗೈದನು–ಬಂದವನಾದನು, ಅದರಿನಿಂ–ಆದಕಾರಣದಿಂದ, ತನ್ನ–ನನ್ನದಾಗಿರತಕ್ಕ, ಈ ಮೈಯೊಳು–ಈ ದೇಹದಲ್ಲಿ, ಅರ್ಧಮಂ–ಅರ್ಧದೇಹವನ್ನು, ಈಗ–ಈಗಲಾದರೊ, ಅತಿ ಪ್ರೇಮದಿಂದ–ಬಹಳ ಅಕ್ಕರೆಯಿಂದ, ಈ ವಿಪ್ರನಿಗೆ–ಈ ಬ್ರಾಹ್ಮಣನಿಗೆ, ಕೊಯಿದು ಕೊಟ್ಟಪೆನು–ವಿಭಾಗಿಸಿ ಕೊಡುವೆನು, ಈತನ–ಈ ವಿಪ್ರೋತ್ತಮನ, ಸುತಂ–ತನುಜನು, ಬದುಕಲಿ–ಪ್ರಾಣಗಳನ್ನು ಪಡೆಯಲಿ, ಇಳೆಗೆ–ಭೂಮಂಡಲಕ್ಕೆ, ಪೊಸತು–ಹೊಸ ಸುದ್ದಿಯು, ಆಗಲಿ–ಉಂಟಾಗಲಿ, ಎಂದು–ಎಂಬುದಾಗಿ ನುಡಿದನು ||೪೭||

---

ವೆಂಬದಾಗಿ ಅಭಯ ಪ್ರದಾನಮಂ ಗೈದು, ತನ್ನ ಸಕಲ ಸಂಪತ್ತನ್ನೂ ಪುತ್ರನಾದ ತಾಮ್ರಧ್ವಜನಿಗೆ ಒಪ್ಪಿಸುವುದರಲ್ಲಿ ಅತ್ಯಾಸಕ್ತಿಯುಳ್ಳವನಾಗಿ, ಸಭೆಯಲ್ಲಿ ನೆರೆದಿದ್ದವರನ್ನೆಲ್ಲಾ ಅಲ್ಲಿಯೇ ಇರುವಂತೆ ಹೇಳಿ ತಾನು ಮಾತ್ರ ಹೊರಟವನಾಗಿ||೪೫|| ಗಂಗಾನದಿಯ ತೀರ್ಥವನ್ನು ತರಿಸಿ ಅದರಲ್ಲಿ ಸ್ನಾನವಂ ಮಾಡಿ ಶುಭ್ರವಸ್ತ್ರವನ್ನುಟ್ಟು, ಶ್ರೇಷ್ಠವಾದ ಸಾಲಗ್ರಾಮವಂ ಪೂಜಿಸಿ, ತೀರ್ಥವಂ ಪಾನಮಾಡಿ, ಕತ್ತಿನಲ್ಲಿ ಹೊಸದಾದ ತುಳಸೀಮಾಲಿಕೆಯನ್ನು ಹಾಕಿಕೊಂಡು, ಸಭಾಭವನಕ್ಕೆ ಹಿಂತಿರುಗಿಬಂದು ಸೇರಿ ಅಲ್ಲಿ ನೆರೆದಿರತಕ್ಕ ಸಭಾಜನರಿಗೆಲ್ಲಾ ಸಾಷ್ಟಾಂಗದಂಡಪ್ರಣಾಮವಂಗೈದು, ಮುಕುಳಿತಕರಸಂಪುಟನಾಗಿ ವಿಜ್ಞಾಪಿಸಿಕೊಂಡಪರಿಯನ್ನರುಹುವೆನು, ಕೇಳೈ ಜನಮೇಜಯ ಧರಾನಾಥನೆ, || ೪೬ || ಆ ಮಯೂರಧ್ವಜನಾದರೊ, ನೆರೆದಿದ್ದ ಸಭಾಜನರನ್ನು ಕುರಿತು ಎಲೈ ಸಭಾಸದರೆ ಕೇಳಿ, ಪೂರ್ವದಲ್ಲಿ ಬಲಿಚಕ್ರವರ್ತಿಯುಮಾಡುತ್ತಲಿದ್ದ ಯಾಗಶಾಲೆಗೆ ವಾಮನ ಮೂರುತಿಯು ತಾನಾಗಿಯೇ ಬಂದು ಮೂರು ಹೆಜ್ಜೆ ಭೂಮಿಯನ್ನು ಯಾಚಿಸಿದನು. ಬಲಿಚಕ್ರವರ್ತಿಯು ಸ್ವಲ್ಪವಾದರೂ ಹಿಂಜರಿಯದೆ ದಾನವಂ ಮಾಡಿದ್ದರಿಂದ ಅವನ ಯಶಸ್ಸು ಆಚಂದ್ರಾರ್ಕವಾಗಿ ನೆಲೆಗೊಂಡಿರುವುದು, ಈಗಲಾದರೊ ಈ ಬ್ರಾಹ್ಮಣನು ಅಪ್ರಾರ್ಥಿತನಾಗಿಯೇ ನನ್ನ ಪುಣ್ಯಪರಿಪಾಕದಿಂದ ಈ ಯಜ್ಞಮಂಟಪಕ್ಕೆ ಬಂದು, ನನ್ನ ದೇಹದಲ್ಲಿ ಅರ್ಧವನ್ನು ಯಾಚಿಸಿರುವನು ಶ್ರೀಮ

ಮರಸನಪುರೋಹಿತಮಹಾದ್ವಿಜರಿ | ದೇನಿದೆತ್ತಣಕೃತ್ಯಮೀವಿಪ್ರನಂತಕೋಪಮನೆಂದುಭೀತಿಯಿಂದ ‖ ದಾನಮೆಂದ್ಯೊಡೆರಾಜ್ಯ ಲಕ್ಷ್ಮೀಧನಕನಕಮಣಿ | ಧೇನುಗಳನೀವರೀಕಾಯಮಂಕೊಯ್ದುಕೊಡು | ವೀನಿಮಿತ್ತವೇನರಿಯೆವೆಂದೆಲ್ಲರುಂ ಕಂಪಿಸಲ್ಕರದೇವನಿಂತೆಂದನು ‖೪೮‖ ಯಾಚಿಸಿದನಂಗಮಂಸುತನನುಳುಹೆಂದೆನಗೆ | ಸೂಚಿಸಿದನೀವಿಪ್ರತಾಂ ಕೊಡುವೆನೆಂದೊಡನೆ | ವಾಚಿಸಿದನಿಂತಿದಕೆತಪ್ಪಿದೊಡೆಲೋಕದೊಳ್ತನ್ನಂಸಮಸ್ತಜನರು ‖ ನಾಚಿಸದೆಮಾಣ್ಬಪರೆವುಸಿದೊಡಂತಕನವ | ರ್ಚಾಚಿಸರೆನರಕದೊಳ್ಮೈಯ್ಯನರಿದೀಯ್ಯಲಾ | ಲೋಚಿಸಲದೇಕಿನ್ನುತೊಲಗಿನೀವೆಂದುನೃಪನನಿಬರಂಸೈಪಿಟ್ಟನು ‖ ೪೯ ‖ ಆಮಯೂರಧ್ವಜಂಬಳಿ

---

ಟೀ‖ ಸಕಲಪ್ರಧಾನಿಗಳು-ಸಚಿವರೆಲ್ಲರೂ, ಅರಸನ-ರಾಜನ, ಪುರೋಹಿತ-ಅಶ್ವಮೇಧವನ್ನು ಮಾಡಿಸುವನೂ, ಮಹಾ ದ್ವಿಜರು-ಶ್ರೇಷ್ಠರಾದ ಸಕಲವಿಪ್ರರೂ, ಭೂನಾಥನು-ಪ್ರೊಢವಿಪನಾದ ಮಯೂರಧ್ವಜನು, ಎಂದ-ನುಡಿದ, ಮಾತಂ-ನುಡಿಯನ್ನು, ಕೇಳ್ದು-ಆಲಿಸಿ, ಇದೇನು-ಇದು ಯಾವಬಗೆಯು, ಇದು-ಈ ಕಾರ್ಯವು, ಎತ್ತಣಕೃತ್ಯಂ- ಎಲ್ಲಿಯ ಕಾರ್ಯವು, ಈವಿಪ್ರನು-ಈ ಭೂಸುರನಾದರೊ, ಅಂತಕೋಪಮನು-ಯಮಧರ್ಮರಾಯನನ್ನು ಹೋಲತಕ್ಕವನಾಗಿರುವನು. ಎಂದು-ಎಂಬತೆರನಾಗಿ ನುಡಿದು, ಭೀತಿಯಿಂದ-ಹೆದರಿಕೆಯಿಂದ, ದಾನಂ-ದಾನಮಾಡುವುದು, ಎಂದೊಡೆ-ಎಂದು ನುಡಿದರೆ, ರಾಜ್ಯಲಕ್ಷ್ಮೀ-ಐಶ್ವರ್ಯ ಲಕ್ಷ್ಮಿಯನ್ನೂ, ಧನಕನಕಮಣಿಧೇನುಗಳನು-ದ್ರವ್ಯಸುವರ್ಣ ವಜ್ರವೈಡೂರ್ಯಾದಿಗಳು ಗೋವುಗಳೇ ಮೊದಲಾದವನ್ನು, ಈವರು-ದಾನಮಾಡುವರು, ಈಕಾಯಮುಂ-ಈ ದೇಹವನ್ನು, ಕೊಯ್ದುಕೊಡುವ- ಛೇದಿಸಿಕೊಡತಕ್ಕ, ಈ ನಿಮಿತ್ತವನು-ಇದರ ಹೇತುವಾವುದೆಂಬುದನ್ನು, ಅರಿಯೆವು-ತಿಳಿದಿಲ್ಲ, ಎಂದು-ಎಂಬತೆರನಾಗಿ, ಎಲ್ಲರುಂ-ಸಮಸ್ತರೂ, ಕಂಪಿಸಲು-ಭಯದಿಂದ ಗಡಗಡನೆ ನಡುಗಲಾಗಿ, ನೃಪತಿ-ಮಾನವೇಂದ್ರನಾದ ಮಯೂರಧ್ವಜನು, ಇಂತು-ಮುಂದೆಹೇಳುವಂತೆ, ಎಂದನು-ನುಡಿದನು‖೪೮

ಟೀ‖ ಈವಿಪ್ರ-ಈ ದ್ವಿಜನಾದರೊ, ಎನಗೆ-ನನ್ನೊಂದಿಗೆ, ಸೂಚಿಸಿದನು - ತನಿಗುಂಟಾದ ಶೋಕಪರಂಪರೆಯನ್ನು ಅರುಹಿದನು, ಸುತನನು-ತನ್ನ ತನುಜನನ್ನು, ಉಳುಹೆಂದು - ಕಾಪಾಡು ಎಂಬುದಾಗಿ, ಅಂಗಮುಂ-ಈ ನನ್ನ ದೇಹವನ್ನು, ಯಾಚಿಸಿದನು-ಕೇಳಿಕೊಂಡನು. ತಾನು-ನಾನಾದರೊ, ಒಡನೆ-ಆ ಬ್ರಾಹ್ಮಣನ ಸಂಕಟವನ್ನು ಕೇಳಿದೊಡನೆಯೆ, ಕೊಡುವೆನು-ನನ್ನ ಶರೀರವನ್ನು ನಿನ್ನ ಮಗನು ಬದುಕುವ ಕಾರ್ಯಕ್ಕೆ ದಾನವಂ ಮಾಡುವೆನು, ಎಂದು-ಎಂಬತೆರನಾಗಿ, ಒಡನೆ-ಕೂಡಲೆ, ವಾಚಿಸಿದೆನು-ನುಡಿದೆನು, ಇಂತು-ಈ ತೆರನಾಗಿರುವಲ್ಲಿ, ಇದಕೆ-ಈ ನುಡಿಗೆ, ತಪ್ಪಿದೊಡೆ-ತಪ್ಪಿಬಿಟ್ಟರೆ, ಸಮಸ್ತಜನರೂ-ಅಶೇಷರೂ, ತನ್ನಂ-ನನ್ನನ್ನು, ಲೋಕದೊಳ್-ಭೂಮಂಡಲದೊಳಗೆ, ನಾಚಿಸದೆ-ಹೀಯಾಳಿಸದೆ, ಮಾಣ್ಬರೆ-ಬಿಡುತ್ತಾರೆಯೆ, ಪುಸಿದೊಡೆ-ಅಸತ್ಯವನ್ನಾಡಿದಲ್ಲಿ, ಅಂತಕನವರು-ಯಮನಕಡೆಯ ಆಳುಗಳು, ನರಕದೊಳ್-ಯಮನ ರಾಜಧಾನಿಯಲ್ಲಿ. ಪಾಚಿಸರೆ-ಭಸ್ಮಮಾಡದೆ ಬಿಡುತ್ತಾರೆಯೆ, ಮೈಯ್ಯನು-ನನ್ನ ದೇಹವನ್ನು, ಈಯಲು-ದಾನಮಾಡಲು, ಆಲೋಚಿಸಲು-ಆಲೋಚನೆಯನ್ನೆಸಗಲಾಗಿ, ಅದೇಕೆ-ಅದೇಕೆ ಆಗಬಾರದು, ನೀವು-ನೀವಾದರೊ, ಇನ್ನು-ಇನ್ನುಮುಂದೆ, ತೊಲಗಿರಿ-ನಡೆಯಿರಿ, ಎಂದು-ಎಂಬತೆರನಾಗಿ, ಅನಿಬರಂ-ಅಲ್ಲಿ ಸೇರಿದ್ದ ಸರ್ವರನ್ನೂ, ನೃಪನು-ಮಯೂರಧ್ವಜನು, ಸೈಪಿಟ್ಟನು-ಶಾಂತರಾಗುವಂತೆ ಮಾಡಿದನು ‖ ೪೯ ‖

---

ನ್ನಾರಾಯಣನೇ ಸಾಕ್ಷಾತ್ತಾಗಿ ಬಂದಿರುವನೆಂದು ಭಾವಿಸಿ ಸಂತೋಷದಿಂದ ಈ ದ್ವಿಜೋತ್ತಮನಿಗೆ ನನ್ನ ದೇಹಾರ್ಧವನ್ನು ದಾನಮಾಡಿ ಸತ್ಕೀರ್ತಿಗೆ ಭಾಗಿಯಾಗುವೆನು ನನ್ನದೇಹವು ಲಯವಾದರೂ ಈ ಭೂಸುರೋತ್ತಮನ ಸುತನು ಬದುಕುವನಲ್ಲಾ ! ಇದೇ ನನಿಗೆ ಬೇಕಾದದ್ದು ಲೋಕದಲ್ಲಿದ್ದ ನನ್ನ ಹೆಸರು ಶಾಶ್ವತವಾಗಿ ನಿಲ್ಲಲೆಂದು ಸಂತೋಷದಿಂದ ನುಡಿದನು ‖೪೭‖ ಮಯೂರಧ್ವಜನ ಈತೆರನಾದ ಮಾತನ್ನು ಸಭೆಯಲ್ಲಿ ನೆರೆದಿದ್ದ ಅಮಾತ್ಯರೂ, ಪುರೋಹಿತನಾದ ಸತ್ಯಶೀಲನೂ, ವಿಪ್ರವರ್ಯರೂ ಕೇಳಿ, ಅಹ! ಇದು ಎಂತಹ ಕ್ರೂರಕೃತ್ಯವು ! ಅಯ್ಯೋ ! ಈ ಬ್ರಾಹ್ಮಣನು ಮಯೂರಧ್ವಜನಿಗೆ ಯಮಸ್ವರೂಪನಾದಲ್ಲ ! ಲೋಕದಲ್ಲಿ ದೇಶವನ್ನೂ, ಕೋಶವನ್ನೂ ಹಸುಗಳು, ಐಸಿರಿ ಮೊದಲಾದವೆಲ್ಲವನ್ನೂ ದಾನಮಾಡುವುದುಂಟು. ಶರೀರವನ್ನೆ ದಾನಮಾಡತಕ್ಕವರಾರನ್ನೂ ಕಾಣಲಿಲ್ಲವಲ್ಲ ! ಇದು ಎಂತಹ ಅದ್ಭುತಕಾರ್ಯವೆಂದು ಸಕಲರೂ ಭಯದಿಂದ ಕಂಪಿಸುತ್ತಲಿದ್ದರು ‖೪೮‖ ಆಗ ಮಯೂರಧ್ವಜನು ಸಭಾಸದರ ಈತೆರನಾದ ಸ್ಥಿತಿಯನ್ನು ನೋಡಿ, ಅವರನ್ನು ಕುರಿತು, ಎಲೈ ಸಭಾಸದರೇ ಕೇಳಿರಿ, ಸಿಂಹವು ಹಿಡಿದುಕೊಂಡಿರತಕ್ಕ ಮಗನನ್ನು ಬದುಕಿಸಬೇಕೆಂದು ಈ ಬ್ರಾಹ್ಮಣನು ನನ್ನ ದೇಹದಲ್ಲಿ ಅರ್ಧ ಭಾಗವನ್ನು ಕೇಳಿದನು, ನಾನು ಹಾಗೆಯೇ ಆಗಲೆಂದು ವಾಗ್ದಾನವಂ ಮಾಡಿರುವೆನು, ಈಗ ನಾನು ಆಡಿದ ಮಾತಿಗೆ ತಪ್ಪಿದರೆ ಲೋಕದಲ್ಲಿರುವ ಸಮಸ್ತಜನರೂ ನನ್ನನ್ನು ಹೀಯಾಳಿಸದೆ ಬಿಟ್ಟಾರೆ ! ನಾನು ಈಗ ಸುಳ್ಳು ಹೇಳಿದರೆ ಯಮದೂತರಿಗೆ ಗೊತ್ತಾಗುವುದಿಲ್ಲವೆ ! ಅಸ್ಸತನನ್ನು ಸಾಧಿಸಿ ಯಮಲೋಕದಲ್ಲಿ ಬಾಧೆಯನ್ನನುಭವಿಸುವುದಕ್ಕಿಂತಲೂ ಈ ಬ್ರಾಹ್ಮಣನಿಗೆ ನನ್ನ ಶರೀರವನ್ನು ಕೊಯ್ದುಕೊಡುವುದೇಲೇಸೆಂದು ಆಲೋಚಿಸಿರುವೆನಾದ್ದರಿಂದ ಇದಕ್ಕೆ ನೀವಾರೂ ತಡೆಯನ್ನು ಮಾಡಬಾರದೆಂದು ಒಳ್ಳುಡಿಗಳಿಂದ ಸಮಾಧಾನವಂಮಾಡಿ‖೪೯‖

ಕಲ್ಲಿವಿಪ್ರರ್ಗೆ | ಹೇಮಮಣಿಗಜತುರಗವಸ್ತ್ರಭೂಷಣಧೇನು | ಭೂಮಿದಾನಂಗಳಿಂದಣಿಸಿನಡಿಸಿದನೆರಡುಕಂಭಮಂನಡುವೆತನ್ನ ||
ಕೋಮಲಶರೀರಮಂಪೊಗಿಸಿಕಾಂಚನಮಯಸು | ದಾಮದಿಂತೋಳ್ತೊಡೆಗಳಂಬಿಗಿಸಿಕೊಂಡುನಿಂ | ದಾಮಹೀಸುರನಪಾದ
ಕಮಲಂಗಳಂತೊಳೆದುಸಾದರದೊಳಿಂತೆಂದನು || ೫೦ || ಭೂಸುರೋತ್ತಮನಿನಗೆತಾಂಕೊಡುವದೇಹಾರ್ಧ | ಮೀಸುದಾನದೊ
ಳಧಿಕಯಜ್ಞನಾಯಕನಾದವಾಸುದೇವಂಪ್ರೀತನಾಗಲಸ್ಮತ್ಕುಲೋದ್ಭವರಾದಜೀವಿಗಳೊಳು || ಲೇಸಿಂದಪಾರ್ವರ್ಗೆತನುಧನವನೀ
ವೆಡೆಯೊ | ಳೋಸರಿಸದಿರಲಿಬುದ್ಧಿಗಳೆಂದುನೃಪತಿಕ | ಟ್ಟಾಸುರದಕೊಯ್ಕಾರನಂಕರೆಸಿತೆಗಿ | ಸಿದಂಮಸೆದಕೈಗತ್ತಿಗಳನು ||೫೧||
ಕೊಡುವನಿರೆತನಗೆಬೇಕಾದುದಂಬೇಡುವಂ | ಬಿಡುವನೇಬೇಡುವಂಬರೆತನ್ನೊಳಿರ್ದುದಂತಡೆದಪನೆಕೊಡುವವಂಕೊಡುವಬೇಡು
ವರೊಳಗೆಕೊಡೆನಿಲ್ಲಬೇಡೆನೆಂಬ || ಎಡೆಕಡೆಗಳಿಲ್ಲೆಂಬನಾಣ್ನುಡಿಯೆನೀಪಾರ್ವ | ಪೊಡವೀಶರೊಳ್ಕಂಡೆನೆಂದುನಡನಡುಗಿ

---

ಟೀ|| ಬಳಿಕ-ತರುವಾಯ, ಅಲ್ಲಿ-ಆ ಯಜ್ಞಮಂಟಪದೊಳಗೆ, ಆಮಯೂರಧ್ವಜನು-ಸಾರಸ್ವತ ನಗರದ ರಾಜನು, ಹೇಮ-ಚಿನ್ನವು, ಮಣಿ-ರನ್ನಂಗಳು, ಗಜ-ಹಸ್ತಿಗಳು. ತುರಗ-ಅಶ್ವಗಳು, ವಸ್ತ್ರ-ಉಡುಗೆಗಳು, ಭೂಷಣ-ತೊಡಿಗೆಗಳು, ಧೇನು-ಗೋವುಗಳು, ಭೂಮಿ-ಭೂಮಿಯೇ ಮೊದಲಾದ ವಸ್ತುಗಳ, ದಾನಂಗಳಿಂ-ದಾನಮಾಡುವುದರಿಂದ, ವಿಪ್ರರ್ಗೆ-ಅಲ್ಲಿ ಸೇರಿದ್ದ ಸಕಲ ಬ್ರಾಹ್ಮಣರಿಗೂ, ದಣಿಸಿ-ಸಂತುಷ್ಟಿಯನ್ನುಂಟುಮಾಡಿ, ಎರಡುಕಂಬಮಂ-ಕಂಬಗಳೆರಡನ್ನು, ನೆಡಿಸಿದನು-ಹೂಣುವಂತೆ ಅನುಗೊಳಿಸಿದನು. ತನ್ನ-ತನ್ನದಾದ, ಕೋಮಲ-ಅತಿಮೃದುವಾದ, ಶರೀರಮಂ-ಶರೀರವನ್ನು, ನಡುವೆ-ಆ ಎರಡು ಕಂಬಗಳ ಮಧ್ಯದೊಳಗೆ, ಪೊಗಿಸಿ-ಸೇರಿಸಿದವನಾಗಿ, ತೋಳತೊಡೆಗಳಂ-ತನ್ನ ಕೈಕಾಲುಗಳನ್ನು, (ತೊಡೆಗಳನ್ನು) ಕಾಂಚನಮಯ-ಸುವರ್ಣವಿಕಾರವಾದ, ದಾಮದಿಂ-ಸರಪಣಿಯಿಂದ, ಬಿಗಿಸಿಕೊಂಡು-ಬಂಧನೆಯಂ ಮಾಡಿಸಿಕೊಂಡವನಾಗಿ, ನಿಂದು-ನಿಂತುಕೊಂಡು, ಸಾದರದೊಳು-ಪ್ರೇಮಪುರಸ್ಸರವಾಗಿ, ಆಮಹೀಸುರನ-ಆ ವಿಪ್ರೋತ್ತಮನ, ಪದಕಮಲಂಗಳಂ-ಅಡಿದಾವರೆಗಳನ್ನು ತೊಳೆದು-ತೊಳೆದವನಾಗಿ, ಇಂತು-ಮುಂದೆ ಹೇಳುವಂತೆ, ಎಂದನು-ನುಡಿದವನಾದನು ||೫೦||

ಟೀ|| ಭೂಸುರೋತ್ತಮ – ವಿಪ್ರವರ್ಯನೆ, ತಾಂ – ನಾನಾದರೊ, ನಿನಿಗೆ - ನಿನಿಗಾಗಿ, ಕೊಡುವ - ಕೊಡತಕ್ಕ, ದೇಹಾರ್ಧಂ-ಶರೀರದ ಅರ್ಧಭಾಗವು, ಈಸುದಾನದೊಳ್-ಈ ಉತ್ತಮವಾದ ದಾನದೊಳಗೆ, ಅಧಿಕ-ಹೆಚ್ಚಾದ, ಯಜ್ಞನಾಯಕನಾದ- ಯಾಗಾಧಿಪತಿಯಾದ, ವಾಸುದೇವಂ – ಶ್ರೀಮನ್ನಾರಾಯಣನು, ಪ್ರೀತನಾಗಲು – ಸಂತಸಂಗೊಳ್ಳಲಿಕ್ಕಾಗಿಯೂ, ಅಸ್ಮತ್-ನನ್ನ, ಕುಲ-ಸಂತತಿಯಲ್ಲಿ. ಉದ್ಭವರಾದ-ಹುಟ್ಟಿದ, ಜೀವಿಗಳೊಳು-ಮಾನವರಲ್ಲಿ, ತನುಧನವನು-ದೇಹವನ್ನೂ ದ್ರವ್ಯವನ್ನೂ, ಪಾರ್ವರ್ಗೆ-ಭೂಸುರರಿಗೆ, ಲೇಸಿಂದ-ಸನ್ಮಾರ್ಗದಿಂದ, ಈವೆಡೆಯೊಳು-ದಾನಮಾಡುವ ಸಂದರ್ಭದೊಳಗೆ, ಬುದ್ಧಿಗಳು-ತಿಳಿವಳಿಕೆಗಳು, ಓಸರಿಸದೆ-ಹಿಂದಾಗದೆ, ಇರಲಿ-ಇರತಕ್ಕದ್ದಾಗಲಿ, ಎಂದು-ಎಂಬ ತೆರನಾಗಿ, ನೃಪತಿ – ಮಯೂರಧ್ವಜನು, ಕಟ್ಟಾಸುರದ-ರಾಕ್ಷಸರಂತೆ ಕಠಿಣರಾದ, ಕೊಯ್ಕಾರರಂ-ಮರಗೆಲಸ ಮಾಡತಕ್ಕವರನ್ನು, ಕರೆಸಿ-ಬರಮಾಡಿ, ಮಸೆದ-ಸಾಣೆಹಿಡಿದ, ಕೈಗತ್ತಿಗಳನು-ಕೈಖಡ್ಗಗಳನ್ನು, ತೆಗೆಸಿದಂ-ತನ್ನ ದೇಹವನ್ನು ಕೊಯ್ದು ಬ್ರಾಹ್ಮಣನಿಗೆ ದಾನಮಾಡಬೇಕೆಂದು ತೆಗೆಸಿದವನಾದನು. || ೫೧ ||

ಟೀ|| ಕೊಡುವನು-ದಾತೃವು, ಇರೆ-ಇದ್ದಪಕ್ಷದಲ್ಲಿ, ಬೇಡುವಂ-ಯಾಚನಾವೃತ್ತಿಯಿಂದ ಇರುವವನು, ತನಗೆ-ತನಗಾದರೊ, ಬೇಕಾದುದು-ಇಷ್ಟವಾದದ್ದೆಲ್ಲವನ್ನೂ, ಬೇಡುವಂ-ಕೇಳಿಕೊಳ್ಳುವನು, ಬಿಡುವನೆ-ಸುಮ್ಮನಿರುತ್ತಾನೆಯೆ, ಕೊಡುವವಂ-ದಾನಶೀಲನಾದರೊ, ಬೇಡುವಂಬರೆ-ಯಾಚಕನು ಬಂದರೆ, ತನ್ನೊಳು-ತನ್ನಲ್ಲಿ, ಇರ್ದುದಂ-ಇರತಕ್ಕ ವಸ್ತುವನ್ನು, ತಡದಪನೆ-ಕೊಡದೆ ಇರುವನೆ, ಕೊಡುವಬೇಡುವರೊಳಗೆ-ದಾತೃಗಳು ಯಾಚಕರೆಂಬುವರಲ್ಲಿ, ಕೊಡನು – ಕೊಡುವದೇ ಇಲ್ಲ, ಬೇಡೆನು-ಬೇಡ, ಎಂಬ-ಎನ್ನತಕ್ಕ, ಎಡೆ ಸ್ಥಾನಗಳಿಗೆ, ಕಡೆಗಳು-ತುದಿಗಳು, ಇಲ್ಲ-ಇಲ್ಲವು, ಎಂಬ-ಎನ್ನತಕ್ಕ, ನಾಣ್ನುಡಿಯನು-

---

ಅಲ್ಲಿ ನೆರದಿದ್ದ ಬ್ರಾಹ್ಮಣೋತ್ತಮರಿಗೆಲ್ಲಾ ಭಂಗಾರ, ನವರತ್ನಗಳು, ನಾನಾ ಪ್ರಕಾರವಾದ ಉಡಿಗೆ ತೊಡಿಗೆಗಳು, ಆನೆ, ಕುದುರೆ ಹಸುಗಳು ಮೊದಲಾದವನ್ನೆಲ್ಲಾ ದಾನಮಾಡಿ, ಎರಡು ಕಂಬಗಳನ್ನು ನೆಡಿಸಿ, ಆ ವೆರಡರ ಮಧ್ಯೆ ತಾನು ನಿಂತವನಾಗಿ, ತನ್ನ ಬಾಹುಗಳನ್ನೂ ತೊಡೆಗಳನ್ನೂ ಮೃದು ಶರೀರವನ್ನೂ ಚಿನ್ನದ ಸರಪಣಿಗಳಿಂದ ಬಿಗಿಸಿಕೊಂಡು, ಆ ಬ್ರಾಹ್ಮಣನ ಅಡಿದಾವರೆಗಳನ್ನು ತೊಳೆದು ||೫೦|| ಎಲೈ ಭೂಸುರಾಗ್ರಣಿಯೆ, ನಾನು ಈಗ ನಿನಿಗೆ ವಿಶ್ವಾಸದಿಂದ ಕೊಡುವ ದಾನವು ಶ್ರೀ ಮಹಾವಿಷ್ಣುವಿಗೆ ಪ್ರೀತಿಯಾಗಲಿ, ನನ್ನ ಪಿತೃಗಳೆಲ್ಲಾ ಸದ್ಗತಿಯನೈದಲಿ, ನನ್ನ ವಂಶದಲ್ಲಿ ಹುಟ್ಟುವವರೆಲ್ಲಾ ಸದಾ ಗೋಬ್ರಾಹ್ಮಣ ಪೂಜಾ ನಿರತರಾಗಿ ಬಾಳಲೆಂದು ನುಡಿದು ಕ್ರೂರಕೃತ್ಯವಂ ಮಾಡತಕ್ಕವರನ್ನು ಕರೆಸಿದವನಾಗಿ, ಹರಿತವಾದ ಕತ್ತಿಗಳನ್ನು ಒರೆಯಿಂದ ತೆಗೆಸಿದನು || ೫೧ || ಆಗ ಅಲ್ಲಿ ನೆರೆದಿದ್ದವರೆಲ್ಲರೂ ತಮ್ಮ ಮನದೊಳಗೆ ಉದಾರಿಯು ಸಿಕ್ಕಿದರೆ ಯಾಚಕನು ತನಿಗೆ

ಮೊರೆ | ಯಿಡುತಿರ್ದುದವನರಾಷ್ಟ್ರದಜನಂಬೆದರಿಕೂಡಿದದನಂಗಳತೆರದೊಳು ||೫೨|| ಪೂರ್ವಮಂನೆನೆದುಕಂಬನಿಗಳಿಂಧ್ವನಿ ಗಳಿಂ | ಚೀರ್ವರಂಪ್ರಜೆಗಳಂಪಾಲಿಸದೆಲಾಲಿಸದೆ | ಜಾರ್ವಪರಿಯೆಂತೆಂದಳಲ್ವರಂಬೆರಗಾಗಿಬೆಗಡುಗೊಂಡು || ಸಾರ್ವಭೌಮಕ ನಿನ್ನರಕ್ಷೆಯುಂಶಿಕ್ಷೆಯುಂ | ಮಿರ್ಪ್ಪರಲ್ಲೆಮ್ಮನೀಂಬಿಡುವರೇಕೊಡುವರೇ | ಪಾರ್ವಂಗಸುವನೆಂದುಬೈವರಂಸುಯ್ವರಂನೋಡಿ ನೃಪನಿಂತೆಂದನು || ೫೩ || ಪ್ರಜೆಗಳಿರನೀವಿದಕೆದುಃಖಿಪರೆಧನ್ಯನಾಂ | ನಿಜಶರೀರದೊಳರ್ಧಮಂಕೊಯ್ದುಕೊಡುವೆನೀ | ದ್ವಿಜನ ಹಸ್ತದೊಳಿವಂನೃಹರಿಯೆಂದೀತ ನಡವಿಯಸಿಂಹಕೀಯಲಿದನು || ಗಜಬಜವಿದೇತಕೆ ಪರೋಪಕೃತಿಗಲ್ಲದವನು | ನುಜನ ಬಾಳ್ಕೆಯುಸಣಬುರಿದಬೂದಿಯಪ್ಪುದಾ | ರಜಮಿಲ್ಲದೀಕ್ಷಿಪುದುಕೌತುಕವನೆಂದೊಡಂಬಡಿಸಿದಂನರನಾಥನು || ೫೪ || ಮತ್ತೆ

---

ಲೋಕವಾರ್ತೆಯನ್ನು, ಈಪಾರ್ವಪೊಡವೀಶರೊಳ್ - ಈಪಾರ್ವ-ಈ ಭೂಸುರನು, ಪೊಡವೀಶರೊಳ್ - ರಾಜನಲ್ಲಿ, ಕಂಡೆವು- ಈಕ್ಷಿಸಿದೆವು, ಎಂದು - ಎಂಬತೆರನಾಗಿ, ಅವನ - ಆ ರಾಯನ. ರಾಷ್ಟ್ರದಜನಂ - ದೇಶಿಗರು, ನಡನಡುಗಿ - ಕಂಪಿಸುತ್ತಾ, ಬೆದರಿ - ಹೆದರಿದವರಾಗಿ, ಕೂಡಿದ - ಒಟ್ಟಾಗಿ ಬೆರತ ದನಂಗಳ, ತೆರದೊಳು - ದನಗಳ ಪರಿಯಾಗಿ, ಮೊರೆಯಿಡುತ-ಗೋಳಾ ಡುತ್ತ, ಇರ್ದುದು-ಇದ್ದಿತು. ||೫೨||

ಟೀ|| ಪೂರ್ವಮಂ-ಮಯೂರಧ್ವಜನ ಹಿಂದಣ ಉಪಕಾರಂಗಳೆಲ್ಲವನ್ನು, ನೆನೆದು-ಜ್ಞಾಪಕಮಾಡಿಕೊಂಡು, ಕಂಬನಿ ಗಳಿಂ - ಕಣ್ಣಿನಲ್ಲಿ ನೀರನ್ನು ಸುರಿಸುತ್ತಲೂ, ಚೀರ್ವರಂ - ಕೂಗುತ್ತಲೂ ಇರತಕ್ಕವರನ್ನು, ಪ್ರಜೆಗಳಂ-ನಿನ್ನಾಳ್ವಿಕೆಗೊಳಗಾ ದವರನ್ನೂ, ಪಾಲಿಸದೆ-ಸಲಹದೆ, ಲಾಲಿಸದೆ-ಪ್ರೀತಿಸದೆ, ಜಾರ್ವ-ಬಿಡತಕ್ಕ, ಪರಿಯೆಂತು-ಬಗೆಯು ಹೇಗೆ, ಎಂದು-ಎಂಬತೆರ ನಾಗಿ, ಅಳಲ್ವರಂ-ದುಃಖಿಸತಕ್ಕವರನ್ನು, ಬೆರಗಾಗಿ-ಭ್ರಾಂತರಾಗಿ, ಬೆಗಗೊಂಡು-ಹೆದರಿಕೊಂಡು, ನಿಲ್ವರಂ-ನಿಲ್ಲತಕ್ಕವರನ್ನೂ, ಸಾರ್ವಭೌಮಕ-ಎಲೈ ಚಕ್ರವರ್ತಿಯೆ, ನಿನ್ನ-ನಿನ್ನ ಸಂಬಂಧವಾದ, ರಕ್ಷೆಯುಂ-ಸಾಕುವಿಕೆಯನ್ನೂ, ಶಿಕ್ಷೆಯುಂ-ತಪ್ಪಿಗೆ ತಕ್ಕ ಪ್ರತಿಫಲವನ್ನುಂಟುಮಾಡಿದ್ದನ್ನೂ, ಮಿರ್ಪರು-ಮೀರಿನಡೆಯುವಂಥವರು, ಅಲ್ಲ-ಅಲ್ಲವು, ಎಮ್ಮ-ನಿನ್ನನ್ನೇ ನಂಬಿರುವ ನಮ್ಮನ್ನು, ನೀಂ-ನೀನಾದರೊ, ಬಿಡುವರೆ-ಬಿಟ್ಟುಬಿಡಬಹುದೆ, ಅಸುವನು-ಜೀವವನ್ನು, ಪಾರ್ವಂಗೆ-ಭೂಸುರನಿಗೆ, ಕೊಡುವರೆ-ಕೊಡಲಾ ದೀತೆ, ಎಂದು-ಎಂಬತೆರನಾಗಿ, ಬೈವರಂ-ನಿಂದಿಸತಕ್ಕವರನ್ನೂ, ಸುಯ್ವರಂ-ವ್ಯಥೆಯಿಂದ ಕೂಡಿದವರನ್ನೂ, ನೋಡಿ-ನಿರು ಕಿಸಿ, ನೃಪನು-ಮಯೂರಧ್ವಜನು, ಇಂತು-ಮುಂದೆ ಹೇಳುವಂತೆ, ಎಂದನು-ನುಡಿದನು. ||೫೩||

ಟೀ|| ಪ್ರಜೆಗಳಿರ-ಎಲೈ ಜನಗಳೆ, ಇದಕೆ - ನಾನು ಮಾಡುವ ಈ ಸತ್ಕಾರ್ಯವನ್ನು ನೋಡಿ, ನೀವು - ನೀವಾದರೊ, ದುಃಖಿಪರೆ-ಚಿಂತಿಸಬಹುದೆ, ಆಂ-ನಾನಾದರೊ, ಧನ್ಯನು-ಕೃತಕೃತ್ಯನಾದವನು, ನಿಜ-ನನ್ನದಾದ, ಶರೀರದೊಳು-ಶರೀರದಲ್ಲಿ, ಅರ್ಧಮುಂ-ಅರ್ಧಪಾಲನ್ನು, ಕೊಯ್ದು-ಸೀಳಿ, ಇವಂ-ಈ ವಿಪ್ರನು, ನೃಹರಿಯೆಂದು-ನರಸಿಂಹಾವತಾರದ ಮಹಾವಿಷ್ಣುವೆಂಬು ದಾಗಿ, ಈದ್ವಿಜನ-ಈ ಭೂಸುರೋತ್ತಮನ, ಹಸ್ತದೊಳು - ಕರದಲ್ಲಿ, ಕೊಡುವೆನು - ಕೊಟ್ಟುಬಿಡುತ್ತೇನೆ, ಈತನು-ಈ ವಿಪ್ರ ನಾದರೊ, ಇದನು-ನಾನು ದಾನಮಾಡಿದ ಶರೀರಾರ್ಧವನ್ನು, ಅಡವಿಯ - ಅರಣ್ಯದಲ್ಲಿರತಕ್ಕ, ಸಿಂಹಕೆ - ಕೇಸರಿಗೆ, ಈಯಲಿ- ಕೊಡುವನಾಗಲಿ, ಇದುಗಜಬಜವು-ಈ ಗದ್ದಲವು, ಏತಕೆ-ಏನು ಪ್ರಯೋಜನ, ಪರೋಪಕೃತಿಗೆ-ಪರರವರ ಸಹಾಯಕ್ಕೆ, ಅಲ್ಲದು- ಒದಗದಿರುವ, ಮನುಜನ-ಮಾನವನ, ಬಾಳ್ಕೆಯು-ಜೀವನವಾದರೊ, ಸಣಬು-ನಾರು, ಉರಿದ-ಬೆಂದುಹೋದ, ಬೂದಿಯು- ಬೂದಿ ಎಂಬ ಭಾಗವು, ಅಪ್ಪುದು - ಆಗುತ್ತದೆ, ಆರಜಂಎಣಿಸದೆ - ದೋಷವನ್ನೇ ಲೆಕ್ಕಿಸದೆ, ಕೌತುಕವನು-ಆಶ್ಚರ್ಯವನ್ನು, ಈಕ್ಷಿಸಿ-ನೋಡಿ, ಎಂದು-ಎಂಬತೆರನಾಗಿ, ನರನಾಥನು-ಮಯೂರಧ್ವಜನು, ಒಡಂಬಡಿಸಿದಂ-ಒಪ್ಪಿಸಿದವನಾದನು. ||೫೪||

---

ಇಷ್ಟವಾದದ್ದನ್ನೆಲ್ಲಾ ಯಾಚಿಸುವುದೂ. ಯಾಚಕನ ಇಷ್ಟಾರ್ಥವನ್ನೆಲ್ಲಾ ಉದಾರಗುಣವುಳ್ಳವನು ನೆರವೇರಿಸುತ್ತಲೇ ಇರುವುದೂ ಈ ಮಯೂರಧ್ವಜ ಕಪಟವಿಪ್ರರೀರ್ವರಲ್ಲಿಯೇ ನೆಲೆಗೊಂಡಿರುವುದೆಂದು ಯೋಚಿಸಿ ಭಯದಿಂದ ನಡುಗುತ್ತ ಲಿದ್ದರು. ||೫೨|| ಅವರಲ್ಲಿ ಕೆಲವರು ತಮಗೆ ರಾಜನಾದ ಮಯೂರಧ್ವಜನಿಂದಾದ ಉಪಕಾರಂಗಳಂ ನೆನೆನೆನೆದು ಸಂಕಟದಿಂದ ಸುರಿಸುತ್ತ ಲಿದ್ದ ಕಣ್ಣೀರು ದೊಡ್ಡ ಪ್ರವಾಹವನ್ನೂ ಕೂಡ ಮೀರಿಸಿಬಿಟ್ಟಿತು. ಇನ್ನು ಕೆಲವರು ನಮ್ಮನ್ನು ಮಕ್ಕಳೋಪಾದಿಯಲ್ಲಿ ಪರಿಪಾಲಿಸುತ್ತ ಈಗ ತನ್ನ ಪ್ರಾಣವನ್ನು ಬ್ರಾಹ್ಮಣನಿಗೆ ದಾನಮಾಡಿ ನಮ್ಮನ್ನು ಕಾಡುಪಾಲು ಮಾಡುತ್ತಾನಲ್ಲಾ ! ಎಂದು ಗೋಳಿಡುವ ಕೂಗು ದಿಗಂತವನ್ನು ವ್ಯಾಪಿಸಿತು. ಇದನ್ನು ರಾಜೇಂದ್ರನಾದ ಮಯೂರಧ್ವಜನು ನೋಡಿ ||೫೩|| ಅಲ್ಲಿ ನೆಂದಿದ್ದ ಸಕಲ ಜನರನ್ನೂ ಸಂಬೋಧಿಸಿ, ಎಲೈ ಪ್ರಜೆಗಳೆ. ಈ ಬ್ರಾಹ್ಮಣನು ವಿಷ್ಣುಸ್ವರೂಪನೆಂದು ಭಾವಿಸಿ ನನ್ನ ದೇಹಾರ್ಧವನ್ನು ಆ ಭೂಸುರನಿಗೆ ದಾನಮಾಡಿ ಕೃತಕೃತ್ಯನಾಗಬೇಕೆಂದು ನಾನು ಯೋಚಿಸಿರುವೆನು. ಇಂತಹ ಸತ್ಕಾರ್ಯವನ್ನು ಮಾಡುವುದಕ್ಕಿಂತಲೂ ಲೋಕದಲ್ಲಿ ದೊಡ್ಡದು ಮತ್ತೆ ಯಾವದಿರುವುದು ? ನನ್ನ ಶರೀರವನ್ನು ದಾನಮಾಡಿದರೆ ಈ ಭೂಸು

ಮನುಜೇಂದ್ರನಾವಿಪ್ರನಂಕರೆದುಸಿನ | ಗಿತ್ತೆನೀದೇಹಾರ್ಧಮುಂಪರಿಗ್ರಹಿಸೆಂದು | ಚಿತ್ತದೊಳ್ಮಿಗೆಹರುಷಮುಂತಾಳ್ದುಪೊರೆ
ಯೊಳಿಹಸೂದಕರ್ಮಜ್ಞರೊಡನೆ || ಪೊತ್ತುಗಳೆಯದೆತನ್ನತನುವನೆರಡಾಗಿಮಸೆ | ವೆತ್ತಕರಪತ್ರದಿಂಸೀಳ್ವುದೆಂದಾಜ್ಞಾಪಿಸು
ತ್ತಿರೆಶಿಖಿಧ್ವಜನಸತಿಕುಮುದ್ವತಿನುಡಿದಳತಿವಿನಯದಿಂದಪತಿಗೆ || ೫೫ || ನೀಂತಿಳಿದುದಿಲ್ಲರಸವಿಪ್ರೇಂದ್ರನರಿಯಂವ | ನಾಂತರ
ದೊಳಾಸಿಂಹಮೆಂದನುಡಿಶಾಸ್ತ್ರಸಿ | ದ್ಧಾಂತಮಂಗನೆಪುರುಷನರ್ಧಾಂಗಮೆಂಬುದಕೆನಿನ್ನವಾಮಾಂಗಿಯಾದ || ಕಾಂತೆಯಂಬೇಡಿ
ದೊಡೆಕೊಯ್ದುಕಾಯವನೀವ | ಭ್ರಾಂತಿಯೇತಕೆತನ್ನಯಸುವೆರಸಿಕೊಟ್ಟುಕಳೆ | ತಾಂತಳವೆನೈದೆತನದಿಂದಸದ್ಗತಿಯನೆಂದಾ
ಕುಮುದ್ವತಿನುಡಿದಳು || ೫೬ || ಸಮ್ಮತಮಿದಹುದೆಂದರೆಲ್ಲರುಂಭೂವರಂ | ಸುಮ್ಮನಿರೆಕಂಡನೀತೆರನಂದ್ವಿಜೋತ್ತಮಂ |

ಟೀ|| ಮತ್ತೆ - ತಿರುಗಿ, ಮನುಜೇಂದ್ರನು - ನರೇಶ್ವರನಾದ ಮಯೂರಧ್ವಜನು, ಆವಿಪ್ರನಂ - ಆ ಭೂಸುರನನ್ನು, ಕರೆದು-ಬರಹೇಳಿ, ಈದೇಹಾರ್ಧಮುಂ-ಈ ನನ್ನ ಅರ್ಧಶರೀರವನ್ನು, ಇತ್ತೆನು-ಕೊಟ್ಟಿದ್ದೇನೆ, ಪರಿಗ್ರಹಿಸು-ಸ್ವೀಕರಿಸು ಎಂದು-ಎಂಬತೆರನಾಗಿ, ಚಿತ್ತದೊಳ್-ಅಂತರಂಗದಲ್ಲಿ, ಮಿಗೆ - ಹೆಚ್ಚಾಗಿ, ಹರ್ಷಮುಂ - ಆನಂದವನ್ನು, ತಾಳ್ದು - ಹೊಂದಿ, ಪೊರೆಯೊಳ್-ಹತ್ತಿರವಿರುವ, ಸೂದಕರ್ಮಜ್ಞರ - ಮಾಂಸವನ್ನು ಬೇಯಿಸಬಲ್ಲವರ, ಒಡನೆ-ಕೂಡ, ಪೊತ್ತುಕಳೆಯದೆ - ಕಾಲಹರಣೆಯನ್ನು ಮಾಡದೆ, ಮಸೆವೆತ್ತ-ಚೂಪಾಗಿರುವ, ಕರಪತ್ರದಿಂ-ರಂಪದಿಂದ, ಎರಡಾಗಿ - ಇಭಾಗವಾಗುವತೆರನಾಗಿ, ತನ್ನತನುವನು-ನನ್ನ ದೇಹವನ್ನು, ಸೀಳ್ವುದು-ವಿಭಾಗಿಸುವದು, ಎಂದು-ಎಂಬತೆರನಾಗಿ, ಆಜ್ಞಾಪಿಸುತ-ಅಪ್ಪಣೆಯನ್ನೀಯುತ್ತ, ಇರೆ-ಇರತಕ್ಕ ಕಾಲದಲ್ಲಿ, ಶಿಖಿಧ್ವಜನ-ಶಿಖಿಧ್ವಜನೆಂಬ ರಾಜನ, ಸತಿ-ರಾಣಿಯಾದ, ಕುಮುದ್ವತಿ - ಕುಮುದ್ವತಿಯೆಂಬಾಕೆಯು, ಅತಿವಿನಯದಿಂದ-ಹೆಚ್ಚಾದ ನಮ್ರಭಾವದಿಂದ, ಪತಿಗೆ-ತನ್ನ ಕಾಂತನೊಂದಿಗೆ, ನುಡಿದಳು-ಉಸುರಿದಳು. ||೫೫||

ಟೀ|| ಅರಸ-ಎಲೈ ರಾಜನೆ, ನೀಂ-ನೀನಾದರೊ, ತಿಳಿದುದಿಲ್ಲ-ಅರಿತಿಲ್ಲವು, ವಿಪ್ರೇಂದ್ರನು-ಆ ಭೂಸುರನೂ ಕೂಡ, ಅರಿಯಂ- ತಿಳಿದವನೇ ಆಗಲಿಲ್ಲವು, ಆಸಿಂಹಂ-ಆ ಕೇಸರಿಯಾದರೊ, ಎಂದ-ಎಂದುಹೇಳಿದಂಥ, ನುಡಿ-ವಚನವು, ಶಾಸ್ತ್ರಸಿದ್ಧಾಂತಂ-ಶಾಸ್ತ್ರಸಮ್ಮತವಾಗಿರುವುದು, ಅಂಗನೆ-ಸ್ತ್ರೀಯು, ಪುರುಷನ-ಮಾನವನ, ಅರ್ಧಾಂಗ-ದೇಹದಲ್ಲಿ ಅರ್ಧಭಾಗವು, ಎಂಬುದಕೆ-ಎಂದು ನುಡಿಯುವುದಕ್ಕೆ, ನಿನ್ನ-ನಿನ್ನ ಸಂಬಂಧವಾದ, ವಾಮಾಂಗಿಯಾದ-ಎಡದ ಪಕ್ಕವಾಗಿರುವ, ಕಾಂತೆಯುಂ-ಪ್ರಿಯಳನ್ನು, ಬೇಡಿದೊಡೆ-ಯಾಚಿಸಿದರೆ, ಕಾಯವನು-ನಿನ್ನ ದೇಹವನ್ನು, ಕೊಯ್ದು-ವಿಭಾಗಿಸಿ, ಈವ-ಕೊಡತಕ್ಕ, ಭ್ರಾಂತಿ-ಹುಚ್ಚತನವು, ಏತಕೆ-ಏನು ಪ್ರಯೋಜನ, ತನ್ನನು-ನನ್ನನ್ನು, ಅಸುವೆರಸಿ-ಜೀವದೊಂದಿಗೆ, ಕೊಟ್ಟುಕಳೆ-ಕೊಟ್ಟು ಕಳುಹುವನಾಗು, ತಾಂ-ನಾನಾದರೊ, ಐದೆತನದಿಂದ- ಮುತ್ತೈದೆಯಾಗಿಯೇ, ಸದ್ಗತಿಯನು-ಮೋಕ್ಷವನ್ನು, ತಳೆವೆನು-ಹೊಂದುತ್ತೇನೆ, ಎಂದು-ಎಂಬತೆರನಾಗಿ, ಆಕುಮುದ್ವತಿ ಎಂಬಾಕೆಯು, ನುಡಿದಳು-ಹೇಳಿದವಳಾದಳು. ||೫೬||

ಟೀ|| ಎಲ್ಲರುಂ-ಅಲ್ಲಿ ನೆರೆದಿದ್ದ ಸಕಲ ಜನರೂ, ಇದು-ಈ ಕಾರ್ಯವು, (ಕುಮುದ್ವತಿಯು ಸಿಂಹದ ಬಾಯಿಗೆ ತುತ್ತಾಗುವುದು) ಸಮ್ಮತಂ - ಯೋಗ್ಯವಾದದ್ದು, ಅಹುದು - ಆಗುವುದು, ಎಂದು - ಎಂಬತೆರನಾಗಿ, ಎಂದರು - ನುಡಿದರು, ಭೂವ

---

ರೋತ್ತಮನ ಮಗನು ಸಿಂಹದ ಬಾಯಿಯಿಂದ ಬಿಡುಗಡೆ ಯಾಗುವನು. "ಪರೋಪಕಾರಾರ್ಥಮಿದಂ ಶರೀರಂ" ಎಂಬ ನಾಣ್ನುಡಿಯಂತೆ ಈ ನನ್ನ ದೇಹವು ಪರೋಪಕಾರಕ್ಕೆ ಸಾಧನೆಯಾಗದಿದ್ದರೆ ಸಣಬನ್ನು ಸುಟ್ಟ ಬೂದಿಯಂತೆ ನಿಷ್ಫಲವಾಗುವುದು. ಈ ಅದ್ಭುತ ಕಾರ್ಯವನ್ನು ನೋಡಿ ನೀವು ಸಂತೋಷಪಡಬೇಕಲ್ಲದೆ ಈ ತೆರನಾದ ದುಃಖವನ್ನು ಬಿಟ್ಟುಬಿಡಿ, ಶಾಂತಮನಸ್ಕರಾಗಿರೆಂದೊಡಂಬಡಿಸಿ ||೫೪|| ಆ ಬ್ರಾಹ್ಮಣೋತ್ತಮನನ್ನು ಕರೆದು ಅಯ್ಯಾ ಭೂಸುರವರ್ಯನೆ, ಈ ನನ್ನ ಶರೀರದಲ್ಲಿ ಅರ್ಧ ಭಾಗವನ್ನು ನಿನಿಗೆ ದಾನಮಾಡುವುದರಲ್ಲಿ ಲೇಶವೂ ಅನುಮಾನವಿಲ್ಲವು. ನಿನ್ನ ಮಗನನ್ನು ಬದುಕಿಸಿಕೊಂಡು ಸುಖವಾಗಿ ಬಾಳೆಂದು ನುಡಿದು, ಹತ್ತಿರದಲ್ಲಿ ನಿಂತಿದ್ದ ಮಾಂಸದಿಂದ ಅಡಿಗೆಯನ್ನು ಮಾಡತಕ್ಕವರನ್ನು ಕುರಿತು, ತಡಮಾಡದೆ ನನ್ನ ದೇಹವನ್ನು ಅರ್ಧಕ್ಕೆ ಸರಿಯಾಗಿ ಕೊಯ್ದುಬಿಡಿರೆಂದಾಜ್ಞಾಪಿಸಿದನು. ರಾಜನಾದ ಮಯೂರಧ್ವಜನು ಈ ತೆರನಾಗಿ ಅಜ್ಞಾಪಿಸಿದ್ದನ್ನು, ಆತನ ಕಾಂತಾಮಣಿಯಾದ ಕುಮುದ್ವತಿಯು ನೋಡಿ, ಅತ್ಯಂತ ನಮ್ರಭಾವದಿಂದ ರಮಣನನ್ನು ಕುರಿತು || ೫೫ || ಎಲೈ ನನ್ನ ಪ್ರಾಣಪದಕವೆ ! ಸಿಂಹದ ಆಶಯವು ನಿನಿಗೂ ಈ ಬ್ರಾಹ್ಮಣನಿಗೂ ಗೊತ್ತಾದ ಹಾಗೆ ಕಾಣುವುದಿಲ್ಲವಲ್ಲಾ ಪುರುಷನ ಅರ್ಧಾಂಗವು ಆವನ ಸತಿಯೇ ಎಂಬುದು ಶಾಸ್ತ್ರಸಿದ್ಧವಾದ ಮಾತಾಗಿರುವಾಗ ನಿನ್ನ ಶರೀರವನ್ನು ಕೊಯ್ದುಕೊಡುವುದೆಂದರೇನು ? ನಿನ್ನ ದೇಹಾರ್ಧವೇ ನಾನಾಗಿರುವುದರಿಂದ ನನ್ನನ್ನು ಆ ಸಿಂಹದ ಬಾಯಿಗೆ ಗುರಿಮಾಡಿ ನೀನು ಧನ್ಯನಾಗು. ಇದರಿಂದ ನನಿಗೆ ಮುತ್ತೈದೆತನವು ಉಳಿಯುವುದಲ್ಲದೆ ಶಾಶ್ವತವಾದ ಸದ್ಗತಿಯುಂಟಾಗುವುದು. ಸ್ವಲ್ಪವೂ ಅನುಮಾನವಿಲ್ಲದೆ ಈ ಕಾರ್ಯವನ್ನು ಮಾಡಬೇಕೆಂದು ಹೇಳಿದ್ದನ್ನು ನೋಡಿ ಸಭಾಸದರೆಲ್ಲರೂ || ೫೬ || ಕುಮುದ್ವತಿಯ ಮಾತು ಯುಕ್ತವಾಗಿದೆ

ನೆಮ್ಮಿದವ ಮುಕುಂದನೆಲೆರಾಯನಿನ್ನರಸಿನುಡಿದುತ್ತರನನೊಪ್ಪಬಹುದೆ । ಸುಮ್ಮಾನದಿಂ ಜನೇಶ್ವರನದಕ್ಷಿಣಭಾಗ । ಮಂ ಮೆಲ್ವು
ದೆಂದುವೊಕ್ಕಣಿಸಿತಲ್ಲದೆ ಸಿಂಹ । ವೆಮ್ಮೊಡನೆವಾಮಾಂಗಮೆಂದಾಡಿತಿಲ್ಲೆನಲ್ನೃಪನಸುತಸಿಂತೆಂದನು ॥ ೫೭ ॥ ಕರುಣಿಸೆಲೆವಿಪ್ರನಿ
ನ್ನಂ ಬೇಡಿಕೊಂಬೆನಾಂ । ತರುಣಂ ಸುಪುಷ್ಟಿವಪುತುಷ್ಟ್ಯವೃಗಪತಿಗಾಗ । ದಿರದು ತಾತನಋಣತ್ರಯಕೆಹರಿವಹುದುರಾಘವಭೀ
ಷ್ಮರಂತೆಕೀರ್ತಿ ॥ ಸ್ಥಿರವಹುದುಪಿತನಭಾಷೆಗೆನಿಲಲ್ಜನಕನನ । ತರಿಸನಾತ್ಮಜನಾಗಿತಂದೆಮಕ್ಕಳಿವರೊಳ । ಗೆರವಿಲ್ಲತನ್ನಂ
ಗಮಂತೆಗೆದುಕೊಳ್ಳೆಂದುತಾಮ್ರಧ್ವಜಂನುಡಿದನು ॥ ೫೮ ॥ ಭೂಪಾಲಕೇಳವನಮಾತಿಗೆಮಹೀಸುರಂ । ಕಾಪಟ್ಯಮಿಲ್ಲೆಲೆಕುಮಾ

---

ರ-ಪ್ರೌಢವಿಪನಾದ ಮಯೂರಧ್ವಜನು, ಸುಮ್ಮನಿರೆ-ಮೂಕಭಾವದಿಂದ ಕುಳಿತಿರಲು, ಈತೆರನಂ-ಮಯೂರಧ್ವಜನ ಭಾವ
ವನ್ನು, ದ್ವಿಜೋತ್ತಮಂ-ಭೂಸುರ ಶ್ರೇಷ್ಠನು, ಕಂಡನು-ಈಕ್ಷಿಸಿದನು, ಎಲೆರಾಯ-ಎಲೈ ರಾಯನೆ, ನೆಮ್ಮಿದ-ನೆಚ್ಚಿಕೊಂ
ಡಿರತಕ್ಕ, ಮುಕುಂದನು-ಮುಕ್ತಿದಾಯಕನಾದ ಸ್ವಾಮಿಯೇ ಎಂಬುದಾಗಿರುವೆನು, ನಿನ್ನರಸಿ-ನಿನ್ನ ಕಾಂತೆಯು, ನುಡಿದ-
ಪೇಳಿರತಕ್ಕ, ಉತ್ತರವನು-ಸಮಾಧಾನ ವಚನವನ್ನು,ಒಪ್ಪಬಹುದು-ಅನುಮೋದಿಸಬಹುದಾಗಿದೆ,ಸಿಂಹವು-ಆ ಕೇಸರಿಯಾದರೊ,
ಜನೇಶ್ವರನ-ಮಾನವಾಧೀಶನಾದ ನಿನ್ನ, ದಕ್ಷಿಣಭಾಗಮಂ-ಬಲಪಾರ್ಶ್ವವನ್ನು, ಮೆಲ್ವೆನೆಂದು-ಭಕ್ಷಿಸುವೆನೆಂಬುದಾಗಿ, ಒಕ್ಕ
ಣಿಸಿತಲ್ಲದೆ-ನುಡಿಯಿತೆ ಹೊರತು, ವಾಮಾಂಗಂ-ಎಡಗಡೆಯ ಭಾಗವು, ಎಂದು-ಎಂಬ ತೆರನಾಗಿ, ಎಮ್ಮೊಡನೆ-ನಮ್ಮ ಕೂಡ,
ಆಡಿತೆ-ನುಡಿಯಿತೆ, ಇಲ್ಲ-ಅರೀತಿಯಾಗಿ ಹೇಳಲಿಲ್ಲವು, ಎನಲ್-ಎಂದು ನುಡಿಯಲು, ನೃಪಸುತನು-ರಾಜಕುಮಾರನಾದ ತಾಮ್ರ
ಕೇತವು, ಇಂತು-ಮುಂದೆ ಹೇಳುವಂತೆ, ಎಂದನು-ನುಡಿದನು. ॥೫೭॥

ಟೀ॥ ತಾಮ್ರಧ್ವಜನು ಆ ಕಪಟವಿಪ್ರನನ್ನು ಕುರಿತು ಎಲೆವಿಪ್ರ-ಎಲೈ ಭೂಸುರೋತ್ತಮನೆ, ಕರುಣಿಸು-ಕೃಪೆ
ಯನ್ನಿಡತಕ್ಕವನಾಗು, ನಿನ್ನಂ-ನಿನ್ನನ್ನು, ಆಂ-ನಾನಾದರೊ, ಬೇಡಿಕೊಂಬೆನು-ಕೇಳಿಕೊಳ್ಳುತ್ತೇನೆ, ತರುಣಂ-ಪ್ರಾಯಸಮ
ರ್ಥನು, ಸುಪುಷ್ಟ-ಚೆನ್ನಾಗಿ ಬೆಳದಿರುವ, ವಪು-ದೇಹದಿಂದ ಕೂಡಿರತಕ್ಕವನು, (ಇಂತಹ ನನ್ನ ದೇಹವು) ಮೃಗಪತಿ-ಕೇಸರಿಗೆ,
ತುಷ್ಟಿಯಾಗದೆ-ಸಂತೋಷವಾಗದೆ, ಇರದು-ಇರತಕ್ಕದ್ದಲ್ಲವು, ತಾತನ-ನಮ್ಮ ಜನಕನ, ಋಣತ್ರಯಕೆ-ಮೂರು ಋಣಗಳಿಗೆ,
ಹರಿವು-ಮುಕ್ತಿಯು, ಅಹುದು-ಆಗುತ್ತದೆ, ಪಿತನ-ತಾತನ, ಭಾಷೆಗೆ-ನುಡಿಗೆ, ರಾಘವ-ಶ್ರೀರಾಮನು, ಭೀಷ್ಮರಂತೆ-ಭೀಷ್ಮನು
ಇವರ ತೆರನಾಗಿ, ನಿಲಲ್-ನಿಂತಹಾಗಾದರೆ, ಕೀರ್ತಿ-ಒಳ್ಳೆಯ ಹೆಸರು, ಸ್ಥಿರವಹುದು-ಶಾಶ್ವತವಾಗುತ್ತದೆ, ಜನಕನು-ಪಿತನು,
ಆತ್ಮಜನಾಗಿ-ಸುತನಾಗಿ, ಅವತರಿಪನು-ಜನಿಸುವನು, ತಂದೆಮಕ್ಕಳು-ಪಿತನು ತನುಜನು, ಇವರೊಳಗೆ-ಈ ಇಬ್ಬರಲ್ಲಿ, ಎರವು-
ವ್ಯತ್ಯಾಸವು, ಇಲ್ಲ-ಇಲ್ಲವು, ತನ್ನ-ನನ್ನದಾಗಿರುವ, ಅಂಗಮಂ-ದೇಹವನ್ನು, ತೆಗೆದುಕೊಳ್-ಸ್ವೀಕರಿಸು, ಎಂದು ಎಂಬತೆರನಾಗಿ,
ತಾಮ್ರಧ್ವಜನು-ಶಿಖಿಕೇತುವು, ನುಡಿದನು-ಅರುಹಿದವನಾದನು ॥

ಅ॥ ವಿ॥ ಋಣತ್ರಯಗಳು-ದೇವಋಣ, ಋಷಿಋಣ, ಪಿತೃಋಣಗಳೆಂಬಿವು, ಆತ್ಮಜ-ಆತ್ಮ-ತನ್ನಲ್ಲಿ, ಜ-ಹುಟ್ಟಿದ
ವನು, (ಸ. ತ.) ರಾಮನು ತಂದೆಯ ಮಾತಿನ ಪ್ರಕಾರ ಹದಿನಾಲ್ಕು ವರುಷ ವನವಾಸಮಾಡಿದ್ದರಿಂದ ಶಾಶ್ವತವಾದ ಕೀರ್ತಿಯ
ನ್ನೈದಿದನು, ಭೀಷ್ಮನೂಕೂಡ ತನ್ನ ತಂದೆಯಾದ ಶಂತನು ಚಕ್ರವರ್ತಿಗೆ ಗಂಗಾದೇವಿಯನ್ನು ಮದುವೆಮಾಡಿ ತಾನು ಬ್ರಹ್ಮ
ಚಾರಿಯಾಗಿಯೇ ಇದ್ದುಕೊಂಡು ತಂದೆಯ ಮಾತನ್ನು ನೆರವೇರಿಸಿದನು. ॥ ೫೮ ॥

---

ಯೆಂದೊಡಂಬಟ್ಟರು, ಮಯೂರಧ್ವಜನೂ ಕೂಡ ಮೌನ ಭಾವದಿಂದಿರುವುದನ್ನು ಕಪಟಬ್ರಾಹ್ಮಣನು ನೋಡಿ, ಎಲೈ ರಾಜನೆ
ನಿನ್ನರಸಿಯಾದ ಕುಮುದ್ವತಿಯ ಮಾತು ಶಾಸ್ತ್ರಸಿದ್ಧವೇಸರಿ ನನಗೂ ಬಹಳ ಸಂತೋಷವೆ; ಆದರೆ ಆ ಸಿಂಹವು ಮಯೂರಧ್ವ
ಜನ ಬಲಗಡೆಯ ಅರ್ಧಭಾಗವೆಂದು ಹೇಳಿತಲ್ಲದೆ ವಾಮಾಂಗವೆಂದು ನುಡಿಯಲಿಲ್ಲ. ಅದ್ದರಿಂದ ನಿನ್ನ ಶರೀರವನ್ನು ಕೊಯ್ದು
ಕೊಟ್ಟಲ್ಲದೆ ಅದು ಒಪ್ಪುವುದಿಲ್ಲವಲ್ಲಾ ಎಂದು ನುಡಿಯುತ್ತಿರುವಾಗ ॥ ೫೭ ॥ ಮಯೂರಧ್ವಜನ ಮಗನಾದ ತಾಮ್ರಧ್ವಜನು
ಆ ಭೂಸುರ ತಿಲಕನಂ ಕುರಿತು, ಅಯ್ಯಾ ಬ್ರಾಹ್ಮಣಶ್ರೇಷ್ಠನೆ, ಕೃಪಾಕಟಾಕ್ಷದಿಂದ ನನ್ನ ಮಾತನ್ನು ಆಲಿಸು. ರಾಜನಿಗಿಂತಲೂ
ನನ್ನ ಶರೀರವು ಚೆನ್ನಾಗಿ ಬಲಿತು ಕೊಬ್ಬಿದೆ, ಇಂತಹ ದೇಹದಿಂದ ಸಿಂಹಕ್ಕೆ ತೃಪ್ತಿಯಾಗದಿರದು, ಅದೂ ಅಲ್ಲದೆ ನೀನು ನನ್ನ
ಶರೀರವನ್ನು ಪರಿಗ್ರಹಿಸುವುದರಿಂದ ಪೂರ್ವದಲ್ಲಿ ಪಿತೃವಾಕ್ಯ ಪರಿಪಾಲನೆಯುಂಗೈದ ಶ್ರೀರಾಮ ಮೂರ್ತಿಯಂತೆಯೂ, ಗಂಗಾ
ಪುತ್ರನಾದ ಭೀಷ್ಮನಂತೆಯೂ ನಾನೂ ಧನ್ಯನಾಗುವೆನಲ್ಲದೆ ಶಾಶ್ವತವಾದ ಸತ್ಕೀರ್ತಿಗೆ ಭಾಗಿಯಾಗುವೆ ನಲ್ಲವೆ? "ಆತ್ಮಾವೈಪುತ್ರ
ನಾಮಾಸಿ" ಎಂಬ ವಚನದಂತೆ ತಂದೆಯೇ ಮಗನಾಗಿ ಹುಟ್ಟುವನೆಂಬುದು ಶಾಸ್ತ್ರಸಿದ್ಧವಾಗಿರುವುದರಿಂದ ನೀನು ನನ್ನ ದೇಹ
ವನ್ನು ಪರಿಗ್ರಹಿಸಬಹುದು, ಇದರಿಂದ ನಮ್ಮ ತಂದೆಯಾದ ಮಯೂರಧ್ವಜನು ದೇವಋಷಿ ಪಿತೃಋಣಗಳಿಂದ ಬಿಡುಗಡೆಯ
ನ್ನೈದುವನು. ನಾನೂಕೂಡ ಧನ್ಯನಾಗಿ ಶಾಶ್ವತವಾದ ಕೀರ್ತಿಗೆ ಭಾಗಿಯಾಗುವೆನೆಂದು ನುಡಿದನು. ॥೫೮॥ ಕೇಳೈ ಜನಮೇಜ

ರಸೀನೆಂದನುಡಿ । ಪಾಪಿಕೇಸರಿತನ್ನೊಳವನಿಪನಸತಿಯೆಂದುಸುತನೆಂದುಪೇಳ್ವುದಿಲ್ಲ ॥ ಆಪಡೆಮಯೂರಧ್ವಜನದಕ್ಷಿಣದಂಗಮಂ। ತಾಪುತ್ರನಂಬಿಡುವೆನೆಂದೊಡಿಲ್ಲಿಗೆಬಂದೆ । ನೀಪರಿಯೊಳಳುಕುವರೆಕೊಡಬೇಡಪೋಪೆನೆನೆನರನಾಥನಿಂತೆಂದನು ॥ ೫೯ ॥ ರಾಣಿಯಂಕೊಡುವುದಿಲ್ಲಾತ್ಮಜನನೀವುದಿ । ಲ್ಲೂಣೆಯಂತನ್ನಭಾಷೆಗೆಬಾರದಂತಬ್ಜ । ಪಾಣಿಮೆಚ್ಚೆವೊಲರ್ಧದೇಹಮಂಕೊಯ್ದುಕೊಟ್ಟಪೆನೀಗಸ್ವೈರಿಸೆನುತ । ಸಾಣೆವಿಡಿದಿರ್ದಕರಪತ್ರಮಂಕೊಡಿಸಿದಂ । ಪ್ರಾಣನಾಥೆಯಕೈಯೊಳೆನ್ನುತ್ತಮಾಂಗಮಂ । ಕೇಣವಿಲ್ಲದೆತನುಜನಂಕೂಡಿಕೊಂಡುನೀಸೀಳೆಂದುನೇಮಿಸಿದನು ॥ ೬೦ ॥ ಬಾಲಲೀಲೆಗಳಿಂದನಂದನಂತರುಣಿರತಿ । ಕಾಲದೋಳ್ನಖದಿಂದಸೀಳಲ್ಕೆನೋವುದೆವಿ । ಶಾಲಾಕ್ಷಿತನಗಿದುವಿನೋದಮಿಸಿಪತ್ರದಿಂಸೂನುಸಹಿತೀಗನೀನು ॥ ಆಲಸ್ಯಮಂಮಾಡದರಿವುದೀ

ಟೀ॥ ಭೂಪಾಲ–ರಾಜೇಂದ್ರನಾದ ಜನಮೇಜಯನೆ, ಕೇಳು–ಲಾಲಿಸು, ಮಹೀಸುರಂ–ಕಪಟವಿಪ್ರನು, ಆವನಮಾತಿಗೆ–ಆ ಶಿಖಿಕೇತುವಿನ ನುಡಿಗೆ, (ನುಡಿಯನ್ನು ಕೇಳಿ) ಎಲೆಕುಮಾರ–ಅಯ್ಯಾ ಬಾಲಕನೆ, ನೀನು–ನೀನಾದರೊ, ಎಂದ–ಹೇಳಿದ, ನುಡಿ–ವಚನವು, ಕಾಪಟ್ಯಂ–ವಂಚನೆಗೆ ಸಂಬಂಧಿಸಿದ್ದು, ಇಲ್ಲಲೆ–ಆಗಿಲ್ಲವಷ್ಟೆ, ಪಾಪಿಕೇಸರಿ–ನೀಚ ಸಿಂಗವು, ಅವನಿಪ–ರಾಜನ, ಸತಿಯೆಂದು–ರಾಣಿಯೆಂತಲೂ, ಸುತನೆಂದು– ಕುವರನೆಂತಲೂ, ತನ್ನೊಳು–ನನ್ನೊಂದಿಗೆ, ಪೇಳ್ವುದಿಲ್ಲ – ನುಡಿಯಲಿಲ್ಲವು, ಮಯೂರಧ್ವಜನ–ಶಿಖಿಕೇತುವಿನ, ದಕ್ಷಿಣಾಂಗಮಂ–ಬಲಪಕ್ಕವನ್ನು, ಆಪಡೆ–ತೆಗೆದುಕೊಂಡುಬರುವುದು ನಿನ್ನ ಕೈಯಲಾದರೆ, ತಾ–ತೆಗೆದುಕೊಂಡು ಬಾ, ಪುತ್ರನಂ–ನಿನ್ನ ಕುವರನನ್ನು, ಬಿಡುವೆನು–ಬಿಟ್ಟುಬಿಡುತ್ತೇನೆ, ಎಂದೊಡೆ–ಎಂದು ನುಡಿಯಲು, ಇಲ್ಲಿಗೆ–ಈ ಸ್ಥಳಕ್ಕೆ, ಬಂದೆನು–ಬಂದಿದೇನೆ, (ನೀನು) ಈಪರಿಯೊಳು–ಈ ವಿಧವಾಗಿ, ಅಳುಕುವಡೆ–ಹೆದರಿಕೊಂಡರೆ, ಕೊಡಬೇಡ–ದಾನಮಾಡಬೇಡ, ಪೋಪೆನು–ಹೊರಟುಹೋಗುತ್ತೇನೆ, ಎನೆ–ಎಂದು ನುಡಿಯಲು, ನರನಾಥನು–ಮಾನವೇಂದ್ರನಾದ ಮಯೂರಧ್ವಜನು, ಇಂತು–ಮುಂದೆ ಹೇಳುವಂತೆ, ಎಂದನು–ನುಡಿದನು. ॥ ೫೯ ॥

ಟೀ॥ ಮಯೂರಧ್ವಜನು ಬ್ರಾಹ್ಮಣನೊಂದಿಗೆ ಹೇಳುತ್ತಾನೆ, ರಾಣಿಯಂ – ನನ್ನರಸಿಯನ್ನು, ಕೊಡುವುದಿಲ್ಲ–ದಾನಮಾಡುವುದಿಲ್ಲ, ಆತ್ಮಜನನು–ಸುತನನ್ನು, ಈವುದಿಲ್ಲ–ಕೊಡುವುದಿಲ್ಲವು, ತನ್ನ–ನನ್ನದಾದ, ಭಾಷೆಗೆ–ಪ್ರಮಾಣಕ್ಕೆ, ಊಣೆಯಂ–ಕೊರತೆಯು, (ಲೋಪವು) ಬಾರದಂತೆ–ಆಗದ ತೆರನಾಗಿ, ಅಬ್ಜಪಾಣಿ–ಶ್ರೀಮನ್ನಾರಾಯಣ ಮೂರುತಿಯು, ಮೆಚ್ಚುವೊಲು–ಸಂತಸಂಗೊಳ್ಳುವಂತೆ, ಈಗ–ಈಗಲೆ. ಅರ್ಧದೇಹಮಂ–ನನ್ನ ಗಾತ್ರದಲ್ಲಿ ಅರ್ಧಪಾಲನ್ನು, ಕೊಟ್ಟಪೆನು–ದಾನಮಾಡುತ್ತೇನೆ, ಸ್ವೈರಿಸು–ತಡೆದುಕೊ, ಎನುತ–ಎಂದು ನುಡಿಯುತ್ತ, ಸಾಣೆವಿಡಿದಿರ್ದ–ಒರೆಯಿಟ್ಟದ್ದ, ಕರಪತ್ರಮಂ–ರಂಪವನ್ನು, ಪ್ರಾಣನಾಥೆಯ ಕೈಯೊಳು–ಸುಂದರಾಂಗಿಯಾದ ತನ್ನರಸಿಯ ಹಸ್ತಪ್ರದೇಶಕ್ಕೆ, ಕೊಡಿಸಿದಂ–ಕೊಡಿಸಿದಂ–ಕೊಡಿಸಿದವನಾದನು, (ಮತ್ತು ಕುಮುದ್ವತಿಯೆಂಬ ತನ್ನರಸಿಯನ್ನು ಕುರಿತು) ನೀಂ–ನೀನಾದರೊ, ತನುಜನಂಕೂಡಿಕೊಂಡು–ಪುತ್ರನೊಂದಿಗ, ಎನ್ನ–ನನ್ನದಾಗಿರತಕ್ಕ, ಉತ್ತಮಾಂಗಮಂ–ಶಿರಸ್ಸನ್ನು, ಕೇಣಂ ಭೇದವು, ಇಲ್ಲದೆ–ಬಾರದಹಾಗೆ, ಸೀಳು–ವಿಭಾಗಿಸು, ಎಂದು–ಎಂಬ ತೆರನಾಗಿ, ನೇಮಿಸಿದನು–ಅಪ್ಪಣೆ ಮಾಡಿದನು ॥ ೬೦ ॥

ಟೀ॥ ಬಾಲಲೀಲೆಗಳಿಂದ – ಚಿಕ್ಕವಯಸ್ಸಿನ ಆಟಗಳಿಂದ, ನಂದನಂ – ಕುವರನೂ, ರತಿಕಾಲದೊಳ್ – ಮನ್ಮಥಾವಸ್ಥೆಯನ್ನು ನೀಗಿಕೊಳ್ಳುವ ಕಾಲದೊಳಗೆ, ತರುಣಿ–ಯೌವನಸ್ತ್ರೀಯೂ, ನಖದಿಂದ–ಉಗುರುಗಳಿಂದ, ಸೀಳಲ್ಕೆ–ಭೇದಿಸಿದಹಾಗಾದರೆ, ನೋವುದೆ–ಬಾಧೆಯಾಗುತ್ತದೆಯೇ, ವಿಶಾಲಾಕ್ಷಿ–ಅಂದವಾದ ದೊಡ್ಡ ದೊಡ್ಡ ಕಣ್ಣುಗಳಿಂದ ಮೆರೆಯುತ್ತಿರುವ ಕಾಂತಾಮಣಿಯೆ, ಇದು–ನೀನು ನನ್ನದೇಹವನ್ನು ಕೊಯ್ಯತಕ್ಕದ್ದು, ತನಗೆ–ನನಿಗಾದರೊ, ವಿನೋದಂ–ಆನಂದವಾಗಿದೆ,ತನ್ನ–

ಯ ಮಹೀಪಾಲನೆ, ತಾಮ್ರಧ್ವಜನು ಈ ತೆರನಾಗಿ ಹೇಳಲು ಕಪಟ ಬ್ರಾಹ್ಮಣನಾದ ಕೃಷ್ಣನು ಆ ಶಿಖಿಕೇತುವನ್ನು ಕುರಿತು ಎಲೈ ಮಗುವೆ, ನೀನಾಡಿದಮಾತು ನಿಜವೇಸರಿ, ಆ ಪಾಪಿಷ್ಠ ಸಿಂಹವು ಮಯೂರಧ್ವಜನ ಶರೀರಾರ್ಧವನ್ನು ತಂದರೆ ನನ್ನಮಗನನ್ನು ಬಿಡುತ್ತೇನೆಂದು ಹೇಳಿತಲ್ಲದೆ ಅವನ ಹೆಂಡತಿಯನ್ನಾಗಲೀ ಮಗನನ್ನಾಗಲೀ ತರಬೇಕೆಂದು ಹೇಳಲಿಲ್ಲವಲ್ಲಾ! ನಾನೇನು ಮಾಡಲಿ! ಮಯೂರಧ್ವಜನ ಶರೀರವನ್ನು ಕೊಡುವುದು ನಿಮಗೆ ವ್ಯಸನಕರವಾಗಿದ್ದರೆ ಬೇಡ. ನಾನು ಹೊರಟುಹೋಗುತ್ತೇನೆ ಎಂದು ನುಡಿದ ಬ್ರಾಹ್ಮಣನ ಮಾತನ್ನು ಮಯೂರಧ್ವಜನು ಕೇಳಿ, ॥೫೯॥ ಎಲೈ ಬ್ರಾಹ್ಮಣನೆ ಸ್ವಲ್ಪ ಸುದಾರಿಸು, ನನ್ನ ಸತಿಯನ್ನಾಗಲಿ ಸುತನನ್ನಾಗಲೀ ಕೊಡುವುದಿಲ್ಲವು. ನನ್ನ ಶರೀರವನ್ನೇ ಕೊಯಿಸಿ ಬಲಭಾಗವನ್ನು ನಾರಾಯಣ ಪ್ರೀತಿಯಾಗುವಂತೆ ನಿನಿಗೆ ದಾನಮಾಡುವೆನು, ಶಾಂತಮನಸ್ಕನಾಗಿ ನನ್ನನ್ನು ಕರುಣಿಸೆಂದು ಬೇಡಿಕೊಂಡು ಹರಿತವಾದ ರಂಪವನ್ನು ತನ್ನ ಪ್ರಿಯವಲ್ಲಭೆಯ ಕರದೊಳಿಟ್ಟು, ಸುತನಂ ಕೂಡಿಕೊಂಡು ತಡಮಾಡದೆಯೂ, ವ್ಯಸನವನ್ನುಬಿಟ್ಟೂ ಸಂತೋಷಮಂತಾಳಿ॥೬೦॥ ಪೂರ್ವದಲ್ಲಿ ಶ್ರೀ ಮಹಾವಿಷ್ಣುವು ಗರುಡ ಹನುಮಂತರಿಗೆ ಸಮಪಾಲಾಗಿ ಕೊಡಲು ಹಣ್ಣನ್ನು ಇಭಾಗವಾಗಿ ಮಾಡಿ

ಮಸ್ತಕದಮೇಲಣಿಂದಿಳೆಯಮುಂತಾಗಿತನ್ನಂಗಮಂ | ಪಾಲೆಂಡುಸಮಮಾಗೆಗರುಡಹನುಮಂತರ್ಗೆಚಕ್ರಿಪಣ್ಪಂಚಿದಂತೆ ||೬೧||
ಆಮಹೀಪಾಲನೀತೆರದೋಳ್ಕುಮುದ್ವತಿಗೆ | ನೇಮಿಸೆಕುಮಾರನಂಕೂಡಿಕೊಂಡವಳತಿ | ಪ್ರೇಮದಿಂಕರಪತ್ರಮಂಕೊಂಡು
ಮುನ್ನದೈತ್ಯನನಿಂತುಸೀಳ್ದನೆಂದು || ಆನುಹಾಸಭೆನಾರಸಿಂಹನಂನೆನೆವಂತೆ | ರಾಮರಾಮೆಂದುಜಪಿಸುತಕೊಯ್ದಳವನಿಪಶಿ |
ರೋಮಣಿಯಮಸ್ತಕವನೆರಡಾಗಿಸರಿಸದಿಂದೋರೆಪೋರೆಗಳಿಲ್ಲದೆ ||೬೨|| ಸ್ತಂಭದ್ವಯದನಡುವೆನಿಂದನೃಪನಂತನ್ನ | ಸಂಭವಂ
ಮಡದಿಪಿಡಿದಿಟ್ಟರೊಂದೊಂದುಕಡೆ | ಯಿಂಭಾಳಮಧ್ಯಮಂತೀಕ್ಷ್ಣಕರಪತ್ರದಿಂಘರಿಘರಿನೆಸೀಳುತಿರಲು | ಜಂಭರಿಪು

ನನ್ನದಾದ, ಅಂಗಮಂ-ದೇಹವನ್ನು, ಚಕ್ರಿ-ಸ್ವಾಮಿಯು, ಗರುಡಹನುಮಂತರ್ಗೆ-ಗರುತ್ಮಂತ ಪವನಸುತರಿಗೆ, ಪಣ್-ಫಲವನ್ನು, ಪಂಚಿದಂತೆ-ವಿಭಾಗಿಸಿದ ತೆರನಾಗಿ, ಈಗ – ಈಗಲಾದರೊ, ನೀನು, ಅಲಸ್ಯಮಂಮಾಡದೆ – ಕಾಲವಿಳಂಬವನ್ನೆಸಗದೆ, ತನ್ನಂಗಮಂ-ನನ್ನ ದೇಹವನ್ನು, ಮಸ್ತಕದಮೇಲಿಣಿಂದ-ತಲೆಯ ಕಡೆಯಿಂದ, ಇಳೆಯಮುಂತಾಗಿ – ಕೆಳಭಾಗದ ವರೆಗೂ, ಪಾಲೆರಡು-ಎರಡು ಹೋಳುಗಳೂ, ಸಮಂ-ಏಕರೀತಿಯಾಗಿ, ಆಗೆ-ಆಗುವತೆರನಾಗಿ, ಅಸಿಪತ್ರದಿಂದ-ರಂಪದಿಂದ. ಅರಿವುದು-ಸೀಳಬೇಕು.

ಅ|| ವಿ|| ಅರಿ – ಶತ್ರು, (ನಾಮ) ಅರಿ – ಕತ್ತರಿಸು (ಕ್ರಿಯೆ) ವಿಷ್ಣುವು ಹನುಮಂತ ಗರುತ್ಮಂತರಿಗೆ ಫಲವನ್ನು ಹಂಚಿದ ಕಥೆ:— ||೬೧||

ಟೀ|| ಈತೆರದೊಳ್ – ಈ ವಿಧವಾಗಿ, ಕುಮುದ್ವತಿಗೆ – ಕುಮುದ್ವತಿಯೆಂಬ ತನ್ನ ಕಾಂತೆಗೆ, ಆಮಹೀಪಾಲನು-ರಾಜೇಂದ್ರನಾದ ಮಯೂರಧ್ವಜನು, ನೇಮಿಸೆ-ಅಪ್ಪಣೆಮಾಡಲು, ಅವಳು-ಮಯೂರಧ್ವಜನರಸಿಯಾದರೊ, ಕುಮಾರನಂ ಕೂಡಿಕೊಂಡು-ತನ್ನ ಪುತ್ರನೊಂದಿಗೆ, ಕರಪತ್ರಮಂಕೊಂಡು – ರಂಪವನ್ನು ಇಬ್ಬರೂ ಹಿಡಿದವರಾಗಿ ನಿಂತ ಕಾಲದೊಳಗೆ, ಆಸಭೆ-ಅಲ್ಲಿ ನೆರೆದಿದ್ದವರೆಲ್ಲರೂ, ಮುನ್ನ-ಹಿಂದೆ, ದೈತ್ಯನನು-ರಕ್ಕಸನನ್ನು, ಇಂತು-ಈರನಾಗಿ, ಸೀಳ್ದನು-ವಿಭಾಗಿಸಿದನು, ಎಂದು-ಎಂಬತೆರನಾಗಿ, ನಾರಸಿಂಹನಂ-ನರಸಿಂಹಾವತಾರವನ್ನೆತ್ತಿದ ಸ್ವಾಮಿಯನ್ನು, ನೆನೆವಂತೆ-ಜ್ಞಾಪಿಸಿಕೊಳ್ಳುವಂತೆ, ರಾಮರಾಮ ಎಂದು-ರಾಮರಾಮ ಎಂಬ ತೆರನಾಗಿ, ಜಪಿಸುತ-ಪಠಿಸುತ್ತ, ಓರೆಪೋರೆಗಳಿಲ್ಲದೆ – ಸ್ವಲ್ಪವೂ ವತ್ಯಾಸವುಂಟಾಗದಂತೆ, ಸರಸದಿಂದ-ಕಷ್ಟವಿಲ್ಲದ ಹಾಗೆ, ಅವನಿಪಶಿರೋಮಣಿಯ-ರಾಜಶ್ರೇಷ್ಠನಾದ ಮಯೂರಧ್ವಜನ, ಮಸ್ತಕವನು-ತಲೆಯನ್ನು, ಒಂದು ಕಡೆಯಿಂದ-ಒಂದು ಕಡೆ ಉಪಕ್ರಮವಂ ಮಾಡಿ, ಎರಡಾಗಿ-ಎರಡು ತುಂಡಾಗುವಂತೆ, ಕೊಯ್ದಳು-ತುಂಡುಮಾಡಿದಳು.

ಅ|| ವಿ|| ಅವನಿಪಶಿರೋಮಣಿ-ಅವನಿಪ (ದ್ವಿ. ತ.) ಅವನಿಪರಲ್ಲಿ ಶಿರೋಮಣಿ (ಸ. ತ.) ||೬೨||

ಟೀ|| ಸ್ತಂಭದ್ವಯದನಡುವೆ-ಕಂಭಗಳೆರಡರ ಮಧ್ಯಭಾಗದಲ್ಲಿ, ನಿಂದ-ನಿಂತುಕೊಂಡಿರತಕ್ಕ, ನೃಪನಂ-ರಾಜನಾದ ಮಯೂರಧ್ವಜನನ್ನು, ತನ್ನ-ಆ ಮಯೂರಧ್ವಜನ, ಸಂಭವಂ – ಕುವರನಾದ ತಾಮ್ರಧ್ವಜನು, ಮಡದಿ-ಸತಿಯಾದ ಕುಮುದ್ವತಿಯೂ ಸಹ, ಒಂದೊಂದುಕಡೆಯಿಂ – ಒಂದೊಂದು ಭಾಗದಿಂದ, ಪಿಡಿದು-ಹಿಡಿದವರಾಗಿ, ತೀಕ್ಷ್ಣ – ಮೊನೆಯಾಗಿರುವ, ಕರಪತ್ರದಿಂ-ರಂಪದಿಂದ, ಘರಿಘರಿದಿ-ಘರ್ಘರ ಎಂದು ಶಬ್ದವಾಗುವಂತೆ, ಭಾಳಮಧ್ಯಮಂ – ಹಣೆಯಲ್ಲಿ ಮಧ್ಯಕ್ಕೆ ಸರಿಯಾಗಿ, ಸೀಳುತಿರಲು-ಛೇದಿಸುತ್ತಿರಲಾಗಿ, ಜಂಭರಿಪುನಂದನಮುರಾರಿಗಳ್ – ನರನಾರಾಯಣರು, ಬೆರಗಾದರು – ಆಶ್ಚರ್ಯಗೊಂಡರು,

ದಂತೆ ನೀನೂಕೂಡ ಈಗ ದೃಢಮನಸ್ಕಳಾಗಿ ಈ ನನ್ನ ದೇಹವನ್ನು ಎರಡಾಗಿ ಭಾಗಿಸಿಬಿಡು. ಶೈಶವದಲ್ಲಿ ಮಗುವು ಉಗುರಿನಿಂದ ಗೀಚಿದರೆ ಬಾಧೆಯು ಕಾಣದಿರುವಂತೆಯೂ, ರತಿಕಾಲದಲ್ಲಿ ಕಾಂತೆಯ ನಖಕ್ಷತದಿಂದ ಸಂಕಟವು ತೋರದ ಹಾಗೂ ಇರುವ ತೆರನಾಗಿ, ಪತ್ನೀಪುತ್ರರಾದ ನೀವಿರ್ವರೂ ನನ್ನ ಶರೀರವನ್ನು ಭಾಗಮಾಡುವುದರಿಂದ ನನಿಗೇನೂ ಬಾಧೆಯು ಕಾಣುವುದಿಲ್ಲ. ಆದ್ದರಿಂದ ಆಲಸ್ಯಮಾಡದೆ ನನ್ನ ಶರೀರವನ್ನು ಸೀಳೆಂದಾಜ್ಞಾಪಿಸಲಾಗಿ || ೬೧ || ಕುಮುದ್ವತಿಯು ಸಂತೋಷವಂ ತಾಳಿ, ಮನದ ದುಗುಡವಂ ದೂರಮಾಡಿದವಳಾಗಿ, ಹತ್ತಿರದಲ್ಲಿದ್ದ ತೀಕ್ಷ್ಣವಾದ ರಂಪವನ್ನು ತೆಗೆದುಕೊಂಡು ಅದರ ಒಂದು ಭಾಗವನ್ನು ತನ್ನ ಕಂದನಾದ ತಾಮ್ರಧ್ವಜನ ಕೈಗೆಕೊಟ್ಟು ಮತ್ತೊಂದು ಕಡೆ ತಾನೇ ಹಿಡಿದುಕೊಂಡು ಮಯೂರಧ್ವಜನ ತಲೆಯಮೇಲಿಟ್ಟು ರಾಮ ಮಂತ್ರವನ್ನು ಎಡೆಬಿಡದೆ ಜಪಿಸುತ್ತ ಸ್ವಲ್ಪವೂ ಹೆಚ್ಚುಕಡಿಮೆ ಯಾಗದಂತೆ ಕಾಲುಗಳವರೆಗೂ ಕೊಯ್ದು ಬಿಟ್ಟಳು, ಇದನ್ನು ನೋಡಿದರೆ ಪೂರ್ವದಲ್ಲಿ ನರಸಿಂಹಸ್ವಾಮಿಯು ದುಷ್ಟನಾದ ರಕ್ಕಸನನ್ನು ಸೀಳಿದ ಘೋರಕೃತ್ಯವನ್ನು ಕೂಡ ನಿರಾಕರಿಸುತ್ತಲಿದ್ದಿತು. ||೬೨|| ಆಗ ಗುರುಶಿಷ್ಯವೇಷದಿಂದಿರುವ ನರನಾರಾಯಣರಾದರೋ, ಎರಡು ಕಂಭಗಳ ನಡುವೆ ದೃಢಮನಸ್ಕನಾಗಿ ನಿಂತಿರುವ ಮಯೂರಧ್ವಜ ಮಹಾರಾಯನನ್ನೂ, ಆ ರಾಜೇಂದ್ರನ ಕಾಂತಾಮಣಿಯಾದ ಕುಮುದ್ವತಿಯೂ, ಪ್ರಿಯಪುತ್ರನಾದ ತಾಮ್ರಧ್ವಜನೂ ಹರಿತವಾದ ರಂಪವನ್ನು ಹಿಡಿದು ಲೇಶವೂ ಮರುಕವಿಲ್ಲದೆ ಮಯೂರಧ್ವಜನ ದೇಹವನ್ನು ಸೀಳುತ್ತ

ನಂದನಮುರಾರಿಗಳ್ಸೆರಗಾದ| ರಂಭೋಧಿಘೋಷದಿಂದೆದ್ದು ಹಾಹಾಕಾರ| ದಿಂಭಯಂಗೊಂಡೊರಲುತಿರ್ದುದಾಸ್ಥಾನದೋಳ್ಭೂಪ ಕೇಳ್ಕೌತುಕವನು ||೬೩|| ಪೆಂಡತಿಯೊಳಾತ್ಮಜನೊಳರಸನೊಳ್ಮಿಗೆನೋಡಿ | ಕಂಡುದಿಲ್ಲೊಂದಿನಿಸುಭಯಕೋಡಿಯುಂಬಳಿಕ | ಪುಂಡರೀಕಾಂಬಕಂನೃಪನವಾಮಾಕ್ಷಿಯೋಳ್ಕಂಬನಿಗಳೊಸರುತಿರಲು|| ಅಂಡಲೆದುಮಳುತಳುತಕೊಡುವವನದಾನಮಂ| ಕೊಂಡ ಪರೆಬುಧರಕಟಲೋಕದೋಳ್ಬೇಡುವಂ | ಭಂಡನೆನುತೊಡೆಮುರಿದುತಿರುಗಿದಂತನಯನಂತಿನಲಿಹರಿಬನದೊಳೆನುತ || ೬೪ || ಬೆರಗಾದಳಾಕುಮುದ್ವತಿನುಡಿದಳರಸಂಗೆ | ಬರಿದೆಕೊಯಿಸಿದೆನಿನ್ನಮಸ್ತಕವನೆಡಗಣ್ಣೊ | ಳೊರೆವಕಂಬನಿಗಳಂಕಂಡಾ

---

ಅಂಭೋಧಿ-ಅರ್ಣವವಾದರೊ, ಘೋಷದಿಂದ-ಬಹು ಗಟ್ಟಿಯಾದ ಶಬ್ದದಿಂದ, ಎದ್ದು-ಮೇಲಕ್ಕೆ ಬಂದು, ಆಸ್ಥಾನದೋಳ್-ಸಭಾಭವನದಲ್ಲಿ, ಹಾಹಾಕಾರದಿಂದ - ಹಾಹಾರವದಿಂದ, ಭಯಗೊಂಡು - ಹೆದರಿಕೆಯನ್ನೈದಿ, ಒರಲುತಿರ್ದುದು - ರೋದನ ಧ್ವನಿಯಂ ಗೈಯ್ಯುತ್ತಲಿತ್ತು, ಭೂಪ-ಎಲೈ ಜನಮೇಜಯನೆ, ಕೌತುಕವನು-ಅಚ್ಚರಿಯನ್ನು, ಕೇಳು-ಲಾಲಿಸು.

ಆ| ವಿ|| ಜಂಭರಿಪುನಂದನಮುರಾರಿಗಳ್ - ಜಂಭರಿಪು-ದೇವೇಂದ್ರನ, ನಂದನ-ಸುತನು (ಷ. ತ.) ಅರ್ಜುನನು, ಮುರಾರಿ-ಮುರಾಸುರನಿಗೆ ಶತ್ರುವು-ಶ್ರೀಕೃಷ್ಣನು, (ಷ.ತ.) ಜಂಭರಿಪುನಂದನನೂ ಮುರಾರಿಯೂ ಜಂಭರಿಪುನಂದನ ಮುರಾರಿಗಳು, (ದ್ವಂ. ಸ.) ||೬೩||

ಟೀ|| ಪೆಂಡತಿಯೊಳು-ಮಯೂರಧ್ವಜನರಸಿಯಲ್ಲಿಯೂ, ಆತ್ಮಜನೊಳು-ಅವನ ಕುವರನಾದ ತಾಮ್ರಧ್ವಜನಲ್ಲಿಯೂ, ಅರಸನೊಳ್ - ರಾಜನಾದ ಮಯೂರಧ್ವಜನಲ್ಲಿಯೂ, ಭಯಕೋಡಿಯಂ - ಹೆದರಿಕೆಯ ಸಂಬಂಧವಾದ ದುಸ್ವಭಾವವನ್ನು, ಮಿಗೆ-ಅತಿಶಯವಾಗಿ, ಒಂದಿನಿಸು - ಲೇಶವಾದರೂ ಕೂಡ, ನೋಡಿ-ಈಕ್ಷಿಸಿ, ಕಂಡುದಿಲ್ಲ-ಅರಿಯಲಿಲ್ಲವು, ಬಳಿಕ-ಅನಂತರ, ನೃಪನ-ಅರಸನಾದ ಮಯೂರಧ್ವಜನ, ವಾಮಾಕ್ಷಿಯೊಳ್-ಎಡಭಾಗದಲ್ಲಿನ ನೇತ್ರದೊಳಗಿನಿಂದ, ಕಂಬನಿಗಳು - ನೇತ್ರೋದಕಂಗಳು, ಒಸರುತಿರಲು-ಬೀಳುತ್ತಿರಲಾಗಿ, ಅಂಡಲೆದೊಡೆ-ಹಿಂಸೆಪಡುವುದಾದರೆ, ಅಳುತಳುತ-ಗೋಳಾಡುತ್ತಾ, ದಾನಮಂ ಕೊಡುವವನ-ದಾನವನ್ನೆಸಗುವನ, ದಾನಮಂ-ದಾನವನ್ನು, ಬುಧರು - ಅರಿವುಳ್ಳವರು (ವಿವೇಕಿಗಳು) ಕೊಂಡಪರೆ-ಸ್ವೀಕರಿಸಿಯಾರೆ, ಅಕಟ-ಅಹಾ, ಬೇಡುವಂ-ಯಾಚನಾವೃತ್ತಿಯನ್ನವಲಂಬಿಸಿರತಕ್ಕವನು, ಲೋಕದೋಳ್-ಭೂಮಿಯಲ್ಲಿ, ಭಂಡನು-ಲಜ್ಜಾಹೀನನು, ಎನುತ-ಎಂದು ನುಡಿಯುತ್ತ, ಪುಂಡರೀಕಾಂಬಕಂ-ಸರಸಿಜನೇತ್ರನಾದ ಕೃಷ್ಣನು, ಒಡೆಮುರಿದು-ವ್ಯತ್ಯಸ್ತವಾದ ಮನಸ್ಸುಳ್ಳವನಾಗಿ, ತನಯನು-ನನ್ನ ಕುವರನು, ಅಂತೆ-ಹಾಗೆಯೇ, ಹರಿಬನದೊಳು-ಕೇಸರಿಗೆ ನೆಲೆಯಾಗಿರುವ ಅರಣ್ಯದಲ್ಲಿಯೆ, ಇರಲಿ-ಇರತಕ್ಕವನಾಗಲಿ, ಎನುತ-ಎಂದು ನುಡಿಯುತ್ತ, ತಿರುಗಿದಂ-ಹಿಂದಕ್ಕೆ ಹೊರಟುಹೋದನು. |೬೪||

ಟೀ|| ಆಕುಮುದ್ವತಿ - ಆ ಮಯೂರಧ್ವಜನ ರಾಣಿಯು, ಬೆರಗಾದಳು - ಭ್ರಾಂತಚಿತ್ತಳಾಗಿ ನಿಂತಳು, ಅರಸಂಗೆ-ರಾಜನನ್ನು ಕುರಿತು, ನುಡಿದಳು-ಮುಂದೆ ಹೇಳುವಂತೆ ನುಡಿಯುವವಳಾದಳು, ನಿನ್ನ-ನಿನ್ನದಾದ, ಮಸ್ತಕವನು- ತಲೆಯನ್ನು, ಬರಿದೆ-ಅನ್ಯಾಯವಾಗಿ, ಕೊಯಿಸಿದೆ-ಸೀಳಿಹಾಕಿಸಿ ಬಿಟ್ಟೆ, ಅದ್ವಿಜೋತ್ತಮಂ .. ಆ ವಿಪ್ರವರ್ಯನಾದರೊ, ಎಡಗಣ್ಣೊಳ್ - ಎಡಭಾಗದ ನೇತ್ರದಲ್ಲಿ, ಬರುವ-ಬರುತ್ತಲಿರುವ, ಕಂಬನಿಗಳಂ - ನೇತ್ರೋದಕಗಳನ್ನು, ಕಂಡು-ಈಕ್ಷಿಸಿ, ನೀನು - ನೀನಾದರೊ, ಅಳುತ-ಗೋಳಾಡುತ್ತ, ಕೊಡುವೆ-ದಾನಮಾಡುವೆ, ಎಂದು-ಎಂಬದಾಗಿ ನುಡಿದು, ಒಲ್ಲದೆ-ನೀನು ಕೊಡುವ ದಾನದ ಮೇಲೆ ಅಭಿಲಾಷೆಯಿಲ್ಲದೆ, ಪೊರಮಟ್ಟುಪೋದನು - ಹೊರಟು ಹೋದವನಾದನು, ಅಕ್ಕರೊಳ್ - ವಿಶ್ವಾಸಪೂರ್ವಕವಾಗಿ, ಇತ್ತ-

---

ಲಿರುವುದನ್ನೂ ನೋಡಿ, ಭ್ರಾಂತಚಿತ್ತರಾಗಿ ನಿಂತು ಹೋದರು. ಈ ಘೋರಕೃತ್ಯವನ್ನು ಚತುಸ್ಸಮುದ್ರಗಳೂ ನೋಡಿದ ಕೂಡಲೆ ತಮ್ಮ ಪರಿಮಿತಿಯಂ ಬಿಟ್ಟು ಮೇಲಕ್ಕೆ ಉಕ್ಕಿ ಹಾಹಾಕಾರವಂ ಮಾಡಲಾರಂಭಿಸಿದವು. ಸಭೆಯಲ್ಲಿ ನೆರೆದಿದ್ದ ಮಂತ್ರಿಯೇ ಮೊದಲಾದವರೆಲ್ಲರೂ ಭಯದಿಂದ ನಡುಗುತ್ತ ಕಿರಚುತ್ತಲಿರುವ ಕೂಗು ದಿಗಂತವನ್ನು ವ್ಯಾಪಿಸಿತು || ೬೩ || ಮಯೂರಧ್ವಜನೂ, ಕುಮುದ್ವತಿಯೂ, ತಾಮ್ರಧ್ವಜನೂ ಸ್ವಲ್ಪವೂ ದುಃಖಿಸದೆ ಸಂತೋಷದಿಂದಲೇ ಇರುವುದನ್ನು ಕೃಷ್ಣಸ್ವಾಮಿಯು ಕಂಡು ಅವರಲ್ಲಿ ಯಾವ ತಪ್ಪನ್ನೂ ಕಾಣದಿರುವ ಕಾಲದಲ್ಲಿ ಮಯೂರಧ್ವಜನ ಎಡಗಣ್ಣಿನಿಂದ ಕಂಬನಿಗಳೊಸರುತ್ತಲಿರುವುದು ಕಾಣಿಸಿತು. ಇದನ್ನು ನೋಡಿದ ಕೂಡಲೆ ಕಪಟವಿಪ್ರನಾದ ಸ್ವಾಮಿಯು ಅಯ್ಯೋ ಈ ರೀತಿಯಲ್ಲಿ ದುಃಖದಿಂದ ಕೊಡುವ ದಾನವನ್ನು ಪ್ರಾಜ್ಞರು ಪರಿಗ್ರಹಿಸಬಹುದೆ? ನನ್ನ ಮಗನು ಸಿಂಹದ ಬಾಯಿಗೆ ತುತ್ತಾದರೂ ಸರಿಯೆ, ಇಂತಹ ದಾನವು ಬೇಡವೆಂದು ನುಡಿದು ಹೊರಟು ಹೋದನು. ||೬೪|| ಇದನ್ನು ಕುಮುದ್ವತಿಯು ನೋಡಿ ಸ್ತಬ್ಧಳಾಗಿ ಏನೂ ತೋರದೆ ನಿಂತು ಬಿಟ್ಟು ತನ್ನ ಕಾಂತನನ್ನು ಕುರಿತು, ಎಲೈ ಪ್ರಾಣನಾಥನೆ, ಅನ್ಯಾಯವಾಗಿ ನಿನ್ನ ತಲೆಯನ್ನು ಕೊಯ್ಯಿಸಿ ಬಿಟ್ಟೆಯಲ್ಲ ನಿನ್ನ ಎಡಗಣ್ಣಿನಿಂದ ಬೀಳುತ್ತಲಿರುವ ಕಣ್ಣೀರನ್ನು ನೋಡಿ ನೀನು ಅಳುತ್ತಾ ದಾನವಂ ಗೈಯ್ಯುವೆ ಎಂದು ಭಾವಿಸಿಕೊಂಡು ಆ ಬ್ರಾಹ್ಮಣನು

ದ್ವಿಜೋತ್ತಮಂನೀನಳುತಕೊಡುವೆಯೆಂದು ‖ ಪೊರಮಟ್ಟುಪೋದನೊಲ್ಲದೆವಿಫಲಮಾದುದ | ಕ್ಕೆಲೊಳಿತ್ತದಾನಮಿದಕೆಂತೆನಲ್ಭೂವರಂ | ಮರುಗಿಕರೆಸಾತನಂತಿಳುಪುವೆಂಪೋಳ್ಗಳೆರಡಂಕೂಡಿಪಿಡಿಯೆಂದನು ‖೬೫‖ ಬಳಿಕಾಕುಮುದ್ವತಿನರೇಂದ್ರಮಸ್ತಕದಪೋ | ಳ್ಗಳನೊಂದುಗೂಡಿಪಿಡಿದಾಗನಿಜತನಯನಂ | ಕಳುಹಲವನಾಪಾರ್ವನಂತಡೆದೊಡಂಬಡಿಸಿವಿನಯದಿಂಕರೆತರಲ್ಕೆ ‖ ತಿಳುಪಿದಂಭೂಪನೆಲೆವಿಪ್ರಕರಪತ್ರಹತಿ | ಗಳುಕಿದಲ್ಲುಪಕಾರಕಾಯ್ತುದಕ್ಷಿಣಭಾಗ | ಮುಳಿದುದುನಿರ್ಥಕಕೆವಾಮಾಂಗಮೆಂದೊಸರಿತೆಡಗಣ್ಣಜಲವೆಂದನು ‖ ೬೬ ‖ ಮೆಚ್ಚಿದಂನೃಪನೆಂದಮಾತಿಗೆಮುರಧ್ವಂಸಿ | ಹೆಚ್ಚಿರ್ದರಾಯನಕಳೇಬರದಪೋಳ್ಗಳಂ | ಬೆಚ್ಚುತಕಾರುಣ್ಯದಿಂವ್ಯೆದಡವಿತಕ್ಕೈಸಿನಿನ್ನಂಪರೀಕ್ಷಿಸಿದೆನು ‖ ನಿಚ್ಚಟದಭಕ್ತಿಯಂಕಂಡೆನಿವನರ್ಜುನಂ | ಮುಚ್ಚ

ಕೊಟ್ಟಂಥ, ದಾನಂ–ಪದಾರ್ಥವು, ವಿಫಲಂ–ನಿಷ್ಪ್ರಯೋಜನವಾದದ್ದು, ಆದುದು–ಆಗಿಬಿಟ್ಟಿತು, ಇದಕೆ–ಈ ವಿಚಾರವಾಗಿ, ಎಂತು–ಹೇಗೆ, ಎನಲ್–ಎಂದು ನುಡಿಯಲು, ಭೂವರಂ–ಅರಸನು, ಮರುಗಿ–ದುಃಖಗೊಂಡು, ಆತನಂ–ಆ ವಿಪ್ರನನ್ನು, ಕರಸು–ಬರಮಾಡು, ತಿಳುಪುವೆಂ–ನನ್ನ ಎಡಗಣ್ಣಿನಿಂದ ನೀರುಸುರಿಯುವುದರ ಕಾರಣವನ್ನು ಆ ಬ್ರಾಹ್ಮಣನಿಗೆ ಹೇಳುವೆನು, ಎರಡಂ–ಎರಡು ಭಾಗವಾಗಿರುವ, ಪೋಳ್ಗಳಂ–ಹೋಳುಗಳನ್ನೂ, ಕೂಡಿಪಿಡಿ–ಒಂದುಗೂಡಿಸುವಳಾಗು, ಎಂದನು–ಎಂಬದಾಗಿ ಮಯೂರಧ್ವಜನು ನುಡಿದನು. ‖೬೫‖

ಟೀ‖ ಬಳಿಕ–ಅನಂತರದಲ್ಲಿ, ನರೇಂದ್ರಮಸ್ತಕದ–ಮಯೂರಧ್ವಜನ ತಲೆಯ, ಪೋಳ್ಗಳನು–ಎರಡು ಭಾಗಗಳನ್ನೂ, ಆ ಕುಮುದ್ವತಿಯು–ಆ ದೊರೆಯ ರಾಣಿಯು, ಒಂದುಗೂಡಿ–ಜೋಡಿಸಿದವಳಾಗಿ, ಪಿಡಿದು–ಹಿಡಿದುಕೊಂಡು, ನಿಜತನಯನಂ–ತನ್ನ ಕುವರನಾದ ಮಯೂರಧ್ವಜನನ್ನು, ಕಳುಹಲು–ಆ ಬ್ರಾಹ್ಮಣನನ್ನು ಕರತರಲು ಕಳುಹಿಸಿದ್ದರಿಂದ, ಆಗ–ಆ ವೇಳೆಯೊಳಗೆ, ಅವನು–ಆ ತಾಮ್ರಕೇತುವಾದರೊ, ಪಾರ್ವನಂ–ಆ ವಿಪ್ರನನ್ನು, ತಡದು–ಅಡ್ಡಗಿಸಿ, ವಿನಯದಿಂ–ನಮ್ರಭಾವದಿಂದ, ಒಡಂಬಡಿಸಿ–ಒಪ್ಪಿಸಿ, ಕರತರಲ್ಕೆ–ಕರೆದುಕೊಂಡು ಬರಲಾಗಿ, ಭೂಪನು–ಮಯೂರಧ್ವಜನು, ತಿಳುಪಿದಂ–ಮುಂದೆ ಹೇಳುವಂತೆ ಶ್ರುತಪಡಿಸಿದನು, ಎಲೆ ವಿಪ್ರ–ಅಯ್ಯಾ ಬ್ರಾಹ್ಮಣ ಶ್ರೇಷ್ಠನೆ, ಕರಪತ್ರಕೆ–ರಂಪದ ಕೊಯ್ಲಿಗೆ, ಅಳುಕಿದುದು ಇಲ್ಲ–ಹೆದರಿದೆನೆಂದು ತಿಳಿಯಬೇಡ, ಉಪಕಾರಕೆ–ಇತರರ ನೆರವಿಗಾಗಿ, ದಕ್ಷಿಣಭಾಗಂ–ನನ್ನ ದೇಹದ ಬಲಭಾಗವು ಆಯಿತು, ವಾಮಭಾಗಂ–ಎಡಗಡೆಯ ಭಾಗವಾದರೊ, ನಿರ್ಥಕಕೆ–ಅನ್ಯಾಯವಾಗಿ, ಉಳಿದುದು–ನಿಂತುಹೋಯಿತು, ಎಂದು–ಎಂಬತೆರನಾಗಿ, ಎಡಗಣ್ಣ–ಎಡಭಾಗದ ಕಣ್ಣಿನ ಮೂಲಕ, ಜಲ–ಕಣ್ಣೀರು, ಒಸರಿತು–ಬಿದ್ದಿತು, ಎಂದನು–ಎಂಬುದಾಗಿ ನುಡಿದನು. ‖೬೬‖

ಟೀ‖ ನೃಪನು–ರಾಜನಾದ ಮಯೂರಧ್ವಜನು, ಎಂದ–ನುಡಿದ, ಮಾತಿಗೆ–ವಚನಕ್ಕೆ, ಮುರಧ್ವಂಸಿ–ಮುರಾಂತಕನಾದ ಕೃಷ್ಣಸ್ವಾಮಿಯು, ಮೆಚ್ಚಿದಂ–ಒಪ್ಪಿಕೊಂಡನು, ಹೆಚ್ಚಿರ್ದ–ವಿಭಾಗಿಸಿದ್ದ, ರಾಯನ–ಅರಸಾದ ಮಯೂರಧ್ವಜನ, ಕಳೇಬರದ–ದೇಹದ, ಪೋಳ್ಗಳಂ–ತುಂಡುಗಳನ್ನು, ಬೆಚ್ಚು–ಸೇರಿ, (ಅವುಗಳ ಸಮೀಪಕ್ಕೆ ಹೋಗಿ) ಕಾರುಣ್ಯದಿಂ–ದಯೆಯಿಂದ, ವ್ಯೆದಡವಿ–ದೇಹವನ್ನೆಲ್ಲಾ ಸವರಿ, ತಕ್ಕೈಸಿ–ಉಪಚಾರೋಕ್ತಿಗಳನ್ನು ಹೇಳಿ, ನಿನ್ನಂ–ನಿನ್ನನ್ನು, ಪರೀಕ್ಷಿಸಿದೆನು–ಪರೀಕ್ಷೆಮಾಡಿ ನೋಡಿದೆನು, ನಿಚ್ಚಟದ–ನೆಲೆಗೊಂಡಿರತಕ್ಕ, ಭಕ್ತಿಯಂ–ವಿಶ್ವಾಸಪೂರ್ವಕವಾದ ನಂಬಿಕೆಯನ್ನು, ಕಂಡೆನು–ಈಕ್ಷಿಸಿ

ಹೊರಟು ಹೋದನು. ನೀನು ಪ್ರೀತಿಪುರಸ್ಸರವಾಗಿ ದಾನಮಾಡಿದ್ದು ನಿಷ್ಫಲವಾಯಿತು. ಇದಕ್ಕೇನು ಮಾಡಬೇಕೆಂದು ಕೇಳುತ್ತಲಿರುವ ಸತಿಯ ನುಡಿಗಳನ್ನು ಮಯೂರಧ್ವಜನು ಕೇಳಿ, ಮನದಲ್ಲಿ ಬಹಳವಾಗಿ ಚಿಂತಿಸಿ, ಎಲೈ ಪ್ರಾಣನಾಯಕಿಯೆ, ಆ ಭೂಸುರೋತ್ತಮನನ್ನು ಕರಸು, ಎಡಗಣ್ಣಿನಲ್ಲಿ ನೀರು ಸುರಿದ ಕಾರಣವನ್ನು ಆ ದ್ವಿಜವರ್ಯನಿಗೆ ತಿಳಿಸಿ ಆತನನ್ನು ಸಂತೈಸಿ ದಾನವನ್ನಂಗೀಕರಿಸುವಂತೆ ಮಾಡುವೆನು, ಎರಡು ಭಾಗವಾಗಿ ಸೀಳಿರುವ ಈ ನನ್ನ ದೇಹವನ್ನು ಒಂದಾಗಿ ಸೇರಿಸಿ ಹಿಡಿದುಕೊಳ್ಳೆಂದು ನುಡಿಯಲು, ಆ ಕುಮುದ್ವತಿಯು ಹಾಗೆಯೇ ಮಾಡಿ ತನ್ನ ಮಗನಾದ ತಾಮ್ರಧ್ವಜನನ್ನು ಆ ಬ್ರಾಹ್ಮಣನನ್ನು ಜಾಗ್ರತೆಯಾಗಿ ಹಿಂದಕ್ಕೆ ಕರತರಬೇಕೆಂದು ಹೇಳಿ ಕಳುಹಿಸಿದಳು. ‖ ೬೫ ‖ ತಾಮ್ರಧ್ವಜನು ತಡಮಾಡದೆ ಆ ಭೂಸುರನ ಬಳಿಗೆ ಹೋಗಿ ನಯವಿನಯಗಳಿಂದ ಆತನನ್ನು ಒಪ್ಪಿಸಿ ಪುನಃ ಸಭೆಗೆ ಕರೆದುಕೊಂಡು ಬಂದದ್ದನ್ನು ಮಯೂರಧ್ವಜನು ಕಂಡು, ಆ ಬ್ರಾಹ್ಮಣನನ್ನು ಕುರಿತು, ಎಲೈ ದ್ವಿಜತಿಲಕನೆ. ರಂಪದಿಂದ ನನ್ನ ದೇಹವನ್ನು ಕೊಯ್ದದ್ದಕ್ಕಾಗಿ ನನ್ನ ಎಡಗಣ್ಣಿನಲ್ಲಿ ನೀರು ಸುರಿಯಿತೆಂದು ನೀನು ಸರ್ವಥಾ ತಿಳಿಯಕೂಡದು, ಈ ನನ್ನ ದೇಹದ ಬಲಭಾಗವನ್ನು ನಿನಗೆ ದಾನಮಾಡೋಣವರಿಂದ ಸಾರ್ಥಕವಾದಂತೆ ಎಡಭಾಗವೂ ಸಾರ್ಥಕವಾಗಲವಕಾಶವಿಲ್ಲದೆ ನಿರ್ಥಕವಾಗಬೇಕಾಗಿದೆಯಲ್ಲಾ ಎಂಬ ಸಂಕಟವೊಂದು ಹೀಗೆ ಎಡಗಣ್ಣಿನಲ್ಲಿ ನೀರು ಸುರಿಯುವಂತೆ ಮಾಡಿತಲ್ಲದೆ ಮತ್ತೇನೂ ಇಲ್ಲವು ಇದಕ್ಕಾಗಿ ನೀನು ಚಿಂತಿಸದೆ ಸಂತೋಷವಾಗಿ ನನ್ನ ದಾನವನ್ನಂಗೀಕರಿಸಿ ನನ್ನನ್ನು ಕೃತಾರ್ಥನನ್ನಾಗಿ ಮಾಡೆಂದು ನುಡಿದನು. ‖ ೬೬ ‖ ಮಯೂರಧ್ವಜನ ಈ ಪರಿಯಾದ ಗಂಭೀರ

ಮರೆಯೇಕಿನ್ನು ತಾನೀಗಕೃಷ್ಣನೆಂ | ದೆಚ್ಚರಿಸಿನಿಗಮದರಿಕೆಯತನ್ನಸಾಕಾರಮೂರ್ತಿಯಂತೋರಿಸಿದನು ||೬೭|| ವರಸುಪ್ರಸನ್ನ ವದನದಕಮಲನೇತ್ರದನು | ಕರಕುಂಡಲದಲಲಿತನಾಸಿಕದಪಣೆಯಕತ್ತುರಿಯತಿಲಕದ | ಮುರಿದಪುರ್ಬುಗಳಸುಳಿಗುರುಳ ಮಣಿಮುಕುಟದೆಳೆತುಳಸಿಯ || ಕೊರಳವನಮಾಲಿಗಳಕೌಸ್ತುಭದಶ್ರೀವತ್ಸ | ದುರದಚಂದನದನಳಿದೋಳ್ಗಳಘನಾಂಗ ಸೌಂ | ದರಿಯದವಯವದ ಸರ್ವಾಭರಣಭೂಷಿತದ ಹರಿ ನೃಪನನುಂದೆಸೆದನು || ೬೮ || ಹೇಮಾಂಬರದ ಲಲಿತಕಾಂತಿ ಹೊಳೆಹೊಳೆವಸೌ | ದಾಮಿನಿಯುವೊಲಿರೆಯೊಸರ್ವಕರುಣಾರಸಸುಧಾ | ರಾಮುಯದಮಳೆಯೊಲಿರೆನುಡಿವಗಂಭೀರವಾಕ್ಯಂ

---

ದೆನು, ಇವನು-ನನ್ನ ಬಳಿಯಲ್ಲಿ ಶಿಷ್ಯವೃತ್ತಿಯನ್ನವಲಂಬಿಸಿರತಕ್ಕವನು, ಅರ್ಜುನಂ-ಫಲುಗುಣನು, ಮುಚ್ಚುಮರೆ-ಗುಟ್ಟಾಗಿಯೇ ಇರುವುದು, ಏಕೆ-ಏತಕ್ಕೆ, ಈಗ-ಈಗಲಾದರೊ, ತಾನು-ನಾನು, ಕೃಷ್ಣನು- ಕೃಷ್ಣಮೂರುತಿಯು, ಎಂದು-ಎಂಬತೆರನಾಗಿ, ಎಚ್ಚರಿಸಿ-ಜ್ಞಾನೋದಯವುಂಟಾಗುವಂತೆ ಮಾಡಿ, ನಿಗಮದರಿಕೆಯ-ವೇದಪ್ರತಿಪಾದ್ಯಮಾದ, ತನ್ನ-ತನ್ನದಾಗಿರತಕ್ಕ, ಸಾಕಾರ ಮೂರ್ತಿಯಂ-ನಿಜರೂಪವನ್ನು, ತೋರಿಸಿದನು-ನೋಡಿಸಿದವನಾದನು.

ಅ|| ವಿ|| ಮುರಧ್ವಂಸಿ (ದ್ವಿ. ತ) ಮ್ಯೆದಡವಿ (ಆದೇಶಸಂಧಿ ಮತ್ತು ಕ್ರಿ. ಸ) ಸಾಕಾರಮೂರ್ತಿ=ಸಾಕಾರ-ಆಕಾರ ಸಹಿತವಾದದ್ದು (ಸಹ ಪೂರ್ವಪದ) ಸಾಕಾರವಾದ ಮೂರ್ (ವಿ. ಪೂ) ||೬೭||

ಟೀ|| ವರ-ಉತ್ತಮವಾದ, ಸು-ಮೇಲ್ಮೆಯನ್ನೈದಿದ, ವದನದ-ಮೋರೆಯಿಂದ ಕೂಡಿರುವ, ಕಮಲನೇತ್ರದ-ತಾವರೆಯಂತೆ ನಯನಂಗಳನ್ನುಳ್ಳ, ಮಕರಕುಂಡಲದ-ಮತ್ಸ್ಯದಹಾಗಿರುವ ಹತ್ತಕಡಕುಗಳಿಂದ ಕೂಡಿರತಕ್ಕ, ಲಲಿತ-ಮೆತ್ತಗಿರುವ, ನಾಸಿಕದ-ಮೂಗಿನಿಂದ ಕೂಡಿದ, ಪಣೆಯ-ಫಾಲದಲ್ಲಿ, ಕತ್ತುರಿಯ ತಿಲಕದ-ಕಸ್ತೂರಿಯ ತಿಲಕದಿಂ ಶೋಭಿಸುತ್ತಲಿರುವ, ಮುರಿದ-ಭಿನ್ನವಾದ, ಪುರ್ಬುಗಳ-ಹುಬ್ಬುಗಳಿಂದ ಕೂಡಿಕೊಂಡಿರತಕ್ಕ, ಸುಳಿಗುರುಳ-ಸುತ್ತಿಕೊಂಡಿರುವ ಕೂದಲ ಸಮೂಹದಿಂದ ಕೂಡಿಕೊಂಡಿರತಕ್ಕ, ಮಣಿಮುಕುಟದ-ರತ್ನ ಖಚಿತವಾದ ಕಿರೀಟದಿಂ ಕೂಡಿರುವ, ಎಳೆತುಳಸಿಯ-ಎಳತುಳಸಿಯಿಂದ ಕೂಡಿದ, ಕೊರಳ-ಕಂಠವನ್ನಾವರಿಸಿಕೊಂಡಿರತಕ್ಕ, ವನಮಾಲೆಗಳ-ತುಳಸೀಮಾಲಿಕೆಯೇ ಮೊದಲಾದ ಹಾರಗಳಿಂದ ಕೂಡಿರತಕ್ಕ, ಕೌಸ್ತುಭದ-ಕೌಸ್ತುಭರತ್ನವು, ಶ್ರೀವತ್ಸ-ಶ್ರೀವತ್ಸವೆಂಬ ಲಾಂಛನವು ಇವುಗಳನ್ನು, ಉರದ-ಹೊಕ್ಕಳ ಸಮೀಪದಲ್ಲಿ ಉಳ್ಳ, ಚಂದನ-ಗಂಧದಿಂದೊಡಗೂಡಿದ, ನಳಿತೋಳ್ಗಳ-ಪ್ರಕಾಶಿಸುವ ಹಸ್ತಗಳನ್ನುಳ್ಳ, ಘನ-ಮುಗಿಲ್ಗಳಂತೆ, ಅಂಗ ಸೌಂದರಿಯ-ದೇಹಾಲಂಕಾರದಿಂ ಕೂಡಿರತಕ್ಕ, ಅವಯವದ-ಶರೀರದ ನಾನಾ ಕಡೆಗಳಲ್ಲಿಯೂ, ಸರ್ವ-ಸಮಸ್ತವಾದ, ಆಭರಣ-ತೊಡಿಗೆಗಳಿಂದ, ಭೂಷಿತದ-ಕಾಂತಿಯುಕ್ತವಾಗಿರುವ, ಹರಿ-ಶ್ರೀ ಕೃಷ್ಣಮೂರುತಿಯು, ನೃಪನ ಮುಂದೆ- ರಾಜನಾದ ಮಯೂರಧ್ವಜನಿದಿರಾಗಿ, ಎಸೆದನು-ಹೊಳೆಯುತ್ತಲಿದ್ದನು ||೬೮||

ಟೀ|| ಹೇಮಾಂಬರದ-ಹಳದಿ ಬಣ್ಣದ ವಸ್ತ್ರದ, ಲಲಿತ-ಮನೋಹರವಾದ, ಕಾಂತಿ-ಕಳೆಯು, ಹೊಳೆಹೊಳೆವ-ಹೆಚ್ಚಾಗಿ ಮಿರುಗುಟ್ಟತಕ್ಕ, ಸೌದಾಮಿನಿಯುವೊಲು- ವಿದ್ಯುತ್ತಿನತೆರನಾಗಿ, ಇರೆ-ಇರಲಾಗಿ, ಒಸರ್ವ- ಬಿಡುಗಡೆಯನ್ನೈದಿದ, ಕರುಣಾರಸ-ದಯಾರಸದ, ಸುಧಾರಾ- ನೀರು ಬೀಳುವಿಕೆಯ, ಮುಯದ- ಆಧಿಕ್ಯವುಳ್ಳ, ಮಳೆಯೊಲ್-ಮಳೆಯಹಾಗೆ, ಇರೆ-

---

ನುಡಿಯು ಕಿವಿಗೆ ಬಿದ್ದ ಕೂಡಲೇ ಕೃಷ್ಣಸ್ವಾಮಿಯು ಅತ್ಯಾನಂದದಿಂದ ಮೆಚ್ಚಿದವನಾಗಿ, ಕರುಣಾ ಕಟಾಕ್ಷಪೂರಿತ ಮನಸ್ಕನಾಗಿ, ಆ ರಾಯನ ಶರೀರದ ಹೋಳುಗಳ ಬಳಿಗೆ ಬಂದು, ಚನ್ನಾಗಿ ಸವರಿ, ಅಯ್ಯಾ ಮಯೂರಧ್ವಜಾ! ನಿನ್ನ ಸ್ಥಿರವಾದ ಭಕ್ತಿಗೆ ಮೆಚ್ಚಿದೆನು, ನಿನ್ನ ಭಕ್ತಿಯನ್ನು ಪರೀಕ್ಷಿಸಬೇಕೆಂದು ಈ ರೀತಿ ಬ್ರಾಹ್ಮಣ ವೇಷದಿಂದ ಬಂದೆನು. ನಾನೇ ಕೃಷ್ಣನೆಂದೂ ಈ ಶಿಷ್ಯನೆ ಅರ್ಜುನನೆಂದೂ ತಿಳಿ ಎಂದು ನುಡಿದು, ವೇದ ಪ್ರತಿಪಾದ್ಯಮಾದ ತನ್ನ ನಿಜಾಕಾರವಂ ತಾಳಿ ಮಯೂರಧ್ವಜನ ಮುಂದೆ ನಿಂತುಕೊಂಡನು. ||೬೭|| ಶ್ರೇಷ್ಠವಾದ ಮತ್ತು ಸೌಮ್ಯವಾದ ಮುಖದಿಂದಲೂ ತಾವರೆಯಂತೆ ಅತಿವಿಶಾಲವಾದ ಕಣ್ಣುಗಳಿಂದಲೂ ಕರ್ಣಾಭರಣಗಳಿಂದ ಶೋಭಿಸುವ ಶ್ರೋತ್ರಂಗಳಿಂದಲೂ, ಮನೋಹರವಾದ ಮೂಗಿನಿಂದಲೂ, ಕತ್ತುರಿಯ ಬಟ್ಟನಿಂ ವಿರಾಜಿಸುತ್ತಲಿರುವ ವಿಶಾಲವಾದ ಹಣೆಯಿಂದಲೂ, ವಕ್ರವಕ್ರವಾದ ಕಣ್ಣುಬ್ಬುಗಳಿಂದಲೂ, ನವರತ್ನ ಖಚಿತವಾದ ಕಿರೀಟದಿಂದ ಶೋಭಿಸುತ್ತಲಿರುವ ಶಿರಸ್ಸಿನಿಂದಲೂ, ತುಲಸೀಮಾಲಿಕೆ ಮತ್ತು ಕೌಸ್ತುಭವೆಂಬ ದಿವ್ಯರತ್ನ ಇವುಗಳಿಂದಲಂಕೃತವಾದ ಕಂಠದಿಂದಲೂ, ಶ್ರೀವತ್ಸವೆಂಬ ಲಾಂಛದಿಂದ ಕೂಡಿದ ಎದೆಯ ಭಾಗದಿಂದಲೂ, ದೀರ್ಘವಾದ ಬಾಹುಗಳಿಂದಲೂ, ಕೂಡಿದ ಕೃಷ್ಣಸ್ವಾಮಿಯು ||೬೮|| ಸರ್ವಾಲಂಕಾರ ಭೂಷಿತನಾಗಿ ಮಯೂರಧ್ವಜನಮುಂದೆ ನಿಂತವನಾದನು. ಆ ಮಹಾನುಭಾವನಾದ ಕೃಷ್ಣಮೂರುತಿಯು ಉಟ್ಟಿದ್ದ ಪೀತಾಂಬರದ ಕಾಂತಿಯು ಮಿಂಚಿನ ಹೊಳಪನ್ನು ಕೂಡ ಅಲಗಳೆಯುತ್ತಲಿದ್ದಿತು. ಆ ಸ್ವಾಮಿಯ ಬಾಯಿಯಿಂದ ಹೊರಡುವ ಮಾತುಗಳಾದರೊ, ಕರುಣಾರಸ ವಿಶಿಷ್ಟವಾದ ಉದಕಧಾರೆಯೊ

ಕೂಡೆನೊಳಗುವೊಲಿರೆ ‖ ಕೋಮಲಶ್ಯಾಮ ಲಾವಣ್ಯತನುಮುಂಗಾರ । ಜೀಮೂತದೊಡ್ಡೊಲಿರೆನಲಿಯದಿರ್ದಪನೆ ಬಳಿ । ಕಾ ಮಯೂರಧ್ವಜಂ ಪೇಳೆನಲ್ಕೃಷ್ಣನಂ ಕಂಡು ಪುಳಕಿತನಾದನು ‖ ೬೯ ‖ ಜಯಜಯಜಗನ್ನಾಥ ವರಸುವರ್ಣವರೂಥ । ಜಯಜಯರಮಾಕಾಂತಶಮಿತದುರಿತಧ್ವಾಂತ । ಜಯಜಯಸುರಾಧೀಶನಿಗಮನಿರ್ಮಲಕೋಶ ಕೋಟಿಸೂರ್ಯಪ್ರಕಾಶ ‖ ಜಯ ಜಯಕ್ರತುಪಾಲ ತರುಣತುಲಸೀಮಾಲ । ಜಯಜಯಕ್ಷ್ಮಾಪೇಂದ್ರ ಸಕಲಸದ್ಗುಣಸಾಂದ್ರ । ಜಯಜಯತುಯದುರಾಜ ಭಕ್ತಸುಮನೋಭೂಜ ಜಯಜಯತುಯೆನುತಿರ್ದನು ‖೭೦‖ ನೋಡಿದಂ ಕಣ್ದಣಿಯೆಬಳಿಕಿಳೆಗೆತನುವನೀ । ಡಾಡಿದಂಡಪ್ರಣಾ ಮಂಗೈದುಭೂವರಂ । ಮಾಡಿದಂನಿಗಮಾರ್ಥದನುಪಮಸ್ತುತಿಗಳಂಮುರಹರನಮುಂದೆನಿಂದು‖ ಕೂಡೆತಾಮ್ರಧ್ವಜಕುಮುದ್ವತಿ

---

ಇರಲು, ನುಡಿವ–ಮಾತನ್ನಾಡುತ್ತಲಿರತಕ್ಕ, ಗಂಭೀರವಾಕ್ಯಂ–ಗಾಂಭೀರ್ಯದ ನುಡಿಗಳು, ಕೂಡೆ–ಜೊಡನೆಯೇ, ಮೊಳಗುವವೊಲು–ಗುಡುಗಿನ ಶಬ್ದದಹಾಗೆ, ಇರೆ–ಇರಲಾಗಿ, ಕೋಮಲ–ಮೆತ್ತಗಿರತಕ್ಕ, ಶ್ಯಾಮ–ಮೇಘವರ್ಣದ, ಲಾವಣ್ಯ–ಸೌಂದರ್ಯವುಳ್ಳ, ತನು ದೇಹವು, ಮುಂಗಾರ–ಮುಂಗಾರದಿನದ, ಜೀಮೂತದ–ಮೇಘದ, ಒಡ್ಡೊಲು–ಗುಂಪಿನಂತೆ, ಇರೆ–ಇರಲಾಗಿ, ಬಳಿಕ–ಅನಂತರ, ಆ ಮಯೂರಧ್ವಜನು – ಆ ಮಯೂರಧ್ವಜನೆಂಬ ರಾಜನು, ನಲಿಯದೆ – ಆನಂದವನ್ನೈದದೆ, ಇರ್ದಪನೆ – ಇರುತ್ತಾನೆಯೇ, ಪೇಳು–ನುಡಿ, ಎನಲ್–ಎನ್ನುವಂತೆ, ಕೃಷ್ಣನಂ ಕಂಡು–ಕೃಷ್ಣಸ್ವಾಮಿಯನ್ನು ನೋಡಿ, ಪುಳುಕಿತನಾದನು–ರೋಮಾಂಚನವನ್ನೈದಿದನು ‖ ೬೯ ‖

ಟೀ‖ ಜಗನ್ನಾಥ–ಪ್ರಪಂಚಕ್ಕೆಲ್ಲಾ ಒಡೆಯನಾದವನೆ, ಸುಪರ್ಣ–ಗರುತ್ಮಂತನನ್ನೇ, ವರೂಥ–ರಥದಲ್ಲಿ ಉಳ್ಳವನೆ, ಜಯಜಯ–ಸರ್ವೋತ್ಕೃಷ್ಟನಾಗಿರು, ರಮಾಕಾಂತ–ಲಕ್ಷ್ಮೀರಮಣನೆ, ಶಮಿತ – ಕಳೆದುಬಿಟ್ಟ, ದುರಿತ–ದೋಷಗಳೆನ್ನತಕ್ಕ, ಧ್ವಾಂತ–ಅಂಧಕಾರವುಳ್ಳವನೆ, ಜಯಜಯ–ನಿನಗೆ ಮಂಗಳವಾಗಲಿ, ಸುರಾಧೀಶ–ದೇವರ ದೇವನೆ, ನಿಗಮ–ವೇದಗಳೆನ್ನತಕ್ಕ. ನಿರ್ಮಲ–ಪವಿತ್ರವಾದ, ಕೋಶ–ಭಂಡಾರವುಳ್ಳವನೆ, ಜಯಜಯ–ನೀನು ಮೇಲ್ಮೆಯನ್ನೈದು, ಕೋಟಿಸೂರ್ಯಪ್ರಕಾಶ–ಒಂದು ಕೋಟಿ ಆದಿತ್ಯರಿಗಿರುವ ಕಾಂತಿಯನ್ನು ತಾನೊಬ್ಬನೆ ಉಂಟಾಗಿರತಕ್ಕವನೆ, ಕ್ರತುಪಾಲ–ಯಾಗರಕ್ಷಕನೆ, ತರುಣ–ಹೊಸದಾಗಿರುವ, ತುಲಸೀಮಾಲ–ತುಲಸೀಹಾರದಿಂ ಕೂಡಿರುವನೆ, ಜಯಜಯ–ನೀನು ಶುಭಾತಿಶಯಕ್ಕೆ ಆಕರನಾಗು, ಕ್ಷ್ಮಾಪೇಂದ್ರ–ರಾಜಾಧಿರಾಜನಾಗಿರತಕ್ಕನನೆ, (ಸಕಲ ರಾಜರನ್ನೂ ರಕ್ಷಿಸತಕ್ಕವನೆ) ಸಕಲ–ಅಶೇಷವಾದ, ಸದ್ಗುಣಸಾಂದ್ರ–ಸುಗುಣರಾಶಿಯಿಂದೊಡಗೂಡಿರುವನೆ, ಜಯಜಯ–ನಿನಿಗೆ ಮಂಗಳವು, ಯದುರಾಜ–ಯದುವಂಶದ ದೊರೆಗಳಿಗೆಲ್ಲಾ, ರಾಜ–ಪ್ರಭುವಾಗಿರತಕ್ಕವನೆ, ಭಕ್ತ–ನಿನ್ನ ಭಜಕರಿಗೆ, ಸುಮನೋಭೂಜ–ಕಲ್ಪವೃಕ್ಷದಹಾಗೆ ಇಷ್ಟಸಿದ್ಧಿಯಂ ದಯೆಪಾಲಿಸತಕ್ಕ ಸ್ವಾಮಿಯೆ, ಜಯಜಯ–ನಿನಿಗೆ ಒಳ್ಳೆಯದಾಗಲಿ, ಎನುತ–ಎಂದು ನುಡಿಯುತ್ತಾ, ಇರ್ದನು–ಇದ್ದವನಾದನು ‖

ಅ‖ ವಿ‖ ಮಯೂರಧ್ವಜನ ಶ್ರೀ ಕೃಷ್ಣಮೂರುತಿಯನ್ನು ಜಯಜಯ ಎಂತಲೂ ಜಯತುಜಯತು ಎಂಬುದಾಗಿಯೂ ನುತಿಸಿರುವುದರಿಂದ ತನಿಗೆ ಇಹಪರಂಗಳಲ್ಲಿ ಸುಖವೂ ಚತುರ್ವಿಧ ಫಲಸಿದ್ಧಿಯೂ ಆಗಬೇಕೆಂಬಿಚ್ಛೆಯನ್ನುಂಟಾಗಿದ್ದನೆಂದು ಊಹಿಸಬಹುದಾಗಿದೆ. ಚತುರ್ವಿಧಫಲಗಳು–ಧರ್ಮ, ಅರ್ಥ, ಕಾಮ, ಮೋಕ್ಷ ಎಂಬಿವುಗಳು ‖೭೦‖

ಟೀ‖ ಭೂವರಂ–ರಾಜೇಂದ್ರನಾದ ಮಯೂರಧ್ವಜನು, ಕಣ್ದಣಿಯೆ – ನಯನಂಗಳಿಗೆ ಆನಂದವುಂಟಾಗುವವರೆಗೂ, ನೋಡಿದಂ – ಕೃಷ್ಣ ಸಂದರ್ಶನವಂ ಮಾಡಿದನು, ಬಳಿಕ – ಅನಂತರ, ತನುವನು – ತನ್ನ ದೇಹವನ್ನು, ಇಳೆಗೆ – ಭೂಮಿಯ ಮೇಲಕ್ಕೆ, ಈಡಾಡಿ–ಹೊಂಳಿಸಿಬಿಟ್ಟು, ದಂಡಪ್ರಣಾಮಮಂಗೈದು–ಉದ್ದವಾಗಿ ಅಡ್ಡಬಿದ್ದು, ಮುರಹರನಮುಂದೆ–ಕೃಷ್ಣಸ್ವಾ

---

ಎಂಬಂತೆ ತೋರುತ್ತಲಿತ್ತು. ಮುಂಗಾರು ಮೇಘದ ಕಾಂತಿಯೂ ಆ ಸ್ವಾಮಿಯ ದೇಹಕಾಂತಿಯಿಂದ ಲಜ್ಜೆಯನ್ನೈದಬೇಕಾಯಿತು. ಇಂತಹ ದಿವ್ಯ ಸುಂದರ ವಿಗ್ರಹವನ್ನು ಮಯೂರಧ್ವಜನು ನೋಡಿದ ಕೂಡಲೆ, ಅತ್ಯಂತ ಸಂತೋಷದಿಂದ ರೋಮಾಂಚವುಳ್ಳವನಾಗಿ, ‖೬೯‖ ಎಲೈ ಅಖಿಲಾಂಡಕೋಟಿ ಬ್ರಹ್ಮಾಂಡನಾಯಕಾ, ಓ ಗರುಡಾರೂಢಾ! ಲಕ್ಷ್ಮೀರಮಣನಾದ ಪಾವನಮೂರ್ತಿ, ನಿನಿಗೆ ಮಂಗಳವಾಗಲಿ. ನಿನ್ನ ಭಕ್ತರ ಪಾಪಪರಿಹಾರಕನೇ, ದೇವದೇವೋತ್ತಮನೆ! ನೀನು ಸರ್ವೋತ್ಕೃಷ್ಟನಾಗಿರುವ, ವೇದಪ್ರತಿಪಾದ್ಯನೆ, ಸಹಸ್ರ ಭಾನುಗಳಿಗಿಂತಲೂ ಹೆಚ್ಚಾದ ಕಾಂತಿಯುಳ್ಳವನೆ! ಯಜ್ಞರಕ್ಷಕನೆ! ತುಲಸೀಮಾಲಾಂಕೃತನಾದ ಸ್ವಾಮಿಯೆ! ನಿನಿಗೆ ಒಳ್ಳಿತಾಗಲಿ, ಸಕಲ ಕಲ್ಯಾಣಗುಣ ಮಂಡಿತನೆ! ಯದುಕುಲತಿಲಕನೆ! ದೇವತೆಗಳಿಗೆ ಕಲ್ಪವೃಕ್ಷ ಪ್ರಾಯನಾದ ಮಹಾಪ್ರಭೋ! ಎಂದು ನಾನಾ ಪ್ರಕಾರವಾಗಿ ಶ್ಲಾಘಿಸುತ್ತ ‖ ೭೦ ‖ ತನ್ನ ಕಣ್ಣುಗಳು ದಣಿಯುವಷ್ಟು ನೋಡಿನೋಡಿ ಸಂತಸಗೊಂಡು ದೀರ್ಘದಂಡಪ್ರಣಾಮವಂಗೈದು ಅನಂತರ ಮೇಲಕ್ಕೆದ್ದುನಿಂತು ಅಸಾಧಾರಣವೂ ವೇದಸ್ತುತಿಸಾಧ್ಯವೂ ಆದ ಸ್ತುತಿಗಳಂಮಾಡಿ ಶ್ರೀ ಕೃಷ್ಣಮೂರುತಿಯ ಮುಂದುಗಡೆಯಲ್ಲಿ ನಿಂತುಕೊಂಡನು.

ಯೆರಗಿದ | ಮೂಡಿದಾನಂದದಿಂ ತಮತಮಗೆ ಕೈಮುಗಿದು | ಬೇಡಿಕೊಳುತಿರ್ದುದು ಮಹಾಸಭೆ ಮುಕುಂದನಂ ಜಯಜಯನಿನಾದದಿಂದ ||೭೧|| ಪನ್ನಗಾರಿಧ್ವಜಂ ಬಳಿಕಾ ನೃಪಾಲನಂ | ಮನ್ನಿಸಿ ಕೃತಾರ್ಥನಹೆ ನೀನರ್ಧದೇಹಮಂ | ನನ್ನಿಯಿಂದೀಯೆ ಮೆಚ್ಚಿದೆನಿನಗೆ ಸಮರದೊಳ್ ತನಸೂನು ತಾಮ್ರಕೇತು|| ನಿನ್ನೆ ಪಡೆಯೆಲ್ಲಮನುಮೀ ಸವ್ಯಸಾಚಿಯನು | ಮೆನ್ನನುಂ ಮೂರ್ಛೆಗಾಣಿಸಿ ಕೆಡಹಿ ಬಂದುದಕೆ | ಮುನ್ನ ಹರುಷಿತನಾದೆ ನಿನ್ನು ಸತಿಸುತರೊಡನೆ ಮಾಡು ಯಜ್ಞವನೆಂದನು || ೭೨ || ಧರ್ಮಜನ ತುರಗವಿದೆ ನಿನ್ನ ಹಯಮಿದೆ ನೀನೆ | ನಿರ್ಮಲಾಧ್ವರಮೆರಡನುಂ ಸಮಯಮಾಗಲ್ಕೆ | ಕರ್ಮಕಧಿಪತಿಯಾಗಿ ಮಾಳ್ಪುದೆಂದಚ್ಯುತಂ ನುಡಿದೊಡೆ ಮಯೂರಕೇತು || ಚರ್ಮಶೃಂಗಮನಾಂತು ಮಖದೀಕ್ಷೆಯಂ ಕೊಂಬ | ದುರ್ಮತಿಗಳುಂಟೆ ನಿನ್ನಂ ಕಂಡ ಬಳಿಕದರ |

---

ಮಿಗೆದುರಾಗಿ, ನಿಂದು–ನಿಂತುಕೊಂಡು, ನಿಗಮಾರ್ಥದ-ವೇದವೇದ್ಯಮಾಗಿರುವ, ಅನುಪಮ–ಅಸಾಧಾರಣವಾದ, ಸ್ತುತಿಗಳಂ ಮಾಡಿದನು–ಸ್ತೋತ್ರಂಗಳನ್ನೆಸಗಿದನು, ಕೂಡೆ–ಒಡನೆಯೆ, ತಾಮ್ರಧ್ವಜಕುಮುದ್ವತಿಯರು–ತಾಮ್ರಧ್ವಜ ಕುಮುದ್ವತಿಗಳೆಂಬ ಮಯೂರಧ್ವಜನ ಸುತನೂ ಸತಿಯೂ ಸಹ, ಮೂಡಿದ–ಉಂಟಾದ, ಆನಂದದಿಂದ–ಸಂತಸದಿಂದ, ಎರಗಿದರು–ವಂದಿಸಿದರು, ಮಹಾಸಭೆ–ಆ ಸಭೆಯಲ್ಲಿ ನೆರೆದಿರತಕ್ಕವರೆಲ್ಲರೂ, ತಮತಮಗೆ–ತಾವುತಾವೇ, ಕೈಮುಗಿದು–ಕೈಗಳಂ ಜೋಡಿಸಿದವರಾಗಿ, ಮುಕುಂದನಂ – ಶ್ರೀ ಕೃಷ್ಣಪರಮಾತ್ಮನನ್ನು, ಜಯಜಯನಾದದಿಂದ – ಜಯಜಯ ಎನ್ನುವ ಶಬ್ದದಿಂದ, ಬೇಡಿಕೊಳುತಿರ್ದುದು– ಪ್ರಾರ್ಥನೆಯನ್ನು ಮಾಡುತ್ತಲಿದ್ದರು ||

ಅ|| ವಿ|| ಸ್ತುತಿ (ತ್ಸ), ತುತಿ (ತ್ಭ) ಮುರಹರ (ದ್ವಿ. ತ.) ನಿಗಮಾರ್ಥ (ಸ. ದೀ.) ಮುಕುಂದ–ಮುಕ್–ಮೋಕ್ಷವನ್ನು, ದ–ಕೊಡುವನು (ದ್ವಿ. ತ.) ||೭೧||

ಟೀ|| ಬಳಿಕ–ತರುವಾಯ, ಪನ್ನಗಾರಿಧ್ವಜಂ–ಕೃಷ್ಣಮೂರುತಿಯು, ಆ ನೃಪಾಲನಂ–ಆ ರಾಜನನ್ನು, ಮನ್ನಿಸಿ– ಉಪಚರಿಸಿ, ನೀನು–ನೀನಾದರೊ, ಕೃತಾರ್ಥನಹೆ–ಕೃತಕೃತ್ಯನಾಗಿರುವಿ, ನನ್ನಿಯಿಂದ–ಅಕ್ಕರೆಯಿಂದ, ಅರ್ಧದೇಹಮಂ–ಶರೀರದಲ್ಲಿ ಅರ್ಧಭಾಗವನ್ನು, ಈಯೆ–ದಾನಮಾಡಿದ್ದರಿಂದ, ನಿನಿಗೆ–ನಿನ್ನ ಕಾರ್ಯಕ್ಕೆ, ಮೆಚ್ಚಿದೆಂ–ಒಪ್ಪಿಕೊಂಡಿರುವೆನು, ನಿನ್ನೆ–ನಿನ್ನೆಯ ದಿನ, ಸಮರದೊಳ್–ಕಾಳಗದಲ್ಲಿ, ತನಸೂನು–ನಿನ್ನ ನಂದನನಾದ, ತಾಮ್ರಕೇತು–ತಾಮ್ರಧ್ವಜನಾದರೊ, ಪಡೆಯೆಲ್ಲಮನುಂ– ನಮ್ಮ ಸಕಲಪರಿವಾರವನ್ನೂ, ಈ ಸವ್ಯಸಾಚಿಯನು–ಈ ಫಲುಗುಣನನ್ನೂ, ಎನ್ನನಂ–ನನ್ನನ್ನೂ ಸಹ, ಮೂರ್ಛೆಕಾಣಿಸಿ–ಪ್ರಜ್ಞೆ ತಪ್ಪುವಂತೆ ಮಾಡಿ, ಕೆಡಹಿ–ನೆಲಕ್ಕೆ ಉರುಳಿಸಿ, ಬಂದುದಕ್ಕೆ–ಬಂದಕಲುವಾಗಿ, ಮುನ್ನ–ಆದಿಯಲ್ಲಿಯೇ, ಹರುಷಿತನಾದೆನು– ಸಂತಸಗೊಂಡೆನು, ಇನ್ನು–ಇನ್ನುಮುಂದೆ, ಸತಿಸುತರೊಡನೆ–ದಾರಾಪುತ್ರರಿಂದೊಡಗೂಡಿ, ಯಜ್ಞವನುಮಾಡು–ಅಶ್ವಮೇಧವನ್ನೆಸಗು, ಎಂದನು–ಎಂಬುದಾಗಿ ಕೃಷ್ಣಸ್ವಾಮಿಯು ಮಯೂರಧ್ವಜನೊಂದಿಗೆ ಹೇಳಿದನು ||೭೨||

ಟೀ|| ಅಚ್ಯುತಂ–ಕೃಷ್ಣಮೂರುತಿಯು, (ಮಯೂರಧ್ವಜನನ್ನು ಕುರಿತು) ಧರ್ಮಜನ–ಯುಧಿಷ್ಠಿರನ, ತುರಗಂ– ಯಾಗದ ಕುದುರೆಯು, ಇದೆ–ಇಗೊ, ನಿನ್ನಹಯಂ–ನಿನ್ನ ತುರಂಗವು, ಇದೆ – ನಿನ್ನ ಸಮೀಪದಲ್ಲಿಯೇ ಇದೆ, ಸಮಯಮಾಗಲ್ಕೆ–ಅನುಕೂಲವಾಗಿ, ನೀನೇ, ನಿರ್ಮಲಾಧ್ವರಂ ಎರಡನೂ–ಎರಡು ಹಯಮೇಧಂಗಳನ್ನೂ, ಕರ್ಮಕಧಿಪತಿಯಾಗಿ–ಯಾಗಕ್ಕೆ ಒಡೆಯನಾಗಿ, ಮಾಳ್ಪುದು–ಮಾಡತಕ್ಕದ್ದು, ಎಂದು–ಎಂಬತೆರನಾಗಿ, ನುಡಿದೊಡೆ–ಪೇಳಲು, ಮಯೂರಕೇತು– ಮಯೂರಧ್ವಜನಾದರೊ, ನಿನ್ನಂ ಕಂಡಬಳಿಕ–ನಿನ್ನನ್ನು ನೋಡಿದಮೇಲೆ, ಚರ್ಮ–ಚರ್ಮವನ್ನೂ, ಶೃಂಗಮನು–ಕೊಂಬನ್ನೂ, ಆಂತು–

---

ಆ ಬಳಿಕ ಕುಮುದ್ವತಿಯೂ ತಾಮ್ರಧ್ವಜನೂ ಸಹ ಅತ್ಯಾನಂದದಿಂದ ಶ್ರೀ ಕೃಷ್ಣನ ಪಾದಾರವಿಂದಗಳಲ್ಲಿ ಆನತರಾದರು. ಆ ಮಹಾಸಭಾಸ್ಥಾನವನ್ನಲಂಕರಿಸಿದ್ದವರೆಲ್ಲರೂ ಜಯಜಯಧ್ವನಿಯಿಂದ ಕೃಷ್ಣಪರಮಾತ್ಮನನ್ನು ಕೊಂಡಾಡಿದರು || ೭೧ || ಆ ಬಳಿಕ ಕೃಷ್ಣಸ್ವಾಮಿಯು ರಾಜನಾದ ಮಯೂರಧ್ವಜನನ್ನು ಕುರಿತು, ಅಯ್ಯಾ ಮಯೂರಧ್ವಜನೆ ನೀನು ನಿನ್ನ ಶರೀರಾರ್ಧವನ್ನು ಕೊಡಲು ಸ್ವಲ್ಪವೂ ಹಿಂದೆಗೆಯದಿರುವುದರಿಂದ ನಿನ್ನ ದೃಢಭಕ್ತಿಯನ್ನು ನೋಡಿ ನನಿಗೆ ಸಂತೋಷವಾಗುವುದಕ್ಕೆ ಮೊದಲೆ ನಿನ್ನೆಯದಿನ ನಿನ್ನ ಮಗನಾದ ತಾಮ್ರಧ್ವಜನು ನಮ್ಮ ಅಪರಿಮಿತವಾದ ಸೇನಾಸಮುದ್ರವನ್ನು ಈ ಅರ್ಜುನನ್ನೂ, ನನ್ನನ್ನೂ ಕೂಡ ಮೂರ್ಛೆಗೊಳಿಸಿ ಬಂದಿರುವುದರಿಂದ ಆಗಲೇ ನನಿಗೆ ಅತ್ಯಾನಂದವುಂಟಾಗಿರುವುದು, ನೀನೇ ಧನ್ಯನು ನಿನ್ನ ಭಕ್ತಿಗೆ ನಾನು ಮೆಚ್ಚಿರುವೆನು. ಇನ್ನು ನಿನ್ನ ಪತ್ನೀಪುತ್ರರೊಂದಿಗೆಕೂಡಿ ಸಂತೋಷದಿಂದ ಯಜ್ಞವನ್ನು ಮಾಡು ||೭೨|| ಇಗೋ ಧರ್ಮಾತ್ಮನಾದ ಧರ್ಮನಂದನನ ಯಜ್ಞಾಶ್ವವೂ, ನಿನ್ನ ಯಾಗದ ಕುದುರೆಯೂ ಇಲ್ಲಿಯೇ ಇವೆ. ಇವೆರಡನ್ನೂ ನೀನೇ ತೆಗೆದುಕೊಂಡು ಕರ್ಮದೀಕ್ಷಿತನಾಗಿ ಯಜ್ಞವನ್ನು ಸಾಂಗವಾಗಿ ನೆರವೇರಿಸೆಂದು ನುಡಿದನು. ಈ ಮಾತು ಮಯೂರಧ್ವಜನ ಕಿವಿಗೆ ಬಿದ್ದೊಡನೆಯೇ ಕೃಷ್ಣಮೂರುತಿಯನ್ನು ಕುರಿತು ಎಲೈ ಮಹಾನುಭಾವನಾದ ಸ್ವಾಮಿಯೆ, ನಿನ್ನ ದರ್ಶನ ಲಾಭವು ನನಿಗುಂ

ಮರ್ಮಮಂಬಲ್ಲೆನಾನೆಲೆದೇವತನ್ನಬಿನ್ನಪವನವಧರಿಸೆಂದನು ||೭೩|| ವಿಶ್ವೇಶನಿನ್ನಶಾಶ್ವತಮೂರ್ತಿಯಂತಳೆವವಿಶ್ವಾಸದಿಂದ ನಿನಗೊಪ್ಪಿಸಿದೆನೀಗಳೀ | ನಶ್ವರಶರೀರಮಂಸಾಕದಂತಿರಲಿನ್ನುತಾಂಕರ್ಮಕರ್ತೃವಾಗಿ || ಅಶ್ವಮೇಧಂಗಳಂಮಾಡಿದೊಡೆ ನಗದೆನಿ | ನ್ನುಚ್ಛ್ವಾಸದಿಂದೊಗೆದಮಂತ್ರಾದಿಗಳ್ಮಾತ | ರಿಶ್ವಮಿತ್ರಜ್ವಾಲೆಪೊರೆಯೊಳಿರೆಭೇಷಜವನರಸುವರೆಹಿಮ ಕೆಂದನು ||೭೪|| ದೇವಚಿತ್ತೈಸೆನ್ನನಂದನಂನಿನ್ನೆಸಮ | ರಾವನಿಯೊಳಗಾದನಿಮ್ಮೊರ್ವರಂಬಿಟ್ಟು | ಭಾವದಿಂಬಂದನಿಲ್ಲಿಗೆತನ್ನ ಪುಣ್ಯದಿಂತನಗನುಗ್ರಹಿಸಲೆಂದು|| ನೀವೆಬಿಜಯಂಗೈದಿರದರಿಂದಸಲೆಧನ್ಯ | ರಾವುನರನಾರಾಯಣರ್ಕಳಂಕಂಡೆವಿ | ನ್ನಾವಕಲ್ಪಿತ ವೆನಗೆಧರ್ಮಜಂಮಾಡಿಬದುಕಲಿಮಖಂಗಳನೆಂದನು ||೭೫|| ಸುರನದಿಯತೋಯಮಿರೆನೀರಡಸಿಹಿಮಜಲಕೆ | ಪರಿವಂತೆನಿನ್ನ

ಹೊಂದಿ, ಮಖದೀಕ್ಷೆಯಂಕೊಂಬ–ಯಾಗದೀಕ್ಷೆಯಂ ವಹಿಸತಕ್ಕ, ದುರ್ಮತಿಗಳು–ಕೆಟ್ಟ ನಡತೆಯುಳ್ಳವರು, (ಅವಿವೇಕಿಗಳು) ಉಂಟೆ–ಇರುತ್ತಾರೆಯೆ, ನಾನು-ನಾನಾದರೊ, ಅದರಮರ್ಮಮಂ – ಆದರ ಗುಟ್ಟನ್ನು, ಬಲ್ಲೆನು-ಅರಿತಿರುವೆನು, ಎಲೆದೇವ– ಓ ಪ್ರಭುವೇ, ತನ್ನಬಿನ್ನಪವನು–ನನ್ನ ಪ್ರಾರ್ಥನೆಯನ್ನು, ಅವಧರಿಸು–ಕೇಳ.ವನಾಗು, ಎಂದನು-ಎಂದು ನುಡಿದನು ||೭೩||

ಟೀ|| ವಿಶ್ವೇಶ–ಲೋಕಾಧಿಪನಾದ ಸ್ವಾಮಿಯೆ, ನಿನ್ನ – ನಿನ್ನ ಸಂಬಂಧವಾದ, ಶಾಶ್ವತಮೂರ್ತಿಯಂ-ಸ್ಥಿರವಾದ ಆಕೃತಿಯನ್ನು, ತಳೆವ-ಹೊಂದುವ, ವಿಶ್ವಾಸದಿಂದ-ಅಕ್ಕರೆಯಿಂದ, ಈಗಳು-ಈಗಲಾದರೊ, ನಿನಿಗೆ–ನಿನಿಗಾಗಿಯೇ, ಈನಶ್ವರ ಶರೀರಮಂ–ಅಶಾಶ್ವತಮಾದ ಈ ನನ್ನ ಶರೀರವನ್ನು, ಒಪ್ಪಿಸಿದೆನು – ಇತ್ತೆನು, ಸಾಕು–ಆ ನುಡಿಯು ಸಾಕು, ಅಂತೆ – ಹಾಗೆ, ಇರಲಿ–ಇರತಕ್ಕದ್ದಾಗಲಿ, ತಾಂ–ನಾನಾದರೊ, ಕರ್ಮಕರ್ತೃವಾಗಿ–ಯಾಗದೀಕ್ಷಿತನಾಗಿ, ಅಶ್ವಮೇಧಂಗಳಂ–ಹಯಮೇಧಗಳನ್ನು, ಮಾಡಿದೊಡೆ–ಎಸಗಿದರೆ, ಎನಗೆ–ನನಿಗೆ, ಅದೆ–ಆ ಯಾಗವೆ, ನಿನ್ನಉಚ್ಛ್ವಾಸದಿಂದ–ನಿನ್ನ ಉಸಿರನ್ನು ಸೇದುವುದರ ದೆಸೆಯಿಂದ, ಒಗೆದ – ಉಂಟಾದ, ಮಂತ್ರಾದಿಗಳು – ಮಂತ್ರವೇ ಆದಿಯಾಗಿರತಕ್ಕವುಗಳು, ಮಾತರಿಶ್ವ - ಅಗ್ನಿಯು, ಮಿತ್ರ - ಸಖನಾದ ಯಜ್ಞೇಶ್ವರನ, ಜ್ವಾಲೆ–ತಾಪವು, ಪೊರೆಯೊಳ್–ಹತ್ತಿರದಲ್ಲಿ, ಇರೆ – ಇರಲಾಗಿ, ಹಿಮಕೆ–ತನುವಿಗೆ, ಭೇಷಜವನು - ಮದ್ದನ್ನು, ಅರಸುವರೆ–ಅನ್ವೇಷಣವಂ ಗೈವರೆ, ಎಂದನು–ಎಂಬುದಾಗಿ ನುಡಿದನು ||೭೪||

ಟೀ|| ದೇವ-ಎಲೈ ಪ್ರಭುವೆ, ಚಿತ್ತೈಸು–ಸಾವಧಾನದಿಂದ ನನ್ನ ಮಾತನ್ನಾಲಿಸು, ನಿನ್ನೆ–ನಿನ್ನೆಯ ದಿವಸ, ಸಮರಾವನಿಯೊಳ್–ರಣರಂಗದಲ್ಲಿ, ಒಳಗಾದ–ಲಭಿಸಿದ, ನಿಮ್ಮೊರ್ವರಂ – ನಿಮ್ಮಿಬ್ಬರನ್ನೂ, ಎನ್ನ–ನನ್ನ, ನಂದನಂ – ಕುವರನಾದ ತಾಮ್ರಕೇತುವು. ಬಿಟ್ಟು–ಬಿಟ್ಟುಬಂದ, ಭಾವದಿಂ-ಆಶಯದಿಂದ, (ಕಾರಣದಿಂದೆ) ಇಲ್ಲಿಗೆ–ಈ ಎಡೆಗೆ, ಬಂದನು–ಬಂದವನಾದನು, ನೀವೆ–ಕೃಷ್ಣಾರ್ಜುನರಾದ ನೀವೆ, ಇಲ್ಲಿಗೆ–ನನ್ನ ನಗರಿಗೆ, ತನ್ನಪುಣ್ಯದಿಂ–ನನ್ನ ಸತ್ಕಾರ್ಯದ ಫಲಗಳಿಂದ, ತನಿಗೆ–ನನಿಗೆ, ಅನುಗ್ರಹಿಸಲೆಂದು, ಒಳ್ಳಿತನ್ನೆಸಗಲೋಸುಗ, ಬಿಜಯಂಗೈದಿರಿ–ಬಂದಿರಿ, ಅದರಿಂದ–ನೀವು ಬಂದ ನಿಮಿತ್ತದಿಂದ, ಅವು – ನಾವಾದರೊ, ಸಲೆ-ಹೆಚ್ಚಾಗಿ, ಧನ್ಯರು - ಕೃತಕೃತ್ಯರು, ನರನಾರಾಯಣರ್ಕಳಂ – ನರನಾರಾಯಣಸ್ವರೂಪರಾದ ನಿಮ್ಮೊರ್ವರನ್ನೂ, ಕಂಡೆವು–ಈಕ್ಷಿಸಿದೆವು, ಎನಗೆ–ನನಿಗಾದರೊ, ಇನ್ನು–ಮುಂದೆ, ಆವಕಲ್ಪಿತವು–ಏನುತಾನೆ ಆಗಬೇಕಾಗಿದೆ, ಧರ್ಮಜನು–ಧರ್ಮರಾಯನು, ಮಖಗಳನು–ಯಾಗಗಳನ್ನು, ಮಾಡಿ–ಎಸಗಿ, ಬದುಕಲಿ – ಬದುಕಿರಲಿ, ಎಂದನು–ಎಂಬುದಾಗಿ ಮಯೂರಧ್ವಜನು ಶ್ರೀ ಕೃಷ್ಣಸ್ವಾಮಿಯೊಂದಿಗೆ ನುಡಿದವನಾದನು ||೭೫||

ಟೀ|| ಸುರನದಿಯ–ದೇವಗಂಗೆಯ, ತೋಯಂ – ನೀರು, ಇರೆ–ಇರಲಾಗಿ, ನೀರಡಿಸಿ – ದಾಹವನ್ನೈದಿ, ಹಿಮಜಲಕೆ

ಟಾದ ಬಳಿಕ ಚರ್ಮ ಮತ್ತು ಕೊಂಬುಗಳನ್ನು ಧರಿಸಿ ದೀಕ್ಷಾಬದ್ಧನಾಗಿ ಯಾಗವಂ ಮಾಡುವೆನೆಂದು ಬ್ಬುಗಿಸುವ ಮೂಢಾತ್ಮನಲ್ಲವೆ||೭೩|| ಅಗ್ನಿಯನ್ನು ಹತ್ತಿರದಲ್ಲಿರಿಸಿಕೊಂಡು ಹಿಮದ ಕೊರತಕ್ಕೆ ಹೆದರಿಕೊಳ್ಳಬೇಕೇ? ಮೋಕ್ಷದಾಯಕನೂ ಲೋಕೈಕನಾಯಕನೂ ಆಗಿರುವ ಮಹಾನುಭಾವನಾದ ನೀನೇ ನನ್ನೆದುರಿಗೆ ನಿಂತುಕೊಂಡಿರಲು ನನಿಗೆ ಯಾಗದ ಗೊಡವೆ ಏತಕ್ಕೆ ||೭೪|| ಎಲೈ ಕೃಷ್ಣಭಗವಂತನೆ ನನ್ನ ನುಡಿಗಳನ್ನಾಲಿಸು ಈ ನಶ್ವರವಾದ ನನ್ನ ದೇಹವನ್ನು ನಿನ್ನ ಪಾದಾರವಿಂದಗಳಲ್ಲಿಯೇ ಒಪ್ಪಿಸಿರುವೆನು ಈ ನನ್ನ ದೇಹವನ್ನು ನಿನ್ನಲ್ಲಿಯೇ ಲೀನವಾಗುವಂತೆ ಮಾಡು ನಿನ್ನೆಯದಿನ ನನ್ನ ಮಗನಾದ ತಾಮ್ರಧ್ವಜನು ನಿಮ್ಮೆಲ್ಲರನ್ನೂ ಮೂರ್ಛೆಗೊಳಿಸಿ ಬಂದರೂ ಕೂಡ ಅದನ್ನು ಲೆಕ್ಕಿಸದೆ ಭಕ್ತರಕ್ಷಣಾಧುರೀಣನಾದ ನೀನು ಇಲ್ಲಿಗೆ ಬಂದು ನಿನ್ನ ಸಂದರ್ಶನವನ್ನಿತ್ತಿರುವೆಯಾದ ಕಾರಣ ಲೋಕದಲ್ಲಿ ನನಿಗಿಂತಲೂ ಧನ್ಯರು ಮತ್ತೆ ಯಾರಿರುವರು? ನರನಾರಾಯಣರಾದ ನಿಮ್ಮೊರ್ವರ ದರ್ಶನಲಾಭವಾದ ಮಾತ್ರಕ್ಕೆ ನನಿಗೆ ಸಹಸ್ರ ಯಾಗ ಫಲಕ್ಕಿಂತಲೂ ಇಮ್ಮಡಿಯಾದ ಪುಣ್ಯಪ್ರಾಪ್ತಿಯಾಗಿರುವಾಗ ಇನ್ನು ಬೇರೆ ಯಜ್ಞವನ್ನು ಮಾಡಬೇಕೆಂಬ ಹಂಬಲೇ ನನಿಗಿಲ್ಲವು ಧರ್ಮಾಧೀಶನಾದ ಧರ್ಮತನಯನೇ ಈ ಅಶ್ವಂಗಳೆರಡನ್ನೂ ತೆಗೆದುಕೊಂಡು ಯಾಗವಂ ಮಾಡಿ ಸುಖದಿಂದಿರಲಿ ||೭೫|| ಪುಣ್ಯಪ್ರದವಾದ ದೇವನದೀತೀರ್ಥವು ಲಭಿಸಿದರೆ ಸಾಧಾರಣವಾದ

## ಇಪ್ಪತ್ತಾರನೆಯ ಸಂಧಿ.

ದರುಶನಮಿರ್ದುಮಹಾ | ಧ್ವರಕೆಳಸುವವನಲ್ಲತನ್ನನುಂತನ್ನಸತಿಸುತರನುಂತನ್ನೊಳಿರ್ದ || ತುರಗಂಗಳಂತನ್ನಯಜ್ಞಮಂ ಯಜ್ಞೋಪ | ಕರಣಂಗಳಂತನ್ನರಾಜ್ಯಮಂತನ್ನನುಂ | ದಿರದಸರ್ವಸ್ವಮಂನಿನ್ನಪದಕರ್ಪಿಸಿದೆನೆಂದವಂಕೈಮುಗಿದನು ||೭೬|| ಇಂತೆಂದುಭೂವರಂನುಡಿಯೆಹರುಷಿತನಾಗಿ | ಕುಂತೀಸುತಂಗವನಭಕ್ತಿಯಂತೋರಿಸುತ | ನಂತರದೊಳಾನೃಪನನಗರದೊಳ್ಮೂರುದಿನಮಿರ್ದುನಿಜಸೇನೆಬರಲು || ದಂತಿಪುರಕಲ್ಲಿಯಸಮಸ್ತವಸ್ತುಗಳೈದುವಂತೆನೇಮಿಸಿಮಯೂರಧ್ವಜಂಸಹಿತನಡೆ | ದಂತುರಗಮೆರಡನುಂಬಿಡಿಸಿಮುಂದಕೆದೇವಪುರದಲಕ್ಷ್ಮೀಕಾಂತನು ||೭೭||

ಸಂಧಿ ೨೬ ಕ್ಕೆ ಪದ್ಯ ೧,೪೪೯ ಕ್ಕಂ ಮಂಗಳಮಸ್ತು.

---

ಮಂಜಿನಿಂದ ಕೂಡಿದ ಉದಕಕೆ, (ತಣ್ಣೀರಿಗೆ) ಪರಿವಂತೆ – ತೆರಳುವ ಬಗೆಯಾಗಿ, ನಿನ್ನ-ನಿನ್ನ ಸಂಬಂಧವಾದ, ದರುಶನಂ-ದೃಷ್ಟಿಯು, ಇರ್ದುಂ-ಇದ್ದೂ ಕೂಡ, ಈಮಹಾಧ್ವರಕೆ – ಈ ದೊಡ್ಡ ಯಾಗಕ್ಕೆ, ಎಳಸುವನನು-ಆಶಿಸುವನು, ಅಲ್ಲ – ಅಲ್ಲವು, ತನ್ನನುಂ-ನನ್ನ ದೇಹವನ್ನೂ, ತನ್ನ-ಸ್ವಕೀಯರಾದ, ಸತಿಸುತರನುಂ-ದಾರಾಪುತ್ರರನ್ನೂ, ತನ್ನೊಳ್-ನನ್ನಲ್ಲಿ, ಇರ್ದ-ಇದ್ದಂಥ, ತುರಗಂಗಳಂ-ಅಶ್ವಂಗಳನ್ನೂ, ತನ್ನ-ನನ್ನದಾದ, ಯಜ್ಞಮಂ-ಕ್ರತುವನ್ನೂ, ಯಜ್ಞೋಪಕರಣಂಗಳಂ-ಯಾಗಕ್ಕೆ ಸಲಕರಣೆಯಾಗಿದ್ದ ಪದಾರ್ಥಗಳನ್ನೂ, ನಿನ್ನ-ನಿನ್ನದಾದ, ಪದಕೆ-ಅಡಿಗಳಿಗೆ, ಅರ್ಪಿಸಿದೆನು-ಒಪ್ಪಿಸಿಬಿಟ್ಟಿದ್ದೇನೆ, ಎಂದು-ಎಂಬತೆರನಾಗಿ, ಅವಂ-ಆ ಮಯೂರಧ್ವಜರಾಯನು, ಕೈಮುಗಿದನು-ವಂದಿಸಿದನು ||೭೬||

ಟೀ|| ಭೂವರಂ-ರಾಜಶ್ರೇಷ್ಠನಾದ ಮಯೂರಧ್ವಜನು, ಇಂತು-ಈ ಬಗೆಯಾಗಿ, ನುಡಿಯೆ-ಪೇಳಲಾಗಿ, ಹರುಷಿತನಾಗಿ-ಆನಂದವನ್ನೈದಿ, ಅವನಭಕ್ತಿಯನು-ಆ ಮಯೂರಧ್ವಜನಿಗೆ ತನ್ನಲ್ಲಿರುವ ನಂಬಿಕೆಯನ್ನು ತೋರ್ಪಡಿಸುತ್ತ, ಅನಂತರದೊಳು-ತರುವಾಯ, ಆನೃಪನಗರದೊಳು-ಆ ರಾಜೇಂದ್ರನ ಪಟ್ಟಣದಲ್ಲಿ, ಮೂರುದಿನಂ-ಮೂರು ದಿನಗಳು, ಇರ್ದು-ಇದ್ದವನಾಗಿ, ನಿಜ – ಸ್ವಕೀಯವಾದ, ಸೇನೆ-ಬಲವು, ಬರಲು – ಬರಲಾಗಿ, ಅಲ್ಲಿನ – ಆ ರತ್ನಪುರಿಯಲ್ಲಿರತಕ್ಕ, ಸಮಸ್ತವಸ್ತುಗಳು-ಪುರುಳ್ಗಳೆಲ್ಲಾ, (ಸಾಮಾನುಗಳೆಲ್ಲವೂ) ದಂತಿಪುರಿಗೆ-ಗಜನಗರಕ್ಕೆ, ಐದುವಂತೆ-ಹೋಗಿ ಸೇರುವರೀತಿಯಾಗಿ, ನೇಮಿಸಿ-ನಿಷ್ಕರ್ಷೆಯಂ ಮಾಡಿ, ತುರಗಮೆರಡನು-ಎರಡು ಹಯಗಳನ್ನೂ, ಬಿಡಿಸಿ-ಯಥೇಚ್ಛವಾಗಿ ಹೋಗುವಂತೆ ಮಾಡಿ, ದೇವಪುರದ-ದೇವಪುರವನ್ನೇ ವಾಸಸ್ಥಾನವಾಗಿವುಳ್ಳ, ಲಕ್ಷ್ಮೀಕಾಂತನು – ಶ್ರಿಯಃಪತಿಯಾದ ಕೃಷ್ಣಸ್ವಾಮಿಯು, ಮಯೂರಧ್ವಜಸಹಿತ-ಮಯೂರಧ್ವಜನನ್ನು ಜೊತೆನಾಡಿಕೊಂಡು, ಮುಂದಕೆನಡೆದಂ-ಮುಂದಕ್ಕೆ ಪ್ರಯಾಣವಂ ಬೆಳಸಿದವನಾದನು ||೭೭||

ಟೀಕಾತಾತ್ಪರ್ಯ ಸಹಿತ ಜೈಮಿನಿಭಾರತದೊಳು ಇಪ್ಪತ್ತಾರನೆಯ ಸಂಧಿಯು ಸಮಾಪ್ತಮಾದುದು.

---

ಹಿಮದ ನೀರಿಗೆ ಮನಸ್ಸು ಎಳೆಯುವುದು ಹೇಗೆ ಅಸಂಭವವೊ ಹಾಗೆಯೇ ಭಕ್ತರ ದುರಿತಂಗಳೆಂಬ ಕತ್ತಲೆಗೆ ಸೂರ್ಯಪ್ರಾಯನಾದ ನಿನ್ನ ದರುಶನದಿಂದ ನಾನು ಧನ್ಯನಾಗಿರುವೆನಲ್ಲದೆ ನನಿಗೆ ಪುನಃ ಯಾಗಾದಿಗಳಂ ಮಾಡಬೇಕೆಂಬ ಅಭಿಲಾಷೆಯೇ ಇಲ್ಲವು ಎಲೈ ಭಗವಂತನೆ ನನ್ನ ಪತ್ನೀಪುತ್ರರಾದ ಕುಮುದ್ವತಿ ತಾಮ್ರಧ್ವಜರೂ ನನ್ನಲ್ಲಿರುವ ತುರಂಗಮಂಗಳೂ ನಾನು ಮಾಡಬೇಕೆಂದು ಜಾಗಿಸಿದ್ದ ಯಾಗವೂ ಯಾಗೋಪಕರಣಂಗಳೂ ನನ್ನ ರಾಜ್ಯವೂ ನನ್ನ ಕೋಶವೂ, ನನ್ನ ಸರ್ವಸ್ವವೂ ನಾನೂ ಸಹ ಇಗೋ ನಿನ್ನ ಸ್ವಾಧೀನಂಗಳೇ ಹೊರತು ಮತ್ತೆ ಬೇರೆಯಿಲ್ಲವೆಂದು ಆನಂದಾತಿಶಯದಿಂದ ನುಡಿಯುತ್ತಾ ಕೃಷ್ಣಸ್ವಾಮಿಯ ಪದಾರವಿಂದಗಳಲ್ಲಿ ತಲೆಯನ್ನಿಟ್ಟು ಮುಕುಳಿತಕರಸಂಪುಟನಾಗಿರುವ ರಾಜೇಂದ್ರನಾದ ಮಯೂರಧ್ವಜನನ್ನು ನೋಡುತ್ತಲಿರುವ ಕೃಷ್ಣಸ್ವಾಮಿಯ ಆನಂದಕ್ಕೆ ಪಾರವೇ ಇರಲಿಲ್ಲವು ||೭೬|| ಎಲೈ ಜನಮೇಜಯರಾಯನೆ ಕೇಳು ಆ ಬಳಿಕ ಕೃಷ್ಣಸ್ವಾಮಿಯು ಮಯೂರಧ್ವಜ ಮಹಾರಾಯನ ಪರಮ ಭಕ್ತಿಯನ್ನು ಅರ್ಜುನನಿಗೆ ತೋರಿಸಿದವನಾಗಿ ಕೃಷ್ಣಾರ್ಜುನರೀರ್ವರೂ ಮಯೂರಧ್ವಜನ ರಾಜಧಾನಿಯಾದ ರತ್ನಪುರಿಯೊಳಗೆ ಮೂರು ದಿನಗಳವರೆಗೂ ಸುಖದಿಂದ ಕಾಲವಂ ಕಳೆಯುತ್ತಲಿದ್ದರು ಇಷ್ಟು ಕಾಲಕ್ಕೆ ತಮ್ಮ ಸೈನ್ಯವೆಲ್ಲಾ ಬಂದೊದಗಲಾಗಿ ಕೃಷ್ಣಮೂರುತಿಯಾದರೊ, ಮಯೂರಧ್ವಜನು ಸಮರ್ಪಿಸಿರತಕ್ಕ ಸಕಲ ವಸ್ತುಗಳನ್ನೂ ತೆಗೆದುಕೊಂಡು ಹೋಗಿ ಹಸ್ತಿನಾವತಿಯಲ್ಲಿರುವ ಧರ್ಮರಾಯನಿಗೆ ತಲುಪಿಸಬೇಕೆಂದು ಅಪ್ಪಣೆಯನ್ನಿತ್ತವನಾದನು. ತರುವಾಯ ದೇವಪುರನಿವಾಸಿಯೂ ಲಕ್ಷ್ಮೀಪತಿಯೂ ಪರಮಪಾವನನೂ ಆದ ಕೃಷ್ಣಸ್ವಾಮಿಯು ಯಾಗದ ಕುದುರೆಗಳನ್ನು ಮುಂದೆ ಬಿಟ್ಟವನಾಗಿ ಬೆಂಗಾವಲಿಗಾಗಿ ಹೊರಟು ಸೇನಾರ್ಣವದಿಂದ ಕೂಡಿರುವ ಧನಂಜಯನೊಂದಿಗೆ ಭಕ್ತಾಗ್ರೇಸರನಾದ ಮಯೂರಧ್ವಜ ಸಹಿತನಾಗಿ ರತ್ನಪುರಿಯನ್ನು ಬಿಟ್ಟು ತಾನೂ ಮುಂದಕ್ಕೆ ಪ್ರಯಾಣವಂ ಬೆಳಸಿದನು ||೭೭||

ಟೀಕಾತಾತ್ಪರ್ಯ ಸಹಿತ ಜೈಮಿನಿಭಾರತದೊಳು ಇಪ್ಪತ್ತಾರನೆಯ ಸಂಧಿಯು ಸಮಾಪ್ತಮಾದುದು.

## ಇಪ್ಪತ್ತೇಳನೆಯ ಸಂಧಿ.

ಸೂಚನೆ॥ ಹರಿಗಳಂತಡೆಯಲ್ಕೆ ಸಾರಸ್ವತಾಖ್ಯಪುರ | ವರದೊಳಂತಕನವೃತ್ತಾಂತಮಂ ಕೇಳ್ದು ಸಂ | ಗರದೊಳಚ್ಯು
ತನಮತದಿಂ ವೀರವರ್ಮನಂ ಜಯಿಸಿದಂ ಕಲಿಪಾರ್ಥನು ||

ಸೋಮಕುಲತಿಲಕಜನಮೇಜಯನರೇಂದ್ರ ಕೇಳ್ | ಆ ಮಯೂರಧ್ವಜಂ ತನ್ನ ನಗರದೊಳತಿ | ಪ್ರೇಮದಿಂ ಮೂರು ದಿನವರ್ಜುನ ಮುರಾರಿಗಳನಿರಿಸಿಕೊಂಡಿರ್ದುಬಳಿಕ || ಭೀಮಾನುಜನ ಕೂಡೆ ಪೊರಮಟ್ಟನನುಸಾಲ್ವ | ಕಾಮ ಕರ್ಣಜಬಭ್ರು

---

ಇಪ್ಪತ್ತೇಳನೆಯ ಸಂಧಿ ಪ್ರಾರಂಭವು.

ಸೂಚನೆ॥ ಕಲಿ–ಶೂರನಾದ, ಪಾರ್ಥನು–ಫಲುಗುಣನು, (ವೀರವರ್ಮನು) ಹರಿಗಳಂ–ಯಜ್ಞಾಶ್ವಂಗಳನ್ನು, ತಡೆಯಲ್ಕೆ–ಕಟ್ಟಿಹಾಕಲು, ಅಂತಕನ–ಯಮಧರ್ಮರಾಯನ, ವೃತ್ತಾಂತಮಂ–ವಾರ್ತೆಯನ್ನು, ಸಾರಸ್ವತಾಖ್ಯಪುರದೊಳಗೆ–ಸಾರಸ್ವತನಾಮಕವಾದ ಪಟ್ಟಣದಲ್ಲಿ, ಕೇಳ್ದು–ಕೇಳಿದವನಾಗಿ, ವೀರವರ್ಮನಂ–ವೀರವರ್ಮನೆಂಬ ರಾಜನನ್ನು, ಸಂಗರದೊಳ್–ರಣದಲ್ಲಿ, ಅಚ್ಯುತನ–ಕೃಷ್ಣಸ್ವಾಮಿಯ, ಮತದಿಂ–ಆಶಯವನ್ನನುಸರಿಸಿ, ಜಯಿಸಿದಂ–ಗೆದ್ದವನಾದನು.

ಅ॥ ವಿ॥ ಹರಿ–ಇದು ನಾನಾರ್ಥಪದವಾಗಿದೆ, ಕಪ್ಪೆ, ಕುದುರೆ, ಯಮ, ಗಾಳಿ, ಚಂದ್ರ, ವಿಷ್ಣು, ಸಿಂಹ, ಗಿಳಿ, ಕೋತಿ, ಅಶ್ವತ್ಥವೃಕ್ಷ ಮೊದಲಾದ ಅರ್ಥಗಳಿಂದ ಕೂಡಿರತಕ್ಕ ಪದವಾಗಿದೆ, ಕಲಿ–ಪರಾಕ್ರಮಿ, ಕಲಿಯೆಂಬಯುಗ, ಕಲಿಪುರುಷನ ಹೆಸರು, ಕಲಹ (ಇವೆಲ್ಲಾ ನಾಮಪದದಲ್ಲಿ ಅರ್ಥಗಳು) ಕಲಿ–ಕಲಿತುಕೊಳ್ಳುವುದು (ಕ್ರಿ.)

ಸಾರಸ್ವತಾಖ್ಯಪುರವೆಂಬ ಹೆಸರು ಬರಲು ಕಾರಣ.

ಪೂರ್ವದಲ್ಲಿ ದಧೀಚಿಯೆಂಬ ಮುನಿಯೋರ್ವನು ಸರಸ್ವತೀನದಿಯ ತಡಿಯಲ್ಲಿ ಕುಳಿತು ದೇವಋಷಿಗಳಿಗೂ ತಮ್ಮ ಪಿತೃಗಳಿಗೂ ತರ್ಪಣವನ್ನು ಕೊಡುತ್ತಾ ಕುಳಿತಿದ್ದನು, ಆ ಕಾಲಕ್ಕೆ ಸರಿಯಾಗಿ "ಅಲಂಬುಸಾ" ಎಂಬ ಅಪ್ಸರಾಂಗನೆಯು ಬಂದು ಸರಸ್ವತೀನದಿಯಲ್ಲಿ ಸ್ನಾನಮಾಡತೊಡಗಿದಳು ದಧೀಚಿಯು ಇವಳ ಸೌಂದರ್ಯಪಾಶಕ್ಕೆ ಸಿಕ್ಕಿದನಾದಕಾರಣ ವೀರ್ಯಸ್ಖಲನೆಯಾಗಿ ಆ ನದೀಜಲದೊಳಗೆ ಬಿದ್ದು ಹೋಯಿತು ಸರಸ್ವತೀನದಿಯಾದರೊ ಈ ವೀರ್ಯವನ್ನು ನೋಡಿ ಅಸಾಧಾರಣವಾದ ಇದನ್ನು ತಾನು ಉಪೇಕ್ಷೆಮಾಡುವುದು ಸರಿಯಲ್ಲವೆಂದು ಬಗೆದು ತನ್ನಲ್ಲಿಯೆ ಇಟ್ಟುಕೊಂಡು ಒಬ್ಬ ಮಗನನ್ನು ಹೆತ್ತು ಆ ಶಿಶುವನ್ನು ದಧೀಚಿ ಮಹರ್ಷಿಗೆ ಒಪ್ಪಿಸಿದಳು ಮುನಿವರ್ಯನಾದರೊ ಸರಸ್ವತೀನದಿಯಿಂದುತ್ಪನ್ನನಾದ ಆ ಬಾಲಕನಿಗೆ ಸಾರಸ್ವತನೆಂಬುದಾಗಿ ನಾಮಕರಣವನ್ನು ಮಾಡಿದನು ಸಾರಸ್ವತಮುನಿಯ ಅನುಗ್ರಹದಿಂದಾದ ಪಟ್ಟಣಕ್ಕೆ ಸಾರಸ್ವತ ನಗರವೆಂದು ಹೆಸರಾಯಿತು.

ವೀರವರ್ಮನೆಂಬ ಹೆಸರು ಬರಲು ಕಾರಣ.

ಯಮನಿಂದ ಕೊಡಲ್ಪಟ್ಟ ವಜ್ರಕವಚವುಳ್ಳವನಾದ್ದರಿಂದ ವೀರವರ್ಮನೆಂದು ಹೆಸರು ಬಂದಿದೆ, ಅಸ್ತ್ರಗಳಿಂದಲೂ ಕೂಡ ಇದನ್ನು ಭೇದಿಸಲು ಆಗುವುದಿಲ್ಲ.

ಟೀ॥ ಸೋಮಕುಲತಿಲಕ–ಹಿಮಕರಾನ್ವಯಕ್ಕೆ ತಿಲಕಪ್ರಾಯನಾದ, ಜನಮೇಜಯನರೇಂದ್ರ–ಜನಮೇಜಯನೆಂಬ ದೊರೆಯೇ, ಕೇಳು–ಲಾಲಿಸು, ಆ ಮಯೂರಧ್ವಜಂ–ಮಯೂರಧ್ವಜನೆಂಬ ರತ್ನಪುರಿರಾಜನು, ಅರ್ಜುನ ಮುರಾರಿಗಳನು–ಫಲುಗುಣ ಮತ್ತು ಕೃಷ್ಣಮೂರುತಿಯರನ್ನು ಸಹ, ಅತಿ ಪ್ರೇಮದಿಂದ–ಹೆಚ್ಚಾದ ವಿಶ್ವಾಸದಿಂದ, ಮೂರುದಿನಂ–ಮೂರುದಿನ

---

ಇಪ್ಪತ್ತೇಳನೆಯ ಸಂಧಿಯ ಕಥಾಸಾರವು.

ಅನಂತರದಲ್ಲಿ ಜೈಮಿನಿಮುನಿನಾಥನು ಹಿಮಕರಾನ್ವಯಕ್ಕೆ ರತ್ನಪ್ರಾಯನಾದ ಜನಮೇಜಯನಂ ಕುರಿತು ಇಂತೆಂದನು, ಕೇಳೈ ಜನಮೇಜಯ ಮಹೀವಲ್ಲಭನೆ, ಆ ಬಳಿಕ ರತ್ನಪುರಿ ಎಂಬ ನಗರಕ್ಕೆ ರತ್ನದಂತಿರುವ ಮಯೂರಧ್ವಜ ಮಹಾರಾಯನು ತನ್ನ ಪಟ್ಟಣದೊಳಗೆ ಕೃಷ್ಣಮೂರುತಿಯನ್ನೂ ಧನಂಜಯನನ್ನೂ ಸಹ ಪ್ರೀತ್ಯತಿಶಯದಿಂದ ಮೂರು ದಿನಗಳ ಪರ್ಯಂತವೂ ಇರಿಸಿಕೊಂಡಿದ್ದನು. ಕೃಷ್ಣಾರ್ಜುನರಾದರೊ, ಮಯೂರಧ್ವಜನ ದೃಢಭಕ್ತಿ ವಿಶ್ವಾಸಮರ್ಯಾದೆಗಳಿಗೆ ಪರಮಸಂತುಷ್ಟರಾದರು. ಅನಂತರ ಯಜ್ಞಾಶ್ವಂಗಳನ್ನು ಮುಂದುಮಾಡಿಕೊಂಡು ಅರ್ಜುನ ಕೃಷ್ಣರೀರ್ವರೂ ರತ್ನಪುರಿಯಿಂದ ಪ್ರಯಾಣವಂ ಬೆಳೆಸಿದರು. ಆಗ ಮಯೂರಧ್ವಜನೂ ಕೂಡ ತನ್ನ ಚತುರಂಗ ಬಲವನ್ನು ಜೊತೆಮಾಡಿಕೊಂಡು ನರ ನಾರಾಯಣರಾದ ಅರ್ಜುನ ಕೃಷ್ಣರನ್ನು ಹಿಂಬಾಲಿಸಿದನು. ಸಾಲ್ವಾನುಜ, ಮನ್ಮಥ, ವೃಷಕೇತು, ಬಭ್ರುವಾಹನರು, ಸುವೇಗ, ನೀಲಧ್ವಜ, ಹಂಸ

ವಾಹನಸುವೇಗನಿ | ಸ್ಸೀಮನೀಲಧ್ವಜಮರಾಳಧ್ವಜಾದಿಗಳ್ಪಡೆವೆರಸಿನಡೆದರೊಡನೆ ‖ ೧ ‖ ತುಂಬಿತುಮಹೀಮಂಡಲವನತುಲ ಸೇನೆನಡೆ | ಗೊಂಬುದಿನ್ನೆಲ್ಲಿಗೆಮಹಾದೇವಕೌತುಕಮಿ | ದೆಂಬತೆರನಾಗೆಮುಂದಕೆತಳೆವಕುದುರೆಗಳಕೂಡೆಸೌರಾಷ್ಟ್ರಕಾಗಿ ‖ ಬೆಂಬಿಡದೆಬಂದುದರ್ಜುನನಬಲಮಲ್ಲಿಸುಖ | ದಿಂಬಾಳ್ವಭೂವರಂವೀರವರ್ಮಂಜನಾ | ಡಂಬರದೊಳಿರ್ದಂಸಾರಸ್ವತಾಖ್ಯ ನಗರದೊಳತಿವಿಲಾಸದಿಂದ ‖ ೨ ‖ ನೆರೆನಾಲ್ಕುಚರಣದಿಂಧರ್ಮಮಡಿಯಿಡುತಿಹುದು | ಮರೆದುಕನಸಿನೊಳಾದೊಡಂಪಾತ ಕದಕೃತ್ಯ | ಕೆಂಗುವರಿಲ್ಲಪುರುಷಸ್ತ್ರೀಕದಂಬದೊಳ್ವ್ಯಾಧಿಗಳಪೀಡೆಗಳನು ‖ ಅರಿಯರಾರುಂದುಃಖಶೋಕಸಂತಾಪದಿಂ | ಮರುಗು ವವರಂಕಾಣೆನಾನೃಪನರಾಷ್ಟ್ರದೊ | ಳ್ಸೆರೆಯಾಗಿವೈವಸ್ವತಂಮನೆಯಳಿಯತನದೋರುತಿಹಂಭೂವರಂಗೆ ‖ ೩ ‖ ಆವೀರ ವರ್ಮನೀಪಾಂಡವಂಕುದುರೆಗಳ್ಕಾವಪಡೆಸಹಿತನಿಜರಾಷ್ಟ್ರಕ್ಕೆತಂದನೆಂ | ಬೀವಾರ್ತೆಯಂಕೇಳ್ದುನಗುತಖತಿಗೊಂಡುಕೃಷ್ಣಾ

---

ಗಳ ವರೆಗೂ, ತನ್ನ ನಗರದೊಳು–ತನ್ನ ಪಟ್ಟಣದೊಳಗೆ, ಇರಿಸಿಕೊಂಡು–ಉಪಚರಿಸಿಕೊಂಡು, ಇರ್ದಬಳಿಕ–ಇದ್ದ ತರುವಾಯ, ಭೀಮಾನುಜನ ಕೂಡೆ–ಭೀಮಸೇನನ ತಮ್ಮನಾದ ಫಲುಗುಣನೊಂದಿಗೆ, ಪೊರಮಟ್ಟನು-ಹೊರಟವನಾದನು, ಅನುಸಾಲ್ವ-ಸಾಲ್ವನ ತಮ್ಮನು, ಕಾಮ–ಮನ್ಮಥನು, ಕರ್ಣಜ–ವೃಷಧ್ವಜನು, ಬಭ್ರುವಾಹನ-ಚಿತ್ರಾಂಗದೆಯಲ್ಲಿ ಅರ್ಜುನನಿಂದ ಹುಟ್ಟಿದ ನಕುಲಧ್ವಜನು, ಸುವೇಗ-ಯೌವನಾಶ್ವನ ಕುವರನು, ನಿಸ್ಸೀಮ–ಸಾಹಸಿಗಳಾದ, ನೀಲಧ್ವಜ ಮರಾಳಧ್ವಜಾದಿಗಳ್–ನೀಲಧ್ವಜ ಮರಾಳಧ್ವಜರೇ ಮೊದಲಾದ ರಾಜಾಗ್ರಣಿಗಳೆಲ್ಲರೂ, ಪಡೆವೆರಸಿ-ಸೇನಾಜಲಧಿಯಿಂದೊಡಗೂಡಿ, ಒಡನೆ–ಪಾರ್ಥನ ಹಿಂದೆಯೇ, ನಡೆದರು–ಹೊರಟವರಾದರು.

ಅ‖ ವಿ‖ ನರೇಂದ್ರ (ಗು. ಸ) ಭೀಮ-ಧರ್ಮರಾಯನ ತಮ್ಮ, ಹೆದರಿಕೆಯನ್ನುಂಟುಮಾಡುವುದು, ದಮಯಂತಿಯ ತಂದೆಯ ಹೆಸರು. ‖೧‖

ಟೀ‖ ಅತುಳ-ಅತ್ಯಧಿಕವಾದ, ಸೇನೆ–ಬಲವು, ಮಹೀಮಂಡಲವನು–ಭೂ ಪ್ರದೇಶವನ್ನೆಲ್ಲಾ, ತುಂಬಿತು–ವ್ಯಾಪಿಸಿ ಕೊಂಡಿತು, ಇನ್ನೆಲ್ಲಿಗೆ-ಇನ್ನು ಯಾವ ಸ್ಥಳಕ್ಕೆ, ನಡೆಗೊಂಬುದು–ಹೋಗಲಾದೀತು, ಮಹಾದೇವ-ಪರಮೇಶ್ವರನೆ, ಇದು–ಸೈನ್ಯವು ಈ ಬಗೆಯಾಗಿ ಆವರಿಸಿಕೊಂಡಿರತಕ್ಕ, ಕೌತುಕಂ-ಆಚ್ಚರಿಯು, ಎಂಬ-ಎನ್ನತಕ್ಕ, ತೆರನಾಗಿ– ವಿಧಾನದಿಂದ, ಮುಂದಕೆ–ಮುಂದ ಮುಂದಕ್ಕೆ, ತಳೆವ–ಹೊರಡುವ, ಕುದುರೆಗಳ ಕೂಡೆ–ಅಶ್ವಂಗಳೊಂದಿಗೆ, ಅರ್ಜುನನ ಬಲಂ–ಫಲುಗುಣನ ಸೈನ್ಯವು, ಬೆಂಬಿಡದೆ–ಹಿಂಬಾಲಿಸಿಕೊಂಡೇ, ಸೌರಾಷ್ಟ್ರಕಾಗಿ–ಸೌರಾಷ್ಟ್ರವೆಂಬ ನಾಡನ್ನು ಕುರಿತು, ಬಂದುದು-ಬಂದು ಬಿಟ್ಟಿತು, ಅಲ್ಲಿ-ಆ ಸೌರಾಷ್ಟ್ರದೇಶದಲ್ಲಿರತಕ್ಕ, ಸಾರಸ್ವತಾಖ್ಯನಗರದೊಳು - ಸಾರಸ್ವತವೆಂಬ ಪಟ್ಟಣದೊಳಗೆ, ಸುಖದಿಂದ- ಸೌಖ್ಯವಾಗಿ, ಬಾಳ್ವ-ರಾಜ್ಯಪರಿಪಾಲನೆಯಂ ಗೆಯ್ಯುವ, ವೀರವರ್ಮಭೂವರಂ - ವೀರವರ್ಮನೆಂಬರಸು, ಜನಾಡಂಬರದೊಳು – ಜನಸಮುದಾಯದಲ್ಲಿ, ಅತಿ ವಿಲಾಸದಿಂದ–ಹೆಚ್ಚಾದ ಸಂಭ್ರಮದಿಂದ ಕೂಡಿ, ಇರ್ದಪಂ–ಇದ್ದಾನೆ ‖೨‖

ಟೀ‖ ಧರ್ಮಂ–ಧರ್ಮವಾದರೊ, ನಾಲ್ಕುಚರಣದಿಂದ– ನಾಲ್ಕುಹೆಜ್ಜೆಗಳಿಂದಲೂ, ನೆರೆ– ಚನ್ನಾಗಿ, ಅಡಿಯಿಡುತಿಹುದು-ಹೆಜ್ಜೆಗಳನ್ನಿಡುತ್ತಲಿರವುದು, ಪುರುಷಸ್ತ್ರೀ ಕದಂಬದೊಳು–ಅಲ್ಲಿ ವಾಸಮಾಡುವ ಗಂಡಸರು ಹೆಂಗಸರು ಇವರಲ್ಲಿ ಯಾರೊ

---

ಧ್ವಜನೇ ಮೊದಲಾದ ವೀರರ ವೀರರೆಲ್ಲಾ ಫಲುಗುಣನ ಹಿಂದೆಯೇ ಹೊರಟವರಾದರು ‖ ೧ ‖ ಇವರ ಅಪಾರವಾದ ಸೇನೆಯ ಸಡಗರದಿಂದ, ಭೂಮಂಡಲದಲ್ಲಿ ಎಲ್ಲಿಯೂ ಬಿಡುವೇ ಇಲ್ಲವಾಯಿತು. ಈ ತೆರನಾಗಿ ಹೊರಟ ಅಸಾಧಾರಣವಾದ ಸೇನೆಯು ಮುಂದರಿದು ನಡೆಯುತ್ತಿರುವಾಗ ಸೌರಾಷ್ಟ್ರದೇಶದ ಗಡಿಯು ಸಿಕ್ಕಿತು. ಧನಂಜಯನ ಯಜ್ಞಾಶ್ವಂಗಳಾದರೊ, ಆ ಸೌರಾಷ್ಟ್ರದೇಶವೊಳಗೆ ನುಗ್ಗಿ ನಡೆಯಲು ಆ ನಾಡಿಗೆ ಸೇರಿದ ಸಾರಸ್ವತನಗರವೆಂಬೊಂದು ಪಟ್ಟಣವು ತಲೆದೋರಿತು. ಯಾಗದ ತುರಂಗಮವು ಆ ಸಾರಸ್ವತ ನಗರಕ್ಕೆ ಹೋಗಿ ಸೇರಲು ಬೆಂಗಾವಲಿಗಾಗಿ ಬಂದಿದ್ದ ಕೃಷ್ಣಾರ್ಜುನಾದಿ ಅಶೇಷರೂ ಆ ಪುರವಂ ಪ್ರವೇಶಿಸಿದರು. ಆ ಸಾರಸ್ವತನಗರದೊಳಗೆ ವೀರವರ್ಮನೆಂಬರಸು ಪ್ರಜಾರಂಜಕನಾಗಿ ಧರ್ಮದಿಂದ ರಾಜ್ಯಪರಿಪಾಲನೆಯಂ ಗೆಯ್ಯುತ್ತಲಿದ್ದನು. ‖ ೨ ‖ ಈ ಮಹಾನುಭಾವನಾದ ವೀರವರ್ಮನ ರಾಜ್ಯಭಾರದಲ್ಲಿ ಧರ್ಮದೇವತೆಯು ನಾಲ್ಕು ಚರಣಗಳಿಂದಲೂ ನಡೆಯುತ್ತಲಿರುವುದೊ ಎಂಬಂತೆ ಸೌರಾಷ್ಟ್ರದೇಶ ನಿವಾಸಿಗಳೆಲ್ಲರೂ ಧರ್ಮೈಕಪರಾಯಣರಾಗಿದ್ದರೇ ಹೊರತು ಗಂಡಸರಾಗಲೀ ಹೆಂಗಸರಾಗಲೀ ಯಾರೊಬ್ಬರೂ ಕೂಡ ಸ್ವಪ್ನದಲ್ಲಿಯಾದರೂ ದುಷ್ಕಾರ್ಯವನ್ನು ನೆನೆಯತಕ್ಕವರಾಗಿರಲಿಲ್ಲವು. ಪ್ರಜೆಗಳೆಲ್ಲರೂ ಈ ತೆರನಾಗಿ ಸನ್ಮಾರ್ಗಪ್ರವರ್ತಕರಾಗಿದ್ದರಾದಕಾರಣ ಯಾರೊಬ್ಬರಾದರೂ ರೋಗಾದ್ಯುಪದ್ರವಂಗಳಿಂದಲೂ, ಕಷ್ಟನಷ್ಟಗಳಿಂದೊಗೆವ ಸಂಕಟಗಳಿಂದಲೂ ನರಳದೆ ಸುಖವಾಗಿಯೂ ಸಂತೋಷಾತಿಶಯದಿಂದೊಡಗೂಡಿಯೂ ಕಾಲವಂ ಕಳೆಯುತ್ತಲಿದ್ದರು. ಇಂತಹ ಸುಖದಾಯಕವಾದ ಸೌರಾಷ್ಟ್ರದೇಶಕ್ಕೆ ರಾಜನಾದ ವೀರವರ್ಮ

ರ್ಜುನರಸಾಹಸವನು ‖ ನಾವರಿದುಕೊಂಬೆವಶ್ವಂಗಳಂಕಟ್ಟುವುದು | ನೀವೆಂದುಕಳುಪಲಾನೃಪನಪರಿವಾರಂಮ | ಹಾವಿಭವದಿಂದಕರಿತುರಗರಥಪಾಯದಳವೊತ್ತರಿಸಿಪೊರಮಟ್ಟುದು ‖ ೪ ‖ ಸುಲಭನೆಂದನುಪಮಸುಲೋಭನೆಂದುನ್ನತಕು | ವಲನೆಂದುನೀಲನೆಂದಗ್ಗದಸರಳನೆಂದು|ಬಲವಂತರಿವರೈವರಾನೃಪನಸೂನುಗಳ್ಪೊರಮಟ್ಟುಸೇನೆಸಹಿತ‖ ಕೆಲವರಿದನಡರ್ದುಕೈದುಡುಕಿತುಸಮಾತ್ರಮೆನೆ|ಫಲುಗುಣನತುರಂಗಂಗಳಂತಂದುನಿಮಿಷದೊಳ್ | ನಿಲಿಸಿದರ್ಪಿತನಸನ್ನಿಧಿಯೊಳದನರ್ಜುನನಪಡೆಕಂಡುಕವಿ

---

ಬ್ಬರೂ ಮರೆದು–ಮರತು ಹೋಗಿ, ಕನಸಿನೊಳಾದರುಂ–ಸ್ವಪ್ನದಲ್ಲಿಯೂ ಕೂಡ, ಪಾತಕದಕೃತ್ಯಕೆ–ಕೆಟ್ಟಕೆಲಸಕ್ಕೆ, ಎರಗುವವರು–ಉಜ್ಜುಗಿಸತಕ್ಕವರು, ಇಲ್ಲ–ಇಲ್ಲವು, ವ್ಯಾಧಿಗಳಪೀಡೆಗಳನು–ರೋಗದ ಬಾಧೆಯನ್ನು, ಆರುಂ–ಯಾರು, ಅರಿಯರು–ತಿಳಿದಿಲ್ಲವು, ಆನೃಪನ–ಆ ವೀರವರ್ಮನ, ರಾಷ್ಟ್ರದೊಳ್–ದೇಶದೊಳಗೆ, ದುಃಖಶೋಕ ಸಂತಾಪದಿಂ–ಸಂಕಟಮನೋವ್ಯಥೆಯ ಬಾಧೆ ಮೊದಲಾದವುಗಳಿಂದ, ಮರುಗುವವರಂ–ನರಳುತ್ತಲಿರುವವರನ್ನು, ಕಾಣೆನು–ನೋಡಲೇ ಇಲ್ಲವು, ವೈವಸ್ವತಂ–ಸೂರ್ಯಸುತನಾದ ಯಮನು, ಭೂವರಂಗೆ–ರಾಜಾಗ್ರಣಿಯಾದ ವೀರವರ್ಮನಿಗೆ, ಮನೆಯ–ಮಂದಿರದ, ಅಳಿಯತನದೊಳ್–ಅಳಿಯನಭಾವದಿಂದ, ಸೆರೆಯಾಗಿ–ಸಂಸಾರಪಾಶಕ್ಕೆ ಸಿಕ್ಕಿಕೊಂಡು, ಇರುತಿಹಂ–ಇರುತ್ತಲಿರುವನು ‖೩‖

ಟೀ‖ ಈ ಪಾಂಡವನ–ಈ ಫಲುಗುಣನ, ಕುದುರೆಗಳ್–ತುರಗಂಗಳು, ಕಾವ– ಬೆಂಗಾವಲಾಗಿರತಕ್ಕ, ಪಡೆಸಹಿತ–ಸೇನಾಸಮೇತನಾಗಿ, ನಿಜ–ಸ್ವಕೀಯನಾದ, ರಾಷ್ಟ್ರಕೆ–ನಾಡಿಗೆ, ಐತಂದವು–ಬಂದವು, ಎಂಬ–ಎನ್ನತಕ್ಕ, ಈ ವಾರ್ತೆಯಂ–ಈ ಸಮಾಚಾರವನ್ನು, ಆ ವೀರವರ್ಮಂ–ವೀರವರ್ಮನೆಂಬ ಅಲ್ಲಿನ ರಾಜನು, ಕೇಳ್ದು–ಕೇಳಿದವನಾಗಿ, ನಗುತ–ಮುಗುಳ್ನಗೆಯನ್ನೈದುತ್ತ, ಖತಿಗೊಂಡು–ಆಗ್ರಹವಂತಾಳಿ, ನಾವು–ನಾವಾದರೊ, ಕೃಷ್ಣಾರ್ಜುನರ–ನರನಾರಾಯಣರ, ಸಾಹಸವನು–ಪರಾಕ್ರಮವನ್ನು, ಅರಿದುಕೊಂಬೆವು–ನೋಡಿಕೊಳ್ಳುತ್ತೇವೆ, ನೀವು–ನೀವುಗಳು, ಅಶ್ವಂಗಳಂ–ತುರಂಗಳನ್ನು, ಕಟ್ಟುವುದು–ಕಟ್ಟಿಹಾಕಬೇಕು, ಎಂದು–ಎಂಬತೆರನಾಗಿ, ಕಳುಪಲು–ಕಳುಹಿಸಿಕೊಡಲು, ಆ ನೃಪನ–ಆ ವೀರವರ್ಮನೆಂಬ ರಾಜನ, ಪರಿವಾರಂ–ವೀರರ ಸಮುದಾಯವು, ಕರಿತುರುಗಪಾಯದಳಂ–ಹಸ್ತ್ಯಶ್ವಪದಾತಿಗಳಿಂದ, ಒತ್ತರಿಸಿ–ಒಟ್ಟುಗೂಡಿ, ಮಹಾವಿಭವದಿಂದ–ಹೆಚ್ಚಾದ ಅಟ್ಟಹಾಸದಿಂದ, ಪೊರಮಟ್ಟುದು–ಹೊರಟಂಥಾದ್ದಾಯಿತು ‖

ಅ‖ ವಿ‖ ಕೃಷ್ಣಾರ್ಜುನರು (ಸ.ದೀ.) ‖೪‖

ಟೀ‖ ಸುಲಭನು–ಸುಲಭನು, ಎಂದು–ಎಂಬ ಹೆಸರಿನಿಂದಲೂ, ಅನುಪಮ–ಅಸದೃಶನಾದ, ಸುಲೋಭನೆಂದು–ಸುಲೋಭನೆಂಬತೆರನಾಗಿಯೂ, ಉನ್ನತ–ಹೆಚ್ಚಿಕೆಯನ್ನೈದಿರುವ, ಕುವಲನೆಂದು–ಕುವಲನೆಂಬನಾಮಧೇಯದಿಂದಲೂ, ನೀಲನೆಂದು–ನೀಲನೆಂಬುದಾಗಿಯೂ, ಅಗ್ಗದ–ಶೂರನಾದ, ಸರಳನೆಂದು–ಸರಳನೆಂಬ ನಾಮಧೇಯದಿಂದಕೂಡಿರತಕ್ಕ, ಬಲವಂತರು–ಪರಾಕ್ರಮಿಗಳಾದ, ಇವರೈವರು–ಈ ಐದುಜನರಾದ, ಆನೃಪನಸೂನುಗಳ್–ಆ ರಾಜಕುವರರು, ಸೇನೆಸಹಿತ–ಪಡೆಯಿಂದ–ಪಡೆಯಿಂದೊಡಗೂಡಿ, ಪೊರಮಟ್ಟು–ಹೊರಟವರಾಗಿ, ಕೆಲವರಿದು–ಪಕ್ಕಗಳನ್ನುನೋಡಿಕೊಂಡು, ಅಡರ್ದು–ಮುಂದಕ್ಕೆನಡೆದು, ತುಸುಮಾತ್ರಂ–ಅತ್ಯಲ್ಪವು, ಎನೆ–ಎಂಬತೆರದಿಂದ, ಕೈದುಡುಕಿ–ಕೈಮಿಾರಿ, ನಿಮಿಷದೊಳ್–ನಿಮಿಷಮಾತ್ರದೊಳಗಾಗಿ, ಫಲುಗುಣನ–ಪಾರ್ಥನ, ತುರಂಗಂಗಳಂ–ಹಯಗಳನ್ನು, ತಂದು–ತೆಗೆದುಕೊಂಡುಬಂದು, ಪಿತನ–ಜನಕನಾದ ವೀರವರ್ಮನ, ಸನ್ನಿಧಿಯೊಳ್–ಬಳಿಯಲ್ಲಿ, ನಿಲಿಸಿದರ್–ನಿಲ್ಲಿಸಿಬಿಟ್ಟರು, ಅರ್ಜುನನ–ಫಲುಗುಣನ, ಪಡೆ–ದಳವು, ಅದನು–ಕುದುರೆಗಳನ್ನುಸುಲಭನೆ ಮೊದಲಾದ ವೀರವರ್ಮನ ಕುವರರು ಸೆಳೆದುಕೊಂಡು ಹೋಗುತ್ತಲಿರುವುದನ್ನು, ಕಂಡು–ನೋಡಿ, ಒಡನೆ–ಸಾವಕಾಶವಂಗೈಯ್ಯದೆ, ಕವಿದುದು–ಸುತ್ತಿಕೊಂಡಿತು ‖ ೫ ‖

---

ನಿಗಾದರೊ ಯಮಧರ್ಮರಾಯನ ಅಳಿಯನಾಗಿದ್ದುಕೊಂಡು ಯಾವುದೊಂದು ಬಾಧೆಗೂ ಅವಕಾಶವಿಲ್ಲದೆ ನೋಡಿಕೊಳ್ಳುತ್ತಲಿದ್ದನಾಗಿ ವೀರವರ್ಮನು ಸುಖದಿಂದಲೂ ರಾಜ್ಯವಂ ಪರಿಪಾಲಿಸುತ್ತಲಿದ್ದನು. ‖೩‖ ಈಪರಿಯಿಂದಿರುವ ವೀರವರ್ಮ ಮಹಾರಾಯನಿಗೆ ಅರ್ಜುನನ ಯಜ್ಞಾಶ್ವಂಗಳು ತನ್ನ ದೇಶಕ್ಕೆ ನುಗ್ಗಿಬಂದಿರುವಂತೆಯೂ ಫಲುಗುಣನು ಅಪಾರವಾದ ಸೇನಾಸಮುದ್ರದಿಂದ ಆ ತುರಂಗಮಂಗಳಂ ಹಿಂಬಾಲಿಸಿ ಬಂದಿರುವದಾಗಿಯೂ ತಿಳಿದು, ಅತ್ಯಾಗ್ರಹವಂ ತಾಳಿದವನಾಗಿ ಕೃಷ್ಣಾರ್ಜುನರ ಸಾಹಸವನ್ನು ನೋಡಿಕೊಳ್ಳುವೆನು. ನೀವು ತಡಮಾಡದೆ ಹೋಗಿ ಯಾಗದ ಕುದುರೆಗಳನ್ನು ಕಟ್ಟಿಹಾಕಿಬಿಡಿರೆಂದು ತನ್ನಕಡೆಯವರಿಗೆ ಅಪ್ಪಣೆಯನ್ನಿತ್ತನು. ಕೂಡಲೆ ಚತುರಂಗಬಲವೂ ಸಿದ್ಧನಾಯಿತು ‖ ೪ ‖ ಪಡೆಕಡಲಿನೊಂದಿಗೆ ಹೊರಟ ಸುಲಭ, ಸುಲೋಭ, ಕುವಲ, ನೀಲ, ಸರಳರೆಂಬ ಹೆಸರುಗಳುಳ್ಳ ವೀರವರ್ಮನ ಐವರು ಕುವರರೂ ನಿರಾಯಾಸವಾಗಿಯೇ ಕ್ಷಣಮಾತ್ರದಲ್ಲಿ ಅರ್ಜುನನ ಕುದುರೆಗಳನ್ನು ಹಿಡಿತಂದು ತಂದೆಯಾದ ವೀರವರ್ಮನಿಗೆ ಒಪ್ಪಿಸಿದರು, ಈ ವಾರ್ತೆಯು ಫಲುಗು

ದ. ದೊಷನೆ ॥ ೫ ॥ ಮೋಹರದನಡುವೆನಡೆತರುತಿರ್ದಕಲಿಬಭ್ರು | ವಾಹನಂಕೇಳ್ದುಕಡುಕೋಪದಿಂದೊದಗಿಬಂ | ದಾಹವಕೆ ಶಂಖನಾದಂಗೈಯೆಬೆದರಿತುಜಗತ್ರಯಂಪರಬಲದೊಳು ॥ ಸಾಹಸಿಗಳೊದಗಿದರ್ಬಳಿಕೆರಡುಚೂಣಿಗಳ | ಕಾಹುರವಕಲಿಗಳೆಡೆ ವರಿಸಿಹೊಯ್ದಾಡಿದರ್ಬಾಹುನಖಮುಷ್ಟಿಕೇಶಾಕೇಶಿಮಲ್ಲಯುದ್ಧದಹತಾಹತಿಗಳಿಂದ ॥ ೬ ॥ ಬಳಿಕೆರಡುಕಡೆಯಭಟರುಬ್ಬರದೊ ಳಬ್ಬರದೊ | ಳೆಳಸಿಹೊಯಿದಾಡುತಿರದಾಚೆಯಿಂದೀಚೆಯಿಂ | ತಳತಂತ್ರವೊಡನೊಡನೆಮುಗ್ಗಿದುದುಮುಗ್ಗಿದುದುಬಹಳಕೋ ಲಾಹಲದೊಳು ॥ ಖಳಿಖಟಿಲುಕಟಿಲೆಂಬರವದಿಂದಜವದಿಂದ | ಕಳಿವರಿದುಘೋರಪ್ರಹಾರದಿಂಪೀರದಿಂ | ಬಳಸಿಬಿದ್ದುದುಮಂ ದಿಹೆಣಮಯದರಣಮಯದತಾಕುಳದರಚನೆಮೆರೆಯೆ ॥ ೭ ॥ ಮತ್ತೆಪುರದಿಂದಯುತನಿಯುತಸಂಖ್ಯೆಯರಥದ | ಮೊತ್ತದಿಂಕು ದುರೆಮಂದಿಗಳಸಂದಣಿಗಳಿಂ | ಮತ್ತಗಜಘಟೆಗಳಿಂದಾನೃಪನಸುತರೈವರುಂಪಚಾರಿಸುತಬಂದು ॥ ಒತ್ತಾಯಮುಂಮಾಡೆಬ

ಟೀ॥ ಮೋಹರದನಡುವೆ-ದಳದ ಮಧ್ಯಭಾಗದಲ್ಲಿ, ನಡೆತರುತಿರ್ದ-ಬರುತ್ತಲಿದ್ದ, ಕಲಿ-ವೀರನಾದ, ಬಭ್ರುವಾಹನಂ-ಪಾರ್ಥಜನು, ಕೇಳಿ-ಕುದುರೆಗಳನ್ನು ವೀರವರ್ಮನ ಮಕ್ಕಳು ಹಿಡಿದುಕೊಂಡು ಹೋಗುತ್ತಲಿರುವರೆಂಬ ವಾರ್ತೆಯನ್ನಾಲಿಸಿ, ಆಹವಕೆ-ಕಾಳಗಕ್ಕೆ, ಕಡುಕೋಪದಿಂದ-ಅತ್ಯಾಗ್ರಹದಿಂದ, ಒದಗಿ-ನೆರೆದು, ಬಂದು-ಬಂದವನಾಗಿ, ಶಂಖನಾದಂಗೈಯೆ-ಶಂಖವನ್ನೂದಲು, ಜಗತ್ರಯಂ-ಮೂರುಲೋಕಗಳೂ, ಬೆದರಿತು-ಹೆದರಿಕೊಂಡಿತು, ಪರಬಲದೊಳ್-ಹಗೆಗಳ ಪಡೆಯಲ್ಲಿ, ಸಾಹಸಿಗಳು-ವೀರಾಗ್ರಣಿಗಳೆಲ್ಲಾ, ಒದಗಿದರು-ಒಟ್ಟುಗೂಡಿದರು, ಬಳಿಕ-ಆಮೇಲೆ, ಎರಡುಚೂಣಿಗಳು-ಎರಡು ಕಡೆಯಲ್ಲಿಯೂ ಸೇರಿರುವ, ಕಾಹುರದ-ಕಾಳಗದಲ್ಲಿ ಸಮರ್ಥರಾದ, ಕಲಿಗಳು-ಸಾಹಸದಿಂದ ಕೂಡಿದವರು, ಎಡೆವರಸಿ-ಒಟ್ಟುಗೂಡಿದವರಾಗಿ, ಬಾಹು-ಭುಜಗಳು, ನಖ-ಉಗುರುಗಳು, ಮುಷ್ಟಿ-ಕೈಹಿಡಿ, ಕೇಶಾಕೇಶಿ-ಒಬ್ಬರ ಜುಟ್ಟನ್ನು ಮತ್ತೊಬ್ಬರು ಹಿಡಿಯುವುದು, ಮಲ್ಲಯುದ್ಧದ-ಕುಸ್ತಿಗಳು ಮೊದಲಾದವುಗಳ, ಹತಾಹತಿಗಳಿಂದ-ಪೆಟ್ಟುಗಳಮೇಲೆ ಪೆಟ್ಟುಗಳು ಬೀಳುವಂತೆ, ಹೊಯ್ದಾಡಿದರು-ಹೊಡೆಯಲುಜ್ಜುಗಿಸಿದರು ॥ ೬ ॥

ಟೀ॥ ಬಳಿಕ-ಅನಂತರ, ಎರಡುಕಡೆಯಭಟರು- ಎರಡುಕಡೆಯೂ ಇರುವವೀರರು, ಉಬ್ಬರದೊಳು-ಹೆಚ್ಚಿಕೆಯಿಂದಲೂ, ಅಬ್ಬರದೊಳು-ಸಿಂಹನಾದದಿಂದಲೂ, ಎಳಸಿ-ಅಪೇಕ್ಷಿಸಿ, ಆಚೆಯಿಂ-ಆ ಭಾಗದಿಂದಲೂ, ಈಚೆಯಿಂ-ಈ ಭಾಗದಿಂದಲೂ, ಹೊಯ್ದಾಡುತ-ಒಬ್ಬರನೊಬ್ಬರು ಹೊಡೆಯುತ್ತ, ಇರಲು-ಇರಲಾಗಿ, ತಳತಂತ್ರಂ-ಪರಾಕ್ರಮವು, (ಪಡೆ) ಒಡನೊಡನೆ-ಆಗಾಗ್ಗೆ, ಮುಗ್ಗಿದುದು-ಕೆಡಲಾರಂಬವಾಯಿತು, ಮುಗ್ಗಿದುದು-ಕಡಮೆಯಾಯಿತು, ಬಹಳ-ಅಧಿಕವಾದ, ಕೋಲಾಹಲದೊಳು-ಕಲಕಲಧ್ವನಿಯಿಂದ ಖಳಿಖಟಿಲು-ಖಳಿಕಟಿಲು, ಎಂಬ-ಎನ್ನತಕ್ಕ, ರವದಿಂದ-ಶಬ್ದದಿಂದ, ಜವದಿಂದ-ಜಾಗ್ರತೆಯಿಂದ, ಕಳಿವ-ಎವೆಯ ಭಾಗವನ್ನು, (ಮರ್ಮಸ್ಥಳವನ್ನು) ಅರಿದು-ತಿಳಿದು, ಘೋರ-ಬಲವಾದ, ಪ್ರಹಾರದಿಂದ-ಏಟನಿಂದ, ವೀರದಿಂದ-ಪರಾಕ್ರಮದಿಂದ, ಬಳಸಿ-ಕೂಡಿ. ಹೆಣಮಯದ-ಹೆಣಗಳಿಂದ ತುಂಬಿದ, ರಣಮಯದ-ಯುದ್ಧದಿಂದ ಕೂಡಿರುವ, ಕಾಕುಳದ-ಸೋಕುವುದರ, ರಚನೆ-ಕಾರ್ಯವು, ಮೆರೆಯೆ-ಅಂದದಿಂದ ಕೂಡಲು, ಮಂದಿ-ಜನಗಳು, ಬಿದ್ದುದು-ಬಿದ್ದುಬಿಟ್ಟಿತು ॥೭॥

ಟೀ॥ ಮತ್ತೆ- ತಿರುಗಿ, ಆನೃಪನ-ಆ ಸಾರಸ್ವತ ನಗರದ ರಾಜನ, ಸುತರೈವರು - ಐದುಜನ ಮಕ್ಕಳೂ, ಪುರದಿಂದ-ತಮ್ಮನಗರದಿಂದ, ಅಯುತ-ಹತ್ತುಸಾವಿರದ, ನಿಯುತ-ಇಪ್ಪತ್ತುಸಹಸ್ರದ, ಸಂಖ್ಯೆಯ-ಲೆಕ್ಕವುಳ್ಳ, ರಥದ-ವರೂಥಂಗಳ, ಮೊತ್ತದಿಂ-ಸಮುದಾಯದಿಂದ, ಕುದುರೆ-ಹಯಂಗಳು, ಮಂದಿಗಳ-ಕಾಲ್ಬಲವು ಇವುಗಳ, ಸಂದಣಿಗಳಿಂ-ಗುಂಪಿನಿಂದ, ಮತ್ತ- ಮದದಿಂದ ಕೂಡಿರತಕ್ಕ, ಗಜಘಟೆಗಳಿಂದ-ಆನೆಗಳ ಸಮುದಾಯದಿಂದ,ಪಚಾರಿಸುತ-ದಂಡಿಸುತ್ತ, ಬಂದು-ಬಂದವರಾಗಿ

ಣಿವಿಗೆ ತಿಳಿಯಿತು. ಬಳಿಕ ಅರ್ಜುನನ ಸಕಲಪರಿವಾರವೂ ಯುದ್ಧಕ್ಕೆ ಅನುವಾಯಿತು ॥೫॥ ಸೇನೆಯ ಮಧ್ಯಭಾಗದಲ್ಲಿ ಬರುತ್ತಲಿದ್ದ ಅರ್ಜುನಾತ್ಮಜನಾದ ಬಭ್ರುವಾಹನನು ಇದನ್ನು ನೋಡಿದಕೂಡಲೆ ಕೋಪಾತಿಶಯವನ್ನೈದಿ ಯುದ್ಧರಂಗಮಂ ಪೊಕ್ಕು ವೈರಿಗಳೆವೆನಡುಗುವಂತೆ ಶಂಖನಾದವನ್ನು ಮಾಡಿದ್ದರಿಂದ ಮೂರು ಲೋಕಗಳೂ ಕೂಡ ಗಾಬರಿಯನ್ನೈದಿತು. ನಕುಲಧ್ವಜನ ಶಂಖನಾದವು ಕೇಳಿದ ಕೂಡಲೇ ವೀರವರ್ಮನ ಸೇನೆಯ ಶೂರರೆಲ್ಲಾ ಯುದ್ಧಕ್ಕೆ ನಿಂತರು. ಉಭಯ ಸೈನ್ಯಗಳೂ ಕಲೆತಾಗ ಕೈಗಳಿಂದ ಒಬ್ಬರನ್ನೊಬ್ಬರು ಅಪ್ಪಳಿಸುತ್ತಲೂ, ಉಗುರುಗಳಿಂದ ಗಾಯಮಾಡುತ್ತಲೂ, ಮುಷ್ಟಾಮುಷ್ಟಿಯಲ್ಲಿ ಯಾರೊಬ್ಬರೂ ಸೋಲದೆಯೂ, ಜಟ್ಟಿಯ ಕಾಳಗದಲ್ಲಿಯೂ, ಒಬ್ಬರ ಜುಟ್ಟನ್ನು ಒಬ್ಬರು ಹಿಡಿದು ಹೊಡೆಯುವುದರಲ್ಲಿಯೂ, ಒಬ್ಬರು ಮತ್ತೊಬ್ಬರನ್ನು ಮೀರಿಸುತ್ತಲಿದ್ದರು. ॥ ೬ ॥ ಇಕ್ಕಡೆಗಳಲ್ಲಿಯೂ ನೆರದಿದ್ದ ವೀರರೆಲ್ಲರೂ ಈಪರಿ ಘೋರಯುದ್ಧವಂಗೈಯುತ್ತ ಸಿಂಹನಾದವನ್ನು ಮಾಡುತ್ತಲಿರಲಾಗಿ, ಬಭ್ರುವಾಹನನ ಸಾಹಸಾತಿಶಯದಿಂದ ವೀರವರ್ಮನ ಕಡೆಯ ಸೈನ್ಯವೆಲ್ಲಾ ನಷ್ಟವಾಗಿ ಹೋದಕಾರಣ ಎಲ್ಲಿನೋಡಿದರೂ ಹೆಣದ ರಾಶಿಯು ಪರ್ವತಾಕಾರವಾಗಿ ಬಿದ್ದುಹೋಯಿತು. ॥ ೭ ॥

ಭ್ರುವಾಹಂಕನ | ಬ್ದುತ್ತುಂಗಚಾಪದಿಂಕಣೆಗರೆವುತಿರಲನಿಬ | ರೆತ್ತಲಡಗಿದರೊಪೇಳೆನೆಮಡಿದುದರಿಚಾತುರಂಗಮದನೇವೇ ಳ್ವೆನು ||೮|| ಕಲಿಬಭ್ರುವಾಹನನಕೋಲ್ಗಳಿಂನಿಜಸೇನೆ | ಖಿಲಮಾಗುತಿರೆಕೇಳ್ದುವೀರವರ್ಮಂತಾನೆ | ಬಲಸಹಿತಪೊರಮಟ್ಟುತನ ಗಳಿಯನಾಗಿರ್ದಕಾಲಂಗೆತೋರಿಸಲ್ಕೆ || ಕೊಲತೊಡಗಿದಂಬಳಿಕಧರ್ಮರಾಜಂಮುಳಿದು | ಫಲುಗುಣನತಳತಂತ್ರಮಂತನ್ನಮಾ ವಂಗೆ | ಗೆಲವಾಗಬೇಕೆಂದುಜೀವಿಗಳವಧೆಗೆಜವನಳುಕುವನೆಜಗದೊಳೆನಲು ||೯|| ಎಂದಿರ್ದೊಡಾಪ್ರಾಣಿಗಳನೆಲ್ಲರಂಕೊಲ್ವದಂ | ದುಗಂತನಗೆಬಿಡದೆಂದುಮುಳಿದಂತಕಂ | ಬಂದುಪೊಕ್ಕನೊಕಿರೀಟಿಯದಳವನೆನೆಹತಾಹತಿಗಳಂಮಾಡುತಿರಲು || ನಿಂದುಕಾ ದುವರಿಲ್ಲವಂಕಂಡುಫಲುಗುಣಮುಕುಂ | ದನಂಬೆಸಗೊಂಡನೆಲೆದೇವಸೈನ್ಯಮಂ | ಮುಂದುಗೆಡಿಸುವಪರಾಕ್ರಮದೆಕಿಟ್ಬಾಸುರದ

---

ಬತ್ತಾಯಮುಂಮಾಡೆ-ನೆರವಾಗಿ ಸೇರಲು, ಬಭ್ರುವಾಹನನು – ಪಾರ್ಥಜನಾದರೊ, ಕನಲ್ದು – ಆಗ್ರಹಗೊಂಡು, ಉತ್ತುಂಗ– ಬಹು ದೊಡ್ಡದಾದ, ಚಾಪದಿಂ – ಧನುಸ್ಸಿನಿಂದ, ಕಣೆಗರೆವುತ – ಶರಗಳಂ ವರ್ಷಿಸುತ್ತ, ಇರೆ–ಇರಲಾಗಿ, ಅನಿಬರು – ಆ ವೀರ ವರ್ಮನ ಐವರು ಪುತ್ರರು, ಎತ್ತಲು–ಯಾವ ಭಾಗದಲ್ಲಿ, ಅಡಗಿದರೊ–ಔತುಕೊಂಡರೊ, ಪೇಳೆನೆ–ಹೇಳೆಂಬತೆರನಾಗಿ, ಅರಿಚಾತು ರಂಗಂ-ಹಗೆಗಳ ಆನೆ ಕುದುರೆ ರಥ ಕಾಲಾಳುಗಳ ಸಮುದಾಯವು, ಮಡಿದುದು–ಮರಣವನ್ನೈದಿತು, ಅದನು-ಆ ಸಮಾಚಾರ ವನ್ನು, ಏವೇಳ್ವೆನು–ಏನೆಂದು ನುಡಿಯಲಿ.

ಅ|| ವಿ|| ಅರಿಗಳ ಚಾತುರಂಗ (ಷ. ತ.) ||೮||

ಟೀ|| ವೀರವರ್ಮಂ–ವೀರವರ್ಮನೆಂಬ ಸಾರಸ್ವತನಗರದ ರಾಜೇಂದ್ರನಾದರೊ, ನಿಜ – ಸ್ವಕೀಯನಾದ, ಸೇನೆ– ದಂಡು, ಕಲಿಬಭ್ರುವಾಹನನ–ಕಲಿ–ಶೂರನಾದ ಬಭ್ರುವಾಹನನ–ಪಾರ್ಥನಂದನನ, ಕೋಲ್ಗಳಿಂ–ಕಣೆಗಳಿಂದ, ಖಿಲಮಾಗು ತಿರೆ–ನಾಶವನ್ನೈದುತ್ತಿರಲು, ಕೇಳ್ದು–ಕೇಳಿದವನಾಗಿ, ಬಲಸಹಿತ–ದಂಡಿನೊಡನೆ, ತಾನೆ–ತಾನಾಗಿಯೇ, ಪೊರಮಟ್ಟು–ಹೊರಟವ ನಾಗಿ, ಫಲುಗುಣನ–ಧನಂಜಯನ,ತಳತಂತ್ರಮಂ–ಶೌರ್ಯವನ್ನು,(ಪಡೆ) ತನಿಗೆ–ತನಿಗಾದರೊ,ಅಳಿಯನಾಗಿರ್ದ,ಕಾಲಂಗೆ–ಅಂತಕ ನಿಗೆ, ತೋರಿಸಲ್ಕೆ–ತೋರ್ಪಡಿಸಲಾಗಿ, ಬಳಿಕ–ಆಮೇಲೆ, ಧರ್ಮರಾಜಂ – ವೈವಸ್ವತನು, ಮುಳಿದು–ಆಗ್ರಹಮಂ ತಾಳಿ, ತನ್ನ ಮಾವಂಗೆ – ತನಿಗೆ ಮಾವನಾಗಿರತಕ್ಕ ವೀರವರ್ಮನು ಜಯಶೀಲನಾಗಬೇಕೆಂಬುದಾಗಿ ಯೋಚಿಸಿ, ಜಗದೊಳು – ಲೋಕದಲ್ಲಿ, ಜವನು–ದಂಡಧರನು, ಜೀವಿಗಳ–ಪ್ರಾಣವನ್ನುಳ್ಳವರ, ವಧೆಗೆ–ಕೊಲೆಗೆ, ಅಳುಕುವನೆ–ಹೆದರಿಕೊಳ್ಳುತ್ತಾನೆಯೆ, ಎನಲು–ಎಂಬ ತೆರನಾಗಿ, ಫಲುಗುಣನ–ಪಾರ್ಥನ, ತಳತಂತ್ರಮಂ–ಪರಾಕ್ರಮಿಗಳಾದ ಯೋಧರನ್ನೆಲ್ಲಾ. ಕೊಲತೊಡಗಿದಂ–ಕೊಂದುಹಾಕ ಲುಜ್ಜುಗಿಸಿದನು ||೯||

ಟೀ||ಅಂತಕಂ–ಯಮಧರ್ಮರಾಯನಾದರೊ, ತನಿಗೆ–ತನಿಗಾಗಿ, ಪ್ರಾಣಿಗಳನೆಲ್ಲರಂ–ಅಶೇಷವಾದ ಜೀವರಾಶಿಗಳನ್ನೂ, ಕೊಲ್ವ–ಕೊಂದುಹಾಕುವ, ದಂದುಗಂ–ಬಾಧೆಯು, ಎಂದಿರ್ದೊಡಂ–ಎಂದಿಗೇ ಆದರೂ, ಬಿಡದು–ತಪ್ಪುವುದಿಲ್ಲವು, ಎಂದು– ಎಂಬತೆರನಾಗಿ, ಮುಳಿದು–ಆಗ್ರಹವನ್ನೈದಿ, ಬಂದು–ಯುದ್ಧಭೂಮಿಯಂ ಸೇರಿ, ಕಿರೀಟಿಯ–ಧನಂಜಯನ, ದಳವನು–ಬಲವ ನ್ನು, ಪೊಕ್ಕನೊಎನೆ–ಪ್ರವೇಶಮಾಡಿದನೊ ಎಂಬಂತೆ, ಹತಾಹತಿಗಳಂಮಾಡುತಿರಲು–ಎಡೆಬಿಡದೆ ಏಟುಗಳನ್ನು ಹಾಕುತ್ತಿರಲಾಗಿ, ನಿಂದು–ಆ ಯಮನಿಗೆದುರಾಳಾಗಿ, ಕಾದುವರು–ಹೋರಾಡತಕ್ಕವರು, ಇಲ್ಲ–ಇರಲಿಲ್ಲವು, ಅದಂ–ಆ ಬಗೆಯನ್ನು, ಫಲುಗುಣಂ

---

ಈ ವರ್ತಮಾನವನ್ನು ವೀರವರ್ಮನ ಮಕ್ಕಳಾದ ಸುಲಭ, ಸುಲೋಭಾದಿಗಳು ಕೇಳಿ, ಕೋಪಾವಿಷ್ಟರಾಗಿ, ಇಪ್ಪತ್ತು ಸಹಸ್ರ ವಾದ ಚತುರಂಗಬಲದೊಂದಿಗೆ ಕೂಡಿ ಬಭ್ರುವಾಹನನ ಮೇಲೆ ಯುದ್ಧಕ್ಕೆ ನಿಂತರು. ಬಭ್ರುವಾಹನನಿಗೆ ರೋಷವಿಮ್ಮಡಿ ಸಿದ್ದರಿಂದ ಧನುಸ್ಸಿಗೆ ಬಾಣಗಳನ್ನು ಹೂಡಿ ಸುಲಭನೇ ಮೊದಲಾದವರ ಮೇಲೆ ಬಿಡುತ್ತಿರಲು, ಅವರು ಬಂದ ಮಾರ್ಗವನ್ನೇ ಕಾಣದೆ ಯಮಪುರಿಯನ್ನೈದಬೇಕಾಯಿತು. ಈ ಸುದ್ದಿಯು ವೀರವರ್ಮಭೂಪಾಲನಿಗೆ ತಿಳಿಯಲು, ||೮|| ತಾನೇ ಚತುರಂಗ ಬಲ ಸಮೇತನಾಗಿ ಹೊರಟು ತನ್ನ ಅಳಿಯನಾದ ಯಮಧರ್ಮರಾಯನಿಗೆ ಬಭ್ರುವಾಹನನಿಂದಾದ ಸೇನಾನಾಶವನ್ನು ತಿಳಿಯ ಪಡಿಸಿದನು. ಯಮನಾದರೊ, ತನ್ನ ಮಾವನ ಸಹಾಯಾರ್ಥವಾಗಿ ಹೊರಟು, ಫಲುಗುಣನ ಸೈನ್ಯದ ಬಳಿಗೆ ಬಂದವನಾಗಿ ||೯|| ಎಂದಾದರೂ ಇಲ್ಲಿ ನೆರೆದಿರುವ ಸಕಲ ಜೀವಿಗಳನ್ನೂ ಕೊಂದುಬಿಡುವ ತನ್ನ ಕರ್ತವ್ಯವನ್ನು ಈಗಲೇ ನೆರವೇರಿಸಲುಜ್ಜುಗಿಸಿರು ವನೋ ಎಂಬಂತೆ ಘೋರಯುದ್ಧವಂ ಗೈಯುತ್ತ, ವೀರಾಧೀಶರನ್ನೂ ಅಪರಿಮಿತವಾದ ಫಲುಗುಣನ ಪಡೆಯನ್ನೂ ತನ್ನ ಲೋ ಕಕ್ಕೆ ಕರೆದುಕೊಳ್ಳುತ್ತಲಿರುವುದನ್ನು ಅರ್ಜುನನು ನೋಡಿ ಭ್ರಾಂತಿಮನಸ್ಕನಾಗಿ, ಸಮೀಪದಲ್ಲಿದ್ದ ಮೋಕ್ಷಪ್ರದನಾದ ಕೃಷ್ಣ ಸ್ವಾಮಿಯನ್ನು ಕುರಿತು, ಎಲೈ ಮಹಾನುಭಾವನೇ! ನಮ್ಮ ಅಪರಿಮಿತವಾದ ಸೇನಾರ್ಣವವನ್ನು ಹೀರುತ್ತಲಿರುವ ಈ ಶೂರನು ಯಾರೆಂದು ಕೇಳಿದನು. || ೧೦ || ಆಗ ರಾಕ್ಷಸಾಂತಕನಾದ ಕೃಷ್ಣಭಗವಂತನು ಪಾರ್ಥನನ್ನು ಕುರಿತು, ಅಯ್ಯಾ ಧನಂಜ

ವೀರನಿವನಾರೆಂದನು ‖೧೦‖ ತಾತಕೇಳೈಪಾರ್ಥನಿನಗೆಹಿರಿಯಯ್ಯನಹ | ನೀತಂಕಣಾಧರ್ಮರಾಜನೀನೃಪನಜಾ | ಮಾತನಾಗಿರ್ದಪಂಮಾವಂಗೆಹಿತಮಾಗಿನಮ್ಮ ಚಾತುರ್ಬಲವನು ‖ ಘಾತಿಸುವನೆಂದುಹರಿನುಡಿದೊಡೆಧನಂಜಯನಿ | ದೇತಕೆಮಹೀಪತಿಗೆ ತಾನಳಿಯನಾದನೀ | ಭೂತಳದೊಳಿದನರುಹಬೇಕೆಂದುಬೇಡಿಗೊಳಲಸುರಹರನಿಂತೆಂದನು ‖೧೧‖ ಆಲಿಸಾದೊಡೆಪಾರ್ಥವೀರ ವರ್ಮಕನುಹೀ | ಪಾಲಕನತನುಜೆಮಾಲಿನಿಯೆಂಬನಾಮದಿಂ | ದಾಲಯದೊಳಿರುತಿರ್ದೊಡಾದುದಾಕನ್ನಿಕೆಗೆಯೌವನಪ್ರಾಪ್ತಿ ಬಳಿಕ ‖ ಬಾಲಕಿಗೆಪತಿಯಾಗಬೇಕೆಂದುನರನಾಥ | ನಾಲೋಚಿದೊಡಾಕೆಪಿತನೊಡನೆಮಾನವರ | ಮೇಲೆನಗೆಮನವೆರಗದೆನಲ

---

ಕಂಡು–ನಿರುಕಿಸಿ, ಮುಕುಂದನಂ–ಮೋಕ್ಷದಾಯಕನಾದ ಕೃಷ್ಣಸ್ವಾಮಿಯನ್ನು, ಬೆಸಗೊಂಡನು–ಕೇಳಿದವನಾದನು, ಎಲೆದೇವ–ಓ ಮಹಾನುಭಾವನೆ, ಸೈನ್ಯಮಂ–ನಮ್ಮ ಬಲವನ್ನೆಲ್ಲಾ, ಮುಂದುಗೆಡಿಸುವ–ಹಿಂದಕ್ಕೆ ಹೋಗುವ ಹಾಗೆ ಮಾಡುತ್ತಲಿರತಕ್ಕ, ಪರಾಕ್ರಮದ–ಶೌರ್ಯವುಳ್ಳ, ಇವನು–ಈ ಕಟ್ಟಾಸುರನು, ರಕ್ಕಸನಂತೆ–ತೋರುವ, (ಕಾರ್ಯದಲ್ಲಿ) ವೀರನು – ಸಾಹಸಿಯಾಗಿರತಕ್ಕವನು, ಆರ–ಯಾರಾಗಿದ್ದಾನೆ, ಎಂದನು–ಎಂಬುದಾಗಿ ಕೃಷ್ಣಮೂರುತಿಯನ್ನು ಪಾರ್ಥನು ಕೇಳಿದನು ‖೧೦‖

ಟೀ‖ ತಾತ–ಎಲೈ, ಪಾರ್ಥ – ಕಿರೀಟಿಯೆ, ಕೇಳೈಯ್ಯ, ಈತಂ–ಈಗ ಯುದ್ಧಮಾಡುತ್ತಲಿರುವನು, ಧರ್ಮರಾಜಂ ಕಣಾ–ದಂಡಧರನಲ್ಲವೆ, ನಿನಿಗೆ–ನಿನಿಗಾದರೂ, ಹಿರಿಯಯ್ಯನು–ದೊಡ್ಡ ತಂದೆಯು, ಆಹನು–ಆಗಿದ್ದಾನೆ, ಈನೃಪನ – ಈ ಸಾರಸ್ವತನಗರದ ಅರಸನ, ಜಾಮಾತನು–ಮಗಳ ಗಂಡನು, ಆಗಿರ್ದಪಂ – ಆಗಿದ್ದಾನೆ, ನಮ್ಮ – ನಮ್ಮದಾದ, ಚಾತುರ್ಬಲವನು–ಆನೆ, ಕುದುರೆ, ರಥಕಾಲಾಳ್ಗಳನ್ನು, ಮಾವಂಗೆ–ತನ್ನ ಮಾವನಾದ ವೀರವರ್ಮನಿಗೆ, ಹಿತಮಾಗೆ–ಒಳ್ಳಿತನ್ನೆಸಗಲು, ಘಾತಿಸುವನು–ಸಂಹರಿಸುತ್ತಲಿರುವನು, ಎಂದು–ಎಂಬತೆರನಾಗಿ, ಹರಿ–ಕೃಷ್ಣಸ್ವಾಮಿಯು, ನುಡಿದಡೆ–ಪೇಳಲು, ಮಹೀಪತಿಗೆ – ರಾಜನಾದ ವೀರವರ್ಮನಿಗೆ, ಈಭೂತಳದೊಳು–ಈ ಪ್ರಪಂಚದಲ್ಲಿ, ತಾನು–ಆ ಯಮನು, ಅಳಿಯನು–ಅಳಿಯನಾಗಿ, ಏತಕೆ–ಯಾವ ನಿಮಿತ್ತವಾಗಿ, ಆದನು – ಆಗಿಬಿಟ್ಟನು, ಇದನು – ಈ ವಾರ್ತೆಯನ್ನು, ಅರುಹಬೇಕು – ತಿಳಿವನ್ನುಂಟುಮಾಡಬೇಕು, ಎಂದು–ಎಂಬತೆರನಾಗಿ, ಧನಂಜಯಂ–ಪಾರ್ಥನು, ಬೇಡಿಕೊಳಲು–ಕೇಳಿಕೊಂಡದ್ದಕ್ಕಾಗಿ, ಅಸುರಹರನು – ರಾಕ್ಷಸಾಂತಕನಾದ ಕೃಷ್ಣಸ್ವಾಮಿಯು, ಇಂತು–ಮುಂದೆ ಹೇಳುವಂತೆ, ಎಂದನು–ನುಡಿದನು ‖೧೧‖

ಟೀ‖ ಪಾರ್ಥ – ಎಲೈ ಧನಂಜಯನೆ, ಆದೊಡೆ – ಯಮನು ವೀರವರ್ಮನಿಗೆ ಅಳಿಯನಾದ ಕಥೆಯನ್ನು ಕೇಳುವುದು ನಿನಿಗೆ ಇಷ್ಟವಾದರೆ, ಆಲಿಸು–ಕೇಳುವನಾಗು, ಮಾಲಿನಿಯೆಂಬನಾಮದಿಂದ–ಮಾಲಿನಿಯೆಂಬ ಹೆಸರಿನಿಂದ ಕೂಡಿದ, ವೀರವರ್ಮಕನುಹೀಪಾಲಕನ – ವೀರವರ್ಮನೆಂಬ ಅರಸ, ತನುಜೆ–ಕುವರಿಯು, ಆಲಯದೊಳು – ಮಂದಿರದಲ್ಲಿ, ಇರುತಿರ್ದೊಡೆ–ಇರತಕ್ಕ ಕಾಲದಲ್ಲಿ, ಆಕನ್ನಿಕೆಗೆ–ಆ ಹುಡಿಗಿಗೆ, ಯೌವನಪ್ರಾಪ್ತಿಯಾದುದು–ಪ್ರಾಯವು ತಲೆದೋರಿತು, ಬಳಿಕ–ತರುವಾಯ, ಬಾಲಕಿಗೆ–ಕುವರಿಯಾದ ಮಾಲಿನಿಗೆ. ಪತಿಯು – ಕಾಂತನು, ಆಗಬೇಕು–ಆಗುವಂತೆ ಮಾಡಬೇಕು, ಎಂದು–ಎಂಬತೆರನಾಗಿ, ಆಲೋಚಿಸಿದೊಡೆ–ಯೋಚನೆಯಂ ಗೈಯ್ಯಲು, ಪಿತನೊಡನೆ–ತಂದೆಯಾದ ವೀರವರ್ಮನಂ ಕುರಿತು, ಎನಗೆ–ನನಿಗಾದರೊ, ಮಾನವರಮೇಲೆ–ಮನುಷ್ಯರನ್ನು ಮದುವೆಮಾಡಿಕೊಳ್ಳಲು, ಮನಂ–ಚಿತ್ತವು, ಎರಗದು–ಉಂಟಾಗುವುದಿಲ್ಲವೆಂದು, ಆಕೆ–ಆ ಮಾಲಿನಿಯು, ಎನಲು–ನುಡಿಯಲು, ಅವಂ–ಆಕೆಯ ತಂದೆಯು, ಮತ್ತೆ–ಪುನಃ, ವರನು–ನಿನಿಗೆ ಅನುರೂಪನಾದವನು, ಆರು–ಯಾರಾ

---

ಯನೇ ! ಈ ವೀರಾಗ್ರಣಿಯು ನಿನ್ನ ದೊಡ್ಡ ತಂದೆಯಾದ ಯಮಧರ್ಮರಾಯನು. ಈ ಕಾಲನಿಗೆ ವೀರವರ್ಮನ ಮಗಳನ್ನು ಮದುವೆಮಾಡಿರುವುದರಿಂದ ನಿನಗೆ ಎದುರಾಳಾದ ಈ ರಾಜನು ಯಮನಿಗೆ ಮಾವನಾಗಬೇಕು. ಬಭ್ರುವಾಹನನ ಸಾಹಸದಿಂದ ವೀರವರ್ಮನ ಸೈನ್ಯವು ನಾಶವಾಗುತ್ತಿರಲು ವೀರವರ್ಮನೇ ತನ್ನ ಅಳಿಯನಾದ ವೈವಸ್ವತನಿಂದೊಡಗೂಡಿ ನಿನ್ನನ್ನು ಎದುರಿಸಿರುವನು ಈ ಅಂತಕನೇ ನಿನ್ನ ಸೈನ್ಯವನ್ನೆಲ್ಲಾ ನಾಶಮಾಡುತ್ತಲಿರುವನೆಂದು ನುಡಿದನು. ಇದನ್ನು ಅರ್ಜುನನು ಕೇಳಿ ಮತ್ತೆ ಕೃಷ್ಣಸ್ವಾಮಿಯನ್ನು ಕುರಿತು ಎಲೈ ಕೃಷ್ಣಮೂರುತಿ! ಭೂಲೋಕವಾಸಿಯಾದ ವೀರವರ್ಮನಿಗೆ ಯಮನು ಅಳಿಯನಾದದ್ದು ಹೇಗೆ ಇದನ್ನು ನನಗೆ ಸವಿಸ್ತಾರವಾಗಿ ಹೇಳಬೇಕೆಂದು ಕೇಳಿಕೊಂಡನು. ‖ ೧೧ ‖ ಕೇಳೈ ಜನಮೇಜಯರಾಯನೆ, ಅರ್ಜುನನು ಈ ರೀತಿಯಲ್ಲಿ ಕೃಷ್ಣಸ್ವಾಮಿಯನ್ನು ಪ್ರಶ್ನೆಮಾಡಲಾಗಿ, ವೀರವರ್ಮನಿಗೆ ಯಮನು ಅಳಿಯನಾದ ಕಥೆಯನ್ನು ಹೇಳತೊಡಗಿದನು:— ಕೇಳೈ ಫಲುಗುಣ, ನಿನಗೆ ಎದುರಾಳಾಗಿರುವ ವೀರವರ್ಮಮಹಾರಾಯನಿಗೆ ಮಾಲಿನಿ ಎಂಬ ಕುವರಿ ಇರುವಳು. ಆಕೆಯು ಶುಕ್ಲಪಕ್ಷದ ಚಂದ್ರನಂತೆ ಸಕಲಗುಣಸಂಪನ್ನಳಾಗಿ ಬೆಳೆಯುತ್ತಲಿರುವಳು. ಪ್ರಾಪ್ತವಯಸ್ಕಳಾದ ತನ್ನ ಕುವರಿಗೆ ಅನುರೂಪನಾದ ವರನನ್ನು ಹುಡುಕಬೇಕೆಂದು ಆಲೋಚಿಸುತ್ತಲಿರುವಾಗ, ಮಾಲಿನಿಯು ತಂದೆಯನ್ನು ಕುರಿತು ಎಲೈ ಜನಕನೆ, ನನಿಗೆ ಮನುಷ್ಯರನ್ನು ಮದುವೆಮಾಡಿಕೊಳ್ಳಬೇಕೆಂಬ ಇಚ್ಛೆ ಇಲ್ಲವೆಂದು ನುಡಿದಳು. ‖೧೨‖ ಭೂಲೋಕವಾಸಿ

ವಂಮತ್ತೆವರನಾರೆಂದೊಡಿಂತೆಂದಳು ||೧೨|| ಬೊಪ್ಪಕೇಳ್ಮನುಜರ್ಗೆಮರಣಮೆಂದಿರ್ದೊಡಂ | ತಪ್ಪದದರಿಂದಮಾನವರಪಾಣಿಗ್ರಹಣ | ಕೊಪ್ಪಿನಾಪತಿಯೊಳುರಿಪೋಗುವೇಳ್ಪುದಲ್ಲದೊಡೆವಿಧವೆಯಾಗಿರವೇಳ್ಪುದು || ಅಪ್ಪುವೊಡೆನಿಜಕಾಂತನಿಲ್ಲದೊಡೆಮನ್ಮಥಂ ನಿಪ್ಪಸರದಿಂದೆಸೆವ ಕುಸುಮಾಸ್ತ್ರಕನ್ಯರಂ | ಬಪ್ಪನರಕವ ನರಿಯದೊಡಗೂಡು ವೇಳ್ಪುದಿದಕಂಜುವೆಂತಾನೆಂದಳು ||೧೩|| ನಿಜನಾಥನಿರ್ದಲ್ಲಿಮರಣಮಾದೊಡೆಪುಣ್ಯ | ಮಜನಾದರಿಪನವನಕೂಡೆತನ್ನಂಗಮಂ | ತ್ಯಜಿಸಿದೊಡೆವಿಧವೆಯಾದೊಡೆಸತಿಗೆಪಾತಕಂಬಂದಲ್ಲದಿರದುಬಳಿಕ || ಪ್ರಜೆಗಳಂಪಡೆದುಸದ್ಗತಿಗೈದುವೇಳ್ಪುದಿದು| ಋಜುವಲ್ಲಮಾನುಷ್ಯಮಾರ್ಗಮಿದುಕಾರಣಂನಾಂ| ಭಜಿಸುವೆಂಧರ್ಮರಾಜನನೆನ್ನನಾತಗೆಕೊಡುಮದುವೆಯಹೆನೆಂದಳು || ೧೪ || ಮೃತಿಯಾದೊಡನನಪೊರೆಗೈದುವರ್ಸುಕೃತದು | ಷ್ಕೃ

---

ಗಿತವನು, ಎಂದೊಡೆ-ಎಂದು ಪ್ರಶ್ನೆಮಾಡಲು, ಇಂತು-ಈ ತೆರನಾಗಿ, ಎಂದಳು-ಉತ್ತರಕೊಟ್ಟಳು ||೧೨||

ಟೀ|| ಬೊಪ್ಪ-ಎಲೈ ಪಿತನೆ, ಕೇಳು-ಲಾಲಿಸು, ಮನುಜರ್ಗೆ-ಭೂಲೋಕವಾಸಿಗಳಿಗೆ, ಮರಣಂ-ಸತ್ತು ಹೋಗುವಿಕೆಯು, ಎಂದಿರ್ದೊಡಂ-ಎಂದಿಗೇ ಆದರೂ, ತಪ್ಪದು-ತಪ್ಪತಕ್ಕದ್ದಲ್ಲವು, ಅದರಿಂದ-ಅದರ ನಿಮಿತ್ತವಾಗಿ, ನಾಂ-ನಾನಾದರೊ, ಮಾನವರ-ಮನುಷ್ಯಸಾಮಾನ್ಯದವರ, ಪಾಣಿಗ್ರಹಣಕೆ-ವಿವಾಹಕ್ಕೆ, ಒಪ್ಪಿ-ಸಮ್ಮತಿಪಟ್ಟು, ಉರಿ-ಅಗ್ನಿಯನ್ನು, ಪತಿಯೊಳು-ಗಂಡನೊಂದಿಗೆ, ಪೊಗವೇಳ್ಪುದು-ಹೋಗಬೇಕಾಗುವುದು, ಅಲ್ಲದೊಡೆ-ಹಾಗೆ ಆಗದೆಹೋದರೆ, ವಿಧವೆಯಾಗಿ-ವೈಧವ್ಯವನ್ನು ಸಂಪಾದಿಸಿಕೊಂಡು, ಇರವೇಳ್ಪುದು-ಇರಬೇಕು, ಅಪ್ಪುವಡೆ-ತಬ್ಬಿಕೊಳ್ಳಲು, ನಿಜ-ಸ್ವಕೀಯವಾದ, ಕಾಂತನು-ರಮಣನು, ಇಲ್ಲದೊಡೆ-ಇಲ್ಲದೆ ಹೋದರೊ, (ಮದುವೆ ಇಲ್ಲದೆ ಇದ್ದರೆ) ನಿಪ್ಪಸರದಿಂದ-ಕೂರಲಗಿನಿಂದ, ಎಸೆವ-ಹೊಳೆಯುವ, ಕುಸುಮಾಸ್ತ್ರಕೆ-ಹೂಸರಲಿಗೆ, ಮನ್ಮಥಂ-ಮದನನು, ಬಪ್ಪ-ಬರತಕ್ಕ, ನರಕವನು- ನರಕಬಾಧೆಯನ್ನು, ಅರಿಯದೆ-ಗೋಚರವಿಲ್ಲದೆ, ಅನ್ಯರಂ-ಬೇರೆ ಯಾರನ್ನಾದರೂ, ಒಡಗೂಡವೇಳ್ಪುದು-ಸೇರಿ ರಮಿಸಬೇಕಾಗುತ್ತದೆ, ತಾನು-ನಾನಾದರೊ, ಇದಕೆ-ಈ ತೊಂದರೆಗೆ, ಅಂಜುವೆಂ-ಹೆದರುತ್ತೇನೆ, ಎಂದಳು-ಎಂಬುದಾಗಿ ಮಾಲಿನಿಯು ತನ್ನ ಪಿತನೊಂದಿಗೆ ನುಡಿದಳು ||೧೩||

ಟೀ|| ಮರಣಂ-ಮೃತಿಯು, ನಿಜನಾಥನು-ಪತಿಯು, ಇರ್ದಲ್ಲಿ-ಇರತಕ್ಕ ಕಾಲದಲ್ಲಿ, ಆದೊಡೆ-ಒದಗಿದರೆ, ಪುಣ್ಯಂ-ಉತ್ತಮವೇ ಸರಿ, ಅಜನು-ಸೃಷ್ಟಿಕರ್ತನೂ ಕೂಡ, ಆದರಿಪನು- ಮನ್ನಣೆಯಂ ಗೈವನು, ತನ್ನ-ತನ್ನದಾದ, ಅಂಗಮಂ-ದೇಹವನ್ನು, ಅವನಕೂಡೆ-ಪತಿಯೊಂದಿಗೇನೆ, ತ್ಯಜಿಸದೊಡೆ-ಬಿಟ್ಟುಬಿಡದಿದ್ದರೆ, ವಿಧವೆಯು-ವೈಧವ್ಯವನ್ನವಲಂಬಿಸುವಳು, ಆದೊಡೆ-ಆದಪಕ್ಷದಲ್ಲಿ, ಸತಿಗೆ-ನಾರಿಗೆ, ಪಾತಕಂ-ದೋಷವು ಬಂದಲ್ಲದೆ ಇರದು-ಬಾರದೆ ಇರಲಾರದು, ಬಳಿಕ-ಆಮೇಲೆ, ಮಾನುಷ್ಯಮಾರ್ಗಂ-ಮನುಷ್ಯರ ನಡವಳಿಕೆಯು, ಪ್ರಜೆಗಳಂಪಡೆದು-ಸಂತಾನವನ್ನೈದಿ, ಸದ್ಗತಿಗೆ-ಉತ್ತಮಗತಿಗೆ, ಐದವೇಳ್ಪುದು-ಹೋಗಬೇಕಾಗುವುದು, ಇದು-ಈ ಕೃತ್ಯವು, ಋಜುವಲ್ಲ-ನ್ಯಾಯವಾದದ್ದಲ್ಲವು, ಇದಕೆ-ಈ ಕಾರ್ಯಕ್ಕೆ, ಅಂ - ನಾನಾದರೊ, ಆರನು-ಯಾರನ್ನು, ಭಜಿಸುವೆಂ-ವರಿಸಲಿ, ಧರ್ಮರಾಜನಂ-ಕಾಲನನ್ನು, ಭಜಿಸುವೆಂ-ಮದುವೆಮಾಡಿಕೊಳ್ಳಬೇಕೆಂದಿರುವೆನು, ಆತಂಗೆ-ಆ ಕಾಲನಿಗೆ, ಕೊಡು-ನನ್ನನ್ನು ದಾನಮಾಡು, ಮದುವೆಯಹೆನು-ಮದುವೆಯಾಗುತ್ತೇನೆ, ಎಂದಳು-ಎಂಬುದಾಗಿ ಮಾಲಿನಿಯು ತಿಳಿಸಿದಳು ||೧೪||

ಟೀ|| ಮೃತಿಯು-ಮರಣವು, ಆದೊಡೆ-ಒದಗಿದರೆ, ಅವನ-ಆ ದಂಡಧರನ, ಪೊರೆಗೆ-ಸಮೀಪಕ್ಕೆ, ಐದುವರು-ಹೋಗಿ ಸೇರುತ್ತಾರೆ, ಆತನೆ-ಆ ಕಾಲನೆ, ಸುಕೃತದುಷ್ಕೃತುವನು-ಸುಕೃತ-ಪುಣ್ಯಕಾರ್ಯವೆನ್ನುವುದನ್ನೂ, ದುಷ್ಕೃತವನು-ದುರಿತವೆಂಬು

---

ಗಳನ್ನು ವರಿಸದಿರುವ ತನ್ನ ಸುತೆಯನ್ನು ಕುರಿತು, ಅಮ್ಮ ! ಮಾಲಿನೀ ! ನೀನು ಮತ್ತೆ ಯಾರನ್ನು ಮದುವೆ ಮಾಡಿಕೊಳ್ಳಲಿಚ್ಛಿಸುವಿ ಎಂದು ಪ್ರಶ್ನೆ ಮಾಡಿದನು. ಆಗ ಮಾಲಿನಿಯು ತಂದೆಯಾದ ವೀರವರ್ಮನಂ ಕುರಿತು, ತಾತನೆ, ನನ್ನ ನುಡಿಗಳನ್ನಾಲಿಸು. ಭೂಲೋಕವಾಸಿಗಳಿಗೆ ಸಾವು ಸಿದ್ಧವೆಂಬುದು ಹೊಸದಾದ ನುಡಿಯಲ್ಲವಷ್ಟೆ? ನಾನು ಮಾನವರನ್ನು ಮದುವೆಯಾದರೆ ಗಂಡನು ಸತ್ತಾಗ ಅವನೊಂದಿಗೆ ಸಹಗಮನವನ್ನು ಮಾಡಬೇಕು. ಇಲ್ಲವಾದರೆ ವಿಧವೆಯಾಗಿ ಬಾಳಬೇಕು. ಅಥವಾ ಮನ್ಮಥನ ಬಾಣದ ಏಟುಗಳನ್ನು ತಾಳಲಾರದೆ ದುರ್ಮಾರ್ಗಪ್ರವರ್ತಕಳಾಗಿ ಯಮದಂಡನೆಗೆ ಗುರಿಯಾಗಬೇಕು ||೧೩|| ಗಂಡನೆದುರಿಗೆ ನಾನೇ ಸತ್ತು ಹೋದರೆ ಮಹಾ ಪುಣ್ಯ ಉಂಟಾಗುವುದು. ಹಾಗಲ್ಲದಿದ್ದರೆ ನಾನು ಮಾತ್ರ ಬದುಕಿದ್ದು ಪತಿಯು ಪರಲೋಕವನ್ನೈದಿದರೆ ಮಹಾ ಅನರ್ಥಗಳುಂಟಾಗುತ್ತವೆ ಯಾದ್ದರಿಂದ ನನಗೆ ಮಾನವರನ್ನು ಮದುವೆಮಾಡಿಕೊಳ್ಳುವ ಯೋಚನೆ ಇಲ್ಲವು. ಮರಣಭಯವೇ ಇಲ್ಲದಿರುವ ಯಮಧರ್ಮರಾಯನನ್ನೆ ಮದುವೆ ಮಾಡಿಕೊಳ್ಳಬೇಕೆಂದಿರುವೆನಾದ್ದರಿಂದ ಆ ಅಂತಕನಿಗೆ ನನ್ನನ್ನು ಕೊಟ್ಟು ಮದುವೆ ಮಾಡು || ೧೪ || ಸತ್ತವರೆಲ್ಲರೂ ಅವನ ಬಳಿಗೆ ಹೋಗಿ ಸೇರುವರು. ಸುಕೃತ ದುಷ್ಕೃತಗಳನ್ನು ಪರಿಶೀಲಿಸತಕ್ಕ ಆತನನ್ನು ಯಮೋಪಾಸನೆಯೇ ಮೊದಲಾದವುಗಳಿಂದಲೂ, ದಾನಧರ್ಮ

ತನನಾತನೆಬಲ್ಲನದರಿಂದತನನೆರವಿ | ಸುತನೆನರನಾದಸಂವ್ರತದಾನಜಪತಪದೊಳಾತನಂಮೆಚ್ಚಿಸುವೆನು || ಅತಿಶಯಮಿದೆನ್ನ ದಿರ್ನಿನ್ನಪುಣ್ಯದಫಲಂ | ಪ್ರತಿಕೂಲಮಾಗದೆನಗಿನ್ನುವೈವಸ್ವತಂ | ಪತಿಯಾಗದಿರನವನಕಾಯಮಂತಳೆದುಜಸವಡೆದಪೆಂತಾನೆಂದಳು ||೧೫|| ಇಂತೆಂದುಮಾಲಿನಿಮಹೀಪತಿಗೆವಿನಯದಿಂ | ದಂತಸ್ಥವಾಗಿಹಮನೋರಥನನೊರೆದಿನ್ನು | ಸಂತತಂಬಿಡದೆನಾನಾವಿಧದಪುಣ್ಯಕರ್ಮಂಗಳಂನೀನೆರಚಿಸಿ || ಎಂತಾದೊಡಾಂಧರ್ಮರಾಜಂಗೆಮದುವೆಯ | ಪ್ಪಂತೆಮಾಡೆಂದುಕಾಲ್ಗೆರಗಿದೊಡೆತನಯಳಂ | ಸಂತೈಸಿತೊಡಗಿದಂಯಮಸೂಕ್ತದಿಂದವೈವಸ್ವತನಪ್ರಾರ್ಥನೆಯನು ||೧೬|| ಅಂದುಮೊದಲಾಗಿಮಾಲಿನಿದಿವಾರಾತ್ರಿಯೊಳ್ | ಕುಂದದೆಕೃತಾಂತನಂನಾನಾವಿಧಾನಂಗ | ಳಿಂದಪೂಜಿಸುತಿರ್ದಳನ್ನೆಗಳದಿನದಿನಕೆಯೌವನಂಪ್ರಬಲಮಾಗೆ || ಇಂದುವದನೆಯನೆನಹಿಗೊಳಗಾಗಿತರಣಿಜಂ | ಬಂದುಮೈದೋರದಿರೆಧರ್ಮದಸಹಾಯಕ್ಕೆ | ಮುಂದುವರಿನಮುರಮುನಿನಾರದಂತಿಳಿದನೀ

---

ವ್ರವನೂ, ಸಹ, ಬಲ್ಲನು-ಅರಿತವನಾಗಿದಾನೆ, ಅದರಿಂದ-ಆ ನಿಮಿತ್ತದಿಂದ, ರವಿಸುತನ-ಇನನ ಕುವರನೆ, ಎನಗೆ-ನನಗೆ, ವರನು-ಇಷ್ಟವುಳ್ಳ ಕಾಂತನು, ಆದನಂ-ಆಗುವನು, (ನಾನು) ಆತನಂ-ಆ ವೈವಸ್ವತನನ್ನು, ವ್ರತ-ಉಪವಾಸಾದಿ ವ್ರತಗಳಿಂದಲೂ, ದಾನ-ಅಂತಕನ ಮನಸ್ಸಿಗೆ ಒಪ್ಪಿಕೆಯಾಗಬಹುದಾದ ಪದಾರ್ಥಗಳನ್ನು ಕೊಡುವುದರಿಂದಲೂ, ಜಪ-ಆತನ ಸಂಬಂಧವಾದ ಮಂತ್ರಗಳನ್ನೇ ಬಾರಿಬಾರಿಗೂ ಪಠಿಸುವುದರಿಂದಲೂ, ತಪದೊಳು-ತಪಸ್ಸಿನಿಂದಲೂ, ಮೆಚ್ಚಿಸುವೆನು-ಅವನ ಪ್ರೀತಿಗೆ ಪಾತ್ರಳಾಗುತ್ತೇನೆ. ಇದು-ಈ ಕಾರ್ಯವಾದರೊ, ಅತಿಶಯಂ-ಅಸಾಧ್ಯವು, ಎನ್ನದೆ-ಎಂದು ಭಾವಿಸದೆ, ಇರು-ಇರತಕ್ಕವನಾಗು, ನಿನ್ನ-ನೀನು ಮಾಡಿರುವ, ಪುಣ್ಯದ-ಸತ್ಕಾರ್ಯದ, ಫಲಂ-ಪ್ರಯೋಜನವು, ಪ್ರತಿಕೂಲಂ-ಬೇರೆ ತೆರನಾದದ್ದು, ಆಗದು-ಆಗತಕ್ಕದ್ದಲ್ಲವು, ಇನ್ನು-ಮುಂದೆ, ವೈವಸ್ವತಂ-ಭಾನುಸುತನೆ, ಎನಗೆ-ನನಗ, ಪತಿಯು-ಕಾಂತನು, ಆಗದೆಇರನು-ಆಗದೆ ಇರುವುದಿಲ್ಲವು, (ಆಗುತ್ತಾನೆ) ತಾನು-ನಾನಾದರೊ, ಅವನ-ಆ ಯಮಧರ್ಮರಾಯನ, ಕಾಯಮಂ-ದೇಹವನ್ನು, ತಳೆದು-ಮುಟ್ಟಿ, (ಆಲಿಂಗಿಸಿಕೊಂಡು) ಜಸವಡೆದಪೆಂ-ಕೀರ್ತಿಗೆ ಪಾತ್ರಳಾಗುತ್ತೇನೆ ||

ಅ|| ವಿ|| ಜಸವಡೆದಪೆಂ - ಜಸ - ಕೀರ್ತಿಯನ್ನು, ಪಡೆದಪೆಂ - ಹೊಂದುತ್ತೇನೆ. (ಕ್ರಿ. ಸ.) ಜಸ (ತ್ಭ) - ಯಶಸ್ (ತ್ಸ) || ೧೫ ||

ಟೀ|| ಇಂತೆಂದು-ಈ ತೆರನಾಗಿ, ಮಹೀಪತಿಗೆ-ದೊರೆಯಾದ ವೀರವರ್ಮನ ಸಂಗಡ, ಅಂತಸ್ಥಂ-ಅಂತರಂಗವಾದದ್ದು, ಆಗಿಹ-ಆಗಿರತಕ್ಕ, ಮನೋರಥವನು-ಕೋರಿಕೆಯನ್ನು, ಮಾಲಿನಿ-ಆ ರಾಜನ ಕುವರಿಯು, ಒರೆದು-ತಿಳಿಸಿ, ಇನ್ನು-ಇನ್ನುಮುಂದೆ, ನೀನೆ-ನೀನಾಗಿಯೆ, ಸಂತತಂ-ಅನವರತವೂ, ಬಿಡದೆ-ತಪ್ಪದೆ, ನಾನಾವಿಧದ-ಅನೇಕ ಪ್ರಕಾರವಾದ, ಪುಣ್ಯಕರ್ಮಂಗಳಂ-ಒಳ್ಳಜ್ಜಂಗಳನ್ನು, ರಚಿಸಿ-ಎಸಗಿ, ನಾನು-ನಾನಾದಲೊ, ಧರ್ಮರಾಜಂಗೆ-ಭಾನುಸುತನಿಗೆ, ಎಂತಾದೊಡಂ-ಯಾವಬಗೆಯಿಂದಲಾದರೂ, ಮದುವೆಯಪ್ಪಂತೆ-ಮದುವೆ ಆಗುವ ತೆರನಾಗಿ, ಮಾಡು-ಎಸಗು, ಎಂದು-ಎಂಬತೆರನಾಗಿ ನುಡಿದು, ಕಾಲ್ಗೆರಗಿದೊಡೆ-ತನ್ನ ಪಾದಗಳಮೇಲೆ ಬಿದ್ದದ್ದರಿಂದ, ತನಯಳಂ-ತನ್ನ ಕುವರಿಯನ್ನು, ಸಂತೈಸಿ-ಒಳ್ಳೆಯ ಮಾತುಗಳಿಂದ ಮನ್ನಿಸಿ. ವೈವಸ್ವತಪ್ರಾರ್ಥನೆಯನು- ಸೂರ್ಯನ ಮಗನಾದ ಯಮನ ಪ್ರಾರ್ಥನೆಯನ್ನು, ಯಮಸೂಕ್ತದಿಂದ-ಯಮಧರ್ಮರಾಜನ ಸಂಬಂಧವಾದ ಮಂತ್ರದಿಂದಲೆ, ತೊಡಗಿದಂ-ರಚಿಸಲುದ್ಯುಕ್ತನಾದನು ||೧೬||

ಟೀ|| ಮಾಲಿನಿ-ಮಾಲಿನಿಯೆಂಬ ವೀರವರ್ಮನ ಕುವರಿಯಾದರೊ, ಅಂದುಮೊದಲಾಗಿ-ಯಮನನ್ನು ತನ್ನ ಗಂಡನನ್ನಾಗಿ ಮಾಡಿಕೊಳ್ಳಬೇಕೆಂದು ತಂದೆಯೊಂದಿಗೆ ಹೇಳಿದ ಕಾಲದಿಂದಲೂ, ಕುಂದದೆ-ಸ್ವಲ್ಪವೂ ಬಿಡದೆ, ನಾನಾವಿಧಾನಂಗಳಿಂದ-ಅನೇಕ ವಿಧವಾದ ಶಾಸ್ತ್ರನಿಯಮಂಗಳಿಂದ, ದಿವಾರಾತ್ರಿಯೊಳು-ಅಹರ್ನಿಶಿಯಲ್ಲಿಯೂ, ಕೃತಾಂತನಂ-ಅಂತಕನನ್ನು, ಪೂಜಿಸುತಿರ್ದಳು-ಅರ್ಚನೆಯಂ ಗೈಯ್ಯುತ್ತಲಿದ್ದಳು, ಅನ್ನೆಗಂ-ಆ ಕಾಲಕ್ಕೆ, ದಿನದಿನಕೆ-ದಿನೇ ದಿನೆ, ಯೌವನಂ-ಹರಯವು, ಪ್ರಬಲಮಾಗೆ-ಅಧಿಕವಾಗುತ್ತಿದ್ದ ಕಾಲದಲ್ಲಿ, ತರಣಿಜಂ- ಭಾನುಸುತನಾದ ಕಾಲನು, ಇಂದುವದನೆಯ-ಚಂದ್ರಮುಖಿಯಾದ ಮಾಲಿನಿಯ, ನೆನಹಿಗೆ-ಅಭಿಲಾಷೆಗೆ, ಒಳಗಾಗಿ-ವಶನಾಗಿ, ಬಂದು-ಬಿಜಮಾಡಿ, ಮೈದೋರದಿರೆ - ಕಣ್ಣಿನೆದುರಿಗೆ ನಿಲ್ಲದೆ

---

ಗಳಿಂದಲೂ ಮೆಚ್ಚಿಸುವೆನು. ಇದು ಅಸಾಧ್ಯವೆಂದು ಆಲೋಚಿಸದೆ ನನ್ನನ್ನು ಆ ಸೂರ್ಯನ ಮಗನಿಗೇ ಮದುವೆ ಮಾಡೆಂದು ||೧೫|| ತನ್ನ ಮನೋಭಿಪ್ರಾಯವನ್ನು ವೀರವರ್ಮನಿಗೆ ತಿಳಿಸಿ ಸಾಷ್ಟಾಂಗ ನಮಸ್ಕಾರವನ್ನರ್ಪಿಸಲಾಗಿ, ವೀರವರ್ಮನು ತನ್ನ ತನುಜೆಯನ್ನು ಒಳ್ನುಡಿಗಳಿಂದ ಮನ್ನಿಸಿ, ಅಂದು ಮೊದಲು ಯಮಸೂಕ್ತವಂ ಪಠಿಸುತ್ತಲಿದ್ದನು. || ೧೬ || ಮಾಲಿನಿಯೂ ಕೂಡ ದಿವಾರಾತ್ರಿಯಲ್ಲಿಯೂ ಯಮನನ್ನು ಧ್ಯಾನಿಸುತ್ತಲೂ, ಯಮನ ಪ್ರೀತಿಗಾಗಿ ಅನೇಕ ದಾನಧರ್ಮಂಗಳಂ ಮಾಡುತ್ತಲೂ ಇರುವಾಗ ಮಾಲಿನಿಯ ಯೌವನವು ದಿನೇ ದಿನೇ ಹೆಚ್ಚಿ ಮದನ ಬಾಧೆಯಿಂದಲೂ, ಯಮನು ಸುಪ್ರಸನ್ನ

ವೃತ್ತಾಂತಮಂ ಮನದೊಳು ॥ ೧೭ ॥ ನಾರದಮುನೀಶ್ವರಂ ಕಾಲನಲ್ಲಿಗೆ ಬಂದು | ವೀರವರ್ಮ ಕನ್ಯಪನತನುಜೆ ಮಾಲಿನಿಯಂ ವಿ | ಚಾರಿಸದೆ ಸುಮ್ಮನಿರ್ದಪರೆ ನೀ ಧರೆಯ ಮಾನವರನೊಲ್ಲದೆ ನಿನ್ನನು ॥ ಹಾರೈಸಿ ಪತಿಯಾಗಬೇಕೆಂದು ಭಜಿಸುವ | ಳ್ಚಾರಿತ್ರ ಗುಣಶೀಲ ಸತ್ಯಧರ್ಮಂಗಳಿಂ | ಸಾರಸ್ವತಾಖ್ಯಪುರಮಂ ಪಾವನಂಗೈವಳಾಕೆಯಂ ವರಿಸೆಂದನು ॥ ೧೮ ॥ ನಿಜವಾಗಿ ಮನದೊಳನ್ಯರನುಳಿದು ತನ್ನನೇ | ಭಜಿಪ ಶರಣಾಗತರನಾದರಿಸದಿರ್ದಪರೆ | ಸುಜನರೆಲೆ ತರಣಿಸುತ ನಾಲ್ಕು ಚರಣವನೂರಿ ನಡೆವ ಧರ್ಮದೊಳಡರ್ದ ॥ ಪ್ರಜೆಗಳಿಂದೆಸೆವ ಸಾರಸ್ವತಪುರಕ್ಕೆಲೆ ಮ | ನುಜವೇಷಂ ತಾಳ್ದು ನೀಂ ಪೋಗಿ ವರಿಸು ಭೂ | ಭುಜನ ಕುವರಿಯನೆಂದೊಡೊಪ್ಪಿ ವೈವ

---

ಇದ್ದದ್ದರಿಂದ, ಈ ವೃತ್ತಾಂತಮಂ-ವೀರವರ್ಮನ ಕುಮಾರಿಯು ತನ್ನ ಮನದಲ್ಲಿ ಯೋಚಿಸಿಕೊಂಡಿರತಕ್ಕ ಆಶಯವನ್ನು, ಧರ್ಮದ ಸಹಾಯಕ್ಕೆ- ಧರ್ಮಕಾರ್ಯವು ಕೈಗೂಡುವುದಕ್ಕೆ ಅಡಚಣೆಯಾಗಿರುವಾಗ, ಮುಂದುವರಿಪ-ಎದುರಾಳಾಗಿ ಹೋಗಿ ಸಹಾಯ ಮಾಡತಕ್ಕ ಕಾರ್ಯದಲ್ಲಿ ಆಸಕ್ತನಾದ, ಅಸುರಮುನಿ-ಸುರಮುನಿಯಾದ, ನಾರದಂ-ನಾರದನು, ಮನದೊಳು-ತನ್ನ ಮನಸ್ಸಿನಲ್ಲಿ, ತಿಳಿದನು-ಯೋಚಿಸಿಕೊಂಡವನಾದನು. ॥೧೭॥

ಟೀ॥ ನಾರದ ಮುನೀಶ್ವರಂ- ನಾರದ ಮಹರ್ಷಿಯಾದರೊ, ಕಾಲನಲ್ಲಿ- ವೈವಸ್ವತನಿದ್ದ ಸ್ಥಳಕ್ಕೆ, ಬಂದು-ಐತಂದು, (ಯಮನನ್ನು ಕುರಿತು) ನೀಂ-ನೀನು, ವೀರವರ್ಮ ಕನ್ಯಪನತನುಜೆ-ವೀರವರ್ಮನೆಂಬ ಮಹಾರಾಜನ ಕುವರಿಯಾದ, ಮಾಲಿನಿಯಂ-ಮಾಲಿನಿಯೆಂಬ ಬಾಲೆಯನ್ನು, ವಿಚಾರಿಸದೆ-ಅವಳ ಇಷ್ಟಾರ್ಥಸಿದ್ಧಿಯಂ ಮಾಡದೆ, ಸುಮ್ಮನೆ ಇರ್ದಪರೆ-ಮನಸ್ಸಿಗೆ ತಂದುಕೊಳ್ಳದಿರಬಹುದೆ. ನಿನ್ನನು-ನಿನ್ನನ್ನೆ, ಪತಿಯು-ರಮಣನನ್ನಾಗಿ, ಆಗಬೇಕೆಂದು-ಮಾಡಿಕೊಳ್ಳಬೇಕೆಂದು, ಹಾರೈಸಿ-ಆಸೆಯುಳ್ಳವಳಾಗಿ, ಧರೆಯ ಮಾನವರಂ-ಭೂಲೋಕನಿವಾಸಿಗಳಾದ ಮನುಜರನ್ನು, ಒಲ್ಲದೆ-ಕೋರದೆ, ಚಾರಿತ್ರ-ಸಚ್ಚರಿತ್ರೆಯಿಂದಲೂ, ಗುಣ-ಒಳ್ಳೆ ಗುಣಗಳು, ಶೀಲ-ಸನ್ಮಾರ್ಗವು, ಸತ್ಯ-ನಿಶ್ಚಯ ಬುದ್ಧಿಯು, ಧರ್ಮಂಗಳಿಂ-ಧರ್ಮ ಮಾರ್ಗವು ಇವುಗಳಿಂದಲೂ, ಭಜಿಸುವಳು-ಆರಾಧಿಸುತ್ತಲಿದಾಳೆ, ಸಾರಸ್ವತಾಖ್ಯಪುರಮಂ-ಸಾರಸ್ವತವೆಂಬ ಪಟ್ಟಣವನ್ನು, ಪಾವನಂಗೈವಳು-ಪವಿತ್ರವಾಗುವಂತೆ ಮಾಡುವಳು, ಆಕೆಯಂ-ಅಂತಹ ಸದ್ಗುಣ ಸಂಪನ್ನಳಾದ ವೀರವರ್ಮನ ತನುಜೆಯನ್ನು, ವರಿಸು-ಅಂಗೀಕರಿಸುವನಾಗು, ಎಂದನು-ಎಂಬದಾಗಿ ನಾರದನು ಯಮನಿಗೆ ತಿಳಿಸಿದನು.

ಅ॥ ವಿ॥ ಮುನೀಶ್ವರಂ (ಸ. ದೀ. ಮತ್ತು ಷ. ತ) ॥೧೮॥

ಟೀ॥ ಎಲೆ ತರಣಿಸುತ-ಎಲೈ ಭಾನು ಕುಮರನೆ, ಮನದೊಳು-ಮನಸ್ಸಿನೊಳಗೆ, ಅನ್ಯರನು-ಇತರರನ್ನು, ಉಳಿದು-ತ್ಯಜಿಸಿ, ತನ್ನನೆ-ತನ್ನೊಬ್ಬನನ್ನೆ, ಭಜಿಪ-ಆರಾಧಿಸತಕ್ಕ, ಶರಣಾಗತರನು-ಮರೆಬಿದ್ದು ಕೇಳಿಕೊಳ್ಳತಕ್ಕವರನ್ನು, ಸುಜನರು-ಸನ್ಮಾರ್ಗಪ್ರವರ್ತಕರಾದವರು, ಆದರಿಸದೆ-ಮನ್ನಣೆಯಂಗೈಯ್ಯದೆ, ಇರ್ದಪರೆ-ಇರುವುದುಂಟೆ (ಹಾಗೆ ಅನಾದರಣೆಯನ್ನು ಮಾಡತಕ್ಕದ್ದಲ್ಲವು), ನೀಂ- ನೀನಾದರೊ, ಮಾನುಷ್ಯವೇಷಮುಂ ತಾಳ್ದು- ಮನುಷ್ಯಸಂಬಂಧವಾದ ಆಕಾರವನ್ನು ಮಾಡಿಕೊಂಡು, ನಾಲ್ಕು ಚರಣವನು-ಕಾಲುಗಳ ನಾಲ್ಕನ್ನು, ಊರಿ-ಇಟ್ಟು, ನಡೆವ-ತಿರುಗುವ, ಧರ್ಮದೊಳು-ಧರ್ಮದ ಮೂಲಕ, ಅಡರ್ದ-ಸೇರಿಕೊಂಡಿರುವ, ಪ್ರಜೆಗಳಿಂದ-ಜನಗಳಿಂದ, ಎಸೆವ-ಹೊಳೆಯುತ್ತಲಿರತಕ್ಕ, ಸಾರಸ್ವತಪುರಕೆ- ಸಾರಸ್ವತನಗರಕ್ಕೆ, ಪೋಗಿ-ಹೋದವನಾಗಿ, ಭೂಭುಜನ-ರಾಜೇಂದ್ರನಾದ ವೀರವರ್ಮನ, ಕುವರಿಯನು-ಪುತ್ರಿಯನ್ನು, ವರಿಸು-ಮದುವೆಮಾಡಿಕೊ, ಎಂದೊಡೆ-ಎಂಬದಾಗಿ ನಾರದಮುನಿಯು ನುಡಿಯಲು, ವೈವಸ್ವತಂ-ಅಂತಕನಾದರೊ, ಒಪ್ಪಿ-ನಾರದರ ಮಾತಿಗೆ ಅನುಮೋದಿಸಿ,

---

ನಾಗದಿರುವ ಮನೋವ್ಯಥೆಯಿಂದಲೂ ಸಂಕಟಪಡುತ್ತಿರುವುದನ್ನು ದೇವಮುನಿಯಾದ ನಾರದನು ದಿವ್ಯಜ್ಞಾನದಿಂದರಿತು ॥೧೭॥ ಸಂಭ್ರಮದಿಂದ ಕೂಡಿ ಯಮಲೋಕಕ್ಕೆ ಬಂದು, ಅಂತಕನ ದರ್ಶನವಂ ಮಾಡಿಕೊಂಡು, ಕಾಲನನ್ನು ಕುರಿತು, ಎಲೈ ದಂಡಧರನೆ ಕೇಳು, ಭೂಲೋಕದಲ್ಲಿ ಸಾರಸ್ವತನಗರದ ರಾಜನ ಕುವರಿಯಾದ ಮಾಲಿನಿ ಎಂಬ ಕನ್ಯಾಮಣಿಯು ಮಾನವರನ್ನು ಮದುವೆಮಾಡಿಕೊಳ್ಳಲು ಇಷ್ಟವಿಲ್ಲದೆ ನಿನ್ನನ್ನೆ ವರಿಸಿ ಸುಖಿಯಾಗಬೇಕೆಂದು ಹಾರೈಸುತ್ತ, ವಿಧ ವಿಧವಾದ ಪೂಜೆಗಳನ್ನು ಮಾಡುತ್ತಲಿದ್ದರೂ ಕೂಡ ನೀನು ಪ್ರಸನ್ನನಾಗದಿರಬಹುದೆ? ಆ ಮಾಲಿನಿಯು ಗುಣದಲ್ಲಿಯೂ, ಶೀಲದಲ್ಲಿಯೂ, ರೂಪಲಾವಣ್ಯಾದಿಗಳಲ್ಲಿಯೂ ಸಕಲರನ್ನೂ ಮೀರಿಸಿರುವಳು. ಸನ್ಮಾರ್ಗದಿಂದಲೂ ದಾನಧರ್ಮಾದಿಗಳಿಂದಲೂ ಸಾರಸ್ವತನಗರವನ್ನು ಪಾವನವಾಗುವಂತೆ ಮಾಡುತ್ತಲಿರುವಳು. ॥೧೮॥ ಎಲೈ ಭಾನುಸೂನುವೇ, ಯಾವಲ್ಲಿಯೂ ಮನಸ್ಸಿಡದೆ ಅನವರತವೂ ನಿನ್ನನ್ನೆ ಭಜಿಸುತ್ತ ನಿನ್ನ ಶರಣಾಗತಳಾದವಳನ್ನು ಆದರಿಸದೆ ಈ ಪರಿ ಉಪೇಕ್ಷೆ ಮಾಡುವುದು ಯುಕ್ತವಲ್ಲವು. ಧರ್ಮಕ್ಕೆ ನೆಲೆಯಾಗಿರುವ ಸಾರಸ್ವತ ನಗರಕ್ಕೆ ಮನುಷ್ಯ ವೇಷದಿಂದ ನೀನು ಹೋಗಿ ಅಲ್ಲಿಗೆ ರಾಜನಾಗಿರುವ ವೀರವರ್ಮನ ತನುಜೆಯಾದ ಮಾಲಿನಿಯನ್ನು ಮದುವೆ ಮಾಡಿಕೊಳ್ಳೆಂದು ಬೋಧಿಸುತ್ತಲಿರುವ ನಾರದ ಮುನಿಯ ನುಡಿಗಳಿಗೆ ಸಮ್ಮತಿಸಿ

ಸ್ವತಂ ಕಳುಹಿದಂ ಸುರಮುನಿಯನು || ೧೯ || ಅಸ್ವಭಾವಿಕಮಲ್ಲನೈಜಮಿದು ತನಗೆನೆತ | ಪಸ್ವಿಗಳ ಮೌಳಿಮಣಿ ನಾರದಂ ಪೋಗಿ ವೈವ ಸ್ವತಂಗರುಪಿ ಮಾಲಿನಿಯ ಭಾವವನಲ್ಲಿ ಬೀಳ್ಕೊಂಡು ಖೇಚರದೊಳು || ಸುಸ್ವರದ ವೀಣೆ ಪಿಡಿದಾನಂದದಿಂದ ಸಾ | ರಸ್ವತಪುರಕೆ ಬಂದು ಕಾಲನಾಡಿದುದಂ ಯಶಸ್ವಿಯಾಗಿಹ ವೀರವರ್ಮನಂ ಕಂಡು ಸತ್ಕೃತನಾಗಿ ವಿವರಿಸಿದನು ||೨೦|| ಧರ್ಮರಾಜನ ಪೊರೆಗೆ ಪೋಗಿರ್ದೆನೆಲೆ ವೀರ | ವರ್ಮ ಕೇಳಿನ್ನೆಗಂ ನೀನಾರ್ಜಿಸಿದ ಪುಣ್ಯ | ಕರ್ಮಫಲದಿಂದ ವೈಶಾಖಮಾಸದ ಶುಕ್ಲಪಕ್ಷದೊಳ್ಧರೆಗೆ ಬಂದು || ನಿರ್ಮಲಚರಿತ್ರೆ ತವ ತನುಜೆ ಮಾಲಿನಿಯುಂ ಜ | ನರ್ಮೆಚ್ಚೆ ಮದುವೆಯಾದಪೆನೆಂದನಂತಕಂ | ಪೇರ್ಮೆಯಿಂದಾದರಿಸುವಂತೆ ಸಂಪಾದಿಸುವುದೆಂದು ಮುನಿಪತಿ ನುಡಿದನು ||೨೧|| ಸುರಮುನಿಯ ವಾಕ್ಯಮಂ ಕೇಳ್ದಂ | ಪರಿತೋಷಮಂ ಭೂಪನೊಲವಿಂದ ನಲವಿಂದ |

---

ಸುರಮುನಿಯನು–ನಾರದ ಮಹರ್ಷಿಯನ್ನು, ಕಳುಹಿದಂ–ಹಿಂದಕ್ಕೆ ಕಳುಹಿಸಿದನು ||೧೯||

ಟೀ|| ಇದು–ಈ ತೆರನಾದ ಕೆಲಸವು, ತನಗೆ–ನಾರದನಿಗೆ, ಅಸ್ವಭಾವಿಕಂ-ನವೀನವಾದದ್ದು, ಅಲ್ಲ–ಅಲ್ಲವು, ನೈಜಂ–ಯಾವಾಗಲೂ ಇರತಕ್ಕದ್ದೇ ಆಗಿದೆ, ಎನೆ–ಎಂಬತೆರನಾಗಿ, ತಪಸ್ವಿಗಳ–ಋಷಿವರ್ಯರ, ಮೌಳಿ–ತಲೆಗಳಿಗೆ, ಮಣಿ–ರತ್ನದ ಹಾಗೆ ಇರತಕ್ಕ, ನಾರದಂ–ನಾರದ ಮುನೀಂದ್ರನು, ವೈವಸ್ವತಂಗೆ–ಸೂರ್ಯನ ಕುವರನಾದ ಯಮಧರ್ಮರಾಯನೊಂದಿಗೆ, ಮಾಲಿನಿಯ–ಮಾಲಿನಿಯೆಂಬ ಕನ್ಯಕಾಮಣಿಯ, ಭಾವವನು–ಅಭಿಲಾಷೆಯನ್ನು, ಅರುಪಿ–ಹೇಳಿ, ಅಲ್ಲಿ–ಕೃತಾಂತನ ಹತ್ತಿರ, ಬೀಳ್ಕೊಂಡು–ಆಜ್ಞೆಯನ್ನು ಹೊಂದಿ ಹಿಂದಿರುಗಲು, ಪೋಗಿ–ಮುಂದೆ ಹೊರಟು, ಖೇಚರದೊಳು–ಅಂತರಿಕ್ಷದಲ್ಲಿ, ಸುಸ್ವರದ–ಚನ್ನಾಗಿ ಧ್ವನಿ ಮಾಡುವ, ವೀಣೆ–ಮಹತೀ ಎಂಬೊಂದು ವೀಣೆಯನ್ನು, ಪಿಡಿದು–ಹಿಡಿದವನಾಗಿ, ಸಾರಸ್ವತ ಪುರಕೆ–ಸಾರಸ್ವತ ನಗರಕ್ಕೆ, ಆನಂದದಿಂದ–ಸಂತಸದಿಂದ, ಬಂದು–ಹೊಕ್ಕವನಾಗಿ, ಯಶಸ್ವಿಯಾಗಿಹ–ಕೀರ್ತಿವಂತನಾಗಿರುವ, ವೀರವರ್ಮನಂ–ವೀರವರ್ಮನೆಂಬ ಸಾರಸ್ವತನಗರದ ಅರಸನನ್ನು, ಕಂಡು–ದರ್ಶನ ತೆಗೆದುಕೊಂಡು, ಸತ್ಕೃತನಾಗಿ–ಅವನು ಮಾಡಿದ ಸತ್ಕಾರವನ್ನು ಒಪ್ಪಿ, ಕಾಲನು–ಯಮನು, ಆಡಿದುದಂ–ಹೇಳಿದ ಸಮಾಚಾರವನ್ನು, ವಿವರಿಸಿದನು–ತಿಳಿಯಪಡಿಸಿದನು ||೨೦||

ಟೀ|| ಮುನಿಪತಿ–ಮುನಿವರ್ಯನಾದ ನಾರದ ಮಹರ್ಷಿಯು, (ವೀರವರ್ಮನನ್ನು ಕುರಿತು) ಎಲೆ ವೀರವರ್ಮ–ಅಯ್ಯಾ ವೀರವರ್ಮನೆಂಬ ಭೂಮಿಪತಿಯೇ, ಕೇಳು–ನನ್ನ ನುಡಿಗಳನ್ನು ಆಲಿಸು, (ನಾನು) ಧರ್ಮರಾಜನ ಪೊರೆಗೆ–ಯಮನಿರುವ ಸ್ಥಳಕ್ಕೆ, ಪೋಗಿರ್ದೆನು–ಹೋಗಿದ್ದೆನು, ಇನ್ನೆಗಂ–ಇಷ್ಟುದಿನ ಪರ್ಯಂತವೂ, ನೀನು ಆರ್ಜಿಸಿದ–ಗಳಿಸಿದ, ಪುಣ್ಯಕರ್ಮ ಫಲದಿಂದ–ಒಳ್ಳೆಯ ಕಾರ್ಯಗಳ ಅನುಕೂಲತೆಗಳಿಂದ, ಅಂತಕಂ–ಭಾನುಪುತ್ರನು, ಧರೆಗೆ–ಭೂತಳಕ್ಕೆ, ವೈಶಾಖಮಾಸದ–ವೈಶಾಖವೆಂಬ ಮಾಸದಲ್ಲಿ, ಶುಕ್ಲಪಕ್ಷದೊಳ್–ಶುಕ್ಲಪಕ್ಷದೊಳಗೆ, ಬಂದು–ಐತಂದು, ಜನಗಳು–ಭೂಲೋಕವಾಸಿಗಳೆಲ್ಲರೂ, ಮೆಚ್ಚುವಂತೆ–ಒಪ್ಪಿಕೊಳ್ಳುವಹಾಗೆ, ನಿರ್ಮಲ–ಪಾವನವಾದ, ಚರಿತೆ–ಚರಿತ್ರೆಯುಳ್ಳ, (ನಡವಳಿಕೆಯಿಂದೊಡಗೂಡಿರುವ) ತವ–ನಿನಗೆ, ತನುಜೆ–ಕುವರಿಯಾದ, ಮಾಲಿನಿಯುಂ–ಮಾಲಿನಿಯೆಂಬ ಬಾಲೆಯನ್ನು, ಮದುವೆಯಾದಪೆನು–ಪಾಣಿಗ್ರಹಣಮಾಡಿಕೊಳ್ಳುವೆನು, ಎಂದು–ಎಂಬತೆರನಾಗಿ, ಎಂದನು–ನುಡಿದನು, ಪೇರ್ಮೆಯಿಂದ–ಹೆಚ್ಚಿಕೆಯಿಂದ, ಆದರಿಸುವಂತೆ–ಮರ್ಯಾದೆಮಾಡತಕ್ಕ ರೀತಿಯಲ್ಲಿ, ಸಂಪಾದಿಸುವುದು–ಅವನ ಪ್ರೀತಿಗೆ ಪಾತ್ರನಾಗಬೇಕು, ಎಂದು–ಎಂಬ ತೆರನಾಗಿ, ನುಡಿದನು–ತಿಳಿಯಪಡಿಸಿದನು. ||೨೧||

ಟೀ|| ಭೂಪನು–ವೀರವರ್ಮನೆಂಬ ಪೃಥ್ವೀಶ್ವರನು, ಸುರಮುನಿಯ–ದೇವಮುನಿಯಾದ ನಾರದ ಮಹರ್ಷಿಯ, ವಾಕ್ಯಮಂ–ನುಡಿಯನ್ನು, ಕೇಳ್ದಂ–ಆಲಿಸಿದನು, ಪರಿತೋಷಮಂ–ಸಂತೋಷವನ್ನು, ತಾಳ್ದಂ–ಪಡೆದನು, ಪುರವನು–ಸಾರಸ್ವತ ನಗರವನ್ನು, ಒಲವಿಂದ–ಅಕ್ಕರೆಯಿಂದಲೂ, ನಲವಿಂದ–ಆನಂದದಿಂದಲೂ, ಐದೆ–ಚೆನ್ನಾಗಿ, ಸಿಂಗರಿಸಿದಂ–ಸೌಂದರ್ಯವುಳ್ಳದ್ದನ್ನಾಗಿ ಮಾಡಿದನು, ಬೇಕಾದ ವಸ್ತುಗಳನು–ಅನೇಕ ವಿಧವಾದ ಸಾಮಗ್ರಿಗಳನ್ನು, ತರಿಸಿದಂ–ತೆಗೆದುಕೊಂಡು ಬರುವಂತೆ ಮಾ

---

ದವನಾಗಿ, ಮುನಿಪುಂಗವನನ್ನು ಮರ್ಯಾದೆಯಿಂದ ಕಳುಹಿಸಿಕೊಟ್ಟನು. || ೧೯ || ಯಮಧರ್ಮರಾಜನಿಂದ ಸತ್ಕಾರವನ್ನೈದಿ ಹಿಂದಿರುಗಿ ಬಂದ ನಾರದ ಮುನೀಶ್ವರನಾದರೋ, ಮನಸ್ಸಿನಲ್ಲಿ ಅತಿಶಯವಾದ ಆನಂದವಂ ತಾಳಿ, ವೀಣೆಯನ್ನು ನುಡಿಸುತ್ತಾ ಸಾರಸ್ವತನಗರಕ್ಕೆ ಬಂದು ಸೇರಿ, ಅಲ್ಲಿಯ ಅರಸನಾದ ವೀರವರ್ಮನಂ ಕಂಡು, ಅವನು ಮಾಡಿದ ಸತ್ಕಾರಮಂ ಸ್ವೀಕರಿಸಿ ವೀರವರ್ಮನನ್ನು ಕುರಿತು ಇಂತೆಂದನು || ೨೦ || ಅಯ್ಯಾ ವೀರವರ್ಮಮಹೀವಲ್ಲಭನೆ ಕೇಳು, ನಾನು ಧರ್ಮರಾಜನ ಬಳಿಗೆ ಹೋಗಿ ಆತನ ಆಶಯವನ್ನು ತಿಳಿದುಕೊಂಡು ಇಲ್ಲಿಗೆ ಬಂದಿರುವೆನು ಲೋಕದಲ್ಲಿ ನೀನು ಮಾಡಿದ ಪುಣ್ಯದ ಫಲವು ನಿನಗೆ ಕೈಗೂಡುವ ಕಾಲವು ಒದಗಿತು ಸೂರ್ಯಸುತನಾದ ಕಾಲನು ವೈಶಾಖಶುದ್ಧದಲ್ಲಿ ಭೂಲೋಕಕ್ಕೆ ಬಂದು, ಪಾವನ ಚರಿತ್ರೆಯಾಗಿರತಕ್ಕ ಮಾಲಿನಿಯೆಂಬ ನಿನ್ನ ಮಗಳನ್ನು ಮದುವೆಮಾಡಿಕೊಂಡು ನಿನಗೂ ನಿನ್ನ ಕುವರನಿಗೂ, ನಿನ್ನ ಪ್ರಜೆಗಳಿಗೂ ಸಂತಸವನ್ನುಂಟುಮಾಡುವನು ಮದುವೆಗೆ ಬೇಕಾದ ಸೋಪಸ್ಕರಗಳನ್ನು ಅಣಿಮಾಡಿಕೊಳ್ಳೆಂದು ನುಡಿದ ನಾರದಮುನೀಂದ್ರನ ವಾಕ್ಯಮಂ

ಪುರವರವನ್ನೈದೆಸಿಂಗರಿಸಿತರಿಸಿದಂಬೇಕಾದವಸ್ತುಗಳನು ‖ ಸರಸಗುಣಸೌಂದರ್ಯಶಾಲಿನಿಗೆಮಾಲಿನಿಗೆ | ತರಣಿಜನಕೂಡೆವೈವಾಹಮುಂಮೋಹಮುಂ | ದೊರಕೊಂಬುದೆಂದುವಿಸ್ತರಿಸಿದಂಕರೆಸಿದಂಬಾಂಧವರನುತ್ಸವದೊಳು ‖ ೨೨ ‖ ರಿಪುಮಥನಕೇಳಿತ್ತ ಮಾಲಿನಿಯಪರಿಣಯಕೆ | ತಪನಜಂಪೊರಮಟ್ಟುತನ್ನಮನ್ನಣೆಯವರ | ನಪರಿಮಿತಪರಿವಾರಮುಂಕರೆಸಿಬಹುದುನೀವೆಮ್ಮೊಡನೆಮದುವೆಗೆನಲು ‖ ಕುಪಿತವದನದಕೋರೆದಾಡೆಗಳಕಾರೊಡಲ | ವಿಪರೀತವಿಕ್ರಮಭಯಂಕರದವೀರಭಟ | ರುಪಮಿಸುವಡರಿದೆನಲ್‌ಕ್ಷಯನೆಂಬಮಂತ್ರಿಯೊಡನೈತಂದರಾಕ್ಷಣದೊಳು ‖ ೨೩ ‖ ದುರಿತಕೋಟಿಗಳೊಡನೆಪಂಚಪಾತಕಮುಖ್ಯ | ದೊರೆಗಳಿಟ್ಟಣಿಸಿತಗಣಿತರೋಗಸಂಕುಲಂ | ವೆರಸಿಮಿಗೆರಾಜಕ್ಷಯಾದಿನಿಖಿಳವ್ಯಾಧಿನಾಯ | ಕರ್ಸಂದಣಿಸಲಗಣಿತದ ರುಜೆಗಳರಸಿಯರಸಂಖ್ಯಾತದಿಂ | ನೆರೆದುದಗಣಿತಸೂಚಿಕಾಗ್ರಹಣ್ಯಾದಿಭೀ | ಕರವದನೆಯರಕೂಡೆಬಳಿಕಂತಕಂಗೆಬಿನ್ನೈ

---

ಸಿದನು, ತರಣಿಜನಕೂಡೆ-ಸೂರ್ಯನಮಗನಾದ ಯಮಧರ್ಮರಾಯನೊಂದಿಗೆ, ಸರಸಗುಣಸೌಂದರ್ಯಶಾಲಿನಿಗೆ – ಸರಸ-ಶೃಂಗಾರವೇ ಮೊದಲಾದ ನವರಸಗಳಿಂದಲೂ, ಗುಣ-ಒಳ್ಳೇ ಗುಣಗಳಿಂದಲೂ, ಸೌಂದರ್ಯ-ಅಲಂಕಾರದಿಂದಲೂ, ಶಾಲಿನಿಗೆ-ಕೂಡಿರತಕ್ಕ, ಮಾಲಿನಿಗೆ-ಮಾಲಿನಿಯೆಂಬ ಬಾಲೆಗೆ, ವೈವಾಹಮುಂ-ಪಾಣಿಗ್ರಹಣಮಹೋತ್ಸವವೂ, ಮೋಹಮುಂ-ಅವರೀರ್ವರಿಗೂ ಪರಸ್ಪರ ಪ್ರೀತಿಯೂ, ದೊರಕೊಂಬುದು-ಲಭಿಸುವುದು, ಎಂದು-ಎಂಬತೆರನಾಗಿ, ವಿಸ್ತರಿಸಿದಂ-ಎಲ್ಲೆಲ್ಲಿಯೂ, ಪ್ರಸಿದ್ಧಪಡಿಸಿದನು, (ಬೇಕಾದವರಿಗೆಲ್ಲಾ ಲಗ್ನಪತ್ರಿಕೆಗಳನ್ನು ಬರೆದು ಕಳುಹಿದನು) ಬಾಂಧವರನು-ತನ್ನ ನಂಟರನ್ನೆಲ್ಲಾ, ಉತ್ಸವದೊಳು-ಬಹು ಸಂತೋಷದಿಂದ, ಕರೆಯ ಕಳುಹಿದನು ‖೨೨‖

ಟೀ‖ ರಿಪುಮಥನ – ವೈರಿಗಳನ್ನು ಧ್ವಂಸಮಾಡುವುದರಲ್ಲಿ ಸಮರ್ಥನಾದ ಪಾರ್ಥನೆ, ಕೇಳು-ಲಾಲಿಸು, ತಪನಜಂ-ಭಾನುಸುತನಾದರೊ, ಇತ್ತ-ತನ್ನ ರಾಜಧಾನಿಯಾದ ಸಂಯಮನೀಪಟ್ಟಣದ ಕಡೆಯಿಂದ, ಮಾಲಿನಿ ಎಂಬ ಕನ್ಯೆಯ, ಪರಿಣಯಕೆ-ಪಾಣಿಗ್ರಹಣಕ್ಕೆ, ಪೊರಮಟ್ಟು-ಹೊರಟವನಾಗಿ, ತನ್ನ-ತನ್ನವರಾದ, ಮನ್ನಣೆಯವರನು-ಸೇವೆಮಾಡುವವರನ್ನೂ, ಅಪರಿಮಿತ-ಅಸಂಖ್ಯಾತವಾದ, ಪರಿವಾರವನು-ಸೇನೆಯವರು ಸಭೆಯಲ್ಲಿ ನೆರದಿರುವರು ಇವರುಗಳನ್ನು, ಕರೆಸಿ-ಬರಹೇಳಿ, ನೀವು-ನೀವೆಲ್ಲರೂ, ಮದುವೆಗೆ-ಮಾಲಿನಿಯೊಂದಿಗೆ ನಾನು ಮಾಡಿಕೊಳ್ಳತಕ್ಕ ಲಗ್ನಕ್ಕೆ, ಎಮ್ಮೊಡನೆ-ನಮ್ಮೊಂದಿಗೆ, ಬಹುದು-ಬರಬೇಕು, ಎನಲು-ಎಂದು ನುಡಿಯಲು, ಕುಪಿತವದನದ-ಆಗ್ರಹದಿಂದ ಕೂಡಿದ ಮುಖವೂ, ಕೋರದಾಡೆಗಳ-ಕೋರೆ ಹಲ್ಲುಗಳೂ, ವಿಪರೀತ-ಅತ್ಯಧಿಕವಾದ, ವಿಕ್ರಮ-ಶೌರ್ಯವೂ ಇವುಗಳಿಂದ ಕೂಡಿ, ಭಯಂಕರ-ಹೆದರಿಕೆಯನ್ನುಂಟುಮಾಡತಕ್ಕ, ವೀರಭಟರು-ಸಾಹಸಾತಿಶಯದಿಂದ ಕೂಡಿದವರು, ಉಪಮಿಸುವೊಡೆ-ಹೋಲಿಕೆಯನ್ನು ಕೊಡಲು, ಅರಿದು-ಅಸಾಧ್ಯವು, ಎನಲ್ ಎಂಬಂತೆ, ಆಕ್ಷಣದೊಳು-ಕೂಡಲೆ, ಕ್ಷಯನೆಂಬ-ಕ್ಷಯನಾಮಕನಾದ, ಮಂತ್ರಿಯೊಡನೆ-ಸಚಿವನೊಂದಿಗೆ, ಐತಂದರು-ಬಂದು ನೆರೆದರು.

ಅ‖ ವಿ‖ ಮನ್ನಣೆ (ತ್ಪ) ಮಾನ್ಯತಾ (ತ್ಸ) ರಿಪುಮಥನ (ದ್ವಿ. ತ.) ‖೨೩‖

ಟೀ‖ ಪಂಚಪಾತಕ-ಸ್ವರ್ಣಸ್ತೇಯ, ಸುರಾಪಾನ, ಬ್ರಹ್ಮಹತ್ಯ, ಭ್ರೂಣಹತ್ಯ, ಈ ನಾಲ್ಕು ಪಾಪಗಳಂ ಮಾಡುವರೊಂದಿಗೆ ಸೇರುವುದು ಇವುಗಳೇ, ಮುಖ-ಆದಿಯಾಗಿರತಕ್ಕವುಗಳು, ದೊರೆಗಳು – ಅಧಿನಾಯಕರು, ದುರಿತಕೋಟಿಯೊಡನೆ-ಅಪರಿಮಿತವಾದ ಪಾತಕದೊಂದಿಗೆ, ಇಟ್ಟಣಿಸಿತು-ಒಟ್ಟುಕೂಡಿ ಬಂದಿತು, ರಾಜಕ್ಷಯಾದಿ-ರಾಜಕ್ಷಯವೇ ಮೊದಲಾದ, ನಿಖಿಳ-ಅಶೇಷರಾದ, ವ್ಯಾಧಿನಾಯಕರು-ಕಾಯಿಲೆಗಳ ಒಡೆಯರು, ಮಿಗೆ-ಅತಿಶಯವಾಗಿ, ಅಗಣಿತ-ಅಸಂಖ್ಯಾತವಾದ, ರೋಗಸಂಕುಲಂ ವೆರಸಿ – ರೋಗಾನೇಕಂಗಳಿಂದ ಕೂಡಿ, ಸಂದಣಿಸಲು – ನೆರೆಯಲು, ಅಗಣಿತ – ಎಣಿಸಲು ಆಗದಿರುವ, ಸೂಚಿಕಾಗ್ರಹಣ್ಯಾದಿ-ಸೂತಿಕಾಗ್ರಹವೇ ಮೊದಲಾದ, ಭೀಕರ-ಹೆದರಿಕೆಯನ್ನುಂಟುಮಾಡತಕ್ಕ, ವದನೆಯರಕೂಡೆ-ಮುಖವುಳ್ಳವರೊಂದಿಗೆ, ಉರು

---

ಕೇಳದೊಡನೆಯೇ ವೀರವರ್ಮನ ಸಂತೋಷವು ಮಿತಿಮೀರಿತು ‖೨೧‖ ಕೂಡಲೇ ಪಟ್ಟಣವನ್ನೆಲ್ಲಾ ಶೃಂಗಾರಮಾಡುವಂತೆ ಆಜ್ಞಾಪಿಸಿದನು, ಸದ್ಗುಣಸಂಪನ್ನಳಾದ ಮಾಲಿನಿಯನ್ನು ಸೂರ್ಯಪುತ್ರನಾದ ಯಮನಿಗೆ ಕೊಟ್ಟು ವಿವಾಹವು ನಡೆಯುವಂತೆ ತನ್ನ ರಾಷ್ಟ್ರದಲ್ಲೆಲ್ಲಾ ಸಿದ್ಧಪಡಿಸಿ ತನ್ನ ಬಂಧುವರ್ಗದವರನ್ನೆಲ್ಲಾ ಕರೆಯಿಸಿದವನಾಗಿ ಅತ್ಯಾನಂದದಿಂದ ಕೂಡಿದ್ದನು ‖೨೨‖ ಸಾರಸ್ವತ ನಗರವೆಲ್ಲಾ ಮದುವೆಯ ಸಂಭ್ರಮದಿಂದ ಕೂಡಿತ್ತು. ಅತ್ತ ಯಮನಾದರೊ, ತನ್ನ ರಾಜಧಾನಿಯಿಂದ ಸಾರಸ್ವತನಗರಕ್ಕೆ ಹೊರಡಲಿಚ್ಛಿಸಿದವನಾಗಿ ತನ್ನ ಅಸಂಖ್ಯಾತವಾದ ಸೈನ್ಯವನ್ನೆಲ್ಲಾ ಕರೆಯಿಸಿದವನಾಗಿ ನೀವೆಲ್ಲರೂ ಸಾರಸ್ವತ ನಗರಕ್ಕೆ ನನ್ನೊಂದಿಗೆ ಬರಬೇಕೆಂಬುದಾಗಿ ಹೇಳಲು, ರೌದ್ರಾಕಾರವಾದ ಮುಖಗಳಿಂದಲೂ ಕಪ್ಪಾದ ಮೈಗಳಿಂದಲೂ ಕೂಡಿದ ಮಹಾಪರಾಕ್ರಮಿಗಳೆಲ್ಲರೂ ಕ್ಷಯನೆಂಬ ಮುಖ್ಯಾಮಾತ್ಯನನ್ನು ಮುಂದುಮಾಡಿಕೊಂಡು ಹೊರಟರು ‖೨೩‖ ಆ ಕ್ಷಯನೆಂಬ ಮುಖ್ಯಮಂತ್ರಿಯು ಹೊರಡಲು ಆತನ ಹಿಂದೆ ಕೋಟಿಪ್ರಕಾರವಾದ ಪಾಪರಾಶಿಗಳಿಂದ ಕೂಡಿದ [illegible] ಅಧಿ

ಸಿದಂ ಕ್ಷಯಸಚಿವನು ‖೨೪‖ ದೇವನಿಮ್ಮೊಡನೆಮದುವೆಗೆಬಂದೊಡೆಮಗೆವೇ| ದಾವಳಿಯಘೋಷಶ್ರವಣಮ-ಹುದುಹೋಮಧೂ |
ಮಾವಲೋಕನಮಹುದುಪುಣ್ಯಕರ್ಮಿಗಳಸೋಂಕಿನಗಾಳಿಮೇಲೆಬಹುದು ‖ ಆವೀರವರ್ಮಕಂಧಾರ್ಮಿಕಂಗೋವಿಪ್ರಸೇವಕಂ
ಪ್ರಜೆಗಳುಂದ್ವಿಜಹಿತನರತಿಶುಚಿಗ | ಳಾವೆಂತುಬಹೆವಲ್ಲಿಗೆಂದೊಡಕೃತಾಂತಕಂ ಕ್ಷಯಗೆಮಗುಳಿಂತೆಂದನು ‖ ೨೫ ‖ ಕ್ಷಯ
ಕೇಳ್ಸಮಸ್ತಪಾತಕರೋಗನಾಯಕ | ಭಯಮುಂಟಾಕಾರಂಗಳಂಬಿಟ್ಟುದಿವ್ಯಾಕೃ | ತಿಯನಾಂತುತನ್ನಪಟ್ಟಣದೊಳೆಂತನ
ವರತಮಿರುತಿರ್ಪರಂತನಿಬರು ‖ ಪ್ರಿಯದಿಂದಬರಲೆಮ್ಮೊಡನೆಮದುವೆಗಾಪುರಾ | ಶ್ರಯದನರರೆಲ್ಲರುಂಪುಣ್ಯಕರ್ಮಿಗಳವರ |
ನಯನಾವಲೋಕನಕೆಸೊಗಸಾಗಬೇಕೆಂದುವೈವಸ್ವತಂನುಡಿದನು ‖ ೨೬ ‖ ಆಲಿಸುವುದೆಲ್ಲರುಂಪಾಪಿಗಳಕಣ್ಗೆತಾಂ | ಕಾಲಾ

---

ತರದ_ಬಹು ಹೆಚ್ಚಾದ, ರುಜೆಗಳ_ಕಾಯಿಲೆಗಳ, ಅರಸಿಯರು_ನಾಯಕಿಯರು, (ಕಾಯಿಲೆಗಳ ಅಧಿನಾಯಕಿಯರು) ನೆರೆದುದು-ಒಟ್ಟು ಗೂಡಿತು, ಬಳಿಕ_ಇವರೆಲ್ಲಾ ಒಟ್ಟಾಗಿ ಸೇರಿದ ನಂತರ, ಕ್ಷಯಸಚಿವನು_ಕ್ಷಯರೋಗಕ್ಕೆ ದೊರೆಯಾದ ಅಮಾತ್ಯನು, ಅಂತಕಂಗೆ-ಯಮನೊಂದಿಗೆ, ಬಿನ್ನೈಸಿದಂ-ಅರಿಕೆ ಮಾಡುವನು ‖೨೪‖

ಟೀ‖ ದೇವ_ಎಲೈ ಪ್ರಭುವೇ, ಮದುವೆಗೆ - ಮಾಲಿನಿ ಎಂಬ ಕನ್ನಿಕೆಯ ಪರಿಣಯಕ್ಕೆ, ನಿಮ್ಮೊಡನೆ - ನಿಮ್ಮ ಜತೆಯಲ್ಲಿ, ಬಂದೊಡೆ_ಬಂದು ಸೇರಿದರೆ, ವೇದಾವಳಿಯ_ವೇದಸಮುದಾಯದ, ಘೋಷ-ಧ್ವನಿಯ, ಶ್ರವಣಂ-ಕೇಳಿಸುವಿಕೆಯು, ಎಮಗೆ_ನಮಗಾದರೊ, ಅಹುದು_ಉಂಟಾಗುವುದು, ಹೋಮ_ಹವಿಸ್ಸುಗಳ, ಧೂಮ_ಹೊಗೆಯನ್ನು, ಅವಲೋಕನಂ_ನೋಡುವುದು, ಅಹುದು-ಆಗುತ್ತದೆ, ಮೇಲೆ - ನಾವಿರುವ ಕಡೆಗೆ, ಪುಣ್ಯಕರ್ಮಿಗಳ ಸೋಂಕಿನಗಾಳಿ - ಸತ್ಕಾರ್ಯ ನಿರತರಾದವರ ಕಡೆಯಿಂದ ಬರತಕ್ಕ ಗಾಳಿಯು, ಬಹುದು-ಬರುತ್ತದೆ, ಆವೀರವರ್ಮಕಂ_ಆ ವೀರವರ್ಮನೆಂಬ ಮಹೀಪಾಲನಾದರೊ, ಧಾರ್ಮಿಕಂ-ಧರ್ಮಶೀಲನು, ಗೋವಿಪ್ರಸೇವಕಂ - ಹಸುಗಳು, ಭೂಸುರರು - ಇವರನು ಭಜಿಸುವುದರಲ್ಲಿ ಅತ್ಯಾಸಕ್ತನು, ಪ್ರಜೆಗಳುಂ-ಸಾರಸ್ವತ ನಗರ ವಾಸಿಗಳೂ ಕೂಡ, ದ್ವಿಜಹಿತರು - ಭೂಸುರರಲ್ಲಿ ಅನುರಾಗವುಳ್ಳವರು, ಶುಚಿಗಳು - ಪವಿತ್ರರಾದವರು, ಅಲ್ಲಿಗೆ-ಅಂತಹ ಪವಿತ್ರವಾದ ಸಾರಸ್ವತ ನಗರಕ್ಕೆ, ಎಂತು_ಹೇಗೆ, ಆವು-ನಾವು, ಬಹೆವು_ಬರಲಾದೀತು, ಎಂದೊಡೆ_ಎಂಬುದಾಗಿ ಕ್ಷಯನು ಅಂತಕನನ್ನು ಕೇಳಲು, ಕ್ಷಯಗೆ - ಕ್ಷಯ ನಾಮಕನಾದ ಸಚಿವನಿಗೆ, ಮಗುಳೆ - ತಿರುಗಿ, ಇಂತು-ಮುಂದೆ ಹೇಳುವಂತೆ, ಕೃತಾಂತಕಂ-ದಂಡಧರನು, ಎಂದನು_ಉತ್ತರವನ್ನಿತ್ತನು. ‖೨೫‖

ಟೀ‖ ಕ್ಷಯ_ಸಚಿವನಾದ ಕ್ಷಯನೆ, ಕೇಳು - ಲಾಲಿಸು, ಸಮಸ್ತ - ಸಕಲವಾದ, ಪಾತಕ-ದುರಿತಂಗಳ, ರೋಗ_ಕಾಯಿಲೆಗಳ, ನಾಯಕರು_ಅಧಿಪತಿಗಳು, ಭಯಮುಂ - ಹೆದರಿಕೆಯನ್ನುಂಟುಮಾಡತಕ್ಕ, ಆಕಾರಂಗಳಂ - ಆಕೃತಿಗಳನ್ನು, ಬಿಟ್ಟು-ಬಿಟ್ಟವರಾಗಿ, ದಿವ್ಯ-ಉತ್ತಮವಾದ, ಆಕೃತಿಯನು_ಆಕಾರವನ್ನು, ಆಂತು_ಹೊಂದಿ, ಅನವರತಂ_ಸದಾಕಾಲದಲ್ಲಿಯೂ, ಎಂತು_ಯಾವ ತೆರನಾಗಿ, ತನ್ನಪಟ್ಟಣದೊಳು - ನನ್ನ ನಗರದಲ್ಲಿ, ಇರುತಿರ್ಪರು - ಇರತಕ್ಕವರಾಗುತ್ತಾರೊ, ಅಂತು - ಅದೇ ಬಗೆಯಾಗಿಯೇ, ಅನಿಬರೆಲ್ಲರು_ಅಷ್ಟು ಮಂದಿಯೂ, ಮದುವೆಗೆ - ಪಾಣಿಗ್ರಹಣದ ಉತ್ಸವಕ್ಕೆ, ಪ್ರಿಯದಿಂದ_ಅಕ್ಕರೆಯಿಂದ, ಎಮ್ಮೊಡನೆ_ನಮ್ಮೊಂದಿಗೆ, ಬರಲಿ_ಬರತಕ್ಕವರಾಗಲಿ, ಆಪುರಾಶ್ರಮದ_ಆಸಾರಸ್ವತ ನಗರದ, ನರರೆಲ್ಲರುಂ_ಸಕಲ ಮಾನವರೂ, ಪುಣ್ಯಕರ್ಮಿಗಳು - ಸತ್ಕಾರ್ಯಗಳನ್ನು ಎಸಗಿರತಕ್ಕವರೇ ಆಗಿದಾರೆ, ಅವರ - ಆ ಜನಗಳ, ನಯನಾವಲೋಕನಕೆ - ದೃಷ್ಟಿಪಥಕ್ಕೆ, ಸೊಗಸು - ಅಲಂಕಾರವು, ಆಗಬೇಕೆಂದು - ಆಗಬೇಕೆಂಬ ತೆರನಾಗಿ, ವೈವಸ್ವತಂ - ಯಮಧರ್ಮರಾಯನು, ನುಡಿದನು-ಉತ್ತರ ಕೊಟ್ಟನು.

ಅ‖ ವಿ‖ ದಿವ್ಯಾಕೃತಿ (ಸ. ದೀ ಮತ್ತು ವಿ ಪೂ. ಕ.) ನಯನದ ಅವಲೋಕನ (ಷ. ತ. ದೀ ಸಂಧಿ.) ‖೨೬‖

---

ನಾಯಕರೂ ಅನೇಕ ರೋಗಗಳಿಂದ ಕೂಡಿದ ಕ್ಷಯರೋಗಾಧಿಪನೂ ಸೂಚಿಕಾಗ್ರಹ ಮೊದಲಾದ ವಿಧವಿಧವಾದ ವ್ಯಾಧಿರಾಶಿಗಳ ಅಧಿಪರೂ ಸಹ ಹೊರಟವರಾದರು ‖೨೪‖ ಈ ತೆರನಾದ ಪರಿವಾರದಿಂದ ಕೂಡಿದ ಕ್ಷಯಸಚಿವನಾದರೊ ತಮ್ಮ ರಾಜನಾದ ಯಮಧರ್ಮರಾಯನನ್ನು ಕುರಿತು ಎಲೈ ನಮ್ಮೊಡೆಯನೆ ನಿನ್ನ ಜತೆಯಲ್ಲಿ ನಾವು ಸಾರಸ್ವತನಗರಕ್ಕೆ ಬರುವುದು ಹೇಗೆ ಸಾಧ್ಯವು? ಅಲ್ಲಿ ವೇದಘೋಷವೂ ಹೋಮಾದಿಗಳಿಂದುಂಟಾದ ಹೊಗೆಯೂ ಪುಣ್ಯಕರ್ಮದಲ್ಲಿ ನಿರತರಾಗಿರುವವರ ಕಡೆಯಿಂದ ಬರುವ ಗಾಳಿಯೂ ತುಂಬಿರುವುದು ಆ ವೀರವರ್ಮನು ಬಹಳ ಧರ್ಮಿಷ್ಠನು ಗೋಬ್ರಾಹ್ಮಣ ಪೂಜೆಯಲ್ಲಿ ಅತ್ಯಾಸಕ್ತನು, ಅಲ್ಲಿನ ಜನರೆಲ್ಲರೂ ಪರಮಪವಿತ್ರರು ಇಂತಹ ಪುಣ್ಯಭೂಮಿಗೆ ನಾವು ಬರುವ ಬಗೆ ಹೇಗೆಂದು ಕೇಳಿದನು ಅದಕ್ಕೆ ಯಮಧರ್ಮರಾಯನು ‖೨೫‖ ಕ್ಷಯನೆಂಬ ತನ್ನ ಮಂತ್ರಿಯನ್ನು ಕುರಿತು ಎಲೈ ಅಮಾತ್ಯನೆ ಕೇಳು ನೀನೂ ಸಕಲ ರೋಗಗಳ ಅಧಿನಾಯಕರೂ ಕೂಡ ಭಯಂಕರಾಕಾರಂಗಳಂ ಬಿಟ್ಟು ಸುಂದರರೂಪಗಳಂ ಧರಿಸಿದವರಾಗಿ ಎಲ್ಲರೂ ನನ್ನೊಡನೆ ಬರಬೇಕು ಸಾರಸ್ವತ

ಗ್ನಿಸದೃಶನಾಗಿರ್ದಪೆಂ ಪುಣ್ಯಾತ್ಮ | ರಾಲಿಗಳ್ಗತಿಸೌಮ್ಯನಾಗಿಹೆಂನೀವುಮೆನ್ನಂತೆರಮಣೀಯಮಾದ || ಕಾಲಿಸೌಂದರರೂಪಂ ಗಳಂತಳೆದುದಿ | ವ್ಯಾಲಂಕೃತಿಗಳಿಂದವೀರವರ್ಮಕಧರಾ | ಪಾಲಕನ ಪಟ್ಟಣಕೆ ಬಹುದೆಂದು ಭೃತ್ಯರ್ಗೆತರಣಿಜಂನೇಮಿಸಿದನು ||೨೭|| ವಿಜಯಕೇಳಿಂತೆಂದುಬಳಿಕದಿವ್ಯಾಕೃತಿಯ | ನಿಜಭೃತ್ಯರೊಡನೆಶಮನಂವೀರವರ್ಮಭೂ | ಭುಜನಪಟ್ಟಣಕೆಬರಲಾನೃಪನಿದಿರ್ಗೊಂಡುನಾರದಂಮೊದಲಾಗಿಹ || ದ್ವಿಜರಮುಂದಗ್ನಿಸಾಕ್ಷಿಕದೊಳಂತಕಂಗೆಪಂ | ಕಜವದನೆಮಾಲಿನಿಯನಿತ್ತುವಿಧಿವಿಹಿತದಿಂ | ತ್ರಿಜಗಕಿದುಪೊಸತೆನೆವಿವಾಹಭವನದೊಳಂದುಮದುವೆಯಂಮಾಡಿಸಿದನು || ೨೮ || ಅಚ್ಚರಿಯೊಳಾದವೈವಾಹದುತ್ಸವಕೆಸಲೆ | ಮೆಚ್ಚಿವೈವಸ್ವತಂನುಡಿದನೆಲೆರಾಯನಿ | ನ್ನಿಚ್ಛೆಯಾವುದುಬೇಡುಕೊಡುವೆನಿನ್ನಲ್ಪಕಾಲಕೆಬಹುದುಮೃತ್ಯುನಿನಗೆ || ಎ

ಟೀ|| ಎಲ್ಲರುಂ-ಸಕಲರೂ, ಆಲಿಸುವುದು-ನನ್ನ ನುಡಿಯನ್ನು ಕೇಳತಕ್ಕದ್ದು, ಪಾಪಿಗಳ್-ಪಾಪಿಷ್ಠರಾದವರ, ಕಣ್ಗೆ-ನಯನಕ್ಕೆ, ತಾಂ-ನಾನಾದರೊ, ಕಾಲಾಗ್ನಿಸದೃಶಂ-ಪ್ರಳಯಾಗ್ನಿಯನ್ನು ಹೋಲತಕ್ಕವನು, ಆಗಿರ್ಪೆಂ-ಆಗಿರುತ್ತೇನೆ, ಪುಣ್ಯಾತ್ಮರ-ಪುಣ್ಯಮಾಡಿದವರ, ಆಲಿಗಳ್ಗೆ - ನಯನಂಗಳಿಗಾದರೊ, ಅತಿಸೌಮ್ಯನು - ಬಹು ಸಮಾಧಾನಮನಸ್ಕನು, ಆಗಿ - ಅದವನಾಗಿ, ಇಹೆಂ-ಇದ್ದೇನೆ, ಎನ್ನಂತೆ-ನನ್ನ ಹಾಗೆಯೇ, ನೀವುಂ-ನೀವೂ ಕೂಡ, ರಮಣೀಯಮಾದ-ನೋಡುವುದಕ್ಕೆ ಅಂದವಾಗಿ, ಕಾಲಿ-ಅನುರೂಪವಂ ತಾಳಿರುವ, ರೂಪಂಗಳಂ-ಆಕಾರಗಳನ್ನು, ತಳೆದು-ಹೊಂದಿ, ವೀರವರ್ಮಕಧರಾಪಾಲಕನ-ವೀರವರ್ಮನೆಂಬ ಪೊಡವಿಪತಿಯ, ಪಟ್ಟಣಕೆ-ಪೊಳಲಿಗೆ, ದಿವ್ಯಾಲಂಕೃತಿಗಳಿಂದ-ಸುರರಿಗೆ ಅನುರೂಪವಾದ ಅಂದದಿಂದ, ಬಹುದು-ಬರಬೇಕು, ಎಂದು-ಎಂಬುದಾಗಿ, ಭೃತ್ಯರ್ಗೆ-ತನ್ನ ಚಾಕರರಿಗೆಲ್ಲಾ, ತರಣಿಜಂ-ಸೂರ್ಯಸೂನುವಾದ ಯಮನು, ನೇಮಿಸಿದನು-ಅನುಜ್ಞೆಯನ್ನಿತ್ತವನಾದನು ||೨೭||

ಟೀ|| ವಿಜಯ-ಎಲೈ ಪಾರ್ಥನೆ, ಕೇಳು-ಲಾಲಿಸು, ಇಂತು-ಈ ತೆರನಾಗಿ (ದಿವ್ಯಾಕೃತಿಯಿಂದ ಸಾರಸ್ವತ ನಗರಕ್ಕೆ ಹೊರಡಲನುವಾಗಿರಿ), ಎಂದು-ಎಂಬುದಾಗಿ ಸಕಲರಿಗೂ ತಿಳಿಯಪಡಿಸಿ, ಬಳಿಕ - ಅನಂತರ, ಶಮನಂ-ಅಂತಕನು, ವೀರವರ್ಮಭೂಭುಜನ-ವೀರವರ್ಮನೆಂಬ ಅರಸನ, ಪಟ್ಟಣಕೆ-ನಗರಕ್ಕೆ ದಿವ್ಯಾಕೃತಿಯ - ಸುಂದರಾಕಾರಸಂಪನ್ನರ. ಒಡನೆ-ಜೊತೆಯಲ್ಲಿ, ಬರಲು-ಬಂದು ಸೇರಲು, ಆನೃಪನು-ಆ ವೀರವರ್ಮನೆಂಬ ನರೇಂದ್ರನು, ಇದಿರ್ಗೊಂಡು-ಎದುರುಗೊಳ್ಳಲು ಐತಂದು, ನಾರದಂ-ನಾರದ ಮುನಿಯೇ, ಮೊದಲಾಗಿ-ಆದಿಯಾಗಿ, ಇಹ-ಇರತಕ್ಕ, ದ್ವಿಜರಮುಂದೆ-ಭೂಸುರೋತ್ತಮರ ಮುಂಭಾಗದಲ್ಲಿ, ಪಂಕಜವದನೆ-ಕಮಲಮುಖಿಯಾದ, ಮಾಲಿನಿಯಂ-ಮಾಲಿನಿಯೆಂಬ ಕನ್ಯಾರತ್ನವನ್ನು, ಅಂತಕಂಗೆ-ಯಮಧರ್ಮರಾಯನಿಗೆ, ಇತ್ತು-ದಾನಮಾಡಿ, ತ್ರಿಜಗಕೆ-ಸ್ವರ್ಗ ಮರ್ತ್ಯ ಪಾತಾಳಗಳೆಂಬ ಮೂರುಲೋಕಂಗಳಲ್ಲಿಯೂ, ಇದು-ಈ ಕಾರ್ಯವು ಪೊಸದು-ನವೀನವಾದದ್ದು, ಎನೆ-ಎಂಬರಂತೆ, ಅಂದು-ಆಗ, ವಿವಾಹಭವನದೊಳು-ಪಾಣಿಗ್ರಹಣದ ಮಂಟಪದೊಳಗೆ, ವಿಧಿವಿಹಿತವಿಂದ ಶಾಸ್ತ್ರೋಕ್ತವಾದ ಮಾರ್ಗದಿಂದ. ಮದುವೆಯಂಮಾಡಿಸಿದನು-ಲಗ್ನವನ್ನು ನೆರವೇರಿಸಿದನು ||೨೮||

ಟೀ|| ವೈವಸ್ವತಂ-ಸೂರ್ಯನ ಮಗನಾದ ಯಮನಾದರೊ, ಅಚ್ಚರಿಯೊಳು-ಪ್ರೀತ್ಯತಿಶಯದಿಂದ, ಆದ-ಉಂಟಾದ, ವೈವಾಹದ-ಪರಿಣಯದ, ಉತ್ಸವಕೆ-ಸಂತೋಷ ಕಾರ್ಯಕ್ಕೆ, ಸಲೆ-ಹೆಚ್ಚಾಗಿ, ಮೆಚ್ಚಿ-ಒಪ್ಪಿಕೊಂಡವನಾಗಿ, ನುಡಿದನು-ಮುಂದೆ ಹೇಳುವಂತೆ ವೀರವರ್ಮನೊಂದಿಗೆ ಹೇಳತೊಡಗಿದನು, ಎಲೆರಾಯ-ಎಲೈ ಭೂಮೀಂದ್ರನೆ, ನಿನ್ನ-ನಿನಗೆ ಇರತಕ್ಕ, ಇಚ್ಛೆ-

ನಗರವಾಸಿಗಳೆಲ್ಲರೂ ಪುಣ್ಯಶಾಲಿಗಳಾದ್ದರಿಂದ ನೀವೆಲ್ಲರೂ ಅವರ ಕಣ್ಣುಗಳಿಗೆ ಸೌಮ್ಯವಾಗಿ ಕಾಣಿಸಬೇಕು ||೨೬|| ಪಾಪಿಷ್ಠರ ಕಣ್ಣುಗಳಿಗೆ ನಾನು ಪ್ರಳಯಕಾಲದ ಬೆಂಕಿಯ ಹಾಗೂ ಸುಕೃತದಿಂ ಮೆರೆಯುವರ ನಯನಂಗಳಿಗೆ ಬಹಳ ಶಾಂತರೂಪನಾಗಿಯೂ ಕಾಣುವದು ನನ್ನ ಸ್ವಭಾವವಾಗಿರುವುದು ನಾನು ಸೌಮ್ಯವಾದ ಆಕಾರದಿಂದ ಸಾರಸ್ವತನಗರಕ್ಕೆ ಹೋಗುವೆನಾಗಿ ನೀವೂ ನನ್ನಂತೆಯೇ ಸುಂದರ ರೂಪಂಗಳಂ ತಾಳಿ ನನ್ನನ್ನು ಹಿಂಬಾಲಿಸಬೇಕೆಂದು ಆಜ್ಞಾಪಿಸಿದನು || ೨೭ || ಕೇಳೈ ಅರ್ಜುನಾ, ಯಮಧರ್ಮರಾಯನಿಂದ ಆಜ್ಞಾಪಿಸಲ್ಪಟ್ಟ ಕ್ಷಯನೇ ಮೊದಲಾದರೆಲ್ಲರೂ ಕೂಡಲೇ ದಿವ್ಯಾಕಾರಂಗಳಂ ಧರಿಸಿದವರಾದರು. ಕಾಲನಾದರೊ ಇಂತಹ ದಿವ್ಯಾಕಾರವಂ ತಾಳಿ ತನ್ನ ಪರಿವಾರದೊಂದಿಗೆ ತಡಮಾಡದೆ ಸಾರಸ್ವತನಗರಕ್ಕೆ ಬರಲು ವೀರವರ್ಮನು ದಂಡಧರನನ್ನೂ ಅವನ ಪರಿವಾರವನ್ನೂ ಎದುರ್ಗೊಂಡವನಾಗಿ ಮರ್ಯಾದೆಯಿಂದ ತನ್ನ ಪಟ್ಟಣಕ್ಕೆ ಕರೆದುಕೊಂಡು ಹೋಗಿ ನಾರದಮುನಿಯೇ ಮೊದಲಾದ ವಿಪ್ರವರ್ಯರ ಮುಂದೆ ಅಗ್ನಿಸಾಕ್ಷಾತ್ಕಾರದಿಂದಲೂ, ವೇದೋಕ್ತಮಾರ್ಗದಿಂದಲೂ ಮೂರುಲೋಕಕ್ಕೂ ಪರಮಾಶ್ಚರ್ಯವುಂಟಾಗುವಂತೆ ಬಹು ವಿಜೃಂಭಣೆಯಿಂದ ಮಾಲಿನಿಯೆಂಬ ತನ್ನ ಕುವರಿಯನ್ನು ಯಮನಿಗೆ ಕೊಟ್ಟು ಪಾಣಿಗ್ರಹಣ ಮಹೋತ್ಸವವನ್ನು ಬೆಳೆಯಿಸಿದನು ||೨೮|| ಈತೆರನಾಗಿ ಬಹು ಸಂಭ್ರಮದಿಂದ ಮದುವೆಯನ್ನುಮಾಡಿಕೊಟ್ಟದ್ದರಿಂದ ಯಮಧರ್ಮರಾಯನಿಗೆ ಅತಿಸಂತೋಷವಾಗಿ ವೀರವರ್ಮ ಮಹಾರಾಯನನ್ನು ಕುರಿತು ಎಲೈ ರಾಜೇಂದ್ರನೆ,

ಚ್ಚರಿಂದರಿದಿರ್ಪುದೆನೆವೀರವರ್ಮಕಂ | ನಿಚ್ಚಟದೊಳೀಮಗಳನಿತ್ತುಮಗುಳೀಸಿಕೊಂ | ಬಚ್ಚಿಗದವರಮಿದೇಕೆನಗೆಕನ್ಯಾಶುಲ್ಕ
ಮತಿದೋಷಕರಮೆಂದನು ||೨೯|| ಎಂದೊಡಂತಕನೆಂದನೆಲೆಮಹೀಪಾಲನಿನ | ಗಿಂದುಪುರುಷಾರ್ಥಮಲ್ಲೀವರಂ ಕರೆದುಲೇ | ಸಿಂದ
ಕೊಟ್ಟಾತನಂ ಮಿಗೆಪರಸದಿರ್ದಪನೆತೆಗೆದುಕೊಂಡವನಿಳೆಯೊಳು || ಹಿಂದುಗಳೆಯದಿರೆನ್ನಮಾತನೆನೆಭೂವರಂ | ಮುಂದೆತನಗಲ್ಪ
ಕಾಲಕೆಮೃತ್ಯುಬಹುದನರಿ | ದೊಂದುಪಾಯಾಂತರವನೆಣಿಸಿನಸುನಗುತಶಮನಂಗೆಬಳಿಕಿಂತೆಂದನು || ೩೦ || ಆದರಿಲ್ಲಿಗೆಬರಲಿ
ನಿನ್ನ ಕೃಪೆಯಿಂದಮಧು | ಸೂದನಂತನಗನ್ನೆಗಂ ಮರಣಮಾಗದಿರಲಾದೈತ್ಯಮರ್ದನಂ ಕಾಣ್ಬಪರಿಯಂತರಂ ನೀನುನಮ್ಮಾಪುರ
ದೊಳು || ಕಾದುಕೊಂಡಿಹುದೆನ್ನನೀವುದೀವರವನೆನೆ | ಸಾದರದೊಳಿತ್ತಂದುಮೊದಲಾಗಿನಾನಾವಿನೋದದಿಂಮಾಲಿನಿ | ಯೊಡ

---

ಅಭಿಲಾಷೆಯು, ಯಾವುದು-ಯಾವುದಾಗಿದೆ, ಬೇಡು-ಕೇಳಿಕೊ, ಕೊಡುವೆನು-ಈಯುವೆನು, ನಿನಿಗೆ-ನಿನಿಗಾದರೊ, ಇನ್ನು-ಮುಂದೆ, ಅಲ್ಪಕಾಲಕೆ-ಸ್ವಲ್ಪದಿನದಲ್ಲಿಯೇ, ಮೃತ್ಯು-ಸಾವು, ಬಹುದು-ಸಿದ್ಧಿಸುವುದು, ಎಚ್ಚರಿಂದ-ಮರೆದುಹೋಗದೆ, ಇರ್ಪುದು-ಇರತಕ್ಕದ್ದು. ಎನೆ-ಎಂದು ನುಡಿಯಲು, ವೀರವರ್ಮಕಂ-ವೀರವರ್ಮ ರಾಜೇಂದ್ರನಾದರೊ, ನಿಚ್ಚಟದೊಳು-ಸ್ಥಿರಮನಸ್ಸಿನಿಂದ, ಈ ಮಗಳನು-ಈ ನನ್ನ ಸುತೆಯನ್ನು, ಇತ್ತು-ಮದುವೆಮಾಡಿಕೊಟ್ಟು, ಮಗುಳೆ-ತಿರುಗಿ, ಈಸಿಕೊಂಬ-ಪ್ರತಿಫಲವನ್ನು ಹೊಂದುವ, ಅಚ್ಚಿಗದ-ವಿಪರೀತಕಾರ್ಯವಾದ, ಇದುವರಂ-ಇಂತಹವರವು, ಎನಗೆ-ನನಿಗಾದರೊ, ಏಕೆ-ಏನುಸಾರ್ಥಕವಾದೀತು, ಕನ್ಯಾಶುಲ್ಕಂ-ಹೆಣ್ಣು ಮಗಳನ್ನು ದಾನಮಾಡಿ ಪ್ರತಿಫಲವನ್ನು ಪಡೆಯತಕ್ಕದ್ದು, ಅತಿದೋಷಕರಂ-ಹೆಚ್ಚಾದ ನಿಂದೆಗೆ ಕಾರಣವಾದದ್ದು, ಎಂದನು-ಎಂಬುದಾಗಿ ನುಡಿದನು.

ಅ|| ವಿ|| ಹೆಣ್ಣು ಹುಡುಗಿಗೆ ಇಟ್ಟದ್ದ ಒಡವೆಗಳನ್ನು ಅಪಹರಿಸುವುದು, ಮಗಳನ್ನು ಕೊಟ್ಟು ದ್ರವ್ಯವನ್ನು ತೆಗೆದುಕೊಳ್ಳುವುದು, ಅವರ ಆಶ್ರಯಕ್ಕೆ ಸಿಕ್ಕಿಬೀಳುವುದು, ಹೆಣ್ಣುಕೊಟ್ಟು ತರುವುದು, ಇವುಗಳೆಲ್ಲಕ್ಕೂ ಕನ್ಯಾಶುಲ್ಕವೆಂಬುದಾಗಿ ಹೇಳುವರು || ೨೯ ||

ಟೀ|| ಎಂದೊಡೆ-ಹೀಗೆಂದು ವೀರವರ್ಮನು ಹೇಳಿದಾಗ, ಅಂತಕನು-ಕಾಲನು, ಎಂದನು-ನುಡಿದನು, ಎಲೆಮಹೀಪಾಲ-ಅಯ್ಯಾ ರಾಜನೆ, ಇಂದು-ಈ ಕಾಲದಲ್ಲಿ, ಈ ವರಂ-ಈ ವರವಾದರೊ, ನಿನಿಗೆ-ಪುರುಷಾರ್ಥಂ-ನಿನ್ನ ದಾನಕ್ಕೆ, ಪ್ರತ್ಯುಪಕಾರವೆಂದು, ಅಲ್ಲ-ಅಲ್ಲವು, ಲೇಸಿಂದ-ಉತ್ತಮಮಾರ್ಗದಿಂದ, ಕರೆದು - ಬರಹೇಳಿ, ಕೊಟ್ಟಾತನಂ-ದಾನವಂಗೈದವನಿಗೆ, ತೆಗೆದುಕೊಂಡವನು-ದಾನವನ್ನಂಗೀಕರಿಸಿದವನು, ಇಳೆಯೊಳು-ಲೋಕದೊಳಗೆ, ಮಿಗೆ-ಹೆಚ್ಚಾಗಿ, ಪರಸದೆ-ಹರಸದೆ, ಇರ್ದಪನೆ-ಇರುತ್ತಾನೆಯೆ, ಎನ್ನ-ನನ್ನದಾದ, ಮಾತನು-ನುಡಿಯನ್ನು, ಹಿಂದುಗಳೆಯದೆ-ಅಲಕ್ಷ್ಯಮಾಡದೆ, ಇರು-ಇರುವನಾಗು, ಎನೆ-ಎಂದು ವೈವಸ್ವತನು ಮತ್ತೆ ಹೇಳಲು, ಭೂವರಂ-ರಾಜಶ್ರೇಷ್ಠನಾದರೊ, ಮುಂದೆ-ಇನ್ನುಮುಂದೆ, ತನಗೆ-ವೀರವರ್ಮನಿಗೆ, ಮೃತ್ಯು-ಸಾವು ಅಲ್ಪಕಾಲಕೆ-ಜಾಗ್ರತೆಯಲ್ಲಿಯೆ, ಬಹುದನು-ಬರತಕ್ಕದ್ದನ್ನು, ಅರಿದು-ತಿಳಿದುಕೊಂಡು, ಒಂದು-ಒಂದಾದ, ಉಪಾಯಾಂತರವನು-ಚಾತುರ್ಯವನ್ನು, ಎಣಿಸಿ-ಆಲೋಚನೆ ಮಾಡಿ, ಬಳಿಕ-ಅನಂತರ, ಶಮನಂಗೆ-ದಂಡಧರನೊಂದಿಗೆ, ಇಂತು-ಮುಂದೆ ಹೇಳುವತೆರನಾಗಿ, ನಸುನಗುತ-ಮುಗುಳ್ನಗೆಯನ್ನೈದುತ್ತ, ಎಂದನು-ನುಡಿದನು ||೩೦||

ಟೀ|| ಆದರೆ-ನಾನು ನಿನ್ನಲ್ಲಿ ವರವನ್ನು ಕೇಳುವುದು ದೋಷವಲ್ಲವಾದರೆ, ಮಧುಸೂದನಂ-ಮಧುವೈರಿಯಾದ ನಾರಾಯಣಮೂರ್ತಿಯು, ಇಲ್ಲಿಗೆ-ನನ್ನ ನಗರವಾದ ಸಾರಸ್ವತ ಪುರಕ್ಕೆ, ನಿನ್ನಕೃಪೆಯಿಂದ-ನಿನ್ನ ಕರುಣಾಕಟಾಕ್ಷದಿಂದ, ಬರಲಿ-ಬಂದು ಸೇರಲಿ, ಅನ್ನೆಗಂ-ಆ ಮಹಾ ವಿಷ್ಣುವು ಇಲ್ಲಿಗೆ ಬರುವ ಪರ್ಯಂತವೂ, ಮರಣಂ-ಸಾವು, ತನಿಗೆ-ನನಿಗೆ, ಆಗದೆ-ಒದಗದೆ

---

ನೀನು ಸಂತಸದಿಂದ ಮಾಡಿದ ಮದುವೆಯಿಂದ ನನಿಗೆ ಬಹಳ ಆನಂದವುಂಟಾಗಿರುವುದು ನಿನಗೆ ಬೇಕಾದದ್ದು ಯಾವುದೆಂಬುದನ್ನು ತಿಳಿಸಿದರೆ ಸಂತೋಷದಿಂದ ಕೊಡುವೆನೆಂದು ನುಡಿದನು ಇದನ್ನು ವೀರವರ್ಮನು ಕೇಳಿ ನನಿಗೆ ಯಾವ ವರವೂ ಬೇಡ ಕನ್ಯಾದಾನವನ್ನು ಮಾಡಿ ನಿನ್ನಿಂದ ವರವನ್ನು ಬೇಡುವುದು ಯಾವ ಧರ್ಮವು? ಇದರಿಂದ ಕನ್ಯಾಶುಲ್ಕದೋಷಕ್ಕೆ ಭಾಗಿಯಾಗುವೆನಲ್ಲದೆ ಮತ್ತೆ ಬೇರೆಯಿಲ್ಲವೆಂದು ನುಡಿದನು || ೨೯ || ಇದನ್ನು ಯಮನು ಕೇಳಿ ಅಯ್ಯಾ ರಾಜನೇ ನೀನು ಹೀಗೆ ಆಲೋಚಿಸುವುದು ಯುಕ್ತವಲ್ಲವು ನೀನಾಗಿಯೆ ನನ್ನನ್ನು ಕರೆಯಿಸಿ ಕನ್ಯಾದಾನವಂ ಮಾಡಿದಬಳಿಕ ನಾನು ವರವನ್ನು ಕೊಡುವುದರಿಂದ ಕನ್ಯಾದಾನಕ್ಕೆ ಪ್ರತಿಫಲವೆಂದು ನೀನೆಂದಿಗೂ ತಿಳಿಯಕೂಡದು ಅಲ್ಲದೆ ನಿನಿಗೆ ಸಾವು ಸಮೀಪಸ್ಥವಾಗಿರುವುದು ಆದುದರಿಂದ ಬೇಕಾದ ವರವೊಂದನ್ನು ಕೇಳೆಂದು ನುಡಿದನು ಆಗ ವೀರವರ್ಮನು ತನ್ನಲ್ಲಿತಾನೆ ಯೋಚಿಸಿಕೊಂಡವನಾಗಿ ನಸುನಗುತ್ತ, ಯಮಧರ್ಮರಾಯನನ್ನು ಕುರಿತು ||೩೦|| ಎಲೈ ಕಾಲನೆ, ನನಗೆ ಮೃತ್ಯುವು ದೂರವಾಗಿಲ್ಲವಷ್ಟೆ! ಕೃಷ್ಣಸ್ವಾಮಿಯ ಸಂದರ್ಶನವು ನನಿಗೆ ಸಿದ್ಧಿಸುವವರೆಗೂ ಮರಣವಾಗದಂತೆಯೂ ಅದುವರೆಗೂ ನೀನು ಇಲ್ಲಿಯೆ ಇದ್ದುಕೊಂಡು ನನ್ನನ್ನು ಕಾಪಾಡು

ನೆರಮಿಸುತಿರ್ದಪೀಪಟ್ಟಣದೊಳಿನತನುಜನು ||೩೧|| ಇನ್ನರಿದಲ್ಲೈಪಾರ್ಥರವಿತನಯನೀಪುರದೊಳಿನ್ನೆಗಂಬಂದಿರ್ದವೃತ್ತಾಂತಮಂ ನೋಡು | ತನ್ನಮಾವನಸಹಾಯಕೆನಮ್ಮಸೇನೆಯಂಸಂಹರಿಸುತಿಹನಿತ್ತಲು || ಸನ್ನದ್ಧನಾಗಿತನ್ನಂಕಾಣ್ಬಲವಲಿಕೆ | ಯಿಂನಡೆತಹಂವೀರವರ್ಮನೀಕ್ಷಿಸುಘುರಕೆ | ನಿನ್ನಕೋದಂಡಮಂನುಡಿಸೆನುತಹರಿಧನಂಜಯನರಥಕೈತಂದನು || ೩೨ || ವೀರವರ್ಮನಕಾಳಗಕೆಹರಿಫಲುಗುಣನ | ತೇರನೇರಲ್ಕಂಡುತಮತಮಗೆನೂಕಿತುಮ | ಯೂರಧ್ವಜಾದಿಭೂಪಾಲಕರ್ತೊಲಗಲಂತಕಂ ತಾನಾದೊಡೆ || ನಾರಕಿಗಳಂಬಾಧಿಸುವದಿಲ್ಲದಸುರಸಂ | ಹಾರಕನಸೇವೆಯಂಮಾಡುತಿಹನಮ್ಮಪರಿ | ವಾರಮಂಕೊಲ್ವೊಡಧಿ

ಇರಲಿ–ಇರತಕ್ಕದ್ದಾಗಲಿ, ನೀನು–ನೀನಾದರೊ, ಅದೈತ್ಯಮರ್ದನಂ–ಆ ರಾಕ್ಷಸ ಸಂಹಾರಕನಾದ ನಾರಾಯಣನು, ಕಾಣ್ಬ–ದರ್ಶನವನ್ನೀಯುವ, ಪರಿಯಂತಂ–ತನಕ, ಎನ್ನನು–ನನ್ನನ್ನು, ನಮ್ಮ - ನಮ್ಮದಾಗಿರತಕ್ಕ, ಈಪೊಳಲೊಳಗೆ – ಈ ನಗರದಲ್ಲಿಯೇ, ಕಾಮುಕೊಂಡಿಹುದು-ಸಂರಕ್ಷಿಸುತ್ತಲಿರು. ಈವರವನು–ಈ ನನ್ನ ಅಭಿಲಾಷೆಯನ್ನು, ಈವುದು–ನೆರವೇರಿಸಬೇಕು, ಎನೆ-ಎಂದು ಕೇಳಲು, ಸಾನುರಾಗದೊಳು - ಪ್ರೀತಿಪುರಸ್ಸರವಾಗಿ, ಇತ್ತು - ಹಾಗೆಯೆ ಆಗಲೆಂದು ನಂಬಿಕೆಯನ್ನುಂಟುಮಾಡಿ, ಮಾಲಿನಿಯೊಡನೆ–ಮಾಲಿನಿಯೆಂಬ ವೀರವರ್ಮನ ಕುವರಿಯೊಂದಿಗೆ, ನಾನಾವಿನೋದದಿಂದ–ವಿಧವಿಧವಾದ ಕ್ರೀಡೆಗಳಿಂದ, ರಮಿಸುತ–ಭೋಗಿಸುತ್ತ, ಈಪಟ್ಟಣದೊಳ್–ಈ ಪುರದೊಳಗೆ, ಇರ್ದನು–ಇದ್ದವನಾದನು.

ಅ|| ವಿ|| ಮಧುವನ್ನು ಸೂದನಂ (ಕೃ. ವೃ.) ಇನತನುಜ-ತನುಜ-ತನು = ಶರೀರದಲ್ಲಿ, ಜ–ಹುಟ್ಟಿದವನು (ಕೃ. ವೃ.) ಇನನತನುಜ (ಷ. ತ.) ||೩೧||

ಟೀ|| ಎಲ್ಲೈಪಾರ್ಥ–ಅಯ್ಯಾ ಫಲುಗುಣನೆ, ಇನ್ನೆಗಂ–ಇಷ್ಟು ಕಾಲದವರೆಗೂ, ಈಪುರದೊಳು - ಈ ನಗರದೊಳಗೆ, ರವಿತನಯನು - ಭಾನುನಂದನನು, 'ಬಂದಿರ್ದ - ಬಂದು ನೆಲಸಿದ್ದ, ವೃತ್ತಾಂತಮಂ - ವರ್ತಮಾನವನ್ನೆಲ್ಲಾ, ಇನ್ನುಅರಿದೆಲ್ಲೈ - ಸಾಂಗವಾಗಿ ತಿಳಿದುಗೊಂಡದ್ದಾಯಿತಷ್ಟೆ, ನಮ್ಮಸೇನೆಯಂ - ನಮ್ಮ ಬಲವನ್ನೆಲ್ಲಾ, ತನ್ನ - ಸ್ವಕೀಯನಾಗಿರುವ, ಮಾವನಸಹಾಯಕ್ಕೆ - ನೆರವಿಗೋಸ್ಕರ, ಸಂಹರಿಸುತ - ಧ್ವಂಸಮಾಡುತ್ತ, ಇಹನು - ಇದ್ದಾನೆ, ನೋಡು - ನೋಡುವನಾಗು, ಇತ್ತಲು - ಈ ಭಾಗದಲ್ಲಾದರೊ, ವೀರವರ್ಮಂ - ವೀರವರ್ಮನೆಂಬ ಈ ನಗರದ ಅರಸನು, ತನ್ನಂ - ನನ್ನನ್ನು, ಕಾಣ್ಬ–ನೋಡಬೇಕೆನ್ನುವ, ಲವಲವಿಕೆಯಿಂ–ಚಾತುರ್ಯದಿಂದ, ಸನ್ನದ್ಧನಾಗಿ - ಯುದ್ಧಕ್ಕೆ ಅನುವಾಗಿ, ನಡೆತಹಂ - ಬರುತ್ತಲಿರುವನು. ಈಕ್ಷಿಸು - ನಿರುಕಿಸು, ನಿನ್ನ – ನಿನ್ನದಾಗಿರುವ, ಕೋದಂಡಮಂ – ಧನುಸ್ಸನ್ನು, ಘುರಕೆ- ರಣದ ಸಲುವಾಗಿ, ನುಡಿಸು - ಧ್ವನಿಯಾಗುವಂತೆ ಎಳೆ, ಎನುತ - ಎಂದು ನುಡಿಯುತ್ತ, ಧನಂಜಯನರಥಕೆ – ಫಲುಗುಣನ ತೇರಿಗೆ, ಹರಿ-ಕೃಷ್ಣಸ್ವಾಮಿಯು, ಐತಂದನು–ಬಂದು ಸೇರಿದನು. ||೩೨||

ಟೀ|| ಹರಿ – ಕೃಷ್ಣಸ್ವಾಮಿಯು, ಫಲುಗುಣನತೇರನು-ಪಾರ್ಥನ ರಥಭಾಗವನ್ನು, ವೀರವರ್ಮಕನ - ವೀರವರ್ಮನೊಂದಿಗೆ, ಕಾಳಗಕೆ–ಹೋರಾಡುವ ಸಲುವಾಗಿ, ಏರಲು-ಹತ್ತಲಾಗಿ, ಕಂಡು–ಸೇನಾಜನರು ಇದನ್ನು ನೋಡಿ, ತಮತಮಗೆ-ತಾವ್ತಾವೆ, ನೂಕಿತು–ಮುಂದರಿದು ನಡೆಯಿತು. ಮಯೂರಧ್ವಜ-ಮಯೂರಧ್ವಜನೆ, ಆದಿ–ಮೊದಲಾದ, ಭೂಪಾಲಕರು-ಅರಸುಗಳು, ತೊಲಗಹೇಳು-ಹೊರಟುಹೋಗುವಂತೆ ತಿಳಿಸು, ತಾಂ–ಅವನು, ಅಂತಕಂ ಯಮಧರ್ಮರಾಯನು, ಆದೊಡೆ–ಆದರೆ, ನಾರಕಿಗಳಂ–ನರಕವಾಸಿಗಳನ್ನು, ಬಾಧಿಸುವನು–ತೊಂದರೆಯನ್ನೆಸಗುವನು, ಅಲ್ಲದೆ-ಅದನ್ನುಬಿಟ್ಟು, ಅಸುರಸಂಹಾರಕನ-ದನುಜಾಂತಕನಸೇವೆಯಂ–ಭಜನೆಯನ್ನು, ಮಾಡುತಿಹ–ಗೈಯುತ್ತಲಿರುವ, ನಮ್ಮ–ನಮ್ಮಗಳ, ಪರಿವಾರಮಂ–ಸೇಸೆಯನ್ನು, ಕೊಲ್ವೊಡೆ-

ತ್ತಿರಬೇಕೆಂದೂ ಕೇಳುವೆನು ಈ ನನ್ನ ಇಷ್ಟಾರ್ಥವನ್ನು ನೀನು ದಯಮಾಡಿ ನೆರವೇರಿಸೆಂದು ವೀರವರ್ಮನು ಕೇಳಿಕೊಂಡನು ಅದಕ್ಕೆ ಅನುಮೋದಿಸಿ ಅಂದಿನಿಂದಲೂ ಯಮನು ಪರಿಪರಿಯ ಕ್ರೀಡಾದಿಗಳಿಂದ ಮಾಲಿನಿಯೊಂದಿಗೆ ಸುಖವಾಗಿ ಕಾಲಹರಣವಂ ಮಾಡುತ್ತಲಿರುವನು ||೩೧|| ಎಲ್ಲೈ ಅರ್ಜುನನೆ, ಸೂರ್ಯನ ಪುತ್ರನಾದ ಯಮನು ಸಾರಸ್ವತನಗರಕ್ಕೆ ಬಂದಿರುವ ಕಾರಣವು ನಿನಗೆ ಗೊತ್ತಾಯಿತಷ್ಟೆ, ಇಗೋನೋಡು ತನ್ನ ಮಾವನಾದ ವೀರವರ್ಮನ ಸಹಾಯಕ್ಕಾಗಿ ಬಂದು ನಮ್ಮ ಸೇನಾರ್ಣವವನ್ನು ಹೀರುತ್ತಲಿರುವುದನ್ನು ನೋಡಿದೆಯಾ, ಇಗೋ ವೀರವರ್ಮನು ನಮಗೆದುರಾಳಾಗಬೇಕೆಂದು ಬರುತ್ತಲಿರುವುದನ್ನು ನೋಡು, ತಡಮಾಡದೆ ನಿನ್ನ ಧನುಸ್ಸಿಗೆ ಬಾಣವನ್ನು ಹೂಡೆಂದು ನುಡಿದನು. ತಾನು ಅರ್ಜುನನ ರಥವನ್ನೇರಿದನು||೩೨|| ಕೃಷ್ಣನು ಪಾರ್ಥನಿಗೆ ಸಾರಥಿಯಾದ ಕೂಡಲೆ ಮಯೂರಧ್ವಜನೆ ಮೊದಲಾದವರೆಲ್ಲರೂ ಯುದ್ಧಕ್ಕೆ ಅನುವಾಗಿ ಯಮಧರ್ಮರಾಯನು ನರಕದಲ್ಲಿರುವವರನ್ನು ಬಾಧೆಪಡಿಸುವ ಅಧಿಕಾರವುಳ್ಳವನೆ ಹೊರತು ವಿಷ್ಣುಭಕ್ತರಾದ ನಮ್ಮನ್ನು ಏನುತಾನೆ ಮಾಡಿಯಾನೆಂದು ಜರಿಯುತ್ತಾ ಮುಂದರಿದು ನಡೆಯುವಾಗ ಯಮನನ್ನೂ ವೀರವರ್ಮನನ್ನೂ ಆವರಿಸಿಕೊಂಡು ವಿಧವಿಧವಾದ ಬಾಣಗಳಿಂದ ಘಾತಿಸ

ಕಾರನೆತ್ತಣದೆನುತಮುಂಕೊಂಡುಕವಿದೆಚ್ಚರು ॥ ೩೩ ॥ ಅನಿರುದ್ಧಸಾತ್ಯಕಿಪ್ರದ್ಯುಮ್ನಕೃತವರ್ಮ । ನಿನಜಸುತಗದಸಾಂಬ ಹೈಡಿಂಬಿಬಭ್ರುವಾ । ಹನಯೌವನಾಶ್ವಪ್ರವೀರಹಂಸಧ್ವಜಸುವೇಗಸಮನೀಲಕೇತು ॥ ಅನುಸಾಲ್ವತಾಮ್ರಕೇತನಮಯೂರ ಧ್ವಜ । ರ್ತನತನಗೆಕಣೆಗರೆಯಲಾವೀರವರ್ಮನೆ । ಚ್ಚನಿಬರಂಮುರಿದುಕೃಷ್ಣಾರ್ಜುನರಸರಿಸದೊಳ್ನಿಂದುನಗುತಿಂತೆಂದನು ॥೩೪॥ ಈವೀರರೊರ್ವರುಂತನಗೆಪಾಡಲ್ಲರಾ । ಜೀವಲೋಚನನಿನ್ನೊಳೀನರನೊಳೀಧ್ವಜದ । ಪಾವಮಾನಿಯೊಳುನೆರೆಕಾದಿಮದ್ಭುಜದ ಕಂಡೂತಿಯಂಕಳೆವುದೀಗ ॥ ಮೂವರುಂತೊಲಗದಿರಿಸಾಕೆನುತಕೃಷ್ಣಗಾಂಡೀವಿಮರುತಜರನಾರೇಳೆಂಟುಸರಳನೆ । ಚ್ಚಾವ ಸುಮತೀಶನುಳಿದವರನೈದೈದುಬಾಣಂಗಳಿಂಘಾತಿಸಿದನು ॥ ೩೫ ॥ ಈತನೀಗಲೆದೇವವೀರವರ್ಮಕನೆಂಬ । ಭೂತಳಾಧಿಪನಾ

---

ಕೊಂದುಹಾಕಬೇಕಾದರೆ, ಅಧಿಕಾರಂ-ಶಕ್ತಿಯು, (ಸ್ವತಂತ್ರವು) ಎತ್ತಣದು-ಎಲ್ಲಿಂದ ಬಂದಿದೆ, ಎನುತ-ಎಂದು ನುಡಿಯುತ್ತ, ಮುಂಕೊಂಡು-ಮೇಲ್ಬಾಯ್ದು, ಕವಿದು-ಆವರಿಸಿಕೊಂಡು, ಎಚ್ಚರು-ಸರಲ್ಗಳಿಂ ಕರೆದರು ॥೩೩॥

ಟೀ॥ ಅನಿರುದ್ಧ-ಮದನನ ಕುವರನು, ಸಾತ್ಯಕಿ-ಸತ್ಯಕನಸುತನು, ಪ್ರದ್ಯುಮ್ನ-ಕೃಷ್ಣನಂದನನು, ಕೃತವರ್ಮನು-ಯದುಕುಲದ ಮುಖ್ಯಸೇನಾನಾಯಕನು, ಇನಜಸುತ - ಸೂರ್ಯನ ಮೊಮ್ಮಗನಾದ ವೃಷಧ್ವಜನು, ಗದ - ಗದನೆಂಬುವನು, ಸಾಂಬ-ಜಾಂಬವತಿಯ ಕುವರನು, ಹೈಡಿಂಬಿ-ಹಿಡಂಬಿಯಲ್ಲಿ ಭೀಮಸೇನನಿಂದ ಹುಟ್ಟಿದ ಮೇಘವರ್ಣನೂ, ಬಭ್ರುವಾಹನ-ಅರ್ಜುನನಿಂದ ಚಿತ್ರಾಂಗದೆಯ ಗರ್ಭದಿಂದುಂಟಾದ ನಕುಲಧ್ವಜನು, ಯೌವನಾಶ್ವ-ಭದ್ರಾವತಿಯ ಅರಸು, ಪ್ರವೀರ-ಪರಾಕ್ರಮಿಯಾದ, ಹಂಸಕೇತು - ಮರಾಳಧ್ವಜನು, ಸುವೇಗ-ಭದ್ರಾವತಿ ನಗರದ ಯುವರಾಜನು, ಅಸಮ - ಅಸಾಧಾರಣನಾದ, ನೀಲಕೇತು-ನೀಲಧ್ವಜನೆಂಬ ಮಾಹಿಷ್ಮತೀ ಪಟ್ಟಣದ ದೊರೆಯು, ಅನುಸಾಲ್ವ - ಸಾಲ್ವಾನುಜನು, ತಾಮ್ರಕೇತನ - ತಾಮ್ರಧ್ವಜನು, ಮಯೂರಧ್ವಜರ್-ಮಯೂರಧ್ವಜನೆ ಮೊದಲಾದವರು, ತಮತಮಗೆ-ತಮ್ಮ ತಮ್ಮಷ್ಟಕ್ಕೆ, ಕಣೆಗರೆಯಲು-ಬಾಣಗಳನ್ನು ಬಿಡಲು, ಆವೀರವರ್ಮಂ - ಆ ಸಾರಸ್ವತನಗರದ ರಾಜನು, ಅನಿಬರಂ - ಅಷ್ಟು ಮಂದಿಯನ್ನೂ, ಎಚ್ಚು - ಘಾತಿಸಿ, (ಬಾಣಗಳಿಂದ) ಮುರಿದು-ಶಿಕ್ಷಿಸಿ, ಕೃಷ್ಣಾರ್ಜುನರಸರಿಸದೊಳ್-ನರನಾರಾಯಣರ ಹತ್ತಿರದಲ್ಲಿ, ನಿಂದು-ನಿಂತವನಾಗಿ, ನಗುತ-ನಗುತ್ತ, ಇಂತು-ಮುಂದೆ ಹೇಳುವಂತೆ, ಎಂದನು-ನುಡಿದನು ॥೩೪॥

ಟೀ॥ ಆವಸುಮತೀಶನು - ಆ ಧರಾವಲ್ಲಭನಾದ ವೀರವರ್ಮನು, (ಕೃಷ್ಣನನ್ನು ಕುರಿತು) ರಾಜೀವಲೋಚನ-ಕಮಲಾಕ್ಷನಾದ ಕೃಷ್ಣಸ್ವಾಮಿಯೆ, ತನಿಗೆ-ನನಿಗಾದರೊ, ಈವೀರರು - ಈ ಶೂರರು, ಓರ್ವರುಂ-ಯಾರೊಬ್ಬರೂ, ಪಾಡಲ್ಲ-ಸರಿಯಲ್ಲವು, ನಿನ್ನೊಳು-ನಿನ್ನೊಂದಿಗೂ, ನರನೊಳು - ಪಾರ್ಥನ ಜೊತೆಯಲ್ಲಿಯೂ, ಈಧ್ವಜದ - ಈ ಧ್ವಜಪಟವನ್ನವಲಂಬಿಸಿರತಕ್ಕ, ಪಾವಮಾನಿಯೊಳು-ಹನುಮಂತನ ಸಂಗಡಲೂ, ನೆರೆ-ಚೆನ್ನಾಗಿ, ಕಾದಿ-ಕಾಳಗಮಾಡಿ, ಮದ್ಭುಜದ-ನನ್ನ ಬಾಹುಗಳ, ಕಂಡೂತಿಯಂ - ಚಪಲವನ್ನು, ಕಳೆವುದು - ತಪ್ಪಿಸಿಕೊಳ್ಳಬೇಕಾಗಿದೆ, ಈಗ-ಈಗಲಾದರೊ, ಮೂವರುಂ - ಈ ಮೂರು ಜನವೂ, ತೊಲಗದಿರಿ-ಹೊರಟು ಹೋಗಬೇಡಿರಿ, ಸಾಕು-ಇದುವರೆಗೆ ನೀವು ಕಾಲಹರಣ ಮಾಡಿದ್ದೇ ಸಾಕು, ಎನುತ-ಎಂದು ನುಡಿಯುತ್ತ, ಆರೇಳೆಂಟುಸರಳನು-ಆರು, ಏಳು, ಎಂಟಂಬುಗಳನ್ನು ಕ್ರಮವಾಗಿ, ಕೃಷ್ಣಗಾಂಡೀವಿಮರುತಜರನು-ಕೃಷ್ಣಾರ್ಜುನ ಅಂಜನೇಯರ ಮೇಲೆ, ಎಚ್ಚು ಪ್ರಯೋಗಿಸಿ, ಐದೈದುಬಾಣಗಳಿಂ-ಕೋಲ್ಗಳೈದರಂತೆ, ಉಳಿದವರನು-ಮಿಕ್ಕವರನ್ನೆಲ್ಲಾ, ಘಾತಿಸಿದನು-ದಂಡಿಸಿದನು ॥೩೫॥

ಟೀ॥ ಎಲೆದೇವ-ಎಲೈ ಪ್ರಭುವೇ, ವೀರವರ್ಮಕನೆಂಬ-ವೀರವರ್ಮನೆಂಬ ಹೆಸರುಳ್ಳ, ಭೂತಳಾಧಿಪನು - ಪೊಡವಿ

---

ಲಾರಂಭಿಸಿದರು ॥ ೩೩ ॥ ಆ ವೀರವರ್ಮನಾದರೊ ಅರ್ಜುನನ ಕಡೆಯವರಾದ ಮಯೂರಧ್ವಜ, ನೀಲಧ್ವಜ ಹಂಸಧ್ವಜನೇ ಮೊದಲಾದವರೂ ಯಾದವರ ಕಡೆಯ ಅನಿರುದ್ಧ, ಗದ, ಸಾಂಬ ಪ್ರದ್ಯುಮ್ನಾದಿಗಳೂ ಬಿಟ್ಟ ಬಾಣಗಳಿಗೆ ಸ್ವಲ್ಪವೂ ಲಕ್ಷ್ಯ ಮಾಡದೆ ಮುಂದರಿತು ಬಂದು ಕೃಷ್ಣಾರ್ಜುನರನ್ನು ನೋಡಿ, ॥೩೪॥ ಎಲೈ ದೇವ! ನನ್ನನ್ನು ಎದುರಿಸಿದ ಹಂಸಧ್ವಜಾದಿಗಳಲ್ಲಿ ಯಾರೊಬ್ಬರೂ ನನಿಗೆ ಸಮಾನರಿಲ್ಲವು ಆದುದರಿಂದ ಇವರನ್ನು ನಾನೆಂದಿಗೂ ಲಕ್ಷ್ಯದಲ್ಲಿಡುವುದಿಲ್ಲವು ಎಲೈ ಕಮಲಾಕ್ಷನಾದ ಕೃಷ್ಣಸ್ವಾಮಿಯೆ, ನಿನ್ನ ಮತ್ತು ಈ ಫಲುಗುಣನೊಂದಿಗೂ, ಈ ಹನುಮನೊಂದಿಗೂ ಕಾದಾಡಿ ನನ್ನ ಬಾಹುಗಳಿಗುಂಟಾಗಿರತಕ್ಕ ಚಪಲವನ್ನು ನಿವಾರಣೆಮಾಡಿಕೊಳ್ಳುವೆನು ನೀವು ಮೂವರು ಮಾತ್ರ ಇಲ್ಲಿಯೆ ಇರಬೇಕೆಂದು ನುಡಿಯುತ್ತಾ ಆರು ಬಾಣಗಳಿಂದ ಕೃಷ್ಣನನ್ನೂ ಏಳು ಕಣೆಗಳಿಂದ ಫಲುಗುಣನನ್ನೂ ಅಂಜನೇಯನನ್ನು ಎಂಟು ಕೋಲ್ಗಳಿಂದಲೂ ಹೊಡೆದು ಮಿಕ್ಕವರನ್ನೆಲ್ಲಾ ಐದೈದು ಸರಲ್ಗಳಿಂದ ಗಾಯಮಾಡಿದನು॥೩೫॥ಆಗ ಅರ್ಜುನನು ಕೃಷ್ಣಸ್ವಾಮಿಯನ್ನು ಕುರಿತು ಎಲೈ ಪ್ರಭುವೇ ಇವನೇ ವೀರವರ್ಮನಷ್ಟೆ, ಇವನು ಬಲಶಾಲಿಯೆಂದೂ ಯಮನ ಸಹಾಯವನ್ನುಂಟಾಗಿರುವೆನೆಂದೂ ಅಹಂಕಾರವನ್ನೈದಿ ನಮ್ಮ ಕುದುರೆಗ

ದೊಡೊಳ್ಳಿತಿವನತಿಬಲಂ | ಮಾತುಲನಲಾಧರ್ಮರಾಜಂಗೆಕಟ್ಟಿಕೊಳಬಹುದಿವಂಕುದುರೆಗಳನು || ಘಾತಿಸಿದೊಡೆಮಗೆತಪ್ಪಿಲ್ಲ
ಲಾಬೆಸಗೊಂಬ | ಮಾತಾವುದಶ್ವಂಗಳಂಬಿಡನೆಭುಜದಕಂ | ಡೂತಿಯಂಕಳೆದಪಂಗಡನೋಳ್ಪೆವೆನುತನರನೆಚ್ಚನಾಭೂಪತಿಯ
ನು || ೩೬ || ಕಟಕಿಯೇಕೆಮ್ಮೊಡನೆಪಾಂಡುಸುತನೀನೆಪಟು | ಭಟನಪ್ಪೆಮೂಜಗಕೆಕೃಷ್ಣನಸಹಾಯದಿಂ | ಘಟಿಸಿದಗ್ಗಳಿಕೆ
ಗೇತಕೆಬೆರೆವೆಸೈರಿಸೆನುತಾನೃಪಂಕೋಪದಿಂದ || ಚಟುಲಚಾಪದೊಳುರುಳ್ಚಿದನಂಬನಖಿಳದಿ | ಕ್ತಟದೋಳ್ಗಗನಮಂಡಲದೊ
ಳಹಿತಬಲದೊಳು | ತ್ಕಟಬಾಣಮಯಮಾಗೆಹರಿನರಕಪೀಂದ್ರರಥವಾಜಿಗಳ್‌ಭ್ರಮಿಸುವಂತೆ ||೩೭|| ನೆರೆಮಂತ್ರಿಮಂತ್ರದಿಂದ
ಹಿತರುತ್ಸಾಹಮಂ | ಬರಿಗೈವತೆರದಿಂದನರನವನಕಣೆಗಳಂ | ತರಿದೊಟ್ಟುತಿದರೊಳೇನಾದಪುದುಸಾಕಿನ್ನುಬಿಡುನಮ್ಮಕುದುರೆ

---

ಕನು, ಈತನು–ಇವನು, ಆದೊಡೆ–ಆದಪಕ್ಷದಲ್ಲಿ, ಒಳ್ಳಿತು–ಮೇಲಾಯಿತು, ಅರಸ–ಅರಸು, ಅತಿಬಲಂ–ಬಹುಶೂರನು, ಧರ್ಮ ರಾಜಂಗೆ–ಧರ್ಮತನಯನಿಗೆ, ಮಾತುಲನಲಾ–ಸೋದರಮಾವನಷ್ಟೆ, ಇವಂ– ಇಂಥವನು, ಕುದುರೆಗಳನು – ಧರ್ಮಪುತ್ರನ ಯಜ್ಞಾಶ್ವಂಗಳನ್ನು, ಕಟ್ಟಿಕೊಳಬಹುದೆ–ಕಟ್ಟತಕ್ಕದ್ದುಯೋಗ್ಯವಾಗಿದೆಯೇ, ಘಾತಿಸಿದೊಡೆ–ಸಂಹಾರಮಾಡಿದರೆ, ನಮಗೆ–ನಮಗಾದರೂ, ತಪ್ಪು–ದೋಷವು, ಇಲ್ಲಲಾ–ಇಲ್ಲವಷ್ಟೆ, ಬೆಸಗೊಂಬ–ಕೇಳತಕ್ಕ, ಮಾತು–ನುಡಿಯು, ಆವುದು–ಯಾವುದಾಗಿದೆ, ಅಶ್ವಂಗಳಂ–ತುರಂಗಗಳನ್ನು, ಬಿಡನೆ–ಬಿಡದೆ ಇದ್ದಾನೆ, ಭುಜದ–ಬಾಹುಗಳ, ಕಂಡೂತಿಯಂ–ತೀಟೆಯನ್ನು, ಕಳೆದಪಂಗಡ–ತಪ್ಪಿಸಿಕೊಳ್ಳುವನಷ್ಟೆ, ನೋಳ್ಪೆವು–ನೋಡೋಣ, ಎನುತ–ಎಂದು ನುಡಿಯುತ್ತ, ಆ ಭೂಪತಿಯನು–ಆ ರಾಜನಾದ ವೀರವ ರ್ಮನನ್ನು, ಎಚ್ಚನು–ಸರಲಿಂದ ಹೊಡೆದನು ||೩೬||

ಟೀ|| ಆನೃಪಂ–ಆ ವೀರವರ್ಮನೆಂಬ ಸಾರಸ್ವತನಗರದರಸು, (ಅರ್ಜುನನ್ನು ಕುರಿತು) ಪಾಂಡುಸುತ – ಪಾಂಡು ನಂದನನಾದ ಧನಂಜಯನೆ, ಎಮ್ಮೊಡನೆ–ನಮ್ಮೊಂದಿಗೆ, ಕಟಕಿಯಾಕೆ–ಕುಚೇಷ್ಟೆಯ ಕೆಲಸವೇತಕ್ಕೆ, ಮೂಜಗಕೆ–ಸ್ವರ್ಗ ಮರ್ತ್ಯ ಪಾತಾಳಲೋಕವೆಂಬ ಮೂರರಲ್ಲಿಯೂ, ಪಟುಭಟನು–ಸಾಹಸಾತಿಶಯದಿಂದ ಕೂಡಿದವನು, ನೀನೆ–ನೀನೊಬ್ಬನೆ, ಅಪ್ಪೆ–ಆಗಿದ್ದಿ, ಕೃಷ್ಣನಸಹಾಯದಿಂ–ಕೃಷ್ಣಮೂರ್ತಿಯ ಅನುಗ್ರಹದಿಂದ, ಘಟಿಸಿದ– ಲಭಿಸಿರತಕ್ಕ, ಅಗ್ಗಳಿಕೆ–ಹೆಚ್ಚಿಕೆಗೆ, ಏತಕೆ–ಏನುಕಾರಣ, ಬೆರೆವೆ–ಅಹಂಕಾರಪಡುತ್ತಿ, ಸೈರಿಸು–ಸಾವಕಾಶಮಾಡು, ಎನುತ–ಎಂದು ನುಡಿಯುತ್ತಾ, ಅಖಿಳ–ಸಕಲ ವಾದ, ದಿಕ್ತಟದೋಳ್–ದಿಕ್ಕುಗಳ ಕೊನೆಗಳಲ್ಲಿಯೂ, ಗಗನಮಂಡಲದೊಳಂ–ಅಂತರಿಕ್ಷಪ್ರದೇಶದೊಳಗೂ. ಅಹಿತ–ವೈರಿಗಳ, ಮಂಡಲದೊಳು–ಸಮುದಾಯದಲ್ಲಿಯೂ, ಉತ್ಕಟ–ಅಧಿಕವಾದ, ಬಾಣಮಯಂ–ಶರಸಮುದಾಯದಿಂದ ಕೂಡಿದ್ದು, ಆಗೆ–ಆಗುವ ತೆರನಾಗಿಯೂ, ಹರಿ–ಕೃಷ್ಣಸ್ವಾಮಿಯೂ, ನರ–ಫಲುಗುಣನೂ, ಕಪೀಂದ್ರ–ಹನುಮಂತನೂ, ರಥವಾಜಿಗಳ್–ರಥಕ್ಕೆ ಬಿಗಿದಿದ್ದ ಕುದುರೆಗಳೂ ಸಹ, ಭ್ರಮಿಸುವಂತೆ–ಸುಳಿಯುವಹಾಗೆ, (ಸುತ್ತುವಂತೆ), ಕೋಪದಿಂದ–ಅತ್ಯಾಗ್ರಹದಿಂದ, ಅಂಬನು–ಕಣೆಗಳನ್ನು, ಚಟುಲಚಾಪದೋಳ್–ಅಲ್ಲಾಡುತ್ತಿರುವ ಧನುಸ್ಸಿನೊಳಗೆಸೇರಿಸಿ, ಉರುಳ್ಚಿದಂ–ಅರ್ಜುನನಮೇಲೆಸೆದನು ||೩೭||

ಟೀ|| ನರನು–ಫಲುಗುಣನಾದರೊ, ನೆರೆ–ಹೆಚ್ಚಾಗಿ, ಮಂತ್ರಿಮಂತ್ರದಿಂದ–ಅಮಾತ್ಯನ ಯೋಚನೆಯ ಮೂಲಕ ವಾಗಿ, ಅಹಿತರ–ಹಗೆಗಳಾಗಿರತಕ್ಕವರ, ಉತ್ಸಾಹಮಂ–ಆಸಕ್ತಿಯನ್ನು, ಬರಿಗೈವ–ಹೋಗಲಾಡಿಸತಕ್ಕ, ತೆರದಿಂದ–ಬಗೆಯಿಂದ, ಅವನ–ಆ ವೀರವರ್ಮಭೂಭುಜನ, ಕಣೆಗಳಂ–ಸರಲ್ಗಳನ್ನು, ತರಿದು–ಪುಡಿಪುಡಿಮಾಡಿ, ಒಟ್ಟುತ–ಒಟ್ಟುಗೂಡಿಸುತ, ಇದಿರೊಳು–ನನ್ನೊಂದಿಗೆ ಈಪರಿ ಹೋರಾಡುವುದರಿಂದ,ಏನಾದಪುದು–ಏನು ಸಾರ್ಥಕವಾಗುತ್ತದೆ, ಸಾಕು–ಯಜ್ಞಾಶ್ವಗಳನ್ನು ಕಟ್ಟನಮ್ಮೊಂ

---

ಳನ್ನು ಕಟ್ಟಿಕೊಂಡಿರುವನಷ್ಟೆ! ಇಂತಹವನನ್ನು ನಾನು ಕೊಂದರೆ ಪಾಪವೇನೂ ಬರಲಾರದಲ್ಲವೆ! ಇವನು ತನ್ನ ಬಾಹುಗಳ ತೀಟೆಯನ್ನು ಹೋಗಲಾಡಿಸಿಕೊಳ್ಳಲೋಸುಗ ನಮ್ಮ ಮೇಲೆ ಯುದ್ಧವಂ ಗೈಯ್ಯುವನಂತೆ, ಒಳ್ಳೇದು ಇರಲೆಂದು ನುಡಿಯುತ್ತಾ ಕೂರ್ಗಣೆಗಳನ್ನು ವೀರವರ್ಮನ ಮೇಲೆ ಬಿಟ್ಟನು || ೩೬ || ಇದಕ್ಕೆ ವೀರವರ್ಮನಿಗೆ ಕೋಪಾವೇಶವುಂಟಾಗಿ ಫಲುಗುಣನನ್ನು ಕುರಿತು, ಎಲೈ ಧನಂಜಯನೆ, ನಮ್ಮಮೇಲೆ ಇಂತಹ ಹಾಸ್ಯರೂಪವಾದ ದೋಷವೇತಕ್ಕೆ, ಕೃಷ್ಣಸ್ವಾಮಿಯ ಸಹಾಯವಿರುವುದರಿಂದ ನಿನಿಗೆ ಮೂರುಲೋಕದಲ್ಲಿಯೂ ಹೆಸರುವಾಸಿಯಲ್ಲದೆ ಮತ್ತೇನಿರುವುದು, ಇದಕ್ಕಾಗಿ ಇಂತಹ ಅಹಂಕಾರವು ನಿನಿಗೆ ಪ್ರಾಪ್ತವಾಗಿದೆಯಲ್ಲಾ! ಸ್ವಲ್ಪಸುದಾರಿಸೆಂದು ನುಡಿಯುತ್ತಾ, ಕ್ರೂರವಾದ ತನ್ನ ಧನುಸ್ಸಿಗೆ ಬಾಣವನ್ನು ತಗಲಿಸಿ ಅತ್ಯಾಗ್ರಹದಿಂದ ಅರ್ಜುನನಮೇಲೆ ಬಿಟ್ಟ ರಭಸದಿಂದ ಅಷ್ಟದಿಕ್ಕುಗಳೂ, ಭೂಮ್ಯಾಕಾಶಂಗಳೂ, ನರನಾರಾಯಣರ ಸೇನಾಜನಗಳೂ ಗಡಗಡನೆ ನಡುಗಲಾರಂಭಿಸಿದರು. ಕೃಷ್ಣಾರ್ಜುನರೂ, ತೇರಿನಮೇಲಿದ್ದ ಹನುಮಂತನೂ ದಿಗ್ಭ್ರಮೆಯನ್ನೈದಿದರು. ಹೆಣದ ರಾಶಿಗಳು ಪರ್ವತಾಕಾರವಾಗಿ ಬಿದ್ದುಹೋದವು. || ೩೭ || ಇದನ್ನು ನೋಡಿದ ಪಾರ್ಥನು ಅತ್ಯಾಗ್ರಹವನ್ನೈದಿ ವೀರವರ್ಮನನ್ನು ಕುರಿತು ಎಲೈ ಅರಸೆ, ನಮ್ಮನ್ನು ಸೋಲಿಸುವೆನೆಂಬ ಭ್ರಾಂತಿಯನ್ನಿಟ್ಟುಕೊಂಡು ಇದುವರೆಗೆ

ಗಳನು । ಬಿರುಸರಳಬಿಡಯುಕೆಡೆಕೊಡದಿರೊಡಲಂಕಡೆಯೊ । ಉರುಬೆಗೆರಗದಹರಿಯದರಿದುಕೊಳ್ಳೆನುತಕೋ । ಲ್ಗರೆದೊ ದಾನೃಪತಿಪಾರ್ಥನ ಬಾಣಮಂಕಡಿದುನಸುನಗೆಯೊಳಿಂತೆಂದನು ॥೩೮॥ ಎಲೆಪಾರ್ಥವಿನಯದಿಂನೀಂಬೇಡಿಕೊಂಡೊಡೆವೊ । ದಲೆಬಿಡುವೆನಶ್ವಂಗಳಂಬರಿದೆಕಾಳಗಕೆ । ಬಲಸಹಿತಬಂದೆನೀನಿನಿತುರುಬೆಗೆರಗುವರೆನೆಲದಾಣ್ಮಂಕಟನಿನಗೆ ॥ ಕಲಿತನದಪಂಥ ಮುಂಟಾದೊಡಿದುಸಮಯಮೈ । ಸಲೆಕಾಣಬಹುದೆನುತಕಣೆಗಳರವತ್ತರಿಂ । ಫಲುಗುಣಮುರಧ್ವಂಸಿವಾನರಹಯಂಗಳಂಕೆಡೆ ಯೆಚ್ಚುಬೊಬ್ಬಿರಿದನು ॥ ೩೯ ॥ ಅರಸಕೇಳವನಬಾಣದಘಾತಿಗರ್ಜುನಂಕೊರಗಿದಂಮೇಲೆಪಲ್ಲಿರಿದನಾಕಪಿಚಕ್ರ । ಧರನ್ವೆದೆ ಕೈಮರೆದುವಾಘೆಯುಂಸಡಲಿಸೆರಥಾಶ್ವಂಗಳಸ್ತ್ರಹತಿಗೆ ॥ ತರಹರಿಸಲರಿಯದೊಡಿದುವೊಂದುಕಡೆಗೆಬಳಿ । ಕುರುವಣಿಸಿಪಾಂಡವ

---

ದಿಗೆ ಹೋರಾಡುವುದು, ಇನ್ನುಬೇಡ, ಇನ್ನು ಬೇಡ-ಇನ್ನು ಆಲೋಚನೆಯು ಕೂಡದು, ಬಿರುಸರಳ-ಕೂರಲಗುಗಳ, ಬಿಡಯಕೆ-ಸಮುದಾಯಕ್ಕೆ, ಒಡಲಂ-ದೇಹವನ್ನು. ಎಡೆಗೊಡದೆ-ಸೇರಿಸದಂತೆ, ಇರು-ಇರುವನಾಗು, ಕಡೆಯೋಳ್-ಅಂತ್ಯಕಾಲಕ್ಕೆ, ಉರುಬೆಗೆ-ಪೆಟ್ಟುಗಳಿಗೆ, ಎರಗದೆ-ಅವಕಾಶ ಕೊಡದೆ, ಹರಿಯದು-ತಪ್ಪುವುದೇ ಇಲ್ಲವು, ಅರಿದುಕೊಳ್- ತಿಳಿಯುವನಾಗು, ಎನುತ-ಎಂದು ನುಡಿಯುತ್ತ, ಕೋಲ್ಗರೆದೊಡೆ-ಶರವರ್ಷವನ್ನುಂಟುಮಾಡಲು, ಆನೃಪತಿ-ಸಾರಸ್ವತನಗರದರಸು, ಪಾರ್ಥನ-ಫಲುಗುಣನ, ಬಾಣಮಂ-ಕಣೆಯನ್ನು, ಕಡಿದು-ಭಂಗಪಡಿಸಿ, ಇಂತು-ಮುಂದೆ ಹೇಳುವಂತೆ, ನಸುನಗೆಯೊಳು-ಮಂದಹಾಸದಿಂದ, ಎಂದನು-ಉತ್ತರವನ್ನಿತ್ತನು ॥೩೮॥

ಟೀ॥ ಎಲೆಪಾರ್ಥ – ಎಲೈ ಧನಂಜಯನೆ, ಮೊದಲೆ-ಪ್ರಾರಂಭದಲ್ಲಿಯೆ, ನೀಂ-ನೀನು, ವಿನಯದಿಂದ-ನಮ್ರಭಾವದಿಂದ, ಬೇಡಿಕೊಂಡಡೆ-ಕೇಳಿಕೊಂಡಿದ್ದರೆ, ಅಶ್ವಂಗಳಂ-ಯಾಗದ ತುರಗಂಗಳನ್ನು, ಬಿಡುವೆನು-ಬಿಟ್ಟುಬಿಡುತ್ತಲಿದ್ದೆ, ನೀಂ-ನೀನಾದರೊ, ಬರಿದೆ-ಅನ್ಯಾಯವಾಗಿ, (ವ್ಯರ್ಥವಾಗಿ) ಬಲಸಹಿತ-ದಳದಿಂದಕೂಡಿ, ಕಾಳಗಕೆ-ಯುದ್ಧಕ್ಕೆ, ಬಂದೆ-ಬಂದವನಾದೆ, ನಿನಿಗೆ-ನಿನಿಗಾದರೊ, ಇನಿತು ಉರುಬೆಗೆ-ಇಷ್ಟುಮಾತ್ರದ ಪರಾಕ್ರಮಕ್ಕೆ, ಎರಗುವರೆ-ನಿನ್ನ ವಶವರ್ತಿಗಳಾಗುವುದುಂಟೆ, ಅಕಟ-ಅಯ್ಯೊ, ಕಲಿತನದ-ಪರಾಕ್ರಮದ, ಪಂಥಂ-ಕಟ್ಟು, ಉಂಟಾದೊಡೆ-ಇದ್ದಹಾಗಾದರೆ, ಇದು-ಈ ಸಂದರ್ಭವು, ಸಮಯಮೈ-ಸರಿಯಾಗಿರುತ್ತದಯ್ಯ, ಸಲೆ-ಚನ್ನಾಗಿ, ಕಾಣಬಹುದು-ನಿನ್ನ ಪರಾಕ್ರಮವನ್ನು ನೋಡಲನುಕೂಲವಾಗಿದೆ. ಎನುತ-ಎಂದು ನುಡಿಯುತ್ತ, ಫಲುಗುಣ ಮುರಧ್ವಂಸಿ ವಾನರ ಹಯಂಗಳಂ-ಫಲುಗುಣ-ಪಾರ್ಥನು, ಮುರಧ್ವಂಸಿ-ಮುರಾಂತಕನಾದ ಕೃಷ್ಣಮೂರುತಿಯು, ವಾನರ-ಕಪಿವರ್ಯನಾದ ಆಂಜನೇಯನು, ಹಯಂಗಳಂ-ತುರಗಂಗಳು ಇವುಗಳನ್ನು, ಕಣೆಗಳರವತ್ತರಿಂ-ಅರವತ್ತುಸರಲ್ಗಳಿಂದ, ಕೆಡೆ-ಬಿದ್ದುಹೋಗುವಂತೆ, ಎಚ್ಚು-ಹೊಡೆದು, ಬೊಬ್ಬಿರಿದನು-ಸಿಂಹನಾದಮಂ ಮಾಡಿದನು ॥೩೯॥

ಟೀ॥ ಅರಸ-ಜನಮೇಜಯ ಮಹೀಪಾಲನೆ, ಅರ್ಜುನಂ-ಪಾರ್ಥನು, ಅವನ-ಆ ಸಾರಸ್ವತ ನಗರದ ರಾಜನ, ಬಾಣದಘಾತಿಗೆ-ಸರಲಿನ ಹೊಡೆತಕ್ಕೆ, ಕೊರಗಿದಂ - ಸಂಕಟಪಟ್ಟನು. ಆಕಪಿ - ಆಂಜನೇಯನು, ಮೇಲೆ – ಧ್ವಜಪಟದಲ್ಲಿಯೇ, ಪಲ್ಲಿರಿವನ-ಹಲ್ಲುಬಿಟ್ಟು ಸಂಕಟಪಟ್ಟನು. ಚಕ್ರಧರನು-ಚಕ್ರಪಾಣಿಯಾದ ಕೃಷ್ಣಸ್ವಾಮಿಯು, ಐದೆ-ಚೆನ್ನಾಗಿ, ಮೈಮರೆದು-ಸ್ಮೃತಿತಪ್ಪಿಹೋಗಿ ಕುದರೆಗೆ ಬಿಗಿದಿದ್ದದಾರವನ್ನು (ಲಗಾಮನ್ನು) ಮರೆತುಬಿಟ್ಟು, ವಾಘೆಯಂ-ಕಟ್ಟಿದ್ದ ಹುರಿಯನ್ನು, ಸಡಲಿಸೆ-ಭದ್ರವಾಗಿ ಹಿಡಿಯದೆ ಹೋದಕಾರಣ, ಅಸ್ತ್ರಹತಿಗೆ-ಸರಲ್ಗಳ ಹೊಡೆತಕ್ಕೆ, ರಥಾಶ್ವಂಗಳು-ರಥಕ್ಕೆ ಕಟ್ಟಿದ್ದ ತುರಂಗಮಂಗಳು, ತರಹರಿಸಲು-ತಾಳಲು, ಅರಿಯದೆ-ಆಗಲಾರದೆ, ಒಂದುಕಡೆಗೆ-ಒಂದು ದಿಕ್ಕನ್ನು ಹಿಡಿದು, ಓಡಿದವು-ಪಲಾಯನಂಗೈದವು. ಬಳಿಕ-ಇದಾದಮೇಲೆ, ಉರವಣಿಸಿ-ಮೇಲ್ಬಾಯ್ದು, ಪಾಂಡವ-ಫಲುಗುಣನ, ಪತಾಕಿನಿಯ-ದಳದಲ್ಲಿರತಕ್ಕ, ಸುಭಟ

---

ಸನ್ನೊಂದಿಗೆ ಹೋರಾಡಿದ್ದೇಸಾಕು. ಅನ್ಯಾಯವಾಗಿ ನಿನ್ನ ಪ್ರಾಣವನ್ನು ಬಾಣಕ್ಕೆ ಏತಕ್ಕೆ ಸಿಕ್ಕಿಸುವೆ? ಎಂದು ನುಡಿಯುತ್ತಾ ಕಣೆಗಳನ್ನು ವೀರವರ್ಮನಮೇಲೆಸೆದನು. ಆ ವೀರವರ್ಮನುಕೂಡ ಫಲುಗುಣನ ಬಾಣಗಳನ್ನು ನಡುದಾರಿಯಲ್ಲಿಯೆ ಖಂಡಿಸಿ ಮಂದಸ್ಮಿತನಾಗಿ ಅರ್ಜುನನ್ನು ಕುರಿತು, ॥೩೮॥ ಎಲೈ ಪಾರ್ಥನೆ, ನೀನು ಯಜ್ಞಾಶ್ವಂಗಳನ್ನು ಕೊಡಬೇಕೆಂದು ಮೊದಲೆ ನನ್ನನ್ನು ಯಾಚಿಸಿದ್ದರೆ ಕೊಡುತ್ತಿದ್ದೆನಲ್ಲಾ! ಅನ್ಯಾಯವಾಗಿ ನನ್ನ ಮೇಲೆ ಯುದ್ಧಕ್ಕೆ ಬಂದು ಹೆಚ್ಚಾದ ಆಯಾಸಕ್ಕೆ ಭಾಗಿಯಾದೆಯಲ್ಲ! ಎಂದು ನುಡಿಯುತ್ತ ಅರವತ್ತು ಬಾಣಗಳನ್ನು ಕೃಷ್ಣಾರ್ಜುನ ಹನುಮಂತರ ಮೇಲೆ ಬಿಟ್ಟು ಸಿಂಹನಾದಮಂಗೈಯ್ಯಲಾರಂಭಿಸಿದನು. ॥ ೩೯ ॥ ಕೇಳೈ ಜನಮೇಜಯ ಮಹೀವಲ್ಲಭನೆ, ವೀರವರ್ಮನು ಬಿಟ್ಟ ಸರಲ್ಗಳ ಹೊಯ್ಲಿನಿಂದ ಅರ್ಜುನನಿಗೆ ಉಂಟಾದ ವ್ಯಥೆಯನ್ನು ಹೇಳಲಸಾಧ್ಯವು. ಹನುಮಂತನು ಹಲ್ಲನ್ನು ತೆರೆದುಕೊಂಡು ಕಿರಚಿಕೊಳ್ಳುವಹಾಗಾಯಿತು, ಕೃಷ್ಣಸ್ವಾಮಿಯು ಸ್ಮೃತಿ ತಪ್ಪಿದವನಾಗಿ ಕೈಯಲ್ಲಿದ್ದ ಲಗಾಮನ್ನು ಸಡಿಲವಾಗಿ ಬಿಟ್ಟು ಬಿಟ್ಟನಾದ್ದರಿಂದ ರಥಕ್ಕೆ ಕಟ್ಟಿದ್ದ ಕುದುರೆಗಳು ಗಾಬರಿಬಿದ್ದು ಓಡಿಹೋದವು. ಅರ್ಜುನನ ಸೈನ್ಯವೆಲ್ಲಾ ದಿಕ್ಕಾಪಾಲಾಗಿ ಚದರಿಹೋಯಿತು, ಈ ಅದ್ಭುತ

ಪತಾಕಿನಿಯುಸುಭಟಪ್ರ | ಕರವನರೆಯಟ್ಟಿದಂತಿರುತಿರುಗಿಚಾರಿವರಿದೇವೇಳ್ವೆನದ್ಭುತವನು ॥ ೪೦ ॥ ಅಭ್ರದೋಳ್ಮಿಂಚುಸುಳಿ ವಂತೆಪರಬಲದೋಳ್ಪ | ರಿಭ್ರಮಿಸಿತವನರಥ ಮೆರಗುತಿಹಸಿಡಿಲಂತೆ | ವಿಭ್ರಾಜಿಸಿತುಘೋಷದೊಡನೆಬಿರುವಳೆಯಂತೆಕರೆದ ವಂಬಿನಸರಿಗಳು ॥ ಬಭ್ರುವಾಹನಮಯೂರಧ್ವಜಾದಿಗಳಾಹ | ವಭ್ರಷ್ಟರಾದರಿದಕರ್ಜುನಂರೋಷಬ | ದ್ಧಭ್ರುಕುಟೀ ಮುಖಭಯಂಕರನಾಗಲಸುರಾರಿಕಂಡುಬಳಿಕಿಂತೆಂದನು ॥೪೧॥ ಖಾತಿಬೇಡೆಲೆಪಾರ್ಥನಿನಗೆನಗೆಮಣಿಯಂನ | ಹಾತಿಬಲನೆಲ್ಲಧ

---

ಪ್ರಕರವನು–ವೀರರ ಗುಂಪನ್ನು, ಚಾರಿವರಿದು–ಸಮಯವನ್ನು ನಿರೀಕ್ಷಿಸಿ, ತಿರುತಿರುಗಿ–ಹಿಂಬಾಲಿಸಿ ಹಿಂಬಾಲಿಸಿ, ಅರೆಯಟ್ಟಿದಂ–ಅರ್ಧಭಾಗದವರೆಗೂ ಹಿಂದಹಿಂದಕ್ಕೆ ಹೋಗುವಂತೆ ಓಡಿಸಿಬಿಟ್ಟನು, ಅದ್ಭುತವನು–ಆಶ್ಚರಿಯನ್ನು, ಏವೇಳ್ವೆನು–ಏನೆಂದು ನುಡಿಯಲಿ ॥೪೦॥

ಟೀ॥ ಮಿಂಚು–ವಿದ್ಯುತ್ತು, ಅಭ್ರದೊಳ್–ಅಂತರಿಕ್ಷದಲ್ಲಿ, ಸುಳಿವಂತೆ–ತಿರುಗುವಹಾಗೆ, ಅವನ–ಆ ಸಾರಸ್ವತನಗರದ ರಾಜನಾದ ವೀರವರ್ಮನ, ರಥಂ–ರಥವು, ಪರಬಲದೊಳ್–ಹಗೆಗಳ ಪಡೆಯೊಳಗೆ, ಪರಿಭ್ರಮಿಸಿತು–ತಿರುಗಾಡುತ್ತಲಿತ್ತು, ಎರಗುತಿಹ–ಕೆಳಗೆ ಉರುಳುತ್ತಲಿರುವ, ಸಿಡಿಲಂತೆ–ಸಿಡಿಲಿನೋಪಾದಿಯಲ್ಲಿ, ಘೋಷದೊಡನೆ–ಹೆಚ್ಚಾದ ಶಬ್ದದಿಂದ ಕೂಡಿ, ವಿಭ್ರಾಜಿಸಿತು–ಕಾಂತಿಯುಕ್ತವಾಯಿತು, ಅಂಬಿನಸರಿಗಳು–ಶರವರ್ಷವಾದರೊ, ಬಿರುವಳೆಯಂತೆ–ದೊಡ್ಡ ಮಳೆಯ ರೀತಿಯಾಗಿ, ಕರೆದವು–ಬಿದ್ದವು, ಬಭ್ರುವಾಹನ–ಪಾರ್ಥಿಯೂ, ಮಯೂರಧ್ವಜನು–ಶಿಖಿಕೇತುವೂ, ಆಹವಭ್ರಷ್ಟರಾದರು–ರಣದಿಂದ ಹಿಮ್ಮೆಟ್ಟಿ ಹೋದರು, ಇದಕೆ–ಈ ರೀತಿಯಲ್ಲಿ ತಮ್ಮ ಕಡೆಯವರೆಲ್ಲಾ ಪರಾಭವವನ್ನೈದಿದ್ದಕ್ಕೆ, ಅರ್ಜುನಂ–ಪಾರ್ಥನು, ರೋಷ–ಕೋಪದಿಂದ, ಬದ್ಧ–ಕಟ್ಟಲ್ಪಟ್ಟ, ಭ್ರುಕುಟೀಮುಖ–ಕಣ್ಣುಬ್ಬುಗಳಿಂದ ಕೂಡಿದ ಮುಖದಿಂದ, ಭಯಂಕರನು–ಹೆದರಿಕೆಯನ್ನುಂಟುಮಾಡತಕ್ಕವನು, ಆಗಲು–ಆಗಲಾಗಿ, ಅಸುರಾರಿ–ರಾಕ್ಷಸಾಂತಕನಾದರೊ, ಕಂಡು–ಅರ್ಜುನನ ಮುಖಭಾವವನ್ನರಿತು, ಬಳಿಕ–ಆ ಮೇಲೆ, ಇಂತು–ಮುಂದೆ ಹೇಳುವಂತೆ ಎಂದನು–ನುಡಿದನು ॥೪೧॥

ಟೀ॥ ಎಲೆ ಪಾರ್ಥ–ಅಯ್ಯಾ ಫಲುಗುಣನೆ, ಖಾತಿಬೇಡ–ಆಗ್ರಹವನ್ನು ತಾಳಬೇಡ, ನಿನಗೆ–ನಿನಗೂ, ಎನಗೆ–ನನಗೂ, ಸಹ, ಮಣಿಯಂ–ಸ್ವಾಧೀನನಾಗತಕ್ಕವನಲ್ಲ, ಮಹಾತಿಬಲನು–ಅಧಿಕವಾದ ಸಾಹಸವುಳ್ಳವನು, ಎಲ್ಲರಂತೆ–ಎಲ್ಲರಹಾಗೆ, ಅಲ್ಲ–ಅಲ್ಲವು, (ಇವನು ಎಲ್ಲರನ್ನೂ ಮೀರಿಸಿದ್ದಾನೆ) ಈತನೊಳ್–ಇವನೊಂದಿಗೆ, ಅಘಟು–ಶೌರ್ಯಸಂಬಂಧವಾದ, ಉಪಾಯಂಗಳು–ಚಮತ್ಕಾರದ ಕಾರ್ಯಗಳು, ಕೊಳ್ಳದು–ನಡೆಯತಕ್ಕದ್ದಲ್ಲವು, ಇವನೆಡೆಗೆ–ಈ ವೀರವರ್ಮ ಭೂನಾಥನಿರುವ ಸ್ಥಳಕ್ಕೆ, ಜಯದ್ರಥನ–ಸೈಂಧವನೆಂಬುವನ, ತಲೆಯನು–ಉತ್ತಮಾಂಗವನ್ನು, ಅರಿದ–ಕತ್ತರಿಸಿದ, ಅಂಬು–ಸರಲೂ ಕೂಡ, ಪೋಗದು–ತಾಗುವುದೇ ಇಲ್ಲವು, ಸೂತಜನ–ಸೂರ್ಯನ ಸುತನಾದ ಕರ್ಣನ, ರಥದಗಾಲಿಗೆ–ರಥದ ಪಾರುಂಬಳಿಗಳು ಮೇಲಕ್ಕೆ ಬಂಬೇಕೆಂದು ಬಿಟ್ಟ ಕಣೆಗಳು ಕೂಡ, ಸಿಕ್ಕನು–ಸಿಕ್ಕತಕ್ಕವನಲ್ಲವು, ಇಕ್ಕಿದ–ವೀರವರ್ಮನು ಹೆಜ್ಜೆಯೂರಿದ, ಮಹೀತಳದೊಳ್–ನೆಲದಲ್ಲಿಯೂ ಕೂಡ, ಎಡರಿಲ್ಲ–ದೋಷವು ನಿಲ್ಲುವುದಿಲ್ಲ, ನಾಂ–ನಾನು, ಇವಂಗೆ–ಈ ರಾಜನಮೇಲೆ, ಮುಳಿದೊಡೆ–ಸಿಟ್ಟುಮಾಡಿಕೊಂಡರೆ, ಇವನಂ–ಈ ಪೊಡವಿಪನನ್ನು, ಸುನೀತನ–ಸುನೀತನೆನ್ನತಕ್ಕವನ, ಶಿರಭೇದನಂಗೈದ–ತಲೆಯನ್ನು ತುಂಡುಮಾಡಿದ, ಚಕ್ರಂ–ಚಕ್ರಾಯುಧವೂ ಕೂಡ, ಮುಟ್ಟದು–ಸೋಕುವುದಿಲ್ಲವು. ಏವೇಳ್ವೆನು–ಏನೆಂದು ನುಡಿಯಲಿ.

ಉ॥ ವಿ॥ ಜಯದ್ರಥನ ಶಿರಭೇದನದ ಪೂರ್ವ ಕಥೆ.

ಅರ್ಜುನನ ಮಗನಾದ ಅಭಿಮನ್ಯುವು ತಾಯಿಯ ಗರ್ಭದಲ್ಲಿರುವಾಗ ಒಂದಾನೊಂದು ದಿವಸ ಕೃಷ್ಣಸ್ವಾಮಿಯು ತನ್ನ ತಂಗಿಯಾದ ಸುಭದ್ರೆಯೊಂದಿಗೆ ಮುಂದೆ ಪದ್ಮವ್ಯೂಹವನ್ನು ಕೌರವರು ಕಟ್ಟುವರೆಂದೂ, ಅದರೊಳಗೆ ಪ್ರವೇಶಮಾಡುವುದೇ ಅಸಾಧ್ಯವೆಂದೂ, ಹೇಳುತಾ, ಪದ್ಮವ್ಯೂಹದೊಳಗೆ ಪ್ರವೇಶಮಾಡುವ ತೆರವನ್ನೆಲ್ಲಾ ಹೇಳುತ್ತಲಿದ್ದನು. ಗರ್ಭದಲ್ಲಿದ್ದ

---

ಕಾರ್ಯವನ್ನು ನೋಡಿ ಎಲ್ಲರೂ ಬೆರಗಾದರು ॥೪೦॥ ಆಗಸದಲ್ಲಿ ಮಿಂಚು ಪ್ರಕಾಶಿಸುವಂತೆ ವೀರವರ್ಮನ ರಥವು ಪಾರ್ಥ ಸೇನಾಮಧ್ಯದಲ್ಲೆಲ್ಲಾ ತಿರುಗಾಡಲಾರಂಭಿಸಿತು, ಸಿಡಿಲಿನಹಾಗೆ ಘೋರವಾದ ಧ್ವನಿಯು ಕೇಳಬರುತ್ತಲಿದ್ದಿತು, ಬಿರುಮಳೆಯಹಾಗೆ ಶರವರ್ಷವು ಶತ್ರುಸೈನ್ಯದಲ್ಲುಂಟಾಯಿತು. ಬಭ್ರುವಾಹನ, ಮಯೂರಧ್ವಜನೇ ಮೊದಲಾದವರೆಲ್ಲಾ ಯುದ್ಧದಲ್ಲಿ ಅವಮಾನವನ್ನು ಹೊಂದಿ ಹಿಂದಿರುಗಿದರು, ಇದರಿಂದ ಅರ್ಜುನನ ಮುಖದಿಂದ ಕೋಪಾಗ್ನಿಯ ಕೆಂಡಗಳು ಉದುರಲಾರಂಭಿಸಿತು, ಕಣ್ಣುಬ್ಬುಗಳು ತಿರುಮುರಿಯನ್ನೈದಿದವು. ಅರ್ಜುನನ ಈ ತೆರನಾದ ಮುಖಭಾವವನ್ನು ನೋಡಿದ ಕೃಷ್ಣಸ್ವಾಮಿಯು ಪಾರ್ಥನನ್ನು ಕುರಿತು, ॥ ೪೧ ॥ ಎಲೈ ಫಲುಗುಣಾ! ನೀನು ಕೋಪಮಾಡಲಾಗದು, ವೀರವರ್ಮನನ್ನು ಗೆಲ್ಲುವುದು ನಿನಗೂ ನನಗೂ ಅಸಾಧ್ಯವಾಗಿರುವುದು, ಇವನು ಅಸಹಾಯ ಶೂರನು, ಎಲ್ಲರಂತೆ ಸಾಮಾನ್ಯನೆಂದು ನೀನು ಯೋಚಿಸಬೇಡ, ಮಹಾಪರಾ

ಉಪಾಯಂಗ | ಶೀತನೋಳ್ಕೊಳ್ಳದುಜಯದ್ರಥನತಲೆಯನರಿದಂಬಿನನಡೆಗೆಪ್ಪೋಗದು || ಸೂತಜನರಥದಗಾಲಿಗೆಸಿಕ್ಕಿನಿಕ್ಕದ ಸು | ಶೀತಳದೊಳಿಡರಲ್ಲಿವಂಗೆನಾಂಮುಳಿದೊಡೆಸು | ನೀತನಶಿರಚ್ಛೇದನಂಗೈದಚಕ್ರವಿಷನಂಮುಟ್ಟದೇವೇಳ್ಕೆನು || ೪೨ || ಇಂತೆಂದುಹರಿಪಾರ್ಥನಂನಿಲಿಸಿನೋಡಿ ಹಸು | ಮಂತನಂಕರೆದುಸೀನೀತನವರೂಥಮಂ | ತೊಂತಿವಾಲಾಗ್ರದಿಂಗಗನದೋಳ್ತಿರುಹಿ

ಶಿಶುವು ಕೃಷ್ಣನು ಹೇಳಿದ್ದನ್ನೆಲ್ಲಾ ಕೇಳಿ ಊಗುಟ್ಟುತ್ತಲಿತ್ತು ಸುಭದ್ರೆಯು ನಿದ್ರೆಹೋಗಿದ್ದಳು ಕೃಷ್ಣನಿಗೆ ಇದು ಗೊತ್ತಾಗದೆ ಪದ್ಮವ್ಯೂಹದೊಳಕ್ಕೆ ಪ್ರವೇಶಮಾಡುವವರೆಗೂ ಹೇಳಿದನು, ಕೂಡಲೆ ಎಚ್ಚೆತ್ತು ಮುಂದಿನ ಸುದ್ದಿಯನ್ನು ಹೇಳದೆ ನಿಲ್ಲಿಸಿಬಿಟ್ಟನು. ಸ್ವಲ್ಪದಿನದಮೇಲೆ ಸುಭದ್ರೆಯ ಗರ್ಭದಲ್ಲಿ ಅಭಿಮನ್ಯುವು ಹುಟ್ಟಿದನು ಕೌರವ ಪಾಂಡವರಿಗೆ ಯುದ್ಧವು ನಡೆಯುತ್ತಲಿರುವಾಗ ಅಭಿಮನ್ಯುವು ಪದ್ಮವ್ಯೂಹಕ್ಕೆ ನುಗ್ಗಿ ಶತ್ರುಗಳನ್ನು ಸೋಲಿಸಿ ಹಿಂದಿರುಗಿ ಬರಲಾರದಿರುವಾಗ ಜಯದ್ರಥನು ಇವನನ್ನು ಕೊಂದನು. ಈ ಸುದ್ದಿಯು ಅರ್ಜುನನಿಗೆ ತಿಳಿದು ಮಹಾ ವ್ಯಸನವುಳ್ಳವನಾಗಿ ನನ್ನ ಮಗನನ್ನು ಕೊಂದವನನ್ನು ನಾಳೆ ಸೂರ್ಯಾಸ್ತಮಾನದೊಳಗಾಗಿ ಸಂಹರಿಸುವೆನೆಂದೂ, ತಪ್ಪಿದರೆ ಅಗ್ನಿಪ್ರವೇಶವಂ ಮಾಡಿ ಪ್ರಾಣಗಳನ್ನು ಹೋಗಲಾಡಿಸಿಕೊಳ್ಳುವಂತೆಯೂ, ಕ್ರೂರ ಶಪಥವಂ ಮಾಡಿಕೊಂಡು ಯುದ್ಧಕ್ಕೆ ಅನುವಾದನು. ಕೃಷ್ಣಸ್ವಾಮಿಯು ಅರ್ಜುನನ ರಥವನ್ನು ನೇವರಿಸುವುದರಲ್ಲಿ ಬಹುಕಾಲವಂ ಕಳೆದನು. ಸೂರ್ಯಾಸ್ತಮಯಕ್ಕೆ ೨-೩ ಘಳಿಗೆ ಇರುವಾಗಲೆ ಕೃಷ್ಣನು ತನ್ನ ಚಕ್ರವನ್ನು ಸೂರ್ಯನಿಗೆ ಅಡ್ಡಲಾಗಿ ಹಿಡಿದನು, ಕೌರವಾದಿಗಳೆಲ್ಲರೂ ಸೂರ್ಯಾಸ್ತಮಯವಾದ್ದರಿಂದ ಜಯದ್ರಥನಿಗೆ ಭಯವಿಲ್ಲವೆಂದು ಅವನನ್ನು ಮುಂದೆ ಬಿಟ್ಟುಕೊಂಡು ಅರ್ಜುನನು ಅಗ್ನಿಪ್ರವೇಶಮಾಡಲೆಂದು ಹತ್ತಿರಕ್ಕೆ ಬರುವ ಕಾಲಕ್ಕೆ ಸರಿಯಾಗಿ ಕೃಷ್ಣನು ಅರ್ಜುನನನ್ನು ನೋಡಿ ಇಗೋ ಜಯದ್ರಥನು ಮುಂದೆ ಬರುತ್ತಲಿರುವನು ಜಾಗ್ರತೆಯಾಗಿ ಬಾಣವನ್ನು ಧನುಸ್ಸಿಗೆ ಹೂಡಿ ಹೊಡಿಯುವಂತೆ ಒಪ್ಪಿಸಿ ಚಕ್ರವನ್ನು ಹಿಂದಕ್ಕೆ ತೆಗೆದನು, ಅರ್ಜುನನ ಏಟಿನಿಂದ ಜಯದ್ರಥನ ಪ್ರಾಣವು ಹೋಯಿತು, ಆ ಈ ಬಾಣವು ಈಗ ಪ್ರಯೋಜನಕ್ಕೆ ಬಾರದೆಂದು ಕೃಷ್ಣನು ನುಡಿದನು.

### ಕರ್ಣನು ಅರ್ಜುನನ ರಥಕ್ಕೆ ಬಾಣವನ್ನು ಬಿಟ್ಟ ಕಥೆ.

ಕೌರವ ಪಾಂಡವರಿಗೆ ಯುದ್ಧವಾಗುವಾಗ ಕರ್ಣನು ದುರ್ಯೋಧನನೊಂದಿಗೆ ಸೇರಿ ಪಾಂಡವರಮೇಲೆ ಯುದ್ಧಕ್ಕೆ ನಿಂತನು. ಕರ್ಣನು ಪಂಚಪಾಂಡವರೂ ಕುಂತೀಪುತ್ರರಾದರೂ ಒಬ್ಬರನ್ನೊಬ್ಬರು ಅರಿಯದೆ ಯುದ್ಧಮಾಡುತ್ತಲಿದ್ದರು. ಇಂದ್ರನ ಖಾಂಡವನವನ್ನು ದಹಿಸಿದ ಕಾಲದಲ್ಲಿ ತಕ್ಷಕನೆಂಬ ಸರ್ಪವು ಅರ್ಜುನನ ಮೇಲಿನ ದ್ವೇಷದಿಂದ ಕರ್ಣನ ಬತ್ತಳಿಕೆಯಲ್ಲಿ ಬಾಣವಾಗಿ ಕಾದುಕೊಂಡಿದ್ದು ಪಾರ್ಥನನ್ನು ಸಂಹರಿಸಲು ಸಮಯವನ್ನು ನಿರೀಕ್ಷಿಸುತ್ತಲಿತ್ತು, ಇದನ್ನು ಕೃಷ್ಣನು ತಿಳಿದು ಕೊರಡು ಬಂದಾನೊಂದು ಉಪಾಯವನ್ನು ಹುಡುಕಿ ಅರ್ಜುನನಿಗೆ ಬಂದಿರುವ ಅಪಾಯವನ್ನು ಹೋಗಲಾಡಿಸಬೇಕೆಂದಿಚ್ಛಿಸಿ, ಕುಂತೀದೇವಿಯನ್ನು ಕುರಿತು, ಎಲೌ ಕುಂತಿಯೇ, ನೀನು ಕರ್ಣನ ಬಳಿಗೆ ಹೋಗಿ ನೀನೂ ಪಾಂಡವರೂ ನನ್ನ ಮಕ್ಕಳೆಂದೂ, ಧರ್ಮಾದಿಗಳೂ ನೀನೂ ಅನ್ಯೋನ್ಯವಾಗಿರಬೇಕೆಂದೂ ಹೇಳು. ಇದಕ್ಕೆ ಅವನು ಒಪ್ಪದಿದ್ದರೆ ತೊಟ್ಟ ಬಾಣವನ್ನು ಪುನಃ ತೊಡುವುದಿಲ್ಲವೆಂಬ ಪ್ರಮಾಣವನ್ನು ತೆಗೆದುಕೊಂಡು ಬಾರೆಂದು ಹೇಳಿ ಕಳುಹಿಸಿದನು, ಕುಂತಿಯು ಅದರಂತೆಯೇ ಹೋಗಿ ಕರ್ಣನನ್ನು ಕುರಿತು ಹೇಳಿದಳು. ಕರ್ಣನೂ ಕೂಡ ತನ್ನ ತಮ್ಮಂದಿರೆಂದರಿಯದೆ ದುರ್ಯೋಧನನೊಂದಿಗೆ ಕೂಡಿ ವೈರವನ್ನು ಬೆಳಸಿದ್ದಕ್ಕೆ ಬಹಳವಾಗಿ ನೊಂದು ದುರ್ಯೋಧನನಿಗೆ ಕೊಟ್ಟ ಮಾತನ್ನು ಮೀರಲಾರನೆಂದು ನುಡಿದು ತೊಟ್ಟ ಬಾಣವನ್ನು ಪುನಃ ತೊಡುವುದಿಲ್ಲವೆಂಬ ನಂಬಿಕೆಯನ್ನಿತ್ತು ಕಳುಹಿದನು. ಇದರಿಂದ ಕೃಷ್ಣನಿಗೆ ಸಂತೋಷವಾಯಿತು, ಕರ್ಣಾರ್ಜುನರ ಕಾಳಗವು ನಡೆಯುವಾಗ ಕರ್ಣನು ಅರ್ಜುನನ ಮೇಲೆ ಸರ್ಪಾಸ್ತ್ರವನ್ನು ಹೂಡಿದನು. ಕೃಷ್ಣನು ಇದನ್ನು ತಿಳಿದು ರಥವನ್ನು ನೆಲಕ್ಕದುಮಲು ಆ ತಕ್ಷಕರೂಪವಾದ ಬಾಣವು ಅರ್ಜುನನ ಕಿರೀಟಕ್ಕೆ ತಗಲಿತು. ಅರ್ಜುನನಿಗೆ ಏನೂ ಅಪಾಯವಾಗಲಿಲ್ಲ, ಆವೇ ತಕ್ಷಕನೇ ಪುನಃ ತನ್ನನ್ನು ಬಿಡೆಂದು ಕರ್ಣನನ್ನು ಕೇಳಿಕೊಂಡಿತು. ಕರ್ಣನು ತೊಟ್ಟ ಬಾಣವನ್ನು ತೊಡುವುದಿಲ್ಲವೆಂದು ಅದನ್ನು ನಿರಾಕರಿಸಿದನಾದ್ದರಿಂದ ಅರ್ಜುನನ್ನು ಆ ತಕ್ಷಕನು ಏನೂ ಮಾಡಲಾರದೆ ಹೋಯಿತು. ಈಗ ಈ ವೀರವರ್ಮನನ್ನು ಸಂಹರಿಸಲು ಇಂತಹ ಬಾಣದಿಂದಲೂ ಆಗುವುದಿಲ್ಲವೆಂದು ಕೃಷ್ಣನು ಅರ್ಜುನನೊಂದಿಗೆ ಹೇಳಿದನು. ||೪೨||

ಟೀ|| ಇಂತು- ಈ ರೀತಿಯಾಗಿ, ಹರಿ-ಕೃಷ್ಣಸ್ವಾಮಿಯು, ಎಂದು- ಅರ್ಜುನನಿಗೆ ತಿಳಿಸಿ, ಪಾರ್ಥನಂ- ಫಲುಗುಣ

---

ಕ್ರಮಿಯಾದ್ದರಿಂದ ಇವನನ್ನು ಉಪಾಯಾಂತರದಿಂದ ಸಂಹರಿಸಲಾಗದು. ಜಯದ್ರಥನನ್ನು ಕೊಲ್ಲುವಾಗ ನೀನು ಬಿಟ್ಟ ಬಾಣವೂ ಕೂಡ ಇವನನ್ನು ಏನೂ ಮಾಡಲಾರದು, ಕರ್ಣನಮೇಲೆಸೆದ ಕಣೆಯೂ, ಸುನೀತನ ತಲೆಯನ್ನು ಕತ್ತರಿಸಿದ ನನ್ನ ಚಕ್ರವೂ ಇವನಿಗೆ ಎದುರಲ್ಲವು. ಏನು ಮಾಡೋಣವೆಂದು ನುಡಿಯುತ್ತಾ ||೪೨|| ಅರ್ಜುನನ ರೋಷವನ್ನು ತಗ್ಗಿಸಿ, ಪಕ್ಕದಲ್ಲಿದ್ದ ವಾಯು

ಮಹಾರ್ಣವಕೆಪೋಗೆನ್ನಲು|| ಎಂತಿವನರಥವನೀಡಾಡುವೆಂದಶವದನ| ನಂತೆಯುಂಜಂಬುಮಾಲಿಯತೆರದಿರಾಮಸೀ| ಮಂತಿ ನಿಗೆಕಾವಲಿರ್ದಸುರೆಯರತೆರದೊಳುಂಖಳನೀತನಲ್ಲೆಂದನು ||೪೩|| ವಾಯುಸುತಶಂಕೆಬೇಡೆನ್ನಾಜ್ಞೆಧರ್ಮದಸ| ಹಾಯಮಿದು ನಿನಗೆಬೇಕಾದಕಜ್ಜಮೆಂ | ದಾಯದುಕುಲಾಧಿಪಂನೇಮಿಸಿದೊಡಾಕಪಿವರಂತನ್ನವಾಲಧಿಯನು || ಆಯತಂಗೈದುಸಾರಥಿ ಕುದುರೆಗಳ್ಸಹಿತ | ಜೇಯಮಾಗಿಹನೃಪನರಥಮಂತೊಡರ್ದಾಂಜ | ನೇಯಂನಭಸ್ಥಳಕೆಚಿಗಿದಂಪಯೋನಿಧಿಗೆಬಿಸುಡು ವುದ್ಯೋಗದಿಂದೆ ||೪೪|| ಅನ್ನೆಗಂತನ್ನರಥಮಂಬಿಟ್ಟುವೀರವ| ರ್ಮಂನರನಮಣಿಮಯವರೂಥಮಂತೆಗೆದುಕೊಂ | ಡುನ್ನತ

---

ನನ್ನ, ವಿಲಿಸಿ-ಯುದ್ಧಕ್ಕೆ ಹೋಗುವುದನ್ನು ನಿರೋಧಿಸಿ, ನೋಡಿ-ನಿರುಕಿಸಿ, ಹನುಮಂತನಂ-ವಾಯುನಂದನನನ್ನು. ಕರೆದು- ಸಂಬೋಧಿಸಿ, ಈತನ-ಈ ವೀರವರ್ಮನ, ವರೂಥಮುಂ-ರಥವನ್ನು, ನೀನು-ನೀನಾದರೊ, ವಾಲಾಗ್ರದಿಂ-ಬಾಲದ ಕೊನೆಯಿಂದ, ತೊಂತಿ-ಸುತ್ತಿಕೊಂಡು, ಗಗನದೊಳ್-ಆಗಸದೊಳಗೆ, ತಿರುಹಿ-ತಿರುಗಿಸಿಬಿಟ್ಟು, ಮಹಾರ್ಣವಕೆ-ದೊಡ್ಡದಾದ ಸಾಗರದೊಳಗೆ, ಇಡು-ಕೆಡವು, ಪೋಗು-ಹೊರಡು, ಎನಲು-ಎಂದು ನುಡಿಯಲು, ಇವನರಥವನು - ಈ ವೀರವರ್ಮಮಹೀವಲ್ಲಭನ ರಥವನ್ನು, ಎಂತು-ಹೇಗೆ, ಈಡಾಡುವೆಂ-ಬಾಲದಲ್ಲಿ ಕಟ್ಟಿ ಸಮುದ್ರದೊಳಕ್ಕೆ ಕೆಡಹಲಿ, ಈತನು-ಈ ರಾಜನಾದರೊ. ದಶವದನನಂತೆಯುಂ- ಲಂಕಾಧಿಪನಾದ ದಶಕಂಠನ ಹಾಗೂ, ಜಂಬುಮಾಲಿಯತೆರದಿ - ಜಂಬುಮಾಲಿಯಂತೆಯೂ, ರಾಮಸೀಮಂತಿನಿಗೆ-ಶ್ರೀರಾಮ ನರಸಿಯಾದ ವೈದೇಹಿಗೆ, ಕಾವಲಿರ್ದ - ಕಾವಲಾಗಿದ್ದ, ಅಸುರೆಯರ - ರಕ್ಕಸರ ಹೆಂಗಸರ, ತೆರದೊಳುಂ - ಪರಿಯಾಗಿಯೂ, ಖಳನು-ದುಷ್ಟನು, ಅಲ್ಲ-ಆಗಿಲ್ಲವಲ್ಲ, ಎಂದನು-ಎಂಬುದಾಗಿ ಹೇಳಿದನು ||೪೩||

ಟೀ|| ವಾಯುಸುತ - ಪಾವಮಾನಿಯೆ, ಶಂಕೆಬೇಡ - ಅನುಮಾನಪಡಬೇಡ, ಎನ್ನಆಜ್ಞೆ-ಈಗ ನಾನು ನಿನಗೆ ಹೇಳ ತಕ್ಕದ್ದು, ಧರ್ಮದಸಹಾಯಂ-ಪುಣ್ಯಪ್ರದವಾದದ್ದು, ನಿನಗೆ-ನಿನಗೂ, ಎಮಗೆ-ನಮಗೂ, ಇದು-ಹೀಗೆ ಮಾಡತಕ್ಕದ್ದು, ಬೇಕಾದ ಕಜ್ಜಂ - ಅವಶ್ಯಕವಾದ ಕಾರ್ಯವು, ಎಂದು - ಎಂಬರೀತಿಯಾಗಿ, ಆಯದುಕುಲಾಧಿಪಂ - ಯದುವಂಶನಾಥನಾದ ಕೃಷ್ಣ ಸ್ವಾಮಿಯು, ನೇಮಿಸಿದೊಡೆ-ಅನುಜ್ಞೆಯನ್ನೀಯಲು, ಆಕಪಿವರಂ-ಆ ಹನುಮಂತನು, ತನ್ನವಾಲಧಿಯನು-ತನ್ನ ಬಾಲವನ್ನು, ಆಯತಂಗೈದು-ದೊಡ್ಡದಾಗಿಬೆಳಸಿ, ಸಾರಥಿ-ರಥವನ್ನು ನಡೆಯಿಸುವವನು, ಕುದುರೆಗಳ್ಸಹಿತ - ಕುದುರೆಗಳು ಇವುಗಳೊಂದಿಗೆ, ಅಜೇಯಂ-ಗೆಲ್ಲಲಸಾಧ್ಯವಾದದ್ದು, ಆಗಿಹ - ಆಗಿರತಕ್ಕ, ನೃಪನ-ರಾಜನ, ರಥಮಂ-ರಥವನ್ನು. ತೊಡರ್ದ - ಸುತ್ತುಗಟ್ಟಿ, ಪಯೋನಿಧಿಗೆ-ಸಮುದ್ರದೊಳಕ್ಕೆ, ಬಿಸುಡುವ-ಕೆಡಹತಕ್ಕ, ಉದ್ಯೋಗದಿಂದ - ಕಾರ್ಯದಿಂದ, ಅಂಜನೇಯಂ - ಪವಮಾನ ನಂದನನು, ನಭಸ್ಥಳಕೆ-ಆಕಾಶಮಾರ್ಗಕ್ಕೆ, ಚಿಗಿದಂ-ಎಗರಿದವನಾದನು.

ಅ|| ವಿ|| ಆಜ್ಞೆ (ತ್ಸ) ಆಣೆ (ತ್ಭ) ಕಜ್ಜ (ತ್ಭ) ಕಾರ್ಯ (ತ್ಸ) ಕಪಿವರಂ (ಸ. ತ.) ಪಯೋನಿಧಿ-ಪಯ-ನೀರೇ, ನಿಧಿ ನಿಕ್ಷೇಪವಾಗಿ ಉಳ್ಳದ್ದು (ಸಮುದ್ರವು) (ಕೃ. ವೃ.) ||೪೪||

ಟೀ||ವೀರವರ್ಮಂ-ವೀರವರ್ಮನಾದರೊ, ಅನ್ನೆಗಂ-ಅಷ್ಟುಹೊತ್ತಿಗೆ, ತನ್ನರಥಮಂಬಿಟ್ಟು-ತನ್ನರಥದಿಂದ ಹೊರಟು, ನರನ-ಫಲುಗುಣನ, ಮಣಿಮಯ-ರತ್ನಖಚಿತವಾದ, ವರೂಥಮಂ-ಸ್ಯಂದನವನ್ನು, ತೆಗೆದುಕೊಂಡು-ತೆಗೆದುಕೊಂಡವನಾಗಿ, ಆಗಸದೆಡೆಗೆ-ಅಂತರಿಕ್ಷಮಾರ್ಗಕ್ಕೆ, ಉನ್ನತಪರಾಕ್ರಮದೊಳ್ - ಅತ್ಯಂತ ಸಾಹಸದಿಂದ, ಚಿಗಿದು-ಎಗರಿಹೋಗಿ, ಎಲೈ ವಾನ ರೇಂದ್ರ-ಅಯ್ಯಾ ಕಪಿವರ್ಯನಾದ ಅಂಜನೇಯನೆ, ನಿನ್ನೊಳ್ - ನಿನ್ನ ಹತ್ತಿರ, ಬರಿದೇರು ಯಾರೂ ಇಲ್ಲದಿರತಕ್ಕ ರಥವು, ಇರ್ದ

---

ಸುತನನ್ನು ಕುರಿತು, ಎಲೈ ಅಂಜನೆಯ ಕುವರನೆ, ನೀನು ನಿನ್ನ ಬಾಲದಿಂದ ಈ ವೀರವರ್ಮನ ರಥವನ್ನು ಸುತ್ತಿ ಆಕಾ ಶಕ್ಕೆ ಎತ್ತಿಕೊಂಡು ಹೋಗಿ ದೊಡ್ಡ ಸಮುದ್ರದೊಳಕ್ಕೆ ಕೆಡಹೆಂದು ನುಡಿಯಲು, ಅಂಜನೇಯನು ಕೃಷ್ಣಮೂರುತಿಯನ್ನು ನೋಡಿ, ಎಲೈ ಮಹಾನುಭಾವನೆ, ರಾವಣಾಸುರನಂತೆಯೂ, ಜಂಬುಮಾಲಿಯ ಹಾಗೂ, ಸೀತಾದೇವಿಗೆ ಹಿಂಸೆಯನ್ನುಂಟು ಮಾಡುತ್ತಲಿದ್ದ ರಕ್ಕಸಸ್ತ್ರೀಯರ ತೆರದಿಂದಲೂ ಇವನು ದೋಷಿಯಾಗಿಲ್ಲವು. ನಿರ್ದೋಷಿಯಾದ ಈ ವೀರವರ್ಮನ ರಥವನ್ನು ನನ್ನ ಬಾಲದಿಂದ ಸುತ್ತಿ ಸಮುದ್ರದಲ್ಲಿ ಕೆಡಹಲು ಹಿಂಜರಿಯುತ್ತಲಿರುವೆನೆಂದು ನುಡಿದ ವಾಯುನಂದನನನ್ನು ನೋಡಿ ಕೃಷ್ಣ ಮೂರುತಿಯು, ಎಲೈ ಹನುಮಂತನೆ || ೪೩ || ನೀನು ಸ್ವಲ್ಪವೂ ಅನುಮಾನವನ್ನೈದದೆ ಧರ್ಮಕ್ಕೆ ಸಹಾಯಕವಾದ ಈ ನನ್ನ ಮಾತನ್ನು ನೆರವೇರಿಸಬೇಕು, ಇದರಿಂದ ಅರ್ಜುನನಿಗೂ ನನಿಗೂ ನಿನಿಗೂ ಸಹಾಯವೆಂದು ನುಡಿದ ಕೃಷ್ಣಮೂರುತಿಯ ಮಾತಿ ನಂತೆ ಅಂಜನೇಯನು ತನ್ನ ಬಾಲವನ್ನು ಬೆಳೆಸಿದವನಾಗಿ, ಅಶ್ವಸಾರಥಿಗಳಿಂದ ಕೂಡಿದ ವೀರವರ್ಮನ ತೇರನ್ನು ಬಾಲದಿಂದ ಸುತ್ತಿ ಆಕಾಶಕ್ಕೆ ಹಾರುವಷ್ಟರೊಳಗೆ || ೪೪ || ವೀರವರ್ಮನು ತನ್ನ ರಥವನ್ನು ಬಿಟ್ಟು ಅರ್ಜುನನ ತೇರಿನ ಮೇಲೆಕ್ಕೆ ಹಾರಿ ಹೆಚ್ಚಾದ ಸಾಹಸದಿಂದ ಅದನ್ನು ಅಂತರಿಕ್ಷಕ್ಕೆ ತೆಗೆದುಕೊಂಡು ಹೋಗಿ ಅಂಜನೇಯನನ್ನು ಕುರಿತು, ಎಲೈ

ಪರಾಕ್ರಮದೊಳಾಗಸದೆಡೆಗೆಚಿಗಿದುಬಂದೆಲೈವಾನರೇಂದ್ರ ‖ ಪಿನ್ನೊಳಿರ್ದಪುದ-ಬರಿದೇರೆನ್ನಕೈಯೊಳಿದೆ । ಪನ್ನಗಾರಿಧ್ವಜ ಕಿರೀಟಿಗಳ್ವೆರಸಿರ್ದ । ಸನ್ನುತಸ್ಯಂದನಂನೋಡೆಂದುಗಗನದೋಳ್ಕಪಿಯಂಪಚಾರಿಸಿದನು ‖ ೪೫ ‖ ಎಲ್ಲಿಗೆನ್ನಯವರಥವ ಪಿಡ-ಪೆಕೀಶನೀ । ನಲ್ಲಿಗೀಡಾಡುವೆಂಸವ್ಯಸಾಚಿಯರಥವ । ನಲ್ಲದೊಡೆಪಾಲ್ಕಡಲಶೇಷತಲ್ಪದೊಳೆಸೆವಯಿಂದಿರಾದೇವಿತನ್ನ ‖ ವಲ್ಲಭನನಗಲ್ದುಪಾರ್ಥನಭಕ್ತಿಗೊಲಿದಿರ । ಲ್ತಲ್ಲಣಿಸಿವಿರಹದಿಂತಪಿಸುತಿಹಳಾರಮೆಗೆ । ನಲ್ಲನೊಡಗೂಡುವಂತಮೃತಾಬ್ಧಿಗಿಡುವೆನೆಂದುಬ್ಬಿದಂಭೂಪಾಲನು ‖ ೪೬ ‖ ಸಾಗರವಲಂಘಿಸಿದಸಾಹಸಕೆಬೆರೆವನೀ । ನಾಗಸದೊಳಾದಿತ್ಯನಿರೆಚಂದ್ರನೊಪ್ಪುವುದೆ । ಪೋಗೆಲೆಮರುಳೆತನ್ನಮುಂದಣಪರಾಕ್ರಮಿಗಳುಂಟೆಮೂಜಗದೊಳೆನುತ ‖ ತಾಗಿದಂನೃಪತಿಹನುಮಂತನಂಬಳಿಕನಾ । ವೀಗಣವರಂತಲ್ಲತಾನೆತನ್ನಂಪೊಗಳು । ವೀಗರುವಿಕೆಯನರಿಯೆವತಿವೃದ್ಧರೆಂದೆರಗಿದಂಕಪಿಮಹೀಶ್ವರನನು ‖ ೪೭ ‖ ಆವೀರವರ್ಮಂ

---

ಇವೆ, ಪನ್ನಗಾರಿಧ್ವಜಕಿರೀಟಿಗಳ್ - ಕೃಷ್ಣಾರ್ಜುನರಿಂದ, ವೆರಸಿರ್ದ - ಒಡಗೂಡಿದಂಥ, ಸನ್ನುತ - ಸ್ತೋತ್ರಾರ್ಹವಾದ, ಸ್ಯಂದನಂ-ತೇರಾದರೊ, ಎನ್ನಕೈಯೊಳ್-ನನ್ನ ಕೈಯೊಳಗ ಇದೆ, ನೋಡು-ಈಕ್ಷಿಸು, ಎಂದು-ಎಂಬುದಾಗಿ, ಕಪಿಯಂ-ಆಂಜನೇಯನನ್ನು, ಪಚಾರಿಸಿದನು-ಧಿಕ್ಕರಿಸಿ ನುಡಿದನು ‖೪೫‖

ಟೀ‖ (ಭೂಪಾಲನು) ಕೀಶ-ಎಲೈ ಕಪಿಯೇ, ಎನ್ನಯರಥವನು-ನನ್ನ ತೇರನ್ನು, ನೀನು-ನೀನಾದರೊ, ಎಲ್ಲಿಗೆ-ಯಾವ ಸ್ಥಳಕ್ಕೆ, ಇಡುವೆ-ಕೆಡಹುವಿಯೊ, ಅಲ್ಲಿಗೆ - ಅದೇಪ್ರದೇಶಕ್ಕೇ, ಸವ್ಯಸಾಚಿಯ - ಧನಂಜಯನ, ರಥವನು - ರಥವನ್ನು, ಈಡಾಡುವೆಂ-ಕೆಡಹುತ್ತೇನೆ, ಅಲ್ಲದೊಡೆ-ಹಾಗಿಲ್ಲವಾದರೆ, ಪಾಲ್ಗಡಲ-ಹಾಲಿನ ಸಮುದ್ರದಲ್ಲಿರುವ, ಶೇಷತಲ್ಪದೊಳಗೆ-ಆದಿಶೇಷನೆಂಬ ಹಾಸಿಗೆಯಲ್ಲಿ, ಎಸೆವ-ಹೊಳೆಯುತ್ತಲಿರುವ, ಇಂದಿರಾದೇವಿವಲ್ಲಭಂ-ಲಕ್ಷ್ಮೀಕಾಂತನು, ಅಗಲ್ದು-ಬಿಟ್ಟು, ಪಾರ್ಥನ ಭಕ್ತಿಗೆ-ಕಿರೀಟಿಯ ಭಕ್ತಿಗಾಗಿ, ಒಲಿದು-ಸಂತೋಷವನ್ನೈದಿ, ಇರಲ್-ಪಾರ್ಥನ ಜತೆಯಲ್ಲಿಯೇ ಇರುವುದರಿಂದ, ತಲ್ಲಣಿಸಿ-ಸಂಕಟಪಟ್ಟು, ವಿರಹದಿಂ-ಗಂಡನ ಅಗಲಿಕೆಯಿಂದ, ತಪಿಸುತ-ವಿರಹಾಗ್ನಿಯಿಂದ ಬೇಯುತ್ತ, ಇಹಳು-ಇದ್ದಾಳೆ, ಆರಮೆಗೆ-ಆ ಲೋಕಮಾತೆಗೆ, ನಲ್ಲನು-ಪತಿಯಾದ ಕೃಷ್ಣಸ್ವಾಮಿಯು, ಒಡಗೂಡುವಂತೆ-ಪುನಃ ಅಲ್ಲಿಯೇ ಹೋಗಿ ಸೇರಿಕೊಳ್ಳುವ ತೆರನಾಗಿ, ಅಮೃತಾಬ್ಧಿಗೆ-ಪಾಲ್ಗಡಲಿನೊಳಕ್ಕೆ, ಇಡುವೆನು-ಹಾಕಿಬಿಡುವೆನು, ಎಂದು-ಎಂಬತೆರನಾಗಿ ನುಡಿದು, ಉಬ್ಬಿದಂ-ಅತ್ಯಾಸಕ್ತಿಯಿಂದ ಕೂಡಿದನು ‖೪೬‖

ಟೀ‖ ಸಾಗರವ-ದಕ್ಷಿಣದ ಕಡಲನ್ನು, ಲಂಘಿಸಿದ-ಹಾರಿದ, ಸಾಹಸಕೆ-ಪರಾಕ್ರಮಕ್ಕೆ, ನೀನು-ನೀನಾದರೊ, ಬೆರೆವೆ-ಗರ್ವಪಡುತ್ತಿ, ಆದಿತ್ಯನು-ರವಿಯು, ಆಗಸದೊಳ್-ಅಂತರಿಕ್ಷದಲ್ಲಿ, ಇರೆ-ಪ್ರಕಾಶಿಸತಕ್ಕ ಕಾಲದಲ್ಲಿ, ಚಂದ್ರನು-ಚಂದ್ರಕಾಂತಿಯು, ಒಪ್ಪುವುದೆ-ಅಂದವಾಗಿ ಕಾಣುತ್ತದೆಯೇ, ಎಲೆಮರುಳೆ-ಎಲೈ ಅವಿವೇಕಿಯೇ, ಹೋಗು-ಮೂಜಗದೊಳು - ಮೂರು ಲೋಕದಲ್ಲಿ ಹುಡುಕಿದರೂ, ತನ್ನಮುಂದಣ-ನನಿಗೆದುರಾಳುಗಳಾತಕ್ಕ, ಪರಾಕ್ರಮಿಗಳು-ಸಾಹಸದಿಂದ ಕೂಡಿದವರು, ಉಂಟೆ-ಇದ್ದಾರೆಯೇ, ಎನುತ-ಎಂದು ನುಡಿಯುತ್ತ, ಹನುಮಂತನಂ-ಪವಮಾನಸುತನನ್ನು, ನೃಪತಿ-ವೀರವರ್ಮನೆಂಬ ಮಹೀವಲ್ಲಭನು ಹೀಯಾಳಿಸುತ್ತ, ತಾಗಿದಂ-ಅವನೊಂದಿಗೆ ಕಾಳಗಕ್ಕೆ ನಿಂತನು, ಬಳಿಕ-ಆಮೇಲೆ, ಕಪಿ-ವಾಯುಸೂನುವಾದರೊ, (ವೀರವರ್ಮನನ್ನು ಸಂಬೋಧಿಸಿ) ನಾವು-ನಾವಾದರೊ, ಈಗಣವರಂತೆ - ಈಗಿನ ಕಾಲದವರ ಹಾಗೆ, ಅಲ್ಲ - ಅಲ್ಲವು, ತಾನೆತನ್ನಂಪೊಗಳುವ-ಆತ್ಮಸ್ತೋತ್ರಮಾಡಿಕೊಳ್ಳತಕ್ಕ, ಈಗರುವಿಕೆಯನು-ಈ ಹೆಮ್ಮೆಯನ್ನು, ಅರಿಯೆವು-ತಿಳಿದಿಲ್ಲವು, ಅತಿವೃದ್ಧರು-ಬಹು ವಯಸ್ಸಾದವರು, ಎಂದು-ಎಂಬುದಾಗಿ, ಮಹೀಶ್ವರನನು-ವೀರವರ್ಮನಿಗೆ, ಎರಗಿದಂ-ನಮಸ್ಕಾರಮಾಡಿದನು ‖೪೭‖

---

ವಾಯುಸೂನುವೆ ನನ್ನ ಬರೀತೇರು ನಿನ್ನ ಕೈಗೆ ಸಿಕ್ಕಿರುವುದು. ಇಗೋ ನೋಡು, ಕೃಷ್ಣಾರ್ಜುನರಿಂದ ಕೂಡಿದ ರಥವನ್ನು ಸೆಳೆದುಕೊಂಡು ಬಂದಿರುವೆನು ‖ ೪೫ ‖ ನೀನು ನನ್ನ ರಥವನ್ನೆಲ್ಲಿಗೆ ಬಿಸುಡುವೆಯೋ ನಾನೂ ಅರ್ಜುನನ ತೇರನಲ್ಲಿಗೆಸೆಯುವೆನು, ಇಲ್ಲದಿದ್ದರೆ ಶ್ರೀಮನ್ನಾರಾಯಣಮೂರ್ತಿಯು ಅರ್ಜುನನ ಭಕ್ತಿಗೆ ಮೆಚ್ಚಿ ಲಕ್ಷ್ಮೀದೇವಿಯನ್ನು ಕ್ಷೀರಸಮುದ್ರದಲ್ಲಿಯೇ ಬಿಟ್ಟು ತಾನುಮಾತ್ರ ಪಾರ್ಥನ ಹಿಂದೆ ತಿರುಗಾಡುತ್ತಲಿರುವುದರಿಂದುಂಟಾಗಿರತಕ್ಕ ಲಕ್ಷ್ಮೀದೇವಿಯ ಮನೋವ್ಯಥೆಯು ನೀಗಲೆಂದು ಈ ತೇರನ್ನು ಕ್ಷೀರಸಮುದ್ರಕ್ಕೆ ಕೆಡಹುವೆನೆಂದೂ, ‖೪೬‖ ದಕ್ಷಿಣ ಸಮುದ್ರವನ್ನು ದಾಟಿದ್ದರಿಂದ ಮಹಾಪರಾಕ್ರಮಿಯಾಗಿರುವೆನೆಂಬ ನಿನ್ನ ಹೆಮ್ಮೆಯನ್ನಡಗಿಸುವೆನೆಂದೂ, ಮೂರು ಲೋಕಂಗಳಲ್ಲಿಯೂ ಯಾರೂ ನನ್ನ ಮುಂದೆನಿಂತು ಬದುಕಲಾರರೆಂದೂ, ಗರ್ವೋದ್ರೇಕದಿಂದ ಮಾತನಾಡುತ್ತಲಿರುವ ವೀರವರ್ಮನನ್ನು ಕುರಿತು ಹನುಮಂತನು, ಎಲೈ ರಾಜೇಂದ್ರನೆ! ಕೇಳು, ಈ ದ್ವಾಪರಯುಗದಲ್ಲಿ ತಮ್ಮನ್ನು ತಾವೇ ಹೊಗಳಿಕೊಳ್ಳುವಂತೆ ನಾವು ಆತ್ಮಶ್ಲಾಘನೆಯನ್ನು ಮಾಡತಕ್ಕವರಲ್ಲವು. ನಾನು ಬಹಳ ಮುದುಕನೆಂದು ನುಡಿಯುತ್ತಾ ವೀರವರ್ಮನಿಗೆ ನಮಸ್ಕಾರವಂಮಾಡಲು ಆ ರಾಜನ ಕೋಪಮ್ಮಿಡಿಸಿತು ‖೪೭‖

ಕನಲ್ದಾಗಪಾರ್ಥರಾ | ಜೀವಾಕ್ಷಕಪಿಗಳಂಕರೆದುಲೋಕತ್ರಯಕೆ | ಮೂವರಂನೀನತಿಪರಾಕ್ರಮಿಗಳಾನೋರ್ವನಾಹವ ದೊಳೆನ್ನ ಕೂಡೆ || ಸಾವಧಾನದೊಳೊದಗಿದೊಡೆಕಾಣಬಹುದೆನುತ | ಪಾವಮಾನಿಯನಡಸಿದೊಡೆಮುಷ್ಟಿಘಾತದಿಂ | ದಾವಾ ಯುಜಂತೊಲಗಲಸುರಹರನಾನೃಪನವಕ್ಷಸ್ಥಳವನೊದೆದನು || ೪೮ || ಹರಿಯಪದಘಾತಿಗಾನೃಪತಿಮೂರ್ಛಿತನಾಗಿ | ಧರೆಗುರು ಳ್ದೊಡನೆಚೇತರಿಸುತೆಲೆವೀರರ್ಕಳ | ಿರನೀವುಮೂವರನೋರ್ವನೆಂದಾಹವದೊಳುರವಣಿಸಬೇಡಿಬರಿದೆ || ಮುರಹರನದರುಶ ನಂದೊರಕೊಳ್ವಿನಂತನಗೆ | ಮರಣವಿಲ್ಲಂತಕನವರದಿಂದಬಳಿಕೀಗ | ಪುರುಷೋತ್ತಮಾಂಘ್ರಿಸ್ಪರ್ಶನಮಾದುದೆನಗಿನ್ನು ಮೃ ತ್ಯುವೆತ್ತಣದೆಂದನು ||೪೯|| ಎಂದೊಡಸುರಾಂತಕಂನೋಡಿದಂಕಾರುಣ್ಯ | ದಿಂದನಿಜರಥದೊಳಿದಿರಾಗಿಸಮರಕೆಮತ್ತೆ | ನಿಂದಿಹ ನರೇಂದ್ರನಂನಸುನಗುತನುಡಿದನೆಲೆಪಾರ್ಥನಿನಗೆನಗಿವನೊಳು || ಕುಂದದೆಸಹಸ್ರವರುಷಂಪೊಣರ್ದೊಡೆತೀರ | ದೆಂದಿಗುಂಲ

ಟೀ|| ಆಗ_ಆಂಜನೇಯನು ನಮಸ್ಕಾರವಂಮಾಡಿದ ಕಾಲದಲ್ಲಿ, ಆವೀರವರ್ಮಂ_ಆ ಸಾರಸ್ವತನಗರದರಸು, ಕನ ಲ್ದು_ಕೋಪಗೊಂಡು, ಪಾರ್ಥರಾಜೀವಾಕ್ಷಕಪಿಗಳಂ_ಪಾರ್ಥ-ಫಲುಗುಣನನ್ನೂ, ರಾಜೀವಾಕ್ಷ-ಕಮಲನೇತ್ರನಾದ ಕೃಷ್ಣ ಸ್ವಾಮಿಯನ್ನೂ, ಕಪಿಗಳಂ_ಹನುಮಂತನ್ನೂ ಸಹ, ಕರೆದು_ಕೂಗಿ, ಮೂವರುಂ_ಮೂರುಮಂದಿಯಾದ ನೀವುಗಳು, ಲೋಕ ತ್ರಯಕೆ_ಮೂರುಲೋಕಗಳಲ್ಲಿಯೂ, ಅತಿಪರಾಕ್ರಮಿಗಳು-ಬಹು ಸಾಹಸಿಗಳು, ಆಂ_ನಾನಾದರೊ, ಓರ್ವನು_ಒಬ್ಬನೆ, ಸಾವ ಧಾನದೋಳ್-ನಿಧಾನವಾಗಿ, ಎನ್ನ ಕೂಡೆ-ನನ್ನೊಂದಿಗೆ, ಆಹವದೊಳು_ಕಾಳಗದಲ್ಲಿ, ಒದಗಿದೊಡೆ_ಬಂದು ಸೇರಿದರೆ, ಕಾಣ ಬಹುದು-ನನ್ನ ಸಾಹಸವನ್ನು ಪರೀಕ್ಷಿಸಬಹುದು, ಎನುತ-ಎಂದು ನುಡಿಯುತ್ತ, ಮುಷ್ಟಿಘಾತದಿಂದ_ಕೈ ಗುದ್ದುಗಳಿಂದ, ಪಾವಮಾನಿಯನು-ಹನುಮಂತನನ್ನು, ಅಡಸಿದೊಡೆ_ತಾಡಿಸಲು, ಆವಾಯುಜಂ_ಆ ಪವಮಾನ ಸುತನು, ತೊಲಗಲು-ಒಂದು ಪಕ್ಕಕ್ಕೆ ಹೋದಕಾರಣ, ಆನೃಪನ_ವೀರವರ್ಮನೆಂಬ ಭೂಮಿಾಶನ, ವಕ್ಷಸ್ಥಳವನು-ಎದೆಯ ಭಾಗವನ್ನು (ಮರ್ಮಸ್ಥಳವನ್ನು) ಅಸುರಹರನು-ರಾಕ್ಷಸಾಂತಕನಾದ ಕೃಷ್ಣಸ್ವಾಮಿಯು, ಒದೆದನು_ತಾಡಿಸಿದನು ||೪೮||

ಟೀ|| ಆನೃಪತಿ-ಆ ವೀರವರ್ಮನೆಂಬ ಭೂಮಿಪನು, ಹರಿಯ - ಕೃಷ್ಣಸ್ವಾಮಿಯ, ಪದಘಾತಿಗೆ - ಕಾಲಿನ ಒದೆಗೆ, ಮೂರ್ಛಿತನಾಗಿ_ಮೈಮೇಲೆ ಎಚ್ಚರವಿಲ್ಲದೆ ಹೋಗಿ, ಧರೆಗೆ_ಭೂಮಿಯ ಮೇಲಕ್ಕೆ, ಉರುಳ್ದು-ಉರುಳಿಕೊಂಡು, ಒಡನೆ_ತಡ ಮಾಡದೆ, ಚೇತರಿಸುತ_ಎಚ್ಚರವನ್ನೈದುತ್ತ, ಎಲೆವೀರರ್ಕಳಿರ-ಎಲೈ ಪರಾಕ್ರಮಿಗಳೆ, ನೀವು_ನೀವಾದರೆ, ಮೂವರು_ಮೂರು ಜನರಿದ್ದೀರಿ, ಆಂ_ನಾನು, ಓರ್ವನು_ಒಬ್ಬನು ಮಾತ್ರವೇ, ಎಂದು_ಎಂಬ ತೆರನಾಗಿ, ಬರಿದೆ_ವ್ಯರ್ಥವಾಗಿ, ಆಹವದೊಳು_ ಕಾಳಗದಲ್ಲಿ, ಉರವಣಿಸಬೇಡಿ_ಮೇಲ್ವಾಯ್ದು ನಡೆಯಬೇಡಿ, ತನಗೆ_ನನಿಗೆ, ಅಂತಕನ_ಯಮನು ಕೊಟ್ಟರತಕ್ಕ, ವರದಿಂದ_ ವರದಮಹಿಮೆಯಿಂದ, ಮುರಹರನ ದರುಶನಂ-ಶ್ರೀ ಕೃಷ್ಣಮೂರುತಿಯ ಸಂದರ್ಶನವು, ದೊರೆಕೊಳ್ವಿನಂ_ಉಂಟಾಗುವವ ರೆಗೂ, ಮರಣಂ-ಮೃತ್ಯುವು, ಇಲ್ಲ_ಬರುವುದಿಲ್ಲವು, ಪುರುಷೋತ್ತಮ-ಶ್ರೀಮನ್ನಾರಾಯಣನ, ಅಂಘ್ರಿಸ್ಪರ್ಶನಂ_ಕಾಲುಸೋ ಕುವಿಕೆಯು, ಆದುದು_ಸಿದ್ಧಿಸಿತು, ಇನ್ನು-ಇಂತಹ ಪಾವನಮೂರ್ತಿಯ ಪಾದಸ್ಪರ್ಶದಿಂದ, ಬಳಿಕ-ಆನಂತರ, ಮೃತ್ಯುವು- ಸಾವು, ಎನಗೆ_ನನಿಗಾದರೊ, ಎತ್ತಣದು-ಹೇಗೆತಾನೆ ಆದೀತು, ಎಂದನು-ಎಂದು ನುಡಿದನು ||೪೯||

ಟೀ|| ಎಂದೊಡೆ - ಈ ರೀತಿಯಾಗಿ ವೀರವರ್ಮನು ಹೇಳಲು, ಅಸುರಾಂತಕಂ - ಕೃಷ್ಣಸ್ವಾಮಿಯು, ಕಾರುಣ್ಯ ದಿಂದ - ದಯಾರ್ದ್ರಹೃದಯನಾಗಿ, ನೋಡಿದಂ - ನೋಡಿದವನಾದನು, ನಿಜ - ಸ್ವಕೀಯವಾದ, ರಥದೋಳ್ - ರಥದಲ್ಲಿ, ಇದಿ ರಾಗಿ_ಎದುರಿಸಿಬಂದು, ಮತ್ತೆ-ಪುನಃ, ಸಮರಕೆ_ಕಾಳಗಕ್ಕೆ, ನಿಂದಿಹ-ನಿಂತುಕೊಂಡಿರತಕ್ಕ, ನರೇಂದ್ರನಂ-ಮನುಜಾಧಿಪನಾದ

ಆಗ ರಾಜನಾದ ವೀರವರ್ಮನು ಹನುಮಂತನನ್ನೂ, ಕೃಷ್ಣಾರ್ಜುನರನ್ನೂ ಸಂಬೋಧಿಸಿ, ಪ್ರಪಂಚದಲ್ಲಿ ನೀವು ಮೂ ವರೂ ಮಹಾಪರಾಕ್ರಮಿಗಳೆಂದು ಹೆಸರ್ಗೊಂಡಿರುವಿರಷ್ಟೆ? ನನ್ನೊಂದಿಗೆ ನಿಧಾನವಾಗಿ ಕಾದಾಡಿ ನನ್ನ ಸಾಹಸವನ್ನಾದರೂ ನೋಡಿರೆಂದು ನುಡಿಯುತ್ತಾ ಆಂಜನೇಯನನ್ನು ಬಲವಾಗಿ ಗುದ್ದಿದನು. ವೀರವರ್ಮನ ಪೆಟ್ಟಿನಿಂದ ವಾಯುನಂದನನು ಬಹು ವಾಗಿ ನೊಂದು ಅಲ್ಲಿಂದ ಹಿಂಜರಿಯಲಾಗಿ, ಶ್ರೀ ಕೃಷ್ಣನು ವೀರವರ್ಮನ ಎದೆಗೆ ಬಲವಾಗಿ ಒದೆದನು ||೪೮|| ಶ್ರೀಮನ್ನಾರಾ ಯಣನ ಪಾದದ ಪೆಟ್ಟು ವೀರವರ್ಮನಿಗೆ ತಾಕಿದೊಡನೆಯೇ ಮೂರ್ಛಾಕ್ರಾಂತನಾಗಿ ನೆಲಕ್ಕೆ ಉರುಳಿಕೊಂಡು ಸ್ಮರಣೆಯಿಲ್ಲ ದವನಾಗಿ ಮತ್ತೆ ಚೇತರಿಸಿಕೊಂಡು, ಕೃಷ್ಣಾರ್ಜುನ ಹನುಮಂತರನ್ನು ಕುರಿತು, ಎಲೈ ನೀವು ಮೂವರೂ ಪರಾಕ್ರಮಿಗಳೆಂದೂ ನಾನೊಬ್ಬನೇ ಎಂದೂ ಅಹಂಕಾರಪಡಬೇಡಿರಿ, ಕೃಷ್ಣಸ್ವಾಮಿಯ ದರ್ಶನಲಾಭವಾಗುವವರೆಗೂ ನನಿಗೆ ಮರಣವಿಲ್ಲವೆಂದು ವರವಿರುವುದು. ಈಗ ಕೃಷ್ಣನ ಪಾದಘಾತವು ನನ್ನ ಮೇಲೆ ಬಿದ್ದುದರಿಂದ ನನಿಗೆ ಮರಣದಭಯವೇ ಇಲ್ಲವೆಂದು ನುಡಿದನು||೪೯|| ವೀರವರ್ಮನ ಈಪರಿಯಾದ ವೀರವಚನಂಗಳನ್ನು ಕೃಷ್ಣಮೂರುತಿಯು ಕೇಳಿ, ಕರುಣಾಕಟಾಕ್ಷ ಪೂರಿತನಾಗಿ, ಯುದ್ಧಕ್ಕೆ

ಘುಹಸ್ತನತಿಬಲಂಶಸ್ತ್ರಾಸ್ತ್ರ | ದಿಂದಧಿಕನಖಿಳವೀರರ್ಕಳಂಗೆಲ್ದನಿವನಾಂತೋಷಿಸುವೆನೆಂದನು ॥೫೦॥ ದೇವನೀನಾವನಂತೋಷಿ ಸುವೆಜಗದೊಳವ |. ನೇವಿಜಯಮೇಣವನೆಬಲವಂತನೆಂದೊಡಿ | ನ್ನೀವಸುಮತೀಶ್ವರಂಧುರದೊಳೆನ್ನಾಳ್ತನಕೆಸೋಲ್ದಪನೆ ಸಾಕಿವೆಂದು ॥ ಶ್ರೀವಲ್ಲಭನೊಳರ್ಜುನಂಪೇಳ್ದೊಡಾಮಾತ | ನಾವೀರವರ್ಮ್ಮಕಂಕೇಳ್ದುಮಿಗೆಮೆಚ್ಚಿಗಾಂ | ಡೀವಿಗಭಿನಮಿಸಿ ತಾಂಬೆರಳ್ಗೊನೆಯನೊರದೊಲೆದುಕೊಂಡಾಡುತಿಂತೆಂದನು ॥೫೧॥ ಎಲೆಧನಂಜಯಚರಾಚರಮೆಲ್ಲಮುಂಬಾಹು | ಬಲದಿಂದಗೆಲ್ವೆ ನೆಂಬಗ್ಗಳಿಕೆಯಂಬಿಟ್ಟು | ಜಲಜಾಯತಾಕ್ಷನಾಡಿದಮಾತಿಗನುಸಾರಿಯಾಗಿ ನೀನೆಂದುನುಡಿಗೆ | ಸಲೆಸೊಗಸಿತೆನ್ನಮನಮಿನ್ನು ಕಾದುವೆನೆಂಬ | ಛಲಮಿಲ್ಲತನಗೆನುತಕರದಚಾಪವನಿಳುಹಿ | ನಲವಿಂದಬಂದುಕೃಷ್ಣನಪಾದಕೆರಗಿದಂ ವೀರವರ್ಮಂಪ್ರಿಯ ದೊಳು ॥೫೨॥ ತಾಮರಸಲೋಚನಂತೆಗೆದುಬಿಗಿದಪ್ಪಿದಂ | ಪ್ರೇಮದಿಂದಾನೃಪನನರ್ಜುನಂಮನ್ನಿಸಿದ | ನಾಮಯೂರಧ್ವಜಾ

---

ವೀರವರ್ಮನನ್ನು ಸಂಬೋಧಿಸಿ, ನಸುನಗುತ-ಮುಗುಳ್ನಗೆಯನ್ನೈದುತ್ತ, ನುಡಿದನು- ಮಾತನಾಡಲಾರಂಭಿಸಿದನು, ಎಲೆ ಪಾರ್ಥ-ಅಯ್ಯಾ ಫಲುಗುಣ, ಇವನೊಳು-ಈ ರಾಜನೊಂದಿಗೆ, ನಿನಗೆ-ನಿನಗೂ, ಎನಗೆ-ನನಗೂ, ಕುಂದದೆ-ತಪ್ಪದೆ ಸಹಸ್ರವರು ಷಂಪೊಣರ್ದೊಡೆ-ಒಂದು ಸಾವಿರವರ್ಷಪರ್ಯಂತ ಕಾಳಗಮಾಡಿದಾಗ್ಯೂ. ತೀರದು-ಸಮಾಪ್ತಿಯನ್ನು ಹೊಂದುವುದೇ ಇಲ್ಲವು, ಎಂದಿಗುಂ-ಅನವರತವೂ ಲಘುಹಸ್ತನು-ನಿಧಾನವಾಗದ ಕೈಕರಣವುಳ್ಳವನು, ಅತಿಬಲಂ-ಅಧಿಕಶಕ್ತಿಯಿಂದನ್ವಿತನಾದನನು, ಶಸ್ತ್ರಾಸ್ತ್ರದಿಂದ-ಮಂತ್ರಶಕ್ತಿಗೂ ಆಯುಧಾದಿಗಳಿಗೂ, ಅಧಿಕನು-ಸಗ್ಗದವನು, ಅಖಿಳ-ಅಶೇಷರಾದ, ವೀರರ್ಕಳಂ-ಪರಾ ಕ್ರಮಿಗಳನ್ನೆಲ್ಲಾ. ಗೆಲ್ದನು-ಸೋಲಿಸಿಬಿಟ್ಟನು, ಆಂ-ನಾನಾದರೊ, ಇವನಂ-ಈ ವೀರವರ್ಮನನ್ನು ನೋಡಿ, ತೋಷಿಸುವೆನು- ಆನಂದವನ್ನೈದುವೆನು, ಎಂದನು-ಎಂದು ನುಡಿದನು ॥೫೦॥

ಟೀ॥ ದೇವ-ಎಲೈ ಪ್ರಭುವೆ, ಜಗದೊಳ್-ಲೋಕದೊಳಗೆ, ಆವನಂ-ಯಾರನ್ನು ನೋಡಿ, ನೀಂ-ನೀನು, ತೋಷಿ ಸುವೆಯೊ-ಆನಂದವನ್ನೈದುತ್ತೀಯೊ, ಅವನೆ-ಅಂತಹ ಸ್ತೋತ್ರಾರ್ಹನಾದವನೆ, ವಿಜಯನು-ಜಯಶೀಲನು, ಮೇಣ್-ಅಲ್ಲದೆ, ಅವನೆ-ಅಂತಹ ಮನುಷ್ಯನೆ, ಬಲವಂತನು-ಬಲಿಷ್ಠನು, ಎಂದು ನುಡಿಯುವಾಗ, ಇನ್ನು-ಅನಂತರ, ಧುರದೊಳು-ಕಾಳಗದಲ್ಲಿ, ಎನ್ನ-ನನ್ನ, ಆಳ್ತನಕೆ - ಸಾಹಸಕ್ಕೆ, ಈ ವಸುಮತೀಶ್ವರಂ - ಈ ಪೊಡವಿಪನಾದ ವೀರವರ್ಮನು, ಸೋಲ್ದಪನೆ-ಸೋತುಹೋ ಗುತ್ತಾನೆಯೆ, ಇದು-ಈ ಕಾಳಗವು, ಸಾಕು-ಇನ್ನು ಬೇಡ, ಎಂದು-ಎಂಬುದಾಗಿ, ಅರ್ಜುನಂ - ಫಲುಗುಣನು, ಶ್ರೀವಲ್ಲಭ ನೊಡನೆ-ಇಂದಿರಾರಮಣನಾದ ಕೃಷ್ಣಮೂರುತಿಯೊಂದಿಗೆ, ಪೇಳ್ದೊಡೆ-ನುಡಿಯಲು, ಆವೀರವರ್ಮಕಂ-ಆ ವೀರವರ್ಮ ಮಹೀ ವಲ್ಲಭನು, ಆಮಾತನು-ಅರ್ಜುನನ ನುಡಿಗಳನ್ನು, ಕೇಳ್ದು-ಆಲಿಸಿ, ಮಿಗೆ-ಹೆಚ್ಚಾಗಿ, ಮೆಚ್ಚಿ-ಅನುಮೋದಿಸಿ, ಗಾಂಡೀವಿಗೆ- ಫಲುಗುಣನಿಗೆ, ಅಭಿನಮಿಸಿ-ನಮಸ್ಕಾರಮಾಡಿ, ಬೆರಳ್ಗೊನೆಯನು-ಬೆಟ್ಟಿನ ಕೊನೆಯನ್ನು, ತಾಂ-ತಾನಾದರೊ, ಒಲದೊಲದು- ಹೆಚ್ಚಾಗಿ ಅಲ್ಲಾಡಿಸುತ್ತ, ಕೊಂಡಾಡುತ-ಹೊಗಳುತ್ತ, ಇಂತು-ಮುಂದೆ ಹೇಳುವಂತೆ, ಎಂದನು-ನುಡಿದನು ॥೫೧॥

ಟೀ॥ ವೀರವರ್ಮಂ - ವೀರವರ್ಮನಾದರೊ, (ಅರ್ಜುನನನ್ನು ಕುರಿತು) ಎಲೈ ಧನಂಜಯ - ಎಲೈ ಪಾರ್ಥನೆ, ಬಾಹುಬಲದಿಂದ-ಕೈ ಶಕ್ತಿಯಿಂದ, ಚರಾಚರಮೆಲ್ಲಮುಂ-ಪ್ರಪಂಚದಲ್ಲಿರತಕ್ಕ ಎಲ್ಲಾ ಸಜೀವನಿರ್ಜೀವ ವಸ್ತುಗಳನ್ನೂ, ಗೆಲ್ವೆ ನು-ಸೋಲಿಸುತ್ತೇನೆ, ಎಂಬ-ಎನ್ನತಕ್ಕ, ಅಗ್ಗಳಿಕೆಯಂ-ಶ್ರೇಷ್ಠತೆಯನ್ನು ದೂರೀಕರಿಸಿ, ಜಲಜಾಯತಾಕ್ಷನು-ಕೃಷ್ಣಸ್ವಾ

---

ಮತ್ತೆ ಸನ್ನದ್ಧನಾಗಿ ನಿಂತಿರತಕ್ಕ ವೀರವರ್ಮನನ್ನು ಫಲುಗುಣನಿಗೆ ತೋರಿಸಿ, ಎಲೈ ಅರ್ಜುನ, ಈ ವೀರವರ್ಮನ ಸಾಹಸ ವನ್ನು ನೋಡಿದೆಯಾ! ನಾವೀರ್ವರೂ ಸಹಸ್ರವರುಷಗಳವರೆಗೂ ಇವನೊಂದಿಗೆ ಹೋರಾಡಿದರೂ ಇವನು ಬೇರೆ ಸೋಲುವು ದಿಲ್ಲವು. ಶಸ್ತ್ರಾಸ್ತ್ರಂಗಳೂಕೂಡ ಇವನ ಬಳಿಗೆ ಹೋಗಲು ಹೆದರುವವು. ಇದುವರೆಗೆ ಗೆದ್ದ ರಾಜಾಧಿರಾಜರಿಗಿಂತಲೂ ಇವನು ಮಹಾ ಪರಾಕ್ರಮಿಯಾದ್ದರಿಂದ ಇವನನ್ನು ನೋಡಿದರೆ ನನಿಗೆ ಅತ್ಯಾನಂದವುಂಟಾಗುತ್ತಲಿರುವುದೆಂದು ನುಡಿದನು ॥ ೫೦ ॥ ಕೃಷ್ಣಸ್ವಾಮಿಯ ಈ ತೆರನಾದ ಮಾತುಗಳನ್ನು ಕೇಳಿದ ಕಿರೀಟಿಯಾದರೊ, ಎಲೈ ಪ್ರಭುವೆ, ಲೋಕದಲ್ಲಿ ನೀನು ಯಾರನ್ನು ನೋಡಿ ಸಂತಸಂಗೊಳ್ಳುವಿಯೊ ಅಂಥವನಿಗಿಂತಲೂ ಪರಾಕ್ರಮಿಯೂ, ಜಯಶೀಲನೂ ಮತ್ತೆ ಯಾರಿರುವರು? ಇಂತಹ ಸಾಹಸಿ ಯಾದ ವೀರವರ್ಮನನ್ನು ನಾನು ಗೆಲ್ಲಲಾಗುತ್ತದೆಯೇ? ಇನ್ನು ಯುದ್ಧಪ್ರಸಕ್ತಿಯೇ ಬೇಡವೆಂದು ನುಡಿದನು. ಈ ಮಾತು ಗಳು ವೀರವರ್ಮನ ಕಿವಿಗೆ ಬಿದ್ದದ್ದರಿಂದ ಅವನು ಬಹಳವಾಗಿ ಸಂತಸಂಗೊಂಡು, ಎದುರು ಭಾಗದಲ್ಲಿ ನಿಂತಿರುವ ಅರ್ಜುನನ್ನು ಕುರಿತು, ॥೫೧॥ ಎಲೈ ಪಾರ್ಥನೆ, ಲೋಕದಲ್ಲಿರುವ ಸ್ಥಾವರಜಂಗಮಾತ್ಮಕವಾದ ಸರ್ವವನ್ನೂ ಗೆಲ್ಲುತ್ತೇನೆಂಬ ಗರ್ವವಿಲ್ಲದೆ ಕೃಷ್ಣಸ್ವಾಮಿಯಾಡಿದ ಮಾತಿಗೆ ಅನುಮೋದಿಸಿದೆಯಾದ್ದರಿಂದ ಯುದ್ಧಾಸಕ್ತಿಯು ಇನ್ನು ನನಿಗೆ ಇಲ್ಲವೆಂದು ನುಡಿದು, ತನ್ನ ಕೈಯಲ್ಲಿದ್ದ ಬಿಲ್ಲನ್ನೂ, ಬಾಣಗಳನ್ನು ನೆಲಕ್ಕೆಸೆದು, ಮನದೊಳಗೆ ಉಕ್ಕುತ್ತಲಿರುವ ಸಂತೋಷವುಳ್ಳವನಾಗಿ ಕೃಷ್ಣಸ್ವಾ

ದಿಗಳೆಲ್ಲರುಂ ಕೂಡಿಭಾವಿಸಿದರುಚಿತದಿಂದ || ಜಾಮಾತನಾಗಿರ್ದವೈವಸ್ವತಂಬಂದು | ಭೂಮಿಾಶನಂಮುಕುಂದನಕೈಯೊಳಿತ್ತು ಸು | ತ್ರಾಮಸುತಮುಖ್ಯರಭಿವಂದಿಸಲ್ಪರಸಿನಿಜನಗರಕ್ಕೆಬೀಳ್ಕೊಂಡನು ||೫೪|| ಬಳಿಕವಂತನ್ನ ತನುದೇಶಕೋಶಂಗಳಂ | ಬಳುವಳಿಗಳಂಮಾಡಿತುರಗಂಗಳಂತರಿಸಿ | ನಳಿನೋದರನಕೈಯೊಳಿತ್ತುಮಿಗೆಭಕ್ತಿಯಿಂದುಪಚರಿಸಿಮುರಹರನನು || ಉಳಿದನೃಪರೆಲ್ಲರುಂ ಸತ್ಕರಿಸಿವಿನಯದಿಂ | ಪೊಳಲೊಳಾರ್ದಿನಮಿರಿಸಿಕೊಂಡಿರ್ದುಪಾರ್ಥನಂ | ದಳಸಹಿತಪೊರಮಟ್ಟನಾವೀರವರ್ಮಕಂ ಕುದುರೆಗಳರಕ್ಷೆಗೊಡನೆ||೫೫|| ಭದ್ರಲಕ್ಷಣದಿಂದಶುಭ್ರಮಾಗಿಹಕರಿಗಳ| ಳದ್ರಿಸಮಮಾದನೆಪ್ಪತ್ತೊಂದುಸಾವಿರವ | ನುದ್ರಿತಮು

---

ಮಿಯು, ಆಡಿದ–ನುಡಿದಂಥ, ಮಾತಿಗೆ–ವಚನಕ್ಕೆ, ಅನುಸಾರಿಯಾಗಿ–ಒಪ್ಪತಕ್ಕವನಾಗಿ, ನೀಂ–ನೀನು, ಎಂದ–ಹೇಳಿದ, ನುಡಿಗೆ–ವಚನಕ್ಕೆ, ಎನ್ನಮನಂ – ನನ್ನ ಮನಸ್ಸು, ಸಲೆ–ಚೆನ್ನಾಗಿ, ಸೊಗಸಿತು – ಕಾಣಿಸಿತು, (ನನಿಗೆ ಬಹಳ ಸಂತೋಷವಾಯಿತು) ಇನ್ನು–ಇನ್ನುಮುಂದೆ, ಕಾದುವೆನೆಂಬ–ಕಾಳಗಕ್ಕುಜ್ಜುಗಿಸುವೆನೆಂಬ, ಛಲಂ – ಶಪಥವು, ತನಿಗೆ – ನನಿಗಾದರೊ, ಇಲ್ಲ–ಇಲ್ಲವು, ಎನುತ–ಎಂದು ನುಡಿಯುತ್ತ, ಕರದ–ಕೈಯ್ಯಲ್ಲಿದ್ದ, ಚಾಪವನು–ಧನುಸ್ಸನ್ನು, ಇಳುಹಿ–ನೆಲಕ್ಕಿಳಿಸಿ, ನಲವಿಂದ–ಪ್ರೇಮದಿಂದ, ಬಂದು–ಹತ್ತಿರಕ್ಕೆ ಬಂದು, ಪ್ರಿಯದೊಳು – ವಿಶ್ವಾಸದಿಂದ, ಕೃಷ್ಣನಪಾದಕೆ – ಕೃಷ್ಣಸ್ವಾಮಿಯ ಚರಣಗಳಿಗೆ, ಎರಗಿದಂ–ನಮಸ್ಕಾರವನ್ನು ಮಾಡಿದನು. |೫೩||

ಟೀ|| ತಾಮರಸಲೋಚನಂ – ಪದ್ಮಾಕ್ಷನಾದ ಕೃಷ್ಣಸ್ವಾಮಿಯು, ಪ್ರೇಮದಿಂದ – ವಿಶ್ವಾಸದಿಂದ, ತೆಗೆದು–ಆ ವೀರವರ್ಮನನ್ನು ಹತ್ತಿರಕ್ಕೆ ಕರೆದುಕೊಂಡು, ಬಿಗಿಯಪ್ಪಿದಂ – ಗಟ್ಟಿಯಾಗಿ ತಬ್ಬಿಕೊಂಡನು. ಅರ್ಜುನಂ – ಫಲುಗುಣನು, ಆನೃಪನನು–ಆ ಅರಸನನ್ನು, ಮನ್ನಿಸಿದನು–ಮರ್ಯಾದೆ ಮಾಡಿದನು, (ಹೆಚ್ಚಾಗಿ ಆದರಿಸಿದನು) ಆ ಮಯೂರಧ್ವಜಾದಿಗಳೆಲ್ಲರು–ಮಯೂರಧ್ವಜ ಮೊದಲಾದ ಸಕಲ ರಾಜಾಧಿರಾಜರೂ, ಕೂಡಿ – ಒಟ್ಟಾಗಿ ಸೇರಿ, ಉಚಿತದಿಂದ – ಯೋಗ್ಯವಾಗಿರುವ ಪರಿಯಾಗಿ, ಭಾವಿಸಿದರು – ಮನ್ನಣೆಯಂ ಗೈದರು. ಜಾಮಾತನಾಗಿರ್ದ – ವೀರವರ್ಮನ ಅಳಿಯನಾದ, ವೈವಸ್ವತಂ–ಸೂರ್ಯತನುಜನು, ಬಂದು – ಸಮಿಾಪಕ್ಕೆ ಬಂದು, ಮುಕುಂದನಕೈಯೊಳು – ಮೋಕ್ಷದಾಯಕನಾದ ಕೃಷ್ಣನ ಕರತಳದಲ್ಲಿ, ಭೂಮಿಾಶನಂ–ಧರಾವಲ್ಲಭನಾದ ವೀರವರ್ಮನನ್ನು, ಇತ್ತು–ಕೊಟ್ಟವನಾಗಿ, ಸುತ್ರಾಮಸುತಮುಖ್ಯರು – ಪಾರ್ಥಾದಿಗಳೆಲ್ಲರೂ, ಅಭಿವಂದಿಸಲ್–ವಂದನೆಯನ್ನರ್ಪಿಸಲು, ಪರಸಿ–ಅವರನ್ನೆಲ್ಲಾ ಹರಸಿದವನಾಗಿ, ನಿಜನಗರಕೆ–ತನ್ನ ಪಟ್ಟಣವಾದ ಸಂಯಮಿನೀಪುರಿಗೆ ಬೀಳ್ಕೊಂಡನು–ಹೊರಟವನಾದನು. ||೫೪||

ಟೀ|| ಬಳಿಕ–ಅನಂತರ, ಅವಂ–ಸಾರಸ್ವತ ನಗರದರಸು, ತನ್ನ–ತನ್ನನಾದ, ತನು–ದೇಹವು, ದೇಶ–ರಾಜ್ಯವು, ಕೋಶಂಗಳಂ – ಬೊಕ್ಕಸ ಧಾನ್ಯರಾಶಿಗಳನ್ನೆಲ್ಲಾ, ಬಳುವಳಿಗಳಂಮಾಡಿ – ಕೃಷ್ಣಾದಿಗಳಿಗೆ ಉಚಿತದಿಂದ ಕೊಟ್ಟು ಮನ್ನಿಸಿ, ತುರಗಂಗಳಂ–ಯಾಗದ ಕುದುರೆಗಳನ್ನು, ತರಿಸಿ–ತರಿಸಿದವನಾಗಿ, ನಳಿನೋದರನ–ಕಮಲನಾಭನಾದ ಕೃಷ್ಣಮೂರುತಿಯ, ಕೈಯೊಳು–ಕರತಳದಲ್ಲಿ, ಇತ್ತು–ಕೊಟ್ಟುಬಿಟ್ಟು. ಮುರಹರನನು–ಕೃಷ್ಣಸ್ವಾಮಿಯನ್ನು, ಮಿಗೆ – ಅತ್ಯಧಿಕವಾದ, ಭಕ್ತಿಯಿಂದ – ಪೂಜಾದಿಗಳಿಂದ, ಉಪಚರಿಸಿ–ಮನ್ನಿಸಿ, ಉಳಿದ–ಮಿಕ್ಕಿದ್ದ, ನೃಪರೆಲ್ಲರಂ – ಸಮಸ್ತರಾದ ರಾಜರನ್ನೂ, ಸತ್ಕರಿಸಿ – ಮರ್ಯಾದೆಯಿಂದ ಕಂಡು, ಪಾರ್ಥನಂ–ಫಲುಗುಣನನ್ನು, ತನ್ನಪೊಳಲೊಳಗೆ–ತನ್ನ ನಗರದಲ್ಲಿ, ಆರ್ದಿನಂ–ಆರುದಿನ ಪರ್ಯಂತವೂ, ವಿನಯದಿಂದ–ನಮ್ರತೆಯಿಂದ, ಇರಿಸಿಕೊಂಡಿದ್ದು–ಇಟ್ಟುಕೊಂಡಿದ್ದವನಾಗಿ, ಕುದುರೆಗಳರಕ್ಷೆಗೆ – ಯಜ್ಞಾಶ್ವಗಳನ್ನು ಕಾಪಾಡಲು, ಒಡನೆ–ಪಾರ್ಥಾದಿಗಳೊಂದಿಗೆ, ದಳಸಹಿತ–ಚತುರಂಗಬಲದೊಂದಿಗೆ, ಆವೀರವರ್ಮಕಂ–ಆ ವೀರವರ್ಮನೆಂಬರಸು, ಪೊರಮಟ್ಟನು–

---

ಮಿಯುಬಳಿಗೆ ಬಂದು ಆ ಮಹಾನುಭಾವನಿಗೆ ಸಂತೋಷದಿಂದ ಸಾಷ್ಟಾಂಗದಂಡಪ್ರಣಾಮವನ್ನರ್ಪಿಸಿದನು. ||೫೩|| ಈಪರಿ ವಂದಿಸುತ್ತಲಿರುವ ವೀರವರ್ಮನನ್ನು ಕೃಷ್ಣಮೂರುತಿಯು ಮೇಲಕ್ಕೆಬ್ಬಿಸಿ, ಸಂತೋಷದಿಂದ ಬಾಚಿ ತಬ್ಬಿಕೊಂಡನು. ಮಯೂರಧ್ವಜಾದಿಗಳೆಲ್ಲಲೂ ಸಂತೋಷದಿಂದ ವೀರವರ್ಮನನ್ನು ಮನ್ನಿಸಿದರು. ಅಷ್ಟು ಹೊತ್ತಿಗೆ ವೀರವರ್ಮನ ಅಳಿಯನಾದ ಯಮಧರ್ಮರಾಯನು ಬಂದು ರಾಜನನ್ನು ಕೃಷ್ಣಸ್ವಾಮಿಗರ್ಪಿಸಿ, ತನಿಗೆ ವಂದನೆಮಾಡಿದ ಅರ್ಜುನಾದಿಗಳಿಗೆಲ್ಲಾ ಆಶೀರ್ವಾದವಂ ಮಾಡಿ, ತನ್ನ ಪಟ್ಟಣಕ್ಕೆ ಹೊರಟು ಹೋದನು ||೫೪|| ಇತ್ತ ವೀರವರ್ಮನಾದರೊ, ತನ್ನ ದೇಹವನ್ನೂ, ತನ್ನ ದೇಶವನ್ನೂ, ಬೊಕ್ಕಸ ಭಂಡಾರಾದಿಗಳನ್ನೂ, ತಾನು ಹಿಡಿದುಕೊಂಡಿದ್ದ ಯಜ್ಞಾಶ್ವಂಗಳನ್ನೂ ಸಹ ಕೃಷ್ಣಮೂರುತಿಯ ಪದಾರವಿಂದಗಳಿಗೆ ಸಮರ್ಪಿಸಿ, ಕೃಷ್ಣಾರ್ಜುನರನ್ನೂ, ಮಯೂರಧ್ವಜಾದಿಗಳನ್ನೂ ಆರು ದಿನಗಳವರೆಗೂ ತನ್ನ ನಗರದಲ್ಲಿಯೆ ಇರಿಸಿಕೊಂಡಿದ್ದು ||೫೫|| ಆ ಬಳಿಕ ಅತಿ ಶುಭ್ರವಾದ ಮತ್ತು ಬಿಳಿ ಜಾತಿಯ ಸಹಸ್ರ ಆನೆಗಳನ್ನೂ, ವಾಯುವೇಗವನ್ನು ಕೂಡ ಮಿಾರಿಸಬಲ್ಲ ಒಂದು ಕಿವಿಮಾತ್ರ ಕಪ್ಪಾಗಿರುವ ಒಂದು ಸಾವಿರ ಕುದುರೆಗಳನ್ನೂ ಹವಳದ ಮಣಿಗಳಂತೆ ಶೋಭಿಸುವ ಚೆಂಡುಟಿಗಳುಳ್ಳ

ಹಾವೇಗವೇಕಕರ್ಣಶ್ಯಾಮದಗಣಿತಸುವಾಜಿಗಳನು ‖ ವಿದ್ರುಮಾಧರೆಯರಸಹಸ್ರಮಂನವವಿಧದ | ಸದ್ರತ್ನರಾಜಿಗಳನೆಂಟೆಡೆಯೊಳಗೆದವಿಲ | ಸದ್ರುಚಿರಮುಕ್ತಾಫಲಂಗಳಂ ಕೊಟ್ಟನಂನೊಡನವಂ ಪೊರಮಟ್ಟನು ‖ ೫೫ ‖ ಸಾರಸ್ವತಾಖ್ಯಪುರದಿರಿದಬಳಿಕರ್ಜುನಂ | ವೀರವರ್ಮಕ್ಷಿತಿಪನಂ ಕೂಡಿಕೊಂಡಾಮ | ಯೂರಧ್ವಜಾದಿಗಳ್ವೆರಸಿಪಡೆಸಹಿತಕುದುರೆಗಳೊಡನೆನಡೆಯೆಮುಂದೆ ಘೋರನಕ್ರಾಕುಲದಪೇರ್ಮಡುಗಳಿಂದಗಂ | ಭೀರಮಾಗಿಹಮುಹಾನದಮಿರ್ದುದೊಂದದಂ | ಭೂರಿಪೋತಪ್ರಕರದಿಂತಳೆದ ನಸುರನಗರಶ್ರೀಶನಾಜ್ಞೆಯಿಂದ ‖೫೬‖

ಸಂಧಿ ೨೭ ಕ್ಕೆ ಪದ್ಯ ೧,೫೦೫ ಕ್ಕಂ ಮಂಗಳಮಸ್ತು.

---

ಹೊರಟವನಾದನು. ‖೫೪‖

ಟೀ‖ ಅವಂ-ಆ ರಾಜೇಂದ್ರನು, ಭದ್ರಲಕ್ಷಣದಿಂದ-ಭದ್ರಜಾತಿಯ ಆನೆಗಳ ಕುರುಹಿನಿಂದ, ಶುಭ್ರನಾಗಿಹ-ಬೆಳ್ಳಗಿರತಕ್ಕ, ಅದ್ರಿಸಮಮಾದ – ಪರ್ವತೋಪಮಾನವಾಗಿರುವ, ಕರಿಗಳ-ಹಸ್ತಿಗಳ, ಎಪ್ಪತ್ತೊಂದುಸಾವಿರವನು-ಎಪ್ಪತ್ತೊಂದು ಸಹಸ್ರವನ್ನೂ, ಉದ್ರಿತ-ಚಟವಟಿಕೆಯಿಂದ ಕೂಡಿದ, ಮಹಾವೇಗದ-ಹೆಚ್ಚಾದ ಜಾಗ್ರತೆಯುಳ್ಳ, ಏಕಕರ್ಣಶ್ಯಾಮದ-ಒಂದು ಕಿವಿಮಾತ್ರ ಕಪ್ಪಗಿರುವ, ಅಗಣಿತ-ಲೆಕ್ಕವಿಲ್ಲದಷ್ಟು, ಸುವಾಜಿಗಳನು-ಉತ್ತಮಾಶ್ವಂಗಳನ್ನೂ, ವಿದ್ರುಮ-ಪ್ರವಾಳಂಗಳಂತೆ, ಅಧರೆಯರ-ತುಟಿಗಳನ್ನುಳ್ಳ ಅಂಗನೆಯರ, ಸಹಸ್ರಮಂ – ಸಾವಿರ ಮಂದಿಯನ್ನೂ, ನವವಿಧದ – ಒಂಭತ್ತು ವಿಧವಾಗಿರುವ, ಸದ್ರತ್ನ - ಉತ್ತಮವಾದ ರತ್ನಗಳ, ರಾಜಿಗಳನು – ಸಮುದಾಯಗಳನ್ನೂ, ಎಂಟೆಡೆಯೊಳು – ಎಂಟು ಕಡೆಗಳಲ್ಲಿಯೂ, (ಸಮುದ್ರಗಳ ಹತ್ತಿರ) ವಿಲಸತ್ - ಹೊಳೆಯುತ್ತಲಿರುವ, ರುಚಿರ-ಕಾಂತಿಯುಕ್ತವಾದ, ಮುಕ್ತಾಫಲಗಳನು-ಆಣಿಮುತ್ತುಗಳನ್ನು, ಕೊಟ್ಟ-ಸಮರ್ಪಿಸಿ, ನರನೊಡನೆ-ಪಾರ್ಥನೊಂದಿಗೆ, ಪೊರಮಟ್ಟನು-ತಾನೂ ಹೊರಟವನಾದನು. ‖೫೫‖

ಟೀ‖ ಬಳಿಕ-ಅನಂತರ, ಅರ್ಜುನ-ಪಾರ್ಥನು, ವೀರವರ್ಮಕ್ಷಿತಿಪನಂಕೂಡಿಕೊಂಡು-ವೀರವರ್ಮನೆಂಬ ಅರಸನಿಂದೊಡಗೂಡಿ, ಆಮಯೂರಧ್ವಜಾದಿಗಳ್ವೆರಸಿ – ಆ ಶಿಖಿಕೇತುವೇ ಮೊದಲಾದವರನ್ನು ಜೊತೆಮಾಡಿಕೊಂಡು, ಪಡೆಸಹಿತ-ದಳದೊಂದಿಗೆ, ಸಾರಸ್ವತಾಖ್ಯಪುರದಿಂದ-ಸಾರಸ್ವತನಗರದಿಂದ, ಕುದುರೆಗಳು-ಯಜ್ಞಾಶ್ವಂಗಳು, ಮುಂದೆನಡೆಯೆ-ಮುಂದೆ ಹೊರಡಲು, ಘೋರ-ಭಯಂಕರವಾದ, ನಕ್ರ-ಮೊಸಳೆಗಳ ಸಮುದಾಯದಿಂದ, ಆಕುಲದ-ತುಂಬಿಕೊಂಡಿರುವ, ಪೇರ್ಮಡುಗಳಿಂದ ದೊಡ್ಡ ದೊಡ್ಡ ಹಳ್ಳಗಳಿಂದ, ಗಂಭೀರಮಾಗಿ-ಅಸಾಧ್ಯವಾಗಿ, ಇಹ-ಇರತಕ್ಕ, ಒಂದು-ಒಂದಾನೊಂದು, ಮಹಾನದಂ-ದೊಡ್ಡ ಹೊಳೆಯು, ಇರ್ದುದು – ಇದ್ದಿತು, ಅಸುರನಗರ – ದೇವಪುರನಿವಾಸಿಯಾದ, ಶ್ರೀಶನ - ಲಕ್ಷ್ಮೀಕಾಂತನಾದ ನಾರಾಯಣ ಮೂರ್ತಿಯ, ಆಜ್ಞೆಯಿಂದ-ಅನುಜ್ಞೆಯ ಮೂಲಕ, ಭೂರಿ-ಹೆಚ್ಚಾದ, ಪೋತ-ದೋಣಿ, (ತೆಪ್ಪ ಮೊದಲಾದುವುಗಳ) ಪ್ರಕರದಿಂದ-ಸಮುದಾಯದಿಂದ, ಕಳೆದನು-ದಾಟಿ ಮುಂದೆ ನಡೆದನು. ‖೫೬‖

ಇಂತು ಟೀಕಾತಾತ್ಪರ್ಯ ಸಹಿತಮಾದ ಜೈಮಿನಿ ಭಾರತದೊಳು ಇಪ್ಪತ್ತೇಳನೆಯ
ಸಂಧಿಯು ಸಮಾಪ್ತಮಾದುದು.

---

ಒಂದು ಸಹಸ್ರ ನಾರೀಮಣಿಗಳನ್ನೂ, ನವರತ್ನಗಳನ್ನೂ, ಆಣಿಮುತ್ತುಗಳನ್ನೂ ಕೃಷ್ಣಾರ್ಜುನರಿಗೊಪ್ಪಿಸಿ, ತನ್ನ ಅಪರಿಮಿತವಾದ ಸೇನಾರ್ಣವದಿಂದ ಕೂಡಿ ಯಜ್ಞಾಶ್ವರಕ್ಷೆಗೋಸುಗ ಅರ್ಜುನನ ಹಿಂದೆ ತಾನೂ ಹೊರಟನು. ‖೫೫‖ ಅರ್ಜುನನಾದರೊ, ತನ್ನೊಂದಿಗೆ ಬಂದಿಲ್ಲಿಸಿರುವ ವೀರವರ್ಮನನ್ನು ಜೊತೆಯಲ್ಲಿ ಕರೆದುಕೊಂಡು, ಮಯೂರಧ್ವಜ ಹಂಸಧ್ವಜಾದಿ ಮಹಾ ವೀರರಿಂದೊಡಗೂಡಿ ಯಜ್ಞಾಶ್ವಂಗಳನ್ನು ಮುಂದು ಮಾಡಿಕೊಂಡು ಸಾರಸ್ವತನಗರದಿಂದ ಪ್ರಯಾಣವಂ ಬೆಳಸಿ ಮುಂದೆ ಹೋಗುತ್ತಲಿರುವಾಗ, ಅನೇಕ ಪ್ರಕಾರವಾದ ಮೊಸಳೆಗಳಿಗೂ, ದೊಡ್ಡ ದೊಡ್ಡ ಹಳ್ಳಗಳಿಗೂ, ಆಕರವಾಗಿದ್ದ ನದಿಯೊಂದು ಅಡ್ಡವಾಗಿರಲು ಆ ದೊಡ್ಡ ನದಿಯನ್ನೂ ಕೂಡ ಅನೇಕ ದೋಣಿಗಳ ಸಹಾಯವುಳ್ಳವನಾಗಿ, ಲಕ್ಷ್ಮೀಪತಿಯಾದ ನಾರಾಯಣ ಮೂರ್ತಿಯ ಅನುಗ್ರಹದಿಂದ ಸುಖವಾಗಿ ಸಕಲ ಸೇನೆಯಿಂದಲೂ ಯಜ್ಞಾಶ್ವಗಳಿಂದಲೂ ಕೂಡಿದವನಾಗಿ ಮುಂದಿನ ದಡವನ್ನು ಸೇರಿದನು. ‖೫೬‖

ಇಂತು ಟೀಕಾತಾತ್ಪರ್ಯ ಸಹಿತಮಾದ ಜೈಮಿನಿ ಭಾರತದೊಳು ಇಪ್ಪತ್ತೇಳನೆಯ
ಸಂಧಿಯು ಸಮಾಪ್ತಮಾದುದು.



## ಇಪ್ಪತ್ತೆಂಟನೆಯ ಸಂಧಿ.

ಸೂಚನೆ॥ ಇಂದ್ರಜಂತುರಗಂಗಳಂಕಾಣದಿರೆನಾರದಂ | ದೃಷ್ಟಿಗೋಚರಕೈದಿವಿಸ್ತರಿಸಿದಂ | ಚಂದ್ರಹಾಸಕಥಾ ವಿಶೇಷಮಂಕರ್ಣಪಿಯೂಷಮಂಪ್ರೀತಿಯಿಂದ ॥

ಭೂಮಿಪತಿಕೇಳ್ಬಳಿಕ ಸೌರಾಷ್ಟ್ರದಿಂದ ಸು | ತ್ರಾಮಸುತನಸುರಾರಿಸಹಿತಕುದುರೆಗಳಕೂ | ಡಾಮಹಾನದವ ನುತ್ತರಿಸಿನಡೆತರುತಿರ್ದನಾಪಥದೊಳೈಕಿಲಿಂದ ॥ ಹೇಮಂತಶೈಶಿರದಮಾಗಿಮಡಲಿರೆತರಣಿ | ಸೋಮನಂತಿರೆಬಿಸಿಲ್ಬೆಳದಿಂಗಳೋಲಾಗೆ | ತಾಮರಸರಾಜಿ ನಸಿದುವುಕುಗ್ಗಿದುವು ಕೋಗಿಲೆಯ ಕಂಠಕಲರವಗಳು ॥ ೧ ॥ ಬಾಲೆಯರಕಡೆಗಣ್ಣಬಾಣ ದಿಂದಂಗಜಂ | ರೋಲಂಬರಾಜಿ ಸೊಕ್ಕಾನೆಗಳ ಸೊಗಡಿಂದ | ಕಾಲಮಂ ಕಳೆವೊಲಾದುದು ಪೂಗಳಿಲ್ಲದೆಮಸುಳ್ದುವಿನಶಶಿ

---

ಇಪ್ಪತ್ತೆಂಟನೆಯ ಸಂಧಿ ಪ್ರಾರಂಭವು.

ಸೂಚನೆ॥ ಇಂದ್ರಜಂ-ದೇವೇಂದ್ರನ ಮಗನಾದ ಪಾರ್ಥನು, ತುರಗಂಗಳಂ-ಯಾಗದ ಕುದುರೆಗಳನ್ನು, ಕಾಣದಿರೆ-ನೋಡದೆ ಕಳವಳಪಡುತ್ತಲಿರುವಾಗ, ನಾರದಂ-ನಾರದ ಮಹಾಮುನಿಯು, ದೃಷ್ಟಿಗೋಚರಕೈದಿ-ಪಾರ್ಥನಿಗೆದುರಾಗಿ ಬಂದು, ಕರ್ಣ ಪೀಯೂಷಮಂ-ಕೇಳಲು ಇಂಪಾಗಿರುವ, ಚಂದ್ರಹಾಸ ಕಥಾವಿಶೇಷಮಂ= ಚಂದ್ರಹಾಸ-ಚಂದ್ರಹಾಸನೆಂಬ ವಿಷ್ಣು ಭಕ್ತನಾದ ರಾಜನ, ಕಥಾ ವಿಶೇಶಮಂ-ಆಶ್ಚರ್ಯಕರವಾದ ಚರಿತ್ರೆಯನ್ನು, ಪ್ರೀತಿಯಿಂದ-ವಿಶ್ವಾಸಪೂರ್ವಕವಾಗಿ, ವಿಸ್ತರಿಸಿದಂ-ವಿಶದಪಡಿಸಿದನು.

ಟೀ॥ ಭೂಮಿಪತಿ-ಧರಣೀಂದ್ರನಾದ ಜನಮೇಜಯನೆ, ಕೇಳು-ಲಾಲಿಸು, ಬಳಿಕ-ಆ ಮೇಲೆ, ಕುದುರೆಗಳ ಕೂಡ-ಯಜ್ಞಾಶ್ವಗಳೊಂದಿಗೆ, ಅಸುರಾರಿ ಸಹಿತ-ರಾಕ್ಷಸಾಂತಕನಾದ ಕೃಷ್ಣಮೂರುತಿಯ ಸಮೇತನಾಗಿ, ಸುತ್ರಾಮಸುತನು-ಇಂದ್ರ ಸೂನುವಾದ ಫಲುಗುಣನು, ಮಹಾನದವನು-ದೊಡ್ಡ ಗಂಡುನದಿಯನ್ನು, ಉತ್ತರಿಸಿ-ಅತಿಕ್ರಮಿಸಿ, ಸೌರಾಷ್ಟ್ರದಿಂದ-ಸೌರಾಷ್ಟ್ರನಾಮಕನಾದ ವೀರವರ್ಮನ ದೇಶದಿಂದ, ನಡೆತರುತಿರ್ದನು- ಐತರುತ್ತಲಿದ್ದನು, ಆ ಪಥದೊಳು-ಆ ದಾರಿಯಲ್ಲಿ, ಐಕಿಲಿಂದ-ಒಟ್ಟಾಗಿ, ಹೇಮಂತ-ಹಿಮಕಾಲವು, ಶೈಶಿರ-ಶಿಶಿರ ಋತುವಿನ ಸಮಯವು, ಮಾಗಿ-ಕೊರೆತವು, ಮಡಲಿರೆ-ಹೆಚ್ಚಾಗುತ್ತಿರಲು, ತರಣಿ-ರವಿಯು, ಸೋಮನಂತೆ-ಇಂದುವಿನ ತೆರನಾಗಿ, ಇರೆ-ಇರುತ್ತಿರಲು, ಬಿಸಿಲ್-ಸೂರ್ಯನ ಕಾಂತಿಯು, ಬೆಳದಿಂಗಳೊಲ್-ಚಂದ್ರಿಕೆಯಂತೆ ಆಗೆ-ಆಗಿ ಬಿಡಲು, ತಾಮರಸರಾಜಿ-ತಾವರೆಗಳ ಸಮುದಾಯವು, ನಸಿದವು-ಮುಕುಳಿತಂಗಳಾದವು, ಕೋಗಿಲೆಯ-ಕೋಗಿಲೆ ಹಕ್ಕಿಯ, ಕಂಠ-ಕತ್ತಿನ, ಕಲ-ಇಂಪಾದ, ರವಗಳು-ಶಬ್ದಗಳು, ಕುಗ್ಗಿದವು-ಕಡಿಮೆಯಾದವು, (ಉಡುಗಿ ಹೋಯಿತು.)

ಅ॥ ವಿ॥ ನದಿ-ಹೆಣ್ಣುನದಿ, ನದ-ಗಂಡುನದಿ, ಅಸುರಾರಿ (ಸ. ದೀ) ॥೧॥

ಟೀ॥ ಬಾಲೆಯರ-ಕನ್ನಿಕೆಯರ, ಕಡೆಗಣ್ಣ-ಕಟಾಕ್ಷನೆಂಬ, ಬಾಣದಿಂದ-ಸರಲಿನಿಂದ, ಅಂಗಜಂ-ಮದನನು, ರೋಲಂಬ-ಭೃಂಗಗಳ, ರಾಜಿ- ಸಾಲುಗಳೆನ್ನುವ, ಸೊಕ್ಕಾನೆಗಳ- ಮದಿಸಿದ ಆನೆಗಳ, ಸೊಗಡಿಂದ- ಸುರಭಿಯಿಂದ, ಕಾಲಮಂ ಕಳೆವೊಲು-ಕಾಲವನ್ನು ಕಳೆಯುವ ತೆರನಾಗಿ, ಪೂಗಳಿಲ್ಲದಾದುದು-ಪುಷ್ಪರಹಿತವಾಯಿತು, ಇನಶಶಿರುಚಿಗಳು-ಸೂರ್ಯಚಂದ್ರರ ಪ್ರಕಾಶಗಳು, ಮಸುಳ್ದವು-ಕುಗ್ಗಿ ಹೋಯಿತು, ಜ್ವಾಲೆ-ಅಗ್ನಿಯ ಹೊಯಲು, ಶೀತಳಂ-ತಣ್ಣಗಿರುವುದು, ಆದುದು-ಆಗಿ

---

ಇಪ್ಪತ್ತೆಂಟನೆಯ ಸಂಧಿಯ ಕಥಾಸಾರವು.

ಕೇಳ್ಳೈ ಜನಮೇಜಯ ಮಹೀವಲ್ಲಭನೆ! ಅನಂತರದಲ್ಲಿ ಇಂದ್ರಸೂನುವಾದ ಪಾರ್ಥನು ಕೃಷ್ಣಸ್ವಾಮಿಯಿಂದಲೂ, ಯೌವನಾಶ್ವಾದಿ ರಾಜಾಧಿರಾಜರಿಂದಲೂ ಕೂಡಿದವನಾಗಿ, ಯಜ್ಞಾಶ್ವಂಗಳನ್ನು ಜೊತೆಮಾಡಿಕೊಂಡು, ಸೌರಾಷ್ಟ್ರದೇಶದಿಂದ ಹೊರಟು ಬರುತ್ತಲಿರುವಾಗ ದಾರಿಯಲ್ಲಿ ಮಹಾನದಿಯೊಂದು ಕಾಣಿಸಲು ಅದನ್ನೂ ಕೂಡ ಶ್ರೀ ಕೃಷ್ಣಮೂರ್ತಿಯ ಅನುಗ್ರಹದಿಂದ ಅರ್ಜುನನು ಸಕಲ ಪರಿವಾರದೊಂದಿಗೆ ನಿರಾಯಾಸವಾಗಿ ದಾಟಿದನು. ಅಷ್ಟು ಹೊತ್ತಿಗೆ ಹಿಮಂತಋತುವು ಒದಗಿತು ಆಗ ಚಳಿಯನ್ನು ಸಹಿಸುವುದು ಬಲು ಕಷ್ಟವಾಯಿತು, ಸೂರ್ಯನ ತಾಪವೆಲ್ಲಾ ಕಡಮೆಯಾಗಿ ಹೋಯಿತಾದ್ದರಿಂದ ಬಿಸಿಲು ಚಂದ್ರನ ಕಾಂತಿಯಂತೆ ಬೆಳ್ಳಗಾಯಿತು, ಕಮಲಗಳಿಗೆ ವೃದ್ಧಾಪ್ಯವು ಒದಗಿತು, ಕೋಗಿಲೆ ಪಕ್ಷಿಗಳ ಕಂಠಧ್ವನಿಗಳು ಮಾಯವಾದವು ॥೧॥ ಜನರಿಗೆ ಮನ್ಮಥಬಾಧೆಯು ಸಹಿಸಲಸದಳವಾಯಿತು. ಸೂರ್ಯ ಚಂದ್ರರ ಕಾಂತಿಗೆ ಭಂಗವುಂಟಾಯಿತು. ಬೆಂಕಿಯಲ್ಲಿರಬೇಕಾದ ತೀಕ್ಷ್ಣತೆಯೂ ಕೂಡ ಹೇಮಂತ ಋತುವಿನ ಶೈತ್ಯಕ್ಕೆ ಹೆದರಿತು. ಜನರೆಲ್ಲಾ ಸ್ತ್ರೀಸಂಭೋಗದಲ್ಲಿ ನಿರತರಾಗಿರು

ಮುಟಿಗಳು || ಜ್ವಾಲಿಶೀತಳಮಾದುದಗ್ನಿಯಂಬಿಟ್ಟುಕಾಂ | ತಾಲಿಂಗನವನೆಬಯಸಿದುದುಕಾಮುಕಜನಂ | ಮೂಲೋಕ ಮನ್ಮಾಗಿನಡುಗಿಸಿತುಮೇಣುಡುಗಿಸಿತುಪೇರ್ಚಿದೈಕಿಲಿಂದ || ೨ || ಉತ್ತಮಾಂಗದಗಂಗೆಯಂಸಾಗರಕೆಕಳುಹಿ | ಪೊತ್ತಶಶಿಕಲೆಯನಂಬರಕಿಟ್ಟುತನ್ನನಡು | ನೆತ್ತಿಯೊಳ್ಕಣ್ಣತೆರದಗ್ನಿಯಂತಾಳ್ದುದಲ್ಲದೆಕಾಂತೆಗರೆಮೈಯನು | ಇತ್ತುಬಿಡದಪ್ಪಿಕೊಂಡಿರುವನೀಶ್ವರನೆನ | ಲ್ಮತ್ತೆಕಾಮಿನಿಯರಕುಚಾಲಿಂಗನವನುಳಿದೊ | ಡೆತ್ತಣದುಹಿಮಗೆಭೇಷಜಮೆಂದುವಿರಹಿಗಳ್ಕೂರ್ಪರನರಸುತಿರ್ದರು || ೩ || ನೆರೆಲೋಭಿವಿತ್ತಮಂಸುಯಿಧಾನಮುಂಮಾಳ್ಪ | ತೆರದಿಂದಕಾಮಿನಿಯಪ್ರಣಯಮುಂನಂಬಿಹದ | ನರಿವಿನಂತಿಡಿಪಶೈಶಿರದಶೀತಳಕೆಪಗಲಿರುಳ್ತಮ್ಮಗೂಡುಗಳನು || ಪೊರಮಟ್ಟುಪಾರಲೊಲ್ಲದೆವಾಯಸಪ್ರತತಿ | ಗರಿಗಳಂಪೊದಿಸಿಮಗ್ಗುಲೊಳಿಟ್ಟುಕೋಗಿಲೆಯ | ಮರಿಗಳಂಮೈಯೊಳ್ಪುದುಗಿಕೊಂಡುಮರುಕದಿಂದ್ಯೆದಪಾಲಿಸುತಿರ್ದುವು || ೪ || ಭುವನಮಂತೀ

---

ಹೋಯಿತು, ಕಾಮುಕಜನಂ-ಕಾಂತೆಯರಲ್ಲಿ ಅನುರಾಗವುಳ್ಳವರು, ಅಗ್ನಿಯಂಬಿಟ್ಟು-ಬೆಂಕಿಯಮೇಲಣ ಆಸೆಯನ್ನು ತೊರೆದು, ಕಾಂತಾಲಿಂಗನವನೆ-ಸ್ತ್ರೀಯನ್ನು ತಬ್ಬಿಕೊಳ್ಳುವಿಕೆಯನ್ನೆ, ಬಯಸಿದುದು-ಇಚ್ಛಿಸಿತು, ಮಾಗಿ-ಮಾಗಿಯ ಕಾಲವು, ಪೇರ್ಚಿದೈಕಿಲಿಂದ-ಹೆಚ್ಚಾದ ಕೊರತದಿಂದ, ಮೂಲೋಕಮುಂ-ಲೋಕತ್ರಯವನ್ನೂ, ನಡುಗಿಸಿತು-ಕಂಪಿಸುವಂತೆ ಮಾಡಿಬಿಟ್ಟಿತು, ಮೇಣ್-ಅದೂ ಅಲ್ಲದೆ, ಉಡುಗಿಸಿತು-ಕೆಲಸವನ್ನು ಕಡಿಮೆಮಾಡಿತು ಮತ್ತು ಶರೀರವನ್ನು ಕುಗ್ಗುವಹಾಗೆ ಮಾಡಿಬಿಟ್ಟಿತು ||೨||

ಟೀ|| ಈಶ್ವರನು-ಪಾರ್ವತೀಪತಿಯು, ಸಾಗರಕೆ-ಸಮುದ್ರದ ಭಾಗಕ್ಕೆ, ಉತ್ತಮಾಂಗದ-ತನ್ನ ತಲೆಯಮೇಲಿದ್ದ, ಗಂಗೆಯಂ-ಸುರನದಿಯನ್ನು, ಕಳುಹಿ-ಕಳುಹಿಸಿದವನಾಗಿ, ಅಂಬರಕೆ-ಆಗಸಕ್ಕೆ, ಪೊತ್ತ-ತಾನು ಧರಿಸಿರತಕ್ಕ, ಶಶಿಕಲೆಯನು-ಇಂದು ಲೇಖೆಯನ್ನು, ಇಟ್ಟು-ಇಟ್ಟವನಾಗಿ, ತನ್ನ-ಸ್ವಕೀಯವಾದ, ನಡುನೆತ್ತಿಯೊಳ್-ಹಣೆಯ ಮಧ್ಯಭಾಗದಲ್ಲಿರುವ, ಕಣ್ಣ-ಕಣ್ಣನ್ನು, ತೆರೆದು-ಬಿಟ್ಟವನಾಗಿ, ಅಲ್ಲಿ-ಆ ನಯನದಲ್ಲಿ, ಅಗ್ನಿಯಂ-ಅಗ್ನಿಯನ್ನು, ತಾಳ್ದುದಲ್ಲದೆ-ಇಟ್ಟುಕೊಂಡಿರತಕ್ಕದ್ದಲ್ಲದೆ, ಅರೆಮೈಯನು-ತನ್ನ ಶರೀರದ ಅರ್ಧಭಾಗವನ್ನು, ಕಾಂತೆಗೆ-ತನ್ನ ಸತಿಗೆ, ಇತ್ತು-ಕೊಟ್ಟವನಾಗಿ, ಬಿಡದೆ-ಅಗಲಿರಲಾರದೆ, ಅಪ್ಪಿಕೊಂಡು-ತಬ್ಬಿಕೊಂಡು, ಇರುವನು-ಇದ್ದಾನೆ, ಎನಲ್- ಎಂಬತೆರನಾಗಿ, ಮತ್ತೆ-ತಿರುಗಿ, ವಿರಹಿಗಳು-ವಿರಹವೇದನೆಯಿಂದ ಕೂಡಿರತಕ್ಕವರು, ಕಾಮಿನಿಯರ-ಸ್ತ್ರೀಯರ, ಕುಚಾಲಿಂಗನವನು-ವಕ್ಷೋಜಾತಂಗಳನ್ನು (ಮೊಲೆಗಳನು) ತಬ್ಬಿಕೊಳ್ಳುವುದನ್ನು, ಉಳಿದೊಡೆ-ಬಿಟ್ಟಹಾಗಾದರೆ, ಹಿಮಕೆ-ಕೊರೆತಕ್ಕೆ, ಭೇಷಜಂ-ಔಷಧವಾದದ್ದು, ಎತ್ತಣದು-ಇನ್ನೆಲ್ಲಿದೆ, ಎಂದು-ಎಂಬ ತೆರನಾಗಿ ಆಲೋಚಿಸಿ, ಕೂಪರನು-ನಲ್ಲರನ್ನು, ಅರಸುತಿರ್ದರು-ಹುಡುಕುತ್ತಲಿದ್ದರು ||೩||

ಟೀ|| ವಿತ್ತಮುಂ-ಹಣವನ್ನು, ನೆರೆಲೋಭಿ-ಅಧಿಕವಾದ ಜಿಪುಣತನದಿಂದೊಡಗೂಡಿದ ಮನುಷ್ಯನು, ಸುಯಿದಾನಮುಂ ಮಾಳ್ಪ-ಸಂಕಟಪಟ್ಟುಕೊಂಡು ಕೊಡುವ, ತೆರದಿಂದ-ಬಗೆಯಿಂದ, ಕಾಮಿನಿಯ-ಸ್ತ್ರೀಯ, ಪ್ರಣಯಮುಂ-ಪ್ರೇಮವನ್ನು, ಇಹನ-ಇರುವ ಮನುಷ್ಯನ, ಅರಿವಿನಂತೆ-ತಿಳಿವಳಿಕೆಯ ಹಾಗೆ, ಇಡಿದ-ನೆರೆದ, ಶೈಶಿರದ-ಮಾರ್ಗಶಿರ ಪುಷ್ಯಮಾಸಗಳ, ಶೀತಳಕೆ-ಕೊರೆತಕ್ಕೆ, ಪಗಲಿರುಳ್-ದಿವಾರಾತ್ರಿಯಲ್ಲಿಯೂ, ತಮ್ಮ-ಸ್ವಕೀಯಂಗಳಾದ, ಗೂಡುಗಳನು-ನಿಲಯಂಗಳಿಂದ, ಪೊರಮಟ್ಟು-ಹೊರಟು, ಪಾರಲು-ಹಾರಾಡಲು, ಒಲ್ಲದೆ-ಇಷ್ಟವಿಲ್ಲದೆ, ವಾಯಸಪ್ರತತಿ-ಕಾಗೆಗಳ ಬಳಗವು, ಗರಿಗಳಂ- ಪಕ್ಕಂಗಳನ್ನು, ಪೊದಿಸಿ-ಆಚ್ಛಾದಿಸಿಕೊಂಡು, ಮಗ್ಗುಲೊಳ್- ತಮ್ಮ ಬಳಿಯಲ್ಲಿ, ಇಟ್ಟು-ಇಟ್ಟುಕೊಂಡು, ಮೈಯೊಳ್-ತಮ್ಮ ದೇಹದಲ್ಲಿ, ಕೋಗಿಲೆಯ ಮರಿಗಳಂ-ಎಳೆ ಕೋಗಿಲೆ ಹಕ್ಕಿಗಳನ್ನು, ಪುದುಗಿಕೊಂಡು-ಆಚ್ಛಾದಿಸಿಕೊಂಡು, ಮರುಕದಿಂದ-ಅಕ್ಕರೆಯಿಂದ, ಐದೆ-ಚೆನ್ನಾಗಿ. ಪಾಲಿಸುತಿರ್ದವು-ಕಾಪಾಡುತ್ತಲಿದ್ದವು ||೪||

ಟೀ|| ಭುವನಮುಂ-ಪ್ರಪಂಚವನ್ನೆಲ್ಲಾ, ತೀವಿರ್ದ-ಆವರಿಸಿಕೊಂಡಿದ್ದ, ಹಿಮವನುಂ-ಕೊರೆತವನ್ನೂ, ತಮವನು-ಅಂಧಕಾರವನ್ನೂ, ತವಿಸುವ-ತೊಂದರೆಪಡಿಸುವ, (ಬೇಯಿಸುವ) ಉತ್ಸವದಿಂದಲಿ-ಆಸಕ್ತಿಯಿಂದ, ಅವಗಡಿಸಿ-ಹಾಸಿಸಿ, ಜವ

---

ತ್ತಲಿದ್ದರು. ||೨|| ಈ ಕಾಲದಲ್ಲಿ ಚಳಿಯನ್ನು ತಡೆಯಲಾರದೆ ಕಾಮಾಸಕ್ತರಾಗಿ ಅಲೆದಾಡುತ್ತಲಿರುವುದನ್ನು ನೋಡಿದರೆ, ಪೂರ್ವದಲ್ಲಿ ಪರಮೇಶ್ವರನು ತನ್ನ ತಲೆಯಮೇಲಿದ್ದ ಗಂಗೆಯನ್ನು ಸಮುದ್ರಕ್ಕೆ ಕಳುಹಿಸಿ, ಚಂದ್ರನ ಕಾಂತಿಯನ್ನು ಆಗಸಕ್ಕೆ ಹೋಗಿ ಸೇರುವಂತೆ ಮಾಡಿ, ಫಾಲ ಪ್ರದೇಶದಲ್ಲಿ ಅಗ್ನಿಯನ್ನಿಟ್ಟುಕೊಂಡವನಾದರೂ ಕೂಡ ಚಳಿಯು ಅಸಾಧ್ಯವಾಗಲು, ಇದರ ಬಾಧೆಯನ್ನು ಪರಿಹಾರಮಾಡಿಕೊಳ್ಳಲು ತನ್ನರಸಿಯಾದ ಪಾರ್ವತಿಯನ್ನು ತನ್ನರ್ಧಾಂಗದಲ್ಲಿ ಆವರಿಸಿರುವ ಔಷಧವನ್ನಾಗಿ ಮಾಡಿಕೊಂಡು, ಚಳಿಯ ಬಾಧೆಯನ್ನು ಪರಿಹರಿಸಿಕೊಂಡುದನ್ನು ಜ್ಞಾಪಿಸುತ್ತಲಿತ್ತು ||೩|| ಇದೂ ಅಲ್ಲದೆ ವಾಯಸ ಪಕ್ಷಿಗಳು ಚಳಿಗಾಗಿ ಹೊರಗೆ ಹೊರಡಲಾರದೆ ಗೂಡುಗಳಲ್ಲಿಯೇ ಸೇರಿಕೊಂಡು ತಮ್ಮ ಮರಿಗಳೊಂದಿಗೆ ಕೋಗಿಲೆಯ ಮರಿಗಳನ್ನೂ ಕೂಡ ಕಾಪಾಡುತ್ತಲಿದ್ದವು ||೪|| ಎಲ್ಲೆಲ್ಲಿಯೂ ಮಂಜು ಆವರಿಸಿತು ಸೂರ್ಯನ ಕಾಂತಿಯೂ ಕೂಡ ಕಾಣಿಸದೆ ಹೋದ್ದರಿಂದ

ನಿರ್ವಹಿಮವನುಂ | ತಮವನುಂತವಿಸುವುತ್ಸವದಿಂದಲವಗಡಿಸಿಜವಗೆಡಿಸಿ | ಭವಣಿಗೊಂಡಭ್ರದೊಳ್ತೊಳಲುತ್ತಬಳಲುತ್ತಬಂದೊಡಂಮತ್ತೆಬಿಡದೆ || ಕವಿಯಲ್ಪ್ರತಾಪದೇಳಿಗೆನಂದಿಮಿಗೆಕುಂದಿ | ರವಿತಣ್ಣಗಾದನೆನೆಕಾಣಿಸಿತುಮಾಸಿತು | ತವೆತಕ್ಕೆಯೊಳ್ನೆರೆಯಬಲ್ಲರೊಳ್ನಲ್ಲರೊಳ್ಮುನಿಸನಾನಾಶ್ಯೈಶಿರದೊಳು || ೫ || ಉರ್ವೀಶಕೇಳ್ಬಳಿಕಸೇನಾಸಮುಗ್ರದಿಂ | ಗೀರ್ವಾಣಪತಿನಂದನಂಬಹಳದೇಶವನ| ಪರ್ವತನದೀನದಂಗಳನುತ್ತರಿಸಿಕುದುರೆಗಳಹಿಂದುಗೊಂಡುಬರಲು|| ತರ್ವಾಯದೊಳಹಾಯ್ದುವನನಿಲಜವದಿಂಪಡೆಯೊ | ಳೋರ್ವರುಮರಿಯದಂತೆಕುಂತಳನಗರಕೆಬಲ | ಗರ್ವಿತಂಚಂದ್ರಹಾಸಾಖ್ಯನರಸಲ್ಲಿಗವನಾಹರಿಗಳಂತಡೆದನು||೬|| ಬೆಂಗಾವಲಾಗಿರ್ದಪಟುಭಟರ್ಮೀರಿದತು | ರಂಗಯುಗಮಂಕಾಣದೈತಂದುಪಿತವಾಹ | ನಂಗೆಬಿನ್ನೈಸಿದರ್ಜೀಯಪೋದುವುಹರಿಗ

---

ಗಡಿಸಿ-ಜಾಗ್ರತೆಯನ್ನು ತಗ್ಗಿಸಿ, ಅಭ್ರದೊಳ್-ಅಂತರಿಕ್ಷದಲ್ಲಿ, ಬವಣಿಗೊಂಡು-ಅಲೆದಾಡಿಕೊಂಡು, ತೊಳಲುತ್ತ-ತಿರುಗಾಡುತ್ತ, ಬಳಲುತ್ತ-ಆಯಸಂಗೊಳ್ಳುತ್ತ, ಬಂದೊಡಂ-ಬಂದರೂಕೂಡ, ಮತ್ತೆ-ಪುನಃ, ಬಿಡದೆ-ತಪ್ಪದೆ, ಕವಿಯಲ್-ಆಕ್ರಮಿಸಲು, ಪ್ರತಾಪದ-ಸಾಹಸದ, ಏಳಿಗೆ-ಅತಿಶಯವು, ಮಿಗೆ-ಹೆಚ್ಚಾಗಿ, ನಂದಿ-ತಪ್ಪಿ, ಕುಂದಿ-ಕೃಶವಾಗಿ, ರವಿ-ಭಾನುವು, ತಣ್ಣಗಾದನು-ತಂಪಾಗಿ ಹೋದನು, ಎನೆ-ಎಂಬಂತೆ, ಕಾಣಿಸಿತು-ತೋರಿತು, ಆಶ್ಯೈಶಿರದೊಳು-ಆ ಹಿಮಂತಋತು ಸಮಯದಲ್ಲಾದರೊ, ತವೆತಕ್ಕೆಯೊಳ್-ಗಾಢಾಲಿಂಗನೆಯಲ್ಲಿ, ನೆರೆಯಬಲ್ಲರೋಳ್-ಸೇರಲಾಂದವರೊಂದಿಗೆ, ನಲ್ಲರೊಳ್-ಕಾಮುಕರಲ್ಲಿ, (ಗಂಡಂದಿರಲ್ಲಿ) ಮುನಿಸನು-ಕೋಪವನ್ನು, ಮಾಣಿಸಿತು-ಹೋಗಲಾಡಿಸಿತು.

ಅ|| ವಿ|| ಚಳಿಯು ಹೊಡೆತವು ಅತಿಯಾದ್ದರಿಂದ ಗಂಡಹೆಂಡರು ತಮ್ಮ ತಮ್ಮ ಕೋಪವನ್ನು ದೂರೀಕರಿಸಿ ಸುಖಸಲ್ಲಾಪಂಗಳಿಂದ ವಿಹರಿಸುತ್ತಲಿದ್ದರು || ೫ ||

ಟೀ|| ಉರ್ವೀಶ-ಪೊಡವಿಪನಾದ ಜನಮೇಜಯರಾಯನೆ, ಕೇಳು-ಲಾಲಿಸು, ಬಳಿಕ-ಆನಂತರ, ಸೇನಾಸಮುಗ್ರದಿಂ-ಅತಿಶಯವಾದ ದಳದಿಂದ ಕೂಡಿದವನಾಗಿ, ಬಹಳದೇಶ- ಅನೇಕಜನಪದಂಗಳು, ವನ-ಕಾಡುಗಳು, ಪರ್ವತ-ದುರ್ಗಂಗಳು, ನದೀನದಂಗಳು-ಹೆಣ್ಣುಗಂಡು ಹೊಳೆಗಳು ಮೊದಲಾದವನ್ನೆಲ್ಲಾ, ಗೀರ್ವಾಣಪತಿನಂದನಂ-ಇಂದ್ರಸೂನುವಾದ ಪಾರ್ಥನಾದರೊ, ಉತ್ತರಿಸಿ-ಅತಿಕ್ರಮಿಸಿದವನಾಗಿ, ಕುದುರೆಗಳಂ-ಯಾಗದ ತುರಂಗಮಂಗಳನ್ನು, ಹಿಂದುಗೊಂಡುಬರಲು-ಅನುಸರಿಸಿ ನಡೆಯುತ್ತಿರುವಾಗ, ತರ್ವಾಯದೊಳ್-ಅನಂತರ, ಪಡೆಯೊಳು-ದಳದೊಳಗೆ, ಓರ್ವರುಂ-ಯಾರೊಬ್ಬರೂ. ಅರಿಯದಂತೆ-ಕಾಣದ ರೀತಿಯಾಗಿ, ಕುಂತಳನಗರಕೆ-ಕುಂತಳನಾಮಕವಾದ ಪಟ್ಟಣಕ್ಕೆ, (ಯಾಗದ ಕುದುರೆಗಳು), ಹಾಯ್ದುವು-ನಡೆದವು, ಅಲ್ಲಿಗೆ-ಆ ಊರಿಗೆ, ಬಲಗರ್ವಿತಂ-ಸತ್ವಾತಿಶಯದಿಂದೊಪ್ಪುವ, ಚಂದ್ರಹಾಸಾಖ್ಯನು - ಚಂದ್ರಹಾಸನೆಂಬುವನು, ಅರಸು-ರಾಜನಾಗಿದಾನೆ, ಆ ಹರಿಗಳಂ-ಆ ಅರ್ಜುನನ ಯಜ್ಞಾಶ್ವಂಗಳನ್ನು, ಆತನು-ಆ ಚಂದ್ರಹಾಸನೆಂಬ ರಾಜೇಂದ್ರನು, ತಡೆದನು-ಅಡ್ಡಹಾಕಿ ನಿಲ್ಲಿಸಿದನು.

ಅ|| ವಿ|| ಉರ್ವೀಶ (ಸ. ದೀ.) ಗೀರ್ವಾಣಪತಿನಂದನಂ-ಗೀರ್ವಾಣಪತಿ (ಷ. ತ.) ಗೀರ್ವಾಣಪತಿಯನಂದನಂ (ಷ. ತ.) ನಂದನಂ-ಮಗನು, ನಂದನವೆಂಬ ವನದ ಹೆಸರು, ನಂದನವೆಂಬ ಸಂವತ್ಸರ, ಹರಿ-ಕುದುರೆ, ವಿಷ್ಣು, ಕಪ್ಪೆ, ಕೋತಿ, ಅಶ್ವತ್ಥದಮರ ಮುಂತಾದವು || ೬ ||

ಟೀ|| ಮೀರಿದತುರಂಗಯುಗಮಂ-ಮೀರಿದ ಅಗೋಚರವಾದ ವೇಗದಿಂದ ಕೂಡಿದ, ತುರಂಗಯುಗಮಂ-ಯಜ್ಞಾಶ್ವಂಗಳೆರಡನ್ನೂ, ಬೆಂಗಾವಲಾಗಿರ್ದ-ವೈಗಾವಲಿಗಾಗಿ ಯಜ್ಞಾಶ್ವಂಗಳೊಂದಿಗೆ ಬರುತ್ತಲಿದ್ದ, ಪಟುಭಟರು-ವೀರರವೀರರು, ಕಾಣದೆ-ನೋಡದೆ, ಪಿತವಾಹನಂಗೆ-ಪಾರ್ಥನಬಳಿಗೆ,ಐತಂದು-ಬಂದವರಾಗಿ,ಬಿನ್ನೈಸಿದರು-ಅರಿಕೆಮಾಡಿಕೊಂಡರು,(ಹೇಗೆಂದರೆ) ಜೀಯ-ಪ್ರಭುವಾದ ಅರ್ಜುನನೇ, ಹರಿಗಳು-ಯಜ್ಞಾಶ್ವಂಗಳು, ಪೋದವು-ಮಾಯವಾದವು, ಅರಸಿದೊಡೆ-ಹುಡುಕಿದರೂಕೂಡ

---

ಗಾಢಾಂಧಕಾರವು ಕವಿದುಕೊಂಡಿತು. ತಮ್ಮಲ್ಲಿದ್ದ ಕೋಪವನ್ನುಬಿಟ್ಟು ಸ್ತ್ರೀಪುರುಷರು ಸುಖದಿಂದ ಕಾಲವಂಕಳೆಯುತ್ತಲಿದ್ದರು. ||೫|| ಎಲೈ ರಾಜೇಂದ್ರನಾದ ಜನಮೇಜಯನೆ ಕೇಳು, ಇಂತಹವಾಗಿಯ ಕಾಲವೊದಗಿದರೂಕೂಡ ಲೆಕ್ಕಿಸದೆ, ಅಪರಿಮಿತವಾದ ಸೇನಾರ್ಣವದಿಂದಕೂಡಿದ ಅರ್ಜುನನು ಯಜ್ಞಾಶ್ವಂಗಳೊಂದಿಗೆ ಹೊರಟು, ಅನೇಕವಾದ ದೇಶಗಳನ್ನೂ, ಪರ್ವತಗಳನ್ನೂ, ನದಿಗಳನ್ನೂ, ಕಾಡುಗಳನ್ನೂ ದಾಟಿದವನಾಗಿ ಮುಂದೆ ಬರುತ್ತಲಿರುವಾಗ ಯಾರಿಗೂಗೋಚರವೇ ಇಲ್ಲದಂತೆಯಾಗದ ತುರಂಗಮಂಗಳು ಕುಂತಳ ದೇಶಕ್ಕೆ ಬಂದು ಸೇರಿದವು ಆ ಕುಂತಳ ನಗರಕ್ಕೆ ಚಂದ್ರಹಾಸನೆಂಬಾತನು ರಾಜಾಧಿರಾಜನಾಗಿದ್ದನು. ಆ ರಾಜೇಂದ್ರನು ಈ ಯಾಗದ ಕುದುರೆಗಳನ್ನು ಕಟ್ಟಿದವನಾದನು || ೬ || ಅತ್ತ ಕುದುರೆಗಳ ರಕ್ಷೆಗಾಗಿ ಹೊರಟಿದ್ದ ಕಾವಲ್ಗಾರರಾದರೊ, ಸೇನಾಮಧ್ಯದಲ್ಲಿ ಯಜ್ಞಾಶ್ವಂಗಳು ಕಾಣದಿರಲು ಬಹಳವಾಗಿ ಗಾಬರಿಬಿದ್ದು, ಎಲ್ಲೆಲ್ಲಿಯೂ

ಳಂಕಿದೊಡೆಗೋಚರಿಸವು || ಮುಂಗೈವಕಜ್ಜಮಂಬೆಸಸೆನೆಧನಂಜಯಂ | ಮಂಗಳಾತ್ಮಕನಮೊಗನೋಡಿಚಿಂತಿಸುವಿನಿಂ | ಕಂಗೊಳಿಸಿತಾಗಸದೊಳೊಂದುಬೆಳಗೆರಡನೆಯದಿನಮಣಿಯತೇಜದಂತೆ || ೭ || ಕ್ರೀಡೆಯಿಂಮಾಧವನುತಪ್ರಸಂಗವನುಂಟು| ಮಾಡುತ್ತ ಸುಮನೋನುರಾಗದಿಂದಿರದೆನಲಿ | ದಾಡುತ್ತ ಕುಜವಂಶಭೇದನಂಗೈವುತ್ತ ಸಾಮಜೋಲ್ಲಾಸದಿಂದ || ಪಾಡುತ್ತ ವಿಷ್ಣುಪದಕಮಲಮಧುಕರನೆಂಬ|ರೂಢಿಯಿಂನಿಜವಾಗಿಕಾಣಿಸುವತೆರದಿಂದ | ನೋಡುವರಕಣ್ಗೆ ಗೋಚರಿಸಿದಂನಾರದಮುನೀಶ್ವರಂಬಾಂದಳದೊಳು || ೮ || ಕೆಂಜಡೆಯಸುಲಿಪಲ್ಲಚೀರಕೃಷ್ಣಾಜಿನದ | ಮಂಜುಲತುಲಸಿದಂಡೆಗಳಕೊರಳತಾವಡದ | ರಂಜಿಸುವಪದ್ಮಾ

---

ಗೋಚರಿಸವು-ದೃಷ್ಟಿಪಥಕ್ಕೆ ಬೀಳಲಿಲ್ಲವು, ಮುಂಗೈವ-ಮುಂದೆ ನಾವು ಮಾಡಬೇಕಾದ, ಕಜ್ಜಮಂ-ಕಾರ್ಯವನ್ನು, ಬೆಸಸು-ಅಪ್ಪಣೆಮಾಡು, ಎನೆ-ಎಂದು ಕುದುರೆಗಳ ಕಾವಲ್ಗಾರರು ಅರಿಕೆಮಾಡಿಕೊಳ್ಳಲು, ಮಂಗಳಾತ್ಮಕನ-ಕಲ್ಯಾಣಕರವಾದ, ಆಕಾರದಿಂದೊಪ್ಪುವ ಕೃಷ್ಣಸ್ವಾಮಿಯ, ಮೊಗಂ-ಮೋರೆಯನ್ನು, ಧನಂಜಯಂ-ಪಾರ್ಥನು, ನೋಡಿ-ಈಕ್ಷಿಸಿ, ಚಿಂತಿಸುವಿನಿಂ-ಆಲೋಚನೆಯಂಗೈಯುತ್ತಲಿರುವ ಕಾಲಕ್ಕೆ ಸರಿಯಾಗಿ, ಎರಡನೆಯ-ಎರಡನೆಯದಾದ ದಿನಮಣಿಯ-ಸೂರ್ಯನ, ತೇಜದಂತೆ-ಕಾಂತಿಯೋಪಾದಿಯಲ್ಲಿ, ಆಗಸದೊಳು-ಅಂತರಿಕ್ಷಮಾರ್ಗದೊಳಗೆ, ಕಂಗೊಳಿಸಿತು-ಹೊಳೆಯಲಾರಂಭಿಸಿತು ||೭||

ಟೀ|| (ಈ ಪದ್ಯದಲ್ಲಿ ಭೃಂಗವನ್ನು ನಾರದ ಮಹಾಮುನಿಗಳಿಗೆ ಹೋಲಿಸಿರುವುದು) ಕ್ರೀಡೆಯಿಂ-ವಿನೋದದಿಂದ, ಮಾಧವ-ಹೂಗಳಲ್ಲಿರುವ ಮಕರಂದದ, ನುತ-ಉತ್ತಮವಾದ, ಪ್ರಸಂಗವನು-ಸಲ್ಲಾಪಂಗಳನ್ನು, ಉಂಟುಮಾಡುತ್ತ-ನೆರವೇರಿಸುತ್ತ, ಇರದೆ-ಕಾಲಹರಣೆಯಂ ಮಾಡದೆ, ಸುಮನೋನುರಾಗದಿಂದ-ಸುಮನ-ಕುಸುಮಂಗಳಲ್ಲಿ, ಅನುರಾಗದಿಂದ-ವಿಶ್ವಾಸದಿಂದ, ನಲಿದಾಡುತ್ತ-ಆನಂದಪಡುತ್ತ, ಕುಜ-ವೃಕ್ಷಂಗಳನ್ನೂ, ವಂಶ-ಬಿದಿರುಗಳನ್ನೂ ಸಹ, ಭೇದನಂಗೈವುತ್ತ-ರಂಧ್ರಗಳುಂಟಾಗುವಂತೆ ಮಾಡುತ್ತ, ಸಾಮಜ-ಝೇಂಕಾರದ, ಉಲ್ಲಾಸದಿಂದ-ಸಡಗರದಿಂದ, ಪಾಡುತ್ತ-ಗಾನವನ್ನು ಮಾಡುತ್ತ, (ಇದು ಭೃಂಗದಪರವಾದ ಅರ್ಥವು), ಕ್ರೀಡೆಯಿಂ-ಸಂಭ್ರಮದಿಂದ, ಮಾಧವ-ಶ್ರೀಮನ್ನಾರಾಯಣ ಮೂರ್ತಿಯ, ನುತ-ಅನಿರ್ವಾಚ್ಯವಾದ, ಪ್ರಸಂಗವನು-ಪ್ರಸ್ತಾಪವನ್ನು, ಉಂಟುಮಾಡುತ್ತ-ಎಸಗುತ್ತ, ಇರದೆ-ಎಡೆಬಿಡದೆ, ಸುಮನೋನುರಾಗದಿಂದ-ಸದುಹೃದಯದ ಕೌತುಕದಿಂದ, ನಲಿದಾಡುತ್ತ-ಮುದಮಂತಾಳುತ್ತ, ಕುಜ-ವೃಕ್ಷದಿಂದ ಮಾಡಿದ, ವಂಶ-ವಿಪಂಚಿಯನ್ನು, ಭೇದನಂಗೈವುತ್ತ-ನುಡಿಸುತ್ತ, ಸಾಮಜೋಲ್ಲಾಸದಿಂದ-ಸಾಮಗಾನ ಸಂಬಂಧದ ಸಂತೋಷದಿಂದ, ಪಾಡುತ್ತ-ಸಂಗೀತರೂಪವಾಗಿ ಹೊಗಳುತ್ತ, (ಇದು ಋಷಿವರ್ಯರಾದ ನಾರದರ ಪರವಾದ ಅರ್ಥವು), ವಿಷ್ಣುಪದ ಕಮಲ ಮಧುಕರನು-ವಿಷ್ಣು-ವೈಕುಂಠಾಧಿಪತಿಯ, ಪದಕಮಲ-ಅಡಿಗಳೆಂಬತಾವರೆ ಹೂಗಳಿಗೆ, ಮಧುಕರನು - ಭೃಂಗದಂತಿರುವನು, ಎಂಬ-ಎನ್ನತಕ್ಕ, ರೂಢಿಯಂ-ಪ್ರಾಶಸ್ತ್ಯವನ್ನು, ನಿಜವಾಗಿ-ಯಥಾರ್ಥವಾಗಿ, ಕಾಣಿಸುವ-ಗೋಚರ ಮಾಡುವ, ತೆರದಿಂದ-ಪರಿಯಿಂದ, ನೋಡುವರಕಣ್ಗೆ-ನೋಟಕರ ನಯನಂಗಳಿಗೆ, ನಾರದ ಮುನೀಶ್ವರಂ-ಅಮರಮುನಿಯು, ಬಾಂದಳದೊಳು-ಅಂತರಿಕ್ಷ ಪ್ರದೇಶದಲ್ಲಿ, ಗೋಚರಿಸಿದಂ-ಕಾಣಿಸಿದವನಾದನು ||೮||

ಟೀ|| ಕೆಂಜಡೆಯ-ಕೆಂಡದಂತೆ ಹೊಳೆಯುವ ಜಟೆಯಿಂದಲೂ, ಸುಲಿ-ಪರಿಶುದ್ಧವಾದ, ಪಲ್ಲ-ದಂತಪಙ್ಕ್ತಿಗಳಿಂದಲೂ, ಚೀರ-ನಾರಿನಮಡಿ, ಕೃಷ್ಣಾಜಿನದ-ಜಿಂಕೆಯ ಚರ್ಮ ಇವುಗಳ ಉಡಿಗೆಯಿಂದಲೂ, ಮಂಜುಲ-ಶ್ರೇಷ್ಠವಾದ, ತುಲಸೀದಂಡೆಗಳ-ತುಲಸೀಮಾಲಿಕೆಯಿಂದಕೂಡಿದ, ಕೊರಳ-ಕಂಠದಿಂದಲೂ, ತಾವಡದ-ಕಮಲದಹಾಗೆ, ರಂಜಿಸುವ-ಹೊಳೆಯುವ, ಪದ್ಮಾಕ್ಷಗಳ-ಪದ್ಮಮಣಿಗಳ ಹಾರಗಳಿಂದಲೂ,ಲಲಿತ-ಕೋಮಲವಾದ,ಮೇಖಲೆಯ-ಉಡಿದಾರದಿಂದಲೂ, ಚಾರುತರದ-ಬಹು ಅಂದವಾದ, ಉಪವೀತದ-ಬ್ರಹ್ಮಸೂತ್ರದಿಂದಲೂ (ಜನಿವಾರದಿಂದಲೂ), ಕಂಜನಾಭ-ಪದ್ಮನಾಭನಾದ ಸ್ವಾಮಿಯ, ಧ್ಯಾನದ-

---

ಹುಡುಕಿ ಕಾಣದೆ, ತಮ್ಮರಸನಾದ ಅರ್ಜುನನ ಬಳಿಗೆ ಬಂದು, ಎಲೈ ಪಾರ್ಥನೆ, ಯಜ್ಞಾಶ್ವಂಗಳು ಮಾಯವಾಗಿವೆ, ಎಲ್ಲಿ ಹುಡಿಕಿದರೂ ಸಿಕ್ಕಲಿಲ್ಲವು, ಮುಂದೆ ನಾವೇನು ಮಾಡಬೇಕೆಂದು ಬಿನ್ನವಿಸುತ್ತಲಿರತಕ್ಕ ಪರಿವಾರದ ಜನರ ಮಾತನ್ನು ಕೇಳುತ್ತಲಿರುವ ಫಲುಗುಣನು ಹತ್ತಿರದಲ್ಲಿರುವ ಶ್ರೀ ಕೃಷ್ಣಪರಮಾತ್ಮನ ಮುಖವನ್ನು ನೋಡುತ್ತ ಖಿನ್ನನಾಗಿ ನಿಂತಿರುವಲ್ಲಿ ಸೂರ್ಯನ ಕಾಂತಿಗಿಂತಲೂ, ಹೆಚ್ಚಾದ ಪ್ರಕಾಶ ||೭|| ವೊಂದು ಆಗಸದಲ್ಲಿ ಉಂಟಾಯಿತು. ಆಗ ಅರ್ಜುನನಾದರೊ, ಆಗಸದಲ್ಲಿಯೇ ನೋಡುತ್ತಲಿರುವಾಗ, ಶ್ರೀಮನ್ನಾರಾಯಣ ಮೂರ್ತಿಯ ದಿವ್ಯ ನಾಮಸಂಕೀರ್ತನೆಯಂ ಮಾಡುತ್ತಲೂ, ವೀಣೆಯನ್ನು ನುಡಿಸುತ್ತಲೂ, ಸಾಮಗಾನದಿಂದ ಸ್ವಾಮಿಯನ್ನು ಕೀರ್ತಿಸುತ್ತಲೂ, ಭ್ರಮರವು ಕಮಲವನ್ನು ಸೇವಿಸುವಂತೆ ಶ್ರೀಮನ್ನಾರಾಯಣನ ಪಾದಕಮಲಂಗಳನ್ನು ಸೇವಿಸುವ ಭ್ರಮರವೋ ಎಂಬಂತೆ ಇರುವನಾಗಿಯೂ || ೮ || |ಕೆಂಪಾಗಿರುವ ಜಟೆಯಿಂದಲೂ, ಶುಭ್ರಗಳಾದ ಹಲ್ಲುಗಳಿಂದಲೂ, ನಾರು ವಸ್ತ್ರ ಕೃಷ್ಣಾಜಿನಗಳನ್ನು ಧರಿಸಿ, ತುಲಸೀ ಮಾಲೆಯನ್ನು ಕೊರಳಲ್ಲಿ ಹಾಕಿಕೊಂಡು

ಕ್ಷೆಗಳಲಲಿತಮೇಖಲೆಯಚಾರುತರದುಪವೀತದ ‖ ಕಂಜನಾಭಧ್ಯಾನದಮಲವೀಣಾಕ್ವಣಿತ । ಸಂಜಾತಗಾನಸುಖಮೆಸೆವತೇ
ಜೋಮಯದ । ಪುಂಜವೆನಿಪಮರಮುನಿನಾರದಂಪಾರ್ಥಾದಿಗಳಕಣ್ಗೆ ಕಾಣಿಸಿದನು ‖ ೯ ‖ ಅಂಭೋಜಮಿತ್ರನಾಸರೊಳಗಾಗಸವ
ನುಳಿದು । ಕುಂಭಿನಿಗೆಬಂದಪನೊಪೇಳೆನಲ್ಗಗನಪಥದಿಂ । ಭಾಸುರಪ್ರಭೆಯೊಳಾಮುನಿಪನಿಳಿತಂದಡಸುರಾಂತಕಾದಿನೃಪರು ‖
ಸಂಭಾವಿಸಿದರಾತಪೋನಿಧಿಯನತಿವಿನಯ । ಗಂಭೀರವಾಕ್ಯದಿಂಬೆಸಗೊಂಡನುಪಚರಿಸಿ । ಜಂಭಾರಿನಂದನಂನಾರದನನಖಿಳ
ಲೋಕಸ್ಥಿತಿವಿಶಾರದನನು ‖ ೧೦ ‖ ಎಲೆಮುನೀಶ್ವರತನ್ನಕುದುರೆಗಳ್ಪೋದುವೀ । ನೆಲದೊಳಾವೆಡೆಯೊಳಿರ್ದಪವೆಂದರಿಯೆ

---

ಸ್ಕಂಣೆಯಿಂದ ಕೂಡಿದ, ಅಮಲ–ಪರಿಶುದ್ಧವಾದ, ವೀಣಾ–ವೀಣೆಯ, ಕ್ವಣಿತ–ದನಿಯಿಂದ, ಸಂಜಾತ-ಹುಟ್ಟಿದ, ಗಾನ-ಹಾಡು ವುದರ, ಸುಖಂ-ಸಂತಸದಿಂದ, ಎಸೆವ-ಹೊಳೆಯುವ, ತೇಜೋಮಯದ–ತೇಜೋವಿಶಿಷ್ಟವಾದ, ಪುಂಜವು-ಸಮುದಾಯವು, ಎನಿಪ–ಎಂದು ಹೆಸರ್ಗೊಂಡಿರತಕ್ಕ, ಅಮರಮುನಿ - ಸುರಋಷಿಯಾದ, ನಾರದಂ - ನಾರದಋಷಿಯು, ಪಾರ್ಥಾದಿಗಳಕಣ್ಗೆ- ಧನಂಜಯನೇ ಮೊದಲಾದವರ ದೃಷ್ಟಿಗೆ, ಕಾಣಿಸಿದನು-ಗೋಚರಿಸಿದವನಾದನು.

ಅ‖ ವಿ‖ ಕೆಂಜೆಡೆ=ಕೆಚ್ಚನೆ+ಜಡೆ (ಕನ್ನಡ ವಿ.ಪೂ.) ಕಂಜನಾಭ–ಕಂ–ನೀರಿನಲ್ಲಿ ಜ–ಹುಟ್ಟಿದ್ದು (ಕಮಲ ಕೃ. ವೃ.) ಕಂಜದಂತೆ ನಾಭಿಯು ಯಾವನಿಗೊ ಅವನು ಕಂಜನಾಭ (ಬ.ಸ.) ಕಂಜನಾಭನ ಧ್ಯಾನ (ಷ.ತ.) ಅಮರಮುನಿ (ಷ.ತ.) ‖೯‖

ಟೀ‖ ಆಮುನಿಪನು-ಋಷಿವರ್ಯನಾದ ನಾರದನಾದರೊ, ಅಂಭೋಜಮಿತ್ರನು - ಕಮಲಬಂಧುವಾದ ದಿನಮಣಿಯೇ, ಆಗಸವನು-ಅಂತರಿಕ್ಷವನ್ನು, ಉಳಿದು–ಬಿಟ್ಟುಹೊರಟು, ಕುಂಭಿನಿಗೆ - ಭೂಮಂಡಲಕ್ಕೆ, ಆಸರೊಳು – ಶ್ರಮದಿಂದ, ಬಂದಪನೊ–ಬರುತ್ತಲಿದ್ದಾನೊ, ಪೇಳು–ಹೇಳುವನಾಗು, ಎನಲ್–ಎಂಬತೆರನಾಗಿ, ಭಾಸುರಪ್ರಭೆಯೊಳು–ಹೆಚ್ಚಾದ ಕಾಂತಿಯಿಂದ ಕೂಡಿ, ಗಗನಪಥದಿಂ–ಆಕಾಶದ ಮಾರ್ಗದಿಂದ, ಇಳಿತಂದಡೆ–ಇಳಿದುಬರಲಾಗಿ, ಆತಪೋನಿಧಿಯನು–ತಪಸ್ಸನ್ನೇ ನಿಕ್ಷೇಪವಾಗಿ ವುಳ್ಳ ಆ ನಾರದಮುನಿವರ್ಯನನ್ನು, ಅತಿವಿನಯ-ಹೆಚ್ಚಾದ ನಮ್ರತೆಯಿಂದ ಕೂಡಿದ, ಗಂಭೀರವಾಕ್ಯದಿಂ–ಮನ್ನಣೆಯ ನುಡಿಗ ಳಿಂದ, ಅಸುರಾಂತಕಾದಿನೃಪರು–ಕೃಷ್ಣಸ್ವಾಮಿಯೇ ಮೊದಲಾದ ಸಕಲ ರಾಜರೂ ಕೂಡ, ಸಂಭಾವಿಸಿದರು-ಮರ್ಯಾದೆಯಿಂದ ಕಂಡರು, ಅಖಿಲಲೋಕಸ್ಥಿತಿವಿಶಾರದನನು – ಸಕಲ ಲೋಕಗಳ ನಡವಳಿಕೆಯನ್ನೆಲ್ಲಾ ಕಂಡಿರತಕ್ಕ, ನಾರದನನು-ನಾರದಮುನಿ ಯನ್ನು, ಜಂಭಾರಿನಂದನಂ–ಪಾರ್ಥನು, ಉಪಚರಿಸಿ-ಉಪಚಾರಮಾಡಿ, ಬೆಸಗೊಂಡನು–ಮುಂದೆ ಹೇಳುವಂತೆ ಕೇಳಿಕೊಳ್ಳುವನು.

ಅ‖ ವಿ‖ ಅಂಭೋಜ (ಕೃ. ವೃ.) ಅಂಭೋಜಗಳ ಮಿತ್ರ (ಷ. ತ.) ಅಸರು (ತೃ.) ಆಶ್ರಯ (ತ್ರಿ.) ‖೧೦‖

ಟೀ‖ ಎಲೆಮುನೀಶ್ವರ-ಋಷಿವರ್ಯನಾದ ನಾರದನೆ, ತನ್ನ-ನನ್ನ ಸಂಬಂಧವಾದ, ಕುದುರೆಗಳ್ – ಯಜ್ಞಾಶ್ವಂಗಳು, ಪೋದವು-ಕಾಣಿಸುವುದಿಲ್ಲ, ಈನೆಲದೊಳ್–ಈ ಪ್ರಪಂಚದಲ್ಲಿ, ಆವೆಡೆಯೊಳ್–ಯಾವ ಭಾಗದಲ್ಲಿ, ಇರ್ದಪವು-ಇವೆ, ಎಂದು- ಎಂಬ ಬಗೆಯನ್ನು, ಅರಿಯೆನು–ತಿಳಿದಿಲ್ಲವು, ಇನ್ನು - ಇನ್ನುಮೇಲೆ, ಈಸ್ಥಳದೊಳು–ಈ ಭಾಗದಲ್ಲಿ, ಬಲವಂತರು - ಶೂರರು, ಇಲ್ಲಲೆ–ಇಲ್ಲವಷ್ಟೆ, ಕಂಡುದಂ – ನಿನಗೆ ಗೋಚರವಾಗಿರುವುದನ್ನು, ತನಗೆ – ನನ್ನೊಂದಿಗೆ, ಒರೆಯುವೇಳ್ವುದು - ಪೇಳಬೇಕು, ಎಂದು–ಎಂಬತೆರನಾಗಿ, ಫಲುಗುಣಂ–ಪಾರ್ಥನು, ಕೇಳ್ದಡೆ–ಕೇಳಲಾಗಿ, ನಾರದಂ–ನಾರದಮುನೀಂದ್ರನಾದರೊ, ನಸುನಗುತ- ಮಂದಹಾಸವಂ ಗೈಯ್ಯುತ್ತ, (ಅರ್ಜುನನನ್ನು ಕುರಿತು) ಸುಲಲಿತಾಶ್ವಂಗಳು–ಮನೋಹರಂಗಳಾದ ನಿನ್ನ ಯಾಗದ ಕುದುರೆ ಗಳು, ಕುಂತಳಪುರಕೆ - ಕುಂತಳವೆಂಬ ನಗರಕ್ಕೆ, ಐದಿದವು - ಹೋದವು, ಅಲ್ಲಿಗೆ–ಆ ಜನಪದಕ್ಕೆ, ಕಲಿ–ವೀರನಾದ, ಚಂದ್ರ ಹಾಸನೆಂಬಾತನು, ಅರಸು–ರಾಜನಾಗಿರುವನು, ಆನೃಪಂ–ಆ ರಾಜೇಂದ್ರನು, ಕಟ್ಟಿಕೊಂಡು – ನಿನ್ನ ಕುದುರೆಗಳನ್ನು ಬಂಧಿಸಿ

---

ಪದ್ಮ ಮಣಿಗಳ ಸರದಿಂದ ಪ್ರಕಾಶಿಸುತ್ತ, ಉತ್ತಮವಾದ ಯಜ್ಞೋಪವೀತವನ್ನು ಕಂಠದಲ್ಲಿ ಹಾಕಿಕೊಂಡು, ವೀಣಾಗಾನಮಂ ಮಾಡುತ್ತ, ತೇಜೋರಾಶಿಯಿಂದ ಕೂಡಿದವನಾಗಿ ಬರುತ್ತಲಿರುವುದು ಅರ್ಜುನನೇ ಮೊದಲಾದವರಿಗೆ ಕಾಣಿಸಿತು ‖೯‖ ಅಂತ ರಿಕ್ಷ ಮಾರ್ಗದಲ್ಲಿ ಸಂಚಾರಮಾಡುತ್ತಲಿದ್ದ ಸೂರ್ಯನು ಆಯಾಸದಿಂದ ನೆಲಕ್ಕೆ ಇಳಿದು ಬಂದನೋ ಎಂಬಂತೆ ಬರುತ್ತಲಿರುವ ನಾರದ ಮುನಿವರ್ಯನನ್ನು ನೋಡಿ ಅರ್ಜುನಾದಿಗಳೆಲ್ಲಾ ಅತ್ಯಂತ ಮೃದುಮಧುರ ವಾಕ್ಯದಿಂದ ಕೂಡಿದ ನಮ್ರತೆಯಿಂದ ಮನ್ನಿಸಿ ದವರಾದರು. ಅನಂತರದಲ್ಲಿ ಇಂದ್ರ ಕುವರನಾದ ಪಾರ್ಥನು ತ್ರಿಲೋಕ ಸಂಚಾರಿಯಾದ ನಾರದನನ್ನು ಕುರಿತು, ‖೧೦‖ ಎಲೈ ನಾರದ ಮಹರ್ಷಿಗಳೆ, ನಮ್ಮ ಯಾಗದ ಕುದುರೆಗಳು ಇಲ್ಲಿ ಎಲ್ಲಿಯೊ ಮಾಯವಾದವು ಎಲ್ಲಿ ಹುಡಿಕಿದರೂ ಸಿಕ್ಕಲಿಲ್ಲ. ಇಲ್ಲಿ ನನಗಿಂತಲೂ ಬಲಶಾಲಿಗಳು ಯಾರೂ ಇಲ್ಲವಷ್ಟೆ. ನಿಜಸ್ಥಿತಿಯನ್ನು ನನಗೆ ಅಪ್ಪಣೆ ಕೊಡಬೇಕೆಂದು ಕೇಳಿಕೊಳ್ಳುತ್ತಲಿರುವ ಪಾರ್ಥನನ್ನು ಕುರಿತು ನಾರದ ಮುನಿಯು ಇಂತೆಂದನು. ಎಲೈ ಅರ್ಜುನಾ, ನಿನ್ನ ಯಜ್ಞಾಶ್ವಂಗಳಾದರೊ, ಕುಂತಳ ನಗರಕ್ಕೆ ಹೊರಟು ಹೋಗಿವೆ. ಅಲ್ಲಿ ಚಂದ್ರಹಾಸನೆಂಬ ಶೂರನು ರಾಜನಾಗಿರುವನು, ಆ ಭೂಮಿಪನು ನಿನ್ನ ಯಜ್ಞಾಶ್ವಂಗಳನ್ನು

ನಿನ್ನ | ಬಲವಂತರೀಸ್ಥಳದೊಳಿಲ್ಲಿಲೀಕಂಡುದಂತನಗೊರೆಯವೇಳ್ಕುದೆಂದು || ಫಲುಗುಣಂಕೇಳ್ಕೊಡಾನಾರದಂನಸುನಗುತ | ಸುಲಲಿತಾಶ್ವಂಗಳೈದಿಮುವುಕುಂತಳಪುರಕೆ | ಕಲಿಚಂದ್ರಹಾಸಾಖ್ಯನರಸಲ್ಲಿಗಾನೃಪಂಕಟ್ಟಿಕೊಂಡಿಹನೆಂದನು || ೧೧ || ಹಿಂದ ಣರಸುಗಳಬಲಮಿವನಹದಿನಾರರೊಳ | ಗೊಂದುಕಳೆಯಿಲ್ಲಿವಂಪರಮವೈಷ್ಣವನಿವನ | ಮುಂದಧಟರಂಕಾಣೆನಾಹವದೊಳೀತನ ಚರಿತ್ರಮತಿಚಿತ್ರಮೆಂದು || ಮುಂದಸ್ಮಿತದೊಳಾತಪೋಧನಂಪೇಳ್ದೊಡೆಪು | ರಂದರಾತ್ಮಜನವನವರ್ತ್ತನವನಾದ್ಯಂತ | ದಿಂದೆನಗೆ ವಿಸ್ತರಿಸಿಪೇಳ್ಕುದೆನಲರ್ಜುನಂಗಾತಪೋನಿಧಿನುಡಿದನು || ೧೨ || ಸಮಯಯಮಲ್ಲಿದುನಿನಗೆಪಾರ್ಥಸಿಕ್ಕಿರ್ದಪವು | ವಿಮಲ ಮಖವಾಜಿಗಳ್ಚಿಂತಿಸುತಿಹಂಮಹೀ | ರಮಣನಿಭಪುರದೊಳೆನೆಫಲುಗುಣಂ| ನರರಬಾಳ್ಚಿರಕಾಲಮಿರ್ಪುದಿಲ್ಲ || ಭರಮೆಯಿಂದ

ಕೊಂಡು, ಇಹನು-ಇದ್ದಾನೆ, ಎಂದನು-ಎಂದು ನುಡಿದನು. ||೧೧||

ಟೀ|| ಆತಪೋಧನಂ - ಕೃಚ್ಛ್ರ ಚಾಂದ್ರಾಯಣ ಮೊದಲಾದ ತಪಸ್ಸನ್ನೇ ನಿಕ್ಷೇಪವಾಗಿ ವುಳ್ಳ ನಾರದಋಷಿಯು ಮಂದಸ್ಮಿತದೊಳ್-ಮುಗುಳ್ನಗೆಯಿಂದ ಕೂಡಿದವನಾಗಿ, (ಅರ್ಜುನನನ್ನು ಕುರಿತು) ಇವನ - ಈ ಚಂದ್ರಹಾಸನೆಂಬ ರಾಜೇಂದ್ರನ, ಹದಿನಾರರೊಳಗೆ-ಹದಿನಾರು ಭಾಗದಲ್ಲಿ, ಒಂದುಕಳೆಯು-ಒಂದಂಶಕ್ಕೆ ಹೋಲಿಕೆಯಾಗಿ, ಹಿಂದಣ-ನೀನು ಇದುವರೆಗೆ ದೇಶಸಂಚಾರಮಾಡುತ್ತಾ ನೋಡಿರತಕ್ಕ, ಅರಸುಗಳ-ರಾಜರುಗಳ, ಬಲಂ-ಶೌರ್ಯವು, ಇಲ್ಲ-ಸಮತೆಯನ್ನೈದುವುದಿಲ್ಲ, ಇವಂ-ಇವನಾದರೊ, ಪರಮವೈಷ್ಣವಂ - ಶ್ರೀಮನ್ನಾರಾಯಣನಲ್ಲಿರಬೇಕಾದ ಭಕ್ತಿಯನ್ನುಂಟಾಗಿರುವವರಲ್ಲಿ ಮೊದಲನೆಯವನಾಗಿದಾನೆ, (ಪರಂ-ಹೆಚ್ಚಾಗಿ, ಆವೈಷ್ಣವಂ-ಪರಬ್ರಹ್ಮಸ್ವರೂಪವನ್ನು ಧ್ಯಾನಿಸತಕ್ಕವನು) ಆಹವದೊಳು - ರಣರಂಗದಲ್ಲಿ, ಇವನ ಮುಂದೆ-ಈ ಚಂದ್ರಹಾಸನೆದುರಿಗೆ ನಿಲ್ಲುವ, ಅಧಟರಂ-ವೀರರನ್ನೇ, ಕಾಣೆನು-ಕಂಡಿಲ್ಲವು, ಈತನ-ಈ ಭೂಮಿಪನ, ಚರಿತ್ರಂ-ನಡವಳಿಕೆಯೆಲ್ಲವೂ, ಅತಿಚಿತ್ರಂ-ಬಹು ಅಚ್ಚರಿಯನ್ನುಂಟುಮಾಡತಕ್ಕದ್ದಾಗಿರುವುದು, ಎಂದು-ಎಂಬತೆರನಾಗಿ, ಪೇಳ್ದಡೆ-ನುಡಿಯಲಾಗಿ, ಅವನ-ಆ ಚಂದ್ರಹಾಸನೆಂಬ ರಾಜಾಧಿರಾಜನ, ವರ್ತಮಾನವನು-ಸಮಾಚಾರವನ್ನೆಲ್ಲಾ, ಎನಗೆ-ನನ್ನಕೂಡ, ಆದ್ಯಂತದಿಂದ-ಮೊದಲಿಂದ ಹಿಡಿದು ಪೂರೈಸುವವರೆಗೂ, ವಿಸ್ತರಿಸವೇಳ್ಕುದು-ತಿಳಿಸಬೇಕೆಂದು, ಪುರಂದರಾತ್ಮಜನು - ಇಂದ್ರಸೂನುವಾದ ಪಾರ್ಥನು, ಎನಲು-ಅರಿಕೆಮಾಡಲು, ಅರ್ಜುನಂಗೆ-ಫಲುಗುಣನನ್ನು ಕುರಿತು, ನುಡಿದನು-ಮುಂದೆ ಹೇಳುವಂತೆ ಹೇಳುವನು.

ಅ|| ವಿ|| ಅರಸು (ದೊರೆ, ನಾಮ) (ಹ-ಡಕು ಕ್ರಿ.) ಬಲಂ - ಸಾಹಸವು. ಮತ್ತು ಸೈನ್ಯವು ತಪೋಧನಂ - ತಪಸ್ಸೆ ಧನವಾಗಿವುಳ್ಳವನು (ಬ.ಸ.) ಪುರಂದರಾತ್ಮಜ-ಆತ್ಮ-ತನ್ನಲ್ಲಿ, ಜ-ಉತ್ಪನ್ನನಾದವನು (ಕೃ.ವೃ.) ಪುರಂದರನ ಆತ್ಮಜ (ಷ.ತ.) ವೊಗ (ತ್ಭ) ಮುಖ (ತ್ಸ) ಆದ್ಯಂತ (ಎಣ್ ಸಂಧಿ) ||೧೨||

ಟೀ|| ಇದು-ಚಂದ್ರಹಾಸ ಕಥಾಶ್ರವಣ ಮಾಡುವುದು, ಪಾರ್ಥ-ಎಲೈ ಧನಂಜಯನೆ, ನಿನಗೆ-ನಿನಿಗಾದರೊ, ಸಮಯಮಲ್ಲ-ಈಗ ಹೊತ್ತಲ್ಲ, ವಿಮಲ-ಪವಿತ್ರಂಗಳಾದ, ಮಖವಾಜಿಗಳು-ಯಾಗದ ಕುದುರೆಗಳು, ಸಿಕ್ಕಿರ್ದಪವು-ಸಿಕ್ಕಿಬಿದ್ದಿರುವುವು, ಇಭಪುರದೊಳು-ಹಸ್ತಿನಾವತಿಯೊಳಗೆ, ಮಹೀರಮಣನು-ಭೂಕಾಂತನಾದ ಯುಧಿಷ್ಠಿರನಾದರೊ, ಚಿಂತಿಸುತಿಹಂ-ಯಜ್ಞಾಶ್ವದೊಂದಿಗೆ ಪಾರ್ಥನು ಇನ್ನೂ ಹಿಂದಿರುಗಿ ಬರಲಿಲ್ಲವೆಂದು ಆಲೋಚನೆ ಮಾಡುತ್ತಲಿರುವನು, ಎನೆ - ಹೀಗೆಂದು ನಾರದಮುನಿಯು ನುಡಿಯಲು, ಫಲುಗುಣಂ-ಪಾರ್ಥನಾದರೊ, ಚಿರಕಾಲಂ-ಬಹು ದಿನಗಳವರೆಗೂ, ನರರಬಾಳ್ - ಮಾನವಜನ್ಮವು, ಇರ್ಪುದಿಲ್ಲ-ಇರತಕ್ಕದ್ದಲ್ಲವು, ವೈಷ್ಣವಕಥೆಯನು-ವಿಷ್ಣುಭಕ್ತರಾದವರ ಕಥೆಯನ್ನು, ಭರಮೆಯಿಂದ-ಅಕ್ಕರೆಯಿಂದ, ಕೇಳದೆ ಇರಬಹುದೆ - ಕೇಳದೆ ಇರಲು ಆದೀತೆ, ಅನುಮ - ಆಶ್ಚರ್ಯವು, ಉಭಯಬಲಮಧ್ಯದೊಳ್ - ಎರಡು ಸೈನ್ಯಗಳು ಕಲೆತಿರುವ ಕಾಲದಲ್ಲಿ, (ಕೌರವಪಾಂಡವರ ಯುದ್ಧದಲ್ಲಿ) ಆವಪೊತ್ತು-ಯಾವಾಗಲೂ, ಕಮಲಾಕ್ಷನು - ಪದ್ಮನಯನನಾದ ಕೃಷ್ಣಭಗವಂತನು, ತನಗೆ-ನನ್ನೊಂದಿಗೆ, ಒರೆದ-ನುಡಿದ, ಗೀತಾಮೃತವನು-ಅಮೃತೋಪಮಾನವಾದ ಭಗವದ್ಗೀತಾಸಾರವನ್ನು, ಆಲಿಸಿ

ಕಟ್ಟಿಕೊಂಡಿದ್ದಾನೆ. ||೧೧|| ನೀನು ಇದುವರೆಗೆ ಜೈಸಿದ ರಾಜಾಧಿರಾಜರುಗಳ ಪರಾಕ್ರಮಕ್ಕಿಂತಲೂ ಈತನು ಹದಿನಾರು ಪಾಲು ಹೆಚ್ಚಾದ ಪರಾಕ್ರಮದಿಂದ ಕೂಡಿದ್ದಾನೆ. ವಿಷ್ಣುಭಕ್ತರಲ್ಲಿ ಅಗ್ರೇಸರನೂ ಮಹಾ ಸಾಹಸಿಯೂ ಆಗಿರುವನು. ಇವನ ಚರಿತ್ರೆಯಾದರೊ ಅತ್ಯಾಶ್ಚರ್ಯವನ್ನುಂಟುಮಾಡತಕ್ಕದ್ದಾಗಿದೆ ಎಂದು ತಪೋನಿಧಿಯಾದ ನಾರದನು ನುಡಿಯಲು, ಆಗ ಅರ್ಜುನನು ದೇವಮುನಿಯನ್ನು ಕುರಿತು, ಎಲೈ ಮಹನೀಯನೆ, ಹಾಗಾದರೆ ವಿಷ್ಣುಭಕ್ತನಾಗಿಯೂ ಪರಮ ಪಾವನನಾಗಿಯೂ ಇರುವ ಚಂದ್ರಹಾಸನ ಕಥೆಯನ್ನು ನನಿಗೆ ಸವಿಸ್ತಾರವಾಗಿ ತಿಳಿಸಬೇಕೆಂದು ಕೇಳಿಕೊಳ್ಳುತ್ತಲಿರುವ ಧನಂಜಯನನ್ನು ಕುರಿತು, ಎಲೈ ಫಲುಗುಣಾ ! || ೧೨ || ಈಗ ಚಂದ್ರಹಾಸನ ಕಥೆಯನ್ನು ಕೇಳುವ ಸಮಯವಲ್ಲವು. ಯಜ್ಞಾಶ್ವಂಗಳು ಸಿಕ್ಕಿವೆ, ಹಸ್ತಿನಾವತಿಯಲ್ಲಾದರೊ ಧರ್ಮರಾಯನು ಕಳವಳಿಸುತ್ತಲಿದಾನೆ. ಆದಕಾರಣ ಕಥೆಯನ್ನು ಕೇಳಲು ಇದು ಸಮಯವ

ಕೇಳದಿರಬಹುದೆವೈಷ್ಣವಕಥೆಯ | ನಮುಮತನಗಾನವೊತ್ತುಭಯ ಬಲಮಧ್ಯದೋಳ್ | ಕಮಲಾಕ್ಷನೊರೆದಗೀತಾಮೃತವನಾಲಿಸಿದೆನೆನೆಮುನಿಪನಿಂತೆಂದನು || ೧೩ || ಇನ್ನೊರವೆನಾಲಿಸಾದೊಡೆಪಾರ್ಥಧಾರ್ಮಿಕಂ | ಮುನ್ನೋರ್ವನುಂಟುಕೇರಳದೇಶದವನಿಪಂ | ಸನ್ನುತಗುಣೋದಯಂಮೇಧಾವಿಯೆಂಬವಂಬಲಯುತಂಬಳಿಕವಂಗೆ || ತನ್ನಪಟ್ಟಣದರಾಣಿಯೊಳ್ಬಹಳಭಾಗ್ಯಸಂ| ಪನ್ನನೆಡದಂಘ್ರಿಗರುವೆರಳಾಗಿದಿವದೊಳು | ತ್ಪನ್ನನಾದಂಮೂಲನಕ್ಷತ್ರದಿಂದರಿಷ್ಟಾಂಶದೊಳ್ಸುಕುಮಾರನು ||೧೪|| ಪುತ್ರೋತ್ಸವಂಮಾಡಿ ಕೆಲವುದಿನಮಿರೆನೃಪಂ | ಶತ್ರುಗಳ್ಬಂದುನಿಜನಗರಮಂಮುತ್ತಿದೊಡೆ | ಕ್ಷತ್ರಧರ್ಮದೊಳವರೊಡನೆಯುದ್ಧರಂಗದೊಳ್ಪೊಯ್ದಾಡಿಮಡಿಯೆಕೇಳ್ದು || ಚಿತ್ರಭಾನುಪ್ರವೇಶಂಗೈದಳಂದುಶತ | ಪತ್ರಲೋಚನೆಪತಿವ್ರತೆಯಾಗಿಬಳಿಕೆಲೆಧ | ರಿತ್ರೀಶ್ವ

ದೆನು-ಶ್ರವಣ ಮಾಡಿರುವೆನು, ಎನೆ-ಎಂದು ನುಡಿಯಲು, ಮುನಿಪನು-ಋಷಿಶ್ರೇಷ್ಠನಾದ ನಾರದನು, ಇಂತು-ಮುಂದೆ ಹೇಳುವಂತೆ, ಎಂದನು-ನುಡಿಯುವವನಾದನು.

ಅ|| ವಿ|| ಅರ್ಜುನನಿಗೆ ಕೃಷ್ಣಸ್ವಾಮಿಯು ಗೀತೆಯನ್ನು ಉಪದೇಶ ಮಾಡಿದ್ದು:—ಪೂರ್ವದಲ್ಲಿ ಕೌರವರಿಗೂ ಪಾಂಡವರಾದ ನಮಗೂ ಯುದ್ಧವು ಒದಗಿದ್ದರಿಂದ ನಾನು ಯಾರಯಾರನ್ನು ಕೊಲ್ಲಬಹುದೆಂದು ಕೃಷ್ಣಮೂರುತಿಯಂ ಪ್ರಶ್ನೆ ಮಾಡಿದಾಗ ಸ್ವಾಮಿಯು ಸವಿಸ್ತಾರವಾಗಿ ಉಪದೇಶಿಸಿ ನನಗುಂಟಾದ ಸಂಶಯಂಗಳನ್ನು ದೂರಮಾಡಿ ಯುದ್ಧದಲ್ಲಿ ನಮಗೆ ಗೆಲುವಾಗುವಂತೆ ಮಾಡಿದನು. ಈಗ ವಿಷ್ಣುಭಕ್ತನಾದ ಚಂದ್ರಹಾಸನ ಕಥೆಯನ್ನು ಕೇಳಿ ಆನಂದವನ್ನೈದಿ ಮುಂದೆ ಯಜ್ಞಾಶ್ವದ ಯೋಚನೆಯನ್ನು ಮಾಡುವೆನೆಂದು ನಾರದರೊಂದಿಗೆ ಅರ್ಜುನನು ನುಡಿದನು || ೧೩ ||

ಟೀ|| ಇನ್ನು - ಮುಂದೆ, ಆದೊಡೆ - ನಿನಗೆ ಚಂದ್ರಹಾಸನ ಕಥೆಯನ್ನು ತಿಳಿದುಕೊಳ್ಳಬೇಕೆಂಬ ಆಸೆಯಿದ್ದ ಪಕ್ಷದಲ್ಲಿ, ಪಾರ್ಥ-ಅಯ್ಯಾ ಅರ್ಜುನ, ಒರೆವೆನು-ಹೇಳಲುಜ್ಜುಗಿಸುವೆನು, ಆಲಿಸು-ಗಮನವಿಟ್ಟು ಏಕಾಗ್ರಚಿತ್ತದಿಂದ ಕೇಳುವನಾಗು, ಮುನ್ನ-ಪೂರ್ವಕಾಲದಲ್ಲಿ, ಧಾರ್ಮಿಕಂ-ಧರ್ಮಮಾಡುವುದರಲ್ಲಿ ಹೆಸರುವಾಸಿಯಾಗಿದ್ದವನೂ, ಸನ್ನುತ-ಸ್ತೋತ್ರಮಾಡಲು ಯೋಗ್ಯವಾದ, ಗುಣೋದಯಂ-ಗುಣಾವಳಿಯಿಂದೊಡಗೂಡಿದವನೂ, ಬಲಯುತಂ-ಸಾಹಸಾತಿಶಯದಿಂದ ಕೂಡಿದವನೂ ಆದ, ಓರ್ವನು-ಒಬ್ಬಾನೊಬ್ಬ, ಮೇಧಾವಿಯೆಂಬವಂ-ಮೇಧಾವಿಯೆಂಬ ಹೆಸರುಳ್ಳ, ಕೇರಳದೇಶದ - ಕೇರಳವೆಂಬ ರಾಜ್ಯದ, ಅವನಿಪಂ-ರಾಜನು, ಉಂಟು-ಇದ್ದನು, ಬಳಿಕ-ಹೀಗಿರುವಲ್ಲಿ, ಅವಂಗೆ-ಆ ಮೇಧಾವಿಯೆಂಬ ಮಹಾರಾಯನಿಗೆ, ಬಹುಭಾಗ್ಯವಂತನು-ಐಶ್ವರ್ಯಾತಿಶಯದಿಂದ ಶೋಭಿಸುವ, ಸುಕುಮಾರನು - ಕೋಮಲಾಂಗನಾದ ಮಗನು, ತನ್ನಪಟ್ಟದರಾಣಿಯೊಳ್-ತನ್ನ ಧರ್ಮಪತ್ನಿಯ ಗರ್ಭದಲ್ಲಿ, ಮೂಲನಕ್ಷತ್ರದ-ಮೂಲಾನಕ್ಷತ್ರಯುಕ್ತವಾದ, ಅರಿಷ್ಟಾಂಶದೊಳ್-ತಂದೆಗೆ ಕೇಡನ್ನುಂಟುಮಾಡುವ ಭಾಗದಲ್ಲಿ, ದಿನದೊಳು-ಹಗಲಿನ ವೇಳೆಯಲ್ಲಿ, ಎಡದಂಘ್ರಿಗೆ-ಎಡದ ಕಾಲಿನಲ್ಲಿ, ಆರು ವೆರಳಾಗಿ-ಆರು ಬೆಟ್ಟುಗಳನ್ನುಂಟಾಗಿ, ಉತ್ಪನ್ನನು-ಹುಟ್ಟಿದವನು, ಆದಂ-ಆದನು ||೧೪||

ಟೀ|| ನೃಪಂ-ಆ ರಾಜನಾದ ಮೇಧಾವಿಯಾದರೊ, ಪುತ್ರೋತ್ಸವಂಮಾಡಿ-ಹುಟ್ಟಿದ ಮಗುವಿಗೆ ಜಾತಕರ್ಮ, ನಾಮಕರಣ ಮೊದಲಾದ ಶುಭಕರ್ಮಂಗಳನ್ನು ಸಂತೋಷದಿಂದ ಸಾಂಗವಾಗಿ ನೆರವೇರಿಸಿ, ಕೆಲವುದಿನಂ - ಕೆಲವು ಕಾಲದವರೆಗೆ, ಇರೆ - ಸುಖವಾಗಿರುವ ಕಾಲದಲ್ಲಿ, ನಿಜನಗರಮಂ - ತನ್ನ ಪಟ್ಟಣವನ್ನು, ಶತ್ರುಗಳ್ - ವೈರಿರಾಜರು, ಬಂದು - ಬಂದವರಾಗಿ, ಮುತ್ತಿದೊಡೆ-ಕವಿದುಕೊಳ್ಳಲು, (ಆಕ್ರಮಿಸಲಾಗಿ) ಅವರೊಡನೆ-ಆ ಹಗೆಗಳೊದಿಗೆ, ಯುದ್ಧರಂಗದೊಳ್-ರಣರಂಗದಲ್ಲಿ, ಕ್ಷತ್ರಧರ್ಮದೊಳು-ಸಾಹಸಾತಿಶಯದಿಂದ, ಪೊಯ್ದಾಡಿ-ಹೊಡೆದಾಡಿ (ಯುದ್ಧವಂಗೈದು), ಮಡಿಯೆ-ಮರಣವನ್ನೈ

ಲ್ದವು. ಯಜ್ಞಾಶ್ವಂಗಳನ್ನು ಬಿಡಿಸಿಕೊಂಡು ಹೋಗುವ ಯೋಚನೆಯನ್ನು ಮಾಡೆಂದು ನುಡಿದನು. ಈ ಮಾತನ್ನು ಕೇಳಿದ ಅರ್ಜುನನಾದರೊ, ಎಲೈ ನಾರದಮುನೀಂದ್ರನೆ! ಮಾನವ ಜನ್ಮವು ಅಶಾಶ್ವತವಾದದ್ದು, ಕೌರವ ಪಾಂಡವರ ಯುದ್ಧದಲ್ಲಿ ಕೃಷ್ಣಸ್ವಾಮಿಯಿಂದ ಗೀತಾಸಾರವನ್ನು ಕೇಳಿ ಆನಂದಗೊಂಡಿರುವಂತೆ ಈಗಲೂ ವಿಷ್ಣುಭಕ್ತನಾದ ಚಂದ್ರಹಾಸನ ಕಥೆಯನ್ನು ನಿನ್ನಿಂದ ಕೇಳಬೇಕೆಂದಿರುವೆನು. ದಯೆಮಾಡಿ ನನಗೆ ಅನುಗ್ರಹಿಸಬೇಕೆಂದು ಕೇಳಿಕೊಳ್ಳುತ್ತಲಿರುವ ಅರ್ಜುನನನ್ನು ಕುರಿತು, || ೧೩ || ಎಲೈ ಫಲುಗುಣನೆ! ಕೇಳು, ಚಂದ್ರಹಾಸನ ಕಥೆಯನ್ನು ಹೇಳುವೆನು—ಪೂರ್ವದಲ್ಲಿ ಕೇರಳ ದೇಶವೆಂಬ ರಾಷ್ಟ್ರದಲ್ಲಿ ಮೇಧಾವಿಯೆಂಬ ಅರಸನು ಧರ್ಮದಿಂದ ರಾಜ್ಯವಂ ಪರಿಪಾಲಿಸುತ್ತಲಿದ್ದನು. ಅವನು ಸದ್ಗುಣಸಂಪನ್ನನೂ, ಮಹಾ ಪರಾಕ್ರಮಿಯೂ ಆಗಿದ್ದನು. ಆ ಮೇಧಾವಿರಾಜನಿಗೆ ಅಷ್ಟೈಶ್ವರ್ಯಗಳಿಂದೊಡಗೂಡಿದ ಕುವರನೋರ್ವನು ಮೂಲ ನಕ್ಷತ್ರದಲ್ಲಿ ತಂದೆತಾಯಿಗಳಿಗೆ ಅರಿಷ್ಟವನ್ನುಂಟುಮಾಡುವ ಅಂಶದೊಳಗೆ ಹಗಲು ಹೊತ್ತಿನಲ್ಲಿ ಹುಟ್ಟಿದನು, ಇವನ ಎಡಗಾಲಿನಲ್ಲಿ ಆರು ಬೆರಳುಗಳಿದ್ದುವು || ೧೪ || ಇಂತಹ ಸುಕುಮಾರನು ಹುಟ್ಟಿದಕೂಡಲೆ ರಾಜನು ಅತ್ಯಾನಂದವನ್ನೈದಿ ಜಾತಕರ್ಮಾ

ರನ ರಾಜ್ಯಮಂತೆಗದುಕೊಂಡ ಹಿತರಾಳ್ದರದನೇವೇಳ್ವೆನು ‖ ೧೫ ‖ ಬಳಿಕೋರ್ವಧಾತ್ರಿಶಿಶುವಂಕೊಂಡುಪೊರಮಟ್ಟು | ತೊಳಲಿಬಳಲುತಮೆಲ್ಲಮೆಲ್ಲನೈತಂದುಕುಂ | ತಳನಗರಮಂಪೊಕ್ಕಳಲ್ಲಿಸಾಕಿದಳರ್ಭಕನನತಿಸ್ನೇಹದಿಂದ ‖ ಎಳೆಯಂಗೆಬೇಕಾದುದಿಲ್ಲದಿರೆಮರುಗುವ | ಳ್ಪೊಳಲೊಳಗೆತಿರಿದುಹೊರೆದಳಲುವಳ್ಮುದ್ದಿಸಿಪ | ಸುಳೆಯಭಿನಯಂಗಳ್ಗೆ ಹಿಗ್ಗಿ ಬಿಸುಸುಯ್ವಳವಳನುದಿನದೊಳಾರ್ತೆಯಾಗಿ ‖೧೬‖ಇಡೆತೊಟ್ಟಲಿಲ್ಲಾಡಿಸುವರಿಲ್ಲನಿನಗೆಪೊಂ| ದೊಡಿಗೆಯಿಲ್ಲಿರೆನಿಳಯಮಿಲ್ಲಬಿಡದೆರೆವನೀ | ರ್ಗುಡಿವಾಲ್ಗಳೆಣ್ಣೆಬೆಣ್ಣೆಗಳಿಲ್ಲಲಾಲಿಸಿನಲಿವತಂದೆತಾಯ್ಗಳಿಲ್ಲ ‖ ಪೊಡವಿಪತಿಕೇರಳಾಧೀಶ್ವರಂತನಯನಂ| ಪಡೆದನಿದಕೀಗನಿನ್ನಂನೋಡುವೆನ್ನ ಕಣ್ಣೊ

ದಿದ ಸುದ್ದಿಯನ್ನು, ಅಂದು-ಆಗ, ಶತಪತ್ರಲೋಚನೆ- ಕಮಲಾಕ್ಷಿಯಾದ ಆ ರಾಜನರಸಿಯು, ಕೇಳ್ದು-ತಿಳಿದು, ಪತಿವ್ರತೆಯಾಗಿ-ಗಂಡನೊಂದಿಗೆ ತಾನು ಮೃತಿಯನ್ನೈದುವ ಅಭಿಪ್ರಾಯವುಳ್ಳವಳಾಗಿ, ಚಿತ್ರಭಾನುಪ್ರವೇಶಂಗೈದಳು-ಬೆಂಕಿಯಲ್ಲಿ ಬಿದ್ದು ಹೋದಳು, ಅಹಿತರು-ವೈರಿಗಳಾದರೂ, ಆಧರಿತ್ರೀಶ್ವರನ-ಆ ಮೇಧಾವಿ ರಾಜನ, ರಾಜ್ಯಮಂ-ರಾಷ್ಟ್ರವನ್ನು, ಬಳಿಕಲಿ-ತಾವು ಗೆದ್ದುಕೊಂಡನಂತರ, ಆಳ್ದರು-ರಾಜ್ಯಭಾರವಂ ಮಾಡಲುಜ್ಜುಗಿಸಿದರು, ಅದನು-ಆ ಸಮಾಚಾರವನ್ನು, ಏವೇಳ್ವೆನು-ಏನೆಂದು ನುಡಿಯಲಿ ‖ ೧೫ ‖

ಟೀ‖ ಬಳಿಕ-ಈ ರೀತಿಯಲ್ಲಿ ಮೇಧಾವಿಯೂ ಅವನ ಪಟ್ಟದ ರಾಣಿಯೂ ಸಹ, ಸ್ವರ್ಗಸ್ಥರಾಗಿ ಕೇರಳ ರಾಜ್ಯವು ಶತ್ರುಗಳ ಪಾಲಾದ ಬಳಿಕ, ಓರ್ವಧಾತ್ರಿ-ಒಬ್ಬ ದಾಸಿಯು, ಶಿಶುವಂ - ಹಸುಳೆಯನ್ನು, ಕೊಂಡು - ಕರೆದುಕೊಂಡು, ಪೊರಮಟ್ಟು-ಹೊರಟವಳಾಗಿ. ತೊಳಲಿಬಳಲುತ- ಹೆಚ್ಚಾದ ಶ್ರಮವನ್ನನುಭವಿಸುತ್ತ, ಮೆಲ್ಲಮೆಲ್ಲನೆ - ನಿಧಾನವಾಗಿ, ಐತಂದು-ಬಂದವಳಾಗಿ, ಕುಂತಳನಗರಮಂ-ಕುಂತಳ ರಾಜ್ಯವನ್ನು, ಪೊಕ್ಕಳು-ಪ್ರವೇಶ ಮಾಡಿದಳು, ಅರ್ಭಕನನು-ಬಲಕನನ್ನು, ಅಲ್ಲಿ-ಆ ನಾಡಿನೊಳಗೆ, ಅತಿಸ್ನೇಹದಿಂದ-ಪ್ರೀತ್ಯತಿಶಯದಿಂದ, ಸಾಕಿದಳು-ಸಂರಕ್ಷಣೆಯಂ ಮಾಡಿದಳು, ಎಳೆಯಂಗೆ-ಆ ಹಸುಳೆಗೆ, ಬೇಕಾದುದು-ಆವಶ್ಯಕವಾದದ್ದು, ಇಲ್ಲದಿರೆ-ಇಲ್ಲದೆ ಹೋದರೆ, ಮರುಗುವಳ್-ಸಂಕಟ ಪಡುವಳು (ಆ ದಾಸಿಯು) ಪೊಳಲೊಳಗೆ-ಕುಂತಳವೆಂಬ ಪಟ್ಟಣದಲ್ಲಿ, ತಿರಿದು-ತಿರುಪಮಾಡಿ, ಹೊರೆದು-ಕಾಪಾಡಿ, ಮುದ್ದಿಸಿ-ಹೆಚ್ಚಾದ ವಿಶ್ವಾಸವನ್ನೈದಿ, ಅಳಲುವಳ್-ಆ ಶಿಶುವಿಗೆ ಪ್ರಾಪ್ತವಾದ ವಿಪತ್ತನ್ನು ನೋಡಿ ಸಂಕಟಪಡುವಳು, ಪಸುಳೆಯ-ಬಾಲಕನ, ಅಭಿನಯಂಗಳ್ಗೆ-ಆಟಗಳಿಗೆ, ಹಿಗ್ಗಿ-ಆನಂದಪಟ್ಟು, ದಿನದಿನದೊಳು-ಪ್ರತಿನಿತ್ಯವೂ, ಆರ್ತೆಯಾಗಿ-ಮನದಲ್ಲಿ ಮರುಕವುಳ್ಳವಳಾಗಿ, ಬಿಸುಸುಯ್ವಳು-ನಿಟ್ಟುಸಿರು ಬಿಡುವಳು ‖ ೧೬ ‖

ಟೀ‖ ಇಡೆ-ಮಲಗಿಸಬೇಕಾದರೆ, ತೊಟ್ಟಲ-ಇಲ್ಲ-ತೊಟ್ಟಲೇ ಇಲ್ಲವು, ಆಡಿಸುವರು-ಆಟವಾಡಿಸತಕ್ಕವರು, ಇಲ್ಲ-ಇಲ್ಲವು, ನಿನಿಗೆ-ನಿನಿಗಾದರೊ, ಪೊನ್ತೊಡಿಗೆ-ಚಿನ್ನದ ಒಡವೆಗಳು, ಇಲ್ಲ- ಇಲ್ಲವು, ಇರೆ-ವಾಸಮಾಡಿಕೊಂಡಿರೋಣವೆಂದರೆ, ನಿಳಯಂ-ವಾಸದಮಂದಿರವೂ ಕೂಡ, ಇಲ್ಲ-ಇಲ್ಲವು, ಬಿಡದೆ-ವಿರಾಮವಿಲ್ಲದೆ, ಎರೆವ-ಹಾಕುವ, ನೀರ್-ಅಭ್ಯಂಜನಕ್ಕೆ ಬೇಕಾದ ನೀರು, ಕುಡಿವ-ಕುಡಿಯ-ತಕ್ಕ, ಪಾಲು-ಹಾಲೂ, ಎಣ್ಣೆಬೆಣ್ಣೆಗಳು-ಎಣ್ಣೆ ಮತ್ತು ಬೆಣ್ಣೆ ಇವುಗಳು, ಇಲ್ಲ-ಇಲ್ಲವು, ಲಾಲಿಸಿ-ಮುದ್ದಾಡಿ, ನಲಿವ-ಸಂತಸಂದಾಳುವ, ತಂದೆತಾಯ್ಗಳು-ಜನನೀಜನಕರು, ಇಲ್ಲ-ಇಲ್ಲವು, ಇದಕೆ-ಇಂತಹ ಸಹಿಸಲಸದಳನಾದ ಕಷ್ಟಪರಂಪರೆಗೆ ಭಾಗಿಯಾಗಲೆಂದು, ಪೊಡವಿಪತಿ-ರಾಜೇಂದ್ರನಾದ, ಕೇರಳಾಧೀಶ್ವರಂ-ಕೇರಳದೇಶದ ಅರಸು, ತನಯನಂ-ಸುತನನ್ನು, ಪಡೆದನು-ಹೆತ್ತನು, ನಿನ್ನಂನೋಡುವ-ನಿನ್ನನ್ನು ನೋಡಿನೋಡಿ ಮರುಗುತ್ತಲಿರುವ, ಎನ್ನ-ನನ್ನದಾದ, ತಣ್ಣನಸುನವು, ಒಡೆಯುದೆಇರದು-ಸೀಳಿಹೋಗುವದಿಲ್ಲವು, ಅಕಟ-ಅಯ್ಯೋ, ಎಂದು-ಎಂಬುದಾಗಿ, ಬಿಸುಸುಯ್ದು-ದೀರ್ಘವಾಗಿ

ಉತ್ಸವಂಗಳನ್ನು ನೆರವೇರಿಸಿ ಸಂತೋಷದಿಂದಿರುವಾಗ ಶತ್ರುಗಳು ಬಂದು ಕೇರಳ ದೇಶಕ್ಕೆ ಮುತ್ತಿಗೆ ಹಾಕಿದರು ಶೂರನಾದ ಮೇಧಾವಿಯು ಅರಿಗಳೊಡನೆ ಹೋರಾಡಿ ಕಡೆಗೆ ಯುದ್ಧದಲ್ಲಿ ಸತ್ತುಹೋದನು ಈ ಸುದ್ದಿಯು ಮೇಧಾವಿಯ ಹೆಂಡತಿಗೆ ತಿಳಿಯಿತು, ಆಕೆಯು ಕೂಡಲೆ ಅಗ್ನಿಪ್ರವೇಶವನ್ನು ಮಾಡಿ ತಾನೂ ಪತಿಸಾನ್ನಿಧ್ಯವನ್ನೈದಿದಳು. ಆ ಬಳಿಕ ಶತ್ರುಗಳು ಕೇರಳ ದೇಶವನ್ನಾಕ್ರಮಿಸಿ ರಾಜ್ಯವಾಳತೊಡಗಿದರು ‖ ೧೫ ‖ ಆಗ ಅಲ್ಲಿದ್ದ ದಾಸಿಯೋರ್ವಳು ಮೇಧಾವಿರಾಜನ ಮಗುವನ್ನು ಎತ್ತಿಕೊಂಡು ಕುಂತಳ ದೇಶಕ್ಕೆ ಬಂದುಸೇರಿ ಊರಲ್ಲೆಲ್ಲಾ ತಿರುಪಮಾಡಿ ಮಗುವನ್ನು ಅಕ್ಕರೆಯಿಂದ ಸಲಹುತ್ತಲಿದ್ದಳು ಈ ಬಾಲಕನಿಗೆ ಏನಾದರೂ ಇಲ್ಲದೆ ಹೋದರೆ ಆ ದಾದಿಯ ದುಃಖಕ್ಕೆ ಮಿತಿಯೇ ಇರುತ್ತಿರಲಿಲ್ಲವು ಪ್ರತಿ ದಿನವೂ ಆ ಹಸುಳೆಯನ್ನು ವಿಶ್ವಾಸದಿಂದ ಸಲಹುತ್ತಾ, ಅದರ ಬಾಲ್ಯ ಚೇಷ್ಟೆಗಳನ್ನು ನೋಡಿ ಸಂತೋಷದಿಂದ ಕಾಲವಂ ಕಳೆಯುತ್ತಲಿದ್ದಳು ‖ ೧೬ ‖ ಒಂದೊಂದುವೇಳೆ ಆ ದಾದಿಯು ಮಗುವನ್ನು ನೋಡಿನೋಡಿ, ಅಯ್ಯೋ ಕಂದನೇ ! ನಿನ್ನನ್ನು ಮಲಗಿಸುವುದಕ್ಕೆ ತೊಟ್ಟಲೇ ಇಲ್ಲವು. ಒಡವೆಗಳನಿಟ್ಟು ಸಂತೋಷಪಡುವುದಕ್ಕೆ ಮಾರ್ಗವೇ ಇಲ್ಲ. ವಾಸಮಾಡುವುದಕ್ಕೆ ಮನೆಯೇ ಇಲ್ಲವಲ್ಲಾ ! ಅಭ್ಯಂಜನ

ಡೆಯದಿರವಕಟೆಂದು । ಬಿಸುಸುಯ್ದುಳಲ್ದುಮರುಗುವಳಾಕೆದಿನದಿನದೊಳು ॥ ೧೭ ॥ ಮೊಳೆವಲ್ಲೊಗುವಜೊಲ್ಲುದಟ್ಟಡಿತೊದಲ್ನುಡಿಯು । ತೊಳತೊಳಗುತಿಹಸೊಬಗುಮೆರೆವನಗೆಮೊಗದಬಗೆ । ಪೊಳೆವಕಣ್ಮಿಸುಪನುಣ್ಣದಪಿಗೆಣೆಚಲ್ವಪಣೆಕುರುಳುಜೋಲ್ವಂಬೆಗಾಲು ॥ ಸುಳಿನಾಭಿಮಿಗೆಶೋಭಿಪಧರದೆಡೆಬಟ್ಟದೊಡೆ। ನಳಿತೋಳಿಡಿದಧೂಳಿಸೊಗಯಿಸುವವರಶಿಶುವನಲಿ । ದಾಡಿಸುವರೂಢಿಯಿಲ್ಲೆಂದುನೆರೆನೊಂದುಮರುಗುವಳಜಸ್ರಮವಳು ॥ ೧೮ ॥ ಬಾಲಕನಲೀಲೆಯಂ ಕಂಡುಹಿಗ್ಗುವಳೊಮ್ಮೆ । ಲಾಲನೆಗಳಿಲ್ಲೆಂದಳಲ್ದುಮರುಗುವಳೊಮ್ಮೆ । ಪಾಲಿಸಿದಳಿಂತುನಡೆನುಡಿಗಳಂಕಲಿಪಲ್ಲಿಪರಿಯಂತಮಾಶಿಶುವನು ॥ ಮೇಲೆರುಜೆಬಂದಡಿಸಿವಿಧಿವಶದೊಳಾಧಾತ್ರಿ । ಕಾಲನರಮನೆಗೈದಿದಳ್ಬಳಿಕಪಸುಳೆಗೆ । ನಿರಾಲಂಬಮಾಗಲಾಪಟ್ಟಣದೊಳೆಲ್ಲರ್ಗೆಕಾರುಣ್ಯಕೀಡಾ

---

ಉಸಿರನ್ನು ಬಿಡುತ್ತಾ, ಅಳಲ್ದು-ಗೋಳಾಡಿ, ದಿನದಿನದೊಳು-ಪ್ರತಿನಿತ್ಯವೂ, ಆಕೆ-ಆ ದಾಸಿಯು, ಮರುಗುವಳ್-ಸಂಕಟಪಡುವಳು ॥೧೭॥

ಟೀ॥ ಮೊಳೆವ-ಆಗತಾನೆ ಹುಟ್ಟುತ್ತಲಿರುವ, ಹಲ್ಲು-ಹಲ್ಲುಗಳು, ಒಗುವ-ಕೆಳಕ್ಕೆ ಸ್ರವಿಸುತ್ತಲಿರುವ, ಜೊಲ್ಲು-ಜೊಲ್ಲುರಸವು, ದಟ್ಟಡಿ-ಚಿಕ್ಕಚಿಕ್ಕ (ತಪ್ಪು) ಹೆಜ್ಜೆಗಳನ್ನಿಡುವ ಅಂದವು, ತೊದಲ್ನುಡಿಯು-ತೊದಲುತ್ತಲಿರುವ ಮಾತುಗಳು, ತೊಳತೊಳಗುತಿಹ-ಬಹಳ ಹೆಚ್ಚಾದ ಕಾಂತಿಯಿಂದ ಶೋಭಿಸುತ್ತಲಿರುವ, ಸೊಬಗು-ಚೆಲುವಿಕೆಯು, ಮೆರೆವ-ಹೊಳೆಹೊಳೆವ, ನಗೆಮೊಗದ-ಮಂದಹಾಸದಿಂದ ಕೂಡಿದ, ಬಗೆ-ತೆರನು, ಪೊಳೆವ-ಥಳಥಳಿಸುವ, ಕಣ್ಣು-ನಯನಂಗಳು, ಮಿಸುಪ-ಕಾಂತಿಯುಕ್ತ ಮುಖದ, ನುಣ್ಣದಪಿಗೆ-ನಯವಾದ ಕಪೋಲಕ್ಕೆ, ಎಣೆ-ಹೋಲಿಕೆಯಾಗಿರತಕ್ಕ, ಚೆಲ್ವ-ಅಲಂಕಾರದಿಂದ ಕೂಡಿದ, ಪಣೆ-ಹಣೆಯ ಭಾಗವು, ಜೋಲ್ವ-ಜೋಲಾಡುತ್ತಲಿರತಕ್ಕ, ಅಂಬೆಗಾಲು-ಮೊಣಕಾಲಿನಮೇಲೆ ನಡೆಯುವಿಕೆಯು, ಸುಳಿನಾಭಿ-ಸುತ್ತಿಸುತ್ತಿಕೊಂಡಿರತಕ್ಕ ಆಳವಾದ ಹೊಕ್ಕಳು, ಮಿಗೆ-ಅತಿಶಯವಾಗಿ, ಶೋಭಿಪ-ಹೊಳೆಯತಕ್ಕ, ಅಧರದ-ತುಟಿಯ, ಎಡೆ-ಭಾಗವು, ಬಟ್ಟ-ದುಂಡಾಗಿಯೂ ಕೋಮಲವಾಗಿಯೂ ಇರುವ, ತೊಡೆ-ಮೊಣಕಾಲಿನ ಮೇಲ್ಭಾಗವು, ನಳಿತೋಳು-ಕಮಲದ ದಂಟಿನಂತೆ ಗುಂಡಾಗಿರತಕ್ಕ ಕೈಗಳು, ಇಡಿದ-ತುಂಬಿರತಕ್ಕ, ಧೂಳಿ-ಧೂಳು ಮೊದಲಾದವುಗಳಿಂದ, ಸೊಗಯಿಸುವ-ನೋಡುವುದಕ್ಕೆ ಅಂದವಾಗಿ ಕಾಣುತ್ತಲಿರುವ, ವರಶಿಶುವ-ಶ್ರೇಷ್ಠತೆಯನ್ನೈದಿದ ಹಸುಳೆಯನ್ನು, ನಲಿದು-ಸಂತೋಷದಿಂದ, ಆಡಿಸುವ-ಆಟವಾಡಿಸಿ ವಿನೋದವಾಗಿರುವ, ರೂಢಿ- ಅಭ್ಯಾಸವು, ಇಲ್ಲೆಂದು- ಇಲ್ಲವೆಂಬುದಾಗಿ, ಅವಳು-ಆ ದಾದಿಯು, ನೆರೆ-ಹೆಚ್ಚಾಗಿ, ನೊಂದು-ಸಂಕಟಪಟ್ಟು, ಅಜಸ್ರಂ-ಅನವರತವೂ, (ಸಲಸಲಕ್ಕೂ) ನೆರೆ-ಹೆಚ್ಚಾಗಿ, ನೊಂದು-ಸಂಕಟಪಟ್ಟು, ಮರುಗುವಳು-ವ್ಯಸನಪಡುವಳು.

ಅ॥ ವಿ॥ ದಟ್ಟಡಿ-ದಟ್ಟಿತ್ತಾದ ಅಡಿ (ಕ. ವಿ. ಪೂ) ತೊಳತೊಳಗು (ಆಧಿಕ್ಯದಲ್ಲಿ ದ್ವಿರುಕ್ತಿ) ಬಟ್ಟದೊಡೆ (ಕ. ವಿ. ಪೂ. ಮತ್ತು ವ್ಯಂಜನ ಸಂಧಿ) ॥೧೮॥

ಟೀ॥ ಒಮ್ಮೆ-ಒಂದು ಸಲ, ಬಾಲಕನ-ಹಸುಳೆಯ, ಲೀಲೆಯಂ-ಆಟಪಾಟಗಳನ್ನು, ಕಂಡು-ನೋಡಿ, ಹಿಗ್ಗುವಳು-ಆನಂದಪಡುವಳು, ಒಮ್ಮೆ-ಇನ್ನೊಂದಾವರ್ತಿ, ಲಾಲನೆಗಳು-ಚೆನ್ನಾಗಿ ಸಾಕುವುದು, ಇಲ್ಲ-ಇಲ್ಲವು, ಎಂದು-ಎಂಬತೆರನಾಗಿ, ಅಳಲ್ದು-ಗೋಳಾಡಿ, ಮರುಗುವಳು-ಸಂಕಟಪಡುವಳು, ಆ ಶಿಶುವಂ-ಆ ಹಸುಳೆಯನ್ನು, ನಡೆನುಡಿಗಳಂ-ನಡೆಯುವುದಕ್ಕೂ ಮಾತನಾಡುವುದಕ್ಕೂ, ಕಲಿಪಲ್ಲಿಪರಿಯಂತಂ-ಅಭ್ಯಾಸವಾಗುವ ತನಕ, ಇಂತು-ಹೀಗೆಯೇ, (ಸಂತೋಷ ಮತ್ತು ದುಃಖಗಳನ್ನು ಅನುಭವಿಸುತ್ತಾ) ಪಾಲಿಸಿದಳು-ಸಂರಕ್ಷಣೆಯಂ ಮಾಡಿದಳು, ಮೇಲೆ-ಹೀಗೆ ನಡೆಯುತ್ತಿರುವಲ್ಲಿ, ರುಜೆ ಬಂದು-ಕಾಯಿಲೆಯುಂ

---

ಸ್ನಾನ ಎಣ್ಣೆ ತುಪ್ಪ ಮೊದಲಾದುವೆಲ್ಲಾ ಸ್ವಪ್ನಪ್ರಾಯವಾಗಿವೆಯಲ್ಲಾ! ನಿನ್ನ ತಾಯ್ತಂದೆಗಳಿಗೆ ಪುಣ್ಯವೇ ಇಲ್ಲವು. ನಿನ್ನನ್ನು ನೋಡಿ ದುಃಖಪಡುವುದು ನನಗೆ ಒದಗಿತಲ್ಲಾ ಏನುಮಾಡಲೆಂದು ಗೋಳಾಡುತ್ತಲಿದ್ದಳು ॥೧೭॥ ಆಗ ತಾನೆ ಅಂಕುರಿಸುತ್ತಲಿರುವ ಹಲ್ಲುಗಳನ್ನೂ, ಉಕ್ಕಿ ಬರುತ್ತಲಿರುವ ಜೊಲ್ಲು ರಸವನ್ನೂ, ತಪ್ಪುಹೆಜ್ಜೆ ಇಡುವುದನ್ನೂ, ತೊದಲು ಮಾತುಗಳನ್ನಾಡುವುದನ್ನೂ, ಆ ಮಗುವಿನ ಅಂದ ಚಂದಗಳನ್ನೂ, ಪ್ರಕಾಶವಾದ ಕಣ್ಣುಗಳನ್ನೂ, ನುಣ್ಣಗಿರುವ ಕೆನ್ನೆಗಳನ್ನೂ, ಅಂದವಾದ ಹಣೆಯನ್ನೂ, ಅಂಬೆಗಾಲಿಡುವುದನ್ನೂ, ಗುಂಡಾಗಿ ಮೈದುಂಬಿಕೊಂಡು ನಲಿದಾಡುವುದನ್ನೂ, ನೋಡಿ ಸುಖಪಡುವ ರೂಢಿಯೇ ಇಲ್ಲವೆಂಬುದಾಗಿ ದಿನಂ ಪ್ರತಿಯಲ್ಲಿಯೂ ದುಃಖವನ್ನು ಪಡುತ್ತಲಿದ್ದಳು. ॥೧೮॥ ಆ ಮಗುವು ತೋರಿಸುವ ಅಭಿನಯಗಳನ್ನು ನೋಡಿ ಹಲವುಬಾರಿ ಸಂತಸಂಗೊಳ್ಳುತ್ತಲೂ, ಮುದ್ದುಮಾಡುವರೇ ಇಲ್ಲವೆಂದು ಕೆಲವುಸಾರಿ ದುಃಖಗೊಳ್ಳುತ್ತಲೂ, ಆ ಮಗುವಿಗೆ ಸ್ವಲ್ಪ ಮಾತುಗಳು ಬಂದು ನಡೆಯುವುದಕ್ಕಾಗುವ ತನಕ ಸಂರಕ್ಷಿಸಿದ ಬಳಿಕ ಆ ದಾದಿಯೂ ದೈವಾಧೀನವನ್ನೈದಿದಳಾದ ಕಾರಣ ಅದಕ್ಕೆ ಯಾರೂ ದಿಕ್ಕೇ ಇಲ್ಲದೆ ಹೋಯಿತು. ಈ ರೀತಿಯಲ್ಲಿ ಅನಾಥನಾದ ಆ ಬಾಲಕನು ಕುಂತಳನಗರದ

ವನು ||೧೯|| ಚೆಲ್ವಶಿಶು ಬೀದಿಯೊಳ್ಬಂದು ದೇಶಿಗನಾಗಿ | ನಿಲ್ವಿನಂ ಕಂಡಬಲೆಯರ್ಕರೆಕರೆದು | ಮೆಲ್ವತನಿವಣ್ಗಳಂ ಕಜ್ಜಾಯ್ಗಳಂ ಸಕ್ಕರೆಗಳಂ ಕೊಡುವರೆತ್ತಿಕೊಂಡು || ಸೊಲ್ವಮಾತುಗಳನಾಲಿಸಿ ಮುದ್ದುಗೈವರವ | ರೊಲ್ವುದಕಮಜ್ಜನಂಗೈಸಿ ಮಡಿಯಂ ಪೊದಿಸಿ | ಮೆಲ್ಪಾಸಿನೊಳ್ಮಲಗಿಸುವರರ್ಥಿಯಿಂದೊಸೆದು ತಮ್ಮ ಮಕ್ಕಳುಗಳೊಡನೆ || ೨೦ || ಪರಪುಟ್ಟನಾಗಿ ಪಟ್ಟಣದ ಬೀದಿಗಳೊಳಗೆ | ತಿರುಗುತಿಹ ಬಾಲಕನ ರೂಪಮಂ ಕಂಡು ಕರೆ | ಕರೆದು ಭವನಂಗಳ್ಗೆ ಕೊಂಡೊಯ್ದು ಗಣಿಕೆಯರ್ತಮತಮಗೆ ಮೋಹದಿಂದ || ಸರಸಪರಿಮಳಸುಗಂಧಂಗಳಂ ತೀಡಿ ಕ | ತ್ತುರಿಯತಿಲಕವನಿಟ್ಟು ಕಮ್ಮಲರ್ಮುಡಿಸಿ ಕ | ರ್ಪುರವೀಳಯಂಗೊಟ್ಟು ಮಡಿತೊಡಿಗೆಗಳಿನೈದೆ ಸಿಂಗರಿಸಿ ಕಳುಹುತಿಹರು || ೨೧ || ಆಡುವೆಳೆಮಕ್ಕಳೊಡನಾಡುವಂ ಲೀಲೆ ಮಿಗೆ | ನೋಡುವಚ್ಚರಿಗಳಂ ನೋಡುವಂ

ಟಾಗಿ, ಅಡಸಿ–ಆವರಿಸಿಕೊಂಡು, ಕಾಲನರಮನೆಗೆ–ಯಮಪುರಿಗೆ, ಆ ಧಾತ್ರಿ–ಆ ದಾಸಿಯು, ಐದಿದಳು–ಹೋದಳು, ಬಳಿಕ–ಅನಂತರ, ಆ ಪಸುಳೆಗೆ–ಆ ಹುಡುಗನಿಗೆ, ನಿರಾಲಂಬಂ-ಆಶ್ರಯರಹಿತವಾದದ್ದು, ಆಗಲು-ಆಗಿ ಹೋಗಲು, ಆ ಪಟ್ಟಣದೊಳು–ಆ ಕುಂತಳನಾಮಕವಾದ ನಗರದಲ್ಲಿ, ಎಲ್ಲರ್ಗೆ–ಸಕಲರಿಗೂ, ಕಾರುಣ್ಯಕೆ–ಅಂತಃಕರಣಕ್ಕೆ, ಈಡಾದನು–ಪಾತ್ರನಾದನು.

ಅ|| ವಿ|| ಧಾತ್ರಿ (ತ್ಸ) ದಾದಿ (ತ್ಭ) ಶಿಶು (ತ್ಸ) ಸಿಸು (ತ್ಭ) ವಿಧಿ–ಬ್ರಹ್ಮನು, ಕಟ್ಟಳೆ ||೧೯||

ಟೀ|| ಬೀದಿಯೊಳ್–ದಾರಿಯೊಳಗೆ, ಚೆಲ್ವ–ಚೆನ್ನಾದ, ಶಿಶು-ಹಸುಳೆಯು, ಬಂದು–ಐತಂದು, ದೇಶಿಗನಾಗಿ–ಅನಾಥನಾಗಿ, ನಿಲ್ವಿನಂ–ನಿಂತಿರುವ ವೇಳೆಯಲ್ಲಿ, ಕಂಡಕಂಡ-ಈ ಬಾಲಕನನ್ನು ನೋಡಿದ, ಅಬಲೆಯರು–ಸ್ತ್ರೀಯರು, ಕರೆಕರೆದು-ತಮ್ಮ ಹತ್ತಿರಕ್ಕೆ ಬರಮಾಡಿಕೊಂಡವರಾಗಿ, ಮೆಲ್ವ–ತಿನ್ನಲು ಯೋಗ್ಯವಾದ, ತನಿವಣ್ಗಳಂ-ಉತ್ತಮವಾದ ಫಲಗಳನ್ನೂ, ಕಜ್ಜಾಯ್ಗಳಂ ಸಕ್ಕರೆಗಳಂ–ಭಕ್ಷ್ಯಗಳನ್ನೂ ಸಕ್ಕರೆಯನ್ನೂ ಸಹ, ಕೊಡುವರು–ಕೊಡುತ್ತಲಿರುವರು, ಎತ್ತಿಕೊಂಡು–ಆ ಮಗುವನ್ನು ತಮ್ಮ ಕಂಕುಳಲ್ಲಿ, ಸೇರಿಸಿಕೊಂಡು, ಸೊಲ್ವಮಾತುಗಳನು–ಪ್ರೀತಿಯ ನುಡಿಗಳನ್ನು, ಆಲಿಸಿ-ಕೇಳಿದವರಾಗಿ, ಮುದ್ದುಗೈವರು–ವಿಶ್ವಾಸದಿಂದ ಆದರಿಸುವರು, ಅವರು–ಆ ಮಂದಿಯೆಲ್ಲವೂ, ಉಲ್ವ-ಉತ್ತಮವಾದ, ಉದಕಮಜ್ಜನಂಗೈಸಿ–ಚೆನ್ನಾಗಿ ಸ್ನಾನಮಾಡಿಸಿ, ಮಡಿಯಂ–ಚನ್ನಾಗಿ ಒಗೆದು ಬೆಳ್ಳಗಿರುವ ಬಟ್ಟೆಯನ್ನು, ಪೊದಿಸಿ–ಹೊದಿಸಿದವರಾಗಿ, ತಮ್ಮ ಮಕ್ಕಳುಗಳೊಡನೆ–ತಮ್ಮ ಬಾಲಕರ ಜೊತೆಯಲ್ಲಿ, ಒಸೆದು-ಪ್ರೀತಿಸಿದವರಾಗಿ, ಮೆಲ್ಪಾಸಿನೊಳ್-ಮೆತ್ತಗಿರತಕ್ಕ ಹಾಸಿಗೆಯ ಮೇಲೆ, ಮಲಗಿಸುವರು–ಮಲಗಿಸುತ್ತಲಿರುವರು ||೨೦||

ಟೀ|| ಗಣಿಕೆಯರು–ಸೂಳೆಯರು, ಮೋಹದಿಂದ–ವಿಶ್ವಾಸದಿಂದ, ತಮತಮಗೆ–ತಮ್ಮತಮ್ಮಷ್ಟಕ್ಕೆ, ಪರಪುಟ್ಟನಾಗಿ–ಇತರರ ಪಾಲನೆಗೆ ಸಿಕ್ಕಿದವನಾಗಿ, ಪಟ್ಟಣದ–ಊರಿನ, ಬೀದಿಗಳೊಳಗೆ–ಬೀದಿಗಳಲ್ಲಿ, ತಿರುಗುತಿಹ–ಓಡಾಡುತ್ತಲಿರುವ, ಬಾಲಕನ-ಹಸುಳೆಯ, ರೂಪಮಂ-ಸೌಂದರ್ಯವನ್ನು, ನೋಡಿ–ಈಕ್ಷಿಸಿ, ಕರೆಕರೆದು–ಹೆಚ್ಚಾಗಿ ಬರಮಾಡಿಕೊಂಡು, ಭವನಂಗಳ್ಗೆ–ತಮ್ಮ ಮನೆಗಳಿಗೆ, ಕೊಂಡೊಯ್ದು–ಕರೆದುಕೊಂಡು ಹೋಗಿ, ಸರಸ–ಅಲಂಕಾರಯುಕ್ತವಾದ, ಪರಿಮಳ-ಸುರಭಿಯನ್ನುಂಟುಗಿರತಕ್ಕ, ಸುಗಂಧಂಗಳಂ–ಒಳ್ಳೆ ಗಂಧವನ್ನು, ತೀಡಿ–ಬಳಿದು, ಕತ್ತುರಿಯತಿಲಕವನು–ಕಸ್ತೂರಿಯ ತಿಲಕವನ್ನು, ಇಟ್ಟು–ಇಟ್ಟವರಾಗಿ, ಕಮ್ಮಲರ್–ಒಳ್ಳೆ ವಾಸನೆಯ ಕುಸುಮಂಗಳನ್ನು, ಮುಡಿಸಿ–ಮುಡಿಸಿದವರಾಗಿ, ಕರ್ಪುರ–ಪಚ್ಚಕರ್ಪೂರವನ್ನು ಬೆರಸಿದ, ವೀಳೆಯಂಗೊಟ್ಟು–ಎಲೆ ಅಡಿಕೆ ಇವನ್ನು ಕೊಟ್ಟವರಾಗಿ, ಮಡಿತೊಡಿಗೆಗಳಿಂ–ಮಡಿ ವಸ್ತ್ರಾಭರಣಗಳಿಂದ, ಐದೆ-ಚನ್ನಾಗಿ, ಸಿಂಗರಿಸಿ–ಶೃಂಗಾರಮಾಡಿ, ಕಳುಹುತ ಇಹರು–ಕಳುಹಿಸುತ್ತಲಿರುವರು ||೨೧||

ಟೀ|| ಪಸುಳೆ– ಆ ಶಿಶುವು, ಪರಪುಟ್ಟನಾಗಿ– ಅನ್ಯರ ಕಾಪಾಡುವಿಕೆಗೆ ಒಳಪಟ್ಟು, ಆ ಪುರದ– ಆ ಕುಂತಳನಗರದ, ರೂಢಿಸಿದ-ಪ್ರಖ್ಯಾತವಾದ, ಬೀದಿಯೊಳ್–ದಾರಿಯಲ್ಲಿ, ಆಡುವ-ಆಟಾಡುವ, ಎಳೆ ಮಕ್ಕಳೊಡನೆ–ಸಣ್ಣ ಹುಡುಗರೊಂದಿಗೆ, ಆಡುವಂ-ಆಡುತ್ತಾನೆ, ಲೀಲೆ–ಸಂತಸವು, ಮಿಗೆ-ಹೆಚ್ಚುವಂತೆ, ನೋಡುವ–ನೋಡತಕ್ಕ, ಅಚ್ಚರಿಗಳಂ–ಆಶ್ಚರ್ಯಂಗಳನ್ನೆಲ್ಲಾ, ನೋಡುವಂ-ನೋಡುತ್ತಾನೆ, ಮನೆಮನೆಗಳೊಳಗೆ–ಪ್ರತಿಯೊಂದು ಮನೆಯಲ್ಲಿಯೂ, ಬಾಲಕಂ ಕೂಡೆ–ಹುಡುಗರ ಜೊತೆಯಲ್ಲಿ,

ಬೀದಿ ಬೀದಿಗಳಲ್ಲಿ ತಿರುಗಾಡುತ್ತಲಿರುವುದನ್ನು ಕಂಡಕಂಡ ಜನರೆಲ್ಲಾ || ೧೯ || ತಮ್ಮ ತಮ್ಮ ಮನೆಗಳಿಗೆ ಕರೆದುಕೊಂಡು ಹೋಗಿ, ಆ ಮಗುವಿಗೆ ಬೇಕಾದ ತಿಂಡಿಗಳನ್ನು ಕೊಟ್ಟು, ಅದರ ನಲ್ಮಾತುಗಳಿಂದಾನಂದವನ್ನೈದುತ್ತ, ಆ ಮಗುವಿಗೆ ತಮ್ಮ ಮಕ್ಕಳುಗಳ ಜತೆಯಲ್ಲಿ ನೀರೆರೆದು, ಮಡಿಬಟ್ಟೆಗಳನ್ನುಡಿಸಿ, ಮೆತ್ತಗಿರುವ ಹಾಸಿಗೆಗಳ ಮೇಲೆ ಮಲಗಿಸುತ್ತಲಿದ್ದರು. || ೨೦ || ಈ ಬಾಲನು ವೇಶ್ಯಾಸ್ತ್ರೀಯರ ಬೀದಿಗಳಲ್ಲಿ ಆಡುತ್ತಲಿರುವುದನ್ನು ಕಂಡ ಗಣಿಕೆಯರಾದರೂ ತಮ್ಮ ಮನೆಗಳಿಗೆ ಕರೆದುಕೊಂಡು ಹೋಗಿ, ತಲೆಯನ್ನು ಬಾಚಿ, ಜಡೆಯನ್ನು ಹೆಣೆದು, ಒಳ್ಳೆಯ ಬಟ್ಟೆಗಳನ್ನುಡಿಸಿ, ಸುವಾಸನೆಯ ಗಂಧವನ್ನು ಮೈಗೆ ಬಳಿದು, ಹಣೆಗೆ ಕತ್ತುರಿಯ ಬಟ್ಟನ್ನಿಟ್ಟು, ಹೂವನ್ನು ಮುಡಿಸಿ, ತಾಂಬೂಲವನ್ನು ಕೊಟ್ಟು ಕಳುಹಿಸುತ್ತಲಿದ್ದರು. || ೨೧ || ಈ ಬಾಲ

ಬಾಲಕರ| ಕೂಡೆಮನೆಮನೆಗಳೊಳಗಾಡುತಿಹನೆಲ್ಲರ್ಗೆಮುದ್ದುಮೋಹಿಸುತಿರ್ಪನು. ‖ ಪಾಡುವರನೋಡುವರನಾಡಸಾಧನೆಗಳಂ | ಮಾಡುವರನರ್ಥಿಯಿಂಬೇಡುವರನೆರವಿಯೋಳ್ | ಕ್ರೀಡಿಸುವನಾಪುರದರೂಢಿಸಿದಬೀದಿಯೋಳ್ಪಸುಳೆಪಂಪುಟ್ಟನಾಗಿ ‖ ೨೨ ‖ ಬಟ್ಟೆಯೊಳ್ಪುಣ್ಯವಶದಿಂದರ್ಭಕನಕಣ್ಗೆ | ಪುಟ್ಟಸಾಲಗ್ರಾಮದೊಂದುರಮಣೀಯಶಿಲೆ | ಕಟ್ಟೆಸಕದಿಂದಕಾಣಿಸಲದಂತಾನೆತ್ತಿಕೊಂಡುಕೆಳೆಯರ್ಗೆ ತೋರಿ ‖ ಬಟ್ಟಗಲ್ಲಿಂತುವರ್ತುಳದಿಂದಚೆಲ್ವಾಗಿ | ಪುಟ್ಟುವುದೆಪೊಸತೆಂದುಪಿಡಿದಾಡುತೊಡನೆಜೈ | ಚಿಟ್ಟುಕೊಂಬಂಬಾಯೊಳನವರತಮಿರಿಸಲ್ಕೆತನಗೆಮನೆಯಿಲ್ಲವಾಗಿ ‖ ೨೩ ‖ ತೊಳಪಸಾಲಗ್ರಾಮಫಲದಿಂದಬಾಲಕಂ | ಕೆಳೆಮಕ್ಕಳೊಡನಾಟದಶ್ಮಗೋಳಕಮೆಂದು | ತಿಳಿದಣ್ಣೆಕಲ್ಲೊಡ್ಡುಗಳನಾಡುತದರಿಂದಗೆಲ್ದೆಲ್ಲರಂಜರೆವುತ ‖ ಕಳಕಳಿಸಿನಗುತತಿಸ್ನೇಹದಿಂಕ್ರೀಡೆಯಂ | ತಳೆದಾಗಳುಣಿಸುಗಳನುಂಬಲ್ಲಿತನ್ನಕೈ | ದಳಕೆತಂದುಳಿದೆಪೊತ್ತುಗಳೊಳಾವಗಂಬಾಯೊಳಿರಿಸಿಕೊಂಡಿರುತಿರ್ಪನು ‖೨೪‖ ಕುಂತೀಕುಮಾರಕೇಳಾಮಹಾಪಟ್ಟಣದೊ | ಳಿಂತರ್ಭಕರೊಳಾಡುತಿಹಪಸುಳೆಸೈದುವರು | ಪಂತುಂಬಿತಾಸನು

---

ಆಡುತ – ಆಟವನ್ನಾಡುತ್ತ, ಇಹನು – ಇರುತ್ತಾನೆ, ಪಾಡುವರ – ಸಂಗೀತಗಾರರ, ನೋಡುವರ – ನೋಟಕರ, ನಾಡ-ಪ್ರಜೆಗಳಿಗೆ ಮೇಲ್ಮೆಯನ್ನೆಸಗುವ, ಸಾಧನೆಗಳಂ – ಕಾರ್ಯಗಳನ್ನು, ಮಾಡುವರ – ಮಾಡತಕ್ಕ ಜನರ, ಅರ್ಥಿಯಿಂ - ಆಸಕ್ತಿಯಿಂದ, ಬೇಡುವರ - ಬಯಸತಕ್ಕವರ, ನೆರವಿಯೊಳ್ - ಬಳಿಯಲ್ಲಿ, ಕ್ರೀಡಿಸುವನು – ಆಟದಿಂದ ಕಾಲವನ್ನು ಕಳೆಯುವನು ‖೨೨‖

ಟೀ‖ ಪುಟ್ಟ–ಸಣ್ಣದಾಗಿರುವ, ಒಂದು-ಒಂದಾದ, ರಮಣೀಯ-ನೋಡುವುದಕ್ಕೆ ಚನ್ನಾಗಿರುವ, ಸಾಲಗ್ರಾಮದಶಿಲೆ–ಗಂಡಕೀತೀರ್ಥದಲ್ಲಿ ಉದಿಸಿದ ಒಂದುಕಲ್ಲು, ಕಟ್ಟೆಸಕದಿಂದ – ಕಾಂತ್ಯತಿಶಯದಿಂದ, ಅರ್ಭಕನಕಣ್ಗೆ - ಹಸುಳೆಯನಯನಂಗಳಿಗೆ, ಬಟ್ಟೆಯೊಳ್-ದಾರಿಯಲ್ಲಿ, ಪುಣ್ಯವಶದಿಂದ–ಪುಣ್ಯಪರಿಪಾಕದಿಂದ, ಕಾಣಿಸಲು–ತೋರಿಬರಲು, ತಾನು–ಆ ಹಸುಳೆಯು, ಅದಂ–ಆ ಸಾಲಗ್ರಾಮವನ್ನು, ಎತ್ತಿಕೊಂಡು–ತೆಗೆದುಕೊಂಡವನಾಗಿ, ಕೆಳೆಯರ್ಗೆ–ತನ್ನ ಸ್ನೇಹಿತರಿಗೆ, ತೋರಿ-ಕಾಣಿಸಿದವನಾಗಿ, ಬಟ್ಟಕಲ್ಲು–ಗುಂಡಾದಕಲ್ಲು, ಇಂತು–ಈ ಪರಿಯಿಂದ, ಚೆಲ್ವಾಗಿಪುಟ್ಟುವುದೆ–ಅಂದವಾಗಿ ಕಾಣಿಸುವುದುಂಟೆ, ಹೊಸತು–ಹೊಸದಾಗಿದೆ, ಎಂದು–ಎಂಬತೆರನಾಗಿ, ಪಿಡಿದು-ಹಿಡಿದುಕೊಂಡು, ಆಡುತ–ಆಟವಾಡುತ್ತ, ಒಡನೆ–ಆಟವು ಪೂರೈಸಿದನಂತರ, ಇರಿಸಲ್ಕೆ–ಭದ್ರಮಾಡಲು, ತನಿಗೆ, ಮನೆ-ಮಂದಿರವು, ಇಲ್ಲವಾಗಿ–ಇಲ್ಲವಾದ ಪ್ರಯುಕ್ತ, ಅನವರತಂ–ಎಡೆಬಿಡದೆ, ಮುಖದಲ್ಲಿ-ಬಾಯಿಯೊಳಗೆ, ಬೆ.ಚಿಟ್ಟುಕೊಂಬಂ–ಭದ್ರವಾಗಿ ಸೇರಿಸುತ್ತಲಿದ್ದನು.

ಅ‖ ವಿ‖ ಕಟ್ಟೆಸಕ=ಕಡಿದ-+ಎಸಕ (ವಿ. ಪೂ.) ಬಟ್ಟಗಲ್-ಬಟ್ಟಿತ್ತು ಕಲ್ (ಕ. ವಿ. ಪೂ.) ‖೨೩‖

ಟೀ‖ ಬಾಲಕಂ–ಹಸುಳೆಯಾದರೊ, ತೊಳಪ–ಕಾಂತಿಯುಕ್ತವಾದ, ಸಾಲಗ್ರಾಮಫಲದಿಂದ - ಸಾಲಗ್ರಾಮವೆಂಬ ಹಣ್ಣಿನಿಂದ, (ಫಲಪ್ರದವಾದ ವಸ್ತುವಿನಿಂದ) ಕಳೆ–ಕಾಂತಿಯುಕ್ತರಾದ (ಕೆಳೆ–ಸ್ನೇಹ) ಮಕ್ಕಳೊಡನೆ-ಬಾಲಕರ ಕೂಡ, ಆಟದ-ಆಟಕ್ಕೆ ತಕ್ಕ, ಅಶ್ಮ-ಶಿಲೆಯ, ಗೋಳಕಂ–ಗೋಲಾಕೃತಿಯಾದ ಶಿಲೆಯು, ಎಂದು–ಎಂಬತೆರನಾಗಿ, ತಿಳಿದು- ಅರಿತವನಾಗಿ, ಅಣ್ಣೆಕಲ್ಲೊಡ್ಡುಗಳನು–ಅಣ್ಣೆಕಲ್ಲಿಗೆ ಬೇಕಾಗುವಂತೆ ಇಟ್ಟು, ಆಡುತ-ಆಟವಾಡುತ್ತ, ಎಲ್ಲರಂ-ಸಕಲರನ್ನೂ, ಅದರಿಂದ-ಆ ಸಾಲಗ್ರಾಮದಿಂದ, ಗೆಲ್ದು-ಸೋಲಿಸಿ, ಜರೆವುತ-ತಿರಸ್ಕರಿಸುತ್ತ, ಕಳಕಳಿಸಿ-ಹೆಚ್ಚಾಗಿ ಪ್ರಕಾಶಿಸಿ, ನಗುತ–ನಗುತ್ತ, ಅತಿಸ್ನೇಹದಿಂ–ಹೆಚ್ಚಾದ ಸ್ನೇಹದಿಂದ, ಕ್ರೀಡೆಯಂತಳೆದು–ಆಟವಾಡಿ, ಆಗಲು-ಆಟವೆಲ್ಲಾ ಮುಗಿದಮೇಲೆ, ಉಣಿಸುಗಳನು–ತಿಂಡಿಯನ್ನು, ಉಂಬಲ್ಲಿ–ತೆಗೆದುಕೊಳ್ಳುವಾಗ, ತನ್ನ–ತನ್ನದಾದ, ಕೈದಳಕೆ–ಹಸ್ತಪ್ರದೇಶಕ್ಕೆ, (ಕರತಳಕ್ಕೆ) ತಂದು-ತೆಗೆದುಕೊಂಡು, ಉಳಿದು ಪೊತ್ತುಗಳು–ಮಿಕ್ಕ ಕಾಲಗಳಲ್ಲಿ, ಬಾಯೊಳು–ಬಾಯಿಯಲ್ಲಿಯೇ, ಆವಗಂ–ಅನವರತವೂ. ಇರಿಸಿಕೊಂಡು–ಇಟ್ಟುಕೊಂಡವನಾಗಿ, ಇರುತಿರ್ಪನು–ಇರುತ್ತಾನೆ ‖೨೪‖

---

ಕನು ಆಡತಕ್ಕವರೊಂದಿಗೆ ಆಡುತ್ತಲೂ, ಬೇಕಾದ ಆಶ್ಚರ್ಯಗಳನ್ನು ನೋಡುತ್ತಲೂ, ಎಲ್ಲರ ಮನೆಯಲ್ಲಿಯೂ ಇರುವ ಹುಡುಗರೊಂದಿಗೆ ಆಡುತ್ತಲೂ ಎಲ್ಲರ ವಿಶ್ವಾಸಕ್ಕೂ ಪಾತ್ರನಾಗಿದ್ದನು. ಸಂಗೀತಗಾರರು, ಗರಡಿಯವರು, ಮೊದಲಾದವರಿರುವೆಡೆಗಳಲ್ಲೆಲ್ಲಾ ತಿರುಗುತ್ತಾ, ಆಟವಾಡಿಕೊಂಡು ಕಾಲಮಂ ಕಳೆಯುತ್ತಲಿದ್ದ ಆ ಬಾಲಕನಿಗೆ ‖೨೨‖ ದಾರಿಯಲ್ಲಿ ಗುಂಡಾಗಿರುವ ಸಾಲಗ್ರಾಮಶಿಲೆಯೊಂದು ದೈವವಶದಿಂದ ಕಾಣಿಸಿತು, ಈ ಬಾಲಕನಾದರೊ ಪ್ರಕಾಶಿಸುತ್ತಲಿರುವ ಆ ಕಲ್ಲನ್ನು ತಡಮಾಡದೆ ತೆಗೆದುಕೊಂಡು, ತನ್ನ ಸಮೀಪದಲ್ಲಿದ್ದ ಜತೆಗಾರರಿಗೆಲ್ಲಾ ಅದನ್ನು ತೋರಿಸಿ, ತನಿಗೆ ಮನೆಯಿಲ್ಲವಾದ್ದರಿಂದ ಯಾವಾಗಲೂ ಬಾಯಿಯಲ್ಲಿಯೇ ಇಟ್ಟುಕೊಂಡಿರುತ್ತಲಿದ್ದನು. ‖೨೩‖ ಈ ಹುಡಗನಾದರೊ, ತನಿಗೆ ದೊರಕಿದ ಸಾಲಗ್ರಾಮ ಶಿಲೆಯ ಮಹಿಮೆಯಿಂದ ಅಣ್ಣೆಕಲ್ಲಾಡುವರೊಂದಿಗೆ ಆಟವಾಡಿ ಗೆಲ್ಲುತ್ತಲೂ, ಊಟಮಾಡುವಾಗ ಮಾತ್ರ ಆ ಸಾಲಗ್ರಾಮವನ್ನು ಕೈಯಲ್ಲಿ

ಯುಮೊಳ್ಬಲದಿಂಪ್ರವರ್ತಿಪದುಷ್ಟಬುದ್ಧಿಯೆಂಬ || ಕುಂತಳೇಂದ್ರನಮಂತ್ರಿತನ್ನಮನೆಯೊಳ್ವಿಪ್ರ | ಸಂತರ್ಪಣಂಗೈದೊಡಾ ದ್ವಿಜರ್ಭೋಜನಾ | ನಂತರದೊಳ್ಕೈದೆಸತ್ಕೃತರಾಗಿಕುಳ್ಳಿರ್ದುಪರಸುತಲ್ಲಿರುತಿರ್ದರು || ೨೫ || ಅಲ್ಲಿಕೆಳೆಯರೊಳಾಡುತಿರ್ದಶಿಶುವಂ ಕಂಡ | ರುಲ್ಲಾಸದಿಂದೆಸೆವಭೂಸುರರ್ಬಾಲಕನ | ಸಲ್ಲಲಿತರಾಜಲಕ್ಷಣಕೆಬೆರಗಾದರವನಂಗಮಂನೋಡಿನೋಡಿ || ನಿಲ್ಲದನು ರಾಗದಿಂದಾರಸುತನೀತರುಣ | ನೆಲ್ಲಿಂದಬಂದನೆಂದಾದುಷ್ಟಬುದ್ಧಿಯಂ | ಮೆಲ್ಲನೆವಿಚಾರದಿಂಕೇಳ್ದೊಡಾವಿಪ್ರರ್ಗೆನಗುತಾತ ನಿಂತೆಂದನು ||೨೬|| ಈಪುರಿಯೊಳೆನಿತಿಲ್ಲನಾಥರಾಗಿಹಬಾಲ | ರೀಪುರದೊಳೆತ್ತಣವನಾರಸುತನೆಂದರಿಯೆ | ವೀಪಸುಳೆಯಂರಾಜ

ಟೀ|| ಕುಂತೀಕುಮಾರ – ಕುಂತೀದೇವಿಯ ತನುಜನಾದ ಧನಂಜಯನೆ, ಕೇಳು–ಲಾಲಿಸು, ಇಂತು - ಈ ಪ್ರಕಾರ ವಾಗಿ, ಅರ್ಭಕರೊಳು–ಹುಡುಗರ ಜತೆಯಲ್ಲಿ, ಆಮಹಾಪಟ್ಟಣದೊಳು- ಆ ದೊಡ್ಡ ಊರಿನಲ್ಲಿ, ಆಡುತಿಹ–ಆಟವಾಡುತ್ತಲಿರುವ, ಪಸುಳೆಗೆ–ಹುಡುಗನಿಗಾದರೊ, ಐದುವರ್ಷಂತುಂಬಿತು–ಐದುವರ್ಷವಾಯಿತು, ಆಸಮಯದೊಳ್–ಆ ವೇಳೆಯಲ್ಲಿ, ಪ್ರಬಲದಿಂ ಬಹು ಸ್ವೇಚ್ಛೆಯುಳ್ಳವನಾಗಿ, ಪ್ರವರ್ತಿಪ–ನಡೆಯುತ್ತಲಿರುವ, ದುಷ್ಟಬುದ್ಧಿಯೆಂಬ – ದುಷ್ಟಬುದ್ಧಿಯೆಂದು ಹೆಸರ್ಗೊಂಡಿರತಕ್ಕ, ಕುಂತಳೇಂದ್ರನಮಂತ್ರಿ-ಕುಂತಳದೇಶದ ಸಚಿವನು, ತನ್ನಮನೆಯೊಳ್ – ತನ್ನ ಮಂದಿರದಲ್ಲಿ, ವಿಪ್ರಸಂತರ್ಪಣಂಗೈದೊಡೆ–ಬ್ರಾಹ್ಮಣರಿಗೆ ಊಟದ ಪ್ರಯತ್ನವನ್ನು, (ಸಮಾರಾಧನೆಯನ್ನು) ಮಾಡಲುದ್ಯುಕ್ತನಾಗಲು, ಆದ್ವಿಜರು–ಆವಿಪ್ರರು, ಭೋಜನಾ ನಂತರದೊಳು–ಊಟವಾದ ಬಳಿಕ, ಐದೆ–ಚೆನ್ನಾಗಿ, ಸತ್ಕೃತರಾಗಿ-ಮರ್ಯಾದೆಯನ್ನು ಹೊಂದಿದವರಾಗಿ, ಕುಳ್ಳಿರ್ದು–ಕುಳಿತು ಕೊಂಡು, ಪರಸುತ–ಆಶೀರ್ವಚನಂಗಳನ್ನು ಹೇಳುತ್ತಾ, ಅಲ್ಲಿ–ಆ ಮಂತ್ರಿಯಾದ ದುಷ್ಟಬುದ್ಧಿಯ ನಿಲಯದೊಳಗೆ, ಇರು ತಿರ್ದರು-ಇದ್ದವರಾದರು ||೨೫||

ಟೀ|| ಅಲ್ಲಿ–ಆ ಎಡೆಯಲ್ಲಿ, ಉಲ್ಲಾಸದಿಂದ–ಆನಂದಾತಿಶಯದಿಂದ, ಎಸೆವ–ಹೊಳೆಯುತ್ತಲಿರುವ, ಕೆಳೆಯರೊಳ್–ಸ್ನೇಹಿತರೊಂದಿಗೆ, ಆಡುತಿರ್ದ–ಆಡುತ್ತಲಿದ್ದಂಥ, ಶಿಶುವಂ – ಮಗುವನ್ನು, ಭೂಸುರರು–ವಿಪ್ರರು, ಕಂಡರು – ನಿರುಕಿಸಿದರು, ಬಾಲಕನ–ಹಸುಳೆಯ, ಸಲ್ಲಲಿತ–ಅತ್ಯಂತ ಮನೋಹರವಾದ, ರಾಜಲಕ್ಷಣಕೆ–ದೊರೆಗೆ ಇರುವ ಕುರುಹುಗಳೆಲ್ಲಾ ಈ ಬಾಲನಲ್ಲಿರುವುದನ್ನು ನೋಡಿ, ಬೆರಗಾದರು–ಅಚ್ಚರಿಗೊಂಡರು, ಅವನ – ಆ ಪಸುಳೆಯ, ಅಂಗಮಂ – ಅವಯವಂಗಳನ್ನು, ನೋಡಿ ನೋಡಿ–ಚನ್ನಾಗಿ ನೋಡಿದವರಾಗಿ, ನಿಲ್ಲದ–ಪರಿಮಿತಿಯಿಲ್ಲದಿರುವ, ಅನುರಾಗದಿಂದ–ವಿಶ್ವಾಸದಿಂದ, ಈತರುಣನು–ಈ ಬಾಲ ಕನು, ಆರಸುತನು–ಯಾರಕುವರನು, ಎಲ್ಲಿಂದ–ಯಾವದೇಶದಿಂದ, ಬಂದನು–ಬಂದಿದ್ದಾನೆ, ಎಂದು–ಎಂಬತೆರನಾಗಿ, ಮೆಲ್ಲನೆ–ನಿಧಾನವಾಗಿ, ವಿಚಾರದಿಂ – ತಿಳಿದುಕೊಳ್ಳುವ ರೀತಿಯಿಂದ, ಆದುಷ್ಟಬುದ್ಧಿಯಂ – ಆ ದುಷ್ಟಬುದ್ಧಿಯೆಂಬ ಸಚಿವನನ್ನು, ಕೇಳ್ದಡೆ–ಪ್ರಶ್ನೆಮಾಡಲು, ಆತನು–ಆ ಸಚಿವನಾದ ದುಷ್ಟಬುದ್ಧಿಯಾದರೊ, ನಗುತ–ಮುಗುಳ್ನಗೆಯನ್ನೈದುತ್ತ, ಆವಿಪ್ರರ್ಗೆ–ಆ ಭೂಸುರೋತ್ತಮರೊಂದಿಗೆ, ಇಂತು–ಮುಂದೆ ಹೇಳುವಂತೆ, ಎಂದನು–ನುಡಿದನು.

ಅ|| ವಿ|| ಭೂಸುರರು - ಭೂ - ಭೂಮಿಗೆ, ಸುರರ್ – ದೇವತೆಗಳು, (ಷ. ತ.) ನೋಡಿನೋಡಿ-ಆಧಿಕ್ಯಾರ್ಥದಲ್ಲಿ ದ್ವಿರುಕ್ತಿ ||೨೬||

ಟೀ|| ಈಪುರದೊಳ್–ಈ ನಗರದಲ್ಲಿ, ಅನಾಥರಾಗಿಹ – ಗತಿಯಿಲ್ಲದಿರತಕ್ಕ, ಬಾಲರು - ಪಸುಳೆಗಳು, ಈಪರಿಯೊಳು–ಇದೇರೀತಿಯಾಗಿಯೆ, ಎನಿತಿಲ್ಲ - ಎಷ್ಟು ಜನಗಳಿಲ್ಲ, (ಅನೇಕವಾಗಿದ್ದಾರೆ) ಈಪಸುಳೆಯು – ಈ ಬಾಲಕನು, ಎತ್ತಣ ವನು – ಎಲ್ಲಿಂದ ಬಂದಿದಾನೆ, ಆರಸುತನು – ಯಾರಕುವರನು, ಎಂದು – ಎಂಬುದನ್ನು, ಅರಿಯೆವು – ನಾವು ಕಾಣೆವು, ರಾಜ

ಹಿಡಿದುಕೊಂಡು ಮಿಕ್ಕ ವೇಳೆಗಳಲ್ಲೆಲ್ಲಾ ಬಾಯಿಯಲ್ಲಿಯೆ ಹಾಕಿಕೊಂಡಿರುತ್ತಲಿದ್ದನು. || ೨೪ || ಕೇಳೈ ಕೌಂತೇಯನೆ, ಈ ರೀತಿಯಲ್ಲಿ ಕುಂತಳನಗರದಲ್ಲೆಲ್ಲಾ ಆಟವಾಡಿಕೊಂಡು ಕಾಲಮಂ ಕಳೆಯುತ್ತಲಿರುವಾಗ ಆ ಬಾಲಕನಿಗೆ ಐದು ವರ್ಷಗಳಾದವು ಹೀಗಿರುವಲ್ಲಿ ಆ ಕುಂತಳನಗರದ ಮುಖ್ಯಮಂತ್ರಿಯಾದ ದುಷ್ಟಬುದ್ಧಿಯೆಂಬಾತನ ಮನೆಯಲ್ಲಿ ಒಂದಾನೊಂದು ದಿನ ಬ್ರಾಹ್ಮಣರ ಸಮಾರಾಧನೆ ಆಯಿತು ಆ ನಗರದಲ್ಲಿದ್ದ ಭೂಸುರೋತ್ತಮರೆಲ್ಲಾ ನೆರೆದಿದ್ದರು. ವಿಪ್ರವರ್ಯರೆಲ್ಲಾ ಸಂತರ್ಪಣೆಯ ಊಟದಿಂದ ತೃಪ್ತರಾದ ಬಳಿಕ ತಮ್ಮನ್ನು ಸತ್ಕರಿಸಿದ ದುಷ್ಟಬುದ್ಧಿಗೆ ಆಶೀರ್ವಾದವಂ ಮಾಡಬೇಕೆಂದಿರುವಾಗ, ||೨೫|| ಅಲ್ಲಿ ಮಕ್ಕಳೊಂದಿಗೆ ಆಡಿಕೊಂಡಿರುವ ಹಸುಳೆಯೊಂದನ್ನು ನೋಡಿ ಆ ಮಗುವಿಗಿರುವ ರಾಜಲಕ್ಷಣಗಳನ್ನು ಕಂಡು ಅಚ್ಚರಿಗೊಳ್ಳುತ್ತ ಮಂತ್ರಿಯಾದ ದುಷ್ಟಬುದ್ಧಿಯನ್ನು ಕುರಿತು. ಎಲೈ ಅಮಾತ್ಯಶ್ರೇಷ್ಠನೆ, ಈ ಬಾಲಕನು ಯಾರು? ಇಲ್ಲಿಗೆ ಯಾವ ಊರಿನಿಂದ ಬಂದಿರುವನು? ಎಂದು ಕೇಳಿದರು. ಆಗ ದುಷ್ಟಬುದ್ಧಿಯಾದರೊ, ||೨೬|| ಎಲೈ ಭೂಸುರೋತ್ತಮರೆ ಕೇಳಿರಿ, ಇಂತಹ ಅನಾಥರಾದ ಬಾಲಕರು ಈ ಪಟ್ಟಣದಲ್ಲಿ ಎಷ್ಟೋಮಂದಿ ಇರುವರು. ಇವನೆಲ್ಲಿಯವನೆಂದೂ ಯಾರ ಮಗನೆಂದೂ ನನಗೆ ತಿಳಿಯದು,

ಕಾರ್ಯದೊಳಗಿಹೆವಿದರ್ಚಿಂತೆನಮಗೇತಕೆನಲು ‖ ಅಪಾರ್ವರೆಂದಿದಿರ್ದೊಡಂಚಾರುಲಕ್ಷಣದೊ | ಳೀಪ್ರೊಳಲ್ಗೀಕುಂತಳಾಧೀಶನಾ ಳ್ವನ | ಮಿಾಪೊಡವಿಗೊಡೆಯನಹನೀತನಂನೀನಿರಿಸಿಕೊಂಡುರಕ್ಷಿಪುದೆಂದರು ‖೨೭‖ ಕ್ರೂರನಕ್ರಾಕುಲದೊಳಿಡಿದಿರ್ದಪೇರ್ಮಡುಗ ಭೀರನಿರ್ಮಲಜಲದೊಳೆಸೆವಂತೆ ಮನದೊಳ್ಕ | ಠೋರತರಭಾವಮಂತಳೆದುಬಹಿರಂಗ ದೋಳ್ವಿನಯಮುಳ್ಳಾತನಾಗಿ ‖ ಚಾರು ಲಕ್ಷಣದಶಿಶುವಂನೋಡಿಧರೆಯಬ್ಬಂ | ದಾರಕರನುಡಿಗೊಪ್ಪಿದಂತಿರ್ದುಬಳಿಕಸ | ತ್ಕಾರದಿಂದಾವಿಪ್ರರಂಕಳುಹಿದಂದುಷ್ಟಬು ದ್ಧಿನಿಜಭನನದಿಂದ ‖ ೨೮ ‖ ಈಕುಂತಳೇಂದ್ರಂಗೆಸುತರಿಲ್ಲರಾಜ್ಯಮೆನ | ಗೇಕಾಧಿಪತ್ಯಮಾಗಿರ್ದಪುದು ಮುಂದಿವಂ | ಭೂ ಕಾಂತನಾದ ಪಂಗಡವಿಪ್ರರೆಂದನುಡಿತಪ್ಪದೆನ್ನಾತ್ಮಜರ್ಗೆ ‖ ಬೇಕಾದ ಸಂಪದಂಬಯಲಾಗಿ ಪೋಪುದೆಂದಾಕುಮತಿಬೇರೊಂದು

---

ರ್ಯದೊಳಗೆ_ರಾಜ್ಯಾಡಳಿತದಲ್ಲಿ, ಇಹೆವೆ_ಇದ್ದೇವೆ, ನಮಿಗೆ-ಬಿಡುವೇ ಇಲ್ಲದಿರುವ ನಮಗೆ ಈ ಬಾಲಕನ, ಚಿಂತೆ_ಆಲೋಚನೆಯು, ನಮಗೆಏಕೆ_ನಾವು ಏತಕ್ಕೆ ಇಟ್ಟುಕೊಳ್ಳಬೇಕಾಗಿದೆ, ಎನಲು-ಎಂದು ನುಡಿಯಲು, ಎಂದಿದಿರ್ದೊಡಂ_ಇನ್ನೆಷ್ಟುಕಾಲಕಳೆದರೂ, ಈಪೊಳಲ್ಗೆ-ಈಗ ನಾವಿರುವ ಕುಂತಳ ನಗರಕ್ಕೂ, ಈಕುಂತಳಾಧೀಶನು_ಈ ಕುಂತಳ ರಾಜನ ಮಗನು, ಆಳ್ವ - ರಕ್ಷಿಸುತ್ತಲಿ ರುವ, ನಮ್ಮ-ನಮ್ಮರಾಜನಿಗೆ ಸಂಬಂಧಪಟ್ಟ, ಈ ಪೊಡವಿಗೆ_ಈ ಭೂಮಂಡಲಕ್ಕೂ, ಚಾರುಲಕ್ಷಣದೊಳು-ಅಸಾಧಾರಣವಾದ ರಜಚಿಹ್ನೆಗಳಿಂದದೊಪ್ಪುತ್ತಲಿರುವ ಈ ಬಾಲಕನೆ, ಒಡೆಯನು-ಅರಸು, ಅಹನು_ಆಗುತ್ತಾನೆ, ನೀನು_ನೀನಾದರೊ, ಈತನಂ_ ಈ ಹಸುಳೆಯನ್ನು, ಇರಿಸಿಕೊಂಡು-ಮನೆಯಲ್ಲಿಟ್ಟುಕೊಂಡು, ರಕ್ಷಿಪುದು_ಸಂರಕ್ಷಣೆಯಂ ಮಾಡಬೇಕೆಂದು, ಅಪಾರ್ವರು- ಭೋಜನದಿಂದ ತೃಪ್ತಿಗೊಂಡು ಆಶೀರ್ವಾದವನ್ನು ಮಾಡುತ್ತಲಿದ್ದ ಆ ಬ್ರಾಹ್ಮಣರು, ಎಂದರು_ನುಡಿದರು ‖೨೭‖

ಟೀ‖ ದುಷ್ಟಬುದ್ಧಿ-ದುಷ್ಟಬುದ್ಧಿಯೆಂಬ ಮಂತ್ರಿಯಾದರೊ, ಕ್ರೂರ - ಕಠಿಣತೆಯಿಂದಿರುವ, ನಕ್ರ_ಮೊಸಳೆಗಳ, ಆಕುಲ-ಆವರಿಸುವಿಕೆಯಿಂದ, ಇಡಿದಿರ್ದ-ತುಂಬಿಕೊಂಡಿದ್ದ, ಪೇರ್ಮಡು_ದೊಡ್ಡ ಹಳ್ಳವು, ಗಭೀರ_ಗಾಂಭೀರ್ಯಯುಕ್ತವಾದ, ನಿರ್ಮಲಜಲದೊಳು_ಪರಿಶುದ್ಧವಾದ ಉದಕದಿಂದ, ಎಸೆವಂತೆ-ಹೊಳೆಯುವಹಾಗೆ, ಮನದೊಳ್_ಮನಸ್ಸಿನೊಳಗೆ, ಕಠೋರತರ ಭಾವನಮಂ_ಅತ್ಯಂತ ಕಡಿದಾದ ಆಶಯವನ್ನು, ತಳೆದು-ಹೊಂದಿ, ಬಹಿರಂಗದೊಳ್-ಹೊರಗಡೆಯಾದರೊ, ವಿನಯಂ_ನಮ್ರ ಭಾವನನ್ನು, ಉಳ್ಳಾತನಾದ_ಉಂಟಾದವನಂತೆ ತೋರಿಸುತ್ತಾ, ಚಾರು-ಸುಂದರವಾದ, ಲಕ್ಷಣದ-ಗುರುತುಗಳಿಂದೊಪ್ಪುವ, ಶಿಶುವಂ_ಬಾಲಕನನ್ನು, ನೋಡಿ-ನೋಡಿದನನಾಗಿ, ಧರೆಯಬ್ಬಂದಾರಕರನುಡಿಗೆ-ಬ್ರಾಹ್ಮಣೋತ್ತಮರಾಡಿದ ಮಾತಿಗೆ, ಒಪ್ಪಿ ದೋಲ್_ಒಪ್ಪಿಕೊಂಡಹಾಗೆಯೇ, ಇರ್ದು_ಇದ್ದವನಾಗಿ, ಬಳಿಕ-ಅನಂತರ, ನಿಜಭವನದಿಂದ_ತನ್ನ ಮನೆಯಿಂದ, ಆವಿಪ್ರರಂ_ ಆ ಭೂಸುರರನ್ನು, ಸತ್ಕಾರದಿಂದ_ಮರ್ಯಾದೆಯಿಂದಲೆ, ಕಳುಹಿದಂ_ಕಳುಹಿಸಿಕೊಟ್ಟವನಾದನು ‖

ಅ‖ ವಿ‖ ಪೇರ್ಮಡು (ವಿ. ಪೂ.) ‖ ೨೮ ‖

ಟೀ‖ ಆಕುಮತಿ-ಆ ದುರ್ಬುದ್ಧಿಯಾದರೊ, (ತನ್ನ ಮನದಲ್ಲಿಯೇ) ಈ ಕುಂತಳೇಂದ್ರಂಗೆ-ಈ ಕುಂತಳ ದೇಶದ ಅರಸನಿಗೆ, ಸುತರಿಲ್ಲ-ಮಕ್ಕಳಿಲ್ಲವು, ಎನಗೆ ನನಿಗಾದರೊ, ರಾಜ್ಯಂ-ಈ ರಾಷ್ಟ್ರವು, ಏಕಾಧಿಪತ್ಯಮಾಗಿರ್ದಪುದು-ನಿರಂಕುಶ ವಾಗಿರುವುದು, ಇವಂ_ಈ ಬಾಲಕನಾದರೊ, ಮುಂದೆ_ಇನ್ನುಮೇಲೆ, ಭೂಕಾಂತನು_ಅರಸು, ಆದಪಂಗಡ_ಆಗುತ್ತಾನಷ್ಟೆ. ವಿಪ್ರರು_ಭೂಸುರರು, ಎಂದ-ಹೇಳಿದ, ನುಡಿ_ವಚನವು, ತಪ್ಪದು_ತಪ್ಪತಕ್ಕದ್ದಲ್ಲವು, ಎನ್ನಾತ್ಮಜರ್ಗೆ- ನನ್ನ ಕುವರರಿಗೆ, ಬೇಕಾದ_ಆಗಬೇಕಾಗಿರುವ, ಸಂಪದಂ_ಐಸಿರಿಯು, ಬಯಲಾಗಿಪೋದಪುದು-ವ್ಯರ್ಥವಾಗಿ ಬಿಡುವುದು, ಎಂದು-ಎಂಬತೆರನಾಗಿ ಆಲೋಚಿಸಿ, ಬೇರೊಂದು_ಮತ್ತೊಂದು, ಉಪಾಯಮಂ - ತಂತ್ರವನ್ನು, ಚಿಂತಿಸಿ_ಹುಡುಕಿ, ಭಯಂಕರದ - ಬಹುವಾಗಿ

---

ರಾಜಕಾರ್ಯಗೌರವದಲ್ಲಿರತಕ್ಕನಮಿಗೆ ಈ ಬಾಲಕನಗೊಡವೆ ಏಕೆಂದು ನುಡಿದ ಮಂತ್ರಿಯ ಮಾತುಗಳನ್ನಾಲಿಸಿದ ಆ ವಿಪ್ರರಾದರೊ ಅಯ್ಯಾ ಸಚಿವೇಂದ್ರನೆ ಕೇಳು, ಈ ಬಾಲಕನು ಸುಂದರವಾದ ರಾಜಲಕ್ಷಣಗಳಿಂದ ರಾರಾಜಿಸುತ್ತಲಿರುವನು. ಈ ಪಟ್ಟಣಕ್ಕೆ ಮುಂದೆ ಈ ಬಾಲಕನೆ ಪ್ರಭುವಾಗುವನು. ಈ ಕುಂತಳನಗರದ ರಾಜರ ರಾಷ್ಟ್ರಕ್ಕೆಲ್ಲಾ ಈ ಹಸುಳೆಯೇ ಚಕ್ರವರ್ತಿಯಾಗು ವುದರಲ್ಲಿ ಯಾವ ಸಂದೇಹವೂ ಇಲ್ಲವಾದ್ದರಿಂದ ಈ ಬಾಲನನ್ನು ನೀನು ನಿಮ್ಮ ಮನೆಯಲ್ಲಿಟ್ಟುಕೊಂಡು ಕಾಪಾಡಬೇಕೆಂದು ನುಡಿದರು, ‖೨೭‖ ಈ ತೆರನಾದ ವಿಪ್ರವಚನವನ್ನಾಲಿಸುತ್ತಲಿದ್ದ ದುಷ್ಟಬುದ್ಧಿಯ ಮನಸ್ಸು, ಕಠಿಣವಾದ ಮೊಸಳೆಗಳಿಂದ ಕೂ ಡಿದ ದೊಡ್ಡ ಜಲಾಶಯದಂತಾದರೂ ಕೂಡ ತನ್ನ ಕೋಪವನ್ನು ಅವರಿಗೆ ತೋರ್ಪಡಿಸದೆ, ಮೊಸಳೆಗಳಿದ್ದರೂ ನಿರ್ಮಲೋದಕ ವು ತುಂಬಿರುವುದರಿಂದ ಹೇಗೆ ಕಾಣುವುದಿಲ್ಲವೋ ಹಾಗೆಯೇ ಮನಸ್ಸಿನಲ್ಲಿ ಕಠಿಣತ್ವವನ್ನೂ, ಬಹಿರಂಗದಲ್ಲಿ ಮಮತೆಯನ್ನೂ ತಾಳಿ ಹಾಗೆಯೇ ಆಗಲೆಂದೊಪ್ಪಿ, ಮರ್ಯಾದೆಯಿಂದ ಕಳುಹಿಸಿ ಕೊಟ್ಟನು ‖ ೨೮ ‖ ಆ ಬಳಿಕ ದುಷ್ಟಬುದ್ಧಿಯು ಈ ಕುಂತಳ ದೇಶದ ರಾಜನಿಗೆ ಮಕ್ಕಳಿಲ್ಲದ್ದರಿಂದ ನನಿಗೇ ರಾಜ್ಯವೆಲ್ಲಾ ಏಕಮುಖವಾಗಿರುವುದು ಬ್ರಾಹ್ಮಣರಮಾತು ಎಂದಿಗೂ ಸುಳ್ಳಾಗು

ಪಾಟಸುಮಂಚಿಂತಿಸಿಭ | ಯಾಕಾರದೊಡಲಚಂಡಾಲರಂ ಕರೆಸಿಬೆಸಸಿದನಾರುಮರಿಯದಂತೆ || ೨೯ || ಕಾನನಾಂತರದೊಳೀತರಳ ನಂಕೊಂದುನೀ | ವೇನಾದೊಡಂ ಕುರುಹುತಂದೆನಗೆತೋರ್ಪುದೆಂ | ದಾನರೇಂದ್ರನಮಂತ್ರಿಬೆಸಸಿದೊಡೆಪಶುಘಾತಿಗಳಾಡುತಿಹ ಶಿಸುವನು | ಹೀನದಯದಿಂದ ಪಿಡಿದೆತ್ತಿಕೊಂಡೊಯ್ದರ್ಭ | ಯಾನಕದಲಂದುಕೊಲೆಗೆಳಸಿ ಪ್ರಹ್ಲಾದನಂ | ದಾನವೇಶ್ವರನಾಜ್ಞೆಯಿಂಕಾಳರಕ್ಕಸರ್ಬಂದುಕೈದುಡುಕುವಂತೆ || ೩೦ || ಪಾತಕಿಗಳೊಡಲೊಳಿಹಪರಮಾತ್ಮನಂತೆಯಮ | ದೂತರೆಳತಂದಜಾಮಿಳನಂತೆಕಾಕಸಂ | ಘಾತದೊಳ್ಸಿಕ್ಕಿರ್ದಕೋಗಿಲೆಯಮರಿಯಂತೆನಲುಗಿಕತ್ತಲೆಯೊಳಿರ್ದ || ಶೀತಳಮರೀಚಿಲಾಂಛನದಂತೆಬಹಳಕೋಪಾತಿಶಯದೊಳಿಹವಿವೇಕದಂತಾಗಪಶು | ಘಾತಕಿಗಳೆತ್ತಿಕೊಂಡೊಯ್ವಬಾಲಕನಿರ್ದನವರೆಡೆಯೊಳಂಜು

---

ಹೆದರಿಸುವ, ಒಡಲ-ದೇಹವುಳ್ಳ, ಚಂಡಾಲರಂ-ಕಟುಕರನ್ನು, ಕರೆಸಿ-ಕರೆಸಿದವನಾಗಿ, ಆರುಂ-ಯಾರೊಬ್ಬರೂ, ಅರಿಯದಂತೆ-ತಿಳಿಯಕೊಳ್ಳದ ಹಾಗೆ, ಬೆಸಸಿದನು-ಅಪ್ಪಣೆಮಾಡಿದನು. ||೨೯||

ಟೀ|| ಆ ನರೇಂದ್ರನಮಂತ್ರಿ- ಕುಂತಳಾಧೀಶನ ಸಚಿವನಾದ ದುಷ್ಟಬುದ್ಧಿಯು, (ಚಂಡಾಲರೊಂದಿಗೆ) ನೀವು-ನೀವಾದರೊ, ಈ ತರಳನಂ- ಈ ಹಸುಳೆಯನ್ನು, ಕಾನನಾಂತರದೊಳು- ಅರಣ್ಯದ ನಡುವಣ ಭಾಗದಲ್ಲಿ, ಕೊಂದು-ಪ್ರಾಣಗಳನ್ನು ತೆಗೆದು, ಏನಾದೊಡಂ-ಯಾವುದಾದರೂ ಒಂದು, ಕುರುಹಂ-ಕುರುಹನ್ನು, ತಂದು-ತೆಗೆದುಕೊಂಡು ಬಂದು, ಎನಗೆ-ನನಗೆ, ತೋರ್ಪುದು-ಕಾಣಿಸತಕ್ಕದ್ದು, ಎಂದು-ಎಂಬತೆರನಾಗಿ, ಬೆಸಸಿದೊಡೆ-ಆಜ್ಞಾಪಿಸಲು, ಅಂದು-ಹಿಂದೆ, ಭಯಾನಕದಲಿ-ಹೆಚ್ಚಾದ ಹೆದರಿಕೆಯನ್ನುಂಟುಮಾಡುವಿಕೆಯಿಂದ, ಕೊಲೆಗೆ-ಸಂಹಾರಮಾಡಲು, ಎಳಸಿ-ಅಭಿಪ್ರಾಯಪಟ್ಟು, ದಾನವೇಶ್ವರನ-ರಾಕ್ಷಸೇಂದ್ರನಾದ ಹಿರಣ್ಯಕಶಿಪುವಿನ, ಆಜ್ಞೆಯಿಂದ-ಅನುಜ್ಞೆಯಿಂದ, ಕಾಳರಕ್ಕಸರ್-ಕಪ್ಪಗಿರುವ ನಿಶಿಚರರು, ಬಂದು-ಬಂದವರಾಗಿ, ಪ್ರಹ್ಲಾದನಂ-ಬಾಲಕನಾದ ಪ್ರಹ್ಲಾದನನ್ನು, ಕೈದುಡುಕುವಂತೆ-ಕೈಯಿಂದ ಹೊತ್ತುಕೊಂಡು ಹೋದ ಹಾಗೆಯೇ, ಪಶುಘಾತಕಿಗಳು-ಕೊಲೆಗಾರರು, ಹೀನದಯದಿಂದ-ನಿಷ್ಕರುಣವುಳ್ಳವರಾಗಿ, ಆಡುತಿಹ ಶಿಶುವನು-ಆಡಿಕೊಂಡಿದ್ದ ಬಾಲನನ್ನು, ಪಿಡಿದು-ಹಿಡಿದುಕೊಂಡು, ಎತ್ತಿಕೊಂಡೊಯ್ದರ್-ಎತ್ತಿಕೊಂಡು ಹೋದರು.

ಅ|| ವಿ|| ನಾರದರ ಉಪದೇಶದಿಂದ ಯಾವಾಗಲೂ ವಿಷ್ಣು ಭಕ್ತಿಯಲ್ಲಿ ಆಸಕ್ತನಾಗಿದ್ದ ಪ್ರಹ್ಲಾದನನ್ನು ನೋಡಿ ಅವನ ತಂದೆಯಾದ ಹಿರಣ್ಯಕಶಿಪುವು ಭಯಂಕರರಾದ ರಾಕ್ಷಸರಿಂದ ಕೊಲ್ಲಲೆಳಸಿದುದನ್ನು ಜ್ಞಾಪಿಸುವಂತೆ ದುಷ್ಟಬುದ್ಧಿಯೂ ಕೂಡ ಹುಡುಗರ ಜತೆಯಲ್ಲಿ ಆಡಿಕೊಂಡಿದ್ದ ಸುಂದರಾಂಗನೂ ರಾಜಲಕ್ಷಣಗಳಿಂ ಶೋಭಿಸುವವನೂ ಆದ ಬಾಲಕನನ್ನು ಕೊಂದು ಬರಬೇಕೆಂದು ಕಟುಕರಿಗೆ ಅಪ್ಪಣೆಮಾಡಿದನೆಂದು ಭಾವವು. ರಕ್ಕಸರ್ (ತ್ಭ) ರಾಕ್ಷಸರ್ (ತ್ಸ) ಆಜ್ಞೆ (ತ್ಸ) ಆಣೆ (ತ್ಭ) ದಾನವೇಶ್ವರ (ಗುಣ ಸಂ) ಕೈದುಡಿಕು (ಕ್ರಿಯಾಸಮಾಸ) ||೩೦||

ಟೀ|| ಆಗ-ಕಟುಕರು ಆಡುತ್ತಿದ್ದ ಹುಡುಗನನ್ನು ಕೊಲ್ಲಲು ಕಾಡಿಗೆ ಎತ್ತಿಕೊಂಡು ಹೋಗುವಾಗ, ಪಶುಘಾತಕಿಗಳು-ಕೊಲೆಗಾರರು, ಎತ್ತಿಕೊಂಡೊಯ್ವ-ಎತ್ತಿಕೊಂಡು ಹೋಗುತ್ತಲಿರತಕ್ಕ, ಬಾಲಕ-ಹುಡುಗನಾದರೋ, ಪಾತಕಿಗಳ-ಪಾಪಮಾಡಿದವರ, ಒಡಲೊಳು-ದೇಹದಲ್ಲಿ, ಇಹ ಇರತಕ್ಕ, ಪರಮಾತ್ಮನಂತೆ-ಪರಬ್ರಹ್ಮಸ್ವರೂಪನೇ ಆಗಿರುವ ಸ್ವಾಮಿಯತೆರನಾಗಿಯೂ, ಯಮದೂತರು-ಯಮನ ಆಳುಗಳು, ಎಳೆತಂದ-ಎಳೆದುಕೊಂಡು ಬಂದ, ಅಜಾಮಿಳನಂತೆ-ಭಕ್ತನಾದ ಅಜಾಮಿಳನೆಂಬವನ ಬಗೆಯಿಂದಲೂ, ಕಾಕಸಂಘಾತದೊಳ್-ಕಾಗೆಗಳ ಗುಂಪಿನೊಳಗೆ, ಸಿಕ್ಕಿರ್ದ-ಸಿಕ್ಕಿಕೊಂಡಿದ್ದ, ಕೋಗಿಲೆಯ ಮರಿಯಂತೆ-ಕೋಗಿಲೆ ಹಕ್ಕಿಯಂತೆಯೂ, ನಲುಗಿ-ಸಿಕ್ಕಿಕೊಂಡು, ಕತ್ತಲೆಯೊಳ್- ಕತ್ತಲೆಯಲ್ಲಿ, ಇರ್ದ-ಇದ್ದಂಥ, ಶೀತಳ-

---

ವುದಿಲ್ಲವಾದ್ದರಿಂದ ಮುಂದೆ ಈ ರಾಜ್ಯಕ್ಕೆ ಇವನೇ ಅರಸಾಗಬಹುದು, ಇದರಿಂದ ನನ್ನ ಇಷ್ಟವು ವಿಫಲವಾಗಿ ನನ್ನ ಮಕ್ಕಳಿಗೆ ಹಾನಿಯುಂಟಾಗುವುದು. ಇವನು ಬದುಕಿದ್ದರೆ ಇಷ್ಟು ಬಾಧಕಗಳಾಗುತ್ತವೆಯಾದ್ದರಿಂದ ಈ ಹಸುಳೆಯನ್ನು ಕೊಂದುಹಾಕಬೇಕೆಂದು ಆಲೋಚಿಸಿ ಅತಿಭಯಂಕರಾಕಾರದಿಂ ಕೂಡಿರತಕ್ಕ ಕಟುಕರನ್ನು ಕರೆಕಳುಹಿದವನಾಗಿ || ೨೯ || ಎಲೈ ಚಂಡಾಲರೆ, ನೀವು ಈ ಬಾಲಕನನ್ನು ಅರಣ್ಯಮಧ್ಯಕ್ಕೆ ಗುಟ್ಟಾಗಿ ಕರೆದುಕೊಂಡು ಹೋಗಿ, ಕೊಂದು ಹಾಕಿದ ಕುರುಹೊಂದನ್ನು ತಂದು ತೋರಿಸಿದರೆ ನಿಮಗೆ ಹೆಚ್ಚಾಗಿ ಬಹುಮಾನವಂ ಮಾಡುವೆನೆಂದು ನುಡಿದನು. ಆ ಚಂಡಾಲರು ಅದಕ್ಕೆ ಒಪ್ಪಿ ಬೀದಿಯಲ್ಲಿ ಆಡುತ್ತಲಿದ್ದ ಬಾಲಕನನ್ನು ನಿಷ್ಕರುಣದಿಂದ ಎತ್ತಿಕೊಂಡು ತಡಮಾಡದೆ ಹೋಗುತ್ತಲಿರುವುದನ್ನು ನೋಡಿದರೆ ಪೂರ್ವದಲ್ಲಿ ಪ್ರಹ್ಲಾದನನ್ನು ರಾಕ್ಷಸರು ಹಿಡಿದುಕೊಂಡು ಹೋಗುತ್ತಲಿದ್ದ ಘೋರಕೃತ್ಯವನ್ನು ಜ್ಞಾಪಿಸುತ್ತಲಿತ್ತು. ||೩೦|| ಕಟುಕರು ಈ ಬಾಲಕನನ್ನು ಎತ್ತಿಕೊಂಡು ಹೋಗುತ್ತಲಿರುವಾಗ ಈ ಹಸುಳೆಯಾದರೊ, ಪಾಪಿಷ್ಠರದೇಹದಲ್ಲಿರತಕ್ಕ ಪರಮಾತ್ಮನ ಹಾಗೂ, ಯಮದೂತರು ಎಳದುಕೊಂಡು ಹೋಗತಕ್ಕ ಅಜಾಮಿಳನ ರೀತಿಯಿಂದಲೂ, ಕಾಗೆಗಳ ಮಧ್ಯೆ ಸಿಕ್ಕಿ ಬಿದ್ದಿರತಕ್ಕ

ತಳುತ ‖ ೩೧ ‖ ಪೆಗಲೊಳೇರಿಸಿಬನಕೆಚಂಡಾಲರೊಯ್ಯುತಿರೆ | ಮಿಗೆಬೆದರಿಭಯದಿಂದಬಾಲಕಂಬಾಯೊಳಾ | ವಗಮಿರಿಸಿ ಕೊಂಡಿರ್ಪದಿವ್ಯಸಾಲಗ್ರಾಮದುಪಲದತಿಮಹಿಮೆಯಿಂದ ‖ ಬಗೆದೋರಲಾಗೆಮುರಹರಕೃಷ್ಣಕಮಲಾಕ್ಷ | ಖಗರಾಜಗಮನ ಸಲಹೆಂದುಚೀರಿದೊಡವನ | ಮೊಗನೋಡಿಕರುಣದಿಂಕಟುಕರೆದೆಕರಗಿದುದದೆಂತೊಹರಿನಾಮದೇಳ್ಗೆ ‖೩೨‖ ಒಯ್ದುಪಸುಳೆಯ ನರಣ್ಯದೊಳಿರಿಸಿಮರುಗಿಬಿಸು | ಸುಯ್ದುಪಶುಘಾತಕಿಗಳಾದುಷ್ಟಬುದ್ಧಿಯಂ | ಬಯ್ದುಶಿಶುವಧೆಗಳುಕಿನಿಂದುನೋಡುತಕಂಡ ರ್ಭಕನೆಡದಕಾಲೊಳು ‖ ಅಯ್ದಲ್ಲದೊಂದುಬೆರಳಿರ್ಪುದಂಬಳಿಕದಂ | ಕೊಯ್ದುಕುರುಪಂಗೊಂಡುತಮ್ಮದಾತಾರನೆಡೆ |

---

ತಣ್ಣಗಿರುವ, ಮರೀಚಿಲಾಂಛನದಂತೆ-ಇಂದುಕಳೆಯೋಪಾದಿಯಲ್ಲಿಯೂ, ಬಹಳ-ಅಧಿಕವಾದಕೋಪಾತಿಶಯದೊಳು-ಹೆಚ್ಚಾದ ಕೋಪದಲ್ಲಿ, ಇಹ-ಇರತಕ್ಕ, ವಿವೇಕದಂತೆ-ತಿಳುವಳಿಕೆಯ ಪರಿಯಿಂದಲೂ, ಅವರ-ಆ ಕಟುಕರ, ಎಡೆಯೊಳ್-ಸಮೀಪದಲ್ಲಿ, ಅಂಜುತ-ಹೆದರುತ್ತ, ಅಳುತ-ವ್ಯಸನಪಡುತ್ತ, ಇರ್ದನು-ಇದ್ದವನಾದನು ‖೩೧‖

ಟೀ‖ ಚಂಡಾಲರು – ಕಟುಕರಾದರೊ, ಪೆಗಲೊಳು-ಭುಜದಮೇಲೆ, ಏರಿಸಿ-ಹತ್ತಿಸಿಕೊಂಡು, ಒಯ್ಯುತಿರೆ-ಹೋಗುತ್ತಿರಲು, ಬಾಲಕಂ – ಆ ಹಸುಳೆಯು, ಮಿಗೆ – ಹೆಚ್ಚಾಗಿ, ಬೆದರಿ – ಹೆದರಿಕೊಂಡು, ಭಯದಿಂದ – ದಿಗಿಲಿನಿಂದ, ಆವಗಂ-ಯಾವಾಗಲೂ, ಬಾಯೊಳ್-ಬಾಯಿಯಲ್ಲಿ, ಇರಿಸಿಕೊಂಡಿರ್ಪ-ಇಟ್ಟುಕೊಂಡಿರತಕ್ಕ, ದಿವ್ಯ-ಮನೋಹರವಾದ, ಸಾಲಗ್ರಾಮದುಪಲದ-ಸಾಲಗ್ರಾಮಶಿಲೆಯ, ಅತಿಮಹಿಮೆಯಿಂದ – ಮಹಿಮಾತಿಶಯದಿಂದ, ಬಗೆದೋರಲು – ಯುಕ್ತಿಯೊಂದು ಹೊಳೆಯಲು, ಆಗ-ಆ ವೇಳೆಯಲ್ಲಿ, ಮುರಹರ-ಮುರಾಂತಕನೆ, ಕೃಷ್ಣ-ಭಕ್ತರ ದುರಿತಂಗಳನ್ನು ದೂರಮಾಡುವನೆ, ಕಮಲಾಕ್ಷ-ಕಮಲನೇತ್ರನೆ, ಖಗರಾಜ-ಗರುತ್ಮಂತನನ್ನೆ, ಗಮನ – ವಾಹನವಾಗಿವುಳ್ಳವನೆ, ಸಲಹು – ರಕ್ಷಿಸು, ಎಂದು-ಎಂಬತೆರನಾಗಿ, ಚೀರಿದೊಡೆ-ಅರಚಿಕೊಂಡದ್ದರಿಂದ, ಅವನ-ಆ ಹುಡುಗನ, ಮೊಗ – ವದನವನ್ನು, ನೋಡಿ-ನಿರುಕಿಸಿ, ಕಟುಕರ – ಕೊಲೆಪಾತಕರ, ಎದೆ-ಎದೆಯು, ಕರುಣದಿಂ-ಕಾರುಣ್ಯದಿಂದ, ಕರಗಿದುದು – ಮೃದುವಾಗಿ ಬಿಟ್ಟಿತು, ಹರಿನಾಮದ – ವಿಷ್ಣುನಾಮದ, ಏಳ್ಗೆ-ಹೆಚ್ಚಿಗೆಯಾದರೊ, ಅದೆಂತೊ-ಇನ್ನು ಎಂಥಾದ್ದೊ, (ಎಂದರೆ ಹರಿನಾಮಸಂಕೀರ್ತನೆಯು ಅಸಾಧಾರಣವಾದದ್ದು ‖೩೨‖

ಟೀ‖ ಪಶುಘಾತಕಿಗಳು-ಚಂಡಾಲರು, ಪಸುಳೆಯನು-ಆ ಮಗುವನ್ನು, ಒಯ್ದು-ಹೊತ್ತುಕೊಂಡು ಹೋಗಿ, ಅರಣ್ಯದೊಳು-ಕಾನನದೊಳಗೆ, ಇರಿಸಿ-ಇರಿಸಿದವರಾಗಿ, ಮರುಗಿ-ಸಂಕಟಪಟ್ಟು, ಬಿಸುಸುಯ್ದು-ಹೆಚ್ಚಾದ ದುಃಖವಂ ತಾಳಿ, ಆ ದುಷ್ಟಬುದ್ಧಿಯಂ – ತಮಿಗೆ ಅಪ್ಪಣೆ ಮಾಡಿರತಕ್ಕ ದುಷ್ಟಬುದ್ಧಿಯೆಂಬ ಮಂತ್ರಿಯನ್ನು, ಬೈದು – ದೂಷಿಸಿ, ಶಿಶುವಧೆಗೆ-ಆ ಮಗುವಿನ ಪ್ರಾಣವನ್ನು ಕಳೆಯಲು, ಅಳುಕಿ-ಹೆದರಿ, ನಿಂದು-ನಿಂತುಕೊಂಡು, ನೋಡುತ್ತ-ಈಕ್ಷಿಸುತ್ತ, ಅರ್ಭಕನ-ಆ ಪಸುಳೆಯ, ಎಡದಕಾಲೊಳು – ಎಡದ ಕಾಲಿನಲ್ಲಿ, ಅಯ್ದಲ್ಲದೆ – ಅಯ್ದನ್ನು ಬಿಟ್ಟು, ಅದೊಂದುಬೆರಳು – ಹೆಚ್ಚಾದ ಮತ್ತೊಂದು ಬೆಟ್ಟು, ಇರ್ಪುದಂ-ಇರತಕ್ಕದ್ದನ್ನು, (ಕಂಡು-ನೋಡಿ) ಬಳಿಕ-ಅನಂತರ, ಅದಂ-ಆ ಬೆಟ್ಟನ್ನು, ಕೊಯ್ದು-ಕೊಯ್ದುಹಾಕಿ, ಕುರುಪಂಕೊಂಡು-ಕುರುಹಿಗಾಗಿ ತೆಗೆದುಕೊಂಡು, ತಮ್ಮದಾತಾರನ-ತಮ್ಮ ಒಡೆಯನಾದ ದುಷ್ಟಬುದ್ಧಿಯ, ಎಡೆಗೆ-ಹತ್ತಿರಕ್ಕೆ, ಐದಿ-ಹೋಗಿಸೇರಿ, ತೋರಿದೊಡೆ-ತೋರಿಸಿದ್ದರಿಂದ, ಅವನು-ಆ ಮಂತ್ರಿಯು, ಅವರ್ಗಳಂ-ಆ ಕೊಲೆಪಾತಕರನ್ನು, ಮನ್ನಿಸಿ-ಮರ್ಯಾದೆಯಿಂದ ಕಂಡು, ಮಹೋತ್ಸವದೊಳು-ಆನಂದಾತಿಶಯದಿಂದ, ಇರುತಿರ್ದನು-ಇದ್ದವನಾದನು ‖೩೩‖

---

ಕೋಗಿಲೆ-ಹಕ್ಕಿಯ ಪರಿಯಿಂದಲೂ, ಘೋರಾಂಧಕಾರದ ನಡುವೆ ಇರುವ ಹಿಮಕರನಂತೆಯೂ, ಆಗ್ರಹದ ಮಧ್ಯದಲ್ಲಿರತಕ್ಕ ತಿಳಿವಳಿಕೆಯ ಬಗೆಯಿಂದಲೂ ಕಾಣುತ್ತಲಿರುವ ಆ ಬಾಲಕನನ್ನು ‖ ೩೧ ‖ ಹೆಗಲಿನ ಮೇಲೆ ಕುಳ್ಳಿರಿಸಿಕೊಂಡು ಹೋಗುತ್ತಲಿರುವಾಗ ಈ ಹುಡುಗನು ಹೆದರಿಕೊಂಡು, ಏನೂ ತೋರದೆ ವ್ಯಥೆಪಡುತ್ತಲಿರುವಾಗ ಆ ಹಸುಳೆಯ ಬಾಯಲ್ಲಿರತಕ್ಕ ಸಾಲಿಗ್ರಾಮಶಿಲೆಯ ಮಾಹಾತ್ಮ್ಯೆಯಿಂದ ಬಂದಾನೊಂದು ಯೋಚನೆಯು ಹೊಳೆಯಲು, ಆಗ ಹೇ ಮುರಾಂತಕ, ಕೃಷ್ಣ; ಕಮಲನಾಭ, ಗರುಡವಾಹನ, ಆರ್ತರಕ್ಷೈಕಪರಾಯಣ! ಎಂದು ಹಲವು ಬಗೆಯಾಗಿ ಕೃಷ್ಣಪರಮಾತ್ಮನನ್ನು ಧ್ಯಾನಿಸಿದ ಕೂಡಲೆ ಕಲ್ಲಿನಂತಹ ಕಟುಕರೆದೆಯು ಕರಗಿ ನೀರಾಯಿತು ‖೩೨‖ ಹೀಗಿರುವಲ್ಲಿ ಆ ಚಂಡಾಲರಾದರೊ ಜಾಗ್ರತೆಯಾಗಿ ಮಗುವನ್ನು ಕಾಡಿಗೆ ಕರೆದುಕೊಂಡುಹೋಗಿ ಒಂದೆಡೆಯಲ್ಲಿ ಕುಳಿತುಕೊಂಡು ಈ ಶಿಶುವನ್ನು ಕೊಂದುಹಾಕಲು ಮನಸ್ಸು ಒಪ್ಪದೆ ದುಷ್ಟಬುದ್ಧಿಯನ್ನು ನಾನಾ ಪ್ರಕಾರವಾಗಿ ಬೈಯುತ್ತ ಏನೂ ತೋರದಿರುವಾಗ ಈ ಬಾಲಕನ ಎಡಗಾಲಿನಲ್ಲಿ ಆರು ಬೆರಳಿರುವದನ್ನು ಕಂಡು ಈ ಒಂದು ಬೆರಳನ್ನು ಮಾತ್ರ ಕತ್ತರಿಸಿಕೊಂಡು ತಮ್ಮೊಡೆಯನಾದ ದುಷ್ಟಬುದ್ಧಿಯ ಹತ್ತಿರಕ್ಕೆ ಹೋಗಿ ತಾವು ತೆಗೆದುಕೊಂಡು ಹೋಗಿದ್ದ ಕುರುಹನ್ನು ತೋರಿಸಿದ ಕೂಡಲೇ ಆ ದುಷ್ಟಬುದ್ಧಿಯ ಆನಂದಕ್ಕೆ ಪಾರವೇ ಇರಲಿಲ್ಲವು. ಬಳಿಕ ಅವನು ಚಂಡಾಲರನ್ನು ಮರ್ಯಾದೆಯಿಂದ ಕಳುಹಿಸಿ ಅಪರಿಮಿತವಾದ ಆನಂದದಿಂದ ಕಾಲವಂ ಕಳೆಯುತ್ತಲಿದ್ದನು‖೩೩‖ಇತ್ತ ಅರಣ್ಯದಲ್ಲಾದರೊ

ಗೈದಿತೋರಿದೊಡವನವರ್ಗಳಂಮನ್ನಿಸಿಮಹೋತ್ಸವದೊಳಿರುತಿರ್ದನು ‖ ೩೩ ‖ ಇತ್ತಲಾವಿಪಿನದೊಳ್ತನ್ನವದನದೊಳಿರ್ದ | ವೃತ್ತಸಾಲಗ್ರಾಮಶಿಲೆಯಪ್ರಭಾವದಿಂ | ದುತ್ತಮಶ್ಲೋಕನಂಭಜಿಸೆದಯಗೈದೆಡೆದಕಾಲಷಷ್ಠಾಂಗುಳಿಯನು ‖ ಕತ್ತರಿಸಿಕೊಂಡುಳುಹಿಪೋದರಂತ್ಯಜರ್ಬಳಿಕ | ತುತ್ತಿಸಿದರಾಹುತೊಲಗಿದಶಶಿಯೊಲಿರ್ದನವ | ನೆತ್ತಣದುಬಾಧೆಗಳ್ನಿನ್ನ ಮಿತ್ರನಂಮರೆಯೊಕ್ಕಜೀವಿಗಳ್ಗೆ ‖ ೩೪ ‖ ಬಸಿವನೆತ್ತರಗಾಯದೆಡದಡಿಯವೇದನೆಗೆ | ಪಸುಳೆಹರಿಹರಿಯೆಂದೊರಲ್ದಳುತಿರಲ್ಕಣ್ಣೊಳ್ | ಬಸರ್ವಬಾಷ್ಪಂಗಳಂ ಕಂಡುಮಿಗೆ ಪಕ್ಕಿಗಳ್ನೊಂದು ಕಡುಶೋಕದಿಂದ ‖ ಪಸಿವುನೀರಡಿಕೆಯುಂ ತೊರೆದಲ್ಲಿ ನಿಂದುಪಚ | ರಿಸುತಿರ್ದವಾಶಿಶುವನೆಂದೊಡೆಲಿಪಾರ್ಥಕೇಳ್ | ವಸುಮತಿಯೊಳಾರ್ತರಂನೋಡಿಮಿಗೆಮರುಗದಿಹಮಾನವಂ ಪಾಪಿಯಲ್ತೆ ‖ ೩೫ ‖ ಗರಿಗೆದರಿಕೊಡೆವಿಡಿದು ನಿಂದವು ಬಿಸಿಲ್ಗೆನವಿ | ಲೆರಕೆಯಿಂ ಬೀಸಿಬಿಜ್ಜಣವಿಕ್ಕಿತಂಚೆತಂ | ತುರನು

---

ಟೀ‖ ಇತ್ತಲು–ಈ ಭಾಗದಲ್ಲಿ, ಆವಿಪಿನದೊಳ್–ಆ ಕಾಡಿನೊಳಗೆ, ತನ್ನವದನದೊಳ್–ತನ್ನ ಬಾಯಿಯಲ್ಲಿ, ಇರ್ದ–ಇಟ್ಟುಕೊಂಡಿದ್ದ, ವೃತ್ತ–ದುಂಡಗಿರುವ, ಸಾಲಗ್ರಾಮಶಿಲೆಯ–ಸಾಲಗ್ರಾಮವೆಂಬ ಕಲ್ಲಿನ, ಪ್ರಭಾವದಿಂದ–ಮಾಹಾತ್ಮೆಯಿಂದ, ಉತ್ತಮಶ್ಲೋಕನಂ–ಪುಣ್ಯಸಮುದಾಯದಿಂದ ಕೂಡಿದ ನಾರಾಯಣಮೂರ್ತಿಯನ್ನು, ಭಜಿಸೆ–ಧ್ಯಾನಮಾಡಲಾಗಿ, ಅಂತ್ಯಜರ್–ಕಟುಕರು, ದಯೆಗೈದು–ಕರುಣಿಸಿ, ಎಡದಕಾಲ – ಎಡದ ಕಾಲಿನಲ್ಲಿರತಕ್ಕ, ಷಷ್ಠಾಂಗುಳಿಯನು – ಆರನೇ ಬೆಟ್ಟನ್ನು, ಕತ್ತರಿಸಿಕೊಂಡು, ಉಳುಹಿ–ಜೀವವನ್ನು ತೆಗೆಯದೆ ಬಿಟ್ಟು, ಪೋದರು - ಹೊರಟುಹೋದರು, ಬಳಿಕ–ಆಮೇಲೆ, ತುತ್ತಿಸಿದ – ಗ್ರಸ್ತವಾದ, ರಾಹು–ರಾಹುವು, ತೊಲಗಿದ–ಹೊರಟುಹೋದ, (ಬಿಡುಗಡೆಯನ್ನೈದಿದ) ಶಶಿಯೊಲು-ಇಂದುವಿನಂತೆ, ಅವನು–ಆ ಹಸುಳೆಯು, ಇರ್ದನು–ಇದ್ದವನಾದನು. ನರ–ಎಲೈ ಪಾರ್ಥನೆ, ನಿನ್ನಮಿತ್ರನಂ – ನಿನ್ನ ಗೆಳೆಯನಾದ ಕೃಷ್ಣಪರಮಾತ್ಮನನ್ನು, ಮರೆಯೊಕ್ಕ-ನಂಬಿದ, ಜೀವಿಗಳ್ಗೆ-ಜೀವರಾಶಿಗೆ, ಬಾಧೆಗಳು-ಕಷ್ಟಗಳು, ಎತ್ತಣದು ಎಲ್ಲಿಂದ ಬಂದೀತು. (ನಿನ್ನ ಸ್ನೇಹಿತನನ್ನು ನಂಬಿದವರಿಗೆ ಯಾವ ಬಾಧೆಯೂ ಉಂಟಾಗುವದಿಲ್ಲವು) ‖೩೪‖

ಟೀ‖ ಪಸುಳೆ–ಬಾಲಕನು, ಬಸಿವ–ಸುರಿಯುತ್ತಲಿರುವ, ನೆತ್ತರ-ರಕ್ತದಿಂದ ಕೂಡಿದ, ಗಾಯದ – ಗಾಯವುಳ್ಳ, ಎಡದಡಿಯ–ಎಡಗಾಲಿನ, ವೇದನೆಗೆ–ಬಾಧೆಗೆ, ಹರಿಹರಿಯೆಂದು – ಕೃಷ್ಣನಾಮಸ್ಮರಣೆಯನ್ನು, ಒರಲ್ದು - ಬಲು ಗಟ್ಟಿಯಾಗಿ ಹೇಳುತ್ತಾ, ಅಳುತಿರಲ್-ದುಃಖಿಸುತ್ತಿರಲು, ಕಣ್ಣೊಳ್-ನೇತ್ರದಲ್ಲಿ, ಬಸರ್ವ-ಸುರಿಯತಕ್ಕ, ಬಾಷ್ಪಂಗಳಂ – ನೇತ್ರೋದಕಂಗಳನ್ನು, ಕಂಡು–ಈಕ್ಷಿಸಿ, ಪಕ್ಕಿಗಳ್-ಪಕ್ಷಿಗಳು, ಮಿಗೆ–ಹೆಚ್ಚಾಗಿ, ನೊಂದು - ಸಂಕಟಪಟ್ಟು, ಕಡುಶೋಕದಿಂದ - ಬಹಳ ವ್ಯಸನದಿಂದ, ಪಸಿವು-ಹಸಿವನ್ನೂ, ನೀರಡಿಕೆಯುಂ-ದಾಹವನ್ನೂ ಸಹ, ತೊರೆದು-ಬಿಟ್ಟು, ಅಲ್ಲಿ–ಆ ಹುಡುಗನ ಹತ್ತಿರದಲ್ಲಿಯೇ, ನಿಂದು–ನಿಂತುಕೊಂಡು, ಆಶಿಶುವನು–ಆ ಮಗುವನ್ನು, ಉಪಚರಿಸುತ – ಸೇವೆಮಾಡುತ್ತಾ, ಇರ್ದವು - ಕಾಲವಂ ಕಳೆಯುತ್ತಲಿದ್ದವು. ಎಲೆಪಾರ್ಥ-ಎಲೈ ಧನಂಜಯಾ, ಕೇಳು-ಲಾಲಿಸು, ವಸುಮತಿಯೊಳು-ಲೋಕದಲ್ಲಿ, ಆರ್ತರಂ ನೋಡಿ–ದೀನರನ್ನು, ಕಂಡು, ಮಿಗೆ-ಹೆಚ್ಚಾಗಿ, ಮರುಗದಿಹ–ಸಂಕಟಪಡದಿರುವ, ಮಾನವಂ–ನರನು, ಪಾಪಿಯಲ್ತೆ–ಪಾಪಿಷ್ಠನಲ್ಲವೇ, ಎಂದನು–ಎಂಬುದಾಗಿ ನಾರದನು ಅರ್ಜುನನೊಂದಿಗೆ ನುಡಿದನು ‖೩೫‖

ಟೀ‖ ಕರುಬರು–ಕಟುಕರಾದವರು, ಇರ್ದ–ಇರತಕ್ಕ, ಊರಿಂದ – ಊರಿಗಿಂತಲೂ, ಕಾಡು - ಕಾನನವು, ಒಳ್ಳಿತು–

---

ತನ್ನ ಬಾಯಲ್ಲಿರುವ ಗುಂಡಾದ ಸಾಲಗ್ರಾಮ ಶಿಲೆಯನ್ನು ಯಾವಾಗಲೂ ಧ್ಯಾನಮಾಡುತ್ತಲಿರುವ ಬಾಲಕನನ್ನು ಕಟುಕರು ಕೊಲ್ಲಲಾರದೆ ಎಡಗಾಲಿನ ಒಂದು ಬೆರಳನ್ನು ಮಾತ್ರ ಕತ್ತರಿಸಿಕೊಂಡು ಹೊರಟುಹೋದರು. ಇಂತಹ ಬಾಧೆಯೂ ಕೂಡ ಶ್ರೀ ಕೃಷ್ಣಸ್ವಾಮಿಯ ಅನುಗ್ರಹದಿಂದ ಆ ಬಾಲಕನಿಗೆ ನಿವಾರಣೆಯಾಗಿ ರಾಹುವಿನಿಂದ ಬಿಡುಗಡೆಯನ್ನೈದಿದ ಚಂದ್ರನೋಪಾದಿಯಲ್ಲಿ ರಾರಾಜಿಸುತ್ತಲಿದ್ದನು. ‖೩೪‖ ಅಯ್ಯೋ, ಅರ್ಜುನಾ ! ನಿನ್ನ ಸಖನಾದ ಕೃಷ್ಣಪರಮಾತ್ಮನನ್ನು ನಂಬಿದವರಿಗೆ ಆಪತ್ತು ಹೇಗೆ ತಾನೆ ಬಂದೀತು? ಈ ರೀತಿಯಲ್ಲಿ ಹೊಳೆಯುತ್ತಲಿರುವ ಬಾಲಕನ ಎಡಗಾಲಿನ ಬೆರಳನ್ನು ಕತ್ತರಿಸಿದ್ದರಿಂದುಂಟಾದ ಬಾಧೆಯನ್ನು ತಡೆಯಲಾರದೆ ಕೃಷ್ಣಸ್ಮರಣೆಯನ್ನು ಮಾಡುತ್ತಾ ವ್ಯಸನದಿಂದ ಕಣ್ಣುಗಳಲ್ಲಿ ನೀರನ್ನು ಸುರಿಸುತ್ತಿರಲು, ಅಲ್ಲಿ ನೆರದಿದ್ದ ಪಕ್ಷಿಗಳು ಇದನ್ನು ನೋಡಿ ನಿದ್ರಾಹಾರಂಗಳನ್ನು ಬಿಟ್ಟು ತಾವೂ ಈ ಬಾಲಕನೊಂದಿಗೆ ಮರುಗುತ್ತ ಅವನನ್ನು ಎಡೆಬಿಡದೆ ಉಪಚಾರಮಾಡಿಕೊಂಡು ಅವನ ದುಃಖವನ್ನು ಶಮನಮಾಡುತ್ತಲಿದ್ದವು. ಕೇಳೈಪಾರ್ಥ, ಪಕ್ಷಿಗಳೂ ಕೂಡ ಈ ರೀತಿಯಲ್ಲಿ ಕನಿಕರದಿಂದ ಪರೋಪಕಾರವಂ ಮಾಡುತ್ತಲಿರುವಾಗ ಮಾನವನಾದವನು ದೀನರನ್ನು ನೋಡಿ ಮರುಕವನ್ನೈದದಿದ್ದರೆ ಅಂತಹ ಮೂಢನಿಗಿಂತಲೂ ಪಾಪಿಗಳು ಮತ್ತೆ ಯಾರಿರುವರು ? ಇನ್ನೂ ಈ ಬಾಲಕನ ದುರವಸ್ಥೆಯನ್ನು ಕೇಳು ‖೩೫‖ ಈ ರೀತಿಯಲ್ಲಿ ದುಃಖಾಕ್ರಾಂತನಾಗಿರುವ ಬಾಲಕನನ್ನು ನವಿಲುಗಳು ನೋಡಿ ತಮ್ಮ ರೆಕ್ಕೆಗಳನ್ನಗಲಿಸಿ ಕೊಡೆಯಾಗಿ ಮಾಡಿದವು. ಹಂಸ

ದುರ್ಚಿತುಸಾರಸಂಸಲಿಲದೊಳ್ನೆನೆದಪಕ್ಕಂಗಳಂಬಿದಿರ್ಚಿ ॥ ಮರುಗಿಮೆಲ್ನುಡಿಯಲುಪಚರಿಸಿದವುಗಿಳಿಗಳ । ಕ್ಕರೊಳಳಿಗಳ ರ್ಭಕನರೋದನದಕೂಡಳುವ । ತೆರದೊಳ್ಮೆರೆದವಲ್ಲಿಕರುಬರಿದೂರ್ಂದಕಾಡೊಳ್ಳಿತೆನಿಸುವಂತೆ ॥ ೩೬ ॥ ನಿಲ್ಲದೆನರಳ್ವಪಸು ಳೆಯನಿರ್ಮಲಾಸ್ಯಮಂ । ಪುಲ್ಲೆಗಳ್ಕಂಡುಕಾನನಕೆಕಾಮಿಸಿತಮ್ಮ । ನಲ್ಲನೈತರಲುಮ್ಮಳಿಸಿವಾಹನವನರಸಬಂದಪೂರ್ಣೇಂದು ವೆಂದು ॥ ವಲ್ಲಭಸ್ವಾಮಿಯಂಬೇಡಿಕೊಳುತಿರ್ದುವೆನೆ । ಮೆಲ್ಲಮೆಲ್ಲನೆಪೊರೆಗೆಪೊದ್ದಿಬಾಲಕನಂಘ್ರಿ । ಪಲ್ಲವದರುಧಿರಮಂ ಕುಡಿನಾಲಿಗೆಗಳಿಂದಸವಿದುಲೇಪಂಗೈದವು ॥ ೩೭ ॥ ಕೋಗಿಲೆಯನಿಡುಸರಂಪಾರಿವದಕಲ್ಲುಣಿಸು । ಗೂಗೆಗಳಕಣ್ಪೊಳಸುಬಕನ ಮೌನದಬೆರಗು । ನಾಗದನಿರಾಹಾರಮಳಿಗಳಪರಿಭ್ರಮಣವಿಭದಸೀತ್ಕಾರಂಗಳು ॥ ಪೋಗಲಡಿಯಿಡಲರಿಯೆನಾರೈವಜನಮಿಲ್ಲ।

ಉತ್ತಮವು, ಎನಿಸುವಂತೆ-ಎನ್ನಿಸಿಕೊಳ್ಳುವ ರೀತಿಯಾಗಿ, ನವಿಲು-ಶಿಖಿಯು, ಗರಿ-ತಮ್ಮ ಪಕ್ಕಂಗಳನ್ನು, ಕೆದರಿ-ಅಗಲಿಸಿ, ಕೊಡೆ ಪಿಡಿದು-ಕೊಡೆಯ ಹಾಗೆ ಮಾಡಿ, ನಿಂದವು-ನಿಂತುಕೊಂಡವು, ಅಂಚೆ-ಹಂಸವಾದರೊ, ರೆಕ್ಕೆಯಂ-ತನ್ನ ರೆಕ್ಕೆಯನ್ನು, ಬೀಸಿ-ಅಲ್ಲಾಡಿಸುತ್ತ, ಬಿಜ್ಜಣವಿಕ್ಕಿತು-ಬೀಸಣಿಗೆಯಂತೆ ಉಪಚರಿಸಿತು, ಸಾರಸಂ-ಸಾರಸಪಕ್ಷಿಯು, ಸಲಿಲದೊಳ್-ಉದಕ ದಲ್ಲಿ, ನನೆದ-ನೆನದಿರುವ, ಪಕ್ಕಂಗಳಂ-ರೆಕ್ಕೆಗಳನ್ನು, ಬಿದಿರ್ಚಿತು-ಉದರಿಸಿ ಬಿಟ್ಟಿತು, ಗಿಳಿಗಳು-ಗಿಳಿಗಳಾದರೊ, ಮರುಗಿ-ಸಂ ಕಟವನ್ನೈದಿ, ಮೆಲ್ನುಡಿಯಲಿ-ಇಂಪಾದ ನುಡಿಗಳಿಂದ, ಉಪಚರಿಸಿದವು-ಉಪಚಾರವಂ ಮಾಡಿದವು, ಅಳಿಗಳು-ಭೃಂಗಂಗಳು, ಅರ್ಭಕನ-ಬಾಲಕನ, ರೋದನದ ಕೂಡೆ-ಅಳುವುದರಜತೆಗೆ, ಅಕ್ಕರೊಳ್-ವಿಶ್ವಾಸದಿಂದ, ಅಳುವತೆರದೊಳ್-ಅಳುವ ಹಾಗೆ, ಅಲ್ಲಿ-ಆ ಎಡೆಯಲ್ಲಿ, ಮೆರೆದವು-ತಿರುಗುತ್ತಲಿದ್ದವು ॥೩೬॥

ಟೀ॥ ಪುಲ್ಲೆಗಳ್-ಜಿಂಕೆಗಳಾದರೊ, ನಿಲ್ಲದೆ-ಎಲ್ಲಿಯೂ ನಿಲ್ಲದೆ, ನರಳ್ವ-ಸಂಕಟಪಡುತ್ತಲಿರತಕ್ಕ, ಪಸುಳೆಯ-ಹುಡುಗನ, ನಿರ್ಮಲ-ಪರಿಶುದ್ಧವಾಗಿರತಕ್ಕ, ಆಸ್ಯಮಂ-ಮುಖವನ್ನು, ಕಂಡು-ಈಕ್ಷಿಸಿ, ತಮ್ಮನಲ್ಲನು-ತಮ್ಮ ಪತಿಯು, ಕಾಮಿಸಿ-ಕಾಮೋದ್ರೇಕವನ್ನುಂಟಾಗಿ, ಕಾನನಕೆ-ಕಾಡಿಗೆ, ಐತರಲು-ಬರುವುದಕ್ಕೆ, ಉಮ್ಮಳಿಸಿ-ಸಿಟ್ಟುಮಾಡಿಕೊಂಡು, ವಾಹನವನು-ತನ್ನ ವಾಹನವನ್ನು, ಅರಸೆಬಂದ- ಹುಡುಕಲೆಳಸಿ ಬಂದಿರತಕ್ಕ, ಪೂರ್ಣೇಂದುವು - ಷೋಡಶಕಲೆಗಳಿಂ ವಿರಾಜಮಾನನಾದ ಇಂದುವೆಂಬುದಾಗಿ, ವಲ್ಲಭಸ್ವಾಮಿಯಂ-ಹಿಮಾಂಶುವನ್ನು, ಬೇಡಿಕೊಳುತ-ಕೇಳಿಕೊಳ್ಳುತ್ತ, ಇದ್ದವು- ಇರುತ್ತಲಿದ್ದವು, ಎನೆ-ಎಂಬತೆರನಾಗಿ, ಮೆಲ್ಲಮೆಲ್ಲನೆ-ಬಹು ನಿಧಾನವಾಗಿ, ಪೊರೆಗೆ-ಹತ್ತಿರಕ್ಕೆ, ಪೊದ್ದಿ-ಹೋಗಿ ಸೇರಿ, ಕುಡಿನಾಲಿಗೆಗಳಿಂದ-ಕೊನೆ ನಾಲಿಗೆಗಳಿಂದ, ಬಾಲಕನ-ಹಸುಳೆಯ, ಕರಾಂಘ್ರಿಪಲ್ಲವದ-ಚಿಗುರನ್ನು ಹೋಲುವ ಕಾಲ್ಗಳ, ರುಧಿರಮಂ-ನೆತ್ತರನ್ನು, ಸವಿದು-ಪಾನವಂ ಮಾಡಿ, ಲೇಪಂಗೈದುವು-ಬಳಿದುಕೊಂಡವು.

ಅ॥ ವಿ॥ ಅಂಘ್ರಿಪಲ್ಲವ-ಪಲ್ಲವದಂತಿರುವ ಅಂಘ್ರಿ (ಉ. ಉ. ಕ) ನಿರ್ಮಲಾಸ್ಯ (ಸ. ದೀ) ॥೩೭॥

ಟೀ॥ ಕೋಗಿಲೆಯ-ಕೋಗಿಲೆಯೆಂಬ ಹಕ್ಕಿಯ, ನಿಡುಸರಂ-ಉದ್ದವಾಗಿ ಬಿಡುವ ಶ್ವಾಸವು, ಪಾರಿವದ-ಕಪೋತ ಪಕ್ಷಿಯ, ಕಲ್ಲುಣಿಸು-ಕಲ್ಲುಗಳನ್ನು ನುಂಗುವ ಕ್ರಮವು, ಗೂಗೆಗಳ-ಗೂಬೆಗಳ, ಕಣ್ಪೊಳಸು-ಕುರುಡತನವು, ಬಕನ-ಬಕ ಪಕ್ಷಿಯ, ಮೌನದ-ಚಲಿಸದಿರತಕ್ಕ, ಬೆರಗು-ಆಶ್ಚರ್ಯವು, ನಾಗದ-ಹಾವಿನ, ನಿರಾಹಾರಂ-ತಿಂಡಿಯಿಲ್ಲದಿರುವಿಕೆಯು, ಅಳಿಗಳ-ಭೃಂಗಗಳ, ಪರಿಭ್ರಮಣಂ-ತಿರುಗಾಟವು, ಇಭದ-ಗಜದ, ಸೀತ್ಕಾರಂಗಳು-ಘೀಂಕಾರಶಬ್ದವಿಶೇಷವು, ಪೋಗಲು-ಹೋಗುವುದಕ್ಕೂ, ಅಡಿಯಿಡಲು-ಹೆಜ್ಜೆಯನ್ನೂರುವುದಕ್ಕೂ, ಅರಿಯೆನು-ತಿಳಿದಿಲ್ಲವು, ಆರೈವಜನಂ - ಉಪಚಾರಮಾಡತಕ್ಕವರು, ಇಲ್ಲದ-ಬಿಡುಗಡೆಯಾದ, ಆ ಗಹನಗಂಹರದೊಳು-ಆ ಕಾಡಿನ ಮಧ್ಯದೆಡೆಯೊಳಗೆ, ಅಳುವ-ಗೋಳಾಡುತ್ತಲಿರತಕ್ಕ, ಶಿಶುವಂ-ಹಸುಳೆಯನ್ನು, ದುಃಖಾತಿರೇಕಂ-ಹೆಚ್ಚಾದ ವ್ಯಸನಪರಂಪರೆಯೇ, ನೋಡಲಾಗಿ-ನೋಡಬೇಕೆಂಬಿಚ್ಛೆಯಿಂದ, ಬಂದು-ಸಮೀಪಿಸಿ, ಎಡೆಗೊಂಡುದು-ಆವರಿಸಿಕೊಂಡಿತು, ಎಂಬಂತೆ-ಎನ್ನುವ ತೆರನಾಗಿ, ಕಾಣಿಸುತ-ಕಾಣುತ್ತ, ಇರ್ದುದು-ಇದ್ದಂಥಾದ್ದಾಯಿತು.

ಪಕ್ಷಿಗಳು ತಮ್ಮ ರೆಕ್ಕೆಗಳಿಂದ ಗಾಳಿಯನ್ನು ಬೀಸಿದವು, ಸಾರಸಪಕ್ಷಿಗಳು ತಮ್ಮ ರೆಕ್ಕೆಗಳನ್ನು ನೀರಿನಲ್ಲಿ ಅದ್ದಿಕೊಂಡು ಬಂದು ಈ ಬಾಲಕನ ಮೇಲೆ ಸಣ್ಣಸಣ್ಣ ನೀರ್ಹನಿಗಳನ್ನು ಸುರಿಸಿದವು, ಶುಕಂಗಳಾದರೊ ತಮ್ಮ ಮುದ್ದು ಮಾತುಗಳಿಂದ ಆ ಬಾಲಕನ ದುಃಖವನ್ನು ಕುಗ್ಗಿಸಿದವು, ಭೃಂಗಂಗಳಾದರೊ ತಮ್ಮ ಝೇಂಕಾರದಿಂದ ತಾವೂ ಈ ಹಸುಳೆಯೊಂದಿಗೆ ಅಳುತ್ತಲಿರುವಂತೆ ತೋರ್ಪಡಿಸುತ್ತಲಿದ್ದವು, ಈ ರೀತಿಯಲ್ಲಿ ದುಷ್ಟಜನರಿರುವ ಊರಿಗಿಂತಲೂ ಅರಣ್ಯವೇ ಮೇಲಾಗಿರು॥೩೬॥ ವುದೆಂದು ಯೋಚಿಸುತ್ತಲಿರುವಾಗ ಚಂದ್ರನಂತೆ ಹೊಳೆಯುವ ಈ ಬಾಲಕನ ಮುಖದ ಹತ್ತಿರಕ್ಕೆ ಬಂದು ಹುಲ್ಲೆಗಳು ಕಾಲಿನಲ್ಲಿ ಸುರಿಯುತ್ತಲಿರುವ ರಕ್ತವನ್ನು ಚಂದ್ರಕಿರಣವೆಂಬ ಭ್ರಾಂತಿಯಿಂದ ನೆಕ್ಕುತ್ತಲಿದ್ದವು ॥ ೩೭ ॥ ಕೋಗಿಲೆಗಳು ತಮ್ಮ ಇನಿದಾದ ಧ್ವನಿಯನ್ನೂ, ಪಾರಿವಳಗಳು ಕಲ್ಲುಗಳನ್ನು ನುಂಗುವುದನ್ನೂ, ಗೂಬೆಗಳು ಕಣ್ಣುಗಳನ್ನು ತಿರುಗಿಸುವುದನ್ನೂ, ಬಕಪಕ್ಷಿಯ ಮೂಕಭಾವ

ಯಾಗಹನಗಂಹರದೊಳಳುವಶಿಶುವಂನೋಡಲಾಗಿಬಂದೆಡೆಗೊಂಡ | ದುಃಖಾತಿರೇಕಮೆಂಬಂತೆಕಾಣಿಸುತಿರ್ದುದು ||೩೮|| ಬಾಲಕನರೋದನದಕೂಡೆಬನದೇವಿಯ | ರ್‍ಗಾಳಿತೀಡಿದೊಡೆಭೋರೆಂಬತರುಲತೆಗಳಿಂ | ಘೋಳಿಟ್ಟವಗ್ನಿಜಲಭೂಗಗನವಾಯು ರವಿಶಶಿಗಳೇಣ್ಸೆಸೆವೆಣ್ಣಳು || ಹೇಳಲೇನಡವಿಯಚರಾಚರಂಗಳಜೀವ | ಜಾಲಂಗಳುರೆಮರುಗುತಿರ್ದುವನಿತರೊಳೊಂದು | ಕೋಲಾಹಲದಘೋಷಮೆಲ್ಲಿಯುಂಕಿವಿಗಿಡಿದುದಾಮಹಾಕಾನನದೊಳು ||೩೯|| ದಿನಪನುಪಟಳದಿಂದನೆಲೆಗೆಟ್ಟುಪಲವುರೂಪನೆ | ತಾಳ್ದುವನವಾಸದುರುತಪದಸಿದ್ಧಿಯಿಂ | ಘನತೆಯಂಪಡೆದುಮಿಗೆಪಗೆಯಾದಪಗಲಂತೊಲಗಿಸಂಧಕಾರಮೆನಲು || ಅನುಪಮದ ಕಾರೊಡಲಬೇಡಪಡೆನೇಂಟಗೆವಿ | ಪಿನದೊಳೈತರುತಿರ್ದುದಬ್ಬರದಬೊಬ್ಬೆಗಳ | ನಿನದದಿಂಜೀವಿಗಳಕೊಲೆಗೆಳಸಿದಂತಕನದೂತ ಸಂಘಾತದಂತೆ ||೪೦|| ತಪ್ಪತಪ್ಪಲೊಳಲ್ಲಿಗಲ್ಲಿಮಂಜುಗಳೆಸೆವಕಪ್ಪಕಪ್ಪನೆಯಗಿರಿಗಳಪರ್ಬುಗೆಗಳಂತೆ | - ಬಪ್ಪಬಪ್ಪೆಳನಾಯ್ಗಳಂ

ಅ|| ವಿ|| ನಿಡುಸರಂ_ನಿಡಿದಾದಸರಂ (ವಿ. ಪೂ) ಸರಂ (ತ್ಭ) ಸ್ವರ (ತ್ಸ) ಶಿಶು (ತ್ಸ) ಸಿಸು (ತ್ಭ) ದುಃಖಾತಿರೇಖಂ (ಸ. ದೀ. ಸಂಧಿ ಮತ್ತು ಷ. ತ) ||೩೮||

ಟೀ|| ಬನದೇವಿಯರ್_ಅರಣ್ಯಾಭಿಮಾನದೇವತೆಗಳಾದರೂ, ಗಾಳಿ-ಗಾಳಿಯು, ಬಾಲಕನ_ಪಸುಳೆಯ, ರೋದನದ ಕೂಡೆ_ಅಳುವುದರ ಜತೆಗೆ, ತೀಡಿದೊಡೆ_ಬೀಸಲಾಗಿ, ಭೋರೆಂಬ-ಭೋ ಎಂದು ಶಬ್ದಮಾಡುವ, ತರುಲತೆಗಳಿಂ-ದೊಡ್ಡ ಮರಗಳು ಬಳ್ಳಿಗಳು ಇವುಗಳಿಂದ, ಗೋಳಿಟ್ಟವು – ರೋದನಧ್ವನಿಯನ್ನುಂಟುಮಾಡಿದವು, ಅಗ್ನಿ-ಬೆಂಕಿಯು, ಜಲ_ಉದಕವು, ಭೂ_ಇಳೆಯು, ಗಗನ_ಅಂತರಿಕ್ಷವು, ವಾಯು_ಪವನನು, ರವಿ ಶಶಿಗಳು_ದಿನಕರ ಹಿಮಕರರೂ, ಏಣ್ಸೆಸೆವೆಣ್ಣಳು_ಎಂಟು ದಿಕ್ಕುಗಳೆಂಬ ಕನ್ನಿಕೆಯರೂ, ಅಡವಿಯ-ಅರಣ್ಯದ, ಚರಾಚರಂಗಳ_ಚೇತನಾಚೇತನ ವಸ್ತುಸಮೂಹದಿಂದ ಕೂಡಿದ ಲೋಕದ, ಜೀವಜಾಲಂಗಳು_ ಪ್ರಾಣಿ ಸಮುದಾಯವು, ಉರೆ-ಹೆಚ್ಚಾಗಿ, ಮರುಗುತಿರ್ದವು- ದುಃಖಪಡುತ್ತಲಿದ್ದವು, ಆ ಮಹಾಕಾನನದೊಳು-ಆ ಘೋರಾರಣ್ಯದೊಳಗೆ, ಅನಿತರೊಳ್-ಅಷ್ಟು ಹೊತ್ತಿಗೆ, ಎಲ್ಲಿಯುಂ_ ಎಲ್ಲಾ ಕಡೆಯಲ್ಲಿಯೂ, ಒಂದು_ಒಂದಾದ, ಕೋಲಾಹಲದ ಘೋಷಂ_ಕೋಲಾಹಲ ನಿನದವು, ಇಡಿದುದು_ವ್ಯಾಪಿಸಿತು ||೩೯||

ಟೀ|| ಅನುಪಮದ_ ಹೋಲಿಕೆಯನ್ನುಂಟಾಗಿಲ್ಲದ, ಕಾರೊಡಲ- ಕಪ್ಪುದೇಹವುಳ್ಳ, ಬೇಡಪಡೆ- ಬೇಡರ ಗುಂಪು, ಜೀವಿಗಳ-ಜೀವರಾಶಿಗಳ, ಕೊಲೆಗೆ_ಕೊಂದುಹಾಕುವ ಕೃತ್ಯಕ್ಕೆ, ಎಳಸಿದ-ಕೋರಿದ, ಅಂತಕನ-ಯಮಧರ್ಮರಾಯನ, ದೂತಸಂಘಾತದಂತೆ_ದೂತರ ಸಮುದಾಯದೋಪಾದಿಯಲ್ಲಿ, ಅಬ್ಬರದ-ಗರ್ಜನೆಯ, ಬೊಬ್ಬೆಗಳ-ಕೂಗಾಟದ, ನಿನದದಿಂ_ಶಬ್ದವನ್ನುಂಟಾಗಿ, ದಿನಪನ_ರವಿಯು, ಉಪಟಳದಿಂದ_ಕಾಂತಿವಿಶೇಷದಿಂದ ಮತ್ತು ಕ್ರೀಡಾತಿಶಯದಿಂದ, ನೆಲೆಗೆಟ್ಟು-ವಾಸಸ್ಥಾನವನ್ನು ಬಿಟ್ಟು, ಪಲವು-ಅನೇಕವಾದ, ರೂಪನೆ-ಆಕೃತಿಗಳನ್ನೆ, ತಾಳ್ದು-ಹೊಂದಿ, ವನವಾಸದ-ಕಾಡಲ್ಲಿ ತಿರುಗುವಿಕೆಯಿಂದುಂಟಾದ, ಉರು_ಅಧಿಕವಾದ, ತಪದ_ತಪಸ್ಸಿನ, ಸಿದ್ಧಿಯಿಂ-ಕೈಗೂಡುವಿಕೆಯನ್ನು, ಘನತೆಯಂ_ಮನ್ನಣೆಯನ್ನೂ ಸಹ, ಮಿಗೆ_ಹೆಚ್ಚಾಗಿ, ಪಡೆದು_ತಾಳಿ, ಪಗೆಯಾದ-ವೈರಿಯಾದ, ಪಗಲಂ_ಕತ್ತಲನ್ನು, ತೊಲಗಿಪ-ಹೋಗಲಾಡಿಸತಕ್ಕ, ಅಂಧಕಾರಂ-ಕತ್ತಲೆಯು, ಎನಲು-ಎಂಬತೆರನಾಗಿ, ಐತರುತಿರ್ದುದು_ಬರುತ್ತಲಿತ್ತು.

ಅ|| ವಿ|| ಉಪಟಳ_ಬಾಧೆ, ಪಟಲ_ಸಮೂಹ, ಕಾರೊಡಲು (ವಿ. ಪೂ) ಪಡೆ-ಸೈನ್ಯ (ನಾ) ಪಡೆ_ಹೊಂದು (ಕ್ರಿ) ಅಂತಕ-ಕೊನೆಯನ್ನುಂಟುಮಾಡುವವನು ||೪೦||

ಟೀ|| ಶಬರಸೇನೆ-ಬೇಡರ ಗುಂಪಾದರೊ, ಅಲ್ಲಿಗಲ್ಲಿಗೆ_ಅಷ್ಟಷ್ಟರಲ್ಲಿ, ತಪ್ಪತಪ್ಪಲೊಳ್_ ಬೆಟ್ಟಗಳ ಸಾನುಪ್ರದೇಶಗಳಲ್ಲಿ, ಮಂಜುಗಳ-ಹಿಮರಾಶಿಯಿಂದ, ಎಸೆವ-ಹೊಳೆಯುತ್ತಲಿರುವ, ಕಪ್ಪಕಪ್ಪನೆಯ-ಬಹುಕಪ್ಪಾಗಿರತಕ್ಕ, ಗಿರಿಗಳ-ಬೆಟ್ಟಗಳ,

ವನ್ನೂ ಹಾವುಗಳು ಆಹಾರವಂ ಬಿಟ್ಟಿರುವುದನ್ನೂ, ದುಂಬಿಗಳು ತಮ್ಮ ಝೇಂಕಾರವನ್ನೂ ಆನೆಗಳು ಘೀಂಕಾರಧ್ವನಿಯನ್ನೂ ಬಿಟ್ಟು ನಿರ್ಜನಪ್ರದೇಶವಾಗಿರುವ ಆ ಘೋರಾರಣ್ಯದಲ್ಲಿ ಅಳುತ್ತಲಿರುವ ಬಾಲಕನ ಜತೆಗೆ ತಾವೂ ದುಃಖಪಡುತ್ತಲಿರುವಂತೆ ಕಾಣುತ್ತಲಿದ್ದವು ||೩೮|| ಹಸುಳೆಯು ಕಾಲಿನ ಬಾಧೆಯನ್ನು ತಡೆಯಲಾರದೆ ದುಃಖಿಸುತ್ತ ಹೋ ಎಂದು ಅಳುವ ಧ್ವನಿಯ ಜತೆಗೆ ಗಾಳಿಯ ಶಬ್ದವೂ ಮರದ ರೆಂಬೆಗಳಿಂದುಂಟಾದ ಬಿರ್ರೆಂಬಧ್ವನಿಯೂ ಒಂದುಗೂಡಿದ್ದರಿಂದ ಅತ್ಯಾರ್ಭಟವುಂಟಾಯಿತು ಪಂಚಭೂತಂಗಳೂ ಸೂರ್ಯ ಚಂದ್ರರೂ ಲೋಕದ ಸಕಲ ಜೀವರಾಶಿಗಳೂ ದುಃಖಾತಿಶಯದಿಂದ ಕೂಡಿರುವಾಗ ಅರಣ್ಯ ಮಧ್ಯಪ್ರದೇಶದಲ್ಲಿ ಒಂದಾನೊಂದು ದೊಡ್ಡ ಶಬ್ದವು ಕೇಳ ಬಂದಿತು ||೩೯|| ಇದಾದ ಸ್ವಲ್ಪ ಹೊತ್ತಿನೊಳಗಾಗಿ ಸೂರ್ಯನ ಬಾಧೆಯಿಂದ ದಿಕ್ಕೆಟ್ಟು ಓಡಿ ಬರುತ್ತಲಿರುವ ಘೋರಾಂಧಕಾರದಂತೆ ಕಪ್ಪಾದ ಮೈಯುಳ್ಳವರಾಗಿಯೂ ಯಮದೂತರಂತೆ ಘೋರಾಕಾರವುಳ್ಳವರಾಗಿಯೂ ಇರುವ ಬೇಡರು ಗುಂಪುಗುಂಪಾಗಿ ಬರುತ್ತಲಿರುವುದನ್ನೂ || ೪೦ || ಕೈಯಲ್ಲಿ ಬೇಟೆನಾಯಿಗಳನ್ನು

ಹಾಸೊಳಾಂತುಬಂದುದುಶಬರಸೇನೆಬಳಿಕ ‖ ಸೊಪ್ಪುಸೊಪ್ಪುಗಳಮೆಳೆಮೆಳೆಗಳಂಸೋವುತ್ತ । ತಪ್ಪತಪ್ಪದೆಶರಂಗಳಂತೆಗೆದೆಚ್ಚು । ತೊಪ್ಪತೊಪ್ಪನೆಮೃಗಮೃಗಂಗಳಂಕೆಡಹಿದರ್ಕಾನನದೊಳೇವೇಳ್ವೆನು ‖ ೪೧ ‖ ಚಾಪಬಾಣಂಗಳೇತಕೆಬೇಂಟೆಗಂಗಜನ। ಚಾಪಬಾಣಂಗಳಿರ್ದಪುವೆಮ್ಮೊಳೆಂಬೊಲಿಹ। ಚಾಪಲಭ್ರೂಲತೆಯಚಂಚಲಾಪಾಂಗದಪುಳಿಂದೆಯರ್ತಮ್ಮತಮ್ಮ‖ ಓಪರಂಬಳಿವಿಡಿದುಬರುತಿರ್ದರಾಗಸ । ಲ್ಲಾಪದಿಂದೆಸೆವಹರಿಹರಿಣಕರಿಚಮರಿಗಳ । ರೂಪಂಗಳವಯವದೊಳಾರಾಜಿಸಲವಕೆತಾತದೇಹಂಗಳಾಗಿ ‖ ೪೨ ‖ ಸೊಕ್ಕಾನೆಗಳಸೊಗಡನುರ್ವಕಸ್ತೂರಿಯಮೃಗದಿಕ್ಕೆಗಳನಲ್ಲಲ್ಲಿಪುಣುಗಿನಜವಾಜಿಗಳ । ಬೆಕ್ಕುಗಳಬಿಡೆಯದಾಡುಂಬೊಲವನರಸುವಕಿರಾತರಂಗಚ್ಛವಿಗಳು ‖ ಅಕ್ಕರಿಂದವರವರತನುಪರಿಮಳಂಗಳ್ಗೆ । ತಕ್ಕುವೆಳೆದುಂಬಿಗಳಬಳಗಂಗಳೆಂಬಂತೆ । ಪೊಕ್ಕುಪೊಕ್ಕಡವಿಯೊಳ್ಕಣ್ಗೆ ಕಾಣಿಸುತಿರ್ದುವೇನೆಂಬೆನಚ್ಚರಿಯನು ‖ ೪೩ ‖ ಇದೆಪಂದಿಕೆದರಿದನೆಲಂನೋಡಲಿದೆ

---

ಪಬ್ಬುಗೆಗಳಂತೆ-ಹರಡಿರುವಿಕೆಯ ರೀತಿಯಿಂದ, ಬಪ್ಪಬಪ್ಪ – ಹತ್ತಿರ ಬರತಕ್ಕ, ಎಳೆನಾಯ್ಗಳಂ – ನಾಯಿಯ ಮರಿಗಳನ್ನು, ಹಾಸೊಳು_ಕತ್ತಿನ ಸರಪಣಿಗಳಿಂದ, ಆಂತು_ತಾಳಿ, ಬಂದುದು-ಬಂದಂಥಾದ್ದಾಯಿತು, ಬಳಿಕ_ಆಮೇಲೆ, ಸೊಪ್ಪುಸೊಪ್ಪುಗಳ_ಮರದೆಲೆಗಳ, ಮೆಳೆಮೆಳೆಗಳಂ-ದಂಟಿನ ಭಾಗವನ್ನು, ಬಿಡಬಿಡದೆ – ಬಿಟ್ಟುಬಿಡದೆ, ಸೋವುತ್ತ – ಬಯಲಿಗೆ ಬರುವಂತೆ ಮಾಡುತ್ತ, ಶರಗಳಂ_ಸರಲ್ಗಳನ್ನು, ತೆಗೆದು_ತೆಗೆದುಕೊಂಡು, ಎಚ್ಚು_ಹೊಡೆದು, ಕಾನನದೊಳು-ಕಾಡಿನೊಳಗೆ, ಮೃಗಮೃಗಂಗಳಂ_ಅಲ್ಲಿನ ಮೃಗರಾಶಿಯನ್ನೆಲ್ಲಾ, ತೊಪ್ಪತ್ತೊಪ್ಪನೆ-ತೊಪತೊಪ ಎಂಬ ಧ್ವನಿಯುಂಟಾಗುವಂತೆ, ಕೆಡಹಿದರು_ನೆಲದಮೇಲಕ್ಕೆ ಉರುಳಿಸಿದರು, ಏವೇಳ್ವೆನು_ಏನೆಂದು ನುಡಿಯಲಿ.

ಅ‖ ವಿ‖ ತಪ್ಪತಪ್ಪಲೊಳ್-ಕಪ್ಪಕಪ್ಪನೆ, ಬಪ್ಪಬಪ್ಪ, ಸೊಪ್ಪುಸೊಪ್ಪುಗಳ, ಮೆಳೆಮೆಳೆ, ತಪ್ಪತಪ್ಪದೆ, ಶರಶರಂಗಳ್ ತೊಪ್ಪತೊಪ್ಪನೆ, ಮೃಗಮೃಗ ಈ ದ್ವಿರುಕ್ತಿಗಳು ಆಧಿಕ್ಯಾರ್ಥದಲ್ಲಿ ಪ್ರಯೋಗಿಸಲ್ಪಟ್ಟಿವೆ ಮೃಗ (ತ್ಸ) ಮಿಗ (ತ್ಭ) ‖೪೧‖

ಟೀ‖ ಆಗ-ಆ ಕಾಲದಲ್ಲಿಯಾದರೊ, ಚಾಪಬಾಣಂಗಳು-ಅಂಬು ಬಿಲ್ಲು ಮೊದಲಾದವು, ಬೇಂಟೆಗೆ_ಬೇಟೆಯ ಕೆಲಸಕ್ಕೆ, ಏತಕೆ_ಏನು ಪ್ರಯೋಜನ, ಅಂಗಜನ – ಮದನನ, ಚಾಪಬಾಣಂಗಳು – ಧನುಸ್ಸು ಶರಗಳು ಸಹ, ಎಮ್ಮೊಳು-ನಮ್ಮ ಹತ್ತಿರ, ಇರ್ದಪವು-ಇವೆ, ಎಂಬೊಲು_ಎನ್ನುವ ತೆರನಾಗಿ, ಇಹ_ಇರತಕ್ಕ, ಚಾಪಲಭ್ರೂಲತೆಯ, ಸ್ಥಿರವಿಲ್ಲದ ಲತೆಯಂತಿರುವ ಕಣ್ಣುಬ್ಬುಗಳಿಂದ ಕೂಡಿರತಕ್ಕ. ಪುಳಿಂದೆಯರ್_ಬೇಡತಿಯರು, ಸಲ್ಲಾಪದಿಂ-ನುಡಿಗಳಿಂದ, ಎಸೆವ – ಹೊಳೆಯುತ್ತಲಿರುವ, ಹರಿ_ಸಿಂಗವು, ಹರಿಣ-ಜಿಂಕೆಯು, ಕರಿ_ಗಜವು, ಚಮರಿಗಳ_ಚಮರೀಮೃಗಗಳು ಇವುಗಳ, ರೂಪಂಗಳ್_ಆಕಾರಗಳಾದರೊ, ಅವಕೆ-ಆ ಮಿಗಂಗಳಿಗೆ, ತಾವೇ-ಈ ಬೇಡರ ಹೆಂಗಸರೇ, ದೇಹಂಗಳಾಗಿ – ದೇಹವುಳ್ಳವರಾಗಿ, ಆರಾಜಿಸಲ್ಕೆ – ಹೊಳೆಯಲು, ಬರುತಿರ್ದರು-ಬರುತ್ತಲಿದ್ದವರಾದರು ‖೪೨‖

ಟೀ‖ ಸೊಕ್ಕಾನೆಗಳ ಮತ್ತಹಸ್ತಿಗಳ, ಸೊಗಡನು – ವಾಸನೆಯ ಹಾಗೆ, ಉರ್ವ – ಇರತಕ್ಕ, ಕಸ್ತೂರಿಯಮೃಗದ_ಕಸ್ತೂರೀಮೃಗದ, ಇಕ್ಕೆಗಳನು_ಸ್ಥಿತಿಯನ್ನೂ, ಅಲ್ಲಲ್ಲಿ-ಆಯಾಯ ಎಡೆಗಳಲ್ಲಿ, ಪುಣಗಿನ-ಪುನಗಿನಿಂದಲೂ, ಜವಾಜಿಗಳ_ಜವಾಜಿಯಿಂದಲೂ ಕೂಡಿದ, ಬೆಕ್ಕುಗಳ-ಮಾರ್ಜಾಲಂಗಳ, ಬಿಡಯದ – ಸಮುದಾಯದ, ಆಡುಂಬೊಲನನು – ಹುಲ್ಲುಗಾವಲನ್ನು, (ಮೇಯತಕ್ಕ ಬಯಲಿನ ಪ್ರದೇಶವನ್ನೂ) ಅರಸುವ – ಹುಡುಕಾಡುತ್ತಲಿರತಕ್ಕ, ಕಿರಾತರ – ಬೇಟೆಗಾರರ, ಅಂಗಚ್ಛವಿಗಳು_ದೇಹದ ಸೌಂದರ್ಯಾತಿಶಯವು, ಅವರವರ_ಆಯಾಯವ್ಯಾಧರ_ತನುಪರಿಮಳಂಗಳ್ಗೆ-ಶರೀರದ ಸುವಾಸನೆಗೆ, ಅಕ್ಕರಿಂದ_ವಿಶ್ವಾಸದಿಂದ, ತಕ್ಕುವ_ಹೋಗಿ ಸೇರುವ, ಎಳೆದುಂಬಿಗಳ-ದುಂಬಿಯ ಮರಿಗಳ, ಬಳಗಂಗಳು-ಸಮುದಾಯವು, ಎಂಬಂತೆ_ಎಂಬತೆರನಾಗಿ ಪೊಕ್ಕುಪೊಕ್ಕು-ಪ್ರವೇಶಮಾಡಿ ಪ್ರವೇಶಮಾಡಿ, ಅಡವಿಯೊಳ್_ಅರಣ್ಯದಲ್ಲಿ, ಕಣ್ಗೆ-ನಯನಂಗಳಿಗೆ, ಅಚ್ಚರಿಯನು_ಆಶ್ಚರ್ಯದ ರಾಶಿಯನ್ನು, ಕಾಣಿಸುತಿರ್ದವು_ಕಾಣಿಸುತ್ತಲಿತ್ತು, ಏನೆಂಬೆನು_ಏನೆಂದು ನುಡಿಯಲಿ.

ಅ‖ ವಿ‖ ಅಚ್ಚರಿ (ತ್ಭ) ಆಶ್ಚರ್ಯ (ತ್ಸ) ಸೊಕ್ಕಾನೆ_ಸೊಕ್ಕಿದ ಆನೆ (ವಿ. ಪೂ.) ಕತ್ತುರಿ (ತ್ಭ) ಕಸ್ತೂರಿ (ತ್ಸ) ‖೪೩‖

---

ಹಿಡಿದುಕೊಂಡು ಪರ್ವತದ ತಪ್ಪಲುಗಳಲ್ಲಿಯೂ ಅರಣ್ಯದ ಪೊದೆಗಳೆಡೆಯಲ್ಲಿಯೂ ಅವಿತುಕೊಂಡಿರುವ ಮೃಗಗಳಮೇಲೆ ಅಂಬನ್ನೆಸೆದು ಕೊಂದುಕೊಂದು ರಾಶಿಮಾಡುತ್ತಲಿರುವುದನ್ನೂ ‖೪೧‖ ಸಿಂಹದ ನಡುವಿನಂತೆ ನಡುವನ್ನೂ, ಜಿಂಕೆಗಳ ಕಣ್ಣುಗಳಂತೆ ಅಂದವಾದ ಕಣ್ಣುಗಳನ್ನೂ, ಆನೆಯ ಮುಂದಗಮನದಂತಿರುವ ನಡಿಗೆಯನ್ನೂ ವುಳ್ಳ ಬೇಡತಿಯರು ತಮ್ಮನ್ನೆಲ್ಲರ ಬೆನ್ನಂಪಿಡಿದು ಬರುತ್ತಲಿರುವುದನ್ನೂ ‖೪೨‖ ಮದ್ದಾನೆಗಳು, ಪುಣಗಿನ ಬೆಕ್ಕುಗಳು ಕತ್ತುರಿಮಿಗಂಗಳು, ಮೊದಲಾದವುಗಳನ್ನೆಲ್ಲಾ ಸೂರೆಗೊಳ್ಳುತ್ತಲಿರುವುದನ್ನೂ ನೋಡಿದರೆ ಅಪಾರವಾದ ಅಚ್ಚರಿಯುಂಟಾಗುತ್ತಲಿದ್ದಿತು ‖೪೩‖ ಈ ರೀತಿಯಲ್ಲಿ ರಭಸದಿಂದೈತರುತ್ತಲಿರುವ ಬೇಟೆಗಾರರಾದರೊ ವನಮಾರ್ಗದಲ್ಲಿ ಸಂಚಾರಮಾಡಿಕೊಂಡು ಬರುತ್ತಾ ನೆಲವೆಲ್ಲಾ ಕೆದರಿರುವುದನ್ನು ನೋಡಿ ಹಂದಿಗ

ದಂತಿ | ಕದಡಿದಕೊಳಂತೋರಲಿದೆವುಲಿಯುಗಿದಮೃಗದ | ಮೆದುಳಿತ್ತಲಿದೆಸಿಂಗವೆರಗಿದಾನೆಯತಲೆಯಮುತ್ತುದುರಿನೆತ್ತರೊಡನೆ || ಇದೆವನಮಹಿಷನುದ್ದಿಕೊಂಡಮರದಿಗುಡಿತ್ತ | ಲಿದಕೊಸಾರಂಗಮಿಕ್ಕಡಿಗೈದಪಾವಿತ್ತ | ಲಿದೆವುಲ್ಲೆಗಳಪಕ್ಕೆಮರಿಗಳಿಕ್ಕೆಗಳೆಂದುಪರಿದರ್ಪುಳಿಂದರಂದು || ೪೪ || ನಡೆಪಜ್ಜೆವಿಡುಪೋಗುತಡೆನಿಲ್ಲುಜಡಿಬೊಬ್ಬೆ | ಗೊಡುಪೊದರೊಳಡಗುಕೈಗೆಡದಿರೆಸೆನಿಡುಸರಳ | ತೊಡುಕೆಲಕೆಸಿಡಿಯದಿರ್ಪೊಡೆಸಾರ್ಚುತುಡುಕುಮೊಗೆಸಡಗುಮರಕಡರೊಡರ್ಚು || ಅಡಗಿಪೊಯ್ಜಡಿಕೋಲನೆಡುಮುಂದುಗಡೆನಾಯಿವಿ | ಡುಕೂಡೆಪಡಿತಳಿಸುಸೆಡೆಯದಿರ್ಕೆಡಪೆಂಬ | ನುಡಿಗಳಡಿಗಡಿಗೆಕಿವಿಗಿಡಿದುದೆಲ್ಲೆಡೆಯೊಳಂದಡವಿಯೊಳ್ಕಡುಪೊಸತೆನೆ || ೪೫ || ಉಬ್ಬಿದುರದೇರಿದೆಗೆದೊಡಲಬಾಗಿದಬೆನ್ನ | ಹಬ್ಬುಗೆಯಪಚ್ಚಳದಸೆಳೆದಬಾಲದಕೊನೆಯ |

ಟೀ|| ಅಂದು–ಆಗ, ಪುಳಿಂದರು–ಬೇಟೆಗಾರರಾದರೊ, ಪಂದಿ–ಹಂದಿಯಾದರೊ, ಕೆದರಿದ - ಗೀಚಿರತಕ್ಕ, ನೆಲಂ–ನೆಲವು, ಇದೆ–ಇಲ್ಲಿ ಕಾಣುತ್ತದೆ, ನೋಡಲು–ಪರಿಕಿಸಿದರೆ, ದಂತಿ–ಹಸ್ತಿಯು, ಕದಡಿದ–ಚದುರಿಸಿರತಕ್ಕ, ಕೊಳಂ–ಸರೋವರವು, ಇದೇ–ಇಗೋ, ಪುಲಿ–ಹುಲಿಯು, ಉಗಿದ–ತಿಂದುಹಾಕಿದ, ಮೃಗದ–ಜಿಂಕೆಯ, ಮೆದುಳ್–ಮೆದುಳಾದರೊ, ತೋರಲಿದೆ–ಕಾಣುತ್ತಲಿದೆ, ಸಿಂಗಂ–ಮೃಗರಾಜನು, ಎರಗಿದ ಬೇಟೆಯಾಡಿದ, ಆನೆಯ–ಗಜದ, ತಲೆಯ–ತಲೆಯಲ್ಲಿರತಕ್ಕ, ಮುತ್ತು–ಮೌಕ್ತಿಕವು, ಉದುರಿ–ಕೆಳಗೆ ಬಿದ್ದು, ಇತ್ತಲು–ಈಕಡೆ, ನೆತ್ತರೊಡನೆ–ರಕ್ತದೊಂದಿಗೆ, ಇದೆ–ಸೇರಿದೆ, ವನಮಹಿಷನು – ಕಾಡುಕೋಣವು, ಉದ್ದಿಕೊಂಡು–ಉಜ್ಜಿಕೊಂಡಿರುವ, ಮರದಿಗುಡು–ಮರದ ಬಬ್ಬಡೆಯು, ಇದೆ – ಕಾಣುತ್ತಲಿದೆ, ಇತ್ತಲ್ - ಈ ಭಾಗದಲ್ಲಿ, ಸಾರಂಗಂ–ಸಾರಗವು, ಇಕ್ಕಡಿಗೈದ–ಎರಡಾಗಿ ಭಾಗಿಸಿದ, ಪಾವು–ಸರ್ಪವು, ಇದಕೊ–ಇಲ್ಲಿಯೇ ಕಾಣುತ್ತಲಿರುವುದು, ಪುಲ್ಲೆಗಳ–ಜಿಂಕೆಗಳ, ಪಕ್ಕೆಮರಿಗಳ – ಮಕ್ಕದಲ್ಲಿರುವ ಮರಿಜಿಂಕೆಗಳ, ಇಕ್ಕೆಗಳು – ಸ್ಥಾನಗಳು, ಇತ್ತಲಿದೆ – ಇಲ್ಲಿಯೇ ಇರುವುದು, ಎಂದು–ಎಂಬತೆರನಾಗಿ ನುಡಿಯುತ್ತಾ, ಪರಿದರು–ತಿರುಗಾಡುತ್ತಲಿದ್ದರು ||೪೪||

ಟೀ|| ನಡೆ–ಮುಂದಕ್ಕೆ ಹೊರಡು, ಪಜ್ಜೆವಿಡಿ - ಹೆಜ್ಜೆಗಳಿಡು, ನಿಲ್ಲು–ನಿಂತುಕೊ, ಜಡಿ–ಹೊಡೆ, ಬೊಬ್ಬೆಗೊಡು–ಗಟ್ಟಿಯಾಗಿ ಕೂಗು, ಪೊದರೊಳ್–ಹೊದರಿನಲ್ಲಿ, ಅಡಗು–ಅವಿತಿಕೊ, ಕೈಗೆಡದೆ–ಚುರುಕಾಗಿಯೆ, ಇರು–ಇರುವನಾಗು, ಎಸೆ–ಶರಗಳಂ ಪ್ರಯೋಗಿಸು, ನಿಡುಸರಳ–ದೊಡ್ಡ ಬಾಣವನ್ನು, ತೊಡು–ಬಿಲ್ಲಿಗೆ ಸೇರಿಸು, ಕೆಲಕೆ–ಪಕ್ಕಕ್ಕೆ, ಸಿಡಿಯದೆ - ಹೋಗದೆ, ಇರು ಇರುವನಾಗು, ಪೊಡೆ–ಹೊಡದೇ ಬಿಡು, ಸಾರ್ಚು–ಬಿಲ್ಲಿಗೆ ಹೂಡು, ತುಡುಕು–ಕೈಯಿಂದ ಹಿಡಿ, ಮೊಗಸು – ತಲೆಯನ್ನು ಬಾಗಿಸು, ಅಡುಗು–ಅವಿತುಕೊ, ಮರಕೆ–ಮರದ ಮೇಲ್ಗಡೆಗೆ, ಅಡರು–ಹತ್ತು, ಒಡರ್ಚು – ನೆರವೇರಿಸು, ಅಡಗಿ–ಮರೆಯಾಗಿನಿಂತು, ಪೊಯ್–ಹೊಡೆ, ಜಡಿ–ಅಮುಕು, ಕೋಲನು–ಬಾಣವನ್ನು, ಇಡು–ಇಡುವನಾಗು, ನಾಯ–ನಾಯಿಯನ್ನು, ಮುಂದುಗಡೆವಿಡು–ಎದುರಿಗೆ ಬಿಟ್ಟುಕೊಂಡು ಹೊರಡು, ಕೂಡೆ–ಒಡನೆಯೇ, ಪಡಿತಳಿಸು–ಕಾಲಿಗೆ ಹಗ್ಗವನ್ನು ಕಟ್ಟು, ಸೆಡೆಯದಿರ್–ಎಳೆದು ಬಿಡಬೇಡ, ಕೆಡಪು–ಉರುಳಿಸು, ಎಂಬ–ಎನ್ನತಕ್ಕ, ನುಡಿಗಳು–ವಚನಗಳು, ಅಡವಿಯೊಳ್–ಅರಣ್ಯದಲ್ಲಿ, ಎಲ್ಲೆಡೆಯೊಳಂ–ನಾನಾ ಕಡೆಯೊಳಗೂ, ಅಂದು–ಆಗ, ಕಡುಪೊಸತು–ಬಹು ಹೊಸದಾದ್ದು, ಎನೆ–ಎಂಬಂತೆ, ಇಡಿದುದು–ಆವರಿಸಿತು ||೪೫||

ಟೀ|| ಏರೆ–ಬೇಟೆಯಾಡಬೇಕೆಂಬ ಅಭಿಲಾಷೆಯುಂಟಾಗಲು, ಉಬ್ಬಿದ–ಮೇಲಕ್ಕೆದ್ದ, ಉರದ–ಎದೆಯ ಭಾಗವುಳ್ಳ, ತೆಗೆದ–ತೋರಲ್ಪಟ್ಟ, ಒಡಲ–ದೇಹವುಳ್ಳ, ಬಾಗಿದ–ಕೆಳಗೆ ತಗ್ಗಿರುವ, ಬೆನ್ನ–ಪಶ್ಚಾದ್ಭಾಗದ, ಹಬ್ಬುಗೆಯ–ಹರಡುವುದರ, ಪಚ್ಚಳದ–ಜುಳುಪೆಯಿಂದ ಕೂಡಿರುವ, ಸೆಳೆದ–ಚಿಕ್ಕದಾಗಿರತಕ್ಕ, ಬಾಲದಕೊನೆಯ–ಬಾಲದ ತುದಿಯಿಂದ ಕೂಡಿರುವ, ಕೊಬ್ಬಿದ–ಚನ್ನಾಗಿ ಬೆಳೆದು ದಪ್ಪನಾಗಿರುವ, ಕೊರಳ–ಕಂಠವುಳ್ಳ, ಸಣ್ಣ–ತೆಳುವಾದ, ಜಂಘೆಗಳ–ಕಣಕಾಲುಗಳುಳ್ಳ, ಕೊಂಕು – ತಿರಿತಿರಿಯಾಗಿರುವ, ಉಗುರ ಉಗುರುಗಳುಳ್ಳ, ಮಡಿ–ಸುತ್ತಿಕೊಂಡಿರುವ, ಕಿವಿಯ–ಶ್ರೋತ್ರಂಗಳಿಂದ ಕೂಡಿದ, ಕಿಡಿಗಂಗಳ–ಕೆಂಪಾದ ಕಣ್ಣುಗಳುಳ್ಳ, ಹೆಬ್ಬಲ್ಲ–ದೊಡ್ಡದೊಡ್ಡ ದಂತಗಳುಳ್ಳ, ವಿಡುವಾಯ ಈಚೆಗೆ ತೆಗೆದ ಬಾಯುಳ್ಳ, ಜೋಲ್ವ–ಜೋಲಾಡುತ್ತಲಿರತಕ್ಕ, ಕೆನ್ನಾಲಿಗೆಯ–ರಕ್ತಛಾಯೆಯಾದ ನಾಲಿಗೆಯುಳ್ಳ, ಗಬ್ಬಿನಾಯ್ಗಳ–ಚನ್ನಾಗಿ ಬಲಿತ ನಾಯಿಗಳ, ಹಾಸನು–ಕಂಠದಲ್ಲಿರುವ ಸರಪಣಿಯನ್ನು, ಉಗಿದು–ಚದರಿಸಿ, ಬಿಡೆ–ಬಿಟ್ಟದ್ದರಿಂದ, ಅಬ್ಬರಿಸಿ–ಆರ್ಭಟಮಾಡಿ, ಪಂದಿಗಳನು–ಹಂದಿಗಳನ್ನು, ತುಡುಕಿದವು–

ಳಿರುವೆಡೆಯನ್ನೂ, ಸರೋವರಗಳ ನೀರೆಲ್ಲಾ ಬಗ್ಗಡವಾಗಿರುವುದನ್ನೂ ಕಂಡು ಆನೆಗಳಿರಬೇಕೆಂದೂ, ಎಲ್ಲೆಲ್ಲಿಯೂ ಮೃಗದ ಮೂಳೆಗಳು ಮೇದಸ್ಸು ಬಿದ್ದಿರುವುದರಿಂದ ಹುಲಿಗಳಿರಬೇಕೆಂದೂ, ಮುತ್ತುಗಳು ಚೆಲ್ಲಾಡಿರುವುದನ್ನೂ ತಲೆಬುರುಡೆಯನ್ನೂ ನೋಡಿ ಸಿಂಹಗಳಿರುವ ಸ್ಥಳವೆಂಬುದನ್ನೂ, ಊಹಿಸಿ ತಿಳಿದುಕೊಂಡು ಕಾಡಿನಲ್ಲೆಲ್ಲಾ ತಿರುಗಾಡುತ್ತಾ ||೪೪|| ನಡೆ, ಹೆಜ್ಜೆಯಗುರುತನ್ನು ಹಿಡಿ, ಸ್ವಲ್ಪ ನಿಲ್ಲು, ಹೊಡಿ, ಕೂಗಿಕೊ, ಅವಿತುಕೊ, ಬಾಣವನ್ನು ಬಿಡು ಈ ಮೊದಲಾಗಿ ನಾನಾ ಪ್ರಕಾರದಿಂದ ಆರ್ಭಟಿಸುತ್ತ ||೪೫|| ಎದೆಯುಬ್ಬಿಕೊಂಡು ಬೆನ್ನು ಬಾಗಿರುವ, ಸಣ್ಣ ಬಾಲದ ತುದಿಯುಳ್ಳ ದಪ್ಪ ಕತ್ತಿನಿಂದ ಕೂಡಿದ, ಸಣ್ಣಕಾಲ್ಗಳುಳ್ಳ

ಬ್ಬಿದಕೊರಳಸಣ್ಣಜಂಘೆಗಳಕೊಂಕುಗುರಮಡಿಗಿವಿಯಕಿಡಿಗಂಗಳ ॥ ಹೆಬ್ಬಲ್ಲವಿಡುವಾಯಜೋಲ್ವಕೆನ್ನಾಲಿಗೆಯ । ಗಬ್ಬಿನಾಯ್ಗಳಹಾಸನುಗಿದುಬಿಡೆಪಂದಿಗಳ । ನಬ್ಬರಿಸಿತುಡುಕಿದುವುಕೇಸರಿಗಡರ್ದುಮೇಲ್ವಾಯ್ದುಪುಲಿಯಂಕೊಂಡುವು ॥ ೪೬ ॥ ಬಿಡದೆ ತುತ್ತುರ್ಗಳಂಸೋವಿದರ್ತೀವಿದ । ಗಿಡಗಳಪೊದರ್ಗಳಿಂದೆಬ್ಬಿಸಿದುರುಬ್ಬಿಸಿದ । ರೊಡನೊಡನೆಖಗಮೃಗವ್ರಾತಮಂಪಾತಮಂ ಮಾಡಿದರ್ಕೂಡೆಕೂಡೆ॥ ಸಿಡಿಗುಂಡುಬಡಿಕೋಲ್ಗಳುರುಬೆಯಿಂದಿರುಬೆಯಿಂ। ದಿಡುವಣೆನೇಣುರಲ್ಗೊಲೆಗಳಿಂಬಲೆಗಳಿಂ । ಜಡಿದಾರ್ದುಬೊಬ್ಬೆಯಬ್ಬರದಿಂದಶರದಿಂದಕಾಡೊಳ್ಕಿರಾತರಂದು ॥೪೭॥ ಕುತ್ತುರೋಳ್ಪುದುಗಿರ್ದಪುಲಿಪೊರಮಡಲ್ಕಂಡು । ಕಿತ್ತು

---

ಹಿಡಿದುಕೊಂಡವು, ಕೇಸರಿಗಳು-ಸಿಂಗಂಗಳು, ಅಡರ್ದು-ಮೇಲೆ ಕವಿದುಕೊಂಡು, ಮೇಲ್ವಾಯ್ದು-ಮೇಲಕ್ಕೆ ನೆಗೆದು, ಪುಲಿಯಂ-ವ್ಯಾಘ್ರವನ್ನು, ಕೊಂದವು-ಕೊಂದುಹಾಕಿದವು.

ಅ॥ ವಿ॥ ಕೆನ್ನಾಲಿಗೆ-ಕೆಚ್ಚನೆ+ನಾಲಿಗೆ (ಉ. ಪೂ) ಕೊಂಕುಗುರು- ಕೊಂಕಾದ+ಉಗುರು (ವಿ. ಪೂ) ಮಡಿಗಿವಿ-ಮಡಿಸಿದ+ಕಿವಿ (ವಿ. ಪೂ) ಕಿಡಿಗಣ್-ಕಿಡಿಯಂತಿರುವ+ಕಣ್ (ವಿ. ಪೂ) ಕೇಸರಿ-ಕೇಸರವುಳ್ಳದ್ದು (ಸಿಂಹ) ॥೪೬॥

ಟೀ॥ ತುತ್ತುರ್ಗಳಂ-ತುತ್ತುರಿಗಳನ್ನು, ಕುತ್ತುರ್ಗಳಂ-ಪೊದೆಗಳನ್ನು, ಬಿಡದೆ-ಅವಕಾಶವಿಲ್ಲದೆ, ಸೋವಿದರು-ಊದಿ ಅಲ್ಲಿದ್ದ ಮೃಗಗಳನ್ನು ಬಯಲಿಗೆ ಬರುವಂತೆ ಮಾಡಿಬಿಟ್ಟರು, ತೀವಿದರು-ಎಲ್ಲೆಲ್ಲಿಯೂ ಕವಿದುಕೊಂಡರು, ಗಿಡಗಳ ಪೊದರ್ಗಳಿಂದ-ಗಿಡಗಳ ಹೊದರುಗಳಿಂದ, ಎಬ್ಬಿಸಿದರು-ಹೊರಕ್ಕೆ ಹೊರಡಿಸಿದರು, ಉಬ್ಬಿಸಿದರು-ಅಧಿಕವಾಗುವಂತೆ ಮಾಡಿದರು, ಖಗಮೃಗವ್ರಾತಮಂ-ಪಕ್ಷಿಗಳು ಮೃಗಗಳು ಇವುಗಳ ಸಮುದಾಯವನ್ನು, ಪಾತಮಂ ಮಾಡಿದರು-ಕೆಳಗೆ ಉರುಳಿಸಿ ಬಿಟ್ಟರು, ಕೂಡೆಕೂಡೆ-ಮತ್ತೆಮತ್ತೆ, ಸಿಡಿ-ಸಿಡಿ ಎತ್ತುವುದು, ಗುಂಡು-ಕಲ್ಲುಗಳು, ಕೋಲ್ಗಳ-ದಂಡಗಳು ಮೊದಲಾದವುಗಳ, ಉರುಬೆಯಿಂದ-ಪೆಟ್ಟಿನಿಂದ, ಇರುಬೆಯಿಂದ-ಒತ್ತಾಗಿರುವಿಕೆಯಿಂದ, ಅಣೆ-ಕವಣೆಗಳು, ನೇಣು ಉರಲುಹಾಕುವುದು, (ಜೀರುಕುಣಿಕೆಯಿಂದ ಹಿಡಿಯುವುದು)ಉರುಲ್-ಕೆಳಕ್ಕೆ ಉರುಳಿಸುವುದು, ಕೊಲೆಗಳಿಂ-ಕೊಂದುಹಾಕುವುದೇ ಮೊದಲಾದವುಗಳಿಂದಲೂ, ಬಲೆಗಳಿಂ-ಬಲೆಗಳಿಂದಲೂ, ಜಡಿದು-ದಾರಿಯನ್ನಡ್ಡಗಿಸಿ, ಆರ್ದು-ಕೂಗಿ, ಬೊಬ್ಬೆಯ-ಆರ್ಭಟದ, ಅಬ್ಬರದಿಂದ-ಆಧಿಕ್ಯದಿಂದ, ಶರದಿಂದ-ಕೋಲ್ಗಳಿಂದಲೂ, ಅಂದು-ಆಗ, ಕಿರಾತರು-ಬೇಟೆಗಾರರು, ಕಾಡೊಳ್- ಅರಣ್ಯದಲ್ಲಿ, ಇಡುವರು-ಬಾಣಗಳಿಂದ ಹೊಡೆಯುತ್ತಲಿರುವರು.

ಅ॥ ವಿ॥ ಖಗಮೃಗವ್ರಾತ=ಖಗ- ಖ-ಆಕಾಶದಲ್ಲಿ, ಗ-ಗಮಿಸುವುದು (ಕೃ. ವೃ) ಖಗಮೃಗ (ದ್ವ) ಖಗಮೃಗಗಳ ವ್ರಾತ (ಷ. ತ) ॥೪೭॥

ಟೀ॥ ಈರ್ವರು-ಇಬ್ಬರಾದ, ಲುಬ್ಧಕರು-ಬೇಟೆಗಾರರು, ಇತ್ತತ್ತಲು- ಸಮೀಪವಾಗಿ, ಇರ್ದು- ಇದ್ದುಕೊಂಡು, ಕುತ್ತುರೋಳ್-ಹೊದರುಗಳಲ್ಲಿ, ಪುದುಗಿರ್ದ-ಸೇರಿಕೊಂಡಿದ್ದ, ಪುಲಿ-ವ್ಯಾಘ್ರವು, ಪೊರಮಡಲ್-ಈಚೆಗೆ ಬಂದದ್ದನ್ನು, ಕಂಡು-ಈಕ್ಷಿಸಿ, ಸರಿಸದೊಳ್-ಹತ್ತಿರದಲ್ಲಿಯೇ, ಎಚ್ಚಡೆ-ಹೊಡೆಯಲು, ಅದರ-ಆ ವ್ಯಾಘ್ರದ, ಒಡಲನು-ದೇಹವನ್ನು, ಉಚ್ಚಳಿಸಿದ-ಸೀಳಿಹಾಕಿದ, ಅಂಬು-ಸರಲು, ತಾಗಿ-ಬಿದ್ದದ್ದರಿಂದ. (ತಗಲಿದ ಕಾರಣ) ಇಳೆಗೆ-ಭೂಮಿಯ ಮೇಲಕ್ಕೆ, ವ್ಯಾಘ್ರದೊಡನೆ-ಹುಲಿಯ ಜೊತೆಯಲ್ಲಿಯೇ, ಇತ್ತಂಡಮುಂ-ಈರ್ವರೂ, ಉರುಳ್ದರು-ಕೆಳಗೆ ಬಿದ್ದು ಹೋದರು, ಏಕಾರ್ಥಮಂ-ಒಂದು ಫಲವನ್ನು, ಉಭಯಜನಂ-ಇಬ್ಬರು, ಉದ್ವೃತ್ತದಿಂದ-ಅಸೂಯೆಯಿಂದ, ಎಳಸಿದೊಡೆ-ಇಚ್ಛಿಸಿದಲ್ಲಿ, ಮತ್ತೆ-ತಿರುಗಿ, ಲೇಸಾದಪುದೆ-ಮೇಲಾದೀತೆ, (ಎಂದಿಗೂ ಒಳ್ಳೇದಾಗುವುದಿಲ್ಲವು) ಈ ಮೂವರ-ಈ ಮೂವರು ಪ್ರಾಣಿಗಳ, ಉಪಹತಿ-ಮರಣವು, ಜಗದೊಳು-ಪ್ರಪಂಚದಲ್ಲಿ, ಚಿತ್ರಂ-ಆಶ್ಚರಿಯಿಂದ ಕೂಡಿದ್ದು, ಅಲ್ಲಂ-ಆಗಿಲ್ಲವು, ಎಂದನು-ಎಂಬದಾಗಿ ಹೇಳಿದನು.

ಅ॥ ವಿ॥ ಹುಲಿಯ ಬೇಟೆಗಾರರು ದೂರದಿಂದ ಹೊಡೆಯದೆ ಹತ್ತಿರದಿಂದಾಗಲೀ ಎದುರಿಸಿಯಾಗಲೀ ಹೊಡೆಯಲೆಳಸಬಾರದೆಂದು ಭಾವವು. ಕೂರ್ಗಣೆಗಳ್-ಕೂರಿತ್ತುಕಣೆಗಳ್ (ವಿ.ಪೂ) ಅಂಬು-ಬಾಣ (ಕನ್ನಡ) ಅಂಬು-ನೀರು (ಸಂಸ್ಕೃತ)॥೪೮॥

---

ಕಿವಿಯನ್ನು ಮಡಿಸಿಕೊಂಡು ಬಾಗಿರುವ ಉಗುರುಗಳಿಂದ ಕೂಡಿ ಕೆಂಡದಂತೆ ಕೆಂಪಾದ ಕಣ್ಣುಗಳುಳ್ಳ ದೊಡ್ಡದೊಡ್ಡ ಹಲ್ಲುಗಳನ್ನೂ ಅಗಲವಾಗಿ ತೆರೆದುಕೊಂಡಿರತಕ್ಕ ಬಾಯನ್ನೂ ಜೋಲಾಡುತ್ತಲಿರುವ ನಾಲಿಗೆಯನ್ನೂ ಉಳ್ಳ ನಾಯಿಗಳನ್ನು ಬಿಟ್ಟುಬಿಡಲು ಅವು ಹೋಗಿ ಹಂದಿಗಳನ್ನೂ ನಾಯಿಗಳನ್ನೂ ಸೀಳಿಹಾಕಿದವು, ಸಿಂಹವನ್ನು ಕೂಡ ಅಡ್ಡಗಿಸಿದವು ॥೪೬॥ ಇದೂ ಅಲ್ಲದೆ ತುತ್ತೂರಿಗಳನ್ನು ಊದಿ ಪೊದರುಗಳಲ್ಲಿ ಅವಿತುಕೊಂಡಿದ್ದ ಮೃಗಗಳನ್ನು ಈಚೆಗೆ ಹೊರಡಿಸಿ ಕಲ್ಲು ಗುಂಡು ಬಾಣ ಮೊದಲಾದವುಗಳಿಂದ ಅವುಗಳನ್ನು ತಡಮಾಡದೆ ನೆಲಕ್ಕೆ ಉರುಳಿಸಿಬಿಟ್ಟರು ॥ ೪೭ ॥ ಆಗ ಬೇಟೆಗಾರರೀರ್ವರು ಪೊದೆಯಿಂದ ಹೊರಗೆ ಬಂದ ಹುಲಿಯನ್ನುಕೂರಂಬುಗಳಿಂದ ಹೊಡೆದ ರಭಸಕ್ಕೆಆ ಪೆಟ್ಟಿನಿಂದ ಹುಲಿಯೂ ಅದರ ವೇಗದಿಂದ ಬೇಡರೀರ್ವರೂ ಮಡಿದು

ಕೂರ್ಗಣೆಗೆಳಂಪೂಡಿಲುಬ್ಧಕರೀರ್ವ | ರಿತ್ತತ್ತಲಿರ್ದುಸರಿಸದೊಳೆಚ್ಚೊದರೊಡಲನುಚ್ಚಳಿಸಿದಂಬುತಾಗಿ ॥ ಇತ್ತಂಡಮುಂ ವ್ಯಾಘ್ರದೊಡನಿಳೆಗುರುಳ್ದರು | ದ್ವೃತ್ತದಿಂದುಭಯಜನಮೇಕಾರ್ಥಕೆಳಸಿದೊಡೆ | ಮತ್ತೆಲೇಸಾದಪುದೆಜಗದೊಳೀಮೂವರುಪಹತಿಚಿತ್ರಮುಲ್ಲೆಂದನು ॥ ೪೮ ॥ ನಳಿತೋಳಬಲ್ಮೊಲೆಯಸೊಕ್ಕುಜವ್ವನದಪರಿ | ಮಳಗಾತ್ರದಳಿಕುಂತಳದಮೆಲ್ನಡೆಯಶಬರಿ | ಹಳುವದೊಳ್ತನ್ನಕಾಂತನಬಳಿಯುಬರಲೊಂದುಸಿಂಗಮದಭರದೊಳೆರಗಿ ॥ ಬಳಿಕವಳಮಧ್ಯಮುಂಕಂಡುಸಾಮಾನ್ಯಮಂ| ತಳೆದುಮತ್ತಾಕೆಯಚಲಾಪಾಂಗಮುಂನೋಡಿ | ಮುಳಿದಡರಲಾಕೇಸರಿಯನೆಚ್ಚುಕೆಡಹಿದಂಕ್ರೋಧದಿಂದಾವ್ಯಾಧನು॥೪೯ ಮರಿಗೆಮರೆಯಾಗಿಮೈಯೊಡ್ಡಿಮಡಿದುವುಕೆಲವು | ಬರಿಯಬಿಲ್ದನಿಗೆರಮಣನತಾಗಿತಾಂಬೆಂದು | ನೆರೆಮೋಹದಿಂದಪೊರಳ್ದವುಕೆಲವುರಾವುಗೊಂಡೊಂದಿದಿನೆಯನನಗಲ್ದು ॥ ಮರುಗಿಮದನಾಸ್ತ್ರದಿಂದಿರದೆಬಿದ್ದುವುಕೆಲವು | ಬಿರುಸರಳ್ತಮ್ಮಕೂಪರಮೇಲೆಬರಲದಕೆ | ಗುರಿಯಾಗಿತೊರೆದುವಸುವಂಕೆಲವುಪುಲ್ಲೆಗಳ್ಬೇಡರೆಸುವೆಸುಗೆಯಿಂದ ॥ ೫೦ ॥ ಕರಿಯಕುಂಭಸ್ಥಳದಮುಕ್ತಾ

---

ಟೀ॥ ನಳಿತೋಳ್-ತಾವರೆದಂಟಿನಂತಿರುವ ಭುಜಗಳುಳ್ಳ, ಬಲ್ಮೊಲೆಯ-ಪೀವರಸ್ತನಂಗಳಿಂ ಕೂಡಿದ, ಸೊಕ್ಕು-ಮತ್ತತೆಯನ್ನೈದಿದ, ಜವನದ-ಹರಯವುಳ್ಳ, ಪರಿಮಳ-ಸುವಾಸನೆಯಾದ, ಗಾತ್ರದ-ದೇಹವುಳ್ಳ, ಅಳಿ-ಭೃಂಗಾಳಿಗೆ ಹೋಲಿಕೆಯಾಗಿರುವ, ಕುಂತಳದ-ಕೇಶಪಾಶಗಳುಳ್ಳ, ಮೆಲ್ನಡೆಯ-ಮೆತ್ತಗೆ ನಡೆಯುವ ವಿಲಾಸವುಳ್ಳ, ಶಬರಿ-ಬೇಟೆಗಾರರ ಹೆಂಗಸು, ಹಳುವದೊಳ್-ಅರಣ್ಯದಲ್ಲಿರತಕ್ಕ, ತನ್ನ-ಸ್ವಕೀಯನಾದ, ಕಾಂತನ ಬಳಿಗೆ-ರಮಣನಿರುವೆಡೆಗೆ, ಬರಲು-ಐತರಲು, ಮದಭರದೊಳು-ಗರ್ವಾತಿಶಯದಿಂದ, ಒಂದುಸಿಂಗಂ-ಕೇಸರಿಯೊಂದು, ಎರಗಿ-ಎದುರಿಸಿ, ಬಳಿಕ-ಅನಂತರ, ಅವಳ-ಆ ಬೇಡಿತಿಯ, ಮಧ್ಯಮುಂ-ಸೊಂಟವನ್ನು, ಕಂಡು-ಈಕ್ಷಿಸಿ, ಸಾಮಾನ್ಯಮಂತಳೆದು - ತನಿಗಿಂತಲೂ ಹೆಚ್ಚಾಗಿಲ್ಲವೆಂದರಿತು, ಚಲ-ಚಪಲವನ್ನೈದಿದ, ಆಕೆಯ-ಆ ಬೇಡತಿಯ, ಅಪಾಂಗಮುಂ-ಓರೆನೋಟವನ್ನು, ಮತ್ತೆ-ಪುನಃ, ನೋಡಿ-ನಿರುಕಿಸಿ, ಮುಳಿದು-ಅಸೂಯೆಯನ್ನೈದಿ, ಅಡರಲು-ಆ ಶಬರಿಯಮೇಲೆ ಬೀಳಬೇಕೆಂದುಜ್ಜುಗಿಸಿದ್ದರಿಂದ, ಕ್ರೋಧದಿಂದ-ಹೆಚ್ಚಾದ ಆಗ್ರಹದಿಂದ, ಆ ಕೇಸರಿಯನು- ಆ ಸಿಂಗವನ್ನು, ಆ ಬೇಡನು- ಆ ವ್ಯಾಧನು, ಎಚ್ಚು ಕೆಡಹಿದನು- ಬಾಣವನ್ನು ಬಿಟ್ಟು ನೆಲಕ್ಕೆ ಉರುಳಿಸಿಬಿಟ್ಟನು ॥೪೯॥

ಟೀ॥ ಕೆಲವು ಪುಲ್ಲೆಗಳ್-ಜಿಂಕೆಗಳಲ್ಲಿ ಕೆಲವು, ಬೇಡರು-ಬೇಟೆಗಾರರು, ಎಸುವ-ಪ್ರಯೋಗವಂ ಮಾಡುವ, ಎಸುಗೆಯಿಂದ-ಸರಲ್ಗಳಿಂದ, ಮರಿಗೆ ಮರೆಯಾಗಿ-ತಮ್ಮ ಮರಿಗಳನ್ನು ಕಾಪಾಡಬೇಕೆಂಬಿಚ್ಛೆಯಿಂದ, ಮೈಯೊಡ್ಡಿ- ತಮ್ಮ ದೇಹವನ್ನು ಚಾಚಿ, ಮಡಿದವು-ಮರಣಕ್ಕೆ ಈಡಾದವು, ಕೆಲವು-ಕೆಲವು ಹುಲ್ಲೆಗಳು, ಬರಿಯಬಿಲ್ದನಿಗೆ-ಬಿಲ್ಲಿನ ಶಬ್ದ ಮಾತ್ರಕ್ಕೇ, ನೆರೆ-ಅತಿಶಯವಾದ, ಮೋಹದಿಂದ-ಪ್ರೀತಿಯಿಂದ, ರಮಣನ-ತನ್ನ ಕಾಂತನನ್ನು, ತಾಗಿ-ಸೇರಿ, ತಾಂ-ಅವು, ಬೆಂದು-ಭಸ್ಮವಾಗಿ, ಪೊರಳ್ದವು-ಉರುಳಿಕೊಂಡವು, ಇನ್ನು ಕೆಲವಾದರೊ, ರಾವುಗೊಂಡು-ಗಾಬರಿಯಂತಾಳಿ, ಒಂದಿದ-ಒಟ್ಟಿಗೆ ನೆರೆದ, ಇನೆಯನನು-ರಮಣನನ್ನು, ಅಗಲ್ದು-ಬಿಟ್ಟು, ಮದನಾಸ್ತ್ರದಿಂದ-ಮಾರನ ಸರಲಿನಿಂದ, ಮರುಗಿ-ಸಂಕಟವನ್ನೈದಿ, ಇರದೆ-ನಿಲ್ಲದೆ, ಬಿದ್ದವು-ಬಿದ್ದು ಹೋದವು, ಕೆಲವು ಬಿರುಸರಳ್-ಹಲವು ಕೂರ್ಗಣೆಗಳು, ತಮ್ಮ ಕೂಪರಮೇಲೆ-ತಮ್ಮ ಪ್ರಿಯನಾದ ಜಿಂಕೆಯ ಮೇಲೆ ಬರಲು-ಬರಲಾಗಿ, ಅದಕೆ-ಆ ಸರಲಿಗೆ, ಗುರಿಯಾಗಿ- ಈಡಾಗಿ, ಅಸುವಂ-ತಮ್ಮ ಹರಣವನ್ನು, ತೊರೆದವು-ಕಳೆದುಕೊಂಡವು. ॥೫೦॥

ಟೀ॥ ಶಬರಿಯರು-ಬೇಟೆಗಾರರ ಪೆಂಗಸರಾದರೊ, ಕರಿಯ-ಗಜಗಳ, ಕುಂಭಸ್ಥಳದ-ನಡುನೆತ್ತಿಯಲ್ಲಿರುವ, ಮುಕ್ತಾಫಲಂಗಳಂ-ಮೌಕ್ತಿಕಂಗಳನ್ನೂ, ಬರುಹಿಗಳ-ಅರಣ್ಯದಲ್ಲಿರುವ ನವಿಲುಗಳ, ಗರಿಗಳಂ-ಪಕ್ಷಗಳನ್ನೂ, ಚಮರಿವಾಲಂಗಳಂ-ಚಮರಿ ಮೃಗಗಳ ಬಾಲಗಳನ್ನೂ, ದ್ವಿರದ-ಗಜಗಳ, ನವ-ನೂತನವಾದ, ದಂತ-ಪಲ್ಗಳ, ಅಂಕುರಂಗಳಂ-ಮೊಳಕೆಗಳನ್ನೂ, ಮೃಗಸಾರ-ಕಸ್ತೂರಿಯ, ಮೃತ್ತಿಕೆಗಳಂ-ಮಣ್ಣನ್ನೂ, ಇರದೆ-ಸಮ್ಮನಿರದೆ, ಎತ್ತಿಕೊಂಡು-ತಮ್ಮ ತಮ್ಮ ಕೈಗಳಲ್ಲಿ ಧರಿಸಿದವ

---

ಬಿದ್ದರು ॥೪೮॥ ಇದೇ ಕಾಲದಲ್ಲಿಯೇ ಸಿಂಹವೊಂದು ತನ್ನ ನಡುವಿನಂತಿರುವ ನಡುವನ್ನೂ, ಚಂಚಲವಾದ ನೋಟವನ್ನೂ ಉಳ್ಳ ಬೇಡತಿಯೋರ್ವಳಮೇಲೆ ಕೋಪದಿಂದ ಬಿದ್ದದ್ದನ್ನು ಅವಳ ಪತಿಯು ನೋಡಿ ಬಾಣದಿಂದ ಹೊಡೆದು ಕೊಂದುಹಾಕಿದನು॥೪೯॥ ಈ ತೆರನಾಗಿ ಬೇಡರೆಲ್ಲಾ ನಾನಾಪ್ರಕಾರವಾಗಿ ಬಾಣಗಳನ್ನು ಬಿಡುತ್ತಿರಲು ಇವುಗಳ ವೇಗಕ್ಕೆ ಅಲ್ಲಿದ್ದ ಮೃಗಗಳೆಲ್ಲಾ ಹೆದರಿ ಕೆಲವು ತಮ್ಮತಮ್ಮ ಮರಿಗಳನ್ನು ಮರೆಮಾಡಬೇಕೆಂಬುದರಲ್ಲಿ ಬಾಣದ ಹೊಡೆತಕ್ಕೆ ಸಿಕ್ಕಿ ಸತ್ತುಹೋದವು. ಬಿಲ್ಲಿನ ಝೇಂಕಾರ ಶಬ್ದವನ್ನು ಕೇಳಿದ ಮಾತ್ರದಿಂದಲೇ ಕೆಲವು ಯಮಪುರಿಯನ್ನು ಸೇರಿದವು ಮೃಗಗಳೆಲ್ಲಾ ಚದರಿಹೋದಕಾರಣ ಗಂಡು ಮೃಗವನ್ನು ಕಾಣದೆ ಹೆಣ್ಣು ಮೃಗವೂ, ಹೆಣ್ಣು ಮೃಗವನ್ನು ಕಾಣದೆ ಗಂಡು ಮೃಗವೂ ಹಂಬಲಿಸುತ್ತ ಸತ್ತುಹೋದವು ॥೫೦॥

ಫಲಂಗಳಂ | ಬರುಹಿಗಳಗರಿಗಳಂಚಮರಿವಾಲಂಗಳಂ | ದ್ವಿರದನವದಂತಾಂಕುರಂಗಳಂಮೃಗಸಾರಮುತ್ತಿಗೆಗಳಂಬನದೊಳು ||
ಇರದೆತ್ತಿಕೊಂಡುಬರುತಿರ್ದಪರೊಕಬರಿಕುಂತಳಕುಚಶ್ಯಾಮತನು | ಪರಿಮಳಂಗಳನಾಂತುಬಂದಪರೊತಿಳಿಯಲರಿದೆಂಬಂತೆ
ಕಾಣಿಸಿದರು || ೫೧ || ಪುಲಿಕರಡಿಕರಿಸಿಂಗಸಾರಂಗಮರಿಪಂದಿ | ಮೊಲಹುಲ್ಲೆಕಾಡೆಮ್ಮೆಚಮರಿಗಳ್ಮೊದಲಾದ | ಪಲವುಮೃಗ
ಜಾತಿಯಂಕ್ರೌಂಚಶಿಖಿತಿತ್ತಿರಿಕಪೋತಾದಿಪಕ್ಷಿಗಳನು || ಕೊಲುತಬಹಬೇಡರ್ಗೆಸಿಕ್ಕಿದೋಡಿದುದೊಂದೆ | ರಳೆಕುಳಿಂದಕ
ನೆಂಬದೊರೆಕಂಡುತನ್ನಚಾ | ಪಲಹಯದೊಳದರಬಳಿಸಂದನತಿವೇಗದಿಂಚಿಲ್ವಿಡಿದುಕೊಲ್ವೆನೆಂದು |೫೨|| ಆಕುಳಿಂದಂದುಷ್ಟ
ಬುದ್ಧಿಯನಿಯೋಗದಿಂ | ದಾಕಾನನದನಾಡವಳಿತಮಂಕೈಗೊಂಡು | ಭೂಕಾಂತನಾಗಿಹಂಚಂದನಾವತಿಯೆಂಬಪುರದೊಳವ

---

ರಾಗಿ, ಬನದೊಳ್-ಅರಣ್ಯದಲ್ಲಿ, ಬರುತಿರ್ದಪರೊ-ಬರುತ್ತಲಿದ್ದಾರೆಯೊ, ದರಹಾಸ-ಮುಗುಳ್ನಗೆ, ಕಬರಿಗುಂತಲ - ಕೊಂಕು ಕೂದಲು, ಕುಚ-ವಕ್ಷೋಜಾತಂಗಳು, ಶ್ಯಾಮತನುಪರಿಮಳಂಗಳನು-ಪ್ರಾಯಮದದಿಂ ಕಪ್ಪಾಗಿರುವ ದೇಹದ ಸುರಭಿಯನ್ನು, ಅಂತು-ತಾಳಿ, ಬಂದಪರೊ-ಬರುತ್ತಲಿದ್ದಾರೆಯೋ, ತಿಳಿಯಲು-ತಿಳಿದುಕೊಳ್ಳುವುದು, ಅರಿದು-ಕಷ್ಟವು, ಎಂಬಂತೆ-ಎನ್ನುವ ರೀತಿಯಾಗಿ, ಕಾಣಿಸಿದರು-ಕಂಗೊಳಿಸುತ್ತಲಿದ್ದರು. ||೫೧||

ಟೀ|| ಪುಲಿ - ವ್ಯಾಘ್ರಗಳು, ಕರಡಿ - ಋಕ್ಷಂಗಳು, ಕರಿ-ಗಜಗಳು, ಸಿಂಗ-ಕೇಸರಿಗಳು, ಸಾರಂಗ - ಸಾರಂಗವು, ಮರಿಪಂದಿ - ಹಂದಿಗಳು ಮತ್ತು ಅವುಗಳ ಮರಿಗಳು, ಮೊಲ-ಮೊಲವು, ಹುಲ್ಲೆ - ಜಿಂಕೆಯು, ಕಾಡೆಮ್ಮೆ - ವನಮಹಿಷವು, ಚಮರಿಗಳ್-ಚವರಿಮಿಗಂಗಳು, ಮೊದಲಾದ-ಮೊದಲಾಗಿರತಕ್ಕ, ಹಲವು - ನಾನಾಬಗೆಯಾದ, ಮೃಗಜಾತಿಯಂ - ಮಿಗಂಗಳ ಸಮುದಾಯವನ್ನೂ, ಕ್ರೌಂಚ-ಕ್ರೌಂಚಹಕ್ಕಿ, ಶಿಖಿ-ನವಿಲು, ತಿತ್ತಿರಿ-ಲಾವಕ್ಕಿ ಎನ್ನತಕ್ಕ ಒಂದು ಪಕ್ಷಿಜಾತಿಯು, ಕಪೋತ-ಪಾರಿವಾಳಪಕ್ಷಿ, ಆದಿ-ಇವೇ ಮೊದಲಾದ, ಪಕ್ಷಿಗಳನು - ಪಕ್ಷಿಗಳನ್ನೂ ಸಹ, ಕೊಲುತಬಹ-ಬೇಟೆಮಾಡಿಕೊಂಡು ಬರುತ್ತಲಿರುವಾಗ, ಒಂದಾದ, ಎರಳೆ - ಜಿಂಕೆಯು, ಬೇಡರ್ಗೆ - ಬೇಟೆಗಾರರಿಗೆ, ಸಿಕ್ಕದೆ-ಸಿಕ್ಕದೇನೆ, ಓಡಿದುದು - ತಪ್ಪಿಸಿಕೊಂಡು ಹೋಯಿತು. ಕುಳಿಂದಕನೆಂಬದೊರೆ-ಕುಳಿಂದಕರಾಜನಾದರೊ, ಕಂಡು-ಓಡಿಹೋಗುತ್ತಲಿದ್ದ ಜಿಂಕೆಯನ್ನು ನೋಡಿ, ಬಿಲ್ವಿಡಿದು-ಧನುಸ್ಸನ್ನು ಕೈಗೆ ತೆಗೆದುಕೊಂಡು, ಚಾಪಲಹಯದೊಳ್-ಬಹು ವೇಗವಾಗಿ ನಡೆಯುವ ಆ ಕುದುರೆಯ ಮೇಲೆ ಕುಳಿತುಕೊಂಡು, ಕೊಲ್ವೆನೆಂದು-ಕೊಂದುಹಾಕುತ್ತೇನೆಂಬುದಾಗಿ, ಅತಿವೇಗದಿಂದ - ಬಹು ಜಾಗ್ರತೆಯಿಂದ, ಅದರಬಳಿ - ಆ ಜಿಂಕೆಯಿದ್ದೆಡೆಗೆ, ಸಂದನು-ಬಂದವನಾದನು. ||೫೨||

ಟೀ|| ಆಕಾನನದ-ಆ ಕಾಡಿನ, ನಾಡ-ದೇಶದಭಾಗಕ್ಕೆ, ವಳಿತಮಂ-ಸೇರಿರತಕ್ಕದ್ದನ್ನೆಲ್ಲಾ, ದುಷ್ಟಬುದ್ಧಿಯನಿಯೋಗದಿಂ-ದುಷ್ಟಬುದ್ಧಿ ಎಂಬ ಕುಂತಳನಗರದ ಮುಖ್ಯಾಮಾತ್ಯನ ಆಜ್ಞಾಪ್ರಕಾರವಾಗಿ, ಆಕುಳಿಂದಂ - ಆ ಕುಳಿಂದನೆಂಬರಸು, ಕೈಕೊಂಡು-ಸ್ವೀಕರಿಸಿದವನಾಗಿ, ಭೂಕಾಂತನಾಗಿ-ದೊರೆಯಾಗಿ ಚಂದನಾವತಿಯೆಂಬಪುರದೊಳು - ಚಂದನಾವತಿಯೆಂಬ ನಗರದಲ್ಲಿ. ಇಹಂ-ವಾಸಿಸುತ್ತಿರುವನು. ಅವಂ-ಆ ಕುಳಿಂದಕನಾದರೋ, ಮೃಗಯಾಕಾಮನಾಗಿರ್ದು-ಬೇಟೆಯಾಡುವುದರಲ್ಲಿ ಅತ್ಯಾಸಕ್ತನಾಗಿ, ಈಕಿರಾತಪ್ರಕರದೊಡನೆ-ಈ ಬೇಡಪಡೆಯೊಂದಿಗೆ, ಅರ್ಥಿಯಿಂದ-ಅಕ್ಕರೆಯಿಂದ, ಪೊರಮಟ್ಟು-ಹೊರಟವನಾಗಿ, ತೇಜಿಯ-ಹಯದ, ಜವಂ - ವೇಗವು, ಗಾಳಿಯಂಮಿಂಚಲು - ವಾಯುವೇಗವನ್ನು ಮೀರಲು, ಅವಂ - ಆ ಚಂದನಾವತಿಯ ಅರಸು, ಸಿಡಿದು-ನುಸುಳಿಕೊಂಡು, ಓಡುವ-ಓಡಿ ಹೋಗುತ್ತಲಿರುವ, ಆಕುರಂಗದಬೆನ್ನನು-ಆ ಜಿಂಕೆಯು ಓಡಿಹೋಗುತ್ತಿದ್ದ ದಾರಿಯನ್ನೆ ಹಿಡಿದವನಾಗಿ, ಐದಿದಂ-ಮುಂದರಿತು ಹೊರಟನು. ||೫೩||

---

ಅಂದವಾದ ಜಡೆಯಿಂದೊಪ್ಪುತ್ತಲೂ ಪೀವರಸ್ತನಂಗಳಿಂ ಮೆರೆಯುತ್ತಲೂ ಸುಂದರಾಕಾರದಿಂದ ಕೂಡಿಯೂ ಇರುವ ಬೇಡತಿಯರಿಂದ ಕೂಡಿದ ಬೇಟೆಗಾರರಾದರೊ||೫೧||ಹುಲಿ ಕರಡಿ ಸಿಂಹ, ಆನೆ, ಜಿಂಕೆ, ಹಂದಿ ಕಾಡುಕೋಣ ಮೊದಲಾದ ಮೃಗಜಾತಿಯನ್ನೂ ಚಕ್ರವಾಕ, ನವಿಲು, ಪಾರಿವಾಳಂಗಳೆ ಆದಿಯಾದ ಹಕ್ಕಿಗಳನ್ನೂ ಬೇಟೆಯಾಡಿಕೊಂಡು ಬರುತ್ತಲಿರುವಾಗ ಒಂದಾನೊಂದು ಜಿಂಕೆಯು ಯಾರಿಗೂ ಸಿಕ್ಕದೆ ತಪ್ಪಿಸಿಕೊಂಡು ಓಡಿ ಹೋಗುತ್ತಲಿದ್ದಿತು. ಇದನ್ನು ಬೇಡರೊಡೆಯನಾದ ಕುಳಿಂದನೆಂಬ ರಾಜನು ನೋಡಿ ತನ್ನ ಕುದುರೆಯನ್ನು ವಾಯುವೇಗವನ್ನೂ ಮೀರುವಂತೆ ನಡೆಸುತ್ತಾ ಆ ಜಿಂಕೆಯ ಬೇಟೆಗಾಗಿ ಅಂಬುಬಿಲ್ಲುಗಳನ್ನು ತೆಗೆದುಕೊಂಡು ಬರುತ್ತಲಿದ್ದನು || ೫೨ || ಕೇಳ್ಳೈ ಅರ್ಜುನಾ ! ಈ ಕುಳಿಂದನಾದರೊ ಕುಂತಳನಗರಕ್ಕೆ ಆಶ್ರಿತರಾಜ್ಯವಾದ ಚಂದನಾವತಿಯ ಅರಸನಾಗಿ ಆ ಕಾಡಿನಲ್ಲೆಲ್ಲಾ ಬೇಟೆಯಾಡಿಕೊಂಡಿರಬಹುದೆಂದು ದುಷ್ಟಬುದ್ಧಿಯಿಂದ ಅಪ್ಪಣೆಯನ್ನು, ಪಡೆದಿದ್ದನು ಅವನು ಬೇಟೆಯಾಡಬೇಕೆಂಬಿಚ್ಛೆಯಿಂದ ತನ್ನ ಬೇಡಪಡೆಯೊಂದಿಗೆ ಹೊರಟು ಮನಸ್ವಿಯಾಗಿ ಬೇಟೆಯಾಡಿಕೊಂಡು ಬರುತ್ತಿರುವಾಗ ತಪ್ಪಿಸಿಕೊಂಡು ಹೋಗುತ್ತಲಿರುವ ಜಿಂಕೆಯನ್ನು ಬೇಟೆಯಾಡಲು ಕುದು

ನರ್ಥಿಯಿಂದ || ಈಕಿರಾತಪ್ರಕರದೊಡನೆಪೊರಮೊಟ್ಟುಮೃಗ | ಯಾಕಾಮನಾಗಿಬಂದಿರ್ದ್ದವಂಕಿಡಿದೋಡು | ವಾಕುರಂಗದ
ಬೆನ್ನ ನೈದಿದಂತೇಜಿಯುಜವಂಗಾಳಿಯಂಮಿಂಚಲು ||೫೩|| ಹರಿಣನಂಬೆಂಬತ್ತಿಬರಲಾಕುಳಿಂದಕಂ | ಹರಿಯನೇಜಪಿಸುತಳುತಿಹ
ಬಾಲನಂಕಂಡು| ಹರಿಯನಲ್ಲಿಯೆನಿಲಿಸಿನೋಡಿನಿಜಶಿರವನಲ್ಲಾಡಿತಾಂಮೃಗದಕೊಲೆಗೆ || ಹರಿತಂದಪಾಪಮತಿಪುಣ್ಯಮೊದವಿಸಿತು
ಸುವಿ| ಹರಿಸುವೊಡೆಶಿನಶಿವಾಪ್ರೊಸತೆಂದುಹರುಷದಲ | ಹರಿಯೊಳೋಲಾಡಿದಂಕಡವರವನೆಡಹಿಸಂಧಿಸಿದಕಡುಬಡವನಂತೆ ||೫೪||
ಇಳಿದುನಿಜವಾಜಿಯಂಸಾರ್ದುಮೈದಡವಿಬರ | ಸೆಳೆದುಬಿಗಿಯಪ್ಪಿಕಂಬನಿದೊಡೆದುಕೂಡೆಸಗ್ಗಳೆಯನೀರಿಂದಕಾಲ್ತುದಿಯೊೞ
ಬ್ಬಸಿವನೆತ್ತರಂತೊಳೆದುಮೋಹದಿಂದ || ಗಳದೊಳುಬ್ಬುವಗದ್ಗದಂಗಳಂಸೈಪಿಟ್ಟು| ತಿಳುಪಿಲಾಲಿಸಿದಂಕುಳಿಂದಕಂಸೌಭಾಗ್ಯ |
ನಿಳಯದೆರಕೆಯನಸುವನೊದವಿದಗ್ಗದಪುಣ್ಯದೊಡಲಸುವನಾಶಿಶುವನು ||೫೫|| ಎಡಬಲದೊಳಿಹತನ್ನವರೊಳಾಕುಳಿಂದಕಂ |

ಟೀ|| ಆಕುಳಿಂದಕಂ–ಆ ಕುಳಿಂದಕನೆಂಬ ಚಂದನಾವತಿಯ ಅರಸು, ಹರಿಣನಂಬೆಂಬತ್ತಿಬರಲು – ಕುದುರೆಯನ್ನು ಹಿಂಬಾಲಿಸಿ ಬರುತ್ತಲಿರುವಾಗ, ಹರಿಯನೆ–ಶ್ರೀಮನ್ನಾರಾಯಣನನ್ನೆ, ಜಪಿಸುತ–ಸ್ತೋತ್ರಮಾಡುತ್ತ, ಅಳುತಿಹ–ಗೋಳಾಡುತ್ತಲಿರತಕ್ಕ, ಬಾಲನಂ–ಪಸುಳೆಯನ್ನು, ಕಂಡು–ಈಕ್ಷಿಸಿ, ಅಲ್ಲಿಯೆ–ಆ ಸ್ಥಳದಲ್ಲಿಯೆ, ಹರಿಯನು–ತೇಜಿಯನ್ನು, ನಿಲಿಸಿ–ನಿಲ್ಲುವಂತೆಮಾಡಿ, ನೋಡಿ–ಆ ಮಗುವನ್ನು ಚೆನ್ನಾಗಿ ನಿರುಕಿಸಿ, ನಿಜಶಿರವನು – ತನ್ನ ತಲೆಯನ್ನು, ಅಲ್ಲಾಡಿ–ತೂಗುತ್ತಾ, ತಾಂ–ತಾನಾದರೊ, ಮೃಗದಕೊಲೆಗೆ–ಮೃಗಯಾರ್ಥವಾಗಿ, ಹರಿತಂದ – ಬಂದಂಥ, ಪಾಪಂ–ಎಡರು, ಅತಿಪುಣ್ಯಂ – ಬಹಳ ಮೇಲ್ಮೆಯನ್ನು, ಒದವಿಸಿತು–ಪ್ರಾಪ್ತಿಯಾಗುವಂತೆ ಮಾಡಿತು. ಶಿವಶಿವ–ಎಲೈ ಮಹಾದೇವನೆ, ಸುವಿಹರಿಸುವೊಡೆ–ಆನಂದವನ್ನೈದುವುದಕ್ಕೆ, ಹೊಸದು–ಇದೇ ಪ್ರಾರಂಭವು, ಎಂದು–ಎಂಬುದಾಗಿ ಎಂದುಕೊಂಡು, ಕಡವರವನು–ನಿಕ್ಷೇಪವನ್ನು, ಎಡಹಿ–ಎಡವಿದ್ದರಿಂದ, ಸಂಧಿಸಿದ–ಪ್ರಾಪ್ತಿಯನ್ನೈದಿದ, ಕಡುಬಡವನಂತೆ – ಬಹು ದರಿದ್ರತೆಯನ್ನು ಅನುಭವಿಸುವನ ರೀತಿಯಾಗಿ, ಹರುಷದ ಲಹರಿಯೊಳು–ಆನಂದಸಾಗರದಲ್ಲಿ, ಓಲಾಡಿದಂ–ಮಗ್ನನಾದನು. ||೫೪||

ಟೀ|| ಕುಳಿಂದಕಂ–ಕುಳಿಂದಕರಾಜನಾದರೊ, ನಿಜವಾಜಿಯ–ತನ್ನ ಕುದುರೆಯನ್ನು, ಇಳಿದು–ಇಳಿದವನಾಗಿ, ಸಾರ್ದು–ಸಮೀಪಸ್ಥನಾಗಿ, ಮೈದಡವಿ – ಶರೀರವನ್ನೆಲ್ಲಾ ತಡವಿನೋಡಿ, ಬರಸೆಳೆದು–ಹತ್ತಿರಕ್ಕೆ ಕರೆದುಕೊಂಡು, ಬಿಗಿಯಪ್ಪಿ–ಗಾಢಾಲಿಂಗನವಂ ಮಾಡಿಕೊಂಡು, ಕಂಬನಿದೊಡದು–ಕಣ್ಣಿನ ನೀರನ್ನು ಒರಸಿದವನಾಗಿ, ಕೂಡ – ಒಡನೆಯೇ, ಕಾಲ್ತುದಿಯೊೞ–ಕಾಲಿನ ಕೊನೆಯಲ್ಲಿ, ಬಸಿವ – ಸುರಿಯುತ್ತಲಿರುವ, ನೆತ್ತರಂ – ರಕ್ತವನ್ನು, ಸಗ್ಗಳೆಯನೀರಿಂದ – ತನ್ನ ಹತ್ತಿರವೇ ಇಟ್ಟುಕೊಂಡಿರುವ ಚರ್ಮದ ಚೀಲದ ನೀರಿನಿಂದ, ತೊಳೆದು–ತೊಳೆದವನಾಗಿ, ಗಳದೊಳು–ಕತ್ತಿನಲ್ಲಿ, ಉಬ್ಬುವ–ಒದಗುತ್ತಲಿರುವ, ಗದ್ಗದಂಗಳಂ–ಗದ್ಗದ ಸ್ವರವನ್ನು, ಮೋಹದಿಂದ–ಅಕ್ಕರೆಯಿಂದ, ಸೈಪಿಟ್ಟು – ಹೋಗಲಾಡಿಸಿ, ತಿಳುಪಿ – ಅಭಯವನ್ನಿತ್ತು, ಸೌಭಾಗ್ಯ–ಐಸಿರಿಗೆ, ನಿಳಯದ–ವಾಸಸ್ಥಾನವಾಗಿರತಕ್ಕ,ಎರಕೆಯ–ನೇಮಿಸಲ್ಪಟ್ಟ,ವಸುವನು–ಇಳೆಯನ್ನು, (ಕಾಂತಿ) ಒದವಿದ–ಹೊಂದಿದ, ಅಗ್ಗದ–ಶ್ರೇಷ್ಠವಾದ, ಪುಣ್ಯದ–ಪುಣ್ಯಸಮುದಾಯದಿಂದ ಕೂಡಿದ, ಒಡಲು–ಶರೀರವು, ಅಸುವನು–ಜೀವನವನ್ನುಳ್ಳ, ಆಶಿಶುವನು–ಆ ಹಸುಳೆಯನ್ನು, ಲಾಲಿಸಿದಂ–ಮೃದುನುಡಿಗಳಿಂದ ಆನಂದಗೊಳಿಸಿದನು. ||೫೫||

ಟೀ|| ಎಡಬಲದೊಳು – ಇಕ್ಕಡೆಗಳಲ್ಲಿಯೂ, ಇಹ – ಇರತಕ್ಕ, ತನ್ನವರೊಳು – ತನ್ನ ಕಡೆಯ ಜನಗಳ ಕೂಡ, ಆಕುಳಿಂದಕಂ–ವ್ಯಾಧಾಧಿಪನಾದ ಕುಳಿಂದಕನು, ನುಡಿದನು–ಮುಂದೆ ಹೇಳುವಂತೆ ನುಡಿಯುವನು, ತನ್ನ – ಸ್ವಕೀಯರಾದ,

---

ರೆಯ ಮೇಲೆ ವಾಯುವೇಗದಿಂದ ಬರುತ್ತಲಿರುವಾಗ ||೫೩|| ಶ್ರೀಮನ್ನಾರಾಯಣನ ಪದಾರವಿಂದ ಧ್ಯಾನಾಸಕ್ತನಾಗಿ ಅಳುತ್ತಲಿರುವ ಬಾಲಕನೋರ್ವನನ್ನು ಕಂಡನು. ಆಗ ಕುಳಿಂದನಾದರೊ ಕುದುರೆಯನ್ನು ಅಲ್ಲಿಯೆ ನಿಲ್ಲಿಸಿ ಆಹಾ! ನಾನು ಇಂದು ಬೇಟೆಯಾಡಿ ಪಾಪಕ್ಕೆ ಗುರಿಯಾಗಬೇಕೆಂದು ಬಂದದ್ದು ನನಗೆ ಪುಣ್ಯಪ್ರದವಾಗಿ ಪರಿಣಮಿಸಿತು. ಇನ್ನು ನನ್ನ ಪುಣ್ಯಕ್ಕೆಣೆಯೇ ಇಲ್ಲವೆಂದು ಹಣದ ರಾಶಿಯನ್ನು ಕಂಡ ದರಿದ್ರನಂತೆ ಸಂತೋಷಸಾಗರದಲ್ಲಿ ಮಗ್ನನಾದನು ||೫೪|| ಆ ಬಳಿಕ ಕುಳಿಂದಕನು ತನ್ನ ಕುದುರೆಯಿಂದ ಕೆಳಗಿಳಿದು ಆ ಬಾಲಕನ ಬಳಿಗೆ ಹೋಗಿ ಮೈಯನ್ನು ಸವರಿ ತನ್ನ ಹತ್ತಿರಕ್ಕೆ ಕರೆದು ಗಾಢಾಲಿಂಗನವಂ ಮಾಡಿಕೊಂಡು ಕಣ್ಗಳಿಂದ ಉಕ್ಕಿ ಬರುತ್ತಲಿರುವ ಕಣ್ಣೀರನ್ನು ಒರಸಿ ಕಾಲಿನ ಕೊನೆಯಿಂದ ಹೊರಡುತ್ತಿರುವ ರಕ್ತಧಾರೆಯನ್ನು ತನ್ನಲ್ಲಿಟ್ಟುಕೊಂಡಿದ್ದ ಚರ್ಮದ ಚೀಲದ ನೀರಿನಿಂದ ಒರಸಿ, ಕಂಠದಿಂದ ಉಕ್ಕಿ ಉಕ್ಕಿ ಬರುವ ದುಃಖವನ್ನು ಒಳ್ನುಡಿಗಳಿಂದ ಸಂತೈಸಿ ಆ ಶಿಶುವನ್ನು ಹೆದರಬೇಡವೆಂದು ಸಮಾಧಾನವಾದ ನುಡಿಗಳಿಂದ ಮನ್ನಿಸುತ್ತಿದ್ದನು ||೫೫|| ಅನಂತರದಲ್ಲಿ ಆ ಕುಳಿಂದಕನೆಂಬ ಚಂದನಾವತಿಯರಸು ತನ್ನ ಪಕ್ಕದಲ್ಲಿದ್ದವರನ್ನು ಕುರಿತು, ಆ ಬಾಲಕನಾದರೊ ತನ್ನ ತಂದೆತಾಯಿಗಳನ್ನೂ, ಒಡಹುಟ್ಟಿದವರನ್ನೂ ಸ್ಮರಿಸಿಕೊಳ್ಳದೆ ಯಾವಾಗಲೂ ಶ್ರೀಮನ್ನಾರಾಯಣ ಮೂರ್ತಿಯನ್ನೇ ಧ್ಯಾನಮಾಡುತ್ತಲಿರುವುದರಿಂದ ಈ ಬಾಲಕನಿಗೆ

ನುಡಿದನೀಬಾಲಕಂತನ್ನತಾಯ್ತಂದೆಗಳ | ನೊಡಹುಟ್ಟಿದವರಹಂಬಲಿಸದೆಮುರಾರಿಯಂನೆನೆವನದರಿಂದಿವಂಗೆ || ಒಡೆಯನಚ್ಯುತನಾದಕಾರಣಂಮೃತನಾಗ | ದಡವಿಯೋಳ್ಜೀವಿಸಿದನೆಲ್ಲರ್ಗೆತನುಜರಂ | ಕೊಡುವವಂಕೃಷ್ಣನೈಸಲೆತನಗೆಮಕ್ಕಳಿಲ್ಲೀತನೇ ಸುತನೆಂದನು ||೫೬|| ಪತ್ತುವಿಧಮುಂಟುಸುತರದರೊಳೌರಸಪುತ್ರ | ನುತ್ತಮಂಮೇಣಾತನಿಲ್ಲದೊಡೆಮಿಕ್ಕವೊಂ | ಭತ್ತುಬಗೆಯೊಳಗೊಂದುತೆರದಮಗನಾದೊಡಂಬೇಕಲಾಮಾನವರ್ಗೆ|| ತತ್ತನಯರೊಳ್ನನ್ನತಾನೆದೊರೆಕೊಂಡವಂ| ದತ್ತನಂದನವಂತನಗೆಂದವಂಮುದದೊ | ಳೆತ್ತಿಕೊಂಡಶ್ವಮನಡರ್ದುಪರಿಜನಸಹಿತನಿಜಪುರಕೆಬರುತಿರ್ದನು || ೫೭ || ಮೃಗಯಾವ್ಯಸನದಿಂದಕಾ

---

ತಾಯ್ತಂದೆಗಳ-ಮಾತಾಪಿತೃಗಳನ್ನೂ, ಒಡಹುಟ್ಟಿದವರ-ಸಹೋದರರೇ ಮೊದಲಾದ ತನ್ನವರನ್ನು, ಈ ಬಾಲಕಂ-ಈ ಪಸುಳೆಯು, ಹಂಬಲಿಸದೆ-ಚಿಂತಿಸದೆ, ಮುರಾರಿಯಂ-ಶ್ರೀಕೃಷ್ಣಮೂರುತಿಯನ್ನು, ನೆನೆವನು-ಸ್ಮರಿಸುವನು, ಅದರಿಂದ-ಆದಕಾರಣ, ಅಚ್ಯುತನು-ಕೃಷ್ಣಸ್ವಾಮಿಯೇ, ಇವಂಗೆ-ಈ ಬಾಲಕನಿಗೆ, ಒಡೆಯನು- ಅಧಿಪತಿಯು, ಅದುಕಾರಣಂ-ಆದ್ದರಿಂದಲೇ, ಮೃತನಾಗದೆ-ಸತ್ತುಹೋಗದೆ, ಅಡವಿಯೊಳ್-ಅರಣ್ಯದಲ್ಲಿ, ಜೀವಿಸಿದನು- ಬದುಕಿದ್ದಾನೆ, ಕೃಷ್ಣನು- ಶ್ರೀ ಕೃಷ್ಣಪರಮಾತ್ಮನೆ, ಎಲ್ಲರ್ಗೆ-ಸಕಲರಿಗೂ, ತನುಜರಂ-ಸುತರನ್ನು, ಕೊಡುವವಂ-ದಯೆಮಾಡುವನಾಗಿದ್ದಾನೆ, ಐಸಲೆ-ಅಲ್ಲವೇ, ತನಗೆ-ನನಿಗಾದರೋ, ಮಕ್ಕಳಿಲ್ಲ-ಸಂತಾನವಿಲ್ಲ, ಈತನೆ-ಈ ಬಾಲಕನೆ, ಸುತನು-ನನಗೆ ಕುವರನು, ಎಂದನು-ಎಂಬುದಾಗಿ ಎಂದುಕೊಂಡನು.

ಅ|| ವಿ|| ಮುರಾರಿ (ಸ. ದೀ) ಅಚ್ಯುತ-ನಾಶರಹಿತ-ಅಭಂಗ (ಅನಂತನು) ತನುಜರು-ತನು-ದೇಹದಲ್ಲಿ, ಜ-ಹುಟ್ಟಿದವರು (ಕೃ. ವೃ) ||೫೬||

ಟೀ|| ಸುತರು-ಕುವರರಾದರೊ, ಪತ್ತು ವಿಧಮುಂಟು- ಹತ್ತು ಬಗೆಯಾಗಿದ್ದಾರೆ, ಔರಸಪುತ್ರನು- ಧರ್ಮಪತ್ನಿಯ ಗರ್ಭದಲ್ಲಿ ಹುಟ್ಟಿದವನೇ, ಅದರೊಳು-ಅವರಲ್ಲಿ, ಉತ್ತಮಂ-ಮೇಲಾದವನು, ಮೇಣ್-ಅಲ್ಲದೆ, ಆತನು-ಅಂತಹ ಕುವರನು, ಇಲ್ಲದೊಡೆ-ಇಲ್ಲದೆಹೋದರೆ, ಮಿಕ್ಕ-ಮಿಕ್ಕಿರತಕ್ಕ, ಒಂಭತ್ತು ಬಗೆಯೊಳಗೆ-ಒಂಭತ್ತು ವಿಧದಲ್ಲಿ, ಮಾನವರ್ಗೆ-ಮನುಷ್ಯರಿಗೆ, ಒಂದು ತೆರದ ಮಗನಾದೊಡಂ-ಒಂದು ಬಗೆಯ ಕುವರನಾದರೂ, ಬೇಕಲಾ-ಇರಬೇಕಾಗಿದೆಯಲ್ಲವೆ, ದತ್ತನಯರೊಳ್-ಆಹತ್ತು ವಿಧದಲ್ಲಿ, ಇವಂ-ಈ ಬಾಲಕನು, ತನಗೆ ತಾನೆ ದೊರಕೊಂಡವಂ-ಅಲಭ್ಯವಾಗಿ ಸಿಕ್ಕಿದಾನೆ, ತನಗೆ-ನನಗಾದರೊ, ದತ್ತನಂದನಂ-ದತ್ತಕುವರನು, ಎಂದು-ಎಂಬುದಾಗಿ, ಮುದದೊಳು-ಆನಂದದಿಂದ, ಅವಂ-ಆ ಚಂದನಾವತಿಯರಸು, ಎತ್ತಿಕೊಂಡು-ಎತ್ತಿಕೊಂಡವನಾಗಿ, ಅಶ್ವವನು-ತೇಜಿಯನ್ನು, ಅಡರ್ದು-ಏರಿ, ನಿಜಪುರಕೆ-ತನ್ನ ಪಟ್ಟಣವಾದ ಚಂದನಾವತಿಗೆ, ಪರಿಜನಸಹಿತ-ಸೇನಾಸಮೇತನಾಗಿ, ಬರುತಿರ್ದನು-ಬರುತ್ತಲಿದ್ದವನಾದನು.

ಅ|| ವಿ|| ದಶವಿಧ ಪುತ್ರರು.

(೧) ಧರ್ಮಪತ್ನಿಯ ಗರ್ಭೋದ್ಭವನು. (೨) ಕ್ಷೇತ್ರಜನು. (೩) ದತ್ತಪುತ್ರನು. (೪) ಕೃತ್ರಿಮಕುವರನು. (೫) ತನಗೆ ಅಗೋಚರವಾಗಿ ಉದ್ಭವಿಸಿದ ಮಗನು. (೬) ತಾಯಿತಂದೆಗಳು ಬಿಟ್ಟು ಬಿಟ್ಟವನನ್ನು ಪರಿಗ್ರಹಿಸಿದವನು. (೭) ಕಾನೀನಸುತನು. (೮) ಸಹೋಢಾತನುಜನು. (೯) ಕ್ರಯಕ್ಕೆ ಪಡೆದ ಕುವರನು. (೧೦) ಪೌನರ್ಭವಕುವರನು. (೧೧) ಸ್ವಯಂಲಬ್ಧನು. (೧೨) ಪಾರಶವಕುವರನು.

ಇವರಲ್ಲಿ ಕಲಿಯುಗದೊಳಗೆ ಗ್ರಾಹ್ಯರಾದವರು ಧರ್ಮಪತ್ನಿಯ ಕುವರನು, ದತ್ತಪುತ್ರನು, ದೌಹಿತ್ರನು-ಇವರು ಮಾತ್ರವೇ, ಅಡರ್ದು-ಅಡರ್, ಧಾತುವಿನ ಕೃದಂತ ||೫೭||

ಟೀ|| ತಾಂ-ನಾನು, ಕೃಷ್ಣಮೃಗದ ಕೂಡೆ-ಜಿಂಕೆಯನ್ನು ಹಿಡಿದು, ಕಾನನಕೆ-ಕಾಡಿಗೆ, ಮೃಗಯಾವ್ಯಸನದಿಂದ-

---

ಇಂತಹ ಘೋರಾರಣ್ಯದಲ್ಲಿಯೂ ಕೂಡ ಯಾವುದೊಂದು ಅಪಾಯವೂ ಇಲ್ಲದೆ ಸುಖವಾಗಿರುವನು ಎಲ್ಲರಿಗೂ ಪುತ್ರರತ್ನವನ್ನು ದಯೆಪಾಲಿಸುವನು ಶ್ರೀಮನ್ನಾರಾಯಣನಲ್ಲವೇ! ನನಗೆ ಮಕ್ಕಳಿಲ್ಲದೆ ವ್ಯಥೆಪಡುತ್ತಲಿರುವಾಗ ಶ್ರೀ ಕೃಷ್ಣಸ್ವಾಮಿಯ ದಿವ್ಯಾನುಗ್ರಹದಿಂದ ನನಗೆ ಈ ಬಾಲಕನು ಸಿಕ್ಕಿದನು || ೫೬ || ಪ್ರಪಂಚದಲ್ಲಿ ದಶವಿಧಪುತ್ರರೆಂದು ಸಾಮಾನ್ಯವಾಗಿ ರೂಢಿ ಇರುವುದಷ್ಟೆ ಅವರಲ್ಲಿ ಔರಸಪುತ್ರನೇ ಶ್ರೇಷ್ಠನು ಇಲ್ಲವಾದರೆ ದತ್ತಪುತ್ರನಾಗಲೀ ಅಲಭ್ಯವಾಗಿ ದೊರೆತ ಕುವರನಾಗಲೀ ಉತ್ತಮನು. ನನಗೆ ಈ ಬಾಲಕನು ಅಲಭ್ಯವಾಗಿ ದೊರಕಿದ್ದರಿಂದಲೂ ನನಗೆ ಮಕ್ಕಳಿಲ್ಲದ್ದರಿಂದಲೂ ಈತನೇ ನನಗೆ ದೈವಾನುಗ್ರಹದಿಂದ ಕುವರನಾಗಲೆಂದು ನುಡಿಯುತ್ತಾ ಆ ಬಾಲಕನನ್ನು ಸಂತೋಷದಿಂದೆತ್ತಿ ಕುದುರೆಯಮೇಲೆ ಕುಳ್ಳಿರಿಸಿಕೊಂಡು ||೫೭|| ತನ್ನಲ್ಲಿ ತಾನೆ ಆಹಾ! ಬೇಟೆಯಾಡಬೇಕೆಂಬಿಚ್ಛೆಯಿಂದ ನಾನು ಈ ಅರಣ್ಯಕ್ಕೆ ಬಂದು ಮನಸ್ವಿಯಾಗಿ ಬೇಟೆಯಾಡಿ ತಪ್ಪಿಸಿ

ಸನಕೆತಾಂಕೃಷ್ಣ | ಮೃಗದಕೂಡ್ಯೈದಿದೊಡೆದೊರಕೊಂಡನೀಕೃಷ್ಣ | ಮೃಗಭಾವದರ್ಭಕಂಪಾಪಕೆಳಸಿದೊಡಾಯುಃಪುಣ್ಯ ಮೆನುತಲ್ಲಿನುಡಿದ || ಮೃಗಜಾತಿಗಳನವರವರ್ಗೆಪಚ್ಚಿಸಿನೆರೆದ | ಮೃಗಜೀವಿಗಳನೆಲ್ಲರಂಕಳುಹಿನಿಜಪುರಕೆ | ಮೃಗಧರನೊಲಿಸೆವ ಶಿಶುವಂಕೊಂಡುಪರಿಜನದೊಡನೆಬಂದನುತ್ಸವದೊಳು || ೫೮ || ಮುಂದೆಪರಿತಂದುಚರರರುಪೆಸಿಂಗರಿಸಿದ | ಚಂದನಾವತಿಯ ಸಂಭ್ರಮದಿಂಕುಳಿಂದಕಂ | ಬಂದುನಿಜಭವನಮಂಪೊಗಲಿದಿರ್ವಂದುನಲಿದವನಸತಿಮೇಧಾವಿನಿ || ಕಂದನಂತೆಗದೆತ್ತಿಕೊ ಳುತಬಿಗಿಯಪ್ಪಿಸಾ | ನಂದದಿಂಪೊರೆಯೇರಿದಳ್ತನ್ನಬಂಜೆತನ | ಮಿಂದುಪೋದುದುಪುತ್ರವತಿಯಾದೆನೆನ್ನಪುಣ್ಯದ್ರುಮಂಫಲಿಸಿ ತೆಂದು ||೫೯|| ಬಳಿಕನಗರದೊಳಾದುದುತ್ಸವಂಪಾರ್ವರ್ಗೆ | ನಿಳಯದಸಮುಸ್ತವಸ್ತುಗಳನೊಲಿದಿತ್ತನೊಂ | ದುಳಿಯದೆಪಿದಿತ

---

ಬೇಟೆಯ ಆಲೋಚನೆಯಿಂದ, ಐದಿದೊಡೆ–ಬಂದರೆ, ಈ ಕೃಷ್ಣ ಮೃಗಭಾವದ–ಈ ಕೃಷ್ಣಸ್ವಾಮಿಯನ್ನು ಹುಡುಕುವ ಸಾತ್ವಿಕ ವಾದಸ್ವಭಾವವುಳ್ಳ, (ಕೋಮಲನಾದ)ಅರ್ಭಕಂ-ಹುಡುಗನು, ದೊರಕೊಂಡನು-ಲಭಿಸಿದನು, ಪಾಪಕ್ಕೆ-ದುರಿತಕ್ಕೆ, ಎಳಸಿದೊಡೆ– ಆಶೆಪಟ್ಟರೆ; ಪುಣ್ಯಂ-ಮೇಲ್ಮೆಯೇ, ಆಯ್ತು-ಸಿದ್ಧಿಸಿತು, ಎನುತ-ಎಂದು ನುಡಿಯುತ್ತ, ಅಲ್ಲಿ-ಆ ಹಳುವದಲ್ಲಿ, ಮಡಿದ–ಮೃತಿಯ ನ್ನೈದಿದ, ಮೃಗಜಾತಿಗಳನು–ನಾನಾತೆರದ ಮೃಗಂಗಳನ್ನೂ, ಅವರವರ್ಗೆ–ಆಯಾಯ ಜನರಿಗೆ, ಪಚ್ಚಿಸಿ-ಹಂಚಿಸಿಕೊಟ್ಟು, ನೆರೆದ– ಒಟ್ಟಾಗಿ ಸೇರಿದ್ದ, ಮೃಗಜೀವಿಗಳನು-ವ್ಯಾಧರನ್ನು, ಕಳುಹಿ–ಕಳುಹಿಸಿಬಿಟ್ಟು, ಮೃಗಧರನೊಲು–ಹಿಮಕರನಂತೆ, ಎಸೆವ–ಹೊಳೆ ಯುತ್ತಲಿರುವ, ಶಿಶುವಂ–ಬಾಲಕನನ್ನು, ಕೊಂಡು-ಎತ್ತಿಕೊಂಡು, ನಿಜಪುರಕೆ–ತನ್ನ ನಗರವಾದ ಚಂದನಾವತಿಗೆ, ಉತ್ಸವ ದೊಳು-ವೈಭವದಿಂದ, ಪರಿಜನದೊಡನೆ–ತನ್ನ ಪರಿವಾರದೊಂದಿಗೆ, ಬಂದನು-ಬಂದವನಾದನು.

ಅ|| ವಿ|| ಕೃಷ್ಣ ಮೃಗದ ಭಾವ (ಷ. ತ) ಕೃಷ್ಣ ಮೃಗಭಾವದ-ಕೃಷ್ಣ ಮೃಗದಂತಿರುವ ಭಾವ– ಅಭಿಪ್ರಾಯವುಳ್ಳ ವನು, ಮೃದುಭಾವವುಳ್ಳವನು (ವಿ. ಪೂ) ||೫೮||

ಟೀ|| ಚರರು–ಸೇವಕರು, ಮುಂದೆ-ಮುಂದಾಗಿಯೇ, ಪರಿತಂದು–ಓಡಿ ಬಂದವರಾಗಿ, ಅರುಪೆ–ಗೋಚರ ಪಡಿಸಲು, ಚಂದನಾವತಿಯ–ಚಂದನಾವತಿಯೆಂಬ ಪಟ್ಟಣವನ್ನು, ಸಂಭ್ರಮದಿಂದ–ಸಡಗರದಿಂದ, ಸಿಂಗರಿಸಿದರು–ಚೆನ್ನಾಗಿ ಮೆರೆಯುತ್ತಿ ರುವಂತೆ ಮಾಡಿದರು, ಕುಳಿಂದಕಂ-ಆ ನಾಡಿನೆರೆಯನು, ಬಂದು–ಐತಂದು, ನಿಜಭವನಮಂ–ತನ್ನ ಮಂದಿರವನ್ನು, ಪೊಗಲು- ಹೋಗಿ ಸೇರಲು, ಅವನಸತಿ-ಅವನ ಕಾಂತೆಯಾದ, ಮೇಧಾವಿನಿ–ಮೇಧಾವಿನಿ ಎಂಬಾಕೆಯು, ಇದಿರ್ವಂದು–ಎದುರಾಗಿ ಬಂದ ವಳಾಗಿ, ಕಂದನಂ–ಹಸುಳೆಯನ್ನು, ತೆಗೆದು–ತೆಗೆದುಕೊಂಡು, ಎತ್ತಿಕೊಳುತ-ಸೊಂಟದಲ್ಲಿಟ್ಟುಕೊಳ್ಳುತ್ತ, ಸಾನಂದದಿಂ- ಆನಂದಾತಿಶಯದಿಂದ, ಬಿಗಿಯಪ್ಪಿ–ಗಾಢಾಲಿಂಗನವಂ ಮಾಡಿಕೊಂಡು, ಇಂದು–ಈ ಹೊತ್ತಿಗೆ, ತನ್ನ ಬಂಜೆತನಂ-ಮಕ್ಕಳಿಲ್ಲದೆ ವ್ಯಥೆಪಡೋಣವು, ಪೋದುದು–ನಿವಾರಣೆಯಾಯಿತು, ಪುತ್ರವತಿಯು–ಮಗನನ್ನುಂಟಾಗಿರತಕ್ಕವಳು, ಆದೆನು–ಆಗಿದ್ದೇನೆ, ಎನ್ನ– ನನ್ನ ಸಂಬಂಧವಾದ ಪುಣ್ಯದ್ರುಮಂ–ಪುಣ್ಯಪ್ರದವಾದ ಮರವು, ಫಲಿಸಿತು–ಫಲಸಹಿತವಾದದ್ದಾಯಿತು, ಎಂದು-ಎಂಬತೆರನಾಗಿ, ಪೊರೆಯೇರಿದಳ್-ಅತ್ಯಾನಂದದಿಂದ ಕೂಡಿದವಳಾದಳು.

ಅ|| ವಿ|| ಬಂಜೆ (ತ್ಭ) ವಂಧ್ಯಾ (ತ್ಸ) ||೫೯||

ಟೀ|| ಬಳಿಕ–ಅನಂತರ, ನಗರದೊಳ್–ಚಂದನಾವತಿಯಲ್ಲೆಲ್ಲಾ, ಉತ್ಸವಂ-ಅತ್ಯಾನಂದ ಸೂಚಕವಾದ ಮೆರವಣಿ ಗೆಯು, ಆದುದು-ಆಯಿತು, ನಿಳಯದ- ಮನೆಯಲ್ಲಿರುವ ಸಮಸ್ತ ವಸ್ತುಗಳನು– ಪುರುಳ್ಗಳೆಲ್ಲವನ್ನೂ, ಒಲಿದು–ಅಕ್ಕರೆಯಿಂದ,

---

ಕೊಂಡು ಓಡುತ್ತಲಿರುವ ಜಿಂಕೆಯ ಬೆನ್ನವಿಡಿದು ನಾನು ಹೋಗುತ್ತಲಿದ್ದರೆ ಶ್ರೀ ಕೃಷ್ಣಪರಮಾತ್ಮನನ್ನೆ ಧ್ಯಾನಮಾಡುತ್ತಲಿರುವ ಈ ಕಂದನು ನನಗೆ ದೊರೆತನು ನಾನು ಪಾಪಕಾರ್ಯಕ್ಕುಜ್ಜುಗಿಸಿದ್ದರೂ ಕೂಡ ನನ್ನ ಪುಣ್ಯ ಪರಿಪಾಕದಿಂದ ನನಗೆ ಇಂತಹ ಅಸಾ ಧಾರಣವಾದ ಫಲವು ಪ್ರಾಪ್ತವಾಯಿತೆಂದು ಅಪಾರವಾದ ಆನಂದವನ್ನೈದಿದನು. ಆ ಬಳಿಕ ತನ್ನ ಸಮೀಪದಲ್ಲಿರತಕ್ಕ ಬೇಡರಿ ಗೆಲ್ಲಾ ತಾವು ಅಲ್ಲಿ ಬೇಟೆಯಾಡಿದ್ದ ಮೃಗರಾಶಿಯನ್ನು ಹಂಚಿಕೊಟ್ಟು ಅವರನ್ನೆಲ್ಲಾ ಪಟ್ಟಣಕ್ಕೆ ಕಳುಹಿ ಚಂದ್ರನಂತೆ ಹೊಳೆ ಯುತ್ತಲಿರುವ ಬಾಲಕನನ್ನು ಕರೆದುಕೊಂಡು ಪರಿಜನಸಹಿತವಾಗಿ ಸಂತೋಷದಿಂದ ಚಂದನಾವತಿಗೆ ಬರುತ್ತಲಿದ್ದನು || ೫೮ || ಅಷ್ಟರೊಳಗಾಗಿ ಪಟ್ಟಣವನ್ನೆಲ್ಲಾ ನಾನಾ ಪ್ರಕಾರವಾಗಿ ಅಲಂಕರಿಸಿದರು ಕುಳಿಂದಕನಾದರೊ ಅತ್ಯುತ್ಸವದಿಂದ ಪುರಪ್ರವೇಶ ಮಂ ಮಾಡಿ ತನ್ನ ಮನೆಯ ಬಳಿಗೆ ಬರುತ್ತಲಿರುವಾಗ ಆ ರಾಜನರಸಿಯಾದ ಮೇಧಾವಿಯು ನೋಡಿ ತಡಮಾಡದೆ ಬಂದು ಅಂಸ ನೆತ್ತಿಕೊಂಡಿದ್ದ ಮಗುವನ್ನು ತನ್ನೆರಡು ಕೈಗಳಿಂದಲೂ ಎತ್ತಿಕೊಂಡು ಮುದ್ದಾಡುತ್ತಾ ಅಹಾ! ಇನ್ನು ನನ್ನ ಪುಣ್ಯಕ್ಕೆಣೆಯೇ ನಿರುವುದು ನಾನೇ ಧನ್ಯಳು ನನ್ನ ಬಂಜೆತನವು ಇಂದಿಗೆ ನಾಶವಾಯಿತೆಂದು ಅತ್ಯಾನಂದಪರವಶಳಾಗಿದ್ದಳು ||೫೯|| ಆ ಬಳಿಕ ಈ ಬಾಲಕನನ್ನು ಊರಲ್ಲೆಲ್ಲಾ ಮೆರವಣಿಗೆ ಮಾಡಿಸಿದರು ತಮಗೆ ಪುತ್ರಲಾಭವಾದುದಕ್ಕಾಗಿ ಆ ಊರಿನಲ್ಲಿದ್ದ ಭೂಸುರೋತ್ತಮ

ಜಾತಕರ್ಮಮಂಮಾಡಿಸಲುಬುಧರುತ್ತರೋತ್ತರವನು ‖ ತಿಳಿದುನಿರ್ಮಲಮುಖಾಂಬುಜದಿಂಶಶಾಂಕನಂ | ಕಳಕಳಿಸಿನಗುವ ನದರಿಂಚಂದ್ರಹಾಸನೆಂ | ದಿಳೆಯೊಳೀತಂಗೆಪೆಸರಾಗಲೆಂದುಚ್ಚರಿಸಿನಾಮಕರಣಂಗೈದರು ‖೬೦‖ ಪಸುಳೆತನದಿಂವೃದ್ಧಾಪ್ಯದಿಂ ದನ್ನೆಗಂ | ಬಿಸಜನಾಭನಭಕ್ತಿದೊರಕೊಳದಮನುಜರಂ | ನಸುನಗುವಧವಳದೊಳ್ಪಿಂಚಂದ್ರಹಾಸನಿವ ‖ ನಖಿಳಭೂಮಂಡಲ ದೊಳು ‖ ಪಸರಿಸುವಜಸದಬೆಳ್ಪಿಂಚಂದ್ರಹಾಸನಿವ | ನಸಮನಕ್ಷೀಣನಕಳಂಕನತಿಶಾಂತನೆಂ | ಬೆಸೆವಸದ್ಗುಣದೇಳ್ಗೆಯಿಂ ಚಂದ್ರಹಾಸನಿವನಹುದೆಂದುಬುಧರೊರೆದರು ‖೬೧‖ ಮಂಜುಮಹಿಮಾಸ್ಪದಂಚಾರುವೃತ್ತಂಕಲಾ | ಪುಂಜಂಸದಾನಭೋಗಂ ಕುವಲಯಪ್ರಿಯಂ | ರಂಜಿಸುವರಾಜನೆನ್ನವೊಲಾದೊಡಂಮಿತ್ರತೇಜಕಳವಳಿದುಪಗೆಯ ‖ ಭಂಜನೆಗೆಸಿಕ್ಕಿಬಡತನವಟ್ಟಿಕಂದಿ

---

ವರ್ಗೆ-ಬ್ರಾಹ್ಮಣೋತ್ತಮರಿಗೆ, ಇತ್ತನು-ಕೊಟ್ಟವನಾದನು, ಒಂದು-ಯಾವುದನ್ನೂ, ಉಳಿಯದೆ-ನಿಲ್ಲಿಸದೆ, ವಿದಿತ-ಶಾಸ್ತ್ರ ಸಮ್ಮತವಾದ, ಜಾತಕರ್ಮಮಂ-ಜಾತಕರ್ಮವನ್ನು, ಮಾಡಿಸಲು-ಮಾಡಿಸಲಾಗಿ, ಬುಧರು-ವಿದ್ವಾಂಸರಾದರೊ, ಉತ್ತರೋತ್ತರವನು - ಪುರೋವೃದ್ಧಿಯ ಸೂಚನೆಗಳನ್ನು, ತಿಳಿದು - ತಿಳಿದವರಾಗಿ, ನಿರ್ಮಲ - ಪರಿಶುದ್ಧವಾದ, ಮುಖಾಂಭೋಜದಿಂ-ಮುಖಪದ್ಮದಿಂದ, ಶಶಾಂಕನಂ - ಹಿಮಕರನನ್ನು, ಕಳಕಳಿಸಿ - ಹೆಚ್ಚಾದ ಪ್ರಕಾಶದಿಂದ, ನಗುವನು - ನಗುತ್ತಲಿರುವನು, ಅದರಿಂದ-ಆದಕಾರಣ, ಈತಂಗೆ-ಈ ಬಾಲಕನಿಗೆ, ಇಳೆಯೊಳು-ಲೋಕದಲ್ಲಿ, ಚಂದ್ರಹಾಸನೆಂದು-ಚಂದ್ರಹಾಸನೆಂಬ ಹೆಸರನಾಗಿ, ಪೆಸರಾಗಲಿ-ಹೆಸರಾಗಬಹುದು, ಎಂದು-ಎಂಬತೆರನಾಗಿ, ಉಚ್ಚರಿಸಿ-ನುಡಿದು, ನಾಮಕರಣಂಗೈದರು-ನಾಮಕರಣ ಮಹೋತ್ಸವವನ್ನು ನೆರವೇರಿಸಿದರು. ‖೬೦‖

ಟೀ‖ ಇವನು-ಈ ಬಾಲಕನಾದರೊ, ಪಸುಳೆತನದಿಂದ-ಬಾಲ್ಯದಿಂದ, ವೃದ್ಧಾಪ್ಯದಿಂದ-ಮುದಿಯಾಗುವಿಕೆಯಿಂದ, ಅನ್ನೆಗಂ-ಅಷ್ಟು ಹೊತ್ತಿಗೆ, ಬಿಸಜನಾಭನ-ಕಮಲದಂತೆ ಹೊಕ್ಕಳುಳ್ಳ ಶ್ರೀಮನ್ನಾರಾಯಣನಲ್ಲಿ, ಭಕ್ತಿ-ಭಕ್ತಿಯನ್ನು, ದೊರಕೊಳದ-ಹೊಂದದ, ಮನುಜರಂ-ಮಾನವರನ್ನು ಸಂಬೋಧಿಸಿ, ನಸುನಗುವ-ಮಂದಹಾಸವನ್ನು ತೋರ್ಪಡಿಸತಕ್ಕ, ಧವಳದ-ಶುಭ್ರವಾದ, ಬೆಳ್ಪಿಂ-ಕಾಂತಿಯಿಂದ, ಅಖಿಲಭೂಮಂಡಲದೊಳು-ಸರ್ವಲೋಕಂಗಳಲ್ಲಿಯೂ, ಚಂದ್ರಹಾಸನು-ಚಂದ್ರಹಾಸನೆಂಬಾತನು, ಪಸರಿಸುವ-ಹರಡಿಕೊಂಡಿರತಕ್ಕ, ಜಸದ-ಕೀರ್ತಿಯ, ಬೆಳ್ಪಿಂ-ಶುಭ್ರತೆಯಿಂದ, ಚಂದ್ರಹಾಸನು-ಚಂದ್ರನನ್ನೂ ಕೂಡ ಹಾಸ್ಯಮಾಡತಕ್ಕ, ಇವನು - ಈ ಪಸುಳೆಯು, ಅಸಮನು - ಸಾಧಾರಣನಲ್ಲವು, ಅಕ್ಷೀಣನು - ಐಶ್ವರ್ಯ ಬುದ್ಧಿ ಮೊದಲಾದವುಗಳಿಗೆ ನಿಧಿಯಾಗಿರುವನು, (ಕಳಾಹೀನನಲ್ಲ) ಅಕಳಂಕನು-ನಿರ್ದೋಷಿಯು, ಅತಿಶಾಂತನು-ಶಾಂತಮೂರ್ತಿಯಾಗಿದ್ದಾನೆ, ಎಂಬ-ಎನ್ನತಕ್ಕ, ಎಸೆವ-ಕಾಂತಿಯುಕ್ತವಾದ, ಸದ್ಗುಣದ-ಒಳ್ಳೆ ಗುಣಗಳ, ಏಳ್ಗೆಯಿಂ-ಮೇಲ್ಮೆಯಿಂದ, ಇವನು-ಈ ಹುಡುಗನಾದರೊ,ಚಂದ್ರಹಾಸನು-ಚಂದ್ರಹಾಸನೆಂಬ ಹೆಸರಿಗೆ ತಕ್ಕವನು, ಅಹುದು-ಆಗಬಹುದು, ಎಂದು-ಎಂಬತೆರನಾಗಿ, ಬುಧರು-ವಿದ್ವಾಂಸರು, ಒರೆದರು-ಹೇಳಿದರು. ‖೬೧‖

ಟೀ‖ ಮಂಜುಮಹಿಮಾಸ್ಪದಂ - ಮಂಜು-ಮನಸ್ಸಿಗೆ ಆನಂದವನ್ನುಂಟುಮಾಡುವ, ಮಹಿಮಾ - ಸ್ವಾಮಿಭಕ್ತಿಯ ಮಹಾತ್ಮೆಗೆ, ಆಸ್ಪದಂ-ಕಾರಣನು, ಚಾರು-ಮನಸ್ಸಿಗೆ ಹರ್ಷಪ್ರದವಾದ, ವೃತ್ತಂ-ಆಚಾರವುಳ್ಳವನು, ಕಲಾಪುಂಜಂ-ಹೆಚ್ಚಾದ ವಿದ್ಯೆಗಳಲ್ಲೆಲ್ಲಾ ಪಂಡಿತನು, ಸದಾನ-ದಾನವಂ ಮಾಡುವುದರಲ್ಲಿ, ಭೋಗಂ-ಅತ್ಯಾಸಕ್ತನು, ಕುವಲಯಪ್ರಿಯಂ-ಕುವಲಯ-ಇಳಾವಲಯದೊಳಗೆ, ಪ್ರಿಯಂ-ಹಿತನಾದವನು, (ಸಕಲಜನಮನೋರಂಜಕನು ಇದು ಚಂದ್ರಹಾಸನ ವರ್ಣನೆಯು) ಮಂಜು

---

ಪಾರಿಗೆಲ್ಲಾ ಬೇಕುಬೇಕಾದಷ್ಟು ಧನರಾಶಿಗಳನ್ನೂ, ಉಡಿಗೆ ತೊಡಿಗೆಗಳನ್ನೂ ದಾನಮಾಡಿದರು ಅನಂತರ ಬ್ರಾಹ್ಮಣರಿಂದ ಜಾತಕರ್ಮವನ್ನು ನೆರವೇರಿಸಿದರು ಆ ಭೂಸುರರಾದರೊ ಈ ಶಿಶುವಿನ ಶರೀರಲಕ್ಷಣಗಳನ್ನು, ಚಂದ್ರನನ್ನು ನಿರಾಕರಿಸುತ್ತಲಿರುವ ಮುಖದ ಕಾಂತಿಯನ್ನೂ ನೋಡಿ ಈ ಬಾಲಕನಿಗೆ ಚಂದ್ರಹಾಸನೆಂಬುದಾಗಿ ನಾಮಕರಣವನ್ನು ಮಾಡಿದರು ‖೬೦‖ ಈ ಬಾಲಕನಿಗಿಂತಲೂ ವಿಷ್ಣುಭಕ್ತರು ಮತ್ತೆ ಯಾರೂ ಇಲ್ಲವೆಂದು ನಗುತ್ತಲಿರುವುದರಿಂದುಂಟಾದ ಶುಭ್ರತೆಯಿಂದಲೂ ಭೂಲೋಕದಲ್ಲೆಲ್ಲಾ ಶಾಶ್ವತವಾದ ಕೀರ್ತಿಯನ್ನು ನಿಲ್ಲಿಸತಕ್ಕವನಾಗಿರುವುದರಿಂದಲೂ ಅಸಾಧಾರಣನೂ ಅಚ್ಯುತನೂ ನಿರ್ದೋಷಿಯೂ, ಸದಾಚಾರಸಂಪನ್ನನೂ ಸಕಲ ವಿದ್ಯಾಪ್ರವೀಣನೂ ಶಾಂತಮೂರುತಿಯೂ ಐಶ್ವರ್ಯಕ್ಕೆ ಗಣಿಯೂ ಆಗುವನಾದ್ದರಿಂದಲೂ ಈ ಬಾಲಕನಿಗೆ ಚಂದ್ರಹಾಸನೆಂಬ ನಾಮಧೇಯವು ಸಾರ್ಥಕವಾಗಿರುವುದೆಂದು ಅನೇಕರು ಒಪ್ಪಿದರು‖೬೧‖ಒಳ್ಳೆಯ ಮಾಹಾತ್ಮ್ಯದಿಂದಲೂ, ಸದಾಚಾರದಿಂದಲೂ, ವಿದ್ಯಾಬಲದಿಂದಲೂ, ದಾನವಂ ಮಾಡುವ ಸುಗುಣದಿಂದಲೂ ಲೋಗರಂ ರಂಜಿಸುವ ಒಳ್ನಡತೆಯಿಂದಲೂ, ಹಿಮಕರನಾಗಿಯೂ, ಗುಂಡಾಗಿಯೂ, ಷೋಡಶಕಲಾಪರಿಪೂರ್ಣನಾಗಿಯೂ ಆಕಾಶಮಾರ್ಗ ಸಂಚಾರಿಯಾಗಿಯೂ ಕನ್ನೈದಿಲೆಗಳಿಗೆ ಸಖನಾಗಿಯೂ ಇರುವ ಚಂದ್ರನನ್ನು ನಿರಾಕರಿಸುತ್ತಲಿರುವುದರಿಂದಲೂ ಈ ಬಾಲಕನಿಗೆ ಚಂದ್ರ

ಪಳಿ| ವಂಜಗವರಿಯಪೊತ್ತನೆಂದುಬಿಡದಮೃತಾರ್ಚಿ| ಯುಂಜರೆದುನಗುವನದರಿಂಚಂದ್ರಹಾಸನಿವನಹನೆನೆಪೆಸರ್ಮೆರೆದುದು ||೬೨|| ಕತ್ತಲೆಯಮನೆಗೆಮಣಿದೀಪವಾದಂತೆಸಲೆ| ಬತ್ತಿದಸರೋವರಕೆನವಜಲವೊದವಿದಂತೆ | ಬಿತ್ತರದಕಾವ್ಯರಚನೆಗೆದೇವತಾಸ್ತುತಿನೆಗಳ್ದಂತೆಭೂತಳದೊಳು || ಮತ್ತೆಸಂತಾನಮಿಲ್ಲದಕುಳಿಂದನಬಾಳ್ಕೆ | ಗುತ್ತಮಕುಮಾರನಾದಂಚಂದ್ರಹಾಸನೆನ | ಲುತ್ತರೋತ್ತರಮಪ್ಪುದಚ್ಚರಿಯೆಸುರಪುರದಲಕ್ಷ್ಮೀವರನಭಕ್ತರು ||೬೩||

ಸಂಧಿ ೨೮ಕ್ಕೆ ಪದ್ಯ ೧೫೬೩ಕ್ಕಂ ಮಂಗಳಮಸ್ತು.

---

ಮಹಿಮಾಸ್ಪದಂ-ಮಂಜು-ಹಿಮವೆನ್ನತಕ್ಕ, ಮಹಿಮಾ-ಶೈತ್ಯಕ್ಕೆ, ಆಸ್ಪದಂ-ಸ್ಥಾನಭೂತನು, ಚಾರು-ಅಂದವಾದ, ವೃತ್ತಂ-ಮಂಡಲವಾಗಿರುವನು, ಕಲಾಪುಂಜಂ - ಷೋಡಶಕಲಾವಿಷ್ಟನು, ಸದಾ-ಅನವರತವೂ, ನಭೋಗಂ-ಅಂತರಿಕ್ಷದಲ್ಲಿ ತಿರಗತಕ್ಕವನು, ಕುವಲಯಪ್ರಿಯಂ-ಕಪ್ಪುಕಮಲಗಳ ಬಂಧುವು, (ಇದು ಚಂದ್ರನ ವರ್ಣನೆಯು) ರಂಜಿಸುವ - ಹೊಳೆಯುತ್ತಲಿರುವ, ರಾಜನು-ಇಂದುವು, ಎನ್ನವೋಲ್-ನನ್ನಂತೆಯೇ, ಆದೊಡೆ-ಆದರೆ, ಮಿತ್ರತೇಜಕೆ - ದಿನಕರನ ಮತ್ತು ಸಖನಕಾಂತಿಗೆ, ಅಳವಳಿದು ಕಂಗೆಟ್ಟು, ಪಗೆಯ-ವೈರಿಯು, ಭಂಜನೆಗೆ-ತೊಂದರೆಗೆ, ಸಿಕ್ಕಿ-ಈಡಾಗಿ, ಬಡತನಬಟ್ಟು-ಬಡವಾಗಿ ಹೋಗಿ, ಕಂದಿ-ಕೃಶವಾಗಿ, ಜಗವು-ಲೋಕವೆಲ್ಲಾ, ಅರಿಯೆ-ಗೋಚರಪಡುವಂತೆ, ಪಳಿವಂ - ದೋಷವನ್ನು, ಪೊತ್ತನು - ಅವಲಂಬಿಸಿದನು, ಎಂದು-ಎಂಬತೆರನಾಗಿ, ಅಮೃತಾರ್ಚಿಯಂ-ಹಿಮಕರನನ್ನು, ಜರೆದು-ಹೀಯಾಳಿಸಿ, ನಗುವನು-ನಗುತ್ತಿರುವನು, ಅದರಿಂದ-ಆದಕಾರಣ, ಇವನು-ಈ ಹುಡುಗನು, ಚಂದ್ರಹಾಸನೆಂಬ ಹೆಸರಿಗೆ ತಕ್ಕವನು, ಅಹನು-ಆಗುತ್ತಾನೆ, ಎನೆ-ಎಂದು ನುಡಿಯಲು ಹೆಸರು-ನಾಮವು, ಮೆರೆದುದು-ಕಾಂತಿಯುಕ್ತವಾಯಿತು.

ಅ|| ವಿ|| ಇದರಲ್ಲಿ ಚಂದ್ರಹಾಸನಿಗೆ ಚಂದ್ರನನ್ನು ಹೋಲಿಸಿರುತ್ತೆ. ||೬೨||

ಟೀ|| ಮಣಿದೀಪಂ - ರತ್ನವಿಕಾರವಾದ ಕಾಂತಿಯು, ಕತ್ತಲೆಯಮನೆಗೆ - ಅಂಧಕಾರಮಯವಾದ ಮಂದಿರಕ್ಕೆ, ಆದಂತೆ-ಆದಹಾಗೂ, ನವಜಲಂ-ಹೊಸನೀರು, ಸಲೆ-ಚನ್ನಾಗಿ, ಬತ್ತಿದ-ಹೀರಿಹೋಗಿರತಕ್ಕ, ಸರೋವರಕೆ-ಕಾಸಾರಕ್ಕೆ, ಒದವಿದಂತೆ-ಬಂದು ಕೂಡಿದ ತೆರನಾಗಿಯೂ, ಬಿತ್ತರದ - ಮೇಲ್ಮೆಯನ್ನೈದಿದ, ಕಾವ್ಯ - ಕಬ್ಬದ, ರಚನೆಗೆ-ಮಾಡುವ ಕಾರ್ಯಕ್ಕೆ, ದೇವತಾಸ್ತುತಿ-ದೇವನಾಮಸಂಕೀರ್ತನೆಯು, ನೆಗಳ್ದಂತೆ-ಒದಗಿದ ಪರಿಯಿಂದಲೂ, ಸಂತಾನಂ-ಕುವರನು, ಇಲ್ಲದ-ಇಲ್ಲದಿರತಕ್ಕ, ಕುಳಿಂದನ-ಕುಳಿಂದನೆಂಬ ಅರಸನ, ಬಾಳ್ಕೆಗೆ-ಜೀವನಕ್ಕೆ, ಮತ್ತೆ-ಪುನಃ, ಭೂತಳದೊಳು-ಇಳಾವಲಯದಲ್ಲಿ, ಚಂದ್ರಹಾಸನು-ಚಂದ್ರಹಾಸನೆಂಬ ಬಾಲಕನು, ಉತ್ತಮ-ಶ್ರೇಷ್ಠನಾದ, ಕುಮಾರನು-ಮಗನು, ಆದಂ-ಆದನು, ಎನಲು - ಎಂಬ ಪರಿಯಿಂದ, ಸುರಪುರದ - ದೇವನಗರನಿವಾಸಿಯಾದ, ಲಕ್ಷ್ಮೀವರನ - ಇಂದಿರಾವಲ್ಲಭನ, ಭಕ್ತರು-ಭಕ್ತರಾದವರು, ಉತ್ತರೋತ್ತರಂ-ಅಭಿವೃದ್ಧಿಯನ್ನು, ಅಪ್ಪುದು-ಪಡೆಯುವುದು, ಅಚ್ಚರಿಯೆ-ಆಶ್ಚರ್ಯವೇ, (ವಿಷ್ಣುಭಕ್ತರಿಗೆ ಏಳ್ಗೆಯೆಂಬುದು ಸಿದ್ಧವಾಗಿರುತ್ತೆಂದು ಆಶಯವು.)

ಅ|| ವಿ|| ಬಿತ್ತರ (ತ್ಭ) ವಿಸ್ತಾರ (ತ್ಸ) ಅಚ್ಚರಿ (ತ್ಭ) ಆಶ್ಚರ್ಯ (ತ್ಸ) ಸ್ತುತಿ (ತ್ಸ) ತುತಿ (ತ್ಭ) ||೬೩||

ಟೀಕಾತಾತ್ಪರ್ಯ ಸಹಿತವಾದ ಜೈಮಿನಿಭಾರತದೊಳು ಇಪ್ಪತ್ತೆಂಟನೆಯ

ಸಂಧಿಯು ಸಮಾಪ್ತವಾದುದು.

---

ಹಾಸನೆಂಬ ಹೆಸರು ಅನ್ವರ್ಥವೇ ಆಗುವುದೆಂದು ಬ್ರಾಹ್ಮಣರು ನುಡಿದರು ||೬೨|| ಎಲೈ ಅರ್ಜುನನೆ! ಕೇಳು ಕತ್ತಲಾಗಿರುವ ಮನೆಯು ರತ್ನದಿಂದ ಪ್ರಕಾಶವನ್ನೈದುವಂತೆಯೂ ಒಣಗಿದ ಸರೋವರವು, ಹೊಸನೀರಿನಿಂದ ಕಾಂತಿಯನ್ನೈದುವ ಹಾಗೂ ವಿಸ್ತಾರವಾದ ಕಾವ್ಯವು ದೇವತಾಸ್ತುತಿಯಿಂದ ಶೋಭಿಸುವ ಪರಿಯಿಂದಲೂ ಮಕ್ಕಳಿಲ್ಲದ ಕುಳಿಂದನ ವಂಶವು ಚಂದ್ರಹಾಸನೆಂಬ ಬಾಲಕನಿಂದ ಅಭಿವೃದ್ಧಿಯನ್ನೈದಿತು ಲೋಕದಲ್ಲಿ ಕೃಷ್ಣಮೂರುತಿಯ ಪದಾರವಿಂದವಂ ನುತಿಸತಕ್ಕವರಿಗೆ ಯಾವ ಬಾಧೆಯು ತಾನೆ ಉಂಟಾದೀತೆಂದು ಜನರು ಅಚ್ಚರಿಪಡುತ್ತಲಿದ್ದರೆಂಬಲ್ಲಿಗೆ, ||೬೩||

ಟೀಕಾತಾತ್ಪರ್ಯ ಸಹಿತವಾದ ಜೈಮಿನಿಭಾರತದೊಳು ಇಪ್ಪತ್ತೆಂಟನೆಯ

ಸಂಧಿಯು ಸಮಾಪ್ತವಾದುದು.



## ಇಪ್ಪತ್ತೊಂಭತ್ತನೆಯ ಸಂಧಿ.

ಸೂಚನೆ|| ಮಂತ್ರಿಮತ್ಸರದಿಂದಮುಂದೆತಪ್ಪದೆದೈವ | ಯಂತ್ರಭೇದವನರಿಯದಿಂದುಹಾಸನಮೇಲೆ | ತಂತ್ರ ಮಂಪಣ್ಣಿಕೊಲಿಸುವೆನೆಂದುಕಳುಹಿದಂಕುಂತಳೇಂದ್ರನನಗರಿಗೆ ||

ಧ್ರುವನಂಬರಸ್ಥಳದೊಳಸ್ಮತ್ಪಿತಾಮಹಂ | ದಿವದೊಳ್ವಿಭೀಷಣಂ ಲಂಕೆಯೊಳ್ಪಾತಾಳ | ಭವನದೊಳ್ಬಲಿ ವಿಷ್ಣುಭಕ್ತರಂ ಕಾಣ್ಬರಾರೀ ಚಂದ್ರಹಾಸನಿಂದ || ಅವನಿ ಪಾವನಮಪ್ಪುದಾತನಂ ಸಂಧಿಸುವ | ಲವಲವಿಕೆಯಾಗಿರ್ಪುದೆಲೆತಪೋಧನ ತನಗೆ | ವಿವರಿಸೀಕಥೆಯ ನೆಂದರ್ಜುನಂಕೇಳ್ದೊಡಾ ಮುನಿಪನಿಂತೆಂದನು ||೧|| ಆಲಿಸೆಲೆಫಲುಗುಣ ಕುಳಿಂದಕನ ಭವನದೋ | ಳ್ಬಾಲಕಂ ಪೆಚ್ಚುವ ಸುಧಾಂಶುಕಳೆಯಂ ನಗುವ | ಲೀಲೆಯಿಂ ಚಂದ್ರಹಾಸಂ ತಪ್ಪನೆಂ

---

### ಇಪ್ಪತ್ತೊಂಭತ್ತನೆಯಸಂಧಿ ಪ್ರಾರಂಭವು.

ಸೂಚನೆ|| ಮಂತ್ರಿ–ಅಮಾತ್ಯನಾದ ದುಷ್ಟಬುದ್ಧಿಯಾದರೋ, ಮುಂದೆ–ಅನಂತರ, ತಪ್ಪುವ–ನಿವಾರಣೆಯನ್ನೈದುವ, ದೈವ–ದೇವರ ಸಂಬಂಧವಾದ, ಯಂತ್ರ–ಆಜ್ಞೆಯ, ಭೇದವನು–ವ್ಯತ್ಯಾಸವನ್ನು, ಅರಿಯದೆ–ಗೋಚರಮಾಡಿಕೊಳ್ಳಲಾರದೆ, ಕೊಲಿಸುವೆನು–ಪ್ರಾಣಗಳನ್ನು ಹೋಗಲಾಡಿಸಿ ಬಿಡುವೆನು, ಎಂದು–ಎಂಬತೆರನಾಗಿ, ಮತ್ಸರದಿಂದ–ಅಸೂಯೆಯಿಂದ, ಇಂದುಹಾಸನಮೇಲೆ–ಚಂದ್ರಹಾಸನಮೇಲೆ, ತಂತ್ರಮಂಪಣ್ಣಿ–ಹೂಟವೊಂದನ್ನು ಬಗೆದು, ಕುಂತಳೇಂದ್ರನ ನಗರಿಗೆ–ಕುಂತಳ ರಾಜ್ಯಕ್ಕೆ, ಕಳುಹಿದಂ–ಕಳುಹಿಸಿಕೊಟ್ಟವನಾದನು ||

ಟೀ|| ಅರ್ಜುನಂ– ಫಲುಗುಣನು, (ನಾರದನನ್ನು ಕುರಿತು) ಎಲೆ ತಪೋಧನ– ಎಲೈ ಋಷಿವರ್ಯನೆ, ಅಂಬರಸ್ಥಳದೊಳು–ಅಂತರಿಕ್ಷಮಾರ್ಗದೊಳಗೆ, ಧ್ರುವನು–ಧ್ರುವಚಕ್ರವರ್ತಿಯೂ, ದಿವದೊಳ್–ಇಂದ್ರಲೋಕದಲ್ಲಿ, ಅಸ್ಮತ್ಪಿತಾಮಹಂ–ನಮ್ಮ ತಾತನಾದ ವಿಚಿತ್ರವೀರ್‍ಯನೂ, ಲಂಕೆಯೊಳ್– ಲಂಕಾಪಟ್ಟಣದೊಳಗೆ, ವಿಭೀಷಣಂ– ರಾವಣಾಸುರನ ಅನುಜನೂ, ಪಾತಾಳ ಭವನದೊಳ್ – ಪಾತಾಳಲೋಕದಲ್ಲಿ, ಬಲಿ–ಬಲಿಯೆಂಬುವನೂ, (ಇರುವ ಹಾಗೆ) ಆರು–ಯಾರುತಾನೆ, ವಿಷ್ಣುಭಕ್ತರಂ ಕಾಣ್ಬರು – ವಿಷ್ಣುಭಕ್ತರನ್ನು ನೋಡುವರು, ಅವನಿ–ಲೋಕವು, ಈ ಚಂದ್ರಹಾಸನಿಂದ – ಈ ಚಂದ್ರಹಾಸನೆಂಬಾತನಿಂದ, ಪಾವನಂ–ಪವಿತ್ರತೆಯನ್ನೈದಿದ್ದು, ಅಪ್ಪುವುದು–ಆಗುತ್ತದೆ, ಆತನಂ–ಆ ಇಂದುಹಾಸನನ್ನು, ಸಂಧಿಸುವ–ದರ್ಶನ ಮಾಡಿಕೊಳ್ಳತಕ್ಕ, ಲವಲವಿಕೆಯು–ಕೌತುಕವು, ಆಗಿರ್ಪುದು–ಆಗಿದೆ, ಎಲೆ ತಪೋಧನ–ಅಯ್ಯಾ ಮಹನೀಯನಾದ ನಾರದನೆ, ಈತನ ಕಥೆಯನು–ಈ ಚಂದ್ರಹಾಸನ ಚರಿತ್ರೆಯನ್ನು, ತನಗೆ–ನನಗಾದರೋ, ವಿವರಿಸು–ವಿಸ್ತಾರವಾಗಿ ಹೇಳು, ಎಂದು–ಎಂಬತೆರನಾಗಿ, ಕೇಳ್ದಡೆ–ಪ್ರಶ್ನೆಯಂ ಮಾಡಲು, ಇಂತು–ಮುಂದೆ ಹೇಳುವಂತೆ, ಆ ಮುನಿಪನು– ನಾರದನು, ಎಂದನು–ಹೇಳತೊಡಗಿದನು.

ಅ|| ವಿ|| ಭವನ–ಮನೆ, ಭುವನ–ಪ್ರಪಂಚ ||೧||

ಟೀ|| ಎಲೆ ಫಲುಗಣ–ಅಯ್ಯಾ ಪಾರ್ಥನೇ, ಆಲಿಸು–ಕಿವಿಗೊಟ್ಟು ಕೇಳುವನಾಗು, ಬಾಲಂ–ಹಸುಳೆಯಾದ ಚಂದ್ರ

---

### ಇಪ್ಪತ್ತೊಂಭತ್ತನೆಯ ಸಂಧಿಯ ಕಥಾಸಾರವು.

ಕೇಳೈ ಜನಮೇಜಯಕ್ಷಿತಿಪನೆ! ಈ ರೀತಿಯಾಗಿ ಚಂದ್ರಹಾಸನು ಚಂದನಾವತಿಯಲ್ಲಿ ಹುಣ್ಣಿಮೆಯ ಚಂದ್ರನಂತೆ ಅಭಿವೃದ್ಧಿಯನ್ನೈದುತ್ತಿರುವನೆಂದು ನಾರದಮುನೀಂದ್ರನು ಅರ್ಜುನನೊಂದಿಗೆ ಹೇಳಲಾಗಿ, ಆಗ ಫಲುಗುಣನು, ಎಲೈ ದೇವಮುನಿಯೇ! ಧ್ರುವರಾಯನು ಅಂತರಿಕ್ಷದಲ್ಲಿಯೂ, ನಮ್ಮ ತಾತನಾದ ವಿಚಿತ್ರವೀರ್‍ಯನು ಸ್ವರ್ಗಲೋಕದೊಳಗೂ, ವಿಭೀಷಣನು ಲಂಕಾನಗರದಲ್ಲೂ, ಬಲಿಚಕ್ರವರ್ತಿಯು ಪಾತಾಳದಲ್ಲಿಯೂ ಇದ್ದುಕೊಂಡು ವಿಷ್ಣುಭಕ್ತಾಗ್ರೇಸರರೆಂದು ಖ್ಯಾತಿಗೊಂಡಿರುವುದಕ್ಕಿಂತಲೂ ಅತ್ಯಧಿಕವಾದ ಹೆಸರುವಾಸಿಯನ್ನೂ, ವಿಷ್ಣುಭಕ್ತಿಯನ್ನೂ ಉಳ್ಳ ಈ ಚಂದ್ರಹಾಸನಿಂದ ಈ ಭೂಮಂಡಲವೆಲ್ಲಾ ಪಾವನವಾಗುತ್ತಲಿರುವುದು. ಇಂತಹ ಅಸಾಧಾರಣವಾದ ನಡತೆಯುಳ್ಳ ಚಂದ್ರಹಾಸನನ್ನು ನೋಡಬೇಕೆಂಬ ಕುತೂಹಲವಿರುವುದು ದಯಮಾಡಿ ಆತನ ಕಥೆಯನ್ನು ನನಗೆ ತಿಳಿಸೆಂದು ಕೇಳಿಕೊಂಡನು. ಫಲುಗುಣನು ಈ ಪ್ರಕಾರವಾಗಿ ನಾರದನನ್ನು ಕೇಳಿಕೊಂಡದ್ದರಿಂದ ದೇವಮುನಿಯಾದ ನಾರದನು ಚಂದ್ರಹಾಸನ ಮುಂದಿನ ಕಥೆಯನ್ನು ಹೇಳಲಾರಂಭಿಸಿದನು ||೧|| ಕೇಳೈ ಅರ್ಜುನಾ, ಚಂದ್ರಹಾಸನು ಮೇಧಾವಿಯೆಂಬ ಚಂದನಾವತಿಯ ರಾಜನ ಮನೆಯಲ್ಲಿ ಶುಕ್ಲಪಕ್ಷದ ಚಂದ್ರನಂತೆ ಅಭಿವೃದ್ಧಿಯನ್ನೈದುತ್ತಲಿದ್ದನು. ಈ ಮಹಾನುಭಾವನು ಮೇಧಾವಿಯ ಮನೆಯನ್ನು ಸೇರಿ

ಬಂತೆದಿನದಿನಕೆ ವರ್ಧಿಸುತಿರೆ ‖ ಮೇಲೆ ಮೇಲೆಸೆದುದಾ ಪೊಳಲಸಿರಿ ವಿಮಲಗುಣ | ಶೀಲದಿಂಮೆರೆದುದೆಲ್ಲಾಜನಂ ಬಿಡದೆ ಕೊಡ | ವಾಲಂಕರೆದವಾಕಳುಗಳು ಬಿತ್ತದೆಬೆಳೆಯ ತೊಡಗಿತಿಳೆ ಮಳೆಗಳಿಂದ ‖ ೨ ‖ ಸೂಚಿತದ ಪೂರ್ವಜನ್ಮದಪುಣ್ಯ ಫಲದಿಂವ | ಯಾಚಿತದೊಳನುಪಮದಶಿಶು ನಿಧಾನಂತನಗೆ | ಗೋಚರಿಸಿತೆಂದು ನಲಿದಾಕುಳಿಂದ ನುಮವನರಾಣಿಯುಂದಿನ ದೊಳು ‖ ಲೋಚನಂ ದಣಿಯೆ ನೋಡುತ ಹರುಷ ವಾರಿಧಿಯ | ವೀಚಿಯೋಳ್ಮುಳುಗಾಡಿ ಪುತ್ರವಾತ್ಸಲ್ಯದಿಂ | ದಾಚಂದ್ರಹಾಸ ನಭ್ಯುದಯದೋಳ್ಪೆರ್ಚಿದರನೇಕ ಸಂಪದ ವೊದವಲು ‖ ೩ ‖ ಲಕ್ಷಣದೊಳೆಸೆವ ಸುಕುಮಾರ ನಂ ನಗರಿಗ | ಧ್ಯಕ್ಷನಾಗಿಹ ಕುಳಿಂದಂ ಕೆಲವು ದಿನದ ಮೇ | ಲಕ್ಷರಾಭ್ಯಾಸ ಕಿರಿಸಿದೊಡೆ ಹರಿಯೆಂಬೆರಡು ವರ್ಣಮಲ್ಲದೆ ಪೆರತನು ‖ ಅಕ್ಷಿಯಿಂ ದೀಕ್ಷಿಸದೆ ವಾಚಿಸದಿರಲ್ಕೆ ಗುರು | ಶಿಕ್ಷಿಸಿ ಕನಲ್ದು ಬರೆಯೆಂದೊಡಂ ಕೇಳದಿರೆ ತ | ತ್ಕ್ಷಣ

---

ಹಾಸನಾದರೊ, ಪೆಚ್ಚುವ– ಅಧಿಕವಾಗುವ, ಸುಧಾಂಶು– ಇಂದುವಿನ, ಕಳೆಯಂ– ಹೊಳಪನ್ನು, ನಗುವಲೀಲೆಯಿಂ-ಹಾಸ್ಯ ಗೈವ ಪರಿಯಿಂದ, ಚಂದ್ರಹಾಸಂತಪ್ಪನು-ಚಂದ್ರಹಾಸನೆಂಬುದರಲ್ಲಿ ಸಂದೇಹವೇ ಇಲ್ಲವು, ಎಂಬಂತೆ–ಎನ್ನುವ ರೀತಿಯಾಗಿ, ದಿನದಿನಕೆ-ಪ್ರತಿಯೊಂದು ದಿನದಲ್ಲಿಯೂ, ಕುಳಿಂದಕನ- ಚಂದನಾವತಿಯೊಡೆಯನ, ಭವನದೊಳ್–ಮಂದಿರದಲ್ಲಿ, ವರ್ಧಿಸು ತಿರೆ–ಮೇಲ್ಮೆಯನ್ನೈದುತ್ತಿರಲು, ಆ ಪೊಳಲಸಿರಿ–ಆ ನಗರದ ಐಶ್ವರ್ಯವು, ಮೇಲೆಮೇಲೆ-ಅತ್ಯಧಿಕವಾಗುತ್ತ, ಎಸೆದುದು–ಹೊಳೆ ಯಲಾರಂಭಿಸಿತು, ಎಲ್ಲಾ ಜನಂ-ಅಲ್ಲಿಯ ನಿವಾಸಿಗಳೆಲ್ಲರೂ, ವಿಮಲ–ಪವಿತ್ರವಾದ, ಗುಣಶೀಲದಿಂ–ಸದ್ಗುಣಸದಾಚಾರಂಗ ಳಿಂದ, ಮೆರೆದುದು-ಕಾಂತಿಯುಕ್ತವಾಯಿತು, ಆಕಳುಗಳು-ಧೇನುಗಳಾದರೋ, ಬಿಡದೆ–ತಪ್ಪದೆ, ಕೊಡವಾಲಂ–ಬಂದೊಂದು ಬಿಂದಿಗೆಯ ತುಂಬ ಹಾಲನ್ನು, ಕರೆದವು-ಕರೆಯುತ್ತಲಿದ್ದವು, ಇಳೆ–ಚಂದನಾವತಿಗೆ ಸೇರಿದ ಭೂಮಿಯೆಲ್ಲವೂ, ಬಿತ್ತದೆ– ಬಿತ್ತನೆಯನ್ನು ಮಾಡದಿದ್ದರೂ, ಮಳೆಗಳಿಂದ–ಚೆನ್ನಾಗಿ ಮಳೆಯು ಸುರಿಯುವುದರಿಂದ, ಬೆಳೆಯತೊಡಗಿತು–ಬೆಳೆಯಲಾರಂ ಭಿಸಿತು. ‖೨‖

ಟೀ‖ ಆ ಕುಳಿಂದನು-ಆ ಚಂದನಾವತಿಯೊಡೆಯನೂ, ಅವನ ರಾಣಿಯುಂ–ಆತನರಸಿಯಾದ ಮೇಧಾವಿನಿಯೂ ಸಹ, ತಮಗೆ–ತಮಗಾದರೊ, ಸೂಚಿತದ–ಒದಗಿದ, ಪೂರ್ವಜನ್ಮದ ಪುಣ್ಯಫಲದಿಂದ–ಹಿಂದಿನ ಜನ್ಮದಲ್ಲಿ ಮಾಡಿದ ಸತ್ಕಾರ್ಯಂಗಳ ಪರಿ ಪಾಕದಿಂದ, ಅಯಾಚಿತದೊಳು–ಮತ್ತೆ ಯಾರನ್ನೂ ಕೇಳಬೇಕೆಂಬಿಚ್ಛೆಯೇ ಇಲ್ಲದಿರುವಂತೆ, ಅನುಪಮ–ಅಸಾಧಾರಣವಾದ, ಶಿಶುನಿಧಾನಂ–ಮಗುವೆಂಬ ಫಲವು, (ನಿಕ್ಷೇಪ) ಗೋಚರಿಸಿತು–ಸಿದ್ಧಿಸಿತು, ಎಂದು-ಎಂಬ ತೆರನಾಗಿ, ನಲಿದು–ಆನಂದವನ್ನೈದಿ, ಲೋಚನಂದಣಿಯೆ–ಕಣ್ಣುಗಳಿಗೆ ಸಾಕಾಗುವ ವರೆಗೂ, ದಿನದಿನದೊಳು–ದಿನಂಪ್ರತಿಯಲ್ಲಿಯೂ, ಹರ್ಷವಾರಿಧಿಯವೀಚಿಯೋಳ್– ಆನಂದವೆಂಬ ಕಡಲಿನತರಂಗಗಳಲ್ಲಿ, ಮುಳುಗಾಡಿ–ಮಗ್ನರಾಗಿ, ಅನೇಕ ಸಂಪದಂ–ಐಶ್ವರ್ಯಸಮುದಾಯವು, ಒದವಲು-ಬಂದು ಸೇರಲು, ಆ ಚಂದ್ರಹಾಸನ- ಆ ಇಂದುಹಾಸನೆಂಬ ಬಾಲಕನ, ಅಭ್ಯುದಯದೋಳ್– ಏಳಿಗೆಯಲ್ಲಿ, ಪುತ್ರವಾತ್ಸಲ್ಯದಿಂದ–ಸುತ ನೆಂಬ ಮೋಹಾತಿಶಯದಿಂದ, ಪೆರ್ಚಿದರು–ವೃದ್ಧಿಯನ್ನೈದಿದರು ‖೩‖

ಟೀ‖ ಕೆಲವು ದಿನದಮೇಲೆ–ಹೀಗೆಯೇ ಕೆಲವು ದಿನಗಳು ಕಳೆದನಂತರ, ನಗರಿಗೆ-ಚಂದನಾವತಿಗೆ, ಅಧ್ಯಕ್ಷನಾಗಿಹ– ಒಡೆಯನಾಗಿರತಕ್ಕ, ಕುಳಿಂದಕಂ– ಕುಳಿಂದಕನೆಂಬಾತನು, ಲಕ್ಷಣದೊಳ್ - ಸಕಲವಾದ ಸುಲಕ್ಷಣಂಗಳಿಂದಲೂ, ಎಸೆವ– ಒಪ್ಪುತ್ತಲಿರತಕ್ಕ, ಸುಕುಮಾರನಂ-ಕೋಮಲಾಂಗದಿಂ ಮೊರೆಯುವ ಬಾಲಕನನ್ನು, ಅಕ್ಷರಾಭ್ಯಾಸಕೆ–ವಿದ್ಯೆಯಂ ಕಲಿಸಲು,

---

ದಂದಿನಿಂದಲೂ ಐಸಿರಿಯು ದಿನೇದಿನೇ ಹೆಚ್ಚುವುದಕ್ಕಾರಂಭಿಸಿತು. ಆ ಚಂದನಾವತಿಯ ಪ್ರಜೆಗಳೆಲ್ಲಾ ಸದ್ಗುಣ ಸದಾಚಾರ ಸಂಪನ್ನರಾಗಿರುತ್ತಲಿದ್ದರು. ಅಲ್ಲಿ ವಾಸಮಾಡುವ ಹಸುಗಳೆಲ್ಲಾ ಒಂದೊಂದು ಬಿಂದಿಗೆಯ ತುಂಬಾ ಹಾಲನ್ನು ಕರೆಯಲಾರಂ ಭಿಸಿದವು. ಕಾಲಕಾಲಕ್ಕೆ ಮಳೆಬೆಳೆಗಳು ಆಗುತ್ತ ಪ್ರಜೆಗಳೆಲ್ಲಾ ನೆಮ್ಮದಿಯಾಗಿರುತ್ತಲಿದ್ದರು. ‖ ೨ ‖ ಮತ್ತು ಚಂದನಾ ವತಿಯ ರಾಜನೂ ರಾಣಿಯೂ ಸಹ ತಮಗೆ ಅಪ್ರಾರ್ಥಿತವಾಗಿ ದೊರೆತ ಉತ್ತಮೋತ್ತಮನಾದ ಈ ಬಾಲಕನನ್ನು ನೋಡಿ ನೋಡಿ ಆನಂದಗೊಂಡು ತಮ್ಮ ಪೂರ್ವ ಜನ್ಮದ ಪುಣ್ಯವೇ ಈ ಬಾಲಕನ ರೂಪವಾಗಿ ಬಂದಿರುವುದೆಂದೆಣಿಸಿ ಆನಂದಾಂಬುಧಿ ಯಲ್ಲಿ ಓಲಾಡುತ್ತಾ, ಬಾಲಕನಾದ ಚಂದ್ರಹಾಸನ ಏಳಿಗೆಯಲ್ಲಿಯೇ ಅತಿಯಾದ ಕುತೂಹಲದಿಂದ ಕೂಡಿದವರಾದರು ‖ ೩ ‖ ಹೀಗೆಯೇ ಕೆಲವು ದಿನಗಳು ಕಳೆದ ಬಳಿಕ ಕುಳಿಂದರಾಜನಾದರೊ, ರಾಜಲಕ್ಷಣಗಳಿಂದೊಪ್ಪುತ್ತಲಿರುವ, ಚಂದ್ರಹಾಸನನ್ನು ವಿದ್ಯಾಭ್ಯಾಸಕ್ಕಾಗಿ ಗುರುವಿನ ಬಳಿಗೆ ಕಳುಹಿಸಿದನು. ಆ ವಿದ್ಯಾಗುರುವು ರಾಜಕುವರನಾದ ಚಂದ್ರಹಾಸನಿಗೆ ಎಷ್ಟು ವಿಧವಾಗಿ ಬೋಧಿಸಿದರೂ ನಿಷ್ಫಲವಾಯಿತು. ಚಂದ್ರಹಾಸನಿಗೆ ಹರಿಯೆಂಬೆರಡು ಅಕ್ಷರದಮೇಲೆ ಆಶೆಯೇ ಹೊರತು ಮತ್ತೆ ಯಾವುದನ್ನೂ ಕಣ್ಣಿನಿಂದಲೂ ನೋಡದೆಯೂ, ಓದದೆಯೂ ಇದ್ದನಾದ್ದರಿಂದ ಗುರುವಿಗೆ ಕೋಪವು ಹೆಚ್ಚಿ ಶಿಕ್ಷಿಸಿದರೂ ಕೂಡ ಲೆಕ್ಕಿಸದೆ

ದೊಳಾತನೈತಂದವನತಾತಂಗದಂಪೇಳ್ದೊಡಿಂತೆಂದನು ॥ ೪ ॥ ಈತನೇಕಾದಶಿಯೊಳುಪವಾಸಮಂಮಾಳ್ಪ | ನೀತನಂಕಂಡು ನಾವೆಲ್ಲರುಮನುಷ್ಠಿಸು | ವೆವೀತನಚ್ಯುತಭಕ್ತನೀತನಿಂದೆನಗಪ್ಪುದಭ್ಯುದಯಮಿಹಪರದೊಳು ॥ ಈತನಲ್ಲದೆಬೇರೆತನು ಜಾತರಿಲ್ಲತನ | ಗೀತನಲ್ಲಿಯೆಜೀವಮಾಗಿರ್ಪೆನಾನದರಿ | ನೀತನೆಂತಾದೊಡಿರಲೀತಂಗೆಶಿಕ್ಷೆಬೇಡೆಂದಂಕುಳಿಂದನಂದು ॥ ೫ ॥ ಅಂದುಮೊದಲಾಗಿತನ್ನಿಚ್ಛೆಯಿಂಚಂದ್ರಹಾ | ಸಂದಾನವಾರಿಯಂಬಿಡದೆಬಾಲಕ್ರೀಡೆ | ಯಿಂದುತ್ಸವಂಗಳಂಮಾಡಿಕೆಳೆಯ ರ್ವೆರಸಿಕೊಂಡಾಡಿಭಕ್ತಿಯಿಂದ ॥ ತಂದುಫಲವರ್ಗಮಂಪೂಜೆಯಂಗೈದುಪವಾಸ | ದಿಂದಜಾಗರಣದಿಂದೇಕಾದಶೀ

ಇರಿಸಿದೊಡೆ-ಬಿಡಲಾಗಿ, ಹರಿಯೆಂಬ-ಹರಿಯೆನ್ನತಕ್ಕ, ಎರಡನು-ಎರಡನ್ನೆ, ಅಲ್ಲದೆ-ಬಿಟ್ಟರೆ, ಅಕ್ಷಿಯಿಂದ ತನ್ನ ಕಣ್ಣಿನಿಂದಲೂ ಕೂಡ, ಪೆರತನು-ಅನ್ಯವಾದದ್ದನ್ನು, ಈಕ್ಷಿಸದೆ - ದೃಷ್ಟಿಪಥಕ್ಕೆ ತಂದುಕೊಳ್ಳದೆ, ವಾಚಿಸದೆ - ಓದದೆ, ಇರಲ್ಕೆ-ಇದ್ದಕಾರಣ, ಗುರು-ವಿದ್ಯೆಯನ್ನು ಹೇಳಿಕೊಡುವ ಶಿಕ್ಷಕನಾದರೋ, ಶಿಕ್ಷಿಸಿ - ಬಡಿದು, ಕನಲ್ದು - ಆಗ್ರಹವಂ ಮಾಡಿಕೊಂಡು, ಬರೆಯೊಂದೊಡಂ - ಅಕ್ಷರಗಳನ್ನು ತಿದ್ದೆಂದರೂ ಕೂಡ, ಕೇಳದೆ-ಲೆಕ್ಕಿಸದೆ, ಇರೆ - ಇದ್ದದ್ದರಿಂದ, ಆತನು - ಆ ಶಿಕ್ಷಕನು, ತತ್ಕ್ಷಣದೊಳ್ - ಕೂಡಲೇ, ಐತಂದು-ಬಂದವನಾಗಿ, ಅವನತಾತಂಗೆ-ತಂದೆಯಾದ ಕುಳಿಂದರಾಜನಿಗೆ, ಪೇಳ್ದಡೆ-ತಿಳಿಸಲು, ಇಂತೆಂದನು - ಮುಂದೆ ಹೇಳುವಂತೆ ಹೇಳುವನಾಗುವನು.

ಅ॥ ವಿ॥ ಅಧ್ಯಕ್ಷ (ತ್ಸ) ಅದ್ಭಿಕ (ತ್ಭ) ॥೪॥

ಟೀ॥ ಆಕುಳಿಂದಂ - ಆ ಚಂದನಾವತಿಯರಸಾದರೋ, (ವಿದ್ಯಾಗುರುವನ್ನು ಕುರಿತು,) ಏಕಾದಶಿಯೊಳು - ಏಕಾದಶಿಯ ದಿವಸ, ಈತನು-ಈ ಇಂದುಹಾಸನು, ಉಪವಾಸಮಾಳ್ಪನು-ಉಪವಾಸವನ್ನು ಮಾಡುತ್ತಾನೆ. ನಾವೆಲ್ಲರುಂ - ನಾವುಗಳೆಲ್ಲಾ, ಈತನಂಕಂಡು - ಇವನ ನಡವಳಿಯನ್ನು ನೋಡಿ, ಅನುಷ್ಠಿಸುವೆವು - ಅನುಸರಿಸಿ ನಡೆಯುತ್ತೇವೆ, ಈತನು - ಈ ಬಾಲಕನಾದರೋ, ಅಚ್ಯುತಭಕ್ತನು - ವಿಷ್ಣುಭಕ್ತನಾಗಿರುವನು, ಎನಗೆ - ನನಿಗಾದರೋ, ಇಹಪರದೊಳು - ಈ ಲೋಕ ಪರಲೋಕಗಳಲ್ಲಿ, ಅಭ್ಯುದಯಂ - ಏಳಿಗೆಯು, ಈತನಿಂದ - ಇವನಿಂದಲೇ, ಅಪ್ಪುದು-ಆಗುತ್ತದೆ. ಈತನಲ್ಲದೆ - ಇವನನ್ನು ಬಿಟ್ಟರೆ, ಬೇರೆಸುತರು - ಬೇರೆ ಮಕ್ಕಳು, ತನಿಗೆ-ನನಗಾದರೋ, ಇಲ್ಲ - ಇಲ್ಲವು, ಈತನಲ್ಲಿಯೇ - ಈ ಹಸುಳೆಯಲ್ಲಿಯೇ, ಜೀವಂಆಗಿರ್ಪೆನು - ನನ್ನ ಜೀವವನ್ನಿಟ್ಟುಕೊಂಡಿರುವೆನು, ಅದರಿಂ - ಆದಕಾರಣ, ಈತಂ-ಈ ಬಾಲಕನು, ಎಂತಾದೊಡಂ-ಹೇಗೆಬೇಕಾದರೂ, ಇರಲಿ - ಇರತಕ್ಕವನಾಗಲಿ, ಈತಂಗೆ - ಇವನಿಗೆ, ಶಿಕ್ಷೆ - ದಂಡಿಸುವಿಕೆಯು, ಬೇಡ - ಕೂಡದು, ಎಂದು-ಎಂಬದಾಗಿ, ಅಂದು-ಆ ಕಾಲದಲ್ಲಿ, ಎಂದಂ-ಪ್ರತ್ಯುತ್ತರವನ್ನಿತ್ತನು. ॥೫॥

ಟೀ॥ ಚಂದ್ರಹಾಸಂ - ಚಂದ್ರಹಾಸನೆಂಬ ಬಾಲಕನು, ಅಂದುಮೊದಲಾಗಿ-ಕುಳಿಂದನು ವಿದ್ಯಾಗುರುವಿಗೆ ಹೇಳಿದ ಕಾಲದಿಂದಲೂ, ತನ್ನಿಚ್ಛೆಯಿಂ - ಇಷ್ಟಾನುಸಾರವಾಗಿ, ದಾನವಾರಿಯಂ - ಶ್ರೀ ಕೃಷ್ಣಸ್ವಾಮಿಯನ್ನು, ಬಿಡದೆ - ತಪ್ಪದೆ, ಬಾಲಕ್ರೀಡೆಯಿಂದ - ಬಾಲರೊಂದಿಗೆ ಆಟದಿಂದ, ಉತ್ಸವಂಗಳಂಮಾಡಿ - ಉತ್ಸವಾದಿಗಳನ್ನು ನೆರವೇರಿಸಿ, ಕೆಳೆಯರ್ವೆರಸಿ-ತನ್ನಮಿತ್ರರೊಂದಿಗೆ, ಭಕ್ತಿಯಿಂದ - ಆಸಕ್ತಿಯಿಂದ, ಕೊಂಡಾಡಿ - ನುತಿಸಿ, ಫಲವರ್ಗಮಂ ನಾನಾ ಪ್ರಕಾರವಾದ ಹಣ್ಣುಗಳನ್ನು, ತಂದು - ಸಂಗ್ರಹಿಸಿ, ಪೂಜೆಗೈದು - ಆರಾಧನೆಯಂ ಮಾಡಿ, ಹರಿಯ - ಶ್ರೀ ಕೃಷ್ಣಮೂರ್ತಿಯ, ಮಹಿಮೆಗಳನು-ಮಹಾತ್ಮೆಗಳನ್ನು, ಅಖಿಳಜನಕೆ - ಸಮಸ್ತ ಪ್ರಜೆಗಳಿಗೂ, ಉಪದೇಶಿಪಂತೆ - ತಿಳಿಸುವನೆಂಬ ತೆರನಾಗಿ, ಉಪವಾಸಮಂ-ಊಟಮಾಡದಿರುವಿಕೆಯನ್ನೂ, ಜಾಗರಣದಿಂದ-ಎಚ್ಚರಿಕೆಯಿಂದ, ಏಕಾದಶಿವ್ರತವನು-ಏಕಾದಶಿಯ ಕಟ್ಟಳೆಯನ್ನು, ಆನಂದದಿಂ ಆಚರಿಪನು-ಸಂತೋಷದಿಂದ ನಡೆಯಿಸುವನು.

ಮನಸ್ಸಿಯಾಗಿರುವದನ್ನೂ ಕಂಡು ರಾಜನ ಬಳಿಗೆ ಬಂದು ಇದ್ದ ಸಂಗತಿಯನ್ನೆಲ್ಲಾ ತಿಳಿಸಿದನು ॥ ೪ ॥ ಆಗ ಮೇಧಾವಿಯು ವಿದ್ಯಾಗುರುವನ್ನು ಕುರಿತು ಈ ಬಾಲಕನು ಏಕಾದಶೀದಿನ ಉಪವಾಸವನ್ನು ಮಾಡುವನು ಇವನನ್ನು ನೋಡಿ ನಾವೆಲ್ಲಾ ಆಚರಿಸುತ್ತಲಿರುವೆವು. ಇವನು ವಿಷ್ಣುಭಕ್ತರಲ್ಲಿ ಅಗ್ರೇಸರನು. ನನಗೆ ಉಂಟಾಗಬೇಕಾಗಿರುವ ಐಹಿಕಾಮುಷ್ಮಿಕ ಸುಖಂಗಳಿಗೆ ಈ ಬಾಲಕನೆ ಕಾರಣನಾಗಿರುವನು. ನನಿಗೆ ಇವನೊಬ್ಬನೆ ಮಗನಾದ್ದರಿಂದ ಈ ಹಸುಳೆಯನ್ನು ಕಂಡರೆ ನನಗೆ ಹೆಚ್ಚಾದ ಪ್ರೇಮವಿರುವುದು. ಇವನನ್ನು ಬಿಟ್ಟರೆ ನನ್ನ ಪ್ರಾಣವು ನಿಲ್ಲಲಾರದಾದಕಾರಣ ಈ ಬಾಲಕನು ಹೇಗಾದರೂ ಇರಲಿ, ಇವನನ್ನು ಶಿಕ್ಷಿಸಕೂಡದೆಂದು ನುಡಿದನು ॥ ೫ ॥ ಅಂದಿನಿಂದಲೂ ಈ ಇಂದುಹಾಸನು ಸ್ವೇಚ್ಛೆಯಾಗಿ ಬೆಳೆಯುತ್ತಲಿದ್ದನು ಇವನು ಯಾವಾಗಲೂ ಅನೇಕ ಬಾಲಕರನ್ನು ಜೊತೆಮಾಡಿಕೊಂಡು ನಾನಾ ಪ್ರಕಾರವಾದ ಫಲಪುಷ್ಪಗಳನ್ನು ತಂದು, ರಾಕ್ಷಸಾಂತಕನಾದ ಶ್ರೀಮನ್ನಾರಾಯಣನನ್ನು ಆರಾಧಿಸುತ್ತಾ, ಶ್ರೀ ಮಹಾವಿಷ್ಣುವಿನ ಮಹತ್ವವನ್ನು ಸಕಲ

ವ್ರತವನಾನಂದ । ದಿಂದಾಚರಿಪನಖಿಳಜನಕುಪದೇಶಿಪಂತೆಹರಿಮಹಿಮೆಗಳನು ॥ ೬ ॥ ಮೆಲ್ಲನಿಂತಿರಲೆಂಟನೆಯವರುಷ ವಾಗಲ್ಕೆ । ನಿಲ್ಲದುಪನಯನಮಂವಿರಚಿಸಿಕುಳಿಂದಂಸ । ಮುಲ್ಲಾಸಮಂತಾಳ್ದನಂಗಸಹಿತಖಿಳವೇದಂಗಳಂನೀತಿಗಳನು ॥ ಸಲ್ಲ ಲಿತಶಬ್ದಾದಿಶಾಸ್ತ್ರಸಿದ್ಧಾಂತಂಗ । ಳೆಲ್ಲಮಂಗುರುಮುಖದೊಳಧಿಕರಿಸಿಬೇಕಾದ । ಬಿಲ್ಲವಿದ್ಯೆಯನರಿದುಗಜತುರಗದೇರಾಟ ದೋಳ್ಚತುರನಾದನವನು ॥ ೭ ॥ ವಿದಿತವೇದಾರ್ಥಮಂವಿಷ್ಣುವೆಂದರಿದು । ಬಹುವಿಧಶಾಸ್ತ್ರತತಿಹರಿಯೆಗತಿಯೆಂದು ತಿಳಿದುತಾ । ನಧಿಕರಿಸಿಬಳಿಕನಿಜಭಕ್ತಿಚಾಪಕೆಸತ್ವಗುಣವನಳವಡಿಸಿತನ್ನ । ಸುಧಿಯಶರಮಂಪೂಡಿಕೃಷ್ಣನಂಗುರಿ ಮಾಡಿ ॥ ವಿಧುಹಾಸ ನನುಪಮ ಧನುರ್ವಿದ್ಯೆಯಂ ಜಗದೊ । ಳಧಿಕತರನಾಗೆ ಸಾಧಿಸಿ ಪರಮಭಾಗವತ ಕಲೆಗಳಿಂದೆಸೆ ದಿರ್ದನು ॥ ೮ ॥ ಷೋಡಶಪ್ರಾಯದೊಳವಂಪ್ರಬಲಬಲನಾಗಿ । ಮೂಡಿದಗ್ಗಳಿಕೆಯಿಂದ್ಮೈದೆರಥಿಕರ್ಕಳಂ । ಕೂಡಿ

---

ಅ॥ ವಿ॥ ಪೂಜೆಗೈ (ಕ್ರಿ. ಸ.) ಕೆಳೆ – ಸ್ನೇಹ, ಕಳೆ – ಹೋಗಲಾಡಿಸುವುದು ಮತ್ತು ಅಪ್ರಕೃತವಾದ ವೈರು ॥೬॥

ಟೀ॥ ಇಂತು–ಈ ಬಗೆಯಾಗಿ, ಇರಲು–ಇರುತ್ತಿರಲಾಗಿ, ಮೆಲ್ಲನೆ–ನಿಧಾನವಾಗಿ, ಎಂಟನೆಯವರ್ಷಂ – ಎಂಟನೆಯ ಸಂವತ್ಸರವು, ಆಗಲ್ಕೆ–ಆದಕಾರಣ, ನಿಲ್ಲದೆ – ಸಾವಕಾಶಮಾಡದೆ, ಕುಳಿಂದಂ – ಕುಳಿಂದನೆಂಬ ರಾಜನು, ಉಪನಯನಮಂ, ವಿರಚಿಸಿ – ಉಪನಯನವೆಂಬ ವೇದಾಧಿಕಾರಕರ್ಮವನ್ನು ನೆರವೇರಿಸಿ, ಸಮುಲ್ಲಾಸಮಂತಾಳ್ದನು – ಸಂತೋಷವನ್ನೈದಿದನು. ಅವಂ–ಆ ಬಾಲಕನಾದರೋ, ಗುರುಮುಖದೊಳು–ಗುರುವಿನ ಮೂಲಕವಾಗಿ, ಅಂಗಸಹಿತ–ಶಿಕ್ಷಾದಿ ಷಡಂಗಗಳಿಂ ಕೂಡಿರತಕ್ಕ, ವೇದಂಗಳಂ – ಋಗ್ವೇದವೇ ಮೊದಲಾದ ನಾಲ್ಕು ವೇದಗಳನ್ನೂ, ನೀತಿಗಳನು – ನ್ಯಾಯಶಾಸ್ತ್ರವನ್ನೂ, ಸಲ್ಲಲಿತ – ಸುಂದರ ವಾದ, ಶಬ್ದಾದಿ–ಶಬ್ದಗಳೇ ಮೊದಲಾಗಿರತಕ್ಕ, ಸಿದ್ಧಾಂತಗಳೆಲ್ಲಮಂ–ಸಕಲ ಸಾರಾಂಶವನ್ನು, ಗುರುಮುಖದೊಳ್ – ಗುರುವಿನ ಮೂಲಕ, ಅಧಿಕರಿಸಿ–ಅಭ್ಯಾಸಮಾಡಿ, ಬೇಕಾದ–ಅವಶ್ಯಕವಾದ, ಬಿಲ್ಲವಿದ್ಯೆಯನು – ಧನುರ್ವಿದ್ಯೆಯನ್ನು, ಅರಿದು – ತಿಳಿದು ಕೊಂಡು, ಗಜತುರಗದ – ಹಸ್ತ್ಯಶ್ವಂಗಳ, ಏರಾಟದೋಳ್ – ಸವಾರಿಯಲ್ಲಿ, ಅವನು – ಆ ಬಾಲಕನು, ಚತುರನಾದನು– ಪಂಡಿತನಾದನು.

ಅ॥ ವಿ॥ ವೇದಗಳು–ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವಣವೇದವೆಂಬಿವು, ವೇದಾಂಗಗಳು – ಶಿಕ್ಷೆ, ವ್ಯಾಕರಣ, ಛಂದಸ್ಸು, ನಿರುಕ್ತ, ಜ್ಯೋತಿಷ, ಕಲ್ಪ ಎಂಬಿವು. ॥೭॥

ಟೀ॥ ವಿಧುಹಾಸನು–ಚಂದ್ರಹಾಸನೆಂಬ ಬಾಲಕನು, ವಿದಿತ–ಗೋಚರವಾದ, ವೇದಾರ್ಥಮಂ–ವೇದದ ಸಾರವನ್ನು, ವಿಷ್ಣುವೆಂದು–ವಿಷ್ಣುವೆಂಬುದಾಗಿ, ಅರಿದು–ತಿಳಿದವನಾಗಿ, ಬಹುವಿಧ–ನಾನಾ ಬಗೆಯಾದ, ಶಾಸ್ತ್ರತತಿ–ಶಾಸ್ತ್ರಂಗಳ ಗುಂಪು, ಹರಿಯೇ–ಶ್ರೀಕೃಷ್ಣನೇ, ಗತಿಯೆಂದು–ದಿಕ್ಕೆಂಬುದಾಗಿ, ತಿಳಿದು – ತಿಳಿದುಕೊಂಡು, ತಾನು–ತಾನಾದರೊ, ಅಧಿಕರಿಸಿ – ಸಕಲ ಶಾಸ್ತ್ರಗಳನ್ನೂ ಕಲಿತು, ಬಳಿಕ–ಅನಂತರ, ನಿಜ–ಸ್ವಕೀಯವಾದ, ಭಕ್ತಿಚಾಪಕೆ–ಭಕ್ತಿಯೆಂಬ ಬಿಲ್ಲಿಗೆ, ಸತ್ವಗುಣವನು–ಸನ್ಮಾರ್ಗ ವೆಂಬ ಹುರಿಯನ್ನು, ಅಳವಡಿಸಿ–ಜೋಡಿಸಿ, ತನ್ನ – ತನ್ನದಾದ, ಸುಧಿಶರಮಂಪೂಡಿ – ಸುಜ್ಞಾನವೆಂಬ ಅಲಗನ್ನು ತಗಲಿಸಿ, ಕೃಷ್ಣನಂಗುರಿಮಾಡಿ–ಕೃಷ್ಣನಂ ಎದುರಾಳನ್ನಾಗಿ ತಿಳಿದು, ಜಗದೊಳು–ಲೋಕದಲ್ಲಿ, ಅಧಿಕತರಂ–ಬಹು ಹೆಚ್ಚಾದದ್ದು, ಆಗೆ– ಆಗುವಂತೆ, ಅನುಪಮ–ಅಸಾಧಾರಣವಾದ, ಧನುರ್ವಿದ್ಯೆಯಂಸಾಧಿಸಿ – ಬಾಣಪ್ರಯೋಗದ ಚಾತುರ್ಯವನ್ನರಿತು, ಪರಮ–ಅತಿ ಶ್ರೇಷ್ಠಂಗಳಾದ, ಭಾಗವತಕಲೆಗಳಿಂದ–ಭಗವಂತನ ಭಕ್ತರ ಕಾಂತ್ಯತಿಶಯದಿಂದ, ಎಸೆದಿರ್ದನು–ಹೊಳೆಯುತ್ತಲಿದ್ದನು.

ಅ॥ ವಿ॥ ಶರ–ಬಾಣ, ಶರ–ನೀರು. ॥೮॥

---

ರಿಗೂ, ಬೋಧಿಸುತ್ತಲಿರುವನೋ ಎಂಬಂತೆ, ಎಚ್ಚರಿಕೆಯಿಂದಲೂ, ಉಪವಾಸದಿಂದಲೂ, ಏಕಾದಶೀ ವ್ರತವನ್ನು ಸಾಂಗ ವಾಗಿ ನೆರವೇರಿಸುತ್ತಲಿದ್ದನು. ॥ ೬ ॥ ಹೀಗಿರುವಾಗ ಈ ಬಾಲಕನಿಗೆ ಎಂಟನೆಯ ವರ್ಷವಾಗಲು ರಾಜನಾದ ಮೇಧಾವಿಯು ಯಥಾವಿಧಿಯಾಗಿ ಉಪನಯನ ಮಹೋತ್ಸವವನ್ನು ನೆರವೇರಿಸಿ, ಗುರುಮುಖದಿಂದ ವಿದ್ಯೆಯಂ ಕಲಿಸಲಾರಂಭಿಸಿದನು. ಈ ಬಾಲಕನಾದರೊ, ಕೆಲವು ದಿವಸಗಳೊಳಗಾಗಿ ವೇದವೇದಾಂಗಗಳಲ್ಲಿಯೂ, ಶಬ್ದಾದಿ ಶಾಸ್ತ್ರಂಗಳಲ್ಲಿಯೂ ಪಂಡಿತನಾದನು. ಧನುರ್ವಿದ್ಯೆಯಲ್ಲಿಯೂ, ಆನೆ ಕುದುರೆಗಳ ಸವಾರಿಯಲ್ಲಿಯೂ, ಇವನನ್ನು ಮೀರಿಸತಕ್ಕವರೇ ಇರಲಿಲ್ಲವು ॥ ೭ ॥ ಈ ಚಂದ್ರ ಹಾಸನು ಭಕ್ತಿಯೆಂಬ ಧನುಸ್ಸಿಗೆ ಸನ್ಮಾರ್ಗವೆಂಬ ಹುರಿಯನ್ನು ಕಟ್ಟಿ ತನ್ನ ಬುದ್ಧಿಯೆಂಬ ಬಾಣವನ್ನು ತಗಲಿಸಿ, ಗುರಿಯಿಟ್ಟು ಕೃಷ್ಣನೆಂಬ ವಸ್ತುವನ್ನು ಹೊಡೆದು ಸ್ವಾಧೀನಮಾಡಿಕೊಂಡದ್ದರಿಂದಲೇ ಅತ್ಯುನ್ನತಿಯನ್ನೈದಿದ ನೆಂಬಂತೆ ಸುಲಕ್ಷಣಂ ಗಳಿಂ ಮೆರೆಯುತ್ತಲಿದ್ದನು. ॥ ೮ ॥ ಇವನು ಸಕಲ ಕಲಾಕೋವಿದನಾಗುವ ವೇಳೆಗೆ ಹದಿನಾರುವರ್ಷ ಪ್ರಾಯದವನಾದನು.

ಕೊಂಡೈದಿನಿಜತಾತಂಗೆಮಲೆವಮನ್ನೆಯರೆಲ್ಲರಂಘಾತಿಸಿ ‖ ಮಾಡಿದಂದಿಗ್ವಿಜಯಮಂಕುಳಿಂದಕನಾಳ್ವ । ನಾಡಲ್ಲದೇಣ್ದೆಸೆಯಸೀಮೆಗಳನೊತ್ತಿದಂ । ಪೂಡಿಸಿದನವರವರಮನೆಗಳಸುವಸ್ತುಜಾಲಂಗಳಂತನ್ನಪುರಕೆ ‖ ೯ ‖ ಹರಿಯನಾರಾಧಿಸದೆ ರಾಜ್ಯಮದದಿಂಸೊಕ್ಕಿ । ದರಿಭೂಪರಂಗೆಲ್ದುಮಣಿಕನಕಮುಕ್ತಾಳಿ । ಕರಿತುರಗಮೊದಲಾದಮುಖ್ಯವಸ್ತುಪ್ರತತಿಸಹಿತಪಟ್ಟಣಕೆಬರಲು ‖ ಪುರದಸಿಂಗರವಮಂಗಳವಾದ್ಯರವದಬಲೆ । ಯರಸೊಡರ್ವೆಳಗಿನಾರತಿಗಳಮಹೋತ್ಸವದ । ಸಿರಿಯೊಳ್ಕುಳಿಂದಂಕುಮಾರನನಿದಿರ್ಗೊಳಿಸಿಮತ್ತೆಕಾಣಿಸಿಕೊಂಡನು ‖ ೧೦ ‖ ತಾಯಿತಂದೆಗಳೀಗಲಿಂದಿರಾದೇವಿನಾ । ರಾಯಣರ್ತನಗೆಂದುಭಾವಿಸಿನಮಿಸಲವರ್ । ಪ್ರೀಯದಿಂತನಯನಂತೆಗೆದಪ್ಪಿದರ್ಬಳಿಕಪುರವೀಧಿಯೊಳ್ಬರುತಿರೆ ‖ ಆಯ

ಟೀ‖ ಅವಂ–ಆ ಇಂದುಹಾಸನಾದರೋ, ಷೋಡಶಪ್ರಾಯದೊಳು–ತನ್ನ ಹದಿನಾರನೆಯ ವಯಸ್ಸಿನಲ್ಲಿ, ಪ್ರಬಲ–ಹೆಚ್ಚಾದ, ಬಲನು–ಸಾಮರ್ಥ್ಯವುಳ್ಳವನು ಆಗಿ, ರಥಿಕರ್ಕಳಂಕೂಡಿಕೊಂಡು – ರಥಿಕರೊಂದಿಗೆ ಬೆರತು, ಐದೆ - ಚೆನ್ನಾಗಿ, ಮೂಡಿದ–ಲಭ್ಯವಾದ, ಅಗ್ಗಳಿಕೆಯಿಂದ–ಸಾಹಸದಿಂದ, ಐದಿ–ಹೊರಟು, ನಿಜತಾತಂಗೆ–ತನ್ನ ತಂದೆಗೆ, ಮಲೆವ–ಎದುರಾಳುಗಳಾಗುವ, ಮನ್ನೆಯರೆಲ್ಲರಂ - ಸಮಸ್ತರಾಜರನ್ನೂ ಸಹ, ಘಾತಿಸಿ – ಸಂಹರಿಸಿ, ದಿಗ್ವಿಜಯಮಂ ಮಾಡಿದಂ – ಗೆಲುವನ್ನು ಹೊಂದಿದನು, ಕುಳಿಂದಕನು–ಕುಳಿಂದಕನೆಂಬ ಪ್ರಭುವು, ಆಳ್ವ – ಪರಿಪಾಲಿಸತಕ್ಕ, ನಾಡಲ್ಲದೆ–ಊರನ್ನುಮಾತ್ರ ಬಿಟ್ಟು, ಎಣ್ದೆಸೆಯ ಸೀಮೆಗಳನು - ಎಂಟು ದಿಕ್ಕಿನ ಸರಹದ್ದುಗಳನ್ನೂ, ಒತ್ತಿದಂ–ಆವರಿಸಿದನು, ತನ್ನಪುರಕ್ಕೆ–ತನ್ನ ನಗರಿಗೆ, ಅವರವರ–ಆಯಾಯ ಪ್ರಜೆಗಳ, ಮನೆಗಳ–ಮಂದಿರಗಳ, ಸುವಸ್ತುಜಾಲಂಗಳಂ ಉತ್ತಮ ಪದಾರ್ಥಗಳ ರಾಶಿಯನ್ನೂ, ಪೂಡಿಸಿದನು–ಸಾಗಿಸಿಕೊಂಡು ಬಂದು ಸೇರಿಸಿದನು ‖ ೯ ‖

ಟೀ‖ ರಾಜ್ಯಮದದಿಂ–ರಾಜ್ಯಭಾರದ ಅಹಂಕಾರದಿಂದ, ಹರಿಯನು–ಶ್ರೀ ಕೃಷ್ಣಮೂರುತಿಯನ್ನು, ಆರಾಧಿಸದೆ–ಪೂಜೆಮಾಡದೆ, ಸೊಕ್ಕಿದ–ಗರ್ವೋದ್ಧತರಾದ, ಅರಿಭೂಪರಂ–ಶತ್ರುರಾಜರನ್ನು, ಗೆಲ್ದು-ಜಯಿಸಿ, ಮಣಿ–ರತ್ನಗಳು, ಕನಕ–ಸುವರ್ಣವು, ಮುಕ್ತಾಳಿ – ಮುತ್ತಿನ ರಾಶಿಯು, ಕರಿ–ಗಜಗಳು, ತುರಗ–ಅಶ್ವಂಗಳು, ಮೊದಲಾದ – ಮೊದಲಾಗಿರತಕ್ಕ, ಮುಖ್ಯವಸ್ತುಪ್ರತತಿಸಹಿತ – ಮುಖ್ಯವಾದ ಪದಾರ್ಥ ಸಹಿತವಾಗಿ, ಪಟ್ಟಣಕೆ-ಚಂದನಾವತಿಗೆ, ಬರಲು - ಬಂದಕಾರಣ, ಪುರದ–ಪಟ್ಟಣದ, ಸಿಂಗರ–ಅಲಂಕಾರದ, ಮಂಗಳ–ಕಲ್ಯಾಣಪ್ರದಮಾದ, ವಾದ್ಯರವದ–ಶಬ್ದದ ಧ್ವನಿಯು, ಅಬಲೆಯರ–ನಾರಿಯರ, ಸೊಡರ್ವೆಳಗಿನ-ದೀಪದ ಕಾಂತಿಯು, ಆರತಿಗಳ–ಮಂಗಳಾರತಿಯು, ಸಿರಿಯೊಳ್–ಐಶ್ವರ್ಯದಿಂದ, ಕುಳಿಂದಂ–ಕುಳಿಂದನೆಂಬ ನರಪತಿಯು, ಕುಮಾರನನು-ಪುತ್ರನಾದ ಚಂದ್ರಹಾಸನನ್ನು, ಇದಿರ್ಗೊಳಿಸಿ–ಇದಿರ್ಗೊಂಡವನಾಗಿ, ಮತ್ತೆ–ತಿರುಗಿ, ಕಾಣಿಸಿಕೊಂಡನು–ಕರೆದುಕೊಂಡವನಾದನು.

ಅ‖ ವಿ‖ ಸಿಂಗರ (ತ್ಭ) ಶೃಂಗಾರ (ತ್ಸ) ಸಿರಿ (ತ್ಭ) ಶ್ರೀ (ತ್ಸ) ‖ ೧೦ ‖

ಟೀ‖ ಈಗಲ್ - ಈಗಲಾದರೊ, ತನಿಗೆ – ನನಿಗೆ, ತಾಯಿತಂದೆಗಳ್ – ಜನನೀ ಜನಕರು, ಇಂದಿರಾದೇವಿ ನಾರಾಯಣರು–ರಾಧಾಮಾಧವರು, ಎಂದು–ಎಂಬ ತೆರನಾಗಿ, ಭಾವಿಸಿ – ಯೋಚನೆಯಂ ಮಾಡಿಕೊಂಡು, ನಮಿಸಲು – ಎರಗಲು, ಅವರ್ – ಅವರೀರ್ವರೂ, ತನಯನಂ–ಕುವರನನ್ನೂ, ಪ್ರಿಯದಿಂ-ಅಕ್ಕರೆಯಿಂದ, ತೆಗೆದು ಅಪ್ಪಿದರ್–ಬಾಚಿ ತಬ್ಬಿಕೊಂಡರು. ಬಳಿಕ – ತರುವಾಯ, ಪುರವೀಧಿಯೊಳ್ - ನಗರದ ದೊಡ್ಡರಸ್ತೆಯಲ್ಲಿ, ಬರುತಿರೆ – ಬರುತ್ತಿರಲಾಗಿ, ಆಗಲು-ಆ ಕಾಲದಲ್ಲಿ, ಕಾಯಜಾಕೃತಿಯೊಳು–ಮನ್ಮಥಾಕಾರದಿಂದ, ಐತಹ- ಬರುತ್ತಲಿರತಕ್ಕ, ಚಂದ್ರಹಾಸನ - ಇಂದುಹಾಸನ, ವಿಡಾಯುಮಂ-ರಾಜಾಂಗಗಳನ್ನು, ನೋಡುವ - ಈಕ್ಷಿಸತಕ್ಕ. ಕಟಾಕ್ಷದ – ಕಡೆಗಣ್ಣುನೋಟದ, ಮರೀಚಿವೀಚಿಯು – ಕಿರಣ ಸಮು

ಇವನಿಗೆ ಕಾಯಶಕ್ತಿಯು ದಿನೇದಿನೆ ಹೆಚ್ಚಿತು. ಆಗ ಚಂದ್ರಹಾಸನು ಮಹಾರಥಿಕರಿಂದಲೂ ಅಪರಿಮಿತವಾದ ಸೇನಾಸಮುದ್ರದಿಂದಲೂ ಕೂಡಿ, ತಮ್ಮ ತಂದೆಗೆ ಶತ್ರುಗಳಾದ ರಾಜರ ದೇಶಗಳಮೇಲೆ ನುಗ್ಗಿ ಎಲ್ಲರನ್ನೂ ಜಯಿಸಿ ರಾಜ್ಯವನ್ನು ವಿಸ್ತರಿಸಿದನು. ಮತ್ತು ಅವರ ಸರ್ವಸ್ವವನ್ನು ಸೂರೆಗೊಂಡು ‖ ೯ ‖ ನವರತ್ನಗಳು, ಆನೆ ಕುದುರೆಗಳು ಮೊದಲಾದ ವಸ್ತುಗಳಿಂದೊಡಗೂಡಿ ಪಟ್ಟಣಕ್ಕೆ ಮಹಾ ವೈಭವದಿಂದ ಬರುತ್ತಲಿರುವದನ್ನು ಕುಳಿಂದನು ನೋಡಿ, ಮಗನನ್ನು ಎದುರುಗೊಳ್ಳಲು ಹೊರಟನು. ಪಟ್ಟಣವೆಲ್ಲಾ ಶೃಂಗಾರವಾಯಿತು. ಮಂಗಳ ವಾದ್ಯಗಳು ಮೊಳಗಲಾರಂಭಿಸಿದವು. ಚಂದನಾವತಿಯ ಸ್ತ್ರೀಯರೆಲ್ಲಾ ಆರತಿಗಳನ್ನು ಕೈಗಳಲ್ಲಿ ಹಿಡಿದು ಹೊರಟವರಾದರು ‖ ೧೦ ‖ ಇಂತಹ ಸಂಭ್ರಮದಿಂದ ಬರುತ್ತಲಿರುವ ಕುಳಿಂದನನ್ನೂ, ಆತನರಸಿಯಾದ ಮೇಧಾವಿನಿಯನ್ನೂ ಚಂದ್ರಹಾಸನು ನೋಡಿದ ಕೂಡಲೇ ಅವರನ್ನು ಲಕ್ಷ್ಮೀನಾರಾಯಣರೇ ಎಂಬ ಸಂತಸವುಳ್ಳವನಾಗಿ ಅವರ ಪಾದಾಂಬುಜಗಳಿಗೆರಗಿದನು. ಆ ದಂಪತಿಗಳು ಚಂದ್ರಹಾಸನನ್ನು ಮೇಲಕ್ಕೆಬ್ಬಿಸಿ ಸಂತೋ

ತಾಕ್ಷಿಯರಾಗಲರ್ಗಳಂಚೆಲ್ಲಿದ | ಕರ್ಣಯಜಾಕೃತಿಯೊಳೈತಹಚಂದ್ರಹಾಸನವಿ | ಡಾಯಮುಂನೋಡುವಕಟಾಕ್ಷದಮರೀ ಚಿಗಳವೀಚಿಯವಿಕೀರ್ಣದೊಡನೆ ‖ ೧೧ ‖ ನಿಳಯಕೈತಂದನುತ್ಸವದಿಂ ಕುಳಿಂದಕಂಬಳಿಕತನ್ನಾಧಿಪತ್ಯವನಾತ್ಮಜಂಗೆಮಂ | ಗಳಮುಹೂರ್ತದೊಳಿತ್ತನಂದಿನಿಂ ಚಂದ್ರಹಾಸಂಪಾಲಿಸುವನಿಳೆಯನು | ತುಳುಕಾಡಿತಾನಾಡಸಿರಿಚಂದನಾವತಿಯ | ಪೊಳಲ ಸೌಭಾಗ್ಯಮಭಿವರ್ಧಿಸಿತುವೈಷ್ಣವಂ | ಬೆಳವಳಿಗೆಯಾದುದೆಲ್ಲಾಜನದೊಳಾಚಾರಗುಣದಾನಧರ್ಮದಿಂದ ‖ ೧೨ ‖ ದಶ ಮಿಯಮಹೋತ್ಸವಂಪೆಚ್ಚಿತೇಕಾದಶಿಯೊ | ಳಶನಮಂತೊರೆದರಚ್ಯುತಪರಾಯಣರಾಗಿ | ನಿಶಿಯೊಳ್ನಿರಂತರಂನಿದ್ರೆಯಂ ಬಿಟ್ಟರಾಮರುದಿನಂದ್ವಾದಶಿಯೊಳು ‖ ಕುಶಶಯನಪೂಜೆಯಂಮಾಡಿಭುಂಜಿಪಮಹಾ | ತಿಶಯಮಾದುದುಮೇಲೆಮೇಲೆ ಮಾಧವಭಕ್ತಿ | ವಿಶದಗುಣನಿಧಿಚಂದ್ರಹಾಸನಾಜ್ಞೆಯೊಳವನದೇಶದಸಮುಸ್ತಜನಕೆ ‖ ೧೩ ‖ ಜಲಚಾಕ್ಷಭಕ್ತಿಯಿಂ

---

ದಾಯದ, ವಿಕೀರ್ಣದೊಡನೆ–ಚಲ್ಲುವಿಕೆಯೊಂದಿಗೆ, ಆಯತಾಕ್ಷಿಯರು–ವಿಶಾಲನೇತ್ರೆಯರು, ಅಲರ್ಗಳಂಚೆಲ್ಲಿದರು - ಹೂಮಳೆಗರೆದರು ‖ ೧೧ ‖

ಟೀ‖ ಕುಳಿಂದಕಂ–ಕುಳಿಂದಕನಾದರೊ, ಉತ್ಸವದಿಂದ–ಅತ್ಯಾನಂದದಿಂದ, ನಿಳಯಕೆ–ತನ್ನ ಮನೆಗೆ, ಐತಂದನು–ಬಂದು ಸೇರಿದನು, ಬಳಿಕ-ಅನೇಲೆ, ಮಂಗಳಮುಹೂರ್ತದೊಳು–ಶುಭಲಗ್ನದಲ್ಲಿ, ತನ್ನ–ಸ್ವಕೀಯವಾದ, ಆಧಿಪತ್ಯವನು–ಒಡೆತನವನ್ನು, ಆತ್ಮಜಂಗೆ–ಕುವರನಾದ ಚಂದ್ರಹಾಸನಿಗ, ಇತ್ತನು–ಒಪ್ಪಿಸಿದನು, ಅಂದಿನಿಂ–ಆಹೊತ್ತಿನಿಂದಲೂ, ಚಂದ್ರಹಾಸನು–ಚಂದ್ರಹಾಸನೆಂಬ ಬಾಲಕನು, ಇಳೆಯನು-ಚಂದನಾವತಿಗೆ ಸೇರಿದ ರಾಜ್ಯವನ್ನೆಲ್ಲಾ, ಪಾಲಿಸುವನು-ಸಲಹುವನು, ಆನಾಡಸಿರಿ-ಆ ರಾಜ್ಯದ ಸಂಪತ್ತು, ತುಳುಕಾಡಿತು–ಅತ್ಯಧಿಕವಾಯಿತು, ಚಂದನಾವತಿಯ–ಚಂದನಾವತಿಯೆಂಬ, ಪೊಳಲ-ನಗರದ, ಸೌಭಾಗ್ಯಂ–ಐಸಿರಿಯು, ಅಭಿವರ್ಧಿಸಿತು–ಅಧಿಕವಾಯಿತು, ಆಚಾರ-ಸನ್ಮಾರ್ಗವು, ಗುಣ–ಸದ್ಗುಣಗಳು, ದಾನ–ದಾನವಂಮಾಡುವುದು, ಧರ್ಮದಿಂದ–ಸತ್ಕಾರ್ಯದಿಂದ, ವೈಷ್ಣವಂ–ಶ್ರೀ ಕೃಷ್ಣಸ್ವಾಮಿಯಲ್ಲಿ ಭಕ್ತಿಯು, ಎಲ್ಲಾಜನದೊಳು–ಸಕಲ ಪ್ರಜೆಗಳಲ್ಲಿಯೂ, ಬೆಳವಳಿಗೆಯಾದುದು-ವೃದ್ಧಿಯನ್ನೈದಿತು ‖ ೧೨ ‖

ಟೀ‖ ಮಾಧವ-ಶ್ರೀಮನ್ನಾರಾಯಣನಲ್ಲಿ, ಭಕ್ತಿ - ಅಕ್ಕರೆಯಿಂದ, ವಿಶದ- ವಿಸ್ತಾರವಾದ, ಗುಣ–ಒಳ್ಳೇ ಗುಣಗಳಿಗೆ, ನಿಧಿ - ಆಶ್ರಯನಾದ, ಚಂದ್ರಹಾಸನ–ಚಂದ್ರಹಾಸನೆಂಬ ರಾಜೇಂದ್ರನ, ಆಜ್ಞೆಯೊಳ,-ಅನುಜ್ಞೆಯಿಂದ, ಅವನ–ಆ ಇಂದುಹಾಸನ, ದೇಶದ–ನಾಡಿನ, ಸಮುಸ್ತಜನಕೆ–ಸಕಲರಿಗೂ ಕೂಡ, ದಶಮಿಯ–ದಶಮಿ ದಿವಸದ, ಮಹೋತ್ಸವಂ–ಸೇವೆಯ ಅತಿಶಯವು, ಪೆಚ್ಚಿತು–ಅಭಿವೃದ್ಧಿಯಾಯಿತು, ಏಕಾದಶಿಯೊಳು – ಏಕಾದಶೀದಿನ, ಅಶನಮಂತೊರೆದರು - ಊಟವನ್ನು ನಿಲ್ಲಿಸಿ ಬಿಟ್ಟರು, ನಿರಂತರಂ–ಯಾವಾಗಲೂ, ಅಚ್ಯುತಪರಾಯಣರಾಗಿ – ಶ್ರೀ ಕೃಷ್ಣನನ್ನು ಧ್ಯಾನಿಸುವುದರಲ್ಲಿ ಆಸಕ್ತಿಯನ್ನೈದಿ, ನಿದ್ರೆಯಂಬಿಟ್ಟರು – ನಿದ್ರಾಸುಖವನ್ನು ದೂರಮಾಡಿದರು, ಆಮರುದಿನಂ – ಏಕಾದಶಿಯ ಬೆಳಗಿನ ದಿನವಾದರೊ, ದ್ವಾದಶಿಯೊಳು – ದ್ವಾದಶಿಯ ದಿವಸ, ಕುಶಶಯನ ಪೂಜೆಯಂ - ಶ್ರೀ ಮಹಾವಿಷ್ಣುವಿನ ಪೂಜೆಯನ್ನು, ಮಾಡಿ–ನೆರವೇರಿಸಿ, ಮೇಲೆಮೇಲೆ – ಆಬಳಿಕ, ಭುಂಜಿಪ-ಪಾರಣೆಯನ್ನು ನೆರವೇರಿಸತಕ್ಕ, ಮಹಾತಿಶಯಂ–ಸರ್ವೋತ್ತಮವಾದ ನಡವಳಿಕೆಯು, ಆದುದು-ಆಯಿತು ‖

ಅ‖ ವಿ‖ ಆಜ್ಞೆ (ತ್ಸ) ಆಣೆ (ತ್ಭ) ಕುಶಶಯನ–ದರ್ಭೆಯನ್ನೆ ಹಾಸಿಗೆಯಾಗಿವುಳ್ಳ ನಾರಾಯಣನು, ಮಾಧವ–ಲಕ್ಷ್ಮಿಯ ಒಡೆಯ, ಸ್ವಾಮಿಯು ಲಕ್ಷ್ಮೀಪತಿ ‖ ೧೩ ‖

---

ಶಾತಿಶಯದಿಂದ ಗಾಢಾಲಿಂಗನವನ್ನು ಮಾಡಿಕೊಂಡು, ಅತ್ಯುತ್ಸವದಿಂದ ಆ ಬಾಲಕನೊಂದಿಗೆ ಪಟ್ಟಣದ ಬೀದಿಯಲ್ಲಿ ಬರುತ್ತಿರುವುದನ್ನು ಕಂಡ ಕಂಡ ಅಬಲೆಯರೆಲ್ಲಾ ಅವನಮೇಲೆ ಪುಷ್ಪಗಳನ್ನು ಎರಚುವುದರಿಂದಲೂ, ಕಟಾಕ್ಷವೀಕ್ಷಣದಿಂದಲೂ ಆನಂದವನ್ನೈದುತ್ತಲಿದ್ದರು ‖೧೧‖ ಈರೀತಿಯಲ್ಲಿ ಮಹೋತ್ಸವದಿಂದ ಬರುತ್ತಲಿರುವ ಕುಳಿಂದನು ತನ್ನರಮನೆಯನ್ನು ಪೊಕ್ಕಸಂತೋಷದಿಂದ ಕಾಲವಂ ಕಳೆಯುತ್ತಲಿದ್ದನು. ಆ ಬಳಿಕ ಗುರುವರ್ಯರಿಂದ ಸುಮೂರ್ತವನ್ನಿಡಿಸಿ. ಆ ಶುಭ ಲಗ್ನದಲ್ಲಿ ತನ್ನ ಕುವರನಾದ ಚಂದ್ರಹಾಸನಿಗೆ ಚಂದನಾವತಿಯ ರಾಜ್ಯಭಾರವನ್ನು ಒಪ್ಪಿಸಿದನು. ಅಂದಿನಿಂದಲೂ, ಚಂದನಾವತಿಗೆ ಚಂದ್ರಹಾಸನೇ ರಾಜನಾದನು, ಇವನ ರಾಜ್ಯಭಾರದಿಂದ ಚಂದನಾವತಿಯಲ್ಲಿಯೇ ಲಕ್ಷ್ಮೀದೇವಿಯು ಸ್ಥಿರವಾಗಿ ನಿಲ್ಲಬೇಕೆಂದು ಆಶಿಸಿದಳು ಅಲ್ಲಿರುವ ಜನರೆಲ್ಲರೂ ಚಂದ್ರಹಾಸನಂತೆಯೇ ಸದಾಚಾರ ಸದ್ಗುಣಗಳಿಂದ ಕೂಡಿ ವಿಷ್ಣು ಭಕ್ತಾಗ್ರೇಸರರಾದರು ‖ ೧೨ ‖ ಚಂದನಾವತಿಯಲ್ಲಿ ದಶಮಿಯ ಉತ್ಸವವು ಇಧಿಕವಾಯಿತು ಅಲ್ಲಿಯ ಪ್ರಜೆಗಳೆಲ್ಲರೂ ವಿಷ್ಣು ಭಕ್ತಿಪರಾಯಣರಾಗಿ, ಏಕಾದಶಿಯದಿನ ನಿದ್ರಾಹಾರಾದಿಗಳನ್ನು ಬಿಟ್ಟು ಪೂಜೆಯಂ ಮಾಡುತ್ತಲೂ, ಮಾರನೆದಿನ ಶ್ರೀಮನ್ನಾರಾಯಣನನ್ನು ಅರ್ಚಿಸಿದ

ಪ್ರಹ್ಲಾದನಾಗಿನಿಶ್ಚಲಹರಿಧ್ಯಾನದಿಂ ಧ್ರುವನಾಗಿಸತ್ವದಿಂ | ಬಲಿಯಾಗಿ ಶಾಂತತ್ವದಿಂವಿಭೀಷಣನಾಗಿವೈಷ್ಣವಾಭರಣನೆಂಬ || ಕಲೆಯಿಂದಮಹಿಗೆ ರುಕ್ಮಾಂಗದಂತಾನಾಗಿ | ಸಲೆಕೀರ್ತಿಯಿಂ ಪುಂಡರೀಕನಾಗಿರುತಿಹಂ | ಸುಲಲಿತಚರಿತ ಭಾಗವತಶಿರೋಮಣಿಚಂದ್ರಹಾಸನುರ್ವೀತಳದೊಳು || ೧೪ || ರೂಪಿಂದಮದನನುಂ ನಾರಿಯರುಮಮಿತಪ್ರ | ತಾಪದಿಂದಿನಪನುಂಪರಮಹೀಪಾಲರುಂ | ವ್ಯಾಪಿಸಿದಕೀರ್ತಿಯಿಂ ಪೀಯೂಷಕಿರಣನುಂತಾರೆಗಳುಮಭಿವರ್ಧಿಪ || ಶ್ರೀಪತಿಯಭಕ್ತಿಯಿಂಗರುಡನುಂಸನಕಾದಿ | ತಾಪಸರುಮೈದೆಸೋಲ್ವಪರೆಂದರಿನ್ನುಳಿದ | ಕಾಪುರುಷರೀಚಂದ್ರಹಾಸನಂಪೋಲ್ವಪರೆಪೇಳೆಂದುಮುನಿನುಡಿದನು || ೧೫ || ಈತೆರದೊಳಿರೆಕುಳಿಂದಂ ಚಂದ್ರಹಾಸನಂಪ್ರೀತಿಯಿಂದಲಿಕರೆದುನುಡಿದನೆಲೆಮಗನೆ | ವಿಖ್ಯಾತಮಾ

(ಈ ಪದ್ಯದಲ್ಲಿ ಅರ್ಥ ಚಮತ್ಕಾರದಿಂದ, ಚಂದ್ರಹಾಸನ ಗುಣಾವಳಿಯನ್ನು ಕವಿಯು ವರ್ಣಿಸುವನು.)

ಟೀ|| ಉರ್ವೀತಳದೊಳು- ಇಳಾಮಂಡಳದೊಳಗೆ, ಸುಲಲಿತ- ಅತಿಮನೋಹರವಾದ, ಚರಿತ-ನಡವಳಿಯನ್ನುಳ್ಳ, ಭಾಗವತಶಿರೋಮಣಿ-ಸ್ವಾಮಿಯ ಭಕ್ತರಲ್ಲಿ ಮೊದಲನೆಯವನಾದ, ಚಂದ್ರಹಾಸನು-ಚಂದ್ರಹಾಸನೆಂಬ ರಾಜನು, ಜಲಜಾಕ್ಷ ಭಕ್ತಿಯಿಂ-ತಾವರೆಯ ಎಸಳಂತೆ ಅಗಲವಾದ ಕಣ್ಣುಗಳುಳ್ಳ ಶ್ರೀಮನ್ನಾರಾಯಣನಲ್ಲಿರಬೇಕಾದ, ಭಕ್ತಿಯಿಂ-ಭಕ್ತಿಯಿಂದ, ಪ್ರಹ್ಲಾದನಾಗಿ-ಪ್ರಹ್ಲಾದನೆಂಬ ಹರಿಭಕ್ತನೇ ಆಗಿ ಮತ್ತು ಹೆಚ್ಚಾದ ಸಂತೋಷಕ್ಕೆ ನಿಧಿಯಾಗಿ, ನಿಶ್ಚಲ-ಚಂಚಲವಿಲ್ಲದ, ಹರಿಧ್ಯಾನದಿಂ-ಶ್ರೀಮನ್ನಾರಾಯನ ಆರಾಧನೆಯಿಂದ, ಧ್ರುವನಾಗಿ-ಧ್ರುವಚಕ್ರವರ್ತಿಯಾಗಿ ಮತ್ತು ಸ್ಥಿರ ಬುದ್ಧಿಯುಳ್ಳವನಾಗಿ, ಸತ್ವದಿಂ-ಸಾಹಸಗುಣದಿಂದ, ಬಲಿಯಾಗಿ-ಬಲಿಚಕ್ರವರ್ತಿಯೂ ಮತ್ತು ಶಕ್ತಿಯುಳ್ಳವನೂ ಆಗಿ, ಶಾಂತತ್ವದಿಂ-ಶಾಂತಗುಣದಿಂದ, ವಿಭೀಷಣನು-ವಿಭೀಷಣನೆಂಬ ಲಂಕಾಧಿಪನು ಮತ್ತು ಶತ್ರುಭಯಂಕರನು, ಆಗಿ-ಆದವನಾಗಿ, ವೈಷ್ಣವಾಭರಣನು-ವಿಷ್ಣುಭಕ್ತಿಯೆಂಬ ತೊಡಿಗೆಯಿಂದಲಂಕೃತನು, ಎಂಬ-ಎನ್ನತಕ್ಕ, ಕಲೆಯಿಂದ-ಪ್ರಕಾಶದಿಂದಲೂ, ವಿದ್ಯದಿಂದಲೂ ಸಹ, ತಾಂ-ತಾನಾದರೊ, ಮಹಿಗೆ-ಭೂಮಂಡಲಕ್ಕೆ, ಖುಕ್ಮಾಂಗದಂ-ಖುಕ್ಮಾಂಗದನೆಂಬ ಭಕ್ತನು ಮತ್ತು ಸುವರ್ಣದ ಭುಜಕೀರ್ತಿಗಳಿಂದ ಕೂಡಿರತಕ್ಕವನು, ಆಗಿ-ಆಗಿಬಿಟ್ಟು, ಸಲೆ-ಚೆನ್ನಾಗಿ, ಕೀರ್ತಿಯಿಂ-ಕೀರ್ತಿಯಿಂದ, ಪುಂಡರೀಕನು, ತಾವರೆಯಂತಿರುವನು ಮತ್ತು ಮನುಷ್ಯರಲ್ಲಿ ಹುಲಿಗೆ ಸಮಾನನು ಆಗಿ, ಇರುತಿಹಂ-ಪ್ರಕಾಶಿಸುತ್ತಲಿರುವನು.

ಅ|| ವಿ|| ಪ್ರಹ್ಲಾದ, ಧ್ರುವ, ಬಲಿ, ವಿಭೀಷಣ, ಖುಕ್ಮಾಂಗದ, ಪುಂಡರೀಕ ಎಂಬ ಪದಗಳು, ಮೇಲೆ ಹೇಳಿರುವ ದ್ವಂದ್ವಾರ್ಥಗರ್ಭಿತಂಗಳಾಗಿರುವವು. ||೧೪||

ಟೀ|| ಮುನಿ-ನಾರದನು, (ಅರ್ಜುನನನ್ನು ಕುರಿತು) ಮದನನುಂ-ಪ್ರದ್ಯುಮ್ನನೂ, ನಾರಿಯರುಂ-ಸ್ತ್ರೀಯರೂ ಸಹ, ರೂಪಿಂದ-ಚಂದ್ರಹಾಸನ ಸೌಂದರ್ಯದಿಂದಲೂ, ದಿನಪನುಂ-ಆ ದಿನಕರನೂ, ಪರಮಹೀಪಾಲರುಂ-ಇತರ ಶತ್ರುರಾಜರೂ ಸಹ, ಅಮಿತಪ್ರತಾಪದಿಂ- ಅಸಾಧಾರಣವಾದ ಸಾಹಸದಿಂದಲೂ, ಪೀಯೂಷಕಿರಣನುಂ- ಇಂದುವೂ, ತಾರೆಗಳುಂ-ಉಡುಗಣವೂ, ವ್ಯಾಪಿಸಿದ-ಆವೃತವಾದ, ಕೀರ್ತಿಯಿಂ-ಬಳ್ಳಿಯ ಹೆಸರಿನಿಂದಲೂ, ಗರುಡನುರಿ-ಗರುತ್ಮಂತನೂ, ಸನಕಾದಿತಾಪಸರುಂ-ಸನಕನೆ ಮೊದಲಾದ ಮುನಿವರ್ಯರೂ, ಅಭಿವರ್ಧಿಪ-ಅತ್ಯಧಿಕವಾಗುತ್ತಲಿರುವ, ಶ್ರೀಪತಿಯ ಭಕ್ತಿಯಿಂ-ಇಂದಿರಾರಮಣನಾದ ನಾರಾಯಣಮೂರ್ತಿಯಲ್ಲಿರುವ ಭಕ್ತಿಯಿಂದಲೂ, ಐದೆ-ಚೆನ್ನಾಗಿ, ಸೋಲ್ವಪರು-ಪರಾಭವವನ್ನೈದುವರು, ಎಂದರು-ಎಂದು ನುಡಿದರು, ಇನ್ನು-ಹೀಗೆಂದು ಹೇಳಿದಮೇಲೆ, ಈ ಚಂದ್ರಹಾಸನಂ-ಇಂತಹ ಇಂದುಹಾಸನೆಂಬ ರಾಜನನ್ನು, ಉಳಿದ-ಮಿಕ್ಕಿರುವ, ಕಾಪುರುಷರು-ಸಾಧಾರಣರಾದ ಮಾನವರು, ಪೋಲ್ವಪರೆ-ಹೋಲುತ್ತಾರೆಯೆ, ಪೇಳ್-ಹೇಳುವನಾಗು, ಎಂದು-ಎಂಬ ತೆರನಾಗಿ, ನುಡಿದನು-ವಿಸ್ತರಿಸಿದನು. ||೧೫||

ಟೀ|| ಈ ತೆರದೊಳ್ - ಈ ಪರಿಯಾಗಿ, ಇರೆ- ಇರಲು, ಚಂದ್ರಹಾಸನಂ - ಚಂದ್ರಹಾಸನೆಂಬ ಕುವರನನ್ನು,

---

ಬಳಿಕ ಊಟಮಾಡುತ್ತಲೂ ಇದ್ದರು || ೧೩ || ಈ ಚಂದ್ರಹಾಸನಿಗಿರುವ ವಿಷ್ಣುಭಕ್ತಿಯ ಎದುರಿಗೆ ಪ್ರಖ್ಯಾತರಾದ ಪ್ರಹ್ಲಾದ, ಧ್ರುವ, ಬಲಿಚಕ್ರವರ್ತಿ, ವಿಭೀಷಣ, ಖುಕ್ಮಾಂಗದ ಮೊದಲಾದವರಿಗಿರುವ ಭಕ್ತಿಯು ನಿಲ್ಲಲಾರದೆ ಹೋಯಿತು. ಈ ಮಹನೀಯರೆಲ್ಲರಿಗಿಂತಲೂ ಚಂದ್ರಹಾಸನಿಗೆ ಶ್ರೀಮನ್ನಾರಾಯಣನಲ್ಲಿ ಭಕ್ತಿಯು ಅತ್ಯಧಿಕವಾಯಿತು || ೧೪ || ಕೇಳೈ ಅರ್ಜುನಾ, ಈ ಚಂದ್ರಹಾಸನ ಸೌಂದರ್ಯವು ಮನ್ಮಥನನ್ನು ಅಣಕಿಸುತ್ತಲಿರುವುದು. ಸ್ತ್ರೀಯರಲ್ಲಿ ಯಾರಿಗೂ ಇಂತಹ ರೂಪು ಇಲ್ಲವು. ಸೂರ್ಯನೂ ಶತ್ರುರಾಜರೂ ಇವನ ಸಾಹಸದ ಮುಂದೆ ನಿಲ್ಲಲಾರರು. ಲೋಕದಲ್ಲಿ ಹೆಸರುವಾಸಿಯನ್ನು ಪಡೆದಿರುವ ಚಂದ್ರನಿಗೂ ನಕ್ಷತ್ರಗಳಿಗೂ ಇಷ್ಟು ಸತ್ಕೀರ್ತಿಯೆಂಬುದೇ ಇಲ್ಲವು. ಈ ಚಂದ್ರಹಾಸನು ವಿಷ್ಣುಭಕ್ತಿಯಲ್ಲಿ ಅಗ್ರಗಣ್ಯರೆಂದೆನ್ನಿಸಿಕೊಂಡಿರತಕ್ಕ ಗರುತ್ಮಂತನನ್ನೂ ಸನಕಾದಿಗಳನ್ನೂ ಸಹ ಮೀರಿಸಿದ್ದಾನೆ ಇಷ್ಟು ಪ್ರಸಿದ್ಧಿಯಿಂ ಪಡೆದಿರತಕ್ಕ

ಗಿಹರಾಜಧಾನಿಕುಂತಳವಿಲ್ಲಿಗಾರುಯೋಜನದೊಳಿಹುದು ‖ ಭೂತಳಮಿದಾನಗರದರಸಿನದುನಮಗೊಡೆಯ । ನಾತನಶಿರಃಪ್ರಧಾನಂದುಷ್ಟಬುದ್ಧಿ । ಸಂಜಾತವಸ್ತುಗಳಸಿದ್ಧಾಯಮುಂಕೊಡವೇಳ್ಪುದರಸಂಗೆನಾವೆಂದದು ‖ ೧೬ ‖ ರಾಯಂಗೆವರುಷವರುಷಕೆನಾವುಕೊಡುವಸಿ । ದ್ಧಾಯಮುಂದುಷ್ಟಬುದ್ಧಿಗೆಸಲಿಸಿಬಪ್ಪನಿ । ಷ್ಠಾಯುತದ್ರವ್ಯಮಂನೃಪನರಾಣಿಗೆಪುರೋಹಿತನಾದಗಾಲವಂಗೆ ‖ ಪ್ರೀಯದಿಂದುಪಚರಿಸುವರ್ಥಮಂ । ತತ್ಕಾಲಕೀಯಬೇಕೆಲೆಮಗನೆಧನವನೊದವಿಸಿಕಳುಹ । ಸೂಯೆಗೀಡಾಗಬೇಡೆಂದುನಿಜನಂದನಂಗಾಕುಳಿಂದಂಪೇಳ್ದನು ‖೧೭‖ ಪಿತನಮಾತಂಕೇಳ್ದುಚಂದ್ರಹಾಸಂಮಹೀ । ಪತಿಗೆಮಹಿಷಿಗೆಮಂತ್ರಿದುಷ್ಟಬುದ್ಧಿಗೆಪುರೋ । ಹಿತಗಾಲವಂಗೆಸಲಿಸುವಧನವನದರಸಂಗಡಕೆತಾನಾಹವದೊಳು ‖ ಪ್ರತಿಭೂಪರಂಜಯಿಸಿತಂದವಸು

ನೋಡಿ, ಕುಳಿಂದಂ-ಕುಳಿಂದನೆಂಬರಸು, ಪ್ರೀತಿಯಿಂದಲಿ-ಪ್ರೇಮದಿಂದ, ನುಡಿದನು-ಮುಂದೆ ಹೇಳುವಂತೆ ಹೇಳುವನು, ಎಲೆ ಮಗನೆ-ಅಯ್ಯಾ ಕುವರನಾದ ಚಂದ್ರಹಾಸನೆ, ಇಲ್ಲಿಗೆ-ಈ ನಮ್ಮ ನಗರಕ್ಕೆ, ಆರು ಯೋಜನದೊಳು-ಆರು ಗಾವುದದ ಆಚೆ, ವಿಖ್ಯಾತಮಾಗಿ-ಹೆಸರ್ಗೊಂಡು, ಇಹ-ಇರತಕ್ಕ, ಕುಂತಳಂ-ಕುಂತಳವೆನ್ನತಕ್ಕ, ರಾಜಧಾನಿ-ಅರಸನ ನಿವಾಸಸ್ಥಾನವು, ಇಹುದು-ಪ್ರಸಿದ್ಧವಾಗಿದೆ, ಇದು ಭೂತಳಂ-ಈ ನಮ್ಮ ನಾಡಾದರೋ, ಆ ನಗರದರಸನದು-ಆ ದೇಶದ ದೊರೆಗೆ ಸೇರಿದ್ದಾಗಿದೆ, ಆತನ-ಆ ಕುಂತಳೇಂದ್ರನ, ಶಿರಃಪ್ರಧಾನಂ-ಮುಖ್ಯಾಮಾತ್ಯನಾದ, ದುಷ್ಟಬುದ್ಧಿ-ದುಷ್ಟಬುದ್ಧಿ ಎಂಬಾತನು, ನಮಗೆ-ನಮಗಾದರೋ, ಒಡೆಯನು-ದಣಿಯು, ನಾವು-ನಾವಾದರೊ, ಅರಸಂಗೆ-ಕುಂತಳನಗರದ ಪ್ರಭುವಿಗೆ, ಸಂಜಾತ-ಉತ್ಪನ್ನ ದ್ರವ್ಯದಲ್ಲಿ, ಸಿದ್ಧ-ನಿಯಾಮಕವಾದ, ಆಯಮಂ-ಕಾಣಿಕೆಯನ್ನು, ಕೊಡವೇಳ್ಪುದು ಸಲ್ಲಿಸಿಬರಬೇಕು, ಎಂದನು-ಎಂದು ನುಡಿದನು ‖೧೬‖

ಟೀ‖ ಆ ಕುಳಿಂದಂ- ಆ ಕುಳಿಂದನೆಂಬರಸು, ನಿಜನಂದನಂಗೆ- ತನ್ನ ಕುವರನಾದ ಚಂದ್ರಹಾಸನನ್ನು ಕುರಿತು, ನಾವು-ನಾವಾದರೊ, ವರುಷವರುಷಕೆ-ಪ್ರತಿ ವರುಷವೂ, ರಾಯಂಗೆ-ಕುಂತಳಾಧೀಶನಿಗೆ, ಕೊಡುವ-ಕೊಡಬೇಕಾದ, ಸಿದ್ಧಾಯಮಂ-ಕ್ಲುಪ್ತವಾದ ಧನವನ್ನೂ, ದುಷ್ಟಬುದ್ಧಿಗೆ-ದುಷ್ಟಬುದ್ಧಿ ಎಂಬಾತನಿಗೆ, ಸಲಿಸಿ ಬಪ್ಪ-ಕೊಡಬೇಕಾದ, ನಿಷ್ಕಾಯುತದ್ರವ್ಯಮಂ-ಹತ್ತು ಸಹಸ್ರ ವರಹಗಳನ್ನೂ, ನೃಪನ-ಕುಂತಳಪತಿಯ, ರಾಣಿಗೆ-ಪಟ್ಟದರಸಿಗೆ, ಪುರೋಹಿತ-ಪುರೋಹಿತನಾಗಿರತಕ್ಕ, ಗಾಲವಂಗೆ-ಗಾಲವನೆಂಬ ಮುನಿಗೆ, ಪ್ರೀಯದಿಂದ-ಅಕ್ಕರೆಯಿಂದ, ಉಪಚರಿಸುವ-ಕೊಡತಕ್ಕ, ಅರ್ಥಮಂ-ದ್ರವ್ಯವನ್ನೂ, ತತ್ಕಾಲಕೆ-ಕ್ಲುಪ್ತ ಸಮಯಕ್ಕೆ, ಈಯಬೇಕು-ಕೊಟ್ಟು ಬರಬೇಕು, ಎಲೆ ಮಗನೆ-ಕುವರನಾದ ಚಂದ್ರಹಾಸನೆ, ಧನವನು-ಹಣವನ್ನು, ಒದವಿಸಿ ಕಳುಹು-ಒಟ್ಟುಗೂಡಿಸಿ ಅವರಿಗೆ ತಲಪಿಸುವನಾಗು, ಅಸೂಯೆಗೆ-ಅವರ ದ್ವೇಷಕ್ಕೆ, ಈಡಾಗಬೇಡ-ಪಾತ್ರನಾಗಬೇಡ, ಎಂದು-ಎಂಬತೆರನಾಗಿ, ನುಡಿದನು-ಹೇಳಿದನು.

ಅ‖ ವಿ‖ ರಾಯ (ತ್ಭ) ರಾಜ್ಞ (ತ್ಸ) ರಾಣಿ (ತ್ಭ) ರಾಜ್ಞಿ (ತ್ಸ) ‖೧೭‖

ಟೀ‖ ಪಿತನ-ಜನಕನಾದ ಕುಳಿಂದಕನ, ಮಾತಂ-ನುಡಿಯನ್ನು, ಚಂದ್ರಹಾಸನು - ಚಂದ್ರಹಾಸನೆಂಬ ಅರಸನು, ಕೇಳ್ದು - ಕೇಳಿದವನಾಗಿ, ಮಹೀಪತಿಗೆ - ಕುಂತಳರಾಜನಿಗೂ, ಮಹಿಷಿಗೆ - ಆತನ ಪಟ್ಟದರಸಿಗೂ, ಮಂತ್ರಿ ದುಷ್ಟಬುದ್ಧಿಗೆ-ದುಷ್ಟಬುದ್ಧಿ ಎಂಬ ಹೆಸರುಳ್ಳ ಅಮಾತ್ಯನಿಗೂ, ಪುರೋಹಿತ-ಗುರುವಾದ, ಗಾಲವಂಗೆ-ಗಾಲವನೆಂಬ ಮುನಿಗೂ, ಸಲಿಸುವ-ಒಪ್ಪಿಸಬೇಕಾದ, ಧನವನು- ದ್ರವ್ಯವನ್ನೂ, ಅದರ ಸಂಗಡಕೆ-ಆ ಹಣದ ಕೂಡ, ತಾನು- ತಾನಾದರೊ, ಪ್ರತಿಭೂಪರಂ-ಅರಿಗಳನ್ನು, ಆಹವದೊಳು- ಕಾಳಗದಲ್ಲಿ, ಜಯಿಸಿ- ಸೋಲಿಸಿ, ತಂದ- ಸಂಪಾದಿಸಿಕೊಂಡು ಬಂದ, ವಸ್ತುಗಳನು-ಪುರುಳ್ಗಳನ್ನೂ, ಅಂಕಿತದಿಂದ- ತಾನು ಕಳುಹಿಸಿರುವೆನೆಂಬ ಚಿಹ್ನೆಗಳಿಂದ, ಕಟ್ಟಿ- ಕಟ್ಟಿದವನಾಗಿ, ಶಕಟ-ಗಾಡಿ

ಈ ಚಂದ್ರಹಾಸನೆದುರಿಗೆ ಮಿಕ್ಕವರು ಯಾರುತಾನೆ ನಿಲ್ಲುವಷ್ಟು ಶಕ್ತರಾದಾರು ‖ ೧೫ ‖ ಕೇಳ್ಳೈ ಫಲುಗುಣಾ! ಇಂತಹ ಪ್ರಸಿದ್ಧಿಯಂ ಪಡೆದಿರತಕ್ಕ ಚಂದ್ರಹಾಸನನ್ನು ನೋಡುವ ಮೇಧಾವಿ ಎಂಬರಸನ ಪುಣ್ಯವು ಅತ್ಯುತ್ತಮವಾದದ್ದಲ್ಲವೆ? ಆ ಬಳಿಕ ಬಂದಾನೊಂದುದಿನ ಮೇಧಾವಿಯು ಕುವರನಾದ ಚಂದ್ರಹಾಸನನ್ನು ಕುರಿತು, ಎಲೈ ಸುಪುತ್ರನೆ! ಈ ನಮ್ಮ ಚಂದನಾವತಿಗೆ ಆರುಗಾವುದದ ಆಚೆ ಕುಂತಳದೇಶ ವೆಂಬುದೊಂದು ಜನಪದವುಂಟು, ಅಲ್ಲಿನ ಚಕ್ರವರ್ತಿಗೆ ಈ ಚಂದನಾವತಿಯು ಸೇರಿದ್ದಾಗಿರುವುದು, ಆ ಕುಂತಳೇಂದ್ರನ ಮಂತ್ರಿಯಾದ ದುಷ್ಟಬುದ್ಧಿ ಎಂಬಾತನು ನಮಗೆ ಒಡೆಯನಾಗಿರುವನು ‖ ೧೬ ‖ ನಾನು ಇಲ್ಲಿ ಹುಟ್ಟುವಳಿಯಾಗತಕ್ಕ ಹಣದಲ್ಲಿ ಕ್ಲುಪ್ತವಾಗಿದ್ದ ಕಾಣಿಕೆಯನ್ನು ರಾಯನಿಗೂ ಆತನ ಮಂತ್ರಿಗೆ ಹತ್ತು ಸಾವಿರ ವರಹಗಳೂ, ಪುರೋಹಿತನಾದ ಗಾಲವ ಮುನಿಗೆ ಮರ್ಯಾದಾರ್ಥವಾಗಿ ಹಣವೂ ಕಾಲಕ್ಕೆ ಸರಿಯಾಗಿ ಕಳುಹಿಸುತ್ತಲಿದ್ದೆನು. ನೀನೂ ಈಗ ಆ ಹಣವನ್ನು ಸಿದ್ಧಮಾಡಿಕೊಂಡು ಪದ್ಧತಿಯಮೇರಿಗೆ ಕಳುಹಿಸಿ ಆ ಕುಂತಳೇಂದ್ರನ ಅನುಗ್ರಹಕ್ಕೆ ಪಾತ್ರನಾಗಿರಬೇಕೆಂದು ನುಡಿದನು ‖ ೧೭ ‖ ಚಂದ್ರಹಾಸನಾದರೋ ತಂದೆಯ ಮಾತನ್ನು ಶಿರಸಾವಹಿಸಿ ಮೇಧಾವಿಯು

ಗಳನಂ । ಕಿತದಿಂದಕಟ್ಟಿಶಕಟೋಷ್ಟ್ರಕರಿಗಳಭಾರ । ಶತಸಂಖ್ಯೆಯಿಂದಕಳುಹಿದನಾಪ್ತರಂಕೂಡಿಕೊಟ್ಟುಕುಂತಳನಗರಿಗೆ ॥ ೧೮ ॥ ಹಸ್ತಿಹಯರತ್ನವಸ್ತ್ರಾಭರಣಕರ್ಪೂರ । ಕಸ್ತೂರಿಮಲಯಜಸುವರ್ಣರಜತಾದ್ಯಖಿಳ । ವಸ್ತುಚಯಮಂಕೊಂಡುಚಂದ್ರಹಾಸನಚರರ್ಬಂದುಕುಂತಳನಗರಿಗೆ ॥ ವಿಸ್ತಾರದಿಂದೆಸೆವನಗರೋಪಕಂಠದಸ । ರಸ್ತೀರದೊಳ್ಮಿಂದುಚಕ್ರಿಯಂಪೂಜಿಸೈ । ದಸ್ತಮಯದೊಳ್ಪೊಕ್ಕರಾಪಟ್ಟಣವನತಿಶುಚಿರ್ಭೂತರಾಗಿ ॥ ೧೯ ॥ ನೊಸಲೊಳೆಸೆವೂರ್ಧ್ವಪುಂಡ್ರದಸುಧೌತಾಂಬರದ । ಮಿಸುಪತುಲಸಿಯದಂಡೆಗಳಕೊರಳಸ್ವಚ್ಛತರ । ದಶನಪಙ್ತಿಯಕಿಲ್ಬಿಷಗಾತ್ರದಚ್ಛಸಾತ್ವಿಕಭಾವದಿಂದಮೆರೆವ ॥ ಶಶಿಹಾಸನನುಚರರ್ಬಂದುಕಾಣಲ್ಕಿದೇಂಪೊಸತಕಟನಿಮಗೀಗಲೇಕೆಶುದ್ಧಸ್ನಾನ । ಮಸು

---

ಗಳು, ಉಷ್ಟ್ರ-ಒಂಟೆಗಳು, ಕರಿಗಳ-ಗಜಗಳ, ಭಾರ-ಹೊತ್ತುಕೊಂಡು ಹೋಗುವುದರ, ಶತಸಂಖ್ಯೆಯಿಂದ-ನೂರರ ಎಣಿಕೆಯಿಂದ, ಕುಂತಳನಗರಿಗೆ – ಕುಂತಳವೆಂಬ ರಾಜ್ಯಕ್ಕೆ, ಆಪ್ತರಂಕೂಡಿಕೊಟ್ಟು – ತನಿಗೆ ನಂಬಿಕೆಯಾದವರನ್ನು ಜೊತೆಮಾಡಿ, ಕಳುಹಿದಂ-ಕಳುಹಿಸಿದವನಾದನು. ॥೧೮॥

ಟೀ॥ ಹಸ್ತಿ-ಗಜಗಳು, ಹಯ-ಅಶ್ವಂಗಳು, ರತ್ನ – ನವರತ್ನಗಳು, ವಸ್ತ್ರ – ಉಡಿಗೆಗಳು, ಆಭರಣ – ತೊಡಿಗೆಳು, ಕರ್ಪೂರ – ವಿಧವಿಧವಾದ ಕರ್ಪೂರವು, ಕಸ್ತೂರಿ - ಕಸ್ತೂರಿಯು, ಮಲಯಜ - ಸಿರಿಕಂಡವು, ಸುವರ್ಣ - ಚಿನ್ನವು, ರಜತ - ಬೆಳ್ಳಿಯು, ಆದಿ - ಮೊದಲಾದ, ಅಖಿಳ - ಸಮಸ್ತವಾದ, ವಸ್ತುಚಯಮಂ – ಪದಾರ್ಥಗಳ ರಾಶಿಯನ್ನು, ಚಂದ್ರಹಾಸನಚರರ್-ಇಂದುಹಾಸನ ದೂತರು, ಕೊಂಡು-ತಮ್ಮ ವಶಮಾಡಿಕೊಂಡು, ಕುಂತಳನಗರಿಗೆಬಂದು-ಕುಂತಳವೆಂಬೂರನ್ನು ಸೇರಿ, ವಿಸ್ತಾರದಿಂದ - ಬಹು ರಮ್ಯವಾಗಿ, ಎಸೆವ - ಹೊಳೆಯುತ್ತಿರುವ, ನಗರೋಪಕಂಠದ – ಕುಂತಳನಗರದ ಹತ್ತಿರವಿರುವ, ಸರಸ್ತೀರದೋಳ್ – ಸರೋವರದ ತಡಿಯಲ್ಲಿ, ಮಿಂದು – ಮಜ್ಜನಂಗೈದು, ಚಕ್ರಿಯಂ – ಶಾರ್ಙ್ಗಧರನಾದ ಶ್ರೀಮನ್ನಾರಾಯಣನ, ಪೂಜಿಗೈದು – ಪೂಜೆಯಂ ಮಾಡಿ, ಅತಿಶುಚಿರ್ಭೂತರಾಗಿ – ಬಹಳ ನಿರ್ಮಲವಾದ ಮನಸ್ಸಿನಿಂದ ಕೂಡಿ, ಆಪಟ್ಟಣವನು – ಆ ಕುಂತಳ ನಗರವನ್ನು, ಅಸ್ತಮಯಸಮಯದೊಳ್ – ಸಂಧ್ಯಾಕಾಲಕ್ಕೆ ಸರಿಯಾಗಿ, ಪೊಕ್ಕರು-ಪ್ರವೇಶಮಾಡಿದರು. ॥೧೯॥

ಟೀ॥ ನೊಸಲೊಳ್ - ಹಣೆಯಲ್ಲಿ, ಎಸೆವ-ಥಳಥಳಿಸುವ, ಊರ್ಧ್ವಪುಂಡ್ರದ – ಉದ್ದವಾಗಿ ಬರೆದ ತಿಲಕವುಳ್ಳ, ಸುಧೌತ - ಚೆನ್ನಾಗಿ ಮಡಿಮಾಡಿದ. ಅಂಬರದ - ವಸ್ತ್ರಗಳುಳ್ಳ, ಮಿಸುಪ – ಪ್ರಕಾಶಿಸುವ, ತುಳಸಿಯದಂಡೆಯ – ತುಳಸೀ ಮಾಲಿಕೆಯಿಂದ ಕೂಡಿದ, ಕೊರಳ – ಕಂಠವುಳ್ಳ, ಸ್ವಚ್ಛತರ – ಬಹಳ ಶುದ್ಧವಾಗಿರುವ, ಧವಳ – ಬೆಳ್ಳಗಿರುವ, ದಶನಪಙ್ತಿಯ – ಹಲ್ಲುಗಳನ್ನುಳ್ಳ, ಅಕಿಲ್ಬಿಷಗಾತ್ರದ – ನಿರ್ದುಷ್ಟವಾದ ದೇಹವನ್ನುಳ್ಳ, ಅಚ್ಛ – ಶುದ್ಧವಾದ, ಸಾತ್ವಿಕಭಾವದಿಂದ – ಸತ್ವಗುಣವೆಂಬ ನಿಧಿಯಿಂದ, ಮೆರೆವ-ಹೊಳೆಯುವ ಶಶಿಹಾಸನ-ಇಂದುಹಾಸನ, ಅನುಚರರ್-ದೂತರು, ಬಂದು-ಪುರಪ್ರವೇಶಂಗೈದು, ಕಾಣಲ್ಕೆ – ದುಷ್ಟಬುದ್ಧಿಯನ್ನು ನೋಡಲಾಗಿ, ಆದುಷ್ಟಬುದ್ಧಿಯು – ಆ ಕುಂತಳರಾಜನ ಮಂತ್ರಿಯಾದರೊ, ಅಕಟ-ಆಹಾ, ಪೊಸತು – ಎಂದೂ ಇಲ್ಲದ ನಡತೆಯು ಈಗ ಉಂಟಾಗಿದೆಯಲ್ಲಾ, ಇದೇಂ – ಇದೇನಚ್ಚರಿಯು, ಈಗಲೆ – ಈ ಸಂಧ್ಯಾಕಾಲದಲ್ಲಿಯೆ, ನಿಮಗೆ – ನಿಮಗಾದರೊ, ಶುದ್ಧಿಸ್ನಾನಂಪಕ – ನಿರ್ಮಲವಾಗಿರಬೇಕೆಂದು ಮಾಡಿರುವ ಸ್ನಾನಕ್ಕೆ ನಿಮಿತ್ತವೇನು? ಕುಳಿಂದಕನು – ಕುಳಿಂದಕನೆಂಬ ಚಂದನಾವತಿಯರಸು, ಅಸುವಿಡಿದು – ಪ್ರಾಣಸಹಿತ

---

ಪ್ರತಿವರ್ಷವೂ ಕಳುಹಿಸಿಕೊಡುತ್ತಿದ್ದಂತೆ ಕಪ್ಪಕಾಣಿಕೆಗಳನ್ನು ಸಿದ್ಧಮಾಡಿ ಇದರ ಜೊತೆಗೆ ತಾನು ಅರಿ ಭೂಪರನ್ನು ಗೆದ್ದು ಸೂರೆಮಾಡಿದ್ದ ಉತ್ತಮ ವಸ್ತುಗಳನ್ನೂ ಸಹ ಅರಗಿನ ಮೊಹರು ತನ್ನ ರುಜು ಮೊದಲಾದವುಗಳಿಂದ ಭದ್ರಮಾಡಿ ಆನೆ ಕುದುರೆ ಒಂಟೆ ಕಾಲಾಳ್ಗಳ ಮೇಲಿಡಿಸಿ, ॥ ೧೮ ॥ ಬೆಂಗಾವಲಾಗಿ ಆಪ್ತರಾದ ಸೇವಕರನ್ನು ನಿಯಮಿಸಿ ಕುಂತಳ ನಗರಕ್ಕೆ ತಲುಪಿಸಿ ಬರುವಂತೆ ಹೇಳಿ ಕಳುಹಿಸಿದನು. ಚಂದ್ರಹಾಸನಿಂದಾಜ್ಞಪ್ತರಾದ ಸೇವಕ ಜನರು ಆನೆ ಕುದುರೆ ರತ್ನ ಧನಕನಕಾದಿ ಸರ್ವಸ್ವವನ್ನೂ ಯಾವುದೊಂದಪಾಯಕ್ಕೂ ಈಡುಮಾಡದೆ ಸಂರಕ್ಷಿಸಿಕೊಂಡು ತಡಮಾಡದೆ ಕುಂತಳನಗರದ ಸಮಿಪಕ್ಕೆ ಹೋದರು. ಆ ಪಟ್ಟಣದ ಹೊರಭಾಗದಲ್ಲಿ ರಮ್ಯವಾದ ಉದ್ಯಾನವಿರಲು, ಅಲ್ಲಿಗೆ ಹೋಗಿ ಅಲ್ಲಿದ್ದ ನಿರ್ಮಲವಾದ ಸರೋವರದಲ್ಲಿ ಸ್ನಾನವಂಮಾಡಿ ಶ್ರೀ ಕೃಷ್ಣಮೂರುತಿಯ ಸೇವೆಯಂ ಮಾಡಿ ಶುದ್ಧಾಂತರಂಗರಾಗಿ ಸಾಯಂಕಾಲದ ಹೊತ್ತಿಗೆ ಪಟ್ಟಣವಂ ಪ್ರವೇಶಿಸಿದರು. ॥ ೧೯ ॥ ಹಣೆಯಲ್ಲಿ ನಾಮುವನ್ನಿಟ್ಟು, ಮಡಿಮಾಡಿದ ವಸ್ತ್ರಗಳನ್ನುಟ್ಟು, ತುಲಸೀ ಮಾಲಿಕೆಗಳಿಂದ ಕಂಠವನ್ನಲಂಕರಿಸಿಕೊಂಡು, ಸನ್ಮಾರ್ಗಪ್ರವರ್ತಕರಾಗಿ ಎದುರಿಗೆ ನಿಂತಿರುವ ಚಂದ್ರಹಾಸನ ದೂತರನ್ನು ಮಂತ್ರಿಯಾದ ದುಷ್ಟಬುದ್ಧಿಯು ನೋಡಿ, ಅಚ್ಚರಿಗೊಂಡು, ಅವರನ್ನು ಕುರಿತು, ಓಹೋ! ಇದೇನು ಚಂದನಾವತಿಯ

ಎಡಿದಿಹನೆಕುಳಿಂದಕನೆಂದುಶಂಕೆಯಿಂಕೇಳ್ದನಾಡುಷ್ಟಬುದ್ಧಿ ‖ ೨೦ ‖ ಅಶುಭಕೋಟಿಯನೊರಸುವೇಕಾದಶೀವ್ರತಕೆ ವಿಶದಸಲಿಲಸ್ನಾನಮಿಂದೆಮಗೆಸಮನಿಸಿತು | ಕುಶಲದಿಂಬಾಳ್ದಂಕುಳಿಂದನಾತನಸೂನುಚಂದ್ರಹಾಸಂಗೆನಾಡು ‖ ವಶವರ್ತಿ ಯಾಗಿರ್ಪುದವನಾಜ್ಞೆಯಿಂದುಭಯ | ದಶಮಿಯೊಳ್ಪೆವದುತ್ಸವನುಚ್ಯುತಂಗೆಕ | ರ್ಕಶಮಿಲ್ಲದಖಿಳಜನಮಂಬಿಡದೆ ಪಾಲಿಪಂಹರಿಭಕ್ತಿನಿರತನಾಗಿ ‖ ೨೧ ‖ ಸುತ್ತಲುಂದಿಗ್ವಿಜಯಮಂಮಾಡಿರಿಪುನೃಪರ | ನೊತ್ತಿಭುಜಬಲದಿಂದಕಪ್ಪಮಂ ಕೊಂಡುಬಂ | ದುತ್ತಮಸುವಸ್ತುಗಳನೆಂದುಮಿಾವರ್ಥಮಂಚಂದ್ರಹಾಸಂಕಳುಹಲು ‖ ಪೊತ್ತುತಂದಿಹೆವನೇಕದ್ರವ್ಯವರ ಮನೆಗೆ | ಹತ್ತುನಿನಗೊಂದರೆಣಿಕೆಯೊಳೆಂದುಲೇಖನವ | ನಿತ್ತೊಡೆಕುಳಿಂದಕನಸೇವಕರ್ಗಾದುಷ್ಟಬುದ್ಧಿಮಗುಳಿಂತೆಂ ದನು ‖ ೨೨ ‖ ಏನಿದೆತ್ತಣಕೌತುಕದನುಡಿಕುಳಿಂದಂಗೆ | ಸೂನುಜನಿಸಿರ್ದಪನೆಬಂಜೆಯಾಗಿಹಳವನ | ಮಾನಿನಿವಿಚಿತ್ರ

---

ನಾಗಿ, ಇಹನೆ–ಇದ್ದಾನೆಯೇ, ಎಂದು – ಎಂಬತೆರನಾಗಿ, ಶಂಕೆಯಿಂದ – ಅನುಮಾನಬುದ್ಧಿಯಿಂದ, ಕೇಳ್ದನು – ಪ್ರಶ್ನೆಯಂ ಗೈದಿದನು. ‖೨೦‖

ಟೀ‖ ಎಮಗೆ – ನಮಿಗಾದರೊ, ಇಂದು – ಈ ದಿನದಲ್ಲಿ, ವಿಶದ – ಪವಿತ್ರವಾದ, ಸಲಿಲಸ್ನಾನಂ – ಉದಕಮಜ್ಜ ನವು, ಅಶುಭಕೋಟಿಯನು – ಕೋಟಿ ಸಂಖ್ಯಾಕವಾದ ಅಮಂಗಳಗಳನ್ನೆಲ್ಲಾ, ಒರಸುವ – ಧ್ವಂಸಮಾಡುವ, ಏಕಾದಶೀ ವ್ರತಕೆ–ಏಕಾದಶೀ ಕಟ್ಟಳೆಗೆ, ಸಮನಿಸಿತು – ನೆರವೇರಿಸಬೇಕಾಯಿತು. ಕುಳಿಂದಂ – ಕುಳಿಂದನಾದರೋ, ಕುಶಲದಿಂ–ಕ್ಷೇಮ ವಾಗಿ, ಬಾಳ್ದಂ – ಇಂದಿನತನಕ ರಾಜ್ಯಮಂ ಪಾಲಿಸಿದನು. ನಾಡು–ಚಂದನಾವತಿಯು, ಆತನಸೂನು – ಅವನ ತನುಜನಾದ, ಚಂದ್ರಹಾಸಂಗೆ–ಚಂದ್ರಹಾಸ ನೆಂಬಾತನಿಗೆ, ವಶವರ್ತಿಯಾಗಿಇರ್ಪುದು – ವಶವಾಗಿದೆ. ಅಚ್ಯುತಂಗೆ – ಶ್ರೀಮನ್ನಾರಾಯಣ ಸ್ವಾಮಿಗೆ, ಉಭಯದಶಮಿಯೊಳು – ಶುಕ್ಲ ಕೃಷ್ಣಪಕ್ಷಗಳಲ್ಲಿ ಬರತಕ್ಕ ಎರಡು ದಶಮಿಗಳಲ್ಲಿಯೂ, ಉತ್ಸವಂ – ಉತ್ಸವ ವಾದರೊ, (ಪೂಜೆ) ಅವನ–ಆ ಚಂದ್ರಹಾಸನೆಂಬರಸನ, ಆಜ್ಞೆಯಿಂದ–ಅಪ್ಪಣೆಯಿಂದ, ನಡೆವುದು–ನೆರವೇರುತ್ತಲಿದೆ, ಕರ್ಕಶ ಮಿಲ್ಲದೆ–ಕಠಿಣಬುದ್ಧಿಯನ್ನು ಬಿಟ್ಟು, ಹರಿಭಕ್ತಿನಿರತನಾಗಿ–ವಿಷ್ಣುಭಕ್ತರಲ್ಲಿ ಮೊದಲನೆಯವನೆಂದೆನಿಸಿಕೊಂಡು, ಬಿಡದೆ–ನಿರು ಪಾಧಿಕಮಾಗಿ, ಅಖಿಳಜನಮುಂ–ಸಕಲ ಜನರನ್ನೂ, ಪಾಲಿಪಂ–ಕಾಪಾಡುತ್ತಲಿದಾನೆ. ‖೨೧‖

ಟೀ‖ ಚಂದ್ರಹಾಸನು–ಚಂದ್ರಹಾಸನೆಂಬರಸನು, ಸುತ್ತಲುಂ–ಚಂದನಾವತಿಯ ಹತ್ತಿರದಲ್ಲಿರುವ, ಎಲ್ಲಾ ಊರುಗ ಳನ್ನು, ದಿಗ್ವಿಜಯಮಂಮಾಡಿ–ದುಷ್ಟನಿಗ್ರಹವನ್ನೆಸಗಿ, ಭುಜಬಲದಿಂದ – ತನ್ನ ಬಾಹುಬಲದಿಂದ, ರಿಪುನೃಪರನು – ಶತ್ರು ರಾಜರನ್ನು, ಒತ್ತಿ–ಜಯಿಸಿ, ಕಪ್ಪಮಂ – ಕಾಣಿಕೆಯ ಹಣವನ್ನು, ಕೊಂಡುಬಂದು – ಪಡೆದು ಬಂದವನಾಗಿ, ಉತ್ತಮಸುವ ಸ್ತುಗಳನು–ಶ್ರೇಷ್ಠವಾದ ಸಕಲ ವಸ್ತುಗಳನ್ನೂ, ಎಂದುಂ–ಪದ್ಧತಿಯ ಮೇರಿಗೆ, ಈವ – ಕೊಡಬೇಕಾದ, ಅರ್ಥಮಂ–ಹಣ ವನ್ನೂ, ಅರಮನೆಗೆ–ರಾಜನಿಗೆ, ಕಳುಹಲು–ಕಳುಹಿಸಿದ್ದರಿಂದಲೂ, ನಿನಗೆ–ನಿನಗಾದರೋ, ಹತ್ತು–ಹತ್ತು ಸಹಸ್ರವನ್ನೂ, ಒಂದರೆಣಿಕೆಯೊಳು–ಒಂದು ಸಾವಿರದ ಗಣನೆಯಿಂದ, ಅನೇಕದ್ರವ್ಯವನು–ಹೆಚ್ಚಾದ ಹಣದ ರಾಶಿಯನ್ನು, ಪೊತ್ತುಂಬಂದಿಹೆವು, ಹೊತ್ತುಕೊಂಡು ಬಂದಿದ್ದೇವೆ. ಎಂದು–ಎಂಬತೆರನಾಗಿ ನುಡಿದು, ಲೇಖನವನು – ಚಂದ್ರಹಾಸನು ಬರೆದುಕೊಟ್ಟಿದ್ದ ವಿಜ್ಞಾ ಪನಾಪತ್ರವನ್ನು, ಇತ್ತಡೆ–ಕೊಡಲಾಗಿ, ಆದುಷ್ಟಬುದ್ಧಿ–ಕುಳಿಂದರಾಜನ ಸಚಿವನು, ಮಗುಳೆ–ಮತ್ತೆ, ಇಂತು–ಮುಂದೆ ಹೇಳು ವಂತೆ, ಕುಳಿಂದಕನಸೇವಕರ್ಗೆ–ಚಂದನಾವತೀ ರಾಜಭೃತ್ಯರಿಗೆ, ಎಂದನು–ಹೇಳಿದನು. ‖ ೨೨ ‖

---

ರಾಜನು ಕ್ಷೇಮವಾಗಿದಾನೆಯೇ? ನಿಮ್ಮ ರೂಪು ಈ ರೀತಿ ಬದಲಾಯಿಸಿರಲು ನಿಮಿತ್ತವೇನೆಂದು ಕೇಳಿದನು. ‖೨೦‖ ಆಗ ಚಂದ್ರಹಾಸನ ದೂತರು ದುಷ್ಟಬುದ್ಧಿಯಂ ಕುರಿತು, ಎಲೈ ಮಂತ್ರಿವರ್ಯನೇ ಕೇಳು, ಅನೇಕಾನೇಕ ಪಾಪಗಳನ್ನು ಪರಿಹರಿಸ ತಕ್ಕ ಏಕಾದಶೀವ್ರತವನ್ನು ಸಾಂಗವಾಗಿ ನೆರವೇರಿಸಲು ಸ್ನಾನಮಾಡಿಕೊಂಡು ಬಂದಿರುವೆವು. ಚಂದನಾವತಿಯರಸನಾದ ಮೇಧಾವಿಯು ಕ್ಷೇಮವಾಗಿದಾನೆ ಆ ರಾಜನು ತನ್ನ ಕುವರನಾದ ಚಂದ್ರಹಾಸನಿಗೆ ಪಟ್ಟವನ್ನು ಕಟ್ಟಿದಾನೆ. ಚಂದ್ರಹಾಸ ನೆಂಬರಸನ ಅಪ್ಪಣೆಯಿಂದ ಚಂದನಾವತಿಯಲ್ಲೇ, ಶುಕ್ಲ ಕೃಷ್ಣಪಕ್ಷಗಳಲ್ಲಿ ಬರತಕ್ಕ ಎರಡು ದಶಮಿಗಳಲ್ಲೂ ಶ್ರೀಮನ್ನಾ ರಾಯಣನನ್ನು ಅತಿ ವೈಭವದಿಂದ ಆರಾಧಿಸುತ್ತಾ ಏಕಾದಶೀ ವ್ರತವನ್ನು ಸಾಂಗವಾಗಿ ನೆರವೇರಿಸುತ್ತಲಿರುವರು. ಆ ಚಂದ್ರ ಹಾಸನೂ, ಪ್ರಜೆಗಳನ್ನು ಬಹು ಕನಿಕರದಿಂದ ಪಾಲಿಸುತ್ತಿರುವನು. ‖೨೧‖ ಇದೂ ಅಲ್ಲದೆ ತನ್ನ ಬಾಹುಬಲದಿಂದ ಅನೇಕ ರಾಜರನ್ನೂ ಗೆದ್ದು ಕಪ್ಪ ಕಾಣಿಕೆಗಳನ್ನು ತಂದು ಪ್ರಖ್ಯಾತನಾಗಿರುವನು. ಪದ್ಧತಿಯ ಮೇರಿಗೆ ನಿಮಗೆ ಸಲ್ಲಿಸಬೇಕಾದ ಕಾಣಿಕೆಯೊಂದಿಗೆ ತಾನು ಸಂಪಾದಿಸಿದ ಸುವಸ್ತುಗಳನ್ನೂ ಸಹ ತಲುಪಿಸಿ ಬರಬೇಕೆಂದು ನಮ್ಮನ್ನು ಕಳುಹಿಸಿರುವನು. ಇಗೋ, ಆ ಚಂದ್ರಹಾಸನು ಕೊಟ್ಟಿರುವ ಬಿನ್ನವತ್ತಲೆಯನ್ನು ಪರಾಂಬರಿಸಬೇಕೆಂದು ಆ ದುಷ್ಟಬುದ್ಧಿಗೆ ಕೊಟ್ಟರು. ‖೨೨‖

ಮೆನಲಾಚರರ್ಜೀಯಪುಸಿಯಲ್ಲವಂಬೇಂಟೆಗೈದೆ ‖ ಕಾನನದಮಧ್ಯದೊಳನಾಥನಾಗಿಹಶಿಶುನಿ ‖ ಧಾನಮಿರೆಕಂಡೆತ್ತಿಕೊಂ ಡುಬಂದಾತ್ಮಜವಿ ‖ ಧಾನದಿಂದೋವಿದಂಪ್ರೀತಿಮಿಗೆಚಂದ್ರಹಾಸಾಭಿಧಾನದೊಳೆಂದರು ‖ ೨೩ ‖ ಕೇಳಿವಿಸ್ಮಿತನಾದನಾ ದುಷ್ಟಬುದ್ಧಿನಾಂ ‖ ಪಾಳಡವಿಯೊಳ್ಪಸುಳೆಯುಂಕೊಂದುಬಹುದೆಂದು ‖ ಹೇಳಿದರೆಚಂಡಾಲರಂದುಳುಹಿಬಂದಿರಬಹುದೆಂ ದುನಿಶ್ಚೈಸಿಬಳಿಕ ‖ ತಾಳಿದಂದ್ವೇಷಮಂಚಿತ್ತದೊಳ್ಪೊರಗೆ ‖ ಕರುಣಾಳುಗಳತೆರದಿಂದವರ್ಗಳಂಮನ್ನಿಸಿನಿ ‖ ನಿಜಾಲ ಯಕೆತೆಗೆಸಿದಂಚಂದ್ರಹಾಸಂಕಳುಹಿದಗಣಿತಸುವಸ್ತುಗಳನು ‖ ೨೪ ‖ ಇಂದುಹಾಸನದೂತರುಪವಾಸವಿರಬಾರ ‖ ದೆಂ ದುಬಾಣಸಿಗರಂಕರೆಸಿಬಹುವಿಧಪಾಕ ‖ ದಿಂದಷಡುರಸಭೋಜ್ಯಮಂಮಾಡಿಸಿದರೂಟಕವರೊಲ್ಲೆವೆನೆಕನಲ್ದು ‖ ಎಂದಿನಂ

ಟೀ‖ ಇದುಏನು-ಇದೇನು ಆಶ್ಚರ್ಯದಮಾತು, ಎತ್ತಣಕೌತುಕದನುಡಿ-ಬಹು ಅಚ್ಚರಿಯಾಗಿರುವದಲ್ಲಾ, ಕುಳಿಂ ದಂಗೆ - ಕುಳಿಂದರಾಜನಿಗೆ, ಸೂನು-ಕುವರನು, ಜನಿಸಿರ್ದಪನೆ - ಹುಟ್ಟಿದಾನೆಯೆ, ಅವನಮಾನಿನಿ - ಅವನರಸಿಯಾದರೋ, ಬಂಜೆಯಾಗಿಹಳು - ಅಪುತ್ರವತಿಯಾಗಿದ್ದಾಳೆ, ಚಿತ್ರಂ-ಬಹು ಅಚ್ಚರಿಯು, ಎನಲು- ಎಂದು ನುಡಿಯಲು, ಆಚರರ್-ಆ ಸೇವ ಕರಾದರೊ, ಜೀಯ-ಅಯ್ಯಾ ಪ್ರಭುವೆ, ಪುಸಿಯಲ್ಲ-ನಮ್ಮ ಮಾತನ್ನು ಸುಳ್ಳೆಂದೆಣಿಸಬೇಡ, ಅವಂ - ಚಂದನಾವತಿಯರಸು, ಬೇಂಟೆಗೆ - ಮೃಗಯಾವಿನೋದಕ್ಕಾಗಿ, ಐದೆ-ಹೊರಡಲು, ಅನಾಥನಾಗಿಹ-ಯಾರೂ ಪೋಷಕರಿಲ್ಲದಿರುವ, ಶಿಶುನಿಧಾನಂ- ಮಗುವೆಂಬ ನಿಕ್ಷೇಪವು, ಕಾನನಮಧ್ಯದೋಳ್-ಅರಣ್ಯದ ಮಧ್ಯಭಾಗದಲ್ಲಿ, ಇರೆ-ಇದ್ದದ್ದನ್ನು, ಕಂಡು-ಈಕ್ಷಿಸಿ, ಎತ್ತಿಕೊಂಡು ಬಂದು-ಕರೆದುಕೊಂಡು ಬಂದವನಾಗಿ, ಪ್ರೀತಿಮಿಗೆ-ಪ್ರೇಮಾತಿಶಯದಿಂದ, ಆತ್ಮಜವಿಧಾನದಿಂದ-ಈ ಬಾಲಕನೇ ಕುವರ ನೆಂಬ ನಿಯಮದಿಂದ, ಚಂದ್ರಹಾಸ-ಚಂದ್ರಹಾಸನೆನ್ನತಕ್ಕ, ಅಭಿಧಾನದೊಳು - ಪೆಸರಿನಿಂದಲೇ, ಓವಿದಂ-ಸಂರಕ್ಷಣೆ ಮಾಡಿ ದನು, ಎಂದರು ಎಂಬುದಾಗಿ ದುಷ್ಟಬುದ್ಧಿಗೆ ತಿಳಿಸಿದರು ‖

ಅ‖ ವಿ‖ ಬಂಜೆ (ತ್ಧ), ವಂಧ್ಯಾ (ತ್ಸ), ಶಿಶು (ತ್ಸ), ಸಿಸು (ತ್ಭ) ‖ ೨೩ ‖

ಟೀ‖ ಆದುಷ್ಟಬುದ್ಧಿ - ಆ ದುಷ್ಟಬುದ್ಧಿ ಎಂಬ ಮಂತ್ರಿಯಾದರೋ, ಕೇಳಿ - ಕುಳಿಂದನ ಸೇವಕರು ಹೇಳಿದ ನುಡಿಗಳನ್ನಾಲಿಸಿ, ವಿಸ್ಮಿತನಾದನು - ಅಚ್ಚರಿಯಿಂದ ಕೂಡಿದವನಾದನು, ಪಸುಳೆಯಂ-ಬಾಲಕನನ್ನು, ಪಾಳಟವಿಯೋಳ್- ನಿರ್ಜನ ಪ್ರದೇಶವಾದ ಕಾಡಿನೊಳಗೆ, ಕೊಂದು ಬಹುದೆಂದು - ಪ್ರಾಣವನ್ನು ಕಳೆದು ಬನ್ನಿರೆಂಬುದಾಗಿ, ನಾಂ - ನಾನು, ಪೇಳಿದರೆ-ಹೇಳಿದರೂ ಕೂಡ, ಅಂದು- ಆ ಹೊತ್ತು, ಚಂಡಾಲರು-ಕಟುಕರು, ಉಳುಹಿಬಂದರು - ಜೀವದೊರಸೆ ಬಿಟ್ಟು ಬಂದಿದಾರೆ, ಅಹುದು - ಈ ಮಾತು ಖಂಡಿತವಾದದ್ದು, ಎಂದು - ಎಂಬತೆರನಾಗಿ, ನಿಶ್ಚೈಸಿ - ಖಂಡಿತವಾಗಿ ತಿಳಿದವನಾಗಿ, ಬಳಿಕ - ಅನಂತರ, ಚಿತ್ತದೊಳ್-ತನ್ನ ಹೃದಯದಲ್ಲಿ, ದ್ವೇಷವಂತಾಳಿದಂ - ಶತ್ರುತ್ವವನ್ನು ಹೆಚ್ಚಿಸಿದನು, ಪೊರಗೆ - ಬಹಿ ರಂಗದಲ್ಲಾದರೊ, ಅವರ್ಗಳಂ-ಆ ಸೇವಕರನ್ನು, ಕರುಣಾಳುಗಳ ತೆರದಿಂದ-ತಾನು ಬಹು ಕರುಣಿಯೆಂದು ತಿಳಿದುಕೊಳ್ಳು ವಂತೆ, ಮನ್ನಿಸಿ - ಮರ್ಯಾದೆ ಮಾಡಿ, ನಿಜಾಲಯಕೆ-ತನ್ನ ಮಂದಿರಕ್ಕೆ, ಚಂದ್ರಹಾಸಂಕಳುಹಿದ-ಚಂದ್ರಹಾಸನು ಕಳುಹಿಸಿ ಕೊಟ್ಟಿದ್ದ, ಅಗಣಿತ - ಅಸಂಖ್ಯಾತವಾದ, ಸುವಸ್ತುಗಳನು - ಒಳ್ಳೆಯ ಪದಾರ್ಥಗಳನ್ನು, ತೆಗಿಸಿದಂ - ತೆಗಿಸಿಕೊಂಡು ಹೋದನು. ‖ ೨೪ ‖

ಟೀ‖ ಆ ಸಚಿವನು - ಆ ದುಷ್ಟಬುದ್ಧಿಯೆಂಬ ಮಂತ್ರಿಯು, ಇಂದುಹಾಸನ - ಚಂದ್ರಹಾಸನೆಂಬ ರಾಯನ, ದೂತರು - ಸೇವಕರು, ಉಪವಾಸವಿರಬಾರದು - ಹಸಿವಿನಿಂದ ಕೂಡಿರಬಾರದು, ಎಂದು - ಎಂಬದಾಗಿ ಎಂದುಕೊಂಡು,

ದುಷ್ಟಬುದ್ಧಿಯು ಆ ಸೇವಕರನ್ನು ಕುರಿತು, ಆಹಾ ! ಇದೇನಚ್ಚರಿಯು, ಮೇಧಾವಿಗೆ ಮಗನಿದ್ದಾನೆಯೆ, ಅವನರಸಿಯು ಬಂಜೆಯಾಗಿದ್ದಳಲ್ಲಾ ! ನಿಮ್ಮ ಮಾತನ್ನು ನಿಜವೆಂದು ನಂಬಲಾಗುವದಿಲ್ಲವೆಂದು ನುಡಿಯುತ್ತಿರುವ ದುಷ್ಟಬುದ್ಧಿಯನ್ನು ಕುರಿತು ಎಲೈ ಮಂತ್ರಿಶ್ರೇಷ್ಠನೇ ! ನಮ್ಮಮಾತು ಸುಳ್ಳಲ್ಲವು. ಮೇಧಾವಿಯು ಒಂದಾನೊಂದು ದಿನ ಕಾಡಿಗೆಹೋಗಿ ಬೇಟೆ ಯಾಡುತ್ತಿರುವಾಗ ಅನಾಥನಾದ ಬಾಲಕನೊಬ್ಬನು ಸಿಕ್ಕಿದ್ದರಿಂದ ಆ ಶಿಶುವನ್ನು ಕರೆದುಕೊಂಡು ಬಂದು ಸಾಕಿಕೊಂಡು ಆ ಮಗನಿಗೆ ಚಂದ್ರಹಾಸನೆಂದು ನಾಮಕರಣವಂಮಾಡಿ ಅವನನ್ನು ಸಂತೋಷದಿಂದ ಕಾಪಾಡಿದನು. ಈಗ ಆ ಬಾಲಕನೇ ಚಂದನಾವತಿಗೆ ರಾಜನಾಗಿರುವನೆಂದು ವಿಜ್ಞಾಪಿಸಿಕೊಂಡರು. ‖ ೨೩ ‖ ಈ ಮಾತನ್ನು ಕೇಳಿದೊಡನೆಯೆ ದುಷ್ಟಬುದ್ಧಿಯು ಆಶ್ಚರ್ಯವಿಂದ ಕೂಡಿ, ಆಹಾ! ನಾನು ಒಬ್ಬ ಬಾಲಕನನ್ನು ಚಂಡಾಲರಕೈಗೆ ಕೊಟ್ಟು ಅರಣ್ಯಕ್ಕೆ ಕರೆದುಕೊಂಡು ಹೋಗಿ ಕೊಂದುಬನ್ನಿರೆಂದು ಹೇಳಿದ್ದೆನು ಆ ಕೊಲೆಪಾತಕರು ಆ ಬಾಲಕನನ್ನು ಕೊಲ್ಲದೆ ಬಂದಿರಬಹುದು, ಆ ಹುಡುಗನೆ ಈಗ ಚಂದ್ರಹಾಸಾಭಿಧಾನದಿಂದ ಚಂದನಾವತಿಗೆ ಅರಸನಾಗಿರಬಹುದೆಂದು ನಿಶ್ಚಯಿಸಿ, ಮನಸ್ಸಿನಲ್ಲಿ ಹೆಚ್ಚಾದ ದ್ವೇಷವುಂಟಾ

ತಲ್ಲಗರ್ವಿಸಿದಂ ಕುಳಿಂದನವ । ನಿಂದಸೊಕ್ಕಿದರವನಭೃತ್ಯರವರೆಲ್ಲರಂ ತಂದುಕಾರಾಗಾರದೋಳ್ನಿಗಳಮಂಪೂಡಿಸುವೆನೆಂದ
ನಾಸಚಿವನು ‖ ೨೫ ‖ ಕಷ್ಟಮೇತಕೆಜೀಯಹರಿವಾಸರವ್ರತ । ಭ್ರಷ್ಟರಾದಪೆವೆಂಬಭಯಕೆನಿನ್ನಾಲಯದ । ಮೃ
ಷ್ಟಾನ್ನನಾವೊಲ್ಲದಿರ್ದೆವೈಸಲೆಗರ್ವದಿಂಬೇರೆಯಲ್ಲವೆಂದು ‖ ದುಷ್ಟಬುದ್ಧಿಯಚಿತ್ತಮಂತಿಳುಪಿಮರುದಿನದೊ । ಳಿಷ್ಟ
ಭೋಜನದಿಂದಸನ್ಮಾನಮಂತಳೆದು । ಹೃಷ್ಟಮಾನಸರಾಗಿಬೀಳ್ಕೊಂಡುತಿರುಗಿದರ್ಚಂದ್ರಹಾಸನದೂತರು ‖ ೨೬ ‖ ಮನ್ನಿ
ಸಿಕುಳಿಂದಕನಚರರಂ ಕಳುಹಿಮಂತ್ರ । ಭಿನ್ನಮಾಗದವೊಲರಮನೆಗೆಬಂದಾಗತಾ । ಮನ್ನಿಸಿದಬಗೆಯನಾಲೋಚಿಸಿನೃಪಾ
ಲನಂಬೀಳ್ಕೊಂಡುಮದನನೆಂಬ ‖ ತನ್ನತನಯನಮೇಲೆರಾಜಕಾರ್ಯದಭಾರ । ಮನ್ನಿಯೋಗಿಸಿದುಷ್ಟಬುದ್ಧಿಪೊರ

---

ಬಾಣಾಸಿಗರಂಕರೆಸಿ–ಅಡಿಗೆ ಮಾಡತಕ್ಕವರನ್ನು ಹೇಳಿ ಕಳುಹಿಸಿ, ಬಹುವಿಧಪಾಕದಿಂದ-ಬಗೆಬಗೆಯಾದ ಅಡಿಗೆಗಳಿಂದ, ಷಡುರಸಭೋಜ್ಯಮಂ ಮಾಡಿಸಿದರು–ಷಡ್ರಸ ಸಹಿತಮಾದ ಆಹಾರದ್ರವ್ಯವನ್ನು ಅಣಿಮಾಡಿದರು, ಅವರು–ಆ ಕುಳಿಂದನದೂತರು, ಊಟಕೆ–ಭೋಜನವು, ಒಲ್ಲೆವು–ಬೇಡ, ಎನಲು–ಎಂದು ಹೇಳಿದ್ದರಿಂದ, ಆ ಸಚಿವನು–ಆ ಮಂತ್ರಿಯು, ಕನಲ್ದು–ಕೋಪಮಾಡಿಕೊಂಡು, ಎಂದಿನಂತೆ–ಯಾನಾಗಲೂ ಇದ್ದಹಾಗೆ, ಕುಳಿಂದನು–ಕುಳಿಂದ ರಾಜನು, ಅಲ್ಲ–ಇಲ್ಲವು, ಗರ್ವಿಸಿದಂ–ಅಹಂಕಾರದಿಂದ ಕೂಡಿದ್ದಾನೆ, ಅವನಭೃತ್ಯರು–ಅವನ ಸೇವಕರೂ ಕೂಡ, ಅವನಿಂದ–ಆ ಕುಳಿಂದನಿಂದಲೇ, ಸೊಕ್ಕಿದರು–ಅಹಂಕಾರಿಗಳಾಗಿದಾರೆ, ಅವರೆಲ್ಲರಂ–ಆ ದೂತರನ್ನೆಲ್ಲಾ, ತಂದು–ಸೆಳೆದುಕೊಂಡು ಬಂದು, ಕಾರಾಗಾರದೋಳ್ – ಬಂದೀಖಾನೆಯೊಳಗೆ, ನಿಗಳಮಂಪೂಡಿಸುವೆನು–ಬೇಡಿಹಾಕಿಸಿ ಬಿಡುತ್ತೇನೆ,ಎಂದನು–ಎಂಬುದಾಗಿ ನುಡಿದನು ‖

ಅ‖ ವಿ‖ ಷಡ್ರಸಭೋಜ್ಯ–ಭಕ್ಷ್ಯ, ಭೋಜ್ಯ, ಲೇಹ್ಯ, ಚೋಷ್ಯ, ಪಾನೀಯವೆಂಬಿವು. ‖ ೨೫ ‖

ಟೀ‖ ಜೀಯ–ಎಲೈ ಪ್ರಭುವಾದ ದುಷ್ಟಬುದ್ಧಿಯೇ, ಕಷ್ಟಂ–ಇಷ್ಟು ತೊಂದರೆಯು, ಏತಕ್ಕೆ–ಏನು ಪ್ರಯೋಜನ, ಆವು–ನಾವಾದರೋ, ನಿನ್ನ– ನಿನ್ನದಾದ, ಆಲಯದ – ಮಂದಿರದ, ಮೃಷ್ಟಾನ್ನಮಂ – ಭಕ್ಷ್ಯ ಭೋಜ್ಯಾದಿಗಳಿಂದ ಕೂಡಿದ ಊಟವನ್ನು, ಹರಿವಾಸರವ್ರತಭ್ರಷ್ಟರು – ಏಕಾದಶೀ ನಿಯಮಕ್ಕೆ ಭಂಗಬರದು ದೋಷಕ್ಕೆ ಗುರಿಯಾಗತಕ್ಕವರು, ಆದಪೆವೆಂಬ – ಆಗುತ್ತೇವೆನ್ನತಕ್ಕ, ಭಯಕೆ – ಹೆದರಿಕೆಯ ನಿಮಿತ್ತವಾಗಿ, ಒಲ್ಲದಿರ್ದೆವು–ಅಪೇಕ್ಷಿಸಲಿಲ್ಲವು, ಐಸಲೆ–ಇಷ್ಟು ಮಾತ್ರವೇ ಹೊರತು, ಗರ್ವದಿಂ – ಮದದಿಂದ, ಬೇರೆಯು – ಪ್ರಕಾಂತರವಾದ ಆಲೋಚನೆಯಿಂದ, ಅಲ್ಲವು–ಊಟಮಾಡದಿರಲಿಲ್ಲವು, ಎಂದು – ಎಂಬತೆರನಾಗಿ, ಚಂದ್ರಹಾಸನ ದೂತರು – ಚಂದ್ರಹಾಸನು ಕಳುಹಿಸಿದ್ದ ಸೇವಕ ಜನರು, ದುಷ್ಟಬುದ್ಧಿಯ – ದುಷ್ಟಬುದ್ಧಿಯೆಂಬ ಮಂತ್ರಿಯ, ಚಿತ್ತಮಂ – ಮನಸ್ಸನ್ನು ನಾಟುವಂತೆ, ತಿಳುಪಿ – ಗೋಚರಪಡಿಸಿ, ಇಷ್ಟಭೋಜನದಿಂದ – ಬೇಕುಬೇಕಾದ ಆಹಾರ ದ್ರವ್ಯಗಳಿಂದ, ಮರುದಿನದೊಳು – ಆದಿನದ ಬೆಳಿಗ್ಗೆ, ಸನ್ಮಾನಮಂ–ಮರ್ಯಾದೆಯನ್ನು, ತಳೆದು – ಹೊಂದಿ, ಹೃಷ್ಟಮಾನಸರಾಗಿ – ಸಂತೋಷಚಿತ್ತವುಳ್ಳವರಾಗಿ, ಬೀಳ್ಕೊಂಡು–ಅನುಜ್ಞೆಯನ್ನೈದಿ, ತಿರುಗಿದರ್–ಚಂದನಾವತಿಗೆ ಹಿಂದಿರುಗಿ ಪ್ರಯಾಣ ಮಾಡಿದರು ‖ ೨೬ ‖

ಟೀ‖ (ಕುಂತಳೇಂದ್ರನ ಮಂತ್ರಿಯಾದರೊ), ಕುಳಿಂದಕನ–ಕುಳಿಂದಕನೆಂಬ ಚಂದನಾವತಿಯರಸನ, ಚರರಂ–ಸೇವ

---

ದರೂ ಕೂಡ ಅದನ್ನು ಬಹಿರಂಗಮಾಡದೆ ಕರುಣೆಯನ್ನು ತೋರ್ಪಡಿಸುತ್ತ, ಅವರನ್ನೆಲ್ಲಾ ಮನ್ನಿಸಿ ಚಂದ್ರಹಾಸನು ಕಳುಹಿಸಿದ್ದ ಸುವಸ್ತುಗಳನ್ನೆಲ್ಲಾ ತನ್ನ ಮನೆಗೆ ಸೇರಿಸಿದವನಾದನು. ‖ ೨೪ ‖ ಆ ಬಳಿಕ ದುಷ್ಟಬುದ್ಧಿಯು ಚಂದ್ರಹಾಸನ ದೂತರಿಗಾಗಿ ಷಡ್ರಸಾದಿಗಳಿಂದ ಕೂಡಿದ ಅಡಿಗೆಯನ್ನು ಮಾಡಿಸಿದನು. ಆ ಸೇವಕರು ಯಾರೂ ಊಟಕ್ಕೆ ಏಳದಿರಲು ದುಷ್ಟಬುದ್ಧಿಗೆ ಬಹಳವಾಗಿ ಕೋಪಬಂದು, ಆಹಾ, ಚಂದನಾವತಿಯರಸನಾದ ಮೇಧಾವಿಯು, ಈಚೆಗೆ ಅಹಂಕಾರಿಯಾಗಿದ್ದಾನಾದ್ದರಿಂದಲೇ ಅವನ ಭೃತ್ಯರೂ ಹೀಗೆ ಗರ್ವೋದ್ಧತರಾಗಿರುವರು. ಇವರನ್ನು ಈಗಲೇ ಕಾರಾಗೃಹದಲ್ಲಿಡಿಸಿಬಿಡುತ್ತೇನೆಂದು ನುಡಿದ ದುಷ್ಟಬುದ್ಧಿಯ ಮಾತುಗಳನ್ನು ಕೇಳಿದ ಇಂದುಹಾಸನ ದೂತರಾದರೋ, ‖ ೨೫ ‖ ದುಷ್ಟಬುದ್ಧಿಯನ್ನು ಕುರಿತು, ಎಲೈ ಮಂತ್ರಿವರ್ಯನೇ ! ನೀನು ನಮ್ಮಮೇಲೆ ಕೋಪಿಸಿಕೊಳ್ಳಲಾಗದು. ಈ ದಿವಸ ಏಕಾದಶೀ ವ್ರತಕ್ಕಾಗಿ ನಿಮ್ಮ ಮನೆಯ ಮೃಷ್ಟಾನ್ನ ಭೋಜನವನ್ನು ಬಿಟ್ಟಿರುವೆವೇ ಹೊರತು ಅಹಂಕಾರದಿಂದಲ್ಲವು, ಇವತ್ತು ಬಿಟ್ಟು ನೀವಿನ್ನೆಂದು ಊಟಕ್ಕೆ ಏಳಬೇಕೆಂದರೂ ಸಿದ್ಧವಾಗಿರುವೆನೆಂದು ಒಡಂಬಡಿಸಿ, ಆ ಮಾರನೇದಿನ ದುಷ್ಟಬುದ್ಧಿಯ ಸತ್ಕಾರವಂ ಕೈಕೊಂಡು ಅವನ ಅನುಜ್ಞೆಯಂ ಪಡೆದು ಚಂದನಾವತಿಗೆ ಹೊರಟವರಾದರು. ‖ ೨೬ ‖ ಇತ್ತ ದುಷ್ಟಬುದ್ಧಿಯು ಚಂದ್ರಹಾಸನ ದೂತರನ್ನು ಕಳುಹಿಸಿದ ಮೇಲೆ, ಅಯ್ಯೋ, ನಾನು ಯೋಚಿಸಿದ್ದು ನೆರವೇರಿದಂತಿಲ್ಲವಲ್ಲಾ ! ಏನುಮಾಡಲಿ ! ಎಂದು ಮನಸ್ಸಿನಲ್ಲಿ ವ್ಯಥೆಗೊಂಡು, ಅರಮನೆಗೆ ಬಂದು, ರಾಜಕಾರ್ಯಕ್ಕಾಗಿ ತನ್ನ ಕುವರನಾದ ಮದನನನ್ನು ಒಪ್ಪಿಸಿ,

ಮಡುತಿರ್ದ | ನನ್ನೆಗಂವಿಷಯಾಭಿಧಾನದಿಂದೆಸೆವನಿಜಸುತೆಭರದೊಳೈತಂದಳು || ೨೭ || ತನುಸೊಂಪಡರ್ದುನುಂಪಿಡಿದುಕಂಪೊಗೆಯೆಲೋ | ಚನದನೋಟದಹೊಳಹುಹೊಡಕರಿಸೆಚೆಲ್ವಕದ | ಪಿನಕಾಂತಿಕಳವಳಿಸೆನಸುಲಜ್ಜೆನಗೆಮೊಗದೊಳಂಕುರಿಸೆತನುಸೊಬಗಿನ || ವನಜಕುಟ್ಮಲದಂತೆಕುಚಯುಗಂಪೊಣ್ಮೆಬಡ | ತನದಿಂದನಡುವೆಸೆಯೆಗತಿಮಂದವಾಗೆ | ಜವ್ವನದೇಳ್ಗೆಯಿಂದೆಸೆವವಿಷಯೆನಿಜತಾತನಸಮೀಪಕ್ಕೈತರುತಿರ್ದಳು || ೨೮ || ಎಸಳುಕಂಗಳದಿಟ್ಟಮನುಮಥನಕರದಿಟ್ಟ | ಮಿಸುಪಪುರ್ಬಿನಗಾಡಿದರ್ಪಕನಸಿಂಗಾಡಿ | ಲಸಿತಮಂದಸ್ಮಿತಂಮುನಿಜನಕೆವಿಸ್ಮಿತಂಕುರುಳುವಿಟನಿಕರದುರುಳು || ಅಸಿಯಕೋಮಲಕಾಯಮಂಗಜೋತ್ಸವಕಾಯ ಮೆಸೆವನವಯೌವನಂ ಸ್ಮರನ ಕೇಳೀವನಂ | ಪೊಸತಿದೆನಲಾ ವಿಷಯೆಜನಿತ ಮೋಹನವಿಷಯೆ

---

ಕರನ್ನು, ಮನ್ನಿಸಿ–ಮರ್ಯಾದೆಮಾಡಿ, ಕಳುಹಿ–ಅವರ ಊರಿಗೆ ಹೋಗುವುದಕ್ಕೆ ಅನುಜ್ಞೆಯನ್ನಿತ್ತು, ಮಂತ್ರಭಿನ್ನಂ–ತನ್ನ ಯುಕುತಿಯು, ಭಿನ್ನಮಾಗದವೊಲು–ಹೊರಪಡದಂತೆ, ಅರಮನೆಗೆ–ರಾಜಗೃಹಕ್ಕೆ, ಬಂದವನಾಗಿ, ಆಗ-ಆ ಕಾಲದಲ್ಲಿ, ತಾ–ತಾನಾದರೋ, ಮನ್ನಿಸಿದ–ಮರ್ಯಾದೆಯಿಂದ ಕಳುಹಿಸಿದ, ಬಗೆಯನು–ತೆರವನ್ನು. ಆಲೋಚಿಸಿ – ಯೋಚನೆಯನ್ನು ಮಾಡಿ, ನೃಪಾಲನಂ–ಕುಂತಳಾಧೀಶನಿಂದ, ಬೀಳ್ಕೊಂಡು – ಅಪ್ಪಣೆಯುಂ ಪಡೆದು, ರಾಜಕಾರ್ಯದಭಾರಮಂ– ದೇಶಕ್ಕೆ ಸಂಬಂಧವಾದ ಎಲ್ಲಾ ಕೆಲಸಗಳನ್ನೂ, ಮದನನುಎಂದು – ಮದನನೆಂಬುದಾಗಿರುವ, ತನ್ನ–ತನ್ನವನಾದ, ಕುವರನಮೇಲೆ–ಸುತನ ಮೇಲೆ, ನಿಯೋಗಿಸಿ-ಬಿಟ್ಟು, ಪೊರಮಡುತ–ಹೊರಟು ಹೋಗುತ್ತ, ಇರ್ದನು-ಇದ್ದವನಾದನು, ಅನ್ನೆಗಂ–ಅಷ್ಟುಹೊತ್ತಿಗೆ ಸರಿಯಾಗಿ, ವಿಷಯಾಭಿಧಾನದಿಂದ – ವಿಷಯೆಯೆನ್ನತಕ್ಕ ನಾಮದಿಂದ, ಎಸೆವ-ಕಾಂತಿಯುಕ್ತಳಾದ, ನಿಜಸುತೆ–ತನ್ನ ಕುವರಿಯು, ಭರದೊಳು–ವೇಗವಾಗಿ, ಐತಂದಳು–ದುಷ್ಟಬುದ್ಧಿಯೆಂಬ ತನ್ನ ತಂದೆಯಬಳಿಗೆ ಬಂದಳು || ೨೭ ||

ಟೀ|| ಜವ್ವನದೇಳ್ಗೆಯಿಂದ – ಪ್ರಾಯಸಾಮರ್ಥ್ಯದಿಂದ, ಎಸೆವ – ಪ್ರಕಾಶಿಸುವ, ವಿಷಯೆ – ವಿಷಯೆ ಎಂಬ ದುಷ್ಟಬುದ್ಧಿಯ ಕುವರಿಯು, ತನು – ದೇಹವು, ಸೊಂಪಡರ್ದು – ನೋಡುವುದಕ್ಕೆ ಅಂದವಾಗಿ, ನುಂಪಿಡಿದು – ನಯವಾಗಿ, ಕಂಪು – ಸುಗಂಧವು, ಒಗೆಯೆ – ತೋರುತ್ತಿರಲು, ಲೋಚನದ-ನಯನಂಗಳ, ನೋಟದ – ದೃಷ್ಟಿಯ, ಹೊಳಪು – ಕಾಂತಿಯು, ಹೊಡಕರಿಸೆ – ವ್ಯಾಪಿಸುತ್ತಿರಲು, ಚೆಲ್ವ – ಚೆನ್ನಾಗಿರುವ, ಕದಪಿನ – ಕಪೋಲಂಗಳ, ಕಾಂತಿ – ಹೊಳಪು, ಕಳವಳಿಸೆ – ಮಿರುಮಿರುಗುತ್ತಿರಲು, ನಗೆಮೊಗದೊಳು – ಮಂದಹಾಸಯುಕ್ತವಾದ ಮುಖದಲ್ಲಿ, ನಸುಲಜ್ಜೆ–ಅಲ್ಪವಾದ ನಾಚಿಕೆಯು, ಅಂಕುರಿಸೆ-ಉಂಟಾಗಲು, ಕುಚಯುಗಂ–ಸ್ತನಂಗಳೆರಡು, ತನು–ದೇಹದ, ಸೊಬಗಿನ–ಕಾಂತಿಯುಕ್ತಮಾದ, ವನಜಕುಟ್ಮಲದಂತೆ–ತಾವರೆ ಮೊಗ್ಗುಗಳಹಾಗೆ, ಪೊಣ್ಮೆ–ಬಲವಾಗುತ್ತಿರಲು, ನಡು–ಸೊಂಟವು, ಬಡತನದಿಂದ–ಚಿಕ್ಕದಾಗಿ, ಎಸೆಯೆ–ಅಂದವಾಗಿ ತೋರುತ್ತಿರಲು, ಗತಿ – ನಡಿಗೆಯು, ಮಂದಆಗೆ – ನಿಧಾನವಾಗಲು, ತಾತನ ಸಮೀಪಕ್ಕೆ – ತಂದೆಯಾದ ದುಷ್ಟಬುದ್ಧಿಯ ಹತ್ತಿರಕ್ಕೆ, ಐತರುತಿರ್ದಳು–ಬರುತ್ತಲಿದ್ದಳು. || ೨೮ ||

ಟೀ|| ಜನಿತ – ಪ್ರಾಪ್ತವಾದ, ಮೋಹನ - ಪ್ರೀತಿಗೆ, ವಿಷಯೆ - ಕಾರಣ ಭೂತಳಾದ, ಆ ವಿಷಯೆ – ಆ ವಿಷಯೆಯಾದರೊ, ಎಸಳುಕಂಗಳ – ತಾವರೆಯ ದಳದಂತಿರುವ ನಯನಂಗಳ, ದಿಟ್ಟೆ – ದೃಷ್ಟಿಯುಳ್ಳವಳಾಗಿ, ಮನ್ಮಥನ–ಮಾರನ, ಕರದೆ – ಹಸ್ತವನ್ನವಲಂಬಿಸಿರುವ, ಮಿಸುಪ-ಹೊಳೆಯುತ್ತಲಿರುವ, ಪುರ್ಬಿನ–ಹುಬ್ಬಿನ, ಗಾಡಿ–ಅಂದವು, ದರ್ಪಕನ – ಮನ್ಮಥನ, ಸಿಂಗಾಡಿ - ಬತ್ತಳಿಕೆಯಾಗಿಯೂ, ಲಸಿತ–ಥಳಥಳಿಸುವ, ಮಂದಸ್ಮಿತಂ - ಹುಸಿನಗೆಯುಂ, ಮುನಿಜನಕೆ – ತಾಪಸರಿಗೆ, ವಿಸ್ಮಿತಂ - ಆಚ್ಚರಿಯನ್ನುಂಟುಮಾಡತಕ್ಕದ್ದು, ಕುರುಳು – ಕೇಶಂಗಳು, ವಿಟ – ಕಾಮಾಸಕ್ತರ ನಿಕರ – ಗುಂಪಿಗೆ, ಉರುಳು – ಬಂಧಕವಾದದ್ದು, ಅಸಿಯ – ಕಾಂತಿಯುಕ್ತಳಾದ ಇವಳ, ಕೋಮಲಕಾಯಂ – ಸುಕುಮಾರವಾದ ದೇಹವು, ಅಂಗಜೋತ್ಸವಕೆ - ಮಾರನಾಟಕ್ಕೆ, ಆಯಂ – ಯೋಗ್ಯವಾದದ್ದು, ಎಸೆವ – ಕಾಂತಿಯುಕ್ತ

---

ತಾನು ಚಂದನಾವತಿಗೆ ಹೋಗಿ ನಿಜಸ್ಥಿತಿಯನ್ನು ತಿಳಿದುಕೊಳ್ಳಬೇಕೆಂದು ಹೊರಡುತ್ತಿರುವಾಗ ಈತನ ಕುವರಿಯಾದ ವಿಷಯೆ ಎಂಬ ಕನ್ಯಾಮಣಿಯು, ತಂದೆಯ ಬಳಿಗೆ ಸಂಭ್ರಮದಿಂದ ಬರುತ್ತಲಿದ್ದಳು || ೨೭ || ಆ ಬಾಲೆಯ ಶರೀರವು ಕೋಮಲವಾಗಿಯೂ, ನಯವಾಗಿಯೂ ಇದ್ದಿತು. ಕಣ್ಣಿನ ಕುಡಿನೋಟದ ಅಂದವು ಅಸದೃಶವಾಗಿತ್ತು, ಶರೀರಕಾಂತಿಯಿಂದಲೂ, ಮುಖದಲ್ಲಿ ಆವಿರ್ಭವಿಸುತ್ತಲಿರುವ ಹುಸಿನಗುವಿನಿಂದಲೂ ಕೂಡಿದ್ದಳು. ಆ ಬಾಲೆಯ ಸ್ತನಯುಗ್ಮಂಗಳಾದರೊ ತಾವರೆ ಮೊಗ್ಗುಗಳನ್ನು ನೋಡಿ ನಗುವಂತಿದ್ದವು. ಆ ವಿಷಯೆಯ ಸೊಂಟವು ಸಿಂಹದ ಸೊಂಟವನ್ನೂ, ಆಕೆಯ ಗಮನವು ಆನೆಯ ನಡಿಗೆಯನ್ನು ನಿರಾಕರಿಸುವಂತಿತ್ತು. || ೨೮ || ತಾವರೆಯ ರೇಕುಗಳನ್ನು ಹೋಲುವ ವಿಶಾಲವಾದ ನಯನಂಗಳಿಂದಲೂ, ಪುರುಷರ ಮನಸ್ಸನ್ನು ಸೆಳೆಯುವ ಅಂದವಾದ ಮುಂಗುರುಳು, ಕಣ್ಣುಬ್ಬು ಮೊದಲಾದವುಗಳಿಂದ ಕೂಡಿ ಮನ್ಮಥನ ಕ್ರೀಡಾ

ಪಿತನೆಡೆಗೆನಡೆತಂದಳು ‖ ೨೯ ‖ ಕನ್ನೆವೆಣ್ಗಳಗೆಳದಿಯರಕೂಡೆಶ್ಯೆಶವೋ । ದ್ಭಿನ್ನಯೌವ್ವನೆಯಾದವಿಷಯೆಬರೆಕಂಡಿವಳ್ಗಿನ್ನುವರನಾಗಬೇಕೆಂದುಚಿಂತಿಸಿಮನದೊಳಾದುಷ್ಟಬುದ್ಧಿಬಳಿಕ ‖ ತನ್ನಮುಗಳಂತೆಗೆದುತಕ್ಕೈಸಿವಾತ್ಸಲ್ಯ । ದಿಂನಾಳೆಬಂದಪೆಂಪೋಗುನಿಜಭವನಕೆನೆ । ಸನ್ನುತವಸಂತದೋಳ್ಬಾಯ್ದೆರೆವಕೋಗಿಲೆಯುಮರಿಯೊಳವಳಿಂತೆಂದಳು ‖ ೩೦ ‖ ತಾತನಂದನದೊಳಾಂನೀರ್ಪೊಯ್ದು ಬೆಳಸಿರ್ದ । ಚೂತಲತೆಕಾತುದಿನ್ನುದ್ಯಾಪನಂಗೈಸ । ದೇತಕಿರ್ದಪೆರಾಜಕಾರ್ಯಮೇನೆಂದುತಲೆವಾಗಿನಸುಲಜ್ಜೆಯಿಂದ ‖ ಮಾತನಾಡುವಮುಗಳಭಾವಮಂಕಂಡುಸಂ । ಪ್ರೀತಿಯಂತಿಳುಹಿಮೈದಡವಿಮುದ್ದಿಸಿದನು । ಜಾತಮದನಂಗಿವಳನೋಂಪಿಯಂ ಮಾಡಿಸೆಂದಾಮಂತ್ರಿನೇಮಿಸಿದನು ‖ ೩೧ ‖ ಮಗನೆಮುಗಳಂ ಕಳುಹಿ ರಾಜಕಾರಿಯಕೆ

ವಾಪದ್ದು, ನನಂಯೌವನಂ– ನೂತನವಾದ ಪ್ರಾಯವಾದರೊ, ಸ್ಮರನ – ಮದನನ, ಕೇಳೀವನಂ – ಆಟದ ಮಂದಿರವು, ಇಮ – ಈ ಬಗೆಯು, ಪೊಸತು – ನೂತನವಾದದ್ದು, ಎನಲ್ – ಎಂಬಂತೆ, ಪಿತನೆಡೆಗೆ – ಜನಕನಾದ ದುಷ್ಟಬುದ್ಧಿಯ ಹತ್ತಿರಕ್ಕೆ, ನಡೆತಂದಳು–ಬಂದವಳಾದಳು. ‖ ೨೯ ‖

ಟೀ‖ ಶೈಶವ – ಚಿಕ್ಕತನವನ್ನು, ಉದ್ಭಿನ್ನ – ಹೋಗಲಾಡಿಸಿಕೊಂಡು, ಯೌವನೆಯಾದ – ಪ್ರಾಪ್ತವಯಸ್ಕಳಾದ, ವಿಷಯೆ – ವಿಷಯೆ ಎಂಬ ಮಂತ್ರಿ ಸುತೆಯು, ಕನ್ಯೆವೆಣ್ಗಳ – ಕನ್ನಿಕೆಯರಾದ, ಕೆಳದಿಯರಕೂಡೆ-ಜೊತೆಗಾತಿಯರೊಂದಿಗೆ, ಪಿತನೆಡೆಗೆ – ತಂದೆಯಾದ ದುಷ್ಟಬುದ್ಧಿಯ ಹತ್ತಿರಕ್ಕೆ, ಬರೆ-ಬಂದದ್ದನ್ನ, ಕಂಡು–ನೋಡಿ, ಇನ್ನು – ಇನ್ನು ಮುಂದೆ, ಇವಳ್ಗೆ – ಈ ವಿಷಯೆಗೆ, ವರನು – ಗಂಡನು, ಆಗಬೇಕೆಂದು – ಆಗಬೇಕೆಂಬುದಾಗಿ, ಮನದೋಳ್ – ಮನಸ್ಸಿನೊಳಗೆ, ಆದುಷ್ಟಬುದ್ಧಿ – ಆ ದುಷ್ಟಬುದ್ಧಿಯಾದರೋ, ಚಿಂತಿಸಿ – ಆಲೋಚನೆಯಂ ಮಾಡಿ, ಬಳಿಕ – ಅನಂತರ, ತನ್ನಮುಗಳಂ–ತನ್ನ ಕುವರಿಯಾದ ವಿಷಯೆಯನ್ನು, ಕರೆದು – ಹತ್ತಿರಕ್ಕೆ ಬರಹೇಳಿ, ವಾತ್ಸಲ್ಯದಿಂ-ಅಕ್ಕರೆಯಿಂದ, ತಕ್ಕೈಸಿ–ತಬ್ಬಿಕೊಂಡು, ನಾಳೆ-ನಾಳೆಯ ದಿನ, ಬಂದಪೆಂ – ಬರುತ್ತೇನೆ, ನಿಜಭವನಕೆ – ನಿನ್ನ ವಾಸಸ್ಥಾನಕ್ಕೆ, ಪೋಗು – ಹೊರಡುವಳಾಗು, ಎನೆ-ಎಂದು ನುಡಿಯಲು, ಅವಳು–ಆ ವಿಷಯೆಯಾದರೊ, ಸನ್ನುತ–ಮೇಲ್ಮೆಯನ್ನೈದಿದ, ವಸಂತದೋಳ್-ಚೈತ್ರ ವೈಶಾಖ ಮಾಸಗಳಲ್ಲಿ, ಬಾಯ್ದೆರೆವ – ಬಾಯಿ ತೆಗೆಯತಕ್ಕ, ಕೋಗಿಲೆಯುಮರಿಯೊಲು – ಕೋಗಿಲೆ ಹಕ್ಕಿಯ ಮರಿಯಂತೆ, ಇಂತು–ಮುಂದು ಹೇಳುವಂತೆ, ಎಂದಳು–ನುಡಿದಳು. ‖ ೩೦ ‖

ಟೀ‖ ತಾತ-ಜನಕನೆ, ಆಂ – ನಾನಾದರೋ, ನಂದನದೊಳು – ತೋಟದಲ್ಲಿ, ನೀರ್ಪೊಯ್ದು – ನೀರನ್ನೆರದು ಬೆಳಸಿರ್ದ – ಬೆಳೆಮಾಡಿದ್ದ, ಚೂತಲತೆ-ಮಾವಿನಮರದ ಬಳ್ಳಿಯು, ಕಾತುದು – ಫಲಸಹಿತವಾಗಿದೆ, ಏತಕೆ–ಯಾವನಿಮಿತ್ತವಾಗಿ, ಇನ್ನು – ಇನ್ನುವರೆಗೂ, ಉದ್ಯಾಪನಂಗೈಸದೆ – ಉದ್ಯಾಪನೆಯನ್ನು ಮಾಡಿಸದೆ, ಇರ್ದಪೆ – ಇರುತ್ತೀಯೆ, ರಾಜಕಾರ್ಯಂ–ದೇಶಕ್ಕೆ ಸಂಬಂಧವಾದ ಕೆಲಸವು, ಏನು – ಏನಿದೆ, ಎಂದು – ಎಂಬ ತೆರನಾಗಿ, ನಸುಲಜ್ಜೆಯಿಂದ–ಹೆಚ್ಚಾದ ನಾಚಿಕೆಯಿಂದ, ತಲೆವಾಗಿ-ತಲೆಯನ್ನು ನೆಲದಕಡೆಗೆ ಮಾಡಿಕೊಂಡು, ಮಾತನಾಡುವ–ಮಾತನಾಡುತ್ತಲಿರುವ, ಮುಗಳ–ಕುವರಿಯ, ಭಾವಮಂ–ಆಶಯವನ್ನೂ, ಆ ಮಂತ್ರಿ ಕಂಡು – ಅರಿತವನಾಗಿ, ಸಂಪ್ರೀತಿಯಿಂ–ಆನಂದದಿಂದ, ತಿಳುಹಿ-ಅರುಹಿ, ಮೈದಡವಿ-ದೇಹವನ್ನು ತಡವಿ, ಮುದ್ದಿಸಿ–ಮುದ್ದುಮಾಡಿ, ಇವಳ–ಈ ಬಾಲೆಯ, ನೋಂಪಿಯ–ನೇಮವನ್ನು, ಮಾಡಿಸು–ನೆರವೇರಿಸುವನಾಗು, ಎಂದು–ಎಂಬತೆರನಾಗಿ, ಮದನಂಗೆ–ಮದನನೆಂಬ ತನ್ನ ಕುವರಂಗೆ, ನೇಮಿಸಿದನು–ಅನುಜ್ಞೆಯನಿತ್ತವನಾದನು ‖ ೩೧ ‖

ಮಂದಿರವೋ ಎಂಬಂತೆ ಹೊಳೆಯುತ್ತಲಿದ್ದಳು. ‖ ೨೯ ‖ ಇಂತಹ ಅಸದೃಶಂಗಳಾದ, ರೂಪುಲಾವಣ್ಯಾದಿಗಳಿಂ ಕೂಡಿದ ವಿಷಯೆಯು ಸಖೀಜನರಿಂದೊಡಗೂಡಿ ತನ್ನ ಬಳಿಗೆ ಬರುತ್ತಲಿರುವುದನ್ನು, ದುಷ್ಟಬುದ್ಧಿಯು ನೋಡಿ, ಈಕೆಗೆ ಅನುರೂಪನಾದವನನ್ನ ಹುಡುಕಬೇಕೆಂದು ಮನದಲ್ಲಿ ನಿಶ್ಚೈಸಿಕೊಂಡು ಕುವರಿಯನ್ನು ಸಂತೋಷದಿಂದ ಅಪ್ಪಿಕೊಂಡು, ಆ ಬಾಲೆಯನ್ನು ಕುರಿತು, ನಾನು ನಾಳೆ ಬರುತ್ತೇನೆ, ನೀನು ಮನೆಗೆ ಹೋಗೆಂದು ಹೇಳಲು ಆ ವಿಷಯೆಯು ತಂದೆಯೊಂದಿಗೆ ಒಂದಾನೊಂದು ಮಾತನ್ನು ಹೇಳಲುಜ್ಜುಗಿಸಿದಳು. ಆ ಕನ್ಯಾಮಣಿಯು ಮಾತನಾಡಲಾರಂಭಿಸಿದ್ದನ್ನು ನೋಡಿದರೆ ಮಾಗಿಯಕಾಲದಲ್ಲಿ ಮೂಕಭಾವನ್ನೈದಿ ಮಧುಮಾಸದಲ್ಲಿ ಬಾಯ್ದೆರೆಯಲುಜ್ಜುಗಿಸುವ ಕೋಕಿಲೆ ಹಕ್ಕಿಯನ್ನು ಜ್ಞಾಪಿಸಿಕೊಳ್ಳುವಂತಿತ್ತು ‖ ೩೦ ಇಂತಹ ಸುಕುಮಾರಿಯಾದ ವಿಷಯೆ ಎಂಬ ಬಾಲೆಯು ತನ್ನ ಜನಕನಾದ ದುಷ್ಟಬುದ್ಧಿಯನ್ನು ಕುರಿತು, ಎಲೈ ತಂದೆಯೇ, ನಾನು ಪ್ರತಿದಿನವೂ ನೀರೆರದು ಬೆಳಸಿದ ಮಾವಿನ ಮರವು ಈಗ ಫಲಭರಿತವಾಗಿದೆ. ನಾನು ಅದಕ್ಕೆ ಪೂಜೆ ಮಾಡಬೇಕು, ಇದನ್ನು ನೆರವೇರಿಸಬೇಕೆಂದು ನುಡಿದ ವಿಷಯೆಯ ಮಾತನ್ನು ಪ್ರೀತಿಯಿಂದ ಒಪ್ಪಿದವನಾಗಿ, ತನ್ನ ಮಗನಾದ ಮದನನಿಗೆ ಈ ಪೂಜೆಯನ್ನು ಮಾಡಿಸುವಂತೆ ಹೇಳಿ, ಕುವರಿಯನ್ನು ಮನೆಗೆ ಹೋಗಲು ಒಡಂಬಡಿಸಿ, ‖ ೩೧ ‖ ರಾಜಕಾರ್ಯವನ್ನು

ಮದನನನಿರಿಸಿತನ್ನ ಪರಿಜನಸಹಿತಪೊರಮಟ್ಟು । ದಿನವೆರಡಕೈತಂದುಮುನ್ನಿರ್ದಕಾಡೆಲ್ಲಮೆಸೆವನಾಡಾಗಿರಲ್ಕೆ । ಮನದೊಳ್ಕರುಬನಾಂತುಮೆಚ್ಚಿದವನಾಗಿಲೇ । ಸಿನೊಳಾಕುಳಿಂದಕನಿದಿರ್ವಂದುಸತ್ಕರಿಸೆ । ಘನವಿಭವದಿಂದರಾಜಿಪಚಂದನಾವತಿಗೆ ಬಂದನಾದುಷ್ಟಬುದ್ಧಿ ॥ ೩೨ ॥ ರಿಪುಮಥನಕೇಳ್ಕುಳಿಂದಂಬಹಳವೈಭವದೊ । ಳುಪಚರಿಸಿತನ್ನನಂದನಚಂದ್ರಹಾಸನಂ । ವಿಪುಲಪರಿತೋಷದಿಂದೊಡೆಯಂಗೆಕಾಣಿಕೆಯನೀಡಿಕಾಣಿಸಿದಬಳಿಕ । ವಿಪಿನದೊಳ್ತನಗೀಕುಮಾರಕಂಮುಂಗೈದತಪದಫಲದಿಂತಾನೆದೊರೆಕೊಂಡನೀತನಂ । ಕೃಪೆಯಿಂದನೀವೆಪಾಲಿಸವೇಳ್ಕುದೆಂದುನಿಜಪತಿಗೆವರ್ತಿಸಿದನು ॥ ೩೩ ॥ ಗಾಡಿಸಿದನೃಪಲಕ್ಷಣದಚಂದ್ರಹಾಸನಂ । ನೋಡಿವಿಸ್ಮಿತನಾಗಿತನ್ನಮನದೊಳ್ಪಿಂತೆ । ಮಾಡಿಸಿದಕೃತ್ಯಮುಂನೆನೆದುವಂಚಿ

---

ಟೀ॥ ಆದುಷ್ಟಬುದ್ಧಿ – ಆ ದುಷ್ಟಬುದ್ಧಿಯೆಂಬಾತನು, ಮನೆಗೆ–ಆಲಯಕೆ, ಮಗಳಂ – ಕುವರಿಯಾದ ವಿಷಯೆಯನ್ನು, ಕಳುಹಿ – ಹೋಗುವಂತೆ ಒಡಂಬಡಿಸಿ, ಮದನನನು – ಮದನನೆಂಬುವನನ್ನು, ರಾಜಕಾರಿಯಕೆ – ತನಿಗೆ ಬದಲಾಗಿ, ಇರಿಸಿ – ಇರುವಂತೆಮಾಡಿ, ತನ್ನ ಪರಿಜನಸಹಿತ – ತನ್ನ ಸೇನಾಸಹಿತನಾಗಿ, ಪೊರಮಟ್ಟು – ಹೊರಟವನಾಗಿ, ದಿನವೆರಡಕೆ–ಎರಡು ದಿನಗಳೊಳಗಾಗಿ, ಐತಂದು–ಬಂದು ಸೇರಿ, ಮುನ್ನಿರ್ದ–ಮೊದಲು ಇದ್ದಂಥ, ಕಾಡೆಲ್ಲಂ – ಕಾಂತಾರವೆಲ್ಲವೂ, ನಾಡಾಗಿ-ಊರಾಗಿ, ಇರಲ್ಕೆ – ಇರುವುದರಿಂದ, ಮನದೊಳ್ – ಮನಸ್ಸಿನಲ್ಲಿ, ಕರುಬನಾಂತು – ಅಸೂಯೆಯನ್ನೈದಿ, ಮೆಚ್ಚಿದವನಾಗಿ – ಆನಂದದಿಂದ ಕೂಡಿರುವನಂತೆ ತೋರ್ಪಡಿಸುತ್ತ, ಆಕುಳಿಂದನು–ಆ ಕುಳಿಂದನೆಂಬ ಚಂದನಾವತಿಯರಸು, ಇದಿರ್ವಂದು–ಎದುರಾಗಿ ಬಂದು, ಲೇಸಿನೊಳು–ಒಳ್ಳೆಯ ಮಾರ್ಗದಿಂದ, (ಮರ್ಯಾದೆಯಿಂದ) ಸತ್ಕರಿಸೆ–ಸತ್ಕಾರವಂ ಮಾಡಲು, ಘನವಿಭವದಿಂದ – ಹೆಚ್ಚಾದ ಐಸಿರಿಯಿಂದ, ರಾಜಿಪ – ಹೊಳೆಯುತ್ತಲಿರುವ, ಚಂದನಾವತಿಗೆ-ಚಂದನಾವತಿಯೆಂಬ ನಗರಕ್ಕೆ, ಬಂದನು-ಬಂದು ಸೇರಿದವನಾದನು. ॥೩೨॥

ಟೀ॥ ರಿಪುಮಥನ–ಶತ್ರುಸಂಹಾರಕನಾದ ಪಾರ್ಥನೆ, ಕೇಳು–ಲಾಲಿಸು, ಕುಳಿಂದನು ಚಂದನಾವತಿಯರಸನಾದರೋ, ಬಹಳವೈಭವದೊಳು – ಹೆಚ್ಚಾದ ಐಸಿರಿಯಿಂದ, ಉಪಚರಿಸಿ – ಮರ್ಯಾದೆಮಾಡಿ, ಒಡೆಯಂಗೆ – ತನಿಗೆ ಯಜಮಾನನಾದ ದುಷ್ಟಬುದ್ಧಿಗೆ, ವಿಪುಲಪರಿತೋಷದಿಂದ-ಆನಂದಾತಿಶಯದಿಂದ, ನಂದನ–ಕುವರನಾದ, ಚಂದ್ರಹಾಸನ–ಚಂದ್ರಹಾಸನನ್ನು, ಕಾಣಿಕೆಯನೀಡಿ – ಕಾಣಿಕೆ ಹಣವಾಗಿ ತೋರಿಸಿ, ಕಾಣಿಸಿದಬಳಿಕ – ಕಾಣುವಂತೆ ಮಾಡಿದ ನಂತರ, ದುಷ್ಟಬುದ್ಧಿಯನ್ನು ಕುರಿತು, ತನಗೆ–ನನಿಗಾದರೋ, ಮುಂಗೈದ – ಪೂರ್ವದಲ್ಲಿ ಮಾಡಿದ, ತಪದಫಲದಿಂ – ಪುಣ್ಯಪರಿಪಾಕದಿಂದ, ವಿಪಿನದೊಳ್–ಕಾಡಿನಲ್ಲಿ, ತಾನೆ-ಅಲಭ್ಯವಾಗಿಯೆ, ದೊರೆಕೊಂಡನು – ಲಭಿಸಿದನು, ಈತನಂ – ಈ ನನ್ನ ಕುವರನನ್ನು, ನೀವೆ – ನೀವೇನೇ, ಕೃಪೆಯಿಂದ–ವಿಶ್ವಾಸದಿಂದ, ಪಾಲಿಸವೇಳ್ಕುದು–ಸಂರಕ್ಷಣೆಮಾಡಬೇಕು, ಎಂದು–ಎಂಬುದಾಗಿ ನುಡಿದು, ನಿಜಪತಿಗೆ – ತನ್ನೊಡೆಯನಿಗೆ, ಕೈವರ್ತಿಸಿದವನಾದನು. ॥೩೩॥

ಟೀ॥ ಆದುಷ್ಟಬುದ್ಧಿ–ಆ ದುಷ್ಟಬುದ್ಧಿಯಾದರೋ, ಗಾಡಿಸಿದ-ಅಂದವಾದ, ನೃಪಲಕ್ಷಣದ – ರಾಜಕುರುಹುಗಳಿಂದೊಪ್ಪುವ, ಚಂದ್ರಹಾಸನಂನೋಡಿ–ಇಂದುಹಾಸನನ್ನು ಕಂಡು, ವಿಸ್ಮಿತನಾಗಿ–ಅಚ್ಚರಿಗೊಂಡು, ಪಿಂತೆ–ಪೂರ್ವದಲ್ಲಿ, ಮಾಡಿಸಿದ-ಎಸಗುವಂತೆ ನೇಮಿಸಿದ್ದ, ಕೃತ್ಯಮಂ–ಕಾರ್ಯವನ್ನು, ತನ್ನಮನದೊಳಗೆ–ತನ್ನ ಹೃದಯದಲ್ಲಿ, ನೆನೆದು–ಜ್ಞಾಪಕಮಾಡಿಕೊಂಡು, ಎಮ್ಮ–ನಾವು ಕಳುಹಿಸಿದ್ದ, ಚಂಡಾಲರು – ಕಟುಕರು, ವಂಚಿಸಿದರೇ – ಮೋಸಗೊಳಿಸಿದರಲ್ಲಾ, ಎಂದು – ಎಂಬ

---

ಸರಿಯಾಗಿ ನೋಡಿಕೊಳ್ಳುತ್ತಿರಬೇಕೆಂದು ಮದನನಿಗೆ ಆಜ್ಞಾಪಿಸಿ, ಪರಿವಾರ ಸಮೇತನಾಗಿ ಕುಂತಳನಗರದಿಂದ ಹೊರಟು ಎರಡು ದಿವಸಕ್ಕೆ ಚಂದನಾವತಿಗೆ ಬಂದು ಸೇರಿದನು, ಕಾಡುಮೇಡಾಗಿ ನೋಡುವುದಕ್ಕೆ ವಿಕಾರವಾಗಿ ಕಾಣುತ್ತಿದ್ದ ಆ ಚಂದನಾವತಿಯು ಆಗ ಅತ್ಯಂತ ರಮಣೀಯವಾಗಿರುವುದನ್ನು ನೋಡಿದ ದುಷ್ಟಬುದ್ಧಿಯು ಅತ್ಯಧಿಕವಾದ ಅಸೂಯೆಯಿಂದ ಕೂಡಿದರೂ ಅದನ್ನು ತೋರ್ಪಡಿಸದೆ, ತನ್ನನ್ನು ಇದಿರ್ಗೊಳ್ಳಲು ಬಂದ ಮೇಧಾವಿಯನ್ನು ಮರ್ಯಾದೆಯಿಂದ ಕಂಡು, ಆತನ ಸತ್ಕಾರವನ್ನು ಸ್ವೀಕರಿಸಿ, ಅತ್ಯಂತ ರಮಣೀಯವಾದ ಚಂದನಾವತೀಪಟ್ಟಣಕ್ಕೆ ಪ್ರವೇಶಮಾಡಿದನು. ॥೩೨॥ ಎಲೈ ಶತ್ರುಸಂಹಾರಕನಾದ ಅರ್ಜುನನೇ ಕೇಳು, ಮೇಧಾವಿಯು ದುಷ್ಟಬುದ್ಧಿಗೆ ಸತ್ಕಾರವನ್ನು ಮಾಡಿದ ಬಳಿಕ ತನ್ನ ಕುವರನಾದ ಚಂದ್ರಹಾಸನನ್ನು ಕರೆದು ಆ ಮಂತ್ರಿಗೆ ಕಾಣಿಕೆಯಾಗಿ ಒಪ್ಪಿಸಿ, ಆತನೊಡನೆ ಇಂತೆಂದನು:— ಈ ಬಾಲಕನು ಕಾಡಿನೊಳಗೆ ಬೇಂಟೆಯಾಡುತ್ತಿದ್ದಾಗ ಅಪ್ರಾರ್ಥಿತವಾಗಿ ಸಿಕ್ಕಿದನು. ನನಿಗೆ ಮಕ್ಕಳಿಲ್ಲದ್ದರಿಂದ ಈ ಹಸುಳೆಯೇ ನನ್ನ ಮಗನೆಂದು ಭಾವಿಸಿ ಕಾಪಾಡಿ ಈ ನಗರದ ರಾಜ್ಯಭಾರವಂ ಈತನಿಗೊಪ್ಪಿಸಿರುವೆನು. ಇವನನ್ನು ಕಾಪಾಡುವ ಭಾರವು ತಮ್ಮದಾಗಿರುವದೆಂದು ನುಡಿದನು. ॥ ೩೩ ॥ ಆಗ ದುಷ್ಟಬುದ್ಧಿಯು ಅಸದೃಶವಾದ ರಾಜಲಕ್ಷಣಗಳಿಂದ ಮೆರೆಯುತ್ತಲಿರುವ ಈ ಬಾಲಕನನ್ನು

ಸಿವರೇಚಂಡಾಲರೆಮ್ಮನೆಂದು || ಕೂಡೆಮುಮ್ಮುಲನುರುಗಿಪುಸಿಗೆನಸುನಗುತಕೊಂ | ಡಾಡಿಮನ್ನಿಸಿತನಗೆನಿನ್ನಸುತನಂಕಂಡು | ಮೂಡಿತುತ್ಸಹಮೆಂದನಾದುಷ್ಟಬುದ್ಧಿವಿನಯದೊಳಾಕುಳಿಂದನೊಡನೆ || ೩೪ || ವ್ಯಾಳದಂಗದನಯವೊಗರ್ತಸಂಛಾದಿತತೃ | ಣಾಳಿಗಳೊಮಕರದಿಕ್ಕೆಯಮುಡುವಿನಂಬುಜವೊ | ಬಾಳಧಾರೆಗೆಲೇಪಿಸಿದಮಧುವೊಕಮಲಾಂಬಕಿಯರಕೃತಕದಬೇಟವೊ | ಕಾಳಕೂಟಂಬೆರಸಿದಮೃತಾನ್ನಭೋಜನವೊ | ಪೇಳಲರಿದೆನೆಸೊಗಸಿತಾದುಷ್ಟಬುದ್ಧಿಘಾತಾಳಿಕೆಯ | ನೊಳಗೊಂಡು ಹರುಷಲಾಂಛನದಿಂದನಸುನಗುತನುಡಿದಮಾತು || ೩೫ || ಎತ್ತಬಲ್ಲರ್ಸುಜನರೆಲೆಪಾರ್ಥಕಪಟಿಗಳ | ಚಿತ್ತದೊಳ್ಪುದು

ತೆರನಾಗಿ, ಮಮ್ಮುಲಮರುಗಿ – ಮನಸ್ಸಿನಲ್ಲಿಯೇ ಸಂಕಟಪಟ್ಟುಕೊಂಡು, ಪುಸಿಗೆ – ಹೊರಗೆಮಾತ್ರ, (ಕಪಟದಿಂದ) ನಗುತ-ನಗುತ್ತ, ಕೊಂಡಾಡಿ–ಹೊಗಳಿ, ಮನ್ನಿಸಿ-ಮರ್ಯಾದೆಮಾಡಿ, ತನಿಗೆ–ತನಿಗಾದರೊ, ನಿನ್ನಸುತನಂಕಂಡು – ನಿನ್ನ ಕುವರನನ್ನು ನೋಡಿ, ಉತ್ಸಹಂ – ಆನಂದವು, ಮೂಡಿತು – ಆವಿರ್ಭವಿಸಿತು, ಎಂದು – ಎಂಬದಾಗಿ, ವಿನಯದಿಂದ – ನಮ್ರಭಾವದಿಂದ, ಆಕುಳಿಂದನೊಡನೆ – ಆ ಕುಳಿಂದನೆಂಬರಸನೊಂದಿಗೆ, ಎಂದನು – ನುಡಿದನು. || ೩೪ ||

ಟೀ|| ಘಾತಾಳಿಕೆಯನು – ಪ್ರಾಣಹರಣವನ್ನು, ಬಳಕೊಂಡ – ಮಾಡಬೇಕೆಂದೆಳಸಿ, ಹರುಷಲಾಂಛನದಿಂದ–ಆನಂದದ ಕುರುಹಿನಿಂದ, ನಸುನಗುತ - ಹುಸಿನಗುವನ್ನು ಬೀರುತ್ತ, ನುಡಿದ – ಹೇಳಿದ, ಆದುಷ್ಟಬುದ್ಧಿಯಮಾತು – ಆ ದುಷ್ಟಬುದ್ಧಿಯೆಂಬಾತನ ನುಡಿಯಾದರೊ, ವ್ಯಾಳದ – ಹಾವಿನ, ಅಂಗದ - ದೇಹದ, ನಯವೊ – ನಾಜೂಕೊ, ಗರ್ತ–ಹಳ್ಳದ ಮೇಲ್ಗಡೆಯಲ್ಲಿ, ಸಂಛಾದಿತ – ಮುಚ್ಚಿರತಕ್ಕ, ತೃಣಾಳಿಗಳೊ – ಹುಲ್ಲಿನ ರಾಶಿಗಳೊ, ಮಕರದ – ಮೊಸಳೆಗಳ, ಇಕ್ಕೆಯ–ನೆಲೆಯಾಗಿರತಕ್ಕ, ಮಡುವಿನ–ಹಳ್ಳದಲ್ಲಿ ಬೆಳೆದಿರುವ, ಅಂಬುಜವೊ – ತಾವರೆಯೊ, ಬಾಳಧಾರೆಗೆ – ಕತ್ತಿಯ ತುದಿಗೆ, ಲೇಪಿಸಿದ-ಬಳದಿರತಕ್ಕ, ಮಧುವೊ – ಜೇನುತುಪ್ಪವೊ, ಕಮಲಾಂಬಕಿಯರ – ತಾವರೆಯ ದಳಗಳ ಹಾಗೆ ನೇತ್ರಗಳುಳ್ಳ ನಾರಿಯರ, ಕೃತಕದ–ವಂಚನೆಯಿಂದ ಕೂಡಿದ, ಬೇಟವೋ-ಸಡಗರವೊ, ಕಾಲಕೂಟಂ–ನಂಜು, ಬೆರಸಿದ–ಸೇರಿರತಕ್ಕ, ಅಮೃತಾನ್ನಭೋಜನವೊ – ಹಾಲು ಬೆರಸಿದ ಅನ್ನವನ್ನು ತಿನ್ನುವುದೊ, ಪೇಳಲು–ಹೇಳುವುದಕ್ಕೆ, ಅರಿದು–ಅಸದಳವಾದದ್ದು, ಎನೆ–ಎಂಬ ರೀತಿಯಾಗಿ, ಸೊಗಸಿತು-ಅಂದವಾಗಿ ಕಾಣಿಸಿತು. || ೩೫ ||

ಟೀ|| ಎಲೆ ಪಾರ್ಥ, ಅಯ್ಯಾ ಫಲುಗುಣಾ, ಕಪಟಿಗಳ – ಮೋಸಗಾರರ, ಚಿತ್ತದೊಳ್ – ಮನದಲ್ಲಿ, ಪುದುಗಿರ್ದ–ಅವರಿಸಿಕೊಂಡಿರತಕ್ಕ, ಮಾಟಮಂ - ಆಶಯವನ್ನು, ಸುಜನರು – ಉತ್ತಮರು, ಎತ್ತಬಲ್ಲರು – ಹೇಗೆತಾನೆ ಅರಿತಾರು, ಮಂತ್ರಿಪತಿ - ಮಂತ್ರೀಶನಾದರೊ, ವೀಳೆಯವನು – ಎಲೆ ಅಡಿಕೆಯನ್ನು, ಇತ್ತು – ಕೊಟ್ಟವನಾಗಿ, ಮನ್ನಿಸಿ – ಮರ್ಯಾದೆ ಮಾಡಿ, ಚಂದ್ರಹಾಸನಂ – ಚಂದ್ರಹಾಸನನ್ನು, ಕರೆದು – ಹತ್ತಿರ ಬರಮಾಡಿಕೊಂಡು, ಕುಳ್ಳಿರಿಸಿಕೊಂಡು – ಕೂತುಕೊಳ್ಳುವಂತೆ ಹೇಳಿ, ಮನದೊಳ್ – ತನ್ನ ಅಂತರಂಗದಲ್ಲಿಯೆ, ಭೂಸುರರು – ಬ್ರಾಹ್ಮಣರು, ಮುನ್ನ – ಮೊಟ್ಟಮೊದಲು, ಎಂದ–ನುಡಿದ, ವೃತ್ತಾಂತಮಂ - ವಾರ್ತೆಯನ್ನು, ಮತ್ತೆ – ತಿರುಗಿ, ನೆನೆದು - ಜ್ಞಾಪಕಕ್ಕೆ ತಂದುಕೊಂಡು, ಅಕಟ – ಅಯ್ಯೋ ದೇವರೆ, ತನ್ನ - ನನ್ನವರಾದ, ಸುತರ–ಕುವರರ, ಆಳ್ಕೆಗೆ - ಪ್ರಭುತ್ವಕ್ಕೆ, ಕಂಟಕಂ – ಬಾಧೆಯು, ಆಯ್ತು–ಉಂಟಾಯಿತು, ಇವನು – ಈ ಇಂದುಹಾಸನು, ಓರ್ವನು – ಒಬ್ಬನು, ಪಗೆಯಾದನು – ವೈರಿಯಾದನು, ಎಂದು – ಎಂಬತೆರನಾಗಿ, ಚಿಂತಿಸುತ - ಆಲೋಚನೆಯಂ ಗೈಯ್ಯುತ್ತ, ಇರ್ದನು–ಇದ್ದವನಾದನು.

ಕಂಡು, ಮನಸ್ಸಿನಲ್ಲಿ ಪೂರ್ವದಲ್ಲಿ ನಾನು ಮಾಡಿದ ಉಪಾಯವು ಚಂಡಾಲರಿಂದ ಕೆಟ್ಟು ಹೋಯಿತಲ್ಲಾ ! ಅವರು ನನ್ನನ್ನು ಮೋಸಗೊಳಿಸಿದರೆಂದು ಮನದಲ್ಲಿ ವ್ಯಥೆಗೊಂಡವನಾದರೂ ಬಹಿರಂಗದಲ್ಲಿ ಸಂತಸಂಗೊಂಡಿರುವಂತೆಯೇ ತೋರ್ಪಡಿಸಿ, ಮೇಧಾವಿಯನ್ನು ಕುರಿತು, ಅಯ್ಯಾ ರಾಜನೆ, ನಿನ್ನ ಕುವರನನ್ನು ನೋಡಿ ನನಗೆ ಬಹು ಸಂತೋಷವಾಯಿತೆಂದು ಕಪಟವಾದ ಮುಗುಳ್ನಗೆಯಿಂದ ನುಡಿದನು. || ೩೪ || ಅಂತರಂಗದಲ್ಲಿ ಅಸೂಯೆಯಿಂದಲೂ ಬಹಿರಂಗದಲ್ಲಿ ಸಂತಸದಿಂದಲೂ ತುಂಬಿರುವ ಈ ದುಷ್ಟಬುದ್ಧಿಯ ಮಾತುಗಳಾದರೊ, ಸರ್ಪಶರೀರಕಾಂತಿಯನ್ನೂ, ಮೇಲೆ ಚಿಗುರುಹುಲ್ಲನ್ನೊಳಗೊಂಡಿರುವ ದೊಡ್ಡ ಹಳ್ಳವನ್ನೂ, ಮೊಸಳೆಗಳಿಂದ ಕೂಡಿದ ಸರೋವರದ ಮೇಲ್ಗಡೆ ತೋರಿಬರುವ ತಾವರೆಗಳನ್ನೂ ಹೋಲುತ್ತಿದ್ದಿತು. ಖಡ್ಗಕ್ಕೆ ಬಳಿದ ಜೇನುತುಪ್ಪವೋ ಎಂಬಹಾಗೂ, ಕಾಂತೆಯರ ಕಡೆಗಣ್ಣಿನ ನೋಟದಂತೆಯೂ, ವಿಷವಂ ಬೆರಸಿದ ಅನ್ನದ ಪರಿಯಿಂದಲೂ ಇರುವ ಇಂತಹ ಕೃತ್ರಿಮೋಪಾಯವು ಸಜ್ಜನರಿಗೆ ಹೇಗೆತಾನೆ ತಿಳಿದೀತು? ||೩೫|| ಎಲೈ ಧನಂಜಯನೆ ಕೇಳು, ಆ ಬಳಿಕ ದುಷ್ಟಬುದ್ಧಿಯು ಚಂದ್ರಹಾಸನನ್ನು ಮನ್ನಿಸಿ, ಪಕ್ಕದಲ್ಲಿ ಕುಳ್ಳಿರಿಸಿಕೊಂಡು, ಮನಸ್ಸಿನಲ್ಲಿ ವ್ಯಥೆಯನ್ನು ಹೊಂದಿ, ಅಯ್ಯೋ ! ನನ್ನಮಕ್ಕಳಿಗೆ ಬರತಕ್ಕ ರಾಜ್ಯಭಾರಕ್ಕೆ ಇವನೊಬ್ಬನು ಶತ್ರುವು ಹುಟ್ಟಿದನಲ್ಲಾ ! ಬ್ರಾಹ್ಮಣರ ಮಾತು ಎಂದಿಗೂ

ಗಿರ್ದಮಾಟಮುಂವೀಳಯುವ | ನಿತ್ತುಮುನ್ನಿಸಿಮುಂತ್ರಿಪತಿಚಂದ್ರಹಾಸನಂಕರೆದುಕುಳ್ಳಿರಿಸಿಕೊಂಡು || ಮತ್ತೆಮನದೋಳ್ಮನ್ನಭೂಸುರರ್ತನಗೆಂದ | ವೃತ್ತಾಂತಮಂನೆನೆದುತನ್ನಸುತರಾಳ್ಕೆಗಾ | ಯಿತ್ತುಕಂಟಕಮುಕಟಪಗೆಯಾದನಿವನೋರ್ವನೆಂದುಚಿಂತಿಸುತಿರ್ದನು || ೩೬ || ಬಂಜೆಯಾಗದುವಿಪ್ರರಂದೆನ್ನೊಳೆಂದನುಡಿ | ರಂಜಿಸುವರಾಜಲಕ್ಷಣದೊಳೊಪ್ಪುವನಿವಂ | ಭಂಜಿಸದೊಡೀ ಧರಣಿಗೀತನರಸಾದಪಂ ಬಳಿಕತನ್ನಾತ್ಮಜರ್ಗೆ || ಸಂಜನಿಸಲರಿಯದು ನೃಪಾಲತ್ವಮಗ್ಗಳಿಕೆ | ಗಂಜುವವನಲ್ಲ ಬಲವಂತನಹನೀತಂಗೆ | ನಂಜನೂಡಿಸಿಕೊಲ್ವುಪಾಯಮಂ ಮಾಳ್ಪೆನೆಂದೆಣಿಸಿದಂ ದುಷ್ಟಬುದ್ಧಿ || ೩೭ || ರಾಕಾಶಶಾಂಕನಭ್ಯುದಯಮುಂಕೆಡಿಸಿತ | ನ್ನಾಕಾರಮಂತೋರಿಸುವೆನೆಂಬಕತ್ತಲೆಯೊ | ಳಾಕಮಲಲೋಚನನಭೃತ್ಯನಂಕೊಲಿಸಿತಾಂ ಬಾಳ್ವೆನೆಂಬುಜ್ಜುಗದೊಳು || ಆಕುಮತಿಯಹಮಂತ್ರಿಬಳಿಕೊಂದುಲೇಖನವ | ನೇಕಾಂತದೋಳ್ಬರೆದುಮೇಣದಕೆಮುದ್ರೆಯಂ | ಜೋಕೆಯಿಂದಳವಡಿಸಿಕರೆಸಿಶಶಿಹಾಸನಂನೋಡಿನಗುತಿಂತೆಂದನು || ೩೮ || ಉರ್ವಮಂತ್ರದಕಜ್ಜಮಿದು

ಅ|| ವಿ|| ಭೂಸುರರ್ ಭೂ-ಭೂಮಿಯ, ಸುರರ್-ದೇವತೆಗಳು ||೩೬||

ಟೀ|| ದುಷ್ಟಬುದ್ಧಿ-ದುಷ್ಟಬುದ್ಧಿಯೆಂಬ ಮಂತ್ರಿಯು, (ತನ್ನಲ್ಲಿ ತಾನೆ) ಅಂದು-ಮೊಟ್ಟಮೊದಲು, ಎನ್ನೊಳು-ನನ್ನೊಂದಿಗೆ, ವಿಪ್ರರು-ಭೂಸುರರು, ಎಂದ-ಹೇಳಿದ, ನುಡಿ-ವಚನವು, ಬಂಜೆಯಾಗದು-ವ್ಯರ್ಥವಾಗತಕ್ಕದ್ದಲ್ಲವು, ಇವಂ-ಈ ಇಂದುಹಾಸನು, ರಂಜಿಸುವ- ಹೊಳೆಹೊಳೆವ, ರಾಜಲಕ್ಷಣದೊಳು- ಅರಸು ಗುರುಹುಗಳಿಂದ, ಒಪ್ಪುವನು- ಕೂಡಿದ್ದಾನೆ, ಭಂಜಿಸಿದೊಡೆ-ಕೊಂದುಬಿಡದೆ ಹೀಗೆಯೇ ಬಿಟ್ಟರೆ, ಈತನು-ಇವನೆ, ಈ ಧರಣಿಗೆ-ಈ ಭೂಮಂಡಲಕ್ಕೆಲ್ಲಾ, ಅರಸು-ರಾಜನು, ಆದಪಂ-ಆಗುತ್ತಾನೆ, ಬಳಿಕ-ಅನಂತರ, ನೃಪಾಲತ್ವಂ-ರಾಜ್ಯದ ಆಡಳಿತವು, ತನ್ನಾತ್ಮಜರ್ಗೆ-ನನ್ನ ಕುವರರಿಗೆ, ಸಂಜನಿಸಲು ಅರಿಯದು-ದೊರೆಯುವದು ಅಸಾಧ್ಯವು, ಅಗ್ಗಳಿಕೆಗೆ-ನಮ್ಮ ದೊಡ್ಡಸ್ತಿಕೆಗೆ, ಅಂಜುವನು-ಹೆದರತಕ್ಕವನು, ಅಲ್ಲ-ಅಲ್ಲವು, ಬಲವಂತನು-ಶಕ್ತನು, ಅಹನು-ಆಗಿದ್ದಾನೆ, ಈತಂಗೆ-ಈ ಬಾಲಕನಿಗೆ, ನಂಜನು-ಹಾಲಾಹಲವನ್ನು ಊಡಿಸಿ-ಇಡಿಸಿ, ಕೊಲ್ವ-ಕೊಂದು ಬಿಡುವ, ಉಪಾಯಮಂ-ಚಮತ್ಕಾರವನ್ನು, ಮಾಳ್ಪೆನು-ಎಸಗುವೆನು, ಎಂದು-ಎಂಬತೆರನಾಗಿ, ಎಣಿಸಿದಂ-ಆಲೋಚನೆಯಂಗೈದನು ||೩೭||

ಟೀ|| ಆ ಕುಮತಿಯಮಂತ್ರಿ-ನೀಚಬುದ್ಧಿಯುಳ್ಳವನಾದ ಆ ಕುಂತಳೇಂದ್ರನ ಸಚಿವನು-ರಾಕಾಶಶಾಂಕನ-ಹುಣ್ಣಿಮೆಯ ದಿನದ ಚಂದ್ರನ, ಅಭ್ಯುದಯಮುಂ-ಏಳಿಗೆಯನ್ನು ಕೆಡಿಸಿ-ತಪ್ಪಿಸಿ, ತನ್ನ-ತನ್ನದಾಗಿರತಕ್ಕ, ಆಕಾರಮಂ-ಆಕಾರವನ್ನು, ತೋರಿಸುವೆನು-ತೋರಿಸುತ್ತೇನೆ, ಎಂಬ-ಎನ್ನತಕ್ಕ, ಕತ್ತಲೆಯೊಲು-ತಮಸ್ಸಿನಹಾಗೆ, ತಾಂ-ತಾನಾದರೊ, ಆ ಕಮಲಲೋಚನನ-ಶ್ರೀಮನ್ನಾರಾಯಣನ, ಭೃತ್ಯನಂ-ಸೇವಕನನ್ನು, ಕೊಲಿಸಿ-ಕೊಂದುಹಾಕಿಸಿ, ಬಾಳ್ವೆನು-ಶಾಶ್ವತವಾಗಿರುವೆನು, ಎಂಬ-ಎನ್ನತಕ್ಕ, ಉಜ್ಜುಗದೊಳು-ಕಾರ್ಯದಲ್ಲಿ ಆಸಕ್ತನಾಗಿ, ಬಳಿಕ-ಆ ಮೇಲೆ, ಏಕಾಂತದೊಳು-ಗೋಪ್ಯವಾಗಿಯೇ, ಒಂದು ಲೇಖನವನು-ಒಂದು ಪತ್ರವನ್ನು, ಬರೆದು-ಬರೆದವನಾಗಿ, ಮೇಣ್-ಅಲ್ಲದೆ, ಅದಕೆ-ಆ ಕಾಗದಕ್ಕೆ, ಜೋಕೆಯಿಂದ-ಬಲವಾಗಿ, ಮುದ್ರೆಯಂ-ಮೋಹರನ್ನು, (ಸೀಲನ್ನು) ಅಳವಡಿಸಿ-ಹಾಕಿ, ಶಶಿಹಾಸನಂ- ಇಂದುಹಾಸನನ್ನು, ಕರೆಸಿ-ಕರೆಸಿದವನಾಗಿ, ನೋಡಿ-ಈಕ್ಷಿಸಿ, ನಗುತ, ಇಂತು-ಮುಂದೆ ಹೇಳುವಂತೆ, ಎಂದನು-ನುಡಿದನು. ||೩೮||

ಟೀ|| ಆ ಮಂತ್ರಿ- ಆ ದುಷ್ಟಬುದ್ಧಿಯು, (ಚಂದ್ರಹಾಸನನ್ನು ಕುರಿತು) ಚಂದ್ರಹಾಸ- ಇಂದುಹಾಸನೆ, ಇದು-ಈಗ ನಾನು ಬರೆದಿರತಕ್ಕ ಕಾಗದವು, ಉರ್ವ-ಹೆಚ್ಚಾದ, ಮಂತ್ರದ ಯೋಚನೆ ಮಾಡಬೇಕಾಗಿರತಕ್ಕ, ಕಜ್ಜಂ-ಕಾರ್ಯವಾಗಿದೆ, ನಾಲ್ಕು ಸೇವಕರ್ವೆರಸಿ-ನಾಲ್ಕು ಜನ ಭೃತ್ಯರನ್ನು ಮಾತ್ರ ಕರೆದುಕೊಂಡು, ಹಯಾರೂಢನಾಗಿ-ಕುದುರೆಯ ಮೇಲೆ

ಸುಳ್ಳಾಗುವುದಿಲ್ಲವು. || ೩೬ || ಇವನನ್ನು ಹೀಗೆಯೇ ಬಿಟ್ಟರೆ ಕುಂತಳದೇಶಕ್ಕೆ ಇವನೇ ಚಕ್ರವರ್ತಿಯಾಗುವನಾದ್ದರಿಂದ ಉಪಾಯಾಂತರದಿಂದ ಇವನನ್ನು ಯಮನಿಗೆ ಗುರಿಮಾಡಬೇಕೆಂದೂ, ಸಾಹಸದಿಂದ ಇವನನ್ನು ಸಂಹರಿಸುವುದಕ್ಕಾಗುವುದಿಲ್ಲವೆಂದೂ ಬಗೆದು ವಿಷವನ್ನಿಡಿಸಿ ಕೊಲ್ಲಲು ನಿಶ್ಚಯಿಸಿದವನಾದನು. ||೩೭|| ಪೂರ್ಣಚಂದ್ರನ ಬೆಳಕನ್ನು ಕತ್ತಲೆಯು ತಪ್ಪಿಸಿ ಸುಖಪಡಬೇಕೆಂಬ ಯೋಚನೆಯು ಹೇಗೆ ಅಸಂಭವವೊ ಹಾಗೆಯೇ ಶ್ರೀ ಕೃಷ್ಣಮೂರುತಿಯಂ ಭಜಿಸುತ್ತಲಿರುವ ಚಂದ್ರಹಾಸನನ್ನು ಕೊಂದು ತಾನು ರಾಜ್ಯಸಂಪತ್ತನ್ನು ಪಡೆಯುವುದು ಅಸಂಭವವಾದರೂ ಕೂಡ, ಆ ದುಷ್ಟಬುದ್ಧಿಯು ರಹಸ್ಯವಾಗಿ ಒಂದು ಕಾಗದವನ್ನು ಬರೆದು, ಅರಗು ಮುದ್ರೆಯನ್ನು ಹಾಕಿ, ಚಂದ್ರಹಾಸನನ್ನು ಕರೆದು, ||೩೮|| ಎಲೈ ಇಂದುಹಾಸನೆ ಇದು ಬಹು ರಹಸ್ಯವಾದ ಕಾಗದವು. ನೀನು ನಾಲ್ವರು ಸೇವಕರನ್ನು ಮಾತ್ರ ಕರೆದುಕೊಂಡು ಕುದುರೆಯಮೇಲೆ ಸವಾರಿ ಮಾಡಿಕೊಂಡು ಜಾಗ್ರತೆಯಲ್ಲಿ ಕುಂತಳನಗರಕ್ಕೆ ಹೋಗಿ, ನನ್ನ ಮಗನಾದ ಮದನನಿಗೆ ರಹಸ್ಯವಾಗಿ ಈ ಕಾಗದವನ್ನು ಕೊಟ್ಟು

ಚಂದ್ರಹಾಸನೀ | ನೋರ್ವನೆಹಯಾರೂಢನಾಗಿನಾಲ್ವರುಸೇವ | ಕರ್ವೆರಸಿರಾಜಧಾನಿಗೆಪೋಗಿ ತನ್ನಮಗಮದನಂಗೆಮುದ್ರೆ ಸಹಿತ || ಸರ್ವಜನಮರಿಯದಂತೀವುದೀಪತ್ರಿಕೆಯ | ನುರ್ವರೆಯೊಳಾವೆಸಗಿದತಿಶಯದಮಾಳ್ಕೆನ | ವಿರ್ಮ್ವರೋಳ್ಗುಪ್ತ ಮಾಗಿರಲೆಂದುಕೊಟ್ಟನಾಮಂತ್ರಿತಲ್ಲೇಖನವನು ||೩೯|| ಪ್ರೀತಿಯಿಂಪೇಳ್ದನಂತಸ್ಥಮಂತನ್ನೊಳೀ | ಮಾತುನಿಶ್ಚಯಮೆಂದು ನಂಬಿಕೈಕೊಂಡುಹರು | ಷಾತಿಶಯದಿಂದಮಂತ್ರಿಗೆಮಣಿದುಬೀಳ್ಕೊಂಡುವಂದಿಸಿಕುಳಿಂದನಡಿಗೆ || ಆತನೋಳ್ಪರಕೆವೆತ್ತೊಡನೆಕಳುಹಿಸಿಕೊಂಡು | ಮಾತೆಮೇಧಾವಿನಿಗೆಬಂದುನಿರ್ಗಮವನಾ | ಖ್ಯಾತಿಸಿಪದಾಂಬುಜಕೆಪಣೆಯಿಟ್ಟನಾಚಂದ್ರಹಾಸನಭ್ಯಗ್ರದಿಂದ || ೪೦ || ಆಸುದತಿಪಣೆವಿಡಿದುನೆಗಪಿಸುಕುಮಾರಂಗೆ | ಸೇಸೆದಳಿದಾರತಿಯುನೆತ್ತಿ ತಿಲಕವನಿಟ್ಟು | ಭಾಸುರಸುಲಾಜೆ ದಧಿದೂರ್ವಾಕ್ಷತೆಗಳೊಡನೆತಳಿಗೆತಾಂಬುಲವನಿತ್ತು || ಲೇಸೊದವಲಧ್ವದೋಳ್ನಿನ್ನವಯವಂಗಳಂ | ವಾಸುದೇವಂಕಾಯಲನು

---

ಕುರಿತು, ರಾಜಧಾನಿಗೆ_ಕುಂತಳ ನಗರಕ್ಕೆ, ನೀನು_ನೀನಾದರೊ, ಓರ್ವನೆ-ಒಬ್ಬನು ಮಾತ್ರವೇ, ಪೋಗಿ-ಹೋಗಿ, ಸರ್ವಜನಂ_ಯಾರೊಬ್ಬರೂ, ಅರಿಯದಂತೆ_ ಗೋಚರಮಾಡಿಕೊಳ್ಳದ ಹಾಗೆ, ಮುದ್ರೆಸಹಿತ_ಮೋಹರನ್ನು ಮಾಡಿರತಕ್ಕ, ಈ ಪತ್ರಿಕೆಯನು_ಈ ಕಾಗದವನ್ನು, ತನ್ನ ಮಗ_ನನ್ನ ಕುವರನಾದ, ಮದನಂಗೆ_ಮದನನೆಂಬಾತನಿಗೆ, ಈವುದು-ತಲುಪಿಸಬೇಕು, ಉರ್ವರೆಯೊಳ್-ಭೂಲೋಕದಲ್ಲಿ, ಆವು-ನಾವಾದರೊ, ಎಸಗಿದ_ರಚಿಸಿದ, ಅತಿಶಯದ-ಅತ್ಯಧಿಕವಾದ, ಮಾಳ್ಕೆ-ಕಜ್ಜವು, ನವಿರ್ಮ್ವರೊಳ್-ನಮ್ಮಿಬ್ಬರಲ್ಲಿ ಮಾತ್ರವೇ, ಗುಪ್ತಮಾಗಿ-ಅಂತರಂಗವಾಗಿಯೆ, ಇರಲಿ_ಇರಬೇಕು, ಎಂದು_ಎಂಬತೆರನಾಗಿ ನುಡಿದು, ತಲ್ಲೇಖನವನು-ತಾನು ಬರೆದು ಮೋಹರು ಮಾಡಿದ್ದ ಪತ್ರವನ್ನು, ಕೊಟ್ಟನು-ಇಂದುಹಾಸನ ಕೈಗೆ ಕೊಟ್ಟವನಾದನು. ||೩೯||

ಟೀ|| ತನ್ನೊಳು_ತನ್ನ ಕೂಡ, ಅಂತಸ್ಥಮಂ_ಮನಸ್ಸಿನ ಅಭಿಪ್ರಾಯವನ್ನು, ಪ್ರೀತಿಯಿಂದ_ಅಕ್ಕರೆಯಿಂದ, ಪೇಳ್ದನು_ನುಡಿದಿರುವನು, ಈ ಮಾತು ನಿಶ್ಚಯಂ-ಈ ನುಡಿಯು ಸಟೆಯಿಲ್ಲ, ಎಂದು_ಎಂಬ ತೆರನಾಗಿ, ಚಂದ್ರಹಾಸಂ-ಇಂದುಹಾಸನು, ನಂಬಿ_ನೆಚ್ಚಿ, ಹರುಷಾತಿಶಯದಿಂದ_ಹೆಚ್ಚಾದ ಆನಂದದಿಂದ, ಕೈಕೊಂಡು-ಹಾಗೆಯೇ ಆಗಲೆಂದು ಒಪ್ಪಿಕೊಂಡು, ಮಂತ್ರಿಗೆ_ಮಂತ್ರಿಯಾದ ದುಷ್ಟಬುದ್ಧಿಗೆ, ಮಣಿದು_ನಮಸ್ಕಾರವಂ ಮಾಡಿ, ಬೀಳ್ಕೊಂಡು-ಆಜ್ಞೆಯಂ ಕೇಳಿ, ಕುಳಿಂದನ-ಕುಳಿಂದನೆಂಬ ತನ್ನ ಸಾಕುತಂದೆಯ, ಅಡಿಗೆ- ಕಾಲುಗಳಿಗೆ, ವಂದಿಸಿ-ಎರಗಿ, ಆತನೊಳ್_ ಆ ರಾಜನಿಂದ, ಪರಕೆ ಪೊತ್ತು- ಆಶೀರ್ವಚನವನ್ನೈದಿ, ಒಡನೆ_ತಡಮಾಡದೆ, ಕಳುಹಿಸಿಕೊಂಡು_ಹೋಗಲು ಅಪ್ಪಣೆಯಂ ಪಡೆದು, ಬಂದು_ಬಂದವನಾಗಿ, ಮಾತೆ_ತಾಯಿಯಾದ, ಮೇಧಾವಿನಿಗೆ_ಮೇಧಾವಿನಿ ಎಂಬಾಕೆಗೆ, ನಿರ್ಗಮವನು_ತಾನು ಕುಂತಳ ನಗರಕ್ಕೆ ಹೋಗಿ ಬರುತ್ತೇನೆಂದು, ಆಖ್ಯಾತಿಸಿ_ತಿಳಿಸಿ, ಅಭ್ಯಗ್ರದಿಂದ-ಜಾಗ್ರತೆಯಾಗಿ, ಪದಾಂಬುಜಕೆ-ಕಮಲಗಳ ಹಾಗಿರುವ ಅಡಿಗಳಿಗೆ, ಫಣೆ_ಹಣೆಯನ್ನು, ಇಟ್ಟನು-ಇರಿಸಿದವನಾದನು. ||೪೦||

ಟೀ|| ಚಂದ್ರಹಾಸನು ಬಂದು ಕಾಲಿಗೆರಗಿದ ಸಮಯದಲ್ಲಿ, ಆ ಸುದತಿ_ಆ ಕುಳಿಂದರಾಜನರಸಿಯಾದ ಮೇಧಾವಿನಿಯು, ಪಣೆವಿಡಿದು_ಹಣೆಯನ್ನು ತನ್ನ ಕೈಯಲ್ಲಿ ಹಿಡಿದವಳಾಗಿ, ನೆಗಪಿ_ತಲೆಯನ್ನು ನೀವಿ, ಸೇಸೆ_ಮಂತ್ರಾಕ್ಷತೆಯನ್ನು, ಸುಕುಮಾರಂಗೆ_ಕೋಮಲಾಂಗನಾದ ಇಂದುಹಾಸನ ತಲೆಯಮೇಲೆ, ತಳೆದು-ಇರಿಸಿದವಳಾಗಿ, ಆರತಿಯನು_ಶುಭಕರವಾದ ಆರತಿಯನ್ನು, ಎತ್ತಿ-ಬೆಳಗಿ, ತಿಲಕವನು_ತಿಲಕವನ್ನು, ಇಟ್ಟು_ ಇಟ್ಟವಳಾಗಿ, ಭಾಸುರ_ಹೊಳೆ ಹೊಳೆವ, ಸುಲಾಜೆ_ಮೇಲಾದ ಅರಳನ್ನು, ದಧಿ-ಮೊಸರು, ದೂರ್ವ_ಗರಿಕೆಯ ಹುಲ್ಲು, ಅಕ್ಷತೆಗಳೊಡನೆ-ಮಂತ್ರಾಕ್ಷತೆ ಮೊದಲಾದವುಗಳ ಜತೆಯಲ್ಲಿ, ತಳಿಗೆ ತಾಂಬೂಲವನು_ಅಡಿಕೆ ವೀಳೆಯದೆಲೆಯ ತಟ್ಟೆಯನ್ನು, (ತಾಂಬೂಲವನ್ನು) ಇತ್ತು-ಕೊಟ್ಟು, (ನಿನಗೆ) ಅಧ್ವದೋಳ್-ಮಾರ್ಗದಲ್ಲಿ, ಲೇಸು_ಮೇಲ್ಮೆಯು, ಒದವಲಿ-ಉಂಟಾಗಲಿ, ವಾಸುದೇವಂ_ಶ್ರೀಮನ್ನಾರಾಯಣನೆ, ನಿನ್ನ_ನಿನ್ನದಾದ, ಅವಯವಂಗಳಂ_

---

ಬರಬೇಕು. ಈ ಸಂಗತಿಯು ನಮ್ಮಿಬ್ಬರನ್ನು ಬಿಟ್ಟು ಮತ್ತೆ ಯಾರಿಗೂ ತಿಳಿಯಕೂಡದೆಂದು ನುಡಿದು ತಾನು ಬರೆದಿದ್ದ ಕಾಗದವನ್ನು ಕೊಟ್ಟನು. ||೩೯|| ಚಂದ್ರಹಾಸನಾದರೊ, ಮಂತ್ರಿಗೆ ತನ್ನ ಮೇಲೆ ಬಹಳ ವಿಶ್ವಾಸವಿದೆ ಎಂದು ನಂಬಿ ಸಂತೋಷದಿಂದ ಆ ಕಾಗದವನ್ನು ತೆಗೆದುಕೊಂಡು, ದುಷ್ಟಬುದ್ಧಿಯ ಅಪ್ಪಣೆಯಂ ಪಡೆದು ಹೊರಟು ಬಂದು ತನ್ನ ತಂದೆಯ ಪಾದಗಳಿಗೆ ನಮಸ್ಕರಿಸಿ ಆತನಿಂದಲೂ ಅನುಜ್ಞೆಯನ್ನೈದಿ, ತಾಯಿಯಾದ ಮೇಧಾವಿನಿಯ ಬಳಿಗೆ ಬಂದು, ಕುಂತಳನಗರಿಗೆ ಹೋಗಿ ಬರುವೆನೆಂದು ನುಡಿದು ಆಕೆಯ ಪಾದಾರವಿಂದಗಳಿಗೆರಗಿದನು || ೪೦ || ಆ ಮೇಧಾವಿನಿಯು ಬಾಲಕನನ್ನು ಮೇಲಕ್ಕೆಬ್ಬಿಸಿ ಹಣೆಗೆ ಕತ್ತುರಿಯ ತಿಲಕವನ್ನಿಟ್ಟು, ಆರತಿಯಂ ಬೆಳಗಿ ಅರಳು, ಮೊಸರು, ಗರಿಕೆ ಇವುಗಳಿಂದ ಕೂಡಿರತಕ್ಕ ತಾಂಬೂಲವನ್ನು ಚಂದ್ರಹಾಸನ ಕೈಯ್ಯಲ್ಲಿಟ್ಟು ಕುವರನನ್ನು ಕುರಿತು, ಎಲೈ ಕಂದನೆ, ನಿನಗೆ ದಾರಿಯಲ್ಲಿ ಯಾವ ಬಾಧೆಯೂ ಉಂಟಾಗದಂತೆ ಜಗದ್ರಕ್ಷಕನಾದ ಶ್ರೀ ಹರಿಯು ನಿನ್ನನ್ನು ಕಾಪಾಡಲಿ. ನಿನಗೆ ಅನುರೂಪಳಾದ ಸತೀ ರತ್ನವು ದೊರೆಯಲಿ, ಶ್ರೀಮನ್ನಾರಾ

ಕೊಲೆಯಾಗಿ ಹನ | ಧೂಸಮನ್ವಿತನಾಗಿ ರಾಜ್ಯಮುಂಪಡೆಯೆಂದುಪರಸಿಬೀಳ್ಕೊಟ್ಟಳಂದು || ೪೧ || ಕ್ರಮದಿಂದಮಾತೆಯುಂಬೀಳ್ಕೊಂಡುಪೊರಮಡುವ | ಸಮಯದೊಳ್ಚಂದ್ರಹಾಸಂಕಂಡನಿದಿರೆ ಕುಂ | ಕುಮುಸುರಂಜಿತಹರಿದ್ರಾಂಗದಿಂಕಂಗೊಳಿಪನೂತನವಧೂವರರನು || ಸಮಸದಾಕಾರದಿಂಬರುತಿರ್ದಭೂಸುರೋ | ತ್ತಮಯುಗವ ನೆಳೆಗರುವೆರಸಿ ಬಪ್ಪಘೃಷ್ಟಿಯಂ | ರಮಣೀಯಕುಸುಮ ಫಲಮಂಕೊಂಡು ತನಗೀಯಲೈತಹವನಾಧಿಪರನು || ೪೨ || ಸೂಡಿದಂಪರಿಪರಿಯೊಳೆಸೆವ ಕುಸುಮಂಗಳಂ ಮಾಡಿದಸುಮಾಲೆಯಂ ತಲೆಗೋರ್ವನೋರ್ವನೆಡೆ | ಗೂಡಿಸೇರಿಸಿಕಟ್ಟಿದಚ್ಚಸಂಪಗೆಯ ಮಾಲೆಯನಿಕ್ಕಿದಂ ಕೊರಳೊಳು || ನೀಡಿದಂಮತ್ತೋರ್ವನೊಪ್ಪುವಬುಕರಾಂಬುಜಕೆ | ದಾಡಿಮುದಫಲವನಿವನೆಲ್ಲಮಂಕೈಕೊಂಡು| ಗಾಡಿಮಿಗೆಮೆರೆವನವವರನಂತೆ

---

ದೇಹದ ಭಾಗಗಳನ್ನೆಲ್ಲಾ, ಕಾಯಲಿ–ಯಾವದೊಂದು ಬಾಧೆಗೂ ಸಿಕ್ಕಿಸದಿರಿಸಲಿ, ಅನುಕೂಲೆಯು–ಹಿತವಾದವಳು, ಅಹ–ಆಗಿರತಕ್ಕ, ವಧೂಸಮನ್ವಿತನಾಗಿ-ಸ್ತ್ರೀಯಿಂದಕೂಡಿ, ರಾಜ್ಯಮುಂ-ಅರಸುತನವನ್ನು, ಪಡೆ–ಹೊಂದುವನಾಗು, ಎಂದು–ಎಂಬುದಾಗಿ, ಪರಸಿ–ಬಳ್ಳಿಯದಾಗಲೆಂದು ನುಡಿದು, ಬೀಳ್ಕೊಟ್ಟಳು–ಕಳುಹಿಸಿಕೊಟ್ಟವಳಾದಳು ||

ಅ|| ವಿ|| ಸೇಸೆ (ತ್ಪ) ಶೇಷಾ (ತ್ಸ) || ೪೧ ||

ಟೀ|| ಮಾತೆಯಂ–ತಾಯಿಯಾದ ಮೇಧಾವಿನಿಯನ್ನು, ಕ್ರಮದಿಂದ – ಯೋಗ್ಯವಾಗಿ, ಬೀಳ್ಕೊಂಡು–ಪ್ರಯಾಣ ಮಾಡಲು ಅನುಜ್ಞೆಗೊಂಡವನಾಗಿ, ಪೊರಮಡುವ–ಹೊರಡುತ್ತಲಿರುವ, ಸಮಯದೊಳ್–ಕಾಲದಲ್ಲಿ, ಇದಿರೆ–ಮುಂದುಗಡೆಯಲ್ಲಿ, ಕುಂಕುಮುಸುರಂಜಿತದ–ಕುಂಕುಮದಿಂದ ಶೋಭಿಸುತ್ತಲಿರುವ, ಹರಿದ್ರಾಂಗದಿ–ಅರಿಶಿನವನ್ನು ಬಳಿದುಕೊಂಡಿರುವ ದೇಹದಿಂದ,ಕಂಗೊಳಿಪ–ಕಾಂತಿಯುಕ್ತರಾಗಿರತಕ್ಕ,ನೂತನವಧೂವರರನು-ಆಗತಾನೆ ಮದಿವೆಮಾಡಿಕೊಂಡು ಮೆರವಣಿಗೆಯಾಗಿ ಬರುತ್ತಲಿರುವ ದಂಪತಿಗಳನ್ನೂ, ಸದಾಕಾರದಿಂ–ನಿತ್ಯಕರ್ಮಗಳನ್ನು ತೀರಿಸಿಕೊಂಡು, ಬರುತಿರ್ದ–ಬರುತ್ತಲಿದ್ದಂಥ, ಸಮ–ಸರಿಸಂಖ್ಯೆಯುಳ್ಳ, ಭೂಸುರೋತ್ತಮರ–ವಿಪ್ರವರ್ಯರ, ಯುಗವನು–ಈರ್ವರನ್ನೂ, ಎಳೆಗರುವೆರಸಿ–ಎಳೆಕರುವನ್ನು ಜೊತೆಮಾಡಿಕೊಂಡು, ಬಪ್ಪ–ಬರುತ್ತಲಿರುವ, ಘೃಷ್ಟಿಯಂ – ಧೇನುವನ್ನು, ರಮಣೀಯ – ಉತ್ತಮವಾದ, ಕುಸುಮ – ಪುಷ್ಪವನ್ನೂ, ಫಲಮಂ – ಹಣ್ಣುಗಳನ್ನು, ಕೊಂಡು – ತೆಗೆದುಕೊಂಡು ಬಂದು, ತನಗೆ – ತನಗಾಗಿ, ಈಯಲು – ಕೊಡಬೇಕೆಂದು, ಐತಹ – ಬರುತ್ತಲಿರತಕ್ಕ, ವನಾಧಿಪರನು – ತೋಟದ ಕಾವಲ್ಗಾರರನ್ನೂ, ಚಂದ್ರಹಾಸಂ – ಇಂದುಹಾಸನು, ಕಂಡನು–ಈಕ್ಷಿಸಿದವನಾದನು || ೪೨ ||

ಟೀ|| ಪರಿಪರಿಯಿಂದ-ನಾನಾಪ್ರಕಾರವಾಗಿ, ಎಸೆವ – ಹೊಳೆಯುತ್ತಲಿರತಕ್ಕ, ಕುಸುಮಂಗಳಿಂ – ಪುಷ್ಪಗಳಿಂದ, ಮಾಡಿದ–ಮಾಡಿದಂಥ, ಸುಮಾಲೆಯಂ–ಹೂವಿನ ಹಾರವನ್ನು, ತಲೆಗೆ–ಚಂದ್ರಹಾಸನ ಮುಡಿಗಂಟಿಗೆ, ಓರ್ವನು–ಒಬ್ಬಾನೊಬ್ಬ ಮನುಷ್ಯನು, ಸೂಡಿದಂ–ಸುತ್ತಿದವನಾದನು. ಎಡೆಗೂಡಿಸಿ–ಒಟ್ಟುಮಾಡಿ, ಕಟ್ಟಿದ–ಕಟ್ಟಿರತಕ್ಕ, ಅಚ್ಚ–ಸ್ವಚ್ಛವಾದ, ಸಂಪಿಗೆಯ ಮಾಲೆಯನು–ಸಂಪಿಗೆ ಹೂವಿನಿಂದ ಮಾಡಿರತಕ್ಕ ದಂಡೆಯನ್ನು, ಓರ್ವನು–ಮತ್ತೊಬ್ಬನು, ಕೊರಳೊಳ್–ಚಂದ್ರಹಾಸನ ಕಂಠಕ್ಕೆ, ಇಕ್ಕಿದಂ–ಹಾಕಿದನು, ಮತ್ತೋರ್ವನು – ಬೇರೊಬ್ಬನಾದರೊ, ದಾಡಿಮುದಫಲವನು–ದಾಳಿಂಬದ ಹಣ್ಣನ್ನು, ಒಪ್ಪುವ–ರಾಜಚಿಹ್ನೆಗಳಿಂದ ಕೂಡಿರತಕ್ಕ, ಕರಾಂಬುಜಕೆ–ತಾವರೆಯಂತಿರುವ ಕೈಗಳಿಗೆ, ನೀಡಿದಂ–ಕೊಟ್ಟವನಾದನು, ಅಂದು–ಆ ಕಾಲದಲ್ಲಿ, ಇವನು–ಈ ಇಂದುಹಾಸನು, ಎಲ್ಲಮಂ–ಸಮಸ್ತವನ್ನೂ, ಕೈಕೊಂಡು–ಸ್ವೀಕರಿಸಿ, ಗಾಡಿ–ಅಲಂಕಾರವು, ಮಿಗೆ–ಹೆಚ್ಚಲು, ಮೆರೆವ – ಪ್ರಕಾಶಿಸತಕ್ಕ, ನವವರನಂತೆ – ನೂತನವಾಗಿ ಮದಿವೆಯಾಗತಕ್ಕ ಗಂಡಿನಂತೆ, ಪೊರಮಟ್ಟನು – ಹೊರಟವನಾದನು || ೪೩ ||

---

ಯಣನೇ ನಿನಗೆ ಉನ್ನತೋನ್ನತವಾದ ರಾಜ್ಯ ಸಂಪತ್ತನ್ನು ದಯೆಮಾಡಲೆಂದು ಆಶೀರ್ವದಿಸಿ ಸಂತೋಷದಿಂದ ಕಳುಹಿಸಿಕೊಟ್ಟಳು ||೪೧|| ಈರೀತಿಯಲ್ಲಿ ತಾಯಿಯಿಂದನುಜ್ಞೆಯಂ ಪಡೆದು ಬರುತ್ತಲಿರುವಾಗ, ನೂತನವಾಗಿ ಮದುವೆಯಾದ ಗಂಡುಹೆಣ್ಣಿನ ಮೆರವಣಿಗೆಯನ್ನು ಕಂಡನು. ಸ್ನಾನ ಸಂಧ್ಯಾವಂದನಾದಿ ನಿತ್ಯ ಕರ್ಮಗಳನ್ನು ತೀರಿಸಿಕೊಂಡು ಶುಚಿರ್ಭೂತರಾಗಿರುವ ಭೂಸುರೋತ್ತಮರೀರ್ವರು ಎದುರಾದರು. ಕರುವಿನಿಂದ ಕೂಡಿದ ಹಸುವೊಂದು ದಾರಿಯಲ್ಲಿ ಬರುತ್ತಲಿತ್ತು. ವನಪಾಲಕರು ಕೈಯಲ್ಲಿ ಪುಷ್ಪಹಾರಮಂಪಿಡಿದು ತನ್ನೆದುರಿಗೆ ಬರುತ್ತಿದ್ದರು||೪೨||ಆಗ ಒಬ್ಬನು ವಿಧವಿಧವಾದ ಹೂಗಳನ್ನೂಸೇರಿಸಿ ಕಟ್ಟಿರತಕ್ಕ ದಂಡೆಯೊಂದನ್ನು ಚಂದ್ರಹಾಸನ ಜುಟ್ಟಿಗೆ ಸುತ್ತಿದನು. ಮತ್ತೊಬ್ಬನು ಸುವಾಸನೆಯಂ ಬೀರುತ್ತಲಿರುವ ಹೂವಿನ ಮಾಲಿಕೆಯನ್ನು ಕತ್ತಿಗೆ ಹಾಕಿದನು. ಒಬ್ಬನು ಪಕ್ವವಾದ ದಾಳಿಂಬದ ಹಣ್ಣನ್ನು ಚಂದ್ರಹಾಸನ ಕೈಗೆ ಕೊಟ್ಟನು. ಇವೆಲ್ಲವನ್ನೂ ಕೈಕೊಂಡು ಹೊರಟು ಬರುತ್ತಲಿರುವ ಈ ಇಂದುಹಾಸನು ಮದುವೆಯ ಗಂಡಿನಂತೆ ಮೆರೆಯುತ್ತಲಿದ್ದನು || ೪೩ ||

ಪೊರಮಟ್ಟನಾಚಂದ್ರಹಾಸನಂದು ‖ ೪೩ ‖ ಹಯವರಸಮಾರೂಢನಾಗಿ ಸೇವಕಚತು | ಷ್ಟಯದೊಡನೆಸೂಚಿತಶುಭೋದಯ ದಶಕುನಾವ | ಳಿಯನಾಲಿಸುತಬಟ್ಟೆ ವಿಡಿದುಕುಂತಳಪುರದಬಾಹ್ಯೋಪವನಕೆಬರಲು | ನಯಸರದಕೋಗಿಲೆಯಸಾದರದನುಡಿ ಯೊಳತಿ | ಶಯಫಲೋತ್ಕರದ ತರುಶಾಖೆಗಳಕೈಕಾಣಿ | ಕೆಯೊಳಿದಿರ್ಗೊಂಡುಪಚರಿಸುವಂತೆ ಚಂದ್ರಹಾಸನಮುಂದೆ ಕಣ್ಗೆಸೆದುದು ‖೪೪‖ ತಳಿರ್ದುರುಗಿದೆಳೆಮಾವುಗಳನೆಳಲ್ಗವಿದನಿ | ರ್ಮಲಪುಳಿನತಳದಿಂತೊಡರ್ದಡರ್ದಿರುವಲರ್ವಳಿ | ಗೆಳಮಂಟಪಂಗಳಿಂದವಿವಿಧಮಣಿಮಯಕೃತಕಗಿರಿಕಂದರಂಗಳಿಂದ ‖ ತೊಳಪರನ್ನದಪಾಸಟಿಗೆಳಿಂದರಂಜಿಸುವ | ನಳಿನೋತ್ಪಲಪ್ರಕರಶೋಭಿತ ಸರೋವರಂ | ಗಳರಮ್ಯ ಸೋಪಾನದಿಂದ ತದ್ರಾಜಕೇಳೀವನಂ ಕಣ್ಗೆಸೆದುದು ‖೪೫‖ ಸರಸಮಿಗೆನಲಿದಾಡುವಂಚೆಗಳಕೊಂಚೆ

---

ಟೀ‖ ಹಯವರ_ಉತ್ತಮಾಶ್ವವನ್ನು, ಸಮಾರೂಢನಾಗಿ_ಏರಿದವನಾಗಿ, ಸೇವಕಚತುಷ್ಟಯದೊಡನೆ – ನಾಲ್ವರು ದೂತರೊಂದಿಗೆ, ಸೂಚಿತ_ತಲೆದೋರುವ, ಶುಭೋದಯದ_ಶುಭಕರವಾದ, ಶಕುನಾವಳಿಯನು_ಸೂಚನೆಗಳ ಸಮುದಾಯವನ್ನು, ಆಲಿಸುತ_ಶ್ರವಣಮಾಡುತ್ತ, ಬಟ್ಟೆಹಿಡಿದು_ದಾರಿಯನ್ನು ಹಿಡಿದುಕೊಂಡು, ಕುಂತಳಪುರದ_ಕುಂತಳನಗರದ, ಬಾಹ್ಯೋಪವನಕೆ-ಊರಮುಂದಿರುವ ಉದ್ಯಾನಕ್ಕೆ, ಬರಲು_ಐತರಲು, ನಯಸರದ-ಇನಿದಾದ ಧ್ವನಿಯಿಂದ ಕೂಡಿರತಕ್ಕ, ಕೋಗಿಲೆಯ_ಕೋಗಿಲೆ ಹಕ್ಕಿಯ, ಸಾದರದನುಡಿಯೊಳು_ಮಧುರವಾದ ಗಾನದಿಂದ, ಅತಿಶಯ-ಹೆಚ್ಚಾದ, ಫಲೋತ್ಕರದ_ಫಲಸಮುದಾಯವುಳ್ಳ, ತರು-ವೃಕ್ಷಗಳ, ಶಾಖೆಗಳ_ಕೊಂಬೆಗಳ, ಕೈಗಾಣಿಕೆಯೊಳು_ಕೈಯ್ಯಲ್ಲಿರುವ ಕಾಣಿಕೆಯ ಹಣವೊ ಎಂಬಂತೆ, ಇದಿರ್ಗೊಂಡು_ಎದುರಾಗಿ ಬಂದು, ಉಪಚರಿಸುವಂತೆ_ಸತ್ಕರಿಸತಕ್ಕ ರೀತಿಯಾಗಿ, (ಆ ಉದ್ಯಾನವು) ಚಂದ್ರಹಾಸನಮುಂದೆ-ಚಂದ್ರಹಾಸನ ದಾರಿಯೊಳಗೆ, ಕಣ್ಗೆ-ನಯನಂಗಳಿಗೆ, ಎಸೆದುದು_ಕಾಂತಿಯುಕ್ತವಾಗಿ ತೋರಿತು ‖೪೪‖

ಟೀ‖ ತದ್ರಾಜಕೇಳೀವನಂ_ತದ್ರಾಜ-ಆ ಕುಂತಳೇಂದ್ರನ, ಕೇಳೀವನಂ_ಉದ್ಯಾನವನವಾದರೊ, ತಳಿರು_ಪಲ್ಲವಂಗಳಿಂದ, ತುರುಗಿದ_ತುಂಬಿಕೊಂಡಿರತಕ್ಕ, ಎಳೆಮಾವುಗಳ-ಎಳೆ ಮಾವಿನ ಮರಗಳ, ನೆಳಲ್-ನೆರಳ್ಗಳಿಂದ, ಕವಿದ_ಮುಚ್ಚಲ್ಪಟ್ಟಿರುವ, ನಿರ್ಮಲ-ಪರಿಶುದ್ಧವಾದ, ಪುಳಿನತಳದಿಂ_ಮರಳಿನ ಪ್ರದೇಶದಿಂದ, ತೊಡರ್ದು_ಬಂದಕ್ಕೊಂದುತಾಗಿ, ಅಡರ್ದಿರುವ_ಆಕ್ರಮಿಸಿರತಕ್ಕ, ಅಲರ್ವಳ್ಳಿಗಳ-ಹೂವಿನಿಂದ ಕೂಡಿದ ಬಳ್ಳಿಗಳ,ಮಂಟಪಂಗಳಿಂ-ವಿಹಾರಸ್ಥಾನಗಳಿಂದ, ವಿವಿಧ-ನಾನಾಪ್ರಕಾರವಾದ, ಮಣಿಮಯ_ರತ್ನ ಖಚಿತವಾದ, ಕೃತಕಗಿರಿ_ಮಾಡುವೆಟ್ಟುಗಳ, ಕಂದರಂಗಳಿಂ_ಗವಿಗಳಿಂದ, ತೊಳಪ-ಹೊಳೆಯತಕ್ಕ, ರನ್ನದ-ರತ್ನದ, ಪಾಸಟಿಗೆಳಿಂದ_ಸ್ಥಾನಗಳಿಂದ, ರಂಜಿಸುವ-ಪ್ರಕಾಶಿಸತಕ್ಕ, ನಳಿನ-ತಾವರೆಗಳ, ಉತ್ಪಲ_ಕರೀಕಮಲಗಳ, ಪ್ರಕರ_ಸಮುದಾಯದಿಂದ, ಶೋಭಿತ_ಕಾಂತಿಯುಕ್ತವಾದ. ಸರೋವರಂಗಳ_ಕಾಸಾರಂಗಳ, ರಮ್ಯ-ಅಂದವಾದ, ಸೋಪಾನದಿಂ-ಮೆಟ್ಟಲುಗಳಿಂದ, ಕಣ್ಗೆ-ನಯನಂಗಳಿಗೆ, ಎಸೆದುದು-ಅಂದವಾಗಿ ಕಾಣಿಸಿತು. ‖೪೫‖

ಟೀ‖ ಅಲಂಕಾರವು, ಮಿಗೆ_ಹೆಚ್ಚಾಗುವಂತೆ, ನಲಿದು_ಆನಂದದಿಂದ, ಆಡುವ_ತಿರುಗುವ, ಅಂಚೆಗಳ_ಹಂಸಗಳ, ಕೊಂಚೆಗಳ_ಬಕಗಳ, ಬೆರಸಿ-ಹೆಣ್ಣುಗಂಡುಗಳೆರಡೂ ಒಂದಾಗಿ, ರಮಿಸುವ-ಆನಂದವನ್ನೈದುವ, ಕುಣಿವ-ನಾಟ್ಯಗೈಯ್ಯುವ, ಕೋಕಿಗಳ_ಜಕ್ಕವಕ್ಕಿಗಳ, ಕೇಕಿಗಳ-ಶಿಖಿಗಳ, ನೆರೆನೆರೆದು-ಒಂದೊಂದಾಗಿ ಬೆರತು, ಮೊರೆವ-ಶಬ್ದವಂಗೈವ, ಮರಿದುಂಬಿಗಳ-ಭೃಂಗದ ಮರಿಗಳ, ಡೊಂಬಿಗಳ-ಗುಂಪಿನ, ಚೀರ್ವ_ಕಿರುಚುತ್ತಿರತಕ್ಕ, ಗಿಳಿಗಳ-ಶುಕಗಳ, ಕೋಗಿಲೆಗಳ_ಪಿಕಂಗಳ, ತರುಲತೆಯ_ವೃಕ್ಷ ಲತೆಗಳ, ತುರುಗಲ-ಅತಿಶಯವಾದ, ರಸಾಲ_ಮಾವಿನ ಮರಗಳ, ಪ್ರವಾಳ_ಪಲ್ಲವಂಗಳ, ಪ್ರಕರದ_ಗುಂಪಿನ,

---

ಎಲೈ ಅರ್ಜುನನೇ ! ಕೇಳು, ಇಂತಹ ಶುಭಶಕುನಗಳಿಂದ ಕೂಡಿದ ಚಂದ್ರಹಾಸನು ಕುದುರೆಯನ್ನೇರಿ, ನಾಲ್ವರು ಸೇವಕರನ್ನು ಜತೆಯಲ್ಲಿ ಕರೆದುಕೊಂಡು, ಕುಂತಳ ನಗರಕ್ಕೆ ಪ್ರಯಾಣ ಮಾಡಿದನು. ಹೀಗೆಯೇ ಬಹಳದೂರ ಪ್ರಯಾಣವಂ ಬೆಳಸಿದ ಬಳಿಕ ಕುಂತಳ ನಗರದ ಉದ್ಯಾನವನವು ಕಾಣಬಂದಿತು. ಚಂದ್ರಹಾಸನು ಬಂದಿರುವನೆಂಬುತ್ಸವದಿಂದ ವನದೇವಿಯು ಶುಭವಾದ ನಾದದಿಂದಲೂ, ಕೈಗಾಣಿಕೆಯ ದ್ರವ್ಯಗಳಿಂದಲೂ ಕೂಡಿ ಆ ರಾಯನನ್ನು ಎದುರ್ಗೊಳ್ಳಲು ಬರುತ್ತಲಿರುವಳೋ ಎಂಬಂತೆ ಆ ಉದ್ಯಾನದಲ್ಲಿರುವ ಕೋಗಿಲೆಗಳು ಧ್ವನಿಮಾಡಿದವು. ಮರಗಳ ರೆಂಬೆಗಳಲ್ಲೆಲ್ಲಾ ಹಣ್ಣುಗಳು ಕಂಗೊಳಿಸುತ್ತಲಿದ್ದವು. ‖೪೪‖ ಅಲ್ಲಿರುವ ಮಾವಿನ ಮರಗಳೆಲ್ಲವೂ ಚಿಗುರಿ ಹೂ ಕಾಯಿ ಹಣ್ಣುಗಳಿಂದ ತುಂಬಿಕೊಂಡು ನೋಡುವುದಕ್ಕೆ ಅಂದವಾಗಿ ಕಾಣುತ್ತಾ ತಮ್ಮ ನೆರಳನ್ನು ಮರಳ ಬೆಟ್ಟಗಳ ಮೇಲೆ ಹರಡಿ ಅಲ್ಲಿ ವಿಹರಿಸುತ್ತಿರುವ ಕಾಮುಕ ಜನರ ಆಯಾಸವಂ ಸೂರೆಗೊಳಿಸುತ್ತಲಿತ್ತು. ಎಲ್ಲೆಲ್ಲಿಯೂ ಲತಾ ಮಂಟಪಂಗಳೂ, ಮಾಡುವೆಟ್ಟಂಗಳೂ ನೋಡುವುದಕ್ಕೆ ರಮ್ಯವಾಗಿರುತ್ತಲಿದ್ದವು. ಸರೋವರಗಳಲ್ಲೆಲ್ಲಾ ಕಪ್ಪು ಕಮಲಗಳೂ, ತಾವರೇ ಹೂಗಳೂ ತುಂಬಿದ್ದವು. ‖೪೫‖ ಹಂಸಪಕ್ಷಿಗಳು ತಮ್ಮ ನಡಿಗೆಯಿಂದ ನೋಟಕರ ಮನಸ್ಸನ್ನು ಭ್ರಾಂತಿಗೊಳಿಸುತ್ತಲಿದ್ದುವು. ಕ್ರೌಂಚಪಕ್ಷಿಗಳು ಯಥೇಚ್ಛವಾಗಿ ವಿಹರಿಸುತ್ತಲಿದ್ದವು.

ಗಳ | ಬೆರಸಿರಮಿಸುವಕುಣಿವಕೋಕಿಗಳಕೇಗಿಗಳ | ನೆರೆನೆರೆದುವೊರೆವಮರಿದುಂಬಿಗಳಡೊಂಬಿಗಳಚೀರ್ವಗಿಳಿಕೋಗಿಲೆಗಳ || ತರುಲತೆಯತುರಗಲರಸಾಲಪ್ರವಾಳಪ್ರ | ಕರದಶೋಭೆಗಳಕುಸುಮಾಳಿಗಳಗಾಳಿಗಳ | ಪರಿಮಳದಿಂದಸೊಗಯಿಸುವಬಗೆಯಿಸುವರಾಜೋಪವನವೆಸೆದುದು || ೪೬ || ಹೃದ್ಯಮಾಗಿಹಶೈತ್ಯಸೌರಭ್ಯಮಾಂದ್ಯದಿಂ | ದುದ್ಯಾನಮಾರುತಂಬೀಸಿಮಾರ್ಗಶ್ರಮಂ | ಸದ್ಯಃಪ್ರಶಮನಮಾಗಲ್ಕೆಹರುಷದೊಳಲ್ಲಿಕೃಷ್ಣನಂಪೂಜೆಗೈವ || ಉದ್ಯೋಗದಿಂದಿಳಿದುತನ್ನೆಳಲತುರಮೂಲ | ಕುದ್ಯತ್ತುರಂಗಮಂನೀರ್ಗುಡಿಸಿಕಟ್ಟನಿ | ರವದ್ಯಗುಣನಿಧಿಚಂದ್ರಹಾಸನೆಳೆವುಲ್ಗಳಂತಿರಿತರಿಸಿಮುಂದಿಟ್ಟನು ||೪೭|| ವಾಜಿಯಂಕಟ್ಟದೆಡೆಯೋಳ್ಸೇವಕರನಿರಿಸಿ | ರಾಜವನದೊಳ್ಪೊಕ್ಕುಶಶಿಹಾಸನಲ್ಲಿವಿ | ಭ್ರಾಜಿಸುವನಿರ್ಮಲಸರಸ್ತೀರದೊಳ್ಮಿಂದು

---

ಶೋಭೆಗಳ_ಹೊಳವುಗಳ, ಕುಸುಮಾವಳಿಗಳ_ಪುಷ್ಪಸಮುದಾಯದ, ಗಾಳಿಗಳ, ಪರಿಮಳದ-ಸುರಭಿಯಿಂದ, ಸೊಗಯಿಸುವ_ಚನ್ನಾಗಿ ಕಾಣಿಸತಕ್ಕ, ಬಗೆಯಿಸುವ_ಯುಕ್ತವಾಗಿರುವ, ರಾಜೋಪವನಂ - ಕುಂತಳಾಧೀಶನ ಉದ್ಯಾನವನವು, ಮನದಿಂದ_ಸ್ವೇಚ್ಛೆಯಾಗಿ, ಎಸೆದುದು_ಹೊಳೆಯಲಾರಂಭಿಸಿತು.

ಅ|| ವಿ|| ಅಂಚೆ (ತ್ಭ) ಹಂಸ (ತ್ಸ) ಕೊಂಬೆ (ತ್ಭ) ಕ್ರೌಂಚ (ತ್ಸ) ||೪೬||

ಟೀ|| ನಿರವದ್ಯಗುಣನಿಧಿ - ನಿರ್ದುಷ್ಟವಾದ ಸದ್ಗುಣ ಸಮುದಾಯದಿಂದ ಕೂಡಿರತಕ್ಕ, ಚಂದ್ರಹಾಸನು - ಇಂಹುಹಾಸನೆಂಬಾತನು, ಹೃದ್ಯಂ-ಮನಸ್ಸಿಗೆ ಇಂಪಾದದ್ದು, ಆಗಿಹ_ಆಗಿರತಕ್ಕ, ಶೈತ್ಯಸೌರಭ್ಯಮಾಂದ್ಯದಿಂದ_ತಂಪು, ಸುವಾಸನೆ, ನಿಧಾನವಾಗಿ ಚಲಿಸುವುದು ಈ ಗುಣಗಳಿಂದ ಕೂಡಿದ, ಉದ್ಯಾನಮಾರುತಂ - ತೆವೀಟದ ಮೇಲೆ ಬೀಸಿಕೊಂಡು ಬರತಕ್ಕ ವಾಯುವು, ಬೀಸಿ-ಚಲಿಸಿ, ಸದ್ಯಃ_ತಕ್ಷಣವೇ, ಮಾರ್ಗಶ್ರಮಂ-ದಾರಿಯಲ್ಲಿ ಉಂಟಾದ ಬಳಲಿಕೆಯು, ಪ್ರಶಮನಂ-ನಿವಾರಣೆಯನ್ನೈದಿದ್ದು, ಆಗಲ್ಕೆ-ಆಗಲಾಗಿ, ಅಲ್ಲಿ-ಆ ಸ್ಥಳದಲ್ಲಿಯೇ, ಕೃಷ್ಣನಂ_ಕೃಷ್ಣಪರಮಾತ್ಮನನ್ನು, ಹರುಷದಿಂ-ಸಂತಸದಿಂ, ಪೂಜೆಗೈವ_ಅರ್ಚಿಸುವ, ಉದ್ಯೋಗದಿಂದ - ಕಾರ್ಯದಿಂದ, ಇಳಿದು - ಕೆಳಕ್ಕಿಳಿದವನಾಗಿ, ಉದ್ಯತ್ - ಹೊಳೆಯುತ್ತಲಿರುವ. ತುರಂಗಮಂ_ಅಶ್ವಕ್ಕೆ, ನೀರ್ಗುಡಿಸಿ - ನೀರನ್ನು ಕುಡಿಸಿದವನಾಗಿ, ತತ್-ಆ ಮರಗಳ, ನೆಳಲ-ನೆರಳುಳ್ಳ, ತರುಮೂಲಕೆ - ವೃಕ್ಷದ ಬುಡಕ್ಕೆ, ಕಟ್ಟಿ-ಕಟ್ಟಿದವನಾಗಿ, ಎಳೆವುಲ್ಗಳಂ_ಚಿಗುರು ಹುಲ್ಲನ್ನು, ತಿರಿತರಿಸಿ_ತರಿಸಿದವನಾಗಿ, ಮುಂದಿಟ್ಟನು-ಅದರ ಮುಂದೆ ಇರಿಸಿದನು. ||೪೭||

ಟೀ|| ಶಶಿಹಾಸನು - ಚಂದ್ರಹಾಸನಾದರೊ, ಸೇವಕರನು - ತಾನು ಕರೆದುಕೊಂಡು ಹೋಗಿದ್ದ ಆಳುಗಳನ್ನು, ವಾಜಿಯಂ-ಹಯವನ್ನು, ಕಟ್ಟಿದ_ಬಂಧಿಸಿದ್ದ, ಎಡೆಯೋಳ್_ಸ್ಥಾನದಲ್ಲಿ, ಇರಿಸಿ_ಇಟ್ಟವನಾಗಿ, ರಾಜವನದೊಳ್-ಕುಂತಳೇಂದ್ರನ ಉದ್ಯಾನವನಕ್ಕೆ, ಪೊಕ್ಕು-ಪ್ರವೇಶಮಾಡಿ, ವಿಭ್ರಾಜಿಸುವ_ರಮ್ಯವಾಗಿರುವ, ಸರಸ್ತೀರದೊಳ್-ಸರೋವರದ ತಡಿಯಲ್ಲಿ, ಮಿಂದು - ಮಜ್ಜನಂಗೈದು, ಶುಚಿಯಾಗಿ - ಪವಿತ್ರನಾಗಿ, ಸುಸ್ಥಳದೊಳು - ಶುಚಿಯಾಗಿರುವ ಪ್ರದೇಶದಲ್ಲಿ, ರಾಜೀವ_ತಾವರೆ ಹೂವೇ, ಮೊದಲಾದ-ಮೊದಲಾಗಿರತಕ್ಕ, ಅಲರ್ಗಳಂ-ಪುಷ್ಪಗಳನ್ನು ತಂದು, ಕೊಯ್ದು-ವನಪಾಲಕರನ್ನು ಕೇಳಿ ಕೊಯ್ದುಕೊಂಡು, ಹರಿಪೂಜೆಯುಂಮಾಡಿ-ಶ್ರೀ ಕೃಷ್ಣಸ್ವಾಮಿಯನ್ನಾರಾಧಿಸಿ, ತಾ-ತಾನು, ತಂದ_ತೆಗೆದುಕೊಂಡು ಬಂದಿದ್ದ, ಪಾಥೇಯಮಂ-ಆಹಾರ ದ್ರವ್ಯವನ್ನು, ಭೋಜನಂಗೈದು - ತಿಂದವನಾಗಿ, ತಳಿತ - ಚಿಗುರಿನಿಂದ ಕೂಡಿರತಕ್ಕ, ಮಾಮರನನೆಳಲಂ-ಚೂತವೃಕ್ಷದ ನೆರಳನ್ನು, ವಿಶ್ರಮಕಾಗಿ-ಆಯಾಸಪರಿಹಾರಕ್ಕಾಗಿ, ಸೇರ್ದನು-ಹೋಗಿ ಸೇರಿದವನಾದನು. ||೪೮||

ಟೀ|| ಮಿರುಗುವ_ಮಿಣುಗುಟ್ಟುತ್ತಲಿರತಕ್ಕ, ಅಹಿತಲ್ಪದೊಳ್ - ಸರ್ಪರಾಜನೆಂಬ ಶಯ್ಯೆಯಲ್ಲಿ, ದೇವಪುರ - ದೇವಪುರವೆಂಬ ಊರೇ, ನಿಲಯ_ವಾಸಮಾಡತಕ್ಕೆಡೆಯಾಗಿರತಕ್ಕ, ಲಕ್ಷ್ಮೀವರಂ_ಇಂದಿರಾವಲ್ಲಭನಾದ ನಾರಾಯಣನು, ಪವಡಿಸು

---

ನವಿಲುಗಳು ಕುಣಿಯುತ್ತಲಿದ್ದವು. ಶುಕಪಿಕಂಗಳ ಧ್ವನಿಯು ಇಂಪಾಗಿದ್ದಿತು. ಬಗೆಬಗೆಯಾದ ಹೂಗಳ ಮೇಲೆ ಬೀಸಿಕೊಂಡು ಬರುತ್ತಲಿರುವ ಮಂದಮಾರುತವು ಜನಗಳ ಆಯಾಸವಂ ಸೂರೆಗೊಂಡು ಆನಂದವನ್ನುಂಟುಮಾಡುತ್ತಲಿತ್ತು ||೪೬|| ಇಂತಹ ಮನೋಹರವಾದ ಗಾಳಿಯು ಬೀಸುವೆಡೆಯಲ್ಲಿ ತನ್ನ ಮಾರ್ಗಶ್ರಮವನ್ನು ಪರಿಹರಿಸಿಕೊಂಡು ಶ್ರೀ ಕೃಷ್ಣಪರಮಾತ್ಮನನ್ನು ಆರಾಧಿಸಿ, ಅನಂತರ ಪಟ್ಟಣ ಪ್ರವೇಶವಂ ಮಾಡಬೇಕೆಂದು ನಿಶ್ಚಯಿಸಿದ ಚಂದ್ರಹಾಸನು ಕುದುರೆಯಿಂದ ಕೆಳಗಿಳಿದು, ಹತ್ತಿರದಲ್ಲಿರುವ ಸರೋವರದಲ್ಲಿ ಅದಕ್ಕೆ ನೀರನ್ನು ಕುಡಿಸಿ, ಪಕ್ಕದಲ್ಲಿದ್ದ ಬಂದಾನೊಂದು ಮರಕ್ಕೆ ಅದನ್ನು ಬಿಗಿದು, ಸೇವಕಜನರಿಂದ ಚಿಗುರುಹುಲ್ಲನ್ನು ತರಿಸಿ ಹಾಕಿಸಿದನು. ||೪೭|| ಆ ಬಳಿಕ ಚಂದ್ರಹಾಸನು ಕುದುರೆಯ ಕಾವಲಿಗೆ ತನ್ನ ಸೇವಕರನ್ನು ಇಟ್ಟು ಉದ್ಯಾನವನವನ್ನು ಪ್ರವೇಶಿಸಿದನು. ಅಲ್ಲಿ ದಿವ್ಯವಾದ ಸರೋವರವೊಂದು ಕಂಗೊಳಿಸುತ್ತಲಿರುವುದನ್ನು ನೋಡಿ, ಅಲ್ಲಿಗೆ ಹೋಗಿ; ಸ್ನಾನವಂ ತೀರಿಸಿಕೊಂಡು, ನಿತ್ಯಕರ್ಮಾನುಷ್ಠಾನುಗಳನ್ನೆಲ್ಲಾ ಸಾಂಗವಾಗಿ ನೆರವೇರಿಸಿದ ಬಳಿಕ ದಿವ್ಯ

ಶುಚಿಯಾಗಿಸುಸ್ಥಲದೊಳು ‖ ರಾಜೀವಮೊದಲಾದಲರ್ಗಳಂತಂದುಹರಿ | ಪೂಜೆಯಂಮಾಡಿತಾತಂದಪಾಥೇಯಮಂ|ಭೋಜನಂಗೈದುವಿಶ್ರಮಕಾಗಿತಳಿತಮಾಮರನನೆಳಲಂಸಾರ್ದನು ‖ ೪೮ ‖ ತರಿದೆಳೆದಳಿರ್ಗಳಂಪಾಸಿಕುಳ್ಳಿರ್ದೊಯ್ಯ | ನೊರಗಲ್ಕೆನಡುವಗಲಬಿಸಿಲಿಂದಮಾರ್ಗದೋಳ್ನೆರೆಬಳಲ್ದಿಹಚಂದ್ರಹಾಸಂಗೆ | ತಣ್ಣೆಲರಸೊಗಸಿಂದಕಣ್ಣೆವೆಗಳು ‖ ಸೆರೆಗೊಂಡವಾಲಿಗಳನಾತ್ಮೀಯಕೃತ್ಯಮಂ | ಮರೆದುನಿದ್ರಾಲೋಲನಾಗಿಮಲಗಿದನವಂ | ಮಿರುಗುವಹಿತಲ್ಪದೋಳ್ದೇವಪುರನಿಲಯಲಕ್ಷ್ಮೀವರಂಪವಡಿಸುವೊಲು ‖ ೪೯ ‖

ಸಂಧಿ ೨೯ ಕ್ಕೆ ಪದ್ಯ ೧೬೧೭ ಕ್ಕಂ ಮಂಗಳಮಸ್ತು.

---

ಮಲಗಿಕೊಳ್ಳತಕ್ಕ ರೀತಿಯಾಗಿ, ಅವಂ - ಆ ಇಂದುಹಾಸನೂ ಕೂಡ, ಎಳೆದಳಿರ್ಗಳಂ - ಚಿಗುರುಗಳನ್ನೆಲ್ಲಾ, ತರಿದು-ಕಿತ್ತು, ಪಾಸಿ - ಹರಡಿದವನಾಗಿ, ಕುಳ್ಳಿರ್ದು - ಕೂತುಕೊಂಡು, ಒಯ್ಯನೆ - ನಿಧಾನವಾಗಿ, ಒರಗಲ್ಕೆ - ಮಲಗಿಕೊಳ್ಳಲು, ಮಾರ್ಗದೊಳ್-ಬಟ್ಟೆಯಲ್ಲಿ, ನಡುವಗಲ-ಮಧ್ಯಾಹ್ನಕಾಲದ, ಬಿಸಿಲಿಂದ-ಸೂರ್ಯನ ಕಿರಣದಿಂದ, ನೆರೆ-ಹೆಚ್ಚಾಗಿ, ಬಳಲ್ದು-ಶ್ರಮೆಯನ್ನೈದಿ, ಇಹ - ಇರತಕ್ಕ, ಚಂದ್ರಹಾಸಂಗೆ - ಇಂದುಹಾಸನಿಗೆ, ಕಣ್ಣೆವೆಗಳು - ಕಣ್ಣಿನ ರೆಪ್ಪೆಗಳು, ತಣ್ಣೆಲರಸೊಗಸಿನಿಂದ-ತಂಗಾಳಿಯ ಚೆಂದದಿಂದ, ಆಲಿಗಳನು - ನಯನಂಗಳನ್ನು, ಸೆರೆಗೊಂಡವು - ಮರೆಮಾಡಿದವು, ಆತ್ಮೀಯಕೃತ್ಯಮಂ-ತಾನು ಮಾಡಬೇಕಾದ ಕಾರ್ಯವನ್ನು, ಮರೆದು - ಮರತವನಾಗಿ, ನಿದ್ರಾಲೋಲನಾಗಿ - ನಿದ್ರೆಯಲ್ಲಿ ನಿರತನಾಗಿ, ಮಲಗಿದಂ-ಮಲಗಿಕೊಂಡನು ‖

ಟೀಕಾತಾತ್ಪರ್ಯ ಸಹಿತವಾದ ಜೈಮಿನಿ ಭಾರತದೊಳು ಇಪ್ಪತ್ತೊಂಭತ್ತನೆಯ ಸಂಧಿಯು
ಸಮಾಪ್ತವಾದುದು.

---

ವಾದ ತಾವರೆ ಹೂಗಳೇ ಮೊದಲಾದವನ್ನೆಲ್ಲಾ ತಂದು, ಶ್ರೀ ಕೃಷ್ಣಭಗವಂತನನ್ನು ಭಕ್ತಿಯಿಂದಾರಾಧಿಸಿ, ತಾನು ತಂದಿದ್ದ ಬುತ್ತಿಯನ್ನು ತಿಂದು, ಚಿಗುರಿರುವ ಮಾವಿನ ಮರದ ಬುಡಕ್ಕೆ ವಿಶ್ರಮಿಸಿಕೊಳ್ಳಬೇಕೆಂದು ಹೋಗಿ ‖೪೮‖ ಅಲ್ಲಿ ಚಿಗುರೆಲೆಗಳಿಂದ ಹಾಸಿಗೆಯನ್ನು ಮಾಡಿಕೊಂಡು ಮಲಗಿಕೊಂಡ ಕೂಡಲೆ ಹಗಲೆಲ್ಲಾ ಮಾರ್ಗಶ್ರಮದಿಂದ ಬಳಲಿದ್ದ ಸುಕುಮಾರನಾದ ಇಂದುಹಾಸನು ಶೇಷತಲ್ಪದೊಳು ಮಲಗಿಕೊಂಡಿರುವ ಲಕ್ಷ್ಮೀಕಾಂತನಾದ ನಾರಾಯಣನಂತೆ ಸುಖವಾಗಿ ನಿದ್ರೆಗೈಯುತ್ತಲಿದ್ದನು. ‖ ೪೯ ‖

ಟೀಕಾತಾತ್ಪರ್ಯ ಸಹಿತವಾದ ಜೈಮಿನಿಭಾರತದೊಳು ಇಪ್ಪತ್ತೊಂಭತ್ತನೆಯ ಸಂಧಿಯ
ಕಥಾಸಾರವು ಸಮಾಪ್ತವಾದುದು.



## ಮೂವತ್ತನೆಯ ಸಂಧಿ.

ಸೂಚನೆ ‖ ನಿದ್ರೆಗೈವಿಂದುಹಾಸನಕಂಚುಕದಕೊನೆಯೊ | ಳಿದ್ದಪತ್ರವನೋದಿಕೊಂಡು ಚದುರಿಂದದಂ | ತಿದ್ದಿ ತನಗಾತನಂ ಕಾಂತನಹದಾಯಮುಂಮಾಡಿದಳ್ಮಂತ್ರಿತನುಜೆ ‖

ಕುಂತೀಕುಮಾರಕೇಳ್ ಚಂದ್ರಹಾಸಂ ಬನದೊ | ಳಿಂತುಸುಖ ನಿದ್ರೆಯಿಂ ದಿರುತಿರ್ಪಸಮಯದೋ | ಳ್ಕುಂತ ಳೇಂದ್ರಂಗೆ ಚಂಪಕಮಾಲಿನೀನಾಮ ದೋರ್ವಮಗಳುಂಟವಳ್ಗೆ ‖ ಸಂತತಂ ಮಂತ್ರಿಸುತೆ ವಿಷಯೆಸಖಿಯಾಗಿರ್ಪ | ಳಂತರಿಸದವ ರೀರ್ವರುಂ ಬಂದರಲ್ಲಿಗೆವ | ಸಂತಕಾಲಂ ಪ್ರಾಪ್ತಮಾಗಿರೆ ಜಲಕ್ರೀಡೆಗಾಳಿಯ ರಗಡಣದಿಂದ ‖ ೧ ‖ ಒಚ್ಚೇರೆಗಣ್ಣ ಕೋಮಲೆಯ ರೊಪ್ಪಿಡಿನಡುನಿ | ನಚ್ಚಿಗರ ಬಾಲಕಿಯ ರೋರಣದ ಪೊಳವಲ್ಲ | ನಿಚ್ಚಳದ ಕದಪಿನನಿತಂಬಿನಿಯ

---

ಮೂವತ್ತನೆಯ ಸಂಧಿ ಪ್ರಾರಂಭವು.

ಸೂ‖ ನಿದ್ರೆಗೈವ - ನಿದ್ರೆಹೊಗುತ್ತಿರತಕ್ಕ, ಇಂದುಹಾಸನ – ಚಂದ್ರಹಾಸನೆಂಬಾತನ, ಕಂಚುಕದಕೊನೆಯೋಳ್– ಅಂಗಿಯ ಜೇಬಿನ ಕೊನೆಯೊಳಗೆ, ಇದ್ದ-ಕಾಣಿಸುವಂಥ, ಪತ್ರವನು–ಕಾಗದವನ್ನು, ಮಂತ್ರಿತನುಜೆ-ದುಷ್ಟಬುದ್ಧಿಯ ಕುವರಿಯಾದ ವಿಷಯೆಯು, ಓದಿಕೊಂಡು–ಓದಿಕೊಂಡವಳಾಗಿ, ಅದಂ-ಆ ಕಾಗದವನ್ನು, ಚದುರಿಂದ - ಬುದ್ಧಿವಂತಿಕೆಯಿಂದ, ತಿದ್ದಿ-ತಿದ್ದಿದವಳಾಗಿ, ಆತನಂ–ಆ ಇಂದುಹಾಸನನ್ನು, ತನಿಗೆ–ತನಿಗಾಗಿಯೇ, ಕಾಂತನು-ಪತಿಯು, ಅಹ–ಆಗತಕ್ಕ, ದಾಯಮುಂ-ಯುಕ್ತಿಯನ್ನು, ಮಾಡಿದಳ್–ಎಸಗಿದಳು ‖

ಟೀ‖ ಕುಂತೀಕುಮಾರ–ಕುಂತೀದೇವಿಯ ಮಗನಾದ ಪಾರ್ಥನೆ, ಕೇಳು-ಆಲಿಸು, ಬನದೊಳ್–ಉದ್ಯಾನ ವನದಲ್ಲಿ, ಇಂತು-ಈ ಪ್ರಕಾರವಾಗಿ, ಚಂದ್ರಹಾಸನು-ಇಂದುಹಾಸನಾದರೊ, ಸುಖನಿದ್ರೆಯಿಂದ–ಸುಖಾಸ್ಪದವಾದ ವಿಶ್ರಾಂತಿಯಿಂದ, ಇರುತಿರ್ಪ-ಇರತಕ್ಕ, ಸಮಯದೊಳ್-ಕಾಲದಲ್ಲಿ, ಕುಂತಳೇಂದ್ರಂಗೆ–ಕುಂತಳವೆಂಬ ಜನಪದದರಾಯನಿಗೆ, ಚಂಪಕಮಾಲಿನೀನಾಮದ–ಚಂಪಕಮಾಲಿನೀ ಎಂಬ ಹೆಸರಿನ, ಓರ್ವ–ಒಬ್ಬಳಾದ, ಮಗಳು–ಕುವರಿಯು, ಉಂಟು–ಇದ್ದಾಳೆ, ಅವಳ್ಗೆ–ಆ ರಾಜಕುವರಿಗೆ, ಸಂತತಂ–ಅನವರತವೂ, ಮಂತ್ರಿಸುತೆ-ದುಷ್ಟಬುದ್ಧಿಯ ಕುವರಿಯಾದ ವಿಷಯೆಯೆಂಬ ಬಾಲೆಯು, ಸಖಿಯಾಗಿ-ಜೊತೆಗಾರಳಾಗಿ, ಇರ್ಪಳು–ಇರುತ್ತಾಳೆ, ವಸಂತಕಾಲಂ-ಮಧುಮಾಸವು,ಆಗಿರೆ-ಒದಗಿದ್ದಕಾರಣ, ಅವರೀರ್ವರುಂ–ಆ ಚಂಪಕಮಾಲಿನಿ ವಿಷೆಯೆ ಎಂಬುವರು, ಅಲ್ಲಿಗೆ–ಆ ಚಂದ್ರಹಾಸನು ಮಲಗಿದ್ದ ಉದ್ಯಾನ ವನಕ್ಕೆ, ಆಳಿಯರಗಡಣದಿಂದ-ಸಖಿಯರ ಸಮೇತವಾಗಿ, ಜಲಕ್ರೀಡೆಗೆ–ನೀರಾಟಕ್ಕಾಗಿ, ಅಂತರೀಸದೆ–ಬಿಡದೆ, ಬಂದರು-ಬಂದು ಸೇರಿದರು ‖ ೧ ‖

ಟೀ‖ ಒಚ್ಚೇರಗಂಣಕೋಮಲೆಯರು–ಒಂದು ಸೇರಿಸೆಯಷ್ಟು ಅಗಲದ ನಯನಂಗಳನ್ನುಳ್ಳ ಸುಂದರಾಂಗಿಯರು, ಒಪ್ಪಿಡಿ-ಒಂದು ಹಿಡಿಯಲ್ಲಿ ಹಿಡಿದುಕೊಳ್ಳುವಷ್ಟು ಚಿಕ್ಕದಾಗಿರುವ, ನಡುವಿನ–ಸೊಂಟವುಳ್ಳ, ಅಚ್ಚಿಗದ–ಆಶ್ಚರ್ಯವನ್ನುಂಟುಮಾಡತಕ್ಕ, ಬಾಲಕಿಯರು–ಯೌವನ ಸಮರ್ಥರಾಗಿರುವರು, ಓರಣದ-ಪಙ್ತಿಯಾಗಿರತಕ್ಕ, ಪೊಳೆವ-ಪ್ರಕಾಶಿಸತಕ್ಕ, ಪಲ್ಲ-ದಂತಗಳುಳ್ಳ, ನಿಚ್ಚಳದ–ಪರಿಶುದ್ಧವಾದ, ಕದಪಿನ–ಕಪೋಲಂಗಳುಳ್ಳ, ನಿತಂಬಿನಿಯರು–ನಾರಿಯರು, ಒಮ್ಮಾರು–ಒಂದುಬಾರಿನಷ್ಟು,ವೇಣಿಯ–ಜಡೆಯನ್ನುಂಟಾಗಿರತಕ್ಕ,ವಿಲಾಸಿನಿಯರು–ನಾರಿಯರು, ಒಚ್ಚತದ-ಅನುಗುಣವಾಗಿರತಕ್ಕ, ಚೆಲ್ವಿನ–ಅಂದವುಳ್ಳ, ಎಳೆವೆಣ್ಗಳೊಳ್-ಬಾಲೆಯರಲ್ಲಿ, ಕೈಕೊಳ್ಳದ–ಕೈಗೆ ಒಪ್ಪದಿರತಕ್ಕ, ಅಚ್ಚರಿಯ–ಆಶ್ಚರ್ಯವನ್ನುಂಟುಮಾಡುವ, ಕಡು–ಹೆಚ್ಚಾಗಿ, ಕಕ್ಕಸದ–ಗಟ್ಟಿಯಾಗಿರತಕ್ಕ, ಬಟ್ಟ-ವರ್ತುಳಾಕಾರವಾಗಿರತಕ್ಕ, ಬಲ್ಮೊಲೆಯ-ದಪ್ಪನಾದ ಕುಚಗಳುಳ್ಳ, ಪೊಚ್ಚ-ಹಳದಿ ಬಣ್ಣ

---

ಮೂವತ್ತನೆಯ ಸಂಧಿಯ ಕಥಾಸಾರವು.

ಆಬಳಿಕ ಜೈಮಿನಿ ಋಷಿಯು ಜನಮೇಜಯನಂ ಕುರಿತು, ಕೇಳೈ ಜನಮೇಜಯನೆ, ಕುಂತಳ ನಗರದ ಉದ್ಯಾನ ವನದಲ್ಲಿ ಚಿಗುರುಗಳನ್ನು ತಂದು ಹಾಸಿಗೆಯಂ ಮಾಡಿಕೊಂಡು ಮಾವಿನ ಮರದ ಬುಡದಲ್ಲಿ ಚಂದ್ರಹಾಸನು ಪವಡಿಸಿದ್ದನೆಂದು ನಾರದ ಮುನೀಂದ್ರನು ಅರ್ಜುನನೊಂದಿಗೆ ಹೇಳಿದ ಬಳಿಕ ಮುಂದಿನ ಕಥೆಯನ್ನು ವಿಸ್ತರಿಸುವನೆಂತೆನೆ:—ಅಯ್ಯಾ ಪಾರ್ಥನೆ ಕೇಳು, ಈ ರೀತಿಯಲ್ಲಿ ಚಂದ್ರಹಾಸನು ಸುಖ ನಿದ್ರೆಯಂ ಮಾಡುತ್ತ ಕಾಲವಂ ಕಳೆಯುತ್ತಲಿದ್ದನು. ಆ ಕುಂತಳ ರಾಜನಿಗೆ ಚಂಪಕಮಾಲಿನಿಯೆಂಬೋರ್ವ ಕುವರಿಯುಂಟು, ಆ ರಾಜ್ಯದ ಮಂತ್ರಿಯಾದ ದುಷ್ಟಬುದ್ಧಿಗೆ ವಿಷಯೆ ಎಂಬ ತನುಜೆ ಇರುವಳು. ರಾಜಕುವರಿಯಾದ ಚಂಪಕಮಾಲಿನಿಗೂ ಮಂತ್ರಿ ತನುಜೆಯಾದ ವಿಷಯೆಗೂ ಅತ್ಯಂತ ಸ್ನೇಹವುಂಟಾಗಿತ್ತು. ಆಗ ವಸಂತಕಾಲವಾದಕಾರಣ ಚಂಪಕಮಾಲಿನಿ ವಿಷಯೆ ಎಂಬೀರ್ವರೂ ಸಖೀಜನರಿಂದೊಡಗೂಡಿ ಚಂದ್ರಹಾಸನು ಮಲಗಿದ್ದ ಉದ್ಯಾನವನಕ್ಕೆ ಜಲಕ್ರೀಡೆಗಾಗಿ ಬಂದರು ‖೧‖ ಅವರ ಕಣ್ಣುಗಳು ವಿಶಾಲವಾಗಿದ್ದವು. ಅವರ ಸೊಂಟವು ಬಹಳ ಸಣ್ಣ

ರೊನಾನ್ಮರು ವೇಣಿಯವಿಲಾಸಿನಿಯರು ‖ ಒಚ್ಚತದಚಲ್ಪಿನೆಳೆವೆಣ್ಗಳೊಳ್ಕೈಕೊಳ್ಳ । ದಚ್ಚರಿಯಕಡುಗಕ್ಕಸದಬಟ್ಟಬಲ್ಮೊಲೆಯ । ಪೊಚ್ಚಪೊಸಜವ್ವನದನೀರೆಯರ್ನಡೆತಂದರೊಗ್ಗಾಗಿ ಸಂಭ್ರಮದೊಳು ‖ ೨ ‖ ಕಲಕೀರವಾಣಿಯರ್ಕಾಳಾಹಿವೇಣಿಯ । ರ್ಕಲಭಮದಯಾನೆಯರ್ಕಾಯಜನಿದಾನೆಯ । ರ್ಕಲಧೌತಗಾತ್ರೆಯರ್ಕಂಜದಳನೇತ್ರೆ ಯರ್ಕಳೆವೆತ್ತಕಾಮಿನಿಯರು ‖ ಕಲಶಕುಚಯುಗಳೆಯರ್ಕನಕಮಣಿನಿಗಳೆಯ । ರ್ಕಳಕಳಿಪವದನೆಯರ್ಕುಂದಾಭರದನೆಯ । ರ್ಕಳೆದುಳಿದರನ್ನೆಯರ್ಕಾಂತಿ ಸಂಪನ್ನೆಯರ್ನಂದನಕೆನಡೆತಂದರು ‖ ೩ ‖ ತಳಿರಡಿಗೆತೊಂಡೆವಣ್ಣುಟಿಗೆತಾವರೆಮೊಗಕೆಬೆಳುಗಾಯಿಮೊಲೆಗೆನೈದಿಲೆಕಣ್ಗೆಬಾಳೆದೊಡೆ । ಗಳೆವಳ್ಳಿಮೈಗೆ ಸಂಪಗೆನಾಸಿಕಕೆಮಲ್ಲಿಗೆಯು ನಗೆಗೆಮೊಲ್ಲೆಪಲ್ಗೆ ‖ ಅಳಿಕುಂತಳಕೆನಲ್ನಡಗೆನುಡಿಗೆಕೋ । ಗಿಲೆಗಳಿಂಚರಕೆಸೋಲ್ದವಯವಂಗಳೊಳ್ನೆಲಸಿದುವು ಗಣ್ಗಳ್ಗೆ ಸೋಲದವರಾರೆನಲ್ನಡೆತಂದರಂಗನೆಯರು ‖ ೪ ‖

---

ದಿಂದ ಕೂಡಿದ, ಪೊಸಜವ್ವನದ–ಆಗತಾನೆ ಆವಿರ್ಭವಿಸುತ್ತಲಿರುವ ಪ್ರಾಯದ ಪ್ರಾರಂಭವುಳ್ಳ, ನೀರೆಯರ್–ನಾರಿಯರು, ಸಂಭ್ರಮದೊಳು–ಆನಂದದಿಂದ, ಒಗ್ಗಾಗಿ–ಒಂದಾಗಿ, ನಡೆತಂದರು–ಬಂದವರಾದರು. ‖ ೨ ‖

ಟೀ‖ ಕಲ–ಇಂಪಾಗಿ ಗಾನವಂ ಮಾಡತಕ್ಕ, ಕೀರ–ಶುಕಂಗಳ ಹಾಗೆ, ವಾಣಿಯರ್–ನುಡಿಯತಕ್ಕ, ಕಾಳಾಹಿ–ಕರೀನಾಗರಹಾವಿನಂತೆ ಕಾಣತಕ್ಕ, ವೇಣಿಯರ್–ಜಡೆಗಳುಳ್ಳ, ಕಲಭಮದ–ಮತ್ತಗಜಗಳಂತೆ, ಯಾನೆಯರು – ನಡಿಗೆಯುಳ್ಳ, ಕಾಯಜ–ಮದನನಿಗೆ, ನಿದಾನೆಯರು–ಕಾರಣಭೂತರಾಗಿರತಕ್ಕ, ಕಲಧೌತಗಾತ್ರೆಯರು–ಸುವರ್ಣ ಛಾಯೆಯಿಂದ ಕೂಡಿರುವ, ಕಂಜದಳ–ಕಮಲದ ಎಸಳ್ಗಳಂತೆ ವಿಶಾಲವಾದ, ನೇತ್ರೆಯರು–ನಯನಂಗಳನ್ನುಳ್ಳ, ಕಲಶ–ಸುವರ್ಣದ ಗಡಿಗೆಯಂತೆ, ಕುಚಯುಗಳೆಯರು–ಎರಡು ಮೊಲೆಗಳುಳ್ಳ, ಕನಕಮಣಿ–ಭಂಗಾರ ಮತ್ತು ರತ್ನಗಳಿಂದ ಕೂಡಿರುವ, ನಿಗಳೆಯರು – ಕೈಗಂಕಣ ಕಾಲ್ಗಡಗಗಳನ್ನುಳ್ಳ, ಕಳಕಳಿಪ–ಪ್ರಕಾಶಿಸತಕ್ಕ, ವದನೆಯರು–ಮೋರೆಯುಳ್ಳ, ಕುಂದ–ಮಲ್ಲಿಗೆ ಮೊಗ್ಗುಗಳಹಾಗೆ, ಆಭ–ಪ್ರಕಾಶಿಸತಕ್ಕ, ರದನೆಯರು–ದಂತಪಙ್ತಿಗಳನ್ನುಳ್ಳ, ಕಳೆದು–ಹುಡುಗತನವು ಹೋಗಿ, ಉಳಿದ–ಮುದಿಯಾಗುವುದು ಮಿಕ್ಕಿರುವ, ರನ್ನೆಯರು–ಪ್ರಾಯದ ಕಾಂತಿಯನ್ನುಂಟಾಗಿರತಕ್ಕ, ಕಾಂತಿಸಂಪನ್ನೆಯರು–ಸೌಂದರ್ಯದಿಂ ಶೋಭಿಸುತ್ತಲಿರುವ, ಕಳೆವೆತ್ತ–ಕಾಮಬಾಧೆಗಳಿಗೊಳಗಾಗಿರತಕ್ಕ ಮತ್ತು ಕಾಂತಿಯುಕ್ತರಾಗಿರತಕ್ಕ, ಕಾಮಿನಿಯರು–ನಾರಿಯರಾದ ವಿಷಯೆ ಚಂಪಕಮಾಲಿನಿಯರು, ನಂಧನಕೆ–ಉದ್ಯಾನವನಕ್ಕೆ, ನಡೆತಂದರು–ಬಂದು ಸೇರಿದರು ‖ ೩ ‖

ಟೀ‖ ಅಡಿಗೆ–ಪಾದಗಳಿಗೆ, ತಳಿರು–ಪಲ್ಲವವೂ, ತುಟಿಗೆ–ಕೆಳಭಾಗದ ತುಟಿಗೆ, ತೊಂಡೆವಣ್ಣು–ತೊಂಡೆಯ ಹಣ್ಣೂ, ಮೊಗಕೆ–ಮೋರೆಗೆ, ತಾವರೆ–ಕಮಲವೂ, ಮೊಲೆಗೆ–ಕುಚಗಳಿಗೆ, ಬೆಳುಗಾಯಿ–ಕಪಿತ್ಥವೂ, ಕಣ್ಗೆ–ನಯನಂಗಳಿಗೆ, ನೈದಿಲೆ–ಕಪ್ಪುಕಮಲವೂ, ತೊಡೆಗೆ–ಕಾಲಮೇಲ್ಗಡೆಗೆ, ಬಾಳೆ–ಕದಳಿಸ್ತಂಭವು, ಮೈಗೆ–ದೇಹಕ್ಕೆ, ಎಳೆವಳ್ಳಿ–ಕೋಮಲವಾದ ಲತೆಯೂ, ನಾಸಿಕಕೆ–ಮೂಗಿಗೆ, ಸಂಪಗೆ–ಸಂಪಗೇ ಹೂ, ಪಲ್ಗೆ–ದಂತಗಳಿಗೂ, ನಗೆಗೆ–ಮುಗುಳ್ನಗೆಗೂ, ಮೊಲ್ಲೆ–ಮಾಲ್ಲಿಕಾ ಕುಸುಮವೂ, ಕುಂತಲಕೆ–ಕೂದಲಿಗೆ, ಅಳಿ–ದುಂಬಿಗಳು, ನಡೆಗೆ–ನಡೆಯುವರೀತಿಗೆ, ಅಂಚೆ–ಹಂಸವೂ, ಇಂಚರಕೆ–ಮೃದುಧ್ವನಿಗೆ, ಕೋಗಿಲೆಗಿಳಿಗಳು–ಶುಕಪಿಕಂಗಳೂ, ಸೋಲ್ದು–ಪರಾಜಯವನ್ನು ಪಡೆದು, ಅವಯವಂಗಳೊಳ್–ದೇಹಗಳ ಭಾಗಗಳಲ್ಲಿ, ನೆಲಸಿದವು–ಸೇರಿದವು, ಆರು–ಯಾರುತಾನೆ, ಹೆಣ್ಗಳ್ಗೆ–ಸ್ತ್ರೀಯರ ಪಾಶಕ್ಕೆ, ಸೋಲದವರು– ಒಳಗಾಗುವದಿಲ್ಲ, (ಎಲ್ಲರೂ ಸಿಕ್ಕಿಬೀಳುವರು) ಎನಲ್–ಎಂಬತೆರನಾಗಿ, ಅಂಗನೆಯರು–ನಾರಿಯರು, ನಡೆತಂದರು–ಬಂದರು ‖ ೪ ‖

ಟೀ‖ ಮೈನೆರದ–ಗೃಹಸ್ಥಾಶ್ರಮಕ್ಕೆ ತಕ್ಕವರಾಗಿರತಕ್ಕ, ಹೆಣ್ಗಳು– ಸ್ತ್ರೀಯರು, ಉಪವನಕೆ – ತೋಟಕ್ಕೆ, ನಡೆತಂದು–ಬಂದವರಾಗಿ, ಮುಂಕೊಂಡು–ಮುಂದಕ್ಕೆ ನಡೆದು, ಬಹುವಿಧ–ಅನೇಕ ಪ್ರಕಾರವಾದ, ಚೇಷ್ಟೆಗಳಿಂದ–ನಡವಳಿಕೆಗಳಿಂದ, ಭುಲ್ಲವಿಸಿ–ಸಂತಸಂಗೊಳ್ಳುತ್ತಾ, ಕಂಡಕಂಡ–ದೃಷ್ಟಿಗೆ ಗೋಚರವಾದ, ಅವನಿಜಾತಂಗಳಂ–ವೃಕ್ಷಗಳನ್ನು, ಚಿಗುರಿಸಿದರ್–ಚಿಗುರಿಸಿಂದೊಡುವಂತೆ ಮಾಡಿದರು, ಒಡನೆ – ತಡವಿಲ್ಲದೆ, ಪೂದೋರಿಸಿದರು – ಹೂವಿನಿಂದ ತುಂಬಿಸಿದರು, ಅಲ್ಲಿ–

---

ಗೂ ಅವರ ಹಲ್ಲುಗಳು ಬಹಳ ಬೆಳ್ಳಗೂ ಇದ್ದವು. ವಿಶಾಲವಾದ ಕೆನ್ನೆಯನ್ನುಂಟಾಗಿದ್ದರು. ಅವರ ಜಡೆಗಳು ನಾಗರಹಾವಿನಂತೆ ಉದ್ದವಾಗಿದ್ದವು. ಸುವರ್ಣ ಕುಂಭಗಳಂತಿರುವ ಬಲ್ಮೊಲೆಗಳಿಂದ ಕೂಡಿದ್ದರು ಅವರ ನುಡಿಯು ಗಿಳಿಗಳ ನುಡಿಯನ್ನು ಕಂಡರೆ ತಿರಸ್ಕಾರಮಾಡುತ್ತಲಿತ್ತು‖೨‖ ಅವರ ನಡಿಗೆಯಂತೆ ಆನೆಗಳ ನಡಿಗೆಯು ಇರಲಿಲ್ಲವು. ಬಹಳವಾಗಿ ಥಳಥಳಿಸುತ್ತಲಿರತಕ್ಕ ಕಮಲ ಮುಖಿಯರ ಕಾಲುಗಳು ‖ ೩ ‖ ಎಳೆಚಿಗುರುಗಳಂತೆ ಕೆಂಪಗೂ, ಅವರ ತುಟಿಗಳು ತೊಂಡೆಯ ಹಣ್ಣಿನ ಹಾಗೂ ಇದ್ದವು. ಕನ್ನೈದಿಲೆಗಳಂತಿರುವ ಕಣ್ಣುಗಳೂ, ಸಂಪಗೆಯ ಮೊಗ್ಗನ್ನು ಹೋಲುವ ಮೂಗೂ ಕೋಗಿಲೆಯ ಧ್ವನಿಯಂತಿರುವ ಮೃದು ನುಡಿಯೂ ಸರಿಯಾದ ಪ್ರಾಯವೂ ‖೪‖ ಉಳ್ಳ ಆ ಬಾಲೆಯರೆಲ್ಲರೂ ಗಿಡಗಳಿಗೆ ನೀರೆರೆಯುತ್ತಲೂ, ಹೂಗಳನ್ನು

ವಿಂಡದ್ವಹೆಣ್ಣಳುಪವನಕೆನಡೆತಂದುವಂ | ಕೊಂಡುಬಹುವಿಧದಚೇಷ್ಟೆಗಳಿಂದಭುಲ್ಲವಿಸಿ | ಕಂಡಕಂಡವನಿಜಾತಂಗಳಂ ಚಿಗುರಿಸಿದರೊಡನೆಪೂದೋರಿಸಿದರು || ತಂಡತಂಡವೊಳಲ್ಲಿಪರಿಪರಿಯಲರ್ಗೊಯಿದು | ಬೆಂಡಾಗಿಬಂದುನಿರ್ಮಲಸರೋವರವನು | ದ್ದಂಡದೋಳ್ಪೊಕ್ಕರಂಬುಕ್ರೀಡೆಗಂಗಜನಸೊಕ್ಕಾನೆಗಳತೆರದೊಳು || ೫ || ನಿರುಗುರುಳ್ಗಳತುಂಬಿಗಳಪೊಳೆವ ಲೋಚನದ | ಮರಿಮೀನವೊಗನುಲದರ್ವರೆಯ ತ್ರಿವಳಿಗಳ | ಕಿರುದೆರೆಯ ಕಂಧರದ ಕಂಬುವಿನ ಘನಕುಚಂಗಳ ಕಂಜ ಮುಕುಳಂಗಳ || ಪೊರೆವಾರವುಳಿನದತನುಚ್ಛವಿಯತಿಳಿನೀರ | ಮೆರೆವಮಧ್ಯದಮೃಣಾಳದ ಬಗೆಯಭೇದಮಂ | ಕುರುಪಿಡಿವೊಡರಿದೆನಲ್ಸರಸಿಯೋಳ್ತರಳೆಯರ ಜಲಕೇಳಿಕಣ್ಗೆಸೆದುದು || ೬ || ಲಲನೆಯರ್ತಾವರೆದೆರೆದ ಮೇಲುದಿನೊಳೆಸೆವ | ನೆಲೆ ಮೊಲೆಗಳಲುಗೆ ತಾವರೆದೆರೆದಕೈಗಳಿಂ | ತಳುಕಿದರ್ಚಲ್ವಕಂಕಣರವಂಮಿಗೆ ಚೆಲ್ವಕಂಕಣರವಂಗಳೊಡನೆ || ವಿಲಸಿತದ ಕಾಸಾರದಂಬುಗಳನೆಸೆವಜೀ | ರ್ಕೊಳವಿಗಳಕದನಕಾಸಾರದಂಬುಗಳ | ವೊಲಳವಡಿಸಿಸರಸಕೇಳಿಗೆಡೆಯಾಗಲು ||೭|| ಹೊಳೆವ

---

ಆ ಉದ್ಯಾನದಲ್ಲಿ, ತಂಡತಂಡದೊಳು-ಒಟ್ಟೊಟ್ಟಾಗಿ, ಪರಿಪರಿಯ_ಬಗೆಬಗೆಯಾದ, ಅಲರ್-ಕುಸುಮಂಗಳನ್ನು, ಕೊಯ್ದು-ಬಿಡಿಸಿ, ಬೆಂಡಾಗಿ ಬಂದು_ಚೈತನ್ಯವನ್ನೆಲ್ಲಾ ಹೋಗಲಾಡಿಸಿಕೊಂಡು, ಅಂಗಜನ_ಮದನನ, ಸೊಕ್ಕಾನೆಗಳ-ಮದಿಸಿದ ಆನೆಗಳ, ತೆರದೊಳು-ಬಗೆಯಿಂದ, ಅಂಬುಕ್ರೀಡೆಗೆ-ನೀರಾಟವನ್ನಾಡಲು, ನಿರ್ಮಲಸರೋವರವನು-ಪರಿಶುದ್ಧೋದಕದಿಂದ ತುಂಬಿರತಕ್ಕ ಕಾಸಾರವೊಂದನ್ನು, ಉದ್ದಂಡದೊಳ್_ನಿರುಪಾಧಿಕವಾಗಿ, ಪೊಕ್ಕರು-ಪ್ರವೇಶಮಾಡಿದರು ||೫||

ಟೀ|| ತರಳೆಯರ_ಬಾಲೆಯರ, ಜಲಕೇಳಿ_ಜಲಕ್ರೀಡೆಯಾದರೊ, ಸರಸಿಯೊಳ್_ಕಾಸಾರದಲ್ಲಿ, ತುಂಬಿಗಳ_ಅಳಿವಿಂಡಿನಂತೆ ಹೊಳೆಯುತಕ್ಕ, ನಿಡುಗುರುಳ್ಗಳ-ಉದ್ದನೆ ಕೂದಲ್ಗಳಿಂದಲೂ, ಮರಿಮೀನ-ಎಳೆ ಮೀನುಗಳ ಹಾಗಿರುವ, ಪೊಳೆವ-ಪ್ರಕಾಶವಾದ, ಲೋಚನದ-ನಯನಂಗಳನ್ನು, ಅಲದರ್ವರೆಯ_ಕಮಲದ ಹೂವಿನ ಮೇಲಿರುವ ಗೆರೆಗಳಂತೆ, ತ್ರಿವಳಿಗಳ_ಮೂರುಗೆರೆಗಳನ್ನು ಹೊಟ್ಟೆಯ ಮೇಲುಳ್ಳ, ಕಿರುದೆರೆಯ_ಸಣ್ಣ ಅಲೆಗಳ, ಕಂಬುವಿನ_ಶಂಖವನ್ನು ಹೋಲುವ, ಕಂಧರದ-ಕಂಠವುಳ್ಳ, ಕಂಜ_ತಾವರೆಯ, ಮುಕುಳಂಗಳ-ಮೊಗ್ಗುಗಳ ಹಾಗೆ ಇರುವ, ಘನಕುಚಂಗಳ-ಸ್ತನಗಳುಳ್ಳ, ಪೊರೆವಾರವುಳಿನದ-ಬಲವಾದ ಕಟಿಪಶ್ಚಾದ್ಭಾಗವುಳ್ಳ, ತನಿವಾರ_ಸ್ವಚ್ಛವಾದ ಉದಕದಂತಿರುವ, ತನುಚ್ಛವಿಯ-ದೇಹ ಸೌಂದರ್ಯವುಳ್ಳ, ಮೃಣಾಳದ-ತಾವರೆ ದಂಟನ್ನು ಹೋಲತಕ್ಕ, ಮೆರೆವ_ಕಾಂತಿಯುಕ್ತವಾದ, ಮಧ್ಯದ_ಸೊಂಟದ, ಬಗೆಯ_ತೆರದ, ಭೇದಮಂ_ವ್ಯತ್ಯಸ್ತವನ್ನು, ಕುರುಪಿಡಲು – ತಿಳಿದುಕೊಳ್ಳಲು. ಅರಿದು-ಅಸಾಧ್ಯವು, ಎನಲ್-ಎಂಬ ಬಗೆಯಾಗಿ, ಕಣ್ಗೆ – ನಯನಂಗಳಿಗೆ, ಎಸೆದುದು_ಅಂದವಾಗಿ ಕಾಣಿಸಿತು. ||೬||

ಟೀ|| ಲಲನೆಯರು_ಸ್ತ್ರೀಯರಾದರೊ, ತಾವು-ತಾವುಗಳು, ಅರೆದೆರೆದ ಅರ್ಧತೆಗೆದಿರತಕ್ಕ. ಮೇಲುದಿನೊಳ್_ಸೀರೆಯ ತುದಿಯಿಂದ, ಎಸೆವ_ಹೊಳೆಯತಕ್ಕ, ನೆಲೆಮೊಲೆಗಳು-ಕುಚಂಗಳು, ಅಲುಗೆ_ಜೋಲುತ್ತಿರಲು, ತಾವರೆ_ಸರೋಜವು, ತೆರೆದ ಕೈಗಳಿಂ_ತೆಗೆಯಲ್ಪಟ್ಟ ಕೈಗಳಿಂದ, ತಳುಕಿದ-ಹೊಳೆಯತಕ್ಕ, ಚೆಲ್ವ-ಅಂದವಾಗಿರುವ, ಕಂಕಣ_ಕೈಕಡಗಗಳ, ರವಂ_ಶಬ್ದವು, ಮಿಗೆ_ಹೆಚ್ಚಾಗಲು, ಚೆಲ್ವ-ಮೇಲಾದ. ಕಂ_ಉದಕದ, ಕಣ-ಹನಿಗಳ, ರವಂಗಳೊಡನೆ_ಧ್ವನಿಯೊಂದಿಗೆ, ವಿಲಸಿತದ_ಹೊಳೆಯುವ, ಕಾಸಾರದ_ಸರೋವರದ, ಅಂಬುಗಳನು- ಉದಕವನ್ನು, ಎಸೆವ- ಚೆನ್ನಾಗಿ ಕಾಣುವ, ಜೀರ್ಕೊಳವಿಗಳ_ನೀರನ್ನು ಚಿಮ್ಮುವ ಯಂತ್ರಗಳ, ಕದನಕೆ_ಮನ್ಮಥ ಕ್ರೀಡೆಗೆ, ಆಸಾರದ_ರಕ್ತಛಾಯೆಯ ಅಂಬುಗಳವೊಲ್_ಉದಕದಂತೆ, ಅಳವಡಿಸಿ_ಅನುವಾಗಿ, ಸರಸಕೇಳಿಗೆ-ಶೃಂಗಾರ ಚೇಷ್ಟೆಗೆ ಮತ್ತು ಉದಕದ ಆಟವು, ಅಡಿಗಡಿಗೆ-ಬಾರಿಬಾರಿಗೂ, ಆಗಲು_ಆಗಲಾಗಿ, ಜಲಕ್ರೀಡೆಗೆ-ನೀರಿನಲ್ಲಿ ವಿಹರಿಸುವುದಕ್ಕಾಗಿ, ಪೊಕ್ಕರು-ಹೋಗಿ ಸೇರಿದರು. ||೭||

ಟೀ|| ಹೊಳೆವ_ಕಾಂತಿಯುಕ್ತವಾದ, ಹುಬ್ಬುಗಳ_ಹುಬ್ಬುಗಳಿಂದ ಕೂಡಿರತಕ್ಕ, ಭಾಸುರ_ಹೊಳೆಯುವ, ಚಾಪಲತೆಯ- ಅಸ್ಥಿರವಾದ ಮನಸ್ಸುಳ್ಳ, ಮಂಡಳಿಸಿದ- ದುಂಡಾಗಿರುವ, ಉನ್ನತಪಯೋಧರದ - ದೊಡ್ಡದಾದ ಮೊಲೆಗಳಿಂದ ಕೂಡಿರತಕ್ಕ, ಕಡೆಗಣ್ಣ-ಕಟಾಕ್ಷದ, ಚಂಚಲದ_ಚಲನೆಯುಳ್ಳ, ಭೂಷಣದ_ಒಡವೆಗಳ, ಘನರವದ_ಹೆಚ್ಚಾದ ಧ್ವನಿಯಿಂದ ಕೂಡಿರತಕ್ಕ, ಚಿತ್ರಾಂಗಿಯರು_ಸುಂದರ ಸ್ತ್ರೀಯರು, ಹಸ್ತದೊಳ್_ಕರತಳದಲ್ಲಿ, ತವೆ_ಚನ್ನಾಗಿ, ತೋಯದ ಮಳೆಗರೆವುದು_

---

ಕೊಯ್ಯುತ್ತಲೂ, ತೋಟದಲ್ಲೆಲ್ಲಾ ಸುತ್ತಿಸುತ್ತಿ ಜಲಕ್ರೀಡೆಯನ್ನಾಡಬೇಕೆಂಬ ಆಸಕ್ತಿಯಿಂದ ಸರೋವರದ ಬಳಿಗೆ ಬಂದವರಾದರು ||೫|| ಆ ಬಳಿಕ ಸರೋವರಮಂ ಪೊಕ್ಕು ತಮ್ಮ ಮುಖ, ಕಣ್ಣುಗಳು, ತ್ರಿವಳಿಗಳು, ನಿತಂಬಸ್ಥಳಗಳು, ಸೊಂಟ ಮೊದಲಾದವುಗಳಿಂದ ಸರಸ್ಸಿನಲ್ಲಿರುವ ಕಮಲಗಳು, ಕಮಲದ ದಂಟುಗಳು, ಕನ್ನೈದಿಲೆಗಳು, ಅಲೆಗಳು, ತಾವರೆಯ ದಂಟು ಇವುಗಳನ್ನೆಲ್ಲಾ ತಿರಸ್ಕರಿಸುತ್ತ ||೬|| ಅರ್ಧವಾಗಿ ತೆರದ ಸೆರಗುಗಳುಳ್ಳವರಾಗಿ ಕೈಕಂಕಣಗಳಿಂದ ಧ್ವನಿಯಂ ಮಾಡುತ್ತ, ನೀರ್ಕೊಳವಿಗಳಿಂದ ಒಬ್ಬರಮೇಲೊಬ್ಬರು ನೀರು ಚೆಲ್ಲುತ್ತ ಸರಸ ಸಲ್ಲಾಪಂಗಳಿಂದ ಅತ್ಯಾನಂದವನ್ನೈದುತ್ತ || ೭ || ಒಬ್ಬರಮೇಲೊಬ್ಬರು ನೀರನ್ನು ಚೆಲ್ಲುತ್ತಿದ್ದರು. ಇವರು ಸ್ನಾನಮಾಡಿದ್ದರಿಂದ ನೀರಿನಲ್ಲೆಲ್ಲಾ ಕುಂಕುಮ ಮೊದಲಾದವು ಕದಡಿ ಹೋದ

ಹುಬ್ಬುಗಳಭಾಸುರಚಾಪಲತೆಯುಮಂ । ಡಳಸಿದುನ್ನತಪಯೋಧರದಕಡೆಗಣ್ಣಬಂ । ಚಲದಭೂಷಣದಘನರವದಚಿತ್ರಾಂಗಿಯರ್ತನೆಹಸ್ತದೋಳ್ತೋಯದ ॥ ಮಳೆಗರೆವುದಚ್ಚರಿಯೆಪೇಳೆನೆಸುವಾರಿಯಂ । ತುಳುಕಿದರ್ಬಿಂಕದಿಂದೋರ್ವರಮೇಲೆ । ಮೊಲೆಗೆಲದಕುಂಕುಮದಕದಡರುಣಗಿರಿತಟದಕೆಂಬೊನಲ್ಗಳವೊಲಾಗೆ ॥ ೮ ॥ ಹರಿಯಲೋಚನಮಜಂಕುಳ್ಳಿರ್ಪತಾಣಮಿಂ । ದಿರೆಯನಿಳಯಂದಿವಾಕರನಕಳೆಮನ್ಮಥ । ಸರಳಾಂಡಿಗಳಿಕ್ಕೆಪರಿಮಳದಬೀಡೆನಿಸಿಕೊಂಡುಸಂಪೂರ್ಣತೆಯೊಳು ॥ ಪರಿಶೋಭಿಸಿದವಲ್ಲಿನೆರೆದಿಂಗಳಂಪೋಲ್ವ । ತರುಣಿಯರಚಲ್ವನಗೆಮೊಗದಮುಂದೀಗತಾ । ವರೆಯಾದವೆಂಬಂತೆಪೆಣ್ಗಳಾಸ್ಯಕೆಸೋಲ್ದವಾಕೊಳದಕಮಲಂಗಳ್ ॥೯॥ ಮೇಲೆಕುಪ್ಪರಿಸಿತಲೆಕೆಳಗಾಗಿಬಿದ್ದೊಡಂ । ಲೋಲಲೋಚನಕೆಪಾಸಟಿಯಾಗದಿರೆಮೀನ್ಗಳಾಳದೊಳ್ಮುಳಿಗಿದುವುಗತಿಗಳವಿಲಾಸಮುಂಕಂಡುಕಲಹಂಸಂಗಳು ॥ ಕಾಲಿಂದನಡೆಯಲೊಲ್ಲದೆನಭಕೆಪಾರಿದವು । ಬಾಲೆಯರಕಣ್ಣಹೊಳಹಿಗೆಗಮನದುಜ್ಜುಗಕೆ । ಸೋಲದವರಾರೆಂಬತೆರನಾಗೆಸಲಿಲದೊಳ್ ಕ್ರೀಡಿಸಿದರಂಗನೆಯರು ॥೧೦॥ ಶಿಖರಿದಶನದ್ಯುತಿಯಬೆಳ್ಪಗೆಯಸೂಸಲೆನೆ । ನಖರುಚಿಯತೆರಳಿಕೆಯಹೆರಳಿಯೆನೆಲೋಚನವಿ । ಶಿಖದಮುವ್ಮೊನೆಯೊಗರಢಾಳಿಯೆನೆಹಾರಮಂಪರಿದಬೀರ್ಗರೆಪೇಳೆನೆ ॥ ಸಖಿಯರಂಕೂಡಿಕೊಂಡೊರ್ವರೋರ್ವರ್ಗೆಸಂ । ಮುಖವಾಗಿವಿಷಯೆಚಂಪಕಮಾಲಿನಿಯರಾಗ । ಸುಖಜಲಕ್ರೀಡೆ

---

ನೀರನ್ನು ಸುರಿಸತಕ್ಕದ್ದು, ಅಚ್ಚರಿಯೆ-ಆಶ್ಚರ್ಯವಾಗಿರುತ್ತದೆಯೇ, ಪೇಳು-ನುಡಿ, ಎನೆ-ಎಂದು ಹೇಳಲು, ಬಿಂಕದಿಂದ-ಬತ್ತಾಗಿ, ಓರ್ವರು-ಒಬ್ಬರು, ಓರ್ವರಮೇಲೆ-ಮತ್ತೊಬ್ಬರಮೇಲೆ, ಮೊಲೆ-ಕುಚಗಳ, ಕೆಲದ-ಪಕ್ಕಗಳ, ಕುಂಕುಮದ-ಕುಂಕುಮಕೇಸರಿಯನ್ನುಂಟಾಗಿದ್ದದ್ದರಿಂದಲೇ, ಕದಡು- ಕದಡಿದಕಾರಣ, ಅರುಣ-ಕೆಂಪಾದ, ಗಿರಿತಟದ- ಪರ್ವತಪ್ರಾಂತದ, ಕೆಂಬೊನಲ್ಗಳವೋಲ್-ರಕ್ತಛಾಯೆಯ ನೀರಿನ ಪ್ರವಾಹದಂತೆ, ಆಗೆ-ಕಾಣುವ ಬಗೆಯಿಂದ, ಸುವಾರಿಯಂ-ಸರೋವರದ ಉತ್ತಮವಾದ ನೀರನ್ನು, ತುಳುಕಿದರು-ಸುರಿದರು. ॥೮॥

ಟೀ॥ ಹರಿಯ-ಶ್ರೀಮನ್ನಾರಾಯಣನ, ಲೋಚನಂ-ನಯನವು, ಅಜಂ-ಸೃಷ್ಟಿಕರ್ತನು, ಕುಳ್ಳಿರ್ಪ-ಕುಳಿತುಕೊಳ್ಳುವುದಕ್ಕೆ, ತಾಣಂ-ಸ್ಥಾನವು, ಇಂದಿರೆಯ-ರಮಾದೇವಿಯ, ನಿಳಯಂ-ಮಂದಿರವು, ದಿವಾಕರನ-ಹಗಲನ್ನುಂಟುಮಾಡುವ ಸೂರ್ಯನ, ಕಳೆ-ಹೊಳವು, ಮನ್ಮಥನ-ಮದನನ, ಸರಳು-ಅಲಗು, ಆರಡಿಗಳಿಗೆ-ಭೃಂಗಾಳಿಗೆ, ಇಕ್ಕೆ-ವಾಸಸ್ಥಾನವು, ಪರಿಮಳದ-ಸುಗಂಧಿಯ, ಬೀಡು-ನೆಲೆಯು, ಎನಿಸಿಕೊಂಡು-ಎಂಬುದಾಗಿ ಎನ್ನಿಸಿಕೊಂಡು, ಸಂಪೂರ್ಣತೆಯೊಳು-ಪೂರೈಸುವಿಕೆಯಿಂದ, ಪರಿಶೋಭಿಸಿದವು-ಕಾಂತಿಯುಕ್ತವಾದವು, ಅಲ್ಲಿ-ಆ ಕಾಸಾರದಲ್ಲಿ, ಈಗ-ಈ ಕಾಲದಲ್ಲಿ, ನೆರೆ-ಪೂರ್ಣವಾಗಿ, ತಿಂಗಳಿಂ-ಚಂದ್ರಿಕೆಯಿಂದ, ಪೋಲ್ವ-ಹೋಲಿಕೆಯಾಗಿರುವ, ತರುಣಿಯರ-ನಾರಿಯರ, ಚೆಲ್ವ- ಅಲಂಕಾರವಾದ, ನಗೆ ಮೊಗದ ಮುಂದೆ- ಮಂದಹಾಸದ ತಾವರೆಯ ಎದುರಿಗೆ, ತಾವು-ತಾವಾದರೊ, ಅರೆಯಾದೆವು-ಕಡಮೆಯಾಗಿದ್ದೇವೆ, ಎಂಬಂತೆ-ಎನ್ನುವ ರೀತಿಯಾಗಿ, ಆ ಹೆಂಗಳ್-ಆ ಬಾಲೆಯರ ಆಸ್ಯಕೆ-ಮುಖ ಕಮಲಕ್ಕೆ, ಆ ಕೊಳದ ಕಮಲಂಗಳು-ಆ ಸರೋವರದಲ್ಲಿರುವ ತಾವರೆ ಹೂಗಳು, ಸೋಲ್ದವು-ಸೋತುಬಿಟ್ಟವು ॥೯॥

ಟೀ॥ ಮೀನ್ಗಳು-ಮೀನುಗಳಾದರೊ, ಮೇಲಕೆ-ಮೇಲ್ಗಡೆಗೆ, ಉಪ್ಪರಿಸಿ-ನೆಗೆದು, ತಲೆಕೆಳಗಾಗಿ-ತಲೆಯನ್ನು ಕೆಳಗೆ ಇರುವಂತೆ ಮಾಡಿಕೊಂಡು, ಬಿದ್ದಡಂ-ಬಿದ್ದರೂ ಕೂಡ, ಲೋಲಲೋಚನಕೆ-ಸ್ತ್ರೀಯರ ಚಂಚಲವಾದ ನಯನಂಗಳಿಗೆ, ಪಾಸಟಿಯು-ಸರಿಯಾದದ್ದು, ಆಗದಿರೆ-ಆಗದೆ ಹೋದ ಕಾರಣ, ಆಳದೊಳ್-ಬಹಳ ಆಳಕ್ಕೆ, ಮುಳುಗಿದವು-ಮುಳುಗಿಕೊಂಡವು, ಕಲಹಂಸಗಳು-ಅಂಚೆವಕ್ಕಿಗಳಾದರೊ, ಗತಿಗಳ ವಿಲಾಸಮಂ ಕಂಡು-ಆ ಸ್ತ್ರೀಯರ ನಡಿಗೆಯನ್ನು ನೋಡಿ, ಕಾಲಿಂದ-ತಮ್ಮ ಕಾಲ್ಗಳಿಂದ, ನಡಿಯಲೊಲ್ಲದೆ-ನಡೆಯಬೇಕೆಂಬ ಆಶೆಯನ್ನು ಬಿಟ್ಟು, ನಭಕೆ-ಅಂತರಿಕ್ಷಕ್ಕೆ, ಪಾರಿದವು-ನೆಗೆದವು, ಅಂಗನೆಯರು-ಆ ಸ್ತ್ರೀಯರಾದರೊ, ಬಾಲೆಯರ ಕಣ್ಣ ಹೊಳಹಿಗೆ-ಯುವತಿಯರ ನೇತ್ರಗಳ ಕಾಂತಿಗೂ, ಗಮನ-ನಡೆಯುವ, ಉಜ್ಜುಗಕೆ-ಕೆಲಸಕ್ಕೂ, ಸೋಲದವರು - ಪರಾಭವವನ್ನೈದದವರು, ಆರು-ಯಾರಿದಾರೆ, ಎಂಬತೆರನಾಗೆ-ಎಂಬ ಬಗೆಯಾಗಲು, ಸಲಿಲದೊಳ್-ಸರೋವರದ ನೀರಿನಲ್ಲಿ, ಕ್ರೀಡಿಸಿದರು-ಆಟವನ್ನಾಡಿದರು ॥೧೦॥

---

ಕಾರಣ ಆ ಸರೋವರದ ನೀರೆಲ್ಲಾ ಕೆಂಪಾಗಿ ಕಾಣುತ್ತಲಿತ್ತು ॥೮॥ ಆ ಕೊಳದಲ್ಲಿ ತಾವರೆಗಳಾದರೊ ವಿಷ್ಣುವಿನ ಕಣ್ಣುಗಳನ್ನೂ, ಬ್ರಹ್ಮದೇವರ ವಾಸಸ್ಥಾನವನ್ನೂ, ಸೂರ್ಯನ ಕಾಂತಿಯನ್ನೂ, ಮನ್ಮಥನ ಬಾಣಗಳನ್ನೂ, ಸುವಾಸನೆಯನ್ನೂ, ಲಕ್ಷ್ಮಿಯ ವಾಸಸ್ಥಾನವನ್ನೂ ಹೋಲಿಸಿದಾಗ್ಯೂ ಕೂಡ ಆ ಸರೋವರದಲ್ಲಿ ಜಲಕ್ರೀಡೆಯನ್ನಾಡುತ್ತಲಿರತಕ್ಕ ಬಾಲೆಯರ ಮುಖ ಕಮಲವನ್ನು ನೋಡಿ ನಾಚಿಕೆಯನ್ನೈದಬೇಕಾಯಿತು. ॥೯॥ ಮೀನಾಕ್ಷಿಯರಾಗಿಯೂ, ಹಂಸಪಕ್ಷಿಗಳ ನಡಿಗೆಯ ಬೆಡಗುಳ್ಳವರಾಗಿಯೂ ॥೧೦॥ ದಾಡಿಮಾ ಬೀಜಗಳಂತೆ ಅಂದವಾದ ಹಲ್ಲುಗಳಿಂದ ಕೂಡಿಯೂ, ಇರುವ ಚಂಪಕಮಾಲಿನಿಯೂ ವಿಷಯೆಯೂ

ಯೊಳ್‌ಚೆಲ್ವತಿಳಿನೀರತುಂತುರ್ವನಿಗಳೆಸೆದಿರ್ದುವು ||೧೧|| ಮುದದಿಂದವಿಷಯೆಚಂಪಕಮಾಲಿನಿಯರೊಡನೆ | ಸುದತಿಯರ್ನಾನಾಪ್ರಕಾರದಿಂ ಕ್ರೀಡಿಸಿದ| ರುದಕದೊಳ್ಬಳಿಕತಮ್ಮಾನನಸುಧಾಂಶುಮಂಡಲದಬೆಳದಿಂಗಳಿಂದ|| ಸದಮಲಸರೋವರದತೀರದೊಳ್ಬಳಸಿದ | ಟ್ಟದಚಂದ್ರಕಾಂತಸೋಪಾನದೊಳೊಸರ್ವನೀ | ರೊದವಿತೆನೆಮೈಗಳ್ಗೆತಣ್ಣಸಂದೋರಲಾಕೊಳದಿಂದಪೊರಮಟ್ಟರು || ೧೨ || ಕೂಲವನಡರ್ದುನನದಂಗದೊಳ್ಪತ್ತಿದದು | ಕೂಲದೊಳಿರಲ್ಕೆತಾಪಸರದೃಢಮತಿಗೆಪ್ರತಿ | ಕೂಲಕೃತಿಗಳೊಮೋಹನದರಸ| ನೊಳಾರ್ದತೆಯನಾಂತಚಲ್ವಿನಕಣೆಗಳೊ|| ಸಾಲಮಣಿಮಯದಸೋಪಾನದೊಳ್ನಿಲಿಸಿರ್ದ|ಸಾಲಭಂಜಿಕೆಗಳೊವಿಚಿತ್ರಮೆನೆರಂಜಿತರ | ಸಾಲಪಲ್ಲವಪಾಣಿಪಾದತಳದಬಲೆಯರರೂಪುಗಳ್ಕಣ್ಗೆಸೆದುವು ||೧೩|| ಅಥಟಂದಮನ್ಮಥಂತ್ರಿಜಗಮಂ

ಟೀ|| ಆಗ-ಆ ಸಮಯದಲ್ಲಿ, ವಿಷಯೆ ಚಂಪಕಮಾಲಿನಿಯರು - ಮಂತ್ರಿಯ ಮಗಳು ಮತ್ತು ರಾಜ ಕುವರಿಯರು, ಸಖಿಯರಂ ಕೂಡಿಕೊಂಡು - ಗೆಳತಿಯರೊಂದಿಗೆ, ಓರ್ವರು - ಒಬ್ಬರು, ಓರ್ವರ್ಗೆ-ಮತ್ತೊಬ್ಬರಿಗೆ, ಸಮ್ಮುಖವಾಗಿ - ಎದುರೆದುರಿಗೆ ನಿಂತವರಾಗಿ, ಸುಖ-ಸೌಖ್ಯವಂ ಬೀರುವ, ಜಲಕ್ರೀಡೆಯೊಳ್ - ನೀರಾಟದಲ್ಲಿ, ಚೆಲ್ವ - ಸುರಿದಾಡತಕ್ಕ, ತಿಳಿನೀರ-ಸ್ವಚ್ಛೋದಕದ, ತುಂತುರ್ವನಿಗಳು - ನೀರಿನ ಕಣಗಳಾದರೋ, ಶಿಖರಿ-ದಾಡಿಮೀ ಬೀಜಂಗಳಂತಿರತಕ್ಕ, ದಶನ - ದಂತಗಳ, ದ್ಯುತಿಯು-ಪ್ರಭೆಯಂತಿರುವ, ಬೆಳ್ನಗೆಯಸೂಸಲು-ಮಂದಹಾಸದ ಪ್ರವಾಹವು, ಎನೆ-ಎಂಬ ಬಗೆಯಾಗಿಯೂ, ನಖರುಚಿಯ, ಉಗುರುಗಳ ಹೊಳಪಿನ, ತೆರಳಿಕೆಯ-ಪ್ರಸರಣದ, ಹೊರಳಿ-ಸಮುದಾಯವು, ಎನೆ-ಎಂಬ ರೀತಿಯಿಂದಲೂ, ಲೋಚನವಿಶಿಖದ-ಕಣ್ಣಿನ ನೋಟವೆಂಬ ಸರಳಿನ, ಮುಮ್ಮೊನೆಯ-ತುದಿಯ, ಒಗರ-ಕಳೆಯ, ಧಾಳಿಯು - ಸಮುದಾಯವು, ಎನೆ - ಎಂಬ ತೆರನಾಗಿಯೂ, ಹಾರಮಂ-ಮುತ್ತಿನ ಮಾಲಿಕೆಯನ್ನು, ಪರಿದು-ಕಿತ್ತುಹಾಕಿ, ಬೀರ್ದರೊ - ಎರಚಿಬಿಟ್ಟರೊ, ಪೇಳು - ನುಡಿ, ಎನೆ-ಎಂಬಂತೆಯೂ, ಎಸೆದಿರ್ದವು-ಹೊಳೆಹೊಳೆಯುತ್ತಲಿದ್ದವು. ||೧೧||

ಟೀ|| ಉದಕದೊಳ್-ಆ ಸರೋವರದ ನೀರಿನಲ್ಲಿ, ಸುದತಿಯರು-ಅಲ್ಲಿ ನೆರೆದಿದ್ದ ಸ್ತ್ರೀಯರೆಲ್ಲಾ, ವಿಷಯೆ ಚಂಪಕಮಾಲಿನಿಯರೊಡನೆ - ವಿಷಯೆ ಚಂಪಕಮಾಲಿನಿಯೆಂಬೀರ್ವರನ್ನೂ ಕೂಡಿಕೊಂಡು ನಾನಾಪ್ರಕಾರದಿಂದ - ತಂಡತಂಡವಾಗಿ-ಮುದದಿಂದ-ಆನಂದದಿಂದ, ಕ್ರೀಡಿಸಿದರು-ನೀರಾಟವನ್ನಾಡಿದರು, ಬಳಿಕ-ಅನಂತರ, ಸತ್ - ಶ್ರೇಷ್ಠವಾದ, ಅಮಲ - ಸ್ವಚ್ಛವಾದ, ಸರೋವರದತೀರದೊಳ್ - ಕಾಸಾರದ ತಡಿಯಲ್ಲಿ, ಬಳಸಿ - ಆವರಿಸಿ, ಕಟ್ಟಿದ - ನಿರ್ಮಿಸಿರತಕ್ಕ, ಚಂದ್ರಕಾಂತದ-ಇಂದುಕಾಂತಶಿಲೆಯ, ಸೋಪಾನದೊಳು-ಮೆಟ್ಟಲುಗಳಿಂದ, ಒಸರ್ವ-ಸುರಿಯತಕ್ಕ, ನೀರು-ಉದಕವು, ತಮ್ಮ ಸ್ವಕೀಯವಾದ, ಆನನ-ಮುಖವೆನ್ನತಕ್ಕ, ಸುಧಾಂಶುಮಂಡಲದ-ಇಂದುಮಂಡಲದ, ಬೆಳದಿಂಗಳಿಂದ-ಚಂದ್ರಿಕೆಯಿಂದ, ಒದವಿತು-ಉಂಟಾಯಿತು, ಎನೆ-ಎಂಬಂತೆ, ಮೈಗಳ್ಗೆ-ತಮ್ಮ ದೇಹಕ್ಕೆ, ತಣ್ಣನಂ-ಶೈತ್ಯವು, ತೋರೆ-ಕಾಣಿಸಿಕೊಳ್ಳಲು, ಆಕೊಳದಿಂದ-ಆ ಕಾಸಾರದಿಂದ, ಪೊರಮಟ್ಟರು-ಹೊರಗಡೆಗೆ ಬಂದುಬಿಟ್ಟರು. ||೧೨||

ಟೀ|| ರಂಜಿತಪ್ರಕಾಶಮಾನವಾದ, ರಸಾಲ-ಚೂತವೃಕ್ಷದ, ಪಲ್ಲವ-ಚಿಗುರನ್ನು ಹೋಲುವ, ಪಾಣಿ - ಕರಗಳನ್ನೂ, ಪಾದತಳದ-ಅಂಗಾಲ್ಗಳನ್ನು ಉಳ್ಳಂತಾಗಿರತಕ್ಕ, ಅಬಲೆಯರ - ನಾರಿಯರ, ರೂಪುಗಳ್ - ಆಕೃತಿಗಳು, ಕೂಲವನು - ತೀರವನ್ನು, ಅಡರ್ದ-ಸೇರಿ, ನನದ-ನೆನೆದಿರತಕ್ಕ, ಅಂಗದ-ದೇಹದಲ್ಲಿ, ಪತ್ತಿದ-ಸೇರಿರತಕ್ಕ, ದುಕೂಲದೊಳ್ ಸೀರೆಗಳಿಂದ ಕೂಡಿದವರಾಗಿ, ಇರಲ್ಕೆ-ಇರುವದರಿಂದ, ತಾಪಸರ-ಮುನಿವರ್ಯರ, ದೃಢಮತಿಗೆ-ಸ್ಥಿರಚಿತ್ತಕ್ಕೆ, ಪ್ರತಿಕೂಲಕೃತಿಗಳೊ-ವ್ಯತಿರಿಕ್ತವಾದ ಆಕಾರಗಳೊ, ಮೋಹನದ-ಭ್ರಾಂತಿಯೆನ್ನತಕ್ಕ, ರಸದೊಳ್-ನೀರಿನಲ್ಲಿ, ಆರ್ದ್ರತೆಯನು-ತೋಯಿದು ಹೋಗಿರುವಿಕೆಯನ್ನು, ಆಂತ-ಪಡೆದ, ಚೆಲ್ವಿನ-ಚೆನ್ನಾದ, ಕಣೆಗಳೊ-ವಿಶಿಖಂಗಳೊ, ಸಾಲ-ಸಾಲಾಗಿರತಕ್ಕ, ಮಣಿಮಯದ-ರತ್ನಖಚಿತವಾದ, (ಚಂದ್ರಕಾಂತದ) ಸೋಪಾನದೊಳ್-ಮೆಟ್ಟಲುಗಳಮೇಲೆ, ನಿಲಿಸಿರ್ದ-ನಿಲ್ಲಿಸಿರತಕ್ಕ, ಸಾಲಭಂಜಕೆಗಳೊ-ಬೊಂಬೆಗಳೊ, ವಿಚಿತ್ರಂ-ಅಚ್ಚರಿಯು, ಎನೆ-ಎಂಬತೆರನಾಗಿ, ಕಣ್ಗೆ-ನಯನಂಗಳಿಗೆ, ಎಸೆದವು-ಅಂದವಾಗಿ ಕಾಣಿಸಿದವು ||೧೩||

ಟೀ|| ಉದಕದಿಂ-ಸರೋವರದ ನೀರಿನಿಂದ, ಪೊರಮಟ್ಟು - ಹೊರಹೊರಟು, ನಿಂದ-ನಿಂತುಕೊಂಡಿರತಕ್ಕ, ನೀರೆಯರ-ಸ್ತ್ರೀಯರ, ಕಾಯದಬಳಿಯ-ದೇಹಕ್ಕೆ ಸಮೀಪದಲ್ಲಿ, ನೆನೆದು-ನೆನೆದುಹೋಗಿ, ನಿಡಿಯಾಗಿ-ನೀಳವಾಗಿ, ಮಿಡಿಪರ್ಯಂತ-ಕಾಲಿನ ಕೊನೆಯತನಕ, ಇಳಿದು-ಇಳಿಬಿದ್ದು, ಜೋಲ್ವ-ನೇತಾಡುತ್ತಿರತಕ್ಕ, ಕೇಶಪಾಶಂಗಳು-ಕೂದಲ್ಗಳು, ಮನ್ಮಥಂ-ಮದ

ನೀರನ್ನು ಒಬ್ಬರಮೇಲೊಬ್ಬರು ಎರಚುತ್ತ ||೧೧|| ವಿಹರಿಸಿ ಬಹಳ ಹೊತ್ತು ನೀರಿನಲ್ಲಿದ್ದ ಕಾರಣ ತಂಪುಂಟಾಗಿ ಅಲ್ಲಿಂದ ಹೊರಹೊರಟು ||೧೨|| ಮೆಟ್ಟಲ್ಗಳ ಬಳಿಗೆ ಬಂದು ನಿಂತಿರುವುದನ್ನು ನೋಡಿದರೆ ಥಳಥಳಿಸುವ ಪುತ್ಥಳಿಗಳೆಂಬಂತೆ ಕಾಣುತ್ತಲಿದ್ದರು. ||೧೩|| ತಲೆಯನ್ನು ಮೊದಲುಮಾಡಿ ಕಾಲತುದಿಯವರೆಗೂ ನೀಳವಾದ ಕೇಶಪಾಶಂಗಳಿಂದ ಕೂಡಿಯೂ ||೧೪||

ಗಲ್ವೆಡೆಯೊ | ಳೊದಗಿದ್ದಪಲವುಕೈದುಗಳನಲ್ಲಿಜಾಡಿಸಿತೊ | ಳೆದುತೀರದೊಳ್ನಿಲಿಸಿವೇಣಿಂದೊರೆಗಳಂತೊಡಿಸಿದನೋಪೇಳೆನಲ್ಕೆ ‖ ಉದಕದಿಂಪೊಱಮಟ್ಟನಿಂದನೀರೆಯರಕಾ | ಯದಬಳಿಯನೆನೆದ-ನಿಡಿಯಾಗಿಮಿಡಿಪರಿಯಂತಿ | ಳಿದುಜೋಲ್ವಕೇಶಪಾಶಂಗಳಾ ರಾಜಿಸಿದುವೇನೆಂಬೆನಚ್ಚರಿಯನು ‖೧೪‖ ತೊಳಗುವನಿತಂಬಗಿರಿಯಿಂದಾಗಸಕೆಪರ್ಬಿ | ದೆಳೆಯವಲ್ಲಿಯಮೇಲನೆಲಸಿದೆಣೆವಕ್ಕಿಗ | ಳ್ಬಳಿವಿಡಿದುಮದನಶಬರನಬಲೆಗೆಸಿಕ್ಕಿನಭಕುಬ್ಬಿಕೊಂಡೇಳ್ವತೆರದಿ ‖ ಸಲಿಲದೊಳ್ನನೆದದಿವ್ಯಾಂಗದೊಳಡರ್ದನೆಲೆ | ಮೊಲೆಗಳ್ಮೃಗಾಕ್ಷಿಯರಚಲುವ್ವನಿ | ಚ್ಚಳದಿಂದಸಲೆಕಾಣಿಸಿದವಾಗಸಾಕಾರತೀರದೊಳ್ತೀವಿದೊಳ್ಪಿಂದಮೆಸೆವ ‖೧೫‖ ಹಿಮದಿಂದ ತಣ್ಣಸಂಬಡೆದಿರ್ದಮಾಗಿಯುಂ| ಕ್ರಮದಿಂದಜಾರಿಸಿವಸಂತರುತುತಲೆದೋರ್ವ | ಸಮಯದೊಳೇಣಾಕ್ಷಿಯರ್ನನೆದಮೈಯೊಳಿಹ ವಸನಂಗಳಂಸಡಲ್ಚಿ‖ ರಮಣೀಯಚಿತ್ರಾವಲಂಬನಶೋಭೆಗಳ| ಸವನಿಸಿದಚಂದ್ರಿಕೆಯಸೊಗಸುವೆಳೆಮಾದಳದ| ಸುಮನೋನು ರಾಗದಿಂಪಲವುಬಣ್ಣಂಗಳಂತೆಗೆದುಟ್ಟುರಂಜಿಸಿದರು ‖ ೧೬ ‖ ತಡಿಗಡದೊಡನೆಮಡಿವರ್ಗಮಂತೆಗೆದುಟ್ಟು | ನಿಡಿಗುರುಳ್ಗೆಸೆವ

---

ನನು, ತ್ರಿಜಗಮಂ-ತ್ರಿಲೋಕಂಗಳನ್ನೂ, ಅಘಟಂದ-ಸಾಹಸದಿಂದ, ಗೆಲ್ವೆಡೆಯೊಳ್-ಜಯಿಸುವಾಗ, ಒದಗಿದ್ದ-ಸಿದ್ಧವಾಗಿದ್ದ, ಪಲವು-ಹಲವು, ಕೈದು-ಗಳ-ಆಯುಧಂಗಳನ್ನು, ಅಲ್ಲಿ-ಆ ಸರೋವರದಲ್ಲಿ, ಜಾಡಿಸಿ-ಅಲ್ಲಾಡಿಸಿ, ತೊಳೆದು-ಕೊಳೆಯಿಲ್ಲದಂತೆ ತಿಕ್ಕಿ, ತೀರದೊಳ್-ತಡಿಯಲ್ಲಿ, ನಿಲಿಸಿ-ನಿಲ್ಲಿಸಿಬಿಟ್ಟು, ಮೇಣ್-ಅಲ್ಲದೆ, ಇಂದು-ಈ ಹೊತ್ತು, ಒರೆಗೆಳಂತೊಡಿಸಿದನೋ-ಕತ್ತಿಯ ಚೀಲಕ್ಕೆ ಸೇರಿಸಿದನೊ, ಪೇಳು-ಹೇಳು, ಎನಲ್ಕೆ-ಎಂಬರೀತಿಯಾಗಿ, ಆರಾಜಿಸಿದವು-ಹೊಳೆಯುತ್ತಲಿದ್ದವು, ಅಚ್ಚರಿಯನು-ಆಶ್ಚರ್ಯವನ್ನು, ಏನೆಂಬೆನು-ಏನೆಂದು ನುಡಿಯಲಿ. ‖೧೪‖

ಟೀ‖ ಆಗ-ಜಲಕ್ರೀಡೆಯನ್ನು ಮುಗಿಸಿಕೊಂಡು ಚಂದ್ರಕಾಂತದ ಮೆಟ್ಟಲುಗಳ ಬಳಿಗೆ ಬಂದ ವೇಳೆಯಲ್ಲಿ, ಕಾಸಾರ ತೀರದೊಳ್-ಸರೋವರದ ತಡಿಯಲ್ಲಿ, ತೀವಿದ-ಆವರಿಸಿದ, ಒಳ್ಪಿಂದ – ಮೇಲ್ಮೆಯಿಂದ, ಎಸೆವ – ಹೊಳೆಯತಕ್ಕ, ಮೃಗಾಕ್ಷಿಯರ-ನಾರಿಯರ, ಚಲುವು – ಅಲಂಕಾರದಿಂದ, ತೊಳಗುವ – ಹೊಳೆಯುತ್ತಲಿರುವ, ನಿತಂಬಗಿರಿಯಿಂದ ಕಟಿಪಶ್ಚಾದ್ಭಾಗವೆನ್ನತಕ್ಕ ಅದ್ರಿಯಿಂದ, ಆಗಸಕೆ-ಅಂತರಿಕ್ಷಕ್ಕೆ, ಪರ್ಬಿದ – ವ್ಯಾಪಿಸಿರುವ, ಎಳೆಯವಲ್ಲಿಯಮೇಲೆ – ಎಳೆಯದಾದ ಬಳ್ಳಿಯ ಮೇಲ್ಗಡೆ, ನೆಲಸಿದ-ಸೇರಿರುವ, ಎಣೆವಕ್ಕಿಗಳ್ – ಚಕ್ರವಕ್ಕಿಗಳು, ಬಳಿವಿಡಿದು-ಸಮಿಪವಾಗಿ, ಮದನ – ಪ್ರದ್ಯುಮ್ನನೆನ್ನುವ, ಶಬರನಬಲೆಗೆ-ಬೇಟೆಗಾರನ ಹೂಟಕ್ಕೆ, ಸಿಕ್ಕಿ-ವಶವಾಗಿ, ನಭಕೆ-ಅಂತರಿಕ್ಷಕ್ಕೆ, ಉಬ್ಬಿಕೊಂಡು – ಉನ್ನತವಾಗಿ, ಏಳ್ವತೆರದಿ-ಏಳುವ ಬಗೆಯಾಗಿ, ಸಲಿಲದೊಳ್-ಉದಕದಲ್ಲಿ, ನನದ-ನೆನೆದಿರತಕ್ಕ, ದಿವ್ಯಾಂಗದೊಳ್-ಉತ್ತಮವಾದ ದೇಹದಲ್ಲಿ, ಅಡರ್ದ-ಆವರಿಸಿರತಕ್ಕ, ನೆಲೆಮೊಲೆಗಳು – ಸ್ಥಿರವಾಗಿರತಕ್ಕ ಕುಚಂಗಳು, ನಿಚ್ಚಳದಿಂ – ಸ್ಪಷ್ಟವಾಗಿ, ಸಲೆ – ಚೆನ್ನಾಗಿ, ಕಾಣಿಸಿದವು-ಗೋಚರಿಸಿದವು. ‖೧೫‖

ಟೀ ಹಿಮದಿಂದ-ಮಂಜಿನ ದೆಸೆಯಿಂದ, ತಣ್ಣಸಂಪಡೆದಿರ್ದ – ತಣ್ಣಗಾಗಿದ್ದ, ಮಾಗಿಯಂ – ಮಾರ್ಗಶಿರ ಪುಷ್ಯವೆಂಬೆರಡು ತಿಂಗಳುಗಳನ್ನು, ಕ್ರಮದಿಂದ – ಕಾಲಕ್ರಮದಿಂದ, ಜಾರಿಸಿ – ಹೋಗಲಾಡಿಸಿ, ವಸಂತಋತು – ಚೈತ್ರ ವೈಶಾಖ ಮಾಸಗಳು, ತಲೆದೋರ್ವಸಮಯದೊಳು-ಕಾಣಬರುವ ವೇಳೆಯಲ್ಲಿ, ಏಣಾಕ್ಷಿಯರು-ಮೃಗಾಕ್ಷಿಯರಾದರೊ, ನನದ – ಒದ್ದೆಯಾದ, ಮೈಯೊಳು-ದೇಹದಲ್ಲಿ, ಇಹ-ಇರತಕ್ಕ, ವಸನಂಗಳಂ-ವಸ್ತ್ರಂಗಳನ್ನು, ಸಡಲ್ಚಿ-ಕಳೆದು, ರಮಣೀಯ-ಕಾಂತಿಯುಕ್ತವಾದ, ಚಿತ್ರಾವಲಂಬನದ-ಆಚ್ಚರಿಯಂ ಬೀರುವ, ಶೋಭೆಗಳ-ಕಳೆಗಳನ್ನು, ಸಮನಿಸಿದ-ಉಂಟಾಗಿರತಕ್ಕ, ಚಂದ್ರಿಕೆಯ-ಜೊನ್ನದ, ಸೊಗಸುವ-ಕಾಂತಿ ವಿಶಿಷ್ಟವಾಗಿರತಕ್ಕ, ಎಳೆಮಾದಳದ-ಎಳೆಮಾದಾಳ ಹಣ್ಣಿನ, ಸುಮನ-ಕುಸುಮಂಗಳ, ಅನುರಾಗದಿಂ-ವರ್ಣದಿಂದ ಕೂಡಿರತಕ್ಕ, ಪಲವು-ವಿಧವಿಧವಾದ, ಬಣ್ಣಗಳಂ-ಸೀರೆಗಳನ್ನು, ತೆಗೆದು-ಸ್ವೀಕರಿಸಿ, ಉಟ್ಟು-ಉಟ್ಟುಕೊಂಡು, ರಂಜಿಸಿದರು-ಹೊಳೆಯುತ್ತಲಿದ್ದರು. ‖೧೬‖

ಟೀ‖ (ಆ ಉದ್ಯಾನವನದ ಭಾಗದಲ್ಲಿದ್ದ ವಿಷಯೆ ಚಂಪಕಮಾಲಿನಿ ಮೊದಲಾದವರೆಲ್ಲ) ತಡಿಗೆ-ಸರೋವರದ ದಡಕ್ಕೆ, ಅಡರ್ದು-ಏರಿಬಂದು, ಮಡಿವರ್ಗಮಂ – ಚೆನ್ನಾಗಿ ಒಗೆದು ಶುಚಿಯಾಗಿರುವ ಮಡಿ ವಸ್ತ್ರಗಳನ್ನು, ಒಡನೆ – ಕೂಡಲೆ, ತೆಗೆದುಕೊಂಡು-ಸ್ವೀಕರಿಸಿ, ಉಟ್ಟು – ಉಟ್ಟುಕೊಂಡವರಾಗಿ, ಎಸೆವ-ಹೊಳೆಯತಕ್ಕ, ಧೂಪದಪೊಗೆಗಳಂ – ಸಾಂಬ್ರಾಣಿಯ ಹೊಗೆ

---

ದೊಡ್ಡ ದೊಡ್ಡ ಕುಚಂಗಳಿಂ ಶೋಭಿಸುತ್ತಲೂ ‖೧೫‖ ಸುವರ್ಣ ಸದೃಶವಾದ ತನುಛಾಯೆಯುಳ್ಳವರಾಗಿಯೂ ಇರುವ ಆ ಬಾಲೆಯರು ಪ್ರಕಾಶಮಾನವಾದ ಪಟ್ಟೆ ಮಡಿಗಳನ್ನುಟ್ಟುಕೊಂಡು ‖೧೬‖ ನಾನಾ ಪ್ರಕಾರವಾದ ಆಭರಣಂಗಳನ್ನು ಧರಿಸಿದವರಾಗಿ, ಹಣೆಗೆ ಕುಂಕುಮವನ್ನಿಟ್ಟುಕೊಂಡು, ಕಾಲ್ಗಳಿಗೆ ಅಲಕ್ತರಸವನ್ನೂ, ಕಣ್ಣುಗಳಿಗೆ ಕಾಡಿಗೆಯನ್ನೂ, ತುರುಬಿಗೆ ಸುವಾಸನೆಯಂ ಬೀರುವ ಕುಸುಮಂಗಳನ್ನೂ, ಕೆನ್ನೆಗೆ ಮಕರಿಕಾ ಪತ್ರವನ್ನು ಇರಿಸಿಕೊಂಡು ಮಧುಪಾನದಿಂದ ಮೆರೆಯುತ್ತ

ಧೂಪದೆಪೊಗೆಗಳಂಕೊಟ್ಟು|ತೊಡವೆಲ್ಲಮಂತೊಟ್ಟುಪಣೆಗೆತಿಲಕವನಿಟ್ಟುತಿಗುರಿಂದಸೊಬಗುವಟ್ಟು|| ಅಡಿಗಲತಿಕೆಯನಕ್ಷಿಗಂಜನವಲರ್ಗಳಂ|ಮುಡಿಗೆನುಣ್ಗದಪಿಂಗೆಮಕರಪತ್ರಮನಾಂತು|ಬಿಡದೆಮಧುಪಾನಮಂಮಾಡಿಕರ್ಪುರವೀಳೆಯಗೊಂಡುಸೊಗಯಿಸಿದರು ೧೭ ಬಳಿಕೋರ್ವರೋರ್ವರಂನೋಡುತ್ತಕೂಡುತ್ತ|ನಲವಿಂದನೃತ್ತಮಂಮಾಡುತ್ತಪಾಡುತ್ತಲೆಳಸಿಂಸೋಕ್ತಿಗಳನಾಡುತ್ತತೀಡುತ್ತಬೆಳ್ನಗೆಯಬೆಡಗುಗಳನು| ಅಲರ್ಗಳಂ ತೆಗೆತೆಗೆದುನೀಡುತ್ತಸೂಡುತ್ತಲಲಿತಮಧುಚಷಕಮಂಬೇಡುತ್ತಕಾಡುತ್ತ| ಕಲೆಗಳವಿಲಾಸಮಂಪೂಡುತ್ತಕೂಡುತ್ತಕಣ್ಗೆಸೆದರೆಳೆವೆಣ್ಗಳು||೧೮||ಆಳಿಯರೊಳಿಂತುಚಂಪಕಮಾಲಿನಿಗೆಸರಸ| ಕೇಳಿವೆಗ್ಗಳಿಸಿರ್ಪಸಮಯದೊಳಗೊರ್ಯ್ಯುಬೇಳಂಬದಿಂದಕೆಲಸಿಡಿದುಬಂದಾವಿಷಯೆಚೂತದ್ರುಮದನೆಳಲೊಳು||ತೋಳತಲೆದಿಂಬಿನತಳಿರ್ಸಸೆಯಮೇಲೆ|ಗಾಳಿಗೊಡ್ಡಿದಮಯ್ಯಸೊಗಸಿಂದಮರೆದುನಿ|ದ್ರಾಲೋಲನಾಗಿಮಲಗಿಹಚಂದ್ರಹಾಸನಂಕಂಡುಸ್ವೈರಂಗಾದಳು||೧೯|| ಲೋಕತ್ರಯಂತನಗೆ

---

ಯಿಸ್ನು, ನಿಡಿಗುರುಳ್ಗೆ-ಉದ್ದವಾದ ತಮ್ಮ ಕೂದಲುಗಳಿಗೆ, ಕೊಟ್ಟು-ಕೊಟ್ಟವರಾಗಿ, ತೊಡವೆಲ್ಲಮಂ-ಆಭರಣಾದಿಗಳನ್ನೆಲ್ಲಾ, ತೊಟ್ಟು-ಧರಿಸಿ, ತಿಲಕವನು-ಕುಂಕುಮನ್ನು, ಪಣೆಗೆ-ಫಾಲಪ್ರದೇಶದಲ್ಲಿ, ಇಟ್ಟು-ಇಟ್ಟುಕೊಂಡವರಾಗಿ, ತಿಗುರಿಂದ-ಲೇಪಿಸಿಕೊಂಡಿರತಕ್ಕ ಸುಗಂಧದಿಂದ, ಸೊಬಗುವಟ್ಟು-ಅಲಂಕೃತರಾಗಿ, ಅಲತಿಕೆಯನು-ಅಲಕ್ತವೆಂಬೊಂದು ರಸವನ್ನು, ಅಡಿಗೆ-ಕಾಲುಗಳಿಗೂ, ಅಂಜನ-ಕಪ್ಪನ್ನು, ಅಕ್ಷಿಗೆ-ಕಣ್ಣುಗಳಿಗೂ, ಅಲರ್ಗಳಂ-ಹೂವನ್ನು, ಮುಡಿಗೆ-ತಲೆಗೂ, ಮಕರಪತ್ರವನು-ಮಕರಿಕಾಪತ್ರಾದಿಗಳನ್ನು, ನುಣ್ಗದಪಿಂಗೆ-ನುಣ್ಣಗಿರುವ ಕಪೋಲಂಗಳಿಗೂ, ಆಂತು-ಇರಿಸಿಕೊಂಡವರಾಗಿ, ಮಧುಪಾನಮಂ-ಮದ್ಯದ ಕುಡಿಯುವಿಕೆಯನ್ನು, ಬಿಡದೆ-ತಪ್ಪದೆ, ಮಾಡಿ-ನೆರವೇರಿಸಿ, ಕರ್ಪೂರವೀಳಯವಂ-ಪಚ್ಚಕರ್ಪೂರಸಹಿತವಾದ ತಾಂಬೂಲವನ್ನು, ಕೊಂಡು-ಸ್ವೀಕರಿಸಿ, ಸೊಗಯಿಸಿದರು-ಕಾಂತಿಯುಕ್ತರಾಗಿದ್ದರು || ೧೭ ||

ಟೀ|| ಬಳಿಕ-ಆಮೇಲೆ, ಎಳೆವೆಣ್ಗಳು-ಅಲ್ಲಿ ನೆರದಿದ್ದ ಬಾಲೆಯರಾದರೊ, ಓರ್ವರು-ಒಬ್ಬರು, ಓರ್ವರಂ-ಬೇರೊಬ್ಬರನ್ನು, ನೋಡುತ್ತ-ನಿರುಕಿಸುತ್ತ, ಕೂಡುತ್ತ-ಒಬ್ಬರೊಂದಿಗೆ ಒಬ್ಬರು ನೆರೆಯುತ್ತ, ನೃತ್ಯಮಂ-ನಾಟ್ಯವನ್ನು, ನಲನಿಂದ-ವಿಶ್ವಾಸದಿಂದ, ಮಾಡುತ್ತ-ಎಸಗುತ್ತ, ಪಾಡುತ್ತ-ಗಾನಮಾಡುತ್ತ ನೆಲಸಿ-ಕುಳಿತುಕೊಂಡು, ಸರಸ-ರಸಭರಿತಮಾದ, ಉಕ್ತಿಗಳನು-ಮಾತುಗಳನ್ನು, ಆಡುತ್ತ-ನುಡಿಯುತ್ತಲೂ, ಬೆಳ್ನಗೆಯ-ಹುಸಿನಗುವಿನ, ಬೆಡಗುಗಳನು-ವೈಯ್ಯಾರವನ್ನು, ತೀಡುತ್ತ-ತೋರ್ಪಡಿಸುತ್ತ, ಅಲರ್ಗಳಂ-ಕುಸುಮಂಗಳನ್ನು, ತೆಗೆತೆಗೆದು-ಹೆಚ್ಚುಹೆಚ್ಚಾಗಿ ಕೊಯಿದವರಾಗಿ, ನೀಡುತ್ತಕೊಡುತ್ತಲೂ, ಸೂಡುತ್ತ-ತುರುಬಿಗೆ ಸೇರಿಸುತ್ತ, ಲಲಿತ-ಅಂದವಾದ, ಮಧುಚಷಕಮಂ-ಮದ್ಯದ ಪಾತ್ರೆಯನ್ನು, ಬೇಡುತ್ತ-ಕೇಳುತ್ತಲೂ, ಕಾಡುತ್ತ-ಆತುರವನ್ನೂ ತೊಂದರೆಯನ್ನೂ ಉಂಟುಮಾಡುತ್ತ, ಕಲೆಗಳ-ಮನ್ಮಥವಿಕಾರವಾದ, ವಿಲಾಸಮಂ-ನಡವಳಿಕೆಗಳನ್ನು, ಪೂಡುತ್ತ-ಎಸಗುತ್ತಲೂ, ಕೂಡುತ್ತ-ಒಟ್ಟೊಟ್ಟಾಗಿ ನೆರೆಯುತ್ತಲೂ, ಕಣ್ಗೆ-ನೋಟಕ್ಕೆ, ಎಸೆದರು-ಅಂದವಾಗಿ ಕಾಣಿಸಿದರು||೧೮

ಟೀ|| ಆಳಿಯರೊಳು - ಜೊತೆಗಾತಿಯರೊಂದಿಗೆ, ಚಂಪಕಮಾಲಿನಿಗೆ - ಚಂಪಕಮಾಲಿನೀ ಎಂಬ ಅರಸುಕುವರಿಗೆ, ಸರಸಕೇಳಿ-ಸರಸವಾದ ಕ್ರೀಡೆಯು, ಇಂತು-ಈ ಪ್ರಕಾರವಾಗಿ, ವೆಗ್ಗಳಿಸಿ-ಮಿತಿಮಿೀರಿ, ಇರ್ದ-ಇದ್ದಂಥ, ಸಮಯದೊಳ್-ಕಾಲದಲ್ಲಿ ಆ ವಿಷಯೆ, ಅಲರ್ಗೊಯ್ಯ-ಹೂಗಳನ್ನು ಬಿಡಿಸುವ, ಬೇಳಂಬದಿಂದ-ಕೆಲಸದಿಂದ, ಕೆಲಸಿಡಿದು-ಒಬ್ಬಳೇ ಹೊರಟು, ಚೂತದ್ರುಮದ-ರಸಾಲವೃಕ್ಷದ, ನೆಳಲೊಳ್-ನೆರಳಿನಲ್ಲಿ, ತೋಳ್-ತನ್ನಕೈಯ್ಯನ್ನೆ, ತಲೆದಿಂಬಿನ-ತಲೆದಿಂಬಾಗಿ ಮಾಡಿಕೊಂಡಿರುವ, ತಳಿರ್ವಸೆಯಮೇಲೆ-ಚಿಗುರಾದ ಎಲೆಹಾಸಿನಲ್ಲಿ, ತಂಗಾಳಿಗೆ-ತಣ್ಣಗಿರುವ ವಾಯುವಿಗೆ, ಒಡ್ಡಿದ-ಚಾಚಿರುವ, ಮೈಸೊಗಸಿಂದ-ದೇಹದ ಅಲಂಕೃತಿಯಿಂದ, ಮರೆದ-ಸ್ಮೃತಿತಪ್ಪಿ, ನಿದ್ರಾಲೋಲನಾಗಿ- ನಿದ್ರೆಯಲ್ಲಿ ಆಶೆಯುಳ್ಳವನಾಗಿ, ಮಲಗಿಹ-ಮಲಗಿಕೊಂಡಿರತಕ್ಕ, ಚಂದ್ರಹಾಸನಂಕಂಡು-ಇಂದುಹಾಸನನ್ನು ನಿರುಕಿಸಿ, ಸ್ವೈರಂಗಾದಳು-ಅಚ್ಚರಿಗೊಂಡಳು ||೧೯||

ಟೀ|| ತನಗೆ-ಮಿೀನಕೇತನನಿಗೆ, ಲೋಕತ್ರಯಂ-ಸ್ವರ್ಗ, ಮರ್ತ್ಯ, ಪಾತಾಳಂಗಳು, ವಶವರ್ತಿಯಾದುದು-ಕೈಸೇರಿತು, ಇನ್ನು-ಹೀಗಾದಬಳಿಕ, ಧಾವತಿ-ಅವಸರವು, ಏಕೆ-ಏತಕ್ಕೆ, ಎಂದು-ಎಂಬುದಾಗಿ ಎಂದುಕೊಂಡು, ಕಬ್ಬುವಿಲ್ಲನು-ಮದನನು, ಸುಖದಿಂದ-ನಿರುಪಾಧಿಕವಾಗಿ, ಪವಡಿಸಿದನೊ-ನಿದ್ರೆಗೈಯ್ಯುವನೊ, ಎನೆ-ಎಂಬಂತೆಯೂ, ಸೋಮನು-ಇಂದುವು,

---

ತ್ತಲಿದ್ದರು ||೧೮|| ಈ ಪ್ರಕಾರವಾಗಿ ವಿಷಯೆ ಚಂಪಕಮಾಲಿನಿಯರು ಸಖೀಜನರಿಂದೊಡಗೂಡಿ ಉದ್ಯಾನದಲ್ಲೆಲ್ಲಾ ತಿರುಗಾಡುತ್ತಲಿರುವಾಗ ವಿಷಯೆ ಎಂಬ ದುಷ್ಟಬುದ್ಧಿಯ ಕುವರಿಯು ಅತ್ಯಾತುರದಿಂದ ಅಲ್ಲಲ್ಲಿ ತಿರುಗಾಡುತ್ತಾ ಅವರ ಗುಂಪನ್ನೆಲ್ಲಾ ಬಿಟ್ಟು ಏಕಾಕಿನಿಯಾಗಿ ಬರುತ್ತಾ ಬಲು ಚೆನ್ನಾಗಿ ಚಿಗುರಿರುವ ಮಾವಿನ ಮರದ ಬಳಿಗೆ ಬಂದಳು. ಆ ಮರದ ಬುಡದಲ್ಲಿ ಮಲಗಿ ನಿದ್ರಿಸುತ್ತಲಿರುವ ಚಂದ್ರಹಾಸನನ್ನು ನೋಡಿ ||೧೯|| ಮೂರುಲೋಕಗಳನ್ನೂ ವಶಮಾಡಿಕೊಂಡ ಮನ್ಮಥನಂತೆಯೂ, ಆಕಾಶದಲ್ಲೆಲ್ಲಾ ಸುತ್ತಿಸುತ್ತಿ ಬಳಲಿರತಕ್ಕ ಚಂದ್ರನೆಂಬತೆನಾಗಿಯೂ, ಲಕ್ಷ್ಮಿಯೊಂದಿಗೆ ರಮಿಸಿ ಆಯಾಸವನ್ನೈದಿರುವ

ವಶವರ್ತಿಯಾದುದಿ | ನ್ನೇಕೆಧಾವತಿಯೆಂದುಸುಖದಿಂದಪವಡಿಸಿದ | ನೋ ಕಬ್ಬು ವಿಲ್ಲನೆನೆಬೇಸರದೆಬಾಂದಳದೊಳಾವಗಂನಡೆವ ಬವಣೆ || ಸಾಕೆಂದುನಿದ್ರೆಗೈದನೊಸೋಮನೆನೆವನ | ಶ್ರೀಕಾಮಿನಿಯರತಿಶ್ರಮದೊಳೊರಗಿದನೊಕುಸುಮಾಕರನೆನಲ್ಕೆಮಲಗಿಹ ಚಂದ್ರಹಾಸನಂಕಂಡುವಿಸ್ಮಿತೆಯಾದಳು || ೨೦ || ಓರ್ವರೋರ್ವರನಗಲ್ದಶ್ವಿನೀದೇವತೆಗಳೋರ್ವನಳಕೂಬರಜಯಂತಾದಿಸುರ ತನುಜ | ರೋರ್ವರೆಗದೇಕೆ ಬಹರಿನಶಶಿಗಳಾದೊಡಿಹುದುಷ್ಣಶೀತದ್ಯುತಿಗಳು || ಗೀರ್ವಾಣಯಕ್ಷಕಿನ್ನರಸಿಗರುಡಗಂಧ ರ್ವರೊಳಗಾವನೋ ಮನುಜನಲ್ಲೆಂದವನ | ಸರ್ವಾಂಗಮುಂಬಿಡದೆ ನೋಡಿದಳ್ವಿಷಯೆವಿಷಯಾಸಕ್ತಿಯಾಗಿಬಳಿಕ || ೨೧ || ಬೆಚ್ಚನಳೆಗಂಗಳವಯವರಂಗಚಲ್ವಿನೋ | ಳ್ಬೆಚ್ಚನಂಗಜನಾಗಕಿವಿವರೆಗೆತೆಗೆದುತುಂ | ಬೆಚ್ಚಲಗೊರ್ಲಂತರಂಗದೋಳ್ನಾಂಟಿ ದುವುದಾಂಟಿದುವುಗರಿಗಳೊಡನೆ || ಬೆಚ್ಚನಾದೆದೆಯಿಂದಕಾತರಿಸಿಮುದುಡಿಗೊಂ | ಡೆಚ್ಚರಿಂದೇಳ್ವರೋಮಾಂಚನದೊಳಾ

---

ಬೇಸರದೆ-ಆಲಸ್ಯಪಡವೆ, ಬಾಂದಳದೊಳು-ಅಂತರಿಕ್ಷದಲ್ಲಿ, ಆವಗಂ-ಅನವರತವೂ, ನಡೆವ-ತಿರುಗಾಡುವ, ಬವಣೆ-ವ್ಯಥೆಯು, ಸಾಕು-ಇನ್ನುಬೇಡ, ಎಂದು-ಎಂಬುದಾಗಿ, ನಿದ್ರೆಗೈದನೊ-ನಿದ್ರೆಯನ್ನುಮಾಡುತ್ತಲಿದ್ದಾನೊ, ಎನೆ-ಎಂಬಪರಿಯಿಂದಲೂ, ಕುಸುಮಾಕರನು-ವಸಂತನೆಂಬುವನು, ವನಶ್ರೀ-ಉದ್ಯಾನವನ ಲಕ್ಷ್ಮೀದೇವಿಯೆಂಬ, ಕಾಮಿನಿ-ಸ್ತ್ರೀಯೊಡನೆ, ರತಿ-ರಮಿಸಿ ದ್ದರಿಂದುಂಟಾದ, ಶ್ರಮೆಯೊಳು-ಬಳಲಿಕೆಯಿಂದ, ಒರಗಿದನೊ-ನಿದ್ರೆಯಂಗೈದನೊ,ಎನಲ್ಕೆ-ಎನ್ನುವಬಗೆಯಿಂದಲೂ, ಮಲಗಿಹ-ಮಲಗಿಕೊಂಡಿರತಕ್ಕ, ಚಂದ್ರಹಾಸನಂ-ಇಂದುಹಾಸನನ್ನು, ಕಂಡು-ನಿರುಕಿಸಿ, ವಿಸ್ಮಿತೆಯಾದಳು-ಆಚ್ಚರಿಗೊಂಡಳು ||೨೦||

ಟೀ|| ಬಳಿಕ-ಅನಂತರ, ವಿಷಯೆ-ವಿಷಯೆ ಎಂಬ ಮಂತ್ರಿಯ ಮಗಳು, ವಿಷಯಾಸಕ್ತೆಯಾಗಿ-ಮನ್ಮಥೋದ್ರೇಕ ದಿಂದ ಕೂಡಿ, (ತನ್ನ ಮನದಲ್ಲಿ) ಓರ್ವರನು-ಒಬ್ಬರನ್ನು, ಓರ್ವರು-ಬೇರೊಬ್ಬರು, ಅಗಲ್ದು-ಬಿಟ್ಟಿರತಕ್ಕ, ಅಶ್ವಿನೀದೇವತೆ ಗಳೊ, ಓರ್ವ-ಒಂಟಿಯಾದ,ನಳಕೂಬರ-ಧನಪತಿಯಮಗನು,ಜಯಂತ-ಇಂದ್ರಸುತನು, ಆದಿ-ಮೊದಲಾಗಿರತಕ್ಕಸುರತನುಜರು-ದೇವತೆಗಳ ಮಕ್ಕಳು, ಉರ್ವರೆಗೆ-ಭೂಲೋಕಕ್ಕೆ, ಅದೇಕೆ-ಏನುಕಾರಣದಿಂದ, ಬಹರು-ಬರುತ್ತಾರೆ, ಇನಶಶಿಗಳಾದೊಡೆ-ನಿಶಾಕರನಾಗಲಿ ದಿನಕರನಾಗಲಿ ಆಗಿದ್ದರೆ, ಉಷ್ಣಶೀತದ್ಯುತಿಗಳು-ಶಾಖವಾದ ಮತ್ತು ತಂಪಾದ ಕಳೆಯು, ಇಹುದು-ಕಂಗೊ ಳಿಸಬೇಕಾಗಿತ್ತು, ಗೀರ್ವಾಣ-ಸುರರು, ಯಕ್ಷ-ಯಕ್ಷರೆನ್ನುವ ದೇವತೆಗಳ ಭೇಧದವರು, ಕಿನ್ನರ-ಕಿನ್ನರರು, ಸಿದ್ಧ-ಸಿದ್ಧರು, ಗರುಡ-ಗರುತ್ಮಂತನು, ಗಂಧರ್ವರೊಳಗೆ-ಗಂಧರ್ವರಲ್ಲಿ, ಆವನೊ-ಯಾರೊ ಆಗಿರಬೇಕು, ಮನುಜನು-ನರನು, ಅಲ್ಲ-ಅಲ್ಲವು, ಎಂದು-ಎಂಬತೆರನಾಗಿ, ಬಿಡದೆ-ತಪ್ಪದೆ, ಅವನ-ಆ ಇಂದುಹಾಸನ, ಸರ್ವಾಂಗಮಂ-ದೇಹದ ಭಾಗಗಳನ್ನೆಲ್ಲಾ, ನೋಡಿದಳು-ಈಕ್ಷಿಸಿದಳು. || ೨೧ ||

ಟೀ|| ಅವನ-ಆ ಇಂದುಹಾಸನ, ಅವಯವದ-ದೇಹದ ಭಾಗಗಳ, ಚಲ್ವಿನೊಳ್-ಅಂದದಿಂದ, ಎಳೆಗಂಗಳು-ಆ ವಿಷ ಯೆಯ ನೇತ್ರಂಗಳು, ಬೆಚ್ಚವು-ಹೆದರಲಿಲ್ಲವು, (ಚಂದ್ರಹಾಸನಲ್ಲಿಯೇ ಮನಸ್ಸಾಯಿತು) ಅಂಗಜನು-ಮೀನಕೇತನನೂ,ಬೆಚ್ಚನು-ಹೆದರಲಿಲ್ಲವು. (ಮನ್ಮಥೋದ್ರೇಕವಾಯಿತು) ಆಗ-ಆ ಕಾಲದಲ್ಲಿ, ಕಿವಿಯವರೆಗೆ-ಕಿವಿಯತನಕ, ತೆಗೆದು-ಎಳೆದು, ತುಂಬ-ಚೆನ್ನಾಗಿ, ಎಚ್ಚಲ್-ಹೊಡೆಯಲು, ಅಂತರಂಗದೊಳ್-ಮರ್ಮಸ್ಥಳದೊಳಗೆ, ಅಲರ್ಗೋಲು-ಕುಸುಮಶರವು, ನಾಂಟಿದವು-ಪ್ರವೇಶಮಾಡಿದವು, ಗರಿಗಳೊಡನೆ-ರೆಕ್ಕೆಗಳೊಂದಿಗೆ, ದಾಂಟಿದವು-ಹೊರಟವು, ಬೆಚ್ಚನಾದ-ಭ್ರಾಂತಿಯನ್ನೈದಿದ, ಎದೆಯಿಂದ-ಮರ್ಮಸ್ಥಾನದಿಂದ, ಕಾತರಿಸಿ-ಹೆದರಿ, ಮುದುಡುಕೊಂಡು-ಆನಂದವನ್ನೈದಿ, ಎಚ್ಚರಿಂದ-ಜಾಗರೂಕತೆಯಿಂದ, ಏಳ್ವ-ಏಳ ತಕ್ಕ, ರೋಮಾಂಚನದೊಳು-ರೋಮಾಂಚದಿಂದ, ಆಶೆ-ಇಷ್ಟವು, ಮುಂಬೆಚ್ಚೆ-ಮುಂದುವರಿಸುತ್ತಿರಲಾಗಿ, ಬೆವರುವ-ಬೆವರುಂ ಟಾಗುವ, ಬಾಲೆ-ಕನ್ಯೆಯಾದ ವಿಷಯೆಯು, ಬೇಸರದೆ-ಬೇಜಾರುಪಡದೆ, ನಿಂದು-ನಿಂತವಳಾಗಿ, ನಿಟ್ಟಿಸುತ-ಚಂದ್ರಹಾಸನನ್ನೇ ನೋಡುತ್ತ, ಇರ್ದಳು-ಇರುತ್ತಲಿದ್ದಳು, ಏವೇಳ್ವೆನು-ಏನೆಂದು ನುಡಿಯಲಿ || ೨೨ ||

ಟೀ|| (ವಿಷಯೆ) ಸುತ್ತ-ಎಲ್ಲಾದಿಕ್ಕಿನಲ್ಲಿಯೂ, ಒಮ್ಮೆ-ಒಂದಾವರ್ತಿ, ನೋಡುವಳು-ನೋಡುತ್ತಾಳೆ, ಒಮ್ಮೆ-

---

ಮಹಾವಿಷ್ಣುವೆಂಬ ಪರಿಯಿಂದಲೂ ಭ್ರಾಂತಿಗೊಂಡವಳಾಗಿ ||೨೦|| ಆ ಬಳಿಕ ಈ ಮಹಾಪುರುಷನಾದ ಚಂದ್ರಹಾಸನಲ್ಲಿಯೇ ನಾಟಿದ ಮನಸ್ಸುಳ್ಳ ವಿಷಯೆಯಾದರೊ, ಆಹಾ! ಈತನು ಅಶ್ವಿನೀ ದೇವತೆಗಳಲ್ಲಿ ಯಾರೋ ಕಾಣೆನು. ನಳಕೂಬರ ಜಯಂ ತರೆಂದು ಸಂಶಯಪಡಲು ಕಾರಣವಿಲ್ಲವು. ಸೂರ್ಯಚಂದ್ರರಾಗಿದ್ದರೆ ಇನನಲ್ಲಿ ಉಷ್ಣವಾಗಲಿ ಶೈತ್ಯವಾಗಲೀ ಇರಬೇಕಾ ಗಿತ್ತು. ಈತನು ಗರುಡನೊ, ಗಂಧರ್ವನೊ, ಯಕ್ಷಕಿನ್ನರಾದಿಗಳಲ್ಲಿ ಯಾರೋ ತಿಳಿಯದಲ್ಲಾ ||೨೧|| ಈತನ ರೂಪ ಲಾವಣ್ಯಾದಿ ಗಳಿಂದ ಮನ್ಮಥನಕಾಂತಿಯೂ ಹೇಯವಾಗಿದೆಯಲ್ಲಾ! ಎಂದು ಅವನನ್ನೇನೋಡುತ್ತ, ಆ ಚಂದ್ರಹಾಸನಮೇಲೆಯೇ ಅತ್ಯಂತ ಪ್ರೇಮವುಳ್ಳವಳಾಗಿ ಮೈಯಲ್ಲಿ ರೋಮಾಂಚವನ್ನೈದಿ || ೨೨ || ಭ್ರಾಂತಮನಸ್ಕಳಾಗಿ, ಒಂದುಬಾರಿ ಅವನ ಹತ್ತಿರಕ್ಕೆ ಬರು

ಶೆಮುಂ| ಬೆಚ್ಚಿಬೆಮರುವಬಾಲೆಬೇಸಂದೆನಿಂದುಸಿಟ್ಟುಸುತಿರ್ದಳೀವೇಳ್ಪೆನು||೨೨|| ಸುತ್ತನೋಡುವಳೊಮ್ಮೆನೂಪುರವಲುಗದಂತೆ| ಹತ್ತೆಸಾರುಳೊವಮ್ಮೆಸೋಂಕಲೆಂತಹುದೆಂದು | ಮತ್ತೆಮುರಿದಪಳೊಮ್ಮೆಹೆಜ್ಜೆಹೆಜ್ಜೆಯಮೇಲೆಸಲ್ವಳಮ್ಮದೆನಿಲ್ವಳು || ಚಿತ್ತದೊಳ್ನಿಶ್ಚೈಸಿನೆರೆಯೊಳೆಳಸುವಳೊಮ್ಮೆ | ಹೊತ್ತಲ್ಲದನುಚಿತಕೆಬೆದರಿಹಿಂಗುವಳೊಮ್ಮೆ | ತತ್ತಳದಬೇಟದೊಳ್ಬೆಂಡಾಗಿ ವಿಷಯೆನಿಂದಿರ್ದಳಾತನಪೊರೆಯೊಳು ||೨೩|| ದಿವಿಜೇಂದ್ರತನಯಕೇಳೀತೆರದೊಳಾಗನವ | ಯುವತಿನಿಂದೀಕ್ಷಿಸುತಕಂಡಳವನಂಗದೊಳೆ| ಸೆವರುಚಿರಕಂಚುಕದತುದಿಸೆರಗಿನೊಳ್ಕಟ್ಟಿಕೊಂಡಿರ್ದಪತ್ರಿಕೆಯನು || ತವಕದಿಂಬಿಟ್ಟುಮುದ್ರೆಯನೊಸರಿಸಿತೆಗೆದು ವಿವರದೊಳ್ತನ್ನತಂದೆಯಹೆಸರಬರಹಮಿರೆ| ಲವಲವಿಕೆಮಿಗೆನೋಡಿಹರುಷಪುಳಕದೊಳಂದುನಿಂದೋದಿಕೊಳುತಿರ್ದಳು ||೨೪|| ಶ್ರೀಮತ್ಸಚಿವಶಿರೋಮಣಿದುಷ್ಟಬುದ್ಧಿಸು | ಪ್ರೇಮದಿಂತನ್ನಮಗಮದನಂಗೆಮಿಗೆಪರಸಿ | ನೇಮಿಸಿದಕಾರ್ಯಮಿಾಚಂದ್ರಹಾಸಂ

---

ಮತ್ತೊಂದಾವರ್ತಿ, ನೂಪುರವು-ಕಾಲ್ಗಡಗವು, ಅಲುಗದಂತೆ-ಅಲ್ಲಾಡದಹಾಗೆ, ಹತ್ತಿರ-ಚಂದ್ರಹಾಸನ ಬಳಿಗೆ, ಸಾರುವಳು-ಹೋಗಿ ಸೇರುವಳು, ಸೋಂಕಲು-ಸ್ಪರ್ಶವಂಗೈಯ್ಯಲು, ಎಂತು-ಹೇಗೆ, ಅಹುದು-ಆದೀತು, ಎಂದು-ಎಂಬತೆರನಾಗಿ, ಮತ್ತೆ-ತಿರುಗಿ, ಮುರಿದಪಳ-ಹಿಮ್ಮೆಟ್ಟುವಳು, ಹೆಜ್ಜೆ ಹೆಜ್ಜೆಯಮೇಲೆ-ಹೆಜ್ಜೆಯಮೇಲೆ ಹೆಜ್ಜೆಹಾಕುತ್ತ, ಸಲ್ವಳು-ಹಿಂದಕ್ಕೂ ಮುಂದಕ್ಕೂ ತಿರುಗಾಡುವಳು, ಅಮ್ಮದೆ-ಇಂದುಹಾಸನು ಎಚ್ಚರನಾಗುವಂತೆ ಮಾಡಲಾಗದೆ, ನಿಲ್ವಳು-ನಿಂತುಕೊಳ್ಳುವಳು, ಚಿತ್ತದೊಳ್-ತನ್ನ ಮನದೊಳಗೆ, ನಿಶ್ಚೈಸಿ-ಇವನನ್ನು ಎಬ್ಬಿಸಬೇಕೆಂದು ದೃಢೀಕರಿಸಿಕೊಂಡು, ನೆರೆಯಲು-ಅವನೊಂದಿಗೆ ಬೆರೆಯಲು, ಒಮ್ಮೆ-ಒಂದಾವರ್ತಿ, ಎಳಸುವಳು-ಆಶೆಪಡುವಳು, ಹೊತ್ತು-ಅವನೊಂದಿಗೆ ಬೆರೆಯತಕ್ಕ ಕಾಲವು, ಅಲ್ಲದೆ-ಆಗದೆ ಇರುವ ಕಾರಣ, ಅನುಚಿತಕೆ-ಆ ಕೃತ್ಯಕ್ಕೆ, ಬೆದರಿ-ಹೆದರಿಕೊಂಡು, ಹಿಂದಿರುಗುವಳು- ಹಿಂಜರಿಯುವಳು, ತತ್ತಳದ-ಆಶೆಯಾಗಿರುವ, ಬೇಟದೊಳ್-ಕೂಡುವುದರಲ್ಲಿ ಬೆಂಡಾಗಿ-ಶಕ್ತಿ ಕುಂದಿ, ಆತನ-ಆ ಇಂದುಹಾಸನ, ಪೊರೆಯೊಳು-ಹತ್ತಿರದಲ್ಲಿಯೆ, ನಿಂದಿಹಳು-ನಿಂತುಕೊಂಡಿದ್ದಳು. ||೨೩||

ಟೀ|| ದಿವಿಜೇಂದ್ರತನಯ - ಇಂದ್ರಸೂನುವಾದ ಪಾರ್ಥನೆ, ಕೇಳು-ಲಾಲಿಸು, ನವಯುವತಿ - ಆಗತಾನೆ ಉಂಟಾಗುತ್ತಿರುವ ಯೌವನವುಳ್ಳ, ವಿಷಯೆ-ವಿಷಯೆಯೆಂಬ ಕನ್ಯಾಮಣಿಯು, ಈತೆರದೊಳು-ಈ ಪ್ರಕಾರವಾಗಿ, ನಿಂದು-ನಿಂತುಕೊಂಡು, ಈಕ್ಷಿಸುತ - ನೋಡುತ್ತ, ಅವನ- ಆ ಇಂದುಹಾಸನ, ಅಂಗದೊಳ್ - ದೇಹದಲ್ಲಿ, ಎಸೆವ-ಹೊಳೆಯುವ, ರುಚಿರ-ಮನರಂಜಿಸುವ, ಕಂಚುಕದ-ಅಂಗಿಯ, ತುದಿಯಸೆರಗಿನೊಳು-ಕೊನೆಯ ಭಾಗದಲ್ಲಿ, ಕಟ್ಟಿಕೊಂಡಿರ್ದ-ಕಟ್ಟಿಕೊಂಡಿದ್ದಂಥ, ಪತ್ರಿಕೆಯನು-ಕಾಗದವೊಂದನ್ನು, ಕಂಡಳು-ನಿರುಕಿಸಿದಳು, ತವಕದಿಂ-ಅದನ್ನು ನೋಡಬೇಕೆಂಬ ಆಸಕ್ತಿಯಿಂದ, ಬಿಟ್ಟು-ನಾಚಿಕೆ ಮತ್ತು ಭಯ ಇವುಗಳನ್ನು ದೂರಮಾಡಿ, ಮುದ್ರೆಯನು-ಅದಕ್ಕೆ ಹಾಕಿದ್ದ ಮೊಹರನ್ನು, ಓಸರಿಸಿ-ಕಳಚಿ, ತೆಗೆದು - ಪತ್ರಿಕೆಯನ್ನು ಹೊರಕ್ಕೆ ಸೆಳೆದುಕೊಂಡು, ತನ್ನ ತಂದೆಯ, ಹೆಸರ - ಹೆಸರಿನ, ಬರಹಂ - ಬರಹವು, ಭರದೊಳು - ಚನ್ನಾಗಿ, ಇರೆ-ಕಾಣಲು, ಲವಲವಿಕೆ - ಆಸಕ್ತಿಯು, ಮಿಗೆ - ಅಧಿಕವಾಗಲು, ನೋಡಿ - ನೋಡಿದವಳಾಗಿ, ಅಂದು - ಆಗ, ಹರುಷಪುಳಕದೊಳು - ಸಂತೋಷಕರವಾದ ರೋಮಾಂಚದಿಂದ, ನಿಂದು - ಆ ಚಂದ್ರಹಾಸನ ಹತ್ತಿರದಲ್ಲಿಯೆ ನಿಂತುಕೊಂಡು, ಓದಿಕೊಳುತ - ಇರ್ದಳು ಇದ್ದವಳಾದಳು. ||೨೪||

ಟೀ|| ಶ್ರೀಮತ್ - ಐಶ್ವರ್ಯಶಾಲಿಯಾಗಿರತಕ್ಕ, ಸಚಿವಶಿರೋಮಣಿ - ಅಮಾತ್ಯವರ್ಯನಾದ, ದುಷ್ಟಬುದ್ಧಿ ಎಂಬಾತನು, ತನ್ನಮಗ-ತನ್ನ ಕುವರನಾದ, ಮದನಂಗೆ-ಮದನನೆಂಬ ಬಾಲಕನಿಗೆ, ಮಿಗೆ-ಹೆಚ್ಚಾದ, ಸುಪ್ರೇಮದಿಂ-ವಿಶ್ವಾಸದಿಂದ, ಪರಸಿ-ಆಶೀರ್ವದಿಸಿ, ನೇಮಿಸಿದ - ಗೊತ್ತುಮಾಡಿದ, ಕಾರ್ಯಂ - ಉದ್ಯೋಗವು, (ಯಾವುದೆಂದರೆ) ಎನುಗೆ - ನಮಿಗಾದರೊ,

---

ತ್ತಲೂ, ಮುಟ್ಟಿದರೆ ಏನೋ ಎಂದು ಯೋಚಿಸಿ ಹಿಂಜರಿಯುತ್ತಲೂ, ಧೈರ್ಯದಿಂದ ಚಂದ್ರಹಾಸನ ಸಮಿಾಪವಂ ಸೇರುತ್ತಲೂ, ಅಕಾಲವಾದದ್ದರಿಂದ ಇವನೊಂದಿಗೆ ಬೆರತು ಮನ್ಮಥಬಾಧೆಯನ್ನು ಹೋಗಲಾಡಿಸಿಕೊಳ್ಳಲಾಗುವದಿಲ್ಲವೆಂದು ಸ್ತಬ್ಧಳಾಗಿ ಆ ಚಂದ್ರಹಾಸನ ಬಳಿಯಲ್ಲಿ ನಿಂತುಕೊಂಡಿದ್ದಳು || ೨೩ || ಕೇಳೈ ಅರ್ಜುನನೆ, ಈ ರೀತಿಯಾಗಿ ಚಪಲ ಮನಸ್ಸಿನಿಂದ ಕೂಡಿರುವ ವಿಷಯೆಯಾದರೊ, ಆ ಚಂದ್ರಹಾಸನ ಅಂಗಿಯ ಜೇಬಿನಲ್ಲಿ ಕಾಣಿಸುತ್ತಲಿರುವ ಒಂದಾನೊಂದು ಕಾಗದವನ್ನು ಕಂಡು, ಅದನ್ನು ಜಾಗ್ರತೆಯಲ್ಲಿ ತೆಗೆದುಕೊಂಡು, ಗುರ್ತುಕಾಣದಂತೆ ಅದನ್ನು ತೆರೆದು, ಅದರಲ್ಲಿರತಕ್ಕ ಅಭಿಪ್ರಾಯವನ್ನೆಲ್ಲಾ ಓದಿಕೊಳ್ಳಲಾರಂಭಿಸಿದಳು. ||೨೪|| ಆ ಕಾಗದದಲ್ಲಿಯಾದರೊ, ಮಂತ್ರಿಶ್ರೇಷ್ಠನಾದ ದುಷ್ಟಬುದ್ಧಿಯು ತನ್ನ ಕುವರನಾದ ಮದನನಿಗೆ ಆಶೀವಾದವಂಮಾಡಿ ಬರದ ಕ್ರಮವೆಂತೆಂದರೆ:—ಈ ಚಂದ್ರಹಾಸನು ಮಹಾಹಿತನು, ಸರ್ವಥಾ ಮಿತ್ರನು, ಮುಂದೆ ನಮ್ಮ ಹೀವೆಗೆಲ್ಲಾ ರಾಜನಾಗತಕ್ಕವನೂ ಆಗಿದಾನೆ ನೀನಾದರೊ ಇವನ ಕುಲಗೊತ್ರಾದಿಗಳಾವುದನ್ನೂ ವಿಚಾರ

ಮಹಾಹಿತನೆನುಗೆಮೇಲೆನಮ್ಮ || ಸೀಮೆಗರಸಾದಪಂಸಂದೇಹಮಿಲ್ಲಿದಕೆ | ಸಾಮಾನ್ಯದವನಲ್ಲನಮಗೆಮುಂದಕೆಸರ್ವ | ಥಾಮಿ
ತ್ರನಹನೆಂದೀತನಂಕಳುಹಿದೆವುನಿನ್ನಬಳಿಗಿದನರಿವುದು || ೨೫ || ಹೊತ್ತುಕಳೆಯದೆಬಂದಬಳಿಕಿವನಕುಲಶೀಲ | ವಿತ್ತವಿದ್ಯಾವ
ಯೋವಿಕ್ರಮಂಗಳನೀಕ್ಷಿ | ಸುತ್ತಿರದೆವಿಷವಮೋಹಿಸುವಂತೆಕೊಡುವುದೀತಂಗೆನೀನದರೊಳೆಮಗೆ || ಉತ್ತರೋತ್ತರಮಪ್ಪು
ದೆಂದುಬರದಿಹಲಿಪಿಯ | ನೆತ್ತಿವಾಚಿಸಿಕೊಂಡು ತರಳಾಕ್ಷಿತಾನದಕೆಮ | ತ್ತೊಂದಭಿಪ್ರಾಯಮಂತಿಳಿದಳುಲ್ಲಂಘಿಸುವರುಂಟೆ
ವಿಧಿಕೃತವನು || ೨೬ || ಈತಂತಮಗೆಮಹಾಮಹಿತನೆಂದುತಮ್ಮಧರೆ |ಗೀತನರಸನಹನೆಂದುಕುಲಶೀಲವಿದ್ಯೆಗಳ| ನೀತನೊಳರಸ
ಬೇಡವೆಂದುಮುಂದಕೆ ಸರ್ವಥಾಮಿತ್ರನಹನೆಂದು || ಈತಂಗೆವಿಷಯೆಮೋಹಿಸುವಂತೆಕೊಡುವುದೆಂ | ದಾತನಣ್ಣಂಗೆಬರೆಸಿಕೊ

---

ಈ ಚಂದ್ರಹಾಸಂ–ಈ ಇಂದುಹಾಸನು, ಮಹ–ಹೆಚ್ಚಾದ, ಅಹಿತನು– ವೈರಿಯಾಗಿರುವನು, ಮೇಲೆ–ಇದೂ ಅಲ್ಲದೆ, ನಮ್ಮ ಸೀಮೆಗೆ–ನಮ್ಮ ದೇಶಕ್ಕೆ, ಅರಸು–ರಾಜನು, ಆದಪಂ–ಆಗುತ್ತಾನೆ, ಇದಕೆ–ಈ ನುಡಿಗೆ, ಸಂದೇಹಂ-ಅನುಮಾನವು, ಇಲ್ಲ–ಇಲ್ಲವು, ಸಾಮಾನ್ಯದವನು-ಸಾಧಾರಣ ಮನುಷ್ಯನು, ಅಲ್ಲ-ಅಲ್ಲವು, ನಮಗೆ–ನಮಿಗಾದರೊ, ಸರ್ವಥಾ–ಸರ್ವ ಪ್ರಕಾರದಿಂದಲೂ, ಅಮಿತ್ರನು–ವೈರಿಯು, ಅಹನು–ಆಗುತ್ತಾನೆ, ಎಂದು–ಎಂಬುದಾಗಿ, ನಿನ್ನ ಬಳಿಗೆ–ನಿನ್ನ ಹತ್ತಿರಕ್ಕೆ, ಈತನಂ–ಇವನನ್ನು, ಕಳುಹಿದೆವು-ಕಳುಹಿಸಿಕೊಟ್ಟಿರುವೆವು, ಇದನು–ಈ ವಾರ್ತೆಯನ್ನು, ಅರಿವುದು–ತಿಳಿಯತಕ್ಕದ್ದು. ||೨೫||

ಟೀ|| ಬಂದ ಬಳಿಕ–ಚಂದ್ರಹಾಸನು ನಿನ್ನ ಬಳಿಗೆ ಬಂದನಂತರ, ಹೊತ್ತುಕಳೆಯದೆ–ಸಾವಕಾಶಮಾಡದೆ, ಇವನ–ಈ ಇಂದುಹಾಸನ, ಕುಲ–ಸಂತತಿಯನ್ನೂ, ಶೀಲ–ನಡತೆಯನ್ನೂ, ವಿತ್ತ–ಐಸಿರಿಯನ್ನೂ, ವಿದ್ಯಾ–ಪಾಂಡಿತ್ಯವನ್ನೂ, ವಯಃ–ಹರೆಯವನ್ನೂ, ವಿಕ್ರಮಂಗಳನು-ಸಾಹಸಗಳನ್ನೂ, ಈಕ್ಷಿಸುತ–ನಿರುಕಿಸುತ್ತ, ಇರದೆ-ಕಾಲಹರಣಮಾಡದೆ, ಮೋಹಿಸುವಂತೆ–ಅಜ್ಞಾನವುಂಟಾಗುವ ಹಾಗೆ, ಈತಂಗೆ–ಇವನಿಗೆ, ನೀನು–ನೀನಾದರೊ, ವಿಷವ ಕೊಡುವುದು–ವಿಷವನ್ನು ಹಾಕಬೇಕು, ಅದರೊಳು–ಹಾಗೆ ಮಾಡೋಣದರಿಂದ, ಎಮಗೆ-ನಮಿಗಾದರೊ, ಉತ್ತರೋತ್ತರಂ-ಮೇಲ್ಮೆಯು, ಅಪ್ಪುದು-ಆಗುತ್ತದೆ, ಎಂದು–ಎಂಬ ತೆರನಾಗಿ ಬರೆದಿಹ–ಬರೆದಿರತಕ್ಕ, ಲಿಪಿಯನು–ಪತ್ರಿಕೆಯನ್ನು, ಎತ್ತಿ–ತೆಗೆದುಕೊಂಡು, ವಾಚಿಸಿಕೊಂಡು–ಓದಿಕೊಂಡವಳಾಗಿ, ತರಳಾಕ್ಷಿ–ಚಪಲನೇತ್ರೆಯಾದ ಆ ಬಾಲೆಯು, ಅದಕೆ–ಆ ಕಾಗದದ ಆಶಯಕ್ಕೆ, ಮತ್ತೊಂದು-ಬೇರೆಯಾದ, ಅಭಿಪ್ರಾಯಮಂ-ಆಶಯವನ್ನು, ತಿಳಿದಳು–ಆಲೋಚಿಸಿದಳು, ವಿಧಿ–ಬ್ರಹ್ಮನ, ಕೃತವನು – ಬರಹವನ್ನು, ಉಲ್ಲಂಘಿಸುವರು – ಅತಿಕ್ರಮಿಸತಕ್ಕವರು, ಉಂಟೆ–ಇದ್ದಾರೆಯೇ, (ಯಾರೂ ಮೀರಿ ನಡೆಯಲಾರರು) ||೨೬||

ಟೀ|| ಅಬಲೆ–ವಿಷಯೆಯೆಂಬ ಬಾಲೆಯು, ತಮಗೆ – ನಮಿಗಾದರೊ, ಈತಂ – ಈ ಇಂದುಹಾಸನು, ಮಹಾಹಿತನು–ಬಹು ಪ್ರೀತಿಪಾತ್ರನು, ಎಂದು-ಎಂಬುದಾಗಿಯೂ, ಈತನು–ಇವನೆ, ತಮ್ಮಧರೆಗೆ–ತಮ್ಮ ದೇಶಕ್ಕೆ, ಅರಸು–ರಾಜನು, ಅಹನು–ಆಗುತ್ತಾನೆ, ಎಂದು–ಎಂಬತೆರನಾಗಿಯೂ, ಕುಲಶೀಲವಿದ್ಯೆಗಳನು–ಕುಲ–ಸಂತತಿಯನ್ನೂ, ಶೀಲ–ನಡೆವಳಿಯನ್ನೂ, ವಿದ್ಯೆಗಳನು–ವಿದ್ಯಾವಿಷಯವನ್ನೂ ಸಹ, ಈತನೊಳು–ಈ ಇಂದುಹಾಸನಲ್ಲಿ, ಅರಸಬೇಡವು–ಗಣನೆಗೆ ತರತಕ್ಕದ್ದಿಲ್ಲವು, ಎಂದು-ಎಂಬ ಪರಿಯಿಂದಲೂ, ಈತಂಗೆ–ಈ ಚಂದ್ರಹಾಸನ ವಿಷಯದಲ್ಲಿ, ಮುಂದಕೆ-ಉತ್ತರೋತ್ತರ, ವಿಷಯೆಮೋಹಿಸುವಂತೆ–ವಿಷಯೆಯು ಒಪ್ಪುವಹಾಗೆ, ಈವುದು–ಲಗ್ನವನ್ನು ಮಾಡಬೇಕು, ಎಂದು – ಎಂಬ ಬಗೆಯಾಗಿ, ಆತನು – ಆ ನಮ್ಮ ತಂದೆಯಾದ ದುಷ್ಟಬುದ್ಧಿಯು, ಅಣ್ಣಂಗೆ–ನಮ್ಮಗ್ರಜನಾದ ಮದನನಿಗೆ, ಬರೆಸಿಕೊಟ್ಟು-ಬರದುಕೊಟ್ಟು, ಕಳುಹಿದ–ಕಳುಹಿಸಿರತಕ್ಕ, ಪತ್ರವೇ-ಪತ್ರಿಕೆಯೇ, ತಪ್ಪದು–ಸುಳ್ಳಲ್ಲವು, ಇದು – ವ ಎಂದು ಬಿದ್ದಿರುವ ಅಕ್ಷರವು, ವರ್ಣಪಲ್ಲಟವೋ – "ಯೆ" ಕಾರಕ್ಕೆ ಬದಲಾಗಿ ಪ್ರಮಾದದಿಂದ ಬಿದ್ದಿರಬಹುದು, ಮೋಸಂ – ಮೋಸವಾಯಿತು, ಎಂದು – ಎಂಬತೆರನಾಗಿ, ಭಾವಿಸುತ – ಆಲೋಚನೆಯಂ ಮಾಡುತ್ತ, ಇರ್ದಳು-ಇದ್ದವಳಾದಳು. ||೨೭||

---

ಮಾಡದೆ ವಿಷವ ಮೋಹಿಸುವಂತೆ ಜಾಗ್ರತೆಮಾಡಬೇಕು. ಇದರಿಂದ ನಮಿಗೆಲ್ಲಾ ಬಹಳ ಒಳ್ಳೆಯದಾಗುವುದು, ಎಂಬುದಾಗಿ ಬರೆದಿತ್ತು ||೨೫|| ಇದನ್ನು ವಿಷಯೆಯು ಓದಿಕೊಂಡು ದುಷ್ಟಬುದ್ಧಿಯ ಅಭಿಪ್ರಾಯಕ್ಕೆ ವಿರೋಧಾಶಯವುಳ್ಳ ಬೇರೊಂದಭಿಪ್ರಾಯವನ್ನುಂಟುಮಾಡುವ ಅರ್ಥವುಳ್ಳವಳಾದಳು. ಕೇಳೈ ಅರ್ಜುನ! ದೈವವಿಲಾಸವನನ್ನು ಮೀರಿನಡೆಯುವುದು ಹೇಗೆ ತಾನೆ ಆದೀತು ! ||೨೬|| ಅಬಳಿಕ ವಿಷಯೆಯಾದರೊ, ತನ್ನ ಮನಸ್ಸಿನಲ್ಲಿ ತಾನೇ ಆಲೋಚಿಸುತ್ತಾ, ಈ ಚಂದ್ರಹಾಸನು ನಮಗೆ ಪ್ರೀತಿಪಾತ್ರನೆಂದೂ, ನಮ್ಮ ರಾಜ್ಯಕ್ಕೆ ಇವನೇ ಮುಂದೆ ರಾಜಾಧಿರಾಜನಾಗುವನೆಂದೂ, ಕುಲಗೋತ್ರಾದಿಗಳೊಂದನ್ನೂ ವಿಚಾರಮಾಡಬೇಡವೆಂದೂ, ಇವನು ನಮಿಗೆ ಮುಂದೆ ಪರಮ ಸ್ನೇಹಿತನಾಗುವನೆಂದೂ, ವಿಷಯೆಯ ಮನ ಮೆಚ್ಚುವಂತೆ ಮಾಡಬೇಕೆಂದೂ, ಪ್ರಮಾದದಿಂದ ಯೆ ಕಾರಸ್ಥಾನದಲ್ಲಿ ವ ಕಾರ ಬಿದ್ದುಹೋಗಿರುವುದೆಂದೂ ||೨೭|| ಇಂತಹ ಸುಂದರಾ

ಟ್ಟುಕಳುಹಿದಪತ್ರ| ವೇತಪ್ಪದಿದುವರ್ಣಪಲ್ಲಟವೊ(ಸಮೆಂದಬಲೆಮನವಿಭಾವಿಸುತಿರ್ದಳು ||೨೭|| ಕಡುಚಲ್ವನಾದವರನಂಕಂಡು ನಿಶ್ಚೈಸಿ | ತಡೆಯದಿಂದೀತಂಗೆವಿಷಯೆಮೋಹಿಸುವಂತೆ| ಕೊಡುವುದೆಂದಲ್ಲಿಂದತನ್ನಪಿತನೀತನಂಕಳುಹಿದಂಸುತನಬಳಿಗೆ || ಒಡಗೂಡದಿಂದೆನ್ನಮನದೆಣಿಕೆಪತ್ರಿಕೆಯೊ | ಳೆಡಹಿಬರದಕ್ಕರದಬೀಳಿರ್ದಡಿದರಿಂದ | ಕೆಡುವುದಗ್ಗದಕಜ್ಜಮೆಂದಾತರುಣಿತಾನದಂ ತಿದ್ದಲನುಗೈದಳು || ೨೮ || ತಪ್ಪಿರ್ದಲಿಪಿಯೋಳ್ವಕಾರಮಂತೊಡೆದಲ್ಲಿ | ಗೊಪ್ಪವಯೆಕಾರಮಂಕೆಲಬಲದಮಾಮರದೊ| ಳಿಪ್ಪ ನಿರ್ಯಾಸಮಂತೆಗೆದುಕಿರುವೆರಳುಗುರ್ಗೊನೆಯಿಂದತಿದ್ದಿಬರೆದು || ಅಪ್ಪಂತೆಮೊದಲಿರ್ದಮುದ್ರೆಯಂಸಂಘಟಿಸಿ | ಕುಪ್ಪಸದ ಸೆರಗಿನೋಳ್ಕಟ್ಟಿಪಳೆಯಂತಿರಿಸಿ| ಸೊಪ್ಪುಳಾಗದತೆರದೊಳೆದ್ದುಮೆಲ್ಲನೆಮಂತ್ರಿಸುತೆತೊಲಗಿಬರುತಿರ್ದಳು ||೨೯|| ದಿಟ್ಟಿಮುರಿಯದು ಕಾಳ್ಗಳಿತ್ತಬಾರವುಮನಂ | ನೆಟ್ಟುಬೇರೂರಿದುದುಕಾಮನಂಬಿನಗಾಯ | ಯಿಟ್ಟಣಿಸಿತಂಗಲತೆಕಾಹೇರಿತೊಡಲೊಳಗೆವಿರಹ ದುರಿತಲೆದೋರಿತು || ಬಟ್ಟೆವಿಡಿದೊಡನೊಡನೆತಿರುತಿರುಗಿನೋಡುತಡಿ | ಯಿಟ್ಟಳೀಚೆಗೆಬಳಿಕಬೆರಸಿದಳ್ಕೆಳದಿಯರ | ಘಟ್ಟನೋ

---

ಟೀ|| ಕಡು_ಬಹಳ, ಚೆಲ್ವ - ಸುಂದರನಾದ, ವರನಂ_ಈ ತರುಣನನ್ನು, ತನ್ನಪಿತನು_ನಮ್ಮ ತಂದೆಯಾದ ದುಷ್ಟಬುದ್ಧಿಯು, ನೋಡಿ_ನಿರುಕಿಸಿ. ನಿಶ್ಚೈಸಿ-ತನ್ನ ಕುವರಿಗೆ ಇವನೇ ಅನುರೂಪನಾದ ವರನೆಂದು ಗೊತ್ತುಮಾಡಿಕೊಂಡು, ತಡೆಯದೆ-ನಿಧಾನಮಾಡದೆ, ಈತಂಗೆ - ಈ ಇಂದುಹಾಸನಿಗೆ, ಇಂದು_ಈ ಹೊತ್ತೆ, ವಿಷಯೆಮೋಹಿಸುವಂತೆ - ವಿಷಯೆಯ ಮನಸ್ಸಂತೋಷವಾಗುವ ತೆರನಾಗಿ, ಕೊಡುವುದು_ಲಗ್ನವನ್ನು ನೆರವೇರಿಸಬೇಕು. ಎಂದು-ಎಂಬತೆರನಾಗಿ, ಅಲ್ಲಿಂದ_ತಾನು ಹೋಗಿರುವ ಕಡೆಯಿಂದಲೇ, ಸುತನಬಳಿಗೆ-ತನ್ನ ಕುವರನಾದ ಮದನನ ಸಮೀಪಕ್ಕೆ, ಈತನಂ_ಈ ಇಂದುಹಾಸನನ್ನು, ಕಳುಹಿದಂ-ಕಳುಹಿಸಿದನು. ಎನ್ನ-ನನ್ನ, ಮನದೆಣಿಕೆ-ಮನೋಭಿಪ್ರಾಯವು, ಒಡಗೂಡದೆ - ಸಿದ್ಧಿಸದೆ, ಇರದು - ಇರುವುದಿಲ್ಲವು. ಎಡಹಿಬರೆದ-ಅಕಸ್ಮಾತ್ತಾಗಿ ತಪ್ಪುಬಿದ್ದಿರುವ, ಅಕ್ಕರದ_ವರ್ಣದ, ಬೀಳು_ಬದಲಾವಣೆಯು, ಇರ್ದಡೆ-ಇದ್ದಹಾಗಾದರೆ, ಅದರಿಂದ-ಆವರ್ಣವ್ಯತ್ಯಾಸದಿಂದ, ಅಗ್ಗದಕಜ್ಜಂ-ಅಧಿಕವಾದ ಕಾರ್ಯವು, ಕೆಡುವುದು - ಹಾಳಾಗುವುದು, (ನನ್ನ ಪ್ರೀತಿಗೆ ಆಸ್ಪದನಾದ ಇವನು ಮರಣವನ್ನೈದಬೇಕಾಗುವುದು) ಎಂದು-ಎಂಬಪರಿಯಿಂದ, ಆತರುಣಿ_ಆ ವಿಷಯೆಯು, ಅದಂ_ವ್ಯತ್ಯಸ್ತವಾಗಿ ಬಿದ್ದಿರತಕ್ಕ ಆ ಅಕ್ಷರವನ್ನು, ತಿದ್ದಲು-ಸರಿಪಡಿಸಲು, ಅನುಗೈದಳು-ಅಣಿಮಾಡಿಕೊಂಡಳು. ||೨೮||

ಟೀ|| ಮಂತ್ರಿಸುತೆ_ಕುಂತಳರಾಜನ ಮಂತ್ರಿಯಾದ ದುಷ್ಟಬುದ್ಧಿಯ ಕುವರಿಯು, ತಪ್ಪಿರ್ದ_ತಪ್ಪೆಂಬುದಾಗಿತಿಳಿದುಕೊಂಡಿದ್ದ, ಲಿಪಿಯೋಳ್ - ಬರಹದಲ್ಲಿ, ವಕಾರಮಂತೊಡದು - "ವ" ಎಂಬ ಅಕ್ಷರವನ್ನು ಅಳಿಸಿಹಾಕಿ, ಕಿರುವೆರಳ - ಕಿರುಬೆಟ್ಟಿನ, ಉಗುರ್ಗೊನೆಯಿಂದ_ಉಗುರಿನ ಕೊನೆಯ ಭಾಗದಿಂದ, ಕೆಲಬಲದ_ಪಕ್ಕಗಳಲ್ಲಿರತಕ್ಕ, ಮಾಮರದೊಳು_ಚೂತವೃಕ್ಷಂಗಳಲ್ಲಿ, ಇರ್ಪ_ಇರತಕ್ಕ, ನಿರ್ಯಾಸಮಂ_ಅಂಟು ಪದಾರ್ಥವನ್ನು, ತೆಗೆದು_ತೆಗೆದುಕೊಂಡವಳಾಗಿ, ತಿದ್ದಿ - 'ಯೆ' ಎಂಬುದಾಗಿ ಮಾಡಿ, ಅಪ್ಪಂತೆ_ಮುಂಚಿನ ಹಾಗೆಯೇ. ಮುದ್ರೆಯಂ ಸಂಘಟಿಸಿ-ಗೋಂದು ಮೊದಲಾದುವನ್ನೆಲ್ಲಾ ಹಾಕಿ, ಕುಪ್ಪಸದ ಸೆರಗಿನೊಳು- ಕವಚದ ಜೇಬಿನ ಕೊನೆಯೊಳಗೆ, ಕಟ್ಟಿ-ಕಟ್ಟಿದವಳಾಗಿ, ಪಳೆಯೋಲು - ಮುಂಚಿನಂತೆಯೇ, ಇರಿಸಿ_ಇಟ್ಟು ಬಿಟ್ಟು, ಸೊಪ್ಪುಳು_ಗದ್ದಲವು, ಆಗದತೆರದೊಳು-ಆಗದ ಹಾಗೆ, ಎದ್ದು_ಅಲ್ಲಿಂದ ಎದ್ದವಳಾಗಿ, ತೊಲಗಿ_ಹೊರಗೆ ನಡೆದು, ಮೆಲ್ಲನೆ-ನಿಧಾನವಾಗಿ, ಬರುತಿರ್ದಳು_ಹಿಂದಿರುಗುತಿರ್ದಳು ||೨೯||

ಟೀ|| ದಿಟ್ಟಿ_ವಿಷಯೆಯ ನೋಟವು, ಮುರಿಯದು_ಹಿಂದಿರುಗದೆ ಹೋಯಿತು, ಇತ್ತ_ತನ್ನ ಕೆಳದಿಯರಿರುವಕಡೆ ನಡೆಯಲು, ಕಾಳ್ಗಳು_ಹಜ್ಜೆಗಳು, ಬಾರವು-ಬರಲಾರದೆ ಹೋದವು, ಮನಂ_ಆ ತರುಣಿಯ ಹೃದಯವಾದರೊ, ನೆಟ್ಟು-ಇಂದುಹಾಸನಲ್ಲಿ ಸೇರಿ, ಬೇರೂರಿದುದು-ಚಲಿಸದೆ ನಿಂತು ಬಿಟ್ಟಿತು, ಕಾಮನ_ಮನ್ಮಥನ, ಅಂಬಿನ_ಸರಲಿನ, ಗಾಯವು-ಹುಣ್ಣು ಇಟ್ಟಣಿಸಿತು_ ಆಕ್ರಮಿಸಿತು, ಒಡನೊಡನೆ - ಸಂಗಡ ಸಂಗಡಲೇ, ಅಂಗಲತೆ - ದೇಹವೆಂಬ ಬಳ್ಳಿಯು, ಕಾಹೇರಿತು - ಬಿಸಿಯಾಗುತ್ತ ಬಂದಿತು, ವಿರಹದ_ಅಗಲುವಿಕೆಯ, ಉರಿ-ಉರಿಯೂ ಕೂಡ, ತಲೆದೋರಿತು_ಕಾಣಿಸಿಕೊಂಡಿತು, ಒಡನೊಡನೆ-

---

ಕಾರನಾದ ಚಂದ್ರಹಾಸನಿಗೆ ವಿಷಯೆಯನ್ನು ಕೊಟ್ಟು ಮದುವೆ ಮಾಡೆಂದು ನಮ್ಮಣ್ಣನಿಗೆ ಬರೆದಿರತಕ್ಕ ಕಾಗದವಲ್ಲದೆ ಬೇರೆಯಲ್ಲವು. ಈ ಅಕ್ಷರ ದೋಷವು ಹೀಗೆಯೇ ಇದ್ದರೆ ಮಹಾ ಪ್ರಮಾದವೆಂದು ನಿಶ್ಚಯಿಸಿ, ಅದನ್ನು ತಿದ್ದಬೇಕೆಂದುಜ್ಜುಗಿಸಿ ||೨೮|| ಆ ಕಾಗದದಲ್ಲಿರತಕ್ಕ ವಕಾರವನ್ನು ಅಳಿಸಿ ಹಾಕಿ ಪಕ್ಕದಲ್ಲಿರತಕ್ಕ ಮಾವಿನ ಮರದ ಅಂಟನ್ನು ತನ್ನ ಕಿರುಬೆಟ್ಟಿನಿಂದ ತೆಗೆದುಕೊಂಡು, "ಯೆ" ಎಂಬದಾಗಿ ತಿದ್ದಿ, ಮೊದಲಿನಂತೆಯೆ ಗೋಂದಿನಿಂದ ಅಂಟಿಸಿ ಆ ಇಂದುಹಾಸನ ಅಂಗಿಯ ಜೇಬಿನಲ್ಲಿರಿಸಿ, ಸ್ವಲ್ಪವೂ ಶಬ್ದವಾಗದಂತೆ ಹೊರಟು ಬರಲುಜ್ಜುಗಿಸಿದಳು ||೨೯|| ಅವಳ ಕಾಲ್ಗಳು ಹಿಂದಹಿಂದಕ್ಕೇ ಎಳೆಯುತ್ತಲಿದ್ದವು. ಮನಸ್ಸಾದರೊ ಆ ಚಂದ್ರಹಾಸನಲ್ಲಿಯೇ ಸ್ಥಿರವಾಗಿ ನಿಂತುಹೋಯಿತು. ಶರೀರವೆಲ್ಲಾ ಮನ್ಮಥಾಗ್ನಿಯಿಂದ ದಹಿಸ

ಕ್ಸಂಭ್ರಮುದಸಂತಾಪದೆಡೆಯಾಟದಂತರಂಗದಬಾಲಕಿ ‖ ೩೦ ‖ ಆಳಿಯರ್ಕಂಡರೀಕೆಯಮೊಗದಭಾವಮಂ | ಕೇಳಿದರೇದೇನೆಲೆ ಮೃಗಾಕ್ಷಿತಳುವಿದೆಮನದ | ಬೇಳಂಬಮಾವುದುಕ್ಕುವಹರುಷರಸದೊಡನೆಬೆರಸಿಹುದುಬೆದರುವೊನಲು ‖ ಗಾಳಿಪರಿಮಳವನಡಗಿಪ್ಪು ದುಂಟೆತನುಚಿತ್ತ | ದಾಳಾಪಮುಂಮಾಜಲರಿದವುದೆಸಾಕಿನ್ನು | ಹೇಳದೊಡೆಮಾಣಲಂತಸ್ಥಮಂತಾನೆಯುಬ್ಬುವುದೆಂದುನಗು ತಿರ್ದರು ‖೩೧‖ ಕೆಳದಿಯರನುಡಿಗೆನಸುನಗುತನಿಜಭಾವಮಂ | ಮೊಳಗಾಣಿಸದೆಪುಸಿಗೆಸರಸವಾಡುತಪೊತ್ತು | ಗಳೆವಮಂತ್ರಿಜೆ ಸಹಿತತಿರುಗಿದಳ್ಪನದಿಂದಮನೆಗೆಚಂಪಕಮಾಲಿನಿ ‖ ಪೊಳಲೊಳ್ವಿವಾಹೋತ್ಸವಂಗಳಾಸಮಯದೊ | ಳ್ಸುಳಿದುವಗ್ಗದಗೀತ ನೃತ್ಯವಾದ್ಯಂಗಳಿಂ | ಕಳಶಕನ್ನಡಿಗಳವಿಲಾಸದವುರಂಧ್ರಿಯರಶೋಭನದಸುಸ್ವರದೊಳು ‖ ೩೨ ‖ ಪದುಳದಿಂದೈತಂದುಬಾಲ

---

ಕ್ಷಣಕ್ಷಣಕ್ಕೂ, ಹಿಂತಿರುಗಿ_ಹಿಂದಹಿಂದಕ್ಕೆ ತಿರುಗುತ್ತಾ, ಬಟ್ಟೆವಿಡಿದು_ದಾರಿಯನ್ನು ಹಿಡಿದುಕೊಂಡು, ಈಚಿಗೆ_ಸಖಿಯರಿರುವ ಸ್ಥಳಕ್ಕೆ, ಅಡಿಯಿಟ್ಟಳು – ನಡೆದುಬರುತ್ತಲಿದ್ದಳು. ಸಂಭ್ರಮದ – ಆನಂದದ, ಸಂತಾಪದ – ವಿಯೋಗವೆಂಬ ದುಃಖದ, ಎಡೆ ಯಂಟೆದ_ಹರಡುವಿಕೆಯಿಂದುಂಟಾದ, ಅಂತರಂಗ_ಚಿತ್ತವುಳ್ಳ, ಬಾಲಕಿ_ಕನ್ಯಾಮಣಿಯಾದ ವಿಷಯೆಯು, ಬಳಿಕ-ಆ ಮೇಲೆ, ಕೆಳದಿಯರ_ಸಖಿಯರ, ಥಟ್ಟನೊಳ್‌_ಗುಂಪಿನೊಳಗೆ, ಬೆರಸಿದಳು-ಬೆರತುಕೊಂಡಳು. ‖೩೦‖

ಟೀ‖ ಈಕೆಯ-ಕನ್ಯಾಮಣಿಯಾದ ವಿಷಯೆಯ, ಮೊಗದ – ಮೋರೆಯ, ಭಾವಮಂ – ಆಶಯವನ್ನು, ಆಳಿಯರು- ಈ ಬಾಲೆಯ ಸಖಿಯರೆಲ್ಲಾ, ಕಂಡರು_ಈಕ್ಷಿಸಿದರು, ಎಲೆ ಮೃಗಾಕ್ಷಿ – ಹರಿಣಾಕ್ಷಿಯಾದ ವಿಷಯೆಯೇ, ಇದೇನು – ಯಾವ ನಿಮಿತ್ತವಿಂದ, ತಳುವಿದೆ_ಇಷ್ಟು ನಿಧಾನಮಾಡಿಕೊಂಡು ಬಂದಿದ್ದಿ, ಮನದ_ಅಂತರಂಗದಲ್ಲಿರತಕ್ಕ, ಬೇಳಂಬಂ_ಇಷ್ಟಾರ್ಥವು, ಆವುದು_ಯಾವುದಾಗಿದೆ. ಬೆದರು_ಗಾಬರಿಯನ್ನತಕ್ಕ, ಒನಲ್ – ಪ್ರವಾಹವು, ಉಕ್ಕುವ_ಉಕ್ಕಿ ಬರುತ್ತಲಿರತಕ್ಕ, ಹರುಷರಸ ದೊಡನೆ_ಆನಂದಸಾಗರದೊಂದಿಗೆ, ಇಹುದು_ಕೂಡಿಕೊಂಡಿದೆ, ಪರಿಮಳವನು_ಸುವಾಸನೆಯನ್ನು, ಗಾಳಿ_ವಾಯುವು, ಅಡಗಿ ಪ್ಪುದು-ಬಚ್ಚಿಡುವುದು, ಉಂಟೆ_ಸಂಭವವೇ, ಚಿತ್ತದ-ಹೃದಯದ, ಆಳಾಪಮುಂ-ಆಶಯವನ್ನು, ತನು_ದೇಹವು, ಮಾಚಲು ಮರೆಮಾಚುವುದಕ್ಕೆ, ಅರಿದವುದೆ-ಆಗುತ್ತದೆಯೇ, (ತಿಳಿದಿರುವುದೆ) ಎಂಬುದಾಗಿ, ಕೇಳಿದರು-ಪ್ರಶ್ನೆಯಂಮಾಡಿದರು. ಸಾಕು- ನಿನ್ನ ಯೌವನವು ಸಾಕಾಗಿದೆ. ಅಂತಸ್ಥಮಂ_ಮನಸ್ಸಿನಲ್ಲಿರತಕ್ಕ ಅಭಿಪ್ರಾಯವನ್ನು, ಹೇಳದೊಡೆ_ತಿಳಿಯಪಡಿಸದೆ ಹೋದರೆ, ಮಾಣಲು_ಮರೆಮಾಚಿದರೆ, ತಾನೆ-ಅದಾಗಿಯೆ, ಉಬ್ಬುವುದು_ಬೈಲಿಗೆ ಬರುತ್ತದೆ, ಎಂದು – ಎಂಬತೆರನಾಗಿ ನುಡಿಯುತ್ತ, ನಗುತಿರ್ದರು_ನಗುವುದಕ್ಕಾರಂಭಿಸಿದರು. ‖೩೧‖

ಟೀ‖ ಚಂಪಕ ಮಾಲಿನಿ_ಚಂಪಕಮಾಲಿನಿಯೆಂಬ ಕುಂತಳಾಧೀಶನ ಕುವರಿಯು, ಬನದಿಂದ-ಉದ್ಯಾನವನ ಪ್ರದೇಶ ದಿಂದ, ಕೆಳದಿಯರ_ಸಖೀಜನರ, ನುಡಿಗೆ-ಮಾತುಗಳನ್ನು ಕೇಳಿ, ನಸುನಗುತ_ಹುಸಿನಗುವಂ ತೋರ್ಪಡಿಸುತ್ತ, ನಿಜಭಾವ ಮಂ_ತನ್ನ ಆಶಯವನ್ನು, ಮೊಳಗಾಣಿಸದೆ_ಸ್ವಲ್ಪವೂ ತಿಳಿಸದೆ, ಪುಸಿಗೆ_ನಿಜವಲ್ಲದ, ಸರಸೋಕ್ತಿಯನು-ಹಾಸ್ಯದ ನುಡಿಗಳನ್ನು, ಆಡುತ್ತ_ಮಾತನಾಡುತ್ತ, ಪೊತ್ತುಗಳೆವ_ಕಾಲಹರಣವಂ ಮಾಡತಕ್ಕ, ಮಂತ್ರಿಜೆ ಸಹಿತ-ಮಂತ್ರಿಕುವರಿಯಾದ ವಿಷಯೆಯ ನ್ನೊಡಗೊಂಡು, ತಿರುಗಿದಳು_ಪಟ್ಟಣಕ್ಕೆ ಹೊರಡಲು ಅನುವಾದಳು, ಪೊಳಲೊಳ್‌_ನಗರದಲ್ಲಿ, ಆ ಸಮಯದೋಳ್‌_ಇವರು ಹಿಂ ದಿರುಗಿ ಬರುವಾಗ, ವಿವಾಹೋತ್ಸವಂಗಳು-ಮದುವೆಯ ಮೆರವಣಿಗೆಗಳು, ಅಗ್ಗದ_ಅಧಿಕವಾದ, ಗೀತ_ಗಾನವು, ನೃತ್ತ_ಕುಣಿ ಯುವುದು, ವಾದ್ಯಂಗಳಿಂ_ಶುಭಕರವಾದ ವಾದ್ಯ ವಿಶೇಷಗಳಿಂದಲೂ, ಕಳಶ ಕನ್ನಡಿಗಳ-ಕಳಶ ಕನ್ನಡಿಯನ್ನು ಹಿಡಿದಿರತಕ್ಕ, ವಿಲಾಸದ-ಸಂತಸವುಳ್ಳ, ಪುರಂಧ್ರಿಯರ-ಸುಮಂಗಲಿಯರ, ಶೋಭನದ-ಶುಭಕರವಾದ, ಸುಸ್ವರದೊಳು_ಒಳ್ಳೆಯ ಧ್ವನಿಗಳಿಂ ದಲೂ, ಸುಳಿದವು-ಕಾಣಬರುತ್ತಲಿದ್ದವು. ‖೩೨‖

---

ಲಾರಂಭಿಸಿತು. ಈ ತೆರನಾದ ವಿಷಯೆಯು ತನ್ನ ಜತೆಯವರಾದ ಚಂಪಕಮಾಲಿನಿಯೇ ಮೊದಲಾದವರೊಂದಿಗೆ ಮತ್ತೆ ಬೆರ ತಳು ‖೩೦‖ ಆಗ ವಿಷಯೆಯ ಸಖಿಯರಾದರೊ, ಈ ಬಾಲೆಯ ಮುಖಭಾವವನ್ನು ಕಂಡು, ಎಲೌ ವಿಷಯೆಯೇ, ಇದೇನು ಸಂತೋಷವಾಗಿದ್ದ ನಿನ್ನ ಮುಖದಲ್ಲಿ ಬೆದರಿಕೆಯೆಂಬುದೊಂದು ಸೇರಿ ಬಾಧೆಪಡಿಸುವಂತೆ ಕಾಣುವುದಲ್ಲಾ! ಗಾಳಿಯು ಸುವಾಸ ನೆಯನ್ನು ಮುಚ್ಚಲಾದೀತೆ, ಶರೀರವು ಮನೋಭಾವವನ್ನು ಮರೆಮಾಚುವುದೆಂದರೆ ಅಸಾಧ್ಯವಲ್ಲವೆ? ನೀನು ಹೇಳದಿದ್ದರೂ ತಾನಾ ಗಿಯೇ ಹೊರಕ್ಕೆ ಬೀಳುವುದು ‖೩೧‖ ಎಂದು ನುಡಿಯುತ್ತಿರುವ ಸಖಿಯರಿಗೆ ತನ್ನ ಮನೋಭಿಪ್ರಾಯವನ್ನು ಲೇಶವೂ ತೋ ರ್ಪಡಿಸದೆ, ಒಳಗೆ ವಿರಹವೇದನೆಯುಂಟಾಗಿದ್ದರೂ ಹೊರಗೆ ಅವರೊಂದಿಗೆ ಸರಸಸಲ್ಲಾಪಂಗಳಿಂದ ಕಾಲವಂ ಕಳೆಯುತ್ತಲಿ ದ್ದಳು. ಇಂತಹ ವಿಷಯೆಯೂ ಚಂಪಕಮಾಲಿನಿಯೂ ಸಹ ಸಖೀ ಜನರಿಂದೊಡಗೂಡಿ ತಮ್ಮ ಊರಿಗೆ ಹಿಂದಿರುಗಿ ಬರುತ್ತಿರಲು, ಊರೆಲ್ಲಾ ನೃತ್ತಗೀತವಾದ್ಯಂಗಳೂ ಮದುವೆಯ ಮೆರವಣಿಗೆಯೂ ನೋಡುವುದಕ್ಕೆ ಮನೋಹರವಾಗಿತ್ತು ‖ ೩೨ ‖ ಇಂತಹ

ಕಿಯರಂ ಕಳುಹಿ | ಸದನಮಂ ಪೊಕ್ಕಳವನೀಶ್ವರಾತ್ಮಜೆಬಳಿಕ | ಮದುವೆಗಳಮಂಗಳೋತ್ಸವದ ಮಧುರಸ್ವನಂಗಳನಾಲಿಸುತ ಮನದೊಳು || ಇದುಶುಭನಿಮಿತ್ತಮಿಂದೆನಗೆವೈವಾಹದ | ಭ್ಯುದಯಮಾದಪುದುಕಾಂತನೊಳೆಂಬೆಣಿಕೆಯಿಂದ | ಮದನಶರದಿಂದಪೀಡಿತೆಯಾವ ಮಂತ್ರಿಸುತೆಮನೆಗೆಬರುತಿರ್ದಳೆಂದು || ೩೩ || ಪುರುಹೂತಸಂಭೂತಕೇಳ್ಭವನದೋಳ್ವಿಷಯೆ | ವಿರಹತಾಪದೊಳೊಂದುಗಳಿಗೆಯಂಪತ್ತು | ಸಾವಿರಯುಗಕೆಸಮಮಾಗಿಭಾವಿಪಳ್ನಿಂದಲ್ಲಿನಿಲ್ಲಳಾರಂನೋಡಳು || ಪರಿಚಯದಬಲೆಯರ್ಗಳನಗಿಸಳಾಪ್ತಸಖಿ | ಯರಮಾತನಾಲಿಸಳ್ಸಿಂಗರಕೆಮೈಗೊಡ | ಳ್ಕರೆವಪಂಜರದಗಿಳಿಯಂನುಡಿಸಳ್ಸಾಕುತಿಹಖಗಮೃಗವನು || ಉಣ್ಣಳೊರಗಳ್ನುಡಿಯಳುಡಲಿಡಲ್ಯೊಡಲುರಿಗೆ | ತಣ್ಣಸವನರಸುವಳ್ಸುಕುಮಾರತನುತನಗೆ | ತಿಣ್ಣಮೆಂದರಸುವಳ್ಬಿಸುಸುಯ್ಯು

ಟೀ|| ಅವನೀಶ್ವರಾತ್ಮಜೆ_ಕುಂತಳರಾಜನ ಮಗಳಾದ ಚಂಪಕಮಾಲಿನಿಯಾದರೊ, ಪದುಳದಿಂದ_ಆನಂದದಿಂದ, ಐತಂದು-ಪಟ್ಟಣವಂ ಪ್ರವೇಶಿಸಿ, ಬಾಲಕಿಯರಂ_ತನ್ನ ಸಖಿಯರನ್ನೆಲ್ಲಾ, ಕಳುಹಿ_ಅವರವರ ಮನೆಗೆ ಕಳುಹಿಸಿ, ಸದನಮಂ-ತಮ್ಮರಮನೆಯನ್ನು, ಪೊಕ್ಕಳು-ಪ್ರವೇಶಮಾಡಿದಳು, ಮದನ-ಮೀನಕೇತನನ, ಶರ-ಸರಲಿನಿಂದ, ಪೀಡಿತೆಯಾದ_ನೋವನ್ನನುಭವಿಸುತ್ತಲಿರತಕ್ಕ, ಮಂತ್ರಿಸುತೆ-ವಿಷಯೆಯೆಂಬ ದುಷ್ಟಬುದ್ಧಿಯ ಮಗಳು, ಬಳಿಕ-ಅನಂತರ, ಮದುವೆಗಳ-ಪರಿಣಯಂಗಳ, ಮಂಗಳೋತ್ಸವದ-ಶುಭವಾದ ಸಂಭ್ರಮಂಗಳ, ಮಧುರಸ್ವನಂಗಳನು-ಇನ್ಚರವನ್ನು, ಮನದೊಳು_ತನ್ನಂತರಂಗದಲ್ಲಿ, ಆಲಿಸುತ-ಶ್ರವಣಮಾಡುತ್ತ, (ಮದುವೆಯೇ ಆಗುತ್ತೆಂಬುದಾಗಿ ಮನಸ್ಸಿನಲ್ಲಿ ಕಳವಳವು ಹೆಚ್ಚಿತು) ಎನಗೆ_ನನಿಗಾದರೊ, ಇಂದು_ಈ ಹೊತ್ತು, ಇದು ಶುಭ ನಿಮಿತ್ತಂ-ಈ ಶುಭ ಶಕುನವು, ಕಾಂತನೊಳು – ಪತಿಯೊಂದಿಗೆ, ವೈವಾಹದ_ಲಗ್ನದ, ಅಭ್ಯುದಯಂ-ಏಳಿಗೆಯು, ಆದಪುದು_ಆಗುತ್ತದೆ, ಎಂಬ-ಎನ್ನತಕ್ಕ, ಎಣಿಕೆಯಿಂದ-ಆಲೋಚನೆಯಿಂದ, ಮನೆಗೆ_ತಮ್ಮ ಭವನಕ್ಕೆ, ಬರುತಿರ್ದಳು_ಬರುತ್ತಲಿದ್ದಳು. || ೩೩ ||

ಟೀ|| ಪುರುಹೂತ ಸಂಭೂತ-ಇಂದ್ರಸೂನುವಾದ ಪಾರ್ಥನೆ, ಕೇಳು-ಆಲಿಸು, ವಿಷಯೆ_ವಿಷಯೆಂಬ ಬಾಲೆಯು, ಭವನದೋಳ್-ತಮ್ಮ ಮಂದಿರದಲ್ಲಿ, ಒಂದುಗಳಿಗೆಯಂ_ಒಂದು ಗಳಿಗೆಯ ಕಾಲವನ್ನು, ಪತ್ತುಸಾವಿರಯುಗಕೆ-ಹತ್ತುಸಹಸ್ರಯುಗಕ್ಕೆ, ಸಮವಾಗಿ-ಹೋಲಿಕೆಯಾಗಿ, ಭಾವಿಪಳ್ - ಬಗೆಯುವಳು, ನಿಂದಲ್ಲಿ-ಇದ್ದ ಕಡೆಯಲ್ಲಿ, ನಿಲಲಾರಳ್-ಇರಲಾರದೆ ಹೋದಳು, ನೋಡಳು_ಯಾವ ಪದಾರ್ಥವನ್ನೂ ನೋಡಳು, ಪರಿಚಯದ_ತನಗೆ ಚಾಕರಿಮಾಡತಕ್ಕ, ಅಬಲೆಯರ್ಗಳ_ದಾಸೀಜನರನ್ನು, ನಗಿಸಳು-ಸರಸೋಕ್ತಿಗಳಿಂದ ಮಾತನಾಡಿಸುತ್ತಿರಲಿಲ್ಲವು, ಆಪ್ತಸಖಿಯರ-ಪ್ರಿಯ ಸ್ನೇಹಿತೆಯರ, ಮಾತನು-ನುಡಿಗಳನ್ನು, ಆಲಿಸಳು-ಕೇಳುತ್ತಿರಲಿಲ್ಲವು, ಸಿಂಗರಕೆ_ಅಲಂಕಾರಮಾಡಿಕೊಳ್ಳಲು, ಮೈಗೊಡಳು-ಒಪ್ಪುತ್ತಿರಲಿಲ್ಲವು, ಕರೆವ-ಧ್ವನಿಯಂಗೈವ, ಪಂಜರದ ಗಿಳಿಯಂ-ಪಂಜರದಲ್ಲಿರತಕ್ಕ ಶುಕನನ್ನು, ನುಡಿಸಳು-ನುಡಿಸಲಿಲ್ಲವು, ಸಾಕುತಿಹ_ತಾನು ಸಲಹುತ್ತಲಿರತಕ್ಕ, ಖಗಮೃಗವನು_ಹಕ್ಕಿಗಳು ಮೃಗಂಗಳು ಮೊದಲಾದವನ್ನು, ಆಡಿಸಳ್-ಆಟವಾಡಿಸಲಿಲ್ಲ ||೩೪||

ಟೀ|| ಅಬಲೆ_ವಿಷಯೆಯೆಂಬ ಕನ್ನೆಯು, ಕಾಮತಾಪದಿಂದ-ಮದನಶರಘಾತದಿಂದ, ಉಣ್ಣಳು-ಊಟವನ್ನು ಮಾಡುವುದಿಲ್ಲ, ಒರಗಳು-ಮಲಗಿಕೊಳ್ಳುವುದಿಲ್ಲ, ಉಡಲು-ಉಟ್ಟುಕೊಳ್ಳಲು, ಇಡಲು_ಒಡವೆಗಳನ್ನು ಧರಿಸಲು, ನುಡಿಯಳು_ಮಾತನಾಡುತ್ತಿರಲಿಲ್ಲವು. ಒಡಲ-ದೇಹದ, ಉರಿ-ಉಷ್ಣಕ್ಕೆ, ತಣ್ಣಸವನು_ತಂಪನ್ನು, ಅರಸುವಳು-ಕೋರುವಳು, ತನಗೆ_ತನಿಗಾದರೊ, ಸುಕುಮಾರತನು_ಕೋಮಲವಾದ ಶರೀರವು, ತಿಣ್ಣ-ಕ್ರೂರವಾದದ್ದು, ಎಂದು_ಎಂಬತೆರನಾಗಿ, ಅರಸುವಳು_ಹುಡುಕುತ್ತಿರುವಳು, ಕೇಳ್ವವರೋಳ್-ಏಕೆ ಹೀಗಿರುವಿಯೆಂದು ಪ್ರಶ್ನೆಗೈದವರಲ್ಲಿ, ಏನು ಇದು_ಏಕೆ ಕೇಳುತ್ತೀರಿ, ಎಂದು_ಎಂಬ ತೆರನಾಗಿ, ಅಂಡಲೆದು-ಅವರನ್ನು ತಿರಸ್ಕರಿಸಿ, ಬಿಸುಸುಯ್ವಳು_ನಿಟ್ಟುಸಿರನ್ನು ಬಿಡುತ್ತಿರುವಳು, ಕಣ್ಣೊಳು_ನಯನಂಗಳಲ್ಲಿ, ಎವೆ_ರಪ್ಪೆಗಳನ್ನು, ಒದವಿಪಳ್_ಸೇರಿಸುವಳು, ಶೈತ್ಯವಸ್ತುಗಳಿಂದ_ತಣ್ಣಗಿರುವ ಪುರುಳ್ಗಳಿಂದ, ಪಣ್ಣಿದ_ಎಸಗಿದ, ಉಪಚಾ

---

ಪಟ್ಟಣಕ್ಕೆ ಪ್ರವೇಶಮಾಡಿದಬಳಿಕ ಚಂಪಕಮಾಲಿನಿಯು ಎಲ್ಲರನ್ನೂ ಅವರವರ ಮನೆಗೆ ಕಳುಹಿ ತಾನೂ ತಮ್ಮರಮನೆಯನ್ನು ಪ್ರವೇಶಮಾಡಿದಳು. ಮದುವೆಯ ಉತ್ಸವಂಗಳನ್ನೆಲ್ಲಾ ನೋಡಿನೋಡಿ ವಿಷಯೆಯೂ ತನ್ನ ಅಂತರಂಗದಲ್ಲಿ ಕಾಮಬಾಧೆಯಿಂದ ಪೀಡಿತಳಾಗಿ ತನಿಗೂ ಮದುವೆಯು ಶೀಘ್ರವಾಗಿಯೇ ನೆರವೇರುವುದೆಂಬ ಕೌತುಕದಿಂದ ಕೂಡಿ ತಮ್ಮಮನೆಯಂ ಪೊಕ್ಕಳು||೩೩|| ಕೇಳೈ ಇಂದ್ರಸೂನುವಾದ ಧನಂಜಯನೆ, ವಿಷಯೆಯು ತಮ್ಮ ಮನೆಯನ್ನು ಹೊಕ್ಕಬಳಿಕ ವಿರಹತಾಪವನ್ನು ತಾಳಲಾರದೆ ಒಂದು ಗಳಿಗೆಯನ್ನು ಒಂದು ಯುಗದಂತೆ ಕಳೆಯುತ್ತಿದ್ದಳು. ನಿಂತಕಡೆ ನಿಲ್ಲಲು ಇಷ್ಟವಾಗಿರಲಿಲ್ಲವು. ಯಾರೊಬ್ಬರನ್ನೂನೋಡಬೇಕೆಂಬ ಆಸೆಯೇ ಇರಲಿಲ್ಲವು. ಗಿಳಿಗಳೊಂದಿಗೆ ಮಾತನಾಡುವುದಕ್ಕೂ ಜೊತೆಗಾತಿಯರ ಮಾತಿನಂತೆ ನಡೆಯುವುದಕ್ಕೂ ತಾನು ಸಾಕುತ್ತಲಿದ್ದ ಪಕ್ಷಿಮೃಗಾದಿಗಳನ್ನು ಅಕ್ಕರೆಯಿಂದ ನೋಡುವುದಕ್ಕೂ ಆಸಕ್ತಿಯನ್ನುಂಟಾಗಿರಲಿಲ್ಲವು||೩೪||ಊಟವನ್ನು ಬಿಟ್ಟು

ಳೇನಿನೆಂದುಂಡಲೆದುಕೇಳ್ವವರೊಳು ‖ ಕಣ್ಣೊಳವನೊದವಿಪಲ್ಕೈತ್ಯವಸ್ತುಗಳಿಂದ | ಪಣ್ಣಿದುಪಚಾರಮುಂಹೃದಯದೊಳ್ನೀರ್ವೊಯ್ದ | ಸುಣ್ಣಮುರಳ್ವಂತಾದುದೆಂದುಕಾತರಿಸುವಳ್ಕಾಮಪರಿತಾಪದಿಂದ ‖೩೫‖ ಜಲಜಂತ್ರದೆಡೆಯೊಳ್ತಳಿರ್ವಸೆಯತಾಣದೋ | ಳ್ಮಲಯಜದನಾಡದೊಳ್ಶಶಿಕಾಂತವೇದಿಯೋ | ಳ್ಸುಲಲಿತಲತಾಮಂಟಪದೊಳೆಸೆವತಂಗೊಳದತಡಿಯಪುಳಿನಸ್ಥಳದೊಳು ‖ ಎಲೆವೆಲರತುಂಬಿಗಳಪಲ್ಲವದಕುಸುಮಸಂ | ಕುಲದ ಹಂಸದಗಿಳಿಯಕೋಗಿಲೆಯಕರ್ಕಶಕೆ | ನಿಲಲರಿಯದುಪ್ಪರಿಗೆತುದಿನೆಲೆಯಚಂದ್ರಶಾಲೆಗೆಬಂದಳಂಬುಜಾಕ್ಷಿ ‖ ೩೬ ‖ ಅಲ್ಲಿ ನಿಜಸಖಿಯರಬಲೆಯಚಿತ್ತದಾಸರಂ | ಮೆಲ್ಲಮೆಲ್ಲನೆತವಿಸಲೆಂದುಪಚರಿಸಲವರ | ಸಲ್ಲಲಿತಮುಖವಾಣಿಲೋಚನಭ್ರೂಕುಂತಳಾಧರಂಗಳನೀಕ್ಷಿಸಿ ‖ ತಲ್ಲಣಿಸಿ ತಿಂಗಳರಗಿಳಿಪೂಸರಲ್ಕಬ್ಬು | ವಿಲ್ಲಾರಡಿಲಲಿತತಳಿರ್ಗಳೆಂದೆಣಿಸಿನು | ಣ್ಣಲ್ಲದೋಳ್ಕೈಯಿಟ್ಟುಬೆರಗಾಗಿಚಿಂತಿಸುವತೆರದೊಳವಳಿರುತಿರ್ದಳು ‖೩೭‖ ಪಾವಗಿದುಳಿದರುಂಟೆ

---

ರಮುಂ-ಸತ್ಕಾರವನ್ನು, ಹೃದಯದೋಳ್-ಮನದಲ್ಲಿ, ನೀರ್ವೊಯ್ದ-ನೀರೆರೆದ ಸುಣ್ಣವು, ಮುರಳ್ವಂತೆ - ಕುದಿಯುವಹಾಗೆ, ಆದುದು-ಆಗಿಬಿಟ್ಟು ಇರುವುದು, ಎಂದು-ಎಂಬತೆರನಾಗಿ, ಕಾತರಿಸುವಳು-ಹೆದರುವಳು ‖೩೫‖

ಟೀ‖ ಅಂಬುಜಾಕ್ಷಿ-ಪದುಮನೇತ್ರೆಯಾದ ವಿಷಯೆ ಎಂಬ ಬಾಲೆಯು, ಜಲಜಂತ್ರದ-ನೀರ್ಗೊಳವಿಯ, ಎಡೆಯೊಳ್-ಸ್ಥಳದಲ್ಲಿ, ತಳಿರ್ವಸೆಯ-ಚಿಗುರಿನಿಂದ ಮಾಡಿರತಕ್ಕ, ತಾಣದೊಳ್-ಪ್ರದೇಶದಲ್ಲಿ, ಮಲಯಜದ-ಸಿರಿಕಂಡದ, ಮಾಡದೊಳ್-ಗೂಡಿನೊಳಗೆ, ಶಶಿಕಾಂತವೇದಿಯೊಳ್-ಇಂದುಕಾಂತ ಶಿಲೆಯ ಜಗಲಿಯಲ್ಲಿ, ಸುಲಲಿತ-ಮೃದುವಾದ, ಲತಾಮಂಟಪದೊಳು-ಬಳ್ಳಿಯ ಮನೆಯಲ್ಲಿ, ಎಸೆವ-ಹೊಳೆಯುತ್ತಿರುವ, ತಂಗೊಳದ-ತಣ್ಣಗಿರುವ ಸರಸ್ಸಿನ, ತಡಿಯ-ದಡದಲ್ಲಿರತಕ್ಕ, ಪುಳಿನಸ್ಥಳದೊಳು-ಮರಳಿರುವ ಭಾಗದಲ್ಲಿ, ಎಳೆವೆಲರ-ತಂಗಾಳಿಯ, ತುಂಬಿಗಳ-ಅಳಿವಿಂಡನ, ಪಲ್ಲವದ-ಚಿಗುರಿನ, ಕುಸುಮ-ಹೂಗಳ, ಸಂಕುಲದ-ಗುಂಪಿನ, ಹಂಸದ-ಅಂಚೆಗಳ, ಗಿಳಿಯ-ಶುಕದ, ಕೋಗಿಲೆಯ-ಕೋಗಿಲೆ ಪಕ್ಷಿಯ, ಕರ್ಕಶಕೆ-ಕಠಿಣತೆಗೆ, ನಿಲಲು ನಿಂತುಕೊಳ್ಳಲು, ಅರಿಯದೆ-ಅಸಾಧ್ಯವಾದಕಾರಣ, ಉಪ್ಪರಿಗೆ-ಮಹಡಿಯ, ತುದಿ-ಕಡೆಯಲ್ಲಿರತಕ್ಕ, ನೆಲೆಯ-ಸ್ಥಾನದ, ಚಂದ್ರಶಾಲೆಗೆ-ಮೇಲ್ಮಚ್ಚಿಗೆ, ಬಂದಳು-ಬಂದು ಸೇರಿದಳು ‖೩೬‖

ಟೀ‖ ಅಲ್ಲಿ-ಆ ಎಡೆಯಲ್ಲಿ, ಅಬಲೆಯ-ವಿಷಯೆಯೆಂಬ ತರುಣಿಯ, ಚಿತ್ತದ-ಹೃದಯಂಗಮವಾದ, ಅಸರಂ-ಕಳವಳವು, ಮೆಲ್ಲಮೆಲ್ಲನೆ-ಕ್ರಮಕ್ರಮವಾಗಿ, ತವಿಸಲಿ-ನಿವಾರಣೆಯನ್ನೈದಲಿ, ಎಂದು-ಎಂಬುದಾಗಿ, ನಿಜ-ತನ್ನ, ಸಖಿಯರು-ಗೆಳತಿಯರು, ಉಪಚರಿಸಲು-ಉಪಚಾರಮಾಡಲಾಗಿ, ಅವರ-ಆ ಗೆಳತಿಯರ, ಸಲ್ಲಲಿತ-ಮೃದುವಾದ, ವಾಣಿ-ನುಡಿಯು, ಲೋಚನ-ನಯನಂಗಳು, ಭ್ರೂ-ಕಣ್ಣುಬ್ಬುಗಳು, ಕುಂತಳ-ಕೇಶಪಾಶಂಗಳು, ಅಧರಂಗಳನು-ತುಟಿ ಮೊದಲಾದವನ್ನೆಲ್ಲಾ, ಈಕ್ಷಿಸಿ-ದೃಷ್ಟಿಸಿದವಳಾಗಿ. ತಲ್ಲಣಿಸಿ-ಆಯಸಂಗೊಂಡು, ತಿಂಗಳು-ಬೆಳದಿಂಗಳು, ಅರಗಿಳಿ-ಗಿಳಿಗಳು, ಪೂ-ಕಪ್ಪುಕಮಲವೆನ್ನುವ, ಸರಲ್-ಕಣೆಯು, ಕಬ್ಬುವಿಲ್ಲು-ಕಬ್ಬಿನ ಧನುಸ್ಸು, (ಇಕ್ಷುಚಾಪವು) ಅರಡಿಗಳ್-ಅಳಿಗಳು, ಲಲಿತತಳಿರ್ಗಳ್-ಶರೀರವೆನ್ನುವ ಪಲ್ಲವಂಗಳು, ಎಂದು-ಎಂಬತೆರನಾಗಿ, ಎಣಿಸಿ-ಆಲೋಚನೆಯಂ ಮಾಡಿಕೊಂಡು, ಕೈ-ತನ್ನ ಕರವನ್ನು, ನುಣ್ಗಲ್ಲದೊಳ್-ಮೃದುವಾದ ಕೆನ್ನೆಯಮೇಲೆ, ಇಟ್ಟು-ಇಟ್ಟವಳಾಗಿ, ಬೆರಗಾಗಿ-ಅಚ್ಚರಿಗೊಂಡು, ಚಿಂತಿಸುವತೆರದೊಳು-ಆಲೋಚನೆಯಂಗೈಯ್ಯುವ ಪರಿಯಿಂದ, ಅವಳು-ಮಂತ್ರಿಕುವರಿಯು, ಚಿಂತಿಸುತ-ಆಲೋಚನೆಯಂ ಗೈಯ್ಯುತ್ತ, ಇರ್ದಳು-ಇದ್ದವಳಾದಳು ‖೩೭‖

ಟೀ‖ ಓರ್ವಸಖಿ-ವಿಷಯೆಯ ಬಳಿಯಲ್ಲಿರುವ ಸ್ನೇಹಿತಳೊಬ್ಬಳು, (ತನ್ನಲ್ಲಿತಾನೆ) ಪಾವಗಿದು-ಸರ್ಪದಷ್ಟವಾಗಿ, ಉಳಿದವರು-ಪ್ರಾಣವನ್ನಿಟ್ಟುಕೊಂಡಿರತಕ್ಕವರು, ಉಂಟೆ - ಇರುತ್ತಾರೆಯೆ, ಹರನ- ಪರಮೇಶ್ವರನ, ಕೋಪದೊಳು-ಅಗ್ರಹದಿಂದ, ಉರಿದು-ಭಸ್ಮವಾಗಿ, ಜೀವಿಸಿದರು-ಪ್ರಾಣವನ್ನಿಟ್ಟುಕೊಂಡಿರತಕ್ಕವರು, ಉಂಟೆ-ಇದ್ದಾರಯೆ, ಕಾಳ್ಗಿಚ್ಚಿನೋಳ್-ಕಾಡುಬೆಂಕಿಯೊಂದಿಗೆ, ಕೆಳೆಗೊಂಡು-ಮೈತ್ರಿಯನ್ನುಂಟು ಮಾಡಿಕೊಂಡು, ಬೇವುತ-ತಪಿಸುತ್ತ, ಅಸುವಿಡಿದು-ಜೀವವನ್ನು

---

ಬಿಟ್ಟಳು ನಿದ್ರೆಯನ್ನೂ ದೂರಮಾಡಿದಳು. ಇವಳ ವಿರಹತಾಪವಂ ನಿವಾರಿಸಲು ಸಖಿಯರು ಮಾಡಿದ ಶೈತ್ಯೋಪಚಾರವೆಲ್ಲಾ ಕಾದ ಸುಣ್ಣದಲ್ಲಿಹಾಕಿದ ನೀರಿನಂತೆ ನಿಷ್ಫಲವಾಯಿತು. ಕಾಮಬಾಧೆಯಾದರೊ ಪ್ರತಿದಿನವೂ ಹೆಚ್ಚುತ್ತ ಬಂದಿತು‖೩೫‖ನೀರ್ಗೊಳವಿಗಳ ಆಟವೂ, ಮಂದಮಾರುತವೂ, ಚಂದ್ರಕಾಂತ ಶಿಲೆಯೂ, ಬಳ್ಳಿಯಮಂಟಪಂಗಳೂ, ತಂಪಾದ ನೀರುಳ್ಳಸರೋವರವೂ, ಮರಳ ದಿಣ್ಣೆಗಳೂ ಹಂಸ ಗಿಳಿ ಮೊದಲಾದವುಗಳೂ, ಹೂಗಳ ಪರಿಮಳವೂ ಇರುವ ಕಡೆಯಲ್ಲಿ ವಿಷಯೆಯು ನಿಲ್ಲಲಾರದೆ ಹೊರಟು ತಮ್ಮ ಮನೆಯ ಮಹಡಿಯ ಕಡೇ ಅಂತಸ್ತಿಗೆ ಬಂದುಸೇರಿದಳು ‖೩೬‖ ಅಲ್ಲಿ ವಿರಹತಾಪದಿಂದಿರುವ ಈ ಬಾಲೆಯನ್ನು ಉಪಚರಿಸುತ್ತಲಿದ್ದ ಸಖಿಯರನ್ನೆಲ್ಲಾ ನೋಡಿ ಅವರ ಮುಖವನ್ನು ಬೆಳ್ದಿಂಗಳೆಂತಲೂ, ಅವರ ನುಡಿಗಳನ್ನು ಅರಗಿಳಿಗಳ ನುಡಿಯೆಂದೂ, ಅವರ ಕಣ್ಣುಬ್ಬುಗಳನ್ನು ಕಬ್ಬಿನ ಬಿಲ್ಲೆಂತಲೂ ಭ್ರಾಂತಿಗೊಂಡು ನುಡಿಯುತ್ತಲಿದ್ದಳು ‖೩೭‖ ಆ ಉಪ್ಪರಿಗೆಯಮೇಲೆ

ಹರನಕೋಪದೊಳುರಿದು | ಜೀವಿಸಿದರುಂಟೆಕಾಡ್ಗಿಚ್ಚಿನೋಳ್ಕಿಳಿಗೊಂಡು | ಬೇವುತಸುವಿಡಿದುಬಾಳ್ದವರುಂಟೆಚಂದ್ರಮನ್ಮಥ
ಪವನರಬಲೆಯರ್ಗೆ || ಹಾವಳಿಯನೊದವಿಸುವೆವೆಂದುಬದುಕಿದರಲ್ಲ | ದಾವಕರುಣಿಗಳವರ್ವಿರಹಮಿಾಕೆಯಮನವ | ನಾವರಿಸ
ಲೇನಹುದೊಶಿವಶಿವಾತಾಳಲರಿದೆಂದೋರ್ವಸಖಿನುಡಿದಳು || ೩೮ || ಬೆಳವಿಗೆಗೆಸುರರೊಂದುಕಳೆಯನೇಕಳುಹಿದರೊ | ಮುಳಿ
ದಂದುಶಿವನೇಕೆಮತ್ತೆ ಕರುಣಿಸಿದನೊ | ಮೆಲುತಮೆಲುತೇಕೆಬಿಟ್ಟವೊಫಣಿಗಳೆಂದುಶಶಿಮದನಮಂದಾನಿಲರನು || ಸಲೆಬೈದು
ಕೋಗಿಲೆಯತುಂಬಿಗಳಗಿಳಿಯಕಳ | ಕಳಕೆವಾಯಸಮಂಸರೋಜಮಂತನ್ನ ಕರ | ತಳಮಂಜರೆದುನಿಂದಿಸಿದಳೋರ್ವಸಖಿ
ಬಾಲೆಯನೋಡಿಬಿಸುಸುಯ್ಯುತ ||೩೯|| ಇವಳಮನದೆಣಿಕೆಕೈಗೂಡಲಾವೆಲ್ಲರುಂ | ವಿವಿಧಕುಸುಮೋತ್ಕರಸುಗಂಧಾಕ್ಷತೆಗಳಿಂದ |
ನವಪಕ್ವಫಲಮೋದಕಾದಿನೈವೇದ್ಯದಿಂಧೂಪದೀಪಂಗಳಿಂದ || ಶಿವನವಲ್ಲಭೆಯನರ್ಚಿಸಿವರುಷವರುಷಕು | ತ್ಸವದಿಂದನೋಂ

ಇರಿಸಿಕೊಂಡು, ಬಾಳ್ದವರು-ಬದುಕಿರತಕ್ಕ ಜನರು, ಉಂಟೆ - ಇದ್ದಾರೆಯೇ, ಚಂದ್ರ-ಇಂದುವು, ಮನ್ಮಥ-ಮಿಾನಕೇತನನು, ಪವನರು-ಗಾಳಿ ಮೊದಲಾದವರು, ಅಬಲೆಯರ್ಗೆ-ನಾರಿಯರಿಗೆ, ಹಾವಳಿಯನು-ಕಷ್ಟವನ್ನು, ಒದವಿಸುವೆವು - ಎಸಗುವೆವು, ಎಂದು-ಎಂಬತೆರನಾಗಿ, ಬದುಕಿದರಲ್ಲ-ಪ್ರಾಣವನ್ನಿಟ್ಟುಕೊಂಡಿರತಕ್ಕವರಲ್ಲವೆ, ಅವರ್-ಆ ಚಂದ್ರಮನ್ಮಥಪವನರು, ಅದಾವ-ಅದು ಎಂಥಾ, ಕರುಣಿಗಳು - ಕೃಪೆಯುಳ್ಳವರು, ಈಕೆಯ - ಈ ವಿಷಯೆಯ, ಮನಂ - ಚಿತ್ತವನ್ನು, ವಿರಹವು-ವಿಯೋಗ ದುಃಖವು, ಆವರಿಸಲು-ಆಕ್ರಮಿಸಿದ್ದರಿಂದ, ಏನಹುದೊ-ಏನಾಗುತ್ತದೆಯೋ, ಶಿವಶಿವ-ಎಲೈ ಈಶ್ವರನೆ, ಎಂದು-ಎಂಬತೆರದಿಂದ, ನುಡಿದಳು-ಎಂದುಕೊಂಡಳು. ||೩೮||

ಟೀ|| ಓರ್ವಸಖಿ-ಮತ್ತೊಬ್ಬಗೆಳತಿಯಾದರೊ, ಬಾಲೆಯುಂ-ವಿಷಯೆಯನ್ನು, ನೋಡಿ-ನಿರುಕಿಸಿ, ಬೆಳವಿಗೆಗೆ-ವೃದ್ಧಿಯನ್ನೈದಲೋಸುಗ, ಸುರರು-ದೇವತಾಸಮೂಹದವರು, ಒಂದುಕಳೆಯನೆ-ಒಂದು ಕಳಾವಿಶೇಷವನ್ನೆ, ಕಳುಹಿದರೊ-ಕಳುಹಿಸುತ್ತಾರೆಯೊ, ಅಂದು-ಪೂರ್ವದಲ್ಲಿ ಮನ್ಮಥನಮೇಲೆ ಪರಮೇಶ್ವರನು ಬಾಣವನ್ನು ಬಿಟ್ಟಕಾಲದಲ್ಲಿ, ಮುಳಿದನೊ-ಸಿಟ್ಟುಗೊಂಡನೊ, ಮತ್ತೆ-ತಿರುಗಿ, ಶಿವನು-ಹರನು, ಏಕೆ ಕರುಣಿಸಿದನೊ-ಏತಕ್ಕೆ ಕೃಪೆಯಿಂದ ಕಂಡನೊ, (ಅನಂಗತ್ವವನ್ನುಂಟುಮಾಡಿದನೊ) ಫಣಿಗಳು - ಹಾವುಗಳು, ಮೆಲುತಮೆಲುತ - ತಿನ್ನತಿನ್ನುತ್ತ, ಏಕೆ-ಯಾವ ನಿಮಿತ್ತದಿಂದ, ಬಿಟ್ಟವೊ - ಬಿಟ್ಟುಬಿಟ್ಟವೊ, ಎಂದು-ಎಂಬತೆರನಾಗಿ, ಸಲೆ-ಸಂಪೂರ್ಣವಾಗಿ, ಶಶಿಮದನಮಂದಾನಿಲರನು - ಶಶಿ-ಇಂದುವನ್ನೂ, ಮದನ-ಮಿಾನಕೇತನನನ್ನೂ, ಮಂದಾನಿಲರನು - ಮಂದಮಾರುತ ಮೊದಲಾದವರನ್ನೂ, ಬೈದು-ದೂಷಿಸಿ, (ಅಗ್ನಿಹರರನು ಮತ್ತು ಹಾವುಗಳನ್ನು) ವಾಯಸಮಂ-ಕಾಗೆಯನ್ನೂ, ಸರೋಜಮಂ-ತಾವರೆಯನ್ನೂ, ತನ್ನಕರತಳಮಂ-ತನ್ನ ಹಸ್ತಪ್ರದೇಶವನ್ನೂ ಸಹ, ಕೋಗಿಲೆಯ-ಕೋಗಿಲೆ ಹಕ್ಕಿಯ, ತುಂಬಿಗಳ-ಅಳಿವಿಂಡಿನ, ಗಿಳಿಯ-ಶುಕದ, ಕಳಕಳಕೆ-ಕಳಕಳವೆನ್ನತಕ್ಕ ಶಬ್ದಕ್ಕಾಗಿ, ಜರೆದು-ಹೀಯಾಳಿಸಿ, ಬಿಸುಸುಯ್ಯುತ-ನಿಟ್ಟುಸಿರನ್ನು ಎಳೆಯುತ್ತ, ನಿಂದಿಸಿದಳು-ಬೈದಳು. ||೩೯||

ಟೀ|| ಆಸಖಿಯರು-ಆ ವಿಷಯೆಯ ಸಂಗಾತಿಯರು, ಆಸಕಲಭುವನಮಾತೆಯನು-ಎಲ್ಲಾ ಲೋಕಂಗಳಿಗೂ ತಾಯಿಯಾಗಿರತಕ್ಕ, ಗೌರಿಯಂ-ಶಿವನವಲ್ಲಭೆಯಾದ, ಉಮಾದೇವಿಯಂ-ಗಿರಿಜೆಯನ್ನು ಕುರಿತು, ಇವಳ-ಈ ನಮ್ಮ ಸಖಿಯಾದ ಮಂತ್ರಿಕುವರಿಯ, ಎಣಿಕೆ-ಇಷ್ಟಾರ್ಥವು, ಕೈಗೂಡಲು-ನೆರವೇರಿದ ಹಾಗಾದರೆ, ಅವೆಲ್ಲರುಂ-ನಾವುಗಳೆಲ್ಲ, ವಿವಿಧ-ತಂಡತಂಡವಾದ **ಕುಸುಮ-ಪುಷ್ಪಗಳ,** ಉತ್ಕರ-ಹೆಚ್ಚಿಕೆಯಿಂದಲೂ, ಸುಗಂಧಾಕ್ಷತೆಗಳಿಂದ-ಒಳ್ಳೆ ವಾಸನೆಯನ್ನು ಬೀರುವ ಗಂಧ ಮಂತ್ರಾಕ್ಷತೆ ಇವುಗಳಿಂದಲೂ, **ನವ**-ಆಗತಾನೆ, ಪಕ್ವಫಲ-ಮಾಗಿರುವ ಫಲಗಳು, ಮೋದಕ - ಸಿಹಿಪದಾರ್ಥಗಳು, (ಕಡಬು ಮೊದಲಾದವು) ಆದಿ-ಮೊದಲಾದ, ನೈವೇದ್ಯದಿಂ-ಆಹಾರ ಸಾಮಗ್ರಿಗಳಿಂದಲೂ, ಧೂಪದೀಪಂಗಳಿಂದ-ಕರ್ಪೂರ, ಊದಬತ್ತಿ ಮೊದಲಾದವುಗಳಿಂದಲೂ, ಶಿವನವಲ್ಲಭೆಯನು-ಪಾರ್ವತಾದೇವಿಯನ್ನು, ಅರ್ಚಿಸಿ - ಆರಾಧಿಸಿ, ಉತ್ಸವದಿಂದ - ಅತ್ಯಾನಂದದಿಂದ, ವರುಷವರುಷಕೆ-ಪ್ರತಿಯೊಂದು ವರ್ಷವೂ, ನೋಂಪಿಯಂ - ಪೂಜೆಯನ್ನು, ಮಾಳ್ಪೆವು - ಗೈಯ್ಯುವೆವು, ಎಂದು - ಎಂಬತೆರನಾಗಿ, ಪ್ರಾರ್ಥಿಸಿದರು-ಕೇಳಿಕೊಂಡವರಾದರು. ||೪೦||

---

ಬೆಳ್ದಿಂಗಳು ಬೀಳುತ್ತಲಿದ್ದ ಕಾರಣ ಈ ಬಾಲೆಯ ವಿರಹವು ಮತ್ತಷ್ಟು ಹೆಚ್ಚಾಯಿತು || ೩೮ || ಚಂದ್ರನ ಕಾಂತಿಯು ಹೆಚ್ಚಾಗಿರುವುದನ್ನೂ, ಮನ್ಮಥ ಬಾಧೆಯು ಅಭಿವೃದ್ಧಿಯನ್ನೈದುತ್ತಲಿರುವುದನ್ನೂ ಮಂದಮಾರುತದ ಸೊಬಗನ್ನೂ ನೋಡಿ, ಆ ಬಾಲೆಗುಂಟಾದ ವಿರಹತಾಪಕ್ಕೆ ತಾನೂ ಮರುಗುತ್ತ ಒಬ್ಬಾನೊಬ್ಬ ಸಖಿಯು ನಿಟ್ಟುಸಿರು ಬಿಡುತ್ತಲಿದ್ದಳು. || ೩೯ || **ಬಳಿಕ** ಆ ವಿಷಯೆಯ ಸಖಿಯರೆಲ್ಲರೂ ಸೇರಿ, ಈ ನಮ್ಮ ವಿಷಯೆಗುಂಟಾಗಿರತಕ್ಕ ಬಾಧೆಯನ್ನು ಪರಿಹಾರ ಮಾಡಬೇಕಾದರೆ ಪಾರ್ವತಾದೇವಿಯೆ ಸರಿಯೆಂದು ನಿಷ್ಕರ್ಷಿಸಿಕೊಂಡು, ಲೋಕಮಾತೆಯಾದ ಪರ್ವತಪುತ್ರಿಯೇ! ನಮ್ಮ ಸಖಿ

ಪಿಯುಂಮಾಳ್ಪೆವೆಂದಾಸಕಲ | ಭುವನಮಾತೆಯನುಮಾದೇವಿಯಂಗೌರಿಯಂಪ್ರಾರ್ಥಿಸಿದರಾಸಖಿಯರು ‖ ೪೦ ‖ ಪ್ರಾಸಾದದಗ್ರದೇಳನೆಯನೆಲೆಯೊಳ್ಚಂದ್ರ | ಹಾಸನೈತಹಮಾರ್ಗಮಂನೋಡುತುಪಚರಿಸು | ವಾಸಖೀಜನದನುಡಿಗಳನಾಲಿಸುತವಿಷಯೆ ಚಿತ್ತದೊಳ್ತನ್ನಪಿತನ ‖ ಶಾಸನವನಿಂದುಮದನಂಪಾಲಿಪಂತೆನೀಂ | ಸೂಸುಕಾರುಣ್ಯವರುಷವನೆನ್ನಮೇಲೆಂದು | ವಾಸುದತಿ ಭಕ್ತಿಯಿಂಬೇಡಿಕೊಳುತಿರ್ದಳಾನತೆಯಾಗಿಪಾರ್ವತಿಯನು ‖ ೪೧ ‖ ವಿಜಯಕೇಳಿತ್ತಬನದೊಳ್ಚಂದ್ರಹಾಸನಂ | ಬುಜಮಿತ್ರನಪರಾಣಹ್ನಕೈದಲ್ಕೆನಿದ್ರೆಯಂ | ತ್ಯಜಿಸಿಮೊಗದೊಳದುಮುಕ್ಕುಳಿಸಿಕರ್ಪೂರವೀಳೆಯಂಗೊಂಡುಬಳಿಕಬಿಗಿಸಿ ‖ ನಿಜವಾಜಿಯಂಬಂದಡರ್ದನುಚರರ್ವೆರಸಿ | ಋಜುವಾದಶಕುನಂಗಳಂಕೇಳುತೊಲಿದುಪೌ | ರಜನಮಿವನಾರೆಂದುನೋಡಲ್ಕೆನಗರಮಂಪೊಕ್ಕುನಡೆತರುತಿರ್ದನು ‖ ೪೨ ‖ ಆನಗರದೊಳ್ಕುಂತಳೇಶ್ವರಂನಿರ್ಮಲ | ಜ್ಞಾನದಿಂದಾಗಾಲವನಸೂಕ್ತಮಂಕೇಳುತಸ | ದಾನಂ

ಟೀ‖ ವಿಷಯೆ–ಮಂತ್ರಿತನುಜೆಯು, ಪ್ರಾಸಾದದ–ಮಹಡೀಮನೆಯ, ಅಗ್ರದ–ಕಟ್ಟಕಡೆಯ, ಏಳನೆಯ ನೆಲೆಯೊಳ್–ಏಳನೇ ಅಂತಸ್ತಿನಲ್ಲಿ, ಚಂದ್ರಹಾಸಂ–ಇಂದುಹಾಸನು, ಐತಹ – ಬರುತ್ತಲಿರತಕ್ಕ, ಮಾರ್ಗಮಂನೋಡುತ – ದಾರಿಯನ್ನು ನಿರುಕಿಸುತ್ತ, ಉಪಚರಿಸುವ–ಉಪಚಾರಮಾಡತಕ್ಕ, ಆಸಖೀಜನ–ಆ ತನ್ನ ಸಂಗಾತಿಯರ, ನುಡಿಗಳನು – ವಚನಂಗಳನ್ನು, ಆಲಿಸುತ–ಶ್ರವಣಮಾಡುತ್ತ, ತನ್ನಪಿತನ–ತನ್ನ ಜನಕನ, ಶಾಸನವನು–ಆಜ್ಞೆಯನ್ನು, ಮದನಂ–ನಮ್ಮ ಅಣ್ಣನು, ಪಾಲಿಪಂತೆ–ಈಡೇರಿಸುವ ಹಾಗೆ, ಎನ್ನಮೇಲೆ–ನನ್ನಮೇಲೆ, ಕಾರುಣ್ಯವರುಷವನು – ದಯೆಯೆಂಬ ಮಳೆಯನ್ನು, ನೀಂ–ನೀನು, ಸೂಸು–ಸುರಿಸತಕ್ಕವಳಾಗು, ಎಂದು–ಎಂಬ ಪರಿಯಿಂದಲೂ, ಆಸುದತಿ ಆ ವಿಷಯೆಯು, ಭಕ್ತಿಯಿಂದ–ಆನತೆಯಾಗಿ ವಿಧೇಯಳಾಗಿ, ಪಾರ್ವತಿಯನು–ಗಿರಿಜೆಯನ್ನು, ಚಿತ್ತದೊಳ್–ತನ್ನಂತರಂಗದಲ್ಲಿಯೇ, ಬೇಡಿಕೊಳುತಿರ್ದಳು–ಕೇಳಿಕೊಳ್ಳುತ್ತಾ ಇದ್ದಳು ‖೪೧‖

ಟೀ‖ ವಿಜಯ–ಅಯ್ಯಾ ಪಾರ್ಥನೆ, ಕೇಳು–ಆಲಿಸು, ಚಂದ್ರಹಾಸನು–ಇಂದುಹಾಸನಾದರೊ, ಅಪರಾಹ್ಣಕೆ–ಮಧ್ಯಾಹ್ನ ಕಾಲಕ್ಕೆ ಎಂದರೆ ೨೭ ಘಳಿಗೆ ಹೊತ್ತಿಗೆ, ಅಂಬುಜಮಿತ್ರನು – ರವಿಯು, ಐದಲ್ಕೆ – ಬಂದು ಸೇರಲು, ಬನದೊಳ್ – ಉದ್ಯಾನದಲ್ಲಿ, ನಿದ್ರೆಯಂ–ನಿದ್ದೆಯನ್ನು, ತ್ಯಜಿಸಿ – ಬಿಟ್ಟವನಾಗಿ, ಮೊಗದೊಳೆದು – ತನ್ನ ಮೋರೆಯನ್ನೊರಸಿಕೊಂಡು, ಮುಕ್ಕಳಿಸಿ–ನೀರನ್ನು ಬಾಯಿಗೆ ಹಾಕಿ ಹೊರಕ್ಕೆ ಉಗುಳಿ, ಕರ್ಪೂರವೀಳೆಯಂಗೊಂಡು – ಪಚ್ಚಕರ್ಪೂರವು ಬೆರತಿರತಕ್ಕ ತಾಂಬೂಲವನ್ನು ಸೇವಿಸಿ, ಬಳಿಕ–ಆಮೇಲೆ, ನಿಜ–ತನ್ನದಾದ, ವಾಜಿಯಂ–ಹಯವನ್ನು, ಬಿಗಿಸಿತರಲು–ಜೀನುಹಾಕಿ ತೆಗೆದುಕೊಂಡು ಬರಲಾಗಿ, ಅಡರ್ದು–ಏರಿ, ಅನುಚರರ್ವೆರಸಿ–ಸೇವಕ ಜನರಿಂದ ಕೂಡಿ, ಋಜುವಾದ–ಉತ್ತಮವಾದ, ಶಕುನಂಗಳಂ–ಶುಭಸೂಚನೆಗಳನ್ನು, ಕೇಳುತ – ಶ್ರವಣಮಾಡುತ್ತ, ಪೌರಜನಂ – ಕುಂತಳನಗರ ವಾಸಿಗಳೆಲ್ಲಾ, ಇವನು–ಈ ತರುಣನು, ಆರು–ಯಾರು, ಎಂದು–ಎಂಬತೆರನಾಗಿ, ಒಲಿದು–ಅಕ್ಕರೆಯಿಂದ, ನೋಡಲ್ಕೆ–ನಿರುಕಿಸುತ್ತಲಿರಲಾಗಿ, ನಗರಮಂ – ಪಟ್ಟಣವನ್ನು, ಪೊಕ್ಕು–ಪ್ರವೇಶಮಾಡಿ, ನಡೆತರುತಿರ್ದನು–ಬರುತ್ತಲಿದ್ದನು.

ಅ‖ ವಿ‖ ಬನ (ತ್ಭ) ವನ (ತ್ಸ) ಪೊಕ್ಕನು – ಪುಗುಧಾತುವಿನ ಭೂತಕಾಲ. ‖೪೨‖

ಟೀ‖ ಕುಂತಳೇಶ್ವರಂ–ಕುಂತಳೇಂದ್ರನಾದರೊ, ನಿರ್ಮಲಜ್ಞಾನದಿಂದ–ಪವಿತ್ರವಾದ ತಿಳಿವಳಿಕೆಯಿಂದ, ಗಾಲವಸೂಕ್ತಮಂ–ಗಾಲವಋಷಿಯ ನುಡಿಗಳನ್ನು, ಕೇಳುತ–ಕೇಳಿಕೊಂಡು, ಸದಾ–ಯಾವಾಗಲೂ, ಆನಂದಯೋಗಮಂ–ಸಂತೋಷವಾದ ಯೋಗವನ್ನು, ಕೈಕೊಂಡು–ಪಡೆದು, ವಿಚಾರವನು–ದೇಶದ ಅಧಿಕಾರವನ್ನೆಲ್ಲಾ, ದುಷ್ಟಬುದ್ಧಿಗೆ–ದುಷ್ಟಬುದ್ಧಿ ಎನ್ನತಕ್ಕ ತನ್ನ ಸಚಿ

ಯಾದ ವಿಷಯೆ ಗುಂಟಾಗಿರತಕ್ಕ ಬಾಧೆಯನ್ನು ಹೋಗಲಾಡಿಸು, ಈಕೆಯ ಇಷ್ಟಾರ್ಥವನ್ನೀಡೇರಿಸಿದರೆ ನಾವೆಲ್ಲರೂ ಸೇರಿ ಧೂಪದೀಪ ನೈವೇದ್ಯಾದಿಗಳಿಂದ ನಿನ್ನನ್ನು ಪ್ರತಿವರ್ಷವೂ ಪೂಜಿಸುತ್ತೇವೆಂದು ಬೇಡಿಕೊಳ್ಳುತ್ತಲಿದ್ದರು ‖೪೦‖ ಆ ವಿಷಯೆಯೆಂಬ ಕನ್ಯಾಮಣಿಯೂ ಕೂಡ ಏಳನೆಯ ಅಂತಸ್ತಿನಲ್ಲಿ ಕುಳಿತು ರಾಜಬೀದಿಯಲ್ಲಿಯೇ ನೋಡುತ್ತ ಚಂದ್ರಹಾಸನು ಬರುತ್ತಿರುವುದನ್ನೂ, ತನ್ನ ಸಖಿಯರೆಲ್ಲಾ ಶಂಕರಿಯನ್ನು ಪೂಜೆಮಾಡುತ್ತಲಿರುವುದನ್ನೂ ಕಂಡು, ತಾನೂ ಕೂಡ ಅಂತರಂಗದಲ್ಲಿಯೇ ಓ ಲೋಕಮಾತೆಯೇ, ಈ ಚಂದ್ರಹಾಸನೇ ನನಿಗೆ ಪತಿಯಾಗುವಂತೆ ಮಾಡಿ ನಿನ್ನ ಕರುಣಾರಸವನ್ನು ನನ್ನ ಮೇಲೆ ಸುರಿಸೆಂದು ಬೇಡಿಕೊಳ್ಳುತ್ತಲಿದ್ದಳು. ‖೪೧‖ ಕೇಳೈ ಅರ್ಜುನ, ಈ ರೀತಿಯಲ್ಲಿ ವಿಷಯೆಯು ಕಾಮಬಾಧೆಯನ್ನೈದುತ್ತಲಿರುವಾಗ, ಅತ್ತ ಚಂದ್ರಹಾಸನಾದರೊ, ಮಧ್ಯಾಹ್ನಕಾಲವಾಗಲು ತಾನು ನಿದ್ದೆಯನ್ನು ಬಿಟ್ಟು ಮೇಲಕ್ಕೆದ್ದು, ಮುಖವನ್ನು ತೊಳೆದುಕೊಂಡು ಬಾಯಿಮುಕ್ಕಳಿಸಿ, ತಾಂಬೂಲವನ್ನು ಹಾಕಿಕೊಂಡು, ಕುದುರೆಯನ್ನೇರಿ ಬರುತ್ತಲಿರುವಾಗ ಶುಭಶಕುನಗಳೇ ತಲೆದೋರುತ್ತಲಿದ್ದವು. ಇವನು ಬರುತ್ತಲಿರುವುದನ್ನು ನೋಡಿ ಪಟ್ಟಣದ ಜನರೆಲ್ಲಾ ಈ ಮಹಾಪುರುಷನನ್ನೇ ಎವೆಯಿಕ್ಕದೆ ನೋಡುತ್ತಲಿದ್ದರು.‖೪೨‖ ಆ ಪಟ್ಟಣದ ರಾಜನಾದರೋ, ರಾಜ್ಯದಾಡಳಿತಗಳನ್ನೆಲ್ಲಾ ತನ್ನ ಮಂತ್ರಿಯಾದ ದುಷ್ಟಬುದ್ಧಿಗೆ ಒಪ್ಪಿಸಿ

ದಯೋಗಮಂಕೈಕೊಂಡುದುಷ್ಟಬುದ್ಧಿಗೆ ವಿಚಾರವನೊಪ್ಪಿಸಿ ‖ ಧ್ಯಾನ ಪರನಾಗಿರ್ಪನದರಿಂದಪೊಳಲಂಪ್ರ | ಧಾನಿಪಾಲಿಸುವ ವಂಪೊರಮುಟ್ಟಿರಲ್ಕೆತ | ತ್ತನೂಜಮದನಂಧುರಂಧರತೆವೆತ್ತಾ ಸಮಯಕೋಲಗದೊಳಿರುತಿರ್ದನು ‖೪೩‖ ಶ್ರೀಕಂಠನಂಕೆಣಕಿ ಮೈಗೆಟ್ಟಮದನನಂ | ಲೋಕದೊಳ್ಜರಿವಂತೆಶಂಕರಪ್ರಿಯನಾಗಿ | ಸಾಕಾರದಿಂದೆಸೆವಮದನನಿವನೆಂಬಂತೆರಂಜಿಸುವಮಂತ್ರಿಸೂನು ‖ ವ್ಯಾಕೀರ್ಣರತ್ನರೋಚಿಗಳಚಾವಡಿಯಚಾ | ಮೀಕರದಸಿಂಹಾಸನದೊಳಿರ್ದನಿಕ್ಕೆಲದ | ಕೋಕನದನೇತ್ರೆಯರ್ಚಿಮ್ಮಿಸುವಚಾರುಚಂಚಲಚಾಮರಂಗಳಿಂದ ‖ ೪೪ ‖ ಉಚಿತದಿಂದೊಪ್ಪುವಮಹೀಸುರರಭೂಭುಜರ | ನಿಚಯದ ನಿಯೋಗಿಗಳಗಣಿಕರಪುರೋಹಿತರ | ವಚನಕೋವಿದರಕವಿಗಮಕಿಗಳವಂದಿಗಾಯಕನಟರನರ್ತಕಿಗಳ ‖ ರುಚಿರದಿಂಕೃಷ್ಣಚಾ

ವನಿಗೆ, ಒಪ್ಪಿಸಿ–ಬಿಟ್ಟವನಾಗಿ, ಧ್ಯಾನಪರನಾಗಿ–ದೇವರ ಧ್ಯಾನದಲ್ಲಿಯೇ ಆಸಕ್ತಿಯನ್ನಿಟ್ಟುಕೊಂಡು, ಆ ನಗರದೊಳು–ಆ ಕುಂತಳದೇಶದಲ್ಲಿ, ಇರ್ಪನು–ಇದ್ದಾನೆ, ಅದರಿಂದ–ಆದಕಾರಣ, ಪೊಳಲಂ–ನಾಡನ್ನು, ಪಾಲಿಸುವವಂ–ಸಲಹತಕ್ಕವನು, ಪ್ರಧಾನಿ–ದುಷ್ಟಬುದ್ಧಿಯೆಂಬಾತನು, ಪೊರಮುಟ್ಟಿರಲ್ಕೆ–ಹೊರಟು ಹೋಗಿದ್ದನಾದಕಾರಣ, ತತ್ತನೂಜನು–ಅವನ ಕುವರನಾದ, ಮದನಂ–ಮದನನೆಂಬವನು, ಧುರಂಧಂತೆವೆತ್ತು–ರಾಜ್ಯಾಡಳಿತವನ್ನು ಪಡೆದು, ಓಲಗದೊಳು–ಸಭಾಭವನದೊಳಗೆ, ಆಸಮಯದೊಳು–ತಾನು ಹೋಗುವ ಕಾಲದಲ್ಲಿ, ಇರುತಿರ್ದನು–ಇದ್ದವನಾದನು ‖೪೩‖

ಟೀ‖ ಲೋಕದೊಳು–ಭುವನದಲ್ಲಿ, ಶ್ರೀಕಂಠನಂ–ಪರಮೇಶ್ವರನನ್ನು, ಕೆಣಕಿ–ಕೋಪಕ್ಕೆ ಗುರಿಮಾಡಿ, ಮೈಗೆಟ್ಟ–ಅಂಗಹೀನನಾದ, ಮದನನಂ–ಮನ್ಮಥನನ್ನು, ಜರಿವಂತೆ–ತಿರಸ್ಕರಿಸುವಹಾಗೆ, ಶಂಕರಪ್ರಿಯನಾಗಿ–ಹರನ ವಿಶ್ವಾಸಕ್ಕೆ ಪಾತ್ರನಾಗಿ, ಸಾಕಾರದಿಂದ–ಆಕೃತಿಯನ್ನೈದಿ, ಎಸೆವ–ಕಾಂತಿಯುಕ್ತನಾಗಿರತಕ್ಕ, ಮದನನು–ಮೀನಕೇತನನು, ಇವನು–ಈತನೇ ಆಗಿದಾನೆ, ಎಂಬಂತೆ–ಎನ್ನುವ ಬಗೆಯಿಂದ, ರಂಜಿಸುವ–ಹೊಳೆಹೊಳೆವ, ಮಂತ್ರಿಸೂನು–ಮಂತ್ರಿಯ ತನುಜನು, ವ್ಯಾಕೀರ್ಣ–ತುಂಬಿಕೊಂಡಿರತಕ್ಕ, ರತ್ನ–ನವರತ್ನಗಳ, ರೋಚಿಗಳ–ಕಳೆಗಳುಳ್ಳ, ಚಾವಡಿಯ–ಸಭಾಭವನದ, ಚಾಮೀಕರದ– ಸುವರ್ಣ ವಿಕಾರವಾದ, ಸಿಂಹಾಸನದೊಳು–ಸಿಂಹಾಸನದಲ್ಲಿ, ಇಕ್ಕೆಲದ–ಎರಡು ಕಡೆಯಲ್ಲಿಯೂ ತೆರದಿರತಕ್ಕ, ಕೋಕನದನೇತ್ರೆಯರು–ಪದುಮವದನೆಯರಾದ ಹೆಂಗಸರು, ಚಿಮ್ಮಿಸುವ–ಹಾಕುತ್ತಲಿರತಕ್ಕ, ಚಾರು–ಸುಂದರವಾದ, ಚಪಲ–ಅಲುಗಾಡುತಲಿರತಕ್ಕ, ಚಾಮರಂಗಳಿಂದ–ಚೌರಿಗಳಿಂದ ಬೀಸಲ್ಪಟ್ಟ ಶರೀರವುಳ್ಳವನಾಗಿ, ಇರ್ದನು–ಇರುತ್ತಲಿದ್ದನು ‖೪೪‖

ಟೀ‖ ಸಚಿವಸುತನ–ಕುಂತಳೇಂದ್ರನ ಅಮಾತ್ಯನಾದ ದುಷ್ಟಬುದ್ಧಿಯ ಕುವರನ, ಓಲಗಂ–ಸಭಾಸ್ಥಾನವಾದರೊ, ಉಚಿತದಿಂ–ನ್ಯಾಯವಾಗಿ, ಒಪ್ಪುವ–ನೆರೆದಿರತಕ್ಕ, ಮಹೀಸುರರ– ವಿಪ್ರವರ್ಯರ, ಭೂಭುಜರ–ಅರಸುಗಳ, ನಿಚಯದ–ಸಮುದಾಯದ, ನಿಯೋಗಿಗಳ–ಸೇವಕಜನರ, ಗಣಿಕರ–ಲೆಕ್ಕಗಳನ್ನು ಬರೆಯತಕ್ಕ ಕರಣಿಕರ, ಪುರೋಹಿತರ–ಹವ್ಯಕವ್ಯಾದಿಗಳನ್ನು ಮಾಡಿಸತಕ್ಕವರ, ವಚನಕೋವಿದರ–ವಾಕ್ಚಾತುರ್ಯವುಳ್ಳ ಜನಗಳ, ಕವಿ–ಕವಿತ್ವಮಾಡುವವರ, ಗಮಕಿಗಳ–ಕಾರಣಸಹಿತವಾಗಿ ನುಡಿಯತಕ್ಕವರ, ವಂದಿ–ಹೊಗಳತಕ್ಕ, ಜನರ, ಗಾಯಕ–ಸಂಗೀತಗಾರರ, ನಟರ–ವೇಶ್ಯಾಜನರ, ನರ್ತಕಿಗಳ–ನಾಟ್ಯವಂ ಮಾಡತಕ್ಕವರ, ರುಚಿರದಿಂ–ಮನರಂಜಿಸುವ ತೆರದಿಂದ, ಕೃಷ್ಣಚಾರಿತ್ರಮಂ–ಶ್ರೀ ಕೃಷ್ಣ ಪರಮಾತ್ಮನ ಚರಿತ್ರೆಯನ್ನು, ಸೊಗಸಾಗಿ–ಕೇಳುವರಿಗೆ ಇಂಪಾಗಿರುವಂತೆ, ರಚಿಸುತಿಹ–ಮಾಡುತ್ತಲಿರತಕ್ಕ, ಭಾವಕರ–ಬಾವಜ್ಞರಾದವರ, ಸಂಗೀತಗೋಷ್ಠಿಯಿಂ–ಸಂಗೀತದ ಸಮುದಾಯದಿಂದಲೂ ಕೂಡಿ, ಇಂದ್ರನ–ಸ್ವರ್ಗಲೋಕದ ಅರಸನಾದ ದೇವೇಂದ್ರನ, ಆಸ್ಥಾನದಂತೆ–ಸಭೆಯೋಪಾದಿಯಲ್ಲಿ, ರಮಣೀಯಮಾಗಿ–ಮನೋಹರವಾಗಿ, ಇರ್ದುದು–ಇದ್ದಿತು ‖೪೫‖

ಟೀ‖ ಇಂದುಹಾಸಂ–ಚಂದ್ರಹಾಸನಾದರೊ, ಲೀಲೆ–ಸಂತಸವು, ಮಿಗೆ–ಅಧಿಕವಾಗುವ ತೆರನಾಗಿ, ನಗರದೋಳ್–

ತಾನು ತಮ್ಮ ಗುರುವಾದ ಗಾಲವ ಮುಂಯೊಂದಿಗೆ ಸೇರಿ ತತ್ವಜ್ಞಾನವನ್ನು ಆರ್ಜಿಸುತ್ತಲಿದ್ದನು. ದುಷ್ಟಬುದ್ಧಿಯು ರಾಜ್ಯದಾಡಳಿತವನ್ನೆಲ್ಲಾ ತನ್ನ ಮಗನಾದ ಮದನನಿಗೆ ಒಪ್ಪಿಸಿ ತಾನು ಚಂದನಾವತಿಗೆ ಬಂದಿದ್ದನು ‖೪೩‖ ಆ ದುಷ್ಟಬುದ್ಧಿಯ ಸೂನುವಾದ ಮದನನಾದರೋ, ಮನ್ಮಥನನ್ನು ಮೀರಿಸುವ ಸೌಂದರ್ಯವುಳ್ಳವನಾಗಿಯೂ, ಸಾಕ್ಷಾತ್ ಮನ್ಮಥನೆಂಬ ಭ್ರಾಂತಿಯನ್ನುಂಟುಮಾಡುವವನಾಗಿಯೂ, ನವರತ್ನಗಳಿಂದ ದೇದೀಪ್ಯಮಾನವಾದ, ಒಡ್ಡೋಲಗದಲ್ಲಿ ಸುವರ್ಣಮಯವಾದ ಸಿಂಹಾಸನವನ್ನಲಂಕರಿಸಿ ಎಡಬಲಗಳಲ್ಲಿ ಕಮಲದ ದಳಗಳಂತೆ ವಿಶಾಲವಾದ ನಯನಂಗಳಿಂದ ಕೂಡಿತತಕ್ಕ ನಾರೀಮಣಿಗಳಿಂದ ಚಾಮರಗಳನ್ನು ಹಾಕಿಸಿಕೊಳ್ಳುತ್ತ ‖೪೪‖ ವಿಪ್ರವರ್ಯರಿಂದಲೂ, ಅನೇಕ ರಾಜರುಗಳಿಂದಲೂ, ಕವಿಗಳು, ವಾಗ್ಮಿಗಳು, ಕರಣಿಕರು ವಂದಿಗಳು, ನರ್ತಕಗಾಯಕರು ಮೊದಲಾದವರಿಂದ ಪರಿವೃತನಾಗಿ ದೇವಲೋಕದಲ್ಲಿ ದೇವೇಂದ್ರನ ಸಭೆಯಲ್ಲಿರುವ ಇಂದ್ರನೋ ಎಂಬಂತೆ ರಾರಾಜಿಸುತ್ತಲಿರುವುದನ್ನು ಚಂದ್ರಹಾಸನು ನೋಡಿ ‖೪೫‖ ಸಂತೋಷದಿಂದ ಆ ಮದನನ ಮನೆಯಬಳಿಗೆ

ರಿತ್ರನುಂಸೊಗಸಾಗಿ | ರಚಿಸುತಿಹಭಾವಕರಸಂಗೀತಗೋಷ್ಠಿಯಿಂ | ಸಚಿವಸುತನೋಲಗಂರಮಣೀಯಮಾಗಿರ್ದುದಿಂದ್ರನಾ
ಸ್ಥಾನದಂತೆ ||೪೫|| ಲೀಲೆಮಿಗೆನಗರದೊಳ್ನಡೆತಂದುಮಂತ್ರಿಸುತ| ನಾಲಯದಮುಂದೆವಾಜಿಯನಿಳಿದುತದ್ದ್ವಾರ|ಪಾಲರಿಗೆಯಿಂ
ದುಹಾಸಂಪೇಳ್ದೊಡವರಂತರಂತರದೊಳೆಚ್ಚರಿಸಲು || ಏಳನೆಯಬಾಗಿಲವಿವೇಕನೆಂಬವನಿದಂ | ಕೇಳಿತಾಂಪಿಡಿದಶ್ರದ್ಧಾಯಷ್ಟಿ
ಸಹಿತಬಂದೋಲಗ | ದೋಳಿರ್ದಮದನಂಗೆಬಿನ್ನೈಸಲ್ಪರಾಕಾದೊಡಿಂತೆಂದನು || ೪೬ || ಅವಧರಿಸು-ಜೀಯ್ಯಂಗೆಕ್ರೋಧನೆಂ |
ಬವನಾಪ್ತನಾಗಿಹಿಂಸಾಯಷ್ಟಿಯಂಪಿಡಿದು | ಸಲ್ವವನಲಾಬಾಗಿಲ್ಗೆ ತನಗಾತನಂತೆನಿನ್ನೊಳ್ಸಲುಗೆಯುಂಟೆಬರಿದೆ || ತವಭೃ
ತ್ಯನಾಗಿ ಹೆಂಸಾಕದಂತಿರಲಖಿಳ | ಭುವನಕಧಿಪತಿಯಾದಮುರಹರನಭಕ್ತನ | ಲ್ಲವೆಚಂದ್ರಹಾಸನಾತನಬರವನರ-ಪಲೇತಕೆ
ಸುಮ್ಮನಿಹೆಯೆಂದನು || ೪೭ || ನೀತಿ ಸಮ್ಮತದಿಂವಿವೇಕನಿಂದೆಕೇಳ್ದು | ಶಾತಕುಂಭಾಲಂಕೃತಾಸನವನಿಳಿದುಹರು | ಷಾತಿಶ

---

ಪಟ್ಟಣದಲ್ಲಿ, ನಡೆತಂದು-ಬಂದವನಾಗಿ, ವಾಜಿಯನು-ತನ್ನ ಕುದುರೆಯಿಂದ, ಮಂತ್ರಿಸುತನ-ಮದನನೆಂಬ ದುಷ್ಟಬುದ್ಧಿಯ ಕುವರನ, ಆಲಯದಮುಂದೆ-ಮಂದಿರದ ಎದುರಿಗೆ, ಇಳಿದು-ಇಳಿದವನಾಗಿ, ತದ್ದ್ವಾರಪಾಲಕರ್ಗೆ-ಅಲ್ಲಿ ಕಾವಲುಗಾರರಾದ ಜನರಿಗೆ, ಪೇಳ್ದೊಡೆ-ತಾನು ಬಂದಿರುವದನ್ನುಮದನನಿಗೆ ಹೇಳುವಂತೆ ತಿಳಿಸಲಾಗಿ, ಅವರು-ಆ ದ್ವಾರಪಾಲಕರು, ಅಂತರಂಗದೊಳು-ಒಳಒಳಗೆ ಇರತಕ್ಕ ದ್ವಾರಪಾಲಕರಿಗೆ, ಎಚ್ಚರಿಸಲು-ಹೇಳಿದಕಾರಣ, ಏಳನೆಯಬಾಗಿಲ-ಏಳನೆಯ ಬಾಗಿಲಲ್ಲಿರತಕ್ಕ, ವಿವೇಕನೆಂಬವಂ-ವಿವೇಕನೆಂಬ ದ್ವಾರಪಾಲಕನು, ಇದಂ-ಈ ನುಡಿಯನ್ನು, ಕೇಳಿ-ಆಲಿಸಿ, ತಾಂ-ತಾನಾದರೊ, ಪಿಡಿದ-ಕೈಯಲ್ಲಿರತಕ್ಕ, ಶ್ರದ್ಧಾಯಷ್ಟಿಸಹಿತ-ಮರ್‍ಯಾದೆಗೆ ಹಿಡಿದಿರತಕ್ಕಚಿನ್ನದ ಕಟ್ಟಿಗೆಯ ಸಮೇತವಾಗಿ, ಬಂದು-ಬಂದವನಾಗಿ, ಓಲಗದೊಳು-ಸಭಾಮಂಟಪದಲ್ಲಿ, ಇರ್ದ-ದರ್ಬಾರನ್ನು ಮಾಡುತ್ತಲಿದ್ದ, ಮದನಂಗೆ-ಮದನನೆಂಬಾತನಿಗೆ, ಬಿನ್ನೈಸಲು-ಅರಿಕೆಮಾಡಲು, ಪರಾಕಾದೊಡೆ-ಪರಾಕ್ ಎಂಬ ಮರ್‍ಯಾದಾರ್ಥಕವಾದ ಮಾತಿನಿಂದ, ಇಂತು-ಮುಂದೆ ಹೇಳುವಂತೆ, ಎಂದನು-ನುಡಿದನು ||೪೬||

ಟೀ|| ಜೀಯ-ಒಡೆಯನಾದ ಮದನನೆ, ಅವಧರಿಸು-ಕಿವಿಗೊಟ್ಟು ಕೇಳುವನಾಗು, ಕ್ರೋಧನೆಂಬವನು-ಕ್ರೋಧನೆಂಬಾತನು, ನಿಮ್ಮಯ್ಯಂಗೆ-ನಿನ್ನ ಪಿತನಿಗೆ, ಆಪ್ತನಾಗಿ-ವಿಶ್ವಾಸಕ್ಕೆ ಪಾತ್ರನಾಗಿ, ಹಿಂಸಾಯಷ್ಟಿಯ ಪಿಡಿದು-ಕೊಲ್ಲುವುದೆಂಬ ಕಟ್ಟಿಗೆಯನ್ನು ಹಿಡಿದಕೊಂಡು, ಬಾಗಿಲ್ಗೆ-ಬಾಗಿಲಿನ ಹತ್ತಿರಕ್ಕೆ, ಸಲ್ವವನಲಾ-ಸೇರಿರುವನಲ್ಲವೆ, ಆತನಂತೆ-ಆ ಕ್ರೋಧನೆಂಬುವನಹಾಗೆ, ನಿನ್ನೊಳ್-ನಿನ್ನಲ್ಲಿ, ಸಲುಗೆಯು-ರೂಢಿಯು, ತನಗೆ-ನನಿಗಾದರೊ, ಉಂಟೆ-ಇದೆಯೇ, ಬರಿದೆ-ವ್ಯರ್ಥವಾಗಿ, ತವ-ನಿನಗೆ, ಭೃತ್ಯನಾಗಿಹೆಂ-ಸೇವಕನಾಗಿದ್ದೇನೆ, ಸಾಕು, ಅದು-ಆ ನುಡಿಯಾದರೊ, ಅಂತು-ಹಾಗೆ, ಇರಲಿ-ಇರತಕ್ಕದ್ದಾಗಲಿ, ಅಖಿಳಭುವನಕೆ-ಸಕಲಲೋಕಕ್ಕೂ, ಅಧಿಪತಿಯಾದ-ಅರಸಾದ, ಮುರಹರನ-ಶ್ರೀ ಕೃಷ್ಣಸ್ವಾಮಿಗೆ, ಭಕ್ತಂ-ಭಕ್ತನಾದವನು, ಚಂದ್ರಹಾಸಂ-ಇಂದುಹಾಸನೆಂಬುದು, ಅಲ್ಲವೆ-ಸರಿಯಷ್ಟೆ, ಆತನ-ಆ ಇಂದುಹಾಸನ, ಬರವನು-ಆಗಮನವನ್ನು, ಅರುಪಲು-ತಿಳಿಸಲು, ಸುಮ್ಮನೆ-ಸಾವಕಾಶವಾಗಿ, ಏನು-ಏನುಕಾರಣ, ಇಹೆ-ಇದ್ದೀಯೆ, ಎಂದನು-ಎಂಬದಾಗಿ ನುಡಿದನು ||೪೭||

ಟೀ|| ವಿವೇಕನು-ವಿವೇಕನೆಂಬ ದ್ವಾರಪಾಲಕನು, ಇಂತು-ಈ ಪ್ರಕಾರವಾಗಿ, ನೀತಿಸಮ್ಮತದಿಂದ-ನ್ಯಾಯದ ನುಡಿಗಳಿಂದ, ಎನೆ-ನುಡಿಯಲು, ಮದನನು-ಮದನನೆಂಬಾತನು, ಕೇಳ್ದು-ಲಾಲಿಸಿ, ಶಾತಕುಂಭಾಲಂಕೃತದ-ಸುವರ್ಣವಿಕಾರವಾದ, ಆಸನವನು-ಸಿಂಹಾಸನವನ್ನು, ಇಳಿದು-ಇಳಿದವನಾಗಿ, ಹರ್ಷಾತಿಶಯದಿಂದ-ಹೆಚ್ಚಾದ ಆನಂದದಿಂದ, ಚಂದ್ರಹಾಸನನು-ಇಂದುಹಾಸನಿಗೆ, ಇದಿರ್ವಂದು-ಎದುರಾಗಿ ಬಂದು, ಕಂಡು-ಈಕ್ಷಿಸಿ, ನಗುತ-ಮುಗುಳ್ನಗೆಯನ್ನೈದುತ್ತ, ಪ್ರೀತಿಯಿಂದ-ಪ್ರೇಮದಿಂದ, ಅಪ್ಪಿ-ತಬ್ಬಿಕೊಂಡು, ಕೈವಿಡಿದು-ಚಂದ್ರಹಾಸನ ಕೈಯನ್ನುಹಿಡಿದವನಾಗಿ, ಆತನಂ-ಆ ಇಂದುಹಾಸನನ್ನು, ಒಡನೆ-ಜೊತೆಯಲ್ಲಿಯೇ, ಸಭೆಗೆತಂದು-ಸಭಾಮಂಟಪಕ್ಕೆ ಕರೆದುಕೊಂಡುಹೋಗಿ, ಸತ್ಕರಿಸಿ-ಮರ್‍ಯಾದೆಯಂಮಾಡಿ, ಚಂದನಾವತಿಯ-ಚಂದನಾವತಿಯೆಬ ಪಟ್ಟಣದ, ತದ್ಭೂತಳದ-ಆ ನಾಡಿನ, ಮೇಧಾವಿನಿಯ-ಮೇಧಾವಿನಿಯೆಂಬಾಕೆಯ, ಕುಳಿಂದನ-ಮೇಧಾವಿರಾಜನ, ಕುಶಲದೇಳ್ಗೆಯಂ-ಕ್ಷೇಮಾತಿಶಯವನ್ನೆಲ್ಲಾ, ಬೆಸಗೊಂಡನು-ಪ್ರಶ್ನೆಯಂ ಮಾಡಿದನು ||೪೮||

---

ಬಂದು, ಕುದುರೆಯಿಂದ ಕೆಳಗಿಳಿದು, ತಾನು ಬಂದಿರುವ ಸುದ್ದಿಯನ್ನು ಬಾಗಿಲಿನಲ್ಲಿರತಕ್ಕ ಸೇವಕರ ಮೂಲಕ ಹೇಳಿ ಕಳುಹಿಸಿದನು. ವಿವೇಕನೆಂಬ ಏಳನೆಯ ಬಾಗಲನ್ನು ಕಾಯುವ ಸೇವಕನು ಕೈಯಲ್ಲಿ ಚಿನ್ನದ ಕಟ್ಟನ್ನು ಹಾಕಿದ ಕಟ್ಟಿಗೆಯನ್ನು ಹಿಡಿದುಕೊಂಡು, ಓ ಪ್ರಭುವೆ ! ಪರಾಕ್, ||೪೬|| ಎಲೈ ಸ್ವಾಮಿಯಾದ ಮದನನೇ, ತ್ರಿಲೋಕಾಧೀಶನಾದ, ಶ್ರೀಕೃಷ್ಣಸ್ವಾಮಿಯ ಪರಮಭಕ್ತನಾದ ಚಂದ್ರಹಾಸನೆಂಬಾತನು ಇಲ್ಲಿಗೆ ಬಂದಿರುವನೆಂದು ಬಿನ್ನೈಸಿದನು. || ೪೭ || ವಿನಯ ಪುರಸ್ಸರವಾಗಿ ನುಡಿಯುತ್ತಲಿರುವ ವಿವೇಕನ ಮಾತನ್ನು ಕೇಳಿದ ಕೂಡಲೇ ಮದನನು ಸಿಂಹಾಸನದಿಂದ ಕೆಳಗಿಳಿದು ಬಂದು ಚಂದ್ರಹಾಸನನ್ನು ಸಂತೋಷದಿಂದ ಗಾಢಾಲಿಂಗನವಂ ಮಾಡಿಕೊಂಡು, ಸಭೆಗೆ ಕರೆದುಕೊಂಡು ಬಂದು, ಉಚಿತಾಸನದಲ್ಲಿ ಕುಳ್ಳಿರಿಸಿದ

ಯದಿಂದಮದನಂಚಂದ್ರಹಾಸನನಿದಿರ್ಗೊಂದುಕಂಡುನಗುತ ‖ ಪ್ರೀತಿಯಿಂದಪ್ಪಿಕೈಪಿಡಿದೊಡನೆಸಭೆಗೆತಂ | ದಾತನಂಸತ್ಕರಿಸಿ ಚಂದನಾವತಿಯತ | ದ್ಭೂತಳದಮೇಧಾವಿನಿಯಕುಳಿಂದನಕುಶಲದೇಳ್ಗೆಯಂಬೆಸಗೊಂಡನು ‖೪೮‖ ವಿನಯದಿಂಮತ್ತೆನಸುನಗೆ ವೆರಸಿನಿನ್ನದರು | ಶನಮಿಂದಪೂರ್ವಮಾದುದುಬಂದಕಾರ್ಯಮಂ | ತನಗೊರೆವುದೆಂದುಮದನಂಚಂದ್ರಹಾಸನಂಕೇಳ್ದೊಡಾತಂಗೆ ನಿನ್ನ ‖ ಜನಕನೆನ್ನಂನಿನ್ನಬಳಿಗತಿರಹಸ್ಯದಿಂದ | ನುಮತಿಸಿಕಳುಹಲಾನೈತಂದೆನೆಂದುಕುರು | ಹಿನಮುದ್ರೆಸಹಿತನಿಜಕರದೊಳಿಹಪತ್ರಮಂಕೊಟ್ಟನಾತನಕೈಯೊಳು ‖ ೪೯ ‖ ಇದ್ದವರನಾಸಭೆಯೊಳಿರಿಸಿಶಶಿಹಾಸನಂ | ಗದ್ದುಗೆಗೆನೆಲೆಗೊಳಿಸಿಮದನನಾಸ್ಥಾನದಿಂ | ದೆದ್ದಮಲನೆಂಬತನ್ನನುಜನಂಕೂಡಿಕೊಂಡೇಕಾಂತಭವನಕೈದಿ ‖ ಹೊದ್ದಿಸಿದಮುದ್ರೆಯಂತೆಗೆದುಪತ್ರವನೋದಿ | ತಿದ್ದಿದಕ್ಕರವನರಿಯದೆನಿಜದಬರಹಮೆಂ| ದೆದ್ದನತಿಹರ್ಷಾರ್ಣವದೊಳಾಗಶತಯಾಗತನಯಕೇಳ್ ಕೌತುಕವನು ‖೫೦‖ ಲೇಸಾದು

ಟೀ‖ ಮದನಂ-ಮದನನೆಂಬಾತನು, ಚಂದ್ರಹಾಸನಂ-ಇಂದುಹಾಸನನ್ನು ಕುರಿತು, ವಿನಯದಿಂ-ನಮ್ರತೆಯಿಂದ, ನಸುನಗೆವೆರಸಿ-ಮುಗುಳ್ನಗೆಯಿಂದ ಕೂಡಿ, ಮತ್ತೆ-ಪುನಃ, ಇಂದು - ಈ ಹೊತ್ತು, ನಿನ್ನದರುಶನಂ - ನಿನ್ನನ್ನು ನೋಡಿದ್ದು, ಅಪೂರ್ವಂ-ಅಲಭ್ಯವಾದದ್ದು, ಆದುದು-ಆಯಿತು, ತನಗೆ - ನನಿಗಾದರೊ, ಬಂದ-ಇಲ್ಲಿಗೆ ಬಂದ, ಕಾರ್ಯಮಂ - ಕೆಲಸವನ್ನು, ಒರೆವುದು-ತಿಳಿಸಬೇಕು, ಎಂದು-ಎಂಬತೆರನಾಗಿ, ಕೇಳ್ದೊಡೆ-ಪ್ರಶ್ನೆಯಂಮಾಡಲು, ಎನ್ನಂ-ನನ್ನನ್ನು, ಅತಿರಹಸ್ಯದಿಂದ-ಬಹು ಗೋಪ್ಯವಾಗಿ, ನಿನ್ನಬಳಿಗೆ-ನಿನ್ನೆಡೆಗೆ, ನಿನ್ನಜನಕನು - ನಿಮ್ಮ ತಂದೆಯಾದ ದುಷ್ಟಬುದ್ಧಿಯು, ಅನುಮತಿಸಿ - ಒಡಂಬಟ್ಟು, ಕಳುಹಲು-ಕಳುಹಿಸಿದ ಕಾರಣ, ನಾನು-ನಾನಾದರೊ, ಐತಂದೆನು-ಬಂದಿರುವೆನು, ಎಂದು-ಎಂಬತೆರನಾಗಿ, ನಿಜಕರದೊಳು-ತನ್ನ ಕೈಯಲ್ಲಿ, ಕುರುಹಿನಮುದ್ರೆಸಹಿತಇಹ - ಗುರುತಾಗಿ ಹಾಕಿರುವ ಮುದ್ರೆಯಿಂದ ಕೂಡಿರುವ, ಪತ್ರಮಂ-ಕಾಗದವನ್ನು, ಆತನಕೈಯೊಳು-ಆ ಮದನನ ಕೈಗೆ, ಕೊಟ್ಟನು-ಕೊಟ್ಟವನಾದನು. ‖೪೯‖

ಟೀ‖ ಮದನನು-ಮದನನೆಂಬಾತನು, ಆಸಭೆಯೊಳು-ಆ ಒಡ್ಡೋಲಗದಲ್ಲಿ, ಇದ್ದವರನು-ನೆರದಿದ್ದವರನ್ನು, ಇರಿಸಿ-ಅಲ್ಲಿಯೆ ಇರುವಂತೆ ಹೇಳಿ, ಗದ್ದುಗೆಗೆ - ಆಸನದಲ್ಲಿ, ಶಶಿಹಾಸನಂ - ಇಂದುಹಾಸನನ್ನು, ನೆಲೆಗೊಳಿಸಿ - ಕೂತುಕೊಳ್ಳುವಂತೆ ಹೇಳಿ, ಅಮಲನೆಂಬ-ಅಮಲನೆಂಬ ಹೆಸರುಳ್ಳ, ತನ್ನಅನುಜನಂಕೂಡಿಕೊಂಡು-ತನ್ನ ತಮ್ಮನೊಂದಿಗೆ, ಆಸ್ಥಾನದಿಂದ - ಸಭಾಭವನದಿಂದ ಹೊರಟು, ಏಕಾಂತಭವನಕ್ಕೆ- ರಹಸ್ಯವಾದ ಸ್ಥಳಕ್ಕೆ, ಐದಿ-ಹೋಗಿ ಸೇರಿ, ಹೊದ್ದಿಸಿದ-ಸೇರಿಸಿದ್ದ, ಮುದ್ರೆಯಂ-ಮುದ್ರೆಯನ್ನು, ತೆಗೆದು-ಸಡಲಿಸಿ, ಪತ್ರವನು-ಕಾಗದವನ್ನು, ಓದಿ-ಓದಿಕೊಂಡು, ತಿದ್ದಿದ-ತಿದ್ದಿದ್ದಂಥ, ಅಕ್ಕರವನು-ವರ್ಣವನ್ನು, ಅರಿಯದೆ-ಗುರ್ತುಹಿಡಿಯದೆ, ನಿಜದ ಬರಹಂ-ನಿಶ್ಚಯವಾದ ಬರವಣಿಗೆಯೇ, ಎಂದು-ಎಂಬುದಾಗಿ, ಆಗ-ಆ ಕಾಲದಲ್ಲಿ, ಹರ್ಷಾರ್ಣವದೊಳು-ಆನಂದಸಾಗರದಲ್ಲಿ, ಅದ್ದನು-ಮಗ್ನನಾದನು, ಶತಯಾಗತನಯ-ಪಾರ್ಥನೆ, ಕೌತುಕವನು-ಆಶ್ಚರಿಯನ್ನು, ಕೇಳು-ಲಾಲಿಸು.

ಅ‖ ವಿ‖ ಶತಯಾಗತನಯ-ನೂರು ಯಜ್ಞಗಳನ್ನು ಮಾಡಿದ ದೇವೇಂದ್ರನ ಮಗನು. ‖೫೦‖

ಟೀ‖ ಎನಗೆ-ನನಿಗಾದರೊ, ಇಂದು-ಈ ದಿನಸ, ಅಯ್ಯನು-ಜನಕನಾದ ದುಷ್ಟಬುದ್ಧಿಯು, ನೇಮಿಸಿ-ಆಜ್ಞಾಪಿಸಿ, ಕಳುಹಿದ- ಕಳುಹಿಸಿರತಕ್ಕ, ಈಸುವಕ್ಕಣೆಗಳ್- ಇಷ್ಟು ಆಶಯಂಗಳು, ಲೇಸಾದುದು- ಮೇಲಾಯಿತು, ತನಗೆ- ದುಷ್ಟಬುದ್ಧಿಗಾದರೊ, ಈತನು-ಈ ಇಂದುಹಾಸನು, ಮಹಾ ಹಿತನು- ಬಹಳ ಬೇಕಾದವನು, ಈ ಸೀಮೆಗೆ-ಈ ನಾಡಿಗೆ, ಅರಸು-ರಾಜನು, ಆದಪಂ-ಆಗುತ್ತಾನೆ, ಸರ್ವಥಾ-ನಾನಾ ಪ್ರಕಾರವಾಗಿ, ಮಿತ್ರನು-ಹಿತನಾದವನೆ, ಆದಪಂ-ಆಗಿದ್ದಾನೆ, ಇದು-ಈ ನುಡಿಯು,

ಬಳಿಕ ಎಲೈ ಚಂದ್ರಹಾಸನೇ! ನಿಮ್ಮ ರಾಜ್ಯವೆಲ್ಲವೂ ಕ್ಷೇಮವಾಗಿರುವುದೇ? ಚಂದನಾವತಿಯಲ್ಲಿ ಮೇಧಾವಿಯೂ ಮೇಧಾವಿನಿಯೂ ಕುಶಲಿಗಳೇ? ‖ ೪೮ ‖ ಎಲೈ ಕೃಷ್ಣಭಕ್ತನಾದ ಇಂದುಹಾಸನೇ, ನಿನ್ನ ದರ್ಶನಲಾಭವಾದ ಈ ದಿವಸವೇ ಸುದಿನವು. ನೀನು ಇಲ್ಲಿಗೆ ಬಂದ ಕಾರ್ಯವೇನೆಂಬುದನ್ನು ದಯೆಮಾಡಿ ತಿಳಿಸೆಂದು ಕೇಳಿದನು. ಈ ರೀತಿಯಲ್ಲಿ ಕುಶಲ ಪ್ರಶ್ನೆಯಂಗೈದ ಮದನನ್ನು ಕುರಿತು, ಅಯ್ಯಾ ಮದನನೇ! ನಿಮ್ಮ ತಂದೆಯಾದ ದುಷ್ಟಬುದ್ಧಿಯು ಅತಿ ರಹಸ್ಯವಾಗಿ ನಿನ್ನನ್ನು ನೋಡಿ ಬರಬೇಕೆಂದು ನನ್ನನ್ನು ಕಳುಹಿಸಿದ ಕಾರಣ ಬಂದಿರುವೆನು. ನಿಮ್ಮಯ್ಯನು ಕೊಟ್ಟ ಕಾಗದವನ್ನು ತೆಗೆದುಕೊಳ್ಳೆಂದು ಮುದ್ರೆ ಸಹಿತವಾದ ಕಾಗದವನ್ನು ಮದನನ ಕೈಗೆ ಕೊಟ್ಟನು. ‖ ೪೯ ‖ ಮದನನಾದರೊ ಸಭಾಸದರನ್ನೆಲ್ಲಾ ಅಲ್ಲಿಯೇ ಇರುವಂತೆ ಹೇಳಿ, ಚಂದ್ರಹಾಸನನ್ನು ಅಲ್ಲಿಯೇ ಬಿಟ್ಟು ತನ್ನನುಜನಾದ ಅಮಲನೂ ತಾನೂ ಏಕಾಂತಸ್ಥಳಕ್ಕೆ ಹೋಗಿ, ಮುದ್ರೆಸಹಿತವಾಗಿದ್ದ ಕಾಗದನನ್ನು ತೆರೆದು ಓದಿಕೊಂಡು ಸಂತೋಷವೆಂಬ ಸಾಗರದಲ್ಲಿ ಮುಳುಗಿದನು. ಈ ಮದನನಿಗೆ ಅಕ್ಷರವು ತಿದ್ದಿರುವುದು ಗೊತ್ತೇ ಆಗಲಿಲ್ಲವು ‖೫೦‖ ಕೇಳೈ ಅರ್ಜುನ! ಮುಂದೆ ನಡೆದ ಪರಮಾಶ್ಚರ್ಯ

ದಯ್ಯನಿಂದೆನಗೆನೇಮಿಸಿಕಳುಹಿ | ದೀಸುವೊಕ್ಕಣಿಗಳ್ಕ್ರಹಾಹಿತಂತನಗೀತ | ನೀಸೀಮೆಗರಸಾದಪಂಸರ್ವಥಾಮಿತ್ರನಪ್ಪವಂ
ನಿಶ್ಚಯಮಿದು|| ಮೋಸವೆಕುಲಾಚಾರಂಗತಿಯನಾರೈವೊಡೆವಿ | ಲಾಸದಿಂವಿಷಯೆವೋಹಿಸುವಂತೆಕೊಡುವೆನಿದ| ಕೋಸರಿಸಲೇಕೆ
ತಂಗಿಗೆತಕ್ಕವರನೀತನೆಂದುಮದನಂತಿಳಿದನು ||೫೧|| ಮುನ್ನತಂದೆಯನಿರೂಪದಕಾರ್ಯಮದರಮೇ | ಲೆನ್ನಮನವಿವನೊಳಕ್ಕ
ರ್ವೆರಸುತಿದೆರೂಪ | ಮನ್ನಿಸ-ವೊಡನುಜೆಗೀತಂಗೆಪಾಸಟವಿಚಾರಿಸೆಕೃಷ್ಣಭಕ್ತನಿವನು || ಇನ್ನುಸಂಶಯಮಿಲ್ಲಮಿಾಚಂದ್ರ
ಹಾಸಂಗೆಕನ್ನೈದಿಲಂದದಕ್ಷಿಯತಂಗಿಯಂಕೊಟ್ಟು | ಮನ್ನಿಸುವೆನೆಂದುನಿಶ್ಚೈಸಿಮದನಂಮತ್ತೆ ಬಂದನೋಲಗದಸಭೆಗೆ ||೫೨||
ಗಣಿತಜ್ಞರಂಕರೆಸಿನೋಡಿಸಿದನಾಗಲನು | ಗುಣಮಾದರಾಶಿಕೂಟವನಮಲಲಗ್ನಮಂ | ಗುಣಿಸಿವಿಸ್ತರಿಸಿದರ್ಬಳಿಕಮದನಂಮಾಡಿ
ಸಿದನೊಸಗೆಯಂಪೊಳಲೊಳು || ಅಣದವಧ್ರುವನೆಸವಗುಡಿತೋರಣಂಗಳಿ | ಟ್ಟಣಿಸಿದವುಬೇಕಾದಮಂಗಳಸುವಸ್ತುಗ | ಳ್ಮಣಿ

---

ನಿಶ್ಚಯಂ-ಸುಳ್ಳಲ್ಲವು, ಕುಲ-ಸಂತತಿಯ ವಿಚಾರವನ್ನೂ, ಆಚಾರ-ನಡವಳಿಕೆಯನು, ಗತಿಯನ್ನು-ಮಾರ್ಗವನ್ನೂ, ಆರೈವೊಡೆ-ವಿಚಾರಮಾಡುವುದಕ್ಕೆ, ಮೋಸವೆ-ಯೋಗ್ಯವಾಗಿಲ್ಲವು, ವಿಷಯೆ-ವಿಷಯೆಯೆಂಬ ನನ್ನ ತಂಗಿಯು, ವಿಲಾಸದಿಂ-ಅಕ್ಕರೆಯಿಂದ, ಮೋಹಿಸುವಂತೆ-ಒಪ್ಪುವ ರೀತಿಯಾಗಿ, ಕೊಡುವೆನು-ಕೊಟ್ಟುಬಿಡುತ್ತೇನೆ. ಇದಕೆ-ಈ ನುಡಿಗೆ, ಓಸರಿಸಲು-ನಿಧಾನಮಾಡುವುದು, ಏಕೆ-ಏನುಪ್ರಯೋಜನ, ಈತನು-ಈ ಇಂದುಹಾಸನಾದರೊ, ತಂಗಿಗೆ-ನನ್ನ ತಂಗಿಯಾದ ವಿಷಯೆಗೆ, ತಕ್ಕ-ಅನುರೂಪನಾಗಿರತಕ್ಕ, ವರನು-ಪತಿಯು, ಎಂದು-ಎಂಬತೆರನಾಗಿ, ಮದನನು-ಮದನನೆಂಬಾತನು, ತಿಳಿದನು-ಆಲೋಚನೆಯಂ ಮಾಡಿದನು. ||೫೧||

ಟೀ|| ಮದನನು-ಮದನನೆಂಬ ದುಷ್ಟಬುದ್ಧಿಯ ತನುಜನು, (ತನ್ನಲ್ಲಿತಾನು) ಮುನ್ನ-ಆದಿಯಲ್ಲಿ, ಮೊಟ್ಟಮೊದಲು) ತಂದೆಯನಿರೂಪದಕಾರ್ಯಂ-ತಂದೆ ಅಪ್ಪಣೆ ಮಾಡಿರತಕ್ಕ ಕೆಲಸವಾಗಿದೆ, ಅದರಮೇಲೆ - ಇದೂ ಅಲ್ಲದೆ, ಇವನೊಳು-ಈ ಇಂದುಹಾಸನಲ್ಲಿ, ಎನ್ನಮನಂ-ನನ್ನ ಮನಸ್ಸು, ಅಕ್ಕರ್ವೆರಸುತ - ಪ್ರೀತಿಯನ್ನುಂಟುಮಾಡುತ್ತ, ಇದೆ-ಇರತಕ್ಕದ್ದಾಗಿದೆ, ರೂಪಂ-ಇವನ ಸೌಂದರ್ಯವನ್ನು, ಎನ್ನಿಸುವಡೆ-ಊಹೆಮಾಡಿದರೆ, ಅನುಜೆಗೆ-ನನ್ನ ತಂಗಿಗೆ, ಈತಂ-ಇವನು, ಪಾಸಟಿ-ಸಮನಾದವನು, ವಿಚಾರಿಸೆ-ವಿಚಾರಮಾಡಿದರೆ, ಈತಂ-ಇವನು, ಕೃಷ್ಣಭಕ್ತನು-ಶ್ರೀ ಕೃಷ್ಣಸ್ವಾಮಿಯಲ್ಲಿ ಭಕ್ತಿಯನ್ನುಂಟಾಗಿದ್ದಾನೆ, ಇನ್ನು-ಇನ್ನಾದರೊ, ಸಂಶಯಂ-ಅನುಮಾನವು, ಇಲ್ಲ-ಇಲ್ಲವು, ಕನ್ನೈದಿಲಂದದ-ಕಪ್ಪುಕಮಲದ ಹಾಗಿರತಕ್ಕ, ಅಕ್ಷಿಯ - ನಯನಂಗಳುಳ್ಳ, ತಂಗಿಯಂ-ಅನುಜೆಯಾದ ವಿಷಯೆಯನ್ನು, ಈ ಚಂದ್ರಹಾಸಂಗೆ-ಈ ಇಂದುಹಾಸನಿಗೆ, ಕೊಟ್ಟು-ದಾನಮಾಡಿ, ಮನ್ನಿಸುವೆನು-ಮನ್ನಣೆಯಂ ಮಾಡುತ್ತೇನೆ, ಎಂದು-ಎಂಬ ತೆರನಾಗಿ, ನಿಶ್ಚೈಸಿ-ನಿಷ್ಕರ್ಷೆಮಾಡಿ, ಮತ್ತೆ-ಪುನಃ, ಓಲಗದ ಸಭೆಗೆ-ಒಡ್ಡೋಲಗಕ್ಕೆ, ಮದನಂ-ಮದನನೆಂಬ ಮಂತ್ರಿಯ ಮಗನು, ಬಂದನು-ಬಂದವನಾದನು. ||೫೨||

ಟೀ|| ಮದನನು-ಮದನನೆಂಬ ದುಷ್ಟಬುದ್ಧಿಯ ಸುತನು, ಆಗಲ್-ಆ ಕಾಲದಲ್ಲಿ, ಗಣಿತಜ್ಞರಂ ಕರೆಸಿ-ಜ್ಯೋತಿಷ್ಕರನ್ನು ಬರಹೇಳಿ, ಅನುಗುಣಮಾದ-ಗಂಡು ಹೆಣ್ಣುಗಳ ಜಾತಕಾನುಕೂಲಂಗಳನ್ನು, ಅಮಲ-ಶ್ರೇಷ್ಠವಾದ, ಲಗ್ನಮಂ-ಲಗ್ನವನ್ನೂ ಸಹ, ನೋಡಿಸಿದನು-ನೋಡಿಸಿದವನಾದನು, ಗುಣಿಸಿ-ಲೆಕ್ಕಮಾಡಿ ತಿಳಿದು, ವಿಸ್ತರಿಸಿದರ್-ವಿಶದ ಪಡಿಸಿದರು, ಬಳಿಕ-ಆಮೇಲೆ, ಪೊಳಲೊಳಗೆ-ಪಟ್ಟಣದಲ್ಲೆಲ್ಲಾ, ಒಸಗೆಯಂ ಮಾಡಿಸಿದನು-ಮದುವೆ ಸಾಮುಗ್ರಿಗಳನ್ನೆಲ್ಲಾ ಸಿದ್ಧಪಡಿಸಿದನು, ಅಭ್ರವನು-ಅಂತರಿಕ್ಷವನ್ನು, ಎಸೆವ-ಸೋಕುತ್ತಲಿರುವ, ಗುಡಿ ತೋರಣಗಳು - ಚಪ್ಪರಗಳು ತೋರಣಗಳು ಮೊದಲಾದವೆಲ್ಲಾ, ಅಣಿದವು-ಹರಡಿದವು, ಬೇಕಾದ-ಇಷ್ಟವಾದ, ಮಂಗಳ-ಶುಭಪ್ರದವಾದ, ಸುವಸ್ತುಗಳ್-ಉತ್ತಮವಾದ ಸಾಮುಗ್ರಿಗಳೂ, ಮಣಿಮಯ-ರತ್ನ ಖಚಿತವಾದ, ವೇದಿಯ-ಜಗುಲಿಯ, ಬಳ್ವಿನಿಂ-ಬಗೆಯಿಂದ, ವೈವಾಹಮಂಟಪವನು-ಮದುವೆಯ ಮಂಟಪವನ್ನು,

---

ವನ್ನು ತಿಳಿಸುವೆನು, ಆ ಬಳಿಕ ಮದನನು ತಮ್ಮ ತಂದೆಯು ಬರದು ಇರತಕ್ಕ ಕಾಗದದ ಅಭಿಪ್ರಾಯವನ್ನೆಲ್ಲಾ ತಿಳಿದುಕೊಂಡು, ನಮ್ಮ ತಂದೆಯು ನನಗೆ ಬರೆದಿರತಕ್ಕದ್ದು ಬಹು ಚೆನ್ನಾಗಿದೆ. ಈ ಚಂದ್ರಹಾಸನು ನಮಗೆ ಪರಮ ಮಿತ್ರನೆಂದೂ ಈ ರಾಜ್ಯಕ್ಕೆ ಮುಂದೆ ಇವನೇ ಅಧಿಪತಿಯಾಗುವನೆಂದೂ, ಸರ್ವದಾ ಮಿತ್ರನೆಂಬುದಾಗಿಯೂ, ಇವನ ಕುಲಾಚಾರಧರ್ಮಗಳಾವುದನ್ನು ವಿಚಾರಮಾಡದೆ ವಿಷಯೆಗೆ ಇಷ್ಟವಾಗುವಂತೆ ಕೊಡೆಂದು ಬರೆದು ಇದ್ದಾನೆ || ೫೧ || ತಂದೆಯು ಈ ರೀತಿಯಲ್ಲಿ ಅಪ್ಪಣೆಯನ್ನಿತ್ತಿರುವುದಲ್ಲದೆ ಕೃಷ್ಣಭಕ್ತನೂ, ಸುಂದರಾಕಾರನೂ ಆಗಿರುವುದರಿಂದ ನನ್ನ ತಂಗಿಯಾದ ವಿಷಯೆಗೆ ಇವನೇ ತಕ್ಕ ವರನಾಗಿರುವನೆಂದು ನನಗೂ ಪ್ರೇಮವುಂಟಾಗಿರುವುದರಿಂದ ಈ ಚಂದ್ರಹಾಸನಿಗೆ ವಿಷಯೆಯನ್ನು ಕೊಟ್ಟು ವಿವಾಹ ಮಹೋತ್ಸವವನ್ನು ಬೆಳಸುವುದೇ ಸಿದ್ಧವೆಂದು ನಿಶ್ಚಯಿಸಿಕೊಂಡು, ಸಭಾ ಮಂಟಪಕ್ಕೆ ಬಂದು ಸೇರಿದನು. || ೫೨ || ಕೇಳೈ ಅರ್ಜುನಾ, ಅನಂತರ ಮದನನು ಜ್ಯೋತಿಷ್ಕರನ್ನು ಕರೆಸಿ, ವಧೂವರರ ಜಾತಕವನ್ನು ತೋರಿಸಿ, ಸುಮುಹೂರ್ತವನ್ನು ಗೊತ್ತುಮಾಡಿಸಿದ ತರುವಾಯ ಪಟ್ಟಣದಲ್ಲೆಲ್ಲಾ ವಿಷಯೆಗೆ ಮದುವೆ ಎಂಬ ಸುದ್ದಿಯನ್ನು ಹರಡಿಸಿದನು. ಎಲ್ಲೆಲ್ಲಿ ನೋಡಿದರೂ ಅಂತ

ಮಯದವೇದಿಯಂ ವಿರಚಿಸಿದರೊಪ್ಪಿನಿಂವೈವಾಹಮಂಟಪವನು ‖೫೩‖ ಬಳಿಕ ಮದನನಹೇಳಿಕೆಯೊಳಂದುವಿದಿತಮಂ | ಗಳವಿವಾಹೋಚಿತಕ್ರಿಯೆಗಳಂವಿರಚಿಸಿದ | ರಿಳೆಯದಿವಿಜಪುರಂಧ್ರಿಯರ್ಬೈದೆಮಜ್ಜನದಮಂಡನದ ಮಾಳ್ಕೆಗಳನು ‖ ಆಳವಡಿಸಿದರ್ಪಣೆಯೊಳೆಸೆವಬಾಸಿಗದಮದ | ವಳಿಗನಾಗಿರ್ದಂಕುಳಿಂದಜಂದೇವಪುರ | ನಿಳಯಲಕ್ಷ್ಮೀಕಾಂತನೊಲವಿಂದ ವಿಷಮಮೃತಮಹುದುಪೊಸತೇನೆನಲ್ಕೆ ‖ ೫೪ ‖

ಸಂಧಿ ೩೦ ಕ್ಕೆ ಪದ್ಯ ೧೬೭೧ಕ್ಕೆ ಮಂಗಳಮಸ್ತು.

ರಚಿಸಿದರು-ನೆರವೇರಿಸಿದರು. ‖ ೫೩ ‖

ಟೀ‖ ಬಳಿಕ_ಅನಂತರ, ಅಂದು_ಆಕಾಲದಲ್ಲಿ, ಇಳೆಯದಿವಿಜರು_ಭೂಸುರರಾದರೊ, ವಿದಿತ-ಪ್ರಸಿದ್ಧವಾದ, ಮಂಗಳ_ಮಂಗಳಕರವಾದ, ವಿವಾಹ_ಮದುವೆಗೆ, ಉಚಿತ_ಯೋಗ್ಯವಾದ, ಕ್ರಿಯೆಗಳಂ-ಕಾರ್ಯಗಳನ್ನೆಲ್ಲಾ, ಮದನನ ಹೇಳಿಕೆಯೊಳು_ಮದನನ ಅಜ್ಞಾನುಸಾರವಾಗಿ, ವಿರಚಿಸಿದರು-ನೆರವೇರಿಸಿದರು, ಮಜ್ಜನದ_ನೀರೆರೆದುಕೊಳ್ಳುವ, ಮಂಡನದ-ಅಲಂಕಾರದ, ಮಾಳ್ಕೆಗಳನು-ಕಾರ್ಯಗಳನ್ನೆಲ್ಲಾ, ಪುರಂಧ್ರಿಯರು_ಮುತ್ತೈದೆಯರು, ಐದೆ-ಚನ್ನಾಗಿ, ಆಳವಡಿಸಿದರು_ಅಣಿಮಾಡಿದರು, ಕುಳಿಂದಜಂ-ಇಂದುಹಾಸನಾದರೊ, ವಿಷಂ-ನಂಜೂಕೂಡ, ದೇವಪುರನಿಲಯ-ದೇವಪುರನಿವಾಸಿಯಾದ, ಲಕ್ಷ್ಮೀಕಾಂತನ-ಇಂದಿರಾವಲ್ಲಭನಾದ ನಾರಾಯಣನ, ಒಲವಿಂದ - ಪ್ರೀತಿಯಿಂದ, ಅಮೃತಂ - ಅಮೃತಪ್ರಾಯವಾದದ್ದು, ಅಹುದು_ಆಗತಕ್ಕದ್ದು, ಪೊಸತು_ಹೊಸದಾದ್ದು, ಏಂ_ಏನು, ಎನಲ್ಕೆ-ಎಂಬುವ ಪರಿಯಾಗಿ, ಪಣೆಯೋಳ್_ಹಣೆಯಲ್ಲಿ, ಎಸೆವ-ಪ್ರಕಾಶಿಸತಕ್ಕ, ಬಾಸಿಗದ-ಬಾಸಿಂಗವುಳ್ಳ, ಮದವಳಿಗನಾಗಿ_ಮದುವೆಯ ವರನಾಗಿ, ಇರ್ದಂ_ಮೆರೆಯುತ್ತಲಿದ್ದನು. ‖ ೫೪ ‖

ಇಂತು ಟೀಕಾ ತಾತ್ಪರ್ಯಸಹಿತ ಜೈಮಿನಿಭಾರತದೊಳು ಮೂವತ್ತನೆಯ
ಸಂಧಿಯು ಪೂರ್ತಿಯಾದುದು.

ರಿಕ್ಷವನ್ನೂ ಕೂಡ ನೂಕುತ್ತಲಿರುವವೋ ಎಂಬಂತಿರುವ ದೊಡ್ಡ ದೊಡ್ಡ ಚಪ್ಪರಗಳು ಕಂಗೊಳಿಸುತ್ತಿದ್ದವು. ಮತ್ತು ಮಣಿ ಮೊದಲಾದವುಗಳಿಂದ ಕೆತ್ತಲ್ಪಟ್ಟ ತೋರಣಂಗಳಿಂದ ಊರೆಲ್ಲಾ ಅಲಂಕೃತವಾಯಿತು. ಮಂಗಳಕರವಾದ ಸೋಪಸ್ಕರಂಗಳೆಲ್ಲಾ ಅಣಿಯಾದವು. ಮದುವೆಯ ಮಂಟಪವು ಬಹಳ ಸೊಗಸಾಯಿತು. ‖೫೩‖ ಮದುವೆಯ ಕಾರ್ಯಗಳನ್ನೆಲ್ಲಾ ಪ್ರಾರಂಭವಾದವು. ಬ್ರಾಹ್ಮಣರೂ ಮುತ್ತೈದೆಯರೂ ಮಂಗಳ ಕಾರ್ಯಗಳನ್ನೆಲ್ಲಾ ಆರಂಭಿಸಿದರು. ಚಂದ್ರನಂತಿರುವ ಚಂದ್ರಹಾಸನಾದರೊ, ದೇವಪುರದ ನಿವಾಸಿಯಾದ ಶ್ರೀಮನ್ನಾರಾಯಣಮೂರ್ತಿಯ ದಿವ್ಯಾನುಗ್ರಹದಿಂದ ತನಿಗೆ ಬಂದಿದ್ದ ಮಹದಾಪತ್ತನ್ನೂ ಕೂಡ ನಿವಾರಣೆಮಾಡಿಕೊಂಡು, ಭಾಷಿಂಗದಿಂದಲಂಕೃತನಾದ ಹಣೆಯುಳ್ಳ ಮದವಣಿಗನಾಗಿ ದುಷ್ಟಬುದ್ಧಿಯ ಮನೆಯಲ್ಲಿ ಆತ್ಯಾನಂದದಿಂದಿರುತ್ತಾ, ಶ್ರೀಕೃಷ್ಣಪರಮಾತ್ಮನನ್ನು ಧ್ಯಾನಿಸುತ್ತಲಿದ್ದನೆಂಬಲ್ಲಿಗೆ

ಟೀಕಾತಾತ್ಪರ್ಯಸಹಿತವಾದ ಜೈಮಿನಿಭಾರತದೊಳು ಮೂವತ್ತನೆಯ ಸಂಧಿಯ
ಕಥಾಸಾರವು ಸಂಪೂರ್ಣವಾದುದು. ‖೫೪‖



## ಮೂವತ್ತೊಂದನಯ ಸಂಧಿ.

ಸೂಚನೆ ‖ ಕೃತವಿವಾಹದೊಳಗುಪಹತಿಯ ಕೃತಕಂಗಳಿಂ । ಸುತನೊಡನೆ ಮೃತನಾದ ಮಂತ್ರಿಯಂ ಧರಣಿ ಗಧಿ । ಪತಿಯಾಗಿ ನೆಗಪಿದಂ ಚಂದ್ರಹಾಸಂ ಚಂಡಿಕಾದೇವಿಯಂ ಮೆಚ್ಚಿಸಿ ‖

ವಾಸವಾತ್ಮಜಕೇಳಲಂಕಾರದಿಂ ಚಂದ್ರಹಾ । ಸನಂಮದವಳಿಗನಂ ಮಾಡುತಿರ್ದರ್ಸು ವಾಸಿನಿಯ ರುತ್ಸವದೊ ಳಿಂತೆಂದು ಮದನನಂತಃಪುರದೊ ಳೆಚ್ಚರಿಸಲು ‖ ಪ್ರಾಸಾದ ದಗ್ರದೊಳ್ತಪಿಸುತಿಹ ವಿಷಯೆಗೆ ವಿ । ಲಾಸಿನಿಯರೈ ತಂದು ನುಡಿದರಂಬುಜ ವನಕೆ । ನೇಸರುದ ಯಿಸುವ ಕಾಲದಮುಂದೆ ತಂಪಿಡಿದು ಬೀಸುವೆಳೆ ಗಾಳಿಯಂತೆ ‖ ೧ ‖ ಸೊಗಯಿಸುವ ಪಚ್ಚೆಕರ್ಪುರದ ಪುಡಿಯಂ ಮೈಗೆ । ತಿಗುರಿದೊಡೆ ಬಾವನ್ನದೋಳ್ಗೆಸರನೆಸೆವ ಕುಚ । ಯುಗದೆಡೆಗೆಮೆತ್ತಿ ದೊಡೆಕಣ್ಣೆವೆಗೆ ಪನ್ನೀರನೊಡನೊಡನೆ ತೊಡೆಕೊಡದಕೆ ‖ ಮಿಗೆಪೆಚ್ಚಿತುರಿಯೆಂದು ಮತ್ತೆಸಿಡಿಮಿಡಿಗೊಂಡು । ಮಗುಳಂಬ ನುರುಬೆಗಾದರೆ ಪೊರಳುತಿಹ ಮಂತ್ರಿ । ಮಗಳೆಡೆಗೆಪರಿತಂದು ನುಡಿದಳೊಸಗೆಯನಾಪ್ತ ಸಖಿಯೋರ್ವಳವಳಕೊಡೆ ‖ ೨ ‖

---

ಮೂವತ್ತೊಂದನೆಯ ಸಂಧಿ ಪ್ರಾರಂಭವು.

ಸೂ ‖ ಚಂದ್ರಹಾಸಂ-ಇಂದುಹಾಸನು, ಧರಣಿಗೆ-ಭೂಮಂಡಲಕ್ಕೆಲ್ಲಾ, ಅಧಿಪತಿಯಾಗಿ-ರಾಜನಾಗಿ, ಚಂಡಿಕಾದೇವಿಯಂ-ಚಂಡಿಕೇಶ್ವರಿಯನ್ನು, ಮೆಚ್ಚಿಸಿ-ಅನುಗ್ರಹಮಾಡಲಿಕ್ಕೆಪಾತ್ರಳಾಗುವಂತೆ ಮಾಡಿಕೊಂಡು, ಕೃತ-ನೆರವೇರಿದ, ವಿವಾಹದೊಳು-ಲಗ್ನದಲ್ಲಿ, ಉಪಹತಿಯ-ಕೊಂದುಹಾಕುವುದರ, ಕೃತಕಂಗಳಿಂ-ಕಾರ್ಯಗಳಿಂದ, ಸುತನೊಡನೆ-ತನ್ನ ಕುವರನಾದ ಮದನನೊಂದಿಗೆ, ಮೃತನಾದ-ಸತ್ತು ಬಿದ್ದ, ಮಂತ್ರಿಯಂ-ಅಮಾತ್ಯನಾದ ದುಷ್ಟಬುದ್ಧಿಯನ್ನು ನೆನಪಿದಂ-ಪುನಃ ಜೀವಿಸುವಂತೆ ಮಾಡಿದನು‖

ಟೀ‖ ವಾಸವ-ದೇವೇಂದ್ರನ, ಆತ್ಮಜ-ಕುವರನಾದ ಫಲುಗುಣನೆ, ಕೇಳು-ಲಾಲಿಸು, ಸುವಾಸಿನಿಯರು-ಸುಮಂಗಲಿಯಾದರೊ, ಚಂದ್ರಹಾಸನಂ-ಇಂದುಹಾಸನನ್ನು, ಉತ್ಸವದೊಳು-ಮದುವೆಯ ಸಂಭ್ರಮದಲ್ಲಿ, ಮದವಳಿಗನಂ-ಮದುವೆಯ ಗಂಡನ್ನಾಗಿ, ಮಾಡುತಿರ್ದರ್-ಅಲಂಕರಿಸುತ್ತಲಿದ್ದರು. ಅಂತಃಪುರದೊಳು-ಸ್ತ್ರೀಯರಿದ್ದೆಡೆ, ಇಂತೆಂದು-ಈತೆರನಾಗಿ, ಮದನನು-ದುಷ್ಟಬುದ್ಧಿಯ ಕುವರನು, ಎಚ್ಚರಿಸಲು-ಹೇಳಿದ ಕಾರಣ, ವಿಲಾಸಿನಿಯರು-ಅಲ್ಲಿ ನೆರೆದಿದ್ದ ಹೆಂಗಸರು, ಐತಂದು-ಬಂದವರಾಗಿ, ನೇಸರು-ರವಿಯು, ಉದಯಿಸುವ-ಉಂಟಾಗುವ, ಕಾಲದ-ವೇಳೆಯ, ಮುಂದೆ-ಮೊದಲೇ, ಅಂಬುಜವನಕೆ-ತಾವರೆಗಳಿರತಕ್ಕ ಉದ್ಯಾನಕ್ಕೆ, ತಂಪಿಡಿದು-ತಣ್ಣನಾಗಿ, ಬೀಸುವ-ಬೀಸುತ್ತಲಿರತಕ್ಕ, ಎಳೆಗಾಳಿಯಂತೆ-ನಿದಾನವಾಗಿ ಬೀಸತಕ್ಕ ಗಾಳಿಯ ತೆರನಾಗಿ, ಪ್ರಾಸಾದದ-ಮಹಡಿಯ, ಅಗ್ರದೊಳ್-ತುದಿಯಲ್ಲಿ, ತಪಿಸುತಿಹ-ಕಾಮಬಾಧೆಯನ್ನನುಭವಿಸುತ್ತಲಿರುವ, ವಿಷಯೆಗೆ-ವಿಷಯೆ ಎಂಬ ದುಷ್ಟಬುದ್ಧಿಯ ಕುವರಿಗೆ, ನುಡಿದರು-ತಿಳಿಸಿದರು ‖ ೧ ‖

ಟೀ‖ ಓರ್ವಳು-ಒಬ್ಬಳಾದ, ಸಖಿಯು-ಗೆಳತಿಯು, ಮೈಗೆ-ವಿಷಯೆಯ ದೇಹಕ್ಕೆ. ಸೊಗಯಿಸುವ-ಉತ್ತಮವಾದ. ಪಚ್ಚಕರ್ಪೂರದಪುಡಿಯಂ-ಪಚ್ಚಕರ್ಪೂರದ ಹುಡಿಯನ್ನು, ತಿಗುರಿದೊಡೆ-ಉಜ್ಜಿದರೆ, ಎಸೆವ-ಹೊಳೆಹೊಳೆವ, ಕುಚಯುಗದೆಡೆಗೆ-ಸ್ತನಯುಗ್ಮಂಗಳಮೇಲೆ. ಬಾವನ್ನದ-ಶ್ರೀಗಂಧದ, ಒಳ್ಗೆಸರನು-ನೀರಾಗಿರುವ ಗಂಧವನ್ನು, ಮೆತ್ತಿದೊಡೆ-ಬಳಿದರೆ. ಒಡನೊಡನೆ-ಬಾರಿಬಾರಿಗೂ, ಪನ್ನೀರನು-ತಂಪಾದ ಗುಲಾಬೀಹೂವಿನ ನೀರನ್ನು, ಕಣ್ಣೆವೆಗೆ-ಕಣ್ಣಿನರೆಪ್ಪೆಯ ಹತ್ತಿರಕ್ಕೆ, ತೊಡೆದೊಡೆ-ಹಚ್ಚಿದರೆ, ಅದಕೆ-ಹಾಗೆ ಬಳಿದ ಕಾರಣ, ಉರಿ-ತಾಪವು, ಮಿಗೆ-ಹೆಚ್ಚಾಗಿ, ಪೆಚ್ಚಿತು-ಬಲವಾಯಿತು. ಎಂದು-ಎಂಬ ತೆರನಾಗಿ, ಮತ್ತೆ-ತಿರುಗಿ, ಸಿಡಿಮಿಡಿಗೊಂಡು-ನೆಗೆದು, ಮುಗುಳಂಬನ-ಪುಷ್ಪವೇ ಬಾಣವಾಗಿವುಳ್ಳ ಮನ್ಮಥನ, ಉರುಬೆಗೆ-ಹೊಯ್ಲಿಗೆ, ಆರದೆ-ಸಹಿಸುವುದಕ್ಕೆ ಆಗದೆ, ಪೊರಳುತಿಹ-ಹೊರಳಾಡುತ್ತಲಿರತಕ್ಕ, ಮಂತ್ರಿಮಗಳೆಡೆಗೆ-ವಿಷಯೆಯ ಸಮಿಪಕ್ಕೆ,

---

ಮೂವತ್ತೊಂದನೆಯ ಸಂಧಿಯ ಕಥಾಸಾರವು.

ಕೇಳೈ ಜನಮೇಜಯ ಮಹೀಪಾಲನೇ ! ಆ ಬಳಿಕ ನಾರದಮಹಾಮುನಿಯು ಇಂದ್ರನಂದನನಾದ ಅರ್ಜುನನನ್ನು ಕುರಿತು ಇಂತೆಂದನು. ಕೇಳೈ ಫಲುಗುಣನೆ, ದುಷ್ಟಬುದ್ಧಿಯ ಕುವರನಾದ ಮದನನು ವಿಷಯೆಯನ್ನು ಇಂದುಹಾಸನಿಗೆ ಕೊಟ್ಟು ಮದುವೆನಾಡಬೇಕೆಂದು ನಿಶ್ಚೈಸಿರತಕ್ಕ ಸುದ್ಧಿಯನ್ನು ರಾಣಿವಾಸದ ಸ್ತ್ರೀಯರೊಂದಿಗೆ ಹೇಳಿದ ಕೂಡಲೇ ಅವರೆಲ್ಲಾ ಇಂದುಹಾಸನನ್ನು ಮದವಣಿಗನನ್ನಾಗಿ ಮಾಡಿದರು. ಅಲ್ಲಿದ್ದ ನಾರಿಯರಲ್ಲಿ ಕೆಲವರು ತಡಮಾಡದೆ ಉಪ್ಪರಿಗೆಯ ಮೇಲಿನಂತಸ್ತಿನಲ್ಲಿ ವಿರಹವೇದನೆಯಿಂದ ತಪಿಸುತ್ತಲಿರುವ ವಿಷಯೆಯ ಬಳಿಗೆ ಹೋಗಿ ಈ ಸುದ್ದಿಯನ್ನು ಹೇಳಿದರು. ವಿಷಯಾಸಕ್ತಳಾದ ವಿಷಯೆಯು ಇವರ ಮಾತನ್ನು ಕೇಳಿದಕೂಡಲೇ ಕಮಲಗಳ ವನಕ್ಕೆ ಸೂರ್ಯಕಾಂತಿಯು ಬಿದ್ದಂತೆ ಅತ್ಯಾನಂದದಿಂದ ಕೂಡಿದವಳಾದಳು ‖೧‖ ಪಚ್ಚಕರ್ಪೂರ ಪನ್ನೀರು ಗಂಧ ಮೊದಲಾದವನ್ನು ಬಳಿದುಕೊಂಡು ವಿರಹತಾಪದಿಂದ ಕೂಡಿರುವ ವಿಷಯೆಯನ್ನು ಅವಳ

ಚಿಂತೆಯುಂಬಿಡುತರಳೆಕೈಸಾರ್ದುದೀಗ ನಿ | ನ್ನಂತರಂಗದಬಯಕೆ ಶಶಿಹಾಸನೆಂಬವಂ | ಕಂತುಸಮನಾಗಿಹಂನೀನದೇಂಪುಣ್ಯ ಮಂಮಾಡಿದೆಯೊಮುನ್ನಿಳೆಯೊಳು || ಕುಂತಳೇಂದ್ರನಕುವರಿನಗುತೆಸರಸದೊಳಾಡಿ | ದಂತಾಯ್ತುತಂದೆಕಳುಹಿ ಲೇಖನವ ನೋಡಸಂತಸದೊಳಿಂದುಮದನಂನಿನ್ನನಾತಂಗೆಕೊಡುವೆನೆಂದವಳೊರೆದಳು ||೩|| ರಜ್ಜುಬಂಧವನುಗಿದಮೃಗದಂತೆತಾನೆನೆದ | ಕಜ್ಜಮೊಡಗೂಡಲ್ಕೆ ಮೊಗಮರಳ್ದುದುಬಳಿಕ ಲಜ್ಜೆಮೊಳೆದೋರಿದುದುತಲೆವಾಗಿ ನೆಲನನುಂಗುಟದಿಂದ ಬರೆವುತಿರಲು| ಉಜ್ಜುಗಮಿದೇನಬಲೆಸಾಕು ನಡೆಮಂಗಳಸು | ಮಜ್ಜನದಮನೆಗೆಂದು ಕಮಲಾಯತಾಕ್ಷಿಯಂ | ತಜ್ಜನನಿಕಳುಹಿದ ನಿತಂಬಿನೆಯರು

---

ಪರಿತಂದು_ಜಾಗ್ರತೆಯಾಗಿ ಬಂದು, ಅವಳಕೂಡೆ_ಆ ವಿಷಯೆಯೊಂದಿಗೆ, ಒಸಗೆಯನು - ಶುಭವಾದ ವಾರ್ತೆಯನ್ನು, ನುಡಿದಳು_ತಿಳಿಸಿದಳು || ೨ ||

ಟೀ|| ತರಳೆ-ಎಲೌ ತರುಣಿಯೆ, ಚಿಂತೆಯಂ_ನಿನಿಗುಂಟಾಗಿರತಕ್ಕ ವ್ಯಥೆಯನ್ನು, ಬಿಡು-ಬಿಡುವಳಾಗು, ನಿನ್ನ_ನಿನ್ನದಾದ, ಅಂತರಂಗದ_ಒಳಗೇ ನೆಲಸಿದ್ದ, ಬಯಕೆ_ಇಷ್ಟಾರ್ಥವಾದರೊ, ಈಗ-ಈ ಸಮಯದಲ್ಲಿ, ಕೈಸಾರ್ದುದು_ನೆರವೇರಿರುವುದು, ಶಶಿಹಾಸನೆಂಬವಂ-ಇಂದುಹಾಸನೆಂಬ ತರುಣನಾದರೊ, ಕಂತುಸಮನಾಗಿಹಂ- ಮನ್ಮಥನನ್ನು ಹೋಲತಕ್ಕವನಾಗಿದ್ದಾನೆ, ಮುನ್ನ-ಪೂರ್ವಜನ್ಮದಲ್ಲಿ, ಇಳೆಯೊಳು_ಪ್ರಪಂಚದಲ್ಲಿ, ನೀಂ_ನೀನಾದರೊ, ಅದೇಂಪುಣ್ಯವಂ- ಇನ್ನೆಂಥ ಮೇಲ್ಮೆಯನ್ನು, ಮಾಡಿದೆಯೊ_ಎಸಗಿರುವೆಯೊ, ನಗುತ_ಮುಗುಳ್ನಗೆಯನ್ನೈದುತ್ತ, ಸರಸದೊಳು_ಹಾಸ್ಯವಾಗಿ, ಕುಂತಳೇಂದ್ರನ ಕುವರಿ_ಕುಂತಳಾಧೀಶನ ಸುತೆಯಾದ, ಚಂಪಕಮಾಲಿನಿ_ಚಂಪಕಮಾಲಿನಿ ಎಂಬ ನಿನ್ನ ಸಖಿಯು, ಆಡಿದಂತೆ_ನುಡಿದಹಾಗೆಯೆ, ಆಯ್ತು-ಉಂಟಾಯಿತು. ಇಂದು_ಈ ಹೊತ್ತು, ಮದನಂ_ಮದನನಾದರೊ, ತಂದೆ_ತಂದೆಯಾದ ದುಷ್ಟಬುದ್ಧಿಯು, ಕಳುಹಿದ-ಹೇಳಿ ಕಳುಹಿಸಿದಂಥ, ಲೇಖನವ-ಕಾಗದವನ್ನು, ನೋಡಿ_ನೋಡಿಕೊಂಡು, ಆತಂಗೆ_ಆ ಇಂದುಹಾಸನಿಗೆ, ನಿನ್ನನು-ನಿನ್ನನ್ನು, ಸಂತಸದೊಳು-ಪ್ರೇಮಾತಿಶಯದಿಂದ, ಕೊಡುವನು_ದಾನವಂ ಮಾಡುವನು, ಎಂದು-ಎಂಬತೆರನಾಗಿ, ಅವಳು_ಆ ಸಖಿಯು, ಬರೆದಳು_ನುಡಿದಳು. || ೩ ||

ಟೀ|| ತಾಂ-ತಾನಾದರೊ, ನೆನೆದ_ಆಲೋಚನೆ ಮಾಡಿಕೊಂಡಿದ್ದ, ಕಜ್ಜಂ-ಕಾರ್ಯವು, ಒಡಗೂಡಲ್ಕೆ-ನೆರವೇರಿದಕಾರಣ, ರಜ್ಜುಬಂಧನವನು_ಹಗ್ಗವನ್ನು ಕಟ್ಟದ್ದದ್ದನ್ನು, ಉಗಿದ_ಬಿಡಿಸಿದ, ಮೃಗದಂತೆ_ಮೃಗರೀತಿಯಿಂದ, ಮೊಗಂ-ಮೋರೆಯು, ಅರಳ್ದುದು_ಅಗಲವಾಯಿತು, (ಇಷ್ಟಾರ್ಥವು ಕೈಗೂಡಿದ್ದರಿಂದ ಅಂತರಂಗದಲ್ಲಿ ಸಂತೋಷವು ಹೆಚ್ಚಿತು) ಲಜ್ಜೆ_ನಾಚಿಕೆಯೂಕೂಡ, ಬಳಿಕ-ಅನಂತರ, ಮೊಳೆದೋರಿದುದು-ಆರಂಭವಾಯಿತು, ತಲೆವಾಗಿ_ತಲೆಯನ್ನು ತಗ್ಗಿಸಿದವಳಾಗಿ, ಉಂಗುಟದಿಂದ_ಹೆಬ್ಬೆರಳಿನಿಂದ, ನೆಲನನು-ಭೂಮಿಯನ್ನು, ಬರವುತಿರಲು-ಗೆರೆಗಳು ಹಾಕುತ್ತಿದ್ದಕಾರಣ, ಅಬಲೆ_ಎಲೈ ಬಾಲೆಯೇ, ಇದೇನು ಉಜ್ಜುಗಂ_ಇದೆಂತಹ ಕೆಲಸವು, ಸಾಕು_ನಿಲ್ಲಿಸು, ಮಂಗಳ-ಕಲ್ಯಾಣಪ್ರದವಾದ ಸುಮಜ್ಜನದ, ಮನೆಗೆ_ನೀರುಹಾಕಿಕೊಳ್ಳತಕ್ಕ ಪ್ರದೇಶಕ್ಕೆ, ನಡೆ_ಹೊರಡು, ಎಂದು_ಎಂಬತೆರನಾಗಿ, ತಜ್ಜನನಿ-ಅವರ ತಾಯಿಯು, ಕಳುಹಿದ-ಕಳುಹಿಸಿದಂಥ, ನಿತಂಬಿನಿಯರು_ಸ್ತ್ರೀಯರು, ಕಮಲಾಯತಾಕ್ಷಿಯಂ_ತಾವರೆಯಂತೆ ವಿಶಾಲವಾದ ನಯನಂಗಳನ್ನುಳ್ಳ ವಿಷಯೆ ಎಂಬ ಬಾಲೆಯನ್ನು, ಉಪ್ಪರಿಗೆಯ_ಮಹಡಿಯ, ತುದಿಯಿಂದ_ಕಡೆಯಭಾಗದಿಂದ, ಇಳುಹಿ_ಕೆಳಕ್ಕಿಳಿಸಿದವರಾಗಿ, ತಂದರು_ಸ್ನಾನದ ಮನೆಗೆ ಕರೆದುಕೊಂಡು ಬಂದವರಾದರು. || ೪ ||

ಟೀ|| ಸೌಂದರ_ಅಲಂಕಾರದಿಂದ ಕೂಡಿದ, ಕುಂಕುಮಾಂಗ-ಕುಂಕುಮವೇ ದೇಹದಲ್ಲಿವುಳ್ಳ, ಮಾಂಗಲ್ಯ-ಮಾಂಗಲ್ಯವಿಂದ ವಿರಾಜಿಸುತ್ತಿರುವ, ಅಬಲೆಯರು-ನಾರಿಯರು, ಉದಕ-ಜಲದಿಂದ, ಪೂರಿತ_ತುಂಬಿರತಕ್ಕ, ಕನಕಕಲಶದ_ಸುವರ್ಣದ

---

ಸಖಿಯಾದೋರ್ವಳು ನೋಡಿ || ೨ || ಅಮ್ಮಾ, ವಿಷಯೇ ! ನೀನೇಕೆ ಯೋಚಿಸುವಿ, ನಿನ್ನ ಮನೋಭಿಪ್ರಾಯವು ನೆರವೇರಿತಾದ್ದರಿಂದ ಇನ್ನು ಚಿಂತಿಸಬೇಡ, ಪೂರ್ವದಲ್ಲಿ ನೀನು ಮಾಡಿದ ಪುಣ್ಯವಾದರೊ, ಅಸಾಧಾರಣವಾದ್ದರಿಂದಲೇ ನಿನಿಗೆ ಚಂದ್ರನಂತಿರುವ ಚಂದ್ರಹಾಸನೊಂದಿಗೆ ಪಾಣಿಗ್ರಹಣಮಹೋತ್ಸವವು ನಡೆಯುವುದು, ನಿನ್ನತಂದೆಯಾದ ದುಷ್ಟಬುದ್ಧಿಯು ನಿನ್ನಣ್ಣನಿಗೆ ಕಾಗದವನ್ನು ಬರೆದಿದಾನೆ, ಮದನನೂಕೂಡ ಅತ್ಯಾನಂದದಿಂದ ನಿನ್ನನ್ನು ಚಂದ್ರಹಾಸನಿಗೆ ಕೊಟ್ಟು ಮದುವೆ ಮಾಡಲು ನಿಷ್ಕರ್ಷಿಸಿರುವನೆಂದು ನುಡಿದಳು ||೩|| ಈ ಮಾತನ್ನು ಕೇಳಿದ ವಿಷಯೆಯಾದರೊ, ಬಂಧನದಿಂದ ಬಿಡುಗಡೆಯನ್ನೈದಿದ ಮೃಗದಂತೆ ಸಂತೋಷ ಚಿತ್ತಳಾದಳು. ಮುಖವು ವಿಕಸಿತವಾಯಿತು. ನಾಚಿಕೆಯು ತಲೆದೋರಲಾರಂಭಿಸಿತು. ನೆಲವನ್ನು ಹೆಬ್ಬೆಟ್ಟನಿಂದ ಕೆರೆಯುತ್ತಲಿದ್ದಳು. ಆಗ ಅವರ ತಾಯಿಯು ಕಳುಹಿಸಿದ ಸೇವಕ ಜನರು ಬಂದು ವಿಷಯೆಗೆ ಮಂಗಳ ಸ್ನಾನವಂಮಾಡಿ ಸಲೋಸುಗ ಉಪ್ಪರಿಗೆಯಿಂದ ನೀರಮನೆಗೆ ಕರೆದುಕೊಂಡು ಬಾದರು. || ೪ || ಪೊಂಗಳ ಶಂಗಳಂತಿರುವ ಕುಚಯು

ಪುರಿಗೆತುದಿಯಿಂದಿಳುಹಿತಂದರು ||೪|| ವರಶಾತಕುಂಭಕುಂಭಸ್ತನದಪಲ್ಲವಾ | ಧರದಗುಣರಾಜಿರಾಜಿತದಕೋಮಲೆಗೆ ಸೌಂ | ದರಕುಂಕುಮ ಮಾಂಗಲ್ಯದಬಲೆಯರುದಕಪೂರಿತಕನಕಕಲಶದ || ಸುರುಚಿವೆತ್ತಶಣತರುಣಪ್ರವಾಳದವಸ್ತ್ರ | ಪರಿವೃತದ ಕಲ್ಪಕಲ್ಪಕವಿಧಾನಮಾಗಿರದೆ | ವಿರಚಿಸಿದರಾಗರಾಗದೊಳಮಲ ಶೋಭನಸ್ನಾನವಮಹೋತ್ಸವದೊಳು || ೫ || ಮುಟ್ಟಿದರೆಕಂ ದದಿಂದಿವಳಸುಕುಮಾರತನು | ದಿಟ್ಟೆಯರದೆಂತೊನವಕುಂಕುಮುವನೀಗನುಂ | ಪಿಟ್ಟರಲ್ಲದೆಪೋದಮಧ್ಯದೊಳದೆಂತುನಿಲಿಸಿದ ರೊದಿವ್ಯಾಂಬರವನು || ಬಟ್ಟಮೊಲೆಗಳಪೊರೆಗೆಬಾಗಿನಡೆವಳ್ಗೆಂತು | ಕಟ್ಟಿದರೊಹಾರಾವಳಿಯುನೆಂದು ಕೌತುಕಂ | ಬಟ್ಟು ನೋಡುವೊಲೆಸೆದಳಾವಿಷಯೆ ಬಳಿಕಲಂಕಾರಮಂಡಿತೆಯಾಗಲು || ೬ || ಬಾವನ್ನಗಂಪಿನಂಗದಲಲನೆಗನುಲೇಪ | ನಾವಳಿಗಳೇ ಕಿನ್ನುಕನ್ಯಕಾತಿಲಕಕ್ಕೆ | ಭಾವಿಸಲಲಾಮುವೇತಕೆ ಪಣೆಗೆಸೊಂಪೊದವಿದವಯವದೊಳಿಂಪುವಡೆದ || ಪೂವಿಸರಕೋಮಲೆಗದೇ ಕೆಕುಸುನುದಮಾಲೆ | ಲಾವಣ್ಯಭೂಷಣದಪೆಣ್ಗಾಭರಣಮೇಕೆ | ಕೋವಿದೆಯರಲ್ಲಸ್ಯೈರಂಧ್ರಿಯರೆನಲ್ಕೆವಿಷಯೆಗೆ ಸಿಂಗರಂಗೈ

---

ತಂಬಿಗೆಯ, ಸುರುಚಿವೆತ್ತ-ಕಳೆಯಿಂದ ಕೂಡಿರತಕ್ಕ, ಅರುಣ-ರಕ್ತವರ್ಣವುಳ್ಳ, ತರುಣ-ನೂತನವಾದ, ಪ್ರವಾಳದ-ಪಲ್ಲವದ, ವಸ್ತ್ರ-ಬಟ್ಟೆಯಮೂಲಕ, ಪರಿವೃತದ-ಆವರಿಸಿಕೊಂಡಿರತಕ್ಕ, ಕಲ್ಪ-ಬಗೆಗೆ, ಕಲ್ಪ-ಹೋಲುತ್ತಲಿರತಕ್ಕ, ವಿಧಾನಮಾಗಿ-ರೀತಿಯಾಗಿ, ಇರದೆ-ಕಾಲವಂ ಕಳೆಯದೆ, ಆಗ-ಆಕಾಲದಲ್ಲಿ, ವರ-ಉತ್ತಮವಾದ, ಶಾತಕುಂಬ-ಸುವರ್ಣವಿಕಾರವಾದ, ಕುಂಭ-ಕಲಶದಹಾಗೆ ಇರತಕ್ಕ, ಸ್ತನದ-ಕುಚಗಳುಳ್ಳ, ಪಲ್ಲವ-ಚಿಗುರಿನಂತೆ ವರ್ಣವುಳ್ಳ, ಅಧರದ-ತುಟಿಯಿಂದ ಕೂಡಿರತಕ್ಕ, ಗುಣರಾಜಿ-ಸದ್ಗುಣ ಸಮುದಾಯದಿಂದ, ರಾಜಿತದ-ಕಾಂತಿಯುಕ್ತಳಾಗಿರತಕ್ಕ, ಕೋಮಲೆಗೆ-ಸುಂದರಾಂಗಿಯಾದ ವಿಷಯೆ ಎಂಬ ಬಾಲಕಿಗೆ, ರಾಗದೊಳು-ಸಂತಸದಿಂದ, ಮಹೋತ್ಸವದೊಳು-ಅತ್ಯಂತ ವೈಭವದಿಂದ, ಅಮಲ-ಪರಿಶುದ್ಧವಾದ, ಶೋಭನ-ಮಂಗಳಕರವಾದ, ಸ್ನಾನವ-ಸ್ನಾನವನ್ನೂ, ಆಗ-ಆಸಮಯದಲ್ಲಿ, ವಿರಚಿಸಿದರು-ನೆರವೇರಿಸಿದರು. ||೫||

ಟೀ|| ಇವಳ-ಈ ವಿಷಯೆ ಎಂಬ ತರುಣಿಯ, ಸುಕುಮಾರತನು-ಮೃದುವಾದ ದೇಹವನ್ನು, ಮುಟ್ಟಿದರೆ-ಮುಟ್ಟಿಬಿಟ್ಟರೆ, ಕಂದದಿಂದು- ಕಾಂತಿಯುಕ್ತವಾಗಿರುವುದಿಲ್ಲ. ನವಕುಂಕುಮುವನು – ಹೊಸಕುಂಕುಮುವನ್ನು, ದಿಟ್ಟೆಯರು-ಪ್ರಾಜ್ಞರಾದ ಸ್ತ್ರೀಯರು, ಈಗ-ಈಗಲಾದರೊ, ಅದೆಂತು-ಅದುಹೇಗೆ, ನುಂಪಿಟ್ಟರು-ಸಿಂಗರಿಸಿದರು, ಅಲ್ಲದೆ-ಇದಲ್ಲದೆ, ದಿವ್ಯಾಂಬರವನು-ಅತ್ಯುತ್ತಮವಾದ ಪೀತಾಂಬರವನ್ನು, ಪೋದಮಧ್ಯದೊಳು-ಬಡವಾದ ಸೊಂಟದಲ್ಲಿ, ಅದೆಂತುನಿಲಿಸಿದರೊ-ಅದುಹೇಗೆ ನಿಲ್ಲುವಂತೆ ಮಾಡಿದಾರೊ, ಹಾರಾವಳಿಯನು-ಅನೇಕ ಹಾರಗಳನ್ನು, ಬಟ್ಟ-ದುಂಡಗಿರತಕ್ಕ, ಮೊಲೆಗಳ ಪೊರೆಗೆ-ಕುಚಗಳ ಭಾರಕ್ಕೆ, ಬಾಗಿನಡೆವಳ್ಗೆ-ಬಗ್ಗಿ ನಡೆಯತಕ್ಕವಿಷಯಗೆ, ಎಂತು-ಯಾವರೀತಿಯಲ್ಲಿ, ಕಟ್ಟಿದರೊ-ಹಾಕಿನಿಲ್ಲಿಸಿದರೊ, ಎಂದು-ಎಂಬ ತೆರನಾಗಿ, ಕೌತುಕಂ-ಆಚ್ಚರಿಯನ್ನು, ಬಟ್ಟು-ತಾಳಿ, ನೋಡುವವೊ-ನಿರುಕಿಸುವಂತೆ, ಅಲಂಕಾರಮಂಡಿತೆಯಾಗಲು-ಅಲಂಕಾರದಿಂದ ಕೂಡಲು, ಬಳಿಕ-ಅನಂತರ, ಆವಿಷಯೆ-ಆ ದುಷ್ಟಬುದ್ಧಿಯ ಕುವರಿಯು, ಎಸೆದಳು-ಕಾಂತಿಯುಕ್ತಳಾದಳು ||೬||

ಟೀ|| ಅನುಲೇಪನಾವಳಿಗಳು- ಸ್ರಕ್ಚಂದನಾವಳಿಗಳು, ಬಾವನ್ನ-ಸಿರಿಕಂಡದ, ಕಂಪಿನ-ಪರಿಮಳವುಂಟಾಗಿರತಕ್ಕ, ಅಂಗದ-ದೇಹವುಳ್ಳ, ಲಲನೆಗೆ-ತರುಣಿಗೆ, ಏಕೆ-ಏನು ಪ್ರಯೋಜನವು, ಭಾವಿಸೆ-ಯೋಚಿಸಿ ನೋಡಿದರೆ, ಪಣೆಗೆ-ಹಣೆಗೆ, ಲಲಾಮವು-ತಿಲಕವು, ಕನ್ಯಕಾತಿಲಕಕೆ-ಹುಡಿಗಿಯರಲ್ಲೆಲ್ಲಾ ಶ್ರೇಷ್ಠಳಾಗಿರತಕ್ಕ ವಿಷಯಗೆ, ಇನ್ನು-ಇನ್ನುಮುಂದೆ, ಏತಕೆ-ಏನುಸಾರ್ಥಕವು, ಕುಸುಮದಮಾಲೆ-ಪುಷ್ಪಮಾಲಿಕೆಯು, ಸೊಂಪು-ಸೌಂದರ್ಯವು, ಒದವಿದ-ಉಂಟಾಗಿರತಕ್ಕ, ಅವಯವದೊಳು-ಅವಯವಂಗಳಲ್ಲಿ, ಇಂಪುವಡೆದ-ಸುವಾಸನೆಯಂ|ಬೀರುವ, ಪೂವಿಸರ-ಹೂವಿನ ಸಮುದಾಯದಂತಿರತಕ್ಕ, ಕೋಮಲೆಗೆ-ಮೃದುವಾದ ಶರೀರವುಳ್ಳ ವಿಷಯೆಗೆ, ಅದೇಕೆ-ಯಾತಕ್ಕೆ ಬೇಕು, ಆಭರಣಂ-ತೊಡಿಗೆಗಳು, ಲಾವಣ್ಯ-ಸೌಂದರ್ಯವೆಂಬ, ಭೂಷಣದ-ಅಲಂಕಾರವುಳ್ಳ, ಪೆಣ್ಗೆ-ವಿಷಯೆ ಎಂಬ ತರುಣಿಗೆ, ಏಕೆ-ಏನು ಸಾರ್ಥಕವು, ಸೈರಂಧ್ರಿಯರು-ಸೇವಕಸ್ತ್ರೀಯರು,

---

ಗ್ಯದಿಂದಲೂ, ಕೆಂಪಾದ ಚಿಗುರನ್ನು ನಿರಾಕರಿಸತಕ್ಕ ಚೆಂದುಟಿಯಿಂದಲೂ, ಸದ್ಗುಣಾವಳಿಗಳಿಂದಲೂ ಶೋಭಿಸುತ್ತಲಿರುವ ವಿಷಯೆ ಎಂಬ ನಾರೀಮಣಿಗೆ ಭಂಗಾರದ ತಂಬಿಗೆಗಳಿಂದ ನೀರನ್ನು ಹೊಯಿದು ಸ್ನಾನವಂ ಮಾಡಿಸಿದಮೇಲೆ ||೫|| ತಲೆಮೈಯನ್ನೆಲ್ಲಾ ಒರಸಿ, ದಿವ್ಯವಾದ ಪೀತಾಂಬರವನ್ನುಡಿಸಿ, ಹಣೆಗೆ ಕುಂಕುಮುವನ್ನಿಟ್ಟು, ಸೊಂಟವನ್ನು ಡಾಬಿನಿಂದಲೂ, ಹಾರಾವಳಿಗಳೇ ಮೊದಲಾದ ತೊಡಿಗೆಗಳಿಂದ ಸರ್ವಾಂಗವನ್ನೂ ಅಲಂಕರಿಸಿದರು || ೬ || ಈ ವಿಷಯೆಯ ದೇಹವು ದಿವ್ಯವಾದ ಗಂಧದ ಸುವಾಸನೆಯನ್ನೂ ನಿರಾಕರಿಸುತ್ತಲಿದ್ದ ಕಾರಣದಿಂದಲೂ ಕನ್ಯಾಮಣಿಗಳಲ್ಲೆಲ್ಲಾ ಈ ಬಾಲೆಯೇ ಉತ್ತಮಳಾಗಿದ್ದದ್ದರಿಂದಲೂ ಆ ನಾರಿಯರು ಬಳಿದ ಗಂಧವೂ ಹಣೆಗಿಟ್ಟತಿಲಕವೂ ನಿರರ್ಥಕಂಗಳಾದವು. ಸುಕುಮಾರಿಯಾದ ಈ ಬಾಲೆಗೆ ಹೂವಿನ ಹಾರವೂ, ಸೌಂದರ್ಯದಿಂದ ಕೂಡಿದ ಈ ತರುಣಿಗೆ ಅವರಿಟ್ಟ ಒಡವೆಗಳೂ ಪ್ರಯೋಜನಕರವೇ ಆಗಲಿಲ್ಲವು. || ೭ || ಚಂಚಲವಾಗಿಯೂ,

ದರು ॥೭॥ ಅಪರದಿಗ್ಭಾಗದಂತಂಜನೋದ್ಭಾಸಿತಂ । ವಿಪುಲಹರಿಪದದಂತೆತಾರಕಾಲಂಕೃತಂ । ಲಿಪಿಯಂತೆದೀರ್ಘಶೋಭಾನ್ವಿತಂದ್ವಿಜನಂತೆಶ್ರುತಿಯುತಂದೈತ್ಯನಂತೆ ॥ ಅಪಹೃತಾನಿಮಿಷಲೀಲಾವಿಲಾಸಂನರಾ । ಧಿಪನಂತೆಕುವಲಯಶ್ರೀಧರಂಘನದಂತೆ । ಚಪಲಾಭಿರಾಮಮಾಗಿರ್ದುದಾ ಶಶಿಮುಖಿಯ ನೇತ್ರಯುಗ ಮೇವೇಳ್ವೆನು ॥ ೮ ॥ ಉಲ್ಲಾಸತಿಲಕಮುಂಸುತಮಾಲಪತ್ರಮುಂ । ಮೊಲ್ಲೆಯಮುಗುಳ್ಗಳುಂಸಂಪಗೆಯಮೊಗ್ಗೆಯುಂ । ನಿಂಬದಳಮುಂತೊಳಗುವ ॥ ಸಲ್ಲಲಿತಸಾಲಕಾನನದೋಳಿರ್ದಪವುಪೊಸ । ತಲ್ಲಿಂಬತೆರನಾದುದೆಂತುಬಣ್ಣಿಸುವೆನೀ । ಚೆಲ್ವಗಂಗಳಚಲ್ವಿಕೆಯೊಳೆಸೆವಬಾಲಕಿಯನಗೆಮೊಗದ ಸೌಂದರವನು ॥ ೯ ॥ ಶ್ರವಣಭೂಷಣದಿಂದಹಸ್ತಾಭರಣದಿಂದ । ದಿವಿಜಪದಮೆಸೆವಂತೆಕುಂತಳಶ್ರೀಯುವೈ । ಭವದಿಂದ

---

ಕೋವಿದೆಯರು_ಬಲ್ಲವರು, ಅಲ್ಲ-ಆಗಿಲ್ಲವು, ಎನಲ್ಕೆ-ಎಂಬ ರೀತಿಯಾಗಿ, ವಿಷಯೆಗೆ_ವಿಷಯೆಯೆಂಬ ಮಂತ್ರಿ ಸುತೆಗೆ, ಸಿಂಗರಂಗೈದರು_ಅಲಂಕಾರವನ್ನು ಮಾಡಿದರು ॥೭॥

(ಈ ಪದ್ಯದಲ್ಲಿ ವಿಷಯೆಯ ಕಣ್ಣುಗಳನ್ನು ವರ್ಣಿಸಿರುವುದು)

ಟೀ॥ ಅಪರದಿಗ್ಭಾಗದಂತೆ-ಪಡುವಣ ದಿಕ್ಕಿನ ರೀತಿಯಾಗಿ, ಅಂಜನ-ಅಂಜನವೆನ್ನುವ ಆನೆಯಿಂದ, ಉದ್ಭಾಸಿತಂ-ಹೊಳೆಯುತ್ತಲಿರುವುದು, ವಿಪುಲ-ವಿಶಾಲವಾಗಿರತಕ್ಕ, ಹರಿಪದದಂತೆ_ಅಂತರಿಕ್ಷದ ಹಾಗೆ, ತಾರಕಾಲಂಕೃತಂ-ಉಡುಗಣದಿಂದ ಅಲಂಕರಿಸಲ್ಪಟ್ಟಿರುವುದು, ಲಿಪಿಯಂತೆ_ಬರವಣಿಗೆಯ ಹಾಗೆ, ದೀರ್ಘ-ದೀರ್ಘವಾದ ಅಕ್ಷರಗಳ, ಶೋಭಾ-ಕಾಂತಿಯಿಂದ, ಅನ್ವಿತಂ-ಕೂಡಿದುದಾಗಿರುವುದು, ದ್ವಿಜನಂತೆ_ವಿಪ್ರನ ಹಾಗೆ, ಶ್ರುತಿಯುತಂ-ವೇದ ಸಹಿತವಾಗಿರುವುದು, ದೈತ್ಯನಂತೆ-ರಕ್ಕಸನ ರೀತಿಯಾಗಿ, ಅಪಹೃತ-ಅಪಹರಿಸಲ್ಪಟ್ಟ, ಲೀಲಾ_ಸಂತೋಷದ, ವಿಲಾಸಂ-ಸಡಗರವುಳ್ಳದ್ದು, ನರಾಧಿಪನಂತೆ_ರಾಜನ ಹಾಗೆ, ಕುವಲಯ_ಇಳಾಮಂಡಲದ, ಶ್ರೀ-ಐಸಿರಿಯನು, ಧರಂ_ಹೊಂದಿರುವುದು, ಘನದಂತೆ_ಮೋಡದ ರೀತಿಯಾಗಿ, ಚಪಲಾಭಿರಾಮಂ-ವಿದ್ಯುತ್ತಿನಿಂದ ಶೋಭಿಸುವುದು, (ಇದು ಪಶ್ಚಿಮದಿಕ್ಕಿನ ಅಂತರಿಕ್ಷದ ವರ್ಣನೆಯು) ಆ ಶಶಿಮುಖಿಯ-ಚಂದ್ರಮುಖಿಯಾದ ಆ ವಿಷಯೆಯ, ನೇತ್ರಯುಗಂ_ನಯನಂಗಳೆರಡೂ, ಅಪರದಿಗ್ಭಾಗದಂತೆ ಅಂಜನೋದ್ಭಾಸಿತಂ-ಕಪ್ಪನ್ನು ಹಚ್ಚಿರುವುದರಿಂದ ಕಾಂತಿವಿಶಿಷ್ಟವಾಗಿರುವುದು, ವಿಪುಲಹರಿಪದದಂತೆ_ತಾರಕಾಲಂಕೃತಂ – ತಾರಕಾ_ಕಣ್ಣುಗುಡ್ಡುಗಳಿಂದ, ಅಲಂಕೃತಂ-ನೋಡುವುದಕ್ಕೆ ಅಂದವಾಗಿರುವುದು, ಲಿಪಿಯಂತೆ - ದೀರ್ಘಶೋಭಾನ್ವಿತಂ – ವಿಶಾಲವಾಗಿಯೂ, ಅಲಂಕಾರವಾಗಿಯೂ ಇರುವುದು, ದ್ವಿಜನಂತೆ-ಶ್ರುತಿಯುತಂ_ಶ್ರೋತ್ರಂಗಳಿಂದ ಕೂಡಿರುವುದು, ದೈತ್ಯನಂತೆ-ಅಪಹೃತ_ಹೊಂದಿರುವ, ಅನಿಮಿಷ-ರೆಪ್ಪೆ ಬಡಿಯದೆ ನೋಡುತ್ತಲಿರುವ, ಲೀಲಾ_ಲೀಲೆಯ, ವಿಲಾಸಂ-ಕಾಂತಿಯುಳ್ಳದ್ದು, ಘನದಂತೆ_ಕುವಲಯ, ಶ್ರೀಧರಂ-ಕರೀಕಮಲದ ಪ್ರಕಾಶದಂತೆಯೂ, ಚಪಲಾಭಿರಾಮಂ-ಚಂಚಲವಾದದ್ದಾಗಿಯೂ, (ಇದು ವಿಷಯೆಯ ಕಣ್ಣುಗಳ ವರ್ಣನೆಯು) ಆಗಿರ್ದುದು_ಆಗಿದ್ದಿತು. ಏವೇಳ್ವೆನು-ಏನೆಂದು ನುಡಿಯಲಿ. ॥೮॥

(ಈ ಪದ್ಯದಲ್ಲಿ ವಿಷಯೆಯ ಹಣೆಯಲ್ಲಿರುವ ತಿಲಕವನ್ನು ತಿಲಕವೃಕ್ಷಕ್ಕೂ, ಭುಜದಮೇಲಿರುವ ಮಕರಿಕಾಪತ್ರವನ್ನು ಹೊಂಗೆಯಮರಕ್ಕೂ, ಹಲ್ಲುಗಳನ್ನು ಮಲ್ಲಿಗೆ ಮೊಗ್ಗುಗಳಿಗೂ, ತುಟಿಯನ್ನು ಮಾವಿನ ಚಿಗುರಿಗೂ, ಮುಗುಳ್ನಗೆಯನ್ನು ಅರಳಿದ ಮಲ್ಲಿಗೆ ಹೂವಿಗೂ, ಆವಳ ಮೂಗನ್ನು ಸಂಪಿಗೆಯ ಮೊಗ್ಗಿಗೂ, ಮುಖವನ್ನು ಬೇವಿನ ಚಿಗುರಿಗೂ ಕವಿಯು ಹೋಲಿಸಿರುವನು.)

ಟೀ॥ ಉಲ್ಲಾಸ-ಹೊಳೆಯುತ್ತಲಿರುವ, ತಿಲಕಮುಂ_ತಿಲಕವೆಂಬ ಮರವು, ಉಲ್ಲಾಸ-ಅಗಲವಾದ, ತಿಲಕಮುಂ-ಹಣೆಯಲ್ಲಿರತಕ್ಕ ಕುಂಕುಮವು, ಸು_ಉತ್ತಮವಾದ, ತಮೂಲಪತ್ರಮುಂ-ಹೆಗಲಿನಮೇಲೆ ಬರೆದಿರತಕ್ಕ ಮಕರಿಕಾಪತ್ರವೂ, ಸು_ಚೆನ್ನಾಗಿರತಕ್ಕ, ತಮಾಲಪತ್ರಮುಂ-ಹೊಂಗೇ ಎಲೆಯೂ, ಮೊಲ್ಲೆಯ_ಮಲ್ಲಿಗೆಯ, ಮುಗುಳ್ಗಳುಂ_ಮೊಗ್ಗುಗಳೂ, ಚೂತ

---

ಕನ್ನೈದಿಲೆಯಂತೆಯೂ ಇರುವ ಕಣ್ಣುಗಳಿಂದಲೂ, ನಕ್ಷತ್ರದಂತಿರುವ ಕಣ್ಣುಗುಡ್ಡುಗಳಿಂದಲೂ, ಕಾರ್ಮುಗಿಲಿನಂತಿರುವ ಕಾಡಿಗೆಯನ್ನು ಕಣ್ಣಿಗೆ ಹಚ್ಚಿರುವುದರಿಂದಲೂ, ಅಂದವಾದ ರೆಪ್ಪೆಯನ್ನುಂಟಾಗಿರುವುದರಿಂದಲೂ ನೋಡುವುದಕ್ಕೆ ಅಲಂಕಾರವಾಗಿರತಕ್ಕ ಆ ವಿಷಯೆಯ ॥ ೮ ॥ ಹಣೆಯಲ್ಲಿರುವ ತಿಲಕಕ್ಕೆ ತಿಲಕ ವೃಕ್ಷವು ಹೋಲುಕೆಯಾಗಿರಲಿಲ್ಲವು. ಆಕೆಯ ಭುಜದಮೇಲಿರುವ ಮಕರಿಕಾ ಪತ್ರವು ತಮಾಲಪತ್ರವನ್ನು ಕೂಡ ನಿರಾಕರಿಸುತ್ತಲಿತ್ತು. ಸಂಪಗೆಯ ಮೊಗ್ಗಿನಂತಿರುವ ಮೂಗಿನಿಂದಲೂ ಮಲ್ಲಿಗೆಯ ಮೊಗ್ಗುಗಳನ್ನು ಹೋಲುವ ಹಲ್ಲುಗಳಿಂದಲೂ, ಮಾವಿನ ಚಿಗುರಿನಂತೆ ಕೆಂಪಾಗಿರುವ ತುಟಿಗಳಿಂದಲೂ, ಮಲ್ಲಿಕಾ ಕುಸುಮದಂತಹ ಮುಗುಳ್ನಗೆಯಿಂದಲೂ, ಬೇವಿನಮರದ ಎಳೆದಳಿರನ್ನು ನಿರಾಕರಿಸುವ ಮುಖಕಾಂತಿಯಿಂದಲೂ, ಚಂಚಲಾಪಾಂಗದಿಂದಲೂ ಕೂಡಿದ್ದಳು ॥೯॥ ಕಿವಿಗೆ ಇಟ್ಟಿರತಕ್ಕ ಒಡವೆಗಳೂ, ಕೈಗೆ ತೊಡಿಸಿರತಕ್ಕ ಕೈಕಡಗಗಳೂ ನೋಡುವುದಕ್ಕೆ

ರಮಣೀಯಕಾಂಚಿಪ್ರದೇಶದಿಂ ಭೂಭಾಗವೊಪ್ಪುವಂತೆ || ತವೆಮೆರೆವಸುಗ್ರೀವತಾರಾವಲಂಬದಿಂ | ದವಿಕಲಾಂಗದವಿರಾಜಿತ ದಿಂದಸನ್ನುತ | ಪ್ಲವಗಕುಲದುನ್ನತಿಯಬೆಳವಿಗೆಯಚೆಲ್ವಿಂದವಿಷಯೆಕಂಗೊಳಿಸಿರ್ದಳು ||೧೦|| ಲಾವಣ್ಯವಾರಿಪೂರಿತಮಾದ ನಾಭೀಸ | ರೋವರದತ್ರಿವಳಿತೆರೆಗಳನಡುವೆರಂಜಿಸುವಶೈವಾಲದಂತೆ | ಜಘನಾದ್ರಿಯಂವೆಡ್ಡೈಸಿದಮಲಕಾಂಚೀದಾಮದ || ದಾವಶಿಖಿಯಿಂದನಭಕೇಳ್ವಕಾರ್ಬೊಗೆಯಂತೆ | ಪೀವರಸ್ತನದುರ್ಗಕಂಗಜನಡರ್ದ್ದಿಳಿವ | ಠಾವಿನಂತಾಚಂದ್ರಮುಖಿಯತನುಮಧ್ಯ ದೊಳ್ಬಾಸೆಕಂಗೊಳಿಸಿರ್ದುದು ||೧೧|| ಬಿಡದೆಮುಕ್ತಾಹಾರದಿಂದಸಮರೂಪದಿಂ | ದೃಢತೆವೆತ್ತೂರ್ಧ್ವಮುಖಮಾಗಿಕರ್ಕಶವ್ರ

---

ಪ್ರವಾಳಮುಂ–ಮಾವಿನಮರದ ಎಳೆದಳಿರು, ಮಲ್ಲಿಗೆಯು–ಮಲ್ಲಿಗೇಗಿಡದ, ಅಲರ್ಗಳುಂ–ಲತೆಗಳೂ, ಸಂಪಿಗೆಯು–ಚಂಪಕವೃಕ್ಷದ, ಮೊಗ್ಗೆಯುಂ – ಮೊಗ್ಗು, ನಿಂಬದಳಮುಂ–ಬೇವಿನಮರದ ಚಿಗರೂ, ತೊಳಗುವ – ಹೊಳೆಯುತಕ್ಕ, ಸಲ್ಲಲಿತ – ಸುಂದರವಾದ, ಸಾಲಕಾನನದೊಳು–ಸಾಲಾಗಿರುವ ಕಾಂತಾರದೊಳಗೆ, ಇರ್ದಪವು–ಇದ್ದವು. ಪೊಸತು–ನೂತನವಾದದ್ದು, ಅಲ್ಲ–ಅಲ್ಲವು, ಎಂಬ–ಎನ್ನತಕ್ಕ, ತೆರನು–ಬಗೆಯು. ಆದುದು–ಆಗಿಬಿಟ್ಟಿತು. ಈಚೆಲ್ಲೆಗಂಗಳ–ಚಪಲನೇತ್ರಂಗಳಿಂ, ಚೆಲ್ವಿಕೆಯೊಳು–ಅಲಂಕಾರದಿಂದ, ಎಸೆವ–ಹೊಳೆಯುತ್ತಲಿರುವ, ಬಾಲಕಿಯ – ಬಾಲೆಯಾದ ವಿಷಯೆಯ, ನಗೆಮೊಗದ – ಮಂದಹಾಸಯುಕ್ತವಾದ ಮುಖದ, ಸೌಂದರವನು–ಅಲಂಕಾರವನ್ನು, ಎಂತು–ಯಾವ ರೀತಿಯಾಗಿ, ಬಣ್ಣಿಸುವೆನು–ವರ್ಣನೆಯಂಮಾಡಲಿ. ||೯||

ಟೀ|| ದಿವಿಜಪದಂ–ಅಂತರಿಕ್ಷವು, (ಶ್ರವಣಭೂಷಣದಿಂದ - ಶ್ರವಣವೆಂಬ) ನಕ್ಷತ್ರದ ಒಡಿವೆಯಿಂದ, ಹಸ್ತಾಭರಣ ದಿಂದ–ಹಸ್ತಾನಕ್ಷತ್ರವೆಂಬ ತೊಡಿಗೆಯಿಂದ, (ಅಂತರಿಕ್ಷದಪರವಾಗಿ) ಶ್ರವಣಭೂಷಣದಿಂ–ಕಿವಿಗೆ ಇಟ್ಟುಕೊಳ್ಳುವ, ಓಲೆ ಮೊದ ಲಾದವುಗಳಿಂದಲೂ, ಹಸ್ತಾಭರಣದಿಂದ–ಕೈಗೆ ಇಟ್ಟುಕೊಳ್ಳತಕ್ಕ ಕಡಗ ಮುಂತಾದವುಗಳಿಂದಲೂ, (ವಿಷಯೆಯ ಅಲಂಕಾರಪರ ವಾಗಿ) ಎಸೆವಂತೆ–ಹೊಳೆಯುವಹಾಗೆ, ಭೂಭಾಗಂ–ಭೂಮಿಯ ಭಾಗವು, ಕುಂತಳ–ಕುಂತಳನಗರದ, ಶ್ರೀ–ಐಶ್ವರ್ಯದ, ವೈಭವ ದಿಂದ ಏಳಿಗೆಯಿಂದ, ಕುಂತಳ–ಕೂದಲಿನ, ಶ್ರೀ–ಕಾಂತಿಯ–ವೈಭವದಿಂದ–ಅಲಂಕಾರದಿಂದ, ರಮಣೀಯ–ನೋಡುವುದಕ್ಕೆ ಚೆನ್ನಾಗಿರತಕ್ಕ, ಕಾಂಚೀ–ಕಂಚೀ ಎಂಬ ನಗರದ, ಪ್ರದೇಶದಿಂದ–ಸ್ಥಳದಿಂದ, ರಮಣೀಯ – ಅಲಂಕಾರವಾಗಿರುವ, ಕಾಂಚೀ–ಡಾಬಿನ, ಪ್ರದೇಶದಿಂದ-ಸೊಂಟದಲ್ಲಿರೋಣದರಿಂದ, ಒಪ್ಪುವಂತೆ–ಅಂದವಾಗಿರುವಂತೆ, ತವೆ–ಚೆನ್ನಾಗಿ, ಮೆರೆವ–ಹೊಳೆಯುತ್ತ, ಸುಗ್ರೀವನೆಂಬ ಕಪಿರಾಜನ, (ಒಳ್ಳೆ ಕಂಠದ) ತಾರಾ – ತಾರೆಯೆಂಬ ವಾಲಿಯ ಹೆಂಡತಿಯ, (ಕಣ್ಣು ಗುಡ್ಡುಗಳ) ಅವಲಂಬ ದಿಂದ–ಆಶ್ರಯದ ಮೂಲಕ, ಅವಿಕಲ–ವಿಶಾಲವಾದ ಮತ್ತು ಸ್ಫುಟನಾಗಿರತಕ್ಕ, ಅಂಗದ–ಭುಜಕೀರ್ತಿಯು, ಮತ್ತು ಅಂಗದ ನೆಂಬ ಕಪಿಯು, ವಿರಾಜಿತದಿಂದ–ಸೌಂದರ್ಯದಿಂದ, ವಿಷಯೆ – ವಿಷಯೆಯೆಂಬ ಬಾಲೆಯು, ಕಂಗೊಳಿಸುತ್ತಿರ್ದಳು–ಕಾಂತಿ ಯುಕ್ತಳಾಗಿದ್ದಳು. ||೧೦||

(ಈ ಪದ್ಯದಲ್ಲಿ ವಿಷಯೆಯ ಶರೀರದ ಸೌಂದರ್ಯವನ್ನು ಅಗ್ನಿಗೂ, ಆಕೆಯ ಕೇಶಪಾಶಂಗಳನ್ನು ಹೊಗೆಗೂ, ಸ್ತನ ಯುಗ್ಮವನ್ನು ಬೆಟ್ಟಗಳಿಗೂ, ಆಕೆಯ ಹೊಟ್ಟೆಯಮೇಲಿರುವ ಮೂರು ಗೆರೆಗಳನ್ನು ಬೆಟ್ಟದಿಂದಿಳಿಯುವ ಮೆಟ್ಟಿಲುಗಳಿಗೂ ಹೋಲಿಸಿ ಮದನ ಬಾಧೆಯ ಹೊಯ್ಲಿಗೆ ಗುರಿಯಾಗಿದ್ದಳೆಂಬುದನ್ನು ಕವಿಯು ಸೂಚಿಸುತ್ತಾನೆ.)

ಟೀ|| ಆಚಂದ್ರಮುಖಿಯ–ಇಂದುವಿನಂತೆ ಮುಖವುಳ್ಳ ಆ ವಿಷಯೆಯ, ತನು–ದೇಹದ, ಮಧ್ಯದೊಳ್–ಮಧ್ಯಭಾಗದ ಲ್ಲಿರತಕ್ಕ, ಬಾಸೆ–ವಳಿತ್ರಯವಾದರೊ,(ರೋಮರಾಜ) ಲಾವಣ್ಯ–ಸೌಂದರ್ಯವೆನ್ನತಕ್ಕ, ವಾರಿ–ನೀರಿನಿಂದ, ಪೂರಿತಮಾದ–ತುಂಬಿರ ತಕ್ಕ, ನಾಭಿ–ವಕ್ಷಸ್ಥಲವೆನ್ನತಕ್ಕ, ಸರೋವರದ–ಕಾಸಾರದ, ತ್ರಿವಳಿ–ಗೆರೆಗಳೆನ್ನುವ, ತೆರಗಳನಡುವೆ–ತರಂಗಗಳ ಮಧ್ಯಭಾಗದೊ ಳಗೆ, ರಂಜಿಸುವ–ಹೊಳೆಯುವ, ಶೈವಾಲದಂತೆ–ಪಾಚಿಯಹಾಗೂ, ಜಘನ–ಕಟಿಪಶ್ಚಾದ್ಭಾಗವೆನ್ನತಕ್ಕ. ಅದ್ರಿಯಂ–ಪರ್ವತವನ್ನು, ವೆಡ್ಡೈಸಿದ–ಎದುರಿಸಿದಂಥ, ಅಮಲ–ಪರಿಶುದ್ಧವಾದ, ಕಾಂಚೀದಾಮದ–ಚಿನ್ನದ ಡಾಬಿನ, ದಾವಶಿಖಿಯಿಂದ – ಕಾಡುಬೆಂಕಿ ಯಿಂದ, ನಭಕೆ–ಅಂತರಿಕ್ಷಕ್ಕೆ, ಏಳ್ವ–ಏಳತಕ್ಕ, ಕಾರ್ಬೊಗೆಯಂತೆ–ಕಪ್ಪಗಿರುವ ಹೊಗೆಯರೀತಿಯಾಗಿ, ಪೀವರ–ದಪ್ಪನಾದ ಸ್ತನದುರ್ಗಕೆ–ಕುಚಗಳೆಂಬ ಪರ್ವತಕ್ಕೆ, ಅಂಗಜನು–ಮನ್ಮಥನು, ಅಡರ್ದು–ಹತ್ತಿ, ಇಳಿವ – ಇಳಿದುಬರುವ, ಠಾವಿನಂತೆ–ಪ್ರದೇಶದ ಹಾಗೆ, ಕಂಗೊಳಿಸಿರ್ದುದು–ಕಾಂತಿಯುಕ್ತವಾಗಿತ್ತು. ||೧೧||

---

ಅಂದವಾಗಿ ಕಾಣುತ್ತಲಿದ್ದವು. ಉದ್ದವಾದ ಕೇಶಪಾಶಂಗಳಿಂದಲೂ, ಮನೋಹರವಾದ ಒಡ್ಯಾಣದಿಂದಲೂ, ಬಲಮುರಿ ಶಂಖ ದಂತಿರುವ ಕಂಠದಿಂದಲೂ, ಕಪ್ಪಗೂ ಮನೋಹರವಾಗಿಯೂ ಇರತಕ್ಕ ಕರೀಗುಡ್ಡುಗಳಿಂದ ಕೂಡಿದ ನಯನಂಗಳಿಂದಲೂ, ಭುಜಕ್ಕೆ ಇಟ್ಟುಕೊಂಡಿರುವ ಒಡವೆಗಳಿಂದಲೂ ನೋಡುವುದಕ್ಕೆ ರಮಣೀಯವಾಗಿ ಕಾಣುತ್ತಲಿದ್ದಳು. ||೧೦|| ಮನ್ಮಥನು ಇರುವ ಸ್ಥಳಕ್ಕೆ ಹೋಗಲು ಮಾಡಿರುವ ಮೆಟ್ಟಿಲುಗಳೆಂಬಂತಿರುವ ತ್ರಿವಳಿಗಳಿಂದ ಕೂಡಿದ್ದಳು.||೧೧|| ಮೇಲೆ ಬಿದ್ದಿರುವ ಮುತ್ತಿನ

ತ್ತ | ದೊಡಗೂಡಿಕುಚಯುಗಂಮೆರೆದುದುಕಠೋರತಪದಿಂದೆಸೆವಯೋಗಿಯಂತೆ || ಬಡವಾಗಿಬಲ್ಲಿದರನಡುವೆನವದಿರ್ದುಸೊಂ
ಪಡಗದೆವಿಜೃಂಭಿಸುವವೀರಕಂಠೀರವಕೆ | ಪಡಿಯಾಗಿಸತ್ಪುರುಷನಂದದೊಳ್ಕಾಣಿಸಿತುಮಧ್ಯಲತೆಮಂತ್ರಿಸುತೆಯ ||೧೨|| ತೊಳಗಿ
ಬೆಳಗುವಸದ್ಗುಣಾವಳಿಗಳೈಶ್ವರ್ಯ | ಲಲನೆಯಂಗೃಹಪತಿಯಮಂದಿರಕೆಸಂಗಡಿಸಿ | ಬೆಳವಿಗೆಯನತಿಶಯಂಮಾಳ್ಪಂತೆಸಿಂಗರಂ
ಗೈದುನೀಲಾಲಕೆಯರು || ಬಳಿಕಪೊನ್ನಂದಣದಮೇಲೆವೈವಾಹಮಂ | ಗಳಮಹೋತ್ಸವಕೆವಿರಚಿಸಿದಮಂಟಪದೆಡೆಗೆ| ನಳಿನ
ಪತ್ರಾಕ್ಷಿಯಂತಂದರೊಸಗೆಯೊಳಂದುವಿಭವದವಿಲಾಸದಿಂದ || ೧೩ || ಬಳಸಿದಸಮಸ್ತಜನಜಂಗುಳಿಯಕೈಸೊಡ | ರ್ಗಳ

---

ಟೀ|| ಬಿಡದೆ–ನಿಯಮಕ್ಕೆ ವಿರುದ್ಧವಿಲ್ಲದಂತೆ, (ಅನವರತವೂ) ಮುಕ್ತ-ಬಿಡಲ್ಪಟ್ಟ, ಆಹಾರದಿಂದ–ಅನ್ನಾದಿಗಳಿಂದ, ಮುಕ್ತಾಹಾರದಿಂದ-(ಮುತ್ತುಗಳ ಮಾಲಿಕೆಯಿಂದ), ಸಮರೂಪದಿಂ-ಸಕಲ ಜೀವರಾಶಿಗಳಲ್ಲಿಯೂ ಏಕರೀತಿಯಾದ ವಿಶ್ವಾಸದಿಂದ, ಸಮ–ಒಂದೇಬಗೆಯಾದ, ರೂಪದಿಂ–ಆಕಾರದಿಂದ, ಧೃಡತೆವೆತ್ತು–ಮನಸ್ಸನ್ನು ಸ್ಥಿರಮಾಡಿಕೊಂಡು, (ಗಟ್ಟಿಯಾಗಿದ್ದುಕೊಂಡು) ಊರ್ಧ್ವಮುಖವಾಗಿ – ಮೇಲಕ್ಕೆ ನೋಟವನ್ನುಂಟಾಗಿ, (ಮೇಲಕ್ಕೆತ್ತಲ್ಪಟ್ಟ ಮೊಲೆ ತೊಟ್ಟುಗಳನ್ನು ಹೊಂದಿ) ಕರ್ಕಶ-ಬಹು ಕಠಿಣವಾದ, ವೃತ್ತದ–ನಡವಳಿಕೆಯುಳ್ಳ, ಕರ್ಕಶವೃತ್ತದ–ಬಲವಾಗಿಯೂ, ದುಂಡಗೂ ಇರತಕ್ಕ ರೀತಿಯಿಂದ, ಒಡಗೂಡಿ–ಸೇರಿ, ಕುಚಯುಗಂ–ಸ್ತನಯುಗ್ಮವು, ಕಠೋರ–ಬಹು ಕಠಿಣವಾದ. ತಪದಿಂದ–ತಪಸ್ಸಿನಿಂದ, ಎಸೆವ-ಹೊಳೆಯುತ್ತಲಿರುವ, ಯೋಗಿಯಂತೆ–ಯತಿಯತೆರನಾಗಿ, ಎಸೆದುದು – ಕಾಂತಿಯುಕ್ತವಾಯಿತು. ಬಲ್ಲಿದರ - ಪ್ರಾಜ್ಞರಾದವರ, ನಡುವೆ–ಮಧ್ಯದಲ್ಲಿ, ನವೆದು-ಬಡವಾಗಿ, ಇರ್ದು–ಇದ್ದುಕೊಂಡು, ಸೊಂಪು–ದೇಹದ ಕೋಮಲತೆಯು, ಅಡಗದೆ–ತಗ್ಗದೆ, ವಿಜೃಂಭಿಸುವ–ಮೆರೆಯತಕ್ಕ, ವೀರ–ಪರಾಕ್ರಮದಿಂದ ಕೂಡಿದ, ಕಂಠೀರವಕೆ–ಮೃಗರಾಜನಿಗೆ, ಪಡಿಯಾಗಿ-ಹೋಲಿಕೆಯಾಗಿ, ಸತ್ಪುರುಷನ-ಉತ್ತಮನಾದ ಮನುಷ್ಯನ, ಅಂದದೊಳ್–ರೀತಿಯಾಗಿ, ಮಂತ್ರಿಸುತೆಯ–ದುಷ್ಟಬುದ್ಧಿಯ ಕುವರಿಯಾದ ವಿಷಯೆಯ, ಮಧ್ಯಲತೆ–ಬಳ್ಳಿಯಂತಿರುವ ಸೊಂಟವು, ಬಡವಾಗಿ – ಸಣ್ಣನಾಗಿ, ಕಾಣಿಸಿತು – ತೋರಬಂದಿತು, ಎಂದರೆ ಬಲವಾದ ಕುಚಯುಗ್ಮದಿಂದಲೂ, ಸಣ್ಣನಾದ ನಡುವಿನಿಂದಲೂ ಕೂಡಿದ್ದಳು. ||೧೨||

ಟೀ|| ನೀಳ-ಕಪ್ಪಾಗಿರತಕ್ಕ, ಅಳಕೆಯರು–ಮುಂಗುರುಳುಳ್ಳ ಸ್ತ್ರೀಯರು, ತೊಳಗಿಬೆಳಗುವ–ಹೆಚ್ಚಾದ ಕಾಂತಿಯುನ್ನೀವ, ಸದ್ಗುಣಾವಳಿಗಳು–ಉತ್ತಮವಾದ ಗುಣಗಳು ಮತ್ತು ಐಶ್ವರ್ಯ ಸಂಪತ್ತು ಇವುಗಳನ್ನುಂಟಾಗಿರತಕ್ಕ, ಲಲನೆಯಂ–ನಾರಿಯನ್ನು, ಸಂಗಡಿಸಿ–ಹೊಂದಿ, ಗೃಹಪತಿಯಮಂದಿರಕೆ–ಯಜಮಾನನ ಭವನಕ್ಕೆ, ಬೆಳವಿಗೆಯ–ಏಳಿಗೆಯ, ಅತಿಶಯಮಂ–ಹೆಚ್ಚಿಕೆಯನ್ನು, ಮಾಳ್ಪಂತೆ - ಮಾಡುವರೀತಿಯಾಗಿ, ಸಿಂಗರಂಗೈದು - ಶೃಂಗಾರವನ್ನು ಮಾಡಿ, ಬಳಿಕ – ಅನಂತರ, ಅಂದು ಆ ಸಮಯದಲ್ಲಿ, ಪೊನ್ನಂದಣದ–ಚಿನ್ನದ ವಿಮಾನದ, ಮೇಲೆ–ಮೇಲ್ಭಾಗದಲ್ಲಿ, ವೈವಾಹ–ಪರಿಣಯದ, ಮಂಗಳ-ಶುಭದಾಯಕವಾದ, ಮಹೋತ್ಸವಕೆ–ವೈಭವಕ್ಕಾಗಿ, ವಿರಚಿಸಿದ – ನೆರವೇರಿಸಿದ, ಮಂಟಪದೆಡೆಗೆ – ಮಂಟಪದ ಹತ್ತಿರಕ್ಕೆ, ಒಸಗೆಯೊಳು–ಮಂಗಳಕರವಾದ ವರ್ತಮಾನದಿಂದ, ವಿಭವದವಿಲಾಸದಿಂದ-ಅತಿಶಯವಾದ ವೈಭವದಿಂದ. ನಳಿನಪತ್ರಾಕ್ಷಿಯಂ – ಕಮಲದ ದಳದಂತೆ ವಿಶಾಲವಾದ ಕಣ್ಣುಗಳುಳ್ಳ ವಿಷಯೆಯನ್ನು, ತಂದರು–ಕರೆದುಕೊಂಡು ಬಂದರು.

ಅ|| ವಿ|| ಅಂದಣ (ತ್ಭ) ಆಂದೋಳಿಕ (ತ್ಸ) ಸಿಂಗರಿಸಿ (ತ್ಭ) ಶೃಂಗರಿಸಿ (ತ್ಸ) ||೧೩||

ಟೀ|| ಚಂದ್ರಹಾಸಂ–ಇಂದುಹಾಸನಾದರೊ, ಬಳಸಿದ–ಆವರಿಸಿಕೊಂಡಿರತಕ್ಕ, ಸಮಸ್ತ-ಎಲ್ಲಾ, ಜನ-ಪ್ರಜೆಗಳ, ಜಂಗುಳಿಯ–ಗುಂಪಿನ, ಕೈಸೊಡರ್ಗಳ–ಕೈಯಲ್ಲಿ ಹಿಡಿದಿರತಕ್ಕ ದೀಪಗಳ, ಸಾಲ – ಸಾಲಾಗಿರತಕ್ಕ, ಸಂದಣಿಯ – ಗುಂಪನ್ನು ಪಾಡುವ-ಶುಭವಾದ ಹಾಡುಗಳನ್ನು ಹೇಳುವ, ಪುರಂಧ್ರಿಯರ–ಸುವಾಸಿನಿಯರ, ಕಲಶಕನ್ನಡಿ-ಕಲಶಕನ್ನಡಿಯನ್ನು, ಪಿಡಿದ–ಹಿಡಿದಿರತಕ್ಕ, ಕನ್ನೆಯರ–ಬಾಲೆಯರ, ನಾನಾ-ತಂಡತಂಡವಾದ, ಸುವಸ್ತುಗಳ-ಉತ್ತಮವಾದ ಪದಾರ್ಥಗಳ, ವಿಸ್ತರಣದ–ಸಮುದಾಯದ. ತೊಳಗುವ – ಅಲಂಕಾರವಾಗಿರುವ, ಪೊಸಗೆಯ – ಮಂಗಳಕರವಾದ, ವಾದ್ಯ-ಭೇರಿ ಮೃದಂಗ ಮೊದಲಾದವುಗಳ,

---

ಸರಗಳಿಂದ ಕೂಡಿದ್ದಾಗಿಯೂ, ಕಠಿಣವಾಗಿಯೂ, ದುಂಡಗೂ ಇರುವ ಕುಚಯುಗ್ಮದಿಂದಲೂ, ಸಿಂಗದ ನಡುವನ್ನು ಹೋಲುವ ತೆಳ್ಳಡುವಿನಿಂದಲೂ, ಕೂಡಿದ್ದಳು. ||೧೨|| ಇಂತಹ ಸುಂದರಾಂಗಿಯಾದ ವಿಷಯೆಯನ್ನು ನಾನಾ ಬಗೆಯಾದ ಉಡಿಗೆ ತೊಡಿಗೆಗಳಿಂದಲಂಕರಿಸಿ, ಅತ್ಯುತ್ಸವದಿಂದ ಕೂಡಿದವರಾಗಿ ನವರತ್ನಖಚಿತವಾದ ವಿವಾಹ ಮಂಟಪಕ್ಕೆ ಕರೆದುಕೊಂಡುಬಂದರು ||೧೩|| ಆ ದಿವ್ಯವಾದ ವಿವಾಹಮಂಟಪವಾದರೊ, ಅನೇಕ ಜನಗಳ ಗುಂಪಿನಿಂದಲೂ, ಕೈಯ್ಯಲ್ಲಿ ಹಿಡಿದಿರತಕ್ಕ ದೀಪಗಳಿಂದಲೂ, ಮುತ್ತೈದೆಯರು ಹೇಳತಕ್ಕ ಮಂಗಳಕರವಾದ ಹಾಡುಗಳ ಸೊಬಗಿನಿಂದಲೂ, ಕಲಶಕನ್ನಡಿಯಂ ಕರದೊಳ್ಪಿಡಿದಿರುವ ಕನ್ನೆಯರಿಂದಲೂ, ಅನೇಕವಾದ ವಾದ್ಯವಿಶೇಷಂಗಳಿಂದಲೂ ಕೂಡಿ ಮನೋಹರವಾಗಿತ್ತು. ಇಂತಹ ಮನೋಹರವಾದ ದಿವ್ಯ ಮಂಟ

ಸಾಲಸಂದಣಿಯುಪಾಡುವಪುರಂಧ್ರಿಯರ | ಕಲಶಗನ್ನಡಿವಿಡಿದಕನ್ನೆಯರನಾನಾಸುವಸ್ತುಗಳವಿಸ್ತರಣದ || ತೊಳಗುವಸಗೆಯ ವಾದ್ಯಸಂಕುಲದಬಹುಫಲಾ | ವಳಿಗಳವಿಡಾಯದಿಂದೈತಂದುದಂಡಿಗೆಯ | ನಿಳಿದನಾರತಿಗಳನಿವಾಳಿಯಿಂಚಂದ್ರಹಾಸಂ ಭದ್ರಮಂಟಪದೊಳು || ೧೪ || ವರತಾರಕಾಕ್ಷಿಯೆಂಬಪ್ರಧಾನನಪತ್ನಿ | ಚರಣಮಂಪ್ರಕ್ಷಾಳನಂಗೈದುಮದನನಾ | ದರಿಸಿ ಮಧುಪರ್ಕಮಂಮಾಡಿಕನ್ಯಾವರಣದೋಳ್ಕುಲಪರಂಪರೆಯನು || ಒರೆಯೆನಲ್ಕಶಿಹಾಸನೆನಗೆವಾಮನಗೋತ್ರ| ಮರವಿಂದನಾಭಂ ಪಿತಂಹರಿಪಿತಾಮಹಂ | ಮುರಹರಂಪ್ರಪಿತಾಮಹಂಕುಳಿಂದನುಮವನಸತಿಯುಂಗುರುಗಳೆಂದನು ||೧೫|| ಅಲ್ಪಭಾಷಿತಮಲ್ಲದಿಹ ಚಂದ್ರಹಾಸನಸು | ಜಲ್ಪಿತಂಸೊಗಸೆಮದನಂಮುದದೊಳಾಗಸಂ | ಕಲ್ಪಿತನಿರೀಕ್ಷಣೆಗೆಸುಮುಹೂರ್ತಮಂಕೇಳ್ದುತೆರೆದೆಗಿಸಿ ಭೂದಿವಿಜರ || ನಲ್ಪರಕೆವೆತ್ತುಜೀರಿಗೆಬೆಲ್ಲದೊಪ್ಪಮೆಸೆ | ಯಲ್ಪನದಮೆಟ್ಟಕ್ಕಿಸುತ್ತನೂಲ್ಮೆರೆಯೆಫಣಿ | ತಲ್ಪನಿದಿರೋಳ್ತದರ್ಪಿ

---

ಕುಲದ-ಗುಂಪಿನ, ಬಹು–ಅನೇಕ ಪ್ರಕಾರವಾದ, ಫಲಾವಳಿಗಳ – ಹಣ್ಣಿನ ಸಮುದಾಯದ, ವಿಡಾಯದಿಂದ – ಗುಂಪಿನಿಂದ, ಐತಂದು–ಬಂದವರಾಗಿ, ಭದ್ರಮಂಟಪದೊಳು–ಮದುವೆಯ ಮಂಟಪದೊಳಗೆ, ಆರತಿಗಳನಿವಾಳಿಯಿಂ – ಆರತಿಗಳನ್ನೆತ್ತುವುದ ರಿಂದ, ದಂಡಿಗೆಯನು–ವಿಮಾನದಿಂದ, ಇಳಿದನು–ಇಳಿದವನಾದನು. ||೧೪||

ಟೀ|| ವರ – ಮೇಲ್ಮೆಯನ್ನು ಹೊಂದಿದ, ತಾರಕಾಕ್ಷಿಯೆನ್ನತಕ್ಕ, ಪ್ರಧಾನನಪತ್ನಿ – ಸಚಿವನಾದ ದುಷ್ಟಬುದ್ಧಿಯ ಸತಿಯು, ಚರಣಮಂ–ಚಂದ್ರಹಾಸನ ಕಾಲುಗಳನ್ನು, ಪ್ರಕ್ಷಾಳನಂಗೈದು–ತೊಳೆದು, ಮದನನು-ಮದನನಾದರೊ, ಆದರಿಸಿ– ಸತ್ಕರಿಸಿ, ಮಧುಪರ್ಕಮಂಮಾಡಿ–ಮಧುಪರ್ಕದ್ರವ್ಯವನ್ನು ರಚಿಸಿ, ಕನ್ಯಾವರಣದೊಳು–ಬಾಲೆಯನ್ನು ಪರಿಗ್ರಹಿಸುವ ಕಾಲದಲ್ಲಿ, ಕುಲಪರಂಪರೆಯನು–ವಂಶಾವಳಿಯನ್ನು, ಒರೆ–ತಿಳಿಸು, ಎನಲ್-ಎಂದು ಮದನನು ಕೇಳಲಾಗಿ, ಶಶಿಹಾಸನು-ಇಂದುಹಾಸನಾ ದರೊ, ಎನಗೆ–ನನಿಗಾದರೊ, ವಾಮನಗೋತ್ರಂ–ವಾಮನಗೋತ್ರಕ್ಕೆ ಸೇರಿದವನು, ಅರವಿಂದನಾಭಂ–ಕಂಜನಾಭನೆ, ಪಿತಂ– ತಂದೆಯು, ಪಿತಾಮಹಂ–ತಾತನಾದರೊ, ಹರಿ–ವಿಷ್ಣುವು, ಪ್ರಪಿತಾಮಹಂ – ಮುತ್ತಾತನು, ಮುರಹರಂ – ಮುರಾಂತಕನು, ಗುರುಗಳು–ನನ್ನನ್ನು ಪಾಲಿಸಿದವರಾದರೊ, ಕುಳಿಂದನೂ – ಮೇಧಾವಿಯೂ, ಅವನ–ಆ ಮೇಧಾವಿಯ, ಸತಿಯುಂ – ಹೆಂಡತಿ ಯಾದ ಮೇಧಾವಿನಿಯೂ ಆಗಿರುವರು, ಎಂದನು–ಎಂಬುದಾಗಿ ಉತ್ತರ ಕೊಟ್ಟನು. ||೧೫||

ಟೀ|| ಅಲ್ಪಭಾಷಿತಂ–ಸಾಧಾರಣವಾದ ಮಾತು, ಅಲ್ಲದಿಹ – ಅಲ್ಲದಿರತಕ್ಕ, ಚಂದ್ರಹಾಸನ – ಇಂದುಹಾಸನು, ಸುಜ ಲ್ಪಿತಂ–ಸವಿನುಡಿಯು, ಸೊಗಸೆ–ಯೋಗ್ಯವಾಗಿರಲು, ಮದನಂ–ಮದನನಾದರೊ, ಮುದದೊಳು–ಆನಂದದಿಂದ, ಆಗ–ಆ ಕಾಲ ದಲ್ಲಿ, ಸಂಕಲ್ಪಿತ–ನಿಷ್ಕರ್ಷಿಸಿರತಕ್ಕ, ನಿರೀಕ್ಷಣೆಗೆ–ಲಗ್ನವನ್ನು ಎದುರು ನೋಡುವುದಕ್ಕೆ, ಸುಮುಹೂರ್ತಮಂ–ಒಳ್ಳೆ ಲಗ್ನವನ್ನು, ಕೇಳ್ದು–ಕೇಳಿ, ತೆರೆತೆಗಿಸಿ-ತೆರೆಯನ್ನು ತೆಗೆಯುವಂತೆ ಮಾಡಿ, ಭೂದಿವಿಜರ–ವಿಪ್ರರ, ನಲ್-ಶ್ರೇಷ್ಠವಾದ, ಪರಕೆವೆತ್ತು–ಆಶಿ ರ್ವಚನವಂ ಕೈಕೊಂಡು, ಜೀರಿಗೆಬೆಲ್ಲದ-ಜೀರಿಕೆಬೆಲ್ಲ ಇವುಗಳ, ಒಪ್ಪಂ-ವಧೂವರರು–ಇಡತಕ್ಕದ್ದು, ಎಸೆಯಲ್–ಚನ್ನಾಗಿ ಕಾಣಲು, ಪದದ-ಹೆಜ್ಜೆಯು, ಮೆಟ್ಟಕ್ಕಿ–ಮೆಟ್ಟತಕ್ಕ ಅಕ್ಷತೆಯು, ಸುತ್ತ–ನಾಲ್ಕು ಕಡೆಯೂ, ನೂಲ್–ಸೂತ್ರವು, ಮೆರೆಯೆ–ಕಂಗೊಳಿಸುತ್ತ ಲಿರಲಾಗಿ, ಫಣಿತಲ್ಪನ–ಶ್ರೀಮನ್ನಾರಾಯಣನ, (ಶೇಷಚಕ್ರದ) ಸಾಲಗ್ರಾಮದ–ಸಾಲಗ್ರಾಮ ಶಿಲೆಯ, ಇದಿರೊಳ್–ಮುಂದು ಗಡೆ, ತದರ್ಪಿತಂ – ಶ್ರೀಮನ್ನಾರಾಯಣನಿಗೆ ಸಮರ್ಪಕವಾಗತಕ್ಕದ್ದು, ಆಗಲಿ-ಆಗಬೇಕು, ಎಂದು–ಎಂಬುದಾಗಿ, ಅವನಕ್ಕೆಗೆ– ಆ ಇಂದುಹಾಸನ ಹಸ್ತಪ್ರದೇಶಕ್ಕೆ, ಧಾರೆಯನು-ತುಲಸೀದಳ, ಸಾಲಗ್ರಾಮ ಶಿಲೆ ಇವುಗಳಿಂದ ಕೂಡಿದ ಉದಕವನ್ನು, ಎರ ದರು–ಸುರಿದವರಾದರು. ||೧೬||

---

ಪಕ್ಕೆ ಚಂದ್ರಹಾಸನನ್ನು ಕರೆದುಕೊಂಡು ಬಂದರು. ||೧೪|| ಅಲ್ಲಿ ದುಷ್ಟಬುದ್ಧಿಯ ಹೆಂಡತಿಯಾದ ತಾರಕಾಕ್ಷಿಯು ಚಂದ್ರ ಹಾಸನ ಕಾಲುಗಳನ್ನು ತೊಳೆದಳು, ಮದನನು ಇಂದುಹಾಸನನ್ನು ಆದರದಿಂದ ದಿವ್ಯ ಪೀಠದಲ್ಲಿ ಕುಳ್ಳಿರಿಸಿದನು, ಮಧುಪರ್ಕವೇ ಮೊದಲಾದ ಕಾರ್ಯಗಳೆಲ್ಲಾ ನಡೆದು ಕನ್ಯಾವರಣ ಕಾಲದಲ್ಲಿ ಪ್ರವರೋಚ್ಚಾರಣವನ್ನು ಕೇಳಿದರು, ಆಗ ಇಂದುಹಾಸನಾದರೊ, ನಾನು ವಾಮನ ಗೋತ್ರದವನು, ಪದ್ಮನಾಭನಾದ ಶ್ರೀ ಮಹಾವಿಷ್ಣುವೇ ನಮ್ಮ ತಂದೆಯು, ಪಾಪಗಳನ್ನು ದೂರಮಾಡುವ ಹರಿಯೇ ನಮ್ಮ ತಾತನು, ಮುರಾಂತಕನಾದ ಕೃಷ್ಣಸ್ವಾಮಿಯೇ ನಮ್ಮ ಮುತ್ತಾತನಾಗಬೇಕು, ಚಂದನಾವತಿಯ ಅರಸ ನಾದ ಕುಳಿಂದನೂ ಅವನ ರಾಣಿಯಾದ ಮೇಧಾವಿನಿಯೂ ನನ್ನ ಸಾಕು ತಂದೆ ತಾಯಿಗಳಾಗಿದಾರೆಂದು ನುಡಿದನು. ||೧೫|| ಇಂತಹ ಅಸಾಧಾರಣವಾದ ಇಂದುಹಾಸನ ನುಡಿಗಳನ್ನಾಲಿಸಿ ಸಂತುಷ್ಟನಾದ ಮದನನು ಗೋತ್ರ ಪ್ರವರಗಳನ್ನು ಹೇಳಿದ ಬಳಿಕ ಕನ್ಯಾನಿರೀಕ್ಷಣೆಗೆ ಸರಿಯಾದ ಮುಹೂರ್ತವನ್ನು ಕೇಳಿ, ತೆರೆಯನ್ನು ತೆರೆದರು. ವಧೂವರರು ಜೀರಿಗೆ ಬೆಲ್ಲವನ್ನು ಪರ ಸ್ಪರ ಹಾಕಿದರು, ಅನಂತರ ಅಕ್ಷತಾರೋಪಣೆಯೂ ಕಂಕಣ ಬಂಧನೆಯೂ ನಡೆಯಿತು, ಆ ತರುವಾಯ ಮದನನೂ ತಾರಕಾ

ತಮಾಗಲೆಂದವನಕೈಗೆಧಾರೆಯನೆರದರು ||೧೬|| ಮೊರೆವಮುರಿದುಂಬಿಗಳಮಾಲೆಯಂತಾಳ್ದನವ|ಪರಿಮಳದಮಂದಾರಮಾಲೆಯಂ ವಿಷಯೆಸೌಂ | ದರಶಿರೀಷಮಾಲೆಯಂಪೋಲ್ವ ನಳಿತೋಳುಗಳನೆತ್ತಿ ಕಂಧರದೊಳಿಡಲು || ಭರಿತಲಾವಣ್ಯಸಾಕಾರದಿಂಮಂಗ ಳಾ | ಭರಣಂಗಳೆಸೆವಲಂಕಾರದಿಂಪಾರ್ವರು | ಚ್ಚರಿಸಗ್ನಿಹೋತ್ರಪ್ರಕಾರದಿಂ ವಧುವಂಕುಳಿಂದಜಂಕೈವಿಡಿದನು ||೧೭|| ಮುಂ ನೆವಿರಚಿಸಿದವೇದಿಯೊಳೆಸೆವಹಸೆಗೆನಡೆ | ತಂದುಪಾಣಿಗ್ರಹಣಸಪ್ತಪದಲಾಜಾಶ್ಮ | ದಿಂದಹೋಮದೊಳಗ್ನಿಯಂಬೆಳಗಿವಿಪ್ರರಾ ಶೀರ್ವಾದಮಂಮಾಡಲು || ಬಂದುತಿಲಕವನಿಟ್ಟುಪತ್ರಫಲಮಂಕೊಟ್ಟು| ಪೊಂದಳಿಗೆವಿಡಿದಾರತಿಯನೆತ್ತಲೈದೆಯು | ರ್ಕಂದರ್ಪ ರತಿಗಳವಿವಾಹಮೆನೆಕಂಗೊಳಿಸಿತಾದಂಪತಿಗಳಮದುವೆ||೧೮||ತತ್ಕಾಲದೋಳ್ಮದನನಾಚಂದ್ರಹಾಸನಂ | ಸತ್ಕರಿಸಿಬಹಳುವಳಿಗೆಬಹ

---

ಟೀ|| ಮೊರೆವ-ಧ್ವನಿಯಂಗೈವ, ಮುರಿದುಂಬಿಗಳ-ಎಳೆದಾದ ಭೃಂಗಂಗಳ, ಮಾಲೆಯಂ-ಸಾಲನ್ನು, ತಾಳ್ದ-ಪಡೆದಿ ರತಕ್ಕ, ನವ-ನೂತನವಾದ, ಪರಿಮಳದ-ಸುರಭಿಯುಳ್ಳ, ಮಂದಾರಮಾಲೆಯಂ-ಮಂದಾರ ಕುಸುಮಂಗಳಿಂ ವಿರಚಿಸಿದ ಹಾರ ವನ್ನು, ಸೌಂದರ-ಅಂದವಾದ, ಶಿರೀಷಮಾಲೆಯಂ-ಶಿರೀಷ ಕುಸುಮಂಗಳ ಸಾಲನ್ನು (ಬಿಂದಿಗೆ ಹೂವಿನ ಸಾಲನ್ನು) ಪೋಲ್ವ- ಹೋಲತಕ್ಕ, ನಳ-ತಾವರೆಯ ದಂಟನಂತಿರತಕ್ಕ, ತೋಳುಗಳನು-ಕೈಗಳನ್ನು, ಎತ್ತಿ-ಮೇಲಕ್ಕೆತ್ತಿದವಳಾಗಿ, ಕಂಧರದೊಳು- ಇಂದುಹಾಸನ ಕಂಠದಲ್ಲಿ, ಇಡಲು-ಹಾಕಲಾಗಿ, ಭರಿತ-ತುಂಬಿರುವ, ಲಾವಣ್ಯ-ಸೌಂದರ್ಯದ, ಸಾಕಾರದಿಂ-ಆಕೃತಿಯಿಂದಲೂ, ಮಂಗಳ-ಶುಭದಾಯಕಂಗಳಿಂದ, ಆಭರಣಗಳಾದ-ತೊಡಿಗೆಗಳಿಂದ, ಎಸೆವ-ಹೊಳೆಯುವ, ಅಲಂಕಾರದಿಂ-ಅಂದದಿಂದಲೂ, ಪಾರ್ವರು-ಭೂಸುರರು, ಉಚ್ಚರಿಸ-ನುಡಿಯುತ್ತಲಿರತಕ್ಕ, ಅಗ್ನಿಹೋತ್ರಪ್ರಕಾರದಿಂ-ಅಗ್ನಿಸಾಕ್ಷಿಯಾಗಿಯೂ, ಕುಳಿಂದಜ- ಇಂದು ಹಾಸನು, ವಧುವಂ - ಮದುವೆಗೆ ಸಿದ್ಧಳಾಗಿರತಕ್ಕ ವಿಷಯೆಂಬ ತರುಣಿಯನ್ನು, ಕೈವಿಡಿದನು - ಮದುವೆ ಮಾಡಿ ಕೊಂಡನು. || ೧೭ ||

ಟೀ|| ಮುಂದೆ-ಮೊದಲೇ, ವಿರಚಿಸಿದ-ಎಸಗಿದ್ದ, ವೇದಿಯೊಳು-ಹಸೆಜಗಲಿಯ ಮೇಲ್ಗಡೆ, ಎಸೆವ-ಹೊಳೆಯುವ, ಲಾಜ-ಲಾಜಾಹೋಮವು (ಅರಳನ್ನು ಮಂತ್ರ ಪುರಸ್ಸರವಾಗಿ ಅಗ್ನಿಯಲ್ಲಿ ಹಾಕುವುದು) ಅಶ್ಮದಿಂದ-ಅಶ್ಮನಾಮಕವಾದ ಕಾರ್ಯ ದಿಂದ, ಹೋಮದೊಳು-ಹೋಮದ ಕಾರ್ಯದಿಂದ, ಅಗ್ನಿಯಕುರಿತು - ಯಜ್ಞೇಶ್ವರನಿಗೆ, ಬೆಳಗಿ-ಆರತಿಮಾಡಿ, ವಿಪ್ರರು- ಭೂಸುರರು, ಆಶೀರ್ವಾದಮಂ ಮಾಡಲು-ಆಶೀರ್ವಚನವನ್ನು ನುಡಿಯಲು, ಬಂದು-ಬಂದವನಾಗಿ, ತಿಲಕವನು-ಹಣೆಗೆ ಅಲಂ ಕಾರವಾದದ್ದನ್ನು, ಇಟ್ಟು-ಇಟ್ಟವನಾಗಿ, ಪತ್ರಫಲಮಂ-ಫಲತಾಂಬೂಲವನ್ನು, ಕೊಟ್ಟು-ಅವರೀರ್ವರ ಕೈಗೆ ಕೊಟ್ಟು, ಐದೆ ಯರ್-ಮುತ್ತೈದೆಯರು, ಪೊಂದಳಿಗೆ ಪಿಡಿದು-ಚಿನ್ನದ ತಟ್ಟೆಯನ್ನು ಹಿಡಿದುಕೊಂಡು, ಆರತಿಯನು ಎತ್ತಲು-ಆರತಿಯನ್ನು ಬೆಳಗಿದಾಗ, ಆದಂಪತಿಗಳಮದುವೆ-ಆ ಇಂದುಹಾಸ ವಿಷಯೆಯರ ಲಗ್ನವು, ಕಂದರ್ಪರತಿಗಳ-ಕಾಮ ರತಿದೇವಿಯರ, ವಿವಾ ಹಂ-ಕಲ್ಯಾಣವು, ಎನೆ-ಎಂಬಂತೆ, ಕಂಗೊಳಿಸಿತು-ವಿಜೃಂಭಣೆಯಿಂದ ಕೂಡಿತ್ತು || ೧೮ ||

ಟೀ|| ತತ್ಕಾಲದೊಳ್-ವಿಷಯೆಗೂ ಚಂದ್ರಹಾಸನಿಗೂ ಮದುವೆಯು ನಡೆದ ವೇಳೆಯೊಳಗೆ, ಮದನಂ-ಮದನನೆ ನ್ನುವ ದುಷ್ಟಬುದ್ಧಿಯ ಕುವರನು, ಚಂದ್ರಹಾಸನಂ-ಆ ಇಂದುಹಾಸನನ್ನು, ಸತ್ಕರಿಸಿ- ಆದರಿಸಿದವನಾಗಿ, ಬಹಳ-ಅಧಿಕ ವಾದ, ಗೋ-ಧೇನುಗಳನ್ನೂ, ಮಹಿಷಿ-ಎಮ್ಮೆಗಳನ್ನೂ, ಬಲವರ್-ಬಲವಾಗಿರತಕ್ಕ, ಕರಿ-ಗಜಗಳನ್ನೂ, ಅಶ್ವರಥ ಶಯ್ಯಾಸ ನಂಗಳಂ-ಕುದುರೆ, ರಥ, ಹಾಸಿಗೆ, ಕೂತುಕೊಳ್ಳುವ ಪದಾರ್ಥಗಳೆ ಮೊದಲಾದವನ್ನೂ, ವಳಿತ-ಆವರಿಸಿರುವ, ವಾಹನಪದವನು- ಅಶ್ವರಥಗಳನ್ನು ನಿಲ್ಲಿಸಲನುಕೂಲವಾದೆಡೆಗಳನ್ನೂ, ಉತ್ಕರ್ಷ-ಶ್ರೇಷ್ಠವಾದ, ಪರಿಮಳ-ಸುರಭಿ ವಿಶಿಷ್ಟಮಾದ, ದ್ರವ್ಯ-ಪದಾ

---

ಕ್ಷಿಯೂ ಸಹ ವಿಷಯೆಯನ್ನು ಇಂದುಹಾಸನಿಗೆ ಕೃಷ್ಣಾರ್ಪಿತವಾಗಲೆಂದು ಧಾರೆಯೆರೆದರು. || ೧೬ || ಸುಕುಮಾರಿಯಾದ ವಿಷಯೆಯೆಂಬ ಕನ್ಯಾಮಣಿಯು ಶಿರೀಷ ಕುಸುಮದಂತೆ ಅತ್ಯಂತ ಮೃದುವಾದ ತನ್ನ ಕೈಗಳಿಂದ ಸುವಾಸನೆಯಂ ಬೀರುತ್ತಲಿ ರುವ ಮಂದಾರ ಮಾಲೆಯನ್ನೆತ್ತಿಕೊಂಡು ಇಂದುವನ್ನುಹೋಲುತ್ತಲಿರುವ ಇಂದುಹಾಸನ ಕಂಠಕ್ಕೆ ಹಾಕಿದಳು. ಆಗ ಬ್ರಾಹ್ಮ ಣರೆಲ್ಲಾ ಚಂದ್ರಹಾಸ ವಿಷೆಯರಿಗೆ ಆಶೀರ್ವಾದವನ್ನು ಮಾಡಿದರು. ಸುಂದರಾಕಾರದಿಂದಲೂ, ದಿವ್ಯಾಭರಣಗಳಿಂದಲೂ, ಒಪ್ಪುತ್ತಲಿರುವ ವಿಷಯೆಯನ್ನು ಇಂದುಹಾಸನು ಅಗ್ನಿಸಾಕ್ಷಿಯಾಗಿ ಪಾಣಿಗ್ರಹಣವಂ ಮಾಡಿದನು. ||೧೭|| ಸಪ್ತಪದಿ, ಲಾಜಾ ಹೋಮ ಮೊದಲಾದವೆಲ್ಲಾ ನೆರವೇರಿದವು. ಬ್ರಾಹ್ಮಣರೆಲ್ಲಾ ಆಶೀರ್ವಾದವನ್ನು ಮಾಡಿದರು, ಮುತ್ತೈದೆಯರು ಚಂದ್ರಹಾಸ ನಿಗೂ ವಿಷಯೆಗೂ ಕುಂಕುಮವನ್ನು ಹಣೆಗಿಟ್ಟು, ಕೈಗೆ ತಾಂಬೂಲವನ್ನುಕೊಟ್ಟು ಹಾಡುಗಳನ್ನು ಹೇಳುತ್ತಿರುವ ಚಂದವನ್ನು ನೋಡಿದರೆ ಮನ್ಮಥ ರತೀದೇವಿಯರ ಮದುವೆಯೋ ಎಂಬಂತೆ ಮೆರೆಯುತ್ತಲಿತ್ತು. ||೧೮|| ಈ ರೀತಿಯಲ್ಲಿ ಅತಿ ಸಂಭ್ರಮ ದಿಂದ ವಿವಾಹ ಮಹೋತ್ಸವವು ನಡೆದಮೇಲೆ ಮದನನು, ಅನೇಕವಾದ ಗೋವುಗಳನ್ನೂ, ಮಹಿಷಿಗಳನ್ನೂ, ಆನೆ, ಕುದುರೆ

ಳಗೋಮುಹಿಸಿಬಲ | ವತ್ಕರಿತುರಂಗರಥಶಯ್ಯಾಸನಂಗಳಂಪಳಿತವಾಹನಪದನನು || ಉತ್ಕರ್ಷಪರಿಮಳದ್ರವ್ಯಸಂಕುಲಮುಂಚ | ಮತ್ಕಾರದಬಲೆಯರನಂಬರಾಭರಣವಿಲ | ಸತ್ಕಂಠಮಾಲೆಗಳನಿತ್ತನೆಂದುಬಳಸಿತೀರದಸುವಸ್ತುಗಳನು ||೧೯|| ಉರ್ವೀಶ್ವರನ ಪುರೋಹಿತಗಾಲವಂಗೆತನ | ಗುರ್ವಬಾಂಧವಪುತ್ರಮಿತ್ರರ್ಗೆನೆರೆದಭೂ | ಗೀರ್ವಾಣರೆಲ್ಲರ್ಗೆಕವಿಗಮುಕಿನಟವಿದೂಷಕವಂದಿಗಾಯಕರ್ಗೆ | ಸರ್ವಜನಕವರವರತರವರಿತುಸತ್ಕರಿಸಿ | ತರ್ವಾಯದೊಳಗಣಿತದ್ರವ್ಯವಂಪೊತ್ತುಬೇ | ಸರ್ವಿನಿಂಕೊಟ್ಟನುತ್ಸವದಿಂದಯಾಚಕರ್ಗಾಗದುರ್ಮತಿಯಸೂನು ||೨೦|| ತದನಂತರದೊಳನಿಬರೆಲ್ಲರಂಕಳುಹಿನಿಜ | ಸದನದಿಸಮಗ್ರವೈಭವದೊಳಿರಲಂದಿರು| ಳ್ಮದನಂಸಬಾಂಧವರ್ವೆರಸಿದಂಪತಿಗಳಸಹಭೋಜನಂಮಾಡಿಸಿ|| ಇದನಂಗತಾತನಂಪೂಜಿಸಿದಫಲದೊಳಾ| ದುದನಂತ

---

ರ್ಥಗಳ, ಸಂಕುಲಮಂ-ಸಮುದಾಯುವನ್ನು, ಚಮತ್ಕಾರದ-ಚಾತುರ್ಯದಿಂದ ಕೂಡಿರುವ, ಅಬಲೆಯರನು-ನಾರಿಯರನ್ನೂ, ಅಂಬರ-ಪೀತಾಂಬರವೇ ಮೊದಲಾದವನ್ನೂ, ಆಭರಣ-ತೊಡಿಗೆಗಳನ್ನೂ, ವಿಲಸತ್-ಕಾಂತಿಯುಕ್ತವಾದ, ಕಂಠಮಾಲೆಗಳನು-ಕಂಠೀಹಾರಗಳನ್ನೂ, ಬಳಸಿ-ಅನುಭವಿಸಿಕೊಂಡು, ಎಂದುಂ-ಯಾವಕಾಲಕ್ಕೂ, ತೀರದ-ಪೂರೈಸದಿರತಕ್ಕ, ಸುವಸ್ತುಗಳನು-ಶ್ರೇಷ್ಠವಾದ ಪುರುಳ್ಗಳನ್ನೂ, ಬಳುವಳಿಗೆ-ಮರ್ಯಾದಾ ದ್ರವ್ಯಕ್ಕಾಗಿ, ಇತ್ತನು-ಕೊಟ್ಟವನಾದನು || ೧೯ ||

ಟೀ|| ದುರ್ಮತಿಯಸೂನು-ದುರಾತ್ಮನಾದ ದುಷ್ಟಬುದ್ಧಿಯ ತನುಜನಾದ ಮದನನು, ಉರ್ವೀಶ್ವರನ-ಕುಂತಳ ರಾಜನ, ಪುರೋಹಿತ-ಹವ್ಯಕವ್ಯಾದಿಗಳನ್ನು ಮಾಡಿಸತಕ್ಕ, ಗಾಲವಂಗೆ-ಗಾಲವ ಮುನಿಗೂ, ತನಗೆ-ತನ್ನಕಡೆಯ, ಉರ್ವ-ಹೆಚ್ಚಾದ, ಬಾಂಧವ-ನೆಂಟರುಗಳಿಗೂ, ಪುತ್ರ-ಮಕ್ಕಳಿಗೂ, ಮಿತ್ರರ್ಗೆ-ಪ್ರೀತಿಪಾತ್ರರಾದವರಿಗೂ, ನೆರೆದ-ಅಲ್ಲಿ ಸೇರಿರತಕ್ಕ, ಭೂಗೀರ್ವಾಣರೆಲ್ಲರ್ಗೆ-ಭೂಸುರರಿಗೂ, ಕವಿ-ಗ್ರಂಥಗಳನ್ನುರಚಿಸುವರು, ಗಮುಕಿ-ತರ್ಕಶಾಸ್ತ್ರಜ್ಞರು,(ಓದುಗ) ನಟ-ನರ್ತಕರು, ವಿದೂಷಕ-ನಕಲಿಯವರು, ವಂದಿ-ಹೊಗಳತಕ್ಕವರು, ಗಾಯಕರ್ಗೆ-ಗಾನಮಾಡುವರಿಗೆ, ಸರ್ವಜನಕೆ-ಸಮಸ್ತರಿಗೂ, ಅವರವರ-ಆಯಾಯ ಪ್ರಜೆಗಳ, ತರವ-ಮರ್ಯಾದೆಯನ್ನು, ಅರಿತು-ತಿಳಿದವನಾಗಿ, ಸತ್ಕರಿಸಿ-ಮನ್ನಿಸಿ, ತರ್ವಾಯದೊಳು-ಇವರನ್ನೆಲ್ಲಾ ಉಪಚರಿಸಿದ್ದಾದನಂತರ, ಅಗಣಿತ-ಲೆಕ್ಕವಿಲ್ಲದಷ್ಟು, ದ್ರವ್ಯಮಂ-ಹಣವನ್ನು, ಪೊತ್ತು-ಹೊತ್ತುಕೊಂಡು, ಬೇಸರ್ವಿನಂ-ಬೇಸರಹುಟ್ಟುವ ಬಗೆಯಾಗಿ, ಉತ್ಸವದಿಂದ-ಅತ್ಯಾನಂದದಿಂದ, ಯಾಚಕರ್ಗೆ-ಯಾಚನೆಯಂ ಮಾಡುವ ಜನರಿಗೆ, ಕೊಟ್ಟನು-ಕೊಟ್ಟವನಾದನು || ೨೦ ||

ಟೀ|| (ಮದನನು) ತದನಂತರದೊಳು-ಕವಿಗಮುಕಿಗಳೇ ಮೊದಲಾದವರಿಗೂ ಬ್ರಾಹ್ಮಣೋತ್ತಮರಿಗೂ ಅವರವರ ಇಷ್ಟಸಿದ್ಧಿಯಾಗುವವರೆಗೂ ದಾನದಕ್ಷಿಣೆಗಳನ್ನು ಕೊಟ್ಟತರುವಾಯ, ಅನಿಬರೆಲ್ಲರಂ-ಅವರನ್ನೆಲ್ಲಾ, ಕಳುಹಿ-ಮರ್ಯಾದೆಯಿಂದ ಕಳಹಿಸಿದವನಾಗಿ, ಸಮಗ್ರವೈಭವದೊಳು-ಅತ್ಯಂತ ಆನಂದದಿಂದ, ನಿಜ-ತನ್ನ, ಸದನದೊಳು-ಮಂದಿರದಲ್ಲಿ, ಇರಲು-ಇರುತ್ತಿರಲಾಗಿ, ಅಂದಿನಇರುಳ್-ಆದಿನ ರಾತ್ರಿಯಲ್ಲಿ, ಬಾಂಧವರ್ವೆರಸಿ-ಸಕಲ ಬಂಧು ಜನಗಳಿಂದೊಡಗೂಡಿ, ದಂಪತಿಗಳಂ-ದಂಪತಿಗಳಾದ ವಿಷಯೆ ಚಂದ್ರಹಾಸರಿಗೆ, ಸಹಭೋಜನಂಮಾಡಿಸಿ-ಒಂದೇ ಎಲೆಯಲ್ಲಿ ಇಬ್ಬರೂ ಊಟಮಾಡುವಂತೆಮಾಡಿ (ಬೂವದೂಲ್ಲಟವನ್ನು ನೆರವೇರಿಸಿ), ಇದು-ಈಗ ಸಿದ್ಧಿಸತಕ್ಕ, ಅನಂತಸೌಭಾಗ್ಯಂ-ಅಧಿಕವಾದ ಐಸಿರಿಯು, ಅನಂಗತಾತನಂ-ಶ್ರೀಮನ್ನಾರಾಯಿಣನನ್ನು, ಪೂಜಿಸಿದ-ಪೂಜೆ ಮಾಡಿದ, ಫಲದೊಳು-ಫಲದಿಂದ, ಆದುದು-ಸಿದ್ಧಿಸಿತು, ಎಂದು-ಎಂಬತೆರನಾಗಿ, ಮುದದಿಂ-ಆನಂದದಿಂದ, ಪವಡಿಸಿದನು-ವಿಶ್ರಮಿಸಿಕೊಳ್ಳಲು ಹೊರಟನು, ಅನ್ನೆಗಂ-ಅಷ್ಟುಹೊತ್ತಿಗೆ, ರವಿ-ದಿನಕರನಾದರೊ, ಹೊಂಗಲಶದಂತೆ-ಚಿನ್ನದಿಂದ ಮಾಡಿದ ಕಲಶದೋಪಾದಿಯಲ್ಲಿ, ಪೂರ್ವಶೈಲದೊಳು-ಮೂಡಣದಿಕ್ಕಿನ ಪರ್ವತದಮೇಲೆ, ಮಿಗೆ-

---

ರಥಗಳನ್ನೂ, ಹಸೆಗೆ ಕುಳಿತುಕೊಳ್ಳುವ ಪೀಠಗಳೇ ಮೊದಲಾದವನ್ನೂ ಹೆಚ್ಚಾದ ಸುಗಂಧ ದ್ರವ್ಯಗಳನ್ನೂ, ಅನೇಕ ಜನ ಹೆಂಗಸರನ್ನೂ, ನಾನಾಪ್ರಕಾರವಾದ ಉಡಿಗೆ ತೊಡಿಗೆಗಳನ್ನೂ, ಅನೇಕ ಕಂಠೀಹಾರಗಳನ್ನೂ, ಎಂದೆಂದಿಗೂ ಮುಗಿಯದಷ್ಟು ಹೆಚ್ಚಾಗಿ ಆ ವಧೂವರರಿಗೆ ಬಳುವಳಿಯಾಗಿ ಕೊಟ್ಟನು. ||೧೯|| ಆ ಬಳಿಕ ಪುರೋಹಿತನಾದ ಗಾಲವ ಮುನಿಗೂ, ತನ್ನ ಬಂಧು ಮಿತ್ರರಿಗೂ, ಬ್ರಾಹ್ಮಣೋತ್ತಮರಿಗೂ, ಕವಿಗಳು, ಶಾಸ್ತ್ರಜ್ಞರು, ನಟವಿದೂಷಕರಿಗೂ, ಸ್ತುತಿಪಾಠಕರಿಗೂ, ಗಾಯಕರೇ ಮೊದಲಾದವರಿಗೆಲ್ಲಾ ಅಪರಿಮಿತವಾದ ಹಣದ ರಾಶಿಯನ್ನು ಕೊಟ್ಟು ಸತ್ಕರಿಸಿದನು, ಯಾಚಕರಿಗಾದರೋ, ಅವರು ಹೊರುವಷ್ಟು ಧನವನ್ನು ಕೊಟ್ಟು ಅವರ ಮನಸ್ಸನ್ನು ದಣಿಸಿದನು || ೨೦ || ಇವರೆಲ್ಲರೂ ಸಂತುಷ್ಟರಾಗಿ ತಮ್ಮ ಮನೆಗಳಿಗೆ ತೆರಳಿದಬಳಿಕ ಆದಿನ ರಾತ್ರಿ ಮದನನು ಅವನ ಬಂಧುವರ್ಗದವರಿಂದೊಡಗೂಡಿ ದಂಪತಿಗಳಿಗೆಸಹ ಭೋಜನವಂಮಾಡಿಸಿ ತಾವೂ ಸುಖವಾಗಿ ಊಟಮಾಡಿದರು ಶ್ರೀ ಕೃಷ್ಣಸ್ವಾಮಿಯ ದಿವ್ಯಾನುಗ್ರಹದಿಂದ ಈ ಮದುವೆಯು ಅತಿ ವಿಜೃಂಭಣೆಯಿಂದ ನಡೆಯಿತೆಂದು ಆನಂದವನ್ನೈದಿ ಮಲಗಿಕೊಂಡನು. ಸ್ವಲ್ಪಹೊತ್ತಿನಮೇಲೆ ಅರುಣೋದಯವಾದಕಾರಣ ಉದಯಗಿರಿಯಲ್ಲಿ

ಸೌಭಾಗ್ಯವೆಂದುಮುದದಿಂಪವಡಿ | ಸಿದನನ್ನೆಗಂಪೂರ್ವಶೈಲದಲಿಹೊಂಗಲಶದಂತೆಮಿಗೆರವಿಮೆರೆದನು || ೨೧ || ಪಂಕರುಹಮಿತ್ರ
ನುದಯದೊಳಿದ್ದುಮದನಂಸ್ವ | ಕಿಂಕರ್ಗರುಪಲವರಂದಿನಮಹೋತ್ಸವಕ| ಲಂಕರಿಸಿದಧ್ವಜಪತಾಕೆಗಳರಚನೆಯಿಂದಮಲ
ಮಣಿಮಂಟಪವನು || ಕಂಕಣದಘನರವದಮಿಂಚುಗಂಗಳಸರಿ | ತ್ಸಂಕುಲದಮಾಳ್ಕೆಗಳಮಂಗಳಸ್ನಾನದಿಂ | ಕುಂಕುಮವಿಲಿ
ಪ್ತಾಂಗನಾಗಿನಿಜಸತಿಸಹಿತಚಂದ್ರಹಾಸಂಮೆರೆದನು ||೨೨|| ಚಂಪಕಸ್ನೇಹಸಂಮಾರ್ಜನದಕುಂಕುಮದ | ಕಂಪಿನಸುಲೇಪನದ
ನಿರ್ಮಲಜಲಸ್ನಾನ | ದಿಂಪಿನಕಳೇವರದರಂಜಿಸುವನೊಸಲಮುತ್ತಿನಬಾಸಿಗದಚೆಲ್ವಿನ || ದಂಪತಿಗಳೊಪ್ಪಿದರ್ಪಾಡುವಪುರಂಧ್ರಿ
ಯರ | ನುಂಪಿಡಿದಸರಸದಿಂಮಂಗಳಸುವಾದ್ಯರವ| ದಿಂಪಾರ್ವರಡಿಗಡಿಗೊಡರ್ಚುವಕೃತಸ್ವಸ್ತಿವಾಚನದಘೋಷದಿಂದ ||೨೩||
ಸುತ್ರಾಮತನಯಕೇಳುತ್ಸವದೊಳೀಪರಿದಿ | ನತ್ರಯಂನಡೆಯಲ್ಕೆನಾಲ್ಕನೆಯದಿನದೊಳ್ವಿ | ಚಿತ್ರದಿಂವಿರಚಿಸಿಪೊಳಲ್ಪೊಗಿಸಿ

---

ಹೆಚ್ಚಾಗಿ, ಮೆರೆದನು–ಕಾಂತಿಯುಕ್ತನಾದನು ||೨೧||

ಟೀ|| ಪಂಕರುಹ ಮಿತ್ರನ–ಕಮಲ ಬಂಧುವಾದ ಬಿಸಿಲ್ಗದಿರನ, ಉದಯದೊಳು-ಹುಟ್ಟುವ ವೇಳೆಗೆ ಸರಿಯಾಗಿ, ಮದನನು-ಮದನನೆಂಬ ದುಷ್ಟಬುದ್ಧಿಯ ಮಗನು, ಅಂದಿನ-ಆ ಹೊತ್ತು ನಡೆಯಬೇಕಾಗಿರತಕ್ಕ, ಮಹೋತ್ಸವಕೆ–ಉತ್ಸವದ ವಿಜೃಂಭಣೆಗಾಗಿ, ಸ್ವಕಿಂಕರರ್ಗೆ–ತನ್ನ ದೂತರಿಗೆ, ಅರುಪಲು–ತಿಳಿಸಿದ ಕಾರಣ, ಅಂದಿನ ಮಹೋತ್ಸವಕೆ–ಆ ಹೊತ್ತಿನ ಸಂಭ್ರಮಕ್ಕಾಗಿ, ಅವರು-ಆ ಸೇವಕ ಜನರು, ಅಮಲ-ಶ್ರೇಷ್ಠವಾದ, ಮಣಿಮಂಟಪವನು-ರತ್ನ ಖಚಿತವಾದ ಮಂಟಪವನ್ನು, ಧ್ವಜ ಪತಾಕೆಗಳ ರಚನೆಯಿಂದ–ಬಾವುಟಗಳು ಧ್ವಜಗಳು ಇವನ್ನೆಲ್ಲಾ ಸೇರಿಸುವುದರಿಂದ, ಅಲಂಕರಿಸಿದರ್–ಅಂದವಾಗಿರುವಂತೆ ಮಾಡಿದರು, ಚಂದ್ರಹಾಸಂ–ಇಂದುಹಾಸನಾದರೊ, ಕಂಕಣದ–ಕೈ ಬಳೆಗಳ, ಘನರವದ–ದೊಡ್ಡ ಶಬ್ದದ, ಮಿಂಚುಕಂಗಳ-ವಿದ್ಯುತ್ತಿನ ಹಾಗೆ ಹೊಳೆಹೊಳೆವ ನಯನಂಗಳ, ಸರಿತ್–ಪ್ರವಾಹಗಳಿಂದ, ಸಂಕುಲ–ಸೇರಿರತಕ್ಕ, ಮಾಳ್ಕೆಗಳ–ಕಾರ್ಯಗಳ, ಮಂಗಳಸ್ನಾನದಿಂ-ಶುಭಸ್ನಾನದಿಂದ, ಕುಂಕುಮ–ಕುಂಕುಮದಿಂದ, ವಿಲಿಪ್ತ–ಬಳಿಯಲ್ಪಟ್ಟ, ಅಂಗನಾಗಿ–ದೇಹವುಳ್ಳವನಾಗಿ, ನಿಜ ಸತಿಸಹಿತ–ತನ್ನ ಹೆಂಡತಿಯಾದ ವಿಷಯೆಯೊಂದಿಗೆ, ಮೆರೆದನು-ಕಾಂತಿಸಂಪನ್ನನಾಗಿದ್ದನು ||೨೨||

ಟೀ|| ಚಂಪಕ–ಚಂಪಕ ಪುಷ್ಪಗಳಿಂದೊಸರುವ, ಸ್ನೇಹ–ಮಂತ್ರಪೂರಿತಮಾದ ನೀರಿನ ಕಣಗಳಿಂದ, ಸಂಮಾರ್ಜನದ–ಮೇಲೆರಚುವುದರ, ಕುಂಕುಮದ– ಕೇಸರಿಯ, ಕಂಪಿನ– ಸುರಭಿಯಿಂದ ಕೂಡಿದ, ಅನುಲೇಪನದ– ಬಳಿಯುವಿಕೆಯ, ನಿರ್ಮಲ–ಪರಿಶುದ್ಧವಾಗಿರುವ, ಜಲ–ನೀರಿನ, ಸ್ನಾನದ–ಸ್ನಾನದಿಂದ, ಇಂಪಿನ–ಮನೋಹರವಾಗಿರತಕ್ಕ, ಕಳೇವರದ–ದೇಹವುಳ್ಳ, ರಂಜಿಸುವ-ಪ್ರಕಾಶಿಸುತ್ತಲಿರತಕ್ಕ, ನೊಸಲ-ಹಣೆಯಲ್ಲಿರುವ, ಮುತ್ತಿನ ಬಾಸಿಗದ ಚೆಲ್ವಿನ–ಮುತ್ತಿನ ಭಾಸಿಂಗದ ಅಲಂಕಾರವುಳ್ಳ, ದಂಪತಿಗಳು – ಚಂದ್ರಹಾಸ ವಿಷಯೆಯರಾದರೊ, ಪಾಡುವ–ಹಾಡುಗಳನ್ನು ಹೇಳುತ್ತಲಿರತಕ್ಕ, ಪುರಂಧ್ರಿಯರ–ಮುತ್ತೈದೆಯರ, ನುಂಪಿಡಿದು–ಇಸಿದಾದ, ಸರದಿಂದ–ಧ್ವನಿಯಿಂದ. (ಸರಸದಿಂದ–ಅಲಂಕಾರದಿಂದ ಎಂದು ಪಾಠಾಂತರ) ಮಂಗಳ–ಕಲ್ಯಾಣಪ್ರದನಾದ, ಸುವಾದ್ಯ-ಶ್ರೇಷ್ಠವಾದ ಮೇಳ ಮೊದಲಾದವುಗಳ, ರವದಿಂ–ಶಬ್ದದಿಂದ, ಅಡಿಗಡಿಗೆ-ಬಾರಿಬಾರಿಗೂ, ಪಾರ್ವರು–ಭೂಸುರರು, ಒಡರ್ಚುವ–ನೆರವೇರಿಸುವ, ಕೃತ–ಮಾಡತಕ್ಕ, ಸ್ವಸ್ತಿವಾಚನಘೋಷದಿಂದ-ಸ್ವಸ್ತಿವಾಚನದ ಧ್ವನಿಯಿಂದ, ಒಪ್ಪಿದರು–ಕಾಂತಿಯುಕ್ತರಾಗಿ ಮೆರೆಯುತ್ತಲಿದ್ದರು. ||೨೩||

ಟೀ|| ಸುತ್ರಾಮತನಯ–ದೇವೇಂದ್ರನಮಗನಾದ ಪಾರ್ಥನೆ, ಕೇಳು-ಲಾಲಿಸು, ದಿನತ್ರಯಂ–ಮೂರು ದಿವಸಗಳು, ಈಪರಿ–ಈ ರೀತಿಯಲ್ಲಿ, ಉತ್ಸವದೊಳು–ಸಂಭ್ರಮಾತಿಶಯದಿಂದ, ನಡೆಯಲ್ಕೆ–ನಡೆಯಲಾಗಿ, ವಿಚಿತ್ರದಿಂ-ಬಹು ಆಚ್ಚರಿಯಾಗುವಂತೆ, ನಾಲ್ಕನೆಯಇರುಳ್–ನಾಲ್ಕನೇ ದಿವಸದ ರಾತ್ರಿ, ವಿರಚಿಸಿ – ಹರಿಬೂವದ ಮಹೋತ್ಸವವನ್ನು ನಡೆಸಿ, ಪೊಳಲ್ – ನಗರ

---

ಸೂರ್ಯನು ಭಂಗಾರದ ಕಲಶದಂತೆ ಹೊಳೆಯಲಾರಂಭಿಸಿದನು. ||೨೧|| ಸೂರ್ಯೋದಯವಾದ ಕೂಡಲೆ ಮದನನು ಆದಿನಕ್ಕೆ ಬೇಕಾದ ಸಾಮುಗ್ರಿಗಳನ್ನು ಸಿದ್ಧಮಾಡುವಂತೆ ತನ್ನ ಸೇವಕರಿಗೆ ಆಜ್ಞಾಪಿಸಿದನು. ಅವರು ರತ್ನಗಳಿಂದಲೂ ಧ್ವಜ ಪತಾಕಾದಿಗಳಿಂದಲೂ, ಸಿಂಗರಂಗೈದ ದಿವ್ಯ ಮಂಟಪದಲ್ಲಿ ವಿಷಯೆಯೂ ಇಂದುಹಾಸನೂ ಕಾಂತಿಯುಕ್ತರಾಗಿರುತ್ತಿದ್ದರು. ||೨೨|| ಬಳಿಕ ಅವರೀರ್ವರಿಗೂ ಮಂಗಳ ಸ್ನಾನವಂ ಮಾಡಿಸಿ, ದಿವ್ಯವಾದ ಉಡಿಗೆ ತೊಡಿಗೆಗಳಿಂದ ಅಲಂಕರಿಸಿ, ಹಣೆಗೆ ಮುತ್ತಿನ ಬಾಸಿಂಗವನ್ನು ಕಟ್ಟಿ ಹಸೆ ಮಣೆಯಮೇಲೆ ಕುಳ್ಳಿರಿಸಿ ಮುತ್ತೈದೆಯರೆಲ್ಲಾ ಹಾಡುಗಳನ್ನು ಹೇಳುತ್ತಲೂ, ನಾನಾ ವಿಧವಾದ ಧ್ವನಿಗಳಿಂದಲೂ, ಬ್ರಾಹ್ಮಣರ ಆಶೀರ್ವಾದ ಘೋಷದಿಂದಲೂ, ನೋಡುವುದಕ್ಕೆ ನೋಟಕರ ಮನವಂ ಸಂತಸಂಗೊಳಿಸುತ್ತಲಿತ್ತು. ||೨೩|| ಕೇಳೈ ಅರ್ಜುನಾ, ಈ ರೀತಿಯಲ್ಲಿ ಅತ್ಯುತ್ಸವದಿಂದ ಮೂರು ದಿನಗಳು ಕಳೆದ ಬಳಿಕ ನಾಲ್ಕನೆಯ ದಿವಸ ನಾಗವಲ್ಲಿಯ ಮಹೋತ್ಸವವನ್ನೂ, ಪಟ್ಟಣದಲ್ಲೆಲ್ಲಾ ಮೆರವಣಿಗೆಯನ್ನೂ ನಡೆಯಿಸಿದರು, ಈ ವಿಷಯೆ ಚಂದ್ರಹಾಸರ ಮದುವೆಯೇ ಭೂಲೋಕ

ನಾಗವಲ್ಲಿಯಸೊಡರ್ಗಳನೊದವಿಸಿ ॥ ಕ್ಷತ್ರಿಯವಿವಾಹವೈಭವದೊಳಿದುಪೊಸತೆನೆಧ । ರಿತ್ರಿಯೊಳ್ಚಂದ್ರಹಾಸಂಗಾಯ್ತುಮದುವೆಶತ । ಪತ್ರನಾಭನಕಿಂಕರರ್ಗೆಮಾಡಿದಮಿಥ್ಯೆಯಿದುಪಥ್ಯಮಹುದೆಂದನು ॥ ೨೪ ॥ ವಿಸ್ತರಿಸಿಮೃಷ್ಟಭೋಜನದನವಕುಸುಮಫಲ । ವಸ್ತುಗಳಕರ್ಪೂರವೀಳೆಯದಚಂದನದ । ಕಸ್ತೂರಿಜವಾಜಿಗಳಪರಿಮಳದಕರ್ದಮದನಸ್ತುಭೂಷಣವಿತ್ತದ । ಪ್ರಸ್ತುತದಸನ್ಮಾನದಿಂದಮನ್ನಿಸಿದಂಸ । ಮಸ್ತಜನಮುಂಮದನನಾಪ್ತಬಂಧುಗಳಂಪ್ರ । ಶಸ್ತಪೂಜೆಗಳಿಂದಸತ್ಕರಿಸಿಕೊಟ್ಟನೆಲ್ಲರ್ದಣಿಯೆತಾಂದಣಿಯದೆ ॥೨೫॥ ಭಂಡಾರದಖಿಳವಸ್ತುಗಳೊಂದುತೃಣಮಾಗಿ । ಕಂಡುವೆಚ್ಚಿಸಿಚಂದ್ರಹಾಸನವಿವಾಹಮಂ । ಕೊಂಡೆಸಗುತಿರ್ದನೊಲವಿಂಮದನನಿತ್ತಕುಂತಳಪುರದೊಳವನತ್ತಲು ॥ ಅಂಡಲೆದುಚಂದನಾವತಿಯೊಳ್ಕುಳಿಂದನಂ । ದಂಡಿಸಿದನಾದುಷ್ಟಬುದ್ಧಿಜರೆದುರೆಬೈದು । ಹಿಂಡಿಹಿಳಿದರ್ಥಮಂತೆಗೆದುಸೆರೆಮನೆಗಿಕ್ಕಿನಿಗಳಮಂಕಾಲ್ಗೆಪೂಡಿ ॥ ೨೬ ॥ ಹೆಕ್ಕಳಿಸಿರಾಜ್ಯಮಂಕೊಟ್ಟರೆ

---

ವನ್ನು, ಬಗಿಸಿ-ಪ್ರವೇಶಮಾಡಿಸಿ, ನಾಗವಲ್ಲಿಯಸೊಡರ್ಗಳನು - ನಾಗವಲ್ಲಿಯ ದೀಪಗಳನ್ನು, ಒದವಿಸಿ-ಅಣಿಮಾಡಿ, ಇದು-ಈ ಚಂದ್ರಹಾಸ ವಿಷಯೆಯ ಪರಿಣಯವಾದರೊ, ಕ್ಷತ್ರಿಯ-ಕ್ಷತ್ರಿಯವರ್ಗದಲ್ಲಿ, ನಡೆದಿರತಕ್ಕವಿವಾಹವೈಭವದೊಳು-ಮದುವೆಯ ಉತ್ಸವದಲ್ಲಿ, ಪೊಸತು-ನೂತನವಾದದ್ದು, ಎನೆ-ಎಂಬ ರೀತಿಯಿಂದ, ಧರಿತ್ರಿಯೊಳ್-ಇಳೆಯಲ್ಲಿ, ಚಂದ್ರಹಾಸಂಗೆ - ಇಂದುಹಾಸನಿಗೆ, ಮದುವೆ-ಮದುವೆಯು, ಆಯ್ತು-ನೆರವೇರಿತು, ಇದು-ಈ ಶತಪತ್ರನಾಭನ, ಕಮಲನಾಭನಾದ-ಮಹಾವಿಷ್ಣುವಿನ, ಕಿಂಕರರ್ಗೆ-ಸೇವಕರಿಗೆ, ಮಾಡಿದ-ಎಸಗಿದ, ಮಿಥ್ಯೆ-ಕೊಲೆಮಾಡಲೆಳಸಿದ ಕಾರ್ಯವು, ಪಥ್ಯಂ-ಹಿತದಿಂದ ಕೂಡಿದ್ದೆ, ಅಹುದು-ಆಗುತ್ತದೆ, ಎಂದನು-ಎಂಬುದಾಗಿ ಹೇಳಿದನು. ॥೨೪॥

ಟೀ॥ ಮದನನು-ಮದನನೆಂಬಾತನು, ವಿಸ್ತರಿಸಿ-ಹೆಚ್ಚಾಗಿ, ಮೃಷ್ಟಭೋಜನದ-ಮೃಷ್ಟಾನ್ನದ, ನವ-ನೂತನವಾದ, ಕುಸುಮ-ಪುಷ್ಪಂಗಳು, ಫಲ-ಫಲಗಳು, ವಸ್ತುಗಳ-ಇವೇ ಮೊದಲಾದವುಗಳ, ಕರ್ಪೂರ-ಪಚ್ಚಕರ್ಪೂರವನ್ನು ಬೆರಸಿರತಕ್ಕ, ವೀಳೆಯದ - ಎಲೆ ಅಡಿಕೆ ಇವುಗಳ, ಚಂದನದ - ಗಂಧದ, ಕಸ್ತುರಿಜವಾಜಿಗಳ - ಕಸ್ತೂರಿ ಪುನಗು ಇವುಗಳ, ಪರಿಮಳದ-ಸುರಭಿಯ, ಕರ್ದಮದ-ದೇವಯಕ್ಷ ಕರ್ದಮಂಗಳೆಂಬ ಗಂಧಗಳ, ವಸ್ತ್ರ - ಉಡಿಗೆಗಳು, ಭೂಷಣ-ತೊಡಿಗೆಗಳು, ವಿತ್ತದ-ದ್ರುವ್ಯದ, ಪ್ರಸ್ತುತದ - ಮದುವೆಯ ಸಂಬಂಧವಾದ, ಪೂಜೆಗಳಿಂದ - ಸಮಸ್ತಜನಮಂ-ಸಕಲ ಜನಗಳನ್ನೂ, ಬಂಧುಗಳಂ-ಬಂಧುವರ್ಗದವರನ್ನೂ ಸಹ, ಸತ್ಕರಿಸಿ-ಆದರಿಸಿ, ಮನ್ನಿಸಿದಂ-ಮರ್ಯಾದೆ ಮಾಡಿದನು. ಎಲ್ಲರ್-ಸರ್ವರೂ, ದಣಿಯೆ-ತೃಪ್ತಿಯನ್ನೈದಿದರೂ ಕೂಡ, ತಾಂ-ತಾನುಮಾತ್ರ, ದಣಿಯದೆ-ತೃಪ್ತಿಯೇ ಇಲ್ಲದೆ, ಕೊಟ್ಟನು-ಇತ್ತವನಾದನು. ॥೨೫॥

ಟೀ॥ ಕುಂತಳಪುರದೊಳು-ಕುಂತಳರಾಜ್ಯದಲ್ಲಿ, ಇತ್ತ-ಈ ಕಡೆ, ಮದನನು - ಮದನನೆಂಬಾತನು. ಭಂಡಾರದ-ದುಷ ಬುದ್ಧಿಯ ಖಜಾನೆಯಲ್ಲಿದ್ದ, ಅಖಿಳ-ಸಕಲವಾದ, ವಸ್ತುಗಳ - ಪುರುಳ್ಗಳನ್ನೂ, ಒಂದುತೃಣಮಾಗಿ - ಒಂದು ಹುಲ್ಲುಕಡ್ಡಿಗಿಂತಲೂ ಕಡೆಯಾಗಿ, ಕಂಡು-ದೃಷ್ಟಿಸಿ, ವೆಚ್ಚಿಸಿ-ಖರ್ಚುಮಾಡಿ, ಒಲವಿಂದ-ವಿಶ್ವಾಸದಿಂದ, ಚಂದ್ರಹಾಸನವಿವಾಹಮಂ-ಇಂದುಹಾಸನ ಲಗ್ನವನ್ನು, ಎಸಗುತಿರ್ದನು-ನೆರವೇರಿಸುತ್ತಲಿದ್ದನು, ಅತ್ತಲು-ಆಕಡೆ, ಚಂದನಾವತಿಯೊಳು - ಚಂದನಾವತಿಯಲ್ಲಾದರೊ, ಅವನು ದುಷ್ಟಬುದ್ಧಿಯು, ಕುಳಿಂದನಂ-ಚಂದನಾವತಿಯ ರಾಜನಾದ ಮೇಧಾವಿಯನ್ನು, ಜರೆದು-ಹೀಯಾಳಿಸಿ, ಉರೆ-ಹೆಚ್ಚಾಗಿ, ಬೈದು-ಕೆಟ್ಟ ಮಾತುಗಳಿಂದ ಧಿಕ್ಕರಿಸಿ, ಅಂಡಲೆದು - ಕಾಡಿಸಿ, ಹಿಂಡಿ-ಬೈಲಿಗೆ ತಂದು, ಹಿಳಿದ-ಅತನ ಭಂಡಾರದಲ್ಲಿದ್ದ. ಅರ್ಥಮಂ-ಹಣವನ್ನೆಲ್ಲಾ, ತೆಗೆದು-ಅಪಹರಿಸಿ, ನಿಗಳಮಂ-ಸರಪಣಿಯನ್ನು, ಕಾಲ್ಗೆ-ಪಾದಗಳಿಗೆ, ಪೂಡಿ-ತೊಡಿಸಿ, ಸೆರೆಮನೆಗೆ-ಬಂದೀಖಾನೆಗೆ, ಇಕ್ಕಿ-ಹಾಕಿ, ದಂಡಿಸಿದನು ನಾನಾ ಪ್ರಕಾರವಾದ ಶಿಕ್ಷೆಗೆ ಗುರಿಮಾಡಿದನು. ॥೨೬॥

ಟೀ॥ ಆ ದುಷ್ಟಬುದ್ಧಿ-ಆ ದುಷ್ಟಬುದ್ಧಿಯಾದರೊ, ಕುಳಿಂದನನ್ನು ಕುರಿತು, ರಾಜ್ಯಮಂ - ಚಂದನಾವತಿಯನ್ನು,

---

ದಲ್ಲಿ ನಡೆದ ಕ್ಷತ್ರಿಯರ ಮದುವೆಗಳಲ್ಲೆಲ್ಲಾ ಮೊದಲನೆಯದೆನ್ನಿಸಿಕೊಂಡಿತು. ಎಲೈ ಪಾರ್ಥನೆ, ಶ್ರೀಕೃಷ್ಣಪರಮಾತ್ಮನನ್ನು ಧ್ಯಾನ ಮಾಡತಕ್ಕವರಿಗೆ ಕೇಡಕನ್ನು ಮಾಡಿದರೂ ಅದು ಕೊನೆಗೆ ಸುಖವಾಗಿಯೇ ಪರಿಣಮಿಸದಿರುವುದೇ? ॥ ೨೪ ॥ ಈಪರಿ ಅತ್ಯುತ್ಸವದಿಂದ ನಡೆದ ವಿಷಯೆ ಇಂದುಹಾಸರ ವಿವಾಹಮಹೋತ್ಸವದಲ್ಲಿ ಮದನನು ಆ ದೇಶದ ಭೂಸುರೋತ್ತಮರನ್ನೂ, ತನ್ನ ಆಪ್ತ ಬಂಧುಗಳನ್ನೂ, ಮೃಷ್ಟಾನ್ನದಿಂದಲೂ, ಪುಷ್ಪ ಫಲ ವೀಳೆಯಗಳಿಂದಲೂ, ದಿವ್ಯವಾದ ವಸ್ತ್ರಾಭರಣಂಗಳಿಂದಲೂ, ಯಥೋಚಿತವಾಗಿ ಅವರವರು ದಣಿಯುವಂತೆ ತೃಪ್ತಿಗೊಳಿಸಿದರೂ ಕೂಡ ತನಗೆಮಾತ್ರ ತೃಪ್ತಿಯೇ ಆಗಲಿಲ್ಲವು. ॥೨೫॥ ಮದನನು ಈ ಪ್ರಕಾರ ಭಂಡಾರದಲ್ಲಿದ್ದ ಸರ್ವಸ್ವವನ್ನೂ ತೃಣದಂತೆ ಭಾವಿಸಿ ಅತ್ಯಾನಂದದಿಂದ ದಾನವಂ ಮಾಡುತ್ತಿದ್ದನು. ಅತ್ತ ದುಷ್ಟಬುದ್ಧಿಯಾದರೊ, ಚಂದನಾವತಿಯಲ್ಲಿ ಕುಳಿಂದನ ಸರ್ವಸ್ವವನ್ನೂ ಖಜಾನೆಗೆ ಸೇರಿಸಿಕೊಂಡು, ॥೨೬॥ ರಾಜ್ಯವನ್ನು ಆಳಿಕೊಂಡಿರಲೆಂದು ಕೊಟ್ಟ ಮಾತ್ರಕ್ಕೆ ಅಲ್ಲಿನ ದೇವಾಲಯ, ಕೆರೆ, ಕೋಟೆ ಮೊದಲಾದವನ್ನೆಲ್ಲಾ ಹಾಳುಮಾಡಿ ನಮ್ಮ ಅಪ್ಪಣೆಯಿಲ್ಲದೆಒಬ್ಬ ದತ್ತು ಮಗನನ್ನು ಮಾಡಿಕೊಂಡು ನಮ್ಮನ್ನು ಲಕ್ಷ್ಯಮಾಡುವುದಿಲ್ಲವೆಂಬ ದೋಷವನ್ನಾರೋಪಿಸಿ, ಅವನನ್ನು

ನ್ನಂಮರೆದು | ಸೊಕ್ಕಿತನಗೊರ್ವಮಗನಂಮಾಡಿಕೊಂಡವನ | ಮಕ್ಕಳಾಟಗೆಯಿಂದದೇವತಾಲಯತಟಾಕಾರಾಮಕೋಂಟೆಗಳಿಗೆ || ಇಕ್ಕಿಕೆಡಿಸಿದನೆಂದವನವಳಿತಮಂತೆಗೆದು | ಕಕ್ಕಸದಬಂಧನದೊಳಿರಿಸಿಕುಂತಳನಗರಿ | ಗೆಕ್ಕರಿಂದೈತಂದನಾದುಷ್ಟಬುದ್ಧಿವಾಹಕರನವಘಡಿಸಿನಡೆಸಿ||೨೭||ಕೊಂದಪನೊವಿಷವಡಿಸಿಚಂದ್ರಹಾಸನಂ| ಮಂದಮತಿಯಾಗಿಮರದಿರ್ದಪನೊಮಗನೆಂಬ| ಸಂದೇಹದಿಂಚಂದನಾವತಿಯೊಳಿರದೆಕುಂತಳಪುರಕೆದುಷ್ಟಬುದ್ಧಿ || ನಿಂದಲ್ಲಿನಿಲ್ಲದೈತರೆಪಥದೊಳಿದಿರಾಗಿ | ಬಂದುನುಡಿದುದುಸರ್ಪವೊಂದುನಿನ್ನಾಲಯದೊ | ಳಿಂದುವರೆಗೊಡವೆಯಂಕಾದಿರ್ದೆನದುನಿನ್ನ ಸುತನಿಂದಪೋದುದೆಂದು||೨೮||ಮಾನವರತೆರದೊಳಿಂತೆಂದೊರೆದುಫಣಿಬಿಲಕೆ | ತಾನಿಳಿಯೆಕೇಳ್ದುವಿಸ್ಮಿತನಾಗಿಮಂತ್ರಿದುಮ್ಮಾನದಿಂನಗರದಸಮೀಪಕೈತರೆವಾದ್ಯಘೋಷಂಕಿವಿಯೊಳಗಿಡಿಯೆ || ಏನಿದುತ್ಸವಮೂರೊಳೆನೆಕಂಡಪರ್ನಿನ್ನ|ಸೂನುಮದನಂಚಂದ್ರಹಾಸಂಗೆತಂಗಿಯವಿ|ಧಾನದಿಂಮದುವೆಯಂಮಾಡಿಸಿದನದರೊಸ

---

ಕೊಟ್ಟರೆ-ಕೊಡಲಾಗಿ, ಎನ್ನಂ-ನನ್ನನ್ನು, ಮರೆದು-ಮರೆತುಬಿಟ್ಟು, ಹೆಕ್ಕಳಿಸಿ-ಗರ್ವಿಸಿ, ಸೊಕ್ಕಿ-ಅಹಂಕಾರವನ್ನು ಹೊಂದಿ, ತನಿಗೆ-ತನಗಾದರೊ,ಒರ್ವ-ಒಬ್ಬಾನೊಬ್ಬ,ಮಗನಂ-ಕುವರನನ್ನು, ಮಾಡಿಕೊಂಡು-ದತ್ತುಮಾಡಿಕೊಂಡವನಾಗಿ,ಅವನ-ಕುಳಿಂದರಾಜನ, ಮಕ್ಕಳಾಟಕೆಯಿಂದ-ಬಾಲಭಾವದಿಂದ, ದೇವತಾಲಯ-ದೇವಸ್ಥಾನಗಳು, ತಟಾಕ-ಕೆರೆಗಳು, ಆರಾಮ-ಉದ್ಯಾನಗಳು, ಕೋಂಟೆಗಳಿಗೆ-ಕೋಟೆ ಮೊದಲಾದವುಗಳಿಗೆ, ಇಕ್ಕೆಗೆಡಸಿದನು-ಸರಿಯಾದ ಏರ್ಪಾಟುಗಳನ್ನೆಲ್ಲಾ ಹೋಗಲಾಡಿಸಿದನು, ಎಂದು-ಎಂಬ ತೆರನಾಗಿ, ಅವನ-ಆ ಮೇಧಾವಿಯ, ವಳಿತಮಂ-ರಾಜ್ಯವನ್ನು, ತೆಗೆದು-ಆತನಿಂದ ಬಿಡಿಸಿದವನಾಗಿ, ಕಕ್ಕಸದ-ಕ್ರೂರವಾದ, ಬಂಧನದೊಳು-ಬಂದೀಕಾನೆಯೊಳಗೆ, ಇರಿಸಿ-ಇಟ್ಟವನಾಗಿ, ವಾಹಕರನು-ಪಲ್ಲಕ್ಕಿ ಹೊರುವವರನ್ನು, ಅವಘಡಿಸಿ-ಹಿಂಸಿಸಿ, ನಡಿಸಿ-ಬೇಗಬೇಗನೆ ಹೊರಟು, ಕುಂತಳನಗರಿಗೆ-ಕುಂತಳ ರಾಜ್ಯಕ್ಕೆ, ಅಕ್ಕರಿಂದ-ಪ್ರೇಮಾತಿಶಯದಿಂದ, ಐತಂದನು-ಬಂದನು || ೨೭ ||

ಟೀ|| ದುಷ್ಟಬುದ್ಧಿ-ದುಷ್ಟಬುದ್ಧಿಯಾದರೊ, ಚಂದ್ರಹಾಸನಂ-ಇಂದುಹಾಸನಿಗೆ, ವಿಷವನು-ವಿಷವನ್ನು, ಊಡಿಸಿ-ಹಾಕಿ, ಮದನನು-ನನ್ನ ಕುವರನಾದ ಮದನನು, ಕೊಂದಪನೊ-ಕೊಂದುಹಾಕುವನೊ, ಅಥವಾ, ಮಂದಮತಿಯಾಗಿ-ಅವಿವೇಕದ ಬುದ್ಧಿಯಿಂದ ಕೂಡಿ, ಮರದಿರ್ದಪನೊ - ಮರತು ಬಿಟ್ಟಿರುವನೊ, ಎಂಬ - ಎನ್ನತಕ್ಕ, ಸಂದೇಹದಿಂ - ಅನುಮಾನದಿಂದ, ಚಂದನಾವತಿಯೊಳು - ಚಂದನಾವತಿ ಪಟ್ಟಣದಲ್ಲಿ, ಇರದೆ - ಇರಲಾರದವನಾಗಿ, ನಿಂದಲ್ಲಿ ನಿಲ್ಲದೆ - ಇದ್ದಕಡೆ ಇರದೆ, ಕುಂತಳಪುರಕೆ - ಕುಂತಳ ರಾಜ್ಯಕ್ಕೆ, ಐತರೆ - ಬರುತ್ತಿರುವಾಗ, ಪಥದೊಳು - ದಾರಿಯೊಳಗೆ, ಒಂದು - ಒಂದಾನೊಂದು, ಸರ್ಪಂ - ಉರಗವು, ಇದಿರಾಗಿ - ಎದುರಿಗೆ ಬಂದು, ಇಂದುವರೆಗೆ - ಈ ಹೊತ್ತಿನ ತನಕ, ಒಡವೆಯಂ - ನಿನ್ನ ವಸ್ತುಗಳನ್ನೆಲ್ಲಾ, ನಿನ್ನ - ನಿನ್ನದಾದ, ಆಲಯದೊಳು - ಮಂದಿರದಲ್ಲಿ, ಕಾದಿರ್ದೆನು - ಕಾದುಕೊಳ್ಳುತ್ತಲಿದ್ದೆನು. ನಿನ್ನಸುತನಿಂದ - ನಿನ್ನ ಮಗನ ದೆಸೆಯಿಂದ, ಅದು - ಆ ರಕ್ಷಣೆಯು, ಪೋದುದು - ಹೋಯಿತು, ಎಂದು - ಎಂಬ ರೀತಿಯಾಗಿ, ನುಡಿದುದು - ಹೇಳಿತು || ೨೮ ||

ಟೀ|| ಮಾನವರತೆರದೊಳು - ಮನುಷ್ಯರಹಾಗೆ, ಫಣಿ-ಹಾವು, ಇಂತೆಂದು-ಈ ರೀತಿಯಾಗಿ, ಒರೆದು-ನುಡಿದು, ತಾನು-ಆ ಹಾವು, ಬಿಲಕೆ-ತನ್ನ ವಾಸಸ್ಥಾನಕ್ಕೆ, ಇಳಿಯೆ-ಇಳಿಯಲಾಗಿ, ಮಂತ್ರಿ-ಸಚಿವನಾದ ದುಷ್ಟಬುದ್ಧಿಯು, ಕೇಳ್ದು-ಅದರನುಡಿಗಳನ್ನಾಲಿಸಿ, ವಿಸ್ಮಿತನಾಗಿ-ಅಚ್ಚರಿಯನ್ನೈದಿ, ನಗರದ ಸಮೀಪಕೆ-ಪಟ್ಟಣದ ಹತ್ತಿರಕ್ಕೆ, ದುಮ್ಮಾನದಿಂ-ವ್ಯಸನದಿಂದ, ಐತರೆ-ಬರಲಾಗಿ, ಕಿವಿಯೊಳಗೆ-ತನ್ನ ಕಿವಿಗಳಿಗೆ, ವಾದ್ಯಘೋಷಂ-ವಾದ್ಯಗಳ ಶಬ್ದವು, ಇಡಿಯೆ-ವ್ಯಾಪಿಸಲು, ಇದು ಉತ್ಸವಂ-ಈ ಉತ್ಸವವು, ಊರೊಳು-ಪೊಳಲೊಳಗೆ, ಏನು-ಏನು ಎಂದು ನಡಿಯಲು, ಕಂಡವರು-ಇವನೆದುರಿಗೆ ಸಿಕ್ಕಿದವರು, ಚಂದ್ರಹಾಸಂಗೆ-ಇಂದುಹಾಸನಿಗೆ, ನಿನ್ನಸೂನು-ನಿನ್ನ ಕುವರನು, ತಂಗಿಯ-ತಂಗಿಯಾದ ವಿಷಯೆಯನ್ನು ಕೊಟ್ಟು, ವಿಧಾನದಿಂ-

---

ಬೈದು ಹಿಂಸಿಸಿ, ಅವಮಾನ ಮಾಡಿ, ಕಾಲಿಗೆ ಬೇಡಿಯನ್ನು ಸಹ ಹಾಕಿಸಿ, ಕಠಿಣವಾದ ಕಾರಾಗೃಹದಲ್ಲಿರಿಸಿ ಪಲ್ಲಕ್ಕಿಯಲ್ಲಿ ಕುಳಿತು ಬಹುಬೇಗನೆ ಕುಂತಳನಗರಕ್ಕೆ ಹಿಂದಿರುಗಿ ಬರುತ್ತಾ ||೨೭|| ಚಂದ್ರಹಾಸನಿಗೆ ವಿಷವನ್ನಿಟ್ಟು ಮದನನು ಕೊಂದನೊ ಅಥವಾ ಸೋಮಾರಿತನದಿಂದ ಸುಮ್ಮನೆ ಬಿಟ್ಟುಬಿಟ್ಟನೋ, ಎಂದು ಯೋಚಿಸುತ್ತಾ ಎಲ್ಲಿಯೂ ನಿಲ್ಲದೆ ಕುಂತಳನಗರದ ಹತ್ತಿರಕ್ಕೆ ಬರುವಾಗ ಅಲ್ಲಿ ಒಂದು ಸರ್ಪವು ಎದುರಾಗಿ ಬಂದಿತು. ಆಗ ಆ ಹಾವು ದುಷ್ಟಬುದ್ಧಿಯನ್ನು ಕುರಿತು, ಎಲೈ ಮಂತ್ರಿಯೇ ಇದುವರೆಗೂ ನಿನ್ನ ಮನೆಯಲ್ಲಿದ್ದ ಸರ್ವಸ್ವವನ್ನೂ ಕಾಯುತ್ತಲಿದ್ದೆನು, ಈಗ ಆ ಭಂಡಾರವೆಲ್ಲಾ ನಿನ್ನ ಕುವರನಿಂದ ಬರಿದಾಯಿತು, ಆದಕಾರಣ ನಾನು ಹಿಂದಿರುಗಿ ಬಂದೆನೆಂದು ತನ್ನಬಿಲಕ್ಕೆ ಹೊರಟು ಹೋಯಿತು||೨೮||ಸರ್ಪವು ಈಪ್ರಕಾರವಾಗಿ ಮನುಷ್ಯನಂತೆ ಹೇಳಿ ಹೊರಟು ಹೋಗಲಾಗಿ ದುಷ್ಟಬುದ್ಧಿಯ ಮನಸ್ಸಿನಲ್ಲಿ ಅತ್ಯಂತ ದುಃಖ ಉಂಟಾಯಿತು. ಹೀಗೆಯೇ

ಗೆಪ್ಪೊಳಲೊಳಾದಪುದೆಂದರು ॥೩೯॥ ಕೂರ್ಪಸಿಯನಿಳುಹಿದಂತಾಯ್ತು ಕರ್ಣದೊಳಾಗ । ಕಾರ್ದವಕ್ಷಿಗಳರುಣತೆಯನುಗ್ರಕೋಪದಿಂ । ಮೀರ್ದನೇತನ್ನನೇಮುವನಕಟಮಗನೆಂದುಪಲ್ಗಡಿವುತೈತರಲ್ಕೆ ॥ ಸಾರ್ದಸಂತೋಷದಿಂಬಂದುಕಾಲ್ಗೆರಗಿದೊಡೆ । ಚೀರ್ದುಸುತನಂಬೈದುಮಂತ್ರಿನಿಜಸದನಮಂ । ಸೇರ್ದುಪೊನ್ನಂದಣಮನಿಳಿದಾತ್ಮಜಾತನಂನೋಡಿಮುಳಿದಿಂತೆಂದನು॥೪೦॥ಮದನನಂಮದವರ್ಕಳಂಮಹಾವೈಭವದ । ಮದುವೆಯಂತ್ಯಾಗಭೋಗವನುಚಿತರಚಿತಮಂ । ಮುದುದದಿಂದಬಣ್ಣಿಸುವಭಟರನಂಬಿತ್ತರಿಸಿಪರಸುವಮಹೀಸುರರನು ॥ ಸುದತಿವಿಷಯೆಗೆತಕ್ಕವರನಿಂದುಹಾಸನೆಂ । ದಿದಿರಾಗಿಬಂದಾರತಿಯನೆತ್ತಿನುಡಿವಶಶಿ । ವದನೆಯರನವಘಡಿಸಿಮಂತ್ರಿಬೈದಂತನ್ನಮನೆಗಾಪ್ತರಾದವರನು ॥ ೪೧ ॥ ರಂಜಿಸುವಪೊಸಮುತ್ತಿನೆಸೆವಬಾಸಿಗದನೊಸ । ಲಿಂಜಡಿಮಣಿಭೂಷಣಾವಳಿಯಕಾಂತಿಯಿಂ । ಮಂಜುಳಹರಿದ್ರಕುಂಕುಮಚರ್ಚಿತಾಂಗದಿಂಚಲ್ವಿಂದಸಂಗಡಿಸಿದ ॥ ಅಂಜಳಗಳಿಂಮೆರೆವದಂ

---

ವೇದೋಕ್ತವಿಧಿಯಿಂದ, ಮದುವೆಯಂಮಾಡಿನದನು-ಲಗ್ನವಂ ನಡಿಸಿದನು. ಪೊಳಲೊಳ್-ನಗರದಲ್ಲಿ, ಆದರ-ಆ ಮದುವೆಯ, ಬಸಗೆ-ವಾರ್ತೆಯು, ಆದಪುದು-ಆಗುತ್ತಲಿದೆ, ಎಂದರು-ಎಂಬದಾಗಿ ತಿಳಿಸಿದರು ॥೩೯॥

ಟೀ॥ ಆಗ-ಚಂದ್ರಹಾಸನಿಗೆ ವಿಷಯೆಯನ್ನು ಕೊಟ್ಟು, ಮದನನು ಲಗ್ನವನ್ನು ಬೆಳಸಿದನೆಂಬ ಮಾತು ಕಿವಿಗೆ ಬಿದ್ದೊಡನೆಯೇ, ಕೂರ್ದ-ಹರಿತವಾದ, ಅಸಿಯನು-ಖಡ್ಗವನ್ನು, ಕರ್ಣದೊಳು-ಶ್ರೋತ್ರದೊಳಗೆ, ಇಳುಹಿದಂತೆ-ಚುಚ್ಚಿದ ಹಾಗೆ, ಆಯ್ತು-ಆಗಿಬಿಟ್ಟಿತು, ಅಕ್ಷಿಗಳು-ನಯನಂಗಳಾದರೊ, ಉಗ್ರಕೋಪದಿಂದ-ಹೆಚ್ಚಾದ ಕೋಪದಿಂದ, ಅರುಣತೆಯನು-ಕೆಂಪುವರ್ಣವನ್ನು, ಕಾರ್ದುವು-ಕಾರಿದವು (ಪಡೆದವು) ತನ್ನ-ನನ್ನದಾದ, ನೇಮುವನು-ಆಜ್ಞೆಯನ್ನು, ಮಗನು-ಕುವರನು, ಮೀರ್ದನು-ಅತಿಕ್ರಮಿಸಿದನು, ಅಕಟ-ಅಯ್ಯೋ, ಎಂದು-ಎಂಬತೆರನಾಗಿ, ಪಲ್ಗಡಿವುತ-ಹಲ್ಲುಗಳನ್ನು ಕಡಿಯುತ್ತ, ಐತರಲ್ಕೆ-ಬರಲಾಗಿ, (ಮದನನು) ಸಾರ್ದ-ಉಂಟಾದ, ಸಂತೋಷದಿಂ-ಆನಂದದಿಂದ, ಕಾಲ್ಗೆ-ಕಾಲುಗಳಿಗೆ, ಎರಗಿದೊಡೆ-ವಂದನೆಯಂಗೈಯ್ಯಲು, ಮಂತ್ರಿ-ದುಷ್ಟಬುದ್ಧಿಯು, ಚೀರ್ದು-ಆರ್ಭಟಿಸಿ, ಸುತನಂ-ಕುವರನನ್ನು, ಬೈದು-ದೂಷಿಸಿ, ನಿಜಸದನಮಂ-ತನ್ನ ಮನೆಯನ್ನು, ಸೇರ್ದು-ಪೊಕ್ಕು, ಪೊನ್ನಂದಣವನು-ಚಿನ್ನದ ಪಲ್ಯಯನವನ್ನು, ಇಳಿದು-ಇಳಿದವನಾಗಿ, ಆತ್ಮಜಾತನಂ-ಕುವರನನ್ನು, ನೋಡ-ಈಕ್ಷಿಸಿ, ಮಳಿದು-ಸಿಟ್ಟುಮಾಡಿಕೊಂಡು, ಇಂತು-ಮುಂದೆ ಹೇಳುವಂತೆ, ಎಂದನು-ನುಡಿದನು ॥೪೦॥

ಟೀ॥ ಮದನನಂ-ಮದನನೆಂಬ ತನ್ನ ಕುವರನನ್ನೂ, ಮದುವರ್ಕಳಂ-ಗಂಡುಹೆಣ್ಣುಗಳನ್ನೂ, ಮಹಾವೈಭವದ-ಅತ್ಯುತ್ಸವದಿಂದ ಕೂಡಿರತಕ್ಕ, ಮದುವೆಯಂ-ಲಗ್ನವನ್ನೂ, ತ್ಯಾಗಭೋಗವನು-ದಾನಮಾಡುವ ಸುಖವನ್ನೈವುದು ಇವುಗಳನ್ನೂ, ಉಚಿತ-ತಕ್ಕದ್ದಾದ, ರಚಿತಮಂ-ಮಾಡಿರತಕ್ಕ ಕಾರ್ಯಗಳನ್ನೂ, ಮುದದಿಂದ-ಆನಂದದಿಂದ, ಬಣ್ಣಿಸುವ-ವರ್ಣನೆಯಂ ಮಾಡತಕ್ಕ, ಭಟರನು-ಸ್ತುತಿಪಾಠಕರನ್ನೂ, ಬಿತ್ತರಿಸಿ-ಅತಿಶಯವಾಗಿ, ಪರಸುವ-ಆಶೀರ್ವಾದ ಮಾಡತಕ್ಕ, ಮಹೀಸುರರನು-ಭೂಸುರರನ್ನೂ, ಇಂದುಹಾಸನು-ಶಶಿಹಾಸನೇ, ಸುದತಿ-ವಿಷಯೆಗೆ, ತಕ್ಕ-ಅನುರೂಪವಾಗಿರತಕ್ಕ, ವರನು-ಪತಿಯು, ಎಂದು-ಎಂಬತೆರನಾಗಿ, ಇದಿರಾಗಿಬಂದು-ಎದುರಾಗಿ ಬಂದವರಾಗಿ, ಆರತಿಯನು, ಎತ್ತಿ-ಬೆಳಗಿ, ನುಡಿವ-ಹಾಡಗಳನ್ನುಹೇಳತಕ್ಕ, ಶಶಿವದನೆಯರನು-ಇಂದುಮುಖಿಯರನ್ನೂ, ಮಂತ್ರಿಯು ಅವಘಡಿಸಿ-ತಿರಸ್ಕಾರಮಾಡಿ, ತನ್ನಯಮನೆಗೆ-ತನ್ನ ಮಂದಿರಕ್ಕೆ, ಆಪ್ತ

---

ಬರುತ್ತಲಿರುವಾಗ ಕುಂತಳಪುರವು ಸಿಕ್ಕಿತು. ಗುಂಪು ಗುಂಪಾಗಿ ಜನಗಳು ಊರೊಳಗಿನಿಂದ ಬರುತ್ತಲಿದ್ದರು. ಊರಲ್ಲಿ ನಡೆಯುತ್ತಲಿದ್ದ ಸುವಾದ್ಯ ಘೋಷಂಗಳು ದುಷ್ಟಬುದ್ಧಿಗೆ ಕೇಳಿಸಿದ್ದರಿಂದ ದಾರಿಗರಾಗಿ ಬರುತ್ತಲಿದ್ದವರನ್ನು ಊರಲ್ಲಿ ಇಷ್ಟು ವಿಜೃಂಭಣೆಗೆ ಕಾರಣವೇನೆಂದು ಕೇಳಿದನು. ಅವರು ಎಲೈ ಮಂತ್ರಿಯೇ, ನಿನ್ನ ಕುವರನಾದ ಮದನನು ನಿನ್ನ ತನುಜೆಯಾದ ವಿಷಯೆಯನ್ನು ಚಂದ್ರಹಾಸನಿಗೆ ಕೊಟ್ಟು ಯಥಾಶಾಸ್ತ್ರೀಯವಾಗಿ ವಿವಾಹ ಮಹೋತ್ಸವವಂ ಬೆಳಸಿದನು, ಆ ಮಹೋತ್ಸವದಸಡಗರವೇ ಇದೆಂದು ನುಡಿದ ಸುದ್ದಿಯು ದುಷ್ಟಬುದ್ಧಿಯ ಕಿವಿಗೆ ಬಿದ್ದೊಡನೆಯೇ, ॥ ೩೯ ॥ ಕಿವಿಯೊಳಗೆ ಕಾದ ಕಬ್ಬಿಣದ ಸಲಾಕೆಯನ್ನು ಚುಚ್ಚಿದಹಾಗಾಯಿತು. ಕೋಪವಿಮ್ಮಡಿಸಲಾಗಿ ಕಣ್ಣುಗಳು ಕೆಂಡದಂತಾದವು, ತನ್ನ ಅಪ್ಪಣೆಯನ್ನು ಮದನನು ಮೀರಿದನಲ್ಲಾ ಎಂದು ಹಲ್ಲುಗಳನ್ನು ಕಡಿಯುತ್ತಾ ಪುರಪ್ರವೇಶಂಗೈದದ್ದನ್ನು ಮಗನಾದ ಮದನನು ನೋಡಿ ಅತ್ಯಾನಂದದಿಂದ ತಂದೆಯಬಳಿಗೆ ಬಂದು ವಂದನೆಯಂಗೈಯ್ಯಲು, ದುಷ್ಟಬುದ್ಧಿಯು ಕೋಪ ವಿಮ್ಮಡಿಸಲಾಗಿ, ಹಲ್ಲುಗಳನ್ನು ಕಟಕಟನೆ ಕಡಿಯುತ್ತಾ ಮಗನನ್ನು ನಾನಾ ಪ್ರಕಾರವಾಗಿ ಬೈದು ತನ್ನ ಮನೆಗೆ ಬಂದು ಪಲ್ಲಕ್ಕಿಯಿಂದಿಳಿದು ॥೪೦॥ ಒಳಗೆ ಬರಲು ಮದುವೆಯ ಅತ್ಯುತ್ಸವವು ಕಾಣಬಂದಿತು. ಎಲ್ಲಿ ನೋಡಿದರೂ ಮಂಗಳ ಘೋಷಗಳೇ ತುಂಬಿದ್ದವು. ಮುತ್ತೈದೆಯರು ಹಾಡುಗಳನ್ನುಹೇಳುತ್ತಲೂ, ಬ್ರಾಹ್ಮಣರು ಆಶೀರ್ವಾದವನ್ನು ಮಾಡುತ್ತಲೂ, ಕೆಲವರು ಮದುವೆಯ ಸಂಭ್ರಮವನ್ನು ಹೇಳುತ್ತಲೂ ಅತ್ಯಾನಂದದಿಂದಿರುತ್ತಿದ್ದರು. ಇವರೆಲ್ಲರೂ ಆಗತಾನೆ ಬಂದ ಮಂತ್ರಿಯನ್ನೆದುರ್ಗೊಳ್ಳಲು ಬರಲಾಗಿ ದುಷ್ಟಬುದ್ಧಿಯು ಎಲ್ಲ

ಪತಿಗಳಭಿನಮಿಸೆ | ಮಂಜರಂಮರಿಗಿಳಿಗಳಂನಿರೀಕ್ಷಿಸುವಂತೆ | ನಂಜಿಡಿದಮನದಮಾತ್ಯಂನೋಡಿತನ್ನಸುತನಂಬಯ್ಯುತಿಂತೆಂದನು||೩೨||ಮೂಢನೀನೆಲವೆಲವೊಮದನನಿನ್ನೆಡೆಗೆನಾಂ|ಗೂಢದಿಂಬರೆಸಿಕಳುಹಿದೊಡುರುವಕಜ್ಜಮಂ | ರೂಢಿಯಿಂಮಾಡಿಕೆಡಿಸಿದೆ ಪಾಪಿಹೃದಯಶೂಲದವನೆನಗೆಮೇದಿನಿಯೊಳು || ಗಾಢದಿಂಬಲಿದೆಸಾಮ್ರಾಜ್ಯಸಿಂಹಾಸನಾ | ರೂಢನಾಗಿರಲೊಲ್ಲದಾರ್ಜಿಸಿದವಿತ್ತಮಂ|ಪ್ರೌಢದಿಂದಖಿಳಜನಕಿತ್ತೆ ವನವಾಸವೇಗತಿನಿನಗೆಹೋಗೆಂದನು ||೩೩|| ಪಿತನಮಾತಂಕೇಳ್ದುಮದನನುರೆಬೆರಗಾಗಿ| ಖತಿಯೇಕೆಜೀಯನಿಮ್ಮಡಿಗಳನಿರೂಪಮಂ | ಪ್ರತಿಪಾಲಿಸಿದೆನಲ್ಲದಾನತಿಕ್ರಮಿಸಿಮಾಡಿದಕಜ್ಜಮೇನಿದರೊಳು || ಕ್ಷಿತಿಗೆಕೌತುಕವೆ

---

ರಾದವರನು-ಬೇಕಾದವರನ್ನು, ಬೈದಂ-ದೂಷಣೆಯಂ ಮಾಡಿದನು. ||೩೧||

ಟೀ|| ರಂಜಿಸುವ-ಹೊಳೆಯುತ್ತಲಿರುವ, ಪೊಸ-ನೂತನವಾದ, ಮುತ್ತಿನ-ಮುತ್ತುಗಳಿಂದ ಮಾಡಿರತಕ್ಕ, ಬಾಸಿಗದ-ಭಾಷಿಂಗವನ್ನು ಕಟ್ಟಿಕೊಂಡಿರುವ, ನೊಸಲಿಂ-ಹಣೆಯ ಭಾಗವನ್ನುಳ್ಳ, ಜಡಿವ-ಬಾಗುತ್ತಲಿರುವ, ಮಣಿ-ರತ್ನಖಚಿತಗಳಾದ, ಭೂಷಣಾವಳಿಯ-ತೊಡಿಗೆಗಳಕಾಂತಿಯ,ಕಾಂತಿಯಿಂ-ಪ್ರಕಾಶದಿಂದಲೂ ಮಂಜುಳ-ಮನಸ್ಸಿಗೆ ಸಂತೋಷಕರವಾದ,ಹರಿದ್ರಾ-ಕುಂಕುಮಗಳಿಂದ, ಚರ್ಚಿತ-ಲೇಪನೆಯಂ ಮಾಡಿರುವ, ಅಂಗದಿಂದ-ದೇಹದಿಂದಲೂ, ಚೆಲ್ವಿಂದ-ಅಲಂಕಾರದಿಂದ, ಸಂಗಡಿಸಿದ-ಸೇರಿರತಕ್ಕ, ಅಂಜಲಿಗಳಿಂ-ಬೊಗಸೆಗಳಿಂದ, ಮೆರೆವ-ಹೊಳೆಯುತ್ತಲಿರತಕ್ಕ, ದಂಪತಿಗಳು-ವಿಷಯೆ ಇಂದುಹಾಸರು, ಅಭಿನಮಿಸೆ-ಎರಗಲಾಗಿ, ಅಮಾತ್ಯಂ-ಸಚಿವನಾದ ದುಷ್ಟಬುದ್ಧಿಯಾದರೊ, ಮರಿಗಿಳಿಗಳಂ-ಗಿಣಿಯ ಮರಿಗಳನ್ನು, ಮಂಜರಂ-ಬೆಕ್ಕು, ನಿರೀಕ್ಷಿಸುವಂತೆ-ನೋಡುವರೀತಿಯಾಗಿ, ನಂಜಿಡಿದ-ವಿಷಭರಿತವಾದ, ಮನದ-ಚಿತ್ತವುಳ್ಳ, ಅಮಾತ್ಯಂ-ದುಷ್ಟಬುದ್ಧಿಯೆಂಬ ಸಚಿವನು, ತನ್ನಸುತನಂ-ತನ್ನ ಕುವರನನ್ನು, ನೋಡಿ-ನೋಡಿದವನಾಗಿ, ಬೈವುತ-ದೂಷಿಸುತ್ತ, ಇಂತು-ಮುಂದೆ ಹೇಳುವಂತೆ, ಎಂದನು-ನುಡಿದನು. ||೩೨||

ಟೀ|| ಎಲವೆಲವೊ-ಎಲಎಲಾ! ಮದನ, ಮೂಢ-ತಿಳಿವಳಿಕೆಯಿಲ್ಲದವನು, ನೀನು-ನೀನಾಗಿರುವಿ, ನಾಂ-ನಾನಾವರೊ, ಗೂಢದಿಂಬರಸಿ-ಗೋಪ್ಯವಾಗಿ ಬರಸಿ, ನಿನ್ನೆಡಗೆ - ನಿನ್ನ ಹತ್ತಿರಕ್ಕೆ, ಕಳುಹಿದೊಡೆ ಕಳುಹಿಸಿದರೆ, ರೂಢಿಯಿಂ-ಪ್ರಕಟವಾಗುವಂತೆ, ಉರುವಕಜ್ಜಮಂ-ಅದ್ಭುತಕಾರ್ಯವನ್ನು, ಮಾಡಿ-ರಚಿಸಿ, ಕೆಡಸಿದೆ-ನನ್ನ ಯೋಚನೆಯನ್ನು ವ್ಯರ್ಥಮಾಡಿದೆ, ಮೇದಿನಿಯೊಳು-ಇಳೆಯೊಳಗೆ, ಪಾಪಿ-ಪಾಪಿಷ್ಠನು, (ಪಿತೃವಾಕ್ಯವನ್ನು ಉಲ್ಲಂಘಿಸಿದ ಮಹಾ ಪಾತಕಕ್ಕೆ ಭಾಗಿಯಾದವನು) ಎನಗೆ-ನನಿಗಾದರೊ, ಹೃದಯ - ಮರ್ಮಭೇದವನ್ನುಂಟುಮಾಡುವ ಸಲಾಕೆಯನ್ನು, ಗಾಢದಿಂ - ಬಲವಾಗಿ, ಬಲಿದೆ-ಚುಚ್ಚಿಬಿಟ್ಟೆ, ಸಾಮ್ರಾಜ್ಯ-ಚಕ್ರವರ್ತಿಯ, ಸಿಂಹಾಸನ-ಆಸನದಲ್ಲಿ, ಆರೂಢನಾಗಿ-ಕುಳಿತವನಾಗಿ, ಇರಲು-ಇರುವುದಕ್ಕೆ, ಒಲ್ಲದೆ-ಇಷ್ಟವಿಲ್ಲದೆ, ಆರ್ಜಿಸಿದ-ಗಳಿಸಿಟ್ಟದ್ದು, ವಿತ್ತಮಂ-ಹಣವನ್ನು, ವೇಡ್ಯೈಸದೆ - ಸಂರಕ್ಷಣೆಮಾಡಿಕೊಳ್ಳದೆ, ಅಖಿಳಜನಕೆ - ಸಕಲರಿಗೂ, ಇತ್ತೆ-ಕೊಟ್ಟು ಕಳದುಬಿಟ್ಟೆ, ನಿನಿಗೆ-ನಿನಿಗಾದರೊ, ವನವಾಸವೇ-ಕಾಡಿನಲ್ಲಿ ವಾಸಮಾಡತಕ್ಕದ್ದೆ, ಗತಿ-ಮಾರ್ಗವು, ಹೋಗು-ಹೊರಟು ನಡೆ, ಎಂದನು-ಎಂಬುದಾಗಿ, ದುಷ್ಟಬುದ್ಧಿಯು-ಮದನನ್ನು, ತಿರಸ್ಕರಿಸಿದನು-ಗದರಿಸಿ ಬಿಟ್ಟನು. ||೩೩||

ಟೀ|| ಮದನನು-ಮದನನೆಂಬ ದುಷ್ಟಬುದ್ಧಿಯ ಮಗನು, ಪಿತನಮಾತಂ-ತಂದೆಯ ವಚನವನ್ನು, ಕೇಳ್ದು-ಕೇಳಿ, ಉರೆ-ಹೆಚ್ಚಾಗಿ ಬೆರಗಾಗಿ-ಆಶ್ಚರ್ಯಪಟ್ಟು, ಜೀಯ-ಸ್ವಾಮಿಯಾದ ತಂದೆಯೇ, ಖತಿಯೇಕೆ-ನನ್ನಮೇಲೆ ಇಷ್ಟು ಕೋಪ ಉಂಟಾಗಲು ನಿಮಿತ್ತವೇನು. ನಿಮ್ಮಡಿಗಳ-ನಿಮ್ಮ ಚರಣಗಳ, ನಿರೂಪಮಂ - ಆಜ್ಞೆಯನ್ನು, ಪ್ರತಿಪಾಲಿಸಿದೆನು - ನೆರವೇರಿಸಿದ್ದೇನೆ. ಅಲ್ಲದೆ-ಅದನ್ನು ಬಿಟ್ಟು, ಇದರೊಳು-ಈಗ ನಾನು ರಚಿಸಿರುವುದರಲ್ಲಿ, ಅತಿಕ್ರಮಿಸಿ - ನಿನ್ನಾಜ್ಞೆಗೆ ವ್ಯತಿರಿಕ್ತವಾಗಿ, ಮಾಡಿದ-ಮಾಡಿರುವಂಥ, ಕಜ್ಜಂ-ಕಾರ್ಯವು, ಏನು-ಏನಿರುವುದು, ವಿಷಯೆಗೆ-ತಂಗಿಯಾದ ವಿಷಯೆಗಾದರೊ, ಪತ್ರಸಮ್ಮತವಿಡಿದು-ನಿನ್ನ ಕಾಗದದಲ್ಲಿ ಬರೆದ ರೀತಿಯಾಗಿ, ವಿವಾಹಮಂ-ಲಗ್ನವನ್ನು, ವಿರಚಿಸಿದೊಡೆ-ನೆರವೇರಿಸಿದರೆ, ಎನಗೆ-ನಿನ್ನಾಜ್ಞೆಯಂ ಸಲಿಸಿರ

---

ರನ್ನೂ ಮನಸ್ವಿಯಾಗಿ ಗದರಿಸಿದನು. ||೩೧|| ಆ ಬಳಿಕ ವಧೂವರರಾದ ವಿಷಯೆ ಇಂದುಹಾಸರು ಬಂದು ಅಂಜಲಿಬದ್ಧರಾಗಿ ನಮಸ್ಕಾರ ಮಾಡಲಾಗಿ ಈ ನೀಚಬುದ್ಧಿಯುಳ್ಳ ಮಂತ್ರಿಯು ಗಿಳಿಯ ಮರಿಗಳನ್ನು ನೋಡುತ್ತಲಿರುವ ಬೆಕ್ಕಿನಂತೆ ಮನಸ್ಸಿನಲ್ಲಿ ವಿಷದಿಂದ ತುಂಬಿದವನಾಗಿ ತನ್ನ ಮಗನಾದ ಮದನನ್ನು ಕುರಿತು. ||೩೨|| ಎಲೆ ಮದನಾ! ಮೂಢಾತ್ಮ! ನಾನು ಗೂಢವಾಗಿ ನಿನಗೆ ಬರದದ್ದೇನು? ನೀನು ಮಾಡಿದ ಅತ್ಯದ್ಭುತಕೃತ್ಯವೇನು? ಅಯ್ಯೋ ಪಾಪಿಯೇ ನಾನು ಸಂಪಾದಿಸಿದ್ದನ್ನೆಲ್ಲಾ ಅನ್ಯಾಯವಾಗಿ ವೆಚ್ಚಮಾಡಿ ರಾಜ್ಯಭಾರನಂ ಗೈಯುವ ಪುಣ್ಯವನ್ನೂ ಹೋಗಲಾಡಿಸಿಕೊಂಡ ನಿನಿಗೆ ವನವಾಸವೇ ಸರಿ ||೩೩|| ನೀನು ನನ್ನೆದುರಿಗೆ ನಿಲ್ಲದೆ ಹೊರಟುಹೋಗೆಂದು ನುಡಿದನು. ಮದನನಾದರೊ. ತಂದೆಯ ಈ ತೆರನಾದ ನುಡಿಗಳನ್ನಾಲಿಸಿದ ಕೂಡಲೇ ಕೈಗಳನ್ನು ಜೋಡಿಸಿಕೊಂಡು ತಂದೆಯೇ ನನ್ನಮೇಲೆ ಇಷ್ಟು ಕೋಪವೇಕೆ? ನಿನ್ನ ಅಪ್ಪಣೆಯ ಪ್ರಕಾರ ನಾನು ಈ ಕಾರ್ಯವನ್ನು ಮಾಡಿರುವೆನಲ್ಲದೆ ಸ್ವಲ್ಪವಾದರೂ ನಿನ್ನಾಜ್ಞೆಗೆ ವ್ಯತಿರಿಕ್ತವಾಗಿ ನಡೆಯಿಸಿಲ್ಲವು. ನೀನು ಬರೆದ ಕಾಗದದಂತೆ ನಾನು ಮಾಡಿ

ತಂದೆಯಮಾತಿಗಾಗಿರಘುಪತಿವರ್ತಿಸನೆವಿಪಿನವಾಸದೊಳ್ಪುತ್ರಸ | ನ್ಮತವಿಡಿದುವಿಷೆಯೆಗೆವಿವಾಹಮುಂವಿರಚಿಸಿದೊಡಾಯ್ತೆನಗೆ ವನಮೆಂದನು ||೩೪|| ಗನ್ನಗತಕದಮಾತುಸಾಕೆನ್ನಕಣ್ಣಮುಂ | ದಿನ್ನಿರದೆಹೋಗೆಂದುಮಂತ್ರಿಮಗನಂಬೈದು | ಮುನ್ನತಾಂ ಬರೆಸಿಕಳುಹಿದಪತ್ರಮಂತರಿಸಿನೋಡಿಕೊಂಡದರೊಳಿರ್ದ || ಭಿನ್ನಿಸಿದಭಾವಾರ್ಥಮಂತಿಳಿದುತಪ್ಪಿಲ್ಲ | ತನ್ನತನಯನೊಳಿನ್ನು ಲೋಕದೊಳ್ವಿಧಿಲಿಖಿತ | ಮಂನಿವಾರಿಪರುಂಟೆಶಿವಶಿವಾಪೊಸತೆಂದುಬಿಸುಸುಯ್ದುಬೆರಗಾದನು || ೩೫ || ವಿಷವಮೋಹಿಸು ವಂತೆಕೊಡುವುದೆನಲೀತಂಗೆ | ವಿಷಯೆಮೋಹಿಸುವಂತೆಲೇಖನದಬರಹತಾಂ | ವಿಷಮುವಿದುವಿಧಿಕೃತವೊತನ್ನಮೋಸವೊಬರೆದ ವನಮುರಹೊಶಶಿಹಾಸನ|| ವೃಷೆಯೊಮದನನಮೇಲೆತಪ್ಪಿಲ್ಲಮೊದಲೆನಗೆ| ಋಷಿಗಳಾಡಿದಮಾತುಪುಸಿಯದೆಂದಾಮಂತ್ರಿ|ವಿಷಮ ಬುದ್ಧಿಯೊಳೊಂದುಪಾಯಮುಂಮನದೊಳಗೆನೆನದುಚಿಂತಿಸುತಿರ್ದನು ||೩೬|| ವಿಧುಹಾಸನಂಪಲವುಪಾಯದಿಂದೀಗನಾಂ| ವಧಿಸ

---

ತಕ್ಕ ನನಿಗೆ, ವನವಾಸಂ-ಕಾಡಿನಲ್ಲಿ ವಾಸಮಾಡತಕ್ಕದ್ದು, ಆಯ್ತು-ಆಗಿಬಿಟ್ಟತೆ, ರಘುಪತಿ-ಶ್ರೀರಾಮನು, ವಿಪಿನವಾಸದೊಳ್-ಕಾಡಿನವಾಸಕ್ಕೆ, ತಂದೆಯಮಾತಿಗಾಗಿ-ತಂದೆಯ ಅನುಜ್ಞೆಯನ್ನು ನಡೆಯಿಸುವ ಸಲುವಾಗಿ, ವರ್ತಿಸನೆ-ನಡೆಯಲಿಲ್ಲವೆ, ಕ್ಷಿತಿಗೆ-ಲೋಕದಲ್ಲಿ, ಕೌತುಕವೆ-ತಂದೆಯ ಮಾತನ್ನು ನಡೆಯಿಸತಕ್ಕದ್ದು ಅಚ್ಚರಿಯೆ, ಎಂದನು-ಎಂಬುದಾಗಿ ನುಡಿದನು. ||೩೪||

ಟೀ|| ಗನ್ನಗತಕದಮಾತು-ಗರ್ವೋದ್ರೇಕದಿಂದಾಡತಕ್ಕ ಮಾತುಗಳು, ಸಾಕು-ಇನ್ನು ಬೇಡ, ಎನ್ನಕಣ್ಣಮುಂದೆ-ನನ್ನ ಕಣ್ಣಿಗೆದುರಾಗಿ, ಇನ್ನು-ಇನ್ನು ಮೇಲೆ, ಇರದೆ-ನಿಲ್ಲದಹಾಗೆ, ಹೋಗು-ಹೊರಟುನಡೆ, ಎಂದು-ಎಂಬುದಾಗಿ, ಮಗನಂ-ಕುವರನಾದ ಮದನನನ್ನು, ಮಂತ್ರಿ-ದುಷ್ಟಬುದ್ಧಿಯು, ಬೈದು - ದೂಷಿಸಿ, ತಾಂ-ತಾನಾದರೊ, ತನ್ನ - ಪೂರ್ವದಲ್ಲಿ, ಬರಸಿ, ಕಳುಹಿದ-ಬರೆದು ಕಳುಹಿಸಿಕೊಟ್ಟದ್ದ, ಪತ್ರಮಂ-ಕಾಗದವನ್ನು, ತರಿಸಿ-ತರಿಸಿಕೊಂಡು, ಅದರೊಳು-ಆ ಕಾಗದದಲ್ಲಿ, ಇರ್ದ-ಇದ್ದಂಥ, ಭಿನ್ನಿಸಿದ-ಭೇದವಾಗಿದ್ದ, ಭಾವಾರ್ಥಮಂ - ಆಶಯವನ್ನು, ತಿಳಿದು-ತಿಳಿದವನಾಗಿ, ಇನ್ನು-ಮುಂದೆ, ತನ್ನತನಯನೊಳು-ತನ್ನ ಕುವರನಲ್ಲಿ, ತಪ್ಪು-ಅಪರಾಧವು, ಇಲ್ಲ-ಇಲ್ಲವು, ವಿಧಿಲಿಖಿತಮಂ-ಬ್ರಹ್ಮಸಂಕಲ್ಪವನ್ನು, ನಿವಾರಿಪರು-ಹೋಗಲಾಡಿಸತಕ್ಕವರು, ಲೋಕದೊಳ್-ಭೂಮಿಯಲ್ಲಿ, ಉಂಟೆ-ಇದ್ದಾರೆಯೆ, ಶಿವಶಿವ-ಈಶ್ವರ ಈಶ್ವರ, ಪೊಸದು-ಹೊಸದಾಗಿದೆ, ಎಂದು-ಎಂಬತೆರನಾಗಿ ಎಂದುಕೊಂಡು, ಬಿಸುಸುಯ್ದು-ದೀರ್ಘವಾಗಿ ಉಸಿರನ್ನು ಬಿಟ್ಟು, ಬೆರಗಾದನು-ಅಚ್ಚರಿಯಿಂದ ಕೂಡಿದನು||೩೫||

ಟೀ|| ಆಮಂತ್ರಿ-ಅಮಾತ್ಯನಾದ ಆ ದುಷ್ಟಬುದ್ಧಿಯು, (ತನ್ನಲ್ಲಿತಾನೆ) ಮೋಹಿಸುವಂತೆ-ಜ್ಞಾನವು ತಪ್ಪಿಹೋಗುವ ರೀತಿಯಾಗಿ, ವಿಷವ-ಗರಳವನ್ನು, ಈತಂಗೆ-ಈ ಇಂದುಹಾಸನಿಗೆ, ಕೊಡುವುದು-ಕೊಡಬೇಕು, ಎನಲು-ಎಂದು ನುಡಿಯಲು, ಲೇಖನದಬರಹ-ಬರೆದಿರತಕ್ಕ ಬರವಣಿಗೆಯಾದರೊ, ವಿಷಯೆ-ವಿಷಯೆಯೆಂಬ ನನ್ನ ಕುವರಿಯು, ಮೋಹಿಸುವಂತೆ-ಈ ಇಂದುಹಾಸನನ್ನು ವರಿಸುವಂತೆ, ತಾಂ-ಆ ಲೇಖನವು, ವಿಷಮವು-ಬದಲಾಯಿಸಿ ಹೋಗಿದೆ, ಇದು-ಈ ಲೇಖನವು, ವಿಧಿಕೃತವೋ-ಸೃಷ್ಟಿಕರ್ತನ ಬದಲಾವಣೆಯೊ, ತನ್ನಮೋಸವೊ-ನನ್ನ ಮೋಸದಿಂದ ಹೀಗಾಯಿತೊ, ಬರೆದವನ ಕಾಗದವನ್ನು ಬರೆದಿರತಕ್ಕ ಮನುಷ್ಯನ, ಮರಹೊ-ಆಲಸ್ಯವೊ, ಶಶಿಹಾಸನ-ಇಂದುಹಾಸನ, ವೃಷೆಯೊ-ಅನೃತವೊ, (ಇಂದು ಹಾಸನೇ ಮುದ್ರೆಯನ್ನು ತೆರೆದು ಈ ರೀತಿ ತಿದ್ದಿಬಿಟ್ಟನೊ) ತಪ್ಪು-ದೋಷವು, ಮದನನಮೇಲೆ - ಮದನನೆಂಬ ನನ್ನ ಕುವರನಮೇಲೆ, ಇಲ್ಲ - ಇಲ್ಲವು, ಋಷಿಗಳು-ತಪಸ್ವಿಗಳು, ಎನಗೆ-ನನ್ನೊಂದಿಗೆ, ಮೊದಲು-ಪ್ರಾರಂಭದಲ್ಲಿ, ಆಡಿದ-ನುಡಿದ, ಮಾತು-ನುಡಿಯು, ಪುಸಿಯದು-ಸುಳ್ಳಾಗತಕ್ಕದ್ದಲ್ಲವು, ಎಂದು-ಎಂಬುದಾಗಿ, ಮನದೊಳಗೆ-ತನ್ನ ಅಂತರಂಗದಲ್ಲಿ, ವಿಷಯು-ಒಂದು ಕೆಟ್ಟಯೋಚನೆಯನ್ನು, ಚಿಂತಿಸುತಿರ್ದನು-ಯೋಚನೆಯಂ ಗೈಯುತ್ತಲಿದ್ದನು. ||೩೬||

---

ದರೆ ನನಿಗೆ ವನವಾಸಪ್ರಾಪ್ತಿಯಾಯಿತೆ ! ಒಳ್ಳೇದು ಪೂರ್ವದಲ್ಲಿ ಶ್ರೀರಾಮಚಂದ್ರನು ತಂದೆಯ ಆಜ್ಞೆಯಂ ಪಾಲಿಸುವದಕ್ಕಾಗಿ ವನವಾಸಮಂ ಗೈದಂತೆ ನಾನೂ ಕೂಡ ನಿನ್ನ ಅಪ್ಪಣೆಯನ್ನು ತಲೆಯಮೇಲಿಟ್ಟುಕೊಂಡು ಅರಣ್ಯಕ್ಕೆ ಹೊರಡುವೆನೆಂದು ನುಡಿದನು ||೩೪|| ಸುತನ ಈ ತೆರನಾದ ಮಾತುಗಳನ್ನು ಕೇಳಿದ ದುಷ್ಟಬುದ್ಧಿಯು ಕೋಪದಿಂದ ತನ್ನ ಮಗನನ್ನು ಮತ್ತೆ ಬ್ಯಯುತ್ತಾ, ನನ್ನೆದುರಿಗೆ ನಿಲ್ಲಬೇಡವೆಂದು ಗದರಿಸಿ ಅನಂತರ ತಾನು ಬರೆದಿದ್ದ ಕಾಗದವನ್ನು ತರಿಸಿ ಓದಿಕೊಂಡು ಭಿನ್ನಾಭಿಪ್ರಾಯವಾಗಿರುವುದರಿಂದ ಇದು ನನ್ನ ಮಗನ ತಪ್ಪಲ್ಲವೆಂದು ತಿಳಿದುಕೊಂಡು ವಿಧಿವಿಲಾಸಕ್ಕೆ ಭ್ರಾಂತನಾಗಿ ||೩೫|| ಆಹಾ ! ನಾನು ಈ ಕಾಗದದಲ್ಲಿ ವಿಷವ ಮೋಹಿಸುವಂತೆ ಎಂದು ಬರೆದಿದ್ದೆನು ಈಗ ನೋಡಿದರೆ ವಿಷಯೆ ಮೋಹಿಸುವಂತೆ ಎಂದಿರುವುದರಿಂದ ಮದನನಲ್ಲಿ ಏನೂ ದೋಷವಿಲ್ಲ ಅಯ್ಯೋ ! ಇದು ದೈವಕೃತವೊ, ನನ್ನ ಅವಿವೇಕವೊ, ಬರದವನ ತಪ್ಪೊ, ಅಥವಾ ಇಂದುಹಾಸನ ಮೋಸವೊ ಯಾವದೂ ತಿಳಿಯದೆ ಹೋಯಿತಲ್ಲಾ ! ಏನುಮಾಡಲಿ ಪೂರ್ವದಲ್ಲಿ ಬ್ರಾಹ್ಮಣರು ಹೇಳಿದ ಮಾತು ಎಂದಿಗೂ ಸುಳ್ಳಾಗುವುದಿಲ್ಲವಾದರೂ ಉಪಾಯಾಂತರದಿಂದ ಇದನ್ನು ತಪ್ಪಿಸಬೇಕು || ೩೬ || ಇಲ್ಲದಿದ್ದರೆ ನನ್ನ ವಂಶಕ್ಕೆ

ಬಿರ್ೞದೆತನ್ನಸಂತತಿಗೆಧರೆಯನಾ | ಳ್ವಧಿಕಾರಪದವಾಗದದರಿಂದಕುಲಘಾತಕಗೆಮದುವೆಯಾದವಿಷಯೆ || ವಿಧವೆಯಾಗಿರಲೆಂದುಹೃದಯದೊಳ್ನಿಶ್ಚೈಸಿ | ಮಧುರೋಕ್ತಿಯಿಂದಮದವರ್ಕಳಂಮನ್ನಿಸಿವಿ | ವಿಧವೈಭವಂಗಳಂನಡಿಸಿಜಾಮಾತನಂಮಂತ್ರಿಕರದಿಂತೆಂದನು ||೩೭|| ವೀರಬಾರ್ಚಂದ್ರಹಾಸನೀನಿನ್ನೆಗಂ | ದೂರವಾಗಿರ್ದೆನಮಗಿನ್ನಳಿಯನಾದಬಳಿ | ಕೂರಹೊರಬನದೊಳಿಹಚಂಡಿಕಾಲಯಕೆಮದುವೆಯನಾಲ್ಕನೆಯದಿನದೊಳು || ನೀರಜಸಖಾಸ್ತಮಯದೊಳಗೋರ್ವನೆಪೋಗಿ | ಗೌರಿಯಂಪೂಜಿಸಿಬಹುದುನಮ್ಮವಂಶದಾ | ಚಾರವಿದುವರನಾದವಂಗೆನೀನಿಂದದಂಮಾಡೆಂದುನೇಮಿಸಿದನು ||೩೮|| ಲೇಸಾದುದೆಂದುಮಾವನಮಾತಿಗೊಪ್ಪಿಶಶಿ | ಹಾಸಂಪ್ರಸೂನಗಂಧಾಕ್ಷತೆಗಳಂತರಿಸಲಾಸಚಿವನತಿಗೂಢದಿಂಚಂಡಾಲರಂಕರೆಸಿನೀವಂದಿನಂತೆ || ಮೋಸದಿಂಬಿ

ಟೀ|| ಮಂತ್ರಿ-ಸಚಿವನಾದ ದುಷ್ಟಬುದ್ಧಿಯು, ತಾಂ-ನಾನಾದರೊ, ಈಗ-ಈಕಾಲದಲ್ಲಿ, ಪಲವುಪಾಯದಿಂದ-ಬಗೆಬಗೆಯಾದ ಆಲೋಚನೆಗಳಿಂದ, (ಯುಕ್ತಿಗಳಿಂದ) ವಿಧುಹಾಸನಂ-ಇಂದುಹಾಸನನ್ನು, ವಧಿಸದಿರ್ದೊಡೆ-ಸಂಹಾರಮಾಡದೆ ಬಿಟ್ಟರೆ, ಧರೆಯನು-ಇಳೆಯನ್ನು, ಆಳ್ವ-ಪಾಲಿಸುವ, ಅಧಿಕಾರಪದಂ-ದೊರೆತನದ ಸಂಪತ್ತು, ತನ್ನ-ನನ್ನ, ಸಂತತಿಗೆ-ವಂಶಕ್ಕೆ, ಆಗದು-ಆಗುವುದಿಲ್ಲವು, ಅದರಿಂದ-ಆದಕಾರಣ, ಕುಲಘಾತಕಗೆ-ವಂಶಕ್ಕೆ ಕೊಡಲಿಯಂತಿರತಕ್ಕ ಈ ಇಂದುಹಾಸನಿಗೆ, ಮದುವೆಯಾದ-ಲಗ್ನವಾದ, ವಿಷಯೆ-ವಿಷಯೆಯೆಂಬ ನನ್ನ ಕುವರಿಯು, ವಿಧವೆಯಾಗಿ - ಪತಿಹೀನಳಾಗಿಯೇ, ಇರಲಿ-ಇರತಕ್ಕವಳಾಗಲಿ, ಎಂದು-ಎಂಬತೆರನಾಗಿ, ಹೃದಯದೊಳ್-ಮನದಲ್ಲಿ. ನಿಶ್ಚೈಸಿ-ಗೊತ್ತುಮಾಡಿಕೊಂಡು, ಮದವರ್ಕಳಂ-ಗಂಡುಹೆಣ್ಣುಗಳನ್ನು, ಮಧುರೋಕ್ತಿಯಿಂದ-ಸವಿನುಡಿಗಳಿಂದ, ಮನ್ನಿಸಿ-ಉಪಚರಿಸಿ, ವಿವಿಧ-ತಂಡತಂಡವಾದ, ವೈಭವಂಗಳಂ-ಸಂಭ್ರಮಗಳನ್ನು, ನಡೆಸಿ-ನೆರವೇರಿಸಿ, ಜಾಮಾತನಂ-ಅಳಿಯನಾದ ಇಂದುಹಾಸನನ್ನು, ಕರೆದು-ಕರೆದವನಾಗಿ, ಇಂತು-ಮುಂದೆ ಹೇಳುವಂತೆ, ಎಂದನು-ನುಡಿದನು.

ಅ|| ವಿ|| ಹೃದಯ (ತ್ಸ) ಎದೆ (ತ್ಭ) ಮಧುರೋಕ್ತಿ (ಗು. ಸಂಧಿ). ||೩೭||

ಟೀ|| ವೀರ-ಪರಾಕ್ರಮಿಯಾದ, ಚಂದ್ರಹಾಸ-ಇಂದುಹಾಸನೆ, ಬಾರೈ-ಇಲ್ಲಿ ಬಾ, ನೀನು-ನೀನಾದರೊ, ನಮಗೆ-ನಮ್ಮ ವಿಷಯದಲ್ಲಿ, ಇನ್ನೆಗಂ-ಈಹೊತ್ತಿನ ತನಕ, ದೂರಂ-ನೆಂಟಸ್ಥನಕ್ಕೆ ಸಿಕ್ಕದಿದ್ದವನು, ಆಗಿರ್ದೆ-ಆಗಿದ್ದವನಾದೆ, ಇನ್ನು-ಇನ್ನುಮುಂದೆ, ಅಳಿಯನು-ನನ್ನ ಕುಮಾರಿಯ ಪತಿಯು, ಆದಬಳಿಕ-ಆದನಂತರ, ಊರ-ಈ ವೂರಿನ, ಹೊರಬನದೊಳು-ಹೊರಗಡೆಯ ಕಾಡಿನೊಳಗೆ, ಇಹ-ಇರತಕ್ಕ, ಚಂಡಿಕಾಲಯಕೆ-ಕಾಳಿಕಾ ದೇವಾಲಯಕ್ಕೆ, ಮದುವೆಯ-ಲಗ್ನವಾದ, ನಾಲ್ಕನೆಯ ದಿನದೊಳು-ನಾಲ್ಕನೆಯ ದಿವಸ, ಓರ್ವನೆ-ಏಕಾಂಗಿಯಾಗಿ, ನೀರಜಸಖ-ರವಿಯ, ಅಸ್ತಮಯದೊಳಗೆ-ಅಸ್ತಮಾನದ ಕಾಲದಲ್ಲಿ, ಪೋಗಿ-ಹೋಗಿ, ಗೌರಿಯಂ-ದುರ್ಗಾದೇವಿಯನ್ನು, ಪೂಜಿಸಿಬಹುದು-ಪೂಜೆಮಾಡಿಬರಬೇಕು, ವರನಾದವಂಗೆ-ನಮ್ಮ ಮನೆಯಲ್ಲಿ ಲಗ್ನಮಾಡಿಕೊಂಡಂಥವರಿಗೆ, ಇದು-ಈ ಪದ್ಧತಿಯು, ನಮ್ಮವಂಶದ-ನಮ್ಮ ಸಂತತಿಯಲ್ಲಿ ಬಂದಿರತಕ್ಕ, ಆಚಾರಂ-ನಡವಳಿಯಾಗಿದೆ, ಅದಂ-ಆ ಅರ್ಚನೆಯನ್ನು, ನೀನು-ನೀನಾದರೊ, ಇಂದು-ಈ ದಿವಸ, ಮಾಡು-ನಡೆಯಿಸುವನಾಗು, ಎಂದು-ಎಂಬತೆರನಾಗಿ, ನೇಮಿಸಿದನು-ಆಜ್ಞಾಪಿಸಿದನು. ||೩೮||

ಟೀ|| ಮಾವನ-ಮಾವನಾದ ದುಷ್ಟಬುದ್ಧಿಯ, ಮಾತಿಗೆ-ವಚನಕ್ಕೆ, ಲೇಸಾದುದು-ಉತ್ತಮವಾಯಿಯಿತು, ಎಂದು-ಎಂಬುದಾಗಿ. ಶಶಿಹಾಸಂ-ಇಂದುಹಾಸನು, ಒಪ್ಪಿ-ಒಡಂಬಟ್ಟವನಾಗಿ, ಪ್ರಸೂನ-ಹೂವು, ಗಂಧ-ಗಂಧವು, ಅಕ್ಷತೆಗಳಂ-ಅಕ್ಷತೆ ಇವುಗಳನ್ನು, ತರಿಸಲು-ತರಿಸಲಾಗಿ, ಆಸಚಿವನು-ಆ ದುಷ್ಟಬುದ್ಧಿಯು, ಚಂಡಾಲರಂ-ಕೊಲೆಗಾರರನ್ನು, ಅತಿಗೂಢದಿಂದ-ಬಹಳ

---

ರಾಜ್ಯಾಧಿಕಾರವು ಹೋಗುವದಾದಕಾರಣ ಈ ವಿಷಯೆಯು ಮುಂಡೆಯಾಗಿಯೇ ಇರಲಿ ಈ ಇಂದುಹಾಸನನ್ನು ಕೊಲ್ಲಿಸುವದೇ ಸರಿ ಎಂದು ನಿಶ್ಚೈಸಿ, ತನ್ನ ಆಲೋಚನೆಯು ಹೊರಪಡದಂತೆ ಅನೇಕಾನೇಕ ಉತ್ಸವಾದಿಗಳಿಂದ ವಧೂವರರ ಮನವಂ ದಣಿಸುತ್ತಲಿದ್ದನು ಅನಂತರ ಇಂದುಹಾಸನನ್ನು ಕರೆದು ||೩೭|| ಅಯ್ಯಾ ಶಶಿಹಾಸನೆ ನೀನು ಇದುವರೆಗೆ ದೂರದವನಾಗಿದ್ದೆ ಈಗ ನಮಿಗೆ ಸಮೀಪ ಬಂಧುವಾದೆ ಆದ್ದರಿಂದ ನಮ್ಮವಂಶಪಾರಂಪರ್ಯವಾಗಿ ಬಂದಿರುವ ಪೂಜೆಯೊಂದುಂಟು ಈ ಊರಬಳಿ ಚಂಡಿಕಾಲಯವಿರುವುದು, ಮದುವೆಯ ನಾಲ್ಕನೆಯದಿನ ಸೂರ್ಯನು ಮುಳುಗುವ ವೇಳೆಗೆ ಸರಿಯಾಗಿ ಆ ದುರ್ಗಾದೇವಿಯನ್ನು ನಮ್ಮಮನೆಯ ಅಳಿಯಂದಿರು ಒಬ್ಬರೇ ಹೋಗಿ ಪೂಜೆಮಾಡಿಕೊಂಡು ಬರತಕ್ಕ ಪದ್ಧತಿ ಇರುವುದು ನೀನೂ ಅದರಂತೆ ಕಾಳಿಕಾದೇವಸ್ಥಾನಕ್ಕೆ ಒಬ್ಬನೇ ಹೋಗಿ ಪೂಜೆಯನ್ನು ಮಾಡಿಕೊಂಡು ಬರಬೇಕೆಂದು ನುಡಿದನು || ೩೮ || ಮಾವನಾದ ದುಷ್ಟಬುದ್ಧಿಯ ಕಪಟೋಕ್ತಿಗಳನ್ನು ನಿಜವೆಂದೇ ತಿಳಿದ ಇಂದುಹಾಸನಾದರೊ ಪೂಜಾಸಾಮಗ್ರಿಗಳನ್ನು ಸಿದ್ಧಮಾಡಿಕೊಳ್ಳಲು ದುಷ್ಟಬುದ್ಧಿಯ ಆಜ್ಞೆಯಿಂದ ಹೊರಟುಹೋಗಲಾಗಿ, ಮಂತ್ರಿಯು ಗೂಢವಾಗಿ ಚಂಡಾಲರನ್ನು ಕರೆಸಿ ನೀವು ಪೂರ್ವದಲ್ಲಿ ಅರ

ಟ್ಟುಬಾರದೆಚಂಡಿಕಾಲಯಕೆ | ನೇಸರಂಬುಧಿಗಿಳಯಲರ್ಚನೆಗೆಬಹನೋರ್ವ| ನೋಸರಿಸದಡಗಿಕೊಂಡಿರ್ದಾತನಂಕೊಲ್ವುದೆಂದು ಬೆಸಸಿದನವರ್ಗೆ ‖ ೩೯ ‖ ವಿಜಯಕೇಳಾಸಮಯದೋಳ್ಕುಂತಳೇಶ್ವರಂ | ನಿಜಶರೀರಚ್ಛಾಯಶಲೆಯಿಲ್ಲದಿರೆಕಂಡು ದ್ವಿಜಶಿರೋಮಣಿಗಾಲವಂಗರುಪಲಾತನಿದುಮೃತಿಗೆಕಾರಣಮೆನಲ್ಕೆ ‖ ರುಜೆಗೆಮೈಗೊಡಬಾರದೆಂದುನಿರ್ಮೋಕಮಂ | ಭುಜಗಪತಿಬಿಡುವಂತೆ ಸಕಲಸೌಭಾಗ್ಯಮಂ | ತ್ಯಜಿಸಿನಿರುಪಮಯೋಗಸಿದ್ಧಿಯಂಪಡೆಯೆವನವಾಸಕುದ್ಯೋಗಿಸಿದನು ‖೪೦‖ ಗಾಲವನಪದಕೆರಗಿಕೈಮುಗಿದುನಿಂದುಭೂ | ಪಾಲಂತನಗಿನ್ನುಸಾಕುರಾಜ್ಯದಚಿಂತೆ | ಕಾಲಮುಂಸಾಧಿಸುವೆನತುಳಯೋಗದೊಳೆನಗೆಸುತರಿಲ್ಲಧರೆಯನಾರ್ಗೆ ‖ ಬಾಲೆಚಂಪಕಮಾಲಿನಿಯನಾರ್ಗೆಕೊಡುವೆಂವಿ | ಶಾಲಮತಿಬೆಸಸೆಂದುಬೇಡಿಕೊಳಲಾಕ್ಷಣಸು | ಶೀಲನಹಚಂದ್ರಹಾಸಂ

ಗುಟ್ಟಾಗಿ, ಕರೆಸಿ-ಕರಸಿದವನಾಗಿ, ಅಂದಿನಂತೆ ಹಿಂದೆಮಾಡಿದಹಾಗೆ ನೀವುಗಳು, ಮೋಸದಿಂ-ಕಪಟ ಕೃತ್ಯದಿಂದ, ಬಿಟ್ಟುಬಾರದೆ-ಬಿಟ್ಟುಬರದೆ, ನೇಸರ್-ರವಿಯು, ಅಂಬುಧಿಗೆ-ಕಡಲಿಗೆ, ಇಳಿಯಲು-ಇಳಿಯುವ ಕಾಲಕ್ಕೆ ಸರಿಯಾಗಿ, ಅರ್ಚನೆಗೆ-ಆರಾಧನೆಯಂ ಮಾಡಲೋಸುಗ, ಓರ್ವನು-ಒಬ್ಬಾನೊಬ್ಬ ಮನುಷ್ಯನು, ಬಹನು-ಬರುತ್ತಾನೆ, ಓಸರಿಸದೆ-ಬಿಟ್ಟುಬಿಡದೆ, ಅಡಗಿಕೊಂಡಿರ್ದು-ಅಲ್ಲಿಯೇ ಅವಿತುಕೊಂಡವರಾಗಿ, ಆತನಂ-ಆ ಮನುಷ್ಯನನ್ನು, ಕೊಲ್ವುದು-ಕೊಂದುಹಾಕಬೇಕು, ಎಂದು-ಎಂಬತೆರನಾಗಿ, ಅವರ್ಗೆ-ಆ ಕೊಲೆಗಾರರಿಗೆ, ಬೆಸಸಿದನು-ಆಜ್ಞೆಯನ್ನಿತ್ತನು. ‖೩೯‖

ಟೀ‖ ವಿಜಯ-ಪಾರ್ಥನೆ, ಕೇಳು-ಲಾಲಿಸು, ಆ ಸಮಯದೊಳ್-ಆ ಕಾಲದಲ್ಲಿ, ಕುಂತಳೇಶ್ವರಂ-ಕುಂತಳ ದೇಶದ ಅರಸು, ತಲೆಯಿಲ್ಲದೆ-ತಲೆಯು ಕಾಣದೆ, ನಿಜಶರೀರ ಛಾಯೆ-ತನ್ನ ಶರೀರದ ಪ್ರತಿಬಿಂಬವು, ಇರೆ-ಇರುವುದನ್ನು, ಕಂಡು-ಈಕ್ಷಿಸಿ, ದ್ವಿಜಶಿರೋಮಣಿ-ವಿಪ್ರವರ್‍ಯನಾದ, ಗಾಲವಂಗೆ - ಗಾಲವ ಮುನಿಗೆ, ಅರುಪಲು - ತಿಳಿಸಿದ ಕಾರಣ, ಇದು-ಹೀಗಿರತಕ್ಕದ್ದು, ಮೃತಿಗೆ-ಸಾವಿಗೆ, ಕಾರಣಂ-ಕಾರಣವೆಂದು, ಆತನು-ಆ ಗಾಲವ ಋಷಿಯು, ಎನಲ್ಕೆ-ಹೇಳಲಾಗಿ, ರುಜೆಗೆ-ಕಾಯಿಲೆಯಿಂದ ನರಳುವುದಕ್ಕೆ, ಮೈಗೊಡಬಾರದು-ಅವಕಾಶಕೊಡಕೂಡದು, ಎಂದು-ಎಂಬುದಾಗಿ ಆಲೋಚಿಸಿ, ಸಕಲಸೌಭಾಗ್ಯಮಂ-ತನ್ನ ಸಂಪತ್ತನ್ನೆಲ್ಲಾ, ನಿರ್ಮೋಕಮಂ-ಶರೀರದ ಮೇಲಣ ಪರೆಯನ್ನು, ಭುಜಗಪತಿ-ಸರ್ಪವು, ಬಿಡುವಂತೆ-ಬಿಡುವರೀತಿಯಾಗಿ, ತ್ಯಜಿಸಿ-ವರ್ಜಮಂಮಾಡಿ, ನಿರುಪಮ-ಅಸದೃಶವಾದ, ಯೋಗಸಿದ್ಧಿಯಂ-ಯೋಗಜ್ಞಾನವನ್ನು, ಪಡೆಯೆ-ಪಡೆಯುವುದಕ್ಕಾಗಿ, ವನವಾಸಕೆ-ಕಾಡಿನಲ್ಲಿ ಜೀವಿಸಬೇಕೆಂಬುದಾಗಿ, ಉದ್ಯೋಗಿಸಿದನು-ಪ್ರಯತ್ನವಂ ಮಾಡಿದನು ‖೪೦‖

ಟೀ‖ ಗಾಲವನ-ಗಾಲವ ಋಷಿಯ, ಪದಕೆ-ಚರಣಗಳಿಗೆ, ಭೂಪಾಲಕಂ-ಕುಂತಳಾಧೀಶನು, ಎರಗಿ-ಅಡ್ಡಬಿದ್ದು, ಕೈಮುಗಿದು-ಕರಗಳನ್ನು ಜೋಡಿಸಿಕೊಂಡು, ನಿಂದು-ನಿಂತವನಾಗಿ, ರಾಜ್ಯದಚಿಂತೆ-ದೊರೆತನವನ್ನು ಮಾಡಬೇಕೆನ್ನುವ ಹಂಬಲು, ಇನ್ನು-ಇನ್ನುಮುಂದೆ, ತನಗೆ ನನಿಗಾದರೊ, ಸಾಕು-ಸಾಕಾಗಿದೆ, ಕಾಲಮುಂ-ಮುಂದೆ ನಾನು ಬದುಕಿರುವ ಕಾಲವೆಲ್ಲವನ್ನೂ, ಅತುಳ-ಹೆಚ್ಚಾದ, ಯೋಗದೊಳು-ಯೋಗಾಭ್ಯಾಸದಲ್ಲಿ, ಸಾಧಿಸುವೆನು-ಹೋಗಲಾಡಿಸಿಕೊಳ್ಳುತ್ತೇನೆ, ಎನಗೆ-ನನಿಗಾದರೊ, ಸುತರು-ಕುವರರು, ಇಲ್ಲ-ಇಲ್ಲವು, ಧರೆಯನು-ಈ ನನ್ನ ರಾಷ್ಟ್ರವನ್ನೆಲ್ಲಾ, ಆರ್ಗೆ-ಯಾರಿಗೆ, ಮತ್ತು ಬಾಲೆ-ಕನ್ನೆಯಾದ, ಚಂಪಕಮಾಲಿನಿಯ-ಚಂಪಕಮಾಲಿನಿಯೆಂಬ ನನ್ನ ಕುವರಿಯನ್ನು, ಆರ್ಗೆ-ಯಾವ ವರನಿಗೆ, ಕೊಡುವೆಂ-ಕೊಡಬೇಕು, ವಿಶಾಲಮತಿ-ವಿವೇಕಾತಿಶಯದಿಂದ ಕೂಡಿರತಕ್ಕ ಮುನೀಂದ್ರನೆ, ಬೆಸಸು-ನಾನು ಮಾಡಬೇಕಾಗಿರತಕ್ಕ ಕಾರ್‍ಯವನ್ನು ಆಜ್ಞಾಪಿಸು, ಎಂದು-ಎಂಬತೆರನಾಗಿ, ಬೇಡಿಕೊಳೆ-ಕೇಳಿಕೊಳ್ಳಲು, ಚಂಪಕಮಾಲಿನಿಯನು-ನಿನ್ನ ಕುವರಿಯಾದ ಚಂಪಕಮಾಲಿನಿಯನ್ನು, ಮೇದಿನಿಸಹಿತ-ನಿನ್ನ ರಾಷ್ಟ್ರಸಮೇತವಾಗಿ, ಲಕ್ಷಣ-ರಾಜಲಕ್ಷಣಗಳಿಂದಲೂ, ಸುಶೀಲನು-ಸದಾಚಾರನು, ಅಹ-ಆಗಿರತಕ್ಕ, ಚಂದ್ರಹಾಸಂಗೆ-ಇಂದುಹಾಸನಿಗೆ, ಇತ್ತಪುದು-ದಾನಮಾಡಬೇಕು, ಎಂದನು - ಎಂಬುದಾಗಿ ಗಾಲವಮುನಿಯು ಕುಂತಳೇಂದ್ರನೊಂದಿಗೆ ನುಡಿದನು ‖೪೧‖

ಣ್ಯಕ್ಕೆ ಕರೆದುಕೊಂಡುಹೋಗಿ ಬಿಟ್ಟುಬಂದಂತೆ ಈಗ ಮೋಸಮಾಡಕೂಡದು ಈದಿನ ರಾತ್ರೆ ಈ ಊರಿನ ಹೊರಗಿರತಕ್ಕ ಕಾಳೀಗುಡಿಗೆ ಪೂಜಾಸಾಮಗ್ರಿಗಳನ್ನು ತೆಗೆದುಕೊಂಡು ಸೂರ್‍ಯಾಸ್ತಮಯಕಾಲಕ್ಕೆ ಸರಿಯಾಗಿ ಒಬ್ಬನು ಬರುವನು ನೀವು ಅಲ್ಲಿಯೇ ಕಾದಿದ್ದು ಅವನನ್ನು ಕೊಂದುಹಾಕಿಬಿಡಿರೆಂದು ಕಟ್ಟುಮಾಡಿ ಕಳುಹಿಸಿದನು ‖೩೯‖ ಕೇಳೈ ಅರ್ಜುನ ಇಲ್ಲಿ ಈ ರೀತಿಯಲ್ಲಿ ನಡೆಯುತ್ತಿರುವಾಗ ಅತ್ತ ಅರಮನೆಯಲ್ಲಿದ್ದ ಕುಂತಳಾಧೀಶನು ತನ್ನತಲೆಯೇ ಕಾಣಿಸದಿದ್ದತನ್ನನೆರಳನ್ನು ಕಂಡು ಕಾರಣವೇನೆಂದು ತಮ್ಮಗುರುವಾದ ಗಾಲವ ಮುನಿಯನ್ನು ಕೇಳಿದನು. ಆ ಋಷಿಯು ಅಯ್ಯಾ ರಾಜೇಂದ್ರನೆ ನಿನಗೆ ಸಾವು ಸಮೀಪಿಸಿರುವುದರಿಂದ ಈ ರೀತಿಯಲ್ಲಿ ತಲೆಯು ಕಾಣುವುದಿಲ್ಲವೆಂದು ನುಡಿಯಲಾಗಿ ಭೂಕಾಂತನಾದರೊ ಅಯ್ಯೋ ನಾನು ಇನ್ನು ಬದುಕಿ ಈ ದೇಹವನ್ನು ಅನೇಕ ರೋಗಗಳಿಗೆ ಗುರಿಮಾಡುವುದರಿಂದ ಸಫಲವೇನು? ಈ ನನ್ನ ಕಲಸಂಪತ್ತನ್ನೂ ಬಿಟ್ಟು ವನವಾಸಕ್ಕೆ ಹೊರ

ಗಮೇದಿನಿಸಹಿತಮಗಳನಿತ್ತಪುದೆಂದನು ||೪೧||ಎಂದೊಡರಸಂಗಾಲವನಬುದ್ಧಿಯಂ ಕೇಳ್ದು | ತಂದೆಮಾಡುವರಾಜಕಾರ್ಯಮಂ ನಿರ್ವಹಿಸು | ತಂದುಬಾಗಿಲೊಳಿರ್ದಮದನನಂ ಕರೆಸಿಕೈವಿಡಿದುಮೆಲ್ಲನೆಕಿವಿಯೊಳು || ಮುಂದೆಮಗೋರ್ವಕೆಲಸದಪೊರಗೆಯುಂಟುನೀ | ನಿಂದುಹಾಸನನಿಲ್ಲಿಗೀಗಲೊಡಗೊಂಡುಬಾ | ಸಂದೇಹಿಸದೆಪೋಗೆನಲ್ಕೆಭೂಪಾಲನಂಬೀಳ್ಕೊಂಡುಪೊರಮಟ್ಟನು||೪೨|| ಉತ್ತಮಹಯಾರೂಢನಾಗಿಮದನಂಜವದೊ | ಳಿತ್ತಲಿಂದೈದೆರವಿಪಶ್ಚಿಮಾಂಬುಧಿಗಿಳಿವ | ಪೊತ್ತುಪೊಂದಳಿಗೆಯೊಳ್ಪುಷ್ಪತಾಂಬೂಲಗಂಧಾಕ್ಷತೆಗಳನಿರಿಸಿ || ಎತ್ತಿಕೊಂಡತ್ತಣಿಂಬಹಚಂದ್ರಹಾಸನನಿ | ದೆತ್ತಪೋದಪೆಯೆಂದುಬೆಸಗೊಳಲ್ತವಪಿತಗೆ | ತತ್ತ

---

ಟೀ|| ಎಂದೊಡೆ-ಈ ರೀತಿಯಾಗಿ ಗಾಲವಮುನಿಯು ತಿಳಿಸಲು, ಗಾಲವನ ಬುದ್ಧಿಯಂ-ಗಾಲವ ಋಷಿಯು ಹೇಳಿದ ಬುದ್ಧಿವಾದವನ್ನು, ಅರಸಂ-ರಾಜನು, ಕೇಳ್ದು-ಕೇಳಿದವನಾಗಿ, ಅಂದು-ಆ ವೇಳೆಯೊಳಗೆ, ತಂದೆ ಮಾಡುವ-ದುಷ್ಟಬುದ್ಧಿಯು ಮಾಡುತ್ತಿದ್ದ, ರಾಜಕಾರ್ಯಮಂ-ರಾಜ್ಯಾಡಳಿತಗಳನ್ನು, ನಿರ್ವಹಿಸುತ-ನೆರವೇರಿಸುತ್ತ, ಬಾಗಿಲೊಳ್-ಅರಮನೆಯ ಮುಂದುಗಡೆ ಇರ್ದ-ಇದ್ದಂಥ, ಮದನನು-ಮದನನೆಂಬಾತನನ್ನು, ಕರೆಸಿ-ಕರಸಿದವನಾಗಿ, ಕೈವಿಡಿದು-ಮದನನ ಕೈಯ್ಯನ್ನು ಹಿಡಿದುಕೊಂಡು, ಮುಂದೆ-ಇನ್ನು ಮುಂದೆ, ಓರ್ವ ಒಂದಾನೊಂದು, ಕೆಲಸ ಪೊರಗೆಯು ಕಾರ್ಯಗೌರವವು, ಉಂಟು-ನೆರವೇರಬೇಕಾಗಿದೆ, ಈಗಲೇ-ನಿನ್ನ ಸಂಗಡಲೇ, ಇಂದುಹಾಸನನು-ಶಶಿಹಾಸನನ್ನು, ಒಡಗೊಂಡು-ಜೊತೆಮಾಡಿಕೊಂಡು, ನೀನು-ನೀನಾದರೊ, ಬಾ-ಬರಬೇಕು, ಸಂದೇಹಿಸದೆ-ಅನುಮಾನ ಪಡದೆ, ಪೋಗು-ಹೊರಡು ಎಂಬುದಾಗಿ, ಕಿವಿಯೊಳು-ಮದನನ ಕಿವಿಯೊಳಗೆ, ಮೆಲ್ಲನೆ-ಯಾರಿಗೂ ಕೇಳಿಸದ ರೀತಿಯಾಗಿ, ಎನಲ್ಕೆ-ನುಡಿಯಲು, ಭೂಪಾಲನಿಂ-ಪ್ರೌಢನಿಪನಾದ ಕುಂತಳಾಧೀಶನಿಂದ, ಬೀಳ್ಕೊಂಡು-ಆಜ್ಞೆಯಂ ಪಡೆದವನಾಗಿ, ಪೊರಮಟ್ಟನು-ಅರಮನೆಯಿಂದ ಹೊರಟವನಾದನು. ||೪೨||

ಟೀ|| ಮದನನು-ಮದನನೆಂಬ ದುಷ್ಟಬುದ್ಧಿಯ ಕುವರನು, ಉತ್ತಮ-ಮೇಲಾದ, ಹಯಾರೂಢನಾಗಿ-ಕುದುರೆಯನ್ನೇರಿ, ಇತ್ತಲಿಂದ-ಕುಂತಳ ರಾಜನ ಮನೆಯಿಂದ, ಜವದೊಳು - ಬೇಗನೆ, ಐದೆ - ಹೊರಡಲು, ಪಶ್ಚಿಮಾಂಬುಧಿಗೆ-ಪಡುಗಡಲಿಗೆ, ರವಿ-ಭಾನುವು, ಇಳಿವ ಪೊತ್ತು-ಬೀಳುವ ಕಾಲಕ್ಕೆ ಸರಿಯಾಗಿ, ಪುಷ್ಪದ- ಕುಸುಮಂಗಳನ್ನೂ, ಫಲ-ಫಲಗಳನ್ನೂ, ತಾಂಬೂಲ-ಅಡಿಕೆ ಎಲೆಗಳನ್ನೂ, ಗಂಧಾಕ್ಷತೆಗಳನು-ಗಂಧ ಅಕ್ಷತೆ ಇವನ್ನು, ಪೊಂದಳಿಗೆಯೊಳ್-ಚಿನ್ನದ ತಾಟನಲ್ಲಿ, ಇರಿಸಿ-ಇರಿಸಿದವನಾಗಿ, ಎತ್ತಿಕೊಂಡು-ಕೈಯಲ್ಲಿ ಹಿಡಿದುಕೊಂಡು, ಅತ್ತಣಿಂ-ತಮ್ಮ ಮನೆಯ ಕಡೆಯಿಂದ, ಬಹ-ಬರುತ್ತಲಿರತಕ್ಕ, ಚಂದ್ರಹಾಸನನು-ಇಂದುಹಾಸನನ್ನು, ಇದೆತ್ತಪೋದಪೆ-ಈಗ ಎಲ್ಲಿ ಹೋಗುತ್ತಿ, ಎಂದು-ಎಂಬತೆರನಾಗಿ, ಬೆಸಗೊಳಲ್-ಕೇಳಿದ್ದರಿಂದ, (ಚಂದ್ರಹಾಸನು) ತವಪಿತಗೆ-ನಿನ್ನ ಜನಕನಾದ ದುಷ್ಟಬುದ್ಧಿಗೆ, ಕರ್ತ-ಅನೂಚಾನವಾಗಿ ಬಂದಿರತಕ್ಕ, ವ್ರತಂ-ಕಟ್ಟಳೆಯು, ಉಂಟು-ಇದೆ, ಚಂಡಿಕಾದೇವಿಯಂ- ದುರ್ಗಾದೇವಿಗೆ, ಪೂಜೆಗೈದಪೆನು- ಪೂಜೆಮಾಡಿಕೊಂಡು ಬರುತ್ತೇನೆ, ಎಂದನು-ಹೀಗೆಂದು ಚಂದ್ರಹಾಸನು ಮದನನೊಂದಿಗೆ ನುಡಿದನು. ||೪೩||

---

ಡುವುದೇ ಉತ್ತಮವೆಂದು ನಿಶ್ಚಯಿಸಿ ಗಾಲವ ಮುನಿಯ ಪಾದಾರವಿಂದಗಳಿಗೆರಗಿ || ೪೦ || ಅಯ್ಯಾ ಗುರುವೇ ಇನ್ನು ನನಗೆ ಈ ರಾಜ್ಯವೂ ಐಸಿರಿಯೂ ಏಕೆ? ಇವೆಲ್ಲವನ್ನೂ ಬಿಟ್ಟು ಪತ್ನಿಯೊಂದಿಗೆ ಅರಣ್ಯಕ್ಕೆ ಹೋಗಿ ದೇವರ ಧ್ಯಾನದಲ್ಲಿ ಕಾಲವಂ ಕಳೆಯಬೇಕೆಂದಿರುವೆನು ಈ ನನ್ನ ರಾಜ್ಯವನ್ನೂ ನನ್ನ ಸರ್ವಸ್ವವನ್ನೂ ಯಾರಿಗೊಪ್ಪಿಸಲಿ ನನ್ನ ಕುವರಿಯಾದ ಚಂಪಕಮಾಲಿನಿಯನ್ನು ಯಾರಿಗೆ ಮದುವೆ ಮಾಡಲಿ ನಿನ್ನಾಜ್ಞೆಯಂತೆ ನಡೆಯಿಸಲು ಸಿದ್ಧನಾಗಿರುವೆನೆಂದು ನುಡಿದು ಆ ಮುನಿಯ ಪಾದಗಳಿಗೆ ಮತ್ತೆ ನಮಸ್ಕಾರಮಾಡಲು ಅಯ್ಯಾ ರಾಜೇಂದ್ರನೆ ಕೇಳು ನಿನ್ನ ಕುವರಿಯನ್ನು ಇಂದುಹಾಸನಿಗೆ ಕೊಟ್ಟು ಮದುವೆ ಮಾಡಿ ಈ ರಾಜ್ಯವನ್ನೂ ನಿನ್ನ ಸರ್ವಸ್ವವನ್ನೂ ಆತನಿಗೆ ಒಪ್ಪಿಸಿಬಿಡು ಆ ಇಂದುಹಾಸನೆ ನಿನ್ನ ಕುವರಿಗೂ ನಿನ್ನ ರಾಜ್ಯಕ್ಕೂ ಯೋಗ್ಯನಾದವನೆಂದು ನುಡಿದ ಗಾಲವನ ಬುದ್ಧಿವಾದವನ್ನು ರಾಜನು ಒಪ್ಪಿಕೊಂಡು, ||೪೧|| ತಂದೆಯ ಮಂತ್ರಿಕಾರ್ಯವನ್ನು ನೋಡುತ್ತಲಿದ್ದ ಮದನನನ್ನು ಕರೆಸಿ, ನೀನು ತಡಮಾಡದೆ ಈಗಲೇ ಹೋಗಿ ಚಂದ್ರಹಾಸನನ್ನು ಇಲ್ಲಿಗೆ ಕರೆದುಕೊಂಡು ಬಾ, ಅವನಿಂದ ಒಂದು ಕಾರ್ಯವಾಗಬೇಕಾಗಿದೆ, ಲೇಶವೂ ಅನುಮಾನಿಸದೆ ಹೋಗೆಂದು ನುಡಿಯಲು ಮದನನೂ ಕೂಡ ಬಹು ಬೇಗನೆ ಹೊರಟು ||೪೨|| ಅತ್ಯುತ್ತಮವಾದ ಕುದುರೆಯನ್ನೇರಿ ಪರಿವಾರ ಸಹಿತನಾಗಿ ಹೊರಡುವ ಹೊತ್ತಿಗೆ ಸೂರ್ಯಾಸ್ತಮಯ ಕಾಲವಾಗಿದ್ದಿತು, ಆಗ ಚಂದ್ರಹಾಸನು ಮಾವನ ಮಾತಿನ ಪ್ರಕಾರ ಊರ ಹೊರಗಿರುವ ಕಾಳೀಗುಡಿಗೆ ಹೋಗಿ ದುರ್ಗಾದೇವಿಯನ್ನು ಪೂಜೆಮಾಡಿಕೊಂಡು ಬರಬೇಕೆಂದು ಪೂಜಾ ಸಾಮಗ್ರಿಗಳಿಂದ ಕೂಡಿದ್ದ ಚಿನ್ನದ ತಟ್ಟೆಯನ್ನು ಕೈಯಲ್ಲಿ ಹಿಡಿದುಕೊಂಡು ಬರುತ್ತಲಿದ್ದನು. ಇವನನ್ನು ಮದನನು ಕಂಡು ಎಲ್ಲಿಗೆ ಹೋಗುವಿ ಎಂದು ಕೇಳಿದನು. ಚಂದ್ರಹಾಸನು ಅಯ್ಯಾ ಮದನ, ನಿಮ್ಮ ತಂದೆಯ ಆಜ್ಞೆಯ ಮೇರೆಗೆ ನಾನು ಕಾಳಿಕಾ ದೇವಾಲಯಕ್ಕೆ ಹೋಗಿ ಪೂಜೆ ಮಾಡಿಕೊಂಡು ಬರಲು ಹೊರಟಿರುವೆ

ಸುವ್ರತಮುಂಟುಚಂಡಿಕಾದೇವಿಯಂಪೂಜಿಗೈದಪೆನೆಂದನು ||೪೩|| ತಟ್ಟನೆತುರಂಗಮವನಿಳಿದೆಲೆಮರುಳೆಪಿತನ | ಕಟ್ಟಳೆಯಚಂಡಿಕಾಪೂಜೆಗಾಂಪೋದಪೆಂ | ನೆಟ್ಟನೆಮಹೀಶ್ವರಂಪಿರಿದುಕಜ್ಜಕೆನಿನ್ನನೊಡಗೊಂಡ-ಬಾಯೆನಲ್ಕೆ || ಕಟ್ಟವಸರಕೆಬಂದೆನೆಂದರ್ಚನಾದ್ರವ್ಯ | ಮಿಟ್ಟಪೊಂದಳಿಗೆಯಂತೆಗೆದುಕೊಂಡಶ್ವಮಂ || ಕೊಟ್ಟಾತನಂಕಳುಹಿಪೊರಮಟ್ಟನೇಕಾಕಿಯಾಗಿಮದನಂಪೊಳಲನು ||೪೪|| ತನ್ನಪಿತನಾಜ್ಞೆಯಿಂನಡೆಸುವಕುಲವ್ರತದ | ನನ್ನಶಶಿಹಾಸಂಗೆಭಂಗಮಾದಪುದೆಂದು | ಮನ್ನಿಸಿನೆರೆದಸಕಲಸೇವಕರನೆಲ್ಲರಂಕಳುಹಿತಾನೊರ್ವನಾಗಿ || ಉನ್ನತದ್ರುಮಷಂಡಮಂಡಿತದಬನದೊಳ್ಪ | ಸನ್ನೆಯಾಗಿಹಚಂಡಿಕಾಲಯಕೆಬರುತಿರ್ದ | ನನ್ನೆಗಂಕರತಳದಗಂಧಪುಷ್ಪದಪಾತ್ರೆಯೋಸರಿಸಿಬಿದ್ದುದಿಳೆಗೆ || ೪೫ || ಚೀರುತಪೊಣರ್ದವುಬಿಡಾಲಗಳ್ಪಕ್ಷಿಗ | ಳ್ಕಾರಿದುವ್ರುಧಿರಮಂಕೂಗಿದವುಗೂಗೆಗ | ಳ್ಸಾರುತಿಹದುರ್ನಿಮಿತ್ತಂಗಳಂಕಂಡವಂವ್ರತಭಂಗಮಪ್ಪುದೆಂದು || ಮೀರಿನಡೆವುತಮನದೊ

---

ಟೀ|| ಮದನನು- ಮದನನೆಂಬಾತನು, ತುರಂಗಮವನು- ತಾನು ಹತ್ತಿದ್ದ ಕುದುರೆಯನ್ನು, ತಟ್ಟನೆ-ಕೂಡಲೆ, ಇಳಿದ.-ಇಳಿದವನಾಗಿ, ಎಲೆ ಮರುಳೆ-ಎಲೈ ಮಂದ ಬುದ್ಧಿಯುವನೆ, ಅಂ-ನಾನಾದರೊ, ಪಿತನ ಕಟ್ಟಳೆಯ-ನನ್ನ ಜನಕನಾದ ದುಷ್ಟಬುದ್ಧಿಯು ನಿನಗೆ ಅಪ್ಪಣೆ ಮಾಡಿರತಕ್ಕ, ಚಂಡಿಕಾ ಪೂಜೆಗೆ-ಗೌರೀವ್ರತಕ್ಕೆ, ಪೋದಪೆಂ-ಹೋಗುತ್ತೇನೆ, ನಿನ್ನನು-ನಿನ್ನನ್ನು, ಪಿರಿದು ಕಜ್ಜಕೆ-ಹೆಚ್ಚಾದ ಕಾರ್ಯ ಗೌರವಕ್ಕಾಗಿ, ಮಹೀಶ್ವರಂ-ನಮ್ಮ ರಾಜೇಂದ್ರನು, ನೆಟ್ಟನೆ-ನೇರವಾಗಿ, ಒಡಗೊಂಡು-ಸಂಗಡಲೇ ಕರೆದುಕೊಂಡು, ಬಾಯೆನಲ್ಕೆ-ಬರುವಂತೆ ನನಗೆ ಅಪ್ಪಣೆ ಮಾಡಿದ ಕಾರಣ, ಕಟ್ಟವಸರಕೆ-ಅತ್ಯಾತುರದಿಂದ, ಬಂದೆನು-ಬಂದಿದ್ದೇನೆ, ಎಂದು-ಎಂಬ ತೆರನಾಗಿ, ಅರ್ಚನಾದ್ರವ್ಯಮಂ-ಪೂಜಾ ಸಾಮಗ್ರಿಗಳನ್ನು, ಇಟ್ಟ-ಇಟ್ಟಂಥ, ಪೊಂದಳಿಗೆಯಂ-ಚಿನ್ನದ ತಟ್ಟೆಯನ್ನು, ತೆಗೆದುಕೊಂಡು-ತಾನು ಕೈಗೊಂಡವನಾಗಿ, ಅಶ್ವಮಂ ಕೊಟ್ಟು-ಕುದುರೆಯನ್ನು ಚಂದ್ರಹಾಸನಿಗೊಪ್ಪಿಸಿ, ಆತನಂ-ಆ ಇಂದುಹಾಸನನ್ನು, ಕಳುಹಿ-ಕಳುಹಿಸಿದವನಾಗಿ, ಏಕಾಕಿಯಾಗಿ-ತಾನೊಬ್ಬನೇ, ಪೊಳಲನು-ಊರಿನಿಂದ ಆಚೆಗೆ, ಪೊರಮಟ್ಟನು-ಹೊರಟವನಾದನು. ||೪೪||

ಟೀ|| ನೆರೆದ-ತನ್ನ ಜೊತೆಯಲ್ಲಿದ್ದ, ಸಕಲ ಸೇವಕರನು-ಅಶೇಷರಾದ ಭೃತ್ಯರನ್ನೂ, ಮನ್ನಿಸಿ-ಮರ್ಯಾದೆ ಮಾಡಿ, ಕಳುಹಿ-ಕಳುಹಿಸಿಕೊಟ್ಟು, ತಾನು-ತಾನು ಮಾತ್ರ, ಓರ್ವನಾಗಿ-ಒಂಟಿಯಾಗಿ, ಉನ್ನತದ-ಎತ್ತರವಾದ, ದ್ರುಮ-ವೃಕ್ಷಂಗಳ, ಷಂಡ-ಗುಂಪಿನಿಂದ, ಮಂಡಿತದ-ಅಂದವಾಗಿರುವ, ಬನದೊಳ್-ಕಾಡಿನಲ್ಲಿ, ಪ್ರಸನ್ನೆಯಾಗಿಹ-ಭಕ್ತರಿಗೆ ಅನುಗ್ರಹವನ್ನುಂಟುಮಾಡುವ, ಚಂಡಿಕಾಲಯಕೆ-ಕಾಳಿಕಾ ದೇವಸ್ಥಾನಕ್ಕೆ, ಬರುತಿರ್ದನು-ಬರುತ್ತಲಿದ್ದನು, ಕರತಳದ-ಕೈಯಲ್ಲಿ ಹಿಡಿದಿದ್ದ, ಗಂಧಪುಷ್ಪದ ಪಾತ್ರೆಯು-ಗಂಧ ಹೂ ಇವುಗಳನ್ನಿಟ್ಟುಕೊಂಡಿದ್ದ ತಟ್ಟೆಯು, ಓಸರಿಸಿ-ಸ್ವಲ್ಪ ಜಾರಿ, ಅನ್ನೆಗಂ-ಆ ಕಾಲಕ್ಕೆ, ಇಳೆಗೆ-ಭೂಮಿಯಮೇಲೆ, ಬಿದ್ದುದು-ಬಿದ್ದುಹೋಯಿತು. ||೪೫||

ಟೀ|| ಬಿಡಾಲಗಳು-ಬೆಕ್ಕುಗಳು, ಚೀರುತ-ಕಿರುಚುತ್ತ, ಪೊಣರ್ದವು-ಜಗಳವಾಡುತ್ತಲಿದ್ದವು, ರುಧಿರಮಂ-ನೆತ್ತರನ್ನು, ಪಕ್ಷಿಗಳ್-ಹಕ್ಕಿಗಳು, ಕಾರಿದವು-ಕಾರಿಬಿಟ್ಟವು, ಗೂಗೆಗಳು-ಗೂಬೆಗಳು, ಕೂಗಿದವು-ಕೂಗಲಾರಂಭಿಸಿದವು, ಸಾರುತಿಹ-ತೋರಿ ಬರುತ್ತಲಿರುವ, ದುರ್ನಿಮಿತ್ತಂಗಳಂ-ಅಶುಭಗಳನ್ನು, ಅವಂ-ಆ ಮದನನು, ಕಂಡು-ಈಕ್ಷಿಸಿ, ವ್ರತಭಂಗಂ-ವ್ರತವು ಕೆಡತಕ್ಕದ್ದು, ಚಂದ್ರಹಾಸಂಗೆ-ಇಂದುಹಾಸನಿಗೆ, ಅಪ್ಪುದು-ಆಗುತ್ತದೆ, ಎಂದು-ಎಂಬುದಾಗಿ, ಎನುತ-ತಿಳಿದವನಾಗಿ, ಮೀರಿ-ಈ ಅಪಶಕುನಗಳನ್ನೂ ಲಕ್ಷ್ಯಮಾಡದೆ, ನಡೆವುತ-ಹೊರಡುತ್ತ, ಅದರಿಂದ-ಅವುಗಳ ದೆಸೆಯಿಂದ, ಮನದೊಳ್-ಮನಸ್ಸಿನೊಳಗೆ, ಭೀತಿಗಳ-ಹೆದರಿಕೆಯನ್ನು, ತೊರೆದು-ವರ್ಜಮಾಡಿ, ಇರಲು-ಇರಲಾಗಿ, ಅವನಿಯೊಳ್-ಲೋಕದಲ್ಲಿ, ಮೂರಂಬಕ

---

ನೆಂದು ನುಡಿದನು. ||೪೩|| ಆಗ ಮದನನು ಕುದುರೆಯಿಂದ ತಟ್ಟನೆ ಕೆಳಗಿಳಿದು ಇಂದುಹಾಸನನ್ನು ಕುರಿತು, ಎಲೈ ಶಶಿಹಾಸನೇ ನಾನು ಪೂಜೆಮಾಡಿಕೊಂಡು ಬರುವೆನು, ಕುಂತಳೇಂದ್ರನು ನಿನ್ನನ್ನು ಈಗಲೇ ಕಳುಹಿಸೆಂದು ಹೇಳಿರುವುದರಿಂದ ನಾನು ಬಂದೆನು, ಜಾಗ್ರತೆಯಲ್ಲಿ ಕುದುರೆಯನ್ನೇರಿ ಹೊರಡೆಂದು ನುಡಿದು ತಾನು ಏರಿಕೊಂಡು ಬಂದಿದ್ದ ಕುದುರೆಯನ್ನು ಚಂದ್ರಹಾಸನಿಗೊಪ್ಪಿಸಿ, ತನ್ನ ಹಿಂದೆ ಬಂದಿದ್ದ ಪರಿವಾರವನ್ನೆಲ್ಲಾ ಆ ಇಂದುಹಾಸನ ಜೊತೆಯಲ್ಲಿಯೇ ಕಳುಹಿಸಿ, ಅವನ ಕೈಯ್ಯಲ್ಲಿದ್ದ ಚಿನ್ನದ ತಟ್ಟೆಯನ್ನು ತಾನು ತೆಗೆದುಕೊಂಡು ದುರ್ಗಾಪೂಜೆಗಾಗಿ ಹೋದನು. ||೪೪|| ಹೀಗೆ ಬರುತ್ತಿರುವಾಗ ನಡುದಾರಿಯಲ್ಲಿ ಮದನನ ಕೈಯಲ್ಲಿದ್ದ ಪೂಜಾ ಸಾಮಗ್ರಿಗಳ ತಟ್ಟೆಯು ಕೆಳಕ್ಕೆ ಬಿದ್ದು ಹೋಯಿತು ||೪೫|| ಬೆಕ್ಕುಗಳು ಕಿರುಚುತ್ತಾ ಬಂದ ಕ್ಕೊಂದು ಕಚ್ಚಾಡಲಾರಂಭಿಸಿದವು, ಪಕ್ಷಿಗಳು ರಕ್ತವನ್ನು ಕಾರುತ್ತಲಿದ್ದವು, ಗೂಬೆಗಳ ಕೂಗು ಎಲ್ಲೆಲ್ಲಿಯೂ ಕೇಳಬರುತ್ತಲಿತ್ತು, ಇಂತಹ ದುಶ್ಯಕುನಂಗಳು ತಲೆದೋರುತ್ತಲಿದ್ದರೂ ಕೂಡ ವ್ರತಭಂಗವಾಗಬಾರದೆಂದು ಅವ್ರಗಳಾವುವನ್ನೂ ಗಣಿ

ಳದರಿಂದಭೀತಿಗ | ಳೊತ್ತೀರದಿರಲವನಿಯೊಳ್ಚಂದ್ರಹಾಸಂಗೆನುತ | ಮೂರಂಬಕದೊಳೆಸೆವದೇವನರಸಿಯಭವನಕಾಮದನ ನೈತಂದನು ೪೬‖ಖಳರಂತರಂಗದಪ್ರದೇಶದವಿವೇಕಮಂ| ಬಳಸಿದರಿಷಡ್ವರ್ಗಮೊತ್ತರಿಸಿಮುರಿವಂತೆ|ಪೊಲಬರಿಯದೊಳಪೊಗುವ ಮದನನಂಮಂತ್ರಿಕಳುಹಿದೆಡಲ್ಲಿಬಂದಡಗಿರ್ದ ‖ ಕೊಲೆಗಡಿಗಚಂಡಾಲರುಗಿದಕೈದುಗಳಿಂದ | ಕೆಲಬಲದೊಳಿರ್ದುಪೊಯ್ದಿರಿದು ಕೆಡಹಿದೊಡೆಭೂ | ತಳಕೆಬೀಳುತ್ತವಂಮಾಧವಸ್ಮರಣೆಯಿಂದೊರೆದನಾಕ್ಷಣದೊಳು ‖ ೪೭ ‖ ಅವಘಡಿಸಿಮದನನಂಘಾತಕರ್ಚಂಡಿಕಾ | ಭವನದೊಳ್ಕೊಂದುನಿಲ್ಲದೆಪೋದರಿತ್ತಲು | ತ್ಸವದಿಂದಚಂದ್ರಹಾಸಂಕುಂತಳೇಂದ್ರನಂಕಾಣಲಾನೃಪನವಂಗೆ‖ ಅವನಿಯಂಕೊಟ್ಟರಸುಪಟ್ಟಮಂಕಟ್ಟಿಗಾ | ಲವನಮತದಿಂದಗಾಂಧರ್ವವೈವಾಹದಿಂ | ಕುವರಿಚಂಪಕಮಾಲಿನಿಯನಿತ್ತುಸತ್ಕರಿಸಿ ಬನಕೆತಾಂಪೊರಮಟ್ಟನು‖೪೮‖ಬಾಧಿಸುವಸುಖದುಃಖದೊಡಲೆನಿಪಸಂಸಾರ | ಸಾಧನವನೆಲ್ಲಮಂತೊರೆದುಸಮ್ಯಕ್ಜ್ಞಾನಬೋಧಿ

---

ದೊಳು_ತ್ರಿನೇತ್ರಗಳಿಂದ, ಎಸೆವ-ಹೊಳೆಯುತಕ್ಕ, ದೇವನ_ಹರನ, ಅರಸಿಯು_ರಾಣಿಯಾದ ಗೌರಿದೇವಿಯ, ಭವನಕೆ_ದೇವಸ್ಥಾನಕ್ಕೆ, ಐತಂದನು_ಬಂದವನಾದನು. ‖೪೬‖

ಟೀ‖ ಮಂತ್ರಿ-ಮಂತ್ರಿಯಾದ ದುಷ್ಟಬುದ್ಧಿಯು, ಕಳುಹಿದೊಡೆ - ಕಳುಹಿಸಿದ ಕಾರಣ, ಅಲ್ಲಿ - ಆ ಕಾಳಿಕಾಲಯದೊಳಗೆ, ಬಂದು_ಬಂದವರಾಗಿ, ಅಡಗಿರ್ದ_ಆಚ್ಛಾದಿಸಿಕೊಂಡಿದ್ದ, ಕೊಲೆಗಡಿಗ_ಕೊಲೆಪಾತಕರಾದ,ಚಂಡಾಲರು_ಕ್ರೂರ ಕೆಲಸವನ್ನು ಮಾಡತಕ್ಕವರು, ಕೆಲಬಲದೊಳು_ಉಭಯ ಭಾಗಗಳಲ್ಲಿಯೂ, ಉಗಿದ – ಈಚೆಗೆ ತೆರೆದಿರತಕ್ಕ, ಕೈದುಗಳಿಂದ_ಖಡ್ಗಂಗಳಿಂದ, ಇರ್ದು_ಇದ್ದುಕೊಂಡು, ಪೊಲಬ_ಹೊರಗೆ ನಡೆಯುವದನ್ನು, ಅರಿಯದೆ_ಗೋಚರಕ್ಕೆ ತಾರದೆ, ಒಳಪೊಗುವ_ದೇವಸ್ಥಾನಕ್ಕೆ ಬರತಕ್ಕ, ಮದನನಂ_ಮದನನೆಂಬ ದುಷ್ಟಬುದ್ಧಿಯ ಸುತನನ್ನು, ಖಳರ-ದುರಾತ್ಮರ, ಅಂತರಂಗದೊಳ್_ಹೃದಯದಲ್ಲಿ, ಪ್ರವೇಶದ_ಸೇರಿರತಕ್ಕ, ವಿವೇಕವಂ_ತಿಳಿವಳಿಕೆಯನ್ನು, ಬಳಸಿದ-ಸುತ್ತಿಕೊಂಡಿರುವ, ಅರಿಷಡ್ವರ್ಗಂ_ಆರು ಬಾಧೆಗಳು, ಮುರಿವಂತೆ-ಭಂಗಪಡಿಸತಕ್ಕ ರೀತಿಯಾಗಿ, ಪೊಯ್ದು-ಬಡಿದು, ಇರಿದು_ಚುಚ್ಚಿ, ಕೆಡಹಿದೊಡೆ_ಉರುಳಿಸಿ ಬಿಡಲು, ಅವಂ_ಆ ಮದನನಾದರೊ, ಭೂತಳಕೆಬೀಳುತ್ತ-ನೆಲದಮೇಲೆ ಬಿದ್ದುಹೋಗುತ್ತ, ಆಕ್ಷಣದೊಳು_ಕೂಡಲೆ, ಮಾಧವಸ್ಮರಣೆಯಿಂದ-ನಾರಾಯಣಸ್ಮೃತಿಯಿಂದ, ಅಸು-ಹರಣವನ್ನು, ತೊರೆದನು_ಬಿಟ್ಟುಬಿಟ್ಟನು. ‖೪೭‖

ಟೀ‖ ಚಂಡಿಕಾಭವನದೊಳ್ - ಕಾಳಿಕಾಲಯದಲ್ಲಿ, ಮದನನಂ_ಮದನನೆಂಬ ದುಷ್ಟಬುದ್ಧಿಯ ಸುತನನ್ನು, ಘಾತಕರು_ಚಂಡಾಲರು, ಅವಘಡಿಸಿ-ಮೇಲೆ ಬಿದ್ದು, ಕೊಂದು-ಪ್ರಾಣವನ್ನು ತೆಗೆದು, ನಿಲ್ಲದೆ-ಆ ಸ್ಥಳದಲ್ಲಿರದೆ, ಪೋದರು-ಹೊರಟುಹೋದರು. ಚಂದ್ರಹಾಸನು - ಇಂದುಹಾಸನಾದರೊ, ಇತ್ತಲು-ಈ ಭಾಗದಲ್ಲಿ, ಕುಂತಳೇಂದ್ರನಂ – ಕುಂತಳಾಧಿಪನನ್ನು, ಉತ್ಸವದಿಂದ_ಬಹಳ ಸಡಗರದಿಂದ, ಕಾಣಲು – ನಿರುಕಿಸಲು, ಅವಂಗೆ-ಆ ಇಂದುಹಾಸನಿಗೆ, ಆನೃಪನು-ಆ ರಾಜೇಂದ್ರನು, ಅವನಿಯಂ-ಇಳೆಯನ್ನು, ಕೊಟ್ಟು-ಕೊಟ್ಟವನಾಗಿ, ಅರಸುಪಟ್ಟಮಂ-ರಾಜ್ಯಾಭಿಷೇಕವನ್ನು, ಕಟ್ಟಿ-ನೆರವೇರಿಸಿ, ಕುವರಿ_ಸುತೆಯಾದ, ಚಂಪಕಮಾಲಿನಿಯನು-ಚಂಪಕಮಾಲಿನಿ ಎಂಬ ಕನ್ನಿಕೆಯನ್ನು, ಗಾಲವನ_ಗಾಲವಋಷಿಯ, ಮತದಿಂದ_ಒಡಂಬಡಿಕೆಯಿಂದ ಗಾಂಧರ್ವವೈವಾಹದಿಂ – ಗಂಧರ್ವಪದ್ಧತಿಯ ಮದುವೆಯಿಂದ, ಇತ್ತು - ದಾನವಂಮಾಡಿ, ಸತ್ಕರಿಸಿ_ಮನ್ನಣೆಯಂಮಾಡಿ, ತಾಂ_ತಾನಾದರೊ, ಬನಕೆ_ಅರಣ್ಯಕ್ಕೆ, ಪೊರಮಟ್ಟನು-ಹೊರಟುಹೋದನು. ‖೪೮‖

ಟೀ‖ ಆಕುಂತಳಾಧಿಪನು – ಆ ಕುಂತಳದೇಶದ ರಾಜನು, ಗಾಲವನ – ಗಾಲವಋಷಿಯ, ಅನುಜ್ಞೆಯಿಂದ_ಅಜ್ಞೆಯಿಂದ, ಬಾಧಿಸುವ-ಸಂಕಟಪಡಿಸುವ, ಸುಖದುಃಖದ-ಕಷ್ಟಸುಖಗಳನ್ನುಂಟಾಗಿರತಕ್ಕ, ಒಡಲ್_ದೇಹವು, ಎನಿಪ_ಎನ್ನತಕ್ಕ, ಎಲ್ಲಮಂ-ಸಮಸ್ತವಾದ, ಸಂಸಾರಸಾಧನಮಂ-ಸಂಸಾರಸಂಬಂಧವನ್ನೆಲ್ಲಾ, ತೊರೆದು_ತ್ಯಜಿಸಿ, ಸಮ್ಯಕ್-ಸರಿಯಾದ, ಜ್ಞಾನ

---

ಸದೆ ಕಾಳಿಕಾದೇವಾಲಯದ ಬಳಿಗೆ ಬಂದು |೪೬| ಒಳಕ್ಕೆ ಪ್ರವೇಶಮಾಡಿದ ಕೂಡಲೇ ದುಷ್ಟಬುದ್ಧಿಯಿಂದಾಜ್ಞಪ್ತರಾಗಿ ದೇವಾಲಯದೊಳಬಾಗಿಲ ಇರ್ಕಡೆಗಳಲ್ಲಿಯೂ ಕೈಗಳಲ್ಲಿ ಕತ್ತಿಯನ್ನು ಹಿಡಿದು ನಿಂತಿದ್ದ ಚಂಡಾಲರು ತಟ್ಟನೆ ಈ ಮದನನ ತಲೆಯಮೇಲೆ ಕತ್ತಿಯನ್ನು ಬಿಟ್ಟು ಬಿಡಲು ಅವನು ಮುಕುಂದ ಸ್ಮರಣೆಯಂ ಮಾಡುತ್ತ ನೆಲಕ್ಕೆ ಬಿದ್ದು ಪ್ರಾಣವನ್ನು ಕಳೆದುಕೊಂಡನು. ‖ ೪೭ ‖ ಚಂಡಾಲರಾದರೊ ಅಲ್ಲಿ ನಿಲ್ಲದೆ ಹೊರಟುಹೋದರು. ಅತ್ತ ಇಂದುಹಾಸನು ಮದನನು ಕೊಟ್ಟ ಕುದುರೆಯನ್ನೇರಿ ಪರಿವಾರದೊಂದಿಗೆ ಹೊರಟು ಅರಮನೆಗೆ ಹೋಗಿ ಕುಂತಳೇಂದ್ರನನ್ನು ನೋಡಿದನು. ಆ ರಾಜೇಂದ್ರನು ಈ ಇಂದುಹಾಸನ ಮುಖವನ್ನು ನೋಡಿದೊಡನೆಯೇ ಅತ್ಯಾನಂದದಿಂದ ಕೂಡಿ ತನ್ನ ರಾಜ್ಯವನ್ನೂ ಕೋಶವನ್ನೂ ಚಂದ್ರಹಾಸನಿಗೊಪ್ಪಿಸಿ ತನ್ನ ಕುವರಿಯಾದ ಚಂಪಕಮಾಲಿನಿಗೂ ಚಂದ್ರಹಾಸನಿಗೂ ಗಂಧರ್ವ ವಿವಾಹವನ್ನು ಮಾಡಿ ತಾನು ಪತ್ನೀಸಮೇತನಾಗಿ ವಾನಪ್ರಸ್ಥಾಶ್ರಮಕ್ಕೆ ಹೊರಟುಹೋದನು. ‖ ೪೮ ‖ ಕುಂತಳರಾಜ್ಯವೂ ಅಲ್ಲಿನ ಐಸಿರಿಯೂ ಚಂದ್ರ

ತದಯೋಗಮುಂಕೈಗೊಂಡುಸತಿಸಹಿತಗಾಲವನನುಜ್ಞೆಯಿಂದ || ಗೋಧೂಳಿಲಗ್ನದೊಳ್ಪೊರಮಟ್ಟನಾಕುಂತ | ಳಾಧಿಪನರಣ್ಯ ವಾಸಕೆಬಳಿಕಚಂದ್ರಹಾ | ಸಾಧೀನವಾಯ್ತುವನಸಂಪದಂಪುರುಷಸ್ಯಭಾಗ್ಯಮೆಂಬುದುನಿಜಮೆನೆ || ೪೯ || ಪಟ್ಟದರಸಾಗಲ್ಕೆ ಚಂದ್ರಹಾಸಂಬಳಿಕ | ಪಟ್ಟಣದಜನಮರಿಯಲೆಂದುಸಿಂಗರಿಸಿಕೋ | ರ್ಪಟ್ಟಗಜಮಸ್ತಕದಮೇಲೆನೃಪಸುತೆಸಹಿತಪೊರಮಟ್ಟ ನುತ್ಸವದೊಳು || ದಟ್ಟಸಿದವಾದ್ಯರವಮೋದರಿತಿವಾರ್ತೆಕಿವಿ | ದಟ್ಟದರೆದುಷ್ಟಬುದ್ಧಿಗೆಮತ್ತೆ ಭೀತಿಹೊ| ಯ್ದಟ್ಟತೇನೆಂಬೆನದು ಪೊಸತಲಾದೈವಕೃತಮೆಂದುಸೈವೆಂಗಾದನು ||೫೦|| ಗಾಲವನಮತದೊಳೆನ್ನಂಕರೆಸದಿಂದುಭೂ|ಪಾಲಂಕುಳಿಂದತನಯಗೆಧರೆಯ ನೊಪ್ಪಿಸಿವ | ನಾಲಯಕೆತೆರಳಿದನೆಮದನನಿದ್ದೇಗೈದನೆಂದುಪಲ್ಮೊರೆದುಮಗನ || ಮೇಲೆಕೋಪಿಸುತಿರ್ದನನ್ನೆಗಂಪ್ರಿಯಪತ್ನಿ |

---

ವಿವೇಕದಿಂದ, ಬೋಧಿತ-ತಿಳಿದುಕೊಳ್ಳಬೇಕಾದ, ಯೋಗಮುಂ-ಯೋಗಶಾಸ್ತ್ರವನ್ನು, ಕೈಕೊಂಡು-ಸ್ವೀಕರಿಸಿ, ಗೋಧೂಳಿ ಲಗ್ನದೊಳ್ - ಸಂಜೆಯಲ್ಲಿ ಹಸುಗಳು ಮನೆಗೆ ಬರತಕ್ಕ ಕಾಲಕ್ಕೆ ಸರಿಯಾಗಿ, ಸತಿಸಹಿತ-ಪತ್ನೀಸಮೇತನಾಗಿ, ಅರಣ್ಯವಾಸಕೆ-ವಾನಪ್ರಸ್ಥಾಶ್ರಮಕ್ಕೆ, ಪೊರಮಟ್ಟನು-ಹೊರಟುಹೋದನು. ಪುರುಷಸ್ಯ-ಮನುಷ್ಯನ, ಭಾಗ್ಯಂ-ಐಸಿರಿಯು, ಎಂಬುದು-ಎನ್ನ ತಕ್ಕದ್ದು, ನಿಜಂ-ನಿಶ್ಚಯವು, ಎನೆ-ಎಂಬ ರೀತಿಯಾಗಿ, ಅವನ-ಆ ಕುಂತಳೇಂದ್ರನ, ಸಂಪದಂ-ಐಸಿರಿಯು, ಚಂದ್ರಹಾಸ-ಇಂದುಹಾಸನಿಗೆ, ಆಧೀನಂ-ಆಧೀನವಾದದ್ದು, ಆಯ್ತು-ಆಗಿಬಿಟ್ಟಿತು. ||೪೯||

ಟೀ|| ಚಂದ್ರಹಾಸಂ-ಇಂದುಹಾಸನು, ಪಟ್ಟದರಸು - ಪಟ್ಟಾಭಿಷೇಕವನ್ನು ಮಾಡಿಕೊಂಡ ರಾಜನು, ಆಗಲ್ಕೆ-ಆಗ ಲಾಗಿ, ಬಳಿಕ-ಆಮೇಲೆ, ಪಟ್ಟಣದ-ಆ ಊರಿನ, ಜನಂ-ಜನರೆಲ್ಲರೂ, ಅರಿಯಲಿ-ತಿಳಿದುಕೊಳ್ಳಲಿ, ಎಂದು-ಎಂಬ ರೀತಿಯಿಂದ, ಸಿಂಗರಿಸಿ-ಅಲಂಕಾರದಿಂ ಕೂಡಿ, ಕೋರ್ಪಟ್ಟ - ಕಾಣಿಸಿಕೊಂಡ, ಗಜಮಸ್ತಕದಮೇಲೆ - ಆನೆಯ ಕುಂಭಸ್ಥಳದ ಮೇಲ್ಗಡೆ, ಉತ್ಸವದೊಳು-ಅತ್ಯಾನಂದದಿಂದ, ನೃಪಸುತೆಸಹಿತ-ರಾಜಕುವರಿಯಿಂದೊಡಗೂಡಿ, ಪೊರಮಟ್ಟನು-ಮೆರವಣಿಗೆ ಹೊರಟನು, ದಟ್ಟಸಿದ-ಸಾಂದ್ರವಾದ, ವಾದ್ಯ-ವಾದ್ಯಗಳ, ರವಂ-ಶಬ್ದವು, ಒದರಿತು - ತೋರ್ಪಟ್ಟಿತು, ದುಷ್ಟಬುದ್ಧಿಗೆ - ಮಂತ್ರಿಯಾದ ದುಷ್ಟಬುದ್ಧಿಯೆಂಬಾತನಿಗೆ, ಈವಾರ್ತೆ-ಈ ವರ್ತಮಾನವು, ಕಿವಿದಟ್ಟದರೆ-ಕಿವಿಗಳಿಗೆ ಕೇಳಿಸಲು, ಮತ್ತೆ-ತಿರುಗಿ, ಭೀತಿ-ಹೆದರಿಕೆಯು, ಹೊಯ್ದು-ಉಂಟಾಗಿ, ಅಟ್ಟಿತು-ಧೈರ್ಯವನ್ನು ನಿಲ್ಲದಂತೆ ಮಾಡಿಬಿಟ್ಟಿತು, ಏನೆಂಬೆನು-ಏನೆಂದು ನುಡಿಯಲಿ, ಅದು-ಈ ಕಾರ್ಯವು, ಪೊಸತಲಾ-ಹೊಸದಾದ ಬಗೆಯಲ್ಲವೇ, ದೈವಕೃತಂ - ದೈವಾಯತ್ತವಾದದ್ದು, ಎಂದು - ಎಂಬತೆರನಾಗಿ, ಎಂದು ಕೊಂಡು, ಸೈವೆಂಗಾದನು-ಅಚ್ಚರಿಯನ್ನೈದಿದನು. ||೫೦||

ಟೀ|| ಇಂದು-ಈ ದಿವಸ, ಭೂಪಾಲಂ - ರಾಜೇಂದ್ರನಾದ ಕುಂತಳಾಧೀಶನು, ಎನ್ನಂ-ನನ್ನನ್ನು, ಕರೆಸದೆ - ಹೇಳಿ ಕಳುಹಿಸದೆ, ಧರೆಯನು-ರಾಜ್ಯಸಂಪತ್ತನ್ನು, ಕುಳಿಂದತನಯಗೆ-ಮೇಧಾವಿಯಮಗನಾದ ಇಂದುಹಾಸನಿಗೆ, ಗಾಲವನ ಮತ ದೊಳು-ಗಾಲವಋಷಿಯ ಇಷ್ಟದಂತೆ, ಒಪ್ಪಿಸಿ-ದಾನಮಾಡಿ, ವನಾಲಯಕೆ-ಅರಣ್ಯವಾಸಕ್ಕಾಗಿ, ತೆರಳಿದನೆ-ಹೊರಟುಹೋದನೆ, ಮದನನು-ಮದನನೆಂಬಾತನು, ಇದ್ದು-ಇದ್ದಾಗ್ಯೂ ಕೂಡ, ಏಗೈದನು - ಏನುಮಾಡಿದ ಹಾಗಾಯಿತು, ಎಂದು - ಎಂಬತೆರನಾಗಿ ಎಂದುಕೊಂಡು, ಪಲ್ಮೊರೆದು-ಹಲ್ಲುಗಳನ್ನು ಕಡಿಯುತ್ತ, ಮಗನಮೇಲೆ-ಕುವರನಾದ ಮದನನ ಮೇಲೆ, ಕೋಪಿಸುತ-ಸಿಟ್ಟು ಮಾಡಿಕೊಳ್ಳುತ್ತ, ಇರ್ದನು - ಇದ್ದವನಾದನು, ಅನ್ನೆಗಂ - ಈ ರೀತಿಯಲ್ಲಿರುವಾಗ, ಶಶಿಹಾಸನು - ಇಂದುಹಾಸನಾದರೊ, ಮಾವನಂ - ತನ್ನ ಹೆಂಡತಿಯಾದ ವಿಷಯೆಯ ತಂದೆಯನ್ನು, ಕಾಣಲೆಂದು - ನೋಡಬೇಕೆಂಬುದಾಗಿ, ಶುಂಡಾಲಮಸ್ತಕ ದಿಂದಲಿ - ಆನೆಯ ಕುಂಭಸ್ಥಳದ ದೆಸೆಯಿಂದ, ಭ್ರಮರಾರಿಮಾಲಿನಿವೆರಸಿ - ಮಾಲಿನಿಯೆಂಬ ಕನ್ಯಾಮಣಿಯಿಂದೊಡಗೂಡಿ, ಇಳಿತಂದು - ಕೆಳಕ್ಕಿಳಿದವನಾಗಿ, ಸಚಿವನ - ಮಂತ್ರಿಯಾದ ದುಷ್ಟಬುದ್ಧಿಯ, ಅಡಿಗೆ - ಚರಣಗಳಿಗೆ, ಎರಗಿದಂ-ನಮುಸ್ಕಾರ ವನ್ನು ಮಾಡಿದನು. ||೫೧||

---

ಹಾಸನ ಸ್ವಾಧೀನವಾಯಿತು. || ೪೯ || ಈ ರೀತಿಯಲ್ಲಿ ಶಶಿಹಾಸನಿಗೆ ಕುಂತಳ ನಗರದಲ್ಲಿ ಪಟ್ಟಾಭಿಷೇಕವಾದ ಮೇಲೆ ಊರಿನಲ್ಲಿ ಎಲ್ಲರೂ ಕಾಣಲೆಂದು ತಾನೂ ಚಂಪಕಮಾಲಿನಿಯೂ ಪಟ್ಟದಾನೆಯ ಮೇಲಿರುವ ನವರತ್ನ ಖಚಿತವಾದ ಅಂಬಾರಿ ಯಲ್ಲಿ ಕುಳಿತು ಮೆರವಣಿಗೆ ಹೊರಟರು, ವಿಧವಿಧವಾದ ಮಂಗಳ ವಾದ್ಯಂಗಳುಂಟಾದವು. ಇದು ದುಷ್ಟಬುದ್ಧಿಗೆ ಕೇಳಿಸಿದ ಕೂಡಲೇ ಅವನ ಎದೆಯಲ್ಲಿ ಅತ್ಯಂತ ಭಯವುಂಟಾಗಿ ದೈವಮಾಯೆಗೆ ಅಚ್ಚರಿಗೊಂಡು || ೫೦ || ಅಯ್ಯೋ! ಈ ದಿವಸ ಇಂದುಹಾಸನಿಗೆ ಗಾಲವ ಮುನಿಯ ಮಾತಿನಂತೆ ಕುಂತಳೇಂದ್ರನು ತನ್ನ ಸರ್ವಸ್ವವನ್ನೂ ಒಪ್ಪಿಸಿ ತಾನು ಹೊರಟು ಹೋಗಿದ್ದಾನೆ ಈ ಸಂಗತಿಯೇ ನನಗೆ ತಿಳಿಯಲಿಲ್ಲವಲ್ಲಾ! ಮದನನು ಅಲ್ಲಿಯೇ ಇದ್ದು ಮಾಡಿದ ಕೆಲಸವೇನೆಂದು ಆತ್ಯಾ ಗ್ರಹಗೊಂಡಿರುವ ವೇಳೆಗೆ ಸರಿಯಾಗಿ ಇಂದುಹಾಸನು ಅಲ್ಲಿಗೆ ಬಂದು, ಚಂಪಕಮಾಲಿನಿಯೂ ತಾನೂ ಆನೆಯ ತಲೆಯ ಮೇಲ್ಗಡೆ

ಮಾಲಿನಿವೆರಸಿಮಾವನಂ ಕಾಣಲೆಂದುಕುಂ । ಡಾಲಮಸ್ತಕದಿಂದಲಿಳಿತಂದುಶಶಿಹಾಸನೆರಗಿದಂಸಚಿವನಡಿಗೆ॥೫೧॥ ಕಳಿವರಿವಕೋಪ ದಿಂಮಂತ್ರಿವಂಶಾಚಾರ।ಮುಳಿಯಲಾಗದುಚಂಡಿಕಾರ್ಚನೆಗೆನಡೆಯೆಂದು।ಕಳುಹಿದೊಡೆನೀಮಾಡೆನೀಮಾಡಿದುಜ್ಜುಗಮಿದೇನೆಂದು ಕೇಳ್ದೊಡಾಶಶಿಹಾಸನು ॥ ಅಳವಡಿಸಿಕೊಂಡುನಾಂಪೋಗುತಿರೆನಡುವೆಕುಂ । ತಳರಾಜನರಮನೆಗೆತನಗವಸರವನಿತ್ತು। ತಳೆದನೋ ರ್ವನೆನಿನ್ನಮಗನಂಬಿಕಾಪೂಜೆಗಿಂತಾಯ್ತುಬಳಿಕಿಂತೆಂದನು ॥೫೨॥ ಹಮ್ಮೈಸಿದಂದುಷ್ಟಬುದ್ಧಿನಯದೊಳಗಳಿಯ। ನಂಮನೆಗೆಬೀ ಳ್ಕೊಟ್ಟನರಿದರಿದುಪರಹಿಂಸೆ । ಯಂಮಾಡಿಮಾನವಂಬಾಳ್ವಪನೆದೀಪಮಂಕೆಡಿಸುವಪತಂಗದಂತೆ ॥ ನಮ್ಮುಪಾಯವೆನಮಗಪಾ ಯಮಂತಂದುದೆಂ । ದೊಮ್ಮೆನಿಜಸದನಮಂಪೊಕ್ಕಾರುಮರಿಯದೊ । ಲುಮ್ಮಳಿಸಿಶೋಕದಿಂಪೊರಮಟ್ಟನೇರಿಳಿದು

ಟೀ॥ ಮಂತ್ರಿ-ಸಚಿವನು, ವಂಶಾಚಾರಂ-ವಂಶದಲ್ಲಿ ಬಂದಿರತಕ್ಕ ಪದ್ಧತಿಯನ್ನು, ಉಳಿಯಲಾಗದು-ಬಿಡಬಾರದು ಆದ್ದರಿಂದ, ಚಂಡಿಕಾರ್ಚನೆಗೆ-ಕಾಳಿಕಾದೇವಾಲಯಕ್ಕೆ, ನಡೆ-ಹೊರಡು, ಎಂದು-ಎಂಬತೆರನಾಗಿ, ಕಳುಹಿದೊಡೆ-ಕಳುಹಿಸಿದರೆ, ನೀಂ-ನೀನಾದರೊ, ಮಾಡಿದ-ನಡಿಸಿರತಕ್ಕ, ಉಜ್ಜುಗಂ-ಕಾರ್ಯವು, ಇದೇನು-ಇದು ಏತರದು, ಎಂದು-ಎಂಬತೆರನಾಗಿ, ಕಳಿವರಿವ-ಉಕ್ಕಿ ಬರುತ್ತಲಿರುವ, ಕೋಪದಿಂ-ಆಗ್ರಹದಿಂದ, ಕೇಳ್ದೊಡೆ-ಪ್ರಶ್ನೆಯಂ ಮಾಡಲು, ನಾಂ-ನಾನಾದರೊ, ಅಳವಡಿಸಿಕೊಂಡು-ಗಂಧಪುಷ್ಪಾಕ್ಷತೆಗಳನ್ನು ಕೈಕೊಂಡು, ಪೋಗುತಿರೆ-ಹೋಗುತ್ತಿರಲಾಗಿ, ನಡುವೆ-ಮಧ್ಯದಾರಿಯೊಳಗೆ, ನಿನ್ನಮಗನು-ನಿನ್ನ ಕುವರನಾದ ಮದನನು, ತನಗೆ-ನನಿಗಾದರೆ, ಕುಂತಳ ರಾಜನ-ಕುಂತಳಾಧೀಶನ, ಅರಮನೆಗೆ-ರಾಜಗೃಹಕ್ಕೆ ಹೊರಡುವಂತೆ, ಅವಸರವನು-ಕಾಲವನ್ನು, ಇತ್ತು-ಮಾಡಿಕೊಟ್ಟು, ಓರ್ವನೆ-ಏಕಾಕಿಯಾಗಿಯೇ, ಅಂಬಿಕಾಪೂಜೆಗೆ-ಕಾಳಿಯನ್ನು ಪೂಜೆಮಾಡುವುದಕ್ಕೆ, ತಳೆದನು-ಹೋದನು, ಬಳಿಕ-ಆಮೇಲೆ, ಇಂತು-ಈ ಪ್ರಕಾರವಾಗಿ, ಆಯ್ತು-ಪಟ್ಟಾಭಿಷೇಕವೂ ಚಂಪಕಮಾಲಿನಿಗೂ ನನಿಗೂ ಮದುವೆಯೂ ಸಹ ನೆರವೇರಿತು, ಎಂದನು-ಎಂಬುದಾಗಿ ಹೇಳಿದನು. ॥೫೨॥

ಟೀ॥ ದುಷ್ಟಬುದ್ಧಿ-ದುಷ್ಟಬುದ್ಧಿಯಾದರೊ, ಹಮ್ಮೈಸಿದಂ-ಬಹಳವಾಗಿ ಸಂಕಟಪಟ್ಟನು. ಅಳಿಯನಂ-ಅಳಿಯನಾದ ಇಂದುಹಾಸನನ್ನು, ಮನೆಗೆ-ಮಂದಿರಕ್ಕೆ, ನಯದೊಳು-ನಮ್ರಭಾವದಿಂದ, (ಒಳ್ಳೆನುಡಿಗಳನ್ನಾಡಿ) ಬೀಳ್ಕೊಟ್ಟನು-ಕಳುಹಿಸಿದನು. ಮಾನವಂ - ನರನು, ಅರಿದರಿದು-ತಿಳಿತಿಳಿದೂ ಕೂಡ, ಪರ-ಇತರರಿಗೆ, ಹಿಂಸೆಯಂಮಾಡಿ - ಕೇಡನ್ನೆಸಗಿ, ಬಾಳ್ವಪನೆ-ಬದುಕಲಾದೀತೆ, ನಮ್ಮ-ನಾವು ಮಾಡಿದ, ಉಪಾಯವೆ-ಚಾತುರ್ಯವೇ, ದೀಪಮಂ-ದೀಪವನ್ನು, ಕೆಡಿಸುವ-ಕೆಡಿಸತಕ್ಕ, ಪತಂಗದಂತೆ-ಪತಂಗದ ಹುಳದ ರೀತಿಯಾಗಿ, ನಮಗೆ-ನಮಿಗಾದರೊ, ಅಪಾಯಮಂ-ಕೆಟ್ಟದ್ದನ್ನೆ, ತಂದುದು-ಮಾಡಿಬಿಟ್ಟಿತು. ಎಂದು-ಎಂಬತೆರನಾಗಿ, ನಿಜಸದನಮಂ-ತನ್ನಮಂದಿರವನ್ನು, ಒಮ್ಮೆ-ಒಂದಾವರ್ತಿ, ಪೊಕ್ಕು-ಪ್ರವೇಶಮಾಡಿ, ಶೋಕದಿಂ-ವ್ಯಸನದಿಂದ, ಉಮ್ಮಳಿಸಿ-ಬಾಧೆಪಟ್ಟು, ಕತ್ತಲೆಯೊಳು-ಕತ್ತಲೆಯಾಗಿರುವಾಗ, ಆರುಂ-ಯಾರೊಬ್ಬರೂ, ಅರಿಯದವೊಲು-

ಯಿಂದ ಕೆಳಗಿಳಿದು, ಮಂತ್ರಿಯಾದ ದುಷ್ಟಬುದ್ಧಿಯ ಕಾಲುಗಳಿಗೆರಗಿದರು ॥ ೫೧ ॥ ಆಗ ಮಂತ್ರಿಯು ಉಕ್ಕಿಬರುವ ಕೋಪವನ್ನು ಒಳಗೇ ಅಡಗಿಸಿಕೊಂಡು, ಆ ಇಂದುಹಾಸನನ್ನು ಕುರಿತು, ಎಲೈ ಚಂದ್ರಹಾಸನೆ, ನಮ್ಮ ವಂಶಪಾರಂಪರ್ಯವಾಗಿ ಬಂದಿರತಕ್ಕ ದುರ್ಗಾಪೂಜೆಯನ್ನು ಮದುವೆಯ ನಾಲ್ಕನೆ ದಿವಸ ಮಾಡಬೇಕೆಂದು ನಾನು ನಿನಗೆ ಹೇಳಿದರೆ ನೀನು ಮಾಡಿರತಕ್ಕ ಕಾರ್ಯವಿದೇನೆನ್ನಲು ಆ ಇಂದು ಹಾಸನು ಮಂತ್ರಿಯನ್ನು ಕುರಿತು, ನಾನು ನಿನ್ನಾಜ್ಞೆಯಂತೆ ಪೂಜೋಪಕರಣಗಳನ್ನು ಅಣಿಮಾಡಿಕೊಂಡು ಸೂರ್ಯಾಸ್ತಮಯಕಾಲದಲ್ಲಿ ಏಕಾಂಗಿಯಾಗಿ ಅಂಬಿಕಾದೇವಾಲಯಕ್ಕೆ ಹೋಗುತ್ತಿದ್ದೆನು. ನಿನ್ನ ಕುವರನಾದ ಮದನನು ಕುದುರೆಯನ್ನೇರಿ ಪರಿವಾರದೊಂದಿಗೆ ನನಿಗೆದುರಾಗಿ ನನ್ನನ್ನುಕಂಡು ಎಲ್ಲಿಗೆ ಹೋಗುತ್ತಿ ? ಎಂದು ಕೇಳಲಾಗಿ ನಾನು ಇದ್ದ ಸಂಗತಿಯನ್ನೆಲ್ಲಾ ಹೇಳಿದೆನು. ಆಗ ಮದನನು ನನ್ನನ್ನು ಬಹು ಜಾಗ್ರತೆಯಾಗಿ ಕುಂತಳೇಂದ್ರನು ಬರಹೇಳಿರುವನೆಂದು ತನ್ನ ಕುದುರೆಯನ್ನೂ ಪರಿವಾರವನ್ನೂ ನನಿಗೊಪ್ಪಿಸಿ ನನ್ನ ಕೈಯಲ್ಲಿದ್ದ ತಟ್ಟೆಯನ್ನು ತೆಗೆದುಕೊಂಡು ಕಾಳಿಕಾದೇವಾಲಯಕ್ಕೆ ಒಬ್ಬನೇ ಹೊರಟು ಹೋದನು. ನಾನಾದರೊ ತಡಮಾಡದೆ ಜಾಗ್ರತೆಯಾಗಿ ಅರಮನೆಗೆ ಹೋಗಿ ರಾಜನನ್ನು ನೋಡಿದೆನು. ಆ ಭೂಕಾಂತನು ತನ್ನ ಬೊಕ್ಕಸ ಭಂಡಾರಗಳನ್ನೂ ರಾಜ್ಯವನ್ನೂ ನನಿಗೊಪ್ಪಿಸಿ ಆತನ ಕುವರಿಯಾದ ಈ ಚಂಪಕಮಾಲಿನಿಯನ್ನೂ ನನಿಗೆ ಗಾಂಧರ್ವವಿಧಿಯಿಂದ ವಿವಾಹಮಾಡಿ ತಾನು ಪತ್ನೀಸಹಿತ ಅರಣ್ಯಕ್ಕೆ ಹೊರಟುಹೋದನೆಂದು ನುಡಿದನು॥೫೨॥ ಈ ಮಾತುಗಳನ್ನು ಕೇಳಿದಕೂಡಲೆ ಉಕ್ಕಿ ಉಕ್ಕಿ ಬರುತ್ತಲಿರುವ ದುಃಖಾತಿಶಯವನ್ನು ತಡೆದುಕೊಂಡು ಅಳಿಯನನ್ನು ಮೃದುನುಡಿಗಳಿಂದ ಸಂತೈಸಿ ಅರಮನೆಗೆ ಕಳುಹಿಸಿ ತಾನು ತನ್ನ ಮನೆಗೆ ಬಂದು ಅಯ್ಯಾ! ಲೋಕದಲ್ಲಿ ಯಾವ ಮನುಷ್ಯನು ತಿಳಿತಿಳಿದೂ ಪರಹಿಂಸೆಗೆ ಉಜ್ಜುಗಿಸುವನೊ ಅವನು ದೀಪದ ಬಳಿಗೆ ಹೋಗಿ ಪ್ರಾಣಗಳನ್ನು ಹೋಗಲಾಡಿಸಿ ಕೊಳ್ಳತಕ್ಕ ದೀಪದ ಹುಳದಂತೆ ತಾನು ಸತ್ತು ಹೋಗದಿರುವನೆ? ಅಯ್ಯೋ! ದೇವರೇ ನಾನು ಮಾಡಿದ ದುರಾಲೋಚನೆಯೇ ನನ್ನನ್ನ ಹಾಳು

ಕೋಂಟೆಯಂ ಕತ್ತಲೆಯೊಳು ‖ ೫೩ ‖ ಮಿಾಂಟುವಗ್ಗದಶೋಕದಿಂದಿರದೆಪೊರಮಟ್ಟು | ನಾಂಟುವೊತ್ತುಮುಳ್ಳುಕಲ್ಗಳಂಬಗೆಗೊಳದೆ | ದಿಂಟುಗುಳಿಗಳನರಿಯದೇಳುತ್ತಬೀಳುತ್ತತಲೆಗೆದರಿಬಾಯಿವಿಡುತ ‖ ಕೋಂಟೆಗಳನೇರಿಳಿದುಪರಿಘೆಯಜಲಂಗಳಂ| ದಾಂಟಿಕತ್ತಲೆಯೊಳೋರ್ವನೆಮಂತ್ರಿಪೊಳಲ್ಪೊರ| ದೋಂಟದೆಡೆಯೊಳ್ನೆಲಸಿದಂಬಿಕಾಭವನಮಂಸಾರ್ದನದನೇವೇಳ್ವೆನು ‖ ೫೪ ‖ ಪರಿದಪೂಮಾಲೆಗಳಬಣ್ಣಗೂಳ್ಗಳಬಲಿಯ | ಮೊರದಪಳೆಗೊಳ್ಳಿಗಳಭಸ್ಮವಾದೊಡಲುಗಳ | ಮುರಿದಗೂಡುಗಳಂಕಳಲ್ದಸಿಬಿಕೆಗಳಚಿತಿಯೋಳ್ಬೇವಕುಣಪಂಗಳ ‖ ತುರುಗಿದೆಲುವಿನಜಂಬುಕಾವಳಿಯಗೂಗೆಗಳ | ಬಿರುದನಿಯಭೂತಭೇತಾಳಸಂಕುಲದಡಗಿನರಕೆಗಳಸುಡುಗಾಡೊಳಾಮಂತ್ರಿಚಂಡಿಕಾಲಯದೆಡೆಗೆನಡೆತಂದನು ‖ ೫೫ ‖ ತಂಡತಂಡದಭೂತವಿತತಿಗಳ್ದಲೆಗೆದರಿ| ಕೊಂಡುಪೇರ್ಮರುಳಂತೆಬಹದುಷ್ಟಬುದ್ಧಿಯಂ | ಕಂಡುತಾವತಿಪಾತಗಂಗಳಂಮಾಡಿದಪಿಶಾಚರಗ್ಗಳೆಯರೆಮ್ಮ ‖ ಹಿಂಡೊಳಿವನವೊಲಾರು

---

ಗೋಚರಪಡಿಸಿಕೊಳ್ಳಲು ಆಗದಹಾಗೆ, ಕೋಂಟೆಯಂ-ಕೋಟೆಯನ್ನು, ಏರಿ-ಹತ್ತಿ, ಇಳಿದು-ಅಲ್ಲಿಂದ ಇಳಿದವನಾಗಿ, ಪೊರಮಟ್ಟನು-ಹೊರಟವನಾದನು ‖೫೩‖

ಟೀ‖ ಮಂತ್ರಿ-ಸಚಿವನಾದ ದುಷ್ಟಬುದ್ಧಿಯು, ಓರ್ವನೆ-ಏಕಾಕಿಯಾಗಿ, ಇರದೆ-ಪಟ್ಟಣದಲ್ಲಿ ನಿಲ್ಲಲಾರದೆ, ಮಿಾಂಟುವ-ಉಕ್ಕುತ್ತಲಿರತಕ್ಕ, ಅಗ್ಗದ-ಹೆಚ್ಚಾದ, ಶೋಕದಿಂದ-ವ್ಯಸನದಿಂದ, ಪೊರಮಟ್ಟು- ಹೊರಟವನಾಗಿ, ನಾಂಟಿ-ಚುಚ್ಚಿಕೊಂಡು, ಪೊತ್ತುವ-ಅದುಮತಕ್ಕ, ಮುಳ್ಳು ಕಲ್ಲು ಇವನ್ನೂ ಕೂಡ, ಬಗೆಗೊಳದೆ-ಗಣನೆಗೆತಾರದೆ, ದಿಂಟು-ದಿಣ್ಣೆಗಳನ್ನೂ, ಗುಳಿಗಳನು-ಹಳ್ಳಗಳನ್ನೂ, ಅರಿಯದೆ-ಲಕ್ಷ್ಯಮಾಡದೆ, ಏಳುತ್ತ-ಮೇಲಕ್ಕೇಳುತ್ತಲೂ, ಬೀಳುತ್ತ-ಕೆಳಗೆ ಉರುಳುತ್ತಲೂ, ತಲೆಗೆದರಿ-ಕೂದಲು ಬಿರೀ ಹೊಯ್ದುಕೊಂಡು, ಬಾಯಿಬಿಡುತ-ಬಾಯಿಯನ್ನು ಮುಚ್ಚಿಕೊಳ್ಳದೆ, ಕೋಂಟೆಗಳನು-ಕೋಟೆಗಳನ್ನು, ಏರಿ-ಹತ್ತಿದವನಾಗಿ, ಇಳಿದು-ಅಲ್ಲಿಂದ ಇಳಿದು, ಪರಿಘೆಯ-ಕಂದಕದಲ್ಲಿರತಕ್ಕ, ಜಲಂಗಳಂ-ನೀರುಗಳನ್ನು, ದಾಂಟಿ-ದಾಟಿದವನಾಗಿ, ಪೊಳಲ-ನಗರದ, ಪೊರದೋಂಟದ-ಹೊರಭಾಗದ ಉದ್ಯಾನದ, ಎಡೆಯೋಳ್-ಭಾಗದಲ್ಲಿ, ನೆಲಸಿದ-ಇರತಕ್ಕ, ಅಂಬಿಕಾಭವನಮಂ-ದುರ್ಗಾಲಯವನ್ನು, ಕತ್ತಲೆಯೊಳ್-ಕತ್ತಲೆಯಿಂದ ಕೂಡಿರುವಾಗ, ಸಾರ್ದನು-ಹೋಗಿ ಸೇರಿದನು, ಅದನು-ಅವನು ಹೋದ ಆತುರವನ್ನು, ಏವೇಳ್ವೆನು-ಏನೆಂದು ಬಣ್ಣಿಸಲಿ ‖೫೪‖

ಟೀ‖ ಮಂತ್ರಿ-ಆ ದುಷ್ಟಬುದ್ಧಿಯು, ಪರಿದ-ಕಿತ್ತುಹೋಗಿರುವ, ಪೂಮಾಲೆಗಳ-ಪುಷ್ಪಹಾರಂಗಳ, ಬಣ್ಣಗೂಳ್ಗಳ-ರಕ್ತವರ್ಣದ ಅನ್ನಗಳ, ಬಲಿಯಂ-ಬಲಿಯಿಂದ ಕೂಡಿದ, ಮೊರದ-ಮೊರಗಳ, ಪಳೆಗೊಳ್ಳಿಗಳ - ಉರಿಯತಕ್ಕ ಕಟ್ಟಿಗೆಗಳ, ಭಸ್ಮವಾದ-ಬೆಂದುಹೋಗಿರತಕ್ಕ, ಒಡಲುಗಳ-ದೇಹಗಳ, ಮುರಿದ-ಭಂಗವಾದ, ಗೂಡುಗಳಂ-ಗೂಡುಗಳನ್ನು, (ದೇಹ) ಕಳಲ್ದ-ಶಿಥಿಲವಾಗಿ ಬಿದ್ದುಹೋದ, ಶಿಬಿಕೆಗಳ-ಪಾಲಕ್ಕಿಯ ತುದಿಗಳ, ಚಿತಿಯೊಳ್-ಸುಡುವೆಡೆಯಲ್ಲಿ, ಬೇವ-ಭಸ್ಮವಾಗುತ್ತಲಿರತಕ್ಕ, ಕುಣಪಂಗಳ-ಶವಗಳ, ತುರುಗ-ತುಂಬಿಕೊಳ್ಳುತ್ತಲಿರತಕ್ಕ, ಕುಣಪಂಗಳ-ಶವಗಳ, ತುರುಗ-ತುಂಬಿಕೊಂಡು ಇರುವ, ಎಲುವಿನ-ಮೂಳೆಗಳ, ಜಂಬುಕ-ಶೃಗಾಲಂಗಳ, ಆವಳಿಯ-ಗುಂಪಿನ, ಗೂಗೆಗಳ-ಗೂಬೆಗಳ, ಬಿರುದನಿಯ-ಕಠಿಣವಾದ ಧ್ವನಿಯುಳ್ಳ, ಭೂತ-ಪಿಶಾಚಗಳ, ಭೇತಾಳ-ಪಿಶಾಚದ ಭೇದಗಳ, ಸಂಕುಲದ-ಗುಂಪಿನ, ಅಡಗಿನ-ಮಾಂಸದ, ಅರಕೆಗಳ-ಹರಿಕೆ ಮಾಡಿಕೊಂಡಿದ್ದ ಪದಾರ್ಥಗಳಿಂದ ಕೂಡಿದ, ಸುಡುಗಾಡೊಳು-ಮಸಣದೊಳಗೆ, ಇರುವ-ಇರತಕ್ಕ, ಚಂಡಿಕಾಲಯದೆಡೆಗೆ-ಕಾಳಿಕಾದೇವಾಲಯದ ಹತ್ತಿರಕ್ಕೆ, ನಡೆತಂದನು-ಬಂದವನಾದನು ‖೫೫‖

ಟೀ‖ ತಂಡತಂಡದ-ಬಗೆಬಗೆಯಾದ, ಭೂತ-ಮರುಳ್ಗಳ, ವಿತತಿಗಳ್-ಸಮುದಾಯಗಳು, ಪೇರ್ಮರುಳಂತೆ-ದೊಡ್ಡ ಪಿಶಾಚಗಳ ರೀತಿಯಾಗಿ, ತಲೆ-ತಲೆಯನ್ನು, ಕೆದರಿ-ಕೆದರಿಕೊಂಡು, ಬಹ-ಬರತಕ್ಕ, ದುಷ್ಟಬುದ್ಧಿಯಂ ಕಂಡು-ದುಷ್ಟಬುದ್ಧಿಯನ್ನು ನೋಡಿ, ತಾವು-ತಾವಾದರೊ, ಅತಿ ಪಾಪಂಗಳ-ಹೆಚ್ಚಾದ ದುರಿತಂಗಳನ್ನು, ಮಾಡಿದ-ಎಸಗಿದ, ಪಿಶಾಚರು-ಭೂತಗಳಾಗಿಯೂ, ಅಗ್ಗಳೆಯರು-ಸಾಹಸಿಗಳೂ ಸಹ ಆಗಿರುವೆವು, ಇವನ ಓಲ್-ಇವನಿರುವಂತೆ, ಆರುಂ-ಯಾರೊಬ್ಬರೂ, ಎಮ್ಮ ಹಿಂಡೋಳ್-ನಮ್ಮ ಗುಂಪಿನೊಳಗೆ, ಇಲ್ಲ-ಇಲ್ಲವು, ಆವ-ಯಾವ ಬಗೆಯ, ಪಾಪದ-ದುರಿತದ, ಉದ್ದಂಡವೊ-ಹೆಚ್ಚಿಗೆಯೊ,

---

ಮಾಡಿತಲ್ಲಾ ಎಂದು ಚಿಂತಿಸುತ್ತಾ ಯಾರೂ ತಿಳಿಯದಂತೆ ಕತ್ತಲಲ್ಲಿ ಹೊರಟು ಕೋಟೆಯನ್ನು ಧುಮುಕಿ ‖೫೩‖ ಕಲ್ಲುಮುಳ್ಳುಗಳನ್ನೂ, ಹಳ್ಳತಿಟ್ಟುಗಳನ್ನೂ ನೋಡದೆ ಬಿದ್ದುಎದ್ದು ಕಂದಕದಲ್ಲಿ ತುಂಬಿರುವ ನೀರನ್ನುದಾಟ ಒಬ್ಬನೇ ಹೊರಟು‖೫೪‖ ಕಿತ್ತುಬಿದ್ದಿರುವ ಹೂವಿನ ಸರಗಳಿಂದಲೂ, ಬಣ್ಣದ ಅನ್ನದ ರಾಶಿಗಳಿಂದಲೂ, ಭಸ್ಮವಾದ ಶರೀರಗಳಿಂದಲೂ, ಬೇಯುತ್ತಲಿರುವ ಹೆಣಗಳಿಂದಲೂ, ಎಲುಬಿನ ರಾಶಿಗಳಿಂದಲೂ, ನರಿಗಳು, ಗೂಬೆಗಳು, ಭೂತಭೇತಾಳಗಳು ಇವುಗಳಿಂದಲೂ ‖೫೫‖ ಕೂಡಿ ಭೋರ್ಗರೆಯುತ್ತಲಿರುವ ಅರಣ್ಯ ಮಧ್ಯಕ್ಕೆ ಬಂದು ಅಲ್ಲಿರುವ ಭೂತಭೇತಾಳಗಳನ್ನೂ ಕೂಡ ಹೆದರಿಸುವಂತೆ ಹೊರಟುಬರುತ್ತ

ವಿಲ್ಲಾನಪಾಪದು | ದ್ದಂಡವೊಹಿರಣ್ಯಕಶಿಪುವಿನೆದೆಯನುರೆಬಗೆದ | ಚಂಡದೈವದಪೆಸರನುಸುರುವನದೆಸೆಗಲ್ಲದಳುಕನಿವನೆನುತಿ ರ್ದವು ॥೫೬॥ ಪಾಕಶಾಶನತನಯಕೇಳ್ಬಳಿಕಮಂತ್ರಿಸುತ | ಶೋಕದಿಂದಲ್ಲಿಹಮರುಳ್ಗಳಂಕಾಣದವಿ | ವೇಕದಿಂಬೇವಕುಣಪದ ಚಿತಿಯೊಳುರಿವಕಾಷ್ಟಂಗಳಂತೆಗೆದುಕೊಂಡು ॥ ಆಕಾಳಿಕಾಲಯಕೆಬಂದದರಬೆಳಕಿನೊ | ಳ್ವ್ಯಾಕೀರ್ಣಕೇಶದನಿಮಿರ್ದಕೈಕಾಲು ಗಳ | ನೇಕಾಯುಧದಗಾಯದೊಡಲರುಧಿರದಪೊಸಲ(ನೊಸಲ)ಸುಕುಮಾರನಂಕಂಡನು ॥೫೭॥ ಉನ್ನಿಸಿದನಿಜಮನೋರಥಮು ಡಿದೊರಗಿದಂತೆ | ತನ್ನಕುಲತರುಮುರಿದುಬಿದ್ದಂತೆಸೌಭಾಗ್ಯ | ದುನ್ನತಪ್ರಾಸಾದವೋರ್ಗ್ಗುಡಿಸಿಕಂಡಂತೆಮುರಿದಮೀಸೆಗಳಮೊ ಗದ ॥ ಬಿನ್ನಣದಬಿಟ್ಟಕಂಗಳಬಿಗಿದಪುರ್ಬುಗಳ | ಕೆನ್ನಿರೊಳದ್ದಕೇಶದಶೋಣಿತಾಂಬರದ | ಪೊನ್ನದೊಡಿಗೆಯನಂದನಂಚಂಡಿಕಾ ದೇವಿಮುಂದೆಸೈಗೆಡದಿರ್ದನು ॥೫೮॥ ಕೈಯೊಳಿಹಕಾಷ್ಠಂಗಳಂಬಿಸುಟುತನುಭವನ | ಮೈಯಗಾಯಂಗಳಂತಡವಿತಕ್ಕೈಸಿಮುಗು

---

ಉರೆ-ಅಧಿಕವಾಗಿ, ಹಿರಣ್ಯಕಶಿಪುವಿನ_ಹಿರಣ್ಯಕಶಿಪುವೆಂಬ ರಕ್ಕಸನ, ಎದೆಯ-ಎದೆಯನ್ನು, ಬಗಿದ_ಭೇದಿಸಿದ, ಚಂಡ-ಉಗ್ರ ವಾದ, ದೈವದ_ದೇವರ, ಪೆಸರನು- ನಾಮವನ್ನು, ಉಸುರುವವನ_ ನುಡಿಯತಕ್ಕವನ. ದೆಸೆಗೆ-ಭಾಗಕ್ಕೆ, ಅಲ್ಲದೆ_ಹೊರತು, ಇವನು_ಈ ನೀಚನು, ಅಳುಕನು_ಹೆದರುವುದಿಲ್ಲ, ಎನುತ_ಎಂದು ನುಡಿಯುತ್ತ, ಇದ್ದವು-ಇರುತಿರ್ದವು. ॥೫೬॥

ಟೀ॥ ಪಾಕಶಾಸನ_ದೇವೇಂದ್ರನ, ತನಯ-ಕುವರನಾದ ಪಾರ್ಥನೆ, ಕೇಳು-ಲಾಲಿಸು, ಮಂತ್ರಿ_ಸಚಿವನಾದ ದುಷ್ಟ ಬುದ್ಧಿಯು, ಬಳಿಕ_ಅನಂತರ, ಸುತಶೋಕದಿಂದ_ಮಗನ ಸಂಬಂಧವಾದ ದುಃಖದಿಂದ, ಅಲ್ಲಿಹ-ಅಲ್ಲಿರತಕ್ಕ, ಮರುಳ್ಗಳಂ_ ಭೂತಂಗಳನ್ನೂ ಕೂಡ, ಕಾಣದೆ_ಲಕ್ಷ್ಯಮಾಡದೆ, ಬೇವ-ಸುಡುತ್ತಲಿರತಕ್ಕ, ಕುಣಪದ_ಶವದ, ಚಿತಿಯೊಳ್_ಚಿತಿಯೊಳಗೆ, ಉರಿವ-ಉರಿಯತಕ್ಕ, ಕಾಷ್ಟಂಗಳಂ_ಕಡ್ಡಿಗಳನ್ನು, ಅವಿವೇಕದಿಂ-ಪ್ರಜ್ಞೆಯೇ ಇಲ್ಲದೆ, ತೆಗೆದುಕೊಂಡು-ತೆಗೆದುಕೊಂಡವನಾಗಿ, ಆ ಕಾಳಿಕಾಲಯಕೆ-ಆ ದುರ್ಗಾ ದೇವಸ್ಥಾನಕ್ಕೆ, ಬಂದು-ಬಂದು ಸೇರಿ, ವ್ಯಾಕೀರ್ಣ-ಕೆದರಿಕೊಂಡಿರತಕ್ಕ, ಕೇಶ_ಕೇಶಪಾಶಂಗ ಳನ್ನೂ, ನಿಮಿರ್ದ-ಕಟ್ಟಿಗೆಯಹಾಗೆ ಆಗಿರತಕ್ಕ, ಕೈಕಾಲುಗಳ-ಕೈಕಾಲುಗಳನ್ನುಂಟಾಗಿರತಕ್ಕ, ಅನೇಕ_ಬಹುವಾದ, ಆಯು ಧದ-ಆಯುಧಂಗಳ, ಗಾಯದ_ಗಾಯಗಳಿಂದ ಕೂಡಿರತಕ್ಕ, ಒಡಲ-ದೇಹದಲ್ಲೆಲ್ಲಾ, ರುಧಿರದ-ರಕ್ತ ತುಂಬಿರುವ, ಪೊಸಲ_ ಯೌವನನಾದ, ಸುಕುಮಾರನಂ - ಮೃದುವಾದ ದೇಹವುಳ್ಳ ತನ್ನ ಕುವರನನ್ನು, ಅದರ - ಕೈಯಲ್ಲಿ ಹಿಡಿದಿರುವ ಕಟ್ಟಿಗೆಯ, ಬೆಳಕಿನೊಳ್_ಬೆಳಕಿನೊಳಗೆ, ಕಂಡನು_ನೋಡಿದವನಾದನು. ॥೫೭॥

ಟೀ॥ ಉನ್ನಿಸಿದ-ಆಲೋಚನೆ ಮಾಡಿಕೊಂಡಿದ್ದ, ನಿಜ_ತನ್ನದಾದ, ಮನೋರಥಂ-ಇಷ್ಟಾರ್ಥವು, ಉಡಿದು - ಭಗ್ನ ವಾಗಿ, ಒರಗಿದಂತೆ-ಬಿದ್ದುಹೋದಹಾಗೂ, ತನ್ನ_ತನ್ನದಾದ, ಕುಲತರು_ಸಂತಾನವೆಂಬ ಮರವು, ಮುರಿದು-ಮುರಿದುಹೋಗಿ, ಬಿದ್ದಂತೆ-ಬಿದ್ದುಹೋದ ರೀತಿಯಿಂದಲೂ, ಸೌಭಾಗ್ಯ-ಐಶ್ವರ್ಯವೆನ್ನುವ, ಪ್ರಾಸಾದ-ಅರಮನೆಯು, ಓರ್ಗುಡಿಸಿ-ವಕ್ರವಾಗಿ, ಕಂಡಂತೆ-ಕಾಣುವ ಬಗೆಯಿಂದಲೂ, ಮುರಿದ-ಸುತ್ತಿಕೊಂಡಿರುವ, ಮೀಸೆಗಳ-ಮೀಸೆಗಳಿಂದಲೂ, ಮೊಗದ - ಮೋರೆಯ, ಬಿನ್ನಣದ-ವೈಯ್ಯಾರದಿಂದಲೂ, ಬಿಟ್ಟ-ತೆರೆದುಕೊಂಡಿರತಕ್ಕ, ಕಂಗಳ-ನಯನಂಗಳಿಂದಲೂ, ಬಿಗಿದ-ಬಿಗಿದು ಹೋಗಿರತಕ್ಕ, ಪುರ್ಬುಗಳ-ಕಣ್ಣುಬ್ಬುಗಳಿಂದಲೂ,ಕೆನ್ನೀರೊಳು-ಕಣ್ಣುನೀರುಗಳಲ್ಲಿ, ಅದ್ದ-ಒದ್ದೆಯಾದ, ಕೇಶದ_ಕೇಶಪಾಶದಿಂದಲೂ, ಶೋಣಿ ತಾಂಬರದ_ರಕ್ತಮಿಶ್ರವಾದ ಬಟ್ಟೆಗಳಿಂದಲೂ, ಪೊನ್ನ-ಚಿನ್ನದ, ತೊಡಿಗೆಯ-ಒಡವೆಗಳುಳ್ಳ, ನಂದನು-ಕುವರನಾದ ಮದ ನನು, ಚಂಡಿಕಾದೇವಿಯಮುಂದೆ-ಕಾಳಿಕಾದೇವಿಯ ಎದುರಿನಲ್ಲಿ, ಸೈಗೆಡದಿರ್ದನು-ಬಿದ್ದುಹೋಗಿದ್ದನು.

ಅ॥ ವಿ॥ ಅಂಬರ-ಆಕಾಶ ಮತ್ತು ಬಟ್ಟೆ. ॥೫೮॥

ಟೀ॥ ಅವನು - ಆ ಮಂತ್ರಿಯಾದ ದುಷ್ಟಬುದ್ಧಿಯು, ಕೈಯೊಳು - ತನ್ನ ಕೈಯ್ಯಲ್ಲಿ, ಇಹ - ಇರತಕ್ಕ ಕಾಷ್ಠಂ ಗಳಂ_ಕಟ್ಟಿಗೆಗಳನ್ನೆಲ್ಲಾ, ಬಿಸುಟು - ಹೊರಕ್ಕೆಸೆದು, ತನುಭವನ - ಕುಮಾರನಾದ ಮದನನ, ಮೈಯ್ಯ - ಮೈಯ್ಯಲ್ಲಿರತಕ್ಕ, ಗಾಯಂಗಳಂ_ಆಯುಧಗಳ ಪೆಟ್ಟುಗಳನ್ನೆಲ್ಲಾ, ತಡಹಿ_ತಡವುಸುತ್ತಾ, ಮುಗುಳೆ_ಮತ್ತೆ, ತಕ್ಕೈಸಿ_ತಬ್ಬಿಕೊಂಡು, ಒಯ್ಯ ನೊಯ್ಯನೆ_ಸಿಧಾನವಾಗಿ, ಕುಳ್ಳಿರಿಸಿ_ಕೂಡಿಸಿದವನಾಗಿ, ಮೊಗಂ_ತನ್ನ ಮೋರೆಯನ್ನು, ಮೊಗಕೆ-ಮದನನ ಮುಖಕ್ಕೆ, ಇಟ್ಟು-

---

ಲಿದ್ದನು ॥೫೬॥ ಕೇಳ್ಳೈ ಅರ್ಜುನಾ ! ದುಷ್ಟಬುದ್ಧಿಯು ಈ ರೀತಿಯಲ್ಲಿ ಪುತ್ರಶೋಕದಿಂದ ಹೊರಟು ಅಲ್ಲಿ ಉರಿಯುತ್ತಿದ್ದ ಕೊಳ್ಳಿಯೊಂದನ್ನು ಕೈಯ್ಯಲ್ಲಿ ಹಿಡಿದು ಆ ದುರ್ಗಾಲಯಕ್ಕೆ ಬಂದು ನೋಡಿದಾಗ ಬಿಚ್ಚಿಹೋದ ಕೂದಲ್ಗಳಿಂದಲೂ, ಕಟ್ಟಿಗೆ ಯಂತಾಗಿರುವ ಕೈಕಾಲುಗಳಿಂದಲೂ, ಗಾಯಗಳಿಂದ ಹೊರಟುಬರುತ್ತಲಿರುವ ರಕ್ತದಿಂದ ತುಂಬಿದ ದೇಹದಿಂದಲೂ ಕೂಡಿ ಸತ್ತು ಬಿದ್ದಿರತಕ್ಕ ಸುಕುಮಾರನಾದ ಮದನನನ್ನು ಕಂಡನು. ॥೫೭॥ ತನ್ನ ಇಷ್ಟಾರ್ಥವೆಂಬ ಮರವು ಕೆಳಗುರುಳಿಕೊಂಡಂತೆ ಸತ್ತು ಬಿದ್ದಿರತಕ್ಕ ಮದನನ್ನು ಚಂಡಿಕಾದೇವಿಯ ಎದುರಿಗೆ ನೋಡಿದ ಕೂಡಲೇ ॥೫೮॥ ತನ್ನ ಕೈಯ್ಯಲ್ಲಿದ್ದ ಕಡ್ಡಿಗಳನ್ನು ಕೆಳಗೆ

ಳ್ದೊಯ್ಯನೊಯ್ಯನೆ । ಕುಳ್ಳಿರಿಸಿಮೊಗಕೆಮೊಗವಿಟ್ಟುಚುಂಬಿಸಿಕುಮಾರನಿನ್ನ ॥ ಅಯ್ಯನಾಬಂದೆನೇಳ್ಳೆತಂದೆನಾಡನಾ । ರಯ್ಯಬೇಡವೆಕಂದಕುಂತಳಾಧೀಶನೇಗೈಯ್ಯುಹೇಳಿದನೆನಗವಿವರಿಸೆನೆಸುಮ್ಮನಿರ್ದಪೆಯೆಂದೊರಲ್ದನವನು ॥೫೯॥ ಬಂದನಿದೆಶಶಿಹಾಸಗನುಜೆಯುಂಕೊಡುವಿಪ್ರ । ವೃಂದಮಂದಣಿಸುಬಹುವಿಧದಿಂದನುನ್ನಾಂಬೈದೆ । ನೆಂದುಮುನಿದಿರಬೇಡವೈಷ್ಣವದ್ರೋಹದಿಂದೆನಗಿಂತುಂಟಾಗದಿಹುದೆ ॥ ಕಂದನೀನಚ್ಯುತರಾಯಣಂಶಿವಪೂಜ । ಕಂದೇವಗುರುಧರಾಮರಸೇವಕಂಮೋಸ । ದಿಂದಳಿವುದುಚಿತವೆಮದನತನ್ನಮರಿಯಾನೆಹಾಯೆಂದೊರಲ್ದನಂದು॥೬೦॥ ಮಿತ್ರಪ್ರಿಯಂರಾಜತೋಷಿತಂಮಂಗಳಚ । ರಿತ್ರಂಬುಧಾಶ್ರಯಂಗುರುಭಾವಿಕವಿನುತ । ಚಿತ್ರಗುಣಿಮಂದರನಿಭಂಭೋಗಿಸಂತತಂಧ್ವಜವಜ್ರಶುಭಶರಣನು ॥ ಪುತ್ರನಿನಗಿರ್ದಪುದುನವಗ್ರಹಸ್ಥಿತಿಗ

---

ಇಟ್ಟವನಾಗಿ, ಚುಂಬಿಸಿ-ಚಪ್ಪರಿಸುತ್ತಾ, ಕುಮಾರ-ಎಲಾ ಮದನನೆ, ನಾಂ-ನಾನಾದರೊ, ನಿನ್ನ ಅಯ್ಯ-ನಿನ್ನ ತಂದೆಯು, ಬಂದೆನು-ಬಂದಿದ್ದೇನೆ, ತಂದೆ-ತಂದೆಯೇ, ಏಳ್ಳೆ-ಮೇಲಕ್ಕೇಳು, ನಾಡನು-ಕುಂತಳ ರಾಜ್ಯವನ್ನು, ಆರಯ್ಯಬೇಡವೆ-ಕಾಪಾಡಬೇಡವೆ, ಕಂದ-ಮಗುವೇ, ಕುಂತಳಾಧೀಶ್ವರನು-ಕುಂತಳೇಂದ್ರನು, ಏಗೈಯ್ಯುಹೇಳಿದನು-ಏನುಮಾಡಬೇಕೆಂದು ನಿನ್ನೊಂದಿಗೆ ನುಡಿದನು. ಎನಗೆ-ನನಿಗಾದರೊ, ಏವರಿಸದೆ-ತಿಳಿಸದೇನೆ, ಸುಮ್ಮನೆ-ವ್ಯರ್ಥವಾಗಿ, ಇರ್ದಪೆ-ಇದ್ದೀಯೆ, ಎಂದು-ಎಂಬತೆರನಾಗಿ, ಒರಲ್ದನು-ಅಳುತ್ತಿದ್ದನು ॥ ೫೯ ॥

ಟೀ॥ (ದುಷ್ಟಬುದ್ಧಿಯು) ಮದನ-ಮದನನೇ, ಇದೊ-ಇಗೊ, ಶಶಿಹಾಸನು-ಇಂದುಹಾಸನು, ಬಂದನು-ಬಂದಿರುವನು. ಅನುಜೆಯುಂ-ತಂಗಿಯಾದ ವಿಷಯೆಯನ್ನು, ಕೊಡು-ಕೊಡುವನಾಗು, ವಿಪ್ರವೃಂದಮುಂ-ಭೂಸುರೋತ್ತಮರ ಗುಂಪನ್ನೆಲ್ಲಾ, ಬಹುವಿಧದಿಂದ-ಅನೇಕ ಪ್ರಕಾರವಾಗಿ, ದಣಿಸು-ದಾನಧರ್ಮಂಗಳಿಂದ ಆನಂದಪಡಿಸು, ನಾಂ-ನಾನು, ಬೈದನು-ನಿಂದಿಸಿದೆನು, ಎಂದು-ಎಂಬುದಾಗಿ, ಮುನಿದು-ಕೋಪಮಾಡಿಕೊಂಡು, ಇರಬೇಡ-ಇರಕೂಡದು, ಎನಗೆ - ನನಿಗಾದರೊ, ಇಂತುಟು-ಈ ಪ್ರಕಾರವಾಗಿ, ವೈಷ್ಣವದ್ರೋಹದಿಂದ-ಶ್ರೀ ಕೃಷ್ಣನಲ್ಲಿ ಭಕ್ತರಾದವರಿಗೆ ಮಾಡಿದ ತಪ್ಪಿನಮೂಲಕ, ಆಗದೆ ಇಹುದೆ-ಆಗದೆ ಇರುತ್ತದೆಯೇ, ಕಂದ-ಪುತ್ರನೆ, ನೀನು-ನಿನಾದರೊ, ಅಚ್ಯುತರಾಯಣಂ-ಶ್ರೀಮನ್ನಾರಾಯಣನ ಭಕ್ತಾಗ್ರೇಸರನಾಗಿದ್ದಿ, ಶಿವ-ಹರನ, ಪೂಜಕಂ-ಪೂಜೆಮಾಡತಕ್ಕವನಾಗಿರುವಿ, ದೇವ-ಸುರರನ್ನೂ, ಗುರು-ಗುರುಗಳನ್ನೂ, ಧರಾಮರ-ಭೂಸುರೋತ್ತಮರನ್ನೂ, ಸೇವಕಂ-ಸೇವೆಮಾಡಿ ಮೆಚ್ಚಿಸತಕ್ಕವನಾಗಿದ್ದಿ, ಮೋಸದಿಂದ-ಮೋಸಕಾರ್ಯದಿಂದ, ಅಳಿವುದು-ಸತ್ತುಹೋಗುವುದು, ಉಚಿತವೆ-ನ್ಯಾಯವಾಗಿದೆಯೇ, ತನ್ನ-ನನ್ನ, ಮರಿಯಾನೆ-ಆನೆಯ ಮರಿಯಹಾಗಿರುವವನೇ, ಹಾ-ಕಷ್ಟವು, ಎಂದು-ಎಂಬುದಾಗಿ, ಒರಲ್ದನು-ದುಃಖಪಟ್ಟನು ॥೬೦॥

ಟೀ॥ ಮಂತ್ರಿ-ಆ ಸಚಿವನು, ಶೋಕಾರ್ತನಾಗಿ-ವ್ಯಸನದಿಂದ ಕೂಡಿದವನಾಗಿ, ಮಗನೆ-ಎಲೈ ಕಂದನೆ, ಮಿತ್ರಪ್ರಿಯಂ-ನಿನ್ನ ಸ್ನೇಹಿತರಿಗೆ ನೀನು ಸ್ನೇಹಿತನಾಗಿರುವಿ, ರಾಜ-ಅರಸರಿಂದ, ತೋಷಿತಂ-ಆನಂದವನ್ನು ಪಡೆಯತಕ್ಕವನು, ಮಂಗಳ-ಕಲ್ಯಾಣದಾಯಕವಾದ, ಚರಿತ್ರಂ-ನಡವಳಿಕೆಯುಳ್ಳವನು, ಬುಧ-ವಿದ್ವಾಂಸರಿಗೆ, ಆಶ್ರಯಂ-ಆಶ್ರಯನಾಗಿರತಕ್ಕವನು, ಗುರು-ಗೌರವವನ್ನು ಪಡೆದವರಿಂದಲೂ, ಭಾವಿ-ಪೂಜಿಸಲ್ಪಡತಕ್ಕನು, ಕವಿ-ಕವಿತ್ವ ಮಾಡತಕ್ಕವರಿಂದ, ನುತ-ಸ್ತೋತ್ರ ಮಾಡಲ್ಪಟ್ಟ, ವಿಚಿತ್ರ-ಅಚ್ಚರಿಯನ್ನುಂಟು ಮಾಡತಕ್ಕ, ಗುಣಿ-ಗುಣಗಳುಳ್ಳವನು, ಮಂದರನಿಭಂ-ಮಂದರಗಿರಿಗೆ ಹೋಲಿಕೆಯಾದ ಧೈರ್ಯವನ್ನುಳ್ಳವನು, ಸಂತತಂ-ಅನವರತವೂ, ಭೋಗಿ - ಆನಂದದಿಂದಿರುವುದು, ಧ್ವಜವಜ್ರ-ಧ್ವಜವಜ್ರಗಳೆನ್ನುವ ರೇಖೆಗಳಿಂದ ಕೂಡಿದ, ಶುಭ - ಕಲ್ಯಾಣವನ್ನುಂಟು ಮಾಡತಕ್ಕ, ಚರಣನು-ಕಾಲುಗಳುಳ್ಳವನು, ಪುತ್ರ-ಎಲೈ ಕಂದನೆ, ನಿನಿಗೆ-ನಿನಿಗಾದರೊ, ನವಗ್ರಹಗಳ-ಸೂರ್ಯಾದಿ ಒಂಬತ್ತು ಗ್ರಹಗಳ, ಸ್ಥಿತಿಗಳು-ಅನುಕೂಲವಾಗಿರತಕ್ಕವಾಗಿ, ಇರ್ದಪವು-ಇವೆ, ಪರಿತ್ರಾಣಮಂ-ಇಷ್ಟು ಅನುಕೂಲವಾಗಿದ್ದರೂ ನಿನ್ನನ್ನು ಕಾಪಾಡಿದವರು, ಇಲ್ಲ-ಇಲ್ಲವು. ಆನೆ-ನಾನೇ, ನಿನಿಗೆ-ನಿನಿಗಾದರೆ, ಶತ್ರುವು-ವೈರಿಯಾದವನು, ಆದೆ-ಆಗಿಬಿಟ್ಟೆನು, ಹಾಯೆಂದು-ಅಯ್ಯೊ ಎಂಬದಾಗಿ, ಶೋಕಾರ್ತನಾಗಿ-ದುಃಖದಿಂದಕೂಡಿ, ಹಲುಬಿದಂ-ಸಂಕಟ ಪಟ್ಟನು ॥೬೧॥

---

ಹಾಕಿ, ಮಗನ ಮೈಗಾಯಗಳನ್ನು ಮುಟ್ಟಿ ಮುಟ್ಟಿ ನೋಡುತ್ತ, ಅವನನ್ನು ತಬ್ಬಿ ಕೊಂಡು ತನ್ನ ಮುಖವನ್ನು ಮದನನ ಮುಖದ ಬಳಿ ಇಟ್ಟು, ಅಯ್ಯೋ ಮಗನೆ! ನಾನು ನಿಮ್ಮ ತಂದೆಯಲ್ಲವೇ? ನಿನಿಗೆ ರಾಜ್ಯಭಾರ ಬೇಡವೇ? ಕುಂತಳೇಂದ್ರನು ನಿನ್ನೊಂದಿಗೆ ಏನು ಹೇಳಿದನು, ನನಿಗೆ ಹೇಳದೆ ಈ ರೀತಿ ಸುಮ್ಮನಿರಬಹುದೇ? ॥೫೯॥ ಈಗ ಇಂದು ಹಾಸನು ಬಂದಿರುವನು. ನೋಡು ನಿನ್ನ ತಂಗಿಯನ್ನು ಕೊಟ್ಟು ಮದುವೆ ಮಾಡಿ ನಿನ್ನ ಮನದಣಿಯುವಂತೆ ಸರ್ವರನ್ನೂ ದಣಿಸಯ್ಯ! ಅಯ್ಯೊ ನನ್ನ ಕಂದ, ನಾನು ಬೈದೆನೆಂದು ನನ್ನ ಮೇಲೆ ಈ ರೀತಿ ಕೋಪಿಸಲಾಗದು, ನಾನು ವಿಷ್ಣುಭಕ್ತನಿಗೆ ಕೇಡನ್ನೆಸಗಿದ್ದರಿಂದಲೇ ನನಿಗೆ

ಳ್ಪರಿತ್ರಾಣಮಂಮಾಡಿದವರಿಲ್ಲನಿನಗಾನೆ | ಶತ್ರುವಾದೆಂಮಗನೆಹಾಎಂದುಹಲುಬಿದಂಮಂತ್ರಿಶೋಕಾರ್ತನಾಗಿ॥೬೧॥ ಕಂಬನಿಗಳರುಣಾಂಬುವಂತೊಳೆಯೆಮುಂಡಾಡಿ | ಹಂಬಲಿಸಿಹಲುಬಿದಂಮರುಗಿತನ್ನಿಂದಳಿದ | ನೆಂಬಳಲ್ಮಿಗೆಮಂತ್ರಿಸೈರಿಸದೆಕೆಲಬಲದ ಕಂಬಂಗಳಂಪಾಯಲು ॥ ಕುಂಬಳದಕಾಯಂತೆಚಿಪ್ಪಾಗಿನಿಜಮಸ್ತ | ಕಂಬಿರಿದುಬಿದ್ದನುರ್ವಿಗೆಪೋದುದಸುಕಾಯ | ದಿಂಬಳಿಕ ನಂದಿದಸೊಡರ್ಗಳೆನೆಮೃತರಾಗಿಸುತತಾತರಿರುತಿರ್ದರು॥೬೨॥ ಅರಿಯರಾರುಂಪುರದೊಳಿವರಿಲ್ಲಿಮಡಿದುದಂ | ತುರುಗಿದತಮೋಂಧಮೊಯ್ಯನೆಜಾರಿತಳಿಕುಲದ | ಸೆರೆಬಿಟ್ಟುದಂಬುಜದೊಡನೆತಲೆದೋರಿದಂತರಣಿಮೂಡಣದೆಸೆಯೊಳು ॥ ಪೊರಮಟ್ಟುಚಂಡಿಕಾಲಯಕೆಪೊಸಪೂಗಳಂ | ತಿರಿತಂದುಪೂಜಿಸುವಡೊಳಪೊಗುವತಾಪಸಂ | ಬೆರತುಬಿದ್ದಿಹತಂದೆಮಕ್ಕಳಂಕಂಡುಹಮ್ಮೈಸಿವಿಸ್ಮಿತನಾದನು ॥ ೬೩ ॥ ಪಟ್ಟಣದೊಳಿರುಳೊಸಗೆಪಸರಿಸಿತುರಾಜ್ಯಮಂ | ಬಿಟ್ಟುವನಕೈದಿದಂಕುಂತಳಾಧೀಶ್ವರಂ | ಪಟ್ಟಮಾದುದು

ಟೀ॥ ಅರುಣಾಂಬುವಂ_ನೆತ್ತರನ್ನು, ಕಂಬನಿಗಳು-ನೇತ್ರೋದಕಂಗಳು, ತೊಳೆಯೆ_ತೊಳೆಯಲಾಗಿ, ಮಂತ್ರಿ_ಸಚಿವನಾದಬೊ, ಮುಂಡಾಡಿ_ಮುತ್ತಿಟ್ಟವನಾಗಿ, ಹಂಬಲಿಸಿ_ಕಳವಳಪಡುತ್ತ, ಹಲುಬಿದಂ – ವ್ಯಸನಪಟ್ಟನು. ಮರುಗಿ_ಈ ರೀತಿಯಲ್ಲಿ ಸಂಕಟಪಟ್ಟು, ತನ್ನಿಂದ_ತನ್ನ ಕಾರಣದಿಂದಲೆ, ಅಳಿದನು-ಮರಣವನ್ನೈದಿದನು, ಎಂಬ_ಎನ್ನತಕ್ಕ, ಅಳಲ್-ಸಂಕಟವು, ಮಿಗೆ_ಹೆಚ್ಚಾದಕಾರಣ, ಸೈರಿಸದೆ_ಅದನ್ನು ತಡೆಯಲಾರದೆ, ಕೆಲಬಲದ_ಉಭಯ ಭಾಗಗಳಲ್ಲಿರತಕ್ಕ, ಕಂಬಂಗಳಂ-ಕಂಬಗಳನ್ನು, ಪಾಯಲಾಗಿ_ಹಾಯಲಾಗಿ, ನಿಜ-ತನ್ನ, ಮಸ್ತಕಂ-ಶಿರಸ್ಸು, ಕುಂಬಳದಕಾಯಂತೆ_ಕುಂಬಳಕಾಯಿಯೋಪಾದಿಯಲ್ಲಿ, ಚಿಪ್ಪಾಗಿ_ಎರಡು ಭಾಗವಾಗಿ, ಬಿರಿದು_ಒಡೆದುಹೋಗಿ, ಉರ್ವಿಗೆಬಿದ್ದನು_ಭೂಮಿಯ ಮೇಲಕ್ಕೆ ಬಿದ್ದುಹೋದನು, ಅಸು-ಹರಣವು, ಕಾಯದಿಂ_ದೇಹದಿಂದ, ಪೋದುದು_ಹೊರಟು ಹೋಯಿತು, ಬಳಿಕ_ಹೀಗಾದಮೇಲೆ, ನಂದಿದ_ಆರಿಹೋದ, ಸೊಡರ್ಗಳು, ಎನೆ-ದೀಪಗಳೋ ಎಂಬಂತೆ, ಸುತತಾತರು_ಮದನ ದುಷ್ಟಬುದ್ಧಿಗಳು, ಮೃತರಾಗಿ-ಪ್ರಾಣವನ್ನು ಕಳೆದುಕೊಂಡು, ಇರುತಿರ್ದರು_ಇದ್ದವರಾದರು ॥೬೨॥

ಟೀ॥ ಇಲ್ಲಿ-ಈ ದೇವಾಲಯದಲ್ಲಿ, ಇವರು_ತಂದೆ ಮಕ್ಕಳಾದ ಮದನ ದುಷ್ಟಬುದ್ಧಿಗಳು, ಮಡಿದುದಂ_ಮರಣವನ್ನೈದಿದ್ದನ್ನು, ಆರುಂ_ಯಾರೊಬ್ಬರೂ, ಪುರದೊಳು_ನಗರದೊಳಗೆ, ಅರಿಯರು_ತಿಳಿಯಲಿಲ್ಲವು, ಒಯ್ಯನೆ_ನಿದಾನವಾಗಿ, ತುರುಗಿದ-ಸಾಂದ್ರವಾಗಿದ್ದ, ತಮೋಂಧಂ-ಗಾಢಾಂಧಕಾರವೂ ಕೂಡ, ಜಾರಿತು – ಹೊರಟುಹೋಯಿತು. ಅಂಬುಜದೊಳು_ತಾವರೆಯಲ್ಲಿ, ಅಳಿಕುಲದ_ಜೀರುಂಡೆಗಳ, ಸೆರೆ-ಬಂಧನವು, ಬಿಟ್ಟುದು_ಕಳೆದು ಹೋಯಿತು, ಮೂಡಣದೆಸೆಯೊಳು_ಪೂರ್ವದಿಕ್ಕಿನಲ್ಲಿ, ತರಣಿ-ರವಿಯು, ಒಡನೆ_ತಕ್ಷಣವೇ, ತಲೆದೋರಿದಂ-ಕಂಗೊಳಿಸಿದನು. ಬೆರತು-ಒಟ್ಟಾಗಿ, ಬಿದ್ದಿಹ-ಬಿದ್ದಿರತಕ್ಕ, ತಂದೆಮಕ್ಕಳಂ_ಮಂತ್ರಿ ಮತ್ತು ಮಂತ್ರಿಸುತನನ್ನು, ಪೊರಟು_ಹೊರಹೊರಟವನಾಗಿ, ಪೊಸ_ಆಗತಾನೆ ಅರಳಿದ, ಪೂಗಳಂ_ಕುಸುಮಂಗಳನ್ನು, ತಿರಿತಂದು_ಕೊಯ್ದುಕೊಂಡು ಬಂದು, ಪೂಜಿಸುವೊಡೆ_ಪೂಜೆಮಾಡಲೋಸುಗ, ಚಂಡಿಕಾಲಯಕೆ_ಕಾಳೀಗುಡಿಗೆ, ಒಳಪುಗುವ_ಹೋಗತಕ್ಕ, ತಾಪಸಂ_ಪೂಜಾರಿಯು (ಅರ್ಚಕನು) ಕಂಡು_ದಿಟ್ಟಿಸಿ, ಹಮ್ಮೈಸಿ_ಸಂದೆಗಂಗೊಂಡು, ವಿಸ್ಮಿತನಾದನು_ಅಚ್ಚರಿಯನ್ನೈದಿದನು ॥೬೩॥

ಟೀ॥ ಇರುಳ_ನಿಶಿಯಲ್ಲಿ ನಡೆದ, ಒಸಗೆ_ಚಂದ್ರಹಾಸನ ಪಟ್ಟಾಭಿಷೇಕದ ಸಂಭ್ರಮವು, ಪಟ್ಟಣದೊಳು_ನಗರದೊಳಗೆ, ಪಸರಿಸಿತು-ಹರಡಿಕೊಂಡಿತು. ರಾಜ್ಯಮಂ_ಕುಂತಳ ನಗರವನ್ನು, ಬಿಟ್ಟು-ತೊರೆದು, ಕುಂತಳಾಧೀಶ್ವರಂ_ಕುಂತಳೇಂ

---

ಇಂತಹ ವ್ಯಥೆಯುಂಟಾಯಿತು. ಮಗುವೇ ನೀನು ವಿಷ್ಣುಭಕ್ತನೂ ಹರಸೇವಕನೂ, ದೇವಬ್ರಾಹ್ಮಣ ಪೂಜೆಯಲ್ಲಿ ಆಸಕ್ತನೂ ಆಗಿದ್ದೂ ಕೂಡ ಈ ರೀತಿಯಾದ ವ್ಯಸನಕ್ಕೆ ಗುರಿಯಾದೆಯಲ್ಲಾ ! ಅಯ್ಯೋ ನನ್ನ ಮರಿಯಾನೆಯೇ ॥ ೬೦ ॥ ಸರ್ವರಿಂದಲೂ ಶ್ಲಾಘ್ಯವಾದ ಸದ್ಗುಣ ಸಮುದಾಯದಿಂದ ಕೂಡಿದ ನಿನಿಗೆ ಸೂರ್ಯಾದಿ ನವಗ್ರಹಗಳೂ ಶುಭಫಲದಾಯಕಗಳಾಗಿದ್ದರೂ ನನ್ನ ದುಷ್ಕೃತ್ಯವೇ ನಿನಿಗೆ ಮೃತ್ಯುವಾಗಿ ಪರಿಣಮಿಸಿತಲ್ಲಾ ! ಎಂದು ಸಂಕಟ ಉಂಟಾಗಿ ॥೬೧॥ ಕಣ್ಣುಗಳಿಂದ ರಕ್ತಧಾರೆಯನ್ನು ಸುರಿಸುತ್ತಾ, ಪುತ್ರನ ದುರ್ಮರಣವನ್ನು ನೋಡಿ ಸಹಿಸಲಾರದೆ ಎಡಬಲಗಳಲ್ಲಿದ್ದ ಕಂಬಗಳಿಗೆ ತನ್ನ ತಲೆಯನ್ನು ಬಡಿದುಕೊಂಡು ತಾನೂ ಮದನನ ಬಳಿಯಲ್ಲಿಯೇ ಸತ್ತುಬಿದ್ದನು. ॥೬೨॥ ಮಂತ್ರಿಯೂ ಮಂತ್ರಿಸುತನೂ ದುರ್ಗಾಲಯದಲ್ಲಿ ಸತ್ತಿರುವ ಸುದ್ದಿಯು ಊರಲ್ಲಿ ಯಾರಿಗೂ ತಿಳಿಯದು, ಅಷ್ಟುಹೊತ್ತಿಗೆ ಬೆಳಗಾಯಿತು, ಕಮಲಗಳೆಲ್ಲಾ ಅರಳಲಾರಂಭಿಸಿದವು. ಪೂರ್ವದಿಕ್ಕಿನ ಭಾಗವೆಲ್ಲಾ ಕೆಂಡದಂತೆ ಕಂಗೊಳಿಸುತ್ತಲಿತ್ತು. ನಿತ್ಯವೂ ಬೆಳಿಗ್ಗೆ ಎದ್ದಕೂಡಲೇ ಹೂವನ್ನು ಕೊಯ್ದುಕೊಂಡು ದುರ್ಗಾಪೂಜೆಗೆ ಬರತಕ್ಕ ಅರ್ಚಕನು ಆದಿನವೂ ನಿತ್ಯದಂತೆಯೇ ಬಂದು ಮಂತ್ರಿಯು ಮಂತ್ರಿಯ ಮಗನೂ ಸತ್ತು ಬಿದ್ದಿರುವುದನ್ನು ಕಂಡು ದುಃಖಿಸಿ, ॥೬೩॥ ಅಯ್ಯೋ ನಿನ್ನೆತಾನೆ ನಮ್ಮರಸನು ತನ್ನ ಕುವರಿಯಾದ ಚಂಪಕಮಾಲಿನಿಯನ್ನು ಚಂದ್ರ

ಚಂದ್ರಹಾಸಂಗೆಸೂನುಸಹಿತೀದುಷ್ಟಬುದ್ಧಿಗಿಲ್ಲಿ ‖ ಕೆಟ್ಟೆಣಿಸಿದನರಾರೊಶಿವಶಿವಾದ್ಭುತವೆನುತ । ನೆಟ್ಟನೆನೃಪಾಲಯಕೆತಾಪ ಸಂಬಂದುನೊರೆ । ಯಿಟ್ಟೊಡೆಕುಳಿಂದಜಂಕೇಳಿರದೆಪೊರಮಟ್ಟುಕಾಲ್ನಡೆಯೊಳೈತಂದನು ‖ ೬೪ ‖ ಚಂಡಿಕಾಲಯಕಖಿಳಜನಸ ಹಿತನಡೆತಂದು । ದಿಂಡುಗೆಡದಿಹಮಾವನ್ಮೈದುನರಹಾನಿಯಂ । ಕಂಡುಕಡುಶೋಕದಿಂದುರೆನೊಂದುಚಂದ್ರಹಾಸಂದೇವಿಯಂ ನೋಡುತ ‖ ಖಂಡಿಸಿದೆಲಾತನ್ನಭಾಗ್ಯಮುಂತಪ್ಪಾವು । ದಂಡಲೆದುಪಡೆವೆನಿವರಸುಗಳಂಮಾರಿದೊಡೆ । ಪುಂಡರೀಕಾಂಬಕನಸಾ ಯುಜ್ಯಮೆನಗಾಗಲೆಂದುನಿಶ್ಚಿತನಾದನು ‖೬೫‖ ರಭಸದಿಂದೈತಂದುಗೋಳಿಡುವಬಂಧುಜನ । ಕಭಯಮುಂಕೊಟ್ಟುನಿಶ್ಚಲನಾಗಿ ಶಶಿಹಾಸ । ನಭವನರಸಿಯಮುಂದೆಚತುರಸ್ರದೋಳ್ಕುಂಡಮಂತೆಗಿಸಿಬಳಿಕದರೊಳು ‖ ಅಭಿಶೋಭಿಸುವೊಲಗ್ನಿಯಂಪ್ರತಿಷ್ಠಿಸಿವಿ

---

ದ್ರನು, ವನಕೆ-ಕಾಡಿಗೆ, ಐದಿದಂ_ಹೊರಟು ಹೋದನು, ಪಟ್ಟಂ-ಪಟ್ಟಾಭಿಷೇಕವಾದರೊ, ಚಂದ್ರಹಾಸಂಗೆ_ಇಂದುಹಾಸನಿಗೆ. ಆದುದು_ಆಗಿಬಿಟ್ಟಿತು, ಇಲ್ಲಿ - ಈ ದೇವಸ್ಥಾನದೊಳಗೆ, ಸೂನುಸಹಿತ - ಮಗನಿಂದೊಡಗೂಡಿದ, ಈ ದುಷ್ಟಬುದ್ಧಿಗೆ - ಈ ಮಂತ್ರಿಗೆ, ಆರೊ_ಯಾರೊ, ಕೆಟ್ಟೆಣಿಸಿದರೆ_ಅಲ್ಲದ್ದನ್ನು ಬಗೆದರು, ಶಿವಶಿವ_ಪರಮೇಶ್ವರನೆ, ಅದ್ಭುತಂ-ಆಶ್ಚರಿಯಾಗಿದೆಯಲ್ಲಾ, ಎನುತ_ಎಂದು ನುಡಿಯುತ್ತ, ತಾಪಸಂ_ಆ ಕಾಳೀದೇವಾಲಯದ ಪೂಜಾರಿಯು, ನೃಪಾಲಯಕೆ_ಅರಮನೆಗೆ, ನೆಟ್ಟಗೆ-ಸರಿಯಾಗಿ, ಬಂದು_ಬಂದವನಾಗಿ, ನೊರೆಯಿಟ್ಟೊಡೆ_ಅರಿಕೆ ಮಾಡಲು, ಕುಳಿಂದಜಂ-ಇಂದುಹಾಸನು, ಕೇಳ್ದು-ಈ ಮಾತನ್ನಾಲಿಸಿ, ಇರದೆ_ಸುಮ್ಮನಿರದೆ, ಕಾಲ್ನಡೆಯೊಳು-ನಡೆದುಕೊಂಡೇ, ಪೊರಮಟ್ಟು-ಹೊರಟವನಾಗಿ, ಐತಂದನು_ಪಾರ್ವತಿಯ ದೇವಾಲಯಕ್ಕೆ ಬಂದು ಸೇರಿದನು ‖೬೪‖

ಟೀ‖ ಚಂದ್ರಹಾಸನು_ಇಂದುಹಾಸನಾದರೊ, ಅಖಿಳಜನಸಹಿತ_ಸಕಲಜನರೊಂದಿಗೆ, ಚಂಡಿಕಾಲಯಕೆ-ದುರ್ಗಾಲಯಕ್ಕೆ, ನಡೆತಂದು_ಐತಂದು, ದಿಂಡುಗೆಡದಿಹ_ಶರೀರವೂ ತಲೆಯು ಬೇರೆಬೇರೆಯಾಗಿರತಕ್ಕ, ಮಾವನ್ಮೈದುನರ_ದುಷ್ಟಬುದ್ಧಿ ಮದನರ, ಹಾನಿಯಂ_ಅನಾಹುತವನ್ನು, ಕಂಡು_ಈಕ್ಷಿಸಿ, ಕಡುಶೋಕದಿಂದ-ಹೆಚ್ಚಾದ ಸಂಕಟದಿಂದ, ಉರೆ_ಅತ್ಯಧಿಕವಾಗಿ, ನೊಂದು-ವ್ಯಸನಪಟ್ಟು, ದೇವಿಯಂ-ದುರ್ಗಿಯನ್ನು, ನೋಡುತ_ಈಕ್ಷಿಸುತ್ತ, ಭಾಗ್ಯಮುಂ-ನೆಂಟರೆನ್ನತಕ್ಕ ಐಸಿರಿಯನ್ನು, ಖಂಡಿಸಿದೆಲಾ_ಹಾಳುಮಾಡಿದೆಯಲ್ಲ, ತಪ್ಪು_ಅಪರಾಧವು, ಆವುದು_ಯಾವುದು, ಇವರ_ಇವರೀರ್ವರ, ಅಸುಗಳಂ_ಹರಣಗಳನ್ನೂ, ಅಂಡಲೆದು_ನನ್ನ ಶರೀರವನ್ನು ಕಷ್ಟಪಡಿಸಿ, ಪಡೆವೆನು_ಐದುವೆನು, ಮಾರಿದೊಡೆ_ನನ್ನ ದೇಹವನ್ನು ಶ್ರಮಗೊಳಿಸಿದರೂ ನಿರರ್ಥಕವೇ ಆದರೆ, ಎನಗೆ_ನನಿಗಾದರೊ, ಪುಂಡರೀಕಾಂಬಕನ- ಕಮಲನೇತ್ರನಾದ ವೈಕುಂಠಪತಿಯ, ಸಾಯುಜ್ಯಂ_ಸನ್ನಿಧಿಯು, ಆಗಲಿ-ಸಿದ್ಧಿಸಲಿ, ಎಂದು_ಎಂಬತೆರನಾಗಿ, ನಿಶ್ಚಿತನು_ದೃಢಮಾಡಿಕೊಂಡವನು, ಆದನು_ಆಗಿಬಿಟ್ಟನು ‖೬೫‖

ಟೀ‖ ಶಶಿಹಾಸನು-ಇಂದುಹಾಸನಾದರೊ, ರಭಸದಿಂದ_ಆತುರದಿಂದ, ಐತಂದು_ಬಂದು, ಗೋಳಿಡುವ-ಹೆಚ್ಚಾಗಿ ಅಳುತ್ತಲಿರತಕ್ಕ, ಬಂಧುಜನಕೆ-ತನ್ನ ಬಂಧುಗಳಿಗೆಲ್ಲಾ, ಅಭಯಮುಂಕೊಟ್ಟು-ಜೀವಭಯವೇನೂ ಇಲ್ಲವೆಂದು ಧೈರ್ಯವನ್ನು ಹೇಳಿ, ನಿಶ್ಚಲನಾಗಿ_ಚಪಲವನ್ನು ಬಿಟ್ಟ ಮನಸ್ಸುಳ್ಳವನಾಗಿ, ಅಭವನ-ಪರಮೇಶ್ವರನ, ಅರಸಿಯ-ರಾಣಿಯಾದ ಗಿರಿಜೆಯ, ಮುಂದೆ-ಮುಂಭಾಗದಲ್ಲಿ, ಕುಂಡಮಂ-ಅಗ್ನಿಕೊಂಡವನ್ನು, ಚತುರಸ್ರದೊಳ್_ಚೌಕವಾಗಿ, ತೆಗಿಸಿ_ನಿರ್ಮಿಸಿ, ಬಳಿಕ_ಆಮೇಲೆ, ಅದರೊಳು_ಆ ಅಗ್ನಿಗುಂಡದೊಳಗೆ, ಅಗ್ನಿಯಂ_ಯಜ್ಞೇಶ್ವರನನ್ನು, ಅಭಿಶೋಭಿಸುವೊಲು_ಕಾಂತಿಯನ್ನೀಯುವಂತೆ, ಪ್ರತಿಷ್ಠಿಸಿ_ಪ್ರತಿಷ್ಠೆಯಂ ಮಾಡಿ, ವಿಪ್ರಸಭೆಸಹಿತ_ಭೂಸುರೋತ್ತಮರ ಸಮಾಜದಿಂದೊಡಗೂಡಿ, ಕುಳ್ಳಿರ್ದು- ಕೂತುಕೊಂಡವನಾಗಿ, ಬಲಿ_ಅನ್ನಾದಿಗಳು, ದೀಪ-ದೀವಟಗೆಗಳು, ಮುಂತಾದ_ಆದಿಯಾಗಿರತಕ್ಕ, ವಿಭವಂಗಳಂ_ಸಾಮಗ್ರಿಗಳನ್ನೆಲ್ಲಾ, ಮಾಡಿ-

---

ಹಾಸನಿಗೆ ಮದುವೆಮಾಡಿ ರಾಜ್ಯಕೋಶಗಳನ್ನೆಲ್ಲಾ ಆತನಿಗೊಪ್ಪಿಸಿ ತಾನು ವನಕ್ಕೆ ಹೊರಟು ಹೋದನು. ವಿಪರೀತವಾದ ಮಹೋತ್ಸವವು ನಡೆಯಿತು. ಇಂತು ಅಪರಿಮಿತವಾದ ಆನಂದದಿಂದಿರುವಾಗ ಇವರೀರ್ವರಿಗೂ ಯಾರಿಂದ ಮರಣವಾಯಿತೊ ಕಾಣೆನಲ್ಲಾ ! ಎಂದು ಕಳವಳ ಪಡುತ್ತಾ ಅರಮನೆಗೆ ಬಂದು ನಡದಿರುವ ಸುದ್ದಿಯನ್ನೆಲ್ಲಾರಾಜನಾದ ಚಂದ್ರಹಾಸನಿಗೆ ವಿಜ್ಞಾಪಿಸಿಕೊಂಡನು. ದುರ್ಗಾದೇವಸ್ಥಾನದ ಅರ್ಚಕನ ಮಾತುಗಳನ್ನು ಕೇಳಿದ ಇಂದುಹಾಸನಾದರೊ ತಡಮಾಡದೆ ಕಾಳಿಕಾಲಯಕ್ಕೆ ಪರಿವಾರದೊಂದಿಗೆ ನಡೆದುಕೊಂಡೇ ಬಂದು, ‖೬೪‖ ಸತ್ತುಬಿದ್ದಿರುವ ಮಾವನನ್ನು ಭಾವಮೈದುನನ್ನು ನೋಡಿ, ದುಃಖಾತಿಶಯದಿಂದ ಚಂಡಿಕಾದೇವಿಯ ಕಡೆಗೆ ತಿರುಗಿ, ಅಯ್ಯೋ ಮಹಾ ಕಾಳಿಯೆ, ನನ್ನ ಭಾಗ್ಯಕ್ಕೆ ಭಂಗವನ್ನುಂಟುಮಾಡಿದೆಯಾ ! ನನ್ನಲ್ಲಿ ದೋಷವೇನು? ಒಳ್ಳೇದು, ಈಗಲೂ ನಿನ್ನನ್ನು ಮೆಚ್ಚಿಸಿ ಇವರ ಪ್ರಾಣಗಳನ್ನು ಪಡೆವೆನು. ಇಲ್ಲವಾದರೆ ನನಿಗೂ ಇವರಗತಿಯೇ ಆಗಲೆಂದು ನಿಶ್ಚೈಸಿಕೊಂಡು. ‖ ೬೫ ‖ ದುಃಖಿಸುತ್ತಲಿದ್ದ ಜನರನ್ನೆಲ್ಲಾ ಸಂತೈಸಿ, ತಾನು ನಿಶ್ಚಲ ಹೃದಯನಾಗಿ ದೇವಿಯ ಇದಿರು ಭಾಗದಲ್ಲಿ ಅಗ್ನಿಕೊಂಡವನ್ನು ತೆಗೆಸಿ, ಅನೇಕ ಬ್ರಾಹ್ಮಣೋತ್ತಮರನ್ನು ಕರೆಸಿ, ದುರ್ಗಾ

ಪ್ರ | ಸಭೆಸಹಿತಕುಳ್ಳಿರ್ದುಬಲಿದೀಪಮುಂತಾದ | ವಿಭವಂಗಳಂಮಾಡಿಘೃತಪಾಯಸಾಜ್ಯತಿಲಹೋಮಂಗಳಂಬೇಳ್ದನು ||೬೬||
ಹೇಳಲೇನೈಪಾರ್ಥಚಂದ್ರಹಾಸಂಬಳಿಕ | ಬಾಳಿಂದನಿಜದೇಹಮಾಂಸಮಂಕೊಯಿಕೊಯಿದು | ಬೇಳಿಪೂರ್ಣಾಹುತಿಗೆಶಿರವನ
ರಿದಪೆನೆಂದುಖಡ್ಗಮಂಗೋಣ್ಗೆಪೂಡಿ || ಕಾಳಿನೀನಖಿಳಶಕ್ತಿಗಳರೂಪಂಗಳಂ | ತಾಳಿಸರ್ವಾತ್ಮಕನಕೂಡೆ ರಮಿಸುವೆಯಲಾ |
ವ್ಯಾಳಶಾಯಿಗೆಸಮರ್ಪಿತಮಾಗಲೊಪ್ಪಿಗೊಳ್ಳೆಂದರಿಯಲನುವಾದನು ||೬೭|| ಬೆಚ್ಚಿದಂತೆಸೆವಪೀಠವನಿಳಿದುರುದ್ರಾಣಿ | ಬೆಚ್ಚರ
ದೊಳೈತಂದುಕಯ್ಯಬಾಳಂಪಿಡಿದು | ನಿಚ್ಚಟದಹರಿಭಕ್ತಿಗಾಂಪ್ರೀತಿಯಂತಳೆದೆನಾತ್ಮವಧೆಬೇಡನಿನಗೆ || ಪೆಚ್ಚಿದಕುಮಂತ್ರ
ಪಾಪದೊಳಳಿದ ನೀಮಂತ್ರಿ | ವೆಚ್ಚಿಸಿದನಸುವನಾತನಸುತಂನಿನಗಾಗಿ | ಮೆಚ್ಚಿಸಿದೆನೀಂಮಗನೆಬಯಕೆಯಪೇಳೆರಡುವರವನಿ
ತ್ತಪೆನೆಂದಳು ||೬೮|| ದೇವಿಯಪದಾಂಬುಜದೊಳೆರಗಿಕೈಮುಗಿದುನಿಂ | ದಾವಾವಜನ್ಮಜನ್ಮಾಂತರದೊಳೆನಗೆರಾ | ಜೀವನಾಭನಭ

---

ಇಡಿಸಿ, ಘೃತ-ತುಪ್ಪವು, ಪಾಯಸ-ಪಾಯಸವು, ಆಜ್ಯ-ತುಪ್ಪ, ತಿಲ-ಎಳ್ಳುಮೊದಲಾದ ವಸ್ತುಗಳ, ಹೋಮಂಗಳಂ-ಹೋಮಗಳನ್ನು, ಬೇಳ್ದನು-ನೆರವೇರಿಸುತ್ತಲಿದ್ದನು ||೬೬||

ಟೀ|| ಪಾರ್ಥ-ಫಲುಗುಣನೆ, ಹೇಳಲೇನೈ-ಏನೆಂದು ಹೇಳಲಯ್ಯ, ಚಂದ್ರಹಾಸಂ-ಇಂದುಹಾಸನು, ಬಳಿಕ-ಆಮೇಲೆ, ನಿಜ-ತನ್ನ, ದೇಹ-ಅಂಗದ, ಮಾಂಸಮಂ-ಮಾಂಸವನ್ನು, ಬಾಳಿಂದ-ಕತ್ತಿಯಿಂದ, ಕೊಯಿಕೊಯಿದು-ತುಂಡು ತುಂಡುಗಳಾಗಿ ಮಾಡಿ, ಬೇಳಿ-ಅಗ್ನಿಗೆ ಸಮರ್ಪಣೆಯಂಮಾಡಿ, ಶಿರವನು-ನನ್ನ ಶಿರಸ್ಸನ್ನು, ಪೂರ್ಣಾಹುತಿಗೆ-ಕಡೆಯಲ್ಲಿ ಮಾಡತಕ್ಕ ಹೋಮಕ್ಕೆ, ಅರಿದಪೆನು-ಕಡಿದು ಬಿಡುತ್ತೇನೆ, ಎಂದು-ಎಂಬತೆರನಾಗಿ, ಗೋಣ್ಗೆ-ಕತ್ತಿನಮೇಲಕ್ಕೆ, ಖಡ್ಗವಂ-ಕತ್ತಿಯನ್ನು, ಪೂಡಿ-ಇಟ್ಟವನಾಗಿ, ಕಾಳಿ-ಎಲೈ ಚಂಡಿಯೇ, ನೀನು-ನಿನಾದರೊ, ಅಖಿಳಶಕ್ತಿರೂಪಂಗಳಂ-ಸರ್ವ ದೇವತೆಗಳ ಸ್ವರೂಪವನ್ನೂ, ತಾಳಿ-ಹೊಂದಿ, ಸರ್ವಾತ್ಮಕನಕೂಡೆ-ಸಕಲ ಚೈತನ್ಯಸ್ವರೂಪನಾದ ಪರಮೇಶ್ವರನೊಂದಿಗೆ, ರಮಿಸುವಿಯಲಾ-ಸಂಸರ್ಗದಿಂದ ಕಾಲವಂ ಕಳೆಯತಕ್ಕ ಲೋಕಮಾತೆಯಾಗಿದ್ದೀಯಲ್ಲವೆ, ವ್ಯಾಳಶಾಯಿಗೆ-ಆದಿಶೇಷನನ್ನೆ ಹಾಸಿಗೆಯಾಗಿ ಮಾಡಿಕೊಂಡಿರತಕ್ಕ ಶ್ರೀಮನ್ನಾರಾಯಣನಿಗೆ, ಸಮರ್ಪಿತಂ-ಸೇರತಕ್ಕದ್ದು, ಆಗಲು-ಆಗಬೇಕೆಂದು, ಒಪ್ಪಿಕೊಳ್-ಒಡಂಬಡಬೇಕು, ಎಂದು-ಎಂಬತೆರನಾಗಿ, ಅರಿಯಲು-ತನ್ನ ಶಿರಸ್ಸನ್ನು ಖಂಡಿಸುವದಕ್ಕೆ, ಅನುವಾದನು-ಪ್ರಯತ್ನಿಸಿ ನಿಂತುಕೊಂಡನು ||೬೭||

ಟೀ|| ರುದ್ರಾಣಿ-ದುರ್ಗಾದೇವಿಯು, ಬೆಚ್ಚಿದಂತೆ-ಹೆದರಿಕೆಯನ್ನೈದಿದಳೊ ಎಂಬಂತೆ, ಎಸೆವ - ಹೊಳೆಹೊಳೆವ, ಪೀಠವನು-ಆಸನವನ್ನು, ಇಳಿದು-ಇಳಿದವಳಾಗಿ, ಬೆಚ್ಚರದೊಳು-ತಡಮಾಡದೆ, ಐತಂದು-ಇಂದುಹಾಸನ ಬಳಿಗೆ ಬಂದವಳಾಗಿ, ಕೈಯ್ಯ-ಅವನ ಕೈಯಲ್ಲಿ ಹಿಡಿದಿದ್ದ, ಬಾಳಂ-ಕತ್ತಿಯನ್ನು, ಪಿಡಿದು-ಹಿಡಿದವಳಾಗಿ, ಮಗನೆ-ಕಂದನೆ, ಆಂ-ನಾನಾದರೊ, ನಿಚ್ಚಟದ-ಚಂಚಲವಿಲ್ಲದ, ಹರಿಭಕ್ತಿಗೆ-ವಿಷ್ಣುಭಕ್ತಿಗೆ, ಪ್ರೀತಿಯತಳೆದನು-ಸಂತಸಂಗೊಂಡಿರುವೆನು. ಆತ್ಮವಧೆ-ದುರ್ಮರಣವು (ನಿನ್ನ ಪ್ರಾಣವನ್ನು ನೀನೆ ತೆಗೆದುಕೊಳ್ಳತಕ್ಕದ್ದು), ಬೇಡ-ಕೂಡದು, ಆತನ-ಆ ಮಂತ್ರಿಯ, ಸುತಂ-ಕುವರನಾದ ಮದನನು, ಪೆಚ್ಚಿದ-ಮಿತಿಮಿಾರಿದ, ಕುಮಂತ್ರ-ದುರಾಲೋಚನೆಯ ಸಂಬಂಧವಾದ, ಪಾಪದೊಳು-ದುರಿತದಿಂದ, ಅಳಿದನು-ಮರಣವನ್ನೈದಿದನು, ಈ ಮಂತ್ರಿ-ಈ ಸಚಿವನಾದರೊ, ಅಸು-ತನ್ನ ಜೀವವನ್ನು, ವೆಚ್ಚಿಸಿದನು-ತಾನೆ ಹೋಗಲಾಡಿಸಿಕೊಂಡಿರುವನು, ನೀಂ-ನೀನಾದರೊ, ಮೆಚ್ಚಿಸಿದೆ-ಸ್ಥಿರವಾದ ಭಕ್ತಿಯಿಂದ ನನ್ನಪ್ರೀತಿಗೆ ಪಾತ್ರನಾದೆ, ಬಯಕೆಯಂ-ಇಷ್ಟಾರ್ಥಗಳನ್ನು, ಪೇಳು-ಹೇಳುವನಾಗು, ಎರಡುವರವನು-ಎರಡು ವರಗಳನ್ನು, ನಿನಿಗಾಗಿ-ನಿನ್ನ ಸಲುವಾಗಿ, ಇತ್ತಪೆನು-ಅನುಗ್ರಹಿಸುತ್ತೇನೆ, ಎಂದಳು-ಎಂಬುದಾಗಿ ದುರ್ಗಾದೇವಿಯು ಚಂದ್ರಹಾಸನೊಂದಿಗೆ ನುಡಿದಳು. ||೬೮||

---

ದೇವಿಗೆ ಸಂತೋಷವಾಗಬೇಕೆಂದು ನಾನಾವಿಧವಾದ ಹೋಮಗಳನ್ನುಮಾಡುತ್ತಾ ಇದ್ದನು ||೬೬|| ಕೇಳೈ ಅರ್ಜುನ, ಆ ಇಂದುಹಾಸನ ಮನೋಧೈರ್ಯವು ಅಸಾಧಾರಣವಾದದ್ದೇ ಸರಿ, ಆ ಬಳಿಕ ಚಂದ್ರಹಾಸನು ತನ್ನ ದೇಹದ ಮಾಂಸಖಂಡಗಳನ್ನು ಕೊಯಿದು ಕೊಯಿದು ಯಜ್ಞೇಶ್ವರನಿಗೆ ಹೋಮ ಮಾಡುತ್ತ ಕೊನೆಗೆ ಚಂಡಿಯ ತೃಪ್ತಿಗಾಗಿ ಪೂರ್ಣಾಹುತಿಗೆ ತನ್ನ ತಲೆಯನ್ನೇ ಅರ್ಪಿಸಬೇಕೆಂದು ಕೈಯಲ್ಲಿದ್ದ ಖಡ್ಗವನ್ನು ತನ್ನಕತ್ತಿನಮೇಲೆಸೆಯಲನುವಾಗಿ, ಎಲೆ ಪಾರ್ವತೀ! ಇಗೋ ನಿನಿಗೆ ತೃಪ್ತಿಯಾಗಿರುವದರಮೂಲಕ ನನಿಗೆ ಮುಕ್ತಿಯುಂಟಾಗಲೆಂದು ನುಡಿದು ಪ್ರಾಣವನ್ನು ಕಳೆದುಕೊಳ್ಳಲುಜ್ಜುಗಿಸಿದೊಡನೆಯೆ||೬೭|| ದುರ್ಗಿಯು ಥಟ್ಟನೆದ್ದುಬಂದು ಚಂದ್ರಹಾಸನ ಕೈಯನ್ನು ಹಿಡಿದುಕೊಂಡು, ಅಯ್ಯೋ ಇಂದುಹಾಸನೆ, ನಿನ್ನಲ್ಲಿರುವ ನಿಶ್ಚಲವಾದ ಹರಿಭಕ್ತಿಗೆ ನಾನು ಮೆಚ್ಚಿರುವೆನು, ಈ ದುಷ್ಟಬುದ್ಧಿಯ ದುರಾಲೋಚನೆಗಳೇ ಮದನನ ನಾಶಕ್ಕೆ ಹೇತುಗಳು. ಇವನು ತನ್ನ ದುಷ್ಕಾರ್ಯಗಳಿಂದ ತಾನೇ ಇಲ್ಲಿ ಬಿದ್ದೊರಗಿರುವನು, ಅಯ್ಯಾ ಕಂದ, ನಿನ್ನ ದೃಢಭಕ್ತಿಗೆ ನಾನು ಮೆಚ್ಚಿದೇನೆ. ನಿನಗೆ ಬೇಕಾದ ಎರಡು ವರಗಳನ್ನು ಕೇಳಿಕೊ, ಕೊಡುವೆನೆಂದು ನುಡಿದಳು. ‖ ೬೮ ‖ ಆಗ ಇಂದುಹಾಸನು ಕೈಗಳನ್ನು ಜೋಡಿಸಿ

ಕ್ತಿದೊರಕೊಳಲಿದೊಂದುಮಡಿದಿಹಮಂತ್ರಿಮಂತ್ರಿಸುತರು|| ಜೀವಿಸಲಿದೊಂದೀಗಲಿಂತೆರಡುವರಮಂಕೃ|ಪಾವಲೋಕದೊಳಿತ್ತು ಪುದೆಂದುಮತ್ತೆಚರಣಾವನತನಾಗಲ್ಕೆಪಿಡಿದೆತ್ತಿಕ್ಷತಮಡಗೆಮೈದಡವುತಿಂತೆಂದಳು||೬೯||ಜಗದೊಳಾರಚ್ಯುತಪ್ರೀತಿಯಂಮಾಡುವ| ರ್ಮಗನೆತನಗಿಷ್ಟರವರಾಬಾಲ್ಯದಿಂದನೀ| ನಗಧರಧ್ಯಾನಪರನಾಗಿರ್ಪೆ ನಿನ್ನಚರಿತವನೋದಿಕೇಳುವರ್ಗೆ || ಮಿಗೆವರ್ಧಿಪುದುಮುಕುಂದಾಭಿರತಿಮುಂದೆಕಲಿ | ಯುಗದೊಳೆನ್ನಾಜ್ಞೆಯಿದುಹರಿಭಕ್ತಿನಿನಗೆಬೆಳ | ವಿಗೆಯಾಗದಿರ್ದಪುದೆನಿನ್ನವಾಂಛಿತಕಿನ್ನುಕಡೆಯುಂಟೆಹೇಳೆಂದಳು ||೭೦|| ಎಂದುಕಾರುಣ್ಯದಿಂತಾನೊಮ್ಮೆಕಣ್ಮುಚ್ಚಿ | ನಿಂದುಧ್ಯಾನಿಸಲಾಗತಲೆದೋರಿತಾಕ್ಷಣದೊ | ಳೊಂ

---

ಟೀ|| (ಚಂದ್ರಹಾಸನು) ದೇವಿಯ - ಕಾಳಿಕಾಮ್ಮನವರ, ಪದಾಂಬುಜದೊಳು-ಅಡಿದಾವರೆಗಳಲ್ಲಿ, ಎರಗಿ-ವಂದನೆಯಂ ಮಾಡಿ, ಕೈಮುಗಿದುನಿಂದು-ಕೈಗಳನ್ನು ಜೋಡಿಸಿ ನಿಂತು, ಎನಗೆ-ನನಿಗಾದರೊ, ರಾಜೀವನಾಭನ-ಕಮಲನಾಭನಾದ ಶ್ರೀಮನ್ನಾರಾಯಣನಲ್ಲಿ ಭಕ್ತಿ-ಪ್ರೇಮವು, ಅವಾವ-ಸಕಲವಾದ, ಜನ್ಮಜನ್ಮಾಂತರದೊಳು-ಎಲ್ಲ ಜನ್ಮಗಳೊಳಗೂ, ದೊರಕೊಳಲಿ-ಪ್ರಾಪ್ತವಾಗಲಿ, ಇದೊಂದು-ಈ ವರವೊಂದನ್ನು ಕರುಣಿಸಬೇಕು, ಮಡಿದಿಹ-ಮರಣವನ್ನು ಹೊಂದಿರತಕ್ಕ, ಮಂತ್ರಿ-ಅಮಾತ್ಯನೂ, ಮಂತ್ರಿಸುತನು-ಇವನ ಮಗನಾದ ಮದನನೂ ಸಹ, ಜೀವಿಸಲಿ-ಮತ್ತೆ ಜೀವವನ್ನು ಪಡೆಯಲಿ, ಇದೊಂದು-ಇದೊಂದು ವರವನ್ನು ಅನುಗ್ರಹಿಸಬೇಕು, ಇಂತು-ಈ ಮೇರಿಗೆ, ಈಗಲು-ಈಗ, ಕೃಪಾವಲೋಕನದೊಳು-ಕರುಣಾಕಟಾಕ್ಷದಿಂದ, ಎರಡು ವರಮಂ-ವರದ್ವಯವನ್ನು, ಇತ್ತಪುದು-ಕೊಟ್ಟು ಕಾಪಾಡಬೇಕು, ಎಂದು-ಎಂಬತೆರನಾಗಿ ಬೇಡುತ್ತ, ಚರಣ-ಕಾಲುಗಳ ಮೇಲೆ, ಮತ್ತೆ-ತಿರುಗಿ, ಅನತನು-ಬಗ್ಗಿದ ದೇಹವನ್ನುಂಟಾಗಿರತಕ್ಕವನು, ಆಗಲ್ಕೆ-ಆಗಲಾಗಿ, ಪಿಡಿದು-ಹಿಡಿದುಕೊಂಡು, ಎತ್ತಿ-ಮೇಲಕ್ಕೆಬ್ಬಿಸಿ, ಕ್ಷತಂ-ಪೆಟ್ಟುಗಳ ನೋವು, ಅಡಗೆ-ನಿವಾರಣೆಯಾಗುವಂತೆ, ಮೈದಡವುತ-ಶರೀರವನ್ನು ತಡವುತ್ತ, ಇಂತು-ಮುಂದೆ ಹೇಳುವಂತೆ, ಎಂದಳು-ನುಡಿದಳು. ||೬೯||

ಟೀ|| ಮಗನೆ-ಎಲೈ ಇಂದುಹಾಸನೆ, ಆರು-ಯಾರು, ಜಗದೊಳು-ಪ್ರಪಂಚದಲ್ಲಿ, ಅಚ್ಯುತ ಪ್ರೀತಿಯಂಮಾಡುವವರು-ಶ್ರೀ ಮಹಾ ವಿಷ್ಣುವನ್ನು ಆರಾಧಿಸುತ್ತಾರೆಯೊ ಅವರು, ತನಗೆ-ನನಿಗೂ ಕೂಡ, ಇಷ್ಟರು-ಬೇಕಾದವರೇ ಆಗಿರುವರು, ನೀನು-ನೀನಾದರೊ, ಆ ಬಾಲ್ಯದಿಂದ-ಹುಟ್ಟಿದ್ದು ಮೊದಲ್ಗೊಂಡು, ಅಗಧರ-ಶ್ರೀ ಕೃಷ್ಣಸ್ವಾಮಿಯ, ಧ್ಯಾನ-ಪೂಜೆಯಲ್ಲಿ, ಪರನಾಗಿ-ನಿರತನಾಗಿ, ಇರ್ಪೆ-ಇರುತ್ತೀಯೆ, ಮುಂದೆ-ಇನ್ನುಮೇಲೆ, ಕಲಿಯುಗದೊಳು-ಕಲಿಯುಗದಲ್ಲಿ, ಮಿಗೆ-ಅಧಿಕವಾದ, ಮುಕುಂದಾಭಿರತಿ-ವಿಷ್ಣುಭಕ್ತಿಯು, ನಿನ್ನ-ನಿನ್ನ ಸಂಬಂಧವಾದ, ಚರಿತವನು-ವೃತ್ತಾಂತವನ್ನು, ಓದಿ-ಓದಿಕೊಂಡು, ಕೇಳುವರ್ಗೆ-ಕೇಳತಕ್ಕ ಜನರಿಗೆ, ವರ್ಧಿಪುದು-ಹೆಚ್ಚುವುದು, ಎನ್ನ-ನನ್ನ ಸಂಬಂಧವಾದ, ಆಜ್ಞೆ-ಅಪ್ಪಣೆಯು, ಇದು-ಇದೇ, ನಿನಗೆ-ನಿನಗಾದರೊ, ಹರಿಭಕ್ತಿ-ಶ್ರೀ ಕೃಷ್ಣನಲ್ಲಿ ಪ್ರೇಮವು, ಬೆಳವಿಗೆಯು ಆಗದಿರ್ದಪುದೆ-ಅಧಿಕವಾಗದೆ ಹೋದೀತೆ (ಹೆಚ್ಚಾದ ಭಕ್ತಿಯೇ ಉಂಟಾಗುತ್ತದೆ) ನಿನ್ನ ವಾಂಛಿತಕ್ಕೆ-ನಿನ್ನ ಇಷ್ಟಾರ್ಥಕ್ಕೆ, ಕಡೆ-ತುದಿಯು, ಉಂಟೆ-ಇದೆಯೇ, ಹೇಳು-ನುಡಿ, ಎಂದಳು-ಎಂಬುದಾಗಿ ಉತ್ತರಗೊಟ್ಟಳು.

ಅ|| ವಿ|| ಅಗಧರ-ಅಗ-ಗಮನವಿಲ್ಲದಿರುವುದು (ಪರ್ವತ). ಅಗ-ಪರ್ವತವನ್ನು (ಗೋವರ್ಧನ ಗಿರಿಯನ್ನು) ಧರ-ಕಿರುಬೆರಳಿಂದ ಎತ್ತಿಹಿಡಿದನು, (ಶ್ರೀ ಕೃಷ್ಣನು) ||೭೦||

ಟೀ|| ತಾನು-ಪಾರ್ವತಿಯು, ಕಾರುಣ್ಯದಿಂ-ಕೃಪೆಯಿಂದ, ಎಂದು-ಈ ರೀತಿಯಾಗಿ ಹೇಳಿ, ಒಮ್ಮೆ-ಒಂದಾವರ್ತಿ, ಕಣ್ಮುಚ್ಚಿ-ಕಣ್ಣುಗಳನ್ನು ಮುಚ್ಚಿಕೊಂಡು, ನಿಂದು-ನಿಂತುಕೊಂಡು, ಧ್ಯಾನಿಸಲು-ಧ್ಯಾನವಂ ಮಾಡಲು, ಆಗ-ಆಕಾಲದಲ್ಲಿ,

---

ನಿಂತುಕೊಂಡು, ಎಲೌ ಲೋಕಮಾತೆಯೇ, ನನಿಗೆ ಜನ್ಮಜನ್ಮಾಂತರದಲ್ಲಿಯೂ ಧೃಢವಾದ ಹರಿಭಕ್ತಿಯುಂಟಾಗಿರಲೆಂದೂ, ಸತ್ತು ಬಿದ್ದಿರುವ ಮಂತ್ರಿಯನ್ನೂ ಮಂತ್ರಿಸುತನನ್ನೂ ಬದುಕಿಸಿಕೊಡಬೇಕೆಂದೂ ಬೇಡಿಕೊಳ್ಳುವ ಈ ಎರಡು ನನ್ನ ಇಷ್ಟಾರ್ಥಗಳನ್ನು ಈಡೇರಿಸಬೇಕೆಂದು ಬೇಡಿಕೊಂಡನು. ದೇವಿಯ ಪದಾಂಬುಜಗಳಿಗೆರಗಿದನು. ಆಗ ಪಾರ್ವತಿಯು ಪ್ರಸನ್ನೆಯಾಗಿ ಇಂದುಹಾಸನ ಮೈಯ್ಯನ್ನು ಸವರುತ್ತಾ ಮೇಲಕ್ಕೆಬ್ಬಿಸಿ, || ೬೯ || ಮಗನೇ ಲೋಕದಲ್ಲಿ ಯಾರು ಶ್ರಿಮನ್ನಾರಾಯಣ ಮೂರ್ತಿಯಲ್ಲಿ ಭಕ್ತಿಯುಳ್ಳವರಾಗಿರುವರೋ ಅವರು ನನಿಗೂ ಅತ್ಯಂತ ಭಕ್ತರು. ನೀನಾದರೊ, ಹುಟ್ಟಿದಂದಿನಿಂದಲೂ ಹರಿಧ್ಯಾನಪರನಾಗಿರುವಿಯಾದ್ದರಿಂದ ನಿನ್ನಯ ಮಹಿಮೆಯು ಅಸಾಧಾರಣವಾದದ್ದಾಗಿರುವುದು. ನಿನ್ನ ಚರಿತ್ರೆಯನ್ನು ಕಲಿಯುಗದಲ್ಲಿ ಭೂಲೋಕದೊಳಗೆ ಯಾರು ಭಕ್ತಿಯಿಂದ ಓದಿ ಕೇಳಿದರೂಕೂಡ ಅಂತಹ ಜನರಿಗೆ ಶಾಶ್ವತವಾದ ಮುಕ್ತಿಯುಂಟಾಗುವುದೆಂದು ನಾನನುಗ್ರಹಿಸಿದೇನೆ. ನಿನಗೆ ಶಾಶ್ವತವಾದ ಹರಿಭಕ್ತಿಯುಂಟಾಗಿರುವುದರಲ್ಲಿ ಸಂದೇಹವೇನೂ ಇಲ್ಲವೆಂದು ಅನುಗ್ರಹಿಸಿ, ||೭೦|| ಸ್ವಲ್ಪ ಹೊತ್ತು ಕಣ್ಣುಮುಚ್ಚಿಕೊಂಡು ಧ್ಯಾನವಂ ಮಾಡಲು ತನ್ನೆದುರಿಗೆ ಬಂದು ನಿಂತ ವೈಷ್ಣವಶಕ್ತಿಯನ್ನು

ದುವೈಷ್ಣವಶಕ್ತಿಬಳಸಿದಾಯುಧಜಾಲದಿಂಪರೆಸಿಕೊಟ್ಟುಬಳಿಕ ‖ ಇಂದುಹಾಸನಮಸ್ತಕದಮೇಲೆನಿಜಕರವ | ನೊಂದಿಸಿ ತದೀಯಮಂತ್ರೋಪದೇಶಂಗೈದ | ಳಂದುಕರ್ಣದೊಳಾನತಪ್ರೀತೆಗಿರಿಜಾತೆವಿಖ್ಯಾತೆಲೋಕಮಾತೆ ‖ ೭೧ ‖ ತಾಯೆಪಾರ್ವತಿ ಪರಮಕಲ್ಯಾಣಿಶಂಕರ | ಪ್ರಿಯೆಸರ್ವೇಶ್ವರಿಜಗನ್ಮಾತೆಸನ್ನುತ | ಚ್ಛಾಯೆಸಾವಿತ್ರಿಶಾಂದೆಸಕಲಶಕ್ತಿರೂಪಿಣಿಕಾಳಿಕಾತ್ಯಾಯನಿ ‖ ಶ್ರೀಯೆವೈಷ್ಣವಿವರದೆಚಂಡಿಚಾಮುಂಡಿನಿರ | ಪಾಯೆನಿಗಮಾಗಮಾರ್ಚಿತೆಮಂತ್ರಮಯೆಮಹಾ | ಮಾಯೆಕ್ಷಿಂಪುದೆಂದು ಕೈಮುಗಿದುಚಂದ್ರಹಾಸಂಬೇಡಿಕೊಳುತಿರ್ದನು‖೭೨‖ ಹರಿಯವಕ್ಷಸ್ಥಳವನಜನವದನಾಬ್ಜಮಂ | ಗಿರಿಶನಕಳೇಬರಾರ್ಧವನಿಂಬು ಗೊಂಡೆಸೆವ | ಪರಮಕಲ್ಯಾಣಿಕಾಲತ್ರಯದುಪಾಸ್ತಿಗಧಿದೇವಿಗಾಯತ್ರಿವರದೆ ‖ ಗರುಡವಾಹನೆಹಂಸಗಮನೆವೃಷಭಾರೂಢೆ |

ಆಯುಧಜಾಲದಿಂ-ಆಯುಧಂಗಳ ಸಮುದಾಯದಿಂದ, ಬಳಸಿದ_ಆವರಿಸಿಕೊಂಡಿರತಕ್ಕ, ಬಂದು_ಅನಿರ್ವಾಚ್ಯವಾದ, ವೈಷ್ಣವ ಶಕ್ತಿ_ವಿಷ್ಣುಸಂಬಂಧವಾದ ಶಕ್ತಿಯು, ಆಕ್ಷಣದೊಳು_ಒಡನೆಯೇ, ತಲೆದೋರಿತು_ಕಾಣಬಂದಿತು. ಬಳಿಕ_ಆ ಮೇಲೆ, ಪರಸಿ ಕೊಟ್ಟು-ಆಶೀರ್ವಾದವಂಮಾಡಿ, ನಿಜ_ತನ್ನದಾದ, ಕರವನು - ಕೈಯನ್ನು, ಇಂದುಹಾಸನಮಸ್ತಕದೊಳು - ಚಂದ್ರಹಾಸನ ತಲೆಯ ಮೇಲ್ಗಡೆ, ಒಂದಿಸಿ_ಇಟ್ಟವಳಾಗಿ, ಆನತ_ತನ್ನನ್ನ ನಂಬಿದವರಲ್ಲಿ, ಪ್ರೀತಿ-ವಿಶ್ವಾಸವುಳ್ಳ, ವಿಖ್ಯಾತೆ_ಹೆಸರುವಾಸಿಯಾ ಗಿರತಕ್ಕ, ಲೋಕಮಾತೆ - ಲೋಕಜನನಿಯಾದ, ಗಿರಿಜಾತೆ – ಪರ್ವತರಾಜನ ಕುವರಿಯಾದ ಗೌರೀದೇವಿಯು, ಕರ್ಣದೊಳ್_ ಇಂದುಹಾಸನ ಕಿವಿಯೊಳಗೆ, ಅಂದು - ಆ ಕಾಲದಲ್ಲಿ, ತದೀಯ – ವಿಷ್ಣುಶಕ್ತಿಯ, ಮಂತ್ರ - ಮಂತ್ರವನ್ನು, ಉಪದೇಶಂ ಗೈದಳು – ಉಪದೇಶ ಮಾಡಿದಳು. ‖೭೧‖

ಟೀ‖ (ಈ ಪದ್ಯದಲ್ಲಿ ಪಾರ್ವತಿಯು ಸರ್ವಶಕ್ತಳೆಂದೂ, ಇಂದುಹಾಸನಿಗೆ ತಾನು ಶಿವಶಕ್ತಿಯೂ ವಿಷ್ಣುಭಕ್ತಿಯೂ ಆಗಿರುವಳೆಂದೂ, ತನ್ನ ಶಕ್ತಿಯನ್ನು ಪಾರ್ವತಿಯು ತೋರ್ಪಡಿಸಿದಂತೆ ಬರೆದಿರುವುದು).

ಟೀ‖ ಪಾರ್ವತಿ_ಪರ್ವತರಾಜನಾದ ಹಿಮವಂತನ ಕುವರಿಯೇ, ಪರಮ - ಶ್ರೇಷ್ಠವಾದ, ಕಲ್ಯಾಣಿ – ಮಂಗಳಗಳ ನ್ನುಂಟುಮಾಡತಕ್ಕವಳೆ, ಶಂಕರ-ಪರಮೇಶ್ವರನಿಗೆ, ಪ್ರಿಯೆ – ಹಿತಳಾದವಳೆ, ಸರ್ವ-ಎಲ್ಲಾ ಲೋಕಕ್ಕೂ, ಈಶ್ವರೀ – ಕಾರಣ ಭೂತಳೇ, ಸಾವಿತ್ರಿ-ಬ್ರಹ್ಮತೇಜಸ್ಸನ್ನುಂಟುಮಾಡತಕ್ಕ ತಾಯಿಯೇ, ಶಾಂದೆ_ವಾಣಿಯೇ, ಸಕಲಶಕ್ತಿರೂಪಿಣೀ – ಸರ್ವಶಕ್ತ ಳಾದವಳೇ, ಕಾಳಿ_ದುಷ್ಟರಾದ ಮಧುಕೈಟಭರೆಂಬ ರಕ್ಕಸರ ನಾಶಕ್ಕೆ ಕಾರಣಳಾದವಳೇ, ಕಾತ್ಯಾಯನಿ-ಕತ್ಯಯನನೆನ್ನತಕ್ಕ ದಕ್ಷನ ಸುತೆಯೇ. ಶ್ರೀಯೆ_ರಮಾಸ್ವರೂಪವಾದವಳೇ, ವೈಷ್ಣವಿ-ವಿಷ್ಣುಶಕ್ತಿಯಾಗಿರುವಳೆ, ವರದೆ_ ಇಷ್ಟಸಿದ್ಧಿಯಂ ಗೈಯ್ಯು ವಳೆ, ಚಂಡಿ – ಚಂಡನನ್ನು ಸಂಹರಿಸಿದವಳೇ, ಚಾಮುಂಡಿ – ಮುಂಡನನ್ನು ಯಮಲೋಕಕ್ಕೆ ಕಳುಹಿಸಿದವಳೇ, ನಿರಪಾಯೆ_ ನಾಶರಹಿತಳೆ, ನಿಗಮ-ವೇದಗಳಲ್ಲಿಯೂ, ಆಗಮ_ಶಾಸ್ತ್ರಗಳೊಳಗೂ, ಅರ್ಚಿತೆ_ಪೂಜೆಮಾಡಿಸಿಕೊಳ್ಳತಕ್ಕವಳೇ, ಮಂತ್ರಮಯೆ_ ಮಂತ್ರಾಕ್ಷರರೂಪಿಣಿ, ಮಹಾಮಾಯೆ_ಆದಿಶಕ್ತಿಸ್ವರೂಪಳಾದವಳೆ, ತಾಯೆ_ಎಲೌ ದುರ್ಗಿಯೇ, ರಕ್ಷಿಪುದು-ಕಾಪಾಡಬೇಕು, ಎಂದು_ಎಂಬತೆರನಾಗಿ, ಅಂದು_ಆ ಕಾಲದಲ್ಲಿ, ಚಂದ್ರಹಾಸಂ_ಇಂದುಹಾಸನು, ಬೇಡಿಕೊಳುತ_ಪ್ರಾರ್ಥನೆಯಂ ಮಾಡುತ್ತ, ಇರ್ದನು_ಇದ್ದವನಾದನು. ‖೭೨‖

ಟೀ‖ ಹರಿಯ-ಶ್ರೀಮನ್ನಾರಾಯಣಮೂರ್ತಿಯ, ವಕ್ಷಸ್ಥಳವನು_ಹೃದಯದ ಭಾಗವನ್ನೂ, ಅಜನ_ಬ್ರಹ್ಮದೇವನ, ವದನಾಬ್ಜಮಂ-ಮುಖವೆನ್ನುವ ತಾವರೆಯನ್ನೂ, ಗಿರಿಶನ-ಪರಮೇಶ್ವರನ, ಕಳೇಬರ_ದೇಹದ, ಅರ್ಧವನು-ಅರ್ಧ ಭಾಗವನ್ನೂ, ಇಂಬುಗೊಂಡು_ಸೇರಿದವಳಾಗಿ, ಎಸೆವ_ಹೊಳೆಯುತ್ತಲಿರುವ, ಪರಮ_ಶ್ರೇಷ್ಠವಾದ, ಕಲ್ಯಾಣಿ_ಕಲ್ಯಾಣಗುಣ ವಿಶಿಷ್ಟಳಾದ, ಪಾರ್ವತಿಯೇ, ಕಾಲತ್ರಯ-ತ್ರಿಕಾಲದಲ್ಲಿಯೂ ಮಾಡಬೇಕಾದ, ಉಪಾಸ್ತಿಗೆ_ಕರ್ಮಗಳಿಗೆಲ್ಲಾ, ಅಧಿದೇವಿ_ಮುಖ್ಯಳಾದವಳೇ, ಗಾಯತ್ರಿ_ಗಾಯತ್ರೀಸ್ವರೂಪಳೇ, ವರದೆ_ವರವನ್ನು ಕೊಡತಕ್ಕವಳೆ, ಗರುಡವಾಹನೆ_ಗರುಡಾರೂಢನಾದ ಶ್ರೀ ಮಹಾವಿಷ್ಣು ಶಕ್ತಿಯನ್ನುಂಟಾಗಿರತಕ್ಕವಳೇ, ಹಂಸಗಮನೆ - ಹಂಸಾರೂಢನಾದ ಬ್ರಹ್ಮದೇವನ ರಾಣಿಯಾದ ಶಾರದೆಯ ಶಕ್ತಿಯನ್ನೊಳ

ನೋಡಿ ಪುನಃ ಕಣ್ತೆರೆದು, ತನ್ನ ಕೈಯ್ಯನ್ನು ಇಂದುಹಾಸನ ತಲೆಯಮೇಲಿಟ್ಟು ಆ ಚಂದ್ರಹಾಸನ ಕಿವಿಯೊಳಗೆ ವಿಷ್ಣುಭಕ್ತಿ ದಾಯಕವಾದ ಮಂತ್ರೋಪದೇಶವನ್ನು ಮಾಡಿದಳು. ‖ ೭೧ ‖ ಆಗ ಇಂದುಹಾಸನು, ಹೇ ಪಾರ್ವತೀ, ಲೋಕಮಾತೆ, ಶಿವ ಶಕ್ತಿಯೇ, ವಿಷ್ಣುರೂಪಿಣೀ, ಚಂಡಿಚಾಮುಂಡೀ, ಗಿರಿಜಾತೇ, ಶಂಕರಾರ್ಧ ಶರೀರಿಣೀ, ಇಷ್ಟಾರ್ಥದಾಯಕೀ, ಆರ್ತತ್ರಾಣ ಪರಾಯಣೇ, ಭಕ್ತರಕ್ಷಣ ಧುರೀಣೇ, ದುರ್ಗೀ, ಹರಿಹೃದಯವಾಸಿನಿ ! ಬ್ರಹ್ಮವದನಸದನೆ ! ಗಿರಿಶನರ್ಧಾಂಗಿ, ಕಾಲತ್ರಯೋ ಪಾಸ್ಯೆ, ಗಾಯತ್ರಿ, ಸಾವಿತ್ರಿ, ಸರಸ್ವತಿ! ಗರುಡ, ಹಂಸ, ವೃಷಭಗಮನೆ! ಸರ್ವಫಲಪ್ರದೆ! ಪಾಪಹಾರಿಣಿ! ಎಂದು ನಾನಾ ಪ್ರಕಾರವಾಗಿ ದೇವಿಯನ್ನು ಸ್ತೋತ್ರಮಾಡುತ್ತಾ ನಿಂತಿರುವಾಗ ‖೭೨-೭೩‖ ಆಕಾಶದಲ್ಲಿ ದೇವದುಂದುಭಿಗಳು ಮೊಳಗಿ

ನಿರುಪಮುಫಲಪ್ರದಾಯಿನಿಪುಣ್ಯಮಯೆಸಕಲ| ದುರಿತಹರೆತನ್ನನುದ್ಧರಿಸೆಂದುಚಂದ್ರಹಾಸಂಬೇಡಿಕೊಳುತಿರ್ದನು ||೭೩|| ಮೊಳಗಿದುವುದೇವದುಂದುಭಿಗಳಂತಾಗಪೂಮಳೆಗರೆದುದಭ್ರದೊಳ್ಕೊಂಡಾಡಿತಮರತತಿ | ಬಳಿಕಶಾಂಭವಿಮಾಯವಾದಳಸುಪಸರಿಸಿತು ಮದನಮಂತ್ರಿಗಳೊಡಲೊಳು || ಬಲರೂಪಕಾಂತಿಗಳ್ಮುನ್ನಿನಂದದೊಳೆಸೆಯೆಮಲಗಿದವರೇಳ್ವಂತೆಕಣ್ದೆರೆದುಕುಳ್ಳಿರ್ದ| ರೊಲವಿನಿಂಚಂದ್ರಹಾಸಂಮಾವನಡಿಗೆಮಣಿದಪ್ಪಿದಂಮೈದುನನನು || ೭೪ || ಭೂವಲಯಕಿದುಪೊಸತುಮರಣಮಾದೊಡೆಮತ್ತೆ ಜೀವಮಂಬರಿಸಿದವರುಂಟೆನಿನ್ನವೋಲೆಂದು | ಕೈವಾರಿಸುವನಿಖಿಳಪೌರಜನಪರಿಜನಕೆಚಂದ್ರಹಾಸಂಮುದದೊಳು || ಕಾವರಾರ್ಕೊಲ್ವರಾರಳಿವರಾರುಳಿವರಾ | ರ್ಭಾವಿಪೊಡೆವಿಷ್ಣುಮಾಯಾಮಯಮಿದೆಂದರಿದು | ನೀವೆಲ್ಲರುಂಕೃಷ್ಣಭಜನೆಗೈದಪುದೆಂದುಸಾರಿದಂಬೇಡಿಕೊಳುತ ||೭೫|| ಇಮ್ಮಡಿಸಿತುತ್ಸವಂಬಳಿಕನಿಬರೆಲ್ಲರುಂಸಮ್ಮಾನದಿಂದನಗರಪ್ರವೇಶಂಗೈದ| ದುಮ್ಮಳ

---

ಕೊಂಡಿರತಕ್ಕವಳೇ, ವೃಷಭಾರೂಢೆ-ಎತ್ತನ್ನೇ ವಾಹನವಾಗಿ ಉಳ್ಳ ಶಿವನ ಶಕ್ತಿಯಾದ ಗಿರಿಜೆಯೇ, ನಿರುಪಮ-ಅಸಾಧಾರಣವಾದ, ಫಲ-ಫಲಗಳನ್ನು, ಪ್ರದಾಯಿನಿ-ಕೊಡತಕ್ಕ, ಪುಣ್ಯಮಯೆ-ಪುಣ್ಯಸ್ವರೂಪಳೇ, ಸಕಲ-ಸರ್ವಪ್ರಕಾರವಾದ, ದುರಿತ-ದೋಷಗಳನ್ನೆಲ್ಲಾ, ಹರೆ-ನಾಶಗೊಳಿಸತಕ್ಕ ಪಾರ್ವತಿಯೇ, ತನ್ನನು-ನಿನ್ನ ಮರೆ ಬಿದ್ದಿರತಕ್ಕ ನನ್ನನ್ನು, ಉದ್ಧರಿಸು - ಸಲಹು, ಎಂದು-ಎಂಬತೆರನಾಗಿ, ಚಂದ್ರಹಾಸನು-ಇಂದುಹಾಸನು, ಬೇಡಿಕೊಳುತ, ಇರ್ದನು-ಇದ್ದವನಾದನು. ||೭೩||

ಟೀ|| ದೇವದುಂದುಭಿಗಳು - ಸುರರ ದುಂದುಭಿ ಎಂಬ ವಾದ್ಯಗಳು, ಮೊಳಗಿದವು - ಧ್ವನಿಗೈಯ್ಯಲ್ಪಟ್ಟವು, ಆಗ-ಆ ಕಾಲದಲ್ಲಿ, ಅಂತು-ಹಾಗೆಯೇ, ಪೂಮಳೆ-ಹೂವಿನಮಳೆಯು, ಕರೆದುದು- ಸುರಿಸಲ್ಪಟ್ಟಿತು, ಅಭ್ರದೊಳ್-ಅಂತರಿಕ್ಷದಲ್ಲಿ, ಅಮರತತಿ-ಸುರರವಿಂಡು, ಕೊಂಡಾಡಿತು-ಹೊಗಳಿತು, ಶಾಂಭವಿ-ಗಿರಿಜೆಯಾದರೊ, ಬಳಿಕ-ಆಮೇಲೆ. ಮಾಯವಾದಳು-ಅದೃಶ್ಯಳಾದಳು. ಅಸು-ಹರಣವು, ಮದನಮಂತ್ರಿಗಳ-ಮದನ ದುಷ್ಟಬುದ್ಧಿಯೆಂಬೀರ್ವರ, ಒಡಲೊಳು-ದೇಹದಲ್ಲಿ, ಪಸರಿಸಿತು-ಹರಡಿತು, ಬಲ-ಬಲವು, ರೂಪು-ಆಕಾರವು, ಕಾಂತಿ-ಕಳೆಯು, ಮುನ್ನಿನಂದದೊಳು-ಮೊದಲಿನ ಹಾಗೆಯೇ, ಎಸೆಯೆ-ಕಾಣಬರಲು, ಒಲವಿನಿಂ-ಅಕ್ಕರೆಯಿಂದ, ಮಲಗಿದ್ದವರು-ನಿದ್ರೆಮಾಡುತ್ತಿದ್ದವರು, ಏಳ್ವಂತೆ-ಏಳುವರೀತಿಯಾಗಿ, ಕಣ್ದೆರೆದು-ಕಣ್ಣುಗಳನ್ನು ಬಿಟ್ಟುಕೊಂಡು, ಕುಳ್ಳಿರ್ದರು-ಕೂತುಕೊಂಡಿದ್ದರು, ಮಾವನ-ಮಾವನಾದ ದುಷ್ಟಬುದ್ಧಿ ಎಂಬ ಮಂತ್ರಿಯ, ಅಡಿಗೆ-ಕಾಲುಗಳಿಗೆ, ಚಂದ್ರಹಾಸನು- ಇಂದುಹಾಸನು, ಮಣಿದು-ವಂದಿಸಿ, ಮೈದುನನನು- ಭಾವಮೈದನಾದ ಮದನನನ್ನು, ಅಪ್ಪಿದನು-ತಬ್ಬಿಕೊಂಡನು. ||೭೪||

ಟೀ|| ಮರಣಮಾದೊಡೆ-ಸತ್ತುಹೋದರೆ, ನಿನ್ನವೊಲ್-ನಿನ್ನ ಹಾಗೆ, ಮತ್ತೆ-ತಿರುಗಿ, ಜೀವಮಂ - ಹರಣವನ್ನು, ಬರಿಸಿದವರು-ಪಡೆದವರು, ಉಂಟೆ-ಇದ್ದಾರೆಯೇ, ಭೂವಲಯಂ-ಲೋಕದಲ್ಲಿ, ಇದು-ಈ ನಿನ್ನ ಅತ್ಯದ್ಭುತಕಾರ್ಯವು, ಪೊಸದು-ನವೀನವಾದದ್ದು, ಎಂದು-ಎಂಬತೆರನಾಗಿ, ಕೈವಾರಿಸುವ-ಹೊಗಳತಕ್ಕ, ನಿಖಿಳ-ಎಲ್ಲಾ, ಪೌರಜನ-ನಗರವಾಸಿಗಳಿಗೂ, ಪರಿಜನಕೆ-ಸೇವಕರಿಗೂ, ಚಂದ್ರಹಾಸನು-ಇಂದುಹಾಸನು, ಮುದದೊಳು-ಪ್ರೇಮದಿಂದ, ಕಾವರು-ಸಲಹುವರು, ಆರ್-ಯಾರು, ಕೊಲ್ವರು-ಕೊಲ್ಲತಕ್ಕವರು, ಆರ್-ಯಾರು, ಅಳಿವರು-ಮರಣವನ್ನೈದುವರು, ಆರ್-ಯಾರು, ಉಳಿವರು-ಮತ್ತೆ ಜೀವವನ್ನು ಬರಮಾಡುವರು, ಆರ್-ಯಾರು, ಭಾವಿಪೊಡೆ-ಆಲೋಚನೆಮಾಡಿದರೆ, ವಿಷ್ಣು-ಶ್ರೀ ಕೃಷ್ಣಪರಮಾತ್ಮನ, ಮಾಯಾಮಯಂ-ಮಾಯಾಸ್ವರೂಪವು. ಎಂದು-ಎಂಬತೆರನಾಗಿ, ಅರಿದು-ತಿಳಿದುಕೊಂಡು, ನೀವೆಲ್ಲರು-ನೀವುಗಳೆಲ್ಲ, ಕೃಷ್ಣಭಜನೆಗೈದಪುದು-ಶ್ರೀ ಕೃಷ್ಣನನ್ನು ಪೂಜಿಸಬೇಕು. ಎಂದು-ಎಂಬತೆರನಾಗಿ, ಬೇಡಿಕೊಳುತ-ವಿನಯದಿಂದ ಕೇಳಿಕೊಳ್ಳುತ್ತ, ಸಾರಿದಂ-ಸರ್ವರಿಗೂ ತಿಳಿಯಪಡಿಸಿದನು. ||೭೫||

---

ದವು. ದೇವತೆಗಳು ಇಂದುಹಾಸನ ಮೇಲೆ ಪುಷ್ಪವೃಷ್ಟಿಯನ್ನು ಕರೆಸಿದರು. ದೇವತೆಗಳೇ ಮೊದಲಾದವರೆಲ್ಲಾ ಇಂದುಹಾಸನನ್ನು ಸ್ತುತಿಸುತ್ತಲಿರುವಾಗ ಪಾರ್ವತಿಯು ಅಂತರ್ಧಾನಳಾದಳು. ಆ ಬಳಿಕ ಮದನ ದುಷ್ಟಬುದ್ಧಿಗಳು ಮೆಲ್ಲಮೆಲ್ಲನೆ ಚೇತರಿಸಿಕೊಂಡು ಮಲಗಿದ್ದವರು ಮೇಲಕ್ಕೇಳುವಂತೆ ಎದ್ದು ಕುಳಿತುಕೊಳ್ಳಲು ಚಂದ್ರಹಾಸನು ಮಾವನಾದ ದುಷ್ಟಬುದ್ಧಿಯ ಕಾಲುಗಳಿಗೆರಗಿದ ಮೇಲೆ ತನ್ನ ಮೈದುನನಾದ ಮದನನನ್ನು ಸಂತೋಷದಿಂದ ಅಪ್ಪಿಕೊಂಡನು.||೭೪||ಇದನ್ನೆಲ್ಲಾ ನೋಡುತ್ತಲಿದ್ದ ಇಂದುಹಾಸನ ಪರಿವಾರದವರೂ ಬಂಧುಗಳೂ ಸಹ ಚಂದ್ರಹಾಸನ ಮಹಿಮೆಯನ್ನು ಕೊಂಡಾಡುತ್ತ ಆ ಶಶಿಹಾಸನನ್ನು ಕುರಿತು ಲೋಕದಲ್ಲಿ ಸತ್ತವರನ್ನು ಬದುಕಿಸಿದವರು ನಿನ್ನಂತೆ ಮತ್ತೆ ಯಾರಿರುವರೆಂದು ನುಡಿಯುತ್ತಿರುವಾಗ ಚಂದ್ರಹಾಸನು ತನ್ನ ಸಕಲ ಬಂಧುಗಳನ್ನೂ ಪರಿವಾರದವರನ್ನೂ ಸಂತೈಸುತ್ತ, ಲೋಕದಲ್ಲಿ ಕೊಲ್ಲುವರು, ಕಾಪಾಡತಕ್ಕವರು, ಬದುಕಿಸುವರು ಸಹ ಯಾರೂ ಇಲ್ಲವು. ಇದಕ್ಕೆಲ್ಲಾ ಶ್ರೀ ಕೃಷ್ಣಪರಮಾತ್ಮನೇ ಕಾರಣನಾಗಿರುವುವರಿಂದ ನೀವೆಲ್ಲಗೂ ಹರಿಭಕ್ತಿ

ಸುತಿರ್ದಂ ಕುಳಿಂದಕಂ ಪಾರ್ಥ ಕೇಳಾ ಚಂದನಾವತಿಯೊಳು || ಸಮ್ಮತದೊಳಾತನಂ ಕರೆಸಿಕೊಂಡಾರಾಜ್ಯ | ಮಂಮಹಾವಿಭವ
ದಿಂವರಿಸಿದಂ ಚಂದ್ರಹಾ | ಸಂ ಮುದಾನ್ವಿತನಾಗಿ ವಿಷಯೆ ಚಂಪಕಮಾಲಿನಿಯರ ಸಂಭೋಗದಿಂದ ||೭೬|| ನಂದನಂ ಜನಿಸಿದಂ ಬಳಿಕ
ವಿಷಯಾಗರ್ಭ | ದಿಂದ ಮಕರಧ್ವಜಾಖ್ಯಂ ಕೂಡೆ ಸೌಭಾಗ್ಯ | ದಿಂದ ಚಂಪಕಮಾಲಿನಿಯ ಬಸುರೊಳುದಿಸಿದಂ ಪದ್ಮಾಕ್ಷನೆಂಬ
ಸೂನು || ತಂದೆಗಿಮ್ಮಡಿ ಪರಾಕ್ರಮಿಗಳಾದರ್ಧರೆಯೊ | ಳಿಂದುಹಾಸಂಗೆ ಸಮನಾದ ದೊರೆಯಿಲ್ಲಾದು | ದಿಂದುವರೆಗಾತಂಗೆ
ಮುನ್ನೂರು ವರುಷವಿರ್ದನೀಗ ವೃದ್ಧನಾಗಿ || ೭೭ || ಬುದ್ಧಿಪೂರ್ವಕಮಿಲ್ಲದಿಹ ಬಾಲಂಗೆ ಪರಿ | ಶುದ್ಧ ಸಾಲಗ್ರಾಮಶಿಲೆಯ ಸಂ
ಸರ್ಗದಿಂ | ದದ್ಭುತದ ಸಾಮ್ರಾಜ್ಯಪದವಿ ಕೈಸಾರ್ದುದೆನಲಿನ್ನು ಬೇಕೆಂದು ಬಯಸಿ || ಶ್ರದ್ಧೆಯಿಂ ಪ್ರತಿದಿನದೊಳರ್ಚಿಸುವ ನರ

ಟೀ|| ಬಳಿಕ-ಆಮೇಲೆ, ಉತ್ಸವಂ-ಸಂತಸವು, ಇಮ್ಮಡಿಸಿತು-ಹೆಚ್ಚಿತು, ಸುಮ್ಮಾನದಿಂದ-ಅತ್ಯಾನಂದದಿಂದ, ಅನಿಬರೆಲ್ಲರುಂ-ಅಷ್ಟು ಮಂದಿಯೂ, ನಗರಪ್ರವೇಶಂ ಗೈದರು-ಕುಂತಳ ನಗರಕ್ಕೆ ಹೋದರು, ಪಾರ್ಥ-ಎಲೈ ಫಲುಗುಣನೆ, ಕೇಳು-ಲಾಲಿಸು, ಕುಳಿಂದಕಂ-ಮೇಧಾವಿಯಾದರೊ, ಆ ಚಂದನಾವತಿಯೊಳು- ಆ ಚಂದನಾವತಿಯೊಳಗೆ, ಉಮ್ಮಳಿಸುತ-ದುಃಖವನ್ನನುಭವಿಸುತ್ತ, ಇರ್ದಂ-ಇದ್ದವನಾದನು, ಚಂದ್ರಹಾಸನು-ಇಂದುಹಾಸನಾದರೊ, ಆತನಂ-ಆ ಚಂದನಾವತಿಯ ಅರಸನ್ನು, ಸಮ್ಮತದೊಳು-ಒಡಂಬಡಿಕೆಯಿಂದ, ಕರಸಿಕೊಂಡು-ಕುಂತಳನಗರಕ್ಕೆ ಕರಸಿದವನಾಗಿ, ಮುದಾನ್ವಿತನಾಗಿ-ಆನಂದದಿಂದ ಕೂಡಿ, ವಿಷಯೆ ಚಂಪಕಮಾಲಿನಿಯರ ಸಂಭೋಗದಿಂದ-ವಿಷಯೆ ಚಂಪಕಮಾಲಿನಿಯರೊಂದಿಗೆ ಕ್ರೀಡಿಸುವಿಕೆಯಿಂದ, ವಹಿಸಿದಂ-ರಾಜ್ಯಭಾರವನ್ನು ಪಡೆದು ಸುಖವಾಗಿದ್ದನು ||೭೬||

ಟೀ|| ಬಳಿಕ-ಅನಂತರ, ಮಕರಧ್ವಜ-ಮಕರಧ್ವಜನೆಂಬ, ಆಖ್ಯಂ-ನಾಮಧೇಯದಿಂದ ಕೂಡಿದ, ನಂದನಂ-ಕುವರನು, ವಿಷಯಾಗರ್ಭದಿಂದ-ವಿಷಯೆಯೆಂಬ ದುಷ್ಟಬುದ್ಧಿಯ ಕುವರಿಯ ಹೊಟ್ಟೆಯಿಂದ, ಜನಿಸಿದನು-ಉದ್ಭವಿಸಿದನು, ಕೂಡೆ-ಒಡನೆಯೇ, ಚಂಪಕಮಾಲಿನಿಯ-ಚಂಪಕಮಾಲಿನಿಯೆಂಬ ಕುಂತಳ ರಾಜನ ತನುಜೆಯ, ಬಸುರೊಳು-ಹೊಟ್ಟೆಯಲ್ಲಿ. ಪದ್ಮಾಕ್ಷನೆಂಬ-ಪದ್ಮಾಕ್ಷನೆನ್ನುವ, ಸೂನು-ಕುವರನು, ಸೌಭಾಗ್ಯದಿಂದ-ಐಸಿರಿಯಿಂದ, ಉದಿಸಿದಂ-ಜನಿಸಿದನು, ಧರೆಯೊಳಗೆ-ಲೋಕದಲ್ಲಿ, ತಂದೆಗೆ-ತಂದೆಗಿಂತಲೂ, ಇಮ್ಮಡಿ-ಎರಡರಷ್ಟಾದ, ಪರಾಕ್ರಮಿಗಳು-ಸಾಹಸಿಗಳು, ಆದರು-ಆಗಿ ಬಿಟ್ಟರು, ಇಂದುಹಾಸಂಗೆ-ಶಶಿಹಾಸನೆಂಬಾತನಿಗೆ, ಸಮನಾದ-ಹೋಲಿಕೆಯಾಗಿರತಕ್ಕ, ದೊರೆ-ಅರಸು, ಇಲ್ಲ-ಇಲ್ಲವು, ಆತಂಗೆ-ಆ ಇಂದುಹಾಸನಿಗೆ, ಇದುವರೆಗೆ-ಈಗ್ಗೆ, ಮುನ್ನೂರು ವರ್ಷಂ ಆದುದು-ಮುನ್ನೂರು ವರ್ಷ ವಯಸ್ಸಾಯಿತು, ಈಗ-ಈಗಲಾದರೊ, ವೃದ್ಧನಾಗಿ-ಬಹಳ ವಯಸ್ಸಾದವನಾಗಿ, ಇರ್ಪನು-ಇದ್ದಾನೆ. ||೭೭||

ಟೀ|| ಆ ನಾರದಂ-ಪ್ರಸಿದ್ಧನಾದ ನಾರದ ಮಹರ್ಷಿಯು, ಫಲುಗುಣಂಗೆ-ಫಾರ್ಥನನ್ನು ಕುರಿತು, ಬುದ್ಧಿಪೂರ್ವಕಂ ಇಲ್ಲದೆ-ಸಾಲಗ್ರಾಮವೆಂಬುದು ತಿಳಿಯದಿದ್ದರೂ, ಪರಿಶುದ್ಧ-ಪವಿತ್ರವಾದ, ಸಾಲಗ್ರಾಮಶಿಲೆಯ-ಸಾಲಗ್ರಾಮವೆಂಬ ಕಲ್ಲಿನ, ಸಂಸರ್ಗದಿಂದ-ಸಹವಾಸದಿಂದ, ಆ ಬಾಲಕಂಗೆ-ಹಸುಳೆಯಾದ ಇಂದುಹಾಸನಿಗೆ, ಸಾಮ್ರಾಜ್ಯಪದವಿ-ಚಕ್ರವರ್ತಿತ್ವವು, ಕೈಸಾರ್ದುದು-ಪ್ರಾಪ್ತವಾಯಿತು, ಎನಲು-ಹೀಗೆಂದು ಹೇಳಿದ ಮೇಲೆ, ಇನ್ನು-ಇನ್ನು ಮುಂದೆ, ಬೇಕೆಂದು-ಮನಃಪೂರ್ವಕವಾಗಿ, ಬಯಸಿ-ಪೂಜೆಮಾಡಲು ಇಚ್ಛಿಸಿ, ಶ್ರದ್ಧೆಯಿಂ-ಭಕ್ತ್ಯತಿಶಯದಿಂದ, ಪ್ರತಿದಿನದೊಳು-ನಿತ್ಯವೂ, ಅರ್ಚಿಸುವ-ಪೂಜೆ ಮಾಡತಕ್ಕ. ನರನು-ಮಾನವನು, ಆವ-ಇನ್ನೆಂಥ, ಸಿದ್ಧಿಯಂ-ಇಷ್ಟಾರ್ಥವನ್ನು, ಪಡದಪನೊ- ಪಡೆಯುತ್ತಾನೆಯೊ, ಆದರ-ಆ ಆಸ್ತಿಕ್ಯ

ಯುಳ್ಳವರಾಗಿರಿ, ಇದರಿಂದ ನಿಮಗೆ ಅಪಾರವಾದ ಸುಖ ಸಂತೋಷಗಳು ಲಭಿಸುವವು. ಇದರಲ್ಲೇನೂ ಅನುಮಾನವೇ ಇಲ್ಲವೆಂದು ನುಡಿಯುತ್ತಿರುವ || ೭೫ || ಇಂದುಹಾಸನ ನುಡಿಗಳನ್ನು ಕೇಳಿದವರಿಗೆಲ್ಲಾ ಅತ್ಯಾನಂದವುಂಟಾಯಿತು. ಅನಂತರ ಸಂತೋಷದಿಂದ ಎಲ್ಲರೂ ಪಟ್ಟಣಕ್ಕೆ ಹೋಗಿ ಸುಖವಾಗಿರುತ್ತಿದ್ದರು. ಕೇಳೈ ಅರ್ಜುನ, ಆ ಬಳಿಕ ಚಂದ್ರಹಾಸನು ಚಂದನಾವತಿಯಿಂದ ತನ್ನ ಮಾತಾ ಪಿತೃಗಳಾದ ಮೇಧಾವಿನೀ ಕುಳಿಂದರನ್ನು ಕರೆಸಿಕೊಂಡು ಚಂಪಕಮಾಲಿನಿ, ವಿಷಯೆ ಎಂಬ ಸತೀರತ್ನಗಳಿಂದ ಕೂಡಿ ಅತ್ಯಧಿಕವಾದ ಸುಖಭೋಗಂಗಳನ್ನನುಭವಿಸುತ್ತಾ ಕುಂತಳ ರಾಜ್ಯವನ್ನೂ ಅಲ್ಲಿನ ಪ್ರಜೆಗಳನ್ನೂ ಪರಿಪಾಲಿಸುತ್ತಲಿದ್ದನು. || ೭೬ || ಹೀಗೆ ಕೆಲವು ದಿನಗಳು ಕಳೆದ ಬಳಿಕ ವಿಷಯೆಯೆಂಬ ದುಷ್ಟಬುದ್ಧಿಯ ಮಗಳು, ಮಕರಧ್ವಜನೆಂಬ ಮಗನನ್ನು ಹೆತ್ತಳು. ಚಂಪಕಮಾಲಿನಿ ಎಂಬ ಕುಂತಲಾಧೀಶನ ಸುತೆಯು ಪದ್ಮಾಕ್ಷನೆಂಬ ಸುತನನ್ನು ಪಡೆದಳು. ಇವರೀರ್ವರೂ ತಂದೆಗಿಂತಲೂ ಮಹಾಪರಾಕ್ರಮಿಗಳಾಗಿದಾರೆ. ಲೋಕದಲ್ಲಿ ಈ ಚಂದ್ರಹಾಸನಿಗೆ ಸಮನಾದ ದೊರೆಯೇ ಇಲ್ಲವು. ಈಗ ಈ ಚಂದ್ರಹಾಸನಿಗೆ ಮುನ್ನೂರುವರ್ಷ ವಯಸ್ಸಾಗಿರುವುದು. || ೭೭ || ಆಕಸ್ಮಾತ್ತಾಗಿ ಸಿಕ್ಕಿದ ಸಾಲಗ್ರಾಮವನ್ನು ಭಕ್ತಿಯಿಂದ ಪೂಜಿಸಿದ ಮಾತ್ರಕ್ಕೆ ಈ ಇಂದುಹಾಸನಿಗೆ ಇಂತಹ ಅಸಾಧಾರಣವಾದ ರಾಜ್ಯಪದ

## ಮೂವತ್ತೊಂದನೆಯ ಸಂಧಿ.

ನಾವ | ಸಿದ್ಧಿಯಂಪಡೆವಪನೂತನಗದರಪುಣ್ಯದಭಿ | ವೃದ್ಧಿಯಂಬಣ್ಣಿಸುವೊಡರಿವೆಂದುಫಲುಗುಣಂಗಾನಾರದಂಪೇಳ್ದನು ||೭೮||
ಹರಿಯಸಾಲಗ್ರಾಮಶಿಲೆಯಮಹಿಮೆಗಳನಾ | ದರದಿಂದವಿಸ್ತರಿಸಿಚಂದ್ರಹಾಸನಪೂರ್ವ | ಚರಿತಮಂಪೇಳ್ದುವಂದನೆಗೊಂಡು
ದೇವಮುನಿಸರಿದನಂಬರಪಥದೊಳು || ವರಭಾಗವತಶಿರೋಮಣಿಯದರುಶನದಿಂದ | ಪರಮವೈಷ್ಣವಸಂಗತಿಯನಾಲಿಸಿದೆ
ನೆಂದು | ಸುರನಗರದೊಡೆಯಲಕ್ಷ್ಮೀಪತಿಯಮೈದುನಂಪರಿತೋಷಮಂತಾಳ್ದನು ||೭೯||

ಸಂಧಿ ೩೧ ಕ್ಕೆ ಪದ್ಯ ೧೭೫ಂಕ್ಕಂ ಮಂಗಳಮಸ್ತು.

---

ಬುದ್ಧಿಯಿಂದುಂಟಾಗತಕ್ಕ, ಪುಣ್ಯದ-ಮೇಲ್ಮೆಯ, ಅಭಿವೃದ್ಧಿಯಂ-ಏಳಿಗೆಯನ್ನು, ಬಣ್ಣಿಸುವೊಡೆ-ವಿಸ್ತರಿಸುವುದಕ್ಕೆ, ಎನಗೆ-ನನಿಗಾದರೊ, ಅರಿದು-ಅಸದಳವಾಗಿದೆ, ಎಂದು-ಎಂಬತೆರನಾಗಿ, ಪೇಳ್ದನು-ವಿವರಿಸಿದನು ||೭೮||

ಟೀ|| ದೇವಮುನಿ-ಸುರಗುರುವು, ಹರಿಯ-ಶ್ರೀಮನ್ನಾರಾಯಣನ, ಸಾಲಗ್ರಾಮ ಶಿಲೆಯ-ಸಾಲಗ್ರಾಮವೆಂಬ ಕಲ್ಲಿನ, ಮಹಿಮೆಗಳನು-ಮಹಿಮೆಗಳನ್ನು, ಆದರದಿಂದ-ಅಕ್ಕರೆಯಿಂದ, ವಿಸ್ತರಿಸಿ-ಹೇಳಿ, ಚಂದ್ರಹಾಸನ-ಇಂದು ಹಾಸನ, ಪೂರ್ವ ಚರಿತಮಂ-ಪೂರ್ವದಲ್ಲಿ ನಡೆದ ಕಥೆಯನ್ನೆಲ್ಲಾ, ಪೇಳ್ದು-ವಿವರಿಸಿ, ವಂದನೆಗೊಂಡು-ನಮಸ್ಕಾರಗಳನ್ನು ಕೈಕೊಂಡವನಾಗಿ, ಅಂಬರ ಪಥದೊಳು-ಅಂತರಿಕ್ಷ ಮಾರ್ಗದಲ್ಲಿ, ಸರಿದನು-ನಡೆದನು, ಸುರ ನಗರದ-ದೇವನಗರದ, ಎರೆಯ-ಒಡೆಯನಾದ, ಲಕ್ಷ್ಮೀಪತಿಯ-ಇಂದಿರಾರಮಣನ, ಮೈದುನಂ-ಭಾವಮೈದುನನಾದ ಪಾರ್ಥನು, ವರ-ಉತ್ತಮನಾದ, ಭಾಗವತ ಶಿರೋಮಣಿಯ-ಇಂದುಹಾಸನೆಂಬ ಕೃಷ್ಣಸ್ವಾಮಿಯ ಭಕ್ತಾಗ್ರೇಸರನ, ಸಂಗತಿಯನು-ವೃತ್ತಾಂತವನ್ನು, ಆಲಿಸಿದೆನು-ಶ್ರವಣಮಾಡಿದೆನು, ಎಂದು-ಎಂಬ ತೆರನಾಗಿ, ಪರಿತೋಷಮಂ-ಆನಂದವನ್ನು, ತಾಳ್ದನು-ಪಡೆದನು. ||೭೯||

ಮೂವತ್ತೊಂದನೆಯ ಸಂಧಿಯು ಸಂಪೂರ್ಣವು.

---

ವಿಯೂ ಕೀರ್ತಿಯೂ, ದೃಢವಾದ ಹರಿಭಕ್ತಿಯೂ ಉಂಟಾಗಿರುವಾಗ ಬುದ್ಧಿಪೂರ್ವಕವಾಗಿ ಸದಾ ಶ್ರೀ ಕೃಷ್ಣನಾಮ ಸಂಕೀರ್ತನೆಯಂ ಮಾಡುವ ಮಹನೀಯರಿಗೆ ಇನ್ನೆಂತಹ ಪುಣ್ಯವು ದೊರಕುವುದೋ ನೀನೇ ಆಲೋಚಿಸು, || ೭೮ || ಲೋಕದಲ್ಲಿ ಯಾರು ವಿಷ್ಣು ಸಾಲಗ್ರಾಮ ಮಹಿಮೆಯನ್ನೂ, ಚಂದ್ರಹಾಸನ ಚರಿತ್ರೆಯನ್ನೂ ಕೇಳುವರೊ ಅಂತಹ ಜನರಿಗೆ ಅಪಾರವಾದ ಸುಖ ಸಾಮ್ರಾಜ್ಯಗಳುಂಟಾಗುವುದರಲ್ಲಿ ಲೇಶವೂ ಅನುಮಾನವಿಲ್ಲವೆಂದು ನಾರದಮುನಿಯು ಅರ್ಜುನನಿಗೆ ಹೇಳಿದನು. ಅನಂತರ ಎಲ್ಲರೂ ದೇವಮುನಿಗೆ ನಮಸ್ಕಾರವಂ ಮಾಡಲು ಅವರ ವಂದನೆಗಳಂ ಕೈಕೊಂಡು ಆಕಾಶಮಾರ್ಗದಲ್ಲಿ ಹೊರಟು ಹೋದನು. ಭಗವದ್ಭಕ್ತನಾದ ಇಂದುಹಾಸನ ಅಪಾರವಾದ ಮಹಿಮೆಯನ್ನು ಕೇಳಿ ಅರ್ಜುನನು ಅತ್ಯಾನಂದವುಳ್ಳವನಾಗಿದ್ದನೆಂಬಲ್ಲಿಗೆ,

ಟೀಕಾತಾತ್ಪರ್ಯ ಸಹಿತವಾದ ಜೈಮಿನಿಭಾರತದೊಳು ಮೂವತ್ತೊಂದನೆಯ ಸಂಧಿಯು
ಕಥಾಸಾರವು ಸಂಪೂರ್ಣವಾದುದು. ||೭೯||



## ಮೂವತ್ತೆರಡನೆಯ ಸಂಧಿ.

ಸೂಚನೆ || ವರಚಂದ್ರಹಾಸನಂ ಪ್ರೀತಿಯಿಂದೊಡಗೊಂಡು | ಶರನಿಧಿಯಮಧ್ಯದೋಳ್ಬಕದಾಲ್ಭ್ಯನಂಕಂಡು | ಮುರಳಿಕೃಷ್ಣಾರ್ಜುನರುಸಿಂಧುದೇಶದಮೇಲೆಗಜನಗರಿಗೈತಂದರು ||

ಕೇಳ್ದೈನರನಾಥಪಾರ್ಥಂಗೆನಾರದಂ | ಪೇಳ್ದವೃತ್ತಾಂತಮಂಬಳಿಕಸಂತೋಷಮಂ | ತಾಳ್ದುಕುಂತೀಸುತಂಚಂದ್ರಹಾಸನಪುರಕೆಮುಖಮಾಗಿನಡೆವುತಿರಲು || ಆಳ್ದೋರಿತಮತಮಗೆಭೂಪಾಲರೈದೆಕೆಂ | ಧೂಳ್ದೇವಲೋಕಮಂಕಿತ್ತಿತ್ತಿಕೊಂಡೊಯ್ದು | ದಾಳ್ದುದಿನ್ನೇನಂಬುಧಿಯೊಳವನಿತಳಮೆಂಬತೆರನಾಗಲಾಪದಹತಿಯೊಳು ||೧|| ಬರುತಿರ್ದುದರ್ಜುನನಸೈನಿಕಂಕುಂತಳನ | ಗರಿಗಾಗಿಜನಮೇಜಯಕ್ಷಿತಪಕೇಳಿತ್ತ | ನರನವಾಜಿಗಳೂರಪೊರವಳಯದುಪವನದನಡುವೆತಮ್ಮಿಚ್ಛೆಯಿಂದ || ತಿರುಗುತಿರೆಕಂಡವ

---

### ಮೂವತ್ತೆರಡನೆಯ ಸಂಧಿ ಪ್ರಾರಂಭವು.

ಸೂಚನೆ || ಕೃಷ್ಣಾರ್ಜುನರು-ನರನಾರಾಯಣರು, ಪ್ರೀತಿಯಿಂದ-ಪ್ರೇಮದಿಂದ, ವರ-ಉತ್ತಮವಾದ, ಚಂದ್ರಹಾಸನಂ-ಇಂದುಹಾಸನನ್ನು, ಒಡಗೊಂಡು-ಜೊತೆನಾಡಿಕೊಂಡು, ಬಕದಾಲ್ಭ್ಯನಂ-ಬಕದಾಲ್ಭ್ಯನೆಂಬ ಋಷಿಯನ್ನು, ಶರನಿಧಿಯ-ಸಾಗರದ, ಮಧ್ಯದೊಳ್-ಮಧ್ಯಪ್ರದೇಶದಲ್ಲಿ, ಕಂಡು-ಈಕ್ಷಿಸಿ, ಸಿಂಧುದೇಶದಮೇಲೆ-ಸಿಂಧು ನದಿಯಿಂದಾ ವೃತವಾಗಿರುವ ಜನಪದದ ಮೇಲೆ, ಗಜನಗರಿಗೆ-ವಾರಣಾವತ ಪುರಕ್ಕೆ, ಮುರಳಿ-ತಿರುಗಿ, ಐತಂದರು-ಬಂದು ಸೇರಿದರು ||

ಟೀ|| ಎಲೈನರನಾಥ – ಅಯ್ಯಾ ಜನಮೇಜಯನೆ, ಪಾರ್ಥಂಗೆ-ಫಲುಗುಣನೊಂದಿಗೆ, ನಾರದಂ-ಸುರಮುನಿಯು, ಪೇಳ್ದ-ತಿಳಿಸಿದ, ವೃತ್ತಾಂತಮಂ-ವಾರ್ತೆಯನ್ನು, ಕೇಳ್ದೆ-ಕೇಳಿದೆಯಷ್ಟೆ, ಬಳಿಕ-ಈರೀತಿಯಲ್ಲಿ ನಾರದರ ಉಪದೇಶವಾದನಂತರ, ಕುಂತೀಸುತಂ-ಫಲುಗುಣನು, ಸಂತೋಷಮಂತಾಳ್ದು-ಆನಂದವನ್ನೈದಿ, ಚಂದ್ರಹಾಸನ ಪುರಕೆ-ಇಂದುಹಾಸನು ರಾಜ್ಯಪರಿಪಾಲನೆಯಂ ಮಾಡುತ್ತಿರುವ ಕುಂತಳ ರಾಜ್ಯದ ಕಡೆಗೆ, ಮುಖಮಾಗಿ-ಎದುರಾಗಿ, ನಡೆವುತಿರಲು-ನಡೆಯುತ್ತಿರಲಾಗಿ, ಭೂಪಾಲರು-ಅರಸುಗಳು, ತಮತಮಗೆ-ತಮ್ಮ ತಮ್ಮಿಷ್ಟಕ್ಕೆ, ಆಳ್ದೋರಿ-ಅವರವರ ಸಾಹಸವನ್ನು ತೋರ್ಪಡಿಸಿ, ಐದೆ-ಹೊರಡಲಾಗಿ, ದೇವಲೋಕಮಂ-ಅನುರಾವತಿಯನ್ನು, ಕೆಂಧೂಳ್-ಕೆಂಪಗಿರುವ ಹುಡಿಮಣ್ಣು, ಕಿತ್ತು-ಕಿತ್ತುಕೊಂಡು, ಅವನಿತಳಂ-ಭೂಪ್ರದೇಶವು, ಪದಹತಿಯೊಳು-ಕಾಲುಗಳಲ್ಲಿ ತುಳಿಯುವಿಕೆಯಿಂದ, ಅಂಬುಧಿಯೊಳು-ಸಾಗರದಲ್ಲಿ, ಆಳ್ದುದು-ಮುಳುಗಿಕೊಂಡಿತು, ಇನ್ನೇನು-ಇನ್ನೇನಾದೀತು, ಎಂಬ-ಎನ್ನತಕ್ಕ, ತೆರನು-ಬಗೆಯು, ಆಗೆ-ಆಗಲಾಗಿ, ಒಯ್ದುದು-ಧೂಳನ್ನೆತ್ತಿಕೊಂಡು ಹೊರಟಿತು || ೧ ||

ಟೀ|| ಜನಮೇಜಯ ಕ್ಷಿತಿಪ-ಜನಮೇಜಯನೆಂಬ ಭೂಕಾಂತನೆ, ಕೇಳು-ಆಲಿಸು, ಕುಂತಳನಗರಿಗಾಗಿ – ಕುಂತಳರಾಜ್ಯದ ಕಡೆಗೆ, ಅರ್ಜುನನ-ಫಲುಗುಣನ, ಸೈನಿಕಂ-ದಳವು, ಬರುತಿರ್ದುದು- ಬರುತ್ತಲಿತ್ತು, ನರನ-ಪಾರ್ಥನ, ವಾಜಿಗಳು-ಯಜ್ಞಾಶ್ವಂಗಳಾದರೊ, ಇತ್ತ-ಈ ಭಾಗದಲ್ಲಿ, ಊರ-ಪಟ್ಟಣದ, ಪೊರವಳಯದ-ಹೊರಗಡೆಯಲ್ಲಿರತಕ್ಕ, ಉಪವನದ-ಉದ್ಯಾನದ, ನಡುವೆ-ಮಧ್ಯಭಾಗದೊಳಗೆ, ತಮ್ಮಿಚ್ಛೆಯಿಂದ-ಸ್ವೇಚ್ಛೆಯಾಗಿ, ತಿರುಗುತಿರೆ-ತಿರುಗುತ್ತಿರಲಾಗಿ, ಇದು-ಈರೀತಿ ನಡೆಯುತಕ್ಕದ್ದು, ಕೌತುಕಂ-ಅಚ್ಚರಿಯು, ಎಂದು-ಎಂಬ ತೆರನಾಗಿ, ಕಂಡವರು-ಈ ಯಜ್ಞಾಶ್ವಂಗಳನ್ನು ನೋಡಿದ ಸೇವಕರು,

---

### ಮೂವತ್ತೆರಡನೆಯ ಸಂಧಿ ಕಥಾಸಾರವು.

ಕೇಳೈ ಜನಮೇಜನಮೇಜಯ ಮಹೀವಲ್ಲಭನೆ, ಸುರಮುನಿಯಾದ ನಾರದನು ಫಲುಗುಣನಿಗೆ ಪೇಳಿದ ಇಂದುಹಾಸನ ಕಥೆಯನ್ನು ಇನ್ನೂ ವಿವರಿಸಿ ಹೇಳುವೆನು. ದೇವ ಮುನಿಯಿಂದ ಚಂದ್ರಹಾಸನ ಕಥೆಯನ್ನೆಲ್ಲಾ ಸವಿಸ್ತಾರವಾಗಿ ಕೇಳಿ ಸಂತುಷ್ಟಾಂತರಂಗನಾದ ಧನಂಜಯನು ಸೇನಾಸಮೇತನಾಗಿ ಕುಂತಳರಾಜ್ಯದಕಡೆಗೆ ಹೊರಡುತ್ತಲಿರುವಾಗ ಪಾದಹತಿಯಿಂದುಂಟಾದ ಧೂಳು ಭೂವ್ಯಾಕಾಶಗಳಿಗೆ ಏಕಾಕಾರಮಾಗಿ ಕಾಣಿಸಿತು ||೧|| ಅತ್ತ ಯಜ್ಞಾಶ್ವಂಗಳು ಕುಂತಳರಾಜ್ಯದ ಊರಹೊರಗೆ ತಿರುಗಾಡುತ್ತಿರುವ ಆಶ್ಚರ್ಯವನ್ನು ಅಲ್ಲಿಯ ಕಾವಲ್ಗಾರರಾದರು ನೋಡಿ ತಡಮಾಡದೆ ಬಂದು ಚಂದ್ರಹಾಸನ ಕುವರರಾದ

ರ್ಕ್ಯಾತುಕಮಿದೆಂದುಬಂ | ದೊರೆಯೆಪದ್ಮಾಕ್ಷಮಕರಧ್ವಜರ್ಪಿಡಿದದರ | ಶಿರದಪಟ್ಟದಲಿಪಿಯನೋಡಿ ವಿಸ್ಮಿತರಾಗಿತಂದೆಗೊಪ್ಪಿಸಿ ನುಡಿದರು ||೨|| ಜೀಯಬಿನ್ನಪವನವಧರಿಸಿಳೆಯಮೇಲೆಕೌಂ| ತೇಯನಮಹಾಧ್ವರದವಾಜಿಗಳ್ತಿರುಗಿತರು | ವಾಯೊಳಿಲ್ಲಿಗೆಬಂದೊಡಾವುಕಟ್ಟಿದೆವಿನ್ನುಬಿಡಿಸಿಕೊಂಬತಿಬಲರನು || ಸಾಯಕದವೊನೆಯೊಳ್ಪಿಸಲೆಕಾಣಬೇಕೆನ | ಲ್ಪ್ರಿಯಮಂತಿಳಿದುಹರುಷಿತನಾಗಿಚಂದ್ರಹಾಸಂನಯಪೊಳಿಂತೆಂದನ.||೩|| ಮಕ್ಕಳಿರಕೇಳಾತನಾಬಾಲ್ಯದಿಂದಬಿಡ| ದಕ್ಕರಿಂಚಿತ್ತದೊಳ್ಧ್ಯಾನಿಸುವದೇವನಿನಿ| ತಕ್ಕೆಮೈದೋರುವಂಪಾರ್ಥನಸಹಾಯಕ್ಕೆತಂದುನಿಮಗರಿವೆನಿದನು || ಸಿಕ್ಕಿದರೆಕೃಷ್ಣದರುಶನದಪುಣ್ಯವೇಸಾಕು | ಮಿಕ್ಕಸುಕೃತದಘಸಣಿಯೇಕಿನ್ನುಧರ್ಮಾಧ್ವ | ರಕೆತಿರುಗುವಕುದುರೆಗಳನಿಲ್ಲಿಕಟ್ಟದರೆಪುರುಷಾರ್ಥಮೇನೆಂದನು ||೪|| ಧರಣಿಯೊಳ್ಪ್ರತ್ಯಕ್ಷ

---

ಬಂದು–ಬಂದರಾಗಿ, ಒರೆಯೆ–ಹೇಳಲಾಗಿ, ಪದ್ಮಾಕ್ಷಮಕರಧ್ವಜರು–ಇಂದುಹಾಸನ ಕುವರರಾದ ಪದ್ಮಾಕ್ಷ ಮಕರಧ್ವಜ ಎನ್ನತಕ್ಕವರು, ಪಿಡಿದು–ಹಿಡಿದುಕೊಂಡು, ಅದರ–ಆ ತುರಂಗದ, ಶಿರದ–ತಲೆಯಲ್ಲಿ ಬಿಗಿದಿರತಕ್ಕ, ಪಟ್ಟದ–ಚಿನ್ನದ ತಗಡಿನಮೇಲೆ ಬರೆದಿರತಕ್ಕ, ಲಿಪಿಯ–ಬರವಣಿಗೆಯನ್ನು, ನೋಡಿ–ನೋಡಿದವನಾಗಿ, ವಿಸ್ಮಿತರಾಗಿ–ಆಶ್ಚರಿಗೊಂಡು, ತಂದೆಗೆ–ತಮ್ಮ ಜನಕನಾದ ಇಂದುಹಾಸನಿಗೆ, ಒಪ್ಪಿಸಿ–ಕಾಣಿಸಿ, ನುಡಿದರು–ಮುಂದೆ ಹೇಳುವಂತೆ ಹೇಳುತ್ತಾರೆ, ||೨||

ಟೀ|| ಜೀಯ–ಎಲೈ ತಂದೆಯೇ, ಬಿನ್ನಪವನು–ನಮ್ಮ ಮಾತುಗಳನ್ನು, (ನಾವು ಅರಿಕೆ ಮಾಡುವುದನ್ನು) ಅವಧರಿಸು–ಲಾಲಿಸು, ಕೌಂತೇಯನ–ಕುಂತೀ ಸುತನಾದ ಯುಧಿಷ್ಠಿರನ, ಮಹಾ–ದೊಡ್ಡದಾದ, (ಪ್ರಸಿದ್ಧವಾದ) ಅಧ್ವರದ–ಹಯಮೇಧದ, ವಾಜಿಗಳ್–ತುರಂಗಮಂಗಳು, ಇಳೆಯಮೇಲೆ–ಭೂಪ್ರದೇಶದಲ್ಲೆಲ್ಲಾ, (ಪ್ರಪಂಚದಲ್ಲೆಲ್ಲಾ) ತಿರುಗಿ–ಸುತ್ತಿಕೊಂಡು, ಇಲ್ಲಿಗೆ–ನಮ್ಮ ಪಟ್ಟಣಕ್ಕೆ, ತರುವಾಯೊಳ್–ಕಡೆಗೆ, ಬಂದೊಡೆ–ಬಂದಿರುವ ಕಾರಣದಿಂದ, ಆವು–ನಾವೀರ್ವರೂ, ಕಟ್ಟಿದೆವು–ಕಟ್ಟಿಹಾಕಿರುವೆವು, ಇನ್ನು–ಇನ್ನು ಮುಂದೆ, ಬಿಡಿಸಿಕೊಂಬ–ಬಿಡಿಸಿಕೊಳ್ಳಬೇಕೆಂದು ಬರತಕ್ಕ, ಅತಿಬಲರನು–ಸಾಹಸಿಗಳನ್ನು, ಐಸಲೆ–ಚನ್ನಾಗಿ, ಸಾಯಕದವೊನೆಯೊಳು–ಕಣೆಗಳ ತುದಿಯಿಂದಲೇ, ಕಾಣಬೇಕು–ನೋಡತಕ್ಕದ್ದೇಸರಿ, ಎನಲ್–ಎಂದು ನುಡಿಯಲು, ತನಯರಂ–ಕುವರರನ್ನು, ಪ್ರಿಯದಿಂ–ಅಕ್ಕರೆಯಿಂದ, ತೆಗೆದು–ಹತ್ತಿರಕ್ಕೆ ಕರೆದುಕೊಂಡು, ಅಪ್ಪಿ–ಆಲಂಗಿಸಿಕೊಂಡು, ತಾನು–ತಾನಾದರೊ, ಅಭಿಪ್ರಾಯಮಂ–ಶ್ರೀ ಕೃಷ್ಣಪರಮಾತ್ಮನೇ ಭಕ್ತರ ಮನೋಭಿಷ್ಟಂಗಳನ್ನು ನೆರವೇರಿಸಲು ಭೂಸಂಚಾರಮಾಡಿಕೊಂಡು ಇಲ್ಲಿಗೆ ಬರುತ್ತಿರುವುದಾಗಿ, ತಿಳಿದು–ತಿಳಿದುಕೊಂಡು, ಹರುಷಿತನಾಗಿ–ಸಂತಸಂಗೊಂಡು, ನಯದೊಳು–ವಿಶ್ವಾಸದಿಂದ, ಇಂತು–ಮುಂದೆ ಹೇಳುವಂತೆ ಎಂದನು–ನುಡಿದನು ||೩||

ಟೀ|| ಮಕ್ಕಳಿರ–ಕುವರರಾದ ಪದ್ಮಾಕ್ಷ ಮಕರಧ್ವಜರೇ, ಕೇಳಿ–ನನ್ನಮಾತನ್ನು ಕೇಳಿರಿ, ಆ ಬಾಲ್ಯದಿಂದ–ಚಿಕ್ಕಂದಿನಿಂದಲೂ ತಾನು–ನಾನಾದರೊ, ಬಿಡದೆ–ತಪ್ಪದೆ, ಚಿತ್ತದೊಳ್–ನನ್ನ ಮನದೊಳಗೆ, ಧ್ಯಾನಿಸುವ–ಧ್ಯಾನವಂ ಮಾಡತಕ್ಕ, ದೇವನು–ದೇವರೇ, ಇನಿತಕ್ಕೆ–ಇಷ್ಟು ದಿನಕ್ಕೆ, ಪಾರ್ಥನ–ಫಲುಗುಣನ, ಸಹಾಯಕೆ–ಸಹಾಯದ ನಿಮಿತ್ತವಾಗಿ, ಐತಂದು–ಬಿಜಮಾಡಿ, ನಮಿಗೆ–ನಮಗಾದರೊ, ಮೈತೋರುವಂ–ಪ್ರತ್ಯಕ್ಷನಾಗುವನು. ಇದನು–ಈ ವಾರ್ತೆಯನ್ನು, ಅರಿವೆನು–ತಿಳಿದಿದ್ದೇನೆ, ಸಿಕ್ಕಿದರೆ–ಇಷ್ಟುಮಾತ್ರ ಶ್ರೀ ಕೃಷ್ಣನ ದರ್ಶನಲಾಭವು ನಮಿಗುಂಟಾದರೆ, ಕೃಷ್ಣದರ್ಶನಪುಣ್ಯಮೆ–ಕೃಷ್ಣ ಪರಮಾತ್ಮನನ್ನು ನೋಡಿದಂತಹ ಪುಣ್ಯವೆ, ಸಾಕು–ಸಾಕಾಗಿದೆ. ಮಿಕ್ಕ–ಮಿಕ್ಕಂಥ, ಸುಕೃತದ–ಸತ್ಕಾರ್ಯದ, ಘಸಣೆ–ಅಲೆದಾಟವು, ಏಕೆ–ಏನು ಪ್ರಯೋಜನ, ಇನ್ನು–ಈ ಪ್ರಕಾರವಾಗಿ ಸ್ವಾಮಿಯೆ ನಮ್ಮ ಎದುರಿಗೆ ಬಂದು ನಿಂತ ಬಳಿಕ, ಧರ್ಮಾಧ್ವರಕೆ–ಯುಧಿಷ್ಠಿರನ ಅಶ್ವಮೇಧ ಯಾಗಕ್ಕಾಗಿ, ತಿರುಗುವ–ಭೂಸಂಚಾರವಂ ಮಾಡುತ್ತಲಿರತಕ್ಕ, ಕುದುರೆಗಳನು–ಹಯಂಗಳನ್ನು, ಇಲ್ಲಿ–

---

ಪದ್ಮಾಕ್ಷ ಮಕರಧ್ವಜರಿಗೆ ಬಿನ್ನೈಸಲು ರಾಜಕುವರರೀರ್ವರೂ ಜಾಗ್ರತೆಯಾಗಿ ಹೊಗಿ ಯಜ್ಞಾಶ್ವಂಗಳನ್ನು ನೋಡಿ ಅದರ ಹಣೆಯಲ್ಲಿರುವ ಬಿರುದಾವಳಿಯನ್ನೆಲ್ಲಾ ಓದಿಕೊಂಡು ಕುದುರೆಗಳಸಹಿತ ತಂದೆಯಾದ ಇಂದುಹಾಸನ ಬಳಿಗೆ ಬಂದವರಾಗಿ||೨ ತಂದೆಯೇ? ಈ ಕುದುರೆಗಳೆರಡೂ ಭೂಕಾಂತನಾದ ಯುಧಿಷ್ಠಿರನ ಯಜ್ಞಾಶ್ವಂಗಳಾಗಿವೆ. ದೇಶವೇಶವೂ ಸುತ್ತಿಸುತ್ತಿ ಕೊನೆಗೆ ನಮ್ಮೂರ ಹೊರಗೆ ತಿರುಗಾಡುತ್ತಿದ್ದುದನ್ನು ನಾವು ಕಂಡು ಹಿಡಿತಂದಿರುವೆವು. ಯುದ್ಧಮಾಡಿ ನಮ್ಮನ್ನು ಸೋಲಿಸಿದಲ್ಲದೆ ಈ ಹಯಂಗಳನ್ನು ಯುಧಿಷ್ಠಿರನ ಕಡೆಯವರದೆಂತು ಪಡೆದಾರೆಂದು ನುಡಿದರು, ಈ ರೀತಿಯಲ್ಲಿ ಹೇಳುತ್ತಲಿರುವ ಸುತರ ನುಡಿಗಳನ್ನಾಲಿಸಿದ ಚಂದ್ರಹಾಸನು ಪುತ್ರರೀರ್ವರನ್ನೂ ಸಂತೋಷದಿಂದ ಆಲಂಗಿಸಿಕೊಂಡು || ೩ || ಎಲೈಮಕ್ಕಳೇ ಕೇಳಿ ನಾನು ಆ ಬಾಲ್ಯದಿಂದ ಯಾರನ್ನು ಧ್ಯಾನಿಸುತ್ತಲಿದ್ದೆನೊ ಅಂತಹ ಪರಮಪುರುಷನಾದ ಸ್ವಾಮಿಯು ನನಗೆ ಸಂದರ್ಶನವನ್ನು ಕೊಡುವುದಕ್ಕಾಗಿಯೇ ಅರ್ಜುನನ ಸಹಾಯಕನಾಗಿ ಆತನ ಹಿಂದೆ ಬರುತ್ತಲಿರುವನು. ಇಂತಹ ಪರಮಮೂರ್ತಿಯು ಪ್ರತ್ಯಕ್ಷನಾಗುವಾಗ ಈ ಯಜ್ಞಾಶ್ವಂಗಳನ್ನು ನಾವು ಮತ್ತೆ ಯಾವ ಪುರುಷಾರ್ಥಕ್ಕಾಗಿ ಕಟ್ಟಬೇಕಾಗಿದೆ || ೪ || ಯುಧಿಷ್ಠಿರನಾದರೊ, ಲೋಕದಲ್ಲಿ

ಧರ್ಮದಾಕೃತಿಯುಧಿಷ್ಠಿರಭೂಪನಾತನಹಯಂಗಳಂತಡೆದಪರೆ| ಪಿರಿದಾಯಸದೊಳವರ್ಪಾಲಿಸಿದರಿನ್ನೆಗಂದಶಮಾಸದಿಂದಮೇಲೆ||
ಅರೆದಿಂಗಳಾದುದಿನ್ನಿಹುದುಪಕ್ಷತ್ರಯಂ | ವರುಷಕಲ್ಲಿಂದಮುಂದಲ್ಲಿಸಿಕ್ಕಿರ್ದಡ | ಧ್ವರಮುಳಿವುದದರಿಂದನೀವೆರಕ್ಷಿಸಿಪಾಂಡವಂಗೆ
ಕೊಟ್ಟಪುದೆಂದನು ||೫|| ತನ್ನಹೇಳಿಕೆಯೊಳಲ್ಲದೆಕೃಷ್ಣಫಲುಗುಣ | ರ್ಗಿನ್ನುಸಿಕ್ಕಿದಹರಿಗಳಂಬಿಡದೆಭೂಮಿಯೋ | ಳ್ಸನ್ನದ್ಧ
ರಾಗಿಪಾಲಿಸಿನೀವುಯಜ್ಞಕಾಲಕ್ಕೆಧರ್ಮಜಂಗೆಕೊಡಲು || ಉನ್ನತದಸುಕೃತಮಾದಪುದುನಮಗೆಂದುಸಂ | ಪನ್ನಮತಿಚಂದ್ರ
ಹಾಸಂನಿಜಕುಮಾರರಂ| ಮನ್ನಿಸಿತುರಂಗರಕ್ಷೆಗೆಕಳುಹಿಬಲಸಹಿತಪೊಳಲಪೊರಗಿರುತಿರ್ದನು ||೬|| ತುರಗಂಗಳಂಬಿಟ್ಟದರಕೂಡೆ

---

ಈ ಎಡೆಯಲ್ಲಿ, ಕಟ್ಟದರೆ-ಕಟ್ಟಿಹಾಕಿದ ಮಾತ್ರಕ್ಕೇ, ಪುರ-ಪಾರ್ಥಂಏನು-ಸಾರ್ಥಕವೇನಿರುವುದು, ಎಂದನು - ಎಂಬುದಾಗಿ ತನ್ನ ಮಕ್ಕಳೊಂದಿಗೆ ಹೇಳಿದನು. ||೪||

ಟೀ|| ಯುಧಿಷ್ಠಿರಭೂಪನು-ಧರ್ಮತನಯನಾದರೊ, ಧರಣಿಯೊಳ್-ಇಳೆಯೊಳಗೆ, ಪ್ರತ್ಯಕ್ಷ-ಎದುರಿಗೆ ಇರತಕ್ಕ, ಧರ್ಮದ - ಧರ್ಮಕಾರ್ಯದ ಮತ್ತು ಯಮಧರ್ಮರಾಯನ, ಆಕೃತಿ - ಆಕಾರವಾಗಿರುವನು. ಆತನ ಅಂಥಾ ಧರ್ಮಾತ್ಮನಾದ ಧರ್ಮಪುತ್ರನ, ಹಯಂಗಳಂ-ಯಜ್ಞಾಶ್ವಂಗಳನ್ನು, ತಡೆದಪರೆ - ತಡೆಯಬಹುದೆ, ಅವರ್ - ಆ ಪಾರ್ಥಾದಿಗಳೆಲ್ಲಾ, ಇನ್ನೆಗಂ-ಇಷ್ಟು ಕಾಲವೂ, ಪಿರಿದಾಯಾಸದೊಳು-ಅತ್ಯಧಿಕವಾದ ಕಷ್ಟದಿಂದ, ಪಾಲಿಸಿದರು-ಸಲಹಿಕೊಂಡಿದ್ದಾರೆ, ದಶಮಾಸದಿಂದಮೇಲೆ-ಹತ್ತು ತಿಂಗಳಾಗಿ, ಅರೆದಿಂಗಳು-ಹದಿನೈದು ದಿನಗಳು ಹೆಚ್ಚಾಗಿ, ಆದುದು-ಆಗಿದೆ, ಪಕ್ಷತ್ರಯಂ - ಮೂರು ಪಕ್ಷಗಳು ಮಾತ್ರವೇ, ವರ್ಷಕೆ-ಬಂದು ವರ್ಷಕ್ಕೆ, ಇನ್ನು-ಇನ್ನು ಮುಂದೆ, ಇಹುದು-ಉಳಿದಿರುವುದು, ಇಲ್ಲಿ-ಈ ನಮ್ಮ ನಾಡಿನಲ್ಲಿ, ಸಿಕ್ಕಿರ್ದಡೆ-ಕಟ್ಟಿಹಾಕಿ ಬಿಟ್ಟಪಕ್ಷದಲ್ಲಿ, ಮುಂದೆ-ಇನ್ನು ಮುಂದೆ, ಅಧ್ವರಂ-ಯಾಗವು, ಉಳಿವುದು-ನಿಂತು ಹೋಗುವುದು. ಅದರಿಂದ-ಆದಕಾರಣ, ನೀವೆ-ನೀವೇ, ರಕ್ಷಿಸಿ-ಯಜ್ಞಾಶ್ವಗಳ ಗೊಡವೆಗೆ ಹೋಗದೆ, ಪಾಂಡವಂಗೆ-ಫಲುಗುಣನಿಗೆ, ಕೊಟ್ಟಪುದು-ಈ ಕುದುರೆಗಳನ್ನು ಒಪ್ಪಿಸಬೇಕು, ಎಂದನು-ಎಂಬುದಾಗಿ ನುಡಿದನು. ||೫||

ಟೀ|| ಸಂಪನ್ನ-ಉತ್ತಮೋತ್ತಮವಾದ, ಮತಿ-ತಿಳುವಳಿಕೆಯಿಂದ ಕೂಡಿರತಕ್ಕ, ಚಂದ್ರಹಾಸಂ-ಇಂದುಹಾಸನು, ನಿಜಕುಮಾರರಂ - ತನ್ನ ಮಕ್ಕಳಾದ ಪದ್ಮಾಕ್ಷಮಕರಧ್ವಜರನ್ನು, ಮನ್ನಿಸಿ - ಮರ್ಯಾದೆ ಮಾಡಿ, ಇನ್ನು - ಇನ್ನು ಮುಂದೆ ಭೂಮಿಯೊಳ್-ನಮ್ಮ ದೇಶದಲ್ಲಿ, ಸಿಕ್ಕಿದ-ಸಿಕ್ಕಿದಂಥಾ, ಹರಿಗಳಂ-ಅಶ್ವಂಗಳನ್ನು, ತನ್ನ-ನನ್ನ, ಹೇಳಿಕೆಯೊಳು-ಹೇಳುವಿಕೆಯಿಂದ, ಅಲ್ಲದೆ ಹೊರತು, ಕೃಷ್ಣಫಲುಗುಣರ್-ಕೃಷ್ಣ ಮತ್ತು ಪಾರ್ಥರ ಬಿಡದೆ ವಶಮಾಡದೆ, ಸನ್ನದ್ಧರಾಗಿ - ಸಿದ್ಧವಾಗಿ, ನೀವು-ನೀವೀರ್ವರೂ, ಪಾಲಿಸಿ-ಸಲಹಿ, ಧರ್ಮಜಂಗೆ-ಧರ್ಮತನಯನಿಗೆ, ಯಜ್ಞಕಾಲಕೆ-ಯಾಗಮಾಡುವ ವೇಳೆಗೆ ಸರಿಯಾಗಿ, ಕೊಡಲು-ಕೊಟ್ಟಹಾಗಾದರೆ, ನಮಗೆ-ನಮಿಗಾದರೊ, ಉನ್ನತದಸುಕೃತಂ-ಅತ್ಯಧಿಕವಾದ ಪುಣ್ಯಪ್ರಾಪ್ತಿಯು, ಆದಪುದು-ಆಗುತ್ತದೆ, ಎಂದು-ಎಂಬತೆರನಾಗಿ ಹೇಳಿ, ತುರಂಗಪಾಲನೆಗೆ-ಯಾಗದ ಕುದುರೆಯ ಪೋಷಣೆಗಾಗಿ, ಕಳುಹಿ-ಪದ್ಮಾಕ್ಷ ಮಕರಧ್ವಜರನ್ನೂ ಕಳುಹಿಸಿಬಿಟ್ಟ, (ಚಂದ್ರಹಾಸನು) ಪೊಳಲಪೊರಗೆ - ಪಟ್ಟಣದ ಹೊರಭಾಗದಲ್ಲಿ, ಬಲಸಹಿತ-ದಳದಿಂದ ಕೂಡಿ, ಇರುತಿರ್ದನು-ಇದ್ದವನಾದನು ||

ಅ|| ವಿ|| ತುಗಂಗಮ-ತುರಜಾಗ್ರತೆಯಾಗಿ, ಗಮ-ಗಮಿಸುವುದು, ಬಲ=ಸೈನ್ಯ, ಶಕ್ತಿ, ಬಲಭಾಗ ||೬||

ಟೀ|| ಪದ್ಮಾಕ್ಷಮಕರಧ್ವಜರ್ - ಪದ್ಮಾಕ್ಷಮಕರಧ್ವಜರೆಂಬೀರ್ವರೂ, ತುರಗಂಗಳಂ - ಯಾಗದ ಕುದುರೆಗಳನ್ನು, ಬಿಟ್ಟು-ಬಿಟ್ಟವರಾಗಿ, ಇರದೆ-ಪಟ್ಟಣದಲ್ಲಿ ನಿಲ್ಲದೆ, ಸೇನೆಸಹಿತ-ದಳದೊಂದಿಗೆ, ಅದರಕೂಡ-ಅವುಗಳ ಜೊತೆಯಲ್ಲಿ, ಪೋದಬಳಿಕ-ಹೋದನಂತರ, ಚಂದ್ರಹಾಸನು-ಇಂದುಹಾಸನಾದರೊ, ಅರವಿಂದ - ಕಮಲದಹಾಗೆ ಇರುವ, ನಾಭನ - ಹೊಕ್ಕಳುಳ್ಳ ಶ್ರೀಕೃಷ್ಣಸ್ವಾಮಿಯ, ದರುಶನಕೆ-ದರುಶನಕ್ಕಾಗಿ, ಲೋಲುಪನಾಗಿ-ಆಶೆಗೊಂಡು, ಸೇನೆಯಂ-ಬಲವನ್ನೆಲ್ಲಾ, ಪುರದ-ನಗರದ, ಹೊರವಳಯದೊಳ್-ಹೊರಗಡೆಯಲ್ಲಿ, ಕೂಡಿಕೊಂಡು-ನಿಲ್ಲಿಸಿಕೊಂಡು, ಮುದದೊಳು-ಆನಂದದಿಂದ ಕೂಡಿ, ಇರುತಿರ್ದನು-

---

ಪ್ರತ್ಯಕ್ಷಧರ್ಮಸ್ವರೂಪನು ಆತನು ಮಾಡಬೇಕೆಂದಿರುವ ಯಾಗದ ತುರಗಂಗಳನ್ನು ಅರ್ಜುನಾದಿಗಳು ಹತ್ತು ತಿಂಗಳಿಂದಲೂ ಸಲಹುತ್ತಲಿರುವರು ಧರ್ಮರಾಯನು ಮಾಡಬೇಕೆಂದಿರುವ ಯಾಗದ ಅವಧಿಯು ಒಂದೂವರೆ ತಿಂಗಳು ಮಾತ್ರವೇ ಇರುವಾಗ ನೀವು ಈ ಅಶ್ವಂಗಳನ್ನು ಈಗ ಕಟ್ಟಿಹಾಕಿದರೆ ಯಜ್ಞಭಂಗವಾದೀತು ||೫|| ಆದಕಾರಣ ನೀವು ಈ ಯಾಗದ ಕುದುರೆಗಳನ್ನು ಕಾಪಾಡುತ್ತಿದ್ದು ಯಜ್ಞಕಾಲಕ್ಕೆ ಧರ್ಮಜನಿಗೆ ಅವುಗಳನ್ನು ಒಪ್ಪಿಸಿ ಕೃತಕೃತ್ಯರಾಗಬೇಕೆಂದು ಹೇಳಿ ಅವರೀರ್ವರನ್ನೂ ಯಜ್ಞಾಶ್ವಗಳ ರಕ್ಷಣೆಗಾಗಿ ನೇಮಿಸಿ ತಾನು ಸೇನಾಸಮೇತನಾಗಿ ಕೃಷ್ಣಸ್ವಾಮಿಯ ಸಮಾಗಮವನ್ನೆ ಎದುರು ನೋಡುತ್ತ ಊರ ಹೊರಗಿನ ಬೈಲಿನಲ್ಲಿರುವಾಗ ||೬|| ಮಿತಿಮೀರಿ ಬರುತ್ತಲಿರುವ ಕಡಲೋ ಎಂಬಂತೆ ಸಮೀಪಿಸುತ್ತಲಿರುವ ಅರ್ಜುನನ

ಸೇನೆಸಹಿ | ತಿರದೆಪದ್ಮಾಕ್ಷಸುಕರಧ್ವಜಪ್ರೋದಬಳಿ | ಕರವಿಂದನಾಭದರ್ಶನಕೆಲೋಲುಪನಾಗಿಚಂದ್ರಹಾಸಂಮುದದೊಳು ||
ಪುರದಹೊರವಳಯದೊಳ್ಸೇನೆಯುಂಕೂಡಿಕೊಂ | ಡಿರುತಿರ್ದನನ್ನೆಗಂಮೇರೆದಪ್ಪಿದಮಹಾ | ಶರಧಿಯಂತರ್ಜುನನಮೋಹರಂ
ತಲೆದೋರಿತೆತ್ತಣಾಶ್ಚರ್ಯಮೆನಲು ||೭|| ಸಮತಳಿಸಿಫಲುಗುಣನಸೇನೆಬಹುದಂಕಂಡು | ಸಮರಕಭಿಮುಖನಾಗಿತನ್ನಮೋಹರ
ಸಹಿತಸಮುಚಂದ್ರಹಾಸನೈತರಲಾಗಿಮುರಹರಂಸಕಲಭೂಪಾಲಕರನ ಕ್ರಮದಿಂದನಿಲಿಸಿಪಾರ್ಥಂಗಸಾರಥಿಯಾಗಿ | ಕಮಲ
ಸುಗದಾಶಂಖಚಕ್ರದಚತುರ್ಭುಜದ | ಕಮನೀಯರೂಪಮುಂಕೈಗೊಂಡುಬಿಟ್ಟನಾತನಸಮ್ಮುಖಕೆರಥವನು ||೮|| ನೋಡಿದ್ಯೆ
ಪಾರ್ಥವೈಷ್ಣವಶಿರೋಮಣಿಯನೆನೆ|ಮೂಡಿಮುಳುಗುವಮಾಧವಧ್ಯಾನಚೇತನದ| ಸೂಡಿದಮುಕುಂದಪಾದಾಬ್ಜತುಲಸಿಯಪೂತ
ಮಸ್ತಕದಸತ್ವಗುಣದ || ಬೀಡೆನಿಪಕಲಿಚಂದ್ರಹಾಸನಂಕಂಡುತಾಂ | ಮಾಡಿದಗ್ಗದಪುಣ್ಯದಿಂಜನ್ಮಸಫಲವಾ | ಯ್ತಾಡಲೇನೆಲೆ
ದೇವತನ್ನಬಿನ್ನಪವನವಧರಿಸೆಂದನಿಂದ್ರಸೂನು||೯|| ಜ್ಞಾನವೃದ್ಧಂತಪೋವೃದ್ಧಂವಯೋವೃದ್ಧ | ನೀನರೇಶ್ವರನೀತನೋಳ್ಕಾದಿಜ

---

ಇದ್ದವನಾದನು, ಅನ್ನೆಗಂ-ಅಷ್ಟು ಹೊತ್ತಿಗೆ, ಅರ್ಜುನನ-ಪಾರ್ಥನ, ಮೋಹರಂ-ಬಲವು, ಎತ್ತಣ-ಎಲ್ಲಿಯ, ಆಶ್ಚರ್ಯಂ-ಅಚ್ಚರಿಯು, ಎನಲು-ಎಂಬರೀತಿಯಾಗಿ, ಮೇರೆತಪ್ಪಿದ-ಮಿತಿಮೀರಿ ಬರುತ್ತಲಿರುವ, ಮಹಾಶರಧಿಯಂತೆ-ದೊಡ್ಡಸಾಗರದ ಹಾಗೆ, ತಲೆದೋರಿತು-ತೋರಬಂದಿತು. ||೭||

ಟೀ|| ಅಸಮ-ಅಸದೃಶನಾದ, ಚಂದ್ರಹಾಸಂ-ಇಂದುಹಾಸನು, ಫಲುಗುಣನ-ಪಾರ್ಥನ, ಸೇನೆ-ದಳವು, ಸಮತಳಿಸಿ-ಸಾಂದ್ರವಾಗಿ, ಬಹುದಂ - ಬರತಕ್ಕದ್ದನ್ನು, ಕಂಡು - ಈಕ್ಷಿಸಿ, ಸಮರಕೆ - ಕಾಳಗಕ್ಕೆ, ಅಭಿಮುಖನಾಗಿ - ಎದುರಾಗಿ, ತನ್ನ ಮೋಹರಸಹಿತ-ತನ್ನ ದಳದೊಂದಿಗೆ, ಐತರಲಾಗಿ-ಬರಲು, ಮುರಹರಂ-ಶ್ರೀ ಕೃಷ್ಣಸ್ವಾಮಿಯು, ಕ್ರಮದಿಂದ-ಬಂದುಕ್ರಮವಾಗಿ, ಸಕಲಭೂಪಾಲಕರನು-ರಾಜರನ್ನೆಲ್ಲಾ, ನಿಲಿಸಿ-ನಿಲ್ಲಿಸಿದವನಾಗಿ, ಪಾರ್ಥಂಗೆ-ಫಲುಗುಣನಿಗೆ, ಸಾರಥಿಯಾಗಿ-ರಥವನ್ನು ನಡೆಯಿಸತಕ್ಕವನಾಗಿ, ಕಮಲ-ತಾವರೆಯು, ಸುಗದಂ - ಶ್ರೇಷ್ಠವಾದ ಗದೆಯು, ಶಂಖ-ಶಂಖವು, ಚಕ್ರದ - ಚಕ್ರವೇ ಮೊದಲಾದವುಗಳಿಂದ ಕೂಡಿರತಕ್ಕ, ಚತುರ್ಭುಜದ-ನಾಲ್ಕು ತೋಳುಗಳುಳ್ಳ, ಕಮನೀಯ - ಮನರಂಜಿಸುವ, ರೂಪಮಂ - ಆಕಾರವನ್ನು, ಕೈಕೊಂಡು - ತಾಳಿ, ರಥವನು - ತೇರನ್ನು, ಆತನಸಮ್ಮುಖಕೆ - ಚಂದ್ರಹಾಸನಿಗೆದುರಾಗಿ, ಬಿಟ್ಟನು - ರಥವನ್ನು ನಡೆಯಿಸಿದನು. ||೮||

ಟೀ|| ಪಾರ್ಥ-ಅಯ್ಯಾ ಫಲುಗುಣಾ, ವೈಷ್ಣವ ಶಿರೋಮಣಿಯನು-ಶ್ರೀ ಕೃಷ್ಣನನ್ನು ಧ್ಯಾನಿಸುವವರಲ್ಲಿ ಉತ್ತಮನಾದ ಇಂದುಹಾಸನನ್ನು, ನೋಡಿದ್ಯೆ-ನೋಡಿದೆಯಾ ? ಎನೆ-ಎಂದು ಪ್ರಶ್ನೆಯಂ ಮಾಡಲು, ಇಂದ್ರಸೂನು-ಇಂದ್ರನಂದನನಾದ, ಪಾರ್ಥನು, (ಕೃಷ್ಣನನ್ನು ಕುರಿತು) ಎಲೆದೇವ-ಎಲೈ ಪ್ರಭುವೆ, ತಾಂ-ನಾನಾದರೊ, ಮಾಡಿದ-ಎಸಗಿದ, ಪುಣ್ಯಫಲದಿಂದ-ಸುಕೃತಪರಂಪರೆಯಿಂದ, ಮೂಡಿ-ಪ್ರಾಪ್ತವಾಗಿ, ಮುಳುಗುವ-ಮುಳುಗಿರತಕ್ಕ, ಮಾಧವಧ್ಯಾನಚೇತನದ-ಮಾಧವ-ಶ್ರೀಮನ್ನಾರಾಯಣನ, ಧ್ಯಾನ-ಭಜನೆಯಲ್ಲಿ, ಚೇತನದ-ಆಸಕ್ತಿಯುಳ್ಳ, ಸೂಡಿದ-ಹಾಕಿಕೊಂಡಿರತಕ್ಕ, ಮುಕುಂದ-ಶ್ರೀಕೃಷ್ಣನ, ಪಾದಾಬ್ಜ-ಅಡಿದಾವರೆಯಲ್ಲಿ ಪೂಜಿಸಲ್ಪಟ್ಟಿರುವಂಥಾ, ತುಲಸಿಯ-ತುಲಸೀ ಕುಡಿಗಳಿಂದ, ಪೂತ-ಪವಿತ್ರವಾದ, ಮಸ್ತಕದ-ತಲೆಯನ್ನುಳ್ಳ, ಸತ್ವಗುಣದ-ಸತ್ಸ್ವಭಾವದ, ಬೀಡು-ನೆಲೆಯು, ಎನಿಪ-ಎನ್ನಿಸಿಕೊಳ್ಳತಕ್ಕ, ಕಲಿ-ಶೂರನಾದ, ಚಂದ್ರಹಾಸನಂ-ಇಂದುಹಾಸನನ್ನು, ಕಂಡು-ಈಕ್ಷಿಸಿದ್ದರಿಂದ, ಜನ್ಮ-ನನ್ನಬಾಳು, ಸಫಲವು-ಫಲಸಹಿತವಾದದ್ದಾಗಿ, ಆಯ್ತು-ಆಯಿತು, ಆಡಲೇನು-ಇನ್ನು ಹೆಚ್ಚಾಗಿ ಹೇಳತಕ್ಕದ್ದೇನಿರುವುದು, ತನ್ನ-ನನ್ನದಾದ, ಬಿನ್ನಪವನು-ಅರಿಕೆಯನ್ನು, ಅವಧರಿಸು-ಲಾಲಿಸು, ಎಂದನು-

---

ಸೇನಾಸಾಗರವನ್ನು ಕಂಡು||೭|| ತಾನೂ ದಳಸಹಿತ ನಿಂತು ನೋಡುತ್ತಿದ್ದನು ಅತ್ತ ರಾಕ್ಷಸಾಂತಕನಾದ ಕೃಷ್ಣಮೂರುತಿಯು ಸಕಲ ರಾಜರನ್ನೂ ಕ್ರಮವರಿತು ನಿಲ್ಲಿಸಿ, ತಾನು ಶಂಖಚಕ್ರಗದಾಪದ್ಮಂಗಳಿಂದಲಂಕೃತವಾದ ಕೈಗಳಿಂದಲೂ ಸುಂದರಾಕಾರದಿಂದಲೂ ಕೂಡಿ, ಅರ್ಜುನನ ಸಾರಥಿಯಾಗಿ ತೇರನ್ನು ಮುಂದಕ್ಕೆ ನಡಿಸುತ್ತಾ ಎಲೈ ಅರ್ಜುನ ! ವೈಷ್ಣವಶಿರೋಮಣಿಯಾಗಿರುವ ಚಂದ್ರಹಾಸನನ್ನು ನೋಡೆಂದು ನುಡಿಯಲು ಫಲುಗುಣನು ಕೃಷ್ಣಮೂರುತಿಯನ್ನು ಕುರಿತು ಎಲೈ ಮಹಾನುಭಾವನೆ, ವಿಷ್ಣುನಾಮ ಸಂಕೀರ್ತನೆಯಲ್ಲಿಯೇ ನಿರತನಾಗಿ, ತುಲಸೀಮಾಲಿಕೆಗಳಿಂದೊಪ್ಪುತ್ತ ಸತ್ವಗುಣಾವಿಶಿಷ್ಟನಾಗಿರುವ ಈ ಇಂದುಹಾಸನನ್ನು ನೋಡಿದ್ದು ನನ್ನ ಪೂರ್ವಜನ್ಮಸುಕೃತವೇಸರಿ || ೮ || ಎಂದು ಕೊಂಡಾಡುತ್ತಲಿರುವ ಅರ್ಜುನನ್ನು ನೋಡಿ ಕೃಷ್ಣಸ್ವಾಮಿಯು ಅಯ್ಯಾ ಫಲುಗುಣಾ ! ಈ ಇಂದುಹಾಸನಾದರೋ ಸುಜ್ಞಾನಮೂರುತಿಯು ಮಹಾ ತಪಸ್ವಿಯು ಅಲ್ಲದೆ ಮುನ್ನೂರು ವರುಷ ವಯಸ್ಸುಳ್ಳ ಮುದುಕನಾಗಿದ್ದಾನೆ. ಇವನ ದೃಢಭಕ್ತಿಗೆ ನಾನು ಮೆಚ್ಚಿರುವನೆಂದು ನುಡಿಯುತ್ತ ||೯|| ಶಂಖಚಕ್ರಗದಾಪದ್ಮಧಾರಿಯೂ, ದಿವ್ಯಾಂಬರಾಲಂಕೃತನೂ, ಕೌಸ್ತುಭಮಣಿಯಿಂದ ಶೋಭಿಸುವನೂ

ಯಿಸುವವಿ । ಧಾನವಂತನಗಬಿಸಸೆಂದರ್ಜುನಂಕೇಳ್ದೊಡಸುರಾರಿಕರುಣದಿಂದ ॥ ಧ್ಯಾನಿಸುವನಾಬಾಲ್ಯದಿಂದೆನ್ನನೀತಂಗೆ । ತಾನೊಲಿದೆನೆಂದುನಿಜರೂಪಮಂತೋರಲಾ । ಭೂನಾಥನಂಬುಜಾಕ್ಷನದಿವ್ಯಮೂರ್ತಿಯಂಕಂಡುಪುಳಕಿತನಾದನು ॥ ೧೦ ॥ ಕಂಬುಚಕ್ರಾಬ್ಜಕೌಮೋದಕಿಗಳಂಧರಿಸಿ । ಪೊಂಬಟ್ಟೆಯಂತಾಳ್ದುಕೌಸ್ತುಭದಶೋಭಾವ । ಲಂಬದಿಂಸರ್ವಾಭರಣದಿಂಭೂಷಿತನಾಗಿ ದಿವ್ಯಮಾಲೆಗಳನಾಂತು ॥ ತುಂಬಿದವಯವದಲಾವಣ್ಯಲಹರಿಗಳವಿಸ । ಟಂಬರಿಪಕರುಣರಸದೆಳನಗೆಯಸಿರಿಮೊಗದ । ಶಂಬರಾರಿಯಪಿತಂಪಾರ್ಥನರಥಾಗ್ರದೊಳ್ಕಣ್ಗೆಸೆದನಾನೃಪತಿಯ ॥೧೧॥ ಕಂಗಳನಿರೀಕ್ಷಣದಸೌಖ್ಯಮುಂಸೂಸುವುದ । ಕಂಗಳಪೊನಲ್ತ

ಎಂಬುದಾಗಿ ಹೇಳಿದನು ॥ ೯ ॥

ಟೀ॥ ಈ ನರೇಶ್ವರನು-ಈ ನರೇಂದ್ರನಾದರೊ, ಜ್ಞಾನವೃದ್ಧಂ-ಮಹಾಜ್ಞಾನಿಯಾಗಿರುವನು, ತಪೋವೃದ್ಧಂ-ಕೃಛ್ರಾದಿತಪಸ್ಸುಗಳನ್ನು ಮಾಡಿ ಖ್ಯಾತಿಗೊಂಡಿರುವನು, ವಯೋವೃದ್ಧನು-ಬಹಳ ವಯಸ್ಸಾದವನಾಗಿದಾನೆ, ಎನಗೆ-ನನಿಗಾದರೊ, ಈತನೊಳ್-ಇಂತಹ ಇಂದುಹಾಸನೊಂದಿಗೆ, ಕಾದಿ-ಕಾಳಗ ಮಾಡಿ, ಜಯಿಸುವ-ಗೆಲ್ಲತಕ್ಕ, ವಿಧಾನಂ-ಬಗೆಯು, ಎಂತು-ಯಾವ ರೀತಿಯಾಗಿಧೆ, ಬಿಸಸು-ಆಜ್ಞಾಪಿಸಬೇಕು, ಎಂದು-ಎಂಬ ತೆರನಾಗಿ, ಅರ್ಜುನನು-ಪಾರ್ಥನು, ಕೇಳ್ದೊಡೆ-ಪ್ರಶ್ನೆ ಮಾಡಲು, ಅಸುರಾರಿ-ರಾಕ್ಷಸಾಂತಕನಾದ ಕೃಷ್ಣಸ್ವಾಮಿಯು, ಕರುಣದಿಂದ-ಕೃಪಾಕಟಾಕ್ಷದಿಂದ ಕೂಡಿ, ಎನ್ನನು-ನನ್ನನ್ನು, ಆಬಾಲ್ಯದಿಂದ- ಹುಡುಗನಾದಾರಭ್ಯ, ಧ್ಯಾನಿಸುವನು - ಪೂಜಿಸುತ್ತಲಿದಾನೆ, ತಾನು - ನಾನಾದರೊ, ಈತಂಗೆ-ಈ ಇಂದುಹಾಸನಿಗೆ, ಒಲಿದೆನು-ಮೆಚ್ಚಿದ್ದೇನೆ, (ಪ್ರಸನ್ನನಾಗಿರುವೆನು) ಎಂದು-ಎಂಬುದಾಗಿ ನುಡಿದು, ನಿಜರೂಪಮಂ-ತನ್ನ ನಿಶ್ಚಯವಾದ ಆಕೃತಿಯನ್ನು, ತೋರಲು-ಕಾಣಿಸಲು, ಅಂಬುಜಾಕ್ಷನ-ಕಮಲನಯನನಾದ ಶ್ರೀ ಕೃಷ್ಣಸ್ವಾಮಿಯ, ದಿವ್ಯ-ಉತ್ತಮವಾದ, ಮೂರ್ತಿಯಂ-ಆಕಾರವನ್ನು, ಕಂಡು-ನೋಡಿ, ಆ ಭೂನಾಥನು-ಆ ಪೊಡವಿಪನಾದ ಚಂದ್ರಹಾಸನು, ಪುಳುಕಿತನಾದನು-ರೋಮಾಂಚವುಳ್ಳವನಾದನು ॥೧೦॥

ಟೀ॥ ಶಂಬರಾರಿಯಪಿತಂ-ಶ್ರೀ ಕೃಷ್ಣಸ್ವಾಮಿಯು, ಆನೃಪತಿಯ-ಆ ನರಾಧಿಪನಾದ ಇಂದುಹಾಸನ, ಕಣ್ಗೆ-ನಯನಂಗಳಿಗೆ, ಪಾರ್ಥನ ರಥಾಗ್ರದೊಳ್-ಪಾರ್ಥನ-ಫಲುಗುಣನ, ರಥಾಗ್ರದೊಳ್-ರಥದ ಮುಂದುಗಡೆ, ಕಂಬು-ಶಂಖವು, ಚಕ್ರ-ಚಕ್ರಾಯುಧವು, ಅಬ್ಜ-ತಾವರೆಯು, ಕೌಮೋದಕಿಗಳಂ-ಗದೆ ಇವುಗಳನ್ನು, ಧರಿಸಿ-ಪಿಡಿದವನಾಗಿ, ಪೊಂಬಟ್ಟೆಯಂ-ಹಳದೀ ಬಣ್ಣದ ಮಡಿಯನ್ನು, ತಾಳ್ದು-ಉಟ್ಟುಕೊಂಡು, ಕೌಸ್ತುಭದ-ಕೌಸ್ತುಭವೆಂಬ ರತ್ನದ, ಶೋಭಾ-ಪ್ರಭೆಯ, ಅವಲಂಬದಿಂ-ಆಶ್ರಯದಿಂದ, ಸರ್ವಾಭರಣದಿಂ-ಸಮಸ್ತ ಒಡವೆಗಳಿಂದ, ಭೂಷಿತನಾಗಿ-ಅಲಂಕಾರವನ್ನೈದಿ, ದಿವ್ಯ-ಶ್ರೇಷ್ಠವಾದ, ಮಾಲೆಗಳನು-ದಂಡೆಗಳನ್ನು, ಆಂತು-ಹಾಕಿಕೊಂಡು, ತುಂಬಿದ-ಸಾಂದ್ರವಾದ, ಅವಯವದ-ಅವಯವಗಳ, ಲಾವಣ್ಯ-ಪ್ರಕಾಶಿಸತಕ್ಕ, ಲಹರಿಗಳ-ಪ್ರವಾಹಂಗಳ, ವಿಸಟಂಬರವ-ವಿಶಾಲತೆಯನ್ನು ಪಡೆದಿರತಕ್ಕ, ಕರುಣರಸದ-ಕರುಣಾರಸದಿಂದ ಕೂಡಿರುವ, ಎಳನಗೆಯು-ಹುಸಿನಗೆಯುಳ್ಳ, ಸಿರಿಮೊಗದ-ಕಾಂತಿಯುಕ್ತವಾದ ಮುಖವನ್ನುಳ್ಳವನಾಗಿ, ಎಸೆದನು-ಹೊಳೆಯುತ್ತಲಿದ್ದನು॥೧೧॥

ಟೀ॥ ಚಂದ್ರಹಾಸಂ-ಇಂದುಹಾಸನಾದರೊ, ಸೂಸುವ-ಕಾಣತಕ್ಕ, ಉದಕಂಗಳ-ಕಣ್ಣೀರುಗಳ, ಪೊನಲ್-ಪ್ರವಾಹವು, ಕಂಗಳ-ನಯನಂಗಳಿಂದ, ನಿರೀಕ್ಷಣದ-ಈಕ್ಷಿಸುವಿಕೆಯಿಂದುಂಟಾದ, ಸೌಖ್ಯಮಂ-ಆನಂದವನ್ನು, ತಡೆಯೆ-ಅಡ್ಡಗಿಸುತ್ತಿರಲು, ಭಯ-ಹೆದರಿಕೆಯಿಂದ, ಭರಿತ-ತುಂಬಲ್ಪಟ್ಟ, ಭಕ್ತಿ-ಭಕ್ತಿಯಾದರೊ, ಹರುಷದಿಂದ-ಆನಂದದಿಂದ, ಏಳ್ಗೆ-ಉಬ್ಬುವ, ಪುಳಕಂಗಳ-ರೋಮಾಂಚದ, ನೆಗಳ್ಕೆಯಿಂ-ಆಗುವುದರಿಂದ, ಬಾರಿಸೆ-ಮೇಲಕ್ಕೆಬ್ಬಿಸುತ್ತಿರಲು, ರಥವನು-ರಥದಿಂದ, ಇಳಿದು-ಕೆಳಕ್ಕಿಳಿದು, ಮಂಗಳ-ಶುಭಪ್ರದವಾದ, ಪವಿತ್ರ-ಸ್ವಚ್ಛವಾದ, ಕೋಮಲ-ಮೆತ್ತಗಿರತಕ್ಕ, ಪಾದಪದ್ಮಯುಗ್ಮಂಗಳ-ತಾವರೆಯ ಎಲೆಯನ್ನು ಹೋಲುವ ಎರಡು ಕಾಲ್ಗಳ, ಸಮೀಪದೊಳ್-ಹತ್ತಿರದಲ್ಲಿ, ಪ್ರಣಾಮಂಗಳ ವಿಧಾನಮಂ-ನಮಸ್ಕಾರಗಳನ್ನು, ಮಾಡುತ-ನೆರವೇರಿಸುತ್ತ, ಇರೆ-ಇರಲಾಗಿ, ಹರಿ-ಶ್ರೀ ಕೃಷ್ಣಸ್ವಾಮಿಯು, ಕೃಪೆಯೊಳು-ಕರುಣೆಯಿಂದ, ತೆಗೆದು-ಹತ್ತಿರಕ್ಕೆ ಕರೆದುಕೊಂಡು, ಬಿಗಿಯಪ್ಪಿದಂ-ಗಟ್ಟಿಯಾಗಿ ತಬ್ಬಿಕೊಂಡನು ॥

ಆಗಿ ದಿವ್ಯಾಕಾರದಿಂ ರಾರಾಜಿಸುತ್ತ ಅರ್ಜುನನ ಸಾರಥಿಯಾಗಿ ಕುಳಿತನು ॥ ೧೦ ॥ ಈ ರೀತಿಯಲ್ಲಿ ಶೋಭಿಸುತ್ತಲಿರುವ ಕೃಷ್ಣಸ್ವಾಮಿಯನ್ನು ಚಂದ್ರಹಾಸನು ನೋಡಿದೊಡನೆಯೇ ಆ ಇಂದುಹಾಸನ ಸಂತೋಷಕ್ಕೆ ಪಾರವೇ ಇರಲಿಲ್ಲವು. ಶರೀರವೆಲ್ಲಾ ರೋಮಾಂಚವಾಯಿತು ಕೂಡಲೇ ತನ್ನ ರಥದಿಂದ ಕೆಳಗಿಳಿದು ಅರ್ಜುನನ ತೇರಿನಬಳಿಗೆ ಬಂದು, ಕೃಷ್ಣಸ್ವಾಮಿಯ ಪಾದಾರವಿಂದಗಳಿಗೆರಗಿ ಆ ಮಹಾನುಭಾವನನ್ನು ಸ್ತೋತ್ರಮಾಡುತ್ತಲಿರುವಾಗ ಅಸುರಾರಿಯು ಆ ಇಂದುಹಾಸನನ್ನು ಮೆಲ್ಲಗೆ ಮೇಲಕ್ಕೆತ್ತಿ ಆನಂದಾತಿಶಯದಿಂದ ಬಾಚಿ ತಬ್ಬಿಕೊಂಡು ॥ ೧೧ ॥ ಎಲೈ ಅರ್ಜುನಾ! ಈ ಇಂದುಹಾಸನಾದರೊ ಮಹಾ

ಪೆಯೆಹರುಷದಿಂದೇಳ್ವವುಳ | ಕಂಗಳನೆಗಳ್ಕೆಯಿಂಭಯಭರಿತಭಕ್ತಿಬಾರಿಸೆ ರಥವನಿಳಿದುಬಂದು || ಮಂಗಳಪವಿತ್ರಕೋಮಲ ಪಾದಪದ್ಮಯು | ಗಂಗಳಸಮೀಪದೋಳ್ಚಂದ್ರಹಾಸಂಪ್ರಣಾ| ಮಂಗಳವಿಧಾನಮಂಮಾಡುತಿರೆಹರಿತೆಗೆದುಬಿಗಿಯಪ್ಪಿಕೃಪೆಯೊಳು ||೧೨| ಅಸುರಾರಿಬಳಿಕರ್ಜುನನವದನಮಂನೋಡಿ | ನಸುನಗುತನುಡಿದನೇತಕೆಸುಮ್ಮನಿಹೆಧರ್ಮಿ | ಶಶಿಹಾಸನತಿಬಲಂಪರಿಣತಂಧ್ರುವಸನ್ನಿಭಂತನಗೆಭಕ್ತನಿವನು || ಒಸೆದುನೀನಾಲಿಂಗಿಸೆನೆದೇವನಿಮ್ಮಡಿಗ | ಳುಸಿರದಿರಲಾತನ್ನಮಾರ್ಗಗತಿಲೇಸನ್ಯ | ರೆಸಗುವಂದದೊಳಾಚರಿಸೆಭಯಾವಹಮೆಂದುಭೀಷ್ಮಸಂಗರದೊಳೆನಗೆ ||೧೩|| ಅದರಿಂದಕಾಳಗವೆತನಗೆಕರ್ತವ್ಯಮೀ | ಪ್ರದದೊಳಾಲಿಂಗನಮುಚಿತಮಲ್ಲವೃದ್ಧನಹ | ನದರಿಂದಬೇಕಾದೊಡೀತಂಗೆವಂದಿಸುವೆನೆನೆತನ್ನಕಿಂಕರರ್ಗೆ || ಮುದದೊಳೆರಗಿದೊಡೆಮೇಣವರನಪ್ಪಿದೊಡೆ | ತಪ್ಪದುಮಾನವರ್ಗೆಕಾಪಿಲಗೋಸಹಸ್ರದಾ | ನದಪುಣ್ಯಮೆನ್ನಭಕ್ತರನಾದರಿಪ್ಪುದಧರ್ಮವೆಪಾರ್ಥಹೇಳೆಂದನು |೧೪|| ತನ್ನಶರಣರಜೀವನವೆತನಗೆಜೀವನಂ | ತನ್ನಶರಣರಬೇರೆತಿಳಿಯೆತಾಂಬೇರಲ್ಲ | ತನ್ನಶರಣರಹೃದಯಕಮಲದೊಳ್

ಅ|| ವಿ|| ಮಂಗಳಪವಿತ್ರ-ಕೋಮಲ ಪಾದಪದ್ಮ ಯುಗ್ಮಂಗಳು, ಪದ್ಮಗಳಂತಿರುವ ಪಾದಗಳು-ಪಾದಪದ್ಮಂಗಳು (ಉ-ಉತ್ತರಪದ), ಮಂಗಳವಾದ, ಪವಿತ್ರವಾದ, ಕೋಮಲವಾದ, ಪಾದಪದ್ಮಂಗಳು (ವಿ. ಪೂ.) ಮಂಗಳ............ಪಾದಪದ್ಮಂಗಳ ಯುಗ್ಮ (ಷ. ತ.) ಅಸುರಾರಿ (ಸ. ದೀ.) ||೧೨||

ಟೀ|| ಬಳಿಕ-ಅನಂತರ, ಅಸುರಾರಿ-ಕೃಷ್ಣಸ್ವಾಮಿಯು, ಅರ್ಜುನನ - ಪಾರ್ಥನ, ಮುಖಮಂ - ಮುಖವನ್ನು, ನೋಡಿ-ಈಕ್ಷಿಸಿ, ನಸುನಗುತ-ಮುಗುಳ್ನಗೆಯನ್ನೈದುತ್ತ, ನುಡಿದನು-ಮುಂದೆ ಹೇಳುವಂತೆ ತಿಳಿಸುವನು, ಏತಕೆ-ಯಾವ ನಿಮಿತ್ತದಿಂದ, ಸುಮ್ಮನಿಹೆ-ಮೌನವಾಗಿರುವಿ, ಶಶಿಹಾಸನು-ಇಂದುಹಾಸನಾದರೊ, ಧರ್ಮಿ-ಧರ್ಮಿಷ್ಠನು, ಅತಿಬಲಂ-ಬಹಳ ಪರಾಕ್ರಮಿಯು, ಪರಿಣತಂ-ತಿಳುವಳಿಕೆಯುಳ್ಳವನು, ಧ್ರುವ-ಧ್ರುವಚಕ್ರವರ್ತಿಗೆ, ಸನ್ನಿಭಂ-ಸದೃಶನು, ಇವನು-ಈ ಇಂದುಹಾಸನು, ತನಗೆ-ನನಿಗಾದರೊ, ಭಕ್ತನು-ಭಜಕನು, ನೀನು-ನೀನಾದರೊ, ಒಸೆದು-ವಿಶ್ವಾಸದಿಂದ, ಆಲಂಗಿಸು-ಅಪ್ಪಿಕೊ, ಎನೆ-ಎಂದು ನುಡಿಯಲು, ದೇವ-ಎಲೈ ಪ್ರಭುವೆ, ನಿಮ್ಮಡಿಗಳು, ಉಸಿರದಿರಲ್-ನುಡಿದಿರಲ್ಲವೇ, ಆತನ್ನ-ಅನನ್ನ, ಮಾರ್ಗಗತಿ-ರೀತಿಯು, ಲೇಸು-ಉತ್ತಮವು, ಅನ್ಯರು-ಬೇರೆಯವರು, ಎಸಗುವ-ಗೈವ, ಅಂದದೊಳು-ತೆರನಾಗಿ, ಆಚರಿಸೆ-ನೆರವೇರಿಸಲು, ಭೀಷ್ಮಸಂಗರದೊಳು-ಭೀಷ್ಮಾಚಾರ್ಯರೊಂದಿಗೆ ನಡೆಯಿಸಿದ ಕಾಳಗದಲ್ಲಿ, ಭಯಾವಹಂ-ಭಯವನ್ನುಂಟು ಮಾಡತಕ್ಕದ್ದಾಗಿದೆ, ಎಂದು-ಎಂಬತೆರನಾಗಿ, (ಎಂದರೆ ಭೀಷ್ಮಾಚಾರ್ಯನೊಂದಿಗೆ ಯುದ್ಧಮಾಡಿದಂತೆ ಈಗಲೂ ಈ ಚಂದ್ರಹಾಸನೊಂದಿಗೆ ಕದನವನ್ನು ಮಾಡಲೇಬೇಕೆಂದು ಭಾವವು) ||೧೩||

ಟೀ|| ಅದರಿಂದ-ಆದಕಾರಣ, ಕಾಳಗವೆ-ಹೋರಾಟವೇ, ತನಗೆ-ನನಗಾದರೊ, ಕರ್ತವ್ಯಂ-ಮಾಡತಕ್ಕದ್ದಾಗಿದೆ, ಈ ಪದದೊಳು-ಇಂತಹ ಕಾಲದಲ್ಲಿ, ಆಲಿಂಗನಂ-ತಬ್ಬಿಕೊಳ್ಳುವುದು, ಉಚಿತಂ ಅಲ್ಲ-ಯುಕ್ತವಾಗಿ ತೋರುವುದಿಲ್ಲ, ವೃದ್ಧನು-ಮುದುಕನು, ಅಹನು-ಆಗಿದ್ದಾನೆ, ಬೇಕಾದೊಡೆ-ನಿನಿಗೆ ಇಷ್ಟವಾಗಿದ್ದರೆ, ಈತಂಗೆ-ಈ ಇಂದುಹಾಸನಿಗೆ, ಅದರಿಂದ-ವೃದ್ಧನಾಗಿರೋಣದರಿಂದ, ವಂದಿಸುವೆನು-ವಂದನೆಯಂ ಮಾಡುವೆನು, ಎನೆ-ಎಂದು ನುಡಿಯಲು, (ಕೃಷ್ಣನು) ಪಾರ್ಥ-ಫಲುಗುಣನೆ, ತನ್ನಕಿಂಕರರ್ಗೆ-ನನ್ನ ಭಜನೆಯಂ ಮಾಡತಕ್ಕವರಿಗೆ, ಮುದದೊಳು-ಅಕ್ಕರೆಯಿಂದ, ಎರಗಿದೊಡೆ- ವಂದಿಸಿದರೆ, ಮೇಣು-ಅಲ್ಲದೆ, ಅವರನು-ಆ ಭಜಕರನ್ನು, ಅಪ್ಪಿದೊಡೆ-ತಬ್ಬಿಕೊಂಡರೆ, ಕಾಪಿಲ- ಕಪಿಲವರ್ಣವನ್ನುಂಟಾಗಿರುವ, ಗೋಸಹಸ್ರ-ಒಂದು ಸಾವಿರ ಆಕಳುಗಳ, ದಾನದ-ದಾನಮಾಡುವುದರ, ಪುಣ್ಯಂ-ಸುಕೃತವು, ಮಾನವರ್ಗೆ-ನರರಿಗೆ, ತಪ್ಪದು-ತಪ್ಪುವುದಿಲ್ಲವು. ಎನ್ನ-ನನ್ನ, ಭಕ್ತರನು-ಪೂಜೆ ಮಾಡತಕ್ಕವರನ್ನು, ಆದರಿಪುದು-ಸತ್ಕರಿಸತಕ್ಕದ್ದು, ಅಧರ್ಮವೆ-ಧರ್ಮಕ್ಕೆ ವಿರುದ್ಧವೇ, ಎಂಬುದಾಗಿ ಪ್ರಶ್ನೆಮಾಡಿದನು ||೧೪||

ಟೀ|| ಅಸುರಾರಿ- ರಾಕ್ಷಸಾಂತಕನಾದ ಕೃಷ್ಣಸ್ವಾಮಿಯು, ನಗುತ - ಮುಗುಳ್ನಗೆಯನ್ನೈದುತ್ತ, ಕೌಂತೇಯ

ಧರ್ಮಿಷ್ಠನು ಧ್ರುವನಂತೆ ಶಾಶ್ವತವಾದ ಭಕ್ತಿಯುಳ್ಳವನು ನನಿಗೆ ಪ್ರೀತಿಪಾತ್ರನೂ ಆಗಿರುವುದರಿಂದ ಇವನನ್ನು ಸಂತೋಷದಿಂದ ಆಲಿಂಗಿಸೆಂದು ನುಡಿಯಲು. ||೧೨|| ಅರ್ಜುನನು ಕೃಷ್ಣಮೂರುತಿಯನ್ನು ಕುರಿತು, ಎಲೈ ಮಹಾನುಭಾವನೆ, ಭೀಷ್ಮನೊಂದಿಗೆ ಕಾದಿದಂತೆ ಈಗ ಈ ಇಂದುಹಾಸನೊಂದಿಗೆ ಯುದ್ಧಮಾಡುವುದೇ ಹೊರತು ಆಲಿಂಗನವು ಸರಿಯಲ್ಲವು. ಈತನು ವಯೋವೃದ್ಧನಾಗಿರುವುದರಿಂದ ನಮುಸ್ಕಾರವನ್ನು ಮಾಡುವೆನೆಂದು ನುಡಿದನು. || ೧೩ || ಆಗ ಕೃಷ್ಣನು ಕೇಳೈ ಫಲುಗುಣಾ ! ನನ್ನ ಭಕ್ತರನ್ನು ಆಲಂಗಿಸಿಕೊಂಡು, ಅವರಿಗೆ ವಂದನೆಯನ್ನು ಮಾಡುವವರಿಗೆ ಕಪಿಲಬಣ್ಣದ ಸಹಸ್ರ ಗೋದಾನಗಳಂ ಮಾಡುವ ಮಹಾಪುಣ್ಯ ಪ್ರಾಪ್ತಿಯಾಗುವುದು ||೧೪|| ನನ್ನ ಭಕ್ತರ ದೇಹವೇ ನನ್ನದೇಹವು, ಅವರ ಬಾಳೇ ನನ್ನಬಾಳು, ಅವರ

ಪ್ರತ್ಯಕ್ಷನಾಗಿತಾನಿರುತಿರ್ಪನು ‖ ನಿನ್ನತೆರದಲಿಮರುಳರಾರುಂಟುಲೋಕದೋಳ್ | ನಿನ್ನತೆರದಿಂದೀತನೆನಗೆಬೇಕಾದವಂ | ನಿನ್ನ ತೆರನೇನೆಂದುಜರೆದುಕೌಂತೇಯನಂಕೇಳ್ದನಸುರಾರಿನಗುತ ‖೧೫‖ ಭೂಪಾಲಕೇಳ್ಬಳಿಕಫಲುಗುಣಂಕೃಷ್ಣನನಿ | ರೂಪಮಂಕೈಕೊಂಡುಹರುಷದಿಂದಾಗನಿ|ಷ್ಪಾಪನಾಗಿಹಚಂದ್ರಹಾಸನಂಬಂದುಗಾಢಾಲಿಂಗನಂಗೆಯ್ಯಲು‖ ಆಪೊಡವಿಪತಿನುಡಿದನೆಲೆಪಾರ್ಥ ಕದನದಾ| ಳಾಪಮಂನಿನ್ನೊಡನೆಮಾಡಿದೊಡನೃಪಮುಖಂ| ಲೋಪಮಹುದೆಂದುಕಳುಹಿದೆನೆನ್ನತನುಜರಂತುರಗರಕ್ಷಾರ್ಥಮಾಗಿ‖೧೬ ಹಲವುಮಾತುಗಳೇಕೆನಮಗೆನಿಮಗಾಶ್ರಯಂ | ಜಲಜಾಕ್ಷನಾಗಿರ್ದಬಳಿಕಾಧರ್ಮಕೌಶಲಮಕಟ | ಸಾಕಿನ್ನುಪಾರ್ಥನಿನ್ನಶ್ವಂಗ

---

ನಂ-ಕುಂತೀಪುತ್ರನಾದ ಪಾರ್ಥನನ್ನು, ಜರೆದು_ತಿರಸ್ಕರಿ, ತನಗೆ_ನನಗಾದರೊ, ತನ್ನ ಶರಣರ-ನನ್ನನ್ನು ಮರೆಹೊಕ್ಕಿರತಕ್ಕವರ, ಜೀವನವೆ-ಬಾಳೆ, ಜೀವನವು-ಬದುಕುವಿಕೆಯು, ತನ್ನ ಶರಣರು_ನನ್ನ ಭಜಕರು, ಬೇರೆ ತಿಳಿಯೆ_ಬೇರೆ ವಿಧವಾಗಿ ತಿಳಿದುಕೊಂಡರೆ, ತಾಂ_ನಾನು, ಬೇರಲ್ಲ-ಬೇರೆಯಾದವನಾಗಿಲ್ಲ, ನಾನು-ತಾನಾದರೊ, ತನ್ನ ಶರಣರ-ನನ್ನನ್ನು ಮರೆಹೊಕ್ಕವರ, ಹೃದಯಕಮಲದೋಳ್-ಕಮಲಕ್ಕೆ ಸಮನಾದ ಮನಸ್ಸಿನಲ್ಲಿ, ಪ್ರತ್ಯಕ್ಷಮಾಗಿ-ಗೋಚರವಾಗುವಂತೆ, ಇರುತಿರ್ಪನು-ಇರುತ್ತೇನೆ, ಲೋಕದೊಳ್-ಭೂಮಿಯಲ್ಲಿ, ಮರುಳರು- ಅವಿವೇಕಿಗಳು, ನಿನ್ನ ತೆರದೊಳು- ನಿನ್ನಂತೆ, ಆರು-ಮತ್ತೆ ಯಾರು, ಉಂಟು-ಇದ್ದಾರೆ, ಈತನು-ಈ ಇಂದುಹಾಸನು, ಎನಗೆ-ನನಿಗಾದರೊ, ನಿನ್ನ ತೆರದಿಂದ-ನಿನಗಿಂತಲೂ ಹೆಚ್ಚಾಗಿಯೇ, ಬೇಕಾದವಂ-ಬೇಕಾದವನಾಗಿರುವನು, ನಿನ್ನ ತೆರನು- ನಿನ್ನ ಬಗೆಯು, ಏನು- ಎಂಥಾದ್ದು, ಎಂದು- ಎಂಬುದಾಗಿ, ಕೇಳ್ದನು- ತಿರಸ್ಕರಿಸಿ ನುಡಿದನು. ‖೧೫‖

ಟೀ‖ ಭೂಪಾಲ_ಭೂಕಾಂತನಾದ ಜನಮೇಜಯನೆ, ಕೇಳು_ಲಾಲಿಸು, ಬಳಿಕ_ಅನಂತರ, ಫಲುಗುಣಂ_ಪಾರ್ಥನು, ಕೃಷ್ಣನ-ಕೃಷ್ಣಸ್ವಾಮಿಯ, ನಿರೂಪಮಂ-ಆಜ್ಞೆಯನ್ನು, ಕೈಕೊಂಡು_ಅನುಮೋದಿಸಿ, ಹರುಷದಿಂದ-ಆನಂದದಿಂದ, ಬಂದು_ಬಂದವನಾಗಿ, ಆಗ-ಆ ವೇಳೆಯೊಳಗೆ, ನಿಷ್ಪಾಪನಾಗಿ-ಪಾಪರಹಿತನಾಗಿ, ಇಹ-ಇರತಕ್ಕ, ಚಂದ್ರಹಾಸನಂ_ಇಂದುಹಾಸನನ್ನು, ಗಾಢಾಲಿಂಗನಂಗೆಯ್ಯಲು_ ಭದ್ರವಾಗಿ ಅಪ್ಪಿಕೊಳ್ಳಲು, ಆ ಪೊಡವಿಪತಿ_ಆ ಧರಣೀಶನಾದ ಇಂದುಹಾಸನು, ಎಲೆ ಪಾರ್ಥ-ಅಯ್ಯಾ ಫಲುಗುಣ, ನಿನ್ನೊಡನೆ-ನಿನ್ನ ಕೂಡ, ಕದನದ-ಕಾಳಗದ, ಆಳಾಪಮಂ-ಪ್ರಸಂಗವನ್ನು, ಮಾಡಿದೊಡೆ_ಪ್ರಾರಂಭಿಸಿದರೆ, ನೃಪ-ಧರ್ಮನಂದನನ, ಮಖಂ_ಯಾಗವು, ಲೋಪಂ_ಕೊರತೆಗೆ ಸಿಕ್ಕುವುದು, ಅಹುದು_ಆಗುತ್ತದೆ, ಎಂದು-ಎಂಬ ತೆರನಾಗಿ ತಿಳಿದು, ತುರಗ_ಯಜ್ಞಾಶ್ವಂಗಳ, ರಕ್ಷಾರ್ಥಮಾಗಿ_ಪಾಲನೆಗೋಸುಗ, ಎನ್ನ-ನನ್ನ, ತನುಜರಂ_ಕುವರರಾದ ಪದ್ಮಾಕ್ಷ ಮಕರಧ್ವಜರನ್ನು, ಕಳುಹಿದೆನು-ಕಳುಹಿಸಿಕೊಟ್ಟಿದ್ದೇನೆಂಬದಾಗಿ, ನುಡಿದನು-ಹೇಳಿದನು. ‖೧೬‖

ಟೀ‖ ಹಲವು ಮಾತು_ಅತಿಶಯವಾದ ನುಡಿಗಳು, ಏಕೆ-ಏನು ಪ್ರಯೋಜನ, ನಮಗೆ-ನಮಗೂ, ನಿಮಗೆ_ನಿಮಗೂ, ಆಶ್ರಯಂ_ ಆಧಾರವಾಗಿರುವನು, ಜಲಜಾಕ್ಷನು - ಶ್ರೀಕೃಷ್ಣನು, ಆಗಿರ್ದ ಬಳಿಕ- ಆದನಂತರ, ಆವ_ ಯಾವತೆರನಾದ, ಧರ್ಮಕೌಶಲಂ_ ಕ್ಷಾತ್ರಧರ್ಮವು ಬೇಕಾಗಿರುವುದು, ಪಾರ್ಥ- ಫಲುಗುಣನೆ, ಅಕಟ-ಅಯ್ಯೋ, ಇನ್ನು- ಇನ್ನುಮುಂದೆ, ಸಾಕು_ಯುದ್ಧದಗೊಡವೆ ಬೇಡವು, ನಿನ್ನ_ನಿನ್ನದಾದ, ಅಶ್ವಂಗಳಂ_ತುರಂಗಮಂಗಳನ್ನು, ತರಿಸಿಕೊಡುವೆನು-ತರಿಸಿಕೊಡುತ್ತೇನೆ, ಎನುತ_ಎಂದು ನುಡಿಯುತ್ತ, ಚರರಂ_ತನ್ನ ದೂತರನ್ನು, ಕುದುರೆಗಾವಲ್ಗೆ_ಯಾಗದ ಕುದುರೆಗಳ ಪಾಲನೆಗೆ, ಬಲಸಹಿತ_ದಳದೊಂದಿಗೆ, ಪೋಗಿಹ_ಹೋಗಿರತಕ್ಕ, ಸುತರ ಬಳಿಗೆ_ಪುತ್ರರ ಸಮಿಪಕ್ಕೆ, ಕಳುಹಿ_ಕಳುಹಿಸಿ ಕೊಟ್ಟವನಾಗಿ, ತರಿಸಲು_ಬರುವಂತೆ ಮಾಡಲಾಗಿ, ಅವರು_ಆ ಪುತ್ರರೀರ್ವರೂ, ಐತಂದು_ಬಂದವರಾಗಿ, ಅತಿ ಭಕ್ತಿಯಿಂದ-ಹೆಚ್ಚಾದ ಭಕ್ತಿಯಿಂದ,

---

ಹೃದಯಾಬ್ಜವೇ ನನಗೆ ನೆಲೆಯು, ನನಗೆ ಈ ಇಂದುಹಾಸನಲ್ಲಿ ನಿನಗಿಂತಲೂ ಹೆಚ್ಚಾದ ಪ್ರೇಮವಿರುವಾಗ ಈ ಚಂದ್ರಹಾಸನನ್ನು ಆಲಂಗಿಸುವುದು ತಕ್ಕುದಲ್ಲವೆಂದು ನುಡಿಯುತ್ತಲಿರುವ ನಿನಗಿಂತಲೂ ಮೂಢಾತ್ಮರು ಮತ್ತಾರಿರುವರು ‖೧೫‖ ಎಂದು ಜರಿಯಲು, ಫಲುಗುಣನು ಕೃಷ್ಣಸ್ವಾಮಿಯ ಸದ್ಬೋಧನೆಯಿಂದ ತಡಮಾಡದೆ ಬಂದು ಇಂದುಹಾಸನನ್ನು ಅಪ್ಪಿಕೊಳ್ಳಲು ಆಗ ಇಂದುಹಾಸನು ಪಾರ್ಥನನ್ನು ಕುರಿತು ಕೇಳೈ ಫಲುಗುಣಾ! ನಿನ್ನೊಡನೆ ಯುದ್ಧಕ್ಕೆ ನಿಂತರೆ ಧರ್ಮನಂದನನ ಯಾಗಕ್ಕೆ ಭಂಗಬಂದೀತೆಂದು ಯೋಚಿಸಿ, ಯಜ್ಞಾಶ್ವಗಳ ರಕ್ಷೆಗಾಗಿ ನನ್ನ ಕುವರರಾದ ಪದ್ಮಾಕ್ಷ ಮಕರಧ್ವಜರನ್ನು ಕಳುಹಿಸಿರುವೆನು, ‖ ೧೬ ‖ ಎಲೈ ಅರ್ಜುನ, ಹೆಚ್ಚಾದ ಮಾತುಗಳಿಂದ ಫಲವೇನು ನಮ್ಮಿಬ್ಬರಿಗೂ ಕೃಷ್ಣಸ್ವಾಮಿಯೇ ಆಸರೆಯಾಗಿರುವುದರಿಂದ ನಾನು ಈಗಲೇ ಚರರನ್ನು ಕಳುಹಿಸಿ ಯಜ್ಞಾಶ್ವಂಗಳನ್ನು ತರಿಸಿ ನಿನಗೆ ಕೊಡುವೆನೆಂದು ನುಡಿದು ಕೂಡಲೆ ದೂತರನ್ನು ತನ್ನ ಕುವರರಿದ್ದೆಡೆಗಟ್ಟಿದನು, ಅವರು ತಡಮಾಡದೆ ಹೋಗಿ ಪದ್ಮಾಕ್ಷ ಮಕರಧ್ವಜರಿಗೆ ಚಂದ್ರಹಾಸನ ಆಜ್ಞೆಯನ್ನು ಅರಿಕೆಮಾಡಿದರು. ಅವರೀರ್ವರೂ ಯಜ್ಞಾಶ್ವಂಗಳೊಂದಿಗೆ ಜಾಗ್ರತೆಯಾಗಿ ಬಂದು, ತಂದೆಯ ಅಪ್ಪಣೆಯ

ಳಂತರಿಸಿಕೊಡುವೆನೆನುತ ‖ ಬಲಸಹಿತಕುದುರೆಗಾವಲ್ಗೆ ಪೋಗಿಹಸುತರ । ಬಳಿಗೆಚರರಂಕಳುಹಿಕರಸಲವರೈತಂದು । ಫಲುಗುಣನವಾಜಿಗಳನೊಪ್ಪಿಸಿಮುರಾರಿಯುಂಕಂಡನತಿಭಕ್ತಿಯಿಂದ ‖ ೧೭ ‖ ನರನೊಡನೆಸಖ್ಯಮಾದುದುಬಳಿಕಬಂದುನೃಪ । ರೆಲ್ಲರಂಪ್ರಿಯದೊಳಾದರಿಸಿದಂಕೂಡೆ । ಹರಿಯನತಿಭಕ್ತಿಯಿಂದೈದೆಕೊಂಡಾಡಿದಂನಿರುಪಮಸ್ತುತಿಗಳಿಂದ ‖ ಪರಿಪರಿಯಗುಡಿತೋರಣಾವಳಿಯರಚನೆಮಿಗೆ । ಪುರಕೆಬಿಜಯಂಗೈಸಿತಂದನುತ್ಸವದಿಂ । ದಸಿರಿಯನುರೆವಿಸ್ತರಿಸಿಭೂಪುರಂದರನಂತೆಚಂದ್ರಹಾಸಂಮೆರೆದನು ‖೧೮‖ ಇನ್ದುಹಾಸಾಶ್ರಯದೊಳಿರ್ದಖಿಳಪುರಜನಂ । ಕಂದರ್ಪತಾತನಂಕಂಡುಕೃತಕೃತ್ಯಮಾಯ್ತಿಂದಿರಾವಲ್ಲಭನ । ಸಂದರ್ಶಕೆದುಷ್ಟಬುದ್ಧಿನಿಜಸೂನುಸಹಿತ‖ ಬಂದುನಿರ್ಧೂತಕಿಲ್ಬಿಷನದನಾಗಳೈತಂದುಗಾಲವನಸುರಮರ್ದನನಪಾದಾರ।ವಿಂದಮಂವಿವಿಧಾಗಮೋಕ್ತಿಯಿಂಪೂಜಿಸಿದನತಿಭಕ್ತಿಭಾವದಿಂದ‖೧೯‖ ಪ್ರೀತಿಯಿಂಚಂದ್ರಹಾಸಂತನ್ನರಾಜ್ಯಮಂ । ಪೀತಾಂಬರನಚರಣ

---

ಫಲುಗುಣನ-ಪಾರ್ಥನ, ವಾಜಿಗಳನು-ತುರಂಗಗಳನ್ನು, ಒಪ್ಪಿಸಿ-ಒಪ್ಪಿಸಿ ಬಿಟ್ಟು, ಮುರಾರಿಯುಂ-ಶ್ರೀ ಕೃಷ್ಣನನ್ನು, ಕಂಡರು-ಕಾಣಿಸಿಕೊಂಡರು. ‖೧೭‖

ಟೀ‖ ಸಖ್ಯಂ-ಸ್ನೇಹವು, ನರನೊಡನೆ-ಪಾರ್ಥನೊಂದಿಗೆ, ಆದುದು-ಉಂಟಾಯಿತು, ಬಳಿಕ-ಅನಂತರ, ಬಂದ ನೃಪರೆಲ್ಲರಂ-ಬಂದ ರಾಜರುಗಳನ್ನೆಲ್ಲಾ, ಪ್ರಿಯದೊಳು-ವಿಶ್ವಾಸದಿಂದ, ಆದರಿಸಿದಂ-ಸತ್ಕರಿಸಿದನು, ಕೂಡೆ-ಒಡನೆಯೇ, ಅತಿ ಭಕ್ತಿಯಿಂದ-ಹೆಚ್ಚಾದ ಭಕ್ತಿಯುಳ್ಳವನಾಗಿ, ನಿರುಪಮ-ಅಸದೃಶವಾದ, ಸ್ತುತಿಗಳಿಂದ-ಹೊಗುಳುವುದರ ದೆಸೆಯಿಂದ, ಐದೆ-ಚನ್ನಾಗಿ, ಹರಿಯನು-ಕೃಷ್ಣಸ್ವಾಮಿಯನ್ನು, ಕೊಂಡಾಡಿದಂ-ನುತಿಸಿದನು, ಪರಿಪರಿಯ-ತಂಡತಂಡವಾದ, ಗುಡಿ-ಚಪ್ಪರಗಳು, ತೋರಣ-ತೋರಣಗಳು ಇವುಗಳ, ಆವಳಿಯ-ಸಮುದಾಯದ, ರಚನೆ-ಅಲಂಕಾರಗಳೆಲ್ಲಾ, ಮಿಗೆ-ಹೆಚ್ಚಾಗಿ, ಮೆರೆಯೆ-ಕಾಂತಿಯುಕ್ತವಾಗಲು, ಪುರಕೆ-ನಗರಕ್ಕೆ, ಬಿಜಯಂಗೈಸಿ-ಬರಮಾಡಿ, ಉತ್ಸವದಿಂದ-ಅತ್ಯಾನಂದದಿಂದ, ತಂದನು-ಕರೆದುಕೊಂಡು ಬಂದವನಾದನು, ಚಂದ್ರಹಾಸಂ-ಇಂದುಹಾಸನು, ಉರೆ-ಹೆಚ್ಚಾಗಿ, ಸಿರಿಯನು-ತನ್ನ ಐಶ್ವರ್ಯವನ್ನು, ವಿಸ್ತರಿಸಿ-ಪ್ರಕಟನೆಯಂ ಮಾಡಿ, ಭೂ-ಭೂಲೋಕದ, ಪುರಂದರನಂತೆ-ದೇವೇಂದ್ರನೋಪಾದಿಯಲ್ಲಿ, ಮೆರೆದನು-ಪ್ರಕಾಶಿಸುತ್ತಲಿದ್ದನು. ‖೧೮‖

ಟೀ‖ ಕಂದರ್ಪ-ಮನ್ಮಥನ, ತಾತನಂ-ತಂದೆಯಾದ ಕೃಷ್ಣಸ್ವಾಮಿಯನ್ನು, ಇಂದುಹಾಸನ-ಶಶಿಹಾಸನ, ಆಶ್ರಯದೊಳು-ಆಸರೆಯಲ್ಲಿ, ಇರ್ದ-ಇದ್ದಂಥ, ಅಖಿಳ-ಸಕಲರಾದ, ಪುರಜನಂ-ನಗರವಾಸಿಗಳೂ, ಕಂಡು-ಈಕ್ಷಿಸಿದವರಾಗಿ, ಕೃತಕೃತ್ಯಮಾಯ್ತು-ಕೃತಾರ್ಥರಾದರು, ಇಂದಿರಾ-ಲೋಕಮಾತೆಯ, ವಲ್ಲಭನ-ಕಾಂತನಾದ ಕೃಷ್ಣಮೂರುತಿಯ, ಸಂದರ್ಶನಕೆ-ದರ್ಶನದ ಸಲುವಾಗಿ, ನಿಜಸೂನು ಸಹಿತ-ತನ್ನ ಕುವರನಾದ ಮದನನೊಂದಿಗೆ, ದುಷ್ಟಬುದ್ಧಿ-ದುಷ್ಟಬುದ್ಧಿಯೆಂಬಾತನು ಬಂದು-ಬಂದವನಾಗಿ, ನಿರ್ಧೂತ-ನಿವಾರಣೆಯನ್ನೈದಿದ, ಕಿಲ್ಬಿಷನು-ದೋಷವುಳ್ಳವನ್ನು ಆದನು, ಗಾಲವನು-ಗಾಲವ ಋಷಿಯೂ, ಆಗಲೆ-ಒಡನೆಯೇ, ಐತಂದು-ಬಂದವನಾಗಿ, ಅತಿ ಭಕ್ತಿಭಾವದಿಂದ-ಹೆಚ್ಚಾದ ಭಕ್ತಿಪೂರ್ವಕವಾಗಿ, ವಿವಿಧ-ತಂಡತಂಡವಾದ, ಆಗಮ-ವೇದಗಳ, ಉಕ್ತಿಯಿಂದ-ವಚನಗಳಿಂದ, ಅಸುರಮರ್ದನನ-ರಾಕ್ಷಸ ಸಂಹಾರಕನಾದ ಕೃಷ್ಣಪರಮಾತ್ಮನ, ಪಾದಾರವಿಂದಮಂ-ಅಡಿದಾವರೆಯ್ನು, ಪೂಜಿಸಿದನು. ‖೧೯‖

ಟೀ‖ ಚಂದ್ರಹಾಸಂ-ಇಂದುಹಾಸನು, ಪೀತಾಂಬರನ-ಹೊಂಬಣ್ಣದ ವಸ್ತ್ರವನ್ನುಟ್ಟಿರುವ ಶ್ರೀ ಕೃಷ್ಣಸ್ವಾಮಿಯ, ಚರಣಸರಸಿರುಹಕೆ-ಕಮಲದಂತಿರುವ ಪಾದಗಳಿಗೆ, ತನ್ನ ರಾಜ್ಯಮಂ-ತನ್ನ ದೇಶವನ್ನು, ಪ್ರೀತಿಯಿಂದ-ಪ್ರೇಮದಿಂದ, ಅರ್ಪಿಸಿದನು-ಕೊಟ್ಟನು, ಆತಂ-ಆ ಕೃಷ್ಣಮೂರುತಿಯಾದರೊ, ಎಸೆದು-ಕಾಂತಿಯುಕ್ತನಾಗಿ, (ಪ್ರಕಾಶವಾಗಿ) ವಿಷಯಾಕುಮಾರಂಗೆ-ವಿಷಯೆಯ ತನುಜನಾದ ಮಕರಧ್ವಜನೆಂಬಾತನಿಗೆ, ಧನಂಜಯನ ಸಮ್ಮತದೊಳು-ಪಾರ್ಥನ ಇಷ್ಟದಂತೆ, ಕೊಟ್ಟು-ಕೊಟ್ಟವ

---

ಮೇರೆಗೆ ಆ ಕುದುರೆಗಳನ್ನು ಅರ್ಜುನನಿಗೊಪ್ಪಿಸಿ ಕೃಷ್ಣಸ್ವಾಮಿಯ ಪಾದಾರವಿಂದಗಳಿಗೆ ಭಕ್ತ್ಯತಿಶಯದಿಂದೆರಗಿದರು ‖ ೧೭ ‖ ಕೇಳೈ ಜನಮೇಜಯನೆ, ಆ ಬಳಿಕ ಇಂದುಹಾಸನಿಗೂ ಅರ್ಜುನನಿಗೂ ಸ್ನೇಹವಾಯಿತು. ಮಯೂರಧ್ವಜಾದಿ ರಾಜರನ್ನೆಲ್ಲಾ ವಿಶ್ವಾಸದಿಂದ ನೋಡಿದನು, ಶ್ರೀ ಕೃಷ್ಣಮೂರುತಿಯನ್ನು ಅತ್ಯಂತ ಭಕ್ತಿಯಿಂದ ಕೊಂಡಾಡುತ್ತಲಿದ್ದನು. ಅನಂತರ ತನ್ನ ಪಟ್ಟಣವನ್ನೆಲ್ಲಾ ಅಲಂಕಾರಮಾಡಿಸಿ ಕೃಷ್ಣಾದಿಗಳನ್ನೆಲ್ಲಾ ತನ್ನ ಊರಿಗೆ ಕರೆದುಕೊಂಡು ಹೋದನು. ತನ್ನ ಜನ್ಮವು ಇಂದಿಗೆ ಸಫಲವಾಯಿತೆಂದುಂಟಾದ ಆ ಶಶಿಹಾಸನ ಸಂತೋಷಕ್ಕೆ ಪಾರವೇ ಇರಲಿಲ್ಲವು. ಆಗ ಆ ಕುಂತಳನಗರವು ಭೂಲೋಕದ ಸ್ವರ್ಗದಂತೆ ಹೊಳೆಯುತ್ತಲಿತ್ತು. ‖೧೮‖ ಇಂದುಹಾಸನ ರಾಜ್ಯದ ಸಕಲ ಪ್ರಜೆಗಳೂ ಶ್ರೀ ಕೃಷ್ಣ ಸಂದರ್ಶನದಿಂದ ಧನ್ಯರಾದರು. ದುಷ್ಟಬುದ್ಧಿಯು ತನ್ನ ಕುವರನೊಂದಿಗೆ ಬಂದು ಸ್ವಾಮಿಯ ಪಾದಾರವಿಂದಗಳಿಗೆರಗಿದನು. ಗಾಲವಮುನಿಯೂ ಶ್ರೀ ಕೃಷ್ಣನನ್ನು ಭಕ್ತಿಯಿಂದ ಪೂಜಿಸುತ್ತಲಿದ್ದನು. ‖ ೧೯ ‖ ಆ ಬಳಿಕ ಸಂತುಷ್ಟಾಂತರಂಗನಾದ ಇಂದುಹಾಸನು ತನ್ನ ರಾಜ್ಯವನ್ನು

ಸರಸಿರುಹಕರ್ಪಿಸಿದ| ನಾತಂಧನಂಜಯನಸಮ್ಮತದೊಳೆಸೆದುವಿಷಯಾಕುಮಾರಂಗೆಕೊಟ್ಟು || ಖ್ಯಾತಮಾದಖಿಳವಸ್ತುಗಳೊಡನೆ ಗಜಪುರಕೆ | ದೂತರಂಕಳುಹಿಸತ್ಕೃತನಾಗಿಭೂಪತಿ | ವ್ರಾತಸಹಿತಲ್ಲಿಮೂರಿರುಳಿರ್ದುಪೊರಮಟ್ಟನಾನೆಕುದುರೆಗಳಕೂಡೆ ||೨೦|| ಮುಪ್ಪಾದೆನೆಲೆಮಗನೆಕೃಷ್ಣದರುಶನದಿಂದ | ತಪ್ಪದೆನಗಿನ್ನು ಮೋಕ್ಷದಲಾಭಮಸುರಾರಿ | ಗೊಪ್ಪಿಸುವೆನೀತನುವನಿವರ ಧ್ವರಂಮುಗಿದಬಳಿಕವನಕಾಂಪೋಪೆನು | ಬಪ್ಪುದಿಲ್ಲದರಿಂದನಗರಕರಸಾಗಿಸುಖ | ವಿಪ್ಪುದೆಂದಿರಿಸಿನಿಜತನಯರಂಶರಧಿಗೆಣೆ | ಯಪ್ಪಸೈನಿಕದೊಡನೆಪೊರಮಟ್ಟನಾಚಂದ್ರಹಾಸನರ್ಜುನನಕೂಡೆ ||೨೧|| ಪುತ್ರಸಂಪದಮಾಯುರಾರೋಗ್ಯಮರಿವುಶತ | ಪತ್ರನಾಭನಭಕ್ತಿದೃಢವಾಗಲೀತನಚ| ರಿತ್ರಮಂಕೇಳ್ದವರ್ಗೆಂದುಹರಿವರಂವನಿತ್ತಾತನಂಕೂಡಿಕೊಂಡು || ಸುತ್ರಾಮಸುತನಕುದುರೆಗಳೊಡನೆತೆರಳ್ದಂಥ | ರಿತ್ರಿಯೊಳ್ದೇಶದೊಳ್ದಿರ್ದಭುಜಬಲದ | ಕ್ಷತ್ರಿಯೋತ್ತಮರಂಜಿತುಂಗಂಗಳಂತಡೆಯದಭಿನಮಿಸಿಬಿಡು

---

ನಾಗಿ ದೂತರಂ-ತನ್ನ ಸೇವಕರನ್ನು, ಖ್ಯಾತಮಾದ-ಹೆಸರುವಾಸಿಯಾದ, ಅಖಿಲವಸ್ತುಗಳೊಡನೆ-ಸಕಲ ಪದಾರ್ಥಗಳೊಂದಿಗೆ, ಗಜಪುರಿಗೆ-ವಾರಣಾವತಕ್ಕೆ, ಕಳುಹಿ-ಕಳುಹಿಸಿದವನಾಗಿ, ಸತ್ಕೃತನಾಗಿ-ಮನ್ನಣೆಯನ್ನೈದಿ, ಅಲ್ಲಿ - ಆ ಕುಂತಳ ನಗರದಲ್ಲಿ, ಇವೆ-ಚನ್ನಾಗಿ, ಮೂರಿರುಳು-ಮೂರುರಾತ್ರಿ, ಭೂಪತಿವ್ರಾತಸಹಿತ-ಅರಸುಗಳ ಸಮೂಹದೊಂದಿಗೆ, ಇರ್ದು-ಇದ್ದವನಾಗಿ, ಕೂಡೆ-ಒಡನೆಯೇ, ಪೊರಮಟ್ಟನು-ಹೊರಟವನಾದನು. ||೨೦||

ಟೀ|| ಚಂದ್ರಹಾಸನು, ಎಲೆಮಗನೆ - ಎಲೈ ಕುವರನಾದ ಮಕರಧ್ವಜನೆ, ಮುಪ್ಪಾದೆನು - ಮುದುಕನಾಗಿದ್ದೇನೆ. ಇನ್ನು-ಇನ್ನುಮುಂದೆ, ಎನಗೆ-ನನಿಗಾದರೋ, ಕೃಷ್ಣದರುಶನದಿಂದ-ಕೃಷ್ಣಸ್ವಾಮಿಯನ್ನು ನೋಡೋಣದರಿಂದ, ಮೋಕ್ಷದ ಲಾಭಂ - ಮುಕ್ತಿದೊರೆಯುವುದು, ತಪ್ಪದು - ತಪ್ಪಿಹೋಗುವುದಿಲ್ಲವು, ಈತನುವನು - ಈ ನನ್ನ ದೇಹವನ್ನು, ಅಸುರಾರಿಗೆ-ರಾಕ್ಷಸಾಂತಕನಾದ ಕೃಷ್ಣನಿಗೆ, ಒಪ್ಪಿಸುವೆನು - ಒಪ್ಪಿಸುತ್ತೇನೆ, ಇವರ-ಈ ಧರ್ಮಾದಿಗಳ, ಅಧ್ವರಂ - ಯಾಗವು, ಮುಗಿದ ಬಳಿಕ-ಪೂರೈಸಿದ ನಂತರ, ಆಂ-ನಾನಾದರೊ, ವನಕೆ-ಕಾಡಿಗೆ, ಪೋಪೆನು - ಹೊರಟು ಹೋಗುತ್ತೇನೆ, ಬಪ್ಪುದಿಲ್ಲ-ತಿರುಗಿ ಬರುವುದಿಲ್ಲವು. ಅದರಿಂದ-ಆದಕಾರಣ, ನಗರಕೆ-ಕುಂತಳರಾಜ್ಯಕ್ಕೆ, ಅರಸಾಗಿ-ರಾಜನಾಗಿ, ಸುಖಂ-ಸುಖವಾಗಿ, ಇರ್ಪುದು-ಇರಬೇಕು. ಎಂದು-ಎಂಬತೆರನಾಗಿ, ನಿಜತನಯರಂ-ತನ್ನ ಕುವರರಾದ ಪದ್ಮಾಕ್ಷ ಮಕರಧ್ವಜರನ್ನು, ಇರಿಸಿ-ಬಿಟ್ಟು, ಶರಧಿಗೆ-ಸಾಗರಕ್ಕೆ, ಎಣೆಯು-ಸದೃಶವಾದದ್ದು, ಅಪ್ಪ-ಆಗಿರತಕ್ಕ, ಸೈನಿಕದೊಡನೆ-ದಳದೊಂದಿಗೆ, ಅರ್ಜುನನಕೂಡೆ-ಪಾರ್ಥನೊಂದಿಗೆ, ಪೊರಮಟ್ಟನು-ಹೊರಟವನಾದನು. ||೨೧||

ಟೀ|| ಈತನ-ಈ ಇಂದುಹಾಸನ, ಚರಿತ್ರಮುಂ-ಚರಿತ್ರೆಯನ್ನು, ಕೇಳ್ದವರ್ಗೆ - ಕೇಳಿದವರಿಗೂ, ಪುತ್ರಸಂಪದಂ-ಮಕ್ಕಳನ್ನುಪಡೆಯತಕ್ಕ ಐಸಿರಿಯೂ, ಆಯುಸ್ಸು-ದೀರ್ಘಾಯುವು, ಆರೋಗ್ಯಂ-ರೋಗವಿಲ್ಲದಿರುವುದು, ಅರಿವು-ತಿಳುವಳಿಕೆಯು, ಶತಪತ್ರನಾಭನ-ಕಮಲನಾಭನಲ್ಲಿ, ಭಕ್ತಿ-ಪ್ರೇಮವು, ದೃಢವಾಗಿರಲಿ-ಶಾಶ್ವತವಾಗಿರಲಿ, ಎಂದು-ಎಂಬತೆರನಾಗಿ, ವರವನು-ವರವನ್ನು, ಇತ್ತು-ಕೊಟ್ಟು, ಆತನಂ-ಆ ಇಂದುಹಾಸನನ್ನು, ಕೂಡಿಕೊಂಡು - ಜೊತೆಮಾಡಿಕೊಂಡು, ಸುತ್ರಾಮಸುತನ-ಪಾರ್ಥನ, ಕುದುರೆಗಳೊಡನೆ-ಅಶ್ವಗಳ ಜೊತೆಯಲ್ಲಿ, ತೆರಳ್ದಂ-ಹೊರಟುಹೋದನು. ಧರಿತ್ರಿಯೊಳ್-ಪ್ರಪಂಚದಲ್ಲಿ, ದೇಶದೇಶದೊಳ್-ಪ್ರತಿಯೊಂದು ದೇಶದಲ್ಲಿಯೂ, ಇರ್ದ-ಪ್ರಭುತ್ವವನ್ನು ಮಾಡುತ್ತಲಿದ್ದ, ಕ್ಷತ್ರಿಯೋತ್ತಮರು-ರಾಜಾಧಿರಾಜರು

---

ಕೃಷ್ಣಸ್ವಾಮಿಯ ಪದಾಬ್ಜಗಳಿಗೆ ಸಮರ್ಪಿಸಿದನು. ಶ್ರೀ ಕೃಷ್ಣಮೂರುತಿಯಾದರೂ ಅರ್ಜುನನ ಸಮ್ಮತಿಯಿಂದ ಆ ರಾಜ್ಯವನ್ನು ವಿಷಯೆಯ ಮಗನಾದ ಮಕರಧ್ವಜನಿಗೆ ಕೊಟ್ಟು ಅಲ್ಲಿಯ ಉತ್ತಮವಾದ ವಸ್ತುಗಳನ್ನೆಲ್ಲಾ ಹಸ್ತಿನಾವತಿಗೆ ಕಳುಹಿಸಿದವನಾಗಿ ಅರ್ಜುನಾದಿಗಳೊಡಗೂಡಿ ಚಂದ್ರಹಾಸನ ಸತ್ಕಾರವನ್ನು ಸ್ವೀಕರಿಸಿ, ಕುಂತಳರಾಜ್ಯದಲ್ಲಿಯೇ ಮೂರುದಿನಗಳಿದ್ದು ಅನಂತರ ಸರ್ವರನ್ನೂ ಕರೆದುಕೊಂಡು ಯಜ್ಞಾಶ್ವಗಳೊಂದಿಗೆ ಮುಂದೆ ಹೊರಟನು. ||೨೦|| ಆಗ ಚಂದ್ರಹಾಸನಾದರೋ, ತನ್ನ ಕುವರರಾದ ಪದ್ಮಾಕ್ಷ ಮಕರಧ್ವಜರನ್ನು ಕುರಿತು, ಎಲೈ ಮಕ್ಕಳೇ! ನಾನು ವೃದ್ಧನಾಗಿದೇನೆ, ಕೃಷ್ಣಸ್ವಾಮಿಯ ದರ್ಶನವು ನನಿಗೆ ಲಭಿಸಿದ ಕಾರಣ ಮೋಕ್ಷವು ದೊರಕುವದರಲ್ಲೇನೂ ಅನುಮಾನವಿಲ್ಲವು. ಆದ್ದರಿಂದ ನನ್ನ ಸರ್ವಸ್ವವನ್ನು ಮುರಹರನಿಗೆ ಒಪ್ಪಿಸಿ ನಾನೂ ಅವನ ಹಿಂದೆಯೇ ಯುಧಿಷ್ಠಿರನ ಯಾಗಕ್ಕೆ ಹೊರಟು ಹೋಗುವೆನು, ಯಾಗವು ಪೂರೈಸಿದ ನಂತರ ವನಕ್ಕೆ ಹೋಗುವೆನು. ಪುನಃ ಇಲ್ಲಿಗೆ ಬರುವುದಿಲ್ಲವಾದಕಾರಣ ನೀವೀರ್ವರೂ ಈ ಕುಂತಳರಾಜ್ಯದಲ್ಲಿ ಸುಖವಾಗಿ ಬಾಳಿರೆಂದು ಆಶೀರ್ವದಿಸಿ, ಅಪರಿಮಿತವಾದ ಸೇನಾಪರಿವೃತನಾಗಿ ಕೃಷ್ಣನನ್ನು ಹಿಂಬಾಲಿಸಿದನು. ||೨೧|| ಶ್ರೀ ಕೃಷ್ಣಪರಮಾತ್ಮನಾದರೋ, ತನ್ನ ಹಿಂದೆ ಬರುತ್ತಿರುವ ಇಂದುಹಾಸನನ್ನು ಆದರದಿಂದ ಕರೆದುಕೊಂಡು ಹೊರಟನು. ಈ ಭಕ್ತಾಗ್ರೇಸರನಾದ ಚಂದ್ರಹಾಸನ ಚರಿತ್ರೆಯನ್ನು ಯಾರು ಕೇಳಿದರೂ ಓದಿದರೂ ಕೂಡ ಅಂತಹ ಜನರಿಗೆ ಶಾಶ್ವತವಾದ ವಿಷ್ಣುಭಕ್ತಿಯು ಲಭಿಸುವುದು.

ತಿರ್ದರು ||೨೨|| ರಾಯಕೇಳಾಶ್ಚರ್ಯಮಂಬಳಿಕವಾಜಿಗಳ್ವಾಯುವೇಗದೊಳೈದಿಬಡಗಣಪಯೋನಿಧಿಯ | ತೋಯಮಂಪೊಕ್ಕುನಡೆ ದುವುಕೂಡೆಸಾಗರದವಾರಿಯೋಳ್ಕಾಲಿಡುವರೆ || ದಾಯಮಂಕಾಣದೆಧನಂಜಯಾದಿಗಳಿದಕು | ಪಾಯಮಿನ್ನೇನೆಂದುಬೆಸಗೊಂ ಡೊಡಂಬುಜದಳಾ|ಯತಾಕ್ಷಂಪೇಳ್ದನಿಂತೆಂದುನೆರೆದಿರ್ದಸಕಲಭೂಪಾಲಕರ್ಗೆ||೨೩|| ಶುಭ್ರವಾಹನಮಯೂರಧ್ವಜಪ್ರದ್ಯುಮ್ನ| ಬಭ್ರುವಾಹನಹಂಸಕೇತುನೃಪರಿವರ್ಗೈವ| ರಾಬಭ್ರುವಾಹನನಂತೆಸರ್ವತ್ರಗಮನದವರೂಥದಮಹಾವೀರರು|| ವಿಭ್ರಾಜಿಸುವಸಮು ದ್ರದಮೇಲೆನಡೆಸುವಗ | ತಿಭ್ರಷ್ಟರಲ್ಲೆಂದುರುಕ್ಮಿಣೀಮುಖಪಂಕ | ಜಭ್ರಮರನಾಂಪಂಚರಥಿಕರಂಕೂಡಿಕೊಂಡಂಬುನಿಧಿಯಂ ಪೊಕ್ಕನು||೨೪|| ಸಾಗರದನಡುವೆಕುರ್ವಕಕೆವರಹಯಂಗಳತಿ|ವೇಗದಿಂದೈದಲದರೊಡನೆಪಾರ್ಥಾದಿಗ | ಳ್ಪೋಗಿಬಕದಾಲ್ಭ್ಯಋಷಿ

---

ಅಂಜಿ-ಹೆದರಿ, ತುರಗಂಗಳಂ-ಯಜ್ಞಾಶ್ವಂಗಳನ್ನು, ತಡೆಯದೆ-ನಿರ್ಬಂಧಮಾಡದೆ, ಅಭಿನಮಿಸಿ-ವಂದನೆಯಂ ಮಾಡಿ, ಬಿಡುತಿರ್ದರು-ಬಿಟ್ಟು ಬಿಡುತ್ತಲಿದ್ದರು. ||೨೨||

ಟೀ|| ರಾಯ-ಎಲೈ ಜನಮೇಜಯ ಮಹೀಪಾಲನೆ, ಬಳಿಕ - ಅನಂತರ, ಆಶ್ಚರ್ಯಮಂ - ಅಚ್ಚರಿಯನ್ನು, ಕೇಳು-ಲಾಲಿಸು, ವಾಜಿಗಳು-ಯಜ್ಞಾಶ್ವಂಗಳು, ವಾಯುವೇಗದೊಳು-ಗಾಳಿಗಿಂತಲೂ ಜಾಗ್ರತೆಯಾಗಿ, ಐದಿ-ಹೋಗಿ, ಬಡಗಣ-ಉತ್ತರದಿಕ್ಕಿನ, ಪಯೋನಿಧಿಯ-ಸಾಗರದ, ತೋಯಮಂ - ಉದಕವನ್ನು, ಪೊಕ್ಕು-ಪ್ರವೇಶಮಾಡಿ, ನಡೆದವು - ಹೊರಟವು. ಕೂಡೆ-ಒಡನೆಯೇ, ಧನಂಜಯಾದಿಗಳು-ಪಾರ್ಥನೇ ಮೊದಲಾದವರು, ಸಾಗರದವಾರಿಯೊಳ್-ಸಾಗರದ ನೀರಿನಲ್ಲಿ, ಕಾಲಿಡುವರೆ-ಕಾಲಿಡುವುದಕ್ಕೆ, ದಾಯಮಂಕಾಣದೆ-ಉಪಾಯವು ತೋರದೆ, ಇದಕೆ-ಇದನ್ನು ದಾಟಲು, ಉಪಾಯಂ-ಯುಕುತಿಯು, ಇನ್ನೇನು-ಇನ್ನೇನಿದೆ, ಎಂದು-ಎಂಬತೆರನಾಗಿ, ಬೆಸಗೊಂಡೊಡೆ-ಪ್ರಶ್ನೆಮಾಡಲು, ನೆರೆದಿರ್ದ-ಒಟ್ಟುಗೂಡಿದ್ದ, ಸಕಲಭೂಪಾಲಕರ್ಗೆ-ಎಲ್ಲಾ ರಾಜರನ್ನೂ ಕುರಿತು, ಅಂಬುಜದಳಾಯತಾಕ್ಷಂ-ಪದುಮನೇತ್ರನಾದ ಕೃಷ್ಣಸ್ವಾಮಿಯು, ಇಂತು - ಮುಂದೆ ಹೇಳುವಂತೆ, ಎಂದು-ಎಂಬತೆರನಾಗಿ, ಪೇಳ್ದನು-ನುಡಿದನು ||೨೩||

ಟೀ|| ರುಕ್ಮಿಣೀಮುಖಪಂಕಜಭ್ರಮರನು - ರುಕ್ಮಿಣೀ-ರುಕ್ಮಿಣಿಯ, ಮುಖ-ಮುಖವೆನ್ನುವ, ಪಂಕಜ - ತಾವರೆಗೆ, ಭ್ರಮರನು-ದುಂಬಿಯಂತಿರುವ ಕೃಷ್ಣಸ್ವಾಮಿಯು, ಶುಭ್ರವಾಹನ - ಬಿಳೀ ಕುದುರೆಗಳನ್ನು ಕಟ್ಟಿದ ತೇರಿನಲ್ಲಿ ಕುಳಿತುಕೊಳ್ಳುವ ಫಲುಗುಣನು, ಮಯೂರಧ್ವಜನು-ಶಿಖಿಕೇತುವು, ಪ್ರದ್ಯುಮ್ನನು - ಕೃಷ್ಣನ ಮಗನು, ಬಭ್ರುವಾಹನನು - ಅರ್ಜುನನ ಕುವರನು, ಹಂಸಕೇತು - ಮರಾಳಧ್ವಜನು, ಇವರು - ಈ ಐವರು - ಐದುಮಂದಿ, ನೃಪರು-ರಾಜರು. ಆ ಬಭ್ರುವಾಹನನಂತೆ-ಆ ಬಭ್ರುವಾಹನನ ತೆರನಾಗಿ, ಸರ್ವತ್ರ-ಎಲ್ಲೆಲ್ಲಿಯೂ, ಗಮನದ-ತಿರುಗುವಿಕೆಯುಳ್ಳ, ವರೂಥದ-ತೇರನ್ನುಳ್ಳ, ಮಹಾವೀರರು-ಮಾಮಸಕವುಳ್ಳವರು, ವಿಭ್ರಾಜಿಸುವ-ಕಾಂತಿಯುಕ್ತರಾಗಿರುವ, ಸಮುದ್ರದಮೇಲೆ-ಸಾಗರದ ಮೇಲ್ಗಡೆ, ನಡೆಸುವ-ನಡೆಯಿಸತಕ್ಕ, ಗತಿಭ್ರಷ್ಟರು - ಗಮನವಿಲ್ಲದವರು, ಅಲ್ಲ - ಅಲ್ಲವು, ಎಂದು - ಎಂಬತೆರನಾಗಿ ಹೇಳಿ, ಆಪಂಚರಥಿಕರಂಕೂಡಿಕೊಂಡು - ಆ ಮಹಾರಥಿಕರಾದ ಐವರನ್ನು ಜೊತೆನಾಡಿಕೊಂಡು, ಅಂಬುನಿಧಿಯಂ - ಸಾಗರವನ್ನು, ಪೊಕ್ಕನು - ಪ್ರವೇಶಮಾಡಿದನು. ||೨೪||

ಟೀ|| ವರ - ಉತ್ತಮವಾದ, ಹಯಂಗಳು - ತುರಂಗಂಗಳು, ಅತಿವೇಗದಿಂದ- ಬಹು ಬೇಗನೆ, ಸಾಗರದನಡುವೆ-ಸರೋವರದ ಮಧ್ಯಪ್ರದೇಶದಲ್ಲಿ, ಕುರುವಕಕೆ-ಕುರವಕವೆಂಬಾಶ್ರಮಕ್ಕೆ, ಐದಲು-ಸೇರಲು, ಪಾರ್ಥಾದಿಗಳ್ - ಫಲುಗುಣನೇ ಮೊದಲಾದವರು, ಅದರೊಡನೆ-ಆ ತುರಂಗಂಗಳೊಂದಿಗೆ, ಪೋಗಿ-ಹೊರಟು, ಬಕದಾಲ್ಭ್ಯಋಷಿಯಂ-ಬಕದಾಲ್ಭ್ಯಮುನಿಯನ್ನು,

---

ಆಯುರಾರೋಗ್ಯ ಭಾಗ್ಯಗಳು ಉಂಟಾಗುವವು, ತಿಳುವಳಿಕೆಯು ಹೆಚ್ಚುವುದೆಂದನುಗ್ರಹಿಸಿ, ಆ ಭಕ್ತನೊಂದಿಗೆ ಹೊರಟನು. ಈ ರೀತಿಯಲ್ಲಿ ಕೃಷ್ಣಸ್ವಾಮಿಯು ಅರ್ಜುನಾದಿಗಳನ್ನೂ ಚಂದ್ರಹಾಸನೇಮೊದಲಾದವರನ್ನೂ ಕರೆದುಕೊಂಡು ಯಜ್ಞಾಶ್ವಗಳೊಂದಿಗೆ ಹೊರಡಲು ಆ ದಿವ್ಯವಾದ ತುರಗಂಗಳು ದೇಶದೇಶಂಗಳನ್ನು ಸುತ್ತುತ್ತ ಹೊರಟರೂ ಕೂಡ ಯಾರೊಬ್ಬರೂ ಅವುಗಳನ್ನು ತಡಿಯಲೇ ಇಲ್ಲವು ಯುಧಿಷ್ಠಿರನ ಯಜ್ಞಾಶ್ವಗಳೆಂದು ತಿಳಿದ ಕೂಡಲೆ ನಮಸ್ಕರಿಸಿ ಮುಂದೆ ಬಿಡುತ್ತಲಿದ್ದರು. ||೨೨|| ಕೇಳೈ ಜನಮೇಜಯನೇ, ಕುದುರೆಗಳು ಈ ರೀತಿ ಹೊರಟು ಕಡೆಗೆ ಉತ್ತರದಿಕ್ಕಿನ ಸಮುದ್ರದ ಬಳಿಗೆ ಬಂದವು. ಮುಂದೆ ಹೋಗುವುದಕ್ಕೆ ಉಪಾಯವನ್ನು ಕಾಣದೆ ಅರ್ಜುನಾದಿಗಳು ಚಿಂತಿಸುತ್ತಲಿರುವಾಗ ಕೃಷ್ಣಮೂರುತಿಯು, ||೨೩|| ಸರ್ವರೂ ಈ ಸಮುದ್ರದ ದಡದಲ್ಲಿಯೇ ಇರಲಿ, ಅರ್ಜುನ, ಮಯೂರಧ್ವಜ, ಮದನ, ಬಭ್ರುವಾಹನ, ಮರಾಳಧ್ವಜ, ಇವರು ಮಹಾ ರಥಿಕರಾಗಿರುವುದರಿಂದ ಇವರು ಮಾತ್ರ ನನ್ನೊಂದಿಗೆ ಬರಲೆಂದು ನುಡಿದು ಸಮುದ್ರದಲ್ಲಿ ಪ್ರಯಾಣಮಾಡುತ್ತಲಿರುವಾಗ||೨೪||ಬಕದಾಲ್ಭ್ಯಮುನಿಯು ತಪಸ್ಸು ಮಾಡುತ್ತಿರುವ ಪ್ರದೇಶವು ಸಿಕ್ಕಿತು. ಆ ಸ್ಥಳದಲ್ಲಿ ಆ ಬಕದಾಲ್ಭ್ಯನು ದೃಢಚಿತ್ತ

ಯಂ ಕಂಡರಲ್ಲಿ ಕಣ್ಣೆವೆಗಳಂ ಮುಚ್ಚಿಕೊಂಡು || ಯೋಗದಿಂದಿತಿರುತಿರ್ದನಧ್ರುವದ ಕಾಯಮಂ | ಸಾಗಿಸಲದೇಕೆಂದು ಕೋಳತೊಳಗಿ ಛಿದ್ರಂಗ | ಳಾಗಿರ್ದದೊಂದಾಲದೆಲೆಯಂ ಬಿಸಲ್ಗಳ್ಕಿ ತಲೆಮುರೆಗೆ ಕಯ್ಯೊಳಾಂತು ||೨೫|| ಸ್ಯಂದನಂಗಳನಿಳಿದು ವಿನಯದಿಂದೆಚ್ಚರಿಸಿ | ವಂದಿಸಿದೊಡರ್ಜುನಾದಿಗಳನಾ ಮುನಿವರಂ ಕಣ್ದೆ | ರೆದು ಕಂಡು ಪುರುಷೋತ್ತಮಂ ಕ್ಷಣಿಕರಿವರೈವರಂ ಕೂಡಿಕೊಂಡು || ಬಂದನೀ ಮಂಡಲದೊಳಿರವಿಲ್ಲ ತನಗಿನ್ನು | ಮುಂದೆ ಸುಖಮಾಗದಲ್ಪಾಯುಷದೊಳೇಗೈವೆನೆಂದು ಬಕದಾಲ್ಭ್ಯಋಷಿ | ನುಡಿಯೆ ವಿಸ್ಮಿತನಾಗಿ ಫಲುಗುಣಂ ಬೆಸಗೊಂಡನು ||೨೬|| ಮೊಳಕಾಲ್ಗಳೆಡೆಯೊಳುದ್ಭವಿಸಿರ್ದ ಕಿಂಶುಕಂ | ಗಳ ಮೇಲೆ ಗೂಡಿಕ್ಕಿ ಬಾಳ್ದಪುವು ಪಕ್ಷಿಗಳ | ಬಳಗಂಗಳೊರಸಿಕೊಂಬುವು ತೀಡೆಗಳನಂಗದೊಳ್ಬಂದು ಮೃಗತತಿಗಳು || ಬೆಳದಿಹವು ಸುತ್ತಲುಂ ಪುತ್ತಗಳ್ನಿಮ್ಮ ತೋ | ಳ್ಗಳ ಬಳಿಯೊಳಾಡುವುವು ಸರ್ಪಂಗಳಿರಲೊಂದು | ನಿಳಯಮಂ ಮಾಡದೇತಕೆ ಕಯ್ಯೊಳೀ ಪತ್ರಮೆಂದು ಪಾರ್ಥಂ ಕೇಳ್ದನು ||೨೭||

---

ಕಂಡರ-ಕಾಣಿಸಿಕೊಂಡರು, ಅಲ್ಲಿ-ಆ ಆಶ್ರಮದೊಳಗೆ, ಕಣ್ಣೆವೆಗಳಂ ಮುಚ್ಚಿಕೊಂಡು-ಕಣ್ಣಿನ ರೆಪ್ಪೆಗಳನ್ನು ಮುಚ್ಚಿ, ಅಧ್ರುವದ-ಅಸ್ಥಿರವಾದ, ಕಾಯಮುಂ-ದೇಹವನ್ನು, ಸಾಗಿಸಲು-ಸಲಹುವುದಕ್ಕಾಗಿ, ಅದೇಕೆ-ಏಕೆ ಕಷ್ಟಪಡಬೇಕು, ಎಂದು-ಎಂಬುದಾಗಿ, ಬಿಸಲಿಗೆ, ಅಳ್ಕಿ-ಹೆದರಿ, ತಲೆಮುರೆಗೆ-ತಲೆಗೆ ನೆರಳಾಗಿರುವಂತೆ, ಕೋಳತು-ಬಹಳ ಹಣ್ಣಾಗಿ, ಒಣಗಿ-ಬಾಡಿಹೋಗಿ, ಛಿದ್ರಂಗಳಾಗಿ-ರಂಧ್ರಗಳಾಗಿ, ಇರ್ದ-ಇದ್ದಂಥಾ, ಒಂದಾಲದೆಲೆಯ-ಒಂದು ಆಲದೆಲೆಯನ್ನು, ಕೈಯೊಳು - ಕೈಯಲ್ಲಿ, ಆಂತು-ಹಿಡಿದುಕೊಂಡು, ಯೋಗದಿಂ-ಪರಮಾತ್ಮಧ್ಯಾನಾಸಕ್ತನಾಗಿ, ಇರುತಿರ್ದನು-ಇದ್ದವನಾದನು, ||೨೫||

ಟೀ|| ಸ್ಯಂದನಂಗಳನು-ರಥಗಳನ್ನು, ಇಳಿದು-ಇಳಿದವರಾಗಿ, ವಿನಯದಿಂದ-ನಮ್ರಭಾವದಿಂದ, ಎಚ್ಚರಿಸಿ-ಎಬ್ಬಿಸಿ, ವಂದಿಸಿದೊಡೆ-ವಂದನೆಗಳಂ ಮಾಡಲು, ಅರ್ಜುನಾದಿಗಳನು-ಈ ರೀತಿಯಲ್ಲಿ ತನಗೆ ವಂದನೆಯಂ ಮಾಡುತ್ತಲಿರುವ ಪಾರ್ಥನೆ ಮೊದಲಾದವರನ್ನು, ಆ ಮುನಿವರಂ-ಆ ತಾಪಸೋತ್ತಮನು, ಕಣ್ದೆರೆದು ಕಂಡು-ಕಣ್ಣುಬಿಟ್ಟು ನೋಡಿದವನಾಗಿ, ಇವರು-ಈ, ಕ್ಷಣಿಕರು-ಸ್ವಲ್ಪಕಾಲವೇ ಬದುಕತಕ್ಕ, ಐವರಂ-ಐದು ಜನರನ್ನೂ, ಪುರುಷೋತ್ತಮಂ-ಮಾನವೋತ್ತಮನಾಗಿರುವ ಕೃಷ್ಣನು, ಕೂಡಿಕೊಂಡು ಬಂದನು-ಕರೆತಂದಿರುವನು, ತನಗೆ-ನನಗಾದರೋ, ಈ ಮಂಡಲದೊಳು-ಈ ನಾಡಿನೊಳಗೆ, ಇರವು-ನೆಲೆಯು, ಇಲ್ಲ-ಇಲ್ಲವು, ಸುಖಂ-ಸೌಖ್ಯವೂ, ಇನ್ನು-ಇನ್ನು ಮೇಲೆ, ಆಗದು-ಆಗತಕ್ಕದ್ದಲ್ಲವು, ಅಲ್ಪಾಯುಷದೊಳು-ಸ್ವಲ್ಪ ಕಾಲದಲ್ಲಿ, ಏಗೈವೆನು-ಏನು ಮಾಡಬೇಕು, ಎಂದು-ಎಂಬ ತೆರನಾಗಿ, ಬಕದಾಲ್ಭ್ಯಋಷಿ-ಬಕದಾಲ್ಭ್ಯನೆಂಬ ಮುನಿಯು, ನುಡಿಯೆ-ಪೇಳಲಾಗಿ, ಫಲುಗುಣಂ-ಪಾರ್ಥನಾದರೋ, ವಿಸ್ಮಿತನಾಗಿ-ಬಕದಾಲ್ಭ್ಯನ ಮಾತಿಗೆ ಅಚ್ಚರಿಗೊಂಡವನಾಗಿ, ಬೆಸಗೊಂಡನು-ಮುಂದೆ ಹೇಳುವಂತೆ ಕೇಳುವನು, ||೨೬||

ಟೀ|| ಪಾರ್ಥ-ಫಲುಗುಣನು, (ಬಕದಾಲ್ಭ್ಯನನ್ನು ಕುರಿತು) ಪಕ್ಷಿಗಳ ಬಳಗಂಗಳಂ-ಪಕ್ಷಿಗಳ ಗುಂಪು, ಮೊಣಕಾಲ್ಗಳ-ಮೊಣಕಾಲುಗಳ, ಎಡೆಯೊಳು-ಹತ್ತಿರದಲ್ಲಿ, ಉದ್ಭವಿಸಿರ್ದ - ಹುಟ್ಟಿದ್ದಂಥ, ಕಿಂಶುಕಂಗಳ ಮೇಲೆ - ಪಲಾಶತರುಗಳ ಮೇಲ್ಗಡೆ, ಗೂಡ-ವಾಸಸ್ಥಾನವನ್ನು, ಇಕ್ಕಿ-ಎಸಗಿ, ಬಾಳ್ದಪವು-ಬದುಕುತ್ತಲಿವೆ, ಅಂಗದೊಳ್-ಆ ಮುನಿಯ ದೇಹದ ಬಳಿಗೆ. ಮೃಗತತಿಗಳು-ಮೃಗಂಗಳ ಬಳಗವು, ಬಂದು ತೀಡೆಗಳನು ಒರಸಿಕೊಂಬುವು-ತಮ್ಮ ಮೈಯನ್ನು ಉಜ್ಜಿ ನವೆಯನ್ನು ಹೋಗಲಾಡಿಸುತ್ತದೆ, ಪುತ್ತಗಳು-ಹಾವುಗಳ ಮನೆಗಳಾದರೋ, ಸುತ್ತಲುಂ-ಎಲ್ಲೆಡೆಗಳಲ್ಲಿಯೂ, ಬೆಳದಿಹವು - ಬೆಳದುಕೊಂಡಿವೆ, ಸರ್ಪಂಗಳು-ಉರಗಂಗಳು, ನಿಮ್ಮ ತೋಳ್ಗಳ ಬಳಿಯೊಳು-ನಿಮ್ಮ ಬಾಹುಗಳ ಹತ್ತಿರ, ಆಡುವವು-ತಿರುಗುತ್ತಲಿವೆ, ಇರಲು-ವಾಸವಾಗಿರಲು, ಒಂದು-ನಿಳಯಮಂ-ಒಂದು ವಾಸಸ್ಥಾನವನ್ನು, ಮಾಡದೆ-ಮಾಡಿಕೊಳ್ಳದೆ, ಈ ಪತ್ರಂ-ಈ ಎಲೆಯನ್ನು, ಏತಕೆ-ಯಾವ ನಿಮಿತ್ತವಾಗಿ, ಕೈಯೊಳು-ಕರದಲ್ಲಿ, ಎಂದು-ಇವೆ ಎಂಬತೆರನಾಗಿ, ಕೇಳ್ದನು-ಕೇಳಿದವನಾದನು, ||೨೭||

---

ವುಳ್ಳವನಾಗಿ ಧ್ಯಾನಯೋಗದಲ್ಲಿ ಕುಳಿತಿರುವುದನ್ನು, ಕೈಯಲ್ಲಿ ಒಂದು ಆಲದೆಲೆಯನ್ನು ಮಾತ್ರ ಹಿಡಿದುಕೊಂಡು ನೆರಳಾಗಿರುವಂತೆ ಮಾಡಿಕೊಂಡಿರುವುದನ್ನೂ ಅರ್ಜುನಾದಿಗಳು ನೋಡಿ ||೨೫|| ರಥಗಳಿಂದಿಳಿದವರಾಗಿ ಆ ಮುನಿಯ ಬಳಿಗೆ ಬಂದು ವಂದನೆಯಂಗೈದು ಸವಿನಯದಿಂದ ನಿಂತವರಾದರು. ಬಕದಾಲ್ಭ್ಯನಾದರೋ ಸ್ವಲ್ಪಹೊತ್ತಿಗೆ ಕಣ್ತೆರೆದವನಾಗಿ ಅರ್ಜುನಾದಿಗಳನ್ನು ನೋಡಿ ನಾನು ಇಲ್ಲಿ ನಿಲ್ಲುವ ಕಾಲವು ಹೋಯಿತು, ಏನುಮಾಡಲೆಂದು ನುಡಿಯುತ್ತಲಿರುವ ಬಕದಾಲ್ಭ್ಯನನ್ನು ಕುರಿತು, ಅರ್ಜುನನು ಇಂತೆಂದನು, ||೨೬|| ಎಲೈ ಮಹಸೀಯರೆ. ನಿಮ್ಮ ಮೊಳಕಾಲ್ಗಳ ಮೇಲೆ ಮುತ್ತುಗದ ಗಿಡಗಳು ಬೆಳೆದು ಅಲ್ಲಿ ಹಕ್ಕಿಗಳು ತಮ್ಮ ಗೂಡುಗಳನ್ನು ಮಾಡಿಕೊಂಡು ಬಾಳುತ್ತಲಿವೆ. ಮೃಗಗಳೆಲ್ಲವೂ ತಮ್ಮ ಶರೀರವನ್ನು ನಿನ್ನ ಮೈಗೆ ಉಜ್ಜಿ ನವೆಯನ್ನು ಹೋಗಲಾಡಿಸಿಕೊಳ್ಳುತ್ತಲಿವೆ. ನಿನ್ನ ಸುತ್ತಲೂ ಹುತ್ತಗಳು ಬೆಳದಿವೆ, ನಿನ್ನ ಕೈಗಳ ಬಳಿಯಲ್ಲಿಯೇ ಹಾವುಗಳು ಹೆಡೆಯನಾಡಿಸುತ್ತಲಿವೆ. ಇರುವದಕ್ಕೊಂದೆಲೆಮನೆಯನ್ನು ಸಹ ಮಾಡಿಕೊಳ್ಳದೆ ಕೈಯಲ್ಲಿ ಆಲದೆಲೆಯನ್ನು ಹಿಡಿದಿರಲು ಕಾರಣವೇನೆಂದು

ಮುನಿಕಿರೀಟಿಯನುಡಿಗೆನಸುನಗುತದುಃಖಭಾ | ಜನವಲಾಸ್ತ್ರೀಪರಿಗ್ರಹಮುದಂಪೋಷಿಸುವ | ಮನುಜನೆಣಿಸುವನೆ ಕೃತ್ಯಾಕೃತ್ಯಮುಂಬಳಿಕ ಮೋಕ್ಷಮೆತ್ತಣದವಂಗೆ || ಕನಸಿನಸುಖಕ್ಕೆಳಸಿಬಿದ್ದಪನಧೋಗತಿಗೆ | ಜನನಮರಣಂಗಳಬಳಲ್ಕೆಬೆಂಬಿಡದಿಹುದು | ವನಿತೆಯರತೊಡಕಿಂದಕೆಡುತಿಹುದುಲೋಕಮದನೇವಣ್ಣಿಸುವೆನೆಂದನು || ೨೮ || ಮಡದಿಮಗವೊಮ್ಮಂದಿರಂಸಾಗಿಸುವೆನೆಂತೊ | ಪೊಡವಿಬೆಳೆಬಾಳ್ಕೆ ಸಿರಿಕೀಲಾರಮನೆಗಳಿಸಿ | ದೊಡವುಗಳನಾರ್ಪೈವೆನೆಂತೊವೇದಾದಿಶಾಸ್ತ್ರಂಗಳಂಪಠಣದಿಂದ || ಕಡೆಗಾಣಿಸುವೆನೆಂತೊತನಗೆಂದುಬಾಳುವಿಗೆ | ಬಿಡದೆಚಿಂತಿಸಿತಾಪಕೊಳಗಾಗಿಧರ್ಮದೋ | ಳ್ನಡೆಯದಾಶಾಪಾಶದಿಂದಸಂಸಾರದೋಳ್ಕೆಡುತಿಹುದುಜಗವೆಂದನು ||೨೯|| ಅಂತಾಗಿದಾರಸಂಗ್ರಹಪರ್ಣಶಾಲೆಗಳ| ನಿಂತೊಲ್ಲದಚಿರಕಾಲದೊಳಳಿವಕಾಯಮಿದ | ಕೆಂತಿರ್ದೊಡೇನೆಂದುತಲೆಗೆತರಗೆಲೆವಿಡಿದುತಾಂಪೊತ್ತುಗಳೆವೆನೆನಲು || ಕುಂತೀಸುತಂಮತ್ತೆಕೇಳ್ದನಲ್ಪಾಯುಷ್ಯ | ಮಂತಳೆವು

ಟೀ|| ಕಿರೀಟಿಯನುಡಿಗೆ_ಪಾರ್ಥನಾಡಿದ ಮಾತುಗಳಿಗೆ, ಮುನಿ-ತಾಪಸೋತ್ತಮನು, ನಸುನಗುತ - ಹುಸಿನಗೆಯನ್ನು ನಗುತ್ತ, ಸ್ತ್ರೀಪರಿಗ್ರಹಂ_ಮದುವೆಮಾಡಿಕೊಳ್ಳುವುದು, ದುಃಖಭಾಜನವಲಾ-ವ್ಯಸನಾಸ್ಪದವಲ್ಲವೆ, ಅದಂ-ಆ ಹೆಂಗಸರಲ್ಲಿ ಆಸಕ್ತಿಯಾಗಿರತಕ್ಕದ್ದನ್ನೆ, ಪೋಷಿಸುವ-ಸಲಹತಕ್ಕ, ಮನುಜನು_ಮಾನವನು, ಕೃತ್ಯ-ಮಾಡಬಹುದಾದ್ದನ್ನೂ, ಅಕೃತ್ಯಮಂ-ಮಾಡಬಾರದ್ದನ್ನೂ ಸಹ, ಎಣಿಸುವನೆ_ಆಲೋಚನೆ ಮಾಡುವನೆ, ಬಳಿಕ_ಈರೀತಿ ವಿವೇಚನಾಶಕ್ತಿಯೇ ಇಲ್ಲದ ಬಳಿಕ, ಮೋಕ್ಷಂ-ಕೈವಲ್ಯವು, ಅವರಿಗೆ_ಅಂತಹ ಮನುಜರಿಗೆ, ಎತ್ತಣದು-ಎಲ್ಲಿ ಬಂದೀತು, ಕನಸಿನ ಸುಖಕೆ_ಸ್ವಪ್ನಾವಸ್ಥೆಯಲ್ಲಿ ಆಗ ಬಹುದಾದ ಸುಖದಂತಿರುವ ಮೇಲ್ಮೆಗೆ, ಎಳಸಿ_ಆಸೆಪಟ್ಟು, ಅಧೋಗತಿಗೆ-ದೊಡ್ಡ ನರಕಕ್ಕೆ, ಬೀಳ್ವಪನು_ಬಿದ್ದು ಬಿಡುವನು, ಜನನಮರಣಂಗಳ-ಹುಟ್ಟುವದು ಸತ್ತುಹೋಗುವುದು ಇವುಗಳ, ಬಳಲ್ಕೆ-ಕಷ್ಟನಾದರೊ, ಬೆಂಬಿಡದೆ-ಹಿಂಬಾಲಿಸಿಕೊಂಡೇ, ಇಹುದು_ಇರುತ್ತದೆ, ಲೋಕಂ-ಭೂಲೋಕವೆಲ್ಲವೂ, ವನಿತೆಯರತೊಡಕಿಂದ-ಸ್ತ್ರೀಯರೊಂದಿಗೆ ಆಸಕ್ತರಾಗೋಣದರಿಂದ ಕೆಡುತಿಹುದು_ಹಾಳಾಗುತ್ತಲಿದೆ, ಅದನು_ಆ ಬಗೆಯನ್ನು, ಏವಣ್ಣಿಸುವೆನು_ಏನೆಂದು ಬಣ್ಣಿಸಲಿ, ಎಂದನು - ಎಂಬುದಾಗಿ ಉತ್ತರ ಕೊಟ್ಟನು, || ೨೮ ||

ಟೀ|| ಮಡದಿ_ಸತಿಯು, ಮಗ_ಸುತನು, ಮೊಮ್ಮಂದಿರಂ_ಮೊಮ್ಮಕ್ಕಳನ್ನೂ,ಎಂತು_ಯಾವ ಪ್ರಕಾರವಾಗಿ, ಸಾಗಿಸುವೆನು_ಸಲಹಲಿ, ಪೊಡವಿ-ಲೋಕದಲ್ಲಾಗತಕ್ಕ, ಬೆಳೆ_ಬೆಳೆಯು, ಬಾಳ್ಕೆ-ಆಗತಕ್ಕ ರೀತಿಯು, ಸಿರಿ ಐಶ್ವರ್ಯವು, ಕೀಲಾರ-ಅಂಗಳವು, ಮನೆ_ಮಂದಿರವು, ಗಳಿಸಿದ_ಅರ್ಜನ ಮಾಡಿದ, ಒಡವೆಗಳನು-ಪುರುಳ್ಗಳನ್ನು, ಎಂತೊ-ಹೇಗೆ, ಆರ್ಪೈವೆನು-ಜೋಪಾನಮಾಡಲಿ, ವೇದ_ವೇದಗಳೇ, ಆದಿ_ಮೊದಲಾದ ಶಾಸ್ತ್ರಂಗಳನ್ನು, ಪಠಣದಿಂದ-ಓದುವುದರಿಂದ, ಎಂತೊ_ಹೇಗೆತಾನೆ, ಕಡೆಗಾಣಿಸುವೆನು-ಪೂರೈಸಲಾದೀತು, ಎಂದು-ಎಂಬ ತೆರನಾಗಿ, ತನಗೆ-ತನಿಗಾದರೊ, ಬಾಳುವಿಗೆ_ಜೀವನಕ್ಕೆ, ಬಿಡದೆ_ಅವಕಾಶವೇ ಇಲ್ಲದೆ. ಜಗವು-ಲೋಕದ ಜನರೆಲ್ಲಾ, ಚಿಂತಿಸಿ_ಆಲೋಚನೆ ಮಾಡುತ್ತಾ, ತಾಪಕೆ_ದುಃಖಕ್ಕೆ, ಒಳಗಾಗಿ_ಗುರಿಯಾಗಿ, ಧರ್ಮದೋಳ್_ಸತ್ಕಾರ್ಯದಲ್ಲಿ, ನಡೆಯದೆ_ಪ್ರವೇಶಮಾಡದೆ, ಸಂಸಾರದೊಳು_ಹುಟ್ಟುವುದು ಸಾಯುವುದು ಇವೇ ಮುಖ್ಯವಾಗಿರುವ ಸಂಸಾರದಲ್ಲಿ, ಆಶಾಪಾಶದಿಂದ_ಆಶೆಯಿಂದ, ಕೆಡುತ್ತ_ಕೆಟ್ಟು ಹೋಗುತ್ತ, ಇಹುದು_ಇದ್ದಾರೆ, ಎಂದನು_ಎಂಬುದಾಗಿ ಹೇಳಿದನು, || ೨೯ ||

ಟೀ|| ಅಂತಾಗಿ_ಆದಕಾರಣ, ದಾರಸಂಗ್ರಹ - ಮದುವೆ ಮಾಡಿಕೊಳ್ಳುವುದು, ಪರ್ಣಶಾಲೆಗಳ_ಎಲೆ ಮನೆಗಳ, ನಿರ್ಮಾಣವು, ಇಂತು_ಈ ರೀತಿಯಾಗಿ, ಒಲ್ಲದೆ-ಇಷ್ಟವಿಲ್ಲದೆ, ಅಚಿರಕಾಲದೊಳು - ಬಹುಬೇಗನೆ, ಅಳಿವ - ಲಯವಾಗತಕ್ಕ, ಕಾಯಂ_ದೇಹವು, ಎಂತು-ಯಾವ ಪ್ರಕಾರವಾಗಿ, ಇರ್ದೊಡಂ_ಇದ್ದರೂಕೂಡ, ಇದಕೆ_ಈದೇಹಕ್ಕೆ, ಏನು_ಏನಾಗಬೇಕಾಗಿದೆ, ಎಂದು_ಎಂಬುದಾಗಿ, ಆಂ_ನಾನು, ತರಗೆಲೆವಿಡಿದು_ತರಗೆಲೆಯನ್ನು ಹಿಡಿದುಕೊಂಡು, ಪೊತ್ತುಗಳೆವೆನು-ಕಾಲಹರಣವಂ ಮಾಡುತ್ತಲಿರುವೆನು, ಎನಲು_ಎಂದು ನುಡಿಯಲು, ಮತ್ತೆ-ತಿರುಗಿ, ಕುಂತೀಸುತಂ-ಫಲುಗುಣನು, ಕೇಳ್ದನು_ಪ್ರಶ್ನೆಮಾಡುತ್ತಾನೆ.

ಕೇಳುತ್ತಲಿರುವ ಅರ್ಜುನನನ್ನು ಕುರಿತು, ||೨೭|| ಮುಗುಳ್ನಗೆಯಿಂದ ಕೂಡಿ, ಅಯ್ಯಾ ಅರ್ಜುನ, ಲೋಕದಲ್ಲಿ ಸ್ತ್ರೀಯರನ್ನು ಮದುವೆ ಮಾಡಿಕೊಳ್ಳುವುದರಿಂದ ದುಃಖವೂ, ಕೃತ್ಯಾಕೃತ್ಯ ವಿವೇಚನೆ ಇಲ್ಲದಿರುವುದೂ ಆಗಿ ಮೋಕ್ಷಕ್ಕೆ ದಾರಿಯೇ ಇಲ್ಲದೆ ಹೋಗುವುದು, ನರಕಪ್ರಾಪ್ತಿಯಾಗವುದು. ||೨೮|| ಆಶೆ ಹೆಚ್ಚುವುದು, ವೇದಶಾಸ್ತ್ರ ಪುರಾಣಾದಿಗಳನ್ನು ಪಠಿಸಲುಕೂಡ ಮನಸ್ಸು ಬರುವುದಿಲ್ಲವು. ಧರ್ಮಮಾರ್ಗವೇ ತಪ್ಪಿಹೋಗುವುದು, || ೨೯ || ಆದಕಾರಣ ದಾರಾ ಪುತ್ರಾದಿಗಳೆಲ್ಲವೂ ಅಸ್ಥಿರವೆಂದು ನಂಬಿ ಎಲ್ಲವನ್ನೂ ಪರಿತ್ಯಜಿಸಿ ಎಲೆ ಮನೆಯನ್ನು ಮಾಡಿಕೊಳ್ಳದೆ ಭಗವದ್ಧ್ಯಾನದಲ್ಲಿ ಆಸಕ್ತಿಯುಳ್ಳವನಾಗಿ ಕಾಲಹರಣವನ್ನು ಮಾಡುತ್ತಿರುವೆನೆಂದು ನುಡಿದನು. ಆಗ ಅರ್ಜುನನು ಎಲೈ ಮಹಸೀಯರೇ. ನಿಮಗೆ ಅಲ್ಪಾಯುಷ್ಯವು ಏತಕ್ಕೆ ? ಎಷ್ಟು

ದೀಮಹಾತ್ಮರಿಗೇಕೆಶಿವಶಿವಾ | ಪಿಂತೇಸುದಿನಮಾದುದೆಂದೀಪತ್ರಮಸ್ತಕದೊಳಿಹುದೆಂದನು ‖ ೩೦ ‖ ಅತ್ಯಲ್ಪರಾಗಿಮಾರ್ಕಂಡೇಯರೋಮಶ | ಪ್ರತ್ಯೇಕರಳಿದರಿವರೆನಿಬರೆಂದರಿಯೆನಾಂ | ಸತ್ಯಲೋಕವನಾಳ್ದರಿಪ್ಪತ್ತು ಕಮಲಸಂಭವರಿನಿತರೊಳ್ಮಡಿದರು ‖ ಕ್ಷಿತ್ಯಾದಿಸೃಷ್ಟಿಗಳ್ವಾರಿಮಯಮಹದಾಧಿ | ಪತ್ಯದಚತುರ್ವದನರವಸಾನವಾದಂದು | ನಿತ್ಯಮಾಗಿರದುಪದವಿಗಳೆಂದು ತಾನಿಲ್ಲಿಬಯಲೊಳಿರ್ದಪೆನೆಂದನು ‖೩೧‖ ಬಾರಿಬಾರಿಗೆಜಲಪ್ರಳಯಂಗಳಾಗಲ್ಕೆ | ಭೂರಿಶಾಖೆಗಳಿಂದತಳಿರೆಸೆವುದೊಂದುವಟ | ಭೂರುಹವದರದೊಂದೆಲೆಯಮೇಲೆತನ್ನಮೃದುಪದಕಮಲದುಂಗುಟವನು ‖ ಚಾರುತರಕರತಾಮರಸದಿಂದಪಿಡಿದುವದ | ನಾರವಿಂದದೊಳಿಟ್ಟುನಗುತಳುತಲೀಲೆಯಿಂ | ದೋರಂತೆಮಲಗಿಕೊಂಡಿಹನೋರ್ವಬಾಲಕಂತಾನಾತನಂಕಂಡೆನು‖೩೨‖ಅಂದುಸಲಿಲದೊಳಾಳ್ದ ತನಗಾಲದೆಲೆಯಮೇಲೊಂದೊಂದುಬಾರಿಬಾಲಕನಾಗಿಮೈದೋರಿ | ನಿಂದುಮಾತಾಡಿಸದೆನೋಡದೆ ವಿಚಾರಿಸದೆ

---

ಶಿವಶಿವಾ-ಈಶ್ವರಈಶ್ವರ, ಈ ಮಹಾತ್ಮರಿಗೆ – ಈ ಮಹನೀಯರಿಗಾದರೊ, ಅಲ್ಪಾಯುಷ್ಯಮಂ – ಸ್ವಲ್ಪಕಾಲ ಬದುಕುವುದು, ತಳೆವುದು-ಆಗಿದೆ, ಪಿಂತೆ-ಪೂರ್ವದಲ್ಲಿ, ಏಸುದಿನಂ- ಎಷ್ಟುದಿವಸಗಳು, ಆದುದು- ಕಳದುಹೋಗಿದೆ, ಈ ಪತ್ರ-ಈ ಪರ್ಣವಾದರೊ, ಮಸ್ತಕದೊಳು – ತಲೆಯೊಳಗೆ, ಎಂದಿನಿಂದ – ಎಷ್ಟುದಿನದಿಂದಲೂ, ಇಹುದು – ಇದೆ, ಎಂದನು – ಎಂಬುದಾಗಿ ನುಡಿದನು ‖ ೩೦ ‖

ಟೀ‖ ಮಾರ್ಕಂಡೇಯ ರೋಮಶರು-ಮಾರ್ಕಂಡೇಯರೋಮಶರೆನ್ನುವರು, ಅತ್ಯಲ್ಪರಾಗಿ-ಬಹು ಸ್ವಲ್ಪ ಆಯುಸ್ಸುಳ್ಳವರಾಗಿ, ಪ್ರತ್ಯೇಕರು-ಬೇರೆಬೇರೆಯಾಗಿ, ಅಳಿದರು-ಮೃತಿಯನ್ನೈದಿದರು, ಆಂ-ನಾನಾದರೊ, ಇವರು-ಇವರೀರ್ವರೂ, ಎನಿಬರು-ಎಷ್ಟು ಜನವು, ಎಂದು-ಎಂಬ ತೆರನಾಗಿ, ಅರಿಯೆನು-ತಿಳಿದಿಲ್ಲವು. ಇಪ್ಪತ್ತು ಕಮಲಸಂಭವರು-ಇಪ್ಪತ್ತು ಜನ ಬ್ರಹ್ಮರು, ಸತ್ಯಲೋಕವನು-ಬ್ರಹ್ಮಲೋಕವನ್ನು, ಆಳ್ದರು-ಪ್ರಭುತ್ವ ಮಾಡಿದರು, ಅನಿತರೊಳು-ಅಷ್ಟರೊಳಗೆ, ಕ್ಷಿತ್ಯಾದಿಸೃಷ್ಟಿಗಳು-ಭೂಲೋಕವೇ ಮೊದಲಾದ ಸಕಲ ಜಗತ್ತುಗಳು, ವಾರಿಮಯ-ನೀರಿನಿಂದ ಕೂಡಿದ, ಮಹದಾಧಿಪತ್ಯದ-ದೊಡ್ಡ ಆಧಿಪತ್ಯದ, ಚತುರ್ವದನರು-ನಾಲ್ಕು ಮುಖವುಳ್ಳ ಬ್ರಹ್ಮರು, ಮಡಿದರು-ಮೃತರಾದರು, ಅವಸಾನವು-ಸಾವು, ಆದಂದು-ಆದಾಗ, ಅಂದು-ಆ ಕಾಲದಲ್ಲಿ, ಪದವಿಗಳು-ಅಧಿಕಾರಿಗಳು, ನಿತ್ಯವಾಗಿ-ಶಾಶ್ವತವಾಗಿ, ಇರದು-ಇರತಕ್ಕದ್ದಲ್ಲವು, ಎಂದು-ಎಂಬ ತೆರನಾಗಿ, ತಾನು-ನಾನಾದರೊ, ಇಲ್ಲಿ-ಈ ಸಮುದ್ರತೀರದಲ್ಲಿ, ಬಯಲೊಳು-ಮೈದಾನದ ಪ್ರದೇಶದಲ್ಲಿ, ಇರ್ದಪೆನು – ಇದ್ದೇನೆ, ಎಂದನು-ಎಂಬುದಾಗಿ ಹೇಳಿದನು ‖೩೧‖

ಟೀ‖ ಜಲಪ್ರಳಯಂಗಳು-ಅತಿವರ್ಷವು, ಬಾರಿಬಾರಿಗೆ-ಸಲಸಲಕ್ಕೂ, ಆಗಲ್ಕೆ-ಆಗಲು, ಒಂದು ವಟಭೂರುಹವು-ಒಂದು ಆಲದ ಮರವು, ಭೂರಿ ಶಾಖೆಗಳಿಂದ-ದೊಡ್ಡದೊಡ್ಡ ಕೊಂಬೆಗಳಿಂದ, ತಳಿರು-ಪಲ್ಲವಂಗಳಿಂದ ಕೂಡಿ, ಎಸೆವುದು-ಹೊಳೆಯುತ್ತಲಿರುವುದು, ಅದರ-ಆ ವೃಕ್ಷದ, ಅದೊಂದೊಲೆಯ ಮೇಲೆ-ಪರ್ಣವೊಂದರ ಮೇಲ್ಭಾಗದೊಳಗೆ, ಓರ್ವಬಾಲಕಂ-ಒಬ್ಬ ಹುಡುಗನು, ತನ್ನ-ತನ್ನದಾದ, ಮೃದು-ಮೆತ್ತಗಿರುವ, ಪದಕಮಲದ-ಪದಾರವಿಂದದ, ಉಂಗುಟವನು-ದೊಡ್ಡ ಬೆರಳನ್ನು, ಚಾರುತರ-ಉತ್ತಮವಾದ, ಕರತಾಮರಸದಿಂದ-ತಾವರೆಗೆ ಸಮನಾದ ಹಸ್ತದಿಂದ, ಪಿಡಿದು-ಹಿಡಿದುಕೊಂಡು, ವದನಾರವಿಂದದೊಳ್-ತಾವರೆಗೆ ಸಮನಾದ ಮುಖದಲ್ಲಿ, ಇಟ್ಟು – ಇಟ್ಟುಕೊಂಡು, ನಗುತ-ನಗುತ್ತಲೂ, ಅಳುತ-ಅಳುತ್ತಲೂ, ಓರಂತೆ-ಪ್ರಕಾಶವಾಗಿ, ಲೀಲೆಯಿಂದ-ಸಂತೋಷದಿಂದ, ಮಲಗಿಕೊಂಡು-ಮಲಗಿದವನಾಗಿ, ಇಹನು-ಇಪ್ಪಾನೆ, ಆತಂ-ಆಬಾಲಕನನ್ನು, ತಾನು-ನಾನು, ಕಂಡೆನು-ಈಕ್ಷಿಸಿದೆನು, ‖೩೨‖

ಟೀ‖ ಅಂದು-ಆಕಾಲದಲ್ಲಿ, ಸಲಿಲದೊಳು-ನೀರಿನಲ್ಲಿ, ಆಳ್ದ-ತೇಲಾಡುತ್ತಲಿದ್ದ, ಆಲದೆಲೆಯಮೇಲೆ-ವಟಪತ್ರದಮೇಲ್ಗಡೆ, ಒಂದು ಬಾರಿ-ಒಂದಾವರ್ತಿ, ಬಾಲಕನಾಗಿ-ಮಗುವಾಗಿ, ತನಗೆ-ನನಿಗೆ, ಮೈದೋರಿ-ಕಾಣಿಸಿಕೊಂಡು, ನಿಂದು-ನಿಂತವನಾಗಿ, ಮಾತಾಡಿಸದೆ-ಮಾತನಾಡಿಸದೆಯೂ, ನೋಡದೆ-ಈಕ್ಷಿಸದೆಯೂ, ವಿಚಾರಿಸದೆ-ವಿಚಾರವಂ ಮಾಡದೆಯೂ, ದೂರದೂರದೊಳು-ದೂರದೂರವಾಗಿಯೇ, ಇರ್ಪನು – ಇದ್ದಾನೆ, ಇಂದು-ಈ ಹೊತ್ತು, ಈಹರಿ-ಈ ಕೃಷ್ಣಸ್ವಾಮಿಯು, ಇಲ್ಲಿಗೆ-ಈ

---

ದಿನಗಳಿಂದ ಈರೀತಿಯಲ್ಲಿ ತಪೋನಿಷ್ಠರಾಗಿರುವಿರೆಂದು ಪ್ರಶ್ನೆಮಾಡಿದನು ‖ ೩೦ ‖ ಬಕದಾಲ್ಭ್ಯನಾದರೊ, ಕೇಳೈ ಅರ್ಜುನ ! ಮಾರ್ಕಂಡೇಯ ರೋಮಶಾದಿಗಳಿಗಿಂತಲೂ ಹಿಂದಿನವನು. ಇಪ್ಪತ್ತುಮಂದಿ ಬ್ರಹ್ಮರು ಕಳೆದುಹೋದರು ಆದುದರಿಂದ ಎಲ್ಲವೂ ಅನಿತ್ಯವೆಂದು ನಂಬಿ ನಾನಿಲ್ಲಿಯೇ ಇರುವೆನು‖೩೧‖ ಸಲಸಲಕ್ಕೂ ಮಹಾಪ್ರಳಯಂಗಳುಂಟಾದಾಗ ಆಲದಮರದ ಒಂದು ಎಲೆಯಮೇಲೆ ಮಲಗಿ ಕಾಲ್ಬೆರಳನ್ನು ಬಾಯಲ್ಲಿಟ್ಟುಕೊಂಡು ವಿನೋದದಿಂದ ಕೂಡಿದ ಬಾಲಕನೋರ್ವನನ್ನು ಕಂಡೆನು ‖೩೨‖ ಆ ಬಾಲಕನಾದರೊ ನನ್ನನ್ನು ಮಾತನಾಡಿಸಲೇ ಇಲ್ಲವು. ನನ್ನ ವಿಚಾರವನ್ನೇ ಕೇಳದೆಯೂ ನೋಡದೇಯೂ ಇದ್ದ ಆ ಹಸು

ದೂರದೂರಂದೋಳಿರ್ಪನು ‖ ಇಂದುನಿಮ್ಮೈವರಂಕೂಡಿಕೊಂಡಿಲ್ಲಿಗೈತಂದು ಕರುಣಿಸಿದ ನೀಹರಿಕೃಷ್ಣರೂಪದಿಂ | ಸಂದುದಿನ್ನೀತನೆಸದಾಶ್ರಯಂಮರೆಯೊಗುವೊಡೆನಗೆಂದುಮುನಿನುಡಿದನು ‖೩೩‖ ಬಕದಾಲ್ಭ್ಯಮುನಿಬಳಿಕಕೃಷ್ಣನಂನೋಡಿಬಾ | ಲಕನಾದರೂಪಮುಂವಟಪತ್ರಶಯನದೋ | ಳ್ಸಕಲಜನದಳಿವಂದುನನಗೆಕಾಣಿಸಿದೆಯಲ್ಲದೆರಮಾರಮಣನಾಗಿ ‖ ಪ್ರಕಟತದಧರ್ಮಸಂತತಿಗಳಂಪಾಲಿಸುವ | ಸುಕುಮಾರಮೂರ್ತಿಯಿಂಕೃಪೆಯಿಂದನಿನ್ನಸೇ | ವಕಜನಕೆತೋರುವಂತೆನಗೆತೋರಿದುದಿಲ್ಲತಾನಿನ್ನು ಬಿಡೆನೆಂದನು‖೩೪‖ಜನಪಕೇಳಿಂತೆಂದುಹರುಷದಿಂಬಕದಾಲ್ಭ್ಯ| ಮುನಿಬಂದುಕೃಷ್ಣನಂತಕ್ಕೈಸಿಮತ್ತೆಪಾ| ರ್ಥನಕೂಡೆಪೇಳ್ದಂಸದಾವಾಸಕೀಹರಿಯದೇಹವಿದುಗೇಹಮೆನಗೆ ‖ ಅನುಕೂಲೆಯಾದಸತಿಮುಕ್ತಿಯಲ್ಲದೆಬೇರೆ | ಮನೆಯಿಲ್ಲ ಮಡದಿಯಿಲ್ಲದಕಾಗಿ ತಾನೀಸುದಿನಮಿಲ್ಲಿ ತಲೆಗೆತರಗೆಲೆವಿಡಿದುಕೊಂಡಿರ್ದೆನೆನಲರ್ಜುನಂ ನುಡಿದನು‖೩೫‖ಇಪ್ಪತ್ತುಕಮಲಜರಬಾಳ್ಕೆಯಂ ಕಂಡನಿಮ | ಗೊಪ್ಪದೆಗುರುತ್ವಂ ಮಹಾಪುರುಷರೀಸುದಿನ | ಮಿಪ್ಪುದಚ್ಚರಿಯಲಾಶಿವಶಿವಾ ನೀವೆನಮ್ಮೆಲ್ಲರ್ಗೆಪೂಜ್ಯರೆಂದು ‖ ತಪ್ಪುನೀಕ್ಷಿಸ

---

ಎಡೆಗೆ, ನಿಮ್ಮೈವರಂ-ನೀವೈದು ಜನಗಳನ್ನೂ, ಕೂಡಿಕೊಂಡು_ಜೊತೆಮಾಡಿಕೊಂಡು, ಐತಂದು_ಬಂದವನಾಗಿ, ಕೃಷ್ಣರೂಪದಿಂ_ಕೃಷ್ಣಾವತಾರದಿಂದ, ಕರುಣಿಸಿದನು_ಕೃಪೆಮಾಡಿದನು, ಸಂದುದು_ನನ್ನ ಇಷ್ಟವು ಕೈಗೂಡಿತು, ಇನ್ನು_ಇನ್ನುಮುಂದೆ, ಎನಗೆ_ನನಿಗಾದರೊ, ಈತನ-ಈ ಕೃಷ್ಣಮೂರುತಿಯ,ಮರೆಯಾಗುವೊಡೆ_ಮರೆಹೋಗಲು, ಸದಾಶ್ರಯಂ-ಒಳ್ಳೇ ಆಶ್ರಯನಾಗಿದ್ದಾನೆ, ಎಂದು-ಎಂಬತೆರನಾಗಿ, ಬಕದಾಲ್ಭ್ಯಋಷಿಯು, ನುಡಿದನು_ಉತ್ತರಕೊಟ್ಟನು, ‖೩೩‖

ಟೀ‖ ಬಳಿಕ – ಆಮೇಲೆ, ಬಕದಾಲ್ಭ್ಯಮುನಿಯು – ಬಕದಾಲ್ಭ್ಯನೆಂಬ ಋಷಿಯು, ಕೃಷ್ಣನಂ ನೋಡಿ – ಕೃಷ್ಣಸ್ವಾಮಿಯನ್ನು ಕಂಡು, ಸಕಲಜನಂ_ಎಲ್ಲರೂ, ಅಳಿವಂದು_ಲಯವಾಗತಕ್ಕ ವೇಳೆಯೊಳಗೆ, ತನಗೆ_ನನಿಗಾದರೊ, ಬಾಲಕನಾದ_ಹಸುಳೆಯಾಗಿದ್ದ, ರೂಪಮುಂ_ಆಕಾರವನ್ನು, ವಟಪತ್ರಶಯನದೊಳ್-ಆಲದೆಲೆಯನ್ನುವ ಹಾಸಿಗೆಯಲ್ಲಿ, ಕಾಣಿಸಿದೆ-ತೋರ್ಪಡಿಸಿರುವಿ, ಅಲ್ಲದೆ-ಅದೂ ಅಲ್ಲದೆ, ನಿನ್ನನ್ನು, ಸೇವಿಪಜನಕೆ-ಭಜನೆ ಮಾಡತಕ್ಕವರಿಗೆ, ಕೃಪೆಯಿಂದ_ಕರುಣೆಯಿಂದ, ರಮಾ-ಇಂದಿರಾ ದೇವಿಯ, ರಮಣನಾಗಿ_ವಲ್ಲಭನಾಗಿ, ಪ್ರಕಟತದ-ಹೆಸರಾದ, ಧರ್ಮಸಂತತಿಗಳಂ – ಧರ್ಮಸಮುದಾಯವನ್ನು, ತೋರಿದುದಿಲ್ಲ-ಕಾಣಿಸಲಿಲ್ಲವು, ಇನ್ನು_ಇನ್ನು ಮುಂದೆ, ತಾನು_ನಾನಾದರೊ, ಬಿಡೆನು_ಬಿಡುವುದಿಲ್ಲವು, ಎಂದನು-ಎಂಬುದಾಗಿ ಹೇಳಿದನು ‖೩೪‖

ಟೀ‖ ಜನಪ-ಎಲೈ ಜನಮೇಜಯನೆ, ಬಕದಾಲ್ಭ್ಯಮುನಿ-ಬಕದಾಲ್ಭ್ಯ ಋಷಿಯು, ಬಂದು_ಬ್ಬಂದವನಾಗಿ, ಇಂತು_ಈ ಪ್ರಕಾರವಾಗಿ, ಕೃಷ್ಣನಂ_ಕೃಷ್ಣಸ್ವಾಮಿಯನ್ನು, ತಕ್ಕೈಸಿ-ಆದರಿಸಿ, ಪಾರ್ಥನಕೂಡ-ಫಲುಗುಣನೊಂದಿಗೆ, ಮತ್ತೆ-ತಿರುಗಿ, ಪೇಳ್ದಂ-ನುಡಿದನು, ಎನಗೆ-ನನಿಗಾದರೆ, ಇದು_ಈ, ಹರಿಯ_ಕೃಷ್ಣಮೂರುತಿಯ, ದೇಹವು-ದೇಹವೇ, ಸದಾ-ಅನವರತವೂ, ಆವಾಸಕೆ-ವಾಸಮಾಡುವುದಕ್ಕೆ, ಗೇಹಂ-ಮಂದಿರವಾಗಿದೆ, ಮುಕ್ತಿಯು-ಮೋಕ್ಷವೆಂಬುದೇ, ಅನುಕೂಲೆಯಾದ-ಅನುಕೂಲವಾಗಿರತಕ್ಕ, ಸತಿ-ಭಾರ್ಯೆಯು, ಅಲ್ಲದೆ-ಇದನ್ನು ಬಿಟ್ಟು, ಬೇರೆ-ಅನ್ಯವಾದ, ಮನೆ-ಆಲಯವು, ಇಲ್ಲ-ಇಲ್ಲವು, ತಾನು-ನಾನಾದರೊ, ಈಸುದಿನಂ_ಇಷ್ಟುದಿನ ಪರ್ಯಂತರವೂ; ಮಡದಿಯಿಲ್ಲವಾಗಿ-ಪತ್ನಿಯು ಇಲ್ಲದ್ದರಿಂದ, ತರಗೆಲೆ_ಬಾಡಿಹೋದ ಆಲದೆಲೆಯನ್ನು, ತಲೆಗೆ_ನೆತ್ತಿಯ ಮೇಲಕ್ಕೆ, ಪಿಡಿದುಕೊಂಡು-ಹಿಡಿದುಕೊಂಡವನಾಗಿ, ಇರ್ದೆನು-ಇದ್ದವನಾದೆನು, ಎನಲು-ಎಂದು ನುಡಿಯಲು, ಅರ್ಜುನನು_ಪಾರ್ಥನು, ನುಡಿದನು-ಮುಂದೆ ಹೇಳುವಂತೆ ಹೇಳುವನು, ‖೩೫‖

ಟೀ‖ ನರನು – ಫಲುಗುಣನು, (ಬಕದಾಲ್ಭ್ಯನನ್ನು ಕುರಿತು), ಇಪ್ಪತ್ತುಕಮಲಜರ – ಇಪ್ಪತ್ತು ಜನ ಬ್ರಹ್ಮರ, ಬಾಳ್ಕೆಯಂ-ಬದುಕುವಿಕೆಯನ್ನು, ಕಂಡು_ಈಕ್ಷಿಸಿ, ನಿಮಗೆ_ನಿಮಗಾದರೊ, ಗುರುತ್ವಂ_ಮನ್ನಣೆಯು, ಒಪ್ಪದೆ_ಯೋಗ್ಯವಾಗಿ

---

ಳಿಯೇ ಈಗ ಕೃಷ್ಣಾವತಾರದಿಂದ ನಿಮ್ಮೈವರನ್ನೂ ಕರೆದುಕೊಂಡು ಇಲ್ಲಿಗೆ ಬಂದು ನನಿಗೆ ದರ್ಶನವನ್ನು ಕೊಟ್ಟನಾದಕಾರಣ ಇನ್ನು ಮುಂದೆ ಆ ಪರಮಪುರುಷನೇ ನನಿಗೆ ಆಶ್ರಯನು ‖ ೩೩ ‖ ಆ ಸ್ವಾಮಿಯ ದಿವ್ಯಾಕಾರವು ನನಿಗೆ ಕಾಣುವವರೆಗೂ ನಾನು ಬಿಡುವುದಿಲ್ಲವು ‖ ೩೪ ‖ ಕೇಳೈ ಜನಮೇಜಯಮಹೀವಲ್ಲಭನೆ, ಬಕದಾಲ್ಭ್ಯನು ಅರ್ಜುನನೊಂದಿಗೆ ಈ ರೀತಿ ನುಡಿದು ಕೃಷ್ಣಸ್ವಾಮಿಯನ್ನು ತಬ್ಬಿಕೊಂಡು ಮತ್ತೆ ಪಾರ್ಥನನ್ನು ಕುರಿತು, ಕೇಳೈ ಫಲುಗುಣಾ ! ನನ್ನ ವಾಸಕ್ಕೆ ಈ ಕೃಷ್ಣಮೂರುತಿಯ ದೇಹವೇ ಮನೆಯು, ಮುಕ್ತಿಯೇ ನನಿಗೆ ತಕ್ಕ ಹೆಂಡತಿಯು, ಇವೆರಡೂ ದೊರಕಲೆಂದೇ ಇಷ್ಟು ದಿನವೂ ತರಗೆಲೆಯನ್ನು ತಲೆಯಮೇಲೆ ಹಿಡಿದು ತಪಸ್ಸನ್ನು ಮಾಡುತ್ತಲಿದ್ದೆ ‖೩೫‖ ನೆಂದು ನುಡಿದ ಬಕದಾಲ್ಭ್ಯನನ್ನು ನೋಡಿ ಅರ್ಜುನನು ಇಂತೆಂದನು. ಎಲೈ ಮಹನೀಯರೆ ಇಪ್ಪತ್ತು ಜನ ಚತುರ್ಮುಖರನ್ನು ನೋಡಿದ ನಿಮಿಗಿಂತಲೂ ದೊಡ್ಡವರು ಲೋಕದಲ್ಲಿ ಇನ್ನು ಯಾರಿರುವರು ನೀವು ನಮ್ಮೆಲ್ಲರಿಗೂ ಪೂಜ್ಯರೆಂದು ಆ ಮುನಿಯ ಪಾದಾರವಿಂದಗಳಿಗೆರಗಿ ಇನ್ನು ಯುಧಿಷ್ಠಿರನ ಯಾಗವು

ಲಾಗದರಸನಮುಖಂಸಫಲ | ಮಪ್ಪುದಿನ್ನೆಂದುನರನಭಿನಂದಿಸಲ್ಕಿನಮು | ಗರ್ಪಿಸದಿರೊಂದುಗರ್ವದಭಾವನುಂಕೃಷ್ಣನಿರಲೆಂದು ಮುನಿನುಡಿದನು || ೩೬ || ಸರ್ವವೇದದಮೂಲನೀಕೃಷ್ಣನಾವಂಗೆ | ಗರ್ವಮಿನ್ನೆಲೆಪಾರ್ಥಕೇಳಾದೊಡೀಕಡಲ | ರ್ಕುವದೊಳಗಾನಿರುತಿರಲ್ಮಹಾಕಲ್ಪದೊಳ್ಪದ್ಮಾಭಿಧಾನದಿಂದ || ಉರ್ವನಾಲ್ವತ್ತನೆಯವಾರುಷಿಕನಾಗಿಹಚ | ತುರ್ವದನನಿಲ್ಲಿಗೆಮರಾಳವಾಹನದೊಳಕ್ಕರ್ವೆರಸಿಬಂದೆನ್ನಮುಂದೆನಿಂದಾಗಳಧ್ಯಕ್ಷದೊಳಗಿಂತೆಂದನು||೩೭|| ಎಲೆವಿಪ್ರನೀನಾರದೇತಕೀಪರ್ಣಮಂ| ತಲೆಗೆ ವಿಡಿದಿಹೆಘೋರತಪಮೇಕದೇಂಬಯಕೆ | ಸಲೆಮೆಚ್ಚಿಬಂದೆನಾಂಕಮಲಜನುಸಿರ್ದೊಡಿತ್ತಪೆನೀಗೆವರವನೆನಲು || ತೊಲಗತ್ತ ಸಾರ್ನಿನ್ನತೆರದನಾಲ್ಮೊಗದರಂ | ಪಲಬರಂಕಂಡರಿವೆನೆನಗೀವುದಂಮುತ್ತೆ | ಕೆಲಬರ್ಗೆಕೊಟ್ಟುಕಳೆಪೋಗೆಂದುನಾನೆಂದೆನಾ

ಲ್ಲವೆ, ಈಸುದಿನಂ–ಇಷ್ಟು ಕಾಲವೂ, ಮಹಾಪುರುಷರು–ಮಹಾ ಘನತೆಯನ್ನೈದಿದ ನೀವು, ಇರುವುದು–ಜೀವಿಸಿರತಕ್ಕದ್ದು,ಅಚ್ಚರಿಯಲಾ–ಅಚ್ಚರಿಯಾಗಿಲ್ಲವೆ, ಶಿವಶಿವಾ–ಈಶ್ವರ ಈಶ್ವರ, ನಮ್ಮೆಲ್ಲರ್ಗೆ–ನಮ್ಮೆಲ್ಲರಿಗೂ, ನೀವೆ–ನೀವುಗಳೆ, ಪೂಜ್ಯರು – ಸತ್ಕಾರಕ್ಕೆ ತಕ್ಕವರು, ತಪ್ಪನು–ದೋಷವನ್ನು, ಈಕ್ಷಿಸಲಾಗದು–ಗಣನೆಗೆ ತರಕೂಡದು, ಇನ್ನು–ಇನ್ನುಮುಂದೆ, ಅರಸನ–ಯುಧಿಷ್ಠಿರನ, ಮುಖಂ–ಯಾಗವು, ಸಫಲಂ–ಯುಕ್ತವಾದದ್ದು, ಅಪ್ಪುದು–ಆಗುತ್ತದೆ, ಎಂದು–ಎಂಬುದಾಗಿ ನುಡಿದು, ಅಭಿನಂದಿಸಲ್ಕೆ–ವಂದನೆಯಂ ಮಾಡಲು, ಕೃಷ್ಣನು–ಕೃಷ್ಣಸ್ವಾಮಿಯು, ಇರಲು–ಇರುವ ಕಾಲದಲ್ಲಿ, ಬಂದು–ಬಂದಾದ, ಗರ್ವದನುಡಿಯಂ–ಅಹಂಕಾರದ ಮಾತನ್ನು, ನಮಗೆ–ನಮಿಗಾದರೊ, ಅರ್ಪಿಸದೆ–ಅರ್ಪಣೆಮಾಡದೆ, ಇರು–ಇರಬೇಕು, ಎಂದು–ಎಂಬತೆರನಾಗಿ, ಮುನಿ ಬಕದಾಲ್ಭ್ಯನು, ನುಡಿದನು–ಉತ್ತರ ಕೊಟ್ಟನು. ||೩೬||

ಟೀ|| ಎಲೆಪಾರ್ಥ – ಅಯ್ಯಾ ಫಲುಗುಣಾ ಕೇಳು, ಈಕೃಷ್ಣನು – ಈ ಕೃಷ್ಣಸ್ವಾಮಿಯಾದರೊ, ಸರ್ವವೇದದ ಮೂಲನು-ವೇದಗಳೆಲ್ಲಕ್ಕೂ ತಳಹದಿಯು, ಇನ್ನು–ಹೀಗಿರುವಲ್ಲಿ, ಆವಂಗೆ – ಯಾರಿಗೆತಾನೆ, ಗರ್ವಂ–ಅಹಂಭಾವವಿರುವದು, ಈಕಡಲಕುರ್ವದೊಳಗೆ – ಈ ಸಮುದ್ರದ ಕಡೆಯಲ್ಲಿ, ಆಂ – ನಾನು, ಮಹಾಕಲ್ಪದೊಳು – ಮಹಾಕಲ್ಪದಲ್ಲಿ, ಪದ್ಮಾಭಿಧಾನದಿಂದ-ಪದ್ಮನೆಂಬ ನಾಮಧೇಯದಿಂದ,ಇರುತಿರಲ್–ಇರತಕ್ಕಕಾಲದಲ್ಲಿ, ಉರ್ವ–ಶ್ರೇಷ್ಠನಾಗಿರತಕ್ಕ, ನಾಲ್ವತ್ತನೆಯವಾರುಷಿಕನು – ನಾಲ್ವತ್ತು ಸಂವತ್ಸರದಿಂದ ಕೂಡಿದವನು. ಆಗಿಹ-ಆಗಿರುವ, ಚತುರ್ವದನನು – ಚತುರ್ಮುಖನು, ಅಕ್ಕರ್ವೆರಸಿ–ಪ್ರೇಮಪುರಸ್ಸರವಾಗಿ, ಮರಾಳವಾಹನದೊಳು – ಹಂಸಪಕ್ಷಿಯಮೇಲೆ ಕುಳಿತು, ಇಲ್ಲಿಗೆ–ಈ ಎಡೆಗೆ, ಬಂದು–ಬಂದವನಾಗಿ, ಆಗಳು-ಆಕಾಲದಲ್ಲಿ, ಎನ್ನಎದುರಿಗೆನಿಂದು-ನನ್ನೆದುರಿಗೆ ನಿಂತುಕೊಂಡು, ಅಧ್ಯಕ್ಷದೊಳು–ಠೀವಿಯಿಂದ, (ದೊಡ್ಡಸ್ತಿಕೆಯಿಂದ) ಇಂತು–ಮುಂದೆ ಹೇಳುವಂತೆ, ಎಂದನು–ನುಡಿದನು. ||೩೭||

ಟೀ|| ಎಲೆವಿಪ್ರ–ಎಲೈ ಭೂಸುರೋತ್ತಮನೆ, ನೀನು–ನೀನಾದರೊ, ಆರು–ಯಾರಾಗಿರುವೆ, ಈಪರ್ಣವಂ – ಈ ಎಲೆಯನ್ನು, ಅದೇತಕೆ-ಯಾವ ನಿಮಿತ್ತವಾಗಿ, ತಲೆಪಿಡಿದು–ತಲೆಗೆ ಹಿಡಿದುಕೊಂಡು, ಇಹೆ–ಇರುವಿ, ಘೋರ–ಕಠಿಣವಾದ, ತಪಂ–ತಪಸ್ಸಿನ ಕಾರ್ಯವು, ಏಕೆ–ಏತಕ್ಕೆ, ಆಂ–ನಾನಾದರೊ, ಕಮಲಜನು–ಪದ್ಮಸಂಭವನಾಗಿರುವೆನು. ಈಗ–ಈಗಲಾದರೊ, ಉಸಿರ್ದೊಡೆ–ನಿನ್ನ ವರ್ತಮಾನವನ್ನು ತಿಳಿಸಿದರೆ, ವರವನು-ನಿನ್ನ ಕೋರಿಕೆಯನ್ನು, ಇತ್ತಪೆನು–ನೆರವೇರಿಸುವೆನು. ಎನಲು–ಎಂದು ನುಡಿಯಲು, ನಾನು–ನಾನಾದರೊ, ಪದ್ಮಸಂಭವನೊಳು–ಬ್ರಹ್ಮನೊಂದಿಗೆ, ತೊಲಗು–ಹೊರಡು, ಅತ್ತಸಾರು–ಇಲ್ಲಿ ನಿಲ್ಲಬೇಡ, ನಿನ್ನತೆರದ–ನಿನ್ನಂಥ, ನಾಲ್ಮೊಗರಂ–ಬ್ರಹ್ಮದೇವರುಗಳನ್ನು, ಪಲಬರಂ–ಬಹು ಮಂದಿಯನ್ನು, ಕಂಡು–ಈಕ್ಷಿಸಿ, ಅರಿವೆನು–ತಿಳಿದುಕೊಂಡಿದ್ದೇನೆ. ಎನಗೆ–ನನಿಗೆ, ಈವುದಂ–ಕೊಡಬೇಕೆಂದೆಣಿಸಿರುವುದನ್ನು, ಮತ್ತೆಕೆಲಬರ್ಗೆ–ಬೇರೆಯಾದವರಿಗೆ, ಕೊಟ್ಟುಕಳೆ–ಕೊಟ್ಟುಬಿಡು, ಪೋಗು–ಹೊರಟುಹೋಗು, ಎಂದೆನು–ಎಂಬುದಾಗಿ ಚತುರ್ಮುಖನೊಂದಿಗೆ ನಾನು ಹೇಳಿದೆನು.

ಸಫಲವಾಗುವುದರಲ್ಲೇನೂ ಸಂದೇಹವಿಲ್ಲವೆಂದು ನುಡಿದ ಮಾತನ್ನು ಕೇಳಿ ಬಕದಾಲ್ಭ್ಯನು ಎಲೈ ಅರ್ಜುನ! ಕೃಷ್ಣಸ್ವಾಮಿಯಿರುವಾಗ ನನ್ನನ್ನೆ ಇಷ್ಟು ಗೌರವಿಸತಕ್ಕದ್ದೇಅಲ್ಲವು. || ೩೬ || ಈ ಕೃಷ್ಣನು ವೇದಗಳಿಗೆಲ್ಲಾ ಆಧಾರನಾದವನೂ ಅನಾದಿಯೂ ಆಗಿರುವನಾದ್ದರಿಂದ ನನಿಗೆ ಈ ಅಹಂಭಾವವು ಕೂಡದು. ಕೇಳೈ ಅರ್ಜುನಾ, ಪೂರ್ವದಲ್ಲಿ ನಾನು ಈ ಸಮುದ್ರತೀರದಲ್ಲಿ ತಪಸ್ಸನ್ನು ಮಾಡುತ್ತಲಿರುವಾಗ ಮಹಾ ಪದ್ಮದಲ್ಲಿ ಚತುರ್ಮುಖಬ್ರಹ್ಮನು ಹಂಸಾರೂಢನಾಗಿ ಇಲ್ಲಿಗೆ ಬಂದು ನನ್ನನ್ನು ಕುರಿತು ||೩೭|| ಎಲೈ ಬ್ರಾಹ್ಮಣನೇ ನೀನು ಯಾರು? ಈ ಎಲೆಯನ್ನು ನಿನ್ನ ಕರತಳದಲ್ಲಿ ಹಿಡಿದಿರತಕ್ಕ ನಿಮಿತ್ತವೇನು? ಯಾವ ಪ್ರಯೋಜನಕ್ಕಾಗಿ ಈ ತೆರನಾದ ಉಗ್ರತಪಸ್ಸನ್ನು ಕೈಕೊಂಡಿರುವಿ. ನಿನ್ನ ತಪಸ್ಸಿಗೆ ನಾನು ಮೆಚ್ಚಿರುವೆನು ನಿನಗೆ ಬೇಕಾದ ವರವನ್ನು ಕೇಳಿಕೊ, ನಾನು ಚತುರ್ಮುಖಬ್ರಹ್ಮನು ನಿನ್ನ ಇಷ್ಟಾರ್ಥವನ್ನೀಡೇರಿಸುವೆನೆಂದು ನುಡಿದನು. ನಾನಾದರೊ ಆ ಚತುರ್ಮುಖನನ್ನು ಕುರಿತು, ನಿನ್ನಂಥ ಬ್ರಹ್ಮರು ಇಪ್ಪತ್ತುಮಂದಿಯನ್ನು ಕಂಡಿರುವೆನು ನನಿಗೆ ನಿನ್ನಿಂದ ಆಗಬೇ

ಪದ್ಮಸಂಭವನೊಳು ‖ ೩೮ ‖ ಆನೆಂದುದಂ ಕೇಳ್ದುಗರ್ವದಿಂದಾಪದ್ಮ | ಸೂನು ತೋರಿಸುತನ್ನ ತೆರನಾಲ್ಮೊಗದರಂನೀನೆಂದು ಪೇಳ್ವನ್ನೆಗಂ ಬಂದುದೊಂದುಸುಳಿಗಾಳಿಧರೆನಡಗುವಂತೆ ‖ ನಾನಾದ್ರುಮಂಗಳಂ ಕಿತ್ತೆತ್ತಿ ಮಿಗೆಮಿರ್ದು | ಬಾನೆಡೆಗೆನಮ್ಮಿರ್ವರಂ ಕೊಂಡಡರ್ದುದದ| ನೇನೆಂಬೆನದ್ಭುತವನೆಲೆಪಾರ್ಥ ತೊಳಲಿಸಿತಜಾಂಡಶತಕೋಟಿಗಳನು ‖೩೯‖ ತೀವಿದೌದುಂಬರದದ್ರುಮದ ಫಲದಂತೆರಾ | ಜೀವನಾಭನಮೈಯ್ಯೊಳಿಡಿದಿಹವಜಾಂಡದಗ | ಳಾವಾಯುವಶದಿಂದ ತೊಳಲಿದೆವು ಪೊಕ್ಕವೊಂದರೊಳಷ್ಟಮುಖ ವಿರಂಚಿ ‖ ಜೀವಜಾಲದಸೃಷ್ಟಿಗೊಡೆಯನಾಗಿರ್ದವ | ನಾವೀರ್ವರುಂಬರಲ್ಕಂಡುವಿಸ್ಮಿತನಾಗಿ | ನೀವದಾರೆತ್ತಣಿಂದೈದಿದಿರಿ ನಿಮ್ಮಪೆಸರೇನೆಂದುಬೆಸಗೊಂಡನು ‖೪೦‖ ಚತುರಾಸ್ಯನಾಂ ಸತ್ಯಲೋಕದಿಂಬಂದೆನೀ | ವ್ರತಿಶಿಷ್ಯನೆನಗೆಬಕದಾಲ್ಭ್ಯನೆಂಬವನೆಂದು| ಶತಪತ್ರಜಂಪೇಳ್ದೊಡಪಹಾಸಮುಂಮಾಡುತಷ್ಟವದನವಿರಿಂಚಿ ‖ ಅತಿಗರ್ವಭಾವದಿಂನೀನಜಂಶಿಷ್ಯನಿವ| ನತುಳರ್ಗೆಗುರು

ಅ‖ ವಿ‖ ಕಮಲಜ–ಕಮಲ–ಕಮಲದಲ್ಲಿ, ಜ-ಹುಟ್ಟಿದವನು (ಸ. ತ) ನಾಲ್ಮೊಗದರು-ನಾಲ್ಕು ಮುಖವು ಯಾರಿಗೊ ಅವರು (ಬ. ಸ) ‖೩೮‖

ಟೀ‖ ಆನು–ನಾನಾದರೊ, ಎಂದುದಂ–ಎಂದು ಹೇಳಿದ್ದನ್ನು, ಆಪದ್ಮಸೂನು–ಆ ಕಮಲೋದ್ಭವನು, ಕೇಳ್ದು–ಕೇಳಿದವನಾಗಿ, ತನ್ನತೆರದ–ನನ್ನ ಹಾಗಿರತಕ್ಕ, ನಾಲ್ಮೊಗದರಂ–ಚತುರ್ಮುಖರನ್ನು, ತೋರಿಸು–ತೋರ್ಪಡಿಸು, ಎಂದು-ಎಂಬತೆರನಾಗಿ, ಗರ್ವದಿಂದ–ಹೆಮ್ಮೆಯಿಂದ, ಪೇಳ್ವನ್ನೆಗಂ-ಹೇಳುವಷ್ಟು ಹೊತ್ತಿಗೆ, ಧರೆನಡುಗುವಂತೆ–ಭೂಮಿಯೆಲ್ಲಾ ಅಲ್ಲಾಡುವ ಹಾಗೆ, ಬಂದುಸುಳಿಘಾಳಿ-ಬಂದಾನೊಂದು ಬಿರುಗಾಳಿಯು, ಬಂದುದು–ವ್ಯಾಪಿಸಿತು. ನಾನಾದ್ರುಮಂಗಳಂ–ತಂಡೋಪತಂಡವಾದ ವೃಕ್ಷಂಗಳನ್ನು, ಕಿತ್ತು-ಉರುಳಿಸಿ, ಎತ್ತಿ-ಮೇಲಕ್ಕೆತ್ತಿಕೊಂಡು, ಮಿಗೆಮಿರ್ದು-ಅತ್ಯಧಿಕವಾಗಿ, ನಮ್ಮಿರ್ವರಂ–ನಮ್ಮಿಬ್ಬರನ್ನೂ, ಬಾನೆಡೆಗೆ–ಅಂತರಿಕ್ಷಮಾರ್ಗಕ್ಕೆ, ಕೊಂಡು-ತೆಗೆದುಕೊಂಡು, ಅಡರ್ದುದು–ಹೊರಟುಹೋಯಿತು. ಅಜಾಂಡಶತಕೋಟಿಗಳನು-ನೂರುಕೋಟಿ ಬ್ರಹ್ಮಾಂಡಗಳನ್ನೂ ಕೂಡ, ತೊಳಲಿಸಿತು – ಸುತ್ತುವಂತೆ ಮಾಡಿತು, ಅದನು-ಆ ಅಚ್ಚರಿಯನ್ನು, ಏನೆಂಬೆನು-ಏನೆಂದು ನುಡಿಯಲಿ ‖೩೯‖

ಟೀ‖ ರಾಜೀವನಾಭನ-ಕಮಲನಾಭನಾದ ನಾರಾಯಣನ, ಮೈಯೊಳು-ದೇಹದೊಳಗೆ, ಅಜಾಂಡಗಳು–ಬ್ರಹ್ಮಾಂಡಗಳಾದರೊ, ತೀವಿದ–ಪೂರ್ಣವಾಗಿರುವ, ಔದುಂಬರದ್ರುಮ - ಅತ್ತೀಮರದಲ್ಲಿರುವ, ಫಲದಂತೆ - ಹಣ್ಣುಗಳತೆರನಾಗಿ, ಇಡಿದಿಹವು-ಸೇರಿರುವವು. ಆವಾಯುವಶದಿಂದ–ಆ ಗಾಳಿಯ ಹೊಯ್ಲಿಗೆ ಸಿಕ್ಕಿದ್ದರಿಂದ, ತೊಳಲಿದೆವು-ಆಯಸಂಗೊಂಡೆವು. ಒಂದರೊಳು-ಒಂದಾದ ಬ್ರಹ್ಮಾಂಡದಲ್ಲಿ, ಪೊಕ್ಕೆವು–ಸೇರಿದೆವು. ಅಷ್ಟಮುಖವಿರಂಚಿ–ಎಂಟು ಮುಖಗಳನ್ನುಳ್ಳ ಕಮಲೋದ್ಭವನು. ಜೀವಜಾಲದ–ಪ್ರಾಣಿರಾಶಿಗಳ, ಸೃಷ್ಟಿಗೆ–ಉತ್ಪತ್ತಿಗೆ, ಒಡೆಯನಾಗಿ–ಯಜಮಾನನಾಗಿ, ಇರ್ದನು-ಇರುವವನಾದನು. ಆವೀರ್ವರುಂಬರಲ್-ನಾವಿಬ್ಬರೂ ಬಂದದ್ದನ್ನು, ಅವನು–ಆ ಎಂಟುಮುಖದ ಬ್ರಹ್ಮನು, ಕಂಡು – ದಿಟ್ಟಿಸಿ, ವಿಸ್ಮಿತನಾಗಿ – ಅಚ್ಚರಿಗೊಂಡು, ನೀವು–ನೀವಾದರೊ, ಅದಾರು–ಯಾರಾಗಿದ್ದೀರಿ, ಎತ್ತಣಿಂದ–ಯಾವ ಭಾಗದಿಂದ, ಐದಿದಿರಿ–ಬಂದಿದ್ದೀರಿ, ನಿಮ್ಮ-ನಿಮ್ಮದಾದ, ಪೆಸರು–ನಾಮಧೇಯವು, ಏನು–ಏನಾಗಿದೆ, ಎಂದು-ಎಂಬುದಾಗಿ, ಬೆಸಗೊಂಡನು–ಪ್ರಶ್ನೆಮಾಡಿದನು. ‖೪೦‖

ಟೀ‖ ಶತಪತ್ರಜಂ–ಕಮಲಸಂಭವನಾದರೊ, ಆಂ–ನಾನು, ಚತುರಾಸ್ಯನು – ಚತುರ್ಮುಖನು, ಸತ್ಯಲೋಕದಿಂ-ಸತ್ಯಲೋಕದಿಂದ, ಬಂದೆನು–ಬಂದಿದ್ದೇನೆ, ಈವ್ರತಿ–ಈ ತಪಸ್ವಿಯಾದರೊ, ಎನಗೆ-ನನಿಗೆ, ಶಿಷ್ಯನು–ಶಿಷ್ಯನಾಗಿದ್ದಾನೆ, ಎಂದು-ಎಂಬತೆರನಾಗಿ, ಪೇಳ್ದೊಡೆ-ನುಡಿಯಲು, ಅಷ್ಟವದನದವಿರಂಚಿ-ಎಂಟು ಮುಖವುಳ್ಳ ಬ್ರಹ್ಮನು, ಅತಿಗರ್ವಭಾವದಿಂದ–ಅತ್ಯಧಿಕವಾದ ಅಹಂಕಾರದಿಂದ, ಅಪಹಾಸಮುಂಮಾಡುತ್ತ – ಪರಿಹಾಸವಂಗೈಯ್ಯುತ್ತ, ನೀನು – ನೀನಾದರೊ, ಅಜಂ – ಕಮಲಸಂಭವನಾಗಿರುವಿ, ಇವನು–ಈತನು, ಶಿಷ್ಯನು–ಶಿಷ್ಯನಾಗಿದ್ದಾನೆ, ಗುರುಶಿಷ್ಯರು–ಗುರುಶಿಷ್ಯರಾಗಿರತಕ್ಕ, ಈರ್ವರುಂ-ಇಬ್ಬರೂ, ಅತುಳರ್ಗೆ–ಅಸಾಧಾರಣರ್ಗೇ ಸರಿ, ನಿಮ್ಮಸಂಪ್ರತಿಗೆ - ನಿಮಗೆ ಹೋಲಿಕೆಯಾಗಿರತಕ್ಕವರು, ನಮ್ಮೊಳ್ – ನಮ್ಮಲ್ಲಿ, ಕೌಚದ–

ಕಾದದ್ದೇನು ನೀನು ನನಿಗೆ ಕೊಡಬೇಕೆಂದಿರುವುದನ್ನು ಮತ್ತೆ ಯಾರಿಗಾದರೂ ಕೊಡೆಂದು ಹೇಳಿದೆನು ‖ ೩೮ ‖ ಈ ನನ್ನ ನುಡಿಯನ್ನು ಕೇಳಿದ ಚತುರ್ಮುಖನು ನನ್ನನ್ನು ಕುರಿತು ನೀನು ನೋಡಿದ ಇಪ್ಪತ್ತು ಜನ ಬ್ರಹ್ಮರನ್ನು ನನಿಗೆ ತೋರಿಸೆಂದು ಗರ್ವದಿಂದ ಕೇಳುತ್ತಿರುವಾಗ ಬಿರುಗಾಳಿ ಎದ್ದು ಮರಗಿಡಗಳನ್ನುರುಳಿಸುತ್ತಾ ನನ್ನನ್ನೂ ಚತುರ್ಮುಖನನ್ನೂ ಅಂತರಿಕ್ಷಕ್ಕೆ ಎತ್ತಿಕೊಂಡುಹೋಗಿ ನೂರುಕೋಟಿ ಬ್ರಹ್ಮಾಂಡಗಳನ್ನು ಗಡಗಡನೆ ನಡುಗುವಂತೆ ಮಾಡಿತು ‖೩೯‖ ಅಲ್ಲಿರುವ ಅಷ್ಟಮುಖ ಬ್ರಹ್ಮನು ನಮ್ಮೀರ್ವರನ್ನೂ ನೋಡಿ ನೀವು ಯಾರು? ಎಲ್ಲಿಂದ ಬಂದಿರುವಿರೆಂದು ಕೇಳಲು ‖೪೦‖ ನಾನು ಸತ್ಯಲೋಕದಿಂದ ಬಂದಿರುವ ಚತುರ್ಮುಖನು. ಇವನು ನನ್ನ ಶಿಷ್ಯನಾದ ಬಕದಾಲ್ಭ್ಯನೆಂದು ನುಡಿಯುತ್ತಿರುವುದನ್ನು ಅಷ್ಟಮುಖವಿರಂಚಿಯು

ಶಿಷ್ಯರೀರ್ವರುಂನಿಮ್ಮಸಂ | ಪ್ರತಿಗೆಶೌಚದಸಲಿಲದೂಳಿಗದವಟುಗಳಿದನಮ್ಮೊಳ್ಕೆಲಬರಿದೆಯೆಂದನು ‖ ೪೧ ‖ ಇನಿತುಗರ್ವದೊಳಷ್ಟವದನದವಿರಿಂಚಿನುಡಿ | ವನಿತರೋಳ್ಪೊರೆಯೊಳಿಹನಾವುಸಹಿತಾತನಂ | ಘನರಭಸದಿಂದಸುಳಿಗಾಳಿಕೊಂಡೆದ್ದುದಾಗಸಕತಿಕಠೋರದಿಂದ ‖ ಅನಿಲವಶದೋಳ್ಪೋಗಿಮೂವರುಂಮತ್ತೊಂದು | ವನಜಭವಲೋಕಮುಂಕಂಡೆವಲ್ಲಿಯಪುಣ್ಯ | ಜನರೆಮ್ಮನೆತ್ತಣವಿಕಾರಿಗಳುನೀವೆಂದುನಗುತಲೋಲಾಡಿಸಿದರು ‖೪೨‖ ಅಲ್ಲಿಷೋಡಶಮುಖದಬ್ರಹ್ಮನಂಕಂಡವನ | ಮೆಲ್ಲಡಿಗೆನಮಿಸೆಗರ್ವದೊಳವಂನುಡಿಸದಿರೆ | ತಲ್ಲಣಿಸಿನಾವಂಜಲವನಪೊರೆಯವರೆಮ್ಮನಾರೆಂದುಬೆಸಗೊಳಲ್ಕೆ ‖ ಬಲ್ಲಡಷ್ಟಾನನಚತುರ್ವದನಬಕದಾಲ್ಭ್ಯ | ರಿಲ್ಲಿಗರಿಯದೆಬಂದೆವೆಂದುನಾವುಸಿರಲ್ಕೆ | ಮಲ್ಲಿಗೆಯಲರ್ಗೆದರಿದಂತಟ್ಟಹಾಸದಿಂನಗುತಿರ್ದನಾವಿರಿಂಚಿ ‖ ೪೩ ‖ ಈವಿರಿಂಚಿಗಳನೀಕ್ಷಿಸಿತನ್ನಮಹಿಮೆಯನ | ದೇವಣ್ಣಿಸುವೆನೆಂದುಕೆಲವರೊಳಾಡುವಕ | ಲಾವಕ್ತ್ರನಂಮತ್ತೆಸುಳಿಗಾಳಿಕೊಂಡದುದ-ನಭಸ್ಥಳಕೆಬಳಿಕ ‖ ಮೂವತ್ತೆರಡುಮೊಗದಕಮಲಜನಲೋಕಮಂ | ನಾವುತಲೆಕೆಳಗಾಗಿನಾಲ್ವರುಂಪೊಗಲೆಮ್ಮ |

---

ಶೌಚಕಾರ್ಯದ, ಸಲಿಲದ–ಉದಕದ, ಊಳಿಗದ-ಚಾಕರಿಮಾಡತಕ್ಕ, ವಟುಗಳು–ಬಾಲಕರು, ಕೆಲಬರು–ಕೆಲವು ಮಂದಿ, ಇದೆ–ಇದ್ದಾರೆ, ಎಂದನು–ಎಂಬುದಾಗಿ ಅಷ್ಟಮುಖ ಬ್ರಹ್ಮನು ಹೇಳಿದನು. ‖೪೧‖

ಟೀ‖ ಅಷ್ಟವದನದವಿರಂಚಿ–ಎಂಟು ಮುಖವುಳ್ಳ ಬ್ರಹ್ಮದೇವನು, ಇನಿತು–ಇಷ್ಟೊಂದು, ಗರ್ವದೊಳು-ಅಹಂಕಾರದಿಂದ, ನುಡಿವನಿತರೊಳ್- ಮಾತನಾಡುವ ವೇಳೆಗೆ, ಸುಳಿಗಾಳಿ–ಆವರ್ತ ಮಾರುತವು, ಘನರಭಸದಿಂದ-ಬಹು ಬೇಗನೆ, ಅತಿಕಠೋರದಿಂದ-ಬಹು ಬಿರುಸಾಗಿ, ಪೊರೆಯೊಳು–ಹತ್ತಿರದಲ್ಲಿ, ಇಹ-ಇರತಕ್ಕ, ನಾವು ಸಹಿತ-ನಮ್ಮೊಂದಿಗೆ, ಆತನಂ–ಆ ಬ್ರಹ್ಮನನ್ನೂ, ಕೊಂಡು-ತೆಗೆದುಕೊಂಡು, ಎದ್ದುದು–ಮೇಲಕ್ಕೆದ್ದಿತು, ಮೂವರುಂ–ನಾವು ಮೂರು ಜನವೂ, ಅನಿಲವಶದೊಳ್-ಗಾಳಿಯ ಹೊಯ್ಲಿನಿಂದ, ಪೋಗಿ-ಹೋದವರಾಗಿ, ಮತ್ತೊಂದು–ಬೇರೊಂದಾದ, ವನಜಭವ-ಕಮಲಸಂಭವನ, ಲೋಕವಂ-ಪ್ರಪಂಚವನ್ನು, ಕಂಡೆವು–ಈಕ್ಷಿಸಿದೆವು, ಅಲ್ಲಿಯ–ಅಲ್ಲಿರತಕ್ಕ, ಪುಣ್ಯಜನರು–ಸುಕೃತದಿಂ ಕೂಡಿದವರು, ನೀವು–ನೀವಾದರೊ, ಎತ್ತಣ–ಎಲ್ಲಿಯ, ವಿಕಾರಿಗಳು–ಕುರೂಪಿಗಳು, ಎಂದು–ಎಂಬತೆರನಾಗಿ, ನಗುತಲಿ-ಹಾಸ್ಯಮಾಡುತ್ತ, ಎಮ್ಮನು–ನಮ್ಮನ್ನು, ಓಲಾಡಿಸಿದರು–ನಡಗುವಂತೆ ಮಾಡಿದರು. ‖೪೨‖

ಟೀ‖ ಅಲ್ಲಿ–ಆ ಲೋಕದಲ್ಲಿ, ಷೋಡಶಮುಖದ–ಹದಿನಾರು ಮುಖವುಳ್ಳ, ಬ್ರಹ್ಮನಂ–ಬ್ರಹ್ಮದೇವನನ್ನು, ಕಂಡು–ಈಕ್ಷಿಸಿ, ಅವನ–ಆತನ, ಮೆಲ್ಲಡಿಗೆ–ಮೆತ್ತಗಿರುವ ಕಾಲುಗಳಿಗೆ, ನಮಿಸೆ–ನಮಸ್ಕಾರವಂ ಮಾಡಲು, ಅವಂ–ಆ ಹದಿನಾರು ಮುಖದ ಬ್ರಹ್ಮದೇವನು, ಗರ್ವದೊಳು–ಹೆಮ್ಮೆಯಿಂದ, ನುಡಿಸದಿರೆ–ಮಾತನ್ನೇ ಆಡಿಸದಿರಲು, ನಾವು–ನಾವುಗಳು, ತಲ್ಲಣಿಸಿ–ದುಃಖಿಸಿ, ಅಂಜಲು–ಹೆದರಿಕೊಳ್ಳಲು, ಎಮ್ಮನು–ನಾವು ಮೂವರನ್ನೂ, ಅವನ–ಆ ಬ್ರಹ್ಮದೇವನ, ಪೊರೆಯವರು–ಹತ್ತಿರವಿರತಕ್ಕವರು, ಆರೆಂದು–ಯಾರೆಂಬುದಾಗಿ, ಬೆಸಗೊಳಲ್ಕೆ–ಪ್ರಶ್ನೆಮಾಡಲು, ಬಲ್ಲಡೆ–ಅರಿಯಲು ಆಶೆಯಿದ್ದರೆ, ಅಷ್ಟಾನನ–ಅಷ್ಟಮುಖ ಬ್ರಹ್ಮ, ಚತುರ್ವದನ–ನಾಲ್ಕು ಮುಖದ ಬ್ರಹ್ಮದೇವನು, ಬಕದಾಲ್ಭ್ಯರು–ಬಕದಾಲ್ಭ್ಯ ಇವರುಗಳು, ಇಲ್ಲಿಗೆ–ಈ ಎಡೆಗೆ, ಅರಿಯದೆ–ತಿಳುವಳಿಕೆಯಿಲ್ಲದೆ, ಬಂದೆವು–ಬಂದಿದ್ದೇವೆ, ಎಂದು–ಎಂಬ ತೆರನಾಗಿ, ನಾವು–ನಾವಾದರೊ, ಉಸಿರಲ್ಕೆ–ನುಡಿಯಲು, ಮಲ್ಲಿಗೆಯಲರ್–ಮಲ್ಲಿಕಾ ಕುಸುಮಂಗಳನ್ನು, ಕೆದರಿದಂತೆ–ಹರಡಿದಹಾಗೆ, ಅಟ್ಟಹಾಸದಿ–ಗರ್ವದಿಂದ, ಆ ವಿರಿಂಚಿ–ಆ ಬ್ರಹ್ಮದೇವನು, ನಗುತಿರ್ದನು–ನಗುವುದಕ್ಕಾರಂಭಿಸಿದನು. ‖೪೩‖

ಟೀ‖ ಸುಳಿಗಾಳಿ- ಬಿರುಗಾಳಿಯಾದರೊ, ಈ ವಿರಂಚಿಗಳನು - ಈ ಹದಿನಾರು ಎಂಟು ಮುಖವುಳ್ಳ ಬ್ರಹ್ಮರನ್ನು, ಈಕ್ಷಿಸಿ–ದಿಟ್ಟಿಸಿ, ತನ್ನ–ತನ್ನದಾಗಿರುವ, ಮಹಿಮೆಯನು–ಹೆಚ್ಚಿಗೆಯನ್ನು, ಆದೇವಣ್ಣಿಸುವೆನು–ಏನೆಂದು ವರ್ಣನೆ ಮಾಡಲಿ, ಎಂದು–ಎಂಬ ತೆರನಾಗಿ, ಕೆಲದವರೊಳು–ಸಮೀಪವರ್ತಿಗಳೊಂದಿಗೆ, ಆಡುವ–ಮಾತನಾಡತಕ್ಕ, ಕಲಾವಕ್ತ್ರನಂ– ಹದಿನಾರು ಮುಖದವನನ್ನು, ಮತ್ತೆ–ತಿರುಗಿ, ಕೊಂಡು– ಎತ್ತಿಕೊಂಡು, ನಭಸ್ಥಳಕೆ– ಅಂತರಿಕ್ಷ ಮಾರ್ಗಕ್ಕೆ, ಅಡರ್ದುದು–ವ್ಯಾಪಿಸಿ

---

ಕೇಳಿ ನೀವೀರ್ವರೂ ನಮ್ಮಲ್ಲಿ ಸೇವಕಾವೃತ್ತಿಯಲ್ಲಿರುವ ಬಾಲವಟುಗಳಿಗಿಂತಲೂ ಕಡೆ ಎಂದು ಗರ್ವದಿಂದ ನುಡಿದನು ‖೪೧‖ ಅಷ್ಟರೊಳಗಾಗಿ ಸುಳಿಗಾಳಿ ಎದ್ದು ನಮ್ಮಿರ್ವರನ್ನೂ ಎಂಟು ಮುಖದ ಬ್ರಹ್ಮನನ್ನೂ ಅಂತರಿಕ್ಷಕ್ಕೆ ಎತ್ತಿಕೊಂಡು ಹೋಯಿತು. ಅಲ್ಲಿ ಹದಿನಾರುಮುಖದ ಬ್ರಹ್ಮನ ಲೋಕವು ಸಿಕ್ಕಿತು. ನಾವು ಅಲ್ಲಿ ಹೋಗಲಾಗಿ ಅಲ್ಲಿನವರೆಲ್ಲಾ ನಮ್ಮನ್ನು ನೋಡಿ ಹಾಸ್ಯಮಾಡಿ ನಕ್ಕರು ‖೪೨‖ ಆ ಬಳಿಕ ಆ ಷೋಡಶಮುಖ ಬ್ರಹ್ಮನು ನಮ್ಮನ್ನು ಯಾರೆಂದು ಕೇಳಿ ನಮ್ಮ ವರ್ತಮಾನವನ್ನೆಲ್ಲಾ ತಿಳಿದು ಗಹಗಹಿಸಿ ನಗುತ್ತಾ ‖ ೪೩ ‖ ತನ್ನ ಮಹಿಮೆಯನ್ನೇ ಕೊಂಡಾಡುತ್ತಲಿರುವಾಗ ಸುಳಿಗಾಳಿ ಎದ್ದು ನಮ್ಮೆಲ್ಲರನ್ನೂ ಹಾರಿಸಿಕೊಂಡು ಮುವತ್ತೆರಡು ಮುಖದ ಬ್ರಹ್ಮನ ಬಳಿಗೆ ಹಾಕಲು ನಾವು ತಲೆಕೆಳಗಾಗಿ ಬಿದ್ದೆವು. ಆ ವಿರಂಚಿಯು ಕನಿಕರ

ಸಾವಿಧಾತ್ರಂ ಕಂಡುಕರುಣದಿಂ ಕೇಳ್ದೊಡಾವಿನಿತೆಲ್ಲಮಂಪೇಳ್ದೆವು ||೪೪|| ಏತಕ್ಕೈತಂದಿರಿಲ್ಲಿಗೆರವಿಯಮುಂದೆಖ | ದ್ಯೋತಂಗಳೆಸೆದಪವೆತನಗೆಸರಿಯಾರೆಂಬ | ಮಾತುಮುಗಿಯದಮುನ್ನ ಕೊಂಡೆದ್ದುದಾವರ್ತ ಮಾರುತಂನಾವುಬಳಿಕ || ಆತನಂಕೂಡಿಕೊಂಡರವತ್ತುನಾಲ್ಕುಮುಖ | ದಾತನಂಕಂಡೆವಾತನಗರ್ವದಿಂದಮುಂ | ದೀತೆರದೊಳಿವ್ಮಡಿಸಿದಾಸ್ಯದವಿರಂಚಿಗಳಲೋಕಂಗಳಂಕಂಡೆವು ||೪೫|| ತೊಳಲಿದೆವುಪಾರ್ಥಕೇಳಿಂತುನಾವೆಲ್ಲರುಂ | ಬಳಿಕಸಾವಿರಮೊಗದೊಳೆಸೆವಪರಮೇಷ್ಠಿಯಂ | ಬಳಸಿದಸಮಸ್ತಸುರಮುನಿಗಳಪೊಗಳ್ತೆ ಸನಕಾದಿಗಳಗಡಣದೊಡನೆ || ನಳಿನಶತಕೋಟಿತೇಜದಿಂತೊಳತೊಳಗಿ | ಬೆಳಗುತಿರಲಾವಿನಿಬರುಂಪೋಗಿ ಕಾಣಲ್ಕೆ | ಬಳಲಿದಿರಿದೇಕೆಬಂದಿರಿನಿಮ್ಮ ಕರುಣದಿಂದಿಹೆನೆಂದುಸ್ಯೆಪಿಟ್ಟನು || ೪೬ || ನಿಮ್ಮದೆಸೆಯಿಂದ್ಯೆಸಲೇತನಗೆಸಂತತಂ ಸುಮ್ಮಾನಮಹುದೆಂದುಮಿಗೆಸುಪ್ರಸನ್ನತೆಯೊ | ಳೆಮ್ಮನೆಲ್ಲರನಾದರಿಸಿನೆಗರ್ವಿಕೆಯಿಂದಸಹಸ್ರವದನಂಕಳುಹಲು | ಹೆಮ್ಮೆಗಳ

---

ಬಿಟ್ಟಿತು, ಬಳಿಕ_ಅನಂತರ, ನಾಲ್ವರುಂ-ನಾಲ್ಕು ಮಂದಿಯಾದ, ನಾವು-ನಾವುಗಳು, ಮೂವತ್ತೆರಡು ಮೊಗದ_ಮೂವತ್ತೆರಡು ಮುಖವುಳ್ಳ ಬ್ರಹ್ಮನ, ಲೋಕವುಂ_ಲೋಕವನ್ನು, ತಲೆಕೆಳಗಾಗಿ-ತಲೆಯನ್ನು ಕೆಳಗೆಮಾಡಿಕೊಂಡು, ಪೋಗಲು-ಪ್ರವೇಶ ಮಾಡಲು, ಆ ವಿಧಾತ್ರಂ_ಆ ಬ್ರಹ್ಮನಾದರೂ, ಕಂಡು_ಈಕ್ಷಿಸಿ, ಕರುಣದಿಂ-ದಯೆಯಿಂದ, ಕೇಳ್ದೊಡೆ_ಪ್ರಶ್ನೆ ಮಾಡಲು, ಇನಿತೆಲ್ಲಮಂ_ಹಿಂದಿನ ಸಂದರ್ಭವನ್ನೆಲ್ಲಾ, ಆವು-ನಾವು, ಪೇಳ್ದೆವು_ಹೇಳಿದೆವು. ||೪೪||

ಟೀ|| ಏತಕೆ_ಯಾವನಿಮಿತ್ತವಾಗಿ, ಇಲ್ಲಿಗೆ_ಈ ಎಡೆಗೆ, ಐತಂದಿರಿ_ಬಂದಿರುವಿರಿ, ಖದ್ಯೋತಂಗಳು_ಮಿಂಚು ಹುಳುಗಳು, ರವಿಯ ಮುಂದೆ_ಸೂರ್ಯನೆದುರಿಗೆ, ಎಸೆದಪವೆ_ಹೊಳೆಯುತ್ತವೆಯೇ, ತನಗೆ_ತನಗಾದರೊ, ಸರಿ_ಸಮವಾಗಿರತಕ್ಕವರು, ಆರು_ಯಾರಾಗಿದಾರೆ, ಎಂಬ_ಎನ್ನತಕ್ಕ, ಮಾತು_ನುಡಿಯು, ಮುಗಿಯದಮುನ್ನ- ಪೂರೈಸುವುದಕ್ಕೆ ಮೊದಲೆ, ಆವರ್ತಮಾರುತಂ-ಬಿರುಗಾಳಿಯು, ಕೊಂಡು_ನಮ್ಮೆಲ್ಲರನ್ನೂ ತೆಗೆದುಕೊಂಡು, ಎದ್ದುದು_ಮೇಲಕ್ಕೆದ್ದಿತು, ಬಳಿಕ_ಅನಂತರ, ಆತನಂ ಕೂಡಿಕೊಂಡು_ಅವನೊಂದಿಗೆ, ಅರವತ್ತನಾಲ್ಕು ಮುಖದಾತನಂ-ಅರವತ್ತನಾಲ್ಕು ಮುಖಗಳಿಂದ ಕೂಡಿರುವ ಬ್ರಹ್ಮನನ್ನು, ಆವು-ನಾವಾದರೊ, ಕಂಡೆವು-ಕಾಣಿಸಿಕೊಂಡೆವು, ಆತನ_ಆ ಅರವತ್ತನಾಲ್ಕುಮುಖದವನ, ಗರ್ವದಿಂದ_ಹೆಮ್ಮೆಯಿಂದ, ಮುಂದೆ-ಅನಂತರ, ಈ ತೆರದೊಳು_ಈ ಪರಿಯಾಗಿ, ಇಮ್ಮಡಿಸಿದ_ಅರವತ್ತನಾಲ್ಕರ ಎರಡರಷ್ಟಾದ, ಆಸ್ಯದ_ಮುಖಗಳಿಂದ ಕೂಡಿದ, ವಿರಂಚಿಗಳ_ಬ್ರಹ್ಮದೇವರುಗಳ, ಲೋಕಂಗಳಂ-ಪ್ರಪಂಚಗಳನ್ನು, ಕಂಡೆವು-ಈಕ್ಷಿಸಿದೆವು. ||೪೫||

ಟೀ|| ಪಾರ್ಥ_ಫಲುಗುಣನೆ, ಕೇಳು-ಲಾಲಿಸು, ಇಂತು-ಈ ಪ್ರಕಾರವಾಗಿ, ನಾವೆಲ್ಲರುಂ_ನಾವುಗಳೆಲ್ಲಾ, ತೊಳಲಿದೆವು-ಸುತ್ತಾಡಿದೆವು, ಬಳಿಕ_ಅನಂತರ, ಸಾವಿರ ಮೊಗದೊಳು-ಸಾವಿರ ಮುಖಗಳಿಂದ, ಎಸೆವ_ಹೊಳೆಯುತ್ತಲಿರುವ, ಪರಮೇಷ್ಠಿಯಂ-ಬ್ರಹ್ಮದೇವನನ್ನು, ಬಳಸಿದ-ಆವರಿಸಿಕೊಂಡಿರತಕ್ಕ, ಸಮಸ್ತ-ಸಕಲರಾದ, ಸುರಮುನಿಗಳ_ದೇವಮುನಿಗಳ, ಪೊಗಳ್ತೆ-ಸ್ತುತಿಸುತ್ತಲಿರುವ, ಸನಕಾದಿಗಳ_ಸನಕನೇ ಮೊದಲಾದವರ, ಗಡಣವೊಡನೆ-ಸಮುದಾಯದೊಂದಿಗೆ, ನಳಿನಸಖ ಶತಕೋಟಿ ತೇಜದಿಂ_ನೂರುಕೋಟಿ ಸೂರ್ಯರ ತೇಜಸ್ಸಿನಿಂದ, ತೊಳತೊಳಗಿ-ಬಹಳ ಹೆಚ್ಚಾಗಿ, ಬೆಳಗುತಿರಲು_ಕಾಂತಿಯುಕ್ತರಾಗಿರಲು, ಆವು-ನಾವಾದರೊ, ಇನಿಬರುಂ-ಇಷ್ಟು ಜನರೂ, ಪೋಗಿ-ಸಹಸ್ರಮುಖನ ಸಮೀಪವನ್ನು ಹೊಕ್ಕು, ಕಾಣಲ್ಕೆ-ದರ್ಶನವಂ ಪಡೆಯಲು, ಬಳಲಿದಿರಿ_ಆಯಸಂಗೊಂಡಿರಿ, ಇದೇಕೆ-ಯಾವ ನಿಮಿತ್ತವಾಗಿ, ಬಂದಿರಿ_ಬಂದವರಾಗಿದ್ದೀರಿ, ನಿಮ್ಮ ಕರುಣದಿಂದ_ನಿಮ್ಮ ದಯೆಯಿಂದ, ಇಹೆನು_ಇದ್ದೇನೆ, ಎಂದು-ಎಂಬತೆರನಾಗಿ, ಸ್ಯೆಪಿಟ್ಟನು_ಮೃದು ನುಡಿಗಳನ್ನಾಡಿದನು. ||೪೬||

ಟೀ|| ಸಹಸ್ರವದನಂ_ಒಂದು ಸಾವಿರ ಮುಖಗಳುಳ್ಳ ಬ್ರಹ್ಮನು, ಮಿಗೆ-ಅಧಿಕವಾದ, ಸುಪ್ರಸನ್ನತೆಯೊಳು_ಶಾಂತಿಪೂರ್ವಕವಾದ ಗುಣದಿಂದ, ಎಮ್ಮನು_ನಮ್ಮಗಳನ್ನು, ನಿಗರ್ವಿಕೆಯಿಂದ-ಸ್ವಲ್ಪವೂ ಗರ್ವವಿಲ್ಲದೆ, ಆದರಿಸಿ-ಸತ್ಕರಿಸಿದವನಾಗಿ, ತನಗೆ-ತನಗಾದರೆ, ಸಂತತಂ_ಅನವರತವೂ, ನಿಮ್ಮ ದೆಸೆಯಿಂದ-ನಿಮ್ಮಿಂದಲೇ, ಸುಮ್ಮಾನಂ_ಆನಂದವು, ಅಹುದು_ಉಂಟಾಗು

---

ದಿಂದ ನನ್ನ ವೃತ್ತಾಂತವನ್ನೆಲ್ಲಾ ಕೇಳಿ ||೪೪|| ತನಗೆ ಸಮಾನರೇ ಇಲ್ಲವೆಂದು ಹೊಗಳಿಕೊಳ್ಳುತ್ತಿರುವಾಗ ಸುಳಿಗಾಳಿಯೆದ್ದು ಎಲ್ಲರನ್ನೂ ತಳ್ಳಿಕೊಂಡು ಹೋಯಿತು. ಹೀಗೆಯೇ ಹೋಗಲಾಗಿ ಅರವತ್ತನಾಲ್ಕು ಮುಖದ ಬ್ರಹ್ಮನ ಲೋಕವು ಸಿಕ್ಕಿತು. ಆ ಕಮಲಸಂಭವನೂ ಕೂಡ ಗರ್ವೋದ್ರೇಕದಿಂದ ಮಾತನಾಡಲು ಮುಂದಿನ ಲೋಕಕ್ಕೆ ಬಿರುಗಾಳಿಯು ಎತ್ತಿಕೊಂಡು ಹೋಯಿತು ||೪೫|| ಕೇಳ್ಮೆ ಅರ್ಜುನ ಹೀಗೆಯೇ ಹೋಗಿ ಹೋಗಿ ಕಡೆಗೆ ಸಾವಿರ ಮುಖದ ಬ್ರಹ್ಮನನ್ನು ನೋಡಿದೆವು ದೇವಮುನಿಗಳಿಂದ ಆವರಿಸಲ್ಪಟ್ಟು ಸನಕಾದಿಗಳಿಂದ ಹೊಗಳಿಸಿಕೊಳ್ಳುತ್ತ ಕೋಟಿಸೂರ್ಯಪ್ರಕಾಶದಿಂ ಹೊಳೆಹೊಳೆವ ಆ ಸಹಸ್ರಮುಖನಾದರೊ ನಮ್ಮೆಲ್ಲರನ್ನೂ ಕಂಡು, ಕರುಣಾಕಟಾಕ್ಷದಿಂದ ಕೂಡಿ ನೀವು ಆಯಸಂಗೊಂಡು ಇಲ್ಲಿಗೇತಕ್ಕೆ ಬಂದಿರುವಿರಿ ||೪೬|| ನಿಮ್ಮ ಸುಖವೇ ನನ್ನ ಸುಖವೆಂಬದಾಗಿ ನುಡಿಯುತ್ತಾ ಸಮಾಧಾನವನ್ನು ಮಾಡಿ ಸ್ವಲ್ಪವಾದರೂ ಅಹಂಕಾರವಿಲ್ಲದಿರುವುದನ್ನು

ನುಳಿದುವಿಸ್ಮಿತರಾದರನ್ನೆ | ಗಂಮೊದಲದೆಂತಿರ್ದರಂಕನಸೆನೆತೋರ್ಪ | ತಮ್ಮಲೋಕಂಗಳಿಗೆಬಂದಿರ್ದರಾನೆಂದಿನೋಲಿರ್ದೆ ನೀಕಡಲೊಳು || ೪೭ || ಅದರಿಂದಕೋವಿದರ್ಗರ್ವವಂಮಾಡಲಾ | ಗದುಪಾರ್ಥತಾನಂಮುಸಂಧಿಸಿದಸಾಸಿರದಮೊ | ಗದಪುರುಷ ನೀತನಲ್ಲವೆಕೃಷ್ಣರೂಪದಿಂಕಾಣಿಸುವನೀಜಗದೊಳು || ಉದಧಿಮಧ್ಯದೊಳಿನ್ನೆಗಂಭಜಿಸುತಿರ್ದೊಡಾ | ದುದುಸಫಲಮೆಂದುಬ ಕದಾಲ್ಭ್ಯಮುನಿನುಡಿಯಲ್ಕೆ | ಮುದದಿಂಕೇಳ್ದುವಿಸ್ಮಿತರಾಗಿಸಂಭಾವಿಸಿದರರ್ಜುನಾದಿನೃಪರು || ೪೮ || ಶ್ರೀಕಮಲಲೋಚನಂಬ ಕದಾಲ್ಭ್ಯನಂಬ | ಳಿಕಭೂಕಾಂತನಧ್ವರಕೆನೀವುಬಿಜಯಂಗೈಯ | ಬೇಕೆಂದೊಡಂಬಡಿಸಿವಾಜಿಸಹಿತಂಬುಧಿಯತಡಿಗೆಬಂದಾ ಋಷಿಯನು || ಲೋಕಮರಿಯಲ್ಕೆಶಿಬಿಕಾರೋಹಣಂಗೈಸ | ಲಾಕುದುರೆಗಳ್ತಿರುಗಿಸಿಂಧುದೇಶಕೆಬರಲ | ನೇಕಪೃಥ್ವೀಪಾಲ ರೊಡನೆಕೃಷ್ಣಾರ್ಜುನರ್ನಡೆತಂದರುತ್ಸವದೊಳು || ೪೯ || ಪೃಥ್ವೀಂದ್ರಕೇಳ್ಸಿಂಧುದೇಶದೊಳಗೆಸೆವಜಯ | ದ್ರಥನಪಟ್ಟಣಕೆ

---

ತ್ತದೆ, ಎಂದು_ಎಂಬುದಾಗಿ ನುಡಿದು, ಕಳುಹಲು_ಕಳುಹಿಸಿಕೊಡಲು, ಅವಗು-ಆ ನಾಲ್ಕು, ಎಂಟು, ಹದಿನಾರು, ಮೂವತ್ತೆ ರಡು ಮೊದಲಾದ ಮುಖಗಳುಳ್ಳ ಬ್ರಹ್ಮರು, ಹೆಮ್ಮೆಗಳ-ಗರ್ವವನ್ನೆಲ್ಲಾ, ಉಳಿದು-ಬಿಟ್ಟವರಾಗಿ, ವಿಸ್ಮಿತರಾದರು_ಆಶ್ಚರ್ಯ ಗೊಂಡರು, ಆನ್ನೆಗಂ_ಆ ಕಾಲಕ್ಕೆ, ಮೊದಲು_ಮೊದಲಲ್ಲಿ, ಅದೆಂತು_ಯಾವ ರೀತಿಯಲ್ಲಿ, ಇದ್ದರು-ಇರುವರಾದರೊ, ಅಂತೆ_ ಅವೇ ರೀತಿಯಾಗಿಯೇ, ಕನಸು_ಕನವರಿಕೆಯು, ಎನೆ-ಎಂಬ ತೆರನಾಗಿ, ತೋರ್ಪ-ಕಾಣುವ ತಮ್ಮಲೋಕಂಗಳಿಗೆ_ತಮ್ಮ ತಮ್ಮ ಬ್ರಹ್ಮಾಂಡಗಳಿಗೆ, ಬಂದು-ಬಂದವರಾಗಿ, ಇರ್ದರು_ಇರುತ್ತಿದ್ದರು, ಆನು_ನಾನಾದರೊ, ಎಂದಿನೊಲು-ಎಂದಿನಂ ತೆಯೇ, ಈ ಕಡಲೊಳು-ಈ ಸಮುದ್ರದೊಳಗೆ, ಇರ್ದೆನು_ಇದ್ದವನಾದೆನು ||೪೭||

ಟೀ|| ಬಕದಾಲ್ಭ್ಯಮುನಿ-ಬಕದಾಲ್ಭ್ಯ ಋಷಿಯು, ಪಾರ್ಥ-ಫಲುಗುಣನೆ, ಕೋವಿದರು-ಜ್ಞಾನಿಗಳು, ಅದರಿಂದ_ ಅದ್ದರಿಂದಲೇ, ಗರ್ವಮಂ-ಹೆಮ್ಮೆಯನ್ನು, ಮಾಡಲಾಗದು-ಮಾಡತಕ್ಕದ್ದಲ್ಲವು, ಅಂದು-ಆಹೊತ್ತು, ತಾನು-ನಾನು, ಸಂಧಿ ಸಿದ-ಎದುರ್ಗೊಂಡ, ಸಾಸಿರಮೊಗದ ಪುರುಷನು_ಸಹಸ್ರ ಮುಖಗಳುಳ್ಳ ಸ್ವಾಮಿಯು, ಈ ಜಗದೊಳು_ಈ ಲೋಕದೊಳಗೆ, ಕೃಷ್ಣರೂಪದಿಂ ಕಾಣಿಸುವನು-ಕೃಷ್ಣನೆಂಬ ಅವತಾರದಿಂದ ತೋರುವನು, ಈತನಲ್ಲವೆ - ಇವನೇ ಆಗಿಲ್ಲವೆ, ಇನ್ನೆಗಂ-ಇಷ್ಟು ಕಾಲವೂ, ಉದಧಿ ಮಧ್ಯದೊಳ್...ಸಮುದ್ರದ ನಡುವೆ, ಭಜಿಸುತಿರ್ದೊಡೆ-ಭಜನೆಯಂ ಮಾಡುತ್ತಿರಲಾಗಿ, ಸಫಲಂಆದುದು_ ಸಾರ್ಥಕವಾಯಿತು, ಎಂದು_ಎಂಬ ತೆರನಾಗಿ, ನುಡಿಯಲ್ಕೆ - ತಿಳಿಸಲು, ಮುದದಿಂದ_ಅತ್ಯಾನಂದದಿಂದ, ಅರ್ಜುನಾದಿನೃ ಪರು_ಪಾರ್ಥಾದಿ ರಾಜರುಗಳೆಲ್ಲಾ, ಕೇಳ್ದು_ಕೇಳಿದವರಾಗಿ, ವಿಸ್ಮಿತರಾಗಿ_ಆಶ್ಚರಿಗೊಂಡು, ಸಂಭಾವಿಸಿದರು_ಮನ್ನಣೆಯಂ ಮಾಡಿದರು. || ೪೮ ||

ಟೀ|| ಶ್ರೀಕಮಲಲೋಚನಂ_ಶ್ರೀ - ಐಶ್ವರ್ಯದಾಯಕವಾದ, ಕಮಲ - ಕಮಲದಹಾಗೆ, ಲೋಚನಂ_ನಯನಂಗ ಳುಳ್ಳ ಕೃಷ್ಣಮೂರುತಿಯು, ಬಳಿಕ_ಅನಂತರ, ಬಕದಾಲ್ಭ್ಯನಂ - ಬಕದಾಲ್ಭ್ಯನೆಂಬ ಋಷಿಯನ್ನು, ನೀವು_ನೀವಾದರೊ, ಭೂಕಾಂತನ-ಧರಾವಲ್ಲಭನಾದ ಧರ್ಮತನಯನ, ಅಧ್ವರಕೆ- ಯಾಗಕ್ಕೆ, ಬಿಜಯಂಗೈಯ್ಯಬೇಕೆಂದು_ಕರುಣೆಯಿಂದ ಬರಬೇ ಕೆಂದು, ಒಡಂಬಡಿಸಿ-ಒಪ್ಪಿಸಿ, ಅಂಬುಧಿಯತಡಿಗೆ_ಸಮುದ್ರದ ದಡಕ್ಕೆ, ವಾಜಿಸಹಿತ-ಯಜ್ಞಾಶ್ವಗಳೊಂದಿಗೆ, ಬಂದು_ಬಂದವ ರಾಗಿ, ಲೋಕಂ_ಪ್ರಜೆಗಳು, ಅರಿಯಲ್ಕೆ_ಗೊತ್ತುಮಾಡಿಕೊಳ್ಳುವಂತೆ, ಆಋಷಿಯನು_ಆ ತಾಪಸೋತ್ತಮನನ್ನು, ಶಿಬಿಕಾ ರೋಹಣಂಗೈಸಲು_ಪಲ್ಲಕ್ಕಿಯೊಳಗೆ ಕುಳ್ಳಿರಿಸಲು, ಕುದುರೆಗಳು_ಆ ಯಾಗದ ತುರಂಗಗಳು, ಸಿಂಧುದೇಶಕೆ_ಸಿಂಧು ದೇಶದ ಕಡೆಗೆ, ತಿರುಗಿ-ಹೊರಟು, ಬರಲು_ಬರಲಾಗಿ, ಕೃಷ್ಣಾರ್ಜುನರು_ನರನಾರಾಯಣರು, ಉತ್ಸವದೊಳು - ಸಂತೋಷದಿಂದ, ಅನೇಕಪೃಥ್ವಿಪಾಲರೊಡನೆ_ಅನೇಕ ರಾಜಾಧಿರಾಜರೊಂದಿಗೆ, ನಡೆತಂದರು-ಬಂದವರಾದರು ||

ಅ|| ವಿ|| ಸಿಂಧು ನದಿಯು ಹರಿಯುವ ದೇಶವಾದ್ದರಿಂದ ಆ ಪ್ರದೇಶಕ್ಕೆ ಸಿಂಧುದೇಶವೆಂದು ಹೆಸರು, ಅಲ್ಲಿ ದುರ್ಯೋ

---

ಚತುರ್ಮುಖನೇ ಮೊದಲಾದವರೆಲ್ಲಾ ನೋಡಿ ನಾಚಿಕೆಯನ್ನೈದಿ ತಮ್ಮ ತಮ್ಮ ಲೋಕಂಗಳಿಗೆ ಹೊರಟುಹೋದರು. ನಾನೂ ಕೂಡ ಯಥಾಪ್ರಕಾರದ ನನ್ನ ಸ್ಥಾನಕ್ಕೇ ಬಂದು ಸೇರಿದೆನು ||೪೭|| ಎಲೈ ಅರ್ಜುನ, ಅದ್ದರಿಂದಲೇ ಲೋಕದಲ್ಲಿ ಯಾರೊಬ್ಬರೂ ಗರ್ವವನ್ನು ಪಡಬಾರದು. ಪೂರ್ವದಲ್ಲಿ ನಾನು ನೋಡಿದ ಸಹಸ್ರ ಮುಖನೇ ಈಗ ಕೃಷ್ಣಾವತಾರವಂ ತಾಳಿ ಕಾಣುತ್ತಲಿ ದ್ದಾನೆ. ಇಂದಿಗೆ ನಾನು ಧನ್ಯನಾದೆನೆಂದು ನುಡಿಯುತ್ತಲಿರುವ ಬಕದಾಲ್ಭ್ಯನನ್ನು ಫಲುಗುಣಾದಿಗಳೆಲ್ಲಾ ಮರ್ಯಾದೆಯಿಂದ ಕಂಡರು ||೪೮|| ಆ ಬಳಿಕ ಕೃಷ್ಣಸ್ವಾಮಿಯು ಬಕದಾಲ್ಭ್ಯನನ್ನು ನೋಡಿ ಎಲೈ ಋಷಿಶ್ರೇಷ್ಠರೇ ! ನೀವೂ ಯುಧಿಷ್ಠಿರನ ಯಾಗಕ್ಕೆ ದಯಮಾಡಬೇಕೆಂದೊಡಂಬಡಿಸಿ ಪಲ್ಲಕ್ಕಿಯೊಳಗೆ ಕುಳ್ಳಿರಿಸಿ, ಯಜ್ಞಾಶ್ವಗಳೊಂದಿಗೆ ಸಮುದ್ರದ ದಡಕ್ಕೆ ಬಂದು ಸೇರಿದನು. ಅನಂತರ ತಮ್ಮ ಪರಿವಾರನನ್ನೆಲ್ಲಾ ಜೊತೆನಾಡಿಕೊಂಡು ಕೃಷ್ಣಾರ್ಜುನರು ಕುದುರೆಗಳ ಬೆಂಗಾವಲ್ಗೆ ಹೊರ

ನಡೆತಂದರರ್ಜುನದೈತ್ಯ | ಮಥನರೀವಾರ್ತೆಯಂಕೇಳ್ದನತಿಬಾಲನಾಗಿಹದುಶ್ಶಳೆಯತನುಜನು || ವ್ಯಥಿಸಿಮೈಮರೆದನೋಲಗದ ಮಂತ್ರಿಗಳೆಣಿಕೆ | ಶಿಥಿಲವಾದುದುಪುರಂತಲ್ಲಣಿಸುತಿರ್ದುದೀ | ಕಥನವಂಧೃತರಾಷ್ಟ್ರಸುತೆಗರುಪಲಿದಿರಾಗಿಪೊರಮಟ್ಟಳುರೆಬೆದರ್ದು ||೫೦|| ಎಲ್ಲಿಬಹನರ್ಜುನನರಥದಮೇಲಸುರಹರ | ನಲ್ಲಿಗೈತಂದುಚೀರಿದಳೆಲೆಜಗನ್ನಾಥಮಲ್ಲಮರ್ದನಮಾನಿನಿಯಮೊರೆಯ ಲಾಲಿಸಂತೀಸವ್ಯಸಾಚಿತನ್ನ || ವಲ್ಲಭನಪಗೆಯೆಂದುಕೊಂದನಿಹುದೊಂದುಶಿಶು| ತಲ್ಲಣಿಸುತಿದೆಕಾಯಬೇಕೆನೆಧನಂಜಯಂ| ನಿಲ್ಲದೆವರೂಥದಿಂದಿಳಿದುಬಂದಾಕೆಗಭಿನಮಿಸಿಬಳಿಕಿಂತೆಂದನು ||೫೧|| ತಾಯೆಪಗೆಗೊಂಡುತಾನಿನಗಂದುಮಾಡಿದ | ನ್ಯಾಯಮಂಸೈರಿಪುದುನಿನ್ನತನುಸಂಭವನ | ನೋಯಿಸುವರಲ್ಲರಾಜ್ಯವಗಣಿತಾಶ್ವಮದಕರಿಗಳಿಂಕೊಟ್ಟುನಿನ್ನ || ರಾಯನಮಹಾಧ್ವರಕೆಕೂಡಿಕೊಂಡೊಯ್ವೆನೆನ | ಲಾಯತಾಂಬಕಿಮತ್ತೆಶೋಕವಿಮ್ಮಡಿಸಿನಾ | ರಾಯಣನಪದಕಮಲದೋಳ್ಪೊರಳಿಕಡಲಿಡುವಕಂಬನಿಯೊ

ಧನನ ಭಾವಮೈದುನನಾದ ಸೈಂಧವನು ಪೂರ್ವದಲ್ಲಿ ಆಳುತ್ತಿದ್ದನು, ಅಲ್ಲಿಗೆ ಯಜ್ಞಾಶ್ವಂಗಳು ಬಂದವೆಂದು ಭಾವವು ||೪೯||

ಟೀ|| ಪೃಥಿವೀಂದ್ರ-ಭೂಕಾಂತನಾದ ಜನಮೇಜಯನೆ, ಕೇಳು-ಆಲಿಸು, ಅರ್ಜುನ ದೈತ್ಯ ಮಥರು-ಪಾರ್ಥನೂ ಕೃಷ್ಣನೂ ಸಹ, ಸಿಂಧುದೇಶದೊಳಗೆ-ಸಿಂಧುದೇಶದಲ್ಲಿ, ಎಸೆವ - ವಿರಾಜಿಸುತ್ತಲಿರುವ, ಜಯದ್ರಥನ - ಜಯದ್ರಥನೆಂಬ ದುರ್ಯೋಧನನ ಭಾವಮೈದುನನ, ಪಟ್ಟಣಕೆ-ಪುರಕ್ಕೆ, ನಡೆತಂದರು-ಬಂದವರಾದರು, ಅತಿಬಾಲನಾಗಿ-ಬಹು ಚಿಕ್ಕವಯಸ್ಸಿನವನಾಗಿ, ಇಹ-ಇರತಕ್ಕ, ದುಶ್ಶಳೆಯ ತನುಜನು-ದುಶ್ಶಳೆ ಎಂಬಾಕೆಯ ಪುತ್ರನಾದರೊ, ಈ ವಾರ್ತೆಯಂ-ಈ ವರ್ತಮಾನವನ್ನು, ಕೇಳ್ದನು-ಕೇಳಿದವನಾದನು, ವ್ಯಥಿಸಿ-ವ್ಯಥೆಯನ್ನೈದಿ, ಮೈಮರೆದನು-ಸ್ಮೃತಿತಪ್ಪಿಹೋದನು. ಓಲಗದ- ಒಡ್ಡೋಲಗದಲ್ಲಿರತಕ್ಕ, ಮಂತ್ರಿಗಳ-ಅಮಾತ್ಯರ, ಎಣಿಕೆ - ಇಷ್ಟಾರ್ಥವು, ಶಿಥಿಲಂ ಆದುದು - ಭಂಗವಾದದ್ದಾಯಿತು, ಪುರಂ - ಪಟ್ಟಣದ ಪ್ರಜೆಯು, ತಲ್ಲಣಿಸುತಿರ್ದುದು-ಪೇಚಾಡುತ್ತಲಿತ್ತು, ಧೃತರಾಷ್ಟ್ರಸುತೆಗೆ-ಧೃತರಾಷ್ಟ್ರರಾಯನ ಕುವರಿಗೆ, ಈ ಕಥನಮಂ-ಈ ವಾರ್ತೆಯನ್ನು, ಅರುಪಲು-ತಿಳಿಯಪಡಿಸಲು, ಇದಿರಾಗಿ-ನರನಾರಾಯಣರಿಗೆದುರಾಗಿ, ಉರೆ-ಹೆಚ್ಚಾಗಿ, ಬೆದರ್ದು-ಹೆದರಿ, ಪೊರಮಟ್ಟಳು-ಹೊರಟವಳಾದಳು ||೫೦||

ಟೀ|| ಅರ್ಜುನನ ರಥದಮೇಲೆ-ಪಾರ್ಥನ ತೇರಿನ ಮೇಲ್ಗಡೆ, ಎಲ್ಲಿ-ಯಾವ ಪ್ರದೇಶದೊಳಗೆ, ಅಸುರಹರನು-ರಾಕ್ಷಸಾಂತಕನಾದ ಕೃಷ್ಣಮೂರುತಿಯು, ಬಹನು-ಬರುತ್ತಾನೊ, ಅಲ್ಲಿಗೆ-ಆ ಎಡೆಗೆ, ಐತಂದು-ಬಂದವಳಾಗಿ, ಚೀರಿದಳು-ಕೂಗಿ ಹೇಳಿದಳು, ಎಲೆ ಜಗನ್ನಾಥ-ಲೋಕಬಂಧುವೆ, ಮಲ್ಲಮರ್ದನ-ಮುಷ್ಟಿಕ ಚಾಣೂರರೆಂಬೀರ್ವರನ್ನು ಕೊಂದವನೆ, ಮಾನಿನಿಯ-ಸ್ತ್ರೀಯ, ಮೊರೆಯ-ದೀನತೆಯನ್ನು. ಲಾಲಿಸು-ಕೇಳುವನಾಗು, ಈಸವ್ಯಸಾಚಿ-ಈ ಧನಂಜಯನು, ಪಗೆಯೆಂದು-ವೈರಿ ಎಂಬುದಾಗಿ ಭಾವಿಸಿ, ತನ್ನ ವಲ್ಲಭನ-ನನ್ನ ಕಾಂತನನ್ನು, ಕೊಂದನು-ಕೊಂದುಹಾಕಿದನು, ತಲ್ಲಣಿಸುತ-ಪೇಚಾಡುತ್ತ, ಒಂದುಶಿಶು-ಒಂದ ಕೂಸು, ಇಹುದು-ಇದೆ, ಇದ-ಈ ಹಸುಳೆಯನ್ನು, ಕಾಯಬೇಕು-ಸಲಹಬೇಕು, ಎನೆ-ಎಂದು ನುಡಿಯಲು, ಧನಂಜಯ-ಫಲುಗುಣನು, ನಿಲ್ಲದೆ-ರಥದಲ್ಲಿರದೆ, ವರೂಥದಿಂದ-ರಥದಿಂದ, ಇಳಿದು-ಇಳಿದವನಾಗಿ, ಆಕೆಗೆ-ಆ ದುಶ್ಶಳೆಯೆಂಬ ಧೃತರಾಷ್ಟ್ರ ಕುವರಿಗೆ, ಅಭಿನಮಿಸಿ-ನಮಸ್ಕಾರಮಾಡಿ, ಬಳಿಕ-ಅನಂತರ, ಇಂತು-ಮುಂದೆ ಹೇಳುವಂತೆ, ಎಂದನು-ನುಡಿದನು||೫೧||

ಟೀ.|| ತಾಯೆ-ಎಲೌ ತಾಯಿಯಾದ ದುಶ್ಶಳೆಯೇ, ನಾನು-ನಾನಾದರೊ, ನಿನಗೆ-ನಿನ್ನ ವಿಷಯದಲ್ಲಿ, ಪಗೆಗೊಂಡು-ವೈರಭಾವವನ್ನುಂಟಾಗಿ, ಅಂದು-ಆ ಭಾರತ ಯುದ್ಧಕಾಲದೊಳಗೆ, ಮಾಡಿದ-ನಡೆಯಿಸಿರತಕ್ಕ, ಅನ್ಯಾಯಮಂ-ಅಪರಾಧವನ್ನು, ಸೈರಿಪುದು-ಸುದಾರಿಸಿಕೊಳ್ಳಬೇಕು, ನಿನ್ನ-ನಿನ್ನವನಾಗಿರತಕ್ಕ, ತನುಸಂಭವನ-ಮಗನನ್ನು, ನೋಯಿಸುವರು-ಹಿಂಸೆ ಪಡಿಸತಕ್ಕವರು, ಅಲ್ಲ-ಅಲ್ಲವು, ರಾಜ್ಯಮಂ-ದೇಶವನ್ನೂ, ಅಗಣಿತ-ಲೆಕ್ಕವಿಲ್ಲದ, ಅಶ್ವಮದಕರಿಗಳಂ-ತುರಗಂಗಳು ಮತ್ತ ಗಜಂಗಳು ಇವನ್ನು, ಕೊಟ್ಟು-ಕೊಟ್ಟವನಾಗಿ, ನಿನ್ನರಾಯನ - ಯುಧಿಷ್ಠಿರನು ಮಾಡತಕ್ಕ, ಮಹಾಧ್ವರಕೆ - ದೊಡ್ಡ ಯಾಗಕ್ಕೆ,

ಟರು ||೪೯|| ಹೀಗೆಯೇ ಹೋಗುತ್ತಲಿರುವಾಗ ಸಿಂಧುದೇಶವು ಸಿಕ್ಕಿತು. ಅಲ್ಲಿ ಜಯದ್ರಥನು ರಾಜನಾಗಿದ್ದನು. ದುಶ್ಶಳೆಯ ಮಗನು ಅರ್ಜುನನು ಬಂದನೆಂಬ ಸುದ್ದಿಯನ್ನು ಕೇಳಿದೊಡನೆಯೆ ಮೂರ್ಛಾಕ್ರಾಂತನಾಗಲು ಈ ಸುದ್ದಿಯು ದುಶ್ಶಳೆಗೆ ತಿಳಿದು ದುಃಖಾತಿಶಯದಿಂದ ಕೃಷ್ಣಾರ್ಜುನರು ಬರುವ ದಾರಿಗೆ ಬಂದವಳಾಗಿ || ೫೦ || ಅರ್ಜುನನ ತೇರಿನಮೇಲಿರುವ ಕೃಷ್ಣನನ್ನು ಕಂಡು ಹೇ ಜಗನ್ನಾಯಕ ! ದೀನಬಂಧೊ, ನನ್ನ ಮೊರೆಯನ್ನಾಲಿಸು. ಪೂರ್ವದಲ್ಲಿ ಭಾರತ ಯುದ್ಧದೊಳಗೆ ಈ ಅರ್ಜುನನು ನನ್ನ ಪತಿಯನ್ನು ಯಮನ ಬಾಯಿಗೆ ತುತ್ತಾಗಿ ಮಾಡಿದನು. ನನಗೆ ಒಂದು ಕೂಸಿರುವುದು ಅರ್ಜುನನು ಬಂದನೆಂಬ ಸುದ್ದಿಯನ್ನು ಕೇಳಿ ಮೂರ್ಛಾಕ್ರಾಂತನಾಗಿ ಬಿದ್ದಿರುವುದು. ನೀನು ಅಭಯವನ್ನು ಕೊಟ್ಟು ಸಲಹಬೇಕೆಂದು ಮೊರೆಯಿಡುವಾಗ, ಅರ್ಜುನನು ಕೂಡಲೇ ರಥದಿಂದಿಳಿದು ಆ ದುಶ್ಶಳೆಗೆ ವಂದನೆಯಂಮಾಡಿ ||೫೧|| ಅಮ್ಮಾ ನಾನು ಪೂರ್ವದಲ್ಲಿ ನಿನಗೆ ಮಾಡಿದ

ಳಿಂತೆಂದಳು ||೫೨|| ಪ್ರಾಣಿಗಳಹೃದಯದೊಳ್ದೇವನೀನಿರುತಿರ್ದು | ಮಾಣಿಸುವೆಯವರವರದುಃಖಂಗಳೆಂಬುದಂ | ಕಾಣಿಸಿದೆ ದ್ರೌಪದಿಯಮಾನವಂಕಾಯ್ದಂದುಶೋಕಾಗ್ನಿಸುಡುವುದೆಂದು || ಮೇಣಿದಂಬಿನ್ನೈಸಲೇಕಿನ್ನುಸಲೆಸುಖ | ಶ್ರೇಣಿಯಂನೆನೆದಮಾತ್ರದೊಳೀವೆನಿನ್ನಕ|ಲ್ಯಾಣಮೂರ್ತಿಯದರ್ಶನದೊಳಾಂಕೃತಾರ್ಥೆಯಲ್ಲವೆಸಲಹಬೇಕೆಂದಳು||೫೩||ದೇವತನಗೊಡಹುಟ್ಟಿದವಳೆಂದುನರನೆನ್ನ| ನಾವತೆರದಿಂದಕರೆವನಧ್ವರಕೆಬರಲಪ್ಪು| ದೇವಿಧವೆಹಯಹಸ್ತಿಗಳನಿತ್ತೊಡಾಳ್ವರಾರ್ಪತಿಪುತ್ರರಿಲ್ಲತನಗೆ||ಕಾವುದತಿಬಾಲನಾಗಿಹಶಿಶುವನೆಂದುನಾ | ನಾವಿಧದಶೋಕದಿಂದಳಲ್ವದುಶ್ಶಳೆಯಂಕೃಪಾವ| ನಧಿಪಿಡಿದೆತ್ತಿಸಂತವಿಸಿನಗರಮಂಪೊಕ್ಕಂ

---

ಕೂಡಿಕೊಂಡು - ಕರೆದುಕೊಂಡು, ಒಯ್ವೆನು - ಹೊರಡುವೆನು, ಎನಲು - ಎಂದು ನುಡಿಯಲು, ಮತ್ತೆ - ತಿರುಗಿ, ಆಯತಾಂಬಕಿ - ವಿಶಾಲವಾದ ಕಣ್ಣುಗಳನ್ನುಳ್ಳ ದುಶ್ಶಳೆ ಎಂಬಾಕೆಯು, ಶೋಕದಿ - ವ್ಯಸನದಿಂದ, ಇಮ್ಮಡಿಸಿ - ಎರಡರಷ್ಟಾಗಿ, ಕಡಲ್ - ಸಮುದ್ರದ ಹಾಗೆ, ಇಡಿವ - ಉಕ್ಕಿ ಉಕ್ಕಿ ಬರುತ್ತಲಿರತಕ್ಕ, ಕಂಬನಿಯೊಳು - ನೇತ್ರೋದಕದಿಂದ, ನಾರಾಯಣನ - ಶ್ರೀ ಕೃಷ್ಣಸ್ವಾಮಿಯ, ಪದಕಮಲದೊಳ್ - ತಾವರೆಯಂತಿರತಕ್ಕ ಪಾದಗಳ ಮೇಲೆ, ಪೊರಳೆ - ಹೊರಳಾಡಿ, ಇಂತು-ಮುಂದೆ ಹೇಳುವಂತೆ, ಎಂದಳು - ನುಡಿದಳು. ||೫೨||

ಟೀ|| ದೇವ - ಎಲೈ ಪ್ರಭುವೆ, ನೀನು - ನೀನಾದರೊ, ಪ್ರಾಣಿಗಳ - ಪ್ರಾಣವುಳ್ಳವುಗಳ, ಹೃದಯದೊಳ್-ಚಿತ್ತದೊಳಗೆ, ಇರುತಿರ್ದು - ಇದ್ದುಕೊಂಡು, ಅವರವರ - ಆಯಾಯಜನರ, ದುಃಖಗಳು - ಶೋಕಂಗಳು, ಎಂಬುದಂ-ಎನ್ನತಕ್ಕದ್ದನ್ನು, ಮಾಣಿಸುವೆ - ಹಾಳುಮಾಡುವಿ, ದ್ರೌಪದಿಯ - ದ್ರುಪದರಾಯನ ಕುವರಿಯ, ಮಾನಮಂ - ಮರ್ಯಾದೆಯನ್ನು, ಕಾಯ್ದಂದು - ಕಾಪಾಡಿದಾಗ, ಶೋಕಾಗ್ನಿ - ವ್ಯಸನವೆಂಬ ಶಿಖಿಯು, ಸುಡುವುದು-ಸುಡುತ್ತದೆ, ಎಂದು - ಎಂಬತೆರನಾಗಿ, ಕಾಣಿಸಿದೆ - ತೋರ್ಪಡಿಸಿರುತ್ತಿ, ಮೇಣ್ - ಅಲ್ಲದೆ, ಇದಂ - ಈ ವಾರ್ತೆಯನ್ನು, ಬಿನ್ನೈಸಲು - ಬಿನ್ನವಿಸತಕ್ಕದ್ದು, ಏಕೆ - ಏನು ಪ್ರಯೋಜನವು, ಇನ್ನು - ಇನ್ನುಮೇಲೆ, ಸಲೆ - ಚನ್ನಾಗಿ, ಸುಖಶ್ರೇಣಿಯಂ - ಸುಖಪರಂಪರೆಯನ್ನು, ನೆನೆದಮಾತ್ರದೊಳು - ಜ್ಞಾಪಕಕ್ಕೆ ತಂದಮಾತ್ರದಿಂದಲೇ, ಈವೆ - ಅನುಗ್ರಹಮಾಡುತ್ತಿ, ಆಂ - ನಾನಾದರೊ, ನಿನ್ನ - ನಿನ್ನ ಸಂಬಂಧವಾದ, ಕಲ್ಯಾಣ - ಶುಭಕರವಾದ, ಮೂರ್ತಿಯ - ಆಕೃತಿಯ, ದರ್ಶನದೊಳು - ಈಕ್ಷಿಸುವಿಕೆಯಿಂದ, ಕೃತಾರ್ಥೆಯು - ಕೃತಕೃತ್ಯಳಾದವಳು, ಅಲ್ಲವೆ - ಆಗಿಲ್ಲವೆ, ಸಲಹಬೇಕು - ಸಂರಕ್ಷಣೆ ಮಾಡಬೇಕು, ಎಂದಳು - ಎಂಬುದಾಗಿ ಕೇಳಿಕೊಂಡಳು. ||೫೩||

ಟೀ|| ದೇವ - ಎಲೈ ಪ್ರಭುವಾದ ಕೃಷ್ಣಮೂರುತಿಯೆ, ನರನು - ಫಲುಗುಣನು, ಎನ್ನನು - ನನ್ನನ್ನು, ತನಿಗೆ-ತನಿಗಾದರೊ, ಒಡಹುಟ್ಟಿದವಳು - ಸಂಗಡ ಹುಟ್ಟಿದವಳು, ಎಂದು - ಎಂಬತೆರನಾಗಿ, ಅಧ್ವರಕೆ - ಯಾಗಕ್ಕೆ, ಆವತೆರದಿಂದ - ಯಾವ ಬಗೆಯಿಂದ ತಾನೆ, ಕರೆವನು - ಕರೆಯುವನು, ವಿಧವೆ - ಪತಿಯನ್ನು ಕಳೆದುಕೊಂಡಿರತಕ್ಕ ನಾನು, ಬರಲಪ್ಪುದೆ - ಬರಬಹುದೆ, ಹಯ - ಕುದುರೆಗಳನ್ನೂ, ಹಸ್ತಿಗಳನು - ಇಭಂಗಳನ್ನೂ, ಇತ್ತಡೆ - ಕೊಟ್ಟಮಾತ್ರಕ್ಕೇ, ಆಳ್ವರು-ಸಲಹುವರು, ಆರ್ - ಯಾರಿರುವರು, ತನಿಗೆ - ನನಿಗಾದರೊ, ಪತಿ - ಕಾಂತನೂ, ಪುತ್ರರು - ತನುಜರೂ, ಇಲ್ಲ - ಇಲ್ಲವು, ಅತಿಬಾಲನಾಗಿ - ಬಹು ಚಿಕ್ಕವನಾಗಿ, ಇಹ - ಇರತಕ್ಕ, ಶಿಶುವನು - ಹಸುಳೆಯನ್ನು, ಕಾವುದು - ಕಾಪಾಡಬೇಕು, ಎಂದು-ಎಂಬತೆರನಾಗಿ, ನಾನಾವಿಧದ - ವಿಧವಿಧವಾದ, ಶೋಕದಿಂದ - ವ್ಯಸನದಿಂದ, ಅಳಲ್ವ - ದುಃಖಿಸುವ, ದುಶ್ಶಳೆಯಂ-ದುಶ್ಶಳೆ ಎಂಬಾಕೆಯನ್ನು, ಕೃಪಾವನಧಿ - ಕರುಣಾನಿಧಿಯಾದ ಸ್ವಾಮಿಯು, ಪಿಡಿದು - ಹಿಡಿದುಕೊಂಡು, ಎತ್ತಿ-ಎತ್ತಿದವನಾಗಿ, ಸಂತವಿಸಿ - ಒಳ್ಳೇ ಮಾತುಗಳನ್ನಾಡಿ, ನಗರಮಂ - ಪಟ್ಟಣವನ್ನು, ಕಿರೀಟಿಸಹಿತ - ಪಾರ್ಥನೊಂದಿಗೆ, ಪೊಕ್ಕಂ-ಹೋಗಿ ಸೇರಿದನು. ||೫೪||

---

ಅಪರಾಧವನ್ನು ಸಹಿಸಬೇಕು, ನಿನ್ನ ಮಗನಿಗೆ ನಾನು ಯಾವ ಬಾಧೆಯನ್ನೂ ಉಂಟುಮಾಡುವುದಿಲ್ಲವು, ಬೇಕಾದಷ್ಟು ಕರಿತುರಗಂಗಳನ್ನು ಕೊಟ್ಟು ಧರ್ಮರಾಯನ ಯಜ್ಞಕ್ಕೆ ಕರೆದುಕೊಂಡು ಹೋಗುವೆನೆಂದು ನುಡಿಯಲು ದುಶ್ಶಳೆಗೆ ದುಃಖವೆಂಬುದು ಇಮ್ಮಡಿಯಾಗಿ ಕೃಷ್ಣನ ಪದಾರವಿಂದಗಳಿಗೆರಗಿ ಕಣ್ಣಿನಲ್ಲಿ ನೀರನ್ನು ಸುರಿಸುತ್ತ, ||೫೨|| ಸಕಲ ಜೀವರಾಶಿಗಳಲ್ಲಿಯೂ ನೆಲಸಿರತಕ್ಕ ನೀನು ಅವರವರ ದುಃಖಗಳನ್ನರಿತು ಅದರ ನಿವಾರಣೋಪಾಯವನ್ನು ಮಾಡತಕ್ಕವನಲ್ಲವೆ? ದ್ರೌಪದಿಯ ಮಾನವನ್ನುಳಿಸಿದವನಲ್ಲವೆ ನನ್ನ ದುಃಖವನ್ನು ಇನ್ನು ನಿನಿಗೇತಕ್ಕೆ ಹೇಳಬೇಕು. ಆರ್ತರಕ್ಷಾಧುರೀಣನಾಗಿರುವುದರಿಂದ||೫೩||ನೀನು ಈ ಪಸುಳೆಯನ್ನು ಕಾಪಾಡಬೇಕು ವಿಧವೆಯಾದ ನನ್ನನ್ನು ಅರ್ಜುನನು ಏನೆಂದು ಕರೆದಾನು? ನಾನು ಹೋಗುವುದುತಾನೆ ಹೇಗೆಂದು ಗೋಳಾಡುತ್ತಲಿರುವ ದುಶ್ಶಳೆಯನ್ನು ಕರುಣಾಕಟಾಕ್ಷದಿಂದ ಸಂತೈಸಿ, ಅರ್ಜುನನೊಂದಿಗೆ ಪಟ್ಟಣವಂ ಪ್ರವೇಶಿಸಿದನು ||೫೪||

ಕಿರೀಟಿಸಹಿತ ||೫೪|| ಬಳಿಕದುಶ್ಶಳೆಕಾಣಿಸಿದಳಾಕುಮಾರಂಗೆ | ನಳಿನಾಕ್ಷನಭಯಮಂಕೊಟ್ಟುಸಂತೈಸಿಕರ | ತಳದಿಂದಮೈದಡವಿದಂಕೂಡೆಕಂಡುದುಸಮಸ್ತಜನನುಘರಿಪುವನು || ಪೊಳಲೊಳಾಗಳುತ್ಸವದಗುಡಿತೋರಣಂ | ಮೊಳಗಿದವುವಿವಿಧವಾದ್ಯಧ್ವನಿಗಳಾಗಮಂ | ಗಳನೃತ್ತಗೀತಂಗಳೆಸಗಿದವುಹರಿಪಾರ್ಥರಲ್ಲಿಸತ್ಕೃತರಾದರು ||೫೫|| ಮರುಗಿಕಂಬನಿದುಂಬಿಮಾಡಿದವಿಘಾತಿಯಂ | ಮರೆದುಸುತನಂಕೂಡಿಕೊಂಡುನೃಪನಧ್ವರಕೆ | ಪೊರಮಟ್ಟುಬಂದುಕಾಂಬುದುಕುಂತಿದೇವಿಪಾಂಚಾಲತನುಜೆಯರನೆಂದು|| ನೆರೆನರಂಸಂತೈಸೆಬಳಿಕದುಶ್ಶಳೆಶೌರಿ| ಗೆರಗಿಭಕ್ತರಬೆಳವಿಗೆಗಳನೊಸೆದಾವಾವ | ತೆರದಿಂದಮಾಡುವಂತೆನ್ನನುದ್ಧರಿಸೆಂದುನಿರ್ಗಮನಕನುವಾದಳು ||೫೬|| ಅಲ್ಲಿಯಸುವಸ್ತುಸಹಿತಾಕೆಯಂಕೂಡಿಕೊಂ | ಡೆಲ್ಲಾಮಹೀಶ್ವರರ್ವೆರಸಿಗಜಪುರಕಾಗಿ | ನಿಲ್ಲದೈ

---

ಟೀ|| ದುಶ್ಶಳೆಯು – ದುಶ್ಶಳೆ ಎಂಬಾಕೆಯು, ಬಳಿಕ – ಅನಂತರ, ಕಾಣಿಸಿದಳು – ತನ್ನ ಮೊಮ್ಮಗನನ್ನು ಕೃಷ್ಣಸ್ವಾಮಿಗೆ ತೋರಿಸಿದವಳಾದಳು, ಆಕುಮಾರಂಗೆ – ಆ ಹಸುಳೆಗೆ, ನಳಿನಾಕ್ಷನು – ಕಮಲನಯನನಾದ ಕೃಷ್ಣಸ್ವಾಮಿಯು, ಅಭಯಮಂಕೊಟ್ಟು – ಕಾಪಾಡುವೆನೆಂಬ ಧೈರ್ಯವನ್ನು ಹೇಳಿ, ಸಂತೈಸಿ – ಒಳ್ಳೇ ನುಡಿಗಳನ್ನಾಡಿ, ಮೈ – ಆ ಮಗುವಿನ ದೇಹವನ್ನು, ಕರತಳದಿಂದ – ತನ್ನ ಹಸ್ತಪ್ರದೇಶದಿಂದ, ತಡವಿದಂ – ಸವರಿದನು, ಕೂಡೆ – ಒಡನೆಯೇ, ಅಘರಿಪುವನು– ಪಾಪವಿರುದ್ಧನಾದ ಸ್ವಾಮಿಯನ್ನು, ಸಮಸ್ತಜನಂ – ಸಕಲ ಜನವೂ, ಕಂಡುದು – ದರ್ಶನ ತೆಗೆದುಕೊಂಡಿತು, ಪೊಳಲೊಳ್– ಪಟ್ಟಣದಲ್ಲಿ, ಆಗ – ಆ ವೇಳೆಯೊಳಗೆ, ಉತ್ಸವದ – ಉತ್ಸವ ಸಂಬಂಧವಾದ, ಗುಡಿತೋರಣಂ – ಚಪ್ಪರ ತೋರಣ ಇವುಗಳು, ನೆಗಳ್ದವು – ರಚಿಸಲ್ಪಟ್ಟವು, ವಿವಿಧ – ಬಗೆಬಗೆಯಾದ, ವಾದ್ಯಧ್ವನಿಗಳು – ಭೇರಿಮೃದಂಗಾದಿಗಳೆಲ್ಲಾ, ಮೊಳಗಿದವು– ಧ್ವನಿಮಾಡಲ್ಪಟ್ಟವು, ಮಂಗಳ – ಮಂಗಳಕರವಾದ, ನೃತ್ಯ – ನರ್ತನವು, ಗೀತಂಗಳು – ಸಂಗೀತವು, ಎಸಗಿದವು – ನೆರವೇರಿಸಲ್ಪಟ್ಟಿತು, ಅಲ್ಲಿ – ಆ ದುಶ್ಶಳೆಯ ಮಂದಿರದೊಳಗೆ, ಹರಿಪಾರ್ಥರು – ನರನಾರಾಯಣರಾದರೊ, ಸತ್ಕೃತರು – ಉಪಚಾರದಿಂದ ಕೂಡಿದವರು, ಆದರು – ಆದವರಾಗಿದ್ದರು. ||೫೫||

ಟೀ|| ನರ – ಫಲುಗುಣನು, (ದುಶ್ಶಳೆಯನ್ನು ಕುರಿತು) ಮರುಗಿ – ವ್ಯಸನಗೊಂಡು, ಕಂಬನಿದುಂಬಿ – ನೇತ್ರೋದಕವನ್ನು ಬರಮಾಡಿಕೊಂಡು, ಮಾಡಿದ – ನಡೆಯಿಸಿದ್ದ, ವಿಘಾತಿಯಂ – ಸೈಂಧವನು ಸತ್ತ ಅನಾಹುತವನ್ನೂ, ಮರೆದು– ಸ್ಮೃತಿಗೆ ತಾರದೆ, ಸುತನಂ – ತನ್ನ ಮೊಮ್ಮಗನನ್ನು, ಕೂಡಿಕೊಂಡು – ಜೊತೆಮಾಡಿಕೊಂಡು, ಪೊರಮಟ್ಟು – ಹೊರಟವಳಾಗಿ, ಬಂದು – ಇಭನಗರವನ್ನು ಹೊಕ್ಕು, ಕುಂತೀದೇವಿ – ಕುಂತಿಯನ್ನೂ, ಪಾಂಚಾಲತನುಜೆಯರನು, ಪಾಂಚಾಲಿಯನ್ನೂ ಸಹ, ಕಾಂಬುದು – ನೋಡಬೇಕು, ಎಂದು – ಎಂಬತೆರನಾಗಿ, ನೆರೆ – ಹೆಚ್ಚಾಗಿ, ಸಂತೈಸೆ – ಒಳ್ಳೇ ಮಾತುಗಳನ್ನಾಡಲು, ದುಶ್ಶಳೆಯು – ದುಶ್ಶಳೆಯಾದರೊ, ಬಳಿಕ – ಅನಂತರ, ಶೌರಿಗೆ – ಕೃಷ್ಣಸ್ವಾಮಿಗೆ, ಎರಗಿ – ವಂದಿಸಿ, ಭಕ್ತರ–ಭಜಕರಾದ ಜನರ, ಬೆಳವಿಗೆಗಳನು – ಏಳ್ಗೆಗಳನ್ನು, ಒಸೆದು – ತೃಪ್ತಿಪಡಿಸಿ, ಆವಾವತೆರದಿಂದ – ಯಾವಯಾವ ಪರಿಯಿಂದ, ಮಾಡುವಂತೆ – ಎಸಗುವ ಪರಿಯಾಗಿ, ಎನ್ನನು – ನನ್ನನ್ನು, ಉದ್ಧರಿಸು – ಸಲಹು, ಎಂದು – ಎಂಬತೆರನಾಗಿ, ನಿರ್ಗಮನಕೆ-ಹಸ್ತಿನಾವತಿಗೆ ಹೊರಡಲು, ಅನುವಾದಳು – ಸಿದ್ಧಪಡಿಸಿಕೊಂಡವಳಾದಳು. ||೫೬||

ಟೀ|| ದೇವನಗರೀಶಲಕ್ಷ್ಮೀಕಾಂತನು – ದೇವನಗರಿ – ಸುರನಗರಕ್ಕೆ, ಈಶ – ಪ್ರಭುವಾದ, ಲಕ್ಷ್ಮೀಕಾಂತನು– ಇಂದಿರಾರಮಣನು, ಎಲ್ಲಾಮಹೀಶ್ವರರ್ವೆರಸಿ – ಸಕಲರಾಜರನ್ನೊಡಗೊಂಡು, ಅಲ್ಲಿಯ – ಆ ಸಿಂಧುನಗರದ, ಸುವಸ್ತುಸಹಿತ– ಉತ್ತಮವಾದ ಪದಾರ್ಥಗಳೊಂದಿಗೆ, ಆಕೆಯಂಕೂಡಿಕೊಂಡು – ಆ ದುಶ್ಶಳೆಯನ್ನೂ ಸಂಗಡ ಕರೆದುಕೊಂಡು, ನಿಲ್ಲದೆ– ಮತ್ತೆಲ್ಲಿಯೂ ಇರದೆ ಗಜಪುರಕೆ – ಇಭನಗರಿಗೆ, ಐತಂದು – ಬಂದುಸೇರಿ, ಯೋಜನಮಾತ್ರದೊಳ್ – ಹನ್ನೆರಡು ಮೈಲು ದೂರ ಇರುವಾಗಲೆ, ನಿಂದು – ನಿಂತವನಾಗಿ, ಕಿರೀಟಿಗೆ – ಪಾರ್ಥನನ್ನು ಕುರಿತು, ಉಲ್ಲಸದಿಂದ – ಆನಂದದಿಂದ, ವತ್ಸರಂ– ವರುಷವು, ತುಂಬಿತು – ಮುಗಿದು ಹೋಯಿತು, ಎಂದು – ಎಂಬತೆರನಾಗಿ, ನಿರೂಪಿಸಿ – ಅರುಹಿ, ತಾನೇ – ತಾನಾಗಿಯೆ, ಕಾರುಣ್ಯದಿಂದ – ಕರುಣಾಕಟಾಕ್ಷದಿಂದ ಕೂಡಿದವನಾಗಿ, ಇಳಾವಲ್ಲಭರಮುಂದೆ – ಅನೇಕ ರಾಜಾಧಿರಾಜರುಗಳ ಮುಂದೆಯೇ,

---

ದುಶ್ಶಳೆಯು ಶಿಶುವನ್ನು ಕೃಷ್ಣಸ್ವಾಮಿಗೊಪ್ಪಿಸಿದಳು ಕೃಷ್ಣಪರಮಾತ್ಮನಾದರೊ, ಪ್ರೇಮದಿಂದ ಆ ಬಾಲಕನ ಮೈಯನ್ನು ಸವರಿ ಸಂತಸದಿಂದಿರುತ್ತಲಿದ್ದನು. ಸಕಲರೂ ಬಂದು ಸ್ವಾಮಿಯ ದರ್ಶನವನ್ನು ಮಾಡಿಕೊಂಡರು ಊರೆಲ್ಲಾ ಅಲಂಕಾರದಿಂದ ಕೂಡಿತು. ಮಂಗಳವಾದ್ಯಗಳ ಧ್ವನಿಯು ದಿಕ್ತಟಗಳನ್ನು ವ್ಯಾಪಿಸಿತು. ಕೃಷ್ಣಾರ್ಜುನರಾದಿಯಾಗಿ ಸರ್ವರೂ ಸತ್ಕೃತರಾದರು ||೫೫|| ಅನಂತರ ಅರ್ಜುನನು ದುಶ್ಶಳೆಯನ್ನು ಸಮಾಧಾನೋಕ್ತಿಗಳಿಂದ ಯಜ್ಞಕ್ಕೆ ಬರುವಂತೆ ಒಡಂಬಡಿಸಿದನು, ದುಶ್ಶಳೆಯು ಕೃಷ್ಣಸ್ವಾಮಿಗೆ ವಂದಿಸಿ ಅವರೊಂದಿಗೆ ಹೊರಡಲನುವಾದಳು ||೫೬|| ಲಕ್ಷ್ಮೀಕಾಂತನಾದ ಕೃಷ್ಣಭಗವಂತನು

ತಂದುಯೋಜನಮಾತ್ರದೋಳ್ನಿಂದುವತ್ಸರಂತುಂಬಿತೆಂದು || ಉಲ್ಲಾಸದಿಂಕಿರೀಟಗೆನಿರೂಪಿಸಿತಾನೆ | ಸಲ್ಲಲಿತಹರಿಗಳಂಪಿಡಿದು ಕಟ್ಟಿದನಿಳಾ | ವಲ್ಲಭರಮುಂದೆಕಾರುಣ್ಯದಿಂದೇವನಗರೀಶಲಕ್ಷ್ಮೀಕಾಂತನು ||೫೭||

ಸಂಧಿ ೩೨ ಕ್ಕೆ ಪದ್ಯ ೧೮೦೭ ಕ್ಕಂ ಮಂಗಳಮಸ್ತು.

---

ಸಲ್ಲಲಿತ – ಅತ್ಯಂತ ಸಾಧುಗಳಾದ, ಹರಿಗಳಂ – ಅಶ್ವಂಗಳನ್ನು, ಪಿಡಿದು – ಹಿಡಿದವನಾಗಿ, ಕಟ್ಟಿದನು – ಬಂಧಿಸಿದವನಾದನು. ||೫೭||

ಮೂವತ್ತೆರಡನೆಯ ಸಂಧಿಯು ಮುಗಿದುದು.

---

ಆ ದುಶ್ಶಳೆಯನ್ನೂ ಅಲ್ಲಿಯ ಉತ್ತಮ ವಸ್ತುಗಳನ್ನೂ ತನ್ನೊಂದಿಗೆ ಬರಮಾಡಿಕೊಂಡು, ಅರ್ಜುನಾದಿಗಳೊಂದಿಗೆ ಕೂಡಿ, ಯಜ್ಞಾಶ್ವಂಗಳನ್ನು ಮುಂದೆ ಬಿಟ್ಟುಕೊಂಡು ಹಸ್ತಿನಾವತಿಗೆ ಬಂದು ಗಾವುದ ದೂರದಲ್ಲಿಯೇ ಇಳಿದು ರಥದ ಕುದುರೆಗಳನ್ನೂ ಬಿಚ್ಚಿ ಕಟ್ಟಿ ಸಂವತ್ಸರವು ತುಂಬಿತೆಂದು ಅರ್ಜುನನೊಂದಿಗೆ ಸಂತೋಷದಿಂದ ನುಡಿಯುತ್ತಿದ್ದನೆಂಬಲ್ಲಿಗೆ, ||೫೭||

ಟೀಕಾ ತಾತ್ಪರ್ಯಸಹಿತವಾದ ಜೈಮಿನಿಭಾರತದೊಳು ಮೂವತ್ತೆರಡನೆಯ ಸಂಧಿಯ

ಕಥಾಸಾರವು ಸಂಪೂರ್ಣವು.



## ಮೂವತ್ತುಮೂರನೆಯ ಸಂಧಿ.

ಸೂಚನೆ॥ ಧರಣಿಪಾಗ್ರಣಿಯುಧಿಷ್ಠಿರಮಹೀವಲ್ಲಭಂ । ತುರಗಮೇಧಾಧ್ವರವನೈದೆವಿಸ್ತರಿಸಿದಂ । ಭರತನಳನಹುಷಾದಿಪೃಥ್ವೀಶರೀತಂಗೆಪಾಸಟಿಯೆಪೇಳೆನಲ್ಕೆ ॥

ಜನಮೇಜಯಕ್ಷಿತಿಪಕೇಳ್ಬಳಿಕದೈತ್ಯಭಂ । ಜನನಖಿಳಭೂಪಾಲರಂನಾಗಪುರಕೆಯೋ । ಜನದಳತೆಯೊಳ್ನಿಲಿಸಿಬೇರೆಬೇರವರಪಡೆಗಳಂಪಜ್ಜೆಗೊಳಿಸಿ ॥ ತನತನಗೆಗಂಧನೂಲ್ಯಾಂಬರಾಭರಣನೂ । ತನವಿಭವದಿಂದಬಹುದೆಂದುನೇಮಿಸಿಧರ್ಮ । ತನಯನಂಕಾಣಬೇಕೆಂಬಲವಲವಿಕೆಯಿಂಮುಂದೆಬಿಜಯಂಗೈದನು ॥೧॥ ಸುರನದಿಯತಡಿಯಪುಣ್ಯಕ್ಷೇತ್ರದೊಳ್ಸುವಿ । ಸ್ತರದಮಣಿಮಂಟಪದೊಳಖಿಳಮುನಿಗಣದೊಡನೆ । ಹರುಷದಿಂದೊಡಲದಂಡಿಸಿನೆಲದಮೇಲೆಕುಳ್ಳಿರ್ದುಯಮನಿಯಮದಿಂದ ॥

---

ಮೂವತ್ತುಮೂರನೆಯ ಸಂಧಿ ಪ್ರಾರಂಭವು.

ಸೂ॥ ಈತಂಗೆ-ಈ ಧರ್ಮತನಯನಿಗೆ, ಭರತ ನಳ ನಹುಷಾದಿ ಪೃಥ್ವೀಶರು=ಭರತ-ದುಷ್ಯಂತರಾಜನ ಸುತನು, ನಳ-ನಳನೆಂಬ ಹೆಸರನ್ನುಂಟಾಗಿರತಕ್ಕ ಕೃತಯುಗದಲ್ಲಿದ್ದ ಶಕಪುರುಷರಲ್ಲಿ ಎರಡನೆಯವನು, ನಹುಷ-ದ್ವಾಪರಯುಗ ಕಾಲದ ಶಕ ಪುರುಷರಲ್ಲಿ ಮೊದಲನೆಯವನು, ಆದಿ-ಮೊದಲಾಗಿರತಕ್ಕ, ಪೃಥ್ವೀಶರು-ಅರಸುಗಳು, ಪಾಸಟಿಯೆ-ಸರಿಯಾದಾರೆ, ಪೇಳು-ನುಡಿ, ಎನಲ್ಕೆ-ಎಂಬ ತೆರನಾಗಿ ಹೇಳುವಂತೆ, ಧರಣಿಪಾಗ್ರಣಿ-ರಾಜೇಂದ್ರನಾದ, ಯುಧಿಷ್ಠಿರಮಹೀವಲ್ಲಭಂ-ಧರ್ಮಪುತ್ರನು, ಐದೆ-ಚೆನ್ನಾಗಿ, ತುರಗಮೇಧಾಧ್ವರವನು-ಹಯಮೇಧವನ್ನು, ವಿಸ್ತರಿಸಿದಂ-ನೆರವೇರಿಸಿದನು. ॥

ಟೀ॥ ಜನಮೇಜಯಕ್ಷಿತಿಪ-ಭೂಕಾಂತನಾದ ಜನಮೇಜಯನೆ, ಕೇಳು-ಲಾಲಿಸು, ಬಳಿಕ-ಅನಂತರ, ದೈತ್ಯಭಂಜನನು-ರಾಕ್ಷಸಾಂತಕನಾದ ಕೃಷ್ಣಮೂರುತಿಯು, ನಾಗಪುರಕೆ-ಇಭನಗರಿಗೆ, ಯೋಜನದ-ಒಂದು ಗಾವುದದ, ಅಳತೆಯೊಳ್-ದೂರವಿರುವಾಗಲೆ, ಅಖಿಳ-ಅಶೇಷರಾದ, ಭೂಪಾಲರಂ-ಅರಸುಗಳನ್ನೂ, ನಿಲ್ಲಿಸಿ-ನಿಲ್ಲಗೊಡಿಸಿ, ಅವರವರ-ಆಯಾಯ ಅರಸುಗಳ ಪಡೆಗಳಂ- ದಳಗಳನ್ನು, ಬೇರೆಬೇರೆ- ಬೇರೆಬೇರೆಯಾಗಿರುವಂತೆ, ಪಜ್ಜೆಗೊಳಿಸಿ- ಒರಸೆಯಾಗಿ ನಿಲ್ಲಗೊಡಿಸಿದವನಾಗಿ, ಧರ್ಮತನಯನಂ- ಧರ್ಮನಂದನನನ್ನು, ಗಂಧ-ಪರಿಮಳ ದ್ರವ್ಯವು, ಮಾಲ್ಯ-ಪುಷ್ಪವು, ಅಂಬರ-ಉಡಿಗೆಗಳು, ಆಭರಣ-ತೊಡಿಗೆಗಳು ಮೊದಲಾದುವನ್ನು ಧರಿಸುವುದರ, ನೂತನ-ನವೀನವಾದ, ವಿಭವದಿಂದ-ಸಂಭ್ರಮದ ದೆಸೆಯಿಂದ, ತನತನಗೆ-ತಮ್ಮತಮ್ಮಷ್ಟಕ್ಕೆ, ಕಾಣಬಹುದು-ನೋಡಬಹುದು, ಎಂದು-ಎಂಬ ತೆರನಾಗಿ, ನೇಮಿಸಿ-ಅಪ್ಪಣೆಯನ್ನಿತ್ತು, (ತಾನೂ ಕೂಡ) ಕಾಣಬೇಕು-ನೋಡಬೇಕು, ಎಂಬ-ಎನ್ನತಕ್ಕ, ಲವಲವಿಕೆಯಿಂ- ಆಸಕ್ತಿಯಿಂದ, ಮುಂದೆ-ಮೊದಲೇ, ಬಿಜಯಂಗೈದನು-ಹೊರಟವನಾದನು. ॥೧॥

ಟೀ॥ ಅಸುರಾರಿ-ರಾಕ್ಷಸ ಸಂಹಾರಕನಾದ ಕೃಷ್ಣಸ್ವಾಮಿಯು, ಸುರನದಿಯ- ದೇವಗಂಗೆಯ, ತಡಿಯ-ದಡದಲ್ಲಿರತಕ್ಕ, ಪುಣ್ಯಕ್ಷೇತ್ರದೊಳ್-ಸುಕೃತದಾಯಕವಾದೆಡೆಯಲ್ಲಿ, ಸುವಿಸ್ತರದ-ಬಹು ದೊಡ್ಡದಾಗಿರತಕ್ಕ, ಮಣಿಮಂಟಪದೊಳಗೆ-ರತ್ನಖಚಿತವಾದ ಮಂಟಪದೊಳಗೆ, ಒಡಲ-ತನ್ನದೇಹವನ್ನು, ದಂಡಿಸಿ-ಕಷ್ಟಪಡಿಸಿ, ನೆಲದಮೇಲೆ, ಅಖಿಳ-ಸಮಸ್ತರಾದ, ಮುನಿಗಣದೊಡನೆ-ಋಷಿಗಳ ಸಮುದಾಯದೊಂದಿಗೆ, ಕುಳ್ಳಿರ್ದು-ಕುಳಿತುಕೊಂಡವನಾಗಿ, ಪರಮ-ಉತ್ಕೃಷ್ಟವಾದ, ದೀಕ್ಷಾವಿಧಿಯನು-

---

ಮೂವತ್ತುಮೂರನೆಯ ಸಂಧಿಯ ಕಥಾಸಾರವು.

ಕೇಳೈ ಜನಮೇಜಯಮಹೀವಲ್ಲಭನೆ, ರಾಕ್ಷಸಾಂತಕನಾದ ಕೃಷ್ಣಮೂರುತಿಯು ಸಕಲ ರಾಜಾಧಿರಾಜರನ್ನು ಹಸ್ತಿನಾವತಿಗೆ ಒಂದು ಗಾವುದದ ಹೊರಗೆ ನಿಲ್ಲಿಸಿದವನಾದನು. ಅವರೂ ಮತ್ತು ಅವರ ಕಡೆಯ ಸಕಲ ಪರಿವಾರವೂ ಹೂ, ಗಂಧ ನೂತನ ವಸ್ತ್ರಾದಿಗಳಿಂದ ಕೂಡಿಕೊಂಡು ಧರ್ಮಪುತ್ರನನ್ನು ಮರ್ಯಾದೆಯಿಂದ ನೋಡಬಹುದೆಂದಾಜ್ಞಾಪಿಸಿ, ಧರ್ಮರಾಯನನ್ನು ಕಾಣಬೇಕೆಂಬಿಚ್ಛೆಯಿಂದ ತಾನುಮಾತ್ರ ಏಕಾಕಿಯಾಗಿ ಅಲ್ಲಿಂದ ಹೊರಟು॥೧॥ ಗಂಗಾಕ್ಷೇತ್ರದ ತಡಿಯೊಳಗೆ ವಿಶಾಲವಾಗಿಯೂ ರತ್ನಖಚಿತವಾಗಿಯೂ ಇರುವ ಮಂಟಪದಲ್ಲಿ ಸಕಲ ಮುನಿಜನರಿಂದೊಡಗೂಡಿ ಧ್ಯಾನಯೋಗದಲ್ಲಿ ಕುಳಿತು ದೀಕ್ಷಾ

ಪರಮದೀಕ್ಷಾವಿಧಿಯನನುಕರಿಸಿಸಾಧ್ವಿಯರ | ನೆರವಿಯೊಳೆಸೆವಪತ್ನಿವೆರಸಿತೊಳಗುವಯುಧಿ | ಷ್ಠಿರಭೂಪನಂಕಂಡನಸುರಾರಿ
ವಂದಿಸಿತುತತ್ಸಭೆಮುರಾಂತಕಂಗೆ || ೨ || ಯದುಕುಲಾಗ್ರಣಿಬಳಿಕಭೀಮನಂಬಿಗಿಯಪ್ಪಿ | ವಿದುರಧೃತರಾಷ್ಟ್ರಮಾದ್ರೇ
ಯರಂ ತಕ್ಕೈಸಿ | ಮುದದಿಂದ ದೇವಕಿಯಶೋದೆಯರ್ಗಭಿನಂದನಂಗೈದುಪೃಥೆಗೆನಮಿಸಿ || ಪದುಳವಿಟ್ಟೈದೆಗಾಂಧಾರಿಯಂ
ಬಂದುದ್ರೌಪದಿಸುಭದ್ರೆಯರಂಘ್ರಿಗೆರಗಿದೊಡೆಮಣಿದೆತ್ತಿ|ತದನಂತರದೊಳಖಿಳಮುನಿಗಳ್ಗೆವಂದಿಸಿನಗುತಭೂಪಗಿಂತೆಂದನು||೩||
ಅರಸನಿನ್ನಧ್ವರದವಾಜಿಭೂವಲಯಮಂ | ತಿರುಗಿಬಂದುದುವರುಷಮಾತ್ರದೊಳ್ಮೇದಿನಿಯ | ನರಪತಿಗಳೆಲ್ಲರುನಡೆತಂದರೊ
ಡನೆ ಪಾರ್ಥಪ್ರತಾಪದಹರಹಿಗೆ || ಧರಣಿಸಾಲದುನೆರಪಿದೊಡವೆಗಮರಾಚಲಂ | ಸರಿಯಲ್ಲಬಕದಾಲ್ಭ್ಯಕಾದಿಮುನಿನಿಕರ

---

ದೀಕ್ಷೆಯ ಕಟ್ಟಳೆಯನ್ನು, ಯಮನಿಯಮದಿಂದ – ಜಿತೇಂದ್ರಿಯತ್ವದಿಂದಲೂ, (ಶಾಸ್ತ್ರಸಮ್ಮತವಾದ ಆಚಾರದಿಂದಲೂ), ಅನುಕರಿಸಿ–ಕೂಡಿದವನಾಗಿ, ಸಾಧ್ವಿಯರ–ಗಂಡಂದಿರಲ್ಲಿ ಭಕ್ತಿಯುಳ್ಳ ಹೆಂಗಸರ, ನೆರವಿಯೊಳು-ಗುಂಪಿನೊಳಗೆ, ಎಸೆವ–ಹೊಳೆಯುತ್ತಲಿರುವ, ಪತ್ನಿವೆರಸಿ–ತನ್ನ ರಾಣಿಯರೊಂದಿಗೆ ಕೂಡಿ, ತೊಳಗುವ–ಕಾಂತಿಯುಕ್ತನಾಗಿರತಕ್ಕ, ಯುಧಿಷ್ಠಿರಭೂಪನಂ–ಧರ್ಮಪುತ್ರನನ್ನು, ಕಂಡನು–ಈಕ್ಷಿಸಿದನನಾದನು, ಮುರಾಂತಕಂಗೆ–ಮುರಹರನಾದ ಕೃಷ್ಣಸ್ವಾಮಿಗೆ, ತತ್ಸಭೆ–ಆ ಸಭೆಯವರೆಲ್ಲಾ, ವಂದಿಸಿತು-ವಂದನೆಯಂ ಮಾಡಿದರು || ೨ ||

ಟೀ|| ಯದುಕುಲಾಗ್ರಣಿ–ಯದುಕುಲ–ಯಾದವರ ಕುಲದೊಳಗೆ, ಅಗ್ರಣಿ-ಉತ್ತಮನಾದ ಕೃಷ್ಣಮೂರುತಿಯು, ಬಳಿಕ–ಅನಂತರ, ಭೀಮನಂ–ವೃಕೋದರನನ್ನು, ಬಿಗಿಯಪ್ಪಿ–ಗಾಢಾಲಿಂಗನವಂ ಮಾಡಿಕೊಂಡು, ವಿದುರ–ವಿದುರನನ್ನೂ, ಧೃತರಾಷ್ಟ್ರ–ಧೃತರಾಷ್ಟ್ರ ಮಹಾರಾಜನನ್ನೂ, ಮಾದ್ರೇಯರಂ-ಮಾದ್ರಿದೇವಿಯ ಕುವರರಾದ ನಕುಲ ಸಹದೇವರೆಂಬೀರ್ವರನ್ನೂ, ತಕ್ಕೈಸಿ-ಸತ್ಕರಿಸಿದವನಾಗಿ, ದೇವಕಿಯಶೋದೆಯರ್ಗೆ–ದೇವಕಿಯಶೋದೆಯರೆಂಬ ತನ್ನ ತಾಯಿಯವರಿಗೆ, ಮುದದಿಂದ–ಆನಂದದಿಂದ, ಅಭಿನಂದನಂಗೈದು–ನಮಸ್ಕಾರಗಳನ್ನರ್ಪಿಸಿದವನಾಗಿ, ಪೃಥೆಗೆ–ಕುಂತಿದೇವಿಗೆ, ನಮಿಸಿ–ವಂದನೆಯಂಮಾಡಿ, ಐದೆ–ಚನ್ನಾಗಿ, ಗಾಂಧಾರಿಯಂ–ಗಾಂಧಾರಿದೇವಿಯನ್ನು, ಪದುಳವಿಟ್ಟು- ಕ್ಷೇಮಸಮಾಚಾರವನ್ನುಕೇಳಿ, ದ್ರೌಪದಿಸುಭದ್ರೆಯರು–ಪಾಂಚಾಲರಾಜನ ಕುವರಿಯು ಮತ್ತು ಸುಭದ್ರೆಯು, ಬಂದು-ತನ್ನ ಬಳಿಗೆ ಬಂದು. ಅಂಘ್ರಿಗೆ-ಪಾದಗಳಿಗೆ, ಎರಗಿದೊಡೆ–ವಂದನೆಯಂಗೈಯಲು, ಮಣಿದು–ಬಾಗಿ, ಎತ್ತಿ-ಎತ್ತಿಕೊಂಡು, ಅಖಿಳಮುನಿಗಳ್ಗೆ-ಸಕಲ ತಾಪಸವರ್ಯರಿಗೂ, ತದನಂತರದೊಳು–ಅನಂತರ, ವಂದಿಸಿ–ವಂದನೆಯಂಮಾಡಿ, ಇಂತು–ಮುಂದೆ ಹೇಳುವಂತೆ, ಭೂಪಗೆ–ಧರ್ಮತನಯನೊಂದಿಗೆ, ಎಂದನು–ನುಡಿದನು ||೩||

ಟೀ|| ಅರಸ–ಎಲೈ ರಾಜೇಂದ್ರನಾದ ಧರ್ಮಪುತ್ರನೆ, ನಿನ್ನ–ನಿನ್ನದಾಗಿರುವ, ಅಧ್ವರವಾಜಿ-ಯಾಗದ ಕುದುರೆಯಾದರೊ, ವರುಷಮಾತ್ರದೊಳು–ಒಂದು ವರುಷಮಾತ್ರದಲ್ಲಿಯೆ, ಭೂವಲಯಮಂ–ಇಳಾಮಂಡಲವನ್ನೆಲ್ಲಾ, ತಿರುಗಿ–ಸುತ್ತಿಕೊಂಡು, ಬಂದುದು–ಬಂದಿರುವುದು, ಪಾರ್ಥ–ಫಲುಗುಣನ, ಪ್ರತಾಪದ–ಸಾಹಸದ, ಹರಹಿಗೆ-ಹರಡುವಿಕೆಗೆ, ಒಡನೆ–ಅವನೊಂದಿಗೇ, ಎಲ್ಲರುಂ-ಸಮಸ್ತರಾದ, ಮೇದಿನಿಯನರಪತಿಗಳು–ಭೂಮಂಡಲದಲ್ಲಿರತಕ್ಕ ರಾಜಾಧಿರಾಜರೆಲ್ಲಾ, ನಡೆತಂದರು-ಬಂದಿದಾರೆ, ಧರಣಿ-ಇಳೆಯು, ಸಾಲದು–ಸಾಕಾಗುವದಿಲ್ಲವು, (ಭೂಮಿಯು ಹಿಡಿಯದಷ್ಟು ರಾಜರು ಬಂದಿರುವರು) ಅಮರಾಚಲಂ–ಚಿನ್ನದ ಬೆಟ್ಟವೂ ಕೂಡ, ನೆರಪಿದ–ಹೆಚ್ಚಾಗಿ ಗಳಿಸಿ ತಂದಿರತಕ್ಕ, ಒಡವೆಗೆ–ಚಿನ್ನ ಬೆಳ್ಳಿ ಮೊದಲಾದವುಗಳಿಗೆ, ಸರಿಯಲ್ಲ–ಹೋಲಿಕೆಯಾಗಲಾರದು, ಬಕದಾಲ್ಭ್ಯಕಾದಿ ಮುನಿನಿಕರಂ–ಬಕದಾಲ್ಭ್ಯನೇ ಮೊದಲಾದ ತಾಪಸವರ್ಯರೆಲ್ಲಾ, ಇದೆ–ಬಂದಿದಾರೆ, ದೊರೆಯದಿಹ–ನಾವು ಸಂಪಾದಿಸಿ ತಂದಿರದಿರುವ, ಸಂಭಾರಂ–ಸೋಪಸ್ಕರವು, ಇಲ್ಲ–ಇಲ್ಲವು, (ಸಕಲ ವಸ್ತುಗಳೂ ಸಿದ್ಧವಾಗಿವೆ), ಯಜ್ಞಮಂ–ಅಶ್ವಮೇಧ ಯಾಗವನ್ನು, ಇನ್ನು–ಇನ್ನು ಮುಂದೆ, ನಡೆಸು–ನಡಿಸುವನಾಗು, ಎಂದು–ಎಂಬತೆರನಾಗಿ,

---

ಬದ್ಧನಾಗಿರುವ ಧರ್ಮರಾಯನನ್ನು ಕಂಡನು. ಅಲ್ಲಿದ್ದವರೆಲ್ಲರೂ ಶ್ರೀಕೃಷ್ಣನ ಪಾದಾರವಿಂದಗಳಿಗೆರಗಿದನು ||೨|| ಸರ್ವರಿಂದಲೂ ಮನ್ನಿಸಲ್ಪಟ್ಟ ಕೃಷ್ಣಮೂರುತಿಯು ಭೀಮನನ್ನು ಗಾಢಾಲಿಂಗನವಂ ಮಾಡಿಕೊಂಡನು. ವಿದುರ, ಧೃತರಾಷ್ಟ್ರ, ನಕುಲ ಸಹದೇವರನ್ನು ಆಲಿಂಗಿಸಿಕೊಂಡು, ದೇವಕಿ ಯಶೋದೆಯರೆಂಬ ತನ್ನ ತಾಯಿಯರಿಗೆ ವಂದನೆಯಂಮಾಡಿ, ಕುಂತಿದೇವಿಯ ಪಾದಗಳಿಗೆರಗಿ, ಗಾಂಧಾರಿಯ ಕ್ಷೇಮಲಾಭನನ್ನುಕೇಳಿ, ತನಿಗೆ ನಮಿಸಿದ ದ್ರೌಪದಿ ಸುಭದ್ರೆಯರಿಗೆ ಆಶೀರ್ವಾದವನ್ನು ಮಾಡಿದನು. ಬಳಿಕ ಧರ್ಮರಾಯನನ್ನು ಕುರಿತು ||೩|| ಅಯ್ಯಾ ಧರ್ಮನಂದನಾ ! ನಿನ್ನ ಯಜ್ಞಾಶ್ವವು ವರ್ಷತುಂಬುವುದರೊಳಗಾಗಿ ಭೂಮಂಡಲವೆಲ್ಲವನ್ನೂ ಸಂಚಾರಮಾಡಿಕೊಂಡು ಮರಳಿ ಹಿಂತಿರುಗಿ ಬಂದಿರುವುದು. ನಿನ್ನನುಜನಾದ ಧನಂಜಯನ ಸಾಹಸಾತಿಶಯದಿಂದ ಅನೇಕ ರಾಜಾಧಿರಾಜರೆಲ್ಲಾ ಸೋತುಹೋಗಿ ನಿನ್ನ ದರ್ಶನಾರ್ಥವಾಗಿ ಕುದುರೆಯ ಹಿಂದೆಯೇ ಬಂದಿರುವರು. ಬಕದಾಲ್ಭ್ಯನೇ ಮೊದಲಾದ ಮಹರ್ಷಿಗಳೆಲ್ಲಾ ಬಂದಿದ್ದಾರೆ ಯಾಗಕ್ಕೆ ಬೇಕಾದ ಸೋಪಸ್ಕರಗಳೆಲ್ಲವೂ ಅಣಿಯಾಗಿರು

ಸಿ:ದೆ | ದೊರೆಯ:ದಿಹ ಸಂಭಾರಮಿಲ್ಲನಡೆಸಿನ್ನು ಯಜ್ಞವನೆಂದು ಹರಿನುಡಿದನು ‖ ೪ ‖ ಆಮುರಾಂತಕನಮಾತಂಕೇಳ್ದುಹರುಷ ದಿಂ | ಭೂಮಿಪತಿನುಡಿದನೆಲೆದೇವತವಕಾರುಣ್ಯ | ಜೀಮೂತಮಿ೦ಬೆಳೆಯದಿರ್ದಪುದೆಪಾರ್ಥಪ್ರತಾಪದವೊಲಂತಿಳಿಯಲು ‖ ರೋಮರೋಮದೊಳಿಡಿದಜಾಂಡಕೋಟಿಗಳಿಹಮ | ಹಾಮಹಿಮೆತಾನೆತ್ತ ನರನಸಂಗಡತಿರುಗು | ಈಮನುಜತನವೆತ್ತಭಕ್ತರಂಪಾಲಿಪುದೆನಿನ್ನಬಾಳುವೆಯೆಂದನು ‖ ೫ ‖ ದೇವಸಾಕಿನ್ನದರಮಾತೆಮ್ಮಪಂಚಕದ | ಜೀವನಂನಿಮ್ಮದ್ಯೆಸಲೆಬಾಹ್ಯವೇತಕೆಳ | ರಾವಲಯದರಸುಗಳನೆಂತ-ಜಯಿಸಿದರೆಂಬವಿವರಮುಂಪೇಳ್ವುದೆಂದು ‖ ಭೂವಲ್ಲಭಂಕೇಳ್ಡೊಡಿಂದಿರಾಪತಿಹಸ್ತಿನಾವತಿಯನಗರಮಂ ಪೊರಮಟ್ಟುಮಗುಳಲ್ಲಿಗಾವಾಜಿಗಳ್ಬಂದು ಪೊಗುವಿನಿಂನಡೆದವೃತ್ತಾಂತಮಂ ವಿವರಿಸಿದನು ‖ ೬ ‖ ವಾಜಿಸಹಿತರ್ಜುನಂಪೊರಮಟ್ಟನಂದುವಿ | ಭ್ರಾಜಿಸುವಚೈತ್ರದೋಳ್ಕೂಡೆಮಾಹಿಷ್ಮತಿಗೆ | ರಾಜನಹನೀಲಧ್ವಜಂತುರಗಮಂತಡೆದನಗ್ನಿ

---

ಹರಿ-ಕೃಷ್ಣಸ್ವಾಮಿಯು, ನುಡಿದನು-ಧರ್ಮರಾಯನೊಂದಿಗೆ ತಿಳಿಸಿದವನಾದನು ‖೪‖

ಟೀ‖ ಆ ಮುರಾಂತಕನ-ಆ ಮುರಹರನ, ಮಾತಂ-ನುಡಿಗಳನ್ನು, ಭೂಮಿಪತಿ-ಧರ್ಮತನಯನು, ಕೇಳ್ದು-ಕೇಳಿದವನಾಗಿ, ಹರುಷದಿಂ-ಆನಂದದಿಂದ, ನುಡಿದನು-ಮುಂದೆ ಹೇಳುವಂತೆ ತಿಳಿಸಿದನು, ಎಲೆದೇವ-ಎಲೈ ಪ್ರಭುವೇ, ತವ-ನಿನ್ನ, ಕಾರುಣ್ಯ-ಕೃಪೆಯನ್ನತಕ್ಕ, ಜೀಮೂತಂ-ಮೇಘವು, ಇರೆ-ಇರತಕ್ಕ ಕಾಲದಲ್ಲಿ, ಪಾರ್ಥ-ಫಲುಗುಣನ, ಪ್ರತಾಪದ-ಸಾಹಸವೆನ್ನುವ, ಪೊಲಂ-ಭೂಮಿಯು, ಬೆಳೆಯದೆ-ಬೆಳೆಯನ್ನುಂಟಾಗದೆ, ಇರ್ದಪುದೆ-ಇರುತ್ತದೆಯೇ, (ನಿನ್ನ ದಯೆಯಿರುವಾಗ ಅರ್ಜುನನಿಗೆ ದಿಗ್ವಿಜಯವಾಗುವದಕ್ಕೇನೂ ಅನುಮಾನವಿಲ್ಲವು) ತಿಳಿಯಲು-ಯೋಚಿಸಿ ನೋಡಿದರೆ, ರೋಮರೋಮದೊಳು-ಪ್ರತಿಯೊಂದು ಕೂದಲಲ್ಲಿಯೂ, ಇಡಿದ-ತುಂಬಿರತಕ್ಕ, ಅಜಾಂಡಕೋಟಿಗಳು-ಕೋಟಿ ಬ್ರಹ್ಮಾಂಡಗಳು, ಇಹ-ಇರತಕ್ಕ, ಮಹಾಮಹಿಮೆ-ಹೆಚ್ಚಾದ ಮಹಾತ್ಮ್ಯೆಯು, ತಾನು-ಅಂಥಾದ್ದು, ಎತ್ತ-ಎಲ್ಲಿ, ನರನಸಂಗಡ-ಫಲುಗುಣನೊಂದಿಗೆ, ತಿರುಗುವ-ತಿರುಗಾಡತಕ್ಕ, ಈ ಮನುಜತನಂ-ಈ ನರಲೀಲೆಯು, ಎತ್ತ-ಎಲ್ಲಿಯದು, ಭಕ್ತರಂ- ನಿನ್ನ ಭಜಕರನ್ನು, ಪಾಲಿಪುದೆ-ಸಲಹತಕ್ಕದ್ದೆ, ಬಾಳುವೆ-ನಿನ್ನ ಜೀವನವಾಗಿದೆ, ಎಂದನು-ಎಂದು ನುಡಿದನು ‖ ೫ ‖

ಟೀ‖ ಭೂವಲ್ಲಭಂ-ಧರ್ಮತನಯನು, ದೇವ-ಪ್ರಭುವಾದ ಕೃಷ್ಣಸ್ವಾಮಿಯೆ, ಅದರ-ನಿನ್ನ ಮಹಾತ್ಮ್ಯೆಗೆ ಸಂಬಂಧಪಟ್ಟಿರತಕ್ಕ. ಮಾತು-ಪ್ರಸಂಗವು, ಸಾಕು-ಸಾಕಾಗಿದೆ, ಎಮ್ಮ-ನಮ್ಮದಾಗಿರತಕ್ಕ, ಪಂಚಕದ-ಐದುಜನರ, ಜೀವನಂ-ಬಾಳಾದರೊ, ನಿಮ್ಮದ್ಯೆ-ನಿಮ್ಮದಾಗಿದೆಯಲ್ಲವೆ, ಸಲೆ-ಹೆಚ್ಚಾದ, ಬಾಹ್ಯವು-ಹೊರಗಡೆಯ ಮಾತು, ಏತಕೆ-ಏನು ಪ್ರಯೋಜನವು, ಎಂತು-ಯಾವ ಪ್ರಕಾರವಾಗಿ, ಧರಾವಲಯದ-ಇಳಾಮಂಡಲದ, ಅರಸುಗಳನು - ರಾಜರನ್ನು, ಜಯಿಸಿದಿರಿ-ಸೋಲಿಸಿದಿರಿ, ಎಂಬ-ಎನ್ನತಕ್ಕ. ವಿವರಮುಂ-ವೃತ್ತಾಂತವನ್ನು, ಪೇಳ್ವುದು-ನುಡಿಯಬೇಕು, ಎಂದು-ಎಂಬ ತೆರನಾಗಿ, ಕೇಳ್ದೊಡೆ-ಪ್ರಶ್ನೆಮಾಡಲು, ಹಸ್ತಿನಾವತಿನಗರಮುಂ-ಗಜನಗರವನ್ನು, ಪೊರಮಟ್ಟು-ಬಿಟ್ಟುಹೊರಟು, ಮಗುಳು-ತಿರುಗಿ, ಅಲ್ಲಿಗೆ-ಆ ಇಭನಗರಗೆ, ಆವಾಜಿಗಳ್-ಆ ಅಶ್ವಂಗಳು, ಬಂದುಪೊಗುವಿನಿಂ ಬಂದು ಸೇರುವವರೆಗೂ, ನಡೆದ-ನಡೆದಿರತಕ್ಕ, ವೃತ್ತಾಂತಮಂ-ವರ್ತಮಾನವನ್ನೆಲ್ಲಾ. ಇಂದಿರಾಪತಿ-ಕೃಷ್ಣಮೂರುತಿಯು, ವಿವರಿಸಿದನು-ವಿಶದಪಡಿಸಿದನು ‖ ೬ ‖

ಟೀ‖ ಅಂದು-ಆಕಾಲದಲ್ಲಿ, ವಿಭ್ರಾಜಿತದ-ಅಲಂಕಾರವಾಗಿರತಕ್ಕ, ಚೈತ್ರಮಾಸದೊಳ್- ಚೈತ್ರವೆಂಬ ತಿಂಗಳಿನಲ್ಲಿ, ವಾಜಿಸಹಿತ-ತುರಗದೊಂದಿಗೆ, ಅರ್ಜುನಂ-ಪಾರ್ಥನು,ಪೊರಮಟ್ಟನು-ಹೊರಟವನಾದನು,ಕೂಡೆ-ಜಡನೆಯೆ, ತುರಗಮುಂ-ಯಾಗದಕುದುರೆಯನ್ನು, ಅಗ್ನಿಸಹಾಯದಿಂದ-ಅಗ್ನಿದೇವನ ಸಹಾಯವನ್ನುಹೊಂದಿ, ಮಾಹಿಷ್ಮತಿಗೆ-ಮಾಹಿಷ್ಮತೀ ಎಂಬ ನಗರಕ್ಕೆ,

---

ವುದರಿಂದ ನೀನು ಈಗ ಯಜ್ಞಾರಂಭವನ್ನು ಮಾಡೆಂದು ನುಡಿದನು ‖೪‖ ಈ ಮಾತುಗಳನ್ನೆಲ್ಲಾ ಕೇಳಿದ ಧರ್ಮಪುತ್ರನು ಎಲೈ ಸ್ವಾಮಿಯೇ ! ಮೇಘೋದಯವಾದರೆ ಹೊಲಕ್ಕೆ ಅಭಿವೃದ್ಧಿಯು ಸಿದ್ಧವಾಗಿರುವಂತೆ ನಿನ್ನ ದಯೆಯಿರುವಾಗ ಅರ್ಜುನನಿಗೆ ಗೆಲುವಾಗದಿರುವುದೆ ? ರೋಮರೋಮಗಳಲ್ಲೂ ಕೋಟಿ ಬ್ರಹ್ಮಾಂಡಗಳನ್ನುಳ್ಳ ನೀನು ಭಕ್ತಪರಾಧೀನನಾಗಿ ಈ ರೀತಿಯಲ್ಲಿ ಅಲೆಯುವ ನಿನ್ನ ಮಹಿಮೆಯು ಅಸಾಧಾರಣವಾದದ್ದಲ್ಲವೆ ? ‖೫‖ ಎಲೈ ಮಹಾನುಭಾವನೆ, ನಮ್ಮೈವರ ಪ್ರಾಣವೇ ನೀನಾಗಿರುವಾಗ ಹೆಚ್ಚಾಗಿ ಮಾತನಾಡಿ ಸಾರ್ಥಕವೇನು ? ನೀವು ಅನೇಕ ರಾಜಾಧಿರಾಜರನ್ನೆಲ್ಲಾ ಜಯಿಸಿಕೊಂಡು ಬಂದಿರುವಿರಲ್ಲವೆ? ಅದರ ಪರಿಯನ್ನು ವಿಸ್ತಾರವಾಗಿ ನನಗೆ ಹೇಳಬೇಕೆಂದು ಕೇಳಿಕೊಳ್ಳುತ್ತಲಿರುವ ಧರ್ಮಪುತ್ರನಿಗೆ ಕೃಷ್ಣಸ್ವಾಮಿಯು ತಾವು ಹಸ್ತಿನಾವತಿಯಿಂದ ಯಜ್ಞಾಶ್ವದೊಂದಿಗೆ ಹೊರಟು ಮತ್ತೆ ಹಿಂದಿರುಗಿ ಬರುವವರೆಗೂ ನಡೆದ ಕಥೆಯನ್ನು ಹೇಳತೊಡಗಿದನು ‖ ೬ ‖ ಕೇಳೈ ಯುಧಿಷ್ಠಿರಾ ! ಈ ಕುದುರೆಯೊಂದಿಗೆ ಅರ್ಜುನನು ಸೇನಾಸಮೇತನಾಗಿ ಚೈತ್ರಮಾಸದಲ್ಲಿ ಹೊರಟು ಹೋದನಷ್ಟೆ. ಹೀಗೆ ಹೋಗುತ್ತಿರುವಾಗ ಕುದುರೆಯು ಮಾಹಿಷ್ಮತೀನಗರಕ್ಕೆ ನುಗ್ಗಲು ಅಲ್ಲಿಯ ಅರಸಾದ ನೀಲಧ್ವಜ

ಸಹಾಯದಿಂದ ‖ ಈಜಿಷ್ಣುಸಂಗರದೊಳಾತನಂಜಯಿಸಲಾ | ವ್ಯಾಜದಿಂಬಂದುದುಸರಿದ್ವರೆಯಶಾಪಂಮ | ಹಾಜನದೊಳಲ್ಲಿಂದಪೋಗಿತಿರುಗಿತುಹಯಂಬಳಿಕವಿಂಧ್ಯಾಚಲದೊಳು ‖೭‖ ಆನಗದಜೇನ್ಗಳಿಂಪಣ್ಗಳಿಂದೋಜರದ | ಪಾನೀಯದಿಂಪಿನಿಂತಂಪಿನಿಂಕುಸುಮಗಂ | ಧಾನಿಲನಪೆಂಪಿಂದಕಂಪಿಂದನಲವೇರಿಚಂಡಿಯವಿಶಾಪದಿಂದ ‖ ಸೇನೆವಿಸ್ಮಯದೊಡನೆಹಯದೊಡನೆಮುಂದೆಸು | ಮ್ಮಾನದಿಂನಡೆಯಲ್ಕೆತಡೆಯಲ್ಕೆಸಂಗರದೊ | ಳೀನರಂಜಯಿಸಿದಂಭಲದಿಂದಬಲದಿಂದಹಂಸಧ್ವಜನಸುತರನು ‖೮‖ ಜನಪಕೇಳಾಘರ್ಮಕಾಲದೋಳ್ತುಹಿನಗಿರಿ | ತನುಜೆಯತಪೋವನದವಿಘ್ನಂಗಳಂಕಳೆದು | ವನಿತಾಮಯದಿರಾಜ್ಯದೋಳ್ಪ್ರಮೀಳೆಯನೊಡಂಬಡಿಸಿಗಜಪುರಕೆಕಳುಹಿ ‖ ದನುಜೇಂದ್ರಭೀಷಣನಾಕ್ರಮಿಸಿಬಭ್ರುವಾಹನನಪಟ್ಟಣಕೆವಿಜಯದೊಡನೆಬಂದನ | ರ್ಜುನನಬ್ದಋತುವಿನೋಳ್ಮೇಘರವಮಂಮಿಗುವವಾದ್ಯನಿರ್ಘೋಷದಿಂದ ‖ ೯ ‖ ಮಣಿಪುರಕೆಬಂದುದಾ

---

ರಾಜನು-ಅರಸು, ಆಹ-ಆಗಿರತಕ್ಕ, ನೀಲಧ್ವಜಂ-ನೀಲಧ್ವಜನೆಂಬರಸು, ತಡೆದನು-ಅಡ್ಡಗಿಸಿದನು, ಆತನಂ-ಆ ನೀಲಧ್ವಜನನ್ನು, ಸಂಗರದೊಳು-ಕಾಳಗದಲ್ಲಿ, ಈಜಿಷ್ಣು-ಈ ಫಲುಗುಣನು, ಜಯಿಸಲು-ಸೋಲಿಸಲಾಗಿ, ಸರಿದ್ವತಿಯ-ದೇವಗಂಗೆಯ, ಶಾಪಂ-ಕಟ್ಟ ಹರಿಕೆಯು, ಆವ್ಯಾಜದಿಂ-ಆ ನೀಲಧ್ವಜನನ್ನು ಜಯಿಸಿದ ಕಾರಣದಿಂದ, ಬಂದುದು-ಉಂಟಾಯಿತು, ಬಳಿಕ-ಅನಂತರ, ಹಯಂ-ಯಾಗದ ಕುದುರೆಯು, ಅಲ್ಲಿಂದ-ಆ ಎಡೆಯಿಂದ, ಮಹಾಜನದೊಳು - ಬಹು ಜಾಗ್ರತೆಯಾಗಿ, ಪೋಗಿ-ಹೊರಟು, ವಿಂಧ್ಯಾಚಲದೊಳು-ವಿಂಧ್ಯಪರ್ವತದೊಳಗೆ, ತಿರುಗಿತು-ತಿರುಗಿಕೊಂಡು ಇತ್ತು. ‖೭‖

ಟೀ‖ ಆನಗದ-ಆ ವಿಂಧ್ಯಾದ್ರಿಯಲ್ಲಿರತಕ್ಕ, ಜೇನ್ಗಳಿಂ-ಜೇನುಗಳಿಂದಲೂ, ಪಣ್ಗಳಿಂದ-ಹಣ್ಣುಗಳಿಂದಲೂ ಓಜರದ-ಜರತೆಗಳಿಂದ ಬರತಕ್ಕ, ಪಾನೀಯದ-ಉದಕದ, ಇಂಪಿನಿಂ-ಸೊಬಗಿನಿಂದಲೂ, ತಂಪಿನಿಂ-ಶೈತ್ಯದಿಂದಲೂ, ಕುಸುಮ-ಪುಷ್ಪಗಳಲ್ಲಿರತಕ್ಕ, ಗಂಧ-ಪರಿಮಳ ಸಹಿತವಾದ, ಅನಿಲ-ಗಾಳಿಯ, ಪೆಂಪಿಂದ - ಏಳಿಗೆಯಿಂದಲೂ, ಕಂಪಿಂದ - ಸುರಭಿಯಿಂದಲೂ, ನಲವು-ಆನಂದವು, ಏರಿ-ಹೆಚ್ಚಾಗಿ, ಚಂಡಿಯ-ಚಂಡಿಯೆಂಬಾಕೆಯ, ವಿಶಾಪದಿಂದ-ಶಾಪವಿಮೋಚನೆಯಿಂದ, ಸೇನೆ-ದಳವು, ವಿಸ್ಮಯದೊಡನೆ-ಅಚ್ಚರಿಯೊಂದಿಗೆ, ಹಯದೊಡನೆ-ತುರುಗದೊಂದಿಗೆ, ಸುಮ್ಮಾನದಿಂ-ಆನಂದದಿಂದ, ಮುಂದೆ-ಮುಂದಕ್ಕೆ, ನಡೆಯಲ್ಕೆ-ಹೊರಡಲು, ತಡೆಯಲ್ಕೆ - ಅಡ್ಡಿಮಾಡಲಾಗಿ, ಈನರಂ-ಈ ಧನಂಜಯನಾದರೊ, ಭಲದಿಂದ - ಕ್ರೌರ್ಯದಿಂದಲೂ, ಬಲದಿಂದ-ಸಾಹಸದಿಂದಲೂ ಕೂಡಿ, ಹಂಸಧ್ವಜನಸುತರನು-ಹಂಸಧ್ವಜನ ಕುವರರನ್ನು, ಸಂಗರದೊಳು - ಕಾಳಗದೊಳಗೆ, ಜಯಿಸಿದಂ-ಸೋಲಿಸಿದವನಾದನು. ‖೮‖

ಟೀ‖ ಜನಪ - ಎಲೈ ಜನಮೇಜಯರಾಯನೇ, ಕೇಳು - ಲಾಲಿಸು, ಅರ್ಜುನನು - ಪಾರ್ಥನಾದರೊ, ತುಹಿನಗಿರಿ-ಹಿಮವತ್ಪರ್ವತದ, ತನುಜೆಯ-ಕುವರಿಯಾದ ಪಾರ್ವತಾದೇವಿಯ, ತಪೋವನದ-ತಪಸ್ಸುಮಾಡುವ ಕಾಡಿನ, ವಿಘ್ನಗಳಂ-ತೊಂದರೆಗಳನ್ನು ಆಘರ್ಮಕಾಲದೊಳ್-ಆ ಬೇಸಿಗೆಯೊಳಗೆ, ಕಳೆದು - ಕಳೆದವನಾಗಿ, ಪ್ರಮೀಳೆಯನು-ಪ್ರಮೀಳೆ ಎನ್ನತಕ್ಕ ರಾಣಿಯನ್ನು, ವನಿತಾಮಯದ-ಹೆಂಗಸರ ಸೈನ್ಯವಿರುವ, ರಾಜ್ಯದೊಳ್-ಜನಪದದಲ್ಲಿ, ಒಡಂಬಡಿಸಿ-ಒಪ್ಪಿಸಿದವನಾಗಿ, ಗಜಪುರಕೆ-ಇಭನಗರಿಗೆ, ಕಳುಹಿ-ಕಳುಹಿಸಿದವನಾಗಿ, ದನುಜೇಂದ್ರ-ರಕ್ಕಸರರಾಯನಾದ, ಭೀಷಣನನು-ಭೀಷಣನೆಂಬಾತನನ್ನು, ಆಕ್ರಮಿಸಿ-ಸೋಲಿಸಿ, ಅಬ್ದಋತುವಿನೊಳ್-ಮಳೆಗಾಲದಲ್ಲಿರುವ, ಮೇಘರವಮಂ-ಮೇಘಾಡಂಬರವನ್ನು, ಮಿಗುವ - ಮೀರುತ್ತಲಿರುವ, ವಾದ್ಯನಿರ್ಘೋಷದಿಂದ-ಭೇರೀಮೃದಂಗಾದಿಗಳ ನಿನದದಿಂ, ನಿಜ-ಸ್ವಕೀಯವಾದ, ಹಯದೊಡನೆ-ತುರಗದೊಂದಿಗೆ, ಬಭ್ರುವಾಹನನ-ತನ್ನ ಕುವರನಾದ ಬಭ್ರುವಾಹನೆಂಬ ಹೆಸರುಳ್ಳಾತನ, ಪಟ್ಟಣಕೆ-ನಗರಿಗೆ, ಬಂದನು-ಬಂದವನಾದನು. ‖೯‖

---

ಮಹಾರಾಜನು ಅಗ್ನಿಯ ಸಹಾಯದಿಂದ ಕುದುರೆಯನ್ನು ಕಟ್ಟಿದನು. ಈ ಅರ್ಜುನನು ಅವನನ್ನು ಸೋಲಿಸಿ ತುರಗವನ್ನು ಬಿಡಿಸಿಕೊಂಡು ಮುಂದೆ ಹೊರಟನು, ಇದೇ ಧನಂಜಯನಿಗೆ ಗಂಗಾಶಾಪವು ಬರುವುದಕ್ಕೆ ಕಾರಣವಾಯಿತು. ಆ ಬಳಿಕ ಯಜ್ಞಾಶ್ವವು ವಿಂಧ್ಯಪರ್ವತಕ್ಕೆ ನುಗ್ಗಿ ಅಲ್ಲೆಲ್ಲಾ ತಿರುಗಾಡುತ್ತಲಿತ್ತು ‖೭‖ ಅಲ್ಲಿನ ಹಣ್ಣುಹಂಪಲ್ಗಳಿಂದಲೂ, ಹೂ ಮೊದಲಾದವುಗಳಿಂದಲೂ ಸೇನಾಜನರೆಲ್ಲಾ ದಣಿದು ಆನಂದದಿಂದಿರುವಾಗ, ಕುದುರೆಯು ಒಂದು ಬಂಡೆಯಮೇಲಕ್ಕೆ ಕಾಲಿಡಲು ಕದಲಲಾರದೆ ನಿಂತು ಹೋಯಿತು. ಕಡೆಗೆ ಆ ಬಾಧೆಯೂ ಪರಿಹಾರವಾಯಿತು. ಶಿಲಾರೂಪವಾಗಿದ್ದ ಚಂಡಿಯ ಶಾಪವಿಮೋಚನೆಯೂ ಆಯಿತು. ಬಳಿಕ ಕುದುರೆಯು ಮುಂದಕ್ಕೆ ನಡೆಯುತ್ತಲಿರುವಾಗ ಹಂಸಧ್ವಜನ ಕುವರರು ಕುದುರೆಯನ್ನು ಕಟ್ಟಿಹಾಕಿದರು, ಅವರನ್ನೂ ಕೂಡ ನಿನ್ನನುಜನು ಸೋಲಿಸಿದನು ‖೮‖ ಕೇಳೈ ಧರ್ಮಜ, ಆ ಬಳಿಕ ಕುದುರೆಯನ್ನು ಪ್ರಮೀಳೆಯು ಕಟ್ಟಿಹಾಕಿಸಿ ಅರ್ಜುನನೊಂದಿಗೆ ಕಾಳಗಕ್ಕೆ ನಿಂತಳು. ಧನಂಜಯನು ಆಕೆಯನ್ನು ಉಪಾಯದಿಂದ ಸೋಲಿಸಿ ಅವಳನ್ನು ಹಸ್ತಿನಾವತಿಗೆ ಕಳುಹಿ ತಾನು ಕುದುರೆಯ ಸಂಗಡ ಹೋಗುತ್ತಲಿರುವಾಗ ಭೀಷಣನೆಂಬ ರಕ್ಕಸನಾಯಕನನ್ನು ಸೋಲಿಸಿದನು. ಬಭ್ರುವಾಹನನ

ಸಮಯದೊಳ್ಮುದರ್ಫಲುಗುಣನಲ್ಲಿಮಡಿದ | ನಾತ್ಮಜನಿಂದಬಳಿಕದಂಫಣಿರಾಜತನುಜೆಪರಿಹರಿಸಿದಳ್ಮುಂದೆನಡೆಯಲ್ತಾಮ್ರ ಕೇತುತಡೆದು || ರಣದೊಳೆಮ್ಮೆಲ್ಲರಂಗೆಲ್ದೊಡಾತನಪಿತಂ | ಗುಣನಿಧಿಮಯೂರಧ್ವಜಂತನ್ನಯಜ್ಞಮಂ | ಗಣಿಸದೆಮಗೊಪ್ಪಿಸಿ ತುರಂಗಸಹಿತೈತಂದನರಸಕೇಳ್ಕೌತುಕವನು || ೧೦ || ಆಮಯೂರಧ್ವಜನುಹರಿಸಹಿತನಡೆಯೆನಿ | ಸ್ಸೀಮನಹವೀರವರ್ಮ್ಮಂ ತಡೆಯೆಬಿಡಿಸಲು | ದ್ದಾಮವಾಜಿಗಳೈದುದಿನಗಳಿರ್ದು || ಹೈಮಂತಶೈಶಿರದಮಾಗಿಮಡಲಿಡೆತರಣಿ | ಸೋಮನಂತಿರೆಬಿಸಿಲ್ಬೆಳ ದಿಂಗಳೋಲಾಗೆ | ತಾಮರಸರಾಜಿನಶಿಸಿದವುಕೂಡೆಕುಗ್ಗಿದವುಕೋಗಿಲೆಕೊರಲ್ಧ್ವನಿಗಳು ||೧೧|| ಶೈಶಿರದಕಾಲದೊಳ್ಕಲಿಚಂದ್ರ ಹಾಸನಂ | ಮೈಸಿರಿಯೊಳೊಡಗೊಂಡುಬಕದಾಲ್ಭ್ಯನಂ ಕಂಡು | ಕೈಸಾರ್ದಹರುಷದಿಂಸಿಂಧುದೇಶದಮೇಲೆಮಖಸಮಯಕಿಲ್ಲಿ

ಟೀ|| ಮಣಿಪುರಕೆ – ಮಣಿಪುರವೆಂಬ ಬಭ್ರುವಾಹನನ ರಾಜಧಾನಿಗೆ, ಕುದುರೆ–ಯಾಗದತುರಂಗಮವು, ಬಂದುದು– ಬಂದು ಸೇರಿತು, ಅಲ್ಲಿ-ಆ ಮಣಿಪುರದೊಳಗೆ, ಫಲುಗುಣನು-ಪಾರ್ಥನಾದರೊ, ಆತ್ಮಜನಿಂದ–ತನ್ನ ಕುವರನಿಂದ, ಆಸಮಯ ದೊಳ್-ಆ ವೇಳೆಯಲ್ಲಿ, ಮಡಿದನು–ಮರಣವನ್ನೈದಿದನು, ಬಳಿಕ ಅನಂತರ, ಅದಂ-ಆ ಸಾವನ್ನು, ಫಣಿರಾಜತನುಜೆ-ಹಾವುಗಳಿಗೆ ಅರಸಾದ ಆದಿಶೇಷನ ಕುವರಿಯಾದ ಉಲೂಪಿಯು, ಪರಿಹರಿಸಿದಳು–ಹೋಗಲಾಡಿಸಿದಳು, ಮುಂದೆನಡೆಯಲ್- ಮತ್ತೆ ಸ್ವಲ್ಪ ದೂರ ಪ್ರಯಾಣ ಬೆಳಸಲು, ತಾಮ್ರಕೇತು–ತಾಮ್ರಧ್ವಜನು, ತಡದು–ಬಂಧಿಸಿ, ಎಮ್ಮೆಲ್ಲರಂ-ನಮ್ಮಗಳನ್ನೆಲ್ಲಾ, ರಣದೊಳು– ಕಾಳಗದಲ್ಲಿ, ಗೆಲ್ದೊಡೆ-ಸೋಲಿಸಲಾಗಿ, ಆತನಪಿತಂ–ಅವರ ತಂದೆಯಾದ, ಗುಣನಿಧಿ-ಸದ್ಗುಣಗಳಿಗೆ ಸಮುದ್ರಪ್ರಾಯನಾಗಿರ ತಕ್ಕ, ಮಯೂರಧ್ವಜಂ–ಮಯೂರಧ್ವಜಮಹಾರಾಯನು, ತನ್ನಯಜ್ಞಮಂ – ತಾನು ಮಾಡಬೇಕೆಂದಿದ್ದ ಅಶ್ವಮೇಧವನ್ನೂ, ಗಣಿಸದೆ-ಲೆಕ್ಕಿಸದೆ, ಎಮಗೆ–ನಮಿಗೆ, ಒಪ್ಪಿಸಿ–ಸರ್ವಸ್ವವನ್ನೂ ಬಿಟ್ಟವನಾಗಿ, ತುರಗಸಹಿತ–ಯಜ್ಞಾಶ್ವ ಸಮೇತನಾಗಿ, ಐತಂ ದನು - ಬಂದವನಾದನು, ಅರಸ–ಎಲೈ ರಾಯನೆ, ಕೌತುಕವನು–ಆಚ್ಚರಿಯನ್ನು, ಕೇಳು–ಲಾಲಿಸು. ||೧೦||

ಟೀ|| ಹರಿಸಹಿತ-ಯಜ್ಞಾಶ್ವದೊಂದಿಗೆ, ಆ ಮಯೂರಧ್ವಜನು, ನಡೆಯೆ–ಬರುತ್ತಲಿರುವ ಕಾಲದಲ್ಲಿ, ನಿಸ್ಸೀಮನಹ- ಅಸಹಾಯಶೂರನಾದ, ವೀರವರ್ಮಂ-ವೀರವರ್ಮನೆಂಬರಸು, ತಡೆಯೆ - ಅಡ್ಡಗಿಸಲು, ಬಿಡಿಸಲು – ಬಂಧನದಿಂದ ಬಿಡುಗಡೆ ಮಾಡಿದ್ದರಿಂದ, ಉದ್ದಾಮವಾಜಿಗಳು–ಶ್ರೇಷ್ಠಂಗಳಾದ ಆ ಕುದುರೆಗಳು, ಐದಿದವು-ಕುಂತಳನಗರವನ್ನು ಹೊಕ್ಕವು, ಐದು ದಿನಗಳು – ಐದುದಿವಸಗಳ ಪರ್ಯಂತರವೂ, ಚಂದ್ರಹಾಸನಪುರದೊಳು – ಕುಂತಳ ರಾಜ್ಯದಲ್ಲಿಯೇ, ಇರ್ದು – ಇದ್ದವರಾಗಿ, ಹೈಮಂತಶೈಶಿರದ–ಹಿಮಕಾಲದ ಮತ್ತು ಶಶಿರುತುವಿನ, ಮಾಗಿ–ಮಾಗಿಯ ಕಾಲವು, ಮಡಲಿಡೆ–ಒದಗಲಾಗಿ, ಸೋಮನಂತೆ- ಇಂದುವಿನ ಹಾಗೆ, ತರಣಿ–ರವಿಯು, ಇರೆ–ಇರಲಾಗಿ, ಬೆಳದಿಂಗಳೊಲ್–ಬೆಳದಿಂಗಳ ರೀತಿಯಾಗಿ, ಬಿಸಿಲ್–ಸೂರ್ಯನ ಝಳವು, ಆಗೆ–ಆಗಲು, ತಾಮರಸರಾಜಿ-ತಾವರೆಗಳ ಸಮುದಾಯವು, ನಶಿಸಿದವು–ಲಯವನ್ನೈದಿದವು, ಕೋಗಿಲೆಯ–ಕೋಗಿಲೆ ಹಕ್ಕಿ ಗಳ, ಕೊರಲ್-ಕಂಠದ, ದನಿಗಳು-ಧ್ವನಿಗಳಾದರೊ, ಕೂಡೆ-ಒಡನೆಯೇ, ತಗ್ಗಿದವು-ಕುಗ್ಗಿ ಹೋದವು. ||೧೧||

ಟೀ|| ಕಲಿ-ವೀರನಾದ, ಚಂದ್ರಹಾಸನಂ–ಇಂದುಹಾಸನೆಂಬಾತನನ್ನು, ಮೈಸಿರಿಯೊಲ್ ಶರೀರದ ನೆರಳಿನಂತೆ, ಶೈಶಿ ರದ, ಕಾಲದೊಲ್–ಮಾಘಫಾಲ್ಗುಣ ಮಾಸಗಳ ವೇಳೆಯಲ್ಲಿ, ಒಡಗೊಂಡು–ಜೊತೆಮಾಡಿಕೊಂಡವರಾಗಿ, ಬಕದಾಲ್ಭ್ಯನಂ–ಬಕ ದಾಲ್ಭ್ಯನೆಂಬ ಋಷಿಯನ್ನು, ಕಂಡು-ಈಕ್ಷಿಸಿ, ಕೈಸಾರ್ದ-ಕೈಗೂಡಿದ, ಹರ್ಷದಿಂ-ಆನಂದದಿಂದ, ಮಖಸಮಯಕೆ–ಯಜ್ಞ

ನನ ರಾಜಧಾನಿಗೆ ಕುದುರೆಯೊಂದಿಗೆ ಬಂದನು ||೯|| ಅಲ್ಲಿ ತನ್ನ ಕುವರನೊಂದಿಗೆ ಹೋರಾಡಿ ಅರ್ಜುನನು ಸತ್ತು ಹೋದನು. ಉಲೂಪಿಯು ಈ ಫಲುಗುಣನ ಹರಣವನ್ನು ಕಾಪಾಡಿದಳು. ಅನಂತರ ಕುದುರೆಯು ಮುಂದೆ ಹೋಗುತ್ತಿರುವಾಗ ತಾಮ್ರ ಧ್ವಜನೆಂಬುವನು ಕಟ್ಟಿಹಾಕಿದನು. ನಮ್ಮೆಲ್ಲರನ್ನೂ ಸೋಲಿಸಿ ಕುದುರೆಯನ್ನು ತಮ್ಮೂರಿಗೆ ಸೆಳೆದುಕೊಂಡು ಹೋಗಿ ಯಜ್ಞ ದೀಕ್ಷೆಯಲ್ಲಿದ್ದ ತನ್ನ ತಂದೆಯಾದ ಮಯೂರಧ್ವಜನಿಗ ಒಪ್ಪಿಸಲು ಆ ಭಕ್ತಾಗ್ರೇಸರನಾದ ಮಯೂರಧ್ವಜನು ನಮ್ಮ ಕುದುರೆ ಯನ್ನೂ ತಾನು ಬಿಟ್ಟಿದ್ದ ತುರಂಗವನ್ನೂ ಸಹ ನಮಿಗೆ ಒಪ್ಪಿಸಿ ಕುದುರೆಯ ಬೆಂಗಾವಲ್ಗೆ ತಾನೂ ಬಂದುಬಿಟ್ಟವನಾದನು. ||೧೦|| ಅನಂತರ ಕುದುರೆಯು ವೀರವರ್ಮನ ರಾಜಧಾನಿಯನ್ನು ಹೊಕ್ಕಿತು. ವೀರವರ್ಮನಿಗೂ ಪಾರ್ಥನಿಗೂ ಘೋರವಾದ ಯುದ್ಧ ವಾಯಿತು. ಕಡೆಗೆ ವೀರವರ್ಮನೂ ಸೋತು ಕುದುರೆಯ ಹಿಂದೆಯೇ ಹೊರಟನು. ಅನಂತರ ಕುದುರೆಗಳು ಕುಂತಳರಾಜ್ಯಕ್ಕೆ ನುಗ್ಗಿದವು. ಅಲ್ಲಿಯ ಅರಸಾದ ಚಂದ್ರಹಾಸನಿಂದ ನಾವೆಲ್ಲಾ ಸತ್ಕೃತರಾಗಿ ಐದುದಿನಗಳು ಅಲ್ಲಿಯೇ ಇದ್ದೆವು. ಅಷ್ಟು ಹೊತ್ತಿಗೆ ಹಿಮಂತಋತುವು ಒದಗಿದ್ದರಿಂದ ಸೂರ್ಯರಶ್ಮಿಯು ಚಂದ್ರಕಾಂತಿಯೆಂಬಂತೆ ಭ್ರಾಂತಿಯನ್ನುಂಟುಮಾಡಲಾರಂಭಿ ಸಿತು. ಬಿಸಿಲು ಬೆಳದಿಂಗಳಾಯಿತು, ಕಮಲಗಳ ಕಾಂತಿಯು ಕಡಮೆಯಾಯಿತು. ಕೋಗಿಲೆಯ ಕಂಠಧ್ವನಿಗಳು ಮಾಯ ವಾದವು || ೧೧ || ಶಿಶಿರಋತುವಿನ ಆರಂಭದಲ್ಲಿ ಶೂರಾಗ್ರಣಿಯಾದ ಚಂದ್ರಹಾಸನೊಂದಿಗೆ ಹೊರಟು ಬಕದಾಲ್ಭ್ಯಮುನಿಯ

ಗಾಗಿ ‖ ಜೈಸಿಬಂದೆವುನಿನ್ನನುಜಕೂಡಲೆಕಳುಹಿ । ದೈಸುವೀರರ್ಕಳುಂಸುಖದೊಳ್ಬಂದರೊ । ತ್ತೈಸಿದಗಣಿತವಸ್ತುಸಹಿತಖಿಳನೃಪರೊಡನೆಬಹಳವಿಭವದೊಳೆಂದನು ‖ ೧೨ ‖ ಭೂಮಂಡಲದೊಳಿಂತುಮುಖಹಯಂತಿರುಗಿದಮ । ಹಾಮಹೀಶ್ವರರೊಡನೆಬಂದವೃತ್ತಾಂತಮಂ । ದಾಮೋದರಂಪೇಳ್ದುರಾಯನಂಬೀಳ್ಕೊಂಡುತನ್ನಮಂದಿರಕೆಬಳಿಕ ‖ ಭೀಮನಂಕೈವಿಡಿದುಕೊಂಡುನಡೆತರೆಸತ್ಯ। ಭಾಮಾದಿರಾಣಿವಾಸಂಗಳಿದಿರಾಗಿಸು।ಪ್ರೇಮದಿಂದಾರತಿಗಳಂಕೊಂಡುಬಂದುನಗುತಾತ್ಮಪತಿಯಂಕಂಡರು ‖೧೩‖ ಮಡದಿಯರಮಧ್ಯದೊಳ್ಸತ್ಯಭಾಮಾದೇವಿ । ನುಡಿದಳೆಲೆದೇವನಮಗಹಳುಸೋದರಿಕುಬ್ಜೆ । ಪೊಡವಿಯೋಳ್ಫಲುಗುಣಂತುರಗರಕ್ಷೆಗೆಪೋದಕಥನದಿಂಪ್ರಮೀಳೆನಿಮಗೆ ‖ ಒಡಹುಟ್ಟಿದವಳಾದಳಿನ್ನೇನೆಲ್ಕವಳ । ಮುಡಿಯಮಾತಂಕೇಳ್ದುಮೊಳೆವನಸುನಗೆಯಬೆ । ಳ್ಪಿಡಿಯೆಕಮಲಾಂಬಕಂಪವಮಾನನಂದನನಮೊಗನೋಡುತಿಂತೆಂದನು ‖ ೧೪ ‖ ಸಂತತಿಗೆಸಂತತಿಗಳಾದವಿನ್ನೇನದರ

---

ಮಾಡಬೇಕಾಗಿರತಕ್ಕ ಕ್ಲುಪ್ತಕಾಲಕ್ಕೆ, ಇಲ್ಲಿಗಾಗಿ–ಈ ಎಡೆಗಾಗಿ, ವೀರರ್ಕಳಂ–ಪರಾಕ್ರಮಿಗಳನ್ನೆಲ್ಲಾ, ಜೈಸಿ–ಸೋಲಿಸಿ, ಸಿಂಧುದೇಶದಮೇಲೆ–ಸೈಂಧವನ ರಾಜ್ಯದ ಕಡೆಯಿಂದ, ಬಂದೆವು-ಬಂದಿದ್ದೇವೆ, ನಿನ್ನ-ನಿನ್ನವನಾದ, ಅನುಜನ ಕೂಡಲೆ–ತಮ್ಮನಾದ ಪಾರ್ಥನೊಂದಿಗೆ, ಕಳುಹಿದ–ಕಳುಹಿಸಿಕೊಟ್ಟಿದ್ದ, ಐಸುವೀರರ್ಕಳುಂ–ಅಷ್ಟುಜನ ವೀರರೂ, ಸುಖದೊಳು–ಸೌಖ್ಯವಾಗಿ, ಒತ್ತೈಸಿದ ಶೇಖರಿಸಿದ, ಅಗಣಿತ–ಅಸಂಖ್ಯಾತವಾದ, ವಸ್ತುಸಹಿತ–ಸಾಮಗ್ರಿಗಳೊಂದಿಗೆ, ನೃಪರೊಡನೆ–ರಾಜಾಧಿರಾಜರುಗಳ ಜೊತೆಯೊಳಗೆ, ಬಹಳ–ಹೆಚ್ಚಾದ, ವಿಭವದೊಳು–ಸಂಭ್ರಮದಿಂದ, ಐತಂದರು–ಬಂದವರಾದರು, ಎಂದನು–ಎಂದು ನುಡಿದನು‖೧೨‖

ಟೀ‖ ಮಖಹಯಂ–ಯಜ್ಞಾಶ್ವವು, ಭೂಮಂಡಲದೊಳು–ಇಳಾವಲಯದಲ್ಲಿ, ಇಂತು-ಈ ಪ್ರಕಾರವಾಗಿ, ತಿರುಗಿದ-ತಿರುಗಿಕೊಂಡು ಬಂದ, ಮಹಾಮಹೀಶ್ವರರೊಡನೆ–ರಾಜಾಧಿರಾಜರೊಂದಿಗೆ, ಬಂದ-ಬಂದಂಥ, ವೃತ್ತಾಂತಮಂ–ವಾರ್ತೆಯನ್ನು, ದಾಮೋದರಂ–ಕೃಷ್ಣಸ್ವಾಮಿಯು, ಪೇಳ್ದು–ಹೇಳಿದವನಾಗಿ, ರಾಯನಂ–ಧರ್ಮತನಯನನ್ನು, ಬೀಳ್ಕೊಂಡು–ಒಪ್ಪಿಸಿದವನಾಗಿ, ಬಳಿಕ-ಅನಂತರ, ಭೀಮನಂ–ವೃಕೋದರನನ್ನು, ಕೈವಿಡಿದುಕೊಂಡು-ಕರವಂ ಪಿಡಿದು, ತನ್ನ ಮಂದಿರಕೆ–ತನ್ನ ಮನೆಗೆ, ನಡೆತರೆ–ಬರಲಾಗಿ, ಸತ್ಯಭಾಮಾದಿ ರಾಣಿವಾಸಂಗಳು–ಸತ್ಯಭಾಮಾದೇವಿಯೇ ಮೊದಲಾದ ಸ್ತ್ರೀಯರು, ಇದಿರಾಗಿ–ಇದಿರ್ಗೊಂಡು, ಆರತಿಗಳಂ–ಆರತಿಗಳನ್ನು, ಸುಪ್ರೇಮದಿಂದ–ಆನಂದದಿಂದ, ಕೊಂಡು–ಸ್ವೀಕರಿಸಿ, ಬಂದು–ಕೃಷ್ಣನ ಬಳಿಗೆ ಸೇರಿ, ಆತ್ಮಪತಿಯಂ–ತಮ್ಮ ರಮಣನನ್ನು, ಕಂಡರು–ಕಾಣಿಸಿಕೊಂಡವರಾದರು. ‖೧೩‖

ಟೀ‖ ಸತ್ಯಭಾಮಾದೇವಿ–ಸತ್ಯಭಾಮಾದೇವಿಯೆಂಬಾಕೆಯು, ಮಡದಿಯರ–ರಾಣಿಯರ, ಮಧ್ಯದೊಳ್–ಮಧ್ಯಭಾಗದಲ್ಲಿ. ನುಡಿದಳು–ಮುಂದೆ ಹೇಳುವಂತೆ ತಿಳಿಸುತ್ತಾಳೆ, ಎಲೆ ದೇವ–ಎಲೈ ಕಾಂತನೆ, ನಮಗೆ-ನಮಗಾದರೊ, ಕುಬ್ಜೆ–ಕುರೂಪಿಯಾದವಳು, ಸೋದರಿ–ಒಡಹುಟ್ಟಿದವಳು. (ತಂಗಿ) ಅಹಳು–ಆಗುತ್ತಾಳೆ, ಫಲುಗುಣಂ–ಪಾರ್ಥನು, ತುರಗರಕ್ಷೆಗೆ–ಯಾಗದ ಕುದುರೆಯ ಪಾಲನೆಗೆ, ಪೊಡವಿಯೊಳು–ಭೂಮಂಡಲದ ಮೇಲೆ, ಪೋದ–ಪ್ರಯಾಣಮಾಡಿದ, ಕಥನದಿ–ನಿಮಿತ್ತದಿಂದ, ನಿಮಗೆ–ನಿಮಗಾದರೊ, ಪ್ರಮೀಳೆ–ಪ್ರಮೀಳೆ ಎಂಬ ವಿಷಕನ್ನಿಕೆಯು, ಒಡಹುಟ್ಟಿದಳು–ಸೋದರಿಯು, ಆದಳು-ಆಗಿದ್ದಾಳೆ, ಇನ್ನೇನು–ಇನ್ನು ಹೇಳತಕ್ಕದ್ದೇನಿರುವುದು, ಎನಲ್ಕೆ–ಎಂದು ನುಡಿಯಲು, ಕಮಲಾಂಬಕಂ–ಕಮಲನಯನನಾದ ಕೃಷ್ಣಮೂರುತಿಯು, ಅವಳ–ಆ ಸತ್ಯಭಾಮಾದೇವಿಯ, ಮುಡಿಯಮಾತಂ–ವಕ್ರನುಡಿಗಳನ್ನು. ಕೇಳ್ದು–ಲಾಲಿಸಿ, ಮೊಳೆವ–ಹುಟ್ಟುತ್ತಲಿರುವ, ನಸುನಗೆಯ–ಹುಸಿನಗುವಿನ, ಬೆಳ್ಪು–ಶುಭ್ರವರ್ಣವು, ಇಡಿಯೆ-ಆವಿರ್ಭವಿಸಲು, ಪವಮಾನನಂದನನ–ವೃಕೋದರನ, ಮೊಗ–ಮುಖವನ್ನು, ನೋಡುತ–ಈಕ್ಷಿಸುತ್ತ, ಇಂತು–ಮುಂದೆ ಹೇಳುವಂತೆ, ಎಂದನು–ನುಡಿದನು. ‖೧೪‖

ಟೀ‖ ಮುರಹರನು–ಮುರಾಂತಕನಾದ ಕೃಷ್ಣಮೂರುತಿಯು, (ಭೀಮನನ್ನು ಕುರಿತು) ಸಂತತಿಗೆ–ನನ್ನ ಹೊಟ್ಟೆ

---

ದರ್ಶನವಂ ಮಾಡಿಕೊಂಡು, ಸಿಂದುದೇಶದ ಮೇಲೆ ನಡೆದು ಜಯಶೀಲರಾಗಿ ಬಂದಿದ್ದೇವೆ. ಸಕಲ ರಾಜರೂ ಅಪರಿಮಿತ ವಸ್ತುಗಳಿಂದೊಡಗೂಡಿ ಅರ್ಜುನನೊಂಗೆ ಬಂದಿದ್ದಾರೆಂದು ‖ ೧೨ ‖ ನುಡಿದು, ಆ ಯುಧಿಷ್ಠಿರನಿಂದ ಸತ್ಕೃತನಾದ ಬಳಿಕ ತನ್ನ ಬಿಡಾರಕ್ಕೆ ಹೊರಡುತ್ತಾ ಭೀಮನ ಕೈಯನ್ನು ಹಿಡಿದು ಬರುತ್ತಿರುವಾಗ, ಅಸುರಾಂತಕನ ರಾಣಿಯರೆಲ್ಲಾ ಕೈಗಳಲ್ಲಿ ಆರತಿಗಳನ್ನು ಹಿಡಿದುಕೊಂಡು ತಮ್ಮ ಪತಿಯನ್ನು ಎದುರ್ಗೊಳ್ಳುವರಾದರು. ‖ ೧೩ ‖ ಆಗ ಸತ್ಯಭಾಮಾದೇವಿಯು ಕೃಷ್ಣಸ್ವಾಮಿಯನ್ನು ಕುರಿತು ಕಾಂತನೆ! ಇನ್ನುಮೇಲೆ ಕುಬ್ಜೆಯು ನಮಗೆ ತಂಗಿಯಾದಳು. ಕುದುರೆಯ ಬೆಂಗಾವಲ್ಗೆ ಅರ್ಜುನನು ಹೋದ ಕಾರಣ ಪ್ರಮೀಳೆಯು ನಿಮಗೆ ತಂಗಿಯಾಗಿದ್ದಾಳೆಂದು ಹಾಸ್ಯಮಾಡಿದಳು. ಈ ಸತ್ಯಭಾಮೆಯ ಹಾಸ್ಯೋಕ್ತಿಗಳಿಂದ ಕೃಷ್ಣನು ಮುಗುಳ್ನಗೆಯನ್ನೈದಿ ಭೀಮನ ಮುಖವನ್ನು ನೋಡುತ್ತಾ, ‖ ೧೪ ‖ ಮಕ್ಕಳಿಗೆ ಮಕ್ಕಳಾದರು ಇನ್ನು ನಮಗೆ ಇದೇಕೆಂದನು. ಆದರೂ ಈ ಧರ್ಮರಾಯನ ರಾಜ್ಯದಲ್ಲಿ ನಿನಗೆ ಹೀಗೆ ಇರತಕ್ಕದ್ದು ಯುಕ್ತವೇ ಸರಿಯೆಂದು ಹಾಸ್ಯಮಾಡತೊಡಗಿ

ಚಿಂತೆಬಾಲ್ಯನಮಗೆ ಭೀಮನೋಡೀಗನಂ । ಮಂತರವನರಿಯದಿವಳೆಂದ ಕಟಕಿಯಮಾತನೆಂದುಮುರಹರನೆಂದೊಡೆ ॥ ಅಂತ
ಹುದುಪುಸಿಯಲ್ಲ ತರಳತನದೋಳ್ಪುರುಷ । ರೆಂತಾದೊಡಂನಡೆವರೀಧರ್ಮಜನಪುರದೊ । ಳಿಂತುಮಾರ್ಗಿಗಳಾಗದಿರಬಹುದೆ
ಹೇಳೆಂದಳಾಸತ್ಯಭಾಮೆನಗುತ॥೧೫॥ ಪ್ರಾಣೇಶ್ವರಿಯನುಡಿಗೆನಸುನಗುತಮತ್ತುಳಿದರಾಣಿಯರಸರಸೋಕ್ತಿಗಳನಾಲಿಸುತಚಕ್ರ ।
ಪಾಣಿಮಾರುತಿಸಹಿತಭವನದೋಳ್ಕುಳ್ಳಿರ್ದುಸುಖದೊಳಿರಲಾಪಥದೊಳು ॥ ಕ್ಷೋಣೀಂದ್ರರೊಡಗೂಡಿಫಲುಗುಣಂಭೂವರನ ।
ಕಾಣಿಕೆಗೆನಗರದಸಮಿಾಪಕ್ಕೈತಂದನಾ । ವಾಣಿಯಂದಾರುಕಂಬಂದುಬಿನ್ನೈಸಲ್ಕೆಪೊರಮಟ್ಟನರಮನೆಯನು ॥ ೧೬ ॥ ಬಂದ
ನಧ್ವರಶಾಲೆಗಸುರಾರಿಮತ್ತೆಯುಮ । ನಂದನಂಗಿಲ್ಲಿಹುದುನೀನಖಿಳಭೂಪಾಲ । ವೃಂದಮಂಬಕದಾಲ್ಭ್ಯಮುನಿಪನಂನಾವಿದಿ

ಯಲ್ಲಿ ಹುಟ್ಟಿದವರಿಗೆ, ಸಂತತಿಗಳು-ಕುವರರು, ಆದವು-ಆಗಿರುವರು, ಅದರ-ಆ ಸ್ತ್ರೀಸಂಬಂಧವಾದ, ಚಿಂತೆ-ವ್ಯಥೆಯು, ಇನ್ನೇನು-ಇನ್ನೇನಾದೀತು, ನಮಗೆ-ನಮಗಾದರೊ, ಬಾಲ್ಯವೆ-ಚಿಕ್ಕವಯಸ್ಸೆ, ಭೀಮ-ವಾಯುಸುತನೇ, ನಮ್ಮ-ನಮ್ಮದಾದ, ಅಂತರವನು-ವಯಸ್ಸನ್ನು, ಅರಿಯದೆ-ತಿಳುವಳಿಕೆಗೆ ತಂದುಕೊಳ್ಳದೆ, ಇವಳು-ಈ ಸತ್ಯಭಾಮೆಯು, ಈಗ-ಈ ಸಮಯದಲ್ಲಿ, ಎಂದ-ನುಡಿದ, ಕಟಕಿಯಮಾತನು-ಹಾಸ್ಯೋಕ್ತಿಗಳನ್ನು, ನೋಡು-ನೋಡುವನಾಗು, ಎಂದು-ಎಂಬತೆರನಾಗಿ, ಎಂದೊಡೆ-ಹೇಳಲು, ಸತ್ಯಭಾಮೆಯು-ಸತ್ಯಭಾಮಾದೇವಿಯು, ನಗುತ-ನಗುತ್ತ, ಅಂತು-ಹಾಗೆಯೇ, ಅಹುದು-ಆಗುತ್ತದೆ, ಪುಸಿಯಲ್ಲ-ಅಸತ್ಯದ ಮಾತಲ್ಲವು, ಪುರುಷರು-ಗಂಡಸರಾದರೊ, ತರಳತನದೊಳು-ಚಿಕ್ಕಂದಿನಲ್ಲಿ, ಎಂತಾದೊಡಂ-ಹೇಗೆ ಬೇಕಾದರೂ, ನಡೆವರು-ನಡೆಯುತ್ತಾರೆ, ಈ ಧರ್ಮಜನಪುರದೊಳು-ಈ ಯುಧಿಷ್ಠಿರನ ರಾಜ್ಯದಲ್ಲಿ, ಇಂತು-ಈರೀತಿಯಾಗಿ, ಮಾರ್ಗಿಗಳಾಗದೆ-ನಡವಳಿಕೆಯಿಲ್ಲದವರಾಗದೆ, ಇರಬಹುದೆ-ಇರುತ್ತಾರೆಯೆ, ಹೇಳು-ಹೇಳುವನಾಗು, ಎಂದಳು-ಎಂದು ನುಡಿದಳು. ॥೧೫॥

ಟೀ॥ ಪ್ರಾಣೇಶ್ವರಿಯ- ಪ್ರಿಯಪತ್ನಿಯಾದ ಸತ್ಯಭಾಮೆಯ, ನುಡಿಗೆ-ಹಾಸ್ಯೋಕ್ತಿಗೆ, ನಸುನಗುತ-ಮುಗುಳ್ನಗೆಯನ್ನೈದುತ್ತ. ಮತ್ತೆ-ತಿರುಗಿ, ಉಳಿದ-ನಿಂತ, ರಾಣಿಯರ-ಸ್ತ್ರೀಯರ, ಸರಸೋಕ್ತಿಗಳನು-ಕುಹಕದ ನುಡಿಗಳನ್ನು, ಆಲಿಸುತ-ಕೇಳುತ್ತ, ಮಾರುತಿ ಸಹಿತ-ವೃಕೋದರನೊಂದಿಗೆ, ಚಕ್ರಪಾಣಿ-ಚಕ್ರವನ್ನು ಧರಿಸಿರತಕ್ಕ ಕೃಷ್ಣಮೂರುತಿಯು, ಭವನದೊಳ್-ಮಂದಿರದಲ್ಲಿ, ಕುಳ್ಳಿರ್ದು-ಕೂತುಕೊಂಡವನಾಗಿ, ಸುಖದೊಳು-ಸೌಖ್ಯವಾಗಿ, ಇರಲು-ಇರಲಾಗಿ, ಆ ಪಥದೊಳ್-ಆ ಮಾರ್ಗದಲ್ಲಿ, ಫಲುಗುಣಂ-ಪಾರ್ಥನು, ಭೂವರನ ಕಾಣಿಕೆಗೆ-ಯುಧಿಷ್ಠಿರನನ್ನು ನೋಡುವುದಕ್ಕೆ, ನಗರದ ಸಮಿಾಪಕೆ-ಪಟ್ಟಣದ ಹತ್ತಿರಕ್ಕೆ, ಕ್ಷೋಣೀಂದ್ರರೊಡಗೂಡಿ-ಅನೇಕ ರಾಜರೊಂದಿಗೆ ಕೂಡಿ, ಐತಂದನು-ಬಂದವನಾದನು, ದಾರುಕಂ-ದ್ವಾರಪಾಲಕನಾಗಿದ್ದ ಸಾರಥಿಯು, ಬಂದು-ಬಂದವನಾಗಿ, ಆ ವಾಣಿಯಂ-ಆ ನುಡಿಯನ್ನು, ಬಿನ್ನೈಸಲ್ಕೆ-ಅರಿಕೆಮಾಡಲಾಗಿ, ಅರಮನೆಯನು-ತನ್ನ ಬಿಡಾರದಿಂದ, ಪೊರಮಟ್ಟನು-ಹೊರಟವನಾದನು. ॥೧೬॥

ಟೀ॥ ಅಸುರಾರಿ-ರಾಕ್ಷಸಾಂತಕನಾದರೊ, ಅಧ್ವರಶಾಲೆಗೆ-ಯಾಗ ಮಂಟಪಕ್ಕೆ, ಮತ್ತೆ-ತಿರುಗಿ, ಬಂದನು-ಬಂದವನಾದನು, (ನೀನು) ಇಲ್ಲಿಹುದು-ಇಲ್ಲಿಯೇ ಇರು, (ನಾವುಗಳೆಲ್ಲಾ) ಅಖಿಳ-ಸಕಲರಾದ, ಭೂಪಾಲವೃಂದಮಂ-ರಾಜರ ಸಮುದಾಯವನ್ನೂ, ಬಕದಾಲ್ಭ್ಯಮುನಿಪನಂ-ಬಕದಾಲ್ಭ್ಯನೆನ್ನತಕ್ಕ ಮುನಿಯನ್ನೂ, ಇದಿರ್ಗೊಂಡು-ಇದಿರಾಗಿ, ಬಹೆವು-ಬಂದುಬಿಡುತ್ತೇವೆ, ಎಂದು-ಎಂಬ ತೆರನಾಗಿ, ಉಸುರ್ದು-ತಿಳಿಸಿ, ಮುಂದೆ-ಮುಂದುಗಡೆ, ಧೃತರಾಷ್ಟ್ರ-ಧೃತರಾಷ್ಟ್ರರಾಯನು, ವಿದುರನು-ವಿದುರನೆಂಬಾತನು, ಆದಿ-ಮೊದಲಾಗಿರತಕ್ಕ, ವೃದ್ಧರ್-ವಯಸ್ಸಾದವರು, ಮಹೀವೃಂದಾರಕ ಪ್ರತತಿ ಸಹಿತ-ಭೂಸುರೋತ್ತಮರೊಂದಿಗೆ, ಪೊರಮಟ್ಟು-ಹೊರಟವನಾಗಿ, ಉತ್ಸವದಿಂದ-ಆನಂದದಿಂದ, ಐದೆ-ಚೆನ್ನಾಗಿ, ಸಕಲಜನಂ-ಸರ್ವರೂ, ಬರಲಿ-ಬರತಕ್ಕವರಾಗಲಿ,ಎಂದು-ಎಂಬತೆರನಾಗಿ, ನೇಮಿಸಿ-ಕಟ್ಟುಮಾಡಿ, ಮುದದೊಳು-ಆನಂದದಿಂದ, ನಡೆತಂದನು-ಬಂದವನಾದನು.

ದಳು ॥೧೫॥ ಸತ್ಯಭಾಮೆಯ ಈ ಪರಿಯಾದ ಸರಸೋಕ್ತಿಗಳನ್ನು ಕೇಳಿ ಕೃಷ್ಣಸ್ವಾಮಿಯು ಮುಗುಳ್ನಗೆಗೊಂಡು ಮಿಕ್ಕ ರಾಣಿಯರ ಹಾಸ್ಯವಚನಂಗಳಿಗೆ ಹಿಗ್ಗುತ್ತಾ, ಭೀಮಸೇನನೊಂದಿಗೆ ತನ್ನ ಬಿಡಾರದಲ್ಲಿ ಕುಳಿತು ಸುಖವಾಗಿ ಕಾಲಹರಣವಂ ಮಾಡುತ್ತಲಿರುವಾಗ ಅನೇಕ ರಾಜರಿಂದೊಡಗೂಡಿದ ಅರ್ಜುನನು ಧರ್ಮರಾಯನನ್ನು ಎದುರ್ಗೊಳ್ಳಲು, ಹಸ್ತಿನಾವತಿಯ ಬಳಿಗೆ ಬರುತ್ತಲಿರುವ ಸುದ್ದಿಯು ದ್ವಾರಪಾಲಕನಿಂದ ತಿಳಿಯ ಬಂದಿತು. ಕೃಷ್ಣಮೂರುತಿಯಾದರೊ ತಡಮಾಡದೆ ಅಲ್ಲಿಂದ ಹೊರಟು ॥೧೬॥ ಯಜ್ಞಮಂಟಪಕ್ಕೆ ಬಂದು ಧರ್ಮನಂದನನನ್ನು ಕಂಡು, ಅಯ್ಯಾ ಧರ್ಮಪುತ್ರನೆ, ನೀನು ಇಲ್ಲಿಯೇ ಇರು ನಾನು ಹೋಗಿ ಸಕಲ ರಾಜರನ್ನೂ ಬಕದಾಲ್ಭ್ಯಮುನಿಯನ್ನೂ ಎದುರ್ಗೊಂಡು ಬರುವೆನೆಂದು ನುಡಿದು ಧೃತರಾಷ್ಟ್ರ ವಿದುರಾದಿಗಳಿಂದಲೂ, ಅನೇಕ ಭೂಸುರೋತ್ತಮರಿಂದಲೂ ಕೂಡಿ ಅತ್ಯುತ್ಸವದಿಂದ ಬರುತ್ತಲಿದ್ದನು. ಹಸ್ತಿನಾವತಿಯ ಸಕಲ ಜನರೂ ಕೃಷ್ಣಸ್ವಾಮಿಯನ್ನು ಹಿಂಬಾಲಿಸಿದರು ॥ ೧೭ ॥ ಶ್ರೀ ಕೃಷ್ಣಮೂರುತಿಯ ಆಜ್ಞೆಯಿಂದ ಹಸ್ತಿನಾವತಿ ಪಟ್ಟಣವೆಲ್ಲಾ ಚಪ್ಪರ

ಲ್ಗೊಂಡುಬಹೆವೆಂದುಸಿರ್ದು || ಮುಂದೆಧೃತರಾಷ್ಟ್ರವಿದುರಾದಿವೃದ್ಧರ್ಮಹೀ | ವೃಂದಾರಕಪ್ರತತಿಸಹಿತಪೊರಮಟ್ಟನಡೆ | ತಂದನುತ್ಸವದಿಂದಬರಲೈದೆಸಕಲಜನಮೆಂದುನೇಮಿಸಿಮುದದೊಳು || ೧೭ || ಅಸುರಹರನಾಜ್ಞೆಯಿಂದಾಗಪಟ್ಟಣದೊಳಗೆ | ಪೊಸತಾಯ್ತು ಗುಡಿತೋರಣದರಚನೆಬೀದಿಗಳೊ | ಳೆಸೆದವುಸುಮಂಗಳ ದ್ರವ್ಯಂಗಳೊಪ್ಪಿದುವುಪನ್ನೀರಚಳಕಂಗಳು || ಮುಸುಕಿದವುಧೂಪವಾಸನೆಗಳಿಡಿದುವುವಿವಿಧ | ಕುಸುಮಗಂಧೋತ್ಕರಂಘನಸಾರಕುಂಕುಮದ | ಕೆಸರುಗಳು ಪರಿಮಳಂತೀಡಿದುವುಕರ್ಪೂರದಸೊಡರ್ಗಂಪುರಂಜಿಸಿದುದು || ೧೮ || ಪೊರಮಟ್ಟುದಖಿಳ ಪುರಜನಮೈದೆಸಿಂಗರದ | ಮೆರಹುಗಳ ಮೌಳಿಯಿಂಮೇಳವದರಚನೆಗಳ | ತರತರದವಿದ್ಯಾವಿನೋದದಿಂನಟನರ್ತಕೀಜನದಗೀತದಿಂದ || ತುರುಗಿದಮೃದಂಗಾದಿವಾದ್ಯಧ್ವನಿಗಳಿಂ | ಮಿರುಗುವವಿಲಾಸಿನಿಯರೋಳಿಯಿಂಮಾರ್ಗದೊಳ್ | ತೆರಪಿಲ್ಲೆನಲ್ಕೆವೈಭವದಿಂದಪಾರ್ಥನನಿದಿರ್ಗೊಂಬಸಂಭ್ರಮದೊಳು ||೧೯|| ದಂತಿಗಳಮೇಲೆ ದೇವಕಿಯಶೋದಾದೇವಿ | ಕುಂತಿಯರ್ಪೊರಮಟ್ಟರದರಬಳಿವಿಡಿದು ಸೀ | ಮಂತಿನೀಗಣಸಹಿತರುಕ್ಮಿಣಿಯದಂ

---

ಟೀ|| ಆಗ_ಆವೇಳೆಯೊಳಗೆ, ಅಸುರಹರನ - ಕೃಷ್ಣಸ್ವಾಮಿಯ, ಆಜ್ಞೆಯಿಂದ - ಆನುಜ್ಞೆಯಿಂದ, ಗುಡಿತೋರಣಂಗಳರಚನೆ_ಚಪ್ಪರ ತೋರಣ ಇವುಗಳಿಂದಾದ ಅಲಂಕಾರವು, ಬೀದಿ ಬೀದಿಗಳೊಳು_ಪ್ರತಿಯೊಂದು ಬೀದಿಯಲ್ಲಿಯೂ, ಪಟ್ಟಣದೊಳಗೆ_ಹಸ್ತಿನಾವತಿಯಲ್ಲಿ, ಎಸೆದವು_ಹೊಳೆಯುತ್ತಲಿದ್ದವು, ಸುಮಂಗಳ ದ್ರವ್ಯಂಗಳು_ ಶುಭಸಾಮಗ್ರಿಗಳೆಲ್ಲಾ, ಒಪ್ಪಿದವು-ಅಣಿಯಾದವು, ಪನ್ನೀರಚಳಕಂಗಳು_ಪನ್ನೀರನ್ನು ಚಲ್ಲತಕ್ಕದ್ದು, ಮುಸುಕಿದವು-ಆದವು, ಧೂಪವಾಸನೆಗಳು_ಊದಕಡ್ಡಿ ಗುಗ್ಗುಳ ಇವುಗಳ, ವಾಸನೆಗಳು_ಸುರಭಿಯು, ಇಡಿದವು-ಹರಡಿದವು, ವಿವಿಧ-ತಂಡತಂಡವಾದ, ಕುಸುಮ-ಹೂಗಳ, ಗಂಧೋತ್ಕರಂ-ಹೆಚ್ಚಾದ ಸುವಾಸನೆಯು, ಘನಸಾರ-ಕತ್ತುರಿಯ, ಕುಂಕುಮದ-ಕುಂಕುಮದ ಹೂವಿನ, ಕೇಸರಗಳು ಪರಿಮಳಂ ತೀಡಿದವು-ಸುರಭಿಯನ್ನುಂಟುಮಾಡಿದವು, ಕರ್ಪೂರದ-ಕರ್ಪೂರದಿಂದ ಮಾಡಿದ, ಸೊಡರ್_ದೀಪದ, ಕಂಪು-ಸುವಾಸನೆಯು, ರಂಜಿಸಿದುದು_ಒಪ್ಪುತ್ತಲಿತ್ತು || ೧೮ ||

ಟೀ|| ಐದೆ_ಚೆನ್ನಾಗಿ, ಸಿಂಗರದ_ಅಲಂಕಾರದ, ಮೆರಹುಗಳ-ಕಾಂತಿಯಿಂದೊಪ್ಪುವ ಮೌಳಿಯಿಂ_ತಲೆಗಳಿಂದಲೂ, ಮೇಳವದ_ಸೇರಿರತಕ್ಕ, ರಚನೆಗಳ_ಶೃಂಗಾರದ, ತರತರದ_ಬಗೆಬಗೆಯಾದ, ವಿದ್ಯಾವಿನೋದದಿಂ-ವಿದ್ಯೆಯ ಆನಂದದಿಂದಲೂ, ನಟ-ನಟರು, ನರ್ತಕೀಜನದ_ನರ್ತನಮಾಡುವ ಸ್ತ್ರೀಯರು ಇವರ, ಗೀತದಿಂ_ಹಾಡುವುದರಿಂದಲೂ, ತುರುಗಿದ_ಆವೃತವಾದ, ಮೃದಂಗಾದಿ ವಾದ್ಯಧ್ವನಿಗಳಿಂದ_ಮೃದಂಗವೇ ಮೊದಲಾದ ಶಬ್ದಸಮುದಾಯದಿಂದ, ಮಿರುಗುವ-ಪ್ರಕಾಶಮಾನವಾಗಿರತಕ್ಕ, ವಿಲಾಸಿನಿಯರ_ಸ್ತ್ರೀಯರ, ಓಳಿಯಿಂ_ಸಮೂಹದಿಂದಲೂ, ಮಾರ್ಗದೊಳ್-ಹಾದಿಯಲ್ಲಿ, ತೆರಪಿಲ್ಲ-ಅವಕಾಶವೇ ಇಲ್ಲವು, ಎನಲ್ಕೆ-ಎಂಬತೆರನಾಗಿ, ವೈಭವದಿಂದ_ಉತ್ಸಾಹದಿಂದ, ಪಾರ್ಥನ_ಫಲುಗುಣನನ್ನು, ಇದಿರ್ಗೊಂಬ_ಎದುರ್ಗೊಳ್ಳತಕ್ಕ, ಸಂಭ್ರಮದೊಳು_ಆನಂದದಿಂದ, ಪೊರಮಟ್ಟುದು_ಹೊರಟವರಾದರು ||೧೯||

ಟೀ|| ದಂತಿಗಳಮೇಲೆ_ಹಸ್ತಿಗಳ ಮೇಲ್ಗಡೆ, ದೇವಕಿ-ದೇವಕಿ ದೇವಿಯು, ಯಶೋದಾದೇವಿ_ಯಶೋದೆಯೂ, ಕುಂತಿಯರು_ಕುಂತೀ ದೇವಿಯೂ ಸಹ, ಪೊರಮಟ್ಟರು-ಹೊರಟವರಾದರು, ಅದರ_ಆ ದಂತಿಗಳ, ಬಳಿವಿಡಿದು-ಹಿಂಭಾಗದಲ್ಲಿ, ಸೀಮಂತಿನೀಗಣಸಹಿತ_ಇತರ ಸ್ತ್ರೀಯರೊಂದಿಗೆ, ರುಕ್ಮಿಣಿಯು-ರುಕ್ಮಿಣಿಯೆಂಬ ಕೃಷ್ಣನ ಹೆಂಡತಿಯು, ದಂಡಿಗೆ_ಮೇನವು, ತೆರಳ್ದುದು_ಹೊರಟಂಥಾದ್ದಾಯಿತು, ತುಂಬಿಗಳು-ಅಳಿವಿಂಡು, ಗಗನದೊಳ್_ಅಂತರಿಕ್ಷದಲ್ಲಿ, ಕಾರಮುಗಿಲಂತೆ-ಕಪ್ಪಗಿರುವ ಮೇಘದಹಾಗೆ, ನವ-ನೂತನವಾದ, ಪಾರಿಜಾತದ_ಪಾರಿಜಾತವೆನ್ನುವ, ಕುಸುಮ-ಹೂವಿನ, ಪರಿಮಳಕೆ-ಸುರಭಿಗೆ, ಅತಿವಿಭವದಿಂದ-ಹೆಚ್ಚಾದ ಉತ್ಸಾಹದಿಂದ, ತಿಂಥಿಣಿಸಿ ಒಟ್ಟಾಗಿ, ಸಂತತಂ_ಅನವರತವೂ, ಮುಸುಕಲು_ಕವಿದುಕೊಳ್ಳುವಂತೆ, ಅಳಿಯರ್ವೆರಸಿ-ಸಂಗಾತಿಯರೊಂದಿಗೆ ಸೇರಿ, ಅಂದಣದೊಳು-ಮೇನದಲ್ಲಿ ಕುಳಿತು, ಐದಿದಳು_ಮುಂದಕ್ಕೆ ಹೊರಟಳು ||೨೦||

---

ಗಳು, ತೋರಣಗಳು ಇವುಗಳಿಂದ ಕೂಡಿತು, ಮಂಗಳ ದ್ರವ್ಯಗಳೂ, ಪನ್ನೀರೂ ಅಣಿಯಾದವು, ಹೂ ಗಂಧ ಮೊದಲಾದ ಪರಿಮಳದ್ರವ್ಯಗಳ ಸುವಾಸನೆಯಾದಲೊ ದಿಕ್ಕಟನನ್ನಾವರಿಸಿತು. ಕರ್ಪೂರದೀಪದ ಕಾಂತಿಯು ಊರಲ್ಲೆಲ್ಲಾ ಹರಡಿಕೊಂಡಿತು||೧೮ ಅನೇಕ ವಿದ್ವಾಂಸರ ಸಮುದಾಯವೂ ಹಿಂಬಾಲಿಸಿತು. ನರ್ತಕರ ನಾಟ್ಯವು ಕಣ್ಣುಗಳಿಗೆ ಆನಂದವನ್ನುಂಟುಮಾಡುತ್ತಲಿತ್ತು. ಭೇರಿ ಮೃದಂಗಾದಿ ವಾದ್ಯಧ್ವನಿಗಳು ಕೇಳುವವರ ಕಿವಿಗಳಿಗೆ ಮನೋಹರವಾಗಿದ್ದವು. ಸುಂದರಾಂಗಿಯರೆಲ್ಲಾ ಒಟ್ಟಾಗಿ ನೆರದರು || ೧೯ || ದೇವಕಿ ಯಶೋದೆಯರೂ, ಕುಂತಿಯೂ ಸಹ ಆನೆಗಳಮೇಲೆ ಕುಳಿತು ಹೊರಟವರಾದರು. ಅವುಗಳ ಹಿಂದೆ ಅನೇಕ ಸ್ತ್ರೀಯರಿಂದೊಡಗೂಡಿದ ರುಕ್ಮಿಣಿಯ ಪಲ್ಲಕ್ಕಿಯು ಹೊರಟಿತು, ಪಾರಿಜಾತ ಪುಷ್ಪಸುರಭಿಯನ್ನು ಬಯಸಿ ಹೋಗುವ ಭೃಂಗಾಳಿಯಂತೆ ಅನೇಕ ಸ್ತ್ರೀಯರಿಂದೊಡಗೂಡಿದ ಸತ್ಯಭಾಮೆಯು ವಿಮಾನವನ್ನಲಂಕರಿಸಿ ಹೊರಟಳು ||೨೦|| ಜಾಂಬವತಿ

ಡಿಗೆತೆರಳ್ವುದತಿವಿಭವದಿಂದ ॥ ತಿಂತಿಣಿಸಿಗಗನದೊಳ್ಳುಂಬಿಗಳ್ಕಾರವುಗಿ । ಲಂತೆನವಪಾರಿಜಾತದಕುಸುಮಪರಿಮಳಕೆ । ಸಂತತಂಮುಸುಕಲಂದಣದೊಳ್ಳೈದಿದಳಾಳಿಯರ್ವೆರಸಿ ಸತ್ಯಭಾಮೆ ॥೨೦॥ ಜಾಂಬವತಿ ಮೊದಲಾದಪಂಕರುಹಪತ್ರಾಯ । ತಾಂಬಕನ ರಾಣಿಯರ್ಪರಿಪರಿಯೊಳೆಸೆವದಿ । ವ್ಯಾಂಬರಸುಗಂಧ ಮಾಲ್ಯಾಭರಣಮುಕ್ತಾವಳಿಗಳ ಸಿಂಗರವನಾಂತು ತಾಂಬೂಲರಾಗರಸದೊಳ್ಪಿಡಿದಲಲಿತವದ । ನಾಂಬುಜದಕಾಂತಿಗಳ ಕಳೆವೆತ್ತುತಮತಮಗೆಜಾಂ । ಬೂನದಾಲಂಕೃತಾಂದೋಳಿಕಾರೋಹಣಂಗೈದುಪೊರಮಟ್ಟರು ॥ ೨೧ ॥ ಇಟ್ಟಣಿಸಿತಮರೇಂದ್ರ ತನಯನನಿದಿರ್ಗೊಂಬ । ಬಟ್ಟೆಯೊಳ್ನಾರೀ ಸಮೂಹಮೊರಸೊರಸಿನೊಳ್ । ತೊಟ್ಟಮೈದೊಡಿಗೆಗಳಮಸದ ಪೊಂಬುಡಿಯಂತೆ ಕುಂಕುಮರಜಂಗಳೊಗಲು ॥ ಕಟ್ಟಿರ್ದಹಾರಾದಿಗಳ್ಪರಿದುದುರ್ವವೋಲ್ । ದಿಟ್ಟಿಗೊನೆಗಳಕಾಂತಿ ಸೂಸುತಿರೆತನುರುಚಿಯೊ । ಳುಟ್ಟವಸನದ್ಯುತಿವಿರಾಜಿಸುತ್ತಿರೆಹಾವಭಾವದವಿಲಾಸದಿಂದ॥೨೨॥

ಟೀ॥ ಜಾಂಬವತಿ ಮೊದಲಾದ-ಜಾಂಬವತಿ ಮುಂತಾಗಿರತಕ್ಕ, ಪಂಕರುಹ ಪತ್ರಾಯತಾಂಬಕಿಯರು-ಪಂಕರುಹ-ಕಮಲದ, ಪತ್ರ-ರೇಕುಗಳ ಹಾಗೆ, ಆಯತ-ವಿಶಾಲವಾದ, ಅಂಬಕ-ನೇತ್ರಗಳನ್ನುಳ್ಳ ಕೃಷ್ಣಸ್ವಾಮಿಯ, ರಾಣಿಯರು-ಸತಿಯರು. ಪರಿಪರಿಯೊಳು-ತಂಡತಂಡವಾಗಿ, ಎಸೆವ-ಹೊಳೆಯುತಕ್ಕ, ದಿವ್ಯ-ಶ್ರೇಷ್ಠಗಳಾದ, ಅಂಬರ-ಉಡಿಗೆಗಳ, ಸುಗಂಧ-ಒಳ್ಳೇ ಗಂಧದ, ಮಾಲ್ಯ-ಕುಸುಮದ, ಆಭರಣ-ತೊಡಿಗೆಗಳ, ಮುಕ್ತಾವಳಿಗಳ-ಮುತ್ತಿನ ಹಾರಗಳ, ಸಿಂಗರವನು-ಅಲಂಕಾರವನ್ನು. ಆಂತು-ಹೊಂದಿ, ತಾಂಬೂಲ-ತಾಂಬೂಲವನ್ನು ಮೆಲ್ಲುವುದರಿಂದಾದ, ರಾಗ-ಕೆಂಪುವರ್ಣವೆನ್ನತಕ್ಕ, ರಸದೊಳ್-ಅಲಂಕಾರದಿಂದ, ಪಿಡಿದ-ಕೂಡಿಕೊಂಡಿರುವ, ಲಲಿತ-ಕೋಮಲವಾದ, ವದನಾಂಬುಜದ-ಮುಖಪದ್ಮದ, ಕಾಂತಿಗಳ-ಹೊಳಪುಗಳ, ಕಳೆವೆತ್ತು-ಅಂದವನ್ನುಹೊಂದಿ, ತಮತಮಗೆ-ತಮ್ಮತಮ್ಮಷ್ಟಕ್ಕೆ, ಜಾಂಬೂನದ-ಸುವರ್ಣದಿಂದ, ಅಲಂಕೃತ-ಅಲಂಕರಿಸಲ್ಪಟ್ಟ, ಆಂದೋಳಿಕಾರೋಹಣಂಗೈದು-ಪಲ್ಲಕ್ಕಿಗಳೊಳಗೆ ಕುಳಿತುಕೊಂಡವರಾಗಿ, ಪೊರಮಟ್ಟರು-ಹೊರಟವರಾದರು ॥೨೧॥

ಟೀ॥ ನಾರೀಸಮೂಹಂ-ಸ್ತ್ರೀಯರ ಸಮೂಹವು, ಅಮರೇಂದ್ರ ತನಯನಂ-ಇಂದ್ರತನಯನಾದ ಫಲುಗುಣನನ್ನು, ಇದಿರ್ಗೊಂಬ-ಕಾಣತಕ್ಕ, ಬಟ್ಟೆಯೊಳ್-ಮಾರ್ಗದೊಳಗೆ, ಒರಸೊರಸಿನೊಳ್-ಸಾಲುಸಾಲಾಗಿ, ತೊಟ್ಟ-ಹಾಕಿಕೊಂಡಿರುವ, ಮೈದೊಡಿಗೆಗಳ-ಮೈಕುಪ್ಪಸಂಗಳ, ಮಸದ-ಒಂದಕ್ಕೊಂದು ತಿಕ್ಕಲ್ಪಟ್ಟ, ಪೊಂಬುಡಿಯಂತೆ-ಚಿನ್ನದ ಹರಳುಗಳ ಹಾಗೆ, ಕುಂಕುಮರಜಂಗಳು-ಕುಂಕುಮದ ಧೂಳು, ಬಗಲು-ಸುರಿಯುತ್ತಿರಲು, ಕಟ್ಟಿದ್ದ-ಕಂಠದಲ್ಲಿರುವ, ಹಾರಾದಿಗಳ್-ಮೌಕ್ತಿಕಮಾಲೆ ಮೊದಲಾದವು, ಪರಿದು-ಹರಿದುಹೋಗಿ, ಉದುರ್ವವೋಲ್-ಉದುರತಕ್ಕ ರೀತಿಯಾಗಿ, ದಿಟ್ಟಿಗೊನೆಗಳ-ಕಟಾಕ್ಷಂಗಳ, ಕಾಂತಿ-ಕಳೆಯು, ಸೂಸುತಿರೆ-ಚಲ್ಲಾಡುತ್ತಿರಲು, ಉಟ್ಟ-ಉಟ್ಟುಕೊಂಡಿರತಕ್ಕ, ವಸನ-ಪೀತಾಂಬರಗಳ, ದ್ಯುತಿ-ಕಳೆಯಾದರೊ, ತನುರುಚಿಯೊಳು-ಶರೀರಸೌಂದ್ಯರ್ಯದಿಂದ, ವಿರಾಜಿಸುತ್ತಿರೆ- ಹೊಳೆಹೊಳೆಯುತ್ತಿರಲು, ಹಾವಭಾವವಿಲಾಸದಿಂದ-ಕಾಮೋದ್ರೇಕವಾದ ಸಂಜ್ಞೆಗಳಿಂದ, ಇಟ್ಟಣಿಸಿತು-ಸಾಂದ್ರವಾಗಿ ನೆರೆಯಿತು ॥೨೨॥

ಟೀ॥ ಮಹಾಜನಂ-ಅಧಿಕವಾದ ಜನಸಮುದಾಯವು, ಬಹಳ-ಹೆಚ್ಚಾದ, ವೈಭವದಿಂದ-ಸಡಗರದಿಂದ, ಬಂದುದು-ಬಂದುಸೇರಿತು, ಕೆಲಕೆಲದೊಳು-ಒಂದೊಂದು ಕಡೆಯಲ್ಲಿ, ಚತುರ್ಬಲಂ-ಚತುರಂಗಬಲವು, ಒಡ್ಡಾಗಿನಿಂದುದು-ದಟ್ಟವಾಗಿ ಸೇರಿತು, ಅವರೀರ್ವರುಂ-ಎದುರುಗೊಳ್ಳಲು ಬಂದಿರತಕ್ಕ ಈರ್ವರೂ, ಅಶ್ವಯುಗಸಹಿತ-ಯಜ್ಞಾಶ್ವಗಳೊಂದಿಗೆ, ಬಹ-ಬರುತ್ತಲಿರತಕ್ಕ, ಫಲುಗುಣಂಗೆ-ಪಾರ್ಥನಿಗೆ, ಸಂಧಿಸಿದರು-ಎದುರಾದರು, ಚಂದನದ-ಸಿರಿಕಂಡ ಮಿಶ್ರವಾದ, ಮುತ್ತಿನ-ಮೌಕ್ತಿಕಗಳೆನ್ನತಕ್ಕ, ಅಕ್ಷತೆಯ-ಮಂತ್ರಾಕ್ಷತೆಯ, ಕುಂಕುಮದ ಮಿಶ್ರದಿಂದ-ಕುಂಕುಮವನ್ನು ಸೇರಿಸುವಿಕೆಯಿಂದ, ದಧಿ-ಮೊಸರು, ದೂರ್ವಾಂಕುರಗಳಿಂದ-ಎಳೆ ಗರಿಕೆ ಹುಲ್ಲಿನಿಂದ, ಎಸೆವ-ಹೊಳೆಯುತಕ್ಕ, ಪೊಂದಳಿಗೆವಿಡಿದು-ಭಂಗಾರದ ತಟ್ಟೆಯನ್ನು ತೆಗೆದುಕೊಂಡು, ಸತಿಯರು-ಪತಿವ್ರತೆಯರಾದ, ಹೆಂಗಸರು, ಆರತಿಯನು-ಆರತಿಯನ್ನು, ಎತ್ತಿ-ಎತ್ತಿದವರಾಗಿ, ಸೇಸೆ-ಮಂತ್ರಾ

ಮೊದಲಾದವರೆಲ್ಲಾ ಗಂಧಮಾಲ್ಯಾ ಭರಣಗಳಿಂದಲಕೃತರಾಗಿ, ತಾಂಬೂಲವನ್ನು ಹಾಕಿಕೊಂಡು ಸಂತೋಷದಿಂದ ಹೊರಟರು ॥೨೧॥ ಇವರೆಲ್ಲಾ ಗುಂಪುಗುಂಪಾಗಿ ಹೋಡಲು ಒಬ್ಬರಮೈ ಮತ್ತೊಬ್ಬರಿಗೆ ತಗಲಿ ಉಂಟಾದ ಧೂಳೊ ಎಂಬಂತೆ ಅವರ ದೇಹಗಳಲ್ಲಿ ಲೇಪಿಸಿಕೊಂಡಿದ್ದ ಕುಂಕುಮ ಕೇಸರಿಯು ಉದುರುತ್ತಲು, ಅವರ ಕಂಠಗಳಲ್ಲಿದ್ದ ಹಾರಗಳು ಹರಿದು ಬಿದ್ದವೋ ಎಂಬಂತಿರುವ ಕಾಂತ್ಯತಿಶಯದಿಂದಲೂ, ಅವರು ಉಟ್ಟಿರುವ ಪೀತಾಂಬರಗಳ ಕಾಂತ್ಯತಿಶಯದಿಂದಲೂ ಕೂಡಿ ನೋಟಕರ ಮನವನ್ನು ಆನಂದ ಗೊಳಿಸುತ್ತಲಿದ್ದರು. ॥೨೨॥ ಅನೇಕ ಜನರು ಒಟ್ಟು ಗೂಡಿದರು, ಚತುರಂಗಬಲವೂ ಸಿದ್ಧವಾಯಿತು, ಇವರೆಲ್ಲರೂ ಕೂಡಿ ಅರ್ಜುನನನ್ನೆದುರ್ಗೊಳ್ಳಲು ಹೊರಟರು, ಸ್ತ್ರೀಯರೆಲ್ಲಾ ಅರ್ಜುನನಿಗೆ ಮೊಸರು, ಅರಳು, ಗರಿಕೆ ಇವುಗಳಿಂದ ಕೂಡಿದ ಆರತಿಯನ್ನು ಬೆಳಗಿಸಿದರು ॥೨೩॥ ಅನಂತರ ಅರ್ಜುನ, ಪ್ರದ್ಯುಮ್ನ, ಯೌವನಾಶ್ವ, ಸಾತ್ಯಕಿ, ವೃಷಕೇತು ಇವರುಗಳ

ಬಂದುದುಮಹಾಜನಂಬಹಳವೈಭವದಿಂದ । ನಿಂದುದುಚತುರ್ಬಲಂಕೆಲಕೆಲದೊಳೊಡ್ಡಾಗಿ । ಸಂಧಿಸಿದರವರೀರ್ವರುಂಬಳಿಕ
ಲಕ್ಷ್ಮಯುಗಸಹಿತಬಹಫಲ್ಗುಣಂಗೆ ॥ ಚಂದನದಮುತ್ತಿನಕ್ಷತೆಯಕುಂಕುಮಿಶ್ರ । ದಿಂದದಧಿಲಾಜದೂರ್ವಾಂಕುರಗಳಿಂದೆಸೆವ ।
ಪೊಂದಳಿಗೆವಿಡಿದಾರತಿಯನೆತ್ತಿಮುತ್ತುಗಳಸೇಸೆದಳಿದರ್ಸತಿಯರು ॥೨೩॥ ವಿಜಯಹರಿಸುತಯೌವನಾಶ್ವಸಾತ್ಯಕಿವೃಷ । ಧ್ವಜ
ಸಾಂಬಕೃತವರ್ಮಹೈಡಿಂಬಿಸಾಲ್ವಾವ । ರಜಸುವೇಗಾನಿರುದ್ಧಾದಿಗಳ್ಧೃತರಾಷ್ಟ್ರಭೂಪನಂಕಂಡುಬಳಿಕ ॥ ಅಜವಾಹನ
ಧ್ವಜಮಯೂರಧ್ವಜಾರುಣ । ಧ್ವಜಚಂದ್ರಹಾಸನೀಲಧ್ವಜಧನಂಜಯಾ। ತ್ಮಜವೀರವರ್ಮಪ್ರಮುಖರಾಯರಂಕಾಣಿಸಿದರುಚಿತ
ದಿಂದ ॥ ೨೪ ॥ ವಂದನೀಯರ್ಗೆವಂದಿಸಿವಂದಿಸುವಜನದ । ವಂದನೆಗಳಂಕೊಂಡುಸಮಬಂಧುಗಳನಪ್ಪಿ । ಸಂದರ್ಶನೋತ್ಸ
ವದೊಳನ್ಯೋನ್ಯಸಂಭಾಷಣೆಗಳಿಂದಮುದಿತರಾಗಿ ॥ ವಂದಿಸಿದರೆಲ್ಲರುಂಬಕದಾಲ್ಭ್ಯಮುನಿಗೆಬಳಿ । ಕಂದಣಂಗಳನಿಳಿದುಮುರ
ಹರನನೇಮದಿಂ । ಬಂದರಧ್ವರಶಾಲೆಗರಸನಂಕಾಣಲ್ಕೆಗೋಧೂಳಿಲಗ್ನಮಾಗೆ ॥೨೫॥ ತರತರದಛತ್ರಚಮರಂಗಳವಿಡಾಯಿಗಳ।
ಪರಿಪರಿಯಸಿಂಧಸೀಗುರಿಪತಾಕಾವಳಿಯ । ಮೊರೆಮೊರೆವವಿವಿಧವಾದ್ಯಧ್ವನಿಯಪಾಠಕರಜಯಜಯನಿನಾದದಿಂದ ॥ ಸರಸರದ
ಸಂಗೀತನರ್ತನದಮೇಳವದ । ನೆರೆನೆರೆದಚತುರಂಗದೊಡ್ಡುಗಳಸಂದಣಿಯ । ದೊರೆದೊರೆಗಳೈತಂದರುತ್ಸವದೊಳರಸನಂಕಾಣ

---

ಕ್ಷತೆಯನ್ನು, ತಳಿದರು-ಹಾಕಿದವರಾದರು.॥೨೩॥

ಟೀ॥ ವಿಜಯ-ಫಲುಗುಣನು, ಹರಿಸುತ-ಮೀನಕೇತನನು, ಯೌವನಾಶ್ವ-ಭದ್ರಾವತೀರಾಜನು, ಸಾತ್ಯಕಿ-ಸತ್ಯಕನ ಕುವರನು, ವೃಷಧ್ವಜ-ಕರ್ಣನಂದನನು, ಸಾಂಬ-ಜಾಂಬವತಿಯ ಕುವರನು, ಕೃತವರ್ಮ - ಕೃತವರ್ಮನೆಂಬ ದಳಪತಿಯು, ಹೈಡಿಂಬಿ-ಹಿಡಿಂಬಿಯ ಮಗನು, ಸಾಲ್ವಾವರಜ-ಸಾಲ್ವಾನುಜನು, ಸುವೇಗ - ಯೌವನಾಶ್ವನ ಕುವರನು, ಅನಿರುದ್ಧ-ಮದನನ ತನುಜಾತನು, ಆದಿಗಳ್-ಮೊದಲಾಗಿರತಕ್ಕವರು, ಧೃತರಾಷ್ಟ್ರಭೂಪನಂ-ಧೃತರಾಷ್ಟ್ರನೆಂಬ ರಾಜನನ್ನು, ಕಂಡು-ಈಕ್ಷಿಸಿದವರಾಗಿ, ಬಳಿಕ-ಅನಂತರ, ಅಜವಾಹನಧ್ವಜ-ಅಜ-ಬ್ರಹ್ಮನ, ವಾಹನ-ವಾಹನವಾದ ಹಂಸವನ್ನು, ಧ್ವಜನು-ಧ್ವಜಪಟದಲ್ಲಿವುಳ್ಳ ಮರಾಳಧ್ವಜನು, ಮಯೂರಧ್ವಜ - ಶಿಖಿಕೇತುವು, ಅರುಣಧ್ವಜ - ತಾಮ್ರಕೇತುವು, ಚಂದ್ರಹಾಸ - ಇಂದುಹಾಸನು, ನೀಲಧ್ವಜನು-ನೀಲಧ್ವಜನೆಂಬಾತನು, ಧನಂಜಯಾತ್ಮಜ-ಪಾರ್ಥನಂದನನು, ವೀರವರ್ಮ-ವೀರವರ್ಮನೇ, ಪ್ರಮುಖರಾದ-ಮೊದಲಾಗಿರತಕ್ಕ, ರಾಯರಂ-ಅರಸರನ್ನು, ಉಚಿತದಿಂದ-ಯುಕ್ತವಾದ ತೆರದಿಂದ, ಕಾಣಿಸಿದರು-ತೋರಿಸಿದವರಾದರು.॥೨೪॥

ಟೀ॥ ವಂದನೀಯರ್ಗೆ - ವಂದನಾರ್ಹರಾದವರಿಗೆ, ವಂದಿಸಿ-ವಂದನೆಗಳಂ ಮಾಡಿ. ವಂದಿಸುವ - ನಮಸ್ಕರಿಸತಕ್ಕ ಜನದ ಜನಗಳ, ವಂದನೆಗಳಂ-ವಂದನೆಗಳನ್ನೆಲ್ಲಾ, ಕೊಂಡು-ಸ್ವೀಕರಿಸಿ, ಸಮ-ಸರಿಯಾದ, (ಜೋಡಿಯಾದ) ಬಂಧುಗಳನು-ಬಂಧುವರ್ಗದವರನ್ನು, ಅಪ್ಪಿ-ತಬ್ಬಿಕೊಂಡು, ಸಂದರ್ಶನೋತ್ಸವದೊಳು-ನೋಡತಕ್ಕ ಉತ್ಸವದಲ್ಲಿ, ಅನ್ಯೋನ್ಯ ಸಂಭಾಷಣೆಗಳಿಂದ-ಪರಸ್ಪರ ಮಾತನ್ನಾಡುವುದರಿಂದ, ಮುದಿತರಾಗಿ - ಆನಂದವನ್ನೈದಿ, ಬಕದಾಲ್ಭ್ಯಮುನಿಗಳಿಗೆ - ಬಕದಾಲ್ಭ್ಯಋಷಿಗೆ, ಎಲ್ಲರುಂ - ಸಕಲರೂ, ವಂದಿಸಿದರು - ವಂದನೆಗಳನ್ನರ್ಪಿಸಿದರು, ಬಳಿಕ - ಅನಂತರ, ಮುರಹರನ-ಶ್ರೀ ಕೃಷ್ಣಸ್ವಾಮಿಯ, ನೇಮದಿಂ - ಅನುಜ್ಞೆಯಿಂದ, ಅಂದಣಂಗಳನ್ನು - ವಿಮಾನಗಳನ್ನು, ಇಳಿದು-ಇಳಿದವರಾಗಿ, ಗೋಧೂಳಿಲಗ್ನಂ - ಗೋಧೂಳಿ ಲಗ್ನವು, ಆಗೆ-ಒದಗಲು, ಅಧ್ವರಶಾಲೆಗೆ-ಯಾಗಮಂಟಪಕ್ಕೆ, ಅರಸನಂ-ರಾಜನನ್ನು, ಕಾಣಲ್ಕೆ-ನೋಡಲೋಸುಗ, ಬಂದರು-ಬಂದವರಾದರು. ॥೨೫॥

ಟೀ॥ ತರತರದ-ಬಗೆಬಗೆಯಾದ, ಛತ್ರ-ಬೆಳ್ಗೊಡೆಗಳ, ಚಾಮರ-ಚೌರಿಗಳ. ವಿಡಾಯಿಗಳ-ಸಮುದಾಯಂಗಳ, ಪರಿಪರಿಯ-ತಂಡತಂಡವಾದ, ಸಿಂಧ-ಸತ್ತಿಗೆಗಳ, ಸೀಗುರಿ-ಸಣ್ಣ ಚಾಮರಗಳ, ಪತಾಕ-ಬಾವುಟಗಳ, ಆವಳಿಯ-ಸಮುದಾಯದ, ಮೊರೆಮೊರೆವ-ಶಬ್ದವಂಗೈಯ್ಯುತ್ತಲಿರತಕ್ಕ, ವಿವಿಧ-ನಾನಾ ಪ್ರಕಾರವಾದ, ವಾದ್ಯ-ವಾದ್ಯಗಳಿಂದುಂಟಾಗುವ, ನಿನಾದದಿಂದ-ಧ್ವನಿಯಿಂದ, ಸರಸರದ-ಸ್ವರಸಹಿತವಾದ, ಸಂಗೀತ-ಹಾಡಿನ, ನರ್ತನದ-ಕುಣಿಯುವುದರ, ಮೇಳವದ-ಜೋಡಿಯಾಗುವುದರ,

---

ಳೆಲ್ಲಾ ಧೃತರಾಷ್ಟ್ರನನ್ನು ಕಂಡು, ನೀಲಧ್ವಜ, ಮಯೂರಧ್ವಜ, ತಾಮ್ರಧ್ವಜ, ಚಂದ್ರಹಾಸನೇ ಮೊದಲಾದವರನ್ನೆಲ್ಲಾ ತೋರಿಸಿದರು ॥೨೪॥ ತನಗೆ ನಮಸ್ಕಾರವನ್ನು ಮಾಡುವರಿಗೆ ತಾನು ಆಶೀರ್ವಾದವಂ ಮಾಡುತ್ತಲೂ, ತನಗಿಂತಲೂ ದೊಡ್ಡವರಿಗೆ ತಾನು ನಮಸ್ಕರಿಸುತ್ತಲೂ, ಸಮಬಂಧುಗಳನ್ನಾಲಂಗಿಸಿಕೊಂಡು ಪರಸ್ಪರ ಕುಶಲವಾರ್ತೆಗಳನ್ನು ಕೇಳಿದ ಬಳಿಕ ಎಲ್ಲರೂ ಬಕದಾಲ್ಭ್ಯಮುನಿಗೆ ವಂದಿಸಿದವರಾದರು ಅನಂತರ ಗೋಧೂಳಿ ಲಗ್ನದಲ್ಲಿ ಸರ್ವರೂ ಧರ್ಮರಾಯನನ್ನು ಎದುರ್ಗೊಳ್ಳಲು ಯಜ್ಞಶಾಲೆಗೆ ಬಂದವರಾದರು॥೨೫॥ಇವರ ಜೊತೆಯಲ್ಲಿ ಚತುರಂಗ ಬಲವೂ ಹೊರಟಿತು ಕೆಲವರು ಛತ್ರಚಾಮರಗಳನ್ನು ಹಿಡಿದೂ ಮತ್ತೆ ಕೆಲವರು ಬಾವುಟಗಳಂ ಪಿಡಿದೂ ಹೊರಟವರಾದರು, ಸ್ತುತಿಪಾಠಕರು ಹೊಗಳುತ್ತಲಿದ್ದರು, ಮಂಗಳವಾದ್ಯಗಳುಂಟಾದವು ಸಂಗೀತ

ಲಚ್ಯುತನಕೂಡೆ ॥೨೬॥ ಮುಂದೆಕುದುರೆಗಳದರಬಳಿಯೊಳ್ಸಮಸ್ತಯದು । ವೃಂದದೊಡಗೂಡಿತಾನೆಡಬಲದೊಳಮರೇಂದ್ರ ।
ನಂದನವೃಷಧ್ವಜರ್ಪಿಂತೆಹಂಸಧ್ವಜಮಯೂರಧ್ವಜಾದಿನೃಪರು ॥ ಸಂದಣಿಸಿಗೋಧೂಳಿಲಗ್ನದೋಳ್ಭೂಪನಂ। ಸಂಧಿಸುವ
ಮಾಳ್ಕೆಯಿಂಕರ್ಪುರದತೈಲಂಗ । ಳಿಂದುರಿವಬೊಂಬಾಳಶತಕೋಟಿಗಳ್ಪಿಡಿಯಲಸುರಹರನೈತಂದನು ॥೨೭॥ ಕರ್ಣದೊಳ್ಕೇಳ
ಬಹುದಲ್ಲದಕ್ಷಿಯೊಳನಿಮಿ । ಷರ್ನೋಡಲಳವಹುದೆತುರಗಮೇಧಂಗಳನ । ಹರ್ನಿಶಾವಲ್ಲಭರಕುಲದಭೂಪಾಲಕರ್ಮಾಡಿಸಿದರ್ಪ
ಲಬರವರ ॥ ನಿರ್ಣಯವೆಹರಿಯೊಡನೆಸಿರಿಸಹಿತಧರೆಗೆಪಯ । ದರ್ಣವಂಬಂದಪುದೊಶಿವಶಿವಾಪೊಸತಿದಂ। ವರ್ಣಿಸುವಕವಿಯಾವ
ನೆನೆವಾಜಿಗಳಕೂಡೆನಡೆತಂದರವನೀಶರು ॥ ೨೮ ॥ ಯಾಜಮಾನ್ಯದೊಳೆಸೆವಭೂಪಾಲನಂ ಕಂಡು । ವಾಜಿಗಳನೊಪ್ಪಿಸಿಪದಾಂ
ಬುಜಕೆಪೊಡಮಟ್ಟು । ದಾಜಿಷ್ಣುವಂತೆಗೆದುತಕ್ಕೈಸಿಕರ್ಣಜಪ್ರದ್ಯುಮ್ನಕಾದಿಗಳನು ॥ ತೇಜದಿಂದವನೀಶ್ವರಂಮನ್ನಿಸಿದ

---

ನೆರೆನೆರೆದ-ಒಟ್ಟಾಗಿ ಸೇರಿರುವ, ಚತುರಂಗದ-ನಾಲ್ಕು ತೆರನಾದ ಬಲದ, ಒಡ್ಡುಗಳ-ಸಮೂಹದ, ಸಂದಣಿಯ-ಸಾಂದ್ರವಾಗಿ ನೆರೆದಿರುವ, ದೊರೆದೊರೆಗಳ್-ಶ್ರೇಷ್ಠರಾದ ಅನೇಕ ರಾಜರುಗಳು, ಅರಸನಂ-ಯುಧಿಷ್ಠಿರನನ್ನು, ಕಾಣಲು-ನೋಡಬೇಕೆಂಬು ದಾಗಿ, ಉತ್ಸವದೊಳ್-ಆಸಕ್ತಿಯಿಂದ, ಐತಂದರು-ಬಂದು ಸೇರಿದವರಾದರು. ॥೨೬॥

ಟೀ॥ ಅಸುರಹರನು-ರಾಕ್ಷಸಾಂತಕನಾದ ಕೃಷ್ಣಮೂರುತಿಯು, ಕುದುರೆಗಳು-ತುರಗಂಗಳು, ಮುಂದೆ-ಮುಂಭಾಗ ದಲ್ಲಿಯೂ, ಅದರ-ಆ ಹಯಂಗಳ, ಬಳಿಯೊಳ್-ಸಮೀಪದಲ್ಲಿ, ಸಮಸ್ತ-ಎಲ್ಲಾ, ಯದುವೃಂದದೊಡಗೂಡಿ-ಯಾದವಾಗ್ರ ಣಿಗಳಿಂದ ಕೂಡಿದವನಾಗಿ, ಅಮರೇಂದ್ರನಂದನವೃಷಧ್ವಜರು-ಫಲುಗುಣ ವೃಷಧ್ವಜರು, ಎಡಬಲದೊಳು-ಇಕ್ಕಡೆಗಳಲ್ಲಿಯೂ, ಹಂಸಧ್ವಜಾದಿನೃಪರು-ಹಂಸಧ್ವಜನೇ ಮೊದಲಾದ ರಾಜಾಗ್ರಣಿಗಳು, ಪಿಂತೆ-ಕೃಷ್ಣಸ್ವಾಮಿ ಪಾರ್ಥರ ಹಿಂದುಗಡೆಯಲ್ಲಿಯೂ, ಸಂದಣಿಸಿ - ಒಟ್ಟುಗೂಡಿ, ಕರ್ಪುರದತೈಲಂಗಳಿಂದ - ಕರ್ಪೂರದೆಣ್ಣೆಯಿಂದ, ಉರಿವ - ಉರಿಯುತ್ತಲಿರತಕ್ಕ, ಬೊಂಬಾಳ ಶತಕೋಟಿಗಳ್-ನೂರುಕೋಟಿ ದೀವಟಿಗೆಗಳು, ಪಿಡಿಯಲ್ - ಹಿಡಿದುಕೊಂಡಿರತಕ್ಕ ಕಾಲದಲ್ಲಿ, ಭೂಪನಂ-ಭೂಕಾಂತನಾದ ಧರ್ಮಪುತ್ರನನ್ನು, ಸಂಧಿಸುವ-ಎದುರ್ಗೊಳ್ಳುವ, ಮಾಳ್ಕೆಯಿಂ-ಪರಿಯಿಂದ, ಐತಂದನು-ಬಂದವನಾದನು. ॥೨೭॥

ಟೀ॥ ಕರ್ಣದೊಳ್-ಶ್ರೋತ್ರಂಗಳಿಂದ, ಕೇಳಬಹುದಲ್ಲದೆ-ಕೇಳುವುದಕ್ಕಾಗುವುದೆ ಹೊರತು, ಅನಿಮಿಷರು-ಸುರರೂ ಕೂಡ, ಅಕ್ಷಿಯೊಳು-ನೇತ್ರಂಗಳಿಂದ, ನೋಡಲು-ಈಕ್ಷಿಸುವುದಕ್ಕೆ, ಅಳವಹುದೆ-ಸಾಧ್ಯವಾಗುತ್ತದೆಯೇ, ಪಲಬರು-ಬಹು ಮಂದಿ, ಆಹರ್ನಿಶಾವಲ್ಲಭರಕುಲದ-ಸೂರ್ಯವಂಶ ಚಂದ್ರವಂಶಗಳ, ಭೂಪಾಲಕರ್-ಅರಸುಗಳು, ತುರಗಮೇಧಂಗಳನು-ಅಶ್ವ ಮೇಧ ಯಾಗಗಳನ್ನು, ಮಾಡಿದರು - ನಡೆಯಿಸಿದರು, ಅವರ-ಆ ಅರಸುಗಳ, ನಿರ್ಣಯವೆ - ಯಾಗವೆ, (ಅವರೂ ಮಾಡಿಲ್ಲವು) ಪಯದರ್ಣವಂ-ಪಾಲ್ಗಡಲು, ಧರೆಗೆ-ಇಳೆಗೆ, ಸಿರಿಸಹಿತ - ಶ್ರೀ ಲಕ್ಷ್ಮೀಯುಕ್ತವಾಗಿರುವ, ಹರಿಯೊಡನೆ-ಶ್ರೀ ಮಹಾವಿಷ್ಣು ಸಹಿತವಾಗಿ, ಬಂದಪುದೊ-ಬರುತ್ತದೆಯೊ, ಶಿವಶಿವಾ, ಪೊಸತು-ಹೊಸದಾಗಿದೆ, ಇದಂ-ಈ ಸಡಗರವನ್ನು, ವರ್ಣಿಸುವ-ಹೊಗಳ ತಕ್ಕ, ಕವಿ-ಕವಿಯು, ಯಾವನು - ಯಾವನಿರುವನು, ಎನೆ-ಎಂಬಂತೆ, ವಾಜಿಗಳಕೂಡೆ - ತುರಗಂಗಳೊಂದಿಗೆ, ಅವನೀಶರು- ರಾಜಾಗ್ರಣಿಗಳೆಲ್ಲಾ, ನಡೆತಂದರು-ಬಂದವರಾದರು. ॥೨೮॥

ಟೀ॥ ಯಾಜಮಾನ್ಯದೊಳು-ಯಜ್ಞದೀಕ್ಷೆಯಲ್ಲಿ, ಎಸೆವ-ಕಾಂತಿಯುಕ್ತನಾಗಿರತಕ್ಕ, ಭೂಪಾಲನಂ - ಯುಧಿಷ್ಠಿರ ಮಹಾರಾಜನನ್ನು, ಕಂಡು-ಈಕ್ಷಿಸಿ, ವಾಜಿಗಳನು-ತೇಜಿಗಳನ್ನು, ಒಪ್ಪಿಸಿ-ಒಪ್ಪಿಸಿದವನಾಗಿ, ಪದಾಂಬುಜಕೆ-ಕಮಲದಂತಿರುವ ಪಾದಗಳಿಗೆ, ಪೊಡಮಟ್ಟೊಡೆ-ನಮಸ್ಕಾರವಂ ಮಾಡಲು, ಅವನೀಶ್ವರಂ - ಭೂಕಾಂತನಾದ ಧರ್ಮತನಯನು, ಆ ಜಿಷ್ಣುವಂ- ಆ ಫಲುಗುಣನನ್ನು, ತೆಗೆದು-ಸಮೀಪಕ್ಕೆ ಕರೆದುಕೊಂಡು, ತಕ್ಕೈಸಿ - ಆಲಿಂಗನವಂ ಮಾಡಿಕೊಂಡು, ಕರ್ಣಜ - ಕರ್ಣನಂ

---

ಗಾರರೆಲ್ಲಾ ಗಾನವಂ ಮಾಡುತ್ತಲೂ ನರ್ತಕರು ನಾಟ್ಯವನ್ನಾಡುತ್ತಲೂ ಹೊರಟವರಾದರು ॥೨೬॥ ನೂರುಕೋಟಿ ದೀವಟಿಗೆಗ ಳನ್ನು ಹಿಡಿದಿರುವುದರಿಂದ ರಾತ್ರಿಯು ಹಗಲಿನಂತಿರುವಾಗ ಮುಂದುಗಡೆಯಲ್ಲಿ ಕುದುರೆಗಳು ಹೊರಟವು ಅವುಗಳ ಹಿಂದೆ ಯಾದವ ರಿಂದೊಡಗೂಡಿದ ಕೃಷ್ಣಮೂರುತಿಯು ಹೊರಟವನಾದನು, ಆ ಕೃಷ್ಣಸ್ವಾಮಿಯ ಎಡಬಲ ಭಾಗಗಳಲ್ಲಿ ಅರ್ಜುನ ವೃಷಧ್ವಜರೂ ಹಿಂಭಾಗದಲ್ಲಿ ಹಂಸಧ್ವಜ ಮಯೂರಧ್ವಜನೇ ಮೊದಲಾದರಸುಗಳೂ ಒಟ್ಟುಗೂಡಿ ಗೋಧೂಳಿ ಲಗ್ನದಲ್ಲಿ ರಾಯನನ್ನೆದುರ್ಗೊ ಳ್ಳಲು ಹೊರಟವರಾದರು ॥೨೭॥ ರಾಜಾಧಿರಾಜರೆಲ್ಲಾ ಕೃಷ್ಣಸ್ವಾಮಿಯನ್ನು ಕೂಡಿಕೊಂಡು ಧರ್ಮಪುತ್ರನ ಸಂದರ್ಶನಕ್ಕಾಗಿ ಬರುತ್ತಲಿರುವುದನ್ನು ನೋಡಿದರೆ ಭೂಮಂಡಲವೇ ಕ್ಷೀರಸಮುದ್ರದೊಂದಿಗೆ ಹೊರಟು ಬರುತ್ತಲಿರುವುದೋ ಎಂಬ ಭ್ರಾಂತಿ ಯಂ ಗೈಯುತ್ತಲೂ, ಪೂರ್ವದಲ್ಲಿ ಯಾರೂ ಇಂತಹ ಅಸಾಧಾರಣವಾದ ಯಾಗವನ್ನು ಮಾಡಿಯೇ ಇಲ್ಲವೆಂಬಚ್ಚರಿಯನ್ನುಂಟು ಮಾಡುತ್ತಲೂ, ದೇವತೆಗಳಿಗೂ ಕೂಡ ಇಂತಹ ಸಂಭ್ರಮವು ದರ್ಶನವಾಗುವುದು ಅಸಾಧ್ಯವೆಂಬಂತೆಯೂ ತೋರಿಬರುತ್ತ

ಬಳಿಕ | ರಾಜೀವಲೋಚನಂಕಾಣಿಸಿದನರಸಂಗೆ | ರಾಜಮೌಳಿಗಳಾದಹಂಸಧ್ವಜಪ್ರಮುಖದೇಶಾಧಿವಲ್ಲಭರನು ‖ ೨೯ ‖ ಈ ತಂಕಣಾರಾಜಹಂಸಹಂಸಧ್ವಜಂ | ಖ್ಯಾತನೀತಂವೀರವೀರವರ್ಮಾವನಿಪ | ನೀತಂನೃಪಾಲರತ್ನಾಭರಣಮಧ್ಯನಾಯಕನೀಲನೀಲಕೇತು‖ಈತಂವಿರೋಧಿಬಲದವಶಿಖಿಶಿಖಿಧ್ವಜಂ|ಭೂತಳಸ್ಥಿತಚಂದ್ರಚಂದ್ರಹಾಸಕ್ಷ್ಮೇಂದ್ರ| ನೀತನೀತಂದಿವಿಜಪತಿಯಸುತಸುತ ಬಭ್ರುವಾಹನಂನೋಡೆಂದನು ‖೩೦‖ ಏರಿಸಿನುಡಿವುದಿಲ್ಲತನಗೆಸಮರೆನಿಸುವ | ಮೀರಿದಪರಾಕ್ರಮಿಗಳಿವರನುಪಚರಿಸೆಂದುಬೇರೆಬೇರಾನೃಪರನವರಸುತಸಹೋದರಮುಖ್ಯಮಂತ್ರಿಗಳನು ‖ ಮಾರೊಡ್ಡಿದಮರಾದ್ರಿಯಂತೆರಾಶಿಗಳಾಗಿ | ಹೇರಿತಂದೊಡವೆಯುಂ ವಿವಿಧರತ್ನಂಗಳಂ | ತೋರಿಸಿಸುವಸ್ತುಗಳನೊಪ್ಪಿಸಿದನರಸಂಗೆದಾನವಧ್ವಂಸಿನಗುತ ‖೩೧‖ ಬಳಿಕಾಸಮಸ್ತಭೂಪಾಲರಸುರಾ

---

ನಂದನನು, ಪ್ರದ್ಯುಮ್ನಕ-ಮದನನು, ಆದಿಗಳನು-ಮೊದಲಾದವರನ್ನೆಲ್ಲಾ, ತೇಜದಿಂದ-ಎಲ್ಲರೂ ಕಾಣುವಂತೆ, ಮನ್ನಿಸಿದ ಬಳಿಕ-ಮರ್ಯಾದೆಮಾಡಿದನಂತರ, ರಾಜಮೌಳಿಗಳಾದ-ರಾಜಾಗ್ರಣಿಗಳಾಗಿರುವ, ಹಂಸಧ್ವಜ-ಮರಾಳಧ್ವಜನೇ, ಪ್ರಮುಖ-ಆದಿಯಾದ, ದೇಶಾಧಿವಲ್ಲಭರನು-ರಾಜಾಧಿರಾಜರನ್ನೆಲ್ಲಾ, ಅರಸಂಗೆ-ಯುಧಿಷ್ಠಿರನಿಗೆ, ರಾಜೀವಲೋಚನಂ-ಕಮಲನೇತ್ರನಾದ ಕೃಷ್ಣಸ್ವಾಮಿಯು, ಕಾಣಿಸಿದನು-ತೋರಿಸಿದವನಾದನು. ‖೨೯‖

ಟೀ‖ ಈ ರಾಜೇಂದ್ರನಾದರೊ, ರಾಜಹಂಸ- ರಾಜಾಗ್ರಣಿಯಾದ, ಹಂಸಧ್ವಜಂ-ಹಂಸಧ್ವಜನೆಂಬಾತನು, ಕಣಾ-ಅಲ್ಲವೆ, ಈತಂ-ಈ ಅರಸು, ಖ್ಯಾತನು-ಹೆಸರುವಾಸಿಯಾಗಿರುವ, ವೀರ-ಪರಾಕ್ರಮಿಯಾದ, ವೀರವರ್ಮ-ವೀರವರ್ಮನೆಂಬ ಹೆಸರುಳ್ಳ, ಅವನಿಪನು-ಅರಸನು, ಈತಂ-ಇವನು, ನೃಪಾಲ-ಅರಸುಗಳೆನ್ನುವ, ರತ್ನಾಭರಣ-ರತ್ನದ ತೊಡಿಗೆಗಳ, ಮಧ್ಯ-ಮಧ್ಯಭಾಗದಲ್ಲಿರತಕ್ಕ, ನಾಯಕ-ಶ್ರೇಷ್ಠವಾದ, ನೀಲ-ನೀಲಮಣಿಯಂತಿರತಕ್ಕ, ನೀಲಕೇತು-ನೀಲಧ್ವಜನಾಗಿದ್ದಾನೆ, ಈತಂ-ಈ ದೊರೆಯಾದರೊ, ವಿರೋಧಿ-ಹಗೆಗಳ, ಬಲ-ದಳಕ್ಕೆ, ದವಶಿಖಿ-ಕಾಡಿನ ಬೆಂಕಿಯೋಪಾದಿಯಲ್ಲಿರತಕ್ಕ, ಶಿಖಿಧ್ವಜಂ-ಮಯೂರಧ್ವಜನೆಂಬರಸು, ಈತನು-ಈ ರಾಜನು, ಭೂತಳಸ್ಥಿತ- ಭೂಮಂಡಲದಲ್ಲಿರತಕ್ಕ, ಚಂದ್ರ- ಚಂದ್ರನಂತಿರುವ, ಚಂದ್ರಹಾಸಕ್ಷ್ಮೇಂದ್ರನು- ಚಂದ್ರಹಾಸನೆಂಬ ರಾಜಾಧಿರಾಜನು, ಈತಂ-ಇವನಾದರೊ, ದಿವಿಜಪತಿ- ಸ್ವರ್ಗಾಧಿಪತಿಯಾದ ಇಂದ್ರನ, ಸುತ-ಕುವರನಾದ ಪಾರ್ಥನ, ಸುತ-ತನುಜನಾದ, ಬಭ್ರುವಾಹನಂ-ಬಭ್ರುವಾಹನನೆಂಬಾತನು, ನೋಡು-ನೋಡುವನಾಗು, ಎಂದನು-ಎಂಬುದಾಗಿ ಹೇಳಿದನು ‖೩೦‖

ಟೀ‖ ದಾನವಧ್ವಂಸಿ-ರಾಕ್ಷಸಾಂತಕನಾದ ಕೃಷ್ಣಮೂರುತಿಯು, ನಗುತ-ಮುಗುಳ್ನಗೆಯನ್ನೈದುತ್ತ, (ಧರ್ಮತನಯನೊಂದಿಗೆ) ಏರಿಸಿ ನುಡಿವುದಿಲ್ಲ-ಹೆಚ್ಚಾಗಿ ಹೇಳುವುದಿಲ್ಲವು, ತನಗೆ-ನನಿಗೆ, ಸಮರು-ಸರಿಯಾದವರು, ಎನಿಸುವರು-ಎನ್ನಿಸಿಕೊಳ್ಳುತ್ತಾರೆ, ಮೀರಿದ ಪರಾಕ್ರಮಿಗಳು-ಅತ್ಯಧಿಕವಾದ ಸಾಹಸವುಳ್ಳವರು, ಇವರನು-ಈ ದೊರೆಗಳನ್ನೆಲ್ಲಾ, ಉಪಚರಿಸು-ಸತ್ಕರಿಸು, ಎಂದು-ಎಂಬತೆರನಾಗಿ, ಆ ನೃಪರನು- ಆ ಅರಸುಗಳನ್ನೂ, ಅವರವರ- ಆಯಾಯ ರಾಜರ, ಸುತ-ಕುವರರನ್ನೂ, ಸಹೋದರ-ಅಣ್ಣತಮ್ಮಂದಿರನ್ನೂ, ಮುಖ್ಯ-ಮುಖ್ಯರಾದ, ಮಂತ್ರಿಗಳನು- ಅಮಾತ್ಯರನ್ನೂ, ಬೇರೆಬೇರೆ-ಬೇರೆಬೇರೆಯಾಗಿ ಕಾಣಿಸಿ, ತಂದ-ಸಂಪಾದಿಸಿಕೊಂಡು ಬಂದಿರುವ, ಒಡವೆಯುಂ-ಪುರುಳ್ಗಳನ್ನೂ, ವಿವಿಧ-ನಾನಾಪ್ರಕಾರವಾದ, ರತ್ನಂಗಳಂ-ರತ್ನಗಳನ್ನೂ, ಸುವಸ್ತುಗಳನು-ಶ್ರೇಷ್ಠವಾದ ಪದಾರ್ಥಗಳನ್ನೂ, ಮಾರೊಡ್ಡಿದ-ಬೇರೆಬೇರೆ ನಿಲ್ಲಿಸಿರುವ, ಅಮರಾದ್ರಿಯಂತೆ-ಚಿನ್ನದ ಬೆಟ್ಟದಹಾಗೆ, ರಾಶಿಗಳಾಗೆ-ರಾಶಿಗಳಂತೆ, ಹೇರಿ-ಒಟ್ಟುಮಾಡಿ, ಅರಸಂಗೆ ತೋರಿಸಿ-ಧರ್ಮತನಯನಿಗೆ ತೋರಿಸಿದವನಾಗಿ, ಒಪ್ಪಿಸಿದನು-ಯುಧಿಷ್ಠಿರನ ಸ್ವಾಧೀನಮಾಡಿದನು. ‖೩೧‖

ಟೀ‖ ಸಮಸ್ತ ಭೂಪಾಲರು-ಅರಸುಗಳೆಲ್ಲರೂ, ಬಳಿಕ-ಅನಂತರ, ಅಸುರಾರಿಯಂ-ಕೃಷ್ಣಸ್ವಾಮಿಯನ್ನು, ಬಳಸಿ-ಆವರಿಸಿಕೊಂಡು, ನಿಂದು-ನಿಂತವರಾಗಿ, ಎಲೆ ದೇವ-ಎಲೈ ಭಗವಂತನೆ, ನಿನ್ನ ದರ್ಶನಂ ಆಯ್ತು-ನಿನ್ನನ್ನು ನೋಡಿದ್ದಾಯಿತು,

---

ಲಿತ್ತು ೨೮‖ಇಂತಹ ಉತ್ಸವದಿಂದ ಹೊರಟ ಕೃಷ್ಣಾರ್ಜುನರು ಯಜ್ಞಶಾಲೆಗೆ ಹೋಗಿ ಧರ್ಮಜನನ್ನು ಕಂಡ ಕೂಡಲೆ ಅರ್ಜುನನು ಯಜ್ಞಾಶ್ವಂಗಳನ್ನು ಅಗ್ರಜನಿಗೊಪ್ಪಿಸಿ ಸಾಷ್ಟಾಂಗ ಪ್ರಣಾಮವಂ ಗೈಯ್ಯಲು ಧರ್ಮಪುತ್ರನು ತನ್ನ ತಮ್ಮನನ್ನು ಅತ್ಯಾನಂದದಿಂ ಆಲಂಗಿಸಿದವನಾಗಿ, ವೃಷಕೇತು ಪ್ರದ್ಯುಮ್ನಾದಿಗಳನ್ನೆಲ್ಲಾ ಮನ್ನಿಸಿ ಸುಖ ಸಲ್ಲಾಪಂಗಳಂ ಮಾಡುತ್ತಲಿರುವಾಗ ‖ ೨೯ ‖ ಕೃಷ್ಣಸ್ವಾಮಿಯು ಹಂಸಧ್ವಜಾದಿಗಳನ್ನೆಲ್ಲಾ ಧರ್ಮರಾಯನಿಗೆ ತೋರಿಸುತ್ತಾ ಬಂದನು ಅಯ್ಯಾಧರ್ಮಜನೆ! ಈತನು ರಾಜಾಗ್ರಣಿಯಾದ ಹಂಸಧ್ವಜಮಹಾರಾಯನು, ಇವನು ಶೂರಾಗ್ರಣಿಯಾದ ವೀರವರ್ಮನು. ಇವನು ರಾಜರಿಗೆಲ್ಲಾ ರತ್ನಪ್ರಾಯನಾದ ನೀಲಧ್ವಜನು, ಇವನು ಅರಿಬಲಕ್ಕೆ ವಜ್ರಾಯುಧದಂತಿರುವ ತಾಮ್ರಧ್ವಜನು, ಇವನಾದರೊ ರಾಜೇಂದ್ರನಾದ ಚಂದ್ರಹಾಸನು, ಇವನು ಅರ್ಜುನನ ಕುವರನಾದ ಬಭ್ರುವಾಹನ ‖೩೦‖ ನೆಂಬುದಾಗಿ ನೆರೆದಿದ್ದ ರಾಜಾಧಿರಾಜರನ್ನೂ ಅವರ ಮಂತ್ರಿ ಸೇನಾನಾಯಕರೇ

ರಿಯಿಂ | ಬಳಸಿನಿಂದೆಲೆದೇವಸಿನ್ನ ದರ್ಶನಮಾಯ್ತು | ನಳಿನಭವವಿಂಶತಿಯೊಳಿರ್ದಬಕದಾಲ್ಭ್ಯಮುನಿಯಂಕಂಡೆವಚ್ಚರಿಯೊಳು॥
ಇಳೆಯದೇಶದವೈಭವಂಗಳಂಹರಿಯೊಡನೆ | ತೊಳಲಿನೋಡಿದೆವಧ್ವರಕೆಬಂದೆವೀಪುಣ್ಯ | ನಿಳಯನಹಧರ್ಮಜನನೀಕ್ಷಿಸಿದೆವಿನಿ
ತರಿಂಕೃತಕೃತ್ಯರಾವೆಂದರು ॥೩೨॥ ಎನಲವರನುಡಿಗಳ್ಗೆನಸುನಗುತಮುರಹರಂ | ವಿನಯದಿಂದರಸಂಗೆನೇಮಿಸಿದೊಡಾಸಕಲ |
ಜನಪತಿಗಳಂಧರಾವಲ್ಲಭಂಸತ್ಕರಿಸಿವಿವಿಧೋಪಚಾರದಿಂದ ॥ ಮನವೊಲಿದುಬಕದಾಲ್ಭ್ಯನಂಪೂಜೆಗೈದಖಿಳ | ಮುನಿಗಳಂಕೂಡಿ
ಕೊಂಡಧ್ವರೋಪಕ್ರಮಕೆ | ವಿನುತಸಂಕಲ್ಪಮಂಮಾಡಿರಚಿಸಿದರಿಷ್ಟಿಕಾಚಯನಮಂಕ್ರಮದೊಳು ॥೩೩॥ ಕ್ಷೇತ್ರಮಂನೆಲೆಗೈದು
ವೃಷಭಂಗಳಂಪೂಡಿ | ವೇತ್ರಮಂಪಿಡಿಯೆನೃಪನೋಷಧಿಗಳಿಂಕಮಲ | ನೇತ್ರೆತಾಳ್ದಿರೆಕುಂತಿದೇವಕಿಯಶೋದೆಯರೆಕೃಷ್ಣಾದಿ
ಪೃಥ್ವೀಶರು ॥ ಧಾತ್ರಿಸುರನಾರಿಯರ್ವೆರಸಿವರಕನಕಮಯ | ಪಾತ್ರೆಯೊಳ್ಕರ್ಪೂರಚಂದನಜಲವನೊಡನೆ | ಸೂತ್ರವಿಧಿಗಳ

---

ನಳಿನಭವ ವಿಂಶತಿಯೊಳು-ಇಪ್ಪತ್ತುಮಂದಿ ಬ್ರಹ್ಮರ ಕಾಲದಿಂದಲೂ, ಇರ್ದ-ಇದ್ದಂಥ, ಬಕದಾಲ್ಭ್ಯನಂ-ಬಕದಾಲ್ಭ್ಯನೆಂಬ ತಪಸ್ವಿಯನ್ನು, ಕಂಡೆವು-ದರ್ಶನ ಮಾಡಿಕೊಂಡೆವು, ಹರಿಯೊಡನೆ-ಯಜ್ಞಾಶ್ವದೊಂದಿಗೆ, ತೊಳಲಿ-ತಿರುಗಿ, ಇಳೆಯ-ಭೂಮಂಡಲದಲ್ಲಿರುವ, ದೇಶದ-ನಾನಾ ದೇಶಗಳ, ವೈಭಂಗಳಂ-ಸಂಪತ್ತುಗಳನ್ನು, ನೋಡಿದೆವು-ನೋಡಿದವರಾದೆವು, ಅಧ್ವರಕೆ-ಯಾಗಕ್ಕೆ, ಬಂದೆವು-ಬಂದಿರುವೆವು, ಈ ಪುಣ್ಯನಿಳಯನು-ಈ ಧರ್ಮಾತ್ಮನು, ಅಹ-ಆಗಿರತಕ್ಕ, ಧರ್ಮಜನ- ಧರ್ಮಪುತ್ರನನ್ನು, ಈಕ್ಷಿಸಿದೆವು-ನೋಡಿದವರಾದೆವು, ಆವು- ನಾವಾದರೊ, ಇನಿತರಿಂ- ಇಷ್ಟು ಕಾರ್ಯಗಳಿಂದ, ಕೃತಕೃತ್ಯರು-ಧನ್ಯರಾಗಿದ್ದೇವೆ, ಎಂದರು-ಎಂಬುದಾಗಿ ನುಡಿದರು ॥೩೨॥

ಟೀ॥ ಎನಲು-ಹೀಗೆಂದು ನುಡಿಯಲು, ಮುರಹರಂ-ಕೃಷ್ಣಸ್ವಾಮಿಯು, ಅವರ-ಆ ಅರಸುಗಳ, ನುಡಿಗಳ್ಗೆ-ವಚನಂಗಳಿಗೆ, ನಸುನಗುತ-ಮುಗುಳ್ನಗೆಯನ್ನೈದುತ್ತ, ಅರಸಂಗೆ-ಧರ್ಮಜನಿಗೆ, ವಿನಯದಿಂದ-ನಮ್ರಭಾವದಿಂದ, ನೇಮಿಸಿದೊಡೆ-ಆಜ್ಞಾಪಿಸಲಾಗಿ. ಆ ಸಕಲ ಜನಪತಿಗಳಂ-ಆ ರಾಜರುಗಳೆಲ್ಲರನ್ನೂ, ವಿವಿಧ-ತಂಡತಂಡವಾದ, ಉಪಚಾರದಿಂದ-ಮನ್ನಣೆಗಳಿಂದ, ಧರಾವಲ್ಲಭಂ-ಭೂಕಾಂತನಾದ ಧರ್ಮಜನು, ಸತ್ಕರಿಸಿ-ಸತ್ಕಾರವಂ ಮಾಡಿ, ಬಕದಾಲ್ಭ್ಯನ-ಮುನಿಯಂ-ಬಕದಾಲ್ಭ್ಯನೆಂಬ ಋಷೀಶ್ವರನನ್ನು, ಮನವೊಲಿದು-ಮನಃಪೂರ್ವಕವಾಗಿ, ಪೂಜೆಗೈದು-ಪೂಜೆಯಂ ಮಾಡಿ, ಅಖಿಳ ಮುನಿಗಳಂ ಕೂಡಿಕೊಂಡು-ಸಮಸ್ತ ಋಷಿಗಳಿಂದೊಡಗೂಡಿ, ವಿನುತ-ಶ್ರೇಷ್ಠವಾದ, ಸಂಕಲ್ಪಮಂ-ಸಂಕಲ್ಪವನ್ನು, ಅಧ್ವರೋಪಕ್ರಮಕೆ-ಯಾಗದ ಸಲುವಾಗಿ, ಮಾಡಿ-ಮಾಡಿದವನಾಗಿ, ಇಷ್ಟಕಾಚಯನಮಂ-ಗರುಡನಂತಿರುವ ಜಗಲಿಯನ್ನು ಕ್ರಮದೊಳು-ಶಾಸ್ತ್ರ ಸಮ್ಮತವಾಗಿರುವಂತೆ, ರಚಿಸಿದರು-ನೆರವೇರಿಸಿದವರಾದರು ॥೩೩॥

ಟೀ॥ ಕ್ಷೇತ್ರಮಂ-ನೆಲವನ್ನು, ನೆಲೆಗೈದು- ನಿಷ್ಕರ್ಷಿಸಿಕೊಂಡವರಾಗಿ, ವೃಷಭಂಗಳಂ-ಎತ್ತುಗಳನ್ನು, ಪೂಡಿ-ಹೂಡಿ, ನೆಲೆಗೈದು-ನೇಗಲಲ್ಲಿ ಉತ್ತು ಶುದ್ಧಿಮಾಡಿ, ವೇತ್ರಮಂ-ಚಾಟಿಯನ್ನು, ನೃಪನು-ಧರ್ಮಜನು, ಪಿಡಿಯೆ-ಹಿಡಿಯಲಾಗಿ, ಔಷಧಿಗಳಂ-ಶುಚಿಮಾಡತಕ್ಕ ಪದಾರ್ಥಗಳನ್ನು, ಕಮಲನೇತ್ರೆ-ಪದ್ಮಾಕ್ಷಿಯಾದ ಪಾಂಚಾಲಿಯು ತಾಳ್ದಿರೆ-ಹಿಡಿದಿರಲು, ಕುಂತಿ-ಕುಂತಿಯು, ದೇವಕಿ-ದೇವಕಿದೇವಿಯು, ಯಶೋದೆಯರು-ಯಶೋದೆಯೇ ಮೊದಲಾದವರು, ಕೃಷ್ಣಾದಿ ಪೃಥವೀಶರು-ಕೃಷ್ಣನೆ ಮೊದಲಾದ ಅರಸುಗಳು, ಧಾತ್ರಿಸುರನಾರಿಯರ್ವೆರಸಿ-ಬ್ರಾಹ್ಮಣರ ಹೆಂಗಸರಿಂದೊಡಗೂಡಿ, ಕರ್ಪೂರ ಚಂದನ ಜಲವನು-ಪಚ್ಚೆಗರ್ಪೂರ ಸುಗಂಧಂಗಳಂ ಬೆರಸಿದ ಉದಕವನ್ನು, ವರ-ಉತ್ತಮವಾದ, ಕನಕಮಯ ಪಾತ್ರೆಯೊಳ್-ಸುವರ್ಣ ವಿಕಾರವಾದ ತಂಬಿಗೆಗಳಲ್ಲಿ, ಸೂತ್ರವಿಧಿಗಳ-ಶಾಸ್ತ್ರನಿಯಮಗಳ, ಮಂತ್ರ- ಮಂತ್ರಗಳ, ಪಾಠದಿಂ-ಹೇಳುವಿಕೆಯಿಂದ, ಒಡನೆ-ಕೂಡಲೆ, ತಳಿಯೆ-ಸುರಿಯಲು, ಉಕ್ತಸ್ಥಳವನು-ನಿಷ್ಕರ್ಷೆಯಾದ ನೆಲವನ್ನು ಶೋಧಿಸಿದರು-ಶದ್ಧಿಮಾಡಿದವರಾದರು. ॥೩೪॥

---

ಮೊದಲಾದವರನ್ನೂ ಧರ್ಮರಾಯನಿಗೆ ತೋರಿಸುತ್ತಾ ಅಯ್ಯಾ ಧರ್ಮರಾಯನೆ ಇವರೆಲ್ಲಾ ನನಿಗಿಂತಲೂ ಅಪರಿಮಿತಸಾಹಸಿಗಳಾದ್ದರಿಂದ ನೀನು ಎಲ್ಲರನ್ನು ಮರ್ಯಾದೆಯಿಂದ ಕಾಣಬೇಕೆಂದು ನುಡಿದು, ತಂದಿದ್ದ ಸುವಸ್ತುಗಳು ಮೇರುಪರ್ವದಂತೆ ಭೂವ್ಯೋಮಾಕಾಶಂಗಳಿಗೆ ಏಕಾಕಾರವಾಗಿ ಬಿದ್ದು ಹೋಗಿರುವುದನ್ನು ಧರ್ಮಪುತ್ರನಿಗೆ ತೋರಿಸಿ ತಾನು ಮುಗುಳ್ನಗೆಯಿಂದಿರುತ್ತಿದ್ದನು ॥೩೧॥ ಆಗ ಅಲ್ಲಿ ನೆರದಿದ್ದ ಮಯೂರಧ್ವಜಾದಿಗಳೆಲ್ಲಾ ರಾಕ್ಷಸಾಂತಕನಾದ ಕೃಷ್ಣಸ್ವಾಮಿಯಸುತ್ತಲೂ ನಿಂತವರಾಗಿ ಎಲೈ ಮಹಾನುಭಾವನಾದ ಸ್ವಾಮಿಯೆ, ನಿನ್ನ ದರ್ಶನಲಾಭವು ನಮಗುಂಟಾಯಿತು ಯುಗಾಂತರಂಗಳಿಂದ ತಪಸ್ಸನ್ನು ಮಾಡುತ್ತಲಿದ್ದ ಬಕದಾಲ್ಭ್ಯಮುನಿಯನ್ನು ಕಂಡೆವು. ದೇಶದೇಶಂಗಳಲ್ಲಿಯೂ ನಡೆವ ಅತ್ಯುತ್ಸವಂಗಳಂ ನೋಡಿದೆವು. ಧರ್ಮಾತ್ಮನಾದ ಧರ್ಮನಂದನನನ್ನೂ ನೋಡಿದೆವು ಎಲೈ ಮಹಾನುಭಾವನೆ, ಇನ್ನು ನಮಗಿಂತಲೂ ಧನ್ಯರು ಲೋಕದಲ್ಲಿ ಮತ್ತೆ ಯಾರಿರುವರೆಂದು ನುಡಿಯುತ್ತಲಿರುವ ರಾಜಾಗ್ರಣಿಗಳ ಮಾತುಗಳನ್ನು ಕೇಳಿ ಕೃಷ್ಣನು ಮುಗುಳ್ನಗೆಯನ್ನೈದಿ ॥ ೩೨ ॥ ಧರ್ಮಜ

ಮಂತ್ರಪಾಠದಿಂತಿಳಿಯೆಶೋಧಿಸಿದರುಕ್ತಸ್ಥಳವನು ॥೩೪॥ ಶ್ರುತಿಮಂತ್ರವಿಧಿಗಳಿಂವ್ಯಾಸಬಕದಾಲ್ಭ್ಯರನು । ಮತದಿಂದಬುಧ
ರಿಟ್ಟಿಗೆಗಳನಳವಡಿಸಿತತ್ । ಕ್ಷಿತಿಯೊಳ್ಸುಪರ್ಣಾಕೃತಿಯವೇದಿಯಂಚತುರ್ವ್ಯೂಹದೋಳ್ನಿಲಿಸಿನಾಲ್ಕುಶತವನು ॥ ದರಾಸನಂಗ
ಳ್ಗೆ ತೆಂಕಣಗರಿಯಚಿತಿಗೆ । ನೂರರಮೇಲೆನಾಲ್ವತ್ತನಾಲ್ಕನಾಪ್ರತಿಯೊಳು । ತ್ತರಪಕ್ಷನಿತನುಂಪುಚ್ಛಕೆಪ್ಪತ್ತೊಂದನೊಂದಿಸಿದರು ॥೩೫॥
ಮೊದಲೊಂದರಿಟ್ಟಿಗೆಯನಿಮ್ಮಡಿಸಲೆರಡನೇ । ಯದನಿಮ್ಮಡಿಸಲತಿವಿರಾಜಿಸಿತುಮೂರನೇ । ಯದನಿಮ್ಮಡಿಸಲಾಯ್ತುನಾಲ್ಕನೆ
ಯದನಿಮ್ಮಡಿಸಲೆಸೆದುದೈದನೆಯದು ॥ ಪುದಿದಿಂತುಮೆರೆದುದುಸುಪರ್ಣಪಂಚಕದಯಾ । ಗದವೇದಿಗಳ್ಮಹಾಮಂಟಪವನೈದೆರಚಿ
ಸಿದರೆಂಟುಬಾಗಿಲ್ಗಳಿಂಕೂಡಿತೋರಣಪತಾಕೆಗಳವಿಸ್ತರದೊಳು ॥ ೩೬ ॥ ಇಷ್ಟಕಾಚಯನದಿರಾಜಿಸಿತುಬಳಸಿಪರಿ । ಶಿಷ್ಟದಿಂದೊ

---

ಟೀ॥ ಬುಧರು–ಯೋಗ್ಯರಾದ ಪುರೋಹಿತರು, ತತ್ಕ್ಷಿತಿಯೊಳ್–ಆ ಯಾಗ ಭೂಮಿಯೊಳಗೆ, ಶ್ರುತಿಮಂತ್ರವಿಧಿಗಳಿಂ–ವೇದಮಂತ್ರಗಳ ನಿಯಮಗಳಿಂದಲೂ, ವ್ಯಾಸಬಕದಾಲ್ಭ್ಯಋಷಿಗಳ–ವ್ಯಾಸ ಮತ್ತು ಬಕದಾಲ್ಭ್ಯ ಇವರ, ಅನುಮತದಿಂದ–ಒಡಂಬಡಿಕೆಯಿಂದಲೂ, ಇಟ್ಟಿಗೆಗಳನು–ಇಟ್ಟಿಗೆಗಳನ್ನು, ಅಳವಡಿಸಿ–ಅಣಿಮಾಡಿಕೊಂಡು, ಚತುರ್ವ್ಯೂಹದೊಳ್–ನಾಲ್ಕು ದಿಕ್ಕುಗಳಲ್ಲಿಯೂ. ಸುಪರ್ಣಾಕೃತಿಯ–ಗರುಡನ ಆಕಾರದ, ವೇದಿಯಂ–ಜಗಲಿಯನ್ನು, ನಿಲಿಸಿ–ಮಾಡಿ, ಶತವನು–ನೂರು ಇಟ್ಟಿಗೆಗಳನ್ನೂ, ಉದರ ಆಸನಂಗಳ್ಗೆ–ಉದರಭಾಗ, ಕಟಿ ಪಶ್ಚಾದ್ಭಾಗಗಳಿಗೂ, ನೂರರಮೇಲೆ ನಾಲ್ವತ್ತನಾಲ್ಕನು–ನೂರನಲವತ್ತುನಾಲ್ಕು ಇಟ್ಟಿಗೆಗಳನ್ನು, ತೆಂಕಣಗರಿಯಚಿತಿಗೆ–ಬಲಭಾಗದ ರೆಕ್ಕೆಯ ಭಾಗಕ್ಕೂ, ಉತ್ತರಪಕ್ಷಕ್ಕೆ–ಮತ್ತೊಂದು ಕಡೆಗೆ, ಆಪ್ರತಿಯೊಳು–ಆದೇ ತೆರನಾಗಿಯೂ, ಅನಿತವಂ–ಅಷ್ಟನ್ನೂ, ಪುಚ್ಛಕೆ–ಬಾಲದ ಕಡೆಗೂ, ಎಪ್ಪತ್ತೊಂದನು–ಎಪ್ಪತ್ತೊಂದು ಇಟಿಗೆಗಳನ್ನು, ಬಂಧಿಸಿದರು–ಹಾಕಿ ಕಟ್ಟಿದವರಾದರು ॥೩೫॥

ಟೀ॥ ಮೊದಲು–ಆದಿಯಲ್ಲಿ, ಒಂದರ ಇಟ್ಟಿಗೆಯನು–ಒಂದರ ಇಟ್ಟಿಗೆಯನ್ನು, ಇಮ್ಮಡಿಸಲು–ಎರಡರಷ್ಟು ಹೆಚ್ಚಾಗುವಂತೆ ಮಾಡಲಾಗಿ, ಎರಡನೆಯದು–ಎರಡನೇಯದಾದ ಭಾಗವು, ಅತಿವಿರಾಜಿಸಿತು–ಹೆಚ್ಚಾದ ಪ್ರಕಾಶದಿಂದ ಕೂಡಿತು, ಎರಡನೆಯದ–ಎರಡನೇದನ್ನು, ಇಮ್ಮಡಿಸಲು–ಅಧಿಕಮಾಡಲು, ಮೂರನೆಯದು–ಮೂರನೇದಾದದ್ದು, ವಿರಾಜಿಸಿತು–ಕಾಂತಿಯುಕ್ತವಾಯಿತು, ಅದನು–ಆ ಮೂರನೆಯದನ್ನೂ ಸಹ, ಇಮ್ಮಡಿಸಲು–ಹೆಚ್ಚಿಸಲು, ನಾಲ್ಕನೆಯದು, ಆಯ್ತು–ಆಯಿತು, ಅದನು–ಅದನ್ನೂ, ಇಮ್ಮಡಿಸಲು–ಎರಡರಷ್ಟು ಮಾಡಲು, ಐದನೆಯದು–ಐದನೆಯ ಜಗಲಿಯು, ಎಸೆದುದು–ಕಾಂತಿಯುಕ್ತವಾಯಿತು, ಇಂತು–ಈತೆರನಾಗಿ, ಪುದಿದು–ಸೇರಿ, ಸುಪರ್ಣಪಂಚಕದ–ಗರುಡನಂತಿರುವ, ಯಾಗವೇದಿಗಳ್–ಯಜ್ಞದ ಜಗಲಿಗಳು, ಮೆರೆದುದು–ಕಾಂತಿಯುಕ್ತವಾಯಿತು, ಮಹಾಮಂಟಪವನು–ದೊಡ್ಡ ಮಂಟಪವನ್ನು, ಐದೆ–ಚೆನ್ನಾಗಿ, ಎಂಟುಬಾಗಿಲ್ಗಳಿಂ–ಎಂಟು ಬಾಗಿಲುಗಳಿಂದಲೂ, ಗುಡಿ–ಚಪ್ಪರ, ತೋರಣ–ತೋರಣವು, ಪತಾಕೆಗಳ–ಬಾವುಟ ಇವುಗಳ, ವಿಸ್ತರದೊಳು–ವಿಶಾಲತೆಯಿಂದ, ರಚಿಸಿದರು–ನೆರವೇರಿಸಿದವರಾದನು ॥೩೬॥

ಟೀ॥ ಆಮಂಟಪಾಂತರದೊಳು–ಆ ಯಜ್ಞಮಂಟಪದಲ್ಲಿ, ಇಷ್ಟಿಕಾಚಯನದಿಂ–ಇಟ್ಟಿಗೆಗಳಿಂದ ಮಾಡಿರುವ ಜಗಲಿಯಿಂದ, ರಾಜಿಸಿತು–ಕಾಂತಿಯುಕ್ತವಾಯಿತು, ಪರಿಶಿಷ್ಟದಿಂದ–ಮಿಕ್ಕ ಇಟ್ಟಿಕೆಗಳಿಂದ, ಬಳಸಿ–ಆವರಿಸಲ್ಪಟ್ಟು, ವೇದಿಕೆಗಳಿಂದ–

---

ನೊಂದಿಗೆ ಹೇಳಲು, ಆಗ ಧರ್ಮತನಯನಾದರೊ, ಸಕಲ ಪೃಥ್ವೀಶರನ್ನೂ ಅವರವರ ಮರ್ಯಾದಾನುಸಾರವಾಗಿ ಸತ್ಕರಿಸಿ ಬಕದಾಲ್ಭ್ಯಮಹಾ ಮುನಿಯನ್ನು ಪೂಜೆಮಾಡಿ, ಸಕಲ ತಾಪಸೋತ್ತಮರಿಂದೊಡಗೂಡಿ ಯಾಗಾರಂಭವನ್ನು ಮಾಡಲು ಸಂಕಲ್ಪವಂ ಮಾಡಿಕೊಂಡು ಯಥಾಶಾಸ್ತ್ರೀಯವಾಗಿ ಯಜ್ಞವೇದಿಕೆಯಂ ಮಾಡತೊಡಗಿದನು॥೩೩॥ ಆಗ ಧರ್ಮತನಯನು ಯಜ್ಞವನ್ನು ಮಾಡುವ ಸ್ಥಳವನ್ನು ನಿಷ್ಕರ್ಷಿಸಿ ಎತ್ತುಗಳನ್ನು ಹೊಡೆಯಲುದ್ಯುಕ್ತನಾದಾಗ ದ್ರೌಪದಿಯು ಅನೇಕ ಓಷಧಿಗಳಂ ಪಿಡಿದು ನಿಂತವಳಾದಳು, ಕುಂತೀದೇವಕಿ ಯಶೋದೆ ಮೊದಲಾದವರೂ, ಕೃಷ್ಣಾದಿಗಳೂ ಸಹ ಅನೇಕ ಭೂಸುರೋತ್ತಮರಿಂದೊಡಗೂಡಿ, ಕರ್ಪೂರ ಗಂಧಮಿಶ್ರಿತವಾದ ಉದಕದಿಂ ಕೂಡಿದ ಕಲಶಂಗಳಂ ಪಿಡಿದು ನಿಂತವರಾದರು ॥೩೪॥ ಯಥಾವಿಧಿಯಾಗಿಯೂ, ವ್ಯಾಸಬಕದಾಲ್ಭ್ಯಾದಿ ಮಹಾಮುನಿಗಳ ಅನುಮತಿಯಂತೆಯೂ, ಧರ್ಮಪುತ್ರನು ಗರುಡಾಕೃತಿಯಾದ ವೇದಿಕೆಯ ಆಸನಗಳನ್ನು ನಿರ್ಮಿಸಿದನು ॥ ೩೫ ॥ ಈ ಸುಪರ್ಣಾಕೃತಿಯಾದರೊ, ಹೊಟ್ಟೆಗಳ ಭಾಗದಲ್ಲಿ ನಾಲ್ಕು ನೂರು ಇಟ್ಟಿಕೆಗಳಿಂದ ದಕ್ಷಿಣಭಾಗದ ಗರಿಕೆಯಕಡೆ ನೂರು ನಲವತ್ತು ನಾಲ್ಕು ಇಟ್ಟಿಕೆಗಳಿಂದಲೂ ಅದೇ ರೀತಿಯಾಗಿ ಉತ್ತರಭಾಗದಲ್ಲಿಯೂ ಬಾಲದ ಕಡೆ ಎಪ್ಪತ್ತೊಂದೂ ಇಡಲ್ಪಟ್ಟು ಪ್ರಕಾಶವನ್ನೈದಿತ್ತು. ಅದರ ಸುತ್ತಲೂ ದೊಡ್ಡಮಂಟಪವನ್ನು ಆ ಮಹಾಮಂಟಪಕ್ಕೆ ಎಂಟು ಕಡೆ ಬಾಗಿಲ್ಗಳನ್ನೂರಚಿಸಿ, ಆ ಎಂಟು ಕಡೆಯೂ ಚಪ್ಪರಗಳು ತೋರಣಗಳು ಮೊದಲಾದವುಗಳಿಂದಲಂಕರಿಸಿದವರಾದರು. ॥೩೬॥

ಪ್ಪಿಮವುವೇದಿಕೆಗಳಿಂದೆಸೆದ | ವಷ್ಟಕುಂಡದರಚನೆಪಾಲಾಶಮೇಳುಖಾದಿರಮೂರುಬಿಲ್ವಮೈದು || ದೃಷ್ಟಮಾದುನ್ನತಶ್ಲೇಷ್ಮಾತಕಂಮೂರ | ಧಿಷ್ಠಿತದಯೂಪಮುಂಕೇಕವಿಂಶತಿಗಳು | ತ್ಕೃಷ್ಟಹುತಸೂತ್ರಭೂಷಿತ ಚಷಾಲದಿಮೆರೆದವಾಮುಂಟಪಾಂತರದೊಳು || ೩೭ || ವಿಹಿತಸಂಸ್ಥಾಪಿತಮಖಾವಳಿಗಳಿಂದ ಶತ | ಜುಹುಗಳಿಂವೈಕಂಕತದಷಷ್ಟಿಸ್ರುಕ್ಸ್ರುವನಿ | ವಹದಿಂದಗೋಚರ್ಮಲೋಹಿತದುಲೂಖಲದಸೋಮವಲ್ಲಿಯು ಮುಸಲದ || ವಿಹರಿಸುವಸುದರ್ಭಾಸ್ತರಣದಚಮಸಾದಿಗಳ | ಬಹುಸಾಧನಂಗಳಿಂಭೂರಿ ಸಂಭಾರಸಂ | ಗ್ರಹದಿಂದಬೇಕಾದವಸ್ತುಸಂಜಾತದಿಂ ಮಖಶಾಲೆ ಕಣ್ಗೆಸೆದುದು || ೩೮ || ವರಿಸಿಬಕದಾಲ್ಭ್ಯನಂ ಬ್ರಹ್ಮತ್ವಕಿರಿಸಿದ | ರ್ವರಮುನಿಪನಾವ್ಯಾಸನಾಚಾರ್ಯನಾದನ | ಧ್ವರಯುಮೊದಲಾದಋತ್ವಿಜರಾಗೆವಾಮದೇವವಸಿಷ್ಠಗೌತಮಾತ್ರಿ || ವರಪರಾಶರಭರದ್ವಾಜಕೌಂಡಿನ್ಯಬಾ | ಗುರಿಜಾಮದಗ್ನಿಗಾಲವಜಾತುಕರ್ಣಸೌ | ಭರಿಸುಮಂತಕಹೋಳಶೈಬ್ಯರೋಮಶಮುಖ್ಯಮುನಿಗಳಾಕ್ರತುವರದೊಳು || ೩೯ || ರಕ್ಷೋಘ್ನಮಂತ್ರದಿಂದೆಂಟು ಬಾಗಿಲ್ಗಳಂ | ರಕ್ಷಿಸುವರಾಗಿವಿಶ್ವಾಮಿತ್ರಭೃಗು

---

ಜಗಲಿಗಳಿಂದ, ಒಪ್ಪಿದವು – ಅಲಂಕಾರ ಸಹಿತವಾದವು, ಅಷ್ಟಕುಂಡರಚನೆ – ಎಂಟುಮೂಲೆಯ ಆಕಾರವನ್ನು ಮಾಡಿರುವುದು, ಏಳು – ಏಳಾದ, ಪಾಲಾಶಂ – ಮುಳ್ಳುಗದ ಸ್ತಂಭಂಗಳು, ಮೂರು – ಮೂರಾದ, ಖಾದಿರ – ಕಗ್ಗಲೀಮರದ ಕಂಭಗಳು, ಐದು – ಐದಾದ, ಬಿಲ್ವಂ – ಬಿಲ್ವ ವೃಕ್ಷದ ಕಂಭಗಳು, ಮೂರು– ಮೂರು ಸಂಖ್ಯೆಯುಳ್ಳ, ದೃಷ್ಟಮಾದ – ಕಾಣಿಸತಕ್ಕ, ಉನ್ನತ – ಎತ್ತರವಾಗಿರುವ, ಶ್ಲೇಷ್ಮಾತಕಂ – ಕಪಿತ್ಥವೃಕ್ಷದ ಕಂಭಗಳು, ಏಕವಿಂಶತಿಗಳು – ಇಪ್ಪತ್ತೊಂದು, ಅಧಿಷ್ಠಿತದಯೂಪಂ – ನೆಡಲ್ಪಟ್ಟ ಕಂಭಗಳು, ಉತ್ಕೃಷ್ಟ – ಉತ್ತಮವಾದ, ಹುತಸೂತ್ರ – ಹೋಮಸಂಬಂಧವಾದ ದಾರದಿಂದ, ಭೂಷಿತ – ಅಂದವಾಗಿ ಕಾಣುವ, ಚಷಾಲದಿ – ಯೂಪಸ್ತಂಭದ ಕೆಳಗೆ ಬಿಗಿದಿರತಕ್ಕ ಲೋಹದ ಬಳೆಯಿಂದ, ಮೆರೆದವು–ಕಾಂತಿಯುಕ್ತವಾದವು ||೩೭||

ಟೀ|| ಮಖಶಾಲೆ–ಆ ಯಜ್ಞಮಂಟಪವಾದರೊ, ವಿಹಿತ–ಕ್ರಮವಾಗಿ, ಸಂಸ್ಥಾಪಿತ – ಇಡಲ್ಪಟ್ಟಿರುವ, ಮಖಾವಳಿಗಳಿಂದ–ಯಾಗ ಸಮುದಾಯಗಳಿಂದಲೂ, ಶತ–ನೂರಾದ, ಜುಹುಗಳಿಂ–ತುಪ್ಪವನ್ನಿಟ್ಟುಕೊಳ್ಳುವ ಪಾತ್ರೆಗಳಿಂದಲೂ, ವೈಕಂಕತದ–ಹೆಸರುವಾಸಿಯಾಗಿರತಕ್ಕ, ಕಂಕತದ–ಬಾಚಣಿಗೆಗಳ, ಷಷ್ಟಿ–ಅರವತ್ತು ಸಂಖ್ಯೆಯ, ಸ್ರುಕ್ಸ್ರುವ–ಸ್ರುಕ್ಸ್ರುವವೆನ್ನುವ ಹೋಮಕ್ಕೆ ಬೇಕಾದ ಪಾತ್ರೆಗಳ, ನಿವಹದಿಂದ–ಸಮುದಾಯದಿಂದಲೂ, ಗೋಚರ್ಮ–ಹಸುವಿನ ಚರ್ಮವು, ಲೋಹಿತ–ಕೆಂಪು ಬಣ್ಣದ, ಉಲೂಖಲದ–ಒರಳುಕಲ್ಲಿನ, ಸೋಮವಲ್ಲಿಯು–ಸೋಮಲತೆಯಿಂದ ಮಾಡಿದ, ಮುಸಲದ–ಒನಿಕೆಯ, ವಿಹರಿಸುವ–ಹಾಸಿರತಕ್ಕ, ದರ್ಭಾಸ್ತರಣದ–ದರ್ಭಾಸನದ, ಚಮಸ–ಸೋಮಪಾನಕ್ಕೆ ಉಪಯೋಗಿಸುವ ಪಾತ್ರೆಯೇ, ಆದಿಗಳ–ಆದಿಯಾಗಿರುವ, ಬಹು–ನಾನಾಪ್ರಕಾರವಾದ, ಸಾಧನಂಗಳಿಂ–ಸೋಪಸ್ಕರಗಳಿಂದ, ಭೂರಿ–ಅತಿಶಯವಾದ, ಸಂಭಾರ–ಊಟದ ಸಾಮಾನುಗಳ, ಸಂಗ್ರಹದಿಂ–ಶೇಖರಿಸುವಿಕೆಯಿಂದ, ಬೇಕಾದ–ಇಷ್ಟವಾದ, ವಸ್ತು–ಧನಕನಕಾದಿಗಳ, ಸಂಜಾತದಿಂ–ಸಮುದಾಯದಿಂದ, ಕಣ್ಗೆ–ನಯನಂಗಳಿಗೆ, ಎಸೆದುದು–ಅಂದವಾಗಿ ತೋರುತ್ತಲಿತ್ತು ||೩೮||

ಟೀ|| ಆಕ್ರತುವರದೊಳು–ಆ ಶ್ರೇಷ್ಠವಾದ ಅಶ್ವಮೇಧಯಾಗದಲ್ಲಿ, ಬ್ರಹ್ಮತ್ವಕೆ–ಬ್ರಹ್ಮತ್ವದ ಸಲುವಾಗಿ, ಬಕದಾಲ್ಭ್ಯನಂ–ಬಕದಾಲ್ಭ್ಯನೆಂಬ ಮುನೀಂದ್ರನನ್ನು, ವರಿಸಿ–ಇಚ್ಛಿಸಿ, ಇರಿಸಿದರು–ಇರಿಸಿದವರಾದರು, ವರಮುನಿಪನು – ತಾಪಸೋತ್ತಮನಾದ, ಆವ್ಯಾಸನು–ಆ ವ್ಯಾಸಮಹರ್ಷಿಯು, ಆಚಾರ್ಯನು ಆದನು –ಪುರೋಹಿತನಾದನು, ವಸಿಷ್ಠ–ವಸಿಷ್ಠರು, ಗೌತಮ–ಗೌತಮನು, ಅತ್ರಿ–ಅತ್ರಿಯು, ವರ–ಉತ್ತಮವಾದ, ಭರದ್ವಾಜ–ಭರದ್ವಾಜಮುನಿಯು, ಕೌಂಡಿನ್ಯ–ಕೌಂಡಿಣ್ಯನು, ಬಾಗುರಿ–ಬಾಗುರಿ ಎಂಬ ಋಷಿಯು, ಜಾಮದಗ್ನಿ–ಜಮದಗ್ನಿಯು, ಗಾಲವ–ಗಾಲವಮುನಿಯು, ಜಾತುಕರ್ಣನು–ಜಾತುಕರ್ಣನೆಂಬಾತನು, ಸೌಭರಿ–ಸೌಭರಿಋಷಿಯು, ಸುಮಂತ–ಸುಮಂತನು, ಕಹೋಳ–ಕಹೋಳನೆಂಬುವನು, ಶೈಬ್ಯ–ಶೈಬ್ಯನು, ರೋಮಶ–ರೋಮಶರನೆಂಬುವನೇ, ಮುಖ್ಯ–ಮೊದಲಾದ, ಮುನಿಗಳು–ತಪಸ್ವಿಗಳೆಲ್ಲಾ, ಅಧ್ವರಯು–ಅಧ್ವರಯುವೇ, ಆದಿ–ಮೊದಲಾಗಿರತಕ್ಕ, ಋತ್ವಿಜರು–ಋತ್ವಿಕ್ಕುಗಳು, ಆಗಲ್ಕೆ–ಆಗಲೆಂದು, ಇರಿಸಿದರು–ವರಿಸಿದವರಾದರು ||೩೯||

ಟೀ|| ರಕ್ಷೋಘ್ನಮಂತ್ರದಿಂ–ರಾಕ್ಷಸರಿಂದುಂಟಾಗುವ ತೊಂದರೆಗಳನ್ನು ತಪ್ಪಿಸತಕ್ಕ ಮಂತ್ರಗಳಿಂದ, ವಿಶ್ವಾಮಿತ್ರ–

---

ಪಾದರಿ, ಬಿಲ್ವ, ಮುತ್ತುಗ ಮೊದಲಾದವುಗಳ ಯೂಪಸ್ತಂಭಗಳನ್ನು ರಚಿಸಿದರು || ೩೭ || ಯಜ್ಞಸೋಪಸ್ಕರಗಳೆಲ್ಲಾ ಅಣಿಯಾದವು ||೩೮|| ಬಕದಾಲ್ಭ್ಯಮಹಾಮುನಿಯು ಬ್ರಹತ್ವಕ್ಕೆ ನಿಂತರು. ವ್ಯಾಸಮಹರ್ಷಿಯು ಆಚಾರ್ಯನಾದನು. ವಾಮದೇವ ಅತ್ರಿ, ಗೌತಮ, ವಸಿಷ್ಠ, ಅತ್ರಿ, ಪರಾಶರ, ಜಮದಗ್ನಿ, ಭರದ್ವಾಜ, ಕೌಂಡಿನ್ಯ, ಬಾಗುರಿ, ಗಾಲವ, ಸೌಭರಿ, ಸುಮಂತ, ಕಹೋಳ, ಶೈಬ್ಯ, ರೋಮಶ ಮೊದಲಾದವರೆಲ್ಲಾ ಅಧ್ವರ್ಯುಗಳಾದರು || ೩೯ || ರಕ್ಷೋಘ್ನಮಂತ್ರಗಳಿಂದ ವಿಶ್ವಾಮಿತ್ರ,

ವಾಯು| ಭಕ್ಷಕಪುಲಸ್ತ್ಯಮಧುಛಂದಧೌಮ್ಯೋಪಮನ್ಯುಕಪಿಲನೇತ್ರರಿವರು || ಅಕ್ಷಯತಪೋಧನದವರಮುನಿಗಳೆಲ್ಲರುಂ| ಲಕ್ಷಿತದಪೂಜೆಗಳನನುಕರಿಸಲನಿಬರಸ | ಮಕ್ಷದೊಳ್ಧರ್ಮಜಂಮೃಗಶೃಂಗಧರನಾಗಿಯಾಜಮಾನ್ಯದೊಳೆಸೆದನು || ೪೦ || ವ್ಯಾಸಮುನಿ ಬಳಿಕಲ್ಲಿನುಡಿದನವನೀಶಂಗೆ | ಭಾಸುರಸಭಾವಳಯದೊಳ್ಮೆರೆವದಿವ್ಯಸಿಂ | ಹಾಸನಾರೂಢನಾಗಿಹಮುಕುಂದಾದಿಭೂಪಾಲರ್ಗೆ ವಿನಯದಿಂದ || ಈಸಮಯದೊಳ್ಚತುಷ್ಷಷ್ಟಿದಂಪತಿಗಳ್ವಿ | ಲಾಸದಿಂದಮಲಕಲಶಂಗಳಿಂತುಂಬಿಗಂಗಾಸರಿತ್ತೋಯಮಂ ಕೊಂಡುಬರವೇಳ್ಕುದರಸನಮುಖನಿಮಿತ್ತಮಾಗಿ || ೪೧ || ಜನಪಕೇಳ್ವ್ಯಾಸಮುನಿವಾಕ್ಯಮಂಕೇಳ್ದುಬಳಿ | ಕನಸೂಯೆ ಸಹಿತತ್ರಿಮೇಣರುಂಧತಿಸಹಿತ | ಮುನಿವಸಿಷ್ಠಂಶೌರಿತಾನೆರುಕ್ಮಿಣಿಸಹಿತಪಾರ್ಥಂಸುಭದ್ರೆಸಹಿತ || ದನುಜಾರಿಸೂನುಮಾಯಾವತೀಸಹಿತಮುದದೊ | ಳನಿರುದ್ಧನುಷೆಸಹಿತಮಾರುತಿಹಿಡಿಂಬಿಸಹಿ | ತಿನಸುತನಕುವರಂಪ್ರಭದ್ರೆಸಹಿತಮಲಕಲಶಂಗಳಂಪೊತ್ತ

---

ವಿಶ್ವಾಮಿತ್ರನು, ಭೃಗು_ಭೃಗುಋಷಿಯು, ವಾಯುಭಕ್ಷಕ - ವಾಯುಪಾನವಂ ಮಾಡಿಕೊಂಡಿರತಕ್ಕ, ಪುಲಸ್ತ್ಯ-ಪುಲಸ್ತ್ಯನು, ಮಧುಛಂದ_ಮಧುಛಂದಋಷಿಯು, ಧೌಮ್ಯ-ಧೌಮ್ಯಮುನಿಯು, ಉಪಮನ್ಯುಕ_ಉಪಮನ್ಯುಕನೆಂಬುವನು, ಕಪಿಲನೇತ್ರರು_ ಕಪಿಲಋಷಿಗಳು, ಇವರು_ಇಷ್ಟುಜನರೂ, ಎಂಟುಬಾಗಿಲ್ಗಳಂ-ಎಂಟು ಬಾಗಿಲುಗಳನ್ನೂ, ರಕ್ಷಿಸುವರು - ಕಾಪಾಡತಕ್ಕವರು, ಆಗಿ_ಎಸೆದರು ಕಾಂತಿಯುಕ್ತರಾದರು, ಎಲ್ಲರುಂ_ಸಮಸ್ತರಾದ, ಅಕ್ಷಯ_ಸ್ಥಿರವಾದ, ತಪೋಧನದ_ತಪಸ್ಸನ್ನೇ ನಿಧಿಯಾಗುಳ್ಳ, ವರ_ಉತ್ತಮರಾದ, ಮುನಿಗಳು-ತಪಸ್ವಿಗಳು, ಲಕ್ಷಿತದ- ಅನುಕೂಲವಾದ, ಪೂಜೆಗಳನು_ ಪೂಜೆಗಳನ್ನು, ಅನುಕರಿಸಲು_ ಹೊಂದಿರಲು, ಧರ್ಮಜಂ_ಧರ್ಮನಂದನನಾದರೊ, ಅನಿಬರ_ಅಷ್ಟುಮಂದಿಯ, ಸಮಕ್ಷಮದೊಳ್_ಎದುರಿನಲ್ಲಿ, ಮೃಗಶೃಂಗ ಧರನಾಗಿ-ಜಿಂಕೆಯ ಕೊಂಬನ್ನು ಧರಿಸಿ, ಯಾಜಮಾನ್ಯದೊಳು_ಯಾಗದ ಕಾರ್ಯಕ್ಕೆ ಯಜಮಾನನಾಗಿ, ಎಸೆದನು-ಕಾಂತಿಯುಕ್ತನಾಗಿದ್ದನು. ||೪೦||

ಟೀ|| ಬಳಿಕ_ಅನಂತರ, ಅಲ್ಲಿ_ಆ ಯಾಗಮಂಟಪದಲ್ಲಿ, ಅವನೀಶಂಗೆ- ರಾಜನಾದ ಧರ್ಮಪುತ್ರನಿಗೂ, ಭಾಸುರ_ ಹೊಳೆಹೊಳೆವ, ಸಭಾವಲಯದೊಳ್_ಸಭಾವನದೊಳಗೆ, ಮೆರೆವ_ಪ್ರಕಾಶಿಸುತ್ತಲಿರುವ, ದಿವ್ಯ-ಶ್ರೇಷ್ಠವಾದ, ಸಿಹ್ಮಾಸನಾರೂಢನಾಗಿ_ಸಿಹ್ಮಾಸನದಲ್ಲಿ ಕುಳಿತು, ಇಹ-ಇರತಕ್ಕ, ಮುಕುಂದಾದಿ ಭೂಪಾಲರ್ಗೆ_ಕೃಷ್ಣಮೂರುತಿಯೇ ಮೊದಲಾದ ಅರಸುಗಳಿಗೂ, ಈ ಸಮಯದೋಳ್_ಈಗಲಾದರೊ, ಅರಸನ_ಧರ್ಮನಂದನನ, ಮಖ_ಅಶ್ವಮೇಧದ, ನಿಮಿತ್ತಮಾಗಿ_ಸಲುವಾಗಿ, ಗಂಗಾಸರಿತ್ತೋಯಮಂ_ ಗಂಗಾನದಿಯ ನೀರನ್ನು, ಚತುಷ್ಷಷ್ಟಿ ದಂಪತಿಗಳು_ ಅರವತ್ತನಾಲ್ಕು ದಂಪತಿಗಳು, ವಿಲಾಸ ದಿಂದ_ಸಡಗರದಿಂದ, ಅಮಲ-ಪರಿಶುದ್ಧವಾದ, ಕಲಶಂಗಳಿಂ_ಕಲಶಗಳಿಂದ, ತುಂಬಿಕೊಂಡು_ತುಂಬಿಕೊಂಡವರಾಗಿ, ಬರವೇಳ್ಕುದು-ಬರಬೇಕಾಗಿದೆ ಎಂಬುದಾಗಿ, ಆ ವ್ಯಾಸಮುನಿ-ಆ ವ್ಯಾಸಮುನೀಂದ್ರನು, ವಿನಯದಿಂದ-ನಮ್ರತೆಯಿಂದ, ನುಡಿದನು_ಹೇಳುವನಾದನು ||೪೧||

ಟೀ|| ಜನಪ_ಜನಮೇಜಯನೆ, ಕೇಳು-ಲಾಲಿಸು, ವ್ಯಾಸಮುನಿವಾಕ್ಯಮಂ_ವ್ಯಾಸಮುನಿಯ ನುಡಿಗಳನ್ನು, ಕೇಳ್ದು- ಕೇಳಿದವರಾಗಿ, ಬಳಿಕ_ಅನಂತರ, ಅತ್ರಿ_ ಅತ್ರಿಋಷಿಯು, ಅನಸೂಯೆ ಸಹಿತ_ ಅನಸೂಯೆಯೊಂದಿಗೂ, ಮೇಣ್_ಅಲ್ಲದೆ, ಮುನಿ ವಸಿಷ್ಠಂ - ವಸಿಷ್ಠನೆಂಬ ತಾಪಸೋತ್ತಮನು, ಅರುಂಧತಿಸಹಿತ - ಅರುಂಧತಿ ಎಂಬ ತನ್ನ ಸತಿಯೊಂದಿಗೂ, ಶೌರಿ_ಕೃಷ್ಣಸ್ವಾಮಿಯಾದರೋ, ರುಕ್ಮಿಣಿಸಹಿತ_ರುಕ್ಮಿಣಿಯೆಂಬ ತನ್ನ ಕಾಂತೆಯೊಂದಿಗೂ, ಪಾರ್ಥಂ-ಫಲುಗುಣನು, ತಾನೆ ಸುಭದ್ರೆ ಸಹಿತ-ಸುಭದ್ರೆಯೆಂಬ ತನ್ನರಸಿಯೊಂದಿಗೂ, ದನುಜಾರಿಸೂನು= ದನುಜಾರಿ_ ರಾಕ್ಷಸಾಂತಕನಾದ ಕೃಷ್ಣಮೂರುತಿಯ, ಸೂನು_ಕುವರನಾದ ಮದನನು, ಮಾಯಾವತಿಸಹಿತ_ಮಾಯಾವತಿಯೆಂಬ ತನ್ನ ರಾಣಿಯೊಂದಿಗೂ, ಅನಿರುದ್ಧನು-ಅನಿ

---

ಭೃಗು, ವಾಯುಭಕ್ಷಕ, ಮಧುಛಂದ, ಪುಲಸ್ತ್ಯ, ಧೌಮ್ಯ, ಉಪಮನ್ಯುಕ, ಕಪಿಲನೇತ್ರ ಮೊದಲಾದವರೆಲ್ಲಾ ದ್ವಾರಪಾಲಕರಾದರು, ಇವರ ಮಧ್ಯೆ ಧರ್ಮರಾಯನು ಯಜ್ಞದೀಕ್ಷೆಯಿಂದ ಮೆರೆಯುತ್ತಲಿದ್ದನು. || ೪೦ || ಆಗ ಪುರೋಹಿತನಾದ ವ್ಯಾಸಮುನೀಂದ್ರನು ಧರ್ಮಜನನ್ನೂ, ಸಿಂಹಾಸನಾರೂಢನಾಗಿರುವ ಕೃಷ್ಣಸ್ವಾಮಿಯನ್ನೂ ಕುರಿತು, ಈ ಯಾಗಾರಂಭದಲ್ಲಿ ಅರವತ್ತುನಾಲ್ಕು ದಂಪತಿಗಳು ಗಂಗೋದಕವನ್ನು ತರಬೇಕೆಂದು ಸವಿನಯದಿಂದ ನುಡಿದನು. ||೪೧|| ಕೇಳೈ ಜನಮೇಜಯಮಹೀವಲ್ಲಭನೆ ವ್ಯಾಸಮುನಿಯು ಈ ತೆರನಾಗಿ ಆಜ್ಞಾಪಿಸಿದೊಡನೆಯೇ ಅತ್ರಿಮಹರ್ಷಿಯು ಅನುಸೂಯೆಯೆಂಬ ತನ್ನ ಧರ್ಮಪತ್ನಿಯಿಂದೊಡಗೂಡಿ ಹೊರಟನು. ತಾಪಸೋತ್ತಮನಾದ ವಸಿಷ್ಠನು ಅರುಂಧತಿಯನ್ನೊಡಗೂಡಿ ಹೊರಟವನಾದನು. ಇದೇ ರೀತಿಯಾಗಿಯೇ ಕೃಷ್ಣನು ರುಕ್ಮಿಣಿಯೊಂದಿಗೂ, ಅರ್ಜುನನು ಸುಭದ್ರೆಯೊಂದಿಗೂ, ಪ್ರದ್ಯುಮ್ನನು ಮಾಯಾವತಿಯನ್ನೊಡ

ಸೆದರು ||೪೨|| ಲಲನೆಲೀಲಾವತಿಸಹಿತಮಯೂರಧ್ವಜಂ | ವಿಲಸಿತಸುನಂದೆಬಳಿವಿಡಿಯೆನೀಲಧ್ವಜಂ | ಲಲಿತಪ್ರಭಾವತಿಸಹಿತ ಯೌವನಾಶ್ವನನುಸಾಲ್ವಧಮ್ಮಿಲ್ಲೆಗೂಡಿ || ಉಳಿದಹಂಸಧ್ವಜಕಿರೀಟಿಸುತಶಶಿಹಾಸ | ಕಲಿವೀರವರ್ಮತಾಮ್ರಧ್ವಜಾದ್ಯವನಿಪಾವಳಿತಂತಮ್ಮಕಾಂತೆಯರೊಡನೆಸಲಿಲಕಲಶಂಗಳಂತಾಳ್ದಿಸೆದರು || ೪೩ || ದೊರೆದೊರೆಗಳೆಲ್ಲರುಂತಮ್ಮತಮ್ಮರಸಿಯ | ರ್ವೆರಸಿಗಂಗಾತಟಕೆಮುಸುಕಿದಸುಪಲ್ಲವೋ | ತ್ಕರದಪೊಂಗಲಶಂಗಳಂಕೊಂಡುನಡೆಯಲವರವರಮೈಗಾವಲ್ಗಳ || ಪರಿವಾರದಿಂ ಪಾರ್ವರಮಂತ್ರಘೋಷದಿಂ | ನೆರೆದಿಹಮಹಾಜನದಸಂದಣಿಗಳಿಂಪಾಠ | ಕರನೃತ್ತವಾದ್ಯಗೀತಂಗಳವಿಲಾಸದುತ್ಸವದಿಂದಚೆಲ್ವಾದುದು || ೪೪ || ಆನೆಗಳಮೇಲೆಕುವರಿಯರಿರ್ದುಮುತ್ತುಗಳ | ಸೋನೆಗಳನಡಿಗಡಿಗೆಸೂಸುತಿರೆಮನ್ಮಥನ | ಸೇನೆಗಳತೆರದಿಂದ

---

ರುದ್ಧನೆಂಬಾತನು, ಉಷೆ ಸಹಿತ-ಉಷೆಯೆಂಬಾಕೆಯೊಡನೆ ಕೂಡಿಕೊಂಡೂ, ಮಾರುತಿ-ವೃಕೋದರನು, ಹಿಡಿಂಬಿ ಸಹಿತ-ಹಿಡಂಬಿಯೊಂದಿಗೂ, ಇನಸುತನ-ಸೂರ್ಯನ ಮಗನಾದ ಕರ್ಣನ, ಕುವರಂ-ತನುಜನಾದ ವೃಷಧ್ವಜನು, ಪ್ರಭದ್ರೆಸಹಿತ-ಪ್ರಭದ್ರೆಯೊಂದಿಗೂ, ಅಮಲ-ಪರಿಶುದ್ಧಗಳಾದ, ಕಲಶಂಗಳಂ-ಕಲಶಗಳನ್ನು, ಪೊತ್ತು-ಪೊತ್ತವರಾಗಿ, ಮುದದೊಳು-ಸಂತಸದಿಂದ, ಎಸೆದರು-ಹೊಳೆಯುತ್ತಲಿದ್ದರು. ||೪೨||

ಟೀ|| ಮಯೂರಧ್ವಜಂ-ಶಿಖಿಕೇತುವು, ಲಲನೆ ಲೀಲಾವತಿಸಹಿತ-ಲೀಲಾವತಿಯೆಂಬ ತನ್ನ ರಾಣಿಯೊಂದಿಗೂ, ನೀಲಧ್ವಜಂ-ನೀಲಧ್ವಜನೆಂಬರಸು, ವಿಲಸಿತ-ಹೊಳೆಹೊಳೆವ, ಸುನಂದೆಬಳಿವಿಡಿಯೆ- ಸುನಂದೆಯೆಂಬಾಕೆಯೊಂದಿಗೂ, ಯೌವನಾಶ್ವನು-ಯೌವನಾಶ್ವನೆಂಬ ಭದ್ರಾವತೀನಗರದ ರಾಜನು, ಲಲಿತ-ಮೃದುವಾದ ದೇಹವುಳ್ಳ, ಪ್ರಭಾವತಿಸಹಿತ-ಪ್ರಭಾವತಿಯೊಂದಿಗೂ, ಅನುಸಾಲ್ವನು-ಸಾಲ್ವನ ತಮ್ಮನು, ಧಮ್ಮಿಲ್ಲೆಗೂಡಿ-ಧಮ್ಮಿಲ್ಲೆಯೊಂದಿಗೆ ಸೇರಿದವನಾಗಿಯೂ, ಉಳಿದ-ನಿಂತಿರುವ, ಹಂಸಧ್ವಜ-ಮರಾಳಧ್ವಜನು, ಕಿರೀಟಿಸುತ-ಅರ್ಜುನನ ಮಗನಾದ ಬಭ್ರುವಾಹನನು, ಶಶಿಹಾಸ-ಇಂದುಹಾಸನು, ಕಲಿ-ವೀರನಾದ, ವೀರವರ್ಮನು-ವೀರವರ್ಮನೆಂಬಾತನು, ತಾಮ್ರಧ್ವಜ- ತಾಮ್ರಧ್ವಜನೇ, ಆದಿ-ಮೊದಲಾದ, ಅವನಿಪಾವಳಿ-ರಾಜರ ಗುಂಪು, ತಮ್ಮತಮ್ಮ ಕಾಂತೆಯರೊಡನೆ- ತಮ್ಮತಮ್ಮರಸಿಯರೊಂದಿಗೆ, ಸಲಿಲಕಲಶಂಗಳಂ-ನೀರಿನಿಂದ ತುಂಬಿರತಕ್ಕ ಕಲಶಗಳನ್ನು, ತಾಳ್ದಿ-ಹೊಂದಿ, ಎಸೆದರು-ಕಾಂತಿಯುಕ್ತರಾದರು. ||೪೩||

ಟೀ|| ದೊರೆದೊರೆಗಳೆಲ್ಲರುಂ-ಸಕಲ ರಾಜರುಗಳೂ, ತಮ್ಮತಮ್ಮರಸಿಯರ್ವೆರಸಿ-ತಮ್ಮತಮ್ಮ ರಾಣಿಯರೊಂದಿಗೆ ಸೇರಿ, ಗಂಗಾತಟಕೆ ಬಂದು-ಗಂಗಾನದಿಯ ದಡಕ್ಕೆ ಬಂದವರಾಗಿ, ಮುಸುಕಿದ-ವ್ಯಾಪಿಸಿರತಕ್ಕ, ಸುಪಲ್ಲವ-ಚಿಳ್ಳೆಯ ತಳಿರ್ಗಳ, ಉತ್ಕರದ-ಸಮೂಹದಿಂದ ಕೂಡಿದ, ಪೊಂಗಲಶಂಗಳಂ-ಚಿನ್ನದ ಕಲಶಂಗಳನ್ನು, ಕೊಂಡು-ತೆಗೆದುಕೊಂಡು, ನಡೆಯಲು-ಹೊರಡಲು, ಅವರವರ-ಆಯಾಯ ಅರಸರು ಮತ್ತು ಅವರ ಸತಿಯರು ಇವರ, ಮೈಗಾವಲ್ಗಳ-ಬೆಂಗಾವಲಾಗಿರತಕ್ಕ, ಪರಿವಾರದಿಂದ-ಸಮುದಾಯದಿಂದ, ಪಾರ್ವರ-ಭೂಸುರೋತ್ತಮರ, ಮಂತ್ರಘೋಷದಿಂ-ಮಂತ್ರಗಳ ಶಬ್ದದಿಂದಲೂ, ನೆರೆದಿಹ-ಸೇರಿರತಕ್ಕ, ಮಹಾಜನರ-ಹೆಚ್ಚಾದ ಜನಗಳ, ಸಂದಣಿಗಳಿಂ-ಗುಂಪುಗಳಿಂದಲೂ, ಪಾಠಕರ-ಹೊಗಳುಭಟರ, ನೃತ್ತ-ನಾಟ್ಯದ, ವಾದ್ಯ-ಮೃದಂಗ ಮೊದಲಾದವುಗಳ, ಗೀತಂಗಳ-ಹಾಡುಗಳ, ವಿಲಾಸದ-ಸಂಭ್ರಮದ, ಉತ್ಸವದಿಂದ-ಆನಂದದಿಂದ, ಚೆಲ್ವಾದುದು-ನೋಡುವುದಕ್ಕೆ ಅಂದವಾಗಿತ್ತು ||೪೪||

ಟೀ|| ಆನೆಗಳ ಮೇಲೆ-ಹಸ್ತಿಗಳ ಮೇಲ್ಗಡೆ, ಕುವರಿಯರು- ಬಾಲೆಯರು, ಇರ್ದು-ಇದ್ದವರಾಗಿ, ಅಡಿಗಡಿಗೆ-ಸಲಸಲಕ್ಕೂ, ಮುತ್ತುಗಳ ಸೋನೆಯನು-ಮುತ್ತಿನ ಮಳೆಯನ್ನು, ಸೂಸುತಿರೆ-ಸುರಿಯುವಂತೆ ಮಾಡುತ್ತಿರಲು, ನೃಪಸತಿಯರ-ಅರಸುಗಳ ರಾಣಿಯರ, ಊಳಿಗದ-ಸೇವಾವೃತ್ತಿಯಲ್ಲಿರತಕ್ಕ, ತರಳೆಯರು-ಬಾಲೆಯರು, ಮನ್ಮಥನ-ಮದನನ, ಸೇನೆಗಳತೆರದಿಂದ-

---

ಗೊಂಡೂ, ಅನಿರುದ್ಧನು ಉಷೆಯನ್ನು ಕೂಡಿಕೊಂಡೂ, ಭೀಮಸೇನನು ಹಿಡಂಬಿಯೊಂದಿಗೂ, ವೃಷಕೇತುವು ಪ್ರಭದ್ರೆ ಸಹಿತನಾಗಿಯೂ ||೪೨|| ಮಯೂರಧ್ವಜನು ಲೀಲಾವತಿಯೊಂದಿಗೂ, ನೀಲಧ್ವಜನು ಸುನಂದೆಯೊಂದಿಗೂ, ಯೌವನಾಶ್ವನು ಪ್ರಭಾವತಿ ಸಹಿತನಾಗಿಯೂ, ಸಾಲ್ವಾನುಜನು ಧಮ್ಮಿಲ್ಲೆಯಿಂದೊಡಗೂಡಿಯೂ, ಹಂಸಧ್ವಜ, ಇಂದುಹಾಸ, ವೀರವರ್ಮ, ತಾಮ್ರಧ್ವಜಾದಿಗಳೆಲ್ಲಾ ತಮ್ಮತಮ್ಮ ರಾಣಿಯರಿಂದೊಡಗೂಡಿ ಗಂಗಾ ನದಿಯ ನೀರನ್ನು ಚಿನ್ನದ ಕಲಶಂಗಳಲ್ಲಿ ತುಂಬಿಕೊಂಡು||೪೩|| ಹೊರಟವರಾದರು. ಅವರ ಹಿಂದೆ ಚತುರಂಗ ಬಲವೂ ನಡೆಯಿತು. ಬ್ರಾಹ್ಮಣರೆಲ್ಲಾ ಮಂತ್ರ ಘೋಷವಂ ಗೈಯುತ್ತಲಿದ್ದರು, ಸ್ತುತಿಪಾಠಕರು ಹೊಗಳುತ್ತ ಹೊರಟರು. ನೃತ್ಯಗೀತಂಗಳ ಧ್ವನಿಯು ಸುಮನೋಹರವಾಗಿತ್ತು. || ೪೪ || ಆನೆಗಳ ಮೇಲೆ ಬಾಲೆಯರನೇಕರು ಕುಳಿತು ಮುತ್ತುಗಳ ಸೇಸೆಗಳಂ ಸೂಸುತ್ತಲಿದ್ದರು. ಮನ್ಮಥನ ಸೇನೆಯೋ ಎಂಬಂತೆ ಸಾಂದ್ರವಾಗಿ

ನೃಪಸತಿಯರೂಳಿಗದತರಳೆಯರ್ಕಂಗೊಳಿಸಲು ‖ ನಾನಾವಿಧದೊಳೆಸೆವಶೃಂಗಾರವಿಭವದಿಂ | ಭೂನುತಾಶ್ಚರ್ಯಮಾಗಿರೆಜಲಾಗಮಕೆಹರಿ | ತಾನೆಬರೆಮೊಳಗಿದುವು ದೇವದುಂದುಭಿಕರೆದ ರರಳಮಳೆಗಗನದಿಂದ ‖ ೪೫ ‖ ದೇವದೇವರದೇವ ನೆಂಬುದಂ ಮಾನುಷ್ಯ | ಭಾವದಿಂಲಕ್ಷ್ಮೀವಿಲಾಸನೆಂತೆಂಬುದಂ| ಗೋವಳಯರೊಡನಾಟದಿಂದಲಾಗಾಡಿದಂತೀಗಪದನಖದೊಳೊಗೆದು ‖ ಪಾವನವೆನಿಪಗಂಗಾಜಲವನೆತ್ತುವನು | ಹಾವಿಭುವಿನೆಸೆವಲೀಲೆಗೆಕೈಮುಗಿದುಕುಂತಿ | ದೇವಕಿಯರಚ್ಯುತನವಸನಮಂಪಿಡಿದು ರುಕ್ಮಿಣಿಯಸೆರಗಂಬಿಗಿದರು ‖೪೬‖ ನೋಡಿದಂನಾರದಮುನೀಂದ್ರನೀಕೌತುಕವ | ನಾಡಿದಂಸತ್ಯಭಾಮೆಯಮನೆಗೆಬಂದುನೀಂ| ಮಾಡುವುಜ್ಜುಗಮಿದೇನೆಲೆದೇವಿಮಂದಿರದೊಳಧ್ವರಾರಂಭಕೀಗ ‖ ಆಡಂಬರದೊಳಂಬುಕಲಶಂಗಳಂಪಿಡಿಯೆ | ಕೂಡಿದ ಚತುಃಷಷ್ಟಿದಂಪತಿಗಳೊಗ್ಗಿನೊಳ್ | ಗಾಡಿಮಿಗೆರುಕ್ಮಿಣಿವಿರಾಜಿಸುವಳೇವೇಳ್ಕೆನವಳಭಾಗ್ಯವನೆಂದನು ‖ ೪೭ ‖ ಛತ್ರಚಾಮರ

---

ದಳಗಳ ಪರಿಯಿಂದ, ಕಂಗೊಳಿಸಲು-ಶೋಭಿಸುತ್ತಿರಲು, ನಾನಾವಿಧದೊಳು-ಬಗೆಬಗೆಯಾಗಿ, ಎಸೆವ-ಹೊಳೆಯುವ, ಶೃಂಗಾರ-ಸೊಗಸಿನ, ವಿಭವದಿಂದ-ವೈಭವದಿಂದ, ಭೂ-ಭೂಮಂಡಲದಲ್ಲಿ, ನುತ-ಹೊಗಳುವುದಕ್ಕೆ ತಕ್ಕ, ಆಶ್ಚರ್ಯಮಾಗಿರೆ-ಅಚ್ಚರಿಯಾಗಿರಲು, ಹರಿ-ಕೃಷ್ಣನು, ತಾನೆ-ತಾನಾಗಿಯೆ, ಜಲಾಗಮಕೆ-ನೀರನ್ನು ತರಲು, ಬರೆ-ಬರಲಾಗಿ, ದೇವದುಂದುಭಿ-ದೇವತೆಗಳ ದುಂದುಭಿಯು, ಮೊಳಗಿದವು-ಶಬ್ದಮಾಡಲ್ಪಟ್ಟಿತು, ಅರಳ ಮಳೆ-ಹೂ ಮಳೆಯು, ಗಗನದಿಂದ-ಆಗಸದಿಂದ, ಕರೆದವು-ಸುರಿಸಲ್ಪಟ್ಟವು. ‖೪೫‖

ಟೀ‖ ಕುಂತಿ ದೇವಕಿಯರು- ಕುಂತಿದೇವಿಯೂ ಮತ್ತು ದೇವಕಿದೇವಿಯೂ ಸಹ, ದೇವದೇವರ ದೇವನು=ದೇವಸುರರಿಗೆಲ್ಲಾ, ದೇವರ-ಪ್ರಭುವಾದ ಬ್ರಹ್ಮನಿಗೆ, ದೇವನು-ಒಡೆಯನು, ಎಂಬುದಂ-ಎನ್ನತಕ್ಕದ್ದನ್ನೂ, ಮಾನುಷ್ಯಭಾವದಿಂ-ಮನುಷ್ಯಸಂಬಂಧವಾದ ನಡತೆಯಿಂದ, ಲಕ್ಷ್ಮೀವಿಲಾಸನು-ಇಂದಿರಾಪ್ರಿಯನು, ಇಂತು-ಹೀಗೆಂದು, ಎಂಬುದಂ-ಎನ್ನುವುದನ್ನೂ, ಆಗ-ಪೂರ್ವದಲ್ಲಿ, ಗೋವಳಯರ-ಪಶುಪಾಲಕರ, ಒಡನೆ-ಜೊತೆಯಲ್ಲಿ, ಆಟದಿಂದ-ಆಡುವಿಕೆಯಿಂದ, ಆಡಿದಂತೆ-ಆಡಿದ ರೀತಿಯಾಗಿ, ಈಗ-ಈಗಲೂ ಕೂಡ, ಪದನಖದೊಳು-ತನ್ನ ಕಾಲ್ಬೆರಳಿನ ಉಗುರಿನಿಂದಲೇ, ಒಗೆದು-ಉದ್ಭವಿಸಿ, ಪಾವನವೆನಿಸುವ-ಪವಿತ್ರವಾದದ್ದೆನ್ನಿಸಿಕೊಂಡಿರತಕ್ಕ, ಗಂಗಾಜಲವನು-ಗಂಗಾತೀರ್ಥವನ್ನು, ಎತ್ತುವ-ತುಂಬಿಕೊಳ್ಳುವ, ಮಹಾವಿಭುವಿನ-ಮಹಾತ್ಮೆಯುಳ್ಳ ಕೃಷ್ಣಸ್ವಾಮಿಯ, ಎಸೆವ-ಕಾಂತಿಯುಕ್ತವಾದ, ಲೀಲೆಗೆ-ಸಂಭ್ರಮಕ್ಕೆ, ಕೈಮುಗಿದು-ವಂದಿಸಿದವರಾಗಿ, ಅಚ್ಯುತನ-ಕೃಷ್ಣಸ್ವಾಮಿಯ, ವಸನವಂ-ಬಟ್ಟೆಯನ್ನು, ಪಿಡಿದು-ಹಿಡಿದುಕೊಂಡು, ರುಕ್ಮಿಣಿಯ ಸೆರಗಂ-ರುಕ್ಮಿಣಿಯ ಸೀರೆಯ ಸೆರಗಿನ ತುದಿಯನ್ನು, ಬಿಗಿದರು-ಕಟ್ಟಿದವರಾದರು. ‖೪೬‖

ಟೀ‖ ಈ ಕೌತುಕವನು-ಈ ಆಶ್ಚರ್ಯಕರವಾದ ಸಂಗತಿಯನ್ನು, ನಾರದಮುನೀಂದ್ರನು- ದೇವಮುನಿಯು, ನೋಡಿದಂ-ನೋಡಿದವನಾದನು, ಸತ್ಯಭಾಮೆಯ ಮನೆಗೆ ಬಂದು-ಸತ್ಯಭಾಮೆಯ ಮಂದಿರಕ್ಕೆ ಬಂದವನಾಗಿ, ಎಲೆ ದೇವಿ-ಎಲೈ ಸತ್ಯಭಾಮಾದೇವಿಯೇ, ಮಂದಿರದೊಳು-ಮನೆಯೊಳಗೆ, ನೀಂ-ನೀನಾದರೊ, ಮಾಡುವ-ಮಾಡತಕ್ಕ, ಉಜ್ಜುಗಂ-ಕಾರ್ಯವು, ಇದೇನು-ಇದು ಎಂಥಾದ್ದು, ಈಗ-ಈಗಲಾದರೊ, ರುಕ್ಮಿಣಿ-ರುಕ್ಮಿಣೀದೇವಿಯು, ಅಧ್ವರ-ಅಶ್ವಮೇಧದ, ಆರಂಭಕೆ-ಮೊದಲು ಮಾಡುವಿಕೆಗೆ, ಕೂಡಿದ-ನೆರದಿರುವ, ಚತುಷಷ್ಟಿದಂಪತಿಗಳ-ಅರವತ್ತುನಾಲ್ಕುಜನ ಗಂಡ ಹೆಂಡರುಗಳ, ಒಗ್ಗಿನೊಳ್-ಸಮುದಾಯದಲ್ಲಿ, ಗಾಡಿಮಿಗೆ-ಎಲ್ಲರೂ ಕಾಣುವಂತೆ, ಅಂಬು ಕಲಶಂಗಳಂ ಪಿಡಿಯೆ-ನೀರಿನ ಕಲಶಗಳನ್ನು ಹಿಡಿದುಕೊಳ್ಳುವುದಕ್ಕೆ, ಆಡಂಬರದೊಳು-ಸಂಭ್ರಮಾತಿಶಯದಿಂದ, ವಿರಾಜಿಸುವಳು-ಕಾಂತಿಯುಕ್ತಳಾಗಿದ್ದಾಳೆ, ಅವಳ-ಆ ರುಕ್ಮಿಣೀದೇವಿಯ, ಭಾಗ್ಯವನು-ಐಸಿರಿಯನ್ನು, ಏವೇಳ್ಕೆನು-ಏನೆಂದು ನುಡಿಯಲಿ, ಎಂದು ಆಡಿದಂ-ಎಂಬುದಾಗಿ ಹೇಳಿದನು. ‖೪೭‖

---

ರುತ್ತಲಿರುವ ದಂಪತಿಗಳ ಮಧ್ಯದೊಳಗೆ ರಾರಾಜಿಸುತ್ತಲಿರುವ ಶ್ರೀಕೃಷ್ಣಪರಮಾತ್ಮನಮೇಲೆ ಹೂ ಮಳೆಯು ಆಕಾಶದಿಂದ ಸುರಿಯುತ್ತಲಿತ್ತು, ದೇವದುಂದುಭಿಗಳು ಮೊಳಗಿದವು. ‖೪೫‖ ದೇವದೇವೋತ್ತಮನೂ, ಲಕ್ಷ್ಮೀಪ್ರಿಯನೂ ಆದ ಶ್ರೀಮನ್ನಾರಾಯಣನು ಗೋಕುಲದಲ್ಲಿ ಬಾಲಲೀಲೆಯಿಂದ ವಿನೋದವನ್ನುಂಟುಮಾಡಿದಂತೆ, ಈಗಲೂ ಗಂಗೋದಕವನ್ನು ತರುವ ವಿನೋದದಿಂದ ನೋಟಕರನ್ನು ಬೆರಗುಮಾಡುತ್ತಲಿರುವನೆಂಬಂತಿರುವ ಕೃಷ್ಣಮೂರುತಿಯ ಪೀತಾಂಬರದ ತುದಿಗೆ ರುಕ್ಮಿಣಿಯ ಸೆರಗನ್ನು ಕುಂತಿ ದೇವಕಿಯರು ಕಟ್ಟಿದವರಾದರು. ‖ ೪೬ ‖ ಈ ಅಚ್ಚರಿಯನ್ನು ನಾರದಮುನೀಂದ್ರನು ನೋಡಿ, ಸತ್ಯಭಾಮೆಯ ಮನೆಗೆ ಬಂದು, ಅಮ್ಮಾ ಸತ್ಯಭಾಮಾ! ಕೃಷ್ಣ ರುಕ್ಮಿಣಿಯರು ಧರ್ಮರಾಯನ ಯಾಗಕ್ಕಾಗಿ ಗಂಗೋದಕವಂ ತರಲು ಹೋಗಿರುವರು, ಅರವತ್ತುನಾಲ್ಕು ದಂಪತಿಗಳಿಂದೊಡಗೂಡಿ ರಾರಾಜಿಸುತ್ತಲಿದ್ದಾರೆ ನೀನುಮಾತ್ರ ಏಕಾಕಿನಿಯಾಗಿರುವುದು ಸರಿಯಲ್ಲ ಇದ

ಧೂಪಗಂಧಕುಸುಮಾವಳಿಯ | ಚಿತ್ರವೈಭವದಿಂದದಂಪತಿಗಳಾಗಿಬಹು | ಪುತ್ರಪೌತ್ರರ್ವೆರಸಿಕೈವಾರಿಸುವಸಕಲಜನದಸನ್ಮಾನ ದಿಂದ ‖ ಅತ್ರಿಮೊದಲಾದಋಷಿಗಳಮುಂದೆನೆಲೆದಿಹಧ | ರಿತ್ರಿಯಸಮಸ್ತರಾಜೋತ್ತಮರನಡುವೆಶತ | ಪತ್ರನೇತ್ರನಬಳಿಯ ರಂಜಿಸುವರುಕ್ಮಿಣಿಯಭಾಗ್ಯಮದನೇಂಪೊಗಳ್ವೆನು ‖ ೪೮ ‖ ಉರ್ವಮೋಹದರಾಣಿಕೃಷ್ಣಂಗೆನೀನೆಂದು | ಗರ್ವಿಸುವೆಬರಿದೆ ರುಕ್ಮಿಣಿಯಂತೆಶೌರಿಸಹಿ | ತುರ್ವಿಪನಯಜ್ಞದೊಳ್ದಂಪತಿಗಳಾಗಿರ್ದವರ್ಗೆದುರ್ಲಭಮಿದೆಂದು ‖ ಗೀರ್ವಾಣನದಿಯಸಲಿಲಾಗ ಮಕೆಪೊರಮಟ್ಟು | ಸರ್ವಸಂಭ್ರಮದಿಂದವರ್ತಿಸದೆಮನೆಯೊಳಿಹ | ನಿರ್ವಾಹಮೇನೆಂದುನಾರದಂಕೇಳ್ದೊಡಾದೇವಿನಗುತಿಂ ತೆಂದಳು ‖೪೯‖ ಮುನಿಪನೀನರಿಯದವನಂತೀಗಬಂದೆನ್ನ | ಮನವನಾರೈದುಕೇಳ್ದಪೆದನುಜರಿಪುತನ್ನ | ಮನೆಯೊಳಿರ್ದಪನೆಂದು ಸತ್ಯಭಾಮಾದೇವಿಕೃಷ್ಣನಂತೋರಿಸಲ್ಕೆ ‖ ಜನಪತಿಯಮುಂದೆರುಕ್ಮಿಣಿಸಹಿತತೊಳಗುತಿಹ | ವನಜಾಕ್ಷನಂಕಂಡೆನಲ್ಲಿಮೋ

---

ಟೀ‖ ಛತ್ರ–ಬೆಳ್ಗೊಡೆಯು, ಚಾಮರ- ಚಾಮರವು, ಧೂಪ- ಧೂಪಕ್ಕೆ ಬೇಕಾದ ಹಾಲುಮಡ್ಡಿ ಮೊದಲಾದವು, ಗಂಧ-ಪರಿಮಳವು, ಕುಸುಮ–ಪುಷ್ಪವು ಇವುಗಳ, ಆವಳಿಯ–ಗುಂಪಿನ, ಚಿತ್ರ-ಆಶ್ಚರ್ಯಕರವಾದ, ವೈಭವದಿಂದ–ಆನಂದದಿಂದ, ದಂಪತಿಗಳಾಗಿ–ಗಂಡಹೆಂಡಿರಾಗಿ, ಪುತ್ರ ಪೌತ್ರರ್ವೆರಸಿ–ಮಕ್ಕಳು ಅವರ ಮಕ್ಕಳು ಮೊದಲಾದವರೊಂದಿಗೆ ಸೇರಿ, ಕೈವಾರಿಸುವ–ಹೊಗಳುವ, ಸಕಲಸನ್ಮಾನದಿಂದ–ಅಶೇಷವಾದ ಮನ್ನಣೆಗಳಿಂದ, ಅತ್ರಿ ಮೊದಲಾದ–ಅತ್ರಿಯೇ ಆದಿಯಾಗಿರತಕ್ಕ, ಋಷಿಗಳ ಮುಂದೆ–ತಪಸ್ವಿಗಳೆದುರಿನಲ್ಲಿ, ಶತಪತ್ರನೇತ್ರನ–ಕಮಲದೆಲೆಗಳಂತಿರುವ ಕಣ್ಣುಗಳಿಂದ ಕೂಡಿದ ಕೃಷ್ಣಸ್ವಾಮಿಯ, ಬಳಿಯ–ಸಮೀಪದೊಳಗೆ, ರಂಜಿಸುವ–ಕಾಂತಿಯುಕ್ತಳಾಗಿರತಕ್ಕ, ಋಕ್ಮಿಣಿಯ-ಋಕ್ಮಿಣೀದೇವಿಯ, ಭಾಗ್ಯಂ-ಐಸಿರಿಯು, ಅದನು–ಅವನ್ನು, ಏವೊಗಳ್ವೆನು–ಏನೆಂದು ನುಡಿಯಲಿ. ‖೪೮‖

ಟೀ‖ ನಾರದಂ–ಸುರಮುನಿಯಾದರೊ, (ಸತ್ಯಭಾಮೆಯೊಂದಿಗೆ) ಕೃಷ್ಣಂಗೆ– ಕೃಷ್ಣಮೂರುತಿಗೆ, ನೀನು-ನೀನಾದರೊ, ಉರ್ವ-ಹೆಚ್ಚಾದ, ಮೋಹದ-ಮೋಹದಿಂದ ಕೂಡಿದ, ರಾಣಿ–ಸತಿಯಾಗಿರುವೆನು, ಎಂದು–ಎಂಬತೆರನಾಗಿ, ಗರ್ವಿಸುವೆ-ಹೆಮ್ಮೆಯನ್ನುಂಟಾಗಿರುವಿ, ಉರ್ವಿಪನ–ಧರ್ಮನಂದನನ, ಯಜ್ಞದೊಳ್– ಯಾಗದೊಳಗೆ, ಶೌರಿಸಹಿತ– ಕೃಷ್ಣನೊಂದಿಗೆ, ಋಕ್ಮಿಣಿಯಂತೆ-ಋಕ್ಮಿಯ ರೀತಿಯಾಗಿ, ದಂಪತಿಗಳು– ಸತಿಪತಿಗಳು, ಆಗಿರ್ದವರ್ಗೆ-ಆಗಿರತಕ್ಕವರಿಗೆ, ಇದು–ಈ ಕಾರ್ಯವು, ದುರ್ಲಭಂ–ದುಸ್ಸಾಧ್ಯವು, ಎಂದು–ಎಂಬತೆರನಾಗಿ, ಗೀರ್ವಾಣನದಿಯ-ದೇವನದಿಯಾದ ಮಂದಾಕಿನಿಯ, ಸಲಿಲ–ಉದಕವನ್ನು, ಆಗಮಕ್ಕೆ-ತರಲೋಸುಗ, ಪೊರಮಟ್ಟು–ನಡೆದವಳಾಗಿ, ಸರ್ವ-ಸಕಲವಾದ, ಸಂಭ್ರಮದಿಂದ–ಆನಂದದಿಂದ, ವರ್ತಿಸದೆ–ಇರುವುದನ್ನುಳಿದು, ಮನೆಯೊಳು–ಮಂದಿರದೊಳಗೆ, ಇಹ–ಇರತಕ್ಕ, ನಿರ್ವಾಹಂ-ಅನಿರ್ವಾಹವಾದ ಕಾರ್ಯವು, ಏನು-ಏನಾಗಿದೆ, ಎಂದು-ಎಂಬ ತೆರನಾಗಿ, ಕೇಳ್ದೊಡೆ–ಪ್ರಶ್ನೆಮಾಡಲು, ಆ ದೇವಿ–ಆ ಸತ್ಯಭಾಮೆಯಾದರೊ, ನಗುತ–ಮುಗುಳ್ನಗೆಯನ್ನೈದುತ್ತ, ಇಂತು–ಮುಂದೆ ಹೇಳುವಂತೆ, ಎಂದಳು–ಉತ್ತರಕೊಟ್ಟಳು. ‖೪೯‖

ಟೀ‖ ಸತ್ಯಭಾಮಾದೇವಿ- ಸತ್ಯಭಾಮೆಯಾದರೆ, ಮುನಿಪ–ಎಲೈ ಸುರಗುರುವೆ, ನೀನು–ನೀನಾದರೊ, ಅರಿಯದವನಂತೆ-ಯಾರಿಗೂ ಗೋಚರವಿಲ್ಲದ ಹಾಗೆ, ಬಂದು-ಬಂದವನಾಗಿ, ಈಗ-ಈಗಲಾದರೊ, ಎನ್ನ-ನನ್ನ, ಮನವನು–ಮನಸ್ಸನ್ನು, ಆರೈದು–ಪರೀಕ್ಷಿಸಿ, ಕೇಳ್ದಪೆ-ಕೇಳುತ್ತೀಯೆ, ದನುಜರಿಪು- ರಾಕ್ಷಸಾಂತಕನಾದ ಕೃಷ್ಣಸ್ವಾಮಿಯು, ತನ್ನ ಮನೆಯೊಳು–ತನ್ನ ಮಂದಿರದಲ್ಲಿ, ಇರ್ದಪನು– ಇದ್ದಾನೆ, ಎಂದು– ಎಂಬತೆರನಾಗಿ, ಕೃಷ್ಣನಂ– ಕೃಷ್ಣಮೂರುತಿಯನ್ನು, ತೋರಿಸಲ್ಕೆ-ಕಾಣಿಸಲು, ನಾರದಂ-ನಾರದ ಮುನಿಯಾದರೊ, ಅಲ್ಲಿ–ಯಜ್ಞಶಾಲೆಯಲ್ಲಿ, ರುಕ್ಮಿಣಿ ಸಹಿತ–ರುಕ್ಮಿಣಿಯೊಂದಿಗೆ, ಜನಪತಿಯ ಮುಂದೆ-ಧರ್ಮತನಯನ ಎದುರು ಭಾಗದಲ್ಲಿ, ತೊಳಗುತಿಹ–ಹೊಳೆಹೊಳೆವ, ವನಜಾಕ್ಷನಂ–ಕಮಲನೇತ್ರನನ್ನು, ಕಂಡೆನು–ಈಕ್ಷಿಸಿದೆನು, ಮೇಣ್–ಅಲ್ಲದೆ, ಇಲ್ಲಿ-ಈ ಎಡೆಯೊಳಗೆ, ಮೋಹನರೂಪನಾದ– ಭ್ರಮಣೆಯನ್ನುಂಟುಮಾಡುವ ಆಕೃತಿಯನ್ನುಂಟಾಗಿ, ಕಂಗೊಳಿಸುತ–ಹೊಳೆಯುತ್ತ, ಇರ್ದಪನು-ಇದ್ದಾನೆ, ಎಂದು-ಎಂಬತೆರನಾಗಿ, ಬೆರಗಾದನು–ಅಚ್ಚರಿಯಿಂದ ಕೂಡಿದನು. ‖೫೦‖

---

ರಿಂದ ಕೃಷ್ಣನಿಗೆ ನಿನ್ನಲ್ಲಿ ಪ್ರೇಮವಿಲ್ಲವೆಂದು ತೋರುತ್ತದೆಂದು ನುಡಿದನು. ‖೪೭‖ ಆ ರುಕ್ಮಿಣಿಯಾದರೊ ಸಕಲ ರಾಜಾಧಿರಾಜರಿಂದಲೂ ಮಹಾ ಮುನಿಗಳಿಂದಲೂ ವಂದನೀಯಳಾಗಿ ಮೆರೆಯುತ್ತಲಿದ್ದಾಳೆ. ಆಕೆಯ ಭಾಗ್ಯವನ್ನೆಷ್ಟು ಕೊಂಡಾಡಿದರೂ ಸಾಲದು ‖೪೮‖ ಕೃಷ್ಣನಿಗೆ ನೀನು ಪ್ರಿಯಪತ್ನಿಯೆಂದು ಅಹಂಕಾರವನ್ನೇಕೆ ಪಡುತ್ತಲಿರುವಿ. ಅಷ್ಟು ಉತ್ಸವದಿಂದ ಕೃಷ್ಣರುಕ್ಮಿಣಿಯರೀರ್ವರೂ ಇರುವಾಗ ನೀನೊಬ್ಬಳೇ ಮಾತ್ರ ಮನೆಯಲ್ಲಿಯೇ ಏತಕ್ಕಿರುವೆಯೆಂದು ಮುಗುಳ್ನಗೆಯಿಂದ ಕೇಳಿದವನಾದನು. ‖೪೯‖ ಆಗ ಸತ್ಯಭಾಮೆಯಾದರೊ, ಈ ನಾರದನು ಕಲಹಪ್ರಿಯನೆಂದರಿತು ಕೃಷ್ಣಸ್ವಾಮಿಯು ಇಲ್ಲಿಯೇ ಇರುವನೆಂದು ನುಡಿದಳು.

ಹನರೂಪನಾಗಿಕಂಗೊಳಿಸುತಿರ್ದಪನೆಂದುನಾರದಂಬೆರಗಾದನು ||೫೦|| ನಾಂಬಂದಬಗೆಯನರಿದಿಲ್ಲಿನೀನಿಹೆಸಾಕ | ದೇಂಬಯುಲ ಮನುಜಲೀಲೆಗಳುನಿನಗೆಂದುಪೀ | ತಾಂಬರಂಗಭಿನಮಿಸಿಬೀಳ್ಕೊಂಡುನಾರದಂಪೊರನುಟ್ಟುವಹಿಲದಿಂದ|| ಜಾಂಬವತಿಯಾಲಯ ಕೆನಡೆತಂದುತಾಯೆಕನು | ಲಾಂಬಕಂನೃಪನಮುಖಕರಸಿಯರ್ವೆರಸಿಗಂ | ಗಾಂಬುವಂತಹನಲ್ಲಿಸಂಭ್ರಮದೊಳೇಕೆಪೋಗದೆಮನೆ ಯೊಳಿಹೆಯೆಂದನು ||೫೧|| ಎಂದೊಡೆಮುನೀಂದ್ರನಾವೆಲ್ಲರುಂನಿಮಿಷಮರವಿಂದದಳನೇತ್ರನನಗಲ್ದುಜೀವಿಸಲರಿಯೆ | ಮಿಂದೆಮ್ಮ ಮನೆಯೊಳಿರ್ದಪನಾತನಿದರೊಳೆನಗೆಮತ್ಸರವಿದೇಕೆ || ತಂದೆನಿನ್ನಾಟಮುಂಬಲ್ಲೆನೆನೆಜಾಂಬವತಿ | ಯಂದೇವಋಷಿಪರಸಿಬೀಳ್ಕೊಂ ಡುರಾಣಿಯರ | ಮಂದಿರದೊಳೆಲ್ಲಿಯುಂಕೃಷ್ಣನಿಹನೆಂದರಿದುಮುಖಶಾಲೆಗೈತಂದನು || ೫೨ || ಅಲ್ಲಿಂದನಾರದಂಮತ್ತೆಬಂದ

ಟೀ|| ನಾರದಂ–ನಾರದ ಮುನಿಯು, ನೀನು–ನೀನಾದರೊ, ನಾಂ–ನಾನು, ಬಂದ–ಬಂದಂಥ, ಬಗೆಯನು–ತೆರನನ್ನು, ಅರಿದು–ತಿಳಿದವನಾಗಿ, ಅಲ್ಲಿ–ಆ ಸತ್ಯಭಾಮೆಯ ಬಿಡಾರದೊಳಗೆ, ಇಹೆ–ಇದ್ದೀಯೆ, ಸಾಕು–ಈ ನುಡಿಯು ಇನ್ನು ಬೇಡ, ನಿನಗೆ–ನಿನಗಾದರೂ, ಮನುಜಲೀಲೆಗಳು–ನರಲೀಲೆಗಳು, ಅದೇಂ–ಇನ್ನೆಂಥಾದ್ದೊ, ಎಂದು–ಎಂಬತೆರನಾಗಿ ನುಡಿದು, ಪೀತಾಂಬರಂಗೆ–ಕೃಷ್ಣಮೂರುತಿಗೆ, ಅಭಿನಮಿಸಿ–ನಮಸ್ಕಾರವಂಮಾಡಿ, ಬೀಳ್ಕೊಂಡು–ಅನುಜ್ಞೆಯನ್ನು ಪಡೆದುಕೊಂಡು, ವಹಿಲದಿಂದ–ತಡಮಾಡದೆ, ಪೊರನುಟ್ಟು–ಹೊರಟವನಾಗಿ, ಜಾಂಬವತಿಯ–ಜಾಂಬವತಿಯೆಂಬಾಕೆಯ, ಆಲಯಕೆ–ಮಂದಿರಕ್ಕೆ, ನಡೆತಂದು–ಬಂದವನಾಗಿ, ತಾಯೆ–ಎಲೈ ಜಾಂಬವತಿಯೆ, ನೃಪನ–ಧರ್ಮಪುತ್ರನ, ಮುಖಕೆ–ಯಾಗಕ್ಕೆ, ಅರಸಿಯರ್ವೆರಸಿ–ರಾಣಿಯರೊಂದಿಗೆ ಕೂಡಿ, ಕಮಲಾಂಬಕಂ–ಪದುಮನೇತ್ರನು, ಗಂಗಾಂಬುವಂ–ಗಂಗಾನದೀ ತೀರ್ಥವನ್ನು, ತಹನು–ತೆಗೆದುಕೊಂಡು ಬರುವನು, ಸಂಭ್ರಮದೊಳ್–ಸಡಗರದಿಂದ, ಅಲ್ಲಿ–ಆ ಎಡೆಗೆ, ಪೋಗದೆ–ಹೋಗದೆ, ಏಕೆ–ಯಾವ ನಿಮಿತ್ತವಾಗಿ, ಮನೆಯೊಳು–ಮಂದಿರ ದಲ್ಲಿಯೆ, ಇಹೆ–ಇರುತ್ತಿ, ಎಂದನು–ಎಂಬುದಾಗಿ ಹೇಳಿದನು ||೫೧||

ಟೀ|| ಎಂದೊಡೆ–ನಾರದನು ಹೀಗೆಂದು ನುಡಿಯಲು, ಮುನೀಂದ್ರ–ಮುನಿನಾಥನೇ, ನಾವೆಲ್ಲರುಂ–ನಾವುಗಳೆಲ್ಲಾ, ಅರ ವಿಂದದಳನೇತ್ರನನು–ಕಮಲನಯನನನ್ನು, ನಿಮಿಷಂ–ಒಂದು ನಿಮಿಷಕಾಲವಾದರೂ, ಅಗಲ್ದು–ತೊರೆದು, ಜೀವಿಸಲು–ಪ್ರಾಣ ಸಹಿತರಾಗಿರಲು, ಅರಿಯೆವು–ತಿಳಿದಿಲ್ಲವು, ಸನಾತನನು–ಅನಾದಿಯಾದ ಕೃಷ್ಣಮೂರುತಿಯು, ಎಮ್ಮ ಮನೆಯೊಳಗೆ–ನಮ್ಮ ಮಂದಿರದಲ್ಲಿ, ಇಂದು–ಈದಿನ, ಇರ್ದಪನು–ಇದ್ದಾನೆ, ಇದರೊಳು–ಈ ವಿಚಾರವಾಗಿ, ಮತ್ಸರಂ–ಅಸೂಯೆಯು, ಎನಗೆ–ನನಗಾ ದರೋ, ಏಕೆ–ಏನು ಪ್ರಯೋಜನವು, ತಂದೆ–ಅಯ್ಯಾ ಸುರನಾಥನೆ, ನಿನ್ನ ಆಟಮುಂಬಲ್ಲೆನು–ನೀನು ಮಾಡತಕ್ಕ ಹುಡುಗ ಕೆಲ ಸಗಳೆಲ್ಲಾ ನನಗೆ ತಿಳಿದೇ ಇವೆ, ಎನೆ–ಎಂದು ನುಡಿಯಲು, ದೇವಋಷಿ–ಸುರಮುನಿಯು, ಜಾಂಬವತಿಯೆಂಬಾಕೆಯನ್ನು, ಪರಸಿ–ಹರಸಿದವನಾಗಿ, ಬೀಳ್ಗೊಂಡು–ಆಕೆಯ ಅನುಜ್ಞೆಯನ್ನೈದಿ, ಕೃಷ್ಣನು – ಕೃಷ್ಣಸ್ವಾಮಿಯು, ರಾಣಿಯರ ಮಂದಿರ ದೊಳು–ಹೆಂಡತಿಯರ ಮನೆಗಳಲ್ಲಿ, ಎಲ್ಲಿಯುಂ–ಎಲ್ಲೆಡೆಗಳಲ್ಲಿಯೂ, ಇಹನು–ಇದ್ದಾನೆ, ಎಂದು–ಎಂಬತೆರನಾಗಿ, ಅರಿದು–ತಿಳಿದು ಕೊಂಡು, ಮುಖಶಾಲೆಗೆ–ಯಜ್ಞಮಂಟಪಕ್ಕೆ, ಐತಂದನು–ಬಂದನನಾದನು ||೫೨||

ಟೀ|| ನಾರದಂ–ಸುರಮುನಿಯು, ಮತ್ತೆ–ತಿರುಗಿ, ಅಲ್ಲಿಂದ–ಆ ಕೃಷ್ಣನ ರಾಣಿಯರ ಮಂದಿರಗಳಿಂದ, ಬಂದು–ಬಂದವನಾಗಿ, ಭೂವಲ್ಲಭನನುಂದೆ–ಧರ್ಮತನಯನೆದುರಿಗೆ, ಕಟ್ಟಿರ್ದ–ಕಟ್ಟಿದಂಥ, ಪಲ್ಲವದ–ತಳಿರ್ಗಳಿಂ ಕೂಡಿದ, ಪೊಂಗಲ ಶಮಂ–ಚಿನ್ನದ ಕಲಶವನ್ನು, ಇಲ್ಲಿ–ಈ ಯಾಗಮಂಟಪದಲ್ಲಿ, ರುಕ್ಮಿಣಿಸಹಿತ–ರುಕ್ಮಿಣಿಯೊಂದಿಗೆ, ತಾಳ್ದು–ಹೊಂದಿ, ಋತ್ವಿ ಜರ–ಋತ್ವಿಗ್ಜನಗಳ, ಮುನಿಗಣದ–ತಾಪಸರ ಗುಂಪಿನ, ನೃಪನಿಕರದ– ಅರಸುಗಳ ಸಮುದಾಯದ, ಎಲ್ಲಾಜನಂಗಳ–ಸಕಲ ಜನರ, ಪೊಗಳ್ಕೆಯುಂ–ನುತಿಸುವಿಕೆಯನ್ನು, ಕೈಕೊಂಬ–ಸ್ವೀಕರಿಸುತ್ತಲಿರತಕ್ಕ, ಸಲ್ಲಾಪದಿಂದ–ನುಡಿಗಳಿಂದ, ಎಸೆವುತಿರೆ–ಹೊಳೆಯುತ್ತಿರಲು, ಕಂಡು–ನೋಡಿ, ಬೆರಗಾಗಿ–ಆಚ್ಚರಿಗೊಂಡು, ನಿಲ್ಲದೆ–ಸುಮ್ಮನಿರದೆ, ದೇವಪುರಲಕ್ಷ್ಮೀಪತಿಯನು–ದೇವ

ಆಗ ಕೃಷ್ಣಮೂರುತಿಯು ತನ್ನೆದುರಿಗೆ ಕಂಗೊಳಿಸುತ್ತಲಿರುವುದನ್ನು ನೋಡಿ ಬೆಂಗಾಗಿ ನಿಂತು || ೫೦ || ಅಲ್ಲಿಂದ ಹೊರಟು, ಜಾಂಬವತಿಯ ಮನೆಯಲ್ಲಿಯೂ ಹೀಗೆಯೇ ಮಾಡಿದನು. ಅಲ್ಲಿಯೂ ಜಾಂಬವತಿಯು ಕೃಷ್ಣಸ್ವಾಮಿಯನ್ನು ತೋರಿಸಿದಳು||೫೧|| ಆಗ ಜಾಂಬವತಿಯನ್ನು ನಾರದ ಮುನಿಯು ಆಶೀರ್ವದಿಸಿ ಮುಂದೆ ಹೊರಟು ||೫೨|| ಕೃಷ್ಣನರಾಣಿಯರ ಮನೆಯಲ್ಲೆಲ್ಲಾ ಸ್ವಾಮಿಯು ಇರುವನೆಂದೂ, ಸರ್ವಾಂತರ್ಯಾಮಿಯೆಂದೂ ಅರಿತು, ಅಲ್ಲಿಂದ ಧರ್ಮರಾಯನ ಯಾಗಮಂಟಪವನ್ನು ಸೇರಿದನು. ಅಲ್ಲಿಯೂ ಕೃಷ್ಣನು ರುಕ್ಮಿಣಿಯೊಂದಿಗೆ ಚಿನ್ನದ ಕಲಶದಲ್ಲಿ ಗಂಗೋದಕವಂ ಪಿಡಿದು ಸರ್ವರಿಂದೊಡಗೂಡಿ ನಿಂತಿರುವುದನ್ನು

ಲ್ಲಿಭೂ । ವಲ್ಲಭನಮುಂದೆರುಕ್ಮಿಣಿಸಹಿತಕಟ್ಟೆರ್ದ । ಪಲ್ಲವದಪೊಂಗಲಶನುಂತಾಳ್ದುಋತ್ವಿಜರಮುನಿಗಣದ ನೃಪನಿಕರದ ||
ಎಲ್ಲಾಜನಂಗಳ ಪೊಗಳ್ಕೆಯುಂಕೈಗೊಂಬ । ಸಲ್ಲಾಪದಿಂದೆಸೆವುತಿರೆ ಕಂಡುಬೆರಗಾಗಿ । ನಿಲ್ಲದೆನಿಗಮಸೂಕ್ತದಿಂಸ್ತುತಿಸಿದಂ
ದೇವಪುರಂದಲಕ್ಷ್ಮೀಪತಿಯನು || ೫೩ ||

ಸಂಧಿ ೩೩ ಕ್ಕೆ ಪದ್ಯ ೧೮೬೦ ಕ್ಕಂ ಮಂಗಳಮಸ್ತು.

---

ನಗರ ನಿವಾಸಿಯಾದ ಸ್ವಾಮಿಯನ್ನು, ನಿಗಮಸೂಕ್ತದಿಂದ-ವೇದವಚನಂಗಳಿಂದ, ಸ್ತುತಿಸಿದಂ-ಹೊಗಳಿದವನಾದನು.
ಅ|| ವಿ|| ತುತಿಸು (ತ್ಭ) ಸ್ತುತಿಸು (ತ್ಸ) || ೫೩ ||

ಇಂತು ಟೀಕಾತಾತ್ಪರ್ಯಸಹಿತಮಾದ ಜೈಮಿನಿಭಾರತದೊಳು ಮೂವತ್ತುಮೂರನೆಯ
ಸಂಧಿಯು ಸಮಾಪ್ತಮಾದುದು.

---

ಕಂಡು, ಅತ್ಯುತ್ಸಾಹದಿಂದ ಕೃಷ್ಣಪರಮಾತ್ಮನನ್ನ ಸ್ತೋತ್ರವಂ ಗೈಯುತ್ತಲಿದ್ದನೆಂಬಲ್ಲಿಗೆ

ಟೀಕಾತಾತ್ಪರ್ಯಸಹಿತವಾದ ಜೈಮಿನಿಭಾರತದೊಳು ಮೂವತ್ತುಮರನೆಯ ಸಂಧಿಯು
ಕಥಾಸಾರವು ಸಮಾಪ್ತಿಯನ್ನೈದಿರುವುದು || ೫೩ ||






## ಮೂವತ್ತನಾಲ್ಕನೆಯ ಸಂಧಿ.

ಸೂಚನೆ॥ ಮಿಗೆಮೂಜಗಂದಣಿಯೆಹಯಮೇಧಯಜ್ಞಮಂ । ಮುಗಿಸಿಧರ್ಮಾತ್ಮಜಂಕೃಷ್ಣಾದಿಸಕಲನೃಪ ।
ತಿಗಳನವರವರನಗರಂಗಳ್ಗೆ ಕಳುಹಿಸುಖದಿಂದರಾಜ್ಯಂಗೈದನು ॥

ಅರಸಕೇಳರವತ್ತುನಾಲ್ಕುದಂಪತಿಗಳ । ಧ್ವರದಋತ್ವಿಕ್ಕುಗಳ್ವೆರಸಿವೇದವ್ಯಾಸ । ಪರಮರ್ಷಿಗಂಗೆಯೊಳ್ಜಲ
ದೇವತೆಯನರ್ಚಿಸಿದಮಂತ್ರಿತೋದಕವನು ॥ ವರಪುಷ್ಪಪಲ್ಲವದ ಪೊಂಗಲಶಮಂತುಂಬಿ । ಕರದೊಳನಸೂಯೆಗೀಯ
ಲ್ಕವಳರುಂಧತಿಯ । ಶಿರಕೆಪೊರಿಸಿದೊಡಾಕೆ ರುಕ್ಮಿಣಿಯಸಿರಿಮುಡಿಯೊಳಿರಿಸಿ ನಗುತಿಂತೆಂದಳು ॥ ೧ ॥ ದೇವಿಸಿರಿಮುಡಿಗಲ
ರ್ಪೊರೆಯಹುದುನಿನಗೆನೀ । ರ್ತೀವಿರ್ದಪೊಂಗಲಶಮಿದುತಿಣ್ಣಮಾಗದೆಂ । ದಾವಸಿಷ್ಠನರಮಣಿರುಕ್ಮಿಣಿಗೆವಿನಯದಿಂನುಡಿ
ದೊಡೆಸುಭದ್ರೆಕೇಳ್ದು ॥ ಗೋವರ್ಧನವನಾಂತವಿಶ್ವಕುಕ್ಷಿಯನೆದೆಯೊ । ಳಾವಗಂಧರಿಸಿಕೊಂಡಿರ್ದಮಾನಿನಿಗೆಬಿ । ಣ್ಪಾವುದು

---

ಮೂವತ್ತನಾಲ್ಕನೆಯ ಸಂಧಿ ಪ್ರಾರಂಭವು.

ಸೂ॥ ಧರ್ಮಾತ್ಮಜಂ- ಧರ್ಮನಂದನನಾದರೊ, ಮಿಗೆ-ಅಧಿಕವಾಗಿ, ಮೂಜಗಂ-ತ್ರಿಲೋಕಂಗಳೂ, ದಣಿಯೆ-ಆನಂದವನ್ನೈದುವಂತೆ, ಹಯಮೇಧಯಜ್ಞಮಂ- ಅಶ್ವಮೇಧಯಾಗವನ್ನು, ಮುಗಿಸಿ- ನೆರವೇರಿಸಿ, ಅವರವರ ನಗರಂಗಳ್ಗೆ-ಅವರವರ ರಾಜ್ಯಗಳಿಗೆ, ಕೃಷ್ಣಾದಿ ಸಕಲ ನೃಪತಿಗಳನು-ಕೃಷ್ಣನೇ ಮೊದಲಾದ ರಾಜರನ್ನೆಲ್ಲಾ, ಕಳುಹಿ-ಕಳುಹಿಸಿದವನಾಗಿ, ಸುಖದಿಂದ-ಸೌಖ್ಯವಾಗಿ, ರಾಜ್ಯಂಗೈದನು-ರಾಜ್ಯಭಾರವನ್ನು ಮಾಡಿದನು.

ಅ॥ ವಿ॥ ಧರ್ಮಾತ್ಮಜಂ=ಆತ್ಮ-ತನ್ನಲ್ಲಿ, ಜ-ಹುಟ್ಟಿದವನು (ಸ. ತ) ಧರ್ಮ-ಧರ್ಮರಾಯನ, ಆತ್ಮಜಂ-ಮಗನು (ಷ. ತ.) ಮೂಜಗಂ-ಸ್ವರ್ಗಲೋಕ, ಭೂಲೋಕ, ಪಾತಾಳಂಗಳು.

ಟೀ॥ ಅರಸ-ಜನಮೇಜಯನೆ, ಕೇಳು- ಲಾಲಿಸು, ವೇದವ್ಯಾಸಪರಮರ್ಷಿ- ತಾಪಸೋತ್ತಮನಾದ ವೇದವ್ಯಾಸ ಮುನಿಯು ಅರವತ್ತನಾಲ್ಕು ದಂಪತಿಗಳು ಮತ್ತು ಅಧ್ವರದ ಋತ್ವಿಕ್ಕುಗಳಿಂದ ಕೂಡಿ, ಜಲದೇವತೆಯನು-ಉದಕಾಭಿಮಾನಿದೇವತೆಯನ್ನು, ಗಂಗೆಯೊಳ್-ಗಂಗಾನದಿಯೊಳಗೆ, ಅರ್ಚಿಸಿದ - ಆರಾಧಿಸಿದ, ಮಂತ್ರಿತೋದಕವನು-ಮಂತ್ರಪುರಸ್ಸರವಾದ ನೀರನ್ನು, ವರಪುಷ್ಪಪಲ್ಲವದ- ಉತ್ತಮವಾದ ಹೂ ಚಿಗುರುಗಳಿಂದ ಕೂಡಿದ, ಪೊಂಗಲಶದೊಳ್-ಭಂಗಾರದ ಗಡಿಗೆಯೊಳಗೆ, ತುಂಬಿ-ತುಂಬಿದವನಾಗಿ, ಕರದೊಳು- ತನ್ನ ಕೈಯಿಂದ, ಅನಸೂಯೆಗೆ- ಅತ್ರಿಮಹರ್ಷಿಯಪತ್ನಿಗೆ, ಈಯಲ್ಕೆ-ಕೊಡಲಾಗಿ, ಅವಳು-ಆಕೆಯು, ಅರುಂಧತಿಯಶಿರಕೆ-ಅರುಂಧತಿಯ ತಲೆಯಮೇಲಕ್ಕೆ, ಪೊರಸಿದೊಡೆ-ಹೊರಸಿದ ಕಾರಣ, ರುಕ್ಮಿಣಿಯ ಸಿರಿಮುಡಿಯೊಳು-ರುಕ್ಮಿಣೀದೇವಿಯ ಉತ್ತಮಾಂಗದಲ್ಲಿ, ಆಕೆ-ಆ ವಸಿಷ್ಠನ ಹೆಂಡತಿಯು, ಇರಿಸಿ-ಇಟ್ಟವಳಾಗಿ, ಇಂತು-ಮುಂದೆ ಹೇಳುವಂತೆ, ನಗುತ-ಮುಗುಳ್ನಗೆಯನ್ನೈದುತ್ತ, ಎಂದಳು-ಹೇಳಿದವಳಾದಳು ॥೧॥

ಟೀ॥ ಆ ವಸಿಷ್ಠನ ರಮಣಿ- ಆ ವಸಿಷ್ಠಮುನೀಂದ್ರನರಸಿಯು, ವಿನಯದಿಂ- ಮೆಲ್ನುಡಿಗಳಿಂದ, ರುಕ್ಮಿಣಿಯನ್ನು ಕುರಿತು, ದೇವಿ-ಎಲೌ ಮಾತೆಯೆ, ಅಲರ್-ಪುಷ್ಪವು, ಸಿರಿ ಮುಡಿಗೆ-ಸಂಪದ್ಯುಕ್ತವಾದ ನಿನ್ನ ತುರುಬಿಗೆ, ಪೊರೆಯು-ಭಾರವಾದದ್ದು, ಅಹುದು-ಆಗುತ್ತದೆ, ನೀರ್-ನೀರನ್ನು, ತೀವಿರ್ದ-ತುಂಬಿರತಕ್ಕ, ಇದು ಪೊಂಗಲಶಂ-ಈ ಭಂಗಾರದ ಕೊಡವು, ನಿನಗೆ-ನಿನಗಾದರೊ, ತಿಣ್ಣಂ-ಹೊರಲು ಕಷ್ಟವಾದದ್ದು, ಆಗದೆ-ಆಗದಿರುವುದೆ, (ಭಾರವಾಗಿರುತ್ತದೆ) ಎಂದು-ಎಂಬ ತೆರನಾಗಿ, ನುಡಿದೊಡೆ-ಪೇಳಲು, ಸುಭದ್ರೆ-ಸುಭದ್ರೆಯು, ಕೇಳ್ದು-ಕೇಳಿದವಳಾಗಿ, ಗೋವರ್ಧನವನು-ಗೋವರ್ಧನಗಿರಿಯನ್ನು, ಆಂತ-ಹೊತ್ತುಕೊಂಡಿದ್ದ, ವಿಶ್ವಕುಕ್ಷಿಯನು-ಲೋಕಂಗಳನ್ನೆಲ್ಲಾ ಹೊಕ್ಕಳಲ್ಲಿಟ್ಟುಕೊಂಡಿರುವ ಮಹಾನುಭಾವನನ್ನು, ಎದೆಯೊಳು-ಕುಚಂಗಳಮೇಲೆ, ಆವಗಂ-ಅನವರತವೂ, ಧರಿಸಿಕೊಂಡು-ಸೇರಿಸಿಕೊಂಡು, ಇರ್ದ-ಇರತಕ್ಕ, ಮಾನಿನಿಗೆ-ಸ್ತ್ರೀಗೆ, ಬಿಣ್ಪು-ಅಸಾಧ್ಯವಾದದ್ದು, ಆವುದು-ಯಾವುದು ತಾನೆ ಇರುವುದು, ಪತಿವ್ರತಾಧರ್ಮಂ-ಗಂಡನಲ್ಲಿ ಭಕ್ತಿಯನ್ನಿಟ್ಟುಕೊಂಡಿರಬೇಕಾದದ್ದು, ತಾಯೆ-ಅಮ್ಮ, ನೀನು-ನೀನಾದರೊ, ಇದಕೆ-ಈ ಕಾರ್ಯಕ್ಕೆ, ಅಳುಕಲು-ಹೆದರತಕ್ಕದ್ದು, ಏಕೆ-ಏನು ಪ್ರಯೋಜನ, ಎಂದಳು-ಎಂದು ನುಡಿದಳು. ॥೨॥

---

ಮೂವತ್ತನಾಲ್ಕನೆಯ ಸಂಧಿಯ ಕಥಾಸಾರವು.

ಕೇಳೈ ಜನಮೇಜಯ ಮಹೀಕಾಂತನೆ, ಇತ್ತ ನಾರದ ಮಹಾಮುನಿಯು ಕೃಷ್ಣಸ್ವಾಮಿಯ ಮಹಿಮೆಯನ್ನು ಕೊಂಡಾಡುತ್ತಲಿರುವಾಗ, ಅತ್ತ ಅರವತ್ತುನಾಲ್ಕು ದಂಪತಿಗಳು ಋತ್ವಿಕ್ಕುಗಳು ಇವರುಗಳಿಂದ ಕೂಡಿದ ಕೃಷ್ಣಸ್ವಾಮಿಯು ಗಂಗಾನದಿಗೆ ಹೋಗಿ ಸೇರಿದನು, ಅಲ್ಲಿ ವೇದವ್ಯಾಸಮುನಿನಾಥನು ಮಂತ್ರಪೂರ್ವಕವಾಗಿ ಜಲದೇವತೆಯನ್ನು ಆರಾಧಿಸಿದ ಬಳಿಕ ಚಿನ್ನದ ಕಲಶಗಳಲ್ಲಿ ಗಂಗೆಯನ್ನು ತುಂಬಿ ಅನಸೂಯೆಯ ಕೈಗೆ ಕೊಡಲು ಆಕೆಯು ಅರುಂಧತಿಗೂ, ಅರುಂಧತಿಯು ರುಕ್ಮಿಣಿಗೂ ಕೊಟ್ಟಳು. ॥೧॥ ಆಗ ಅರುಂಧತಿಯು ರುಕ್ಮಿಣಿಯನ್ನು ಕುರಿತು, ಅಮ್ಮಾ ರುಕ್ಮಿಣೀ, ನಿನಗೆ ತಲೆಯಲ್ಲಿರುವ ಹೂವೇ ಭಾರವಾಗಿರುವಾಗ ಈ ನೀರಿನ ಕೊಡವು ಭಾರವಿಲ್ಲದಿರುವುದೇ ಎಂದು ಕೇಳಲು, ಸುಭದ್ರೆಯು ವಸಿಷ್ಠನ ಪತ್ನಿಯನ್ನು ಕುರಿತು, ಗೋವರ್ಧನಗಿರಿಯನ್ನು ಮೇಲಕ್ಕೆತ್ತಿ ಹಿಡಿದ ಮಾಮುಸಕವುಳ್ಳ ನಾರಾಯಣನನ್ನು ಎಡೆಬಿಡದೆ ಎದೆಯಮೇಲಿಟ್ಟುಕೊಂಡಿರುವ

ಪತಿವ್ರತಾಧರ್ಮಮಿದಕಳುಕಲೇತಕೆತಾಯೆನೀನೆಂದಳು ||೨|| ನಸುನಗುತರುಂಧತಿಗೆಬಳಿಕರುಕ್ಮಿಣಿನುಡಿದ | ಳುಸಿರಲಂಜುವೆ
ನೀಸುಭದ್ರೆಯವಿಶೇಷಗುಣ | ದೆಸಕಮಂನಮ್ಮಂತೆಬಿಡದೆಂರಮಣನೆದೆಯೊಳಾವಗಂಧರಿಸಳೊಮ್ಮೆ || ಬಸೆದೊಡೆವಿಚಾರಿಸುವ
ಳಲ್ಲದೊಡೆವಲ್ಲಭನಗೆ | ಸಣಿಯಂಬಾರಳ್ಪತಿವ್ರತಾಧರ್ಮದೋ | ಳ್ಪೊಸತೆಂದುಸರಸಮಾಡುತ್ತೈದೆಯರೊಡನೆಪೊಂಗಲಶಮಂ
ತಾಳ್ದಳು ||೩|| ಅರವತ್ತುನಾಲ್ಕುದಂಪತಿಗಳೊಪ್ಪುವಗಂಗೆ| ದೊರೆಯಿಂದಬಳಿಕಮಖಮುಂಟಪಕೆನೀರ್ದುಂಬಿ | ಮೆರೆವಪೊಂಗಲ
ಶಂಗಳಂಕೊಂಡುಬಂದರುತ್ಸವದಿಂದಮುನಿಗಳೊಡನೆ || ಕರದವನಿಬರಮೇಲೆಮುತ್ತುಗಳಸೇಸೆಗಳ್ಮೆ | ರೆಮೊಳಗಿದುವುಸಕಲ
ವಾದ್ಯಂಗಳಭ್ರದೋ | ಳ್ತುರುಗಿತನಿಮಿಷವಿತತಿಕೌತುಕಕೆನೆರೆದುದು ಮಹಾಜನಂಮೇದಿನಿಯೊಳು || ೪ || ಅಪುಣ್ಯಸಲಿಲ
ದೋಳ್ಸೇಚನಂಗೈದೆಸೆವ | ಯೂಪದೋಳ್ಕಟ್ಟಿಪೂಜಿಸಿದರಮಲಾಶ್ವಮಂ | ಭೂಪನುಂದ್ರೌಪದಿಯುಮಭಿಷಿಕ್ತರಾದರ್ಸುಮಂ

ಟೀ|| ಬಳಿಕ–ಅನಂತರ, ರುಕ್ಮಿಣಿ-ರುಕ್ಮಿಣಿದೇವಿಯು, ನಸುನಗುತ-ಮುಗುಳ್ನಗೆಯನ್ನೈದುತ್ತ, ಅರುಂಧತಿಗೆ–ಅರುಂಧತಿ ದೇವಿಯೊಂದಿಗೆ, ನುಡಿದಳು-ಮುಂದೆ ಹೇಳುವಂತೆ ಉಸಿರುವಳು, ಈ ಸುಭದ್ರೆಯು–ಈ ಸುಭದ್ರೆಯೆಂಬಾಕೆಯ, ವಿಶೇಷ–ಆಶ್ಚರ್ಯಕರವಾದ, ಗುಣದ–ಒಳ್ಳೆ ನಡವಳಿಕೆಗಳ, ಎಸಕಮಂ-ಬಗೆಯನ್ನು, ಉಸಿರಲು-ಪೇಳಲು, ಅಂಜುವೆನು–ಹೆದರುತ್ತೇನೆ, ರಮಣನನು-ಪತಿಯನ್ನು, ಆವಗಂ-ಅನವರತವೂ, ಎಮ್ಮಂತೆ–ನಮ್ಮ ಹಾಗೆ, ಎದೆಯೊಳ್-ಕುಚಗಳಮೇಲೆ, ಬಿಡದೆ-ತಪ್ಪದೆ, ಧರಿಸಳು–ಇಟ್ಟುಕೊಳ್ಳುವುದಿಲ್ಲವು, ಬಸೆದೊಡೆ-ಇಷ್ಟಬಂದರೆ, ಒಮ್ಮೆ-ಒಂದಾವರ್ತಿ, ವಿಚಾರಿಸುವಳು–ವಿಚಾರವಂ ಮಾಡುವಳು, ಅಲ್ಲದೊಡೆ-ಬೇಡವಾದರೆ, ವಲ್ಲಭನ - ರಮಣನ, ಗಸಣಿಯಂಬಾರಳು – ಗೊಡವೆಗೇ ಬರುವುದಿಲ್ಲವು, ಪತಿವ್ರತಾಧರ್ಮದೊಳ್–ಗಂಡನಲ್ಲಿ ಭಕ್ತಿಯನ್ನಿಟ್ಟುಕೊಂಡಿರುವುದರಲ್ಲಿ, ಪೊಸದು–ಹೊಸದಾದದ್ದು, ಎಂದು–ಎಂಬತೆರನಾಗಿ, ಐದೆಯರೊಡನೆ–ಮುತ್ತೈದೆಯರೊಂದಿಗೆ, ಸರಸಮಾಡುತ್ತ - ಅಪಹಾಸ್ಯದ ನುಡಿಗಳನ್ನಾಡುತ್ತ, ಪೊಂಗಲಶಮಂ – ಚಿನ್ನದ ಕಲಶವನ್ನು, ತಾಳ್ದಳು-ಹೊಂದಿದವಳಾದಳು. ||೩||

ಟೀ|| ಬಳಿಕ–ಅನಂತರ, ಒಪ್ಪುವ-ಯೋಗ್ಯವಾದ, ಗಂಗೆದೊರೆಯಿಂದ–ಗಂಗಾನದಿಯಿಂದ, ನೀರ್ದುಂಬಿ–ನೀರನ್ನು ತುಂಬಿಕೊಂಡು, ಅರವತ್ತನಾಲ್ಕು ದಂಪತಿಗಳು-ಅರವತ್ತನಾಲ್ಕು ಮಂದಿ ಸತಿಪತಿಗಳು, ಮೆರೆವ-ಹೊಳೆಯುತ್ತಲಿರುವ, ಪೊಂಗಲಶಂಗಳಂ–ಭಂಗಾರದ ಕಲಶಗಳನ್ನು, ಕೊಂಡು–ತೆಗೆದುಕೊಂಡವರಾಗಿ, ಮುನಿಗಳೊಡನೆ–ತಾಪಸೋತ್ತಮರೊಂದಿಗೆ, ಉತ್ಸವದಿಂದ–ಸಂಭ್ರಮದಿಂದ, ಮಖಮುಂಟಪಕೆ–ಯಾಗಶಾಲೆಗೆ, ಬಂದರು–ಬಂದವರಾದರು, ಬಳಿಕ–ಆಮೇಲೆ, ಮೇದಿನಿಯೊಳು–ಭೂಮಂಡಲದಲ್ಲಿ, ಅನಿಬರಮೇಲೆ-ಅಷ್ಟು ಜನಗಳ ಮೇಲೆಯೂ, ಮುತ್ತುಗಳಸೇಸೆಗಳ್–ಮುತ್ತುಗಳ ಮಂತ್ರಾಕ್ಷತೆಯು, ಕರೆದವು–ಎರಚಲ್ಪಟ್ಟಿತು. ಸಕಲ-ಎಲ್ಲಾ, ವಾದ್ಯಂಗಳು-ಭೇರಿ ಮೃದಂಗಾದಿಗಳು, ನೆರೆ–ಹೆಚ್ಚಾಗಿ, ಮೊಳಗಿದವು-ಶಬ್ದಗೈಯಲ್ಪಟ್ಟವು, ಅಭ್ರದೊಳ್-ಅಂತರಿಕ್ಷದಲ್ಲಿ, ಅನಿಮಿಷವಿತತಿ-ಸುರಸಮುದಾಯವು, ತುರುಗಿತು–ಆವರಿಸಿಕೊಂಡಿತು, ಕೌತುಕಕೆ–ಈ ಅಚ್ಚರಿಯನ್ನು ನೋಡುವುದಕ್ಕೆ, ಮೇದಿನಿಯೊಳು-ಭೂಮಂಡಲದಲ್ಲೆಲ್ಲಾ, ಮಹಾಜನಂ-ಹೆಚ್ಚಾದ ಜನಗಳು, ನೆರೆದುದು–ಸೇರಿತು||೪||

ಟೀ|| ಅಮಲ–ಪವಿತ್ರವಾದ, ಅಶ್ವಮಂ–ತುರಂಗಮವನ್ನು, ಆಪುಣ್ಯಸಲಿಲದೊಳ್-ಆ ಪುಣ್ಯತೀರ್ಥದೊಳಗೆ, ಸೇಚನಂಗೈದು–ಅಭಿಷೇಕಮಾಡಿದವರಾಗಿ, ಎಸೆವ–ಹೊಳೆಯುತಕ್ಕ, ಯೂಪದೊಳ್-ಯೂಪಸ್ತಂಭದಲ್ಲಿ, ಕಟ್ಟಿ–ಬಿಗಿದು, ಪೂಜಿಸಿದರು–ಆರಾಧನೆಯಂಗೈದರು, ಸುಮಂತ್ರಿತ-ಮಂತ್ರಸಹಿತವಾದ, ಜಲಂಗಳಿಂದ - ಉದಕಗಳಿಂದ, ಭೂಪನುಂ–ಧರ್ಮನಂದನನೂ, ದ್ರೌಪದಿಯುಂ–ಪಾಂಚಾಲರಾಜನ ಕುವರಿಯೂ, ಅಭಿಷಿಕ್ತರಾದರು–ಅಭಿಷೇಕಮಾಡಿಸಿಕೊಂಡವರಾದರು, ತಾಪಸಪ್ರತತಿ–ತಪಸ್ವಿಗಳ ಸಮುದಾಯವು, ಸಂದಿಗ್ಧಂಗಳಂ–ಯಾಗಮಾಡುವಾಗ ಬರತಕ್ಕ ಅನುಮಾನಗಳನ್ನೆಲ್ಲಾ, ತಿಳಿದು–ತಿಳಿದವರಾಗಿ, ಸಮ್ಮತ

ಈ ರುಕ್ಮಿಣಿಗೆ ಗಂಗೋದಕದಿಂದ ಕೂಡಿದ ಈ ಕಲಶವು ಭಾರವೇ ಎಂದು ಹಾಸ್ಯಮಾಡಿದಳು. ||೨|| ಇದನ್ನು ಕೇಳಿದ ರುಕ್ಮಿಣಿಯು ಅರುಂಧತಿಯನ್ನು ಕುರಿತು, ನಾನೇನೂ ಯಾವಾಗಲೂ ಶ್ರೀ ಕೃಷ್ಣನನ್ನು ಹೊತ್ತಿರುವುದು ನಿಜವು ಆದರೆ ಈ ಸುಭದ್ರೆಯು ಮನಸ್ಸು ಬಂದಾಗ ಒಂದು ರೀತಿಯಾಗಿಯೂ ಇಲ್ಲದಿರುವಾಗ ಮತ್ತೊಂದು ವಿಧವಾಗಿಯೂ ಇರುವಳು. ಇದು ಪತಿವ್ರತಾಧರ್ಮವೆಂದು ಯಾರುತಾನೆ ಹೇಳುವರೆಂದು ನುಡಿದಳು. ||೩|| ಹೀಗೆಂದು ಮಾತನಾಡುತ್ತಾ ಅವರತ್ತನಾಲ್ಕು ದಂಪತಿಗಳೂ ಕಲಶಂಗಳನ್ನು ಹೊತ್ತುಕೊಂಡು ಯಾಗಶಾಲೆಗೆ ಬರುತ್ತಲಿರುವಾಗ ಅವರ ಮೇಲೆ ಮುತ್ತಿನ ಮಳೆಯು ಸುರಿಯಿತು. ವಿಧವಿಧವಾದ ವಾದ್ಯಂಗಳಾದವು. ಈ ಅಚ್ಚರಿಯಂ ನೋಡಲು ಆಗಸದಲ್ಲಿ ದೇವತೆಗಳ ಗುಂಪೂ ಭೂಮಿಯಮೇಲೆ ಜನವಿಂಡೂ ನೆರೆಯಿತು. ||೪|| ಆಗ ಯಜ್ಞಾಶ್ವವನ್ನು ಗಂಗಾತೀರ್ಥದಿಂದ ಅಭಿಷೇಚನಂಗೈದು ಯೂಪಸ್ತಂಭಕ್ಕೆ ಕಟ್ಟಿದರು. ತಾಪಸೋತ್ತಮರ ಸಹಾಯದಿಂದ ಶ್ರೇಷ್ಠವಾದ ಈ ಅಶ್ವಮೇಧಯಾಗವು ನಿರ್ವಿಘ್ನವಾಗಿ ನಡೆಯಲಾರಂಭಿಸಿತು. ||೫|| ಕೃಷ್ಣಸ್ವಾಮಿಯು ಋಷೀ

ತ್ರಿತಜಲಂಗಳಿಂದ ‖ ವ್ಯಾಪಿಸಿದಪಧವಿಧಾನಂಗಳಿಂದಾವುದುಂ ಲೋಪಮಿಲ್ಲದೆನಡೆಯತೊಡಗಿತುಮಹಾಧ್ವರಂ । ತಾಪಸಪ್ರತತಿ ಸಂದಿಗ್ಧಂಗಳಂತಿಳಿದುಸಮ್ಮತದೊಳಹುದೆನಲ್ಕೆ‖೫‖ಬಂದುಮುನಿಗಳಪಾದಮಂತೊಳೆದುಸತ್ಕಾರ।ದಿಂದಪೂಜಿಸಿನಿವಾಸಸ್ಥಾನಮಂ ಕೊಟ್ಟು । ವಂದಿಸುವನಚ್ಯುತಂತಾನೆಕುಳ್ಳಿರ್ಪಡಾಸನವನೀವಂ ಸಾತ್ಯಕಿ ‖ ಚಂದನಸುಕರ್ಪೂರಕುಸುಮತಾಂಬೂಲಂಗ । ಳಿಂ ದಲಂಕರಿಸುವಂಪ್ರದ್ಯುಮ್ನನವರವರ । ಮಂದಿರಕೆಬೇಕಾದವಸ್ತುಗಳನೊದವಿಸುವನಡಿಗಡಿಗೆ ಸಹದೇವನು ‖ ೬ ‖ ಸಕಲಜನ ಜಾಲಮಂತಾರತಮ್ಯವನರಿತು । ನಕುಲನಾದರಿಸುವಂಪಗಲಿರುಳ್ಪರಿಮಳೋ । ದಕವನಳವಡಿಸುವಂ ಕರ್ಣಸುತನೆಲ್ಲರಾರೈಕೆಹೈ ಡಿಂಬಿಗಾಯ್ತು ಶಕಟಸಂದೋಹದಿಂ ಪೂರಿಸುವಸಂಭಾರ । ನಿಕರಕಧಿಪತಿಯಾದನನಿರುದ್ಧನನ್ನವಾ । ಟಿಕೆಗಳೊಳ್ಪಾಕಮಂ ಮಾಡಿಸುವಮಣಿಹಮಂಕೃತವರ್ಮಕಂತಾಳ್ದನು ‖ ೭ ‖ ಯೋಜನತ್ರಯದಚಪ್ಪರದೊಳೆಡೆವಿಡದೆನಾ । ನಾಜನಕೆಬೇಕಾದಷಡು ರಸದಶಾಲ್ಯನ್ನ । ಭೋಜನವನೈದೆಮಾಡಿಸುತಿಹುದುಸಾಂಬಾದಿಯಾದವರ್ಗಾಯ್ತುಬಳಿಕ ‖ ಶ್ರೀಜನಾರ್ದನನಸಾನ್ನಿಧ್ಯಮಾಗಿ

---

ದೊಳು-ಒಪ್ಪಿಕೆಯಿಂದ, ಅಹುದು-ಸರಿಯಾದದ್ದು, ಎನಲ್ಕೆ-ಎಂದು ನುಡಿಯುತ್ತಿರಲು, ಮಹಾಧ್ವರಂ-ದೊಡ್ಡದಾದ ಆ ಅಶ್ವಮೇಧವು, ವ್ಯಾಪಿಸಿದ-ತುಂಬಿದ, ವಿಧಿವಿಧಾನಂಗಳಿಂದ-ಶಾಸ್ತ್ರನಿಯಮಂಗಳಿಂದ, ನಡೆಯತೊಡಗಿತು-ನಡೆಯಲಾರಂಭಿಸಿತು ‖೫‖

ಟೀ‖ ಅಚ್ಯುತಂ-ಕೃಷ್ಣಮೂರುತಿಯು, ತಾನೆ-ತಾನಾಗಿಯೆ, ಬಂದು-ಬಂದವನಾಗಿ, ಮುನಿಗಳ - ತಾಪಸೋತ್ತಮರ, ಪಾದಮಂತೊಳೆದು-ಕಾಲ್ಗಳನ್ನು ತೊಳೆದವನಾಗಿ, ಸತ್ಕಾರದಿಂದ-ಮನ್ನಣೆಯಿಂದ, ಪೂಜಿಸಿ-ಆರಾಧಿಸಿ, ನಿವಾಸಸ್ಥಾನಮಂ-ಕುಳಿತುಕೊಳ್ಳುವುದಕ್ಕೆ ಅವಕಾಶವನ್ನು, ಕೊಟ್ಟು-ಕೊಟ್ಟವನಾಗಿ, ವಂದಿಸುವನು-ವಂದನೆಗಳನ್ನರ್ಪಿಸುತ್ತಲಿರುವನು, ಕುಳ್ಳಿರ್ಪಡೆ-ಕುಳಿತುಕೊಳ್ಳಲೋಸುಗ, ಆಸನವನು-ಪೀಠವನ್ನು, ಸಾತ್ಯಕಿ-ಸಾತ್ಯಕಿಯು, ಈವಂ-ಮಾಡಿಕೊಡುವನು, ಚಂದನ-ಸಿರಿಕಂಡದಿಂದಲೂ, ಕರ್ಪೂರ-ಕರ್ಪೂರದಿಂದಲೂ, ಕುಸುಮ-ಪುಷ್ಪಗಳಿಂದಲೂ, ತಾಂಬೂಲಂಗಳಿಂದ-ವೀಳೆಯದೆಲೆ ಅಡಿಕೆ ಮೊದಲಾದವುಗಳಿಂದಲೂ ಸಹ, ಪ್ರದ್ಯುಮ್ನನು-ಮದನನು, ಅಲಂಕರಿಸುವಂ-ಸಿಂಗರಿಸುವನು, ಅವರವರ ಮಂದಿರಕೆ- ತಾವು ತಾವು ಇಳಿದಿರುವ ಸ್ಥಳಗಳಿಗೆಲ್ಲಾ, ಬೇಕಾದ-ಅವಶ್ಯಕವಾಗಿರತಕ್ಕ, ವಸ್ತುಗಳನು - ಸಾಮಾನುಗಳನ್ನು, ಅಡಿಗಡಿಗೆ-ಬಾರಿಬಾರಿಗೂ, ಸಹದೇವನು-ಸಹದೇವನೆಂಬ ಧರ್ಮತನಯನ ಅನುಜನು, ಒದಗಿಸುವನು-ಅಣಿಮಾಡುತ್ತಿರುವನು ‖೬‖

ಟೀ‖ ಸಕಲ-ಅಶೇಷರಾದ, ಜನಜಾಲಮಂ-ಜನಗಳ ಗುಂಪನ್ನು, ತಾರತಮ್ಯವನು-ಅವರವರ ಮರ್ಯಾದಾನುಗುಣವಾಗಿ, ಅರಿತು-ತಿಳಿದುಕೊಂಡು, ನಕುಲನು-ಯುಧಿಷ್ಠಿರನ ಮೂರನೇ ತಮ್ಮನು, ಆದರಿಸುವಂ-ಸತ್ಕರಿಸುವನು, ಪಗಲಿರುಳ್-ಅಹರ್ನಿಶಿಯಲ್ಲಿಯೂ, ಪರಿಮಳೋದಕವನು-ಸುಗಂಧಮಿಶ್ರಿತವಾದ ಜಲವನ್ನು ಕರ್ಣಸುತನು-ಕರ್ಣತನಯನು, ಅಳವಡಿಸುವಂ-ಶೇಖರಿಸುವನು, ಹೈಡಿಂಬಿಗೆ-ಹಿಡಿಂಬಿಯ ಕುವರನಾದ ಮೇಘನಾದನಿಗೆ, ಎಲ್ಲರ-ಸರ್ವರ, ಆರೈಕೆ-ಉಪಚಾರ ಮಾಡುವಿಕೆಯು, ಆಯ್ತು-ಉಂಟಾಯಿತು, ಶಕಟ-ಗಾಡಿಗಳ, ಸಂದೋಹದಿಂ-ಸಮುದಾಯದಿಂದ, ಪೂರಿಸುವ-ಹೊರಿಸತಕ್ಕ, ಸಂಭಾರ-ಸಲಕರಣೆಗಳ, ನಿಕರಕೆ-ಸಮುದಾಯಕ್ಕೆ, ಅನಿರುದ್ಧನು-ಕೃಷ್ಣಸ್ವಾಮಿಯ ಮೊಮ್ಮಗನು, ಅಧಿಪತಿಯು-ಒಡೆಯನು ಆದನು, ಅನ್ನವಾಟಿಕೆಗಳೊಳ್-ಪಾಕಶಾಲೆಗಳಲ್ಲಿ, ಪಾಕಮಂಮಾಡಿಸುವ-ಅಡಿಗೆಯನ್ನು ಮಾಡಿಸತಕ್ಕ, ಮಣಿಹಮಂ - ಯಜಮಾನಿಕೆಯನ್ನು, ಕೃತವರ್ಮಕಂ-ಯದುರಾಜರ ಸೇನಾನಾಯಕನು, ತಾಳ್ದನು-ಪಡೆದನು ।೭‖

ಟೀ‖ ಸಾಂಬಾದಿಯಾದವರ್ಗೆ-ಸಾಂಬನೇ ಮೊದಲಾದ ಯದುವಂಶದವರಿಗೆಲ್ಲಾ, ಯೋಜನತ್ರಯದಚಪ್ಪರದೊಳು-ಮೂರುಗಾವುದ ಉದ್ದ ಅಗಲಗಳಿಂದ ಕೂಡಿದ ಚಪ್ಪರದಲ್ಲಿ, ನಾನಾಜನಕೆ-ಸಕಲರಿಗೂ, ಬೇಕಾದ-ಇಷ್ಟವಾದ, ಷಡುರಸದ-ಭಕ್ಷ್ಯ, ಭೋಜ್ಯ, ಲೇಹ್ಯ, ಚೋಷ್ಯ, ಖಾದ್ಯ, ಪಾನೀಯಾದಿಗಳಿಂದ ಕೂಡಿದ, ಶಾಲ್ಯನ್ನಭೋಜನವನು-ಮೃಷ್ಟಾನ್ನದ ಊಟವನ್ನು, ಐದೆ-ಚೆನ್ನಾಗಿ, ಎಡೆವಿಡದೆ-ತಪ್ಪದೆ, ಮಾಡಿಸುತಿಹುದು-ಮಾಡಿಸುತ್ತಲಿರತಕ್ಕದ್ದು, ಆಯ್ತು-ನಿಷ್ಕರ್ಷೆಯಾಯಿತು,

---

ಶ್ವರರ ಪಾದಗಳಂ ತೊಳೆದು ತಕ್ಕೆಡೆಗಳಲ್ಲಿ ಕುಳ್ಳಿರಿಸುತ್ತಲಿದ್ದನು. ಸಾತ್ಯಕಿಯು ಉಚಿತಾಸನಂಗಳಂ ಕೊಡುತ್ತಲಿದ್ದನು. ಮನ್ಮಥನು ಹೂ ಗಂಧ ವೀಳೆಯಂಗಳಿಂದ ಮನ್ನಿಸುತ್ತಲಿದ್ದನು. ಸಹದೇವನು ಅವರವರ ಬಿಡಾರಗಳಿಗೆ ಬೇಕಾದ ಸಾಮಗ್ರಿಗಳನ್ನೊದಗಿಸುತ್ತಲಿದ್ದನು. ‖ ೬ ‖ ನಕುಲನು ಎಲ್ಲರನ್ನೂ ಅವರವರ ಮರ್ಯಾದಾನುಗುಣವಾಗಿ ಉಪಚರಿಸುತ್ತಲಿದ್ದನು. ಕರ್ಣಜನು ಪನ್ನೀರು ಒದಗಿಸುವ ಕೆಲಸದಲ್ಲಿರುತ್ತಿದ್ದನು. ಮೇಘನಾದನು ಎಲ್ಲರನ್ನೂ ಉಪಚರಿಸುತ್ತಲಿದ್ದನು. ಅನಿರುದ್ಧನು ಭಂಡಿಗಳಲ್ಲಿ ಸಾಮಾನುಗಳನ್ನೊದಗಿಸುತ್ತಲಿದ್ದನು. ಅಡಿಗೆ ಮನೆಯ ಪಾರುಪತ್ಯವನ್ನು ಕೃತವರ್ಮನು ಒಪ್ಪಿಕೊಂಡನು ‖೭‖ ಸಾಂಬನೇ ಮೊದಲಾದ ಯಾದವರೆಲ್ಲಾ ಭೋಜನಶಾಲೆಯ ಮೇಲ್ವಿಚಾರಣೆಯಲ್ಲಿ ನಿರತರಾದರು. ಕೇಳ್ವೆ ಜನಮೇಜಯನೆ ! ಯಜ್ಞಕರ್ತನೂ, ಯಜ್ಞರೂಪನೂ, ಯಜ್ಞಮೂರುತಿಯೂ ಆದ ಕೃಷ್ಣಸ್ವಾಮಿಯೇ ಧರ್ಮತನಯನ ಅಶ್ವಮೇಧ

ರಿಧರ್ಮ | ರಾಜನನುಹಾಧ್ವರಂ ಸಾಂಗನಾಗದೆಮೇಣ್ಸ | ರೋಜನಾಭಂ ತಾನೆಯಜ್ಞಸ್ವರೂಪನಲ್ಲವೆಭೂಪಹೇಳೆಂದನು ||೮|| ಸುರೆ
ಯದೊಂದಲ್ಲದೆಪಯೋದಧಿಯನಾರನಾ | ಕರುಷಣಂಗೈದರೆನೆಸುರಸಂಗಳೆಸೆಯೆಕುಲ | ಗಿರಿಗಳಂನಗುವಂತೆಮಿಸುಪಶಾಲ್ಯೋ
ದನದರಾಶಿಗಳ್ಕಂಗೊಳಿಸಲು || ಪರಿಪರಿಯಭಕ್ಷ್ಯಪಾಯಸವಿವಿಧಶಾಕಾದಿ | ಪರಿಕರಮದೆಂತೊದಗಿದುವೊ ಕೃಷ್ಣಸುರಭಿತಾಂ |
ಪೊರೆಯೊಳಿರಲರಿದಾವುದೆಂಬಿನಿಂದಣಿದುಂಡರಾಮುಖದೊತಖಿಳಜನರು || ೯ || ಊಟದಸುಗಂಧಾನುಲೇಪನದಕರ್ಪುರದ | ವೀಟಿ
ಕಾವಳಿಯಮಾಲ್ಯಾಂಬರವಿಭೂಷಣದ | ಮಿಾಟುಸಿಂಗರದಿಂ ಪುವಡೆದುಮಿಗೆಬಯಸಿಬೇಡಿದಸುವಸ್ತುಗಳನಿತ್ತು || ಪಾಟಿಸುವಭೀ
ಮಫಲುಗುಣರಸನ್ಮಾನದಸ | ಫಾಟಿಕೆಯನೃಪಕುಲದಪುಣ್ಯಮುನಿಗಳಯಜ್ಞ | ವಾಟದತಿಕೌತುಕದನಾಳ್ಕೆಯಂ ಕಂಡುನ
ಲಿದಾಡಿತುಜನನುದದೊಳು || ೧೦ || ಹೇಮವಸ್ತ್ರಾಭರಣಮುಕ್ತಾಫಲಂಗಳಂ | ಸಾಮಜತುರಂಗ ರಥರತ್ನಜಾಲಂಗಳಂ |

---

ಬಳಿಕ–ಅನಂತರ, ಶ್ರೀ–ಇಂದಿರಾಸಹಿತನಾದ, ಜನಾರ್ದನನ–ನಾರಾಯಣನ, ಸಾನ್ನಿಧ್ಯಂ-ಸಮಿಾಪದಲ್ಲಿಯೇ ನೆಲಸಿರುವುದು, ಆಗಿರೆ–ಆಗಿರತಕ್ಕ ಕಾಲದಲ್ಲಿ, ಧರ್ಮರಾಜನ-ಧರ್ಮತನಯನ, ಮಹಾಧ್ವರಂ–ಅಸಾಧಾರಣವಾದ ಹಯಮೇಧವು, ಸಾಂಗಂ ಆಗದೆ–ಪೂರ್ತಿಯಾಗದಿರುವುದೆ, ಮೇಣ್–ಅದೂ ಅಲ್ಲದೆ, ಯಜ್ಞಸ್ವರೂಪನು–ಯಜ್ಞಕ್ಕೆ ಅಧಿದೇವತೆಯು, ಸರೋಜನಾಭಂ ತಾನೆಅಲ್ಲವೆ–ಕಮಲನಾಭನಾದ ಸ್ವಾಮಿಯೇ ಅಲ್ಲವೆ, ಭೂಪ-ಭೂಕಾಂತನಾದ ಜನಮೇಜಯನೆ, ಹೇಳು – ಹೇಳುವನಾಗು, ಎಂದನು–ಎಂದು ನುಡಿದನು ||೮||

ಟೀ|| ಪಯೋದಧಿಯನು–ಕ್ಷೀರಸಮುದ್ರ, ದಧಿಸಮುದ್ರ ಇವುಗಳನ್ನು, ಆರನು–ಆರನ್ನು, ಸುರೆಯು–ಸುರೆಯೆಂಬೊಂದು ಜಲಧಿಯು, ಅದೊಂದು–ಅದುಮಾತ್ರವೇ, ಅಲ್ಲದೆ–ಬಿಟ್ಟು, ಆರು–ಮತ್ತೆಯಾರು, ಆಕರ್ಷಣಂಗೈದರು–ಆಕರ್ಷಿಸಿರುವರು, ಎನೆ-ಎಂಬಂತೆ, ಸುರಸಂಗಳು–ಷಡ್ರಸಗಳು, ಎಸೆಯೆ–ಮೆರೆಯುತ್ತಿರಲು, ಮಿರುಪ–ಪ್ರಕಾಶಮಾನವಾದ, ಶಾಲ್ಯೋದನದ ರಾಶಿಗಳು–ಶಾಲ್ಯನ್ನದ ಗುಂಪುಗಳು, ಕುಲಗಿರಿಗಳಂ–ಸಪ್ತಕುಲಾಚಲಂಗಳನ್ನೂ, ನಗುವಂತೆ-ಹಾಸ್ಯಮಾಡುತ್ತಲಿವೆಯೊ ಎಂಬತೆರನಾಗಿ, ಕಂಗೊಳಿಸಲು–ಹೊಳೆಹೊಳೆಯಲು, ಪರಿಪರಿಯ–ತಂಡೋಪತಂಡವಾದ,ಭಕ್ಷ್ಯ–ಲಾಡು ಪೇಣಿ ಮೊದಲಾದವುಗಳೂ, ಪಾಯಸ-ಪಾಯಸಂಗಳೂ, ವಿವಿಧ–ನಾನಾಪ್ರಕಾರವಾದ, ಶಾಕಾದಿಪರಿಕರಂ–ಕಾಯಿಪಲ್ಯಗಳ ಸೋಪಸ್ಕರಗಳೂ, ಅದೆಂತು–ಯಾವರೀತಿಯಲ್ಲಿ, ಒದಗಿದವೊ-ಅಣಿಯಾದವೊ, ಪೊರೆಯೊಳು–ಸಮಿಾಪದಲ್ಲಿಯೆ, ತಾಂ–ಆ, ಕೃಷ್ಣಸುರಭಿ-ಕೃಷ್ಣನೆಂಬ ಕಾಮಧೇನುವೇ, ಇರಲು–ಇರತಕ್ಕ ಕಾಲದಲ್ಲಿ, ಅರಿದು–ಅಸಾಧ್ಯವಾದದ್ದು, ಆವುದು–ಯಾವುದುತಾನೆ ಇರುವುದು,ಎಂಬಿನಿಂ–ಎನ್ನುವ ಪರಿಯಿಂದ, ಅಖಿಳಜನರು–ಸಕಲರೂ, ಆಮುಖದೊಳು–ಆ ಯಾಗದಲ್ಲಿ, ದಣಿದು–ಸಂತುಷ್ಟರಾಗಿ, ಉಂಡರು–ಊಟಮಾಡಿದರು ||

ಅ|| ವಿ|| ಕುಲಪರ್ವತಗಳು – ಹಿಮವತ್ಪರ್ವತ, ನಿಷಧಪರ್ವತ, ವಿಂಧ್ಯಪರ್ವತ, ಮಾಲ್ಯವತ್ಪರ್ವತ, ಪಾರಿಯಾತ್ರಕ ಪರ್ವತ, ಗಂಧಮಾಧನ ಪರ್ವತ, ಹೇಮಕೂಟವೆಂಬ, ಏಳು ಪರ್ವತಗಳು. ಷಡ್ರಸಗಳು–ಸಿಹಿ, ಹುಳಿ, ಉಪ್ಪು, ಒಗರು, ಕಾರ, ಕಹಿ, ಇವುಗಳು || ೯ ||

ಟೀ|| ಜನರು–ಪ್ರಜೆಗಳೆಲ್ಲರೂ, ಊಟದ–ಊಟಮಾಡುವುದರ, ಸುಗಂಧಾನುಲೇಪನದ-ಗಂಧವನ್ನು ಬಳಿದುಕೊಳ್ಳುವುದರ, ಕರ್ಪುರದ-ಪಚ್ಚಕರ್ಪೂರದಿಂಕೂಡಿದ, ವೀಟೀಕಾವಳಿಯ–ವೀಳೆಯದೆಲೆಯ ಕಟ್ಟುಗಳ, ಮಾಲ್ಯ–ಕುಸುಮಂಗಳ, ಅಂಬರ–ಉಡಿಗೆಗಳ, ವಿಭೂಷಣದ–ತೊಡಿಗೆಗಳ, ಮಿಾಟು–ಹೆಚ್ಚಾದ, ಸಿಂಗರದ–ಶೃಂಗಾರ ಸಂಬಂಧವಾದ, ಇಂಪುವಡೆದು–ಸುಖವನ್ನೈದಿ, ಮಿಗೆ–ಹೆಚ್ಚಾಗಿ, ಬಯಸಿ–ಆಶಿಸಿ, ಬೇಡಿದ-ಕೇಳಿಕೊಂಡ, ಸುವಸ್ತುಗಳನು–ಉತ್ತಮವಾದ ಪದಾರ್ಥಗಳನ್ನೆಲ್ಲಾ, ಇತ್ತು-ಕೊಟ್ಟವರಾಗಿ, ಪಾಟಿಸುವ–ಸರಿಸಮನಾದ, ಭೀಮಫಲುಗುಣರ–ವಾಯುಸುತ ಇಂದ್ರನಂದನರ, ಸನ್ಮಾನದ–ಮನ್ನಣೆಯ ಸಂಬಂಧವಾದ, ಸಫಾಟಿಕೆಯ–ಉಪಚಾರದ ಮಾತುಗಳಿಂದ ಕೂಡಿದ. ನೃಪಕುಲದ–ರಾಜಸಮುದಾಯದ, ಪುಣ್ಯಮುನಿಗಳ–ಪುಣ್ಯವಿಶಿಷ್ಟರಾದ ಮಹರ್ಷಿಗಳ, ಯಜ್ಞವಾಟದ–ಯಾಗಮಂಟಪದ, ಅತಿಕೌತುಕದ–ಅತ್ಯಂತಾಶ್ಚರ್ಯಕರವಾದ, ಮಾಳ್ಕೆಯಂ–ಬಗೆಯನ್ನು, ಕಂಡು–ಈಕ್ಷಿಸಿ, ಮುದದೊಳು–ಆನಂದದಿಂದ, ನಲಿದಾಡಿತು-ಸಂತಸಂಗೊಂಡಿತು ||೧೦||

---

ಯಾಗದಲ್ಲಿ ಯಜಮಾನನಾಗಿರುವಾಗ, ಯಾಗವು ಮೇಲಾಗಿ ನಡೆಯಲು ಅಡ್ಡಿಯೇನಿರುವುದು ||೮|| ಕೃಷ್ಣನೆಂಬ ಕಾಮಧೇನುವಿರುವಾಗ ಯಾವುದಕ್ಕೆ ತಾನೆ ಕಡಮೆಯಾದೀತು. ಕ್ಷಣಮಾತ್ರದಲ್ಲಿ ಅನ್ನದ ರಾಶಿಗಳು ಪರ್ವತ ರಾಶಿಗಳಂತೆ ಕಂಗೊಳಿಸಿದವು ಭಕ್ಷ್ಯಭೋಜ್ಯಾದಿಗಳೂ ಕಾಯಿಪಲ್ಯಗಳೂ–ಅಣಿಯಾದವು ಸಕಲರೂ ಸ್ವೇಚ್ಛೆಯಾಗಿ ಭೋಜನವಂಮಾಡಿ ತೃಪ್ತರಾದರು ||೯|| ಅನಂತರ ಭೀಮಾರ್ಜುನರು ಗಂಧ ಪುಷ್ಪ ತಾಂಬೂಲ ವಸ್ತ್ರಾಭರಣಂಗಳಿಂದ ಎಲ್ಲರನ್ನೂ ಸತ್ಕರಿಸಿದರು || ೧೦ || ಅಲ್ಲಿ ನೆರೆದಿದ್ದ ಯಾಚಕರಿಗೆಲ್ಲಾ ವಸ್ತ್ರಾಭರಣಗಳು, ಮೌಕ್ತಿಕರಾಶಿಗಳು. ಗಜತುರಗ ರಥಾದಿಗಳು, ಕೃಷ್ಣಾಜಿನ ಮೊದಲಾದವನ್ನೂ ಅನೇಕ

ಗೋಮಹಿಷಿದಾಸದಾಸೀನಿಕರಮುಂಮೃಗಾಜಿನಕಂಬಳಾದಿಗಳನು ‖ ಚಾಮರವ್ಯಜನಮಾತಪತ್ರಯಾನಂಗಳಂ| ಭೂಮಿಗಳನಗರು
ಚಂದನಮುಖ್ಯವಸ್ತುವಂ | ಭೀಮಫಲುಗುಣರಖಿಳಯಾಚಕಾವಳಿದಣಿಯೆಕೊಡುತಿರ್ದರಾದರದೊಳು ‖೧೧‖ ಯಾಗದೀಕ್ಷೆಯ
ನೃಪಂಮಂತ್ರವಾರಿಸ್ನಾತ | ನಾಗಿಬಳಿಕನುಪಮಸುಪರ್ಣಚಯನದಪೊರೆಗೆ | ಪೋಗಿಹಯಮಂತರಿಸಲುಜ್ವಲಿಸುವಗ್ನಿಪಶುವಾದು
ದೆಂದಭಿವರ್ಧಿಸೆ ‖ ಮೇಗೆಶ್ರುತಿವಾಕ್ಯಂಗಳಂಪಠಿಸುತಲೆಘೋಟ | ಪೋಗುನೀನಶ್ವಲೋಕದೊಳಮರಪದಮಪ್ಪು | ದೀಗ
ನಿನಗಂದುಮಳಿವಿಲ್ಲದುತ್ತಮಸ್ವರ್ಗಮಂಪಡೆಯೆಂದನು ‖೧೨‖ ನೃಪನಮಾತಂಕೇಳ್ದುವಾಜಿತಲೆಗೊಡಹಿಮುರ | ರಿಪುವನೀಕ್ಷಿಸು
ವಭಿಪ್ರಾಯಮಂಮೋದದಿಂ | ವಿಪುಲಮದನಕುಲಂಗೆಸೂಚಿಸಿದೊಡಾತನದರಿಂಗಿತವನರಿದುಬಳಿಕ ‖ ತಪನಸುತನಂದನಗೆಂದ
ನವಧರಿಸುಹಯ | ಮುಪರಿಲೋಕದೊಳಶ್ವಪದವಿಯುಂತಾನೊಲ್ಲ | ನುಪಮೆಗೈದದಕೃಷ್ಣಸಾಯುಜ್ಯಮಂಪಡೆನೆಂಬು

---

ಟೀ‖ ಭೀಮಫಲುಗುಣರು–ಭೀಮಾರ್ಜುನರಾದರೊ, ಅಖಿಳಯಾಚಕಾವಳಿದಣಿಯೆ–ಸಕಲ ಯಾಚಕರಿಗೂ ಅವರವರ ಮನವೊಪ್ಪುವ ರೀತಿಯಾಗಿ, ಆದರದೊಳು–ವಿಶ್ವಾಸದಿಂದ, ಹೇಮ-ಸುವರ್ಣವನ್ನೂ, ವಸ್ತ್ರ-ಉಡಿಗೆಗಳನ್ನೂ ಆಭರಣ-ತೊಡಿಗೆಗಳನ್ನೂ, ಮುಕ್ತಾಫಲಂಗಳಂ–ಮುತ್ತುಗಳ ಸಮುದಾಯವನ್ನೂ, ಸಾಮಜ–ಹಸ್ತಿಗಳು, ತುರಂಗ–ಅಶ್ವಂಗಳು, ರಥ-ತೇರುಗಳು ಇವುಗಳ, ಜಾಲಂಗಳಂ–ಸಮುದಾಯಗಳನ್ನು, ಗೊ–ಆಕಳುಗಳು, ಮಹಿಷಿ-ಎಮ್ಮೆಗಳು, ದಾಸ–ಸೇವಕರು, ದಾಸೀ–ಸೇವಕಸ್ತ್ರೀಯರು ಇವರ, ನಿಕರಮುಂ-ಸಮುದಾಯವನ್ನು, ಮೃಗಾಜಿನ–ಕೃಷ್ಣಾಜಿನವು, ಕಂಬಳ–ಶಹಲುಗಳು, ಆದಿಗಳನು–ಮೊದಲಾದವನ್ನೂ, ಚಾಮರ–ಚಾಮರವು, ವ್ಯಜನ–ಬೀಸಣಿಗೆಯು, ಆತಪತ್ರ - ಬೆಳ್ಗೊಡೆಗಳು, ಯಾನಂಗಳಂ – ರಥಗಳು ಇವನ್ನೂ, ಭೂಮಿಗಳನು–ಭೂಮಿಯನ್ನು, (ಹೊಲ, ಗದ್ದೆ, ತೋಟ, ಇವನ್ನೂ) ಅಗರು–ಕಪ್ಪುಗಂಧದ ಚೆಕ್ಕೆಗಳು, ಚಂದನ–ಕೆಂಪುಗಂಧದ ಚಕ್ಕೆಗಳು, ಮುಖ್ಯ-ಮೊದಲಾದ, ವಸ್ತುವಂ–ಪದಾರ್ಥಗಳನ್ನು, ಕೊಡುತಿರ್ದರು–ದಾನಮಾಡುತ್ತಲಿದ್ದರು. ‖೧೧‖

ಟೀ‖ ಯಾಗದೀಕ್ಷೆಯನೃಪಂ - ಯಜ್ಞದೀಕ್ಷೆಯಂ ಕೈಗೊಂಡಿರತಕ್ಕ ಧರ್ಮಪುತ್ರನು, ಮಂತ್ರವಾರಿಸ್ನಾತನಾಗಿ–ಮಂತ್ರಜಲದಿಂದ ಸ್ನಾನವಂ ಮಾಡಿ, ಬಳಿಕ–ಅನಂತರ, ಅನುಪಮ–ಅಸದೃಶವಾದ, ಸುಪರ್ಣಾಕೃತಿಯ–ಗರುತ್ಮಂತನ ಆಕಾರದ ಜಗಲಿಯ, ಪೊರಗೆ-ಸಮೀಪಕ್ಕೆ, ಪೋಗಿ-ಹೋದವನಾಗಿ, ಹಯಮಂತರಿಸಲು–ಯಜ್ಞಾಶ್ವವನ್ನು ಕರೆತರಲಾಗಿ, ಉಜ್ವಲಿಸುವ-ಜಾಜ್ವಲ್ಯಮಾನವಾಗಿರುವ, ಅಗ್ನಿ-ಯಜ್ಞೇಶ್ವರನಿಗೆ, ಪಶುವು-ಆಹುತಿಗೆ ತಕ್ಕದ್ದು, ಆದುದು-ಆಯಿತು, ಎಂದು–ಎಂಬತೆರನಾಗಿ, ಅಭಿವರ್ಧಿಸೆ–ಹೆಚ್ಚಾಗಿ ಉರಿಯಲು, ಶ್ರುತಿವಾಕ್ಯಂಗಳಂಪಠಿಸುತ–ವೇದವಚನಂಗಳಂ ಪೇಳುತ್ತ, ಎಲೆಘೋಟ - ಎಲೈ ಕುದುರೆಯೇ, ನೀನು–ನೀನಾದರೊ, ಪೋಗು–ಹೊರಟುಹೋಗು, ನಿನಗೆ–ನಿನಗಾದರೊ, ಈಗ–ಈ ಕಾಲದಲ್ಲಿ, ಅಮರಪದಂ–ದೈವಾಂಶವು, ಅಶ್ವಲೋಕದೊಳ್-ಕುದುರೆಗಳ ಲೋಕದೊಳಗೆ, ಅಪ್ಪುದ -ಲಭಿಸುವುದು, ಅಳಿವು–ಚ್ಯುತಿಯು ಎಂದರೆ ಪುನಃ ಭೂಮಿಯಲ್ಲಿ ಹುಟ್ಟುವುದು, ಎಂದುಂ–ಇನ್ನೆಂದಿಗೂ, ಇಲ್ಲದೆ - ಒದಗದೆ, ಉತ್ತಮ–ಮೇಲಾದ, ಸ್ವರ್ಗಮಂ - ಸ್ವರ್ಗಲೋಕವನ್ನು, ಪಡೆ-ಅನುಭವಿಸು, ಎಂದನು–ಎಂದು ನುಡಿದನು. ‖೧೨‖

ಟೀ‖ ವಾಜಿ–ಅಶ್ವವು, ನೃಪನ-ಅರಸನ, ಮಾತಂ–ನುಡಿಯನ್ನು, ಕೇಳ್ದು-ಕೇಳಿ, ತಲೆಕೊಡಹಿ–ತನ್ನ ತಲೆಯನ್ನೊದರಿ, ವಿಪುಲ–ಹೆಚ್ಚಾದ, ಮತಿ–ಬುದ್ಧಿಯನ್ನುಳ್ಳ, ನಕುಲಂಗೆ–ನಕುಲನೆಂಬ ಧರ್ಮರಾಯನ ಮೂರನೇ ತಮ್ಮನಿಗೆ, ಮುರರಿಪುವನು–ಮುರಾಂತಕನಾದ ಕೃಷ್ಣಸ್ವಾಮಿಯನ್ನು, ಈಕ್ಷಿಸುವ–ನೋಡತಕ್ಕ, ಅಭಿಪ್ರಾಯಮಂ–ಆಶಯವನ್ನು, ಮೋದದಿಂ–ಆನಂದದಿಂದ, ಸೂಚಿಸಿದೊಡೆ–ಅರುಹಲು, ಅದರಇಂಗಿತವನು–ಅದರ ಆಶಯವನ್ನು, ಆತನು–ಅನಕುಲನು, ಅರಿದು – ತಿಳಿದವನಾಗಿ, ಬಳಿಕ–ಅನಂತರ, ತಪನಸುತನಂದನಂಗೆ–ಧರ್ಮತನಯನೊಂದಿಗೆ, ಅವಧರಿಸು–ಕಿವಿಗೊಟ್ಟು ಕೇಳು, ಹಯಂ–ಯಜ್ಞಾಶ್ವವಾದರೊ, ತಾನು–ಅದು, ಉಪರಿಲೋಕದೊಳ್–ಸ್ವರ್ಗಲೋಕದೊಳಗೆ, ಅಶ್ವಪದವಿಯಂ – ಕುದುರೆಗಳಿಗಾಗುವ ಮುಕ್ತಿಯನ್ನು, ಒಲ್ಲನು–ಒಪ್ಪುವುದಿಲ್ಲ, ಉಪಮೆಗೈದದ–ಅಸದೃಶವಾದ, ಕೃಷ್ಣಸಾಯುಜ್ಯಮಂ–ಕೃಷ್ಣನಲ್ಲಿಯೇ ಐಕ್ಯವಾಗುವಿಕೆಯನ್ನು, ಪಡೆ

---

ಗೋದಾನ ಭೂದಾನ ಮೊದಲಾದುವನ್ನೂ ಕೊಡುತ್ತಾ, ಯಾಚಕಾವಳಿಯು ದಣಿದರೂ ತಮಿಗೆ ಮಾತ್ರ ತೃಪ್ತಿಯೇ ಇಲ್ಲದಿರುತ್ತಲಿದ್ದರು. ‖೧೧‖ ಆಗ ದೀಕ್ಷಾಬದ್ಧನಾದ ಧರ್ಮನಂದನನು ಮಂತ್ರೋದಕಸ್ನಾನವಂ ಮಾಡಿ ಗರುಡವೇದಿಕೆಯ ಬಳಿಗೆ ಯಾಗಪಶುವಾದ ಕುದುರೆಯನ್ನು ತರಿಸಿ, ತೇಜೋರೂಪವಾಗಿರುವ ಆ ಕುದುರೆಯನ್ನು ಕುರಿತು, ಎಲೈ ಕುದುರೆಯೇ! ನಿನಗೆಂದೆಂದಿಗೂ ನಾಶವಿಲ್ಲದ ಸ್ವರ್ಗವು ಸಿದ್ಧಿಸುವುದು, ನೀನು ಅಶ್ವಲೋಕಕ್ಕೆ ಹೋಗೆಂದು ನುಡಿದನು. ಬ್ರಾಹ್ಮಣರೆಲ್ಲಾ ವೇದವಚನಂಗಳನ್ನು ಉದ್ಘೋಷಿಸುತ್ತಲಿದ್ದರು.‖೧೨‖ಧರ್ಮತನಯನ ಮಾತನ್ನು ಕೇಳಿದ ಕೂಡಲೆ ಕುದುರೆಯು ತನ್ನ ತಲೆಯನ್ನಲ್ಲಾಡಿಸಿತು. ಧರ್ಮಜನು ಇದರ ಇಂಗಿತವೇನೆಂದು ತಮ್ಮನಾದ ನಕುಲನನ್ನು ಕೇಳಲು, ನಕುಲನು ಅಣ್ಣನನ್ನು ಕುರಿತು,

ದೆನ್ನೊಳೆಂದು ||೧೩|| ಫಣಿಶಯನಸಾನ್ನಿಧ್ಯಮಿಂತಿಲ್ಲದೀಶ್ವರಾ | ರ್ಪಣಮಲ್ಲದನ್ಯಯಜ್ಞಂಗಳೊಳ್ಮಡಿದಪಶು | ಗಣಕೆಮೇಣಾವ ಕರ್ತೃಗಳ್ಗತಿಶಯಸ್ವರ್ಗಭೋಗಮಾದಪುದೆಸಿನ್ನ || ಪ್ರಣುತಸತ್ಕ್ರತುಫಲಂಶ್ರೀಕಾಂತನಾದಕಾ | ರಣದಿಂದಕೃಷ್ಣನಶರೀರಮಂ ಪೊಗುವೆನೀ | ಕ್ಷಣದೊಳಿದನೆಲ್ಲರುಂನೋಡಲೆನುತಲಿದೆತುರಂಗಮೆಂದುನಕುಲಂನುಡಿದನು ||೧೪|| ತುರಗದಂತರ್ಭಾವಮಂತಿಳಿದು ನಕುಲನಿಂ | ತರಸಂಗೆಬಿನ್ನಪಂಗೈದುದಂಕೇಳ್ದಖಿಳ | ಧರಣೀಶ್ವರರ್ಮುನಿಗಳಂಗನಾನಿಕುರುಂಬಮಾಶ್ಚರ್ಯಮಂನೋಡಲು || ನೆರೆದುದುಸುಮಂತ್ರಿತದಯೂಪದೊಳ್ಕಟ್ಟುತ | ಧ್ವರಹಯವನಭಿಮಂತ್ರಿಸಿದರಚ್ಯುತನಮುಂದೆ | ಪರಮರ್ಷಿಗಳ್ಬಳಿಕ ಭೀಮನಂಕರೆದುಮುದದಿಂದಧೌಮ್ಯನಿಂತೆಂದನು||೧೫|| ಈಕ್ಷಿಪುದುಸಕಲಜನವೆಲೆವೃಕೋದರನಾಂಪ | ರೀಕ್ಷೆಯಂತೋರಿಸುವೆನೀತುರಂಗಮದೊಳೊಂ | ದೇಕ್ಷಣಂಖಡ್ಗಮಂಕೊಂಡುನಿಶ್ಚಲನಾಗಿನಿಲ್ವುದೆಂದಾಧೌಮ್ಯನು || ಪ್ರೋಕ್ಷಿಸಿಕರಾಗ್ರದಿಂಪಿಡಿದು

---

ವೆನು-ಲಭಿಸುವಂತೆ ಮಾಡಿಕೊಳ್ಳುವೆನು, ಎಂದು-ಎಂಬತೆರನಾಗಿ, ಎನ್ನೊಳು-ನನ್ನ ಕೂಡ, ಎಂಬುದು-ಹೇಳುವುದು, ಎಂದನು-ಎಂಬುದಾಗಿ ನಕುಲನು ಯುಧಿಷ್ಠಿರನೊಂದಿಗೆ ನುಡಿದನು. ||೧೩||

ಟೀ|| ಇಂತು-ಈ ರೀತಿಯಾಗಿ, ಫಣಿಶಯನನ-ಸರ್ಪವನ್ನೆ ಹಾಸಿಗೆಯಾಗಿವುಳ್ಳ ನಾರಾಯಣನ, ಸಾನ್ನಿಧ್ಯಂ-ಹತ್ತಿರದಲ್ಲಿಯೇ ಇರುವಿಕೆಯು, ಇಲ್ಲದ - ಇಲ್ಲದಿಂತಕ್ಕ, ಈಶ್ವರಾರ್ಪಣಂ - ಈಶ್ವರನಿಗೆ ಅರ್ಪಣೆಮಾಡುವುದು, ಅಲ್ಲದ - ಆಗದಿರುವ, ಅನ್ಯಯಜ್ಞಂಗಳೊಳ್-ಮಿಕ್ಕ ಯಾಗಗಳೊಳಗೆ, ಮಡಿದ-ಸತ್ತುಹೋದ, ಪಶುಗಣಕೆ-ಪಶುರಾಶಿಗೆ, ಮೇಣ್-ಅಲ್ಲದೆ, ಆವಕರ್ತೃಗಳ್ಗೆ-ಆವಯಜ್ಞದ ಯಜಮಾನರಿಗೆ, ಅತಿಶಯ-ಹೆಚ್ಚಾದ, ಸ್ವರ್ಗಭೋಗಂ-ಸ್ವರ್ಗಪ್ರಾಪ್ತಿಯು, ಆದಪುದೆ-ಆದೀತೆ, ಶ್ರೀಕಾಂತನು-ಇಂದಿರಾವಲ್ಲಭನಾದರೊ, ನಿನ್ನ-ನೀನು ಮಾಡತಕ್ಕ, ಪ್ರಣುತ-ಸ್ತೋತ್ರಾರ್ಹವಾದ, ಸತ್ಕ್ರತುಫಲಂ-ಯಾಗದ ಫಲವು, ಆವಕಾರಣದಿಂದ-ಆಗಿರುವುದರಿಂದ, ಈಕ್ಷಣದೊಳು-ಈಗಲೆ, ಕೃಷ್ಣನ - ಕೃಷ್ಣಮೂರುತಿಯ, ಶರೀರಮಂ - ದೇಹವನ್ನು, ಪೊಗುವೆನು-ಪ್ರವೇಶಮಾಡುವೆನು, ಇದನು-ಈ ಪರಿಯನ್ನು, ಎಲ್ಲರು-ಸರ್ವರೂ, ನೋಡಲಿ-ನೋಡುವರಾಗಲಿ, ಎಂದು-ಎಂಬತೆನಾಗಿ, ತುರಗಂ-ಹಯವು, ಎನುತಿದೆ-ನುಡಿಯುತ್ತಲಿರುವುದು, ಎಂದು-ಎಂಬತೆರನಾಗಿ, ನಕುಲನು-ನಕುಲನೆಂಬಾತನು, ನುಡಿದನು-ಧರ್ಮಜನಿಗೆ ತಿಳಿಸಿದನು. ||೧೪||

ಟೀ|| ನಕುಲನು-ನಕುಲನಾದರೊ, ತುರಗದ-ಹಯದ, ಅಂತರ್ಭಾವಮಂ-ಆಶಯವನ್ನು, ತಿಳಿದು-ತಿಳಿದುಕೊಂಡು, ಅರಸಂಗೆ-ಧರ್ಮತನಯನಿಗೆ, ಇಂತು-ಈ ಪ್ರಕಾರವಾಗಿ, ಬಿನ್ನಪಂಗೈದುದಂ - ಅರಿಕೆಮಾಡಿಕೊಂಡದ್ದನ್ನು, ಅಖಿಳ - ಸಕಲರಾದ, ಧರಣೀಶ್ವರರ್-ಅರಸುಗಳು, ಮುನಿಗಳು - ತಾಪಸೋತ್ತಮರು, ಅಂಗನಾನಿಕುರುಂಬಂ - ಸ್ತ್ರೀಸಮುದಾಯವೂ ಸಹ, ಕೇಳ್ದು-ಕೇಳಿದವರಾಗಿ, ಆಶ್ಚರ್ಯಮಂ-ಅಚ್ಚರಿಯನ್ನು, ನೋಡಲು-ನೋಡಬೇಕೆಂದು, ನೆರೆದುದು-ಒಟ್ಟುಗೂಡಿತು, ಪರಮರ್ಷಿಗಳು-ತಾಪಸೋತ್ತಮರು, ಅಧ್ವರಹಯವನು-ಅಶ್ವಮೇಧದ ಕುದುರೆಯನ್ನು, ಸುಮಂತ್ರಿತ-ಮಂತ್ರದಿಂದ ಪರಿಶುದ್ಧವಾದ, ಯೂಪದೊಳ್-ಯೂಪಸ್ತಂಭದಲ್ಲಿ, ಕಟ್ಟುತ-ಕಟ್ಟುತ್ತ, ಅಚ್ಯುತನಮುಂದೆ-ಕೃಷ್ಣಸ್ವಾಮಿಯ ಮುಂದುಗಡೆ, ಅಭಿಮಂತ್ರಿಸಿದರು-ಪ್ರೋಕ್ಷಣೆಯನ್ನು ಮಾಡಿಡಿದರು, ಬಳಿಕ-ಅನಂತರ, ಧೌಮ್ಯಮುನಿಯು, ಭೀಮನಂ-ವಾಯುಸುತನನ್ನು, ಕರೆದು-ಬರಮಾಡಿಕೊಂಡು, ಇಂತು-ಮುಂದೆ ಹೇಳುವಂತೆ, ಮುದದಿಂದ-ವಿಶ್ವಾಸದಿಂದ, ಎಂದನು-ನುಡಿದನು. ||೧೫||

ಟೀ|| (ಆಧೌಮ್ಯನು) ಎಲೆವೃಕೋದರ - ಎಲೈ ವಾಯುನಂದನನೆ, ನಾಂ-ನಾನಾದರೊ, ಈತುರಂಗಮದೊಳು-ಈ ಕುದುರೆಯಲ್ಲಿ, ಪರೀಕ್ಷೆಯಂತೋರಿಸುವೆನು - ಪರೀಕ್ಷೆಯನ್ನು ತೋರಿಸಿಕೊಡುತ್ತೇನೆ, ಸಕಲಜನಂ - ಎಲ್ಲರೂ, ಈಕ್ಷಿಪುದು-ನೋಡುತ್ತಿರಬೇಕು, ಖಡ್ಗಮಂ-ಕತ್ತಿಯನ್ನು, ಒಂದೇಕ್ಷಣಂ-ಒಂದು ಕ್ಷಣಮಾತ್ರ, ಕೊಂಡು-ಹಿಡಿದವನಾಗಿ, ನಿಶ್ಚಲನಾಗಿ-ಸ್ಥಿರಚಿತ್ತದಿಂದ, ನಿಲ್ವುದು-ನಿಂತುಕೊಳ್ಳತಕ್ಕದ್ದು, ಎಂದು-ಎಂಬತೆರನಾಗಿ ತಿಳಿಸಿ, ಪ್ರೋಕ್ಷಿಸಿ-ಪ್ರೋಕ್ಷಣೆಯಂ ಮಾಡಿ, ಹಯದ-ಅಶ್ವದ, ಎಡಗಿವಿಯನು-ಎಡಭಾಗದ ಕಿವಿಯನ್ನು, ಕರಾಗ್ರದಿಂಪಿಡಿದು-ಕೈಬರಳಿನಿಂದ ಹಿಡಿದುಕೊಂಡು, ಅಕ್ಷೋಭದಿಂ-ಕಷ್ಟ

---

ಈ ಕುದುರೆಯು ತನಗೆ ಅಶ್ವಲೋಕವು ಬೇಡವೆಂದೂ, ಕೃಷ್ಣಸಾನ್ನಿಧ್ಯವುಂಟಾಗಲೆಂದೂ ಹೇಳುತ್ತಿರುವುದು,||೧೩|| ಪೂರ್ವದಲ್ಲಿ ಯಾರೂ ಇಂತಹ ಯಾಗವನ್ನು ಮಾಡಿಲ್ಲವೆಂದೂ, ಇದು ಅಸಾಧಾರಣವಾದ ಯಾಗವಾದ್ದರಿಂದಲೇ ನನಿಗೆ ಕೃಷ್ಣಸಾನ್ನಿಧ್ಯವು ದೊರೆಯುವುದೆಂದೂ ಈ ಕುದುರೆಯು ಹೇಳುತ್ತಲಿರುವುದೆಂದು ಕುದುರೆಯ ಮನೋಭಿಪ್ರಾಯವನ್ನು ನಕುಲನು ಹೇಳಲು ||೧೪|| ಈ ಅಚ್ಚರಿಯನ್ನು ನೋಡಬೇಕೆಂದು ಅಲ್ಲಿ ನೆರೆದಿದ್ದ ಸರ್ವರೂ ಏಕಾಗ್ರಚಿತ್ತವುಳ್ಳವರಾಗಿರುವಾಗ, ಧೌಮ್ಯಮುನೀಂದ್ರನು ಭೀಮನನ್ನು ಕುರಿತು ಇಂತೆಂದನು. ||೧೫|| ಅಯ್ಯಾ ಭೀಮಸೇನನೆ, ನೀನು ಸ್ವಲ್ಪಹೊತ್ತು ನಿಶ್ಚಲನಾಗಿ ನಿಂತಿರು. ಈ ಕುದುರೆಯಲ್ಲಿ ನಿಮ್ಮೆಲ್ಲರಿಗೂ ಒಂದು ಪರೀಕ್ಷೆಯನ್ನು ತೋರಿಸುವೆನೆಂದು ನುಡಿದು, ಆ ಕುದುರೆಯ ಕಿವಿಯನ್ನು ಸೀಳಿದನು. ಅದರಲ್ಲಿ

ಹಯದೆಡಗಿವಿಯ | ನಾಕ್ಷೋಭದಿಂ ಸೀಳಿದೊಡೆನೆತ್ತರಿಲ್ಲದೆಸು | ಹಾಕ್ಷೀರಧಾರೆಪೊರಮೊಟ್ಟುದು ಸಮಸ್ತಲೋಕಂ ಕಂಡುಬೆರ
ಗಾಗಲು ||೧೬|| ಮತ್ತೆ ಧೌಮ್ಯಂ ಭೀಮಸೇನನಂ ಕರೆದು ಪುರು | ಷೋತ್ತಮಂ ಪ್ರೀತನಪ್ಪವೊಲಿನ್ನು ಬಾಳಿಂದ | ಕತ್ತರಿಸು ಕುದು
ರೆಯ ತಲೆಯನೆಂದು ನೇಮಿಸಿದೊಡನಿಲಸುತನಾಕ್ಷಣದೊಳು || ಬತ್ತಿಡಿದ ವಾದ್ಯಘೋಷದೊಳಮಲ ಬರ್ಹಿಗಳ | ಚಿತ್ತರದ ಪರಿಪೂ
ತ ವಾಜಿ ಶಿರಮಂ ಭೇದಿ | ಸುತ್ತಿರಲಿಳೆಗೆ ಬೀಳದೆ ನಭಸ್ಥಳಕಡರ್ದಡಗಿತಿನಮಂಡಲದೊಳು ||೧೭|| ಪರಿಶುದ್ಧಮಾಗಿರ್ಪುದೀ ತುರಂಗ
ಮೆಂದರಿದು | ಹರಿ ಹೊಯಿದನದರುರಸ್ಥಳದೊಳುರ್ವಿಗೆ ಬಿದ್ದು | ದಿರದೆ ಪೊರಮಟ್ಟು ಜೀವಾತ್ಮನತಿತೇಜದಿಂದಚ್ಯುತಾಸ್ಯದೊಳಡ
ಗಲು || ವರಮುನಿಗಳಮಲಧರ್ಮವಿದೆಂದರೆಲೆಯುಧಿ | ಷ್ಠಿರ ಪೂರ್ವಯುಗದಧ್ವರಂಗಳೊಳ್ಕಾಣೆವೀ | ಪರಿ ಪವಿತ್ರದ ಪಶುವನಿ
ದು ನಿನಗೆ ದೊರಕೊಂಡು ಕ್ರತು ಸಫಲಮಾದುದೆಂದು || ೧೮ || ಏವೇಳ್ವೆನಾಶ್ಚರ್ಯಮಂ ಬಳಿಕ ವಾಜಿಯ ಕ | ಳೇವರಂ ಕರ್ಪೂರಮಾ

ದಿಂದ, ಸೀಳಿದೊಡೆ - ಸೀಳಿಬಿಡಲು, ನೆತ್ತರಿಲ್ಲದೆ - ರಕ್ತವೇ ಬಾರದೆ, ಸಮಸ್ತಲೋಕಂ - ಸಕಲರೂ, ಕಂಡು - ನೋಡಿ ಬೆರಗಾಗಲು, ಅಚ್ಚರಿಯನೈದುವಂತೆ, ಮಹಾಕ್ಷೀರಧಾರೆ - ಹೆಚ್ಚಾದ ಹಾಲಿನ ಧಾರೆಯು, ಪೊರಮಟ್ಟುದು - ಈಚೆಗೆ ಸುರಿಯಲಾರಂಭಿಸಿತು || ೧೬ ||

ಟೀ|| ಮತ್ತೆ-ತಿರುಗಿ, ಧೌಮ್ಯಂ-ಧೌಮ್ಯನೆಂಬ ತಾಪಸೋತ್ತಮನು, ಭೀಮಸೇನನಂ ಕರೆದು – ವೃಕೋದರನನ್ನು ಕೂಗಿ, ಇನ್ನು-ಇನ್ನು ಮುಂದೆ, ಪುರುಷೋತ್ತಮಂ-ಶ್ರೀಮನ್ನಾರಾಯಣ ಮೂರ್ತಿಯು, ಪ್ರೀತನಪ್ಪವೊಲ್-ಸಂತಸಂಗೊಳ್ಳುವಂತೆ, ಬಾಳಿಂದ-ಖಡ್ಗದಿಂದ, ಕುದುರೆಯ-ತುರಂಗಮದ, ತಲೆಯನು-ತಲೆಯನ್ನು, ಕತ್ತರಿಸು-ಕಡಿದು ಹಾಕು, ಎಂದು-ಎಂಬತೆರನಾಗಿ, ನೇಮಿಸಿದೊಡೆ-ಅಪ್ಪಣೆಮಾಡಲು, ಆಕ್ಷಣದೊಳು-ಒಡನೆಯೇ, ಬತ್ತಿಡಿದ – ಸಾಂದ್ರವಾದ, ವಾದ್ಯಘೋಷದೊಳ್-ಮೃದಂಗಾದಿಗಳ ಶಬ್ದದಿಂದ, ಅಮಲ-ಶ್ರೇಷ್ಠಂಗಳಾದ, ಬರ್ಹಿಗಳ-ನವಿಲ್ಗರಿಗಳ, ಚಿತ್ತರದ-ಸಿಂಗರದಿಂದ, ಪರಿಪೂತ-ಪವಿತ್ರವಾದ, ವಾಜಿ-ಅಶ್ವದ, ಶಿರಮಂ-ತಲೆಯನ್ನು, ಅನಿಲಸುತನು-ಭೀಮಸೇನನು, ಭೇದಿಸುತಿರಲು-ಕಡಿದು ಹಾಕುತ್ತಿರಲಾಗಿ, ಇಳೆಗೆಬೀಳದೆ-ಭೂಮಿಯಮೇಲೆ ಉರುಳದೆ, ನಭಸ್ಥಳಕೆ-ಅಂತರಿಕ್ಷ ಪ್ರದೇಶಕ್ಕೆ, ಅಡರ್ದು-ಹಾರಿಹೋಗಿ, ಇನಮಂಡಲದೊಳು-ಸೂರ್ಯಮಂಡಲದೊಳಗೆ, ಅಡಗಿತು-ಮಾಯವಾಯಿತು, (ಕಾಣಿಸದೆ ಹೋಯಿತು) ||೧೭||

ಟೀ|| ಈತುರಗಂ-ಈ ಕುದುರೆಯಾದರೊ, ಪರಿಶುದ್ಧಮಾಗಿರ್ಪುದು-ಪವಿತ್ರವಾದದ್ದಾಗಿರುವುದು, ಎಂದು-ಎಂಬತೆರನಾಗಿ, ಹರಿ, ಅರಿದು-ತಿಳಿದವನಾಗಿ, ಅದರ-ಆ ಅಶ್ವದ, ಉರಸ್ಥಳದೊಳು-ಎದೆಯ ಭಾಗದಲ್ಲಿ, ಹೊಯ್ದನು-ಹೊಡೆದನು, ಇರದೆ-ತಡಮಾಡದೆ, ಉರ್ವಿಗೆ-ನೆಲದಮೇಲೆ, ಬಿದ್ದುದು-ಬಿದ್ದುಹೋಯಿತು, ಜೀವಾತ್ಮನು-ಜೀವಾತ್ಮನಾದರೊ, ಪೊರಮಟ್ಟು-ಹೊರಹೊರಟು, ಅಚ್ಯುತನ ಆಸ್ಯದೊಳು-ಶ್ರೀ ಕೃಷ್ಣನ ಮುಖದಲ್ಲಿ, ಅತಿತೇಜದಿಂದ-ಹೆಚ್ಚಾದ ಕಾಂತಿಯಿಂದ, ಅಡಗಲು-ಹೋಗಿ ಸೇರಲು, ವರಮುನಿಗಳು-ತಾಪಸೋತ್ತಮರು, ಎಲೆಯುಧಿಷ್ಠಿರ-ಅಯ್ಯಾ ಧರ್ಮಪುತ್ರನೆ, ಈಪರಿ-ಈ ಬಗೆಯಾಗಿರತಕ್ಕ, ಪವಿತ್ರ-ಪರಿಶುದ್ಧವಾದ, ಪಶುವನು-ಅಶ್ವವನ್ನು, ಪೂರ್ವಯುಗದ ಅಧ್ವರಂಗಳೊಳ್-ಪೂರ್ವಕಾಲದಲ್ಲಿ ಮಾಡಿದ ಯಾಗಗಳಲ್ಲಿ, ಕಾಣೆವು-ನೋಡಿಯೇ ಇಲ್ಲವು, ಇದು-ಈ ಅಶ್ವವು, ನಿನಗೆ-ನಿನಿಗಾದರೊ, ದೊರಕೊಂಡು-ಲಭಿಸಿದ ಕಾರಣ, ಕ್ರತು-ಈ ನಿನ್ನ ಯಾಗವು, ಸಫಲಂ-ಪ್ರಯೋಜನ ಸಹಿತವಾದದ್ದು, ಆದುದು-ಆಯಿತು, ಎಂದು-ಎಂಬತೆರನಾಗಿಯೂ, ಅಮಲ-ಶ್ರೇಷ್ಟವಾದ, ಧರ್ಮಂ-ಧರ್ಮವು, ಎಂದು-ಎಂಬುದಾಗಿಯೂ, ಎಂದರು-ತಿಳಿಸಿದವರಾದರು ||೧೮||

ಟೀ|| ಆಶ್ಚರ್ಯಮಂ-ಆಶ್ಚರ್ಯಕರವಾದ ಸಂಗತಿಯನ್ನು, ಏವೇಳ್ವೆನು-ಏನೆಂದು ನುಡಿಯಲಿ, ಬಳಿಕ-ಅನಂತರ, ವಾಜಿಯ-ಕುದುರೆಯ, ಕಳೇವರಂ-ದೇಹವು, ಅತಿಶುಭ್ರದಿಂದ-ಬಹಳ ಬೆಳ್ಳಗಿರತಕ್ಕ, ಕರ್ಪೂರಂ-ಕರ್ಪೂರವು, ಆದುದು-ಆಯಿತು, ಆಗ-ಆ ಕಾಲದಲ್ಲಿ, ಮಹಾಮುನಿಗಳು-ತಾಪಸೋತ್ತಮರೆಲ್ಲಾ, ಭಾವಿಸಿ- ಜ್ಞಾನದೃಷ್ಟಿಯಿಂದ ನೋಡಿ, ಇದು-ಈ ಕುದು

ರಕ್ತವು ಸುರಿಯದೆ ಹಾಲು ಸುರಿಯುತ್ತಿರುವುದನ್ನು ನೋಡಿ ಎಲ್ಲರೂ ಅಚ್ಚರಿಗೊಳ್ಳುತ್ತಿರುವಾಗ || ೧೬ || ಧೌಮ್ಯಮುನಿಯು ಮತ್ತೆ ಭೀಮಸೇನನನ್ನು ನೋಡಿ, ಎಲೈ ಭೀಮನೆ, ಈಗ ನೀನು ಈ ಕುದುರೆಯ ತಲೆಯನ್ನು ಕತ್ತರಿಸಿ ಬಿಡೆಂದನು. ವಾಯುಸುತನು ಕೂಡಲೇ ಅದರ ಕಂಠವನ್ನು ಕತ್ತರಿಸುವಾಗ ಅನೇಕ ವಾದ್ಯಘೋಷಂಗಳುಂಟಾದವು, ಭೀಮನು ಅದರ ಶಿರಸ್ಸನ್ನು ಭೇಧಿಸಿದ ಕೂಡಲೆ ತಲೆಯು ನೆಲಕ್ಕೆ ಬೀಳದೆ ಅಂತರಿಕ್ಷದಲ್ಲಿಯೇ ಮಾಯವಾಯಿತು || ೧೭ || ಆಗ ಕೃಷ್ಣಸ್ವಾಮಿಯು ಇದು ಉತ್ತಮಾಶ್ವವೇ ಸರಿಯೆಂದರಿತು, ಅದರ ಎದೆಯನ್ನು ತಾನೇ ಭೇದಿಸಲು ಕುದುರೆಯು ಕೆಳಗೆ ಬಿದ್ದು ಅಂತರಾತ್ಮನು ಕೃಷ್ಣನ ಮುಖದಲ್ಲಿ ಸೇರಿ ತೇಜೋರೂಪನಾಗಿರುವುದನ್ನು ಅಲ್ಲಿ ನೆರದಿದ್ದವರೆಲ್ಲರೂ ನೋಡಿ, ಧರ್ಮರಾಯನ ಯಾಗವು ಸಾರ್ಥಕವಾಯಿತೆಂದೂ ಪೂರ್ವದಿಂದಲೂ ಯಾರಿಗೂ ಇಂತಹ ಪುಣ್ಯವು ಪ್ರಾಪ್ತವಾಗಲಿಲ್ಲವೆಂದೂ ಕೊಂಡಾಡುತ್ತಲಿದ್ದರು ||೧೮|| ಕೇಳ್ವೆ ಜನ

ದುದತಿಶುಭ್ರದಿಂ । ಭಾವಿಸಿಮಹಾಮುನಿಗಳಿದುಕೃಷ್ಣಮಹಿಮೆಯೆಂದಾಗವಿಸ್ಮಿತರಾಗಲು ॥ ಭೂವರಂಹರಿಸಹಿತಪತ್ನಿಯುಂಕೂಡಿಕೊಂ । ಡಾವೇಷ್ಟಿಸಿದಸಕಲಬಾಂಧವರಗಡಣದಿಂ । ಪಾವಕನಮುಂದೆಕುಳ್ಳಿರ್ದನದರಿಂದಹೋಮಂಗಳಂಮಾಡಿಸಲ್ಕೆ ॥೧೯॥
ಧಾರುಣಿಗೆಕುಪ್ಪಳಿಸದಾತುರಗದೊಡಲಕ । ರ್ಪೂರಮಂಸ್ರುವದಿಂದಸಂಗ್ರಹಿಸಿಶಾಸ್ತ್ರಪ್ರ । ಕಾರದಿಂದಾಗವೇದವ್ಯಾಸಮುನಿಪನಮರೇಂದ್ರನಂಕರೆದುಬರಿಸಿ ॥ ಈರಾಜಕುಲತಿಲಕನಧ್ವರದೊಳೀವಘನ । ಸಾರಾಹುತಿಯನೀಗಸ್ವೀಕರಿಸುಮುನ್ನಿನ । ಗಾರುಂಕೊಡುವರಿಲ್ಲಕಲಿಯುಗದೊಳೀತೆರದೊಳೆನೆಶಕ್ರನಿಂತೆಂದನು ॥೨೦॥ ಸರ್ಪನಕ್ಷತ್ರಸಂಯುಗದಗುರುವಾರಮಾ । ಗಿರ್ಪುದಿಂದೆಲೆಮುನೀಶ್ವರಮಹೀಪಾಲಂಸ । ಮರ್ಪಿಸುವಘನಸಾರದಾಹುತಿಯನಗ್ನಿಮುಖದಿಂದ ನೀನೆನಗಿತ್ತೊಡೆ ॥ ದರ್ಪದಿಂತೃಪ್ತನಾದಪೆನೆಂದುಸುರಪನೆ। ಲ್ಲರ್ಪೊಗಳೆಪ್ರತ್ಯಕ್ಷನಾಗಿಬಂತಿರಲಾಗ। ಕರ್ಪೂರಮಂಸ್ರುವದೊಳನಲನೊಳ್ವೇಳಿದಂವ್ಯಾಸಮುನಿಮಂತ್ರದಿಂದ॥೨೧

---

ರೆಯ ದೇಹವು ಕರ್ಪೂರವಾಗಿರತಕ್ಕದ್ದು, ಕೃಷ್ಣನ-ಕೃಷ್ಣಸ್ವಾಮಿಯ, ಮಹಿಮೆ-ಮಹಾತ್ಮೆಯು, ಎಂದು-ಎಂಬ ತೆರನಾಗಿ, ವಿಸ್ಮಿತರಾಗಲು-ಆಶ್ಚರ್ಯದಿಂದ ಕೂಡಲು, ಭೂವರಂ-ಯುಧಿಷ್ಠಿರನು, ಹರಿಸಹಿತ - ಶ್ರೀಕೃಷ್ಣನೊಂದಿಗೆ, ಪತ್ನಿಯುಂ ಕೂಡಿಕೊಂಡು-ಪತ್ನೀ ಸಮೇತನಾಗಿ, ಆವೇಷ್ಟಿಸಿದ-ಸುತ್ತಲೂ ನೆರೆದಿರತಕ್ಕ, ಸಕಲ-ಸಮಸ್ತರಾದ, ಬಾಂಧವರಗಡಣದಿಂ-ಬಂಧುವರ್ಗದ ಗುಂಪಿನಿಂದ, ಪಾವಕನ-ಅಗ್ನಿಯ, ಮುಂದೆ-ಮುಂದುಗಡೆ, ಅದರಿಂದ-ಆ ಕುದುರೆಯ ಶರೀರದಿಂದ, ಹೋಮಂಗಳಂ ಮಾಡಿಸಲ್ಕೆ-ಹೋಮಂಗಳಂ ಮಾಡಿಸಲೋಸುಗ, ಕುಳ್ಳಿರ್ದನು-ಕುಳಿತುಕೊಂಡಿದ್ದವನಾದನು ॥೧೯॥

ಟೀ॥ ವೇದವ್ಯಾಸಮುನಿಪನು-ವ್ಯಾಸಮಹರ್ಷಿಯು, ಸ್ರುವದಿಂದ-ಸ್ರುವನಾಮಕವಾದ ಪಾತ್ರೆಯಿಂದ, ಧಾರುಣಿಗೆ-ಭೂಮಿಗೆ, ಕುಪ್ಪಳಿಸಿದ-ಒಟ್ಟಾಗಿ ಬಿದ್ದಿರತಕ್ಕ, ಆತುರಂಗದ-ಆ ಹಯದ, ಒಡಲಕರ್ಪೂರಮಂ- ಕರ್ಪೂರವಾಗಿರತಕ್ಕ ದೇಹವನ್ನು, ಸಂಗ್ರಹಿಸಿ-ಶೇಖರಿಸಿ, ಆಗ-ಆ ಕಾಲದಲ್ಲಿ, ಅಮರೇಂದ್ರನಂ-ದೇವೇಂದ್ರನನ್ನು, ಶಾಸ್ತ್ರಪ್ರಕಾರದಿಂದ-ಯಥಾ ಶಾಸ್ತ್ರೀಯವಾಗಿ, ಕರೆದು-ಕರೆದವನಾಗಿ, ಬರಸಿ-ಬರುವಂತೆ ಮಾಡಿಕೊಂಡು, ಈರಾಜಕುಲತಿಲಕನ-ಈ ರಾಜಶ್ರೇಷ್ಠನಾದ ಧರ್ಮಪುತ್ರನ, ಅಧ್ವರದೊಳು-ಯಾಗದಲ್ಲಿ, ಈವ-ಕೊಡುತ್ತಲಿರತಕ್ಕ, ಘನ-ಹೆಚ್ಚಾಗಿ, ಸಾರ-ಸ್ವಾರಸ್ಯವುಳ್ಳ ಮತ್ತು, ಘನಸಾರ-ಕರ್ಪೂರದ, ಆಹುತಿಯನು-ಹವಿಸ್ಸನ್ನು, ಈಗ-ಈಗಲಾದರೂ, ಸ್ವೀಕರಿಸು- ತೆಗೆದುಕೊಳ್ಳುವನಾಗು, ನಿನಗೆ ನಿನಿಗಾದರೂ, ಕಲಿಯುಗದೊಳು-ಕಲಿಯುಗದಲ್ಲಿ, ಮುಂದೆ-ಇತಃಪರ, ಈತರದೊಳು-ಈ ಪರಿಯಿಂದ, ಕೊಡುವರು-ಹೋಮ ಮಾಡುವರು, ಆರುಂ-ಬೇರೊಬ್ಬರೂ, ಇಲ್ಲ-ಇಲ್ಲವು, ಎನೆ-ಎಂದು ನುಡಿಯಲು, ಶಕ್ರನು-ದೇವೇಂದ್ರನು, ಇಂತು-ಮುಂದೆ ಹೇಳುವಂತೆ, ಎಂದನು-ನುಡಿಯುವನು ॥೨೦॥

ಟೀ॥ ಎಲೆಮುನೀಶ್ವರ-ಅಯ್ಯಾ ವ್ಯಾಸಮಹರ್ಷಿಯೇ, ಇಂದು-ಈ ಹೊತ್ತು, ಸರ್ಪನಕ್ಷತ್ರಸಂಯುತದ-ಆಶ್ಲೇಷದಿಂದ ಕೂಡಿದ, ಗುರುವಾರಂ-ಗುರುವಾರವು, ಆಗಿರ್ಪುದು-ಆಗಿದೆ, ಮಹೀಪಾಲಂ-ರಾಜೇಂದ್ರನಾದ ಧರ್ಮತನಯನು, ಸಮರ್ಪಿಸುವ-ಕೊಡತಕ್ಕ, ಘನಸಾರದ-ಕರ್ಪೂರದ, ಆಹುತಿಯನು-ಹವಿಸ್ಸನ್ನು, ಎನಗೆ-ನನಿಗಾದರೂ, ನೀನು ಅಗ್ನಿಮುಖದಿಂದ-ಅಗ್ನಿಯ ಮೂಲಕವಾಗಿ, ಇತ್ತೊಡೆ-ಕೊಟ್ಟಹಾಗಾದರೆ, ದರ್ಪದಿಂ-ನನಿಗೆ ಬಂದು ಸೇರುವುದರಿಂದ, ತೃಪ್ತನು-ತೃಪ್ತಿಯನ್ನೈದಿದವನು, ಆದಪೆಂ-ಆಗುತ್ತೇನೆ, ಎಂದು-ಎಂಬತೆರನಾಗಿ, ಎಲ್ಲರು-ಸರ್ವರೂ, ಪೊಗಳೆ-ಹೊಗಳುವಂತೆ, ಸುರಪನು-ದೇವೇಂದ್ರನು, ಪ್ರತ್ಯಕ್ಷನಾಗಿ-ಕಣ್ಣಿಗೆ ಕಾಣುವರೀತಿಯಾಗಿ, ಬಂದುಇರಲು-ಬಂದಿರಲಾಗಿ, ಆಗ-ಆ ವೇಳೆಯಲ್ಲಿ, ವ್ಯಾಸಮುನಿ-ವೇದವ್ಯಾಸನು, ಸ್ರುವದೊಳು-ಸ್ರುವವೆನ್ನುವ ಪಾತ್ರೆಯಿಂದ, ಕರ್ಪೂರಮಂ- ಕರ್ಪುರವನ್ನು, ಅನಲನೋಳ್-ಅಗ್ನಿಯಲ್ಲಿ, ಮಂತ್ರದಿಂದ-ಮಂತ್ರಪೂರ್ವಕವಾಗಿ, ವೇಳಿದಂ-ಹಾಕಿಸಿದನು ॥೨೧॥

---

ಮೇಜಯನೇ, ಇಂತಹ ಆಶ್ಚರ್ಯವನ್ನೆಂದೂ ಕೇಳಿಯೇ ಇಲ್ಲವು. ನೆಲದಮೇಲೆಬಿದ್ದ ಕುದುರೆಯ ದೇಹವೆಲ್ಲಾ ಧವಳವರ್ಣವಾದ ಕರ್ಪೂರವಾಗಿರುವುದನ್ನು ನೋಡಿ, ಇದು ಕೃಷ್ಣನ ಮಹಾತ್ಮೆಯಲ್ಲದೆ ಬೇರೆಂಬುಲ್ಲವೆಂದು ತಿಳಿದು ಕೊಂಡಾಡುತ್ತಲಿದ್ದರು. ಆಗ, ಧರ್ಮರಾಯನು ಪತ್ನಿಯೊಂದಿಗೆ ಕೂಡಿ ಅಶ್ವದೇಹವನ್ನು ಯಜ್ಞೇಶ್ವರನಿಗೆ ಕೊಡಲುದ್ಯುಕ್ತನಾದನು ॥ ೧೯ ॥ ಆಗ ವ್ಯಾಸಮುನಿಯು ನೆಲದಮೇಲೆ ಕರ್ಪೂರಾಕೃತಿಯಾಗಿ ಬಿದ್ದಿರುವ ಅಶ್ವದೇಹವನ್ನೆಲ್ಲಾ ಸ್ರುವವೆಂಬ ಪಾತ್ರೆಯೊಳಕ್ಕೆ ಶೇಖರಿಸಿ ದೇವೇಂದ್ರನನ್ನು ಕುರಿತು, ಎಲೈ ಶಚೀಪತಿಯೇ! ಭೂಕಾಂತನಾದ ಧರ್ಮಪುತ್ರನು ಈಗ ಕೊಡುತ್ತಲಿರುವ ಹೋಮದ್ರವ್ಯವನ್ನು ಆದರದಿಂದ ಸ್ವೀಕರಿಸು, ಕಲಿಯುಗದಲ್ಲಿ ಯಾರೂ ಅಶ್ವಮೇಧಯಾಗವನ್ನು ಮಾಡುವುದಿಲ್ಲವಾದ್ದರಿಂದ ನಿನಿಗೆ ಆಹಾರವು ಮುಂದೆ ದೊರೆಯಲಾರದೆನ್ನಲು ॥೨೦॥ ದೇವೇಂದ್ರನು ವ್ಯಾಸಮಹರ್ಷಿಯನ್ನು ಕುರಿತು ಇಂತೆಂದನು. ಈದಿನ ಆಶ್ಲೇಷಾನಕ್ಷತ್ರಯುಕ್ತವಾದ ಗುರುವಾರವು ಧರ್ಮರಾಯನು ಕೊಡತಕ್ಕ ಹೋಮದ್ರವ್ಯವನ್ನು ಅಗ್ನಿಮುಖದಿಂದ ಕೊಡಲಿ, ಸ್ವೀಕರಿಸುವೆನೆಂದು ನುಡಿದನು. ಆಗ

ಪ್ರತ್ಯಕ್ಷಮಾದಶಕ್ರಾದಿದೇವತೆಗಳ್ಗೆ | ಶ್ರುತ್ಯುಕ್ತಮಂತ್ರವಿಧಿಗಳವಿಧಾನಂಗಳಿಂ | ದತ್ಯಧಿಕಘನಸಾರದಾಹುತಿಗಳಂಯಥಾಕ್ರಮ ದಿಂದಹುತವಹನನೊಳು || ಸತ್ಯಸಂಪನ್ನವೇದವ್ಯಾಸನೀಯಲ್ಕೆ | ಸುತ್ಯಾಹವನಸವನಸಮಯದೋಳ್ವಿರಚಿಸುವ| ಕೃತ್ಯಂಗಳಿಂದ ನಡೆದುದುಮುಖಂ ತ್ರಿಜಗಸಚರಾಚರಂಮಿಗೆದಣಿಯಲು || ೨೨ || ಸಾಕ್ಷಾತ್ಸುಯಜ್ಞಸ್ವರೂಪನಚ್ಯುತತಾನೆ | ಸಾಕ್ಷಿಯಾಗಿರ್ದು ಮಾಡಿಸುವವಂಶ್ರೌತವಿ | ದ್ಯಾಕ್ಷಮುನೆನಿಪಧೌಮ್ಯನೇಕರ್ಮಕರ್ತೃವಿಂಶತಿಕಮಲಸಂಭವರನು||ಈಕ್ಷಿಸಿದಬಕದಾಲ್ಭ್ಯನೇಬ್ರಹ್ಮನಾ ಚಾರ್ಯ | ನೇಕ್ಷಿತಿಸುರಾಗ್ರ್ಯವೇದವ್ಯಾಸನಧ್ವರಕೆ | ದೀಕ್ಷಿತನೆಧರ್ಮಜನುಹಾಮುನಿಗಳೇಋತ್ವಿಜರ್ಪೊಸತಿದೆನಿಸದಿಹುದೆ ||೨೩|| ಆಹುತಿಗಳಂಕೊಂಡುಮಿಗೆತೇಜದಿಂದೊಪ್ಪು | ವಾಹುತವಹಜ್ವಾಲೆಗಳಪುಣ್ಯದರ್ಶನದೊ | ಳಾಹೋಮಧೂಮಸಂಸ್ಪರ್ಶನ ದೊಳಾಕರ್ಮಕೃತಸೋಮಪಾನದಿಂದ || ಆಹೋತ್ರದುರುಮಂತ್ರಘೋಷಣಶ್ರವಣದಿಂ | ದಾಹವಿರ್ಗಂಧದಾಘ್ರಾಣದಿಂದಾಮ

---

ಟೀ|| ಸತ್ಯಸಂಪನ್ನ-ಸತ್ಯವೇ ನಿಧಿಯಾಗಿವುಳ್ಳ, ವೇದವ್ಯಾಸನು-ವ್ಯಾಸಮುನಿಯು, ಯಥಾಕ್ರಮದಿಂದ-ಶಾಸ್ತ್ರರೀತಿ ಯನ್ನತಿಕ್ರಮಿಸದೆ, ಅತ್ಯಧಿಕ-ಬಹು ಹೆಚ್ಚಾದ, ಘನಸಾರದ-ಕರ್ಪೂರದ, ಆಹುತಿಗಳಂ-ಹವಿಸ್ಸುಗಳನ್ನು, ಶ್ರುತ್ಯುಕ್ತ-ವೇದೋ ಕ್ತವಾದ, ಮಂತ್ರವಿಧಿಗಳ-ಮಂತ್ರನಿಯಮಂಗಳ, ವಿಧಾನಂಗಳಿಂದ-ಬಗೆಗಳಿಂದ, ಪ್ರತ್ಯಕ್ಷಮಾದ-ಕಣ್ಣುಗಳೆದುರಿಗೆ ನಿಂತಿರುವ, ಶಕ್ರ-ಶಚೀಪತಿಯೆ, ಆದಿ-ಆದಿಯಾಗಿರತಕ್ಕ, ದೇವತೆಗಳ್ಗೆ-ಸುರರಿಗೆಲ್ಲಾ, ಈಯಲ್ಕೆ-ಕೊಡಲಾಗಿ, ತ್ರಿಜಗದ-ತ್ರಿಲೋಕಂಗಳ, ಚರಾ ಚರಂ-ಚರಾಚರ ಪ್ರಾಣಿಗಳೂ ಕೂಡ, ದಣಿಯೆ- ಸಂತುಷ್ಟರಾಗುವಂತೆ, ಸುತ್ಯಾಹವನ- ಸುತ್ಯಾಹವನವೆನ್ನುವ, ಸವನ- ಹೋ ಮದ, ಸಮಯದೋಳ್-ವೇಳೆಯಲ್ಲಿ, ವಿರಚಿಸುವ-ಮಾಡುತ್ತಲಿರುವ, ಕೃತ್ಯಂಗಳಿಂದ-ಕಾರ್ಯಗಳಿಂದ, ಮಖಂ-ಯಾಗವು, ನಡೆ ದುದು-ಪೂರ್ತಿಯಾಯಿತು. ||೨೨||

ಟೀ|| ಸಾಕ್ಷಾತ್-ಕಣ್ಣುಗಳಿಗೆ ಗೋಚರನಾಗಿ, ಸುಯಜ್ಞಸ್ವರೂಪನು-ಯಜ್ಞಸ್ವರೂಪನಾಗಿರತಕ್ಕವನಾದ, ಅಚ್ಯು ತನು-ಕೃಷ್ಣಮೂರುತಿಯು, ಸಾಕ್ಷಿಯಾಗಿ-|ನೋಡಿರುವುದಕ್ಕೆ ಗುರುತಾಗಿ, ತಾನೆ- ತಾನಾಗಿಯೆ, ಇರ್ದು- ಇದ್ದುಕೊಂಡು, ಮಾಡಿಸುವವಂ-ಮಾಡಿಸತಕ್ಕ ಯಜಮಾನನಾಗಿದ್ದಾನೆ, ಕರ್ಮಕರ್ತೃ-ಕರ್ಮವನ್ನು ಮಾಡಿಸತಕ್ಕವನಾದರೊ, ಶ್ರೌತವಿದ್ಯಾಕ್ಷ ಮಂ-ಯಾಗ ಕಾರ್ಯಗಳನ್ನು ಮಾಡಿಸುವುದರಲ್ಲಿ ನಿಪುಣನಾದ, ಧೌಮ್ಯನೇ-ಧೌಮ್ಯರುಷಿಯಾಗಿರುವನು, ಬ್ರಹ್ಮನು-ಬ್ರಹ್ಮ ತ್ವಕ್ಕೆ ನಿಂತಿರುವನಾದರೊ, ಇಪ್ಪತ್ತು ಕಮಲಸಂಭವರನು-ಇಪ್ಪತ್ತುಮಂದಿ ಬ್ರಹ್ಮರನ್ನು, ಈಕ್ಷಿಸಿದ-ನೋಡಿದ, ಬಕದಾಲ್ಭ್ಯ ನೇ-ಬಕದಾಲ್ಭ್ಯಮುನಿಯೇ ಆಗಿರುವನು, ಆಚಾರ್ಯನೆ-ಆಚಾರ್ಯನಾದರೊ, ಕ್ಷಿತಿಸುರಾಗ್ರ್ಯವೇದವ್ಯಾಸನು-ಭೂಸುರೋತ್ತಮ ನಾದ ವ್ಯಾಸಮುನಿಯು, ಧರ್ಮಜ-ಧರ್ಮಪುತ್ರನೆ, ಅಧ್ವರಕೆ-ಯಾಗಕ್ಕೆ, ದೀಕ್ಷಿತನು-ಕಂಕಣಬದ್ಧನಾದವನು, ಋತ್ವಿಜರು- ಋತ್ವಿಕ್ಕುಗಳಾದರೊ, ಮಹಾಮುನಿಗಳೆ-ಶ್ರೇಷ್ಠರಾದ ಪರಮಮಹರ್ಷಿಗಳೆ ಆಗಿದ್ದಾರೆ, ಇಂತಹ ಅಶ್ವಮೇಧವು, ಪೊಸದು-ಹೊಸ ದಾದದ್ದು, ಎನಿಸದೆ-ಎನ್ನಿಸಿಕೊಳ್ಳದೆ ಇರುತ್ತದೆಯೆ, (ಇದು ಅಪೂರ್ವವಾದ ಯಾಗವೇ ಸರಿ) ||೨೩||

ಟೀ|| ಆ ಮಖದೊಳು- ಆ ಅಶ್ವಮೇಧಯಾಗದಲ್ಲಿ, ಹಿಮಕರಾನ್ವಯಲಲಾಮನು- ಚಂದ್ರವಂಶಕ್ಕೆ ತಿಲಕಪ್ರಾಯ ನಾದ ಧರ್ಮನಂದನನಾದರೊ, ಆಹುತಿಗಳಂಕೊಂಡು-ಹವಿಸ್ಸುಗಳನ್ನು ಕೈಕೊಂಡು, ಮಿಗೆ-ಹೆಚ್ಚಾದ, ತೇಜದಿಂದ-ಕಾಂತಿ ಯಿಂದ, ಒಪ್ಪುವ-ಪ್ರಕಾಶಿಸುತ್ತಲಿರತಕ್ಕ, ಹುತವಹಜ್ವಾಲೆಗಳ-ಯಜ್ಞೇಶ್ವರನ ಹೊಯ್ಲಿನ, ಪುಣ್ಯ-ಪುಣ್ಯಪ್ರದವಾದ, ದರ್ಶನ ದೊಳು-ನೋಟದಿಂದಲೂ, ಆ ಹೋಮಧೂಮಸಂಸ್ಪರ್ಶನದೊಳು- ಆ ಹೋಮಕಾಲದಲ್ಲುಂಟಾಗತಕ್ಕ ಹೊಗೆಯ ಸಂಬಂಧ ದಿಂದಲೂ, ಆ ಕರ್ಮಕೃತ-ಆ ಯಜ್ಞಕರ್ಮದಲ್ಲಿ ಮಾಡಿದ, ಸೋಮಪಾನದೊಳು-ಸೋಮರಸವನ್ನು ಕುಡಿಯುವುದರಿಂದಲೂ, ಆ ಹೋತ್ರದ-ಆ ಹೋಮವನ್ನು ಮಾಡತಕ್ಕವನ, ಉರು-ಅಧಿಕವಾದ, ಮಂತ್ರಘೋಷಣಶ್ರವಣದಿಂದ-ಮಂತ್ರಗಳ ಶಬ್ದವನ್ನು

---

ವ್ಯಾಸಮಹರ್ಷಿಯು ಅಶ್ವದೇಹವನ್ನು ಮಂತ್ರಪುರಸ್ಸರವಾಗಿ ಯಜ್ಞೇಶ್ವರನಲ್ಲಿ ಆಹುತಿಯಾಗಿ ಕೊಡುತ್ತಲಿದ್ದನು||೨೧|| ಪ್ರತ್ಯಕ್ಷ ರಾಗಿರತಕ್ಕ ಇಂದ್ರಾದಿ ದೇವತೆಗಳಿಗೆ ವೇದೋಕ್ತಕ್ರಮದಿಂದ ಯಥಾವಿಧಿಯಾಗಿ ಕರ್ಪೂರದ ಆಹುತಿಗಳಂ ಕೊಡುತ್ತಿರಲು ಈ ಯಾಗವು ಸಂಪೂರ್ಣತೆಯನ್ನೈದುತ್ತ ಬಂದುದನ್ನು ನೋಡಿ ಮೂರುಲೋಕವೂ ಕೊಂಡಾಡುತ್ತಲಿತ್ತು ||೨೨|| ಯಜ್ಞಸ್ವರೂ ಪನೂ, ಆದ್ಯಂತರಹಿತನೂ ಆದ ಸ್ವಾಮಿಯು ಎದುರಿಗಿದ್ದು, ವೇದವೇದಾಂಗ ಪಾರಂಗತನಾದ ಧೌಮ್ಯಮುನಿಯು ಕರ್ಮಕರ್ತ ನೂ, ಇಪ್ಪತ್ತುಜನ ಬ್ರಹ್ಮರನ್ನು ಕಂಡಿರತಕ್ಕ ಬಕದಾಲ್ಭ್ಯನೇ ಬ್ರಹ್ಮತ್ವಕ್ಕೆ ಕುಳಿತಿರುವವನೂ, ವೇದವ್ಯಾಸನೇ ಆಚಾರ್ಯನೂ, ಯಜ್ಞದೀಕ್ಷಿತನೇ ಧರ್ಮಜನೂ, ಮಿಕ್ಕ ಮಹರ್ಷಿಗಳೆಲ್ಲಾ ರುತ್ವಿಕ್ಕುಗಳೂ ಆಗಿರುವಾಗ ಈ ಯಜ್ಞವು ಸಫಲವಾಗುವುದ ರಲ್ಲಿ ತಡೆಯೇನಿರುವುದು? ||೨೩|| ಆಜ್ಯಾದ್ಯಾಹುತಿಗಳಿಂದ ತೇಜೋರೂಪನಾದ ಅಗ್ನಿಯ ದರ್ಶನದಿಂದಲೂ, ಹೋಮಧೂಮಾ ದಿಗಳ ಸ್ಪರ್ಶದಿಂದಲೂ, ಮಂತ್ರಘೋಷವನ್ನು ಕೇಳುವುದರಿಂದಲೂ, ಹವಿಸ್ಸಿನ ಸುವಾಸನೆಯ ಆಘ್ರಾಣದಿಂದಲೂ ಪವಿತ್ರ

ಖಿದೊ | ಳಾಹಿಮಕರಾನ್ವಯಲಲಾಮನೆಸೆದಂಪೂತನಾಗಿಸಂತೋಷದಿಂದ ||೨೪|| ಯಾಗದಿಂದಣಿದುಪಾವನಮಾದುದಿಳೆಹವಿ |
ರ್ಭಾಗದಿಂತುಷ್ಟಿವಡೆದುದುದೇವತಾವಳಿಸ | ರಾಗದಿಂದಸುರಾರಿಸಂತುಷ್ಟನಾಗಿತೆಗೆದಪ್ಪಿಭೂಪಾಲಕಂಗೆ || ಈಗನಿನ್ನಧ್ವರಂ
ಸಾಂಗದಿಂಸಂಪೂರ್ಣ | ಮಾಗಿಮುಗಿದುದುಮಾಳ್ಪುದವಭೃತಸ್ನಾನಮಂ | ಭಾಗೀರಥಿಯೊಳೆಂದುನೇಮಿಸಿದನಖಿಳಮುನಿಜನ
ಮೈದೆಕೊಂಡಾಡಲು ||೨೫|| ವಿಪ್ರವಧೆಮೊದಲಾದಬಹುಪಾಪಸಂಚಿತಂ | ಕ್ಷಿಪ್ರದಿಂಪೋಗಿಪರಿಶುದ್ಧಮಹುದೆಂಬವೇ | ದಪ್ರ
ಮಾಣದವಾಜಿಮೇಧಾವಭೃತಮಮಂಮುನೀಶ್ವರಮಾರ್ಡಿಸಲ್ಕೆ|| ಸುಪ್ರಸನ್ನತೆಯಿಂದಸಾನ್ನಿಧ್ಯಮಾಗಿಬಿಡ| ದಪ್ರಮೇಯಂತಾನಿರಲ್ಕೆ
ನೃಪಮೌಳಿಪರ | ಮಪ್ರೀತನಾಗಿತೊಳಗಿದನಧ್ವರಂಮುಗಿಯೆರಾಜಮುನಿಗಣದನಡುವೆ || ೨೬ || ರಮಣಿಸಹಿತರಸನಭಿಷಿಕ್ತನಾ
ದಂಯಥಾ | ಕ್ರಮದಿಂದಸೋಮಪಾನಂಗೈದರೆಲ್ಲರುಂ | ವಿಮಲಹೋಮಂಗಳಪುರೋಡಾಶಶೇಷಮಂಪೋಷಿಸಿದರುತ್ಸವ

ಕೇಳುವುದರಿಂದಲೂ, ಆ ಹವಿರ್ಗಂಧದ–ಆ ಹವಿಸ್ಸಿನ ಸುವಾಸನೆಯ, ಅಘ್ರಾಣದಿಂದ–ಮೂಸುವುದರಿಂದಲೂ, ಪೂತನಾಗಿ–ಪವಿತ್ರನಾಗಿ, ಸಂತೋಷದಿಂದ–ಉತ್ಸವಾತಿಶಯದಿಂದ, ಎಸೆದಂ–ಕಾಂತಿಯುಕ್ತನಾದನು ||೨೪||

ಟೀ|| ಇಳೆ–ಭೂಮಂಡಲದ ಜನರೆಲ್ಲಾ, ಯಾಗದಿಂದ–ಈ ಅಶ್ವಮೇಧದಿಂದ. ದಣಿದು–ಸಂತುಷ್ಟರಾಗಿ, ಪಾವನಂ–ಪವಿತ್ರವಾದದ್ದು, ಆದುದು–ಆಯಿತು, ಹವಿರ್ಭಾಗದಿಂ–ಹವಿಸ್ಸುಗಳಿಂದ, ದೇವತಾವಳಿ–ಸುರವಿಂಡು, ತುಷ್ಟಿವಡೆದುದು–ಆನಂದ ವನ್ನೈದಿತು. ಅಖಿಳಜನಂ–ಸರ್ವ ಋಷಿಗಳು, ಐದೆ–ಚನ್ನಾಗಿ, ಕೊಂಡಾಡಲು–ಹೊಗಳುತ್ತಿರುವಾಗ, ಅಸುರಾರಿ–ರಾಕ್ಷಸಾಂತಕನಾದ ಕೃಷ್ಣಮೂರುತಿಯು, ಸರಾಗದಿಂದ–ವಿಶ್ವಾಸಪೂರ್ವಕವಾಗಿ, ಸಂತುಷ್ಟನಾಗಿ–ತೃಪ್ತಿಗೊಂಡು, ತೆಗೆದು–ಧರ್ಮನಂದನನನ್ನು ಸಮೀಪಕ್ಕೆ ಕರೆದು, ಅಪ್ಪಿ–ತಬ್ಬಿಕೊಂಡು, ಭೂಪಾಲಕಂಗೆ–ಭೂಕಾಂತನಾದ ಯುಧಿಷ್ಠಿರನನ್ನು ಕುರಿತು, ನಿನ್ನಧ್ವರಂ–ನಿನ್ನ ಯಾಗವು, ಸಾಂಗದಿಂ–ಸಾಂಗವಾಗಿ, ಈಗ–ಈಗಲಾದರೊ, ಸಂಪೂರ್ಣವಾಗಿ–ಲೋಪವಿಲ್ಲದೆ, ಮುಗಿದುದು–ನೆರವೇರಿರುವುದು, ಭಾಗೀರಥಿಯೊಳು–ದೇವಗಂಗೆಯಲ್ಲಿ, ಅವಭೃತಮಂ–ಯಜ್ಞಾಂತದಲ್ಲಿ ಮಾಡಬೇಕಾದ ಸ್ನಾನವನ್ನು, ಮಾಳ್ಪುದು–ನೆರವೇರಿಸತಕ್ಕದ್ದು, ಎಂದು–ಎಂಬತೆರನಾಗಿ, ನೇಮಿಸಿದನು–ಅನುಜ್ಞೆಯಂ ಮಾಡಿದವನಾದನು ||೨೫||

ಟೀ|| ಮುನೀಶ್ವರಂ–ವ್ಯಾಸಮುನೀಂದ್ರನು, ವಿಪ್ರವಧೆ ಮೊದಲಾದ–ಬ್ರಹ್ಮಹತ್ಯವೇ ಮೊದಲಾಗಿರತಕ್ಕ, ಬಹು–ಹೆಚ್ಚಾದ, ಪಾಪಸಂಚಯಂ–ಪಾಪಸಮುದಾಯವೆಲ್ಲಾ, ಪೋಗಿ–ಹೋಗಿ, ಕ್ಷಿಪ್ರದಿಂ–ಬೇಗನೆ, ಪರಿಶುದ್ಧಂ–ಪವಿತ್ರವಾದದ್ದು, ಅಹುದು–ಆಗುತ್ತದೆ, ಎಂಬ–ಎನ್ನತಕ್ಕ, ವೇದಪ್ರಮಾಣದ–ವೇದವಚನವುಳ್ಳ, ವಾಜಿಮೇಧ–ಅಶ್ವಮೇಧಯಾಗದ, ಅವಭೃತಮಂ–ಯಜ್ಞಪೂರ್ತಿಯಾದ ಸ್ನಾನವನ್ನು, ಮಾಡಿಸಲ್ಕೆ–ನೆರವೇರಿಸಲು, ಸುಪ್ರಸನ್ನತೆಯಿಂದ–ವಿಶ್ವಾಸದಿಂದ, ಸಾನ್ನಿಧ್ಯಮಾಗಿ–ಹತ್ತಿರವೇ ಇದ್ದುಕೊಂಡು, ಬಿಡದೆ–ಅವಕಾಶವೇ ಇಲ್ಲದೆ, ತಾನು, ಆ ಅಪ್ರಮೇಯಂ–ವರ್ಣಿಸಲಸಾಧ್ಯನಾದ ಕೃಷ್ಣಮೂರುತಿಯು, ಇರಲ್ಕೆ–ಇರಲಾಗಿ, ಅಧ್ವರಂ–ಅಶ್ವಮೇಧಯಾಗವೆಲ್ಲಾ, ಮುಗಿಯೆ–ಸಮಗ್ರವಾಗಿ ನೆರವೇರಿದಕಾರಣ, ರಾಜ–ಅರಸುಗಳ, ಮುನಿಗಣ–ತಾಪಸನಿಕರದ, ನಡುವೆ–ಮಧ್ಯಭಾಗದಲ್ಲಿ, ನೃಪಮೌಳಿ–ರಾಜೋತ್ತಮನಾದ ಧರ್ಮನಂದನನು, ತೊಳಗಿದನು–ಕಾಂತಿಯುಕ್ತನಾಗಿರುತ್ತಿದ್ದನು. ||೨೬||

ಟೀ|| ಯಥಾಕ್ರಮದಿಂದ– ಶಾಸ್ತ್ರಸಮ್ಮತವಾಗಿ, ರಮಣಿಸಹಿತ– ಕಾಂತೆಯಾದ ದ್ರೌಪದಿಯೊಂದಿಗೆ, ಅರಸನು–ಧರ್ಮನಂದನನು, ಎಲ್ಲರುಂ–ಸಕಲರೂ, ಸೋಮಪಾನಂಗೈದರು–ಸೋಮಪಾನವನ್ನು ಮಾಡಿದರು, ಉತ್ಸವದೊಳು–ಆನಂದಾತಿಶಯದಿಂದ, ವಿಮಲ–ಪವಿತ್ರವಾದ, ಹೋಮಂಗಳ–ಹೋಮಮಾಡುವುದರ, ಪುರೋಡಾಶ–ಹವಿರ್ಭಾಗದ, ಶೇಷವಂ–ಉಳಿದದ್ದೆಲ್ಲವನ್ನೂ, ಪೋಷಿಸಿದರು–ಭಕ್ಷಿಸಿದರು, ವಂದಿಗಳು– ಹೊಗಳ ಭಟ್ಟರು, ತಮತಮಗೆ– ತಮ್ಮತಮ್ಮಷ್ಟಕ್ಕೆ, ಕೊಂಡಾಡೆ–

ನಾಗಿಯೂ, ತೇಜಃಪುಂಜದಿಂ ರಾರಾಜಿಸುವನಾಗಿಯೂ ಇರುವ ಧರ್ಮನಂದನನ ಅಶ್ವಮೇಧಯಾಗದಿಂದ ದೇವತೆಗಳೆಲ್ಲಾ ತೃಪ್ತರಾದರು, ಭೂಮಂಡಲವೆಲ್ಲಾ ಪರಿಶುದ್ಧತೆಯನ್ನೈದಿತು, ಮುನಿನಿಕರವು ಕೊಂಡಾಡುತ್ತಲಿರುವಾಗ ಕೃಷ್ಣಪರಮಾತ್ಮನು ಧರ್ಮಪುತ್ರನನ್ನು ಕುರಿತು, ನೀನು ಮಾಡಿದ ಯಾಗವೆಲ್ಲಾ ಸಾಂಗವಾಗಿ ನೆರವೇರಿರುವುದರಿಂದ ಈಗ ಅವಭೃತಸ್ನಾನವನ್ನು ಗಂಗೋದಕದಲ್ಲಿ ತೀರಿಸೆಂದು ನುಡಿದನು. || ೨೫ || ಆಗ ಧರ್ಮತನಯನಾದರೊ, ಬ್ರಹ್ಮಹತ್ಯಾದಿ ಪಂಚ ಮಹಾಪಾತಂಗಳನ್ನೂ ದೂರೀಕರಿಸತಕ್ಕ ಅಶ್ವಮೇಧಯಾಗಾಂಗವಾಗಿದ್ದ ಅವಭೃಥಸ್ನಾನವನ್ನೂ ವ್ಯಾಸಮುನಿಯು ಮಾಡಿಸಿದ ತರುವಾಯ, ಸಮೀಪದಲ್ಲಿರತಕ್ಕ ಕೃಷ್ಣಸ್ವಾಮಿಯಿಂದಲೂ, ಸುತ್ತಲೂ ನೆರದಿರತಕ್ಕ ರಾಜಾಧಿರಾಜರು ಮತ್ತು ಋಷೀಶ್ವರರಿಂದಲೂ ಕೂಡಿ ಪ್ರಕಾಶಿಸುತ್ತಲಿದ್ದನು. || ೨೬ || ಅನಂತರ ಧರ್ಮರಾಯನಿಗೂ ಪಾಂಚಲಿಗೂ ಅಭಿಷೇಕೋತ್ಸವವಾಯಿತು. ಎಲ್ಲರೂ ಸೋಮಪಾನವಂ ಮಾಡಿದರು. ಹೋಮಮಾಡಿ ಮಿಕ್ಕ ಪುರೋಡಾಶವೆಂಬ ಪದಾರ್ಥವನ್ನು ಎಲ್ಲರೂ ತಿಂದರು. ಆಗ ಧರ್ಮರಾಯನನ್ನು

ದೊಳು|ತಮತಮಗೆವಂದಿಗಳ್ಕೊಂಡಾಡಿಗಾಯಕೋ| ತ್ತಮರೊಲಿದುಪಾಡೆನರ್ತನದಮೇಳವದಸಂ|ಭ್ರಮದಿಂದವೀಣಾದಿವಾದಿತ್ರಘೋಷಮಂಮಾಡೆನೃಪವರನೆಸೆದನು ||೨೭|| ವಿನುತರತ್ನಾದಿಶಿಖರಸ್ಥಮಾಗಿರುತಿರ್ಪ | ಕನಕವೃಷಮಂಕೊಟ್ಟನವನಿಪಂಬಕದಾಲ್ಭ್ಯ | ಮುನಿಬಳಿಕೊಂದೊಂದುರಥವನೊಂದೊಂದಿಭವನೀರ್ಕೈದುವಾಜಿಗಳನು || ಅನುಚರಚತುಷ್ಟಯವನೊಂದೊಂದುಕೊಳಗಮು | ತ್ತನುಪಮಸುವರ್ಣಶತಭಾರಮಂನೂರುಕಾಂ | ಚನವಿಭೂಷಿತಸುರಭಿಗಳನಿತ್ತುಮನ್ನಿಸಿದನಖಿಳಋತ್ವಿಕ್ಕಗಳನು ||೨೮|| ಇಂತಖಿಳಋತ್ವಿಕ್ಕಗಳ್ಗಿತ್ತುಮನ್ನಿಸಿದ | ನಂತಾದರಿಸಿದನೆಲ್ಲಾದ್ವಾರಪಾಲಕ | ನಂತರಿಸದುಳಿದಮುನಿನಿಕರಕೆಚ್ಛಾದಾನಮಂಕೊಟ್ಟನುಚಿತದಿಂದ || ತಿಂತಿಣಿಸಿನೆರೆದಿಹಸಮಸ್ತಭೂನಿರ್ಜರರ | ಸಂತತಿಗಳಂದಣಿಸಿದಂಮಹಾಧನದಿಂದ | ನಂತರದೊಳರಸನುಪಚರಿಸಿದಂಚಂದ್ರಹಾಸಾದಿಪೃಥ್ವೀಶ್ವರರನು ||೨೯|| ಘೋಟಕಸಹಸ್ರಮಂಶತಶತಗಜಂಗಳಂ | ಕೋಟಿಪರಿಮಿತಸುವರ್ಣಂಗಳಂಮಣಿಮಯಕಿ | ರೀಟಾದಿಭೂಷಣಾವಳಿಗಳಂಕೊಟ್ಟಖಿಳಭೂಪಾಲರಂಮನ್ನಿಸಿ || ಪಾಟಮಿಗೆ

ಹೊಗಳುತ್ತಿರಲು, ಗಾಯಕೋತ್ತಮರು - ಗಾನಮಾಡತಕ್ಕವರು, ಒಲಿದು-ವಿಶ್ವಾಸದಿಂದ, ಪಾಡೆ - ಹಾಡುತ್ತಿರಲು, ನರ್ತನದ-ನಾಟ್ಯದ, ಮೇಳವದ - ಕೂಡುವುದರ, ಸಂಭ್ರಮದಿಂದ - ಸಡಗರದಿಂದ, ವಿಣಾ - ವೀಣೆಯೇ, ಆದಿ - ಮೊದಲಾಗಿರತಕ್ಕ, ವಾದಿತ್ರ - ವಾದ್ಯಗಳ, ಘೋಷಮಂ - ಶಬ್ದವನ್ನು, ಮಾಡೆ - ಮಾಡುತ್ತಿರಲು, ನೃಪವರನು - ಧರ್ಮರಾಯನು, ಎಸೆದನು-ಕಾಂತಿಯುಕ್ತನಾಗಿದ್ದನು. ||೨೭||

ಟೀ|| ಅವನಿಪಂ-ಭೂಕಾಂತನಾದ ಧರ್ಮನಂದನನು, ವಿನುತ-ಹೆಸಲುವಾಸಿಯುಂಪಡೆದ, ರತ್ನಾದಿ - ನವರತ್ನಗಳೇ ಮೊದಲಾದುವನ್ನು, ಶಿಖರಸ್ಥಂ-ತಲೆಯಲ್ಲಿಟ್ಟುಕೊಂಡಿರತಕ್ಕದ್ದು, ಆಗಿರ್ಪ-ಆಗಿರತಕ್ಕ, ಕನಕವೃಷಮಂ - ಚಿನ್ನದ ಎತ್ತನ್ನು, ಬಕದಾಲ್ಭ್ಯಮುನಿಗೆ - ಬಕದಾಲ್ಭ್ಯನೆಂಬ ಮಹರ್ಷಿಗೆ, ಇತ್ತನು - ಕೊಟ್ಟನು, ಬಳಿಕ - ಅನಂತರ, ಒಂದೊಂದುರಥವನು-ಒಂದೊಂದು ತೇರನ್ನೂ, ಒಂದೊಂದುಇಭವನು-ಒಂದೊಂದು ಆನೆಯನ್ನೂ, ಐದುವಾಜಗಳನು-ಐದು ಕುದುರೆಗಳನ್ನು, ಅನುಚರಚತುಷ್ಟಯವನು-ನಾಲ್ವರು ಚಾಕರರನ್ನೂ, ಒಂದೊಂದುಕೊಳಗಮುತ್ತ-ಒಂದೊಂದು ಕೊಳಗ ಮುತ್ತನ್ನೂ, ಅನುಪಮ-ಅಸಾಧಾರಣವಾದ, ಸುವರ್ಣ-ಭಂಗಾರದ, ಶತಭಾರಮಂ-ನೂರು ಭಾರವನ್ನೂ, ಕಾಂಚನಭೂಷಿತ-ಸುವರ್ಣಾಲಂಕೃತವಾದ, ನೂರುಸುರಭಿಯನು-ನೂರು ಗೋವುಗಳನ್ನೂ, ಇತ್ತು-ದಾನಮಾಡಿ, ಅಖಿಳಋತ್ವಿಕ್ಕಗಳನು-ಸಕಲರಾದ ಋತ್ವಿಜರನ್ನೂ, ಮನ್ನಿಸಿದನು-ಆದರಿಸಿದವನಾದನು. ||೨೮||

ಟೀ|| ಅಖಿಳ-ಸಕಲರಾದ, ಋತ್ವಿಕ್ಕಗಳ್ಗೆ-ಋತ್ವಿಗ್ಜನರಿಗೂ, ಇಂತು-ಈ ತೆರನಾಗಿ, ಇತ್ತು-ದಾನಮಾಡಿ, ಮನ್ನಿಸಿದನು-ಉಪಚರಿಸಿದನು, ಅಂತು-ಅದೇರೀತಿಯಾಗಿಯೇ, ಎಲ್ಲಾದ್ವಾರಪಾಲಕರನು-ಯಜ್ಞಮಂಟಪದ ಬಾಗಿಲ್ಗಳಿರುವ ಸಕಲರನ್ನೂ, ಆದರಿಸಿದನು-ಉಪಚರಿಸಿದವನಾದನು, ಉಳಿದಮುನಿನಿಕರಕೆ-ಮಿಕ್ಕ ಋಷಿಗಳಿಗೆಲ್ಲಾ, ಅಂತರಿಸದೆ-ಯಾರನ್ನೂ ಬಿಡದೆ, ಇಚ್ಛಾದಾನಮಂಕೊಟ್ಟನು-ಅವರವರಿಗೆ ಬೇಕಾದ ದಾನಗಳನ್ನು ಕೊಟ್ಟವನಾದನು, ಉಚಿತದಿಂದ-ಯೋಗ್ಯವಾಗಿ, ತಿಂತಿಣಿಸಿ-ಸಾಂದ್ರವಾಗಿ, ನೆರೆದಿಹ-ಸೇರಿರತಕ್ಕ, ಸಮಸ್ತ-ಸಕಲರಾದ, ಭೂನಿರ್ಜರರ-ಭೂಸುರೋತ್ತಮರ, ಸಂತತಿಗಳಂ-ಸಮುದಾಯವನ್ನು, ಮಹಾಧನದಿಂದ-ಹೆಚ್ಚಾದ ಹಣದಿಂದ, ದಣಿಸಿದಂ-ಆನಂದಗೊಳಿಸಿದನು, ಅನಂತರದೊಳು-ತರುವಾಯ, ಚಂದ್ರಹಾಸಾದಿ-ಇಂದುಹಾಸನೆ ಮೊದಲಾದ, ಪೃಥ್ವೀಶ್ವರರನು - ಪೊಡವಿಪತಿಗಳನ್ನು, ಅರಸನು - ಧರ್ಮನಂದನನು, ಉಪಚರಿಸಿದಂ-ಮನ್ನಿಸಿದನು. ||೨೯||

ಟೀ|| ನೃಪತಿ-ಧರ್ಮತನಯನು, ಘೋಟಕಸಹಸ್ರಮಂ-ಒಂದು ಸಾವಿರ ಕುದುರೆಗಳನ್ನೂ, ಶತಶತ-ನೂರರ ಪ್ರಕಾರವಾದ, ಗಜಂಗಳಂ-ಹಸ್ತಿಗಳನ್ನೂ, ಕೋಟಿಪರಿಮಿತ - ಕೋಟಿಪ್ರಕಾರವಾದ, ಸುವರ್ಣಂಗಳಂ-ಭಂಗಾರದ ನಾಣ್ಯಗಳನ್ನು,

ಸ್ತುತಿಪಾಠಕರು ಸ್ತುತಿಸುತ್ತಿದ್ದರು. ಗಾಯಕರು ಗಾನಮಾಡುತ್ತಲಿದ್ದರು ನಾಟ್ಯವೂ ವೀಣಾದಿವಾದ್ಯಂಗಳೂ ಕಂಗೊಳಿಸುತ್ತಲಿದ್ದವು. ಮಂತ್ರಘೋಷವು ಎಲ್ಲೆಲ್ಲೂ ವ್ಯಾಪಿಸಿತು. ||೨೭|| ಬಳಿಕ ಧರ್ಮರಾಯನು ನವರತ್ನಾಲಂಕೃತವಾಗಿದ್ದ ಭಂಗಾರದ ವೃಷಭವನ್ನು ಬ್ರಹ್ಮತ್ವಕ್ಕೆ ಕುಳಿತ್ತಿದ್ದಬಕದಾಲ್ಭ್ಯಮುನಿಗೆ ಕೊಟ್ಟನು. ಋತ್ವಿಕ್ಕಗಳಲ್ಲಿ ಪ್ರತಿಯೊಬ್ಬರಿಗೂ ಒಂದುರಥ, ಒಂದು ಆನೆ, ಹತ್ತು ಕುದುರೆಗಳು, ನಾಲ್ಕುಜನ ಸೇವಕರು, ಒಂದೊಂದು ಕೊಳಗ ಮುತ್ತು. ನೂರುಭಾರ ಚಿನ್ನ, ಸುವರ್ಣಾಲಂಕೃತಂಗಳಾದ ಗೋವುಗಳು, ಮೊದಲಾದವನ್ನೆಲ್ಲಾ ಕೊಟ್ಟು ಮನ್ನಣೆಯಂ ಮಾಡಿದನು. ||೨೮|| ಅನಂತರ ಯಜ್ಞಮಂಟಪದ ಅಷ್ಟದಿಕ್ಪಾಲಕರಿಗೂ ಮುನಿಜನಗಳಿಗೂ ಅವರವರ ಮನದಣಿಯುವಂತೆ ದಾನಗಳನ್ನು ಕೊಟ್ಟನು. ಭೂಸುರೋತ್ತಮರಿಗೆಲ್ಲಾ ಬೇಕುಬೇಕಾದಷ್ಟು ಹಣವನ್ನು ಕೊಟ್ಟನು. ||೨೯|| ಅನಂತರ ರಾಜಾಧಿರಾಜರಾದ ಮಯೂರಧ್ವಜಾದಿಗಳಿಗೆಲ್ಲಾ ಸಾವಿರ ಕುದುರೆಗಳು, ನೂರಾನೆಗಳು, ಕೋಟಿಪ್ರಕಾರವಾದ ಸುವರ್ಣಂಗಳು, ನವರತ್ನಖಚಿತವಾದ ಕಿರೀಟಗಳೇ ಮೊದಲಾದ ಒಡವೆ

ರುಕ್ಮಿಣೀದೇವಿಮೊದಲಾಗಿಹವ | ಧೂಟಿಯರವರ್ಗಮಂ ನೃಪತಿಸತ್ಕರಿಸಿದಂ | ಮಿಾಟೆನಿಪವಿವಿಧರತ್ನಾಭರಣರಾಜಿಗಳನಿತ್ತಲಂಕಾರದಿಂದ ‖೩೦‖ ನಯದೊಳರಸಂ ಬಳಿಕಭೂಪಾಲಮುನಿವರನಿ | ಚಯದಿಂದಸಕಲಜನಜಾಲದಿಂದೆಸೆವಮಣಿ | ಮಯಸಭಾಮಧ್ಯದೊಳ್ದಿವ್ಯಸಿಂಹಾಸನದಮೇಲೆಮುರಹರನನಿರಿಸಿ ‖ ಪ್ರಿಯದಿಂದಲಂಕಾರಪೂಜೆಗಳೊಳುಪಚರಿಸಿ | ಹಯಮೇಧಫಲವನಚ್ಯುತನಕರದೊಳೀಯಲ್ಕೆ | ಜಯಜಯಯೆಂದುದುಲೋಕಮರಳಮಳೆಗರೆದು | ಮೊಳಗಿದವುಸುರದುಂದುಭಿಗಳು ‖೩೧‖ ಬಳಸಿದಮಹೀಪಾಲರೊಡಹುಟ್ಟಿದರ್ಬಂಧು | ಬಳಗಂಗಳಖಿಳಮುನಿಮುಖ್ಯರುಪಚರಿತರಾಗೆ | ನಳಿನಾಂಬಕನಕರದೊಳಧ್ವರದಸುಕೃತಮಂಕೊಟ್ಟುತನ್ನಮಲಮುಖಕೆ ‖ ಕಳಸಮಿಡೆಮೂಜಗಂಮಿಗೆದಣಿಯೆಕೊಂಡಾಡ | ಲುಳಿದಯೂಪಂಗಳೊಳ್ಕಟ್ಟಿರ್ದಪಶುಗಳಂ | ಕಳೆದೆಲ್ಲನುಂಬಿಡಿಸಿತೊಳಗಿಬೆಳಗಿದನಿಂದ್ರತೇಜದಿಂಮನುಜೇಂದ್ರನು ‖೩೨‖ ವಾಜಿಮೇಧಕ್ರತು

---

ಮಣಿಮಯ – ರತ್ನಖಚಿತಂಗಳಾದ, ಕಿರೀಟ – ಕಿರೀಟವೇ, ಆದಿ-ಮೊದಲಾಗಿರತಕ್ಕ, ಭೂಷಣಾವಳಿಗಳಂ–ಒಡವೆಗಳ ರಾಶಿಗಳನ್ನೂ, ಕೊಟ್ಟು-ಕೊಟ್ಟವನಾಗಿ, ಅಖಿಲಭೂಪಾಲರಂ–ಸಕಲ ರಾಜರನ್ನೂ, ಮನ್ನಿಸಿ-ಉಪಚರಿಸಿ, ರುಕ್ಮಿಣಿಮೊದಲಾಗಿಹ–ರುಕ್ಮಿಣಿ ಮೊದಲಾಗಿರತಕ್ಕ, ವಧೂಟಿಯರ - ಸ್ತ್ರೀಯರ, ವರ್ಗಮಂ – ಸಮುದಾಯವನ್ನು, ಪಾಟಿಮಿಗೆ-ಅವರವರ ಮರ್ಯಾದೆಗಿಂತಲೂ ಹೆಚ್ಚಾಗಿರುವಂತೆ, ಮಿಾಟೆನಿಪ – ಶ್ರೇಷ್ಠವಾದದ್ದೆನ್ನಿಸಿಕೊಳ್ಳತಕ್ಕ, ವಿವಿಧ-ಪರಿಪರಿಯಾದ, ವಸ್ತ್ರ – ಉಡಿಗೆಗಳು, ಆಭರಣ–ತೊಡಿಗೆಗಳು ಇವುಗಳ, ರಾಜಿಗಳನು – ಸಮುದಾಯಗಳನ್ನು, ಅಲಂಕಾರದಿಂದ - ಅಲಂಕಾರಕ್ಕೆ ತಕ್ಕಂತೆ, ಇತ್ತು-ಕೊಟ್ಟು, ಸತ್ಕರಿಸಿದಂ-ಉಪಚರಿಸಿದನು. ‖೩೦‖

ಟೀ‖ ಅರಸಂ-ಧರ್ಮನಂದನನು, ಮುರಹರನನು–ಕೃಷ್ಣಸ್ವಾಮಿಯನ್ನು. ನಯದೊಳು–ನ್ಯಾಯವಾಗಿ, ಭೂಪಾಲ–ಅರಸುಗಳ, ಮುನಿವರ-ತಾಪಸೋತ್ತಮರ, ನಿಚಯದಿಂದ–ಸಮುದಾಯದಿಂದ, ಸಕಲ-ಅಶೇಷರಾದ, ಜನಜಾಲದಿಂದ-ಜನಸಮುದಾಯದಿಂದ, ಎಸೆವ-ಕಾಂತಿಯುಕ್ತವಾಗಿರತಕ್ಕ, ಮಣಿಮಯ-ರತ್ನಖಚಿತವಾದ, ಸಭಾಮಧ್ಯದೊಳ್ – ಸಭೆಯ ಮಧ್ಯಭಾಗದೊಳಗೆ, ದಿವ್ಯಸಿಂಹಾಸನದಮೇಲೆ–ಶ್ರೇಷ್ಠವಾದ ಸಿಂಹಪೀಠದಲ್ಲಿ, ಇರಿಸಿ–ಕೂಡಿಸಿ, ಅಲಂಕಾರ–ಅಲಂಕಾರ ಸಂಬಂಧವಾದ, ಪೂಜೆಗಳೊಳು–ಪೂಜೆಗಳಲ್ಲಿ, ಪ್ರಿಯದಿಂದ-ಪ್ರೇಮಾತಿಶಯದಿಂದ, ಉಪಚರಿಸಿ–ಸತ್ಕರಿಸಿ, ಅಚ್ಯುತನ–ಕೃಷ್ಣಸ್ವಾಮಿಯ, ಕರದೊಳು-ಕೈಯಲ್ಲಿ, ಹಯಮೇಧದ-ಅಶ್ವಮೇಧ ಯಾಗದ, ಫಲವನು–ಫಲವನ್ನು, ಈಯಲ್ಕೆ-ಧಾರೆಯೆರೆಯಲು, ಲೋಕಂ-ಅಲ್ಲಿ ನೆರದಿದ್ದ ಜನವೆಲ್ಲವೂ, ಅರಳಮಳೆಗರೆದು-ಹೂಮಳೆಯನ್ನು ಸುರಿಸಿ, ಜಯಜಯಎಂದುದು – ಜಯಜಯ ಎಂದು ಶಬ್ದಮಾಡಿತು, ಸುರದುಂದುಭಿಗಳು–ದೇವಲೋಕದ ದುಂದುಭಿವಾದ್ಯಂಗಳು, ಮೊಳಗಿದವು–ಶಬ್ದಮಾಡಲ್ಪಟ್ಟವು. ‖೩೧‖

ಟೀ‖ ಮನುಜೇಂದ್ರನು–ನರನಾಥನಾದ ಧರ್ಮತನಯನಾದರೊ, ಬಳಸಿದ–ಆವರಿಸಿಕೊಂಡಿರತಕ್ಕ, ಮಹೀಪಾಲರು-ಪೊಡವಿಪತಿಗಳು, ಒಡಹುಟ್ಟಿದರು–ಅಣ್ಣಾತಮ್ಮಂದಿರು, ಬಂಧುಬಳಗಂಗಳು–ಬಂಧುವರ್ಗದವರು, ಅಖಿಳ–ಸಕಲರಾದ, ಮುನಿಮುಖ್ಯರು–ಶ್ರೇಷ್ಠರಾದ ತಾಪಸರು, ಉಪಚಿತರು–ಮರ್ಯಾದೆಯನ್ನು ಪಡೆದವರು, ಆಗೆ-ಆಗಲು, ಅಧ್ವರದಸುಕೃತಮಂ–ಯಾಗದ ಫಲವನ್ನೆಲ್ಲಾ, ನಳಿನಾಂಬಕನ-ಪದ್ಮಾಕ್ಷನಾದ ಕೃಷ್ಣನ, ಕರದೊಳು–ಹಸ್ತದಲ್ಲಿ, ಕೊಟ್ಟು-ಕೊಟ್ಟವನಾಗಿ, ತನ್ನ–ತನ್ನದಾದ, ಅಮಲ-ಉತ್ತಮವಾದ, ಮಖಕೆ–ಯಾಗಕ್ಕೆ, ಕಳಸಂಇರೆ–ಕಳಶಪ್ರಾಯವಾಗಿರಲು. ಮಿಗೆ–ಹೆಚ್ಚಾಗಿ, ಮೂಜಗಂ – ತ್ರಿಲೋಕಂಗಳೂ, ದಣಿಯೆ–ತೃಪ್ತಿಯನ್ನೈದಲು, ಕೊಂಡಾಡಲು–ಸ್ತುತಿಸಲು ಹೊಗಳಲು, ಉಳಿದಯೂಪಂಗಳೊಳ್ – ಮಿಕ್ಕ ಯೂಪಸ್ತಂಭಗಳಿಗೆ, ಕಟ್ಟಿರ್ದ–ಕಟ್ಟಿಹಾಕಿದ್ದ, ಪಶುಗಳಂ–ಮೇಕೆಗಳನ್ನು, ಕಳೆದು–ಬಿಟ್ಟು, ಎಲ್ಲಮಂ–ಸಮಸ್ತವನ್ನೂ, ಬಿಡಿಸಿ–ಬಿಡುಗಡೆಮಾಡಿ. ಇಂದ್ರತೇಜದಿಂ–ದೇವೇಂದ್ರನ ಕಾಂತಿಯಿಂದ, ತೊಳಗಿಬೆಳಗಿದನು-ಹೆಚ್ಚಾಗಿ ಪ್ರಕಾಶಿಸುತ್ತಲಿದ್ದನು. ‖೩೨‖

---

ಗಳು ಇವನ್ನೆಲ್ಲಾ ಕೊಟ್ಟು ಮರ್ಯಾದೆಯನ್ನು ಮಾಡಿದ ತರುವಾಯ ರುಕ್ಮಿಣಿ ಮೊದಲಾದವರಿಗೆಲ್ಲಾ ವಿಧವಿಧವಾದ ರತ್ನಾಭರಣಂಗಳನ್ನೂ, ದಿವ್ಯಾಂಬರಗಳನ್ನೂ ಕೊಟ್ಟು ತೃಪ್ತಿಗೊಳಿಸಿದನು. ‖೩೦‖ ಆ ಬಳಿಕ ಧರ್ಮರಾಯನು ತಾಪಸೋತ್ತಮರಿಂದಲೂ ಸಕಲ ರಾಜೋತ್ತಮರಿಂದಲೂ ಕೂಡಿದವನಾಗಿ ಶ್ರೀ ಕೃಷ್ಣಮೂರುತಿಯನ್ನು ಸಿಂಹಾಸನದ ಮೇಲೆ ಕುಳ್ಳಿರಿಸಿ, ಅಶ್ವಮೇಧ ಯಾಗದ ಫಲವನ್ನು, ಧಾರೆಯೆರೆಯುತ್ತಿರುವಾಗ ಜನರೆಲ್ಲರೂ ಜಯಜಯ ನಿನದವಂ ಮಾಡಿದರು. ಆಗಸದಿಂದ ಹೂಮಳೆಯು ಸುರಿಯಿತು. ದೇವದುಂದುದುಭಿಗಳು ಮೊಳಗಿದವು‖೩೧‖ಬಳಿಕ ಯೂಪಸ್ತಂಭಗಳಿಗೆ ಕಟ್ಟಿದ್ದಪಶು ರಜ್ವಾದಿಗಳೆಲ್ಲವನ್ನೂ ಬಿಚ್ಚಿ ಹಾಕಿದರು. ತಾಪಸೋತ್ತಮರಿಂದಲೂ ರಾಜವರ್ಯರಿಂದಲೂ ಪರಿವೃತನಾಗಿರತಕ್ಕ ಧರ್ಮಪುತ್ರನ ಮುಖದಲ್ಲಿ ಇಂದ್ರತೇಜಸ್ಸು ಹೊಳೆ ಹೊಳೆಯುತ್ತಲಿತ್ತು. ‖೩೨‖ ಈ ರೀತಿಯಲ್ಲಿ ಅಶ್ವಮೇಧಯಾಗವೆಲ್ಲಾ ಸಾಂಗವಾಗಿ ನೆರವೇರಲು, ಭೀಮಸೇನನು ಸಕಲರನ್ನೂ ಭೋಜನ ಶಾಲೆಗೆ ಕರೆದುಕೊಂಡು ಹೋಗಿ ಮೃಷ್ಟಾನ್ನದಿಂದಲೂ, ವಿಧವಿಧವಾದ ಭಕ್ಷ್ಯಭೋಜ್ಯಾದಿಗಳಿಂದಲೂ

ಸಮಾಪ್ತಮಾದುದುಬಳಿಕ | ರಾಜಮುನಿವರ್ಗಮಂಪ್ರಾರ್ಥಿಸಿವೃಕೋದರಂ | ರಾಜಿಸುವಕನಕಮಯಮಂಟಪದೊಳರುಣಕಂ
ಬಳಿದಹಸೆಗಳಮಿಸುನಿಯ || ಭಾಜನದಕೆಲಬಲದರತ್ನದೀಪದಪೊನ್ನ | ಹೂಜೆಗಳಪನ್ನೀರವಿಡಿಯೊಳೆಡೆಯಾಗೆ | ಭೋಜನಕೆಬೇ
ಕಾದಭಕ್ಷ್ಯಭೋಜ್ಯಾದಿಗಳನೊದವಿಸಿದನಾದಡದೊಳು || ೩೩ || ನಾನಾವಿಧದರಸದೊಳೆಸೆವಪರಿಕರದನ್ನ | ಪಾನಾದಿಭಕ್ಷ್ಯಭೋ
ಜ್ಯಾವಳಿಗಳಿಂದಪವ | ಮಾನಾತ್ಮಜಂಮಹೀಸುರತತಿಯನಾದರಿಸಿಭೋಜನಾಂತರದಮೇಲೆ || ಭೂನುತಸುಗಂಧಕರ್ದಮದಿಂದ
ವಿವಿಧಪ್ರ | ಸೂನಾವಳಿಗಳಿಂದ ವೀಟಿಕಾವಿಭವದಿಂದ | ದಾನಾತಿಶಯದಿಂದ ಸತ್ಕರಿಸಿದಣಿಸಿದಂಪ್ರತಿದಿನಂಪ್ರೀತಿಯಿಂದ ||೩೪||
ಬಹಳಸನ್ಮಾನಮುಂತಳೆದಖಿಳಭೂಸುರನಿ | ವಹಮ್ಮೈದೆಕೊಂಡಾಡಿ ತಂಬುಜದಳಾಂಬಕನ | ಮಹಿಮೆಯಂಧರ್ಮಜನಚರಿತವಂ
ಭೀಮನವಿಶೇಷಗುಣಮಂಪಾರ್ಥನ || ವಿಹಿತವಿಭವಂಗಳಂ ನಕುಲನವಿವೇಕಮಂ | ಸಹದೇವನುಚಿತಮಂ ಧೌಮ್ಯನ ವಿಚಾರ

---

ಟೀ|| ವಾಜಿಮೇಧಕ್ರತು-ಹಯಮೇಧಕ್ರತುವು, ಬಳಿಕ-ಅನಂತರ, ಸಮಾಪ್ತಂ-ಪೂರೈಸಿದ್ದು, ಆದುದು-ಆಯಿತು, ರಾಜಮುನಿವರ್ಗಮಂ-ಅರಸುಗಳು ಮತ್ತು ತಪಸ್ವಿಗಳು ಇವರ ಸಮುದಾಯವನ್ನು, ವೃಕೋದರಂ-ಭೀಮಸೇನನು, ಪ್ರಾರ್ಥಿಸಿ-ಕೇಳಿಕೊಂಡವನಾಗಿ, ರಾಜಿಸುವ-ಪ್ರಕಾಶಿಸುತ್ತಲಿರತಕ್ಕ, ಕನಕಮಯ-ಸುವರ್ಣವಿಕಾರವಾಗಿರುವ, ಮಂಟಪದೊಳು-ಮಂಟಪದೊಳಗೆ, ಅರುಣ-ಕೆಂಪಗಿರತಕ್ಕ ಕಂಬಳಿಯ- ಕಂಬಳಿಗಳ, ಹಸೆಗಳ-ಚಿತ್ರಗಳ, ಮಿಸುನಿ-ಚಿನ್ನದ, ಭಾಜನದ-ತಟ್ಟೆಯ, ಕೆಲಬಲದ-ಎಡಬಲಗಳಲ್ಲಿರತಕ್ಕ, ರತ್ನದೀಪದ-ರತ್ನಖಚಿತಂಗಳಾದ ದೀಪಸ್ತಂಭಗಳಲ್ಲಿರತಕ್ಕ ದೀಪಗಳ, ಪೊನ್ನ- ಚಿನ್ನದ, ಹೂಜೆಗಳ-ಹೂಜೆ ಎಂಬ ಪಾತ್ರೆಗಳ, ಪನ್ನೀರಪರಿವಿಡಿಯೊಳು-ಪನ್ನೀರಿನ ಕ್ರಮದಿಂದ, ಎಡೆಯಾಗೆ-ತಿರುಗುವ ಸ್ಥಳವಾಗಲು, ಭೋಜನಕೆ-ಊಟಮಾಡುವುದಕ್ಕೆ, ಬೇಕಾದ-ಬೇಕಾಗಿರತಕ್ಕ, ಭಕ್ಷ್ಯಭೋಜ್ಯಾದಿಗಳನು-ಭಕ್ಷ್ಯಭೋಜ್ಯಂಗಳೆ ಮೊದಲಾದವನ್ನು, ಆದರದೊಳು-ವಿಶ್ವಾಸದಿಂದ, ಒದವಿಸಿದನು-ಅಣಿಮಾಡಿದನು ||೩೩||

ಟೀ|| ನಾನಾವಿಧದ-ತಂಡೋಪತಂಡವಾದ, ರಸದೊಳು-ಷಡ್ರಸಂಗಳಿಂದ, ಎಸೆವ-ಹೊಳೆಯುತ್ತಲಿರತಕ್ಕ, ಪರಿಕರ-ಚಟ್ನಿ ಮೊದಲಾದ ವಸ್ತುಗಳ ಸಹಿತವಾದ, ಅನ್ನ-ಅನ್ನವು, ಪಾನ-ಪಾನಮಾಡತಕ್ಕ ದ್ರವಪದಾರ್ಥಗಳು, ಆದಿ-ಮೊದಲಾಗಿರತಕ್ಕ, ಭಕ್ಷ್ಯಭೋಜ್ಯಾವಳಿಗಳಿಂದ-ಭಕ್ಷ್ಯಭೋಜ್ಯವೇ ಮೊದಲಾದವುಗಳಿಂದ, ಮಹೀಸುರತತಿಯನು-ಭೂಸುರೋತ್ತಮರ ಸಮುದಾಯವನ್ನು, ಪವಮಾನಾತ್ಮಜಂ-ವಾಯುಸುತನು, ಆದರಿಸಿ- ಸತ್ಕರಿಸಿದವನಾಗಿ, ಭೋಜನಾನಂತರದಮೇಲೆ-ಊಟವೆಲ್ಲಾ ಮುಗಿದ ಬಳಿಕ, ಭೂ-ಇಳೆಯಲ್ಲಿ, ನುತ-ಸ್ತೋತ್ರಾರ್ಹವಾಗಿರತಕ್ಕ, ಸುಗಂಧ-ಶ್ರೇಷ್ಠವಾದ ಗಂಧವು, ಕರ್ದಮದಿಂದ-ದೇವಯಕ್ಷ ಕರ್ದಮಂಗಳೇ ಮೊದಲಾದವುಗಳಿಂದ, ವಿವಿಧ-ಪರಿಪರಿಯಾದ, ಪ್ರಸೂನಾವಳಿಗಳಿಂದ-ಹೂಗಳ ಗುಂಪಿನಿಂದ, ವೀಟಿಕಾವಿಭವದಿಂ-ತಾಂಬೂಲದ ಸಂಪತ್ತಿನಿಂದಲೂ, ದಾನಾತಿಶಯದಿಂದ-ಹೆಚ್ಚಾದ ದಾನಗಳಿಂದಲೂ, ಸತ್ಕರಿಸಿ-ಆದರಿಸಿ, ಪ್ರೀತಿಯಿಂದ-ವಿಶ್ವಾಸದಿಂದ, ಪ್ರತಿದಿನಂ-ನಿತ್ಯವೂ, ದಣಿಸಿದಂ-ತೃಪ್ತಿಗೊಳಿಸುತ್ತಲಿದ್ದನು ||೩೪||

ಟೀ|| ಅಂಬುಜದಳ-ಪದ್ಮಪತ್ರಗಳಂತೆ, ಅಂಬಕನ-ನಯನಂಗಳನ್ನುಳ್ಳ ಕೃಷ್ಣಸ್ವಾಮಿಯ, ಮಹಿಮೆಯಂ-ಶ್ರೇಷ್ಠತೆಯನ್ನೂ, ಧರ್ಮಜನ-ಧರ್ಮತನಯನ, ಚರಿತಮಂ-ಹೆಸರುವಾಸಿಯಾದ ಕಾರ್ಯಗಳನ್ನೂ, ಭೀಮನ-ಭೀಮಸೇನನ, ವಿಶೇಷ-ಹೆಚ್ಚಾದ, ಗುಣಮಂ-ಒಳ್ಳೇಗುಣಗಳನ್ನೂ, ಪಾರ್ಥನ-ಧನಂಜಯನ, ವಿಹಿತ-ನ್ಯಾಯವಾದ, ವಿಭವಂಗಳಂ- ಸಾಹಸಾತಿಶಯದಿಂದ ಗಳಿಸಿದ ಐಸಿರಿಯನ್ನೂ, ನಕುಲನ-ನಕುಲನೆಂಬಾತನ, ವಿವೇಕಮಂ-ತಿಳುವಳಿಕೆಯನ್ನೂ, ಸಹದೇವನ-ಸಹದೇವನೆಂಬನನ, ಉಚಿತಮಂ-ಸತ್ಕಾರವನ್ನೂ, ಧೌಮ್ಯನ-ಧೌಮ್ಯಮುನಿಯ, ವಿಚಾರಮಂ-ಮೇಲ್ವಿಚಾರವನ್ನೂ, ಮಹಿಯಮನ್ನೆಯರ-ಆವೇಶದ ದಳಪತಿಗಳ, ಸನ್ಮೈತ್ರಿಯಂ-ಸತ್ಸಹವಾಸವನ್ನೂ, ಮುನಿವರ-ತಾಪಸೋತ್ತಮರ, ಆಧಿಕ್ಯಮಂ-ಹೆಚ್ಚಿಕೆಯನ್ನೂ ಸಹ, ಅಖಿಳ-ಸಕಲರಾದ, ಭೂಸುರ-ವಿಪ್ರರ, ನಿವಹಂ-ಸಮುದಾಯವು, ಬಹಳ-ಹೆಚ್ಚಾದ, ಸನ್ಮಾನಮಂ-ಮನ್ನಣೆಯನ್ನು,

---

ತೃಪ್ತಿಗೊಳಿಸಿದನು. ಆ ಭೋಜನಶಾಲೆಯಾದರೊ, ರತ್ನಖಚಿತವಾದ ದೀಪಸ್ತಂಭಗಳಲ್ಲಿರುವ ದೀಪಗಳಿಂದ ಹಗಲಿನಂತೆ ಕಾಣುತ್ತಲಿತ್ತು, ಭಂಗಾರದ ಹೂಜೆಗಳೇ ತುಂಬಿ ತುಳುಕಾಡುತ್ತಲಿದ್ದವು. ಭಂಗಾರದ ತಟ್ಟೆಗಳನ್ನು ಹಾಕಿದ್ದ ಕಾರಣದಿಂದ ನೋಡುವುದಕ್ಕೆ ಅಂದವಾಗಿ ಕಾಣುತ್ತಲಿತ್ತು ||೩೩|| ಇಂತಹ ಭೋಜನಶಾಲೆಯಲ್ಲಿ ಭೀಮಸೇನನು ಸಕಲರನ್ನೂ ಭಕ್ಷ್ಯಭೋಜ್ಯಾದಿಗಳಿಂದ ಆನಂದಗೊಳಿಸಿದಮೇಲೆ ಗಂಧ ಪುಷ್ಪ ತಾಂಬೂಲಾದಿಗಳನ್ನೂ, ವಿಧವಿಧವಾದ ದಾನಗಳನ್ನೂ ಕೊಟ್ಟು ಸತ್ಕರಿಸುತ್ತಲಿದ್ದನು. ೩೪|| ಇಂತಹ ಸತ್ಕಾರದಿಂದ ತೃಪ್ತರಾದ ಬ್ರಾಹ್ಮಣರೆಲ್ಲಾ ಶ್ರೀ ಕೃಷ್ಣ ಪರಮಾತ್ಮನ ಮಹಿಮೆಯನ್ನೂ, ಧರ್ಮರಾಯನ ಸಚ್ಚರಿತ್ರೆಯನ್ನೂ, ಭೀಮನ ಸದ್ಗುಣವನ್ನೂ. ಅರ್ಜುನನ ಐಸಿರಿಯನ್ನೂ, ನಕುಲನ ಬುದ್ಧಿಚಾತುರ್ಯವನ್ನೂ, ಸಹದೇವನ ಮರ್ಯಾದೆಯನ್ನೂ, ಧೌಮ್ಯಮುನಿಯ ಮೇಲ್ವಿಚಾರಣೆಯನ್ನೂ, ರಾಜಾಧಿರಾಜರ ಸತ್ಸಹವಾಸವನ್ನೂ, ತಾಪಸೋತ್ತಮರ ಸಮುದಾಯ

ನುಂ । ಮಹಿಯುಮನ್ನೆಯರಸನ್ನೈತ್ರಿಯಂ ಮುನಿಪರಾಧಿಕ್ಯಮಂತತ್ಕ್ರತುವನು ॥ ೩೫ ॥ ಬಕದಾಲ್ಭ್ಯಮೊದಲಾದಋಷಿಗಳಂ ಕೃಷ್ಣಾದಿ । ಸಕಲಭೂಪಾಲರಂ ಕೂಡಿಕೊಂಡವನೀಶ । ಮಕುಟನಧ್ವರಸಭಾಸ್ಥಾನದೊಳ್ನಾನಾಸುಕಥೆಗಳಂಕೇಳುತಿರ್ದು ॥ ವಿಕಸಿತಹೃದಯನಾಗಿಮುದದಿಂದ ಭೂದೇವ । ನಿಕರಕುಳಿದರ್ಥಂಗಳೆಲ್ಲಮಂಚೆಲ್ಲಿಸಮ । ಧಿಕವೈಭವಂಗಳಿಂನಗರಪ್ರವೇಶಮಂ ಮಾಡಿದಂಸಂಭ್ರಮದೊಳು ॥೩೬॥ ಮೃಷ್ಟಭೋಜನದಿಂದ ಭೂರಿದಕ್ಷಿಣೆಗಳಿಂ । ದಿಷ್ಟದಾನದೊಳಾದವಸ್ತುಸಂದೋಹದಿಂ । ತುಷ್ಟಿವಡೆದಖಿಳಭೂಸುರತತಿ ನರೇಂದ್ರನಂ ಪರಸಿಬೀಳ್ಕೊಂಡಬಳಿಕ ॥ ದೃಷ್ಟಿಗಾಶ್ಚರ್ಯಮಾಗಿಹ ಯಜ್ಞಮಂ । ಪೊಗಳುತ ಷ್ಟದಿಗ್ವಲಯದಾಶ್ರಮಜನಪದಂಗಳ್ಗೆ ಹೃಷ್ಟತೆಯೊಳೈದಿತನತನಗೆಪೊತ್ತ ಬಹುಧನದ ಭಾರಂಗಳಿಂದ ॥ ೩೭ ॥ ರೋಮಶವಸಿಷ್ಠ ಬಕದಾಲ್ಭ್ಯವೇದವ್ಯಾಸ । ವಾಮದೇವಾದಿ ಮುನಿಮುಖ್ಯರವನೀಶನಂ । ಪ್ರೇಮದಿಂಪರಸಿಮಾನಿತರಾಗಿಬೀಳ್ಕೊಂಡುತಳ ರ್ದರಾಶ್ರಮಕೆಬಳಿಕ ॥ ಭೂಮಿಪತಿಗಳನೆಲ್ಲರಂ ಸಕಲಯಾದವ । ಸ್ತೋಮಸಹಿತಂಬುಜದಳಾಕ್ಷನಂಸತ್ಕರಿಸಿ । ಭೀಮಪಾರ್ಥರ

---

ತಳೆದು-ಹೊಂದಿ, ಐದೆ-ಚೆನ್ನಾಗಿ, ತತ್ಕ್ರತುವನು-ಆ ಅಶ್ವಮೇಧಯಾಗವನ್ನು, ಕೊಂಡಾಡಿತು-ಹೊಗಳಿತು ॥೩೫॥

ಟೀ॥ ಅವನೀಶಮಕುಟನು-ರಾಜರುಗಳಲ್ಲೆಲ್ಲಾ ಕಿರೀಟಪ್ರಾಯನಾಗಿರತಕ್ಕ ಧರ್ಮಪುತ್ರನು, ಅಧ್ವರ-ಯಜ್ಞಮಂಟಪದ, ಸಭಾಸ್ಥಾನದೊಳ್-ಸಭಾಭವನವಲ್ಲಿ, ಬಕದಾಲ್ಭ್ಯ-ಬಕದಾಲ್ಭ್ಯಮುನಿಯೇ, ಮೊದಲಾದ-ಮೊದಲಾಗಿರತಕ್ಕ, ಋಷಿಗಳಂ-ತಾಪಸರನ್ನೂ, ಕೃಷ್ಣ-ಕೃಷ್ಣಸ್ವಾಮಿಯೆ, ಆದಿ-ಮೊದಲಾಗಿರತಕ್ಕ, ಸಕಲಭೂಪಾಲರಂ-ಸಕಲ ರಾಜರನ್ನೂ, ಕೂಡಿಕೊಂಡು-ಜೊತೆಮಾಡಿಕೊಂಡು, ನಾನಾ-ತಂಡತಂಡವಾದ, ಸುಕಥೆಗಳಂ-ಸತ್ಕಥೆಗಳನ್ನು, ಕೇಳುತಿರ್ದು-ಕೇಳುತ್ತಿದ್ದು, ವಿಕಸಿತಹೃದಯನಾಗಿ-ವಿಕಾಸವಂಪಡೆದ ಹೃದಯವೆಂಬ ಕಮಲವುಳ್ಳವನಾಗಿ, ಉಳಿದ - ನಿಂತಿರತಕ್ಕ, ಪದಾರ್ಥಂಗಳೆಲ್ಲಮಂ-ವಸ್ತುಗಳೆಲ್ಲವನ್ನೂ, ಭೂದೇವನಿಕರಕೆ-ಭೂಸುರೋತ್ತಮರ ಸಮುದಾಯಕ್ಕೆ, ಮುದದಿಂದ-ವಿಶ್ವಾಸದಿಂದ, ಚೆಲ್ಲಿ-ದಾನವಂಗೈದು, ನಗರಪ್ರವೇಶಮಂ-ಇಭನಗರದ ಪ್ರವೇಶವನ್ನು, ಸಮಧಿಕವೈಭವಂಗಳಿಂ-ಅಧಿಕವಾದ ವೈಭವಂಗಳಿಂದ, ಸಂಭ್ರಮದೊಳು-ಆನಂದದಿಂದ, ಮಾಡಿದಂ-ಮಾಡಿದವನಾದನು ॥೩೬॥

ಟೀ॥ ಮೃಷ್ಟಭೋಜನದಿಂದ-ಮೃಷ್ಟಾನ್ನದ ಊಟದಿಂದಲೂ, ಭೂರಿ-ಹೆಚ್ಚಾದ, ದಕ್ಷಿಣೆಗಳಿಂದ - ದಕ್ಷಿಣಾದ್ರವ್ಯಗಳಿಂದಲೂ, ಇಷ್ಟ-ಬೇಕಾದ, ದಾನದೊಳ್-ದಾನದಿಂದ ಆದ, ವಸ್ತುಸಂದೋಹದಿಂ-ಪದಾರ್ಥಗಳ ಸಮುದಾಯದಿಂದಲೂ ತುಷ್ಟಿವಡೆದ-ಸಂತುಷ್ಟವಾದ, ಅಖಿಳಭೂಸುರತತಿ-ಸಕಲ ಬ್ರಾಹ್ಮಣರಗುಂಪು, ನರೇಂದ್ರನಂ-ಯುಧಿಷ್ಠಿರನನ್ನು, ಪರಸಿ-ಆಶೀರ್ವಾದವಂ ಮಾಡಿ, ಬೀಳ್ಕೊಂಡಬಳಿಕ-ಅನುಜ್ಞೆಯನ್ನೈದಿದ ಮೇಲೆ, ದೃಷ್ಟಿಗೆ-ನೋಡುವುದಕ್ಕೆ, ಆಶ್ಚರ್ಯಮಾಗಿಹ-ಅಚ್ಚರಿಯನ್ನುಂಟು ಮಾಡತಕ್ಕ, ಯಜ್ಞಮಂ-ಕ್ರತುವನ್ನು, ಪೊಗಳುತ-ಸ್ತೋತ್ರಮಾಡುತ್ತ, ತನತನಗೆ-ತಮ್ಮತಮ್ಮಷ್ಟಕ್ಕೆ, ಪೊತ್ತ-ಹೊತ್ತಿರತಕ್ಕ, ಬಹುಧನದ-ಹೆಚ್ಚಾದ ಹಣದ, ಭಾರಂಗಳಿಂದ-ಹೊರೆಗಳಿಂದ, ಅಷ್ಟದಿಗ್ವಲಯದ-ಎಂಟುದಿಕ್ಕುಗಳ ಸಮುದಾಯದ, ಆಶ್ರಮ-ಎಲೆಮನೆಗಳ, ಜನಪದಂಗಳ್ಗೆ-ನಾಡುಗಳಿಗೆ, ಹೃಷ್ಟತೆಯೊಳು-ಆನಂದದಿಂದ, ಐದಿತು-ನಡೆಯಿತು ॥೩೭॥

ಟೀ॥ ರೋಮಶ-ರೋಮಶನೆನ್ನುವ, ವಸಿಷ್ಠ-ವಸಿಷ್ಠನೆನ್ನತಕ್ಕ, ಬಕದಾಲ್ಭ್ಯ - ಬಕದಾಲ್ಭ್ಯನೆಂಬ ಹೆಸರುಳ್ಳ, ವೇದವ್ಯಾಸ-ವೇದವ್ಯಾಸನೆಂದು ಕರೆಯಲ್ಪಡುವ, ವಾಮದೇವಾದಿಮುನಿಮುಖ್ಯರು-ವಾಮದೇವನೇ ಮೊದಲಾದ ತಾಪಸೋತ್ತಮರು, ಪ್ರೇಮದಿಂ-ವಿಶ್ವಾಸದಿಂದ, ಅವನೀಶನಂ-ಧರ್ಮತನಯನನ್ನು, ಪರಸಿ-ಆಶೀರ್ವಾದಮಾಡಿ, ಮಾನಿತರಾಗಿ-ಮನ್ನಣೆಯುಂ ಪಡೆದು, ಬೀಳ್ಕೊಂಡು-ಅನುಜ್ಞೆಯನ್ನೈದಿ, ಆಶ್ರಮಕೆ-ತಮ್ಮತಮ್ಮ ಪರ್ಣಶಾಲೆಗಳಿಗೆ, ಕಳರ್ದರು-ಹೊರಟು ಹೋದರು, ಬಳಿಕ-ಅನಂತರ, ನೃಪನು-ಧರ್ಮಪುತ್ರನು, ಭೂಪತಿಗಳೆಲ್ಲರಂ-ಸಕಲ ರಾಜರನ್ನೂ, ಸಕಲ-ಅಶೇಷವಾದ, ಯಾದವಸ್ತೋಮಸಹಿತ-ಯಾದವರೊಂದಿಗೆ, ಅಂಬುಜದಳಾಕ್ಷನಂ-ಕಮಲನೇತ್ರನಾದ ಕೃಷ್ಣಸ್ವಾಮಿಯನ್ನೂ, ಸತ್ಕರಿಸಿ-ಆದರಿಸಿ, ಅವರವರ

---

ವನ್ನೂ ಕೊಂಡಾಡುತ್ತಲಿದ್ದರು ॥ ೩೫ ॥ ಆಗ ಧರ್ಮರಾಯನಾದರೊ, ಬಕದಾಲ್ಭ್ಯಾದಿ ಮಹಾಮುನಿಗಳಿಂದಲೂ, ಕೃಷ್ಣಾದಿ ರಾಜೋತ್ತಮರಿಂದಲೂ ಕೂಡಿ, ನಾನಾ ಕಥೆಗಳಂ ಕೇಳಿದ ಬಳಿಕ ಮಿಕ್ಕ ಧನವನ್ನೆಲ್ಲಾ ಬ್ರಾಹ್ಮಣರಿಗೆ ದಾನಮಾಡಿ ಅತ್ಯುತ್ಸವದಿಂದ ಹಸ್ತಿನಾವತಿಗೆ ಪ್ರವೇಶಮಾಡಿದನು ॥ ೩೬ ॥ ಬ್ರಾಹ್ಮಣೋತ್ತಮರೆಲ್ಲಾ ಮೃಷ್ಟಾನ್ನ ಭೋಜನ, ಭೂರಿದಕ್ಷಿಣೆಗಳಿಂದ ಸಂತುಷ್ಟರಾಗಿ ಧರ್ಮರಾಯನನ್ನು ಹರಸಿ ಹೊರಟುಹೋದರು. ಅಷ್ಟದಿಕ್ಪಾಲರೂ ಧರ್ಮಜನ ಅಪ್ಪಣೆಯನ್ನು ಪಡೆದು ಹೊರಟರು ॥೩೭॥ ಬಕದಾಲ್ಭ್ಯಾದಿ ಮಹಾಮುನಿಗಳೆಲ್ಲಾ ಧರ್ಮಜನಿಗೆ ಆಶೀರ್ವಾದಮಂಮಾಡಿ, ಅವನು ಮಾಡಿದ ಮನ್ನಣೆಗಳಂ ಕೈಕೊಂಡು, ತಮ್ಮತಮ್ಮ ಆಶ್ರಮಗಳಿಗೆ ಹೊರಟುಹೋದರು. ಅನಂತರ ಧರ್ಮನಂದನನು ಸಕಲರಾಜಾಧಿರಾಜರನ್ನೂ ಯದುಸೈನ್ಯದಿಂ ಕೂಡಿದ ಕೃಷ್ಣಮೂರುತಿಯನ್ನೂ ಅವರವರ ರಾಜಧಾನಿಗಳಿಗೆ ಬಹು ಮರ್ಯಾದೆಯಿಂದ ಭೀಮಾರ್ಜುನರನ್ನು

ನೊಡನೊಡನೆಕಳುಹಿದಂನೃಪನನರನಗರಿಗಳ್ಗೆ ‖ ೩೮ ‖ ಸಂಭಾವಿಸಿದನಧ್ವರದೊಳೆಲ್ಲರಂಬಳಿಕ | ಸಂಭೋಗಮರ್ಜುನಂಗಾ
ಪ್ರಮಿಳೆಯಕೂಡೆ | ಸಂಭವಿಸುವಂತೆನೇಮಿಸಿದನಿಭನಗರದೋಳ್ಕುಂತಿಸಹಿತನುಜರೊಡನೆ ‖ ತೊಂಭತ್ತುವರುಷಪರಿಯಂತರ
ದೊಳ್ಪೆದೆಸುಖ | ದಿಂಭೂವಲಯದಸಾಮ್ರಾಜ್ಯಮಂಮಾಡುತಿ | ರ್ದಂಭಾರತಾಗ್ರಣಿಯುಧಿಷ್ಠಿರಂದೇವಪುರಲಕ್ಷ್ಮೀಶನಾಜ್ಞೆ
ಯಿಂದ ‖೩೯‖ ಈಚತುರ್ದಶಭುವನದೊಳ್ಪಾಂಡವಸ್ಥಾಪ | ನಾಚಾರ್ಯನೆನಿಸಿಕೊಂಬುದೆಪೇರ್ಮೆಯೆಂದುಮನು | ಜೋಚಿತದ
ಲೀಲೆಯಂತಳೆದಯಾದವಸಾರ್ವಭೌಮಂನಿಜಾನತರ್ಗೆ | ಭೂಚಕ್ರದೋಳ್ಪಸರಿಸುವಕೀರ್ತಿಲತೆಮಾಡ | ಲಾಚಂದ್ರನಾಗಿರ್ಪ
ತೆರದಿಂದಕವಿಮತಿಗೆ | ಗೋಚರಿಸೆಕೃತಿಗೆನಾಯಕನಾದನಮರಪುರದೊಡೆಯಲಕ್ಷ್ಮೀಕಾಂತನು ‖ ೪೦ ‖ ಈಪರಿಯೊಳಾಶ್ವ
ಮೇಧಿಕದವೃತ್ತಾಂತಮಂ | ತಾಪಸೋತ್ತಮನಾದಜೈಮಿನಿಮುನೀಶ್ವರಂ | ಭೂಪಾಲತಿಲಕಜನಮೇಜಯಂಗೊರೆದಸಂಗತಿ
ಗಳಂಸಕಲಜನಕೆ ‖ ವ್ಯಾಪಿಸಿದಸುಪ್ರಾಥಿಮೆರೆಯೆಕನ್ನಡದಭಾ | ಷಾಪದ್ಧತಿಯೊಳಣ್ಣಮಾಂಕನಕುಮಾರಲಕ್ಷ್ಮೀಪತಿಯ

---

ಗಳ್ಗೆ-ಅವರ ಪಟ್ಟಣಗಳಿಗೆ, ಒಡನೊಡನೆ-ಜೊತೆಯಲ್ಲಿಯೇ, ಭೀಮಪಾರ್ಥರನು-ಭೀಮಸೇನ ಧನಂಜಯರನ್ನು, ಕಳುಹಿದಂ-ಕಳುಹಿಸಿದವನಾದನು. ‖೩೮‖

ಟೀ‖ ಬಳಿಕ-ಅನಂತರ, ಎಲ್ಲರಂ-ಸರ್ವರನ್ನೂ, ಅಧ್ವರದೊಳು-ಅಶ್ವಮೇಧಯಾಗದಲ್ಲಿ, ಸಂಭಾವಿಸಿದನು-ಮರ್ಯಾದೆಯಂ ಮಾಡಿದನು, ಅರ್ಜುನಂಗೆ-ಧನಂಜಯನಿಗೆ, ಆ ಪ್ರಮಿಳೆಯಕೂಡೆ-ಆ ಪ್ರಮಿಳೆಯೊಂದಿಗೆ, ಸಂಭೋಗಂ ಸಂಭವಿಸುವಂತೆ-ಕ್ರೀಡಾಸುಖವು ಸಿದ್ಧಿಸುವ ರೀತಿಯಾಗಿ, ನೇಮಿಸಿದನು-ಅನುಜ್ಞೆಯನ್ನಿತ್ತನು, ಭಾರತಾಗ್ರಣಿ-ಭರತವಂಶದಲ್ಲಿ ಮುಖ್ಯನಾದ, ಯುಧಿಷ್ಠಿರಂ-ಧರ್ಮಪುತ್ರನು, ಕುಂತಿಸಹಿತ-ಮಾತೆಯಾದ ಕುಂತಿಯೊಂದಿಗೂ, ಅನುಜರೊಡನೆ-ಭೀಮಾದಿ ತಮ್ಮಂದಿರೊಂದಿಗೂ, ತೊಂಭತ್ತುವರ್ಷ ಪರಿಯಂತರದೊಳು-ತೊಂಭತ್ತುವರ್ಷಗಳಾಗುವ ತನಕ, ದೇವಪುರ-ದೇವಪುರನಿವಾಸಿಯಾದ, ಲಕ್ಷ್ಮೀಶನ-ಇಂದಿರಾವಲ್ಲಭನ, ಆಜ್ಞೆಯಿಂದ-ಅನುಜ್ಞೆಯಿಂದ, ಭೂವಲಯದ-ಧರಾಮಂಡಲದ, ಸಾಮ್ರಾಜ್ಯಮಂ-ಸಾರ್ವಭೌಮ ಪದವಿಯನ್ನು, ಇಭನಗರದೊಳ್-ಗಜಪುರದಲ್ಲಿ, ಮಾಡುತಿರ್ದಂ-ನಡೆಯಿಸುತ್ತಿದ್ದನು. ‖೩೯‖

ಟೀ‖ ಈ ಚತುರ್ದಶಭುವನದೊಳ್-ಈ ಈರೇಳು ಲೋಕದಲ್ಲಿಯೂ, ಪಾಂಡವಸ್ಥಾಪನಾಚಾರ್ಯನು-ರಾಜ್ಯವನ್ನು ಕಳೆದುಕೊಂಡ ಪಾಂಡುನಂದನರನ್ನು ಪುನಃ ರಾಜ್ಯಪದವಿಯನ್ನಿತ್ತು ಸಲಹುವ ಕೀರ್ತಿಯುಳ್ಳವನೆಂದು, ಎನಿಸಿಕೊಂಬುದೆ-ಹೇಳಿಸಿಕೊಳ್ಳತಕ್ಕದ್ದೆ, ಪೇರ್ಮೆ-ಹೆಚ್ಚಿಕೆಯು, ಎಂದು-ಎಂಬತೆರನಾಗಿ, ಮನುಜ-ಮಾನವರಿಗೆ, ಉಚಿತ-ತಕ್ಕದ್ದಾಗಿರತಕ್ಕ, ಲೀಲೆಯಂ-ವಿನೋದವನ್ನು, ತಳೆದ-ಹೊಂದಿದ, ಯಾದವ ಸಾರ್ವಭೌಮಂ-ಯದುರಾಜನಾದ ಕೃಷ್ಣಮೂರುತಿಯು, ನಿಜ-ತನ್ನ, ಆನತರ್ಗೆ-ಭಜಕರಿಗೆ, ಭೂಚಕ್ರದೊಳ್-ಇಳಾವಲಯದಲ್ಲಿ, ಪಸರಿಸುವ ಪ್ರಸಿದ್ಧವಾದ, ಕೀರ್ತಿಲತೆ-ಕೀರ್ತಿಯೆಂಬ ಬಳ್ಳಿಯು, ಆಚಂದ್ರಾರ್ಕಂ-ಹಿಮಕರ ದಿನಕರರಿರುವತನಕ, ಇರ್ಪ-ಇರತಕ್ಕ, ತೆರದಿಂದ-ಬಗೆಯಿಂದ, ಮಾಡಲು-ಎಸಗಲು, ಕವಿಮತಿಗೆ-ಕವಿತ್ವಮಾಡುವವನ ವಿವೇಕಕ್ಕೆ, ಗೋಚರಿಸೆ-ತೋರಿದಕಾರಣ, ಕೃತಿಗೆ-ಈ ಕವಿತೆಗೆ, ಅಮರಪುರದ-ದೇವಲೋಕದ, ಒಡೆಯ-ಪ್ರಭುವಾದ, ಲಕ್ಷ್ಮೀಕಾಂತನು-ಲಕ್ಷ್ಮೀರಮಣನು, ನಾಯಕನು-ಯಾಜಮಾನ್ಯವನ್ನು ವಹಿಸಿದವನು, ಆದನು-(ಈ ಕಾವ್ಯಕ್ಕೆ ಕೃಷ್ಣಸ್ವಾಮಿಯೇ ನಾಯಕನೆಂದು ಭಾವವು) ‖೪೦‖

ಟೀ‖ ಆಶ್ವಮೇಧಿಕದ-ಹಯಮೇಧದ, ವೃತ್ತಾಂತಮಂ-ವಾರ್ತೆಯನ್ನು, ಭೂಪಾಲತಿಲಕ-ರಾಜಮೌಳಿಯಾದ, ಜನಮೇಜಯಂಗೆ-ಜನಮೇಜಯನೆಂಬ ಭೂಕಾಂತನಿಗೆ, ಈಪರಿಯೊಳು - ಈ ತೆರನಾಗಿ, ತಾಪಸೋತ್ತಮ - ತಪೋನಿಧಿಯಾದ, ಜೈಮಿನಿಮುನೀಶ್ವರಂ-ಜೈಮಿನಿ ಮಹರ್ಷಿಯು, ಒರೆದ-ತಿಳಿಸಿದ, ಸಂಗತಿಗಳಂ-ಸಮಾಚಾರಗಳನ್ನು, ಸಕಲಜನಕೆ-ಸರ್ವರಿಗೂ, ವ್ಯಾಪಿಸಿದ-ಗೋಚರವಾದ, ಸುಪ್ರಾಥಿ-ರೂಢಿಯು, ಮೆರೆಯೆ-ಕಂಗೊಳಿಸುವಂತೆ ಅಣ್ಣಮಾಂಕನ-ಅಣ್ಣಮಾಂಕನೆಂಬಾತನ,

---

ಜೊತೆಮಾಡಿಕಳುಹಿಸಿಕೊಟ್ಟನು ‖೩೮‖ ವಿಷವಧೂತ್ವದಿಂ ಬಿಡುಗಡೆಯಾದ ಪ್ರಮಿಳೆಗೆ ಅರ್ಜುನನೊಂದಿಗೆ ಸಂಭೋಗವುಂಟಾಗಬಹುದೆಂದು ಧರ್ಮಜನು ಅನುಗ್ರಹಿಸಿದನು ಆಬಳಿಕ ಧರ್ಮಪುತ್ರನು ಹಸ್ತಿನಾವತಿಯಲ್ಲಿ ತನ್ನ ತಾಯಿಯಾದ ಕುಂತಿಯೊಂದಿಗೂ, ಭೀಮಸೇನನೇ ಮೊದಲಾದ ತಮ್ಮಂದಿರೊಂದಿಗೂ ಕೂಡಿ ಅತ್ಯುತ್ಸಾಹದಿಂದ ತೊಂಭತ್ತುವರ್ಷಗಳು ಚಕ್ರವರ್ತಿಪದವಿಯನ್ನನುಭವಿಸಿದನು. ‖೩೯‖ ರಾಜ್ಯದ ಸಕಲ ಸಂಪತ್ತನ್ನೂ ಕಳೆದುಕೊಂಡು ವನವಾಸದಿಂದ ನಾನಾ ಕಷ್ಟಗಳುಂಟಾಗಿದ್ದರೂ ತನ್ನನ್ನೆ ನಂಬಿದ್ದ ಈ ಪಾಂಡವರಿಗೆ ಸಾಮ್ರಾಜ್ಯವನ್ನಿತ್ತು ಸಲಹಿದ ಪಾಂಡವಸ್ಥಾಪನಾಚಾರ್ಯನೆಂಬ ಬಿರುದಾಂಕಿತನೂ ದೇವಪುರನಿವಾಸಿಯೂ ಆದ ಕೃಷ್ಣಮೂರುತಿಯೇ ಈ ಕೃತಿಗೆ ನಾಯಕನಾಗಿರುವನು. ‖೪೦‖ ಈತೆರನಾದ ಅಶ್ವಮೇಧಪರ್ವದ ಕಥೆಯನ್ನು ಜೈಮಿನಿ ಮುನಿನಾಥನು ಭೂಕಾಂತನಾದ ಜನಮೇಜಯನಿಗೆ ತಿಳಿಸಿದ ಈ ಕೃತಿಯು ಲೋಕದಲ್ಲಿ ಸಕಲಜನವೇದ್ಯ

ಮುಖದಿಂದರಚಿಸಿದಂಕೃತಿಯಾಗೆಸುರಪುರಶ್ರೀಕಾಂತನು ||೪೧|| ಅಶ್ವಮೇಧಿಕಪರ್ವದಮಲಸತ್ಕಥೆಯೌವ | ನಾಶ್ವಾದಿನೃಪರ ಚರಿತಂಕೇಳ್ವಮಾನವ | ರ್ಗೈಶ್ವರ್ಯದಾರೋಗ್ಯದಾಯುಷ್ಯದಭಿವೃದ್ಧಿಕಲಿನಾಶನಂಧರೆಯೊಳು || ಅಶ್ವೇತಕೀರ್ತಿಸುತಲಾಭಶತ್ರು ಕ್ಷಯಂ | ಶಾಶ್ವತಸ್ವರ್ಗಭೋಗಂಗಳಾದಪುದುಸ | ರ್ವೇಶ್ವರನಭಕ್ತಿದೊರಕೊಂಡಪುದುದೇವಪುರಲಕ್ಷ್ಮೀಶನಾಜ್ಞೆಯಿಂದ ||೪೨|| ಉಪವನತಟಾಕಪ್ರತಿಷ್ಠೆದೇವಾಲಯ | ಪ್ರಪೆಗಳಸಕಲದಾನಧರ್ಮೋಪಕಾರವೇ | ದಪುರಾಣಶಾಸ್ತ್ರಶ್ರವಣದಪುಣ್ಯಕ್ಷೇತ್ರ ವಾಸತೀರ್ಥಸ್ನಾನದ || ಜಪಹೋಮಸುವ್ರತಸಮಾಧಿಯೋಗಧ್ಯಾನ | ತಪಸುಗಳಹರಿಹರಾರ್ಚನೆಯಸುಕೃತಂಗಳಾ | ದಪುದು ಜೈಮಿನಿಭಾರತಮೊಳೊಂದುವರ್ಣಮಂಪ್ರೀತಿಯಿಂಕೇಳ್ದವರ್ಗೆ ||೪೩|| ತೊಳಗುವಸುವರ್ಣಭೂಷಣದಿಂದಸೇರಿಸಿದ | ಲಲಿತಮು ಕ್ತಾಭರಣದಿಂದಮಿಗೆರಂಜಿಸುವ | ಪಲವಲಂಕಾರಂಗಳಿಡಿದಚೆಲ್ವಿನದೇವಪುರದಲಕ್ಷ್ಮೀಕಾಂತನ || ವಿಲಸಿತದಕೃತಿಲಲನೆಮೃದು

---

ಕುಮಾರ-ಪುತ್ರನಾದ, ಲಕ್ಷ್ಮೀಪತಿಯ- ಲಕ್ಷ್ಮೀಪತಿಯೆನ್ನತಕ್ಕ, ಕವಿಯ- ಕವಿತ್ವವಂ ಮಾಡುವವನ, ಮುಖದಿಂದ-ಬಾಯಿಯಿಂದ, ಕೃತಿಯು-ಈ ಗ್ರಂಥವಾದರೊ, ಸುರಪುರ-ದೇವಪುರನಿವಾಸಿಯಾದ, ಶ್ರೀಕಾಂತನು-ಲಕ್ಷ್ಮೀವಲ್ಲಭನೇ, ಆಗೆ-ಆದ ಕಾರಣ, ಕನ್ನಡದ ಭಾಷಾಪದ್ಧತಿಯೊಳು-ಕನ್ನಡ ಮರ್ಯಾದೆಯನ್ನನುಸರಿಸಿ, ರಚಿಸಿದಂ-ಮಾಡಿದನು. ||೪೧||

ಟೀ|| ದೇವಪುರ-ದೇವಲೋಕ ನಿವಾಸಿಯಾದ, ಲಕ್ಷ್ಮೀಶನ-ಇಂದಿರಾವಲ್ಲಭನ, ಆಜ್ಞೆಯಿಂದ-ಅನುಜ್ಞೆಯಿಂದ, ಅಶ್ವಮೇಧಿಕ ಪರ್ವದ-ಅಶ್ವಮೇಧಿಕಪರ್ವ ಸಂಬಂಧವಾದ, ಸತ್ಕಥೆಯನು-ಶ್ರೇಷ್ಠವಾದ ಕಥೆಯನ್ನು, ಆ ಯೌವನಾಶ್ವಾದಿ-ಆಯೌವನಾಶ್ವನೇ ಮೊದಲಾಗಿರತಕ್ಕ, ನೃಪ-ಅರಸುಗಳ, ಚರಿತವ-ಸತ್ಕಥೆಯನ್ನು, ಕೇಳ್ದ-ಶ್ರವಣಮಾಡಿದ, ಮಾನವರ್ಗೆ-ನರರಿಗೆ, ಐಶ್ವರ್ಯದ-ಐಸಿರಿಯ, ಆರೋಗ್ಯದ-ರೋಗರಹಿತವಾಗಿರುವುದರ, ಆಯುಷ್ಯದ-ಬಹುಕಾಲ ಬದುಕುವಿಕೆಯ, ಅಭಿವೃದ್ಧಿ-ಮೇಲ್ಮೆಯೂ, ಕಲಿ-ಕಲಿಯುಗದಲ್ಲಿ ಪ್ರಾಪ್ತಿಸುವ ಪಾತಕಂಗಳ, ನಾಶನಂ-ನಿವಾರಣೆಯೂ, ಧರೆಯೊಳ್-ಇಳೆಯೊಳಗೆ, ಆ ಶ್ವೇತಕೀರ್ತಿ-ಸುಯಶಸ್ಸೂ, ಸುತಲಾಭ-ಸಂತಾನ ಸಿದ್ಧಿಯೂ, ಶತ್ರುಕ್ಷಯಂ-ಅರಿಗಳ ಬಾಧಾನಿವಾರಣೆಯೂ, ಶಾಶ್ವತ-ಸ್ಥಿರವಾಗಿರತಕ್ಕ, ಸ್ವರ್ಗಭೋಗಂಗಳು-ಸ್ವರ್ಗಸಂಪತ್ತುಗಳು, ಸರ್ವೇಶ್ವರನ-ಜಗನ್ನಾಯಕನಾದ ನಾರಾಯಣನಲ್ಲಿ, ಭಕ್ತಿ-ಶಾಶ್ವತಪ್ರೇಮವೂ, ದೊರಕೊಂಡಪುದು-ಸಿದ್ಧಿಸುವುದು. ||೪೨||

ಟೀ|| ಜೈಮಿನಿಭಾರತದೊಳು-ಜೈಮಿನಿಮುನೀಂದ್ರನು ಹೇಳಿರುವ ಭಾರತದ ಕಥೆಯೊಳಗೆ, ಒಂದು-ಒಂದಾದ, ವರ್ಣಮಂ-ಅಕ್ಷರವನ್ನು, ಕೇಳ್ದವರ್ಗೆ-ಶ್ರವಣಮಾಡಿದವರಿಗೆ, ಉಪವನ-ಉದ್ಯಾನಂಗಳು, ತಟಾಕ-ಕೃತಕ ಕಾಸಾರಂಗಳು ಇವುಗಳನ್ನು, ಪ್ರತಿಷ್ಠೆಮಾಡಿಸುವುದು, ದೇವಾಲಯ-ದೇವತಾ ನಿಲಯಂಗಳು, ಪ್ರಪೆಗಳ-ಅರವಟ್ಟಿಗೆ ಇವುಗಳ, ಸಕಲ-ಅಶೇಷವಾದ, ದಾನಧರ್ಮ-ದಾನಧರ್ಮಗಳ, ದೇವತಾಸೇವೆಯ-ದೇವತಾರ್ಚನೆಗಳ, ಉಪಕಾರ-ಇತರರಿಗೆ ಅನುಕೂಲಮಾಡತಕ್ಕದ್ದು, ವೇದ-ನಾಲ್ಕು ವೇದಗಳು, ಪುರಾಣ-ಅಷ್ಟಾದಶ ಪುರಾಣಂಗಳು, ಶಾಸ್ತ್ರ-ಚತುಶ್ಶಾಸ್ತ್ರಂಗಳು ಇವುಗಳ, ಶ್ರವಣದ-ಕೇಳುವುದರ, ಪುಣ್ಯಕ್ಷೇತ್ರ-ಪುಣ್ಯಕ್ಷೇತ್ರಗಳೇ ಮೊದಲಾದವುಗಳಲ್ಲಿ, ವಾಸ-ವಾಸಮಾಡತಕ್ಕದ್ದು, ತೀರ್ಥಸ್ನಾನದ- ಪುಣ್ಯನದಿಗಳಲ್ಲಿ ಸ್ನಾನವಂ ಮಾಡುವುದರ, ಜಪ-ಮಂತ್ರೋಚ್ಚಾರಣೆಯ, ಹೋಮ-ಹೋಮವನ್ನು ಮಾಡುವುದರ, ಸುವ್ರತ-ಶ್ರೇಷ್ಠಂಗಳಾದ ವ್ರತಗಳ, ಸಮಾಧಿಯೋಗ-ಸ್ಥಿರಯೋಗದ, ಧ್ಯಾನ-ಧ್ಯಾನವಂ ಮಾಡುವುದರ, ಹರಿಹರಾರ್ಚನೆಯ-ಶಿವ ವಿಷ್ಣು ಪೂಜೆಗಳ, ಸುಕೃತಂಗಳು-ಮೇಲ್ಮೆಗಳು, (ಸತ್ಕಾರ್ಯಗಳು) ಆದಪುದು-ಆಗುತ್ತದೆ. ||೪೩||

ಟೀ|| (ಈ ಪದ್ಯದಲ್ಲಿ ಲಕ್ಷ್ಮೀಶನೆಂಬ ಕವಿಯು ರಚಿಸಿದ ಈ ಗ್ರಂಥವನ್ನು ಸುಂದರಾಂಗಿಯಾದ ಸ್ತ್ರೀಗೆ ಹೋಲಿಸಿರುವನು.) ಸ್ತ್ರೀ ಪರವಾದ ಅರ್ಥವು :—ತೊಳಗುವ-ಕಾಂತಿಯುಕ್ತವಾದ, ಸುವರ್ಣಭೂಷಣದಿಂದ-ಚಿನ್ನದ ಒಡವೆಗಳಿಂದ,

---

ವಾಗಲೆಂದು ಅಣ್ಣಮಾಂಕನ ಸುತನಾದ ಲಕ್ಷ್ಮೀಶಕವಿಯು ಕನ್ನಡ ಭಾಷಾಮರ್ಯಾದೆಯನ್ನು ಬಿಡದೆ ಷಟ್ಪದೀರೂಪವಾಗಿ ಬರೆದಿರುವನು. ||೪೧|| ಶ್ರೇಷ್ಠವಾದ ಈ ಅಶ್ವಮೇಧ ಪರ್ವದ ಕಥೆಯನ್ನೂ, ಯೌವನಾಶ್ವಾದಿ ಭಕ್ತಾಗ್ರೇಸರರಾದ ರಾಜರ ಚರಿತ್ರೆಗಳನ್ನೂ, ಭಕ್ತಿಯಿಂದ ಕೇಳತಕ್ಕ ಮನುಷ್ಯರಿಗೆ ಇಹಲೋಕದಲ್ಲಿ ಆಯುರಾರೋಗ್ಯಭಾಗ್ಯಂಗಳೂ, ಪುತ್ರಪೌತ್ರಾಭಿವೃದ್ಧಿಯೂ, ಉಂಟಾಗುವುವಲ್ಲದೆ ಬ್ರಹ್ಮಹತ್ಯಾದಿ ಮಹಾ ಪಾತಕಂಗಳು ಪರಿಹಾರವಾಗುವುವು. ಪರಲೋಕದಲ್ಲಿ ಅತ್ಯುತ್ತಮವಾದ ಸ್ವರ್ಗಸುಖವು ಲಕ್ಷ್ಮೀರಮಣನ ದಿವ್ಯಾನುಗ್ರಹದಿಂದುಂಟಾಗುವುದು. ||೪೨|| ಈ ಜೈಮಿನಿಭಾರತದ ಒಂದು ವರ್ಣವನ್ನು ಭಕ್ತಿಯಿಂದ ಕೇಳಿದಮಾತ್ರಕ್ಕೇ ಉದ್ಯಾನ, ಕೆರೆ, ಗ್ರಾಮ, ದೇವಾಲಯ, ಛತ್ರ, ಅರವಟ್ಟಿಗೆ ಇವುಗಳನ್ನು ನಿರ್ಮಿಸುವುದು, ಪುರಾಣೇತಿಹಾಸಾದಿಶ್ರವಣ, ಕಾಶೀ ಬದರಿಕಾದಿ ಪುಣ್ಯಕ್ಷೇತ್ರ ಸಂಚಾರ, ಗಂಗಾದಿ ತೀರ್ಥಸ್ನಾನ, ಜಪತಪ, ಹರಿಹರಪೂಜೆ ಮೊದಲಾದವುಗಳಿಂದುಂಟಾಗುವ ಪುಣ್ಯಕ್ಕಿಂತಲೂ ಅತ್ಯಧಿಕವಾದ ಸುಕೃತವೇ ಲಭಿಸುವುದರಲ್ಲೇನೂ ಅನುಮಾನವಿಲ್ಲವು ||೪೩||

ವದವಿಲಾಸದಿಂ | ಸಲೆಸೊಗಸಲಡಿಗಡಿಗೆನಡೆಯಲ್ಕೆಚಿತ್ತಗ | ಳೊಲಿದೆರಗದಿರ್ದಪವೆಧರೆಯೊಳಗೆರಸಿಕರಾಗಿರ್ದಭಾವುಕನಿಕರದ||೪೪|| ಲೋಕದೊಳಖಿಳಪುಣ್ಯಕರ್ಮದಿಂಧರ್ಮದಿಂ| ದೇಕಾಗ್ರನಾಗಿರ್ದಯೋಗದಿಂಯಾಗದಿಂ| ಭೂಕನಕಮಣಿಧೇನುದಾನದಿಂಧ್ಯಾನದಿಂ ಪಡೆವಸದ್ಗತಿಯನೀವ || ಈಕಥೆಯನೊಲವಿಂದಕೇಳ್ದರ್ಗೆಪೇಳ್ದರ್ಗೆ | ಶೋಕಭಯದುಃಖಸಂತಾಪಸಂಪಾಪಮಂ | ನೂಕಿ ನಿರ್ಮಲತರಸುಬುದ್ಧಿಯಂಶುದ್ಧಿಯಂಹರಿಕೊಡುತಿಹಂಕೃಪೆಯೊಳು ||೪೫|| ಪುಣ್ಯಮಿದುಕೃಷ್ಣಚರಿತಾಮೃತಂಸುಕವೀಂದ್ರಗಣ್ಯ ಮಿದುಶೃಂಗಾರಕುಸುಮತರುತರಗಿದಾ | ರಣ್ಯಮಿದುನವರಸಪ್ರೌಢಿಲಾಲಿತ್ಯನಾನಾವಿಚಿತ್ರಾರ್ಥಂಗಳ || ಪುಣ್ಯಮಿದುಶಾರದೆಯ ಸಮ್ಮೋಹನಾಂಗಲಾ | ವಣ್ಯಮಿದುಭಾವಕರಕಿವಿದೊಡವಿಗೊದವಿದಹಿರಣ್ಯಮಿದುಭೂತಳದೊಳೆನೆಪಿ | ರಾಜಿಪುದುಲಕ್ಷ್ಮೀ

---

ಸೇರಿಸಿದ-ಜೋಡಿಸಿರತಕ್ಕ, ಲಲಿತ-ಮನೋಹರವಾದ, ಮುಕ್ತಾಭರಣದಿಂದ-ಮುತ್ತಿನ ಮಾಲಿಕೆಯಿಂದ, ಮಿಗೆ - ಹೆಚ್ಚಾಗಿ, ರಂಜಿಸುವ-ಥಳಥಳಿಸುತ್ತಲಿರುವ, ಪಲವು-ಹಲವು, ಅಲಂಕಾರಗಳು-ಸೌಂದರ್ಯಗಳು, ಇಡಿದ-ತುಂಬಿದ, ಚೆಲ್ವಿನ-ಅಂದವಾಗಿರ ತಕ್ಕ, ದೇವಪುರಲಕ್ಷ್ಮೀಕಾಂತನ - ದೇವಪುರವೆಂಬ ಊರನ್ನೆ ವಾಸಸ್ಥಾನವಾಗಿವುಳ್ಳ ಲಕ್ಷ್ಮೀರಮಣನ, ವಿಲಸಿತದ-ಹೊಳೆ ಹೊಳೆವ, ಕೃತಿಲಲನೆ-ಕಾವ್ಯವೆಂಬ ಸ್ತ್ರೀಯು, (ಕಾವ್ಯದ ಪರವಾದ ಅರ್ಥವು) ಸುವರ್ಣಭೂಷಣದಿಂದ-ಶ್ರೇಷ್ಠವಾದ ಅಕ್ಷರಗ ಳೆಂಬ ಒಡವೆಗಳಿಂದ, ಮುಕ್ತಾಭರಣದಿಂದ - ಮುಕ್ತಪದವೆಂಬ ಅಲಂಕಾರ ವಿಶೇಷದಿಂದ, ಅಲಂಕಾರಗಳಿಡಿದ-ಉಪಮಾಲಂ ಕಾರವೇ ಮೊದಲಾದ ಅನೇಕ ಅಲಂಕಾರಗಳಿಂದ ಕೂಡಿರುವ, ಕೃತಿ-ಗ್ರಂಥವು, ಮೃದುಪದವಿಲಾಸದಿಂ= ಮೃದು-ಮೆತ್ತಗಿರುವ, ಪದ-ಕಾಲ್ಗಳ, ವಿಲಾಸದಿಂ-ಅಂದದಿಂದ, (ಸ್ತ್ರೀಪರವಾಗಿ) ಮೃದು-ಸರಸವಾಗಿರತಕ್ಕ, ಪದ-ಶಬ್ದಗಳ, ವಿಲಾಸದಿಂ-ಚೆಲ್ವಿನಿಂದ, (ಗ್ರಂಥದ ಪರವಾಗಿ) ಸಲೆ-ಹೆಚ್ಚಾಗಿ, ಸೊಗಸಲು - ಅಂದವಾಗಿ ಕಾಣಿಸುತ್ತಿರಲು, ಅಡಿಗಡಿಗೆ-ಪ್ರತಿಯೊಂದು ಕಾಲಿಗೂ, ಮತ್ತು ಪ್ರತಿಪಾದಕ್ಕೂ, ನಡೆಯಲ್ಕೆ-ನಡೆಯುತ್ತಿರುವಾಗ, ಧರೆಯೊಳಗೆ-ಇಳೆಯಲ್ಲಿ, ರಸಿಕರಾಗಿರ್ದ-ಶೃಂಗಾರವೇ ಮೊದಲಾದ ರಸವಿಶೇಷಗಳನ್ನು ಬಲ್ಲ, ಭಾವುಕ-ಅಭಿಪ್ರಾಯವನ್ನು ಬಲ್ಲ, ಜನನಿಕರದ-ಜನಸಮುದಾಯದ, ಚಿತ್ತಂಗಳು-ಹೃದಯಂಗಳು, ಒಲಿದು-ವಿಶ್ವಾಸದಿಂದ, ಎರಗದೆ-ಹರಡದೆ, ಇರ್ದಪವೆ-ಇರುತ್ತವೆಯೇ, (ಎಲ್ಲೆಲ್ಲಿಯೂ ವ್ಯಾಪಿಸುತ್ತವೆ). ||೪೪||

ಟೀ|| ಲೋಕದೊಳು-ಭೂಮಂಡಲದಲ್ಲಿ, ಅಖಿಳಪುಣ್ಯಕರ್ಮದಿಂ-ಸಕಲಸತ್ಕಾರ್ಯಗಳಿಂದ, ಧರ್ಮದಿಂ-ಧರ್ಮ ಕೆಲಸ ಗಳಿಂದ, ಏಕಾಗ್ರನಾಗಿರ್ದ-ಸ್ಥಿರಚಿತ್ತವುಳ್ಳ, ಯೋಗದಿಂ-ಯೋಗಾಭ್ಯಾಸದಿಂದಲೂ, ಯಾಗದಿಂ-ಯಜ್ಞಾದಿಗಳಿಂದಲೂ, ಭೂ-ಇಳೆಯು, ಕನಕ-ಭಂಗಾರವು, ಧೇನು-ಗೋವುಗಳು ಇವುಗಳ, ದಾನದಿಂ-ದಾನಮಾಡುವಿಕೆಯಿಂದಲೂ, ಧ್ಯಾನದಿಂದ-ಧ್ಯಾನಮಂಗೈಯುವುದರಿಂದಲೂ, ಪಡೆವ-ಹೊಂದುತ್ತಲಿರತಕ್ಕ, ಸದ್ಗತಿಯನು-ಮುಕ್ತಿಯನ್ನು, ಈವ-ಉಂಟುಮಾಡುತ್ತಲಿ ರುವ, ಈಕಥೆಯನು-ಈ ಸಂಗತಿಯನ್ನು, ಒಲವಿಂದ-ವಿಶ್ವಾಸದಿಂದ, ಕೇಳ್ದರ್ಗೆ-ಕೇಳತಕ್ಕವರಿಗೂ, ಪೇಳ್ದರ್ಗೆ-ತಿಳಿಸುವವರಿಗೂ, ಶೋಕ-ವ್ಯಸನವು, ಭಯ-ಹೆದರಿಕೆಯು, ದುಃಖ-ಸಂಕಟವು, ಸಂತಾಪ-ಮನಸ್ಸಿನ ಕಳವಳವು, ಪಾಪಮಂ-ಪಾತಕವನ್ನೂ ಸಹ, ನೂಕಿ-ದೂರೀಕರಿಸಿ, ಹರಿ-ಕೃಷ್ಣಸ್ವಾಮಿ, ನಿರ್ಮಲತರ-ಪವಿತ್ರವಾದ, ಸುಬುದ್ಧಿಯಂ-ಒಳ್ಳೇ ತಿಳುವಳಿಕೆಯನ್ನೂ, ಶುದ್ಧಿಯಂ-ನಿಷ್ಕಲ್ಮಷತೆಯನ್ನೂ, ಕೃಪೆಯೊಳು-ವಿಶ್ವಾಸದಿಂದ, ಕೊಡುತಿಹಂ-ಕೊಡುತ್ತಲಿರುವನು ||೪೫||

ಟೀ|| ಇದುಕೃಷ್ಣಚರಿತಂ-ಈ ಕೃಷ್ಣಚಾರಿತ್ರವು, ಪುಣ್ಯಂ-ಪುಣ್ಯದಾಯಕವು, ಇದು-ಈ ಕೃತಿಯು, ಸುಕವೀಂದ್ರ-ಸತ್ಕವಿಗಳಿಂದ, ಗಣ್ಯಂ-ಗಣನೆಗೆ ಬಂದಿರತಕ್ಕದ್ದು. ಇದು-ಈ ಕೃತಿಯಾದರೊ, ಶೃಂಗಾರಕುಸುಮ-ಶೃಂಗಾರವೆಂಬ ಹೂಗ ಳನ್ನುಳ್ಳ, ತರು-ವೃಕ್ಷಂಗಳಿಂದ, ತುರುಗಿದ-ಪೂರ್ಣವಾಗಿರತಕ್ಕ, ಅರಣ್ಯಂ-ವನವೇ ಆಗಿದೆ, ಇದು-ಈ ಗ್ರಂಥವು, ನವರಸ-ಶೃಂ ಗಾರವೇ ಮೊದಲಾದ ಒಂಭತ್ತುರಸಗಳಿಂದ, ಭರಿತಂ-ತುಂಬಿತುಳುಕುತ್ತಲಿದೆ, ಪ್ರೌಢ-ಪ್ರೌಢವಾಗಿಯೂ, ಲಾಲಿತ್ಯ-ಲಲಿತವಾದ ದ್ದಾಗಿಯೂ, ನಾನಾ-ವಿಧವಿಧವಾದ, ವಿಚಿತ್ರಾರ್ಥಂಗಳ-ಆಚ್ಚರಿಯನ್ನುಂಟುಮಾಡುವ ಆಶಯಗಳ, ಪುಣ್ಯಂ-ಸುಕೃತದಾಯಕವಾ ದದ್ದು; ಇದು-ಈ ಗ್ರಂಥವು, ಶಾರದೆಯ-ವಾಣಿಯ, ಸಮ್ಮೋಹನ-ಭ್ರಮೆಯನ್ನುಂಟುಮಾಡುವ, ಅಂಗ-ದೇಹದ, ಲಾವಣ್ಯಂ-

---

ಸದ್ವರ್ಣಗಳಿಂದಲೂ, ಸರಸಾಲಂಕಾರಗಳಿಂದಲೂ, ಇತರರ ಮನವಂ ರಂಜಿಸುವ ಸಾಮರ್ಥ್ಯದಿಂದಲೂ || ೪೪ || ಕೂಡಿರತಕ್ಕ ಕಥೆಯು ಅನೇಕ ದಾನಧರ್ಮಂಗಳು, ಯೋಗಾಭ್ಯಾಸ ಮೊದಲಾದವುಗಳಿಂದಾಗುವ ಫಲಂಗಳನ್ನೆಲ್ಲಾ ಕೊಡುವುದು. ಇಂತಹ ಪ್ರದವಾದ ಕಥೆಯನ್ನು ಕೇಳಿದವರಿಗೂ ಹೇಳಿದವರಿಗೂ ಲೋಕದಲ್ಲಿ ಭಯಶೋಕಾದಿಗಳುಂಟಾಗದೆ ಸದಾ ಮನಶ್ಶುದ್ಧಿ ಯುಂಟಾಗಿರುವಂತೆ ಶ್ರೀ ಕೃಷ್ಣಪರಮಾತ್ಮನು ಅನುಗ್ರಹವನ್ನು ಮಾಡುವನು || ೪೫ || ಈ ಕೃಷ್ಣಚರಿತಾಮೃತವು ಲೋಕ ದಲ್ಲಿ ಪುಣ್ಯಪ್ರದವಾದದ್ದು. ಸತ್ಕವಿಗಳಿಂದ ಹೊಗಳಿಸಿಕೊಳ್ಳಲ್ಪಡತಕ್ಕದ್ದು. ಶೃಂಗಾರಾದಿ ನವರಸಭರಿತವಾದದ್ದು. ಇದೂ

ಪತಿಯಕಾವ್ಯರಚನೆ ॥ ೪೬ ॥ ಧರಣಿಯೊಳ್‌ಜೈಮಿನಿಮುನೀಂದ್ರನತಿಪೇರ್ಮೆಯೊಳ್ಪರ । ಮಹಾಭಾರತ(ಭಾಗವತ) ಕಥಾಮೃತಾಬ್ಧಿ ಯೊಳೊಪ್ಪಿ । ವರದಾಶ್ವಮೇಧಿಕದಪರ್ವಮಂ ಸುರಪುರದಲಕ್ಷ್ಮೀಶಕನ್ನಡದೊಳು ॥ ವಿರಚಿಸಿದಕೃತಿಗೆಷಟ್ಚರಣದಿಂಮಾಧುರ್ಯ । ಸರಸಪದಬಂಧಗಳ್ಗೆಣಿಸಲ್ಕೆಶರಧಿಯಂಬರನಿಧಿಶಶಾಂಕ । ಸಂಜ್ಞೆಗಳ್ಪೆದಲಿದನೊಲಿದುಭಾವಿಪುದುಸರ್ವಜನರು ॥ ೪೭ ॥

ಚತುಸ್ತ್ರಿಂಶತ್ಸಂಧಿ ಸಂಪೂರ್ಣಂ.

ಸಂಧಿ ೩೪ ಕ್ಕೆ ಪದ್ಯಗಳು ೧೯೦೭ ಕ್ಕಂ ಮಂಗಳಮಸ್ತು.

---

ಸೊಗಸುಳ್ಳದ್ದು, ಇದು–ಈ ಕೃತಿಯಾದರೊ, ಭಾವಕರ–ಭಾವವನ್ನು ತಿಳಿಯತಕ್ಕವರ, ಕಿವಿದೊಡವಿಗೆ–ಕಿವಿಯ ಒಡವೆಗೆ, ಒದವಿದ–ಸೇರಿರುವ, ಹಿರಣ್ಯಂ–ಸುವರ್ಣವು, ಎನೆ–ಎಂಬಂತೆ, ಭೂತಳದೊಳು–ಧರಾಮಂಡಲದೊಳಗೆ, ಲಕ್ಷ್ಮೀಪತಿಯಕಾವ್ಯರಚನೆ–ಕೃಷ್ಣಾನುಗ್ರಹಕ್ಕೆ ಪಾತ್ರನಾದ ಲಕ್ಷ್ಮೀಶನೆಂಬ ಕವಿಯು ಮಾಡಿರತಕ್ಕ ಈ ಗ್ರಂಥವು, ವಿರಾಜಿಪುದು–ರಾರಾಜಿಸುತ್ತಲಿರುವುದು. ॥೪೬॥

ಟೀ॥ ಜೈಮಿನಿಮುನೀಂದ್ರನು–ಜೈಮಿನಿಯೆಂಬ ಮಹರ್ಷಿಯು, ಅತಿಪೇರ್ಮೆಯೊಳ್ – ಬಹು ವಿಶ್ವಾಸದಿಂದ, ಧರಣಿಯೊಳ್–ಇಳೆಯೊಳಗೆ, ಪರಮ–ಶ್ರೇಷ್ಠವಾದ, ಭಾಗವತಕಥಾಮೃತಾಬ್ಧಿಯೊಳ್–ಭಾಗವತ–ಭಗವತ್ಸಂಬಂಧವಾದ, ಕಥಾ–ಕಥೆಯೆನ್ನುವ, ಅಮೃತ–ಸುಧೆಯಿಂದ ಕೂಡಿದ, ಅಬ್ಧಿಯೊಳ್–ಸಮುದ್ರದೊಳಗೆ, ಒಪ್ಪಿ–ಸೇರಿಕೊಂಡು, ವರದ–ಬೇಕಾದ ಫಲಗಳನ್ನು ಕೊಡತಕ್ಕ, ಆಶ್ವಮೇಧಿಕದಪರ್ವಮಂ–ಅಶ್ವಮೇಧಪರ್ವವನ್ನು, ಸುರಪುರದಲಕ್ಷ್ಮೀಶ–ದೇವಪುರನಿವಾಸಿಯಾದ ಲಕ್ಷ್ಮೀಪತಿಯು, ಕನ್ನಡದೊಳು–ಕನ್ನಡ ಭಾಷೆಯೊಳಗೆ, ವಿರಚಿಸಿದ–ರಚಿಸಿರತಕ್ಕ, ಕೃತಿಗೆ–ಕಾವ್ಯಕ್ಕೆ, ಷಟ್ಚರಣದಿಂ–ಷಟ್ಪದಿರೂಪವಾಗಿರುವ, ಮಾಧುರ್ಯ–ಸ್ವಾರಸ್ಯವಾದ, ಸರಸ–ರಸಭರಿತವಾದ, ಪದಬಂಧಗಳ್ಗೆ–ಪದಶ್ರೇಣಿಗೆ, ಎಣಿಸಲ್ಕೆ–ಗಣನೆಯಂ ಮಾಡಲು, ಶರಧಿ–ಏಳು, ಅಂಬರ–ಸೊನ್ನೆಯು, ನಿಧಿ–ಒಂಭತ್ತು, ಶಶಾಂಕ–ಒಂದು, ಎಂಬ – ಎನ್ನತಕ್ಕ, ಸಂಜ್ಞೆಗಳು – ಗುರುತುಗಳು, ಐದಲು–ಪಡೆಯಲು, ಇವನು – ೧೯೦೭ ಪದ್ಯಗಳಿಂದ ಕೂಡಿರತಕ್ಕ ಈ ಕೃತಿಯನ್ನು, ಒಲಿದು–ವಿಶ್ವಾಸವಿಟ್ಟು, ಸರ್ವಜನರು–ಸಕಲರೂ, ಭಾವಿಪುದು ಸ್ವೀಕರಿಸಬೇಕೆಂದು ಕೋರುವೆನು.

ಅ॥ ವಿ॥ ಶರಧಿ–ಶರ–ನೀರನ್ನು, ಧಿ–ಧರಿಸಿರುವುದು (ಸಮುದ್ರ) ಶರ–ಬಾಣ ಮತ್ತು ನೀರು–ಶರಧಿ–ಏಳು ಎಂಬ ಸಂಜ್ಞೆ, ಅಂಬರ–ಶೂನ್ಯವಾದದ್ದು ಮತ್ತು ಆಕಾಶ, ನಿಧಿ–ನವನಿಧಿಗಳು ಆದ್ದರಿಂದ ೯ ಎಂಬ ಸಂಖ್ಯೆಯನ್ನು ಗುರ್ತಿಸಿ ಇದೆ, ಶಶಾಂಕ–ಒಂದು ಮತ್ತು ಚಂದ್ರನು, ವರ–ಬೇಕಾದ ವಸ್ತು, ಮದುವೆಯಾಗುವ ಗಂಡಸು, ಉತ್ತಮವಾದ ॥ ೪೭ ॥

ಟೀಕಾತಾತ್ಪರ್ಯ ಸಹಿತಮಾದ ಜೈಮಿನಿಭಾರತದೊಳು ಮೂವತ್ತನಾಲ್ಕನೆಯ ಸಂಧಿಯು ಸಂಪೂರ್ಣವಾದುದು.

೩೪ ಸಂಧಿಗಳಿಂದಲೂ ೧೯೦೭ ಪದ್ಯಗಳಿಂದಲೂ ಕೂಡಿರುವ ಲಕ್ಷ್ಮೀಶಕೃತವಾದ

ಈ ಜೈಮಿನಿಭಾರತವು ಇಂತು ಲೋಕವಿಖ್ಯಾತವಾಗಿರುವುದು.

---

ಅಲ್ಲದೆ ಲಲಿತಪದಸರಣಿಯಿಂದ ಕೂಡಿ ಸಕಲರ ಮನಮಂ ರಂಜಿಸತಕ್ಕ ಸತ್ಕೃತಿಯೂ ಆಗಿರುವುದು ॥ ೪೬ ॥ ಲೋಕವಿಖ್ಯಾತವಾದ ಈ ಅಶ್ವಮೇಧಿಕ ಪರ್ವದ ಕಥೆಯನ್ನು ಜೈಮಿನಿ ಮುನೀಂದ್ರನು ಜನಮೇಜಯರಾಯನೊಂದಿಗೆ ಹೇಳಿದನಷ್ಟೆ. ಆ ಸತ್ಕಥೆಯನ್ನೇ ಲಕ್ಷ್ಮೀಶ ಕವಿಯು ಷಟ್ಪದಿಯರೂಪವಾದ ೧೯೦೭ ಪದ್ಯಗಳುಳ್ಳ ಮೂವತ್ತನಾಲ್ಕು ಸಂಧಿಗಳಾಗಿ ಸುಲಲಿತಪದನ್ಯಾಸದಿಂದಲೂ, ಸರಸಾಲಂಕಾರದಿಂದಲೂ ರಚಿಸಿರುವನು. ಈ ಸದ್ಗ್ರಂಥವನ್ನು ಸಕಲರೂ ಲಾಲಿಸಿ, ಅಚಿಂತ್ಯನೂ, ಅವ್ಯಕ್ತನೂ, ಆದ್ಯಂತರಹಿತನೂ, ಭಕ್ತಪರಾಧೀನನೂ ಆಗಿರುವ ಶ್ರೀ ಕೃಷ್ಣಪರಮಾತ್ಮನ ದಿವ್ಯಾನುಗ್ರಹಕ್ಕೆ ಭಾಗಿಗಳಾಗಲೆಂದು ಹಾರೈಸುತ್ತಲಿರುವೆನು ॥ ೪೭ ॥

ಟೀಕಾತಾತ್ಪರ್ಯಸಹಿತವಾದ ಜೈಮಿನಿಭಾರತದೊಳು ಮೂವತ್ತನಾಲ್ಕನೆಯ ಸಂಧಿಯ ಕಥಾಸಾರವು ಸಮಾಪ್ತವು.

**ಜೈಮಿನಿ ಭಾರತವು ಸಂಪೂರ್ಣವಾದುದು.**





ನಮ್ಮ ವಿಳಾಸ:— **ಟಿ. ರ್ಯ. ಕೃಷ್ಣಯ್ಯಶೆಟ್ಟಿ, ಬುಕ್ ಡಿಪೊ, ಪ್ರೊಪ್ರೈಟರ್ ಶ್ರೀ ವೆಂಕಟೇಶ ಪ್ರೆಸ್, ಬೆಂಗಳೂರು ಸಿಟಿ.**